**ಬಿಸುಟ್ಟು₂** 'ಬಿಸುಡು' ಪರಾ.

**ಬಿಸುಟ್ಟು** 'ಬಿಸುಡು' ಪರಾ.

**ಬಿಸುಡಿಸು** (ಕ್ರಿ). ೧.ಎಸೆಯುವಂತೆ ಮಾಡು ; ಒಗೆಸು : ಕೋಪದಿಂ ಬಂದ ಮದನನ ಬಿಲ್ಲ ಬಿ[ಸುಡಿಸಿದ] ಭಾಪುರೇ (ಸಿದ್ಧರಾ. ೪ ಸೂಚನೆ); ನನೆಯಂಬಂ ಕಂತುವಿಂದಂ ಬಿಸುಡಿಸಿ (ಪುಷ್ಪಪು. ೨-೨೬). ೨. ಬಿಟ್ಟು ಬಿಡುವಂತೆ ಮಾಡು : ಎಂದು ನುಡಿದು ಬಿಸುಡಿಸಿದಂ ಪುತ್ರೋರ್ವರಂ ತನ ಗೆರಡಱಿಯದೊಲ್ದು ನಲ್ಲಳಂ (ಹಂಪಭಾ. ೪-೯೨ ವ). [ಬಿಸುಡು + – ಇಸು₃]

**ಬಿಸುಡು** (ಕ್ರಿ). ಬಿಸುಟ್ಟು₂, ಬಿಸುಟ್ಟು(ಭೂತರೂ). ಬಿಸುಟ್ಟಿ(ವರ್ತಕೃ). ೧. (ದೂರಕ್ಕೆ) ಎಸೆ ; ಒಗೆ ; ಚೆಲ್ಲು : ಕೊಲ್ಲೆಂ ಬಿಸುಡಾಯುಧಮಂ ಪುಲ್ಲಂ ಕರ್ಚೆಱು ಪುತ್ರಂ (ಕಬಿರಾ. ೩-೧೪೪) ; ಆ ಬಾಲೆ ಕಾಯ್ದು ಪುಡಿಯೊಳಗೆ ಬಿಸುಟ್ಟೆಳವಾಱಿಯಂತೆ . . . ಮುಮ್ಮುಲಮುಱುಗುತಿರ್ದಳ್ (ಹಂಪಭಾ. ೫-೧೧ ವ); ಮುನಿಜನನಿವಾಸದೊಳೀತನನುಯ್ದು ಬಿಸುಟ್ಟಪುದು (ಶಾಪುಂಪು. ೬೪); ಮಧುಮಾಸದಗ್ನಿಯಲಿ ಚಿಂತೆ ಬೆಸನೆಂಬ ಚಳಿಬೊಂತೆಯನು ಬಿಸುಡು (ಉಮರ. ೯೩-೬). ೨. ತೊರೆ; ತ್ಯಜಿಸು; ಬಿಡು : ತನ್ನೆಯ ತಾಯ್ವಿರಾ ಸನ್ನಾನವು(ಂ)ನುಳಿದು ಬಿಸುಟೋಂ (ಶಾಇಶ. XI-i, ೧೧-೬; 965); ಸವಣದ ಧರ್ಮಮಂ ನಮಗೆ ಕೊಳಲಾಗ ಬಿಸುಡು (ವಡ್ಡಾರಾ. ೧೩-೨೦); ಸಮರಾಕರವಂ ಬಿಸುಟ್ಟು ಕಮಲಾಕರವಂ ಪೊಕ್ಕಿಲವೊ ಮರುಳೆ ಬರ್ದು ಕಲ್ಪಗೆವಾ (ಗದಾಯು. ೬-೧೨): ಧರೆಗೆ ಹೊಱೆಯಾದೆನ್ನ ತನುವನುಯಿರದೆ ಬಿಸುಡುವ ತೆಱನ ಕೃಪೆ ಮಾಡು (ಕುವ್ಯಾಕ. ೬೦೩. ೨೬-೩೩) ; ಬೋಯಿಗಳು ಪಲ್ಲಕ್ಕಿಯನ್ನು ಬಿಸುಟು ಓಡಿಹೋದಾಗ ಮತ್ತೊಂದು ವಿಪತ್ತಿಗೆ ಕಾರಣ ವಾಯಿತೆಂದು ತಿಳಿದಳು (ದೇಬೀಚ. ೩೩). ೩. ತೆಗೆದು ಹಾಕು ; ಕಳಚು : ಮಾಯೆಯು ಮೇಲ್ಮುಸುಕನು ಬಿಸುಡೆ (ಬಸಿಲಗ. ೬-೩). [ದೇ.॥ ತಮಿ. ವಿಚಿಱು; ತುಳು. ಬೀಜಾಡು, ಬೀಜಾವು; ತೆಲು. ವಿಸರು,ವಿಸುರು]

**ಬಿಸುಡುಗಾರ್ತಿ** (ನಾ). ೧. ಗಂಡನನ್ನು ಬಿಟ್ಟವಳು; ಪತಿಯನ್ನು ತ್ಯಜಿಸಿದವಳು : ಇಕೆ ರವಿಯೇಬಱೊಳ್ ಬಿಸುಡುಗಾರ್ತಿಯೆನಿಕ್ಕುಂ (ಶಾಕಿ. ೨೨-೧೩). ೨. ನಡತೆಗೆಟ್ಟವಳು; ವೇಶ್ಯೆ : ಸೂಳೆ ವಿಧವೆ ಬಿಸುಡು ಗಾರ್ತಿ ಕನ್ನೆಯೆಂಬಿವರೊಳ್ (ಶತ್ರ್ಯಶ್ರ. ೨೮೦); ಇತ್ವರಿಯೆಂಬಳು ಬಿಸುಡು ಗಾರ್ತಿ (ಶಸಾರ. ೩೦೬).

[ಬಿಸುಡು + – ಕಾಱ + – ತಿ₁ (< – ಇತ್ತಿ)]

**ಬಿಸುದೊಱೆ** (ನಾ). ಬಿಸಿನೀರಿನ ನದಿ : ಬಾಂದೊಱೆ ಬಿಸುದೊಱೆ ಯಾದುದು ಕಾಲವಶಮದೇನಾಗಿಸದೋ (ಜಗಚ. ೧೬-೬೬).

[ಬಿಸು₂ (< ಬಿಸಿದು) + ತೊಱೆ₂]

**ಬಿಸುನೀರ್, ಬೆನ್ನೀರ್, ಬೆನ್ನೀರು** (ನಾ). = ಬಿಸಿನೀರ್ : "ಬಿಸುನೀರ್ ಬೆನ್ನೀರ್" (ಶಶಾಕಿ. ೬); ಅರಾತಿಪಾರ್ಥಿವರ ಕಾಂತಾನೇತ್ರ ನೀರೇಜದೊಳ್ ಬಿಸುನೀರಂ . . . ಪುಟ್ಟಿಸುವಂ ತನ್ನೃಪನಂದನಂ (ಲೀಲಾವ. ೦-೯೮) ; ಈ ಕೂಸಿನ ಮೆಯ್ಯ ಮಾಸಂ ತೊಳೆಯೆ ಬಿಸುನೀರ್ಗಪಾಯಮಂ ನೆನೆಯಲ್ (ದಶಕು. ೨-೯೪ ವ). **ಬೆನ್ನೀರ್ :** ಪಗೆವರ ಬೇರೊಳ್ ಬೆನ್ನೀರಂ ಪೊಯ್ದು ನಿನಗೆ ಮಾಱ್ಪಂ ಧರೆಯಂ (ಹಂಪಭಾ. ೮-೩೪) ; ಮುನ್ನೀರ್ ಬೆನ್ನೀರನೆ ಬೆರಸಲಣ್ಣ ಕಣ್ಣೀರೊಳವೆ (ಹಂರಾಮಾ. ೯-೯೨) : ಮಿತ್ರಂ ಬಿಸಿಲಂ ಹಿಳಿಯಲ್ ಬೆನ್ನೀರೊಸರ್ವಂತಿರ್ದುದು ಮರೀಚಿಕಾಜಲ ಮೆತ್ತಂ (ಗಂಕ. ೯-೧೮). **ಬೆನ್ನೀರು :** ಬಿಡಿದು ಪೊನ್ನಂಡೆಗಳ ತೀವಿದರೊಡನೆ ಬೆನ್ನೀರೆರೆವುಲಕ್ಷ್ಮಿದರ್ಬೆಡಗಿಯರು ನಳಿತೋಳ (ಪಾಗಹ. ೫-೬) ; ಕುನ್ನಿಗಳ ಬುಡಕೆ ಬೆನ್ನೀರೆರೆಯದಿರೆ ನಾನು ಕೆಮ್ಮನೀ ಕೊಡಲಿವೊತ್ತವನೇನು (ಕಹಾಕ. ೬೨). [ಬಿಸು₂ (< ಬಿಸಿದು) + ನೀರ್]

**ಬಿಸುನುಡಿ** (ನಾ). ಕಠಿಣವಾದ ಮಾತು : ಆ ವನಿತೆ ಬಿಸುನುಡಿಗಳಿಂ ಗೂಢ ಪಾದರಾಗಿರಿಯೆಂದಳು (ಬಕೋಪು. ೦೩-೯). [ಬಿಸು₂ (< ಬಿಸಿದು) + ನುಡಿ₂]

**ಬಿಸುನೆತ್ತರ್** (ನಾ). = ಬಿಸಿನೆತ್ತರು : ಬಿಸುನೆತ್ತರ್ ನೆಣನಡಗೆಲ್ವ ಸಮಸ್ತಂ ಸುರಿಯೆ ಕೈಗೆ ತೊವಲುಱಿಯಲ್ (ಹಂಪಭಾ. ೮-೬೬) ; ಭೀಷ್ಮರ ಬಿಸುನೆತ್ತರಂ ಕುಡಿವೊಡಿನ್ನುಮೊಳು (ಗದಾಯು. ೪-೪೨) ; ಕಿಂಕರಯೂಥಮಾಗ್ಗಿ ತಗ್ಗಿರೆ ಬಿಸುನೆತ್ತರುಣ್ಣೆ ಪರಿಯುತ್ತಿರೆ (ಎಕ. VIII, ಸಾಗರ. ೧೦೯-೨೬ : 1042).

[ಬಿಸು₂ (< ಬಿಸಿದು) + ನೆತ್ತರ್]

**ಬಿಸುಪು,** ಬಿಸುಪ್ಪು (ನಾ). ೧. ತಾಪ ; ಕಾವು ; ಉಷ್ಣತೆ: ಬಿಸಿಲೆಸಕ ದಿಂದೆ ಕೊರಗಿದ ದೆಸೆವೆಣ್ಗಳ ಬಿಸುಪನಾಱಿಪಂತಿರೆ ಗಿಳಿಗಳ್ ಪಸುರೆಱಕೆ ಯೆಂಬ ಬಾಱಿಯ ಪೊಸಬಿಜ್ಜಣಿಗೆಗಳಿನೆಸಗಿಪುವು ತಣ್ಣೆಲರಂ (ಕಾದಂಪೂ. ೧೩೦): ಬಿಸುಪಮರ್ದ ನೊಸಲ ಕಣ್ಣಿಂ . . . ನೋಟ್ಪರನಂಜಿಸೆ (ಕಬ್ಬಿಗ. ೨೩೩) ; ಚೆನ್ನೇಸಱ ಬಿಂಬಂ ಬಿಸುಪನುಳಿದು (ಜಯಕಾ. ೩-೬೬). ೨. ಮೈಯ ಕಾಖವೇರುವಿಕೆ: ಜ್ವರ : ಬೆಳ್ಳಿ ಬಿಸುಪಿಂದ ಮಗು ಳೊಮ್ಮೆ ಮಲಗಲ್ (ಕಾಲೂರ. ೧೩೮-೩೫೦). ೩. (ಅಲಂ) ವಿರಹ ತಾಪ : ಮನದ ಮೆಯ್ಯ ಸಂತಾಪದೊಳ್ ಬಿಸುಸುಯ್ದು ಬಿಸುಪಿನೊಳ ನಿತುವಂ ಗೆಲ್ದು ಕೆಂದಳಿರ್ಗಸು ಸೇಕದ ತೊವಲ್ಗಣೆಯಾಯ್ತು (ಹಂಪಭಾ. ೫-೬ ವ). Δ **ಬಿಸುಪ್ಪು :** ೧. ಕೇದಗೆವೂವಂ ಚಾದಗೆ ಬಾಯಂ ಬಿಡೆ ಬಿಡುತಿರೆ ಬಿಡುವನಿ ಕಡುಬಿಸಿಲಿಂ ಸೋದು ಬಿಸುಪ್ಪಂ ಚಾದಿಯ ಕಂಪಂ . . . ಎಲರ್ಬಂದುದು (ಅರ್ಜುನ. ೪-೦೨೬) : ನೆಲೆವೆರ್ಚಿದ ಪೂಗೊಳಂ ಬಿಸುಪ್ಪೆಸಗದ ನುಣ್ಬಿಸಿಲ್ (ಎಕ. VII, ಶಿಕಾ. ೧೯೬-೪೦; 1181); ವಿರಹ ವಿಮ್ಮಡಿಸೆ ಸುಯ್ ಮೂಪಡಿಸೆ ಮೈ ಬಿಸುಪ್ಪಿರದೆ ನಾಲ್ವಡಿಸೆ ಕಿಡಿಕಿಡಿಯಾಗಿ (ಕಬಕ. ೪೬-೧೦). [ಬಿಸು₂ (<ಬಿಸಿದು) + –ಪು₂] •

**ಬಿಸುಪುಗಿಡಿಸು** (ಕ್ರಿ). ತೀಕ್ಷ್ಣತೆಯನ್ನು ಹೋಗಲಾಡಿಸು ; ಶಾಖ ವನ್ನು ಕುಗ್ಗಿಸು : ಧರಣೀಶನ ಚಿತ್ತದ ಶಾಂತರಸಂ ನೆಲೆವೆರ್ಚೆ ಬಿಸುಪು ಗಿಡಿಸಿತ್ತಕ್ಕುಂ ಖರಕಿರಣಂಗಳಂ (ಪುಣ್ಯಾ. ೧೧-೩).

[ಬಿಸುಪು + ಕಿಡಿಸು (< ಕೆಡಿಸು₁)]

**ಬಿಸುಪೇರು** 'ಬಿಸುಪೇಱು' ನೋ.

**ಬಿಸುಪೇಱು,** ಬಿಸುಪೇರು (ಕ್ರಿ). ೧. ತಾಪವು ಹೆಚ್ಚಾಗು: ಕಾವೇರು : ಸಪ್ತಾಬ್ಧಿ ವೇಳಾಲತಾಂಗಂ ಬಿಸುಪೇಱಿತ್ತಧ್ರುಗಂಗಾಬ್ಜನಿ ಮುಗಿದುದದೇಂ ರೌದ್ರಮೋ ಶೈಲದಾಹಂ (ಜಗಚ. ೮-೩೫) ; ಕೋಡಿ ಬಾಡಿ ಸುರುಳ್ದುರುಳ್ದು . . . ಬಿಸುಪೇಱಿ ಕಳೆಗುಂದಿ (ಗಂಕ. ೪-೧೧೮ವ); ಪೆಱತೊಂದು ನೆಪದೊಳು ಬಿಸುಪೇಱಿದ ಕೋಪದುಱಿಬಿನಿಂದೊದಱುವ ಪತಿಗೆ . . . ಪೆಱದೆಗೆವುದು (ಹರಿಬ. ೩-೨೬). **ಬಿಸುಪೇರು :** ೨. ಜ್ವರವು ಹೆಚ್ಚಾಗು ; ಮೈಯ ತಾಪವೇರು : ಬೆಳ್ಳಿ ಬಂದಳ್ ಮನೆಗೆ ಬಿಸುಪೇರಿ (ಕಾಲೂರ. ೦೨೩-೨೮೧).

[ ಬಿಸುಪು + ಏಱು₁ (< ಏಱ್₁) ]

**ಬಿಸುಬೂರಿಗೆ** 'ಬೀಸುಂಬೂರಿಗೆ' ನೋ.

**ಬಿಸುರ್,** ಬಿಸುರು (ಕ್ರಿ). ೧. ತಾಪಗೊಳ್ಳು ; ಸಂಕಟಪಡು : ಹಾ ಮಲ್ಲಣಿಯೆನುತ್ತಿರದೆ ಕಳವಳಿಸಿ ನುಡಿಯಲ್ಕೇಳ್ದು ಮನದನ್ನನುಲಿ ಯೆಂದು ತಿಳಿದು ಬಿಸುತರ್ (ಕುಮಾರಪು. ೩-೧೧೫). **ಬಿಸುರು :** ೨. (?): ಸಂದ ದ್ರವ್ಯವ ಮತ್ತೆ ಉಲ್ಲಂಘಿಸಿ ಇರುತ್ತ ಮತ್ತೆ ವಿಶ್ರದಿಂದ ದ್ರವ್ಯಂಗಳು ಬಿಸುರಿ ಬಂದು ಸೋಂಕಲಿಕೆ ಮತ್ತಿರಿಸಬಹುದೇ (ಸರ್ವಜ್ಞ. ೦೦೮-೬೦೨). [ < ಬಿಸು₂ ]

**ಬಿಸುರಕ್ತ** (ನಾ). = ಬಿಸಿನೆತ್ತರು : ಸುರಿವ ಬಿಸುರಕ್ತದಿಂದಾ ಜನಜಾಲ ವೈಡಿತು ದೆಸೆದೆಸೆಗೆ (ಕಂವಪ. ೦೦-೫೦). [ ಬಿಸು₂ (< ಬಿಸಿದು) + ರಕ್ತ ]

**ಬಿಸುರು** 'ಬಿಸುರ್' ನೋ.

Δ **ಬಿಸುಪ್ಪು** 'ಬಿಸುಪು' ನೋ.

**ಬಿಸುವಳಿ** (ನಾ). (ಮೃಗಗಳ ಹಿಂಡು) ಸೇರುವ ಜಾಗ (?) : ನೆಲನಂ ನಿಱುಗೆಯುಂ ನಡೆವೊಂದು ಪದಮುಮಂ ಸೋವಳಿ ಮೇವಳಿ ಬಿಸುವಳಿಯುಂ

ಬಲವಂ ಶಕುನವುನೊಳ್ಕಿತ್ತುಪಾಳ್ಗುಬಿಪ್ಪಿಂ ಪಿಡಿವಂದು (ಶಂಪಾ. ೩-೪೬) ; "ಬಿಸುವಳಿಯುಂ — ಒಟ್ಟಾಗುವಿಕೆಯುನ್ನು" (ಶಂಶಬ್ದ. ೦೯೬).

[ಬಿಸು$_1$ + — ವಳಿ$_3$]

**ಬಿಸುವಾತು** (ನಾ). ಕಾವೇರಿದ ಮಾತು ; ಆವೇಶದ ನುಡಿ : ಪಸಿದು ಬಳಲಿ ಪರದೇಸಿ ಬಾಯ್ವಿಡೆ ಕಂಡಸವುಯವೆಂದಬ್ಬರಿಸದೆ ಬಿಸುವಾತಿನೊಳು ಬೇಯಿಸದಿದ್ದ ಮಾತ್ರವನೊಸದೀವುದೊಳ್ವಾತಿನೊಳು (ಹರಿ. ೯-೩೩).

[ಬಿಸು$_2$ (< ಬಿಸಿದು) + ಮಾತು$_1$]

**ಬಿಸುವಿಸಿಲ್**, ಬಿಸುವಿಸಿಲು, ಬೆಂಬಿಸಿಲ್ (ನಾ). = ಬಿಸಿವಿಸಿಲ್ : ದೆಸೆವೆಣ್ಗಳ್ ಬಿಸುವಿಸಿಲಿಂ ಬಸವಳಿದುಃಪೆಂದು ಸುಯ್ದು ಬಿಸುಸುಯ್ಕೆಲರೆಂಬ ಸಕವುನೊಡರ್ಚೆ ಬೀಸಿದುದು (ರಾಜಶೇ. ೩-೩೨). **ಬಿಸುವಿಸಿಲು :** ಬಸವಳಿದು ಬಿಸುವಿಸಿಲ ಪರಿಯಿಂದೆ ನೆರೆ ನೊಂದು . . . ಮರಿದುಂಬಿಯು ಬಳಿಸಾರೆ (ಶಂಕ. ೨-೦೩). **ಬೆಂಬಿಸಿಲ್ :** ಅವ್ಯಯೀಭಾವಕ್ಕೆ —ಅಂಗಯ್ . . . ಬೆಂಬಿಸಿಲ್, ಬೆಂಗೊಡಂ (ಶಮದ. ೦೬೩ ಸೂತ್ರ).

[ಬಿಸು$_2$ (<ಬಿಸಿದು) + ಬಿಸಿಲ್]

**ಬಿಸುವಿಸಿಲು** 'ಬಿಸುವಿಸಿಲ್' ನೋ.

**ಬಿಸುವುಡಿ** (ನಾ). ಕಾದ ಮರಳು : ಕೊಳ್ಳಗಳಂ ಬಿಡದೋವದೆ ಬೀಸುವ ಬಳ್ಳುಗೆಡೆದು ಬಿಸುವುಡಿಯಂ ಸೂಸುವ . . . ಮರುಳ ನೆರವಿಗಿನಿಸಪ್ಪಡವಾಗಿಯದೆ (ಪರ್ವಪು. ೦೩-೨೦ ಠಗೆ) ; ಜನವೆಲ್ಲಂ ನೋಡೆ ಚೌವಟ್ಟದ ಬಿಸುವುಡಿಯೊಳ್ ಬಿಟ್ದು ಸಾವಂತುಟಾಯ್ತೇ (ಶಾಬ್ದವ. ೩೬೯).

[ಬಿಸು$_2$ (<ಬಿಸಿದು) + ಪುಡಿ]

**ಬಿಸುವೂರಿಗೆ** 'ಬೀಸುಂಬೂರಿಗೆ' ನೋ.

**ಬಿಸುಸುಯ್$_1$**, ಬಿಸುಸುಯ್ಯು (ಕ್ರಿ). (ದುಃಖ, ಕೋಪ, ಆಯಾಸ ಮುಂತಾದಂವುಗಳಿಂದ) ಬಿಸಿಯುಸಿರನ್ನು ಬಿಡು : ಮನದ ಮೆಯ್ಯ ಸಂತಾಪದೊಳ್ ಬಿಸುಸುಯ್ದು ಬಿಸುಪಿನೊಳನಿತುಮಂ ಗೆಲ್ದು (ಶಂಪಾ. ೩-೬ ವ) ; ಸತ್ತ ಭೂಪರ ಪೆಂಡಿರ್ ಬಿಸುಸುಯ್ಯೆ (ಎಕ. VIII, ಸಾಗರ. ೦೦೯-೩೩; 1042) ; ಹೇಳಿ ಫಲವಿನ್ನೇನೆನುತ ಬಿಸುಸುಯ್ದನಾ ಪಾರ್ಥ (ಕುವ್ಯಾಕ. ೦೬-೨೮). **ಬಿಸುಸುಯ್ಯು :** ಕಣ್ಬನಿಯೊಸರುತ್ತಿರೆ ನಲ್ಲಳ್ ಹಾಯೆನುತುಂ ಬಿಸುಸುಯ್ಯುತೆ (ಜಯಶಾ. ೨-೨೩); ಮುನಿಮುಖ್ಯಂ . . . ಬಿಸಿಲಿನೊಳು ಬೆಂದುಱೆ ಬೆಮರುತ ಬಿಸುಸುಯ್ಯುತ್ತಂದು ನಿಂದನು ಮರದ ನೆಳಲೊಳು (ಹರಿ. ೨-೩೨). [ಬಿಸು$_2$ (<ಬಿಸಿದು) + ಸುಯ್$_1$]

**ಬಿಸುಸುಯ್$_2$** (ನಾ). (ದುಃಖ, ಕೋಪ, ಆಯಾಸ ಮುಂತಾದುವುಗಳಿಂದ ಬಿಡುವ) ಬಿಸಿಯಾದ ಉಸಿರು : ನೀಳ್ದ ಪೊಗೆಯುಂ ಕಿಡಿಯುಂ ಬಿಸುಸುಯ್ಯ ಗಾಳಿಯೊಳ್ ತೊಡರ್ದು (ಆದಿಪು. ೨-೪೦) ; ಅವಳ . . . ಬಿಸುಸುಯ್ಯೆಲರಿಂ ಗಱೆ ಸೀದು ಸೌರಭಕ್ಕೆಱಗಿದಳಿಗಳುರುಳುತ್ತಿರೆ (ಪರ್ವಪು. ೪-೪೯) ; ವಿರಹಿಗಳ ಬಿಸುಸುಯ್ಯ ಕಿಚ್ಚಟ್ಟಿ ತನ್ನೆರ್ದೆ ಪೊತ್ತಿ ಪೊಗೆವ ಪರಿಯೋ . . . ಎನಲ್ ಹರಿಣಾಂಕನುದರದ ಕಲಂಕವೊಪ್ಪಿದುದು (ಪದ್ಮರಾ. ೮-೬೩). [ಬಿಸು$_2$ (<ಬಿಸಿದು) + ಸುಯ್$_2$]

**ಬಿಸುಸುಯಿಲ್**, ಬಿಸುಸುಯಿಲು (ನಾ). =ಬಿಸುಸುಯ್$_2$: ಬಿಸುನೆತ್ತರ್, ಬಿಸುಸುಯಿಲ್ (ಶಾಶಾಬ್ದ. ೦೯೬ ಉದಾ). **ಬಿಸುಸುಯಿಲು :** ಅರಸ ನೆಱೆ ಬಿಸುಸುಯಿಲ ಸುಯಿವುತ ಪುರಕೆ ತೆರಳದೆಯಿರಲಿಕೆ (ಸಂಶಕ. ೨೬-೦೮) ; ಸುಮಂತ್ರನು . . . ಸಾರಿದನಕ್ಷಿಯುಗಳದ ವಾರಿಗಳ ಬೀಳಿಕೆಯು ಬಿಸುಸುಯಿಲಿ[ಪಾಠಾಂ. ಸುಯ್ಲಿ]ನ ಮಹೀಪತಿಯ (ತೊರರಾ. ೨-೩-೩).

[ಬಿಸು$_2$ (<ಬಿಸಿದು) + ಸುಯಿಲ್]

**ಬಿಸುಸುಯಿಲು** 'ಬಿಸುಸುಯಿಲ್' ನೋ.

**ಬಿಸುಸುಯ್ಯು** 'ಬಿಸುಸುಯ್$_1$' ನೋ.

**ಬಿಸುಸುಯ್ಲು** (ನಾ). = ಬಿಸುಸುಯ್$_2$ : ಜಯವಹುದೆ ನಿರ್ವೇದದಲಿ ನಿರ್ಭಯವಹುದೆ ಬಿಸುಸುಯ್ಲಿನಲಿ (ಕುವ್ಯಾಕ. ೦೬-೬) ; ರಾಗವಡಗಿದ ಮನದ ಬಿಸುಸುಯ್ಲ ಸೂಟಿಗಿಂಬಾಗಿರ್ದ ನಾಸಿಕದ ಬಿಗಿದ ಬೆಱಗಿನ ಚಿಂತೆಗಾಗರಂ ತಾನಾಗಿ (ಕಬಸ. ೬-೨೪).

[ಬಿಸು$_2$ (<ಬಿಸಿದು) + ಸುಯ್ಲ (<ಸುಯ್ಯಲ್)]

**ಬಿಸುಹೂರಿಗೆ** 'ಬೀಸುಂಬೂರಿಗೆ' ನೋ.

**ಬಿಸುಳಿಗೆ** 'ಬೆಸಳಿಗೆ' ನೋ.

**ಬಿಸುಟ್ಟ** 'ಬಿಸುಡು' ಪರಾ.

**ಬಿಸೂರಿಗೆ** 'ಬೀಸುಂಬೂರಿಗೆ' ನೋ.

**ಬಿಸೆಯುಸತ್ತಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬಿಸೆಯುಸತ್ತಿಕುಮಾರ ವಸುನ್ಧಪತಿತನಯು ಪಟುಕ್ಕಣ್ಣಸತ್ತಿಯಾ ಪುತ್ರನತಿಪ್ರಸಿದ್ಧಘನನಿರ್ಮಲ ಮಾಗುತ (ಎಕ. XVI, ಶಾವುಗ. ೦೨-೦ ; ಸು. 754). [?]

**ಬಿಸ್ಕತ್ತು**, ಬಿಸ್ಕೀಟು, ಬಿಸ್ಕೆಟ್ಟು (ನಾ). ಗೋಧಿ ಮೊದಲಾದ ಧಾನ್ಯಗಳ ಹಿಟ್ಟಿಗೆ ಹುದುಗು ಹಾಕದೆ. ತೆಳ್ಳನೆಯ ಸಣ್ಣ ಬಿಲ್ಲೆಗಳ ಆಕಾರದಲ್ಲಿ ತಯಾರಿಸಿದ, ಹಗುರವಾಗಿ ಇರುವ ಒಂದು ಬಗೆಯ ತಿನಿಸು : ಸುಶೀಲೆಯೇನು ಚಿಕ್ಕಗೂನೆ ಬಿಸ್ಕತ್ತು ತಿನ್ನೋಕೆ ? (ಬಿಪಶಂ. ೨೨೬) ; ಸ್ನೇಹವಾಕ್ಯದ ಜೊತೆಗೆ ಚಹ ಬಿಸ್ಕತ್ತುಗಳು ಮಾತ್ರ ಸಿಗುತ್ತಿದ್ದವು (ಬಾಕ. ೯ ಕಥಾಮಾಲ). **ಬಿಸ್ಕೀಟು :** ಎದುರಿಗಿದ್ದ ಬಿಸ್ಕೀಟುಗಳನ್ನು ಒಂದೊಂದಾಗಿ ಬಾಯಿಗೆ ಹಾಕಿಕೊಳ್ಳುವುದೂ . . . ನಡೆದಿತ್ತು (ರಕ್ತಗೋ. ೩) ; ಚಹ ಬಂತು, ಬಿಸ್ಕೀಟಿಗೂ ಹೇಳಿದ್ದಾಯಿತು (ಕಂದುಱ. ೬೬). **ಬಿಸ್ಕೆಟ್ಟು :** ಅವರು ಕಾಫಿ, ಬಿಸ್ಕೆಟ್ಟು ಕೊಟ್ಟರು (ರೂಪ).

[←ಇಂ. Biscuit]

**ಬಿಸ್ಕೀಟು** 'ಬಿಸ್ಕತ್ತು' ನೋ.

**ಬಿಸ್ಕೆಟ್ಟು** 'ಬಿಸ್ಕತ್ತು' ನೋ.

**ಬಿಸ್ಮಿಲ್ಲಾ** (ನಾ). ಮುಸಲ್ಮಾನರು ಕಾರ್ಯಾರಂಭದಲ್ಲಿ ಹೇಳುವ 'ದೇವರ ಹೆಸರಿನಲ್ಲಿ' ಎಂಬರ್ಥದ ಮಾತು : ಬಿಸ್ಮಿಲ್ಲಾ ಹೇಳಲಿಕ್ಕ ದಿಕ್ಕಿಲ್ಲದಾಯಿತ (ಶ್ರೀಮುಖ. ೦೦೬). [←ಅರ. ಹಿಂ. ಬಿಸ್ಮಿಲ್ಲಾಹ್ ; ಮರಾ. ಬಿಸ್ಮಿಲ್ಲಾ]

**ಬಿಳಚಿ** (ನಾ). ಒಂದು ಬಗೆಯ ಸಸ್ಯ : ಹೆತ್ತರಾಣಿಕೆ, ನಲ್ಲ, ಹೆದ್ದರಣಿ, ಬಿಳಚಿ, ತೆರಣಿ, ಕಕೋರ್ಲ (ವೃಕ್ಷಿಗ. ೩೩-೦೨೬೯).

[ದೇ.॥ ತಮಿ. ಪಿಳಿಚ್ಚ್, ಪಿಲಿಞ್ಞಿ, ಪುಳಿಚ್ಚ್]

**ಬಿಳಲ್** 'ಬೀಟಿಲ್' ನೋ.

**ಬಿಳಲು** 'ಬೀಟಿಲ್' ನೋ.

**ಬಿಳಲುಬಿಡು** 'ಬೀಟಿಲ್ಬಿಡು' ನೋ.

**ಬಿಳಲ್ವರಿ** 'ಬೀಟಲ್ವರಿ' ನೋ.

**ಬಿಳವೃತ್ತಿ** 'ಬೀಟವೃತ್ತಿ' ನೋ.

**ಬಿಳಸ** (ನಾ). ಒನಪು; ಒಯ್ಯಾರ : "ಬಿಳಸ (ವಿಳಸ) — ವಿಲಾಸ = ಶೃಂಗಾರ ಚೇಷ್ಟೆ, ಒಯ್ಯಾರ" (ಶಬ್ದಕೋ. ೩೦); ವಿಲಾಸ–ಬಿಳಸ ; ಬಂಧೂಕ-ಬಂದುಗೆ (ಶಬ್ದಮ. ೦೬೦ ಸೂತ್ರ). [<ಸಂ. ವಿಲಾಸ]

**ಬಿಳಿ$_1$** (ಕ್ರಿ). ಮುಗಿ : ತೀರು : ಮಳೆಗಾಲ ಬಿಳಿದ ಮೇಲೆ ಅವರಿಗೆ ರಜೆ ಉಂಟಂತೆ (ಸ್ವಕ್ಷಹೂ. ೯೬). [? ತೆಲು. ವೆಲಿಯು = ಮಳೆಯು ನಿಲ್ಲು]

**ಬಿಳಿ$_2$** (ನಾ). ೧. ಬಿಳುಪು; ಶ್ವೇತವರ್ಣ : ಬಿಳಿಯ ತಾವರೆಯೆಸಟಿನೊಳ್ ಪಡಿದ ಬೆಳ್ಗೊಡೆ ರಯ್ಯಮಾಗೆ (ಶಂಪಾ. ೦೩-೦೦೯); ಜಳಜಭವನೊಲಿದು ಕನ್ನೆಯ ತಳಕು ತಂದೀಯೆ ವಾರಿಜಂಗಳ ಕೆಂಪಂ ಬಿಳಿಯ ಸರಸಿರುಹ ಮಾದುವು (ದರ್ಪಾಮ. ೩-೦೩೪) ; ಬಿಳಿಯ ಚೌರಿಗಳೆಸೆಯೆ (ಕುವ್ಯಾಪ್ರೀ. ೦೬-೩೦). (ಗು). ೨. ಬಿಳುಪಾದ; ಶ್ವೇತವರ್ಣದ : 'ಬಿಳಿಕಂಚುವಾಳ', 'ಬಿಳಿಗಣಗಲು' ಪರಾ. [ದೇ.॥ ತಮಿ. ವೆಳ್; ಮಲ. ವೆಳ; ತುಳು. ಬಿಳಿ; ತೆಲು. ವೆಲಿ; ಪರ್ಜಿ. ವಿಲ್]

**ಬಿಳಿಅಕ್ಕಬುಹುಲ್ಲು** (ನಾ). ಒಂದು ಬಗೆಯ ಸಸ್ಯ : (ವ್ಯ ಕಿ. ೩೦–೫೮೬). [ಬಿಳಿ₂ + ಅಕ್ಕಬು + ಹುಲ್ಲು (< ಪುಲ್)]

**ಬಿಳಿಅಗಿಲು** (ನಾ). ಒಂದು ಬಗೆಯ ಮರ : ಬಿಳೀಬುಡ್ಲಗೆ. ಬಿಳೀ ದೇವದಾರು, ಬಿಳೀಅಗಿಲು (ವ್ಯ ಕಿ. ೩೨–೬೦೯). [ಬಿಳಿ₂ + ಅಗಿಲು (< ಅಗಿಲ್)]

**ಬಿಳಿಅಭ್ರಾಂಗ** (ನಾ). ಒಂದು ಬಗೆಯ ಸಸ್ಯ : (ವ್ಯ ಕಿ. ೪೧–೮೦೩). [ಬಿಳಿ₂ + ಅಭ್ರಾಂಗ₀]

**ಬಿಳಿಉಪ್ಪಿ** (ನಾ). ಒಂದು ಬಗೆಯ ಔಷಧೀಸಸ್ಯ : ಬಿಳಿಕೊಮ್ಮೆ, ಬಿಳಿಉಪ್ಪಿಎಲೆ, ಆಡುಸೋಗೆ, ಹಾಲುಕೊರಟಗೆ, ಕುಪ್ಪಿಎಲೆ, ಮಂಗರವಳ್ಳಿ . . . ಚೊರ್ಣಿಸಿ (ಸಕವ. ೫೦. ೪೪೩) : ಬಿಳೀಉಪ್ಪಿಗಿಡ, ಎಸಗಳೆ, ಎಗಚಿ (ವ್ಯ ಕಿ. ೦೦–೦೬೭). [ಬಿಳಿ₂ + ಉಪ್ಪಿ]

**ಬಿಳಿಉಪ್ಪುನೇರಳೆ** (ನಾ). ಒಂದು ಬಗೆಯ ಉಪ್ಪುನೇರಳೆ : ಬಿಳೀ ಉಪ್ಪುನೇರಳೆ, ಹಿಪ್ಪಲಿನೇರಳೆ (ವ್ಯ ಕಿ. ೫೫–೧೦೯೯). [ಬಿಳಿ₂ + ಉಪ್ಪುನೇರಳೆ]

**ಬಿಳಿಊರ್** (ನಾ). ಒಂದು ಊರಿನ ಹೆಸರು : ಪೆದ್ದೊಱೆಗೆರೆಯ ಬಿಳಿಊರ್ಪನ್ನಿರ್ಛಾಳ್ಕೆಯುಮಂ. . . ಕೊಟ್ಟರ್ (ಇಅ. VI, ೦೦೩–೪; 887). [ಬಿಳಿ₇ + ಊರ್]

**ಬಿಳಿಎಕ್ಕೆ** 'ಬಿಳಿಯೆಕ್ಕೆ' ನೋ.

**ಬಿಳಿಂಬಿ**, ಬಿಂಬಲಿ, ಬಿಂಬ್ಲಿ, ಬಿಳ್ಳಂಬಿ (ನಾ). ೧. ಒಂದು ಬಗೆಯ ಹಣ್ಣಿನ ಮರ ಮತ್ತು ಅದರ ಹುಳಿಹಣ್ಣು ; P ಈ ಹಣ್ಣಿನ ರಸ ವನ್ನು ಚರ್ಮರೋಗಕ್ಕೆ ಔಷಧವನ್ನಾಗಿ ಬಳಸುತ್ತಾರೆ : "ಬಿಲಿಂಬಿ ಮರ, ಬಿಳಿಂಬಿ, ಬಿಂಬ್ಲಿ" (ಸಸ್ಯ. ೦೭). **ಬಿಂಬಲಿ : ೨.** ಒಂದು ಬಗೆಯ ಮರ : ಕಿಡಕಿಯ ಹೊರಗಿನ ಬಿಂಬಲೀಮರದ ಮೇಲೆ ಕಾಗೆಯೊಂದು ಎಡೆ ಬಿಡದೇ ಕಾವ್‌ಗುಡುತ್ತಿತ್ತು (ಮೂರುದಾ. ೯೫). **ಬಿಂಬ್ಲಿ : ೧.** ಬಿಳಿಂಬಿ, ಬಿಂಬ್ಲಿ (ವ್ಯ ಕಿ. ೦೦–೦೬೩). **ಬಿಳ್ಳಂಬಿ : ೨.** ಬಿಳ್ಳಂಬಿ (ಲಾವಿ). — ಇದು ಬಹಳ ಯೆತ್ತರವಾಗಿ ಬೆಳೆಯದಿದ್ದರೂ ಇದರ ಟೊಂಗೆಗಳು ಗಡುತರವಾಗಿ ದೂರ ದೂರ ಹಬ್ಬುತ್ತವೆ . . . ಇದನ್ನು ಇಮಾರತಿಗೆ ಬಹಳ ಉಪಯೋಗಿ ಸುವರು (ಕಫಾಗ. ೯೫).
[ದೇ.॥ ತಮಿ. ಪಿಲಿಮ್ಬಿ ; ತುಳು. ಬಲಿಂಬಿ, ಬಿಂಬಲಿ, ಬಂಬಲಿ, ಬಿಂಬುಲಿ ; ತೆಲು. ಬಿಲಿಂಬಿ ]

**ಬಿಳಿಕ** (ನಾ). ಬೆಳ್ಳಗಿರುವವನು ; ಬಿಳಿಯ : ಕರಿದುಂಟೀತಂಗೆ ಈತನೊಳ್ ಮೇಣ್ ಕರಿಕಂ ಏವಂ ಬಿಳಿಕಂ (ಶಬ್ದ ಮ. ೪೦೩ ಪ್ರಯೋ). [ ಬಿಳಿ₂ + — ಕ₃ ]

**ಬಿಳಿಕಂಚುವಾಳ** (ನಾ). ಬಿಳಿಯ ಹೂವುಗಳನ್ನು ಬಿಡುವ ಒಂದು ಬಗೆಯ ಕಂಚುವಾಳದ ಮರ : ಬಿಳೀಕಂಚುವಾಳ, ಬಿಳೀಮಂದಾರ (ವ್ಯ ಕಿ. ೦೨–೨೦೭). [ ಬಿಳಿ₂ + ಕಂಚುವಾಳ ]

**ಬಿಳಿಕಕ್ಕೊರಲೆ** (ನಾ). ಒಂದು ಬಗೆಯ ಸಸ್ಯ : ಬಿಳಿಕಕ್ಕೊರಲೆ ಅರುಣ ರಿವು ಸುರಸುರಿಕೆ (ಅಕಶ. ೧೦–೦೦). [ ಬಿಳಿ₂ + ಕಕ್ಕೊರಲೆ ]

**ಬಿಳಿಕಣಗಲು** 'ಬಿಳಿಗಣಗಲು' ನೋ.

**ಬಿಳಿಕಣಿಗಿಲ** 'ಬಿಳಿಗಣಗಲು' ನೋ.

**ಬಿಳಿಕಲ್ಲು** (ನಾ). ೧. ಬಿಳುಪಾದ ಕಲ್ಲು. ೨. ಬಿಳಿಯ ಹರಳು : ನಮಗೇಕಪ್ಪ ಅಂತಹ ಓಲೆ, ಅದೆಲ್ಲಾ ನಿಮ್ಮಂತಹ ಹಣವಂತರಿಗೆ ! ನಮ್ಮಂತಹ ಬಡವರಿಗೆ ಬಿಳಿಕಲ್ಲಿನದೇ (ಅರಹೂ. ೯೦). [ ಬಿಳಿ₂ + ಕಲ್ಲು (< ಕಲ್₃) ]

**ಬಿಳಿಕಸ** (ನಾ). ಒಂದು ಬಗೆಯ ಹುಲ್ಲು : ಬೇರುಮಾಂಗಿಡ, ಬಿಳಿಕಸ (ವ್ಯ ಕಿ. ೬೨–೦೯೬೯). [ ಬಿಳಿ₂ + ಕಸ ]

**ಬಿಳಿಕಾಕಮುಷ್ಟಿ** (ನಾ). ಒಂದು ಬಗೆಯ ಸಸ್ಯ : ಬಿಳೀಕಾಕಮುಷ್ಟಿ, ಪೆಲ್ಲ, ತೆಲ್ಲಕಾಕಮುಷ್ಟಿ (ವ್ಯ ಕಿ. ೦೯–೩೫೪). [ ಬಿಳಿ₂ + ಕಾಕಮುಷ್ಟಿ ₇]

**ಬಿಳಿಕಾರೆಮುಳ್ಳು** (ನಾ). ಒಂದು ಬಗೆಯ ಮುಳ್ಳಿನ ಗಿಡ : ಬಿಳೀಕಾರೆ ಮುಳ್ಳು, ಸಣ್ಣಕಾರೆ (ವ್ಯ ಕಿ. ೭೩–೧೩೩೯). [ ಬಿಳಿ₂ + ಕಾರೆಮುಳ್ಳು]

**ಬಿಳಿಕಿ** (ನಾ.) ಬೆಳ್ಳಗಿರುವವಳು : ಕರಿಕಿ, ಬಿಳಿಕಿ, ಮುದುಕಿ (ಶಬ್ದ ಮ. ೦೯೪ ಪ್ರಯೋ). [ಬಿಳಿಕ + — ಇ₂]

**ಬಿಳಿಕುಂತಾಳು** (ನಾ). ಒಂದು ಬಗೆಯ ಸಸ್ಯ : (ವ್ಯ ಕಿ. ೩೫–೬೬೭). [ ಬಿಳಿ₂ + ಕುಂತಾಳು₀ (< ಕುಂತಳ₂) ]

**ಬಿಳಿಕೆಸವು** (ನಾ). ಕೆಸವಿನಲ್ಲಿ ಒಂದು ಬಗೆ ; ಬಿಳಿಯ ಬಣ್ಣದ ಕೆಸವು: ಬಿಳಿಕೆಸವು, ಕರಿಕೆಸವು . . . ಹೊಸಅಕ್ಕಿಅನ್ನ ಇವು ಜ್ವರದವರಿಗೆ ಅಪಥ್ಯ (ವೈದ್ಯಸಾ. I. ೫೭). [ಬಿಳಿ₂ + ಕೆಸವು]

**ಬಿಳಿಕೇಪಲ** (ನಾ). ಒಂದು ಬಗೆಯ ಸಸ್ಯ : (ವ್ಯ ಕಿ. ೪೭–೯೨೭). [ ಬಿಳಿ₂ + ಕೇಪಲ ]

**ಬಿಳಿಕೊಗ್ಗೆ** (ನಾ). ಒಂದು ಬಗೆಯ ಸಸ್ಯ : ಬಿಳಿಕೊಗ್ಗೆಬೇರು ಆಲದ ಹಾಲಿನಿಂದ ಅರದು (ಕಾಮುಶಾ. ೨೭೪). [ ಬಿಳಿ₂ + ಕೊಗ್ಗೆ (< ಕೊಗ್ಗ₁) ]

**ಬಿಳಿಕೊಮ್ಮೆ** (ನಾ). ಒಂದು ಬಗೆಯ ಔಷಧೀಸಸ್ಯ : ಕಿರೀಹುಳಿಪ . . . ಬಿಳಿಕೊಮ್ಮೆ (ವ್ಯ ಕಿ. ೬–೦೨೭) ; ಜೀರಿಗೆ ಬೇಲದ ಹಗಿನು ಬಿಳಿಕೊಮ್ಮೆ . . . ನುಗ್ಗೆಹೂವು ಇಷ್ಟು ತೂಕಗೊಂಡು (ಕಾಮುಶಾ. ೨೭೪). [ ಬಿಳಿ₂ + ಕೊಮ್ಮೆ₂ ]

**ಬಿಳಿಗಣಗಲು**, ಬಿಳಿಕಣಗಲು, ಬಿಳಿಕಣಿಗಿಲ (ನಾ). ಬಿಳಿಯ ಹೂವು ಗಳನ್ನು ಬಿಡುವ ಒಂದು ಬಗೆಯ ಕಣಿಗಿಲು : ಕಾಡುಜನಗಲು, ಬಿಳಿಗಣಗಲು, ಗಿಡ್ಡ (ವ್ಯ ಕಿ. ೬೯–೦೬೦೪). **ಬಿಳಿಕಣಗಲು :** (ವ್ಯ ಕಿ. ೫೬–೦೦೨೪). **ಬಿಳಿಕಣಿಗಿಲ :** ಚಲಸೋಂಕಿಗೆ ಬಿಳಿಕಣಿಗಿಲ ಹೂತೊಲು . . . ಮನವಲರಲಿ ಕನ್ನಡ ಮನೆಮನೆಗೆ (ಅರಳು. ೨೬೬–೭). [ಬಿಳಿ₂ + ಕಣಗಲು (< ಕಣಗಿಲ್₁)]

**ಬಿಳಿಗಣಜಿಲು** (ನಾ). ಒಂದು ಬಗೆಯ ಔಷಧೀಸಸ್ಯ : ಬೇವಿನ ಸೊಪ್ಪು, ಬಿಳಿಗಣಜಿಲ ಬೇರು, ಮಾವಿನ ಬೀಜ ಇವನು ಹಾಲಿಂದ ಅರೆದು (ವೈದ್ಯಸಾ. II. ೨೩೦). [ಬಿಳಿ₂ + ಗಣಜಿಲು₀ (< ಗಣಜಿಲೆ₁)]

**ಬಿಳಿಗಣಜಿ** (ನಾ). ಒಂದು ಬಗೆಯ ಔಷಧೀಸಸ್ಯ : ಬಿಳಿಗಣಜಿ, ಜೀರಿಗೆ ಸಹ ಹಳೇನೀರಿನಲ್ಲರೆದು ಕದಡಿ ಕುಡಿಯೆ ಮೂರು ದಿನಕ್ಕೆ ದಾಹಜ್ವರ ಬಿಡುವುದು (ಸಕವ. ೭೭). [ಬಿಳಿ₂ + ಗಣಜಿ ₇]

**ಬಿಳಿಗರಿಕೆ** 'ಬಿಳಿಗಜುಕೆ' ನೋ.

**ಬಿಳಿಗಜುಕೆ**, ಬಿಳಿಗರಿಕೆ (ನಾ). ಬಿಳಿಯ ಬಣ್ಣದ ಹುಲ್ಲು : "ಚಂಡ— ಇಲಿವಾಲ, ಬಿಳಿಗಜುಕೆ" (ಓಕಧಿ. ೫೩). **ಬಿಳಿಗರಿಕೆ :** ಬಿಳಿಗರಿಕೆಯನ್ನು ಔಷಧಿಗೆ ಬಳಸುತ್ತಾರೆ (ಜಾತಿ). [ಬಿಳಿ₂ + ಕಜುಕೆ (< ಕಜುಂಕೆ)]

**ಬಿಳಿಗಾರ**, ಬಿಳುಗಾರ (ನಾ). ಒಂದು ಬಗೆಯ ಖನಿಜಲವಣ ; ಟಂಕಣ : "ಟಂಕಣ—ಬಿಳಿಗಾರ" (ಅಕಶ. ೦೦–೩); ಆಗೋರಸುಮಂ ಬಿಳಿಗಾರಮುಂ ತನ್ನ ಪಂಚಮಲಸಹಿತ ಸುಣ್ಣದೊಳಗಿಕ್ಕಿ ಸ್ವೀವಶ್ಯಂ (ಕಾಮುಶಾ. ೨೬೨); ೧ಸೇರು ಬಿಸಿನೀರಿನಲ್ಲಿ ೧ತೊಲ ಬಿಳಿಗಾರ ಮತ್ತು ೧ತೊಲ ಪಟಿಕವನ್ನು ಪುಡಿಮಾಡಿ ಹಾಕಿ . . . ನಾಲಗೆಯನ್ನು ಪದೇಪದೇ ತೊಳೆಯುವುದು (ಗ್ರಾವೈಶಾ. ೦೩೫). **ಬಿಳುಗಾರ :** ಸೈಂಧವಲವಣ, ಬಿಳುಗಾರ, ಅಳಲೆಕಾಯಿ . . . ಅರೆದು ಸೇವಿಸಲು ಶ್ಲೇಷ್ಮಜ್ವರ ಬಿಡುವುದು (ಸಕವ. ೬೭); ಬೆಸುಗೆಯಲಿ ಬಿಳುಗಾರ ವಸುವಿನಲಿ ಬೆರೆವಂತೆ ಕುಶಲಮನವಾತ್ಮಿಸಮರಸದಲಿರುತಿಹುದು (ಕಕ್ಕ. ೯೦–೩). 'ಬೆಳುಗಾರ' ಪಠಾ. [ಬಿಳಿ₂ + ಕಾರ₂]

**ಬಿಳಿಗುಗ್ಗಲ** (ನಾ). ಒಂದು ಬಗೆಯ ಮರ: ಧೂಪದ ಮರ, ಸಾಲುಧೂಪ, ಬಿಳೀಗುಗ್ಗಲ . . . ಉಗುಳುಧೂಪ (ವೃ.ಶಿಗ. ೬೬-೧೫೬೬). [ಬಿಳಿ$_2$ + ಗುಗ್ಗಲ$_0$ (< ಗುಗ್ಗಿಳ)]

**ಬಿಳಿಗುರುಗಂಜಿ** 'ಬಿಳಿಗುರುಗುಂಜಿ' ನೋ.

**ಬಿಳಿಗುರುಗುಂಜಿ, ಬಿಳಿಗುರುಗಂಜಿ** (ನಾ). ಬಿಳಿಯ ಬಣ್ಣದ **ಗುಲಗಂಜಿ**: ಬಿಳಿಗುರುಗುಂಜಿ, ಬಿಳಿಸಟ್ಟುಗದ ರಸದಲ್ಲಿ ಮರ್ದಿಸಿ . . . ಹೊಕ್ಕುಳು ತಪ್ಪಿಸಿ ಕೆಳಗೆ ಲೇಪವಂ ಮಾಡೆ ಮೂತ್ರ ಬಿಡುವುದು (ವೈ.ಶಿ. ೬೦). **ಬಿಳಿಗುರುಗಂಜಿ**: ಬಿಳಿಗುರುಗಂಜಿಬೇರನ್ನು ಆದಿವಾರ ಮೌನದಿಂ ತಂದು ಕಿವಿಗೆ ಕಟ್ಟುವುದು (ಸಕವೈ. ೧೨೦). [ಬಿಳಿ$_2$ + ಗುರುಗುಂಜಿ]

**ಬಿಳಿಗುಳ್ಳ** (ನಾ). ಒಂದು ಬಗೆಯ ಗುಳ್ಳ: (ವೃ.ಶಿಗ. ೬೦-೧೪೪೨). [ಬಿಳಿ$_2$ + ಗುಳ್ಳ]

**ಬಿಳಿಗೆಂಪು** (ನಾ). ಬಿಳಿ ಮತ್ತು ಕೆಂಪುಬಣ್ಣಗಳ ಮಿಶ್ರವರ್ಣ: ಪಾಟಲ: "ಪಾಟಲ — ಬಿಳಿಗೆಂಪು" (ಗಂಗಾಮ. ೨೦೪) [ಬಿಳಿ$_2$ + ಕೆಂಪು$_1$]

**ಬಿಳಿಗೆಂಪುಕೇಪಲ** (ನಾ). ಒಂದು ಬಗೆಯ ಸಸ್ಯ: ಪಾಟಲವರ್ಣದ ಕೇಪಲ: (ವೃ.ಶಿಗ. ೪೭-೯೨೬). [ಬಿಳಿಗೆಂಪು + ಕೇಪಲ]

**ಬಿಳಿಚ** (ನಾ). ಒಂದು ಬಗೆಯ ಮೀನು: ಬಿಳಿಚ ಚಿಪ್ಪಲು ಮಲಗು ಹೆಮ್ಮಲಗು . . . ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹರಿಣ. ೫-೪೬). [<ಬಿಳಿ$_2$]

**ಬಿಳಿಚಗತೆ** (ನಾ). ಒಂದು ಬಗೆಯ ಚಗಚೆಗಿಡ: ಬಿಳಿಚಗತೆಸೊಪ್ಪು, ಮೆಣಸು, ಬೆಳ್ಳುಳ್ಳಿಬೇಳೆ. ಇವಂ ಅರೆದು ಕಿವಿಗೆ ಬಿಡೆ ಮೇಲ್ನಾಗುರು ತೀರ್ಗುಂ (ವೈ.ಶಿ. ೬೩). [ಬಿಳಿ$_2$ + ಚಗತೆ (< ಚಗಚೆ)]

**ಬಿಳಿಚಳ್ಳೆ** (ನಾ). ಒಂದು ಬಗೆಯ ಚಳ್ಳೆಮರ: ಹಾಡಗ, ಬಿಳೀಚಳ್ಳೆ, ಗವುಡಿ (ವೃ.ಶಿಗ. ೨೪-೪೫೧). [ಬಿಳಿ$_2$ + ಚಳ್ಳೆ (<ಸೆಳ್ಳೆ) ]

**ಬಿಳಿಚಿಕ್ಕನಗಿಡ** (ನಾ). ಒಂದು ಬಗೆಯ ಗಿಡ: (ಶ). [ಬಿಳಿ$_2$ + ಚಿಕ್ಕ$_?$ + ಗಿಡ (<ಗಿಡು) ]

**ಬಿಳಿಚಿತ್ರಮೂಲ** (ನಾ). ಒಂದು ಬಗೆಯ ಸಸ್ಯ: (ವೃ.ಶಿಗ. ೬೩-೧೨೬೪). [ ಬಿಳಿ$_2$ + ಚಿತ್ರಮೂಲ ]

**ಬಿಳಿಚು** (ಕ್ರಿ). ಕಾಂತಿಯನ್ನು ಕಳೆದುಕೊಂಡು ಬೆಳ್ಳಗಾಗು: ಮೆಯ್ ಬಿಳಿಚಿ ಬೆವರ್ಯಾವ್ತೊ (ಹೂಹಾರ. ೫೫-೨೪).

**ಬಿಳಿಚಿಕೊಳ್ಳು** = ಕಾಂತಿಯನ್ನು ಕಳೆದುಕೊಂಡು ಬೆಳ್ಳಗಾಗು: ಮೋರೆ ಹೀಗೇಕೆ ಬಿಳಿಚಿಕೊಂಡಿದೆ (ಅರೋರಿ. ೯೦): ಅವಳ ಮುಖ ಬಿಳಿಚಿಕೊಂಡಿತ್ತು (ಅಶ್ರಮ. ೬೦). **ಬಿಳಿಚಿ ಹೋಗು** = ಬಿಳಿಚಿಕೊಳ್ಳು: ಸುಯೋಧನನು ವ್ಯಥೆಯಿಂದ ಬಡವಾಗಿ ರಕ್ತ ಕಳೆದುಕೊಂಡು ಬಿಳಿಚಿ ಹೋಗಿದ್ದಾನೆ (ವ್ಯಾಸಕ. ೦೦೪). [ಬಿಳಿ$_2$ + — ಚು$_1$]

**ಬಿಳಿಜಂಬುಹುಲ್ಲು** (ನಾ). ಒಂದು ಬಗೆಯ ಹುಲ್ಲು: (ವೃ.ಶಿಗ. ೪೮-೯೪೬). [ ಬಿಳಿ$_2$ + ಜಂಬುಹುಲ್ಲು ]

**ಬಿಳಿಜಾಲ** (ನಾ). ಸೌತೆಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ: ನೈದಿಲೆಎಸಳು ಸಹದೇವಿಯುಂ ಬಿಳಿಜಾಲ ಮೂಗಳಿಬೇರಂ ಇವೆಲ್ಲವಂ ಚೂರ್ಣವಂ ಮಾಡಿ (ಕಾಮಶಾ. ೨೬೩). [ ಬಿಳಿ$_2$ + ಜಾಲ$_1$ ]

**ಬಿಳಿಜಾಲಿ** (ನಾ). ಒಂದು ಬಗೆಯ ಬಳ್ಳಿ: ಬಿಳೀಜಾಲಿ, ತೊಪ್ಪಾಲೆ, ಸಾರಾಯಿಬೇಲ, ತುಂಬೆಮರ (ವೃ.ಶಿಗ. ೧-೦೬). [ ಬಿಳಿ$_2$ + ಜಾಲಿ$_2$ ]

**ಬಿಳಿಜೇರಿಗೆ** (ನಾ). ಒಂದು ಬಗೆಯ ಜೀರಿಗೆ: "ಕಣಾಹ — ಬಿಳಿಜೇರಿಗೆ" (೬ಶಂ. ೨೦). [ಬಿಳಿ$_2$ + ಜೇರಿಗೆ ]

**ಬಿಳಿಜೋಳ** (ನಾ). ಬಿಳಿಯ ಬಣ್ಣದ ಜೋಳ: ಗೌರಿಹುಣ್ಣಿವೆ ಹಾಲ್ಗುಡಿದು ಬಿಳಿಜೋಳ ಧ್ವಜವನ್ನೆತ್ತಿತು (ಸಂಕು. ೦೨-೧೦). [ ಬಿಳಿ$_2$ + ಜೋಳ ]

**ಬಿಳಿಡಾಮರ್** (ನಾ). ಒಂದು ಬಗೆಯ ಸಸ್ಯ: **ಧೂಪದ ಮರ** . . . ಬಿಳೀಡಾಮರ್, ಹಾಗಡಮರ, ಉಗುಳುಧೂಪ (ವೃ.ಶಿಗ. ೬೩-೧೫೬೬). [ ಬಿಳಿ$_2$ + ಡಾಮರ್$_0$ ]

**ಬಿಳಿತಾವರೆ** 'ಬಿಳಿದಾವರೆ' ನೋ.

**ಬಿಳಿತಾಳೆ** 'ಬಿಳಿದಾಳೆ' ನೋ.

**ಬಿಳಿತಿಗಡೆ** (ನಾ). ಒಂದು ಬಗೆಯ ಸಸ್ಯ: "ಶರಭಃ — ಬಿಳಿತಿಗಡೆ" (೬ಶಧ. ೧೫೪). [ ಬಿಳಿ$_2$ + ತಿಗಡೆ$_2$ ]

**ಬಿಳಿದಾವರೆ, ಬಿಳಿತಾವರೆ** (ನಾ). ಬಿಳಿಯ ಬಣ್ಣದ **ತಾವರೆ**: ಬಿಳಿದಾವರೆಯನ್ನು ಸುತ್ತುವರೆದ ದುಂಬಿಗಳ ಹಿಂಡಿನಂತಿತ್ತು ಶಿವನ ಕಂಠ (ಕಾಸಗ. ೬೯); ಕೈಯಲ್ಲಿ ಒಂದು ಬಿಳಿದಾವರೆಯನ್ನು ಹಿಡಿದು ಹಂಸವನ್ನು ತನ್ನ ಹತ್ತಿರ ಕರೆಯುವಳು (ಇಬರು. ೦೫). **ಬಿಳಿತಾವರೆ**: "ಪುಷ್ಪಗಂಧಿ — ಬಿಳಿತಾವರೆ. ಕಲ್ಲಕ್ತಿ" (೬ಶಧ. ೧೦೦). [ಬಿಳಿ$_2$ + ತಾವರೆ (< ತಾಮರೆ)]

**ಬಿಳಿದಾಸವಾಳ** (ನಾ). ಬಿಳಿಬಣ್ಣದ ಹೂವುಗಳನ್ನು ಬಿಡುವ ದಾಸವಾಳ: ಹಾಲು ಮತ್ತು ಸಕ್ಕರೆಯ ಜೊತೆಗೆ ಬಿಳಿದಾಸವಾಳದ ದಳಗಳ ಅಥವಾ ಬೇರಿನ ರಸವನ್ನು ಸೇರಿಸಿ ಕುಡಿಯುವುದರಿಂದ ಮೇಹರೋಗಗಳು ವಾಸಿಯಾಗುವುವು (ಕವಿಕೋ. IX, ೫೬೫). [ಬಿಳಿ$_2$ + ದಾಸವಾಳ (< ದಾಸವಣ)]

**ಬಿಳಿದಾಳೆ, ಬಿಳಿತಾಳೆ** (ನಾ). ಒಂದು ಬಗೆಯ ತಾಳೆಮರ: ಬಿಳಿದಾಳೆ . . . ಕೈತಾಳೆ (ವೃ.ಶಿಗ. ೬೨-೦೪೬೫). **ಬಿಳಿತಾಳೆ**: ಬಿಳಿಪೋಕು. ಬೂದಿತಾಳೆ. ಪುಳಕೆ. ಬಿಳಿತಾಳೆ, ತೆಲ್ಲಪುನಿ (ವೃ.ಶಿಗ. ೩೯-೬೬೩). [ ಬಿಳಿ$_2$ + ತಾಳೆ$_1$ (<ತಾಟಿ) ]

**ಬಿಳಿದು** (ನಾ). ೧. ಬಿಳಿಯ ಬಣ್ಣ: ಶ್ವೇತವರ್ಣ: "ಗೌರಃ, ಶ್ವೇತಃ . . . ಪಾಂಡರಃ — ಈ ೧೨ ಬಿಳಿದು" (ಹಲಾಯು. ೦೨೦-೪೬); ಎಱಿಯೆ ಸಿತಪ್ರಯುತಾಸವಮಂ ಪೊಯ್ಗೆ ವರ್ಣಯ ಪಾಲಂ ದಾಡಿವಣದ ಪೂ ಬಿಳಿದಕ್ಕುಂ (ಲೋಕೋಪ. ೬-೫೦): ಕವಿಗಳ್ ಕರಿದೆಂದೊಡೆ ಕರಿದವರ್ಗಳ್ ಬಿಳಿದೆಂದೊಡೆ ಬಿಳಿದೇಕವರನುಜಿದೆ ಕಿಡುವರ್ ಕೆಲಬರ್ (ಲೀಲಾವ. ೧-೯): ಸುರಪತಿಯ ಹಯವಹುದು ಬಿಳಿದೋ ಕರಿದೊ ಹೇಳೌ ಅಕ್ಕ (ಸಂಕಶ. ೫-೪೩). ೨. ಬೆಳ್ಳಗಿರುವ ಬಟ್ಟೆ; ಶುಭ್ರವಸನ: ಮಡಿಯ ಕೂಲಿಯು ಬೇಡ ಹೋದರೆ ಬಿಳಿದು ಹಜಿಿದು ಎನ್ನ ಮೇಲೆ ಬಿಸಾಟನು (ತುಂಡಪಾ. ೨೯-೪೨): ಉಟ್ಟ ಬಿಳಿದು ಬೆಳ್ದಿಂಗಳಂ ಬೀಱೆ (ಗಂಶ. ೨-೦೦೫ ಪ). ೩. ವಾಸಿಯಾಗದಿರುವ ಗಾಯದಲ್ಲಿ ಬೆಳ್ಳಗೆ ಕಾಣುವ ಭಾಗ: ಉಗನಿ . . . ಹಾಲನ್ನು ಬೆಂದ ಹುಣ್ಣಿನ ಬಿಳಿದಿಗೆ ತೊಡೆದರೆ ಬಿಳಿದು ಹೋಗಿ ಚೆನ್ನಾಗುವದು (ವೈ.ಶಿ. ೩). ೪. = ಬಿಳುಪು ೩: ಜೂಜಕ್ಕಿ ಸಮೂಲವನ್ನು ಮಜ್ಜಿಗೆಯಲ್ಲಿ ತೆಗೆದುಕೊಳ್ಳೆ ಬಿಳಿದು ಹೋಗುವುದು ಮಾಣ್ಗುಂ (ವೈ.ಶಿ. ೪).

**ಬಿಳಿಯ** = ೧. ಬಿಳುಪಾದ ದೇಹವುಳ್ಳವನು. ೨. ಯೂರೋಪು ದೇಶದವನು: ಕರಿಯರದೋ ಬಿಳಿಯರದೊ ಯಾರದಾದರೆ ಏನು? ಸಾಮ್ರಾಜ್ಯವಾಪಗಂ ಸುಲಿಗೆ ರೈತರಿಗೆ! (ಕೋಗಿರ. ೦೫-೦). **ಬಿಳಿಯಳ್** = ೧. ಬಿಳುಪಾದ ದೇಹವುಳ್ಳವಳು. ೨. ತಿಳಿಗೇಡಿ; ದಡ್ಡ: ☞ ಇಲ್ಲಿ 'ಬೆಳ್' ಎಂಬ ಶಬ್ದಕ್ಕೆ ಇರುವ ಅರ್ಥಗಳಲ್ಲಿ ಒಂದನ್ನು ಕವಿಯು ಉಪಯೋಗಿಸಿರಬಹುದು. ೧, ೨: ಶ್ರುತಮೂರ್ತಿಯಾಗಿಯುಂ ರುಚಿರತನು ಕರಂ ಬಿಳಿಯಳಾಗಿಯುಂ ಚತುರವಚೋನ್ವಿತೆ . . . ವಾಗ್ದೇವಿ ಕೂರ್ತು ಮಾಟ್ಕೆಮಗಱಿವಂ (ಶಾಕಶ. ೦-೨).

[ದೇ.॥ ತಮಿ. ವೆಳಿತು; ತುಳು. ಬೊಳ್ದು, ಬೊಲ್ದು; ಗದಬ, ವಿಲಿದ್]

**ಬಿಳಿದೇವದಾರು** (ನಾ). ಒಂದು ಬಗೆಯ ದೇವದಾರುವೃಕ್ಷ: ಬಿಳೀಬುಡ್ಲಿಗೆ, ಬಿಳೀದೇವದಾರು, ಬಿಳೀಅಗಿಲು (ವೃ.ಶಿಗ. ೬೨-೬೦೯). [ಬಿಳಿ$_2$ + ದೇವದಾರು]

**ಬಿಳಿದೊಡ್ಡಕಾಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಚಿಹುಲ್ಲು . . . ಬಿಳೀದೊಡ್ಡಕಾಚಿಹುಲ್ಲು (ವೃ ಶಿ. ೨೭–೩೦೭). [ಬಿಳಿ₂ + ದೊಡ್ಡ + ಕಾಚಿಹುಲ್ಲು]

**ಬಿಳಿನೀರು** (ನಾ). (ಆಲಂ) ಹೆಂಡ ; ಮದ್ಯ : ಅಗ್ರೋದಕದಿ ನಿರ್ಮಲವಾಗಿ ಪೂಜೆಯ ಮಾಡೆಂದರೆ ಬಿಳಿನೀರ ಕುಡಿದು ಬತ್ತಲೆ ಬೇವು ಉಟ್ಟು ಹುಳಿ ಮೂಲಂಗೀರುಳ್ಳಿ ತಿಂಬುವನೆ ನೋಡಿ (ಶೂರಂಧ. ೨–೩೮–೩). [ಬಿಳಿ₂ + ನೀರು₁ (< ನೀರ್)]

**ಬಿಳಿಪಾದ್ರಿ** (ನಾ). ಒಂದು ಬಗೆಯ ಹೂವಿನ ಮರ : ಬಿಳಿಪಾದ್ರಿ, ಹುದೆ, ಬಿಲ್ಲ, ಹುವ್ವುಲವೆ, ಹುಲವೆ (ವೃ ಶಿ. ೬೨–೧೪೬೬). [ಬಿಳಿ₂ + ಪಾದ್ರಿ₀ (< ಪಾದರಿ₂)]

**ಬಿಳಿಪೊಳಿಕು** (ನಾ). ಒಂದು ಬಗೆಯ ಸಸ್ಯ : ಬಿಳಿಪೊಳಿಕು, ಬೂದಿತಾಳೆ, ಪುಳಿಕೆ, ಬಿಳಿತಾಳೆ, ತೆಲ್ಲಪುನಿ (ವೃ ಶಿ. ೫೪–೬೬೩). [ಬಿಳಿ₂ + ಪೊಳಿಕು₀]

**ಬಿಳಿಬಂಟ** (ನಾ). ಸುಗ್ಗಿಯ ಕಣದಲ್ಲಿ ಪೂಜಿಸುವ ಒಂದು ಸಾಂಕೇತಿಕ ದೇವರು : ಶರಣ ಮಡಿವಾಳಾದ ಕರಿಬಂಟ ಕಣದಾಗ ಹರಳಾದ ಕಣಕ ಬಿಳಿಬಂಟ ಪ್ರಭುಲಿಂಗ ಗುರುಬುದ್ಧಿವಂತ ಲಿಂಗಾದ (ಕನ್ನಜಾ. ೧೩೩). P " 'ವೀರಘಂಟೆಯ ಮಡಿವಾಳ'ನಿಗೆ ಒಕ್ಕಲಿಗನು 'ಕರಿಬಂಟ' ನೆಂದೂ ಮತ್ತು ಪಾಪೆನಭಕ್ತಿಯುಳ್ಳ ಮಹಾಶರಣ ಹರಳಯ್ಯನಿಗೆ 'ಬಿಳಿಬಂಟ' ನೆಂದೂ ಕರೆದಿರುವನು " (ಕನ್ನಜಾ. ೦೩೩). [ಬಿಳಿ₂ + ಬಂಟ₁]

**ಬಿಳಿಬರಲು** (ನಾ). ಒಂದು ಬಗೆಯ ಸಸ್ಯ : ಬಿಳೀಬೂರುಗ, ಬಿಳೀಬರಲು (ವೃ ಶಿ. ೩೪–೬೬೦). [ಬಿಳಿ₂ + ಬರಲು?]

**ಬಿಳಿಬಸುರಿ** (ನಾ). ಬಸರಿಮರಗಳಲ್ಲಿ ಒಂದು ಬಗೆ : ಬಿಳಿಬಸುರಿ, ಬೋವಿಯ ಮರ (ವೃ ಶಿ. ೫೭–೬೩೦). [ಬಿಳಿ₂ + ಬಸುರಿ₂ (< ಬಸರಿ)]

**ಬಿಳಿಬಾಳ** (ನಾ). ಬಿಳಿಯ ಬಣ್ಣದ ಲಾವಂಚ : " ಉಶೀರ. ಲಾಮಜ್ಜಕ, ಲಾವಂಚ, ಬಿಳಿಬಾಳ " (ನಾಕಾ. ೪). [ಬಿಳಿ₂ + ಬಾಳ₂]

**ಬಿಳಿಬೀಟೆ** (ನಾ). ಒಂದು ಬಗೆಯ ಬೀಟೆಮರ : ಹಸುರುಗನ್ನಿ, ಬೆಲಗ, ಬಿಳೀಬೀಟೆ, ಬೆಟ್ಟದ ಹಸುರುಗೋಣಿ (ವೃ ಶಿ. ೨೮–೩೪೬). [ಬಿಳಿ₂ + ಬೀಟೆ₂]

**ಬಿಳಿಬುಡ್ಲಿಗೆ** (ನಾ). ಒಂದು ಬಗೆಯ ಸಸ್ಯ : ಬಿಳೀಬುಡ್ಲಿಗೆ, ಬಿಳಿದೇವದಾರು, ಬಿಳೀಅಗಿಲು (ವೃ ಶಿ. ೩೨–೬೦೯). [ಬಿಳಿ₂ + ಬುಡ್ಲಿಗೆ₁]

**ಬಿಳಿಬೂರುಗ** (ನಾ). ಒಂದು ಬಗೆಯ ಅರಳೆಗಿಡ : ಬಿಳೀಬೂರುಗ, ಬಿಳೀಬರಲು (ವೃ ಶಿ. ೩೪–೬೬೦). [ಬಿಳಿ₂ + ಬೂರುಗ₁ (< ಬೂರ)]

**ಬಿಳಿಬೆಂಡುಗಿಡ** (ನಾ). ಒಂದು ಬಗೆಯ ಸಸ್ಯ : (ವೃ ಶಿ. ೬೨–೦೨೬೪). [ಬಿಳಿ₂ + ಬೆಂಡು? + ಗಿಡ (< ಗಿಡು)]

**ಬಿಳಿಭೂತಾಳೆ** (ನಾ). ಒಂದು ಬಗೆಯ ಭೂತಾಳೆ : ಬಿಳಿಭೂತಾಳೆ, ಮದ್ದಲೆ (ವೃ ಶಿ. ೬೮–೦೩೪೪). [ಬಿಳಿ₂ + ಭೂತಾಳೆ]

**ಬಿಳಿಮಂದಾರ** (ನಾ). ಒಂದು ಬಗೆಯ ಸಸ್ಯ : ಬಿಳೀಕಂಚುವಾಳ, ಬಿಳೀಮಂದಾರ (ವೃ ಶಿ. ೦೨–೨೦೭). [ಬಿಳಿ₂ + ಮಂದಾರ]

**ಬಿಳಿಮತ್ತಿ** (ನಾ). ಒಂದು ಬಗೆಯ ಮತ್ತಿಮರ : ಬಿಳಿಮತ್ತಿ, ತೊರಮತ್ತಿ, ಹೊಳೆಮತ್ತಿ (ವೃ ಶಿ. ೬೪–೦೩೦೦) ; ಬಿಳಿಮತ್ತಿ . . . ಮೆಕ್ಕಲುಮಣ್ಣಿನ ಭೂಮಿಗಳಲ್ಲಿ ಬಲುಸಮೃದ್ಧವಾಗಿ ಬೆಳೆಯುತ್ತದೆ (ಕರಕೋ. XII. ೦೯೬). [ಬಿಳಿ₂ + ಮತ್ತಿ₁ (< ಮಟ್ಟಿ₁)]

**ಬಿಳಿಮೀನು** (ನಾ). ಒಂದು ಬಗೆಯ ಮೀನು : ಬಿಳಿಮೀನು ದೊಡ್ಡ ಗಾತ್ರದ್ದು . . . ಉದರಭಾಗ ಬಿಳಿ. ಅಂಚುಗಳು ಮಾತ್ರ ಕೆಂಪು (ಕರಕೋ. XII. ೦೯೬). [ಬಿಳಿ₂ + ಮೀನು₂ (< ಮೀನ್₂)]

**ಬಿಳಿಮೆಣಸು** (ನಾ). ಒಂದು ಬಗೆಯ ಮೆಣಸು ; ಬಿಳಿಬಣ್ಣದ ಮೆಣಸು : ಬಿಳಿಮೆಣಸನ್ನು ಔಷಧಿಗೆ ಉಪಯೋಗಿಸುತ್ತಾರೆ (ರೂಢಿ). [ಬಿಳಿ₂ + ಮೆಣಸು (< ಮೆಳಸು)]

**ಬಿಳಿಮೆಯ್ಯ** (ನಾ). ೧. ಬಿಳುಪಾದ ದೇಹವುಳ್ಳವನು. ೨. ಲಕ್ಷ್ಮಣ : ಬಿಳಿಮೆಯ್ಯನೆಲ್ಚತ್ತು ಹೊರಗೆ ಹೋಗಿರೆ. ನೀಲಿಮೆಯ್ಯಂ ಕನವರಿಸಿದನ್ (ತ್ರೀರಾಪಟ. ೨೩೩–೨೩೪). [ಬಿಳಿ₂ + ಮೆಯ್₂ + — ಅ₇]

**ಬಿಳಿಯಂಬು** (ನಾ). ಒಂದು ಬಗೆಯ ಬಾಣ : ಪೊಯಿಸಿ ಇಜಿದೊಡೆ ತನ್ನಂ ಪಲವುಂ ಬಿಳಿಯಮ್ಬು ಜಟ್ಟಿಗೆಗಳುಂ ಬಸಮಾಜಿದಿನ ಕೊಳಿ ತಾಂ ಸತ್ತು (ಎಕ. XI, ಹಳ್ಳಿ ೮–೪ ; ಸು. 810 ?) ; ಬಾಣದ ಹಲವಾರು ಪ್ರಭೇದಗಳ ಹೆಸರುಗಳು ಶಾಸನಗಳಲ್ಲಿ ದೊರೆಯುತ್ತವೆ–ಬಿಳಿಯಂಬು, ಕೋಲಂಬು, ಸಾಂಗಲಂಬು ಇತ್ಯಾದಿ . . . ಬಿಳಿಯಂಬು ಎಂಬುದು ಪ್ರತಿಷ್ಠಿತವ್ಯಕ್ತಿಗಳು ಬಳಸುತ್ತಿದ್ದ ಹೊಳಪಿನ ಬಾಣವಿರಬಹುದೆ ? (ಕಶಾಂ. ೨೭೬).

**ಬಿಳಿಯಂಬಿನಾತ** = ಒಂದು ಬಿರುದು : ಮಹಾಸಮಸ್ತತುರಗವೆ [ಡೆ]ಜ್ಞ ಬಿಳಿಯಂಬಿನಾತನಾಹವಸೂದ್ರಕಂ ವಿದ್ವಿಷ್ಟಪಾರ್ತ್ಥಿವಪ್ರಿಯು ಗಾಳ್ಳ ಚಾಳುಕ್ಯವಂಶೋದ್ಭವಂ (ಸೌಇಇ. IX – i, ೬೪–೪ ; 944). [ಬಿಳಿ₂? + ಅಂಬು₂]

**ಬಿಳಿಯಕ್ಷತೆ** (ನಾ). ಪಿತೃಕಾರ್ಯಗಳಲ್ಲಿ ಪೂಜೆಗೆ ಬಳಸುವ ನೆನಸಿದ ಅಕ್ಕಿ ; ಅರಸಿನ ಅಥವಾ ಕುಂಕುಮಗಳನ್ನು ಹಚ್ಚದಿರುವ ಅಕ್ಕಿ : (?). [ಬಿಳಿ₂ + ಅಕ್ಷತೆ]

**ಬಿಳಿಯತ್ತಿ** (ನಾ). ಒಂದು ಬಗೆಯ ಅತ್ತಿಮರ : ಚಿಲ್ಲ ಬೆಲ್ಲವತ್ತದ ಬಿಳಿಯತ್ತಿಯಪ್ಪೆಯ ಮರಂಗಳ ಕೊಂಬುಗಳ್ . . . ಪರ್ಬಿರೆ (ಲೀಲಾವ. ೩–೨೨) ; ಅಂಕೋಲೆ ಬಿಳಿಯತ್ತಿ . . . ಮುತ್ತುಗ ಮೊದಲಾದ ಮರಗಳ ಬಳಗದಿಂದದು ಕಣ್ಗೆಸೆದುದು (ಕುರಾಸಾಂ. ೪–೩). [ಬಿಳಿ₂ + ಅತ್ತಿ₁]

**ಬಿಳಿಯರಳೆ** (ನಾ). ಬೆಳ್ಳನೆಯ ಹತ್ತಿ : ಬಿಳಿಯರಳೆಯಂತೆ ಗಂಗಾಜಳದಂತೆ . . . ಪವಿತ್ರಮುತ್ತಿಮುಚ್ಚೆಯ ಚರಿತಂ (ಆಪು ೦೨–೩). [ಬಿಳಿ₂ + ಅರಳೆ₁]

**ಬಿಳಿಯವರೆ** (ನಾ). ಅವರೆಯಲ್ಲಿ ಒಂದು ಬಗೆ ; ಬೆಳ್ಳಗಿರುವ ಅವರೆ ; "ಮಾಧ್ವೀಕಃ–ಬಿಳಿಯವರೆ " (೬ಷಧಿ. ೦೨೪). [ಬಿಳಿ₂ + ಅವರೆ₁]

**ಬಿಳಿಯಾಚಾರಿ** (ನಾ). ಒಬ್ಬಾತನ ಹೆಸರು : ಇಲ್ಲಿಯ ಬೆಸವಾಕ್ಕಳಾರೆ ನ್ರೊಡೆ . . . ಬಿಳಿಯಾಚಾರಿಯು ಕುಬಾಚಾರಿಯು (ಎಕ. III, ತಂಜನ. ೦೩೯–೯; 915?). [ಬಿಳಿ? + ಆಚಾರಿ]

**ಬಿಳಿಯಾನೆ** (ನಾ). ೧. ಬೆಳ್ಳಗಿರುವ ಆನೆ : ಇಂದ್ರನ ಐರಾವತ ಬಿಳಿಯಾನೆ ಎಂದು ಹೇಳುತ್ತಾರೆ (ರೂಢಿ). ೨. ಒಂದು ಬಗೆಯ ಮೀನು : ಹೆಮ್ಮಲಗು ಬಿಳಿಯಾನೆ . . . ಗಿಜಿಲುಗಳೆಂಬ ಹೊಳೆವಳೆಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಹಕಾ. ೫–೪೬). ೩. (ಆಲಂ) ಹೆಚ್ಚು ಬೆಲೆಯುಳ್ಳುದು; ದುಬಾರಿ; ತುಟ್ಟಿ : ಆ ಇಲಾಖೆ ಸರ್ಕಾರಕ್ಕೆ ಬಿಳಿಯಾನೆಯಾಗಿಬಿಟ್ಟಿದೆ (ರೂಢಿ). [ಬಿಳಿ₂ + ಆನೆ₁]

**ಬಿಳಿಯಾಬಲ್**, ಬಿಳಿಯಾಬಲು (ನಾ). ಬಿಳಿಬಣ್ಣದ ತಾವರೆ : " ಶ್ವೇತಪರ್ಣಂ – ಬಿಳಿಯಾಬಲ್ " (೬ಷಧಿ. ೦೭೦). **ಬಿಳಿಯಾಬಲು** : "ಕದಂಬಕಃ..ಮುತ್ತಿ. ಅತ್ತಿ. ಬಿಳಿಯಾಬಲು" (೬ಷಧಿ. ೨೫) [ಬಿಳಿ₂ + ಆಬಲ್ (<ಆವಲ್₁)]

**ಬಿಳಿಯಾಬಲು** 'ಬಿಳಿಯಾಬಲ್' ನೋ.

**ಬಿಳಿಯಾಲಿ** (ನಾ). ಕಣ್ಣುಗುಡ್ಡೆಯ ಬಿಳುಪಾದ ಭಾಗ : ಕಾಡಿಗೆ ಯೊಳ್ ಕೂಡಿ ಬಿಳಿಯಾಲಿಯಿಂ ಕರಿಯಾಲಿಯಿಂದೆಮೆಯಿಂ ಕಣ್ಣೊಪ್ಪುವಂತೆ (ಧರ್ಮಾಮೃ. ೦೨ ೫) ; ಚಕ್ಷುವಿಂಗೆ ಕರಿಯಾಲಿ ಬಿಳಿಯಾಲಿ ಇವೊಳಗಣು ಪಕರಣಂ ಎವೆ ಹೊಟ್ಟೆಯೆಂಬಿವು 'ಬಾಹ್ಯೋಪಕರಣಂ (ಶಸಾರ ೯೩). [ಬಿಳಿ₂ + ಆಲಿ₂]

ಳ್ಳಿ (ನಾ). ಒಂದು ಬಗೆಯ ಗಡ್ಡೆ : ಬೆಳ್ಳುಳ್ಳಿ : "ಮಿಶ್ರಗಂಧಃ ಳ್ಳಿ. ಬಿಳಿಯುಳ್ಳಿ (ಬೆಳ್ಳುಳ್ಳಿ)" (ಒಷಧಿ. ೧೨೫). [ಬಿಳಿ$_2$+ ಉಳ್ಳಿ$_1$]

ಕ್ಕೆ, ಬಿಳಿಎಕ್ಕೆ (ನಾ). ಎಕ್ಕೆಯಲ್ಲಿ ಒಂದು ಬಗೆ : "ಶ್ವೇತಾರ್ಕಃ– ಯೆಕ್ಕೆ" (ಒಷಧಿ. ೧೬೦). **ಬಿಳಿಎಕ್ಕೆ** : ಸ್ತ್ರೀನಾಮವುಮಂ ಬರೆದು ಎಕ್ಕೆಯ ಕಟ್ಟಿಗೆಯ ಕೆಂಡದಿಂ ಕಾಸಲು ವಶಮಪ್ಪಳು (ಕಾಮಶಾ. ೨೬೭).

[ಬಿಳಿ$_2$ + ಎಕ್ಕೆ$_2$]

ಲಚಿ (ನಾ). ಏಲಚಿಯಲ್ಲಿ ಒಂದು ಬಗೆ : "ಸರ್ಪಗಿಡ– ಯೆಲಚಿ" (ಒಷಧಿ. ೦೬೪). [ಬಿಳಿ$_2$ + ಏಲಚಿ]

ಲವ (ನಾ). ಎಲವದಲ್ಲಿ ಒಂದು ಬಗೆ ; ಬಿಳಿಯ ಬೂರುಗದ ರ : "ಶುಕ್ಲಲೋಹಿತಃ – ಬಿಳಿಯೆಲವ" (ಒಷಧಿ. ೦೬೯).

[ಬಿಳಿ$_2$+ ಎಲವ]

ಕ್ಕಸಿ (ನಾ). ಒಂದು ಬಗೆಯ ಸಸ್ಯ : ಬಿಳಿರಕ್ಕಸಿಯ ಗೆಡ್ಡೆಯ ನಾಳದ ದು ಕುಡಿಯೆ ನಿರ್ವಿಷ (ವೈಶ. ೯೩). 'ಬಲರಕ್ಕಸಿ' ಪರಾ.

[ಬಿಳಿ$_2$ + ಎಲವ]

(ನಾ). ಒಂದು ಬಗೆಯ ಭೂಮಿ : ಕುಂದೇಶ್ವರದೇವರಿಗೆ . . . ರ ಮೆಕ್ಕೆ ಚ ೧ ಮೂ ೧ ಉಳೂರಳ ಗಡಿಂ (ತಾಇಇ. IX-ii. ೪೪೬-೩೩; ) : ಹೆಬಾರರ ಹೊಸಗದೆಯ ಬಿತ್ತಿನ ಬಿಳಿರ ನಾವು ಗೋರಿಸಿದ ಮಕಿಗದೆ ಂ (ಎಶ. VI, ಮೂಡಗೆ. ೩೯-೨೪; 1561 ?).

[?./ತುಳು. ಬೊಳಿರ್ = ಒಂದು ಬಗೆಯ ಪೊದರು]

'ಬೀಳಿಲ್' ನೋ.

'ಬೀಳಿಲ್' ನೋ.

ೊದ್ದುಗ (ನಾ). ಒಂದು ಬಗೆಯ ಮರ : ಬಿಳಿಯ ಬಣ್ಣದ ೀಧ್ರಕ : ಶ್ರೀಗಂಧ ಬೆಲ್ಲವತ್ತ ಬಿಳೀಲೊದ್ದುಗ ಕೆಂಪುಲೊದ್ದುಗ . ಮೊದಲಾದ ಪುಷ್ಪಫಲಭರಿತವಾದ ವೃಕ್ಷಗಳನ್ನು (ಕೃಶಾಕ. ೨೨೮).

[ಬಿಳಿ$_2$ + ಲೊದ್ದುಗ$_?$]

ಪಿಗೆ (ನಾ). ಬಿಳಿಬಣ್ಣದ ಹೂವುಗಳನ್ನು ಬಿಡುವ ಸಂಪಗೆಯ ದು ಬಗೆ : ಆ ಮರದಲ್ಲಿ ಎಲೆಗಳು ಕಾಣದಷ್ಟು ಬಿಳಿಸಂಪಿಗೆ ಅರಳಿವೆ ). 'ಕೆಂಡಸಂಪಿಗೆ' ಪರಾ. [ಬಿಳಿ$_2$+ ಸಂಪಿಗೆ (<ಸಂಪಗೆ)]

ಟ್ಟುಗ (ನಾ). ಒಂದು ಬಗೆಯ ಸಸ್ಯ : ಬಿಳಿಗುರುಗುಂಜಿ. ಬಿಳಿ ಟ್ಟುಗದ ರಸದಲ್ಲಿ ಮರ್ದಿಸಿ . . . ಹೊಕ್ಕುಳು ತಪ್ಪಿಸಿ ಕೆಳಗೆ ಲೇಪವಂ ಡೆ ಮೂತ್ರ ಬಿಡುವುದು (ವೈಶ. ೬೧). [ಬಿಳಿ$_2$+ ಸಟ್ಟುಗ$_?$]

ಳಿ (ನಾ). ಒಂದು ಬಗೆಯ ಸಸ್ಯ: ಕಾಕಸರಳಿ. ಬಿಳಿಸರಳಿ. ಅಕ್ಕಸರಳಿ ಶಿಗ. ೩೦–೩೦೫) [ಬಿಳಿ$_2$+ ಸರಳಿ$_?$]

ಮೆಹುಲ್ಲು (ನಾ). ಒಂದು ಬಗೆಯ ಹುಲ್ಲು: (ವೃಶಿಗ. ೫೯–೦೦೯೧).

[ಬಿಳಿ$_2$ + ಸಾಮೆಹುಲ್ಲು]

ಸಿವೆ, ಬಿಳಿಸಾಸುವೆ (ನಾ). ಒಂದು ಬಗೆಯ ಸಾಸುವೆ : ತ್ಥರ್ಪ : (ವೃಶಿಗ. ೦೪–೨೪೭). **ಬಿಳಿಸಾಸುವೆ** : ಬಿಳಿಸಾಸುವೆ ಕೆಂಪಿನ ಲೆಹುವ್ವ ತುಪ್ಪ ಸಹಿತ ತಿಲಕಮಿಡಲು ತ್ರೈಲೋಕ್ಯವಶಮಪ್ಪುದು ಮುಶಾ. ೨೬೨). [ಬಿಳಿ$_2$ + ಸಾಸಿವೆ]

ಸುವೆ 'ಬಿಳಿಸಾಸಿವೆ' ನೋ.

ರೆ (ನಾ). ೧. ಬಿಳಿಯ ಬಣ್ಣದ ಸೀರೆ : ಅವಳು ಹೆಚ್ಚಾಗಿ ಬಿಳಿ ಯನ್ನೇ ಉಡುತ್ತಾಳೆ(ರೂಢಿ). ೨. ಹೆಂಗಸಿನ ಒಂದು ಬಗೆಯ ತ್ಯರೋಗ; ಶ್ವೇತಪ್ರದರ; ಬಿಳಿಸೆರಗು: ಜಂಬೂಫೃತ . . . ಯದಲ್ಲಿ ಗ ೨ ತೂಕವಂ ತುಪ್ಪದಲ್ಲಿ ಕಲಸಿಕೊಡಲು ರಕ್ತಪಿತ್ತ, ತಿಸಾರ . . . ಬಿಳಿಸೀರೆ . . . ಇವೆಲ್ಲ ಪರಿಹಾರ

**ಬಿಳಿಸುರಿಮುಳ್ಳು** (ನಾ). ಒಂದು ಬಗೆಯ ಸಸ್ಯ : ಬೊಮ್ಮರಲು. ಬಿಳಿ ಸುರಿಮುಳ್ಳು. ಸಣ್ಣಗುರಕಿ (ವೃಶಿಗ. ೬೯–೦೬೩೦). [ಬಿಳಿ$_2$+ ಸುರಿಮುಳ್ಳು]

**ಬಿಳಿಸೂಲಿ** (ನಾ). ಒಂದು ಬಗೆಯ ಸಸ್ಯ : ಸೊಪ್ಪುಗಳು : – ಅಗಸೆ. ಬಿಳಿ ಸೂಲಿ. ಅಕವಿ. ಗೊರಬಿ (ಸಮ್ರಪ. ೨೩೬). [ಬಿಳಿ$_2$ + ಸೂಲಿ$_2$]

**ಬಿಳಿಸೆರಗು** (ನಾ). = ಬಿಳಿಸೀರೆ ೨ : ಗರ್ಭಿಣಿಯ ಬಿಳಿಸೆರಗಿಗೆ . . . ನೆಗ್ಗಿಲ ಮುಳ್ಳಿನ ವಸ್ತ್ರಗಾಳಿತ ಚೂರ್ಣ ಅರ್ಧತೊಲೆಗೆ ಕಲ್ಲುಸಕ್ಕರೆ ಮತ್ತು ತುಪ್ಪ ಒಂದೊಂದು ತೊಲೆ ಕೂಡಿಸಿ ಬೆಳಗ್ಗೆ ಮತ್ತು ಸಂಜೆ ನೆಕ್ಕುವುದು (ಮನಿಮ. ೪೯). [ಬಿಳಿ$_2$+ ಸೆರಗು$_1$ (<ಸೆಱಂಗು) ]

**ಬಿಳಿಸೊಂಡೆ** (ನಾ). ಸೊಂಡೆಯಲ್ಲಿ ಒಂದು ಬಗೆ: ಬಿಳುಪಾದ ಸೊಂಡೆ : ಬಿಳಿಸೊಂಡೆ ಸೊಪ್ಪಿನ ರಸವನ್ನು ಎಳ್ಳೆಣ್ಣೆ ಬೆರಸಿ ಮೂರುದಿನ ಕುಡಿಯ ಕೊಡಲು ಮೂಷಿಕವಿಷಹರ (ವಿಷಶ. ೨೦–೩).

[ಬಿಳಿ$_2$ + ಸೊಂಡೆ$_1$(<ಸುಂಡೆ$_1$)]

**ಬಿಳಿಹಂಬು** (ನಾ). ಒಂದು ಬಗೆಯ ಬಳ್ಳಿ : ಕಾಡುದ್ರಾಕ್ಷಿ. ಬಿಳಿಹಂಬು (ವೃಶಿಗ. ೫–೦೦೪). [ಬಿಳಿ$_2$+ ಹಂಬು$_2$ (<ಪರಪ್ಪು$_2$) ]

**ಬಿಳಿಹರಳು** (ನಾ). ಒಂದು ಬಗೆಯ ಹರಳುಗಿಡ : ಬಿಳಿಹರಳೆಲೆ. ಅಮರದವಳ್ಳಿ . . . ಹಿಪ್ಪಲಿ ಪ್ರತಿಪಾಕವಿಟ್ಟು ಸೇವಿಸಿದರೆ ವಾತಜ್ವರ ತೀರ್ಗುಂ (ಸಕವೈ. ೬೪). [ಬಿಳಿ$_2$ + ಹರಳು (<ಪರಲ್)]

**ಬಿಳಿಹರಿವೆ** (ನಾ). ಒಂದು ಬಗೆಯ ಹರಿವೆ : ಕೊತ್ತುಂಬರಿ. ಕೊಡಸಿಗೆಬೇರು, ಬಿಳಿಹರಿವೆಬೇರು . . . ಕಷಾಯ ಕಾಯಿಸಿ ಕೊಡಲು ವಾತಜ್ವರಂ ಮಾಣ್ಗುಂ (ಸಕವೈ. ೬೫). [ಬಿಳಿ$_2$+ ಹರಿವೆ$_2$(<ಹಱುಫೆ)]

**ಬಿಳಿಹಿಂಡಿಸೊಪ್ಪು** (ನಾ). ಒಂದು ಬಗೆಯ ಸಸ್ಯ : (ವೃಶಿಗ. ೩ ೪೮).

[ಬಿಳಿ$_2$ + ಹಿಂಡಿಸೊಪ್ಪು (< ಪಿಂಡಿಸೊಪ್ಪು)]

**ಬಿಳಿಹುಲಿ** 'ಬಿಳಿಹೂಲಿ' ನೋ.

**ಬಿಳಿಹುಲುಗಿಲು** (ನಾ). ಒಂದು ಬಗೆಯ ಹೊಂಗೆಮರ : ಬಿಳಿ ಹುಲುಗಿಲ ಬೇರು. ಬಿಳಿಯ ಲೊಕ್ಕಿಯ ಬೇರು . . . ಇವಂ ಹುಳಿಯೆಲೆ ಯಲ್ಲಿ ಅರೆದು ಪೂಸಲು ಬಿಳಿಯ ಕುಷ್ಠ ಮಾಣ್ಗುಂ (ವೈಶ. ೪೧).

[ಬಿಳಿ$_2$ + ಹುಲುಗಿಲು$_0$ (<ಪುಲಿಗಿಲ್)]

**ಬಿಳಿಹೂರಿ** (ನಾ). ಒಂದು ಬಗೆಯ ಮರ : ಹೊಂಗೆತೊಕ್ಕು. ತಪಸಿ ತೊಕ್ಕು . . . ಬಿಳಿಹೂರಿತೊಕ್ಕು — ಇವು ಪ್ರತ್ಯೇಕ ೩೦ ಪಲ . . . ಪಾಕವ ಮಾಡಿ (ಸಕವೈ. ೩೩೯). [ಬಿಳಿ$_2$ + ಹೂರಿ$_0$ ]

**ಬಿಳಿಹೂಲಿ**, ಬಿಳಿಹುಲಿ (ನಾ). ಒಂದು ಬಗೆಯ ಹೂಲಿಗಿಡ : ಬಿಳಿಹೂಲಿಯ ಕೊನರು, ವಡಮಾರದ ಕೊನರು . . . ಕೊಡಲು ಬಹುಮೂತ್ರಂ ನಿಲ್ಲುವುದು (ಸಕವೈ. ೩೯೫). **ಬಿಳಿಹುಲಿ** : ಬಿಳಿಹುಲಿ ಚಿಗುರು ಒಂದು ಹಿಡಿ . . . ಕಂಚುವಾಳದ ಹೂವು ಒಂದನ್ನೂ ಅರೆದು ಸೇರಿಸಿ . . . ಕೊಟ್ಟರೆ ಬಹುಮೂತ್ರ ನಿಲ್ಲುವುದು (ಸಕವೈ. ಅಂ. ೫೦೨).

[ಬಿಳಿ$_2$ + ಹೂಲಿ$_1$ (< ಪೂಲಿ$_1$)]

**ಬಿಳುಗ** (ನಾ). ಒಂದು ಬಗೆಯ ಮರ : ಬಿಳುಗದ ಮರದ ಹೊಲದ ಪಡುವ ತವರ ಅರೇ ಬಳಿಯ ಮೂಡಮುಖನೆ (ಎಕ. III, ತಿರುಮ. ೬೩–೮೫೦; 1748). [?]

**ಬಿಳುಗಾರ** 'ಬಿಳಿಗಾರ' ನೋ.

**ಬಿಳುಪು**, ಬಿಳ್ಪು (ನಾ). ೧. ಬಿಳಿಯ ಬಣ್ಣ : ಹಸಿಯ ತೊಂಡೆಯ ಬೇರ ಕಟ್ಟಿ ತೊಳಸಿದೊಡೆ ಬಿಳು[ಪಾಗಿ]ವಹುದು (ಸೂಪಶಾ. ೨–೩). ೨. ಚರ್ಮವು ಬೆಳ್ಳಗಾಗುವ ಒಂದು ಬಗೆಯ ರೋಗ ; ತೊನ್ನು ; ಗಂಧಕ, ಇಲ್ಲಣ, ಅರಿಸಿನ, ಸೈಂಧವ, ಕಹಿಹೀರೇಬೀಜ ಇವಿಷ್ಟನೂ ಸಮಾಂಶವಾಗಿ ಚೂರ್ಣಿಸಿ ಬೆಣ್ಣೆಯಲ್ಲಿ ಕಲಸಿ ಬಳಿಯಲು ಕುಷ್ಠ

ಪ್ರದರರೋಗವುಳ್ಳ ಹೆಂಗಸಿನ ಜನನಾಂಗದಿಂದ ಸ್ರವಿಸುವ ಬಿಳಿಯ ದ್ರವ : ಬಿಳುಪು ಸೋರುವುದು ; ಬಿಳಿಸೆರಗು (Leucorrhoea. ೩೦೪೩). ಬಿಳ್ಪು : ೧. ಇಂದ್ರಜನೊಳ್ನೆರೆ ಬಿಳ್ಪನೊಳು . . . ಪೆರ್ಚಿಸೊಳರ್ಜು ನಾಖ್ಯಪಾಕ್ಯಂ (ಮಂಗರಾ. ೧೯೬-೯೯). [ಬಿಳಿ$_2$ + — ಪು$_2$]

**ಬಿಳುಪುಗಟ್ಟು** (ಕ್ರಿ). ಬಿಳಿಚಿಕೊಳ್ಳು : ಬೆಳ್ಳಗಾಗು : ಅವಳ . . . ಮುಖ ಮಾತ್ರ ಭಯದಿಂದ ಬಿಳುಪುಗಟ್ಟಿತ್ತು (ದೂರಕ. ೨೨೦).

[ಬಿಳುಪು + ಕಟ್ಟು$_1$]

**ಬಿಳುಪೇರು** 'ಬಿಳುಪೇಱು' ನೋ.

**ಬಿಳುಪೇಱು**, ಬಿಳುಪೇರು (ಕ್ರಿ). ೧. ಬಿಳಿಯ ಬಣ್ಣವಾಗು : ನರೆ : ಕಣ್ಣವೆ ಬಿಳುಪೇಱೆ ಕಪ್ಪು ಪತ್ತಿಸಿ . . . ಹಣ್ಣಾಗಲೆಯ ಸೀರೆಯಲಿ ಮಱೆಸಿಹ ಮುದಿಪಣ್ಯಾಂಗನೆಯರೊಪ್ಪಿದರು (ಕಂಪಬ. ೬-೧೯೨). **ಬಿಳುಪೇರು:** ೨. ಬಿಳಿಚಿಕೊಳ್ಳು : ನಿಸ್ತೇಜವಾಗು : ಅಂಬಾಲಿಕಗೂ ಅವನನ್ನು ಕಂಡಾಗ ಕಳವಳದಿಂದ ಮುಖ ಬಿಳುಪೇರಿಬಿಟ್ಟಿತು (ಪಪಭಾ. ೬).

[ಬಿಳುಪು + ಪಱು$_1$ (< ಪಱ್$_1$)]

**ಬಿಳುಮಲ್ಲಿಗೆ** (ನಾ). ಒಂದು ಬಗೆಯ ಬತ್ತ : ಸೋಮಶಾಲಿಯ ಬಿಳುಮಲ್ಲಿಗೆ ಕೆಂಬೂತಿ ಹೇಮವರ್ಣದ . . . ಪುಷ್ಪಮಂಜರಿಯ ನಾಮದ ತೆನೆಗಳೊಪ್ಪಿಹವು (ಕಂಪಬ. ೩-೬೯). [?]

**ಬಿಳುವ** (ನಾ). ಹಲಸಿನಲ್ಲಿ ಒಂದು ಬಗೆ : ಹಲಸಿನ ಹಣ್ಣಿನ ಮಹಾ ಗಾತ್ರವನ್ನು ನೋಡಿ ಅಜ್ಜೀಸಾಬು ಕೇಳಿದನು "ಬಿಳುವನೋ ? ಬಕ್ಕೆಯೋ ?" (ಮರಿವು. ೪೩೦). [?]

**ಬಿಳೆಯ** 'ಬಿಳಿಯ' ನೋ.

**ಬಿಳ್ಕೆ** 'ಬಿಟ್ಕೆ' ನೋ.

**ಬಿಳ್ತು** 'ಬಿಟ್ತು' ನೋ.

**ಬಿಳ್ಪು** 'ಬಿಳುಪು' ನೋ.

**ಬಿಳ್ಳ** (ನಾ). ಒಂದು ವಂಶದ ಹೆಸರು (?) : ಬಿಳ್ಳರ ಪೋಚರಸರುಂ ಅಳ್ದನ್ದು ಈ ಸಾಸನ ಸಿವಙ್ಗೆ ಬಿಟ್ಟು (ಎಕ. VII. ಶಿಕಾ. ೯೬-೨೪; ೪15).

[?]

**ಬಿಳ್ಳಂಬಿ** 'ಬಿಳಂಬಿ' ನೋ.

**ಬಿಱ್$_1$** 'ಬಿಱು$_2$' ನೋ.

**ಬಿಱ್$_2$** (ನಾ). (?) : ಅಬ್ಬರಕ್ಕೆ ಬಸಿಱುಬ್ಬರಿಸೆ ಬಿಱಿಯಂ ಕೊಂಡು ಬಿಱುವಱಿವ ಬೀಱುಗರುವಂ . . . ಕಂಡು (ಅನಾವ. ೩-೧೦೪ ವ). [?]

**ಬಿಱ್ಗೆಂಡ** (ನಾ). ದಪ್ಪವಾದ ಕೆಂಡ : ಅರಲೆಯೊಡ್ಡಿನ ಮೇಲೆಱೆದು ಕಱಿವ ಬಲುಬಿಱ್ಗೆಂಡದ ಮಳೆಯಾಯ್ತು (ಶೇಬಸಂ. ೫೯-೬೩).

[ಬಿಱ್$_1$(<ಬೆಟ್ಟಿತು) + ಕೆಂಡ]

**ಬಿಱ್ನೋಟ** 'ಬಿಱುನೋಟ' ನೋ.

**ಬಿಱ್ಪಿಡಿ** (ಕ್ರಿ). ದೃಢವಾಗಿ ಹಿಡಿ: ಬಲವಾಗಿ ಹಿಡಿ: ಅಹಂಕಾರ ತೋಱೆದಂತೆ ಬಿಱ್ಪಿಡಿದಲೆವುತ್ತಿಪ್ಪುದಮ್ಮ (ಶಿವಗೀ. ೧೬೦-೭೯೯ ವಚನ).

[ಬಿಱ್$_1$ (< ಬೆಟ್ಟಿತು) + ಪಿಡಿ$_1$]

**ಬಿಱ್ಬಿಗಿ** (ಕ್ರಿ). ದೃಢವಾಗಿ ಬಿಗಿ; ಬಲವಾದ ಕಟ್ಟುಹಾಕು : ಎಂಟು ತೊಡಕಿನ ನೇಣಿನಲಿ ಬಿಱ್ಬಿಗಿದರಮ್ಮ (ಶಿವಗೀ. ೦೩೬-೭೯೯ ವಚನ).

[ಬಿಱ್$_1$ (< ಬೆಟ್ಟಿತು) + ಬಿಗಿ$_1$]

**ಬಿಱ್ಬಿಱನೆ** 'ಬಿಱುಬಿಱನೆ' ನೋ.

**ಬಿಱ್ಸು** 'ಬಿಱುಸು' ನೋ.

**ಬಿಱು$_1$** 'ಬೆಱ್' ನೋ.

**ಬಿಱು$_2$**, ಬಿರಿ$_3$, ಬಿರು$_1$, ಬಿಱ್$_1$, ಬೆಟ್ಟು$_4$ (ಸಪೂರೂ). 'ಬೆಟ್ಟಿತು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ: "ಬಿಱುಪೆಂದು ಬೆಟ್ಟಿತು" (ಕಲಾ. ೬೨-೩೪೬) : "ಬಿಱುವೆಂಬುದು ಬೆಟ್ಟಿತರ್ಕೆ" (ಶಮದ. ೦೯೪). 'ಬಿಱುಗತ್ತಲೆ'. 'ಬಿಱುಬಿಮ್ಮು' ಪರಾ. ಬಿರಿ$_3$ : 'ಬಿರಿಗಲ್ಲು' ಪರಾ. ಬಿರು$_1$ : "ಬಿರುಪೆನೆ ಕಠಿಣವಾಕ್ಯಂ" (ಶಜ. ೬೯). 'ಬಿರುಗಣ್ಣು' ಪರಾ. ಬಿಱ್$_1$: 'ಬಿಱ್ಗೆಂಡ' ಪರಾ. ಬೆಟ್ಟು$_4$: 'ಬೆಟ್ಟುಬ್ಬಸ'. 'ಬೆಟ್ಟುಪೊಲೆ' ಪರಾ. [< ಬೆಟ್ಟಿತು]

**ಬಿಱು$_3$**, ಬಿರು$_2$ (ಸಪೂರೂ). 'ಬಿಱುಸು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಿಱುಕೆರಳ್'. 'ಬಿಱುಗಾಳಿ' ಪರಾ. ಬಿರು$_2$ : 'ಬಿರುಗಾರ್ಮುಗಿಲ್'. 'ಬಿರುಗೂದಲು' ಪರಾ.

[< ಬಿಱುಸು]

**ಬಿಱುಕೆರಳ್** (ಕ್ರಿ). ತೀವ್ರವಾಗಿ ಕೋಪಗೊಳ್ಳು: ಆ ತಱಿಸ ಬಿಱುಕೆರಳ್ದು ಜಬು ಟ್ರೈಫೋನ ಎರ್ದೆಯಿಂದೆ ಕೂಱ್ಗುದಿದು ಉಕರ್ವುದು. (ಐಬ್ರ. ೨೦-೪೨೬). [ಬಿಱು$_3$ (< ಬಿಱುಸು) + ಕೆರಳ್ (<ಕೆಳಱ್)]

**ಬಿಱುಗತ್ತಲೆ**, ಬಿರುಗತ್ತಲು (ನಾ). ಗಾಢವಾದ ಕತ್ತಲೆ : ಕಗ್ಗತ್ತಲೆ : ಹುಲಿಯ ಹುಲ್ಲೆಯ ನೇಹ ಬಿಱುಗತ್ತಲೆಯ ಬೆಳಗಿನ ಪ್ರೀತಿ . . . ಇರ್ದುದು ಬನದೊಳಾ ಮುನಿಯ (ಕೂರಾ. ೦-೩-೪೩). **ಬಿರುಗತ್ತಲು :** ಅಸಿತರೊಳೆ ಬಿರುಗತ್ತಲೊಂದು ಬಾನೆಲ್ಲವ ಬಾಸಣಿಸಿ (ಗೂರ್ಜ್ಞಶಾ. ೦೦೨-೩೦೩). [ಬಿಱು$_2$(ಬೆಟ್ಟಿತು) + ಕತ್ತಲೆ$_1$ (<ಕಱ್ತಲೆ)]

**ಬಿಱುಗಲ್**, ಬಿರಿಗಲ್ಲು. ಬಿಱುಗಲ್ಲು (ನಾ). ದಪ್ಪವಾದ ಕಲ್ಲು : ಕಲಿ ಪಾರ್ಥಂ ಧನುವಿಂದೆ ಪೊಯ್ದಂ . . . ಮಹಾಬಲಸಾಂಖ್ಯಂ ಬಿಱುಗಲ್ಲಿಂದೆ ಬಿಡದಿಟ್ಟಂ (ಪ್ರಕಬ. ೯-೦೦೬). **ಬಿರಿಗಲ್ಲು :** ಕರೆಸಿದರು ಹುಡಿಗಲ್ಲು ನಿಡುಗಲ್ಲು ಬಡಿಗಲ್ಲು . . . ಬಿರಿಗಲ್ಲುಗಳನು (ಪಪಶೋ. ೩೩-೩೩) ; ಗುಡ್ಡದ ಬಿರಿಗಲ್ಲ ಹುಡಹುಡುಕುತ ಬಂದ ಧರೆಗೆ ಶಿವಲಿಂಗಪೂಜೆಗೆ ಕೊರೆದ (ಶಪಗೀ. ೬೩). **ಬಿಱುಗಲ್ಲು :** ಹೇಱುವ ಬಿಱುಗಲ್ಲು ಬಳದಡಿ ವರಶಕ್ತಿ ಪಾಱುಂಬಳೆ ಶೂಲದಿಂದೆ ಪಱುಗಾಣಿಸಿ . . . ಗಾಱುಮಾಡಿದರು (ಪೋಹಶ. ೩೪-೨೩). [ಬಿಱು$_2$ (< ಬೆಟ್ಟಿತು) + ಕಲ್$_3$]

**ಬಿಱುಗಲ್ಲು** 'ಬಿಱುಗಲ್' ನೋ.

**ಬಿಱುಗಹಳೆ** (ನಾ). ಜೋರಾಗಿ ಸದ್ದು ಮಾಡುವ ಕಹಳೆ : ಬಹಳಶಂಖ ಧ್ವನಿಗುಡಲು ಬಿಱುಗಹಳೆಗಳು ಪರಸಮಯಕಾನನದಹನವೆನುತಂ ಮೊಱೆಯಲು (ಬಸಪು. ೩೦-೦೬). [ಬಿಱು$_3$ (< ಬಿಱುಸು) + ಕಹಳೆ]

**ಬಿಱುಗಾಣ್ಕೆ** (ನಾ). ಕ್ರೂರವಾದ ನೋಟ; ಘೋರದೃಶ್ಯ : ಸಾಲ್ಗುಮಿ ಬಿಱುಗಾಣ್ಕೆ. ಮುಚ್ಚಿಂ. ಮುಚ್ಚಿಂ (ಅಶ್ವಶಾ. ೪೦-೬೪೦).

[ಬಿಱು$_2$ (<ಬೆಟ್ಟಿತು) + ಕಾಣ್ಕೆ]

**ಬಿಱುಗಾಳಿ**, ಬಿರುಗಾಳಿ (ನಾ). ಬಿರುಸಾಗಿ ಬೀಸುವ ಗಾಳಿ ; ಚಂಡಮಾರುತ : ಬಿಱುಗಾಳಿ ದೂಳಿಗಳನಾಗಿಸಿ ಬಾಧಿಸಿದತ್ತು ತವ್ವಳಂ (ವರ್ಧಪು. ೦೩-೩೯); ಬಂದೊಂದು ಬಿಱುಗಾಳಿ ಬೀಸಿತ್ತು (ಅಂಠ. ದೇ. ೦೬೬-೦೬) ; ಜಡಿವ ತುಂತುರ್ವನಿಗಳನು ಬಿಱುಗಾಳಿ ಮೊಗೆವವೊಲನಿತು ಸೆಲ್ಲೆಹ ಶರವಳೆಯ ಗದೆಯಿಂದ ಘಟ್ಟಿಸಿದ (ಕುವ್ಯಾಗ. ೦-೩೩). **ಬಿರುಗಾಳಿ :** ನಿನ್ನನೀ ನಿನ್ನ ಪಡೆವೆರಸಿ ಬಿರುಗಾಳಿ ತರಗೆಲೆಯನೊದೆದಟ್ಟುವಂತೆಬ್ಬಿ (ಕಶ್ಯಾಂಗ. ೬೯-೨೦೬೪); ಬಿರುಗಾಳಿ ನಾಕೆಯನ್ನು ಎಳೆದೊಯ್ಯುವಂತೆ ವಿಷಯಗಳು ಮಾನವಬುದ್ಧಿಯನ್ನು ಎಳೆದೊಯ್ಯುತ್ತವೆ (ಧರ್ಮಸಾ. ೦೩೦).

[ಬಿಱು$_3$ (< ಬಿಱುಸು) + ಗಾಳಿ$_1$]

**ಬಿಱುಗಿಡಿ** (ನಾ). ಉಗ್ರವಾದ ಕಿಡಿ : ಅಳವಿಗೊಟ್ಟುದು ಮತ್ತೆ ಕೌರವ ಬಲಪಯೋನಿಧಿ ವೈರಿಬಡಬನ ಬಿಲು ಸರಳು ಬಿಱುಗಿಡಿಯಲೌಕಿತು ಚಾತುರಂಗದಲಿ (ಕುವ್ಯಾದ್ರೋ. ೬-೩). [ಬಿಱು$_2$ (<ಬೆಟ್ಟಿತು) + ಕಿಡಿ]

**ಬಿಱುಗುಟ್ಟು**, ಬಿರುಗುಟ್ಟು (ಕ್ರಿ). ಬಿರುಸಾಗಿ ಮೊರೆ; ಜೋರಾಗಿ ಶಬ್ದ ಮಾಡು : ಬಿಱುಗುಟ್ಟುತಾ ಬಾಣ ಪೋಗಿ ಮಾಗಧನಿದ್ದ

ಹೊಱಗಣೋಲಗದ ಶಾಲೆಯೊಳು ನಿಱಿಸಿದ ಕಂಭಕ ತೊಟ್ಟನೆ ನೆಟ್ಟಿತು (ಶಶಿ. ೨೪-೩೮). **ಬಿರುಗುಟ್ಟು :** ತೊಟ್ಟು ಮಾಗಿದ ಫಲನಿಚಯ ಬಿರುಗುಟ್ಟುವನಿಲೋದ್ಧತಿಗುದುರುವೋಲ್ . . . ಯಾದವವೀರರಲ್ಲಿ ತಟ್ಟನುರುಳಿದರನಿಲಜನ ಗದೆಯುಟ್ಟುಳಿಗೆ (ಕೋಗಯು. ೨೪-೨೭).

[ಬಿಱು$_{3}$ (<ಬಿಱುಸು) + ಕುಟ್ಟು$_{1}$]

**ಬಿಱುಗೊಳ್ಳು** (ಕ್ರಿ). ಒರಟಾಗಿ ವರ್ತಿಸು ; ಅಂಕೆಗೆ ಒಳಗಾಗದಿರು : ಈ ತುರಂಗಮಾ ಕುದುರೆಯುಂ ಕಾಣುತುಂ ಧ್ವನಿಗೈದು . . . ಮಾಣಿಕ್ಯ ಮುಕ್ತಾಳಿಗಳ ಭೂಷಣಂಗಳಂ ಮಱಿದಿಕ್ಕಿ ಬಿಱುಗೊಂಡವು (ಕೈಬಿಸಾ. ೨೫-೮).

[ಬಿಱು$_{3}$ (<ಬಿಱುಸು) + ಕೊಳ್ಳು$_{1}$ (<ಕೊಳ್$_{1}$)]

**ಬಿಱುಗೋಲ್**, ಬಿಱುಗೋಲು (ನಾ). ತೀಕ್ಷ್ಣವಾದ ಬಾಣ : ಘನ ಮೇಘಾಳಿ ಸುರಿದವೊ ಮಳೆಯನೆನೆ ಬಿಱುಗೋಲ ಸೈವಳೆಗಱಿದರುಭಯದ ಜೋದರವಗಡಿಸಿ (ಕುವ್ಯಾಶ. ೪-೬೪). **ಬಿಱುಗೋಲು :** ತೋರಹತ್ತದಲಿ ಬೀಱಿದ ಬಿಱುಗೋಲುಗಳೆಂಬ ನಟ್ಟೆಯನೂಱಿದನೀಗ್ಯೆಗಡೆಗೆ (ಮೋಹತ. ೩೯-೪೭). [ಬಿಱು$_{3}$ (<ಬಿಱುಸು) + ಕೋಲ್$_{1}$]

**ಬಿಱುಗೋಲು** 'ಬಿಱುಗೋಲ್' ನೋ.

**ಬಿಱುದನಿ**, ಬಿರುದನಿ (ನಾ). ಬಿರುಸಾದ ಧ್ವನಿ ; ಕರ್ಕಶಸ್ವರ : ಉರುಗಂಭೀರಭೇರಿಯ ಬಿಱುದನಿಗಳುಬ್ಬರಿಸಿದವು (ಕುವ್ಯಾದ್ರೋ. ೦೪-೩೭); ಬಿಱುದನಿಯ ಬೊಬ್ಬೆಗಳ ಲಗ್ಗೆಯ ಹಱಿಯನೊಡೆಬಡಿದು (ಕೊರಾ. ೬-೦೦-೦೫). **ಬಿರುದನಿ :** ಪಾಮರಿಯ ಬಿರುದನಿಗೆ ಕೈಪರೆಗೆ ಬಾಯ್ಪರೆಗೆ ಕಲ್ಗವಣೆಗೊಂಧಿನಿತು ಪೆಳರಿ (ತತ್ವಾಂಗ. ೫೩-೦೪೫೦).

[ಬಿಱು$_{3}$ (< ಬಿಱುಸು) + ದನಿ$_{1}$]

**ಬಿಱುದೇಗು** (ಕ್ರಿ). ರಭಸವಾಗಿ ತೇಗು : ಧಾರುಣೇಶರು ಮಡಿದರೊಂದೇ ಸಾರಿಗೆಯುಲೈನೂಱು . . . ಮಾರಿ ಬಿಱುದೇಗಿದಳು (ಕುವ್ಯಾದ್ರೋ. ೦೬-೫೦). [ಬಿಱು$_{3}$ (<ಬಿಱುಸು) + ತೇಗು$_{1}$]

**ಬಿಱುನಗು** (ಕ್ರಿ). ಜೋರಾಗಿ ನಗು ; ಅಟ್ಟಹಾಸ ಮಾಡು : ರಾಜ ವಿನೋದಂ ಬಿಱುನಕ್ಕು ನಕ್ಕು ಕುಕಿಲುತ್ತುಂ (ರಸರ. ೨-೯೬).

[ಬಿಱು$_{3}$ (<ಬಿಱುಸು) + ನಗು$_{1}$]

**ಬಿಱುನಗೆ**, ಬಿರುನಗೆ (ನಾ). ಜೋರಾದ ನಗು ; ಅಟ್ಟಹಾಸ : ಕೇಳಿ ಕೆದಱಿದ ಬಿಱು[ಪಾಠಾಂ. ಕಡು]ನಗೆಯುಲಡಬೀಳುತೇಳುತ . . . ಸೂಳುನಗೆ ಬೆಳುನಗೆಯುಲಡಿಗಡಿಗಾಳುಮುಳುಗುಬ್ಬುಸದಲಿದ್ದು (ಕುವ್ಯಾಸ. ೬೦೩. ೨-೯೫); ಅರೆನಗೆಯ ಬಿಱುನಗೆಯ ನಗೆಗಳ ಹೊರಳಿಗಳಲಡಬಿದ್ದು (ಕೊರಾ. ೦-೦೫-೬). **ಬಿರುನಗೆ :** ಆತನ ಉಚ್ಛೀಷವನ್ನು ಹಾರಿಸಿ ಬಿಸುಟು ತಿರಸ್ಕೃತಿಯ ಬಿರುನಗೆಯನ್ನು ಬೆಳಗಿ (ಬಿರುಗಂ. ೩೨-೪).

[ಬಿಱು$_{3}$ (<ಬಿಱುಸು) + ನಗೆ]

**ಬಿಱುನಡೆ** (ನಾ). ರಭಸವಾದ ನಡಗೆ ; ಬಿರುಸಾದ ನಡೆ : ಪರಿಕಿಸದೆ ನಡೆವ ಬಿಱುನಡೆಯ ಪದಹತಿಗಳವ ಪಲತೆಱದ ಜೀವಿಗಳಿಗ ವಿಮೋಕ್ಷಂ ದೊರೆವುದು (ಬಸವ. ೩೪-೩೭). [ಬಿಱು$_{3}$ (<ಬಿಱುಸು) + ನಡೆ$_{2}$]

**ಬಿಱುನಾಲಿಗೆ** (ನಾ). ಕಟುವಾದ ಮಾತುಗಳನ್ನಾಡುವ ನಾಲಗೆ : ಪೌರ ಜನ ಜಾಳಿಸುವ ಕಂಬನಿಗಳಲಿ ಬಿಱುನಾಲಿಗೆಯ ಬೈಗುಳಲಿ ಮುನಿಯನು ಕೀಳುನುಡಿಯಲಿ ಜಱಿವುತಿರ್ದಾದು (ಕೊರಾ. ೧-೪-೪೩).

[ಬಿಱು$_{3}$ (<ಬಿಱುಸು) + ನಾಲಿಗೆ (<ನಾಲಗೆ)]

**ಬಿಱುನುಡಿ**, ಬಿರುನುಡಿ (ನಾ). ಕಠಿಣವಾದ ಮಾತು ; ಚುಚ್ಚುಮಾತು; ಕಟಕಿ : ಎಲ್ಲಾ ಮದವ ಸೇವಿಸುತ್ತ ಅಱಿಯದ ಮದವನೊಂದು ನುಡಿದಡೆ ಬಿಱುನುಡಿಯೆಂದೆಂಬರು (ಸಳವ. III, ೩೪೫-೬೪೪) ; ಶಲ್ಯನ ಬಿಱುನುಡಿಗೆ ಬೆಚ್ಚದೆ . . . ಬಿನ್ನವಿಸಿದನು (ಕುವ್ಯಾಶ. ೫-೦೮) ; ಹೀನಮಾನವರ ಬಿಱುನುಡಿಗೆ ತತ್ವದ ಜ್ಞಾನಿಯುಂಜುವನೆ (ಸರ್ವಜ್ಞ. ೩೭೩). **ಬಿರುನುಡಿ :** ಮದಮುಖಿಯು . . . ಮರುತಾತ್ಮಜನ ಬೆದರಿಸಿದಳೇನೆಂಬೆ ಕಾಮರ್ಗಾಲ ಬರಸಿಡಿಲ ಪೋಲ್ವ ಬಿರುನುಡಿಗಳಿಂದ (ಪಂಪಾರಾ. ೫-೩-೫) ; ತನ್ನನು ಹೊಗಳನು ಹೆರರನು ತೆಗಳನು ಆಡನು ಬಿರುನುಡಿಗಳನು . . . ಕರುಬನು ಸಭ್ಯನಾದವನು (ಇಂಪಾಶ. ೬೭-೨೪). [ಬಿಱು$_{3}$ (<ಬಿಱುಸು) + ನುಡಿ$_{2}$]

**ಬಿಱುನುಡಿಗೇಳ್** (ಕ್ರಿ). ಬಿರುಸಾದ ಮಾತನ್ನು ಕೇಳು ; ಕಠೋರವಾದ ನುಡಿಯನ್ನು ಆಲಿಸು : ಬಂದಳು ಭಾಮಿನಿ ರನ್ನೆ ನಿನ್ನೊಳಗೇನೆಂದಳು ಬಿಱುನುಡಿಗೇಳ್ದು (ಮೋಹತ. ೦೦-೩೩). [ಬಿಱುನುಡಿ + ಕೇಳ್]

**ಬಿಱುನೋಟ**, ಬಿರುನೋಟ, ಬಿಱಿನೋಟ (ನಾ). ಬಿರುಸಾದ ನೋಟ ; ತೀಕ್ಷ್ಣವಾದ ದೃಷ್ಟಿ : ಬೆಳುನೋಟವಾವಾಗ ಬಿಱುನೋಟ ವಾವಾಗ . . . ಓರೆನೋಟವಾವಾಗ (ಶರತ. ೦೦-೩೦); ಹಾಲು ಇಲ್ಲದ ಊಟ ಬಾಲೆಯರ ಬಿಱುನೋಟ . . . ಕಂಗಳನ ಕೋಲು ಕಳೆದಂತೆ (ಸರ್ವಜ್ಞ. ೦೫೩೭). **ಬಿರುನೋಟ :** ತನ್ನ ಗೆಡ್ಡೆಗಣ್ಣುಗಳಿಂದ ಬಿರುನೋಟ ವನ್ನು ಬೀರುತ್ತ . . . ಮುಂದೆ ಬಂದನು (ವಕಥಾ. ೩೮); ಅವನು ನನ್ನ ಕಡೆಗೊಮ್ಮೆ ಬಿರುನೋಟ ಬೀರಿದ (ಅಂಹೂ. ೫೭). **ಬಿಱಿನೋಟ :** ಕಿಱಿನೋಟ ವಿಟನಿಂಗೆ ಅರೆನೋಟ ವಿದುಷಕಗೆ . . . ಪೀಠಮರ್ದನಗೆ ಬಿಱಿನೋಟ (ಸರ್ವಜ್ಞ. ೦೭೩೨).

[ಬಿಱು$_{3}$ (< ಬಿಱುಸು) + ನೋಟ]

**ಬಿಱುಬ**, ಬಿರುಬ (ನಾ). ಕಠಿಣಮನಸ್ಸಿನವನು ; ಕ್ರೂರಿ : ಅಱಿವು ಸಂಪನ್ನರಲ್ಲಿ ಇದಿರೆಡೆಯುಡಗಬೇಕಲ್ಲದೆ ಬಱಿ ಕಾಯದ ದರುಶನ ಬಿಱುಬರಲ್ಲಿ ಉಂಟೇ ನೆಱಿಯಱಿವಿನ ಹೊಲಬು (ಸರ್ವವ. ೫೭-೩೦೦) ; ಇಂದುಧರನು ವೋಲಗದಿ ಕುಳ್ಳಿರೆ ಗಿರಿನಂದನೆ ಸಹಿತ ಸಂತಸದಿ ನಂದೀಶನು ಬರೆ ಬಿಱುಬ ಗಣೇಶನು ನಿಂದಿಸಿ ನಿಲಿಸೆ ಬಾಗಿಲಲಿ (ಬಸವ ೦-೨೭). **ಬಿರುಬ :** ಎಲ್ಲರು ಭಯಭಕ್ತಿ ಜಂಗಮದಾಸೋಹಿಗಳಲ್ಲದೆ ಬಿರುಬರಲ್ಲಿಲ್ಲ (ಮಾದೇಗಾಂ. ೦-೩೭).

[ಬಿಱುಬು + — ಅ$_{7}$]

**ಬಿಱುಬಿದ್ದು** (ನಾ). ಬಿರುಸಾದ ಏಟಿನಿಂದಾದ ವ್ರಣ ; ದೊಡ್ಡಗಾಯ : ಬೆಟ್ಟಿತರ್ಕೆ ಬಿಱು ಎಂದು . . . ಆದೇಶಮುಕ್ಕುಂ . . . ಬಿಱುವೊಯಲ್, ಬಿಱುಬಿದ್ದುಂ (ಶಮತ. ೦೬೪ ವೃಯೋ). [ಬಿಱು$_{2}$ (< ಬೆಟ್ಟಿತು) + ಬಿದ್ದು$_{2}$]

**ಬಿಱುಬಿದ್ದುಂಬೋಗು** (ಕ್ರಿ). ದೊಡ್ಡಗಾಯವನ್ನು ಹೊಂದು ; ತೀವ್ರ ವಾದ ವ್ರಣವನ್ನು ಹೊಂದು : ಪೊಯ್ದು ಪೊಯ್ದುಂಗಯ್ಯುಂ ಮೊಗಮುಂ ಮುಸುಂಬು ಬಿಱುಬಿದ್ದುಂಬೋಗೆ ವೀರಂಗೆ ದೋರ್ಭಂಗಂ ಮಾಡಿದಂ (ಶಂರಾಮಾ. ೬-೨೯). [ಬಿಱುಬಿದ್ದು + ಪೋಗು$_{1}$(<ಪೋ$_{1}$)]

**ಬಿಱುಬಿಮ್ಮು** (ನಾ). ಅಧಿಕವಾದ ಗರ್ವ.—ಅಹಂಕಾರ : ಉಪ್ಪರದ ಕೈಮನವ ಕಬಳಿಸಿ ತೆಱಹು ಬಿಱುಬಿಮ್ಮಿನಲಿ ಬಿಗಿದುದು ತೆಗೆದಬ್ಬರ ಘಾಯಘಾತಿಗಳು (ಕುವ್ಯಾಗ. ೬-೨೯). [ಬಿಱು$_{2}$ (<ಬೆಟ್ಟಿತು)+ಬಿಮ್ಮು$_{1}$]

**ಬಿಱುಬಿಸಿಲು** 'ಬಿಱುವಿಸಿಲ್' ನೋ.

**ಬಿಱುಬಿಱನೆ**, ಬಿಱಿಬಿಱನೆ (ಅ). ಬಿರುಸಾಗಿ; ತೀಕ್ಷ್ಣವಾಗಿ : ಬಿಱು ಬಿಱನೆ ಕಂಗಳಂ ಬಿಟ್ಟು ಪಲ್ಲಂ ಕಿರಿದುವುಱುಗಿಸುತೆ ಮೊಗಮುಂ . . . ಭೃಂಗಿ . . . ಎಸೆದಿರ್ದನು (ಶಬಿಶ. ೨-೨೭). **ಬಿಱಿಬಿಱನೆ :** ಬಿಱಿಬಿಱನೆ ಕಣ್ಬಿಡುತ ಬಿಂಕದಲಿ ಲಂಕೆಯನು ಸುರಸುರನೆ ಬಾಲದಲಿ ಸುಟ್ಟು ರಣಧಿಟ್ಟ (ಪಾಂಶೀ. ೨೮-೨). [<ಬಿಱುಸು + — ಅನೆ$_{1}$]

**ಬಿಱುಬು**, ಬಿರುಬು, ಬಿಱುಹು(ನಾ). ೧. ಬಿರುಸು; ತೀಕ್ಷ್ಣತೆ; ಉಗ್ರತೆ : "ಬಿಱುಬುಂ ತಾಂ ಬೆಟ್ಟಿತಕ್ಕು" (ಶಬ್ದಮ. ೨೨೨) ; ಮುನಿಯ ಕೋಪದ ಕಿಚ್ಚಿನುಬ್ಬರದ ಬಿಱುಬನಱಿದು (ಹಕಣ. ೬-೦೪) ; ಅಂಟಿನಂದದ ಸ್ನೇಹ ಬಿಱುಬಿನಂದದ ಕೋಪವುಂಟಾದವರನು ಕೆತ್ತುವುದು (ಶರತ. ೬೮-೩೪). ೨. ರಭಸ ; ತೀವ್ರತೆ : ಬಿಱುಬಿಂದಂ ಬೀಸೆ ಗದೆಯ ಗಾಳಿಯ ಕೋಲಾಹಲ ಱಿಸಿದುದು ಭೀಮನಂ (ಗದಾಯು. ೬-೩೨) ; ಆ ಪಡೆಯ ಬಿಱುಬಂ

**ಬಿಱುಹೊಯ್ಲು** 'ಬಿಱುಸ್ಪೊಯಲ್' ನೋ.

**ಬಿಜ್ಜನೆ, ಬಿರ್‍ರನೆ** (ಅ). ಬಲವಾಗಿ ; ಬಿರುಸಾಗಿ : ಮತ್ಸ್ಯಮಕರಸಿಂಹ ವ್ಯಾಘ್ರಾದಿಪತಾಕಾನೀಕದೊಳಂ ದೆಸೆಗೆ ಬೆಸೆದು ಬಿಜ್ಜನೆ ಬಿಗುವ ಪೊಸ ಸಿರಿವಂತನಂತೆ (ಶಾಂತಿ. ೧೦-೨೦ ವ): ಸಜ್ಜನೆ ಹಱಿತಂದು ಬಿಜ್ಜನೆ ಕಲ್ಲಿಲಿಡುವುದಿದಾವ ಪೂಜೆಯೊಳಗು (ಪಡಶಾ. I, ೪೬೦). **ಬಿರ್‍ರನೆ** : ಸಲ್ಲದು . . . ಸಿಡಿಲ್ಗೆ ಸಾಟಿಯೆನೆ ಬಿರ್‍ರನೆ ಬೀಳ್ವ ಭವ್ಯಚ್ಛೀಮುಖಂ (ಕಾಕಂಠ. ೩-೧೦); ಬಿರ್‍ರನೇ ಬೀಸುವ ಬಿರುಗಾಳಿಯು ಗಿಡವನ್ನು ಬೇರುಸಹಿತ ಕಿತ್ತು ಹಾಕುವಂತೆ, ಕಾಮದೇವನು . . . ಕೊಲ್ಲುವನು (ಪ್ರಿಹ್ಯಪೀ. ೧೨೬).

[< ಬಿಱುಸು + – ಅನೆ$_1$]

**ಬಿಟಲ್** 'ಬೀಟಿಲ್' ನೋ.

**ಬಿಟಲು** 'ಬೀಟಿಲ್' ನೋ.

**ಬಿಟವೃತ್ತಿ** 'ಬೀಟಿವೃತ್ತಿ' ನೋ.

**ಬಿಟಾದೆ** (ನಾ). ಒಂದು ಸ್ಥಳದ ಹೆಸರು (?) : ಆವಜ್ಞ ವಂಶೋತ್ಪತ್ತಿಯಾಗೆ ದಾಯಗೊಟ್ಟುದು ಮದೆಗೂಟುವ್ವಿಬಿಟಾದೆಯು (ಎಕ. X, ಶ್ರೀಬಿಪಾ. ೬-೧೦; ಸು. 780). [?]

**ಬಿಟಿಲ್** 'ಬೀಳಿಲ್' ನೋ.

**ಬಿಟ್ಕ, ಬಿಕ್ಕ$_1$, ಬಿಳ್ಕ** (ನಾ). ೧. ಒಂದು ಬಗೆಯ ಕಾಡುಮರ ಮತ್ತು ಅದರ ಹಣ್ಣು : "ಬಿಟ್ಕ=ಒಂದು ಮರಂ" (ಶಮದ. ಶಂ. ೦); "ಬಿಟ್ಕಯೆನಲೊಂದು ವೃಕ್ಷಂ" (ಸಂಕೀವ. ೬); ಬೇರಂ ಬಿಟ್ಕಿಯನೆ ತಿಂದ ದೆವಸದೊಳಟ್ಟಾಡಿದ ಬೀರಮಿಾಗಳೇಂ ಪೊಸತಾಯ್ತೋ (ಶಂಶಭಾ. ೦೨-೦೭೮); ಏಕಾಕಿ(ನಿ)ಯಾಗಿ ವನವಂ ಪೊಕ್ಕು ಬೇರಂ ಬಿಟ್ಕಿಯುಮಂ ತಿಂದಿರಲ್ (ಪೇಬಾಪು. ೦೯-೧೨೭ ವ). **ಬಿಕ್ಕ$_1$** : ೧. ಸಿರಿಸಂ ಸೀರೆ ಬೆಳ್ಳವಂಗಮೆಲವಂ ಬಳ್ವಾಲೆರಂ ಬಿಕ್ಕ (ಕಾವ್ಯಸಾ. ೦೦೯೦ ಕೂಧ್ರಕ); ಬಿಕ್ಕಯಂ ಬೇರುಮನುಂಡಡವಿಯೊಳಗಿರ್ಪ ಮುನಿಗಳ ನಡೆವಳಿಯೆತ್ತೆತ್ತ ಯುವತಿಜನದನುರಾಗಂ (ಕಾದಂಪೂ. ೮೦೬); ವನದಲಿ ಬೇವು ಬಿಕ್ಕಯನಱಿಸಿ ತೊಳಲಿದು ಸಾಲದೇ ಹದಿಮೂಱು ವತ್ಸರದಿ (ಕುವ್ಯಾವಿ. ೯-೯೦). ೨. ಒಂದು ಬಗೆಯ ಮರ ಮತ್ತು ಅದರ ಹಣ್ಣು; ಸೀಬೆ : ತುಮಕೂರಿನ ಸುತ್ತಮುತ್ತಲಲ್ಲಿ ಸೀಬೆಹಣ್ಣಿಗೆ ಬಿಕ್ಕ ಎನ್ನುತ್ತಾರೆ (ರೂಢಿ). **ಬಿಳ್ಕ** : ೧. ಬಿಳ್ಕ ಮುಳ್ತುಗ . . . ಹೊನ್ನೆಯ ತರುಗಳ್ (ಹರಿಶ್ಚ. ೯-೬೮) ; ನೆಲೆಯಿಲ್ಲದಲೆದಲೆದು ಬೇರು ಬಿಳ್ಕಯ ನುಂಡು . . . ಬಳಲುವರ್ ನಾವು ಲೋಗರೆ ದಿಟಂ ! (ಶಶ್ರಾಂಗ. ೧೪-೪೩೦).

**ಬಿಟ್ತು, ಬಿತ್ತ, ಬಿತ್ತು$_2$, ಬಿಳ್ತು** (ನಾ). ೧. ಬಿತ್ತನೆಗೆ ಉಪಯೋಗಿಸುವ ಕಾಳು ; ಬೀಜ : ಕೆಲವುದಿವಸಕ್ಕೆ ಬಿಟ್ತು ಪತತ್ರಿಗೋತ್ರಕ್ಕಪವೃತ್ತು ಮೂಡುವಂತೆ ಮೂಡುವುದುಂ (ಶಂತಶಂ. ೨೬೯-೭). ೨. ದಾಳಿಂಬೆ ಮುಂತಾದ ಹಣ್ಣುಗಳೊಳಗೆ ಇರುವ, ತಿನ್ನಬಹುದಾದ ಕಾಳು : ಅಂಬುಜಲೋಚನೆಯ ಪಲ್ಗಳಂ ಪೊಸರಸದಾಳಿಂಬದ ಬಿಟ್ತುಗಳೆನುತುಂ ಚುಂಬಿಸಲಾರ್ಪುದದೊಂದು ಮಂಜುಳಕೀರಂ (ಅದ್ಯಟಿ. ೦೦-೫೨); ಬಂಡಿನಲ್ಲವುರ್ಡಿಯಿಂ ಪೊರೆದ ಪರಮೆವಱಿಯುಂ ಕೋಶದೆಳಬಿಟ್ತುಗೆತ್ತು ಕರ್ದುಂಕಲೆಂದವ್ವಳಿಪ ಬಾಲಹಂಸಂಗಳಿಂ . . . ಸೊಗಯಿಸಿದತ್ತು (ರಾಮಾಶ್ವ. ೫೨-೨೮). **ಬಿತ್ತ**: ೧. ಬದಿರಡಿಯ ಗದ್ದೆ ಅಂತು ನಾಗುಡುಗದಲೂ ಬಿತ್ತ ಬಿತ್ತುವ ಹತ್ತುಮೂಡೆ ಗದ್ದೆಗೆ (ಶಾಇಶ. IX–ii, ೯೦೫-೦೫; 1872); ಕಾಮನ ಬಿಲ್ಲಿನ ಬಿತ್ತವ ಬಿತ್ತಿ ಬೆಳೆಯಾದಂತಿದೆ ಹೂದೋಟ (ಕೋಗಿಲೆ. ೭೭-೭). **ಬಿತ್ತು$_2$**: ೧. ಸತ್ಯದ ಬಿತ್ತು ಹುರಿದುದು (ಕುವ್ಯಾಅ. ೨೦-೬೯) : ಚಿತ್ರಜಕೀರ್ತಿಲತೆಯ ಬಿತ್ತುಗಳಪೊಲು ಚಿತ್ರಕಾನಂದವನೀವ ಒತ್ತಿದ ಮುಗುಳುಮಲ್ಲಿಗೆಯ ವಂಗಡಪೆಸೆವತ್ತು (ಕುರಾಸಾಂ. ೪-೦೨). ೨. ರಸದಾಡಿಮದ ಬಿತ್ತುಮಂ ಪೊಸಮುತ್ತುಮಂ ಮುಕ್ಕುಳಿಸಿದೀತಪ್ಪ . . . ದಂತಪಂಕ್ತಿಗಳ್ (ಶಂಶಭಾ. ೨-೩೯ )ವ; ಗಿಳಿಗಳ ಗೂಡಿಂದುದಿರ್ದ ದಾಳಿಂಬದ ಬಿತ್ತುಗಳಿನೊಸರ್ವ ತನಿರಸದಿಪದೊಳಿ (ಶಾಂಪು. ೯೭). **ಬಿಳ್ತು** : ೧. ಸಾಮರ್ಥ್ಯದ ಬಿಳ್ತನಂತೆ ಸೌಂದರ್ಯದಂಕುರದಂತೆ . . . ಗಿರಿಜಾತೆ . . . ಬಳೆಯುತಿರ್ದಳ್ (ಗಿಂಕ. ೪-೬೯ ವ): ಪುರ್ಬೆನಿಪ ಗೊಬ್ಬರವಂ ತಳೆದಲ್ಲಿ ಚೆಲ್ಲಿ ತಾರಗೆಗಳೆನಿಪ್ಪ ಬಿಳ್ತುಗಳಂ . . . ಸುಧಾಮರೀಚಿಜಳಮುಂ ಸುರಿದಂ ಸಲೆ ಕಾಲಪಾಮರಂ (ರಾಜಶೇ. ೧೧-೬೮).

[<ಬಿತ್ತು$_1$. /ತಮಿ. ಮಲ. ವಿತ್ತು; ತುಳು. ಬಿತ್; ಕೊಡ. ಬಿತ್ತೀ: ತೆಲು. ವಿತ್ತು ; ಕೋತ. ವಿತ್; ತೊದ. ಪೀತ್; ಗದಬ. ವೀತ್]

**ಬಿಟ್ಟು$_1$** 'ಬೀಟ್$_1$' ಪರಾ.

**ಬಿಟ್ಟು$_2$** 'ಬಿರ್ದು$_2$' ನೋ.

**ಬಿಟ್ಮಣ್ಣು** (ನಾ). ಒಂದು ಬಗೆಯ ತೆರಿಗೆ (?) : ಪಾರ್ವನ ಮಣ್ಗಲ್ಲಿ ಕೊಡಿತೆ ಕಾಯ ಬಿಟ್ಮಣ್ಣುಂ ಅರಸಣ್ಣುಂ ಅಯ್ದೊನ್ದಿ ಒತ್ತೆ ಮಣ್ವತ್ತು ಪಾದಂತ್ತೆತ್ತುನ್ನೊರ ಬಿಟ್ಟುಂ ಪರಿಯಾರವಾನ್ (ಎಕ. XIV. ತಿರುಮ. ೨೫೪-೭; ಸು. 800). [?]

**ಬೀ, ಬೀಗಂ$_1$, ಬೀಯು** (ಕ್ರಿ). ಬೀತ (ಭೂತಕೃ), ಬೀತು (ಭೂತನ್ಯೂ) ೧. ಮುಗಿ;ಕೊನೆಗಾಣು; ತೀರು; ಕಳೆ: "ಬೀತುದೆನಲ್ ಮುಗಿದಿರ್ದುದು" (ಶಾರಚಾ. ೨೯); ಬೀತು ಬರೆ ಮಳೆಗಾಲ . . . ಶೀತಋತುವಂಕುರಿಸೆ (ಸಮ್ಯಕ್. ೦-೩೦) ; ಬೀತುದು ಮಳೆಗಾಲ ಜಲ ನೆಲೆಗೊಂಡುದು (ಮೋಹತ. ೯-೮೨). ೨. ನಾಶವಾಗು ; ಅಳಿ; ಧ್ವಂಸಗೊಳ್ಳು : ಬೀತುದಿಂದ್ರನ ಬಲುಹು ವಿಗಡನ ವೀತಿಹೋತ್ರನ ವಿಲಗ ತಿದ್ದಿ ವಿಧೂತರಿಪುಬಲ ಬಂದನು (ಕುವ್ಯಾಸ. ೦-೨) ; ನ್ಯಾಯಮುನುಟಿಯದನೈಸಿರಿ ಬೀಯದೆ ಬೇಡಿದ ಸುಖಂಗಳಂ ಬೀಱಿಯುಪಂಗಾಯುಷ್ಯಾಂತಂಬರಮನಪಾಯಾಶ್ರಯಮಕ್ಕು ಮವನ ಸಂತಾನಕ್ಕಂ (ಶೀತಿಮಂ. II, ೮೨). ೩. ಇಲ್ಲವಾಗು ; ಮರೆಯಾಗು ; ಮಾಯವಾಗು : ದಯೆ ದಾಂಟಿ ನೀತಿ ಬೀತು . . . ಕೆಡಿಸದೆ ಮಾಣೆನೆಂದು ಗರ್ಜಿಸುವ ಕೌಶಿಕನ ಹೂಂಕಾರದಿಂದೊಗೆದರಿಬ್ಬರು ಸತಿಯರು (ಹಕಶಾ. ೭-೦); ಘಾಸಿಯಾದೆನು ಮಗನ ಮೇಲಿನ್ನಾಸೆ ಬೀತುದು (ಕುವ್ಯಾದ್ರೋ. ೦-೮); ಆಸೆ ಬೀತುದೆನ್ನುವ ಜಂಭದ ಸಂನ್ಯಾಸಿ ಇತ್ತ ಬರದಿರೆ ಲೇಸು (ನವರಾ. V. ೩೦). ೪. ಮರಣಹೊಂದು ; ಸಾಯು : "ಬೀ–ಅಪಸಾನೇ" (ಶಮರಾ). ೫. ಆರು ; ನಂದು : ಹೊಗೆ ಸುತ್ತಿ ಸುಳಿಯುತಿರೆ ಅದರಾಳದೊಳಗೆಲ್ಲೊ ಬೀತ ಕಿಡಿಯೊಲು ಹೂತ ಮಾಸು ನೆನಪು (ವಡೆಬಿಂ. ೮೨-೮). ೬. ನಿವಾರಣೆಯಾಗು ; ಪರಿಹಾರವಾಗು : ನಿನ್ನವಗೆ ತಿಳಿದುದು ಸೊಕ್ಕು ಚಿತ್ತದ ಬವಣೆ ಬೀತುದು (ಕುವ್ಯಾಕ. ೨೦-೦); ಲೇಸು ಮಾಡಿದಿರೆನ್ನ ಚಿತ್ತಕ್ಲೇಶ ಬೀತುದು ನಾನು ಬದುಕಿದೆ (ಕೌಶಿಕಾ. ೮೪-೨೯). ೭. (ಮರಗಿಡಗಳಲ್ಲಿ ಹಣ್ಣು, ಹೂವು ಮೊದಲಾದುವು ಬಿಡುವುದು) ನಿಂತುಹೋಗು ; ಕೊನೆಗೊಳ್ಳು: ಆವಲರುಂ ಪಣ್ಣುಂ ಬೀತೋವವು ಗಡ ಬೀಯುವಲ್ಲಿ ಮಲ್ಲಿಗೆಗಳುಮಿಮ್ಮಾವುಗಳುಮೆಂದೊಡಿಂ ಪೆಱತಾವುದು ಸಂಸಾರಸಾರಸರ್ವಸ್ವಫಲಂ (ಶಂಶಭಾ. ೦-೫೫); ಅಂತತಿಪ್ರಬಲಮಾದ ಘನಸಮಯಮತಿಕ್ರಮಿಸೆ ಮೊಲ್ಲೆಯು ಪೂಗುಡಿ ಪಲ್ಲಟಿಸೆಯುಂ ಗಿರಿಮಲ್ಲಿಗೆ ಬೀತು ಬಿನ್ನನಾಗೆಯುಂ (ಶಂರಃಪಾ. ೭-೦೬೪ ವ); ಪಣ್ ಎಂದುಂ ಬೀಯದ ಫಲವೃಕ್ಷಂಗಳೆತ್ತಂ ತುಱುಗಿ ಬೆಳೆದಿರೆ (ರಾಮಾಶ್ವ. ೯೪-೦೨). ೮. ಬಿಗಿಯನ್ನು ಕಳೆದುಕೊಳ್ಳು ; ಸಡಿಲವಾಗು : ಹಗೆಯ ಕಟ್ಟಲು ಕೊಟ್ಟ ಭಾಷೆಯ ಬಿಗುಹು ಬೀತುದು (ಕುವ್ಯಾದ್ರೋ. ೯-೫). ೯. ಬಡವಾಗು ; ಕೃಶವಾಗು ; ಕ್ಷೀಣಿಸು : " ತವೆದುದು ತೀರ್ದುದು ಬೀತುದು ಸವೆದುದೆನಲ್ ಕ್ಷಯಮನ್ನೈದಿತೆಂದಱಿಗೆ ಬುಧರ್ " (ಶಾರಚಾ. ೯೨); ಸವೆದುದೀ ವನವಿಲ್ಲಿ ಫಲ ಮೃಗನಿವಹ ಬೀತುದು (ಕುವ್ಯಾಆ. ೦೯-೪) ; ಜಾತರೂಪಾಂಗದ ಸುಕೋಮಲ ಬೀತ ತನು ಬಾಲಕಿಯ ರೊಡಲು ಪರೀತಧೂಳೀಧೂಸರಿತದಿಂ ಕಂದಿ ಕರಕಾಗೆ (ಹಿಮ್ಯಸ್ತ್ರೀ. ೨-೨೦).

೧೦. ಬಾಡು : ಒಣಗು : "ಬೀತುದೆನೆ ಬೀಡಾದುದಕ್ಕು ಬೀಕಲುಮಕ್ಕು" (ಶಬ್ದಮಂ. ೨೩) ; ಬೀತು ಪಸುರೇಱಿರ್ದ ಕುಂದಲತೆ ಪುಷ್ಪಮಂ ನಿಷ್ಪಂದಿಸೆ ಸೊಗಯಿಸಳೆ ಮಧುಪನಿಕರಕ್ಕೆ (ಶಾಂತಿಪು. ೭-೦೩೮ ವ) ; ಬಱಿಸಂದು ಗುರುಜನಂಗಳ ಪಱಿಯರ ಮಂತ್ರಿಗಳ ನೃಪರ ಕುವರರ ಮೊತ್ತಂ ಕಱಿಪಲ್ಕೆ ಪೋಗೆ ವಿಭುವಂ ಪೊಱಲನುಕರಿಸಿದುದು ಬೀತ ನಂದನವನಮಂ (ಪುಷ್ಪಪು. ೦೩-೮೮) ; ಬೀತ ತರು ಶುಕನಿಕರಕೀವುದೆ ಱಿತಣವ (ಕುಮ್ಯಾಭ. ೦೬-೩೬). ೧೧. ಕುಂದು : ಕುಗ್ಗು : ಕಡಮೆಯಾಗು : ಬೀಯುದಟ್ಟಿ ಱಿತೊಳಂ ಪಾಸಿಗೆ ನಾಂಬ ಮುಂಬವಮಳುಂಬಂ ಕೂಟದೊಳ್ ಸಲ್ಲರಾ (ಚಂದ್ರಪು. ೮-೬೮) : ಸೊಗಸು ಬೀಯುದು ರಮಣವಿಲ್ಲದ ಬೆಗಡು ನೋಯದು ಕ್ಷತ್ರಧರ್ಮದ ತಗಹು ಸಾಯದು ನಿನಗೆ (ಕುಮ್ಯಾಕ. ೦೪-೨) ; ತನುವಿನ ಬಿಗುಹು ಬಿಟ್ಟುದು ಬೀತುದಗ್ಗದ ಸತ್ವ (ಕೊರಟಾ. ೫-೦-೩೦). ೧೨. ಸೋಲು : ಹಿಮ್ಮೆಟ್ಟು : ಎನ್ನೆವರಂ ಶ್ರೀರಾಮಂ ತಾನೆ ಮೆಯ್ವೋಱಿಂ ಬಾರನನ್ನೆವರಂ ವಾಜಿಯುಂ ಸಾಜದಿಂದೀಯೆಂ ಬೀಯೆಂ (ರಾಮಾಶ್ವ. ೦೪೨-೨೭). ೧೩. ದಣಿ : ಆಯಾಸಗೊಳ್ಳು : ಅವನಿಯೊಳು ನಿಪತಿತಪ್ರಸವಜಾತ ವಾಸನನಾಗೆ ಕುಳ್ಳಿರ್ದಾತು ಬಿಡೆ ನಿಡುಸುಯಿಲುಗಳು ತಾ ಬೀತರದೆಯು ನೀವೃತ್ತ ಸಂಬಿಯು ಮೊಗವನೀಕ್ಷಿಸುತ (ಬಸವು. ೨೬-೪೨) : ಈಕ್ಷಣಯುಗಳ ಬೀಯುದು ನೋಡಿ ಪಾರ್ಥನ ಮಾತ ಸವಿಸವಿದು ತೆಗೆದು ನಿಲ್ಲದು ಕರ್ಣಯುಗ (ಕುಮ್ಯಾಆ. ೦೨-೬೨). ಬೀಗು₁ : ೩. ಬೀಗೆ ಕುಂತಳತವಂ ಸಾಗೆ ಚೆಂದುಟಿಗೆಂಪು ಮೇಗೆ ಸೌಖ್ಯೋದಯದ ಬೆಳಗ ಪಸರಿಸಿ ನಿತ್ಯನಾಗಿಸಿವ ಪಂಪಾವಿರೂಪಾಕ್ಷಸೂರ್ಯನಾನಂದವಂ ನಮಗೀಯಲಿ (ತಿಬಿಪು. ೦-೨). ೧೨. ತಾಗಿ ಮರಳದ ಬಸವ ಬೀಗಿ ಬೆದಱದ ಬಸವ (ಬಸರ. ೯-೮೯) ; ಭೋಗಿಭೂಷಣನರಸಿ ಮಾಡಿದಳ್ ತಪವನು . . . ಮೇಗೊಗುವ ಶೀತ ಶಿಖಿವಾರಿಧಾರೆಗೆ ಮನಂ ಬೀಗದೆ (ಶಬಪು. ೩೬-೪); ತಾಗಿ ದಂದುಗಗೊಂಡನನು ಸಾಲ್ವನಂಗೈಸಿ ಬೀಗಿದಂ ಕರ್ಣಜಂ (ಜೈಮಿಭಾ. ೨೨-೪೦) ; ಜಂಬುಕನೊದರಿ ತಾಗಿದರಳುಕಿ ಗಜ ಬೀಗುವುದೆ (ಅಂಬಿಶಾ. ೬-೪೦). ಬೀಯು : ೯. ಬೀತ ನರಪೇತುಗಳಿರಾ! ಬಾತಂಥ ಪ್ರೇತಗಳಿರಾ ! (ಗಂ. ೫೦-೯).

[ದೇ.॥ ತಮಿ. ವೀ. ವೀಕ್ಕು : ತೆಲು. ವೀಗು]

**ಬೀಂಟೆ** ' ಬೀಟ್ಟೆ₁ ' ನೋ.

**ಬೀಕಲ್**, ಬೀಕಲು (ನಾ). ೧. ಕೊನೆ; ಅಂತ್ಯ : ಆ ಕುಠಾರನನೇಳನೆಯ ದಿನ ಬೀಕಲಾಗದ ಮುನ್ನ ತಕ್ಷಕನೌಕಿ ಕೊಲಲಿ (ಸಭಾಗ. ೦-೦೩-೦೨). ೨. ಅಳಿವು : ನಾಶ : ಬೀಕಲಾದುವು ತನ್ನ ಕರ್ಮಾನೀಕ (ಸಭಾಗ. ೦-೦೦-೬೨). **ಬೀಕಲು** : ೧. ಎಷ್ಟು ಮಕ್ಕಳನ್ನು ತೂಗಿದೆಯೋ ಈ ತೊಟ್ಟಿಲು . . . ಆ ತೊಟ್ಟಿಲಿಗೆ ಬಿದ್ದ ಮಗು ಯಾವುದೂ ಬೀಕಲಾಗಿಲ್ಲ (ಪಡಣಾ. II, ೦೦೦೯). ೩. ಒಣಗಿದುದು ; ಶುಷ್ಕವಾದುದು : "ಬೀತುದೆನೆ ಬೀಡಾದುದಕ್ಕು ಬೀಕಲುಮಕ್ಕು" (ಶಬ್ದಮಂ. ೨೩). ೪. (ಕಾಳು. ಧಾನ್ಯ ಮುಂತಾದುವು ಗಳಲ್ಲಿ) ಆಯ್ದ ನಂತರ ಉಳಿಯುವ ಭಾಗ : "ಆರಿಸಿಕೊಂಡು ಉಳಿದದ್ದು " (ಜಾನಕೋ. ೨೩). ೫. "ಫಲಪುಷ್ಪಗಳು ಮೊದಲು ಸಮೃದ್ಧಿಯಾಗಿ ಆಗಿ ಕೊನೆಗೆ ಕಡಿಮೆಯಾದುದು" (ಪ್ರಥಮ). ೬. ಪೊಳ್ಳಾದ ಕಾಳು; ಜಳ್ಳು: ಬಿತ್ತಿದ ಬೆಳೆಯಲ್ಲಿ ಬೀಕಲು ಹೊರಡುವದು (ರಕ್ತರ್ಧ. ೩೦೨). ೭. ಅಲ್ಪ: ತುಚ್ಛ : ಏಕೆ ಕೆಣಕಿದೆ ಕರ್ಣ ಬೂತಿನ ಬೀಕಲಿನ ಬದಗಿಯನು (ಕುಮ್ಯಾಸ. ೦೫-೦೪): ಚಿಕ್ಕೆ ಬೀಕಲಿದು. ಮಿಕ್ಕದೊಗ್ಗದದು. ಭೂಮಿಯು ಬರಿಯ ಸ್ಮಶಾನ (ಜಪನಾ. ೩೧). (ಗು). ೮. ವ್ಯರ್ಥವಾದ ; ಅಪ್ರಯೋಜಕವಾದ : ಆಂಗ್ಲಕಾವ್ಯಮಾಲೆಯ . . . ಅಭ್ಯಾಸ ಫಲದಿಂದ ಈ ಗೀತಗಳು ಬಂದಿರುವದರಿಂದ ಇಲ್ಲಿ ಬೀಕಲು ಫಲ ಒಂದೂ ಇಲ್ಲ (ವಿಶಾಮಂ. ೦೨೦). [ಬೀ + – ಕಲ್₄]

**ಬೀಕಲು** ' ಬೀಕಲ್ ' ನೋ.

**ಬೀಗ₁**, ಬಿಯಗ₁, ಬಿಯ್ಯಗ₁, ಬೀಯಗ₁, ಬೀಯ್ಯಗ₁ (ನಾ). (ಬಾಗಿಲು, ಪೆಟ್ಟಿಗೆ ಮುಂತಾದುವುಗಳನ್ನು) ಭದ್ರಪಡಿಸಲು ಹಾಕುವ ಒಂದು ಬಗೆಯ ಲೋಹದ ಸಾಧನ : ಕೀಲಿ : ಆವಾವ ಸ್ಥಲಂಗಳನಾಧರಿಸಿ ನಡೆವಲ್ಲಿ ಘಟವೇ ಬೀಗವಾಗಿ ಎಸಳೇ ಆತ್ಮನಾಗಿ ಅಱಿವೇ ಕೈಯಾಗಿ ಸ್ವಸ್ಥ ಘಟಕ್ಕೆ ಸ್ವಸ್ಥ ಕೈಗಳಿಂದ ಸಿಕ್ಕು ಹರಿವುದಲ್ಲದೆ ಮತ್ತೊಂದು ಕೈಯಿಕ್ಕಿ ತುಡುಕಿದಡೆ ಬಿಟ್ಟುದುಂಟೇ ಆ ಸಿಕ್ಕು (ಮೋಳಿವಚ. ೯-೩೦); ಪುಷ್ಯರಾಗದ ಬೀಗಗಳಿಂದ ಕೂಡಿರುವ ನಾಲ್ಕು ವಾಗಿಲುಗಳಿರುವುವು (ಸೌಗಂಧಿ. ೦೦೫-೦೨). **ಬಿಯಗ₁** : ಉತ್ತರದ್ವಾರದ ಬಾಗಿಲ ಬಿಯಗವ ತೆಗೆದಲ್ಲಿ ನಾದಮೂರುತಿಯಪ್ಪ ಪ್ರಸಾದವ ಕಂಡೆ (ಆದಪ. ೨೪-೬೯). **ಬಿಯ್ಯಗ₁** : "ಗೃಹಬಂಧನಂ ಬಿಯ್ಯಗ" (ಮಂಗರಾ. ೫೬-೪) : ಒಂಬತ್ತು ಬಾಗಿಲ ಬಿಯ್ಯಗವಿಕ್ಕಿಹವು (ಅಪಶಂ. ೨೨೨-೦೦೦೮) ; ಪೆವಾರ್ಗಿಲಂ ತಾಗೆ ಒಂದು ಬಿಯ್ಯಗವಿಕ್ಕಿ ಚಿಕ್ಕುಟುಂ ನುಸುಳಲ್ಬಾರದಂತಾಗಿ ಬಿಗಿಯೆ ಕೆತ್ತಿದ ಕರ್ಬುನದ ಪಡಿಗಳಂ ಕಂಡು (ಅರ್ಧನೇ. ೬-೪೪ ವ). **ಬೀಯಗ₁** : ಬಂಡಿಯನು ಚಾವಡಿಯ ಮುಂದಿರಿಸಿ ಬೀಯಗದ ಕೊಂಡಿಯಂ ಕಳಚಿ (ಸಿದ್ಧರಾ. ೯-೦೪): ತರಣಿ ತೆಗೆದನು ತಾವರೆಯ ಬಾಗಿಲಿನ ಬೀಯಗವ (ಕುಮ್ಯಾವಿ. ೩-೬೩). **ಬೀಯ್ಯಗ₁** : ಆಕೆಯ ಓವರಿಯ ಬೀಯ್ಯಗವನೊಡೆದು . . . ಒಳ ನುಗ್ಗುತ್ತಿದ್ದುದು ಆವ ಪುರುಷಾರ್ಥಕ್ಕೋಸ್ಕರವಾಗಿ (ಪಟ್ಟಿಆ. ೦೨೫-೭).

ಬೀಗದ ಕೆಯ್, ಬೀಗದ ಕೈ, ಬೀಯಗದ ಕಯ್ಯ=ಬೀಗವನ್ನು ತೆರೆಯುವ ಸಾಧನ : ಕೀಲಿಕೈ : ಪೆಟ್ಟಿಗೆ ಕದ್ದ ಕಳ್ಳ ಬೀಗದ ಕೆಯ್ಗೆ ಬಂದಾನೇ ? (ಗಾದೆ) : ಇಂಥ ಹೆಂಡತಿಯಿದ್ದರೆ, ದುಡ್ಡಿನ ಪೆಟ್ಟಿಗೆಯ ಬೀಗದ ಕೈಯನ್ನೂ ಕೊಡಬಹುದು (ಮರಮ. ೦೩೨) ; ಖಡ್ಗವ ಪಿಡಿದು ಜಡಿದು . . . ಮುಕ್ತಿಯ ಮಹಾಕವಾಟದ ಬೀಯಗದ ಕಯ್ಯೆ ಎನ ಲಮೃತಮತಿ ಕೊರಲ್ಗಮರಿಸುತ್ತ (ಭಾಪಶಂ. ೯ ೪೨).

[ದೇ.॥ ತಮಿ. ಪೀಕಮ್. ವೀಕಮ್ ; ಮಲ. ವೀಕಮ್ : ತುಳು. ಕೊಡ. ಬೀಗ ; ತೆಲು. ಬೀಗಮು]

**ಬೀಗ₂** 'ಬಿಯಗ₂' ನೋ.

**ಬೀಗತನ** 'ಬಿಯಗತನ' ನೋ.

**ಬೀಗತಿ** 'ಬೀಗಿತ್ತಿ' ನೋ.

**ಬೀಗದಮರ** (ನಾ). ಒಂದು ಬಗೆಯ ಮರ : ಬೀಗದ ಮರ. ಗುಡ್ಡದ-ರೆಂಬೆ, ಕ್ಯಾಸತ್ತೆ, ರಾಹುಬೀಜ (ಪ್ರಸಿಗ. ೩೩-೬೩೮). [ಬೀಗ₁ + ಮರ₁]

**ಬೀಗಮುದ್ರೆ**, ಬೀಯ್ಯಗಮುದ್ರೆ (ನಾ). ೧. ಬೀಗ ; ಕೀಲಿ : ಬೀಗ ಮುದ್ರೆಗಳಿಲ್ಲದೂರಿಗೆ ಬಾಗಿಲುಗಳೊಂಭತ್ತು (ಹಂಸಾ. ೮೬); ಬಲಿದ ಕವಾಟದ ಬೀಗಮುದ್ರೆ ತಾಂ ಬಲಿದಂತೆಯಿಹುದು (ನವಮೋ. ೦೦-೪೬) ; ಅದರ ಮೇಲಿಂದ ಕಂಸನ ಎದೆಯಷ್ಟೇ ಅಗಲವೂ ದಪ್ಪವೂ ಕಠಿಣವೂ ಆದ ಬೀಗಮುದ್ರೆಯು (ವಾರಾಕೃ. ೪೨). ೨. ಬಾಗಿಲಿಗೆ ಕೀಲಿಯನ್ನು ಹಾಕಿ ಅರಗಿನಿಂದ ಮುದ್ರೆಹಾಕುವುದು, — ಭದ್ರಪಡಿಸುವುದು : ಸದ್ದಡಗಿತು ವೇಳೆ ಗಂಟೆ ಸಾರಿತು ಬೀಗಮುದ್ರೆಗಳಾಗಿಯದೆ ಬಾಗಿಲಿಗೆ (ಪುರಂದ. ೩-೦೩೧-೩) ; ಏಸು ದಿನವಾಯಿತೊ ಬೀಗಮುದ್ರೆಯ ಮಾಡಿ (ಏಡಾಕೃ. ೫೬-೦) ; ಬೀಗಮುದ್ರೆ : ಕಾರ್ಮಿಕವಿವಾದ ಬಗೆಹರಿಯದ ಕಾಲದಲ್ಲಿ, ಕಾರ್ಖಾನೆಯ ಆಡಳಿತಮಂಡಳಿ ಕೈಗೊಳ್ಳುವ ಒಂದು ಕ್ರಮ (ಕವಿಕೋ. XII, ೧೪೭). ೩. (ಬಾಗಿಲಿನ) ಬೀಗಕ್ಕೆ ಹಾಕಿರುವ ಮುದ್ರೆ,— ಮೊಹರು : (ಸ). ೪. ಬೀಗ ಹಾಕಿ ಅದರ ಮೇಲೆ ಮೊಹರಿನಿಂದ ಮುದ್ರೆಯೊತ್ತುವ ಅಧಿಕಾರ : ಈಗ ಸಧ್ಯಾ ಕೋಟೆಬಾಗಿಲು ಬೀಗಮುದ್ರೆ ನಿನ್ನ ವಶದಲ್ಲಿಯಿರಲಿ (ಕೃದರ. ೨೭). **ಬೀಯ್ಯಗಮುದ್ರೆ** : ೨. ಈ ಬಾಗಿಲ್ಗೆ ಬೀಯ್ಯಗಮುದ್ರೆ ಮಾಡಿ, ನೀನೂ ನಿನ್ನವರೂ ಹೊರಗೆ ಕಾವಲ್ಗಾಡುತ್ತಿರಿ (ಪಟ್ಟಿಆ. ೦೪೬-೨). [ಬೀಗ₁ + ಮುದ್ರೆ]

**ಬೀಗಳೆ** (ಕ್ರಿ). ತಿರಸ್ಕರಿಸು ; ಹೀಯಾಳಿಸು : ತನ್ನನ್ನು ಭಕ್ತನಲ್ಲವೆಂದು ಬೀಗಳೆಯುವ ಇವನಾರು ! (ಶರಶ. ೩೦); ಈ ಆಂದೋಲನವನ್ನು ವಹಾಬೀ ಆಂದೋಲನವೆಂದು ಬ್ರಿಟಿಷರು ಬೀಗಳೆದರು (ಶಕ್ತಸ್ವಾ. ೫೮೯).

[ಬೀ + ಕಳೆ$_1$]

**ಬೀಗಿತಿ** 'ಬೀಗಿತ್ತಿ' ನೋ.

**ಬೀಗಿತ್ತಿ**, ಬೀಗತಿ, ಬೀಗಿತಿ, ಬೀಯಗಿತ್ತಿ (ನಾ). ವಧುವಿನ ತಾಯಿ ಮತ್ತು ವರನ ತಾಯಿ -- ಇವರಿಬ್ಬರ ನಡುವೆ ಮದುವೆಯ ಸಂಬಂಧದಿಂದ ಉಂಟಾಗುವ ಪರಸ್ಪರಸಂಬಂಧಸೂಚಕಪದ : ಸುಮಿತ್ರ ಕೇಳ್ದು ತನ್ನ ಬೀಗಿತ್ತಿ[ಪಾಠಾಂ. ತಿ] ದೇವಿಲೆಯಲ್ಲಿಗೆ ಪೋಗಿ ಇಂತೆಂದಳ್ (ಪುಣ್ಯಾಸ್ರ. ೯-೦೫ ವ) ; ಇವರು ನಿಮ್ಮ ಬೀಗಿತ್ತಿಯಲ್ಲವೆ! (ದೇವೀಶ್ರೀ. ೬). **ಬೀಗತಿ :** ಹೆಣ್ಣಿನ ಕಡೆಯವರು ಗಂಡಿನ ಕಡೆಯವರು, ಬೀಗ ಬೀಗಶಿಯರು (ಸುಪಸಂ. ೩೦) ; ಸ್ವತಃ ಪಾರೋತಿಯೇ . . . ಮುಂದೆ ಸವತಿಯಾಗುವವಳನ್ನು ಸಿಂಗರಿಸಿದಂಥ ನೋಟ, ಅವಳ ಬೀಗತಿಯ ಎಲ್ಲ ಅನುಮಾನಗಳನ್ನೂ ಹೋಗಲಾಡಿಸಿದವು (ಪುರಮ. ೦೦೩). **ಬೀಗಿತಿ :** ದಂಪತಿಗಳು ಹಿಮಗಿರಿಗೆ ತೆರಳಿ ಅಲ್ಲಿ ಒಟ್ಟಿಗಿದ್ದ ಬೀಗಿತಿಯರಾದ ಗೌರೀ ಸರಸ್ವತಿಯರಿಗೆ ನಮಸ್ಕರಿಸಿದರು (ಶಾರದ. ೯೯೮). **ಬೀಯಗಿತ್ತಿ :** ಒಂದಿರುಳ್ ಕಾರ್ಯಮಂ ಸಮಕಟ್ಟಿ ತನ್ನ ಬೀಯಗಿತ್ತಿಗಾ ವೃತ್ತಾಂತಮನೆಲ್ಲಮಂ ಪೇಟ್ದು (ಪುಣ್ಯಾಸ್ರ. ೩-೫೨ ವ). [ಬೀಗ$_2$ (<ಬಿಯಗ$_2$) + -- ಇತ್ತಿ]

**ಬೀಗು$_1$** 'ಬೀ' ನೋ.

**ಬೀಗು$_2$** (ಕ್ರಿ). ೧. ದಷ್ಟಪುಷ್ಟವಾಗು ; ತುಂಬಿಕೊಂಡಿರು : "ಬೀಗು -- ಹರ್ಷಭಾವೇ, ಸ್ಥೌಲ್ಯೇ ಚ (ಉಬ್ಬು)" (ಶಮಧಾ) ; ಅಂಗಜಸನ್ನಿಭಂ ತಲೆಯನೇಕೆಗೆ ತೂಗಿದನೆಂದೊಡಕ್ಕ ಕೇಳಂಗನೆ ನಿನ್ನ ಬೀಗಿ ಬಿಗಿದಿರ್ದ ಕುಚದ್ವಯಮಧ್ಯದಲ್ಲಿ ತಾಂ ಪಿಂಗದೆ ನಟ್ಟ ದಿಟ್ಟಿಯನವಂ ಕಿಬಿಲೆಂದನು ಗೆಯ್ದು ತೂಗಿದಂ (ಅದಿಪು. ೦೨-೦೩); ಬೀಗಿ ಬೆನ್ನಿಂ ಬಿರಿವನ್ನಂ ಕೊರ್ವಿ ಮುಂಗಾಲ್ ಗಡಿಯೆನೆ ಕಡ್ಪುಗೆಚ್ಚಲ್ ಪೊದಟ್ಟಿಂದು ವಕ್ತ್ರೋತ್ಕರಮೆಲ್ಲಂ ಬಾಲವಂಬಂ ಕಱಿಯೆ . . . ಮಾಹಿಷೀಸಂತತಿ ವಿಪಿನಭವಂ ಕಣ್ಗೆಗು ರ್ವಾಯ್ತು ಕಾರೊಳ್ (ಚಂದ್ರಪ್ರ.೯-೯೮). ೨. ಉಬ್ಬು; ಊದಿಕೊಳ್ಳು : "ಬಾತುದೆನಲ್ ಬೀಗಿ [ಪಾಠಾಂ. ಬಿಗಿದಿ]ರ್ದುದು" (ಧಾರಣಿ. ೨೯) ; ಕುಟಿಲಾ ನೀಲಾಳಕಂಗಳ್ ನಿಮಿರ್ದಿರೆ ಬೆಳರ್ವಾಯ್ ನಾಡೆಯುಂ ಬೀಗೆ ರೋಷೋತ್ಕಟದೇಹಂ ರಾಗದಿಂ ಪಿಳ್ಳನೆ ಪಿಟಿದವೊಲಿಂಬಾಗೆ . . . ನಿಂದಿರ್ದಳೊರ್ವಳ್ (ಕಾವ್ಯಾವ. ೮೦೨) ; ಬೀಗಿ ಬಿಗಿದವು ಕೊರಳ ಸರೆಗಳು (ಪಭಾಗ. ೯-೨೦-೦೨) ; ತನಿಯಡಗನಡಸಿ ತಿಂದು ಬಸುಱು ನೆಱೆ ಬೀಗೆ ಡಙ್ಙನೆ ತೇಗಿ (ಸಾಳ್ವಭಾ. ೨೫-೨೩). ೩. (ಸಂತೋಷ ಅಥವಾ ಅಭಿಮಾನದಿಂದ ಹೃದಯವು) ಉತ್ಸಾಹಗೊಳ್ಳು : "ಬೀಗು -- ಹರ್ಷಭಾವೇ, ಸ್ಥೌಲ್ಯೇ ಚ (ಉಬ್ಬು)" (ಶಮಧಾ); ರತರಾಗದುರುಳಿವೊಲಾಗೆ ಕರಂ ಬೀಗಿ ಬಾಯ್ಗಳಂ ಚುಂಬಿಸಿದರ್ (ಕಾವ್ಯಸಾ. ೬೬೬ ಚಂದ್ರ೪); ನನೆಗಳರಳದ ಮುನ್ನ ಮನವರಳ್ದು ಪೊಂಗುತಂ ನನೆ ಬಿರಿವುದಕ್ಕೆ ಬಿತ್ತಂ ಬೀಗಿ ಬಿರಿವುತಂ (ಪುಷ್ಪರ. ೦೦-೦); ಓಹಿಲದೇವಂ ಕೊಬ್ಬುತ್ತುಬ್ಬುತ್ತಂ ಬಿಬ್ಬನೆ ಬೀಗಿ . . . ಶಂಕರನಳ್ಕಱ ಪೂಜೆಗೆ ಸಲ್ವಂ (ಉದ್ಭಟದೇ. ೩-೯೩). ೪. ಹೆಚ್ಚಾಗು ; ಅಧಿಕವಾಗು : ಬೀಗಿ ಸುಗ್ಗಿಯ ಬಿಸಿಲ್ ನೆಲೆಗೆಡಿಸೆ ನೆಳಲಂ (ಶಾಂತೀಶ. ೦೩೬-೨೯೭). ೫. ಸೊಂಪಾಗು ; ಸಮೃದ್ಧಿಯಾಗು ; ಹುಲುಸಾಗು : ಬೆಳೆದು ಬೀಗಿ ತಮ್ಮಿಂ ತಾವೆ ಬಿಗಿದು ಬಿರಿವಟ್ಟು ಸುರಿವ ದಾಳಿಂಬದ ಫಣ್ಗಳ ತನಿರಸದ ಪನಿವೊನಲೆ ಪರಿನೀರಾಗೆ (ಶಂಶಶಂ. ೦೦೬-೦೯); ಪಣ್ಣಾಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಂಶ. ೨-೫೦); ನಸುದೋರೆ ದೋರೆವಣ್ ಕಳಿತಸೆವಚ್ಚಪಣ್ಣಡಿದು ಬೀಗಿದ ಬಿಣ್ಪೊಗನೆಯಾಂತು . . . ಬಗೆಗೊಂಡುದು ಶೈಲನಂದನಂ (ಕಬಶಂ. ೦-೫೦).

೬. ಅಹಂಕಾರ ಪಡು ; ಸೊಕ್ಕು ; ಮೆರೆ : ಪೊಂಗಿ ಕಡಂಗಿ ಬೀರದೊಳೆ ಬೀಗುವ ನಿನ್ನಣುಗಾಳೆ ನೋಡೆ . . . ಕೋಡಗಗಟ್ಟುಗಟ್ಟಿ ಚಿತ್ರಾಂಗದನುಯ್ಯೆ (ಪಂಪಭಾ. ೯-೫೯); ಹಾರುವನ ವಧೆ ಸುಡಲಿ ಪಾತಕವೆಂದು ಬಿಟ್ಟರೆ ಬೀಗಿ ಬೆಱತೆಯಲ (ಪಭಾಗ. ೯-೦೯-೩೨) ; ಸೊರ್ಕಿನಸೊರ್ಕಿಂ ಬೀಗಿರ್ಪಯ್ (ರಾಮಾಶ್ವ. ೨-೯). ೭. ಸೆಟೆದುಕೊಳ್ಳು ; ಬಿಗಿದುಕೊಳ್ಳು ; ಪೆಡಸಾಗು : ಬಟಲ್ವಿನಂ ಬಡಿದು ಗೋವುಗಳಂತಿರೆ ಪೇಱೆ ದುಃಖಮಂ ಪೀಱೆ ಬಿಗುರ್ತು ಬೀಗಿ ನಡುವೆನ್ನೊಡೆದಿರ್ಬಗಿಯಾಗಿ ಪೋಟ್ದು (ಸುಕುಮಾ. ೫-೦೬) ; ಮಿಗೆ ಬೀಗಿ ಬಾಗಿರ್ದಿಭಘಟಾವಳಿಯ ಸೆಡೆದ ಕಾಲ್ಗಳ ಕುದುರೆಗಳ . . . ಕಂಡು (ಕೊರಂ. ೩-೯-೯).

**ಬೀಗಿ ಬೆಳೆ** = ೧. ಸೊಂಪಾಗಿ ಬೆಳೆ ; ಹುಲುಸಾಗಿ ಬೆಳೆ : ಬೆಡಂಗುವೆತ್ತು ನೆಱೆ ಬೀಗಿ ಬೆಳೆದವು ಮಗಮಗಿಪ ಗಂಧಶಾಲಿವನಂಗಳ್ (ಸುಕುಮಾ. ೯-೩೨) ; ಬೀಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿದ್ದಡೆ ಬೇಡಿದ ಪದವಿಯನೀವ ಕೂಡಲಸಂಗಮದೇವ (ಬಸವ. ೦೮೯). ೨. ಉನ್ನತಿಯನ್ನು ಹೊಂದು ; ಅಭಿವೃದ್ಧಿಗೆ ಬರು : ಭಾವಪುಷ್ಪಂಗಳಲ್ಲಿ ಪೂಜೆಯಂ ಮಾಡಿ ಬೀಗಿ ಬೆಳೆವುತ್ತಿಪ್ಪ[ಪಾಠಾಂ. ಬೆಳಗುತ್ತಿಪ್ಪ] ಶರಣಂಗೆ ಮತ್ತೆ ಅನುಭಾವದ ಸುಖ ಸವಿದೋಱುವುದೇ (ಶಿವಪ. ೩೬-೨೯). ೩. ಚೆನ್ನಾಗಿ ಅರಳು : "ಬೀಗಿ ಬೆಳೆದುದನು ಕವಿಗಳ್ ಬೀಗದಿ ತಾನುಳ್ಳಲರ್ದುದೆಂಬರ್" (ಕವಿಕಂ. ೨೬೦).

[ದೇ. ॥ ತಮಿ. ವೀಙ್ಕು, ವೀಕ್ಕು ; ಮಲ. ವಿಙ್ಙು, ವೀಕ್ಕು ; ತೆಲು. ವಿಕ್ಕು, ವೀಗು]

**ಬೀಚ** (ನಾ). ಒಬ್ಬಾತನ ಹೆಸರು : ಆತನ ಮಗಂ ಬೀಚಂಗು ಕಲ್ಕಟಿನಾಡ ನೆಟ್ಟೂರ ಕಲ್ನಟುಂಗೊಟ್ಟರ್ (ಎಕ. V, ಕಪ್ನರಾ. ೨೬೨-೦೮ ; 971). [?]

**ಬೀಚು** (ನಾ). ಸಮುದ್ರದ ದಡ ; ಕಡಲಿನ ತೀರ : ಶಾಂತಿಯನ್ನು ಕಳೆದುಕೊಂಡು ಎಸರು ಕುದಿವ ವೀಚಿಗೆ ಎರಡು ಕಡೆಗೆ ಬೀಚಿಗೆ (ಸೂರ್ಯಕಾ. ೯೦-೬); ಬೀಚಿನಲ್ಲಿ ಮರಳಿನ ಹಾಸಿಗೆಯಲ್ಲಿ ಅನೇಕ ಜನ ವಿಶ್ರಮಿಸಿರುವರು (ಹೂಅರ. ೧೫). [← ಇಂ. Beach]

**ಬೀಜ** (ನಾ). ೧. ಸಂತಾನೋತ್ಪತ್ತಿ ಶಕ್ತಿಯುಳ್ಳ ಮತ್ತು ತನ್ನಂಥದೇ ಜೀವದ್ರವ್ಯವನ್ನು ಬೆಳೆಸಿ ವೃದ್ಧಿ ಮಾಡುವ ಸತ್ವವುಳ್ಳ ವಸ್ತು; ಬಿತ್ತ : ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ ಲಿಂಗವೆಂಬ ಎಲೆಯಾಯಿತ್ತು (ಬಸವ. ೫೨೬); ಧರೆ ಬೀಜಂಗಳ ನುಂಗೆ ಬೇಲಿ ಹೊಲನೆಲ್ಲಂ ಮೇದೊಡಂ . . . ಹರ ಕೊಲ್ಲಲ್ ಪರ ಕಾಯ್ವನೇ (ಸೋಮೇಶ. ೨೯). ೨. ದಾಳಿಂಬೆ ಮೊದಲಾದ ಹಣ್ಣುಗಳೊಳಗೆ ಇರುವ ಕಾಳು : ಕುಂಕುಮಂಬೊರೆದ ಕರ್ಪುರವಳುಕಂ ಕೆದಱಿದಂತಿರ್ದ ದಾಡಿಮಬೀಜರಾಜಿಯೊಳಂ . . . ಅತಿರಮಣೀಯಮಾಗಿ (ಮಲ್ಲಿಪು. ೨-೩೩); ಆ ದಾಡಿಮದ್ರುಮದೊಳ್ ಬಿಡೆ ಸವಿಯಲ್ ಬೀಜಮನುಗಿವೆಡೆಯೊಳ್ ಚಂಚೂಪುಟಂಗಳಂ ಬಿಡದೆಂತುಂ ತೊಡರ್ದೊಡೆ (ಕುಸುಮಾ. ೯-೨೩). ೩. ಮೂಲ ; ಉತ್ಪತ್ತಿಸ್ಥಾನ : ಕಮಲಜನ ಚಾತುರ್ಯಬೀಜಮೋ . . . ಎನಲ್ ಪುಷ್ಪಕಂ ಕಣ್ಗೆಸೆದುದು (ವಂಕಾಂ. ೫-೯-೩); ಅಜ್ಞಾನವೇ ದುಃಖಹೇತುವಾದ ಸಂಸಾರದ ಬೀಜ (ಶಾರದ. ೦೨೨). ೪. ಕಾರಣ ; ಹೇತು: "ಹೇತು ನಿದಾನಂ ಬೀಜಂ" (ವಸ್ತುಕೋ. ೦೩೦-೮೦); ಜನಮತದೊಳ್ ಸಮ್ಯಗ್ದರ್ಶನಮುಳ್ಳೊಡೆ ಸಾಲ್ದೊಡದುವೆ ಬೀಜಂ ಗಡ ನೆಟ್ಟನೆ ಮೋಕ್ಷಸುಖಕೆ (ಅಜಪು. ೦೦-೦೩). ೫. ವೀರ್ಯ ; ರೇತಸ್ಸು : "ಶುಕ್ಲಂ, ವೀರ್ಯಂ. ಬಲಂ, ಬೀಜಂ, ಇಂದ್ರಿಯಂ, ರೇತಃ -- ಈ ೬ ಇಂದ್ರಿಯಂ" (ಹಲಾಯು. ೦೦೫-೦೬); ಬೀಜವೆಂದರೆ ಶುಕ್ಲ ಶೋಣಿತಗಳು (ಶಾರದ. ೫೯). ೬. ಅಂಡ ; ವೃಷಣ : ಹೋರಿಯ ಬೀಜವನ್ನು ಒಡೆಮಾಡಿ ಎತ್ತುಗಳಾಗಿ ಮಾರ್ಪಡಿಸಿ ಉಳುಮೆಗೆ ಬಳಸುತ್ತಾರೆ (ರೂಢಿ). ೭. ಸಂತಾನ ;

ಸಂತತಿ: 'ಹರಬೀಜ' ಹೋ. ೮. [ಕಾವ್ಯವಿ‍ಾ] ನಾಟಕ ಮುಂತಾದುವುಗಳ ಕಥಾವಸ್ತುವಿನ ಮೂಲಕಾರಣ: ಬೀಜ ಬಿಂದು ಪತಾಕಾ ಪ್ರಕರೀ ಕಾರ್ಯ — ಈ ಲಕ್ಷಣಗಳುಳ್ಳ ಐದು ಅರ್ಥಪ್ರಕೃತಿಗಳೆಂದು ಕೀರ್ತಿತವಾಗಿವೆ (ದಶರೂ. ೧-೨೭); ಕಥಾವಿಸ್ತರೀಕರಣ ದೃಷ್ಟಿಯಿಂದ, ವಸ್ತುವಿನಲ್ಲಿ ಐದು ಅಂಶಗಳು ಕಂಡುಬರುತ್ತವೆ. ಅವುಗಳಿಗೆ 'ಅರ್ಥಪ್ರಕೃತಿ' ಗಳೆಂದು ಹೆಸರು. ಅವು ಯಾವುದೆಂದರೆ: ೧. ಬೀಜ _ ಹಣ್ಣನ್ನು ಪಡೆಯುವುದಕ್ಕಾಗಿ ಮೊದಲು ಆ ಹಣ್ಣಿನ ಬೀಜವನ್ನು ಬಿತ್ತುವಂತೆ ಕಥಾಫಲಕ್ಕೆ ಸಾಧನಭೂತವಾದ ಘಟನೆಯನ್ನು ಸೂಚಿಸಿರುವಿಕೆ (ಕೃಬಿ. ೨೦೭). 'ಅರ್ಥಪ್ರಕೃತಿ' ಪರಾ. ೯. [ಗಣಿತ] ಸಂಖ್ಯಾವಿಚಾರವನ್ನು ಅಕ್ಷರಸಂಜ್ಞೆಯ ಮೂಲಕ ಪ್ರತಿಪಾದಿಸುವ ಶಾಸ್ತ್ರ: 'ಬೀಜಗಣಿತ' ಪರಾ. ೧೦. [ತತ್ತ್ವಶಾ] ಒಂದು ದೈವದ ಉಪಾಸನೆಯ ನಿರ್ದಿಷ್ಟಮಂತ್ರದ ಮೂಲಭೂತವಾದ (ಆಧ್ಯಾತ್ಮಿಕ) ಅಕ್ಷರ; ಮಂತ್ರವನ್ನು ಪ್ರತಿನಿಧಿಸುವ ಅಕ್ಷರ; ಬೀಜಾಕ್ಷರ: ಮಂತ್ರದೇವತಾನಾಮವರ್ಣವಿಶೇಷವಾದ ಬೀಜವನೇ ನಾಭಿಯಲ್ಲಿ . . . ಸ್ಮರಣಂಗೈದು (ವಿವೇಕ. ೬೯). ೧೧. ನಲವತ್ತೈದು ಮಂತ್ರಸಾಧನಗಳಲ್ಲಿ ಒಂದು: ಬೀಜ ಶಕ್ತಿ ಕೀಲಕ . . . ಆತ್ಮೈಕ್ಯಗಳೆಂಬ ಪಂಚಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (ವಿವೇಕ. ೬೦).

**ಬೀಜಕ್ಕೆ ಬಿಟ್ಟ ಗೂಳಿ** = ಗರ್ಭಧಾರಣೆ ಮಾಡಿಸಲು ಆರಿಸಿರುವ ಉತ್ತಮಜಾತಿಯ ಹೋರಿ: ಒಳ್ಳೆ ಬೀಜಕ್ಕೆ ಬಿಟ್ಟ ಗೂಳಿಯ ಹಾಗೆ ಸೊಕ್ಕಿದ್ದಾನಲ್ಲವೆ ಅವನು! (ಮೂರುದಾ. ೧೫೨). [ಸಂ.]

**ಬೀಜಕ** (ನಾ). ೧. ಬೀಜ. ೨. ಬಕುಳವೃಕ್ಷ: "ವಕುಳಂ ಕೇಸರತರು ಬೀಜಕಮುಕ್ಕುಂ" (ವಸ್ತುಕೋ. ೩೩-೫). ೩. ಒಂದು ಬಗೆಯ ಮರ ಮತ್ತು ಅದರ ಹಣ್ಣು; ಮಾದಲ. [ಸಂ.]

**ಬೀಜಕೋಶ** (ನಾ). ೧. ಸಸ್ಯದ ಹೂವಿನಲ್ಲಿ ಬೀಜಗಳಿರುವ ಭಾಗ; ಅಂಡಾಶಯ: (ಪಕ್ವವಾದ ಮೇಲೆ ಬಾಯಿಬಿಟ್ಟುಕೊಳ್ಳುವ) ಒಣಗಿದ ಬೀಜಕೋಶ (Capsule. ಇಂಕಶ). ೨. (ತಾವರೆ) ಹೂವಿನ ಒಳಗಿನ ಗೊಂಡೆ; ಕರ್ಣಿಕೆ: "ವರಾಳಕಂ ಬೀಜಕೋಶಮದು ಕರ್ಣಿಕೆಯುಂ" (ವಸ್ತುಕೋ. ೨೫-೨೦). ೩. ಕಾಯಿ: "ಶಮಿ ಬೀಜಕೋಶಮೆನೆ ಕಾಯ್ಗೆ ನಾಮಂ" (ಮಂಗರಾ. ೩೩-೬). ೪. (ಪ್ರಾಣಿಗಳ) ವೃಷಣದ ಚೀಲ; ಅಂಡಕೋಶ. [ಸಂ.]

**ಬೀಜಕೋಶಿ** (ನಾ). ೧. (ದ್ವಿದಳಧಾನ್ಯಗಳನ್ನು ಹೊಂದಿರುವ ಸಸ್ಯದ) ಕಾಯಿ: "ಬೀಜಕೋಶೀ, ಶಮೀ, ಶಿಂಬಾ — ಈ ೩ ಕಾಯ್" (ಹಲಾಯು. ೩೧-೩೫). ೨. = ಬೀಜಕೋಶ ೨: "ಕರ್ಣಿಕಾ, ಬೀಜಕೋಶೀ — ಈ ೨ ಕರ್ಣಿಕೆ" (ಹಲಾಯು. ೧೧೨-೬೦); "ಕರ್ಣಿಕೆ ಬೀಜಕೋಶಿಯಕ್ಕುಂ" (ಮಂಗರಾ. ೦೨೪-೦೭). [ಸಂ. ಬೀಜಕೋಶೀ]

**ಬೀಜಗಣಿತ** (ನಾ). [ಗಣಿತ] ಸಂಖ್ಯಾವಿಚಾರವನ್ನು ಅಕ್ಷರಸಂಜ್ಞೆಯ ಮೂಲಕ ಪ್ರತಿಪಾದಿಸುವ ಶಾಸ್ತ್ರ: ಈ ಪುಸ್ತಕದಲ್ಲಿ . . . ಅನಿವಾರ್ಯವಾಗಿ ಕೆಲವು ಕಡೆ ಬೀಜಗಣಿತ, ತ್ರಿಕೋಣಮಿತಿ . . . ಈ ಭಾಗಗಳನ್ನು ಉಪಯೋಗಿಸಲಾಗಿದೆ (ಭೌತಶಿ. ೧೫); 'ಬ್ರಾಹ್ಮಣ' ಎಂಬ ವೈಧಿಕಮತ ಗ್ರಂಥದಲ್ಲಿ ಅಂಕಗಣಿತ, ರೇಖಾಗಣಿತ. ಬೀಜಗಣಿತ ಮತ್ತು ಖಗೋಳಶಾಸ್ತ್ರ ಇವುಗಳು ಉಪಯೋಗಿಸಲ್ಪಟ್ಟಿವೆ (ಗಣಿಶ. ೭). [ಸಂ.]

**ಬೀಜಗಾಣು** (ಕ್ರಿ). (ಭೂಮಿಯು) ಬೀಜವನ್ನು ಪಡೆ; ಬಿತ್ತನೆಯಾಗಂ: ಮಳೆಯಾಗದಿದ್ದರೆ ಹೊಲಗಳು ಬೀಜಗಾಣುವುದಿಲ್ಲ (ಮುಂಬಯು. ೨-೯೯); ಇಬ್ಬನಿಯಲ್ಲಿ ಮಿಂದ ಅದೇ ಹೊಸದಾಗಿ ಬೀಜಗಂಡ ಹೊಲದ ಮೇಲೆ ಹಾಯ್ದು ಬಂದ ನಸುಕಿನ ಮಂದಪವನ . . . ಸನ್ನ ಮೈಗೆ ಮುಳ್ಳು ತಂದವು (ಇಕ್ಷಕ. ೨೦೭). [ಬೀಜ + ಕಾಣು (< ಕಾಣ್)]

ಬೀಜನ 'ಬಿಜ್ಜಣ' ನೋ.

**ಬೀಜಪೂರ** (ನಾ). ಈಳೆ ಜಾತಿಗೆ ಸೇರಿದ ನಿಂಬೆ, ಧೊಡ್ಡೀಳೆ, ಮಾದಲ ಮುಂತಾದ ಯಾವುದಾದರೂ ಮರ ಮತ್ತು ಅದರ ಹಣ್ಣು: ಸಕಳೋದ್ಯಾನಂಗಳೊಳ್ ಸಂತತಸರಸಫಳವ್ರಾತದಿಂ ಸೇವ್ಯಮಲ್ಲಲ್ಲಿ ಕರಂ . . . ಬೀಜಪೂರಪ್ರಕರಂ ನಾರಂಗಸಂಘಂ (ಪುಷ್ಪವೃ. ೯-೦೫); ಇಚ್ಚೆಗಾರ್ತಿಯ ಪೆರ್ಚಿದ ಬಲ್ಮೊಲೆಯ ಪಾಂಗಿನಿಂ ಜೋಲ್ದು ಪೊಂಬಣ್ಣದಿಂ ಮನೋಜ್ಞಮಾದ ಬೀಜಪೂರದಿಂ . . . ಸೊಗಯಿಸಿ ತೋರ್ಕುಂ (ರಾಮಾಶ್ವ. ೫೩-೮೪). [ಸಂ.]

**ಬೀಜಪೂರಕ** (ನಾ). = ಬೀಜಪೂರ: "ಬೀಜಪೂರಕಂ ರುಚಕಂ ಜಂಬೀರಂ" (ವಸ್ತುಕೋ. ೩೪-೬); "ಫಲಪೂರಕಃ, ಬೀಜಪೂರಕಃ, ರುಚಕಃ, ಮಾತುಲುಂಗಕಃ — ೪ ಮಾದೀಗಿಡ, ಮಾದಾಳದ ಗಿಡ" (ಸಿದ್ಧಾಂತಿ. ೦೩೦). [ಸಂ.]

**ಬೀಜಬುದ್ಧಿ** (ನಾ). [ಜೈನ] ಬುದ್ಧಿಋದ್ಧಿಯ ಹದಿನೆಂಟುಭೇದಗಳಲ್ಲಿ ಒಂದು; ಒಂದು ಬೀಜಾಕ್ಷರವನ್ನು ಗ್ರಹಿಸುವುದರ ಮೂಲಕ ಅನೇಕ ಅರ್ಥಗಳನ್ನು ತಿಳಿಯುವ ಜ್ಞಾನ: ಅಲ್ಲಿ ಕೇವಲಜ್ಞಾನಮುಂ ಅವಧಿಜ್ಞಾನಮುಂ ಮನಃಪರ್ಯಯಜ್ಞಾನಮುಂ ಬೀಜಬುದ್ಧಿಯುಂ ಕೋಷ್ಠಬುದ್ಧಿಯುಂ . . . ವಾದಿತ್ವಮುಂ ಎಂದು ಬುದ್ಧಿಮಹರ್ದ್ಧಿ ಪದಿನೆಂಟುತೆಱಂ (ಕಕ್ಕ್ಯಕ್ರ. ೦೭೩); ಏಕಬೀಜಪದದಿಂದನೇಕಾರ್ಥಮನಱಿವುದು ಬೀಜಬುದ್ಧಿಯೆಂಬುದು (ಕಸಾರ. ೩೮೭). 'ಬುದ್ಧಿಋದ್ಧಿ', 'ಬುದ್ಧಿಮಹರ್ದ್ಧಿ' ಪರಾ. [ಸಂ.]

**ಬೀಜಭೋಜಿ** (ನಾ). ಬಿತ್ತನೆಗೆಂದು ಕಾಯ್ದಿರಿಸಿದ ಕಾಳನ್ನೇ ತಿನ್ನುವವನು: ಮಗನೆ . . . ಕಠೋರಚಕ್ರಶಸ್ತ್ರಗಣಮುಖಕ್ಕೆ ನಿನ್ನನಱಿಯುತ್ತುಮೆ ನೆಟ್ಟಗೆಯಟ್ಟಿ ಬೀಜಭೋಜಿಗಳ್ವೊಲಪ್ಪುದಪ್ಪುದುಜು ವಾಟಿಮಗ್ (ನೇಮಿಪು. ೦೨-೩೦). [ಸಂ. ಬೀಜಭೋಜಿನ್]

**ಬೀಜಮಂತ್ರ** (ನಾ). ೧. ರಹಸ್ಯವಾದ ಅರ್ಥವುಳ್ಳ ಮಂತ್ರ; ಪರಮಾರ್ಥವನ್ನು ಪ್ರತಿಪಾದಿಸುವ ಮಂತ್ರ: ಅಸುರಬಾಧೆಗೆ ಸಿಲುಕಿ ಅಶೋಕವನದಲಿ ಶಶಿಮುಖಿ ಬೀಜಮಂತ್ರವ ಜಪಿಸೆ (ತೊರಂದ. ರಾ. ೨-೦೫೭-೮). ೨. (ಆಲಂ) ಮುಖ್ಯವಾದ ಉಪಾಯ: ಸಾವುವೆಂಬುದು ರಾಜನೀತಿಗೆ ತಾ ಮನೋಹರರೂಪು ಬದುಕುವ ಭೂಮಿಪಾಲರನಂತವಿಭವಕೆ ಬೀಜಮಂತ್ರವಿದು (ಕುವ್ಯಾಉ. ೯-೫). [ಸಂ.]

**ಬೀಜಮುದ್ರೆ** (ನಾ). [ಯೋಗ] ಮಂತ್ರಶಾಸ್ತ್ರಪ್ರಸಿದ್ಧವಾದ ಒಂದು ಬಗೆಯ ಹಸ್ತಮುದ್ರೆ: ಅಸ್ತ್ರಮುದ್ರೆ ಚಕ್ರಮುದ್ರೆ . . . ಬೀಜಮುದ್ರೆ ಶಾಂತಿಮುದ್ರೆ . . . ಸಂಹಾರಮುದ್ರೆಯೆಂಬಾದಿಯಾಗಿ ಸಕಲ ಮುದ್ರೋಪಮುದ್ರಾಬಂಧಲಕ್ಷಣಂಗಳಂ ಗುರುಮುಖದಿಂದಱಿತು (ವಿವೇಕ. ೦೦೩). [ಸಂ. ಬೀಜಮುದ್ರಾ]

**ಬೀಜವರಿ$_1$** (ನಾ). ಒಂದು ಬಗೆಯ ತೆರಿಗೆ: ಸಕಲಸುವರ್ಣಾದಾಯ ಭತ್ತಾದಾಯ ತುರುಕಾಣಿಕೆ ವಿರುಭ ಬೇಡಿಗೆ ಬೀಜವರಿ ಮಣುದೆರೆ ಮಗ್ಗದೆರೆ . . . ಕುದುರೇಸುಂಕ (ಎಕ. X, ಕೋಲಾರ. ೨೪೭-೨೭; 1637?). [ಬೀಜ + ವರಿ$_1$]

**ಬೀಜವರಿ$_2$** (ನಾ). ೧. ಒಂದು ನಿರ್ದಿಷ್ಟಪ್ರಮಾಣದ ಬೀಜವನ್ನು ಬಿತ್ತನೆ ಮಾಡಬಹುದಾದಷ್ಟು ಭೂಮಿ: ಹಿರಿಯ ಕೆಱೆಯ ತೆಂಕಣ ಕೋಡಿಯ ಪೊ[ಳ]ಗಣ ಭತ್ತಾದಾಗ ಬೀಜವರಿ ಪೊಕ್ಕಳವೆಂದು ಬಿಟ್ಟರು (ಎಕ. IX. ಶಿಲವಂ. ೫೩-೨೫; 1374); ಪೂರ್ವದ ಗ್ರಾಮದ ಜೋಡಿಬೇಡಿಗೆ ಕಾಣಿಕೆ ಬಿರಾಡ ಓಟ್ಟು ಹುಗ್ಗಿ ಬೀಜವರಿಯವೆಲ್ಲವನು . . . ಮಾಡಿದರು (ಎಕ. V, ಹಾಸನ. ೨-೨೯; 1563). ೨. ಒಂದು ನಿರ್ದಿಷ್ಟ ಅಳತೆಯ ಜಮೀನಿಗೆ ಬಿತ್ತಲು ಬೇಕಾಗುವಷ್ಟು ಬೀಜದ ಪ್ರಮಾಣ: ಸತಖಂಡದ ಗದ್ದೆ ಬೀಜವರಿ ಖ[೦]ಡುಗ ೧ ಕೊಳಗ ೫ (ಸೌಇಇ. IV, ೩೩೦-೩೩; 1190);

ಆ ಕೆಱೆಯ ಕೆಳಗಿಹ ಗದ್ದೆಯಲ್ಲಿ ಬೀಜವರಿ ಖಂಡುಗ ಗದ್ದೆ ಊರಿಂ ಬಡಗಲು × × × ನಹ ಹೊಲ ಬೀಜವರಿ ಖಂಡುಗ ಬೆಜಲು ಯಿದನ್ನು ಸರ್ವಮಾನ್ಯವಾಗಿ ಕೊಟ್ಟೆವು (ಎಕ. IX, ಕನ್ನಕ. ೧೬೪-೧೩ ; 1416) ; ಕೆಲವು ಬೀಜಗಳ ವಿನಾ ಮಿಕ್ಕವೆಲ್ಲವನ್ನೂ ಕೈಯಿಂದ ಚೆಲ್ಲುವುದು ವಾಡಿಕೆಯಾಗಿದೆ. ಹೀಗೆ ಚೆಲ್ಲುವುದರಿಂದ ಬೀಜವರಿ ಹೆಚ್ಚಾಗುವುದಲ್ಲದೆ, ಹರತೆ ಮಾಡುವುದು, ಕಳೆ ಕೀಳುವುದು ಮೊದಲಾದ ಕೆಲಸಗಳನ್ನು ಮಾಡಲು ಅಷ್ಟು ಸುಲಭವಾಗಿ ರುವುದಿಲ್ಲ (ವ್ಯವಪು. ೨೦).

[ಬೀಜ + –ವರಿ₂./ ತಮಿ. ಪೀಚವಾರಿ : ಈ ಶಬ್ದದಲ್ಲಿರುವ ' ವಾರಿ ' ಎಂಬುದು ಉರ್ದುಮೂಲದಿಂದ ಬಂದಿರಬಹುದೇ ? ; ತೆಲು. ಬೀಜು ವರಿ = ಬಿತ್ತನೆಗೆ ಯೋಗ್ಯವಾದ ಮೊಳಕೆ ಬಂದ ಬತ್ತ]

**ಬೀಜವೃಕ್ಷನ್ಯಾಯ** (ನಾ). [ತರ್ಕಶಾ] ಲೌಕಿಕನ್ಯಾಯಗಳಲ್ಲಿ ಒಂದು ; ☞ ಮರವು ಬೀಜದ ಫಲ ಮತ್ತು ಬೀಜವು ಮರದ ಪರಿಣಾಮ. ಇವು ಪರಸ್ಪರ ಕಾರಣ ಮತ್ತು ಫಲವಾದುದರಿಂದ ಇವುಗಳಲ್ಲಿ ಯಾವುದು ಮೊದಲೆಂದು ನಿರ್ಧರಿಸುವುದು ಅಸಾಧ್ಯ : ಈ ಶರಣ ಲಿಂಗ ಎರಡಕ್ಕೂ ಬೀಜವೃಕ್ಷನ್ಯಾಯದ ಹಾಂಗಲ್ಲದೆ ಭಿನ್ನವಿಲ್ಲ (ಸಿದ್ಧೇವ. ೦೩-೩೯); ಬೀಜವೃಕ್ಷನ್ಯಾಯವಿದ ಭೇದಿಸುವಪರಾರಿನ್ನು (ಹಂಸಾ. ೯೩) ; ಬೀಜವೃಕ್ಷನ್ಯಾಯವನ್ನು ನೋಡಿ. ಬೀಜದಿಂದ ಅಂಕುರವು ಹೊರಟಾಗಲೇ ಎಲೆ ಕಡ್ಡಿಗಳಾಗಿ ಪೊರಡುವುದು (ಪುಹಾಣ. ೩೦೯). ' ಬೀಜಾಂಕುರ ನ್ಯಾಯ ' ಪರಾ. [ಸಂ.]

**ಬೀಜವೊನ್ನು**, ಬೀಜಹೊನ್ನು (ನಾ). ಮೂಲಧನ ; ಅಸಲು ; ಬಂಡವಾಳ : ಅಧಿಕಾಲೋಗಣೆಗೆ ಹೊಂಗೆ ಹಾಗವೊಂದ ವೃದ್ಧಿಯಂ ಬೀಜವೊಂನಾಗಿ ಮಹಾಜನಂಗಳಿಗೆ ನಡಸುವಂತಾಗಿ ಕೊಟ್ಟ ಗ ೨ (ವ್ಯಾಆ. ೦೯೩೦, ೩-೬ ; 1241) ; ನಿಯಂತಕರವಹ ಸಿದ್ಧಾಯಕೆ ಬೀಜವೊನ್ನನು ಕೊಂಡು (ಎಕ. IV (R), ಹುಣಸೂ. ೯೩-೬ ; ಸು. 14ನೆಯ ಶತ) . ಬೀಜ ಹೊನ್ನು : ಈ ಗದೆಯ ಹದಿಕೆ ಗದ್ಯಾಣ ಹತ್ತನು ಬೀಜಹೊಂನಾಗಿ ಹಿರಿಯಪ್ಪನ ಕೈಯಲು ಕೊಂಡು ಅಕರವಾಗಿ ಭೂಮಿಚಂದ್ರರುಳ್ಳನಬರಂ ಸಲುವಾದೆಂದು ಕೊಟ್ಟ ಶಾಸನ (ಎಕ. VI(R), ಶ್ರೀರಂಗ. ೧೦೬-೪ ; ಸು. 13ನೆಯ ಶತ) ; ನಾಗಣಹೆಗ್ಗಡೆ ಬೀಜಹೊಂನ ತೆಗೆದುಕೊಂಡು ತಂನ ಮೂಲದ ಮೇಲೆ ಕುಳಕ್ಕೆ ಬರಸಿ ಕೊಟ್ಟ ಭೂಮಿ (ವ್ಯಾಆ. ೦೯೩೪, ೦೪-೦೬ ; 1516). [ಬೀಜ + ಪೊನ್ನು (< ಪೊನ್)]

**ಬೀಜಹೊನ್ನು** 'ಬೀಜವೊನ್ನು' ನೋ.

**ಬೀಜಾಂಕುರನ್ಯಾಯ** (ನಾ). [ತರ್ಕಶಾ] ಒಂದು ಲೌಕಿಕನ್ಯಾಯ ; ಬೀಜ ಮತ್ತು ಚಿಗುರಿನ ನಿತ್ಯಪರಂಪರೆಗೆ ಸಂಬಂಧಪಟ್ಟ ನಿಯಮ; ☞ ಕಾರ್ಯ ಕಾರಣಗಳ ಪರಸ್ಪರ ಅನಿವಾರ್ಯ ಅವಲಂಬನೆಯನ್ನು ಹೇಳುವ ನ್ಯಾಯ. ಬೀಜವು ಚಿಗುರನ್ನು ಉತ್ಪತ್ತಿ ಮಾಡುತ್ತದೆ. ಹಾಗೆಯೇ ಚಿಗುರು ಬೀಜವನ್ನು ಉತ್ಪಾದಿಸುತ್ತದೆ. ಆದುದರಿಂದ ಅವು ಪರಸ್ಪರ ಕಾರಣ ಮತ್ತು ಫಲ : ಆ ವಿರಾಜಿತಭಕ್ತಿಯಿಂದಂ ಪ್ರಸಾದಪ್ರಭಾವಂ ಪ್ರಸಾದದಿಂ ಭಕ್ತಿ ಸಂಭವಿಸಿಪ್ಪುದಾವಗಂ ಬೀಜಾಂಕುರ ನ್ಯಾಯವೆಂದವನ ಚರಣಾಂಬುಜಕ್ಕೆ ಶರಣು (ಲಿಶಿಸಂ. ೩೪-೦೬) ; ಬೀಜಾಂಕುರನ್ಯಾಯದಿಂದ ಸರ್ವಜ್ಞ ಪರಂಪರೆಯೂ . . . ಪ್ರಪಂಚೋದ್ಧಾರ ಪರಂಪರೆಯೂ ನಡೆಯುತ್ತವೆಂದು ನಿರ್ಣಯ (ಹಿಂದಸಾ. ೮೪). [ಸಂ.]

**ಬೀಜಾಕೃತ** (ಗು). ೧. ಬಿತ್ತನೆಯಾದ ಮೇಲೆ ಕುಂಟೆ ಹೊಡೆದ : (೬). (ನಾ). ೨. ಬಿತ್ತನೆಯಾದ ಮೇಲೆ ಕುಂಟೆ ಹೊಡೆದ ಭೂಮಿ : " ಬೀಜಾಕೃತಂ, ಉಪ್ತಕೃಷ್ಟಂ — ೨ ಮೊದಲು ಬಿತ್ತಿ ಬಳಿಕ ಗೆಯಿದ ಕ್ಷೇತ್ರದ ಹೆಸರುಗಳು " (ಸಿದ್ಧಾಂಶಿ. ೨೬೬). [ಸಂ.]

**ಬೀಜಾಕ್ಷರ** (ನಾ). [ತತ್ತ್ವಶಾ] ಒಂದು ದೈವದ ಉಪಾಸನೆಯ ನಿರ್ದಿಷ್ಟ ಮಂತ್ರದ ಮೂಲಭೂತವಾದ (ಆಧ್ಯಾತ್ಮಿಕ) ಅಕ್ಷರ ; ☞ ಇವುಗಳ ಸಂಖ್ಯೆಯಲ್ಲಿ ವ್ಯತ್ಯಾಸವಿದೆ. "ಬೀಜಾಕ್ಷರ—೩: ಅಕಾರ, ಉಕಾರ, ಮಕಾರ (ಆದಯ್ಯ. ೨೮೯). ಬೀಜಾಕ್ಷರ–೫ : (ಅ) ಪ್ರಣವಬೀಜ, ಮಾಯಾ–, ಜ್ಞಾನಶಕ್ತಿ–, ಇಚ್ಛಾ–, ಕ್ರಿಯಾ– (ಸಾಂಖ್ಯ. ೪೪). (ಆ) ವಾಯುಬೀಜಾಕ್ಷರಗಳು ೧೦, ಅಗ್ನಿಬೀಜಾಕ್ಷರಗಳು ೧೦. ಭೂಮಿ–, ಜಲ–, ಗಗನ—(ವಿದ್ಯಾಕ. ೬೦). (ಇ) ಕ್ಷಿಪ ಓಂ ಸ್ವಾಹಾ (ಷಿಮುದ. ೮೮–೩೪ ವ)" (ಶ್ರೀವತ್ಸ. ೨೯೨) : ಅಕಾರ ಉಕಾರ ಮಕಾರವೆಂಬ ಬೀಜಾಕ್ಷರಂಗಳಿಂ . . . ನಿತ್ಯಪರಿಪೂರ್ಣತ್ವದಿಂದೆಡದೆಱಹಿಲ್ಲ ದಿರ್ಪನಯ್ಯಾ (ಆದಪ. ಮು. ೧೬೪–೨೮೯) ; ಕ್ಷಿಪ ಓಂ ಸ್ವಾಹಾ ಎಂಬೀ ಪಂಚ ಬೀಜಾಕ್ಷರಂಗಳುಂ ಯಥಾಕ್ರಮದಿಂ ಹಾರಿದ್ರಶುಭ್ರಸುವರ್ಣಕೃಷ್ಣಸುರ ಚಾಪನಿಭಂಗಳಪ್ಪುವು (ಖಮುದ. ೪-೩೪ ವ) ; ಆಧಾರಚಕ್ರಸ್ಥಾನದಲ್ಲಿ ನಾಲ್ಕೆಸಳ ಕಮಲದ ವ ಶ ಷ ಸ ಎಂಬ ನಾಲ್ಕು ಬೀಜಾಕ್ಷರದ ಪೃಥ್ವಿತತ್ತ್ವದ ಶೋಣವರ್ಣದ ನೆಲೆಯನಱಿಯಬೇಕಯ್ಯ (ಸಿದ್ಧೇವ. ೩೯-೧೬೩). [ಸಂ.]

**ಬೀಜಾಣು** (ನಾ). ಒಂದು ವಸ್ತುವಿನ ಮೂಲಾಂಶ : ಇವುಗಳಲ್ಲಿ ಯಾವುದನ್ನೇ ಆಗಲಿ ಮತ್ತು ಪಟ್ಟಿಗೆ ಸೇರಿಸಬಹುದಾದ ಇತರ ಅಸಂಖ್ಯಾತ ಪ್ರೇರಣೆಗಳನ್ನಾಗಲಿ ಸಂಪೂರ್ಣ ತೃಪ್ತಿಕರವಾದ ಕಥೆಯೊಂದಕ್ಕೆ ಬೀಜಾಣು ವಾಗಿ ಮಾಡಿಕೊಳ್ಳಬಹುದು (ಕಾಹಿಶ್ರ. ೨೪೬). [ಸಂ.]

**ಬೀಜಾಪೂರ** (ನಾ). = ಬೀಜಪೂರ : ತಿಲಕ ಲವಂಗ ಬೀಜಾಪೂರ ಕುಟಜ ಸದಿಕ್ಷು ಖರ್ಜೂರ (ಶಿಭಾಗ. ೪-೩-೧೩). [ < ಬೀಜಪೂರ ]

**ಬೀಜಾವಾಪ** (ನಾ). ೧. ಬೀಜವನ್ನು ಬಿತ್ತುವುದು ; ಬಿತ್ತನೆ : ಅಘದಿಂ ಬೀಜಾವಾಪಮೆನೆ ಜನ್ಮಲತೆಗೆ ಕಲಾಪಿಸ್ತ್ರೀಯುದರದಲ್ಲಿ ವಿಂಧ್ಯ ದೊಳೊಗೆದಂ (ಯಕೋಚ. ೩-೩೪). ೨. ಅಂಕುರಾರ್ಪಣೆ ಮಾಡುವುದು; ಪ್ರಾರಂಭ : ಸಮಸ್ತಮಂತ್ರಿಸಭಾಭ್ರೂಲತಾಗ್ರಥಿತಾನೇಕನೀತಿಬೀಜಾವಾಪ ವಿಜಿತಸಕಲಾರಾತಿಸಚಿವನಿರಸ್ತಸನ್ಮತಿಯಪ್ಪ ಸಸ್ಮಿಶಿಯಿಂತೆಂದಂ (ಕಾಂತಿಪು. ೨-೩೩ ವ) ; ಸಿದ್ಧಿಕನು. . .ತನ್ನ ಕಾರ್ಯಸಾಧನೆಗೆ ಬೀಜಾವಾಪ ಮಾಡಿ ಮನೆಗೆ ಹೊರಟನು (ದಾಂತ್. ೨೮). [ಸಂ.]

**ಬೀಜಾವಾಪನ** (ನಾ). = ಬೀಜಾವಾಪ ೨ : ಆ ರಾಷ್ಟ್ರದಲ್ಲಿ ತಮ್ಮ ಪಂಥದ ಬೀಜಾವಾಪನ ಮಾಡಿದ್ದರು (ಕಥಶ. ೬೦೩). [ಸಂ.]

**ಬೀಜಿ** (ಗು). ೧. ಕಾಳುಗಳನ್ನು ಹೊಂದಿರುವ. ೨. ಒಂದು ವಂಶಕ್ಕೆ ಸೇರಿದ. (ನಾ). ೩. ಮೂಲಪುರುಷ ; ಆದ್ಯಪ್ರವರ್ತಕ: ಜಗವೆಂಬ ವೃಕ್ಷಕ್ಕೆ ಬೀಜಂ ವಿಚಾರಿಸಲ್ ಬೀಜಿಯುಂ ಫಲಭೋಕ್ತೃವುಂ ನೀನೆಯಾಗಿ (ರಶಿಸಂ. ೪-೨೬). [ಸಂ. ಬೀಜಿನ್]

**ಬೀಜಿಗಾಳು** (ನಾ). ಬೀಜರೂಪದ ಕಾಳು : ಹೂ ಹಣ್ಣನಲ್ಲಿರುವ ಬೀಜಿಗಾಳೇ ನೀನು ಒಳಹೊಕ್ಕು ಹೊರಗೆ ಬರುವಿ . . . ಬೀಜಿಗಾಳೇ ನೀನು ಗಾಳಿಯಲಿ ತೇಲಿ ಬಹೆ : ನಿನಗಾಗಿ ಜಬ್ಬಿಸಿಹೆನು (ಕಯುಣ. ೦೦೯-೨) [ಬೀಜಿ + ಕಾಳು₂ (< ಕಾೞ್₂)]

**ಬೀಜಿಸು** (ಕ್ರಿ). ಮೊಳಕೆ ಬರು ; ಕುಡಿಯೊಡೆ : ಅಜನ ಪದಮಂ ಸಾರ್ದಿರ್ಪಾ ಜನಮೆಲ್ಲಂ ಕೃತಾರ್ಥರವರಡಿಸೋಂಕಿಂ ಬೀಜಿಸುತೆ ನಿವಿರ್ದ ಪುಳಕವ್ರಾಜಮೆನಲ್ಕೆಲ್ಲಿಸಸಿ ಮನಂಗೊಳಿಸಿರ್ಕುಂ (ಪೀರಾ. ೧-೩೬). [ಬೀಜ + –ಇಸು₃]

**ಬೀಜ್ಯ** (ಗು). ೧. ಬೀಜದಿಂದ ಉತ್ಪತ್ತಿಯಾದ,—ಹುಟ್ಟಿದ. ೨. ಸದ್ವಂಶದಲ್ಲಿ ಹುಟ್ಟಿದ ; ಸತ್ಕುಲಪ್ರಸೂತ. [ಸಂ.]

**ಬೀಟ್‌ರೂಟ್** (ನಾ). (ತರಕಾರಿಯಾಗಿ ಹಾಗೂ ಸಕ್ಕರೆ ಮಾಡಲು ಉಪಯೋಗಿಸುವ) ಒಂದು ಬಗೆಯ ಗೆಡ್ಡೆ : ನಮ್ಮಲ್ಲಿ ಸಕ್ಕರೆಯು ಕಬ್ಬಿನಿಂದ ತಯಾರಾಗುವುದು. ಎಷ್ಟೋ ದೇಶಗಳಲ್ಲಿ ಸಿಹಿಯಾದ

ಬೀಟ್‌ರೂಟ್ ಗಡ್ಡೆಯಿಂದ ಅದನ್ನು ತಯಾರಿಸುತ್ತಾರೆ (ಜಾಂಶ್ರ. II, ೬೪೪); ಕೆಲವು ದೇಶಗಳಲ್ಲಿ ಸಕ್ಕರೆ ತಯಾರಿಸುವುದಕ್ಕಾಗಿಯೂ ದನಗಳ ಮೇವಿಗೆಂತಲೂ ಬೀಟ್‌ರೂಟನ್ನು ಬೆಳೆಯುವರಂತೆ (ಕಠಕ. ೫೦).

[←ಇಂ. Beetroot]

**ಬೀಟು** (ನಾ). ೧. ಕಾವಲುದಳದವನು ಮಾಡುವ ಪಹರೆ,—ಗಸ್ತು : ಒಬ್ಬ ಪೋಲಿಸ್ ಕಾನಸ್ಟೇಬಲ್‌ನು ಒಂದು ಗ್ರಾಮಕ್ಕೆ (ಗಸ್ತು) ಬೀಟು ಸಂದಿಸಲು ಬಂದ ಕಾಲದಲ್ಲಿಯಾಗಲಿ . . . ಬೀಟುಬುಕ್ಕಿನಲ್ಲಿ ದಾಖಲ್ ಮಾಡಬೇಕು (ಗ್ರಾಪೊಕ. ೪೫); ರಸ್ತೆಯಲ್ಲಿ ಬೀಟಿನ ಪೋಲಿಸಿನವನನ್ನು ಬಿಟ್ಟು ಯಾರ ಸುಳಿವೂ ಇಲ್ಲ (ಕಾಯಿಕ. ೩೪). ೨. ಪಹರೆಯವನ ಗಸ್ತಿಗೆ ಒಳ ಪಡುವ ಪ್ರದೇಶ : ನಮ್ಮ ಕಚೇರಿಯ ಕ್ಷೇತ್ರದಲ್ಲಿ ನಾಲ್ಕು 'ಬೀಟು' ಗಳಿದ್ದುವು (ಖಂಗಾರ. ೦೬೪). [← ಇಂ. Beat]

**ಬೀಟೆ**$_1$, ಬೀಂಟೆ, ಬೀಡು$_1$, ಬೀಡೆ$_1$ (ನಾ). ಬಿರುಕು; ಸೀಳು ; ಸಂದು : ಕೆಚ್ಚು ಬತ್ತಿ ಪೋದುವಿರ್ಪಾವೆಡೆಯೊಂಬಿನಂ ಬಿಚುತು ಬೀಟೆಯುನಾಳ್ದುದು ಬೆಂಚೆ (ಸೊಕ್ತಸು. ೦೦–೪೦); ಮಂದಮತಿಯಾ ಸುಯೋಧನನ್ನಪಂ ಕಗ್ಗಲ್ಲ ಬೀಟೆಯಂದದಿ ಮುನಿಸನು ಒಂದಿನಿಸು ಮುಚ್ಚದಾ ಕಳ್ಳರಂ ನಾಳೆ ನೀಂ ತಂದೊಪ್ಪಿಸೆಂದು . . . ಕಳುಹಿ (ಸಮ್ಮಕೌ. ೨–೬೬) ; ಬೀಟೆಯಂದದಿ ಬಾಯ ಬಿಟ್ಟಿರ್ದ ವಜ್ರಕವಾಟಗಳ್ಕೂಡೆ ಮುಚ್ಚಿದುವು (ಕಠಕ. ೭೬–೦೦೯). **ಬೀಂಟೆ** : ತಟತುದಲೆ ಹುರುಪುವುಯು ಮೇಲ್ಬಿರಿದಿಹ ಹಿಮ್ಮಡಿಯು ಭೀಂಟೆ (ಪದ್ಮಶಾ. ೬–೨೦೯). **ಬೀಡು**$_1$ : ಕಾಡುಜನರು ಇಲಿಗಳನ್ನು ಹಿಡಿಯುವುದಕ್ಕಾಗಿ ನೆಲದ ಬೀಡುಗಳಲ್ಲಿ ಬೆಂಕೀ ಹಾಕುತ್ತಾರೆ (ಕೊಂಬಾ. ೫–೪). 'ಬೀಡುಗಾಲು' ಪರಾ. **ಬೀಡೆ**$_1$ : "ಬೀಡೆಯೆನೆ ಬಿರುಕೆನಿಕ್ಕುಂ" (ಕನ್ನಕೈ. ೬೬) ; ನೆರಪಿ ಮಧುಕಂ . . . ಜಾಜಿಂಬಿವನಿಟ್ಟೊರಸುತ್ತಿರೆ ಕಾಲ ಸೀಡೆ ಬೇಗಂ ಕಿಡುಗುಂ (ಲೋಕೋಪ. ೯–೦೪೬) ; ಎಳವೆಣ್ಣ ಮೆಯ್ಯ ಕೋಮಲನಖರೇಖೆಯಂತಿರೆರೆಗೆಯ್ಗೊಳಿಸಿದುವು ಕೂಡೆ ಬೀಡೆಗಳ್ (ಜಗಪ. ೦೪–೭) ; ಬೀಡೆಗಳುದ್ದಾಮಂಬೆತ್ತೊಗೆದುವರೆಯು ಕೆಯ್ಗೊಳೊಳ್ (ಕುಸುಪಪಾ. ೭–೫).

ಬೀಟೆ ಬೀಳು = ಬಿರುಕು ಬಿಡು ; ಸೀಳು : ಧೂಳಿನಲ್ಲಿ ತಿರುಗಾಡಿ ಕಾಲು ಬೀಟೆ ಬಿದ್ದಿವೆ (ರೂಢಿ). [ದೇ.॥ ತಮಿ. ಮಲ. ವೆಟ ; ತೆಲು. ಬೀಟ]

**ಬೀಟೆ**$_2$ (ನಾ). (ಪೀಠೋಪಕರಣಗಳಿಗೆ ಬಳಸುವ) ಒಂದು ಬಗೆಯ ಉತ್ತಮಜಾತಿಯ ಮರ ; ಕರಿಮರ : ಬೀಟೆ, ತೊಟೆಗಟ್ಟೆ, ಕರೇವ್ಯಾಡಿ (ವೃಕಿಗಿ. ೨೯–೩೪೪) ; ನಮ್ಮ ಸೋಫಾ ಮತ್ತು ಕುರ್ಚಿಗಳು ಬೀಟೆಯ ಮರದಲ್ಲಿ ಮಾಡಿದವು (ಅರಿಪಾ. ೨೭).

[ದೇ.॥ ತಮಿ. ಈಟ್ಟಿ ; ಮಲ. ವೀಟ್ಟಿ ; ತುಳು. ಬೀಟೆ]

**ಬೀಟೆಗಾಲ್**, ಬೀಡುಗಾಲು, ಬೀಡೆಗಾಲ್ (ನಾ). ಬಿರುಕು ಬಿಟ್ಟಿರುವ ಕಾಲು ; ಒಡೆದಿರುವ ಪಾದ : ಬಿಟ್ಟಿರ್ಪ ಬಾಯ್ ಬೀಟೆ [ಪಾಕಾಂ. ಡೆ] ಗಾಲೊಳ್ಪೊಕ್ಕಿರ್ದ ಕಟೀತಟಂ (ಮಹಾಪೇ. ೬–೦೫೩) ; ಕೂನ ಬೆನ್ನ ಕುಗ್ಗಿದ ಕೊರಲ ಬೀಟೆಗಾಲ್ ಜಗ್ಗುನಡೆಯ . . . ವನಚರರಿಂದೆ ವನವೊಸೆದುದು (ಕಂಠಿ. ೩೩–೨೨). **ಬೀಡುಗಾಲು** : ಕೊಡಗನ ಮುಸುಡಾಗಿ ಬೀಡುಗಾಲ ವಳಾಗಿ ನೋಡುವರಿಗೆಲ್ಲ ನಗೆಯಾಗಿ ಇಂಬಳಿದು ಕೂಡುವಳೆ ಸತಿಯು (ಸರ್ವಜ್ಞ. ೦೭೦೯). **ಬೀಡೆಗಾಲ್** : ಕೆಂದಲೆಯ ಕಾಳಿಗವರ್ಣದ ಬೀಡೆಗಾಲ . . . ಪೇರುರದ ಲುಬ್ಧಕರಿರ್ದರಲಬ್ಧಮಾರ್ದವರ್ (ಕೃಷ್ಣಕೃ. ೫–೯೯).

[ಬೀಟೆ$_1$ + ಕಾಲ್$_1$]

**ಬೀಟೆಗೈ** (ನಾ). ಬಿರುಕು ಬಿಟ್ಟಿರುವ ಕೈ : ಮುದುಡುಗುವಿ ಬೀಟೆಗೈ ಸಲೆ ಕೀಸುವಲ್ಲು ಕವಿಸ್ಮಾಸೆ ಬೀಭತ್ಸರಸ ಬಲಿದು ಪುರುಷಾಕಾರವಾದಂತೆ ಶಂಕರಾ ನಂದನೆಯ್ತಂದು ನಿಂದಂ (ಶೀಕೃಕೃ. ೩–೪–೦೬). [ಬೀಟೆ$_1$+ಕೈ$_3$ (<ಕೆಯ್$_2$)]

**ಬೀಟೆಬಿರಿ**, ಬೀಡುಬಿರಿ, ಬೀಡೆಬಿರಿ (ಕ್ರಿ). ಬಿರುಕು ಬಿಡು ; ಸೀಳು : ಧರೆ ಬೀಟೆಬಿರಿ[ಪಾಕಾಂ.ಡೆವರಿ]ದುದು ಹೊಲಂ ಕರಿಕುವರಿಯಿತ್ತು (ಸೋವುತ. ೨–೭೦). **ಬೀಡುಬಿರಿ** : ಜೋಡು ಹಚಿದುದು ಸೀಸಕದ ದಡಿ ಬೀಡುಬಿರಿ ದುದು ತಲೆಯ ಚಿಪ್ಪಿನ ಜೋಡು ಜಚಿದುದು ಮನಕೆ ಸುರಿದುದು ಸೊಗಡು ರಣರಭಸ (ಕುವ್ಯಾಅ. ೦೯–೩೭). **ಬೀಡೆಬಿರಿ** : ಶಾಂಭವಬಾಣವಂ ಹೆದೆಗೆ ಹೂಡಲ್ . . . ಅದ್ರಿಗಳ ತತಿ ಬೀಡೆಬಿರಿದುದು (ಕಬ್ಬಿ. ೪೦–೩೦).

[ಬೀಟೆ$_1$ + ಬಿರಿ$_1$]

**ಬೀಟೆವರಿ**, ಬೀಡೆವರಿ (ಕ್ರಿ). ಬಿರುಕು ದೊಡ್ಡದಾಗು ; ದೊಡ್ಡ ಸೀಳುಂಟಾಗು : ಬೀಟೆವರಿದಿರ್ದ ಮಡಂ ಸೆರೆಗೊಂಡ ಕಾಲ್ಗಳಿಂ ಮನಕೆ ವಿರಕ್ತಿಯಂ ಪಡೆವ ಮುಪ್ಪಿನ ಪಾರ್ವನದೊರ್ಬನೊಪ್ಪಿದಂ (ಪುಜಾಸ್ತ. ೬–೮೦) ; ಬೀಟೆವರಿ [ಪಾಕಾಂ. ಬಿರಿ]ದ ಕಾಲ್ತೊಲ್ವ ಗಲ್ಲಂ ಮಿಸುಪ ವೃದ್ಧ ವನಚರಿಯೊರ್ವಳಾ ಪಣ್ಗಳಂ ಸವಿದು . . . ಏಚುಂಜವ್ವನಂಬಡೆದಳು (ಸಮ್ಮಕೌ. ೦೦–೪೩). **ಬೀಡೆವರಿ** : ಬೀಡೆವರಿದುವು ನಿರಂತರೋತ್ತಪನ ತಾಪದಿಂ ಪೆರ್ಗಿಚಿಗಳ್(ಶಂಕಾಪೂ. ೭–೬೪); ವಾರಿಯಚಿತಾ ತಟಾಕಂ ಬೀಡೆ ವರಿದುದೇನೆಂಬೆ ಬೇಸಗೆಯುಗ್ರಮಂ (ಕಾವಕಾಂ. ೫–೭). [ಬೀಟೆ$_1$ + ವರಿ$_2$]

**ಬೀಟೆಸೆಳೆ**, ಬೀಡುಸೆಳೆ (ಕ್ರಿ).=ಬೀಟೆಬಿರಿ : ಕಟ್ಟೆ ಕಾಲ್ಗಳಾ ಚಕ್ರಮದಿಂಗಿ ಬೀಟೆಸೆಳೆಯಲ್ ಪೊಳೆ ವಳ್ಳಮದುಂ ಜಳಂಗಳಂ ವಿಕ್ರಯಿಸಲ್ಕೆ ತಾನಿನಿತು ಮಿಲ್ಲದೆ ಪೋದುದದೇನರಿಷ್ಟಮೋ (ಶಾಂಕಾಸ. ೦–೦೫–೩). **ಬೀಡುಸೆಳೆ** : ಹೊಲಗಳಲ್ಲಿ ಬೀಡುಸೆಳೆಯಲಿಕ್ಕೆ ಹತ್ತಿದ್ದರಿಂದ ಭೂಮಿಯು ಬಿರಿಯು ವದೋ ಏನೋ ಎಂದು ಕೆಲವರು ಹೆದರಿದರು (ಕಗದ್ಯ. ೯೬).

[ಬೀಟೆ$_1$ + ಸೆಳೆ$_1$]

**ಬೀಡ** 'ಬೀಡಾ' ನೋ.

**ಬೀಡಾ**, ಬೀಡ, ವಿಡಾ (ನಾ). ಅಡಿಕೆ, ಸುಣ್ಣ ಮುಂತಾದುವನ್ನು ಹಾಕಿ ಸಿದ್ಧಪಡಿಸಿದ ವೀಳ್ಯ ; ಪಾನ್‌ಪಟ್ಟಿ : ಕೊನೆಯಲ್ಲಿ ಎಲ್ಲರೂ ಬೀಡಾ ತರಿಸಿ ಹಾಕಿಕೊಂಡೆವು (ಮುರುಳಾ. ೧೨೦) ; ಇನ್ನು ಕೆಲವರು ಬೀಡಾ, ಬೀಡಿಯಂಗಡಿ, ಚಾದಂಗಡಿ ಇಟ್ಟಿರುವರು (ಕುಬ್ಬರೊ. ೫೦). **ಬೀಡ** : ಈ ಬೀಡ ನಾನು ತಯಾರಿಸಿದ್ದು ; ಇದರ ರುಚಿ ಪರಾಂಬರಿಸಬೇಕು ಸ್ವಾಮಿಯವರು (ರಂಗಕ. ೪೦); ಬೀಡವನಡಕಿ ಬಾಯಲ್ಲಿ ಚಟಿಕೆಯಲಿ ಮದ್ರಾಸುನಶ್ಯ ಮಿಡಿದು (ಪಡಂ. ೬೪–೦೨). **ವಿಡಾ** : ಆಚಾರ್ಯರಿಗೆ ಒಂದು ವಿಡಾ ಮಾಡಿಕೊಡು (ಸಪುಣ. ೫೦) ; ಅವಳು . . . ವಿಡಾ ಕಟ್ಟಿ ಧೀರನ ಮುಂದೆ ಹಿಡಿದಳು (ರಕ್ತರ್ಯ. ೨೦೬).

[←ಹಿಂ. ಬೀಡಾ ; ಮರಾ. ವಿಡಾ ; ಬಂಗಾಲಿ. ಬಿಡಾ ; ಸಿಂಧಿ. ಬಿಡೊ./ಪ್ರಾ. ಬೀಡಗ, ವೀಡಗ, ವೀಡಯ./ಸಂ. ವೀಟಿಕಾ]

**ಬೀಡಾಡಿ**, ಬಿಡಾಡಿ (ನಾ). ೧. ಕೆಲಸವಿಲ್ಲದೆ ಅಲೆದಾಡುವವನು ; ಅಪ್ರಯೋಜಕ : ಜೋಡೆಯಲಿ ಜನಿಸಿದವನೀ ಬೀಡಾಡಿ ಕೊಡಿದನು (ಕುವ್ಯಾಅ. ೯–೨೭). ೨. ಕಟ್ಟುಪಾಡಿಗೆ ಒಳಪಡದಿರುವವನು ; ಸ್ವೇಚ್ಛಾಚಾರಿ : ನಾಡೊಳಗೆ ತಾನಿದ್ದಡೆನ್ನನು ಕಾಡುವವು ವಿಷಯಂ ಗಳೆಂದು ನದೀಜಲಾಂತವಲಿ ಓಡಿ ಹೊಕ್ಕಡಗಿರ್ದ ತನ್ನನು ಮಾಡಿದೀ ಪರಿ ಹರಹರಾ ಬೀಡಾಡಿಯೆನು ಮಧುವಿಷ್ಣುವಾಯಿಯ ಕಳೆವರಾರು (ಶಿಹಾಗ. ೯–೭–೪೩) ; ಈ ಬೀಡಾಡಿಯ ಬಟ್ಟರಾಜ್ಯದಲ್ಲಿ ಅಡ್ಡಹಾದಿ ಹಿಡಿಯದ ಹೊರತು ಬಿಡುಗಡೆ ಹೊಂದುವ ಹಾದಿಯೇ ಇಲ್ಲ (ಹುತ್ತಾಟ. ೬೦). ೩. ಕಟ್ಟುಪಾಡಿಗೆ ಒಳಪಡದಿರುವುದು ; ನಿಯಂಮದ ಉಲ್ಲಂಘನೆ : 'ಬೀಡಾಡಿತನ' ಪರಾ. **ಬಿಡಾಡಿ** : ೧. ಎಲ್ಲಿ ನೋಡಿದರೆ ಕರೆದಡೆ ಓ ಎಂಬಾತನೇ ಬಿಡಾಡಿ (ಸವಪ. ೩೩–೦೬೭). ೩. ಇಂದ್ರಿಯವ ಕಟ್ಟಿ ವಸ್ತುವನಚಿತಿಹೆನೆಂದಡೆ ಅದು ಕಚಿವ ಹಸುವಲ್ಲ ಇಂದ್ರಿಯವ ಬಿಟ್ಟು ವಸ್ತುವ ಹಿಡಿದಿಹೆನೆಂದಡೆ ಬಿಡಾಡಿಯಲ್ಲ (ಪೋಳಪಾ. ೦೦೭–೪೨೬). (ಗು). ೪. ಕೆಲಸಕ್ಕೆ ಬಾರದ ; ನಿರುಪಯೋಗಿಯಾದ : ಗೂಢಾರ್ಥ

ವಿಲ್ಲದೆ ವಾಕ್ಯ ಹೇಳಲು ಅಪ್ಪನವರೇನು ಬಿಡಾಡಿ ಸಾಧುವೇ ? (ಗ್ರಾಪಜಾಪು. ೫೪೭); ಕೊನೆಗೆ ಅತ್ಯಂತ ನಿಶ್ಚಿತವಾದ ನಿಕಷ–ಬೀದಿಯು ಬಿಡಾಡಿ ಕೆಲಸಿಗ ನಿಮ್ಮನ್ನು ಕಂಡು ಎದ್ದು ನಿಂತರೆ—ನೀವು ತಿಳಿದುಕೊಳ್ಳಲಾರಿರೋ ? (ಗಾಳಿಕ. ೬೦). [ಬೀಡು$_3$ + – ಆಡಿ$_1$]

**ಬೀಡಾಡಿತನ** (ನಾ). ಕಟ್ಟುಪಾಡಿಗೆ ಒಳಪಡದಿರುವಿಕೆ : ಪುಂಡತನ : ಬಿಡುಬಿಡು ಬೇಡ ಬೀಡಾಡಿತನದಿ ಬಂದು ಹಿಡಿದ ಸೆಜಗನು (ನೇಮಿಷಂ. ೧೯–೯೯). [ಬೀಡಾಡಿ + – ತನ]

**ಬೀಡಾರ**, ಬಿಡಾರ, ಬಿರಾಡ, ಬಿರಾಡು, ಬೀಢಾರ, ವಿರಾಡ (ನಾ). ೧. ನೆಲಸುವ ಸ್ಥಳ ; ನೆಲೆ : ನಾರಿಯರು ನಿಖಿಳಾಮರರು ಬೀಡಾರ ಕೈದಿತು (ಕುವ್ಯಾಅ. ೭–೯೬) ; ಮಾಡಬೇಕಾದುದೆಲ್ಲವ ಮಾಳ್ಪುದೆಂದೀಶ ಬೀಡಾರಕೆ ಸಾಗಿದನು (ಪೋಹಕ. ೩೫–೬೫) ; ವಿಜಯಲಕ್ಷ್ಮಿಗೆ ಬೀಡಾರ ವಾದೊಲು ಹರ್ಮ್ಯ ತ್ರಿಜಗಕಚ್ಚರಿಯ ಬೀಜಿದುವು (ಕಂಪಾ. ೭–೨೩). ೨. ಮನೆ ; ಗೃಹ ; ನಿವಾಸ : "ಬೀಡಾರಂ ಮನೆ" (ಶಾಅಭಿ. ೯೮) ; ಸಾಕು ಬೀಡಾರಕ್ಕೆ ನೀ ಹೋಗೀಕೆ ನಿನಗಹಳಲ್ಲ (ಕುವ್ಯಾವಿ. ೨–೧೪). ೩. ಅತಿಥಿಗಳು ಇಳಿದುಕೊಳ್ಳುವುದಕ್ಕಾಗಿ ವ್ಯವಸ್ಥೆ ಮಾಡಿರುವ ಭವನ ; ಅತಿಥಿಗೃಹ : ಧೃತರಾಷ್ಟ್ರಭೂಪಾಲ ಬೆಜಗು ಬಿನ್ನಾಣದಲಿ ಮಕ್ಕಳ ಮರುಳುಮಾಡಿದನೇನ ಹೇಳುವೆನ್ಸುರಿವನೆಯು ಬೀಡಾರದಲಿ ಬಿಡಿಸಲ್ಕೆ ಮನದಂದ (ಕುವ್ಯಾಅ. ೯–೭೦) ; ನಮ್ಮ ಮನೆಗಳಿದ್ದು ಬೀಡಾರವೇಕೆಂದು ಸಮ್ಮಾನಿಸಿದರಾಗ ಸಖರು (ಭರತ. ೪೭–೦೨೩) ; ಬಂದ ರಾಯರನುಚಿತ ವಚನದಿಂ ನುಡಿಸಿ ಕರತಂದು ಬೀಡಾರವಂ ತೋರ್ದು . . . ಮನ್ನಿಸು ತಿರ್ದರಲ್ಲಲ್ಲಿ (ಶ್ರೀರಾಮ. ೫–೩೯). ೪. ಪರಸ್ಥಳದವರು ಇಳಿದುಕೊಳ್ಳುವ ವಸತಿ,–ತಂಗುವ ಸ್ಥಳ ; ತಂಗುದಾಣ : ಪುರದೊಳಗೆ ಹೇರಾಳ ಹಬ್ಬದ ಹರಹಿನಲಿ ಬೀಡಾರ ಭಿಕ್ಷಾಚರಿತರಿಗೆ ದೊರಕುವುದೆ (ಕುವ್ಯಾಅ. ೦೨–೭); ನೆಗಳ್ದುವಲ್ಲಲ್ಲಿ ಮಯನಿರ್ಮಿತದೊಳಾಗ . . . ಚಾವಡಿ ಹಜಾರ ಹಯ ಗಜಶಾಲೆ ಮುಖ್ಯಬೀಡಾರಂಗಳು (ಶಿವಕ. ೪೭–೩೩) ; ಎರಡು ಕೊಟಡಿಗಳು ಮತ್ತು ಕೈಸಾಲೆಗಳಿವೆ. ಜಾತ್ರೆಯಾಗುವಾಗ ಇವೆಲ್ಲ ಸುಬೇದಾರರ ಮತ್ತು ತಾಲ್ಲೂಕಿನ ಉದ್ಯೋಗಸ್ಥರ ಬೀಡಾರವಾಗುತ್ತವೆ (ಸಾಪತ್ರಿ. ೩೪). ೫. ರಣರಂಗದ ಬಳಿಯ ಶಿಬಿರ, – ಪಾಳೆಯ : ತನ್ನ ಬೀಡಾರದೆಡೆ ಆ ಮಹಾಪ್ರಾಣಿಯಿಂ ಭೂತಲಕ್ಕವತರಿಸಿ ...ಕೈಕೊಳುತೆ ಕನ್ಯೆಯರ ಕೈಂಕರ್ಯಮಂ ಪೊಕ್ಕಳಾ ರಾಜ್ಞಿ ಭರ್ಮಕರ್ಮಂಗೈದ ರಮ್ಯಪಟಹರ್ಮ್ಯಮಂ (ಶತ್ರಾಂಗ. ೦೯–೪೮೪). ೬. ವಾಸ್ತವ್ಯ ; ಮೊಕ್ಕಾಮು : ವಿಪ್ರನೊಬ್ಬನ ಭವನದಲಿ ಮಾಡಿದರು ಬೀಡಾರವನು ವಿನಯದಲಿ (ಕುವ್ಯಾಅ. ೦೦–೩). ೭. ಹಿಂದೆ, ಮನೆಯ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಬಿಟ್ಟಿ ಬೀಡಾರಂ ಹೊಜೆಗೆ . . . ಕಡ್ನಾಯ ಕೊಟ್ಟು ಗುತ್ತಗೆವಾರ ವುಂಟೆಂದಟ್ಟ ನಿನ್ನವರಿಂದವೆನ್ನಂ ಕಟ್ಟಿ ಕುಟ್ಟಿಪುದರಸ ಧರ್ಮವೆ (ಬಸವು. ೨೭–೫೨). **ಬಿಡಾರ**: ೧. ಮರ್ತ್ಯಲೋಕವನೆ ಮಹಾಪ್ರಮಥಬಿಡಾರವ ಮಾಡಿದಾತ ನಮ್ಮ ಬಸವಯ್ಯನು (ಶೀಲಪ. ೨೭–೧); ಕಂಚುಗಾಜಿನ ಬಿಡಾರದಂದದಿ ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ (ಪುರಂದ. ೨–೨೫–೨). ೨. ಸ್ವಾಮಿ ಪುಷ್ಕರಿಣಿಯೊಳ್ ಸ್ನಾನಾದಿ ನಿತ್ಯಕರ್ಮಂಗಳಂ ನೆರವೇರಿಸಿ ಬಿಡಾರಕ್ಕೈದಿ ಶ್ರೀನಿವಾಸನಂ ಸೇವಿಸಲ್ ಪೊರಡಬೇಕೆಂದಿರ್ಪಲ್ಲಿ (ಅಜಾರವಿ. ೦೯–೩೦ ಪ) ; ರಾಜೀವನೂ ಆತನ ಹೆಂಡತಿಯೂ . . . ಬೇರೊಂದು ಪ್ರತ್ಯೇಕ ಬಿಡಾರದಲ್ಲಿರಲಿ (ಹೊಸಊಹ. ೬೯). ೩. ಸಕಲವಸ್ತುಗಳಿಂದಲೂ ಸೇವಕಜನಗಳಿಂದಲೂ ಸಮೃದ್ಧವಾದ ದಿವ್ಯಮಂದಿರವಂ ಬಿಡಾರವಂ ಮಾಡಿ . . . ಅಲ್ಲಿ ಚಾಣಕ್ಯ ಚಂದ್ರಗುಪ್ತರನ್ನಿಳಿಸಿದಂ (ಮುದ್ರಾಮಂ. ೫೩). ೪. ನಿಮ್ಮ ಬಿಡಾರ ಎಲ್ಲಿ ? (ಕುವರು. ೩೦೩). ೫. ನಾರಾಯಣನ ಬಿಡಾರದ ಮುಂದೆ ಹಜಾರ ಹೊಂಗಳಸವೆತ್ತಿದುವು (ಪೋಹಕ. ೩೭–೬೦) ; ಪಾಳೆಯಗಾರರೆಲ್ಲರೂ ತಮ್ಮ ಬಿಡಾರಗಳನ್ನು ಸೇರಿದರು (ದಾಂಡ್. ೩೯೨). ೭. ಎಸೆವೊಸಗೆ ಬಿಟ್ಟಿ ಬಿಡಾರ ಎತ್ತು ಗಾ[ಣ] ಮೊದಲಾಗಿ ಅಉದು ಸಲ್ಲ (ಕಇ. I, ೫೩–೨೮; 1433); ಆಸ್ಥ[ಳ]ಗದಲು ಇದ್ದ ಪೊಕ್ಕಲಿಗೆ ಬಿಟ್ಟಿ ಬಿಡಾರ ಸಲ್ಲದು (ಎಇ. XX, ೯೪–೫೪; 1556). **ಬಿರಾಡ** : ೧. ತನ್ನ ಆಳು–ಕಾಳು ಬಿರಾಡದ ವ್ಯವಸ್ಥೆಯನ್ನೂ ಮಾಡಿಕೊಳ್ಳಲಿ. ಅವನಿಗೆ ವಾಡೆಯಲ್ಲಿ ಇರುವ ಅಧಿಕಾರವಿಲ್ಲ (ದೀಕಹ. II. ೦೦೩). ೭. ಕಾಣಿಕೆ ಖಿಡ್ನಾಯ ಬೇಡಿಗೆ ಬಿರಾಡ ಮುಂತಾದ (ಸೌಇಎ. ೦೯೩೦, ೫೩೯–೦೪: 1446) ; ಬಿರಾಡವ ಸರ್ವ್ವಮಾನ್ಯವಾಗಿ ಬಿಡಿಸಿ ಕೊಡಬೇಕೆಂದು ಬಿಂಸಹ ಮಾಡಲಾಗಿ (ಸೌಇಇ. XX, ೨೩೯–೮; 1547); ಎಡೆಗೆಡೆಗಿರ್ಪುಡಿಸುವ ತೆಜಿಗೆ ಬೇಡಿಗೆ ಬಿರಾಡ ಬಿಟ್ಟಿಗಳಟ್ಟುಳಿಯಿಂ ಪ್ರಜೆಗಳು ಕಿಡಿಪರ್ (ಚಕಪಂ. ೭–೫). **ಬಿರಾಡು** : ೧. ಅವಳಿಗೆ ಅನ್ಯ ಬಿರಾಡಾಗುವವರೆಗೆ ಇದು — ಅಂದರೆ — ಅವಳು ರಾತ್ರಿ ಬಂದು, ಬೆಳಗು ಹರಿಯುವ ತನಕ ಇದ್ದು – ಮತ್ತೆ ನಿಷ್ಕ್ರಮಿಸುವದು ನಿರಾಬಂಧವಾಗಿ ಸಾಗಬಹುದಾಗಿತ್ತು (ದೀಕಹ. II, ೦೪೭). ೭. ಯಿದಕೆ ನೀಉ ಪ್ರಾಕು ಕೊಡುವ ಗುತ್ತಿಗೆ ರೊಕ್ಕ ಬಿಟ್ಟಿ ಬಿರಾಡು (ಎಕ. X, ಮೊಳಬಾ. ೯–೦೦ : 1551). **ಬೀಢಾರ** : ೭. ಬಿಟ್ಟಿ ಬೀಢಾರ ಸೇಸೆ ಮರನ ಬಿಟ್ಟಿ ಜೋಡಿ ಗ್ರಾಸ (ಮ್ಯಾಆ. ೦೯೪೧. ೩೭–೪೪; 1399); ಹಿರಿಯರ ಮನೆಯಿಂದ ಬಂದ ಬಿಟ್ಟಿ ಬೀಢಾರ ಮರದ ಬಿಟ್ಟಿ (ಎಕ. VII, ಶಿಪಮೊ. ೭೦–೨೯; 1431). **ವಿರಾಡ** : ೭. ಅರಮನೆಇಂದ ಖಾಣಧಾನ್ಯ ಯೆತ್ತು ತುಪ್ಪ . . . ಮುಂತಾದ ವೆಚ್ಚ ವಿರಾಡವನು ಕುಳಸರದಿಯಲಿ ತೆಜುವೆಉ (ಸೌಇಇ. IX–ii, ೪೩೩–೫೫: 1408); ಗ್ರಾಮದಿಂ ಭಂಡಾರಕ್ಕೆ ತೆತ್ತು ಬಹ ಸಮಸ್ತ ಕುಳವರಿ ವಿರಾಡ ಕಾಣಿಕೆ ಬೇಡಿಗೆ ಹೊಂನು . . . ಎಲ್ಲವನು ಕುಳವ ಕಡಿದು ಬಿಟು (ಎಕ. III (R), ಗುಂಡ್ಲುಪೇ. ೨೭–೦೭: 1506).

**ಬಿಡಾರದ ಊಳಿಗ** = (ರಾಜರು ಅಥವಾ ಅಧಿಕಾರಿಗಳು) ಬೀಡು ಬಿಟ್ಟಾಗ ಮಾಡುವ ಸೇವೆ : ಅರಮನೆಯಲ್ಲಿ ಸಮುಖದೊಳು ನಿತ್ಯ ಕಟ್ಟಳೆಯಲ್ಲಿ ನಡೆಯುವ ಊಳಿಗಗಳು . . . ಹಾವುಗೆಯ ಊಳಿಗ, ಬಿಡಾರದ ಊಳಿಗ . . . ಚಾವಡಿಯ ಕಾವಲ ಊಳಿಗ (ಮಹಾಪಂ. I, ೪೩).

[ದೇ.॥ ತಮಿ. ಮಲ. ವೀಟಾರಮ್; ತುಳು. ಬುಡಾರ; ತೆಲು. ಬಿಡಾರ, ಬಿಡಾರು./ಮರಾ. ಬಿಡಾರ್, ಬಿಢಾರ್]

**ಬೀಡಿ** (ನಾ). ಹೊಗೆಸೊಪ್ಪನ್ನು ಹದಮಾಡಿ ಎಲೆಯಲ್ಲಿ ಸಂತ್ತಿ ಮಾಡಿದ ಒಂದು ಬಗೆಯ ಸೇದುವ ಬತ್ತಿ ; ಚುಟ್ಟ ; ಹೊಗೆಬತ್ತಿ : ಇಷ್ಟು ಸಣ್ಣಪ್ರಾಯದಲ್ಲೇ ಬೀಡಿ ಸೇದುತ್ತಾನೆ (ಹ್ಯಾಗಮ ೦೯೧); ಕೊಡೆಯ ಮರೆಯಲ್ಲಿ ಬೀಡಿ ಹೊತ್ತಿಸಲು ಅನುವಾಗುತ್ತಿತ್ತು (ಮಲೆಮ. ೫೪೩).

**ಬೀಡಿಎಲೆಮರ** = ಬೀಡಿ ಕಟ್ಟಲು ಬಳಸುವ ಎಲೆಗಳನ್ನು ಬಿಡುವ ಒಂದು ಬಗೆಯ ಮರ : ಕಂಬಳಿಕರೀಮರ, ಬೀಡಿಎಲೆಮರ, ತೂಪ್ರ, ತೂಬರೆ (ವೃಶಿಗ. ೩೦–೭೦೪). [←ಹಿಂ. ಬೀಡೀ]

**ಬೀಡಿಕೆ**, ಬೀಡಿಗೆ (ನಾ). ೧. ನಿವಾಸ ; ವಾಸಸ್ಥಾನ : ಹಂದರಹಾಳು ಕಿತ್ತನಕೆಜ಼ ಬೀಡಿಕೆಯಾಗಿ ಸುಖಸುಖಥಾವಿನೋದದಿ ನಡೆಯುತ್ತಮಿರೆ (ವೃಆಂ. ೦೯೩೮, ೨–೨೯ ; 1132) ; ಸತ್ಯದೆಳ್ತರಕೆ ನಿವಾಸವಾದ ಶಿವಭಕ್ತಿಗೆ ಬೀಡಿಕೆಯಾದ . . . ಪಂಪೆಯನೇಂ ಪೊಗಳಲ್ಕೆ ಬಕರ್ಮೋ (ಹರಿಚಾ. ೪೧) ; ದಾನವರ ವನವದು ಮೃತ್ಯುವಿನ ಬೀಡಿಕೆ ಮಹಾಹಿಯ ಹುತ್ತ (ಹಭಾಗ. ೦೦–೦೫–೨೩). ೨. ಅತಿಥಿಗಳು ಇಳಿದುಕೊಳುವುದಕ್ಕಾಗಿ ವ್ಯವಸ್ಥೆ ಮಾಡಿರುವ ಭವನ ; ಅತಿಥಿಗೃಹ : ಆತನತಿ ಪ್ರೀತಿಯಂ ಮಾಡಿ ತನ್ನರಮನೆಯ ಸಮೀಪದೊಳ್ ಬೀಡಿಕೆಯಂ ಕುಡೆ ಕುಮಾರನಲ್ಲಿರುತ್ತಂ (ಕುಶಾಸ್ತ್ರ. ೩–೪೩ ವ) ; ಪ್ರಧಾನಿಗಳಿಂದ ಬೀಳ್ಕೊಂಡು ಶ್ರೀನಿವಾಸನಾಯಕ ತನ್ನ ಬೀಡಿಕೆಯ ಕಡೆ ನಡೆದ (ಹೇಮುಕೂ. ೦೭). ೩. (ಪರಸ್ಥಳದವರು ಇಳಿದುಕೊಳ್ಳುವ) ವಸತಿ ; ಬಿಡದಿ ; ಬಿಡಾರ :

ಮುನಿಗೆ ಬೀಡಿಕೆಯಾಯ್ತು . . . ವರವೈದೇಹನಗರವಲಿ (ತೊರಲಾ. ೦-೦೨-೨೬) ; ನಂದಾದಿಗಳು . . . ವನದೊಳಗೆ ಬಿಟ್ಟರು ವಿಸ್ತರದ ಬೀಡಿಕೆಯು (ಶಿಭಾಗ. ೦೦-೩೬-೦೯) ; ದೇಶದೇಶದಿಂದ ಬಂದಾರೆ ದೊಂಬಾರು ಬಿಟ್ಟಾರೆ ಬೀಡಿಕೆಯ (ಜಾನಪ. ೯೬). ೪. ಶಿಬಿರ ; ಪಾಳೆಯ ; ಠಾಣ್ಯ : "ನಿವೇಶಃ, ಶಿಬಿರಂ– ಈ ೨ ಬೀಡಿಕೆ" (ಹಲಾಯು. ೬೯-೨೯೬) ; ಬಾಡಿದುತ್ಸಾಹದ ವಿಶಾಳದ ಬೀಡಿಕೆಯು ಬೇಳುವೆಗೆ ಬೆಬ್ಬಳಿವೋದನಾ ಪಾರ್ಥ (ಕುಪ್ಪಾ.ಕ. ೦೯-೦೦) ; ಎತ್ತಿದುದು ಯಾದವರ ಬೀಡಿಕೆ ಮೊತ್ತದಲಿ ಹೂಡಿದವು ಭಂಡಿಗೆ (ಶಿಭಾಗ. ೦೦-೭೬-೯೦). ೫. ನೆಲಸುವುದು ; ವಾಸ್ತವ್ಯ ; ಮೊಕ್ಕಾಮು : ಕೂಡ ನೆಟ್ಟ ಚತುರಂಗಬಲದಲಿ ಬೀಡಿಕೆಯ ಕೈಕೊಳ್ಳದಲ್ಲಿಗೆ ಮೂಢ ಬಂದನು ಕೇಡ ಕರೆಯಲು ತನಗೆ ಬೇಗದಲಿ (ಸಂಭಕ. ೨೬-೦೦) ; ಆ ನದಿಯ ಕಂಡಭಾವನೌಘಕ್ಕಶಾನು ಪರಿತೋಷದಲಿ ನವುಗೀ ಸ್ಥಾನವೇ ಸಾಕೆಂದು ನಿಶ್ಚಯಿಸಿದನು ಬೀಡಿಕೆಯು (ತೊರಲಾ. ೩-೦-೯೬) ; ರೂಢಿಯೊಡೆಯನು ತನಗೆ ಹಳ್ಳಿಯ ಗೌಡನಲಿ ಬೀಡಿಕೆಗೆ ನೆಲನನು ಬೇಡಿಕೊಂಬಂತಾಯ್ತು (ಶಿಭಾಗ. ೮-೦೯-೦೬). **ಬೀಡಿಗೆ :** ೨. ಬಿರ್ದಿನರು ನಮಗವರಾರಯಲ್ಕೆ ಬಿಡಿಸುವೆನು ಬಾಣಾವಳಿಯು ಬಿಸಿಯಡಿಗೆಗಳನಂತಕನ ಪುರದಲಿ ಕೊಡಿಸುವೆನು ಬೀಡಿಗೆಯು (ಹೂಡವಾ. ೩೬). [ಬೀಡು₂ + — ಇಕೆ]

**ಬೀಡಿಕೆಗೊಳ್ಳು** (ಕ್ರಿ). ತಂಗು ; ಬಿಡಾರ ಮಾಡು : ನಮ್ಮ ಗುಪ್ತ ಚಾರರು ಅಲ್ಲಿ ಆ ಗಡುವಿನ ಪರ್ಯನ್ತ ಬೀಡಿಕೆಗೊಂಡಿರುವರು (ಚಿಟ್ಟಿಕ. ೦೯೩-೦೨). [ಬೀಡಿಕೆ + ಕೊಳ್ಳು₁ (<ಕೊಳ್₁)]

**ಬೀಡಿಗೆ** ' ಬೀಡಿಕೆ ' ನೋ.

**ಬೀಡಿಳಿ** (ಕ್ರಿ).=ಬೀಡಿಕೆಗೊಳ್ಳು : ಆ ರಣಧೂಳಿಖಾನ . . . ಬಲುವಾದ್ಯರವಕೆ ಒಡೆಯಲು ಬ್ರಹ್ಮಾಂಡ ಚೆನ್ನಪಟ್ಟಣದ ಮುಂಗಡೆ ಬೀಡಿಳಿದನೇ ವೇಳ್ವೆ (ಕಂಪಖ. ೦೨-೬). [ಬೀಡು₂ + ಇಳಿ₁ (<ಇೞಿ)]

**ಬೀಡು₁** ' ಬೀಟೆ₁ ' ನೋ.

**ಬೀಡು₂, ಬೀಡ್ತೆ, ಬೀಳ್₂, ಬೀಳು₃, ಬೀಟ್₂. ವೀಡು** (ನಾ). ೧. ಆವಾಸ ; ನೆಲೆ : ಬಳವೆತ್ತ ಮದನನರಮನೆ ವಸಂತನ ಬೀಡು . . . ಎನಿಪ್ಪ ಕೇಳೀವನಕ್ಕೆಯ್ತಂದನು (ಹಕಲಾ. ೩-೨೬); ರೋಷಗ ಬೀಡು ಭೀಮನ ಕಂಡು ಧರ್ಮಜ ಬೇಡಿಕೊಂಡನು ತನ್ನ ಕೊರಳಿನ ಬೆರಳ ಸನ್ನೆಯಲಿ (ಕುಪ್ಪಾ.ಸ. ೦೩-೦೩). ೨. ನಿವಾಸ ; ಮನೆ ; ಗೃಹ : "ಮನೆಯೊಳಂ ಬಿಡುವ ಭಾವದೊಳು ಬೀಡಕ್ಕು" (ಕಮ್ಮುಮಂ. ೯೩); ದುರ್ಯೋಧನನಂ ಬೀಡಿಂಗೆ ಪೋಗಲ್ವೇಟ್ಟು (ಶಂಶಖಾ. ೨-೯೨ ವ); ತಾಂಬೂಲಾದಿ ದಾನಸನ್ಮಾನಪುರಸ್ಸರಮವರ ಪೂರ್ವವೃತ್ತಿಯುಮಂ ಕಮ್ಮವಟ್ಟಿಯುಮನಿತ್ತು ಬೀಡಿಂಗೆವೋಗಿಮಂಬುದುಂ (ಸುಕುಮಾ. ೨-೦೩ ವ). ೩. ತಂಗುದಾಣ; ಬಿಡದಿ; ಬಿಡಾರ; ಅಪರಾಜಿತಂ ಯಥೋಕ್ತಪ್ರತಿಪತ್ತಿಯಿಂ ದೂತನಂ ಬೀಡಿಂಗೆ ಪೋಗಲ್ವೇಟ್ಟುಂ (ಶಾಂತಿಪು. ೨-೨೨ ವ). ೪. ವಾಸ್ತವ್ಯ ; ಠಿಕಾಣೆ ; ಮೊಕ್ಕಾಮು : ಬೀಡನೆಲ್ಲಿ ಬಿಡುವವೆನೆ ನಿಮ್ಮಯ್ಯಂ ಧೃತರಾಷ್ಟ್ರನ ಬೆಸದಲ್ ಮುನ್ನಮೆ ಮಾಡಮಂ ಸಮೆದಿಟ್ಟನಲ್ಲಿಗೆ ಬಿಜಯಂಗೆಯ್ಯಿಮೆನೆ (ಶಂಶಖಾ. ೩-೨ ವ). ೫. ಸೈನ್ಯದ ಶಿಬಿರ,_ ಪಾಳೆಯ : ಎರಡುಂ ಪಡೆಯ ನಾಯಕರಪಹಾರತೂರ್ಯಂಗಳಂ ಬಾಜಿಸಿ ತಮ್ಮ ತಮ್ಮ ಬೀಡುಗಳ್ಗೆ ಪೋದರ್ (ಶಂಶಖಾ. ೦೦-೦೨೪ ವ); ನಿನ್ನ ಮುಳಿಸಿನ ಬೆಂಕೆಯಿಂ ಪೊತ್ತಿ ಪೊಗದುರಿವ ಪಗೆವರ ಬೀಡಿನಂತೆ ಸುತ್ತಲುಂ ಪೂತ ಮುಳ್ಮುಟ್ಟುಗದ ಮರಂಗಳೊಳಂ . . . ಬಿನದಕ್ಕೆ ಪಕ್ಕಾದ ಬನಮುಂ ನೋಡಲ್ವೇಟ್ಟುದು (ಕಬ್ಬಿಗಾ. ೯೯) ; ಗುಡಿಗಳನು ಬಿಡಿಸಿದರು ಲೋಹದ ತಡಿಕೆಗಳನಳವಡಿಸಿ ಬೀಡಿನ ನಡುವೆ ರಚಿಸಿದರವನಿಪಾಲನ ರಾಜಮಂದಿರವ (ಕುಪ್ಪಾ.ಶೀ. ೧-೩೦). ೬. ಸ್ಥಳ ; ಜಾಗ; ಭೂಮಿ : ನಡೆವ ಬೀಡಿನೊಳೊಂದೊಟ್ಟೆ ಪೊಲಂಬುಗೆಟ್ಟು ಬಂದಾಡುತ್ತಿರ್ದುದನತಿದೂರದೊಳ್ ಕಂಡು (ಶಂಕಕಂ. ೦೯೦-೬); ಗಾಡಿಗನ ನಿರಲೀಸಲಾಗದು ಬೇಡಬೇಡಾವಂದದಿಂದೀ ಬೀಡಿನಲಿ ಹೊಣವಡಿಸಿಯತ್ತಲಿ ತಗುಳುವುದು ಮತವು (ಐಸಕು. ೯೩-೩೨); ಮಲೆಯ ಬೀಡಿನೆದೆಯ ಮೇಲೆ ದಟ್ಟಗಾಡು ಹಬ್ಬಿರೆ (ಅಶೀಕ. ೯೨-೫). ೭. ಸೀಮೆ; ರಾಜ್ಯ ; ಪ್ರಾಂತ್ಯ : ಮಾಗಟಿನಾಡ ರಾಜವೊಟಲ ಬೀಡಿನೊಳ್ ಸುಖಸಂಕಥಾವಿನೋದದೊಳ್ ಪ್ರಿಥುವೀರಾಜ್ಯಂಗೆಯುತ್ತುಮಿರೆ (ಎಕ. V. ಚಾಗಮಂ. ೫೦-೭; 972); ಅಸುರ ವಿಭಾಡ ನಸುನಗುತುಗ್ರವೈಷ್ಣವಬಾಣವನು ಬೆಸಸೆ . . . ಅಮರರ ಬೀಡಿಗಭಯವ ಕೊಡುತಲಡಗಿಸಿತಾ ಶಿರತ್ರಯವ (ತೊರಲಾ. ೩-೬-೨೩) ; ನಡೆದುದು ನಾಡು ಬೀಡು ಗುಡಿ ಗೋಪುರಗಳ್ ಪುಡಿಯೇಟ (ಜಕಎ. ೨-೦೦೩). ೮. ಸೈನ್ಯ ; ಪಡೆ : ಮಹಾಸಾಮಂತರ ಪದಿರ [ಪ]ಡಿ ಗಳಿಂದಮುಗುರ್ವಾಗೆ ನಡೆವ ಬೀಡಿಂಗೆ ಬೀಡುವಿಡಲ್ ನೆಲನುಂ . . . ಆನೆ ಗಂಬಕ್ಕೆ ಪೆರ್ಮರಂಗಳುಮಾ ಪಡೆಗೆ ನೆಱೆಯವೆನಿಸಿ (ಶಂಶಖಾ. ೯-೦೦೯ ವ); ದಾಂಟಿದುದು ಕೃಷ್ಣನ ಬೀಡು ಕಳಿಂದಕನ್ಯೆಯಂ (ಜಗಪಿ. ೦೬-೭೦); ಬೀಡು ನಡೆಯಲಿ ಮುಂದೆ ಮತ್ಸ್ಯನ ನಾಡಿನೊಳು (ಕುಪ್ಪಾ.ವಿ. ೯-೨೪). ೯. ಒಕ್ಕಲು : ಮೂವತ್ತಾರು ಬೀಡುಗಳುಂ ಸೆಟ್ಟಿಯರುಂ ಸೆಟ್ಟಿಗುತ್ತರುಂ (ಹುಂಬಾಬಾ. IX, ೨೯೬). ೧೦. ಪರಿವಾರ ; ಪರಿಜನ : ಬೀಡಂ ಪೆಱಗೆ ಬಪ್ಪಂತು ನಿಯಮಿಸಿ ಪಯಣದಿಂ ಬಂದು (ಕಾವುಂಕು. ೨೯) : ಪಡೆವಳನಂ ಬರಿಸಿ ಬೀಡೆಲ್ಲಮುರ್ಚನಾದ್ರವ್ಯಂಬೆರಸು ಪೊಱಮಡುವಂತೆ ಸಾರೆಂದು ನಿಯಮಿಸಿ (ಧರ್ಮಾಮೃ. ೦-೬೨) ; ಬೀಡು ಕಾಣಕೆಯಿತ್ತು ಕಂಡುದು ನಾಡೆ ಕಾಣಿಸಿದನು ಪುರೋಚನ (ಕುಪ್ಪಾ.ಆ. ೮-೮೯). ೧೧. ಮರ. ಗಿಡ. ಪೈರು ಮುಂತಾದುವುಗಳು ಒಂದು ಸಲಕ್ಕೆ ಬಿಡುವ ಫಲ, ಫಸಲು ಮುಂತಾದುವು : ಹಣ್ಣು–ಹಂಪಲು, ಕಾಯಿ–ಕಸರು ಮೊದಲಾದುವುಗಳ ಮೊದಲನೆಯ ಬೀಡನ್ನು ಮಠಕ್ಕೆ ಮೀಸಲೆಂದು ನೀಡುತ್ತಾನೆ (ಕನ್ನತಾ. ೬). ೧೨. (ಹಿಂದೆ ಮನೆಯ ಮೇಲೆ ಹಾಕುತ್ತಿದ್ದ) ಒಂದು ಬಗೆಯ ತೆರಿಗೆ: ಸೆಟ್ಟಿಯರ್ಗಂ ಪನ್ನಸಿಗರ್ಗ್ಗಂ ಗಾವುಣ್ಡಗಳ್ಗಂ ಬಿಟ್ಟಿಕೊಟ್ಟಂ ಬೀಡು ಬೆಸಂ ಪೊಱಗು (ಸೌಇಇ. IX–೧, ೭೭–೨೬; 992); ವೀರಭದ್ರದುರ್ಗ್ಗದ ಅಕ್ಕವಣೆಗೆ ತೆಱುವ ಬೀಡು ದೇವಸ್ಥಾನದ ಆರೆವಾಸಿ ಊಳಿಗಮಾನ್ಯ (ಎಕ. III, ಶ್ರೀರಂಗ. ೦೦೦-೦೬೯; 1724). ೧೩. ತೆರೆಯುವುದು; ಬಿಡುವುದು : 'ಕಣ್ಬೀಡು'. 'ಕಿಸುಗಣ್ಬೀಡು' ಪರಾ. ೧೪. (ಬಾಣದ) ಎಸೆತ; ಪ್ರಯೋಗ : ಮಾಸಾಳ್ಗಳಂತೆ ಬೀಡೆನುತ್ತುಂ ಹರಕಾಱರಂತೆ ಕಾಸೆನುತ್ತುಂ (ಧರ್ಮಾಮೃ. ೨-೭೦). 'ಅಂಬುವೀಡು' ಪರಾ. **ಬೀಡ್ತೆ :** ೪. ತತ್ಪುರದ ಭವಿಕತರ ಮಾದ ಮಠದಲ್ಲಿ ಬೀಡೆಯ ಬಿಡಿಸಿ ಸಾಂಗಮನೆ ಸತ್ಕರಿಸುತಂ (ಮಹಾಪು. ೨೭-೯೨). **ಬೀಳ್₂ :** ೨. 'ಬೀಳ್ಕೊಳ್' ಪರಾ. **ಬೀಳು₃ :** ೨. 'ಬೀಳುಕೊಳ್' ಪರಾ. **ಬೀಟ್₂ :** ೨. 'ಬೀಟ್ಕೊಳ್' ಪರಾ. ೬. 'ಬಿತ್ತುಬೀಟು' ಪರಾ. **ವೀಡು :** ೨. ರಾಜಪುರುಷರ್ಮ್ಮನೆಗಳೊಳ್ ವೀಡಿಲ್ಲಾದದು ರಾಜದತ್ತಂ ರಾಜಶ್ರಾವಿತಂ ಸಪ್ತಮೆ ಮರ್ಯ್ಯಾದೆ ತಾಂಬ್ರಶಾಸನಂ ಭುಕ್ತಾನುಭೋಗಂ (ಎಇ. XIV, ೦೯೦-೬; 725); ವೀಡಿಲ್ಲಾದದು ಕೂಟಿಲ್ಲಾದದು ತೆಱೆಯುಂ (ಎಇ. XIV, ೦೯೦-೩೦; 725). ೭. ಮಂಡಳಿಸಾಸಿರದೊಳಗಣಕೆಡೆಹಳ್ಳಿಯ ವೀಡಿನೊಳ್ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರಲ್ (ಎಕ. VII, ಶಿಮೊ. ೯೭-೦೬; 1113); × × × ಹಳ್ಳಿಯ ವೀಡಿನಲು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಿರೆ (ಎಕ. VII, ಶಿಮೊ. ೩೯-೩೬; 1122).

**ಬೀಡುವೀಡು, ಬೀಡುಬೀಡು** (ದ್ವಿರುಕ್ತಿ) : ನಾಳೆ ಕಾಳೆಗಮೆಂದು ಪಡೆವಳರ್ ಪೋಗಿ ಸಾಱಿಮೆಂಬುದುಮವರ್ ಬೀಡುವೀಡುಗಳ್ಗೆಲ್ಲಂ ಸಾಱಿದಾಗಳ್ (ಶಂಶಖಾ. ೦೦-೩೯ ವ) ; ಬೀಡುಬೀಡೊಳಗೆಲ್ಲಮಾ ಸಂಭ್ರಮಂ ಕೂಡೆ (ಶಂಶರ. ೫-೦೦). **ಬೀಡಂ ಬಿಡಿಸು, ಬೀಡ ಬಿಡಿಸು**=೧. ಬಿಡಾರ

ಹೂಡುವಂತೆ ಮಾಡು : ತಂಗುವಂತೆ ಮಾಡು : ಕಡುಪಗಲಾದುದು ಬೀಡಂ ಬಿಡಿಸುವುದೀ ಪುಣ್ಯನದಿಯ ತಡಿಯೊಳ್ ದೇವರ್ (ಅಂಪು. ೧೧-೬೬): ಮಧುಸೂದನಂ ಮಧ್ಯಮಾರ್ಗದೊಳೊಂದು ಕೊಳಸಿರಲ್ಕಲ್ಲಿ ಬೀಡಂ ಬಿಡಿಸಿ ನಸುನಗುತೆ ರುಕ್ಮಿಣಿಯೊಳಿಂತೆಂದನು (ಕೃ.ಶಿಂಶಾ. ೭-೮). ೨. (ದಂಡಿನ) ಠಾಣ್ಯವನ್ನು ಹೂಡು ; ಪಾಳೆಯ ಹೂಡು : ಶರಧಿಯ ಗಾಡಿಕೆಯು ಕಳೆದೆಂತು ಮುಂದಕೆ ಬೀಡ ಬಿಡಿಸುವೆಮೆಂತು ಲಂಕಾಪುರವನೀಕ್ಷಿಪೆವು (ಅಸಂರಾ. ೫-೦-೦೯). ಬೀಡಂ ಬಿಡು, ಬೀಡ ಬಿಡು = ೧. ವಸತಿ ಮಾಡು ; ತಂಗು : ಆರಾಸಂ ಬಟ್ಟೆವೋಪರ್ ಬೀಡಂ ಬಿಟ್ಟಿರ್ದರ್ ನಿಜಿಸು ವರಪ್ಪದಱಿಂದೆ ಚರಿಗೆವುಗುವುದೆಂದೊಡೆ (ಪಜ್ಞಾ.ರಾ. ೯೯-೫) ; ಚತುರ್ವೇದ ಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಂ ಬಿಟ್ಟು ಧರಾಮರವೇಷದೊಳೊಂದುವರುಷಮಿರ್ಪನ್ನೆಗಂ (ಶಂಶಶಾ. ೩-೨೨ ಪ) ; ಬಸದಿಯೊಳಗೆ ಬೀಡ ಬಿಟ್ಟ ನಿಮಿತ್ತವನ್ಯಾಯಕೋಟಿಯಂ ಮಾಡಿ . . . ಮತ್ತೀಗ ಬೀಡ ಕೋಪವನುಡುಗು ತಂದೆಯೆಂದಡೆ ನಿನ್ನ ಕೋಡ ಕೊಱಿಯದೆ ಬಱಿದೆ ಬಿಟ್ಟಪೆನೆ (ಹಕಶಾ. ೬-೨೦). ೨. (ದಂಡಿನ) ಠಾಣ್ಯವನ್ನು ಹೂಡು; (ಸೈನ್ಯದ) ಶಿಬಿರವನ್ನು ಹಾಕು : ದುರ್ಯೋಧನಂ . . . ಕುರುಕ್ಷೇತ್ರದ ಪೂರ್ವದಿಗ್ಭಾಗದೊಳ್ ಪ್ರಳಯಂ ಮೂರಿವಿಟ್ಟಂತೆ ಬೀಡಂ ಬಿಟ್ಟು (ಶಂಶಶಾ. ೦೦-೪೦ ಪ); ಇರುಳೆಲ್ಲಂ ಬಂದು ಬೀಡಂ ಬಿಡುವ ಕಟಕಮಂ ಕಂಡನಾಗಳ್ ನರೇಂದ್ರಂ (ಕಾದಂಉ. ೪೩೨); ಹಿಂಗದೆ ತಳತಂತ್ರಸಹಿತ್ಯದಿ ನೆಱಿ ಶಿವಗಂಗೆಯೊಳಗೆ ಬೀಡ ಬಿಟ್ಟ (ಕಂಶಪ. ೦೦-೩೭). ಬೀಡನೆತ್ತು = ಬಿಡಾರವನ್ನು ತೆಗೆ : ಮಱುದಿವಸಂ ಬೀಡನೆತ್ತಿ ಕತಿಪಯ ಪಯಣಂಬೋಗಿ (ಧರ್ಮಾಮೃ. ೦-೨೦೬); ತೊಳಪ ಜಿನಚೈತ್ಯಾಲಯಂಗಳ ನಳವಿಗಳದತಿಭಕ್ತಿಯಲಿ ತಾನೊಲಿದು ಪೂಜಿಸಿ ಬೀಡನೆತ್ತಿದನು (ಸಾಳ್ವಶಾ. ೦೯-೨೦). ಬೀಡಿನ ಮನೆ = ಅತಿಥಿಗಳು ಇಳಿದುಕೊಳ್ಳುವ ಸ್ಥಳ ; ವಸತಿ; ಬಿಡಾರ : ನಿನಗೆ ಸಾಕಿನ್ನೇಕೆ ಬೀಡಿನ ಮನೆ ವೃಥಾ ಬೇಱಿೊಂದು ಸಂಕಲ್ಪನೆಯ ಬಿಡು (ಪ್ರಭುಲಿಂ. ೫-೪೦).

[ ದೇ.॥ ತಮಿ. ಮಲ. ವೀಟು; ತುಳು. ಬೀಡು ; ತೆಲು. ವೀಡು ]

**ಬೀಡು$_3$, ಬೀಳ್$_3$, ಬೀಳು$_4$, ಬೀಟಿರ್$_3$** (ನಾ). ೧. ನಿಷ್ಪ್ರಯೋಜಕವಾದುದು ; ನಿರರ್ಥಕವಾದುದು : "ಬೀತುವದೆನೆ ಬೀಕಲೆನೆ ಬೀಡಾದುವಕೆ" (ಕಶಪ. ೬೦). 'ಬೀಡಾಡಿ' ಪರಾ. ೨. ಸಾಗುವಳಿಯಿಲ್ಲದ ಭೂಮಿ ; ಬಂಜರುನೆಲ: 'ಬೀಡು ಪ್ರದೇಶ' ಪರಾ. **ಬೀಳ್$_3$:** ೩. ಅಲ್ಪವಾದುದು; ಕ್ಷುದ್ರವಾದುದು : 'ಬೀಳಾಸೆ' ಪರಾ. ೪. ತಪ್ಪು; ದೋಷ : ಪತ್ರಿಕೆಯೊಳಡಹು ಬರೆದಕ್ಕರದ ಬೀಳಿರ್ದೊಡದಱಿಂದೆ ಕೆಡುವುದಗ್ಗದ ಕಜ್ಜಂ (ಕೃಶಿಂಶಾ. ೪೦-೭೭). **ಬೀಳು$_4$:** ೧. ಹೆಂಗೆಯು ನೋವಿನ ಹುಯಿಲುಗಳೆಲ್ಲಂ ಮಕ್ಕಳ್ ಪುಟ್ಟದೆ ಬರಿ ಬೀಳೆಲ್ಲಂ (ಮೂರುಶಾ. ೦೦೩-೨೦೪); ಕಗ್ಗಂಟಾಗಿ ಪರಿಣಮಿಸಿದರೆ ಅಸಂತೋಷ! ಬಾಳೇ ಬೀಳು (ಕಂದುಬಿ. ೪೫). ೨. ಹುಲುಗಲ ಯಾಯ್ಚಗಾವುಣ್ಡ ಬಿಟ್ಟ ತೋಟ ಸಲಕಾಲ ಬೀಳಾಗಿರಲು (ಸೌತ್ಇ. XI–ii, ೦೫೮-೩೬; 1109); ಗುತ್ತಿಯ ದಾರಿಯ ಬೀಳು ೧೩ ಸಿಂಗಟಿಗೆರೆ ಬೀಳು (ಎಳ. VIII, ಸೊರಬ. ೪೭೫-೨೦; 1577) : ಮನೆಯೆಲ್ಲ ಹಾಳು, ನೆಲವೆಲ್ಲ ಬೀಳು, ಈ ಬಾಳು ಗೋಳು ಗೋಳು (ಚಂದ್ರ ಮಾ.೩-೭). 'ಬೀಳುವಂಡು', 'ಬೀಳಂಭೂಮಿ' ಪರಾ. ೩. ಪೇಳಲಿನ್ನೆನಿತದುರಿಗರಿದರು ಬೀಳ ನುಡಿವದ ಬಿಡದ ಪಕ್ಷವ ತಾಳಿದಳು ಏನಾದಡುಳಿವೆಯ ನಿಮ್ಮ ನೃಪಸುತೆಗೆ (ಜಠಾಪಾ. ೦೭-೬೬) ; ಅರಿಯಾ ಬಗೆಯಂ ಬೀಳಂದಾವುದಂ ಕಾಯದೆಳ್ಚರು ಉಯ್ಯಾತಂ ಕಾಪೊಳಿಲ್ಲಾದನಲೆಪಂ ಕುರುಡಂಬೊಲೆ (ಸೌಶಂಧ. ೦೯-೩೯); ಹಾಳರ್ಧ ಹೊಲೆಯರೆಂದೂ ಬೀಳರ್ಧ ಹೆಣ್ಣು ಎಂದೂ ಹೋಳು ಹೋಳಾಗಿಹುದು (ಗಂ. ೫೨-೭). ೫. ಹೀನಸ್ಥಿತಿ : ಹೆಂಗಸರಾಗಿರುವುದರಿಂದ ನಮಗೆ ಅಗೌರವ, ನಮ್ಮ ಬೀಳು (ಬಿಶಂಧ. II, ೨೦೫). ೬. ಹಾಳು; ಶೂನ್ಯ : 'ಬೀಳುವಳ್ಳಿ' ಪರಾ. **ಬೀಟಿರ್$_3$ :** ೨. ಬೀಟ್ಕಳ್, ಬೀಡುಗಳ್, ಬೀಟ್ಗಳ್ (ಶಬ್ದಾಮ. ೨೩೩ ಪ್ರಯೋ). 'ಬೀಟ್ಕಿಲ' ಪರಾ. ೬. 'ಬೀಟ್ಟಿಡಿಸು' ಪರಾ.

ಬೀಡು ಬೀಳು, ಬೀಳು ಬೀಳು = (ನೆಲವು) ಹಾಳಂ ಬೀಳು : ಬಂಜರಾಗು : (೩) ; ಹೀಗೆ ಹೊಲಗಳಲ್ಲಿ ಕರಿಕೆಯನ್ನು ಬೆಳೆಯಿಸಿಕೊಂಡು ನಿಂತರೆ ಕೆಲವು ದಿನಗಳಲ್ಲಿ ಅವು ಬೀಳು ಬೀಳುವಂತಾದೀತು! (ಮಾತೃ.ಮ. ೪೦): ಐದು ವರ್ಷಗಳೊಳಗೆ ೧೫ ಚದರ ಮೈಲಿ ವಿಸ್ತೀರ್ಣ ಬೆಂಗಾಡಾಗಿ ಬೀಳು ಬಿದ್ದಿತು (ಹಸುಹೊ. ೨೨). ಬೀಳ ಮಾತು = ಅಲ್ಪವಾದ ಮಾತು : ಬೀಳ ಮಾತಿಗೆ ಬೆದರಿ ನಿಲುವರೆ (ಉದ್ಯೋಗಶ್ರ. ೦-೫-೭).

[ದೇ.॥ ತಮಿ. ವೀಟು; ತೆಲು. ಬೀಡು, ಬೀರು]

**ಬೀಡು$_4$** (ನಾ). ಎರಕ ಹೊಯ್ದ ಕಬ್ಬಿಣ ; ತಾಂಡವಾಳ : ಈ ರೀತಿಯಿಂದ ಬೀಡು ಅಂದರೆ ಹೊಯಿದ ಕಬ್ಬಿಣವು ಹುಟ್ಟುವದು (ಮುಂಬಯಿ. ೬-೦೯); ಈ ಕೊಳವೆಗಳನ್ನು ಬೀಡಂಬ ಹೊಯ್ದ ಕಬ್ಬಿಣದಿಂದ ಮಾಡಿರುವ ಕಾರಣ (ಮುಂಬಯಿ. ೬-೩೫೫).

[←ಮರಾ. ಬೀಡ್ ; ತುಳು. ಬೀಡು. ಬೀಡ್ ; ತೆಲು. ಬೀಡು]

**ಬೀಡುಂದಾಣ, ಬೀಡುದಾಣ, ಬೀಟುಂದಾಣ, ಬೀಟ್ದಾಣ** (ನಾ). ೧. ಬಿಡಾರ ಮಾಡುವ ಸ್ಥಳ ; ವಿಶ್ರಾಂತಿ ಪಡೆಯುವ ಸ್ಥಳ ; ತಂಗುದಾಣ : ನಾಡೊಳ್ ನಗರಗ್ರಾಮಂಖೇಡಂಖರ್ವಡಮಡಂಬ ಪತ್ತನಮೆಂಬೀ ಬೀಡುಂದಾಣದೊಳೆಲ್ಲಿಯು ನೋಡುತ್ತುಂ (ಅಸಂಪು. ೦೦-೫೮); ತನಗೆ ಬೀಡುಂದಾಣವಾದ ಮಾಡದ ಪೆಱಗಣ ನಂದನವನದ ಮಾಕಂದಭೂರುಹದ ಮಂದಚ್ಛಾಯೆಯೊಳ್ (ಅನಂಪು. ೦೦-೨೯ ಪ) **ಬೀಡುದಾಣ :** ೧. ಬೀಡುದಾಣಂಗಳೊಳಿಕ್ಕಿದ ಬಳ್ಳಿಗಾವಣಂಗಳೊಳಂ ನನೆಯ ಜೊಂಪಂಗಳೊಳಂ ವಿಶ್ರಮಿಸುತ್ತುಂ ಬಂದು (ಶಂಶಶಾ. ೨-೯೭ ಪ); ರಾಜಮಂದಿರಮಂ ಪೊಕ್ಕು ಸಕಲರಾಜಲೋಕಮಂ ಬೀಡುದಾಣಂಗಳ್ಗೆ ಪೋಗಲ್ವೇಳ್ದು (ಕಾದಂಪ. ೪೩೪) ; ಮಯ ರಚಿಸಿದ ಬೀಡುದಾಣದ ಕೆಲದೊಳಾನೆಯ ನಿಲಿಸಿದನವನೀಶ (ಭರತ. ೨೨-೬೩). ೨. ನಿವಾಸ ; ನೆಲೆ : ವಿವೇಕದ ಬೀಡುದಾಣವಾರ್ಚ್ಚಿನ ಕಣಿಯೆನ್ದು ಬಣ್ಣಿಪುದು ಭೂವಳಯಂ (ಎಕ. VII, ಶಿಕಾರಿ. ೦೨೪-೨೮; 1077) : ಜಗಮೆಲ್ಲಮನುಡುಗಿ ಸುಡುವ ಕಲ್ಪಾಂತಹುತವಹಂಗಿದಜ ಕಣ್ಬೀಡೆ ಬೀಡುದಾಣವೆಂಬಂತೆ ಕೆಂಪಡರ್ದು ಕೆಂಡಮಂ ಕೇಸುರಿಯನುಗುಚ್ಚ ಕಣ್ಗಳುಂ . . . ಭಯಂಕರಮಪ್ಪಿನಂ ಬಂದು (ಜಗಪ. ೬-೪೦ ಪ). **ಬೀಟುಂದಾಣ :** ೧. ವಿಮಾನಂಬುಟು . . . ಬೀಟುಂದಾಣಂ (ಶಬ್ದಾಮ. ೫೫ ಪ್ರಯೋ). **ಬೀಟ್ದಾಣ :** ೧. ಬೀಡು + ತಾಣಂ, ಬೀಟ್ದಾಣಂ (ಶಬ್ದಾಮ. ೮೨ ಪ್ರಯೋ). [ಬೀಡು$_2$ + ತಾಣ]

**ಬೀಡುಕಬ್ಬಿಣ** (ನಾ). ಎರಕ ಹೊಯ್ದ ಕಬ್ಬಿಣ : ತಾಂಡವಾಳ : ಎರಡನೆಯ ಮಹಾಯುದ್ಧದಿಂದೀಚೆಗೆ ವಿದ್ಯುಚ್ಛಕ್ತಿಯ ಉಪಯೋಗದಿಂದ ಬೀಡುಕಬ್ಬಿಣ ತಯಾರಾಗುತ್ತಿದೆ (ಕವಿಕೋ. III. ೬೭೬).

[ಬೀಡು$_4$ + ಕಬ್ಬಿಣ (<ಕರ್ಬೊಣ್)]

**ಬೀಡುಕಾಱ** (ನಾ). ಪಾಳೆಯದಲ್ಲಿರುವ ಸೈನಿಕ : ಹೊಮ್ಮಾಡಿಗೆಯ ಹೊದಱುಗಳ ಬಿರುದಿನ ಬೀಡು[ಪಾಠಾಂ. ಗಾಡಿ]ಕಾಱರು ಬೀದಿವರಿದಟ್ಟಿದರು ಬಲಿಮುಖರ (ತೊರವೆ. ೬-೩೭-೦೦). [ಬೀಡು$_2$ + —ಕಾಱ]

**ಬೀಡುಕೊಳ್** 'ಬೀಡುಗೊಳ್' ನೋ.

**ಬೀಡುಗಲಹ** (ನಾ). ಬೀಡಿನಲ್ಲಿ ನಡೆಯುವ ಕಲಹ ; ಒಳಜಗಳ : ಬೀಡುಗಲಹದ ಕೈದೊಳಸು ಕೊಂಡೆಸಗಿ ನಟಿಸಿತು ನಾಡುನಾಡಿನಲಿ (ಕುವ್ಯಾಶ. ೬-೨). [ ಬೀಡು$_2$ + ಕಲಹ ]

**ಬೀಡುಗಾಲು** 'ಬೀಟೆಗಾಲ್' ನೋ.

**ಬೀಡುಗೆಯ್** (ಕ್ರಿ). ವಸತಿ ಮಾಡು : ತಂಗು : ತೃಣಜಲಸಮೃದ್ಧ ಮಾದೆಡೆಯೊಳ್ ಬೀಡುಗೆಯ್ದು (ಕಾದಂಃಉ. ೫೦೦). [ಬೀಡು$_2$ + ಕೆಯ್$_1$]

**ಬೀಡುಗೊಳ್**, ಬೀಡುಕೊಳ್, ಬೀಡುಗೊಳು, ಬೀಳುಕೊಳ್, ಬೀಳುಗೊಳ್, ಬೀಳ್ಕೊಳ್, ಬೀಳ್ಕೊಳು, ಬೀಳ್ಕೊಳ್ಳು, ಬೀಟ್ಕೊಳ್ (ಕ್ರಿ). ೧. ವಸತಿ ಹೂಡು ; ಬಿಡಾರ ಮಾಡು ; ತಂಗು : ಬಿಡಬೇಡಣ್ಣಲೆ ಬೀಡುಗೊಳ್ವೊಡೆನಸುಂ ಕಣ್ಗಾಣಳೆಮ್ಮತ್ತ ನೋಟ್ಬಡೆ ಮಾವಂ ಶತವೃದ್ಧಂ . . . ಎಂದತಿಜಾತಿಜಾರೆ ನುಡಿದಳ್ ಜಾರಂಗೆ ವಕ್ರೋಕ್ತಿಯಿಂ (ಸೂಕ್ತಿಸು. ೬-೦೩೯). ೨. ಶಿಬಿರವನ್ನು ಹಾಕು ; ಠಾಣ್ಯ ಹೂಡು : ಬೀಡುಗೊಂಡಿರ್ದ ಕತ್ತಲೆಯು ಪಾಳೆಯಮೆತ್ತ ಲೋಡಿದುದೊ ನೋಡಿದಪೆನು (ಕೈಬಿಭಾ. ೨-೬೫). **ಬೀಡುಕೊಳ್** : ೩. (ಮನೆಯಿಂದ) ಹೊರಡಲು ನಿರೂಪವನ್ನು ತೆಗೆದುಕೊಳ್ಳು ; ಮುಂದೆ ಸಾಗಲು ಅಪ್ಪಣೆ ತೆಗೆದುಕೊಳ್ಳು : "ಬೀಡುಕೊಂಡಂ _ಬೀಟ್ಕೊಂಡಂ" (ಕವಿರ. ೦೯ ಕ್ರಯೋ). ೪. ಹೋಗಲು ಅನುವು ಮಾಡು; ಕಳಿಸಿ ಕೊಡು : "ಬಿಡುಗೆ ಬೀಡುಕೊಳ್ಳೆಂಬುದದು ಬೀಟ್ಕೊಳ್ಳೆ ನಿಕ್ಕುಂ" (ಸಂಜೀವ. ೨೩). **ಬೀಡುಗೊಳು** : ೧. ನಾನಾನಾಡುಗಳಿಂದೆ ಬಿಜ್ಜವಳರುಂ ಕೈಗೆಯ್ತುದೊಳ್ಜಾಣರುಂ ತೇನಂತೇನವೆ ಬಂದು ಬೀಡುಗೊಳುತಂ ಮೈಸೂರಿನಲ್ಲಿರ್ಪುಗೊಂಡು (ಮೈಸೂವ. ೦-೩೯). **ಬೀಳುಕೊಳ್** : ೩. ನೃಪತಿಯು ಬೀಳುಕೊಂಡಿನನಂದನನು . . . ಕುರುಭೂಮಿಗೈತಂದ (ಕುವ್ಯಾದ್ರೋ. ೦-೦೯) ; ಬೀಳುಕೊಂಡನು ಮುನಿ ಬಳಿಕ ಭೂಪಾಲಕನ ಹರುಷದಲಿ ತನ್ನೃಪಬಾಲಕರು ಸಹಿತ (ತೊರರಾ. ೧-೯-೪೩). ೪. ಲಕ್ಷ್ಮೀಪತಿಯು ಕಮಲಜ ಬೀಳುಕೊಂಡನು (ಸಂಭಕ. ೬-೫೦); ಭೂಪಾಲನನು ತಿಳುಹಿದ ದ್ವಿಜೋತ್ತಮ ಬೀಳುಕೊಂಡನು (ಬಿಭಾಗ. ೦೧-೦೬-೫೦). ೫. ಬಿಟ್ಟು ಹೊರಡು : ಶಾಲಿಹೋತ್ರಾಶ್ರಮವನನಿಬರು ಬೀಳುಕೊಂಡರು ಮತ್ತೆ ಕಂಡರು ಬಾದರಾಯಣನ (ಕುವ್ಯಾಆ. ೦೦-೧). ೬. ಇಲ್ಲವಾಗು ; ಕಳೆದು ಹೋಗು : ಕೀಳು ಮೇಲಿನ ಸೀಮೆ ನಿನ್ನಲಿ ಬೀಳುಕೊಂಡುದು (ಕುವ್ಯಾಕ. ೫-೨೩). **ಬೀಳುಗೊಳ್** : ೩. ನಾನೀ ಬಂಧನವ ಬಿಡಿಸಲ್ಕೆ ಬಂದೆನು ಎಂದು ನಾರದ ಬೀಳುಗೊಂಡನು (ಕೌಶಿರಾ. ೦೯-೬೦). ೬. 'ಬೀಳುಗೊಳಿಸು$_1$' ಪರಾ. **ಬೀಳ್ಕೊಳ್** : ೩. ಭಕ್ತವಚನಂಗಳಂ ಕೇಳಿಸೈ ಕಿವಿಗಳ್ಗೆ ಎಂದು ಬೀಳ್ಕೊಂಡು ಬಪ್ಪಂ (ಇಬಿರ. ದೇ. ೦೦೭-೦೦); ಮಲಗಿದ ಮುತ್ತಯನ ಬೀಳ್ಕೊಂಡು ಕೌರವರಿತ್ತ ಸರಿದರು (ಕುವ್ಯಾದ್ರೋ. ೦_೦೦); ಮುಕ್ಕಣ್ಣನರಸಿಯು ಬೀಳ್ಕೊಂಡು ರತಿದೇವಿ . . . ಹೊಕ್ಕಳು ಕುಸುಮಾವತಿಯು (ಮೋಹತ. ೮-೪೯). ೪. ಶಿರವ ತಡಹುತ ದೇವತತಿ ಪುರಹರನ ಬೀಳ್ಕೊಂಡರು (ಕುವ್ಯಾಕ. ೭-೪೬); ಆರೋಗಣೆವೇಳೆಗೆ ಸನ್ನೆಯಾಯ್ತೆಂದು ಆ ರಾಜಸಭೆ ಭೋಂಕನೆದ್ದು ಆ ರಾಯಗೆಬಿಗಿ ಬೀಳ್ಕೊಂಡುದು (ಧರಕ. ೨-೦೦೫); ನೃಪಾಲನಂ ಬೀಳ್ಕೊಂಡು . . . ದುಷ್ಟಬುದ್ಧಿ ಪೊಱಮಡುತಿರ್ದನು (ಜೈಮಿಭಾ. ೨೯-೨೭). ೫. ಈ ನಿಷ್ಪನ್ನತೆಯು ಬೀಳ್ಕೊಂಡ ಪಾಂಡವಗುನ್ನಿಗಳ ಗರುವಾಯ ಮಾಡುವಿರೆಂದು ಖಳ ನುಡಿದ (ಕುವ್ಯಾವಿ. ೪-೦೮) ; ಮಡಿದುದೈ ನಿನ್ನಾನೆ ನಿನ್ನುಗ್ಗಡದ ಭಟ ಬೀಳ್ಕೊಂಡನೈ (ಕುವ್ಯಾಕ. ೦-೩). **ಬೀಳ್ಕೊಳು** : ೩. ಭುವನೋದ್ಧರಣಶೀಲನಾಗಿ ಮೃಡನಿಂ ಬೀಳ್ಕೊಳುತ್ತೆ . . . ಅಲ್ಲಿಂ ತಳರ್ದು (ಪದ್ಮರಾ. ೨-೬೦); ಅನುಜನಾ ಕ್ರಮದಿಂದ ವಂದಿಸಿ ಜನನಿಯನು ಬೀಳ್ಕೊಳೆ (ತೊರರಾ. ೨-೩-೪೭). **ಬೀಳ್ಕೊಳ್ಳು** : ೩. ಹಿಂತಿರುಗುವಾಗ ಖಂಡಿತಾ ಬರುವೆವು ಎಂದು ಹೇಳಿ ಅವರಿಂದ ಬೀಳ್ಕೊಂಡು ನಮ್ಮ ಪ್ರಯಾಣವನ್ನು ಮುಂದುವರಿಸಿದೆವು (ಕ್ರತಾಪ. ೫೦). ೪. ಗಂಗವ್ವನೇ ಇವರನ್ನು ಬೀಳ್ಕೊಳ್ಳುವಾಗ ಒಂದು ಮಾತು ಹೇಳಿದಳು (ಅಕೋಳ. ೨೯). **ಬೀಟ್ಕೊಳ್** : ೩. ಕೇಳೀವನಪಾದಪಂಗಳಿರ ಚಿತ್ತಂಗೊಂಡು ಬೀಟ್ಕೊಂಡು ರಾಗದೆ ನಿಮ್ಮಂ ಬಲಗೊಂಡು ಪೋಪ ಗುಣಮಂ ಕೊಳ್ಳಿಂ (ಆದಿಪು. ೦೦-೦೩೦) ; ಗಂಧರ್ವರಾಜನಂದನೆಯಿಂ ತನ್ನನೆಂತಾನುಂ ಬಿಡಿಸಿ ಬೀಟ್ಕೊಂಡು . . . ಪೊಱಮಟ್ಟು (ಕಾದಂಉ. ೨೫೩) ; ಅತಿಪ್ರೀತಿಯಿಂ ನುಡಿದಿಂದ್ರಂ ಬೀಟ್ಕೊಂಡು ಪೋದಂ (ಜಗದಿ. ೫-೦೯ ವ). ೪. ಸೂರ್ಯಸೂನುವಂ ಸೂರ್ಯದಿನದಂದು ಕಂಡು ಕಾರ್ಯಸಿದ್ಧಿಯಂ ಮಾಡಿ ಬನ್ನಿಮೆಂದು ಕೊಂತಿಯಂ ಬೀಟ್ಕೊಂಡು (ಪಂಪಭಾ. ೯-೬೩ ವ) ; ಅಂತೆಗೆಯ್ವೆನೆಂದು ನಿಜಗುರುಜನಮಂ ಬೀಟ್ಕೊಂಡು ಬೀಡಿಂಗೆ ಪೋಗಲ್ವೇಟ್ಬು (ಗದಾಯು. ೪-೦೩ ವ). [ಬೀಡು$_2$ + ಕೊಳ್$_1$]

**ಬೀಡುಗೊಳು** 'ಬೀಡುಗೊಳ್' ನೋ.

**ಬೀಡುದಾಣ** 'ಬೀಡುಂದಾಣ' ನೋ.

**ಬೀಡುಪ್ರದೇಶ** (ನಾ). ಸಾಗುವಳಿ ಮಾಡದ ಭೂಮಿ ; ಬಂಜರುನೆಲ : ಜಲವಸತಿಯಿರುವ ಕಡೆಗಳಲ್ಲಿನ ಬೀಡುಪ್ರದೇಶವನ್ನು ಸುತ್ತುಮುತ್ತಲೂ ಜಮೀನಿಲ್ಲದೆ ತೊಂದರೆಪಡುತ್ತಿರುವ ಜನರಿಗೆ ಹಂಚಿ ಕೊಟ್ಟು ಅವರಿಂದ ಬೇಕಾದ ತರಕಾರಿಬೆಳೆ ಮಾಡಿಸಲಾಗುತ್ತದೆ (ತರಬ. ೬೬).

[ಬೀಡು$_3$ + ಪ್ರದೇಶ]

**ಬೀಡುಬಿಡು$_1$**, ಬೀಡೆವಿಡು (ಕ್ರಿ). ಬಿರುಕು ಬಿಡು : ಸೀಳಿಹೋಗು : ಔಡುಗಚ್ಚಿದನಂಘ್ರಿಯಲಿ ನೆಲ ಬೀಡುಬಿಡಲೊದೆದನು (ಕುವ್ಯಾಅ. ೦೮-೨೦). **ಬೀಡೆವಿಡು** : ಖರಕರನ ತಾಪದಿಂದಂ ಧರಣಿತಳಂ ಬೀಡೆವಿಟ್ಟು ತಾಪದೊಳಂ ಭೋರ್ಗರೆದು ಮಾಟ್ ಕಱ(ಗು)ಯೆ ವಿಶ್ವಂಭರೆ ಬೆಳೆಗುಂ ಮನಕೆವಂದ ಧಾನ್ಯವ್ರಜಮಂ (ಅಟ್ಟಮು. ೦-೩೨).

[ಬೀಡು$_1$ (<ಬೀಟೆ$_1$) + ಬಿಡು$_1$]

**ಬೀಡುಬಿಡು$_2$** 'ಬೀಡುವಿಡು' ನೋ.

**ಬೀಡುಬಿಡು$_3$**, ಬೀಳುಬಿಡು (ಕ್ರಿ). ೧. ಸಾಗುವಳಿ ಮಾಡದಿರು ; ಪಾಳುಬಿಡು : ಬೆಳೆ ಕೈಗೆ ಬಂದ ನಂತರ ನೆಲವನ್ನು ಕೆಲವು ತಿಂಗಳ ಮಟ್ಟಿಗಾದರೂ ಬೀಡುಬಿಡುವುದು ನಮ್ಮ ದೇಶದಲ್ಲಿ ಹಳೇ ಪದ್ಧತಿ (ತರಬ. ೦೦). **ಬೀಳುಬಿಡು** : ೨. ಹಾಳುಗೆಡವು ; ನಿರರ್ಥಕಗೊಳಿಸು : ಯಕ್ಷಗಾನದ ಪಾಲಿಗೆ ಈಗ ಒಂದು ಸಂಧಿಕಾಲವೇ ಬಂದಂತಿದೆ. ಅದನ್ನು ಜನರು ಪ್ರೋತ್ಸಾಹಿಸದೆ ಬೀಳುಬಿಡುತ್ತಿದ್ದಾರೆ (ಯಕ್ಷಬ. ೨೩).

[ಬೀಡು$_3$ + ಬಿಡು$_1$]

**ಬೀಡುಬಿರಿ** 'ಬೀಟೆಬಿರಿ' ನೋ.

**ಬೀಡುವಿಡು**, ಬೀಡುಬಿಡು$_2$ (ಕ್ರಿ). ೧. ವಸತಿ ಮಾಡು ; ತಂಗು ; ಬಿಡಾರ ಹೂಡು : ಪೊತದಿಮರ್ಯತ್ತೆಯ ಸುತ್ತಿ ಸುತ್ತಿದ ಸೈಕತಭೂತಳಂಗಳೆಸೆಳೆ ಮೆಲ್ಲನೆ ಬೀಡುವಿಡುತ್ತುಂ (ಆದಿಪು. ೪-೫೮) ; ಸುರಮ್ಯಪ್ರದೇಶಂಗಳೊಳ್ ಬೀಡುವಿಡುತ್ತುಂ ಬಂದು (ಜಗದಿ. ೦೭-೬೦) ; ಉಪವನಪ್ರದೇಶದೊಳ್ ಬೀಡುವಿಟ್ಟು (ವರ್ಧಕು. ೬-೩೨ವ). ೨. (ಸೈನ್ಯದ) ಶಿಬಿರ ಹಾಕು ; (ದಂಡಿನ) ಪಾಳೆಯ ಹೂಡು : ಮಹಾಸಾಮಂತರ ಪದಿರ [ಪ]ೞ ಗಳಿಂದಮುಗುರ್ವಾಗೆ ನಡೆವ ಬೀಡಿಂಗೆ ಬೀಡುವಿಡಲ್ ನೆಲನುಂ . . . ಆನೆಗಂಬಕ್ಕೆ ಪೆರ್ವರಂಗಳುಮಾ ಪಡೆಗೆ ನೆಱಯುವು (ಪಂಪಭಾ. ೯-೦೦೪ವ). ೩. ವಸತಿ ಹೂಡುವಂತೆ ಮಾಡು ; ತಂಗುವಂತೆ ಮಾಡು : ತನ್ನ ತಮ್ಮಂ ವಿಜಿಗೀಷುವಾಗಿ ಪೋದೊಡಾತನಂ ಸಾಮಾದಿಗಳಿನೊಡಂಬಡಿಸಿ ತಂದಲ್ಲಿ ಬೀಡುವಿಟ್ಟೆರೆ (ಚಾವುಂಪು. _೩). ೪. ಆವರಿಸು ; ವ್ಯಾಪಿಸು ; ಹರಡು : ಕುಡುವುರ್ವು ಸೆಡೆಯೆ ಬಿಡುಜಡೆ ಬೀಡುವಿಡೆ . . . ಪಾಡಿ ಬನದಿಪ ಕಡುಬೆಡಗಿನಚ್ಚರಸಿಯರುಂ (ರಾಜಾಶ್ಯ. ೬೩-೯). **ಬೀಡುಬಿಡು$_2$** : ೧. ಚಂಪಕವೀಥಿಗಳೆ ವಿನೋದವಿಹರಣವೀಥಿಗಳಾಗೆಯುಂ ಬೀಡುಬಿಡುತ್ತುಂ (ಚಂಪ್ರಕು. ೬-೮೭ವ) : ಒಂದು ಕಡೆ ಸಸ್ಯಜಲಸಮೃದ್ಧಿಯಾದ ಒಂದು ಮನೋಹರವಾದ ಪ್ರದೇಶದಲ್ಲಿ ಆ ರಾತ್ರಿಗೆ ಬೀಡು

ಬಿಟ್ಟರು (ಹಕ್ಕುಹು. ೨೦) ; ನಗರದ ಹೊರಗೆ ವ್ಯಾಪಾರಿಗಳು ಬೀಡು ಬಿಟ್ಟಿದ್ದರು (ಕೃಹುಹ. ೬೦). ೨. ವಿಖ್ಯಾತನ ತಾರಕಾಸುರನ ಬೀಡು ಬಿಡುತ್ತಿದೆ ನೋಡಲದ್ಭುತಂ (ಗಿರಿಶ. ೬-೪೮) ; ಬೀಡುಬಿಟ್ಟುದು ಬಳಿಕ ಸಿಡಿಲ ಸಪ್ಪಾಡಸಬುದದ ನಿಶಿತಗಿರಿಗಳ ಕೋಡುಗಲ್ಲಳ ಖಣಿಖಟಿಲ ಕಡುಹು ಗಳಲಿನಸುತನ (ಕೊರಂಸಾ. ೬-೬-೨೭). ೫. ನೆಲೆ ನಿಲ್ಲು ; ನೆಲಸಂ ; ತಳವೂರು : ಆರ್ಯರು ಈ ವೇಳೆಗಾಗಲೆ ಭಾರತದಲ್ಲಿ ಭದ್ರವಾಗಿ ಬೀಡು ಬಿಟ್ಟಿದ್ದ ದ್ರಾವಿಡರೊಡನೆ ಬೆರೆತು ಹೋದರು (ದ್ರಾಐಶಿ. ೩೦).

[ಬೀಡು$_{3}$ + ಬಿಡು$_{1}$]

**ಬೀಡುವೇಟ್** (ಕ್ರಿ). ತಂಗುದಾಣವನ್ನಾಗಿ ನಿಯಮಿಸು ; ವಸತಿಗೃಹ ವನ್ನು ಸೂಚಿಸು : ಮತ್ತಿನ ನಾಲ್ವರ್ಗಂ ಕೊಂತಿಗಂ ಬೇಜಿವೇಟಿ ಮಾಡಂಗಳಂ ಬೀಡುವೇಟ್ಟು (ಪಂಶಭಾ. ೩-೫೦ ವ). [ಬೀಡು$_{3}$+ಪೇಟ್]

**ಬೀಡುವೊಗು** (ಕ್ರಿ). ಬಿಡಾರವನ್ನು ಪ್ರವೇಶಿಸು : ಬೀಡುಂಬೊಕ್ಕಂ, ಬೀಡುವೊಕ್ಕಂ (ಶಬ್ದಾಸು. ೩೫೦ ಕೃಯೋ). [ಬೀಡು$_{3}$+ಪೊಗು]

**ಬೀಡುಸೆಳೆ** 'ಬೀಟೆಸೆಳೆ' ನೋ.

**ಬೀಡೆ**$_{1}$ 'ಬೀಟೆ$_{1}$' ನೋ.

**ಬೀಡೆ**$_{2}$ 'ಬೀಡು$_{2}$' ನೋ.

**ಬೀಡೆಗಾಲ್** 'ಬೀಟೆಗಾಲ್' ನೋ.

**ಬೀಡೆತ್ತು** (ಕ್ರಿ). ಶಿಬಿರವನ್ನು ತೆಗೆ. — ಕೀಳು ; ಶಿಬಿರದಿಂದ ಬೇರೆ ಕಡೆಗೆ ಪ್ರಯಾಣ ಮಾಡು : ನಿಶಾವಸಾನಸಮಯದೊಳ್ ಪಯಣದ ಸೂಟುಗಾಳೆಗಳಂ ಪಿಡಿದು ಬೀಡೆತ್ತಲುದ್ಯೋಗಂಗೆಯ್ವುದಂ ಕಂಡು (ಪಂಶಕಂ. ೦೨೬-೦೨). [ಬೀಡು$_{2}$ + ಎತ್ತು$_{1}$]

**ಬೀಡೆಬಿರಿ** 'ಬೀಟೆಬಿರಿ' ನೋ.

**ಬೀಡೆಯೊಡೆ** (ಕ್ರಿ). ಬಿರಿ ; ಬಿರುಕು ಬಿಡು : ಆ ಮುಗ್ಧಾಂಗನಾನಿವಹದ ಸೊಗಯಿಸುವ ಬಾಯ್ದೆಟಿಗಳಂ ಬೀಡೆಯೊಡೆದ ದಾಡಿಮದ ಪಣ್ಣಳೆಂದು ತಳಿರ ತೊಂಗಲೊಳ್ ನಿಳ್ಕಿ ನೋಡುವ ಶುಕಶಿಶುಪ್ರಕರಮುಂ (ಶಾಸುಪು. ೨-೬೦ ವ). [ಬೀಡೆ$_{1}$ (< ಬೀಟೆ$_{1}$) + ಒಡೆ$_{1}$]

**ಬೀಡೆವಡು** (ಕ್ರಿ). ಬಿರುಕುಂಟಾಗು ; ಸೀಳು : ಹರಿಣಧರಹರಿಣನಂ ಪೂಮರದಡಿಯೊಳ್ ಪೊಯ್ದು ಪಟ್ಟ ಪುಲಿಗಳವೆನಿಕುಂ ಪರೆದರುಣಸಿತಾಸಿತ ಮಪ್ಪ ರಾಗದಿಂ ಬೀಡೆವಟ್ಟು ಬೆಟ್ಟದ ಸಜಿಗಳ್ (ಅಜಿತ. ೯-೨೪).

[ಬೀಡೆ$_{1}$ (< ಬೀಟೆ$_{1}$) + ಪಡು$_{1}$]

**ಬೀಡೆವಣ್** (ನಾ). ಬಿರಿದ ಫಲ ; ಬಿರುಕು ಬಿಟ್ಟಿರುವ ಹಣ್ಣು : ಬೀಡೆವಣ್ಣಿಂ ತುಱುಗಿರ್ದ ದಾಡಿಮಚಯಂ . . . ಕುಂದವು ನಂದನಂ ಗಳೊಳ್ (ಜಗಚ. ೨-೦೫); ಬೀಡೆವಣ್ಣಳಿನೆಸೆದಿರ್ಪ ದಾಡಿಮತರುವ್ರಜಮಾ ಬನದೊಳ್ ವಿರಾಜಿಕುಂ (ಶಾಸುಪು. ೦-೯೦) ; ಬೀಡೆವಣ್ಣೆತ್ತು ಕೀರಕ್ಕೊ ಲವಂ ಮೋಳಿಪ್ಪ ದಾಳಿಂಬದ ತರುತತಿಗಳ್ . . . ಓರಂದದಿಂ ಕುಂದವೆಂದುಂ (ಶಾಂತೀಶ್ವ. ೦೩-೦೩೨). [ಬೀಡೆ$_{1}$ (< ಬೀಟೆ$_{1}$) + ಪಣ್$_{3}$]

**ಬೀಡೆವರಿ** 'ಬೀಟೆವರಿ' ನೋ.

**ಬೀಡೆವಿಡು** 'ಬೀಡುಬಿಡು$_{1}$' ನೋ.

**ಬೀಡೆವೆಱು** (ಕ್ರಿ). ಬಿರುಕನ್ನು ಹೊಂದು ; ಬಿರಿ : ಹಿಸಿದುಕೊಳ್ಳು : ಪಾಮರಿಯರ ದೋರೆವಾಯ್ದೆಱೆಗಳಂ ನೆಱಿಮಿಕ್ಕಿಸಿ ಬೀಡೆವೆತ್ತು ಬಿತ್ತರಿ ಸುವ ದಾಡಿಮವ್ರಜಮಿವೆಂಬಭಿಶಂಕೆಯನಪ್ಪುಕೆಯ್ದು ಪೀವರಕುಚದಲ್ಲಿ ಕೇಗುವುದು ಪೋಗದೆ ಕೀರಕುಳಂ ನಿರಾಕುಳಂ (ಶಾಂತೀಶ್ವ. ೦-೯೩).

[ಬೀಡೆ$_{1}$ (< ಬೀಟೆ$_{1}$) + ಪೆಱು$_{1}$]

**ಬೀಡೆವೋಗು** (ಕ್ರಿ). ಬಿರುಕು ಬಿಡು; ಸೀಳು : ಬೀಡೆವೋಗಿರ್ದ ತಣ್ಣೀ ರೊಸದರ್ದಾಣಿಂ (ಜಗಚ. ೦೭-೬೪).

[ಬೀಡೆ$_{1}$ (< ಬೀಟೆ$_{1}$) + ಪೋಗು$_{1}$ (<ಪೋ$_{1}$)]

**ಬೀಡೊಡೆಯ** (ನಾ). ನಾಡಿನ ಪ್ರಭು ; ರಾಜ್ಯದ ದೊರೆ : ಸುವ್ವಿ ಕಾಡೊಡೆಯನೆ ಸುವ್ವಿ ಬೀಡೊಡೆಯನೆ ಸುವ್ವಿ ಬೇಡರ ಕುಲತಿಲಕ (ಪಂಚತ. ೨-೬೫). [ಬೀಡು$_{2}$ + ಒಡೆಯ$_{1}$]

**ಬೀಡಾರ** 'ಬೀಡಾರ' ನೋ.

**ಬೀಣಿಗ** (ನಾ). ವೀಣೆಯನ್ನು ನುಡಿಸುವವನು : ವೈಣಿಕ : ಬೀಣಿಗಂ, ಗಾಣಿಗಂ, ಕೇಣಿಗಂ (ಶಬ್ದಾಸು. ೪೦೭ ಕೃಯೋ). [ಬೀಣೆ + — ಇಗ]

**ಬೀಣಿಗೆ** (ನಾ). ಹುರಿ; ಹಗ್ಗ (?) : ಕಚ್ಚನಪ್ಪ ನೂಲ ಪಾಸಿನ ಬೀಣಿಗೆಯ ಮಳವೆ ಮೂವತ್ತಕ್ಕೊಂದು ಪತ್ರಿಯು ಮಳವೆ ಅಯ್ವತ್ತ ಕ್ಕೊಂದು (ಎಇ. XIX, ೦೬೫-೦೭; 1075); ವೃದ್ಧಳಿಗಂ . . . ಪೊಱಮನದ ಕಾಂತೆಯುಂತೆ ಬೀಣಿಗೆಯುಂ ಬಿಗಿದು . . . ನಾನಾಶಬ್ದಂಗಳಂ ಬಾರಿಸಿ (ಧರ್ಮಶ. ೨-೨೩ ವ). [?]

**ಬೀಣೆ** (ನಾ). ಒಂದು ಬಗೆಯ ತಂತೀವಾದ್ಯ; ವೀಣೆ : ದನಿಯಿಂಪು ಬೀಣೆಯಂ ಮಿಡಿದವೊಲಾಗೆ ಗಾನದೊಳೊಡಂಬಡೆ ಮೇನಕೆ ಮುಂದೆ ಪಾಡಿದಳ್ (ಪಂಶಭಾ. ೬-೮೯); ಕೊರಲ ಬೆರಲ ರಸಮೆಸೆಯೆ ಬೀಣೆಯಂ ಬಾಜಿಸಿದಳ್ (ಸುಕುಮಾ. ೦೦-೨೪); ವನರುಹಸೂತ್ರಂ ತಂತ್ರಿಗಳೆನೆ ಶಿವನಂ ಜಾಣೆ ಬೀಣೆಯಂ ಕೇಳಿಸುವಳ್ (ಗಿರಿಶ. ೩-೯೬). [< ಸಂ. ವೀಣಾ]

**ಬೀಣೆಗಾಜಿ** (ನಾ). ವೀಣೆಯನ್ನು ನುಡಿಸುವವನು; ವೈಣಿಕ : ಬಾಜಿಪ ಬೀಣೆಗಾಜಿರಾಗರಮೆನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುದು ಸೂಳೆ ಗೇರಿಗಳ್ (ಅಭಿನ್ನ. ೪೨) ; ಈಗಳೀ ಮಾನವಲೋಕದೊಳ್ ನೆಗೞ್ತೆವೆತ್ತ ಬೀಣೆಗಾಜಿರುಂ . . . ಪೊಸವಗೆಯ ತಾನಂಗಳಂ ಸಂದರ್ಭಿಸಿದುದಿಲ್ಲೆಂಬುದು ವಿದಿತಮ್ಮೆಸೆ (ಚಕಪು. ೦೬೨-೯). [ಬೀಣೆ + — ಕಾಜಿ]

**ಬೀಣೆವಾಜಿಸು** (ಕ್ರಿ). ವೀಣೆಯನ್ನು ನುಡಿಸು : ಸಪ್ತಸ್ವರಮಂ ಗುಣಿ ಯಿಸುವ ಬೀಣೆವಾಜಿಪ . . . ಬಿನದಮುವರ್ಗಳ ಬಿನದಂ (ಅನಂತ. ೩-೮); ಚಕ್ರಿ ಬೀಣೆವಾಜಿಸೆ ಸುತಿಗೂಡಿ ತಾರಯಿಪ ತುಂಬಿಗಳಿಂತಿವು (ವರ್ಧಮಾ. ೫-೬೦). [ಬೀಣೆ + ಬಾಜಿಸು$_{2}$]

**ಬೀಣೆವಾಡ** (ನಾ). ವೀಣೆಯ ಮನೆ,—ಮೆಟ್ಟಿಲು : ತೆಪ್ಪನೆ ಬೀಣೆ ವಾಡದೊಳಗಾಡುವ ವಾಣಿಯ ನೂಪುರಸ್ವರಂ (ಚಕಿರ. ೪-೦೦೪).

[ಬೀಣೆ + ವಾಡ$_{2}$]

**ಬೀತ** 'ಬೀ' ಪರಾ.

**ಬೀತು** 'ಬೀ' ಪರಾ.

**ಬೀದಿ** (ನಾ). ೧. ಹಾದಿ ; ಮಾರ್ಗ ; ದಾರಿ : "ಪ್ರತೋಳೀ. ವಿಶಿಖಾ, ರಥ್ಯಾ—ಈ ೩ ಬೀದಿ" (ಹಲಾಯು. ೪೯-೦೩೪); ಅಗಲಾ ಪೊಟಲ ಬೀದಿ ಗಳೊಳೆಲ್ಲಂ ಗಂಧೋದಕ ಪಂಚಗವ್ಯಂಗಳಂ ತಳಿಯಿಸಿ (ಪಂಶಭಾ. ೪-೫ ವ); ಎಸೆವ ಬಹುರತ್ನರಾಶಿಯ ಪಸರಂಗಳಿನದಱ ಬೀದಿಗಳ್ ಪಲವುಂ ರಂಜಿಸಿ ತೋರ್ಕುಂ (ಪಂಚತಂ. ೦೪-೦೦). ೨. ವಿಸ್ತಾರ ; ವ್ಯಾಪ್ತಿ ; ಹರಹು : ಕಮಲೋದರನು ಕೈಕೊಂಡನು . . . ಸಕಲಲೋಕದ ಬೀದಿ ವಿಸಟಂಬರಿವ ವಿಮಲವಿರಾಟರೂಪವನು (ಕುವ್ಯಾಅ. ೩-೬೪). 'ಬೀದಿಗಿಚ್ಚು' ಪರಾ.

ಬೀದಿಬೀದಿ (ದ್ವಿರುಕ್ತಿ) : ಆಕೆಯ ವಿಳಾಸಹಾಸಮೆ ಪೊಱಪೊಣ್ಮಿದಂತೆ ಬೀದಿಬೀದಿಗಳೊಳೆಡೆಗಿಱಿದಿರೆ ಕೆದಱಿದ ಕುಸುಮವಾರಜಂಗಳುಂ (ಆದಿಪು. ೬-೩೭೩); ಬೀದಿಬೀದಿ ತಪ್ಪದೆ ಚಂದನದೆಳದಳಗಳಿಂ ತೋರಣಂಗಟ್ಟಿ (ಧರ್ಮಾಮೃ. ೬-೨೦೫). ಬೀದಿಕಾಮಣ್ಣ=ರಸ್ತೆಯಲ್ಲಿ ತಿರುಗಾಡುವ ಪೋಕರಿ : ಬೀದಿಕಾಮಣ್ಣಗಳ ಹಾವಳಿ ಇತ್ತೀಚೆಗೆ ಹೆಚ್ಚಾಗಿದೆ (ರೂಢಿ). ಬೀದಿಗೆ ಬರು= (ರಹಸ್ಯ) ಹೊರಗೆ ಬರು—, ಬಯಲಾಗು; (ಗುಟ್ಟು) ಪ್ರಕಟವಾಗು : ಸಂಸಾರದ ಗುಟ್ಟು ಬೀದಿಗೆ ಬರಬಾರದು (ರೂಢಿ). ಬೀದಿಗೆಳೆ, ಬೀದಿಗೆ ಎಳೆ=ಬೀದಿಪಾಲುಮಾಡು ; ಹಾಳು ಮಾಡು ; ಅವಮಾನಕ್ಕೆ ಅವಕಾಶ ಮಾಡಿಕೊಡು : ನಮ್ಮ

ವಂಶದ ಗೌರವ ಬೀದಿಗೆಳೆದುಬಿಟ್ಟಳು (ಕಂಶಂ. ೨೬೧); ಅರಿಯದ ಹೆಣ್ಣನ್ನು ಬೀದಿಗೆ ಎಳೆಯುವ ಕಲೆ ಚೆನ್ನಾಗಿ ತಿಳಿದಿದೆ (ಬ್ಯಾರಿ. ೬೬). ಬೀದಿಜಗಳ= ಎಲ್ಲರೆದುರಿಗೆ ನಡೆಯುವ ಜಗಳ ; ಮುಚ್ಚುಮರೆಯಿಲ್ಲದ ಕಲಹ : ಹಾದಿಜಗಳ ಹಣವಡ್ಡ, ಬೀದಿಜಗಳ ಮುಪ್ಪಾಗ (ಗಾದೆ) ಬೀದಿದೀಪ = ಸಾರ್ವಜನಿಕರ ಉಪಯೋಗಕ್ಕಾಗಿ ರಸ್ತೆಗಳಲ್ಲಿರುವ (ಸಾಮಾನ್ಯವಾಗಿ) ವಿದ್ಯುದ್ದೀಪ : ಬೀದಿದೀಪದ ಕೆಳಗೆ ನಾಯಿ ಗಳು ಕಚ್ಚಾಡುತ್ತಿವೆ (ರೂಢಿ). ಬೀದಿನಲ್ಲಿ=ಸಾರ್ವಜನಿಕರ ಉಪ ಯೋಗಕ್ಕಾಗಿ ರಸ್ತೆಗಳಲ್ಲಿರುವ ಕೊಳಾಯಿ : ಬೀದಿನಲ್ಲಿಯ ಹತ್ತಿರ ದೊಡ್ಡಗುಂಪು ಸೇರಿತ್ತು (ರೂಢಿ). ಬೀದಿಯ ಗುಂಡ=ಗುರಿಯಿಲ್ಲದೆ ಅಲೆದಾಡುವ ಒನಪುಗಾರ : ಜೂಜುಗಾಜಿನ ಮಾತು ಬೀದಿಯ ಗುಂಡನ ಸೊಬಗು ಓಡಿನೊಳಗಗೆಯ ಹೊಯ್ದಂತೆ (ಬಸವ ೬೭೬). ಬೀದಿಯ ಬಸವ= ರಸ್ತೆಯಲ್ಲಿ ಗುರಿಯಿಲ್ಲದೆ ಅಲೆದಾಡುವ ಗೂಳಿ; ತೊಂಡುದನ : ಬೀದಿಯ ಬಸವಂಗೆ ದೇಗುಲದ ಪಶುವಿಂಗೆ ಹುಟ್ಟಿದ ಕಱು ಹೋರಿಗಳು ಬಸವಗಳಪ್ಪವೆ ಲಿಂಗಮುದ್ರೆಯನೊತ್ತಗ್ನಕ್ಕರ (ಶನ್ಮವ. ೪. ೧೯೨-೪೨೮). ಬೀದಿಯ ಬಸವಿ=ಬೀದಿಬಸವಿ: ಬೀದಿಯ ಬಸವಿ. 'fool' ಎಂದೆಯಲ್ಲ ! (ಹೂಸಕ್ಷ. ೦೪). ಬೀದಿಯ ಭಿಕಾರಿ=ಬಹಳ ದರಿದ್ರ ನಾದವನು : ಬೀದಿಯ ಭಿಕಾರಿ ಜೀವಿಸುವ ಈ ಬೊಂಬಾಯಿನ ಫುಟ್ ಪಾತಿನಲ್ಲಾದರೂ ಕಾಲ ತಳ್ಳಿದರಾಯ್ತು (ಕೊನೆಶೀ.೦೯೯). ಬೀದಿಯಲಿ ಬೀಳು, ಬೀದಿಯಲ್ಲಿ ಬೀಳು = ೧. ಪತನ ಹೊಂದು ; ಪತಿತವಾಗು : ವಾದಗೊಳ್ಳದ ಬಹಳ ವಸ್ತುವನೀ ದುರಾತ್ಮಕನೆತ್ತ ಬಲ್ಲನು ಬೀದಿಯಲಿ ಬಿದ್ದವನು (ಕುವ್ಯಾಸ. ೯-೦೩). ೨. ಧೂಳಿನಲ್ಲಿ ಬೀಳು : ಬೀದಿಯಲ್ಲಿ ಬಿದ್ದ ಮಾಣಿಕ್ಯವ ಹೂಳಿರ್ದ ನಿಧಾನವನಾರಿಗೂ ಕಾಣಬಾರದು ನೋಡ (ಅವತಂ. ೨೨೯-೦೦೩೨); ಬೀದಿಯಲ್ಲಿ ಬಿದ್ದ ಶಿಶುವನು ಹೆತ್ತ ತಾಯಿ ಹತ್ತಿರ ಬಂದು ಎತ್ತುವಂತೆ (ಬಸವ. ೩೯೦). ಬೀದಿವೆಡಂಗ = ತಿರುವಾರೂರಿನಲ್ಲಿ ಪೂಜಿಸಲ್ಪಡುವ ಶಿವನ ಉತ್ಸವಮೂರ್ತಿ : ಇಲ್ಲಿ ದೇವರ ದೇವನಪ್ಪ ಬೀದಿವೆಡಂಗ ಪೆರುಮಾಳೆಯನೋಲೈಪ ತಳಿಯಲಾರಕುಲದ ಪರಮ ಯೌವನೆಯಪ್ಪ ಪರವೆನಾಚಿಯರೆಂಬ ಕನ್ಯಾಕನಕಲತೆಯಿರ್ದಪುದು (ನಂಬಿರ. ೧೦-೧೧). [< ಸಂ. ವೀಥಿ, ವೀಥೀ]

**ಬೀದಿಗ** (ನಾ). ರಸ್ತೆಯಲ್ಲಿ ಹೋಗುವವನು ; ದಾರಿಹೋಕ : ಶಿವಶಿವಾ ದುರ್ಗಂಗಳಿರದೆ ಕೋಳ್ವೋದುವೆಂದೆಡೆಗೆಡೆಗೆ ಬೀದಿಗರ್ ಗಜಬಜಿಸಲು (ಶಬಶ. ೪೨-೪೪). [ಬೀದಿ + -ಗ$_2$]

**ಬೀದಿಗಪ್ಪಡ** (ನಾ). ದಾರಿಯಲ್ಲಿ ಬಿದ್ದಿರುವ ಮೈಲಿಗೆಬಟ್ಟೆ : ಬೂದಿಯಿಂದೊಕ್ಕ ಮಾಲೆಯಿಂ ಬೀದಿಗಪ್ಪಡದಿಂ ಘಟಕಂಠದಿಂ ಸಿಂಗರಿಸಿ ಕೊಂಬುದುಮಕ್ಕುಂ (ರಸರ. ೪-೧೩೦ ವ). [ಬೀದಿ + ಕಪ್ಪಡ]

**ಬೀದಿಗರು** 'ಬೀದಿಗಱು' ನೋ.

**ಬೀದಿಗಲಹ** (ನಾ). ೧. ದಾರಿಯಲ್ಲಾಡುವ ಜಗಳ ; ಬಹುಜನರೆದುರಿಗೆ ಆಡುವ, ಗುಟ್ಟಾಗಿ ಉಳಿಯದ ಜಗಳ : ಬೀದಿಗಲಹದ ಕದಡು ಬೀಡಿನಲ್ಲೆದೆ ಹಬ್ಬಿತು (ಕುವ್ಯಾಅ. ೮-೨); ಸುದ್ದಿಯಿಲ್ಲದೆ ಹೋದ ಪಾಂಡವರಿದ್ದರಾದೊಡೆ ಬೀದಿಗಲಹದ ಯುದ್ಧಕೆಳಸದೆ ತಿರುಗಿಸುವು ದೊಬ್ಬನನು ಕರಿಪುರಿಗೆ (ಕುವ್ಯಾವಿ. ಓಂಶ. ೪-೦೫). ೨. (ಆಲಂ) ಮರ್ಯಾದೆ ಬಿಟ್ಟು ಆಡುವ ಜಗಳ : ಬೀದಿಗಲಹದೊಳೊಮ್ಮೆ ಪೈಸರವಾದಡದು ಪರಿಹರಿಸಿದವರೇ ಸೋದರರು (ಕುವ್ಯಾಅ. ೨೦-೩೫): ತೋಱಿಸುವೆ ನಿಮಗಹ ಗುರುಲಘುತ್ವದ ಪರಿಯ ತುದಿಯಲಿ ದೊರಕು ವಶುಭದ ಬೀದಿಗಲಹವನು (ಕೊರಂ. ೨೧೨-೨೯). [ಬೀದಿ+ಕಲಹ]

**ಬೀದಿಗಱು, ಬೀದಿಗರು** (ನಾ). ಬೀದಿಪಾಲಾದ ಕರು ; ಅನಾಥವಾದ ಕರು. ಬೀದಿಗರು. ಬೀದಿಗಱುವಾಗು, ಬೀದಿಗರುವಾಗು=ಅನಾಥವಾಗು; ತಬ್ಬಲಿಯಾಗು; ದಿಕ್ಕಿಲ್ಲದಂತಾಗು : ಘನವಂತವ ಸುಟ್ಟು ಗುಹೇಶ್ವರ ಬ(ೀ?)ದಿಗಱುವಾದ (ಅವತಂ. ೯೯-೩೯೮); ಮೇದಿನಿಗೆ ಬೀದಿಗಱು[ಪಾಠಾಂ. ಱ]ವಾದುದೆನ್ನಯ ಭಕ್ತಿ (ಮೂವರ. ದೇ. ೩೩೦-೯); ಬೇದವೇಕಂದೇನು ಮಕ್ಕಳು ಬೀದಿಗಱು ವಾದರು ವನಾಂತದಲಾದ ಚಿತ್ರವ್ಯಥೆಯ ಕೇಳಿದು ಬೆಂದುದೆನ್ನೊಡಲು (ಕುವ್ಯಾಅ. ೧೭-೯); ಬಂದೆನಿತ್ತಲು ಬಱಿದೆ ಮಸಣದ ಮಂದಿರದ ಮುಕ್ಕಣ್ಣನನು ಬಳಿಸಂದು ಬಳಲುತ ವರಪರೀಕ್ಷೆಗೆ ಬೀದಿಗಱುವಾಗಿ (ಹರಿಶ್ಚ. ೧೧-೯೧-೨೪); ಪಾಂಡುವಿನ ಮಕ್ಕಳು ವನಾಂತರದಿ ಬೀದಿಗರುವಾದರು (ತುರಂಗ. ೩೪-೫). [ಬೀದಿ + ಕಱು$_2$]

**ಬೀದಿಗಾಣಿಸು** (ಕ್ರಿ). ೧. ದಾರಿಯನ್ನುಂಟು ಮಾಡು. ೨. (ಆಲಂ) ಗಾಯವನ್ನು ಉಂಟುಮಾಡು : ಎಡದಲೌಕುವ ಸಾಂಬನನು ಹಣೆಯೊಡೆಯಲೆಚ್ಚನು ಮಾರಿ ಬಹ ಬಲುಗದೆಯ ಪ್ರದ್ಯುಮ್ನನ ಶರೀರದಿ ಬೀದಿಗಾಣಿಸಿದ (ಕೋಗದು. ೨೫-೫೪). [ಬೀದಿ + ಕಾಣಿಸು]

**ಬೀದಿಗಾವಲಿ** (ನಾ). ದಾರಿಯಂ ಪಕ್ಕದಲ್ಲಿರುವ ತಗ್ಗು ; ಚರಂಡಿ : ಬೀಡಾಡಿನಾಯಿಗೆ ಬೀದಿಗಾವಲಿ ನೀರು (ಸಹಿಗೀ. ೬೪-೪).

[ಬೀದಿ + ಕಾವಲಿ$_3$ ( < ಕಾಲ್ವಾಯ್)]

**ಬೀದಿಗಿಚ್ಚು** (ನಾ). ವಿಸ್ತಾರವಾಗಿ ಹಬ್ಬುವ ಕಿಚ್ಚು ; ವ್ಯಾಪಕವಾಗಿ ಹರಡುವ ಬೆಂಕಿ, ಅಗ್ನಿ : ಕಂಬದಲಿ ಆದುದಾವಿರ್ಭಾವ ಸಿಡಿಲಿನ ಸೋದರರದ ಕಣ್ಣುಗಳ ಭಾಳದ ಬೀದಿಗಿಚ್ಚಿನ ರೌದ್ರದಲಿ ನರಸಿಂಹರೂಪಾಗಿ (ಕುವ್ಯಾಸ. ೯-೪೩). [ಬೀದಿ + ಕಿಚ್ಚು]

**ಬೀದಿಗೊಳ್** (ಕ್ರಿ). ೧. ದಾರಿಯನ್ನು ಹಿಡಿ; ಹಾದಿಯನ್ನು ಅನುಸರಿಸು: ಕಂಪಿನ ಪೊಟಲಂ ಪೊಕ್ಕು ಬೀದಿಗೊಂಡು ಬರ್ಪಾಗಳ್ (ಕಬ್ಬಿಕಾ. ೩೩೩). ೨. ಅಡೆತಡೆಯಿಲ್ಲದಂತೆ ದಾರಿಮಾಡಿಕೊಳ್ಳು : ಸೂಕಳಾಶ್ವಂಗಳನಂ ಕಣೆಯಂ ಬಗೆಯದೆ ಮುಂಕೊಂಡು ಶಂಕಿಸದೇಱ ವಿಾಱ ಬೀದಿಗೊಂಡು ಪರಿಯಿಪಾಗಳ್ (ರಾಜಶೇ. ೬-೧೦೭); ಬೀರರ ಜಂಗುಳಿಯೊಳ್ ನುರ್ಗಿ ಬೀದಿಗೊಂಡು ರಾಯನಿದಿರ್ವಂದು ಶತ್ರುಘ್ನಂ . . . ಎಂದಂ (ರಾಮಾಶ್ವ. ೪೭-೬). [ಬೀದಿ + ಕೊಳ್$_1$]

**ಬೀದಿಪಾಲು** (ನಾ). (ಆಲಂ) ನಿರಾಶ್ರಿತಸ್ಥಿತಿ : ನಿರ್ಗತಿಕಸ್ಥಿತಿ : ಒಂದು ಜೀವವನ್ನು ಬೀದಿಪಾಲಾಗಗೊಡುವುದು ಧರ್ಮವಾಗುತ್ತಿತ್ತೆ ? (ಐವಶಂ. ೦೬೦). 'ಕಾಡುಪಾಲು' ಪರಾ.

ಬೀದಿಪಾಲು ಮಾಡು = ಅನಾಥವಾಗಿ ಮಾಡು ; ನಿರ್ಗತಿಕ ವಾಗಿಸು : ಮಕ್ಕಳನ್ನು ಬೀದಿಪಾಲು ಮಾಡಿದೆ. ನಾನು ಪಾಪಿ ! (ಭಾರತಿ. ೨೬). [ಬೀದಿ + ಪಾಲು$_2$ (< ಪಾಲ್$_2$)]

**ಬೀದಿಬಸವಿ** (ನಾ). ಸ್ವೇಚ್ಛಾಚಾರಿಯಾದ ಸೂಳೆ : ಬೀದಿಬಸವಿಯಾಗಿ ನೀನು ಕುಲಗೆಟ್ಟು ಹೋದರೆ ಅದರ ಕಷ್ಟ ಅನುಭವಿಸುವವಳು ನೀನೇ ಹೊರತು ನಾನಲ್ಲ (ಕಶಿಸಂ. ೦೮೨); ನಾಯಿಲ್ಲಿ ಕತ್ತೇ ಹಂಗೆ ಚಾಕರಿ ಮಾಡಿ ಕೊಂಡಿದ್ದಿನ್ನೀ, ನೀನು ಬೀದಿಬಸವಿ ಹಂಗೆ ಮನೆ ಮನೆ ತಿರುಗಿಕೊಂಡು ನಿಂತಿರು (ಸರ್ವಮಂ. ೩೩೩). 'ಊರುಬಸವಿ' ಪರಾ.

[ಬೀದಿ + ಬಸವಿ]

**ಬೀದಿವರಿ$_1$** (ಕ್ರಿ). ೧. ಸುತ್ತಾಡು; ಅಲೆದಾಡು : ಮೈದೆಗೆದು ಮರ ನಾಗಿ ದೆಸೆಯಲಿ ಬೀದಿವರಿವುತ ವಿವಿಧಭಾವನಭೇದದಲಿ ಮನ ಮುಂದು ಗೆಡುತಿರ್ದುದು ಧನಂಜಯನ (ಕುವ್ಯಾಅ. ೬-೫೨); ವರುಣನನು ಬೆಸ ಗೊಂಡು ತತ್ಪುರವರದೊಳಗಲಕೆ ಬೀದಿವರಿದುಪ್ಪರಿಸಿ ಲೋಕಾಲೋಕ ಪರ್ವತದಗ್ರಪರಿಯಂತಸುರವಿರೋಧಿಯ ಕಾಣದೆ (ಕೊರಂ. ೪-೩೯). ೨. ಸ್ವೇಚ್ಛೆಯಾಗಿ ಓಡಾಡು ; ಸ್ವಚ್ಛಂದವಾಗಿ ನಡೆ : "ವಿಸಟಂಬರಿ ದುದೆನಲ್ ಬೀದಿವಂದುದು" (ಕಾರು. ೦೩); ಎಲ್ಲರೊಡಲ ಕಳವಳಿಗೆಯುಮ್

ಬೀದಿವರಿದೊಕ್ಕಲಿಕ್ಕಿತ್ತು ರಕ್ಕಸಮಿಗಂ (ಪಕಕಾ. ೬-೭): ಕೂರಂಕುಶದಲಾನೆಯು ಬೆಗಡುಗೊಳಿಸಲು ಬೀದಿವರಿದುದು ಸುಭಟರೆದೆಯೊಡೆಯೆ (ಕುವ್ಯಾದ್ರೋ. ೩-೧೩). ೩. ಬೀದಿಗೆ ನುಗ್ಗು; ರಸ್ತೆಗೆ ಧಾವಿಸು: ವ್ಯೈ ನಡನಡುಗಿ ಬೆಪರುತ ಬೀದಿವರಿವುತ್ತೊಡನೊಡನೆಯೊರಲಿದಳು ರಕ್ಕಸಿ ಬೆಟ್ಟ ಬರಿವಂತೆ (ಶಿಭಾಗ. ೧೦-೫-೪೦). ೪. ಮುನ್ನುಗ್ಗು: ಮುಂದುವರಿ: ಕರದೊಳ್ ಕಿಟ್ಟಿ ಕಠಾರಂಬೆರಸದಟಿಂ ಬೀದಿವರಿಯುತಿರ್ಕಲಸಂಸಂಹರಿಸುತ್ತಾ ದನಿವಟೀಯಿಂದರಸನಿದಿರ್ಗೊರ್ವ ವೀರಸೆಬ್ದಿದನಾಗಳ್ (ದಕಕು. ೬-೧೦೬); ಅವನಿಪಾಲಕುಮಾರಕಂಠೀರವನು ರಣದಲಿ ಬೀದಿವರಿದುತ್ಸವದಲಹಿತರನಿಜೀದು . . . ವಾಸವನ ಸಿಂಹಾಸನವನಡರುವ ತವಕದಲಿ ಜಾಱಿದನು (ಕುವ್ಯಾದ್ರೋ. ೭-೩). ೫. ಹಬ್ಬು: ಹರಡು; ವ್ಯಾಪಿಸು: ಮುತ್ತಮೊತ್ತರಿಸಿ ಬಯಲೊಳ್ ಬೀದಿವರಿದುಂ ಬಟ್ಟೆಯೊಳ್ ಬಿದ್ದಂಬರಿದುಂ . . . ತತ್ತಮೋಬಳಂ . . . ಸಕಳಜಗವುನಂಡಲೆದು ನೆಲಸೆ (ವರ್ಧಪು. ೬-೩೨ ವ); ತೊಟ್ಟ ಮುತ್ತಿನ ತೊಡಿಗೆಗಳ ಬೆಳಗು ದೆಸೆಯ ಪಸರಿಸಿ ಪರ್ಬಿ ಬೀದಿವರಿಯೆ (ಹಕಕಾ. ೪-೮); ರಿಪುವನನಿಕರದಲಿ ಸಲೆ ಬೀದಿವರಿದುದು ಭೀಮದಾವಾಗ್ನಿ (ಕುವ್ಯಾದ್ರೋ. ೧೨-೨೪).

ಬೀದಿವರಿದಾಡು = ೧. ಸ್ವೇಚ್ಛೆಯಾಗಿ ತಿರುಗು. ೨. (ಅಲಂ) ಮನಸ್ಸಿಗೆ ಬಂದಂತೆ ವರ್ತಿಸು: ರಕ್ಕಸದೋಟಿಗರ ಹೊಯ್ವೊರಸಿ ಬನದಲಿ ಬೀದಿವರಿದಾಡಿದನು ಕಲಿಹನುಮ (ತೊರರಾ. ೫-೪-೧೪).

[ಬೀದಿ + ಪರಿ$_2$]

**ಬೀದಿವರಿ$_2$** (ನಾ). ೧. ಸಂಚಾರ; ಚಲನೆ: ಕಾದುಕೊಳ್ಳೆನುತೆಚ್ಚ ನಂಬಿನ ಬೀದಿಪರಿ ಬಲುಹಾಯ್ತು (ಕುವ್ಯಾದ್ರೋ. ೧೪-೪); ಆದುದೀರ್ವರ್ಗೆ ಸಮರಂಗವಂಬಂಬುಗಳ ಬೀದಿವರಿಗಿಂಬಿಲ್ಲವಾಗಸಂ ಬೊಬ್ಬೆಯ ನಿನಾದಕಾಶಾತಟಂ ಸಾಲದು (ಜೈಪು. ೩೯-೧೦). ೨. ಸ್ವೇಚ್ಛೆಯಿಂದ ಕೂಡಿದ ನಡೆ; ಸ್ವಚ್ಛಂದವಾದ ಓಡಾಟ: ಬಿಟ್ಟ ಮಂಡೆಯ ಬೀದಿವರಿಗಳ ಕಟ್ಟಲುಹುಗಳ ತೆಗೆದ ಸರಕಿನ ಮೊಟ್ಟೆಗಳ . . . ಪುರಜನಪಱಳದೆಸೆಯಲಿ ಪಟ್ಟಣವ ಹೊಱವಡುತಲಿರ್ದುದು (ತೊರರಾ. ೫-೬-೭೮). ೩. (ಅಲಂ) ಸ್ವೇಚ್ಛೆಯಿಂದ ಕೂಡಿದ ವರ್ತನೆ,—ನಡವಳಿಕೆ: ಆದುದಾವಿರ್ಭಾವ . . . ಇಂದ್ರಿಯದ ಬೀದಿವರಿಗಳ ಬಹಳವಿಷಯವಿಭೇದಸಹಿತ ದಿಗಾಂಶುಗೆ (ಶಿಭಾಗ. ೩-೩-೧೪). [ಬೀದಿ + ಪರಿ$_3$]

**ಬೀದಿವರಿಗ** (ನಾ). ಮುನ್ನುಗ್ಗುವವನು; ಮುಂದಕ್ಕೆ ಧಾವಿಸುವವನು: ಬೀದಿವರಿಗರ[ಪಾಠಾಂ. ಳ] ಬೆರಳ ಸೋಂಕಿನಲಿ ತಳಪುಗುಚಿದವು ತೋರಗಿರಿ . . . ಕಡುಹೆಂತೊ ಕಪಿರಾಜೇಂದ್ರಸೈನಿಕದ (ತೊರರಾ. ೬-೫-೧೩).

[ಬೀದಿವರಿ$_1$ + — ಗ$_2$]

**ಬೀದಿವರಿಯಿಸು, ಬೀದಿವರಿಸು** (ಕ್ರಿ). ೧. ಹಬ್ಬಿಸು; ಹರಡುವಂತೆ ಮಾಡು: ಪಲ್ಲವದ ಶೋಭೆಯಂ ಪಳಚ್ಚನೆ ಮೆಱೆವ ಬಾಲಗಚ್ಚೆಯ ಬೆಳ್ದಿಂಗಳಂ ಬೀದಿವರಿಯಿಸುವ ಪೊಸಮುತ್ತುಗಳ ಮೊತ್ತದಿಂ (ಶಾಂತೀಶ್ವ. ೬-೯೩ ವ). **ಬೀದಿವರಿಸು:** ೨. ಬೀದಿಯಲ್ಲಿ ನಡೆಸು,—ಸಾಗುವಂತೆ ಮಾಡು: ತೇಜಿಗಳನು ಕುಣಿಸುವರು ಕಲಭವನು ಮಾಜದೆ ಬೀದಿವರಿಸುವ ರಾಜಕುಮಾರರ . . . ಸೌಭಾಗ್ಯ ನೆಱೆ ವಿಭ್ರಾಜಿಸಿತಾ ಕೇರಿಯೊಳಗೆ (ಕಂನಪಿ. ೭-೧೧). ೩. ಮುಂದೆ ನುಗ್ಗುವಂತೆ ಮಾಡು.—ಧಾವಿಸುವಂತೆ ಮಾಡು; ಮುನ್ನುಗ್ಗಿಸು: ಕರಿಗಳ . . . ದುರಗಲಿ ಜೋದರು ಬೀದಿವರಿಸುತಾಗಳುರವಣಿಸಿದರಾಕ್ಷಣದೆ (ಕಂನಪಿ. ೧೬-೯೩).

[ಬೀದಿವರಿ$_1$ + — ಇಸು$_3$]

**ಬೀದಿವರಿವರಿ** (ಕ್ರಿ). ಮುಂದೆ ನುಗ್ಗು; ಧಾವಿಸು: ಅಹಿತಕುಮಾರಶತಕವ ತಲೆಯನರಿವೆನು ಸುರರುಘೋಯೆನೆ ಬೀದಿವರಿವರಿದು ಗೆಲವ ಸೂಱೆಯ ಕೊಂಬೆನು (ಕುವ್ಯಾದ್ರೋ. ೫೦. ೨೭೯). [ಬೀದಿವರಿ$_2$ + ಪರಿ$_2$]

**ಬೀದಿವರಿಸು** 'ಬೀದಿವರಿಯಿಸು' ನೋ.

**ಬೀದಿವಱಿ$^3$** (ನಾ). ಬೀದಿಯಲ್ಲಿ ಬಡಿಯುವ ತಮಟೆ; ರಸ್ತೆಯಲ್ಲಿ ಬಡಿಯುವ ಡೋಲು: ಪಂಡಿತರುಂ ವಿವಿಧಕಳಾಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ಕಂಡರ್ ಕೇಳ್ವೊಡೆ ಗೊರವರ ಡುಂಡುಬಿಯೋ ಬೀದಿವಱಿ$^3$[ಪಾಠಾಂ. ರಿ]ಯೆ ಬೀರನ ಕತೆಯೋ (ಶಬ್ದಸಾ. II. ೪೧: ಶಬ್ದಮಣಿ. ೧-೫೭ ನೋ). [ಬೀದಿ + ಪಱಿ$^3$$_1$]

**ಬೀದಿವಾಡ** (ನಾ). ಬೀದಿಯ ಎರಡುಕಡೆಗಳಲ್ಲಿ ಇರುವ ಸೌಧ,—ಮಹಡಿಮನೆ: ಮುಂಡಾಡುವಂತಾಗಸಕೆ ನೆಗೆದ ಬೀದಿ[ಪಾಠಾಂ. ನೆಲೆ] ವಾಡಂಗಳ (ಕಬ್ಬಿಕಾ. ೧೮). [ಬೀದಿ + ಮಾಡ$_1$]

**ಬೀದಿವಾಡು** (ನಾ). ೧. ಬೀದಿಯಲ್ಲಿ ಹೇಳುವ ಹಾಡು: ಪ್ರೌಢವಲ್ಲದ ಕಾವ್ಯ: ನೀರಸರಱಿವಂತೇನಿದು ತಾರೆಲೆಯೋ ಬೀದಿವಾಡೆ ನೆರವಿಯ ತುಮುಕೇ (ಗಿರಿಜಾ. ೧-೩೦); ಮಹಾಮಹಾಪಂಡಿತರ ಸಭೆಯಲ್ಲಿ ಈ ಬೀದಿವಾಡು? (ತುಂಗಭ. ೬೨). ೨. ಸಾಮಾನ್ಯಜನರು ಹಾಡುವ ಹಾಡು; ಜನಪ್ರಿಯವಾದ ಹಾಡು: ಅವರು ಬೀದಿವಾಡುಗಳನ್ನು ಬರೆದಿದ್ದಾರೆಯೋ? (ಚಿತ್ರಸ್ವ. ೫೦ ಮುನ್ನುಡಿ). [ಬೀದಿ + ಪಾಡು$_2$]

**ಬೀದಿಸುದ್ದಿ** (ನಾ). ೧. ಬೀದಿಯಲ್ಲೆಲ್ಲ ಹರಡಿರುವ ಸಮಾಚಾರ: ಎಲ್ಲರೂ ಮಾತಾಡಿಕೊಳ್ಳುವ ಸುದ್ದಿ: ಹಾದಿಸುದ್ದಿ: ನಗರವಲ್ಲೆಲ್ಲ ಬೀದಿಸುದ್ದಿಯಾಗಿ ಹರಡುತ್ತಿದ್ದ . . . ಅವನ ಮತ್ತು ಕಾತ್ಯಾಷಳ ವಿವಾಹವಿಷಯ (ಕೃಪರು. ೪೧೯). ೨. ನಿರಾಧಾರವಾದ ಸಂಗತಿ,—ಸುದ್ದಿ; ವದಂತಿ; ಗಾಳಿವರ್ತಮಾನ: "ವದಂತಿ. ಗಾಳಿಸಮಾಚಾರ; ಬೀದಿಸುದ್ದಿ" (cry. ೩೦೪೩). [ಬೀದಿ + ಸುದ್ದಿ]

**ಬೀದಿಹೋಕ** (ನಾ). (ಅಲಂ) ನಾಡಾಡಿ; ದಾರಿಹೋಕ: ಅತ್ಯಮೂಲ್ಯ ದಿವ್ಯರತ್ನದ ಬೆಲೆಯನ್ನು ಒಬ್ಬ ಸಾಮಾನ್ಯ ಬೀದಿಹೋಕ. ಕೇವಲ ನಾಡಾಡಿ ಅರಿಯಲಾರ (ತುಂಗಭ. ೨೩). [ಬೀದಿ + ಹೋಕ (<ಪೋಕ)]

**ಬೀಬಿ. ಬಿಬ್ಬಿ** (ನಾ). ೧. ಮುಸಲ್ಮಾನ ಹೆಂಗಸು: (ಶ). ೨. ಹೆಂಡತಿ; ಪತ್ನಿ: ಜುಟ್ಟುಳ್ಳ ನೊಟಿನ ಪಾರಿವಾಳಗಳು. ದೊಡ್ಡ ಸಾಹೇಬನ ಬೀಬಿಗಳು . . . ಇದೆಲ್ಲಾ ಸ್ವಪ್ನದಂತೆ (ಶಿಬಿಂರ. II. ೩೭೨); ನೀನೂ ನಿನ್ನ ಬೀಬಿಯೂ ಮಕ್ಕಳಿಗಾಗಿ ಹಂಬಲಿಸುತ್ತಿದ್ದಿರಿ (ಮುಂಗಾರು. ೫). ೩. ರಾಣಿ; ಅರಸಿ: ಈ ಮಗು ಕಣ್ಣೂರ ಬೀಬಿಯದು (ರಾಜೇಂದ್ರ. ೬೫). **ಬಿಬ್ಬಿ:** ೩. ಬಿಬ್ಬಿಯರ ಮೋಹರದೊಳು ಬಂದನಂದೋಲಗಕತಿವೇಗದೊಳು (ಕುರಾಗಾಂ. ೪೦-೨); ಆನೆಯ ಮೇಲೆ ತೊಟ್ಟಿಲ ಚಪ್ಪರದಲಿ ಸುಮ್ಮಾನದ ಬಿಬ್ಬಿಯರೊಡನೆ ಆನಂದವಾಡುತ ಬರುವ ಖಾನರುಗಳನೇನ ಬಣ್ಣಿಸುವೆನು (ಕಂನಪಿ. ೧೧-೩೦). [←ಪಾರ. ಬೀಬೀ; ಹಿಂ. ಬೀಬೀ. ಬೀವೀ; ಮರಾ. ಬಿಬೀ, ಬಿಬ್ಬೀ. ಬುಬೂ]

**ಬೀಭತ್ಸ** (ಗು). ೧. ಅಸಹ್ಯಕರವಾದ; ಜುಗುಪ್ಸೆಗೊಳಿಸುವ; ಹೇಸಿಕೆಯನ್ನುಂಟುಮಾಡುವ: ತಲೆಗಳೊಟ್ಟಿಲ ಕರಿಗಳಟ್ಟೆಯನೆಳೆವ ರಕುತದ ಹೊನಲ ಮುಂಡದ ಲಳಿಯ ನಾಟ್ಯದಲೆಸೆದುದ್ಯೆ ಬೀಭತ್ಸರೌದ್ರವಲಿ (ಕುವ್ಯಾಕ. ೧೫-೨೭). ೨. ಹಾನಿಕರವಾದ; ಕೇಡುಂಟುಮಾಡುವ. ೩. ಭಯಂಕರವಾದ; ಭೀಕರವಾದ; ಘೋರವಾದ. (ನಾ). ೪. ಅಸಹ್ಯ; ಜುಗುಪ್ಸೆ; ಹೇಸಿಕೆ: ನಕ್ತಂಚರರ ರುಧಿರಪಾನಕ್ಕೆ ಬೀಭತ್ಸ . . . ಎನಿಸಿದ ಹಿಮಕರನೆಸೆದಿರುತ್ತಿರ್ದನು (ಹಕಕಾ. ೩-೪೫); ಇಷ್ಟ ಮೋಹಕ ದಿವ್ಯಗುಣಗಳೊಂದು ಕಡೆ ಕಷ್ಟ ಬೀಭತ್ಸ ಘೋರಂಗಳೊಂದು ಕಡೆ (ಮಂಕುತ. ೨೩). ೫. ಅಸಹ್ಯಕರವಾದುದು; ಜುಗುಪ್ಸೆಯನ್ನುಂಟುಮಾಡುವಂಥದು: ಪಂಡಿತರು . . . ಒಂದು ಹಿಂದಿನ ಕಾಲದ ಪಂಡಿತ—ರಸಿಕತೆಯನ್ನು ಪ್ರಯೋಗ ಮಾಡಿದರು. ಅದು ಸ್ವಲ್ಪ ಬೀಭತ್ಸವಾಗಿತ್ತು (ಬಿಂಶಿಮ. XXVi ಕಿರಿಕಾಣಿಕೆ). ೬. = ಬೀಭತ್ಸರಸ:

ವೀರ . . . ಬೀಭತ್ಸ ಮಹಾಸಾರತರಹಾಸ್ಯ ಶಾಂತಾಧಾರಂ ನವವಿಧವಿಭ್ರಮಾ ರಸಮಾರ್ಗಂ (ಕವಿರಾ. ೩-೦೯೯); ಕೃತ ಜುಗುಪ್ಸನಂ ಬೀಭತ್ಸಂ (ಕಾವ್ಯಾವ. ೮೫೦): ಬಳಿಕ ಶೃಂಗಾರ ಹಾಸ್ಯ . . . ಬೀಭತ್ಸಾದ್ಭುತ ಶಾಂತಂಗಳೆಂಬ ನವರಸಾವಸ್ಥೆಯಂ ಪಡೆವುತ್ತಿರ್ಪುದೆಂಬ ರಸಜ್ಞತೆಯಿಂ (ಲೀಲಾವ. ೫೨೭). ೭. [ನಾಟ್ಯ] ಎಂಟು ಬಗೆಯ ರಸದೃಷ್ಟಿಗಳಲ್ಲಿ ಒಂದು ; P "ಅಲಿಯನ್ನೂ ರೆಪ್ಪೆಯನ್ನೂ ಚಲಿಸಿ ರೆಪ್ಪೆಯನ್ನು ಅರ್ಧ ಮುಚ್ಚಿ ಕಡೆಗಣ್ಣಿನಿಂದ ನೋಡುವುದು . . . ಜುಗುಪ್ಸೆಯನ್ನು ಅಭಿನಯಿಸುವಾಗ" (ರಾಸ್ಮರಂ. ಗದ್ಯಾನುವಾದ ೨೬೭): ಮಿಗೆ ಚಲಿಸೆ ತಾರೆ ಮತ್ತಂ ಮುಗುಳ್ದಿವೆ ನೋಡಲ್ಕೆ ನಿಲ್ಲದಿರ್ದಾಪಾಂಗಂ ಸೊಗಯಿಪ ಬೀಭತ್ಸಾಖ್ಯಂ ನೆಗಳ್ದಂ ಸಲೆ ದಿಟ್ಟಿ ಮದನಮೋಹನರೂಪೇ (ರಾಸ್ಮರಂ. ೩-೦೭). [ ಸಂ. ]

**ಬೀಭತ್ಸರಸ** (ನಾ). [ಕಾವ್ಯವಿಮ] ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಮತ್ತು ಶಾಂತ ಎಂಬ ಒಂಬತ್ತು ಬಗೆಯ ರಸಗಳಲ್ಲಿ ಒಂದು ; ಜುಗುಪ್ಸೆಯ ಅನುಭೂತಿ ; ಅಸಹ್ಯದ ಅನುಭವ : ಉತ್ಸವದಿಂದೆ ಹಾಸ್ಯರಸಮಾಮಧುರೋಕ್ತಿಗಳಿಂದಮಲ್ತೆ ಬೀಭತ್ಸರಸಾಂತರಂ ಶಿಥಿಲ ಬಂಧನದಿಂ (ಶಬರಾ. ೨-೦೦೦) ; ಪುಲ್ಲಂ ಕರ್ಚಿ ಕೊಲ್ಲದಿರೆಂದು ಪಲತೆಱದ ನಾಣಂ ತೊಱೆದು ಬೆಂಗೊಟ್ಟೋಡಿದಿಂದ್ರನೋಟವುನಭಿನಯಿಸಿಯಾಡಿ ತೋರ್ಪ ವೈತಾಳಿಕರಿಂ ಬೀಭತ್ಸರಸಮುಂ ಇಂತು ನವರಸಂಗಳಿಂದಭಿನವರಸಂಗಳಾಗಿ ನೆಗಱುತ್ತುಮಿರೆ (ಜಗಪು. ೨-೩೯ ವ). [ಸಂ.]

**ಬೀಭತ್ಸು** (ಗು). ೧. ಭೀಕರವಾದ ; ಭಯಂಕರವಾದ ; ಘೋರವಾದ; ಭಯಾನಕವಾದ : ಕಾಕೋಳೂಕಸೃಗಾಲಶಾರ್ದೂಲೋಪ್ಪಖರಮುಖಂಗಳನನುಕರಿಸುವ ಮಹಾ ಬೀಭತ್ಸುಕುತ್ಸಿತೋತ್ಪತ್ತಿಸ್ಥಾನಂಗಳೊಳ್ (ಸುಕುಮಾ. ೧೦-೯೦ ವ). (ನಾ). ೨. ಅಸಹ್ಯಕರವಾದುದು ; ಜುಗುಪ್ಸೆಯನ್ನುಂಟು ಮಾಡುವಂಥದು : ಬಹುಮಲಪರಿಪೂರ್ಣಮುಮನವರತನಿಷ್ಯಂದಶ್ರೋತಾಖಿಲಗಂಧಿಯುಂ ಅತಿಬೀಭತ್ಸುವುಂ . . . ಅಪ್ಪುದು (ಅಜಪು. ೮-೨೮ ವ). ೩. ಅರ್ಜುನನ ಹೆಸರುಗಳಲ್ಲಿ ಒಂದು : ಬೀಭತ್ಸುವಿನ ಕೈ ಮನದಳವನಱಿಯಿಾ ಕಂಡು ಕಂಡು ಕಾಣುತ ಮರಳಹರಿಯೆಂದ (ಕುಮಾವ್ಯಾಉ. ೩-೦೩೪) ; ಉತ್ಸವದೊಳಧ್ವರಹಯಂ ಮುಂದೆ ನಡೆಯೆ ಬೀಭತ್ಸು ಮೊದಲಾದನುಜರೆಡದೊಳಡಿಯಿಡೆ (ಕೃಷ್ಣರಾಜಾ. ೬-೨೩). [ಸಂ.]

**ಬೀಮ**, ಬೀವ (ಗು). ೧. ಭಯಂಕರವಾದ ; ಭೀಕರವಾದ : (?). (ನಾ). ೨. ಪಂಚಪಾಂಡವರಲ್ಲಿ ಎರಡನೆಯವನು ; ಭೀಮ : ಭೀಮ—ಬೀಮ (ಶಮಂದ. ೨೩೩ ಶ್ರಯೋ). ೩. ಒಬ್ಬಾತನ ಹೆಸರು: ಬೀಮ ಗೋಸಾಸಿ ನಿಱಿಸಿದ (ಎಕ. VII, ಶಿಕಾ. ೬೦-೦೦; 978); ಮೊರಮೊರಡೆಯ ಮಗ ಬೀಮನ ಧಮ್ಮ (ಎಕ. XIV, ಎಳಂದೂ. ೭೯-೨ ; 16ನೆಯ ಶಶ).

**ಬೀವ** : ೨. ಭೀಮ—ಬೀವ (ಶಮಂದ. ೨೬೩ ಶ್ರಯೋ). ೩. ಬಟ್ಟಿಗ ನಟ್ಟವುಣ್ಣಾಗೆಯ್ಯೆ ಶೇಶಿಗಳ ಬೀವನುಗ್ಗವುಣ್ಣಂಗೆಯ್ಯೆ (ಎಕ. VIII, ಸೊರಬ. ೨೦೨-೪ ; 956). [< ಸಂ. ಭೀಮ]

**ಬೀಮಯ** (ನಾ). ಒಬ್ಬಾತನ ಹೆಸರು : ಬೀಮಯ ಗಂಡಕ್ಕಂ ಕೊಟ್ಟು (ಎಕ. IV, ಗುಂಡ್ಲುಪೇ. ೬೭-೦೩; ಸು. 750). [ಬೀಮ + ಅಯ್ಯ$_1$ (<ಅಯ್ಯ$_{61}$)]

**ಬೀಮಾ** 'ವಿಮೆ' ನೋ.

**ಬೀಮಾದಸ್ತೈವಜು** (ನಾ). ವಿಮೆಯ ದಾಖಲೆ, – ಕರಾರುಪತ್ರ : ಮರಣದ ಅಥವಾ ನಷ್ಟದ ರುಜುವಾತನ್ನು ಇನ್‌ಷ್ಯೂರರುಗಳೆಂಬ ಬೀಮಾ ದಸ್ತೈವಜು ಮಾಡಿಕೊಡುವವರಿಗೆ ಕೊಟ್ಟುಕೊಡಲೇ (ಗ್ರಾಮಾಕ. ೦೬೭).

[ಬೀಮಾ (< ವಿಮೆ) + ದಸ್ತೈವಜು (<ದಸ್ತಾವೇಜು) ]

**ಬೀಯ$_1$** (ನಾ). ೧. ಅಕ್ಕಿ : ಮಂತ್ರಾಕ್ಷತೆಯ ನಿವಹದಿಂ ಸಪ್ತಲಕ್ಷಪ್ರವಾಳೀಪ್ರಜೆಗಂ ಬೀಯಮಂ ಕರಂ ತಾನೆಸಲಧಿಕತರಾಲಂಕೃತಂ ಕೌರವೇಂದ್ರಂ(ಕಾವ್ಯಸಾ. ೯೦೦) ; ಕಾಯಕವ ಮಾಡಿಯದ ಮಾಱಿದಾ ಧನದಿಂದ ಬೀಯವಂ ತಂದು ಬೋನವ ಮಾಡಿ ಚರಲಿಂಗ ಕಾಯಕದಿಯಾರೋಗಣೆಯ ಮಾಡಿಸಿದನು (ಏಶಿತಂ. ೩೮-೯೮). ೨. ಆಹಾರ ; ಊಟ ; ಉಣಸು : ಬೆವಸಾಯದ ಮಾಡ ಮನೆಯ ಬೀಯ[ಪಾಠಾಂ. ಬಿಯ್ಯ]ಕ್ಕೆ ಬತ್ತವಿಲ್ಲದಿರ್ದಡೆ ಆ ಬೆವಸಾಯದ ಘೋರವೇತಕಯ್ಯ (ಅವತಂ. ೦೬-೬೩) ; ನೀನಿಕ್ಕಿದ ಬೀಯದಲ್ಲಿ ವಂಚನೆಯುಳ್ಳರೆ ಸಂಗಾ ನಿಮ್ಮ ತೊತ್ತುತನಕ್ಕೆ ದೂರವಯ್ಯಾ (ಬಸವ. ೪೩೩) ; ಅಮೃತವೇ ಮನೆಯ ಬೀಯ (ಹಕಲಾ. ೨-೦). ೩. ಔತಣ; ಭೋಜನ : ಅರಸ ಹೊಱವಡು ಭೀಮ ಪಾರ್ಥರ ಕರುಳ ಬೀಯವ ಭೂತನಿಕರಕೆ ಬಱಿಸುವೆವು (ಕುವ್ಯಾಗ. ೪-೩೩) ; ರಾಯಸವನು ಕೊಟ್ಟು ಬೀಯವುನೊಲಿದಿತ್ತು ರಾಯಾನವನ ಬೋಳೈಸಿ (ಅಂಜಶ. ೭-೦೦). ೪. ಸಮಾರಾಧನೆ : ಸೌಂದರಂ ಪರವೆಯಲ್ಲಿಗೆ ಬಂದು ತಿರುನಾಳ ಬೀಯ[ಪಾಠಾಂ. ಬಿಯ್ಯ]ಕ್ಕೆ ಪುರಕೆ ಪೋದಪೆನೆಂದು ನುಡಿಯೆ (ಸಂಶಿರ. ೦೬-೬೪) ; ನೆರೆಯದೇ ಸ್ವಾಮಿ ಈ ಪೊಸ ಪೊನ್ನ ರಾಶಿ ಸುರಗಿರಿಯಂತಿರಿದೆ ಪರವೆನಾಚಿಯರ್ಗಾನೀವ ತಿರುನಾಳ ಬೀಯಕ್ಕೆನುತ್ತ ಸೌಂದರನು ಬಿನ್ನೈಸೆ (ಸೌಂದಪು. ೦೦-೦೭). ೫. (ಧಾನ್ಯರೂಪದಲ್ಲಿ ಕೊಡುವ) ಒಂದು ಬಗೆಯ ತೆರಿಗೆ; ಸುಂಕ : ಬಿಟ್ಟ ಬೀಯಂ ಈನ್ನಿವಱ (ಬೊಂಕಶಾ. ೦೯೩೪, ರಾಜಶಿಕಾಪ್ರರು. ೬-೨೦ ; 955); ಈ ಬಸದಿಯ ವೃತ್ತಿಯೆಲ್ಲವಕ್ಕಂ ದೇವಿದೆಱೆ ಅಡೆಗಚ್ಚು ಕಾಣಿಕೆ ಸೇಸೆ ಬಿದ್ದು ಬೀಯ ಮೊದಲಾಗೆ . . . ಸರ್ವಬಾಧಾಪರಿಹಾರವಂ ಮಾಡಿದರ್ (ಎಕ. VIII, ನಗರ. ೩೭-೦೩೩ ; 1077).

[ದೇ. ತಮಿ. ವೀಯ ; ತೆಲು. ಬೀಯ, ಬಿಯ್ಯ ; ಕೋಲಾ. ಬೀಯವ್./ಪ್ರಾ. ಬೀಅ./ಹಿಂ. ಬೀಯಾ./ಸಂ. ಬೀಜ]

**ಬೀಯ$_2$** 'ಬಿಯಗ' ನೋ.

**ಬೀಯ$_3$** 'ಬಿಯ' ನೋ.

**ಬೀಯಂಗೆಯ್** 'ಬಿಯಂಗೆಯ್' ನೋ.

**ಬೀಯಕಾಱ** 'ಬಿಯಕಾಱ' ನೋ.

**ಬೀಯಗ$_1$** 'ಬೀಗ'$_1$ ನೋ.

**ಬೀಯಗ$_2$** 'ಬಿಯಗ$_2$' ನೋ.

**ಬೀಯಗತನ** 'ಬಿಯಗತನ' ನೋ.

**ಬೀಯಗಿತ್ತಿ** 'ಬೀಗಿತ್ತಿ' ನೋ.

**ಬೀಯದ** 'ಬ್ಯಾದ' ನೋ.

**ಬೀಯು** 'ಬೀ' ನೋ.

**ಬೀಯ್ಯಗ$_1$** 'ಬೀಗ$_1$' ನೋ.

**ಬೀಯ್ಯಗ$_2$** (ನಾ). (?) : ಹುಯಿ ಬೀಯ್ಯಗವನು ಕಾಲ್ಪಿಡಿಯ ಜನಪಿತ್ತ ಹರಿಹರ ವರಗುಡು ಮತಿಗೆ (ದೀವಾಂಕು. ೦-೬೭). [?]

**ಬೀಯ್ಯಗಮುದ್ರೆ** 'ಬೀಗಮುದ್ರೆ' ನೋ.

**ಬೀರ್$_1$** 'ಬೀಱು$_1$' ನೋ.

**ಬೀರ್$_2$** 'ಬೀರು$_2$' ನೋ.

**ಬೀರ** (ನಾ). ೧. ವೀರ ; ಶೂರ ; ಕಲಿ : "ಬೀರರೆನಲ್ ವೀರರೊಳಂ" (ಕವಿರಾಮ. ೯೨); ಕುರುಬಲದೊಳ್ ಕರಂ ನೆಗಟ್ಟ ಬೀರರ ಚಿನ್ನರ ಸಂದ ಚಿನ್ನಪೊಂಗರ ತಲೆ ತಾಟಪಣ್ ಕೆದಱಿದಂತೆ ನಿರಂತರಮಾಜಿರಂಗದೊಳ್ ಪರೆದಿರೆ (ಶಂಕಶಾ. ೯-೦೦೬) ; ಬೀರರ್ ದಾರಿಗೆಟ್ಟರಂತೆ ಬೆದಱಿ (ರವಾರ್ಜು. ೨-೯೯). ೨. ಶೌರ್ಯ ; ಕಲಿತನ : ಕುಲಮೆಂಬುದುಂಟೆ ಬೀರಮೆ ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ (ಶಂಕಶಾ. ೨-೯೩); ಮರುಳ್ಗಣಸಾಗಿ ಯುದ್ಧದೊಳ್ ಕಱಿದಱಿಯಾಗಿ ಬಿಷ್ಟಿಂಬಲಂಗಳ ಪೇಟವೆ ನಿನ್ನ ಬೀರಮಂ (ಗದಾಯು. ೨-೩). ೩. ಒಬ ದೇವತೆಯ

ಹೆಸರು ; ವೀರಭದ್ರ : "ಜನ್ನವಗೆಯುಂ, ಎಂಟಡಿವರಿಜಂ, ಬೀರಂ . . . ಈ ೫ ವೀರಭದ್ರಂಗೆ ಪೆಸರ್" (ಶಬ್ದಾ. ೯೭-೬) ; ಉರಿಗಣ್ಣಿನೊಗೆದ ಬೀರಂಬೆರಸೊವಿದ ನಂಜುರೂಪುವೆತ್ತೊಲೇನಚ್ಚರಿಯುಂ ಪುಟ್ಟಿಸಿದರೊ ಬಂದೆರಡುಂ ಕೆಲದಲ್ಲಿ ನಿಂದ ಬೀರ ಗಣೇಸರ್ (ಕನ್ನಕಾ. ೦೬೦) ; ಭೈರವ ಬೊಮ್ಮರಕ್ಕಸ ಕಾಳ ಜಟ್ಟಿಗ ಬೀರ ಬೇತಾಳರಾರೊಳರು ಬೀರತೆಯುಳ್ಳವರ್ಗಳು ನಿನ್ನಸುಗಾವೊಡಾರಾದರುಮಡ್ಡ ಬರಲಿ (ಶ್ರೀಪಾಂ. ೯-೫೯). ೪. ಈಶ್ವರ : ತುಳುವದಲ್ಲಿ ಜೈನಧರ್ಮಾವಲಂಬಿಗಳೂ ಈ ಭೂತಾರಾಧನೆಯ ಕಟ್ಟಿಗೆ ಒಳಪಡಬೇಕಾಯಿತು. ರಕ್ತೇಶ್ವರಿಯೂ (ಲೆಕ್ಕಿಸಿರಿ), ಈಶ್ವರನೂ (ಬೀರ) ತುಳುವದ ಪ್ರಧಾನದೈವತಗಳು (ತುಳುನಾ. ೨೩೯). ೫. ಒಬ್ಬಾತನ ಹೆಸರು : ಆತನ ಮಗ ಬೀರನೆಂಬೋನು ಗಾದಿಂಗಾಯಿಗನುಮಿಾ ಕಲ್ಲನಿಱಿಸಿದ (ಎಕ. VIII, ಸೊರಬ. ೨೦೬-೯ ; 903) ; ಮಾರಸಂದ್ರ ಕೆಯ ಕೊಟ × ಗಳವೆಯ ಬೀರ ಕೊಟ (ಎಕ. II (R), ೬೨-೨ ; ಸು. 1150).

ಬೀರದೇಟ್ಗಿ, ಬೀರದೆಳ್ಗಿ = ಪೌರುಷದ ಏಳಿಗೆ, — ಅಭಿವೃದ್ಧಿ : ಚಾಗದ ನೆಗಟ್ತಿಯೊಳ್ ಬೀರದೇಟ್ಗಿಯೊಳ್ ನೆಗಟ್ತೆ ಮಗಂ (ಕಂಶಶಾ. ೦-೯೨) ; ಕಂತುಗೆ ಪೂಜಾರ್ಥಮಿದೆಂದು ಸುಯ್ಗೆಱಗುವುನ್ನತ್ತಾಳಿಯಿಂ ಬೀರದೇಟ್ಗಿಗಳಂ ಪಾಡಿಸುತುಂ ಜಯಧ್ವಜಮನೆತ್ತಿರ್ಪಂತಿರ್ದ ಮಾಲೆಗಳುಂ ತೋಳ್ಗಳುವೊಪ್ಪೆ ಕಣ್ಗೊಳಿಸುತಿರ್ಕುಂ ಪುಷ್ಪಲಾವೀಜನಂ (ಜಗದ. ೯-೦೧೩); ಭುಜಾಸಿಯೊಳೊಪ್ಪಿರೆ ಬೀರದೆಳ್ಗಿಯೊಳ್ (ಸೌಇಇ. IX-i, ೦೦೨-೦೦ ; 1046) ; ಚೋಳನೆ ಪೇಳನೆ ಬೀರದೆಳ್ಗಿಯಂ (ಕಇಆ. ೨-೨-೩೩ ; 1058). ಬೀರರ ಬಂಟ = ಪರಾಕ್ರಮಿಗಳಲ್ಲಿ ಪರಾಕ್ರಮಿಯಾದವನು ; ವೀರರ ವೀರ ; ಒಂದು ಬಿರುದು : × ಟಂಬಕಲಾನ್ವಿಕ ಬೀರರ ಬಣ್ಣ ಪರಿಕರ ನಕಿಗಂ (ಎಕ. II (R), ೯೯-೦; ಸು. 10ಶದು ೫೫). ಬೀರರ ಬೀರ = ಬೀರರ ಬಂಟ : ಶ್ರೀಗೆ ವಿಜಯಕ್ಕೆ . . . ಪೆಂಪಿಂಗಿನಿತರ್ಕ್ಕಾಗರವಿದೆನ್ದು ಕನ್ನಡದಾಗವಮದೊಳೆ ನೆಗಟ್ಗುವಲ್ತೆ ಬೀರರ ಬೀರ (ಎಕ. II, ೦೩೩-೬೬: 982); ಚತುರ್ಬಲಂಗಳೆ ಮೆಯ್ಗಳೊಳ್ ಬಗಿದಸುಂಗೊಳೆ ಸುಯ್ಯು ಕೆತ್ತುವ ಪುಣ್ಣ ಬಾಯ್ಗಳೆ ಬೀರಮಂ ಪೊಗಟ್ವ ಬಾಯ್ಗಳೆನಿಪ್ಪುವಣ್ಣನ ಪೆಂಪು ಬೀರರ ಬೀರನಾ (ಕಾವ್ಯಾವ. ೩೫). ಬೀರೇ ದೇವರು = ವೀರಭದ್ರ : ಅದೇನು ಜಾತಿ ಹೆಣ್ಣಪ್ಪ ಇದು. ಮಸಾಣದ ಬೀರೇದೇವರನ್ನ ಮಾದೇವಪ್ಪನ ಮಾಡೋ ಜಾತಿ (ಮುಲ್ಲ. ೦೨) ; ಮಾರವ್ಮನಿಗೆ ಗಂಡನಿಲ್ಲ, ಬೀರೇದೇವರಿಗೆ ಹೆಂಡತಿಯಿಲ್ಲ (ಗಾದೆ). [< ಸಂ. ವೀರ]

ಬೀರಕಡಗ (ನಾ). ಶೌರ್ಯದ ಗುರುತಿಗಾಗಿ ಧರಿಸುವ ಕೈಬಳೆ ; ವೀರಕಂಕಣ: ಬರೆವ ಕೆಯ್ಯು ಗಂಡುಗೆಡದೆ ಬೀರಕಡಗ ತೊಟ್ಟಿತು (ಗಂ. ೯೨-೦೩). [ಬೀರ + ಕಡಗ₁]

ಬೀರಕಲ್ 'ಬೀರಗಲ್ಲು' ನೋ.

ಬೀರಕ್ಕ (ನಾ). ಒಬ್ಬಾಕೆಯ ಹೆಸರು : ಬೀರಕ್ಕನ ಮಗಂ ಎಱೆಕಳಿಂಗಂ (ಮ್ಯಆಂ. ೦೯೯೯, ೦೦-೦ ; ಸು. ೯೨ಶದು ೫೫). [ಬೀರ + ಅಕ್ಕ₁]

ಬೀರಕ್ಕಿ (ನಾ). (ವಿವಾಹಕಾಲದಲ್ಲಿ ವಧೂವರರಿಗೆ) ಮಂತ್ರಪೂರ್ವಕವಾಗಿ ತಳಿಯುವ ಅರಸಿನ ಅಥವಾ ಕುಂಕುಮದಲ್ಲಿ ಕಲಸಿದ ಅಕ್ಕಿ; ಮಂತ್ರಾಕ್ಷತೆ : (ಎಸಮ್ಮ. II, ೨೯). [ಬೀರು (< ಬೀಱು₁) + ಅಕ್ಕಿ₁]

ಬೀರಗಂಗ (ನಾ). ಒಬ್ಬಾತನ ಹೆಸರು : ಗಂಗವಾಡಿಯ ತಿಗುಳರ ಬೆಂಕೊಣ್ಡು ಬೀರಗಂಗಂಗೆ ನಿವಿರ್ಚ್ಚಿ ಕೊಟ್ಟಂ (ಎಕ. II (R), ೫೬೦-೩೯; 10ಶದು ೫೫). [ಬೀರ + ಗಂಗ]

ಬೀರಗಚ್ಚೆ (ನಾ). ವೀರರು ಹಾಕಿಕೊಳ್ಳುವ ಒಂದು ಬಗೆಯ ಕಚ್ಚೆ ; ವೀರಗಚ್ಚೆ ; ₚ ಮಲ್ಲಯುದ್ಧ ಮುಂತಾದ ಕಾಳಗಸಮಯದಲ್ಲಿ ಧರಿಸುವ, ಚಲನವಲನಕ್ಕೆ ಅಡ್ಡಿಯಾಗದಂತೆ ಉಡುಪನ್ನು ಬಿಗಿಗೊಳಿಸುವ ಕಚ್ಚೆ : ವಸುಧೇಶನ ಕಣ್ಗೆ ನಸುಂ ಮಿಸುಗುವ ಪೊಸಮಸಿಯ ಪೊನ್ನ ಕೂರಂಕುಸವಾಳಿಸಿ ಬರಿಯ ಬೀರಗಚ್ಚೆಯೊಳೆಸೆದುದು ಕಾರ್ಮುಗಿಲ ಕೆಲದ ಕುಡುವಿಂಚಿನವೊಲ್ (ಶಂಧ್ರಪು. ೯-೯೦) ; ಪಂಚವಣ್ಣದ ಪಟ್ಟೆಯ ಬಿರುದಿನ ಬೀರಗಚ್ಚೆಗಟ್ಟಿರ್ದ ಬರಿಯ ನೇಜೆಯಮನೊಜೆಯಿಂದೆತ್ತಿ ಪಿಡಿದು ಸಮರಸಮಯಸಮುಚಿತನೈಪಥ್ಯಂಬಡೆದಬ್ಬರಿಸಿ ಬೊಬ್ಬೆಗೊಟ್ಟೆಱೆ (ರಾಜಶೇ. ೬-೦೦ ಪ). [ಬೀರ + ಕಚ್ಚೆ]

ಬೀರಗನಸು (ನಾ). ವೀರೋಚಿತವಾದ ಕಲ್ಪನೆ : ತನ್ನ ಮಕ್ಕಳ ಬೀರಗನಸುಗಳುಬ್ಬುತಿರೆ ನಸುನಗುವವಳು (ಹೊಂಗಳು. ೯ ೦೫). [ಬೀರ + ಕನಸು]

ಬೀರಗಲು 'ಬೀರಗಲ್ಲು' ನೋ.

ಬೀರಗಲ್ಲು, ಬೀರಕಲ್, ಬೀರಗಲು (ನಾ). (ಮಡಿದ) ವೀರನ ಸ್ಮಾರಕವಾಗಿ ನೆಡುವ ಕಲ್ಲು ; (ಸತ್ತ) ವೀರನ ನೆನಪಿಗಾಗಿ ನೆಡುವ ಕಲ್ಲು ; ವೀರಗಲ್ಲು ; ವೀರಶಾಸನ : ತುಱುವಂ ಮಗುಳ್ಚಿ ಸುರಲೋಕಪ್ರಾಪ್ತವಾದರು ಇ ಬೀರಗಲ್ಲ ಮಾಡಿಸಿದವನು ಪದು × × × (ಎಕ. XVI, ೫ಕ್ನಾ. ೬೦-೬; 1124) ; ಚೆಂನೋಜ ಮಾಡಿದ ಬೀರಗಲ್ಲು (ಮ್ಯಆಂ. ೦೯೩೨. ೬-೦೬ ; 1289). ಬೀರಕಲ್ : ಇ[ವ]ನ ತಮ್ಮ ಗಾವುಣ್ಣ ಸುವಿಲಂ ಬಿರಕಲ್ಲ ನಿಱಿಸ್ಸಿದ (ಎಕ. IV, ಹೆಗ್ಗಡ. ೭೩-೩೨; 1007 ?). ಬೀರಗಲು : ಅಂಕೋಜನು ದೇವಲೋಕಕ್ಕೆ ಸಲಬೇಕೆಂದು . . . ಪ್ರತಿಷ್ಠೆಯ ಮಾಡಿದ ಬೀರಗಲು (ಮ್ಯಆಂ. ೦೯೯೯, ೦-೭; 1286); ಆ ಬೀರಗಲಿಗೆ ಪೂಜೆ ಪುರಸ್ಕಾ × × × ತೊಗೊಡಗೆಯಾಗಿ . . . ಉದಕಧಾರಾಪೂರ್ವಕವ್ಮಾಡಿ ಕೊಟ್ಟ ಗದ್ದೆ (ಎಕ. XVI, ೫ಕ್ನಾ. ೭೬ ೦೦ ; ?). [ಬೀರ + ಕಲ್ಲು (<ಕಲ್₃)]

ಬೀರಗಾಸೆ (ನಾ). = ಬೀರಗಚ್ಚೆ : ಪೊಟ್ಟದ ಬಣ್ಣವಾವುಗೆಯ ಸಿಂಗರದುಟ್ಟ ಬೀರಗಾಸೆಯುಂದದ . . . ನಡೆವೊಂದು ಗಾಡಿಯ ಪುಷ್ಕಲಂ (ರಾಮಾಶ್ವ. ೯೯-೦೭). [ಬೀರ + ಕಾಸೆ₁]

ಬೀರಗುಡಿ (ನಾ). ಮೊರಸುಒಕ್ಕಲು ಪಂಗಡದವರು ವಿವಾಹಕಾಲದಲ್ಲಿ ಜರುಗಿಸುವ ಒಂದು ವಿಧಿ ; ₚ ಕೆಲವು ಮನೆತನಗಳಲ್ಲಿ ವಿವಾಹ ಕಾಲದಲ್ಲಿ ವರ ಮತ್ತು ಆತನ ಕಡೆಯವರು ಮೂರು ದಾರಿಗಳು ಕೂಡುವ ಜಾಗಕ್ಕೆ ಮಧ್ಯರಾತ್ರಿ ಹೋಗಿ, ಬೇಯಿಸಿದ ಆಹಾರವನ್ನು ಮನುಷ್ಯಾಕಾರದ ಚಿತ್ರಕ್ಕೆ ಅರ್ಪಿಸಿದ ನಂತರ ಯಾವ ಸದ್ದುಗದ್ದಲವಿಲ್ಲದೆ ಮತ್ತು ಹಿಂದಕ್ಕೆ ತಿರುಗಿ ನೋಡದೆ ಮನೆಗೆ ಮರಳುತ್ತಾರೆ. ಇದು ಯಾವುದಾದರೂ ಹಾನಿಕರವಾದ ಭೂತ ಪಿಶಾಚಿಗಳ ಶಾಂತಿಗಾಗಿ ಉದ್ದೇಶಿತವಾಗಿರುತ್ತದೆ (ಎಸಮ್ಮ. XV, ೦೫). [?]

ಬೀರಗೂಳ್ (ನಾ). ಯುದ್ಧದಲ್ಲಿ ಸತ್ತ ವೀರರ ಸಂಸಾರದ ಪೋಷಣೆಗಾಗಿ ರಾಜ, ಸಾಮಂತ ಅಥವಾ ಊರಿನವರು ಉಂಬಳಿ ಅಥವಾ ದತ್ತಿಯನ್ನು ಬಿಟ್ಟು ಕೊಡುತ್ತಿದ್ದ ಒಂದು ವಿಧಿ : ಬೈಚೇನಾಯಕನು ಬೀರಗೂಳ ಮಾಡಿ ಕಲ್ಲ ನಿಲಿಸಿದ (ಎಕ. VIII, ಸೊರಬ. ೭೯-೦೦ ; 1147). [ಬೀರ + ಕೂಳ್ (< ಕೂಟ್₁)]

ಬೀರಗೂಳೆತ್ತು (ಕ್ರಿ). ಯುದ್ಧದಲ್ಲಿ ಸತ್ತ ವೀರನ ಸಂಸಾರದ ನಿರ್ವಹಣೆಗೆ ರಾಜ, ಸಾಮಂತ ಅಥವಾ ಊರಿನ ಜನರು, ದತ್ತಿಯನ್ನು ಬಿಟ್ಟು ಕೊಡು : ಹಲ್ಲಬ್ಬೆಯಿಡದ ಕೆಟೆಯಂ ಕಟ್ಟಿಸಿ ಪರೋಕ್ಷ ವಿನೆಯಂಗಳಂ ಮಾಡಿ ಬೀರಗೂಳೆತ್ತಿ ಕಲ್ಲ ನಿಱಿಸಿದಳು (ಎಕ. VIII, ಸೊರಬ. ೯೭೯-೯ ; 1112); ಕೇತಯನಾಯಕ ವೀರಭಟಂಗೆ ಬೀರಗೂಳೆತ್ತಿ ಕಲ್ಲ ನಿರಿಸಿ ಕೃತಾರ್ಥನಾದ (ಎಕ. VIII, ಸೊರಬ. ೫೨೫ ; 1152). [ಬೀರಗೂಳ್ + ಎತ್ತು₁]

ಬೀರಜೇಗಟೆ (ನಾ). ಯುದ್ಧದಲ್ಲಿ ಉಪಯೋಗಿಸುತ್ತಿದ್ದ ಜಾಗಟೆ : ಬೀರಜೇಗಟೆ[ಶಾಕಾಂ. ಜೇಘಂಟೆ, ಜಾಗಟೆ]ಯ ಬೆನ್ನ ಚಮರದ . . .

ಪದಾತಿವ್ಯೂಹದಿಂ (ಲಾಹಸೇ. ೬-೦೧ ವ). [ಬೀರ + ಜೇಗಟೆ (<ಜೇಗಂಟೆ)]

**ಬೀರಡವುಡೆ**, ಬೀರಡೌಡೆ (ನಾ). ಯುದ್ಧದಲ್ಲಿ ಉಪಯೋಗಿಸುತ್ತಿದ್ದ ಒಂದು ಬಗೆಯ ಚರ್ಮವಾದ್ಯ; ವೀರಡಿಂಡಿಮ: ಪೊಡವ ಬೀರಡವುಡೆ [ಪಾಠಾಂ. ಡೌಡೆ]ಯ ಪಿಂಗಾಲೊಳೆಳಲ್ವ ಭಾರಿ ಸಂಕಲೆಯ . . . ಗಂಧಸಿಂಧುರಸಂದೋಹದಿಂ (ಲಾಹಸೇ. ೬-೦೦ ವ). **ಬೀರಡೌಡೆ** : ತಂಬಟದ ಪಟಹದ ಬೀರಡೌಡೆಯ . . . ಕಹಳೆಗಳ ರವಕಸುರಾರಿ ನಗುತಿರ್ದ (ಅಕ್ರೂಚ. ೬-೩೮). [ಬೀರ + ಡವುಡೆ$_1$]

**ಬೀರಡಿ** (ನಾ). ಒಬ್ಬಾತನ ಹೆಸರು : ಆನೆಸಾಸಲಾ ಬೀರಡಿಗಳು ಮಾರಡಿಗಳುಂ . . . ಇ ಪೊಲನಂ ನಡೆಯಿಸಿದೋರ್ (ಎಕ. XVI, ಗುಬ್ಬಿ. ೬೫-೫೬; 733). [ಬೀರ + ಅಡಿ$_1$]

**ಬೀರಡೌಡೆ** 'ಬೀರಡವುಡೆ' ನೋ.

**ಬೀರಣ$_1$** 'ವೀರಣ$_1$' ನೋ.

**ಬೀರಣ$_2$** (ನಾ). ಒಬ್ಬಾತನ ಹೆಸರು : ಹುಲಿಯ ಜಂಗುಳಿ ಬೀರಣನ ಮಗ ಮೂವಡಿ (ಎಕ. VIII. ಸೊರಬ. ೯೬-೫; 1018?). [ಬೀರ + <ಅಣ್ಣ$_1$]

**ಬೀರಣವಱಿ** (ನಾ). ಒಂದು ಬಗೆಯ ಚರ್ಮವಾದ್ಯ : ಹತ್ತು ಚಂಬಕವಱಿ ಹತ್ತು ಬೊಂಬುಳಿಱುಂಚೆ ಹತ್ತು ಬೀರಣವಱಿ (ಕುರಾಸಾಂ. ೯೦-೬೬). [ಬೀರಣ$_1$ (<ವೀರಣ$_1$) + ವಱಿ$_1$]

**ಬೀರಣಿಗ** (ನಾ). (?) : ಅವರಿಗೆ ಆರು ಸಹಾಯವಾಧಾರು ಅವರಿತ್ತಂಡವನೂ ಕೊಂದವನೇ ಬೀರಣಿಗ ಹಾಕಿದಗೆ ಮಂಗಳ ಜವಳಿ ಅವರಿತ್ತಂಡವು ನಾಡು ನಖರ ಪರಿವಾರಕೆ ಹೊರಗು (ಎಕ. V, ಬೇಲೂರು. ೬೫-೧೨೯; 1382). [?]

**ಬೀರಣೆ** (ನಾ). ಅಧಿಕಾರಸೂಚಕವಾದ ಆಸ್ಥಾನದ ಉಡುಪು (?) : ಕುಪ್ಪಸದ ಬೀರಣೆಯ ಬಿನ್ನಣದ ಹಸ[ನಿ]ಗಂ ಟೊಪ್ಪಿಗೆಯ ಹೊಱವೇಷದಿಹಪರದ ಲೆಕ್ಕಿಗಂ (ಬಸರ. ೫-೩೯); ಹೊಳೆವ ನವ್ಯಾಭರಣವೆಲ್ಲವಂ ನೆಱೆ ತೆಗೆದು ಪಳಿಯ ಬೀರಣೆ ಕುಪ್ಪಸಂಗಳಂ ಮಿಗೆ ಕಳೆದು (ಕೇಶಿರ. ಹ. ೩೦೦-೯). [?]

**ಬೀರಣೆಗಾವುಂಡ** (ನಾ). ಒಬ್ಬಾತನ ಹೆಸರು : ಮಾಗರ ಬೀರಣೆಗಾವುಣ್ಡರ ಮಗಂ ಬಸವಯ್ಯಂಗೆ ಪಲ್ಲವಾದಿತ್ಯ ನೊಳಂಬಗಾವುಣ್ಡನೆಂದು ಪೆಸರಂ ದಯೆಗೆಯ್ದು (ಮ್ಯಎಂ. ೧೯೩೨, ೯೮-೧೧: ಸು. 960). [ಬೀರಣೆ? + ಗಾವುಂಡ (<ಗಾಮುಂಡ)]

**ಬೀರತಣಿ** (ನಾ). ಮಡಿದ ವೀರನ ಆತ್ಮಶಾಂತಿಗಾಗಿ ನೀಡುವ ತರ್ಪಣ: ಬಟ್ಟೆಯ ಕಣ್ಣೊಳು[ಳ್] ಕಲ್ಗಳನಿಟ್ಟವರೆಲೆ ಬೀರತಣಿಯನಿತ್ತಂ ಮೂಢರ್ (ಸಮುಕ. ೧೨-೩). [ಬೀರ + ತಣಿ$_3$]

**ಬೀರತೆ** (ನಾ). ಶೌರ್ಯ; ಕಲಿತನ : ಭೈರವ ಬೊಮ್ಮರಕ್ಕಸ ಕಾಳ ಜಟ್ಟಿಗ ಬೀರ ಬೇತಾಳರಾರೊಳರು ಬೀರತೆಯುಳ್ಳವರ್ಗಳು ನಿನ್ನಸುಗಾವೊಡಾರಾದರುಮಡ್ಡ ಬರಲಿ (ಶ್ರೀಪಾಂ. ೯-೩೯). [ಬೀರ +– ತೆ$_3$]

**ಬೀರದೇವ**, ಬೀರೆದೇವ (ನಾ). ೧. ಒಬ್ಬಾತನ ಹೆಸರು : ಶ್ರೀಮನ್ಮಹಾಮಂಡಲೇಸ್ವರ ಕುಮಾರ ಬೀರದೇವನೊಡನೆ ಚಾಲುಕ್ಯ ವಿಕ್ರಮದ ೧೯ನೆಯ ಯುವಸಂವತ್ಸರದ ಮಾಘಸುದ್ಧಪಂಚಮಿ ಆದಿತ್ಯವಾರದಂದು ಪರಲೋಕಪ್ರಾಪ್ತನಾಗುತ್ತಮಿರೆ (ಎಕ. VIII, ಸಾಗರ. ೬೦-೨೯; 1096). **ಬೀರೆದೇವ** : ೨. ಒಬ್ಬ ದೇವತೆಯ ಹೆಸರು; ವೀರಭದ್ರ : (*). [ಬೀರ + ದೇವ]

**ಬೀರನೊಳಂಬ** (ನಾ). ನೊಳಂಬವಂಶದ ಒಬ್ಬ ರಾಜನ ಹೆಸರು : ಶ್ರೀಮನ್ನೊಳಂಬಾಧಿರಾಜ ಅಯ್ಯಪದೇವನ ಮಗ ಅಣ್ಣಿಗ ಬೀರನೊಳಮ್ಬ (ಎಕ. X, ಗೌರಿಬಿ. ೯-೩; ಸು. 920); ಶ್ರೀಪ್ರಿಥಿವೀವಲ್ಲಭ ಪಲ್ಲವಕುಲತಿಲಕ ಶ್ರೀಮತ್ ಅಯ್ಯಪದೇವನ ಮಗಂ ಬೀರನೊಳಮ್ಬಂ (ಎಕ. X, ಕೋಲಾರ. ೫೬-೯; ಸು. 925). [ಬೀರ + ನೊಳಂಬ]

**ಬೀರಪೆರ್ಮಾನಡಿ** (ನಾ). ಗಂಗವಂಶದ ಒಬ್ಬ ರಾಜನ ಹೆಸರು : ನೀತಿಮಾರ್ಗದೆಱೆಯಪ್ಪ ಪೆರ್ಮ್ಮಾನಡಿಯ ಮಗ ಶ್ರೀಮತ್ಸತ್ಯವಾಕ್ಯ ಬೀರಪೆರ್ಮ್ಮಾನಡಿಯು ಗೊಟ್ಟ ಕಲ್ನಾಟು (ಎಕ. V, ಅರಕ. ೬೦-೯; 920). [ಬೀರ + ಪೆರ್ಮಾನಡಿ (<ಪೆರ್ಮಾನಡಿ)]

**ಬೀರಬೊಬ್ಬೆ** (ನಾ). ಪೌರುಷಸೂಚಕವಾದ ಗರ್ಜನೆ,– ಬೊಬ್ಬೆ : ಬೀರಬೊಬ್ಬೆ. ವಿಜಯಯಾತ್ರೆ ಮತ್ತೆ ಮತ್ತೆ ಗುಡುಗಲಿ (ಗಂ. ೯೩-೦೦). [ಬೀರ + ಬೊಬ್ಬೆ$_2$]

**ಬೀರಮಂಡಿ** (ನಾ). ವೀರನು ಮಂಡಿಯೂರಿ ಕುಳಿತುಕೊಳ್ಳುವ ಒಂದು ಭಂಗಿ; ವೀರನು ಬಾಣಪ್ರಯೋಗ ಮಾಡಲು ಮಂಡಿಯೂರುವ ಒಂದು ಭಂಗಿ; ವೀರಮಂಡಿ : ' ಬೀರಮಂಡಿಯೂರು ' ಪರಾ. [ಬೀರ + ಮಂಡಿ$_2$]

**ಬೀರಮಂಡಿಯೂರು** (ಕ್ರಿ). ವೀರಮಂಡಿ ಹಾಕು; ಮೊಣಕಾಲನ್ನು ಊರಿ ಕುಳಿತುಕೊಳ್ಳು : ಬೀರಮಂಡಿಯೂರಿ ಯುವರಾಜನಿಗೆ ಪ್ರೇಮಾಲಿಂಗನವಿತ್ತು (ಚಿಶ್ರೀ. ೦೯-೧೯). [ಬೀರಮಂಡಿ + ಊರು$_1$ (<ಊಱು$_1$)]

**ಬೀರಮುದ್ದಳೆ** ' ಬೀರವದ್ದಳೆ ' ನೋ.

**ಬೀರಮ್ಮ** (ನಾ). ಒಬ್ಬಾತನ ಹೆಸರು : ಬೇಡರ ಬೀರಮ್ಮನ ಪರಿಯೊಳ್ . . . ಪೆ × × ಱಿದು ಸಗ್ಗಕೆ ಸನ್ದನ್ (ಎಕ. V, ಹಾಸನ. ೨೯-೩; 985); ಮಲೆಯುಂ ಕೊಟ್ಟಿತ್ತು ಬೀರಮ್ಮನ ಕುಲಮನಿತುಂ ದಾಸಿಪತ್ರಕ್ಕೆ ನಿಂದರ್ (ಸೌಇಇ. XX. ೯೯-೨೯; 1076?). [ಬೀರ + ಅಮ್ಮ$_1$]

**ಬೀರಯ್ಯ** (ನಾ). ೧. ಒಂದು ಕ್ಷುದ್ರದೇವತೆಯ ಹೆಸರು : ಮಾರಯ್ಯ ಬೀರಯ್ಯ . . . ಕೇತಯ್ಯಗಳೆಂಬ ನೂಱು ಮಡಕೆಗೆ ನಮ್ಮ ಕೂಡಲಸಂಗಮದೇವ ಶರಣೆಂಬುದೊಂದು ದಡಿ ಸಾಲದೆ (ಬಸವ. ೫೫೬). ೨. ಒಬ್ಬಾತನ ಹೆಸರು : ಬರದೊಂ ಬೀರಯ್ಯ (ಎಕ. IV, ಹೆಗ್ಗಡ. ೦೦೬-೦೯; ಸು. 930). [ಬೀರ + ಅಯ್ಯ$_1$]

**ಬೀರರವ** (ನಾ). =ಬೀರಬೊಬ್ಬೆ : ತೆಗೆಯೆ ಬೀರರವ[ದೆ] ಮೇಲೆ ಪರಿವ ಮದಗಜಂಗಳಿಂ ಚಳತ್ತುರಂಗಮಂಗಳಿಂ (ಶಂಶಭಾ. ೦-೫೮ ರಗಳೆ). [ಬೀರ + ರವ]

**ಬೀರರಸ** (ನಾ). ಒಬ್ಬಾತನ ಹೆಸರು : ಬೀರರಸನ ಮಗ ಬೊಂಮರಸನ ಪೆಂಪೆಂತೆಂದಡೆ (ಎಕ. VIII, ಸಾಗರ. ೩೦-೮; 1000 ?). [ಬೀರ + ಅರಸ$_1$]

**ಬೀರವಟ್ಟ** (ನಾ). ೧. ಮುಖ್ಯಸೇನಾಪತಿಯ ಪಟ್ಟ,–ಪದವಿ; ಸೈನ್ಯದ ನಾಯಕತ್ವ; ವೀರಪಟ್ಟ : ಬೀರವಟ್ಟಮನಾನಿರೆ ನೀನೀಸೂತಸುತಂಗೆಡೆಗೊಂಡು ಕೈವಾರದಿಂದೊಸೆದಿತ್ತೊಡಮೇನಾಯ್ತು (ಶಂಶಭಾ. ೦೨-೯೩); ಬೀರವಟ್ಟಕ್ಕೆ ಮೆಚ್ಚಿಡೆ ಬೀರಾಂಗನೆ ಸೇಸೆಗೊಂಡ ಪಡೆಯಂ ಕೈಸನ್ನೆಗೆಯ್ದುದ್ಧತಂ ನಡೆಯಲ್ವೇಱಿಱ್ದುಡೆ (ಶಾಂತಿಪು. ೩-೦೦೬). ೨. ಮುಖ್ಯಸೇನಾಪತಿಯ ಪದವಿಯನ್ನು ಸೂಚಿಸುವ (ಹಣೆಗೆ ಕಟ್ಟುವ) ಸಣ್ಣ ಪಟ್ಟಿ : ಜೋಲ್ದು ಪುರ್ವನೆತ್ತಿ ಕಟ್ಟಿದ ಲಲಾಟಪಟ್ಟದೊಳಿಟ್ಟಳವೊಪ್ಪುವ ಬೀರವಟ್ಟಮುಮಸದಳಮೆಸೆಯೆ (ಶಂಶಭಾ. ೬೦-೫೨ ವ). [ಬೀರ + ಪಟ್ಟ$_3$]

**ಬೀರವಣ** (ನಾ). ೧. ಸೈನಿಕರ ಜೀವನನಿರ್ವಹಣೆಗಾಗಿ ಪ್ರಜೆಗಳು ಕೊಡುತ್ತಿದ್ದ ತೆರಿಗೆ : ಕಿಸುಕಾಡೆಪ್ಪತ್ತಱೊಳಂ ಸಾರಿಗೆ ಬೀರವಣಸಹಿತಂ ಸುಂಕಂ ಪರಿಹಾರಂ (ಎಇ. XV, ೬೯-೨೯; 1050); ಬೀರವಣ ಕೊಡತಿವಣ . . . ಆಚಂದ್ರಾರ್ಕ್ಕತಾರಂಬರಂ ಸಲ್ಗೆ (ಮ್ಯಆರ. ೦೯೩೨, ೧೬-೩೦; 1069); ೨. ಊರಿನ ಜನರು ವೀರನೊಬ್ಬನ ಶೌರ್ಯವನ್ನು ಮೆಚ್ಚಿ ಅವನಿಗೆ ಕೊಡುತ್ತಿದ ಹಣ : ಶಿವಲಿಂಗಮಹಾಮುನಿಮಂಗೆ ನಾಗವಾಡಂ ತನಗೀವ ಬೀರವಣ ದತ್ತಮನಾವಗಮಿತ್ತನರ್ತ್ಥಿಯಿಂ (ಕೊಲ್ಹಾಶಾ. ೮-೬೦; 1147). [ಬೀರ + ಪಣ$_3$]

**ಬೀರವಣಿಗ** (ನಾ). ವರ್ತಕರ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು ; ವೀರಬಣಂಜುಧರ್ಮ ಮತ್ತು ಆ ಧರ್ಮಕ್ಕೆ ಸೇರಿದವನು : **ಬೀರರುಂ ಬೀರವಣಿಗರುಂ** ಗವುಂಡರುಂ . . . ಅಪ್ಪ ಶ್ರೀಮದಯ್ಯಾವ್ವರ ವಿಖ್ಯಾತಿಯೆನ್ತೆಂದಡೆ (ಸೌಇಇ. IX-i, ೦೦೬-೫೫; 1057); ಸೆಟ್ಟಿಗುತ್ತರುಂ ಗಾವುಣ್ಡರುಂ ಗಾವುಣ್ಡಸ್ವಾಮಿಗಳುಂ ಬೀರರುಂ ಬ(ಬೀ)ರವಣಿಗರುಂ (ಎಇ. XIX, ೩೩-೨೦ ; 1135). [< ಸಂ. ವೀರವಣಿಜ್]

**ಬೀರವದ್ದಳೆ, ಬೀರಮದ್ದಳೆ** (ನಾ). ಯುದ್ಧಕಾಲದಲ್ಲಿ ಉಪಯೋಗಿಸುವ ಒಂದು ವಾದ್ಯ : ರಣವಾದ್ಯ : ತಂತಮ್ಮ ಮೊನೆಯ ನಾಯಕರ ಬಿರುದಿನ **ಬೀರವದ್ದಳೆ**ಯ ಪದಿರ ಪಱೆಯ ಕಹಳೆಯ ಕಳಕಳಂ ಕಿವಿ ಶಬ್ದಂಗಿಡೆ ದಿವಮನೆಯ್ದೆ (ಶಂರಾಮಾ. ೦೩-೩೪ ವ). **ಬೀರಮದ್ದಳೆ**: ಕೋಕಿಲಾರವಮದು ಬೀರಮದ್ದಳೆಯ ನಿಸ್ವನಮಾಗಿರೆ (ತಂಪ್ರಕೃ. ೬-೪೨). [ಬೀರ + ಮದ್ದಳೆ$_1$ (<ಮದ್ದಲೆ$_1$)]

**ಬೀರವರ್ತಿ** (ನಾ). ವೀರವೃತ್ತಿಯ ವ್ಯಕ್ತಿ; ಸೈನಿಕ : ಜಗಮನದಿರ್ಪಲಾರ್ಪ ಬಿರುದಾಂತ ಬಲಂಗಳನೆತ್ತಿ ನುಂಗಿ ಮತ್ತುಗುಱಿದ **ಬೀರವರ್ತಿ**ನಿಕರಂಗಳ ಬಾಟಿಕ್ಕೆಯ್ದಲಾದ ಚಾಗದೋಲಗದ ವಿಡಂಬಡಂಬರಕೆ ಕಣ್ಣೆಲೆಯಾದ ವಿಲಾಸವೊಪ್ಪೆ ಗದ್ದುಗೆಯೊಳಗಿರ್ದುದಗ್ಗಳಿಕೆಯುಗ್ಗದ ಪಾರ್ಥಿವಪುತ್ರಸಾರ್ಥಕಂ (ಅವಂಪು. ೨-೨೬). [< ಸಂ. ವೀರವರ್ತಿನ್]

**ಬೀರವಸದನ** (ನಾ). ವೀರೋಚಿತವಾದ ಅಲಂಕಾರ.– ಪ್ರಸಾಧನ : "ಬೀರವಸದನ – ವೀರಪ್ರಸಾಧನ = (ವೀರೋಚಿತ ಆಭರಣ, ಅಲಂಕಾರ)" (ಶಬ್ದಕೋ. ೩೦). 'ಬೀರವಸದನಂಗೆಯ್' ಪರಾ. [ಬೀರ + ಪಸದನ]

**ಬೀರವಸದನಂಗೆಯ್** (ಕ್ರಿ). ವೀರೋಚಿತವಾದ ವೇಷಭೂಷಣಗಳನ್ನು ಧರಿಸು : ಕಣ್ಗಂಬಾಗಿರೆ **ಬೀರವಸದನಂಗೆಯ್ದು** . . . ಪೊಱಪಟ್ಟಂ (ಕಬ್ಬಿಗ. ೦೯೬). [ಬೀರವಸದನ + ಕೆಯ್$_1$]

**ಬೀರವಱೆ** (ನಾ). ವೀರೋಚಿತವಾದ ಒಂದು ವಾದ್ಯ,— ಹರೆ ; ಒಂದು ಬಗೆಯ ರಣವಾದ್ಯ,– ತಮಟೆ : ಬಾಜಿಸುವ **ಬೀರವಱೆ**ಯ ಪೊಡೆವ ಡಕ್ಕೆಯ ಪಿಡಿದ ಬಿರುದಿನ ಕಾಳೆಯ ಬಿಲ್ಲುಲಿಯ ಸಡಗರಮೆಲ್ಲಾ ದೆಸೆಗಳಂ ಕಿವುಂಡುವಡಿಸೆ (ಕಬ್ಬಿಗ. ೨೫೦); ನಾನಾ **ಬೀರವಱೆ**ಗಳ ರಭಸದಲಿ ರಂಜಿಸಿದುದಾ ದುರ್ಗ (ಕೋರಾ. ೬-೬-೦೫). [ಬೀರ + ಪಱೆ$_1$]

**ಬೀರಪುರ** (ನಾ). ಒಂದು ಊರಿನ ಹೆಸರು : ನಾಲ್ಕು ಮತ್ತರ್ಕ್ಕೆಯುಂ ಬಿಡುವುದೊಕ್ಕೆ **ಬೀರಪುರ**ಮುಂ ಬಿದಿರ್ವ್ವಳ್ಳಿಯುಮನೊನ್ದೊ ಅಗ್ರಹಾರಂ ಮಾಡಿ (ಎಕ. XI, ಹಿರ್ದು. ೫೦-೦೬ ; 968). [ಬೀರ + ಪುರ$_2$]

**ಬೀರಸಂಕಲೆ** (ನಾ). ವೀರನು (ಬಿರುದಿನ ಸಂಕೇತವಾಗಿ) ಧರಿಸುವ ಕಾಲ ಬಳೆ ; ವೀರಶೃಂಖಲೆ ; ತೊಡರು : ಪೊನ್ನ **ಬೀರಸಂಕಲೆ**ಯ ತೊಳಪ್ಪ ಕನ್ನಡಿಯ ಚೆನ್ನಡಿಯಡ್ಡಣವೆಡ್ಡಮಾಗೆ (ಕಬ್ಬಿಗ. ೨೬೨). [ಬೀರ + ಸಂಕಲೆ$_1$]

**ಬೀರಸಗ್ಗ** (ನಾ). ಕಾಳಗದಲ್ಲಿ ವೀರೋಚಿತವಾದ ಮರಣವನ್ನು ಪಡೆದ ವೀರನಿಗೆ ದೊರಕುವುದೆಂದು ಭಾವಿಸಲಾದ ಸ್ವರ್ಗ ; ವೀರಸ್ವರ್ಗ : 'ಬೀರಸಗ್ಗಂಬಡೆ' ಪರಾ. [ಬೀರ + ಸಗ್ಗ]

**ಬೀರಸಗ್ಗಂಬಡೆ** (ಕ್ರಿ). ವೀರಸ್ವರ್ಗವನ್ನು ಹೊಂದು,—ಪಡೆ : ಚೋಟಿಗಣ್ಡರ್ ಆಟ್ದನ ಮುನ್ದೆ ಪಱಿದು **ಬೀರಸಗ್ಗಂಬಡೆದು** (ಪ್ರಿಅಂ. ೧೯೨೬, ೩೨-೩ ; 1056). [ಬೀರಸಗ್ಗ+ಪಡೆ$_1$]

**ಬೀರಸಾಂತರ** (ನಾ). ಸಾಂತರವಂಶದ ಒಬ್ಬ ರಾಜನ ಹೆಸರು : ಸಾನ್ತಳಿಗೆಯ **ಬೀರಸಾನ್ತರ**ನ ಮೇಲೆ ನಡೆವಯ್ವತ್ತು ನಾಡೊಳಗಣ ಬಲ್ಲುಗದೊಳ್ಪಟ್ಟಬ್ದನ್ದು (ಎಕ. VIII, ಹೊರಬ. ೪೬೬-೦೫ ; 991). [ಬೀರ + ಸಾಂತರ]

**ಬೀರಸೆಟ್ಟಿ** (ನಾ). ವ್ಯಾಪಾರಿಗಳ ಒಂದು ವರ್ಗ : ಊರಿಗೆಯ್ದಿದ ಮಾರಿ **ಬೀರಸೆಟ್ಟಿ**ಯ ಹೊಯ್ದ ದಾರಿಕಾಱರ ಗಾದೆಯಂತೆ (ಭರತ. ೪೨-೯೪). [ಬೀರ + ಸೆಟ್ಟಿ]

**ಬೀರಸೇನಸಿದ್ಧಾಂತ** (ನಾ). ಒಬ್ಬ ಯತಿನ ಹೆಸರು : ಶ್ರೀ ಬೆಳ್ಗೊಳನಿವಾಸಿಗಳಪ್ಪ ಶ್ರೀ **ಬೀರಸೇನಸಿದ್ಧಾನ್ತ**ದೇವರವರ ಶಿಷ್ಯರ್ (ಎಕ. I, ೯೯-೯; 978). [ಬೀರ + ಸೇನ$_2$ + ಸಿದ್ಧಾಂತ]

**ಬೀರಸೇಸೆ** (ನಾ). (ಯುದ್ಧ ಮುಂತಾದ ಸಂದರ್ಭಗಳಲ್ಲಿ) ವೀರನ ತಲೆಯ ಮೇಲೆ ತಳಿಯುವ ಅಕ್ಷತೆ ; ವೀರಸೇಸೆ : ನೊಸಲ ಕಣ್ಣ ಮಾದೇವನ ಮಿಸುಪ ನೊಸಲೊಳ್ **ಬೀರಸೇಸೆ**ಯನಿಟ್ಟು (ರಾಮಾಶ್ವ. ೧೩೦-೦೫). [ಬೀರ + ಸೇಸೆ$_1$]

**ಬೀರಾಳ್** (ನಾ). ಶೂರನಾದ ಸೈನಿಕ : ಇಂತಿಂತು **ಬೀರಾಳ್ಗ**ಳಲ್ಲಿಲ್ಲಿ ನಗೆನುಡಿಯುತಿರೆ (ಜಕ್ಕಾಂಗ. ೬೬-೨೦೩೧): ಲೆಕ್ಕಕ್ಕೆ ಮಿಗಿಲ್ **ಬೀರಾಳ್ಗ**ಳಂ ತಿಂದೆ (ಶ್ರೀರಾಮಾ. ೬೪೩-೨೫೪). [ಬೀರ + ಆಳ್$_3$]

**ಬೀರಿಸು** 'ಬೀಱಿಸು' ನೋ.

**ಬೀರು$_1$** 'ಬೀಱು$_1$' ನೋ.

**ಬೀರು$_2$, ಬೀರ್$_2$** (ನಾ). ಒಂದು ಬಗೆಯ ಮದ್ಯ : ಇನ್ನೂ ಸ್ವಲ್ಪ **ಬೀರು** ಬೇಕು (ಅಶಮಾ. ೬೬). **ಬೀರ್$_2$** : ನಾಲ್ಕು ಜನ ಸ್ನೇಹಿತರು ಕುಳಿತು ಸಂಜೆ **ಬೀರ್** ಕುಡಿಯುವುದಕ್ಕೆ ಸೊಗಸಾದ ಸ್ಥಳ (ಯೋಧಪು. ೨೫); ಆಧುನಿಕ ನಿರನುಭವಿ ಯುವಕರಂತೆ **ಬೀರ್** ಕುಡಿದು ನೋಡಿದ (ಪ್ರಕ್ಕ. ೫೯). [←ಇಂ. Beer]

**ಬೀರು$_3$** (ನಾ). ಬಾಗಿಲುಳ್ಳ ನಿಲುಪೆಟ್ಟಿಗೆ : ಕಪಾಟು : ಅಲಮಾರು : ಒಂದು **ಬೀರು**ವನ್ನು ಮುರಿದು ಹಾಕಲಾಗಿತ್ತು (ನಾಕೋರಿ. ೧೨೬): ಬಟ್ಟೆಗಳು ಗಾಜಿನ **ಬೀರು**ವನ್ನು ಸೇರಿದ್ದುವು (ಮುಶಿಮಾ. ೨೨); ಚಂದ್ರಪ್ಪಗೌಡರು ತಮ್ಮ **ಬೀರು**ವಿನ ಪಕ್ಕದಲ್ಲಿ . . . ಮಂಡಿಸಿ ಎಲ್ಲರೊಡನೆಯೂ ಸಂಭಾಷಣೆ ನಡಸುತ್ತಿದ್ದರು (ಕಾವೂರು. ೬೯). [ ← ಇಂ. Bureau. / ತಮಿ. ಪೀರೋ ; ತೆಲು. ಬೀರುವಾ, ಬೀರುವ]

**ಬೀರುಗಲ್** (ನಾ). ತೂರಿ ಬರುವ ಕಲ್ಲು ; ಎಸೆದ ಕಲ್ಲು : ಎತ್ತ ತಿರುಗಲುಮಿಲ್ಲದವೊಲ್ಮೇರ್ **ಬೀರುಗಲ್ಗಳ್** . . . ನೆರನಿರಿಯೆ, ತೊಪ್ಪತೊಪ್ಪನೆ ಕುಪ್ಪೆಯೊಟ್ಟಿದರ್ (ಜಾರಸಿ. ೦೬-೪೦೧). [ಬೀರು$_1$ (<ಬೀಱು$_1$) + ಕಲ್$_3$]

**ಬೀರೆದೇವ** 'ಬೀರದೇವ' ನೋ.

**ಬೀರ್ವಗ್ಗ** 'ಬೀಱುವಗ್ಗ' ನೋ.

**ಬೀರ್ವ** (ನಾ). ಕಟ್ಟು; ಕಟ್ಟಳೆ (?): ಪರ್ವ ನಾಲ್ಕರೊಳಾವುದಾನೊಂದು ಪರ್ವವ ಪೂರ್ವಗೊಂಡುಪವಾಸವಿಹೆನು ಸರ್ವಥಾ ಯಮವಲ್ಲ ನಿಯಮ ಮತ್ತದರೊಂದು **ಬೀರ್ವ** ತಿಂಗಳಿಗೊಂದು ದಿವಸ (ಭರತ. ೦೯-೯೯). [ ? ]

**ಬೀವ** 'ಬೀವು' ನೋ.

**ಬೀವು, ಬೀಹು** (ನಾ). ೧. ಬೆನ್ನುಹುರಿ : ಬೆನ್ನ **ಬೀವಂ**[ಶಾಕಾಂ. ಮು೦] ತೆಗೆವ ಬೇಶಾಳರುಮಂ . . . ಕಂಡು (ಗದಾಯು. ೫-೩ ವ); ಬಿಗಿದ ಬೆನ್ನ **ಬೀವುಂ** ತೆಗೆದ ಬಸಿಱುಂ . . . ನಾಲ್ಕುಂ ತಳಮುಂ ತೋಱುತ್ತುಂ ಸರಳಿಸಿ ಪಾಯ್ದು ಪೋಪ ಪೊಳ್ಳೆವಂಧಿಯುಂ ಕಂಡು (ಲೀಲಾವ. ೩-೦೬ ವ); ಸಂದ ನೇಪಾಳನ ಬೆನ್ನ **ಬೀವ**ನಿರದೆತ್ತಿ (ಎಇ. XV, ೩೨೦-೨೨; 1172). ೨. ನರ ; ಸ್ನಾಯು : ಕೀವಿನ ನೆತ್ತರ ತಿಪ್ಪೆ **ಬೀವಿ**ನಿಂದಂ ಬಿಗಿದಿರ್ದ ಪರ್ಣದ ಖಂಡದ ಮಾಂಸದ ತಾಣಮಲ್ಲವೇ (ಧರ್ಮಾಮೃ. ೫-೨೬) ; ಹಲವೆಲುವಿನೆಕ್ಕೆಗಳ ಬಿಗಿದು **ಬೀವಂ** ನೆಯ್ದು ನುಲಿಯ ಹಂದೊಗಲ ಹಾಸಿನೊಳು ಮಂಚಂ ಜಡಿಯೆ (ಹಕಾ. ೦೦-೩೦). ೩.

ಹುರಿ ; ಹಗ್ಗ; ರಜ್ಜು: ಬೀವಂ ಮಿಳಿಯುವಂ ಮಾಜಿ ಕೊಳಲ್ವೇಡೆ ಬಾ (ಖಂಹಂ. ೯-೭೬ ವ); ತನ್ನ ಕೊರಲಸರ್ವಾಭರಣಮಂ ಬೀವಂ ಮಾಡಿ ಕುಮಾರಿಯ ಕೆಯ್ಯೊಳ್ ಕೊಟ್ಟು ... ಆ ಕುಮಾರಿಯುಂ ಕಟ್ಟುವುದುಮಾಕೆ ಬೀವಂ ಮಾಜುತ್ತುಂ ಬರೆ (ಸುಕುಸೇ. ೬-೩೦ ವ); ರಂಜಿಪ ಬೆರೆಕೆವರಲ ಚಿಬ್ಬಿಲೊಳಗೆ ಹೊಸ ಹೊನ್ನ ಸರಿಗೆಯ ಬೀವುಗಳನು ತುಂಬಿ (ಪೇಖಸಂ. ೨೦-೨೭). ೪. ತಂತೀವಾದ್ಯಗಳಲ್ಲಿ ಉಪಯೋಗಿಸುವ ಸರಿಗೆ.—ತಂತಿ: "ಪಿಟೀಲು, ಮೊ. ವಾದ್ಯಗಳ ಹುರಿ; ಬೀವು; ತಂತಿ" (chord· ಇಂಕಳ). ಬೀಹು: ೨. ಬಲ್ಲಿಂದ ಬೀಹಿನ ಹಗಱು ಮುಱಿವವೋಲು ಕಲ್ಲಿಂದ ಕಾಲ್ಸುಂಡಿಸುವೊಲು ಬಲ್ಲಿತಪ್ಪಾ ಕೊಲೆಯಿಂ ಕೊಂದರಾ ವಿಗಮಿಲ್ಲಿಂ ನಿಲ್ಲವೆಂಬಂತೆ (ಪೇಖಸಂ. ೨-೫೨).

**ಬೀವು ಮಾಡು** = ಹಗ್ಗವನ್ನಾಗಿ ಮಾಡು; ಹುರಿಯನ್ನಾಗಿಸು: ತನ್ನೆಸೆವ ರತ್ನಮಾಲೆಯನುನ್ನತನಂತೆಸೆಯೆ ಬೀವು ಮಾಡಿ ಬಱಿಕ್ಕಾ ಕನ್ನೆಯ ಕಯ್ಯೊಳ್ ಕೊಟ್ಟು (ಪೇಖಪು. ೬-೫೭).

**ಬೀವುಗಾರ್ತಿ** (ನಾ). ಹಗ್ಗವನ್ನು ಮಾರುವವಳು: ಬೀವ ಕೊಳ್ಳಿರೆ ಯೆಂದು ವೀಣಾರವದಿಂ ಪೊಳಲಂಗಡಿಯೊಳಾ ಬೀವುಗಾರ್ತಿ [ಕಾಕಂ. ತಿ] ಬರಲ್ಕೆ (ಸಾಳ್ವಭಾ. ೩೦-೨೬). [ಬೀವು + — ಕಾಱ + — ತಿ$_1$ (< — ಇತ್ತಿ)]

**ಬೀವುಗಿತಿ** (ನಾ). = ಬೀವುಗಾರ್ತಿ: ಬೀವುಗಿತಿ ನಿನಗೇತಱಿಂದಾಯಿತ್ತಾ ವಿಭವಮೆನೆ ಬೀವ ಮಾಱಿದೊಡೀ ವಿಭವವಾಯ್ತೆಂದವಳ ಸಖಿ ನುಡಿಯೆ (ಸಾಳ್ವಭಾ. ೩೦-೨೯). [ಬೀವು + — ಗಿತಿ$_1$ (< — ಗಿತ್ತಿ)]

**ಬೀವುಗೊಳ್** (ಕ್ರಿ). ಹಗ್ಗವನ್ನು ಕೊಂಡುಕೊಳ್ಳು: ಬಂದಂಗನೆ ಬೀವು ಗೊಳ್ಳಿಮೆನುತಂ ಪೊಕ್ಕಾ ಪುರೀವೀಥಿಯೊಳ್ ನಿರಹಂಕಾರದಿನಿಟ್ಟಿರುತ್ತಿರೆ (ಪೇಖಪು. ೬-೫೬): ಪೋಗಿ ಪೊಬಲಂ ಜಳಜಾನನೆ ಬೀವುಗೊಳ್ಳಿಮೆನುತಂ ಪೊಕ್ಕಳ್ (ಖಂಹಂ. ೯-೭೦). [ಬೀವು + ಕೊಳ್$_1$]

**ಬೀವೋಜ** (ನಾ). ಒಬ್ಬಾತನ ಹೆಸರು: ಅಭಿಮಾನುಗಳೆಂಬ ಗೊಗ್ಗಿ ತನ್ನ ಮನ್ನೆಯ × × ಬೀವೋಜಂಗೆ ಬಿಟ್ಟಂ (ಎಕ. XI, ದೊಕಳ. ೨೭-೯ : 962). [ಬೀವ (< ಬೀವು) + ಓಜ$_1$ (< ಒಜ್ಜ)]

**ಬೀಸ**, ಬೀಸು$_3$ (ನಾ). ೧. ಒಂದು ಸಂಖ್ಯೆ; ಇಪ್ಪತ್ತು: "ಬೀಸಿಗೆ (ಬೀಸ) — ವಿಂಶತ್ = ಇಪ್ಪತ್ತು" (ಶಬ್ದಕೋ. ೫೨). ೨. ಇಪ್ಪತ್ತರಲ್ಲಿ ಒಂದು ಭಾಗ. ೩. (?): ಭಂಗಾರವಂ ಮಾಱಿನಿಕದಲ್ಲಿ ದೇವರಂಗ ಭೋಗಕ್ಕೆಯಾಚಂದ್ರಾರ್ಕ × × ನಡವಂತಾಗಿ ನಾಱಿಕ್ಕೆ ಬೀಸಮಂ ಬಿಟ್ಟರ್ ಮತ್ತಂ ಚೈತ್ರಾರೋಪಣಕ್ಕೆ ವರ್ಷಂಪ್ರತಿ ಬೀಸಕ್ಕೆ ಭಾಗವೊಂದು ಬಿಟ್ಟರ್ (ಸೌಇಇ. XV. ೦೪೫-೫೨; 1179). ಬೀಸು$_3$: ೧. 'ಉತ್ತಮ ಬೀಸು' ಪರಾ. 'ವೀಸ' ಹೋ.

[← ಹಿಂ. ಮರಾ. ಬೀಸ್./ಪ್ರಾ. ವೀಸ್./ಸಂ. ವಿಂಶತಿ]

**ಬೀಸಗೆ**, ಬಿಸಿಗೆ, ಬೀಸಿಗೆ$_2$ (ನಾ). ೧. ಇಪ್ಪತ್ತುಪಲದ ಪ್ರಮಾಣ: ಬೀಸಗೆವೊಂದಕ್ಕಾ ಪೆರೆ ಲೇಸಾಗಿಹ ಗಂಧ ಪಂಚಭಾರದ ಸುಂಕಂ ಅರಸನೊಲಿ ದೀವ ಪಡಿಯಂ ಭರದಿಂ ತೊಂಭತ್ತು ಭಾರಕೇನುಂ ಬರ್ಕುಂ (ಪ್ರವಹಾ. ೨೬-೦೫); ೧ ಬೀಸಗೆ — ೨೦ ಪಲ (ಕಣಂ. ೩೯೫). ಬಿಸಿಗೆ: ೧. ವಿಂಶತಿ ಪಲಂ ಬಿಸಿಗೆ (ಕಣಂ. ೯೯); ಬಿಸಿಗೆ ಪಂದ ಕೊಪ್ಪರಿಲೆ ಸಾಗಿಹ ಗಂಧ ಪಂಚ ಭಾರದ ಸುಂಕಂ (ಭಾಸ್ಕರ. ೩೪-೪). ಬೀಸಿಗೆ$_2$: ೧. "ಪಲಮಕ್ಕವಿಪ್ಪತ್ತೆನಲ್ಕೆ ಬೀಸಿಗೆಯದಕ್ಕುಂ" (ಮಂಗರಾ. ೦೦೪-೦೦); ಭಂಡಿಯ ಕರುಸೆಯ ಮಳವೆ ಗೆರಡು ಬೀಸಿಗೆ (ಎಇ. XIX, ೩೩-೨೬ ; 1136); ದಶಪ್ಪಯುಪಲದಿಂ ನಿಲ್ಕುಂ ಬೀಸಿಗೆ (ಪ್ರವಹಾ. ೪-೨೫). ೨. (ಅರುವತ್ತುಸಂವತ್ಸರಗಳನ್ನು ಮೂರುಭಾಗಗಳನ್ನಾಗಿ ವಿಂಗಡಿಸಿದ) ಇಪ್ಪತ್ತುವರ್ಷಗಳ ಅವಧಿ: ಮೊದಲುತ್ತಮಬೀಸಿಗೆಯಿಂದಕ್ಷಯಿಸುಗುಂ ನಾಲ್ಕು ಯುಗವುಂ ಪ್ರಭವಾದ್ಯ(ಬ್ದ)ಂ (ಚಟ್ಟಸು. ೭-೫); ಕ್ರಮದಿಂದುತ್ತಮಂ ಬೀಸಿಗೆ ಮಧ್ಯಮಂ ಬೀಸಿಗೆ ಕನಿಷ್ಠಂ ಬೀಸಿಗೆಗಳೆನಿಸಿ ಇಪ್ಪತ್ತಿಪ್ಪತ್ತು ವರುಷಂಗಳಿಂದೊಪ್ಪುತ್ತಸು ಭೂತಫಲಮಾಗಿರ್ಕುಂ (ಶಿವೇಶ. ೩೨೦). ೩. ಒಂದು ಸಂಖ್ಯೆ; ಇಪ್ಪತ್ತು: "ಬೀಸಿಗೆ (ಬೀಸ) — ವಿಂಶತ್ = ಇಪ್ಪತ್ತು" (ಶಬ್ದಕೋ. ೫೨).

[ಬೀಸ + — ಗೆ]

**ಬೀಸಣೆ** 'ಬೀಸಣಿಗೆ' ನೋ.

**ಬೀಸಣಿಕೆ** 'ಬೀಸಣಿಗೆ' ನೋ.

**ಬೀಸಣಿಗೆ**, ಬೀಸಣೆ, ಬೀಸಣಿಕೆ (ನಾ). ಗಾಳಿ ಬೀಸಿಕೊಳ್ಳಲು (ಓಲಿಗರಿ, ಬಿದಿರು ಮುಂತಾದುವುಗಳಿಂದ) ತಯಾರಿಸಿದ ಒಂದು ಸಾಧನ; ವ್ಯಜನ: "ವ್ಯಜನಂ, ತಾಲವೃಂತಕಂ — ಈ ೨ ಬೀಸಣಿಗೆ" (ಹಲಾಯು. ೫೨-೦೫೫); ಬೀಸಣಿಗೆ ಗಿಂಡಿ ಹಡಪಂ ಮಣಿ ಕಾಳಾಂಜಿಯನಾಂತಸಿದರ್ . . . ಸತಿಯರ್ (ಉತ್ತಮಟಿ. ೨-೯); ಝುಳಿವ ಝೋಂಪಿಸಿ ಬೀಸಿದವು ತಂಬೆಲರ ಬೀಸಣಿಗೆಗಳು (ಕುಮ್ಮಾರ. ೦೨-೦೫). ಬೀಸಣೆ: ಕರದಿ ಬೀಸಣ ಕೊಡೆಯ ಭಸಿತದಾಧಾರ ಜಪಸರಮಾಂತು (ಸೋಕಣ. ೦೨-೯). ಬೀಸಣಿಕೆ: ಚಂದನದಿಂದ ಪೆಟ್ಟಿಗೆ ಕರಡಿಗೆ ಬೀಸಣಿಕೆ ಮುಂತಾದವುಗಳನ್ನು ಮಾಡುತ್ತಾರೆ (ಮುಂಜಟು. ೩-೭೮); ಕೂಸು ಇದ್ದ ಮನಿಗೆ ಬೀಸಣಿಕೆ ಯಾತಕ ಕೂಸು ಕಂದಯ್ಯ ಒಳ ಹೊರಗ ಆಡವರ ಬೀಸಣಿಕೆಗಾಳಿ ಸುಳಿದಾವ (ಗರತಿ. ೬೬). 'ಬಿಜ್ಜಣಿಗೆ' ಪರಾ.

**ಬೀಸಣಿಗೆಯ ಊಳಿಗ** = ಬೀಸಣಿಗೆಯನ್ನು ಹಿಡಿದು ಗಾಳಿ ಬೀಸುವ ಸೇವೆ: ಅರಮನೆಯಲ್ಲಿ ಸಮುಖದೊಳು ನಿತ್ಯಕಟ್ಟಳೆಯಲ್ಲಿ ನಡೆಯುವ ಊಳಿಗಗಳು — ಸಂಚಿಯ ಊಳಿಗ . . . ತೂಗುನೀರಿನ ಊಳಿಗ, ಬೀಸಣಿಗೆಯ ಊಳಿಗ (ಮಹಾವಂ. I, ೪೩).

[< ಬೀಸು$_1$. / ತಮಿ. ವಿಚಿಱಿ; ಮಲ. ವೀಶೇರಿ, ವಿಶಱ; ತುಳು. ಬೀಸಣಿಗೆ, ಬೀಸನಿಗೆ; ತೆಲು. ವೀವನ. / ಸಂ. ವ್ಯಜನ]

**ಬೀಸಣಿಗೆಮರ** (ನಾ). ಬೀಸಣಿಗೆಯಾಕಾರದ ಎಲೆಗಳನ್ನು ಹೊಂದಿರುವ ಒಂದು ಬಗೆಯ ಮರ: ಶ್ರೀತಾಳೆ, ಕೊಡೆಮರ, ಸೀಗೋ, ಬೀಸಣಿಗೆಮರ, ಓಲೆಗರಿಮರ (ಪ್ರ ಶಿಗಿ. ೨೫-೯೫೮). [ಬೀಸಣಿಗೆ + ಮರ$_1$]

**ಬೀಸನೆ** (ಅ). ವೇಗವಾಗಿ; ಶೀಘ್ರವಾಗಿ: ಅಲ್ಲಿಂದ ಬೀಸನೆ ಹೆಜ್ಜೆ ಹಾಕಿ ಹೊರಟಾಗ . . . ಕೇಳಿಸಿತು (ಮೂಕಜ್ಜ. ೬೭).

ಬೀಸಬೀಸನೆ (ದ್ವಿರುಕ್ತಿ): ಬನ್ನಿ, ಬೀಸಬೀಸನೆ ಹೋಗುವಾ (ಮೂಕಜ್ಜ. ೩೯). [ಬೀಸು$_1$ + — ಅನೆ$_1$]

**ಬೀಸರ**, ಬೀಸರು (ನಾ). ೧. ವ್ಯರ್ಥವಾದುದು; ನಿರರ್ಥಕವಾದುದು; ನಿಷ್ಪ್ರಯೋಜಕವಾದುದು: ತಡಿಯೊಳ್ ಪೊಳೆವ ತಮ್ಮ ನೆಟಲನಟ್ಟೋವದ ನಲ್ಲಳೆಂದು ಬಲ್ಲೈಸಿ ನೋಟ್ಟಿ ಜಕ್ಕವಕ್ಕಿಗಳಾಸೆಯಂ ಬೀಸರಂ ಮಾಡಿಯುಂ . . . ಸಾಯಂತನಸಮಯಸವಿಹಾರಣಂ ಸೌಖ್ಯಸಾರಸರ್ವಸ್ವಮೆನಿಸಿರ್ದಾಸಳ್ (ಚಂದ್ರಪ್ರ. ೬-೪ ವ); ಪರಿಮಳದ ಮಯವೆನಿಪ ಸಕಲದ್ರವ್ಯಂಗಳಂ ಪರಮಗೆಂತರ್ಪಿಸುವೆನವು ಬೀಸರಂಗಳಂ (ರೀಣ್ಣಕೋ. ೯೯-೫೪); ಬಿನ್ನಪ ಬೀಸರವಹುದೆ ನಿಮ್ಮಯ ಸೊಮ್ಮಿನವರಿಗೆ (ಕುಮ್ಮಾಖಿ. ೬-೫೩); ಬೀಸರ ಮಿದೆಂದು ಜೀವಮಂ ಪರಮೇಶ್ವರಂಗರ್ಪಿಸುತ್ತಂ (ವೀಕೃಪು. ೭-೦೭-೨೫). ೨. ನಾಶ; ಹಾಳು; ಕೇಡು: ಅಸುರವಾದುದು ಬೀಸರವಾಯಿತು (ಅವಕಂ. ೦೨೦-೫೯೪); ಕೇಳು ನಿನ್ನಾತನ ವಿನೋದದ ಖೂಳ ಬೋಳೆಯ ತನದಲೊದಗಿದ ಬಾಳಿಕೆಯ ಬೀಸರವನೆಂದನು ಸಂಜಯನು (ಕುಮ್ಮಾ. ೪. ೦-೦೭); ಮೇದಿನೀಪರಿಯಟಣ ಪುಣ್ಯಫಲೋದಯಕೆ ಪಡೆಯುಂಟೆ ಬೀಸರವಿಲ್ಲ ಪಿತಗೆಂದ (ಶಿಭಾಗ. ೯-೭-೦೫). ೩. ಅಹಿತವಾದುದು; ಕೆಟ್ಟುದು; ನಿಂದೆ: ಕೂಸಂ ಕೊಟ್ಟಪೆನೆಂಬೀ ದೂಸಱಿ ನೀವಿಂತ ವಜ್ಜೆಗೆಯ್ಯುತ್ತೆನ್ನಂ ಬೀಸರವಪ್ಪ ನುಡಿ[ಕಾಕಂ. ಮಾಡ್ದು]ದಪಿರಿ (ಕಂಕಕಂ. ೨೬-೩); ಕುರುಪತಿ ಬೀಸರಮಂ ನುಡಿಯುದೊಳ್ಳಿತಂ ನುಡಿದಪನೇ (ಗಾದ್ಯ. ಗ.

೪೯೭). 'ಬೀಸರನುಡಿ' ಪರಾ. ೪. ಕಷ್ಟ ; ಆಪತ್ತು : ಆ ಸುಯೋಧನ ಸುತರ ಸರಳ ವಿಳಾಸವನು ಖಂಡಿಸಿದನವದಿರ ಬೀಸರಕೆ ಬಂದಡ್ಡಬೀಳುವ ಭಟರ್ಕೆಡೆಯೆಚ್ಚ (ಕುಮಾ.ದ್ರೋ. ೫-೭೫); ಬೀಸರಕೆ ಬೆದಱುವ ವಧೂಜನ ದಾಸಱಡಗಲು . . . ನಗುತಿಂತೆಂದನಸುರಾರಾತಿ ಕರುಣದಲಿ (ಕಿಭಾಗ. ೦೦-೦೬-೫೨). ೫. ಕೊರತೆ ; ಲೋಪ ; ಕುಂದು : ಬೇಸಱವಖಿಳವೇದಂ ಗಳುಚ್ಚರಿಪ ವಿಘ್ನೇಶನ ಪಡೆದ ಮಾತೃಕೆಯ ಭಾಸುರಜಿಹ್ವೆಯೊಳ್ ಪೊಱ ಮಟ್ಟು ವಚನಕೆ ಬೀಸರವಿಲ್ಲೆಂದಳವಳು (ಮೋಹತ. ೨೫-೩೦). ೬. ಅಂತ್ಯ ; ಕೊನೆ; ಮುಕ್ತಾಯ : ಕಡುಪಿನಿಂದೆರಗಿದಂ ಬೇಡಬೇಡೆಂಬವರ ಕಡೆಗಣಿಸಿ ನುಡಿಗಳ್ಗೆ ಬೀಸರಂ ಬರೆದಂ (ಕಾಂಚಿರ. ೦೭೦-೩೮೦). ೭. ಮಲಿನತೆ ; ಅಶುದ್ಧತೆ ; ಮೈಲಿಗೆ : ಸಂಸಾರವೆಂಬ ಶ್ವಾನನಟ್ಟಿ ಮಾಸಲ ಬೀಸರ ಮಾಡಿದಿರಯ್ಯಾ (ಬಸವ. ೫೦೭) ; ಮನ ಬೀಸರವಾದೊಡೆ ಪ್ರಾಣ ಪಲ್ಲಟ ವಹುದವ್ವ (ಮಹಾದೇ. ಬ. ೪೩-೪೮) ; ಮಾರುತನ ಸಂಗದಿಂದ ಪರಿಮಳ ಬೀಸರವಾಯಿತ್ತು (ಲಿಂಗಲೀ. ೩೭೫-೨). ೮. ಚೆಲ್ಲಾಪಿಲ್ಲಿ ; ಅಸ್ತವ್ಯಸ್ತ : ಕಡುಗೊಯ್ಯಲಾದ ಕೆಯ್ಯಂತೆ ತೆನೆ ಮುಱಿದು ಬೀಸರವಾದ ರಾಶಿಯಂತೆ ಪುಲಿಮೊಗಂಗೆಟ್ಟು (ಅಸಂಪು. ೦೦-೬೩ ಪ) ; ಭಾಸುರನಾಗನಾಥನ ಫಣಾಮಣಿ ರುಕ್ಕಯುಮುರ್ಬಿ ಧಾತ್ರಿ ಮೇಣ್ಬೇಸರಮಾಗಲಲ್ಲಿ ಪೊಱಪೊಣ್ಮಿ ಮಡಲ್ತು ವಿಜೃಂಭಿಪಂತೆ ತೋರ್ಪೀ ಸರಸೀಡ್ಯಸನ್ನಿಧಿಯೊಳ್ (ಉದ್ಯಪ. ೦-೪೭). ೯. ಕೆದರುವಿಕೆ ; ಕಲಸುವಿಕೆ : ಪೂಸಿದ ಕುಂಕುಮಮೆನಸುಂ ಬೀಸರವಾಗಿ ರದು (ಬಂಹಂ. ೩-೦೮). ೧೦. ಛಿದ್ರ ; ಭಿನ್ನ ; ಭಂಗ : ತನ್ನಿಷ್ಟಲಿಂಗ ಭಿನ್ನವಾದಾಗೆ . . . ದೋಷಹರ ಬಸವ ಶಂಕರದೇವರಾ ಲಿಂಗ ಬೀಸರಾಗಲಿ ತಮ್ಮ ತನುವಂ ನಿರಾಕರಿಸಿ ಶೇಷಧರನಂಘ್ರಿಯಂ ಪೊರ್ದಿ ಸುಖಿಯಾದರ್ (ಗುರುಚಾ. ೦೬-೨೬). ೧೧. ಅಳ್ಳಕ ; ಸಡಿಲ : ಬೀಸರವಾಗದಪ್ಪ . . . ಮಾಸಲಂತಿರೆ ಮನವಿರ್ಪುದು (ಅರ್ಥಪಂ. ೪-೬೭). ಬೀಸರು: ೧೨. ಕಪಟ ; ವಂಚನೆ ; ಮೋಸ : ಲೋಕದಲ್ಲಿ ಬಿನ್ನಾಣದಿಂ ಬೀಸರಿಲ್ಲದ ಭಾವಶುದ್ಧಿ ಯಿಂದೊಲಿದು ನಲಿದೊಲವಿನಿಂದ ಸ್ಥಾಣುವಿಗೆ ನೀರೆಱೆದು . . . ಮುನಿ ಸಂಕುಲಂ ಕೇಣಮಿಲ್ಲದೆ ತದ್ವನಾಂತರದೊಳಿರ್ದುದು (ಸಂಬವಾ ೨-೨೦).

[ಬೀ + ?./ ತೆಲು. ವೀಸರ]

**ಬೀಸರಂಬೊಂದು** (ಕ್ರಿ). ಮಲಿನವಾಗು : ಇವಳ ಕಡೆಗಣ್ಣ ನುಣ್ಗದಿರ್ಗಣೆ ಯನೆಚ್ಚಪಂ ಕಾಮದೇವಂ . . . ಬೀಸರಂಬೊಂದಿತ್ತು ಮನದೆಸಕಂ (ಅರಾತ. ೨-೫-೭). [ಬೀಸರ + ಪೊಂದು$_1$ (< ಪೊರ್ದು) ]

**ಬೀಸರಂಬೊಗಿಸು** (ಕ್ರಿ). ಮಲಿನಗೊಳಿಸು : ಏಕಭಾಂಡವಾದುದ ಕಂಡುಣದೆ . . . ಆ ಸಯುದಾನಗಳ ತೆಗೆದವಂ ಬಳಸದೆ ಬಳಸಿ ಬೀಸರಂ ಬೊಗಿಸಿದೊಂದಱೊಳಚಳದಿಂದೆಯೊಂದಿತೆನ್ನದೆಯುಂಡು (ಸಿದ್ಧೇಪು. ೨೩-೦೦೨).

[ಬೀಸರಂಬೊಗು + – ಇಸು$_3$]

**ಬೀಸರಂಬೊಗು**, ಬೀಸರಂಹೊಗು (ಕ್ರಿ). ೧. ಕೆಡು ; ಕೆಟ್ಟುಹೋಗು : ಮುಖದೊಳ್ಗಾನಮಂ ಕೆಯ್ಯೊಳ್ಭಿನಯಮಂ ದೃಷ್ಟಿಯೊಳ್ ರಸಮಂ ಪದ ತಳದೊಳ್ ತಾಳಮಂ ಬೀಸರಂಬೊಗಲೀಯದೆ ಸೆಱೆವಿಡಿದು (ರಾಜಶೇ. ೫-೦೯ ಪ). ೨. ಕಡಮೆಯಾಗು ; ಕುಗ್ಗು ; ಕುಂದು : ವಾಸವಂ ಬೀಸರಂ ಬೊಗದ ಸಡಗರದಿಂದೀಸಿಕೊಂಡು ಲೇಸಾಗಿ ವಾಸನೆವಡೆದ ದೇವಾಂಗ ವಾಸಮಂ ತನ್ನಯ ಪರ್ಯಂಕಾಸನಬಂಧದೊಳ್ ಪಾಸಿ ಮೆಲ್ಲನಲ್ಲಿ ಕುಳ್ಳಿರಿ ಸುವುದುಂ (ಜಾರಪು. ೭-೬೫ ಪ). ೩. ಮುಗಿ ; ತೀರು ; ಕೊನೆಗಾಣು : ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂಬೊ [ಪಾಠಾಂ. ಬು]ಗದೆ ಬಿರ್ಚಿ ಬೀಸಿದಾಗಳ್ (ರಾಜಶೇ. ೫-೦೦೪ ಪ). ೪. ಅಶುದ್ಧ ವಾಗು ; ಮಾಲಿನ್ಯವನ್ನು ಹೊಂದು : ' ಬೀಸರಂಬೊಗಿಸು ' ಪರಾ. ಬೀಸರುಹೊಗು : ೩. ಮುರಹರನಾಣೆಘೋಷಣೆಯಲಿ ಜವಿ ಬೀಸರು ಹೊ[ಪಾಠಾಂ ಹೋ]ಗದಂತೆ ನೀನಿರ್ದು ಕರೆಯಲಟ್ಟಿದರೆ ದ್ವಾರಕಿಗೆಯ್ದು ವುದು (ಮೋಹತ. ೦೩-೦೨) ; "ಜವಿಬೀಸರು = ಕೂದಲಷ್ಟು ಪಾಲುಮಾರಿಕೆ" (ಮೋಹತ. ೦೩-೦೨ ಅಡಿ). [ಬೀಸರ + ಪೊಗು ]

**ಬೀಸರಂಬೋಗು**, ಬೀಸರಂಪೋಗು, ಬೀಸರಪೋಗು (ಕ್ರಿ). ೧. ವ್ಯರ್ಥವಾಗು ; ನಿರರ್ಥಕವಾಗು : ತೊಡರಂ ದೇಸೆಗೆ ಕಾಲೊಳಿಕ್ಕಿ ಪಡೆದ ರ್ಥಂ ಬೀಸರಂಬೋಗದಂತೊಡಲಂ ರಕ್ಷಿಸಿ (ಎಕ. V. ಹೇಲಾರು. ೦೦೨-೪೮ ; 1220) ; ಅಲರ ಬಿಜ್ಜಣಿಗೆಯಿಂ ಬೀಸೆ ಬೀಸರಂಬೋದಂತೆ ಹಸನಂ ಹಸಂಗೆಡೆ (ರಾಜಶೇ. ೭-೬೨ ಪ). ೨. ನಾಶವಾಗು ; ಹಾಳಾಗು : ಬೀಸರಂಬೋದುದಿನ್ನೇನು ವಂಶದ ಫಲಂ (ಇಹರ. ದೇ. ೩೭-೨೨). ೩. ಮುಗಿ ; ಕೊನೆಗಾಣು : (ಕ). ಬೀಸರಂಪೋಗು : ೪. ವಿಚಲಿತ ವಾಗು ; ವಿಕ್ಷಿಪ್ತವಾಗು : ಕುಕಿಲ್ವ ಪಡಿಯುಱವಕ್ಕಿಗಳುಗ್ಗಡಣೆಗೆ ಬೀಸರಂ ಪೋಗದೆ ... ಪದ್ಮಕಿಂಜಲ್ಕದೊಳ್ ಸ್ವಸ್ತಿಕಂ ಬರೆವ ಹಂಸಗಾಮಿನಿಯರುಂ (ನಾಗಕು. ೩೦-೩೭ ಪ). **ಬೀಸರಪೋಗು** : ೧. ಹಿಡಿದುದ ಬಿಡಸು ಬಿಟ್ಟು ಱಚ್ಚೆಯ ಬಳಸಿ ಮುಂದಣಡಿಗೆ ಬೀಸರಪೋಗಿ ಬಳಲುವನಲ್ಲ (ಶಿವಗೀ. ೨೭-೦೦೭) ; ಮಾಸರ ಗಂಡನೆಂದೆಂಬ ಬಿರುದಿನ ವಿಲಾಸದ ಸಡೆ ನಮಗಿನ್ನು ಬೀಸರಪೋಗದೆಂದೆಣಿಕೆಯನಾ ನೃಪ ಸೂಸಿ ಬಿಟ್ಟನು ಮನದೊಳಗೆ (ಕುಮಾಸಾಂ. ೮-೪೭). ೨. ದಿನ ವೃಥಾ ಹೋಗದೆ ಯೌವನ ಬೀಸರ ಪೋಗದ ಮುನ್ನ ಪಿನಾಕಿಯ ತಂದು ನೆರಹೆನ್ನವ್ವಾ (ಸರ್ವವ. ೪೩-೫೦೪): ವಿತತರ್ಲಕ್ಷಣಾಮ್ರ ಮುಂತಾದ ನೈವೇದ್ಯಸಂತತಿಯದೀಶಂಗೆ ಹಿತ ವಲ್ಲೆಂದು ನೆನೆದು ನಿಶ್ಚಿತದೆ ಬೀಸರಪೋಗದಮಳತರಸಾರ ಜೀವಾತ್ಮಾ ರ್ಪಿತಂಗೆಯ್ಯುತೆ (ಸಿದ್ಧೇಪು. ೨೦-೩೫). ೫. ಮೋಸಹೋಗು ; ವಂಚಿತ ವಾಗು : ಈಶ್ವರ ನುಡಿದ ನುಡಿಯನಱಿದವೆಂದು ಬೀಸರ ಪೋದರಣ್ಣಗಳಿಲ್ಲ (ಅವತಂ. ೨೫-೦೦೪). ೬. ಮಲಿನವಾಗು ; ಮಾಸಲಳಿ; ಮಾಲಿನ್ಯವನ್ನು ಹೊಂದು : ತನು ಮಾಸಲು ಮನವೆಲ್ಲ ಮಾಸಲು ಶಿವನ ಈ ಮಾಸಲು ಬೀಸರಪೋಗದಂತಿದ್ದರೆ ಆತನೆ ಜಗದೀಶ ಕಾಣಾ (ದೇವಾವ. ೫೦-೧೦೦) ; ಲಿಂಗದಲ್ಲಿ ಮಱೆದು ಮಚ್ಚಿರ್ದ ಮನವು ಹೊಱಗೆ ಬೀಸರಪೋಗದೆ (ಮಹಾದೇ. ಕ. ೦೨೩-೨೪೮); ಬೀಸರಪೋಗದ ಮುನ್ನ ಮಾಸಲಾಗಿ ಅರ್ಪಿಸಬಲ್ಲಡೆ ಕೂಡಿಕೊಂಡಿಪ್ಪ ನಮ್ಮ ಕೂಡಲ ಚನ್ನಸಂಗಮ ದೇವನು (ಚನ್ನವ.ಕ. ೪೨೦-೬೪೪). ೭. ಭಂಗವಾಗು ; ಮುರಿ : ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ ಬೀಸರಪೋಗದೆಯಿಪ್ಪ ಇರವು ಕೂಡಲಸಂಗಮ ದೇವರಲ್ಲಿ ನಮ್ಮ ಮಹದೇವಿಯಕ್ಕಂಗಾಯಿತ್ತು (ಬಸವ. ಕ. ೦೨೬೫).

[ಬೀಸರ + ಪೋಗು$_1$ (<ಪೋ$_1$)]

**ಬೀಸರಂಪೋಗು** ' ಬೀಸರಂಬೋಗು ' ನೋ.

**ಬೀಸರನುಡಿ** (ನಾ). ಮೂದಲಿಕೆಯ ಮಾತು ; ನಿಂದೆ : ಹರ ಶಂಕರ ಪಕ್ಷದಿನೀ ದೊರೆ ಪೊಸಬೆಯನಂಟಕೊಂಡು ಬೀಸರನುಡಿಯಂ ಸೊರಹಿ ಕಿಡೆನುಡಿವುತೆನ್ನಂ ಜಱಿದಪನೀ ನಿಂದೆ ನಿನ್ನದೇ ಶಶಿಮೌಳೀ (ಹಾಲಾಸ್ಯ ೩-೦೨-೨೪). [ಬೀಸರ + ನುಡಿ$_2$]

**ಬೀಸರಪೋಗು** ' ಬೀಸರಂಬೋಗು ' ನೋ.

**ಬೀಸರಿಗ** (ನಾ). ನಾಶಮಾಡುವವನು ; ಕೇಡುಂಟು ಮಾಡುವವನು : ಲೇಸು ಮಾಡಿದೆ ಭುವನಭವನದ ಬೀಸರಿಗನಸುಗೊಂಡು ನಿಜಪದದಾಸ ವರ್ಗವನುದ್ಧರಿಸಿದೆ (ಕಿಭಾಗ. ೩-೯-೪೦). [ಬೀಸರ + – ಇಗ]

**ಬೀಸರಿಸು** (ಕ್ರಿ). ೧. ನಾಶ ಮಾಡು : ಸುತ್ತ ಕೆದರಿದ ಹಿಳುಕನೋಸರಿಸಿ ಬೀಸರಿಸಿ . . . ಬಿತ್ತಿದನು ಹಿಳುಕನಂಗಾಂಗದೊಳು (ಶಶಮು. ೩೭-೭೨). ೨. ಭಂಗವಾಗು : ಭಾಸುರಬಾಹ್ಯಸಾಮಗ್ರಿಯೊಳ್ಮನಿ ಧ್ಯಾನ ಬೀಸರಿಸದೆ ನಿಂದನೊಳಗೆ (ಭರತ. ೭೭-೯). ೩. ಬಿಡು ; ತ್ಯಜಿಸು ; ತೊರೆ : ಮೋಸದೊಳಿರ್ದವ ನಾನಲ್ಲದವನಿನ್ನು ಬೀಸರಿಸುವೆನು ನೋಡೆಂದ (ಭರತ. ೬೦-೭). [ಬೀಸರ + – ಇಸು$_3$]

**ಬೀಸರು** 'ಬೀಸರ' ನೋ.

**ಬೀಸರುಹೊಗು** 'ಬೀಸರಂಬೊಗು' ನೋ.

**ಬೀಸಲು** (ನಾ). ೧. ಬೀಸುವಿಕೆ ; ಬೀಸುವುದು : ಕಟಂಜನದ ಮಿಂಚುಂ ಗಂಬಿಯನ್ನೊದೆದು ನೀಡುಂಗಯ್ಗಳ ಬೀಸಲಿಂದ ತೇಲ್ದು ಹೋಗಿ (ಚಿನ್ನ. ೧೦೯-೦೫). 'ತೋಳ್ವೀಸಲು' ಪರಾ. ೨. ವಿಸ್ತಾರವಾದುದು ; ವಿಶಾಲವಾದುದು : 'ಬೀಸಲುಮನ' ಪರಾ.
[ಬೀಸು$_1$ + – ಅಲು (< – ಅಲ್$_2$) ]

**ಬೀಸಲುಮನ** (ನಾ). ವಿಶಾಲವಾದ ಮನಸ್ಸು : ಬೀಸಲುಮನದಲ್ಲಿ ಉತ್ಸಾಹ ಜೀವಾಳ ಈಸಲು ಬಿದ್ದಿತು ರಾಮರಾಮಾ (ಸೂರ್ಯಪಾ. ೮೫-೬). [ಬೀಸಲು + ಮನ]

**ಬೀಸಾಕು**, ಬಿಸಾಕು (ಕ್ರಿ). ಎಸೆ; ಒಗೆ : ಅವನು ಪಾತ್ರೆ ಬೀಸಾಕಬಹುದು (ಶಾರತಿ. ೬೫). **ಬಿಸಾಕು** : ಯಾರೋ ಉಂಡು ಬಿಸಾಕಿದ ಎಂಜಲೆಲೆಯನ್ನು ಹೆಕ್ಕಿ ನೆಕ್ಕುತ್ತಿದ್ದರು (ಮುಂಗಾಮು. ೧೯); ನನ್ನ ಕಡೆ ಯಾರೂ ಒಂದು ರೊಟ್ಟಿಯ ತುಂಡನ್ನೂ ಕೂಡ ಬಿಸಾಕುವುದಿಲ್ಲ (ಕಮಳ. ೦೦೬).
[ಬೀಸು$_1$ + ಹಾಕು (< ಪಾಯ್ಕು$_{k1}$)]

**ಬೀಸಾಟು** 'ಬೀಸಾಡು' ಪರಾ.

**ಬೀಸಾಡು**, ಬಿಸಾಡು (ಕ್ರಿ). ಬಿಸಾಟು, ಬೀಸಾಟು (ಭೂತನ್ಯೂ). ೧. (ದೂರಕ್ಕೆ) ಒಗೆ ; ಎಸೆ ; ಬಿಸುಡು : "ಬೀಸಾಡು (ಬೀಸು + ಆಡು) ಕರವಿಮೋಚನೇ" (ಶಮಧಾ); ಲೇಸುಲೇಸೆನುತೆ ಪೆಟ್ಟಿಗೆಯನೀಕ್ಷಿಸು ತಂದು ಬೀಸಾಟನೆತ್ತಿ ಹೊಱಯಿಂಕೆ (ತಿರುರ. ರೀ. ೦೩-೬); ಅವಳು . . . ಅವನಿಯಲಿ ಬೀಸಾಟು ಪದಕವ ಬೆಪರಿ ಬಳಲುತ ಬಸುಱ ಹೊಯ್ದಳು (ಕೌತಿರಾ. ೩-೩೨). ೨. ತೊರೆ ; ತ್ಯಜಿಸು : ಒಳಹೊಱಗೊಂದಾಗದವರಿಗೆ ಅಳಿಯಾಸೆದೋಱ ಬೀಸಾಡುವನವರ ಜಗದೀಶ ಕೂಡಲಸಂಗಮದೇವ (ಬಸವ. ೯೬). **ಬಿಸಾಡು** : ೧. ಮಡಿಯ ಕೂಲಿಯ ಬೇಡ ಹೋದರೆ ಬಿಳಿದು ಹಱದು ಎನ್ನ ಮೇಲೆ ಬಿಸಾಟಿನು (ಮಡಿವಾ. ೨೯-೪೨): ಸತ್ತಡೆಳದು ಬಿಸಾಡುವರು (ಎಕ. X (ಶ), ಚನ್ನಪ. ೦೬೮-೦೩ ; 1300) ; ಮೈಮೇಲಿನ ಬಟ್ಟೆಗಳಿಗೆ ಬೆಂಕಿ ಹತ್ತಿದರೆ, ಆ ಕ್ಷಣವೇ ಅದನ್ನು ಮೈಮೇಲಿಂದ ತೆಗೆದು ದೂರ ಬಿಸಾಡಬೇಕು (ಮುಂಬಯು. ೪-೬೦). ೨. ಸುಡಲಿನ್ನು ಸಂಸಾರಭೋಗವಿನ್ನೇಕೆಂದು ಬಿಡುವಲ್ಲಿ ಬಿಸಾಡಿದನೊ (ಅಂಜತ. ೦೪-೦೩೬). [ಬೀಸು$_1$ + ಆಡು$_1$]

**ಬೀಸಿಕೆ**, ಬೀಸಿಗೆ$_1$ (ನಾ). ೧. ಎಸೆಯುವಿಕೆ ; ಬೀಸುವಿಕೆ : ಗಿರಿಯ ಶಿಖರದ ಹೊಯ್ಲಿನಲಿ ಹೆಮ್ಮರನ ಬೀಸಿಕೆಗಳಲಿ . . . ಹೊದೆಸಿದುದು ನೆಲದುಪ್ಪರದ ರುಧಿರದಲಡಗಿದುದು ನಭವಿವರ ಸಮರದಲಿ (ಕೊರಲಾ. ೬-೦೩-೩೮). **ಬೀಸಿಗೆ$_1$** : ೨. ಅಡುವಿಕೆ ; ಹೊಡೆತ ; ಪೆಟ್ಟು : ಹಱಗೊರಳ ತೋಳಿನ ಬೀಸಿಗೆ [ಶಾಶಾಂ. ಕೆ]ಯ ಬಿಱಸಿನಲಿ ಹೊರಳಿತು ಮುಂಡವಾ ಖಳನ (ಕೊರಲಾ. ೩-೬-೨೬) : ಅಸುರಾರಿ ಮಹಾಸ್ತ್ರನಿಕರದ ಬೀಸಿಗೆಯ ಬಿಱುವಳೆಯನದ ಹೊಱಬೀಸಿದುದು ಸುರರಸ್ತ್ರಶಸ್ತ್ರಾವಳಿಯ ಬಿಱುಘಾಳಿ (ಶಿಶಾಗ. ೬-೦೦-೦೬). ೩. ವ್ಯಾಪ್ತಿ ; ಹರಹು : ನೇಸಱನು ಮುಸುಕಿತು ವಿಮಾನದ ಬೀಸಿಗೆಯ ಬಹುರತ್ನಕಾಂತಿಗಳು (ಶಿಶಾಗ ೪-೦೦-೩೦). [ಬೀಸು$_1$ + – ಇಕೆ]

**ಬೀಸಿಗೆ$_1$** 'ಬೀಸಿಕೆ' ನೋ.

**ಬೀಸಿಗೆ$_2$** 'ಬೀಸಗೆ' ನೋ.

**ಬೀಸಿಸು** (ಕ್ರಿ). ದೀಪ ಮುಂತಾದುವನ್ನು ಗಾಳಿಯೂದಿ ಆರಿಸು,— ನಂದಿಸು : ಒಂದು ದಿನ ಫಲುಗುಣನ ಭೋಜನದಂದವನು ತಾವಱಯಲಿಕೆಯರವಿಂದವದನೆಯ ಕೈಯ ದೀಪವನಿರುಳು ಬೀಸಿಸಿದ (ಸಂಭಪ. ೦೬-೦೦೬). [ಬೀಸು$_1$ + – ಇಸು$_3$]

**ಬೀಸು$_1$** (ಕ್ರಿ). ೧. (ವೇಗವಾಗಿ) ಎಸೆ : ಒಗೆ ; ಬಿಸುಡು : ದೈತ್ಯನಂ ಪಿಡಿದು ಮೃಣಾಳನಾಳಮನೆ ಸೀಳ್ವವೊಲೊರ್ಮೆಯೆ ಸೀಳ್ದು ಬೀಸಿದಂ (ಶಂಶಭಾ. ೩-೦೬) ; ಕಾಲನವುಂಕೆ ಪತ್ತಿ ಪಿಡಿದೋಘದೆ ಭೋರೆನೆ ಬೀಸಿ ಕಂಭದೊಳ್ ಲೀಲೆಯಿನಟ್ಟಿ ಮೋದಿಸೆನೆ (ಧರ್ಮಾಮ್ಮ. ೯-೦೬೧). ೨. (ಪ್ರಾಣಿ, ಪಕ್ಷಿ ಮುಂತಾದುವುಗಳನ್ನು ಹಿಡಿಯುವುದಕ್ಕಾಗಿ ಬಲೆ, ಬಟ್ಟೆ ಇತ್ಯಾದಿಗಳನ್ನು) ಎಸೆದು ಹರಡು, – ಹರವು : ನಾಳೆ ಬಂದು ಜಾಲಮಂ ಬೀಸಿ ಮತ್ಸ್ಯಂಗಳಂ ಪಿಡಿವಂ (ಶಂಶಶಂ. ೧೫೬-೨೦); ಬಲೆಯ ನೊಂದಂ ಗಳಿಸಿ ನಿಚ್ಚಂ ಬಲೆಯನುದಕದೊಳಿತ್ತಿ ಬೀಸಲು (ಬಸವು. ೨೭-೨೦); ಸಿಲುಕುವುವು ಮೃಗಪಕ್ಷಿ ಹೂಡಿದ ಬಲೆಗಳಲಿ ಕಾಡಾನೆ ಬೀಸಿದ ಬಲೆಯ ಕೊಂಬುದೆ (ಕುವ್ಯಾಕ. ೦೩-೦೪). ೩. (ಮಾಯೆ, ಗಾರುಡಿ, ಪರಿಮಳ ಮುಂತಾದುವುಗಳನ್ನು) ಪಸರಿಸು ; ಆವರಿಸುವಂತೆ ಮಾಡು : ಮಾಯುಮನೆ ಬೀಸಿ ಪೆಜಿರನುಪಾಯದೆ ಠಕ್ಕಿಕ್ಕಿ (ಧರ್ಮಾಮ್ಮ. ೧-೦೦೨) ; ಕಾಡೊಡೆಯನಂ ಸೋನು ಸೊಕ್ಕಿನ ಧೂಪಮಂ ಬೀಸು (ಹಶಶಾ. ೫-೨೯); ಮೋಹನದ ಮದ್ದುಗಳ ಮಾಯೆಯ ಬೀಸುವುದು ಸೂಸುವುದು ಸೊಗಸುಗಳ (ಕುವ್ಯಾಅ. ೦೩-೨). ೪. ಚಾಚು ; ನೀಡು: ಸುತ್ತಲುಂ ಭೀಮಭೀಷಣ ಕುಟಿಲಜಟಿಲವಿನ್ಯಾಸದಿಂ ಶಾಖಾಮಹಾಶಾಖೆಗಳ ಬೀಸಿ, ಸ್ವಚ್ಛಂದದಿಂ ಬೆಳೆದಿರ್ದವಲ್ಲಿ ಭೂರ್ಜೇಶಕುಲಕೀರ್ತಿಗಳ್ ಲಕ್ಷೋಪಲಕ್ಷವಾಗಿ (ಶತ್ರಾಂಗ. ೩-೬೧). ೫. (ಬೀಸಣಿಗೆ ಮುಂತಾದುವುಗಳಿಂದ) ಗಾಳಿಯನ್ನು ಹಾಕು : ಎಳಮ್ಮೆಂದವಾಟಿಯೆಲೆಯ ಬಿಜ್ಜಣಿಗೆಗಳಿಂ ಬೀಸಲ್ವೇಟ್ದು (ಶಂಶಭಾ. ೫-೬ ವ) ; ಬಬಿಲ್ವರ ಮೊಗದೊಳ್ ನೀರಂ ತಳಿದು ಬೀಸಿ ಚೇತರಿಸಿದಾಗಳ್ (ಧರ್ಮಾಮ್ಮ. ೧೦-೮೬); ಚಂಚತ್ತಾಳವೃಂತಂಗಳಿಂ ತಾಂ ನೀಹಾರಮಯೂಖಬಿಂಬಮುಖಿಯರ್ ಬೀಸುತ್ತೆ ಕಣ್ಗೊಪ್ಪಿದರ್ (ಉದ್ಯಟ. ೬-೪೨). ೬. ತೀಡು; ಸುಳಿ : ಮೊಕ್ಕಳಂ ಬೀಸುವ ಗಾಳಿ ಚಾಮರದ ಗಾಳಿಯೆನಲ್ (ಶಂಶಭಾ. ೬-೨೯): ಸುಳಿದು ಬೀಸುವ ಗಾಳಿ ಉರಿಯಾಯಿತ್ತವ್ವ (ಮಹಾದೇ. ಬ. ೪೩-೧೦೦); ಆಳಾಪಿಸಿದರು ಕೇಳುವ ಜನರೆದೆಗೆ ತಂಗಾಳಿ ಬೀಸಿದ ತೆಱನಾಗೆ (ಭರತ. ೦-೬೨). ೭. ರಭಸವಾಗಿ ಚಲಿಸು ; ವೇಗವಾದ ಚಲನೆಯನ್ನು ಹೊಂದು : ವಿಳಯಾನಿಳಂ ಬೀಸೆ ಮಸಗಿದ ಜಲನಿಧಿಯ ಕಲ್ಲೋಲದಂತೆ (ಶಾಂತಿಪು. ೪-೬ ವ) ; ಪೊಡೆವ ಸಿಡಿಲಿಂ ಮಿಂಚಿಂ ಭೋರೆಂದು ಬೀಸುವ ಗಾಳಿಯಿಂ (ಧರ್ಮಾಮ್ಮ. ೨-೨೨೯): ಬೀಸುವ ಬಿಱು ಗಾಳಿ ಬೀಸಬಾರದು ಬೀಸದಿರಬಾರದು (ಸಕವ. II, ೬೮೦-೦೯೪೮) ; ಅತಿ ನಿರ್ಭರದೊಳನಿಲಂ ಬೀಸಿದನು ಕಂಧೂಳಿ ನೆಗೆಯಿತ್ತು (ಬಸವು. ೬೦-೦೧). ೮. (ದೊಣ್ಣೆ, ಕತ್ತಿ, ಗದೆ ಮುಂತಾದ ಆಯುಧಗಳನ್ನು ವೇಗವಾಗಿ) ಆಡಿಸು ; ತಿರುಗಿಸು ; ಝಳಪಿಸು : ಕಾಲದಂಡಮಂ ಪೋಲ್ವ ತನ್ನ ಗದಾದಂಡಮಂ ಕೊಂಡು ತಿರುಪಿ ಬೀಸುತ್ತುಂ ಬರ್ಪ ಭೀಮಸೇನನಂ (ಶಂಶಭಾ. ೦೨-೦೬೦ ವ) ; ಗದೆಯಂ ಬೀಸುವ ಬೆಡಂಗು ರಂಜಿಸಿತು ಭೀಮ ದುರ್ಯೋಧನರಾ (ಗದಾಯು. ೮-೮) ; ಬೀಸಲ್ ಗಜೆಗಳನವರಂದಾ ಸಕಳ ಧರಿತ್ರಿ ತಿಗುರಿಯಂತಿರೆ ತಿರಿದತ್ತು (ನೇಮಿಪು. ೦೨-೦೯೬). ೯. (ಸೊಂಡಿಲು, ಕೈ ಮುಂತಾದುವುಗಳನ್ನು ತೂಗು ; ಅಲುಗಾಡಿಸು : ಘನಸಾರ ಸರಲಚಂದನವನಮೃದುಪಲ್ಲವಮನಗ್ರಹಸ್ತದೆ ಕೊಂಡೊಯ್ಯನೆ ಬೀಸೆ ಚೆಲ್ವುವಡೆದುದು ಜಿನಂಗೆ ಚಾಮರಮನಿಕ್ಕುವಂತಮರಗಜಂ (ಆದಿಪು. ೬-೬೨); ಲಲಿತಾಂಗಿ ಮೆಲ್ಲಮೆಲ್ಲನೆ ನಳಿತೋಳಂ ಬೀಸೆ (ಕಾದಂಪೂ. ೫೦೬) ; ಓಸರಿಸಿ ಬಿರ್ಚಿ ಪಕ್ಕಮನೋಸರಿಸದೆ ಮುನಿಗಳಿರ್ಪ ಹೋಮಸ್ಥಳದೊಳ್ ಭಾಸುರ ದಿನಂತುಮಿಂತುಂ ಬೀಸುತ್ತೆಳ್ಚಱಸಿ ಕುಡುವುದಾ ಶಿಖಿ ಶಿಖಿಯುಂ (೧೦೪. ೦-೬೬). ೧೦. (ಯುದ್ಧವನ್ನು ಆರಂಭಿಸಲು ಚಾಮರ, ದೀವಟಿಗೆ ಅಥವಾ ಕೈಯನ್ನು) ಅಲುಗಾಡಿಸಿ ಸೂಚನೆ ಕೊಡು: ಅಗಳೆರಡುಂ ಪಡೆಯೊಡೆಯರ್ ಕಾದುವ ಪೊಟ್ಟಱದು ಕಡುಮುಳಿದು ಕೈಯ ಕುಂಚಮಂ

ಬೇಗಬೇಗಂ ಬೀಸಲುಂ (ಶಬ್ದಕಾ. ೨೬೪) ; ನೆಗಹಿ ಬೀಸುವ ಚಾಂರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ತೋಱಿದರು (ಕುವ್ಯಾ.ದ್ರೋ. ೯-೧೬) ; ಬೀಸಿದರು ಚಾಂರಿಗಳ ಬಲವಾರಾಶಿ ಮಸಗಿತು (ಕವ್ಯಾ.ಕ. ೧೩-೬). 'ಕೆಯ್ವೀಸು' ಪರಾ. ೧೧. (ಕತ್ತಿ, ಈಟಿ ಮುಂತಾದುವನ್ನು) ಗುರಿಯಿಟ್ಟು ಪ್ರಯೋಗಿಸು : ಅವರ ಸಮನ್ತಂ ಶ್ರೀಮುತ್ತರ ಅತಿರಥಗಣ್ಡ ಪೊಸವೆಣ್ಣೆರಟ್ಟಿ ಬೀಸಿ ತಪ್ಪದೊನ್ (ಎಕ. XV, ಅರಸೀ. ೨೦೫-೪ ; ಸು. ೫೨೦). ೧೨. ಅಲುಗಾಡು ; ಅಲ್ಲಾಡು ; ಅತ್ತಿತ್ತ ಚಲಿಸು : ಬಿಡೆ ಬಿಡಿಸುವಂತೆ ನೃಪರೊಳ್ನುಡಿಯಂ ಬೀಸುವುದು ಚಾಮರಾವಳಿ (ಕಾದಂಪೂ. ೫೫೬); ಬೀಸುತಿರ್ಪ ತಾಳವೃಂತಮಾಸೆಯಾಗದಿರೆ (ಅಜಪು. ೨-೯). ೧೩. ತಿರುಗಿಸು; ಹೊರಳಿಸು; ಸುತ್ತಿಸು : ಸುತ್ತಿರ್ದುದು ಜಂಬೂದ್ವೀಪಮಂ ವಾರಿಧಿ ಕವಯುರಮಂ ಬೀಸಿದಂತಾಗೆ ಚೆಲ್ವಿಂ (ಧರ್ಮಾಮೃ. ೧-೮೫); ಕೈವಾರಮಂ ಬೀಸಿದಂತೆ ಬಟ್ಟಿತ್ತಾಗಿ ತೋರ್ಪುದು ಸೊನ್ನೆ (ಕಮುದ. ೧೬ ವೃತ್ತಿ). ೧೪. ಚೆಲ್ಲು; ಎರಚು : ವಾಸವನಪೂರ್ವನಾಟ್ಯವಿಳಾಸದೆ ತಾಂ ಭ್ರಮರಿಗುಡುವುದುಂ ನೇತ್ರಸಹಸ್ರಾಸಿತರುಚಿ ಕರ್ನೆಯ್ದಿಲ ಬಾಸಿಗಮಂ ಬೀಸಿದಂತುಟಾದುದು ಸಭೆಯೊಳ್ (ಆಪು. ೫-೦೫) ; ಒಗೆದಂಭೋಧರಕ್ಕಮಳಮರ್ತ್ಯಪತಿ ಬೀಸುತ್ತಿರ್ಪ ಮುಕ್ತಾಮರತ್ರಗಳೋ . . . ಪೇಚಿನೆ ಮಿಂಚುಗಳ್ ನಿಮಿರ್ದುವಾ ಜೀಮೂತಯೂಥಾಗ್ರದೊಳ್ (ಕುಸುಮಪು. ೬-೧೫). ೧೫. ಸೂಸು; ಬೀರು : ದ್ವಾರಕಾಪುರದೊಳು ಬೇಸರಾಗಿಹರೆಲ್ಲ ಜನಗಳಿಗೆ ಹರುಷಮಂ ಬೀಸಿ ಬಹೆ ನಾನು (ಕುರಂಗ. ೮೦-೧೩) ; ರಾಯರು . . . ಬಲಪ್ರಯೋಗದಿಂದ ಮುಗುಳುನಗೆಯನ್ನು ಬೀಸಿ, ಕೈಲಿದ್ದ ದೊಣ್ಣೆಯ ಸಹಾಯದಿಂದ ವೇದಿಕೆಯನ್ನು ಹತ್ತಿ, ಮೇಜನ್ನು ಬಿಗಿಯಾಗಿ ಹಿಡಿದು ಕೊಂಡು ನಿಂತರು (ರಾಯಕ. ೪೪). ೧೬. ಸೆಳೆ ; ಸೆಣೆ ; ಕುಕ್ಕು ; ಅಪ್ಪಳಿಸು : ಜವನ ಬಾರಿಯೊಳಿಕ್ಕುವೆನೆಂದು ಪರ್ವೆ ಭೋರ್ಭೋರೆನೆ ಬೀಸೆ ತದ್ವದನಗಹ್ವರದಿಂ ಬಿಸುನೆತ್ತರುಣ್ಮೆ (ಶಂಶಭಾ. ೩-೩೦) ; ಕಾಸಿ ಕಮ್ಮಾಱನಾದ ಬೀಸಿ ಮಡಿವಾಳನಾದ (ಬಸವ. ೫೯೧) ; ಸೆಳೆವ ಸೇದುವ ಬೀಸುವೊಗೆವ ಕುಸುಕುವ . . . ಖಳರ ಕಳಕಳದ ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೬-೨೯); ಕುದಿಸಿ ಉದಕದೊಳೆಲುಬಿ ಬೀಸುತೊಗೆದು ಪರಡಿ ತೆಗೆತೆಗೆದು ಘಳಿಗೆಯನೊದಗಿಪುದು ಮೈಲಿಗೆ ಮಡಿಗಳೆಹುದಕ್ಕು (ಬಸಪು. ೩೬-೪೬). ೧೭. ರಭಸದಿಂದ ಮುಂದುವರಿ; ನುಗ್ಗು : ಮಸಗಿ ಬೀಸುವ ಕಂಸನಾನೆಯನಸು ಬಿಡಿದ ಗಡ (ಕುವ್ಯಾ.ಸ. ೧೧-೧೬). ೧೮. ನುಗ್ಗಿಸು ; ಎರಗುವಂತೆ ಮಾಡು : ಆನೆಗಳ ತುಡುಕಿ ಹಯಾವಳಿಯ ಬಿಸಿದರು ರಥಿಕರು ಹಾಯ್ಸಿದರು ರಥವ (ಕುವ್ಯಾ.ಕ. ೨-೦೫). ೧೯. ನಿವಾರಿಸು ; ಪರಿಹರಿಸು ; ಅಟ್ಟು ; ಓಡಿಸು : ಕುಮುದಾವತಂಸ ಮಧುಪಂಗಳುಮಂ ಕರದಿಂದೆ ಪಿಂಗೆ ಬೀಸುವ . . . ಬೇವಸಮನಾವರಿಸಿರ್ದಳ್ (ಕಾದಂಬ. ೨೯೦) ; ಅಳಿಯ ಮುತ್ತಿಗೆಗಳನು ಬೀಸದೆ ನೆಲಕೆ ಕಿವಿಯನು ಜೋಲುಬಿಡುವುದು ಬಲುಕಣೆಯ ಹಿಡಿಹಿಂಗೆ ಲಾಗಿಸುತಿರ್ದುದಾ ದಂತಿ (ಕುವ್ಯಾ.ದ್ರೋ. ೩-೩೬). ೨೦. ಹಾರಾಡಿಸು ; ಹಾರಿಸು : ಅಂತು ರಿಪುಕುರಂಗಕಂಠೀರವನ ಕೆಯ್ಯೊಳ್ ವೈಕರ್ತನಂ ಸಾಯಲೊಡಂ ಮೇಲುದಂ ಬೀಸಿ ಬೊಬ್ಬಿಱಿದಾರ್ವ ಪಾಂಡವಪತಾಕಿನಿಯೊಳ್ (ಶಂಶಭಾ. ೧೨-೨೦೬ ವ) ; ಮುಱಿದು ಬಹ ನಿಜಸೇನೆಗಭಯದ ಸೆಱಗ ಬೀಸುತ ಭೀಮಸೇನನ ತಱುಬಿ ನಿಂದನು ಭೀಷ್ಮ (ಕುವ್ಯಾ.ಭೀ. ೬-೫). ೨೧. ಹೊಂದಿಸು; ಅಳವಡಿಸು : ಗಜಕೆ ಗುಳವನು ಬೀಸಿ ವಾಜಿವ್ರಜವ ಹಲ್ಲಣಿಸಿದರು (ಕುವ್ಯಾ.ಶ. ೨-೪). ೨೨. (ಬೀಸುವ ಕಲ್ಲು ಮೊದಲಾದುವನ್ನು ತಿರುಗಿಸಿ ರಾಗಿ, ಜೋಳ ಮುಂತಾದ ಧಾನ್ಯಗಳನ್ನು) ಅರೆ; ಪುಡಿಮಾಡು: ಗೋಪವನಿತೆಯರು ಕುಟ್ಟುತ್ತ ಬೀಸುತ್ತ ತಾ ಪೊಗಳುತಿಪ್ಪ ನಾಮ (ಪುರಂದ. ೨-೨೦೪-೩); ಇಡಿ ಗೋಧಿಯನ್ನು ಬೇಕಾದಂತೆ ಬೀಸಿ ಹಿಟ್ಟು ತಯಾರಿಸಿಕೊಳ್ಳುವುದು ಒಳ್ಳೆಯದು (ಆಯುಸ್ಗ. ೬೩).

**ಬೀಸಹೆಜ್ಜೆ ಹಾಕು** = ವೇಗವಾಗಿ ನಡೆ : ಹೆಂಡತಿಗೆ ಬೈದು ದಂಬ ಬೀಸಹೆಜ್ಜೆ ಹಾಕುತ್ತ ಹೊರಟನು (ದಂಬಮಾ. ೪೦). **ಬೀಸಿ ಒಗೆ** = ವೇಗವಾಗಿ ಎಸೆ : ರಭಸದಿಂದ ಬಿಸುಡು : ಆ ಹಿಮಾಲಯದಿಂದ ನಿನ್ನನ್ನು ಬೀಸಿ ಒಗೆದರೆ ಇಲ್ಲಿಗೆ ? (ಪಲಮು. ೧೧-೧೫). **ಬೀಸಿಕೊಳು, ಬೀಸಿಕೊಳ್ಳು** = ೧. (ಬೀಸಣಿಗೆ ಮುಂತಾದುವುಗಳಿಂದ) ಗಾಳಿ ಹಾಕಿಕೊಳ್ಳು ; ಗಾಳಿ ಬರುವಂತೆ ಮಾಡಿಕೊಳ್ಳು : ಪೊಂಬಾಳೆಯ ಬಿಜ್ಜಣಿಗೆಯಿಂ ಮೆಲ್ಲಮೆಲ್ಲನೆ ಬೀಸಿಕೊಳುತ್ತಂ (ಸಂಬಿಕ. ೧೨-೯೯); ಅಂದು ಅವನು ದಿನವಿಡೀ ಆಂಗ್ಲರಮಣಿಯು ಬೀಸಣಿಕೆ ಬೀಸಿಕೊಳ್ಳುವದನ್ನು ನೋಡಿದನು (ಇಕ್ಕ. ೩೬೦). ೨. (ಬೀಸಣಿಕೆ ಮುಂತಾದುವುಗಳನ್ನು) ಆಡಿಸು : (ಬೀಸಣಿಗೆ ಮುಂತಾದುವುಗಳಿಂದ) ಗಾಳಿ ಹಾಕು : ದೇವಸ್ಥಾನದಲ್ಲಿ ಚಾಮರ ಬೀಸಿಕೊಂಡು ಇರುವ ಹೆಣ್ಣು ನನ್ನನ್ನು ಹಾಗೆ ಅವಮಾನಿಸುವುದೇ ? (ದೇವಹಂ. ೦೫೪). ೩. ಹಾರಾಡಿಸು ; ಹಾರಿಸು : ಅವಳು ಸೆರಗು ಬೀಸಿಕೊಂಡು ಹೋಗುತ್ತಿದ್ದಾಳೆ (ರೂಪ). **ಬೀಸಿಡು** = ಬೀಸಿ ಒಗೆ : ಗದೆಯಂ ಬೀಸಿಟ್ಟೊಡಾ ಮಾಗಧನೃಪನ ರಥಂ ನುರ್ಗೆ (ದಕಳು. ೨-೨೬). **ಬೀಸಿ ಪೊಯ್** = ರಭಸವಾಗಿ ಹೊಡೆ, _ಬಡಿ: ಮೂಳೆಯಂ ದಬ್ಬುಕದಿಂದೆ ನುಗ್ಗುನುಱಿಯಪ್ಪಿನೆಗಂ ಬಿಡೆ ಬೀಸಿ ಪೊಯ್ದು . . . ಕೊಲ್ವ ಕೊಲೆಯಂ ಹರಿಣೇಕ್ಷಣೆ ಕಂಡು (ಸುಕುಮಾ. ೭-೬) ; ಬಡಗಿಯಂತೆ ಕೆತ್ತುವರ್ ಅಗಸನಂತೆ ಬೀಸಿ ಪೊಯ್ವರ್ (ಧರ್ಮಾಮೃ. ೩-೭೩). **ಬೀಸಿ ಬಿಸುಡು** = ಬೀಸಿ ಒಗೆ : ಬೀಸಿ ಬಿಸುಟವು ಪಾಯ್ದಳವ . . . ಬಲವಾರಾಸಿಯಲಿ ತಾಯ್ಮಳಲ ಮೊಗೆದವು ಭೀಷ್ಮನಂಬುಗಳು (ಕುವ್ಯಾ.ಭೀ. ೯-೧೧) ; ಬೀಸಿ ಬಿಸುಟ ಮದೇಭ ಮಾರುತಪಾಶದಲಿ ಸಿಲುಕಿದವು (ತೊರರಾ. ೬-೩೨-೧೨). **ಬೀಸುವ ಕಲ್ಲು, ಬೀಸೂ ಕಲ್ಲು, ಬೀಸೋ ಕಲ್ಲು** = (ರಾಗಿ, ಅಕ್ಕಿ, ಮೊದಲಾದ) ಧಾನ್ಯಗಳನ್ನು ಹಿಟ್ಟು ಮಾಡಲು ಬಳಸುವ ಕಲ್ಲಿನ ಸಾಧನ ; ರಾಗಿಕಲ್ಲು ; ಘರಟ್ಟ : "ಬೀಸುವ ಕಲ್ಲು ಪೆಸರು ಸಂಘಟಯೆನಿಕ್ಕು" (ಮಂಗರಾ. ೬೧-೦೯) ; ಬೀಸುವ ಕಲ್ಲಿನ ಮುಂದೆ ಕುಳಿತು ನೀಲವ್ವ ಆ ಕಾಳು ಬೀಸುತ್ತಿದ್ದಳು (ಬರಹಾ. ೦೦೬); ಬಿಕ್ಕಿ ಬಿಕ್ಕಿ ಅತ್ತರೆ ಬೀಸುವ ಕಲ್ಲು ತಿರುಗೀತೇ ? (ಗಾದೆ) ; ಗಂಗಾಳ ಚರಿಗಿ ಮಂಗಳಸೂತ್ರಾ ತಕ್ಕೊಂಡು ಹೋದರೋ ಬೀಸೂಕಲ್ಲಾ ಎಲ್ಲಾ ತಗೊಂಡರೊ ಸಿಕ್ಕಷ್ಟು (ಕೃಹಿಂಥ. ೬೬) ; ಈಸೋ ಕಾಯನೆ ಬಿಟ್ಟು ಬೀಸೋ ಕಲ್ಲನೆ ಕಟ್ಟಿ ಈಸುವ ತೆಱದಿ ಈ ಭೂಸುರರಾ ದ್ರವ್ಯ (ಪುರಂದ. ೦-೦೯-೨) ; ರಾಗಿ ಬೀಸೋ ಕಲ್ಲೆ ರನ್ನ ಮುತ್ತಿನ ಕಲ್ಲೆ ಅಣ್ಣನ ಮನೆಯ ಸಿರಿಗಲ್ಲೆ (ಜಾನಪ. ೩). **ಬೀಸುವ ದೊಣ್ಣೆ** = (ಆಲಂ) ಅಪಾಯ ; ಆಪತ್ತು: ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರ್ಷ ಆಯುಸ್ಸು (ಗಾದೆ). **ಬೀಸುವಾತ** = ಗಾಳಿ ಬೀಸಲು ಕಾರಣನಾದವನು ; ವಾಯು : ಬೀಸುವಾತನು ಬೀಯವಹನಾಕಾಶದಲಿ ಭೂತಾದಿಯೊಳಗಾಕಾಶವಡಗಿದಡಡಗುವನು ವರಯೋಗಿಯುದಱೊಳಗೆ (ಶಿಭಾಗ. ೨-೧-೪೬).

[ದೇ.॥ ತಮಿ. ವೀಚು; ಮಲ. ವೀಜು, ವೀಯು, ವೀಶು ; ತುಳು. ಬೀಜ್, ಬೀಜು, ಬೀಪು, ಬೀಸ್, ಬೀಸು ; ಕೊಡ. ಬೀಜ್ ; ತೆಲು. ವೀಚು; ಕೋತ. ವೀಚ್; ತೊದ. ಪೀಸ್; ಕುಇ. ವೀಂಜ. /ಸಂ. ವೀಜ್]

**ಬೀಸು₂** (ನಾ). ೧. ಬೀಸುವಿಕೆ ; ಝಳಪಿಸುವುದು ; ತೂಗುವಿಕೆ; (ಕ). ೨. ಸಂಚಾರ ; ನಡೆ ; ಓಟ : ತಿಳಿಗಾಳಿ ತೀಟದಲಿ . . . ಬಿರುಗಾಳಿ ಬೀಸಿನಲಿ ಬರುವ ಮಾರುತಿಯೆ (ಪಸೀಗೀ. ೪೮-೪). ೩. ವಿಸ್ತಾರ ; ಹರಹು : ಕನಕಪತ್ರಮನಲ್ಲಿ ಕಂಡು ಬೀಸುಂ ಬಱಿಯು

ವಿಲ್ಲದೆ ನಿಬಿಡಮಾಗಿ ಬರೆದಿರ್ದಕ್ಕರಂಗಳಂ ಅನುಮಾನಿಸಿ ತಾನೆ ನೋಡಿ (ಅರ್ಜನ. ೬-೭೦ ವ) ; ಕಾಲುವೆ ಮೇಲೆ ಗೇರವರನ ಕಟ್ಟಿ ಬೀಸುವೋಳತಾಗಿ ಗಡಿಯಂಕನಹಳ್ಳೀ ಮೇರೆಯು ಸುಂಕದವರ ಕಟ್ಟಿ (ಎಕ. VII, ಶಿವಮೊ. ೬೫-೦೦೦ ; 1627) ; ಪ್ರತಿಯೊಂದು ವಾಕ್ಯದ ಬೀಸು ಬಿರುಸುಗಳು ಜೋರಾ ಜಾರುಗಳು . . . ಪ್ರತಿಕೃತಿಯಲ್ಲೂ ಮೂಡಬೇಕು (ಸಾಹಿತ್ಯ. XI, ಶ್ರೀನಿ.ವಜ). ೪. ವಿಶಾಲವಾದುದು ; ವಿಸ್ತಾರವಾದುದು : ಬೀಸಾದ ಬಲೆಯೊಳಗೆ ಕಾಸಿಮಿಸಿಯ ಮೃಗವು ತಾ ಸೋತು ಬಿದ್ದು (ಪ್ರಭುಲಿಂಗ. ೧೪-೯೩) ; ಇಲ್ಲಿಯ ಸಭಾಮಂಟಪದ ಬೀಸಾದ ಕಂಭಗಳ ಮೇಲಿನ ಕೆತ್ತನೆಯ ಕೆಲಸವು ಅದ್ಭುತವಾದುದು (ಶಿವಗಂ. ೯೩); ಆ ಗಾಳಿ ಜತಿಗೆ, ನೀ ಗೂಳಿ ಹಾಂಗ ಅಡ್ಡಾಡಿ ಹೇಳು ಏನು ? ಮುಸುಗುಡುತ ಹೊರಟ ಬಯಲಾಗ—ನನ್ನ ಮುಂಗುರುಳ ಭಾಳ ಬೀಸು (ಹೃದಯ. ೦೬-೦೪). ೫. ಉದ್ದ ; ಲಂಬ : ಮೊದಲೇ ಬೀಸಾದ ಕೆಂಪಾದ ಆಳು, ಮತ್ತೇನು ಕೇಳುವುದು ? (ಹೂಬಿಸಿ. ೨೬). 'ಬೀಸುಗಾಲು' ಪರಾ. ೬. ಹೊರವು ; ಸೊಂಪು : ಬೀಸಾಗಿ ಬೆಳೆದು ನಿಂತ ಬಾಳೆಯ ನಿಲುವು (ಜೀವನಂ. ೨೩) ; ತನ್ನ ಆಕಳ ಹಾಲು ಕುಡಿಯದ ಹೋರಿಯು ಸದೃಢವೂ ಆಗುವುದಿಲ್ಲ ಮತ್ತು ಬೀಸಾಗಿಯೂ ಬೆಳೆಯುವುದಿಲ್ಲ (ಗೋಗ್ರಾಸ. ೬೬).

ಬಿಚ್ಚುಬೀಸು = ಸ್ವೇಚ್ಛೆ ; ಸ್ವಚ್ಛಂದತೆ : ನಮ್ಮ ಅಪೂರ್ವನು . . . ಬಿಚ್ಚುಬೀಸಾಗಿ ತಿರುಗುವ ಈ ಬಾಲಿಕೆಯನ್ನು ನಾಲ್ಕಾರು ಬಾರಿ ನೋಡಿದ್ದಾನೆ (ಇಕ್ಷ್ವಕ. ೫೭). [< ಬೀಸು₁./ತಮಿ. ವೀಚ್ಚು]

**ಬೀಸು₃** 'ಬೀಸ' ನೋ.

**ಬೀಸುಂಬಲೆ**, ಬೀಸುಬಲೆ, ಬೀಸುವಲೆ (ನಾ). (ಪ್ರಾಣಿ, ಪಕ್ಷಿ, ಮುಂತಾದುವುಗಳನ್ನು ಹಿಡಿಯಲು, ಎಸೆದು ಹರಡುವ) ಒಂದು ಬಗೆಯ ಬಲೆ : ಅಖಿಳಮೃಗಪಟಳಮಂ ಪಿಡಿಯಲೊಡರಿಸಿ ಸಮೆದ ಶಮನ ಶಬರನ ಬೀಸುಂಬಲೆಯ ಪಾಸಮೆನಿಸಿ (ವರ್ಧಪು. ೦೦-೫ ವ). **ಬೀಸುಬಲೆ :** ಬೀಸುಬಲೆಯಲಿ ಹುಲಿಯ ಹಿಡಿಯಬಲ್ಲಾ (ಜೀನಿ. ೫೯-೯). **ಬೀಸುವಲೆ :** ಹಾಸುವಲೆ ಬೀಸುವಲೆ . . . ಮುಂದಸಿನವಲೆಯ ಹೊಜೆಗಳ ಬೇಡವಡೆ ನೆರೆದುದು (ಹಕಾ. ೫-೬); ಬೀಸುವಲೆ ತಳಿಯ ಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಸಮ್ಯಕ್ತ್ವ. ೬-೨೯).
[ಬೀಸು₁ + ಬಲೆ₁]

**ಬೀಸುಂಬೂರಿಗೆ**, ಬಿಸುಬೂರಿಗೆ, ಬಿಸುವೂರಿಗೆ, ಬಿಸುಹೂರಿಗೆ, ಬಿಸೂರಿಗೆ, ಬೀಸುರಿಗೆ, ಬೀಸುಹೂರಿಗೆ, ಬೀಸೂರಿಗೆ (ನಾ). (ಎಣ್ಣೆ ಸವರಿ ಹಂಚಿನ ಮೇಲೆ ಬೇಯಿಸಿ ಮಾಡುವ) ಅಗಲವಾಗಿರುವ ಒಂದು ಬಗೆಯ ಸಿಹಿ ಭಕ್ಷ್ಯ : ದೇವ ಬೀಸುಂಬೂರಿಗೆಯನೊಮ್ಮೆ ಸವಿಯಯ್ಯ (ಚಕರ. ೬-೦೨೬). **ಬಿಸುಬೂರಿಗೆ:** ಬಿಸುಬೂರಿಗೆಯಂ ಪಲವಂ ನಲವಿನಿಂದವಂ ಬಡ್ಡಿಸಿದರ್ (ಶಾಂತೀಶ್ವ. ೦೫-೬೦). **ಬಿಸುವೂರಿಗೆ :** ಅಲ್ಲಿ ಬಿಸುವೂರಿಗೆ [ಪಾಠಾಂ. ಬಿಸುಪ ಹೂರಿಗೆ] ಗಾರಿಗೆಗಳಾಗೆ ತನಿವಾಲ ಸಣ್ಣ ಸೇವಗೆಯ ಪಾಯಸಮಾಗೆ (ಕೊಮ್ಮರ. ಹ. ೩೯೫-೦೫). **ಬಿಸುಹೂರಿಗೆ :** ಹೂರಿಗೆಯ ಮಂಡಿಗೆಯ ಘನಬಿಸುಹೂರಿಗೆಯ[ಪಾಠಾಂ. ಚಕ್ಕುಲಿ ಗಾರಿಗೆಯ] . . . ಸಂವರಣೆ ಸವನಿಸಲೀ ಕ್ಷಣದಲೆಂದ (ವಿಭಾಗ. ೦೦-೨೨-೦೪). **ಬಿಸೂರಿಗೆ :** ಚಕ್ಕುಲಿ ಬಿಸೂರಿಗೆಯತಿರಸ (ಜ್ಞಾಪತ. ೩೯-೦೨೦). **ಬೀಸುರಿಗೆ :** ಕರಜಿಗೆ ಕಾಯತಿರಸ ಮನೋಹರದುಂಡೆ ತರಗು ಚಕ್ಕುಲಿ ಬೀಸುರಿಗೆಯು (ಜ್ಞಾನತ. ೨-೦೩೬) ; ಹೊನ್ನ ಹರಿವಾಣದಲಿ ಬಡಿಸಿದರೆಣ್ಣುರಿಗೆ ಬೀಸುರಿಗೆ ಮಂಡಿಗೆ . . . ಕ್ಷೀರ ಸಕ್ಕರೆಯು (ಸುಜಾಮು. ೯-೦೬). **ಬೀಸುಹೂರಿಗೆ :** ಬೀಸುಹೂರಿಗೆ ತಳಿಂಗೆಳ್ಳುಂಡೆ . . . ಪೂಸಣವಾದಿ ಭಕ್ಷ್ಯಚಯಮಂ ತಂದಿಕ್ಕಿದರ್ ಕಾಂತೆಯರ್ (ಧರ್ಮಪ. ೨-೫೭). **ಬೀಸೂರಿಗೆ :** ಗಾರಿಗೆ ಲಡ್ಡುಗೆ ಬೀಸೂರಿಗೆ . . . ಮುಖಭಕ್ಷ್ಯಂಗಳಗೊಪ್ಪುವ ಖರ್ಜೂರಂ ಕದಳಿ ಸಾರಘೃತಂ ಮಧುಸಕ್ಕರೆಗಳ ಸಾರಂಗಳ ಸುಳಿವಾಳೆಯ ದೊನ್ನೆಯೊಳಾರೈದೆಬದರ್ಸವಿಗಾತಿಯರ್ (ಮಲ್ಲಿಕಾ. ೦೯-೩೮). [ಬೀಸು₂ + ಪೂರಿಗೆ]

**ಬೀಸುಗಂಡೆಯ** (ನಾ). ತೂಗುವಂತೆ ಕಟ್ಟಿದ ಕತ್ತಿ,—ಖಡ್ಗ : ಕಟ್ಟಿದ ಕೊಂಬುಗತ್ತಿಯ ಸುಂಡಿಲೊಳಗೆಳವಟ್ಟದ ಬೀಸುಗಂಡೆಯದ ಕಟ್ಟೆರಕದ ಚಿತ್ರಪಟಗಳಂ ರಾಯನ ಪಟ್ಟದಾನೆಗಳೈದಿದುವು (ಕಂಪಿಲ. ೩-೯೩);
[ಬೀಸು₁ + ಕಂಡೆಯ₁ (< ಖಂಡೆಯ₂)]

**ಬೀಸುಗಣ್ಣೆ** (ನಾ). (ಮೃಗಪಕ್ಷಿಗಳನ್ನು ಹಿಡಿಯಲು ಉಪಯೋಗಿಸುವ) ಎಸೆಯುವ ಹಗ್ಗ : ಬೀಸುಗಣ್ಣೆ ಗುಗ್ಗುರಿಯರಳು . . . ಕತ್ತಿ ಬಡಿಕೋಲ್ ಕಲ್ಲಿ ಹಿಡಿದ ಹುಲಿ ಶರಭ ಭೇರುಂಡ ಸಿಂಹ ಪ್ರಕರವೆರಸಿ ಬೇಡರು ನೆರೆದರು (ಹಕಾ. ೫-೯) ; ತಡಿಕೆಗಳೆ ಬೀಸುಗಣ್ಣೆ ಹಿಡಿಯೆರಳೆ . . . ಪರಿಪರಿಯ ಹಕ್ಕಿವೆರಸಡವಿಗಂತಕರಂತೆ ನಡೆವ ಶಬರರ ಕಂಡನು (ಸೋಮಚಂ. ೩-೪). [ಬೀಸು₁ + ಕಣ್ಣಿ]

**ಬೀಸುಗಲ್** (ನಾ). ಕವಣೆಯಲ್ಲಿಟ್ಟು ಎಸೆಯುವ ಕಲ್ಲು ; ಕವಣೆಕಲ್ಲು : ನಸುಬಾಗಿ ಬೀಸುಗಲ್ಗಳನಿಡುತಿರ್ಪ ಪಾಮರಿಯರೊಪ್ಪುವರಾ ಕಳಮ ಪ್ರದೇಶದೊಳ್ (ದಶಕು. ೦-೨೯). [ಬೀಸು₁ + ಕಲ್₃]

**ಬೀಸುಗವಣೆ** (ನಾ). ರಭಸವಾಗಿ ಎಸೆದ ಕವಣೆ : ಒಡನೆ ನೂಕಿತು ತೋಕುವಂಬಿನ ತಡೆವ ಶೂಲವ ಹೊಯ್ವ ಖಡುಗದ ಬಿಡುವ ಚಕ್ರದ ಬೀಸುಗವಣೆಯ[ಪಾಠಾಂ. ಬೀಸುಗಣೆಯಲಿ] ಬಹಳ ಭಟನಿಕರ (ತೊರವ. ೫-೬-೦೦). [ಬೀಸು₁ + ಕವಣೆ₁]

**ಬೀಸುಗಾಲು** (ನಾ). ೧. ಉದ್ದವಾದ ಕಾಲು ; ನೀಳವಾದ ಕಾಲು : ಚಂಡಿ ಚಾಮುಂಡಿಯರ್ ನರಶಿರಗಳೊಂದರ್ಬುದವ ಹರಡಿ ಧ್ರುವದಿಂದ ಧ್ರುವಬರಂ ಬೀಸುಗಾಲಿಂದೊದೆದು ಕ್ರೀಡಿಸುವ ಕೆಂಗಾಲ (ಪಪ್ಪರ. ೦೨-೦). ೨. ದೊಡ್ಡ ಹೆಜ್ಜೆ ; ದಾಪುಗಾಲು : ಆತ ಓಡುತ್ತಿದ್ದಾನೆ ; ಇವರು ಅವನ ಹಿಂದೆ ಬೀಸುಗಾಲು ಹಾಕುತ್ತಿದ್ದಾರೆ (ಜಾರುದಾ. ೨೨೬).
[ಬೀಸು₂ + ಕಾಲು₁ (< ಕಾಲ್₁)]

**ಬೀಸುಗೆಯ್**, ಬೀಸುಗೈ (ನಾ). ೧. ನೇಲುವ ಕೈ ; ಜೋಲುಗೈ : ಬೀಸುಗೆಯ್ಗಳ[ಪಾಠಾಂ. ಗೈಗಳ] ಡೊಂಕುಗಾಲುಗಳ . . . ತೋರ ಕಾರೊಡಲ ಕುಬುಬಂ (ಬಸವ. ೨೦-೦೦). **ಬೀಸುಗೈ :** ೨. ಯುದ್ಧದ ಆರಂಭವನ್ನು ಸೂಚಿಸುವ ಸಲುವಾಗಿ ಅಲುಗಾಡಿಸುವ ಕೈ : ರಾಯರಿಬ್ಬರ ಬೀಸುಗೈಗಳ ಸನ್ನೆ ಸಮವಾಗೆ . . . ಬೆರಸಿದುದುಭಯಬಲ ಬಲುಖತಿಯ ಬಿಂಕದಲಿ (ಕುಮಾರ. ೨-೦೩). [ಬೀಸು₁ + ಕಯ್₂]

**ಬೀಸುಗೈ** 'ಬೀಸುಗೆಯ್' ನೋ.

**ಬೀಸುಗೊಳ್ಳಿ** (ನಾ). ಅತ್ತಿತ್ತ ಅಲುಗಾಡಿಸುತ್ತಿರುವ ಕೊಳ್ಳಿ,—ದೊಂದಿ: ಮುಂದೆ ಪಾರ್ಥನ ಬೀಸುಗೊಳ್ಳಿಗಳಿಂದ ತಮದಾವಳಿ ಮುಚಿಯೆ . . . ಅನಿಬರಟವೀವೃಂದದಲಿ ಬರುತಿರ್ದರಿರುಳು (ಕುಮಾರ. ೦೦-೨೬).
[ಬೀಸು₁ + ಕೊಳ್ಳಿ₁]

**ಬೀಸುಗೋಲು** (ನಾ). "ಒಂದು ಬಗೆಯ ಬೇಟೆಯ ಕೋಲು" (ಅಭಿಲಾ. ಕೋಶ) : ಬೀಸುಗೋಲಿನ ಸ್ವಾಳ್ವ ಕರದ ಮೋಸದಿ ಮೃಗಪಕ್ಷಿ ಹಿಡಿವ ಬಲೆಗಳಿಂದ ಲೇಸಾಗಿ ನಡೆದರೊಗ್ಗಿನಲಿ (ಅಭಿಲಾ. ೩-೨೯).
[ಬೀಸು₁ + ಕೋಲು₁ (< ಕೋಲ್₁)]

**ಬೀಸುದೋಳ್** (ನಾ). ೧. ಜೋತು ಬಿದ್ದಿರುವ ತೋಳು ; ನೇಲುವ ತೋಳು : ಸೆಡೆದೇಳ್ವ ಬೀಸುದೋಳ್ಸಿರೆ ನೆಗೆದಿರ್ಪ ಗೋಣ್ (ವೃಷಭ. ೦೦-೬೦). ೨. ಅತ್ತಿತ್ತ ತೂಗಾಡುವ ಕೈ,—ಚಲಿಸುವ ಕೈ : ಗಳಗಳನೆ ನಡೆವಾಗ ಬೀಸುದೋ[ಪಾಠಾಂ. ತೋ]ಳಿಂ ರಕ್ತವಿಳಿದು ಬೆರಳ್ಗಳು ಬಾತು ಮಿಡಿದೊಡೆವುತಂ (ಸೋಮಚಂ. ೩-೫೩). [ಬೀಸು₁ + ತೋಳ್]

**ಬೀಸುಬಲೆ** 'ಬೀಸುಂಬಲೆ' ನೋ.

**ಬೀಸುರಿಗೆ** 'ಬೀಸುಂಬೂರಿಗೆ' ನೋ.

**ಬೀಸುವಲೆ** 'ಬೀಸುಂಬಲೆ' ನೋ.

**ಬೀಸುವಿಟ್ಟು** (ನಾ). (ಬೀಸುವ ಕಲ್ಲಿನಲ್ಲಿ) ಪುಡಿ ಮಾಡಿದ ಹಿಟ್ಟು: ತೆಂಗಾಯುನರೆದಿಕ್ಕಿ ಕಡಲೆಯು ಬೀಸುವಿಟ್ಟನಲ್ಪವನಿಕ್ಕಿ ಕಲಸಿ (ಸೂಶಶಾ. ೪-೬೭). [ಬೀಸು$_1$ + ಪಿಟ್ಟು]

**ಬೀಸುಹೂರಿಗೆ** 'ಬೀಸುಂಬೂರಿಗೆ' ನೋ.

**ಬೀಸೂರಿಗೆ** 'ಬೀಸುಂಬೂರಿಗೆ' ನೋ.

**ಬೀಹಳಿ** (ನಾ). : (?) [ಬೀ]ಹಳಿಯರೆನಿಬರಾದಡಂ ಮೆಯಲು ವಿ ೧೦ (ಶಾಇ. XV. ೩೮-೦೦; 1148); ಹಾಡುವ ಮೊಖರಿಗಂ ಬೀಹಳಿ ಯಿವ್ರ್ವರ್ಗ್ಗಂ ಎರೆ ಮತ್ತ ೧೬ (ಶಾಇ. XX. ೩೦೦-೬; 12ನೆಯ ಶತ). [?]

**ಬೀಹು** 'ಬೀವು' ನೋ.

**ಬೀಳ್$_1$** 'ಬೀೞ್$_1$' ನೋ.

**ಬೀಳ್$_2$** 'ಬೀಡು$_2$' ನೋ.

**ಬೀಳ್$_3$** 'ಬೀಡು$_3$' ನೋ.

**ಬೀಳಲ್** 'ಬೀೞಲ್' ನೋ.

**ಬೀಳಲು** 'ಬೀೞಲ್' ನೋ.

**ಬೀಳಲುಪಲ್ಲು** (ನಾ). ಅಲ್ಲಾಡುತ್ತಿರುವ ಹಲ್ಲು; ಬೀಳುವ ಹಲ್ಲು: ಬೀಳಲುಪಲ್ಲು ಪತ್ತಿದ ಗಲ್ಲದ ನೆಱೆ ವೃದ್ಧನಡಿಯಿಟ್ಟನೊಲಿದು (ಶೀಬಂಸಾಂ. ೦೬-೩೦). [ಬೀಳಲು (<ಬೀೞಲ್) + ಪಲ್ಲು (<ಪಲ್)]

**ಬೀಳಲುಬಿಡು** 'ಬೀೞಲ್ಬಿಡು' ನೋ.

**ಬೀಳಲುವರಿ** 'ಬೀೞಲ್ವರಿ' ನೋ.

**ಬೀಳವೃತ್ತಿ** 'ಭೀೞವೃತ್ತಿ' ನೋ.

**ಬೀಳಾನುವಿರ್ತಿ** (ನಾ). = ಬೀಳಾನುವೃತ್ತಿ: ಶ್ರೀಮನ್ಮಹಾಮಣ್ಡಳೇಶ್ವರಂ ಜೋಯಿಮಯ್ಯರಸರ್ ಸಿಂದವಾಡಿಸಾಸಿರಮಂ ಬೀಳಾನುವಿರ್ತ್ತಿಯಿಂ ತ್ರಿಭೋಗಾಭ್ಯಂತರಸುದ್ಧಿಯಿನಾಳ್ದು ಸುಖದಿನರಸುಗೆಯ್ಯೆ (ಶಾಇ. IX-i, ೦೪೩-೦೫; 107೪). [P ಇದು 'ಬೀಳಾನುವೃತ್ತಿ'ಯ ಅಪಲಿಖಿತ]

**ಬೀಳಾನುವೃತ್ತಿ** (ನಾ). ಮಾಂಡಲಿಕ ಅಥವಾ ತುಂಡರಸನು ಸ್ವಾಮಿ ಭಕ್ತಿಯಿಂದ ಸೇವೆ ಸಲ್ಲಿಸಿದ ಸಲುವಾಗಿ, ಅಧಿರಾಜನಿಂದ ಪಡೆಯುವ ವಿಶೇಷವಾದ ಪದವಿ, ಅಧಿಕಾರ ಮುಂತಾದುವು: ಸೋಮೇಶ್ವರ ದೇವರ್ಪ್ಪೆರ್ಗ್ಗೊಳವಮೂನೂಱುಂ ಪುರಿಗೆಱೆಮೂನೂಱುಮಂ ಬೀಳಾನುವೃತ್ತಿಯಿನಾಳುತಂ ಸುಖದಿನಿರೆ (ಶಾಇ. XI-i, ೮೪-೮; 1049); ಶ್ರೀಮನ್ಮಹಾಮಣ್ಡಲೇಶ್ವರಂ ಲೋಕರಸನಬಲು ಮೂನೂಱುಮಿಱಿತಿ ಮೂನೂಱುಮಂ ಬೀಳಾನುವೃತ್ತಿಯಿಂ ರಾಜ್ಯಂಗೆಯ್ಯುತಮಿರಲು (ಕಇಕ. ೪-೩-೨೪೪; 1062); ಚಾಳುಕ್ಯಚಕ್ರವರ್ತಿ ತ್ರೈಲೋಕ್ಯಮಲ್ಲದೇವನ ಮಗ ಸೋಮೇಶ್ವರನು 'ಬೀಳಾನುವೃತ್ತಿ'ಯಿಂದ ಆಳುತ್ತಿದ್ದಂತೆ ಒಂದು ಶಾಸನದಿಂದ ತಿಳಿದು ಬರುತ್ತದೆ (ಕಶಾಆ. ೩೪೦). 'ಕುಮಾರವೃತ್ತಿ', 'ಬೀೞವೃತ್ತಿ' ಪರಾ. [ಬೀಳ್$_1$ (< ಬೀೞ್$_1$) + ಅನುವೃತ್ತಿ]

**ಬೀಳಾಸೆ** (ನಾ). ತುಚ್ಛವಾದ ಆಸೆ; ಕೀಳಾದ ಅಪೇಕ್ಷೆ: ಆವ ಬೀಳಾಸೆಯಿಂದಾದಾವ ಶಾಪಕೊ . . . ನಮ್ಮ ತಾಯ್ನುಡಿ ತನಗಾದ ನಾಡಿನೊಳೆ ತಾನಮಂಗಳೆಯೆನಿಸಿ . . . ಬನ್ನಪಡುತಿರಲು (ಗಹೀಶ. ೪೦-೬). [ಬೀಳ್$_3$ (< ಬೀಡು$_3$) + ಆಸೆ$_1$]

**ಬೀಳಿಕೆ** (ನಾ). ೧. ಬೀಳುವಿಕೆ; ಪತನ: ಅದೇ ಪ್ರಕಾರ ಈ ಏಳು ಬೀಳಿಕೆಯು ಹೆಣಕ್ಕೆ ಕೂಡ ಇರುತ್ತದೆ (ಶುಂಬಯ. ೬-೨೨೦). ೨. ಸುರಿಯುವುದು; ಸುರಿತ: ಸುಮಂತ್ರನು ಶೂನ್ಯಹರುಷದಲಿ . . . ಸಾರಿದ ನಕ್ಷಿಯುಗಳದ ವಾರಿಗಳ ಬೀಳಿಕೆಯು [ಶಾಕಾಂ. ಬಳಲಿಕೆಯು] ಬಿಸುಸುಯ್ಲಿನ ಮಹೀಪತಿಯ (ತೊರರಾ. ೨-೫-೩). [ಬೀಳ್$_1$ (< ಬೀೞ್$_1$) + -ಇಕೆ]

**ಬೀಳಿಕ್ಕು** (ಕ್ರಿ). ಕೆಳಗೆ ಬೀಳುವಂತೆ ಮಾಡು; ಬೀಳಿಸು: ಹೋಗಿ ದೇಶಂಗಳಲಿ ತಿರಿದುದ ಬಾಗಿಲಲಿ ಬೀಳಿಕ್ಕುವಂತಿರೆ ಯೋಗಗತಿಗೀಡೇ ಬದಿಳಿವರು ಮೃತ್ಯುವಿನ ಮುಖಕೆ (ಶಿಭಾಗ. ೦೦-೯೩-೩೮). [ಬೀಳ್$_1$ (< ಬೀೞ್$_1$) + ಇಕ್ಕು]

**ಬೀಳಿಚು** 'ಬೀಳ್ಚು' ನೋ.

**ಬೀಳಿಲ್**, ಬಿಣಿಲು, ಬಿಳಿಲ್, ಬಿಳಿಲು, ಬಿೞಿಲ್, ಬೀಳಿಲು (ನಾ). ೧. ಆಲ ಮುಂತಾದ ಮರಗಳ ಕೊಂಬೆಗಳಿಂದ ಕೆಳಮುಖವಾಗಿ ಇಳಿ ಬಿದ್ದ ಬೇರು,—ಜಟೆ: ಘಳಿಲನೆ ಬೀಳಲ್ವಿಡಿದಡರ್ದು ನಿಡುಗೊಂಬಿ ನೆಲೆದುಱುಗಲ ಪೊದಱ ಪೊರೆಯೊಳ್ ಮೆಯ್ಗರೆದಿರ್ದ ಗಂಧರ್ವಸೌಂದರಿ ನೆಲೆವಡೆದಕ್ಷೀಣರೂಪಯಕ್ಷಿಣಿಯಂತೆಸೆಯೆ ಮಿಸುಪ ವಟವಿಟಪಿಯಿಂ (ಶಬಕು. ೩-೩೫ ವ). **ಬಿಣಿಲು**: ೧. ಒಣಗಿದ ಮರ ಚಿಗಿತು ಬಿಣಿ[ಶಾಕಾಂ. ಳಿ]ಲು ಬಿಡುವುದ ಕಂಡೆ (ಸರ್ವಜ್ಞ. ೨೦೬೦). **ಬಿಳಿಲ್**: ೨. ಬೀಳಲನ್ನು ಹೊಂದಿರುವ ಆಲದ ಜಾತಿಯ ಮರ: ಬಿಳಿಲ್ಬದರಿ ಸಾಲಮಾ ಹೊನ್ನೆ ಚೆನ್ನಂಗಿ ಮೊದಲಾದ ವೃಕ್ಷಂಗಳಿಂ ವನಮೆಸೆದುದು (ಶಬಪು. ೫೩-೦೮). **ಬಿಳಿಲು**: ೧. ಆಲದ ಬಿಳಿಲಂ ಮೇಕೆಯ ಹಾಲಲ್ಲಿ ಅರೆದು . . . ೩ ದಿನ ಕೊಳ್ಳಲು ವೀರ್ಯವರ್ಧನಂ (ಐವ್ಯ.ಪಿ. ೬೨); ಉರ್ವರೆಗೆ ಇಳಿದ ಬಿಳಿಲಿನ ಹರಹಿನಲಿ ಕಂಗೊಳಿಸುತಿಹ ವಟವೃಕ್ಷ ತಂಪಿನ ನೆಳಲ ವಳಯದಿ ಸುಳಿದುವಾಯ್ದರು (ಅಂಬಶಾ. ೩-೪). ೨. ಬಿಳಿಲರಳಿಯೆರಂ ಕಕ್ಕೆ . . . ತಱಿಯದಿಂದೊಪ್ಪುತಿರ್ದತ್ತರಣ್ಯಂ (ಗಂಕ. ೦-೬೨); ಬಿಳಿಲಾಲ ಬೇಲ ಹೆಬ್ಬೇವು. . . ಮೊದಲಾದ ಮರಗಳ ಬಳಗದಿಂದದು ಕಣ್ಗೆಸೆದುದು (ಕುರಾಸಾಂ. ೪-೬). **ಬಿೞಿಲ್**: ೧. "ಶಿಫೆ ಜಟೆಯೆನೆ ಬಿೞಿಲಕ್ಕು" (ಶಬ್ದಮಣಿ. ೩೨-೪); ಸೈಂಧವದಿಂದರೆದಾಲದ ಬಿೞಿಲನಳಿವೆರಸಿ ಕುಡಿದಂದು ಮಾಣ್ಬಪತಿಸಾರಂ ಕೆಡುಗುಂ (ಕರ್ಣಾಕಾ. ೪-೦೩). ೨. ಬಿೞಲ್ಬಿಲ್ಮತ್ತಿ . . . ಕೆಕ್ಕಮ್ಮರಂ ಎಂಬೀ ಮರದುಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ (ಶಾರ್ಙ್ಗಕೃ. ೦೨-೫೮). **ಬೀಳಿಲು**: ೧. ಸ್ಮರನಿಧಿಯೆಡೆಗೆಯ್ದುವ ನವಮೋಹನ ತರುವಿನಸಿಯ ಬೀಳಿಲ ತೆಱದಿಂ ಬಂಧುರವಮಾದುವು ಕರಯುಗವಂ (ಜಯಕಾ. ೩-೩೮). [ಬೀಳ್$_1$ (<ಬೀೞ್$_1$) + -ಇಲ್$_3$]

**ಬೀಳಿಲು** 'ಬೀಳಿಲ್' ನೋ.

**ಬೀಳಿಲುಬಿಡು** (ಕ್ರಿ). ಮರದ ಕೊಂಬೆಗಳಿಂದ ಜಟೆಯು ಕೆಳಮುಖವಾಗಿ ಬೆಳೆ: ಪುರುಷನಾವನು ಬಂದಡಾಲದ ಮರನು ಬೀಳಿಲು ಬಿಡುವುದಾತನು ವರನು ತರುಣಿಗೆ ತಪ್ಪದಪ್ಪನು (ಶಹಶ. ೩-೫೦). 'ಬೀೞಲ್ಬಿಡು' ಪರಾ. [ಬೀಳಿಲು (<ಬೀಳಿಲ್) + ಬಿಡು$_1$]

**ಬೀಳಿಸು** 'ಬೀೞಿಸು' ನೋ.

**ಬೀಳು$_1$** 'ಬೀೞ್$_1$' ನೋ.

**ಬೀಳು$_2$** 'ಬೀೞ್$_2$' ನೋ.

**ಬೀಳು$_3$** 'ಬೀಡು$_2$' ನೋ.

**ಬೀಳು$_4$** 'ಬೀಡು$_3$' ನೋ.

**ಬೀಳು$_5$** 'ಬೀೞ್$_4$' ನೋ.

**ಬೀಳುಕಟ್ಟೆ** (ನಾ). ನೀರು ಜಲಪಾತವಾಗಿ ಬೀಳುವಂತೆ ಮಾಡುವ ಒಂದು ಬಗೆಯ ಕಟ್ಟೆ: ಆದರೆ ಬೀಳುಕಟ್ಟೆಯನ್ನು ಕಟ್ಟಿದ ಕಡೆ ದೋಣಿಗಳ ದಾರಿಯನ್ನು ಪಾತದಿಂದ ಬೇರೆಯಾಗಿ ಇಡಬೇಕಾಗುತ್ತದೆ (ಶಿಲ್ಪಶಾ. ೩೮೩). [ಬೀಳು$_1$ (< ಬೀೞ್$_1$) + ಕಟ್ಟೆ$_1$]

**ಬೀಳುಕೊಡು** 'ಬೀಳ್ಕೊಡು' ನೋ.

**ಬೀಳುಕೊಳ್** 'ಬೀಡುಗೊಳ್' ನೋ.

**ಬೀಳುಗ** (ನಾ). ಕೆಡೆಯುವವನು: "ಪತನ್, ಪತತಿಃ, ಪತಕಃ—ಈ ೩ ಬೀಳುಗಂ" (ಶಾಶ್ವ. ೦೪೮). [ಬೀಳು$_1$ (<ಬೀೞ್$_1$) + -ಗ$_2$]

**ಬೀಳುಗತ್ತಲೆ** (ನಾ). ಗಾಢವಾದ ಅಂಧಕಾರ : ಹೊಳಜೆಯ ಅಮಾಗಯ್ಯ ಧೂಳ ಚೆಂಜೆಗೆ ಸೇರಿ ಪಾಳದೊಳು ಬಿಟ್ಟ ಬೀಡಾರ ಬೆಳತನಕ ಬೀಳ್ಗತ್ತಲೆಯು ಬೆಳಕಾಗಿ (ಕನ್ನಜಾ. ೩೦೫).
[ಬೀಳು$_1$ (<ಬೀಟ್$_1$) + ಕತ್ತಲೆ$_1$ (< ಕಟ್ಟಲೆ) ]

**ಬೀಳುಗಳೆ** (ಕ್ರಿ). ಹೀನಾಯ ಮಾಡು; ಹೀಗಳೆ : ಪೆಣ್ಣ ಪೆಣ್ಣಿಂದೇತಕೆ ಬೀಳುಗಳೆವರು ಕಣ್ಣ ಕಾಣದ ಗಾವಿಲರು (ಹರಿಶ. ೩-೬) ; ನಾಡನ್ನು ಕಾಡೆಂದು ಬೀಳುಗಳೆವರೆ ಬೀಡ ಕಟ್ಟಿ ಪಟ್ಟಣವನ್ನು ಆಳಬೇಕು (ಅರಳು. ೧೦೨-೫) ; ಮನುಷ್ಯನ ಮನಸ್ಸು ಮಿಕ್ಕವನ್ನೆಲ್ಲ ಬೀಳುಗಳೆಯುವುದು (ಶುಕಾಣ. ೩೦). [ಬೀಳು$_4$ (< ಬೀಡು$_3$) + ಕಳೆ$_1$]

**ಬೀಳುಗುಂಡಿ** (ನಾ). ಉರುಳಿಸಲು ಮಾಡಿರುವ ಹಳ್ಳ; ಬೀಳಿಸಲು ನಿರ್ಮಿಸಿದ ಕಂದಕ : ಶಕುನಿಯೂ . . . ದುಶ್ಶಾಸನನೂ ಕೋಲು ಜೇನಿಗಾಗಿ ಮರದ ತುದಿಗೆ ಹತ್ತಿ ಬಿಟ್ಟು ಅಲ್ಲಿ ಜೋಲಾಡುತ್ತಿದ್ದಾರೆ. ಕೆಳಗೆ ಭೀಮನ ಕೋಪವೆಂಬ ಬೀಳುಗುಂಡಿ ಅವರುಗಳ ನಾಶಕ್ಕಾಗಿ ಬಾಯಿ ತೆರೆದು ಕಾದಿರುವುದು ಆವರುಗಳಿಗೆ ತಿಳಿಯಲಿಲ್ಲವಲ್ಲಾ ! (ಪ್ಯಾಸಶ. ೦೯೨).
[ಬೀಳು$_1$ ( < ಬೀಟ್$_1$) + ಗುಂಡಿ$_2$]

**ಬೀಳುಗುಂಡು** 'ಬೀಟ್ಗುಂಡು' ನೋ.

**ಬೀಳುಗುವರ** (ನಾ). ಅಯೋಗ್ಯನಾದ ತರುಣ,—ಯುವಕ : ಬಾಳಿ ಬದುಕಿ ತಣಿವಿಲ್ಲದ ತಮ್ಮಂತ ಬಾಳಲೆಳಸುವ ಬಾಲಕಿಯು ಬೀಳುಗುವರನಿಗೆ ಬೆಲೆಗೈದರೆಂಬುದ ಕೇಳಿ ಕಿವಿಯು ಮುಚ್ಚುವುದು (ಹರಿಶ. ೩-೦೯).
[ಬೀಳು$_4$ (< ಬೀಡು$_3$) + ಕುವರ$_2$]

**ಬೀಳುಗೆಡವು** (ಕ್ರಿ). ಭೂಮಿಯನ್ನು ಸಾಗುವಳಿ ಮಾಡದಿರು ; ಜಮಾನನ್ನು ಹಾಳುಗೆಡವು : ಅವನು ಕಳ್ಳಭಟ್ಟಿ ಮಾರುವ ಕಸುಬಿಗೆ ಕೈಹಾಕಿ ಗದ್ದೆಗಳನ್ನೆಲ್ಲ ಬೀಳುಗೆಡವಿದ (ರೂಂ).
[ಬೀಳು$_4$ (< ಬೀಡು$_3$) + ಕೆಡವು (< ಕೆಡಪು)]

**ಬೀಳುಗೊಡು** 'ಬೀಳ್ಕೊಡು' ನೋ.

**ಬೀಳುಗೊಳ್** 'ಬೀಡುಗೊಳ್' ನೋ.

**ಬೀಳುಗೊಳಿಸು$_1$** (ಕ್ರಿ). ನಿವಾರಿಸು ; ಪರಿಹರಿಸು : ಉಸುರುಬ್ಬಸದ ದುಸ್ಥಿತಿಯ ಬೀಳುಗೊಳಿಸುವೆನು (ಪಿಕಾಗ. ೪-೬-೩೨).
[ಬೀಳುಗೊಳ್ (< ಬೀಡುಗೊಳ್) + — ಇಸು$_3$]

**ಬೀಳುಗೊಳಿಸು$_2$** (ಕ್ರಿ). ನಿರರ್ಥಕಗೊಳಿಸು ; ನಿಷ್ಪ್ರಯೋಜಕವನ್ನಾಗಿ ಮಾಡು : ನಾವು ಈ ಶಕ್ತಿಯನ್ನು ಬೀಳುಗೊಳಿಸಿರುವೆವು, ಕೀಳುಗೊಳಿಸಿರುವೆವು (ಶಿಕಾಮಂ. ೬೬). [ಬೀಳು$_4$ (<ಬೀಡು$_3$) + ಕೊಳ್$_1$ + —ಇಸು$_3$]

**ಬೀಳುಡಿಗೆ** (ನಾ). (ಇನ್ನೊಬ್ಬರು ಉಟ್ಟು) ಕಳಚಿದ ಬಟ್ಟೆ : ಆವನಾದರೇನು ಶಿವಮಹಾದೇವನ ನೆನೆವವನ ಬಾಯ ತಂಬುಲ ಮೆಲುವೆ ಬೀಳುಡಿಗೆ [ಪಾಠಾಂ. ಡೆ]ಯ ಹೊದೆವೆ (ಬಸವ. ೪೬೩) ; ತನ್ನ ನಿರ್ಮಲವ ಕೊಟ್ಟನೆನಗೆ ಆ ತೊಟ್ಟ ಬೀಳುಡಿಗೆಯ ಹೊದೆದುಕೊಂಡೆನಾಗಿ ಆ ಮಡಿವಳ ಮಾಚಿತಂದೆಯ ಕೃಪೆಯಿಂದ ಆನು ಬದುಕಿದೆನಯ್ಯಾ (ಬಸಹ. ೦೦೬-೩೦೬) ; ನಮ್ಮ ಕಲಿದೇವನ ಶರಣರ ಬೀಳುಡಿಗೆಯ ತೊಳೆವ ಲೆಂಕನ ಬಡತನವ ನೋಡು (ಶೃಶಸೂ. I. ೩೪೮).
[ಬೀಳ್$_1$ (<ಬೀಟ್$_1$) + ಉಡಿಗೆ$_1$ (<ಉಡುಗೆ)]

**ಬೀಳುಡೆ** 'ಬೀಟುಡೆ' ನೋ.

**ಬೀಳುದಂಡ** (ನಾ). ಬೀಳುಭೂಮಿಯ ಮೇಲೆ ಹಾಕುವ ತೆರಿಗೆ : ಆಲನೆಯು ಅನ್ಯ ಬೀಳುದಂಡ ಬೊಗಾರದಣ್ಣ ಅಪೂರ್ವ್ವಾಯ ಏನು ಬಂದಡು ಕಂಚುಗಾಣಿ ಮರ್ಯ್ಯಾದಿಯಲಿ ಧಾರೆಯನೆಱೆದು ಆ ಪಂಚಾಳ ನಡಸುವ ಧರ್ಮಕ್ಕೆ ಸಲುವುದು (ಎಕ. IX (S), ಶಾಪಕಾ. ೯೨-೩೦ ; ಸು. 1300).
[ಬೀಳು$_4$ (<ಬೀಡು$_3$) + ದಂಡ]

**ಬೀಳುನುಡಿ$_1$** (ಕ್ರಿ). ಹೀಯಾಳಿಕೆಯ ಮಾತನ್ನು ಆಡು ; ನಿಂದಿಸು ; ಜರೆ: ಹಾಳುಹರಟೆ ಬಿಟ್ಟು ಹೊತ್ತುಕಳೆವುದೆ ಹಬ್ಬ . . . ಬೀಳುನುಡಿವರ ಬಿಟ್ಟುಕೊಡುವುದೆ ಹಬ್ಬ (ಜಗರಾ. ೦೬೦). [ಬೀಳು$_4$ (<ಬೀಡು$_3$)+ ನುಡಿ$_1$]

**ಬೀಳುನುಡಿ$_2$** (ನಾ). ವ್ಯರ್ಥವಾದ ಮಾತು ; ನಿರರ್ಥಕವಾದ ನುಡಿ : ಬೀಳುನುಡಿಯ ಬಿಡು ಮುನಿಪ (ಹರಿಶಾಂ. ೦-೦೭).
[ ಬೀಳು$_4$ (< ಬೀಡು$_3$) + ನುಡಿ$_2$ ]

**ಬೀಳುಬಾವಿ** (ನಾ). ಹಾಳುಬಿದ್ದ ಬಾವಿ ; ನಿರುಪಯುಕ್ತವಾದ ಬಾವಿ : ಎದುರಿಗಿದ್ದ ಬೀಳುಬಾವಿ ತನ್ನ ಶಾಂತವಕ್ಷಃಸ್ಥಲದಲ್ಲಿ ಆಕಾಶದ ಸಕಲ ಸಂಪತ್ತನ್ನೂ ತುಂಬಿಕೊಂಡು ನಗುವಂತಿತ್ತು (ಶಾಪಿಅ. ೯೨).
[ಬೀಳು$_4$ ( < ಬೀಡು$_3$) + ಬಾವಿ]

**ಬೀಳುಬಿಡು** 'ಬೀಡುಬಿಡು$_3$' ನೋ.

**ಬೀಳುಬುಟ್ಟಿ** (ನಾ). ಒಂದು ಬಗೆಯ ಬಳ್ಳಿಯಿಂದ ಹೆಣೆದ ಕುಕ್ಕೆ : ಅದನ್ನು ಒಂದು ಬೀಳುಬುಟ್ಟಿಯಲ್ಲಿ ತುಂಬಿಸಿ ಒಕ್ಕಲು ಲಿಂಗನ ತಲೆಯ ಮೇಲಿಟ್ಟು . . ಕಳುಹಿಸಿ ಕೊಟ್ಟ (ದೇವಹಂ. ೦೪೬).
[ಬೀಳ್$_5$ (<ಬೀಟ್$_4$) + ಬುಟ್ಟಿ (<ಪುಟ್ಟಿ$_1$)]

**ಬೀಳುಭೂಮಿ** (ನಾ). ಸಾಗುವಳಿ ಮಾಡದ ನೆಲ, — ಜಮಾನು : ಬೀಳುಭೂಮಿಯನ್ನು ಹೊಸದಾಗಿ ಸಾಗುವಮಾಡೋಣ (ಗಂಗಾಪು. ೬. ೦೨೬).
[ಬೀಳು$_4$ (<ಬೀಡು$_3$) + ಭೂಮಿ]

**ಬೀಳುಮಾತು** (ನಾ). = ಬೀಳುನುಡಿ$_2$ : ಬೀ[ಪಾಠಾಂ. ಕೀ]ಳುಮಾತುಗಳೇಕೆ ನಿನಗಿದು . . . ನಳನೃಪಗೆಯೆರಡೆಣಿಸುವುದೆ (ನಳಚ. ೪-೧೦) ; ಭಾಳಲೋಚನನ ಸರ್ಪಾಭರಣವಾಂ ನೀನು ಹರಿಯ ಪರಿಯಂಕವೆಂಬ ಬೀಳುಮಾತನು ಸಭಾಪತಿ ಸಭ್ಯರುಗಳು ಮಿಗೆ ಕೇಳಿ ಛೀ ತೆಗೆಯೆಂಬ ತೆಜದಿ (ಬಕೋಕೃ. ೦೩-೫). [ ಬೀಳು$_4$ (<ಬೀಡು$_3$) + ಮಾತು$_1$ ]

**ಬೀಳುವಲೆ** (ನಾ). (ಮೃಗ, ಪಕ್ಷಿಗಳು ಸಿಕ್ಕಿಕೊಳ್ಳುವ) ಒಂದು ಬಗೆಯ ಬಲೆ,—ಜಾಲ : ಬೀಳುವಲೆ ಜವಳವಲೆ . . . ಸಗಾಢವಲೆಗಳ ಹೊಱಗೆಳೋಳಿಯಂ ಪೊತ್ತು ನಡೆತಂದುದು ಪುಳಿಂದರೂಪದಲಿ ಭೂತಗಣಂಗಳ್ (ಸೌಂದಪು. ೦೬-೩೯) ; ಬೀಳುವಲೆ ಕಣ್ಣವಲೆ ಸಿಡಿಲುವಲೆ . . . ಮರವಲೆಗಳರ್ದುವಾ ಶಬರರಲ್ಲಿ (ಸಿದ್ಧೇಪು. ೮-೬).
[ ಬೀಳು$_1$ (<ಬೀಟ್$_1$) + ಬಲೆ$_1$ ]

**ಬೀಳುವಳ್ಳಿ** (ನಾ). ಹಾಳು ಬಿದ್ದ ಗ್ರಾಮ ; ನಿರ್ಜನವಾದ ಹಳ್ಳಿ : ನಗರ ಪಟ್ಟಣ ಖೇಡ ಖರ್ವಡ ಪುರ ಗ್ರಾಮಂಗಳೆಂಬ ನಾನಾಪೆಸರಾಂತು ಸೊಗಯಿಸುತಿಪ್ಪವಾ ದೇಶದಿ ಬೀಳುವಳ್ಳಿಗಳಿಲ್ಲ (ಪೋಹಚ. ೨-೦೬).
[ಬೀಳು$_4$ (<ಬೀಡು$_3$) + ಪಳ್ಳಿ$_1$]

**ಬೀಳುವೆಣ** (ನಾ). ಬಿದ್ದಿರುವ ಹೆಣದಂತಿರುವವನು : ಬಾಳುವೆಣನ ಬೀಳುವೆ [ಪಾಠಾಂ. ಬೀಳ್ವೆ]ಣನ ಸಂಸಾರವೇನವನ (ಬಸವ. ೦೫೭).
[ ಬೀಳು$_1$ (<ಬೀಟ್$_1$) + ಪೆಣ ]

**ಬೀಳುವೃತ್ತಿ** (ನಾ). = ಬೀಳಾನುವೃತ್ತಿ : ಶ್ರೀಮತ್ಕುಂನ್ನಮರಸಬ್ಬ್ಬನವಾ [ಸಿ]ಪನ್ನಿರ್ಚ್ಚ್ಯಾ[ಸಿ]ರಮುಂ ಸುಖಸಂಕಥಾವಿನೋದದಿಂ ಬೀಳುವೃತ್ತಿಯಿನಾಳುತ್ತುವಿರೆ (ಕಇ. II, ೬-೦೨ ; 1030). [<ಬೀಟವೃತ್ತಿ]

**ಬೀಳ್ಕೆ** 'ಬೀಟ್ಕೆ' ನೋ.

**ಬೀಳ್ಕೊಡಿಗೆ** 'ಬೀಳ್ಕೊಡುಗೆ' ನೋ.

**ಬೀಳ್ಕೊಡಿಸು** (ಕ್ರಿ). ೧. ಕಳುಹಿಸು ; ಹೋಗಲು ಅನುವು ಮಾಡು : ಮಕುಟವರ್ಧನರಂ ಕಾಣಿಸುತಂ ಬಂದ ಚಾರರಂ ಬೀಳ್ಕೊಡಿಸುತಂ ಸುಖದೊಳಿಪ್ಪಲ್ಲಿ (ಬಸರ. ೬-೩೫) ; ಇಳೆಯಾಣ್ಮನ ಮನದಿಂಗಿತವಱಿತು ಹೊಂಜೆಳೆ ವಿಡಿದಬ್ಜನೇತ್ರೆಯರು ಎಳವೆಣ್ಣುಗಳ ಚಿತ್ತೈಸೆಂದು ಸತಿಯರ ನಿಳಯಕೆ ಬೀಳ್ಕೊಡಿಸಿದರು (ಪೋಹಚ. ೨೨-೦೫). ೨. ನಿವಾರಿಸು ; ಪರಿಹರಿಸು :

ನಿಜಶ್ರೀಪದವ ತೋಱಿಸಬೇಕು ವನವಾಸದ ಪರಿಕ್ಲೇಶಾನುಸಂತಾಪವನು ಬೀಳ್ಕೊಡಿಸಿ (ಕುವ್ಯಾವಿ. ೧೧-೩೬). [ಬೀಳ್ಕೊಡು + – ಇಸು₃]

**ಬೀಳ್ಕೊಡು**, ಬೀಳುಕೊಡು, ಬೀಳುಗೊಡು, ಬೀಳ್ಗುಡು (ಕ್ರಿ). ೧. (ಅತಿಥಿ, ಬಂಧು, ಗೆಳೆಯ ಮುಂತಾದವರನ್ನು) ಕಳುಹಿಸಿಕೊಡು ; ಹೋಗಲು ಬಿಟ್ಟು ಕೊಡು : ಮೃಡಂ ರಕ್ಷಿಸುವೆನೆನುತ್ತೆ ವಿನಯೋಕ್ತಿಯಿಂದ ಬೀಳ್ಕೊಡೆ (ಶಬ್ದರಾ. ೬-೧೧೬) ; ಭದ್ರದೇಹದ ಭಟನ ಬೀಳ್ಕೊಡೆ ರುದ್ರರೂಪದ ದೈತ್ಯ ಬಂದನು ರಾಮನಿದ್ದೆಡೆಗೆ (ತೊರಾ. ೩೯-೨೮) ; ಮತ್ತಗಜಗಮನೆಯರ ಬೀಳ್ಕೊಟ್ಟನು ಮಹೀಪಾಲ (ಕೊರರಾ. ೧-೫-೩೪). ೨. ಬಿಡು ; ತ್ಯಜಿಸು : ಮಾನನಿಧಿ ಸಾವಿತ್ರಿಯುಪಾಖ್ಯಾನವನು ಕೇಳಿದನು ಚಿತ್ತಗ್ಲಾನಿಯನು ಬೀಳ್ಕೊಟ್ಟನು (ಕುವ್ಯಾಅ. ೨೩-೩). ೩. ತಲುಪುವಂತೆ ಮಾಡು ; ತಲುಪಿಸು : ಬಿರಯಿತಿಯಾಕೆಗೆ ಬೀಳ್ಕೊಡಿದನು ತೂಗಲಿ ಗುರಿಗೆ ಗರಿಯಂ ! (ಗಿಶಬಂ. ೩೬-೧೨). **ಬೀಳುಕೊಡು** : ೧. ನೀ ಹೋಗೆಂದು ಗುಣದಲಿ ಬೀಳುಕೊಟ್ಟನು ದ್ರೋಣನರ್ಜುನನ (ಕುವ್ಯಾದ್ರೋ. ೯-೫೦) ; ದೇಶಾಂತರ ದ್ವೀಪಾಂತರಂಗಳಿಂ ಬಂದ ಜನವ ಕಾರುಣ್ಯದಿಂದ ಮನ್ನಿಸಿ ಬೀಳುಕೊಟ್ಟು ತಿರುವಾರೂರೊಳೊಪ್ಪುತಿರ್ದಂ ಸೌಂದರಾಧಿಪಂ (ಸೌಂದಪು. ೧೧-೪೦) ; ಬೀಳುಕೊಡಿ ನಿಮ್ಮರಸರಿಗೆ ತಾ ಹೇಳಲೇನದ ಹೇಳಿ (ಕೊರರಾ. ೫-೩-೧೧೨). ೨. ಕೇಳು ಮಾಯಾಮಲವ ಜಾಳಿಸುವ ಪರಿಗಳಂ ಬೀಳುಕೊಡು ಕುಲವೆಂಬ ಕಾಳ್ಗರುಳ್ಗನಗಳಂ (ದೀಕ್ಷಾಬೋ. ೪೨-೮೩೨) ; ಗುರು ಬೀಳುಕೊಟ್ಟನು ದೇಹವನು (ಕುವ್ಯಾದ್ರೋ. ೧೯-೧) ; ಯೋಗಿಸಮೂಹ ನಗದೇ ಮನುಜಭಾವವ ಬೀಳುಕೊಡಿ (ತೊರಾ. ೪೩-೪೮). ೪. ಇಲ್ಲವಾಗಿಸು ; ಮರೆಯಾಗಿಸು ; ಅಡಗಿಸು : ನಿಮ್ಮ ಭೃತ್ಯನ ಭಾವ ಬೆಚ್ಚಿತು ವಿಶ್ವರೂಪವ ಬೀಳುಕೊಡಿ (ಕುವ್ಯಾಉ. ೩-೬೪). **ಬೀಳುಗೊಡು** : ೧. ನಿಮ್ಮಯ ಕರುಣವೇ ಸಾಮ್ರಾಜ್ಯ ನಮ್ಮನು ಬೀಳುಗೊಡಿರಿ (ಕುವ್ಯಾಸ. ೧೨-೫೨) ; ಏಳುದಿನದಲಿ ಮುಗಿದುದಾ ಮಖಶಾಲೆ ದಕ್ಷಿಣೆಗೊಟ್ಟು ವಿಪ್ರರ ಬೀಳುಗೊಟ್ಟನು (ತೊರಾ. ೧-೯೫). **ಬೀಳ್ಗುಡು** : ೧. ಹಸ್ತಸೂಚನದಿಂದ ಬೀಳ್ಗುಡುವನು (ಚಿಟ್ಟಿಅ. ೧೧೧-೮).

[ಬೀಳ್$_2$ (< ಬೀಡು$_2$) + ಕೊಡು$_1$]

**ಬೀಳ್ಕೊಡುಗೆ**, ಬೀಳ್ಕೊಡಿಗೆ (ನಾ). ಒಬ್ಬರನ್ನೊಬ್ಬರು ಅಗಲುವಾಗ ಒಪ್ಪಿಗೆ ತೆಗೆದುಕೊಳ್ಳುವುದು ಅಥವಾ ಕೊಡುವುದು : ನಮ್ಮ ಕಚೇರಿಯಲ್ಲಿ ನಿವೃತ್ತರಾದ ಅಧಿಕಾರಿಯೊಬ್ಬರಿಗೆ ಬೀಳ್ಕೊಡುಗೆ ಸಮಾರಂಭ ಇಟ್ಟುಕೊಂಡಿದ್ದೇವೆ (ರೂಢಿ). **ಬೀಳ್ಕೊಡಿಗೆ** : ಅವನು ಪರಸ್ಪರ ಬೀಳ್ಕೊಡಿಗೆಯಲ್ಲಿ ಮಗ್ನವಾಗಿದ್ದ ಜನರನ್ನು ನೋಡುತ್ತಿದ್ದನು (ಪುನರು. ೨೪೩) ; ಹಿತ ವಚನವನ್ನು. ಆ ಬೀಳ್ಕೊಡಿಗೆ ಸಮಾರಂಭದ ಮುಕ್ತಾಯ ಕಾರ್ಯಕ್ರಮವಾಗಿ ನುಡಿದರು (ರೂಕಸಂ. ೨೧). [ಬೀಳ್ಕೊಡು + – ಗೆ]

**ಬೀಳ್ಕೊಳ್** 'ಬೀಡುಗೊಳ್' ನೋ.

**ಬೀಳ್ಕೊಳಿಸು** 'ಬೀಟಿಕ್ಕೊಳಿಸು' ನೋ.

**ಬೀಳ್ಕೊಳು** 'ಬೀಡುಗೊಳ್' ನೋ.

**ಬೀಳ್ಕೊಳ್ಳು** 'ಬೀಡುಗೊಳ್' ನೋ.

**ಬೀಳ್ಗುಡು** 'ಬೀಳ್ಕೊಡು' ನೋ.

**ಬೀಳ್ಗೆಡಹು** (ಕ್ರಿ). ಬೀಳುವಂತೆ ಕೆಡಹು ; ಬೀಳಿಸು : ರಿಪುಗಳ ಕಾಲ್ಗೆಡಸಿ ಬೀಳ್ಗೆಡಹಿ ಸೈನ್ಯವ ನಾಲ್ಗಡೆಗೆ ಪಾರಿಸಿದಡೆ (ಅಪಂರಾ. ೧-೧೩-೬).

[ಬೀಳ್$_1$ (< ಬೀೞ್$_1$) + ಕೆಡಹು (< ಕೆಡಪು) ]

**ಬೀಳ್ಗೆಡೆ** (ಕ್ರಿ). ಹಾಳಾಗು ; ಹಾಳುಬೀಳು : ಜಲವಿಂಗಿ ಪೋದ ತಂಗೊಳಗಳನಾಗ ಬೀಳ್ಗೆಡೆದ ತೋಂಟಗಳಂ . . . ಅಪಾರಪಕ್ಷಿ ಮೃಗಸಂಕುಲಮಿಲ್ಲದ ಕಾನನಂಗಳಂ (ಶಂರ್ರವ್ಯ. ೦೨-೯೬).

[ಬೀಳ್$_3$ (< ಬೀಡು$_3$) + ಕೆಡೆ$_1$]

**ಬೀಳ್ಚು**, ಬೀಳಿಚು (ಕ್ರಿ). ೧. ಉರುಳಿಸು : ಕೆಡಹು : ನಿನ್ನನುಜನವಗಡಿಸೆ ಕೆಡೆಯೆಚ್ಚು ಬೀಳ್ಚಿದಂ (ಜೈಭಾ. ೨೦-೩೪). **ಬೀಳಿಚು** : ೨. ಸಾಯಿಸು ; ಕೊಲ್ಲು : ಮೊರೆಮೊರೆದು ಹೂಂಕರಿಸೆ ಮಾವ್ತರು . . . ಬೀಳಿಚಿದುವಿರ ಡರ್ಬುದವನಾಭೀಳಸರಪಳಿಯಿಂದ ನಿಮಿಷಕೆ ಕಾಲನಾಲಯ ತುಂಬಿ ತುಳುಕಿಸಲಾಡೆ ಗಜನಿವಹ (ಕೋಗಮು. ೨೦-೧೪) ; ಕಾಲಾಳಿನಲಿ ಖತಿಯಿಂದ ದೈತ್ಯನು ಬೀಳಿಚಿದನೈನೂರುಲಕ್ಷವ (ಕೋಗಮು. ೨೩-೬೫).

[ಬೀಳ್$_1$ (< ಬೀೞ್$_1$) + – ಚು$_1$]

**ಬೀಳ್ದಲೆ** (ನಾ). ಉರುಳುವ ತಲೆ ; ಕೆಳಗೆ ಬೀಳುವ ಶಿರ : ದೇವರೊಳೆ ಪೆರ್ದಲೆವೆತ್ತು ವಿರಾಜಿಸಿರ್ಪನಾ ತಲೆಯುದು ಸಾಟಿ ನಿನ್ನ ತಲೆಗನ್ಯರ ಬೀಳ್ದಲೆ ಸಾಟಿಯುಕ್ಕುವೋ (ವ್ಯಕಾ. ೨೬-೬೨).

[ಬೀಳ್$_1$ (< ಬೀೞ್$_1$) + ತಲೆ$_1$]

**ಬೀಳ್ದಿಸೆ** 'ಬೀಟಿದ್ದಿಸೆ' ನೋ.

**ಬೀಳ್ದೋಳು** (ನಾ). ಎತ್ತಲಾಗದ ತೋಳು ; ಬಿದ್ದುಹೋಗಿರುವ ತೋಳು : ಸುರಪತಿಗೆ ಬೀಳ್ದೋಳು ಮಿಗೆ ದಂತಶೂಲೆ ಪೂಷಂಗೆ ಯಮಜಂಗೆ ಮತ್ತುರುತರಶಿರೋವೇದನೆ (ಲಶಿಪಂ. ೩೯-೮೨).

[ ಬೀಳ್$_1$ (< ಬೀೞ್$_1$) + ತೋಳು (< ತೋಳ್)]

**ಬೀಳ್ನೆಲ** 'ಬೀಟಿನ್ನೆಲ' ನೋ.

**ಬೀಳ್ವನೆ** 'ಬೀಬುಮನೆ' ನೋ.

**ಬೀಱ್** 'ಬೀಱು$_1$' ನೋ.

**ಬೀಱಿಕೆ** (ನಾ). ೧. ಹೊರಸೂಸುವುದು ; ಹೊರಹೊಮ್ಮಿಸುವಿಕೆ : ತಲೆದೂಗಿ ನಸುನಗೆದೋಱಿಕೆಯು ನಯನಾಗ್ರದುಗ್ರದ ಬೀಱಿಕೆಯುಲೀ ಮಾತನಾಡಿದನಾ ಪ್ರಹಸ್ತಂಗೆ (ಕೊರರಾ. ೫-೭-೩೨). ೨. ಅರ್ಪಿಸುವುದು : ಅರ್ಪಣೆ : ಮೂಱುಱೊಳಗೊಲಿದರಱಲರ್ಚಿಸೆ ಮೂಱುಮುತಿಫಲವಹುದು ಯಜ್ಞದ ಬೀಱಿಕೆಯುಲಾ ದ್ವಿಜರು ಭಕ್ತಿಯುಲರ್ಚಿಸುವರೊಲಿದು (ಶಿಭಾಗ ೧೧-೩೩-೧೪). [ಬೀಱು$_1$ + – ಇಕೆ]

**ಬೀಱಿಸು**, ಬೀರಿಸು (ಕ್ರಿ). ೧. ಅತ್ತಿಂದಿತ್ತ ತೂಗಿಸು ; ಒಲೆದಾಡಿಸು : ಬಳಿಕ ಮಿಕ್ಕಿನ ಕಾಕುದೈತ್ಯರ ಬಳಗಕಳವೇ ಹರಿಯ ನಾಮವು ಹುಳುಕು ನಂಜಿನ ಹರಿಯ ನಾಮದ ಘೋಷದಾರ್ಭಟಕೆ ತಲೆಯ ಬೀಱಿಸಿಕೊಂಡು ಬಳಲಿಯೆ ಕಳವಳಿಸೆ ಸ್ವಾತಂತ್ರ್ಯಮಹಿಮನ ಬಳಕೆಗದು ಯೋಗ್ಯವೇ (ಸಂಥಕ. ೮-೨೦). **ಬೀರಿಸು** : ೨. ಎಸೆಯುವಂತೆ ಮಾಡು ; ತೂರುವಂತೆ ಮಾಡು : ಕೆಲವು ಪುಂಡರು ಚಿಕ್ಕ ಹುಡುಗರ ಕೈಯಲ್ಲಿ ಬಸ್ಸಿಗೆ ಕಲ್ಲು ಬೀರಿಸುತ್ತಿದ್ದಾರೆ (ರೂಢಿ). ೩. ಹಂಚಿಸು ; ವಿತರಣೆ ಮಾಡಿಸು : ಅವಳು ತನ್ನ ಚಿಕ್ಕ ಮಗಳಕೈಯಲ್ಲಿ ಎಳ್ಳು ಬೀರಿಸುತ್ತಿದ್ದಾಳೆ (ರೂಢಿ). ೪. ಬದಲಾಯಿಸಿಕೊಳ್ಳು ; ವಿನಿಮಯ ಮಾಡು : ರತುನ ಬೆಲೆಗೆ ಹಾಕಿ ಪಲ್ಯವ ಕೊಂಬಂತೆಗತಿಗೆ ಸಾಧನವಾದ ನಿನ್ನ ನಾಮಂಗಳು ಕ್ಷಿತಿಯೊಳು ಶಾರೆ ತೌಡಿಗೆಬೀರಿಸಲು ಅನುಚಿತಕರ್ಮಗಳೆಲ್ಲ ಉಚಿತಹವೆಂದು ನಗುತ ಕಾಲ ಕಳೆವೆನೊ (ವಿದಾಕ. ೪೦-೪).

[ಬೀಱು$_1$ + – ಇಸು$_3$]

**ಬೀಱು$_1$**, ಬೀರ್$_1$, ಬೀರು$_1$, ಬೀಱ್ (ಕ್ರಿ). ೧. (ಕಲ್ಲು, ಬಾಣ, ಕೋಲು ಮುಂತಾದುವುಗಳನ್ನು) ಒಗೆ ; ತೂರು ; ಎಸೆ : ಸಮರ್ಥನಲ್ಲಾ ಬಿಡುಗಣೆಯು ಬೀಱುವರೆ ಕಟಕಾಚಾರ್ಯನೆಂದೆನುತ (ಕುವ್ಯಾದ್ರೋ. ೬-೧೯) ; ಹುಚ್ಚು ಹಿಡಿದಿತು ಎನಗೆ . . . ಕಡುದುಷ್ಟರನ್ನು ಕಂಡು ನಾನು ಕಲ್ಲು ಕಲ್ಲು ಬೀಱುವಂಥ (ಪುರಂವ. ೩-೨೯-೨); ನಾಲ್ಕೈದು ಬಾಣಂಗಳಂ ಬೀಱಿದಂ ಬಭ್ರುವಾಹನನ ಮೇಲೆ (ಜೈಭಾ. ೨೨-೧೫). ೨. (ಬಲೆ ಮುಂತಾದುವುಗಳನ್ನು) ಬೀಸು : ಮಾಯಾಪಾಶಮಂ ಬೀಱುತಿರ್ಪ ಸತಿಯರ ಭಾವಮುಮಂ ಕಂಡನು (ಕೋಸುಚ. ೨-೨೩). ೩. ಕಟ್ಟಿ ಹಾಕು ;

ಬಂಧಿಸು : ಚಲ್ಲಗಣ್ಣಡೆಯು ಕಾಡಿವೞಗೆಂಬುರುಳ್ಗಣ್ಣಿಯಲ್ಲಿ ಪಥಿಕಮನೋಮೃಗವನೆಯ್ದೆ ಬೀಱಿ ತಂದಿಲ್ಲಿ ತಡೆವರಿವಳ್ದಿರೇಂ ವ್ಯಾಧವಧುಗಳೋ ಮೇಣ್ ಪ್ರಪಾವಧುಗಳೋಯೆನೆ (ಶಬ್ದಮ. ೮-೯). 'ಬೀಱುಗಣ್ಣಿಕೆ' ಪರ್ಯಾ. ೪. ಎರಚು; ಚೆಲ್ಲು : ಮುಳಿದೆಚ್ಚಾಗಳ್ ಮಹೋಗ್ರಪ್ರಳಯಶಿಖಿಶಿಖಾನೀಕಮುಂ ವಿಸ್ಫುಲಿಂಗಂಗಳುಮಂ ಬೀಱುತ್ತುಂ . . . ಬಂದು ಕೊಂಡಾಗಳೆ ಗಗನತಳಂ ಪಾಯ್ದು ಕಣ್ಣೆತ್ತರಿಂದುಚ್ಚಳಿಸುತ್ತಿರ್ಪನ್ನೆಗಂ ಬಿಟ್ಟುದು ಭರದೆ ಸಿಡಿಲ್ದತ್ತ ಕರ್ಣೋತ್ತಮಾಂಗಂ (ಕಂಕಭಾ. ೧೨-೨೦೩); ಬಿರಿಮುಗುಳನು ಮಿಗೆ ಬೀಱಿದರು ಸರಿಮಿಗಿಲೆನೆ ಸಿರಿಯರಸನೊಳರಸಿಯರು (ಗೀತಗೋ. ೪-೧೬). ೫. ಸುರಿಸು; ಕರೆ ; ವರ್ಷಿಸು : ಉಪನಿಷತ್ಸಂಕುಳವಚೋಭಿಪ್ರಾಯಪೀಯೂಷವನು ಬೀಱಿದರೆ ಖಳರಿಗತಿ ದರ್ಪಜ್ವರಪ್ರಜ್ವಲಿತರಿಗೆ ಸೊಗಸುವುದೆ (ಕುವ್ಯಾಸ. ೯-೬೩); ಬೀಱಿದರಂಬುಗಳ ಮಳೆಯ (ಕುವ್ಯಾದ್ರೋ. ೫-೨೩). ೬. ಎರಗು ; ಮೇಲೆ ಬೀಳು : ಪೇಱಿದರ್ ಭಯರಸಮನೊಡನೆ ಬಾಯ್ವಾಱಿದರ್ ಬೀಱಿದರ್ ಸಿಡಿಲಂತೆ ಕೌತುಕಂದೋಱಿದರ್ ಮಾಱಿದರ್ ಮೈಗಳಂ ದನುಜರುಂ ಮರುಳ್ಗಳುಂ (ಕಬಿಪು. ೩೨-೩೯). ೭. (ಸ್ವಸಂತೋಷದಿಂದ) ಕೊಡು; ನೀಡು : "ಬೀಱು—ಸ್ವೇಚ್ಛಾಪ್ರದಾನೇ (ಇಷ್ಟ ಬಂದಂತೆ ಕೊಡು) " (ಶಮುದ) ; ಜನಪತಿಗೆ (ಯೊ)ಸಗೆಯುಂ ಪುರಜನಮೆಲ್ಲಂ ಬೀಱುತಿರ್ಪರ್ (ಕವಿರಾ. ೧-೯೬); ಅಱಿತ್ತೈ ಗೋನಾಳಿ ಫಲುಗುಣ ತೋಱು ನಿನ್ನಱಿತವನು ಸಲಿಲವ ಬೀಱು ಬೇಗದಿನೆನಲು (ಕುವ್ಯಾಭೀ. ೧೦-೨೬); ಸೇರಿದೆ ನಿನ್ನನ್ನು ಕೋಱಿದ ವರಗಳ ಬೀಱುವೆನೆಂದು ವಿಚಾರ ಬಿಡಿಸೋ ಎನ್ನ (ಪುರಂದ. ೧-೧೬೬-೧). ೮. ಹಂಚು ; ವಿತರಣೆ ಮಾಡು : ಪುರಾಂಗನಾನಿಕರಕ್ಕೆ ಮಣಿಮಯಭಾಜನಂಗಳೊಳ್ ತೆಕ್ಕನೆ ತೀವಿದ ಪಂಚರತ್ನದ [ಕೇಸರಿ]ಯು ಕತ್ತುರಿಯ ಕೊಳತದ ಕಪ್ಪುರದ ಪಳಿಕಿನ ಬಾಯಿನಂಗಳಂ ಬೀಱಿ (ಆದಿಪು. ೪-೩೪ ವ); ನರಪರಿವೃಢನಾ ರತ್ನೋತ್ಕರಮೆಲ್ಲಮನಂದು ತನ್ನ ಪರಿಜನಕ್ಕಂ ತತ್ಪುರಜನಕಮರ್ಥಿಜನಕಂ ಪರಿವಿಡಿಯಿಂ ಬೀಱಿ ಸುಖದಿನಿರಲ್ (ಪೇಬಿಪು. ೨-೫೦); ಅಕ್ಷರಜ್ಞಾನಮುಂಟದನ್ನೈದೆ ಮಾಱುವೆಂ ತ್ರ್ಯಕ್ಷನಣುಗರ್ಗಾದಹೊಂಗಳಂ ಬೀಱುವೆಂ (ಬಸರ. ೫-೧೨). ೯. ಹರಡು; ವ್ಯಾಪಿಸು; ಪಸರಿಸು : ಬೀಱುವ ಸೌರಭದಿಂಪಿನಿಂದೆ ಕಂಪಿನ ಕರುವಾದ ಕೇದಗೆಯ ಮಂಟಪಮೊಪ್ಪುವುದೆತ್ತ ನೋಟಿಸ್ಕೊಡು (ಕುಸುಮಾ. ೧-೧೦೨); ಗಾಯಕರು ತಾಳಂಗಳನುಗುಡೆ ಗೇಯರಸದ ಲಹರಿಗಳು ದೆಸೆದೆಸೆಗೆ ಬೀಱುತಿರೆ (ಬಸಪು. ೨೬-೮) ; ಬಳಿಕ ನಿನ್ನಯ ಘರಸುದರ್ಶನ ಸುಳಿವುದೋಱಲು ಕೋಟಿಸೂರ್ಯರ ಬೆಳಗು ಬೀಱಲು (ಕುವ್ಯಾಕ. ೦೬-೨೮). ೧೦. ಹಬ್ಬುವಂತೆ ಮಾಡು ; ಹರಡುವಂತೆ ಮಾಡು : ಬಾಲಾತಪಂ ಸುತ್ತಲುಂ ಕಂಪಿನ ಸೊಂಪಂ ಬೀಱಿ (ರಾಜಶೇ. ೩೫೪); ಪಗಲುಂ ಬೆಳ್ದಿಂಗಳಂ ಬೀಱುವ ಸೊದೆವೆಳಗು ತಾಳ್ದು ನೀಳ್ಪಿಂದಮೆತ್ತಂ ಮುಗಿಲಂ ಪೊತ್ತಿರ್ಪ ಕೂಟಪ್ರಕರದಿಂ (ಚಂದ್ರಪ್ರ. ೩-೮೨). ೧೧. ಸಾರು ; ಘೋಷಿಸು : ಕಳುಪಿ ಕೊಟ್ಟಾದೇಶಮಂ ದೇಶದೊಳು ಸಾಱಿ ತಿಳಿಪಡಿದು ಸುಕುಮಾರವೈವಾಹಮಂ ಬೀಱಿ (ಪಂಬಸ. ೫-೮) ; ನಿಬ್ಬರದ ಬಿರುದನು ಬೀಱುತಿರ್ದುವು ಗೌಱುಗಹಳೆಗಳು (ಕುಭ್ಯಾಶ. ೮-೦೪). ೧೨. ಹೊರಸೂಸು; ಹೊರಹೊಮ್ಮಿಸು : ವೃತ್ತೋತ್ತುಂಗಸ್ತನೆಯರ್ ಶ್ರಮಮುತ್ತುಮದೇಂ ಸುರಭಿಗಂಧಮಂ ಬೀಱಿದರೋ (ಆದಿಪು. ೧೧-೭೦); ಸರಸಿಜಾಯುತದಂದವನು ಮೋಹರಿಸಿ ಮುಂಚುವ ಪರಿಮಳವನಂದರಸಿ ಬೀಱುತ ಬಂದು ಹೊಕ್ಕಳು ರಾಜಮಂದಿರವ (ಕುವ್ಯಾವಿ. ೧-೨೮); ಕಾಂತಿಯ ಬೀಱಿದವು ಭುಜಲತೆಗಳಭಿನವಗರ್ಭದೇಳ್ಗೆಯಲಿ (ತೊರರಾ. ೧-೮-೨). ೧೩. ತೋರಿಸು ; ಪ್ರಕಟಗೊಳಿಸು ; ಪ್ರದರ್ಶಿಸು : ಮಾ[ಱಿೊ]ಡ್ಡುದಲ್ ಸಾಲದೆನ್ನೀ ಬಾಣಾವಾಸಕ್ಕೆನುತುಮಳವಂ ಬೀಱುತುಂ ಬಿಲ್ಗಜಾಣಿಂ ದ್ರೋಣಿಂ ನಿಂದಂ ಮಸಗಿ ತಿರುಪುತ್ತೊಂದು ಕೂರಂಬನಾಗಳ್ (ಪಂಪಭಾ. ೧೧-೫೭) ; ಎಲ್ಲಾ ರತ್ನಂಗಳುಮನೊಳಕೊಂಡೊಳ್ಪನ ಭೋಧಿ ಲೋಕಕ್ಕೆಲ್ಲಂ ಬೀಱಲ್ ಪೊಱಗೆ ಕಸೆವಂ ನಿಚ್ಚಮಿಾಡಾಡುತಿರ್ಕುಂ (ಕಾವ್ಯಾವ. ೨೫೨); ಸುರಭಿ ಪ್ರಾಲೇಯತೋಯಂಗಳಂ ಯುವಪಾಂಥರ್ಗೆಱೆವಲ್ಲಿ ತಮ್ಮ ಲಲಿತಾಂಗೋಪಾಂಗಶೃಂಗಾರಗೌರವಮಂ ಬೀಱುವರೆಂಬ ದೂಱನೆಸಗುತ್ತಿರ್ಪರ್ ಪ್ರಪಾಕಾಂತೆಯರ್ (ಪುಷ್ಪಪು. ೨-೨೨) : ಸೇರಿದ ಹೊಲವನ್ನು ಹೋರುವ ಮಗನನ್ನು ಚಾರು ಮೈನೆಱಿದ ಮಗಳನ್ನು ಪರರಲ್ಲಿ ಬೀಱುವವನೆಗ್ಗ (ಸರ್ವಜ್ಞ. ೦೫೨೬). ೧೪. ಮೆರೆ ; ಕಂಗೊಳಿಸು : ಬೀಱುತಿಹ ಫಲರಸದೊಳಿಪ್ಪ ನವರುಚಿಯಂತೆ ವಾರಣದ ಮಸ್ತಕದ ಮುತ್ತಿನಂತೆ (ಶಿವಗೀ. ೩-೨). ೧೫. ತೂಗು ; ಒಲೆದಾಡು: 'ಬೀಱಿಸು' ಪರ್ಯಾ.

ಬೀರ್₁ : ೩. 'ಬೀರ್ವಗ್ಗ' ಪರ್ಯಾ. ೪. 'ಬೀರ್ಚು' ಪರ್ಯಾ. ೧೩. ಅತುಲಸೊಗಸಂ ಬೀರ್ವ ವಿಟನಂತೆ ಮುಂಬರಿದು ತಂಬೆಲರು ತೀಡಿತಾಗ (ವಂಕಾರಾ. ೫-೬-೩೨).

ಬೀರು₁ : ೧. ಕಳ್ಳರು ಹಿಂದುಗಡೆಯಿಂದ ಕವಣೆಗಲ್ಲನ್ನು ಬೀರುತಾ ಬಂದರು (ಶಿಶಿಶಂ. XI, ೯); ಹುಡುಗರು ಬಸ್ಸಿಗೆ ಕಲ್ಲು ಬೀರುತ್ತಿದ್ದಾರೆ (ರೂಢಿ). ೩. ನಾಯಿಮರಿಯ ಕುತ್ತಿಗೆಗೆ ಜೋರಾಗಿ ಹಗ್ಗ ಬೀರಬೇಡ (ರೂಢಿ). ೮. ಅವಳು ಎಳ್ಳನ್ನು ಬೀರುವುದಕ್ಕೆ ಬಂದಿದ್ದಾಳೆ (ರೂಢಿ). ೧೨. ಬಾಗುವೆ ಬಳುಕುವೆ ಬಳೆಗಳನೆಣಿಸುವೆ ಕಳ್ಳನೋಟವ ಬೀರುತಿರುವೆ (ಇಂಚಾಕ. ೬೯-೩೫); ನಾರಾಚದೇರಿಗಾರದೆ ಸೋಗೆ ನರಳು ದನಿಯಂ ಬೀರಿ ಚೀರಿಡೆ (ಶಶ್ರಾಂಗ. ೫೪-೦೪೩೯) ; ಹೀಗೆ ಮಾಡಿದರೆ ಅದು ಪೂಜನೆ ಹೊಂದಿ ಕೆಟ್ಟವಾಸನೆಯನ್ನು ಬೀರುತ್ತದೆ (ಗೃಹವಿ. ೫೦). ೧೩. ಹರಿ ವಿರಂಚಿಗಳಾನಲಾರದ ಭರಿತಕಾರ್ಯವನಿಳೆಯೊಳಾದಿಸಿದ ನರನು ತಾ ನಿರ್ವಹಿಪನೆಂದೇ ನಯವ ಬೀರಿದರಿ (ಕೋಗಯ. ೮-೦೪). ೧೪. ಕೃಷ್ಣಮೇಘಸದೃಶವೇಣಿ ತೂರಿ ಬೀರಿ ಬರುವಳು! (ಶಾಂತಜ. ೧೧-೪). ೧೬. ಉಂಟಾಗಿಸು ; ಉಂಟುಮಾಡು : ಚಲುವಿಕೆಯದೋರಿ ಮಾಯಾಭ್ರಮೆಯ ಬೀರಿದುದು (ಅನಂರಾ. ೩-೪-೪೩); ಹಾಡಿ ಮುದವನು ಹೀರಿ, ಜನಕೆ ಹರುಷವ ಬೀರಿ ತೇಲು ಮುಂದೆ (ಶಾಂತಜ. ೪೫-೧೯); ನೀತಿ ಮತ್ತು ಧರ್ಮದ ಪ್ರಭಾವವನ್ನು ಜನರ ಮೇಲೆ ಬೀರಲು ಯತ್ನಿಸುವನು (ತತ್ವಶಾ. ೬೦೬).

ಬೀಱ್ : ೧. ಱಕಾರಕ್ಕೆ — ಏಱ್, ಬೀಱ್, ಬಸಿಱ್ (ಶಮುದ. ೫೮ ಪ್ರಯೋ). ೭. ಅರ್ಕಚಂದ್ರಾಗ್ನಿಲೋಚನನನಳವಳಿಸುವೆಂ ಬೀಱ್ರ್ವಳೆಗಳೆ ವಿಳಯವನು (ಕಬಿಪು. ೪೩-೫೩). ೯. ದೆಸೆದೆಸೆಗೆ ಬೀರ್ವ ತನಿಗಂಪಿನಿಂ ತಂಪಿನಿಂ . . . ಕೊಳಂ ಕಣ್ಗೆಸೆದುದು (ಕೃಬಾಭಾ. ೧೫-೯). ೧೨. ಕಂತುತನಯಂಗೆ ಪೂರ್ವದಿಗಂಗನೆ ತಂದು ತೋರ್ವ ಮಾಣಿಕದ ಕನ್ನಡಿಯೆನೆ ಕಾಂತಿಯ ಬೀರ್ವ ಭಾಸ್ಕರ ಮೂಡಿದನು (ಮೋಹತ. ೩೭-೧೬).

ಬೀರಿಕೊಳ್ಳು = ಬಿಗಿದುಕೊಳ್ಳು ; ಬಲವಾಗಿ ಕಟ್ಟಿಕೊಳ್ಳು : ನಡುಪಟ್ಟಿಯನ್ನು (ಬೆಲ್ಟ್) ಬಿಗಿಯಾಗಿ ಬೀರಿಕೊಂಡರೆ ಹಸಿವು ತೋರುವುದಿಲ್ಲ (ಕೊವಕ್ಷ. ೨೬).

[ದೇ.॥ ತಮಿ. ವೀಱು; ತುಳು. ಬೀರು; ಕೋತ. ವೀರ್]

**ಬೀಱು₂** (ನಾ). ೧. ಬಿಗಿದು ಕಟ್ಟುವ ಕುಣಿಕೆ,– ಗಂಟು : 'ಬೀಱುಗೊಳ್' ಪರ್ಯಾ. ೨. ಚಂಚಲವಾಗಿರುವುದು : ಬಲೆದೊಡಕುಗಳು ಕರ್ಮಮಾರ್ಗಂಗಳ ಮೊಳೆಗಳುಗ್ರಂಗಳಾಶಾವಳಯಿತಂಗಳು ಜಾಱುಗಳು ಬೀಱುಗಳು (ಬಸಪು. ೪೦-೫೭). [<ಬೀಱು₁]

**ಬೀಱುಗುಂಡು** (ನಾ). (ಯುದ್ಧ ನಡೆಯುವ ಸಮಯದಲ್ಲಿ) ತೂರಿ ಬರುವ ದೊಡ್ಡ ಕಲ್ಲು ; ಎಸೆಯುವ ದೊಡ್ಡಕಲ್ಲು : ಬೀಳ್ವ ಕವಣೆಗಲ್ಗಳ ಬೀಱುಗುಂಡುಗಳ ಘಾತಿಯಿಂ ಬಸವಳಿದು ಬೀಳುತಿರ್ದರ್ ಕೆಲಬರು (ಕಬಿಪು. ೪೨-೨೬). [ಬೀಱು₁ + ಗುಂಡು]

**ಬೀಱುಗುಣಿಕೆ** (ನಾ). ಬಿಗಿದು ಕಟ್ಟುವ ಕುಣಿಕೆ : ಬಂಧಿಸುವ ಗಂಟು : ವಾರುವಗಳ ಡಾವಣೆ ನೇಣ್ಗಳ್ ಬಲುಬೀಱುಗುಣಿಕೆಗಳ್ ಪಱಿದು ಕೇರಿಕೇರಿಯೊಳು ತಮ್ಮಿಚ್ಚೆಯೊಳಗೆ ಸಲೆ ತಾಱುಮಾಱಾಗಿಯೋಡಿದುವು (ಶಂಪವಿ. ೧೫-೯೦). [ಬೀಱು$_1$ + ಕುಣಿಕೆ$_2$ (< ಕುಳಿಕೆ$_1$)]

**ಬೀಱುಗೊಳ್** (ಕ್ರಿ). ಕುಣಿಕೆಗೆ ಸಿಗುವಂತೆ ಮಾಡು ; ಬಂಧಿಸು : ಹಣವೇನು ಬಾತೆ ನಿನ್ನಯ ಗುಣವೆಂಬುದು ಮಣಿದಾರವಾಗೆನ್ನ ಮನವ ಕ್ಷಣದಲಿ ಬೀಱುಗೊಂಡುದು (ಶಂಪವಿ. ೬-೧೬೯).
[ಬೀಱು$_2$ + ಕೊಳ್$_1$]

**ಬೀಱುವಗ್ಗ, ಬೀರ್ವಗ್ಗ** (ನಾ). ಕುಣಿಕೆಯಿರುವ ಹಗ್ಗ.—ಪಾಶ : ಪಾವಿನ ಪೇಳಿಗೆ ಗಾಣದ ಸಿಡಿಗಳು ಓವದೆ ಬೀಱುವಗ್ಗಗಳು ತೀವಿ ಪಣಿಯು ನೂಂಕುವ ಕವೆವಱಿಗಳಿಂ ಭಾವಿಸೆ ಕೌತುಕಮಾಯ್ತು . . . ಬಲದೊಳಗೆ (ಅವಂತ. ೧೯-೪೯). **ಬೀರ್ವಗ್ಗ** : ಮೋಣಮುನೆಱಿದು ತನುಗಳಂ ಕಾಸಿದರ್ ಬೀರ್ವಗ್ಗಮಂ ಹಾಯ್ಕಿ ಸೇದಿದರ್ ಮುರುಳ್ಗಳಂ ತೂಂತರು (ಚರಿತ್ರೆ. ೪೨-೩೬). [ಬೀಱು$_1$+ವಗ್ಗ]

**ಬೀೞ್$_1$, ಬೀಳ್$_1$, ಬೀಳು$_1$, ಬೀೞು$_1$, ವೀಳ್, ವೀೞ್** (ಕ್ರಿ). ಬಿದ್ದ$_1$, ಬಿರ್ದ, ಬಿೞ್ದ (ಭೂತಕೃ). ಬಿದ್ದು$_1$, ಬಿರ್ದು$_1$, ಬಿೞ್ದು$_1$ (ಭೂತನ್ಯೂ). ೧. ಕೆಳಕ್ಕೆ ಕೆಡೆ,—ಕುಸಿ ; ಪತನ ಹೊಂದು : ತಾನುಂ . . . ಕಣೆಪಂಜರದೊಳೆಱಗಿ ಭೀಷ್ಮನ್ನಿಬ್ದನ್ತೆ ನೆಲ ಮುಟ್ಟದೆ ಬಿೞ್ದೋನಾನ್ (ಎಕ. VIII. ಸೊರಬ. ೦೦-೯ ; ಸು. 800); ಅನಿಬರ ಬಿಲ್ಗಳುಂ ಮುಱಿದು ದವರ್ಗಳನಿಬರುಂ ಪೆಱಗಣ್ಗುರುಳ್ದು ಬಿೞ್ದೊಡೆ (ಪಮ್ಪಭಾ. ೯೬-೯); ಬಿೞ್ದುದು ಭರದೆ ಸಿಡಿಲ್ದತ್ತ ಕರ್ಣೋತ್ತಮಾಂಗಂ (ಶಂಪಭಾ. ೦೨-೨೦೩); ಜೇರಿಗೆಯೊಕ್ಕಲ್ಗಣೆಯಾಗಿ ಬಿೞ್ದ ಭಟರಿಂ ಬಿೞ್ದಶ್ವದಿಂ ಬಿೞ್ದ ದಂತಿಗಳಿಂದಂ ಜವನುಂಡು ಕಾಱಿದವೊಲಾಯ್ತುತ್ತಂ ಕುರುಕ್ಷೇತ್ರದೊಳ್ (ಗದಾಯು. ೩-೨). ೨. ನಮಸ್ಕಾರಮಾಡು ; ಮಣಿ : ಕಿಡೆದಿರ್ದುದು ಷಣ್ಣವತಿ ಸಹಸ್ರಾಂಗನಾಳಿ ನೃಪನಡಿಮೊದಲೊಳ್ ಬಿರ್ದು ನಿನಗೆ ಚತುರ್ದಶರತ್ನಂ ಜನೇಶ ಬೆಸಕೆಯ್ವುದುಮಮರರೆಲ್ಲಂ ಬೆಸನೇನೆನುತಿರ್ಪರ್ (ಆಪು. ೦೦-೩೫); ● ಇಲ್ಲಿ 'ಬಿರ್ದು' ಎಂಬುದು ೩೪ ಮತ್ತು ೩೫ನೆಯ ಪದ್ಯಗಳ ನಡುವೆ ವಚನಭಾಗವಾಗಿ ಬರಬೇಕಿತ್ತು ; ಅದು ಮಡುವಿಂ ಪೊಱಮಟ್ಟು ಬಂದೊಂದೊಂದಱ ಕಾಲ ಮೇಲೆ ಬಿರ್ದಾನಂದಾಶ್ರುಗಳನಿಕ್ಕಿ (ಶಂಶಕಂ. ೩೦೦-೦೩). ೩. (ಹೂವು, ಕಿಡಿ ಮುಂತಾದಂವು) ಉದುರು : ಮಲಯಾನಿಳನೆಸಕದಿನುದಿರ್ವಲರ್ಗಳ ಮಕರಂದಮಾಲೆಗಳ ಪರೆದೆತ್ತಂ ನೆಲದೊಳ್ ಬಿೞ್ದುಂ ಪಡೆದುದು ವಿಲೋಚನಾಂಬುಗಳನಗ್ಗಳಂ ವಿರಹಿಗಳಾ (ಶಬರಿ. ೩-೦೩೬); ಭೋಂಕನೊಗೆತರ್ಪ ಮಹೋರಗನೆಯ್ದೆ ಪಲ್ಗಳರ್ದೊಡೆ ಕಿಡಿವೀೞ್ ನೆತ್ತರೊಱಿದುರ್ಚುಗೆ ಕೊಂಡುದು ತತ್ತಪಸ್ವಿಯಂ (ಆದಿಪು. ೨-೪೦); ಮಾತಂಗಕುಂಭದಿಂ ರಣಭೂತಲದೊಳ್ ಬಿೞ್ದುವೊಡನೆ ಮೌಕ್ತಿಕ ಮಣಿಗಳ್ (ಶಂಧಾವಾ. ೦೩-೭೭). ೪. (ಸಿಡಿಲು, ಬಾಣ, ಕಲ್ಲು ಇತ್ಯಾದಿ) ಎರಗು; ಹಾಯು; ಬಡಿ : [ಸಿ]ಡಿಲ್ ಬೀೞೆ ಮರಂ ಮುಱಿಯೆ (ಶಾಂತಿಪು. ೯-೦೦೬); ಕುಮಾರನನೆತ್ತಿಕೊಂಡು ಮಾಣದೆ ಗಗನಕ್ಕೆ ಮತ್ತೊಗೆದನುರ್ವಿಗೆ ಬಿೞ್ದ ಸಿಡಿಲ್ ಸಿಡಿಲ್ವವೋಲ್ (ಚಂದ್ರಪ್ರ. ೫-೫). ೫. ಇಳಿ : ಕೆಳಮಟ್ಟಕ್ಕೆ ಬರು ; ಶಾಪದಿಂದಕಟ ತಿರ್ಯಗ್ಜಾತಿಯೊಳ್ಬೀೞ್ದನೇ (ಕಾದಂಬ. ೬೦೫). ೬. ಅಸ್ತಮಿಸು ; ಮುಳುಗು : ಬಟ್ಟ ಬೀೞುವೊಲ್ಪೊಟ್ಟನೆ ನೊನ್ದು ಬೀೞ್ವೆಡೆಯೆ × × (ಎಕ. II, ೦೩೯-೦೭; ಸು. 940). ೭. ಜಾರು : ಅಂಬರದೊಳಾಡುವ ಪರ್ದಿನ ಬಾಯಿಂದಂ ಬಿರ್ದ ಬರ್ದುಂಕಿದೊಂದು ಪೆಣ್ಣಲಿಯಂ ಕಂಡು (ಶಂಶಕಂ. ೨೫೬-೭); ನಿತ್ತರಿಸದೆ ಬಲ್ದೊಱೆಯೊಳ್ ಮತ್ತನಿಸದೆ ಬಿರ್ದೊಡಣ್ಣ ಸಹವಾಸಿಯೆ ಬಂದೆತ್ತುವುದು (ರಮಾಕನ್ಯ. ೦-೦೨೫). ೮. ದುಮುಕು ; ಜಿಗಿ : ಬಡಗ ರೆಕ್ಕಕದದುಬದಗಾಯ್ದಟ್ಟದಿಂ ಬಿೞ್ದ ಕೊಳ್ಗಿದುಟ(? ಉ) × × × (ಎಕ. XVIII, ೩೬೯-೨೭ ; ೪ನೆಯ ಶತ): ಬೇಡನೋಂದು ಪುಲಿ ತನ್ನನಟ್ಟವರೆ ಪ್ರಾಣಭಯದಿಂ ದೆಸೆಗಾಣದೆ ಪುರಾಣಕೂಪದೊಳ್ ಬಿರ್ದಂ ಆ ಪುಲಿಯುಂ ಕೋಪಾಂಧನಪ್ಪುದಱಿಂದಲ್ಲಿಯೆ ಬಿರ್ದುದು (ಶಂಶಕಂ. ೦೦೯-೦೬); ಬೆದಱಿ ಪುಲಿ ಬಾವಿಯೊಳ್ ಬಿರ್ದುದನಱಿದೊಡೆ ಗುಂಡುಗೊಂಡು [ಕೊಂದಿ]ಕ್ಕುಗುಂ (ಸುಕುಮಾ. ೬-೩೭); ಪರ್ವತವೇಱಿ ಬಿದ್ದರಂತೆ ನಿರ್ಜೀವನಾಗಿ (ರಮಾಕನ್ಯ. ೦-೦೬೯). ೯. (ಭೂಮಿ, ಕಟ್ಟಡ ಇತ್ಯಾದಿ) ಕುಸಿ; ಜರಿ : ಪಡೆಯ ಪೊಱಗಿದು ಶೇಷಂ ಪೆಡೆಗಳನುಡುಗುವುದುಮೆಳೆ ಬೊದಿಲ್ಲನೆ ಬಿೞ್ದತ್ತಡಿಗಿಡೆ ಕೂರ್ಮನ ಬೆನ್ನಂ ದೊಡೆದು ಸಿಡಿಲ್ದೊಡನೆ ಸುಚ್ಚುನೂಱಿಪ್ಪನೆಗಂ (ಶಂಪಭಾ. ೧೦-೭೦); ಭುವನವ್ರಾತಂ ನಿರಾಧಾರದೊಳಡಕಿರಲುಂ ಬೀೞ್ಗುಮೆಂದಂದು ಕಂಜೋದ್ಭವಂ . . . ಸೃತಿಟ್ಟ ವಿಭಾಸ್ವತ್ಕಾಂಚನಸ್ತಂಭಮಿದೆನೆ (ಕುಸುಮಾ. ೧-೨೫). ೧೦. ಬಳಲು ; ಆಯಾಸಹೊಂದು : ಪದೆದಾಂ ನೋಡಿದೆನಾತನಿರ್ದ ದೆಸೆಯಂ ನಟ್ಟಾಲಿ ಬೀೞ್ವನ್ನೆಗಂ (ಕಾದಂಪೂ. ೭೯೯) ; ನೋಡಿದ ಳಜ್ಞಾನನೆ ನಿನ್ನ ಚಿತ್ರಪಟಮಂ ನಟ್ಟಾಲಿ ಬೀೞ್ವನ್ನೆಗಂ (ರಶಕು. ೦೦-೫೨). ೧೧. ಮರಣ ಹೊಂದು ; ಸಾಯು : ನಾಡನೊರೊಳ್ರಣವಿಕ್ರಮನಾನ್ನೆಱಿತಿಯಡಿಗಾಳ್ಪೆಟ್ಟತ್ತು ಸಿಂಭಿಗೆ ಕೊಳ್ಗೊಳ್ದುಳ್ವೀೞೆ ಎಱಿದು ಗೆಲ್ದು ಅಲ್ಲಿ ಮಹಾಜನಮಾನ್ಕರೆದು ನಿಗಳ ಬಾೞ್ವನ್ತು ಜೀವಿತು ಬೇಡಿಕೊಳ್ವೆಮೆನ್ದೊಡೆ (ಸೌಇಇ. IX-i, ೪೭-೩ ; ಸು. 4ನೆಯ ಶತ) ; ಅಪ್ಪಬಲಮನ್ನ ಎಱಿದು ಬಿೞ್ದ × × (ಎಕ. IX, ಬೆಂಗಳೂ. ೩೭-೪ ; ಸು. 750) ; ಅಗ್ಗಳಾ ಅರಸರಾ ಬೆಸಸಿದೊಡೆ ಬೆಸನ ಪೆತ್ತುರ್ಬಿ ಬಲವಾನ್ತಾಳ್ದಿ ಎಱಿದು ಬಿೞ್ದರ್ (ಎಕ. X (8), ಬಾಗೇಪ. ೯೬-೮ ; ಸು. 820). ೧೨. (ಆಹಾರ ಮುಂತಾದುವು) ಹಳಸು ; ನೀರು ಬಿಟ್ಟುಕೊಳ್ಳು : "ಬಿೞ್ದುದು — ಪಟಿಸಿದುದು, ಸತ್ತುದು. ಕೈ ಜೋಲ್ದುದು" (ಕಮುದ. ಶಂ. ೦) : "ಬಿೞ್ದುದೆನೆ ಪಟಿಸಿದುದು ಸತ್ತುದುಂ ಕೈಯಿಂದೆ ಜಾರ್ದುದಕ್ಕು" (ಶಂಱವ. ೦೬). 'ಬೀೞಂಬಲಿ' ಪರಾ. ೧೩. ಚೆಲ್ಲಾಪಿಲ್ಲಿಯಾಗು ; ಚೆದರು : "ಪಡಲಿಟ್ಟುದೆನಲು ಬಿರ್ದುದು" (ಕವಿಕಂ. ೨೨೩). ೧೪. (ವೆಚ್ಚ, ಬೆಲೆ ಇತ್ಯಾದಿ) ಉಂಟಾಗು ; ತಗಲು : ತಮಗೆ ಸುಂಕ್ಕಂ(ಕಂ) ಬೀೞ್ದಲ್ಲಿ ಒನ್ದು ಪೇಱಿಗೆ (ಇಆ. VIII, ೨೮೬-೩; 732). ೧೫. ಸಿಕ್ಕಿ ಹಾಕಿಕೊಳ್ಳು ; ಸಿಲುಕು : ಚಂಡಾಲರ ಕಯ್ಯೊಳ್ಬೀೞ್ವ ತೋಲ್ಪಂಜರದ ಪಡಿಕೆಯೊಳ್ನಿಲ್ವ ದುರ್ವಾರದುಃಖೋತ್ಕರವೆಲ್ಲಂ ನೋಡಲೆನ್ನಿಂದ್ರಿಯ ನಿವಹದ ದೋಷಂ ದಲ್ (ಕಾದಂಉ. ೬೫೨); ಪೇರಾನೆಯ ಬಾರಿಗೆ ಬಿರ್ದ ಶ್ವಾನನ ತೆಱದಂತೆ ಬಾಧೆಗೊಳಗಾಗಿರ್ಪ (ರಮಾಕನ್ಯ. ೬-೧೩೦) ; ನಿಚ್ಚಮಾ ವೇದವಚನಕೆಂತುಂ ಸಿಲ್ಕದಣ್ಣ ನೀನೇ ವಿಚಿತ್ರಮಿದಲ್ತೆ, ತೊಡರಿ ಬೀೞ್ದಲ ಕೈಕೆಯೊರೆದ ಬಿಱುನುಡಿಯೊಂದಕೆ (ಶ್ರೀರಾಮ. ೪-೨೯). ೧೬. ಧಾರೆಯಾಗು ; ಸುರಿ : ನೇರ್ವಲ್ಲಿ ಕೆನ್ನೆತ್ತರುಂ ಬಿರಿಖಂಡಂಗಳೆ ಬೀೞಲುಣ್ಕೆ ಮನದೊಂದಣ್ಮಿಟ್ಟಳಂ ಪೊಣ್ಮೆ ಬೀರರಸಕ್ಕಾಗರಮಾಯ್ತು ನೋಡೆ ಕವಚಂಗೊಂಡಂದಮಾ ಕರ್ಣನಾ (ಶಂಪಭಾ. ೯-೬೩). ೧೭. ನ್ಯೂನವಾಗು ; ಕೊರತೆಯಾಗು; ಅಪೂರ್ಣವಾಗು : 'ಬೀೞಿಕ್ಕರ' ಪರಾ. **ಬೀಳ್$_1$** : ೧. ಇನ್ತೀ ಧರ್ಮ್ಮಮನಳಿದವರು . . . ನರಕಕ್ಕೆ ಬೀಳ್ವರು (ಕಇ. II, ೦೦-೨೯; 1080); ಗಿರಿಯ ಶಿರದಲಿ ಪೂತ ಕಕ್ಕೆಯ ಮರ ಮುಱಿದು ಬೀಳ್ವಂತೆ (ಕುಮಾರರಾ. ೩-೭೬). ೨. ದಂಡವತ್ಪ್ರಣುತೆಯಿಂ ಮುನ್ನಂ ಮನಂ ಬಿಳ್ದು (ಶಿರುರ. ದೇ. ೦೦-೪); ಹರಹರ ನಮಃಶಿವಾಯೆಂದು ಬಿರ್ದಂ ನೋಡ (ಅಂರ. ದೇ. ೦೭೬-೨೫). ೩. ಜೇರಿಗೆ ಬೆಲ್ಲಂ ಸಡಿಲ್ದು ಕಂಪನದೆ ಬಿಳ್ದು ಪಗಜೆಯ ಪದದೊಳ್ (ಗಂಳ. ೦೦-೯೨) ; ಕಂಬನಿವೊಂದೆರಡು ಬೀಳ್ತಿರ್ದಡಂ (ಬಸಪು. ೪೪-೨೯). ೭. ಕೈಯಾಯುಧಂ ಬೀಳ್ವುದಂ ಕಣನಂ ಲುಬ್ಧಕನಂ . . . ಕನಸೊಳ್ ಕಾಣಲು ಬಾರದೈ (ಕೋಬೋಕ. ೬೦). ೧೧. ಸಂತರಾಗಲಸಂತ

ರಾಗಲಿಯಂತಕಾಲದಲವರು ಬೀಳ್ವರು ಮಂತ್ರಗಳು ತಾವಿರವು ಜ್ಯೋತಿಯ ಸಾಕ್ಷಿಯಿಲ್ಲದಿರೆ (ಸಂಭಶ. ೪-೧೫). ೧೬. ಬೀಳ್ವ ಲೋಳೆಯ ಬಿಗಿದ ಗಲ್ಲಗಳ ಅಂಗವಿಚ್ಛಾಯೆಯ . . . ನಾರ್ವ ಬಾತೊಡಲ (ಬಸವು. ೪೬-೫೭). ೧೮. ಸೋತುಹೋಗು ; ಸೋಲು : ಸಂಕಲಿನಾಚಿಯರ ನೋಟದೊಡನೆ ತನ್ನ ನೋಟಂ ಘಳಿಲನೆ ಸಂದಿಸೆ ಹಳಿಲನೆ ಮನಂಬಿರ್ದು (ಪಂಬರ. ೦೨-೫೨): ಬೀಳ್ದುದು ಮತ್ತಂ ಪಾಂಡ್ಯನ ಬಾಳ್ದ ಬಲಂ (ಹಾಲಾಸ್ಯ. ೩-೩-೨೭). ೧೯. ಆಕ್ರಮಿಸು ; ಧಾಳಿ ಮಾಡು : ಬಾಳೆಯ ಮಕ್ಕೆ ಸೋದಿಯ ಮೇಲೆ ದಂಡಂ ಬೀಳ ಪೇಳಲೇೞ್ ಬಂದು ಪರಿಗೆಯ ಬಯಲಲಿ ಬೀಡಂ ಬಿಟ್ಟು (ಪ್ಕಅಂ. ೦೯೨೯, ೭೩-೩ ; 1216). ಬೀಳು$_1$ : ೧. ಬಿದ್ದವು ತೋಳ ಗಾಳಿಗೆ ತರುಕದಂಬಕವವಳ ಗಮನದಲಿ (ಕೊರಣ. ೦-೦೦-೬). ೨. ಬಿರಿ ಮುಗುಳಂದದಿ ಎನ್ನ ಹೃದಯ ನಿಮ್ಮ ಶ್ರೀಚರಣದ ಮೇಲೆ ಬಿದ್ದರಳುಗೆ (ಬಸವ. ೪೮೬); ನರನ ನುಡಿಯಸು ಹೊಳ್ಳುಗಳೆವರೆ ಚರಣದಲಿ ಬೀಳುವೆವು (ಕುವ್ಯಾದ್ರೋ. ೬-೫೪) ; ನರಹರಿಯ ಪಾದಕೆ ನಾ ಬೀಳಲಿಲ್ಲ (ಪುರಂದ. ೦-೦೭೭-೦೨). ೩. ಬೀಳುವುದು ತಾ ಮತ್ಸ್ಯವಾಲದಿ ಜಾಳಿಸಿದ ಜಲವೀಗ ಭೂಮಿಗೆ (ಸಂಭಶ. ೪-೨೯) ; ದೇವರ ದಯದಿಂದ ಎಲ್ಲಿಯೂ ಕಿಡಿ ಬೀಳಲಿಲ್ಲ (ಮುಂಬಯು. ೪-೬೩). ೪. ಬೀಳುವಂಬಿನ ಹೊಯ್ಲು ಖಡ್ಗದ ತೂಳು ಮಾನೆಯ ತೂಕಿ ತಾಗುವ . . . ಧಾಳಾಧೂಳಿ ಮಸಗಿತು (ಕುವ್ಯಾಕ. ೧೧-೯) ; ನಿಡಿಗಲ್ಲು . . . ಬಟುಗಲ್ಲು ಬೀಳೆ ತುಡುಕಿದ ವಜ್ರಮಾರ್ಗಣದಿಂದ ಶ್ರೀಕೃಷ್ಣ ಹುಡಿಯೇಳಲೆಚ್ಚು ಹಾಱಿಸಿದ (ಮೋಹತ. ೪೦-೭೩). ೫. ಅಧಿಕವಹ ಕೋಪದಲಿ ಬೀಳುವರು ಅಧಮತೆಯಲಿ (ಕಭಾಗ. ೦೦-೬-೨೫) ; ಬೆಲೆ ಏರುತ್ತಿರುವ ಅಥವಾ ಬೀಳುತ್ತಿರುವ ಸೂಚನೆಯನ್ನು ಅನುಸರಿಸಿ . . . ಚಲಾವಣೆಗೆ ತರಬಹುದು (ಹಣಶ್ರ. ೦೯). ೮. ಕೂಡಲಸಂಗನ ಶರಣರೊಡನೆ ಮಱೆದು ಸರಸವಾಡಿದರೆ ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ (ಬಸವ. ೬೬೦ ಅ) ; ಬರುತ ಮೇರುವನೇಱಿ ಬೀಳಲು ಧರಣಿ ಹತ್ತಿಯ ಶಯನದಂದದಿ ವರಮುನಿಗೆ ತಾನಾಗಿ (ಸಂಭಶ. ೨೫-೨೪); ಕಾಳ ಕೂಟದ ಮಡುವಿನೊಳು ಮುಳುಗುವೆನೊ ಬೆಟ್ಟವನೇಱಿ ಬೀಳುವೆನೊ (ಪಳಶ. ೫-೨೩) : ತಾನು ಬಾವಿಗೆ ಬೀಳುವುದನ್ನು ಸಹಾ ಬಿಡದೆ ಹೇಳಿದಳು (ಸಿಂದಿನ. ೦೦೦). ೯. ಹಿತ್ತಲ ಗೋಡೆಯು ಬೀಳಲಿ (ಪುರಂದ. ೩-೨೦-೨). ೧೧. ಉಮೆಯ ನಲ್ಲನು ವಿಷವನುಂಡು ಭ್ರಮಿಸಿ ಬಿದ್ದ ಬಳಿಕ್ಕ ಕಾವಡೆ ನಿಮಗೆ ಶಕ್ಯವೆ (ಬಸವು. ೧೩-೬); ಬೀಳು ಬೀಳಭಿಮನ್ಯುವಿನ ವಧೆ ಬಾಳಲೀವುದೆ ನಿನ್ನನೆನುತುಬ್ಬಾಳುತನದಲಿ ಪಾರ್ಥ ಬೊಬ್ಬಿಡೆ (ಕುವ್ಯಾದ್ರೋ. ೦೪-೪೦) ; ಹುಟ್ಟಿದೆನು ಶ್ರೀಹಂಪೆಯಲ್ಲಿ ಬಾಳುವೆನು ಇಲ್ಲಿ ಬೀಳುವುದೂ ಇಲ್ಲಿಯೇ (ತುಂಗಭ. ೬). ೧೪. ದೂರದೂರದ ಸ್ಥಲಗಳಿಗೆ ಪತ್ರ ಕಳುಹಿಸಬೇಕಾದರೆ ಅರ್ಧ ರೂಪಾಯಿ, ಮುಕ್ಕಾಲು ರೂಪಾಯಿ, ಒಂದು ರೂಪಾಯಿಯ ತನಕ ಬೀಳುವದು (ಮುಂಬಯು. ೬. ೪-೮೭); ಈ ಸೀರೆಗೆ ಎಷ್ಟು ಬಿತ್ತು ? (ರೂಢಿ). ೧೫. ಕೆಸಱಲ್ಲಿ ಬಿದ್ದ ಪಶುವಿನಂತಾನು ದೆಸೆದೆಸೆಗೆ ಬಾಯ ಬಿಡುತ್ತಿದ್ದೇನಯ್ಯಾ (ಬಸವ. ೫೨) ; ಕಾಲನುದ್ದಂಡೋಗ್ರದಂಡಕರಾಳಬಾಧೆಗೆ ಬಿದ್ದೆಯಲ್ಲಾ (ಬಸವು. ೪೯-೦೦) ; ಬಿದ್ದನಬಲಾಜನದ ಬಲೆಯೊಳಗೊದ್ದುಕೊಳುತ ಮುನೀಂದ್ರನಂಗಜನುದ್ದುರುಟುತನಕಾರು ಸರಿ ಸುರನರ ಭುಜಂಗರಲಿ (ಕೊರಣ. ೦-೫-೫೬). ೧೬. ತನುವರಿಚ್ಯುತವೀರ್ಯ ಬೀಳಲ್ಕ ಕನಕಕಳಸದೊಳಿರಿಸಲು (ಸಂಭಶ. ೦೭-೬೯). ೨೦. ಒದಗು; ಸಂಭವಿಸು; ಬರು : ಸೂರ್ಯನು ಇಲ್ಲದಿದ್ದರೆ ಎಲ್ಲಾ ಕಡೆಯಲ್ಲಿಯೂ ಚಳಿ ಬೀಳುತ್ತಿತ್ತು (ಮುಂಬಯು. ೬. ೨-೨೪). ೨೧. ಜೋಲು ; ನೇಲು : ಬಿದ್ದ ಮೊಲೆಯ ಱವಿಕೆಯೊಳೇಱಿಸಿ ಕಟ್ಟಿ (ಕಂಪಶಿ. ೬೦-೯೩) ; ಬಲೆಯು ಹಱಿದರೆ ಹೊಲ್ಲ ಮೊಲೆಯು ಬಿದ್ದರೆ ಹೊಲ್ಲ (ಸರ್ವಜ್ಞ. ೭೦೪). ೨೨. ಸೇರು ; ಕೂಡು : ನಿನ್ನ ಪಾಲಿಗೆ ಬಿದ್ದೆನೊ ಪರಮಕೃಪಾಳೋ (ಪುರಂದ. ೨-೦೮೪ ಪಲ್ಲವಿ) ; ಉತ್ತರದಲ್ಲಿ ಆರ್ಕ್‌ಟಿಕ್ ಸಾಗರಕ್ಕ ಬೀಳುವ ನದಿಗಳು (ಭೂಗೋಳ. ೨೫). ೨೩. ಗುರಿ ತಗುಲು ; ಗುರಿ ತಾಕು.—ಮುಟ್ಟು : ಎಚ್ಚತ್ತು ಮಗುಳೆ ನೋಡಿದೊಡೆ ಮನ್ಮಥ ಬೀಳಲೆಚ್ಚನು ದೈತ್ಯೇಶನೊಡಲ ಎಚ್ಚಱು ಪಲ್ಲಟವಾಗಿರೆ ಕಣ್ದೆಱೆದೆಚ್ಚತ್ತು ರತಿಯ ನಿಟ್ಟಿಸಿದ (ಮೋಹತ. ೦೦-೦೨). ಬೀೞು$_1$ : ೧. ಇಂತಖಿಳ ದಿಶಾಚಕ್ರದೊಳ್ತಕ್ಕನೆ ತೀವಿ ಕೊರ್ವಿ ಪರ್ವಿದತುಳಧ್ವಾಂತದೊಳಲ್ಲಿಗಲ್ಲಿಗೆ ಬೀೞುತ್ತಾಂ ಮೆಲ್ಲನೆ ಬರೆವರೆ (ಉದ್ಭಟ. ೫-೦೩ ವ). ೭. ಬೀೞುವಿನಂ ಕಣ್ಣಾಳ್ಕೆ ನಿರಾಳಂಬನಮಾಗೆ ಮನದ ಮೋಹಸ್ತಂಭಂ ಬೀೞೆ . . . ನಭಸ್ಥಲದೊಳಾದುದುಳ್ಕಾಪಾತಂ (ಅಜಪು. ೬-೪೭). ವೀೞ್ : ೧೯. ನೀಂ ಗಡಿಯೊಳ್ ಭಗದಿಂ ವೀೞೆ ಪಾಂಚಾಳ ಬೀಡಂ ನಡೆಸಂದಾದ್ರೀಸಪ್ಪೋಗಗ್ಗಣಿಸೆನುತೆ ಬೆಸಂಬೇಳರ್ . . . ವೇತ್ರಹಸ್ತರು (ಎಕ. VII, ಶಿಕಮೊ. ೫-೦೫; 1218). ವೀೞ್: ೧೧. ಸ್ವಸ್ತಿಶ್ರೀ ಅಜ್ಜವರ್ಮ ಕಾಸರೂರ್ ಆಳೆ × × × ಪಣ್ಣನೂರ್ × × ಕೀರ್ತ್ತಿಣ್ಣನ್ ಗಡ್ಡಿಪುರದುಳ್ ದುಗ್ಗಮಾರಪ್ಪಡೆಯು × × × ಎಱದ ವಿಱೆವೀೞ್ದರ್ (ಎಕ. IX, ದೇವನ. ೭೪-೬; ಸು. 780). ℗ ಈ ಧಾತುವು ಅನೇಕ ಶಬ್ದಗಳ ಮುಂದೆ ಸೇರಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ :—ಉಪವಾಸ ಬೀಳು, ಏಟು ಬೀಳು, ಕಣ್ಣಿಗೆ ಬೀಳು, ಕಳ್ಳ ಬೀಳು, ಕಾಲಿಗೆ ಬೀಳು, ಕಿವಿಗೆ ಬೀಳು, ಜಾರಿ ಬೀಳು, ತಿರುಗಿ ಬೀಳು, ತೂತು ಬೀಳು, ಬೀದಿಗೆ ಬೀಳು ಇತ್ಯಾದಿ.

ಬಿದ್ದಂಬರಿ = ಬೀಳುವಂತೆ ಓಡು : ಪೋಗೆಂಬ ಬಾಯೆಂಬ ಬಿದ್ದಂಬರಿಯೆಂಬೋವೋವೊ ಕೂ ಕೂಗು . . . ಪುರದೊಳ್ಪೊಣ್ಮಿತ್ತು (ಶಾಂತಾಪು. ೪-೦೦೦) ; ಬಯಲೊಳ್ ಬೀದಿವರಿದುಂ ಬಟ್ಟೆಯೊಳ್ ಬಿದ್ದಂಬರಿದುಂ (ವರ್ಧಶು. ೬-೩೨ ವ). ಬಿದ್ದಂಬೀೞ್ = ವೇಗವಾಗಿ ಬೀಳು : ಬಿದ್ದಂಬೀೞ್ವ ಕೊಂತಕ್ಕೆ ಸುತ್ತುವ ಪಾಶಕ್ಕೆ . . . ನಾಂಟುವ ಗೇಣ್ಗೊಂಬಿನ ಮಾದುದದ್ಭುತಮಾದಶ್ವವ್ಯೂಹದುಗ್ರಾಹವಂ (ಚಂದ್ರಪು. ೦೦-೮೦). ಬಿದ್ದ ನಾಲಿಗೆ = ಸೇದಿ ಹೋದ ನಾಲಿಗೆ : ಕೋಷ್ಠ. ಮಧುಕ . . . ಕುಂಕುಮ ಇವಂ ನೀರಿಂದ ತೇದು, ನಾಲಿಗೆ ತೊಡೆಯಲು ಬಿದ್ದ ನಾಲಿಗೆ ಬಕ್ಕು (ವಿಷ್ಣುವಿ. ೬೫). ಬಿದ್ದ ಬೀಳು = ವಿಶೇಷವಾಗಿ, ನಡೆದಾಡುವ ಮಕ್ಕಳಿಗೆ ಭೇದಿಯಾಗುತ್ತಿದ್ದರೆ, ನಡೆದಾಡುವಾಗ ಕೆಟ್ಟ ಸ್ಥಳದಲ್ಲಿ ಬಿದ್ದು ಉಂಟಾದ ಖಾಯಿಲೆಯೆಂದು, ಅದರ ಪರಿಹಾರರೂಪವಾಗಿ ಮಾಡುವ ಒಂದು ಸಾಂಪ್ರದಾಯಿಕ ವಿಧಿ; ℗ ಕುಂಕುಮ ಕಲಸಿದ ಅನ್ನ ಒಂದು ಉಂಡೆ. ಅರಿಸಿನ ಕಲಸಿದ ಅನ್ನ ಒಂದು ಉಂಡೆ. ಇಜ್ಜಲು ಪುಡಿಯನ್ನು ಕಲಸಿದ ಅನ್ನ ಒಂದು ಉಂಡೆ – ಹೀಗೆ ಮೂರು ಬಗೆಯ ಅನ್ನದ ಉಂಡೆಗಳನ್ನು ಮಗುವಿಗೆ ನಿವಾಳಿಸಿ ನೆಲದಲ್ಲಿ ಅಗೆದ ಗುಳಿಯಲ್ಲಿ ಹುಗಿದಿಟ್ಟು ಮತ್ತೆ ಒಂದು ಚೊಂಬು ನೀರನ್ನು ಮಗುವಿಗೆ ನಿವಾಳಿಸಿ ಅದರ ಮೇಲೆ ಚೆಲ್ಲಿ, ಮೂರು ಸಾರಿ ಆ ಗುಳಿಯನ್ನು ದಾಟಿಸುತ್ತಾರೆ : ಮಗುವಿಗೆ ಏಕೋ ತುಂಬಾ ಭೇದಿಯಾಗುತ್ತಿದೆ. ಬಿದ ಬೀಳು ಮಾಡಿಸಬೇಕು (ರೂಢಿ). ಬಿದ್ದ ಮೋರೆ = ಅವಮಾನದಿಂದ ಜೋತು ಬಿದ್ದ ಮುಖ ; ಇಳಿ ಬಿದ್ದ ಮುಖ : ಗದ್ದಿಗೆಯ ಬಳಿ ಕೆಡವಿದರು . . . ಬಿದ್ದ ಮೋರೆಯ, ನಿದ್ದೆಗಣ್ಣಿನ ಒದ್ದೆ ಕೂದಲ ದೊಂಬನಾ (ಕುಪು. ೪೦-೨೯). ಬಿದ್ದು ಸಾಯು = (ಆಲಂ)ಬಹಳ ಇಷ್ಟಪಡು : ಸುಭಗೆಯನ್ನು ಕಂಡರೆ ಗಂಗಾಸಾನಿ ಬಿದ್ದು ಸಾಯುವಳು (ಗಂಗಾಸಾ. ೨೫). ಬೀಳಗೆಡಹಿಸು = ನೆಲಕ್ಕೆ ಬೀಳುವಂತೆ ಮಾಡು; ನೆಲಕ್ಕುರುಳಿಸು : ಸೋಲ ಮಿಗಲೊಳಸರಿವ ಬಿರುದರ ಬೀಳಗೆಡಹಿಸಿ . . . ಪಾರ್ಥನಿದಿರಾದ (ಕುವ್ಯಾಶೀ. ೬-೦೩). ಬೀಳಲಿಡು = ಕೆಳಗೆ ಕೆಡವು ; ಬೀಳಿಸು : ಎಲೆಲೆ ಕೋಡಗ ಕೊಲುತಲದೆ ಕಪಿ ಬಳೆಯು ಬೀಸಿರೋ ಬೀಳಗೆಡಹಿರೊ

ತೊಲಗದಿರಿರೋ ಕವಿಯೆನುತ . . . ತಱುಬಿದರು (ತೊರರಾ. ೩-೪-೨೦): ತುರಗಗಳನು ಬೀಳಗೆಡಹಿ ಬೆಟ್ಟಿಸ ಚಾಮ ದುರಗಲಿ ಮೆಱೆದ ಸಾಹಸವ (ಕಂಸಬಿ. ೩-೬೦). **ಬೀಳಜಡಿ**=ಬೀಳುವಂತೆ ಹೊಡೆ.–ಬಡಿ : ಹಾಲ ಹಸುಳೆಯನಿಂತು ಭಂಗಿಸಿ ಬೀಳ ಜಡಿ [ಪಾಠಾಂ. ಹೊಯ್ದು]ದಡವಿಯನು ಹೊಗಿಸುವ ಕಾಳು[ಮೂಳಿ]ಯನೇನನೆಂಬೆನು ಸುರುಚಿಯೆಂಬವಳ (ಶಿಭಾಗ. ೪-೬೯-೩೯). **ಬೀಳಬಡಿ**=ಬೀಳಜಡಿ : ಆಳ ಹೆದಱಿಸಿ ನುಡಿವ ನಾಯ್ಗಳ ಬೀಳ ಬಡಿ (ಕುವ್ಯಾದ್ರೋ. ೨-೬೪). **ಬೀಳಲಿಕ್ಕು** = ನೆಲಕ್ಕುರುಳುವಂತೆ ಬಾಣ ಪ್ರಯೋಗ ಮಾಡು : ಸೊಂಡಿಲೊಳ್ ಕೊನೆವೆತ್ತ ಮದಹಸ್ತಿಗಳ ಕಚ್ಚಿ ಕೊಂಡಿರ್ದ ಕೇಸರಿಗಳನು ತುಂಡದೊಳೆರಡು ಕಾಲ್ಗಳೊಳೆರಡಾಂತ ಭೇರುಂಡನ ಬೀಳಲಿಕ್ಕಿದನು (ಮೋಹತ. ೦೯-೩೬). **ಬೀಳಲಿಡು** = ನೆಲಕ್ಕುರುಳಿಸು : ಬೀಳಿಸು: ಕೀಲ ಕಳೆವರು ರವಿಯ ಬಂಡಿಯ ಬೀಳಲಿಡುವರು ಚಂದ್ರಬಿಂಬವ (ಸಂಭಕ. ೬-೦೮). **ಬೀಳಲಿಱು** = ಕೆಡೆಯುವಂತೆ ಹೊಡೆ,–ಚಚ್ಚು : ಭಾಳಾಕ್ಷನ ರೂಹು ನಿನಗೇಕೆನುತ ನಾರಿಕೇಳಫಲವ ಕಟ್ಟಿ ತೂಗಿ ಬೀಳಲಿಱಿದು ಕೊಲುವಂತೆ ತೆಂಗಿನ ಕಾಯ ಹೋಳ ಮಾಡಿದರು ಜೂಧಿನಲಿ (ಮೋಹತ. ೨೦-೨೨) ; ಅಗೆ ತಳಮುಟ್ಟಿ ಕೋಟೆಯ ದ್ವಾರಗಳ ಮಾಡಿ ಹೊಗುವಡ್ಡಲಾದರಿಭಟರ ಮಿಗೆ ಬೀಳಲಿಱಿ (ಕಂಸವಿ. ೦೪-೮). **ಬೀಳ ಹೊಡೆ**=ಬೀಳ ಜಡಿ : ಕಾಲ ಕೆರಹುಗಳಂ ತೆಗೆಯದಿಂತಿರ್ದಡೆಲೊ ನಿನ್ನ ಬೀಳ ಹೊಡೆವೆನು (ಬಸಪು. ೪೯-೦೦). **ಬೀಳ ಹೊಯ್**=ಬೀಳ ಜಡಿ : ಬೀಳ ಹೊಯ್ ಹೊಯ್ ಬಿಡೆಯದಲಿ (ಕುವ್ಯಾಕ. ೦೨-೦೩) ; ಪೌಂಡ್ರಕ ಸೃಗಾಲನ ಬೀಳ ಹೊಯ್ದನು (ಶಿಭಾಗ. ೩-೨-೩೬). **ಬಿಟ್ಟಿರ್, ಬಿರ್ದಿರ್, ಬಿದ್ದಿರು**=೧. ಬೀಳು ; ಕೆಡೆ : ಸರೋವರದಿಂ ಪೊಱಮಟ್ಟೊಂದೆರಡಡಿಯನಿಡುತ್ತೆ ಗತಪ್ರಾಣನಾಗಿ ಬಿಟ್ಟಿರ್ದಂ (ಶಂಶಭಾ. ೮-೩೯) ; ವರರತ್ನಂ ಪೇಲೊಳ್ ಬಿದ್ದಿರೆಯದು ಪೊಲ್ಲೆಂದು ಬಿಸುಡಲಪ್ಪುದೆ (ಧರ್ಮಾಮೃ. ೪-೦೬೦). ೨. ಇರು ; ನೆಲಸು : ಆ ಮಾರ್ಗಂಬಿಡಿದು ಬಿಟ್ಟಿರ್ದ ಸರಸಸರಸಿಜಶಾಲೂರಶಕಲಶೈವಾಲಂಗಳೊಳಡಿಯಿಡುತ್ತುಂ (ಲೀಲಾವ. ೬-೬೦ ವ) ; ಆ ಕೋಂಟೆಯೊಳಗೆ ಮೂಱುಂ ಲೋಕಂ ಬಿರ್ದಿರ್ದುದಕ್ಕುಮೆಂಬಳವಿಗೆ ಮಂದೇಕ ದ್ವಿ ತ್ರಿ ಚತುಶ್ಶಾಲಾಕೀರ್ಣಂ ಪುರವರಂ ಕರಂ ಸೊಗಯಿಸುಗುಂ (ಶಾಂತಿಪು. ೯-೦೯೬) ; ಕೂಳಿಗೆ ಬಿದ್ದಿರುವ ಬೋಳಿಗೆ ನಿನಗಿಷ್ಟು ಗಯ್ಯಾಳಿತನವೇಕೆ (ಪುರಂದ. ೩-೫೦ ಕಲ್ಲಿಶಿ). ೪. ಮರಣ ಹೊಂದಿ ಉರುಳು ; ಸತ್ತು ಬೀಳು : ತಾರಪರ್ವತದ ತಟ್ಟಲೊಳ್ ಬಿಟ್ಟಿರ್ದ ಗಂಡನಗವಂ ಪೋಲ್ತಿರ್ದ ಗೋಪತಿಯಂ ಮೃಗಾಧಿಪತಿ ನೋಡಿ (ಶಂಶಕಂ. ೦೬೦-೮) ; ವಿದ್ಯೆ ಕಲಿಸದ ತಂದೆ ಬುದ್ಧಿ ಹೇಳದ ಗುರುವು ಬಿದ್ದಿರಲು ಬಂದು ನೋಡದ ತಾಯಿಯು ಶುದ್ಧ ವೈರಿಗಳು (ಸರ್ವಜ್ಞ. ೧೫೦೨).

[ದೇ.॥ ತಮಿ. ವಿಟು, ವೀಟ್ ; ಮಲ. ವೀಟು ; ತುಳು. ಬೂಳು ; ಕೊಡ. ಬೂಳ್ ; ತೆಲು. ಬಿದ್ದು]

**ಬೀಟ್$_2$** ' ಬೀಡು$_2$' ನೋ.

**ಬೀಟ್$_3$** ' ಬೀಡು$_3$' ನೋ.

**ಬೀಟ್$_4$**, ಬೀಳು$_6$ (ನಾ). (ಬುಟ್ಟಿ ಹೆಣೆಯಲು, ಮನೆಯ ಜಂತೆಗಳನ್ನು ಜೋಡಿಸಲು ಬಳಸುವ) ಒಂದು ಬಗೆಯ ಬಳ್ಳಿ : ಲೋಕದ ಲೋಗರ್ ಕಾಡ ಬೀಟಂ ತಂದು ಊರ ಮರನೊತ್ತಿಗಿಡುವರುಂಟು (ರಾಮಾಶ್ವ. ೬೮-೨). **ಬೀಳು$_5$** : ಅಲ್ಲೇ ಇದ್ದ ಬೀಳೊಂದನ್ನು ಕಿತ್ತು ಸುಬ್ಬನ ಎರಡು ಕೈಗಳನ್ನು ಬೆನ್ನಿನ ಕಡೆಗೆ ತಿರುಗಿಸಿ ಹಿಂದುಗಡೆ ಬಲವಾಗಿ ಕಟ್ಟಿಹಾಕಿದ (ಕನಾಥ. ೧೪೫) ; ಎರಡನ್ನು ಜೋಡಿಸಲು ಹುರಿಹಗ್ಗವನ್ನೂ ಉಪಯೋಗಿಸಿರಲಿಲ್ಲ. ಕಾಡಿನಲ್ಲಿ ದೊರೆವ ಬೀಳುಗಳನ್ನೇ ಬಿಗಿದಿದ್ದರು (ಜಾಗ. ೩೯). ' ಬೀಳುಬುಟ್ಟಿ ' ಪರಾ.

[?./ ತಮಿ. ವೀಟಿ=ಒಂದು ಬಗೆಯ ಸಸ್ಯ]

**ಬೀಟಂಬಲಿ** (ನಾ). ಹಳಸಿದ ಅಂಬಲಿ : ಬೀಟಂಬಲಿಯೊಳ್ ಕಲಸಿದ ಜೋಳದ ಪುರಿಗೂಟನಿಕ್ಕಿಮೊಡಲಿಡಿಯದವೋಲ್ ಕೇಳೆಲಗೆಯಿಂದಂ ಮಱದಡೆ ಮೇಳಿಸುಗುಂ ನಿನಗೆ ಕಾಷ್ಠದಂಡದ ಘಾಯಂ (ಕುಣ್ಯಸ್ತ್ರಿ. ೯-೬).

[ಬೀಟ್$_1$ + ಅಂಬಲಿ$_1$]

**ಬೀಟಕ್ಕರ** (ನಾ). [ವ್ಯಾಕ] ಸ್ವರಾಕ್ಷರವನ್ನು ಬಿಟ್ಟಿರುವ ಅರ್ಧಾಕ್ಷರ ; ವ್ಯಂಜನಾಕ್ಷರ : " ಬೀಟಕ್ಕರಮೆಂದು ವ್ಯಂಜನಂ " (ಕಶಶಾ. ೫೬-೨೩೬) ; ವ್ಯವಹರಿಪುದೆತ್ವವಿಧಿ ಬಲ್ಲವರಿಂ ಮೇಲೆಂದು ಪೇಟ್ವ ಬೀಟಕ್ಕರಕಂ (ಕಮುದ. ೧೨೦); ಜೀವಾಕ್ಷರಗಳನ್ನು ಕೂಡಿಸದಿರುವುವು 'ನಿರ್ಜೀವಾಕ್ಷರಗಳು'. ಇವನ್ನು ಅರ್ಧಾಕ್ಷರಗಳು–ಅಥವಾ ಬೀಟಕ್ಕರಗಳು–ಎನ್ನುತ್ತಾರೆ (ಸಂಕೋಧ. ೦೫).

[ಬೀಟ್$_1$ + ಅಕ್ಕರ$_2$]

**ಬೀಟಲ್**, ಬಿಳಲ್, ಬಿಳಲು, ಬಿಟಿಲ್, ಬಿಟಿಲು, ಬೀಳಲ್, ಬೀಳಲು (ನಾ). ೧. ಆಲ ಮುಂತಾದ ಮರಗಳ ಕೊಂಬೆಗಳಿಂದ ಕೆಳಮುಖವಾಗಿ ಇಳಿಬಿದ್ದ ಬೇರು, –ಜಟೆ : "ಜಟಾ, ಶಿಫಾ – ಈ ೨ ಮರದ ಬೀಟಲ್" (ಹರಾಯು. ೩೦-೨೯); ತೇಜದ ಬೀಟಲನನುಕರಿಪುವಾದುವೊಗೆ ದುರಿವುರಿಗಳ್ (ಶಂಶಭಾ. ೧-೩೫); ಬಿಸುಗದಿರ್ಗಳೆಂತಿರ್ದ ಬೀಟಲ್ಗಳೊಳಂ (ಲೀಲಾವ. ೮-೪೦ ವ). **ಬಿಳಲ್** : ೧. 'ಬಿಳಲ್ವರಿ' ಪರಾ. **ಬಿಳಲು** : ೧. ಆಲದ ಮರನ ಬಿಳಲ ಹಿಡಿಕೊಂಡು ಶಿವಯೋಗನಿಜಸಮಾಧಿಯಲಿ ನಿಂದು (ಚಬಪು. ೬೩-೩೬) ; ಚಪ್ಪರಕ್ಕೆ ಕುಚ್ಚುಗಳನ್ನು ಕಟ್ಟಿದಂತೆ ಆಲದ ಬಿಳಲುಗಳು ತೂಗುತ್ತಿದ್ದವು (ಪಂಕಪ್ಪ. ೧೨೨). **ಬಿಟಿಲ್**: ೧. ಆಲದ ಬಿಟಿಲಂತೆ ನೆಲಕ್ಕೆಱಗದೆ (ಧರ್ಮಾಮೃ. ೫-೯೯); ಮುನೀಶಂ ಬೇರೂಱಿದ ಬಿಟಿಲ ತೆಱದೆ ಮರವೊಲಿರ್ದಂ (ರಸರ. ೨-೦೨೩). ೨. ಬಿಳಲನ್ನು ಬಿಡುವ ಆಲದ ಜಾತಿಯ ಮರ : ಬಿಳಿಯ ಸಾಸಿವೆ ಬಜೆ ಬಿಟಲಿನ ಬೀಜಮೆಂಬಿವಂ ಸರಿಗೊಂಡಂತಜಮೂತ್ರದೊಳರೆದೆಚ್ಚುಗೆ (ಲೋಕೋಪ. ೯-೦೯೬). **ಬಿಟಿಲು** : ೧. '' ಶಿಫಾ, ಜಟಾ – ಈ ೨ ಬಿಟಿಲು '' (ನಾಚಿರಾ ೦೦೫); ಮಿಂಚಿನಂಚೆವೆರಸು ಕಾರ್ಮುಗಿಲ ಬಿಟಿಲು ಕಾಲೂಱಿದಂತೆ ಮೇಲೆ ಮೆಱೆಯೆಯುಂ (ಅನಂಪು. ೨-೨೯ ವ). **ಬೀಳಲ್** : ೧. ಗಿರಿಶಿಖರಂ ಮುಖಂ ಮರದೊಳೊಪ್ಪುವ ಬೀಳಲೆ ತಜ್ಜಟಾಳಿ (ಗಿಂಕ. ೦-೫೧); ಮಿಸುಪ ಬೀಳಲ್ಗಳಂ ಡೋಳಂಗಳಂ ಮಾಡಿಯಸವಸದಿಯಾಡುತಿರ್ಪರ್ಕೆಲರ್ (ಅರಾಕ. ೫-೬-೫೨). **ಬೀಳಲು** : ೧. ಬೀಳಲೋ ಬ್ರಹ್ಮಾಂಡತರುವಿನ ನಾಳದಂಡವೋ ನಾಕನಳಿನದ . . . ಎನಲೆಸೆದುದಮಲಪದ (ಶಿಭಾಗ. ೬-೧೮-೨೫); ಈ ಬೆಟ್ಟದ ಮಯ್ಯಲ್ಲಷ್ಟೆ ಮನುಷ್ಯನ ಕೈಗೆ ಸಿಗದ ಹೊದರು, ಬೀಳಲನ್ನು ನಾನು ಕಂಡದ್ದು (ಅಪೂಶ. ೩೩). ೨. ಕಿಕ್ಕಿಱಿದ ಮಾವು ಮಾದಲನಿಕರ ಬೀಳಲಿಬ್ಬೀಡೆ (ರುಕ್ಮಾಂಗ. ೧೦-೩). ೩. (ಮನೆ ಕಟ್ಟಲು ಅಥವಾ ಬುಟ್ಟಿ ಹೆಣೆಯಲು ಉಪಯೋಗಿಸುವ) ಒಂದು ಬಗೆಯ ಬಳ್ಳಿ : ಬೀಳಲುಗಳಿಂದ ಒಂದು ಡೋಲಿಯನ್ನು ಮಾಡಿ ದೊಡ್ಡನನ್ನು ಮಲಗಿಸಿ ಕೆಲವರು ತಲೆಗೊಟ್ಟು ಹೊತ್ತು ಮುಂದೆ ನಡೆದರು (ಕಾಲೂರ. ೬ ಕಥಾಸಾರ); ತಿಮ್ಮ ಬೇಟೆಯ ನೆಪದಿಂದಲೋ, ಬೀಳಲು ತರುವ ನೆಪದಿಂದಲೋ . . . ಅಲೆದಾಡುತ್ತಲಿರುವ (ಕುಂಡಕೂ. ೨೫೮). ೪. ಬೀಳುವುದು ; ಕಳಚುವುದು : ' ಬೀಳಲುಪಲ್ಲು ' ಪರಾ.

[ಬೀಟ್$_1$ + –ಅಲ್$_2$./ ತಮಿ. ವಿಟಲ್; ತೆಲು. ಬಿಲ್ಲು, ಬಳ್ಳು]

**ಬೀಟಲ್ಗಱು$^3$** (ಕ್ರಿ). ಮರದ ಕೊಂಬೆಗಳಿಂದ ಹೊರಟ ಜಟೆಯು ಧಾರೆಯಂತೆ ಕೆಳಕ್ಕೆ ಇಳಿಬೀಳು, –ಬೆಳೆ : ನಿಮಿರ್ದೊಳ್ಪಂಬೆತ್ತು ಬೀಟಲ್ಗಱಿದ ಜಡೆಗಳಿಂ ನೀಳ್ದು ಚೆಲ್ವಾದ ಶಾಖಾಸಮುದಾಯಂ ಪತ್ತುತೋಳ್ಗಳ್ ಮಿಸುಗುವ ತನಿವಣ್ಗೊಂಪು ಭಾಳಾಕ್ಷಿಯಾಗಲ್ ಕ್ರಮದಿಂದಂ ತಾಂಡವಾಡಂಬರಮನೆಸಗುವೀಶಂಬೊಲೊಪ್ಪಿರ್ದುದು . . . ವಟತರು ಪತ್ರಪ್ರವಾಳಪ್ರಸಿದ್ಧಂ (ದಕಳು. ೧೧-೩). [ಬೀಟಲ್ + ಕಱು$^3_1$]

**ಬೀಟಿಲ್ಬಿಡು**, ಬಿಳಲುಬಿಡು, ಬೀಳಲುಬಿಡು (ಕ್ರಿ). ಮರದ ಕೊಂಬೆಗಳಿಂದ ಜಟೆಯು ಕೆಳಮುಖವಾಗಿ ಇಳಿಬೀಳು,–ಬೆಳೆ : ಈ ಗಿರಿಯ ದಕ್ಷಿಣೋತ್ತರಭಾಗಂಗಳೊಳಮುರಪುರಮೆ ಬೀಟಿಲ್ಬಿಟ್ಟಂತಾಗಿರ್ದಂಬರಚರಪುರಭಾಗಮೆ ಪರಭಾಗಮೆನಿಪುವುದ್ಯಾನಂಗಳ್ (ಶಾಂತಿಪು. ೨-೮೯). **ಬಿಳಲುಬಿಡು :** ಇಲ್ಲಿ ಒಂದು ತರಹ ಮರ ಬೆಳೆಯುತ್ತದೆ. ಇದು ಅನೇಕ ಬಿಳಲುಬಿಡುತ್ತದೆ (ಕೃಪಾಇ. I, ೫೬). **ಬೀಳಲುಬಿಡು :** ಆಲಬೀ[ಪಾಠಾಂ. ಬಿ]ಳಲು ಬಿಟ್ಟು ಜಿಡೆಗಟ್ಟಿಕೊಂಡಿರ್ದರೇನು (ಸಮಾವ. ೪-೦೨). [ಬೀಟಿಲ್ + ಬಿಡು$_1$]

**ಬೀಟಲ್ವರಿ**, ಬಿಳಲ್ವರಿ. ಬೀಳಲುವರಿ (ಕ್ರಿ). ೧. = ಬೀಟಿಲ್ಬಿಡು : ಭುಜಸಹಸ್ರಂಗಳೊಳ್ಕೈದುವಂ ಸಾಸಿರಮಂ ಕೈಕೊಂಡು ಬೀಟಲ್ವರಿವ ಗಿರಿಯೆನಲ್ಬಂದು ದೈತ್ಯೇಂದ್ರನೆಂದಂ (ಜಗಾ. ೧೬-೫೦) ; ಸೂಟಂ ಕುಡೆದೋರ್ಮಾಲೆಗೆ ಕೀಲಿಸಿದ ನಮೇರುಮಾಲೆ ಸುರತರುಣಿಯದೇನಾಳಂಗೊಂಡಳೊ ಬಯಲೊಳ್ ಬೀಟಲ್ವರಿದಂಗಭವನ ಜಂಗಮಲತೆಯಂ (ಅವಂತಿ. ೧೪-೬೪). ೨. ಮರದ ಕೊಂಬೆಯಿಂದ ಹೊರಟ ಜಟೆಯ ಹಾಗೆ ಹಬ್ಬು, –ವ್ಯಾಪಿಸು : ಪರಿವೃದ್ಧಿವೆತ್ತು ಬೀಟಲ್ವರಿದುದುರಸ್ಸ್ಥಳದೊಳೀ ಮುನೀಂದ್ರನ ಹೃದಯಸ್ಫುರದಮಳಸತ್ವಮೆನೆ ಮುನಿವರನ್ಯೊಳ್ ಯಜ್ಞೋಪವೀತತತಿ ಸೊಗಯಿಸುಗುಂ (ಜಗಾ. ೧೧-೯); ಅಗಲದೆ ನೆಲಸಿದ ಲಕ್ಷ್ಮಿಯ ನಗೆಗಣ್ಗಳ ಬೆಳಗು ಬೀಟಲ್ವರಿದತ್ತಗಲ್ಪುರದೊಳೆಂಬ ತೆಱದಿಂ ಸೊಗಯಿಸಿದುದು ವಿಮಳತರಳತಾರಾಹಾರಂ (ಚಂದ್ರಪ್ರ. ೬-೫೯). **ಬಿಳಲ್ವರಿ :** ೧. ತರುಕುಳಂ ಶಿವನ ರೂಪಂ ಬಯಸಿ ಬೆಳೆದವೊಲ್ ಸಿರಾಕುಳಂ ಹರನ ಜಿಡೆಯಂ ಕಂಡು ಬಿಳಲ್ವರಿದವಿಂತಿಲ್ಲಿ[ಪಾಠಾಂ. ಬಿಳಲು ವರಿದವಿಲ್ಲಿ] (ಶಂಬರ. ೯-೨೬). **ಬೀಳಲುವರಿ :** ೨. ನರ ಉಬ್ಬೆ ಮೆಯ್ಯೊಳಗೆ ಬೀಳಲುವರಿಯಲಂತೆ [ಪಾಠಾಂ. ಬೀಳಲ್ವರಿಯುತಂತೆ] (ಚಂದೋರ. ಹ. ೫೦೫-೦೨). [ಬೀಟಿಲ್ + ವರಿ$_2$]

**ಬೀಟಿವೃತ್ತಿ**, ಬಿಳವೃತ್ತಿ, ಬಿಟಿವೃತ್ತಿ, ಬೀಳವೃತ್ತಿ (ನಾ). = ಬೀಳಾನುವೃತ್ತಿ : ಮುನ್ನಿಂ ಕನ್ನರದೇವನಾಳ್ದ × × × ಬಾಪಂ ಬೀಟಿವೃತ್ತಿಯಿಂದಾಳುತ್ತಮಿರೆ (ಸೌಇಇ. IX-i, ೯೩-೨೨; 1038); ಒಂದು ವಂಶದ ರಾಜನ ಆಶ್ರಯದಲ್ಲಿ ಅದೇ ವಂಶದ ಇತರರು ಅಧೀನರಾಗಿ ಆಳುತ್ತಿದ್ದ ವಿಷಯವನ್ನು ಬೀಟಿವೃತ್ತಿಯು ಸೂಚಿಸಬಹುದು. 'ಅಚಲವೃತ್ತಿ', 'ಅಣುಗವೃತ್ತಿ' ಮತ್ತು 'ಬೀಟಿವೃತ್ತಿ' ಗಳಲ್ಲಿ ಯಾವುವು ಸಮಾನಾರ್ಥಕ ಪದಗಳೋ, ಅವುಗಳ ನಿರ್ದಿಷ್ಟವಾದ ಅರ್ಥವೇನೋ ಸ್ಪಷ್ಟವಾಗಿ ಗೊತ್ತಾಗುವುದಿಲ್ಲ (ಕಶಾಅ. ೩೪೦). **ಬಿಳವೃತ್ತಿ :** ಸಾಸ್ತ್ಯಳಿಗೆಸಾಸಿರಮುಮಂ ಬಿಳವೃತ್ತಿಯಿಂ ತ್ರಿಭೋಗಾಭ್ಯಂತರಸಿದ್ಧಿಯಿನ್ದ ಮಾಳುತಮಿರೆ (ಎಕ. VII, ಶಿಕಾ. ೩೦-೧೧; 1031). P ಇದು 'ಬೀಳವೃತ್ತಿ' ಎಂಬುದರ ಅಪಲಿಖಿತವಿರಬಹುದು. **ಬಿಟಿವೃತ್ತಿ :** ಆರಂಭಲ್ಲವನ್ ಇದುಳಿಯ ಬಿಟಿವೃತ್ತಿ ಆಳುತ್ತಿರೆ (ಎಕ. XIV; ನಾಗಮಂ. ೦೩೬-೬; 900); ಶ್ರೀಮತ್ ಪನ್ನಯ್ಯಂ ಕದಂಬಳಿಗೆಸಾಯಿರಮುಮಂ . . . ಬಿಟಿವೃತ್ತಿಯೊಳಾಳುತ್ತಿರೆ (ಎಕ. XI, ಚಿತ್ರದು. ೫೦-೧೧; 908). P ಇದು 'ಬೀಟಿವೃತ್ತಿ'ಯೆಂಬುದರ ಅಪಲಿಖಿತವಿರಬಹುದು. **ಬೀಳವೃತ್ತಿ :** ಶ್ರೀಮತ್ಪಡವಳ್ಳ ತೈಲಪಯ್ಯಂ ಮಾಸವಾಡಿ ನೂಱನಾಲ್ವತ್ತುಮಂ ಬೀಳವೃತ್ತಿಯಿನಾಳುತ್ತುಮಿರೆ (ಸೌಇಇ. XI-i, ೫೨-೩೬; 1007). 'ಬೀಳಂವೃತ್ತಿ' ಪಠಾ. [< ಬೀಳಾನುವೃತ್ತಿ]

**ಬೀಟಿಸು**, ಬೀಳಿಸು (ಕ್ರಿ). ೧. ಕೆಡೆಯುವಂತೆ ಮಾಡು ; ಕೆಡವು ; ಉರುಳಿಸು : ಮದನನ ಪೂಜೆಗೆಯ್ದುವಳ ನಲ್ಲನನಾಗಿಸುವಂತೆ ಮಾಡುವೆಂ . . . ಸಮಾನಮುಹ ನೋವನೆ ಕಾಣಿಸುತ್ತೀಕೆಗೊಪ್ಪುವಾ ಪದದೊಳೆ ತಂದು ಬೀಟಿಸುವೆನಾಸಮಳೀಟಿಗೆಯ ಬಲ್ಲೆನಾವಗಂ (ಮಲ್ಲಿಕಾ. ೦೫-೦೬೦). **ಬೀಳಿಸು :** ೧. ದುರಾತ್ಮಕರೆನ್ನನೆಳದೊಯ್ದು ಬೀಳಿಸುವರಗ್ನಿಯಲಿ (ಕುಮಾರ. ೩-೯೯) ; ಆನೆಯನ್ನು ಕಷ್ಟಕ್ಕೆ ಬೀಳಿಸಬೇಕೆಂದು ಹಠ ತೊಟ್ಟುಕೊಂಡಿದ್ದ (ಕಂಗಾಳ್. ೨೪೪). ೨. ಸುರಿಸು ; ಕರೆ : ದೇವಿಯರು ಕೆರಳ್ದ ಕರಾಳವಚನವನದಱೆನ್ನನು ಬೀಳುಕೊಡೆ ಬರವಾಯ್ತೆನುತ ಬೀಳಿಸಿದ ನಶ್ರುಗಳ (ಕೂರಂ. ೩-೧೧-೫). ೩. ಅನುಭವಿಸುವಂತೆ ಮಾಡು : ಕುಮಾರನು ಚಿಕ್ಕವನು. ತಾಯಿ-ತಂದೆಗಳನ್ನು ಸರ್ವಥಾ ಕ್ಲೇಶಬೀಳಿಸುತ್ತಾನೆ (ಉತ್ತ್ಸ. ೪-೦೫). ೪. ನಾಶಮಾಡು : ಚೋಳನ ದರ್ಪಮಂ ಮುಱಿಯಲಾಂಧ್ರನನಂಡಲೆಯಲ್ಕಳಿಂಗನಂ ಬೀಳಿಸಲ್ . . . ಪಾಣ್ಡ್ಯಭೂಪಾಳನೆ ಸಾಲ್ಗುಂ (ಎಕ. XI, ದಾವಣ. ೩-೦೯ ; 1121). ೫. ಸಾಯಿಸು : ಪುರುದಂಣ್ಡ[ಲ್ಗೊಲ್ಲೆ]ಯರ ಮಗಳ್ ಕಾಳಬ್ಬೆ × × ×ಯ್ದು ಬೀಳಿಸಿ ಕಲ್ಲು ನಿಱಿಸಿದೋರ್ (ಸೌಇಇ. XI-1, ೨೪-೦೪ ; 897). [ಬೀಟು$_1$ + –ಇಸು$_3$]

**ಬೀಟು$_1$** 'ಬೀಟ್$_1$' ನೋ.

**ಬೀಟು$_2$**, ಬೀಳು$_2$ (ನಾ). ೧. ಬೀಳುವಿಕೆ ; ಪತನ : "ಪತನ ಬಿಲಕ್ಷೇತ್ರದೊಳ್ ಬೀಟು" (ಶಬ್ದಮಂ. ೧೦೬). **ಬೀಳು$_2$ :** ೨. ಬಿದ್ದಿರುವಂಥದು : ಕವನಗಳ್, ಬಳಕಾಗದದ ಮೇಲೆ ಬರಿ ಮಸಿಯ ಬೀಳಲ್ತೆ ? (ಅಗ್ನಿಹಂ. ೫೯). ೩. (ಪ್ರಾಣಿಗಳ) ಹೆಣ ; ಶವ : ಅಲ್ಲಿ ಗುರ್ರು ಪೂಜಿಸಿದ ಆ ಸಮಾಧಿಗೆ ಸಲ್ಲುತಿಹ ಎಲ್ಲ ಮರ್ಯಾದೆ ಇಲ್ಲಿ ಕತ್ತೆಯ ಬೀಳಿಗಾಗುತಿದೆ (ನವಿಲು. ೨-೩೦) ; ಹುಲಿಯೋ ಕಿರುಬನೋ ಒಂದೆಡೆಯಲ್ಲಿ ಬೀಳ ತಿನ್ನುತಾ, ಇನ್ನೊಂದೆಡೆಯಲ್ಲಿ ಗರ್ಜಿಸುತಾ ಮಲಗಿರುವವು (ಕಥಾಬಿ. ೩).

ಬೀಳಿಂ ಮುನ್ನಿಱಿವಂ = ತಾನು ಸಾಯುವ ಮುಂದೆ ಶತ್ರುಗಳನ್ನು ಇರಿಯುವವನು ; ಒಂದು ಬಿರುದು : ಬೀಳಿಂ ಮುಂನ್ನಿಱಿವಂ ಮನಗಜ ಸೂಱೆಕಾಱ [ಸು]ಜನಾಧಾರಂ . . . ಶ್ರೀಮತಂ [ಗೊ]ಲ್ಲಿಮಯ್ಯಂ (ಕಇ. II, ೬-೦೯; 1030). **ಬೀಳೇಳು** = ಇಳಿತ ಮತ್ತು ಏರುವಿಕೆ; ಉಬ್ಬರವಿಳಿತ ; ಏಳುಬೀಳು : ಉಸಿರ ಬೀಳೇಳಿನಲಿ ಜೊಂಕೆ ಪ್ರಾಣಗತಿ (ಜಾಹ್ನವಿ. ೩-೦೨) ; ಬೀಳೇಳುಗಳಿಗನುವೊ ಗೆಯ್ಮೆಯೋ ದೂಸರೇಂ ಪೇಳ ಮನೆಗೆಯ್ಮೆಯುಂ ಪೊಲ ತೂಗುತೊರೆಗುಂ (ಕಾವೇರಿ. ೫೮-೯೪). [ < ಬೀಟ್$_1$ ]

**ಬೀಟುಂದಾಣ** 'ಬೀಡುಂದಾಣ' ನೋ.

**ಬೀಟುಡೆ**, ಬೀಳುಡೆ (ನಾ). (ಇನ್ನೊಬ್ಬರು ಉಟ್ಟು) ಕಳಚಿದ ವಸ್ತ್ರ ; ಬೀಳುಡಿಗೆ: ಪೆಱರ್ ವಿಂದ ನೀರ್ . . . ಬೀಟುಡೆ ಬಾಯ ತಂಬುಲ ವಿಮಸ್ಪೃಶ್ಯಂಗಳೇನಲ್ಲವೇ (ಶಂಕರಪ್ರಾ. ೯-೦೬೦); ಸೀರೆಗಳಂ ಕಂಸದೇವನುಡುಗುಮೆಂದಾತನ ಬೀಟುಡೆಯುವರುಮುಡುಗುಮಲ್ಲದೆಡೆಯ ಕಡೆಯ ಬಡವರುಡಬಾರದೆನೆ (ಅರ್ಜನೀ. ೬-೭೬ ಪ); ತಳಿರ್ಗಳ್ ಬೀಟುಡೆ ಹಸ್ತಪಾವತಳರಾಗಶ್ರೀಗೆ ಕಣ್ಗೊಳ್ವ ಕಣ್ಗಳ ನಿರ್ಮಾಲ್ಯದ ಮಾಲೆ ಕೈರವವನಂ . . . ಎನೆ ಬಣ್ಣಿಸಲ್ಪವಣೆ ರೂಪು ಭೂಪನರ್ಧಾಂಗಿಯಾ (ಅವಂತಿ. ೨-೦೬). **ಬೀಳುಡೆ :** ಬೀಳುಡೆ ಸೀರೆ ಮೈಲಿಗೆಯೊ ಪೇಳೀ ಪಾಣ್ಡ್ಯಭೂಪಾಳನ (ಎಕ. XI, ದಾವಣ. ೦೬೮-೦೫; 1148?); ಕಣ್ಣಪ್ಪನಂ ತಂದು ಗಣಪದವಿಯಂ ಕೊಟ್ಟು ಬಣ್ಣಬಣ್ಣಿಗೆಯ ಪೊಸ ಬೀಳುಡೆಗಳಂ ಕೊಟ್ಟು (ಕಣ್ಣರ. ದೀ. ೦೫೦-೦೪); ದೇವಯಿನಗೀ ಬೀಳುಡೆಯನೀವುದು (ಕದ್ಯರಾ. ೪-೬೩); ಆತನ ಬಾಯ ತಂಬುಲ ಬೀಳುಡೆಯ ಬಲದಿಂದ ಬದುಕುವವು (ಕುಮಾರ. ೧೧-೫೫). [ಬೀಟ್$_1$ + ಉಡೆ$_2$]

**ಬೀಟುಮನೆ**, ಬೀಳ್ಮನೆ (ನಾ). ಹೀನಸ್ಥಿತಿಗೆ ಇಳಿದಿರುವ ಮನೆ; ನಾಶವಾದ ಮನೆ : ಕಿಱುದೋಟಂ ಕಡೆವಳ್ಳಿ ಬೀಟುಮನೆ . . . ಬಱಿಗೈ ಸುಱೀದಂತೆಲ್ಲೆ (ಸೋಮೇಶ. ೦೬). **ಬೀಳ್ಮನೆ :** ಬಾಳಕನ ನಗೆನುಡಿಯು ಮಾಳಿಗೆಯು ಮುಱಿವಂತೆ ಬಾಳು ಉಳ್ಳವರ ಬಱುನುಡಿಯು ಬೀಳ್ಮನೆಯು ಏಳಿಗಾದಂತೆ (ಸರ್ವಜ್ಞ. ೦೩೪೯). [ಬೀಟು$_1$ (< ಬೀಟ್$_1$) + ಮನೆ]

**ಬೀಟ್ಕೆ, ಬೀಳ್ಕೆ** (ನಾ). ೧. ಬೀಳುವಿಕೆ ; ಪತನ : ಬಿಟ್ಟಿಪರ್ ಬಲ್ಲ ನೆಜ಼ಿ ಜಾಣರುವನ್ ನಾಣ್‌ಗೆಟ್ಟು ಬೀಟ್ಕೆಯಂನ್ (ಅಂತಿಗೂ. ೯೬–೯೬೨). **ಬೀಳ್ಕೆ**: ೧. "ಪತ್ಯಂ, ಪಾತ್ಯಂ, ಪತನಂ, ಪತನೀಯಂ, ಈ ೪ ಬೀಳ್ಕೆ" (ಕಾಶಕ್. ೦೯೮). ೨. (ಮೇಲಿನಿಂದ ಕೆಳಕ್ಕೆ) ಕೆಡೆದ ವಸ್ತು ; ಬಿದ್ದ ಪದಾರ್ಥ : ನೋಳ್ಪೆವೆಲ್ಲಿರ್ಪುದಾ ಬೀಳ್ಕೆ ! (ಶ್ರೀರಾಮ. ೨೯೯–೩೬೨).

[ಬೀಟ್$_1$ + –ಕೆ]

**ಬೀಟ್ಕೊಳ್** 'ಬೀಡುಗೊಳ್' ನೋ.

**ಬೀಟ್ಕೊಳಿಸು, ಬೀಳ್ಕೊಳಿಸು** (ಕ್ರಿ). ಹೋಗಲು ಅನುವು ಮಾಡು ; ಹೊರಡಲು ನಿರೂಪ ಕೊಡು: ಜನಕಂ ಬೀಟ್ಕೊಳಿಸಿದನೆನ್ನನುಜನನೊಡಗೊಂಡು ಬಂದಪೆಂ ಜೆಚ್ಚರದಿಂ (ಕಾದಂಬ. ೯೮೩); ದಿವಿಜರಾಜನಂ ಯಥಾಯೋಗ್ಯದಾನಸನ್ಮಾನದಿಂ ಬೀಟ್ಕೊಳಿಸಿ ಕಟಿಪಿ (ಜಗವ. ೧೧–೬೯ ವ). **ಬೀಳ್ಕೊಳಿಸು** : ಪೇರೋಲಗಂಗೊಟ್ಟು ಬಳಿಕೆಲ್ಲರಂ ಬೀಳ್ಕೊಳಿಸಿ ಪರಿಮಿತಂಗೆಯ್ದು (ಶಬ್ದ.ರಾ.೪–೨೨) ; ಅಲಘುವಿರಹವಿಮೋಹಜಲಪರಿಲುಳಿತ ನಯನರನಪ್ಪಿ ಹಳಿ ಬೀಳ್ಕೊಳಿಸಿ ಮರಳಿದು ಬಂದು ಹೊಕ್ಕನು ದ್ವಾರಕಾಪುರವ (ಜಿಶಾಗ. ೧೧–೩೬–೬೨).

[ಬೀಟ್ಕೊಳ್ (< ಬೀಡುಗೊಳ್) + –ಇಸು$_3$]

**ಬೀಟ್ಗುಂಡು, ಬೀಳುಗುಂಡು** (ನಾ). ಬಂದರಿನಲ್ಲಿ ಹಡಗನ್ನು ನಿಲ್ಲಿಸಲು ಹಡಗಿನ ಪಕ್ಕದಲ್ಲಿ ಇಳಿಬಿಡುವ ಭಾರವಾದ ಕಬ್ಬಿಣದ ಸಾಧನ, –ಗಂಡಂ ; ಲಂಗರಂ ; "ಹಡಗು ನಿಲ್ಲಿಸುವುದಕ್ಕಾಗಿ ನೀರಿನಲ್ಲಿ ಇಳಿಬಿಟ್ಟ ಗುಂಡು" (ಪ್ರಭಣ್ಣ) : ಅಂತು ಬೀಟ್ಗುಂಡಿಕ್ಕಿದ [ಪಾಠಾಂ. ಬಿಂಗುಂಡಿಕ್ಕಿದ, ಬಿಣ್ಗುಂಡಿಕ್ಕಿದ] ಚಿಹಿತ್ರದಂತೆ ಅಲ್ಲಿಂ ತಳರದೆ ನಿಂದ ತನ್ನ ರಥಮಂ ಕಂಡು (ಆದಿಪು. ೧೨–೬೩ ವ). **ಬೀಳುಗುಂಡು** : ಅವರು ಮಲೆಬಾರ್ ತೀರಕ್ಕೆ ಬಂದು ಸೇರಿ ಬೀಳುಗುಂಡನ್ನು ಇಳಿಸಿ ತಂಗಿದ ರಾತ್ರಿಯೇ, ಕಡಲ್ಗಳ್ಳರು ಬಂದು ಮೇಲೆ ಬಿದ್ದರು (ಭಾರಚ. ೦೦೬). 'ಬಿಣ್ಗುಂಡು' ಪರಾ. [ಬೀಟ್$_1$ + ಗುಂಡು]

**ಬೀಟ್ಗೊಂಬು** (ನಾ). ಜೋಲುತ್ತಿರುವ ಕೊಂಬೆ : ಕುಬ್ಜಾವೃಕ್ಷದ ಬೀಟ್ಗೊಂಬಿನ ಪಸುರೆಲೆಯ ಕುಸುಂಕುಡಿಗಳಗೆ ರಸಾಯನದ ಕುಪ್ಪಿಗೆಯಂತೆ ತೋರ್ಪ ತನಿವಣ್ಣಿಂ ತಿಳಿಯಲೊಡನೆ (ಅರ್ಜುನ. ೩–೮೦ ವ).

[ಬೀಟ್$_1$ + ಕೊಂಬು$_1$]

**ಬೀಟ್ಜೊಂಪ** (ನಾ). ಇಳಿಬಿದ್ದಿರುವ ಗೊಂಚಲು : ನಾನಾ ಲತಾಮಂಟಪದೊಳೆಸೆವ ಬೀಟ್ಜೊಂಪದೊಳ್ . . . ವಿನಾಸುಮಂ ಕಟ್ಟುವನಜಿಸುಪ ಪೋರ್ ಕೂಡೆ ನೋಡುತ್ತಮಿರ್ದಂ (ಕಾದಂಬ. ೪೪೯).

[ಬೀಟ್$_1$ + ಜೊಂಪ$_1$]

**ಬೀಟ್ತರ್** (ಕ್ರಿ). ೧. (ಮೇಲಿನಿಂದ ಕೆಳಕ್ಕೆ) ಕೆಡೆ ; ಪತನ ಹೊಂದು : ಮೊದಲಿಂ ಕಿಟ್ಟು ಕುಳಾಚಳಪ್ರತತಿಗಳ್ ಪ್ರೋದ್ಯದ್ಘಾತವಾತದಿನಾಕಾಶಮನೆಯ್ದೆ ತೂಳ್ದು ಕವಿತಂದಂಭೋಧಿಯೊಳ್ ಸೂಟು ಸೂಟದೆ ಬೀಟ್ತಂದಾವು (ಶಂಕರಾ. ೦೩–೯೩); ಪುಷ್ಪಕದಿಂ ಧರಣಿಗೆ ಬೀಟ್ತರ್ಪದನಾ ಹರಿಣೇಕ್ಷಣೆ ಸೀತೆ ಕಂಡಳೆರಡಂ ಕನಸಂ (ಕಂರಾಮಾ. ೦೫–೬೩) ; ನೀಡಿದುಪ್ಪರಪೊಯ್ಲಿಂ ಪೊಡವಿಗೆ ಬೀಟ್ತರೆ ತಲೆ (ಕಬ್ಬಿಗ. ೨೬೩). ೨. ಉರುಳು ; ಬೀಳು : ಕುಳಶೃಳದಂತೆ ಕರಿಗಳ್ ಬೀಟ್ತಂಮುಪುಗ್ರಾಜಿಯೊಳ್ (ಕಂಶರಾ. ೦೦–೬೬) : ಮೂರ್ಛೆವೋಗಿ ಬೀಟ್ತರಲಿರದೆತ್ತಿಕೊಂಡಿಟ್ಟಿದರ್ ಧರಣೀಪತಿಯಂ ತುರಂಗದಿಂ (ಕಾದಂಬ. ೯೩೬) ; ತೋರವೆಣಗಳ್ ಬೀಟ್ತಂದುಪುಗ್ರಾಜಿಯೊಳ್ (ಕಂರಾಮಾ. ೦೩–೩೮). ೩. (ಕಿಡಿ ಮುಂತಾದುವು) ಉದುರು : ಕೇಸರಿ ಸೂಸೆ ತನ್ನ ಮೊಗದಿಂ ಕಿಡಿ ಬೀಟ್ತರೆ ತನ್ನ ಕಣ್ಗಳಿಂ (ಕಂರಾಮಾ. ೦೦–೨೦೬). ೪. ಕಳಚಿ ಬೀಳು; ನುಣುಚಿಕೊಂಡು ಬೀಳು; ಜಾರು: ಮುಂಗಯ್ಯಿಂ ಒಡಿದೊತ್ತಿ ಕೈಯಿಂ ಕರವಾಳ್ ಬೀಟ್ತಿರ್ಪಿನಂ . . . ಪೊಯ್ದು (ಕಂರಾಮಾ. ೮–೨೮). ೫. ಧಾರೆಯಾಗು ; ಸುರಿ : ಅನ್ನ ಬಸ್ದು ಮೂಡಾಯಿನ್ನೀ ಬ್ರಿಸ್ತ ನೀರಿಟ್ಟಿವೆ (ವ್ಯಾಕರ. ೦೯೩೬, ೩೩–೨೬ ; ಸು. ೬೬೦ ?) ; ಈಶಾನಂಗೆ ಸೀಮೆ ನೆಡುಪೊಜಡಿಯಾ ಪುಣುಸೆ ಪುಗರಿಯಾ ಎಡೆಯೆ ಬೀಟ್ಬನ್ದ ಪಳ್ಳಮೆ ಅನ್ತೆ ಬಸ್ದು ಬಾಳಪಡಿಯೊಳ್ಕೊಡುಗು (ಎಕ. IX(೩), ಬೆಂಗಳೂ. ೦೩೦–೯೯; 828). [ಬೀಟ್$_1$ + ತರ್]

**ಬೀಟ್ದಾಣ** 'ಬೀಡುಂದಾಣ' ನೋ.

**ಬೀಟ್ದೆಸೆ, ಬೀಳ್ದೆಸೆ** (ನಾ). ಹೀನವಾದ ಸ್ಥಿತಿ ; ಕೀಳಾದ ಸ್ಥಿತಿ : ಸುರನಕ್ಕೆ ನರನಕ್ಕೆ ಅಲ್ಲಿ ತಾನಾರುಂ ನನ್ನದೀ ಬೀಟ್ದೆಸೆಗೆ ಪಿರ್ಗುಪಿರಲಿಲ್ಲಂ (ಶಿವ್ಯ ಶ್ರ. ೦೦–೦೯೪). **ಬೀಳ್ದೆಸೆ** : ಮೇಳದವರೊಂದಿಗೆ ಹೇಳಿಕೊಳ್ಳುವುದರಲ್ಲಿ . . . ಮಾನವ್ಯದ ಬೀಳ್ದೆಸೆಯನ್ನು ಕುರಿತು ಅಲ್ಲಗಳೆಯುವುದು ಉದ್ದೇಶವಲ್ಲ (ಶಿವ್ಯಶ್ರ. XLii. ಪಾಠಕರ ಸಹುಕ್ಕಿ).

[ಬೀಟ್$_3$ (< ಬೀಡು$_3$) + ದೆಸೆ$_1$ (< ದಸೆ)]

**ಬೀಟ್ನೆಲ, ಬೀಳ್ನೆಲ** (ನಾ). ಸಾಗುವಳಿ ಮಾಡದ ಭೂಮಿ ; ಹಾಳುಗೆಡವಿದ ನೆಲ ; ಬೀಡುಭೂಮಿ : ತುಱುಪಟ್ಟಿಯು ದಾರಿಯು ಬೀಟ್ನೆಲನದೇನುಮಿಲ್ಲಾ ನಾಡೊಳ್ (ಕಂಶ್ರಸು. ೪–೮). **ಬೀಳ್ನೆಲ** : ಕೈಕಾಲ್ಗಳೊಳ್ ಪಡುಕಮುಂ ನಿತ್ರಾಣಮುಂ ಪೆರ್ಚಿ ಬೀಳ್ನೆಲದ ಮುಮ್ಮುಳಿಗೆ ದಿಂಡುರುಳೆ ಕೆಡೆಪಿದುವು (ಕಂಶಶ. ೨೦–೬). [ಬೀಟ್$_3$ (< ಬೀಡು$_3$) + ನೆಲ]

**ಬೀಟ್ಪಡಿಸು** (ಕ್ರಿ). ಹಾಳುಮಾಡು ; ಕೆಡಿಸು : ಮುಂತಣೆರವಿನೊಳ್ಪೋಸಪೋದೆಂ ; ಪಿಂತಣೋಜೆಯುಂ ಬೀಟ್ಪಡಿಸಿದೆಂ (ಶಕವಂ. ೫೬–೦೦).

[ಬೀಟ್$_3$ (< ಬೀಡು$_3$) + ಪಡಿಸು]

**ಬುಂಡೆ** 'ಬುರುಡೆ' ನೋ.

**ಬುಂದು, ಬೂಂದು** (ನಾ). ಕಾಫಿಯ ಗಿಡ ಮತ್ತು ಅದರ ಬೀಜ : ನೀಲಗಿರಿಯಲ್ಲಿ ಹುಟ್ಟುವ ಬುಂದು . . . ಚಹಾ ಇವೆರಡೂ ವ್ಯಾಪಾರದಲ್ಲಿ ಬಹಳ ಪ್ರಸಿದ್ಧವಾದವು (ಮುಂಬಯು. ೪–೦೩೯) ; ಬುಂದು(ಕಾಫಿ) ಯಾಲಕ್ಕಿ ಕೆಲವು ಕಡೆ ಸ್ವಲ್ಪ ಸ್ವಲ್ಪ ಬೆಳೆಯುವದುಂಟು (ಮುಂಬಯಿ. ೦೩೦). **ಬೂಂದು** : ಬೂಂದಿನ ಗಿಡಗಳು ತೋಟಗಳಲ್ಲಿ ಯಾವ ಭೂಮಿಗಳಲ್ಲಿ ಯಾದರೂ ಬೆಳೆಯುತ್ತವೆ (ಕೃಷಿಶ್ರ. ೦೯೯) ; **ಕಾಫಿಗಿಡ, ಕಾಫಿಬೀಜ** ; ಬೂಂದುಬೀಜ (coffee. ೩೦೪೩). [← ಮರಾ. ಬುಂದ್, ಬೂದ್ ; ಅರ. ಬುನ್. / ಮಲ. ಬುನ್; ತುಳು. ಬುನ್ನು, ಬೂಣು].

**ಬುಂಭುಕ, ಭುಂಭುಕ** (ನಾ). ೧. ಕುಚ್ಚು ಮತ್ತು ಅದರಿಂದ ಮಾಡುವ ಅಲಂಕಾರ : ಬಳಸಿದ ಜೆಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಂಗಲ್ಗಳ ಸುತ್ತುಗೊಂಡ ಸುರಿಗೆಯ ಮುತ್ತಿನ ಬುಂಭುಕಂಗಳ [ಪಾಠಾಂ. ಜುಂಗುಕಂಗಳ, ಲಂಬುಂಗಳ] ನಡುವೆ (ಆದಿಪು. ೬–೦೫ ವ) ; ಆ ನೆರೆಯ ಚೌಪಳಿಗೆಗಳೊಳನೇಕ ಪ್ರಾಸಾದದ ಮೇಲೆ . . . ಪೊನ್ನ ಮಾಂಗಾಯ ಗೊಂಚಲ್ಗಳುಮಂ ಮುತ್ತಿನ ಬುಂಭುಕಂಗಳುಮನೆಟಿಲೆ ಕಟ್ಟಿಸಿ (ಶಾಂತಿಪು. ೩–೪೦ ವ) ; ಅನ್ನೆಗಂ ಮುನ್ನಮೆ ಸಮೆದ ವಿವಾಹಗೇಹಂ . . . ಮುತ್ತಿನ ಲಂಬಣದ ನೀಲದ ಬುಂಭುಕದ ಮೇಳಾಪಕಮೆಂಬ ಲೋಲಲೋಚನವಿಕಾಸವಿಲಾಸದೊಳಂ . . . ನಲಿದು ನಾಟಕಮಾಡುವಂತಿರ್ದುದು (ಅನಂತ. ೬–೪೦ ವ). **ಭುಂಭುಕ** : ೨. ಅತಿಶಯವಾದುದು; ಅದ್ಭುತವಾದುದು : ಅತಿ ಭುಂಭುಕಮೆನಿಸಿದ ಕೋಪ್ಪ ಕೋಟಿವಿಧದಿಂದೆಸೆಗುಂ (ಎಕ. XIII, ೩೩೦–೩೮; 927); ಭುಜಬಳ ಶಾನ್ತರನೃಪತಿಯ ಭುಜಬಳದಳವುಂ . . . ನಿಜವಿಜಯಮುಮಿಾ ಲೋಕದೊಳಗೆ ಭುಂಭುಕಮೆನಿಕುಂ (ಎಕ. VIII. ನಗರ. ೩೫–೩೩ ; 1077) ; ಆ ಬೇಗನಪಟ್ಟಂಭು ಜಗದ್ಭುಂಭುಕವೆನೆ ರಿಪುವಂ ಚಕ್ರದಿಂ ಕೃಷ್ಣನಿಟ್ಟಂ (ಜಗವ. ೦೮–೬೩). ೩. ಅದ್ಭುತ ವ್ಯಕ್ತಿ : ಕೀರ್ತ್ಯಂಗನೆ ಶುಭ್ರಚ್ಛಾಯೆಯಾವಳ್ . . . ವಂಜ್ಜನವಂ ಪ್ಯೋವಾಪ[ಗಾವಾರಿಯೊ]ಳಿನೆ ಪಿರಿದಂ

ಭುಂಭುಕಂ ಸಾಹಸಾಂಕಂ (ಗದಾಯು. ೦೦-೦೦) ; ಸ[ನ್ನೂರು]ಗುರ ಮೂನೊರ್ಬ್ಬರ್ಜಗದ್ವಂಭುಕರ್ (ಶಾಸನ. XI-ii. ೦೫೦-೦೩; 1094); ಸಕಳೋರ್ವೀಸಸ್ತುತಮಪ್ಪ ಧರ್ಮವನಿದಂ ಕಾದಂ ಚಿರೈಶ್ವರ್ಯಭುಂಭುಕ ನಕ್ಕಂ (ಎಕ. VII. ಶಿಮೊ. ೯೬-೩೦ ; 1112). (ಗು). ೪. ಅದ್ಭುತ ವಾದ ; ಆಶ್ಚರ್ಯಕರವಾದ : ಭಾಸುರಯಂಶಶ್ರೀಭಾಸಿಭೂಭೂತ ಭುಂಭುಕವಾಗ್ಮಿಪ್ರವರಂ (ಸುಕುಮಾ. ೨-೩೯).

[ದೇ. ?./ ಪ್ರಾ. ಬುಂಬುಅ = ಗುಂಫ, ಸಮೂಹ]

**ಬುಕಣಿ,** ಬುಕಣೆ (ನಾ). ಪುಡಿ; ಚೂರ್ಣ: ಕನಡಿ ಒಡದಿಲ್ಲಾ, ಬುಕಣಿ ಆಗಿಲ್ಲಾ (ಐತಕ. II. ೩೦). **ಬುಕಣೆ :** ತಾಪ್ಸುದ ಬುಕಣಿ ಮಾಡಬೇಕು. ಅದನ್ನು ಮಜ್ಜಿಗೆಯಲ್ಲಿ ೪-೫ ದಿವಸಗಳು ನೆನೆ ಇಡಬೇಕು (ಶಿಕಿಧಿ. ೯೦).

[← ಹಿಂ. ಬುಕನೀ; ಮರಾ. ಬುಕಣೀ]

**ಬುಕಣೆ** 'ಬುಕಣಿ' ನೋ.

**ಬುಕುಟು** 'ಬೂಜು$_1$' ನೋ.

**ಬುಕ್ಕ$_1$** (ನಾ). ವ್ಯವಸಾಯದ ಒಂದು ಉಪಕರಣ ; ಬೀಜವನ್ನು ಬಿತ್ತಲು ಉಪಯೋಗಿಸುವ ಬಿದಿರಿನ ನಳಿಕೆಗೆ ಅಳವಡಿಸಿರುವ ಬಟ್ಟಲು : ಸಡ್ಡೆಬಟ್ಟಲು : ಬೆಳೆಯನ್ನು ತೆಗೆದುಕೊಂಡ ನಂತರ ಆ ಹೊಲ ದಲ್ಲಿ ಮಡಿಕೆಯ ಹೂಡಿ ಆ ಮಡಿಕೆಗೆ ಬುಕ್ಕಾ ಕಟ್ಟಿ ಕಡಲೆಯನ್ನು ಬಿತ್ತ ಬೇಕು (ಕೃಷಿಕ್ರ. ೩೬); ಬೀಜಗಳನ್ನು ಕೂರಿಗೆ ಹಿಂದೆ ಬುಕ್ಕಾ ಕಟ್ಟಿ ನಾಲ್ಕು ಬೆರಳಿಗೊಂದು ಬೀಜ ಬೀಳುವಂತೆ ಬಿತ್ತಬೇಕು (ಕೃಷಿಕ್ರ. ೬೯).

**ಬುಕ್ಕ$_2$** (ನಾ). ೧. ಎದೆ ; ಹೃದಯ : "ಬುಕ್ಕಮೆಂದೆನಲಗ್ರಮಾಂಸ ಮೆಂದೆನಲು ಬಹ ಬಿಕ್ಕಕ್ಕು" (ಮಂಗರಾ. ೦೦೭-೬); ಕಬಳಿತವಲ್ಲೂರಂ ಗಿಳಿತ ಬುಕ್ಕಮಾ ಪೀತರಕ್ತಮೋಂ ತಿಂದುದೊ ಹಸ್ತ ಬೃಹಸ್ಪತಿಷ್ಟಂ ತಾಯ ಬಾಯ ಮಾಂಸವನೆ ತೋಡಿ ರಾಕ್ಷಸಲೋಕಂ (ಅರ್ಜನಿ. ೩-೯೧). ೨. ಮೇಕೆ ; ಗಂಡಾಡು. [ಸಂ.]

**ಬುಕ್ಕಚ್ಚಿ** (ನಾ). ಮಕ್ಕಳ ಭಾಷೆಯಲ್ಲಿ ಎರೆಯುವುದಕ್ಕೆ ಬಳಸುವ ಒಂದು ಅನುಕರಣ ಶಬ್ದ : ಮಣ್ಣಾಟ ಬೇಡವೊ ಬುಕ್ಕಚ್ಚಿ ಮಾಡಬೇಕು ಅಣ್ಣಯ್ಯ ಬಾರೆಂದು ಎತ್ತಿಕೊಂಡು ಎಣ್ಣೆ ಒತ್ತಿ ಬೇಗ ಎಚಿಸಿದಳು ಗೋಪ್ಯಮ್ಮ (ಪುರಂದ. ೨-೨೦೦-೦).

**ಬುಕ್ಕಿ** 'ಬುರುಕ$_2$' ನೋ.

**ಬುಕ್ಕಿಟ್ಟು** 'ಬುಕ್ಕಿಹಿಟ್ಟು' ನೋ.

**ಬುಕ್ಕಿಹಿಟ್ಟು,** ಬುಕ್ಕಿಟ್ಟು (ನಾ). ೧. ಉತ್ಸವ, ಹಬ್ಬ ಮುಂತಾದ ಸಮಾರಂಭಗಳಲ್ಲಿ ಉಪಯೋಗಿಸುವ ಒಂದು ಬಗೆಯ ಸುವಾಸನೆಯ ಹಿಟ್ಟು.—ಪುಡಿ: "ಚರ್ಚೆ, ಚರ್ಚಿಕ್ಯಂ ಸ್ಥಾಸಕ-೩ . . . ಮೈಗುಜ್ಜುವ ಗಂಧಪುಡಿ, ಉದ್ವರ್ತನ ಚೂರ್ಣ, ಬುಕ್ಕಿಹಿಟ್ಟು" (ಸಿದ್ದ್ಯ. ೩೦೬); ಸುರಗಿ ಹೂವಿನ ಮಾಲೆ, ಬುಕ್ಕಿಹಿಟ್ಟು, ಹೊಡೆಯ ಉಡಿಗೆಗಳನ್ನೂ ಇಟ್ಟದ ಗಂಟನ್ನು ದಾಸರ ಕೈಯಲ್ಲಿಟ್ಟು ಅದೃಶ್ಯನಾದನು (ಕಥಾ. ೩೦೩). **ಬುಕ್ಕಿಟ್ಟು:** ೧. ಅಗರ ವಾಬರು . . . ಊದಿನ ಕಡ್ಡಿ, ಬುಕ್ಕಿಟ್ಟು ಮುಂತಾದ ಸುಗಂಧದ್ರವ್ಯ ಗಳನ್ನೂ ಮಾಡಿ ಮಾರುವುದೇ ಇವರ ಮುಖ್ಯ ಹೋರೆಯು (ಕಜಾಗ. ೦೦೦): ಅಗರು ಚಂದನಗಂಧ ಅರಿಸಿನ ಬುಕ್ಕಿಟ್ಟು . . . ಮೃಗನಾಭಿ ತರಿಸಿಟ್ಟಿರಬೆಲೆಯರಾಗ (ಶ್ರೀಕೃಪಾ. ೩೦) ; ಬುಕ್ಕಿಟ್ಟು ಊದಿನ ಕಡ್ಡಿಗಳ ವಾಸನೆ ಇಡಗಿತ್ತು (ವೃಷಿ. ೬). ೨. ಒಂದು ಬಗೆಯ ಹಲ್ಲುಪುಡಿ : ಸ್ವಲ್ಪ ಬುಕ್ಕಿಟ್ಟು ಕೊಡು, ಹಲ್ಲುಜ್ಜಿಕೊಳ್ಳಬೇಕು (ಜಾಂ).

[ಬುಕ್ಕಿ (<ಬುರುಕ$_2$) + ಹಿಟ್ಟು (<ಪಿಟ್ಟು)]

**ಬುಕ್ಕು** (ನಾ). ೧. ಪುಸ್ತಕ ; ಹೊತ್ತಿಗೆ : ಕೈಯು ಕಾದ ಬಳಿಕ ಅವರ ಮೇಲೆ ಒಂದು ಬುಕ್ಕು ಹಿಡಿದರೆ, ಆ ಬುಕ್ಕು ಬಿಸಿಲಿನಿಂದ ಬರುವ ಶಕೆಗೆ ಅಡ್ಡಾಗುತ್ತದೆ (ಹುಚಿ. ೬-೬೬) : ಇದೀಗ ತಪ್ಪು ಹಿರಿಯ ಮಗಳು ಮುಲ್ಕಿ ಪರೀಕ್ಷೆ ಪಾಸಾದ ಮೇಲೆ ಇಂಗ್ಲೀಷ್ 'ಎರಡು ಬುಕ್ಕು' ಕಲಿಸಲು ಧಾರವಾಡಕ್ಕೇ ಮನೆ ಮಾಡಿರುವುದಾಗಿಯೂ ಹೇಳಿದನು (ಗಂಡಹೂ. ೬). ೨. ಕಂದಾಯದ ನೋಂದಣಿ ಪುಸ್ತಕ : (ಕಸಂಗ್ರಾ. ೦೩೨).

[← ಇಂ. Book]

**ಬುಕ್ಕೆ** (ನಾ). ಎದೆ ; ಹೃದಯ ; ಗುಂಡಿಗೆ. [ಸಂ. ಬುಕ್ಕಾ]

**ಬುಗಟು** 'ಬುಗುಟು$_1$' ನೋ.

**ಬುಗಟೆ** 'ಬುಗುಟು$_1$' ನೋ.

**ಬುಗಡಿ** 'ಬುಗುಡಿ' ನೋ.

**ಬುಗಬುಗನೆ** (ಅ). ಒಂದು ಅನುಕರಣಾವ್ಯಯ : ನೀರು ಒರತೆಯಿಂದ ಬುಗಬುಗನೆ ಮೇಲೆ ಬರುತ್ತಿತ್ತು (ಜಾಂ).

[ಬುಗಬುಗ$_0$ + -ಅನೆ$_1$]

**ಬುಗರಿ** 'ಬುಗರಿ' ನೋ.

**ಬುಗಿಯೂರ್** (ನಾ). ಒಂದು ಊರಿನ ಹೆಸರು : ಅನಕನ್ನಡಿಯ ಬಡಿದು ಸುರಾಂಗನೆಯೊಳ್ ನೆರೆದನಾತಗೆ ಕೊಟ್ಟ ಕಲ್ಲ × × × ನಿಲಿವ ಬುಗಿ ಯೂರ ಪಾಟು (ಎಕ. X, ಶ್ರೀನಿವಾ. ೬೮-೬; ಕ. ೯೩೦). [ಬುಗಿ$_0$+ಊರ್]

**ಬುಗಿಲ್,** 'ಬುಗಿಲು (ನಾ). ೧. ಒಂದು ಅನುಕರಣ ಶಬ್ದ : 'ಬುಗಿಲನೆ', 'ಬುಗಿಲಿನ್' ಪರಾ. ಬುಗಿಲು: ೨. "ಚಿಂತೆ, ವೇದನೆ" (ಜಾಕೋಕ. ೨೩).

**ಬುಗಿಲನೆ** (ಅ). ಒಂದು ಅನುಕರಣಾವ್ಯಯ : ಒಲೆ ಬುಗಿಲನೆ ಹತ್ತಿ ಕೊಂಡಿತು (ಜಾಂ). [ಬುಗಿಲ್ + -ಅನೆ$_1$]

**ಬುಗಿಲು** 'ಬುಗಿಲ್' ನೋ.

**ಬುಗಿಲಿನ್** (ಕ್ರಿ). ಬುಗಿಲ್ ಎಂದು ಶಬ್ದಮಾಡು : ಮುಕ್ಕಣ್ಣನೆನಿಪ ಶಂಕರದಾಸಿಮಯ್ಯ ಸಿಟ್ಟಾಕ್ಕಿ ಕಿಡಿಗಣ್ಣ ಬಿಡಲನಲ ಬುಗಿಲೆನುತ ಬರೆ (ಗುರುಚಾ. ೮-೫೮).

ಬುಬ್ಬುಗಿಲಿನ್ (ದ್ವಿರುಕ್ತಿ) : ಬುಬ್ಬು[ಕಾಂ. ರ್ಬು]ಗಿಲೆನಲೇಳ್ವನ ಬಾಯ್ಗಿನೋಗಿದವರುಣಜಳಂಗಳೇಯೆ ಕಣ್ಣ ತಿ ಫ ಯ ಮಂ (ಶಾಂತೀಶ. ೦೨-೨೩). [ಬುಗಿಲ್ + ಎನ್$_1$]

**ಬುಗುಂಟು** 'ಬುಗುಟು$_1$' ನೋ.

**ಬುಗುಂಟುವೋಗು** (ಕ್ರಿ). ಬಾವು ಬರು; ಬೊಬ್ಬೆಯುಂಟಾಗು : ಅಟಿಚಟ್ಟಂ ತಲೆ ಬುಗುಂಟುವೋದುದೊಡ ನಾಟ್ಟುಡಿದಂತೆ (ರಜಾಗ್ರ. ೬ ೨೬). [ಬುಗುಂಟು (< ಬುಗುಟು$_1$) + ಪೋಗು$_1$(< ಪೋ$_1$)]

**ಬುಗುಟಿ** 'ಬುಗುಟು$_1$' ನೋ.

**ಬುಗುಟು$_1$,** ಬುಗಟು, ಬುಗಟೆ, ಬುಗುಂಟು, ಬುಗುಟಿ, ಬುಗುಟೆ, ಬುಗುಂತು (ನಾ). ೧. ಉಬ್ಬಿಕೊಂಡಿರುವುದು; ಊದಿಕೊಂಡಿರು ವುದು; ಉಬ್ಬು: ಒಪ್ಪಿದ ಕರ್ಪಸಿಮಾ ಬೃಹತ್ಕುಚಂ ಬುಗುಟೊದವಿರ್ದ ನಾಭಿ . . . ಪಲವುಂ ಕರಂ ಕೆಲವುಂ ಪ್ಪಗುರಾಗೆ ಗಜಾಳಿ ನಿಂದಿತು (ಶಾಂತೀ.ಪು. ೦೦-೬೨). ೨. ಪೆಟ್ಟಿನಿಂದ ತಲೆ ಅಥವಾ ಮೈಮೇಲೆ ಉಂಟಾಗುವ ಊತ, —ಬೋರೆ: ಗುಬಟು: ಕಿದಜಾದ ತಲೆಯ ತೊನೆವ ನಡೆಯ ಬುಗುಟಿನ ಕರಸ್ಥಲದ . . . ಎಡಬಲದ ಬದಿಯ ತಟ್ಟಿನ ಮುಳ್ಳು ದಜಾಹಿನ ಕಂಠಳ ಸೀಳು ಒಂದು ನೋಡುವ ಜನರು ಬೆಜಗಾಗೆ (ಬಸವ. ೩೨-೦೪೮); ನೆಗೆದ ಬುಗುಟಿದೆ ಹಣೆಯಲಿ (ಕುಮಾವ್ಯಾಸ. ೦೨-೩೦); ಹೋ ತಲೆಬುಗುಟು ನೋವುತಿದೆ (ಗಾಥೆಕ. ೦೫-೬೬). **ಬುಗಟು :** ೨. ಆಗ ದುರ್ಯೋಧನನು . . . ಮುಂದಕ್ಕೆ ಸಾಗಲು, ಗೋಡೆಯನ್ನು ಹಾದು ತಲೆಗೆ ಬುಗಟು ಎಬ್ಬಿಸಿಕೊಂಡು ಕಣ್ಣಲ್ಲಿ ಕತ್ತಲುಗೂಡಿಸಿದ್ದರಿಂದ ನೆಲಕ್ಕೆ ಕುಳಿತನು (ಮಹಾಭಾ. ೬೬). **ಬುಗಟೆ :** ೨. ತಲೆಗೆ ಭಾರಿ ಭಾರಿ ಬುಗಟೆಗಳು ಬಂದಿದ್ದವು (ಅಳ್ಸ. ೦೦). **ಬುಗುಂಟು :** ೨. 'ಬುಗುಂಟುವೋಗು' ಪರಾ. **ಬುಗುಟಿ :** ೨. ಎರಡು ಪೊಟಪರಂಗಳಿಂ ನಿಮಿರದೊಳ

ಅಯ್ಯನ ಶಿರವನು . . . ಕುಟ್ಟುತಿರೆ ತಲೆ ಒಡೆದು ಬುಗುಟಿಗಳೆದ್ದೊಡೆದು ನೆತ್ತರು ಬಿಡದೆ ಜೋರನೆ ಸುರಿಯೆ (ಬಸವ. ೩೮-೨೮). **ಬುಗುಟೆ: ೨.** ಹಣೆಗೆ ಹೊಸ್ತಿಲ ಬಡಿದದ್ದರ ಪರಿಣಾಮವಾಗಿ ಬುಗುಟೆಯೆದ್ದಿದೆ (ಸುಗಿಪು. ೧೩೭): ಅದು ಅವನ ಹಣೆಗೆ ಬುಗುಟೆಯನ್ನೇ ಎಬ್ಬಿಸಿತು (ರಂಗರೂ. ೫೬).

**ಬುಗುಡು:** ೧. ತುಂಡಿಲ, ತುಂಡಿಭ=ಹೊಕ್ಕುಳುಬುಗುಡುಳ್ಳವನು (ಶಾಶಾ. ೯). 'ಗುಬುಟು' ಪರಾ. [ ದೇ.॥ ತೆಲು. ಬುಗಡ, ಬೊಗಡ]

**ಬುಗುಟು₂** 'ಬೂಜು₁' ನೋ.

**ಬುಗುಟೆ** 'ಬುಗುಟು₁' ನೋ.

**ಬುಗುಡ** (ನಾ). ಬೊಜ್ಜುಹೊಟ್ಟೆಯುವನು ; ಡೊಳ್ಳುಹೊಟ್ಟೆಯುವನು : "ಬುಗುಡಂ ತುಂದಿಳಂ" (ವಸ್ತುಕೋ. ೭೩-೩೮); "ತುಂದಿಯೆಂಬುವಂ ಬ[ಬು]ಗುಡಂ" (ಪಠಾಯು. ೧೦೦-೪೫೬).

[ಬುಗುಡು (<ಬುಗುಟು₁) + —ಅ₇]

**ಬುಗುಡಿ, ಬುಗಡಿ, ಬುಗುಡೆ** (ನಾ). ೧. (ಕಿವಿಯಲ್ಲಿ ಧರಿಸುವ) ಒಂದು ಬಗೆಯು ಆಭರಣ : ಮುತ್ತಿನ ಮೂಗುತಿ ಕೆತ್ತಿದ ವಾಲೆಯು ಇತ್ತರಾ ಬುಗುಡಿ . . . ಮುತ್ತಿನ ಹಾರವು ರತ್ನದ ಪದಕಾ ಅರ್ತಿಲಿ ನಾರಿಯಾ ಕುತ್ತಿಗೆಗ್ಹಾಕುತ (ಪಾರಿಕೀ. ೬೫-೧೭); ಕಡಗ ಪಟ್ಟಿಯು ಡಾಬು ಬುಗುಡಿ ಗೀರ್ಬಳ್ಳಿಸರಿಗೆ ಚಿಂತಾಕ ಸರಪಣಿಗಳ ಜಡಜಾಕ್ಷಿಯರ್ ಧರಿಸಿ (ಸಿದ್ಧಕಾ. ೬-೦೨); ನೆಗಡಿಯಂತಹ ಬೇನೆಯಿಲ್ಲ, ಬುಗುಡಿಯಂತಹ ಒಡವೆಯಿಲ್ಲ(ಗಾದೆ). ೨. ಮಂಚದ ಕೀಲುಗಳನ್ನು ಜೋಡಿಸಲು ಅಳವಡಿಸುವುದಕ್ಕಾಗಿ ಉಪಯೋಗಿಸುವ, ತಲೆಯ ಮೇಲೆ ಗುಬುಟು ಇರುವ ಮೊಳೆ ; ಗುಬುಟುಮೊಳೆ : ಇಂದ್ರನೀಲದ ಕಾಲು ವಜ್ರದ ಬುಗುಡಿಗಳಿಂದ ಹೇಮದಿ ವಿರಚಿಸಿದ ಚಂದದ ಹಲಗೆಯಿಂ ಹೊಳೆವ ಮಂಚವನವನಂದು ಸಾರ್ದನು ರಾಗದಲಿ (ಕೇಪಂಶಾ. ೨-೬೦). ೩. ಔಷಧಕ್ಕೆ ಉಪಯೋಗವಾಗುವ ಬುಗುಡಿಯಾಕಾರದ ಹೂವು ಬಿಡುವ ಒಂದು ಬಗೆಯು ಮರ : ಕಗ್ಗೊಜಲೆ ಬುಗುಡಿ ಮಿಟಿಲೆಯ ಸುಗ್ಗಿಯ ಪತ್ರಂಗಳೊಡನೆ ಮಾರಿಚದ ಚೂರ್ಣಂ ಅಗ್ಗಳಮೊಂದಿರೆ ಸಸ್ಯದೊಳಿಗ್ಗಲ್ಲದೆ ವಿಷಹರಂ ವಲಂ ಪ್ರತ್ಯೇಕಂ (ಖಪುದ. ೭-೮೨); ಕುರುಟಿಗೆಸೊಪ್ಪು, ಬುಗುಡಿಯ ಸೊಪ್ಪು ಇವೆರಡನು ನಿಂಬೇಹಣ್ಣಿನ ರಸದಿಂದರೆದು ಟಡಿಯ ಕೊಡಲು ನರಿಯ ಹಲ್ಲು ತಾಗಿದ ವಿಷ ಶಮನವಹುದು (ವೈದ್ಯಶಾ. I. ೨೦೬); ಬುಗುಡಿ ಮರದ ಕಾಲುವೆ ಸುಕ್ಷೇತ್ರುದಲ್ಲು ಲಿಂಗಮುದ್ರೇ ಸ್ಥಾಪ್ಯವ ಮಾಡಿಸಿ ಕೊಟ್ಟ ಗದ್ದೆ (ಎಕ. XII. ಪಾವುಗ. ೬೦-೨೫; 1663). **ಬುಗಡಿ : ೧.** "ಕರ್ಣಿಕಾ_ತಾಳಪತ್ರಂ ೨ ಕಿವಿಗಿಟ್ಟುಕೊಳ್ಳುವ ವಾಲೆ, ಸರಪಣಿ, ಬುಗಡಿ ಮುಂತಾದದ್ದು" (ಸಿದ್ಧಾಂತ. ೦೯೯); ಹೊನ್ನೂವು ಗಾತ್ರಮುತ್ತಿನ ಬುಗಡಿ ಗರುವೆ ಕರ್ಣದಲಿಟ್ಟು . . . ಮುದ್ದು ಸುರಿವುತಲಿ (ಶ್ರೀಕೃಶಾ. ೦೦). **ಬುಗುಡೆ : ೨.** ಹುಣ್ಣಿಗೆ ಮದ್ದು :– ಅಡಿಕೆ, ಕಾಚು, ಈಶ್ವರಿ, ಬುಗುಡೆ ಬೇರು, ಅಕ್ಕಿಯು ರಸದಲ್ಲಿ ಮರ್ದಿಸಿ ಪೂಸುವುದು (ವೈ.ವಿ. ೦೬೦).

**ಬುಗುಡಿಅಂಚು, ಬುಗಡಿಯಂಚು**=ಬುಗುಡಿಯ ಆಕಾರದ ಚಿತ್ರ ಬರುವಂತೆ ನೆಯ್ದಿರುವ ಅಂಚು : ಪಾರೋತಿಗಾಗಿ ಬಿಳಿಯಂಚಿನ ಎರಡು ಪಾಲ್ವಾಟು ಸೀರೆಗಳು, ಲಚ್ಚನಿಗೆ ಬುಗುಡಿ ಅಂಚಿನ ಬಿಚ್ಚಕಾನೆ ಇಷ್ಟನ್ನು ಕೊಂಡರು (ಮರವು. ೦೪೮); ಆಕೆ ಬುಗಡಿಯಂಚಿನ ಸೀರೆ ಉಟ್ಟಿದ್ದಳು (ರೂಢಿ). [ದೇ.॥ ತಮಿ. ಪುಕಂಟಿ, ಪುಕಿಟಿ, ಪೂಟಿ, ಪೊಕಿಟಿ; ತುಳು. ಬುಗುಡಿ; ತೆಲು. ಬುಗಡ, ಬೊಗಡ./ ಮರಾ. ಬುಗಡೀ]

**ಬುಗುಡಿಗೆ** (ನಾ). ಒಂದು ಬಗೆಯು ಮರ : "ಶ್ರೋತ್ರಾಂಗೀ–ಬುಗುಡಿಗೆ" (೬ಕಂ. ೦೬೨). [<ಬುಗುಡಿ]

**ಬುಗುಡು** 'ಬುಗುಟು₁' ನೋ.

**ಬುಗುಡೆ** 'ಬುಗುಡಿ' ನೋ.

**ಬುಗುರಿ** 'ಬವರಿ' ನೋ.

**ಬುಗುರಿಮೊಲೆ** 'ಬೊಗರಿಮೊಲೆ' ನೋ.

**ಬುಗ್ಗನೆ** (ಅ). ಒಂದಂ ಅನುಕರಣಶಬ್ದ್ಯಯ; ಕೂಡಲೆ ; ಬೇಗನೆ: ಹೆಗ್ಗಡ್ಡದೊಲ್ಲಿಂದ ಪೆಟಲ ಮದ್ದಂ ಸುಡಲ್ಕಗ್ಗಿನಿಡಿಯಿಂದಳಿದ ಹೆಗ್ಗನಂತಂಗಜಂ ಬುಗ್ಗಿಯಾದಂ ಬುಗ್ಗನುರಿದು (ಮದೇಶ. ೦೨-೦೮).

[ಬುಗ್$_0$ + —ಅನೆ₁]

**ಬುಗ್ಗಿ** (ನಾ). ಬೂದಿ; ಭಸ್ಮ : ಪೆಗ್ಗಳದ ಭಾಗ್ಯ ಗಳಿಗೇಲಿ ಪೋಪಾಗ ಬುಗ್ಗಿ [ಪಾಠಾಂ. ಗ್ಗಿ]ಯ ಹೊದ್ಕೊಂಡು ಹೋದ್ಕಲ್ಲೊ ಪ್ರಾಣ (ತ್ರಿಪದ. ೧-೮೨_೨); ಹೆಗ್ಗಡ್ಡದೊಲ್ಲಿಂದ ಪೆಟಲ ಮದ್ದಂ ಸುಡಲ್ಕಗ್ಗಿನಿಡಿಯಿಂದಳಿದ ಹೆಗ್ಗನಂತಂಗಜಂ ಬುಗ್ಗಿಯಾದಂ ಬುಗ್ಗನುರಿದು (ಮದೇಶ. ೦೨-೦೮). [ ದೇ.॥ ತೆಲು. ಕೋಲಾ. ಬುಗ್ಗಿ ; ಗದಬ. ಬುಗ್ಗಿ = ಭೂಮಿ ]

**ಬುಗ್ಗೆ** (ನಾ). ೧. ನೀರು ಉಕ್ಕುವಿಕೆ. ೨. ನೀರು ಉಕ್ಕುವ ಸ್ಥಳ: ಚಿಲುಮೆ ; ಒರತೆ : ನೆಲದೊಳಗಿಂದ ಹೊರಡುವ ನೀರಿನ ಬುಗ್ಗೆಯುಂಟೆಂದು ವ್ಯಕ್ತವಾಗುತ್ತದೆ (ಮುಂಬಯು. ೭-೦೬೮) : ನೀರಿಲ್ಲದೆ ಬಾಯಾರಿ ಮೈಲುಗಟ್ಟಲೆ ಮರಳುಗಾಡಿನಲ್ಲಿ ಓಡುವವನಿಗೆ ದೂರದಲ್ಲಿ ನೀರಿನ ಬುಗ್ಗೆಯನ್ನು ಕಂಡರೆ ಹೇಗಿರುತ್ತೆ ? (ಕೃತಾಕ. ೩೨); ಸೀಳು, ಒಡೆ. ಬಾಳ್ಟಂಡೆಯುಂ; ಬುಗ್ಗೆಯುಕ್ಕುವೋಲ್ ಮೂಡಿ ನಿಲ್ ಕಣ್ಣಿಂದೆ, ಕಿಳ್ತಿಸೆದು ಒಲ್ದಿನದ ಈ ವೇಷಮಂ (ಶ್ರೀರಾಪಾ. ೨೮೯-೯೭).

[ ದೇ.॥ ತಮಿ. ಪುಕ್ಕೈ, ಪೊಯ್ಕೈ : ತೆಲು. ಬುಗ್ಗ ]

**ಬುಚಡ, ಬುಚಡೆ** (ನಾ.) ಸ್ತ್ರೀಯರ ಕೇಶರಚನೆಯಲ್ಲಿ ಒಂದು ಪ್ರಕಾರ; ತಲೆಯ ಕೂದಲನ್ನು ಒಟ್ಟಿಗೆ ಸೇರಿಸಿ ಹಾಕಿರುವ ಗಂಟು : ಎಣೆಗಂಟು : ಆ ಬುಚಡ, ಜೈತಲ, ಸೀರೆ, ಸೆರಗು, ರಂಭೆ ಅಂತ ತಿಳಕೊಂಡಾಳ ನಮ್ಮವ್ವ ! (ಸಮಾಜೀ. ೨೬); ಅಡುಗೆಮನೆಯಲ್ಲಿ ಇನ್ನೂ ಅರದೆ ಇದ್ದ ತನ್ನ ಕೂದಲಿನ ಬುಚಡ ಕಟ್ಟುತ್ತ ಪತ್ನಿಲೆಯು ಕುಳಿತಿದ್ದಳು (ಎರ್ಡುವ. ೦). **ಬುಚಡೆ :** ಅವಳು ತನ್ನ ನೀಲಾಲಕಗಳನ್ನು ಚೆನ್ನಾಗಿ ಬಾಚಿ, ಚಮತ್ಕಾರವಾಗಿ ಕಾಣುವಂಥ 'ಬುಚಡೆ' ಯನ್ನು ಕಟ್ಟಿದ್ದಳು (ತೋಳ್ಪು. ೨೩೪). [ ←ಮರಾ. ಬುಚಡ. ಬುಚಾಡ ]

**ಬುಚಡೆ** 'ಬುಚಡ' ನೋ.

**ಬುಜಗೇಸ್ವರ** (ನಾ). ಸರ್ಪಗಳ ಒಡೆಯ ; ಭುಜಗೇಶ್ವರ : ಶ್ರೀ ಬುಜಗೇಸ್ವರದೇವರಿಗೆ ಯೆರಡು ನಂದಾದೀವಿಗೆ ಮೂಜು ಹೊತ್ತಿನ ಉಪಾರಕುಂ × × × ಗೆ × × ಭೂಮಿ (ಎಕ. IV (R). ಚಾಮುಂ. ೯೭-೪ ; 16ನೆಯ ಶತ). [ < ಸಂ. ಭುಜಗೇಶ್ವರ ]

**ಬುಜರೂಕ** (ನಾ). ತಿಳಿದವನು ; ಅನುಭವಿ : ಹಿರಿಯ : ನಮ್ಮಲ್ಲಿ ವೃದ್ಧ ರಹೀಮನಂಥ 'ಬುಜರೂಕ' ರಾದ ಜನರು ಕೆಲಕೆಲವು ಪ್ರಸಂಗಗಳಲ್ಲಿ ತಮ್ಮ ಗಿಡಮೂಲಿಕೆಗಳ ಜ್ಞಾನದಿಂದ ಎಷ್ಟೋ ಜೀವಿಗಳನ್ನು ಉಳಿಸಿದ್ದು ಪ್ರಸಿದ್ಧವಿದೆ (ಕೃಮಾಪ. ೭೬).

[ ←ಮರಾ. ಬುಜರೂಕ್, ಬುಜರೂಗ್, ಬುಜರುಕ್, ಬುಜರುಗ್; ಹಿಂ. ಬುಜುರ್ಗ್ = ಹಿರಿಯ, ಪೂರ್ವಿಕ ; ಪಾರ. ಬುಝುರ್ಗ್ ]

**ಬುಜ್ಜಣೆ** 'ಬುದ್ದಲಿ' ನೋ.

**ಬುಜ್ಜಣಿಗೆ** 'ಬುದ್ದಲಿಕೆ' ನೋ.

**ಬುಜ್ಜಯಿಸು, ಬುಜ್ಜವಿಸು** (ಕ್ರಿ). ಉಬ್ಬಿಸು : ಪುಸಲಾಯಿಸು : ತುಂಬುರಾದಿಗಳೆಡೆವೊಕ್ಕು ಇರ್ವರುಮಂ ಬೇಜೆ ಬೇಜೆ ನಿಲಿಸಿ ಕುಮಾರನಂ ಬುಜ್ಜಯಿಸಿ ಕೈಮುಗಿದು (ಪಂಪರಾ. ೬-೧೩೭) : ನಿನ್ನ ಸಡಿಲದ ತಕ್ಕೆ ಸಗ್ಗದ ಸುಖಕ್ಕೆ ಕೈಯನ್ನುತಂ ವಿಟನೊರ್ವನೆಸೆವ ರತಿಯೊಳ್ ಸತಿಯ ಬುಜ್ಜಯಿಸಿ ನೆರೆವುತಿರ್ದಂ (ಶರವು. ೮-೫೦). **ಬುಜ್ಜವಿಸು :** ಬಜ್ಜವಿದು ತಾನೆಂದು ಬಸವಂ ಬುಜ್ಜವಿಸಿ [ಪಾಠಾಂ. ಬುಜ್ಜಯಿಸಿ, ಭುಜ್ಜವಿಸಿ]

ಪೇಳಲ್ಕೆ ರಾಯುಂ ಲಜ್ಜೆಯುಂ ನಾಚಿಕೆಯುಮನುಳಿದಾಗಲಿ ಎನುತ ಬಂದು (ಬಸಪು. ೨೨-೩೮); **ಬಾಳೆಮೀನ್ಗಣ್ಣಬಳೆ** ಮುಳಿಯದಿರು ನೀನೆನುತ್ತಾಳ ಗೊಳುತುಂ ಚದುರನಂಗನೆಯು ಬುಜ್ಜವಿಸಿ ಮೇಳವಮಂ ಮಾಡುತಿರೆ (ಭಾವಚಂ. ೬-೨೮). [← ತೆಲು. ಬುಜ್ಜಗಿಂಚು, ಬುಜ್ಜಿಗಿಂಚು]

**ಬುಜ್ಜವಿಸು** 'ಬಂಜ್ಜಯಿಸು' ನೋ.

**ಬುಟಿ** (ನಾ). ಎತ್ತಿನ **ಗಾಡಿಗಳಿಗೆ** ಹಾಕಿರುವ ಹಲಗೆ : ಯಾವ ಗಾಡಿಗೆ ತೋಳು ಇಲ್ಲ. ಯಾವುದರ ಬುಟಿವು ಮುರಿದುಹೋಗಿದೆ. . .ಎಂದು ಅದನ್ನೂ ಗಟ್ಟಿಯಾಗಿ ಕೂಡಿಸಿದನು (ಬೆಳ್ಳಾ. ೦೬೬). [← ಮರಾ. ಬುಟೀ]

**ಬುಟೀದಾರಿ** 'ಬೂಟಾದಾರಿ' ನೋ.

**ಬುಟ್ಟ** 'ಬೂಟಾ' ನೋ.

**ಬುಟ್ಟಲ** (ನಾ). ಬುಟ್ಟಿ ಮುಂತಾದುವುಗಳನ್ನು ಮಾಡುವವನು: ಬುಟ್ಟಲರು, ಅಂದರೆ ಬುಟ್ಟಿಗಳನ್ನು ಮಾಡುವವರು (ಕನಾಗ. ೨೨೨).
[ ಬುಟ್ಟ ( <ಪುಟ್ಟ$_1$) + – ಅಲ್$_2$ + – ಅ$_7$ ]

**ಬುಟ್ಟಾ** 'ಬೂಟಾ' ನೋ.

**ಬುಟ್ಟಿ** 'ಪುಟ್ಟಿ$_1$' ನೋ.

**ಬುಟ್ಟಿಗರಗೆಲೆ** (ನಾ). ಒಂದು ಬಗೆಯ ಸಸ್ಯ: ಸಣ್ಣಡಿಪ್ಪೆ, ಬುಟ್ಟಿಗರಗೆಲೆ (ಸಸ್ಯಶಿಗ. ೪೦-೮೦೦). [ ಬುಟ್ಟಿ$_?$ + ಗರಗು$_1$ ( <ಗರುಗ) + ಎಲೆ$_1$]

**ಬುಟ್ಟಿಯುಡಿಪ್ಪೆ** (ನಾ). ಒಂದು ಬಗೆಯ ಸಸ್ಯ: ಫಾಲ್ಸ, ತಡಸಲಿ, ಬುಟ್ಟಿಯುಡಿಪ್ಪೆ, ಜಾಣ (ಸಸ್ಯಶಿಗ. ೪೦-೮೦೬). [ ? ]

**ಬುಟ್ಟಿದಾರ** 'ಬೂಟಾದಾರಿ' ನೋ.

**ಬುಟ್ಟಿದಾರಿ** 'ಬೂಟಾದಾರಿ' ನೋ.

**ಬುಟ್ಟೀದಾರಿ** 'ಬೂಟಾದಾರಿ' ನೋ.

**ಬುಡ** (ನಾ). ೧. ಮರದ ಕಾಂಡದ ಅಡಿಭಾಗ; ಬೊಡ್ಡೆ : ತೊಟ್ಟು ಬಿಟ್ಟ ಹಣ್ಣಿಂಗೆ ಮತ್ತಾ ಬುಡದಾಸೆಯೇಕೆ (ಸಕಪ. I. ೪೬೩-೮೬); ಅನಿಲಜನು. . .ಬಳಲಿ ಬೆವರುತ ಬಳಿಕ ಬಂದಾ ಮರದ ಬುಡವನು ಹಿಡಿದು ಕುಳ್ಳಿದನು (ತಂಶಕ. ೦೬-೦೩); ಸಿಡಿದು ಹಾಜೀದ ಹಸ್ತದಿಂಬುಬೆಗೆ ಬುಡ [ಪಾಠಾಂ. ಗಿಡು] ಸಹಿತ ಬಲುಮರ ಧರಾತಳಕುಡಿದು ಬಿದ್ದವು (ಕೂಕರಾ. ೧-೮೦-೦೪). ೨. ಅಡಿಭಾಗ; ತಳಭಾಗ; ಮೂಲ : ಸಕಲ ಸ್ಥಾವರ ಚರ ಘಟ ಬುಡಾದಿಗಳೆಲ್ಲಕ್ಕೆ ಪೃಥ್ವಿಯಿಂದವೇ ಜನನ (ಮೋಕಪು. ೨೮೪-೩೮); ನನ್ನ ಬುಡಕ್ಕೆ ನಾನೇ ಕೊಡ್ಲಿಯನ್ನು ಹಾಕಿದಂತಾಯಿತು! (ದೇಶಿಕಾ. ೩೮). ೩. ವಂಶ ; ಮನೆತನ : ಬ್ರಾಹ್ಮಣಭೂಮಿಯು ಸಿಂಗಾಪುರದ ಗಿರಿಭಟ್ಟರ ಬುಡದವರಿಗೆ ನಡದು ಬಂತು (ಪ್ರಸ್ಥಆ. ೦೪೨೪, ೦೬-೦೦೩ ; 1402). ೪. ಹತ್ತಿರ ; ಸಮೀಪ : ಒಡೆದು ಕೆಡಿಸಿದೆ ಪಾಪಿ ನೀನು ನಿನ್ನಯ ಸವತಿ ಬುಡದಿಪ್ಪೈನೂರು ಸಂವತ್ಸರಂ ದಾಸಿಯಾಗೆಡೆಬಿಡದೆಯಿರುಯೆಂದು ಶಾಪಮಂ ಕೊಟ್ಟು ನರುಣನು (ಕುರಂಗ. ೩-೦೩).

**ಬುಡಕ್ಕೆ ನೀರು ತಿದ್ದು** = ಸಮೂಲ ನಾಶಮಾಡು : ಅವನು ಬುಡಕ್ಕೆ ನೀರು ತಿದ್ದಿದ (ರೂಢಿ). **ಬುಡನಾಶ** = ಬೇರುಸಹಿತವಾಗಿ ಆಗುವ ನಾಶ ; ಸಂಪೂರ್ಣನಾಶ : ದುರ್ಯೋಧನನೊಬ್ಬನ ಅಕೃತ್ಯದಿಂದ ಕ್ಷತ್ರಿಯರು ಬುಡನಾಶವನ್ನೈದುತಲಿಧಾರೆ (ಕೃಪಾಶಿ. ೦೩೦). **ಬುಡ ಭದ್ರವಿರು** = ಗಟ್ಟಿಯಾದ ತಳಹದಿ ಇರು ; ಆಧಾರವಿರು : ಭಾರತದ ಅಸಂಖ್ಯಾತ ಯುವತರಂತೆ ನನಗೆ ಬುಡ ಭದ್ರವಿಲ್ಲ (ಹೊಸಕ್ಷಿ. ೨೪೮). **ಬುಡಮುಟ್ಟ, ಬುಡಮಟ್ಟ** = ೧. ತಳದ ವರೆಗೂ; ಕೆಳಭಾಗದ ವರೆಗೂ: ಕಾಮನುಯೆರಗಿ ಒಡನೆಯೆರ್ದೆಯ ಕ್ರೂರದಾರೆಯ ಕಠಾರಿಯುಂ ಬುಡಮುಟ್ಟ ಶಿವಿಯಲು (ಪಪಪೋ. ೦೨-೮೦). ೨. ಸಂಪೂರ್ಣವಾಗಿ : ಬುಡ ಕಸದ ಬುಡಮುಟ್ಟ ಕೀಳ ಬನ್ನಿ (ಕೋಗಿರಿ. ೨೮-೨); ದೇವಾಲಯಗಳನ್ನೆಲ್ಲಾ ಬುಡಮಟ್ಟ ಕಿತ್ತೊಗೆಯಬೇಕು (ದೌಂಕ್. ೩೪). **ಬುಡ ಮೇಲಾಗು** = ಅಡಿ ಮೇಲಾಗು ; ತಲೆ ಕೆಳಗಾಗು : ಭುಜದ ಸೋಂಕಿಗೆ ಭೂಭೂಜ ವ್ರಜವು ಬುಡ ಮೇಲಾದವು (ಕೂಕರಾ. ೩-೮-೪೯); ಮನೆಯೋ ಬುಡ ಮೇಲಾದಂತೆ ಅವಳಿಗೆ ಭಾಸವಾಯಿತು (ಹಸ್ಯಹಾ. ೦೦೬). **ಬುಡ ಮೇಲು** = ಅಡಿಮೇಲು ; ತಲೆಕೆಳಗು : ಕೆಟ್ಟಿಲ್ಲ ಧರ್ಮ ಹುಟ್ಟಿಲ್ಲ ಧರ್ಮಂತ ಬಿಂದಿಲ್ಲ ದೇವರೂ ಇರಲಿ ಬುಡ ಮೇಲು! (ಅರಕು. ೩೪೪-೦೨). **ಬುಡಮೇಲು ಮಾಡು** = ಅಡಿಮೇಲು ಮಾಡು ; ತಲೆಕೆಳಗು ಮಾಡು : ದಾನವರು ಆಧುನಿಕರಾಜಕೀಯತಂತ್ರದಂತೆ ಅವರ ನಾಟಕಪ್ರಯೋಗಗಳನ್ನು ಬುಡಮೇಲು ಮಾಡಿದರು (ಕ್ರಬಂಥ. ೦೩); ಲಾರ್ಡ್ ಕೇನ್ಸ್‌ರ ಪ್ರತಿಪಾದನೆ . . . ವೈಯಕ್ತಿಕಸ್ವಾತಂತ್ರ್ಯತತ್ತ್ವವನ್ನು ಬುಡಮೇಲು ಮಾಡಿತು (ಕವಿಕೋ. I. ೪೦೪).
[ದೇ. ‖ ತುಳು. ಬುಡ, ಬುಡೊ; ತೆಲು. ಬುಡ. / ಸಂ. ಬುಧ್ನ]

**ಬುಡಕಟ್ಟು** (ನಾ). ೧. ಸಸ್ಯಗಳ ಬುಡದ ಸುತ್ತಲೂ ಹಾಕುವ ಮಣ್ಣಿನ ರಾಶಿ : ಜೋಶಿಯವರು, ತೆಂಗಿನ ಮರದ ಬುಡಕಟ್ಟನ್ನು ಸರಿ ಮಾಡಲು ಕೈಯಲ್ಲಿ ಹಿಡಿದ ಕುಠಾರಿಯ ಕಾವಿನ ಮೇಲೆ ತಮ್ಮ ಸೊಂಟವನ್ನು ಆನಿಸಿ . . . ಕೇಳಿದರು (ಮೂರುದಾ. ೩೦). ೨. ಮೂಲ; ಉತ್ಪತ್ತಿಸ್ಥಾನ: ತಮಿಳು ಮಾತ್ರ ಮೂಲತಃ, ಅದೇ ಬುಡಕಟ್ಟಿನದಾದರೂ ತನ್ನ ವ್ಯಾಕರಣವನ್ನು ಪ್ರತ್ಯೇಕವಾಗಿ ನಿರ್ಮಿಸಿಕೊಂಡಂತೆ ವರ್ಣಮಾಲೆಯನ್ನೂ ಪ್ರತ್ಯೇಕವಾಗಿಯೇ ನಿರ್ಮಿಸಿಕೊಂಡಿತು (ಭಾಪಾಶಾ. ೦೦೨). ೩. ಅಡಿಪಾಯ ; ತಳಹದಿ ; ಬುನಾದಿ : ಇಂಥ ವ್ಯಕ್ತಿಗಳು, ಇಂಥ ಮನೆತನಗಳು ಹೆಚ್ಚು ಹೆಚ್ಚು ಆದಂತೆ ಸಮಾಜದ ಬುಡಕಟ್ಟು ಭದ್ರವಾಗುತ್ತದೆ (ಸಂಪಾಹಂ. ೮ ಮುನ್ನು೩); ನಮ್ಮ ಸಮಾಜದ ಬುಡಕಟ್ಟು ಅದಿರುತ್ತಿರುವುದರಿಂದ ಅದರ ಮೇಲೆ ನಾವು ನಿಲ್ಲಿಸಬೇಕೆಂದಿರುವ ಸ್ವರಾಜ್ಯಮಂದಿರವು ಸುಸ್ಥಿರವಾಗಿ ಎಂದೂ ತಾಳಿ ಬಾಳಲಾರದು (ಹುಕ್ಷಕ್ರ. ೦೩). ೪. ವಂಶ ; ಕುಲ ; ಮನೆತನ : ಈತನು ಅರೇಬಿಯದ ಕುರಾಯಿಷ್ ಬುಡಕಟ್ಟಿಗೆ ಸೇರಿದವನು (ಇಸ್ಲಾಂಸಂ. ೦); ಇದರ ಜೊತೆಗೆ ನಾನಾ ಬುಡಕಟ್ಟಿನ ಜನರ ಸಂಪ್ರದಾಯಗಳೂ ದೇಶಾಚಾರಗಳೂ ಸೇರಿಕೊಂಡುವು (ಸಂಕಮ. ೪೩೮) : ಒಂದು ದೇಶದಲ್ಲಿ ಬೇರೆ ಬೇರೆ ಬುಡಕಟ್ಟುಗಳ ಜನರು ಒಟ್ಟುಗೂಡುವುದರಿಂದ . . . ರಾಷ್ಟ್ರಶೀಲವು ಒಟ್ಟಿನ ಮೇಲೆ ಮಾರ್ಪಡುತ್ತದೆ (ಕ್ರಿಜಾತಿ. ೦೩). [ಬುಡ + ಕಟ್ಟು$_2$]

**ಬುಡಕ್ಕನೆ** (ಅ). ಒಂದು ಅನುಕರಣಾವ್ಯಯ : ಆ ಭಾಗದಲ್ಲಿ ಒಳಗಡೆ ನೆಲವು ಮೃದುವಾಗಿರುವುದೆಂದು . . . ಬುಡಕ್ಕನೆ ಅಲ್ಲಿ ಧುಮುಕಿದನು (ಕಾಲಿರುತಿ. ೬೦). [ ಬುಡಕ್$_0$ + – ಅನೆ$_1$ ]

**ಬುಡಬುಡಕೆ** ಬುಡುಬುಡಿಕೆ' ನೋ.

**ಬುಡಬುಡಿಕೆ** 'ಬುಡುಬುಡಿಕೆ' ನೋ.

**ಬುಡಮೆ** 'ಬುಡುಮೆ' ನೋ.

**ಬುಡಪಳತಿ** (ನಾ). ಅಳಿಯಸಂತಾನದ ನಿಯಮವನ್ನು ಪಾಲಿಸುತ್ತಿರುವ ವಿಧವೆ : (ಕಸಂಗ್ರಾ. ೦೬೮).
[?./ತುಳು. ಬುಡೆದಿ, ಬುಡೆತ್ತಿ, ಬೊಡೆದಿ, ಬೊಡೆತ್ತಿ = ಹೆಂಡತಿ ; ಬುಡದಾರೆ = ವಿಧವೆಗೆ ಮಾಡುವ ಮರುಮದುವೆ, ಮರುಮದುವೆಯಾದವಳು]

**ಬುಡಿಗೆ** 'ಪುಡಿಕೆ' ನೋ.

**ಬುಡು** (ನಾ). ಒಂದು ಅನುಕರಣ ಶಬ್ದ : ಬಲಗೈಯ ಹತ್ತಿರ ಆಗಾಗ್ಗ "ಬುಡು, ಬುಡು " ಎಂದು ಬಾರಿಸುವ ಚಿಕ್ಕ 'ಡಮರುವಾದ್ಯ' ಟೊಂಕಕ್ಕೆ ನೇತಾಡುತ್ತಿತ್ತು (ಜಂಗಾ. ೩).

ಬುಡುಬುಡು (ದ್ವಿರುಕ್ತಿ) : ಮರುದಿನ ಬುಡುಬುಡಿಗನೊಬ್ಬ 'ಬುಡುಬುಡು' ಎಂದು ತನ್ನ ದುಡಿಯನ್ನು ನುಡಿಸುತ್ತ ಸುಂದರಪುರದಲ್ಲಿ ಕಾಣಿಸಿಕೊಂಡನು (ಕರ್ಣಾವಿ. ೬೦).

**ಬುಡುಕೆ** 'ಪ್ರುಡಿಕೆ' ನೋ.

**ಬುಡುಜಾಗನಗಡ್ಡೆ** (ನಾ). ಔಷಧಕ್ಕಾಗಿ ಉಪಯೋಗಿಸುವ ಒಂದು ಬಗೆಯ ಗಡ್ಡೆ ಮತ್ತು ಭೂಮಿಯಿಂದ ಸ್ವಲ್ಪ ಮಾತ್ರವೇ ಮೇಲಿದ್ದು ಸದಾ ಹೂವು ಬಿಡುವ ಅದರ ಬಳ್ಳಿ: (ಕ).
[< ಬುಡ$_2$ + < ಜಾಗಗೆಡ್ಡೆ]

**ಬುಡುಬುಡಿಕ** (ನಾ). ಬುಡುಬುಡಿಕೆಯನ್ನು ಬಾರಿಸುವವನು: ಈ ವಿಚಿತ್ರವೇಷದ ಆ ವ್ಯಕ್ತಿ ಬುಡುಬುಡಿಕನೆಂಬುದನ್ನು ನಮ್ಮ ವಾಚಕರಿಗೆ ಬಿಚ್ಚಿ ಹೇಳುವ ಅವಶ್ಯಕತೆಯಿಲ್ಲ (ಹಂಸ. ೪). 'ಬುಡುಬುಡಿಗ' ಪರಾ.
[ಬುಡುಬುಡಿಕೆ + — ಅ$_7$]

**ಬುಡುಬುಡಿಕೆ,** ಬುಡಬುಡಕೆ, ಬುಡಬುಡಿಕೆ, ಬುಡುಬುಡುಕೆ (ನಾ). ೧. ಡಮರುಗದಂತಹ ಒಂದು ಬಗೆಯ ಚಿಕ್ಕ ವಾದ್ಯ: 'ಜನತೆ ಜನತಾ' ಎಂದು ಬುಡುಬುಡಿಕೆ ಬಾರಿಸುತ್ತ ದೇಶದ ಭವಿಷ್ಯವನು ಸಾರಬಲ್ಲ (ವಿರಮು. ೨೮-೦೦): ಗ್ರಾಮೀಣರಿಗೆ ಬುಡುಬುಡಿಕೆಯವನು ನುಡಿಯುವ ಶಕುನದ ಬಗ್ಗೆ ಅಪಾರವಾದ ನಂಬಿಕೆ (ಕಜಕ. ೦೩೦). ೨. ಸುಳ್ಳು: ಅಸತ್ಯ: (ಕ). ೩. (ಆಲಂ) ಸತ್ವವಿಲ್ಲದುದು; ಚೈತನ್ಯರಹಿತವಾದುದು; ಹುರುಳಿಲ್ಲದುದು: ಬರಿಯ ಬುಡುಬುಡಿಕೆಯಂಥ ಯಶಸ್ಸನ್ನು ಕಟ್ಟಿಕೊಂಡು ಏನು ಮಾಡಬೇಕು (ಬಂಕಮು. ೦೦೨). **ಬುಡಬುಡಕೆ**: (ಕ). **ಬುಡಬುಡಿಕೆ**: ೧. ಡಮರುಃ, ಮಡ್ಡುಃ, ಡಿಂಡಿಮಃ, ಝರ್ಝರಃ, ಮರ್ದಳಃ, ಪಣವಃ—೬ ವಾದ್ಯಪ್ರಭೇದಾಃ—ಈ ೬ ಶಬ್ದಗಳೂ ಕ್ರಮವಾಗಿ ಬುಡಬುಡಿಕೆ, ಡಕ್ಕೆ, ಡಿಮುಕಿ, ಝಾಯಿ, ಮದ್ದಳೆ ಗೋಮುಖಾದಿ ವಾದ್ಯಗಳೂ ಉಂಟು (ಸಿದ್ಧಂಕಿ. ೫೯): ಬುಡಬುಡಿಕೆ—ಸಣ್ಣ ಡಮರು (ಜಾಪಕೋ. ೨೩). ೩. ಕೀರ್ತಿ—ಅಪಕೀರ್ತಿಗಳು ನನಗೆ ಬುಡಬುಡಿಕೆಯಂತೆ ಎಂದೆನ್ನಿಸುತ್ತದೆ (ಸ್ವಕಿತ. ೪೪೪). **ಬುಡುಬುಡುಕೆ**: ೪. ಒಂದೇಸಮನೆ ಮಾತನಾಡುವಿಕೆ; ಗಳಹುವಿಕೆ: ತಂಬೂರಿ ಇಲ್ಲದೆ ಹೋದರೆ ನನ್ನ ಪೀಕಲಾಟದ ಬುಡುಬುಡುಕೆ ಹೇಗೆ ನಡೆಯಬೇಕು? (ಕೃಲಾಕ. ೦೭). [←ತೆಲು. ಬುಡುಬುಡುಕ್ಕ, ಡುಬುಡಕ್ಕ]

**ಬುಡುಬುಡಿಗ** (ನಾ). =ಬುಡುಬುಡಿಕ: ಮರುದಿನ ಬುಡುಬುಡಿಗನೊಬ್ಬ 'ಬುಡುಬುಡು' ಎಂದು ತನ್ನ ದುಡಿಯನ್ನು ನುಡಿಸುತ್ತ ಸುಂದರಪುರದಲ್ಲಿ ಕಾಣಿಸಿಕೊಂಡನು (ಕರ್ಣಬಿ. ೮೧). [<ಬುಡುಬುಡಿಕ]

**ಬುಡುಬುಡಿಸು** (ಕ್ರಿ). ಬುಳುಬುಳು ಎಂಬ ಶಬ್ದಮಾಡು: ಎಜಗಿದಶನಿ ಘಾತಮುಷ್ಟಿಯ ಬಿಜುಬಿನಲಿ ಬುಡುಬುಡಿಸಿ ನೆತ್ತರಿನೊಜತೆ ಹಾಯ್ದುದು ವದನದಲಿ ನಾಸಿಕದ ನಾಳದಲಿ (ಕೊರಾ. ೫-೫-೩೪): ಬುಡುಬುಡು[ಡಿ]ಪೇಜಿನಿಂದಮರೆಗರ್ಚಿದ ನಾಲಗೆ ಬಿಟ್ಟ ದಿಟ್ಟಿಗಳ ನಡುಗುವ ಮೆಯ್ . . . ಕಡೆವಾಯುಲೋಳೆವೆರಸುಬ್ಬಸದಿಂದೊಳಜುತ್ತೆ ಜೀವಮಂ ಬಿಡುವ ಮಹಾಮೃಗಂ ದರುಣಮಂ ಪಿಡಿವಿತ್ತುದು ತದ್ವನಾಂತದೊಳ್ (ಕೃಪೂ. ೨೭-೬೫): ನಾಸಿಕದಲ್ಲಿ ಬುಡುಬುಡಿಸಿದುದು ಶೋಣಿತ ಚಿಮ್ಮಿ ಭೂತಳಕೆ (ಶಂಬಿಕ. ೨೨.೫೦). 'ಬುದುಬುದಿಸು' ಪರಾ.
[<ಬುಡು + —ಇಸು$_3$]

**ಬುಡುಬುಡುಕೆ** 'ಬುಡುಬುಡಿಕೆ' ನೋ.

**ಬುಡುಮೆ,** ಬುಡಮೆ (ನಾ). ಸೌತೆಯ ಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ: ಕೆಕ್ಕರಿಕೆ; ಹಾಲ್ಮೆಕ್ಕೆ: "ಚಿತ್ರಾ, ಗವಾಕ್ಷೀ, ಗೋತುಂಬಾ—೩ ಹಮ್ಮೆಕ್ಕೆ ಹೆಸರು. ಆಂಧ್ರರೀ ಶಬ್ದಗಳಿಗೆ ಪಿಲ್ಲಪಾಪರಚೆಟ್ಟುಯೆಂತಲೂ ಬುಡುಮೆಕಾಯಿಯೆಂತಲೂ ಹೇಳುವರು" (ಸಿದ್ಧಂಕಿ. ೦೪೮): ಬದನೆಯ ಪಳದಿಯ, ಬುಡುಮೆಯ ಪಲ್ಯ, ಸಾಮೆಯಕ್ಕಿಯನ್ನ, ಸವಣೆಯ ಪಾಯಸ: ಉಂಡರು ಏನ? ಅರಸುತನದ ಕನ್ನ (ರಾಮಸ. ೨೫-೫). **ಬುಡಮೆ**: ಸೌತೆಕಾಯಿ. ಬುಡಮೆ ಕಾಯಿ (ವ್ಯಶಿ. ೨೭-೪೮೪): ಬುಡಮೆಕಾಯಿ, ಹಾಲ್ಮೆಕ್ಕೆಬಳ್ಳಿ (ವ್ಯಶಿ. ೨೭-೪೫೯). [←ತೆಲು. ಬುಡಮು, ಬುಡ್ಡಮು]

**ಬುಡ್ನಗ** (ನಾ). ಒಂದು ಕ್ಷುದ್ರದೇವತೆಯ ಹೆಸರು: ಎಲ್ಲರು ದಾಟುವ ಹೊಸ್ತಲು ಬುಡ್ನಗನು ಕಲ್ಲು ಮಾರಿಂದ ತೋಟದ ಪೆಟ್ಟಿಯನ್ನು . . . ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು (ಬಸಾಪು. ೫೮-೨).
[ಬುಡ್ನ ? + —ಗ$_3$]

**ಬುಡ್ಡಿ** 'ಬುರುಡೆ' ನೋ.

**ಬುಡ್ಡೆ** (ನಾ). ಒಂದು ಬಗೆಯ ಗಿಡ: "ಕರಿಬೀಜದ ಬುಡ್ಡೇಗಿಡ" (ಸಸ್ಯ.೭.೪೦). 'ಕಾಡುಬುಡ್ಡೆ' ಪರಾ. [←ತೆಲು. ಬೊಡ್ಡ]

**ಬುಡ್ಡೆಜಾಲಿ** (ನಾ). ಒಂದು ಬಗೆಯ ಜಾಲಿಗಿಡ: ಬುಡ್ಡೆಜಾಲಿ, ಕೊಡೆಮುಳ್ಳುಜಾಲಿ, ಮೊಡೆಜಾಲಿ (ವ್ಯಶಿ. ೨-೦೮).
[ಬುಡ್ಡೆ+ಜಾಲಿ$_1$./ ತೆಲು. ಬುಡಜಾಲ]

**ಬುತ್ತಿ** (ನಾ). ೧. ಪ್ರಯಾಣಕಾಲಕ್ಕಾಗಿ ಕಟ್ಟಿ ಸಿದ್ಧಪಡಿಸಿದ ಮೊಸರನ್ನ, ರೊಟ್ಟಿ, ಕಲಸನ್ನ ಮೊದಲಾದ ಆಹಾರ: ಪಾಥೇಯ: ತಾಂ ಜರೆಯ ಗೊತ್ತು . . . ಜೀವದ ಸಜೀವನೆ ಜವನೆಂಜಲಿಸಿದ ಬುತ್ತಿ ತನುವೆನಿಪ್ಪುದು ಪುಸಿಯೇ (ಚಂದ್ರಪು. ೦೦-೦೦೦): ಬಿಡದೆ ಬುತ್ತಿಯನೊಂದು ಕೈಯಲಿ ಹಿಡಿದು ಬಂದನು ದೈತ್ಯನಲ್ಲಿಗೆ ಭೀಮ ಬೇಗದಲಿ (ಕುಭಶ. ೨೩-೬೬): ಬುತ್ತಿಯನ್ನವನಾರೋಗಿಸಿಯೂ ತೊಜೆಯೊತ್ತಿನ ಬಿಸಿಕೆ ನಡೆದರು (ಭರತ. ೬೩-೬೩): ನಾಯಿ ತಲೆ ಮೇಲಣ ಬುತ್ತಿಯ ಹಾಗೆ (ಗಾದೆ). ೨. ಕೂಡಿಟ್ಟುದು; ಸಂಚಿತವಾದುದು; ಸಂಗ್ರಹ: ಕೊಟ್ಟದ್ದು ಕೆಟ್ಟಿತೆನಬೇಡ ಮುಂದಕ್ಕೆ ಕಟ್ಟಿಹುದು ಬುತ್ತಿ (ಸರ್ವಜ್ಞ. ೬೦೭): ಸಗ್ಗದಮರಿಗನೇಕ ಪುಣ್ಯದ ಬುತ್ತಿ ತೀರಲು ನೂಕುವರು ಭೂತಳಕೆ (ಅಭಿಲಾಷ. ೨೦-೨೨). ೩. ಚಿನ್ನಿಕೋಲಾಟ, ಚೆಂಡಾಟ ಮೊದಲಾದ ಆಟಗಳಲ್ಲಿ ಹಾರಿ ಬಂದ ಚಿಣ್ಣಿ, ಚೆಂಡು ಮೊದಲಾದುವನ್ನು ಹಿಡಿಯುವುದು: ಆಟ್ಟ ಕಾಳನಿಗೆ ಬುತ್ತಿ ಕೊಟ್ಟು ಆಟವನ್ನು ಕಳೆದುಕೊಂಡನು (ಕಳಹು. ೧೮). 'ಬುತ್ತಿ ಹಿಡಿ' ಪರಾ. ೪. (ಆಲಂ) ಸ್ಮರಣೆ; ನೆನಪು: ಬಾಳಿನ ಅನುಭವದ ಬುತ್ತಿಯನ್ನು ಅವನ ಮನಸ್ಸು ಬಿಚ್ಚಿ ನೋಡುತ್ತಿದೆ (ಮುಗಮೂ. ೪೦).

**ಬುತ್ತಿಗಂಟು**=೧. ಪರವೂರಿಗೆ ಪ್ರಯಾಣ ಹೊರಟಾಗ ಕಟ್ಟಿಕೊಂಡು ಹೋಗುವ ಆಹಾರದ ಗಂಟು,—ಕಟ್ಟು. ೨. (ಆಲಂ) ಅನುಭವಿಸಬೇಕಾದುದು: ಎಷ್ಟು ಜನರ ವಿರೋಧವನ್ನು ಬುತ್ತಿಗಂಟಾಗಿ ಕಟ್ಟಿಕೊಳ್ಳಬೇಕು (ಜನಪ್ರ. ೩೦). **ಬುತ್ತಿಯ ಚಿಕ್ಕ**=ಅನ್ನದ ಚೀಲ: ಬುತ್ತಿಯ ಚಿಕ್ಕವನ್ನೂ ನೀರೇಬುರುಡೆಯನ್ನೂ ತಕ್ಕೊಂಡು ಅಡವಿಯಲ್ಲಿ ಹಸುಗಳನ್ನು ಕಾಯುತಲಿದ್ದರು (ಕೃವಾಸ. ೭೯). **ಬುತ್ತಿಯನ್ನು ಕಟ್ಟು,** **ಬುತ್ತಿಕಟ್ಟು**=೧. ಪ್ರಯಾಣಕ್ಕೆ ಸಿದ್ಧವಾಗು: ಹಾಗಾದರಿನ್ನೇನು? ಬುತ್ತಿಯನ್ನು ಕಟ್ಟು; ಈಗ ನಿನಗೆ ತಪೋವನವೂ ಉಪವನವಾಯಿತೆಂದೂ ಹಿಸುಬೆನು (ಶಾಕುಂತ. ೨೬-೫). ೨. ಪ್ರಯಾಣದಲ್ಲಿ ಬೇಕಾಗುವ ಆಹಾರವನ್ನು ಕಟ್ಟಿಕೊಳ್ಳು: ಅಮ್ಮಾ, ನಾನು ಊರಿಗೆ ಹೋಗಬೇಕಾಗಿದೆ ಬುತ್ತಿಕಟ್ಟಿ ಕೊಡು (ರೂ). [< ಸಂ. ಭುಕ್ತಿ]

**ಬುತ್ತಿಗೊಡು** (ಕ್ರಿ). ಎಡೆ ಮಾಡು; ನೈವೇದ್ಯ ಮಾಡು: ಹೊಸತಿಲ ಮೇಲನೊಕ್ಕಜದು ವಿಸಾಲ ತುಮ್ಮಿಲನಟ್ಟು ಬಾಗಿಲರ್ಚಿಸಿ ಚಿಗುರಿಕ್ಕಿ ಚಟ್ಟಿಜಿದು ಕಂಬದೊಳಂಬಿನೆ ಬುತ್ತಿಗೊಟ್ಟು ಪೂಜಿಸಿ (ಶಬರ. ೪೬೫).
[ಬುತ್ತಿ + ಕೊಡು$_1$]

**ಬುತ್ತಿಚಿಗುರು** (ನಾ). (ಮೈಸೂರಿನಲ್ಲಿ ಸಿಗುವ) ತುಂಬಾ ರುಚಿಕರವಾದ ಚಿಗುರು ಮೀಳೆಯೆಲೆ: ಮೈಸೂರಿನಲ್ಲಿ ಬುತ್ತಿಚಿಗುರು ತುಂಬಾ ಪ್ರಸಿದ್ಧಿ (ರೂ). [ಬುತ್ತಿ ? + ಚಿಗುರು$_2$ (< ಚಿಗುರ್$_2$)]

**ಬುತ್ತಿಯಿಡು** (ಕ್ರಿ). = ಬುತ್ತಿಗೊಡು: ತಲಪಜಾಘಾತದಿಂ ಮುರಿಸಿ

ರಜಕನನಾತ್ಮಪ್ರವೇಶಕ್ಕಿದೇ ಮಂಗಲವೆಂಬಂತಾ ಪುರದ್ವಾರದೊಳವನಡಿಗೆ ಬುತ್ತಿಯಿಟ್ಟಲ್ಲಿನಿಂ ಪೂವಲಿಗೆಯ್ದು . . . ಪೊಕ್ಕಂ ದನುಜನ ಪೊಬಲಂ ಸಾಗ್ರಜನ್ಮಂ ಮುಕುಂದಂ (ಜಗಂ. ೬-೦೦). [ ಬುತ್ತಿ + ಇಡು$_1$ ]

**ಬುತ್ತಿರೊಟ್ಟಿ** (ನಾ). ೧. ಪ್ರಯಾಣಕಾಲಕ್ಕೆಂದು ಕಟ್ಟಿದ ರೊಟ್ಟಿ : ಹಳ್ಳಿ ದಿಳ್ಳಿಯವರೆಗೆ ನೂರುದಾರಿಯು ಸವೆದು ಎಲ್ಲರಿಗು ಹಂಚೋಣ ಬುತ್ತಿ – ರೊಟ್ಟಿ (ಕಂಡು. ೦೯-೦೮) ; ನಿಮ್ಮಂತಹ ವೀರರನ್ನು ಬುತ್ತಿ ರೊಟ್ಟಿಯನ್ನು ತಿನ್ನುವುದಕ್ಕೆ ಬಿಡದೆ ಕಟ್ಟಿಹಾಕಿದರೆ (ದೇಶಿಬಾ. ೬೨). ೨. (ಉಕ) ಸಂಮಾರು ಐದು ಅಥವಾ ಏಳನೆಯ ತಿಂಗಳಿನಲ್ಲಿ ಗರ್ಭಿಣಿಸ್ತ್ರೀಗೆ ನಡೆಸುವ ಒಂದು ಉತ್ಸವಸಮಾರಂಭ ಮತ್ತು ಅಂದು ಊರ ಜನರಿಗೆಲ್ಲ ಊಟಕ್ಕೆ ಏರ್ಪಡಿಸುವ ಒಂದು ವಿಧಿ: ಆದರ ಜೊತೆಗೇನೇ ಚೊಚ್ಚಿಲ ಬಸುರಿಗೆ ಮಾಡಬೇಕಾದ ಬುತ್ತಿರೊಟ್ಟಿಯ ಚಿಂತೆ ಅವನಿಗೆ ಹತ್ತಿತು (ಅಪೋಕ. ೬೮).

[ ಬುತ್ತಿ + ರೊಟ್ಟಿ ]

**ಬುತ್ತಿಹಿಡಿ** (ಕ್ರಿ). ಚಿಣ್ಣಿಕೋಲಾಟ, ಚೆಂಡಾಟ ಮುಂತಾದ ಆಟವಲ್ಲಿ ತೂರಿ ಬಂದ ಚಿಣ್ಣಿ, ಚೆಂಡು ಮೊದಲಾದುವುಗಳನ್ನು ಹಿಡಿ : ಅಶೋಕನ ಗುಂಪಿನ ರಂಗನು ಗೆರೆಯ ಹತ್ತಿರ ನಿಂತು ಚೆಂಡು ಎಸೆದನು . . . ಶಂಕರನು ಬುತ್ತಿಹಿಡಿದನು (ಕಪತ್ತ. ೪-೪೮); ಮೂರನೇ ಏಟಿನಲ್ಲಿ ರಾಮಚಂದ್ರ ಬುತ್ತಿಹಿಡಿದನು (ಕಳಹು. ೦೮).

[ ಬುತ್ತಿ + ಹಿಡಿ$_1$ (< ಪಿಡಿ$_1$) ]

**ಬುದಿಂಗನೆ** (ಅ). ಒಂದು ಅನುಕರಣಾವ್ಯಯ : ಕಂಠತಲ್ಲಿಂದ ಅವನು ಬುದಿಂಗನೆ ಎದ್ದು ನಿಂತ (ಶಶಿ. ೦೩) ; ಈಕೆ ಹಾದಿ ನೋಡಿದಳು. ಬುದಿಂಗನೆದ್ದು ಬಾಗಲಿಗೆ ಬಂದಳು (ಪಿರಾಕ. ೩೮). [ ? + – ಅನೆ$_1$ ]

**ಬುದಿಲ್** (ನಾ). ಒಂದು ಅನುಕರಣ ಶಬ್ದ : ' ಬುದಿಲೆನ್ ' ಪರಾ.

**ಬುದಿಲನೆ** (ಅ). ಒಂದು ಅನುಕರಣಾವ್ಯಯ : ಬುದಿಲನೊಗೆವಾನಂದ ಜಲವರಿವ ಜಲಕಣ್ಣೊಳೊದಗೆ . . . ಶ್ರೀಪದದ ಕಿಂಕರಭಾವದಿಂದ ಕಿನ್ನರಿಯ ಬ್ರಹ್ಮಯ್ಯ ನುತಿಸುತ್ತಿರ್ದನು (ಬಸವಪು. ೩೯-೬). [ಬುದಿಲ್ + – ಅನೆ$_1$]

**ಬುದಿಲೆನ್** (ಕ್ರಿ). ಬುದಿಲ್ ಎಂದು ಶಬ್ದಮಾಡು : ಬುದಿಲೆನೆ ತೋಜಿಯಿಂ ಪಾಯ್ದು ಮಾತಂಗ ಕಳಭಮಂ ಪಿಡಿದು . . . ತನ್ನ ಮಠಕ್ಕೆ ತಂದು (ಧರ್ಮಾಮೃ. ೦೨-೦೨೮) ; ಸಜಿಲೆಂಬ ಘರಿಲೆಂಬ ಗಿಟಿಲೆಂಬ ಬುದಿ [ಪಾಠಾಂ. ಘುರಿ]ಲೆಂಬ ಘೋರೆಂಬ ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟಿ (ಇಹರ. ರೇ. ೪೦-೨೩).

ಬುದಿಲ್ಬುದಿಲೆನ್ (ದ್ವಿರುಕ್ತಿ) : ದೊಪ್ಪುಧಡಲೆಂಬ ಬುದಿಲ್ಬುದಿಲೆಂಬ ಸಂಭ್ರಮಂ ನೆರೆದು . . . ಪಟಿಲ್ ಪಟಿಲ್ ಗರಿಗರಿಲೆಂಬ ನಿಷ್ಠುರ ರವಂ ದಿಗೆ ತಳ್ತಿಱಿದತ್ತು ಯುದ್ಧದೊಳ್ (ಗಂಕ. ೬-೬೫).

[ಬುದಿಲ್ + ಎನ್$_1$]

**ಬುದುಬುದ** (ನಾ). ನೀರ ಮೇಲಿನ ಗುಳ್ಳೆ ; ಬುದ್ಬುದ : ಬಸವನ ನುಡಿ ಶಿಲಾಶಾಸನವು ತಪ್ಪದ ನುಡಿಗಳಲ್ಲದೆ ಮಿಕ್ಕನಂತೆ ಕೆಡುತ್ತ ಹುಟ್ಟುತಿಪ ಕಡಲ ತೆರೆಗಳೆ ಬುದುಬುದು[ಪಾಠಾಂ. ಬುದ್ಬುದಂ]ಗಳೆ . . . ಗಾಳಿಯ ಮಿಂಚುಗಳೆ ಚಂದ್ರಮನೇ (ಬಸಪು. ೩೭-೨೫) ; ಜಲಸಮುದ್ರದ ಬುದು ಬುದಂ[ಪಾಠಾಂ. ಬುದ್ಬುದಂ]ಗಳೊ ತಿಳಿಯಲರಿದೆನೆ ಹರಿಗೆ ಮುಸುಕಿತು ಬಿಳಿಯ ಚಾರಿಗಳುಲಿವ ಘಂಟೆಯ ಬಿರುದಿನುಬ್ಬಟೆಯ ತಲಪಟದೊಳಿಂಕಿದರು (ಕುಮ್ಮಟ. ೪-೨೬) ; ಮಗನೆ ಕಲ್ಪಾಂತದ ಮಹಾಂಬುಧಿಯುಗ್ರವೀಚೀಭುಜದ ಭಂಗದಲಿ ಬುದುಬುದ[ಪಾಠಾಂ. ಬುದುಬುದಂ]ಗಳು ತೋಱಿ ಕೆಡುವಂದದಲಿ ತಾನಿದರಾಗುಹೋಗಿನ ಹದನನಱಿಯೆನು (ಜೈಮಿಗ. ೨-೨-೩೬).

[< ಸಂ. ಬುದ್ಬುದ]

**ಬುದುಬುದಿಸು** (ಕ್ರಿ). ಗುಳ್ಳೆಯ ಹಾಗೆ ಊದಿಕೊಳ್ಳು,—ಊದು : ಏಱುಗಳು ಬುದುಬುದಿಸಿ ರಕುತವ ಕಾಱಿ ಕಾಳಿಜ ಖಂಡ ನೆಣ ಜಗಿದೋಱಿ . . . ಪೂರಾಯ ಘಾಯದ ತಾರುಥಟ್ಟಿನ ಹೆಣನ ಮೆದೆ ಹೇರಾಳ ರಂಜಿಸಿತು (ಕುಮಾರರಾ. ೦೦-೬). 'ಬುಡುಬುಡಿಸು' ಪರಾ.

[ಬುದುಬುದ + – ಇಸು$_3$]

**ಬುದ್ದಣೆ** 'ಬುದ್ದಲಿ' ನೋ.

**ಬುದ್ದಣಿಗೆ** 'ಬುದ್ದಲಿಕೆ' ನೋ.

**ಬುದ್ದಲಿ**. ಬುಜ್ಜಣೆ, ಬುದ್ದಣೆ, ಬುದ್ಲಿ (ನಾ). ಎಣ್ಣೆ, ತುಪ್ಪ, ನೀರು ಮೊದಲಾದ ದ್ರವಪದಾರ್ಥಗಳನ್ನು ತುಂಬಿಡುವ ಚರ್ಮದ ಚೀಲ ; ಪಕ್ಕಲೆ : ಬುದ್ದಲಿ[ಪಾಠಾಂ. ಣೆ] ಹಾಡೆ ಪಕ್ಕಲೆ ಕಂಬಿಗಳ ಕೊಡನ ಧಾರೆಗಳ ಘೃತ ತೈಲ ಬಸೆಗಳ ಸಾರ ಕಟ್ಟಿತು (ಕೊರಟಾ. ೩-೬-೪) ; ಹೆದ್ದನಿ ಬುಡನಾಶ ಉದ್ದ ಗುಡ್ಡವು ತಂದ ಬುದ್ದಲಿ ನಡು ದೊಡ್ಡ ಕುಕ್ಷಿ ಶುದ್ಧ ಕುರೂಪಿಗಳ್ಬುದ್ಧಿಯೊಳಧಿಕರಲ್ಲಿದ್ದ ವೈಶ್ಯರ ಕೇರಿಗಳ ಮುಂದೆ ನೋಡುತ ಬರಲು (ಕರಾ. ೩-೦೦೪) ; ತಾಲ್ಲೂಕಿನ ಪ್ರತಿ ಕುಲಕರಣಿಯೂ ಒಂದೊಂದು ಬುದ್ದಲಿ (ಕುದುರೆಯ ಮೇಲೆ ಹೇರುವ ಚರ್ಮದ ಹುಟೆ) ತುಪ್ಪವನ್ನು ತಂದುಕೊಡಬೇಕೆಂಬ ಕಟ್ಟಲೆಯಾಯಿತು (ಕರಾ. ೩೬೪). ಬುಜ್ಜಣೆ : 'ಪೊಂಬುಜ್ಜಣೆ' ಪರಾ. ಬುದ್ದಣೆ : ಮೇಲಿನ 'ಬುದ್ದಲಿ' ಉಲ್ಲೇಖದ 'ತೊರರಾ' ಪ್ರಯೋಗದ ಪಾಠಾಂತರ ವನ್ನು ನೋಡಿ. ಬುದ್ಲಿ : ಹರಳೆಣ್ಣೆ ಬೆಣ್ಣೆಗಾಸಿದ ತುಪ್ಪ ಗೊಪ್ಪರಿ ಯೆಣ್ಣೆಗಳ ಬುದ್ಲಿಗಳ ತಿಂಥಿಣಿಯನ್ನು ನಿನ್ನೊಪ್ಪೆ ಬರಿಯ ಕೊಡಿಪೆನು ಕೂಳ ಕೂಲಿಯನು (ಅರ್ಜುಪ. ೬-೩೧).

[← ಹಿಂ. ಬುದಲಾ ; ಮರಾ. ಬುದಲಾ, ಬುದಲೀ, ಬುಧರಾ./ತುಳು. ಬುದ್ದಲಿ, ಬುದ್ಲೆ, ಬುದಲಿ, ಬುದುಲೆ, ಬುದ್ದೊಲಿ]

**ಬುದ್ದಲಿಕೆ**, ಬುಜ್ಜಣಿಗೆ, ಬುದ್ದಣಿಗೆ (ನಾ). ೧. = ಬುದ್ದಲಿ : "ಚರ್ಮ ಘರ್ಘರಮೆನಲು ಬುದ್ದಲಿಕೆ[ಪಾಠಾಂ. ಬುದ್ದಳಿಗೆ, ಬುಧಳಿಗೆ] ನಾಮಮುಕ್ಕಂ" (ಮಂಗರಾ. ೬೩. ೨೬) ; ಎಣ್ಣೆಯ ದೊಡ್ಡ ದೊಡ್ಡ ಬುದ್ದಲಿಕೆಗಳ ಮರೆಯಲ್ಲಿ ಕುಳಿತುಕೊಂಡೆ (ಮೇರಿವು. ೦೬೦). ಬುಜ್ಜಣಿಗೆ : ೧. ಸ್ತನವೆ ಬುಜ್ಜಣಿಗೆ [ಪಾಠಾಂ. ಬಿಜ್ಜಣಿಗೆ, ಬುದ್ದಲಿಕೆ] ಮೈ ಲಾವಣ್ಯರಸತೈಲ ವದನಾಕ್ಷಿಮುಕ ತೋಳೆ ದಂಡ ಘನಕಾಂತಿವೆತ್ತ ಮಾಣಿಕ್ಯದುಂಗುರವೆರಲ್ಕಿನುಗಿವ ಸೊಡರೊಪ್ಪಿದುವು (ಪೋಹತ ೦೫-೯.). ೨. (ಮದುವೆಯಲ್ಲಿ ವಧುವಿಗೆ ಕೊಡ ಬೇಕಾದ ಮಂಗಳಕರ ವಸ್ತುಗಳನ್ನು ತುಂಬಿರುವ) ಮುಚ್ಚಳದಿಂದ ಕೂಡಿದ ಬಿದಿರಿನ ಬುಟ್ಟಿ : ಸೆಜ್ಜೆಯ ಮನೆಗಳೊಳಗೆ ಚಿನ್ನಮಯವಾದ ಗುಜ್ಜರಿಗಾಲ ಮಂಚಗಳು ಬಿಜ್ಜಣಿಗೆಗಳೆಲೆಯಿಹ ಬುಜ್ಜಣಿಗೆಗಳ್ಬಜ್ಜಾಯ ವಿರುತಿಹವು (ಅಂಶತ. ೩-೦೨೪) ; ಮೂರುಂಡೆ ತಪಟ, ಒಂದು ಚಿಪ್ಪು ಹಣ್ಣು, ತೆಂಗಿನಕಾಯಿ, ತಾಲಿ, ಪರಿಗಡಗ—ಇವು ಬುಜ್ಜಣಿಗೆಯಲಿ ತುಂಬ ಬೇಕಾದ ಸಾಮಾನುಗಳು (ಶಮ್ಮರು. ೮೦). ಬುದ್ದಣಿಗೆ : ೧. ಕೃತ್ತಿ— ಸ್ನೇಹಪಾತ್ರ, ಉತು = ತೊಗಲ ಬುದ್ದಣಿಗೆ (ಪಾತಂಶ. ೪). [< ಬುದ್ದಲಿ]

**ಬುದ್ದಿ** (ನಾ). ೧. ತಿಳಿವಳಿಕೆ ; ಜ್ಞಾನ ; ಅರಿವು : ಉದ್ದವಾಗಿ ಬೆಳೆದವನಿಗೆ ಬುದ್ದಿ ಕಡಿಮೆ (ಗಾದೆ). ೨. ಜ್ಞಾನಿಗಳನ್ನು, ಹಿರಿಯ ರನ್ನು, ಪೂಜ್ಯರನ್ನು ಸಂಬೋಧಿಸುವಾಗ ಬಳಸುವ ಗೌರವಸೂಚಕ ವಾದ ಪದ,—ಶಬ್ದ : P ಮೈಸೂರಿನ ಅರಸುಮನೆತನದವರಲ್ಲಿ ಸಿರಿವಂತರನ್ನು ಸೇವಕರೂ ಮತ್ತು ಹಿರಿಯರನ್ನು ಕಿರಿಯರೂ ಸಂಬೋಧಿಸುತ್ತಿದ್ದ ರೀತಿಯಿದು. ಆ ಬಳಿಕ ಕಿರಿಯರು ಹಿರಿಯ ರನ್ನು, ಕೆಳಮಟ್ಟದವರು ಒಡೆಯರನ್ನು ಕರೆಯಲು ಇದು ಎಲ್ಲಾ ಸನ್ನಿವೇಶಗಳಲ್ಲೂ ಅನ್ವಯವಾಯಿತು. ಇದರ ಅವಶೇಷವೇ ಈಗಲೂ ಅಲ್ಲಲ್ಲಿ ಕಂಡು ಬರುವುದು : ಬುದ್ದಿಯವರು ಮರುಗಬಾರದು, ಸಂಕಟ ಪಡಬಾರದು (ಸಂಗಸಂ. ೦೩೩-೨೦) ; ಅರಮನೆಯ ಮೆಟ್ಟಿಲಿನಿಂದ

ಯಾರೋ ಕೂಗಿದರು . . . ಬುದ್ಧಿಯೋರು. ಪುಟ್ಟ ಬುದ್ಧಿಯವರು (ಪುಟ್ಮಕ. ೩) ; ಆ ಹಾಡು ಕೇಳಿದಿಯಾ, ರಂಗ ? ಕೇಳಿದೀನಿ ಬುದ್ಧಿ (ಶರೀಪ. ೦೦೪). [<ಸಂ. ಬುದ್ಧಿ]

**ಬುದ್ಧಿಗಲಿಸು** (ಕ್ರಿ). ತಿಳಿವಳಿಕೆಯನ್ನು ಹೇಳಿಕೊಡು ; ಬುದ್ಧಿ ಹೇಳು : ಪಾಠಕಲಿಸು : ಹೊದ್ದಿರಲುರ್ವಿಯು ಹೆಜಸಾರು ಸಾರೆಂದು ಬುದ್ಧಿಗಲಿಸಿ ಕೇಳದಿರಲು ಗದ್ದಿಸಿ ತೆರೆಗೆಯ್ಗಳಿಂದೆ ತಾಡಿಸುವಂತೆ ಗುದ್ದಿತು ಜಲನಿಧಿ ತಟವ (ಮೋಹತ. ೨-೬). [ಬುದ್ಧಿ + ಕಲಿಸು$_1$]

**ಬುದ್ಧಿವಂತ, ಬುದ್ಧಿವಂತ$_2$** (ನಾ). ಎಣ್ಣೆ ಮೊದಲಾದ ದ್ರವ ಪದಾರ್ಥಗಳನ್ನು ಕಿರಿದಾದ ಬಾಯೊಳಕ್ಕೆ ಸಾಗಿಸಲು ಉಪಯೋಗಿಸುವ ಅಗಲ ಕಿರಿದಾಗುತ್ತ ಹೋಗುವ ಕೊಳವೆ ; ಆಲಿಕೆ : ಒಂದೂವರೆ ಮೊಳದ ಉದ್ದ ಬಿದಿರಿನ ಕೊಳವೆಯನ್ನು ತೆಗೆದುಕೊಂಡು ಕೊನೆಯನ್ನು ಸಿವರು ಇಲ್ಲದ ಹಾಗೆ ನುಣುಪಾಗಿ ಮಾಡಿ, ಮತ್ತೊಂದು ಕೊನೆಗೆ ಒಂದು ಬುದ್ಧಿವಂತವನ್ನು (Funnel) ಸಿಕ್ಕಿಸಿ . . . ಪಿಚಕಾರಿ ಹೊಡೆದು ಮಲವಿಸರ್ಜನೆ ಮಾಡಿಸಬೇಕು (ಗ್ರಾವಚಿ. ೦೨೩). **ಬುದ್ಧಿವಂತ$_2$** : ಆ ಗೋಡೆಯ ಹತ್ತಿರ ಓರಣಗೊಂಡ ಒಂದು ಧಾನ್ಯದ ಮೂಡೆ . . . ಮಗ್ಗುಲಲ್ಲಿ ಸೀಮೆಯೆಣ್ಣೆಯ ಡಬ್ಬ, ಬುದ್ಧಿವಂತ, ಪಂಪು (ರಾಮೂಪ. ೦೦೧) ; ದಳ ವಲಯ ಕೊಳವೆಯಂತೆ ಉದ್ದವಾಗಿದ್ದು ಬುದ್ಧಿವಂತದ (ಫನ್ನಲ್) ಆಕಾರ ಹೋಲುತ್ತದೆ (ಕವಿಕೋ. I, ೫೬೦). [?]

**ಬುದ್ಧ** (ಗು). ೧. ತಿಳಿದ ; ಅರಿತ ; ಬಲ್ಲ. (ನಾ). ೨. ತಿಳಿದುದು ; ಅರಿವಿಗೆ ಬಂದುದು : "ಬುದ್ಧಂ, ಬುಧಿತಂ . . . ಅವಸಿತಂ, ಅವಗತಂ—೭ ತಿಳಿಯಲ್ಪಟ್ಟದ್ದು, ಅರಿಕೆಯಾಗಲ್ಪಡುವದು" (ಸಿಪ್ರಂಪಿ. ೩೫೨). ೩. ತಿಳಿದವನು ; ಜಾಣ ; ಬುದ್ಧಿವಂತ : ಈ ಪುಸ್ತಕ ಬುದ್ಧರಿಗಾಗಿ ಅಲ್ಲ. ಸಿದ್ಧರಿಗಾಗಿಯೂ ಅಲ್ಲ . . . ನನ್ನಂತಹ ಅಬುದ್ಧರ ಬುದ್ಧಿಯ ಪ್ರಚೋದನೆಗಾಗಿ ಮಾತ್ರ (ಶಪಾತ್ಮ. ix ಸಂಕಲ್ಪ). 'ನಿಶ್ಚಯಬುದ್ಧ' ಪರಾ. ೪. ಬೌದ್ಧ ಅಥವಾ ಜೈನ ಸಂನ್ಯಾಸಿ : "ಯತಿ ಬುದ್ಧಂ . . . ಜಿತಕಾಮಾಪ್ಯಯಂ" (ಪಾಣಾರ. ೪೩). ೫. ಪೂರ್ಣಜ್ಞಾನವನ್ನು ಸಂಪಾದಿಸಿದ ಶಾಕ್ಯವಂಶದ ದೊರೆಯಾದ ಸಿದ್ಧಾರ್ಥ ; ಬೌದ್ಧಮತ ಪ್ರವರ್ತಕ : ಇಪ್ಪತ್ತೈದು ಜನ ಅರ್ಹಂತ ಅಥವಾ ಬುದ್ಧರಲ್ಲಿ ಕೊನೆಯವನು : ವಿಷ್ಣುರೂಪವಾದ ಮತ್ಸ್ಯ, ಕೂರ್ಮ, ವರಾಹ, ನೃಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಎಂಬ ದಶಾವತಾರಗಳಲ್ಲಿ ಒಂಬತ್ತನೆಯ ಅವತಾರವನ್ನು ಧರಿಸಿದವನು ; P "ಬುದ್ಧರು ೨೪ : ದೀಪಂಕರ, ಕೊಂಡನ್ನ (ಕೌಂಡಿನ್ಯ), ಮಂಗಲ, ಸುಮನ, ರೆವತ (ರೈವತ), ಸೊಭಿತ (ಶೋಭಿತ), ಅನೋಮದಸ್ಸೀ (ಅನೋಮದರ್ಶೀ), ಪದುಮ (ಪದ್ಮ), ನಾರದ, ಪದುಮುತ್ತರ (ಪದ್ಮೋತ್ತರ), ಸುಮೇಧ, ಸುಜಾತ, ಪಿಯದಸ್ಸೀ (ಪ್ರಿಯದರ್ಶೀ), ಅತ್ಥದಸ್ಸೀ (ಅರ್ಥದರ್ಶೀ), ಧಮ್ಮದಸ್ಸೀ (ಧರ್ಮದರ್ಶೀ), ಸಿದ್ಧತ್ಥ (ಸಿದ್ಧಾರ್ಥ), ತಿಸ್ಸ (ತಿಷ್ಯ), ಫುಸ್ಸ (ಪುಷ್ಯ), ವಿಪಸ್ಸೀ (ವಿಪಶ್ಯೀ), ಸಿಖೀ (ಶಿಖೀ), ವೆಸ್ಸಭು (ವೇಸ್ತ್ರಭೂ), ಕಕುಸಂಧ (ಕಕುಸಂಧ), ಕೋಣಾಗಮನ (ಕನಕಮುನಿ), ಕಸ್ಸಪ (ಕಾಶ್ಯಪ) (ಬುದ್ಧವಂಸೋ—ಸಂ. ೨೧೮ ; ಭಾರಸಂ. ೯೩). ಬುದ್ಧರು —೨೫ : ಬುದ್ಧರು—೨೪+ಗೌತಮ ಬುದ್ಧ (ಸಂ. ೨೧೮)" (ಶ್ರೀವತ್ಸ. ೨೯೩) : "ಶೌದ್ಧೋದನಿಃ, ದಶಬಲಃ, ಬುದ್ಧಃ, ಶಾಕ್ಯಃ, ತಥಾಗತಃ . . . ಜಿನಃ, ಸಿದ್ಧಾರ್ಥಃ —ಈ ೧೧ ಬುದ್ಧನ ಪೆಸರ್" (ಹಲಾಯು. ೦೫-೬೫) ; ಬುದ್ಧನ ರಥಮಂ ಪೊಜಮಡಿಪ್ಪದ್ಧತಿಯಿಂ ದೇವಲೋಕದಿ ದೇವರ್ ಸನ್ನದ್ಧಪರರಾಗಿ ಪಲವುಂ ಪದ್ಧತಿಯಿಂ ಬಂದರಲ್ಲಿ ಸಂದೆಯಮುಂಟೇ (ಧರ್ಮಾಮೃ. ೬-೨೦೫) ; ದೈವಗಳು ಜಿನ ಬುದ್ಧರಾದೊಡೆ ಆವಗಂ ಮನುಜಾಕೃತಿಯೊಳಿಹರೇ ವಸುಧೆಯೊಳು ನಿಜಮಹತ್ವಮನುಡುಗಿ (ಬಸಪು. ೫೪-೭) ; ಬುದ್ಧ, ಶಂಕರ, ವಿದ್ಯಾರಣ್ಯ, ವಿವೇಕಾನಂದ ಇತ್ಯಾದಿ ಮಹಾಪುರುಷರು ಭಾರತೀಯಸಂಸ್ಕೃತಿಯ ಉದ್ಧಾರಕರು (ಮುಕ್ತಾರ. ೦೦೫ ಬಿ೩೪). [ಸಂ.]

**ಬುದ್ಧಜಾತಕ** (ನಾ). ಗೌತಮಬುದ್ಧನ ಜನ್ಮಾಂತರಗಳ ಕತೆ : ಆತನು ಹೇಳಿದ ಕಥೆಗಳು ಬುದ್ಧಜಾತಕಗಳಲ್ಲಿ ಹೇರಳವಾಗಿ ಕಂಡುಬರುತ್ತದೆ (ಕಥಕ. ೪). [ಸಂ.]

**ಬುದ್ಧದರ್ಶನ** (ನಾ). ಬೌದ್ಧಧರ್ಮ.—ಸಿದ್ಧಾಂತ : ಬುದ್ಧದರ್ಶನದಲ್ಲಿ ಬದ್ಧಹೃದಯಂ ವೈಶ್ಯ ಬುದ್ಧದಾಸಂಗೆ ಮತ್ತಾತನ ಮನೋರಮಣಿ ಬುದ್ಧದಾಸಿಗೆ ಜನಿಸಿ (ಸಪ್ತಕಾ. ೯-೫). [ಸಂ.]

**ಬುದ್ಧವಿಹಾರ** (ನಾ). ಬೌದ್ಧಭಿಕ್ಷುಗಳು ವಾಸಿಸುವ ಸ್ಥಳ : ನೆಗಬ್ದುತ್ತುಂಗಶಿವಾಲಯಪ್ರತತಿಯಾದಿತ್ಯಾಲಯಂ ಸಾಲೆ ವಿಷ್ಣುಗೃಹಂ ಬುದ್ಧವಿಹಾರ ಮಹಾಭವನಂ ನಾಗಾಲಯಂ ಬಾವಿ [ದಿ]ಗ್ಗಿಗೆ ಶತ್ರಂ ಕಜ್ ದೀಪಮಾಲೆಯೆನೆ ನಾನಾಧರ್ಮ್ಮವಂ ಮಾಡಿಸಲ್ (ಕ೪ಇ. XX, ೪೯-೩೯ ; 1076 ?). [ಸಂ.]

**ಬುದ್ಧಸಮಯ** (ನಾ). ಬೌದ್ಧಧರ್ಮ,—ಮಾರ್ಗ : ಈಶ್ವರನೆ ಕರ್ತನೆಂದು ವಸುಮತಿಯೊಳ್ ಪ್ರತಿಷ್ಠಿಸಿಯೆಂದುವುಂ ಜಿನ ಬುದ್ಧಸಮಯ ವಿದೆಂದುಲಿವ ಪೆಸರಿಲ್ಲದಂತಾತನು ತೊಡೆದು ಕಳೆದು (ಬಸಪು. ೫೦-೫೦). [ಸಂ.]

**ಬುದ್ಧಾವತಾರ** (ನಾ). ವಿಷ್ಣುವಿನ ದಶಾವತಾರಗಳಲ್ಲಿ ಒಂಬತ್ತನೆಯ ಅವತಾರ : "ಶ್ರೀಘನ—ಬುದ್ಧಾವತಾರ" (ಗಂಗಾವು. ೩೦೧). [ಸಂ.]

**ಬುದ್ಧಿ** (ನಾ). ೧. ತಿಳಿವಳಿಕೆ : ಅರಿವು : "ಪ್ರೇಕ್ಷಾ, ಪ್ರಜ್ಞಾ, ಪ್ರತಿಭಾ. . .ಬುದ್ಧಿಃ, ಮತಿಃ, ಮೇಧಾ, ಸಂಖ್ಯಾ, ಸಂವಿತ್ತಿಃ, ಉಪಲಬ್ಧಿಃ —ಈ ೧೩ ಬುದ್ಧಿ" (ಹಲಾಯು. ೫೫-೦೭೯) ; ನಿದ್ರೆಯಿಲ್ಲದೆ ಬಗೆ ಬೆರ್ಚಿ ಬುದ್ಧಿಯಣಮಿಲ್ಲದೆ ನಲ್ಲಳಗಲ್ಕೆಯಿಂದಮಾದಪವಳಲಚ್ಚಿಗಂ ಮಜುಕಮೆಂಬ ಪಜಿಂದೆ ಕನಲ್ಪ ಮುನ್ನೆ ಬೇಟದ ನದಿಗಂಡನಲ್ಲದಜಾಯಂ ಶ್ರಮಮಂ ಕಡುವೇಟಕಾಜಿರಾ (ಅಂಪು. ೦೨-೨೨) ; ಅನ್ತು ಸಮಸ್ತರಾಜ್ಯಮಂ ಮಾಡಿ ಬುದ್ಧಿಯನಪಗ್ಗಿರ್ಸ್ತೆಂದು ಪೇಳ್ದರು (ಎಕ. VII. ಶಿವಮೊ. ೪-೩೦ ; 1122) ; ಅಟ್ಟ ಮೇಲೆ ಒಲೆ ಉರಿಯಿತು, ಕಟ್ಟ ಮೇಲೆ ಬುದ್ಧಿ ಬಂತು (ಗಾದೆ). ೨. ಅಭಿಪ್ರಾಯ ; ಉದ್ದೇಶ : ಗಾಲವರ ಬುದ್ಧಿಯಂ ಕೇಳ್ದು ಕುಂತಳೇಂದ್ರಂ ಚಂದ್ರಹಾಸಪ್ರಭುಗೆ ತನ್ನ ಕುವರಿಯಂ ಗಾಂಧರ್ವವೈವಾಹವಿಧಿಯಿಂದ ರಾಜ್ಯಸಹಿತಂ ಧಾರೆಯೆರೆದಿತ್ತು (ತಂದ್ರಸ. ೦೦೬-೫). ೩. ಮನಸ್ಸು : ತಿಂಗಳಾರಕೆ ಮರಳಿ ಬಪೆನೆಂಬ ಭಾಷೆಯಂ ಭಾವಿಸುತೆ, ಭಾಮಿನಿ ಸಮಾಧಾನಬುದ್ಧಿಯಿಂ ಮೇಲೇಳುತಲ್ಲಿಂ ನಡೆದು ಶಿವಾಯತನಕ್ಕೆ (ಹತ್ರಾಂಗ. ೫೬-೦೫೩೯). ೪. ಹಿರಿಯರನ್ನು, ಪೂಜ್ಯರನ್ನು ಗೌರವಾರ್ಥವಾಗಿ ಸಂಬೋಧಿಸುವಾಗ ಬಳಸುವ ಶಬ್ದ : ಮಂದಾರಧ್ವಜನು ಬುದ್ಧೀಯೆಂದು ಕರವಂ ಮುಗಿದು (ಕಗಂಂ. ೩೫-೩) : "ಹಾದೇನಯ್ಯಾ ?" ಎಂದು ಅರಸು ಕೇಳಿದರೆ "ಅದು ಹಾದು ಬುದ್ಧೀ" ಎಂದೇ ನುಡಿವರು (ಮುದ್ರಾಮಂ. ೨೯) : ಅಷ್ಟು ಹೊತ್ತಿಗೆ ಹೊರಗಡೆ ಯಾರೋ "ಬುದ್ಧಿ" ಎಂದರು (ಮಸಾಂ. ೭೨). ೫. [ಜ್ಯೋತಿ] ಲಗ್ನದಿಂದ ಪಂಚಮರಾಶಿ : ತ್ರಿತ್ರಿಕೋಣಾಖ್ಯಮಾ ನವಮಂ ಪಂಚಮರಾಶಿ ಬುದ್ಧಿಯೆನಕುಂ . . . ಲಗ್ನಕ್ಕಷ್ಟಮಸ್ಥಾನಂ (ಜಾತತ. ೦-೩೫). ೬. [ತರ್ಕಶಾ] ಸಾಂಖ್ಯಮತದಂತೆ ಇಪ್ಪತ್ತೈದು ತತ್ತ್ವಗಳಲ್ಲಿ ಹುಟ್ಟುವ ಮನಸ್ಸು, ಅಹಂಕಾರ, ಬುದ್ಧಿ ಎಂಬ ಆತ್ಮನ ಮೂರು ಬಗೆಯ ಅಂತಃಕರಣಗಳಲ್ಲಿ ಒಂದು :

ಬುದ್ಧಿ, ಅಹಂಕಾರ, ಮನಸ್ಸು ಎಂದು ಮೂರು ಅಂತಃಕರಣಗಳು (ಹಿಂದಣಾ. ೬೦). ೭. ಪಂಚಭೂತ ಸಮುದಾಯದಿಂದ ಹುಟ್ಟುವ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತವೆಂಬ ಆತ್ಮನ ನಾಲ್ಕು ಅಂತಃಕರಣಗಳಲ್ಲಿ ಒಂದು ; P ಸಾಂಖ್ಯಮತದವರ ಅಭಿಪ್ರಾಯದ ಪ್ರಕಾರ ಅಂತಃಕರಣಗಳು ಮೂರಾದರೆ ಶ್ರೀಶಾಂಕರಸಿದ್ಧಾಂತದ ಪ್ರಕಾರ ಆತ್ಮನ ಅಂತಃಕರಣಗಳು ನಾಲ್ಕು. ಅವುಗಳ ವಿವರಣೆ ಹೀಗಿದೆ: "ಚಂಚಲ ಹುಟ್ಟುವುದು ಮನಸ್ಸು. ನಾನು ನನ್ನದು ಎಂಬುವುದು ಅಹಂಕಾರ, ಇದು ಇಂತಹದೆಂದು ನಿಶ್ಚಯಿಸುವುದು ಬುದ್ಧಿ, ಕೇವಲ ಭಗವಂತನಡಿಗಳಲ್ಲಿ ಸ್ಥಿರವಾಗಿ ನಿಲ್ಲುವ ಬುದ್ಧಿಯೇ ಚಿತ್ತವೆನಿಸುವುದು. ಬುದ್ಧಿಯಲ್ಲಿ ಸುಬುದ್ಧಿ ದುರ್ಬುದ್ಧಿಯೆಂಬೆರಡು ವಿಧಗಳುಂಟು. ಪುಣ್ಯಕರ್ಮದಲ್ಲಿ ಪ್ರವರ್ತಿಸುವುದು ಸುಬುದ್ಧಿ. ಪಾಪಕರ್ಮಪ್ರವೃತ್ತಿಯೇ ದುರ್ಬುದ್ಧಿ" (ಜಗಾರ. ೫-೨೫ ಟೀಕೆ ಪುರ್ಣ) : ಪೃಥ್ವಿ ಅಪ್ಪು ತೇಜ ವಾಯು ಆಕಾಶವೆಂಬ ಪಂಚಭೌತಿಕ ಮನ ಬುದ್ಧಿ ಚಿತ್ತ ಅಹಂಕಾರ ಚತುಷ್ಟಯಕರಣಂಗಳು ಸತ್ವ ರಜ ತಮದಲ್ಲಿ ಆತ್ಮನ ಎತ್ತಲೆಂದಱಿಯರು (ಅವತಂ. ೪. ೮೪-೧೯೯). ೮. (ಕೈವಲ್ಯನವನೀತ ಕಾರರ ಪ್ರಕಾರ) ಆತ್ಮನ ಅಂತಃಕರಣಗಳಾದ ಜ್ಞಾತೃ, ಅಹಂಕಾರ, ಚಿತ್ತ, ಬುದ್ಧಿ ಮತ್ತು ಮನಸ್ಸು ಎಂಬ ಐದು ಬಗೆಗಳಲ್ಲಿ ಒಂದು : ಬಱಿಯ ನಭದೇ ಜ್ಞಾತೃ ಭೂಕಳಿವರೆಯೆ ಹಮ್ಮು ಜಲಾಂಶ ಕೂಡಲ್ಕಿರಿವ ಚಿತ್ತ ಕೃಶಾನುಭಾಗದಿ ಬುದ್ಧಿ ಮಾರುತನ ಹೊರೆಗಲಸಿ ಮನವಾಯಿತಂತಃಕರಣವೈದೀ ವ್ಯೋಮತತ್ತ್ವದ ಪರಮಸಾರದಲುದಿಸಿದವು (ಅಪ್ಪ.ತ. ೪-೧೪). ೯. ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ ಮತ್ತು ಸಂಸ್ಕಾರ ಎಂಬ ಆತ್ಮನ ನವವಿಧ ಗುಣಗಳಲ್ಲಿ ಒಂದು : ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ ಮತ್ತು ಸಂಸ್ಕಾರ—ಇವುಗಳೆಲ್ಲ ಆತ್ಮನ ಗುಣಗಳೆಂದು ತಾರ್ಕಿಕರು ಹೇಳುತ್ತಾರೆ (ಬ್ರಹ್ಮಣಾ. ೨-೩೪). ೧೦. ನ್ಯಾಯಶಾಸ್ತ್ರದ ಪ್ರಕಾರ ಹೇಳಿರುವ ಪ್ರಮೇಯದ ಹನ್ನೆರಡು ಭಾಗಗಳಾದ ಆತ್ಮ, ಶರೀರ, ಇಂದ್ರಿಯ, ಅರ್ಥ, ಬುದ್ಧಿ, ಮನಸ್ಸು, ಪ್ರವೃತ್ತಿ, ದೋಷ, ಪ್ರೇತ್ಯಭಾವ, ಫಲ, ದುಃಖ ಮತ್ತು ಅಪವರ್ಗ ಎಂಬಿವುಗಳಲ್ಲಿ ಒಂದು : ನ್ಯಾಯಶಾಸ್ತ್ರದಲ್ಲಿ ಹೇಗೆಂದರೆ—ಆತ್ಮ, ಶರೀರ, ಇಂದ್ರಿಯ, ಅರ್ಥ, ಬುದ್ಧಿ . . . ಅಪವರ್ಗವೆಂದು ಹನ್ನೆರಡು ವಿಧವಾಗಿ ಪ್ರಮೇಯವನ್ನು ಒಂಬತ್ತನೆಯ ಸೂತ್ರದಲ್ಲಿ ವಿಭಾಗ ಮಾಡಿರುವರು (ಹಿಂದಣಾ. ೦೦೩). ೧೧. [ದ್ವೈತ] ಹತ್ತು ಬಗೆಯ ಪದಾರ್ಥಗಳಲ್ಲಿ ಒಂದಾದ ದ್ರವ್ಯದ ಇಪ್ಪತ್ತು ಬಗೆಗಳಲ್ಲಿ ಒಂದು : ಪರಮಾತ್ಮ, ಲಕ್ಷ್ಮಿ, ಜೀವಾತ್ಮ, ಅವ್ಯಾಕೃತಾಕಾಶ, ಪ್ರಕೃತಿ, ಗುಣತ್ರಯ, ಮಹತತ್ತ್ವ, ಅಹಂಕಾರತತ್ತ್ವ, ಬುದ್ಧಿ, ಮನಸ್ಸು, ಇಂದ್ರಿಯ, ಮಾತ್ರಾ, ಭೂತ, ಬ್ರಹ್ಮಾಂಡ, ಅವಿದ್ಯೆ, ವರ್ಣ, ಅಂಧಕಾರ, ಕಾಲ, ವಾಸನಾ, ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಣಾ. ೨೬೩). 'ದ್ರವ್ಯ' ಪರಾ. ೧೨. ಹತ್ತು ಪದಾರ್ಥಗಳಲ್ಲಿ ಒಂದಾದ ಗುಣದ ನಲವತ್ತು ಬಗೆಗಳಲ್ಲಿ ಒಂದು ವಿಧ : ಸ್ನೇಹ, ಶಬ್ದ, ಬುದ್ಧಿ, ಸುಖ . . . ಶೌರ್ಯ, ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಣಾ. ೨೬೩). 'ದ್ರವತ್ವ' ಪರಾ. ೧೩. [ಶೈವ] ಶೈವಾಗಮದಲ್ಲಿರುವ ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯೆ, ಕಾಲ, ನಿಯತಿ, ಕಲೆ, ವಿದ್ಯೆ, ರಾಗ, ಪುರುಷ, ಪ್ರಕೃತಿ, ಗುಣ, ಬುದ್ಧಿ, ಅಹಂಕಾರ, ಚಿತ್ತ, ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ, ವಾಕ್ಕು, ಪಾದ, ಪಾಣಿ, ಪಾಯು, ಉಪಸ್ಥ, ಶಬ್ದತನ್ಮಾತ್ರ, ಸ್ಪರ್ಶತನ್ಮಾತ್ರ, ರೂಪತನ್ಮಾತ್ರ, ರಸತನ್ಮಾತ್ರ, ಗಂಧತನ್ಮಾತ್ರ, ನಭಸ್ಸು, ವಾಯು, ವಹ್ನಿ, ಜಲ, ಭೂಮಿ, ಎಂಬ ಮೂವತ್ತಾರು ತತ್ತ್ವಸಮುದಾಯದಲ್ಲಿ ಒಂದು : ಷಟ್ತ್ರಿಂಶತ್ತತ್ತ್ವಗಳು:—ಶಿವ, ಶಕ್ತಿ . . . ಬುದ್ಧಿ, ಅಹಂಕಾರ, ಮನಸ್ಸು . . . ಜಲ, ಭೂಮಿಯು : (ಇವು ಶೈವಾಗಮದಲ್ಲಿರುವ ತತ್ತ್ವಸಂದೋಹಗಳು) (ಚಾರದ. ೬೩ ೮೨೫). ೧೪. [ಜೈನ] ಬುದ್ಧಿ, ತಪ, ವಿಕ್ರಿಯೆ, ಔಷಧ, ರಸ, ಬಲ ಮತ್ತು ಅಕ್ಷೀಣ ಎಂಬ ಏಳುಬಗೆಯ ಋದ್ಧಿಗಳಲ್ಲಿ ಒಂದು : ತ್ರೈಲೋಕ್ಯ ಕ್ಷೋಭಕಾರಣ ತೀರ್ಥಕರ ಪುಣ್ಯಹೇತುಗಳಪ್ಪ ಷೋಡಶಭಾವನೆಗಳಂ ಭಾವಿಸಿ ಭಾವನೆಯೊಳಾದ ಬುದ್ಧಿತಪೋವಿಕ್ರಿಯೌಷಧಿ ರಸ ಬಲಾಕ್ಷೀಣಾಭಿಧಾನ ಸಪ್ತರ್ದ್ಧಿಗಳೊಳಂ ನೆಱೆದು (ಆದಿಪು. ೬-೩೩ವ).

ಬುದ್ಧಿಪೂರ್ವಕ = ಅರಿವಿನಿಂದ ಕೂಡಿದುದು : ಶ್ರುತಿಯನ್ನು ನೆಚ್ಚದೆ ಬುದ್ಧಿಪೂರ್ವಕವಾದ ವಿಚಾರವೇ ತತ್ತ್ವಕ್ಕೆ ಆಧಾರವೆಂಬ ವಾದವೇ ಬುದ್ಧ್ಯಾರೂಢವೆಂದು ಹೇಳುವುದಾದರೆ ಆಧುನಿಕ ತತ್ತ್ವಗಳನ್ನೆಲ್ಲ ಬುದ್ಧ್ಯಾರೂಢವಾದಗಳೆಂದು ಪರಿಗಣಿಸಬೇಕಾಗುತ್ತದೆ (ಕವಿಕಾ. I, ೩೩೯). ಬುದ್ಧಿಮಾತು = ವಿವೇಕದಿಂದ ಕೂಡಿದ ಮಾತು; ಹಿತವಚನ : ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮ (ಪುರಂದ. ೪-೦೩೨ ಪಲ್ಲವಿ) : ನಿನಗೆ ಒಂದು ಬುದ್ಧಿಮಾತು ಹೇಳುವುದಕ್ಕೆ ನಾನು ನಿನ್ನ ಮನೆಯ ಬಾಗಿಲ ವರೆಗೆ ಬರಬೇಕಾಯಿತು (ಕನಸಂ. ೨೬೨). ಬುದ್ಧಿಯೊಡೆಯ = ಅರಿವುಳ್ಳವನು ; ವಿವೇಕಿ : ಶಾಸ್ತ್ರಜ್ಞರುಂ ಬುದ್ಧಿಯೊಡೆಯರುಂ ಯೋಗ್ಯರುಮಪ್ಪಂತು ಮಾಡಿಂ (ಪಂಪಭಾ. ೩-೦೩) ; ಇನ್ನುಂ ಪಾಂಡವರೊಳರೆಂಬ ಮಾತುಗಳಂ ಬುದ್ಧಿಯೊಡೆಯರಾರಾನುಂ ನುಡಿವರ್ (ಪಂಪಭಾ. ೩-೩೨ ವ). [ಸಂ.]

ಬುದ್ಧಿಋದ್ಧಿ (ನಾ). [ಜೈನ] ಬುದ್ಧಿ, ಕ್ರಿಯಾ, ವಿಕ್ರಿಯಾ, ತಪ, ಬಲ, ಔಷಧಿ, ರಸ ಮತ್ತು ಅಕ್ಷೀಣ ಎಂಬ ಎಂಟು ಬಗೆಯ ಋದ್ಧಿಗಳಲ್ಲಿ ಒಂದು ; ಅಪರಿಮಿತವಾದ ಬುದ್ಧಿಶಕ್ತಿ ; P ಈ ಬುದ್ಧಿಋದ್ಧಿಯಲ್ಲಿ ಹದಿನೆಂಟು ಬಗೆಗಳಿವೆ. ಅವು ಯಾವುವೆಂದರೆ "ಕೇವಲಜ್ಞಾನ, ಅವಧಿಜ್ಞಾನ, ಮನಃಪರ್ಯಯಜ್ಞಾನ, ಬೀಜಬುದ್ಧಿ, ಕೋಷ್ಠಬುದ್ಧಿ, ಪದಾನುಸಾರಿತ್ವ, ಸಂಭಿನ್ನ ಶ್ರೋತೃತ್ವ, ದೂರಾಸ್ವಾದನ, ದೂರಸ್ಪರ್ಶ, ದೂರದರ್ಶನ, ದೂರಶ್ರವಣ, ದೂರಘ್ರಾಣ, ದಶಪೂರ್ವತ್ವ, ಚತುರ್ದಶಪೂರ್ವತ್ವ, ಅಷ್ಟಾಂಗಮಹಾನಿಮಿತ್ತತ್ವ, ಪ್ರಜ್ಞಾಶ್ರವಣತ್ವ, ಪ್ರತ್ಯೇಕಬುದ್ಧಿತ್ವ, ವಾದಿತ್ವ" (ಕೈಶಕೋ. ೦೮೬): ಕೇವಲಜ್ಞಾನಾವಧಿಮನಃ ಪರ್ಯಯಜ್ಞಾನಂ . . . ಪ್ರತ್ಯೇಕಬುದ್ಧಿತ್ವಂ ಪ್ರವಾದಿತ್ವಮೆಂದಷ್ಟಾದಶಪ್ರಕಾರಮಪ್ಪ ಬುದ್ಧಿಋದ್ಧಿಯೊಳಂ . . . ನೆಱೆದು (ಶಂಪ್ರಪು. ೦೪-೩೦ ವ) ; ಬುದ್ಧಿಋದ್ಧಿಯುಂ ಕ್ರಿಯಾಋದ್ಧಿಯುಂ ವಿಕ್ರಿಯಾಋದ್ಧಿಯುಂ ತಪೋಋದ್ಧಿಯುಂ ಬಲಋದ್ಧಿಯುಂ ಔಷಧಋದ್ಧಿಯುಂ ರಸಋದ್ಧಿಯುಂ ಅಕ್ಷೀಣಋದ್ಧಿಯುಂ ಎಂದೆಂಟು ಭೇದಮಕ್ಕುಂ (ಜಗಾರ. ೩೮೬). [ಸಂ.]

ಬುದ್ಧಿಕಲಿ 'ಬುದ್ಧಿಗಲಿ' ನೋ.

ಬುದ್ಧಿಕಲಿಸು 'ಬುದ್ಧಿಗಲಿಸು' ನೋ.

ಬುದ್ಧಿಗಮ್ಯ (ಗು). ೧. ಬುದ್ಧಿಗೆ ಮಾತ್ರ ತಿಳಿಯುವ : ಭಾಷಾಜ್ಞಾನ—ವ್ಯಾಕರಣಗಳ ಬಲದಿಂದ ಉಯ್ಯಬಲ್ಲೆನೇದೊಡೆ, ಬುದ್ಧಿಗಮ್ಯ ಆನಂದ ! (ಕರ್ಣಾಕ. ೦೦೩). (ನಾ). ೨. ಬುದ್ಧಿಗೆ ಮಾತ್ರ ತಿಳಿಯುವಂಥದು ; ತಿಳಿವಳಿಕೆಗೆ ಮಾತ್ರ ಗೋಚರಿಸುವಂಥದು : ಅಧ್ಯಯನದ ಫಲವಾದ ಜ್ಞಾನಸಂಪಾದನೆ ಬುದ್ಧಿಗಮ್ಯವಾದರೆ . . . ಪ್ರಕೃತಿಸೌಂದರ್ಯದ ಆನಂದಾನುಭವ ಹೃದ್ಗಮ್ಯ (ಜಾತ್ರಾರ. ೮೪ ಪಿ೯೬೪). [ಸಂ.]

ಬುದ್ಧಿಗಲಿ, ಬುದ್ಧಿಕಲಿ (ಕ್ರಿ). ತಿಳಿವಳಿಕೆಯನ್ನು ಹೊಂದು.—ಪಡೆ : ಹುಟ್ಟಿ ನಾ ಬುದ್ಧಿಗಲಿತು ನಿನ್ನಾಜ್ಞೆಯ ಕಟ್ಟನೊಳಿಹೆನು (ಮೋಹತ. ೨೬-೬೩). ಬುದ್ಧಿಕಲಿ : ಹುಡುಗೀನ ಮನೆಗೆ ಕರೆದುಕೊಂಡು ಬಂದು

ಏನೋ ಬುದ್ಧಿಕಲೀಲಿ ಎಂದು ಎರಡು ಏಟು ಹೊಡೆದರೆ (ಶ್ರಿಕ. ೦೨೦).
[ಬುದ್ಧಿ+ಕಲಿ$_1$ (<ಕಲ್$_1$)]

**ಬುದ್ಧಿಗಲಿಸು, ಬುದ್ಧಿಕಲಿಸು** (ಕ್ರಿ). ೧. ತಿಳಿವಳಿಕೆಯನ್ನುಂಟುಮಾಡು : ಅರಿವನ್ನುಂಟುಂಮಾಡು : ಇನ್ನಾಂ ನಿನಗೇನೆಂದು ಬುದ್ಧಿಗಲಿಸಿದಪೆಂ ನಿನಗೆ ಕ್ಷೇಮಮುಂ ಎನಗೆ ತೇಜಮುಮೆಂತಕ್ಕುಮಂತೆ ಮಾಡು (ಕಂಕಕಂ. ೯೩-೨); ದಂಡಿಬೊಳೇಗಳುಂ ಪ್ರಾಣಕಾಂತಸಟ್ಟುಕೊಂಡಿರಿ ತೊಲಗಬೇಡೆ ನಾತೆ ಮಿಂಡಿಯರಿಗೆ ಬುದ್ಧಿಗಲಿಸುವಂತೆಲವಳ್ಳಿ ಮುಂಡಿಗೆಗಳನಡರಿದುವು (ಕೋಚಕ. ೨೯-೫೩). ೨. ತಿಳಿವಳಿಕೆಯನ್ನುಂಟುಮಾಡುವ ಉದ್ದೇಶದಿಂದ ಶಿಕ್ಷಿಸು.–ದಂಡಿಸು.– ಪೆಟ್ಟುಕೊಡು : ಕೋಪದಿಂದ ಅವನನ್ನೊದೆದು ನೆಲಕ್ಕೆ ಕೆಡಹಿ ಚೆನ್ನಾಗಿ ಬುದ್ಧಿಗಲಿಸಿದನು (೯೭೪. ೬೦). **ಬುದ್ಧಿಕಲಿಸು** : ೧. ಈ ಮಾರ್ಗದಲ್ಲಿ ನೀವು ಬುದ್ಧಿಕಲಿಸಿದಂಥ ಈ ವೃತ್ತಾಂತವು ಬಹು ಸಂಗ್ರಹವಾಗಿರುವುದರಿಂದ. . .ವಿವರವಾಗಿ ನಿರೂಪಿಸಬೇಕು (ಸಕ್ಕ. ೬); ತನಗರಿವಿಲ್ಲವೆಂಬರಿವಿರುವಾತನು ಮುಗ್ಧನು ನೀ ಬುದ್ಧಿಕಲಿಸು (ಶಂಕರ. ೦೩೦-೩೬). ೨. ನಾಲ್ಕು ಲಾತ ಬಿಗಿದು ಇವನಿಗೆ ಬುದ್ಧಿ ಕಲಿಸೋದು ಬಿಟ್ಟು ಇವನ ಮಾತುಗಳನ್ನೆಲ್ಲ ತಲೆಗೆ ಹಾಕಿಕೊಳ್ಳುತ್ತಿರುವರಲ್ಲಾ (ಹೊಸೆ. ೦೦೬). [ಬುದ್ಧಿ + ಕಲಿಸು$_1$]

**ಬುದ್ಧಿಗುಡು** (ಕ್ರಿ). ತಿಳಿವಳಿಕೆಯನ್ನು ನೀಡು : ಮೆಲ್ಲಗೆ ಪೋಗಿನ್ನುಡಿದಪ್ಪದೊಳ್ನಡುಂ ಚಪ್ರಾಗ್ಭಾರದಿಂದೆಂದು ಬುದ್ಧಿಗುಡುತ್ತುಂ ನಡೆತರ್ಪ ಚೇಟಿಯರ ಮಾತಂ ವಿಾಜಿ. . .ಮೃಗಾಕ್ಷಿ ಮರಿತಂದಬ್ಜಾಕ್ಷನಂ ಮೋಡಿದಳ್ (ಜಗ. ೦೬-೬೨). [ಬುದ್ಧಿ + ಕುಡು$_1$ (<ಕೊಡು$_1$)]

**ಬುದ್ಧಿಗೆಡು** (ಕ್ರಿ). ಆಲೋಚಿಸುವ ಶಕ್ತಿಯನ್ನು ಕಳೆದುಕೊಳ್ಳು; ವಿಚಾರಹೀನವಾಗು : ವಿವೇಕವಿಲ್ಲದಾಗು : ಮತಿಗೆಟ್ಟರ್ ಧೃತಿಗೆಟ್ಟರ್ ಗತಿಗೆಟ್ಟರ್ ಬುದ್ಧಿಗೆಟ್ಟರುನ್ನತಿಗೆಟ್ಟರ್ (ಗಂ೯. ೬-೨೩); ಸಲೆ ಮಾಯಾಮೋಹದಿಂದಬ್ಜಾದಿಸೆ ನೆಟ್ಟ್ ಧೃತಿಗೆಟ್ಟುಂ ವೃಥಾ ಧಾತುಗೆಟ್ಟುಂ. . .ಕರಂ ಬುದ್ಧಿಗೆಟ್ಟುಂ (ಕಣ್ಣಕ. ೫೩); ಇವನೊಬ್ಬ ಬುದ್ಧಿಗೆಟ್ಟ ಕತಮೊಂಡ ಅಷ್ಟೆ! (ಎಕೆಡೊ. ೦೬). [ಬುದ್ಧಿ + ಕೆಡು$_1$]

**ಬುದ್ಧಿಗೇಡಿ** (ನಾ). ತಿಳಿವಳಿಕೆ ಇಲ್ಲದ ವ್ಯಕ್ತಿ; ತಿಳಿಗೇಡಿ : ಈ ನಾಚಿಕೆ ಬಿಟ್ಟ ತುಂಗಕ್ಕ, ಆ ಬುದ್ಧಿಗೇಡಿ ವೆಂಕಟರಮಣ, ಇನ್ನಾರಾರೋ ಎಂದರೇನೇ ಇಡಿಯ ಊರಾಗಿಬಿಟ್ಟಿತೇ ? (ಮೂರುದಾ. ೦೩೯).
[ಬುದ್ಧಿ + ಕೇಡಿ$_1$]

**ಬುದ್ಧಿಗೇಡಿತನ** (ನಾ). ತಿಳಿವಳಿಕೆ ಇಲ್ಲದಿರುವಿಕೆ : ಮತಿಹೀನತ : ಬುದ್ಧಿಗೇಡಿತನದಿಂದ ಪರಮಾರ್ಥದ ಸುಖವ ಹೋಗಲಾಡಿಸಿಕೊಂಡು . . . ಮನ ಹೇಸದೆ ಬಂದಿರಣ್ಣ (ಮಹಾದೇ. ೪. ೬೭-೦೬೬); ಒಬ್ಬರೊಬ್ಬರ ಮನಸ್ಸನ್ನು ತಿಳಿಯದ ಹೊರತು ಮದುವೆಯಂಥ ಮಹತ್ವದ ಸಂಬಂಧವನ್ನು ಬೆಳಸುವುದು ಕೇವಲ ಬುದ್ಧಿಗೇಡಿತನ (ಕಮಪ. ೦೦೦).
[ಬುದ್ಧಿಗೇಡಿ +–ತನ]

**ಬುದ್ಧಿಜೀವಿ** (ನಾ). ಜೀವನದಲ್ಲಿ ವಿವೇಕಕ್ಕೆ ಪ್ರಾಧಾನ್ಯತೆ ನೀಡುವವನು: ಬೌದ್ಧಿಕಕ್ರಿಯೆಗಳಲ್ಲಿ ಆಸಕ್ತಿಯುಳ್ಳವನು : ಬುದ್ಧಿಜೀವಿಯಾದ ಈತನನ್ನು ಕ್ರಮವರಿತ ಮಾರ್ಗದಲ್ಲಿ ನಿರ್ದೇಶಿಸುವುದು ಶಿಕ್ಷಣದ ಉದ್ದೇಶ (ಕೊ೯೦ಬ. ೬೫); ಕನ್ನಡಿಗರು ಭಾವಜೀವಿಗಳು, ಬುದ್ಧಿಜೀವಿಗಳಲ್ಲ (ಪಹಾಪ. ೦೦). [ಸಂ. ಬುದ್ಧಿಜೀವಿನ್]

**ಬುದ್ಧಿದಾರಿದ್ರ್ಯ** (ನಾ). ವಿವೇಕವಿಲ್ಲದಿರುವುದು ; ಜ್ಞಾನವಿಲ್ಲದಿರುವುದು: ಶ್ರೀಸಾಮಾನ್ಯನ ಹೃದಯದಾರಿದ್ರ್ಯ, ಕರ್ತವ್ಯದಾರಿದ್ರ್ಯ, ಬುದ್ಧಿದಾರಿದ್ರ್ಯಗಳು ಕರುಣೆಯ ಹಾದಿಯನ್ನು ಕಾಯುತ್ತ ಅನಿರ್ವಾಹದ ಬದುಕಿಗೆ ಅಳಾಗಿರುವವರೆಗೆ 'ಕಾದಂಬರಿ'ಗಳು ಏನು ಕೆಲಸ ಮಾಡಿಯಾವು? (ಕಂಪಹ. ೬ ಕೃಷ್ಣಕಕ). [ಸಂ.]

**ಬುದ್ಧಿನಾಶ** (ನಾ). ತಿಳಿವಳಿಕೆಯು ಇಲ್ಲವಾಗುವುದು : ಸ್ಮೃತಿವಿಭ್ರಮದಿಂದ ಬುದ್ಧಿನಾಶವಾಗುತ್ತದೆ (ರಮಗಾ. ೦೩೨). [ಸಂ.]

**ಬುದ್ಧಿನಿರೂಪ** (ನಾ). ಪ್ರಭುವಿನ ಆಜ್ಞೆ; ರಾಜಾಜ್ಞೆ : ಮಹಾಸ್ವಾಮಿಯವರ ಬುದ್ಧಿನಿರೂಪದ ಮೇರಿಗೆ ವಾಮನಮುದ್ರೆ ಶಿಲಾಪ್ರತಿಷ್ಠೆಯು ಮಾಡಿದ ಶಿಲಾಶಾಸನ (ಎ೯. XVI. ಸಕ್ಕಾ. ೯೫-೨೩; ?). [ಸಂ.]

**ಬುದ್ಧಿನಿಷ್ಠತೆ** (ನಾ). ಅರಿವಿನ ಬಗೆಗಿರುವ ಆಸಕ್ತಿ,–ಶ್ರದ್ಧೆ : ಬುದ್ಧಿನಿಷ್ಠತೆ, ಹೃದಯಸಂಪನ್ನತೆ, ಸಾತ್ವಿಕತೆ, ಸಹಜಸಹಾನುಭೂತಿ, ಸಾಮರಸ್ಯದ ದಾರಿಯ ಸಂಕಲ್ಪ ಇಲ್ಲವೆ ಕ್ರಿಯಾಶಕ್ತಿ–ಈ ಐದು ಶಕ್ತಿಗಳನ್ನು ಮಾನವನು ತನ್ನಲ್ಲಿ ಬೆಳಸಿಕೊಳ್ಳಬೇಕಾಗಿದೆ (ಪಕ್ಕಾ. ೦೨). [ಸಂ. ಬುದ್ಧಿನಿಷ್ಠತಾ]

**ಬುದ್ಧಿಪೇಳ್** 'ಬುದ್ಧಿವೇಳ್' ನೋ.

**ಬುದ್ಧಿಬಲ** (ನಾ). ೧. ಅರಿವಿನ ಸಾಮರ್ಥ್ಯ,–ಶಕ್ತಿ : ಎಷ್ಟೋ ಸಲ ದೈಹಿಕಬಲದಿಂದ ಆಗದ ಕೆಲಸವನ್ನು ಬುದ್ಧಿಬಲದಿಂದ ಸಾಧಿಸಬಹುದು (೯೩೨). ೨. (ಉಕ) ಚತುರತೆಯಿಂದ ಆಡುವ ಆಟ; ಚದುರಂಗ.
[ಸಂ./ಮರಾ. ಬುದ್ಧಿಬಳ]

**ಬುದ್ಧಿಭ್ರಂಶ** (ನಾ). ತಲೆಕೆಡುವಿಕೆ : ಬುದ್ಧಿಭ್ರಮಣೆ : ದ್ರಾಕ್ಷಿಹಣ್ಣು, ಯಷ್ಟಿಮಧುಕ, ಇಪ್ಪೆಹೂವು, ಖರ್ಜೂರದ ಹಣ್ಣು . . . ಲಾಮಂಚ ಇವಂ ಕಷಾಯವನಿಟ್ಟಾದರೂ ಶೀತಕಷಾಯವನಾದರೂ ಸೇವಿಸೆ ಸಮಸ್ತತೃಷ್ಣೆ, ಮದಮೂರ್ಛೆ, ಬುದ್ಧಿಭ್ರಂಶ ಇವೆಲ್ಲ ಪರಿಹರಮಕ್ಕುಂ (ಸಕವೈ. ೨೯೫); ಇದು ಕೇವಲ ಬುದ್ಧಿಭ್ರಂಶದ ಆರಂಭ ಮಾತ್ರ (ಹೇಮಂತ. ೨೯೩). [ಸಂ.]

**ಬುದ್ಧಿಭ್ರಮಣೆ** (ನಾ). ಹುಚ್ಚು : ಬುದ್ಧಿವಿಕಲ್ಪ : ಅಲೆಕ್ಸಾಂಡರ್ ಚಕ್ರವರ್ತಿಗೆ ಬುದ್ಧಿಭ್ರಮಣೆಯಾಗಿ ಕೂಗಾಡುತ್ತಿದ್ದಾಗ ಅವನ ವೈದ್ಯ . . . ವಾದ್ಯವನ್ನು ನುಡಿಸಿ ಮನಸ್ಸಿಗೆ ಶಾಂತತೆಯನ್ನು ತರುತ್ತಿದ್ದನಂತೆ (ಭಾರದ. ೫೯೯); ಮಕ್ಕಳಲ್ಲಿ ಇವುಗಳ ಜೊತೆಗೆ . . . ಕೆಲವು ವೇಳೆ ಬುದ್ಧಿಭ್ರಮಣೆಯುಂಟಾಗುತ್ತದೆ (೯೦ಕೋ. ೫೬). [ಸಂ. ಬುದ್ಧಿಭ್ರಮಣ]

**ಬುದ್ಧಿಭ್ರಮೆ** (ನಾ). =ಬುದ್ಧಿಭ್ರಮಣೆ: ಕ್ಷತ್ರಿಯರಲ್ಲೆಲ್ಲಾ ನೀನೇ ಗಂಡಸು, ಮತ್ತೊಬ್ಬನಿಲ್ಲ ಎಂದು ನೀನು ತಿಳಿದುಕೊಂಡಿರುವುದು ಬುದ್ಧಿಭ್ರಮೆ (ಪಕಭಾ. ೬೯); ನನ್ನನ್ನು ನೋಡಿ ನನ್ನ ಕಡೆಗೆ ಬರುವುದು ಬುದ್ಧಿಭ್ರಮೆಯೇ ಆಗಬೇಕೆ? (ಸಾ೪. I. ೨-೯೫). [ಸಂ. ಬುದ್ಧಿಭ್ರಮ]

**ಬುದ್ಧಿಭ್ರಾಂತಿ** (ನಾ). =ಬುದ್ಧಿಭ್ರಮಣೆ : ಒಂದು ವಸ್ತುವನೆರಡು ಮಾಡುವೆನೆಂದು ಬುದ್ಧಿಭ್ರಾಂತಿಯಲಿ ಮನಸಂದು ಸಮ್ಯಜ್ಞಾನದುದಯದ ನೆಲೆಯು ಕಾಣಿಸದೆ ದಂದುಗಂಬಡುತಿಹುದು . . . ಜಗವು (೯ವ್ಯಾಣ. ೯-೦೬). [ಸಂ.]

**ಬುದ್ಧಿಮತ್ತೆ** (ನಾ). ಜಾಣತನ ; ಚಾತುರ್ಯ : ಬರಿಯ ಬುದ್ಧಿಮತ್ತೆಯೊಂದೇ ಅಷ್ಟು ಅಹಂಕಾರಕ್ಕೆ ಕಾರಣವಾಗದು (ಬಂಟಡ. ೯೫); ಮಗಳ ಬುದ್ಧಿಮತ್ತೆಯಲ್ಲಿ ಅವರಿಗೆ ವಿಶ್ವಾಸವಿತ್ತು (ರಂಗರೂ. ೨೩೩).
[ಸಂ. ಬುದ್ಧಿಮತ್ತಾ]

**ಬುದ್ಧಿಮಹರ್ದ್ಧಿ** (ನಾ). =ಬುದ್ಧಿಋದ್ಧಿ : ಬುದ್ಧಿಕ್ರಿಯಾವಿಕ್ರಿಯತಪೋಬಲೌಷಧರಸ ಕ್ಷೇತ್ರಭೇದದಿಂ ಋದ್ಧಿಪ್ರಾಪ್ತಾರ್ಯರಷ್ಟವಿಧಂ ಅಲ್ಲಿ ಕೇವಲಜ್ಞಾನಮುಂ . . . ಪ್ರತ್ಯೇಕಬುದ್ಧತೆಯುಂ ವಾದಿತ್ವಮುಂ ಎಂದು ಬುದ್ಧಿಮಹರ್ದ್ಧಿ ಪದಿನೆಂಟು ತೆಱಂ (ಕತ್ರಸೃ. ೦೬೪). 'ಬುದ್ಧಿಋದ್ಧಿ' ಪರಾ. [ಸಂ.]

**ಬುದ್ಧಿಮಾಂದ್ಯ** (ನಾ). ಅರಿವಿನಲ್ಲಿ ಉಂಟಾಗುವ ಆಲಸ್ಯ; ಬುದ್ಧಿಯ ಜಡತೆ : ನಮ್ಮ ಕುರುಡು ಆಚಾರಗಳು ಹೇಗೆ ಬುದ್ಧಿಮಾಂದ್ಯವನ್ನು ತರುತ್ತವೆಂಬುದಕ್ಕೆ ಒಂದು ಸಣ್ಣ ಆಕಸ್ಮಿಕಘಟನೆಯನ್ನು ತಿಳಿಸುತ್ತಾರೆ (ಶಬಂರ. I. xiii ಮುಖ್ಯುಕ); ಇವರ ಜೊತೆಗೆ ಬುದ್ಧಿಮಾಂದ್ಯವನ್ನುಂಟು

ಮಾಡುವ ಸುರೆ . . . ಅಜ್ಞಾನ, ಅವಿವೇಕ ಇವೂ ಪಾಪಕಾರಣಗಳು (ಜುಕ್ಕಾರ. ೦೦೬). [ಸಂ.]

**ಬುದ್ಧಿವಂತ₁** (ನಾ). ೧. ತಿಳಿವಳಿಕೆಯುಳ್ಳ ವ್ಯಕ್ತಿ; ಚತುರ; ಜಾಣ: ನೀನವೊಂಡೆ ಕರಂ ಬುದ್ಧಿವಂತಂ (ಶಂಕಶಂ. ೩೯೩-೯); ವೈರಿಯಲಿ ನಾರಿಯಲಿ ನದಿಯಲಿ ಜಾರೆಯಲಿ ನಯವಿಡಿದು ಕೊಂಬುದು ಕಾರಿಯವನವ ಬುದ್ಧಿವಂತನು (ಕೌಶಿಅ. ೩೬ ೦೯); ಬುದ್ಧಿವಂತನಲ್ಲ ರಂಗನು ಮುದ್ದು ಮಾಡಿ ಮಗನ ಸಲಹಿದೆ ಗೋಪಿ (ಪುರಂದ. ೦-೦೦೯ ಪಲ್ಲವಿ). ೨. ಊರಿನ ಹಿರಿಯ; ಹಳ್ಳಿಯ ಮುಖಂಡ: ಈ ಕಾಲೇಕಂಣವಿಗಳು ಇರುವ ಹಳ್ಳಿಯಲ್ಲಿ ಬುದ್ಧಿವಂತನೆಂಬವನೊಬ್ಬ ಅಧಿಕಾರಿ ಇರುವನು (ಕರಾಗೆ. ೦೪೦). [<ಸಂ. ಬುದ್ಧಿವತ್]

**ಬುದ್ಧಿವಂತ₂** 'ಬುದ್ಧಿವಂತ' ನೋ.

**ಬುದ್ಧಿವಂತಿಕೆ** (ನಾ). ಜಾಣತನ; ಚಾತುರ್ಯ: ಶಂಭು ಮಡಿಕೇರಿಯ ಹೈಸ್ಕೂಲು ಸೇರಿ ಅಲ್ಲಿ ಬುದ್ಧಿವಂತಿಕೆಯಿಂದ ಮುಂದುವರಿಯುತ್ತಿದ್ದುದು ನನಗೆ ಗೊತ್ತಿದೆ (ಕವಳ. ೬೦); ಈ ಹಸಿವನ್ನು ತೃಪ್ತಿಪಡಿಸಲು ಇಡೀ ಮಾನವಜಾತಿಯೇ ತನ್ನ ಬುದ್ಧಿವಂತಿಕೆಯನ್ನೆಲ್ಲಾ ವಿನಿಯೋಗ ಮಾಡುತ್ತಲಿದೆ (ಜೀವಾತ್ಮ. ೦೬೨). [ಬುದ್ಧಿವಂತ₁ + -ಇಕೆ]

**ಬುದ್ಧಿವಂತೆ** (ನಾ). ಜಾಣೆ; ಚತುರೆ: ನಿಮ್ಮ ತಂಗಿ ತುಂಬಾ ಬುದ್ಧಿವಂತೆ (ದೂಕಲ್ಲ. ೦೬೯); ಚೆನ್ನಮ್ಮನು ಬುದ್ಧಿವಂತೆಯೂ ಚೆಲುವೆಯೂ ಧೀರಳೂ ಆಗಿದ್ದಳು (ಕಸೆಪು. ೯-೯೦). [ಬುದ್ಧಿವಂತ₁ + -ಎ₂]

**ಬುದ್ಧಿವತಿ** (ನಾ). = ಬುದ್ಧಿವಂತೆ: ಬುದ್ಧಿವತಿಯಾಗಿ ನಡೆವುದು ಸದ್ವರ್ತಮನೆಯ್ದೆ ಮಾಳ್ಪುದು (ಪಾರಶು. ೦೨-೦೦). [ಸಂ. ಬುದ್ಧಿವತೀ]

**ಬುದ್ಧಿವಾದ** (ನಾ). ವಿವೇಕವನ್ನು ತಿಳಿಸುವುದು; ಉಪದೇಶ: ಮಗನಿಗೆ ಬುದ್ಧಿವಾದ ಹೇಳಿದ್ದಳು ವಿಶ್ವವರಾದೇವಿ (ಕಶಂಜಾ. ೬೪); ನಮ್ಮ ತಾಯಿಗೆ ಎಲ್ಲವನ್ನೂ ಹೇಳಿ ಅವರ ಬುದ್ಧಿವಾದವನ್ನು ಕೇಳಿಯೇ ಬಿಡಬೇಕೆಂದು ನನಗೆ ಬಹಳ ಸಲ ಅನ್ನಿಸಿತ್ತು (ಕಾಲಿಮ. ೦೩೩). [ಸಂ.]

**ಬುದ್ಧಿವಾನಸೆ** (ನಾ). ವಿವೇಕವನ್ನು ತಿಳಿಸುವವಳು; ಸಮಯೋಪಾಯವನ್ನು ಹೇಳುವವಳು: ತನಗಾದು ಪರಿಚಾರಕಾಕೃತಿಯುಕ್ಕೃಣೀಚಾರುಜಾನಿಪ್ರಕಾಮಿನಿ ರಾಜಚ್ಛತ್ರವರೀಜಕಾಂತೆ ಮನೋಜ್ಞದಿವ್ಯಾರ್ಕಿಕೆ ನಿಚ್ಚಂ ವಯಾಂಗನೆ ವಾಗ್ವಲ್ಲಭೆ ಬುದ್ಧಿವಾನಸೆ ಕರಂ ಭಾಸ್ವತ್ತ್ರಪೋಲಕ್ಷ್ಮಿ ಸಜ್ಜನ ಮಾರ್ಗಲ್ ಕುಲಭೂಷಣಬ್ರತಿವರಂ ಸ್ತ್ರೀರಾಜ್ಯದಿಂ ರಾಜಿಪಂ (ಎಕ. VIII, ಸೊರಬ. ೦೯೦-೬೬; 1198). [ಬುದ್ಧಿ + ಮಾನಸೆ]

**ಬುದ್ಧಿವಿಕಲ** (ನಾ). ಹುಚ್ಚ; ಮತಿಹೀನ: ಕೊನೆಯ ವರ್ಗದವರು ಬುದ್ಧಿಹೀನರು ಮಾತ್ರವಲ್ಲ, ಬುದ್ಧಿವಿಕಲರಾಗಿಯೂ ತಿಳಿಗೇಡಿಗಳಂತೆಯೂ ತೋರುತ್ತಾರೆ (ತಿಕ್ಷದ. ೩೯೦). [ಸಂ.]

**ಬುದ್ಧಿವಿಕಲ್ಪ** (ನಾ). ಹುಚ್ಚು; ಬುದ್ಧಿಭ್ರಮಣೆ: ನನ್ನ ತಾಯಿಯು ಆ ದಿನಗಳ ಸಂಕಟವನ್ನೂ ಅವಸ್ಥೆಯನ್ನೂ ನೆನಸಿಕೊಂಡುಬಿಟ್ಟರೆ ನನಗೆ ಬುದ್ಧಿ ವಿಕಲ್ಪವಾಗಿ ಹೋಗುತ್ತದೆ (ಮಹಾಗ. ೦೩೪). [ಸಂ.]

**ಬುದ್ಧಿವಿಕಾರ** (ನಾ). = ಬುದ್ಧಿವಿಕಲ್ಪ: ಬುದ್ಧಿವಿಕಾರದಿಂದ ನರಳುವ ಮಕ್ಕಳಿಗಾಗಿ ಪ್ರತ್ಯೇಕವಾದ ಶಾಲೆಯಿರುತ್ತದೆ (ಲೂಕ). [ಸಂ.]

**ಬುದ್ಧಿವಿಕಾಸ** (ನಾ). ಅರಿವಿನ ಬೆಳವಣಿಗೆ: ಓದುವ ರೂಢಿ ಬಲಿತು ಬುದ್ಧಿವಿಕಾಸವಾದಂತೆ ಕ್ರಮೇಣ ಸೂಕ್ಷ್ಮ ಹಾಗೂ ಗಹನವಾದ ಶಾಸ್ತ್ರೀಯ ಗ್ರಂಥಗಳನ್ನು ಆಯ್ಕೆ ಮಾಡಬೇಕು (ಗ್ರಂಥಾ. ೯). [ಸಂ.]

**ಬುದ್ಧಿವೇಳ್** 'ಬುದ್ಧಿವೇಟ್' ನೋ.

**ಬುದ್ಧಿವೇಟ್**, ಬುದ್ಧಿಪೇಳ್, ಬುದ್ಧಿವೇಳ್, ಬುದ್ಧಿಹೇಳು (ಕ್ರಿ). ತಿಳಿವಳಿಕೆಯನ್ನು ನೀಡು; ವಿವೇಕವನ್ನು ಹೇಳು: ಉಪದೇಶಿಸಂ: ಪಲವೆರ್ಯಿಂ ಪರಸಿ ಸೇಸೆಯನಿಕ್ಕುವ ಬುದ್ಧಿವೇಟ್ಟು . . . ಕಣ್ಣನೀರ್ಗಳಂ ಮಿಡಿವ ಬಹುಪ್ರಕಾರಜನಸಂಕಟಮೊಪ್ಪಿದುದಾ ಪ್ರಯಾಣದೊಳ್ (ಆದಿಪು. ೯-೭೬); ಅದು ಕಾರಣದಿಂ ವಿವಾಹಮಂ ಬುದ್ಧಿವುದುವುದು ಮೋಸದಿಂದಿರವೇಡೆಂದು ಬುದ್ಧಿವೇಟ್ (ಧರ್ಮನಾಥ. ೩-೧೩೩). **ಬುದ್ಧಿಪೇಳ್**: ಕಲಿತಪ್ಪ ತೋರುವೆನು ದೇವರು ಬಲಿಯದಾಟವ ಬುದ್ಧಿಪೇಳ್ವುದು (ಜಾಗಕ. ೯-೭೯). **ಬುದ್ಧಿವೇಳ್**: ಮೆಯ್ದೋರಿ ಬುದ್ಧಿವೇಳ್ವರಸು ನಂಟರ್ಕಳಂ ಹೊಯ್ದು ನಿಕ್ಕಡಿಯಾಗೆ ರಣದೊನೆಯವರ್ಗಳಂ (ಜಹರ. ದೀ. ೯೦-೩); ಜಾಣತನದಿ ಬುದ್ಧಿವೇಳ್ದು ರಕ್ಷಿಸ ಹೇಳು (ವೋಃಹಕ. ೩೬-೦೯). **ಬುದ್ಧಿಹೇಳು**: ಬುದ್ಧಿಹೇಳೆ ಗೋಪಿ ನಿನ್ನ ಮುದ್ದು ಕಂದಗೆ (ಪುರಂದ. ೩-೬೬ ಪಲ್ಲವಿ); ಅವನ ಅಂತರಾತ್ಮವು ಎದ್ದುಬಂದು ಅವನಿಗೆ ಬುದ್ಧಿಹೇಳುತ್ತಿತ್ತು (ಬೆಳ್ಳಿ. ೯೯). [ಬುದ್ಧಿ + ಪೇಟ್]

**ಬುದ್ಧಿವೈಕಲ್ಯ** (ನಾ). ಅರಿವಿನಲ್ಲಿ ಉಂಟಾಗುವ ವ್ಯತ್ಯಾಸ...ವಿರುಪೇರು. [ಸಂ.]

**ಬುದ್ಧಿಶಕ್ತಿ** (ನಾ). ಬುದ್ಧಿಯ ಸಾಮರ್ಥ್ಯ; ಬುದ್ಧಿಬಲ: ವಿಷಯ ಮನಸಿಜಯಲುಂ ಬಾರವಜಗೊಳುಂ ಬುದ್ಧಿಶಕ್ತಿಯಿಲ್ಲದುದರಿಂ ಪರಲೋಕ ಬಂಧಮೋಕ್ಷ . . . ದ್ರವ್ಯಾದಿಗಳೊಳ್ ಸರ್ವಜ್ಞಪ್ರಮಾಣತೆಯಿಂ ತತ್ತ್ವಪ್ರಮಾಣತೆಯಾಗಮದೊಳ್ ಪೇಳ್ದುವೆಲ್ಲಂ ಅವಶ್ಯಂ ತಪ್ಪುವುವಲ್ಲೆಂದು ಸಮ್ಯಗ್ದರ್ಶನ ಸ್ವಭಾವದಿನಪ್ಪ ನಿಶ್ಚಯಚಿಂತನಂ ನಪಮಧರ್ಮಂ (ಆದಿಪು. ೬-೨೬ ವ). [ಸಂ.]

**ಬುದ್ಧಿಶಾಲಿ** (ನಾ). ಚಾತುರ್ಯವುಳ್ಳ ವ್ಯಕ್ತಿ; ಚತುರ ವ್ಯಕ್ತಿ: ಬುದ್ಧಿಶಾಲಿಯಂತಾರ್ಕೆಯುಳ್ಳನುಂ ದೂರದರ್ಶಿಯುಂತೆ ಮೇಲನಱುವನುಂ . . . ಅಪ್ಪುದು (ಕರ್ಣಾಮ್ಮ. ೩-೯೯); ಈ ಸಂದರ್ಭದಲ್ಲಿ ಹುಡುಗನ ತಾಯಿಗೂ ಇಷ್ಟವಿದ್ದುದರಿಂದಲೂ ಹುಡುಗಿ ಬುದ್ಧಿಶಾಲಿಯಾದುದರಿಂದಲೂ ಇದೇ ಒಂದು ದಾರಿಯಾಯಿತು (ಕಮ್ಮ. I. ೨-೯೨). [ಸಂ. ಬುದ್ಧಿಶಾಲಿನ್]

**ಬುದ್ಧಿಶೂನ್ಯ** (ನಾ). ತಿಳಿವಳಿಕೆಯಿಲ್ಲದ ವ್ಯಕ್ತಿ; ವಿವೇಕವನ್ನು ಕಳೆದುಕೊಂಡ ವ್ಯಕ್ತಿ; ಬುದ್ಧಿಶೂನ್ಯನಾಗಿ ವಿನ್ಯಾಪದ್ದಕಾರ್ಯಕಾರಕಮನವ ತಿದ್ದಿ ಹೃದಯಶುದ್ಧಿ ಮಾಡೂ ಪ್ರದ್ಯುಮ್ನನೆ (ಕಶಕ. ೯೬-೦೯); ಇವನ್ನು ನಾನು ಬುದ್ಧಿಶೂನ್ಯಳಾಗಿ ಮಾಡಿದ್ದೇನೆಂದು ತಿಳಿದುಕೊಳ್ಳಬೇಡ (ಕಶಾ. ೯೬). [ಸಂ.]

**ಬುದ್ಧಿಸಹಾಯ** (ನಾ). ರಾಜನಿಗೆ ಸಲಹೆ ಕೊಡುವವನು; ಮಂತ್ರಿ; ಸಚಿವ: "ಮಂತ್ರೀ, ಬುದ್ಧಿಸಹಾಯಃ, ಅಮಾತ್ಯಃ, ಸಚಿವಃ—ಈ ೪ ಮಂತ್ರಿ" (ಕಲಾಯು. ೬೦-೨೬೨). [ಸಂ.]

**ಬುದ್ಧಿಸಿದ್ಧಿ** (ನಾ). [ಯೋಗ] ಅರುವತ್ತುನಾಲ್ಕು ಸಿದ್ಧಿಗಳಲ್ಲಿ ಒಂದು; P ಬುದ್ಧಿಸಿದ್ಧಿಗಳಲ್ಲಿ ಎಂಟು ವಿಧಗಳಿವೆ. ಅವು ಯಾವುವೆಂದರೆ "(ಅ) ಜಗಜ್ಜನನ, ಜಗದ್ರಕ್ಷಣ, ಜಗತ್ಸಂಹರಣ, ಇಷ್ಟಕರಣ, ಅಭಿಮತಲೋಕಪ್ರವರ್ತನ, ಅಸದೃಶಲೋಕನಿರ್ಮಾಣ, ಅಶುಭಕರಣ, ಶುಭಕರಣ (ವಿಚಿಂ. ೬-೪೫೭). (ಆ) ಅಭ್ಯಾಸಾಂತರದಲ್ಲಿ ವೇದಾಂತಿ ಗುಣಗಳು: ನಿತ್ಯಾನಿತ್ಯವಿವೇಕ, ಸಕಲಭೋಗವಿರಕ್ತಿ, ಪರಮಶಾಂತಿ, ಅವ್ಯಭಿಚರಿತಭಕ್ತಿ, ದೃಢತರಶ್ರದ್ಧೆ, ವೈದಿಕಾಸ್ತಿಕ್ಯ, ಬ್ರಹ್ಮಜ್ಞಾನ, ಬ್ರಹ್ಮಾನಂದ (ವಿಚಿಂ. ೬-೪೫೭)" (ಶ್ರೀತತ್ತ್ವ. ೨೯೩): ಜಗಜ್ಜನನ ಜಗದ್ರಕ್ಷಣ . . . ಶುಭಕರಣವೆಂಬೆಂಟು ಬುದ್ಧಿಸಿದ್ಧಿಗಳವ ಜೊಡನೆ ಮೊದಲೈವತ್ತಾಱು ಗುಣಮುಂ ಕೂಡಿದಱುವತ್ತುನಾಲ್ಕು ಗುಣಂಗಳಿಂ ಸಂಪನ್ನನಾಗಿ ಸತ್ಯಲೋಕದಲ್ಲಿ ಬ್ರಹ್ಮನಿರ್ಪಂ (ಶಿವಕ. ೨೨೩). 'ಸಿದ್ಧಿ' ಪರಾ. [ಸಂ.]

**ಬುದ್ಧಿಸ್ಥಾನ** (ನಾ). [ಜ್ಯೋತಿ] ಜಾತಕನ ಬುದ್ಧಿಶಕ್ತಿಯನ್ನು ಸೂಚಿಸುವ, ಲಗ್ನದಿಂದ ಗುರುತಿಸುವ ಐದನೆಯ ಸ್ಥಾನ: "ಬುದ್ಧಿಸ್ಥಾನ—ಲಗ್ನದಿಂದ ಐದನೆಯ ಸ್ಥಾನ" (ಜಾತಕ. ಕಂ. ೩೬೦). [ಸಂ.]

**ಬುದ್ಧಿಹೀನ** (ನಾ). ಮತಿಹೀನ ; ದಡ್ಡ : ಬುದ್ಧಿಹೀನರ ಮಾತ ಕೇಳಿ ನಾ ಮರುಳಾದೆ (ಪುರಂದ. ದಾ. ೨-೨-೩) ; ಉದ್ದ ಮೇದ ಕತ್ತೆಯ ಹಾಗೆ ಬುದ್ಧಿಹೀನನು (ಗಾದೆ). [ಸಂ.]

**ಬುದ್ಧಿಹೇಳು** 'ಬುದ್ಧಿವೇಳ್' ನೋ.

**ಬುದ್ಬುದ$_1$** (ನಾ). ಒಂದು ಬಗೆಯ ಕಣ್ಣಿನ ರೋಗ : 'ಬುದ್ಬುದ ನೇತ್ರ' ಪರಾ. [ಸಂ. ಬುದ್ಬುದಾ]

**ಬುದ್ಬುದ$_2$** (ನಾ). ನೀರಿನ ಮೇಲಿನ ಗುಳ್ಳೆ ; ಬೊಬ್ಬುಳಿ : ಜಲದಾಟೋಪೋಪಮಂ ಬುದ್ಬುದನಿವಹನಿಭಂ ಫೇನಪಿಂಡಾಯಮಾನಂ ಜಲರೇಖಾಕಾರಮಾಖಂಡಲಲಲಿತಧನುರ್ಲೀಲ ಮಾಕಾಳಿಕೀಸಂಚಲಮಿಾ ಸೌಂದರ್ಯಂ (ಅಜಿತ. ೬-೫೦) ; ಕೆಡುತ್ತ ಹುಟ್ಟುತಿಹ ಕಡಲ ತೆರೆಗಳ ಬುದ್ಬುದಂಗಳೆ ಜಡಧರಂಗಳೆ ಶಕ್ರಚಾಪವೆ . . . ನುಡಿದ ಭಾಷೆಯನಿಂತು ನಡೆಸಲು ಬಸವನೇ ಬಲ್ಲ (ಬಸವ. ೩೭-೨೫); ಹಯಕೋಹರದ ತೆರೆಮಾಲೆಯಲಿ ಬಲುರ್ಘುಲ್ಲರಿಯ ಬುದ್ಬುದತತಿಯಲಿ . . . ಅರಿಬಲಾರ್ಣವ ಗಜಜುಮಿಗಲಳ್ಳಿಜಿಯುತದೆ ಬಹುವಿಧದ ವಾದ್ಯವಿಡಾಯುರಭಸದಲಿ (ಕುಮಾ.ಭಾ. ೩-೨೩). [ಸಂ.]

**ಬುದ್ಬುದನೇತ್ರ** (ನಾ). ೧. ಬುದ್ಬುದವೆಂಬ ರೋಗವುಳ್ಳ ಕಣ್ಣು. ೨. ಬುದ್ಬುದವೆಂಬ ಕಣ್ಣಿನ ರೋಗವುಳ್ಳವನು; ನೇತ್ರರೋಗಿ : ಉದಯಸ್ಥಂ ದಿನನಾಥನಾಗೆ ವಿಕಲಾಕ್ಷಂ ನಿರ್ಘಯಂ ನಿರ್ದಯಂ ಸದನಂ . . . ಇಂದುಗ್ರಹಲಗ್ನಸ್ಥಾಯಿಯಾದಂದು ಬುದ್ಬುದನೇತ್ರಂ (ಜಾತಕ. ೧೬-೧). [ಬುದ್ಬುದ$_1$ + ನೇತ್ರ]

**ಬುದ್ಬುದಾಕ್ಷ** (ನಾ). = ಬುದ್ಬುದನೇತ್ರ ೧ : ಬುದ್ಬುದಾಕ್ಷರೋಗದಲ್ಲೂ ಯಾವುದು ಹೂಗಣ್ಣೆನ್ನುವುದನ್ನು ತಿಳಿಯಬಹುದು (ಜಾತಕ. ೪-೩೬ ಅಡಿ). [ಸಂ.]

**ಬುದ್ಬುದಿಸು** (ಕ್ರಿ). ನೀರುಗುಳ್ಳೆಯೇಳು; ಬೊಬ್ಬುಳಿಕೆಯುಂಟಾಗು : ವಿಚಾರವು ಆವಿನ ಸೊರೆಹಾಲಿನಂತೆ ಬುದ್ಬುದಿಸಿದಾಗ ಅದಕ್ಕೊಂದು ಪ್ರೌಢಿಮೆ ಬರುತ್ತದೆ (ಪುಂಗಾಕ್ಷಿ. ೫ ಮುನ್ನುಡಿ) [ಬುದ್ಬುದ$_2$ + –ಇಸು$_3$]

**ಬುದ್ಲಿ** 'ಬುದ್ದಲಿ' ನೋ.

**ಬುಧ** (ಗು). ೧. ಬುದ್ಧಿಶಕ್ತಿಯುಳ್ಳ; ತಿಳಿವಳಿಕೆಯಿಂದ ಕೂಡಿದ. (ನಾ). ೨. ವಿದ್ವಾಂಸ; ಪಂಡಿತ : "ಸೂರಿ ಬುಧಂ ಕವಿ ವಾಗ್ಮಿ . . . ಸಭಾಸದಂ ವಿದ್ವಾಂಸಂ" (ಶಬ್ದಕೋ. ೯೬-೪); ಪರಮಬುಧಜನೋಪಾಸನಮುಂ ಕೃತಿಪರಿಚಯಮುಂ (ತರ್ಕಂ) ಪ್ರತೀತಿ(ಯಂ) ವಾಗ್ವಿದಗ್ಧತಾನಿಪುಣತೆ(ಯೊಳ್) (ಕವಿರಾ. ೧-೦೦); ಜಿನರ್ಗಂ ತ್ರಿಕಾಲಯೋಗಂ . . . ನೆಱಿಯೆ ನೋಡಿ ನಂಬುಗೆ ಮಹಾಪುರಾಣದೊಳೆ ಬುಧರ್ (ಆದಿಪು. ೦೨-೩೦); ಬುಧರಿಂದರ್ ನೋಟ್ಟುದು ಪುರಾತನನೂತನಕಾವ್ಯರೇಖೆಯಂ (ಗದಾಯು. ೧-೪೬); ಮಿಗುವವಧಿ ಬುಧರಱಿಯೆ ನಿನ್ನಿನ ಹಗಲು ನಿನ್ನದು ಪಾಂಡುತನಯರು ಹೊಗುವಡಿಂದಿನ ದಿವಸವವರದು ಕಂದ (ಕುಮಾ.ಭಾ. ೬-೨೨). ೩. ದೇವತೆ ; ದಿವಿಜ : "ಬುಧರನ್ವಿತರ್ಕಳುಂ ದಿವಿಜರುಂ" (ಶಬ್ದಕೋ. ೦೨೦-೦೪). ೨. ೩ : ಇತಿಹಾಸಮೆಂಬ ವಿಮಳಾಮೃತವಾರ್ಧಿಯೊಳೊಗೆದ ಕಲ್ಪಕುಜದಂತೆ ರಸಾನ್ವಿತಮಾದೀ ಕೃತಿ ಬುಧಸಂತತಿಗಕ್ಷಯಸುಖಮನೀವುದೊಂದಚ್ಚರಿಯೇ (ಜೈಕೋಶ. ೦-೨೫). ೪. ಬೃಹಸ್ಪತಿಯ ಹೆಂಡತಿಯಾದ ತಾರೆಯಲ್ಲಿ ಚಂದ್ರನಿಂದ ಜನಿಸಿದವನು : "ರೌಹಿಣೇಯಃ, ಬುಧಃ, ಸೌಮ್ಯಃ, ಚಾಂದ್ರಮಸಾಯನಃ—ಈ ೪ ಬುಧನ ಪೆಸರ್" (ಹಲಾಯು. ೪-೪೬) ; ರವಿ ಚಂದ್ರ ಬುಧ ನೀನೆ ರಾಹುಕೇತುವು ನೀನೆ (ಪುರಂದ. ೨-೨೬-೧). 'ಬುಧತಾತ' ಪರಾ. ೫. [ಜ್ಯೋತಿ] ನವಗ್ರಹಗಳಲ್ಲಿ ಒಂದು : ಮಂಗಳ, ಬುಧ, ಬೃಹಸ್ಪತ್ಯಾದಿ ನವಗ್ರಹಂಗಳೆಲ್ಲಂ ಪುಂನಪುಂಸಕಲಿಂಗಂಗಳ್ (ಕವಿಮ. ೮೬ ವೃತ್ತಿ); ಸೂರ್ಯನಿಗೆ ಅತ್ಯಂತ ಸಮಿಾಪದಲ್ಲಿರುವ ಗ್ರಹ ಬುಧ (ಅಕಾಶ. ೦೫). ೬. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : "ನವ . . . ಬುಧ, ಬಂಧ, ಗ್ರಹ, ಗ್ರಹಣ, ರಸ, ನಾಟ್ಯಾಂಗ, ಇಂತಿನಿತುಂ ೯ಕ್ಕೆ ಪೆಸರು" (ವ್ಯವಹಾ. ೦೦-೪). [ಸಂ.]

**ಬುಧತಾತ** (ನಾ). ಬುಧನ ತಂದೆ; ಚಂದ್ರ : ಬುಧತಾತನ ತಿಳಿಜೊನ್ನಂ ವಿದಿತಾಶಾಪಳಿವಿಕೀರ್ಣಪೂರ್ಣವಿಲಾಸಂ (ಹರಿವಂಶ. ೨-೬೩). [ಸಂ.]

**ಬುಧನಾಲು** (ನಾ). ಒಂದು ಬಗೆಯ ಶಿಕ್ಷೆ ಹಾಗೂ ಅದಕ್ಕೆ ಬಳಸುವ ಮರದ ಸಾಧನ : ಅಸುರೇಂದ್ರ ತಾನೆ ಪೋಗಿ ಬಲುಗಾಳಗಂಗೈದು ಪಿಡಿತಂದು ಯರಡುಕಾಲ್ಗಳಿಗೆ ಬುಧನಾಲ ಜೋಡಿಸಿ ಪಹಿಬರ್ಪವರ ಬಲುಹ ನೋಡುವೆನೆನುತ (ಪಪಪೂ. ೨೯-೪೨). [← ಮರಾ. ಬುಧನಾಲ]

**ಬುಧವಾರ** (ನಾ). ಬುಧನಿಗೆ ಸಂಬಂಧಿಸಿದ ದಿನ; ವಾರದ ನಾಲ್ಕನೆಯ ದಿವಸ : ಕ್ರೋಧಿಸಂವತ್ಸರದ ಮಾಘ ಶುದ್ಧ ಬಿದಿಗೆಯು ಬುಧ ವಾರದಲು (ಎಕ. IV. ಹುಣಸೂ. ೨೫-೪ ; 1544). [ಸಂ.]

**ಬುಧ್ನ** (ನಾ). ೧. ಪಾತ್ರೆಯ ತಳಭಾಗ,–ಅಡಿ. ೨. ಮರದ ಬುಡ : "ಅವಾಗ್ಭಾಗಃ, ಬುಧ್ನಃ—ಈ ೨ ಮರದ ಮೊದಲ್" (ಹಲಾಯು. ೩೦-೨೬). ೩. ಅತ್ಯಂತ ಕೆಳಭಾಗ. ೪. ಎತ್ತರ ; ಔನ್ನತ್ಯ. ೫. ಉಬ್ಬಿದ ಹೊಟ್ಟೆ. ೬. ಉಬ್ಬಿದ ಹೊಟ್ಟೆಯುಳ್ಳವನು; ದಪ್ಪ ಹೊಟ್ಟೆಯುಳ್ಳವನು. ೭. ದೇಹ; ಶರೀರ. ೮. ಈಶ್ವರ; ಶಿವ: "ಉನ್ನತೋ ಪರನಲ್ಲಿ ಶಿವನಲ್ಲಿ ಬುಧ್ನವೆಂಬುದು" (ಮಂಗರಾ. ೦೪೩-೨೨); "ಔನ್ನತ್ಯಮುಂ ಮೂಲಮುಂ ಶಿತಿಕಂಠಂ ತ್ರಯಂ ಬುಧ್ನವಾಕ್ಯಂ" (ನಾನಾರ. ೦೩೬). [ಸಂ.]

**ಬುನಗು, ಬುನುಗು** (ನಾ). ದಂಡಿನ ಹಿಂದೆಯೇ ಇದ್ದುಕೊಂಡು ಆಹಾರಸಾಮಗ್ರಿ ಮುಂತಾದುವುಗಳ ಸರಬರಾಜನ್ನು ನೋಡಿಕೊಳ್ಳುವವರ ತಂಡ : "ಪರಿಗ್ರಹ, ಪರಿಗ್ರಹಣ = ೧. ಸೇವಕ. ೨. ದಂಡಿನ ಹಿಂದಿನ ಬುನಗು" (ಗಂಗಾಪು. ೦೪೮). **ಬುನುಗು** : "ಪ್ರತ್ಯಾಸಾರ = ದಂಡಿನ ಬುನುಗು" (ಗಂಗಾಪು. ೨೨೦). [← ಮರಾ. ಬುನಗಾ, ಬುಣಗಾ, ಬುಣಗೇ]

**ಬುನಾದಿ** (ನಾ). ೧. ಅಡಿಪಾಯ; ತಳಹದಿ; ಅಸ್ತಿವಾರ : ಊರಲ್ಲಿ ರಾಯರು ಇಲ್ಲದಿದ್ದರೆ ಕೋಟೆಯ ಕಲ್ಲುಗಳು ಎಷ್ಟು ಮನೆಗಳ ಬುನಾದಿಗಳಾಗಿ ಕೊಳೆಯಬೇಕಾಗಿತ್ತೋ ಏನೋ (ಹಂಗಿನ. ೪); ಕತ್ತಲಿನ ಕಗ್ಗಲ್ಲ ಬುನಾದಿಯ ಕೆಳಗೆ ನಕ್ಷತ್ರಗಳು ಉಸಿರುಕಟ್ಟಿ ಸತ್ತುಹೋಗಿರಬೇಕು (ಅವಾಕ್. ೦೪). ೨. ಮೊದಲು; ಪ್ರಾರಂಭ : ಸಕಲಕಾರ್ಯಗಳು . . . ಮಂಗಳಕರವಾಗಿ ಮುನ್ನಡೆದು ಮುಗಿಯಲೆಂಬ ಸದುದ್ದೇಶದಿಂದ ಆದಿಯಲ್ಲಿ ಇಷ್ಟದೇವತಾಪ್ರಾರ್ಥನೆ ಮಾಡುವುದು ಬುನಾದಿಯಿಂದ ಬಂದ ಆರ್ಯ ಸಂಪ್ರದಾಯ (ಜನಪ. ೨೬೦); ಇವತ್ತು ನಿನ್ನೆ ಕಟ್ಟಿಸಿದ ಗುಡಿಗಳೇನೋ ಇವು? ಜಕ್ಕಣಾಚಾರ್ಯರ ಗುಡಿಗಳು! ಬಹಳ ಬುನಾದಿಯಿಂದ ಬಂದವು! (ಹೊಸಂಶಾ. ೭). [← ಪಾರ. ಬುನ್ಯಾದ್; ಹಿಂ. ಬುನಿಯಾದ್; ಮರಾ. ಬುನಾದ್, ಬುನಿಯಾದ್, ಬುನ್ಯಾದ್]

**ಬುನುಗು** 'ಬುನಗು' ನೋ.

**ಬುಬ್ಬಣಾ** 'ಬುಬ್ಬುಣ' ನೋ.

**ಬುಬ್ಬಣಚಾರ** 'ಬುಬ್ಬುಣಾಚಾರ' ನೋ.

**ಬುಬ್ಬಣಾಚಾರ** 'ಬುಬ್ಬುಣಾಚಾರ' ನೋ.

**ಬುಬ್ಬಣಿ** (ನಾ). ಒಯ್ಯಾರಿ ; ಸೋಗಲಾಡಿ ; ಥಳುಕಲಾಡಿ : ಈಗ ಆ ಬುಬ್ಬಣಿ ಸತ್ತ ಮ್ಯಾಲ, ನೀರು ಕೊಡಾಕ ಗತಿ ಇಲ್ಲದ ಪತ್ರಾ ಬರಸ್ಯಾನ ನಾಚಿಕಿಲ್ಲದೆ (ಕುಂಕುಮ. ೦೦೦). [ಬುಬ್ಬಣ (< ಬುಬ್ಬುಣ) + –ಇ$_2$]

**ಬುಬ್ಬುಣ, ಬುಬ್ಬಣ** (ನಾ). (ಉಕ) ನಟನೆ; ಸೋಗು; ಬೂಟಾಟಿಕೆ :

'ಬುಬ್ಬುಣಾಚಾರ' ಪರಾ. ಬುಬ್ಬಣ: ಬಿಂಕಾ ಮಾಡಿಕೊಂತ ಡಾಕ್ಟರ ಮನ್ಯಾಗ ಹೊಕ್ಕು ಡಾಕ್ಟರ ಮನಿ ಎಲ್ಲೈತಿ? ದವಾಖಾಣಿ ಎಲ್ಲೈತಿ? ಅಂತಾ ಬುಬ್ಬಣಾ ಮಾಡತೀಯೋನು? (ಹೊಸಂಕಾ. ೧೪೨). [?]

**ಬುಬ್ಬುಣಚಾರ** 'ಬುಬ್ಬುಣಾಚಾರ' ನೋ.

**ಬುಬ್ಬುಣಾಚಾರ,** ಬುಬ್ಬಣಚಾರ, ಬುಬ್ಬಣಾಚಾರ, ಬುಬ್ಬುಣಚಾರ (ನಾ). = ಬುಬ್ಬುಣ: ಹಾಗಾದರೆ ಅಂತಃಕರಣದ ಬುಬ್ಬುಣಾಚಾರ ಹೇಳಬೇಡ (ಪಶಂ. ೯೦). **ಬುಬ್ಬಣಚಾರ :** ನೀವು ನೋಡಬೇಕಾಗಿತ್ತು: ಪ್ಯಾಲೆ ಎಂಥಾ ಬುಬ್ಬಣಚಾರದ ಮಾತು ಸುರಸತಾಳ ಅಂಬೂದನ್ನ (ಪ್ರಹ. ೨೪೩). **ಬುಬ್ಬಣಾಚಾರ :** ಎಷ್ಟು ಬುಬ್ಬಣಾಚಾರದ ಮಾತನಾಡುತ್ತೀಯೆ (ಕೂಶ). **ಬುಬ್ಬುಣಚಾರ :** ನಾಲ್ಕು ಬುಬ್ಬುಣಚಾರದ ಮಾತುಗಳನ್ನಾಡಿ ಸಾಂಬನು ಹೊರಟುಬಿಟ್ಟನು (ಕಪಲಾ. ೮೪) ; ಇಷ್ಟು ಬುಬ್ಬುಣಚಾರ ಹೇಳುವವಳು ಅವಳ ಮದುವೆಯನ್ನು ಮಾಡಬೇಕು (ಕಾರಥ. ೧೨೩).
[ಬುಬ್ಬುಣ + ಆಚಾರ]

**ಬುಭುಕ್ಷಿತ** (ಗು). ೧. ಆಹಾರಕ್ಕಾಗಿ ಹಾತೊರೆಯುವ: ತಿನ್ನುವ ಅಪೇಕ್ಷೆಯುಳ್ಳ. ೨. ಹಪಹಪಿಸುವ: ಬಯಸುವ: ನಾನು ನನ್ನ ಬಹುದಿನದ ಬುಭುಕ್ಷಿತಭಕ್ತಿಯನ್ನು ವ್ಯಕ್ತಗೊಳಿಸಿ ಅದನ್ನು ಸಾರ್ಥಕಗೊಳಿಸ ಬಯಸಿದೆ (ಇಶ್ವಕ. ೧೯೦). (ನಾ). ೩. ಆಹಾರಕ್ಕಾಗಿ ಹಾತೊರೆಯು ವವನು; **ಕ್ಷುಧಿತ :** "ಕ್ಷುತ್ಕ್ಷಾನ್, ಬುಭುಕ್ಷಿತಃ . . . ಕ್ಷುಧಿತಃ —ಈ ೫ ಹಸಿದಾತಂ" (ಹಲಾಯು. ೩೯-೨೦೩) ; ಧರೆಯೊಳ್ ಕಲಸಿ ಪರೆದ ಕೂಳಂ ಕಂಡಾನಿರದೆ ಬುಭುಕ್ಷಿತನೆಂ ಭೋರ್ಗರೆಯುತ್ತುಂ ಪಾಯ್ದಂ (ಶಂತಶಂ. ೨೯೨-೬).
[ಸಂ.]

**ಬುಭುಕ್ಷೆ** (ನಾ). ೧. ಹಸಿವು; ಕ್ಷುಧೆ: "ಅಶನಾಯಾ, ಬುಭುಕ್ಷಾ . . . ಕ್ಷುಧಾ—ಈ ೬ ಹಸಿವು" (ಹಲಾಯು. ೩೯-೨೦೬) ; ಒಪ್ಪಿಡಿಯ ಕವಳ ಏತಕ್ಕೆ ಸಾಕು ಅದು ಮಹಾಸುರದ ಭಿಕ್ಷೆ ಅನಂತತೆಯ ಸಂತಶಿಯನುಂಡು ತೀರಿತು, ಆ ಬುಭುಕ್ಷೆ (ಶ್ರಕಾಂ. ೦೬-೬). ೨. ಆಸೆ; ಬಯಕೆ.
[ಸಂ. ಬುಭುಕ್ಷಾ]

**ಬುರಕಾ,** ಬುರಕಿ, ಬುರುಕ$_3$, ಬುರುಕಾ, ಬುರುಕಿ, ಬುರುಕೆ, ಬುರ್ಕಿ (ನಾ). ೧. ಮುಖವನ್ನು ಮರೆಮಾಡಿಕೊಳ್ಳಲು ಹಾಕಿಕೊಳ್ಳುವ ನವಿರಾದ ಬಟ್ಟೆಯ ಮುಸುಕು: ಅವಕುಂಠನ: ರಜಪೂತಹೆಂಗಸರಲ್ಲಿ ಬುರಕಾ ತೊಡುವ ಪದ್ಧತಿಯಿದ್ದಿತು (ಕೂಶ). ೨. ಮುಸಲ್ಮಾನಸ್ತ್ರೀಯರು ತಲೆಯಿಂದ ಕಾಲಿನ ವರೆಗೂ ಮುಚ್ಚುವಂತೆ ತೊಡುವ ಒಂದು ಬಗೆಯ ಉಡುಪು: ಸಂಪ್ರದಾಯನಿಷ್ಠರಾದ ಮುಸಲ್ಮಾನ ಹೆಂಗಸರು ಇಂದಿಗೂ ಬುರಕಾ ಧರಿಸಿಯೇ ತಿರುಗಾಡುತ್ತಾರೆ (ಕೂಶ). **ಬುರಕಿ :** ೧. ಹಿಂದೂಸ್ತ್ರೀಯರು ಬುರಕಿ ಹಾಕಿಕೊಳ್ಳುವ ಪದ್ಧತಿಯು ಈಗ ಕಡಿಮೆಯಾಗಿದೆ (ಕೂಶ). ೩. (ಆನೆ, ಪಲ್ಲಕ್ಕಿ ಮುಂತಾದುವಕ್ಕೆ ಹೊದಿಸುವ) ಗೌಸು; ಆಚ್ಛಾದನೆ: ಲಿಂಗಾಜಮ್ಮಣ್ಣಿಯವರು ಒಪ್ಪಿಸಿದ ಬೆಳ್ಳಿಬಸವನ ಆಭರಣದ ಲೆಖ್ಖಾ . . . ೨ ಬುರಕೀ ಕಾರ್‍ವ ೧ (ಎಕ. XIV, ಸಂಖನ. ೨೫೯-೬ನೆಯ ೪೭೦ ; 1847). **ಬುರುಕ$_3$:** ೨. ಒಬ್ಬ ಹಿಂದೂ ಸ್ತ್ರೀಯು, ಬುರುಕದಲ್ಲಿ ಕೋಟೆಯಿಂದ ಪಾರಾಗಿ ತಪ್ಪಿಸಿಕೊಳ್ಳಲೆತ್ನಿಸಿದ್ದ ಪಂಪರ್‌ಖಾನನನ್ನು ಗುರುತಿಸಿ . . . ಕೊಂದು, ತಾನೂ ಆತ್ಮಹತ್ಯೆ ಮಾಡಿಕೊಂಡಳು (ರಾತಿಸ್ವೀದ. ೨೦೩). **ಬುರುಕಾ:** ೨. ಪಂಪರ್‌ಖಾನನು ಬುರುಕಾ ಸ್ತ್ರೀಯಂತೆ ವೇಷ ಧರಿಸಿ, ಕೋಟೆಯಿಂದ ತಪ್ಪಿಸಿಕೊಳ್ಳುವ ಪ್ರಯತ್ನದಲ್ಲಿ ಇದ್ದನು (ರಾತಿಸ್ವೀದ. ೨೦೪). **ಬುರುಕಿ:** ೧. ಅವರ ಸ್ತ್ರೀಯರು . . . ಮುಖಕ್ಕೆ ಬುರುಕಿ ಹಾಕಿಕೊಳ್ಳುವುದಿಲ್ಲ (ಶ್ರವಾಇ. I, ೩೦೪). ೩. ತಾಮ ನಾಯುತವೆನಿಸಿ ಪೊರೆವಪೆ ಸಮಸ್ತರು ಮುಂದೆನುತೆ ಬುರುಕಿಯನು ಹಾಕಿಸಿದುದಾ ಹಿಮಂ ಪೈಮಂತದಿ (ಪರಜ. ೦೩-೩೦). ಬುರುಕೆ: ೧. ತೆಳ್ಳನ್ನ ಬುರುಕೆಯೊಳಗಿಂದ ಹೊರಗೆ ಕಾಣುವ ಯುವತಿಯು ಮುಖದಂತೆ (ಕಂದುಬಿ. ೬೦). **ಬುರ್ಕಿ :** ೨. ಅರಬರ ರುರಾಯಿಮ್ ಮೊದಲಾದ ಬುಡಕಟ್ಟುಗಳಲ್ಲಿ ಮದುವೆಯಾದ ಹೆಂಗಸರು ಬುರ್ಕಿ ಹಾಕಿಕೊಳ್ಳುತ್ತಿದ್ದರು (ಅಸ್ಕಾಂಸಂ. ೩೩೩).
[←ಅರ. ಬುರಕಾ, ಬುರ್ಕಅ; ಹಿಂ. ಬುರಕಾ; ಮರಾ. ಬುರಕಾ, ಬುರಖಾ, ಭುರಕಾ, ಭುರಕೀ]

**ಬುರಕಿ** 'ಬುರಕಾ' ನೋ.

**ಬುರಗಿಬೊಟ್ಟು** (ನಾ). ಕಿವಿಗೆ ಧರಿಸುವ, ಗಂಡಸರ ಒಂದು ಬಗೆಯ ಆಭರಣ: ನಡುಗಿವಿಗೆ ಲವಂಗದ ಹೂವು. ಬುರಗಿಬೊಟ್ಟು (ಕಪಕಾಲ. I, ೮೨೪). [? + ಬೊಟ್ಟು$_2$ (<ಬಟ್ಟು)]

**ಬುರಜು** 'ಬುರುಜು' ನೋ.

**ಬುರಣೆ** 'ಬೂರಣ' ನೋ.

**ಬುರದೆ,** ಬುರುದೆ (ನಾ). ಕೆಸರು; ರಾಡಿ: ಹಿಮಾಲಯಗಳಿಗೆ ಏಕವಾಗಿರುವ ಬುರದೇ ಭೂಮಿಗೆ "ತಾರೇಯಿ" ಎಂನು ಹೆಸರು (ಭೂಗೋಳ. ೩೦). **ಬುರುದೆ :** ನಾಲ್ಕೈದು ಆಳುದ್ದ ಜಲಸಮೃದ್ಧಿಯಿದ್ದ ಭಾವಿ, ಬರೀ ಬುರುದೆಯಾಯಿತು (ತಂದಕೋ. ೯೦).
[ದೇ.॥ ತುಳು. ಬುರುದೆ, ಬುರದೆ, ಬುರ್ದೆ; ತೆಲು. ಬುರದ; ಪರ್ಜಿ. ಬುರ್ದ]

**ಬುರಬುರ** (ನಾ). ಒಂದು ಅನುಕರಣ ಶಬ್ದ: ಅವನು ಬುಂಡೆಯಲ್ಲಿ ಹೆಂಡ ತಂದಿಟ್ಟು ಹಸಿ ಈಚಲ ಗರಿ ಅಡಿಸಿ, ಹಾಲನ್ನು ಬುರಬುರ ಅನ್ನುವಂತೆ ಉಕ್ಕಿಸುತ್ತಿದ್ದ (ನಮ್ಮೂರು. ೦೩೮).

**ಬುರಬುರನೆ** (ಅ). ಒಂದು ಅನುಕರಣಾವ್ಯಯಂ: ಪರಿಪರಿಯ ದಿವ್ಯ ವಸ್ತ್ರಂಗಳಂ ತೆಗೆದು ಪಿಡಿದು ಶರಣರ ಮೈಯೊಳು ಬುರಬುರನೆ ನೆಗೆನೆಗೆದೇಳ ಪುಳಕದಸಾಲ್ಗೆ ದೃಷ್ಟಿಯಾದಪ್ಪುದೆಂದು ಗವಸಣಿಗೆಯಿಕ್ಕುವಂತೆ ಮೈತೀವಿ ಪೊದೆಯಿಸಿ (ಬಸರ. ೮-೦೪) ; ತುಟಿಗಚ್ಚಿ ಬುರಬುರನೊಡನೆ ಚುಂಬಿಪಳು (ಶರತ. ೦೧-೮೭). [ಬುರಬುರ + −ಅನೆ$_1$]

**ಬುರಬುರಿ$_1$,** ಬುರಬೂರಿ (ನಾ). ಕಡಲೆಹಿಟ್ಟಿನಿಂದ ಕರಿದು ಮಾಡುವ ಒಂದು ಬಗೆಯ ಖಾರವಾದ ತಿಂಡಿ: ಕಡಲಿಯಿಂದ ಬುರಬುರಿ, ವಡಿ . . . ಹೂರಣದ ಕಡಬು ಮೊದಲಾದ ಪಕ್ವಾನ್ನಗಳನ್ನು ಮಾಡುತ್ತಾರೆ (ಕೃಷಿಕ್ರ. ೮೩); ಹಪ್ಪಳ ಸಂಡಿಗೆ ಅಂಬೊಡಿ ಬುರಬುರಿ ಕೋಸಂಬರಿ . . . ಎಲ್ಲಾ ಅನುಕೂಲ ಪ್ರಕಾರ ದಿನಂಪ್ರತಿ ಇದ್ದೇ ಇರತಾವ (ತಿಪಗು. ೩೪). **ಬುರಬೂರಿ :** ಕರ್ಜಿಕಾಯಿ ಮಾಡಿದ್ದೇವೆ, ಚಕ್ಕುಲಿ ಬುರಬೂರಿ ಕರೆದಿದ್ದೇವೆ (ಜನನಾ. ೧೦೮). [?]

**ಬುರಬುರಿ$_2$** (ನಾ). ಗಿಡಗಳಿಗೆ ಹತ್ತುವ ಒಂದು ಬಗೆಯ ಹುಳು: ಬುರಬುರಿಯು ಹತ್ತುವಂಥ ಅವರಿ, ಅಲಸಂದಿ, ಹೆಸರು, ಮಡಿಕಿ, ಹುರಳಿ ಮೊದಲಾದ ಧಾನ್ಯಗಳನ್ನು ತುಂಬಿ ಇಡಬೇಕಾದರೆ ರಾಗಿಯನ್ನು ಸಮತೂಕವಾಗಿ ಕಲಿಸಿ . . . ಹಾಕಿ ಇಟ್ಟರೆ ಎಷ್ಟು ದಿವಸ ಇದ್ದ ಕಾಲಕ್ಕೂ ಹುಳಗಳು ಹತ್ತುವದಿಲ್ಲವು (ಕೃಷಿಕ್ರ. ೩೭). [?]

**ಬುರಬೂರಿ** 'ಬುರಬುರಿ$_1$' ನೋ.

**ಬುರಲೆ** 'ಪ್ರಜಿಲ್' ನೋ.

Δ**ಬುರುಂಡೆ$_1$** 'ಬುರುಡೆ' ನೋ.

**ಬುರುಂಡೆ$_2$** (ನಾ). ಬಿದಿರಿನಿಂದ ಮೊರ, ಕುಕ್ಕೆ, ಬುಟ್ಟಿ ಮೊದಲಾದುವನ್ನು ಮಾಡುವವಳು; ಮೇದರ ಹೆಂಗಸು: ದಾಸಿಯು ಬುರುಂಡೆ [ಪಾಠಾಂ. ಟೆ]ಯು ಕಪಾಲಿನಿಯು . . . ಸೈರಂಧ್ರಿಯು ಕರ್ತವ್ಯದಿಂದಿನಿ ಬರೊಡನಾಡಿದೊಡೆ ಜಾಲೆಯರ್ತವೆ ದುರಾಚಾರವುಂ ಕಲಿವರ್ (ಶ್ರೀಚಾ. ೩-೫೮). [<ಬುರುಡ + −ಎ$_2$]

**ಬುರುಕ₁** (ನಾ). ಎಳೆಯ ಮಗು; ಹಸುಗೂಸು: ಬೆನ್ನೊಳೊಲೆವ ಬುರುಕ ಚನ್ನನ ಸರ ರನ್ನದ ಪಾಳುಗೆ ಕೊರವೀಗೆ (ಕಂಠಕೊ. ೦೯೯); ಕೌಸಲ್ಯಾದೇವಿ ಕೊರವಂಜಿಗೆ ಮುತ್ತುರತ್ನಂಗಳಂ ಬುಟ್ಟಿಯೊಳ್ತುಂಬಿ ಬುರುಕನಿಗೆ (ಮಗುವಿಗೆ) ಹಾಲು ತುಪ್ಪವನೆರೆದು ಅನೇಕ ವಸ್ತ್ರಾಭರಣಗಳಿಂದ ಅಲಂಕರಿಸಿ ಕಳುಹಿದಳು (ಕರ್ಣಾಸಂ. ೯೪). [←ತೆಲು. ಬುರುಕ]

**ಬುರುಕ₂, ಬುಕ್ಕಿ** (ನಾ). ಮದುವೆ, ಹಬ್ಬ ಮುಂತಾದ ಮಂಗಳ ಪ್ರಸಂಗಗಳಲ್ಲಿ ಬಳಸುವ ಸುಗಂಧಯುಕ್ತವಾದ ಬಣ್ಣದ ಪುಡಿ: ಅರಸ ಕೇಳುವವನಕೇಳಿಗೆ . . . ತರುಣಿಯರೀರ್ವರು ಕೂಡಿ ಸುಗಂಧದ ಬುರುಕದ ಪುಡಿಗಳ ತರಲು (ಹೇಮಂಕಾಂ. ೦೨-೦೯); ಬುರುಕದಗಿಲು ಪರಗಂಧ ಕಸ್ತೂರಿಗಳ ಭರಣಿಗಳಿಂದ ಕರ್ಪುರದ ಕರಡಿಗೆಗಳ ಸಾಲಿಂದ ಕಂಗೆಸೆದವಾಗುರುಕಂಚಿಯರ ಗುಡಾರ (ಕುರಾಸಾಂ. ೯೨-೬೩). **ಬುಕ್ಕಿ:** 'ಬುಕ್ಕಿಟ್ಟು', 'ಬುಕ್ಕಿಹಿಟ್ಟು' ಪರಾ.

[← ಹಿಂ. ಭುರಕಾ, ಬುಕ್ಕಾ; ಮರಾ. ಬುಕಾ, ಬುಕ್ಕಾ, ಬುಕ್ಕೀ; ಗುಜ. ಭುಕೀ. / ತೆಲು. ಬುಕ್ಕ]

**ಬುರುಕ₃** 'ಬುರಕಾ' ನೋ.

**ಬುರುಕಾ** 'ಬುರಕಾ' ನೋ.

**ಬುರುಕಿ** 'ಬುರಕಾ' ನೋ.

**ಬುರುಕೆ** 'ಬುರಕಾ' ನೋ.

**ಬುರುಗಲು, ಬುರುಗು₁** (ನಾ). ೧. ನೆನೆಸಿದ ಬತ್ತವನ್ನು ಹುರಿದು ಮಾಡುವ ಅರಳು; ಚುರುಮುರಿ; ಪುರಿ; ಮಂಡಕ್ಕಿ: "ಪೃಥುಕಃ, ಚಿಪಿಟಕಃ—೨ ಅವಲಕ್ಕಿ. ಧಾನಾ, ಭೃಷ್ಟಯವೆ ಹುರಿದ ಬುರುಗಲು" (ಸಿದ್ಧಾಂತ. ೨೯೯). **ಬುರುಗು₁:** ೧. ಬುರುಗು ಕಡಲೆಯು ಕೊಡುವೆ ಸರಕು ಯಿರ್ದೊಡೆ ಕೊಡಿರಿ (ಹುತೋರ. ೩೦). ೨. (ಪುರಿಯ ಹಾಗೆ) ಹಗುರವಾಗಿ ಉಬ್ಬಿರುವ ಸಣ್ಣಗುಳ್ಳೆಗಳಿಂದ ಕೂಡಿದುದು; **ನೊರೆ;** ಫೇನ: ಗಿಡಗಳ ತೊಗಟೆಯು ಮೇಲೆ ಬಂದ ಬುರುಗಿನ ಒಂದು ಕಣವನ್ನು ಯಂತ್ರದೊಳಗಿಂದ (Microscope) ನೋಡಿದರೆ ಅದರೊಳಗೆ . . . ಅರಣ್ಯವೇ ಕಾಣುತ್ತದೆ (ಮುಂಬಯಿ. ೩-೦೯೩); ಸಮುದ್ರ ನಗುತ್ತಿತ್ತು, ಬುರುಗಿನ ದುಗ್ಧಹಾಸದಲಿ (ಪಪ್ರ. ೯-೧).

[ದೇ. ॥ ತೆಲು. ಬೊರುಗುಲು, ಬೊರುವುಲು]

**ಬುರುಗು₁** 'ಬುರುಗಲು' ನೋ.

**ಬುರುಗು₂, ಬೂರುಗು₂, ಭೂರುಗ, ಭೂರ್ಗ** (ನಾ). ಒಂದು ಬಗೆಯ ಕಹಳೆಯಂತಹ ವಾದ್ಯ: ಹೆಗ್ಗಹಳೆ ಕಿಬುಗಹಳೆಯೊತ್ತು ಬುರುಗುಗಳ ಶಂಖ ಸಾಜೆ ಬೀಜುವ ದನಿಗಳಿಂದ ಮಂಗಳವಾದ್ಯ ಪೂರವಿಸೆ (೦೩೩೦ ೩೦-೬೩); ಒತ್ತಿ ಊದುವ ಚಿನಗಾಳೆ ಬುರುಗು ಚಿನ್ನತಿತ್ತಿರಿ ಶಂಖ ವಾಸಗಳ ವೊತ್ತದ ನಾದ ಕೇಳ್ವರ ಕಿವಿವಾಗಿಲ ಕೆತ್ತವದೇನ ಬಣ್ಣಿಪೆನು (ಕುರಾಸಾಂ. ೩೮-೯೩); ಮುರಿದೋಡಿತು ನವ್ಮ ಬಲವಾ ದಳಪಾಯ ಬುರುಗಿನ ದನಿಯುನಾಲಿಸುತ (ಕಂಶಾ. ೦೭-೬೫). **ಬೂರುಗು₂:** ಭೇರಿ ತಮ್ಮಟ ಡೌಡೆ ಗಿಡಿಬಿಡಿಯು ಬೂರುಗುಂ ಭೋರಿಡಲು (ಶಶಪೋ. ೦೯-೨೯). **ಭೂರುಗ:** ಕರಣೆ ಭೂರುಗ ಢಕ್ಕೆ ಮರುಳೆ ದುಂದುಭಿಯು ಧರಣಿ ಬೆದರುವ ತೆರದಿ ನುಡಿವ ಭೇರಿಗಳು (ಜಪುಕ. ೨೩೩). **ಭೂರ್ಗ:** ಕೊಂಬು ಕಹಳೆ ಭೂರ್ಗ ತುತೂರಿ (ಗುರುಚ. ೦೦).

[ದೇ. ॥ ತಮಿ. ಪೂರಿಕ್ಕೈ; ಮಲ. ಪೂರಿಕ; ತೆಲು. ಬೂರ, ಬೂರಗ, ಬೂರುಗು, ಬೂರುವು. / ಮರಾ. ಬುರಗ, ಬುರಂಗ, ಬುರುಗ, ಬುರುಂಗ]

**ಬುರುಗುಗಟ್ಟು** (ಕ್ರಿ). ನೊರೆಗಟ್ಟು; ನೊರೆಯೇಳು: ತುಪ್ಪದ ಖಳಖಳ ಕಡಿಮೆಯಾಗುತ್ತ ಬುರುಗುಗಟ್ಟತೊಡಗಿತು (ಗಂಪಹಾಮು. ೦೬೮); ತುಂಗಕ್ಕ ತಂದ ಸುದ್ದಿ ಕಸ-ಕಡ್ಡಿಯಾಗಿ ನೆರೆಬಂದ ಈ ಪ್ರವಾಹದಲ್ಲಿ ಕೊಚ್ಚಿ ಹೋದುವು. ವಾಸುದೇವ. ವಾಸುದೇವನ ತಾಯಿ ತಮ್ಮ ಊರವರು ಎಂಬ ಅಭಿಮಾನವೂ ಅಲ್ಲಿ ಇಲ್ಲಿ ಬುರುಗುಗಟ್ಟಿತು (ಮೂರುದಾ. ೦೯೬).

[ಬುರುಗು₁ (< ಬುರುಗಲು) + ಕಟ್ಟು₁]

**ಬುರುಗುಗಾಳೆ** (ನಾ). ಒಂದು ಬಗೆಯ ಕಹಳೆ: ಡಮಾನ ಚಂಬಕಬುರುಗುಗಾಳೆ ಹೆಗ್ಗಳೆ ಗಜರ್ವ ಪಟುಕಹಳೆಯುಂ . . . ಮದ್ದಳೆಗಳೆಂಬ ಬಹು ವಾದ್ಯದುಬ್ಬಟೆಯುಖಿಳದೆಸೆಯೊಳಾವರಿಸಲು (ಕಂಪ್ರ. ೩-೭).

[ಬುರುಗು₂ + ಕಾಳೆ (< ಕಹಳೆ)]

**ಬುರುಜು, ಬುರಜು, ಬುರ್ಜು, ಬೂಜು₂** (ನಾ). ೧. ಕೋಟೆಯ ಪ್ರಾಕಾರದ ಮೇಲೂ ಗೋಪುರಗಳ ತುದಿಯಲ್ಲೂ ಕಟ್ಟುವ ವರ್ತುಲಾಕಾರದ ಕಟ್ಟಡ; ☞ ಹಿಂದಿನ ಕಾಲದಲ್ಲಿ. ಆಕ್ರಮಣ ಮಾಡುತ್ತಿದ್ದ ಶತ್ರುಗಳ ಮೇಲೆ ಬುರುಜಿನ ನಡುವೆ ಇರುವ ರಂಧ್ರಗಳ ಮೂಲಕ ಗುಂಡು ಹಾರಿಸುತ್ತಿದ್ದರು: ಆ ಕೋಂಟೆಯು ನಾಲ್ಗಡೆಯಡದಿಟ್ಟೆಗಳೊಳ್ ಬುರುಜುಗಳನ್ನೆಬ್ಬಿಸಿ ಶತಘ್ನಿಗಳು ಪೂಡಿಸಿ ತತ್ಪ್ರಯೋಗಮುಖದಿಂದಾ ಬದುರೂರ ಕೋಂಟೆಯಂ ತೆಗೆದುಕೊಂಡು (ಕೆಳನೃ. ೩-೪೪); ಆ ಕಾಲದಲ್ಲಿ ಹಳ್ಳಿಗೂ ಕೋಟೆಗಳೂ ಬುರುಜುಗಳೂ ಕಟ್ಟಲ್ಪಡುತ್ತಿದ್ದವು (ಕಥಾ. ೦೩೨). ೨. ಸೋಲು, ಗೆಲವು ನಿಶ್ಚಿತವಾಗದ ಚದುರಂಗದ ಆಟ: (*). **ಬುರಜು:** ೧. ಗ್ರಾಮಗ್ರಾಮಕ್ಕೂ ಒಂದೊಂದು ಬುರಜು ಎಂದು ಕಟ್ಟಿರುತ್ತಿದ್ದರು (ಪಾಳೆಗಾ. ೭೯). **ಬುರ್ಜು:** ೧. ಗಗನಾಗ್ರ ಮುಟ್ಟುವತಿ ಮಾನೆಗಳಿಂ ತೆನೆಗಳಿಂ ಝುಗರ್ಝುಗಿಪ ಬುರ್ಜುಗಳ ವ್ರಾತದಿಂ ಘಾತದಿಂ . . . ಕೈಲಾಸವೊಪ್ಪಿರ್ದುದು (ಸಿದ್ಧಕಾ. ೦-೨೩); ಕೋಟೆಗೋಡೆಯು ಬುರ್ಜಿನ ಮೇಲೆ ಕುಳಿತುಕೊಳ್ಳಲು ಜಾಗಮಾಡಿದ್ದರು (೧೮೭೫. ೯೩). **ಬೂಜು₂:** ೩. ಸೋತವನು ಗೆದ್ದವನಿಗೆ ತನ್ನ ಕೆಲವು ಎಲೆಗಳನ್ನು ಕಾಣಿಕೆಯಾಗಿ ಕೊಟ್ಟು ಆಡುವ ಒಂದು ಬಗೆಯ ಇಸ್ಪೀಟಿ ನಾಟ: (*).

[←ಅರ. ಪಾರ. ಬುರ್ಜ್; ಹಿಂ. ಬುರ್ಜ್, ಬುರ್ಜೀ; ಮರಾ. ಬುರುಜ್, ಬುರೂಜ್, ಬುರಜೀ, ಬೂಜ್]

**ಬುರುಡ** (ನಾ). ಬಿದಿರಿನಿಂದ ಬುಟ್ಟಿ, ಮೊರ ಮೊದಲಾದುವುಗಳನ್ನು ಮಾಡುವ ಒಂದು ಜಾತಿ ಮತ್ತು ಆ ಜಾತಿಗೆ ಸೇರಿದವನು; ಮೇದ: ಅಗಸ ಮುಚ್ಚಿಗ ನಟ ಬುರುಡ ಕೈವರ್ತ ಮೇದ ಬಿಲ್ಲರೆಂಬ ಈಯೇಳು ಮಂದಿಯೂ ಅಂತ್ಯಜಾತಿಯೆನಿಸಿಕೊಂಬುದು (ಕುಶಸ. ೦೪೯); ಪಶುಯ ಮಾಂಸಗಳಿಂದಲುಪಜೀವಿಸುವವನ ನಟ್ಟುಗನ ಬುರುಡನ ಸಸಿನೆ ಮದರೀ ಮೂಪರುಗಳನ್ನವ ನಿರಂತರವು . . . ಉಣಲಾಗದು (ಕಾವೇಮು. ೬೭-೨೩).

[ಸಂ.]

**ಬುರುಡೆ, ಬುಂಡೆ, ಬುಡ್ಡಿ, ಬುರುಂಡೆ₁, ಬುರ್ರು, ಬುರ್ರೆ** (ನಾ). ೧. ಬಿಲ್ವ, ಬೇಲ ಮೊದಲಾದುವುಗಳ ಸೊಟ್ಟೆಯನ್ನು ಒಣಗಿಸಿ ಮಾಡಿದ ಪಾತ್ರೆಯಾಕಾರದ ಒಂದು ಸಾಧನ: ಬೆಂಗಲ್ಲಿ ತೊಡಕುವಲೆ ಕಂಬ ತಿತ್ತಿಯು ಸೋರೆಯ ಬುರುಡೆಗಳು ಬಿಲ್ಲುಗೋಂಚಿಯು ಸರಳ್ಗಳ ಪಿಡಿದು . . . ಬೇಂಟೆಯಾಡುತ್ತಿರ್ದರು (ರಾಶಿಕ. ೦೭-೬೭). ೨. ಬೇಲ, ಬಿಲ್ವ ಮುಂತಾದ ಕಾಯಿಗಳ ತಿರುಳನ್ನು ತೆಗೆದು ಒಣಗಿಸಿ, ಬಿರಡೆ ಹಾಕಿ. ನಶ್ಯ, ಶಾಯಿ ಮುಂತಾದುವನ್ನು ಹಾಕಿಡಲು ಸೀಸೆಯಂತೆ ಉಪಯೋಗಿಸುವ ವಸ್ತು: ಗಂಗಾರಾಮನು ತನ್ನ ನಶ್ಯದ ಬುರುಡೆಯಿಂದ ಒಂದಿಷ್ಟು ನಶ್ಯವನ್ನು ಮೂಗಿಗೇರಿಸಿ ಕಥೆಯನ್ನು ಪ್ರಾರಂಭಿಸಿದನು (ಹಂಪ್ರ. ೦೩); ಅವನು ತನ್ನ ಕಿಸೆಯೊಳಗಿಂದ ನಸ್ಯದ ಬುರುಡೆಯನ್ನು ಹೊರಗೆ ತೆಗೆದು ಮೂಗಿಗೇರಿಸಿದನು (ಛತಾ. II, ೯೦೦). ೩. ಈಜುವಾಗ ನೀರಿನಲ್ಲಿ ಮುಳುಗದಂತಿರಲು ಬೆನ್ನಿಗೆ ಕಟ್ಟಿಕೊಳ್ಳುವ, ಒಣಗಿದ ಸೋರೆ ಮುಂತಾದುವುಗಳಿಂದ ಮಾಡಿದ ಸಾಧನ: ಹೊಳೆಗೆ ಬುರುಡೆ

ಯನ್ನು ನಂಬುತಿಳಿದ ನರನು ಮುಳುಗದಿಹನೆ (ಹಾದಪಾ. ೫೬). 'ಈಜು ಬುರುಡೆ' ಪರಾ. ೪. ದೀಪ ಆರಿಹೋಗದಂತಿರಲು ಕಂದೀಲು ಮೊದಲಾದುವುಗಳಿಗೆ ಹಾಕುವ ಕೊಳವೆಯಾಕಾರದ ಉಬ್ಬಿದ ದುಂಡನೆಯ ಗಾಜಿನ ವಸ್ತು : ಕತ್ತಲೆಯಾದ್ದರಿಂದ ದೀಪ ಹಚ್ಚಲೆಂದು ಕಂದೀಲಿನ ಕಾಜಿನ ಬುರುಡೆಯನ್ನು ಉಜ್ಜುತ್ತಿದ್ದ ಪುರುಷೋತ್ತಮ 'ಖುಕ್' ಎಂದ (ಮೂರುಬಾ. ೪೯). ೫. ವೀಣೆ, ತಂಬೂರಿ ಮುಂತಾದ ತಂತೀವಾದ್ಯಗಳ ತುದಿಗಳಲ್ಲಿ ಅಳವಡಿಸುವ, ಸೋರೆ, ಕುಂಬಳ ಮುಂತಾದ ಒಣಗಿದ ಕಾಯಿಗಳಿಂದ ಮಾಡಿರುವ ಗುಂಡನೆಯ ಸಾಧನ : ಆ ವೀಣೆಯ ಬುರುಡೆಯ ಮೇಲೆ ಚಿತ್ತಾಕರ್ಷಕವಾದ ದಂತದ ಕೆತ್ತನೆ ಕೆಲಸವಿದೆ (ರೂ೩). ೬. ತಲೆಯ ಚಿಪ್ಪು ; ಓಡು ; ಕಪಾಲ : ತಂದ ರಾವಣನ ತಲೆಯ ಬುರುಡೆಯನು ನಿರುಕಿಸುತ (ಶ್ರೀರಾಪ. ೬-೬೪). 'ತಲೆಬುರುಡೆ' ಪರಾ. ೭. (ಆಲಂ) ತಲೆ ; ಶಿರಸ್ಸು : ಪತ್ಯವಸ್ತುವನ್ನು ಉಪಾಧ್ಯಾಯರೇ ಅವರ ಬುರುಡೆಗೆ ತುಂಬಲು ಯತ್ನಿಸುವುದು ನಿಂತಿತು (ಶಿಕ್ಷದ. ೬೮೭). ೮. ಸುಳ್ಳು ಮಾತು ; ಬೊಗಳೆ : ಸ್ವಾಮಿ. ಈ ಬುರುಡೆಯನ್ನು ಯಾರಲ್ಲಿ ಬಿಚ್ಚುತ್ತೀರಿ ? (ದೇವಹಂ. ೨೨೮) ; ಇಂಥ ಬಾಯ್ಬಡುಕರ ಬುರುಡೆಗಳಿಗೆ ಸೊಪ್ಪುಹಾಕಿದರೆ ಜಾಗೀರಿನ ಕೆಲಸವು ನಡೆಯಲಿಕ್ಕಿಲ್ಲ (ಜನಜಾ. ೨೦). ಬುಂಡೆ : ೧. ಬುಂಡೇನ್ ಎತ್ತಿ ಕುಡುದ್ಬುಟ್ಯಾಂದ್ರೆ — ತಕ್ಕೊ ! ಪದಗೊಳ್ ಬಾಣ ! (ಕನ್ನಬಾ. ೦೦೩) : ಬಂದರೆ ಸಮಯವು ನುಸುಳಿ ನನ್ನೆಡೆ ಬರುವ ಹೊತ್ತಿಗೆ ಅವಕೆ ರುಚಿ ತೋರಿಸುವೆನು : ಬುಂಡೆಯಲಿ ನೊರೆಪೆಂಡವೀಯುತ ಹಳೆಯ ಪಳ್ಳಿಯ ಹಾಡನು (ನರಿವು. ೬೫-೪). ಬುಡ್ಡಿ : ೨. ಬುಡ್ಡಿಯಲ್ಲಿದ್ದ ಶಾಯಿಯನ್ನು ಮಗುವು ಚೆಲ್ಲಿಬಿಟ್ಟಿತು (ರೂ೩). ೯. ಚಿಮಣಿ ದೀಪ : ಪಡಸಾಲೆಯಲ್ಲಿ ಭಯಂಕರವಾದ ಹೊಗೆಯನ್ನು ಕಾರುತ್ತಿರುವ ಸೀಮೆಯೆಣ್ಣೆಯ ಚಿಮಣಿಯ ಬುಡ್ಡಿ ಉರಿಯುತ್ತಿತ್ತು (ರಂಗರೋ. ೦೦೪) : ಹೊಗೆ ಕಾರುತ್ತಾ ಉರಿಯುತ್ತಿದ್ದ ಬುಡ್ಡಿಯನ್ನು ಆರಿಸಿ ಚೆನ್ನವ್ವನೂ ಮಲಗಿಕೊಂಡಳು (ಕಾದಕೋ. ೦೯೨). Δ ಬುರುಂಡೆ$_1$ : ೧೦. ಒಂದು ಬಗೆಯ ಸಿಹಿತಿಂಡಿ ; ಉಂಡೆ : ತುಪ್ಪದ ಹೂರಿಗೆ ಬುರುಂಡೆ ಜಾಕಾಯ್ನುಜಾಗಂಪೊಪ್ಪುವ ಮೋರುಂಡೆ ಮನಕೊಪ್ಪಿಸಿದುವು ಮಧುರರಸದ ಸುಧೆಯಂ ಬುಧರೊಳ್ (ನಳಕಂ. ೪೪೩). ಬುರ್ರ : ೧೧. ಒಂದು ಬಗೆಯ ವಾದ್ಯ : ಹಾಡುಗಾರರು ಮದ್ದಳೆಯಂತಹ ಒಂದು ವಿಧವಾದ ವಾದ್ಯವಿಶೇಷವನ್ನು ಬಾರಿಸುತ್ತಾ ನರ್ತಿಸುತ್ತಾರೆ. ಈ ವಾದ್ಯವಿಶೇಷಕ್ಕೆ 'ಗುಮ್ಮಟೆ' ಎನ್ನುತ್ತಾರೆ. ತೆಲುಗಿನಲ್ಲಿ ಬುರ್ರ (ಬುರುಡೆ) ಎಂದು ಹೆಸರು (ಕಾಕ. ೦೩೨). 'ಬುರ್ರಕತೆ' ಪರಾ. ಬುರ್ರೆ : ೫. ವಿಪಂಚಿ ಯಾಕೆಂದು ಬುದೆ ಎಂ ಮರುಳಗ್ಯೆ ವಿರಂಗವೆ ನಾಳ ಬುರ್ರೆಯೋಲುಂ ಮೆರೆವ ವಕ್ಷರುಹ ಮೇಲುದರ ನೆರೆತಂತಿಗಂ ಮೇಲೆ ಶಿರಬಿರುಡೆಯೆನುತ್ತೈದಿದೆನಲು ಕೈಹೊಯ್ದಾಳಿಯರು ನಗುತಿರೆ (ಜಸವು. ೧೨-೪೧).

ಬುರುಡೆ ಉರುಳಿಸು = ಸುಳ್ಳು ಹೇಳು ; ಬೊಗಳೆ ಬಿಡು : ಕುಮುದ ರತ್ನಮ್ಮನ ಜೀವನಕತೆ ಕೇಳಬೇಕಂತಾಳೆಂತ ಬುರುಡೆ ಉರುಳಿಸಿದೆ (ಜಾದುಹು. ೦೦೦). ಬುರುಡೆ ಬಿಡು = ಬುರುಡೆ ಉರುಳಿಸು : ಬುರುಡೆ ಬಿಡುವುದರಲ್ಲಿ ಅವನು ಒಳ್ಳೆ ಸಮರ್ಥನಾಗಿದ್ದ (ಸ್ಮೃತಿಜ. ೩೩೦). ಬುರುಡೆಯ ಮಾತು = ಸುಳ್ಳುಮಾತು : ಬೊಗಳೆ ಮಾತು : ಹೊಲದ ಒಡ್ಡಿಗಾಗಿ ಬರುವುದು ಸಾಧ್ಯವಾಗುವುದಿಲ್ಲವೆಂದು ಹೇಳಿ ಕಳಿಸಿದ ಮಾತು ಕೇವಲ ಬುರುಡೆಯ ಮಾತಾಗಿರಬಹುದೆ ? (ವಾಣಿಸು. ೩೨). ಬುರುಡೆ ಹೊಡೆ = ಬುರುಡೆ ಉರುಳಿಸು : ಇಲ್ಲಿ ಸಿಂಹವಿದೆಯೆಂದು ಬುರುಡೆ ಹೊಡೆದೆಯಲ್ಲ ! ಅದಕ್ಕೆ ನಿನ್ನ ಆಧಾರವೇನೋ ? (ಹಸುಹೂ. ೨೯೯) ; ನೀನು ಬುರುಡೆ ಹೊಡೆಯುತ್ತಿದ್ದೀ (ಕಾಲಿಮು. ೪). [ದೇ.॥ ತಮಿ. ಪುರುಟಾ, ಪುಟ್ಟಿ : ತುಳು. ಬುರುಡೆ ; ತೆಲು. ಬುಡ್ಡಿ, ಬುಡ್ಡಿಗ, ಬುರುಡ, ಬುರ್ರ, ಬುಜ್ಜ ; ಕೋಲಾ. ಬುರ್ರಾ ; ನಾಯ್ಕಿ. ಬುರ್ರ ; ಪರ್ಜಿ. ಬುರ್ಕ : ಗೊಂಡಿ. ಪುರ್ರಾ]

ಬುರುದೆ 'ಬುರದೆ' ನೋ.

ಬುರುಬುರನೆ (ಅ). ಉಬ್ಬುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಬುರುಬುರನೆ ಬೋರೆಗಳು ನೆಗೆದೊಡೆದರುಣಜಲದೇಜಾಗಳ ಲಿಬ್ಬರು ತರಣಿ ಶಶಿಯವೊಲೊಪ್ಪಿದರು ಕಡವಗಲ ಪೌರ್ಣಮಿಯ (ಕೊರಾ. ೬-೦೭-೪೦) ; ಬಿಳಿಯ ಕಡಲೆಯ ಸಣ್ಣ ಹಿಟ್ಟು ಸೋದಿಸಿ ಹಾಲಿನೊಳಗಿಕ್ಕಿ ಸುಪಳವ ಮಾಡಿ . . . ತುಪ್ಪವನು ಕಾಸಿ ಇಳಿಯಬಿಡೆ ಬುರುಬುರನೆ ಬೆಂದು (ಸೂಶಾ. ೦-೫೬). [ಬುರುಬುರು + –ಅನೆ$_1$]

ಬುರುಬುರಿಸು (ಕ್ರಿ). ಬುರುಬುರು ಎಂದು ಶಬ್ದ ಮಾಡು : ಬುರುಬುರಿಸುವ ಬಹುವಾದ್ಯಕ್ಕೆ ಕಾಲ್ತರಹರಿಸದೆ ರಾಯನಿದಿರೊಳು ಹರಿಗೆಕಾಜಿರು . . . ಎದ್ದುಂದರಾಗ (ಭಾತ. ೨೩-೦೭). [ಬುರುಬುರು + –ಇಸು$_3$]

ಬುರುಬುರು (ನಾ). ಒಂದು ಅನುಕರಣ ಶಬ್ದ : ಕಾದ ಎಣ್ಣೆಗೆ ಲಟ್ಟಿಸಿದ ಹಿಟ್ಟನ್ನು ಹಾಕಿದಾಗ ಬುರುಬುರು ಎಂದು ಊದಿಕೊಂಡಿತು (ರೂ೩). 'ಬುರುಬುರನೆ'. 'ಬುರುಬುರಿಸು' ಪರಾ.

ಬುರುಸಾಲು (ನಾ). ಒಂದು ಬಗೆಯ ರೇಷ್ಮೆಯ ಬಟ್ಟೆ : ಅರುಣ ಹಸುರು ನೀಲ ಹಳದಿ ಕದಂಬದ ಸುರುಚಿರ ಬುರುಸಾಲುಗಳ ಮೆಚ್ಚಿವ ಪನ್ನಂಗದೊಳಗೆ ಬಿಂಕ ಬೆಡಗಿನ ತರಳಾಕ್ಷಿಯರ್ ನಡೆತರಲು (ಜ್ಞಾನತ. ೨೫-೨೪). [← ತೆಲು. ಬುರುಸ, ಬುರುಸಾ]

ಬುರುಸು 'ಬೂಜು$_1$' ನೋ.

ಬುರುಸುಗಟ್ಟು 'ಬೂಜುಗಟ್ಟು' ನೋ.

ಬುರುಸುಗೆಡು (ಕ್ರಿ). ಬೂಜು ಹಿಡಿ : ಅತ್ಯಂತ ಪ್ರಾಚೀನಕಾಲದಲ್ಲಿ ಜ್ಞಾನೋನ್ಮಾದದ ವಿಕ್ಷಿಪ್ತ ಕುಟಿಲತೆಯ ಮೂಲಕ ನಾಟಕವು ಮುಳುಗಿತು ಹಾಗು ಬೀಭತ್ಸಶೃಂಗಾರದಿಂದ ಬುರುಸುಗಟ್ಟ "ಭಾಣ"ವಾಗಿ ಅದು ಪರಿಣಮಿಸಿತು (ಶ್ರುಬಿಂಧ. ೨೩). [ಬುರುಸು (< ಬೂಜು$_1$) + ಕೆಡು$_1$]

ಬುರ್ಕ 'ಬುರಕಾ' ನೋ.

ಬುರ್ಜು 'ಬುರುಜು' ನೋ.

ಬುರ್ನಾಸು (ನಾ). ೧. ಕೆಲಸಕ್ಕೆ ಬಾರದುದು ; ಕಳಪೆ ; ಕೀಳು : ನನ್ನ ಖಾಯಂ ಕುಳವಾರುಗಳಿಗೇ ಕೊಟ್ಟು ಬರುತ್ತೇನೆ. ನನ್ನ ಮಾಲೇನು ಬುರ್ನಾಸಲ್ಲವಲ್ಲ (ಹೊಸಕ್ಷಿ. ೫೬); ಇಷ್ಟೆಯೋ ನಿಮ್ಮ ಶಾಲೆ, ಏನು ಮಹಾ ? ಬರೀ ಬುರ್ನಾಸು ಎಂದು ಗ್ರಹಿಸಬೇಡಿ (ರೂಪಸು. ೬೦). ೨. ನಿಸ್ಸಾರವಾದುದು : ಸತ್ವರಹಿತವಾದುದು : ಕೇಸರಿಬಣ್ಣದ ತೊಗರಿಬೇಳೆ, ನೀವು ಬುರ್ನಾಸು ಅಂತೀರಲ್ಲ (ಸರಸ. ೨೦). ೩. ಕೆಲಸಕ್ಕೆ ಬಾರದವನು; ನಿಷ್ಪ್ರಯೋಜಕ : ಬುರ್ನಾಸು, ಬರೀ ಬುರ್ನಾಸು. ಆ ಪಾದ್ರಿ (ಮುಕಿವು. ೨೦೭): ಮಾಣಿ ಇಷ್ಟೊಂದು ಬುರ್ನಾಸು ಆಗುತ್ತದೆ ಎಂದು ನಾನೆಣಿಸಿರಲಿಲ್ಲ (ಮಾಕವು. ೨೦೭). (ಗು). ೪. ನಿಷ್ಪ್ರಯೋಜಕವಾದ : ಕಳಪೆಯಾದ : ಈ ಬುರ್ನಾಸು ಅಂಗಡಿಯನ್ನು ನಾನಲ್ಲವೇ ಈ ಸ್ಥಿತಿಗೆ ತಂದದ್ದು (ಮೂರುಬಾ. ೬೦); ನಮ್ಮ ಕಾಂಗ್ರೆಸ್ ಅಧ್ಯಕ್ಷರಾದ ಅಣ್ಣಪ್ಪಯ್ಯನವರೂ ಆ ಬುರ್ನಾಸು ಹೆಸರನ್ನು ಕಿತ್ತು ಹಾಕಬೇಕು (ಶಾರದಾ. ೨೪೬). [←ತುಳು. ಬುರ್ನಾಸ್]

ಬುರ್ನಿಷ್ 'ಬುರ್ನಿಸ್' ನೋ.

ಬುರ್ನಿಸ್, ಬುರ್ನಿಷ್, ಬೂರ್ನೀಸು (ನಾ). ಉಣ್ಣೆಗೆ ಕೆಲವು ಅಂಟು ಪದಾರ್ಥಗಳನ್ನು ಸೇರಿಸಿ ಮಾಡಿದ ಒಂದು ಬಗೆಯ ಮೆತ್ತನೆಯ

ಕಂಬಳಿ : (೩). **ಬುರ್ನಿಷ್ :** "ರಾಂಕವಂ, ೧ ಮೃಗರೋಮಜಂ– ಮೃಗರೋಮಗಳಿಂದ ಮಾಡಲ್ಪಟ್ಟ ಶಾಲು, ಬನಾತು, ಬುರ್ನಿಷ್" (ಸಿದ್ಧಾಂತಿ. ೨೦೨). **ಬುರ್ನೀಸು :** ಬುರ್ನೀಸು ಹೊದ್ದುಕೊಂಡರೂ ಚಳಿ ತಡೆಯಲಾಗುತ್ತಿಲ್ಲ (ರೂಢಿ).

[← ಮರಾ. ಬುರಣೂಸ್, ಬುರನಸ್./ತೆಲು. ಬುರ್ನೀಸು, ಬುರುನೀಸು]

**ಬುರ್ರ** 'ಬುರುಡೆ' ನೋ.

**ಬುರ್ರಕತೆ** (ನಾ). ಮದ್ದಳೆಯಂತಹ ಒಂದು ಬಗೆಯ ವಾದ್ಯವನ್ನು ಬಾರಿಸಿಕೊಂಡು ಹೇಳುವ ಕಥೆ; P ತೆಲುಗಿನಲ್ಲಿ ವಿಶೇಷವಾಗಿ ಪ್ರಚಾರದಲ್ಲಿರುವ ಜನಪದಕಲೆಗಳಲ್ಲಿ ಒಂದಾದ ಇದರಲ್ಲಿ ಮೂವರು ಭಾಗವಹಿಸುತ್ತಾರೆ. ಒಬ್ಬನು ಕಥೆಯನ್ನೂ ನಡುನಡುವೆ ಹಾಡನ್ನೂ ಹೇಳುತ್ತಾನೆ. ಉಳಿದ ಇಬ್ಬರು ಬುರ್ರವನ್ನು ಬಾರಿಸುತ್ತಾ ನರ್ತಿಸುತ್ತಾರೆ: ಕ್ರೈಸ್ತಮತಪ್ರಸಾರಕ್ಕೆಂದು ಪಾದ್ರಿಗಳು ತೆಲಂಗಾಣಕ್ಕೆ ಬಂದಿಳಿದಾಗ . . . ತಮ್ಮ ಮತವನ್ನು ಸೇರಿ ಉನ್ನತಿಗೇರಿದ ಮಹನೀಯರ ಚರಿತ್ರೆಗಳನ್ನು 'ಬುರ್ರಕತೆ'ಯ ರೂಪದಲ್ಲಿ ಬರೆಸಿ ಆಡಿಸಿದರೆಂದೂ ತಿಳಿದು ಬರುತ್ತದೆ (ಕಜಕ. ೦೩೨).

[ಬುರ್ರ (< ಬುರುಡೆ) + ಕತೆ]

**ಬುರ್ರಕಥೆ** (ನಾ). = ಬುರ್ರಕತೆ: ಬುರ್ರಕಥೆಯಲ್ಲಿ ಮೂವರು ಭಾಗವಹಿಸುತ್ತಾರೆ (ಕಜಕ. ೦೩೨). [ಬುರ್ರ (< ಬುರುಡೆ) + ಕಥೆ]

**ಬುರ್ರೆ** 'ಬುರುಡೆ' ನೋ.

**ಬುಲಾಕು** (ನಾ). ಮೂಗಿನ ಎರಡು ಹೊಳ್ಳೆಗಳ ನಡುವೆ ಜೋತಾಡುಹಂತೆ ತೊಡುವ ಒಂದು ಬಗೆಯ ಆಭರಣ: ಅವಳ ಮೂಗಿನಲ್ಲಿ ತಳತಳಿಸುವ ದೊಡ್ಡ ಮುತ್ತಿನ 'ಬುಲಾಕೂ' . . . ವಜ್ರದುಂಗುರವೂ ಇಷ್ಟೇ ಅವಳ ಆಭರಣಗಳಾಗಿದ್ದವು (ತಿರಂಗ. ೦೭); ಬುಲಾಕಿನ ರತ್ನ ಮೇಲ್ತುಟಿಯ ಮಧ್ಯದಲ್ಲಿ ಮಿನುಗುತಿದೆ (ಪವಾ. II. ೦೦).

[←ಪಾರ. ಹಿಂ. ಬುಲಾಕ್; ಮರಾ. ಬುಲಾಕ್, ಬುಲಾಖ್]

**ಬುಲೆಟ್ಟು** (ನಾ). ಬಂದೂಕಿಗೆ ಉಪಯೋಗಿಸುವ ಸೀಸದ ಗುಂಡು,– ಗೋಲಿ: ಡಕಾಯಿತನ ಬುಲೆಟ್ಟಿನಿಂದ ಗಾಯಗೊಂಡಿದ್ದ ಆತನು ಆಸ್ಪತ್ರೆಯಲ್ಲಿ ಚೇತರಿಸಿಕೊಳ್ಳುತ್ತಿದ್ದಾನೆ (ರೂಢಿ). [←ಇಂ. Bullet]

**ಬುಲ್ಬುಲ್** (ನಾ). ಹಾಡುವ ಜಾತಿಗೆ ಸೇರಿದ, ಒಂದು ಬಗೆಯ ಸಣ್ಣ ಗಾತ್ರದ ಪಕ್ಷಿ: (ಬುಲ್‌ಬುಲ್ ಪಕ್ಷಿಗಳು) (Bulbuls): ಆಫ್ರಿಕಾದಿಂದ ಏಷ್ಯಾಖಂಡದಾದ್ಯಂತ ಕಂಡುಬರುವ ಸಂಗೀತಕ್ಕೆ ಹೆಸರಾಂತ ಪಕ್ಷಿಪ್ರಭೇದ ವಿದು (ಪಕ್ಷಿ. ೨೨೬).

[←ಪಾರ. ಹಿಂ. ಬುಲ್‌ಬುಲ್; ಮರಾ. ಬುಲಬುಲ್, ಬುಲ್ಬುಲ್]

**ಬುಲ್ಬುಲ್‌ತರಂಗ** (ನಾ). ಒಂದು ಬಗೆಯ ವಾದ್ಯವಿಶೇಷ: ಲಲಿತಗತಿಯು ಕಾಣಿಸುವಲ್ಲಿ ಬುಲ್‌ಬುಲ್‌ತರಂಗ, ವೀಣೆ, ಕೊಳಲುಗಳು ಬೇಕು (ಶಾಲಕ್ಷ. II. ೯೬೯); ಪರದೇಶದವರ ಸಹವಾಸದಿಂದ . . . ಬುಲ್‌ಬುಲ್‌ತರಂಗ, ಅಗ್ನಿತರಂಗ . . . ಕಾಷ್ಠತರಂಗ ಮುಂತಾದುವು ಎಷ್ಟೋ ಬಂದಿವೆ (ಗಾವಶ. ೦೦೦). [ಬುಲ್ಬುಲ್, + ತರಂಗ]

**ಬುಲ್ಲಣೆ** 'ಬುಲ್ಲವಣೆ' ನೋ.

**ಬುಲ್ಲಯಿಸು** 'ಬುಲ್ಲವಿಸು' ನೋ.

**ಬುಲ್ಲಯ್ಸು** 'ಬುಲ್ಲವಿಸು' ನೋ.

**ಬುಲ್ಲವಣೆ, ಬುಲ್ಲಣೆ, ಭುಲ್ಲಣೆ, ಭುಲ್ಲವಣೆ, ಭುಲ್ಲಪಣೆ** (ನಾ). ೧. ಅತಿಶಯ; ಮೇಲ್ಮೆ; ಹೆಚ್ಚಳ: "ಬು[ಪಾಠಾಂ. ಭು]ಲ್ಲವಣೆಯೆನಲ್ ಪೆರ್ಚುಗೆ" (ಶಬ್ದಮ. ೨೦); ಭಕ್ತಿಭಾವದ ಬುಲ್ಲವಣೆಯಲ್ಲಿ ಮರುಳು ಶಂಕರದೇವನಿಂತೆಂದ (ಶೃಶುಲೀ. ೦೫-೪); ಆರು ಬಲ್ಲರು ವೀರಗಟಿಕದ ಬೂರಿ ಬುಲ್ಲವಣೆಯೆನು (ವಜೂಲಾ. ೦-೨೪). ೨. ಉತ್ಸಾಹ; ಹುರುಪು: ಸಲ್ಲಲೋತುದು ಪಾಪವೇ ಕೊಡಲೊಲ್ಲೆ ಉಚಿತಕೆ ಬಜೆಯ ಬೇಟವ ಬು[ಪಾಠಾಂ. ಭು]ಲ್ಲವಣೆ ಸಲಿಸುವುದು ನೀತಿಯೆ (ಪಶತ. ೧೨-೭). ೩. ಸಡಗರ; ಸಂಭ್ರಮ: ಇವನ . . . ಭರಪಂಥವಣೆ ಗರುವಿಕೆಗಮಕ ಭಾವವಭೀತಿ ಬು[ಪಾಠಾಂ. ಭು]ಲ್ಲವಣೆ ಇವನ ವಿಮಲಕ್ಷತ್ರವಿಕ್ರಮವಿವನ ಕೊಂಡಯತನವಿವೇ ಸಾಕಿವನು ಘಾಟದ ವೀರನೆಂದರು ವೀರರರ್ಜುನನ (ಕುವ್ಯಾಆ. ೧೫-೨೫); ಇಲ್ಲಿಗಿದೇಂ ಬರವೆಂದಾ ಸಲ್ಲಲಿತ ಕವೀಶನೆಯ್ದೆ ನುಡಿಯೆ ಕವೀಶರ್ ಬುಲ್ಲವಣೆಯಿಂದೆ ಕೇಳ್ದಾ ಸೊಲ್ಲಂ ಕಡುನೆಹದಿಂದೆ ನುಡಿದರ್ ತರದಿಂ (ಹಾಶಾಸ್ಕ. ೪-೩-೦೪). **ಬುಲ್ಲಣೆ :** ೩. ಮಹಬುಲ್ಲಣೆಯಿಂದ ಬೂದಿಯ ಪೂಸುತ ಬೇಡುವರೇ ಮಗನು (ಶೃಶುಶ. ೩-೦೪೦). **ಭುಲ್ಲಣೆ :** ೧. ಹಲ್ಲಣಿಸಿದುದು ಯಾವವರ ಪಡೆ ಘಲ್ಲಣೆಯ ಘರ್ಘರದ ಘೋಷದ ಭುಲ್ಲಣೆಯ ಗಂಭೀರಭೇರಿಯ ಬಹಳರಭಸದಲಿ (ಕುವ್ಯಾಕ. ೦೦-೬೦). ೩. ಪುಲ್ಲ ನಲ್ವಾಸಿನೊಳ್ ಚೆಲ್ವದಿಂ ನಲ್ಲಳ್ವೆರಸು ನಿಲ್ವುದೆ ಕುಳ್ಳಿರ್ದ ಮೆಲ್ಲಮೆಲ್ಲನೆ ಲಲ್ಲೆಗಜೆವ ಬಲ್ಲತನದ ಸೊಲ್ಲ ಸೊಗದ ಭುಲ್ಲಣೆಯ ಕೊಲ್ಲಣ ದೊಳೆಸೆದುಂ (ರಾಪಶಾಕ್ಷ. ೭೩-೩). **ಭುಲ್ಲವಣೆ :** ೩. ಭುಲ್ಲವಣೆಯಲಿ ನಿನ್ನ ಜವ್ವನ ಕೊಬ್ಬಿನಲಿ ಮಜೆದು ಪಲ್ಲವಿಸಿ ನೀ ಕಾಮಿಸಿರ್ದೊಡೆ ಮಿಲ್ಲತನದಲಿ ವಿಕೃತವೇಷದಲಲ್ಲಮನೆ ತಾ ಬಂದನೈಸಲೆ (ಶೃಶುಲೀ. ೭-೦೮). **ಭುಲ್ಲವಣೆ :** ೧. ತಾಮಸದ ಭುಲ್ಲವಣೆಯಲಿ ಕುರುಭೂಮಿಪನ ಬಲಪೊಪಜು ವೈರಿಸ್ತೋಮ ಕಂಡುದು ಪವನತನಯನ ರಣದ ಭಾರಣೆಯ (ಕುವ್ಯಾಕ. ೦೦-೨). ೨. ಭುಲ್ಲವಣೆಯಲಿ ಮಾತನಾಡಲಿ ಬಲ್ಲೆನು (ಶೃಶುಲೀ. ೦೭-೩೮); ಅರಿ ಬೊಬ್ಬಿಡುವೆಡಬಲದ ರಣಭೈರವನ ಭುಲ್ಲವಣೆಯಲಿ ಮುಂಗಾರ ಮುಗಿಲು ಬ್ಬರದವೊಲು ನಡೆತಂದನಾಹವಕೆ (ಕೊರಲಾ. ೬-೨೮-೪); ಇವಳ ಮೃದುಮಾತಿನ ನಗೆಯ ಭುಲ್ಲವಣೆ ನಡೆ ವರ್ತನೆ . . . ಲಲ್ಲೆಯಿಂದೆಲ್ಲವರ ನೊಮ್ಮೆಗೆ ಮರುಳುಗೆಡಿಸುವುವ್ತ (ಅಕ್ರೂಕ. ೭-೦೭). ೪. ಕಳೆ; ಶೋಭೆ: ಎಲ್ಲಿಗೆಲವೋ ಹೋಗದಿರು ಕಟಿ ನಿಲ್ಲಿದೇತಣಿ ಕಲಸ ಬೇಹಿನ ಭುಲ್ಲವಣೆ ಬಾರಿಸು ತಲಿದೆ ನೆಜೆ ನಿನ್ನ ಮೋಜಿಯಲಿ (ಕೊರಲಾ. ೩-೨-೪). 'ಬುಲ್ಲವಿಸಂ' ಪರಾ.

[← ಮರಾ. ಭುಲ್ಲವಣ=ಮೈಮರೆವು, ಮೋಹ, ಮರುಳು]

**ಬುಲ್ಲವಿಸು, ಬುಲ್ಲಯಿಸಂ, ಬುಲ್ಲಯ್ಸು, ಬುಲ್ಲೈಸು, ಭುಲ್ಲಯಿಸುಕ ಭುಲ್ಲವಿಸಂ, ಭುಲ್ಲಿಸು, ಭುಲ್ಲೈಸು** (ಕ್ರಿ). ೧. ಅತಿಶಯಿಸಂ; ಅಧಿಗೊಳ್ಳು: ಕ್ರೋಧಶಿಖಿ ಬುಲ್ಲವಿ[ಪಾಠಾಂ. ಭುಲ್ಲಯಿ]ಸೆ ಮುಳಿದು ವಿರೋಧಿಯನು ನೋಡಿದನು (ಕುವ್ಯಾಕ. ೨೩-೪೫). ೨. ಉತ್ಸಾಹಗೊಳ್ಳು; ಹುಮ್ಮಸ್ಸಿನಿಂದ ಕೂಡಿರು: ಒಡನೆ ಬುಲ್ಲವಿಸುತಂ ಬ್ರಹ್ಮಸುತನೆಜಗೆ ಪುಳಕಿಪನ ಚರಣಾಂಬುಜಕ್ಕೆ ಶರಣಾ (ರಶಿಶಂ. ೨೭-೦೪); ಸಿದ್ಧಲಿಂಗೇಶ್ವರನ ಘನ ಸುಪ್ರಸಾದಮಂ ಸವಿದು ತಣಿದು ಬು[ಪಾಠಾಂ. ಭು]ಲ್ಲವಿಸಿ ಹೆಚ್ಚಿಹೆಕ್ಕಳಗೊಂಡು ಕುಕಿಲಿಜಿದು (ಸಿಶ್ಚೀಪು. ೦೫-೬೨). ೩. ಸಡಗರ ಪಡು; ಸಂಭ್ರಮಪಡಂ: ತಮ್ಮಯ ಕೃಪಾಪಾಂಗದಿಂ ಮೆಲ್ಲನಾರೈದು ನೋಡೆ ಸಲ್ಲಲಿತ ಗುರುಭಕ್ತನಡಿಯಂ ಮೊದಲಂತಾಗೆ ಬುಲ್ಲವಿಸಿ ತೆಗೆದಪ್ಪಿಕೊಂಡು (ಶ್ರೀರಲಾ. ೭-೦೦); ಕುಳ್ಳಿರಿಸಿ ತೊಡೆಯೊಳಗೆ ಹಿಗ್ಗುತ ಗಲ್ಲ ಮಿಡಿವುತ ಬುಲ್ಲವಿಸಿ ಬಲುಜೊಲ್ಲಿಳಿವ ಬಾಯಲ್ಲಿ ಬಾಯಿಟ್ಟೊಲಿದು ಮುದ್ದಿಸುತ (ರೇಶಪು. ೩-೪). ೪. (ಸಂಖ, ಸಂತೋಷಗಳ ಆಧಿಕ್ಯದಿಂದ) ಬೀಗು: ಉಬ್ಬು: ಸಂಭ್ರಮದೊಳಿ ಪಡೆತಂದು ಮೈ ಬು[ಪಾಠಾಂ. ಭು]ಲ್ಲವಿಸೆ ಪರ್ವದಿಂ ಪಾರ್ಥನಂ ಕಂಡು (ಜೈಮಿಭಾ. ೦೭-೯೭); ಕಿಜಿದನಟಿದುದಜುಂ ನೀಂ ಬುಲ್ಲವಿಸಿ ಬೆಜಿಯುವೇಟ್ಟುದೆ (ಸೀತಾಪಂ. I. ೦೩೦). ೫. ಗರ್ವ ಪಡು; ಸೊಕ್ಕು: ಉನ್ನತೋನ್ನತಪುತ್ರಪೌತ್ರಾಭಿವೃದ್ಧಿಯಿಂ ತನುಲ್ಲಿಯೋ ಪಡೆದು ಬಿಡದ ಮಮಕಾರದಿಂ ತನ್ನ ಕಾಂ ಬುಲ್ಲವಿಸುತತ್ಕಿಷ್ಪದ್ದ ಲಾಂಗುಲನೆನಿಪನಂ (ರಶಿಶಂ. ೪-೭). ೬. ಉದ್ವೇಗಗೊಳ್ಳು: ಮೆಲ್ಲನೆದ್ದನು

ಮತ್ತೆ ತರಣಿಜ ಬುಲ್ಲವಿಸಿದನು ಕೋಪಶಿಖಿಯುಲಿ ಚೆಲ್ಲವಾಡುತ ಕೊರಳು ಕೈಗಳ ಬಿಗಿದ ಬಾಲದಲಿ (ಕರ್ಣಾ. ೨೦-೪೮). ೭. ಉತ್ಸಾಹಗೊಳಿಸು : ಉಬ್ಬಿಸು : ಬಲ್ಲಾಳನೃಪತಿಗೆ ಬಹುದ್ರವ್ಯಮಂ ಯಶವುಮನುಲ್ಲಾಸವುಂ ಪ್ರತಾಪಮುಮನೊಂದಿಸುತ್ತುವನ ಬುಲ್ಲವಿಪ ಬಲದ ಭಾಗದ ದೇವರೆನಿಸಿ (ಶಬ್ದ. ೪-೨೫). ೮. ಸಂತವಿಸು : ಸಾಂತ್ವನಗೊಳಿಸು : ಸಮಾಧಾನಪಡಿಸು : ಈಶಂ . . . ನಿನಗೊಲಿದು ವರವೀವೆನೆನುತ ಪ್ರತ್ಯಕ್ಷವಾಗೀಯದಿರೆ ಕೊಱತೆ ಯೆನಗಾಗಿ ಬೇಡೇನಾದೊಡಂ ಎನುತ ತಲೆಡದಹಿ ಬುಲ್ಲವಿಸಲು (ಗುರುಪಾ. ೧೦-೦೨) : ಕಂದ ಕೇಳ್ಕೆ ನಿನಗೆ ಹಿತವಹದೊಂದು ವರವಂ ನಾಳೆ ಕೊಟ್ಟಪೆ ನೆಂದು ಶಂಕರದಾಸಿಮಯ್ಯನ ಕರೆದು ಬುಲ್ಲವಿಸಿ (ಶಂಕರಾ. ೫-೩೧). ೯. (ಅಲಂ) ಚಿಗುರುವಂತೆ ಮಾಡು : ಪಲ್ಲವಿಸುವಂತೆ ಮಾಡು : ಮಧ್ಯ ಗಂಡೂಷದಲಿ ಬಕುಳದ ಮರನ ಬು[ಪಾಠಾಂ. ಭು]ಲ್ಲವಿಸಿದೆವು (ಶುಪ್ರಾ. ೮. ೦೬-೨೩). ಬುಲ್ಲಯಿಸು : ೭. ತಳಪಳಿಪುದೆನ್ನ ಮನ ನಿನ್ನ ತೆರೆಯೀ ಹರಿಯ ನಿಲುತವಲೆ ತಡೆವೆ; ಬುಲ್ಲಯಿಸುವೇಕೆನ್ನ ? (ಗೀಗೋ ೨೭-೪). ೧೦. ಮೆರೆ : ವಿಜೃಂಭಿಸು : ಹೇಳಿಗೆಯು ಮುಚ್ಚುಳ ಜಾಱಿಸಿದ ಫಣೆಯಂತೆ ಬುಲ್ಲಯಿಸಿ [ಪಾಠಾಂ. ಭುಲ್ಲವಿಸಿ]ತ್ತು ಕುರುಸೇನೆ (ಕುಪ್ರಾ. ೪. ೨೩-೩೮). ಬುಲ್ಲಯ್ಸು : ೧. ಪೋಡಿ ಕೊಪ್ಪರಿಸಿದುದು ಧೈರ್ಯವಸೀಡಿಱಿದುದಪದೆಸೆ ವಿಕಾಳಿಸಿ ಪೇಡತನ ಬುಲ್ಲಯ್ಸು [ಪಾಠಾಂ. ಭುಲ್ಲವಿಸ , ಭುಲ್ಲೈಸು] ತಿದ್ದುದು ಭಾನುನಂದನನ (ಕುಪ್ರಾ. ೮. ೦೪-೩೭). ಬುಲ್ಲೈಸು : ೨. ಬಲ್ಲಿಹದಲ್ಲಿದೊ ಖಂಡೆಯುದೊಳು ತನ್ನ ಗೆಲ್ಲವ ತೋಱುವನೆಂದು ಬುಲ್ಲೈಸಿ ಕೈಯಿಕ್ಕುತಿದ್ದನು (ಭರತ. ೩೦-೭೪). ಭುಲ್ಲಯಿಸು : ೨. ತೆಲ್ಲಯಿಸಿ ಮಂಗಳಾರತಿಯ ವನಿತೆಯರೆಲ್ಲ ಭುಲ್ಲಯಿಸಿ ಹಾಡಿ ಹರಸುವ ಹೊತ್ತು ಮೆಱೆದು ಸಿರಿವಲ್ಲಭಂ ಗೋಪಿಯರ್ಗೊಲಿದು ಪ್ರತ್ಯೇಕರೂಪಾಗಿ ನೆರೆದಾತಿರ್ದರು (ಸಿದ್ಧರಾ. ೬-೯೬). ೧೦. ಪ್ರಳಯದ ಭವನ ರೌದ್ರದ ವೋಲು ಭುಲ್ಲಯಿಸಿದನು ಕಲಿಭೀಮ (ಕುಪ್ರಾ. ೪. ೧೩-೦೯). ಭುಲ್ಲವಿಸು : ೧. ಸುಮ್ಮಾನದಂಕೆಯು ರಭಂಕೆಗಳ ಭರ ಭುಲ್ಲವಿಸಿದುದು (ಕುಪ್ರಾ. ೫. ೨-೯೦): ಭುಲ್ಲವಿಸೆ ಕೋಪಾಗ್ನಿ . . . ಕರಾಳ ಕರವಾಳವನುಗಿದು ತೆಗೆದು (ಕಾವೇಮ. ೪೦-೫೫). ೨. ಭುವನಜನ ಭುಲ್ಲವಿಸೆ . . . ಯಜ್ಞಪ್ರವರದಲಿ ಪಡೆದನು ಮಹೀಪತಿ ಪುತ್ರಪಿಂಡಕವ (ತೊರೆರಾ. ೦-೭ ಸೂಚನ); ಮಿಂಡೆದ್ದ ಹೆಣ್ಗಳು ಪವನಕೆ ನಡೆತಂದು ಮುಂಕೊಂಡು ಬಹುವಿಧದ ಚೇಷ್ಟೆಗಳಿಂದೆ ಭು[ಪಾಠಾಂ. ಬು]ಲ್ಲವಿಸಿ ಕಂಡಕಂಡವನಿಜಾತಂಗಳಂ ಚಿಗುರಿಸಿದರು (ಶ್ರೀಪಾ. ೩೦-೫). ೩. ಚೆಲುವ ಕುವರನ ಪಡೆದು ಬಲುಮೋಹದಿಂದಲಾನೊಲಿದು ಭುಲ್ಲವಿಸಿ ಮನದ ಪ್ರೀತಿಯಿಂ ಸಲಿಸಲೆಂದಿರ್ದೆಂ (ಪಶುಪ. ೪-೮-೨೭). ೪. ಭೂಮಿಪತಿ ಭುಲ್ಲವಿಸಿದನು ನಿಸ್ಸೀಮ ಸಂತೋಷದಲಿ (ಕುಪ್ರಾ. ೮. ೦-೦೦); ಭುಲ್ಲವಿಸಿತಮರಬಲಮೊಡನೆ ದೆಸೆದೆಸೆಗಳ್ಗೆ ಚೆಲ್ಲಿದುದು ವಿಳರ ಬಲಂ (ತಿಪ್ಪ. ೪೯-೦೫). ೫. ತಿಳಿಯಬೆ:ಕೆಂಬೆಲ್ಲರಿಗೆ ಕರ ಸುಲಭ ವೆನುತಲಿ ಭುಲ್ಲವಿಸಿ ಗಿರಿಜಾತೆ ನುಡಿಯಲು (ಪ್ರಭುಲಿ. ೨-೩೭). ೮. ನಿತ್ಯ ಶಿವನ ಕಾಣುತ್ತಲಡಿದಾವರೆಯೊಳುರುಳ್ವ ರಾಘವನ ಪಿಡಿದೆತ್ತಿ ತೆಗೆದಪ್ಪಿ ಗಲ್ಲವ ಪಿಡಿದು ಭುಲ್ಲವಿಸಿಯುಮೆಯುರಸನು (ರಾಶತ. ೦೩-೧೦). ೧೧. ಸಂತೋಷಪಡು : ಹಿಗ್ಗು : ಅರಸಿಯು ಹರುಷದರ್ಪಣ ಬೆಳಗುವುದು ಮರಳು ಭಾಪೆನುತ ಭುಲ್ಲವಿಸಿದನು ಭೀಮ (ಕುಪ್ರಾ. ೮. ೦೨-೪೪). ೧೨. ಮೋಹಗೊಳಿಸು : ಮರುಳುಮಾಡು : ಎಲ್ಲಾ ಯೌವನಮುಬೆಯರೆಲ್ಲಂಗದಿನೀಕ್ಷಿಸಲ್ಕೆ ಕುಟಿಲಾನ್ವಿತೆಯರ್ ಭುಲ್ಲವಿಸ ಲೇತಕೆನ್ನದಿರೊಲ್ಲದೊಡಾ ವಿಷಯಬದ್ಧಮಾತ್ಮದ್ರೋಹಂ (ಅಮಮು. ೩-೦೮). ೧೩. ಮೋಹಗೊಳ್ಳು : ಮರುಳಾಗು : ಇಲ್ಲದಿಹ ವಸ್ತುವೊಳು ಚಿತ್ತವು ಭುಲ್ಲವಿಪುದು (ಶಂಕರೀ. ೨೩-೦). ೧೪. ಕೃಪೆ ಯಿಂದ ಕಾಣು : ಸೊಲ್ಲಬೇಕನಿತೊಂದನೆನ್ನಂ ಭುಲ್ಲವಿಸಿ ಮರ್ತ್ಯಕೆ

ಜಗತ್ರಯವಲ್ಲಭನೆ ನೀವಲ್ಲದೊರ್ಬನು ಕರ್ತನಿದ್ದಹನೆ (ಅಸಪು. ೨-೪೨). ೧೫. ಅತಿಶಯಗೊಳಿಸು : ಕಾನನದ ನಡುವೆ ಭುಲ್ಲವಿಸುತಿಹಳು ಸ್ಥಳ ವನು ಬಲ್ಲವರ್ಗಿಗೆ ಕುಂಭಕೋಣದ ಸಲ್ಲಲಿತ ಸುಕ್ಷೇತ್ರವೆಂಬರ್ (ಕಾವೇಮ. ೩೯-೦೪). ಭುಲ್ಲಿಸು : ೧೩. ಅರಗಿಳಿ ಮಾತನಾಡಿದುದು ನಿನ್ನೊಡನಂತೆಳಸುತ್ತುಮಿರ್ದೆ ನೀಂ ಪುರುಳಿಯು ಕೂಡೆ ಪಾರಿವದ ಲಲ್ಲೆಗೆ ಭುಲ್ಲಿಸು ತಿರ್ದೆಯೆಂದು ಮಂದರಗತಿಯಿಂದೆ ಹಂಸನೊಡನಾಡಿದೆಯೆಂದತಿ ಕೋಪದಿಂ ಪ್ರಿಯಂ ಪುರುಡಿಸೆ (ಅನಂಪು. ೬-೪೭). ಭುಲ್ಲೈಸು : ೧. ಭಾಳನೇತ್ರನ ತೆರದಿ ಮುಂಡಿಸಿರೆ ಸೌಮಿತ್ರಿ ತಾಳಿ ಶರಚಾಪಗಳ ಕೆಲದಿ ನಿಂದಿರೆ ಹನುಮನಾಳೂಳಿಗಂಗೈವುತಡಿಗಡಿಗೆ ಜಾಂಬುವಂ ಪೊಗಳಿ ಭುಲ್ಲೈಸುತಿರಲು (ತೊರೆರಾ. ೪-೭-೩). ೩. ಪೂರ್ವದಲಿ ಹಿಮಗಿರಿರಾಜ ನೆಂತು ಶಾಂಕರಿಯು ಕಲ್ಯಾಣಕುತ್ಸವಿಪಂತೆ ಭುಲ್ಲೈಸುತಿರ್ದನೀಶಾನಸಟ್ಟಿ (ಗೌಂದಪು. ೨೩-೨೭) : ಸುಖಭಾರದಲ್ಲಿ ಭುಲ್ಲೈಸಿ ಪಾರ್ಥನು ನಿದ್ದೆ ತಿಳಿದೆಚ್ಚತ್ತನು (ಶಾಮಕಿ. ೨೨೨). ೧೬. (ಅಲಂ) ಮೆರೆ; ಆರ್ಭಟಿಸು : ಬಸಗೆವೆಱೆ ಭುಲ್ಲೈಸೆ [ಪಾಠಾಂ. ಭುಲ್ಲವಿಸೆ]ನೂತನವಸನವಿಮಲವಿಭೂಷಣಂಗಳಲೆಸೆವನ್ನೆ ಮೂರ್ಧಾಭಿಷೇಕದ ರಾಜತೇಜದಲಿ (ಕೆಂರಾ. ೨-೨-೦೪) : ಕಟಿಪ್ರಿಗ್ರಮಂ ಬಲ್ಲಗರ್ಗೀಸುಗ ತಾಳ್ದು ಸಾತ್ವಿಕರಸಂ ಮತ್ತೇಳು ತೂಬಿಂದಮುಂ ಭುಲ್ಲೈಸುತಪ್ಪಗೆ ಪೂರ್ವವಾಗಿ ಪರದ ನಿಮರ್ಮಿಲನಂ ಮಾಡುತಂ (ವೃಷಭ. ೨-೭೦). ೧೭. ಹೊಗಳು : ಸ್ತುತಿಸು : ಯಮಸುತನ ತಕ್ಕೈಸಿ ಭೀಮನ ಮಮತೆಯನು ಭುಲ್ಲೈಸಿ . . . ವಿದುರಪ್ರಮುಖ ರನು ಬೀಳ್ಕೊಟ್ಟು ಬಿಜಯಂಗೈದನಸುರಾರಿ (ಕುಪ್ರಾ. ಗ. ೦೩-೦೪).

[ಬುಲ್ಲವಣೆ + – ಇಸು₃]

ಬುಲ್ಲಿ (ನಾ). ಪುರುಷನ ಜನನೇಂದ್ರಿಯ : ನಲ್ಲಳೆ ಬಾ ಎಂದು ಕರೆದು ಸೊಲ್ಲ ಸೊಲ್ಲ ಮಾತನಾಡ ವಲ್ಲಭ ಶ್ರೀಪುರಂದರವಿಠಲ ಬುಲ್ಲಿ ತೋಱಿ ಪೋದ (ಪುರಂದ. ೩-೬೬-೩) ; ಫಾಸಿಯಾಗುವಿಯೆನೆ ಆಕಾಶದವಗೆ ನನ್ನ ಮಿಸಲು ಬುಲ್ಲಿಯು ಲೇಸೆಂದೆನುವ (ಶ್ರೀಸಪಾ. ೦೭-೦೫).

[←ತೆಲು. ಬುಲ್ಲಿ, ಬುಲ್ಲ./ಮರಾ. ಬುಲ್ಲೀ, ಬುಲೀ]

ಬುಲ್ಲಿಕಾಯಿ (ನಾ). ಬುಲ್ಲಿ ಮುಚ್ಚುವಂತೆ ಬೆತ್ತಲೆ ಮಕ್ಕಳಿಗೆ ತೊಡಿಸುವ ಒಂದು ಬಗೆಯ ಆಭರಣ : ಹೊಂಗೆಜ್ಜೆ ಕಾಲ ಗಗ್ಗರ ಹೊನ್ನುಡಿದಾರ ರಂಗು ಡಾಳಿಪ ಬುಲ್ಲಿಕಾಯಿ (ಜ್ಞಾಪತ. ೩-೦೭೫) ; ಕಿರಿಗಾಟೆ ಉಡುದಾರ ಬುಲ್ಲಿಕಾಯಿಯು ಶ್ರೀಚರಣದಂದುಗೆ ಗೆಜ್ಜೆಕಾಯಿಯು ತರಳನಪ್ಪಿಕೊಂಡರ್ ತರಳೆಯರು (ಶ್ರೀಸಪಾ. ೬-೩).

[ಬುಲ್ಲಿ + ಕಾಯಿ₄ (<ಕಾಯ್₄)]

ಬುಲ್ಲೈಸು 'ಬುಲ್ಲವಿಸು' ನೋ.

ಬುವಾ (ನಾ). ಹಿರಿಯ ವ್ಯಕ್ತಿಗಳನ್ನು ಸಂಬೋಧಿಸುವಾಗ ಬಳಸುವ ಒಂದು ಮಾತು : ಸದಾನಂದ ಬುವಾಗೆ ಸಂಗೀತದ ಮೇಲಿದ್ದಷ್ಟೇ ಪ್ರೀತಿಯಿದ್ದ ವ್ಯಕ್ತಿ. ಆತನ ಹೆಂಡತಿ (ಸಂಗೀಶ. ೦೦೦).

[←ಮರಾ. ಬುವಾ]

ಬುವಿ 'ಬೂವಿ' ನೋ.

ಬುವ್ವ 'ಬೂವು' ನೋ.

ಬುಸ್. ಬುಸು (ನಾ). ನಿಟ್ಟುಸಿರು, ಹಾವಿನ ಫೂತ್ಕಾರ ಮೊದಲಾದುವನ್ನು ಅನುಕರಿಸುವ ಒಂದು ಶಬ್ದ : ಹಾವಿಗೆ ಏಟು ಬಿದ್ದಿರಬೇಕು ; ಅದು ಹೆಡೆಯನ್ನು ಇಷ್ಟಗಲ ಬಿಚ್ಚಿ ಬುಸ್ ಎಂದು ಕಲ್ಲುಚಪ್ಪಡಿಯನ್ನು ಕುಟ್ಟಿತು (ಶ್ರೀಕೃ. ೨೭೮). 'ಬುಸ್ಸೆನ್ನು' ಪರಾ. ಬುಸು : 'ಬುಸುಗರೆ', 'ಬುಸುಗುಟ್ಟು'. 'ಬುಸುಗುಡು' ಪರಾ.

ಬುಸುಬುಸು (ದ್ವಿರುಕ್ತಿ) : ಹಾವು ರೋಷದಿಂದ ಬುಸುಬುಸು ಎನ್ನುತ್ತಿತ್ತು (ರೂಢಿ).

**ಬುಸ** (ನಾ). ಧಾನ್ಯಗಳ ಮೇಲಿನ ಹೊಟ್ಟು,-ತೌಡು : "ಕಡಂಗರಂ ಬುಸಂ" (ವಸ್ತುಕೋ. ೯೫-೨೦). [ಸಂ.]

**ಬುಸು** 'ಬುಸ್' ನೋ.

**ಬುಸುಗರೆ** (ಕ್ರಿ). ರೋಷದಿಂದ ಬುಸುಬುಸು ಎಂದು ಶಬ್ದ ಮಾಡು. - ವೇಗವಾಗಿ ಉಸಿರು ಬಿಡು : ತಿಮ್ಮ . . . ಅಂತ ಬುಸುಗರೆದ ಚಿನ್ನ (ಕದಂಬ. II. ೧೦೬೦). [ಬುಸು (< ಬುಸ್) + ಕರೆ$_1$]

**ಬುಸುಗುಟ್ಟು** (ಕ್ರಿ). = ಬುಸುಗರೆ : ಬುಸುಗುಟ್ಟುವ ಪಾತಾಳದ ಹಾವೋ ? (ಕಹೃ. ೨೬-೧) ; ಈ ಮರಗಳೆಲ್ಲಾ ಆಯಾಸದಿಂದ ಬುಸುಗುಟ್ಟುತ್ತ, ತಲೆ ಬಗ್ಗಿಸಿಕೊಂಡು, ಕೊಂಬೆಗಳನ್ನು ಬಲವಾಗಿ ಅಲ್ಲಾಡಿಸಿಕೊಂಡು ಓಲಾಡುತಿರುವುದೇತಕ್ಕೆ ? (ಕಂಕಥೆ. ೩೧). [ಬುಸು (< ಬುಸ್) + ಕುಟ್ಟು$_1$]

**ಬುಸುಗುಡು** (ಕ್ರಿ). = ಬುಸುಗರೆ : ನಿಲ್ಲಲಾರದೆ ಕುಸಿದು ಕುಳ್ತನಾ ಧರಣಿಪತಿ, ಮಂತ್ರಶಕ್ತಿಗೆ ಸಿಲ್ಕಿ ಹಾವಾಡಿಗಂ ಬರೆದ ಮಂಡಲದ ತಡೆಯೊಳಗೆ ಬುಸುಗುಡುವಹೀಂದ್ರನೋಲ್ (ಶ್ರೀರಾಪದ. ೬೦-೪೪೪) ; ಅನ್ನ ಅನ್ನ ಬುಸುಗುಡುತಿದೆ ಮಾನವನಾಗರವು (ಅರಳು. ೪೦೫-೧೭).
[ಬುಸು (< ಬುಸ್) + ಕುಡು$_1$ (< ಕೊಡು$_1$)]

**ಬುಸ್ತ** (ನಾ). ೧. ಸುಟ್ಟ ಮಾಂಸದ ಕರಿಕಾದ ಭಾಗ. ೨. ಕೆಲವು ಕಾಯಿ. ಹಣ್ಣು ಅಥವಾ ಬೀಜಗಳ ಒಣಗಿದ ಹೊರಪದರ. [ಸಂ.]

**ಬುಸ್ಸೆನ್, ಬುಸ್ಸೆನ್ನು** (ಕ್ರಿ). = ಬುಸುಗರೆ: ಪತ್ತೆಸಾರ್ದ ಮರುಳ ಮೊತ್ತಮಂ ಬುಸ್ಸೆಂದು ಬೆದಱಿಸುವ ಪಾವಿನ ತೊಡವುಗಳೊಳಂ . . . ಚೆಲ್ವನಾಂತು (ಕಬ್ಬಿಗ. ೧೬೭). **ಬುಸ್ಸೆನ್ನು** : ಪಕ್ಕಗಳಾಂತ ಪನ್ನಗತತಿ ಬುಸ್ಸೆಂದು ಚಿಕ್ಕನೆ ಪಾಱಿ ಬರ್ಪಂತೆ ಲೆಕ್ಕವಿಲ್ಲದ ಬಾಣಗಳು ಬಂದುಱಿ ನೆಲಕಿಕ್ಕಿದವಹಿತ ವಾಹಿನಿಯ (ಕಂಶ್ರಗಾಂ. ೬-೫೦) ; ಬಡದೇವರನ್ನು ಕಂಡರೆ ಬಿಲ್ಪತ್ರೆ ಕೂಡ ಬುಸ್ಸೆನ್ನುತ್ತದೆ (ಗಾದೆ).
**ಬುಸ್ಸುಬುಸ್ಸೆನ್ನು** (ದ್ವಿರುಕ್ತಿ) : ಚಂಡಚೂಡಾಘಾತದಿಂದಲಖಂಡ ತತ್ವಂಗಳು ತೆರಳುತಿರೆ ತಾಂಡವೋದ್ಧತಿಯಿಂ ಧರಿಸಿದಹಿ ಬುಸ್ಸುಬುಸ್ಸೆನಲು [ಪಾಠಾಂ. ಭುಸ್ಸುಭುಸ್ಸೆನಲು] (ಬಸವ. ೧೭-೦೬). [ಬುಸ್ + ಎನ್$_1$]

**ಬುಸ್ಸೆನ್ನು** 'ಬುಸ್ಸೆನ್' ನೋ.

**ಬುಳಿಗೆಱೆ** (ನಾ). ಒಂದು ಸ್ಥಳದ ಹೆಸರು : ಅನ್ತು ಬನ್ದು ಬುಳಿಗೆಱೆಯ ಮೂಡಣ ಕಟೆಯ ಪೆರಿಸನ್ದರಿಂ (ಎಕ. III, ನಂಜನ. ೦೩೯-೦೩ : 915). [ಬುಳಿ$_0$ + ಕೆಱೆ]

**ಬುಳುಬುಳನೆ** (ಅ). ಒಂದು ಅನುಕರಣಾವ್ಯಯ : ಅಹಿಬಾಣಮಂ ಬಿಡಲ್ ಬುಳುಬುಳನೆ ಪರಿವುತ್ತ ಭುಸ್ಸುಭುಸ್ಸೆನುತ ಪೆಡೆಗಳ ಕೆದರಿ . . . ಅರೆಯಟ್ಟಿ ಬರೆ (ತತ್ವಪು. ೪-೧೧-೬೦) ; ಭೂಮಿಗುರುಳಿದರಿವರು ಬುಳು ಬುಳನೆ (ರಾಮಾಸಂ. ೬-೫-೨೨). [ಬುಳುಬುಳು + - ಅನೆ$_1$]

**ಬುಳುಬುಳು** (ನಾ). (ಹುಳುಗಳ ಹರಿದಾಟವನ್ನು ಸೂಚಿಸುವ) ಒಂದು ಅನುಕರಣ ಶಬ್ದ : ಅಪ್ಪುವಿಂಗೆ ಇಳಿಜಾರಿನಲ್ಲಿ ಚರಿಸುವಾಗ ಹುಟ್ಟುವ ಬುಳುಬುಳು ಚಳಚಳ ಭೋರ್ಭೋರೆಂಬ ಶಬ್ದ ಉಂಟು (ವಚನ. II. ೩೨). 'ಬುಳುಬುಳುಗುಟ್ಟು' ಪರಾ.

**ಬುಳುಬುಳುಗುಟ್ಟು** (ಕ್ರಿ). (ಹುಳುವು) ಹರಿದಾಡಿದಂತಾಗು : ನೆಶ್ಯವು ಮೂಗಿನೊಳಕ್ಕೆ ಹೋದುದೇ ತಡ ಬುಳುಬುಳುಗುಟ್ಟಿ ಅಸಾಧ್ಯ ಫಜೀತಿ ಮಾಡಿಬಿಟ್ಟಿತು (ಳಳಹು. ೬೭). [ಬುಳುಬುಳು + ಕುಟ್ಟು$_1$]

**ಬುಳ್ಳ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಕಲ್ಲು ಮೂಕರಿಂದ ತೋಟದ ಹೆಬ್ಬಯ್ಯಾ ಬುಳ್ಳನು ಸುಕ್ಕಾಲಯಿ ಹಾದಿಬೀದಿ ಒಡೆಯಾ . . . ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು (ಏಕಾಸು. ೫೬-೨). [?]

**ಬುಱುಗಿ** (ನಾ). ಒಂದು ಬಗೆಯ ಪಕ್ಷಿ : ಮರಕುಟಿಗಂ ಪುಱಿಲೆ ಬುಱುಗಿ ಪಸುಬಂ . . . ನೆಗಬ್ಬುವೆನಿಸುವು[ವನಿಶಂ] (ಸೂಕ್ತಿಸು. ೩-೦೯೬). [?]

**ಬುಱುಲೆ** 'ಪುಱಿಲೆ' ನೋ.

**ಬೂಂದಿ** (ನಾ). ಕಡಲೆಹಿಟ್ಟಿನಿಂದ ತಯಾರಿಸುವ ಒಂದು ಬಗೆಯ ಸಿಹಿಭಕ್ಷ್ಯ : ಕಂಚಿ ಇಡ್ಲಿ. ಉಡಿಪೀ ಉಪ್ಪಿಟ್ಟಿ . . . ಧಾರವಾಡದ ಫೇಡೇ. ಬಳ್ಳಾರಿ ಬೂಂದಿ (ಹನುಮಂದ. ೭೯).
[← ಹಿಂ. ಬೂಂದೀ, ಬುಂದಿಯಾ ; ಮರಾ. ಬುಂದೀ]

**ಬೂಂದು** 'ಬುಂದು' ನೋ.

**ಬೂಚಿಗ** (ನಾ). ಒಬ್ಬಾತನ ಹೆಸರು : ಕವಿಲೆಮುನಿಟುದ ಬ್ರಹ್ಮತ್ತಿ ಬೂಚಿಗನಬ್ಬಾತನಮು × × × (ಎಕ. I (R), ೩೭-೦೩ : 944). [?]

**ಬೂಚಿ** (ನಾ). ೧. ಹುಳು ; ಕ್ರಿಮಿ : ಇತ್ತ ದೊಡ್ಡ ತಾಯಿ ಲಚ್ಚನನ್ನು ಎತ್ತಿಕೊಂಡು ಹೊರಟರೆ, ಅವನು ದಾರಿಯುದ್ದಕ್ಕೂ 'ಅಂಬಾಗಳನ್ನೂ ಬೂಚಿಗಳನ್ನೂ ಕಾಕಾಗಳನ್ನೂ ಕೊಕ್ಕೋಗಳನ್ನೂ' ಮಾತನಾಡಿಸುತ್ತ ಸಾಗುತ್ತಾನೆ (ಮರಳು. ೧೪೨). ೨. ಮಕ್ಕಳಿಗೆ ಭಯವನ್ನು ಹುಟ್ಟಿಸಲು ಹೇಳುವ ಒಂದು ಕಾಲ್ಪನಿಕ ಭೂತ : ಗುಮ್ಮ : ಬೂಚಿ ಬಂದಿದೆ ರಂಗ ಬೂಚಿ ಬಂದಿದೆ ಚಾಚಿ ಕುಡಿದು ಸುಮ್ಮನೇ ನೀ ಪಾಚಿಕೊಳ್ಳೋ ಕೃಷ್ಣಯ್ಯ ನಾಲ್ಕುಮುಖದ ಬೂಚಿಯೊಂದು ಗೋಕುಲಕ್ಕೆ ಓಡಿ ಬಂದು ಲೋಕರನ್ನು ಎಳೆದುಕೊಂಡು ಕಾಕು ಮಾಡಿ ಒಯ್ಯುವುದಕೆ (ಪುರಂದ. ೪-೧೧೧-೧) ; ನೀವು ಎರಡು ಬೂಚಿಗಳ ಕತೆ ಕೇಳಿರಬಹುದು. ಅವೂ ಮಧ್ಯರಸ್ತೆಯಲ್ಲೇ ಹೋಗುತ್ತಿದ್ದವು (ಕೀಶ್ರೃಕ. ೧೯೬). ೩. ಹಸು. ಎಮ್ಮೆ ಮುಂತಾದ ಚತುಷ್ಪಾದಪ್ರಾಣಿ : ಒಳಗೆ ಆಡು ಬಾರೊ ರಂಗ ಅಲ್ಲಿ ಹೊಱಗೆ ಬೂಚಿಮುಖದ ಹುಲಿ ತಿರುಗುತಿದೆ (ಪುರಂದ. ೪-೫ ೬).
[ದೇ.॥ ತಮಿ. ಮಲ. ಪೂಚ್ಚಿ ; ತೆಲು. ಬೂಚಿ, ಬೂಚ]

**ಬೂಚು** (ನಾ). ೧. ಬಿರಡೆ; ಮುಚ್ಚಳ : ಸುಣ್ಣದ ಬಣ್ಣದ ಮಾಡದಲ್ಲಿ ಈಗ ಸೆರೆಯ ಬರಿದಾದ ಬಾಟಲಿಗಳು, ಅವುಗಳ ಬೂಚುಗಳು ಮಲಗಿವೆ (ಹೂಲಮು. ೨೨೫); ಒಂದು ಶೀಸೆಯ ಬೂಚನ್ನು ತೆಗೆದು ಅದರೊಳಗಿದ್ದ ದ್ರಾವಕವನ್ನು ಕುಡಿದು ಬಿಟ್ಟನು (ಮಧುನ. ೬). ೨. ಬೆಣೆ ; ಗೂಟ : ಜಗ್ಗಿ ಕಿತ್ತವರಾರು ತವಾದ ತೂಬಿನ ಬೂಚು? (ತಂಡಮು. ೧೯-೮); ಕೋಡಿಯ ಬೂಚು ಹಾಕಿಲ್ಲದ್ದರಿಂದ ಕೆರೆಯ ನೀರೆಲ್ಲ ಹೋಯಿತು (ರೂಢಿ).
[←ತುಳು. ಬೂಚು, ಬೂಚಿ./ಮರಾ. ಬೂಚ್]

**ಬೂಜು$_1$**, ಬುಕುಟು, ಬುಗುಟು$_2$, ಬುರುಸು, ಬೂಷಲು, ಬೂಷ್ಟು, ಬೂಸರು, ಬೂಸಲು (ನಾ). ೧. ತೇವದಿಂದ ವಸ್ತುಗಳ ಮೇಲೆ, ಹತ್ತಿಯ ಅಥವಾ ತುಪ್ಪಟದ ನವಿರೆಳೆಗಳಂತೆ ಕಟ್ಟುವ ಬಿಳಿಯ ಪೊರೆ: ನಿಗ ತಪ್ಪಿ ಸ್ವಲ್ಪ ತೇವವಾಗಿರುವ ಸ್ಥಳಗಳಲ್ಲಿ ಇಡಲ್ಪಡುವ ತೆಂಗಿನ ಕಾಯಿ ಹೋಳುಗಳು, ಬ್ರೆಡ್, ಉಪ್ಪಿನಕಾಯಿ, ಕಳಿತ ಹಣ್ಣುಗಳು ಇವನ್ನು ಬೂಜು ಒಳಹೊಕ್ಕು ಹುಲುಸಾಗಿ ಬೆಳೆದು . . . ಹಾಳು ಮಾಡುವುವು (ಗೃಹವಿ. ೫೬); ಮಾನವನಲ್ಲೂ ಪ್ರಾಣಿಗಳಲ್ಲೂ ಐವತ್ತಕ್ಕೂ ಮೀರಿದ ಬಗೆಗಳ ಅಣಬೆ (ಬೂಜು. ಬೂಷ್ಟು. ಶಿಲೀಂಧ್ರ)ಗಳಿಂದ ಸೋಂಕುರೋಗಗಳು ಕಾಣಿಸಿಕೊಳ್ಳುತ್ತವೆ (ಕವಿಕೋ. I. ೨೨೭). **ಬುಕುಟು** : ೧. ಅಟ್ಟದ ಮೇಲೆ ಇರಿಸಿದ ಹಪ್ಪಳ ಸಂಡಿಗೆ ಈ ಪಾಟ ತಂಡಿಗೆ ಬುಕುಟು ಹಿಡಿಯದೇ ಇದ್ದೀತೇ! (ಮರಮು. ೩೩). **ಬುಗುಟು$_2$** : ೧. ಬುಗುಟು ಹಿಡಿದ ಕಾಳಿನಂತೆ ಒಳಗೊಳಗೆ: ಕೊಳೆಯುತಿರುವ ನಾರು ತಿರುವ ಹೆಪ್ಪುಗೆ (ಪರಿಬಾ. ೬೨-೧೧). **ಬುರುಸು** : ೧. ಕಟಿಕಿಯ . . . ಬದಿಗಳಲ್ಲಿ ಬುರುಸು ಬೆಳೆದಿದ್ದರೆ, ಸೀಮೆಎಣ್ಣೆಯಲ್ಲಿ ಚಿಂದಿಯನದ್ದಿ ಒರಸಿದರೆ ಹೋಗುವುದು (ಅಡುಗೆ. ೩೯). **ಬೂಷಲು** : ೧. ಉಪಯೋಗಿಸದೆ ಪೆಟಾರಿಯಲ್ಲಿಟ್ಟರೆ ಪೀತಾಂಬರಕ್ಕಾದರೂ ಬೂಷಲು ಬರುತ್ತದೆ (ಮಲಮು. ೪೭). **ಬೂಷ್ಟು** : ೧. ಮರವನ್ನು ದುರ್ಬಲಗೊಳಿಸುವ ತೇವ, ಬೂಷ್ಟು (Fungus) ಕ್ರಿಮಿಗಳು . . . ಇವುಗಳಿಂದಾಗುವ ತೊಂದರೆಯು ತಪ್ಪ

ತ್ತದೆ (ಶಿಲ್ಪಶಾ. ೩೨೯); ಕೆಲಕಾಲ ತೇವದ ಬೆಚ್ಚನೆಯ ಗಾಳಿಯಲ್ಲಿರಿಸಲ್ಪಟ್ಟ ವಸ್ತುಗಳ ಮೇಲೆ ಉಂಟಾಗುವ ಹತ್ತಿ, ತುಪ್ಪಟದ ನವಿರೆಳೆಗಳಂತೆ ಕಟ್ಟುವ ಒಂದು ಬಗೆಯ ಬೂಷ್ಟು ಅಲ್ಲಿ ಉಂಟಾಗಿತ್ತು (ವಿಜ್ಞಾಪಿ. ೦೩೬); ಬೂಷ್ಟುಗಳಿಂದಲೂ ಅಣಬೆಗಳಿಂದಲೂ ಆವೃತವಾದ ಪ್ರದೇಶ (ಹಸುಹೊ. ೦೬೬). **ಬೂಸರು :** ೧. ಮಾಡದಲ್ಲಿ ಇಂದು ಹಳಸಿದ ಅನ್ನ, ಬೂಸರು ಬಂದ ರೊಟ್ಟಿಯ ಚೂರುಗಳು ರಾಶಿಯಾಗಿ ಬಿದ್ದಿವೆ (ಹೂಬಿಮ. ೨೨೫). **ಬೂಸಲು :** (ಗು). ೨. (ಆಲಂ) ನಿಷ್ಪ್ರಯೋಜಕವಾದ ; ಕೆಲಸಕ್ಕೆ ಬಾರದ : ಆ ಬಡಕಲು ಬೂಸಲು ದೇವತೆಯನ್ನು ನೋಡಿ ಅವನ ಆಶೆ ಕಮರಿಗೆ ತಲೆಕೆಳಗಾಗಿ ಉರುಳಿ ಹೋಯಿತು ! (ಮಲೆಮ. ೯೩೯).

[ದೇ.॥ ತಮಿ. ಪೂಞ್ಚು ; ಮಲ. ಪೂಕ್ಕ, ಪೂಪ್ಪು; ತುಳು. ಬೂಜು, ಬೂಚು, ಬೂಚಿ ; ತೆಲು. ಬೂಂಜು, ಬೂಚು, ಬೂಜು. /ಮರಾ. ಬುರಸಾ, ಬುರಸೀ, ಬುರಶೀ]

**ಬೂಜು₂** 'ಬುರುಜು' ನೋ.

**ಬೂಜುಗಟ್ಟು**, **ಬುರುಸುಗಟ್ಟು** (ಕ್ರಿ). ಬೂಷ್ಟುಹಿಡಿ : ಬೂಜು ಗಟ್ಟಿದ ಪದಾರ್ಥಗಳನ್ನು ಉಪಯೋಗಿಸುವುದರಿಂದ ಖಾಯಿಲೆಗಳಿಗೆ ಹಾದಿ ಮಾಡಿಕೊಟ್ಟಂತಾಗುತ್ತದೆ (ರೂಢಿ). **ಬುರುಸುಗಟ್ಟು :** ಬೂಟು ಚಪ್ಪಲು ಮಾತದಲ್ಲಿಯೆ ಬುರುಸುಗಟ್ಟಿವೆ ಘಂಡಿಗೆ (ನೆಂಪಯ. ೦೨-೨೩); ಅಲ್ಲು ಬಲೆಯು ಒಟ್ಟಿತ್ತು ಜೇಡಹುಳುವಿನ ಕೃತಿಗೆ ಬುರುಸುಗಟ್ಟಿತ್ತು (ಗಂಗಾತ. ೩೦-೨) ; ಬುರುಸುಗಟ್ಟಿರಬಹುದು ಒಳಗಡೆಗೆ ಪುಪ್ಪುಸ (ಅರರೋ.. ೫೯).

[ಬೂಜು₁ + ಕಟ್ಟು₁]

**ಬೂಟ₁** (ನಾ). ೧. ಮೋಸ; ಕಪಟ : ಹುಡುಗೀನ ಪುಟ್ಟಮ್ಮಾಜೀಗೆ ಜೊತೆ ಯಾಗಿರಲೀ ಅಂತಲ್ಲವೆ ಕರಪದ್ದು? ಇದರಲ್ಲಿ ಬೂಟ ಇಲ್ಲವಲ್ಲ (ಚಕರಾ. ೦೯೩). ೨. ವೇಷ; ನಟನೆ; ಸೋಗು : ಅಲೆವೆಲರಿಗೆ ತಲೆಯೊಲೆಯುವ ನಿಲುವು ಚೆಂದ ಇದೆಸಗುವ ಸೂರ್ಯನ ಬೂಟ (ಕೆಲುವು. ೬-೪); ನಾನೂ ನಿನ್ನುಂತೆಂದಾ ವೈರಿ ಸೇಹವ ತೋರಿ ಜತೆಯಂ ಸೇರಿ ಅಟದಿ ಬೆರತು ಬೂಟಕೆ ಸೋತು (ಗೋಕರಾ. ೦೫-೨೪). 'ಬೂಟಗಾರ' ಪರಾ.

[ದೇ.॥ ತುಳು. ಬೂಟಿ, ಬೂಟು; ತೆಲು. ಬೂಟ]

**ಬೂಟ₂** 'ಬೂಟಾ' ನೋ.

**ಬೂಟಕ** (ನಾ). ೧. ವೇಷ; ನಟನೆ; ಸೋಗು : ಕೋಟಿಯೊಂದಕೆ ಸಲ್ಲದೊಂದುಕೋಟಿಗೆ ಮಿಗಿಲು ನೋಟಕರ ಸಾಫಲ್ಯಮಕ್ಕುದಲೆ ನಿಜಸಂಗ ಬೂಟಕದ ಸಂಗ ಬಿಡು ನಿನ್ನೊಳಿರುತಿರೆ ಮಣಿಯು ಖೇಟಗತಿ (ಅವಶಂ. ೨೮೨-೦೨೯೩) ; ನೀಟುಗಾತಿಯರೊಲುಮೆ ಬೂಟಕವೆಂದು ತಿಳಿಯಿರೊ (ಪುರಂದ. ೨-೦೬-೦). ೨. ಸುಳ್ಳು; ಅಸತ್ಯ : ಸಾಟಿಯಿಲ್ಲದ ಶಂಖಚಕ್ರವು ಚತುರಹಸ್ತದಲಿರಲು ಕಂಡೆನು ಬೂಟಕದ ಮಾತಲ್ಲ ಕೇಳಿರೊ ಭೂರಿದೈವದ ರಮಣನಂಘ್ರಿಯ (ಪುರಂದ. ೦-೦೦೯-೧); ಜನಕ ನೀಯೆನಗರಸ ನೃಪರುಷಿ ಮನುಜನೇ ಪರಮಾರ್ಥ ಪುಣ್ಯಶರೀರಿ ಬೂಟಕವೆ (ಅಂದಶಾ. ೪೮-೩೬). ೩. ತೋರಿಕೆಯ ವೇಷವನ್ನು ಧರಿಸಿದವನು; ಸೋಗುಹಾಕುವವನು : ಅಯ್ಯಾ ನಾಟಕನಲ್ಲ ಬೂಟಕನಲ್ಲ ಶೀಲಿಗನಲ್ಲ (ವಚಶಾ. I. ೦-೩); ಪುಣ್ಯತೀರ್ಥಗಳಲ್ಲಿ ಪರಿಗ್ರಹವಂ ತೆಗೆದುಕೊಂಬವನಲ್ಲಾ ಬೂಟಕನಲ್ಲಾ ಮೃದುಮನವುಳ್ಳವನು (ಕಾಶೀಮ. ೪೫೮-೨); ಪಡಿಯ ಬೂಟಕ ನಲ್ಲ ಒಡನೆ ಬೂಟಕನಲ್ಲ (ಪ್ರಭುಲಾರ. ೦೩೦-೫). (ಗು). ೪. ತೋರಿಕೆಯ; ನಟನೆಯ : ಸೋಗಿನ : ದತ್ತನು, ಆ ಬೂಟಕ ಜಂಗಮನಂ ಕರೆಸಿ ಕೊಂಡು ಕಳುಹಿಸುವುದಕ್ಕೆ ಹೋಗುವಾಗ್ಗೆ (ಪುರಾಶಿ. ೬೦).

[ದೇ.॥ ತಮಿ. ಪೂಟ್ಟಕ, ಪೂಟ್ಟಕ್ಕ ; ತುಳು. ಬೂಟಕ, ಬೂಟಂಗ; ತೆಲು. ಬೂಟಕ]

**ಬೂಟಕತನ** (ನಾ). ತೋರಿಕೆಯ ನಡವಳಿಕೆ; ಡಂಭಾಚಾರ; ಬೂಟಾಟಿಕೆ: ಅವರಾಟವನರಿಯದೆ ಬೂಟಕತನದಿಂದ ದಿಮ್ಮಿಸಾಲೆ (ಕಾಲಿಸಂ. ೬೮-೪); ಗೂಟನಾಮವ ಹೊಡೆದು . . . ನಾ ಧರೆಯೊಳಗೆ ಬರಲೆನ್ನ ಬೂಟಕತನ ನೋಡಿ ಭ್ರಮಿಸದಿರಿ ಜನರೆ (ಪುರಂದ. ೪-೦೬೫-೦); ಬೂಟಕತನ ಮಾಡಿದರೆ ಕಾಟಕತನ ತಪ್ಪೀತೇ? (ಗಾದೆ). [ಬೂಟಕ + -ತನ]

**ಬೂಟಕಮಾತು** (ನಾ). ಸೋಗಿನ ಮಾತು; ನಟನೆಯ ಮಾತು: ಕೊಡದೆ ಬೂಟಕಮಾತಿನಲಿ ಮನ್ಮಥಕೇಳಿಗೊಡನೈದುವ ದೋಸರಿಗನ ನಡೆ ನಾಳೆ ಕರೆವೆನೆಂದೆಬ್ಬಿಸಿ ಪೊನ್ನೀವ ಕಡುದಾತನ ಕರೆ ಬಂಗಳೆ (ಕಂಸಾ. ೬-೦೪೬).

[ಬೂಟಕ + ಮಾತು₁]

**ಬೂಟಗಾರ** (ನಾ). = ಬೂಟಕ ೩ : ಆಟಗಾರನು ಅತ್ತ ಪ್ರಭುವಿಗೆ ಬೂಟಗಾರ ಬಸವನು ಪಾಟಿಗೆಟ್ಟನು ಪರಮಭಕ್ತಿ ಸಘಾಟ ವಿಮಾರಿ (ಕರಶೀ. ೩೪೫ ೦).

[ಬೂಟ₁ + – ಗಾರ (< - ಕಾರ)]

**ಬೂಟಾ**, **ಬುಟ್ಟಿ**, **ಬುಟ್ಟಾ**, **ಬೂಟ₂** (ನಾ). ರೇಷ್ಮೆಬಟ್ಟೆಯ ಮೇಲೆ ಹಾಕುವ ಜರಿಯ ಅಥವಾ ರೇಷ್ಮೆನೂಲಿನ ಬೇರೆ ಬೇರೆ ಆಕಾರದ ಕಸೂತಿ: ಫಲತಾಂಬೂಲದ ಚೀಲ ಕೊಡುತ್ತಿದ್ದಾಕೆ ನೀಲಿಯ ಬೂಟಾ ಹೂವಿನ ಬನಾರಸ್‌ಸೀರೆ ಉಟ್ಟಿದ್ದರು (ಶಂದೆನ. ೬) ; ಹಕೀಂನು ಯಾವತ್ತೋ ಒಂದುದಿನ ಬೂಟಾಪೇಟ ಕಟ್ಟಬೇಕು ಅಂತ ಹೇಳಿ ಕೊಂಡಿದ್ದ ಆಪವಾಲು ಅವೊತ್ತು ಫಲವಾಯಿತು (ಮಲ್ಲಿ. ೩೪). **ಬುಟ್ಟಿ :** ಕಡುನೀಲಿವರ್ಣದ ಸೀರೆಯಲ್ಲಿ ನಕ್ಷತ್ರಗಳಂತಿರುವ ಬುಟ್ಟಿಗಳು ಎದ್ದು ಕಾಣುತ್ತವೆ (ರೂಢಿ). **ಬುಟ್ಟಾ :** ಮದುವೆಯ ಹುಡುಗಿಗೆ ಬುಟ್ಟಾ ಇರುವ ಸೀರೆಯನ್ನು ಉಡಿಸಿದ್ದರು (ರೂಢಿ). **ಬೂಟ₂:** ಬೂಟ ಇರುವ ಸೀರೆಗೆ ಬೆಲೆ ಹೆಚ್ಚು (ರೂಢಿ).

**ಬೂಟಾಸೀರೆ**, **ಬುಟ್ಟಾಸೀರೆ** = ಕಲಾಪತ್ತಿನ ಹೂವುಗಳ ಚಿತ್ರದಿಂದ ಕೂಡಿದ ಸೀರೆ : ಅವರ ಅಂಗಡಿಯಲ್ಲಿ ಬೂಟಾಸೀರೆಗಳೇ ಹೆಚ್ಚಾಗಿವೆದ್ದವು (ರೂಢಿ); ಮಗಳ ಮದುವೆಗೆಂದು ನಾನು ಎರಡು ಬುಟ್ಟಾಸೀರೆಗಳನ್ನು ಕೊಂಡು ತಂದೆ (ರೂಢಿ).

[←ಪಾರ. ಬೋತಾ; ಹಿಂ. ಬೂಟಾ, ಬೂಟೀ, ಬುಟ; ಮರಾ. ಬೂಟಿ, ಬುಟಿ, ಬುಟಾ, ಬುಟೀ, ಬುಟ್ಟೀ]

**ಬೂಟಾಟ**, **ಬೂತಾಟ₁** (ನಾ). ೧. ಬೂಟಾಟಿಕೆ; ನಟನೆ; ತೋರಿಕೆ; ಮಾತುಗಾರಿಕೆಯ ಬೂಟಾಟದಿಂ ಬಡಪಾರ್ವರೇತೆರದಿ ಸೋಲಿಸದೆ ಶಂಭು ಭಟ್ಟನ ಕೂಡೆ ಖ್ಯಾತವಾದವ ಮಾಡಿ ಜೈಸಿದಡೆ ವಿದ್ವಾಂಸನಲ್ಲದೊಡೆ ಗಾಂಪನೀತಂ (ಚತುವು. ೪-೦೪-೨೩); ಇಂಟರ್‌ವ್ಯೂ ಎಲ್ಲಾ ಬರೀ ಬೂಟಾಟ ಅಂತ ಹೇಳ್ತಿದಾನೆ (ಅಶಾ. ೩೫). **ಬೂತಾಟ₁ :** ೧. ಬಱದೆಯುಂ ಬೂತಾಟವಿನ್ನೇಕೆ ಮಾಣೆನು ಬನ್ನಕೈಡೆಯಾದೆನೀ ವಿಹಗನಿ (ಕಾದಂಉ. ೬೨); ನೀಂ ನಿನ್ನ ಮುನ್ನಿನ ಕೂಸಾಟಮನೆಲ್ಲಿಯುಂ ಬಿಸುಡೆ ನಿನ್ನಂ ಸ್ಮೃತಿಡಪ್ಪಾರ ದಿನ್ನಿನಿಸಂ ಮಾಡದೆ ಮಾಡಿದಂತಿರೆಲವೋ ಇನ್ನೇಕೆ ಬೂತಾಟವೋಪನೆ (ಶೃಂಗಾರ. ೦-೫೨) ; ಕೈಯ ಹೊಯ್ಯೂತಾಟಮೇತಕೆ ಧರ್ಮನಂದನನಾಟ ಪೊಳ್ಳಿತು (ಕುಮ್ಮಾಸ. ೦೩-೪೬). ೨. ತಂಟೆ; ಗೋಜು: ಋಷಿಯಲ್ಲ ಋಷಿಗೇಕಾಯುಧಂಗಳ ಗೊಡವೆ ನಮಗೇಕದಱ ಬೂತಾಟ (ಕುಮ್ಮಾಆ. ೫-೨೦).

[ಬೂಟ₁ + ಆಟ]

**ಬೂಟಾಟಂಗೊಡು** (ಕ್ರಿ). ಬೂಟಾಟಿಕೆ ಮಾಡು ; ಸೋಗು ಹಾಕು : ತಾಂ ಬೂಟಾಟಂಗೂಡಿ ವಜ್ರ ಪ್ರಕಟಿತ ಬಹುಮಾನಂಗಳಿಂ ಮಗಂ ವಿಮಾಜಾದಾ ನೂತ್ನಹಾರಂಗಳನೊಸೆದು ಕುಡುತ್ತಂ (ಹಾಲಚ್ಚ. ೦-೦೫-೨೩).

[ಬೂಟಾಟ + ಕೊಡು₁]

**ಬೂಟಾಟಿಕೆ**, **ಬೂತಾಟಿಕೆ** (ನಾ). ತೋರಿಕೆಯ ಪ್ರದರ್ಶನ; ಸೋಗು; ನಟನೆ : ಎಲ್ಲರೂ ಮಾಡುತ್ತಿರುವುದು ಬೂಟಾಟಿಕೆಯ ಬೈಲಾಟ (ಐರಹಾ. ೦೩೬); ದೇವರ ಹೆಸರಿನಲ್ಲಿ ಉಪವಾಸ ಮಾಡಿದರೆ ಅದೂ ಬೂಟಾಟಿಕೆಯೆ?

(ಅಜಾಬಿ. ೫೩). **ಬೂತಾಟಿಕೆ** : ಹಸಿವುಳ್ಳನ್ನಕ್ಕರ ವ್ಯಾಪಾರ ಬಿಡದು . . . ಮಾತುಳ್ಳನ್ನಕ್ಕರ ಬೂತಾಟಿಕೆ ಬಿಡದು (ಅವಚಂ. ೨೦೫-೯೨೪); ನೀವ್ ಹಣೆಯೊಳೋತು ಬೊಟ್ಟನಿತು ಬೂದಿಯನಿಟ್ಟು ಬಳಿಕವಿಾ ಬೂತಾಟಿಕೆ ಯೊಳೊಡೆಯರೊಡೆಯರೆಂದ್ಯೆದುತಿರ್ಪಿರಿ (ಸಿದ್ಧೇಶ. ೨೦-೧೨).

[ಬೂಟಾಟ + – ಇಕೆ]

**ಬೂಟಾದಾರಿ, ಬುಟೇದಾರಿ, ಬುಟ್ಟೆದಾರ, ಬುಟ್ಟೆದಾರಿ, ಬುಟ್ಟೇದಾರಿ, ಬೂಟೆದಾರಿ** (ಗು). ಬುಟ್ಟೆ ಕೆಲಸದಿಂದ ಕೂಡಿದ; ಬುಟ್ಟೆಗಳುಳ್ಳ : ಅವನ ತಲೆಯ ಮೇಲಿದ್ದ ಬೂಟಾದಾರಿ ರುಮಾಲು, ಕೈಯಲ್ಲಿದ್ದ ಚಿನ್ನದ ಚೈನು, ಉಂಗುರಗಳನ್ನು ಕಂಡು ವೇಣು ಗೌರವವಾಗಿ ಮಾತನಾಡಿಸಿದ (ಶಾಯುಳ. ೫೬). **ಬುಟೇದಾರಿ** : ಬುಟೇದಾರಿ ಪಚ್ಚಡ ಮದುಮಗನಿಗಲ್ಲದೆ ಮುದಿಮುದುಕನಿಗೆ ಒಪ್ಪೀತೇ? (ಗಾದೆ). **ಬುಟ್ಟೆದಾರ** : ಇಲ್ಲಿ ಬುಟ್ಟೆದಾರ ವಸ್ತ್ರಗಳೂ ಜಿನುಗು ನಾರುಬಟ್ಟೆಗಳೂ ಆಗುತ್ತವೆ (ಗ್ರಾಚಿತ್ರ. ೬೩). **ಬುಟ್ಟೆದಾರಿ** : ಸೂರ್ಯಪೀಠದ ಮುಖಮೇಲೆ ಹಾಸಿಗೆಗಳು ರತ್ನ ಹುವ್ವುಗಳೆ ಬುಟ್ಟೆದಾರಿ ಜರತಾರಿ ಹುವ್ವುಗಳೆ (ಕುರಂದ. ೫-೬೯-೫). **ಬುಟ್ಟೇದಾರಿ** : ಕಾಂಚೆಯಿಂದಲೂ ಬುಟ್ಟೇದಾರಿ ಬಟ್ಟೆಗಳನ್ನು ಕೊಂಡುಕೊಳ್ಳುವಾಗ ಅಷ್ಟಾನಂದವಾಗಲಿಲ್ಲ (ಶಾರಜೀ. ೦೯೮). **ಬೂಟೆದಾರಿ** : ವಲ್ಲಿ ಉತ್ತಮವಾದ್ದು, ಕಲಾಪತ್ತು ಬೂಟೆದಾರೀದು (ಸುಪುತ. ೬೬).

[← ಹಿಂ. ಬೂಟೆದಾರ್; ಮರಾ. ಬುಟಾದಾರ್, ಬುಟೇದಾರ್]

**ಬೂಟು** (ನಾ). ಹರಡಿನ ಮೇಲಕ್ಕೆ ಬಂದು ಪಾದವನ್ನು ಪೂರ್ತಿಯಾಗಿ ಮುಚ್ಚುವಂತೆ, ಒರಟುಬಟ್ಟೆ ಅಥವಾ ಚರ್ಮದಿಂದ ಮಾಡಿದ ಪಾದರಕ್ಷೆ ; ಮೋಜ : ಅಂದೇ ಹೊಸ ಬೂಟು ಧರಿಸಿದ್ದೆ (ತಂದುಬಿ. ೬೫) ; ಬೂಟು ಚಪ್ಪಲು ಮಾಡದಲ್ಲಿಯೆ ಬುರುಸುಗಟ್ಟಿವೆ ಥಂಡಿಗೆ (ವಂಪಬು. ೦೨-೨೩).

[← ಇಂ. Boot]

**ಬೂಟೆದಾರಿ** 'ಬೂಟಾದಾರಿ' ನೋ.

**ಬೂಡು** (ನಾ). ಮನೆ ; ನೆಲೆ ; ಆಶ್ರಯ : ಕಾಡನು ಕಡಿದಾ ಹಾಡಿಯ ಮಾಡಿದ ಬೂಡನು ಕಟ್ಟಿದ ಕರಿಪೈದ (ಕಾಕೋಟಿ. ೩೬).

[← ತುಳು. ಬೂಡು]

**ಬೂತ** 'ಬೂತು$_2$' ನೋ.

**ಬೂತಗನ್ನಡಿ** (ನಾ). ವಸ್ತುವು ಇರುವುದಕ್ಕಿಂತ ದೊಡ್ಡದನ್ನಾಗಿ ಮಾಡಿ ತೋರಿಸುವ ಕನ್ನಡಿ ; ರಾವುಗನ್ನಡಿ : (*).

[ಬೂತ (<ಬೂತು$_2$) + ಕನ್ನಡಿ$_1$]

**ಬೂತಟ್ಟು** (ಕ್ರಿ). ೧. ಅವಮಾನಗೊಳಿಸುವುದಕ್ಕಾಗಿ ದೂತನನ್ನು ಅಟ್ಟು ; ಕುಚೋದ್ಯಕ್ಕಾಗಿ ದೂತನನ್ನು ಕಳುಹಿಸು : ಇಂದ್ರಂ ಮೃಗೇಂದ್ರನಂತೆ ಗರ್ಜಿಸಿ ಚತುರಂಗಬಲಸಮೇತಂ ಪೊಱಮಟ್ಟು ಬೂತಟ್ಟಿದೊಡುಪೇಂದ್ರನುಂ . . . ಬಾದು ತಾಗುವುದುಂ (ಶಾಂತಿಪು. ೬-೮೦ವ) ; ಘೋರಾಂಧಕಾರಂ ಬಟ್ಟ ಕಲದಿಂದಮೇಬೂತಟ್ಟಿದುದೆನೆ ದಿನಕರಂಗೆ ತತ್ಕಾನನದೊಳ್ ಮುಟ್ಟಿದುದಜಗರಮುಖದಿಂ ಪುಟ್ಟಿದ ವಿಷವಹ್ನಿ ಯುಗುಟ್ಟಿ ಕರ್ಬೊಗೆ ಮುಗಿಲಂ (ಲೀಲಾವ. ೬-೨೪) ; ಜವನೆರ್ದೆಯಂ ಮೆಟ್ಟುವೀಶಂಗೆ ಬೂ[ಪಾಠಾಂ. ದೂ]ತಟ್ಟುವಗುರ್ವಂ ತೋಱದಪ್ಪಂ (ಜಗನ. ೦೩-೩೮). ೨. (ಅಲಂ) ಸ್ಪರ್ಧೆಗೆ ಆಹ್ವಾನಿಸು ; ಹುರುಡಿಸು : ಮನೋಜವಕ್ಕೆ ಬೂತಟ್ಟುವ ತಕ್ಕು ಮಿಕ್ಕು ಬರೆ ಬಂದುವು ಪೊಂಬುಲಿದೋಲ ಪಲ್ಲಣಂಗಟ್ಟಿದ ಪಟ್ಟಸಾಹಣದ ವಾಜಿಗಳಂದು ಜಯೋತ್ಸವಾಜಿಗಳ್ (ಮಲ್ಲಿಪು. ೯-೪). [ಬೂತು$_1$ + ಅಟ್ಟು$_2$]

**ಬೂತರಸ** (ನಾ). ಒಬ್ಬಾತನ ಹೆಸರು : ಬೂತರಸ ಯುವರಾಜಪಥಮುಳ್ ನಿನ್ದು ಕೊಙ್ಗಳ್ನಾಡು ಪೂನಾಡಮುನಾಳುತಿಟ್ಟು (ಎಕ. III (R), ಸಂಖ್ಯ. ೩೯೫-೫ ; 870) : ಸತ್ಯವಾಕ್ಯಪೆರ್ಮ್ಮಾನಡಿಗಳ ಪೃಥುವೀರಾಜ್ಯಂಗೆಯು ಬೂತರಸ ತೊಱಕಾರಟ್ಟಿಯು ಪದಿಯುಳೆಯು ನೆಲೆಗೂರು ಮೊಗಪೆ ಅಳಿಯುವು ಬಿಟ್ಟಿ (ಎಕ. III (R), ಗುಂಡ್ಲುಪೇ. ೫೬-೩ ; ೯ನೆಯ ಶತ).

[ಬೂತ$_?$ + ಅರಸ$_1$]

**ಬೂತಾಟ$_1$** 'ಬೂಟಾಟ' ನೋ.

**ಬೂತಾಟ$_2$** (ನಾ). ೧. ಪಿಶಾಚಿಯ ಆಟ ; ದೆವ್ವದ ಕುಣಿತ : ಅಂತಾಕೆಗಳ್ ತೂಗಿ ತೂನೆವ ತೂನೆಪಂಗಳುಮಂ ಮುರಸರಿಗೆವಿಡಿದು ಬಿಲ್ವಿಡಿದಾಡುವ ಬೂತಾಟಂಗಳುಮಂ ನೋಡಿ (ಶಂಖಪಾ. ೪-೯೦ ವ). ೨. ಸ್ವೇಚ್ಛಾಚಾರ : ಚಾಗು ಕೌರವಬಲದವರ ಬೂತಾಟವಾಯಿತೆ ನಮ್ಮ ಘಟ್ಟಿನಲಿ (ಕುವ್ಯಾದ್ರೋ. ೦೯-೨೬). [ಬೂತು$_2$ + ಆಟ]

**ಬೂತಾಟಿಕೆ** 'ಬೂಟಾಟಿಕೆ' ನೋ.

**ಬೂತಾಳೆ** (ನಾ). ಗದ್ದೆ, ಹೊಲಗಳ ಸುತ್ತ ಬೇಲಿಯಂತೆ ಬೆಳೆಸುವ, ತಾಳೆಜಾತಿಗೆ ಸೇರಿದ ಒಂದು ಬಗೆಯ ಸಸ್ಯ : ಊರಿನ ಸುತ್ತಲೂ ಕಳ್ಳಿ ಬೂತಾಳೆಗಳ ಬಲವಾದ ಬೇಲಿಗಳಿದ್ದುವು (ಹುಬ್ಬಹ. ೦).

[<ಸಂ. ಭೂತಾಲ]

**ಬೂತಿಕ್ಕು** (ಕ್ರಿ). ಕುಚೋದ್ಯ ಮಾಡು ; ಅಪಹಾಸ್ಯ ಮಾಡು : ಆರುಹತರೆಲ್ಲ ಬೂತಿಕ್ಕಿ ನಗುತಿರೆ ಕಂಡು (ಸೋಮಾತ. ೪-೨೪).

[ಬೂತು$_1$ + ಇಕ್ಕು]

**ಬೂತು$_1$** (ನಾ). ೧. ಕುಚೋದ್ಯ ; ಕುಚೇಷ್ಟೆ : 'ಬೂತಟ್ಟು', 'ಬೂತಿಕ್ಕು' ಪರಾ. ೨. ಸೋಗು ; ನಟನೆ : 'ಬೂತುಗ' ಪರಾ. ೩. ನಾಚಿಕೆಗೆಟ್ಟ ಮಾತು : ಅಶ್ಲೀಲವಾದ ಮಾತು : 'ಬೂತುಗೆಡೆ' ಪರಾ. ೪. ನಾಚಿಕೆಗೆಟ್ಟ ವ್ಯಕ್ತಿ ; ಭಂಡ : ಅಲ್ಪವ್ಯಕ್ತಿ : "ಬೂತುಗಳೆನೆ ಬಂಡರೆಂದು ತಿಳಿಗೆ" (ಭಾರಿತ. ೨೯) ; ಈ ಬೂತು ಪಗೆಯೊಳೊಡಂಬಟ್ಟು ಬಂದನಾಗಲ್ವೇಟ್ಟುಂ (ಶಂಕಶಂ. ೨೪೦-೪) ; ಜಾತಿಸೂಳೆಗೆ ರಣಭೀತನ ಪುಸಿನುಡಿಮಾತನ . . . ಬದಗನ ಬೂತಿನ ಮಾತು ದಿಟವಲ್ಲು (ಲೀಲಾವ. ೨-೩೪) ; ಏಕೆ ಕೆಣಕಿದೆ ಕರ್ಣ ಬೂತಿನ ಬೀಕಲಿನ ಬದಗಿಯನು (ಕುವ್ಯಾಸ. ೦೫-೦೪). ೫. ಮೋಸಗಾರ ; ವಂಚಕ : ಒಂದು ದಿವಸಮೊರ್ವ ಬೂತಿಂಗೆ ದ್ರವ್ಯಮಂ ಕೊಟ್ಟೊಡಂಬಡಿಸಿ . . . ಕಟ್ಟಿದ ಬಟ್ಟೆ ಬರ್ಪೊನನ್ನೆಗಮಾ ಬೂತುಮಾ ಪ್ರಸ್ತಾವದೊಳ್ ಪೋಗಿ ಮಹಾದೇವಿಯ ಮಂಚಮನೇಱದಿರ್ದಾಗಳ್ (ವಡ್ಡಾರಾ. ೦೬೬-೦೬) ; ಕೃತಕರುಧಿರಮಪ್ಪುದ ನಱದೀ ಬೂತೆನ್ನಂ ಬಂಚಿಸಿದನೆಂದು ನೆಱೆಯದ ನರಕಾಯುಷ್ಯಮಂ ನೆಱಪುವನೆಂಬಂತೆ ಮುಳಿದು (ಆದಿಪು. ೨-೦೪ವ) ; ಬೂತಿನ ಪೊಗಟ್ಟೆಯಂತೆ . . . ಸೌಂತೆಯ ತೋಂಟದಂತೆ ಕಡೆಯೊಳ್ ಪೇಸುವಫಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೬-೦೨೨). ೬. ಸಾಮಾನ್ಯನಾದವನು ; ನಾಡಾಡಿ : ನೆರೆದ ಬೂತುಗಳ ಕೋಳಾಹಳರವಂಗಳಿಂ . . . ಕರಮೆ ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಜಪು. ೪-೬ ರಗಳೆ). ೭. (ದಾನಪಾತ್ರನಾದ) ದೀನ ; ದರಿದ್ರ : ದ್ರುಪದನ ಪೊಱಲೊಳ್ ಪಾಂಡವರ್ ಚಾಗಕ್ಕೆ ಬೂತುಂ ಭೋಗಕ್ಕೆ ಪೊಟ್ಟುಂ ನೆಱೆಯದೆನಿಸಿ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಿರ್ಪನ್ನೆಗಂ (ಶಂಖಪಾ. ೪-೦ ವ). ೮. ಕೈಯಲ್ಲಿ ಆಗದವನು ; ಹೇಡಿ : ಭೀತಿ ಮನದಲಿ ಪೌರುಷಾಂಗದ ಮಾತು ಮುಖದಲಿ ಮುರಿವು ಕಾಲಲಿ ಬೂತುಗಳು ಕುರುವೀರರೆನುತಿದಿರಾದುದರಿಸೇನೆ (ಕುವ್ಯಾದ್ರೋ. ೦೫-೨೫) ; ಸೂತಸುತ ದಳಪತಿಯೆ ಘಡ ಮುಪ್ಯಾಂತರೇ ಮುಂಬಿಗರು ಬಿರುದಿನ ಬೂತುಗಳ ಬೊಬ್ಬಾಟ ಬಿಡದೇ ಕಂಡು ಕಾಣರಲ (ಕುವ್ಯಾಕ. ೨-೮). ೯. ಕೆಲಸಕ್ಕೆ ಬಾರದವನು ; ನಿಷ್ಪ್ರಯೋಜಕ : ಇಹಕಂ ಪರಕಂ ಪೆಱಗಾದ ಬೂತಾದೆಂ (ರಾಮಾಶ್ವ. ೦೦೫-೦).

ಬೂತನಟ್ಟು=ಬೂತಟ್ಟು ೧ : ಅರ್ಜುನಂ ಕರ್ಣನಲ್ಲಿಗೆ ನಾಳೆ

. . . ತಾನುಮಾನುಂ ಕಾದುವಮೆಂಬುದಂ ಪೇೞ್ದು ಬನ್ನಿಮೆಂದು ಬೂತ ನಟ್ಟಿದೊಡೆ (ಶಂಕರ. ೧೨-೩೨ ಪ). [ದೇ.॥ ತೆಲು. ಬೂತು]

**ಬೂತು$_2$**, ಬೂತ (ನಾ). ೧. ದೆವ್ವ ; ಪಿಶಾಚಿ ; ಭೂತ : ಕೂಡಿ ನಿನ್ನೊಡನೆ ಭೋಗಿಸಲೀಯದೆ ಕಮ್ಮನೆನ್ನನುಬ್ಬಂತಕನೆಂಬ ಬೂತನೆಲೆ ಮಾಣಿಸಲಾಗದೆ ಪೇೞ್ (ಅದಿಪು. ೩-೫) ; ಈ ಬೂತೆನ್ನ ಸರಂಗೇಳ್ದೊಡಲ್ಲದೆ ಪೊಱಮಡುವನಲ್ಲನಿವಂಗಾನೆ ಸಾಲ್ವೆಂ (ಗದಾಯು. ೭-೯ ಪ); ಅಕಟಾ ಬೂತುಗಳ ಕೈಬಾಯ್ಗೆ ಬಂದ್ಯೆ ತಂದೆ ಕುರುರಾಯ (ಕುಮಾ.ಗ. ೫-೧೫). **ಬೂತ** : ೧. ಕೆಲಕೆ ಕಾದಿಹ ಬೂತ ಪೇತವು ಹಲವು ಜಟ್ಟಿಗ ಮಾಣಿ ಭದ್ರರು (ಕೌಶಿರಾ. ೩೮-೨೩) : ಕನಸು ಬೂತವಾಯಿತು, ಮನಸು ನಾನೇ ಆದೆ (ಪಶಿವಾ. I, ೪೩೫). ೨. (ಅಲಂ) ದೊಡ್ಡದಂ ; ಗಾತ್ರವಾದುದು : ' ಬೂತಗನ್ನಡಿ ' ಪರಾ.

**ಬೂತಾಗು** = ಪ್ರೇತವಾಗು ; ಹೆಣವಾಗು : ತಾಗಿದ ಬೇಗದೊಳೆ ಶಿರೋಭಾಗಮನಿಷು ನಡೆ ಕಡಂಗುವುದ್ಭಟನಂ ಬೂ[ಪಾಠಾಂ. ಭೂ]ತಾಗಿರೆ ಕೆಡೆದಂ ತಲೆಕೆೞಗಾಗಿ ಪರಾಜಯಮುಮನಱಿಪುವಂತರಿಬಲದೊಳ್ (ಪರ್ಶವ್ವಾ. ೪-೩೭). [ < ಸಂ. ಭೂತ ]

**ಬೂತು$_3$** (ನಾ). ೧. ಸರ್ಕಾರಕ್ಕೆ ಸಂಬಂಧಿಸಿದ ಡೈರಿಯಿಂ ಹಾಲು, ಮೊಸರು ಮುಂತಾದುವನ್ನು ಮಾರುವ ಸ್ಥಳ : ಏಳು ಗಂಟೆಯಾದರೂ ಬೂತಿಗೆ ಇನ್ನೂ ಹಾಲು ಬಂದಿಲ್ಲ (ರೂಢಿ). ೨. (ಸಾರ್ವಜನಿಕ ಸಂಸ್ಥೆ ಮೊದಲಾದ ಸದಸ್ಯರ) ಚುನಾವಣೆಯಲ್ಲಿ ಮತ ಚಲಾಯಿಸಲು ಗೊತ್ತುಪಡಿಸುವ ಸಾರ್ವಜನಿಕ ಸ್ಥಳ : ಈ ಶಾಲೆಯನ್ನು ಚುನಾವಣೆಯ ಬೂತು ಮಾಡಿದ್ದಾರೆ (ರೂಢಿ). [← ಇಂ. Booth]

**ಬೂತುಗ** (ನಾ) ೧. ಸೋಗುಗಾರ : ಮಾತುಗಂ, ಬೂತುಗಂ, ಕಂತೆಗಂ (ಶಮದ. ೨೦೦ ಪ್ರಯೋ). ೨. ಒಬ್ಬಾತನ ಹೆಸರು : ಶ್ರೀಮಂತ್ ಬೂತುಗ ಎಱೆಯಪ್ಪ ಪೆರ್ಮ್ಮಾಡಿ ಪಟ್ಟಂಗಟ್ಟುವನ್ನು (ಎಕ. VII, ಶಿವಮೊ. ೯೬-೧೩; ಸು. 915); ಬೂತುಗನಜ್ಯಕಾಜಿ ಶ್ರೀಮತ್ ಮುನಾಲರಜ್ಜಿಗೆ ಅಸುಪರದೊಳ್ ಮೆಚ್ಚಿ ಬೇಡಿಕೊಳ್ಳೆನ್ನೊಡೆ (ಎಕ. III, ಮಂಡ್ಯ. ೪೦-೯ ; 950). [ ಬೂತು$_1$ + — ಗ$_2$ ]

**ಬೂತುಗಿ** (ನಾ). ಸೋಗು ಹಾಕುವವಳು : ಮಾತುಗಿ, ಮಾತುಗಿತಿ, ಬೂತುಗಿ, ಬೂತುಗಿತಿ (ಶಬ್ದಮ. ೦೯೩ ಪ್ರಯೋ). [ ಬೂತುಗ + — ಇ$_2$ ]

**ಬೂತುಗೆಡೆ** (ಕ್ರಿ). ತುಚ್ಛವಾದ ಮಾತನ್ನಾಡು ; ಕೆಟ್ಟ ಮಾತನ್ನಾಡು : ಬೂತುಗೆಡೆವನೊಳೆಂಬೆನೇ ಮಜುಮಾತನೆಲೆ ಗಾಂಗೇಯ (ಕುಮಾ.ಗ. ೦೫-೦೦); ಕಾತರಿಸಿ ವಿಷಮಾತುರರು ನೆಱೆ ಬೂತುಗೆಡೆದರೆ ಗರುವರಾದವರಾತು ಮಾಱುತ್ತರವ ಕೊಡುವರೆ (ಕೊರಿರಾ. ೩-೪-೨೨). [ಬೂತು$_1$ + ಕೆಡೆ$_2$]

**ಬೂತುಗೆಯ್** (ಕ್ರಿ). = ಬೂತಿಕ್ಕು : ಅಯ್ಯೋ ಇದೇಕೆ ಹರಿಯಣ್ಣಂಗೆ ಬಲ್ಮರುಳ್ ಮೆಯ್ಯನಾವರಿಸಿತೆನೆ ತದ್ದೂಷಕರ್ ಬೂತುಗೆಯ್ಯುತಂ ಗಹಗಹಿಸುತಿರೆ (ಶಮ್ವರಾ. ೫-೦೦). [ಬೂತು$_1$ + ಕೆಯ್$_1$]

**ಬೂತುಗೊಳ್** (ಕ್ರಿ). ಪಿಶಾಚಿ ಹಿಡಿ ; ಭೂತ ಮೆಟ್ಟಿಕೊಳ್ಳು : ನೆಟ್ಟನೆ ಬೂತುಗೊಳ್ವ ತೆಱದಿಂ ದಶಕಂಧರನಾಡಿ ಪಾಡಿ ನಾಣ್ಗೆಟ್ಟಿರೆ ಕೊಂಡನಲ್ಲದೆ ಬರಂಗಳನೀಶ್ವರನಲ್ಲಿ ಪೇೞಮಾಪ್ನೋಟ್ಟಜೆಯಿಂದೆ ಕೊಂಡಂ (ಶಂಕರ. ೯-೫೩). [ಬೂತು$_2$ + ಕೊಳ್$_1$]

**ಬೂತುತನ** (ನಾ). ಸೋಗು ; ನಟನೆ ; ಬಿಯ್ಯಾರ : ಬಿದೆದುಗಿದಲ್ಲದೇಂ ಪಿಡಿವಳೇ ಸೆಱಗಂ ನೆಱೆ ಪ್ರಾಣ ತಾಣಮುಂ ಬೆದಕವೆ ಸೈತೆ ಸೋಂಕುವಳೆ ಬೂತುತನಂ ಪೆಱಗಾಗೆ ಮಾತುಗಟ್ಟಿದಪಳೆ (ಲೀಲಾವ. ೨-೦೦೦). [ಬೂತು$_1$ + — ತನ]

**ಬೂತುತಪ** (ನಾ). ಸೋಗಿನ ತಪಸ್ಸು : ವನರುಹಗರ್ಭನೆಂಬವನ ಮುನ್ನಿನ ಗೆಯ್ದ ತಪಂ ತಿಲೋತ್ತಮಾಂಗನೆಯಿನದೆಂತುಟಾದುದೆನೆ ಮತ್ತಿನ ಬೂತುತಪಂಗಳೆಮ್ಮ ಪೂರ್ವಿನ ಕಡೆಯೊಂದು ಪರ್ವಿನೊಳೆ ತೀರ್ವ್ವಪ (ಶಂಕರ. ೬-೮೦). [ಬೂತು$_1$ + ತಪ$_3$]

**ಬೂತುವಣಿಗ** (ನಾ). = ಬೂತುಗ ೧ : ಬೂತುಗಂ, ಬೂತುವಣಿಗಂ (ಶಬ್ದಮ. ೪೦೫ ಪ್ರಯೋ). [ ಬೂತು$_1$ + — ವಣಿಗ$_2$ ]

**ಬೂತೇಶ್ವರ**, ಬೂತೇಸ್ವರ (ನಾ). ಶಿವನ ದೇವಾಲಯವಿರುವ ಒಂದು ಸ್ಥಳದ ಹೆಸರು : ಶ್ರೀಮದುಗ್ಗಂ ಬೂತೇಶ್ವರಕೆ ಪಡುವಣ ತೊರೆವಳ್ಳಿಯ ಬಾಸಂಬಾಳ್ಳಿಯೂರ ಮುನ್ನಣ ಕೆಱೆಯೊಳೆ ಸಾಬ್ಬರ್ನಮಸ್ಯಮಂ ದೇವಭೋಗಂ ಬಿಟ್ಟಂ (ಎಕ. III, ಮೈಸೂರು. ೩೬-೦೪ ; ಸು. 990 ?). **ಬೂತೇಸ್ವರ** : ಶ್ರೀಮತ್‌ಗೊಗ್ಗಿ ಬೂತೇಸ್ವರಕ್ಕರಡಗೋಡುಪಳ್ಳಿಯ ದೇವಭೋಗಂ ಬಿಟ್ಟಂ (ಎಕ. III, ಮೈಸೂರು. ೩೬-೩ ; ಸು. 990 ?). [ < ಭೂತೇಶ್ವರ ]

**ಬೂತೇಸ್ವರ** 'ಬೂತೇಶ್ವರ' ನೋ.

**ಬೂದ** 'ಬೂದಿ' ನೋ.

**ಬೂದಗುಂಬಳ** 'ಬೂದಿಗುಂಬಳ' ನೋ.

**ಬೂದಗೂಟಿ** (ನಾ). ಒಂದು ಊರಿನ ಹೆಸರು (?) : ಬಾಳುಗುಳಿಯ ಮಹಾಜನ ಅಯ್ನೂರ್ವರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾದಮ್ಮಗೆ ಬೂದಗೂಟಿನಿತ್ತೊರ್ (ಸೌಇಇ. IX-i. ೫೯-೯; 10ನೆಯ ಶತ); ಅರಸರ ಮೆಚ್ಚಿಸಿ ಬೂದಗೂಟಿಂ ಬಿಡಿಸುವೊನಕ್ಕುಮೆಂದೊಡದ ಬಿಡಿಸಿದೊಡೆ (ಎಇ. XI, ೬-೦೨ ; 10ನೆಯ ಶತ). [ ? ]

**ಬೂದವೇಱು** (ಕ್ರಿ). ಬೂದಿಬಣ್ಣವನ್ನು ಹೊಂದು : ಊದಾಬಣ್ಣಕ್ಕೆ ತಿರುಗು : ಅದು ಮೊದಲೊಂಬುಗಳನಿಱದಿಳೆಯೊಳ್ ಬಿಟ್ಟು ಬೇರೂಱ ಬೆಳೆದ ಬೀಳಲ್ಗಳೊಂದೊಂದನೊತ್ತಿ ಪತ್ತಿ ಸುತ್ತಿ. . .ಕಪಲ್ಮು ಕೊರ್ಬಿ ಬೂದವೇಱ ಬೆಳೆದು ಬೆಳಗಾಯ ಬಣ್ಣವಾಗಿ (ಲೀಲಾವ. ೯-೪೦ ಪ). [ ಬೂದ (< ಬೂದಿ) + ಏಱು$_1$ (< ಏಱ್$_1$) ]

**ಬೂದಿ**, ಬೂದ, ಬೂದು(ನಾ). ೧. ಯಾವುದಾದರೊಂದು ವಸ್ತುವನ್ನು ಬೆಂಕಿಯು ಪೂರ್ಣವಾಗಿ ಸುಟ್ಟು ಉಳಿಸುವ ಭಾಗ : ಒಲೆಯ ಬೂದಿಯ ಬಿಲಿಯಲು ಬೇಡ ಒಲಿದಂತೆ ಹೂಸಿಕೊಂಡಿಪ್ಪುದು (ಬಸವ. ೦೧೪) ; ವಾದಿಗಳಾಚಾರಿಯನಾಗಿ ಪರನೊಳು ಕಾದಿ ಬೂದಿಯನೆಯ್ದಿದೆಯಾ (ಪೋಹಶ. ೯-೨೦). ೨. ಗೋವಿನ ಸಗಣಿಯನ್ನು ಒಣಗಿಸಿ, ತುಷಾಗ್ನಿಯಲ್ಲಿ ಸುಟ್ಟು ಸಂಸ್ಕರಿಸಿದ ಪುಡಿ ; ವಿಭೂತಿ ; ಭಸ್ಮ : "ಬೂದಿಯು ಭೂತಿಯುಕ್ಕು" (ಶಬ್ದಮಂ. ೧೩) ; ಬೂದಿ ಜೆಡೆ ಲಕ್ಕಣಂ ತಪಕಾದುವೆರಟಿರ್ದ್ದಣೆ ಶರಾಸನಂ ಕವಚಮಿವೆಂತಾದುವೊ ಮುತ್ತುಂ ಮೆಟಿಸುಂ ಕೋದಂತುಟೆ ನಿನ್ನ ತಪದ ಪಾಂಗೆಂತು ಗಡಾ (ಶಂಕರ. ೬-೯೨); ಜಸಮೆ ತನಗೆ ಮೆಯ್ಸಿರಿಯೆಂಬುದನಱಿಪುವಂತೆ ಪೂಸಿದ ಬೂದಿಯೊಳು . . . ಚೆಲ್ವನಾಂತು (ಶಬ್ದಕಾ. ೦೭೭) ; ಬೊಕ್ಕಣದ ಬೂದಿಯನುಃಘನುತಊದಿ ಮುಗಿನೊಳ್ ಪೊಕ್ಕೊಡೆ ಸೀಂತು . . . ಪುರ್ಬಿಕ್ಕುವ ಮರ್ಕಟಂ ನಗದ ತಾಪಸರಂ ನಗಿಸಿತ್ತರಣ್ಯದೊಳ್ (ಕಾವ್ಯಸಾ. ೦೦೦೮). ೩. ಊದಾಬಣ್ಣ : 'ಬೂದಿಗುಂಬಳ' ಪರಾ. **ಬೂದ** : ೩. 'ಬೂದವೇಱು' ಪರಾ. ೪. ಊದಾಬಣ್ಣವುಳ್ಳುದು : ತವ್ಮೊಳು ತಾವುಪೊಪ್ಪಿ ಆ ಕುದುರೆ ಬೂದನುಯೆಂದು ಕದ್ರುವೆಂದಳು (ಕಾಶೀಖ. ೨೫೩-೫). **ಬೂದು** : ೩. 'ಬೂದುಂಗುಂಬಳ' ಪರಾ.

**ಬೂದಿ ಮಾಡು** = ಸುಡು ; ದಹಿಸು : ಇದು ಕೈಲಾಸಂ ಭವಾನೀಧವನ ನೆಲೆ ಮನೋಜಾತನಂ ಬೂದಿ ಮಾಡಿ[ತ್ತಿ]ದಱಿೊಳ್ (ಶಂಕರಾ. ೭-೭೪) ; ಅವನ ಕೋಪಾಗ್ನಿಯು ಲೋಚಿಸಿ ಬೂದಿಮಾಡುವೆನು (ಶಕಿಶ. ೨೩-೭೪). **ಬೂದಿ ಮುಚ್ಚಿದ ಕೆಂಡ** = ಮೇಲೆ ಬೂದಿ ಮುಚ್ಚಿಕೊಂಡಿದ್ದು ಒಳಗೊಳಗೇ ಉರಿಯುತ್ತಿರುವ ಕೆಂಡ ; ಅಂತರಂಗದಲ್ಲಿ

ತಾಪವನ್ನು ಹೊಂದಿರುವಿಕೆ: ಆದೊಡಂ ಲೌಕಿಕರ ಮತಂ ತಾನಾಗಿ ಸಂತತಂ ಬೂದಿಮುಚ್ಚಿದ ಕೆಂಡದಂತಾಗಿ ಅಂಕಕಾಱಂ ತಾನದಾಗಿ (ಶಬರ. ೨೦೭-೯೪); ಬೂದಿ ಮುಚ್ಚಿದ ಕೆಂಡದಂತೆ ಮುದುರಿ ಕೂತವಳನ್ನು ರಂಗ ನಿಷ್ಠುರದೃಷ್ಟಿಯಿಂದ ನೋಡಿದ (ಕ್ರಕ್ಕ. ೫೦). **ಬೂದಿಹುಣ್ಣಿಮೆ**, **ಬೂದಿಹುಣ್ಣಿವೆ** = (ಶಿವನು ಮನ್ಮಥನನ್ನು ಸುಟ್ಟ ಸಂಕೇತವಾಗಿ) ಫಾಲ್ಗುಣಮಾಸದ ಹುಣ್ಣಿಮೆಯಂದು ಆಚರಿಸುವ ಹಬ್ಬ : P ಕಾಮನನ್ನು ಸುಟ್ಟನಂತರ ಆ ಬೂದಿಯನ್ನು ಮೈಗೆ ಹಚ್ಚಿಕೊಳ್ಳುವುದು, ಬಣ್ಣದ ನೀರಿನಿಂದ ಓಕುಳಿಯಾಡುವುದು, ಹಾಡುವುದು ಈ ಹುಣ್ಣಿಮೆಯ ಮುಖ್ಯ ಆಚರಣೆಗಳು ; "ಹೋಳಿಹುಣ್ಣಿಮೆ" (ಕ್ರಚ.); (?). [ < ಸಂ. ಭೂತಿ ]

**ಬೂದಿಕಟ್ಟೆ** (ನಾ). ಸುಡುಗಾಡು ; ಶ್ಮಶಾನ : ಇನ್ನೂ ನನಗೆ ಬೂದಿ ಕಟ್ಟೆಗೆ ಹೋಗುವ ಕಾಲ ಬರಲಿಲ್ಲ (ಜಾನಪ. ೨೬). [ ಬೂದಿ+ಕಟ್ಟೆ$_1$ ]

**ಬೂದಿಕುಂಬಳ** 'ಬೂದಿಗುಂಬಳ' ನೋ.

**ಬೂದಿಗ** (ನಾ). ೧. ವಿಭೂತಿಯನ್ನು ಧರಿಸಿದವನು : ಪಾರ್ವನ ಪುತ್ರನಂ ಕೆಡಿಪ ನಂಟುಗಳ್ಗಿನ ತೆಱದಿ ಬೂದಿಗರ ಪತ್ತಿ ಬಿಡದಾತಂ ಪರ ಬ್ರಹ್ಮವೇ (ಬಸವಪು. ೧೭-೩). ೨. ಶಿವ ; ಪರಮಾತ್ಮ : ಅಂದಿವಳಿ ದೊರ್ಡಾ ಬೂದಿಗ ನೊಸಲ ಕಣ್ಣಿಂದ ಕೀಳೆನ್ನ ಸುಡುವನೆ (ಶಾಂತಿ. ೦೭-೯೬). ೩. ಒಬ್ಬಾತನ ಹೆಸರು : ಪೊಲುಕೇಶಿಯ ಬೂದಿಗನ ಕಾಳೆಗದೊಳ್ ಪೊಲುಕೇಸಿಯೊಡತಿಹದು ಕೊಕಾಳಿನ ಕೊನ್ದು ಸತ್ತ (ಎಕ. III, ಮೈಸೂರು. ೪೪-೭ ; ಸು. ೭೭೦ ?). [ ಬೂದಿ + —ಗ$_2$ ]

**ಬೂದಿಗುಂಬಳ**, ಬೂದಗುಂಬಳ, ಬೂದಿಕುಂಬಳ, ಬೂದುಗುಂಬಳ (ನಾ). ತರಕಾರಿಯಾಗಿ ಬಳಸುವ, ಕುಂಬಳಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ ಮತ್ತು ಅದರ ದೊಡ್ಡ ಗಾತ್ರದ ಊದಾ ಬಣ್ಣದ ಕಾಯಿ : ಬೂದಿಗುಂಬಳದ ಕಾಯಂಗಡಿಯೊಳಿಟ್ಟಿರಲು ಮೇದಿನಿಪ ಕಂಡು ಬಸವಣ್ಣನಿಂದು ಭಕ್ತನೇ ಸಾಡದದಿ ನೋಡೆಂದು ಪೇಳೆ (ಗುರುಚ. ೬-೨೯); ಕಳ್ಳಂಗಡಲೆ . . . ರಾಸ್ನೆ, ಬೂದಿಗುಂಬಳದ ಬೇರು, ಇವಂ ಸಮಭಾಗ ಕಷಾಯು ಕಾಸಿ ಕೊಡಲು ಸನ್ನಿಪಾತಜ್ವರ ಗುಣಮಕ್ಕುಂ (ಸೂಪ. ೦೭೭) ; ಬೂದಿಗುಂಬಳ ಬಳ್ಳಿಗಾಧಾರವೆಂದು, ಮೊನೆಯಾದ ಮುಳ್ಗಳ ನೀಡಿ ಬೆಳೆವ ಪೊದೆಯಂತೆ (ಕಂಠ. ೪೩-೬). **ಬೂದಗುಂಬಳ** : ಹೊಂಗೆಬೀಜ, ಬೂದಗುಂಬಳ, ತಿಗಡೆ, ಮತ್ತಿ, ಕಫಿಪಡುವಲ, ಬಿದುರು, ಇವಂ ಸಮತೂಕ ಹಾಕಿ ಕಷಾಯ ಕಾಯಿಸಿಕೊಟ್ಟಲ್ಲಿ ಶೀತಜ್ವರ, ವಿಷಮ ಜ್ವರ, ದೋಷಜ್ವರವೂ ಸಹ ಮಾಣ್ಗುಂ (ಸೂಪ. ೬೮). **ಬೂದಿಕುಂಬಳ** : ಬೂದಿಕುಂಬಳ :—ಈ ಬೀಜವಂ ಹಾಲಲ್ಲಿ ಅರೆದು ಬೆಲ್ಲ ಸಹ ಕುಡಿಯಲು ಋತುವಾಗುವಳು (ಶಿಪ್ಪಿ. ೬). **ಬೂದುಗುಂಬಳ** : ನಮಗೆ ಹುರಿದ ಬೂದುಗುಂಬಳದ ಬಿತ್ತವನ್ನು ಕೊಟ್ಟವರೆ ; ನಾವು ನೋಡದೆ ಬಿತ್ತಿದ್ದು ತಪ್ಪು (ಜಾಬ್ಬಹ. ೦೭೩). [ ಬೂದಿ + ಕುಂಬಳ ]

**ಬೂದಿಬಡಕ** 'ಬೂದಿಬಡಿಕ' ನೋ.

**ಬೂದಿಬಡಿಕ**, ಬೂದಿಬಡಕ, ಬೂದಿಬಡುಕ (ನಾ). ೧. ವಿಭೂತಿಯನ್ನು ಬಳಿದುಕೊಂಡಿರುವವನು ; ಭಸ್ಮವನ್ನು ಲೇಪಿಸಿಕೊಂಡಿರುವವನು. ೨. ಶಿವ ; ಪರಮಾತ್ಮ : ಬೂದಿಬಡಿಕನ ಮೆಯ್ಗೆ ಬಾವನ್ನವಂ ತಿವಿದುರ್ (ಬಸವಪು. ೮೩೦-೦೩). **ಬೂದಿಬಡಕ** : ೨. ಉಪುರ್ವರೇ ಹರಿಯಜಾದ್ಯರ್ ನಮ್ಮ ದುಱನಾ ಮಸಣಗಾಹಿಗೆ ಬೂದಿ ಬಡಕನಾ ಮೊರೆಯನಾಲಿಸಿದನೇ (ಕಂಠ. ೪೭-೦೯) ; ಬಿನುಗುವೇಷದ ಕಾಳ್ದ ಬೂದಿ ಬಡಕನಿಗೆ ವನಿತೆಯಾಗುವರೆ ಬಾಲೆ (ಹುಸ. ೮೬). **ಬೂದಿ ಬಡುಕ** : ೧. ಬೂದಿಬಡು[ಪಾಠಾಂ. ಡ]ಕರ ಮಾತನೆ ನಂಬಿ ಸನ್ಮಾರ್ಗವೀಧಿಯ ಮುಶವ ನೀಸುಳಿದು (ಗೂಪ್ಪ. ೭-೯೯) ; ಮಸಣದೊಳ್ಭೂತಪ್ರೇತಪಿಶಾಚಿಗಳೊಡನೆ ವಿರೂಪಾಕ್ಷನೆನಿಸಿಕೊಂಡು ಕುಣಿಯುತ್ತಿರ್ಪ ಬೂದಿಬಡುಕ ಶಿವನಂ ಶ್ರೈವರ್ಬಗೆಗೆ ಬಂದಂತೆ ಬಣ್ಣಿಪರ್ (ಅನಾದಿ. ೨೬-೨೯ ವ). [ ಬೂದಿ + —ಬಡಿಕ$_2$ ]

**ಬೂದಿಬಡುಕ** 'ಬೂದಿಬಡಿಕ' ನೋ.

**ಬೂದಿಬಾಳೆ**, ಬೂದುಬಾಳೆ (ನಾ). ಒಂದು ಬಗೆಯ ಬಾಳೆಯ ಗಿಡ ಮತ್ತು ಅದರ ಹಣ್ಣು : ಬದನೆಯ ಕಾಯ ಬೂದಿಬಾ[ಪಾಠಾಂ. ದಾ]ಳೆಯ ಹೂವ ಉನ್ನತಿಕೆವಡೆದ ಕಗ್ಗುಂಬಳದ ಕಾಯನಡಹೇಳಿ (ಸೂಪಶಾ. ೫-೫೨); ಬೂದಿಬಾಳೇಹಣ್ಣು . . . ಅಗಸೇಮರದ ಒಳನಾರು ತಳಿಗೆ ಹಾಕಿ ಕಿವಿಚಲು, ಒಳ್ಳೆಯ ಎಳನೀರ ಹಾಗೆ ಬಿಡುವುದು (ಶಿಪ್ಪಿ. ೬೦); ಬಾಳೆಯ ಕುಲದಲ್ಲಿ ಗುಜರಾಥಿ, ರಸಬಾಳೆ . . . ಬೂದಿಬಾಳೆ, ಸೊನ್ನಿಬಾಳೆ, ಏಣಾಬಾಳೆ ಎಂದು ಈ ಪ್ರಕಾರ ಹಲವು ವಿಧವಾದ ಬಾಳೆಯ ಕುಲಗಳುಂಟು (ಕೃಷಿಶಾ. ೦೫೬). **ಬೂದುಬಾಳೆ** : ಹಾದೀಕಲ್ಲಿಗೆ ತೇದ ಗಂಧಾವನಿಕ್ಕಿ ಬೂದುಬಾಳೆಹಣ್ಣ ಸುಲಿದಿಕ್ಕಿ ವಳಗೀರೋ ಬಾಲೆ ಬಂದಕ್ಕೀ ತೊಳಸ್ಕ್ಯಳೋ (ಜಾಬ್ಬಹ. ೫೦). [ ಬೂದಿ + ಬಾಳೆ$_1$ (<ಬಾಟಿ$^3$) ]

**ಬೂದಿಬುಕ್ಕ** (ನಾ). ಮೈಗೆಲ್ಲಾ ಬೂದಿ ಹತ್ತಿರುವಂತಹುದು : ಬೂದಿ ಬುಕ್ಕಗಳಾಗಿದ್ದ ಅವನ ಮನೆಯ ನಾಯಿಗಳೂ ರಂಗ ಪುಟ್ಟರ ಮನೆಯ ನಾಯಿಗಳೂ . . . ಕೂಗತೊಡಗಿದ್ದುವು (ಜಾಲಜ. ೦೯). [ ಬೂದಿ +ಬುಕ್ಕ$_{10}$ ]

**ಬೂದಿಬುಧವಾರ** (ನಾ). "ಕ್ರೈಸ್ತರ ಉಪವಾಸ ವ್ರತದಿನಗಳ ಮೊದಲನೆಯ ದಿನ (ಆ ದಿನ ಪಶ್ಚಾತ್ತಾಪಿಗಳ ತಲೆಯ ಮೇಲೆ ಬೂದಿಯನ್ನೆರಚುವ ಪದ್ಧತಿ ರೋಮನ್‌ಕ್ಯಾತೊಲಿಕರಲ್ಲಿದೆ)" (Ash-Wednesday. ಇಂಕ). [ ಬೂದಿ + ಬುಧವಾರ ]

**ಬೂದಿಮೆಯ್ಯ** (ನಾ). ಮೈಗೆ ಭಸ್ಮವನ್ನು ಬಳಿದುಕೊಂಡಿರುವ ಶಿವ : "ಎಲುಗೈಯ ಬೂದಿಮೆಯ್ಯಂ . . . ಜತ್ತುಗದಲೆಯನೆನೆ ಸತ್ಯವೀಂದ್ರರ್ ಸಲೆ ಪೇಟ್ವರ್ ಸ್ಮರಹರಂಗೆ ನಾಮವಿದೆನುತಂ" (ಬಸವ. ೦೮). [ ಬೂದಿ + ಮೆಯ್$_2$ +—ಅ$_7$ ]

**ಬೂದಿವೂಸು** (ಕ್ರಿ). ವಿಭೂತಿಯನ್ನು ಧರಿಸು : ನಾಗಶರ್ಮಂ ಬೂದಿ ವೂಸಿದ ತಪೋಧನನಂತೆಯುಂ . . . ಅಳಿಗಣ್ಣರಂತೆ ಮಿಳುಮಿಳನೆ ನೋಡುತ್ತುಂ ಮಠದಿಂ ಪೊಱಮಟ್ಟು ನಿಂದ ಛಾಂದಸಬ್ರಾಹ್ಮಣನಂ ಕಂಡು (ಜಂಕಂ. ೦೮೭-೦೭). [ಬೂದಿ+ಪೂಸು$_1$]

**ಬೂದು** 'ಬೂದಿ' ನೋ.

**ಬೂದುಗುಂಬಳ** 'ಬೂದಿಗುಂಬಳ' ನೋ.

**ಬೂದುಬಾಳೆ** 'ಬೂದಿಬಾಳೆ' ನೋ.

**ಬೂಪಳ** (ನಾ). ಬೂಟಾಟಿಕೆ; ನಟನೆ : 'ಬೂಪಳಗಾತಿ' ಪರಾ. [?]

**ಬೂಪಳಗಾತಿ** (ನಾ). ಸೋಗಲಾಡಿ; ವಿಟಕಲಾಡಿ : ಬೂಪಳಗಾತಿ . . . ಏನೂ ಅರೀದ ಪಾಯಿ ಹಂಗೆ ಅಳ್ತಾ ಕುಂತವ್ಳೆ ಇಲ್ಲಿ (ಸರ್ವಮಂ. ೨೦೦). [ ಬೂಪಳ +—ಕಾತಿ$_6$ ]

**ಬೂಮ**, ಬುವ್ವ, ಬೂವ (ನಾ). ೧. ಮದುವೆಯ ದಿನದಂದು ವಧೂವರರೂ ಎರಡು ಕಡೆಯ ಬೀಗರೂ ಒಂದೇ ಪಂಕ್ತಿಯಲ್ಲಿ ಕುಳಿತು ಮಾಡುವ ಮೃಷ್ಟಾನ್ನದ ಊಟ : ಮದುವೆಯಂದು ವಧೂವರರು ಬೂವು ಮಾಡುವಾಗ, ಅಳಿಯ ತನ್ನ ಎಂಜಲುಕೈಯಿಂದಲೇ ಅತ್ತೆಯ ಕೈ ಹಿಡಿದು ಆಕೆಯ ಗಂಡನ ಹೆಸರು ಹೇಳಿಸುವ ಪದ್ಧತಿಯಿದೆ (ಕೂಶ). **ಬುವ್ವ** : ೧. (ಎಸಪ್ಪು. III, ೯). ೨. (ಮಕ್ಕಳ ಭಾಷೆಯಲ್ಲಿ) ಅನ್ನ : ಬುವ್ವ ಬೇಕೆಂದು ಮಗು ಕಾಡುತ್ತಿತ್ತು (ಕೂಶ). **ಬೂವ** : ೧. ಇರೆ ತಂದು ಮುಂದಿಟ್ಟಿರಂದು ಬೂವವನಲ್ಲಿ ಘರಸ ಕಂಡಲ್ಲದಿನ್ನೆನಗೂಟವಿಲ್ಲಲ್ಲಿ ಎನುತ ನಡೆತಂದಳಾಮುದದಿಂದ ಶಿವನೆಡೆಗೆ (ಶಿವಸಂ. ೨೬೯-೦೦೩); ತದನಂತರಂ

ಬೂವವನರ್ಚಿಸಿದಿಂ ಬಿಟಿಯುವುರೆಸನನರಲಸಜ್ಜೆವನೆಯೋಳಿರಿಸಿ (೮೭೦೫೩. ೦೩-೯ ೫); ಬೂವಕ್ಕವಸರವಾಗಲ್ ಪಾವನತರವಾದುದೊಂದು ಮಣಿಭಾಜನವುಮಂ ಪೀವರವುಮಂ ತಂದಿರಿಸಿ ವಧೂವರರೊಂದಾಗಿ ಕುಳ್ಳಿದರ್ ಮುದದಿಂದಂ (ಪಾರಕು. ೧೦-೧೬).

ಬುವ್ವದ ಪೂಜೆ = ವಧೂವರರಿಗೆ ಸಿದ್ಧಪಡಿಸುವ ಭೋಜನ ಸಾಮಗ್ರಿಗಳಿಗೆ ಮಾಡುವ ಪೂಜೆ ಮತ್ತು ಅನಂತರದ ಊಟದ ಸಮಾರಂಭ : (ಎಕಮ್ಮ. XVII. ೦೯). ಬುವ್ವದ ಪೆಟ್ಟಿಗೆ = ವಧೂವರರಿಗೆ ಕೊಡಬೇಕಾದ ಉಣಿಸು ಮೊಂತಾದುವುಗಳನ್ನೊಳಗೊಂಡಿರುವ ಪೆಟ್ಟಿಗೆ : ವಸ್ತ್ರಗಾರಪೆಟ್ಟಿಗೆ ಬುವ್ವದ ಪೆಟ್ಟಿಗೆ ಅಷ್ಟಪೆಟ್ಟಿಗೆ ಇವುಗಳ ಮೆರವಣಿಗೆ ಆಗುತ್ತದೆ. ಈ ಪೆಟ್ಟಿಗೆಯಲ್ಲಿ ಗಂಡಿನ ಕಡೆಯವರು ಹೆಣ್ಣಿಗೆ ಕೊಡಬೇಕಾದ ಎಲ್ಲಾ ಉಡುಗೆರೆಗಳನ್ನೂ ಇಟ್ಟಿರುತ್ತಾರೆ (ಹಳ್ಳಿಪಾ. ೬೦). [< ಸಂ. ಭೂಮನ್./ತಮಿ. ಪೂವ; ತೆಲು. ಬುವ್ವಮು./ಮರಾ. ಭೂಮ]

**ಬೂರ**, ಬೂರಗ, ಬೂರಗೆ, ಬೂರಲ, ಬೂರವ, ಬೂರುಗ, ಬೂರುಗೆ (ನಾ). ಒಂದು ಬಗೆಯ ಮರ ಮತ್ತು ಅದರ ಅರಳೆ; ದೂದಿ ; ಶಾಲ್ಮಲಿ : ಎನ್ನ ಭಕ್ತಿ ಎಲವದ ಕಾಯ ಫಲದಂತೆ ನೋಡಯ್ಯಾ ಹೊರಗೆ ಹೆಂಪು ಒಳಗೆ ಬೂರವಯ್ಯ (ವಕಸಂ. ೩೦೯-೯೦); ವೀರತಪಸ್ವಿನಿಂದನಿರುಳುಂ ಪಗಲುಂ ಹಿಮಪುಂಜಮುಂಗದೊಳ್ ಬೂರವನೊಟ್ಟಿದಂತಲೆಯೆ . . . ಬೆಳ್ಳಿವಾಸದೊಳ್ (ಅಸುಪು. ೯-೨೦); ಆರಯ್ಯೆ ಲಘು ವಪ್ಪುದಾ ಹುಲ್ಲು ಹುಲ್ಲಿಂದ ಬೂರವತಿಲಘುವಲಾ ಬೂರದಿಂ ಲಘುವಪ್ಪ ರಾರೆನಲು ಯಾಚಕನೆನಿಸ್ಕೆ (ವೀಕ್ಕೆ ಪು. ೯-೨೫-೨೫). 'ಕೆಂಬೂರ' ಪರಾ. **ಬೂರಗ :** ಬೂರಗದ ಮರದ ಹುರುಪನ್ನೂ ಅರಿಸಿನ ನೀಲಿಬೀಜ ತ್ರಿಫಲಂಗಳನ್ನೂ ಚೂರ್ಣವಂ ಮಾಡಿ ಮದ್ಯವೆರಸಿ ಹತ್ತಿಯ ಗಿಡಕ್ಕೆ ಲೇಪನಂಗೈದು (ಸಾಗಂ೦. ೯೩೬-೦೮); ಬೂರಗದ ಮರದ ಕೆಳಗೆ ವಿಶ್ರಮಿಸಿಕೊಳ್ಳುತ್ತ . . . ಈ ಸುಪುತ್ರನನ್ನು ಹಡೆದಳು (ಚಕ್ರೋ.ಚ. ೦) ; ನೆಳಲು ಬೂರಗಕಿಲ್ಲ ಕೂಳಿಗೆ ನೀತಿಯಿಲ್ಲ (ಗಾದೆ). **ಬೂರಗೆ :** 'ಬೂರಗೆಬಂಕೆ' ಪರಾ. **ಬೂರಲ :** ಪ್ರಯೋಜನವಲ್ಲದ ಬೂರಲದ ಮರದ ಹೂವ ನೋಡಿ ಗಿಡಗಳ ಸಮೂಹ ಮುಂದಕ್ಕೆಯ್ದದೆ (ವಕಶಾ. I. ೨೦೬-೩ ಅರ್ಥ) ; ನಮ್ಮ ಉಪಾಧ್ಯಾಯರು ನನ್ನನ್ನು ಬೂರಲದ ಹೂವಿಗೂ ಸೊಟ್ಟ ಸೋರೆ ಗುಂಬಳಕಾಯಿಗೂ ಹೋಲಿಸಿ ಉಪಹಾಸ ಮಾಡುತ್ತಿದ್ದರು (ಇಶ್ಕ ೯೮೬). **ಬೂರವ :** ಎಲವದ ಬೂರವನೊರಳೊಳ್ ತುಳಿದಡೆ ತದ್ವರ್ಣ ಬಿಡದ ತೆಜದಿಂ (ಪಪ್ಪತಾ. ೩-೦೦೬). **ಬೂರುಗ**$_1$: "ಪಿಚ್ಛಿಲಾ . . . ಶಾಲ್ಮಲೀ—ಶಿ ಬೂರುಗದ ಗಿಡ, ಚಕ್ಕೆಮುಳ್ಳೀ ಹತ್ತೀಗಿಡ, ಬೆಂಡುಹತ್ತೀಗಿಡ, ಎಲವದ ಮರ" (ಸಿದ್ಧಾಂಚಿ. ೦೨೨) ; ಜಗದೊಳಗೆ ಲಘು ಸಿಪ್ಪೆಯದಱಿಂ ಲಘು ತೃಣಂ ತೃಣದಿಂದೆ ಲಘು ನೆಱೆ ಲಘು ಶಿರೋಜ ಶಿರೋಜದಿಂ ಲಘು ಬೂರುಗ (ಶಂಕರಾ. ೬-೨೨) ; ಬೂರುಗದ ಚಕ್ಕೆ, ಬೂರುಗದ ಎಲೆ ಇವುಗಳನ್ನು ನೀರಿನಲ್ಲಿ ಬೇಯಿಸಿ . . . ವಿಲಕ್ಕಿ ಪ್ರತಿಪಾಕವಿಕ್ಕಿ ಆರಿಸಿ ಕೊಡಲು ಛಳಿಜ್ವರ ಬಿಡುವುದು (ಸಕವೈ. ೬೯) ; ಬೂರುಗದ ಮರ ಗಿಣಿ ಕಾದ ಹಾಗೆ (ಗಾದೆ). **ಬೂರುಗೆ :** 'ಬೂರುಗೆಬಂಕೆ' ಪರಾ.

**ಬೂರದ ಹಾಸು** = ದೂದಿಮರದ ಅರಳೆಯಿಂದ ಮಾಡಿದ ಹಾಸಿಗೆ : ಸುಡುವ ಬೆಂಕಿಯ ತುದಿಯ ಮೊನೆಯಲ್ಲಿ ಒಂದರಗಿಣ ಮಣಿಮಾಡದ ಮನೆಯಲ್ಲಿ ಬೂರದ ಹಾಸು ಹಾಕಿ ನೀರಿನ ಮಂಚದ ಮೇಲೆ ನಾರಿಯರೆಲ್ಲರು . . . ಮಲಗಿರಲಾಗಿ (ವೋಶಾ. ೨೬೦-೬೦೦). **ಬೂರಲ ಅರಳೆ, ಬೂರುಗದ ಅರಳೆ** = ದೂದಿಮರದ ಅರಳೆ,—ಹತ್ತಿ : ಬೂರಲ ಅರಳೆಯ ಮಿದುವಾದ ದಿಂಬಿಗೆ ಮಲಕನ್ನು ಆಸರೆಯಾಗಿರಿಸಿ ಮಲಗಿದ್ದ (ಶಂಕುಟು. ೮೦) ; ಅವರ ಮಹಾಕೃತಿಗಳು ಬೂರುಗದ ಅರಳೆಯಂತೆ ಹಗುರವಾಗಿಲ್ಲ, ವಜ್ರದಂತೆ ಘನವಾಗಿವೆ (ಕಾಪಗೀ. ೩೦). **ಬೂರುಗದ ಹತ್ತಿ** = ಬೂರಲ ಅರಳೆ : ಬೂರುಗದ ಹತ್ತಿಯ ಮೃದುವಾದ ಹಾಸುಗೆಯ ಮೇಲೆ ಮಲಗಿದ ಕೂಡಲೆ ನಿದ್ರೆ ಹತ್ತಿತು (ಕೂಂ).

[ದೇ.॥ ತಮಿ. ಪೂಲ್, ಪೂಲಾ, ಪೂಳೈ ; ಮಲ. ಪುಲ ; ತುಳು. ಬೂರಿಗ್, ಬೂರುಗ, ಬೋರ ; ತೆಲು. ಬೂರುಗ, ಬೂರುಗ, ಬೂರುಗು, ಬೂರುವು ; ಪರ್ಜಿ. ಬೂರು ]

**ಬೂರಗ** 'ಬೂರ' ನೋ.

**ಬೂರಗಬಂಕ** 'ಬೂರಗೆಬಂಕೆ' ನೋ.

**ಬೂರಗೆ** 'ಬೂರ' ನೋ.

**ಬೂರಗೆಬಂಕೆ**, ಬೂರಗಬಂಕ, ಬೂರುಗಬಂಕ, ಬೂರುಗೆಬಂಕೆ (ನಾ). ಎಲವದ ಮೇಣ ; ದೂದೀಮರದ ಹಗಿನು : "ಪಿಚ್ಛಾ, ಶಾಲ್ಮಲೀ, ವೇಷ್ಟಃ —ಶಿ ಬೂರಗೆಬಂಕೆ ಹೆಸರು ; ಎಲವದ ಮ್ಯಾಣ" (ಸಿದ್ಧಾಂಚಿ. ೦೨೩). **ಬೂರಗಬಂಕ :** "ಪಿಚ್ಛಾ—ಗಂಜಿ, ಬೂರಗಬಂಕ" (ಸಿದ್ಧಾಂಚಿ. ೯೯೩). **ಬೂರುಗಬಂಕ :** (೬). **ಬೂರುಗೆಬಂಕೆ :** (೬).

[ ಬೂರಗೆ (< ಬೂರ) + ಬಂಕೆ$_1$ ]

**ಬೂರಣ**, ಬುರಣೆ (ನಾ). ಯಾವುದಾದರೂ ವಸ್ತುವಿಗೆ ಹುಳುಹಿಡಿದು ಜೊಳ್ಳಾದುದು : ನಾಂದುಪವನದಗಟ್ಟಂ ಪುಟು ತಿಂದುವನದಯೊತ್ತಿಬೆಂದುವಂ ಬೂರಣವು(ದಿ)ಂ ಕಂದಿದುವಂ ಪೊಳೆಪೋದುವನೆಂದುಂ ಕಟ್ಟಲ್ವೇಡ ಪಾ(ಬಾ)ಣದಿಗಳಂ (ಅಕ್ಕಶಾ. ೬-೩೬). **ಬುರಣೆ :** ಬುರಣೆಯಾದ ಕಡಲೆಯ ತಿಂದರೆ ನಾಱುವ ನೀರ ಕುಡಿದರೆ ನಾಱುವ ಕವಳವ ಕೊಂಡರೆ (ಅಕ್ಕಮೀ. ೬೬-೬). 'ಬುರಬುರಿ$_2$' ಪರಾ. [ ? ]

**ಬೂರಲ** 'ಬೂರ' ನೋ.

**ಬೂರವ** 'ಬೂರ' ನೋ.

**ಬೂರವಟ್ಟಗೆ** (ನಾ). ಮೇಲೆ ಹೊದ್ದುಕೊಳ್ಳುವ ವಸ್ತ್ರ : "ಬೂರವಟ್ಟಗೆ ಬೃಹತಿಕಾಸಂಜ್ಞಕಂ" (ವಸ್ತುಕೋ. ೬೬-೨೦). [ < ಸಂ. ಬೃಹತಿಕಾ ? ]

**ಬೂರವಡ** (ನಾ). ದೂದಿಮರದ ಹತ್ತಿಯಿಂದ ಮಾಡಿದ ಬಟ್ಟೆ : ಅಂಬುಜನೇತ್ರಿಯರ್ಕಳ ಘನಸ್ತನದೊತ್ತು ನಿತಂಬದೊತ್ತು . . . ಬಿಂಕಂಬಡೆದಿರ್ದ ತೆಳ್ಗಿದಪಿನೊತ್ತು ವಿಟರ್ ನೆಱೆ ಕಾವುದಲ್ಲದೀ ಕಂಬಳಿದಟ್ಟಿ ಬೂರವಡವೆಂದಿವು ಕಾವುವೆ ಶೀತಕಾಲಮಂ (ಸೂಕ್ತಿಸು. ೧೦-೨೬೦).

[ ಬೂರ + ಪಟ್ಟ$_4$ ]

**ಬೂರಾ** (ನಾ). ನಯವಾದ ಒಂದು ಬಗೆಯ ಬಿಳಿಸಕ್ಕರೆ : ಈ ಸ್ಥಳವಲ್ಲಿ ಬೂರಾಸಕ್ಕರೆ ತಯಾರಿಸುತ್ತಿದ್ದರು (ಕ್ರವಾಇ. I. ೯೦೨) ; ಹನ್ನೆರಡುದಿನಗಳೂ ಬೂರಾಸಕ್ಕರೆ, ಹೂ, ಗಂಧವನ್ನು ಹೊತ್ತು, ಭಕ್ತಿಯಿಂದ ಬಾಬಯ್ಯನ ವಿಗ್ರಹದ ಮುಂದೆ ನಿಂತು ಪ್ರಾರ್ಥಿಸುತ್ತಿದ್ದಳು (ಮುಗಮಾಂ. ೧).

[ ← ಹಿಂ. ಬೂರಾ, ಭೂರಾ ]

**ಬೂರುಗ**$_1$ 'ಬೂರ' ನೋ.

**ಬೂರುಗ**$_2$ 'ಬುರುಗು$_2$' ನೋ.

**ಬೂರುಗಬಂಕ** 'ಬೂರಗೆಬಂಕೆ' ನೋ.

**ಬೂರುಗೆ** 'ಬೂರ' ನೋ.

**ಬೂರುಗೆಬಂಕೆ** 'ಬೂರಗೆಬಂಕೆ' ನೋ.

**ಬೂರುಡೆ** (ನಾ). ಒಂದು ಬಗೆಯ ಮರ : ಭೂತಾಳೆ ಬೂರುಡೆ ಮಿಟ್ಟಲಿಯ ದಿಂಡ ಪಾತಂಗ ಮುಗುಳಿಯ ಮರನು . . . ಅಲ್ಲಿಹವು (ಶಿಶಾಂ. ೦-೫೫). [ ? ]

**ಬೂರ್ಜವಾ** 'ಬೂರ್ಜ್ವಾ' ನೋ.

**ಬೂರ್ಜ್ವಾ**, ಬೂರ್ಜವಾ (ನಾ). ೧. ಮಧ್ಯಮ ವರ್ಗದ ಜನತೆ ಮತ್ತು ಆ ವರ್ಗಕ್ಕೆ ಸೇರಿದವನು : ನಮ್ಮ ದೇಶದ ಎಲ್ಲ ನಡವಳಿಕೆಗಳೂ

ಬೂರ್ಜ್ವಾ ಮಟ್ಟವನ್ನು ಮೀರಿಹೋಗಿಲ್ಲ (ಲೂ). **ಬೂರ್ಜ್ವಾ :** (ಗು). ೨. ಮಧ್ಯಮ ತರಗತಿಯ : ಈ ಬೂರ್ಜ್ವಾ ಗವರ್ನಮೆಂಟು ಹೋಗಲೇಬೇಕು (ಹಚ್ಚಂದ. ೦೩). [←ಇಂ. Bourgeois]

**ಬೂರ್ನೀಸು** 'ಬುರ್ನಿಸ್' ನೋ.

**ಬೂಲ, ಬೂಲು** (ನಾ). ೧. ಶರೀರ; ದೇಹ ; ಮೈ : ನಿನ್ನ ಈ ಕರೀ ಬೂಲಕ್ಕೆ ಯಾಕೋ ಈ ಬಿಳಿಬಟ್ಟೆ? (ಜುಲಜು. ೪೪). **ಬೂಲು :** ೨. (ಕರಾ) ನಡು ; ಸೊಂಟ. [ ?. / ತೆಲು. ಬೂಲ=ಮರದ ಕಾಂಡದ ಮಧ್ಯದ ನಿಸ್ಸಾರವಾದ ಭಾಗ]

**ಬೂಲು** 'ಬೂಲ' ನೋ.

**ಬೂವ** 'ಬೂವು' ನೋ.

**ಬೂವಗಾವುಂಡ** (ನಾ). ಒಬ್ಬಾತನ ಹೆಸರು : ಇನಿತು ಮಣ್ಣ ಬಿಡಿಸಿದ ಪ್ರಭುಗಳಂಕನಾಮ ಬೂವಗಾವುಂಡ ಪಡಿಲಜ್ಜ ಪಡುದೆಯ್ಯ (ಎಕ. V. ಅರಕ. ೨೪-೦೩; ಕ್ರಿ. ೯೦೦). [ಬೂವ$_1$+ಗಾವುಂಡ (<ಗಾಮುಂಡ)]

**ಬೂವಯ್ಯ** (ನಾ). ಒಬ್ಬಾತನ ಹೆಸರು : ಮುಚ್ಚಿಯುರ ಬೂವಯ್ಯನ ಮಗಂ ಬಿದಿಯಾಯ್ತು ತುಱುವನ್ನಿಕ್ಕಿಸಿ ಕಾದಿ ಸತ್ತು (ಎಕ. II. ೩೯೪-೮; ೮೮೩೪): ಪತ್ತುಗದ್ಯಾಣ ಪೊನ್ನುಂ . . . ಭತ್ತಮುಮಂ ಎಲ್ಲಾ ಕಾಲಕ್ಕಂ ಸಾಸನವಾಗೆ ಬಿಟ್ಟರ್ ಬೂವಯ್ಯನಕ್ಕರಂ (ಎಕ.I(R), ೯೭-೦೦; ೯ನೆಯ ಶತ). [ಬೂವ$_1$ + ಅಯ್ಯ$_{11}$]

**ಬೂವಿ, ಬುವಿ**(ನಾ). ಧರಣಿ ; ಭೂಮಿ : "ಎಳೆ, ಪೊಡವಿ, ತಿರೆ, ಧರೆ, ರನ್ನವಸುಬಿಳ್, ಬೂವಿ, ಬುವಿ—ಈ ೭ ಭೂಮಿ" (ಕಚಶಾ. ೩೩-೨೦೦); ಮಕಾರಕ್ಕೆ ವಕಾರಂ . . . ಭೂಮಿ—ಬೂವಿ (ಶಮತ. ೨೬೩ ವೃತ್ತಿ): ಬೂವಿಯೊಳುಱ ನೀನೆ ಸಕಲಮಾನ್ಯೆ ಸುಕನ್ನೇ (ಜಾಲಾಸ್ತ. ೨-೩-೪೦); ನಿನ್ನನ್ನರಂ ಬೂವಿ ಬಿದಿನ್ನುಮೇಕೆ ನುಂಗಳೊ ?(ಶಂಸಶ. ೨೪_೦). **ಬುವಿ:** "ಧರೆಗಂ ತಾಂ ಬೂವಿಯುಂ ಬುವಿಯುಮೆಂದೆನುತ್ತಂ" (ಕವಿಕಂ. ೪೭); ಯುವತಿಜನಸಂಸ್ಪರ್ಶತನುವೀ ಬುವಿಗೆ ಬಯಸಿತೆ ಹಾಯೆನುತ ಜನನಿವಹ ಸೆಱ ಮಱುಗಿತ್ತು ತದ್ರಾಜ್ಯಾವಸಾನದಲಿ (ಜೈಭಂತ. ೩-೩); ಬುವಿಯುಲ್ಲಿ ಕುಸುಮದೊಳ್ ಲಿಂಗದಾಕೃತಿ ತಾಳ್ದು ಶಿವೆ ಮೆಱೆವುತಿರ್ಪುದೀ ಕರವೀರ ಪುಷ್ಪವೃಕ್ಷವು (ಜ್ರಿಶಿಲಾ. ೩-೩೪); ಇಳಿಯೆ ನೀವು ಅಳಿಯೆ ನೋವು ಬುವಿಗೆ ದಿವಿಯು ತನ್ನಿ! (ಅವಿಕೀ. ೨೦-೬). [<ಸಂ. ಭೂಮಿ]

**ಬೂವು** (ನಾ). (?): ತಂಬುಲಿಗರೊಳ್ಪಣ ೧ ತಳ್ಳಿಗರೊಳ್ಪಣ ೧ ಜಗತಿಯ ಬೂವುಗಳೊಳ್ಪಣ ೧ ಅವರೊಕ್ಕಲೊಳ್ಮೀಸ ೧೦ (ಎಕ. VII. ಶಿಕಾ. ೯೪-೩೨; 1094). [ ? ]

**ಬೂಷಲು** 'ಬೂಜು$_1$' ನೋ.

**ಬೂಷ್ಟು** 'ಬೂಜು$_1$' ನೋ.

**ಬೂಸ, ಬೂಸಿ** (ನಾ) ೧. (ದನಕರುಗಳು ಕುಡಿಯುವ ಕಲಗಚ್ಚಿನೊಡನೆ ಮಿಶ್ರ ಮಾಡುವ) ಧಾನ್ಯದ ಹೊಟ್ಟು; ತವುಡು; ಉಮ್ಮಿ : ಹೇರಿ ಕೊಪ್ಪ ಜಿನಿಸು ವಿದಳ ಬೂಸ ಅಕ್ಕಿ ಭತ್ತ ರಾಗಿ ಉಪ್ಪು ಬೆಲ್ಲ ಎಣ್ಣೆ ತುಪ್ಪ ಮುನ್ತಾದ ಜಿನಿಸುಗಳನೂ ಕಾಲಕಾಲಂ ಪ್ರತಿಯಲ್ಲೂ ಹೇರಿ ತನ್ದು ಕೊಣ್ಣು (ಎಕ. VIII. ತೀರ್ಥಹ. ೭೨-೨೦ : 1642) ; ಇಲ್ಲಿಯು ಪೇಟೆಯಲ್ಲಿ ಬೂಸದ ವ್ಯಾಪಾರವಾದರೂ ತಕ್ಕಮಟ್ಟಿಗೆ ನಡೆಯುತ್ತದೆ (ಮುಂಬಯಿ. ೪-೦೪೩). ೨. ದಿನಸಿ ; ಧಾನ್ಯ ; ಕಿರಾಣಿ : (?). ೩. (ಅಲಂ) ಸತ್ತ್ವವಿಲ್ಲದುದು ; ಹುರುಳಿಲ್ಲದುದು ; ನಿಷ್ಪ್ರಯೋಜಕವಾದುದು : ಈ ಬರವಣಿಗೆ ತೀರಾ ಬೂಸ ಎನಿಸಿತು (ಲೂ). **ಬೂಸಿ:** ೪. ತಥ್ಯವಿಲ್ಲದುದು ; ಸತ್ಯದೂರವಾದುದು ; ಜಳ್ಳು : ನೀನು ಹೇಳಿದ್ದೆಲ್ಲಾ ಬರೀ ಬೂಸಿ (ಲೂ).
[←ಹಿಂ. ಭೂಸಾ, ಭೂಸೀ; ಮರಾ. ಭುಂಶೀ, ಭುಂಸಾ. ಭೂಂಸ್. ಭೂಸ್; ಬಂಗಾಲಿ. ಭೂಶಿ; ಗುಜ. ಭುಸೋ, ಭುಸ; ಪಂಜಾಬಿ. ಭುಸ್./ ಸಂ. ಬುಷ, ಬುಸ./ತೆಲು. ಬೂಸ]

**ಬೂಸಣ** (ನಾ). ಅಲಂಕಾರ; ಭೂಷಣ: ಈಗಳ್ ರಾಮನ ಬಲದೊಳ್ ಮಲೆನಾಡಿಗರ ಮಂಡೆಯೊಂದುಬಿದುದು ಇವರ್ಗಳ್ಪಲಕಿರ್ದಂತೆ ಕೈದುಗಳಂ ಬೂಸಣಂಗಳುಮಿಲ್ಲಂ (ಅದ್ಭುತ. ೪೭-೨೭). [< ಸಂ. ಭೂಷಣ]

**ಬೂಸರು** 'ಬೂಜು$_1$' ನೋ.

**ಬೂಸಲು** 'ಬೂಜು$_1$' ನೋ.

**ಬೂಸಿ** 'ಬೂಸ' ನೋ.

**ಬೃಂದ** (ನಾ). ೧. ಗುಂಪು ; ಸಮೂಹ : "ನಿಕುರುಂಬಂ ನಿವಹಂ ವ್ರಜಂ ಸಮುದಯಂ ಬೃಂದಂ ಚಯಂ . . . ಸಮೂಹಂ ವ್ರಾತಮೋಕಾರ್ಘಕಂ" (ಪಸ್ತಕೋ. ೦೦೨-೨೭) ; ಅದೆಂತುಚಿತವಾಕ್ಯವಾತ್ಮಗುಣಬೃಂದವಿಂತೀ ಜಗಕ್ಕದೆಂತು ನಯನೋತ್ಸವಂ ಸತತವಾಕ್ಯಮಂತಾಗೆ ಯತ್ನದಿಂ ನಿಜಶರೀರಮಂ ನಿಲಿಸವೇಬ್ಬುದಿ ದೇವಿಯರ್ (ಕಾದಂಬ. ೪೦೩). : ಅರಿ ಭೂಪಾಳತಿ(ಕಿ)ರೀಟತಟಘಟಿತಪದು ಸಪ್ತಾಬ್ಧಿಸನ್ಮುದ್ರಿತೋರ್ವರೆಗೊಪ್ಪಂ ಪತಿ ಸಂದ ವಂದಿ ಬುಧಬೃಂದಕ್ಕೊಂದುಪೊಂದಂಪದಿಂ ಪಿರಿದೀಪಂ (ಎಇ. XXVIII. ೩೪-೦೦; 1032). 'ಬೃಂದಗಾನ' ವರಾ. ೨. ರಾಶಿ ; ಒಟ್ಟಿಲು. [ಸಂ.]

**ಬೃಂದಗಾನ** (ನಾ). ಸಾಮೂಹಿಕವಾಗಿ ಹಾಡುವ ಹಾಡು: ವೃಂದಗಾನ: ಅವರ ಸಂಗೀತ ಬೃಂದಗಾನರೂಪದಲ್ಲೇ ಪ್ರಗತಿಹೊಂದಿದೆ (ಸಂಗೀತಂ. ೦೮೬). [ಸಂ.]

**ಬೃಂದಾರಕ** (ಗು). ೧. ದೇವಲೋಕಕ್ಕೆ ಸೇರಿದ; ಸ್ವರ್ಗದ : ಮರ್ತ್ಯದಿಂ ಸ್ವರ್ಗಕ್ಕೆ ಕೊಂಡೊಯ್ಯುವೊಂದು ಬೃಂದಾರಕವಿಮಾನವೆನೆ ಚಿತೆ ಹೂಡಿ ನಿಂದುದು ವನಧಿವೇಲೆಯಲಿ (ಚಿತ್ರಾಂಗ. ೬೯-೨೪೩೬). (ನಾ). ೨. ದೇವತೆ; ಅಮರ ; ಸುರ : "ಋಭುಗಳುಂ . . . ಅಮರ್ತ್ಯ ಬೃಂದಾರಕ ಸುಪರ್ವ ನಾಕಸದನರ್ . . . ವಿಬುಧರ್ಗೆ ನಾಮಂ" (ಮಂಗರಾ. ೩-೮); ಬೃಂದಾರಕ ರೋರೊರ್ವರ್ಗೊರ್ವದುಕನತ್ಕಳಶನಿಕರಮಂ ಕೆಯ್ಗೆಯ್ದೊಳ್ ತಂದೀವ ಕೊಳ್ವ ಸಂಭ್ರಮದಿಂದಂ ಪೋಲ್ತತ್ತು ಕಂದುಕಕ್ರೀಡಿತಮಂ (ಚಂದ್ರಪ್ರ. ೦೨-೦೨೪); ಸ್ವೈರಾಶ್ಮದಿಂದುದ್ಭವಿಸಿ ತೋರ್ಪವೋಲಾಶಾಮರೀಚಿ ತಾಂ, ಬೃಂದಾರಕಂ ವೈದ್ಯರ್ದೋರ್ದನೆಯರ್ವನ್ (ಶ್ರೀರಾಮಪ. ೨೬೬-೭೮). [ಸಂ.]

**ಬೃಂದಾರಕತರು** (ನಾ). ದೇವಲೋಕದ ಮರ ; ಕಲ್ಪವೃಕ್ಷ : ತೀರ ಮಹೀರುಹನಿಕರಂ ನೀರೊಳ್ಪ್ರತಿಬಿಂಬಿಸಿದೊಡೆ ಪೋಲ್ತುದು ತತ್ಕಾಸಾರಂ ಬೃಂದಾರಕತರುವಾರವನೊಳಕೊಂಡು ಪೆಂಪುವಡೆದಂಬುಧಿಯಂ (ರಾಜಶೇ. ೨-೬೫). [ಸಂ.]

**ಬೃಂದಾರಕಮುನಿ** (ನಾ). ದೇವತೆಗಳ ಮುನಿ; ದೇವರ್ಷಿ; ನಾರದ: ಬೃಂದಾರಕಮುನಿ ಭಗವತ್ಪದಸಾರಜ್ಞಾನಿಗಳೊಳಗ್ರಗಣ್ಯ ನೀನೇ (ಹೂದಶಂ. ೬-೦೦). [ಸಂ.]

**ಬೃಂದಾವನ** (ನಾ). ೧. ಗೋಕುಲದ ಬಳಿಯ ಒಂದು ಪವಿತ್ರಕ್ಷೇತ್ರ; P ವಿಷ್ಣುಭಕ್ತನಾದ ಕೇದಾರರಾಜನ ಮಗಳಾದ 'ಬೃ(ವೃಂ)ದೆ' ಎಂಬುವವಳು ಲಕ್ಷ್ಮಿಯ ಅಂಶದಿಂದ ಜನಿಸಿ, ದುರ್ವಾಸಮಹರ್ಷಿ ಯಿಂದ ವಿಷ್ಣುಮಂತ್ರವನ್ನು ಪಡೆದು, ವಿರಕ್ತಳಾಗಿ ಅರುವತ್ತು ಸಹಸ್ರವರ್ಷಗಳ ಕಾಲ ಅರಣ್ಯದಲ್ಲಿ ತಪಸ್ಸನ್ನಾಚರಿಸಿ, ಪ್ರಸನ್ನನಾದ ಶ್ರೀಕೃಷ್ಣನೇ ತನಗೆ ಪತಿಯಾಗಬೇಕೆಂದು ವರವನ್ನು ಕೇಳಿದಂದರಿಂದ ಅವಳ ಅಪೇಕ್ಷೆಯಂತೆ ಕೃಷ್ಣನು ಬಹಳ ಕಾಲ ಅರಣ್ಯದಲ್ಲಿ ಅವಳೊಂದಿಗೆ ಸುಖವಾಗಿದ್ದನೆಂದೂ, ಅವಳಿದ್ದ ವನಕ್ಕೆ 'ಬೃಂ(ವೃಂ)ದಾವನ' ಎಂದು ಹೆಸರಾಯಿತೆಂದೂ ಪುರಾಣಕಥೆಯಿದೆ : ಈ ವರನುಂ ನೀನುಂ ನಾನಾವಿಧ ನವಕುಸುಮಶಯ್ಯೆಯೊಳ್ ರಮಿಯಿಸು

ಬೃಂದಾವನದೊಳಿಂದ್ರವನಪರಿಭಾವಿಯೊಳಗಲದೆ ಸುಗಂಧಪಾಟಳಗಂಧಿ: (ಶಾಂತಿಪು. ೩-೦೩೦); ಯಾದವರಾಯ ಬೃಂದಾವನದೊಳು ವೇಣುನಾದವ ಮಾಡುತಿರೆ (ಕವಕ. ೨೦೦ ಪಲ್ಲವಿ): ಬೃಂದಾವನದೆದೆಯ ವಿಾಡಿದ ಬಂತು ಕೊಳಲ ಮೆಲ್ಲುಲಿ (ಪಂಪಯು. ೩೯-೦೭). ೨. ಪೂಜೆಗಾಗಿ ತುಳಸಿಯ ಗಿಡವನ್ನು ಕಟ್ಟೆಕಟ್ಟಿ ಬೆಳೆಸುವ ಸ್ಥಳ: ತುಳಸೀಕಟ್ಟೆ: ಮಾಡೋದು ಅನಾಚಾರ, ಮನೇ ಮುಂದೆ ಬೃಂದಾವನ (ಗಾದೆ). ೩. ವೈಷ್ಣವ ಸಂನ್ಯಾಸಿಗಳ ಸಮಾಧಿಸ್ಥಳ: ಭಾರತೀಯ ಯತಿಗಳ ಇತಿಹಾಸದಲ್ಲಿ ಸಶರೀರರಾಗಿ ಬೃಂದಾವನಪ್ರವೇಶ ಮಾಡಿದವರಲ್ಲಿ ವಾದಿರಾಜರು ಮೊದಲನೆಯವರು (ಕಥಾ. ೦೭೧). [ಸಂ.]

**ಬೃಂದಾವನಸ್ಥ** (ನಾ). ಸಮಾಧಿಯಲ್ಲಿ ನೆಲಸಿದವನು ; ಬೃಂದಾವನಸ್ಥರಾದ ಮೇಲೂ ಅಂದಿನಿಂದ ಇಂದಿನವರೆಗೆ . . . ಇಷ್ಟಾರ್ಥಗಳನ್ನು ಕೊಡುತ್ತಿರುವವರು ವಾದಿರಾಜರು (ಕಥಾ. ೦೭೧). [ಸಂ.]

**ಬೃಂದಾವನಿ** (ನಾ). [ಸಂಗೀತ] ಒಂದು ರಾಗದ ಹೆಸರು: ಬೃಂದಾವನಿಯು . . . ಸದಾಕಾಲವಲ್ಲಿಯೂ ಹಾಡುವಂತಹದು (ತತುಕ್ರ. ೦೩೬). [ಸಂ. ಬೃಂದಾವನೀ ?]

**ಬೃಂದಿಗ** (ನಾ). (ಬಂಧುಗಳ) ಗುಂಪಿನಲ್ಲಿರುವವನು; ಕುಟುಂಬಿ : ಉಡುರಾಜಂ . . . ನೆಲಸೆ ವಿಶ್ರಸ್ತಾನದೊಳ್ ವಿಶ್ರಮುಂ ಪಡೆಗುಂ ಬೃಂದಿಗನಕ್ಕುಂ (ಜಾತತಿ. ೦೬-೭). [ಬೃಂದ + —ಇಗ]

**ಬೃಂದಿಷ್ಠ** (ನಾ). ೧. ಅತಿಶಯವಾದ ಮನೋಹರತೆಯನ್ನುಳ್ಳದ್ದು : "ಬಹಳ ಮನೋಹರವಾದುದು ಬೃಂದಿಷ್ಠವು ಎಂದರ್ಥವಾಗುತ್ತದೆ" (ಸಿದ್ಧಾಂತಿ. ೩೩೩). ೨. ಅತ್ಯಂತ ಶ್ರೇಷ್ಠನಾದವನು : ಕಷ್ಟ ಭ್ರಷ್ಟ ಕನಿಷ್ಠ ದಕ್ಷವಿಳಸನ್ಮೂಯಿಷ್ಠಬೃಂದಿಷ್ಠ ನಾದಿಷ್ಠೋತ್ಕೃಷ್ಟಸಿಜೇಷ್ಟದಾಧ್ವರಹರಂ . . . ರಕ್ಷಿಕ್ಕೆ ವಿರೇಶ್ವರು (ಪಬಸ್ತ. ೧-೭). [ಸಂ.]

**ಬೃಂದೆ** (ನಾ). ೧. ತುಳಸಿಯ ಗಿಡ. ೨ = ಬೃಂದಾವನ ೧ : ಎರಡು ಎಲುಬಿನ ಗೂಡು, ಒಂದಾದೊಡನೆ ನೋಡು, ಹಿಂದಿನಾ ಸುಡುಗಾಡು ಬೃಂದೆ ಯಾಯ್ತು (ಜಾಂಕಜ. ೬೯-೧೭). ೩. ಕಾಲನೇಮಿಯೆಂಬ ರಾಕ್ಷಸನ ಮಗಳು ; ಜಲಂಧರ ರಾಕ್ಷಸನ ಹೆಂಡತಿ : ೪. ವಿಷ್ಣುಭಕ್ತನಾದ ಕೇದಾರರಾಜನ ಮಗಳು. ೫. ರಾಧೆಯ ಹದಿನಾರು ಹೆಸರುಗಳಲ್ಲಿ ಒಂದು. [ಸಂ. ಬೃಂದಾ]

**ಬೃಂಹಿತ** (ನಾ). ಆನೆಯ ಘೀಳು : "ಬೃಂಹಿತವುದು ವಾರಣ ಶಬ್ದಿತಂ" (ಶಬ್ದಕೋ. ೬೦-೩೭); ಆ ವಿಜಯಪ್ರಯಾಣಭೇರೀನಿನಾದಸಂಭೋಭಾರಗಂಭೀರಾಂಭೋಧರಸ್ತನಿತ ಬಹಳಸ್ನಿಗ್ಧಂಗಳಪ್ಪ ಮದಸ್ತಂಬೇರಮ ಬೃಂಹಿತಂಗಳಿಂದಂ . . . ಸಂದಣಿಸಿ (ಆದಿಪು. ೦೩-೯೨ ಪ) ; ಕೇರ ಮುಗಿಲ ಮೊಳಗಂ ಮಸುಳಿಸಿ ಪೊಣ್ಮಿತ್ತು ಬೃಂಹಿತಂ ಕಾನನದೊಳ್ (ಕಂರಾಕಥಾ. ೦೦-೦೫೭) : ಒಂದು ಕಡೆಯಲಿ ತಪಿಗಳಬ್ಬರ ಒಂದು ಕಡೆಯಲಿ ರಥದ ಚೀತ್ಕೃತಿ ಕರಿಯ ಬೃಂಹಿತವು (ಕೌರಿಂದಾ. ೨೫-೦೦). [ಸಂ.]

**ಬೃಂಹಿತಂಗೆಯ್** (ಕ್ರಿ). ಘೀಂಕಾರ ಮಾಡು: ಘೀಳಿಡು : ದಿಕ್ಕುಂಭಿಗಳ್ಗೆ ಬೃಂಹಿತಂಗೆಯ್ಯುಂಗಡಿಗಳನಗೆದು ಪೊಸಯ್ದು ಮಾಮಸಕಂ ಮಸಗಿ ಕೋಲಾಹಲಮನೆಸಗಿ . . . ಪೊಟ್ಟೆ ಸಿಳ್ಳ ಕಟ್ಟುಬ್ಬಟೆಯ ದುಷ್ಟಜಂಗಳಂ (ರಾಜಶೇ. ೭-೨೦ ಪ). [ಬೃಂಹಿತ + ಕೆಯ್₁]

**ಬೃಂಹಿತಧ್ವನಿ** (ನಾ). ಆನೆಯು ಘೀಳಿಡುವ ಶಬ್ದ : ಮದಗಜಬೃಂಹಿತಧ್ವನಿ ತುರಂಗಮ ಹೇಷಿತಘೋಷ[ಮಾ]ದಮೊರ್ಮೊದಲೆ ಪಯೋಧಿಮಂಥನಮಹಾರವಮಂ ಗೆಲೆ (ಶಂಕಥಾ. ೩-೩೯); ರಣವಾಜಿವಂಕಿಗಳ ಹೇಷಾರವಂಗಳಿಂ ಬೃಂಹಿತಧ್ವನಿಗಳಿಂ . . . ರಣಶಿಬಿರಮೆಸೆದತ್ತು (ಶಶ್ರಾಂಗ. ೦೬-೯೭೩). [ಸಂ.]

**ಬೃಂಹಿತೆ** (ನಾ). = ಬೃಂಹಿತ : ಕರಿಯ ಬೃಂಹಿತ ಕೇಳಿ ಮದದಿಕ್ಕರಿಗಳಜಿಬಿದವು (ಕೌರಿಂದಾ. ೪೦-೯). [ಸಂ. ಬೃಂಹಿತ]

**ಬೃಂಹಿಸು** (ಕ್ರಿ). = ಬೃಂಹಿತಂಗೆಯ್: ಸಿಂಹನಾದಕೆ ಸಡೆದತ್ತಿತ್ತ ಕದಲುತ ಬೃಂಹಿಸುವಾನೆಯೆಡ್ಡಿನೊಳು ಸಿಂಹಪರಾಕ್ರಮನಿದಿರೆಯ್ದು ಕಂಡನು (ಭರತ. ೨೨-೨೮). [ (ಸಂ. ಬೃಂಹಣ) + — ಇಸು₃ ]

**ಬೃಗ** 'ಭಿಕರ್ಷ್₂' ನೋ.

**ಬೃಸಿ** (ನಾ). ಯೋಗಿಗಳ ಆಸನ : "ವ್ರತಿಗಳ ಆಸನವು ಬ್ರಿಶಿ (ಬೃಸಿ ) ಯೆಂಬುದು" (ಹಲಾಯು. ೬೮-೨೫೭) : ಈ ವಿಧದಿ ರಘುವರನ ತಪನ ವಂಶೋತ್ತಮನ ಪ್ರೀತಿಯಿಂ ಸಂಗ್ರಹಿಸಿ ಬೃಸಿಯ ಮಧ್ಯದಿ ಮುಂಡಿಸಿ (ವಂಕಾರಾ. ೦-೦೩-೩೪). [ಸಂ. ಬೃಸೀ]

**ಬೃಹಂದಳೆ** (ನಾ). ಪಾಂಡವರ ಒಂದು ವರ್ಷ ಅಜ್ಞಾತವಾಸದ ಕಾಲದಲ್ಲಿ ವಿರಾಟರಾಜನ ಆಸ್ಥಾನದಲ್ಲಿ ನಾಟ್ಯಾಚಾರ್ಯನಾಗಿ ನಪುಂಸಕ ವೇಷದಲ್ಲಿದ್ದ ಅರ್ಜುನನ ಹೆಸರು : ರಂಭೆ . . . ಒಂವಬ್ದದೊಳೆ ಬೃಹಂದಳೆಯಾಗೆಂದು ಮುನಿದು ಶಾಪವನಿತ್ತಳ್ (ಶಂಕಥಾ. ೬-೨೯); ಕೇಳಿರೆ ಕಂಕಭಟ್ಟನೆ ಯುಧಿಷ್ಠಿರಂ . . . ಬಾಳೆಯರಂ ದಲಾಡಿಪ ಬೃಹಂದಳೆ ಫಲ್ಗುಣಂ (ಶುಕಶು. ೯-೭). [< ಸಂ. ಬೃಹನ್ನಲಾ]

**ಬೃಹಚ್ಚರಣ** (ನಾ). ದೊಡ್ಡದಾದ ಪಾದವುಳ್ಳವನು : ಬೃಹಚ್ಚರಣಂ ಸ್ಥೂಲಾಂಗಂ ಸೂಕರವದನಂ ಕರ್ಕಟಾದಿಮದ್ರೇಕ್ಕಾಣಂ (ಜಾತತಿ. ೦೯-೦೦). [ಸಂ.]

**ಬೃಹತಿ** (ನಾ). ೧. ಅಧಿಕವಾದುದು : ಹೆಚ್ಚಾದುದು. ೨. ದೊಡ್ಡದಾದ ವೀಣೆ. ೩. ನಾರದನ ವೀಣೆ. ೪. ಹೆಗ್ಗುಳ್ಳದ ಗಿಡ : "ಗುಳ್ಳಂ ಬೃಹತಿಯಕ್ಕುಂ" (ಶುಂಗರಾ. ೩೯-೨೯). ೫. ಶಲ್ಯ ; ಉತ್ತರೀಯ : "ಬೃಹತೀ, ೧ ಬಾವುಗುಳ್ಳದ ಗಿಡ. ಪಾದ ೧ಕ್ಕೆ ೯ ಅಕ್ಷರಗಳುಳ್ಳ ಛಂದಸ್ಸು, ಅಧಿಕವಾದ್ದು, ಉತ್ತರೀಯ" (ಸಿದ್ಧಾಂತಿ. ೩೯೩). ೬. ಮಾತಂ; ನುಡಿ. ೭. ವೇದ. ೮. [ಛಂದ] ಪ್ರತಿಯೊಂದು ಪಾದದಲ್ಲಿ ಒಂಬತ್ತು ಅಕ್ಷರಗಳಿರುವ ಒಂದು ಸಮವೃತ್ತ : ಇಪ್ಪತ್ತಾರು ಬಗೆಯ ಅಕ್ಷರಛಂದಸ್ಸಿನಲ್ಲಿ ಒಂಬತ್ತನೆಯದು: ಉಕ್ತೆ ಅತ್ಯುಕ್ತೆ ಮಧ್ಯ ಪ್ರತಿಷ್ಠೆ ಸುಪ್ರತಿಷ್ಠೆ ಗಾಯತ್ರಿ ಉಷ್ಣಿಕ್ ಅನುಷ್ಟುಪ್ ಬೃಹತಿ . . . ಉತ್ಕೃತಿ—ಎವಿಪ್ಪತ್ತಾರು ಛಂದಂಗಳಕ್ಕುಂ (ಛಂದೋಂಬು. ೦-೪೭) ೯. [ತತ್ತ್ವಶಾ] ಪರಮಾತ್ಮ ; ಪರಬ್ರಹ್ಮ : ಆದ್ಯಂತ ೭೨ ಸಾವಿರ ನಾಡಿಗತ ದೇವತೆಗಳಲ್ಲಿಯೂ ನಾಡಿಗಳಲ್ಲಿಯೂ ತಚ್ಛಬ್ದವಾಚ್ಯನಾಗಿದ್ದುದರಿಂದ ಬೃಹತೀ ಎಂಬ ನಾಮವು ಶ್ರೀಪರಮಾತ್ಮನಿಗೆ ಪ್ರಾಪ್ತವಾದುದು (ಹಸಾರ. ೪-೩ ತಾತ್ಪರ್ಯ). [ಸಂ. ಬೃಹತೀ]

**ಬೃಹತಿಕೆ** (ನಾ). ಹೊದೆಯುವ ವಸ್ತ್ರ; ಶಲ್ಯ; ಉತ್ತರೀಯ : "ವೈಕಕ್ಷ್ಯಂ. ಉತ್ತರಾಸಂಗಃ. ಬೃಹತಿಕಾ—ಈ ೩ ಉತ್ತರಾಸಂಗಂ" (ಹಲಾಯು. ೬೮-೨೫೭). [ಸಂ. ಬೃಹತಿಕಾ]

**ಬೃಹತೀಫಲ, ಬೃಹತೀಫಳ** (ನಾ). ಹೆಗ್ಗುಳ್ಳದ ಕಾಯಿ: ಕೂರ್ಮನೆರ್ದೆಯೊಡೆದು ಬೃಹತೀಫಲದನು ಪಚ್ಚಿದಂತಾದುದು (ಶಂಖ. ೪೬-೨೦). **ಬೃಹತೀಫಳ** : ಸ್ವಯಂಪತಿತ ಸಾರಪ್ಪಫಳಬೀಜಮಂ ಕೊಂಡು . . . ಬೃಹತೀತ(ಫ)ಳ ಕ್ಷಾರವಾರಿಯೊಳ್ ಪುದಿದುಕೊಂಡು ಧೂಪಿಸಿ ವಿಳಂಗದಿಂ ತಾಪ್ಪದಿಂ (ಕೋಕಕೋಶ. ೬-೭). [ಸಂ.]

**ಬೃಹತೀಫಳ** 'ಬೃಹತೀಫಲ' ನೋ.

**ಬೃಹತ್ಕಥೆ** (ನಾ). ೧. ದೊಡ್ಡ ಕಥೆ : ಈ ಮುಖ್ಯವಾದ ಆಖ್ಯಾನವೇ ಅನೇಕ ಉಪಾಖ್ಯಾನಗಳನ್ನೊಳಗೊಂಡು ಒಂದು ಬೃಹತ್ಕಥೆಯಾಗಿದೆ (ಭಾರತ. ೦೦೦). ೨. ಸಂಸ್ಕೃತದಲ್ಲಿ ಗುಣಾಢ್ಯನೆಂಬ ಕವಿಯಿಂದ ರಚಿತವಾದ ಒಂದು ಕೃತಿ : ಬೃಹತ್ಕಥೆಯ ಆಧಾರದ ಮೇಲೆ ಬರೆದುವು —ಸ್ವಪ್ನವಾಸವದತ್ತ, ಪ್ರತಿಜ್ಞಾಯೌಗಂಧರಾಯಣ, (ಬಹುಶಃ) ಅವಿಮಾರಕ, ಚಾರುದತ್ತ (ಕಂಚಾಲಿ. ೭೩). [ಸಂ. ಬೃಹತ್ಕಥಾ]

**ಬೃಹತ್ಕರಿಸು** (ಕ್ರಿ). ದೊಡ್ಡದಾಗಿ ಮಾಡು : ಮ್ಯಾಕ್‌ಡೂಗಲ್ಲನು ಹೇಳುವಂತೆ ಮಿದುಳನ್ನು ಬೃಹತ್ಕರಿಸಿ . . . ಆಧುನಿಕಯಂತ್ರಗಳ ಸಮೇತ ಇಟ್ಟು (ಮುಕ್ತಿ. ೨೩). [(ಸಂ. ಬೃಹತ್ಕರಣ) + —ಇಸು]

**ಬೃಹತ್ತು** (ಗು). ೧. ದೊಡ್ಡದಾದ; ಗಾತ್ರವಾದ : ಗುರುಗಾತ್ರ ಭವ್ಯದಿಂ ಪರ್ವತಸಹೋದರತೆಯನಾಂತುದು ವಿಯಚ್ಚುಂಬಿಭೈರವಬೃಹತ್ತ ರುಧರಂ (ಶ್ರೀರಾಮಾ. ೫೫೮-೬೬೮). (ನಾ). ೨. ದೊಡ್ಡದಾದುದು; ಹಿರಿದಾದುದು: "ಬೃಹತ್, ಉರು, ಗುರು, ವಿಸ್ತೀರ್ಣಂ . . . ಭದ್ರಂ, ವರಿಷ್ಠಂ — ಈ ೧೨ ಹಿರಿದು" (ಹಲಾಯು. ೦೦೬-೦೯); ಮಹದಾದಿಗಣಕ್ಕೆ ನಪುಂಸಕಲಿಂಗದಲ್ಲಿ ಪ್ರಥಮೈಕವಚನದ ಮೇಲೆ ದ್ವಿತ್ವದಿಂ ಉತ್ವಮಕ್ಕುಂ ಮಹತ್ತು, ಬೃಹತ್ತು, ಪ್ರಾಕ್ಕು, ಅವಾಕ್ಕು, ಸಮ್ಯಕ್ಕು ಎಂಬಂತೆ (ಶಬ್ದ. ೬೬ ಅಂಬ). ೩. ವಿಶಾಲವಾದುದು; ವಿಸ್ತಾರವಾದುದು. ೪. ಅಧಿಕವಾದುದು; ಹೆಚ್ಚಾದುದು. ೫. ಬಲವಾದುದು; ಶಕ್ತಿ ಯುತವಾದುದು. ೬. ಒತ್ತಾದುದು; ಸಾಂದ್ರವಾದುದು. ೭. ಪೂರ್ಣವಾಗಿ ಬೆಳೆದುದು. ೮. (ಶಬ್ದದಂತೆ) ಜೋರಾದುದು. [ಸಂ. ಬೃಹತ್]

**ಬೃಹತ್ಸಂಹಿತೆ** (ನಾ). ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಿಸಿದ ವರಾಹಮಿಹಿರನ ಒಂದು ಕೃತಿ : ಸ್ತ್ರೀಯರ ವಿಷಯದಲ್ಲಿ ಬಹುಉದಾರವಾದ ಭಾವನೆಯನ್ನು ವ್ಯಕ್ತಪಡಿಸಿರುವವರಲ್ಲಿ ಬೃಹತ್ಸಂಹಿತೆಯ ಕರ್ತೃ ವರಾಹಮಿಹಿರನು ಅಗ್ರೇಸರನು (ಕಣಾಕ. ೮೨೭). [ಸಂ. ಬೃಹತ್ಸಂಹಿತಾ]

**ಬೃಹದಾಕಾರ** (ನಾ). ದೊಡ್ಡ ಆಕಾರ; ಹಿರಿಯ ಗಾತ್ರ : ಬೃಹದಾಕಾರ ಉಳ್ಳವೂ . . . ಹಾಸಿನ ಮೇಲೆ ಹೊರಳಾಡುವವೂ ಕಂಪಿಸುವುವೂ ಆದ ಪಗಡೆದಾಳಗಳು ನನ್ನನ್ನು ಸಂತೋಷಗೊಳಿಸುತ್ತವೆ (ಮುಕ್ತಾರ. ೪೦೩); ಹಲವಾರು ಪ್ರಶ್ನೆಗಳ ಸಾಲೆ ಒಮ್ಮೆಲೆ ಕಾಣಿಸಿಕೊಂಡು ಈ ಸಮಸ್ಯೆಯ ಬೃಹದಾಕಾರವನ್ನೂ ಜಟಿಲತೆಯನ್ನೂ ತೋರಿಸುತ್ತದೆ (ದ್ರಾಶಿಶಿ. ೨೦). [ಸಂ.]

**ಬೃಹದಾರಣ್ಯಕ** (ನಾ). ದಶೋಪನಿಷತ್ತುಗಳಲ್ಲಿ ಒಂದು; ಶತಪಥ ಬ್ರಾಹ್ಮಣದ ಕಡೆಯ ಆರು ಪ್ರಪಾಠಕಗಳೆಂಬ ಭಾಗಗಳನ್ನೊಳಗೊಂಡ, ಯಜುರ್ವೇದದ ಕಾಣ್ವಶಾಖೆಗೆ ಸಂಬಂಧಿಸಿದ ಉಪನಿಷತ್ತು : ಬೃಹದಾರಣ್ಯಕದಲ್ಲಿ ಯಾಜ್ಞವಲ್ಕ್ಯನಿಗೂ ಗಾರ್ಗಿಗೂ ನಡೆದ ಚರ್ಚೆ ಪ್ರಸಿದ್ಧವಾದುದು (ಕಣಾಕ. ೨೫೯); ಯಜುರ್ವೇದದ ಕಾಣ್ವ ಶಾಖೆಯ ಶತಪಥಬ್ರಾಹ್ಮಣದ ಕಡೆಯ ಕೆಲವು ಅಧ್ಯಾಯಗಳೇ ಬೃಹದಾರಣ್ಯಕ (ಭಾರತ. ೩೮). 'ತೈತ್ತಿರೀಯ' ಪರಾ. [ಸಂ.]

**ಬೃಹದ್ಗ್ರಂಥ** (ನಾ). ದೊಡ್ಡ ಕೃತಿ,—ಹೊತ್ತಗೆ : ಎರಡು ಮೂರು ವರುಷಗಳ ಕಳಗೆ ಹೊರಬಂದ ಭದ್ರಿರಾಜು ಕೃಷ್ಣಮೂರ್ತಿಯವರು ಬರೆದ ತೆಲುಗುಭಾಷೆಯ ಮೂಲ ಧಾತುಗಳು ಎಂಬ ಬೃಹದ್ಗ್ರಂಥ ಅಮೂಲ್ಯ ಕಾಣಿಕೆ (ದ್ರಾವಿಶಿ. ೨). [ಸಂ.]

**ಬೃಹದ್ಭಾಗ್ಯ** (ನಾ). ಅತಿಶಯವಾದ ಐಶ್ವರ್ಯ : ಧರ್ಮಂ ವಿಶ್ರುತ ಸಶ್ರುತಾತಿಶಯಮಂ ಧರ್ಮಂ ಬೃಹದ್ಭಾಗ್ಯಮಂ . . . ಧರ್ಮಂ ಧಾರ್ಮಿಕ ನಪ್ಪವಂಗೆ ಕುಡುಗುಂ ನಿರ್ವಾಣಕಲ್ಯಾಣಮಂ (ಸುಕುಮಾ. ೬-೯೨). [ಸಂ.]

**ಬೃಹದ್ಭಾನು** (ನಾ). ೧. ಬೆಂಕಿ; ಅಗ್ನಿ : "ಸಪ್ತಾರ್ಚಿಃ, ದಮುನಃ . . . ಬೃಹದ್ಭಾನುಃ, ಆಶ್ರಯಾಶಃ . . . ಹುತಾಶನಃ—ಈ ೪೦ ಕಿಚ್ಚಿನ ಪೆಸರ್" (ಹಲಾಯು. ೦೨-೬೨); ಮಹಾತೇಜನಾಗಿರ್ಪುದರಿಂದ ಬೃಹದ್ಭಾನುವೆಂದು ಹೆಸರು (ವಾರಿಣಂ. ೪೩). ೨. ಸೂರ್ಯ. ೩. ವಿಷ್ಣುವಿನ ಹೆಸರು. ೪. ಹರಳಂಗಿಡ. [ಸಂ.]

**ಬೃಹದ್ರಥ** (ನಾ). ೧. ದೊಡ್ಡ ರಥ : ರಥದಿಂದಂ ಮುಂಚಿ ಮನೋರಥಂ ಮನೋರಥದಿನೆತ್ತಲದು ಮುಂಚಿ ಬೃಹದ್ರಥದಿಂತು ಭರತರಾಜನ ರಥದ ಮನೋರಥದ ಬೇಗಮೊದವಿದುದಾಗಳ್ (ಆದಿಪು. ೦೨-೬೦). ೨. ಇಂದ್ರ. ೩. ಮಹಾಭಾರತದಲ್ಲಿ ಬರುವ ಒಬ್ಬ ರಾಜನ ಹೆಸರು; ಜರಾಸಂಧನ ತಂದೆ. ೪. ಶಕ್ತಿಶಾಲಿಯಾದ ನಾಯಕ. ೫. ಸಾಮವೇದದ ಒಂದು ಭಾಗ. [ಸಂ.]

**ಬೃಹನ್ನಡೆ** (ನಾ). = ಬೃಹಂದಳೆ : ನಾನು ಕಿವಿಗಳಲ್ಲಿ ಕುಂಡಲಗಳನ್ನಿಟ್ಟು ಜಡೆ ಹೆಣೆದುಕೊಂಡು ಬೃಹನ್ನಡೆಯೆಂಬ ಹೆಸರಿನಿಂದ ರಾಜನ ಅಂತಃಪುರದ ಜನರಿಗೆ ಕಥೆಹೇಳುತ್ತ ಗೀತನೃತ್ಯಗಳನ್ನು ಹೇಳಿಕೊಡುತ್ತ ಕಾಲ ಕಳೆಯುತ್ತೇನೆ (ವಿರಾಟ. ೦೬೩). [ಸಂ. ಬೃಹನ್ನಡ]

**ಬೃಹನ್ನಳೆ** (ನಾ). = ಬೃಹಂದಳೆ : ಪಿಂದುಗಳೆಯುದೆ ಕರೆಸು ನಮ್ಮ ಬೃಹನ್ನಳೆಯನು (ಕುಮಾವ್ಯಾ. ೩-೬೦). [ಸಂ. ಬೃಹನ್ನಲ, ಬೃಹನ್ನಲಾ]

**ಬೃಹವಾರ** (ನಾ). ಬೃಹಸ್ಪತಿವಾರ ; ಗುರುವಾರ : [ಶ್ರೀ][ಮ] ಚ್ಚಾಳುಕ್ಯವಿಕ್ರಮ[ವ]ರ್ಷದ ೨೬ನೆಯ ವಿಷ[ಸಂ]ವತ್ಸರದ ಕಾರ್ತ್ತಿಕ ಸು ೮ ಬೃಹವಾರದಂದು (ಶಾಂದೇಚ್. ೦೨-೬ ; 1101). [<ಸಂ. ಬೃಹಸ್ಪತಿವಾರ]

**ಬೃಹಸ್ಪತಿ** (ನಾ). ೧. ಅಂಗಿರಸನ ಮಗ; ದೇವತೆಗಳ ಗುರು; ವಾಚಸ್ಪತಿ: "ವಾಚಸ್ಪತಿಃ, ಆಂಗಿರಸಃ, ಬೃಹಸ್ಪತಿಃ, ಗುರುಃ…ಚಿತ್ರಶಿಖಂಡಿಪ್ರಸೂತಿಃ (ಕಥ್ಯತೇ)—ಈ ೮ ಬೃಹಸ್ಪತಿಯ ಪೆಸರ್" (ಹಲಾಯು. ೯-೪೭); ಭಾರತೀಯಪುರಾಣಗಳಲ್ಲಿ ಬೃಹಸ್ಪತಿಯೇ ಸಕಲದೇವತೆಗಳಿಗೂ ಪುರೋಹಿತನೆಂದು ಹೇಳಿದೆ (ಜ್ಯೋತಿರ್. ೦೨೯). ೨. ಮೂವತ್ತಾರು ಜನ ಸ್ಮೃತಿಕಾರರಲ್ಲಿ ಒಬ್ಬಾತನ ಹೆಸರು ; ⁋ "ಸ್ಮೃತಿಕಾರರು—೩೬ : ಮನು, ವಿಷ್ಣು, ಯಮ, ದಕ್ಷ, ಅಂಗಿರಸ್ಸು, ಅತ್ರಿ, ಬೃಹಸ್ಪತಿ, ಆಪಸ್ತಂಬ, ಉಶನಸ್ಸು, ಕಾತ್ಯಾಯನ, ಪರಾಶರ, ವಸಿಷ್ಠ, ವ್ಯಾಸ, ಸಂವರ್ತ, ಹಾರೀತ, ಗೋತಮ, ಪ್ರಚೇತ, ಶಂಕ, ಲಿಖಿತ, ಯಾಜ್ಞವಲ್ಕ್ಯ, ಕಾಶ್ಯಪ, ಶಾತಾತಪ, ಲೋಮಶ, ಜಮದಗ್ನಿ, ಪ್ರಜಾಪತಿ, ವಿಶ್ವಾಮಿತ್ರ, ಪೈಠೀನಸೀ, ಬೌಧಾಯನ, ಪಿತಾಮಹ, ಛಾಗಲೇಯ, ಜಾವಾಲೀ, ಮರೀಚಿ, ಚ್ಯವನ, ಭೃಗು, ಋಷ್ಯಶೃಂಗ, ನಾರದ" (ಶ್ರೀತತ್ತ್ವ. ೫೦೩) : ಬೃಹಸ್ಪತಿಯ ಅಭಿಪ್ರಾಯಗಳೂ ಯಾಜ್ಞವಲ್ಕ್ಯನ ಅಭಿಪ್ರಾಯಗಳನ್ನೇ ಬಹುಮಟ್ಟಿಗೆ ಹೋಲುತ್ತವೆ (ಕಣಾಕ. ೦೯). ೩. [ಜ್ಯೋತಿ] ಸೌರವ್ಯೂಹದಲ್ಲಿಯ ಅತಿದೊಡ್ಡ ಗ್ರಹ ; ಗುರುಗ್ರಹ : ಬೃಹಸ್ಪತಿಯು ಅತಿವೇಗದೊಡನೆ ತನ್ನ ಸುತ್ತಲೂ ತಾನೇ ಹತ್ತು ಗಂಟೆಗಳಿಗೆ ಕಡಿಮೆಯಾದ ಕಾಲದಲ್ಲಿ ತಿರುಗುತ್ತದೆ (ಜ್ಯೋತಿರ್. ೦೪೦). ೪. [ಸಂಗೀತ] ಒಂದು ರಾಗದ ಹೆಸರು : ಕೌಶಿಕೆ, ವೇಳಾವಳಿ . . . ಬೃಹಸ್ಪತಿ . . . ಶಯಸೋದರಿಯೆಂಬ ಮೂವತ್ತುನಾಲ್ಕು ಭಾಷಾಂಗದಿಂದಾದ ರಾಗಂಗಳು (ಚಿವೇಳ. ೦೮೮). [ಸಂ.]

**ಬೃಹಸ್ಪತಿಮತ** (ನಾ). ಬೃಹಸ್ಪತಿಯ ಮತ ; ಚಾರ್ವಾಕ ಮತ ; ನಿರೀಶ್ವರವಾದ: ಬೃಹಸ್ಪತಿಮತಾನುಸಾರಿಯಪ್ಪ ಮಹಾಮತಿ ನುಡಿದ (ಆದಿಪು. ೨-೯ ವ); ಆ ನೆವದಿಂದಂ ಶ್ರಾವಕಮಾನಿಗಳನನೇಕವಿಧದಿನುಪಜೀವಿಪರಜ್ಞಾನಿಗಳ ಬುದ್ಧಿಪೌರುಷಹೀನಮಜೀವಿಕೃತಂ ಬೃಹಸ್ಪತಿಮತದೊಳ್ (ಶಾಂತಿಪು. ೬-೦೪೦). 'ಲೋಕಾಯತಿಕ ಮತ' ಪರಾ. [ಸಂ.]

**ಬೃಹಸ್ಪತಿವಾರ** (ನಾ). ಬೃಹಸ್ಪತಿಯು ಅಧಿಪತಿಯಾಗಿರುವ, ವಾರದ ಐದನೆಯ ದಿನ ; ಗುರುವಾರ : ಪ್ರತಿ ಬೃಹಸ್ಪತಿವಾರ ಹುಣಸೂರಿನಲ್ಲಿ ವಿಶೇಷದಿನ (ಸರ್ವಮಂ. ೪೯). [ಸಂ.]

**ಬೆ** (ನಾ). [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಬೆ, ಬೆನ್ನಿ, ಯಮ, ನಯನ . . . ದಂಪತಿ ಇಂತಿನಿತುಂ ೨ಕ್ಕೆ ಪೆಸರು" (ಕ್ಷೇತ್ರಗ. ೦೦-೧೦). [ ? ]

**ಬೆಂ$_1$** 'ಬೆನ್' ನೋ.

**ಬೆಂ$_2$** 'ಬಿಸು$_2$' ನೋ.

**ಬೆಂಕಟ್ಟು** (ನಾ). ಕಟ್ಟಡದ ಸೂರಿನ ಮೇಲುತುದಿ: ಎರಡೂ ಕಡೆಯ ಹೆಂಚುಗಳ ಹಂದರಗಳು (ಪಾರುಗಳು) ಕೂಡುವ ಭಾಗ : ಹಂಚು ಹೊಚ್ಚಿ ಬೆಂಕಟ್ಟಿನ ಮೇಲೆ ತಲೆಹಂಚು ಹಾಕುತ್ತಾರೆ (ಮುಂಬಯು. ೯-೦೧೪).
[ಬೆಂ$_1$ (<ಬೆನ್) + ಕಟ್ಟು$_2$]

**ಬೆಂಕಿ** 'ಬೆಂಕೆ' ನೋ.

**ಬೆಂಕಿಕಡ್ಡಿ** (ನಾ). ಗೀರಿದರೆ ಉರಿ ಬರುವಂತೆ, ತುದಿಯಲ್ಲಿ ರಂಜಕಾಂಶವನ್ನು ಮೆತ್ತಿರುವ ಕಡ್ಡಿ: ದೀಪದ ಕಡ್ಡಿ : ಬೆಂಕಿಕಡ್ಡಿ : ಒರಟು ಮೈಮೇಲೆ ತುಸು ಒತ್ತಡ ಹೇರಿ ಉಜ್ಜಿದಾಗ ಸುಲಭವಾಗಿ ಬೆಂಕಿ ಹೊತ್ತುವ ರಾಸಾಯನಿಕ ಲೇಪಿತ ತುದಿಯುಳ್ಳ ಮರದ ಕಡ್ಡಿ (ಕವಿಕೋ. XII, ೦೯೯).
[ಬೆಂಕಿ (<ಬೆಂಕೆ) + ಕಡ್ಡಿ]

**ಬೆಂಕಿಗಣ್ಣು** 'ಬೆಂಕೆಗಣ್' ನೋ.

**ಬೆಂಕಿಗೆಳೆಯ** (ನಾ). ಬೆಂಕಿಯ ಸ್ನೇಹಿತ; ಅಗ್ನಿಸಖ : ವಾಯು: ಬೆಂಕಿಗೆಳೆಯನ ಸುತಂ ತನ್ನಿಷ್ಟಲಿಂಗದಿರವಂ ಕಾಣದಂಗದೊಳು ಸಾವೊಡಯಷ್ಟುಗಿಸೆ (ರಾಶಿಕ. ೬-೬೩). [ಬೆಂಕಿ (<ಬೆಂಕೆ) +ಗೆಳೆಯ (<ಕೆಳೆಯ)]

**ಬೆಂಕಿಪಟ್ಟಣ** 'ಬೆಂಕಿಪೊಟ್ಟಣ' ನೋ.

**ಬೆಂಕಿಪೆಟ್ಟಿಗೆ** (ನಾ). ಬೆಂಕಿಕಡ್ಡಿಗಳಿರುವ ಪೊಟ್ಟಣ ; ಬೆಂಕಿಪೊಟ್ಟಣ; ಕಡ್ಡಿಪೆಟ್ಟಿಗೆ : ಅವರು ದೀಪಹಚ್ಚಲು ಬೆಂಕಿಪೆಟ್ಟಿಗೆ ತಂದರು (ರೂಢಿ).
[ಬೆಂಕಿ (<ಬೆಂಕೆ) + ಪೆಟ್ಟಿಗೆ]

**ಬೆಂಕಿಪೊಟ್ಟಣ, ಬೆಂಕಿಪಟ್ಟಣ** (ನಾ). = ಬೆಂಕಿಪೆಟ್ಟಿಗೆ : ಸಮಯಕ್ಕೆ ಅಂತ ಮೋಂಬತ್ತಿ, ಬೆಂಕಿಪೊಟ್ಟಣ ಎರಡನ್ನೂ ಇರಿಸಿರುವರು (ಕಂಗೂಲಿ. ೦೪೦); ಬೆಂಕಿಪೊಟ್ಟಣದ ಕಾರ್ಖಾನೆಯೊಂದು ವಿಶೇಷಲಾಭ ಹೊಂದುತ್ತಿದ್ದರೂ ಕೆಲಸಗಾತಿಯರಿಗೆ ಬಹಳ ಕಡಿಮೆ ಸಂಬಳ ಕೊಡುತ್ತಿತ್ತು (ಸ್ತ್ರೀವಿರ. ೯೬). **ಬೆಂಕಿಪಟ್ಟಣ** : ಕಿಸೆಯಲ್ಲಿ ಬೀಡಿಕಟ್ಟು ಬೆಂಕಿಪಟ್ಟಣ ಬೇರೆ ಇರಬಹುದೊ ಏನೋ! (ಶ್ರೀಕೃ. ೩೫). [ಬೆಂಕಿ (<ಬೆಂಕೆ)+ಪೊಟ್ಟಣ (<ಪೊಟ್ಟಳ)]

**ಬೆಂಕೆ, ಬೆಂಕಿ** (ನಾ). ೧. ಉರಿ ; ಕಿಚ್ಚು; ಅಗ್ನಿ : "ನಿದಾಘಃ, ಘರ್ಮಃ– ಈ ೨ ಬೆಂಕಿಯ ಪೆಸರ್" (ಹಲಾಯು. ೬-೪೦); ಭಟಾರರ್ . . . ಜ್ಯೇಷ್ಠಮಾಸದ ಬಿಸಿಲುಂ ರ್ಚುಳಿಯುಂ ಬೆಂಕೆಯುಂ ಕಿಚ್ಚುಮಂ ಸೈರಿಸಿ . . . ಮೋಕ್ಷಕ್ಕೆ ಪೋದರ್ (ವಡ್ಡಾರಾ. ೦೦೯-೦೬); ಕವಿದಳುರ್ವ ಬೆಂಕೆಯೊ[ಳಾ]ಡಿಸಿದರ್ ಮೊಗಮನಮರಸುಂದರಿಯರ್ಕಳ್ (ಕಂಕಶಾ. ೦೨-೦೯೬); ಸುರಸಿಂಧುವಂ ತಳೆದ ಶಂಭು ನಿಜಾಕ್ಷಿಯ ಬೆಂಕೆ ಸೋಂಕದಿರ್ದೊಡೆ ... ಎಂತು ನಿತ್ತರಿಪರೆಂಬನಿತಾದುದು ಮಾಘಡಂಬರಂ (ಕೃಶ್ರ್ಭ. ೬-೫೨). ೨. ಉಷ್ಣ; ತಾಪ : ತಚ್ಛಶಿರಾಂತಶಿಲಾತಳಂ ಸಿಡಿಲ್ವಂದೊಡೆದತ್ತಿದೇಂ ಬಿಸಿಕೋಟೆಯದ ಬೆಂಕೆ ಮೃಗಾಂಕವಕ್ತ್ರೆಯಾ (ಕಂಕಥಾ. ೫-೬); ಮುಖೇಂದು ಬಿಗುರ್ತಿರೆ ಸುಯ್ಯ ಬೆಂಕೆಯುಂ ನಿಡುಪಮಳುಂಬಮಪ್ಪಿನೆಗಂ ..., ಪಲವಾಡಿದರಂದಜಿತಾಂಗನಾಜನಂ (ಅಜಿಪು. ೬-೦೨೦); ಮುಯ್ಯ ಬಿಸುಪಿಂ ಸುಯ್ಯೆಲರ ಬೆಂಕೆಯಿಂ ಪನಂ ಕೊರಗುತ್ತಮಿರೆ (ಸಂಬರ. ೦೩-೦೦೯). **ಬೆಂಕಿ** : ೧. ಗಜದ ದಂತದಂತೆ ಬೆಂಕಿಯುಷ್ಣದಂತೆ ... ಪಂಚಪಾದೋಷ್ಟಿಗಳೊಳಪ್ಪ ಪತ್ತುಗೆವೆರಸು (ವರ್ಧಮ್ಮ. ೫-೦೨೫); ವಾದ್ಯಮಂ ಬಾಳಿಸಿ ಜಾರುಪಂಬಿಸಿಲೊಳಿಕ್ಕುವ ಬೆಂಕಿಬೊಳೊಡ್ಡಿ ಕಾಸಿಕೊಂಡಾಳಿಸಿ ಸಂದುಕೋಲ ನಾಡಿಗಟ್ಟುವ . . . ಶಬರರ್ಕಳಿನೊಪ್ಪಿದುದೊಂದು ಪಕ್ಕಣಂ (ಕಾಸುವಪ. ೦೦-೦೯೬); ಅಂಕುರವಡೆದ ಪೂಗಿಡುವೃಕ್ಷ ಲತವೇರ್ಗೆ ಬೆಂಕಿಯ ಹರಹಿದಂತಾಯ್ತು (ವೋಹಕ. ೨೬-೨೦). ೨. ಕೊಳನಂ ಪುಗಿಸೆ ಮೆಯ್ಯ ಬೆಂಕಿಯಿಂ ಚುಯ್ಯೆಂದು ನೊರೆಗಟ್ಟಿ ಬಿಸಿಯ ತೆರೆ ತಾಮರ್ಗಟ್ಟಿ . . . ಕಾದ ನೀರ್ ಕಾಯವುಮಂ ಸುಡೆ (ಗಂಕ. ೯-೦೦೬ ಪ).

**ಬೆಂಕಿ ಉಗುಳು** = (ಅಲಂ) ಅತಿಯಾದ ಕೋಪವನ್ನು ತೋರು; ಬಹಳ ಕ್ರೋಧವನ್ನು ಸೂಚಿಸು : ಶಾನಭಾಗರು, ಶಾನಭಾಗರ ಮನೆಯವರು ಎಂದರೆ ಇಷ್ಟೊಂದು ಬೆಂಕಿ ಉಗುಳುತ್ತಾನಲ್ಲ ಮಾತಿನಲ್ಲಿ? (ಪುರುಬಾ. ೬೮). **ಬೆಂಕಿ ಕಾರು** = ೧. ಬೆಂಕಿಯನ್ನು ಉಗುಳು,– ಹೊರಹಾಕು : ಅಗ್ನಿಪರ್ವತ ಬೆಂಕಿಕಾರಿ ನೂರಾರು ಜನರು ಸತ್ತರು (ರೂಢಿ). ೨. (ಅಲಂ) ತಾಪವನ್ನು ಹೆಚ್ಚುಮಾಡು : ಹುಡುಕಿದರು ಕಂದ ಸಿಗದಲ್ಲ ಎಂಬ ಸುದ್ದಿ ಕಿಡಿಕಿಡಿ ಬೆಂಕಿ ಕಾರಿತ್ತು (ಸಿದ್ಧಕ್ಷ. ೯-೯೯). ೩. ಬಹಳ ಕೋಪವನ್ನು ತೋರು; ಸಿಟ್ಟಿಗೇಳು : ತಪ್ಪು ಮಾಡಿದ ಹುಡುಗರ ಮೇಲೆ ಮಾಸ್ತರರು ಬೆಂಕಿಕಾರಿದರು (ರೂಢಿ). **ಬೆಂಕಿಕೋಳಿ** = ಪಕ್ಷಿಜಾತಿಯಲ್ಲಿ ಅತಿ ದೊಡ್ಡದಾದ ಕೋಳಿ; ಉಷ್ಟ್ರಪಕ್ಷಿ ; P ಈ ಪಕ್ಷಿಯು ಬೆಂಕಿಯನ್ನು ನುಂಗಬಲ್ಲದೆಂಬ ನಂಬಿಕೆ ಪ್ರಚಾರದಲ್ಲಿದೆ : "ಉಷ್ಟ್ರಪಕ್ಷಿ ... ಬೆಂಕಿಕೋಳಿ" (Ostrich. ೩೦೪೮). **ಬೆಂಕಿ ತೋರಿಸು** = ಬೆಂಕಿಯನ್ನು ಹಚ್ಚು; ಅಗ್ನಿಸ್ಪರ್ಶ ಮಾಡಿಸು : ಫಿರಂಗಿಯ ಮದ್ದಿಗೆ ಬೆಂಕಿತೋರಿಸಿದ ಸಮಯವನ್ನೂ ಅದರ ಆಸ್ಫೋಟನೆಯು ಕೇಳಿಬಂದ ಸಮಯವನ್ನೂ . . . ಪರಿಶೀಲಿಸಿ ಶಬ್ದದ ವೇಗವನ್ನು ಗಣಿತ ಮಾಡಿದರು (ಭೌತವಿ. ೦೪೦). **ಬೆಂಕಿ ಬೀಳು** = ಬೆಂಕಿ ತಗಲು ; ಅಗ್ನಿಸ್ಪರ್ಶವಾಗು : ಹುಲ್ಲುಮೆದೆಗೆ ಬೆಂಕಿಬಿದ್ದು ಸುಟ್ಟುಹೋಯಿತು (ರೂಢಿ). **ಬೆಂಕಿ ಹಚ್ಚಿಸು** = ಉರಿಯನ್ನು ಉಂಟುಮಾಡು : ಬೆಂಕಿಹಚ್ಚಿಸುತಿನ್ನು ನೀರಿಗೋಡಾಡುವಿರೆ? (ಹಬ್ಬರ. ೪೦-೮೦). **ಬೆಂಕಿ ಹಚ್ಚು** = ಬೆಂಕಿ ಹಚ್ಚಿಸು : ಕಾಜಿ ಬೆಂಕಿಹಚ್ಚಲು ಹೈಗೈ ಮಾಡಲಿಲ್ಲ (ಕೊಕಕಾ. ೩೩). **ಬೆಂಕಿಹತ್ತು** = ಉರಿತಗಲು; ಹತ್ತಿಕೊಳ್ಳು : ಗದ್ದೆಕ್ಕೆ ಬೆಂಕಿಹತ್ತಿದಾಗ ಬಾವಿ ತೋಡಲು ಹೊರಟರು (ಗಾದೆ). **ಬೆಂಕಿ ಹಾಕು** = ಬೆಂಕಿ ಹಚ್ಚಿಸು : ಅವರ ಮನೆಗೆ ಬೆಂಕಿ ಹಾಕಿ ಉರಿಸಿಬಿಡುತ್ತೇನೆ (ಅರ್ಯಾಕ. ೨೬).
[ದೇ.॥ ತಮಿ. ವೆಕ್ಕೈ; ಮಲ. ತೆಲು. ವೆಕ್ಕ ; ತುಳು. ಬೇಂಕಿ]

**ಬೆಂಕೆಗಣ್, ಬೆಂಕಿಗಣ್ಣು** (ನಾ). ಜ್ವಾಲೆಯನ್ನು ಸೂಸುವ ಕಣ್ಣು; ಅಗ್ನಿಯನ್ನು ಕಾರುವ ನೇತ್ರ : ಈಶನ ಬೆಂಕೆಗಣ್ಣ ಬಾಧವನೆನೆ ಶಾಂಮರ್ದಿಸಿದನಪ್ರತಿಮಮಲ್ಲರೆನಿಪ್ಪ ಮಲ್ಲರಂ (ಜಗಾಪ. ೬-೭೩); ಆ ದಾವಾಗ್ನಿ ಬೆಂಕೆಗಣ್ಗಳೆನೆ ಸಿಡಿದೇಳ್ವ ಕೆಂಗಿಡಿಗಳಿಂ ಸೂಸಿದುದು ತೋರ ತಾರೆಯ ಕೆಂಡಧಾರೆಯಂ (ಶ್ರೀರಾಮಾ. ೦೨೩-೩೨೨). **ಬೆಂಕಿಗಣ್ಣು** : ಕೈ ಪಂಜುಗಳನೆ ಬೆಂಕಿಗಣ್ಣು ನಂಜೊಣ್ವಾಯ ಗೋದಣೆವಲ್ಲ ಭೂತಗಳ್ ಮುಂಜುಳಿವೆನೆ ನೆಗಹಿದುವು (ವೋಹಕ. ೨೯-೦೦). [ಬೆಂಕೆ + ಕಣ್]

**ಬೆಂಕಿವೆಟ್ಟು** (ನಾ). ಕುದಿಯುತ್ತಿರುವ ಲಾವಾರಸವನ್ನು ಉಗುಳುವ ಬೆಟ್ಟ ; ಅಗ್ನಿಪರ್ವತ : ಬೆಂಕಿವೆಟ್ಟುಗಳೋಕರಿಸಿದುವು ಭಯಂಕರ ಯುಗಾಂತಕದ್ರಾವಾಗ್ನಿಯಂ (ಶ್ರೀರಾಮಾ. ೬೦೩-೦೯೬).
[ ಬೆಂಕೆ + ಬೆಟ್ಟು$_2$ (< ಬೆಟ್ಟ) ]

**ಬೆಂಕೊಳ್** 'ಬೆಂಗೊಳ್' ನೋ.

**ಬೆಂಕೊಳಿಸು** (ಕ್ರಿ). ೧. ಹಿಂಬಾಲಿಸುವಂತೆ ಮಾಡು; ಅನುಸರಿಸುವಂತೆ ಮಾಡು : ಹರಣಮಂ ಕೂಡಿಕೊಂಡಿರ್ಪನಂ ತಳ್ತಿರದಾತ್ಮಪ್ರಾಣಮಂ ಬೆಂಕೊಳಿಸಿ ಬೆರಸಿದ್ಕೆ (ವೃಷಭ. ೨೯-೫೦). ೨. ಬೆನ್ನು ತೋರಿಸುವಂತೆ ಮಾಡು : ಓಡಿಹೋಗುವಂತೆ ಮಾಡು : 'ಆಹವದೊಳು . . . ಸಾಹಸದಿಂ ಪಡಲ್ವಡಿಸಿ ಬೆಂಕೊಳಿಸಿದ ಸೋಹಿಲ್ಲದಂತೆಂಟುಮೇಳಿ (ಗುಮ್ಮಕ. ೬-೦೦೨). [ಬೆಂಕೊಳ್ (< ಬೆಂಗೊಳ್) + –ಇಸು$_3$]

**ಬೆಂಕೊಳು** 'ಬೆಂಗೊಳ್' ನೋ.

**ಬೆಂಗಟೆ** (ನಾ). ಮನೆಯ ಮೇಲೆ ಹೆಂಚು ಹೊದಿಸಲು ಸಿದ್ಧಪಡಿಸಿದ ಬಿದಿರಿನ ತಡಿಕೆ : ಕಾಣಿಸುತ್ತಿದೆ ಬಿಡಾರದ ಬೆಂಗಟೆಯಿಂದ ನೇತಾಡುತ್ತಿದ್ದ ಹಿಡಿಣನ ನಿಶ್ಚಲ ಕೃತ–ಕಳೇವರ! (ಪುರಿಪು. ೯೩೬). [ ? ]

**ಬೆಂಗಡೆ$_1$** (ನಾ). ೧. ಬೆನ್ನಿನ ಭಾಗ ; ಹಿಂಭಾಗ : ಹಿಂಬದಿ : ಹೊಂಗೆಜ್ಜೆ ಬಿಡಯುವಿಲ್ಲದ ಹೊನ್ನಂಡೆಗಾತಿಯರು ಬೆಂಗಡೆಯ ಸಾರಿದರು ರುಕ್ಮಿಣಿಯ (ವೋಹತ. ೧೯-೬೦). ೨. ಹಿನ್ನೆಲೆ : ಆಡುವ ಮಾತಿನ ಬೆಂಗಡೆಯಲ್ಲಿ ಏನೋ ಅಪೂರ್ವರಹಸ್ಯ ಹುದುಗಿದೆ (ಒಬದ. ೨೮೫). ೩. (?). ರನ್ನದ ಪೆರ್ವೊಡರ್ಗಳೊಳಗಳವಟ್ಟು ಬಿತ್ತರಿಪ ಮುತ್ತಿನ ಬೆಂಗಡೆಗಳ್ ಪೊದಟ್ಟು ಶೋಭೆಗೆ ನೆಲೆಯಾಗಿ ಕಂಗೊಳಿಪುದು (ಕಾಂತೀಕ. ೪-೦೨೦).

[ಬೆಂ$_1$ (<ಬೆನ್) + ಕಡೆ$_3$]

**ಬೆಂಗಡೆ$_2$** (ನಾ). ದೋಣಿಯನ್ನು ನಡೆಸುವ ಹುಟ್ಟು : "ಅರಿತ್ರಂ, ಕೇನಿಪಾತಕಃ — ನಾವೆನಡೆಸುವ ಹುಟ್ಟಿನ ಹೆಸರು. ಬೆಂಗಡೆಂದು ಎಂಬರು" (ಶಾಶಠಾ. ೦೦೦). [ಬೆಂ$_1$ (<ಬೆನ್) + ಗಡೆ$_1$ (<ಗಟ್)]

**ಬೆಂಗದನಾಥ** (ನಾ). ಒಬ್ಬಾತನ ಹೆಸರು : ಸತ್ಯಶೌಚಶೀಲಾಚಾರಸಮ್ಪನ್ನ ಬೆಙ್ಗದನಾಥ ಶ್ರೀಮ[ತ್] ಪೊಮ್ಮಲ್ಲಪೊಡೆಯರ್ (ಎಕ. X, ಕೋಲಾರ. ೬೯-೯ ; 890). [< ಸಂ. ವೇಂಕಟನಾಥ]

**ಬೆಂಗದಿರ್** 'ಬಿಸುಗದಿರ್' ನೋ.

**ಬೆಂಗದಿರ** 'ಬಿಸುಗದಿರ' ನೋ.

**ಬೆಂಗದಿರು** 'ಬಿಸುಗದಿರ್' ನೋ.

**ಬೆಂಗದಿರುಗಲ್** (ನಾ). ಸೂರ್ಯಕಾಂತ ಶಿಲೆ : ಸರಸಿಜಾಳಿಯೊಳು ನೋಟಂ ಪತಿವಿರೋಧಕರೊಳಾಜಿ ಚಿಂತೆ ಪಾಂಸುಲಾಪಂಕ್ತಿಯೊಳ್ ಸುಯ್ಬೆಂಗದಿರುಗಲ್ಲೊಳಂ ತಾಪ ವಿಕಳತೆಯುಲೂಕದೊಳ್ (ಪಂಪಭಾ. ೨೨-೯೬). [ಬೆಂಗದಿರು (<ಬಿಸುಗದಿರ್) + ಕಲ್$_3$]

**ಬೆಂಗರೆ** (ನಾ). (ಕರಾ) (ಬಿಳಿಯ ಮರಳಿನ) ಕಡಲಿನ ಕರೆ ; ಸಮುದ್ರದ ದಂಡೆ : ಹೊಳೆಯಿಂದು ಬಡಗಲು ಬೆಂಗರೆಯಿಂದ ಮೂಡಲು (ಕರಾ. ೦೯೬೦, ಉಡುಪಿ. ೩೮೦-೦೯ ; 1396); ಬೆಂಗರೆಯ ಮೇಲೆ, ಕಡಲುಗಾಳಿಗೆ ಮುಖ ಒಡ್ಡಿ, ನಡೆಯುವುದು ಸಣ್ಣ ಆಟವಲ್ಲ (ಪ.ರಹು. ೪); ಬೆಂಗರೆ ಮನೋಹರವಾಗಿ ತೋರುತ್ತಿತ್ತು (ಹೊಸಕ. ೬೨).

[←ತುಳು. ಬೆಂಗರೆ. ಬೆಂಗ್ರ]

**ಬೆಂಗಲ್** 'ಬಿಸುಗಲ್' ನೋ.

**ಬೆಂಗಲ** (ನಾ). ಸುಟ್ಟ ಮಡಕೆ ; ಬೆಂದ ಮಡಕೆ : ಬೆಂಗಲ, ಬೆಂಗದಿರ್; ಬೆಂಬೊಳಲೆ, ಬೆನ್ನೀರ್ (ಕಬುದ. ಪ. ೦೯೩ ಕ್ರಯೋ).

[ಬೆಂ$_2$ (<ಬಿಸಿದು) + ಕಲ$_1$]

**ಬೆಂಗಲ್ಲಿ** 'ಬೆನ್ಗಲ್ಲಿ' ನೋ.

**ಬೆಂಗಳೂರು** 'ಬೆಂಗುಳೂರ್' ನೋ.

**ಬೆಂಗಜು** (ನಾ). ಬೆನ್ನಿನಲ್ಲಿ ನಾಟಿರುವ ಬಾಣ : ನಂಕುಪದ್ಧನಾಯು ತಮವನೀಶ ಕಂತುವಿಸೆ ನಟ್ಟು ತುಜುಂಗಿದ ಬಾಣಜಾಲದೀ ಕ್ಷತಿಗೊಜಗಿತ್ತು ಬೆಂಗಜುಗಳುಣ್ಮದ ಕೂರ್ಮಸಘಾಜವೆಂಬಿನಂ (ಕುಕುಪಾ. ೦೧-೬೦).

[ಬೆಂ$_1$ (<ಬೆನ್) + ಗಜು]

**ಬೆಂಗಾಡು**, **ಬೆಗ್ಗಾಡು**, **ಬೆಳ್ಕಾಡು** (ನಾ). ೧. ಸುಟ್ಟುಹೋದ ಕಾಡು : ಅಗ್ನಿಸ್ಪರ್ಶವಾದ ಅರಣ್ಯ : ಕಾಳ್ಗಿಚ್ಚಿನಿಂದ ಆ ಪ್ರದೇಶವೆಲ್ಲ ಬೆಂಗಾಡಾಗಿದೆ (ರೂಢಿ). ೨. ಬೆಳೆ ಬೆಳೆಯದ ಪ್ರದೇಶ: ಬರಡುಭೂಮಿ: ಸುಮಾರು ಇಪ್ಪತ್ತು ಮೂವತ್ತು ಹಳ್ಳಿ ಬೆಂಗಾಡು ಸುಂಟೀಕೊಪ್ಪಾಗಿದೆ (ಹುಬ್ಬ.ಹ. ೦೬೦) : ಐದು ವರ್ಷಗಳೊಳಗೆ ೧೫ ಚದರಮೈಲಿ ವಿಸ್ತೀರ್ಣ ಬೆಂಗಾಡಾಗಿ ಬೀಳುಬಿದ್ದಿತು (ಹಸುಹೊ. ೨೨). **ಬೆಗ್ಗಾಡು** ೨. ಬೆಗ್ಗಾಡು ಮೊರಡಿಯಲ್ಲಿ ಹಸುರೆರಚುವೆ ನೂರುಹೊಂಗೆಯು ನೆಳಲ ತಂಪನೀವೆ (ದ್ರಾಕ್ಷಿದಾ. ೦೦-೦). **ಬೆಳ್ಕಾಡು**. ೩. ಹೆಣವನ್ನು ಸುಡುವ ಜಾಗ ; ಶ್ಮಶಾನ : ಆಕೆಯಂ ಬೆಳ್ಕಾಡೊಳ್ ಮಸಣದೊಳ್ ಕೊಂಡುಪೋಗಿಕ್ಕಿ (ಶಶಾಂಠ. ೦೦೨-೬). [ಬೆಂ$_2$ (<ಬಿಸಿದು) + ಕಾಡು$_2$]

**ಬೆಂಗಾಣ್** (ಕ್ರಿ). (ಇತರರು ತನ್ನ) ಬೆನ್ನನ್ನು ನೋಡು ; ಓಡಿಹೋಗುವುದನ್ನು ಕಾಣು : ಪಚ್ಚವಡು ಬೆಂಗಾಣದ ನಿಚ್ಚಟಗಲಿ ಮನಹ ಬಿಟ್ಟಿದೇವಂ (ಎಕ. XII, ತಿಪ್ಟೂ. ೨೯-೦೯ ; 1149). [ಬೆಂ$_1$ (<ಬೆನ್) + ಕಾಣ್]

**ಬೆಂಗಾಣಿಸು** (ಕ್ರಿ). ಬೆನ್ನನ್ನು ತೋರಿಸು ; ಹಿಮ್ಮೆಟ್ಟು ; ಓಡು : ಕಾಣುತ ಬೇಡರ ಪಡೆ ಹೆದವಿಲ್ಲಿಗೆ ಬಾಣವ ಹೂಡಿ ಬೊಬ್ಬಿರಿದು ಹೂಣಿಸಿ ಕವಿದೆಸೆಯಲು ಮಥನನು ಬೆಂಗಾಣಿಸಿ ಮರಳಿದ ಪುರಿಗೆ (ಜೀವಂಧ. ೮-೨೯).

[ಬೆಂ$_1$ (<ಬೆನ್) + ಕಾಣಿಸು]

**ಬೆಂಗಾಪು**, ಬೆಂಗಾಹು (ನಾ). ಬೆನ್ನಿನ ಹಿಂದೆ ಇದ್ದು ಕಾಯುವುದು ; ಬೆಂಗಾವಲು ; ಅಂಗರಕ್ಷಣೆ : ಆ ಕುದುರೆಯ ಬೆಂಗಾಪಿನ ದಕ್ಕಡರ ಗಂಡುಗಲಿಗಳ ಗಂಡು ರಾಘವಾವರಜನೆನ್ನನಿಂತು ಪೇಳ್ದಟ್ಟಿದಂ (ರಾಮಾಶ್ವ. ೦೯೨-೦೬) ; ಬೆಳ್ಳಿಯ ಕಟ್ಟಿನ ನೇಜೆಯುದವರು (ಭರ್ಜಿಯ ಸೈನ್ಯ) ಬೇಂಗಾಪಿನವರಿಗಾಗಿ ಬರುತ್ತಿದ್ದರು (ಕರ್ನಾಟ. ೦೩೯). **ಬೆಂಗಾಹು** : ಸೈಂಧವನ ಬೆಂಗಾಹಿನ ಭಟರು ಭಾರಣೆಯಬೊದಗಿದರು (ಕುಮಾಭಾ. ೨೨-೩೦).

[ಬೆಂ$_1$ (<ಬೆನ್) + ಕಾಪು]

**ಬೆಂಗಾರ್** (ನಾ). ಕಾರ್ಗಾಲದ ಅನಂತರದ ಸಮಯ : ಅಂಗಯ್ಯಂಗಯರ್ . . . ಬೆಂಗಾರ್ ಬೆಂಬಿಸಿಲಿವ ನ್ಯಯಾಭಾವಾಪ್ಯಂ (ಕಬುದ. ಪ. ೦೬೬ ಅಭಿ). [ಬೆಂ$_1$ (<ಬೆನ್) + ಕಾರ್$_2$]

**ಬೆಂಗಾರಿಸು** (ಕ್ರಿ). ಸುಡು ; ತಾಪಗೊಳಿಸು : ಅಡಗಿದಳು ಕಡುಮೋಪ ಮನವನು ಹಿಡಿದು ಬೆಂಗಾರಿಸುತ ಕಾಂತೆಯ ನುಡಿಯು ಬಾಧನವಾಗಿ (ತಪಭಾ. ೨೮-೩೩). [ಬೆಂ$_2$ (<ಬಿಸಿದು) + ಗಾರಿಸು]

**ಬೆಂಗಾಲ್** (ನಾ). ಕಾಲಿನ ಹಿಂಭಾಗ : ಹೆಜ್ಜೆಯ ಹಿಂಭಾಗ : ಅಸ್ಯಯಿ ಭಾವಕ್ಕೆ . . . ಬೆಂಬಿಸಿಲ್, ಬೆಂಗಾಲ್, ಬಯ್ಗಿರುಳ್ (ಕಬುದ.ಪ. ೦೬೬ ಕ್ರಯೋ). [ಬೆಂ$_1$ (<ಬೆನ್) + ಕಾಲ್$_1$]

**ಬೆಂಗಾವಲ್**, ಬೆಂಗಾವಲು, ಬೆನ್ನುಗಾವಲು (ನಾ). = ಬೆಂಗಾಪು : ಜನ್ನಗುದುರೆ ಬೆಂಗಾವಲ್ಗೆ ಸೈನ್ಯಸಾಗರ ಸಹಿತ . . . ಪೊರಮಟ್ಟು (ಜೈಮಿನಿ. ೬೦-೦೯೯೩). **ಬೆಂಗಾವಲು** : ಬೆಂಗಾವಲಾಗಿರ್ದ ಪಟುಭಟ ಮಿರ್ಜಿಪ ತುರಂಗಯುಗವಂ ಕಾಣದೈತಂದು (ಕೃಬಾಶಾ. ೨೮-೬) ; ಪಸ್ತು ಒಡವೆ ಆ ಕುಟುಂಬದ ಬೆಂಗಾವಲಿಗೆ ನಿಂತವು (ಅಶ್ವಘೋ. ೯೩). **ಬೆನ್ನುಗಾವಲು** : ರಣೋತ್ಸಾಹವುಳ್ಳ ಅರ್ಜುನನೂ ಮಹಾಬಲನಾದ ಭೀಮಸೇನನೂ ಬೆನ್ನುಗಾವಲಾಗಿರಲು (ಕೃಶಾಲಾ. ೨೨೯).

[ಬೆಂ$_1$ (<ಬೆನ್) + ಕಾವಲ್$_1$]

**ಬೆಂಗಾವಲು** 'ಬೆಂಗಾವಲ್' ನೋ.

**ಬೆಂಗಾಹು** 'ಬೆಂಗಾಪು' ನೋ.

**ಬೆಂಗಾಳು** (ನಾ). ಬಿಸಿಯಾದ ಕಾಳು : ಒಂದು ಹಿಡಿ ಜೀರಿಗೆಯನ್ನು ನಸುಗೆಂಪಾಗಿ ಹುರಿದು ಬೆಂಗಾಳಾಗುವ ಹಾಗೆ ನೀರ ತಳಿದು (ಸೂಪ. ೦೨೦).

[ಬೆಂ$_2$ (<ಬಿಸಿದು) + ಕಾಳು$_2$ (<ಕಾಟ್$_2$)]

**ಬೆಂಗಿ** 'ವೆಂಗಿ$_2$' ನೋ.

**ಬೆಂಗಿಮಂಡಳ** (ನಾ). ಒಂದು ದೇಶದ ಹೆಸರು ; ವೆಂಗಿನಾಡು : ಆ ಮಳಯಾಚಳ ಹಿಮಗಿರಿಸೀಮಾಪನಿತಳ[ಕೆ] ಬೆಂಗಿಮಂಡಳದೊಳ್ ಚೆಲ್ವಾಪಗಮ ತನಗದೊಂದೂರ್ ನಾಮದೊಳಂ ವೆಂಗಿಪೞು (ಪಂಪಭಾ. ೦೯-೪೦).

[ಬೆಂಗಿ (<ವೆಂಗಿ$_2$) + ಮಂಡಳ (=ಮಂಡಲ)]

**ಬೆಂಗುಡಗಿ** (ನಾ). ಗೊಂದಲ ; ಗಜಿಬಿಜಿ : ಏನು ಸಬಾನೋ ಸಬಾ. ಪಕ್ಷ ಬೈಗೋಳು — ಬಡಿದಾಟ — ಬೆಂಗುಡಗಿ ! (ನಾಥಾಂ. ೯೩). [ ? ]

**ಬೆಂಗುಡು** 'ಬೆಂಗೊಡು' ನೋ.

**ಬೆಂಗುಳೂರ್**, ಬೆಂಗಳೂರು (ನಾ). ಒಂದು ಊರಿನ ಹೆಸರು : P ಕರ್ನಾಟಕದ ಈಗಿನ ರಾಜಧಾನಿ : ಶ್ರೀಮಾತ್ ನಾಗತರಸ ಮನೆವಗತಿ

ಪೆರ್ಗ್ಗೊಣಸೆಟ್ಟಿ ಬೆಂಗುಳೂರ ಕಾಳೆಗದೊಳು ಬಿಳ್ದಾಗತರನ ಮಗಂ ಬುಟ್ಟಣಪತಿ ಸತ್ತಂ (ಎಕ. IX (S), ಬೆಂಗಳೂ. ೧೮೨-೪ ; ಸು. 850). **ಬೆಂಗಳೂರು :** ಬಳಲಾಪುರ ಬೆಂಗಳೂರು ಕೋಳಾಲದಿಳೆಯಾಣ್ಮರುಜಿ ಕಂಗೆಟ್ಟು ತಳತಂತ್ರವ ನೀಗಿ ತಮ್ಮಯ ಪುರಗಳ್ಗೆ ತಳುವದೆ ಸರಿದರು (ಕಂಠೀ. ೩-೯೨) ; ಭಗವನ್ತಗಿರಿ ಗೋಸಾವಿ ಬೆಂಗಳೂರು ವಳಗಡಿ ಬೇಗೂರುತಾಲ್ಲೂಕು ಪೈಕಿ ತಾವರೇಕೆರೆಗ್ರಾಮಕ್ಕೆ ಪೂರ್ವದಿಕ್ಕಿನಲ್ಲಿಯಿರುವ ಧರ್ಮದೀಕ್ಷಿತರ ಛಟವಡಾನ್ನದ ಹೊಲ ಖ ೧-೦-೦ (ಎಕ. IX, ಬೆಂಗಳೂ. ೩-೬ ; 1855).

[? + ಊರ್]

**ಬೆಂಗೂಸು** (ನಾ). ಬೆನ್ನಿನ ಬಾಗು,—ಡೂಗು : ವಿಂಗೆ ಕಾಸಿ ತಿರ್ದಿದಂತೆ ಪೊಲಗಲದ ಬೆಂಗೂಸುಮಳಿಯೆ ಸಸಿನಂದಳೆದಾ ಜಗತೀಪತಿಯಂಗಂ ಪೊಗರುಗೆ ಸೌಂದರ್ಯಮನೆ ತಾಳ್ದು ಕಂಗೊಳಿಸಲೊಡಂ (ಪ್ರಶಾ. ೩೯-೯೫).

[ಬೆಂ$_1$ (<ಬೆನ್) + ಕೂಸು$_2$ (<ಕೂಸ್$_2$)]

**ಬೆಂಗೆಡಿಸು** (ಕ್ರಿ). ಹಿಂದಕ್ಕೆ ಓಡಲು ಅವಕಾಶವಿಲ್ಲದಂತೆ ಮಾಡು : ಅಹಿತರ್ಕಳು ಅಚ್ಚರಿಯೊಳೊಡನೊಡನೆ ಕಂಗೆಡಿಸಿ ಬೆಂಗೆಡಿಸಿ ಕೊಟ್ಟಿ ಕೊಯ್ದು (ನೇಪು. ೯೯-೪). [ಬೆಂ$_1$ (<ಬೆನ್) + ಕೆಡಿಸು$_1$]

**ಬೆಂಗೊಡತಿ** (ನಾ). ಬೆನ್ನಿನಲ್ಲಿ ಧರಿಸಿರುವ ಕೊಡತಿ : ನಡಮುಡಲ್ಲಿಂ ಮೇಲೆ ನೆಲ ದಡದಡಿಸಲಾನೆಗಳಂಕುಶದ ಬೆಂಗೊಡತಿಗಳ ಬಲುಪೊಯ್ಲು ಬೊಬ್ಬೆಯು . . . ಕಳಕಳಿಕೆ ಕೂಗಿಡೆ (ಕೋರಾ. ೫-೬-೦೦).

[ಬೆಂ$_1$ (<ಬೆನ್) + ಕೊಡತಿ (<ಕೊಡಂತಿ)]

**ಬೆಂಗೊಡು**, ಬೆಂಗುಡು, ಬೆನ್ನುಕೊಡು (ಕ್ರಿ). ೧. (ಯುದ್ಧದಲ್ಲಿ ಶತ್ರುಗಳಿಗೆ) ಬೆನ್ನುತೋರಿಸು ; ಸೋತು ಓಡು : "ಅಕ್ಕುಳಿಸಿತೆಂದುಂ . . . ಬೆಂಗೊಟ್ಟುದೆಂದುಂ . . . ಪಾರಗೆಯ್ಕೆಂದುಂ—ಈ ೧೩ ಅವ ಸರಣಕ್ಕೆ ಪೆಸರ್" (ಶಬ್ದಾ. ೬೨-೬೪೯) ; ಕಾಮುನೃಪಾಳನೋಡಿದನವಂ ಬೆಂಗೊಟ್ಟು ಕಾಳ್ಪಟ್ಟೆಯಿಂ (ಎಪಿ. XX, ೦೨-೨೬ ; 1167); ಮುನಿವರ್ಗೆ ಬೆಂಗೊಡದ ದೆಸೆಯೊಳತಿಲೋಭಿ ದುರ್ಜನರ ಮಾತಂ ಕೇಳದೆದೆಯೊಳತಿ ಮೂರ್ಖ (ಹರಿಣ. ೨-೦೬) ; ನಡುಗಿ ಸಂಗರಭೀತಿಯಲಿ ಬೆಂಗೊಡುವ ನಾಯಕವಾಡಿಗಳ ವಂಗಡವ ನೋಡುತ ಮಣಿಯ ಚಕ್ರವ ತೆಗೆದನಸುರಾರಿ (ಕುಮಾರವ್ಯಾ. ೦೯-೪೫). ೨. (ಬೆನ್ನನ್ನು ನೀಡಿ) ಆಧಾರವಾಗು ; ಆಶ್ರಯವಾಗು : ವೃಂದಾರಕರಾದಿಯಾದ ರಾಕ್ಷಸರಾಜರೊಂದಾಗಿ ಸೊದೆ ಗಡಲ್ಗಡೆಯ ಮಂದರಗಿರಿ ಮುಳುಗಿದಡೆ ಕಚ್ಛಪರೂಪಿನಿಂದ ಬೆಂಗೊಟ್ಟಾತನೀತ (ಶೋಕಶ. ೩೬-೨೩). **ಬೆಂಗುಡು :** ೧. ಪೊಳೆವಿಂದುಗಳ್ಕೆ ಬೆಂಗುಡೆ ಪೊಳೆದುವು ಬೆನ್ನಿಂದಮೆರ್ದೆಗೆ ಕದಿರ್ದುಜುಂಗಲೆನಲ್ ತೋಳಗಿದುವು ಮದನಶಿಖಿ ವಿಷ್ಣುಳಹೃದಯುನ್ನಸ್ತಹಸ್ತನಖದೀಧಿತಿಗಳ್ (ಶಾಂತಿಪು. ೯೦೬) ; ಕೋಡೇಜಂಗೆ ಮಾಜಾನೆಗಳ್ ರಣದೊಳ್ ಬಂಗುಡೆ ಪೋದರೆಚ್ಚ ಪಲವುಂ ನಾರಾಚದೇಜಂಗೆ ಬಲ್ಲಣೆಗಳ್ ಬೆಂಗುಡೆ (ಶಂಕಾಪು. ೦೩-೫೦). **ಬೆನ್ನುಕೊಡು :** ೧. ಅವರು ಬೆನ್ನುಕೊಡಲಾಗಿ ಬೆನ್ನಟ್ಟಿ ಪೊಸಕೋಟೆಪೇಟೆ ವಳಗೂ ಪೊಕ್ಕು ಕಡದು ಬಹುಜನಕ್ಕೆ ಜಖಂ ಮಾಡಿ . . . ಬೆಂಗಳೂರಿಗೆ ಬಂದು ದಾಖಲಾದರು (ಕೃಪರ. ೯೦). [ಬೆಂ$_1$ (<ಬೆನ್) + ಕೊಡು$_1$]

**ಬೆಂಗೊಳ್**, ಬೆಂಕೊಳ್, ಬೆಂಕೊಳು, ಬೆಂಗೊಳಂ (ಕ್ರಿ). ಬೆನ್ನಟ್ಟು ; ಹಿಂಬಾಲಿಸು ; ಅನುಸರಿಸು : "ಬೆಂಗೋಳ್—ಅನುಧಾವನೇ (ಬೆನ್ನಟ್ಟು)" (ಕಮರಾ) ; ಬೆಳ್ಳಿರಲೆಯುಂ ಬೆಂಗೊಂಬಂತೆ ತಗುಳ್ದು (ಪರಮಾತ್ಮ. ೪-೨೫೨). **ಬೆಂಕೊಳ್ :** ಆ ಅರಸು ಬನ್ದು ಎಳಚ್ಚೆನಾಯ ಮುಟ್ಟಪೋಗೆ ಬೆಂಕೊಣ್ದು ಕ್ಕಳಕ್ಕಾಟ್ಟಯಿಯೊ ಕಾದಿ ಸತ್ತಂ (ಎಕ. XV, ಅರಸೀ. ೨೦೫-೮ ; 890) ; ನಿನ್ನನುಬುಗಿಸಲುಮಾಜಿಯೊಳೆನ್ನಂ ಬೆಂಕೊಂಡು ಕಾದಲು ಬಂದೀಗಳ್ . . . ಬೀರರ್ ಬೆನ್ನಿತ್ತುದನಿನಿಸು ನೋಡ (ಶಂಕಪ. ೩-೭೩) ; ಕ್ರೂರ ಮೃಗಂಗಳದಂ ಕಂಡು ಬೆಂಕೊಂಡು (ಶಬ್ದಕಂ. ೨೬೦-೬). **ಬೆಂಕೊಳು :** ಕೆಲರು ಪೂಗೊಂಚಲಿನ ತುಂಬಿಯ ಬಳಗವನು ಬೆಂಕೊಂಡರು (ಕುಮಾರ. ೦೯-೪) ; ಬಿತ್ತರದೊಳೊತ್ತರಿಸಿ ಪರಗಣಂ ಸುರಗಣವ ಬೆಂಕೊಂಡುದು (ಕರಪು. ೩೦-೯೩). **ಬೆಂಗೊಳು :** ಹಲವು ಪರಿಯಲಿ ಬೇಡಿ ಬೆಂಗೊಳುವ ಹದನಿಲ್ಲ ಮನಸಿನೊಂದೇ ಪೂಜೆ ನಿನ್ನ ಸೇವನೆಗೆ (ಕಬಿಕ. ೦೦೦-೭).

**ಬೆಂಕೊಳ್ವನ ಕೋಲ್** = ಭೂಮಿಯನ್ನು ಅಳೆಯುವ ಒಂದು ಬಗೆಯ ಕೋಲು,–ಗಳೆ : ಸಿ[ರಿ]ಗಳಚ್ಚೆ[ಯಾ] ಕೆಜಿಯಿಂ ಪಡುವಲು ಬೆಂಕೊಳ್ವನ ಕೋಲಲು ಬಿಟ್ಟ ಕೆಯಿ ಮತ್ತರು ಪತ್ತು ಎಂ (XXVII, ೩೩-೫೦ ; 1114) ; ಮೂಡಲು ಪದಿಮೂಜು ಗೇಣ ಬೆಂಕೊಳ್ವನ ಕೋಲ ಮತ್ತರು ನೂಜು (ಕಾ. II, ೦೨-೪೫ ; 1114).

[ಬೆಂ$_1$ (<ಬೆನ್) + ಕೊಳ್$_1$]

**ಬೆಂಗೊಳು** 'ಬೆಂಗೊಳ್' ನೋ.

**ಬೆಂಗೋಡೆ** (ನಾ). ಹಿಂಬದಿಯ ಗೋಡೆ : ಹಿಂಭಾಗದ ಭಿತ್ತಿ : ಗಗನದೊಳಗೆ ಬಂದು ನೃಪನ ಬೆಂಗೋಡೆಯೊಳಗಣಾದಿಜನಬಿಂಬಕ್ಕದಿರ ಗಗನಪುರುಷ ಸಿದ್ಧಬಿಂಬಗಳಿಗೆ ಕೈಯ ಮುಗಿದಿಳಿದರು ಗಮಕದೊಳು (ಶರಶ. ೦೩-೦೯೦). [ಬೆಂ$_1$ (<ಬೆನ್) + ಗೋಡೆ]

**ಬೆಂಗೋಲು** (ನಾ). ಬೆನ್ನಿಗೆ ಹೊಡೆಯಲು ಎತ್ತಿರುವ ಕೋಲು : ಜಗದ ಜಂಗುಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ (ಪುರಾತ. ೩. ೧೭-೨೩). [ಬೆಂ$_1$ (<ಬೆನ್) + ಕೋಲು$_1$ (< ಕೋಲ್$_1$)]

**ಬೆಂಚ** 'ಬೆಂಚಿ' ನೋ.

**ಬೆಂಚಗ** (ನಾ). ಒಂದು ಬಗೆಯ ಪಕ್ಷಿ : ಬೆಳುವ ಬೆಂಚ [ಪಾಠಾಂ. ಚೆ]ಗ . . . ಮಡಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡು (ಕೋರಾ. ೩-೦-೩೩).

[ ? ]

**ಬೆಂಚಿಯಹಂಬು** (ನಾ). ಒಂದು ಬಗೆಯ ಬಳ್ಳಿ : ಬಾಗಿಲಲ್ಲಿ ಕಟ್ಟಿದ್ದ ತ್ತೊಂದು ಬಲುಗೋಡಗಕ್ಕೆ ಬಾಯ ಆಣಲಿನ ಸಜವ ಕೂಳು ಉಡಿಯೊಳಗಳ ಬೆಂಚಿ [ಪಾಠಾಂ. ಚೆ]ಯ ಹಂಬು ಹಂಬಿನೊಳಗಳ ಬಹುಧಾನ್ಯದ ತನೆ (ಮಹದೇಶ್ವರ. ೯. ೨೬೪-೦೦೦೬). [ ? + ಹಂಬು$_1$ (< ಪರಮ್ಬು)]

**ಬೆಂಚು** (ನಾ). ೧. (ಸಾಮಾನ್ಯವಾಗಿ ಶಾಲೆಗಳಲ್ಲಿ ವಿದ್ಯಾರ್ಥಿಗಳು ಕೂರಲು ಇರುವ) ಸ್ವಲ್ಪ ಎತ್ತರದ ಕಾಲಿರುವ ಉದ್ದವಾದ ಮಣೆ : ದೊಡ್ಡಸೇಠ್‌ಜಿ ತಟೀಲಿ ಮಧ್ಯ ಬೆಂಚು ಹಾಕಿಸಿ ಕೂತ (ಕಂಗಾಲ. ೬೩) ; ಸಾಕಾದಷ್ಟು ಬೆಂಚುಗಳಿರಲಿಲ್ಲ, ಹಲಗೆಗಳಿರಲಿಲ್ಲ (ರಂಗಕ. ೫೩). ೨. ಒಬ್ಬರಿಗಿಂತ ಹೆಚ್ಚಾಗಿ ನ್ಯಾಯಾಧೀಶರಿರುವ ನ್ಯಾಯಾಸ್ಥಾನ ಮತ್ತು ಇಂತಹ ನ್ಯಾಯಾಸ್ಥಾನದಲ್ಲಿ ಕೂರಲು ಅರ್ಹನಾದ ವ್ಯಕ್ತಿ,— ನ್ಯಾಯಾಧಿಪತಿ : ದಾವೆಗಳನ್ನು ವಿಚಾರಿಸುವ ಬಗ್ಗೆ ಏರ್ಪಟ್ಟ ಬೆಂಚುಗಳಲ್ಲಿ ಕೂತುಕೊಳ್ಳಲು ಅರ್ಹರಾದ ಜನರ ಪಟ್ಟಿಯಲ್ಲಿ . . . ಹೆಸರುಗಳು ಸೇರಿರತಕ್ಕದ್ದು (ಗ್ರಾಪಂಚ. ೦೦).

[← ಇಂ. Bench]

**ಬೆಂಚಿ**, ಬೆಂಚ (ನಾ). ಸಣ್ಣಹೊಂಡ ; ಚಿಕ್ಕ ಜಲಾಶಯ ; ಕುಂಟೆ : "ನಿಪಾನಂ, ಉದಪಾನಂ, ವಾಪೀ, ಆಹಾವಃ—ಈ ೪ ಬೆಂಚಿ" (ಹಲಾಯು. ೦೦೩-೬೨) ; ಪೂಗೊಳಂ ತಾಸಿರೆಯುಂ ಬಕನಿಕರಲುಳಿತಕಲುಷೋದಕ ವಿರಳದೊಳಂಚಿ ಬೆಂಚಿಯೊಳ್ ಮಸಿಯಿಸುವೋ (ಕಾವ್ಯಾಶ. ೬೦೩) ; ಅಂಚೆಗಳಿಲ್ಲದ ಬೆಂಚಿ ಬೇಟವಿಲ್ಲದ ಬೆಳವೆಣ್ಗಳಿಲ್ಲ ಪೆಸರಿಲ್ಲದ ಮಾನಸರಿಲ್ಲ ದೆಲ್ಲಿಯುಂ (ಕನ್ನಶಾ. ೨೬) ; ಅರಸಂಚೆಗಳ ಸಂಚಯಂ ಬೆಂಚಿಗಳೊಳು ಸಂಚರಿಸಲು ವಿನೋದದಿಂ (ಗ್ರಾಂಧವು. ೦೦-೨). **ಬೆಂಚ :** ಬೆಲೆಯ ಚನ್ನಿಗ ಬಲ್ಲ ನೆಲೆಯುನಂಬಿಗ ಬಲ್ಲ ಮಲೆಯ ಬೆಂಚದಿಂದಜೀವಂತೆ ಸೂಳೆ ನೆಚ್ಚಿ ಪೊಲಬುಗಜಂದಿಹಳು (ಸರ್ವಜ್ಞ. ೦೯೦೩).

[ದೇ. ಗ ತೆಲು. ಮೆಂಪ]

**ಬೆಂಜನ** (ನಾ). ೧. ನಂಜಿಕೊಳ್ಳುವ ಪದಾರ್ಥ; ಬಾಡಿಸಿಕೊಳ್ಳುವ ವಸ್ತು: **ನಂಚಿಕೆ** : ಬಾಡುಂ ಬೆಂಜನಮುಂ ಕೂಟಂ ರುಚಿಮಾಡುವನಿತಲ್ಲದೆ ತಾಂ ಬೇಱೆ ತಣಿಪಲ್ನೆಱೆಗುಮೆ (ಕೀವಸಂ. ೩೬-೮). ೨. [ವ್ಯಾಕ] ಸ್ವರಗಳ ಸಹಾಯವಿಲ್ಲದೆ ಸ್ವತಂತ್ರವಾಗಿ ಉಚ್ಚರಿಸಲಾಗದ ವರ್ಣ; ವ್ಯಂಜನ : ಯತ್ವಲೋಪಕ್ಕೆ . . . ವ್ಯಂಜನ–ಬೆಂಜನ (ಶಮದ. ೨೪೦ ಪ್ರಯೋ). [< ಸಂ. ವ್ಯಂಜನ]

**ಬೆಂಜನಂಗೆಯ್** (ಕ್ರಿ). ಬಾಡಿಸಿಕೊಳ್ಳುವ ಪದಾರ್ಥವನ್ನು ತಯಾರಿಸು; ವ್ಯಂಜನಪದಾರ್ಥವನ್ನು ಸಿದ್ಧಪಡಿಸು : ಆತನ ಮನೆಯೊಳರ್ಪಿತಂಗೆಯ್ವ ಸಮಯದೊಳು ನೂತನದಲಾಬೂಫಲದೆ ಬೆಂಜನಂಗೆಯ್ದು ಸಾಕಿತಯದಿಂ ನೀಡಲು (ಸಿದ್ಧೇಶ್ವ. ೧೦-೯೪). [ಬೆಂಜನ + ಕೆಯ್$_1$]

**ಬೆಂಡ** (ನಾ). ಒಂದು ಮನೆತನದ ಹೆಸರು (?) : ತುಱುವ ಮೊಱಕಕ್ಕೊಳೆ ಬೆಣ್ಣರ ಮಾಕಿ ಕಾದಿ ಇಕ್ಕಿಸಿ ಸತ್ತು ಸಗ್ಗಸ್ಥನಾದಂ (ಎಕ. X (೩), ಮುಳಬಾ. ೩೦೭-೨ ; 950). [?]

**ಬೆಂಡಾಡು** (ಕ್ರಿ). ಬೆಂಡಿನಂತೆ ಹಗುರವಾಗಿ ಚಲಿಸು,—ತೇಲು : ಬೆಳ್ದಿಂಗಳೆಂಬ ಪಾಲ್ಗಡಲೊಳ್ ಬೆಂಡಾಡುವ ಚಕೋರಂಗಳಂ ನೋಡುತ್ತಾಂ ಮೆಲ್ಲಮೆಲ್ಲನೆ ಬರೆವರೆ (ಅಭ್ಯಟ. ೩-೦೩ ವ). [ಬೆಂಡು + ಆಡು$_1$]

**ಬೆಂಡಿಗ,** ಬೆಂಡುಗ, ಬೆಂಡುಳಿಗೆ (ನಾ). ಒಂದು ಬಗೆಯ ಮರ : ಹಳ್ಳದ ಪಡುವಣಾತ್ತಿನ ಬೆಂಡಿಗದ ತಾಳಿಗೆ ತೆಂಕಣ ನೈಋತ್ಯದ ನಡುವೆ ನೆಟ್ಟ ಕಲ್ಲು (ಎಕ. XIV, ಮೈಸೂರು. ೧೦೯-೩೮೭ ; 1074). **ಬೆಂಡುಗ** : ಕಡವೆ ಬೆಂಡುಗ ಕಾಪಮರ ಕಂಚಾಳವು ಎಡವಿಡದಿಹ ಪುತ್ರಜೀವಿ . . . ಎಸೆದಿಹವು (ವಾರೀಸಾಂ. ೦-೩೪) ; ಬೆಂಡುಗೆ, **ಬೆಂಡುಳಿಗೆ** (ಪ್ರ.ತಿ. ೬೯-೦೧೦). **ಬೆಂಡುಳಿಗೆ** : ಬೆಂಡುಗ, ಬೆಂಡುಳಿಗೆ, ನಾಯಿಕುಳಿ, ಬೋಡು ಆಕೆಹುಲ್ಲು (ಸಕ್ಕ೩. ೦೦೬). 'ಬಿಂಡಿಗ' ಹೋ. [ ? ]

**ಬೆಂಡು** (ನಾ). ೧. (ಜೋಳ ಮುಂತಾದುವುಗಳ) ದಂಟಿನ ಹಗುರವಾದ ಒಳಭಾಗ : ಕಾಲಲಿ ಕಟ್ಟಿದ ಗುಂಡು ಕೊರಳಲಿ ಕಟ್ಟಿದ ಬೆಂಡು ತೇಲಲೀಯದು ಗುಂಡು ಮುಳುಗಲೀಯದು ಬೆಂಡು (ಬಸವ.ತ. ೧೦೭-೩೩೦); ಬೆಂಡಿರದೆ ಮುಳುಗಿದರು ಗುಂಡೆದ್ದು ತೇಲಿದರು . . . ಸಾಲಿಗನು ಕೊಂಡದ್ದು ಕೊಡನು (ಸರ್ವಜ್ಞ. ೦೩೭೭). ೨. ತಿರುಳಿಲ್ಲದಂದು; ಸತ್ತ್ವವಿಲ್ಲದುದು; ಜಡವಾದುದು: ಈ ಕಜ್ಜದೊಳ್ನೀಂ ತೊಡರ್ದು ಮರುಳೆ ಬೆಂಡಾಗದಿರ್ (ಗದಾಯು. ೯-೦೫); ಬೆಂಡಾಗೆ ಮನಂ ಮೌನಂಗೊಂಡಿರೆ ವಲ್ಲಭನ ಮನವನಱೆವಾಗ್ರಹದಿಂ ಮುಂಡೋದರಿ ಮಾಣದೆ ಬೆಸಗೊಂಡಳ್ (ಶಂಕಾವಾ. ೯-೦೩೭); ತಪನನುಷ್ಣತೆಯಿಂದ ತನುಲತೆ ಬೆಂಡಾಗಿ ಲಪನಾಂಭೋರುಹ ಕೊರಗಿ ಅಪರಾಹ್ಣಕಾಲದ ರತಿ ಶಂಬರಾಸುರನುಪವನವನು ಪೊಕ್ಕಳಂದು (ಮೋಹತ. ೯-೩೯). ೩. (ಜೋಳದ ದಿಂಡಿನಾಕಾರದ) ಒಂದು ಬಗೆಯ ಸಿಹಿತಿಂಡಿ : ಅವರು ಮಂಡಕ್ಕಿ . . . ಬೆಂಡು, ಬತ್ತಾಸು ಕೊಂಡುಕೊಂಡರು (ಕರಪು. ೩-೨೩); ಕರ್ಮಿರ್ನಾಸಾಬರು . . . ಮಿಠಾಯಿ, ಬತ್ತಾಸು, ಬೆಂಡು ಮೊದಲಾದ . . . ಪದಾರ್ಥಗಳನ್ನೂ ಮಾರಾಟಕ್ಕೆ ತರುತ್ತಿದ್ದರು (ಮಲೆಮ. ೪೩೭).

**ಬೆಂಡು ಬೆಱಗಾಗು, ಬೆಂಡು ಬೆರಗಾಗು**=ಸತ್ತ್ವಹೀನವಾಗುವಷ್ಟು ಆಶ್ಚರ್ಯಪಡು ; ನಿಬ್ಬೆರಗಾಗು ; ಮಿಡಿವಿಲ್ಲೊಳೆಚ್ಚೊಡೆಯೊಳ್ ಪೊಡ್ರೇಕ್ಷುವಂ ತಾಗೆ ಗಂಟೊಡೆದೆತ್ತಂ ರಸಮೆಚ್ಚೆ ಪಾಯೆ ಪಥಿಕರ್ ಪೊಕ್ಕೀಂಟುತುಂ ಕೈಯ ಬಾಯೆಡೆಯೊಳ್ಪಾಯ್ದುಗೆ ಕಂಡು ಬೆಂಡುಬೆಱಗಪ್ಪರ್ ಪಾಮರೀವಕ್ತ್ರಮಂ (ಅಪಂಪು. ೧-೬೦); ಜನವರು:—(ಬೆಂಡು ಬೆರಗಾಗಿ ಬಣ್ಣಗೆಟ್ಟು ಬಾಗಿಲೆಡೆಯಲ್ಲಿ ಒಗ್ಗಾಗಿ ನಿಂತು ನಿರೀಕ್ಷಿಸುತ್ತಿರುವರು) (ಮಂತ್ರಶ. ೬೪-೩).

[ದೇ.॥ ತಮಿ. ವೆಣ್ಡು; ತುಳು. ಬೇಂಡ್, ಬೆಂಡು, ಬೊಂಡು; ತೆಲು. ಬೆಂಡು]

**ಬೆಂಡುಖರ್ಜೂರ** (ನಾ). (ಸಾಮಾನ್ಯವಾಗಿ ಮರುಭೂಮಿ ಪ್ರದೇಶಗಳಿಂದ ಪಿಂಡಿಗಳಲ್ಲಿ ಆಮದಾಗಿ ಬರುವ) ಒಂದು ಬಗೆಯ ಖರ್ಜೂರ : ಅವರ ಮನೆಯವರು ಜಾತ್ರೆಯಿಂದ ಬೆಂಡುಖರ್ಜೂರವನ್ನು ತಂದಿದ್ದಾರೆ (ಕೂಂ). [<ಸಂ. ಪಿಂಡಖರ್ಜೂರ]

**ಬೆಂಡುಗ** 'ಬೆಂಡಿಗ' ನೋ.

**ಬೆಂಡುಗರೆ** (ಕ್ರಿ). ಬೆಂಡಿನಂತಾಗು; ಸತ್ತ್ವವನ್ನು ಕಳೆದುಕೊಳ್ಳು; ನಿಸ್ಸತ್ತ್ವಗೊಳ್ಳು : ಮದನುದ್ದಂಡದೇವಿಯೊ . . . ಪುಂಡರೀಕಾಂಬಕಿಯೊ ಯಿಾಚಲು ಗಂಡರಾರೆಂದೀಕ್ಷೆದಲಿ ಕಣ್ಬೆಂಡುಗರೆದೊರಗಿದರು ನೃಪಸುತರರ್ಧಮೂರ್ಛೆಯಲಿ (ಕರಾಭಾ. ೨೦೭-೩೩); ಚಿಂತೆಯಿಂದ ನನ್ನ ಹೃದಯವು ಬೆಂಡುಗರೆದಿದೆ (ಶ್ರೀರಾಪ. ೦೦). [ಬೆಂಡು + ಕರೆ$_2$ (<ಕಱೆ$_1$)]

**ಬೆಂಡುಗಳೆ** (ಕ್ರಿ). ಬೆಂಡಿನಂತೆ ಸತ್ತ್ವಹೀನವನ್ನಾಗಿ ಮಾಡು,–ನಿಸ್ಸತ್ತ್ವಗೊಳಿಸು : ಕಂಡ ಕಡೆಗೆ ನಡೆನಡೆದಳುಕದೆ ಕಾಲುಗಂಡ ಕರಾಳಿವೆಣ್ಣುಗಳ ಅಂಡಲೆದವರೊಳು ಬಳೆದೊಳ್ಳೀಹವ ಬೆಂಡುಗಳೆದು ಬಿಡಿಸುವುದು (ಶಾಂ. ೬-೭೭). [ಬೆಂಡು + ಕಳೆ$_1$]

**ಬೆಂಡುನೆಗೆ** (ಕ್ರಿ).=ಬೆಂಡುಗರೆ : ಆ ರಮಣಿ ಕೃತಕಶೋಕಾಸಾರದ ಪೊನಲೊಳಗೆ ಬೆಂಡುನೆಗೆದಿರ್ದುಮದೇಂ ರಾರಾಜಿಸಲಾರ್ತಳೊ ತಿಳಿನೀರೊಳಗಣ ಚಂದ್ರಕಲೆಯ ನೆಬಲೆಂಬಿನೆಗಂ (ಶಂಕಾಪುಶಾ. ೯-೩೭); ಕುಮುದ ಕೇಸರದ ರಜದೊಳರ್ದ ಚರಣಚಯಮಂ ಕೀಲಾಲಾಜದೆ ಪಟವಂಡಿನೊಳ್ಬೆಂಡುನೆಗೆದು ಪೊರಳ್ದು ನರಳ್ದು ಮೊರೆವ ಮಱಿದುಂಬಿಗಳ ಗಱಿಯಂ ಗಿಱ್ಱನೆ ತೆಗೆದು ನೆಗಪಿಯುಂ (ಲೀಲಾವ. ೩-೨೦ ವ). ೨. ಬೆಂಡಿನಂತೆ ಹಗುರವಾಗಿ ತೇಲು : ಪ್ರಧಾನಿ ಹರಿಯಾತಂ ಪೋಗುತಮೊಂದು ಸರಸಿಯೊಳ್ ಶಿಲೆಯತುಳಂ ನೀರೊಳಗೆ ಬೆಂಡುನೆಗೆದಿರೆ ಕಂಡಂ (ರರ್ಮಶ. ೩-೩). [ಬೆಂಡು + ನೆಗೆ$_1$]

**ಬೆಂಡುಮಗುಚು** (ಕ್ರಿ). (ನೀರಿನಲ್ಲಿ) ಬೆಂಡಿನಂತೆ ಅಡಿಮೇಲಾಗು; ಬೋರಲಾಗು : ಮುಡಿಯ ಪೂವಿನ ರಜದಿಂ ವಾಸಿಸಿದ ನೀರ ಕಡಿಂ ದಾಸವದೊಳ್ ಸೊರ್ಕಿ ಬೆಂಡುಮಗುಚುವ್ವು ಮೀಂಗಳ್ (ಶಂಕಭಾ. ೩-೬೩). [ಬೆಂಡು + ಮಗುಚು]

**ಬೆಂಡುಮರ** 'ಬೆಂಡುವರ' ನೋ.

**ಬೆಂಡುಮರಲ್** (ಕ್ರಿ). ಸತ್ತ್ವವನ್ನು ಕಳೆದುಕೊಳ್ಳು ; ಜಡತ್ವವನ್ನು ಹೊಂದು : ನಿಷಾದಿತಿಯೆಂಬ ಬೇಡಿತಿಗಮಯ್ಯರ್ ಮಗಂದಿರ್ಗಮುಣ ಲಿಕ್ಕಿದೊಡೆ ತಣಿಯುಂಡು ಬೆಂಡುಮರಲ್ದು ಮಱಸುಂದಿದರ್ (ಶಂಕಪಾ. ೩-೪ ವ). [ಬೆಂಡು + ಮರಲ್$_1$]

**ಬೆಂಡುವರ,** ಬೆಂಡುಮರ (ನಾ). ಪೊಳ್ಳಾದ ಮರ; ಹಗುರವಾದ ಮರ : ಗುಂಡಿಗೆಗೊಡ ಕೊಪ್ಪರಿಗೆ ಡೋಣಿ ಪಱಗೋಲು ಬೆಂಡುವರಗಳನು ತರಿಸಿ ಮಂಡಲಪತಿ ಸುತರೊಡನೆಳ್ತರಲು (ಕುರಾಸಾಂ. ೨೭-೦೦೦). **ಬೆಂಡುಮರ** : ನರಸಿಂಹನ ಮೈಯಿಂದ ಬೆವರು ಬಸಿದು ಶರೀರ ಬೆಂಡು ಮರದಂತಾಯಿತು (ಮಗಪಾಂ. ೯೯). [ಬೆಂಡು + ಮರ$_1$]

**ಬೆಂಡುವಾಱಿಸು** (ಕ್ರಿ). ಬೆಂಡಿನಂತೆ ಹಾರಿಸು ; ನಿಸ್ಸತ್ತ್ವಗೊಳಿಸು: ತಿಱಿಕಲ್ಲಾಡುವೆನೋ ಕುಲಾದ್ರಿಚಯಮಂ . . . ಮೇರುವಂ ಪಿಱಿತೇಪೂದಿಯ ಬೆಂಡುವಾಱಿಸುವೆನೋ ಬ್ರಹ್ಮಾಂಡವಂ ಪೊಟ್ಟಿಸೆನೋ (ಜಗ. ೭-೩೩). [ಬೆಂಡು + ಪಾಱಿಸು]

**ಬೆಂಡುವೋಗು** (ಕ್ರಿ). ಬೆಂಡಿನಂತೆ ಹಗುರವಾಗು; ನಿಸ್ಸತ್ತ್ವಗೊಳ್ಳು: ಬೆಂಡುವೋದುವೋ ಬಂಡೆ ಎನೆ ಮಹದ್ವಾರದಾ ಪ್ರಾಕ್‌ಶಿಲಾಶಕಲಂಗಳಂ ತಬ್ಬಿ ಪಿಡಿದಲುಗಿ ಕಿತ್ತು ಪೊತ್ತೆತ್ತಿದರು (ಶ್ರೀರಾಪಾ. ೩೪೦-೦೯೭). [ಬೆಂಡು + ಪೋಗು$_1$ (<ಪೋ$_1$)]

**ಬೆಂಡುಳಿಗೆ** 'ಬೆಂಡಿಗ' ನೋ.

**ಬೆಂಡೆ** (ನಾ). ಒಂದು ಬಗೆಯ ಗಿಡ ಮತ್ತು ತರಕಾರಿಯಾಗಿ ಬಳಸುವ ಅದರ ಕಾಯಿ : "ಲೋಮಿಕೆಯೆನಲ್ ಬೆಂಡೆ" (ಮಂಗರಾ. ೯೩-೪೭) ; ಹಸಿಯಲ್ಲವಂ ಹಾಕಿ ಬೆಂಡೆಯ ಬೇರಿನಿಂದ ತಿರುಹಿ ಕದಡಿ ಪನ್ನೀರ ಸೇವಂತಿಗೆಯ ಹೂವಿಕ್ಕಿ (ಸೂಶಶಾ. ೨-೨೩) ; ಇತರ ತರಕಾರಿಗಳ ಜೊತೆಯಲ್ಲಿ ಬೆಂಡೆಕಾಯಿ ಬೆಳೆಸಿದರೆ ಮಿಶ್ರಬೆಳೆಯಿಟ್ಟಂತಾಗಿ ಬಗೆಬಗೆಯ ತರಕಾರಿ ಸಿಗುವುದು (ತರಜ. ೦೮).

[ ದೇ.॥ ತಮಿ. ವೆಣ್ಟೈ, ವಣ್ಟೈ ; ಮಲ. ವೆಣ್ಡ ; ತುಳು. ಬೆಂಡೆ : ತೆಲು. ಬೆಂಡ. / ಸಂ. ಭಿಂಡ, ಭಿಂಡಕ, ಭಿಂಡಾ, ಭೇಂಡಾ, ಭೇಂಡೀ, ಹಿಂ. ಭಿಂಡೀ; ಮರಾ. ಭೇಂಡೀ ]

**ಬೆಂಡೇರು** (ಕ್ರಿ). ಸತ್ತ್ವವನ್ನು ಕಳೆದುಕೊಳ್ಳು ; ದುರ್ಬಲವಾಗು : ಆ ಬಗೆಯ ಕಂಡು ಪರಿ ಮೊಗ್ಗಿದನು ಹರಸೆದೆ ಬೆಂಡೇರಿತು (ಪಾಗಹ. ೨೦-೦).

[ ಬೆಂಡು + ಏರು$_1$ (< ಏಱ್$_1$) ]

**ಬೆಂಡೇಳ್** 'ಬೆಂಡೇೞ್' ನೋ.

**ಬೆಂಡೇಳು** 'ಬೆಂಡೇೞ್' ನೋ.

**ಬೆಂಡೇೞ್**, ಬೆಂಡೇಳ್, ಬೆಂಡೇಳು (ಕ್ರಿ). ೧. (ನೀರಿನಲ್ಲಿ) ಬೆಂಡಿನಂತೆ ಹಗುರವಾಗಿ ಚಲಿಸು ; ತೇಲು : "ಬೆಂಡೇೞ್ವುದೆಂದುಂ ತೇಂಕೆಂದುಂ ತೇಲ್ವುದು" (ಕಶಾ. ೭೧-೬೨೩). ೨. ಸತ್ತ್ವಹೀನವಾಗು : ದುರ್ಬಲವಾಗು : ಜಡವಾಗು : ಎನಸುಂ ಮಿಗಾನೇಕ್ಷಣಂ ಸೋಲದ ರಸದೊದವಿಂ ಸೊರ್ಕಿ ಬೆಂಡೇೞ್ವನಂ . . . ಅನುನಯದಿಂದಾಕೆಯೊಳ್ ಕೂಡಿದಪ್ಪೆಂ (ಲಾದಂಲು. ೩೨೩) ; ಪೊಯ್ವುತ್ತಬ್ಧಿಯಂ ಘೋರರವಮೊಗೆಯೆ ಪಳಂಚಿತ್ತು ನಕ್ಷತ್ರಮಾರ್ಗಾಂತರಮಂ ಬೆಂಡೇೞ್ವಿನಂ ಪೋಗೊದೆದುದು ದಿವಮಂ . . . ರಾಮಕೃಷ್ಣಪ್ರಬಳಶರಭುಜಾಸ್ಫಾಲನಾಭೀಳನಾದಂ (ಜಗ. ೬-೬೨) : ಪ್ರಸೂನಾಂಬಕಂಗಳ್ ಸಲೆ ಬೆಂಡೇೞಲ್ . . . ನಲವಿಂದಂ ಕೂಡಿದಂ ತನ್ನನವನಿತೆಯೊಳಾತ್ಮೀಯಕಾಂತಂ ವಸಂತಂ (ಕುಸುಮಾ. ೩-೨೯). **ಬೆಂಡೇಳ್** : ೨. ತಿಳಿನೀರನೀಂಟಿ ನೆಳಲೊಳ್ ಪಟ್ಟಿರ್ದು ಬೆಂಡೇಳ್ವಲೋಳೆ ಪಿಂಡಿಲ್ಗಟ್ಟಿ ಮೇವಂ ಮುಗುಳ್ಚಿ . . . ಕಾಳರಕ್ಕಸರಂಶಿರ್ದ ಕಾಳ್ಕೊಣಂಗಳಿಂ (ಗಿಂಕ. ೦-೦೨೮ ಪ) ; ರಕುತದ ಕಡಲೊಳಗೆ ಬೆಂಡೆದ್ದು ನೆಗೆದುದು ಕೋಟಿಪಾಯುದಳ (ಕುಮ್ಯಾದ್ರೋ. ೬-೯೮) ; ಆರ ಸಂತೈಕೆಗುಂ ಮುಳ್ಗಲಾರದತಿಸಂತಾಪದಿಂದೆ ಬೆಂಡೇಳ್ವನಂ, ಭರತನಂ, ಬಂದೆಳ್ಚರಿಸಿದತ್ತು ಗುರುವಸಿಷ್ಠನ ವಾಣಿ (ಶ್ರೀರಾಮಾ. ೦೦೬-೦೯೬). **ಬೆಂಡೇಳು** : ೨. ವನಚರಶ್ರೇಣಿ ಬೆಂಡೆದ್ದು ತೇಲಿದುವು (ಮೋಹತ. ೦೯-೯೩) ; ಆ ತೆರೆನೊರೆಗಳ ನೆಲೆಯುಲ್ಲಿ ಮೂಲೋಕವೇ ಮುಳುಗಿ ಬೆಂಡೇಳಬಹುದು (ಮುಂಗಾರು. ೨).

[ ಬೆಂಡು + ಏೞ್$_1$ ]

**ಬೆಂಡೇೞಿಸು** (ಕ್ರಿ). ಬೆಂಡಾಗುವಂತೆ ಮಾಡು ; ನಿಸ್ಸತ್ತ್ವಗೊಳ್ಳುವಂತೆ ಮಾಡು : ಬಿಮ್ಮನೆ ಬಿಗುಪೇಱಿ ಮಿಱಿ ಪೊಣ್ಮುವ ಮೊಲೆಗಳ್ ಪಿಮ್ಮೊಸೆದೋರ್ಪನೆಗಂ ಮುಸದುಮ್ಮಹದಿಂ ಬಿಗಿದು ಬಿಗಿದು ಬೆಂಡೇೞಿಪನೋ (ತಳಿ. ೬-೨೦೯).   [ ಬೆಂಡೇೞ್ + –ಇಸು$_3$ ]

**ಬೆಂಡೋಲೆ** (ನಾ). ಒಂದು ಬಗೆಯ ಕಿವಿಯ ಆಭರಣ ; ಓಲೆ : P ಹಿಂದಿನ ಕಾಲದಲ್ಲಿ ಕಿವಿಗೆ ಬೆಂಡನ್ನೇ ಓಲೆಯಂತೆ ಧರಿಸುತ್ತಿದ್ದರು: ಬೆಂಡೋಲೆ ಮುಂಜುಹು ಮಾಗಾಯಿ್ . . . ಗೊಂಡೆಯದುಡಿದಾರಂ ಭೂಮಂಡಲಪತಿಯಾತ್ಮಜಂಗೆ ರಂಜಿಸುತಿರ್ದಂ (ವಶಕು. ೨-೬೩) ; ಮಾಂಗಾಯಿ ಬಂದಿ ಬೆಂಡೋಲೆ ಸಿಂಗಾರವಾಗಿ ಮತ್ತಾ ಬಾಲಕೇಶವ ನಂಗಣದೊಳಗಾಡುತಿರಲು (ಶೀಬಿಶಂ. ೦೩-೮೩).   [ ಬೆಂಡು + ಓಲೆ ]

**ಬೆಂತರ**, ವೆಂತರ (ನಾ). ಭೂತ ; ಪಿಶಾಚಿ : ಎನಿಸುಕಾಲ ನಿಮ್ಮ ಪೂಜಿಸಿ ಏವೆನಯ್ಯಾ ಮನದಲಿ ದೃಢವಿಲ್ಲದನ್ನಕ್ಕ ನಿಧಾನವ ಕಾಯ್ದಿರ್ದ ಬೆಂತರನಂತೆ ಆದೆನು ವಿಧಿಯೆನಗಾಯಿತ್ತು (ಬಸವ. ೯೯) ; ಕರವೆಸೆಯೆ ಸವೆದು ಬಂದುದು ಚರಣಾಯುಧಯುದಲು ಚಿತ್ರಪರಿಶೋಭೆಗೆ ಬೆಂತರನೊಂದಾಶ್ರೈಸಿದುದು (ಹುಪೋತ. ೩-೨೯) ; ಬೆಂತರ ದೈವಮೆಂಬವವು ವಹಿಲದಿಂದೊಂದೊಂದು ಕೆಲಸಕೆ ವಿಹಿತವಾಗಲು (ಬಸಪು. ೩೩-೩೦). **ವೆಂತರ** ; ನರ್ತಕಿಯರಾಟಗಳ ನೋಡಲು ಮುತ್ತುತಿಹ ವೆಂತರರ ಜಡಿಕೈದತ್ತ ತೊಲಗಿಸಿ (ಶಾಕ್ಯಶಾ. ೩೩-೩೭): ಹಿಂದೆ ಕುಳಿಕನ ದಿನದಿ ಹಾದರದಿಂದ ರುದ್ರನ ಲಿಂಗಭೇದನವೊದುದಾಧರಿಸಿರ್ದ ವೆಂತರನಾಗಿ ಪೂಜೆಯನು ನಿಂದು ತಾನೇ ಲಿಂಗನಾಗಿಹೆನೆಂದುದಾ ದಿನದಿಂದ (ಜಿಬ್ಯತು. ೬೨-೩೯) ; ಸುರರು ವೆಂತರಜ್ಯೋತಿರೇಂದ್ರರು ಉರಗ ವಿದ್ಯಾಧರರು ಸುರಕುಜಧರವು ಫಲಪುಂಜದಲಿ ಕಾಲತ್ರಯವು ಪೂಜಿಪರು (ಬಾಗಹ. ೦-೧೦೯).   [ < ಸಂ. ವ್ಯಂತರ ]

**ಬೆಂತರಬಲ್ಲಹ** (ನಾ). ಪಿಶಾಚಿಗಳ ಒಡೆಯ ; ಭೂತನಾಥ; ಶಿವ : ಪಲಗಣ್ಣಂ . . . ಬೆಂತರಬಲ್ಲಹನುಜ್ವಲಿಸುವ ಜೋಯಿಸರಾಣ್ಮಂ ಮಿಗದ ರಸಂ ಮೊದಲಾಗಿ ಸಲೆ ಸೊಗಯಿಸುವ ಶತೇಂದ್ರರ್ . . . ಜಿನಪನ ಗಂಧಕುಟಿಯೊಳಿದಗಿಱಿದಿಪುದು (ಜಯುಕಾ. ೦೬-೩೯).

[ ಬೆಂತರ + ಬಲ್ಲಹ$_1$ ]

**ಬೆಂತರಿ** (ನಾ). ಹೆಣ್ಣುಭೂತ : ಪಿಶಾಚಿನಿ : ತತ್ಪುರುಷಮ್ಯಾಲಿ ಮಡಿದು ಬೆಂತರಿಯಾಗುವಳಿಸಿ ಕಾಳಿವೆಸರನಾಂತು ಕರಂ ಪಿಂತಣ ಭವದನೆ ನೆನೆಯಿತ್ತು (ಜಯುಕಾ. ೨೦-೪೨).   [ ಬೆಂತರ + –ಇ$_2$ ]

**ಬೆಂದ** 'ಬೇ$_1$' ಪರಾ.

**ಬೆಂದಗುೞ್** (ಕ್ರಿ). ಬೆನ್ನಟ್ಟು ; ಓಡಿಸಿಕೊಂಡು ಹೋಗು : ಅಂದಮ ದಟಲೆಯೆ ಮನಸಿಜನಂದಮಾನಳವಿಗಳೆದು ಕೇಸರಿಯಳವಂ ಬೆಂದಗುಳೆ ವಜ್ರಬಾಹು ಪುರಂದರರ್ (ಕಂಠಾಮಾ. ೦-೦೩೭) ; ಚಾರುದತ್ತಂ ಚಾಪಹಸ್ತನಾಗಿ ಭೋರೆಂದಿಸಲವಂದಿರಂ ಬೆಂದಗುಳ್ವ ತಾನಂದು ಮಗುೞ್ದಂತೆ ಪೋಗೆ (ನೇಬಿಪು. ೯-೭೦ ವ).   [ ಬೆಂ$_1$ (< ಬೆನ್) + ತಗುೞ್$_1$ ]

**ಬೆಂದವಾಡಿ** (ನಾ). ಒಂದು ನಾಡಿನ ಹೆಸರು: ದೇವಜ್ಜಿಯ ಮೆಚ್ಚಿ ಬೆಂದವಾಡಿಯ ಸೋಮಶಿವರಂ ಬರಿಸಕ್ಕಿ ಸಿವಸ್ಥಾನಕ್ಕೆ ಮುನ್ನ ಕೊಟ್ಟ ಭೂಮಿ (ಎಕ. III (R), ಗುಂಡ್ಲುಪೇ. ೮೨-೭ ; 995).   [ ? + ಪಾಡಿ$_2$ ]

**ಬೆಂದಿ** (ನಾ). (?) : ಮಱುವಾರ್ತೆಗೊಳ್ಳನ್ ಬೆನ್ದಿಯುಂ ಕಳಚುಮಾಱಿಡಿಯುಮಾಗಳಿದನೆ ಕಾದಿ ತನ್ನಾಳ್ದಾತ ಸಯೆ ಬಾಱಿನ್ (ಸೌಇಇ. XI–i, ೦೦-೭ ; 865).   [ ? ]

**ಬೆಂದು** 'ಬೇ$_1$' ಪರಾ.

**ಬೆಂದೊಗಲ್** 'ಬೆಂದೊವಲ್' ನೋ.

**ಬೆಂದೊವಲ್**, ಬೆಂದೊಗಲ್ (ನಾ). ಬೆನ್ನಿನ ಚರ್ಮ : ಮೃಗಕುಳಮಾಸೆಗೆಯ್ಮೆ ಮೃಗತೃಷ್ಣಿಕೆಯಂ ಜಳಮೆಂದು ತೃಷ್ಣೆಯಿಂ ಪಗಲಿಱಿವನ್ನೆಗಂ ಪರಿದು ಗಂಟಲುರಂಬರಮಾಱಿ ಬೆಂದೊವಲ್ ತೆಗಳೆಗೆ ಬೀೞೆ . . . ನಡೆಗೆಟ್ಟುವು ತೃಷ್ಣೆಯಿನಾರೋ ಬೇಯದರ್ (ಕಂಠಾಮಾ. ೭-೯೩) ; ತೊಡರ್ದೊಡರಾತಿ ಭೂಭುಜರ ಬೆಂದೊವಲಂ ಪೆಡಮುಂಡೆಗೆತ್ತಿ ಕೂಗಿಡಸದೆ . . . ಮಾಣ್ಬನೆ ಸಮರದೊಳ್ (ಎಕ. XI, ದಾವಣ. ೩೩-೨೬ ; 1160) ; ಪಂದಲೆ, ಬೆಂದೊವಲ್ (ಕಬ್ಬಿನು. ೮೦ ಕೃಯೋ). **ಬೆಂದೊಗಲ್** : ಬೆಂದೊಗಲ್ ಪೊರೆವೊರೆಯೆರ್ದು ಸಾಯದ ಮೃಗವ್ರಜವಿಲ್ಲ . . . ಆ ನಿದಾಘದೊಳ್ (ಸೂಕ್ತಿಸು ೦೭-೯೩).   [ ಬೆಂ$_1$ (< ಬೆನ್) + ತೊವಲ್$_3$ (< ತೋಲ್$_1$) ]

**ಬೆಂಪೂರ್**, ಬೆಂಪೂರು (ನಾ). ಒಂದು ಊರಿನ ಹೆಸರು : ಎಱೆಯಪಂ ಮೆಚ್ಚಿ ಇರುಗಱ್ಗೆ ನಾಗತ್ತರವಟ್ಟಂಗಟ್ಟಿ ಬೆಂಪೂರ್ಪನ್ನೆರಡುಮಂ . . . ಇತ್ತನ್ (ಎಕ. IX, ಬೆಂಗಳೂ. ೮೩-೩ ; ಸು. 890). **ಬೆಂಪೂರು** : ಬೆಮ್ಪೂರು ತೊವಗೂರು . . . ಪರವೂರು ಕೂಡಲೆ ಇನಿತುಮಂ ಪೊಲಮೇರೆ ಸಹಿತ ಮಿತ್ತನ್ (ಎಕ. IX, ಬೆಂಗಳೂ. ೮೩-೬ ; ಸು. 890).   [ ? + ಊರ್ ]

**ಬೆಂಪೂರು** 'ಬೆಂಪೂರ್' ನೋ.

**ಬೆಂಬಂಪಾಟ್** (ನಾ). ಒಂದು ಊರಿನ ಹೆಸರು (?) : ಉತ್ತರತಃ ಬೆಮ್ಬ ವ್ಪಾಟ್ ಪುಣಸೆಪಟ್ಟ ಸಹಿತಂ ಪಲ್ಲವತಟಾಕಮಿತಿಗ್ರಾಮಸ್ಯ ನಾಮಧೇಯಂ ಕೃತ್ವಾ (ಎಕ. III. ಮಂಡ್ಯ. ೦೦೩-೩೬ ; 713). [ ? + ಪಾಟ್]

**ಬೆಂಬಡಿಗೆ** (ನಾ). ಬೆನ್ನಿಗೆ ಬಾರಿಸುವ ಕೋಲು, – ಬಡಿಗೆ : ಬಡದೆಮ್ಮ ಕಂಡ ಜೀವರ ಭವವ್ರಜದ ಬೆಂಬಡಿಗೆ . . . ದುರಿತವನುರುಹಿ ಸುಡುವ ಕಿಚ್ಚಿಂದೆಸಿಪ ತುಂಗಭದ್ರಾನದಿಯನವನೀಶ ನೋಡು (ಹತಆ. ೩-೬೪) : ಸಂಶಯಪಿಶಾಚಕ್ಕೆ ಬೆಂಬಡಿಗೆಯಾಗಿ ಐತನ ಮನಸ್ಸು ಪ್ರಫುಲ್ಲಿತವಾಯಿತು (ಮಲಿಕ. ೨೦೦). [ಬೆಂ$_1$ (< ಬೆನ್) + ಬಡಿಗೆ$_1$]

**ಬೆಂಬಡೆ** (ನಾ). (?) : ನಡಸುವ ದತ್ತಿ ಪತ್ತಿಯ ಹೇಳು ೧೦ ಕೆ ಪಣ ೧ ಕೊಡಲ್ಲಿ ಹತ್ತಿ ಪಲ ೫ ಬೆಂಬಡೆಯು ಮಳವೆ ೧೦ ಕೆ ಪಣ ೧ (ಎಕ. IX (೩). ದೊಡ್ಡಬ. ೩೦-೩೪ ; ತು. 1250). [ ? ]

**ಬೆಂಬತ್ತಳಿಕೆ** (ನಾ). ಬೆನ್ನಿಗೆ ಕಟ್ಟಿಕೊಳ್ಳುವ ಬಾಣದ ಕೋಶ : ತೂಣೀರ : ಕಳಚಿದನು ಸೀಸಕವ ಬೆಂಬತ್ತಳಿಕೆಯನು ಪಜ್ಜಾಂಗಿ ಮೊಚ್ಚೆಯ ಬಿಲುಸರಳನಿಳುಹಿದನು ರಥದಲಿ ದೈತ್ಯರಿಪು ಸಹಿತ (ಕುಮ್ಮಾ.ಶ. ೦೬-೪). [ಬೆಂ$_1$ (< ಬೆನ್) + ಬತ್ತಳಿಕೆ (< ಪತ್ತಳಿಕೆ$_1$) ]

**ಬೆಂಬತ್ತು**, ಬೆನ್ನುಹತ್ತು (ಕ್ರಿ). ೧. ಹಿಂಬಾಲಿಸು ; ಅನುಸರಿಸು : ಮನವೇ ಕೂಡಲ ಸಂಗಮ ದೇವರ ಬಿಡದೆ ಬೆಂಬತ್ತು (ಬಸವ. ೨೬೬). ೨. ಓಡಿಸಿಕೊಂಡು ಹೋಗು ; ಬೆನ್ನಟ್ಟು : ಬಡಪಂ ಬೆಂಬತ್ತೆ ಮೇಪಂ ಮಾಜಿದು . . . ವಿಂದಿರ್ದುದೋರೊಂದೆಡೆಯೊಳ್ ತಾಜಲ್ಗೊತ್ತಂಬಡಿದು ವ್ಯಾಗವ್ಯಾಗೀವ್ರಂದವೋರಂದದಿಂದಂ (ಚಂದ್ರಪ್ರ. ೪-೪೬) ; ದುಶ್ಶಳೆಯೈದೆತನ ಬಯಲಾಯ್ತೆನುತ ಬೆಂಬತ್ತಿದರು ಖಳನ (ಕುಮ್ಮಾ.ಶ. ೨೨-೨೫). **ಬೆನ್ನುಹತ್ತು** : ೧. ಆಕಾಶ, ಪಾತಾಳ, ಎರಡರಲ್ಲೂ ಇಲ್ಲ ತಾಳ ಮೇಳ ಭೂಗೋಳಕ್ಕೆ ಬೆನ್ನುಹತ್ತಿಹುದು ಬೇತಾಳ (ಸರಪು. ೦೫-೬) ; ಆ ಕೊರಗು ಒಂದೆರಡು ದಿನಗಳವಲ್ಲ, ವರ್ಷಗಳವಲ್ಲ ಆತನ ಬದುಕಿಗೇ ಬೆನ್ನುಹತ್ತಿದ ಮಹಾಭೂತ ವದು (ಜಕಜ. ೦೦೦). [ಬೆಂ$_1$ (< ಬೆನ್) + ಪತ್ತು$_1$]

**ಬೆಂಬದಿ** (ನಾ). ಹಿಂಭಾಗ ; ಹಿಂಬದಿ : ಪದದ ಘಟ್ಟಣೆಯಿಂದ ಶಿಖರಗಳು ದುರಿದುವು ತರುಕೋಟಿಗಳು ಬೆಂಬದಿಯೊಳಗಿರಿದವಬುಧಿ ಇಬ್ಬಗೆಯಾಯ್ತು (ಅರ್ಜುನ. ೪-೩-೨೬). [ಬೆಂ$_1$ (< ಬೆನ್) + ಬದಿ$_1$]

**ಬೆಂಬರಂ** (ಅ). ಬೆನ್ನಿನ ವರೆಗೆ ; ಮಣಿಯಿಂ ಬೆಂಬರಮೆಯ್ದೆ ಸೀಳ್ದ ಶಬಸಂ ಘಾತಂಗಳಂಗುಷ್ಠದಿಂ ತೊಡೆಯಿಂ ತಾಪ್ಪಿಸಮೆಯ್ದೆ ಪೋಟ್ಟ ಪೆಣಗಳ್ . . . ಕರಂ ಭೀಕರಂ (೦೬ನಪ. ೬-೬). [ಬೆಂ$_1$ (< ಬೆನ್) + – ಬರಂ (< – ವರಂ)]

**ಬೆಂಬರಿ** (ಕ್ರಿ). ೧. = ಬೆಂಬತ್ತು ೧ : ಈ ಮರ್ತ್ಯದೇಹದಿ ದಿವಿಜಪತಿಯೋ ಮೇಣ್ ಜಯಂತನೊ ಇವನೆನುತ ಬೆಂಬಳಿ [ರಿ] ದು ಕಾಪ್ಯಾಂಗಾರ ಬೆಜಗಾದ (ಜೀವಂಧ. ೦೫-೦೮). ೨. = ಬೆಂಬತ್ತು ೨ : ಕುಮಾರನಾ ಮಂದರಾನೆಯನು ಬೆಂಬರಿದು ಮಿಗೆ ಸರದೋಜಿ ಕೀಳುತದು . . . ಭೋರನೆ ಬಿಟ್ಟ ಕಣು ಬಿಗುಪೊಗದಿನಿದಿರಾಯ್ತು (ಸಾಳ್ವಭಾ. ೦೬-೦೩). ೩. ಹಿಂಜರಿ ; ಹಿಮ್ಮೆಟ್ಟು : ಸೂಕರನಾ ಕರಿಗಂಜಿ ಪೊಕ್ಕು ಬೆಂಬರಿವರಿವಂತು ಪೆರ್ಬಿದಿರನೆತ್ತಿದೊಡಂತದು ತಳಗೆ ಮೇಘಮಂ (ಸೂಕ್ತಿಸು. ೩-೬೪). [ಬೆಂ$_1$ (< ಬೆನ್) + ಪರಿ$_2$]

**ಬೆಂಬಲ**, ಬೆನ್ನುಬಲ (ನಾ). ೧. ಹಿಂದಿರುವ ಸೈನ್ಯ ; ಹಿಂದೆ ಬರುವ ಪಡೆ : ಮಲಯಮಾರುತನ ಬೆಂಬಲಮುಮಂ ಚೈತ್ರಮಿತ್ರನ ಮುಂಬಲ ಮುಮಂ . . . ದರ್ಪಕನ ದರ್ಪಣಿಬೆರಸಟಕುಳಿಗೊಂಡು ಗಂಡೇಜಿದ ಗಂಡ ಗಾಡಿ ರೂಢಿವಡೆಯೆ (ಅನಂತ. ೬-೨೨ ವ) ; ನೀ ಮುಂದಲೆಯ ಹಿಡಿದೆಳ ಕೊಂಡು ಬಾ ಬೆಂಬಲದಿ ಬಂದಿದಿರಾಗಿ ಕಾಳಗಗೊಟ್ಟು ಮಾರಾಂತು (ದೇವೀಮ. ೬-೨). ೨. (ಅಲಂ) ಸಹಾಯ ; ಆಸರೆ ; ನೆರವು : ಪಲವುಂ ಜನ್ಮದೊಳಾದ ನಿನ್ನ ಕೆಳೆಯಂ ಬಂದಪ್ಪನಾತಂಗೆ ಬೆಂಬಲಮಿನ್ನೀಂ ನಿನಗಾತಂ (ಕುವಲಯಾ. ೪-೩೩) ; ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲವಾಗಿ ತೀರ್ಚವೆ ಗಡಂ ಕೊಂಡಾಗ್ಗಿಯಂ ಸುಗ್ಗಿಯೊಳ್ (ಅತ್ಯು. ೬-೨೮) ; ಬೆಂಬಲಕೆ ತಾನೆಂದು ಬಯಲ ವಿಡಂಬದಲಿ ಕಾಳೆಗವ ಮಸೆದರೆ ಸಂಚಿ ಕಟ್ಟಿರಿ ಕೃಷ್ಣನನು (ಕುಮ್ಮಾ.ಶಾ. ೦-೩೪). **ಬೆನ್ನುಬಲ** : ೨. ಬೆನ್ನುಬಲವಾಗಿ ಪರಿಯ ದ್ದರೆ ಸರ್ವ ತನ್ನಿಂದ ತಾನೇವೆ ಪ್ರಾಪ್ತವಾಗುವುವು (ಏಕಾಸ. ೬೬-೪). [ಬೆಂ$_1$ ( < ಬೆನ್) + ಬಲ$_3$]

**ಬೆಂಬಲಂಬಾಯ್** (ಕ್ರಿ). ಸಹಾಯಕ್ಕೆ ಹೋಗು ; ನೆರವಿಗೆ ಧಾವಿಸು : ಪಾಂಚಾಳರಾಜತನೂಜೆಯ ಮಾತಿಂಗೆ ಬೆಂಬಲಂಬಾಯ್ವಂತೆ ಭೀಮಸೇನ ನಿಂತೆಂದಂ (ಪಂಪಭಾ. ೬-೫೨ ವ). [ಬೆಂಬಲ + ಪಾಯ್$_1$]

**ಬೆಂಬಲಿ** (ಕ್ರಿ). (ಸ್ಥಿತಿಯನ್ನು ಅನುಸರಿಸಿ) ಹೆಚ್ಚಾಗಿಸು : ವೃದ್ಧಿಯಾಗಿಸು : ಭೋರೆನೆ ಬಸಿಜುಬ್ಬೆ ಕರಂ ಪೂರಿಸುಗುಮಪಾನವಾಯು ಜಠರ ಮಾನದನಂತಾರಯ್ಯಿಂ ಕಡೆಗಣ್ಣಿಂ ನೀರಂ ಬೆಂಬಲಿದು ತೋರ್ಪೊಡಂ ಮರಣಭಯಂ (ಅಭ್ಯಾ. ೬-೫೪). [ಬೆಂ$_1$ (< ಬೆನ್) + ಬಲಿ$_1$ (< ಬಲ್$_2$)]

**ಬೆಂಬಲಿಗ** (ನಾ). ಸಹಾಯ ಮಾಡುವವನು : ನೆರವಿಗೆ ಬರುವವನು : ಅವನು ಆರಾಧಕನ ಹೃದಯದಲ್ಲಿ ನಿಂತು ಮಿತ್ರನಂತೆ ಬೆಂಬಲಿಗನಾಗಿ ಮುಕ್ತಿಪಥಕ್ಕೆ ಕರೆದೊಯ್ಯುತ್ತಾನೆ (ಶಾರದ. ೨೯೩) ; ಬೆಂಬಲಿಗರ ಬಲವಿಲ್ಲದೆ ಮುನ್ನುಗ್ಗಿ ಮುಖಭಂಗಪಡಿಸಿಕೊಳ್ಳಬೇಕೇಕೆ ? (ಶಾಶ೬೦. ೯೯). [ಬೆಂಬಲ + – ಇಗ]

**ಬೆಂಬಲಿಸು** (ಕ್ರಿ). ೧. ಸಹಕರಿಸು ; ಒತ್ತಾಸೆ ನೀಡು : ಸನ್ನದ್ಧನಾಂ ಧರ್ಮಯುದ್ಧಕೊಡೆಯಾ ! ಬೆಂಬಲಿಸು ನನ್ನನೊಡೆಯಾ ! (ಗೀತಾಂ. ೬೧-೩೬). ೨. ಅನುಮೋದಿಸು : ಸಭೆಯಲ್ಲಿ ಸೇರಿದವರೆಲ್ಲರೂ ಅವನ ಮಾತನ್ನು ಬೆಂಬಲಿಸಿದರು (ರೂಢ). [ಬೆಂಬಲ + – ಇಸು$_3$]

**ಬೆಂಬಳಿ** 'ಬೆಂಬಟಿ' ನೋ.

**ಬೆಂಬಳಿಗೊಳ್** 'ಬೆಂಬಟಿಗೊಳ್' ನೋ.

**ಬೆಂಬಳಿವಿಡಿ** 'ಬೆಂಬಟಿವಿಡಿ' ನೋ.

**ಬೆಂಬಳಿಸು** (ಕ್ರಿ). ೧. = ಬೆಂಬತ್ತು ೧ : ಮಾತಾಡುವ ಅವಶ್ಯಕವಿಲ್ಲದೆ ಕಪಾಲಕುಂಡಲೆಯು ಬೆಂಬಳಿಸಿ ಬರುವುದರಲ್ಲಿ ಅದು ವ್ಯಕ್ತವಾಗುವುದು (ಕಪಾಲಕುಂ. ೩೪). ೨. = ಬೆಂಬತ್ತು ೨ : ಕಂಠರುಡನು ಕಂಡನು ಕಿವುಡನು ಕೇಳದನು ಕುಂಟನು ಬೆಂಬಳಿಸಿದನಯ್ಯ (ಪರಶ. ೩). [ಬೆಂಬಳಿ (< ಬೆಂಬಟಿ) + – ಸು$_1$]

**ಬೆಂಬಟಿ**, ಬೆಂಬಳಿ (ನಾ). ೧. ಬೆನ್ನಿನ ಭಾಗ ; ಹಿಂಬದಿ ; ಹಿಂದು : ಮುಹೂರ್ತಮಾತ್ರದೊಳ್ ಗಡ ಪದಿನೈದುಯೋಜನಮನೊರ್ವನೆ ಸಂಧಿಸಿ ಪೋದನೆಂದು ಪೇರಡವಿಯೊಳಾ ತುರಂಗವದನರ್ಕಳ ಬೆಂಬಟಿಯಂ ಮಹೀಭುಜಂ (ಕಾದಂಬ. ೬೨೦) ; ಗಟಿವಟಿಯ ಪಾವಿನಂತೆ ಬೆಂಬಟಿಯಂ ತಗುಳ್ದು ಪರಿತರೆ (ಸುಕುಮಾರ ೬-೫೩ ವ) ; ಅದೊಂದು ಕಂತುಕದ ಬೆಂಬಟಿಯೊಳ್ ಪೊಳೆವಾಡೆ ಕಣ್ಬೊಣರ್ ಸುಲಲಿತ ಸೆಂಡನಾಡಿ ಮುಬಾಗಾಡಿಸಿದಳ್ ಪರಿಯಂ ಸುಬುದ್ಧಿಯೊಳ್ (ಜಗು. ೫-೦೯). ೨. ಬೆನ್ನ ಹಿಂದೆಯೇ ಬರುವುದು ; ಹಿಂಬಾಲಿಸುವುದು ; ಅನುಸರಣೆ : "ಬೆಂಬಟಿ–ಹಿಂದೆ ಬರ್ಪುದು" (ಶಮದ. ಶು. ೦) ; ಅತೀವಘೋರತಪದಿಂ ಯತಿಗಳ್ ಮಿಗೆ ಕಾಣದಿರ್ಪ ವಿಟ್ಟುಲನನಂತರೀಕ್ಷಿಸಿ ನಿಜೇಚ್ಛೆಗೆ ಬೆಂಬಟಿಯಾಗಿ ತಂದ ನಿಶ್ಚಳಮತಿ ಪುಂಡರೀಕಮುನಿ ಶೀರದೊಳಿರ್ದಂ (ಪಕಸು. ೦೯-೬). **ಬೆಂಬಳಿ** : ೧. ಆತ ಬಿಟ್ಟುವ ಬಡಾವೆನು ಅವನ ಬೆಂಬಳಿಯ ಸಲುವೆನು (ಸಿದ್ಧವ. ೯. ೧೬೬-೬೨೯) ; ಸರಳುಗಳ ಬಳಿಸರಳು ಬೆಂಬಳಿಸರಳ ಹಿಂದಣ ಸರಳುಗಳ ಪಡಿಸರಳ ಸಾರದ ಸೋನೆ ಸದೆದುದು ವೈರಿವಾಹಿನಿಯ (ಕುಮ್ಮಾ.ಶ. ೨-೩೮). [ಬೆಂ$_1$ (< ಬೆನ್) + ಬಟ್ಟಿ$_1$]

**ಬೆಂಬಟಿಗೊಳ್**, ಬೆಂಬಳಿಗೊಳ್ (ಕ್ರಿ). = ಬೆಂಬತ್ತು ೧ : ಬಾಳ

ಮರಾಳಮಂ ಬಬಸಿ ಬೆಂಬಳಿಗೊಂಡೆಡೆಯಾಡುತುಂ (ಪುಷ್ಪಪು. ೩-೯೭). **ಬೆಂಬಳಿಗೊಳ್ :** ಆತಂಗೆ ಮುನ್ನಿತ್ತ ನಂಬುಗೆಯು ಬೆಂಬಳಿಗೊಂಡು ಪೋಗಿ ಮರ್ತ್ಯದೊಳ್ ತೊತ್ತುಗೊಂಡು . . . ಬರ್ಪೆಂ (ಜಂಬಚ. ೬-೫); ತುಂಬಿ ಪುಳುವಂ ಪಿಡಿದೊಯ್ವುದೊ ತಾನೆ ಪೋದುದೋ ಬೆಂಬಳಿಗೊಂಡು (ಕಕಳ. ೪೦). [ಬೆಂಬಳಿ + ಕೊಳ್$_1$]

**ಬೆಂಬಳಿವಿಡಿ, ಬೆಂಬಳಿವಿಡಿ** (ಕ್ರಿ). ೧. = ಬೆಂಬತ್ತು ೧ : ದೇವಿಯರ್ ಬೆಸಸಿದಂತೆ ಗೆಯ್ವೆನೆಂದಾ ಕಾಂತೆಯು ಬೆಂಬಳಿವಿಡಿದು ನಡೆವ ಶಿಷ್ಯನಂತೆ ಪೋಗೆಪೋಗೆ (ಕಾದಂಪೂ. ೬೪೦); ಎನಿತಾನುಮಱಸಿ ಕಾಣದೆ ಬೆಂಬಳಿ ವಿಡಿದೊಂದನುಮಾನದಿಂ ಸಹೇತುಕವನದೆಡೆಗೆ ಮಗುಟ್ದು ಬಂದನಾ ವಿಜಯ ನೃಪಂ (ಅಜಂಪು. ೧೦-೫೯). **ಬೆಂಬಳಿವಿಡಿ :** ೧. ಮಧುರ ತಲೆಗೇಱ ಅರ್ಥ ನೀಗಾಡಿ ಆ ಕಱುವಿನ ಬೆಂಬಳಿವಿಡಿದು ಭವ ಹರಿಯಿತ್ತು (ಬಸವಪು. ೩. ೫೭-೧೪೦); ನೆಳಲಂತೆ ಬೆಂಬಳಿವಿಡಿದು ಕಡಲಿನಂತೊಳಗು ದೋಱದೆ ವಿೞಿಚಿನಂತೆ ಸುಳಿದು ಸಾಮುದ್ರಿಕನಂತರ್ಥರೇಖೆಯ ತಿಳಿವುದು (ಅಂಕಶ. ೩-೦೫೪). ೨. ಬೆನ್ನಿನ ಮಾರ್ಗವನ್ನು ಹಿಡಿ; ಹಿಂಭಾಗವನ್ನು ಅನುಸರಿಸು : ಬೆಳೆದು ಕವಲೊಡೆದು ನೀಳ್ದ ಪ್ರವಾಳಜಾಳದಂತೆ ಬೆಂಬಳಿ ವಿಡಿದಿಳಿದ ಕೆಂಜೆಡೆಗಳಿಂ (ಬಸವ. ೪-೧೧). [ಬೆಂಬಳಿ + ಪಿಡಿ$_1$]

**ಬೆಂಬಾಯ್** (ಕ್ರಿ). ಬೆನ್ನೇರು; ಸವಾರಿ ಮಾಡು : ದಂತಮಂ ಮೆಟ್ಟಿ ಬೆಂಬಾಯ್ದು ತನ್ನಧಿಕಕರಣದಿಂ ಕರಿಮದವನುಡುಗಿಸಿದ ಕುವರನಂ ಖಚರ ನೊರ್ವಂ . . . ಜಿನಗೃಹದಲ್ಲಿ ತಂದಿರಿಸಿ ಪೋದಂ (ಜ್ಞಾಚಕಂ. ೦-೬೫). [ಬೆಂ$_1$ (< ಬೆನ್) + ಪಾಯ್$_1$]

**ಬೆಂಬಾಲಿಸು** (ಕ್ರಿ). ಹಿಂದೆ ಇದ್ದು ರಕ್ಷಿಸು; ಬೆಂಗಾವಲಾಗಿದ್ದು : ಕಾಪಾಡು : ತನ್ನಿಷ್ಟದಾದರ್ಶವಂ ಪೂಜಿಸೋಲ್ದೆಸಿ ಬೆಂಬಾಲಿಪುದೊ ಲಕ್ಷ್ಮಣನ ಧರ್ಮವಾತ್ಸಲ್ಯ ತಾಂ (ಶ್ರೀರಾದ. ೦೨೬-೬೪). [ಬೆಂ$_1$ (< ಬೆನ್) + ಪಾಲಿಸು]

**ಬೆಂಬಿಡಿ** (ಕ್ರಿ). = ಬೆಂಬತ್ತು ೧ : ಕುಡುಗುರುಳೆಂಬ ತಂಬೆಲರ ಬೆಂಬಿಡಿದಿಂ ಪೊಸವೇಟವೆಂಬ ಚೆಲ್ವಿಡಿದೆಳಮಾಮರಂ (ಆದಿಪು. ೦೨-೨೯); ಮನದ ಚಿಂತಣೆ ಧೈರ್ಯಂ ನಡೆಗೊಂಡುದು ಧೈರ್ಯದ ಬೆಂಬಿಡಿದೊರ್ವಳ ಜೀವ ಮಿರದೆ ಪೋದತ್ತಾಗಳ್ (ಜಗಂ. ೫-೯೯); ಮೋಹನ ಕಲಾಪ್ರೌಢೆಯರ ಗಡಣ ಬೆಂಬಿಡಿದು ಬರುತಿರ್ದುದಂತಾ ಪರಮೆಯೊಡನೆ (ಸೌಂದಪು. ೬-೪೭). [ಬೆಂ$_1$ (< ಬೆನ್) + ಪಿಡಿ$_1$]

**ಬೆಂಬಿಡು** (ಕ್ರಿ). ಬೆನ್ನು ಬಿಟ್ಟುಹೋಗು; ಅನುಸರಿಸದಿರು; ಹಿಂಬಾಲಿ ಸದಿರು : ಮುಳಿದು ಮನಃಪ್ರಿಯಂ ಪೆಜಗುಗೆಯ್ದರೆ ಬೆಂಬಿಡದಪ್ಪಿ ಕೊಂಡ ನಲ್ಲಳ ಮೊಲೆಯೊತ್ತಿನೊಳ್ . . . ಪೋದುದು ಕೋಪಮೋಪನಾ (ಆದಿಪು. ೦೨-೦೨ ಟೀಕ); ಬೆಂದ ಸಂಸಾರ ಬೆಂಬಿಡದೆ ಕಾಡುತ್ತಿರುವುದಯ (ಬಸವಪು. ೩. ೦೪-೦೬); ಹಿಂದೆ ಮಾಡಿದ ಕರ್ಮವೆಂದಿಗೂ ಬೆಂಬಿಡದು (ಸರ್ವಜ್ಞ. ೮೬೯). [ಬೆಂ$_1$ (< ಬೆನ್) + ಬಿಡು$_1$]

**ಬೆಂಬಿತ್ತಿಲ್** (ನಾ). ಹಿಂಭಾಗದ ಹಿತ್ತಿಲು; ಹಿಂದಿನ ಹಿತ್ತಿಲು : ಬೆಂಬಿತ್ತಿಲ ತೋಟ ಹಳುವಾದುದು (ಮೋಹತ. ೪-೫೭). [ಬೆಂ$_1$ (< ಬೆನ್) + ಪಿತ್ತಿಲ್ (< ಪಿಂತಿಲ್)]

**ಬೆಂಬಿಸಿಲ್** 'ಬಿಸುವಿಸಿಲ್' ನೋ.

**ಬೆಂಬೀವು** (ನಾ). ಬೆನ್ನಿನ ನರ, -- ಹುರಿ : ವಿದುಳಿನ ನಡುವಿನ ಕೆಳಗೆ ಬೆಂಬೀವು ತಲೆಕಡೆಯಲ್ಲಿ ಮೊಂಡುಮುದ್ದೆಯಾಗಿರುವುದು (ಶರೀಶಾ. I. ೦೪). [ಬೆಂ$_1$ (< ಬೆನ್) + ಬೀವು]

**ಬೆಂಬೀಳ್** 'ಬೆಂಬೀಳ್' ನೋ.

**ಬೆಂಬೀಳು** 'ಬೆಂಬೀಳ್' ನೋ.

**ಬೆಂಬೀೞ್, ಬೆಂಬೀಳ್, ಬೆಂಬೀಳು, ಬೆನ್ನುಬೀಳು** (ಕ್ರಿ). ೧. ಬೆನ್ನಿನ ಮೇಲೆ ಬೀಳು ; ಅಂಗಾತನಾಗು ; ಮುಖಮೇಲುಮಾಡಿ ಬೀಳು : ಅದಟಿಂ ಸಿಂಧುತನೂಭವಂ ವಿಜಯನೊಳ್ ಮಾರ್ಕೊಂಡಣಂ ಕಾದಲಾಱದೆ ಬೆಂಬಿೞ್ದೊಡೆ ಕಾದಲೆಂದು ಬೆಸನರ್ ಪೊಣ್ದಂ ಗಡಂ ದ್ರೋಣಂ (ಪಂಪಭಾ. ೧೦-೬೫). ೨. ಬೆನ್ನಿಂದ ಹೊರಕ್ಕೆ ಬರು,—ಹೊರಬೀಳು : ನಲ್ಲಂಬೀದಿಸೆ ಪುಷ್ಪಬಾಣನೆರ್ದೆಯಂ ಬೆಂಬಿೞ್ದು ಬೆಳ್ಗಾಗಿ . . . ಮೆಯ್ಯೆಲ್ಲಂ ದಿಟ್ಟಗಳಾದೊಡಿಂದ್ರನೆನಿಸಲ್ಕಾರ್ತಂ ಮಹೇಂದ್ರಾಂತಕಂ (ಕಾವ್ಯಾ. ೫೩೦ ಟೀಕೆ). ೩. ದೈನ್ಯದಿಂದ ಹಿಂಬಾಲಿಸು; ಶರಣಾಗತನಾಗು : ತೋರಜಱಿಕೆಯಾಳ್ಗಳ್ ಬಳ್ಕಿ ಬೆಂಬೀೞ . . . ಬಂದುಪೋರ್ಮೊದಲೊಳ್ ಮಾವಿನ ಬಳ್ಳಿ ಮಲ್ಲಿಗೆಯ ಕೋಲತ್ತತ್ತಲುಂ ಕಾವನಾ (ಕಮ್ಮಗ. ೩೦೪). ೪. ಹಿಂದೆ ಬೀಳು ; ಹಿಂಜರಿ ; ಓಡು ; ಪಲಾಯನ ಮಾಡು : ನಿಚ್ಚಂ ಬೆಂಬಿರ್ದು ಚಿಂತಿಸಿ ದುಃಖದೊಳ್ ಪಿರಿದುಮುಪರಿಂ ಕಣ್ಗೆಟ್ಟಂ ಭಟ್ಟಂ ನಿಕೃಷ್ಟರ ದೂಸಱಿಂ (ಸುಕುಮಾ. ೨-೪); ದನುಜಂ . . . ನೆಟ್ಟನೆ ಚಿಂತಾಗಿರಿ ಮೇಲೆ ಬೀೞ ಪಿರಿದುಂ ಬೆಂಬಿೞ್ದು ಬಂದೆಯ್ದಿ ಪೊಕ್ಕು ನಿಜಾವಾಸಮಂ (ಜಗಂ. ೩-೨೯); ಪುಲಿಯುಂ ಭೀಕರರೂಪದಾ ಮಱಿಗಳುಂ ಬೆಂಬಿರ್ದು ಬೇಗಂ ಭಯಾಕುಲದಿಂ ಕಬ್ಬಿನ ಬಿಲ್ಲುಮಯ್ದುವರಲಂಬಾಗಿರ್ದ ವೇಂ ಚೋದ್ಯಮೋ (ಬಂಪು. ೯-೪೫). ೫. (ಆಲಂ) ಕೆಡುಕನ್ನು ಮಾಡಲು ಸಮಯವನ್ನು ಕಾಯು,—ಹೊಂಚುಹಾಕು : ಕರಂ ಬೆಂಬಿೞ್ದು ದುರ್ಯುಕ್ತಿಯಿಂದದಯಂ ಧರ್ಮಜನಿಕ್ಕಿದಂ ಗುರುವಂ (ಕುಶಭಾ. ೦೨-೩೫). ೬. ತಳಮಳಗೊಳ್ಳು; ದುಃಖಿಸು : ನಚ್ಚುಗೆಟ್ಟು ಬಡವನಂತೆ ಬೆಂಬಿರ್ದು ದೆಸೆಗೆಟ್ಟರಂತೆ ಚಿಂತಿಸಿ (ಧರ್ಮಾಮೃ. ೦-೦೬೯). **ಬೆಂಬೀಳ್ :** ೧. ಬಾಡಿದ ಲತೆಯಂತೆ ಬೆಂಬಿದ್ದು ಪಟ್ಟರಲು (ಶಿರು. ದೇ. ೬-೦೯). ೪. ಹಱಿಮೆಟ್ಟಿ ನಡುಗಿ ಬೆಂಬಿರ್ದನಾ ಪಾತಕಂ (ಸೌದರ. ದೇ. ೬೪-೦೬); ನಂಬದಿರು . . . ಸಂಗರವೆಂಬ ಮಾತಿಗೆ ಹಂಬಲಿಸಿ ಬೆಂಬೀಳ್ವ ಬಾಹಿರರ (ಕುಮಾವ್ಯ. ೮-೪೩). **ಬೆಂಬೀಳು:** ೪. ದುರಿತಪಂಚೇಂದ್ರಿಯಂಗಳ ಬಳಿವಿಡಿದು ಭೂತಶರೀರದೊಳು ಬಿದ್ದು ಬೆಂಬೀಳುವನಲ್ಲ (ಶಿವಗೀ. ೨೭-೦೦೮); ವಿದುರ ಬೆಂಬೀಳದಿರು ಬಿಂಕದ ಹದನ ಬಲ್ಲೆನು ಭೀಮಪಾರ್ಥರ ಮುಂದವ ಬಯಸುವೆ (ಕುಮಾವ್ಯ. ೦೨-೬೯); ಅಜ್ಞಾನಿಗಳು ದಿಟ ಪಂಭವಿಸಿದರೆ ತತ್ತ್ವ ವಿದ್ಯಾಪರಿಣತರು ಬೆಂಬೀಳಲರಿವರೆ (ಶಿಶಾಗ. ೫-೬-೩೭). ೬. ಪರರಿಂದು ಮಿಕ್ಕು ಬಾಳಲ್ ಬಯಸಿ ಕುದಿದು ಬೇಳಾಗಿ ಬೆಂಬೀಳುತಿರ್ದುಂ . . . ಗಾಸಿಯಾದಪ್ಪಂ (ರಣ್ನಶ. ೦೦). **ಬೆನ್ನುಬೀಳು :** ೩. ನೀನು ಬಹುಶಃ ಎಣಿಸಿಕೊಂಡಿದ್ದಿರಬಹುದು . . . ನಾನೂ ಆ ಬೀದಿಯ ನಾಯಿಗಳಂತೆ ನಿನ್ನ ಬೆನ್ನುಬೀಳುತ್ತೇನೆಂದು (ಹೂಚೆಲ್ಲ. ೦೧); ನಿಮ್ಮ ವಿದ್ಯೆ ಅಪಾರವಾದುದು ಎಂತಲೇ ಜನ ನಿಮ್ಮ ಬೆನ್ನುಬಿದ್ದಿದ್ದಾರೆ (ಗಾಳಗು. ೦೩). ೭. (ತನ್ನ) ಬಳಿಕ ಜನಿಸು ; ಒಡಹುಟ್ಟು : ಸೃಷ್ಟಿಯಾದಿಮಾಯೆಯೆನ್ನ ಬೆನ್ನುಬಿದ್ದ ತಂಗಿಯು (ಕಚುಬ. ೦೦). [ಬೆಂ$_1$ (< ಬೆನ್) + ಬೀೞ್$_1$]

**ಬೆಂಬುಡಿಕೆ** (ನಾ). ಸಂಡಃವ ಧೂಳು (?) : ಬಡಪಸು ನಸು ಸೋಂಕಲ್ಕಣಂ ವಿಶ್ವನಂದೀ ಕೆಡೆದೈ ಚೌವಟ್ಟದಿಂ ಬೆಂಬುಡಿಕೆಯೊಳ್ (ಶಾಂತೀಶ್ವ. ೬-೩೫). [ಬೆಂ$_2$ (< ಬಿಸಿದು) + ಪುಡಿಕೆ ?]

**ಬೆಂಬುಯ್ಯಲ್** (ನಾ). ಅಟ್ಟಿಸಿಕೊಂಡು ಹೋಗಿ ಮಾಡುವ ಕಾಳಗ; ಮೇಲೆ ಬಿದ್ದು ಮಾಡುವ ಯುದ್ಧ : ಹರಿವಿಂದ್ರಿಯಾದಿಗಳ ಬೆಂಬು ಯ್ಯಲಂ ಪೋಪನುರವಣಿಪ ವಿಷಯಾದಿಗಳ ಬೇಂಟೆಯುಂ ಪೋಪ (ಸೌದರ. ದೇ. ೫೮-೦೯). [ಬೆಂ$_1$ (< ಬೆನ್) + ಪುಯ್ಯಲ್ (< ಪೊಯಲ್)]

**ಬೆಂಬೂದಿ** (ನಾ). ಬಿಸಿಯಾಗಿರುವ ಬೂದಿ; ಬೆಚ್ಚಗಿರುವ ಬೂದಿ : ಬೆನ್ನೀರ್, ಬೆಂಬೂದಿ, ಪಂದಲೆ (ಶಾಶಾಭೂ. ೦೪೫ ಟೀಕಾ). [ಬೆಂ$_2$ (< ಬಿಸಿದು) + ಬೂದಿ]

**ಬೆಂಬೂರಿ** (ನಾ). ಒಂದು ಬಗೆಯ ಊದುವ ವಾದ್ಯವಿಶೇಷ :

ಕೊಂಬು ಕೊಳಲು ಚಿನ್ನ ಬೆಂಬೂರಿ ಹೆಗ್ಗಾಳೆ ಅಂಬಿನಾ ಹೊರೆ ಪೆಟಲಾಳು . . . ನಡೆಯಿತು ಪುರಕ್ಕಾಗಿ (ಗುಂಡುಸು. ೯). 'ಬುರುಗು$_2$' ಹೋ. [ ? ]

**ಬೆಂಬೆಟ್ಟ** (ನಾ). ಕುದಿಯುತ್ತಿರುವ ಲಾವಾರಸವನ್ನು ಉಗುಳುವ ಬೆಟ್ಟ ; ಅಗ್ನಿಪರ್ವತ : ಸಂಜೆಯ ಓಲಗದಾಗ ಪ್ರೇಕ್ಷಕರಿಗೆ . . . ಸ್ತ್ರೀಪ್ರಪಂಚದ ಈರ್ಷ್ಯಾಸೂಯೆಗಳೆಂಬ ಬೆಂಬೆಟ್ಟಗಳನ್ನೂ . . . ಚಿತ್ರ ವಿಚಿತ್ರ ಪುಷ್ಪಮಾಲೆಗಳನ್ನೂ ಧರಯಿಸಿ ಆಳುತಿದ್ದ . . . ನಾಯಿಕೆಯಾಗಿದ್ದೆನು (ಮಂತ್ರಕ. ೨೮-೨೩). [(ಬೆಂ$_2$<ಬಿಸಿದು)+ಬೆಟ್ಟ]

**ಬೆಂಬೊಳಲೆ** (ನಾ). ( ? ): ಚಕೋರಕ್ಕೆ ಮುಕಾರ—ಬೆಂಗದಿರ್, ಬೆಂಬೊಳಲೆ, ಬೆನ್ನೀರ್ (ಶಮದ. ೧೮೨ ಕೃಯೊ). [ಬೆಂ$_2$ (<ಬಿಸಿದು) + ಪೊಳಲೆ ? ]

**ಬೆಕ್ಕಟ** (ನಾ). ಆಶ್ಚರ್ಯ ; ವಿಸ್ಮಯ : ಬೆಕ್ಕಟದಿ ನೋಡುವಿರಿ ನಿಮಗೇನಕ್ಕರವು ಅದರಲ್ಲಿ ಹೀನವು ಬಕ್ಕು (ಜನಭಾ. ೨೦-೬೩); ದನುಜೇಂದ್ರ ಬೆಕ್ಕಟದಿ ನೋಡ್ತನಗು ಪಂಜರಪಕ್ಕಿ ದನುಜರನೆಲ್ಲರನು ಹಾರಿಕ್ಕಿ ದೆಳೆಯುವನಲ್ಲವೆನುತಸುರೇಂದ್ರ ಖಿತಿಗೊಂಡ (ಜರಾವಾ. ೦೨೦-೫೩). 'ಬೆಕ್ಕಟಗರೆ' ಪರಾ. [<ಬೆಕ್ಕಸ?]

**ಬೆಕ್ಕಟಗರೆ** (ಕ್ರಿ). ಆಶ್ಚರ್ಯಪಡು ; ಬೆರಗಾಗು : ಬೆಕ್ಕಟಗರೆವರೇನಂಗೇಶ ಸಾಧ್ಯಕೆ ಬರದು ನಡೆನಡೆಯೆಂದು ನಕ್ಕರು ಆಳರನ್ನೆಯರು (ಜನಭಾ. ೨೦-೨೭). [ಬೆಕ್ಕಟ+ಕರೆ$_2$ (<ಕಱೆ$^3$$_1$) ]

**ಬೆಕ್ಕತ್ತು** (ನಾ). ಬೆನ್ನು ಮತ್ತು ಕತ್ತು ಸೇರುವ ಸ್ಥಳ ; ಕುತ್ತಿಗೆಯ ಹಿಂಭಾಗ : ಕಾವಿಯೊಳಗೆ ಅವಿತಿದ್ದ ಖಡ್ಗ ಹೊರಗೆ ಬಂತು. ಬೆಕ್ಕತ್ತಿಗೆ, ಬೆನ್ನಿಗೆ ಏಟುಬಿದ್ದು ಗಾಯಗಳಾದುವು (ತುಂಗಭ. ೦೦೫). 'ಹೆಕ್ಕತ್ತು' ಪರಾ. [<ಬೆನ್+ಕತ್ತು$_3$ (<ಕಟ್ಟು)]

**ಬೆಕ್ಕನೆ** (ಅ). ಒಂದು ಅನುಕರಣಾವ್ಯಯ : ನರನ ನೇಹದ ನಚ್ಚಿ ಬೆಕ್ಕನೆ ಪೆರತೆ ಪಗೆಯಿವನೆಂಬುದನು ನೀನರಿಯ (ಆನಂಠಾ. ೫-೯-೯). [ಬೆಕ್$_0$+—ಅನೆ$_1$]

**ಬೆಕ್ಕರಿಸು** (ಕ್ರಿ). ೧. ಮೇಕೆಯಂತೆ ಧ್ವನಿಮಾಡು.—ಕೂಗು : "ಬೆಕ್ಕರಿಸು—ಅಜಧ್ವನೌ" (ಶಮಧಾ); ತಾಂ ಪುರುಷನೆಂದಾಗಳೇ ಬೆಕ್ಕರಿಸುತ್ತಿಲ್ಲುತ್ತ ದಲ್ಲಕ್ಷನೆನುತಲವನಂ ತನ್ನವೊಲ್ಮಾಡಿ ತೋರ್ದಾ ಮರುಳಾಟ ಕ್ಕೊಲ್ದುಮಾ ಗೌರವಮೆನಿಸುತ್ತಿರ್ದ ನೀಂ ವೀರಭದ್ರಾ (ವೀರಶ. ೦೦೦). ೨. ಅಹಂಕಾರಪಡು ; ಗರ್ವಿಸು ; ಬೀಗು : ಜಂಕರಿಸಂ ಕಾತರಿಸಂ ಮಾಂಕರಿಸಂ ಬೆಕ್ಕಸಂಬಡಂ ಬೆಕ್ಕರಿಸಂ (ಅಜಿತು. ೫-೮೯) ; ಆರಱಿಪಂ ಮೆಱೆದಪರಿನ್ನಾರಾರ್ ಸೌಭಾಗ್ಯಗರ್ವದಿಂ ಬೆಕ್ಕರಿಪರ್ ಮಾತಂ ಮುನಿವವರೆರ್ದೆಯೊಳ್ ಕೂರಂಬಂ ತೆಗೆಯದೇಕೆ ಕಡೆಗಣಿಸಿರ್ಪಂ (ಲೀಲಾವ. ೯-೨೪). [ಬೆಕ್ಕರ್$_0$+—ಇಸು$_3$]

**ಬೆಕ್ಕಸ** (ನಾ). ಆಶ್ಚರ್ಯ ; ಬೆರಗು ; ವಿಸ್ಮಯಂ : "ಬೆಕ್ಕಸಮೆಂದಾಶ್ಚರ್ಯಂ" (ಕಶಾ. ೫೮-೨೮೯) ; ಕರ್ಣಾದಿಗಳ್ ಕಂಡು ಬೆಕ್ಕಸಮಾಗಿರ್ಪಿನಂ . . . ವಿಮಾನಂ ಸಮಂತೆಚ್ಚು ಮೆಚ್ಚಿಸಿದಂ ದೇವರುಮಂ ಧನುರ್ಧರರುಮಂ ವಿದ್ವಿಷ್ಟವಿದ್ರಾವಣಂ (ಶಂಶಖಾ. ೩-೬೩); ಪೊಸ್ಕು ಬೆಕ್ಕಸವಿರೆ ಧೇವರುಂ ದಿವಿಜಲೋಕದೊಳರ್ವಿಸೆ (ವೀಖುಪು. ೦೨-೨೩೬) ; ಬೆಕ್ಕಸದಿ ನೋಡುತಿರ್ದಳ್ ತರಳೆ (ಜತ್ರಾಂಗ. ೬-೦೬೯). 'ಬೆಱಗು' ಪರಾ. [ದೇ.॥ ತುಳು. ಬೆಕ್ಕಸ್, ಬೆಕ್ಕಸು]

**ಬೆಕ್ಕಸಂಗೊಳ್**, **ಬೆಕ್ಕಸಗೊಳ್** (ಕ್ರಿ). ಆಶ್ಚರ್ಯಪಡು ; ಬೆರಗಾಗು ; ವಿಸ್ಮಯಂಹೊಂದು : ಇಂತಿಂತು ಬೀರಾಳ್ಗಳಿಲ್ಲಲ್ಲಿ ನಗೆ ನುಡಿಯುತಿರೆ ಬೆಕ್ಕಸಂಗೊಂಡಿಂದ್ರುಜಂ ಪಕ್ಕದಲ್ಲಿರ್ದನಂ ಪ್ರದ್ಯುಮ್ನನಂ ಕುರಿತು (ಜತ್ರಾಂಗ. ೬೮-೨೦೩೩). **ಬೆಕ್ಕಸಗೊಳ್** : ನೋವಿನಿಂದಲುಗಾಡದಾದೆ ಬೆಕ್ಕಸಗೊಂಡು (ಕೋಗಿಲೆ. ೯-೬೯). [ಬೆಕ್ಕಸ+ಕೊಳ್$_1$]

**ಬೆಕ್ಕಸಂಬಡು**, **ಬೆಕ್ಕಸಬಡು**, **ಬೆಕ್ಕಸವಡು** (ಕ್ರಿ). =ಬೆಕ್ಕಸಂಗೊಳ್ : "ಬೆಕ್ಕಸಂಬಡು—ವಿಸ್ಮಯೇ" (ಶಮಧಾ) ; ಬಗೆಯನುಱೆ ಸೆಱೆವಿಡಿದ ವಿದ್ಯಾಧರವಿಳಾಸಕ್ಕಂ ಬೆಕ್ಕಸಂಬಟ್ಟು (ಆದಿಪು. ೨-೯೦ ವ) ; ಲಕ್ಕಸಂಖ್ಯೆಯ ಪೊನ್ನ ರಾಶಿಗಳುಕ್ಕುತಿರೆ ಬಿಜ್ಜಳಿಸು ನೋಡುತ ಬೆಕ್ಕಸಂಬಟ್ಟು (ಬಸವು. ೫-೬೦). **ಬೆಕ್ಕಸಬಡು** : ಜನವು ಬೆಕ್ಕಸಬಟ್ಟು ಬೆದಱಿದುದು (ಶಾಕ್ಯಶಾ. ೩೦-೫೯) ; ಮೂಱು ಪೊಡವಿಯುಪ್ಪಗಲದ ಹಂಸ ಬಡಮ್ಮೆಯೊಳಿರ್ದುದ ನೆನೆದು ಬೆಕ್ಕಸಬಟ್ಟ ಬೆಡಗೋಯೆಂದೆನೆ ನೃಪನೆಸೆದ (ಶಠಶ. ೩-೨೨). **ಬೆಕ್ಕಸವಡು** : ಮಕ್ಕಳು ಪುಟ್ಟಿದ ಪದದೊಳು ಬೆಕ್ಕಸವಟ್ಟಿರ್ದ ಮರ್ತ್ಯರಂ ಕಂಡಾಗಳ್ ಬೆಕ್ಕನೆಯವರ ಹೃದಯದೊಳಿರ್ದಕ್ಕಜಮಂ ಕಳೆದು ಕೀರ್ತಿಯಂ ಪ್ರಕಟಿಸಿದಂ (ಶೃಣಾಸ್ರ. ೦೦-೦೦) ; ಅದೆ ಅದೆ ಬಂದಂ ಜಯಜಾಯಾಪತಿಯದಟರ ದೇವನೆನುತ ತಂತಮ್ಮೊಳ್ ಬೆದರ್ದರ್ ಬೆಕ್ಕಸವಟ್ಟರ್ . . . ಪರನೃಪ ಬಲದವರು (ಜಮಕಾ. ೬-೨) ; ನಾರಾಯಣನಖಿಲಜಗತ್ಕಾರಣಂ . . . ಮನಃಜಾಕಾರಮನಾಂತ್ರಿಕರ್ಮಕ್ಕ ಬೆಕ್ಕಸವಡದಿರ್ (ಜಕಬಿ. ೬-೨೩೫). [ ಬೆಕ್ಕಸ + ಪಡು$_1$ ]

**ಬೆಕ್ಕಸಂಬೆರಗು** 'ಬೆಕ್ಕಸಂಬೆಱಗು' ನೋ.

**ಬೆಕ್ಕಸಂಬೆರೆ** (ಕ್ರಿ). =ಬೆಕ್ಕಸಂಗೊಳ್ : ಇದು . . . ಬೆಕ್ಕಸಂಬೆಱೆ[ರೆ]ಯದಿಕ್ಕೆಯುಂ ಸಾಸಮಿಲ್ಲದ ದೇಶಮುಂ . . . ಎನಿಸುಗುಂ (ಜಕವಂ. ೦೩೬-೩). [ ಬೆಕ್ಕಸ + ಬೆರೆ$_1$ ]

**ಬೆಕ್ಕಸಂಬೆಱಗು**, **ಬೆಕ್ಕಸಂಬೆರಗು**, **ಬೆಕ್ಕಸಬೆರಗು**, **ಬೆಕ್ಕಸಬೆಱಗು** (ನಾ). ಅತ್ಯಾಶ್ಚರ್ಯ ; ನಿಬ್ಬೆರಗು ; ಮಹಾವಿಸ್ಮಯ : ಒಕ್ಕಲಿಗರ್ ಸಾಕ್ಷಿಯಿಲ್ಲದೆ ಸಾಲಂಗೊಟ್ಟರಂತೆ [ಬೆಕ್ಕಸಂ]ಬೆಱಗಾಗೆ (ಧರ್ಮಾಮೃ. ೨-೬೯) ; ಬೆಕ್ಕಸಂಬೆಱಗಾಗಿ ಭೈರವನಕ್ಕ ತಾನಿವಳಾಗಬೇಕೆನುತಿಕ್ಕಲನನಾರೈವುತಂಜುತ ನೋಡಿದನು ಹನುಮ (ತೊರರಾ. ೫-೨-೩೨) ; ದೆಸೆದೆಸೆಗಳಂ ಕಕ್ಕರಿಸಿ ನೋಡುತ್ತೆ ಸ್ಯವರಿದು ಬರುತಿರಲ್ ದಿಕ್ಕುದಿಕ್ಕಿನೊಳಿರ್ಪ ರಕ್ಕಸರ್ ಕಾಣುತ್ತೆ ಬೆಕ್ಕಸಂಬೆಱಗಾದರು (ಜಿಖು. ೯೯-೯). **ಬೆಕ್ಕಸಂಬೆರಗು** : ಗಯ ಪುರೆಹೊಕ್ಕನೆಂದೇ ಕೈವಿಡಿದು ಹರಿ ಕೇಳ ಕಳುಹಿದರೆ ಚಿಕ್ಕಮಾತುಗಳಾಡೆ ಚಕ್ರಿಕೆ ಬೆಕ್ಕಸಂಬೆರಗಾಗಿಯಗ್ರಜನೆಕ್ಕತುಳದಲಿ ತಿಳಿದು ಬಾಯೆನೆ ಬಂದೆ ನಿಮ್ಮೆಡೆಗೆ (ಕೋಗಯ. ೦೯-೩೯). **ಬೆಕ್ಕಸಬೆರಗು** : ಭಾಗಮ್ಮ ಬೆಕ್ಕಸ ಬೆರಗಾಗಿ ಕೇಳದಳು (ರಂಗರೋ. ೩೬) ; ಮಹಾಮಾಯೆ ಕ್ಷಣಕಾಲ ಬೆಕ್ಕಸ ಬೆರಗಾಗಿ ನಿಂತಳು (ಶಾಡಳ. ೧೦೩). **ಬೆಕ್ಕಸಬೆಱಗು** : ಹೇಳದಿರು ಮಿಕ್ಕಿಂದ್ರಗಿಂದ್ರರ ತೋಳ ಸತ್ವವನರಸ ಕೇಳಿವನೂಳಿಗವ ಹೇಳದರೆ ಬೆಕ್ಕಸಬೆಱಗು ನಿಮಗೆ (ತೊರರಾ. ೬-೨೬-೦೦); ಇಕ್ಕೇರಿಯ ಭೂಪ ತುರುಕರ ದಾಳಿಗೆ ಬೆಕ್ಕಸಬೆಱಗಾಗುತಾಗ ಹೊಕ್ಕನು ಮಲೆಯನು (ಕಂವಬ. ೦೦-೫). [ ಬೆಕ್ಕಸ + ಬೆಱಗು$_1$ ]

**ಬೆಕ್ಕಸಗೊಳ್** 'ಬೆಕ್ಕಸಂಗೊಳ್' ನೋ.

**ಬೆಕ್ಕಸಬಡು** 'ಬೆಕ್ಕಸಂಬಡು' ನೋ.

**ಬೆಕ್ಕಸಬೆರಗು** 'ಬೆಕ್ಕಸಂಬೆಱಗು' ನೋ.

**ಬೆಕ್ಕಸಬೆಱಗು** 'ಬೆಕ್ಕಸಂಬೆಱಗು' ನೋ.

**ಬೆಕ್ಕಸಮುಱು** (ಕ್ರಿ). = ಬೆಕ್ಕಸಂಗೊಳ್: ಕೌರವ್ಯರಂ ತಿಂದ ರಕ್ಕಸನೋ ಈತನೊ ಭೀಮಸೇನನೆನುತುಂ ಗಾಂಧಾರಿ ಬಳ್ಕುತ್ತೆ ಬೆಕ್ಕಸಮುತ್ತಳ್ ಬರೆ ಕಂಡು ಪಾಂಡವಬಲಪ್ರಾಕಾರನಾಕಾರಮಂ (ಗದಾಯು. ೬-೩೩) ; ತನ್ನಂಗಿಯ ಸಾಹಸಕ್ಕೆ ಬೆಕ್ಕಸಮುತ್ತಿರ್ದಂ (ವೀಖುಪು. ೬-೩೨ ವ) ; ಕನ್ನಡಗಬ್ಬ ಮನೊಲ್ದು ಕೋವಿದರ್ ಬೆಕ್ಕಸಮುತ್ತು ಮಚ್ಚಿ ಪೊಗಳುತ್ತಿರೆ (ಶಖಶಂ. ೫-೬೨). [ ಬೆಕ್ಕಸ + ಉಱು ]

**ಬೆಕ್ಕಸವಡು** 'ಬೆಕ್ಕಸಂಬಡು' ನೋ.

**ಬೆಕ್ಕು** 'ಬೆಕ್ಕು' ನೋ.

**ಬೆಕ್ಕುಗಣ್ಣು** (ನಾ). (ಬೆಕ್ಕಿನ ಕಣ್ಣಿನಂತೆ) ಬಣ್ಣವುಳ್ಳ ಕಣ್ಣು: ಅಕ್ಕುಳಿಸಿದ ಹೊಟ್ಟೆ ಬೆಕ್ಕುಗಣ್ಣಿನ ಮೋಟು ಅಕ್ಕುಳಿಯು ತುಂಬ ಕಡುಗೋಪಿ ಪುರುಷನು ಚಿತ್ರಿನಿಗೆ ಮೇಳ (ತರ್ಪ. ೦೬೬೪); ಕಣ್ಣುಗುಡ್ಡೆಯ ಕರಿಯ ಭಾಗ ಬೂದುಬಣ್ಣವಾಗಿರುವ ಕಣ್ಣು, ಬೂದುಗಣ್ಣು, ಬೆಕ್ಕುಗಣ್ಣು (Grey-eye. ಇಂಕೋ). [ಬೆಕ್ಕು (< ಬೆರ್ಕ್) + ಕಣ್ಣು (< ಕಣ್)]

**ಬೆಕ್ಕುಮಾಳಿಗೆ** 'ಬೆಳಕುಮಾಳಿಗೆ' ನೋ.

**ಬೆಗಡಿಸು** (ಕ್ರಿ). ಹೆದರಿಸು; ಭಯಪಡಿಸು; ಅಂಜಿಸು: ಬೆಗಡಿಸಿ ತತ್ತ್ವವಿದರ ನಿಷ್ಠುರದಿಂ (ಹರಿಣಾಂಬಿ. ೨-೨೨). [ಬೆಗಡು$_1$ + —ಇಸು$_3$]

**ಬೆಗಡು$_1$, ಬೆಗಳ್$_1$, ಬೆಗಟು$_1$** (ಕ್ರಿ). ೧. ಆಶ್ಚರ್ಯಪಡು; ಬೆರಗುಗೊಳ್ಳು; ವಿಸ್ಮಯವನ್ನು ಹೊಂದು: (*). ೨. ಅಂಜು; ಅಳುಕು; ಬೆದರು: ಹರಿ ಬೇಡೆ ಕವಚವುಂ ನೀನಿರದಿತ್ತು ಕೊಂತಿ ಬೇಡೆ ಬೆಗಡದೆ ಕೊಟ್ಟೈ ಹುರಿಗಣೆಯುಂ (ಗದಾಯು. ೫-೨೩). **ಬೆಗಳ್$_1$**: ೨. ಖಳರಳವಂ ಕಳಲ್ಚ(ಲ್ಚಿ) ನೆಱೆ ಕಳ್ಳರ ಕೊಳ್ಳಿಯ ಬಾಧೆಯ[ಂ] ಬಿ(ಬೆ)ಗಳ್ದಳಱೆ ತೆರಳ್ಚಿ . . . ನಿರ್ಮ್ಮಳತರಕೀರ್ತಿಯುಂ ಪಡೆವಳ್ (ಕಇ. IV. ೧-೫೪; 1204). **ಬೆಗಟು$_1$**: ೨. ಜರೆಪದ ಜೀವಚಿತ್ರವುಮಂ ನಿರೀಕ್ಷಿಸಿ . . . ಬೆಗಟ್ಟಿ ಕಣ್ಗಳಂ ಬರೆತೆಗೆದಂ ನೃಪಂ ತನಗೆ ತಾಂ ಗಡ ಲಜ್ಜಿಸಿ (ಲೀಲಾವ. ೩-೬೪); ಕನಲ್ದೊನಲ್ದು ಬೆಗಟುತ್ತು ಬೆಗಟುವಿಂಗೆ ಮತ್ತ [ಮಂತೆ ಸಾರಿರ್ದು] . . . ವಿಪ್ರಳಾಪಂಗೆಯ್ಯುತ್ತುಂ (ಶಂಕರ. ೦೪-೯೩).

**ಬೆಗಟ್ಟಂ**=ಹೆದರಿದವನು; ಭಯಪಟ್ಟವನು: "ಬೆಗಟ್ಟನೆ ಭೀತಿಯುಕ್ತನೊಳ್" (ಶಬ್ದಾನು. ೨೨).

[ದೇ.॥ ತುಳು. ಬೆಗಡು; ತೆಲು. ಬೆಗಡು, ಬೆಗ್ಗಡು, ಬೆಗ್ಗಿಲು]

**ಬೆಗಡು$_2$, ಬೆಗಳ್$_2$, ಬೆಗಟು$_2$** (ನಾ). ೧. ಆಶ್ಚರ್ಯ; ಬೆರಗು; ವಿಸ್ಮಯ: ಬೆಗಡು ಮುಸುಕಿದ ಮುಖದ . . . ಹುಯ್ಯಲಾಗಿಬಿ ಬಹಳೋಲಗಕೆ ಬಂದನು (ಕುಮಾ.ರಾ. ೫-೬). ೨. ಭಯ; ಅಂಜಿಕೆ; ಅಳುಕು: "ಬೆಗಡು=ಭಯಮುಂ" (ಕರ್ಣಾ. ಶಂ. ೨); ಇವರ ಲೀಲಾಲಾಸ್ಯದಲಿ ನೆಲೆಯ ಕಾಣದೆಯೆ ನನ್ನ ಮತಿ ಬೆಗಡಾಗಿ ತೊಳಲುತಿಹುದು (ಒಲವು. ೨೪-೦೬). 'ಬೆಗಡುಗೊಳ್' ಪರಾ. **ಬೆಗಳ್$_2$**: ೨. 'ಬೆಗಳ್ಗೊಳಿಸು' ಪರಾ. **ಬೆಗಟು$_2$**: ೧. "ಬಕ್ಕುಡಿ ಬಿಗುರ್ವಗುರ್ವು ಬೆಬ್ಬಳ ಬೆಗಟು ತಲ್ಲಣಂ ತಳವೆಳಗು ಮಲ್ಲಟಿಯೆನಲ್ಕೆ ಬೆಱಗಪ್ಪ ಭಾವಂ" (ಕನ್ನಶ. ೪೦). ೨. ಕನಲ್ದೊನಲ್ದು ಬೆಗಟುತ್ತು ಬೆಗಟುವಿಂಗೆ ಮತ್ತ [ಮಂತೆ ಸಾರಿರ್ದು] . . . ವಿಪ್ರಳಾಪಂಗೆಯ್ಯುತ್ತುಂ (ಶಂಕರ. ೦೪-೯೩).

[< ಬೆಗಡು$_1$. / ತೆಲು. ವೆಗಡು]

**ಬೆಗಡುಗೊಳ್**, ಬೆಗಡುಂಗೊಳು, ಬೆಗಡುಗೊಳ್ಳು, ಬೆಗಟ್ಗೊಳ್ (ಕ್ರಿ). ೧. ಅಚ್ಚರಿಪಡು; ಬೆರಗುಗೊಳ್ಳು; ವಿಸ್ಮಯಪಡು: ನೆಗೆದು ರಿವಾರ್ವಾನಳನುರ್ಬುಗಳಿನಲುಂ ನೆಗೆದುವಹಿಮಹಿಮಕರಬಿಂಬಂ ಅಂತವಂ ಕಂಡು ಬೆರ್ಚಿ ಬೆಗಡುಗೊಂಡ ಭೋಗಭೂಮಿಜರಂ . . . ಸಂತಯಿಸಿದಂ (ಆದಿಪು. ೬-೫೨ ವ). ೨. ಅಂಜು; ಭಯಪಡು; ಹೆದರು: ಆಗಳದಂ ಕಂಡುತ್ತರನೊತ್ತರಮೊತ್ತಿದಂತೆ ಬೆರ್ಚಿ ಬೆಗಡುಗೊಂಡು (ಪಂಪಭಾ. ೯-೯೯ ವ); ನಿದ್ರೆ ತಿಳಿದು ಕಣ್ದೆಱೆವ ಕಿಲುಬಲಸಂ ನೋಡಿ ಬೆಚ್ಚಿ ಬೆಗಡುಗೊಂಡು ಅನುಕಂಪವೇಱೆ (ಧರ್ಮ. ೪-೨೩); ಪಂಗನ ಮಾತಿಗೆ ಬೆಗಡುಗೊಂಡನು . . . ಬೆದಱಿದನಸುರ (ಸಂಭವ. ೬-೩೭). **ಬೆಗಡುಗೊಳು**: ೨. ತೆಗೆಯೆ ಬಸ್ಸಿಂದಲಗುರಕ್ಕಿ ಮೂಡಿರೆ ಕಂಡು ಬೆಗಡುಗೊಳುತ್ತಲ್ಲರುಂ ಮಱುಗಿ ಮುಮ್ಮುಳಿಗೊಂಡು (ಸೌಂದ. ದೇ. ೩೬-೦೫); ನಗರದೊಳು ದಶಮುಖನ ಕಾಣುತ ಬೆಗಡುಗೊಳುತಲಿ (ಉತ್ತ.ಕ. ೦೪-೨೮); ಬೆಗಡುಗೊಳು ವರು ತಡವುಮಾಡದೆ ವಿಗಡನನು ಕೊಲುತೈದು ಬೇಗನೆ (ಕೃ.ಕಥಾ. ೨-೯೨). **ಬೆಗಡುಗೊಳ್ಳು**: ೧. ರತ್ನಾಜಿಯುಂಥ ಸುರಲೋಕಸುಂದರಿಯೇ ಅವನನ್ನು ನೋಡಿದಾಗ ಬೆಗಡುಗೊಳ್ಳುತ್ತಾಳೆ (ಸೀತಾಂತ. ೧೦೦); ಅಷ್ಟು ಆರ್ಭಟ, ಅಷ್ಟು ಗದ್ದಲ, ಅಷ್ಟು ಉಪಚಾರದಿಂದ ಕೋಣನಾದರೂ ಬೆಗಡುಗೊಳ್ಳದೆ ಇರಬಹುದೆ (ಸಮ.ಕ. VI. ೦೦). **ಬೆಗಟ್ಗೊಳ್**: ೨. ಅಂತು ಸತ್ಕಭಾವಂಗಗ್ಗಳಮಾದ ವಿರಹಪರಿತಾಪಮಂ ಕಂಡು ಬೆಗಟ್ಗೊಂಡು . . . ಇಂತೆಂದಳ್ (ಶಗರ. ೧೦-೨೦ ವ).

[ಬೆಗಡು$_2$ + ಕೊಳ್$_1$]

**ಬೆಗಡುಗೊಳಿಸು**, ಬೆಗಳ್ಗೊಳಿಸು (ಕ್ರಿ). ೧. ಭಯಪಡಿಸು; ಹೆದರಿಸು; ಅಂಜುವಂತೆ ಮಾಡು: ನೆತ್ತಿಯ ಬಗಿದು ಕೂರಂಕುಶದಲಾನೆಯ ಬೆಗಡುಗೊಳಿಸಲು ಬೀದಿವರಿವುದು ಸುಭಟರೆದೆಯೊಡೆಯೆ (ಕುಮಾ.ರಾ. ೩-೦೩); ಮಗಳ ಮನ ವಿಗಡಿಸಿತು ನಾಲ್ವರು ಬೆಗಡುಗೊಳಿಸಿದರು (ಶಶಿ. ೩-೬೩). ೨. (ಆಲಂ) ಭ್ರಮೆಗೊಳಿಸು: ನೋಟದಿಂದದೆಗೆ ಪುಟ್ಟಿಪರು ತಳ್ಪೆಂಳವ ಬೇಟದಿಂ ಬೆಗಡುಗೊಳಿಪರು . . . ಕುಲಟಾಜನ (ಕುರಾಸಾಂ. ೩೦-೬೦). **ಬೆಗಳ್ಗೊಳಿಸು**: ೧. ಮಹಾದಂತಿಗಳಂ ಬೆಗಳ್ಗೊಳಿಪ ಸಿಂಹಕೆ ಲಕ್ಷ್ಯಮೆ ಪುಲ್ಮಿಗಂ (ರಾಜಶೇ. ೫-೦೬೦).

[ಬೆಗಡುಗೊಳ್ + — ಇಸು$_3$]

**ಬೆಗಡುಗೊಳು** 'ಬೆಗಡುಗೊಳ್' ನೋ.

**ಬೆಗಡುಗೊಳ್ಳು** 'ಬೆಗಡುಗೊಳ್' ನೋ.

**ಬೆಗಡುಪಡಿಸು** (ಕ್ರಿ).=ಬೆಗಡುಗೊಳಿಸು ೧: ರಾಜರಾಜಂ ಜೈತ್ರಯಾತ್ರೆಯೊಳ್ . . . ತಗಡೂರಂ ಬೆಗಡುಪಡಿಸಿ ತಾಯೂರಂ ಬಾಯ್ವಿಡಿಸಿ . . . ಮಂಡಲಾಧಿಪತ್ಯದೊಳಿರೆ (ಶಕಶಿ. ೨-೨೯). [ಬೆಗಡು$_2$+ಪಡಿಸು]

**ಬೆಗಡೊಂದು** (ಕ್ರಿ). = ಬೆಗಡುಗೊಳ್ ೨: ಲಲನೆಮಂಜುಲಿಸಲಿಲದಿಂ ಚಪ್ಪಳಿಸುತಂ ಬಿಸ್ನೊಳು ಶಿರಸಿನೊಳ್ ಜಲವನೊತ್ತುವಳಾತ್ಮಜಗೆ ಬೆಗಡೊಂದದಂತೋವಿ (ಐಶ್ವ. ೦೫-೯); ಭ್ರಮೆಯಿಂದು ಬೆಗಡೊಂದಿ ಬಲ್ಪುಡುಗಿ ಬೇಗಂ ಹಮ್ಮುದಂಬೋದುದೆಯ್ದೆ ಮದೇಭಾಶ್ವನರಾದಿ ಜೀವನಿವಹಂ (ವೃಷಭ. ೦೬-೯೬); ಇವಳ ವಿವಾಹವಿಷಯವಾಗಿ ಎಷ್ಟೋ ಬೆಗಡೊಂದುತ್ತಿದ್ದೇನೆ. ಆ ಬೆಗಡೆಲ್ಲವೂ ತೀರಿಹೋಗುತ್ತಿದೆ (ಅಕ್ಕೀಶ್ರ. ೩೬).

[ಬೆಗಡು$_2$ + ಒಂದು$_1$]

**ಬೆಗಸಿಲ್** 'ಬೆಲಗಸೆ' ನೋ.

**ಬೆಗಸಿಲೆ** 'ಬೆಲಗಸೆ' ನೋ.

**ಬೆಗಳ್$_1$** 'ಬೆಗಡು$_1$' ನೋ.

**ಬೆಗಳ್$_2$** 'ಬೆಗಡು$_2$' ನೋ.

**ಬೆಗಳ್ಗೊಳಿಸು** 'ಬೆಗಡುಗೊಳಿಸು' ನೋ.

**ಬೆಗಟು$_1$** 'ಬೆಗಡು$_1$' ನೋ.

**ಬೆಗಟು$_2$** 'ಬೆಗಡು$_2$' ನೋ.

**ಬೆಗಟ್ಗಡೆ** (ಕ್ರಿ). =ಬೆಗಡುಗೊಳ್ ೨: ಪೂರ್ಗರ್ವೇಱಾಗಿ ಮೊಗಂ ಬೆಗಟ್ಗಡೆ ದೊತಂ ಮೆಯ್ಯುಂ ಮರಂ ಬರ್ದೋಡಂ ಬಿಗುರುತ್ತೇನಳವೊಂದಿನಿಂಥ ಳಪಚಾರಂ ಬರ್ಪುದೆಂದಾರ್ಪಿನಿಂ (ಶಶಿ. ೬-೨೫೦).

[ಬೆಗಟು$_2$ (< ಬೆಗಡು$_2$) + ಕೆಡ್$_1$]

**ಬೆಗಟ್ಗೊಳ್** 'ಬೆಗಡುಗೊಳ್' ನೋ.

**ಬೆಗಟ್ಟು** (ನಾ). ಆಶ್ಚರ್ಯ; ಬೆರಗು; ವಿಸ್ಮಯ: "ಬೆಗಟ್ಟು ಬೆಗಡಾಯ್ತು" (ಶಂಶಬ. ೨೧); ಅಂತಾ ಪುರದಹಿತರ್ಗೆ ಬೆಗಟ್ಟನೀಯುತ ಗಟಿಸಿದಿರ್ಕುಂ (ಅದ್ಭುತ. ೦-೯೩).

[ಬೆಗಟು$_2$ (< ಬೆಗಡು$_2$) + — ವು$_2$]

**ಬೆಗುಸೆ** (ನಾ). ಒಂದು ಬಗೆಯ ಮರ: ಬೇವು ಬೆಲ್ಲವತ್ತ ಅರಳಿ ಆಲ ಬೆಗುಸೆಸೊಪ್ಪುಗಳಂ ನೀರೊಳು ಹಾಕಿಕಿಶುವಿಂಗೆ ಮಿಯಲೆಱೆವುದು (ಶಾರಂಗ. ೦೩೦-೦೯). [?]

**ಬೆಗ್ಗಡು** ' ಬೆಂಗಾಡು ' ನೋ.

**ಬೆಚ್ಚ$_{1}$** ' ಬಿಸು$_{1}$ ' ಪರಾ.

**ಬೆಚ್ಚ$_{2}$** ' ಬಿಸು$_{2}$ ' ನೋ.

**ಬೆಚ್ಚಂಬಿಲ** (ನಾ). ಬಿಸಿಯಾದ ಗಂಜಿ ; ಬೆಚ್ಚಗಿರುವ ಅಂಬಲಿ : ನಡನಡನೆ ನಡುಗಿ ಬೆಚ್ಚಂಬಿಲಮುಮಂ ಪೊಯ್ದು ಮಿಡಮಿಡನೆ ಮಿಡುಕೆ ಪೊಕ್ಕುಳ ಬಳ್ಳಿಯುಂ ಕೊಯ್ದು (ಶಿಂಶೂ:ಠ. ಹ. ೫೦೦-೨೩) ; ಬೆಚ್ಚಂಬಿಲವ ಕುಡುಗೋಲ ಕಪ್ಪಡವನರಳೆಯುಂ ತೈಲವಂ ತಾ (ಸಿದ್ಧರಾ. ೨-೨).

[ ಬೆಚ್ಚ$_{2}$ (< ಬಿಸಿದು) + ಅಂಬಿಲ (< ಅಂಬಲಿ$_{1}$) ]

**ಬೆಚ್ಚಗುಟಿಗ್** (ನಾ). ಬಿಸಿಯಾದ ಅಗುಳು ; ಬೆಚ್ಚಗಿರುವ ಅನ್ನ : ಕಬ್ಬಾನೆ, ಬೆಚ್ಚಗುಟಿಗ್ (ಶಬ್ದಾ.ಮ. ೩೯೩ ಪ್ರಯೋ).

[ ಬೆಚ್ಚ$_{2}$ (< ಬಿಸಿದು) + ಅಗುಟಿಗ್$_{4}$ ]

**ಬೆಚ್ಚಗೆ** (ಅ). ಬಿಸಿಯಾಗಿ ; ಶಾಖವಾಗಿ : ಮೊಗಂ ಮೊಗದತ್ತ ಸಾರ್ಚಿ ಬೆಚ್ಚಗೆ ನಿಡುಸುಯ್ದು ನಲ್ಲಳ ಮುಖಾಂಬುಜಸೌರಭದೊಳ್ ಪೊದಟ್ದು (ಶಂಜಶಾ. ೪-೦೦೬) ; ಬೆಲೆವೆಣ್ಣುಗಳ್ಬಂದು ಪಾದಗಳಾ ಬಣ್ಣಿಸಿ ಪಿಡಿವಾಗ ಬೆಚ್ಚಗಿದ್ದುವು ಹಸ್ತ ತಣ್ಣಗಿದ್ದುವು ಚರಣಗಳು (ಶರತ. ೦೨-೦೩೦) ; ಮೈಯನ್ನು ಯಾವಾಗಲೂ ಬೆಚ್ಚಗೆ ಇಡಬೇಕು (ಹುಂಬಲು. ೪-೨೫).

[ ಬೆಚ್ಚ$_{2}$ (< ಬಿಸಿದು) + —ಅಗೆ$_{3}$ ]

**ಬೆಚ್ಚನೆ** (ಅ). = ಬೆಚ್ಚಗೆ : ನೀರೊಳ್ ಮುಟುಗಿದರಂತು ಮ್ಮನೆ ಬೆಮರುತ್ತುಮ್ಮಳಿಕೆವಂದು ಬೆಚ್ಚನೆ ಸುಯ್ದೊಡೆ (ಶಂಶಶಾ. ೪-೬೪ ವ) ; ಕಿರಾತಂ ಬೇಸತ್ತು ಬೆಚ್ಚನೆ ಸುಯ್ದು ಬದಿಯಂ ಬಯ್ದು ತನ್ನ ಮನೆಗೆ ಮಗುಟ್ದಂ (ಶಂತಶಂ. ೨೯೦-೦೬) ; ಬಟ್ಟಿಮೊಲೆಯಿಟ್ಟೆಡೆಯೊತ್ತನೆ ಪತ್ತಿಸಾರ್ದು ಬೆಚ್ಚನೆ ಬಿಗಿದಪ್ಪಿಕೊಂಡು (ಜಾರಪು. ೪-೬೪).

[ಬೆಚ್ಚ$_{2}$ (< ಬಿಸಿದು) + —ಅನೆ$_{1}$ ]

**ಬೆಚ್ಚರ$_{1}$**, ಬೆಚ್ಚಳ, ಬೆಜ್ಜರ (ನಾ). ೧. ಸುತ್ತುವಿಕೆ; ಭ್ರಮಣ : ಬೇಡೊಡೆಯಾ ಬೇಕೆಂಬುವ ತುಂಬಿಯು ಬೆಚ್ಚರಂ, ನೀಡೊಡೆಯಾ ಸಾಕೆಂಬುವ ತಾವರೆಯಬೆಚ್ಚರು (ಗೀಖಂ. ೯೦-೦೯೦). **ಬೆಚ್ಚಳ** : ೨. ದಿಗ್ಭ್ರಮೆ ; ತಬ್ಬಿಬ್ಬು : ಬಿಚ್ಚಟಿ, ಪುಚ್ಚಟಿ, ಬೆಚ್ಚಳ (ಶಬ್ದಾ.ಮ. ೫೩೯ ಪ್ರಯೋ). ' ಬೆಚ್ಚಳಿಸಂ ' ಪರಾ. ಬೆಜ್ಜರ: ೩. ಹೆದರಿಕೆ ; ಭಯ ; ಅಂಜಿಕೆ : ನರಕದೊಳು ಹುಟ್ಟಿಸಿ ಒರಿದು ನಿರ್ಜಾಡಿಸುವುದು ಕರ್ಮಂ ಭವಭವಕ್ಕೆಂಬ ಬೆಜ್ಜರಮುಮಂ ನೋಡದಂತಿರ್ಪುದವಗಂಗಜನ ಗೊಡ್ಡುವೈಸಲ್ಲದೆ (ಸಮ್ಯಕ್. ೫-೨೩) ; ಪುಸಿ ನುಸುಳು ವೈರಮುಟ್ಟಳಿ ತೆಱಹು ಬೆದಱು ಬೆಜ್ಜರ ಕಷ್ಟ ನಿಷ್ಠುರಂ . . . . ಮೊಳೆದೋಱವು (ಕೈವಲ್ಯ. ೨-೫) ; ಬೆಜ್ಜ ಗಜ್ಜುಂಗೆಯ್ದನೀ ನಿನ್ನ ಬೆಜ್ಜರಕೆ (ಶ್ರೀರಾಮ. ೪೫೦-೦೬೦).

**ಬೆಚ್ಚರಾಗು** = ಸುತ್ತು ; ತಿರುಗು : ವಾಯುಸದಂತೆ ನೋಡು ಬಕದಂತಿರೆ ಮೆಲ್ಲನೆ ಮೆಟ್ಟು ಕಚ್ಚಪೋಪಾಯುದಡಗಿ ನಿಲ್ ಭ್ರಮರಿಯೊಳ್ ಭ್ರಮಿಯಂತಿರೆ ಬೆಚ್ಚರಾಗು (ಲಾಟ್ಯ.ಪ. ೪೦೨). **ಬೆಜ್ಜರಬೀಳು** = ಅಂಜು ; ಹೆದರು : ಆ ಶಬ್ದವನ್ನು ಕೇಳಿದವರೆಲ್ಲರೂ ಬೆಜ್ಜರಬಿದ್ದು ಹೊರಗೆ ಬಂದು ಅಪೂರ್ವವಾದ ಆ ನೋಟವನ್ನು ನೋಡಿ ತಾವೂ ಭ್ರಾಂತಿಗೊಂಡು (ಬಿಜ್ಞಾ.ಕ. 1, ೦೬೦).

**ಬೆಚ್ಚರ$_{2}$** (ನಾ). ೧. ಶೀಘ್ರತೆ ; ತ್ವರಿತತೆ : ' ಬೆಚ್ಚರಿಕೆ ' ಪರಾ. ೨. ಎಚ್ಚರಿಕೆ ; ಜಾಗರೂಕತೆ : ಬೆಚ್ಚರದಿಂ ಘಟನೆಗೆದಪೊಲಚ್ಚಿಗೆ ಸೊಬಗಿತ್ತು ದಮುರ್ದ ಕಂದೆನೆಗೊಂಚಲ್ (ಉದ್ಭಟ. ೩-೦೮) ; ನಿದ್ದೆ ಹೋಗದಿರೆಚ್ಚರ ; ಸೂರೆ ಹೋದೀತೆಲ್ಲ ; ನೀನೇ ಸೆರೆಗೆ ಸಿಕ್ಕೀ ಬೆಚ್ಚರ! (ಮುಳ್ಕಂ. ೬೯-೪). 'ಬೆಚ್ಚರ' ಪರಾ. [ <ಬೆಚ್ಚರ ]

**ಬೆಚ್ಚರಂ** (ಅ). ಬೇಗನೆ ; ಶೀಘ್ರವಾಗಿ : " ಬೆಚ್ಚರಂ ಗಟಗಟನೆ ಬೆಚ್ಚರಂ . . . ಶೀಘ್ರಾರ್ಥಮಕ್ಕುಂ " (ಕವ್ಯಕ್ಕ. ೪೯) ; ಆ ಮಹಾದೇವಿಯರುದರದೊಳಂ ಬರ್ಪ ಲೋಕೇಶನಂ ಬೆಚ್ಚರಮಾ ವಿಶ್ವೇಶನಂ ಪೇಟ್ಬುದು ಮೊಸೆದಱುದಿಂಗಳ್ವಶಂ (ಶಾಂತಿಪು. ೯-೦೬೨) ; ಬೆಚ್ಚರಮುದ್ಭಟನೃಪ ಪಾದರ್ಚಂಬುಗಳ್ . . . ಪರಿದೆಣ್ದೆಸೆಗಂ ಮುಚ್ಚಿ ಮುಸುಂಕಿದುವು (ಉದ್ಭಟ. ೪-೯೦). ' ಬೆಚ್ಚರಂ ' ಪರಾ. [ < ಬೆಚ್ಚರಂ ]

**ಬೆಚ್ಚರಿಕೆ** (ನಾ). ೧. ಶೀಘ್ರತೆ ; ತ್ವರಿತತೆ : ಜಾಳಾಂದ್ರಗೈದಾಗ ಖತಿಮಸಗಿ ಕೈಗೈದಪೆವು ಜಯಸಿರಿಯನೆನುತೊರ್ವರೊರ್ವರೆಚ್ಚರೇ ಬೆಚ್ಚರಿಕೆಯಿಂದ (ವೆಂಕಾರಾ. ೬-೪೪-೨೦). ೨. ಚಪ್ಪರಿಸುವುದು ; ತಟ್ಟುವುದು : ಅದೂ ಸ್ವಾಭಾವಿಕವಾಗಿ ತೇಜಾದ ಕುದುರೆಯೇ. ಸ್ವಲ್ಪ ಬೆಚ್ಚರಿಕೆ ಮಾತ್ರ ಆಗಾಗ್ಗೆ ಬೇಕಾಗಿತ್ತು (ಕಂಗಾಳ್. ೩೬). [ ಬೆಚ್ಚರ$_{2}$ + — ಇಕೆ ]

**ಬೆಚ್ಚರು** (ಕ್ರಿ). ಬೆಚ್ಚು ; ಬೆದರು ; ಹೆದರು : ಅಪಚರಿಸಿದೆನೋ ಅತಿಥಿದೇವನಂ ಎಂದು ಬೆಚ್ಚರುತ ನಾನೊಳಪೋಗಿ ನೋಡುವೊಡೆಲ್ಲವು ಸಜ್ಜಿತವಾಗಿ ಹಬ್ಬದೂಲಿರೆ (ಗಹೇಶ. ೦೨-೩೦೫).

**ಬೆಚ್ಚಲ್** (ನಾ). ಬೆದರುಗೊಂಬೆ ; ಬೆಚ್ಚು : ರಕ್ಕಸರ್ ಕಳನ ಕಳಮೆಯ ಪೊಲದ ರಕ್ಷಣೆಗೆ ಮುಂದೊಡ್ಡಿಕೊಂಡು ನುಗ್ಗುತ್ತಿರ್ಪ ಈ ತೃಣದ ಬೆಚ್ಚಲ್ಗಳಿಕೆ ಪಲಾಯನಪಟುಗಳಾಗುವಿರ ಮೂಢಮೃಗಪಕ್ಷಿಗಳವೋಲ್! (ಶ್ರೀರಾಮ. ೬೮೪-೦೬೮). [ಬೆಚ್ಚು$_{1}$ (<ಬೆರ್ಚು$_{1}$) + —ಅಲ್$_{2}$]

**ಬೆಚ್ಚಳ** 'ಬೆಚ್ಚರ$_{1}$' ನೋ.

**ಬೆಚ್ಚಳಿಸು**, ಬೆಜ್ಜರಿಸು (ಕ್ರಿ). ೧. ದಿಕ್ಕು ತೋರದಂತಾಗು ; ದಿಗ್ಭ್ರಮೆಗೊಳ್ಳು: "ಬೆಚ್ಚಳಿಸು—ವಿಮೋಹೇ (ದಿಕ್ಕುತೋರದಂತಾಗು)"(ಶಮುದಾ); ದಿಕ್ಪಾಳರಂ ಬೆಚ್ಚಳಿಸೆ ಕುಣಿದನಾನಂದದಿಂ ದೇವರಾಜು (ಪರ್ವತ. ೦೨-೫೩); ಕಳ್ಳನಿವಂ ಕಡುಧೂರ್ತನೆಂದು ಶಂಕಿಸಿ ಭಯದಿಂದೆ ಬೆಚ್ಚಳಿಸಿ ಮಾನಿಸರಂ ಮೊದಲಾಗೆ ಪೊರ್ದಿ (ರವಾರ್ಣವು. ೬-೪೦). **ಬೆಜ್ಜರಿಸು** : ೨. ಅಂಜಿಸು ; ಹೆದರಿಸು ; ಭಯಪಡಿಸು : ರಂಭಾದಿ ಪಣ್ಯಾಂಗನಾವರವಾಟಿಯಂ ಪೊಕ್ಕು ಸತಿಯರಂ ಬೆಜ್ಜರಿಸಿ ನೆಱೆ ನಗಿಪುವಾ ಗೋತ್ರದಾನೆಗಳ್ (ಸಂದಿಮಾ. ೦೦-೦೩) ; ನಿರ್ಜರರ ಸುದತಿಯರ ಗರ್ಜಿಸುತೆ ಘನರವದಿ ಬೆಜ್ಜರಿಸಿ ಮತ್ತೆಯರನುಳಿದು ತೆರಳು (ಕವೀಶ. ೨೫-೬೨).

[ಬೆಚ್ಚಳ (<ಬೆಚ್ಚರ$_{1}$) + —ಇಸು$_{3}$]

**ಬೆಚ್ಚಿಡು** (ಕ್ರಿ). ಬೆದರುಬೊಂಬೆಯನ್ನು ನಿಲ್ಲಿಸು ; ಬೆಚ್ಚು ನಿಲ್ಲಿಸು : ದಂಡೀಯ ಮುಂಡಾಸ ಚಂಡ್ರೂವಿನ ತುರಾಯಿ ದುಂದೀನ ದೊರೆ ಮಲಸಜ್ಜ ಬರುವಾಗ ಬೆಚ್ಚಿಟ್ಟಾರ ಬಾಳಬನದಾಗ (ಲೋಕಗೀ. ೨೦೮).

[ಬೆಚ್ಚು$_{2}$ (<ಬೆರ್ಚು$_{2}$) + ಇಡು$_{1}$]

**ಬೆಚ್ಚಿಸು** 'ಬೆರ್ಚಿಸು' ನೋ.

**ಬೆಚ್ಚು$_{1}$** 'ಬೆರ್ಚು$_{1}$' ನೋ.

**ಬೆಚ್ಚು$_{2}$** 'ಬೆರ್ಚು$_{2}$' ನೋ.

**ಬೆಚ್ಚು$_{3}$** 'ಬಿಸು$_{2}$' ನೋ.

**ಬೆಚ್ಚುಗೊರಳು** (ನಾ). (?): ಸಣ್ಣಗಳ ನುಣ್ಗೊರಳು ಸವಿಗಳ ಬಣ್ಣಗಳವೋ ಕಂಬುಕಂಠವೋ ಬೆಣ್ಣಗಳವೊ ಬೆಚ್ಚುಗೊರಳಿನ ಚೆಲುವೊ ಸವಿಗಳವೊ (ಜರಾಮಾ. ೦೬-೫೦). [? + ಕೊರಳು (< ಕೊರಲ್)]

**ಬೆಚ್ಚುನೀರ್**, ಬೆಚ್ಚುನೀರು (ನಾ). ಮಗುವು ಹುಟ್ಟಿದಾಗ ಅಥವಾ ಹೆದರಿಕೊಂಡಾಗ ಹೆದರಿಕೆಯನ್ನು ಹೋಗಿಸಲು ಮುಖದ ಮೇಲೆ ಎರಚುವ (ಮಂತ್ರದ) ನೀರು : ಮದದ ನೀರೊಳೆ ಲೋಕವಾರ್ತೆಗೆ ಬೆಚ್ಚುನೀರ್ದಳಿವು . . . ಮದದಂತಿದಾತದೊಳೆ ಕಟ್ಟಿದ ತೊಟ್ಟಿಲಂ ನಯದಿಂದಮೋಱಿಸೆ ಬಾಳಕಾಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದು ಸಲೆ ತೋಱಿದಂ (ಶಂಶಶಾ. ೦-೪೩) ; ಮುಱಿಯದೆ ಬೆಚ್ಚುನೀರೆಱೆದು ತೊಟ್ಟಿಲೊಳಿಟ್ಟು . . . ತನಿವೆರ್ಚುವ ಸೈಪೆನಗೆಂದು ಸಾರ್ಗುಮೋ (ಶಂದ್ರಪು. ೩-೪೫) ; ತರುಣಿಗೆ ಬೆಚ್ಚುನೀರ್ಗಳೆಱೆದರು ಸರಸಿರುಹಲಲಿತನೇತ್ರೆಯರು

(ತ್ರೀಣಾಂ. ೨-೬೯). ಬೆಚ್ಚುನೀರು : ಮಣಿದಟ್ಟೆಯೊಳು ಮಗುವಿಟ್ಟು ಮಾಕೆ ಸಹಿತಂ ಬೆಚ್ಚುನೀರೆಱೆದೋತು ಲಿಂಗವ ಧರಿಸಿ ಶಿಶುವಿಗೆ (ಶಂದೀಕ್ಷ. ೧೬-೧೯); ಬೆಚ್ಚುನೀರೆಂದರೆ, ಮಕ್ಕಳ ಮೇಲೆ ಪರಿಣಮಿಸಬಹುದಾದ ಲೋಕದ ದೃಷ್ಟಿಬಾಧೆ ಪಿಶಾಚಿಪೀಡೆ ವಚನದೋಷಗಳನ್ನು ಬೆಚ್ಚಿಸಿ ಹೋಗಾಡಿಸಲೆಂದು . . . ಎರಚುವ ಅದೊಂದು ಮಂತ್ರಪೂರಿತವಾದ ಬೇಳಂಬದ ನೀರು(ಶಾಕೋಶ. ೯೬). [ಬೆಚ್ಚು$_{2}$ (<ಬೆಚ್ಚುರ್$_{2}$)+ನೀರ್]

ಬೆಚ್ಚುನೀರು 'ಬೆಚ್ಚುನೀರ್' ನೋ.

ಬೆಚ್ಚುರಿ 'ಬೆನ್ನುರಿ' ನೋ.

ಬೆಚ್ಚೋಡು 'ಬೆನ್ನೋಡು' ನೋ.

ಬೆಜಯಿತ್ತ 'ಬಿಜಯಿತ' ನೋ.

ಬೆಜಲು 'ಬೆದ್ದಲ್' ನೋ.

ಬೆಜ್ಜ$_{1}$ (ನಾ). ರೋಗದ ಮೂಲವನ್ನು ತಿಳಿದು ಚಿಕಿತ್ಸೆ ಮಾಡುವವನು; ವೈದ್ಯ : "ಬೆಜ್ಜನೆಂದು ವೈದ್ಯಂ" (ಶಶಸಾ. ೬೦-೩೫೦); ತನ್ನಿಚ್ಛೆಯಿಂದೆ ಕಜ್ಜಂಬೇಟ್ಟಂ ತಱಿಸಲಿಸಲಾಱನಾರ್ತನ ತೆಱನಱಿಯದೆ ಮರ್ದುವೇಟ್ದ ಬೆಜ್ಜನ ತೆಱದಿಂ (ಕಬಿಣಾ. ೩-೦೫೨); ನೊಂದ ತಮ್ಮಣುಗಾಳ್ಗಳ ಕೊಂಡಾಟದಾನೆಗಳ ನಚ್ಚಿನ ಕುದುರೆಗಳ ಪುಣ್ಗಳನುಡಿಯಲುಮೋವಲುಂ ಮರ್ದುಬೆಜ್ಜರುಮನಟ್ಟುತ್ತುಂ (ಕಂಕಥಾ. ೦೦-೨ ವ); ಹಿತವಿದಹಿತವೆಂದು ತಿಳಿಯದ ಶಿಶುವ್ಯಾಧಿಗಿತರರ ಮಾಳ್ಪ ಬೆಜ್ಜನೊಲು ಮತಿಹೀನನೆಮಗೆ ಸಂಸಾರದಾಮಯಕೆ ನೀಂ ಹಿತವೈದ್ಯ ವೀರಜಿನೇಂದ್ರ (ವರ್ಧಕ. ೦೨-೦೦೦). [<ಪ್ರಾ. ವೆಜ್ಜ-/ಸಂ. ವೈದ್ಯ]

ಬೆಜ್ಜ$_{2}$ 'ಬಿಜ್ಜ$_{2}$' ನೋ.

ಬೆಜ್ಜಂಗೆಯ್ (ಕ್ರಿ). ವೈದ್ಯನ ಕೆಲಸವನ್ನು ಮಾಡು : ಚಿಕಿತ್ಸೆ ಮಾಡು : ಒಡವಿದನಿತು ಧನಮುಮಂ ಕೊಟ್ಟು ಬೆಜ್ಜಂಗೆಯ್ಸುದು (ವೃಕಥಾ. ೦೦-೨೫ ವ). [ಬೆಜ್ಜ$_{1}$+ಕೆಯ್$_{1}$]

ಬೆಜ್ಜಗಜ್ಜ (ನಾ). ವೈದ್ಯನ ಕೆಲಸ ; ಚಿಕಿತ್ಸೆ : ಬೆಜ್ಜಗಜ್ಜಂಗೆಯ್ವನೀ ನಿನ್ನ ಬೆಜ್ಜರಕೆ (ತ್ರೀಣಾಪು. ೯೫೦-೦೬೦). [ಬೆಜ್ಜ$_{1}$+ಕಜ್ಜ$_{1}$]

ಬೆಜ್ಜತನ (ನಾ). ವೈದ್ಯನ ಕೆಲಸವನ್ನು ಮಾಡುವಿಕೆ; ಚಿಕಿತ್ಸೆ ಮಾಡುವಿಕೆ: ಕೋಶಮುಮಂ ಬೆಜ್ಜತನದೆಡೆಯುಮಂ ಪೆಱತುಜ್ಜುಗಮಂ ಕೂರ್ತುವಧುಗೆ ಕೊಟ್ಟಂ ಕೆಟ್ಟಂ (ಸೂಕ್ತಿಸು. ೯-೦೦೬; ಶಬ್ದ. ೬-೫೯ ನೋ). [ಬೆಜ್ಜ$_{1}$+_ತನ]

ಬೆಜ್ಜರ 'ಬೆಚ್ಚರ$_{1}$' ನೋ.

ಬೆಜ್ಜರವಡು (ಕ್ರಿ). ಅಂಜು ; ಹೆದರು ; ಭಯಪಡು : ಇಷ್ಟು ಮಾತಿಗೆ ಬೆದರಿ ಬೆಜ್ಜರವಟ್ಟು ಬೇಗದಿ ಬಂದು ಹುತ್ತದ ಹೊಟ್ಟೆಯಲಿ ಹೊಗುತ (ಅಶ್ವರಾ. ೦೬-೩೯). [ಬೆಜ್ಜರ (< ಬೆಚ್ಚರ$_{1}$) + ಪಡು$_{1}$]

ಬೆಜ್ಜರವಡೆ (ಕ್ರಿ). ಹೆದರಿಕೆಯನ್ನು ಹೊಂದು ; ಭಯಪಡು : ಬಿದಿರೂರ್ದೆರೆ . . . ಇದಿರೊಳ್ಪಿಂತೆಡಬಲದೊಳಮಿದೆ ಚಿಕದೇವೇಂದ್ರನೆಂದು ಬೆಜ್ಜರವಡೆವಂ (ಅಪ್ರತಿ. ೯೩-೯); ಗರ್ಜನೆಯಾಕಾಶಮಂಡಲ ತುಂಬಿತು ದಿಗ್ಪಾಲವೆಲ್ಲವ ವ್ಯಾಪಿಸಿತು ಬೆಜ್ಜರವಡೆದನು ಕಂಸನು (ಕೃಸಭಾ. ೬೦-೫). [ಬೆಜ್ಜರ (< ಬೆಚ್ಚರ$_{1}$) + ಪಡೆ$_{1}$]

ಬೆಜ್ಜರಿಕೆ (ನಾ). ಹೆದರಿಕೆ ; ಭಯ ; ಅಂಜಿಕೆ : ಹೆಜ್ಜೆ ಹೆಜ್ಜೆಗೆ ಶತಾನಂತ ತಪ್ಪುಗಳನ್ನು ಬೆಜ್ಜರಿಕೆಯಿಲ್ಲದಲೆ ಆರ್ಜಿಸಿದೆನೊ (ಕೋಕ್ಷದೀ. ೦೫-೦). [ಬೆಜ್ಜರ (< ಬೆಚ್ಚರ$_{1}$) + – ಇಕೆ]

ಬೆಜ್ಜರಿಸು 'ಬೆಚ್ಚಳಿಸು' ನೋ.

ಬೆಜ್ಜಲು$_{1}$, ಬೆಜ್ಜಿಲು (ನಾ). ಒಂದು ಬಗೆಯ ಮರ : "ಪಾಂಡುರಃ – ಲೊಕ್ಕಿ, ಕೊಡಸಿಗೆ, ಅತ್ತಿ, ಬೆಜ್ಜಲು" (೬ಕಧಿ. ೯೮); ತುಪ್ಪವ ತೊಡದು ಕರಿಯೊಳಗಪ್ಪುದ ಬಿಡು ಚಿನಧಾರೆ ಬೆಜ್ಜಲು ಆಡಿನವೊಪ್ಪುತ ಹಿಕ್ಕೆಯು ಕರಿಯುಂ ತಪ್ಪದೆ ಬಿಡು ಬೆನ್ನು ಪುಣ್ಣು ಬೇಗಂ ತೀರ್ಗು (ಅಶ್ವವೈ. ೦೩-೫೬); ಸಂಪಗೆ ಬೆಜ್ಜಲು ಬೆಳವ ಬಿದಿರ್ಬೇವರಿಟಣ . . . ಸಸಿ ನೇಸಱಿವೆಳಗಿಗೆ ವೆಜ್ಜಗೊಡದೆ ಬೆಳೆದಿರಲು (ಶಯುಶಾ. ೦೫-೨೮). ಬೆಜ್ಜಿಲು : "ಶಕಟಾಕ್ಷಃ— ಬೆಜ್ಜಿಲು" (೬ಕಧಿ. ೦೬೦); ಹಾಲೆ ಹಲಸು ಅತ್ತಿ ಬೇಲ ಬೆಜ್ಜಿಲು . . . ಆಲದ ಮರಗಳ ಸಾಲೆಸೆದಿಹವು ಅಲ್ಲಲ್ಲಿ (ಪಾರದೀಶಾಂ. ೦-೫೨).

ಬೆಜ್ಜಲು$_{2}$ 'ಬೆದ್ದಲ್' ನೋ.

ಬೆಜ್ಜಿಲು 'ಬೆಜ್ಜಲು$_{1}$' ನೋ.

ಬೆಜ್ಜು (ನಾ). ಚಿಕಿತ್ಸೆ ಮಾಡುವಿಕೆ ; ವೈದ್ಯ : "ಬೆಜ್ಜೆಂದು ವೈದ್ಯಂ" (ಶಬ್ದಕೈ. ೬೫); ದುರ್ಬಲಂಗಂ ಅಸಹಾಯಂಗಂ ಪ್ರತಿಕೂಲಂಗೆಯ್ದನಪ್ಪವಂಗಮಾವ ಕಜ್ಜಮುಂ ಬೆಜ್ಜಿಯಿಲ್ಲದ[ಬೆಜ್ಜಿಲ್ಲದ] [ಪಾಠಾಂ. ಬಿಜ್ಜಲ್ಲದ] ಬೇನೆಯಂತೆ ತೀರಲರಿಯದು (ಕಂಶಕಂ. ೮೬-೦); ಬೆಜ್ಜುಂ ಕಜ್ಜಮುಮಾಯುಗೆ ನೆರಮಲ್ಲದೆ ಸಾವೆ ಬಾರಿಸಲ್ ನೆಱೆಗುಮೆ (ಶೀವಕಂ. ೩೬-೦೯); ಬೇನೆಯು ಬೆಜ್ಜಿಲ್ಲದುಱಿವಡೊಲ್ಲದರೊಳರೇ (ಉಶಾರ. ೯೩-೨೫೬). [ಬೆಜ್ಜ$_{1}$+ –ಉ$_{4}$]

ಬೆಜ್ಜುಗೆಯ್ (ಕ್ರಿ). ಚಿಕಿತ್ಸೆಮಾಡು ; ವೈದ್ಯಮಾಡು : ಸಾಧ್ಯಮಸಾಧ್ಯಮೆಂಬೆರಡಱೊಳಂ ಅಸಾಧ್ಯಮಂ ಬಿಸುಟ್ಟು ಸಾಧ್ಯಮಂ ಕೆಯ್ಕೊಂಡು ಬೆಜ್ಜುಗೆಯ್ಕೆ ಕುತ್ತಂ ಪೋಕುಂ (ಶೀವಕಂ. ೦೬೦-೬). [ಬೆಜ್ಜು + ಕೆಯ್$_{1}$]

ಬೆಜ್ಜುವಡೆ (ಕ್ರಿ). ಚಿಕಿತ್ಸೆಯನ್ನು ಪಡೆ ; ವೈದ್ಯವನ್ನು ಹೊಂದು : ಕುತ್ತವಡೆದು ಬೆಜ್ಜುವಡೆದು ಕೃಪೆಗಂಜಿ ಮರ್ದಂ ಕುಡಿಯದೊಡಂ . . . ಆತನ ಕುತ್ತಮುಮಿನಾತನ ಕರ್ಮಮುಂ ಪತ್ತುವಿಡದು (ಶೀವಕಂ. ೫೦-೦೦). [ಬೆಜ್ಜು + ಪಡೆ$_{1}$]

ಬೆಜ್ಜುವೇೞ್ (ಕ್ರಿ). ಚಿಕಿತ್ಸೆಯನ್ನು ಹೇಳು ; ವೈದ್ಯ ಮಾಡು : ಕುತ್ತಮುಳ್ಳವಂ ಮರ್ದುವಡೆದವಕ್ರಿಯೆಯೊಳ್ ನೆಗೞ್ದೊಡಂ ಕರ್ಮಮುಳ್ಳಂ ಮನುಷ್ಯಭವಂಬಡೆದು ಧರ್ಮಮಂ ಮಾಡಿದು ನೆಗೞ್ದೊಡಂ ಬೆಜ್ಜುವೇೞಲ್ ಬಲ್ಲವರುಂ ಧರ್ಮಂಬೇೞಲ್ ಬಲ್ಲವರುಮೇಗೆಯ್ವರ್ (ಶೀವಕಂ. ೬೨-೦೯). [ಬೆಜ್ಜು + ಪೇೞ್]

ಬೆಜ್ಜೆಗೆಯ್ (ಕ್ರಿ). (?) : ಚಂಡಭುಜಗರ್ವದಿಂದಂ ಗಂಡಂ ಮುಂದಿಟ್ಟು ಬೆಜ್ಜೆಗೆಯ್ದೆನ್ನರುಮಂ ಪೆಂಡಿರನೀಗೆಂದಟ್ಟಿದ ತೊಂಡಂ ಮುನ್ನಾವ ಕಥೆಯೊಳಂ ಕೇಳ್ದಱಿಯೆಂ (ವರ್ಧಮಾ. ೯-೦೯). [? + ಕೆಯ್$_{1}$]

ಬೆಟ್ (ನಾ). ಒಂದು ಅನುಕರಣ ಶಬ್ದ : ಉಪನ್ಯಾಸದ ವಿನ್ಯಾಸಂ ಬಲಂ ಬೆತ್ತಿಸೆಯೆ ನೃಪಸಭಾಮಧ್ಯದೊಳ್ ಪೆರ್ಚೆ ವಾಗ್ಗುಂಫದೊಳಾಗಳ್ ಬೆಟ್ಟೆನಲ್ಪಿಟ್ಟೆನಲೆಡೆಗುಡದಾಶ್ಚರ್ಯಮು ತಾಳ್ದಿ ನಿಂದಂ(ಸುಕುಮಾ. ೨-೦೫).

ಬೆಟ್ಟ, ಬೆಟ್ಟು$_{2}$, ವೆಟ್ಟ (ನಾ). ೧. ಸುತ್ತುಮುತ್ತಿನ ಭೂಮಿಯ ಮೇಲೆ ಎತ್ತರವಾಗಿರುವ ಪ್ರದೇಶ ; ಗಿರಿ ; ಮಲೆ : "ಧರಮದ್ರಿಕುಧರಮದಹಾರ್ಯಂ ನಗಂ . . . ಗೋತ್ರಮೆನಲು ಬೆಟ್ಟಕ್ಕೆ ನಾಮಂ" (ಮಂಗರಾ. ೨೯-೦); ಅನ್ತೆ ಬನ್ದು ಬೆಟ್ಟದಾ ಮೂಡಾಯ್ (ಮೈಅಂ. ೦೯೩೬, ೯೩-೨೯ ; 550); ಬೆಟ್ಟದ ಮೇಗಣಿಂ ಪಾಯ್ತರ್ಪ ನಿರ್ಝರಶೀಕರಂಗಳಿಂ ಮೆಯ್ಯಾಪ್ಯಾಯನಮಾಗಿ (ಪಣ್ಯಾರಾ. ೦೦೮-೫); ಬಡಪಟ್ಟು ಬೆಟ್ಟದೊಳ್ ಪೋಗಿ ತೊಬಿಲ್ದು . . . ಮಾಡಲಾರ್ತನಿಲ್ಲಾಗಳೆಕೋಪಮಂ ನಿನಗೆ ಸಂಚಿತಶೌರ್ಯಧನಂ ಧನಂಜಯಂ (ಕುಕಥಾ. ೬-೯೬); ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದೊಡೆಂತಯ್ಯ (ವಚಾದೀ. ೭. ೪೫-೦೦೬); ಬೆಟ್ಟಕ್ಕೆ ಕಲ್ಲು ಹೊತ್ತ ಹಾಗೆ (ಗಾದೆ). ೨. (ಅಲಂ) ಕಷ್ಟಸಾಧ್ಯವಾದುದು ; ದುಸ್ತರವಾದುದು : ಮಡೆಯಂಗುತ್ತಮವಿದ್ಯೆ ಬೆಟ್ಟ ಕುರುಡಂಗಂ ಮಾರ್ಗವೇ ಬೆಟ್ಟ ಕೇಳ್ ಬಡವಂಗೆಲ್ಲರ ವೈರ ಬೆಟ್ಟ (ಸೋಮೇಶ. ೯೫). ಬೆಟ್ಟು$_{2}$: ೧. "ಅಚಳಃ... ಅದ್ರಿಃ, ಕುಧ್ರಃ— ಈ ೧೪ ಬೆಟ್ಟು" (ಹಲಾಯು. ೨೬-೦೦); ಕರಮುಚ್ಚಮಪ್ಪ

ಬೆಟ್ಟುಗಳ ತಟಂಗಳಿಂ ಸುರಿವ ನಿರ್ಝರವಾಂ (ಶಬರ. ೦-೦೩೪) ; ಬೆಟ್ಟು ಗಳ್ಮಾರ್ದನಿಗುಡೆ (ಕಾದಂಪೂ. ೦೬೦). ವೆಟ್ಟ : ೧. ಶ್ರೀಮಾಸೇನರ್ವರವು ಪ್ರಭಾವ ರಿಷಿಯರ್ಕಟ್ಟಪ್ಪಿನಾ ವೆಟ್ಟದುಳ್ ಶ್ರೀಸಜ್ಜುಜ್ಜಿಳ ವೇಟ್ಟಿ ಸಿದ್ಧಸಮಾಯನ್ನಪ್ಪಾದೆ ನೋನ್ತು (ಎಕ. II. ೨೬-೦ ; ಸು. 700).

ಬೆಟ್ಟತಟ್ಟೆಯ = ಬಿರುಸಾದ ತಡೆ ; ಕಠಿಣವಾದ ಅಡ್ಡಿ (?) : ಅಶುಭಸ್ಯ ಕಾಲಹರಣ ಎಂದು ದಿನವಂ ನೂಂಕುವಂದವೈಸೆ ನಿನ್ನದೊಂದು ಪರಿಯೆಂಬವನ ಬೆಟ್ಟತೆಟ್ಟೆಯ[ಪಾಠಾಂ. ಬೆಟ್ಟತಟ್ಟೆಯ] ಪಾತಿಗೊಂದನೆಲೆ ನೃಪತಿ ನಾನಾವ ತೆಱದಿಂ ವಿಚಾರಿಸಲವರ್ಗಿಕ್ಕಿತಿಲ್ಲಾ ಎನೆ (ಸಪ್ತ. ೩-೪೦).

ಬೆಟ್ಟದ ನೆಲ್ಲಿಕಾಯ್, ಬೆಟ್ಟದ ನೆಲ್ಲಿಕಾಯಿ = ಬೆಟ್ಟದಲ್ಲಿ ಬಿಡುವ ನೆಲ್ಲಿ ಕಾಯಿ ; ಒಂದು ಬಗೆಯ ಆಮಲಕ : ಗಟ್ಟದುಪ್ಪು ಬೆಟ್ಟದ ನೆಲ್ಲಿ ಕಾಯ್ಗೆ ಸುಪ್ರಯೋಗಿಸಿದಂತೆ ಸುಗುಣಾನಿರುದ್ಧಗೆ ಕಪ್ಪುರಗಂಧಿ ಸೇರಿದಳು (ಪೋಹಚ. ೪೦-೪೫) ; ಬೆಟ್ಟದ ನೆಲ್ಲಿಕಾಯಿ ಸಮುದ್ರದ ಉಪ್ಪು ಎತ್ತಣಿಂದೆತ್ತ ಸಂಬಂಧವಯ್ಯ (ಅಪಶಂ. ೦೫-೩೯) ; ಘಟ್ಟದ ಉಪ್ಪು, ಬೆಟ್ಟದ ನೆಲ್ಲಿಕಾಯಿ (ಗಾದೆ). [ದೇ.ಪ ತಮಿ. ವಿಟವನ್, ವಿಣ್ಣು ; ಕೊಡ. ಬೆಟ್ಟ ; ಬ್ರಾಹುಈ. ಬಿಟ್, ಬುಟ್]

ಬೆಟ್ಟಕುಂಬಳ (ನಾ). ಒಂದು ಬಗೆಯ ಕುಂಬಳ : "ಕೂಷ್ಮಾಂಡಕಃ . . . ನೆಲಕುಂಬಳ, ಬೆಟ್ಟಕುಂಬಳ, ಕಿರಿಕುಂಬಳ — ೬ ಜಾತಿಗಳಿಗೂ ಹೆಸರುಗಳು" (ನಿಘಂ.ಶಿ. ೦೪೬). [ಬೆಟ್ಟ+ಕುಂಬಳ]

ಬೆಟ್ಟಗೆದಲು, ಬೆಟ್ಟಗೆದ್ದಲು (ನಾ). ಒಂದು ಬಗೆಯ ಪ್ರಾಣಿ : "ಪುಚ್ಛಲೋಮಶಃ — ಬೆಟ್ಟಗೆದಲು" (೬ಕಂ. ೦೩೦). ಬೆಟ್ಟಗೆದ್ದಲು : "ಬಿಲೇಶಯಃ — ಎಯ್ಯಮೃಗ, ಬೆಟ್ಟಗೆದ್ದಲು, ಸರ್ಪ" (೬ಕಾ. ೦೦೬). [?]

ಬೆಟ್ಟಗೆದ್ದಲು 'ಬೆಟ್ಟಗೆದಲು' ನೋ.

ಬೆಟ್ಟಗೊರಜಲು (ನಾ). ಒಂದು ಬಗೆಯ ಸಸ್ಯ : ಜಾಜಿಚಕ್ಕೆ, ಬೆಟ್ಟ ಗೊರಜಲು, ಹಿರೇಮದ್ದು . . . ಪ್ರಯೋಗಿಸಲು ಶ್ವಾಸಕಾಸಗಳು, ಉದರ ರೋಗಗಳು . . . ಗುಣ ಹೊಂದುವುವು (ಸಕವೈ. ಕಂ. ೪೩೬).

[ಬೆಟ್ಟ + ಗೊರಜಲು₁]

ಬೆಟ್ಟಗೋಂಟೆ (ನಾ). ದುರ್ಗತ್ರಯಗಳಲ್ಲಿ ಒಂದು ; ಬೆಟ್ಟದ ಮೇಲಿರುವ ಕೋಟೆ ; ಗಿರಿದುರ್ಗ : ಈ 'ದುರ್ಗತ್ರಯ'ವನ್ನು 'ಬೆಟ್ಟಗೋಂಟೆ', 'ಕಡಲ್‌ಗೋಂಟೆ', 'ಪಳುಗೋಂಟೆ' ಅಥವಾ 'ನೆಲಕೋಟೆ' ಎಂದು ಹೇಳುವರು (ಕರ್ನಾಕ. ೪). [ಬೆಟ್ಟ + ಕೋಂಟೆ]

ಬೆಟ್ಟಜೆ (ನಾ). ಪರ್ವತರಾಜನ ಮಗಳು ; ಪಾರ್ವತಿ ; ಗಿರಿಜೆ : 'ಬೆಟ್ಟಜೆಪತಿ' ಪರಾ. [ಬೆಟ್ಟ+-ಜೆ₀. / P ಇಲ್ಲಿ 'ಗಿರಿಜಾ' ಎಂಬ ಶಬ್ದದಂತೆ ಸಂಸ್ಕೃತದ 'ಜಾ' ಪ್ರತ್ಯಯ ಸೇರಿದೆ]

ಬೆಟ್ಟಜೆಪತಿ (ನಾ). ಪಾರ್ವತಿಯ ಗಂಡ ; ಈಶ್ವರ ; ಗಿರಿಜಾಪತಿ : ಎಲೆ ಮಱೆಯ ನೀರ ಸುಟ್ಟ ಬೂದಿಯುದಂ ಪೂಜಿಸಿ ಸಿದ್ಧಿಗಳ ಗುದ್ದಾಟ ಕ್ಕೊಳಗಾದವರ ಕಡೆಮೆಟ್ಟಿ ಬಿಟ್ಟಪ್ಪನೆ ಬೆಟ್ಟಜೆಪತಿ (ಸಿದ್ಧಪ. ೪೦-೩೪೦).

[ಬೆಟ್ಟಜೆ + ಪತಿ₂]

ಬೆಟ್ಟಣುಗಿ (ನಾ). = ಬೆಟ್ಟಜೆ : ಬೆಟ್ಟಣುಗಿಯುಗ್ಗಳದ ಪೂಜೆ . . . ತಾರಕ ನಲೆವ ಮೊಱೆ ಕೂಡಿ ಮುಪ್ಪುರಿಯೊಳೀಶನಂ ಸೋಂಕೆ (೬೩೬ ಕ. ೩-೪-೨೬); ಬೆಟ್ಟಣುಗಿಯುಂಘ್ರಿಯುಗಳಾ ಬಿಸರುಹಂಗಳಿಗೆ ನೊಸಲ್ ಸಾರ್ಚಿ ವಂದಿಸಲು (ಪಪಬೋ. ೨೯-೪೪). [ಬೆಟ್ಟ + ಅಣುಗಿ (<ಅಣುಂಗಿ)]

ಬೆಟ್ಟಣುಗಿಯೆಱೆಯ (ನಾ). = ಬೆಟ್ಟಜೆಪತಿ : ತುಂಬಿದೆಳಜವ್ವನದ ಬೆಟ್ಟಣುಗಿಯೆಱೆಯ ಪೊರೆ ನಂಬಿದೆಂ ಭೋಗಮಲ್ಲ (ತೀರಮ. ೬-೬೦).

[ಬೆಟ್ಟಣುಗಿ + ಎಱೆಯ]

ಬೆಟ್ಟದಾವರೆ (ನಾ). ಒಂದು ಬಗೆಯ ಹೂವು ; ಕೊಸಗು : "ಕೊಸಗೆಂದುಂ ಬೆಟ್ಟದಾವರೆಯೆಂದುಂ ಕರ್ಣಿಕಾರಂ" (ಶಶಾ. ೩೦-೬೦) ; ಬೆಟ್ಟದಾವ[ಪಾಠಾಂ. ಮ]ರೆಯ ಹೂವಂ ತಂದು ನೆಳಲೊಳೊಣಗಿಟ್ಟು ಚೂರ್ಣಂ ಮಾಡಿಕೊಂಡು (ಸೂಶಶಾ. ೨-೨೦) ; ಬಟ್ಟಜವ್ವನೆಯೊರ್ವಳಡಿಯಿಟ್ಟು ಕಾಣ್ಕೆಗೆ ಬೆಟ್ಟದಾವರೆಯ ತಂದಿತ್ತು (ಶಠಕ. ೩-೩೫).

[ಬೆಟ್ಟ + ತಾವರೆ (<ತಾಮರೆ)]

ಬೆಟ್ಟದುದಿ (ನಾ). ಗಿರಿಯ ಶಿಖರ : ಬೆಟ್ಟದುದಿಗಳನಡರಿ ಕಂಡರು . . . ನಡೆದು ಬಹ ಪಾರ್ಥನ ಪತಾಕಿನಿಯನು (ಕೃಬಿಶಾ. ೦೬-೩೨). [ಬೆಟ್ಟ+ತುದಿ]

ಬೆಟ್ಟನೆ (ಅ). ೧. ಬಿರುಸಾಗಿ ; ಒರಟಾಗಿ : ಅಱಿದಂ ನೆಟ್ಟನೆ ಬೆಟ್ಟ ನಿಂತು ನುಡಿವೈ ನೀಂ ಕಂದ ಪೋಗಿಂದೆ ಕೆಟ್ಟಿಱಿದತ್ತಾಗದೆ ಸೋಮವಂಶಂ (ಶಂಕಭಾ. ೯-೮೬) ; ಎನ್ನ ಮಗಳ್ಗಾದ ಸುತರ್ ನಿನಗೆ ಕಿಂಕರರಕ್ಕುಮೆಂದು ಬೆಟ್ಟನೆ ನುಡಿಯೆ (ನೇಬಿಪು. ೩-೨೬ ಪ). ೨. ರಭಸವಾಗಿ ; ವೇಗವಾಗಿ : 'ಬೆಟ್ಟನೆವೋಗು' ಪರಾ.

ಬೆಟ್ಟವೆಟ್ಟನೆ (ದ್ವಿರುಕ್ತಿ) : ಪಲವಂ ಪುಲಾಟಸುತ್ತುಂ . . . ಅಡಿಗಡಿಗೆ ಕಾಲ ಮೇಲೆ ಬೀಬ್ಬುದುಪುವಂ ಬೆಟ್ಟವೆಟ್ಟನಿಂತೆಂದಂ (ಕಾದಂಬ.೬೪೩); ದಟಕಂಠನುದಂಚಿತಕಂಠನಾಗಿ ಬಿಟ್ಟಟ್ಟದೆ ಬೆಟ್ಟವೆಟ್ಟನುಸಿರ್ದಟ್ಟಿದೊಡಿರ್ದ ಪುದಲ್ತೆ ಕಾಳೆಗಂ (ಪಂಪಾಪ. ೦೦-೨೩).

[ಬೆಟ್ಟು₄ (<ಬೆಟ್ಟಿತು) + -ಅನೆ₁]

ಬೆಟ್ಟನೆಲ್ಲಿ (ನಾ). ಬೆಟ್ಟದಲ್ಲಿ ಬಿಡುವ ನೆಲ್ಲಿಕಾಯಿ ; ಒಂದು ಬಗೆಯ ಆಮಲಕ : ಬಾಳೇಹೂವು . . . ಪುಳ್ಳಂಪುರುಚಿಯ ಸೊಪ್ಪು, ಬೆಟ್ಟನೆಲ್ಲೀ ಸೊಪ್ಪು, ಈ ಸೊಪ್ಪುಗಳನ್ನು ಒಂದು ಮಡಕೆಯಲ್ಲಿ ತುಂಬಿ. . .ಪುಟವಿಕ್ಕಿ ತೆಗೆದು ಆ ಸೊಪ್ಪುಗಳ ರಸವ ಹಿಂಡಿಕೊಂಡು ಜೇನುತುಪ್ಪವೆರಸಿ ಕುಡಿಯಕೊಡೆ ಶಿಶುಗಳಿಗೆ ಸರ್ವಾತಿಸಾರ ಹರ (ವೈದ್ಯಸಾ. I, ೪೬೯).

[ಬೆಟ್ಟ + ನೆಲ್ಲಿ]

ಬೆಟ್ಟನೆವೋಗು (ಕ್ರಿ). ರಭಸವಾಗಿ ಹೋಗು ; ವೇಗವಾಗಿ ಸಾಗು : ತೊಟ್ಟನೆ ಬೆಳ್ಕುತ್ತ ಬೆಟ್ಟನೆವೋಗಿ ತನ್ನ ಕೆಯ್ಯಂ ಬೇಗಮುಡುಗಿಕೊಂಡು ಇದು ನಿಮಗೆನಿತು ಪೈತ್ತಿಕಜ್ವರಮಾದೊಡಮಿಂತೆನಲಕ್ಕುಮೆ ಎನೆ (ಬಂಹಂ. ೮-೩೯ ಪ). [ಬೆಟ್ಟನೆ+ಪೋಗು₁ (<ಪೋ₁)]

ಬೆಟ್ಟಬೂರುಗ (ನಾ). ಬೂರುಗದಲ್ಲಿ ಒಂದು ಬಗೆ : "ರೋಚನಃ, ಕೂಟಶಾಲ್ಮಲೀ—೨ ಕಚ್ಚನೆ ಎಲವದ ಪೆಸರು, ಬೆಟ್ಟಬೂರುಗ, ಕೆಂಪು ಬೂರುಗ" (ನಿಘಂ.ಶಿ. ೮೨೩) [ಬೆಟ್ಟ + ಬೂರುಗ₁ (<ಬೂರ)]

ಬೆಟ್ಟಬೇಸಗೆ 'ಬೇಸಗೆ' ಪರಾ.

ಬೆಟ್ಟಮಲ್ಲಿಗೆ (ನಾ). ಮಲ್ಲಿಗೆಯಲ್ಲಿ ಒಂದು ಬಗೆ ; ಗಿರಿಮಲ್ಲಿಗೆ ; ಕೊಡಸಿಗೆ : "ಕುಟಜಃ, ಶಕ್ರಃ, ವತ್ಸಕಃ, ಗಿರಿಮಲ್ಲಿಕಾ—ಕೊಡಸಿನ ಹೆಸರುಗಳು, ಬೆಟ್ಟಮಲ್ಲಿಗೆ ವಿಶೇಷಗಳು" (ನಿಘಂ.ಶಿ. ೦೨೬); ಬೆಟ್ಟಮಲ್ಲಿಗೆಯ ಹೊಚ್ಚಹೂವಿನೊಡ ಕಾಲ ನೀರ ನೀಡಿ (ಮೀಶರೂ. ೨-೪) ; ಬೆಟ್ಟಮಲ್ಲಿಗೆ ಗಿಡ ಹೂವಿನಿಂದ ಮುಚ್ಚಿಹೋಗಿದೆ (ಶಿಬಿಂರ. II, ೦೬೪).

[ಬೆಟ್ಟ + ಮಲ್ಲಿಗೆ]

ಬೆಟ್ಟವಕ್ಕಿ (ನಾ). ಮಲೆಯಲ್ಲಿ ವಾಸಿಸುವ ಹಕ್ಕಿ : ಮುತ್ತು ಹುಟ್ಟುವ ಕಣೆ ಬೆಟ್ಟವಕ್ಕಿಗಳ ಗೂಡೆಳನೇಸಱ ತೊಟ್ಟಿಲ್ . . . ಮಹಾರ್ಣವಂ (ಸೂಕ್ತಿಸು. ೨-೩೬). [ಬೆಟ್ಟ + ಪಕ್ಕಿ]

ಬೆಟ್ಟವಗೆಯ, ಬೆಟ್ಟುವಗೆಯ (ನಾ). ಮಲೆಯ ಶತ್ರು ; ಇಂದ್ರ : "ಬೆಟ್ಟವಗೆಯನೆನಲ್ಕೆ . . . ಅಮರೇಂದ್ರನಭಿಧಾನಮಕ್ಕು" (ಶಶ. ೬೨). ಬೆಟ್ಟುವಗೆಯ : "ಬರ್ದಿಲ . . . ಸಾಸಿರಗಣ್ಣ ಬೆಟ್ಟುವಗೆಯನೆನಲ್ಕೆ ಸುರಪತಿ ನಾಮಮಕ್ಕು" (ಶಬ್ದಮಂ. ೦೦); ಬೆಟ್ಟುಪಗೆಯಂ ಪಗೆಯಿನಟ್ಟ ಕುಳಿಸದ ಕಡಿಖಂಡದಂತೊಪ್ಪುವಚ್ಚವಳಿಕಿನ ಗಂಡಶೈಲದಿಂ (ರಾಮಾಶ್ವ. ೬೨-೨೩). 'ಅದ್ರಿಶತ್ರು' ಪರಾ. [ಬೆಟ್ಟ+ಪಗೆಯ]

ಬೆಟ್ಟವಳಿ (ನಾ). ಮಲೆಯ ಹತ್ತಿರ, — ಸಮೀಪ : ಕೆಡೆದ ಕರಿಗಳ

ಬೆಟ್ಟವಳಿಯ ಗುಂಡುಗಳೊಳಗೆ ವುಡಿದ ಕುದುರೆಗಳ ಪೊಡೆಗಲ್ಲ ಪೊರಳ ಗಳೊಳಗೆ . . . ಬಿಡದೆ ರುಧಿರಪ್ರವಾಹಂ ಪರಿಯೆ (ಕೃಶಿಖ. ೨೨-೨೬).
[ ಬೆಟ್ಟ + ಬಳಿ$_3$ (<ಬಟ್ಟೆ$_3$) ]

**ಬೆಟ್ಟವಾಟಿ$^3$** (ನಾ). ಒಂದು ಬಗೆಯ ಬಾಳೆ: "ಗುರುರಂಭಾ–ಬೆಟ್ಟ ವಾಟಿ" (೬ಕಂ. ೯೯). [ಬೆಟ್ಟ + ಬಾಟಿ$^3$]

**ಬೆಟ್ಟವೇಸಗೆ** 'ಬೇಸಗೆ' ಪರಾ.

**ಬೆಟ್ಟಸಱೆ** (ನಾ). ಪರ್ವತದ ಕಲ್ಲು; ಬಂಡೆ: ಏಕೆ ನಾನ್ ಈಗಳುಂ ನನ್ನನೀ ಬೆಟ್ಟಸಱೆಯತ್ತಣಿನ್ ತೂಳ್ದಿಸಿಮುಕೊಳಬಾರದಯ್ (ಐದ್ಯಶ್ರ. ೩೯-೮೩೮). [ ಬೆಟ್ಟ + ಸಱೆ$_1$ ]

**ಬೆಟ್ಟಸಾಲು** (ನಾ). ಪರ್ವತಗಳ ಪಂಕ್ತಿ; ಪರ್ವತಶ್ರೇಣಿ: ಈ ಬೆಟ್ಟಸಾಲು ಉತ್ತರಕ್ಕೆ ಹಬ್ಬಿ ಭೋಟಾನಾಗಪುರ ಪ್ರಸ್ಥಭೂಮಿಗೆ ಹೋಗುತ್ತವೆ (ಭೂಶಿಪ. ೩೫೬). [ ಬೆಟ್ಟ + ಸಾಲು$_2$ ( < ಸಾಲ್$_3$ ) ]

**ಬೆಟ್ಟಸೀಮೆ** (ನಾ). ಪರ್ವತಪ್ರದೇಶ; ಮಲೆನಾಡು: ಪೂರ್ವಘಟ್ಟಗಳ ಬೆಟ್ಟಸೀಮೆಯ ಕಾಡುಪ್ರದೇಶ (ಭೂಶಿಪ. ೩೫೮). [ ಬೆಟ್ಟ + ಸೀಮೆ ]

**ಬೆಟ್ಟಿ$_1$** 'ಭೇಟಿ' ನೋ.

**ಬೆಟ್ಟಿ$_2$** (ನಾ). (?) : ಗಗನವಾರಣಗಳುನ್ಮದದೊಗುವಿಗೆಯೊ . . . ಸೊಗಸಿನಲಿ ಜಾರಾಕದುಂಬಕೆ ಜಗದ ಕಂಗಳಿಗಿಟ್ಟ ಬೆಟ್ಟಿಯೊ ಹಗಲು ಘಟ್ಟಿಸಿ ಬಿಟ್ಟ ಮಸಿಯೋ ಎನಿಸಿತೆಧಿಕತವು (ಶಿಪ್ಪಕೃ. ೬-೯೬); "ಕಾಡಿಗೆ" (ಶಿಪ್ಪಕೃ. ೯೦೫೮). [?]

**ಬೆಟ್ಟಿತು, ಬೆಟ್ಟಿತ್ತು** (ನಾ). ೧. ಬಿರುಸಾದುದು; ಗಟ್ಟಿಯಾದುದು: "ಬಿಱುವೆಂದು ಬೆಟ್ಟಿತು" (ಶಶಸಾ. ೬೮-೫೯೬); ಬೆಟ್ಟಿತಿದು ನಾಡೆಯುಂ ಮಣಿಕಟ್ಟಿಮತಳಂ (ಕಾದಂಪೂ. ೯೫); ಕಲ್ಲಿನ್ನಳ್ ಪುಳ್ಳಿನ್ನಳ್ ಮೆಲ್ಲಿತ್ತಿದು ಬೆಟ್ಟಿತೆನ್ನಳ್ (ಗಂಕ. ೩-೦೦೧). ೨. ಕಠಿಣವಾದುದು; ಕಠೋರವಾದುದು: ತನಿನೋಟವಂ ನೋಡಿ ಬೆಟ್ಟಿತೆಂದಂಜುತಂ ನೆನೆದುಂ ಮನಂ ಕಠಿಣವೆಂದು ಮತ್ತಂಜುತಂ (ಉತ್ತರ. ದೇ. ೨೦೯-೦೦); ಮುರಾರಿಯ ಹೃದಯ ಬೆಟ್ಟಿತೆನುತ್ತ ಫಲುಗುಣ ತೂಗಿದನು ಶಿರವ (ಕುವ್ಯಾಉ. ೩-೨೮). ೩. ಗಾತ್ರವಾದುದು; ದಪ್ಪವಾದುದು: ಮಳಲೊಟ್ಟಲಂತೆ ಬೆಟ್ಟಿತಪ್ಪ ಪೊಱವಾಱುಂ (ಅಮ್ಮಕ. ೯-೨೨). ೪. ಕರ್ಕಶವಾದುದು: ಸಮಂತು ಡಕಾರಾಶ್ರಿತವಾದ ಜಬಿನುಮಂಗೀಕೃತ ಪದಲತ್ವಕ್ಕೆ ಬೆಟ್ಟಿತೆನಿಸಿದ ಕುಳನುಂ (ಶಮದ. ೦೮). ೫. ಉಗ್ರವಾದುದು; ಘೋರವಾದುದು: ಸೆಟ್ಟಿ ನೀನೆಮಗೆ ಕೊಟ್ಟ ಮಹಾಪವಕು ಕರಂ ಬೆಟ್ಟಿತಪ್ಪ ಘಣೆಯಾದುದು (ಧರ್ಮಶ. ೦೦-೬೮). ೬. ಕಷ್ಟಕರವಾದುದು; ಕ್ಲಿಷ್ಟವಾದುದು: ಕಾಲುಂ ಬಲಿಯುವು ನಡೆಯಲ್ ಬೆಟ್ಟಿತು (ಕಾದಂಪೂ. ೦೯೦); ಅರಸರೋಲಗಂ ಲೇಸು ಕಾಳೆಗಂ ಬೆಟ್ಟಿತೆಂಬಂತೆ (ಧಶಾಗಪ್ಪ. ೯-೨೯); ಇಂದು ನೀನಾ ಪಾಂಡುಪುತ್ರರನಂದಗೆಡಿಸದೆ ಬಿಟ್ಟಿಯಾದೊಡೆ ಮುಂದೆ ಬೆಟ್ಟಿತು ರಾಜಕಾರಿಯವೆಂದನಾ ಶಕುನಿ (ಕುವ್ಯಾಉ. ೮-೨೦). **ಬೆಟ್ಟಿತ್ತು**: ೧. "ಪರುಷಂ, ಅಸ್ನಿಗ್ಧಂ—ಈ ೨ ಬೆಟ್ಟಿತ್ತು" (ಹಲಾಯು. ೦೭೯-೯೮); ಬಿಸಿಮಂ ಬೆಟ್ಟಿತ್ತುಮುಸಿರದೇಂ ಶೀರ್ದಪುದೇ (ಶಂಶಖಾ. ೯-೬೦); ಕಳಾಧರೆ ಮಣಿಮಯಮಪಾದ ಪೀಠಂ ಬೆಟ್ಟಿತ್ತೆಂಬುತಿರಗಲೆ ಸೂಕಿ (ಅರ್ಧನೇ. ೦-೦೦೦ ಪ). 'ಕಡುವೆಟ್ಟಿತ್ತು' ಪರಾ.

**ಬೆಟ್ಟಿತಾಗು, ಬೆಟ್ಟಿತ್ತಾಗು**= ೧. ಬಿರುಸಾಗು; ಕಠಿಣವಾಗು; ಒರಟಾಗು: ಒಳಗಂ ಭೇದಿಸದನ್ನಂ ಚಳಬುದ್ಧಿಗೆ ಪೊಱಗು ಬೆಟ್ಟಿತಾಗಿರ್ಕುಂ . . . ಜಿನವಚನಂ (ಸಮಶ. ೩-೨೬); ಬೆಟ್ಟಿತ್ತಾದ ಪುರುಳಂ ಮೆಲ್ಲನಡಿಯಿಂದೊರೆಯೆ ಸೌಕುಮಾರ್ಯಮೆನಿಪುದು (ಅಕ್ರಶಿ. ೦೬-೮). ೨. ಕರ್ಕಶವಾಗು: ಅವಳ ಬೆಟ್ಟಿತಪ್ಪ ಬಟ್ಟಮೊಲೆಯಿಟ್ಟೆಡೆಯೊಳ್ ತೊಟ್ಟನೆ ಸಿಲ್ಕಿದ ಕಣ್ (ಕಬ್ಬಿಗಾ. ೬೬). ೩. ಬಲವಾಗು; ದೃಢವಾಗು: ಡಕಾರಂ ಪುಟ್ಟುವ ತಾಣಮುಂ ಬೆಟ್ಟಿತ್ತಾಗುಚ್ಚರಿಸೆ ಱಟಿಂ ಪುಟ್ಟುಗುಂ (ಶಮದ. ೦೯ ವೃತ್ತಿ). ೪. ತೀಕ್ಷ್ಣವಾಗು; ಉಗ್ರವಾಗು: ಅತಿ ಬೆಟ್ಟಿತ್ತಾದ ಬಾಯು ಕುತ್ತವೆಂದು ಹೊಟ್ಟೆಯುಂ ಹೊಸೆದು (ಧರ್ಮಪ್ಯಾ. ೯-೦೬೫). **ಬೆಟ್ಟಿದ**= ಕಠಿಣವಾದ ಮನಸ್ಸುಳ್ಳವನು; ಕ್ರೂರಿ: ಬೆಟ್ಟಿದನಾಗಿ ತಾನೆ ವಿಧಿ ಕೊಂದಪನಾಗಳೆ ಸಾಯದಿರ್ದೊಡಂ (ಕಾದಂಪೂ. ೦೯೬); ದಿಟ್ಟತನದೊಳೆಲ್ಲರ ನಱಿಯಟ್ಟುವ ಬೆಟ್ಟಿದ ಮೋಹಾಸುರನ ಪಟ್ಟಣವೆಲ್ಲವ ಸುಟ್ಟಮರರ ಮೆಟ್ಟಿ ಕಟ್ಟಿಯಾಳದೆ ಮಾಣೆನೆಂದ (ತ್ರಿಶಿಸಾಂ. ೯-೦೦೯).
[ದೇ.॥ ತಮಿ. ವೆಟ್ಟಿತು, ವೆಟ್ಟು; ತೆಲು. ಬೆಟ್ಟ, ಬೆಟ್ಟಿದ, ಬೆಟ್ಟು]

**ಬೆಟ್ಟಿತ್ತು** 'ಬೆಟ್ಟಿತು' ನೋ.

**ಬೆಟ್ಟಿಬೆನಕ** (ನಾ). (ಉಕ) (ಮುಂಗಾರಿನ ಸಮಯದಲ್ಲಿ ಕಂಡುಬರುವ) ಅನೇಕ ಕಾಲುಗಳುಳ್ಳ, ಮುಟ್ಟಿದರೆ ಮುದುರಿಕೊಳ್ಳುವ, ಒಂದು ಬಗೆಯ ಹುಳು; ಕಪ್ಪರಚಟ್ಟಿ; ಒನಕೆಬಂಡೆಹುಳು: **ಬೆಟ್ಟಿಬೆನಕವು** ಸಮಸ್ಯೆಯಲ್ಲಿ ಸಿಕ್ಕಿಕೊಂಡಿತು (ದೀಕನ್ನ. ೬೯). [ ? ]

**ಬೆಟ್ಟಿರ್** (ಕ್ರಿ). ತೀಕ್ಷ್ಣವಾಗಿರು; ಉಗ್ರವಾಗಿರು: ಬೆಟ್ಟಿಹ ಬಿಸಿಲೊಳ್ ಬೆಂಟೆಯ ನಟ್ಟಡವಿಯೊಳಾಡಿ ಬರುತ ಬಳಲಿದ ಬೇಡಂ ತುಟ್ಟಿಸಿ ನೀರಂ ನೆಳಲಂ . . . ನೋಡುತಿರಲ್ (ವಸ್ತುಶಾ. ೫-೯೮).
[ ಬೆಟ್ಟು$_4$ (<ಬೆಟ್ಟಿತು) + ಇರ್$_1$ ]

**ಬೆಟ್ಟಿಸು** (ಕ್ರಿ). ನಾಟಿಸು; ಹೊಡೆಯಿಸು: ಇಱಿವುಜಾದಿಕೃತ್ತ್ರೀ ಕಟ್ಟಿಸೆಯುಂ ಬರೆಯಿ[ದ್ದ]ಸೆಯುಮುಳಿಯೊಳ್ ಬೆಟ್ಟಿಸೆಯುಂ (ಬಂಶಂ. ೦೦-೯ ರಗಳೆ); ಪಿಂತಣ ಮುಂತಣ ಕಾಲ್ಗಳಲ್ಲಿ ಬೆಟ್ಟಿಸಿ ದಸಿಯಂ (ಆಃಕೋಶ. ೩-೬೯). [ ಬೆಟ್ಟು$_1$ + – ಇಸು$_3$ ]

**ಬೆಟ್ಟು$_1$** (ಕ್ರಿ). ೧. ಕಡಿ; ಕತ್ತರಿಸು; ಸವರು: 'ಬೆಟ್ಟುಂಗಾಡು', 'ಬೆಟ್ಟುಗತ್ತಿ' ಪರಾ. ೨. (ಕೈ, ದೊಣ್ಣೆ, ಸುತ್ತಿಗೆ ಮುಂತಾದುವುಗಳಿಂದ ಮೊಳೆ, ದಸಿ ಇತ್ಯಾದಿಗಳನ್ನು) ಹೊಡೆ; ಬಡಿ: ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮನುಳಿಯನೂಱೆ ಕೊಡಂತಿಯೊಳ್ ಬೆಟ್ಟಿದಂತತ್ತವಿತ್ತಮುರ್ಚಿ ಪೋಗೆಯುಂ (ಶಂಶಖಾ. ೦-೦೦೯ ವ); ಧಾತ್ರಂ ಬಲ್ಪಿಂದೆಳವಡೆ ಬೆಟ್ಟಿದ ಬೆಳ್ಳಿಯ ಮೊಳೆಗಳೆನಲ್ ತೊಳಗಿ ಬೆಳಗಿದುವು ತಾರಗೆಗಳ್ (ಜಗದ. ೦೬-೯೯); ಒಡೆದ ದೂಹತ್ತಿಗೆಗೆ ಕೀಲ್ಗಳನಡಸಿ ಬೆಟ್ಟಿದ ಗಾಲಿಗಚ್ಚನು ತೊಡಿಸುತಿರಲು (ಕುವ್ಯಾಶೀ. ೫-೩೬). ೩. ಇರಿ; ನಾಟುವಂತೆ ಮಾಡು: "ಬೆಟ್ಟು—ಗಾಢಪ್ರವೇಶೇ, ಪರ್ವತೇ ಚ" (ಶಮಂ); ಕಾಯ್ದ ಕಬೋನ್ನಸೂಜಿಗಳಂ ಬೆರಲ್ಗಳೊಳ್ ಬೆಟ್ಟುವರುಂ (ಅರಿಶ. ೫-೮೫ ವ); ಕೀಲಂ ಬೆಟ್ಟಿರ್ದ ಮರನಂ ಕಂಡು (ಶಂತಶಂ. ೩೦-೫); ಮಂಗಭೂಪನ ಬಾಯೊಳಗೆ ಬೆಟ್ಟಿದನು ಗದೆಯನು (ಕುವ್ಯಾದ್ರೋ. ೨-೬೨). ೪. ನಾಣ್ಯವನ್ನು ಮುದ್ರಿಸು: ಹೇಮ ರಜತಾದಿ ಕರ್ಷದಿಂ ಬೆಟ್ಟಿದ ನಾಣ್ಯ—ಕಾರ್ಷಾಪಣ, ಕಾರ್ಷಿಕ (ನಾಶಣ. ೬). ೫. ತಳ್ಳು; ದಬ್ಬು; ಗಿರವಂ ದಾನವರೂಡಿದರ್ ಬಿಗಿದು ಪಾರಾವಾರದೊಳ್ ಬೆಟ್ಟಿದರ್ (ವಿಶ್ವಕ. ೦-೫-೨೨೩). 'ವೆಟ್ಟು$_1$' ಪರಾ. [ದೇ.॥ ತಮಿ. ಮಲ. ವೆಟ್ಟು; ತುಳು. ಬೆಟ್ಟು; ಕೋತ. ವೆಟ್]

**ಬೆಟ್ಟು$_2$** 'ಬೆಟ್ಟ' ನೋ.

**ಬೆಟ್ಟು$_3$** 'ಬೊಟ್ಟು$_1$' ನೋ.

**ಬೆಟ್ಟು$_4$** 'ಬಿಱು$_2$' ನೋ.

**ಬೆಟ್ಟುಂಗಾಡು, ಬೆಟ್ಟುಗಾಡು** (ನಾ). ಕಾಡನ್ನು ಕಡಿದು ಬೇಸಾಯಕ್ಕೆ ಸಿದ್ಧಗೊಳಿಸಿದ ಪ್ರದೇಶ—ಭೂಮಿ: ಬೆಟ್ಟುಂಗಾಡು, ಬೆಟ್ಟುಗಾಡು (ಕವ್ಯಾಶಂ. ೩೬೯ ಶ್ರ ದೊ). **ಬೆಟ್ಟುಗಾಡು**: ಮೇಲಿನ ಪ್ರಯೋಗವನ್ನು ನೋಡಿ. 'ಬೆಟ್ಟುಗದ್ದೆ' ಪರಾ.
[ಬೆಟ್ಟು$_1$ + ಕಾಡು$_2$. / ತಮಿ. ವೆಟ್ಟುಕ್ಕಾಟು ]

**ಬೆಟ್ಟುಂಬೊಟಿ$^3$, ಬೆಟ್ಟುವೊಟಿ$^3$** (ನಾ). ಬೆಟ್ಟದ ಮೇಲಿನಿಂದ ಹರಿಯುವ

ಪ್ರವಾಹ,—ಹೊನಲು : ಬೆಟ್ಟುಂಬೊಟೆ$^3$ಯೆಂಬುದು ಕೃತ್ತಲ್ಲದಲ್ಲಿಯುಂ ಸಂದುದು (ಶಬ್ದ. ಪ. ೦೮೦ ಪ್ರಯೋ). ಬೆಟ್ಟುವೊಟೆ$^3$ : ಬೆಟ್ಟುಂಬೊಟೆ$^3$, ಬೆಟ್ಟುವೊಟೆ$^3$ (ಶಬ್ದಾ.ಮ. ೪೭೯ ಪ್ರಯೋ).

[ಬೆಟ್ಟು$_2$ (<ಬೆಟ್ಟ) + ಪೊಟೆ$^3$]

**ಬೆಟ್ಟುಕಚ್ಚು** 'ಬೊಟ್ಟುಕಚ್ಚು' ನೋ.

**ಬೆಟ್ಟುಗ** (ನಾ). ಒಬ್ಬಾತನ ಹೆಸರು : ಆತನ ತಮ್ಮ ಬೆಟ್ಟುಗ ಕುಱು ಗಳೊಳ್ಸತ್ತು (ಎಕ. VII, ಶಿವಮೊ. ೨೨-೫; ೯೬೩). [?]

**ಬೆಟ್ಟುಗತ್ತಿ** (ನಾ). (ಮರ ಮುಂತಾದುವನ್ನು) ಕತ್ತರಿಸುವ ಚಾಕು, ಕತ್ತಿ, ಮಚ್ಚು ಮುಂತಾದ ಸಾಧನ,—ಉಪಕರಣ : ಬೆಟ್ಟುಗತ್ತಿಯಿಂದ ಮರದ ಕೊಂಬೆಯನ್ನು ಕಡಿ (ರೂಢಿ).

[ಬೆಟ್ಟು$_1$ + ಕತ್ತಿ. / ತಮಿ. ವೆಟ್ಟುಕ್ಕತ್ತಿ]

**ಬೆಟ್ಟುಗದ್ದೆ** (ನಾ). ಮರಗಳನ್ನು ಕಡಿದು ವ್ಯವಸಾಯಕ್ಕೆ ಅಣಿಮಾಡಿದ ಗದ್ದೆ : ಮನೆಗಳ ಸುತ್ತುಮುತ್ತು ಬೆಟ್ಟುಗದ್ದೆಗಳಿರುವುದೂ ಉಂಟು. ಬೆಟ್ಟುಗದ್ದೆಗಳನ್ನು ದಾಟಿದರೆ ಕುರುಚಲುಗಿಡಗಳಿಂದ ತುಂಬಿದ ಗುಡ್ಡಗಳು (ಜಾಗ. ೪); ಬೈಲುಗದ್ದೆ—ಬೆಟ್ಟುಗದ್ದೆಗಳಿಂದಲೂ ಅಲಂಕೃತವಾಗಿರುವುದು (ಕೊಡಗು. ೩). 'ಬೆಟ್ಟುಂಗಾಡು' ಪರಾ. [ಬೆಟ್ಟು$_1$ + ಗದ್ದೆ (<ಗಟ್ದೆ)]

**ಬೆಟ್ಟುಗಾಡು** 'ಬೆಟ್ಟುಂಗಾಡು' ನೋ.

**ಬೆಟ್ಟುಗೂಂಟ** (ನಾ). ನೆಡುವ ಗೂಟ : ಹೊಸೆಯಿಪ ಬೆತ್ತಗಣ್ಣ ವಲೆಯಂ ಸಮಕಟ್ಟುವ ಬೆಟ್ಟುಗೂಂಟಮಂ ಬಿಸಿವ ಪುಳಿಂದಸಂಕುಳದ ಪೆರ್ಗಣದಿಂದೆಸೆದತ್ತು ಪಕ್ಕಣಂ (ಚಂದ್ರ.ಥ. ೫-೩೯). [ಬೆಟ್ಟು$_1$ + ಗೂಂಟ]

**ಬೆಟ್ಟುಬ್ಬಸ** (ನಾ). ತೀವ್ರವಾದ ಸಂಕಟ,—ಸಂತಾಪ : ಬೆಟ್ಟುಬ್ಬಸದಿಂದ ಹಾಹಾಕಾರ ಮಾಡುತ್ತ ಸಿಂಹವಿಷ್ಟರದತ್ತಣ್ಗೆ ಧಾವಿಸಿ (ಕಬ್ಬಿ. ೦೦೯-೨೯). [ಬೆಟ್ಟು$_4$ (<ಬೆಟ್ಟಿತು) + ಉಬ್ಬಸ]

**ಬೆಟ್ಟುಮುರಿ** 'ಬೊಟ್ಟುಮುರಿ' ನೋ.

**ಬೆಟ್ಟುಮೊಲೆ** (ನಾ). ಕರ್ಕಶವಾದ ಮೊಲೆ : ಬಟ್ಟಚಂದಿರಕಾಂತದಾ ಕಾಲಿಟ್ಟು ಮೃಗಮದಕರ್ಪೂರದ ಪುದಿವಿಟ್ಟು ಚಂದನ ತುಂಡುವಿಡಿದರೆವವರ ನಗೆಮೊಗವಾ ನಟ್ಟನಿಂದುವೆಯೆಂದು ಕಲುನೀರಿಟ್ಟು ಬರೆ ಮಮಗಾಣ ಗುಡದಿರ ಬೆ[ಬೆ]ಟ್ಟುಮೊಲೆ ಬಳಲುವರನಿಬರ ಪುಟ್ಟವಳ್ಳಿಯರು (ಶಾಳ್ವಭಾ. ೨-೦೩). [ಬೆಟ್ಟು$_4$ (<ಬೆಟ್ಟಿತು) + ಮೊಲೆ$_1$]

**ಬೆಟ್ಟುಮೊಳೆ** (ನಾ). (ಎರಡು ಹಲಗೆಗಳನ್ನು ಜೋಡಿಸಲು ಉಪಯೋಗಿಸುವ) ಬಡಿಯುವ ಆಣಿ : ಬೆಟ್ಟುಮೊಳೆಗಳ ಡಾಣೆಗಳ ಬೆನ್ನಟ್ಟಿ ಮೋದುವ ಮರುಳುತಂಡದ . . . ಬಲು ಬೊಮ್ಮರಕ್ಕಸರಿಟ್ಟಣೆಯುಲಿವೆ ಸೀಮಪೊಲು ಸಂಭ್ರಮಿಸಿತಾ ದುರ್ಗ (ಕೊರಲಾ. ೬-೭-೦೨).

[ಬೆಟ್ಟು$_1$ + ಮೊಳೆ$_2$]

**ಬೆಟ್ಟುಮಗೆಯ** 'ಬೆಟ್ಟಮಗೆಯ' ನೋ.

**ಬೆಟ್ಟುವೊನಲ್** (ನಾ). ಬೆಟ್ಟದ ಮೇಲಿನಿಂದ ಹರಿಯುವ ಪ್ರವಾಹ,—ಹೊನಲು : ಇಳಿತಪ್ಪ ಬೆಟ್ಟುವೊನಲ್ಗೆಡೆಗೊಗ್ಗಿನಿಂ ಪೋಗಿ ತಿಳಿನೀರ ಸೆಂಟೆ (ರೇಮ. ೪-೨೬). [ಬೆಟ್ಟು$_2$ (<ಬೆಟ್ಟ) + ಪೊನಲ್]

**ಬೆಟ್ಟುವೊಟೆ$^3$** 'ಬೆಟ್ಟುಂಬೊಟೆ$^3$' ನೋ.

**ಬೆಟ್ಟಿ**, ಬೆರಟೆ (ನಾ). ೧. ಬಿರುಸಾದುದು ; ಕಠಿಣವಾದುದು : ಬೆಟ್ಟಿಯ ಮಾತ ನುಡಿಯಲು ಭೀಷ್ಮನಿಂತೆಂದನು (ಕೇಬಸಂ. ೫-೬೩). ೨. ಒರಟುತನ ; ಕಠಿನತೆ ; ಕಾಠಿಣ್ಯ : ಹಿಮವಂತ ತಾನೆಮ್ಮಯ ಬಳಿಗೆ ಸಂತೋಷದಿಂ ಬಂದು ಕಾಣ್ಬನೊ ಬೆಟ್ಟಿಯ ಮುಂತೆ ಕಾಣಿಸಬೇಕೊಯೆಂದ (ಶರತ. ೩೫-೨೬). 'ಬೆಟ್ಟಿತರಂ' ಹೋ. ೩. ಕಠಿಣ ವ್ಯಕ್ತಿ : "ಕರ್ಕಶಂ ಕಕ್ಕಡಂ ಕಠಿನಂ ಕಠೋರಂ ಖರಂ ಕರ ಬೆಟ್ಟಿಯುವನಕ್ಕು" (ಷಂಗರಾ. ೬೮-೭); ಲಟ್ಟಿಯರು ಮಿಂಡರ ಬೆಟ್ಟಿದರು . . . ವಾರಪುರಂಧ್ರಿಯರು (ಬಸವ. ೪೦-೩೬); ಪಂಥದಿಂ ಮಚ್ಚರಿಪ ದಿಟ್ಟೆಯರ್ಬೆ [ಪಾಠಾಂ. ಬೆ]ಟ್ಟಿಯರ್ಗನ್ನೆಯರ್ಬಿನ್ನಣೆಯರು (ಶತಂ. ೨-೫೮). ೪. ಗಟ್ಟಿಯಾದ, ಹಸನುಗೊಳಿಸದ ಕಡಮೆದರ್ಜೆಯ ಅಡಕೆ; ಕರ್ಚಿಅಡಕೆ : ಶೇಖರಿಸಿದ್ದ ಕದರಡಕೆ ಬರಿಯ ಬೆಟ್ಟಿ, ಗೋಟು ಎಂದು ಕಂಡುಬಂದದ್ದರಿಂದ (ಮರಳು. ೯೩೮); ತೋಟದಲ್ಲಿ ಎಷ್ಟು ಅಡಿಕೆ ಬೆಳೆದಿದೆ, ಬೆಟ್ಟಿಯೆಷ್ಟು—ಹಸ ಎಷ್ಟು (ಹೊಸಸ್ಥ. ೨೯೮) : ಬತ್ತ ಮನೆಗೆ ಬಾರದೆ ಹೋದರೂ ಬೆಟ್ಟಿಗೆ ಒಳ್ಳೆಯ ಕ್ರಯ ಇರುವುದರಿಂದ ಬದುಕಿಕೊಂಡಿದ್ದೇವೆ (ಅಳಿ. ೫೬). (ಗು). ೫. ಮಧ್ಯಮದರ್ಜೆಯ; ಕಡಮೆ ದರ್ಜೆಯ: 'ಬೆಟ್ಟಿಚಿನ್ನ' ಪರಾ. ಬೆರಟೆ : ೬. ಸಾಧಾರಣವಾದುದು ; ಕಡಮೆ ದರ್ಜೆಯದು : ಎಷ್ಟೋ ಕಸ ; ಅದರ ಮರೆಗೆ ಅಲ್ಲಿ ಇಲ್ಲಿ ಇನಿತು ರಸ. ಎಷ್ಟೊ ಒರಟು, ಎಷ್ಟೊ ಬೆರಟೆ ; ನಡುವೆ ಅಲ್ಪ ಸ್ವಲ್ಪ ಹಸ (ಸುವೀತ. ೬೦-೩).

ಬೆಟ್ಟಿ ಮಾಡು=ಬಲಪ್ರಯೋಗ ಮಾಡು; ಕಠಿಣವಾಗಿ ವರ್ತಿಸು : ನೆಟ್ಟಯ ತೆಗೆದೊಮ್ಮೆ ನೋಡಿರ್ಕೆಯೆಂದಾಗ ಜಟ್ಟಗಳಿಗೆ ಕೈಯ ನೀಡೆ ಬೆಟ್ಟಿ ಮಾಡದೆ ಕೈಯನವರೊತ್ತಲರಸನ ಬೆಟ್ಟದ್ದುದಿಸು ಸಡಿಲದೆ ನೋವಿಗಂಜದರಾಗಮೊತ್ತಿ ತೆಗೆವುದೆಂದು ಭೂವರನಾಸುರೆ (ಶರತ. ೪೯-೦೦೨).

[ದೇ.॥ ತಮಿ. ವೆಟ್ಟಿ, ವೆಟ್ಟು; ತುಳು. ಬೆಟ್ಟಿ]

**ಬೆಟ್ಟಿಗಾಣಿಸು** (ಕ್ರಿ). ಕಾಠಿಣ್ಯವನ್ನು ತೋರಿಸು : ಬೆಟ್ಟಿಗಾಣಿಸಲೇಕೆ ಹಿಮವಂತದೇವನು ಕಟ್ಟುಗ್ರುದವನಲ್ಲ ಸ್ವಾಮಿ (ಶರತ. ೩೫-೨೬).

[ಬೆಟ್ಟಿ + ಕಾಣಿಸು]

**ಬೆಟ್ಟಿಚಿನ್ನ** (ನಾ). ಕಡಮೆ ದರ್ಜೆಯ ಚಿನ್ನ : ಅಶುದ್ಧವಾದ ಬಂಗಾರ; ಕೀಳಂಲೋಹಗಳು ಬೆರೆತ ಚಿನ್ನ : ಬೆಟ್ಟಿಚಿನ್ನವಾದರೆ ಸೆಟ್ಟಿಗೆ ಆಗವೇ ? (ಗಾದೆ). [ಬೆಟ್ಟಿ + ಚಿನ್ನ$_1$]

**ಬೆಟ್ಟಿನುಡಿ** (ನಾ). ಕಠಿಣವಾದ ಮಾತು ; ಕಠೋರವಾದ ನುಡಿ : ಅವರಿಗೆ ಕೊಡುವುದಕ್ಕಿಂತ ಮಾತಂಗನೆ ಸವಿನಯದಿಂದೀವೆನೆಂದು ಅವರೊಳು ಬೆಟ್ಟಿನುಡಿಯ ನುಡಿದಾ ಭೂಧವನು ಕಳುಹಲವರೆಯ್ದಿ (ಕೇಬಸಂ. ೨೦-೨೦). [ಬೆಟ್ಟಿ + ನುಡಿ$_2$]

**ಬೆಟ್ಟಿಬಂಗಾರ** (ನಾ). = ಬೆಟ್ಟಿಚಿನ್ನ : ಒರೇ ಹಚ್ಚಿದರೆ ಬರೀ ಬೆಟ್ಟಿ ಬಂಗಾರದ್ಹಾಂಗೆ ಕಾಣ್ತದೆ (ಮರಮು. ೬೯೬). [ಬೆಟ್ಟಿ + ಬಂಗಾರ]

**ಬೆಟ್ಟೇಱು$_1$** (ಕ್ರಿ). ಪರ್ವತವನ್ನು ಹತ್ತು : ತನ್ನೊಲ್ಲದನು ಕರೆದಳ್ತು ಬೆಟ್ಟೇಱಿ ಬಿಟ್ಟುಗರೆವಂತೀಗಳ್ (ಶಾಂತಿಪು. ೮-೬೨); ಅಸಮುಗ್ರಸರ್ಗಲೆ ಜಾತ್ರೆಯೋಗಿ ಭರದಿಂ ಬೆಟ್ಟೇಱೆಯುಂ ಮತ್ತೆ ಪೂಜಿಸುವರ್ (ಸಮಶ. ೯-೯); ಬೆಟ್ಟೇಱಿ ಮೃತ್ಯುವಂ ಕರೆದುಕೊಂಡಂ ಪಾಪಿ (ವೀರಠ. ಶ. ೯೯೫-೨೨). [ಬೆಟ್ಟು$_2$ (< ಬೆಟ್ಟ) + ಏಱು$_1$ (< ಏಱ್$_1$)]

**ಬೆಟ್ಟೇಱು$_2$** 'ಬಿಟ್ಟೇಱು' ನೋ.

**ಬೆಡಂಗ**, ಬೆಡಗ$_1$ (ನಾ). ೧. ಚೆಲುವ ; ರೂಪವಂತ : ಕನಕಾದಿತ್ಯಂ ಷಡ್ಗುಣಾಳಂಕಾರಂ ×ಟದ ಬೆಡಂಗಂ ನುಡಿದು ತಪ್ಪದಂ (ಶಾಸಇ. XI-i, ೨೨-೭; 897); ತಳಿರೊಳ್ ನೀನೆ ಬೆಡಂಗನೈ ನನೆಗಳೊಳ್ ನೀಂ ನೀಟನೈ (ಅಜಿಪು. ೦೦-೯೬); ಎನಸುಂ ತಾನೇಂ ಪರಿಚ್ಛೇದಿಯೊ ತವದ ಬೆಡಂಗಂ ಗುಣವ್ರಾತತುಂಗಂ (ಸಮಶ. ೦-೨೩). **ಬೆಡಗ$_1$** : ೨. ಚತುರ ; ನಿಪುಣ : "ಬೆಡಗನೆಂದರೆ ಚದುರಂ" (ಶಾಠಾ. ೦೦). ೩. ವಿಲಾಸಿ ; ಒನಪುಗಾರ : (*). [ಬೆಡಂಗು + —ಅ$_7$]

**ಬೆಡಂಗಡರ್** (ಕ್ರಿ). ೧. ಚೆಲುವನ್ನು ಹೊಂದು ; ಸುಂದರವಾಗು : ಏಂ ಬೆಡಂಗಡರ್ದರೋ ರುಚಿಮದ್ವಿಚಳಲ್ಲತಾಂಗಿಯರ್ (ಅಪಂಪು. ೭-೨೮). ೨. ಆಶ್ಚರ್ಯವುಂಟಾಗು ; ಬೆರಗಾಗು : ತೊಂಗಿ ಶಸ್ತ್ರಸಮೇತನಾಗಿ ಬೆಡಂಗಡರೆ ಮಾಹೇಶ್ವರರ ವಸ್ತ್ರಂಗಳು ರಜತಾದ್ರಿಯಂದದಿ ಪೊತ್ತು ನಡೆವುತ್ತ (ಬಸವ. ೨೦-೯). [ಬೆಡಂಗು + ಅಡರ್]

**ಬೆಡಂಗಿ,** ಬೆಡಗಿ (ನಾ). ೧. ಚೆಲುವೆ ; ಸುಂದರಿ : ನಿಡುಯಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯವಪ್ಪುವಾ ಪುರವರದೊಳ್ (ಕಾವ್ಯಾ. ೧೬೮ ಕೂದ್ರ೪) ; ಬೆಳಗುವ ಲಾವಣ್ಯವುಸೆಯ ಬಂದರ್ . . . ನಿಡುಗಣ್ಗಳ ಬೆಡಂಗಿಯರ್ ಕೋಮಲೆಯರ್ (ಜಗಂ. ೪-೧೨೪). ೨. ಒಯ್ಯಾರಿ ; ಬೆಡಗುಗಾತಿ : ಜಡೆಗಳ ಬೆಡಂಗಿ ಭಸಿತದ ಫಾಲಲೋಚನೆ ರುದ್ರಾಕ್ಷಿಯ ಭದ್ರಾಂಗಿ (ಗಿರಿಜಾ. ೯-೧೬ ಪ); ಬೇಟದ ಬೆಡಂಗಿಯುಪಾರ್ಗಟಳಿಯು ಕುಸುಮುವುಮಂ . . . ತಿಱಿದರ್ (ಉದ್ಭಟ. ೯-೫೪). **ಬೆಡಗಿ :** ೧. ಕಡುಬೆಡಗಿ ಮೇಲಲರುದು ಪುಣುಗನು ಪಿಡಿಯೆ (ವಾಗಿಷ. ೨-೯). ೨. ತರದಿರೋ ರಂಗ ಬೆಡಗಿಯು (ವಾಕಚ. ೧೫); ಬಂದಿದ್ದ ಹೆಣ್ಣುಗಳ ಪೈಕಿ . . . ಒಬ್ಬಿಬ್ಬರು ಕಾಲೇಜು ಮೆಟ್ಟಿಲು ಹತ್ತಿದ್ದ ಬೆಡಗಿಯರೂ ಆಗಿದ್ದರು (ಕಾಗಿಪ. ೧೯೨). [ಬೆಡಂಗ + -ಇ$_2$]

**ಬೆಡಂಗು,** ಬೆಡಗು$_1$ (ನಾ). ೧. ಅಂದ ; ಸೊಬಗು ; ಸೊಗಸಂ : "ಬೆಡಂಗೊಂದು ಮನೋಹರಂ" (ಕಚಾ. ೬೪-೪೨೪) ; ಎಮ್ಮ ಕೆಲಂಗಳೊಳ್ ಮೆಱೆಯುತಿರ್ದಪುವೀ ಶ್ರುತಿಪೂರಕ್ಕೆರವಂ ತಮ್ಮ ಬೆಡಂಗಂ (ಕಾವ್ಯಾ. ೯೬೫ ಕೂದ್ರ೪) : ಪೊಱಲ ಬೆಡಂಗಂ ಮೆಚ್ಚಿ ಮೆಚ್ಚಿ ನೋಡಿ (ಶಂಕಾ. ೪-೧೧ ಕಗಳ). ೨. ಒಯ್ಯಾರ; ವಿಲಾಸ; ಒನಪು : ಜವ್ವನದ ವಿಳಾಸ ದಂದದ ಬೆಡಂಗಿನ ಪೆಂಡಿರ ಪೆಂಡಿರಱಿಯಾ (ಶಂಕಾ. ೪-೮೫); ಮಧ್ಯಂ ಬೆಡಂಗಿನಿಂ ಬಳ್ಕೆ ಮುಂಡಿ ಪೂಗಳಂ ಕೆದಱೆ (ಶಂಪು. ೫-೧೧). ೩. ಠೀವಿ; ಗತ್ತು : ದಂಡೆಯಂ ನಿಱುವ ಕೈ ನಡುಗದೆ ಗದೆಯಂ ಬೀಸುತ ಬೆಡಂಗು ರಂಜಿಸಿತು ಭೀಮ ದುರ್ಯೋಧನರಾ (ಗದಾಯು. ೮-೮); ನುಡಿವ ಬೆಡಂಗು ನೋಡುವ ಪರಾಕ್ರಮ ಮಾಡುವ ಸಾಹಸೋಕ್ತಿ . . . ಬಣ್ಣಿಸಲಳವಲ್ತೆ (ಶಾಸನ. IX-i, ೨೬೬-೨೪ ; 1183). ೪. ನೈಪುಣ್ಯ ; ಕೌಶಲ್ಯ : ಮೊದಲೊಳ್ ಕಲ್ತೆಗಲ್ಲದೆ ಪದದೊಳ್ ಜಾಣಂ ಬೆಡಂಗು ಮಕ್ಕುಮೆ ಕೃತಿಯೊಳ್ (ಕವಿರಾ. ೧-೯); ಪೊಸ ದೇಸೆಯಂ ಬೆಡಂಗಂ ರಸಪುಷ್ಟಿಯನರ್ಥದೃಷ್ಟಿಯಂ ಬಗೆವರೊ ಭಾವಿಸುವರೊ ಸ್ಮಾರಣೆಯಂತಿರೆ ಕಸಮಂ ಪಿಡಿವರ್ ಕೆಲರ್ ಮಹಾಪುರುಷರ್ಕಳ್ (ಆಪು. ೧-೪೦); ಅಸಗನ ದೇಸಿ ಪೊನ್ನನ ಮಹೋನ್ನತಿವೆತ್ತ ಬೆಡಂಗು . . . ಶೋಭಿಸೆ ನೆಲಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ನಿರಂತರಂ (ಧರ್ಮಾಮೃ. ೧-೩೯). ೫. ಚಮತ್ಕಾರ ; ಚಾತುರ್ಯ : ಬೆಡಂಗು[ಪಾಠಾಂ. ಬೆಡಗು] ಬೇಱೊಂದು ತೆಱಂ ನುಡಿಗೆನೆ ಮನಕ್ಕೆ ವರೆ ಹಳೆ ನುಡಿದು ಅರ್ಥಮದೊಂದು ತೆಱಂ (ಶಾಂತಿಪು. ೨-೬೪); ಸಂಗರದೊಳೀರೇಳು ಲೋಕದರಸುಗಳ ಸಪ್ತಾಂಗಮಂ ಕೊಂಬ ನಿನ್ನಂ ನುಡಿಯು ತೊಡಕಿನ ಬೆಡಂಗಿನಿಂ ಸೋಲಿಸಿ (ಜಜಾ. ೧೧-೧೩). ೬. [ಸಂಗೀತ] ಹಾಡುವ ರೀತಿಯ ಒಂದು ಕ್ರಮ (?): ಭಣಿತೆ ಬೆಡಂಗು ಕಾಕು ಖಚರಂ ಗಮಕಂ . . . ಪೆಲ್ಲಣೆ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗಂ. ೫-೩). **ಬೆಡಗು$_1$ :** ೧. "ಬೆಡಗೆನೆ ರಮ್ಯಂ" (ಕವೀಂ. ೮೪೦) ; ಪೊದಳ್ದುಗುರ್ ಶುಕ್ತಿಜದ ಬೆಡಗಿಂಗೆ ಭಂಗಮುಂ ಸಂಗೊಳಿಸೆ (ಕಪ್ಯಾ. ೩-೨೬); ಬೆಡಗಿನ ತುಂಬು ಜವ್ವನೆ ನಾಲ್ಕುನೀರನ್ ಮಿಂದಳೊಲವಿಂದ (ಹಾರಿಭಾ. ೩-೩೪). ೨. ಅಕಟಕಟಾ ಬೆಡಗು ಬಿನ್ನಾಣವೆಂಬುದೇನೋ (ದಸಪ. ೬೬); ಬಟ್ಟ ಮುಡಿಯ ಬೆಡಗಿನ ಸುಡಿ ನೋಟದ . . . ದಿಟ್ಟೆಯರಿರುತಿಹರಲ್ಲಿ (ಅಂಚೆ. ೨-೧೧೪) ; ಬಾಳೆಗೆ ಕಡಗು ಸೂಳೆಗೆ ಬೆಡಗು (ಗಾದೆ). ೪. ಕದೀಯಾಸ್ತ್ರಪ್ರಯೋಗದ ಬಲುಹನೀಕ್ಷಿಸೆ ತೆಗೆವ ಬೆಡಗನು ಕಲಿಸ ಪಾಶುಪತಾಸ್ತ್ರವೆನಗಾಯ್ತಲ್ಲಿ ವಶವರ್ತಿ (ಕುಮಾರರಾ. ೯-೯). ೫. ಅಡಾದನಾ ಅಜನು ಕೋಡಗಾವನು ಹರಿಯು ನೋಡಿದರೆ ಶಿವನು ನರಿಯಾದನೀ ಬೆಡಗರೂಢಿಯೊಳು ಬಲ್ಲ (ಸರ್ವಜ್ಞ. ೨೩೯); ಒಳ್ಳೆಣ್ಣೆ ತಂದೆನು ಕೈಯೆಣ್ಣೆಯಾಯಿತು ನಾನೇನು ಮಾಡಲಿ ಮತ್ತೆ ಸೊಸೆಯೆಂಬ ಮಾತಿನ ಬೆಡಗರಿವಾಯಿತು ತಲೆದೂಗಿ ಸೈಯೆಂದಳತ್ತೆ (ಇಂಚಾಕ. ೦೨೯-೩೫). ೬. ಚೋದ್ಯ; ಸೋಜಿಗ : ಅಡಿಯಿಲ್ಲದ ನಡುವಿಲ್ಲದ ಮುಡಿಯಿಲ್ಲದ ಬಯಲು ಎಡೆಯಿಲ್ಲದಿಪ್ಪುದು ತಾ ಜಗವನೊಡಗೂಡಿ ಹಿಡಿಯಲು ಬಿಡಲಿಲ್ಲದ ಬೆಡಗು (ಶಿವಗೀ. ೩೨-೦೯೫): ಸಾವಿರ ವಡಿಯ ಹೊನ್ನಿನ ತೂಕವಂ ಕಡಿಕಡಿದು ಜಂಗಮಕೆ ಕೊಡುತಿರಲು ವಿಸ್ಮಯಾವಿದೆನುತತಿವೆಡಗನಾ ಜಂಗಮವು ಬಸವನ ಎಡೆಗೆ ನಡೆತಂದುಬ್ಬುತಾತನ ಮುಂದೆ ಪಸರಿಸುತ . . . ನುತಿಸೆ (ಬಸಪು. ೩೦-೨೦). ೮. ವೈಶಿಷ್ಟ್ಯ ; ವಿಶಿಷ್ಟತೆ : ಎಸೆವ ಕರ್ಣಾಟಕದ ಬೆಡಗುಗಳ ಬಲ್ಲ ಸತ್ಕವಿಗಳೊಪ್ಪಿರ್ದರಾ . . . ಮಣಿಮಯದ ಗರ್ದುಗೆಗಳಲ್ಲಿ (ತಿರುಪು. ೬-೧೧). ೯. ಜಂಬ ; ದರ್ಪ ; ಸೊಕ್ಕು : ಬಾಳುವಾಗ ಸಿರಿ ಬರುವಾಗ ತಂದೆ ಕೇಳು ಬೆಡಗು ಬೇಡೆಚ್ಚರಿಕೆ (ಪುರಂದ. ೧-೯೬೦-೩). ೧೦. ಒಳಗುಟ್ಟು ; ಮರ್ಮ ; ನಿಗೂಢತೆ : ರಹಸ್ಯ : ಬಯಲ ಬಣ್ಣವ ಮಾಡಿ ಸ್ವಯುವ ನಿಲವ ಮಾಡಿ ಸುಳಿವಾತನ ಬೆಡಗ ಬಲ್ಲವರಾರೈ ರಾಮನಾಥ (ದೇವಾರ. ೬೪-೮೩೦); ಶಿವಲಿಂಗಭಕ್ತಿಯು ಬೆಡಗನೇಕಾಂತದಲಿ ನಿಮಗೊಡಬಡಿಸಿ ಹೇಳುವೆ (ಪ್ರಭುಲಿಂ. ೦೪-೩೨); ನುಡಿದ ಮಾತ್ರದಲಿರದು ಧರ್ಮದ ಬೆಡಗು (ಕುಮಾವ್ಯ. ೮೬-೦೩). ೧೧. ಒಗಟಿನ ಮಾತು ; ಚಮತ್ಕಾರದ ನುಡಿ ; ಒಡಪು ; ಹದಿರು : ನುಡಿಯಲ್ಲಿ ಎಡಹಿಟ್ಟು ನುಡಿಯನು ಬೆಡಗಿನ ಗಡಣದ ಕುಲವನು ಕಂಡಱಿಯನು (ಶಿವಗೀ. ೦೨೬-೬೩೨): ಜನಪದದಲ್ಲಿ ಬೆಡಗು ಎಂದಾಗ ಇಂಥ ಗಂಭೀರತೆಗಿಂತ ಹೆಚ್ಚಾಗಿ ಚತುರ ನುಡಿ, ಚಮತ್ಕಾರದ ಮಾತು ಎಂಬ ಅರ್ಥವೇ ಬಹಳ ಮುಖ್ಯವಾಗುತ್ತದೆ (ಕನ್ನಡ. XII, ೨೦೪) ; ಬೆಡಗು: — ಒಳಗುಟ್ಟಿನ ಒಂದು ಮಾತಿನ ರೀತಿ-ಅದಕ್ಕೊಂದು ಅನುಭವ ಸಮುದ್ರವೇ ಆಹಾರ. ಇದು ಒಂದು ರೀತಿಯ ಅಲಂಕಾರಿಕ ಸರಣಿ (ಸಾಹಿಪ. iii, ೫೮೩). ೧೨. ಅಲಂಕಾರ : ಜಲಮಣಿಯು ಬೆಡಗನಿಕ್ಕಬಹುದೆ ಬಯಲ ಬಂಧಿಸಬಹುದೆ (ಕೋಲಶಾ. ೧೧೮-೪೬೪). ೧೩. ಥಳುಕು ; ಹೊರಮಿಂಚು : ಉಳುವರ ಗೆಯ್ಮರ ಬೆವರಲ್ ತೊಯ್ಮರ ತವರೂರದು ಬೆಡಗುಗಳರದ (ಚಳ. ೧-೮೨) : ಹೊಸ ಬಾಳಿನ ಬೆಡಗು ಸಾಕು ಬೆಳಕು ಬೇಕು ಹಾಡಿಗೆ (ಅರಳು. ೩೫೦-೧೧).

**ಬೆಡಗಿನ ವಚನ**= ವಚನಕಾರರು ತಮ್ಮ ತಾತ್ತ್ವಿಕ ಅನುಭಾವದ ತಿಳಿವನ್ನು ತಿಳಿಸಲು, ಸೂಕ್ಷ್ಮವಾದ ಎಷ್ಟೋ ವೇಳೆ ಒಗಟಿನಂತಿರುವ ಸಂಕೇತ ದೃಷ್ಟಾಂತ ರೂಪಕಾದಿಗಳನ್ನು ಉಪಯೋಗಿಸಿ ರಚಿಸಿದ ವಚನಪ್ರಕಾರ : ತಾತ್ತ್ವಿಕಚಿಂತನೆಯನ್ನು ಹುಗಿಗಟ್ಟಿ ಹೇಳಲು ಅನುಭಾವಿಗಳು ಈ ಪ್ರಕಾರವನ್ನು ಸಶಕ್ತವಾಗಿ ಬಳಸಿಕೊಂಡರು. ಅಲ್ಲಮಪ್ರಭು, ಚನ್ನಬಸವಣ್ಣ ಮುಂತಾದವರು ಅನೇಕ ಬೆಡಗಿನ ವಚನಗಳನ್ನು ಬರೆದಿದ್ದಾರೆ (ಕನ್ನಡ. XII, ೨೦೪) ; ಬೆಡಗಿನ ವಚನಗಳಲ್ಲಿ ಹಲವಾರು ಪ್ರಭೇದಗಳಿವೆ. ವಿರೋಧಾಭಾಸವೇ ಅವೆಲ್ಲವೂ ಜೀವಾಳ (ಅವತಂ. ೧೬ ಪಿಠಿಕೆ).

[ದೇ.॥ ತಮಿ. ವಿಟಜ್ಕು ; ಮಲ. ಮಿಡಪ್ಪು ; ತುಳು. ಬೆಡಂಗ್, ಬೆಡಗ್ ; ತೆಲು. ಬೆಡಂಗು, ಬೆಡಗು, ಬೆಣಂಗು, ಬೆಳಂಗು]

**ಬೆಡಂಗುಗಂಪು** (ನಾ). ವಿಶಿಷ್ಟವಾದ ಕಂಪು ; ಅಪೂರ್ವವಾದ ಸುಗಂಧ : ಮಲ್ಲಿಕೋತ್ಕರದ ಬೆಡಂಗುಗಂಪು ಮಧುದೂತಿಯು ತಳ್ತನಿಗಂಪು . . . ಬಗೆಗೊಂಡುದು ತದ್ವನದೊಳ್ ನರೇಂದ್ರನಾ (ರಾಜಶೇ. ೧೧-೨೯).

[ಬೆಡಂಗು + ಕಂಪು]

**ಬೆಡಂಗುಗಿಡು** (ಕ್ರಿ). ಅಂದಗೆಡು ; ಚೆಲುವನ್ನು ಕಳೆದುಕೊಳ್ಳು : ನಗೆಗಣ್ ಸೋರ್ವ ಕದಂಪ್ಪವಾರಿಚಯದಿಂ ಬಿಂಬಾಧರಂ ಸುಯ್ಯ ಬೆಂಕೆಗಳಿಂ ನಾಡೆ ಬೆಡಂಗುಗೆಟ್ಟರವಿದಿಂತೇಕಾರಣಂ (ಶಂಕಾ. ೪-೬೬).

[ಬೆಡಂಗು + ಕಿಡು (< ಕೆಡು$_1$)]

**ಬೆಡಂಗುವಡೆ** (ಕ್ರಿ). ಅಂದವಾಗು ; ಚೆಲುವನ್ನು ಪಡೆ ; ಸೊಗಸಾಗು : ಇಂತುಟಪ್ಪ ಮೆಯ್ವಣ್ಣಕ್ಕಂತೀ ಪೂವಿನೊಳೀ ತುಡುಗೆಯೊಳೀ ಪುಟ್ಟಿಗೆಯೊಳ್ ಬೆಡಂಗುವಡೆದೆಸೆದಿರ್ದಂ (ಶಂಕಪು. ೩-೪೫); ಸೊಡರಂ ಪರ್ಚಿಸಿದಂತಿರೆ ಬೆಡಂಗುವಡೆದೆಸೆವ ಮುನಿಯ ದೇಹದ್ಯುತಿಯಿಂ ಕಡುಗವಿಲಮಾಗಿ ಕಾಂಚನದಡವಿಯುನನುಕರಿಸಿ ತದ್ವನಂ ಸೊಗಯಿಸುಗುಂ (ಅದಂಪು. ೬೨೯). [ಬೆಡಂಗು + ಪಡೆ$_1$]

**ಬೆಡಂಗುವೆಱು** (ಕ್ರಿ). =ಬೆಡಂಗುವಡೆ : ಊದುವ ತೆಂಬೆಲರಿಂ ಬೆಡಂಗುವೆತ್ತು ( ಎಕ. XIII. ೩೩೦-೨೮; 929); ಭಾಸುರಚಂದ್ರಿಕಾತಿಲಕಮುಡುವರ ಕಾಂತಿಯುತಂ ಬೆಡಂಗುವೆತ್ತತ್ತಾಗಳ್ (ಅಜಪು. ೬-೩೯). [ಬೆಡಂಗು+ ಪೆಱು$_1$]

**ಬೆಡಂಗೊಂದು** (ಕ್ರಿ). =ಬೆಡಂಗುವಡೆ : ಕಂದಮುಮುಮುಳಿಸವೃತ್ತಮುಮೊಂದೊಂದೆಡೆಗೊಂದು ಜಾತಿ ಜಾ(ಣೆಸೆ)ಯ ಬೆಡಂಗೊಂದಿಪಱೊಳಮರೆ . . . ಬೆದಂಡೆಗಬ್ಬಮುದಕ್ಕುಂ (ಕವಿರಾ. ೦-೩೪). [ಬೆಡಂಗು+ ಒಂದು$_1$]

**ಬೆಡಗ$_1$** 'ಬೆಡಂಗ' ನೋ.

**ಬೆಡಗ$_2$** 'ಬೆಡಗು$_2$' ನೋ.

**ಬೆಡಗ$_3$** 'ಬೆಡಗು$_3$' ನೋ.

**ಬೆಡಗಿ** 'ಬೆಡಂಗಿ' ನೋ.

**ಬೆಡಗು$_1$** 'ಬೆಡಂಗು' ನೋ.

**ಬೆಡಗು$_2$**, ಬೆಡಗ$_2$ (ನಾ). ಚಿಕ್ಕ ಚಿಕ್ಕ ಪೊದೆಗಳನ್ನು ಕತ್ತರಿಸಲು ಉಪಯೋಗಿಸುವ ಕಬ್ಬಿಣದ ಒಂದು ಸಾಧನ : ಕೃಷಿಕರಾದವರು ಹೊಲಕ್ಕೆ ಹೋಗಬೇಕಾದರೆ ತಮ್ಮ ಕೈಯಲ್ಲಿ ಗುದ್ದಲಿಯನ್ನಾಗಲಿ ಬೆಡಗನ್ನಾಗಲಿ ಕೊಡಲಿಯನ್ನಾಗಲಿ . . . ಹಿಡಿದುಕೊಂಡು ಹೋಗಬೇಕಲ್ಲದೆ ಹಾಗೇ ಹೋಗಲಾಗದು (ಕೃಷಿಶ್ರ. ೩೦). **ಬೆಡಗ$_2$** : ಕಬ್ಬಿಣದ ಸಾಮಾನುಗಳಲ್ಲಿ ಮುಜ, ಬಳಿ, ಕುಡ, ಮೊಳೆ, ಕೊಡ್ಲಿ, ಗುದ್ದಲಿ, ಬೆಡಗ, ಬಾಚಿ, ಉಳಿ . . . ಮುಂತಾದ ಯಾವತ್ತು ಸಾಮಾನುಗಳು . . . ಕೈಯಲ್ಲಿ ಅನುವಾಗಿಯೂ ಇರಬೇಕು (ಕೃಷಿಶ್ರ. ೨೦). [←ಮರಾ. ಬೇಡಗ]

**ಬೆಡಗು$_3$**, ಬೆಡಗ$_3$ (ನಾ). ಜಾತಿಯೊಳಗಿರುವ ಒಂದು ಉಪವಿಭಾಗ ; ಪಂಗಡ ; ಬಣ ; ವರ್ಗ : "ಜಾತಿ, ಬೆಡಗು, ಬಣ, ಕುಲ, ತಳಿ, ಬಳಿ" (ಕಂಜುಶು. ೮೪) ; ಈ ರೀತಿಯ ಗುಂಪುಗಳಿಗೆ ಬೆಡಗುಗಳೆಂದು ಹೆಸರು (ಮಕಂಪಿ. ೩೨) ; 'ಗುಜ್ಜಲ'ವೆಂಬುದು ಬೇಡರಲ್ಲಿ ಒಂದು ಜಾತಿಯ ಬೆಡಗು. ಗುಜ್ಜಲ ಬೆಡಗಿನ ಹೆಂಗಸನ್ನು ಕಂಪಿಲರಾಯನು ಲಗ್ನವಾಗಬೇಕಾದರೆ ಅವನೂ ಬೇಡಜಾತಿಯವನಾಗಿದ್ದು ಬೇರೊಂದು ಬೆಡಗಿನವನಾಗಿರಬೇಕು (ಕರ್ನಾಸಂ. ೨೩೬). **ಬೆಡಗ$_3$** : ರಡ್ಡೇರಲ್ಲಿ ಎಲ್ಲ ಕೂಡಿ ೩೬ ಬೆಡಗಗಳೆಂದರೆ ಮನೆತನಗಳು ಇಲ್ಲವೆ ಗೋತ್ರಗಳು ಇರುತ್ತವೆ. ಒಂದೇ ಬೆಡಗದವರಲ್ಲಿ ಹೆಣ್ಣು ಗಂಡು ಆಗುವುದಿಲ್ಲ (ಕಜಾನ. ೦೨೪). [ ? ]

**ಬೆಡಗುಗಾತಿ** (ನಾ). ವಿಲಾಸಿನಿ ; ಬೆಡಗಿ : ಬೆಡಗುಗಾತಿಯರು ಯಿರುವ ಕಡೆ ನಡೆ (ಶಾಗಂಂ. ೦೯೦-೨೦) ; ಬೆಡಗುಗಾತಿ, ಈ ಯುದ್ಧಕ್ಕೂ ನಿನಗೂ ಏನು ಸಂಬಂಧ ? (ಬಾಂಕ್. ೩೮೨). [ಬೆಡಗು$_1$ (< ಬೆಡಂಗು) + —ಕಾತಿ$_5$]

**ಬೆಡಗುಗಾರ** (ನಾ). ೧. ಚೆಲುವ ; ಸುಂದರ. ೨. ವಿಲಾಸಿ ; ವಿಟ : "ವಿಟಃ = ಬೆಡಗುಗಾರಂ" (ಅಭಿಕ. ೦೮). [ಬೆಡಗು$_1$ (< ಬೆಡಂಗು) + —ಕಾರ$_1$ (< —ಕಾಱ) ]

**ಬೆಡಿ** (ನಾ). ೧. ತುಪಾಕಿಯ ಗೋಲಿ , -ಗುಂಡು : ನಾನು ಬೆಡಿ ಹೊಡೆದು ಕಿರುಬನನ್ನು ಉರುಳಿಸಿದುದು ನಿನಗೆ ನೆನಪಿದೆಯಷ್ಟೆ (ಹುಂಹಾ. ೩೬೮). ೨. ಪಟಾಕಿ ; ಗರ್ನಾಲು : 'ಬೆಡಿಕಂಬ' ಪರಾ. [ದೇ.॥ ತವಿ. ವೆಟಿ ; ಮಲ. ವೆಡಿ ; ತುಳು. ಬೆಡಿ ; ಕೊಡ. ಬೊಡಿ ]

**ಬೆಡಿಕಂಬ** (ನಾ). ಒಂದು ಬಗೆಯ ಸುಡುಮದ್ದು : ಮದುವೆಯ ದಿನ ಬೆಡಿಕಂಬ, ಲಂಕಾಪಟ್ಟಣ, ಬಿರುಸು ಬಾಣಗಳನ್ನು ಸುಡಿಸಿ . . . ನೆಲ ನಡುಗಿಸಿಬಿಟ್ಟೆನು (ಮಕಮ. ೦೬೩). [ ಬೆಡಿ + ಕಂಬ$_1$ (<ಕಂಭ) ]

**ಬೆಣ**, ಬೇಣ (ನಾ). (ಕರಾ) ಸಮತಟ್ಟಾದ, ಗಿಡಮರಗಳಿಲ್ಲದ, ಬರಿದಾದ ನೆಲ : ಮರ ಫಲ ಬೆ[ಣ] ಬಳಿರು ಬೆಟು ಬಟೆ ಮುಂತಾಗಿ ಸರ್ವಾಂಗೋಡು ಸಹಿತವಾದ ಯಿಂತಿವೆಲಉ (ಕಜ. III-i, ೬೦೯; 1527); ಎರಡು ಮೈಲು ದೂರ ನಡೆದು ಹೋದ ಮೇಲೆ ಒಂದು ಚಿಕ್ಕ ಬೆಣವಿದೆ (ಮೂಕಕ್ಕ. ೩೩) ; ಅಲ್ಲೊಂದು ವಿಶಾಲ ಬೆಣವಿದೆ. ಅದರಲ್ಲಿ ಮಳೆಗಾಲದಲ್ಲಿ ಹುಲ್ಲೂ, ಚಳಿಗಾಲದಲ್ಲಿ ಕರಡವೂ ಬೆಳೆಯುತ್ತವೆ (ಸ್ವಶ್ನಪು. ೦೦). **ಬೇಣ** : ನಮ್ಮ ಬೇಣವೇನೂ ಬಟ್ಟಬಯಲಿನಲ್ಲಿಲ್ಲ (ಸುಮಂ. ೬೩); ಅವನೂ ಮಲ್ಲೇಶ ಮೂರ್ತಿಯರೊಂದಿಗೆ ಹೊಲಗದ್ದೆ ಬಯಲು ಬೇಣಗಳಲ್ಲಿ ವಿಹರಿಸುತ್ತಿದ್ದಾನೆ (ಜೀಉಮ. ೨೮೩). [ ? ]

**ಬೆಣಕಚಂಗೆಡೆ** (ಕ್ರಿ). (?) : ಬೆಣಕಚಂಗೆಡೆವರ ಮಾತಂ ಕೇಳ್ದು ದಾನಾದಿಗಳೊಳಪ್ಪರ್ಥವ್ಯಯಕ್ಕೆ ಮನದೊಳ್ ಮುಱುಗಿ ಮಾಡವೇಡ (ರಪುರಾಪು. ೬-೨೩೦). [ ? ]

**ಬೆಣಕು** 'ಬೆಳಗು$_2$' ನೋ.

**ಬೆಣಕೇಱು** (ಕ್ರಿ). ಕಾಂತಿಯುಂಟಾಗು ; ಬೆಳಕು ಹೆಚ್ಚಾಗು : ಹಣತೆವಿಡಿದು ಬತ್ತಿಯಿಂದ ತೈಲವನುಂಡು ಬೆಣಕೇಱುವಂತಗ್ನಿದೀಪ (ಶಅತ. ೬೬-೦೩೬); ಕರ್ಮಾಂಧಕಾರ ಹರೆವನ್ನೋಲು ಸ್ತುತಿಯಿಂದ ಧರ್ಮದ ಬೆಣಕೇಱಿದಂತೆ (ಪೂಜ್ಯಚ. ೦೫-೬೦). [ ಬೆಣಕು (<ಬೆಳಗು$_2$) + ಏಱು$_1$ (<ಏಱು$_1$) ]

**ಬೆಣಚಿಕಲ್ಲು** 'ಬೆಣಚುಗಲ್ಲು' ನೋ.

**ಬೆಣಚಿಗಲ್ಲು** 'ಬೆಣಚುಗಲ್ಲು' ನೋ.

**ಬೆಣಚು** (ನಾ). (ಹರಳಿನ ಆಕೃತಿಯಲ್ಲಿರುವ) ಹೊಳಪುಳ್ಳ ಒಂದು ಬಗೆಯ ಬಿಳಿಯ ಬಣ್ಣದ ಕಲ್ಲು : ಅಲೋಹ ಖನಿಜವಾದರೂ . . . ಅನೇಕ ವೇಳೆ ಇವು ಸಹ ಉಪಯೋಗಕ್ಕೆ ಬರುತ್ತವೆ. ಉದಾ : ಫ್ಲೂರೈಟ್ ಬೆಣಚು (ಕ್ವಾರ್ಟ್ಸ್) ವಿರೈಟ್ ಮುಂತಾದವು (ಕವಿಕೋ. I, ೨೬೮).

**ಬೆಣಚುಕಲ್ಲು** 'ಬೆಣಚುಗಲ್ಲು' ನೋ.

**ಬೆಣಚುಗಲ್ಲು**, ಬೆಣಚಿಕಲ್ಲು, ಬೆಣಚಿಗಲ್ಲು, ಬೆಣಚುಕಲ್ಲು (ನಾ). = ಬೆಣಚು : ಮೂಡ ಹೆಬೀಡ ಬೆಣಚುಗಲ್ಲು (ಎಕ. VII, ಶಿಮೊ. ೬೪-೦೦೦ ; 1112) ; ಬೆಣಚುಗಲ್ಲಿನ ಹಾಗೆ ಸ್ವಲ್ಪ ಬೆಳ್ಳಗೆ ಇರುತ್ತದೆ (ಶುಂಬದು. ೩-೪೫) ; ಸಮುದ್ರದ ದಡದಲ್ಲಿ ಬಿದ್ದಿರುವ ಬೆಣಚುಗಲ್ಲುಗಳನ್ನು ಹೋಲುತ್ತದೆ (ಕವಿಕೋ. I, ೩೦೦). **ಬೆಣಚಿಕಲ್ಲು** : ಅವನೆದೆಯ ಯಮದೂತರತಿಕಠಿಣಬೇಟಂಗಳೊಳು ಬೆಣಚಿಕಲ್ಲುಗಳೊಳಗೆ ಎಳದು ಶೂಲಗಳಿಂದೆ ತಿವಿದು (ಕೂಷ್ಮಶಾ. ೫೦-೨) ; ಸ್ಫಟಿಕರೂಪದ ಬೆಣಚಿಕಲ್ಲಿಗೆ ಸಂಸ್ಕೃತದಲ್ಲಿ ಕಾಚಮಣಿ ಎಂದೆನ್ನುವರು (ಶುಂಬದು. ೬-೨೩೮). **ಬೆಣಚಿಗಲ್ಲು** : ಸಾರತರ ರಂಗವಲ್ಲಿಗಳ. . . ಬೆಣಚಿಗಲ್ಲಿನ ಪಿಷ್ಟದಿಂದಾದೊಡಂ ರಚಿಪುದು (ಶಕುಪು. ೬-೪-೨೪) ; ಕಾಜು . . . ಕಲವು ಕಾಲ ಬೆಣಚಿಗಲ್ಲಿನಿಂದ ಅದನ್ನು ಮಾಡುತ್ತಿದ್ದರು (ಶುಂಬದು. ೪-೨೨೦). **ಬೆಣಚುಕಲ್ಲು** : ಹೊತ್ತಿಯ ಮರಡಿ ಎಂಬ ಬೆಣಚುಕಲ್ಲು ಮರಡಿಯನ್ನು ಬಲದಲ್ಲಿ ಹಾಯ್ಕಿಕೊಂಡು (ಎಕ. III, ತ್ರಿರಂಗ. ೦೩೩-೩೯ ; 1453) ; ಬೆಂಕಿ ಹುಟ್ಟಬೇಕಾದರೆ ಬೆಣಚುಕಲ್ಲಿನಲ್ಲಿ ಮಾತ್ರ. ಬೆಣ್ಣೆಗಲ್ಲಿನಲ್ಲಿ ಬೆಂಕಿಯಿದ್ದರೂ ಇಲ್ಲದಂತೆ ವ್ಯರ್ಥ (ರಾಶ್ಕೋದ. ೬೦). [ಬೆಣಚು + ಕಲ್ಲು (<ಕಲ್$_3$)./ತುಳು. ಬೊಳ್ಕಲ್ಲ್]

**ಬೆಣತಿಗೆ** 'ಬೆಳಂತಿಗೆ' ನೋ.

**ಬೆಣಾಯ್ಯ** (ನಾ). ಒಬ್ಬಾತನ ಹೆಸರು : ಪೆರ್ಗ್ಗಡೆ ಬೆಣಾಯ್ಯಂ ಗಜ್ಜರಾನೆಯ ಕುಂಭಸ್ಥಳಕ್ಕೆ ಉದುರೆಯುಂ ಪಾಯ್ದು ಸತ್ತೊಡೆ (ಎಕ. XII, ಮದ್ಗಿ. ೬೦-೬ ; 920). [? + ಅಯ್ಯ$_1$]

**ಬೆಣೆ** (ನಾ). ಮರದ (ಬೇರೆ ಬೇರೆ ಆಕಾರದ) ಗೂಟ : ಸರ್ವಪರ್ವಂಗಳೆಂಬ ಬೆಣೆಗಳಲನಿಕ್ಕಿ ಹಿಡಿವೃತ್ತಿರ್ದ ಛತ್ರದ ನೆಳಲಿಲ್ಲದಂತೆ ಐಘಟೇಶ್ವರಲಿಂಗಕ್ಕೆ ಬಿಸಿಲು ಮಳೆಗಾಳಿಗೆ ಹೊಱಗಾಗಬೇಕೆಂದು (ಸರ್ವ. ೬೦-೩೨); ಪೆಟಲ ಗುಂಡಿನ್ನ ಬಲುಬಂಡಿ ಪೆಟಲ ಬೆಣೆಯ ಬಂಡಿ ಪೆಟಲುಪ್ಪಿನ ಬಂಡಿ ಕಟಕದೊಳೆಯ್ದಿದುವವಳ (ಕುರಾಕಾಂ. ೯೦-೪೯); ಪೆಱಸಾರದಂತೆವೋಲ್ ಬೆಣೆಯ ನಮರ್ಚೆ ಪೂಣ್ದಪನಿದೆಂಬಿನಮೇಂ ಬಗೆವಂದುದಿಂದು ಸಂದಣಿಸುತ್ತೆ ಗುಂಬದಂಬಟೆವುಯಿಲ್ಪಱೆಯಿಂ ಗಣಿಕಾಪವಂಚಕಂ (ಶಕಪ. ೬-೦೫೨); ಪುಟಗಳ ಮಧ್ಯೆ ಮತ್ತು ಅಂಚುಗಳಲ್ಲಿ . . . ಕಟ್ಟಿಗೆ ಮತ್ತು ಲೋಹದ ತರಪು ಸಾಮಾಗ್ರಿಗಳನ್ನಿಟ್ಟು ಬೆಣೆಗಳಿಂದ ಬಿಗಿಯಬೇಕು (ಮುದ್ರಣ. ೩೯).

[?./ ಮರಾ. ಬೇಣೆ]

**ಬೆಣ್ಣಗೂರ್** (ನಾ). ಒಂದು ಊರಿನ ಹೆಸರು : ಬೆಣ್ಣಗೂರ ಕವ್ವಲೆ ಬಾಣಾಸಾಮಿ ಮಗನ್ (ಎಕ. X, ಬಾಗೇಪ. ೯೩-೪ ; 880).

[ ? + ಊರ್ ]

**ಬೆಣ್ಣತ್ತೂರ್** (ನಾ). ಒಂದು ಊರಿನ ಹೆಸರು : ಎಱೆಯಮ್ಮರಸರಾ ಬೆಣ್ಣತ್ತೂರಾಳ್ಗ (ಎಕ. X, ಗೌರಿಬಿ. ೦೩-೬ ; 1000 ?). 'ಬೆಳತೂರ್' ಪಠಾ. [ ? + ಊರ್ ]

**ಬೆಣ್ಣಮ್ಮ** (ನಾ). ಒಬ್ಬಾತನ ಹೆಸರು : ಬೆಣ್ಣಮ್ಮ ಸೋಮಯಾಜಿಗಳ ಕೊಟ್ಟ ದಾನಂ (ಇಕ. VIII, ೨೬೬-೫೯ ; ೯೩೮ ೫೫). [ ? + ಅಮ್ಮ$_{1}$]

**ಬೆಣ್ಣೆ** (ನಾ). ೧. ಹಾಲು, ಮೊಸರುಗಳಿಂದ ತೆಗೆದ, ಜಿಡ್ಡಾಗಿರುವ ಬಿಳಿಯ ಪದಾರ್ಥ ; ನವನೀತ : "ದಧಿಸಾರಃ, ನವನೀತಃ—ಈ ೨ ಬೆಣ್ಣೆ" (ಹಲಾಯು. ೯೬-೦೦೯) ; ಬಿಸಿಲ ಬೆಣ್ಣೆಯಂತೆ ಕರಗಿ (ಶಾಂತಿಪು. ೬-೯೩ ಪ) ; ಬೆಣ್ಣೆಯಂ ತಿಂದ ಬೆಕ್ಕಿನಂತೆ ಅಱಿಯಲೀಯದೆ (ಶಂಕರಂ. ೯೪-೨೦) ; ಬೆಣ್ಣೆಯ ನೇಮ ಬೆಲ್ಲದ ನೇಮ ಅಂಬಲಿಯ ನೇಮದವನಾರನೂ ಕಾಣೆ (ಬಸವ. ೨೬೨) ; ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣ (ಗಾದೆ). ೨. ಮೃದುವಾದುದು ; ನಯವಾದುದು : 'ಬೆಣ್ಣೆಕಾಗದ' ಪಠಾ.

**ಬೆಣ್ಣೆಯ ಚಾವಡಿ** = (ಚಿಕ್ಕದೇವರಾಜಒಡೆಯರವರು ಏರ್ಪಡಿಸಿದ್ದ) ಹದಿನೆಂಟು ಬಗೆಯ ಅಧಿಕಾರಸ್ಥಾನಗಳಲ್ಲಿ ಒಂದು : ಬೆಣ್ಣೆಯ ಚಾವಡಿ—ಇದರಲ್ಲಿ ಅರಮನೆಯ ದನಕರು ಎಮ್ಮೆ ಕುರಿ ಮುಂತಾದ ಜೀವರಾಸಿಗಳ ವಿಚಾರಣೆ ಮಾಡಿಕೊಂಡು, ಅದರಲ್ಲಿ ಆದ ಹಾಲು, ಮೊಸರು, ಬೆಣ್ಣೆ ಮುಂತಾದವುಗಳಲ್ಲಿ ಕೆಲವು ಅರಮನೆಗೆ ಪ್ರತಿದಿನವೂ ಬರುವಂತೆಯೂ, ಕೆಲವು ಕರಗಪಡಿಸಿಹೋಗುವಂತೆಯೂ ಕಟ್ಟಳೆ ಮಾಡಿಸಿದರು (ಮೈಸೂರುವಂ. I,೦೯೯). **ಬೆಣ್ಣೆ ಹಚ್ಚು** = (ಆಲಂ) ಒಳ್ಳೆಯ ಮಾತನಾಡಿ ಒಲಿಸಿಕೊಳ್ಳು ; ಅನುನಯಿಸು ; ಪುಸಲಾಯಿಸು : ಇಷ್ಟು ಬೆಣ್ಣೆ ಹಚ್ಚಲಿಕ್ಕೇನ ಇವರಿಗೆ ಬಿಡು (ಅಪೋಲ. ೦೫). [ ಬೆಳ್$_{2}$ + ನೆಯ್$_{2}$./ತಮಿ. ವೆಣ್ಣೆಯ್, ವೆಣ್ಣೈ ; ಮಲ. ವೆಣ್ಣ ; ತುಳು. ಬೆಣ್ಣೆ, ಬೊಣ್ಣೆಯಿ ; ಕೊಡ. ಬೊಣ್ಣೆನೆಯ್; ತೆಲು. ವೆನ್ನ ]

**ಬೆಣ್ಣೆಅಕ್ಕಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡಬರಗುಹುಲ್ಲು, ಬೆಣ್ಣೆಅಕ್ಕಿಹುಲ್ಲು (ವೃಕ್ಷಕೋ. ೦೪-೨೯೫). [ ಬೆಣ್ಣೆ + ಅಕ್ಕಿಹುಲ್ಲು ]

**ಬೆಣ್ಣೆಕಳ್ಳ** 'ಬೆಣ್ಣೆಗಳ್ಳ' ನೋ.

**ಬೆಣ್ಣೆಕಾಗದ** (ನಾ). ಮೃದುವಾದ ಕಾಗದ ; ನಯವಾದ ಕಾಗದ : ಬೆಣ್ಣೆಕಾಗದದಲ್ಲಿ ಬರೆಯಲು ಚೆನ್ನಾಗಿರುತ್ತದೆ (ರೂಢಿ). [ಬೆಣ್ಣೆ + ಕಾಗದ]

**ಬೆಣ್ಣೆಗಡುಬು** (ನಾ). ಬೆಣ್ಣೆಯನ್ನು ಹಾಕಿ ಮಾಡುವ ಒಂದು ಬಗೆಯ ಕಡುಬು : ತಣ್ಣೀರಿನಿಂದ ತೊಳದಕ್ಕಿಯನು ಹಾಲೊಳಗೆ ಸಣ್ಣನಪ್ಪಂತರೆದು ಕದಡಿಯೊಲೆಯೊಳು ತೊಳಸಿ ಬೆಣ್ಣೆಯಂ ಹಾಕಿಯುಂಡಲಿಗೆವದದೊಳು ಇಳುಹಿ ಹಲ್ಲಿಗಡುಬುಗಳ ಮಾಡಿ ನುಣ್ಣನೆಸವಾ ಕಡುಬನೊಲೆಗೆತ್ತಿ ಕಾಯ್ದು ಕುದಿವೆಣ್ಣೆವಾಲೊಳು ಮುಳುಗಲಿಕ್ಕಿ ಪೇಱಿಸಿ ತೆಗೆದು ಬೆಣ್ಣೆಗಡುಬೆಂದು ಹೆಸರಂ ಕೊಟ್ಟು ಸಿರಿಪಚ್ಚೆ ಯಾಲಕ್ಕಿಯುಂ ತಳಿವುದು (ಸೂಪಶಾ. ೦-೬೨). [ ಬೆಣ್ಣೆ + ಕಡುಬು (< ಕಡುಂಬು) ]

**ಬೆಣ್ಣೆಗರಗ$_{1}$** 'ಬೆಣ್ಣೆಗರುಗ' ನೋ.

**ಬೆಣ್ಣೆಗರಗ$_{2}$** (ನಾ). ಒಂದು ಬಗೆಯ ಪಕ್ಷಿ : ಪೆಣ್ಣಾಗೆ ಬೆಣ್ಣೆಗರಗಂ . . . ಗಿಡುಗು ಸಿಂಚಾಮಿನಿತುಂ ಗಮನಾಗಮನದಲ್ಲಿ ತಾಂ ಪುಗೆ ಶುಭವಂ (ಲೋಕೋಪ. ೦೨-೧೯). [ ? ]

**ಬೆಣ್ಣೆಗರುಗ, ಬೆಣ್ಣೆಗರಗ$_{1}$** (ನಾ). ಒಂದು ಬಗೆಯ ಸಸ್ಯ ; ಗರುಗದಲ್ಲಿ ಒಂದು ಬಗೆ : ಭಗರಕ್ತಂ ಸಡೆವೊಡೆ ಬೆಣ್ಣೆಗರುಗವಂ ನೀರೊಳಕ್ಕದಂ ದುಗ್ಧದೊಳೀಂಟುಗೆ (ಲೋಕೋಪ. ೯-೦೬೬); ಹೊತ್ತರೆ ಹಾಲಂ ಮರುಗಿಸಿಯುತ್ತರಣೆಯ ಬೆಣ್ಣೆಗರುಗವೆರಡರ ಬೇರಂ ಬಿತ್ತರದೊಳಿಕ್ಕಿ ಹೆಪ್ಪಿಟ್ಟಳ್ತಿಯೊಳಂ ಕಡೆಯೆ ಬೆಣ್ಣೆ ಮೂಡಿಯಕ್ಕುಂ (ಗೋವೈದ್ಯ. ೨೦೦-೩೮). **ಬೆಣ್ಣೆಗರಗ$_{1}$** : "ಹೆತ್ತುತ್ತಿ, ಹೆತ್ತುಟ್ಟೆ . . . ಚಿಟ್ಟರಳು, ಬೆಣ್ಣೆಗರಗ, ಭೇದ" (ಸಸ್ಯಾ. ೦೨೦) ; ಅಮರದವಳ್ಳಿ, ಮೂರೆಲೆಹೊನ್ನೆ . . . ಬೆಣ್ಣೆಗರಗ ಇವಂ ಕಷಾಯವಿಟ್ಟು ಸೇವಿಸಿದರೆ ವಾತಜ್ವರಂ ಕೆಡುಗುಂ (ಸವೈ. ೬೫). [ ಬೆಣ್ಣೆ + ಗರುಗ ]

**ಬೆಣ್ಣೆಗಲ್ಲು** (ನಾ). ಮೃದುವಾದ ಕಲ್ಲು ; ಹಿಟ್ಟುಗಲ್ಲು : ಬೆಂಕಿ ಹುಟ್ಟಬೇಕಾದರೆ ಚೆಣಚುಕಲ್ಲಿನಲ್ಲಿ ಮಾತ್ರ. ಬೆಣ್ಣೆಗಲ್ಲಿನಲ್ಲಿ ಬೆಂಕಿ ಇದ್ದರೂ ಇಲ್ಲದಂತೆ ವ್ಯರ್ಥ (ರಾಜ್ಯೋದ. ೬೦). [ ಬೆಣ್ಣೆ + ಕಲ್ಲು (<ಕಲ್$_{3}$) ]

**ಬೆಣ್ಣೆಗಳವು** (ನಾ). ಬೆಣ್ಣೆಯನ್ನು ಕದಿಯುವಿಕೆ ; ಬೆಣ್ಣೆಯ ಕಳ್ಳತನ : ಬೆಣ್ಣೆಗಳವನು ಮಾಣಿಸುವೆನೀ ಚಿಣ್ಣನನು ಕಟ್ಟಿರಿಸಿ ತಾರಾ ಕಣ್ಣಗಳನೆಂದೊಬ್ಬಳೊಬ್ಬಳ ನಡುವನುಱೆ ಬಿಗಿದು (ಕಶಾಗ. ೦೦-೨೬-೨೮).

[ ಬೆಣ್ಣೆ + ಕಳವು ]

**ಬೆಣ್ಣೆಗಳೆ** (ಕ್ರಿ). ಹಾಲು, ಮೊಸರನ್ನು ಕಡೆದು, ಬೆಣ್ಣೆಯನ್ನು ಹೊರಕ್ಕೆ ತೆಗೆ : ತುಷಾರವನಳೆವ ಶಿಲೆಯೊಳಗೆ ಮುಳುಗುವ ನೀರೊಳು ಬೆಣ್ಣೆಗಳೆವಗ್ಗದ ವೇಶ್ಯಾಮಾತೆಯರನವನೀಶನೀಕ್ಷಿಸಿದ (ಶೀವಂಶ. ೦೬-೯೬).

[ ಬೆಣ್ಣೆ + ಕಳೆ$_{1}$ ]

**ಬೆಣ್ಣೆಗಳ್ಳ, ಬೆಣ್ಣೆಕಳ್ಳ** (ನಾ). ೧. ಬೆಣ್ಣೆಯನ್ನು ಕದಿಯುವವನು. ೨. ಕೃಷ್ಣ : ಬೆಣ್ಣೆಗಳ್ಳನ ಕೊಬ್ಬಿದುದರದೊಳ್ಪೊಚ್ಚಪೊಸ ಸುಣ್ಣಮಂ ಪೊಯ್ದು ನೀರಱೆದಂತೆ ಮಾಡಿ . . . ಕಾಳಗದೊಳುಬ್ಬಸವನುಱೆ ಹಣ್ಣೆದಲ್ಲದೆ ಮಾಣೆಂ (ಕೃಬಿಆ. ೬-೨೯). **ಬೆಣ್ಣೆಕಳ್ಳ** : ೨. ಬೆಣ್ಣೆಕಳ್ಳನೆ ಮುದ್ದು ಚಿನ್ನ ಕೃಷ್ಣಯ್ಯ (ಪುರಂದ. ೨-೯-೨). [ ಬೆಣ್ಣೆ + ಕಳ್ಳ$_{1}$ ]

**ಬೆಣ್ಣೆಗಾರಿಗೆ** (ನಾ). ಬೆಣ್ಣೆ ಹಾಕಿ ತಯಾರಿಸುವ ಒಂದು ಬಗೆಯ ಗಾರಿಗೆ : ಅಣ್ಣವಾಲೊಳು ಸೊಜ್ಜಿಗೆಯಂ ನನೆಹಿಕ್ಕಿ ಬಳಿಕ ಸಣ್ಣನ[ಪ್ಪ]ಂತೆ ಕಣಿಕವ ಮಾಡಿಯದಱ ಸರಿ ಬೆಣ್ಣೆ ನಸುಗೆನೆಯಿಕ್ಕಿ ಗಾರಿಗೆಯ ಮಾಡಿ ಹೊಸತುಪ್ಪದೊಳು ಬೇಯಿಸಿದೊಡೆ ಬೆಣ್ಣೆಗಾರಿ[ಶಾಕಾಂ. ಯಿ]ಗೆಯೆಂಬ ಹೆಸರನುಱೆ ಪಡೆದುದು (ಸೂಪಶಾ. ೦-೨೩). [ಬೆಣ್ಣೆ + ಗಾರಿಗೆ$_{1}$]

**ಬೆಣ್ಣೆಗಾಸು** (ಕ್ರಿ). ಬೆಣ್ಣೆಯನ್ನು ಕಾಯಿಸು ; ತುಪ್ಪ ಮಾಡು : ಬೆಣ್ಣೆಗಾಸಿದಾಮೋದ ಸುಗಂಧಪರಿಮಳಂ ನಾರ್ಪ ತುಪ್ಪಮುಂ . . . ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುತೆಱದ ಭಕ್ಷ್ಯರೂಪಂಗಳುಮಂ . . . ಬಡ್ಡಿಸಿದೊಡೆ (ವಡ್ಡಾರಾ. ೬೮-೦೫). [ಬೆಣ್ಣೆ + ಕಾಸು$_{1}$]

**ಬೆಣ್ಣೆಗೇಸಿ** (ನಾ). ಒಬ್ಬಾತನ ಹೆಸರು : ಕೇಶವಯ್ಯನುಂ ಪೊಣ್ಣೆಪೋಜರುಂ ಮಧುಕಾಮೋಜರುಂ ಬೆಣ್ಣೆಗೇಸಿಯುಂ (ಎಕ. VI, ಶೃಂ. ೩-೦೦ ; 899).

[ ? ]

**ಬೆಣ್ಣೆತೆಂಗು** (ನಾ). ತೆಂಗಿನಲ್ಲಿ ಒಂದು ಬಗೆ ; ಮೃದುವಾದ ತೆಂಗು : ಬೆಣ್ಣೆತೆಂಗಿನಲ್ಲಿ ಎಣ್ಣೆ ಬಹಳವಿರುತ್ತದೆ (ರೂಢಿ). [ಬೆಣ್ಣೆ + ತೆಂಗು$_{2}$]

**ಬೆಣ್ಣೆದಲೆಗ** (ನಾ). ಒಂದು ಬಗೆಯ ಪಕ್ಷಿ : ಕೆಲವ ಪಾರಿವ ಗುರುಸಕ್ಕಿ

ಟಟ್ಟಭ ಬೆಣ್ಣೆದಲೆಗನು ಕಟಕನಲ್ಲಿಹವು (ಶಬರಶಂ. ೦-೬೩). 'ಬೆಣ್ಣೆಗರಗ$_2$' ಪರಾ. [ ? ]

**ಬೆಣ್ಣೆದಳಿಗು** (ನಾ). ಬೆಣ್ಣೆ ಹಾಕಿ ತಯಾರಿಸಿದ ಒಂದು ಬಗೆಯ ಭಕ್ಷ್ಯ: ಎಣ್ಣೆವೂರಿಗೆ ಸುಫೇಣಿ ಮಸುಕೊಡೆ ಬೆಣ್ಣೆದಳಿಗು ಹಾಲುಂಡೆ ಸಕ್ಕರೆ ಮಂಡಗೆ . . . ಎನಿಪ್ಪವಂ . . . ಪರವೆ ಗಡಣಿಸಿದಳಾಗ (ಶೀರಮ.೧೧-೨೯). [ಬೆಣ್ಣೆ + ತಳಿಗು]

**ಬೆಣ್ಣೆಬಳಪ** (ನಾ). (ಕಪ್ಪುಹಲಗೆಯ ಮೇಲೆ ಬರೆಯಲು ಉಪಯೋಗಿಸುವ) ಮೃದುವಾದ ಬಳಪ : ಬೆಣ್ಣೆಬಳಪವಿದ್ದರೆ ಚೆನ್ನಾಗಿ ಬರೆಯಬಹುದು (ಆಡು). [ಬೆಣ್ಣೆ + ಬಳಪ]

**ಬೆಣ್ಣೆಬಿದುರು** (ನಾ). ಒಂದು ಬಗೆಯ ಸೊಪ್ಪು: "ವಿಶಲ್ಯಾ, ಅಗ್ನಿಶಿಖಾ . . . ಬೆಣ್ಣೆಬಿದುರು ಸೊಪ್ಪು, ಅಗ್ನಿಶಿಖೆ" (ಸಿದ್ಧಾಂತಿ. ೦೯೩). [←ತೆಲು. ವೆನ್ನವೆದುರು]

**ಬೆಣ್ಣೆಮಾತು** (ನಾ). (ಅಲಂ) (ಪುಸಲಾಯಿಸುವುದಕ್ಕಾಗಿ ಆಡುವ) ಮೃದುವಾದ ಮಾತು ; ನಯವಾದ ನುಡಿ : ಎದುರಿಗೆ ಮಾತ್ರ ಯಾರೂ ಏನೂ ಅನ್ನೋದಿಲ್ಲ—ಬೆಣ್ಣೆಮಾತನ್ನಾಡ್ತಾರೆ (ಶಿಂರಶೆ. ೨೨). [ಬೆಣ್ಣೆ + ಮಾತು$_1$]

**ಬೆಣ್ಣೆಯೂರ್** (ನಾ). ಒಂದು ಊರಿನ ಹೆಸರು : ಬೆಣ್ಣೆಯೂರ ದೇವಗಣನುಂ ಮಳ್ವೂರದ ಪೆರ್ಮಾಡಿಗಾಮುಣ್ಣನುಂ (ಎಕ. VI, ಕಕ್ಕಮ. ೩-೦೪ ; ೬೬೬ ?). [ಬೆಣ್ಣೆ + ಊರ್]

**ಬೆಣ್ಣೆವಿಟ್ಟು** (ನಾ). ಬೆಣ್ಣೆ ಬೆರಸಿದ ಹಿಟ್ಟು : ಆ ಹಲ್ಲೆಯಂ ಸಲೆ ಸುರುಳಿ ಬೆಣ್ಣೆವಿಟ್ಟಂ ತೊಡೆದು ಬೆರಳುದ್ದದೊಳು ಕೊಯ್ದು ಬೆಣ್ಣೆಗಾಸಿದ ತುಪ್ಪದೊಳು ಪಾಕ ಮಾಡೆ ಗುಜ್ಜರಿವೇಣಿವೆಸರಾದುದು (ಸೂಶಶಾ. ೦-೪೫). [ಬೆಣ್ಣೆ + ಪಿಟ್ಟು]

**ಬೆತಿರೇಕ** (ನಾ). ವಿರೋಧ ; ವ್ಯತ್ಯಾಸ : ವ್ಯತಿರೇಕಂ—ಬೆತಿರೇಕಂ, ವ್ಯಥೆ—ಬೆತೆ (ಶಬರ. ಶ. ೨೮೫ ಪ್ರಯೋ) ; ವ್ಯತಿರೇಕ, ಬೆತಿರೇಕ (ಕಶಾ.ಮ. ೦೬೦ ಪ್ರಯೋ). [< ಸಂ. ವ್ಯತಿರೇಕ]

**ಬೆತೆ**, **ವೆತೆ** (ನಾ). ೧. ದುಃಖ; ಅಳಲು; ವ್ಯಥೆ : ವ್ಯತಿರೇಕಂ-ಬೆತಿರೇಕಂ, ವ್ಯಥೆ—ಬೆತೆ (ಶಬರ. ಶ. ೨೮೫ ಪ್ರಯೋ); ವ್ಯತಿರೇಕ, ಬೆತಿರೇಕ; ವ್ಯಥಾ, ಬೆತೆ (ಕಶಾ.ಮ. ೦೬೦ ಪ್ರಯೋ) ; ನೇಹಗಡಲ ತೆರೆಗಳೆದ್ದು ಬೆತೆಯ ಕಿಡಿಯನಳಿಸದಿರಲು ಜೀವಿಲೋಕವುಳಿವುದೆಂತು (ಕಶಿರಾ. ೦೯-೨). ೨. ನೋವು; ಬೇನೆ: ವಿತತ ಕಷ್ಟವದಾಗೆ ಹೆರಿಗೆಯ ಬೆತೆಯ ಸೈಸದೆಯವರು (ರಾಮಾಶಂ. ೪-೨-೦೦೯). **ವೆತೆ** : ಅವಳ ಬಾಟನ್ ಮುತ್ತಿ ಮುಸುಱ್ವ ಕೇಡುಗಳ ವೆತೆಯನ್, ಅವಳಿಂದಮ ಕೇಳ್ವಂ (ಬದ್ಧಕ್ರ. ೩೩-೭೦೫). [< ಸಂ. ವ್ಯಥಾ]

**ಬೆತೆಗೊಳಿಸು** (ಕ್ರಿ). ದುಃಖಪಡಿಸು; ವ್ಯಥೆಗೊಳಿಸು : ಗತಿರಹಿತರಿರವು ತನ್ನಂ ಬೆತೆಗೊಳಿಸಲ್ತಾಳಲಾಱದುದ್ಧರಣಾರ್ಥಂ ದ್ರುತಗತಿಯಿನವರ ನೆಲೆಗೇಧೃತವ್ರತಂ ನಡೆವ ಭಂಗಿಯೇನಚ್ಚರಿಯೋ (ಶಕ್ತಮ. ೭-೫೨). [ಬೆತೆ + ಕೊಳ್$_1$ + —ಇಸು$_3$]

**ಬೆತ್ತ** (ನಾ). ೧. ಬಿದಿರಿನಲ್ಲಿ ಒಂದು ಬಗೆ ; ಸಣ್ಣಬಿದಿರು : ಸತ್ತಿಗೆ ಗಗ್ಗರಂ . . . ಪಾವುಗೆ ಪಂಚಮಸ್ವನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೫೩೩ ಓಪ್ರತ) ; ಬೆತ್ತ ಬಿದಿರಿಡಿದಡಸಿ ಬೆಳೆವ ಮೆಳೆಗಳ ನಡುವೆ . . . ಏಕೆ ಓಯೆನ್ನೆ ಮಲ್ಲಯ್ಯ ಎಂದತ್ತಸು (ಸಿದ್ಧರಾ. ೨-೬೦); ಮೆತ್ತಿದವು ಶರವಿಭದ ಮೆಯ್ಯಲಿ ಬೆತ್ತ ಬೆಳೆದದ್ರಿಯವೊಲಿದ್ದುದು ಮತ್ತಗಜ (ಕುವ್ಯಾದ್ರೋ. ೩-೩೯). ೨. (ಬಿದಿರಿನ) ಕೋಲು ; ಸೆಳೆ ; ಛಡಿ : "ಬೆತ್ತ—ವೇತ್ರ=ಕೋಲು" (ಶಬ್ದಕೋ. ೩೨); ದಂಡಿಗೆ ಬೆತ್ತ ಹಿಡಿಯುವುದಕ್ಕೆ ಮಂಡೆ ಮಾಚಿ ನಾಚುತ್ತಿದ್ದೆ (ಪುರಂದ. ೦-೯೫-೨) ; ಚಿತ್ತವರಸಿನ ಕರವ ಬೆತ್ತ ತಾ ಪಣಿದಂತೆ ಕುತ್ತ ಹೋಗುವುದು ಅರಸೊಲಿಯೆ ಮುನಿದರೆ ಕತ್ತು ಹೋಗುವುದು (ಸರ್ವಜ್ಞ. ೬೨೯). [< ಪ್ರಾ. ವೇತ್ತ, ವಿತ್ತ./ಪಾಲಿ. ವೇತ್ತ./ಸಂ. ವೇತ್ರ]

**ಬೆತ್ತದ ಬಳ್ಳಿ** (ನಾ). ಒಂದು ಬಗೆಯ ಸಸ್ಯ: ಬೆತ್ತದ ಬಳ್ಳಿ, ಹಾಲುಬೆತ್ತ, ನಾಗಬೆತ್ತ (ಪ್ರಸಿಗ. ೦೫-೨೭೯). [ಬೆತ್ತ + ಬಳ್ಳಿ]

**ಬೆತ್ತಲಿಗ** 'ಬತ್ತಲಿಗ' ನೋ.

**ಬೆತ್ತಲೆ$_1$** 'ಬತ್ತಲೆ$_1$' ನೋ.

**ಬೆತ್ತಲೆ$_2$** 'ಬತ್ತಲೆ$_2$' ನೋ.

**ಬೆತ್ತಲೆಗ** 'ಬತ್ತಲೆಗ' ನೋ.

**ಬೆತ್ತಲೆಗಣ್ಣು** 'ಬತ್ತಲೆಗಣ್ಣು' ನೋ.

**ಬೆತ್ತವರಿಗೆ** (ನಾ). ಬಿದಿರಿನಿಂದ ಮಾಡಿದ ಗುರಾಣಿ : ಹಲಗೆ ಹಕ್ಕರಿಕೆ ಕೊಪ್ಪರಿಕೆ ಬದ್ದರ ಭಂಡಿ ತಳಿ ಬೆ[ಶಾಶಾಂ. ವೆ]ತ್ತವರಿಗೆ ಮಱೆಯೊಳು ಬಿಲುಗಾಜರು ಕಮ್ಮ ಹರಣವೆರಸು ನಿಂದು ಕಲಿರಾಮನ ಕೆಣಕಿದರು (ಕುರಾಶಾಂ. ೪೫-೦೦೬). [ಬೆತ್ತ + ಪರಿಗೆ]

**ಬೆತ್ತಬೆಟ್ಟಾಗು** (ಕ್ರಿ). (?) : ದ್ರೋಣಾಚಾರ್ಯರ ಶಿಷ್ಯರೆಲ್ಲಂ ಬೆತ್ತಬೆಟ್ಟಾಗೆ ಗೂಡುಗೊಂಡು ನೋಡುತಿರ್ಪುದುಂ (ರಮಾಗಶ್ಯ. ೦೩-೫೫). [?]

**ಬೆದಂಕು** 'ಬೆದಕು$_1$' ನೋ.

**ಬೆದಂಡೆ** (ನಾ). [ಕಾವ್ಯವಿ] ಕಂದ, ವೃತ್ತಗಳು ಬರುವ ಒಂದು ಬಗೆಯ ಪ್ರಾಚೀನಕಾವ್ಯಪ್ರಕಾರ : "ಬೆದಂಡೆ = ವೈದಂಡಿಕಂ" (ಶಮತ. ಶಂ. ೨) ; ನುಡಿಗೆಲ್ಲಂ ಸಲ್ಲದ ಕನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀಗಡಿನ ನೆಗಱ್ತೆಯ ಕಬ್ಬದೊಳೊಡಂಬಡಂ ಮಾಡಿದರ್ ಪುರಾತನಕವಿಗಳ್ (ಕಶಿರಾ. ೦-೩೩); ಕೊಟಿಲ ಬೆದಂಡೆಯ ಪಗರಣದಟಿಗಳ ಪರದೈವ ಮಾಡುವವರ್ಗಳ ಮಾತಿಂಗುಟಿವರ ಪರಜಾತಿಯವರ್ಗಳತ್ತಳಿಗಳ ದೆಸೆಬೋಗಲೀಯಲಾಗದು ಪಥುವಂ (ಶುದಶಿ. ೮-೨೯); ಬೀಣೆಯ ಕೊಟಿಲ ಬೆದಂಡೆಯ ಗಾಣರ ಬಟ್ಟಿಡಿದು ಸುಟಿದು ಕುಂ[ದಿಂ] ಕಥಕಶ್ರೇಣಿಯೊಡನೆಳಸಿ ಬಟಸುವ ನಾಣಲಿಗಳನೀ ಬುಧಾಳಿಯೊಳ್ ಪುಗಿಸುವುದೆ (ಸುಕುಮಾ. ೨-೨೪) ; ದಂಡದ ಬೇಳಂಬಿಗರ ಬೆದಂಡೆಯ ತಳಿಗೆಯ ಮಹೇಂದ್ರಜಾಲಿಗಳ ಮನಂಗೊಂಡೆಸೆವ ನೆಗ[ಬ್ಳೆ(ಕೆ)]ಯ ತಂಡಂಗಳಿವಾವ ದೆಸೆಯೊಳಂ ಕಡುರಯ್ಯಂ (ಪರ್ಶಪಾ. ೧೧-೨೦) ; ಬೆದಂಡೆಯೊಳಾದೊಡಂ ಪಾಡೆಂಬುದಂ . . . ಸೈರಿಸಂ (ಕಬ್ಬಿಗಾ. ೦೪೮) ; ಪಾಡುವರಲ್ಲಿ ಬೆದಂಡೆ ತೊತ್ತಸೆತ್ತಱಸುವೆನೆಂದು ಪೋಪ ನೆವಮುಂ ಸಮಕಟ್ಟುವರಲ್ಲಿ ಪಾಣ್ಬೆಯರ್ (ಸೂಕ್ತಿಸು. ೮-೦೩೪). [ ? ]

**ಬೆದಂಡೆಗಬ್ಬ** (ನಾ). =ಬೆದಂಡೆ : ಕಂದಮುಮಮಳಿನ ವೃತ್ತಮುಮೊಂದೊಂದೆಡೆಗೊಂ[ಡು] ಜಾತಿ ಜಾಣೆಸೆಯೆ ಬೆಡಂಗೊಂದಿವಱೊಳವುರೆ ಪೇೞಲ್ ಸುಂದರರೂಪಾ ಬೆದಂಡೆಗಬ್ಬಮದಕ್ಕುಂ (ಕಶಿರಾ. ೦-೩೪) ; ಪಾಡುಗಳಿಂದಂ ತಱಿಸಲೆ ಮಾಡಿದುದಂ ಪಾಡುಗಬ್ಬಮೆಂದು ಬುಧರ್ ಕೊಂಡಾಡುವರದಱಿಂದಲ್ ಮೆಲ್ವಾಡುಂ ರೂಢಿಯ ಬೆದಂಡೆಗಬ್ಬಮುಮಕ್ಕುಂ (ಕಾವ್ಯಾವ. ೯೫೪). [ ಬೆದಂಡೆ + ಕಬ್ಬ$_1$ ]

**ಬೆದಕಾಟ** (ನಾ). ಹುಡುಕುವುದು ; ಶೋಧನೆ : ಬೆದಕಾಟ ಬದುಕಿಲ್ಲ ; ಚಣಚಣವು ಹೊಸ ಹಸಿವು (ಮಂಕುತಿ. ೨೦೮). [ ಬೆದಕು$_1$ + ಆಟ ]

**ಬೆದಕಿಸು** (ಕ್ರಿ). ಪರಿಶೋಧನೆ ಮಾಡು : ವೀರೇಶ ಶರಣಾಗೆನಲ್ ಪ್ರತ್ಯಕ್ಷನಾಗಿ ನೇತ್ರಾಗ್ನಿಯಿಂ ಬೇಗ ಬೆದಕಿಸಿ ಕೊಟ್ಟ ರಾಗದಿಂ ಜಯರುದ್ರ ದೀಪಗುಂಟೆಯ ವೀರಭದ್ರ ಕರುಣಾಸಮುದ್ರ (ಗುರುಶಾ. ೧೧-೨೬). [ ಬೆದಕು$_1$ + — ಇಸು$_3$ ]

**ಬೆದಕು$_1$**, **ಬೆದಂಕು** (ಕ್ರಿ). ೧. ಹುಡುಕು ; ಶೋಧಿಸು : "ಬೆದಕು—ಅನ್ವೇಷಣೇ (ಹುಡುಕು)" (ಶಮಥ) ; ಸರೋವರಾಂಬುವನಿತಂ ತವೆ ತುಳ್ಕಿ ರಸಾತಳಂಬರಂ ಬೆದಕಿಯುಮೆಂತುಮಪ್ಪಳಿಸಿ ಕೋಂದಪೆನೇಟ್ಬುದಿದೇಂ

ಸುಯೋಧನಾ (ಶಂಕರ್ಶ. ೧೪-೬೦); ಬೆದಕದಿರು ಬೆದಕದಿರು ಬೆದಕಿದೊಡೆ ಹುರುಳಿಲ್ಲ (ಬಸವ. ೨೯). ೨. ಆಯು; ಆರಿಸು : ಪಲರುಂ ಚೀಯೆಂಬಿನಂ ಸೂಸದೆಂಜಲವುಟ್ಟಿಗಳಾವಗಂ ಬೆದಕಿ ತಿಂದು (ಸುಕುಮಾ. ೯-೩೭). ೩. ಎತ್ತು : ಮೇಲಕ್ಕೆಬ್ಬಿಸು : ಕಲ್ಲ ಬೆದಕದೆ ಕಪ್ಪೆಯು ಸೋಂಕದೆ ಅಲ್ಲಿಯ ಉದಕವ ಕುಡಿಯಬಲ್ಲಡೆ ಅದು ಯೋಗ (ಅಲ್ಲಮ. ೦೨೩-೫೭೦). ೪. ಕೆದಕು; ಕೆದರು : ಎರಡುಕಾಲೊಳ್ ನೆಲನಂ ಬೆದಕುತ್ತುಂ ನಿಲೆ (ಅಕ್ಷರ. ೪-೬೦); ಬೆಂದುದ ಬೆದಕಿ ನೋಯಿಸಬೇಡ (ಕುವ್ಯಾವಿ. ೯-೩೦). ೫. ಪರ್ಯಾಲೋಚಿಸು ; ವಿವೇಚಿಸು : ಅವನು ಅವುಗಳ ವೈಶಿಷ್ಟ್ಯವನ್ನು ಕುತೂಹಲದಿಂದ ಬೆದಕತೊಡಗಿದ (ರಾಗಿ. ೦೯೮). **ಬೆದಂಕು :** ೧. ತನ್ನ ನಿಶಿತ ನಾರಾಚಪರಂಪರಾಭಿಘಾತದೊಳ್ ತಗ್ಗಿ ನುಗ್ಗುನುಱಿಯಾಗಿ ಕಿಡೆದ ತೇರ ಪಲಗೆಗಳೊಳ್ ಮೆಯ್ಗರೆದನೆ ಗೆತ್ತು ಬೆದಂಕಿ ನೋಡಿಯುಂ (ಗದಾಯು. ೬-೨೮ ವ).

**ಬೆದಕಿ ನೋಡು** = ಹುಡುಕು ; ಅನ್ವೇಷಣೆ ಮಾಡು ; ಪರಿಶೋಧಿಸು : ರಾಜಮಂದಿರದೊಳು ಬೆದಕಿ ನೋಡಿದಳು ಸರೋಜಾಕ್ಷಿ ತನ್ನ ವಲ್ಲಭನ (ಮೋಹತ. ೯-೩) ; ಮಿಗೆ ಮಡಿದ ಮೇತಂಡಂಗಳಂ ನೂಂಕಿ ನೋಡಿ ರಥಸಂದೋಹದಿಡುಕಿನೊಳ್ ಬೆದಕಿ ನೋಡಿ (ತಂಶ್ರ. ೪೦-೨೮) ; ಸುನಂದ ತನ್ನ ಹೃದಯವನ್ನು ಬೆದಕಿ ನೋಡಿದಳು (ದೂಶಬ್ದ. ೦೦೫).

[ದೇ.॥ ತೆಲು. ವೆದಕು, ವೆತಕು, ವೆನಕು, ವೆದುಕು, ವೆತುಕು ; ಕುರುಖ್. ಬೆದ್ನಾ ; ಮಾಲ್ತೊ. ಬೆದೆ ]

**ಬೆದಕು$_2$** (ನಾ). ೧. ಕೆರೆತ ; ಗೀರುವಿಕೆ : "ನಖಘಾತದಲ್ಲಿ ಬೆದಕಕ್ಕ" (ಶಬ್ದಕುಂ. ೯೦). ೨. ಅಪೇಕ್ಷೆಯನ್ನು ಅಧಿಕಮಾಡಿಕೊಳ್ಳುವುದು : ದ್ಯೂತದಲಿ ಮದ್ಯದಲಿ ಘನಕಂಡೂತಿಯಲಿ . . . ದುರ್ನೀತಿಯಲಿ ಪರಸತಿಯರಲಿ ಸಂಪ್ರೀತಿ ಬಲಿವುದು ಬೆದಕ ಬೆದಕಲು ರಾಯ ಕೇಳೆಂದ (ಕುವ್ಯಾಉ. ೪-೯೫). [ < ಬೆದಕು$_1$ ]

**ಬೆದಗತನ** (ನಾ). ಕಾಮುಕತೆ : ಸುದತಿಯನು ಕಂಡೊಡನೆ ಚಿತ್ತವು ಚದುರದಲ್ಲಿಯ ನೆಲಸೆ ಖಲಪತಿ ಬೆದಗತನದಿಂದೌಂಕಿ ಧನುವಿಗೆ ಹೆದೆಯನೇರಿಸುವ (ರಾಮಾಸಂ. ೦-೪-೦೮). [ < ಬೆದೆ + —ತನ ]

**ಬೆದಡು** (ನಾ). (?) : ವೇದೋಕ್ತ ವೀರಶೈವ ಸರಣಿಯಂ ದುಷ್ಕೃತ್ಯ ಮೆಂಬು ಗಿಡು ಬಳ್ಳಿ ಪುಲ್ಮರ ಪೊದಱು ಕಲ್ ಮುಳ್ ಬೆದಡುಗಳೊಂದದ ವೋಲ್ ಸುಸರಮನಾಗಿಸುತೆ (ಚನ್ನರಾ. ೪-೨೭). [ ? ]

**ಬೆದಡೆ** (ನಾ). "ಸಂಬಾಧ, ಗೊಡವೆ" (ದೀಕ್ಷಾಬೋ. ಕೋಶ) : ಇದನಱಿದು ಭಜಿಸು ಮದನನ ಮದಹರನ ನೀನು ಕುದಿಯದಿರು ದೈವಗಳ ಬೆದ [ಪಾಠಾಂ. ಗ]ಡೆಯಂ ಬಿಡು ನೀನು (ದೀಕ್ಷಾಬೋ. ೦೦-೮). [ ? ]

**ಬೆದಬೆದ** (ನಾ). ಒಂದು ಅನುಕರಣ ಶಬ್ದ : 'ಬೆದಬೆದನೆ' ಪರಾ.

**ಬೆದಬೆದ ಬೇ, ಬೆದಬೆದಂ ಬೇ, ಬೆದವೆದ ಬೇ** = ಅತಿಯಾಗಿ ನೋಯು, —ಸಂತಾಪಗೊಳ್ಳು : ಗುಜುಗುಮ್ಮೆಂದು ಪಸಿದಿರ್ದು ಬೆದಬೆದ ಬೆಂದಿನಿಬರ್ ಕಟ್ಟಿಕೊಳ್ವ ಕಣೆಯೇಂ ಪೇಱಿಂ (ಆದಿಪು. ೯-೯೦) ; ಬೆದಬೆದ ಬೇಯುತ್ತುಂ ತಪದೊಳ್ ನವೆದು (ಶಾಂತಿಪು. ೮-೦೩೦) ; ನಡುವೆ ರೋಗಗಳಾಗೆ ಬೆದಬೆದಂ [ಪಾಠಾಂ. ಬೆದಬೆದನೆ]ಬೆಂದು (ಬಿಂದುರೀರ. ಹ. ೫೦೨-೬) ; ಬೆದಬೆದಂ ಬೇಯ ಬೇಸತ್ತು (ಕಇ. I, ೪೯-೪೩ ; 1423) ; ಎನಿತಂ ಬೆದಬೆದ ಬೆಂದವಯ್ ಯೆನಿತಂ ಸುಡುಸುಡನೆ ಪುಗುವೆಯ್ ಜೀವನೆ . . . ಎನಿತಂ ಭವಗಹನದೊಳಗೆ ಬಟ್ಟೆಸೆ ಬರ್ಪಯ್ (ಅಜಿಪು. ೨-೬೨); ಪಾರ್ವಂ ಮಲ್ಲಲನೆ ಮುಱುಗಿ . . . ಬೆದವೆದ ಬೆಂದು (ಸುಕುಮಾ. ೨-೦೦).

**ಬೆದಬೆದನೆ** (ಅ). ಒಂದು ಅನುಕರಣಾವ್ಯಯ ; ಅತಿಯಾಗಿ; ಬಹಳವಾಗಿ : ಪೆಱು ಸಿರಿಯಾಳಂ ಹೃದಯದಲಿ ಬೆದಬೆದನೆ ಕುದಿವುತ್ತ ಶೋಕಂ ಪದುಳಿಸದೆ ತಲೆವಾಗಿ ಲಜ್ಜಿಸಿಯುಳಲುತಿಂತಿರಲು (ಬಸಪು. ೨೨-೭೭) ; ಮದಮತ್ಸರಗಳಿಂದ ಬೆದಬೆದನೆ ಬೆಂದೆನಯ್ಯ (ಸಿದ್ಧೇವ. ೪೫-೦೨೭).

[ಬೆದಬೆದ + —ಅನ್$_1$]

**ಬೆದರಟ್ಟು** 'ಬೆದಱಟ್ಟು' ನೋ.

**ಬೆದರಿಕೆ** 'ಬೆದಱಿಕೆ' ನೋ.

**ಬೆದರಿಸು** 'ಬೆದಱಿಸು' ನೋ.

**ಬೆದರು$_1$** 'ಬೆದಱು$_1$' ನೋ.

**ಬೆದರು$_2$** 'ಬೆದಱು$_2$' ನೋ.

**ಬೆದರುಗಣ್ಣು** 'ಬೆದಱುಗಣ್' ನೋ.

**ಬೆದರುನೋಟ** 'ಬೆದಱುನೋಟ' ನೋ.

**ಬೆದರುಬೊಂಬೆ** (ನಾ). = ಬೆದಗೊರ್ಂಬೆ : ಹೊಲದಲ್ಲಿ ಬೆದರುಬೊಂಬೆ ಇಟ್ಟಿದ್ದರೆ (ರೂಢಿ). [ಬೆದರು$_2$ (< ಬೆದಱು$_2$) + ಬೊಂಬೆ]

**ಬೆದರ್ಕೆ** 'ಬೆದಱಿಕೆ' ನೋ.

**ಬೆದಗೊರ್ಂಬೆ** (ನಾ). ಹೊಲ ಗದ್ದೆಗಳಲ್ಲಿ ಹಕ್ಕಿಗಳನ್ನು ಹೆದರಿಸಲು, ಹುಲ್ಲು ಮೊದಲಾದುವುಗಳಿಂದ ಮಾಡಿ ಇಡುವ ಆಕೃತಿ : ಬೆದರ್ ಗೊಂಬೆಯಂ ಕಂಡು ಹೆದರುವ ಮಕ್ಕಳೋಲಂತೆ (ಶ್ರೀರಾಮಪು. ೬೮೪-೦೭೫).

[< ಬೆದರು$_2$ + ಗೊಂಬೆ$_1$]

**ಬೆದರ್ವಳೆ** (ನಾ). ಹೆದರಿಕೆಯನ್ನು ಹುಟ್ಟಿಸುವ ಮಳೆ ; ಭಾರಿಮಳೆ : ಬೆದರ್ವಳೆ ಬಿಸಿಲುಮಳೆ ಸರಿಸೋನೆ ಸಿಡಿಲಿನ ಘುಸಣಿಮಳೆಯಲಿ ಘಾಸಿಯಾದುದು ಜಗದ ಜನನಿಕರ (ತೊರವೆ. ೪-೭-೭).

[< ಬೆದಱು$_2$ + ಮಳೆ (< ಮುೞೆ$^3$)]

**ಬೆದರ್ವುಲ್ಲೆ** (ನಾ). ಹೆದರಿದ ಜಿಂಕೆ : ಬೆದರ್ವುಲ್ಲೆಯನೇಳಿಪ ಬೆಳತಿಗೆಗಣ್ಣದಿಗೆ ಮೆಱೆಯ ಬಿಂಕಂಗೆಡಿಪಧರಂ (ಜಯನ. ೨-೮). [< ಬೆದಱು$_1$ + ಪುಲ್ಲೆ$_1$]

**ಬೆದಲ್** 'ಬೆದ್ದಲ್' ನೋ.

**ಬೆದಲು** 'ಬೆದ್ದಲ್' ನೋ.

**ಬೆದವಟ್ಟೆ** (ನಾ). (?) : ಹಡುಪಣ ಮೇರೆ ಬೆದವಟ್ಟೆಯ ಹೊಲ (ಕಇ. ೭೬-೦೨-೫೭ ; 1170). [ ? ]

**ಬೆದಱಟ್ಟು, ಬೆದರಟ್ಟು** (ಕ್ರಿ). ಹೆದರಿಸಿ ಓಡಿಸು ; ಹೆದರಿ ಹೋಗುವಂತೆ ಬೆನ್ನಟ್ಟು : ಬಾಣಮಂ ಪೊಸಮಸೆಯಂಬಿನಿಂ ಕಡಿದು ಕಟ್ಟಲೆಯಂ ಬೆದಱಟ್ಟೆ (ಶಂಗಾಪು. ೩-೫೪) ; ಸದಾಶಿವನೆಂಡರೆ ಬೆಧಱಟ್ಟೆ ಸುಡುವುದು ಮಾಣ್ಬುದೆ (ಬಸವ. ೭೭೦) ; ವನಾಂತರಾಂತರದ ಕಟ್ಟಲೆಯಂ ಬೆದಱಟ್ಟುತುಂ (ಜಗನ್ನಾ. ೦೭-೦೦೦). **ಬೆದರಟ್ಟು :** ಆಗ ಕೊಟ್ಟಡಿಯ ಮೇಲುಭಾಗದಲ್ಲಿದ್ದ ಒಂದು ಕಿಟಕಿಯಿಂದ ಕಷ್ಟಪಟ್ಟು ಒಳಗೆ ನುಗ್ಗುತ್ತಲಿರುವ ಬೆಳಕನ್ನು ಒಳಗಿನ ಕತ್ತಲೆಯು ಬೆದರಟ್ಟುತ್ತಲಿರುವಂತೆ ಅವನಿಗೆ ತೋರಿತು (ರಾಜಾಪು. ೭೮).

[ಬೆದಱು$_1$ + ಅಟ್ಟು$_2$]

**ಬೆದಱಾಡಿ** (ನಾ). ಭಯದಿಂದ ಮಾತನಾಡುವವನು ; ಹೆದರಿ ನುಡಿಯುವವನು : ಕಮಲಜ ಜ್ಞಾನದೃಷ್ಟಿಲಿ ನೋಡಿ ತನ್ನವನೆಂದಱಿದು ಬೆದಱಾಡಿಗಳ ಸಂತೈಸಿ ಕಳುಹಾತ (ಕೃಷ್ಣಾಪ. ೪-೨೨).

[ಬೆದಱು$_2$ + — ಆಡಿ$_1$]

**ಬೆದಱಿಕೆ, ಬೆದರಿಕೆ, ಬೆದರ್ಕೆ** (ನಾ). ೧. ಭಯ ; ಭೀತಿ ; ಅಂಜಿಕೆ : ಹರಹಿದನು ಬೆದಱಿಕೆಯನಹುದೋ ಹಿರಿಯನೈ ನೀನಾತ ಸಾಕ್ಷಾತ್ ಪರಮಪುರುಷನು (ತೊರವೆ. ೩-೭-೯೭). **ಬೆದರಿಕೆ :** ೧. ಆದಷ್ಟುವಟ್ಟಿಗೆ ಬೆದರಿಕೆ ಯಿಲ್ಲಿಟ್ಟು ಗರತಿಯರ ಗುಣನಡತೆ ಕಲಿಸಿದ್ದರೆ ಹೀಗಾಗುತ್ತಿತ್ತೆ (ಮರಳ. ೮೨). ೨. ಹೆದರಿಸುವಿಕೆ : ದಿಟ್ಟರಾದ ಹುಡುಗರು ಹುಚ್ಚನ ಬೆದರಿಕೆಗೆ ಲಕ್ಷ್ಯ ಕೊಡದೆ . . . ಹುರಿಗಳಿಂದ ಕಟ್ಟಲಾರಂಭಿಸಿದರು (ರಾಬಿ. ೨೨). **ಬೆದರ್ಕೆ :** ೧. ಬಳಿಕ ಮನದೊಳ್ಪೊಳಂಚುವ ಬೆದರ್ಕೆಯಂ ಬಿಟ್ಟು (ಕೈಪಿಡಿ. ೨೭-೦೦).

**ಬೆದರಿಕೆ ಹಾಕು** = ಹೆದರಿಸು ; ಭಯಪಡಿಸು ; ಅಂಜಿಸು : ಸುಳ್ಳೇ

ಸುಯೋಧನಾ (ಹಂಶಭಾ. ೦೩-೮೦); ಬೆದಕದಿರು ಬೆದಕದಿರು ಬೆದಕಿದೊಡೆ ಹುರುಳಿಲ್ಲ (ಐಸಪ. ೨೬). ೨. ಆಯು; ಆರಿಸು : ಪಲರುಂ ಚೀಯೆಂಬಿನಂ ಸೂಸಿದೆಂಜಲವುಟ್ಗಳನಾವಗಂ ಬೆದಕಿ ತಿಂದು (ಸುಕುಮಾ. ೪-೫೭). ೩. ಎತ್ತು : ಮೇಲಕ್ಕೆಬ್ಬಿಸು : ಕಲ್ಲ ಬೆದಕದೆ ಕಪ್ಪೆಯು ಸೋಂಕದೆ ಅಲ್ಲಿಯು ಉದಕವ ಕುಡಿಯಬಲ್ಲಡೆ ಅದು ಯೋಗ (ಅಪಶಂ. ೦೨೩-೫೬೦). ೪. ಕೆದಕು ; ಕೆದರು : ಎರಡುಕಾಲೊಳ್ ನೆಲನಂ ಬೆದಕುತ್ತುಂ ನಿಲೆ (ಅಕ್ಕಚ. ೪-೬೦) ; ಬೆಂದುದ ಬೆದಕಿ ನೋಯಿಸಬೇಡ (ಶಂಬ್ಯಾ.ಪಿ. ೯-೩೦). ೫. ಪರ್ಯಾಲೋಚಿಸು ; ವಿವೇಚಿಸು : ಅವನು ಅವುಗಳ ವೈಶಿಷ್ಟ್ಯವನ್ನು ಕುತೂಹಲದಿಂದ ಬೆದಕತೊಡಗಿದ (ರಾಗಿಪ. ೦೬೬). ಬೆದಂಕು : ೧. ತನ್ನ ನಿಶಿತನಾರಾಚಪರಂಪರಾಭಿಘಾತದೊಳ್ ತಗ್ಗಿ ನುಗ್ಗುನುಱಿಯಾಗಿ ಕೆಡೆದ ತೇರಪಲಗೆಗಳೊಳ್ ಮೆಯ್ಗರೆದನೆ ಗೆತ್ತು ಬೆದಂಕಿ ನೋಡಿದಾಂ (ಗದಾಯು. ೬-೨೬ ವ).

**ಬೆದಕಿ ನೋಡು** = ಹುಡುಕು ; ಅನ್ವೇಷಣೆ ಮಾಡು ; ಪರಿಶೋಧಿಸು : ರಾಜಮಂದಿರದೊಳು ಬೆದಕಿ ನೋಡಿದಳು ಸರೋಜಾಕ್ಷಿ ತನ್ನ ವಲ್ಲಭನ (ಮೋಹತ. ೯-೩) ; ಮಿಗೆ ಮಡಿದ ಮೇತಂಡಂಗಳಂ ನೂಂಕಿ ನೋಡಿ ರಥಸಂದೋಹದಿಡುಕಿನೊಳ್ ಬೆದಕಿ ನೋಡಿ (ಹಂಪು. ೧೦-೨೬) ; ಸುನಂದ ತನ್ನ ಹೃದಯವನ್ನು ಬೆದಕಿ ನೋಡಿದಳು (ದೂಪಟ್ಟ. ೦೦೫).

[ದೇ.॥ ತೆಲು. ವೆದಕು, ವೆತಕು, ವೆನಕು, ವೆದುಕು, ವೆತುಕು ; ಕುರುಖ್. ಬೆದ್ನಾ ; ಮಾಲ್ತೊ. ಬೆದೆ ]

**ಬೆದಕು$_2$** (ನಾ). ೧. ಕೆರೆತ ; ಗೀರುವಿಕೆ : "ನಖಘಾತದಲ್ಲಿ ಬೆದಕಕ್ಕು" (ಶಬ್ದಸಾಂ. ೬೦). ೨. ಅಪೇಕ್ಷೆಯನ್ನು ಅಧಿಕಮಾಡಿಕೊಳ್ಳುವುದು : ದ್ಯೂತದಲಿ ಮದ್ಯದಲಿ ಘನಕಂಡೂತಿಯಲಿ . . . ದುರ್ನೀತಿಯಲಿ ಪರಸತಿಯರಲಿ ಸಂಪ್ರೀತಿ ಬಲಿವುದು ಬೆದಕ ಬೆದಕಲು ರಾಯ ಕೇಳೆಂದ (ಕುವ್ಯಾಉ. ೪-೯೫). [ < ಬೆದಕು$_1$ ]

**ಬೆದಗತನ** (ನಾ). ಕಾಮುಕತೆ : ಸುದತಿಯನು ಕಂಡೊಡನೆ ಚಿತ್ತವು ಚದುರದಲ್ಲಿಯು ನೆಲಸೆ ಖಲಪತಿ ಬೆದಗತನದಿಂದೌಂಕಿ ಧನುವಿಗೆ ಹೆದೆಯನೇರಿಸುವ (ರಾಮಾಸಂ. ೦-೩-೦೬). [ < ಬೆದೆ + —ತನ ]

**ಬೆದಡು** (ನಾ). (?) : ವೇದೋಕ್ತ ವೀರಶೈವ ಸರಣಿಯಂ ದುಷ್ಕೃತ್ಯಮೆಂಬ ಗಿಡು ಬಳ್ಳಿ ಪುಲ್‌ಮರ ಪೊದಱು ಕಲ್ ಮುಳ್ ಬೆದಡುಗಳೊಂದದ ವೋಲ್ ಸುಸರಮನಾಗಿಸುತೆ (ಚನ್ನರಾ. ೪-೨೭). [ ? ]

**ಬೆದಡೆ** (ನಾ). "ಸಂಬಂಧ, ಗೊಡವೆ" (ದೀಕ್ಷಾಕೋ. ಕೋಶ) : ಇದನಱಿದು ಭಜಿಸು ಮದನನ ಮದಹರನ ನೀನು ಕುದಿಯದಿರು ದೈವಗಳ ಬೆದ[ಪಾಠಾಂ. ಗ]ಡೆಯಂ ಬಿಡು ನೀನು (ದೀಕ್ಷಾಬೋ. ೦೦-೬). [ ? ]

**ಬೆದಬೆದ** (ನಾ). ಒಂದು ಅನುಕರಣ ಶಬ್ದ : 'ಬೆದಬೆದನೆ' ಪರಾ.

**ಬೆದಬೆದ ಬೇ, ಬೆದಬೆದಂ ಬೇ, ಬೆದವೆದ ಬೇ** = ಅತಿಯಾಗಿ ನೋಯು, —ಸಂತಾಪಗೊಳ್ಳು : ಗುಱುಗುವೆಮ್ಮಂದು ಪಸಿದಿರ್ದು ಬೆದಬೆದ ಬೆಂದಿನಿಬರ್ ಕಟ್ಟಿಕೊಳ್ವ ಕಣಿಯೇಂ ಪೇೞಿಂ (ಆದಿಪು. ೯-೯೦) ; ಬೆದಪೆದ ಬೇಯುತ್ತುಂ ತಪದೊಳ್ ನವೆದು (ಶಾಂತಿಪು. ೬-೦೩೦) ; ನಡುವೆ ರೋಗಗಳಾಗೆ ಬೆದಬೆದಂ [ಪಾಠಾಂ. ಬೆದಬೆದನೆ]ಬೆಂದು (ಬಿಂದುಶೇರ. ಪ. ೫೦೨-೬) ; ಬೆದಬೆದಂ ಬೇಯು ಬೇಸತ್ತು (ಶಾಸ. I, ೪೯-೪೩ ; 1423) ; ಎನಿತಂ ಬೆದವೆದ ಬೆಂದವಯ್ ಯೆನಿತಂ ಸುಡುಸುಡನೆ ಪುಗುವೆಯ್ ಜೀವನೆ . . . ಎನಿತಂ ಭವಗಹನದೊಳಗೆ ಬಟ್ಟಸೆ ಬರ್ಪಯ್ (ಅಪಶು. ೨-೬೨); ಪಾರ್ವಂ ಮಲ್ಮಲನೆ ಮಱುಗಿ . . . ಬೆದಪೆದ ಬೆಂದು (ಸುಕುಮಾ. ೨-೦೦).

**ಬೆದಬೆದನೆ** (ಅ). ಒಂದು ಅನುಕರಣಾವ್ಯಯ ; ಅತಿಯಾಗಿ; ಬಹಳವಾಗಿ : ಪೆದಱಿ ಸಿರಿಯಾಳಂ ಹೃದಯದಲಿ ಬೆದಬೆದನೆ ಕುದಿವುತ್ತ ಶೋಕಂ ಪದುಳಿಸದೆ ತಲೆವಾಗಿ ಲಜ್ಜಿಸಿಯಳಲುತಿಂತಿರಲು (ಬಸಪು. ೨೨-೬೬) ; ಮದಮತ್ಸರಗಳಿಂದ ಬೆದಬೆದನೆ ಬೆಂದೆನಯ್ಯ (ಸಿದ್ಧೇವ. ೪೫-೦೨೬).
[ಬೆದಬೆದ + —ಅನೆ$_1$]

**ಬೆದರಟ್ಟು** 'ಬೆದಱಟ್ಟು' ನೋ.

**ಬೆದರಿಕೆ** 'ಬೆದಱಿಕೆ' ನೋ.

**ಬೆದರಿಸು** 'ಬೆದಱಿಸು' ನೋ.

**ಬೆದರು$_1$** 'ಬೆದಱು$_1$' ನೋ.

**ಬೆದರು$_2$** 'ಬೆದಱು$_2$' ನೋ.

**ಬೆದರುಗಣ್ಣು** 'ಬೆದಱುಗಣ್' ನೋ.

**ಬೆದರುನೋಟ** 'ಬೆದಱುನೋಟ' ನೋ.

**ಬೆದರುಬೊಂಬೆ** (ನಾ). = ಬೆದರ್ಗೊಂಬೆ : ಹೊಲದಲ್ಲಿ ಬೆದರುಬೊಂಬೆ ಇಟ್ಟಿದ್ದಾರೆ (ರೂಢಿ). [ಬೆದರು$_2$ (< ಬೆದಱು$_2$) + ಬೊಂಬೆ]

**ಬೆದರ್ಕೆ** 'ಬೆದಱಿಕೆ' ನೋ.

**ಬೆದರ್ಗೊಂಬೆ** (ನಾ). ಹೊಲ ಗದ್ದೆಗಳಲ್ಲಿ ಹಕ್ಕಿಗಳನ್ನು ಹೆದರಿಸಲು, ಹುಲ್ಲು ಮೊದಲಾದುವುಗಳಿಂದ ಮಾಡಿ ಇಡುವ ಆಕೃತಿ : ಬೆದರ್ಗೊಂಬೆಯಂ ಕಂಡು ಹೆದರುವ ಮಕ್ಕಳೋಲಂತೆ (ಶ್ರೀರಾಮಪಾ. ೬೬೪-೦೬೫).
[< ಬೆದರು$_2$ + ಗೊಂಬೆ$_1$]

**ಬೆದರ್ವಳೆ** (ನಾ). ಹೆದರಿಕೆಯನ್ನು ಹುಟ್ಟಿಸುವ ಮಳೆ ; ಭಾರಿಮಳೆ : ಬೆದರ್ವಳೆ ಬಿಸಿಲುಮಳೆ ಸರಿಸೋನೆ ಸಿಡಿಲಿನ ಘನಪಳೆಯಲಿ ಘಾಸಿಯಾದುದು ಜಗದ ಜನನಿಕರ (ತೊರರಾ. ೪-೬-೬).
[< ಬೆದಱು$_2$ + ಮಳೆ (< ಮಟ್$^3$)]

**ಬೆದರ್ವುಲ್ಲೆ** (ನಾ). ಹೆದರಿದ ಜಿಂಕೆ : ಬೆದರ್ವುಲ್ಲೆಯನೇಳಿಪ ಬೇಳತಿಗೆಗಣ್ಬಿದಿಗೆ ವೆಱೆಯ ಬಿಂಕಂಗಿಡಿಪಧರಂ (ಶಬ್ದಾಣ. ೨-೬). [< ಬೆದಱು$_1$ + ಪುಲ್ಲೆ$_1$]

**ಬೆದಲ್** 'ಬೆದ್ದಲ್' ನೋ.

**ಬೆದಲು** 'ಬೆದ್ದಲ್' ನೋ.

**ಬೆದವಟ್ಟೆ** (ನಾ). (?) : ಹಡುಪಣ ಮೇರೆ ಬೆದವಟ್ಟೆಯ ಹೊಲ (ಕಶಾಅ. ೭೩-೦೨-೫೭ ; 1170). [ ? ]

**ಬೆದಱಟ್ಟು, ಬೆದರಟ್ಟು** (ಕ್ರಿ). ಹೆದರಿಸಿ ಓಡಿಸು ; ಹೆದರಿ ಹೋಗುವಂತೆ ಬೆನ್ನಟ್ಟು : ಬಾಣಮಂ ಪೊಸಮಸೆಯಂಬಿನಿಂ ಕಡಿದು ಕಟ್ಟಲೆಯಂ ಬೆದಱಟ್ಟಿ (ಹಂರಾಪು. ೩-೫೪) ; ಸದಾಶಿವನೆಂದರೆ ಬೆಧಱಟ್ಟಿ ಸುಡುವುದು ಮಾಣ್ಬುದೆ (ಬಸವ. ೩೩೦) ; ವನಾಂತರಾಂತರದ ಕಟ್ಟಲೆಯಂ ಬೆದಱಟ್ಟುತಂ (ಜಗನ. ೦೭-೦೦೦). **ಬೆದರಟ್ಟು** : ಆಗ ಕೊಟ್ಟಡಿಯ ಮೇಲುಭಾಗದಲ್ಲಿದ್ದ ಒಂದು ಕಿಟಕಿಯಿಂದ ಕಷ್ಟಪಟ್ಟು ಒಳಗೆ ನುಗ್ಗುತ್ತಲಿರುವ ಬೆಳಕನ್ನು ಒಳಗಿನ ಕತ್ತಲೆಯು ಬೆದರಟ್ಟುತ್ತಲಿರುವಂತೆ ಅವನಿಗೆ ತೋರಿತು (ರಾಜಾಪು. ೩೬).
[ಬೆದಱು$_1$ + ಅಟ್ಟು$_2$]

**ಬೆದಱಾಡಿ** (ನಾ). ಭಯದಿಂದ ಮಾತನಾಡುವವನು ; ಹೆದರಿ ನುಡಿಯುವವನು : ಕಮಲಜ ಜ್ಞಾನದೃಷ್ಟಿಲಿ ನೋಡಿ ತನ್ನವನೆಂದಱಿದು ಬೆದಱಾಡಿಗಳ ಸಂತೈಸಿ ಕಳುಹಿತ (ಕೃಹ್ಯಾ.ಪ. ೪-೨೨).
[ಬೆದಱು$_2$ + —ಆಡಿ$_1$]

**ಬೆದಱಿಕೆ, ಬೆದರಿಕೆ, ಬೆದರ್ಕೆ** (ನಾ). ೧. ಭಯ ; ಭೀತಿ ; ಅಂಜಿಕೆ : ಹರಹಿದನು ಬೆದಱಿಕೆಯನಹುದೋ ಹಿರಿಯನೈ ನೀನಾತ ಸಾಕ್ಷಾತ್ ಪರಮಪುರುಷನು (ತೊರರಾ. ೩-೭-೪೭). **ಬೆದರಿಕೆ** : ೧. ಆದಷ್ಟುಮಟ್ಟಿಗೆ ಬೆದರಿಕೆಯಿಲ್ಲಟ್ಟು ಗರತಿಯರ ಗುಣನಡತೆ ಕಲಿಸಿದ್ದರೆ ಹೀಗಾಗುತ್ತಿತ್ತೆ (ಮರಳ. ೮೨). ೨. ಹೆದರಿಸುವಿಕೆ : ದಿಟ್ಟರಾದ ಹುಡುಗರು ಹುಚ್ಚನ ಬೆದರಿಕೆಗೆ ಲಕ್ಷ್ಯಕೊಡದೆ . . . ಹುರಿಗಳಿಂದ ಕಟ್ಟಲಾರಂಭಿಸಿದರು (ರಾಏಕ. ೨೨). **ಬೆದರ್ಕೆ** : ೧. ಬಳಿಕ ಮನದೊಳ್ಪಳಂಚುವ ಬೆದರ್ಕೆಯುಂ ಬಿಟ್ಟು (ಕೈಏಕಾ. ೨೭-೦೦).

**ಬೆದರಿಕೆ ಹಾಕು** = ಹೆದರಿಸು ; ಭಯಪಡಿಸು ; ಅಂಜಿಸು : ಸುಳ್ಳು

ಬೆದರಿಕೆ ಹಾಕುವುದರಿಂದಲೂ . . . ಬಹಳ ಹಾನಿಯಾಗುವುದು (ಮುಂಜಾಯು. ೪-೬೩); ಊರಿನ ಗೌಡ ಬಂದೂ ಬೆದರಿಕೆ ಹಾಕುತ್ತಾನೆ (ಧರ್ಮಶ್ರೀ. ೬೪).
[ಬೆದಱು$_2$ + – ಇಕೆ. / ತುಳು. ಬೆದರಿಕೆ]

**ಬೆದಱಿಸು**, ಬೆದರಿಸು (ಕ್ರಿ). ೧. ಭಯಪಡಿಸು; ಅಂಜಿಸು: ವಾದಿನಗ ವಾದಿಗಜ ಪರವಾದಿತಮಸ್ತಮುಮನೊಡೆವ ಬಿಡೆ ಬೆದಱಿಪ ನಿರ್ಭೇದಿಪೆಡೆ ಗಣ ಹರಿ ದಿನಪೋದಯಮೆನಿಸಿದುದು ವಿದ್ಯೆಯೊಂದುರ್ಕವರಾ (ಅಂಕು. ೩-೬೫); ಮುದುಡಿಸುತಂ ಕೈರವಮಂ ಬೆದಱಿಸುತುಂ ಕೌಶಿಕಂಗಳಂ . . . ಮೂಡಿದನರ್ಕಂ (ಗಂಳ. ೫-೮); ಪೇರೊಡಲ ತೋಱಿಸಿ ಬಲವ ಬೆದಱಿಸಲಗ್ಗಳಿಕೆಯಹುದೇ (ಕುಮಾರರಾ. ೧೫-೫೩). ೨. ಬೆದುರಿಸು; ಹಾರಿಸು: ಜಿನ ಮುನಿದಾನಮೆಂಬ ಗಾಳಿಯಿಂ ಲೋಭಮೆಂಬ ಮುಗಿಲಂ ಬೆದಱಿಸದೆ (ಧರ್ಮಾಮೃ. ೬-೯೬); ಮಾಗಧನಾಯುಸ್ತಮಮಂ ಬೇಗಂ ಬೆದಱಿಪ ಓಮಾಂಶುರುಚಿಗಳವೆನಲಂತವಗಳೆ ದಶನೇಂದುದ್ಯುತಿಯಾಗಲೆ ಸಭೆಯೊಳಗೆ ಕೃಷ್ಣನವರ್ಗಿಂತೆರೆದಂ (ಜೇಮಿನಿ. ೧೦-೧೦೬). **ಬೆದರಿಸು**: ೧. ಘುಡುಘುಡಿಸಿ ಮರುತಾತ್ಮಜನ ಬೆದರಿಸಿದಳೇನೆಂಬೆ (ಕಂಕಾರಾ. ೫-೩-೫); ಮತ್ತೊಂದು ತೋಳವು ಬೆದರಿಸುತ್ತಾ ಬೊಗಳುತ್ತಾ ನಿಂತಿತು (ಕಂಗಾಳ. ೯೪); ಪ್ರತಾಪ ಕುಮಾರಿಯು ನನ್ನ ಮೇಲೆ ಕೈಮಾಡುತ್ತೇನೆಂದು ಬೆದರಿಸಿ ಹೋಗಿದ್ದಾಳೆ (ಅರ್ಧರ್ಮ. ೨೫). [ಬೆದಱು$_1$ + – ಇಸು$_3$]

**ಬೆದಱು$_1$**, ಬೆದರು$_1$ (ಕ್ರಿ). ೧. ಭಯದ ಸೂಚನೆಯನ್ನು ಕಾಣು,— ತಿಳಿ: "ಬೆದಱು—ವ್ಯಸ್ತೇ" (ಕಮಧಾ); ಪದ್ದೆಗನ ಕೋಣೆಯು ಗಂಗನ ದೊತ್ತಮೆಲ್ಲಮಂ ಬೆದಱುವಿನಂ ತೆರಳ್ದು (ಎಕ. II, ೧೩೮-೧೦; 940); ಪಿಂಗಳಕನಪ್ಪೊಡೆ ಮತ್ತಮಾತಂಗಯೂಥಮಂ ಬೆದಱೆ ಬೆಂಕೊಂಡು ಕೊಲ್ವ ಸಿಂಗದ (ಪಂತಂ. ೧೯೯-೨೦); ಬೆಚ್ಚಿ ಬೆದಱುವ ಸೇನೆಗಭಯವ ಹಚ್ಚಿ ಕೊಟ್ಟನು (ಕುಮಾರ. ೬-೪೬). ೨. ಭಯಪಡುವಂತೆ ಮಾಡು; ಹೆದರಿಸು: ಹರಿಪೋತಮಂ ಬೆದಱುತಂ ಕರಿಪೋತಮುಮುಂಡುಗರ್ಚಿ ಕೇಸರಿಣಿಯು ಕೆಚ್ಚಲಂ ತುಡುಕುತುಂ ಪರಿದತ್ತು (ಪಂಪಭಾ. ೭-೮೦). ೩. ಒಂದ ಕ್ಕೊಂದು ದೂರವಾಗು: ಉಱಿಯು ತೆಱದಿರ್ಕೆಲದೊಳ್ ಮೂಡಿ ಬೆದಱಿರ್ದ ಮೊಲೆಗಳ್ ಮಾಡುಗು ಮನದಟಲನಶುಭಮಂ ದುಃಖಮುಮಂ (ಅಕ್ಕಶ. ೦-೪೦). **ಬೆದರು$_1$**: ೧. ಪೇರಾಳ್ಕೆವರೆ ಪೆತ್ತಣಿ ಸತ್ಯಾಂಕನ್ ಆಟ್ಟುವೊಡ್ಡ ಭಟನ್ ಬೆದರೆ ಮಹೇಂದ್ರನ್ (ಮೈಅಂ. ೦೯೨೩, ೬೨-೨; 7ನೆಯ ೮೫); ಬೆದರಿದನಗಸ್ತ್ಯಂ (ಕಂಕಾರಾ. ೫-೦-೨೩); ಕರಮಿರದೆ ಬೆದರುತ್ತೆ ಸಂತಸವ ನಾನುತ್ತೆ (ಮಹಾಪಿ. ೪-೫೩); ಮನೆ ಬಿಟ್ಟು ಹೊರಗೆ ಹಣುಕಿ ಹಾಕಲು ಬೆದರುತ್ತಿದ್ದಳು (ದೀಕಹ. II, ೦೪೦).
[ದ್ರಾ. II ತಮಿ. ವಿತಱು, ವಿತಿರ್, ವೆತಿರ್; ಮಲ. ವಿತುಕ್ಕು; ತುಳು. ಬೆದರು; ತೆಲು. ಬೆದರು, ಬೆದುರು]

**ಬೆದಱು$_2$**, ಬೆದರು$_2$ (ನಾ). ೧. ಭಯ; ಅಂಜಿಕೆ: ಬೆದಱುಂ [ಕೆದಱುಂ] ಪೆಚುರ್ಗಂ ಕುಂದುಮನಱಿದು (ಪಂಪಭಾ. ೫-೪೩ ವ); ಪದುಳದಿಂದೀ ಮನದ ಬೆದಱ ಮಾಣಿಸು ಸ್ವಾಮಿ (ದೀಕ್ಷಾಬೋ. ೦೦೩-೮); ಬೆದಱು ತವನಿಧಿಯಾಯ್ತು ಪಟುಭಟರೆದೆಗಳಿಬ್ಬಗಿಯಾಯ್ತು (ಕುಮಾರ. ೦೦-೦೩); ಕನಸು ಕಳವಳ ಬೆದಱು ಭ್ರಮೆ . . . ಸಂತೋಷ ಇನಿತು ಸಂಧಿಸಿದವನಿಪನ ಕಂಡು (ತೊರೆರಾ. ೩-೦೦-೪೩). ೨. =ಬೆದರ್ಗೊಂಬೆ: ಕೆಯಿಗೆ ಬೆಚ್ಚು ಬೆದಱ ಟಟ್ಟುವಲ್ಲಿ ಆ ಲೆಪ್ಪಕ್ಕೆ ಇಷ್ಟಲಿಂಗ ರುದ್ರಾಕ್ಷಿ ಭಸಿತ ಪಟ್ಟೆ ಕಟ್ಟಿ ಎನ್ನ ಕಿಯ್ಯ ತಪ್ಪಲಲ್ಲಿ ಕಾಷ್ಠವ ನಟ್ಟು ಕಟ್ಟಿದ ಮತ್ತೆ ವಿಹಂಗಕುಲ ಮೃಗಜಾತಿ ಮುಟ್ಟಲಿಲ್ಲ (ಏಕೋತ್ತ. ೦೬೮). **ಬೆದರು$_2$**: ೧. ಮದಸಹಿತದಯುವಿರಲು ಬೆದರುಯಿನ್ನೇಕೆ (ಹಮತ. ೩೮); ಬೆದರಂ ಮಾಣ್ದಿದಂ ನಂಬು (ಗೀತಂ. ೧೨೦-೫೩). ೨. ಹಳ್ಳಿಯ ಹೆಣ್ಣು ಗಂಡುಗಳೂ ನೀಲವ್ವನ ಕಣ್ಣಿಗೆ ಹೊಲದಲ್ಲಿಯ 'ಬೆದರು' ನಂತೆ ಜೀವವಿದ್ದು ಹೋದಂತೆ ಆಕೆಗೆ ಭಾಸವಾಯಿತು (ಏರಿಷಾ. ೦೨೪); ರಾಗವೆಳೆದರೆ ಭಾವದಾವೇಶವಾದರೂ ಮಾತೆಂಬುದೆಂದಿಗೂ ಅರ್ಥರೂಪದ ಬೆದರು (ಅರಳು. ೦೨೦_೬); ಒಕ್ಕಲಿಗರು ತಮ್ಮ ಬೆಳೆಗಳ ರಕ್ಷಣೆಗಾಗಿ ಹೊಲಗಳಲ್ಲಿ 'ಬೆದರು' ಎಂದು ಒಂದು ಕೋಲಿಗೆ ಗಡಿಗೆಯೊಂದನ್ನು ನೇತುಹಾಕಿ ಅದಕ್ಕೆ ಸುಣ್ಣ ಬರೆಯುತ್ತಾರೆ (ಶಕ. ೦೨). ೩. ಹೆದರಿಸುವಿಕೆ: ಬಡಿಗೆಯ ಬೆದರು ಕಂಡು ಕಣ್ತೆರೆದ ಹಕ್ಕಿ ಹಾರಿ ಹೋಗಬಹುದು; ಕಣ್ಣು ಮುಚ್ಚಿಕೊಂಡು ಬೆಕ್ಕು ಹೋಗಬಹುದೇ? (ಪಂಚಳ. ೦೬೫).
[< ಬೆದಱು$_1$. / ತಮಿ. ವೆತಿರ್, ವಿತಱು; ತುಳು. ಬೆದರ್; ತೆಲು. ಬೆದರು]

**ಬೆದಱುಗಂಟೆ** (ನಾ). ಬೆದರುವ ಹಸು,–ದನ: ಬೆದರ್ಗಂಟೆ, ಬೆದಱುಗಂಟೆ (ಕಣ್ಣಾನು. ೮೩ ಕ್ರಿಯೋ). [ಬೆದಱು$_1$ + ಗಂಟೆ$_1$]

**ಬೆದಱುಗಣ್**, ಬೆದರುಗಣ್ಣು, ಬೆದಱುಗಣ್ಣು (ನಾ). ಭಯಭೀತವಾದ ಕಣ್ಣು; ಅಂಜಿಕೆಯನ್ನು ಸೂಚಿಸುವ ಕಣ್ಣು: ಬೆದಱುಗಂಗಳ ಬಿಟ್ಟ ಮಂಡೆಯ . . . ವರಸುದತಿ ಬಂದಳು ರಾಜಸಭೆಗೆ (ಕುಮಾರ. ೦೪-೭೦). **ಬೆದರುಗಣ್ಣು**: ಭೂಮಿಸುತೆ ಬೆದರುಗಣ್ಣಿಂ ನೋಡಿದಳು ಜಲನಿಧಿಯ (ಶ್ರೀರಾಮಪ. ೬೯೮-೦೬); ಮಕ್ಕಳು ಅಳುಕಿ ನಿಂತು ಬೆದರುಗಣ್ಣಾಗಿ . . . ನೋಡುತ್ತಿದ್ದರು (ಕೃಷರು. ೬). **ಬೆದಱುಗಣ್ಣು**: ಬೆದಱುಗಣ್ಣ ಬೆಳುವನಂತೆ ನಿನ್ನಟಲ್ಗಬೆಲ್ವೆ ನಾನ್ (ಅಕ್ಕಶಾ. ೭-೦೩೦).
[ಬೆದಱು$_1$ + ಕಣ್ಣು (< ಕಣ್)]

**ಬೆದಱುಗಣ್ಣು** 'ಬೆದಱುಗಣ್' ನೋ.

**ಬೆದಱುಗಾಗೆ** (ನಾ). ಹೆದರಿದ ಕಾಗೆ: ಬೆದರುಗಾಗೆಯ ನೋಟ ಸಾಳುವ ನೊದೆವ ಮಿಂಗಳ ರ್ಝಳಕೆ ಕೇಸರಿಯದಟು . . . ಒಪ್ಪಿದವರ ಯುದ್ಧದಲಿ (ಜಾಕ್ಷಭಾ. ೨೨-೭೦). [ಬೆದಱು$_1$ + ಕಾಗೆ]

**ಬೆದಱುನೋಟ**, ಬೆದರುನೋಟ (ನಾ). ೧. ಹೆದರಿಸುವ ನೋಟ: ಕೆದಱುದಲೆ ಕೆಮ್ಮೀಸೆ ಕಿಸುಗಣ್ಣು ಬೆದಱುನೋಟವು . . . ಖಡೆಯ ಪೊಡೆಯುದೊದವಿನಂ . . . ಬಲೆವಿಡಿದಿಹರು ಬೀಯದರು (ಸಾಕ್ಷಭಾ. ೫-೬). **ಬೆದರುನೋಟ**: ೨. ಭಯ ತುಂಬಿದ ದೃಷ್ಟಿ: ಬೆದರುನೋಟದ ವಿದ್ಯಾರ್ಥಿಯೊಬ್ಬ ಆ ಮುದುಕನ ಕಡೆಗೆ ದುರುಗುಟ್ಟಿಕೊಂಡು ನೋಡುತ್ತಿದ್ದನು (ತಿವರು. ೨೩೬). [ಬೆದಱು$_1$ + ನೋಟ]

**ಬೆದಱುವಾತು** (ನಾ). ಹೆದರಿಕೆಯ ಮಾತು; ಭಯದ ನುಡಿ: ನೆಗಪಿರ್ಝಳಪಿಸಿ ಲುಳಿವಡೆಯುಲಿಳೆಗುಗುಳಿದುದು ಬಲುಗಿಡಿಗಳನು ನಿದ್ರೆಗಳ ನಿಬಿಡಸ್ತನೆಯರೆದ್ದುದು ಬೆದಱುವಾತಿನಲಿ (ತೊರೆರಾ. ೫-೨-೮೫).
[ಬೆದಱು$_2$ + ಮಾತು$_1$]

**ಬೆದಿಕೆರೆ** (ನಾ). ಒಂದು ಕೆರೆಯ ಹೆಸರು: ತೆಂಕಾಯ್ಲೆಮೊಱಿಡೆ ಬೆದಿಕೆರೆವಿ ಮೊದಳೆಮಡುವೆ (ಮೈಅಂ. ೦೯೨೭, ೦೦೮-೪೭; 726).
[ ? + ಕೆರೆ$_2$ ( <ಕೆಱೆ$^3$) ]

**ಬೆದಿರೂರ್** (ನಾ). ಒಂದು ಊರಿನ ಹೆಸರು: ಹೊದಳಿವಿಷಯೇ ಬೆದಿರೂರ್ ಮಯಾದತ್ತಮ್ (ಮೈಅಂ. ೦೯೨೫, ೦೦೫-೩೮: 634).
[ ? + ಊರ್ ]

**ಬೆದೆ** (ನಾ). ೧. ಬೀಜ ಬಿತ್ತುವುದು; ಬಿತ್ತನೆ: (೬). ೨. ಬೀಜ ಬಿತ್ತಲು ಯೋಗ್ಯವಾದ, ಮಳೆ ಬಿದ್ದ, ಭೂಮಿಯ ಹದ: ಬೀಜವಿರೆ ಬಿತ್ತರೆ ಪೇಟ್ ಬೆದೆ[ಪಾಠಾಂ. ಳೆ]ಯಾದ ಭೂಮಿಯೊಳ್ (ನೇಮಿಚ. ೦೨-೩೦); ಬೆದೆ ಬಂದ ಕಾಲದಲ್ಲಿ ಬೇಲಿಯಲ್ಲಿ ಚಲ್ಲಿದರೂ ಬೆಳೆಯುತ್ತದೆ (ಕೃಷಿಶ್ರ. ೦೬೬); ಬೆದೆಯರಿತು ಹದಮಾಡು ಹೃದಯದಿ ಹೊಲವನ್ನು (ಜಾನಪದ. ೦೩-೦); ಬೆದೆ ನೋಡಿ ಬಿತ್ತು, ಹದ ನೋಡಿ ಹರಗು (ಗಾದೆ). ೩. ಬೀಜ ಬಿತ್ತಲು ಯೋಗ್ಯವಾದ ಹದವಿರುವ ಭೂಮಿ; ಬಿತ್ತನೆಗೆ ಹದ

ವಾದ ಭೂಮಿ : ಪನ್ನಿರ್ಕ್ಕಣ್ಡು ವೆದೆನೆಲ್ಮಣ್ಣನ್ದನ್ದು (ಇಸಿ. V. ೧೩೭–೦೯; ೪೩೪); ಮಣ್ಣೊರ್ಖಣ್ಡಾಗಂ ಬೆದೆ ಉತ್ತಮ ಕ್ಷೇತ್ರಂ (ಎಕ. IX (S), ಹಂಗಳೂ. ೦೫೦–೬೨; 828); ಇಕ್ಕುಳದ ಬೆದೆ ಕಾಚಿಗೌಡಿಯ ಪೋಲಯ್ಯಪೂರ ಬಯಲಲು ಕೊಟ ಗದೆ (ಎಕ. VI. ಕಕ್ಕಪು. ೩೦–೨೭; ೯). ೪. ಪಕ್ವತೆ; ಯೋಗ್ಯವಾದ ಸ್ಥಿತಿ : ಆಕಾಶಗಂಗಾತಟಾಕತೇಜಃಪುಂಜದಲ್ಲಿ ಒಳಗಿನ ಬೆದೆಗೆ ಚುಕ್ಕಿ ಹೊಳೆವಂತೆ (ಅರಳು. ೧೮–೯). ೫. ನಸೆ ; ಕಾಮೋದ್ರೇಕ : ಬೆದೆ ಬೇಟದೊಳು ಮೆಯ್ದ್ ಪೆಂಪುಗೊಂಡುರ್ಬಿ (ಗೀತಗೋ. ೩೨–೦); ಬೆದೆ ಯನು ಹೆಚ್ಚಿಸಿ ಬೇಗಾ ಪದಗುವ ಕೂಟಕ್ಕೆ ವಳಗಾಗಬೇಡೆಂಬ ಮುದಿ ಸೂಳೆಯರ ನೋಡಿದನು (ಶಿಗಂಕ. ೩–೯೬); ದನ ಸಿಂಗ ಹುಲಿ ಹಕ್ಕಿ ಹಾವು ಮೀನ್‌ಗಳಿಗೆಲ್ಲ ಇನಿಸುಣಿಸು, ಬೆದೆ ಬೆದರು—ಅಷ್ಟೆ ಜೀವಿತವು (ಹುಂಕಾಕ. ೩೯೯).

ಬೆದೆಬೆದೆಗೊಳಿಸು = ಕಾಮೋದ್ರೇಕಕ್ಕೊಳಗಾಗುವಂತೆ ಮಾಡು : ಮುದುಕಿಮುದುಕರೂಮ್ಮೆ ಹೊಕ್ಕರಾ ಮನೆಗಳು ಬೆದೆಬೆದೆಗೊಳಿಸಿ ಕಾಡುವುವು (ಹರಿ. ೦೫–೩೦). ಬೆದೆಬೆದೆಗೊಳು = ಕಾಮೋದ್ರೇಕವನ್ನು ಹೊಂದು : ಬೆದೆಬೆದೆಗೊಳುತಿರ್ದರಬಲೆಯರೆಂದಿಗೆ ಮದುವೆಯಹುದೋ ನಮಗೆಂದು (ಹರಿ. ೩೭–೨೪). ಬೆದೆ ಮಾಡು = ಹದಗೊಳಿಸು; ಹಸನು ಮಾಡು : ಕರಧಾರೆಯಂ ನಿಜೋಗ್ರಗದೆಯೇರ್ಗಳಿನುಬ್ಬು ಸಮಸ್ತವೈರಿಭೂಪರ ರುಧಿರಾಂಬುವಿಂದೆ ಬೆದೆ ಮಾಡಿ . . . ಸಿತ[ಕೀರ್ತಿ]ಯೆಂಬ ಬೆಳೆಸಂ ಬೆಳೆದಂ (ಗದಾಯು. ೦೦–೯); ನಿಮ್ಮ ಹೃದಯವನ್ನು ಬೆದೆ ಮಾಡಿದ್ದೇನೆ (ಗುರುಕ. ೦೬). ಬೆದೆಯಾಗು = ಕಾಮೋದ್ರೇಕ ಉಂಟಾಗು : ಆಡಿನ ಬುಳುಬೊಳ್ ಬಂದುದು ಪೋಂತಿನ ರೂಪು ಬಳೆ ಎಟಿಕ ಮದನೋನ್ಮತ್ತಂ ಬೆದೆಯಾದ ತಾಯನೇರಿದುವದರಿ ಸೋರ್ಕಿದ ಗೂಳಿ ತಾಯನೇರಿಚುಕ್ಕಿಂಬಂದದೆ (ಧರ್ಮೀತ. ೩–೩೪). [ದೇ.? ಮಲ. ಎದ; ತುಳು. ಬಿತ್ತ; ತೆಲು. ವದ]

ಬೆದೆಕಾಜಿ 'ಬೆದೆಗಾಜಿ' ನೋ.

ಬೆದೆಗದ್ದೆ 'ಬೆದೆಗಟ್ಟಿ' ನೋ.

ಬೆದೆಗಟ್ಟಿ, ಬೆದೆಗದ್ದೆ (ನಾ). ಸಾಗುವಳಿ ಮಾಡಲು ಹದವಾದ ಗದ್ದೆ : ಪದಿನಯ್ದು ಕೊಳಗ ಬೆದೆಗಟ್ಟಿ (ಎಕ. III (R). ಹೆಗ್ಗಡ. ೩೮–೦೬ ; 1021); ಕಲಿಕಟಕ ಪಾಣಿಕಾಚಾರಿಗೆ ಐಗುಳಗ ಬೆದೆಗಟ್ಟಿಯು ಬೆಟ್ಟಿಲೆ ಮತ್ತರು ಎರಡು (ಶಿಕಾಇ. IX-i. ೦೦೨–೨೬ ; 1053). ಬೆದೆಗದ್ದೆ : ಶ್ರೀಯೂರ ಚಾಮುಣ್ಡಯ್ಯನ ಭೂಮಿಯಲು ಪತ್ತುಕೊಳಗ ಬೆದೆಗದ್ದೆಯುಂ . . . ಈಶಾನ ಈಶ್ವರದುಡಿಯಾರ್ಗ್ಗೆ ಕೊಟ್ಟುದು (ಮೈಆ. ೦೯೯೬, ೨೮–೦೨ ; 1032) ; ಧಾರಾಪೂರ್ವ್ವಕಂ ಮಾಡಿ ಬಿಟ್ಟ ಎರಡು ಸಲಗೆಯ ಬೆದೆಗದ್ದೆ (ಮೈಆ. ೦೯೩೯, ೪೩–೦೨ ; 1189). [ಬೆದೆ + ಗಟ್ಟಿ]

ಬೆದೆಗಾತಿ (ನಾ). = ಬೆದೆಗಾರ್ತಿ ೨ : ತಳವಾಜರಿದೆ ಬಂದರೆಂದು ಕಾತರಿಸಿ ಬೆದೆಗಾತಿಯರನು ಬಿಟ್ಟಗಲುವ ವಿಟರುಗಳಿದೆಗೇಡನೇನ ಬಣ್ಣಿಸುವೆ (ಪ್ರೋಹಕ. ೦೬–೨೩). [ಬೆದೆ + — ಕಾತಿ]

ಬೆದೆಗಾರ್ತಿ (ನಾ). ೧. ಕಾಮೋದ್ರೇಕವುಳ್ಳವಳು. ೨. ಹಾದರಗಿತ್ತಿ ; ಜಾರೆ : "ಸಿತಗೆ, ಜೋಡೆ, ಪಾಣ್ಬೆ, ಬೆದೆಗಾರ್ತಿ—ಈ ೪ ಜಾರೆಗೆ ಪೆಸರ್" (ಕರ್ಣ. ೬೨–೩೩೬). ೩. ನಲ್ಲೆ ; ಪ್ರೇಯಸಿ : ಬೆಳ್ವಟ್ಟೆಯಂ ಪೊದೆ ದೊಡಲಿಚಿಂ ತನ್ನ ಬೆದೆಗಾರ್ತಿಯ ಚೂಳಿಯ ಸಿಂಗರಕ್ಕೆಂದು ಸಮೆದು ಬೈಚಿಟ್ಟ ಕುಂದಣದ ಗೊಂಡೆಯೆನೆ (ರಾಜಶೇ. ೦೦೦–೨೬).

[ಬೆದೆಗಾಜಿ + — ತಿ$_1$ (< — ಇತ್ತಿ)]

ಬೆದೆಗಾಲ (ನಾ). ೧. ಬೀಜ ಬಿತ್ತಲು ಹದವಾದ ಕಾಲ : ನಿನ್ನ ಭೂಮಿಯೊಳ್ ಬೀಜಮಂ ಬಿತ್ತಿದೊಡೆ ಬೆಳೆ ಬಾಳ್ಕೆಗೆ ಕದನಕ್ಕೆದುವ ವೇಳೆ ಯಲ್ಲೆನಲುವಂ ಮುಂದೆ ಬೆದೆಗಾಲವುಂಟೆಂದೊಡೆ (ಕೈಪಿಡಿ. ೦೦–೦೯). ೨. ಕಾಮೋದ್ರೇಕವಾದ ಕಾಲ : ಬೆದೆಗಾಲ-ಬೆದೆಷು ಕಾಲವನ್ನು ಬಳ್ಳಿ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು (ಗೋಗ್ರಾ. ೩೬) ; ಬೆದೆಗಾಲದ ಹವ್ಯೆಸಿಕೆಯೊಳಗೆ ಪೆರ್ಬಯಂದಬಾಸಂರುತಿಯೊಳಗೆ ತನ್ನ ಹೊರಗಿರುವ ಜೀವದ ನೆರವ ಆತ್ಮಸ್ವಾಸ್ಥ್ಯಕೆ ಯಾಚಿಸುತಿರುವ ಪರಿಯಿಲ್ಲ (ಗಜಕ. ೬೬–೩).

[ಬೆದೆ + ಕಾಲ]

ಬೆದೆಗಾಜಿ, ಬೆದೆಕಾಜಿ (ನಾ). ೧. ಕಾಮಾತುರತೆಯುಳ್ಳವನು. ೨. ಕಾಮುಕ ; ವಿಟ : 'ಬೆದೆಗಾರ್ತಿ' ಪರಾ. ಬೆದೆಕಾಜಿ : ೧. ಬೆದೆಕಾಜಿ ರೆರ್ದಯಂತೆ ಬೇಯುತಿರ್ದ ಪೆಣಂಗಳಿಂ (ಕಾವ್ಯಸಾ. ೩೦೯ ಪುಪ್ರಿತ).

[ಬೆದೆ + — ಕಾಜಿ]

ಬೆದೆಗುದಿ (ನಾ). ಸಂತಾಪ; ಕ್ಲೇಶ ; ಬೇಗುದಿ : ಭವ ನರರ ಬೆದೆ ಗುದಿಗೆ ಪಂಡಗಂಡಸುತನಕೆ (ಶೃಶಾ. ೩–೨೪). [ಬೆದೆ + ಕುದಿ$_3$]

ಬೆದೆಗುದಿಗೊಳ್ (ಕ್ರಿ). ಸಂತಾಪಗೊಳ್ಳು ; ಕ್ಲೇಶಪಡು : ಭವದ ಬೆದೆ ಗುದಿಗೊಂಬ ಜೀವಜಾಲಂಗಳಿಗೆ ಶಿವಪಿಯಾಯಬೇಕೆಂಬುದೇ ಶಂಭುಚಿತ್ತ ದೊಳ್ ಪ್ರಣವವಾಗಿಹುದು (ಚಕುಭು. ೬–೭–೦೨೦). [ಬೆದೆಗುದಿ + ಕೊಳ್$_1$]

ಬೆದೆಗೂಡಿಸು (ಕ್ರಿ). ಬೀಜ ಬಿತ್ತಲು ಭೂಮಿಯನ್ನು ಹದವಾಗಿಸು : ಅಂಬಿನ ಮಾಟೆ ರಕ್ತವಾರಿ ಬೆದೆಗೂಡಿಸೆ ಸಾಲಿಡೆ ಪೆರ್ಬಿಣಂ ರಣಾವನಿಕ್ಷಳ ಮಿರ್ದುದಂಕುರಿತಮಾದಪೊಲೊಕ್ಕ ಕರುಳ್ವಿಣಿಲ್ಗಳಿಂ (ಶಾಂತಿಪು. ೦೬–೯೯).

[ಬೆದೆ + ಕೂಡಿಸು]

ಬೆದೆಗೂಡು (ಕ್ರಿ). ಬೀಜ ಬಿತ್ತಲು ಹದವಾಗು.—ಯೋಗ್ಯವಾಗು : ಪಾಯ್ದೊಡೆ ಕೋಡಸೂಜಿ ನಡೆ ಬಿಟ್ಟ ಮದೇಭದ ದಂತದಿಂ ಭರಂಗೆಯ್ದು ಡೆ ಯುಟ್ಟು ಕಾಡನರುಣಾಂಬುಗಳಿಂ ಬೆದೆಗೂಡಿ ತಾಯ್ನೆಲಕ್ಕೆಯ್ದೂರಲೆಂದು ಬಿತ್ತಿದುದದೊಂದು ಮ್ಯಗಾರಿ ತದುತ್ತಮಾಂಗದಿಂ ಸಯ್ದನೆ ಸೋರ್ವ ಮುತ್ತುಗಳೆ ಬಿತ್ತುಗಳಾಗಿರೆ ತನ್ನ ಬೀರಮಂ (ಕೃಷ್ಣಪು. ೩–೭೭).

[ಬೆದೆ + ಕೂಡು$_1$]

ಬೆದೆಬೆದೆ (ನಾ). ಒಂದು ಅನುಕರಣ ಶಬ್ದ.

ಬೆದೆಬೆದೆ ಬೇ = ಅತಿಯಾಗಿ ನೋಯು ; ಬಹಳ ಸಂತಾಪ ಪಡು : ಮಗನಿಲ್ಲದರ್ಥಪತಿಯಂತೆ ಬೆದೆಬೆದೆ ಬೇಯುತ್ತುಂ (ಧರ್ಮಾಮೃ. ೦–೦೯೯) ; ಬೆದೆಬೆದೆ ಬೆಂದು ಬಾಯಡೆಗಳಂ ಬಸುಟಿಂ ಬಿಡೆ ಕೊಯ್ದುಕೊಂಡು (ಪುಣ್ಯಾಸ್ರ. ೬–೯೦) ; ನೊಂದು ಮನದಲಿ ಪ್ರಾರ್ಥನಾ ಸತಿಯಂದದವನು ಕಾಣುತ್ತ ಬೆದೆಬೆದೆ ಬೆಂದು ಯಮರಾಜನ ಕುಮಾರನ ಮೊಗವ ನೋಡಿದನು (ಕುಮಾರರಾ. ೮–೦೭).

ಬೆದೆಮಣ್ (ನಾ). ಬೀಜ ಬಿತ್ತಲು ಯೋಗ್ಯವಾದ ಹದವಿರುವ ಭೂಮಿ ; ಬಿತ್ತನೆ ನೆಲ: ನಾಲ್ಗಣ್ಡುಗದ ಬೆದೆಮಣ್ಣನ್ ಕಾಣ್ವನ್ನ ಗೋತ್ರುವ ದೇವದತ್ತರ್ಗ್ಗೆ ಇತ್ತಾರ್ (ಎಕ. XVI. ಶಾಪಗ. ೧೦–೨ ; 754) ; ಶ್ರೀ ಜನ್ನ ಕಲ್ಲ ನಿಜಿಸಿ ಪನ್ನಿರ್ಕ್ಕಣ್ಡುಗ ಬೆದೆಮಣ್ಣೊಟ್ಟಾರ್ (ಮೈಆ. ೦೯೯೯, ೬–೩ ; 808) ; ಕುಪ್ಪಂ ಮಣಲಿಯುಂಳ್ ಅಯ್ಗುಳ ಬೆದೆಮಣ್ಣು ಇದನಿಚ್ಚ ಸುಪಗೆ ಸಲ್ಲದು (ಮೈಆ. ೦೯೯೬, ೦೫–೨೩ ; 897). [ಬೆದೆ + ಮಣ್]

ಬೆದೆಮತ್ತಲು (ನಾ). ಬಿತ್ತನೆಗೆ ಹದವಾಗಿರುವ ಭೂಮಿ : ಕೋಸಿಗರಾ ಜಯಮಲ್ಲ ಎಪ್ಪೋನ್ ಗೋಸಾಸಿಮದಾರುಂ ಬೆದೆಮತ್ತಲುಂ ಪದಲ್ದಾ ನಮುಂ ಕೊಟ್ಟೋನ್ (ಎಕ. VIII. ತೊಕೆಲ. ೯೦–೩ ; 910).

[ಬೆದೆ + ಮತ್ತಲು (< ಮತ್ತರ್)]

ಬೆದೆಮೆಟ್ಟೆ (ನಾ). ಒಂದು ಊರಿನ ಹೆಸರು : ಸಿಮ್ಮನರ ಕಿಳ್ಳಮ್ಮಾನ್ ಅಣ್ಣುಗಿಯ ರಟ್ಟಿಗನ್ ಬೆದೆಮೆಟ್ಟೆಯಾಳಮ್ಮಾನ್ ಬಳ್ಳಿಗ್ಗವುಯ ಗಾಮುಣ್ಡನ್ (ಎಕ. VIII. ತೊರಾ. ೦೦–೦೩ ; 800). [ ? ]

ಬೆದೆಯಾಕಳ್ (ನಾ). ಕಾಮೋದ್ರೇಕಗೊಂಡಿರುವ ಹಸು ; ಬಾರಿ ಬಂದಿರುವ ಆಕಳು : "ಪ್ರಚಂಡಿಯೆನೆ ಬೆದೆಯಾಕಳ್" (ಪಂಗಂಗಾ. ೩೩–೩).

[ಬೆದೆ + ಆಕಳ್]

**ಬೆದೆಯಾವು** (ನಾ). = ಬೆದೆಯಾಳಕಳ್ : "ಆಚಂಡೀ, ಸುರತಾ__ಈ ೨ ಬೆದೆಯಾವು" (ಹಲಾಯು. ೪೫-೦೦೬). [ಬೆದೆ + ಆವು]

**ಬೆದೆವಡೆ** (ಕ್ರಿ). ೧. ಬಿತ್ತನೆಗೆ ಯೋಗ್ಯವಾಗು : ನಾಳೆ ಬಿತ್ತುವ ಬೆದೆವಡೆದ ಕೆಯಿ ಹಾಳಹುದು (ಜನಕೃ. ೬೦-೦೭). ೨. ಉತ್ಸಾಹಗೊಳ್ಳು : ಕೋರೇರು ನೇದಾರೊ ಕೊತವುಳ್ಳ ನೂತಾರೊ ಬೆಳ್ಳಿಕಡ್ಡಿಲಿ ಬೆದೆವಡೆದು ನೇದಾರೋ ಸ್ವಾಮಿ ರೇವಯ್ಯ ಋಷಿ ಕಂತೆ (ಜಾ.ಪ. ೩೯).
[ಬೆದೆ + ಪಡೆ$_1$]

**ಬೆದೆವಾವು** (ನಾ). ತಳುಕು ಹಾಕಿಕೊಂಡಿರುವ ಹಾವು ; ವಿಣೆಹಾವು : ತವಕದಿನಪ್ಪಿ ತಳ್ಳಣದೆ ಚುಂಬಿಸಿ ನಿಲ್ಲದೆ ಕೂಡಿ ತೋಡಗಲ್ಗುವ ದಿವಸಾವಸಾನ ಸಮಯಕ್ಕೆ ಕನಲ್ದುರಿದೇಟ್ಟು ಸಂಜೆ ಪೊಣ್ಮುವ ತಮುವುತ್ತಮಿತ್ತ ಮಳುದಿರ್ವತ್ತಲೆ ಪೊರ್ದಿದ ಪೋಟಿಲೊಳ್ ಮಿಡುಂಕುವ ಬೆದೆವಾವಿ [ಪಾಠಾಂ. ಬೆಣವಾವಿ, ಬೆಳುಗಾವಿ] ನಂತಗಲಲಾಜಿದಗಲ್ದುವು ಜಕ್ಕವಕ್ಕಿಗಳ್ (ಸೂಕ್ತಿಸು. ೬-೨೮ ; ಪಂಪಭಾ. ೭-೭೦ ನೋ). [ಬೆದೆ + ಪಾವು$_1$]

**ಬೆದೆವೆರಸು** (ಕ್ರಿ). ಕಾಮಾತುರತೆಯಿಂದ ಕೂಡು ; ಕಾಮೋದ್ರೇಕಗೊಳ್ಳು : ಎಡೆವಿಡದೆ ಬೆದೆವೆರಸಿದ ಕುರರಕೂಜಿತಂಗಳಂತೊಗೆವ ಸರಳ ಮೋಟಿಪದೊಳಂ ಕೂಡೆ ವಿಂಧ್ಯಾಟವಿಯೆಲ್ಲಂ ಪ್ರಚಲಿತಮಾದಂತಾಗೆ (ಕಾದಂಪೂ. ೦೬೦). [ಬೆದೆ + ಬೆರಸು$_1$ (< ಬೆರೆಯಿಸು)]

**ಬೆದೆವೋಗು** (ಕ್ರಿ). ಕಾಮೋದ್ರೇಕಗೊಳ್ಳು : ಇರುಳೊಳ್ ಕಾಂತವಾಗಿರ್ದು ಬೆದೆವೋಹ [ಪಾಠಾಂ. ಯಾದ] ಸವಣಸಮುಹುಳ್ಳ ಕಂತಿಯನವಚಿಕೊಂಡು (ಸೋಮಪುಕ. ೪-೪೩). [ಬೆದೆ + ಪೋಗು$_1$ (< ಪೋ$_1$)]

**ಬೆದ್ದಲ್**, ಬೆಜಲು, ಬೆಜ್ಜಲು$_2$, ಬೆದಲ್, ಬೆದಲು, ಬೆದ್ದಲು, ಬೆದ್ದಲೆ, ಬೆರ್ದಲೆ, ಬೆಟ್ದಲೆ, ಬೆಟ್ಡ್ಲೆ (ನಾ). ಮಳೆಯ ನೀರಿನಿಂದ ಮಾತ್ರ ಬೆಳೆ ಬೆಳೆಯುವ ಭೂಮಿ ; ಹೊಲ ; ಕಾಡಾರಂಬ : ಬೀಡಿನ ದಕ್ಷಿಣದ ಕೊಳದೊಳಗೆ ಬೆದ್ದಲ ಕಮ್ಮ ೫೦ (ಕಾ. V, ೦೯-೦೯ ; 1121). **ಬೆಜಲು** : ಬೀಜವರಿ ಖಂಡುಗ ಬೆಜಲು (ಎಕ. IX, ತನ್ನಕ. ೦೬೯-೦೯ ; 1461). **ಬೆಜ್ಜಲು$_2$** : ಚತುಃಶೀಮೆವಳಗೆ ವುಳ್ಳ ಗದ್ದೆ ಬೆಜ್ಜಲು ತೋಟ ತುಡಿಕೆ (ಎಕ. IV, ಪಾಂಡು. ೨೬೯-೨೯ ; 1397) ; ಗದ್ದೆ ಬೆಜ್ಜಲು ತೋಟ ತುಡಿಕೆ ಕಾಲುವಳಿ (ಕಾಇ. IX–ii, ೬೦೦-೯ ; 1512). **ಬೆದಲ್** : ಅಟಿವವರಾರ್ ಬೆದಲ ಧಾನ್ಯಮಂ ಧರೆ ಸುಖದಿಂದುಬ್ಬುವುದು ಕಾರ್ಗಾಲದೊಳು (ಅಭಿಪು. ಕಂ. ೩-೩೭). **ಬೆದಲು** : ಕೆಱೆಯ ಕೆಳಗೆ ಬೆದಲು ನೂಱು ಕಂಬ (ಎಕ. VI, ಕಡೂರು. ೭-೨೦ ; 1110) ; ಗದ್ದೆ ಬೆದಲು ತೋಟ ತುಡಿಕೆ (ಪ್ರಾಕಂ. ೦೯೯೬, ೨೯-೦೦ ; 1530). **ಬೆದ್ದಲು** : ಆ ನಾಡು ಸಟು ಕೊಟ್ಟ ಹಳ್ಳಿಗಳಿಂದೊಳಗಣ ಬೆದ್ದಲು (ಎಕ. XI, ಚಿತ್ರದು. ೦೨-೩೪ ; 1280) ; ಮುಗುಟಿಯ ಕಟ್ಟೆಯನು ಗದ್ದೆಯಾ ಬಟಿಯ ಬೆದ್ದಲು ಸಹಿತ . . . ಕೊಟ್ಟರು (ಪ್ರಾಕಂ. ೦೯೯೦, ೨-೯ ; 1300) ; ಚತುಃಸ್ಸೀಮೆಯೊಳಗಾದ ಗದ್ದೆ ಬೆದ್ದಲು ಕಟ್ಟೆ ಕಾಲುವೆ (ಎಕ. V, ಹಾಸನ. ೭-೦೬ ; 1563). **ಬೆದ್ದಲೆ** : ಒಮ್ಮರ್ತರ್ ಬೆದ್ದಲೆ (ಪ್ರಾಕಂ. ೦೯೯೬, ೦೦-೩ ; ೧೧ಶದು ಶಕ) ; ಗಳೆಯ ಮತ್ತರ್ ೩ ಬೆದ್ದಲೆ ಮತ್ತರ್ ೫ (ಎಕ. VII, ಶಿಕಾ. ೨೦-೦೩ ; 1032) ; ಆರೆಯ ಕೆಱೆಯುಂ ಆ ಕೆಱೆಯ ಮೂಡಣ ದೆಸೆಯಲು ಖಂಡುಗ ಬೆದ್ದಲೆ (ಎಕ. II, ೦೯೦--೯೯ ; 1130). **ಬೆರ್ದಲೆ** : ಗೊರವಂಗೆ ಬಿಟ್ಟ ಗದ್ದೆ ಕ ೧ ಕೊ ಬೆರ್ದಲೆ ಮತ್ತ ೧ (ಎಕ. XI, ಹೊಳಲ್ಕೆ, ೬೩-೦೬ ; 1051) ; ಧಾರಾಪೂರ್ವಕಂ ಮಾಡಿ ಬಿಟ್ಟ ಬೆರ್ದಲೆ ಮತ್ತ ೫ (ಕಾಇ. XI–i, ೦೦೩-೦೩ ; 1054) ; ಬೆಕ್ಕನ ಕೆಱೆಯ ಬೆರ್ದಲೆಯುಂ (ಎಕ. II, ೩೯೯-೩೯ ; 1135). **Δಬೆಟ್ದಲೆ** : ಏರಿಯಿಂ ಮೂಡ ಬೆಟ್ದಲೆ ಮತ್ತರೊನ್ದು (ದಕಂಕಶಾ. ೦೯೩೩, ೦೬ನೆಯ ಸಂಖ್ಯೆ, ೨೯-೬೦ ; 991) ; ಬೆಟ್ದಲೆ ಮತ್ತ ೪ (ಎಕ. XI, ದಾವಣ. ೨೦-೨೨೯ ; 1045) ; ದೇ[ಗು]ಲಕ್ಕೆ ಬೆಟ್ದಲೆ ಮತ್ತರು (ಎಕ. VI, ಕಡೂರು. ೦೬೦-೦೬ ; 1063). **Δಬೆಟ್ಡ್ಲೆ** : ಕಲುಕುಟಿಗ ಮಾಣಿಕಾಚಾರಿಗೆ ಬಗುಳಗ ಬೆದೆಗಟ್ಟಿಯು ಬೆಟ್ಡ್ಲೆ ಮತ್ತರು ಎರಡು (ಕಾಇ. IX–i, ೦೦೨-೨೬ ; 1053) ; ಗಟ್ಡ್ ಮತ್ತಲು ೨ ಬೆಟ್ಡ್ಲೆ ಮತ್ತಲು ೪ (ಎಕ. VII, ಶಿಕಾ. ೨೩-೦೦ ; ?).

**ಬೆದ್ದಲು** 'ಬೆದ್ದಲ್' ನೋ.

**ಬೆದ್ದಲುಕಂದಾಯ** 'ಬೆದ್ದಲುಗಂದಾಯ' ನೋ.

**ಬೆದ್ದಲುಗಂದಾಯ**, ಬೆದ್ದಲುಕಂದಾಯ (ನಾ). ಕುಷ್ಕಿಭೂಮಿಗೆ ವಿಧಿಸುವ ತೆರಿಗೆ,—ಕಂದಾಯ : ಗದ್ದೆಕರ ಬೆದ್ದಲುಗಂದಾಯ ಕಾಡಾರಂಬ ಮನೆದೆರಿಗೆ (ಕಬ್ಬಿಕ. ೦೫೫-೬). **ಬೆದ್ದಲುಕಂದಾಯ** : ನಿಬಂಧನೆಯ ಮೇರೆಗೆ ಅರಮನೆಗೆ ಬೆದ್ದಲುಕಂದಾಯವನ್ನು ಕೊಡುವಂತೆಯೂ ನಿಷ್ಕರ್ಷೆ ಮಾಡಿಸಿದರು (ಮಪಾಶಾಸಂ. I, ೦೦೯).
[ಬೆದ್ದಲು (< ಬೆದ್ದಲ್) + ಕಂದಾಯ]

**ಬೆದ್ದಲುಗಳೆ**, ಬೆದ್ದಲೆಗಳೆ (ನಾ). ಬೆದ್ದಲು ಭೂಮಿಯನ್ನು ಅಳೆಯುವ ಅಳತೆಕೋಲು : ಒಂದು ಶಾಸನದಲ್ಲಿ 'ಗದ್ದೆಗಳೆ' ಮತ್ತು ಬೆದ್ದಲುಗಳೆ ಗಳನ್ನು ಬೇರೆ ಬೇರೆಯಾಗಿ ಹೇಳಿದೆ (ಕಶಾಅ. ೩೯೩). **ಬೆದ್ದಲೆಗಳೆ** : ತಳವೃತ್ತಿ ಗದ್ದೆಗಳೆಯ ಮತ್ತಲು ಮೂಱು ಬೆದ್ದಲೆಗಳೆಯ ಮತ್ತಲಾಱು (ಎಕ. VII, ಶಿವಮೊ. ೯-೭೦ ; 1122).
[ಬೆದ್ದಲು (< ಬೆದ್ದಲ್) + ಗಳೆ (< ಗಟ$^3$)]

**ಬೆದ್ದಲುಪೈರು** (ನಾ). ಹೊಲದ ಬೆಳೆ ; ಕುಷ್ಕಿ ಪೈರು : ನೀರು ಬಾರದ ವರ್ಷ ಆ ಭೂಮಿಯಲ್ಲಿ ಬೆದ್ದಲುಪೈರು ಮಾಡಿಕೊಂಡು, ನಿಬಂಧನೆಯ ಮೇರೆಗೆ ಅರಮನೆಗೆ ಬೆದ್ದಲುಕಂದಾಯವನ್ನು ಕೊಡುವಂತೆಯೂ ನಿಷ್ಕರ್ಷೆ ಮಾಡಿಸಿದರು (ಮಪಾಶಾಸಂ. I, ೦೦೯).
[ಬೆದ್ದಲು (< ಬೆದ್ದಲ್) + ಪೈರು (< ಪಯಿರ್)]

**ಬೆದ್ದಲುಬೇಸಾಯ** (ನಾ). ಕುಷ್ಕಿ ವ್ಯವಸಾಯ ; ಕಾಡಾರಂಬ : ಇನ್ನು ಆಡೇನಹಳ್ಳಿಯ ವಿಚಾರ. ಅದು ಕುಗ್ರಾಮ. ಎಲ್ಲಾ ಬೆದ್ದಲುಬೇಸಾಯ (ಪಪ್ಕುರು. ೦೫೦).
[ಬೆದ್ದಲು (< ಬೆದ್ದಲ್) + ಬೇಸಾಯ (< ಬೆವಸಾಯ)]

**ಬೆದ್ದಲೆ** 'ಬೆದ್ದಲ್' ನೋ.

**ಬೆದ್ದಲೆಗಳೆ** 'ಬೆದ್ದಲುಗಳೆ' ನೋ.

**ಬೆದ್ದುಗೊಂಡೆ** (ನಾ). ಒಂದು ಊರಿನ ಹೆಸರು : ಶ್ರೀವೀರನೊಳಂಬಾಧಿರಾಜಾಜಾಪರಮೇಶ್ವರ ಬೆದ್ದುಗೊಂಡೆಯ ಕೆಱೆಯ ಕಟ್ಟಿಪ್ಪನ್ದು (ಕಾಇ. IX–i, ೦೭-೬; ೯ಶದು ಶಕ). [? + ಗೊಂಡೆ$_6$ (< ಕುಂಡ$_3$)]

**ಬೆದ್ದೊಱಿಗರೆ** (ನಾ). ಒಂದು ಊರಿನ ಹೆಸರು : ಶ್ರೀಮತ್ ರಕ್ಕಸ ಬೆದ್ದೊಱಿಗರೆಯನಾಳುತ್ತಿರೆ (ಇಕ. VI, ೦೦೨-೯ ; 777 ?). [?]

**ಬೆನ್**, ಬೆಂ$_1$, ಬೆನು, ಬೆನ್ನು (ನಾ). ೧. ಕುತ್ತಿಗೆಯಿಂದ ಸೊಂಟದ ವರೆಗಿನ ಶರೀರದ ಹಿಂಭಾಗ : "ಪೃಷ್ಠಂ, ಪಶ್ಚಿಮಭಾಗಃ__ಈ ೨ ಬೆನ್" (ಹಲಾಯು. ೯೭-೩೭೯) ; ಪಟ್ಟು ಪರಿಕಲಿಸಿ ಬೆನ್ನಂ ಮುಟ್ಟಿರೆ ಮುಡಿ (ಕಾವ್ಯಸಾ. ೯೬೬ ಕೂರ್ಗ) ; ದೇವತೆ ನವಿಲ ರೂಪಿನಿಂದೆತ್ತಿಕೊಂಡು ಬೆನ್ನೊಳಿಟ್ಟು . . . ಲತಾಮಂಟಪದೊಳಿರಿಸಿ ಪೋದೊಡೆ (ಶಬ್ದಾ.ಕಾ. ೦೦೬-೯) ; ಪಡೆಯ ಪೊಱಿಗಗಿದು ಶೇಷಂ ಪಡೆಗಳನಮುಗುಮಮುವೊಳೆ ಬೊದಿಲ್ಲನೆ ಬಿಟ್ಟಿತ್ತಡಿಗಡೆ ಕೂರ್ಮನ ಬೆನ್ನಂದೊಡೆದು ಸಿಡಿಲ್ದೊಡನೆ ನುಚ್ಚುನೂಱಪ್ಪಿನೆಗಂ (ಮುಕಶ. ೦೦-೬೦). **ಬೆಂ$_1$** : ೨. ಹಿಂದುಗಡೆ; ಹಿಂಭಾಗ: 'ಬೆಂಗಾಣಿಸು', 'ಬೆಂಗಾವು', 'ಬೆಂಗಾವಲ್' ಪರ್ಯಾ. **ಬೆನು** : ೧. ಸುರುಳ್ದ ತನು ನಳಿತ ಬೆನು ಜೋಲ್ದ ಪುರ್ವಿಂದೆಸೆಯೆ (ಇಕಿರ. ದೀ. ೩೦-೦೩). **ಬೆನ್ನು** : ೧. ಹಲ್ಲು ಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೦೩೦) ; ಮುಂಬಿದೆಲ್ಲಂ

ಕಣ್ಣು ಬೆನ್ನೆಲ್ಲಂ ಪುಡಿ ಉರವೆಲ್ಲಂ ಮೊಲೆ (ಶಂಬಿರ. ೪-೫೬); ಎದೆಯು ಲೌಕಿದ ಬಾಣ ಬೆನ್ನಲಿ ತುದಿಮೊನೆಯ ತೋಱಿದವು (ಕುಮಾ.ಕ. ೧೦-೫೪). ೨. ಪುಟದ ನಾಲ್ಕು ಪರಿಸರಗಳೂ (ಬೆನ್ನು, ಮೇಲಂಚು, ಮುನ್ನಂಚು ಮತ್ತು ಕೆಳಅಂಚು) ಕ್ರಮವಾಗಿ ಸ್ವಲ್ಪ ಸ್ವಲ್ಪ ವಿಶಾಲವಾಗಿರಬೇಕು (ಮುದ್ರಕ. ೩೯).

**ಬೆಂಗೆವರ್, ಬೆಂಗೆಬರ್**=ಬೆನ್ನನ್ನು ಹತ್ತು : ವಿಜಯಪರ್ವತ ಗಜೇಂದ್ರದ ಬೆಂಗೆವಂದು (ಆಂಧ್ರ. ೧೪-೬ ವ) ; ನಿಜವಿಜಯಸಿಂಧುರದ ಬೆಂಗೆವಂದು (ಅಜಿತ. ೯-೦೪ ವ); ಪಟ್ಟದಾನೆಯ ಬೆಂಗೆ ಬಂದು (ಕೃಷ್ಣಾಸ್ತ್ರ. ೨-೬೨ ವ). **ಬೆಂಗೆವಾಯ್, ಬೆಂಗೆಹಾಯ್**=ಬೆಂಗೆವರ್ : ಮದಾಂಧ ಗಂಧಸಿಂಧುರಮಪ್ಪ ಪಟ್ಟವರ್ಧನದ ಬೆಂಗೆವಾಯ್ದು . . . ಭಯಪಱ ಯದ ಕಲಿ ಸುಯೋಧನಂ ಪೊಱಮಟ್ಟಂ (ಶಂಕರಾ. ೦೦-೨೬ ವ); ಮಂಗಳವ ನಿಮಗೆಂದು ಹಂಸೆಯು ಬೆಂಗೆಹಾಯ್ದನು ಬಳಿಕ ನಭದೊಳಭಂಗಮುನಿಯಡ ಗಿದನು (ಕುಮಾ.ಆ. ೦೮-೩೪). **ಬೆನ್ನಂಹತ್ತಿಸು** = ಹಿಂಬಾಲಿಸು : ಅನುಸರಿಸು : ಚೋಳೋರ್ವ್ವೀಯಂ ನಿಂನಂತಾರೊಳಪೊಕ್ಕು ಸಾಧಿಸಿದ ರಾಪ್ಪಾರ್ಣಡೇಶನಂ ಶೌರ್ಯ್ಯದಿಂ ಬೆಂನಂಪತ್ತಿಸಿ ಸೋದಿದೇವಘಟೆಯುಂ ಕೈಕೊಂಡರ್ (ಎಕ. VII (R), ಶಾಗವು. ೦೬೩-೩೦; 1229). **ಬೆನ್ನಂಪತ್ತು** =**ಬೆನ್ನಿಗೆ ಅಂಟಿಕೊಳ್ಳು**: ಬೇತಾಳನ ಬಸಿಱಾತೆ ಬೆನ್ನಂ ಪತ್ತಿದ ಬಸಿಱುಂ (ಶಂಕಶು. ೬೩-೬) ; ಕುಪ್ಪಸದಂತೆ ಬೆನ್ನಂಪತ್ತಿ ಕೆತ್ತುಪರ್ (ರವಱಮ್ಮ. ೩-೬೩). **ಬೆನ್ನಡಿಹೋಗು** = ಬೆನ್ನಟ್ಟಿ ಹೋಗಂ : ಆ ವಾಲಿಕಾರ ಜನರು ಕಂಡು ಆ ರಾಜರ ಬೆನ್ನಡಿಹೋಗಿ ಹಿಡಿಯುವಷ್ಟರಲ್ಲಿ (ರಾಜೇಂದ್ರ. ೨೪). **ಬೆನ್ನಾಗು**=೧. ಊರೆಯಾಗು ; ಆಧಾರವಾಗು ; ಆಶ್ರಯ ವಾಗು : ಮದನನ ದಿಗ್ವಿಜಯದೊಳಂತಿದೆ ಬೆನ್ನಾಗಿರ್ದ್ದಂಬ ಚೆನ್ನಿಂದೆ ಸೆಗುಂ ಸುದತಿಯ ಸೊಬಗಿನ ಸರ್ವಸ್ವದ ಭಾಗಂಗೊಂಡ ಪೂರ್ವಭಾಗಾ ಭೋಗಂ (ಕೃಷ್ಣಕ. ೩-೫೬); ತನ್ನ ಸೆಳೆದೊಯ್ಯುವಾಗ ಬೆನ್ನಾಪರ ಕಾಣೆನೋ (ಪುರಂದ. ೦-೦೬೬-೩). ೨. ಅಂಗತ್ರನಾಗಿ ಬೀಳು : ಕೈಕಾಲುಱ ತಂಡಿಸಿ ನೋಂದು ಬೆನ್ನಾದ ದಂಡನಾಥನ ಬಲವನು ಮಗ ಹೊಯ್ದುಳ ಕಂಡನು ಕಲಹಭೂಮಿಯೊಳು (ಕುರಾಶಾಂ. ೦೩-೪೦). **ಬೆನ್ನುಚಪ್ಪರಿಸು**= ಪ್ರೋತ್ಸಾಹಿಸು; ಹುರಿದುಂಬಿಸು; ಬೆನ್ನು ತಟ್ಟು: ಬೆನ್ನು ಚಪ್ಪರಿಸಿದರೆ ಬೆಳತನಕ ಬೇಸೂರು ಹಾಡಬಲ್ಲ (ಶಂಕುಾ. ೨೮-೦೫). **ಬೆನ್ನುತಟ್ಟು**= ಬೆನ್ನುಚಪ್ಪರಿಸಂ : ಅನುವಾದಕಾರ್ಯ ವಿಳಂಬವಾಗದಂತೆ ಲೇಖಕರ ಬೆನ್ನು ತಟ್ಟಿದರು (ರ್ವಾಕೋ. XVI, ಸಂಪಾದಕರ ಮಾತು); ಸಂತೋಷದಿಂದ ಓಡಿ ಹೋಗಿ ಅವನ ಬೆನ್ನು ತಟ್ಟುವಂತಾಯಿತು (ಕಾರಿಮು. ೦೬೩). **ಬೆನ್ನು ತಿರುಗಿಸು**=ವಿಮುಖವಾಗಂ : ನೀನು ನನ್ನ ವಿವೇಕದ ಮಾತುಗಳಿಗೆ ಕಿವಿ ಗೊಡದೆ ಹೋದೆ . . . ನನ್ನ ಕಡೆಗೆ ಬೆನ್ನು ತಿರುಗಿಸಿದೆ (ಹೊಸಕ್ಕ. ೦೦). **ಬೆನ್ನುತೋರಿಸು**=ಬೆನ್ನು ತಿರುಗಿಸು : ಅವರು ಯುದ್ಧದಲ್ಲಿ ಶತ್ರುಗಳಿಗೆ ಬೆನ್ನುತೋರಿಸದ ಕಲಿಗಳೂ, ಅಭಿಮಾನಧನರೂ ಆಗಿದ್ದಾರೆ (ಕಶಕು. ೫-೬೪). **ಬೆನ್ನುತೋರು**=ಬೆನ್ನುತಿರುಗಿಸಂ : ಶತ್ರುವಿಗೆ ಬೆನ್ನುತೋರಲಿಲ್ಲ (ಅಹಕೆ. ೬೪). **ಬೆನ್ನುಹಾಕು**=ಹಿಂದಿರುಗು ; ಮರಳು : ಹರಿದಾಸರು ಜಯಶೀಲರಾಗದೆ ಬೆನ್ನುಹಾಕಿದರು (ಕಾಪಿಂ. ೦೪); ವಾಗ್ದೇವಿಯು ಅವನ ಪ್ರಶ್ನೆ ಹೀಳಗಳೆಂದು ಬೆನ್ನು ಹಾಕಿ ನಡೆವಳು (ನಾಗ್ಗೇಂ. ೧೪೦). **ಬೆನ್ನುಹಿಡಿ**=ಅನುಸರಿಸು : ಕೋಶಿಗಳು ಒಂದನ್ನೊಂದು ಬೆನ್ನು ಹಿಡಿಯುತ್ತಿವೆ, ಹೊಡೆದಾಡುತ್ತಿವೆ (ರಕ್ತಊ. ೦).

[ದೇ. ತಮಿ. ಪಿನ್, ಪೆರಿನ್; ತುಳು. ಬೆರಿ; ಕೊಡ. ಬೆನ್ನೀ; ತೆಲು. ವೆನು, ವೆನ್ನು; ಕೋತ. ಕೋಲಾ. ವೆನ್; ನಾಯ್ಕಿ. ವೆಂಕ]

**ಬೆನಕ**, ಬೆನವ (ನಾ). ೧. ಗಣಪತಿ ; ವಿನಾಯಕ : "ಹೇರಂಬಃ . . . ವಿನಾಯಕಃ, ವಿಘ್ನರಾಜಃ — ಈ ೯ ಬೆನಕನ ಪೆಸರ್" (ಹಲಾಯು. ೪-೨೪); ತಾಂ ತಿರಿಪ ಗೊರವಿ ಬೆನಕನುಮಂ ತಿರಿಯಿಪಳೆಂಬ ತೆಱದೆ (ಶಾಂತಿ. ೬-೦೩೦); ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದಱ ಗಂಡಳ ಬಿಡದಣ್ಣ (ಬಸವ. ೪೩). ೨. ಗುಂಡಾದ ಕಲ್ಲು ; ದುಂಡುಶಿಲೆ : "ಬೆನಕ–ಗುಂಡಕಲ್ಲು,ಗಣೇಶ, ಒಂದು ಸಕ್ಕರೆಯ ತಿನಿಸು" (ಜಾನಕೋ. ೨೩); ಹೊಳೆಗಳೊಳಗಿನ ಬೆನಕಗಳು ಹ್ಯಾಗೆ ದುಂಡಾಗಿರುತ್ತವೆ ನೋಡಿರಿ (ಮುಂಬಯಿ. ೪-೦೮೦); ತೀರದ ಬೆನಕಗಳ ಹಾಸಿಗೆಯ ಮೇಲೆ ಮೈಚಾಚಿ ಒರಗಿದಳು (ಅಶ್ವ. ೩). ೩. ಒಂದು ಬಗೆಯ ಸಿಹಿತಿಂಡಿ : ಚೊಕ್ಕಟ ವಾದಂತ ಬೆಂಡು ಬೆನಕ ಬರ್ಫಿ ತುಕ್ಕಡಿ ಕಲ್ಯಾಣಶಾವಿಗಳು (ಹರಿ. ೪೬). **ಬೆನವ** : ೧. ಹಟ್ಟಿಯ ಹೊಱಗೆ ಬೆನವನ ಪೂಜೆಯ ಮಾಡಿ ತಿಪ್ಪೆಯೊಳಗೆ ಬಿಟ್ಟಂತಾಯಿತ್ತು (ತನ್ನವ. ೪. ೦೦೪-೨೩೦); ತ್ರಿಯಂಬಕ ದೇವರ ಹೆಮ್ಮಗನಪ್ಪ ತೊಱಿಗಲ ಬೆನವಂಗೆ ಶರಣೆಂಬೆ (ಸೊಬಸೋ. ೦-೫); ಮದಲು ನೆನೆದವೆ ಸ್ವಾಮಿ ಲಿಂಗನ ಸನುಮತ ಶಿವಗಂಗೆ ಬೆನವನ (ಜಾಕರ. ೬). [< ಸಂ. ವಿನಾಯಕ./ ತುಳು. ಬೆನಕ]

**ಬೆನವ** 'ಬೆನಕ' ನೋ.

**ಬೆನವಯ** (ನಾ). ಒಬ್ಬಾತನ ಹೆಸರು : ಕಾದೊಡೆ ಆತನ ತಮ್ಮಂ ಬೆನವಯ ಸಗ್ಗಿಯಾದಂ (ಮ್ಯಆಂ. ೦೪೨೬, ೬೩-೪; ೨ನೆಯ ಶಶ). [ಬೆನವ (< ಬೆನಕ) + ಅಯ₁ (< ಅಜ್ಯ₆₁)]

**ಬೆನು** 'ಬೆನ್' ನೋ.

**ಬೆನೆಯಿತವುರ** (ನಾ). ಒಂದು ಊರಿನ ಹೆಸರು : ಬೆಳ್ವೊಲ ವಿಷಯಾಭ್ಯನ್ತರ(ರೇ) ಬೆನೆಯಿತವುರಂ ಅಣ್ಣಿಗೆಱೆ (ಇಆ. VII, ೨೨೦-೨೮; 658). [<ಸಂ. ವಿನಯಾದಿತ್ಯಪುರ]

**ಬೆನ್ಗಲ್ಲಿ, ಬೆಂಗಲ್ಲಿ** (ನಾ). (ಬೇಟೆ ಮುಂತಾದ ಸಂದರ್ಭಗಳಲ್ಲಿ) ಬೆನ್ನಿಗೆ ಕಟ್ಟಿಕೊಳ್ಳುವ ಚೀಲ ; ಬೆನ್ನಿನ ಚೀಲ : ಪದವಿಲ್ ಕೂರಂಬು ಬೆನ್ಗಲ್ಲಿ ಕೆಯ್ಪೊಡೆ ಗಾಳಂ . . . ಬಡಿಕೋಲ್ಗಳೊಪ್ಪೆ ಜವದಿಂದೆಯ್ತಂದರಾ ಧೀವರರ್ (ಕಬಕಂ. ೩-೨೩). **ಬೆಂಗಲ್ಲಿ** : ಬಡಿಕೋಲು ಜಾಯಿಲಂ . . . ಬೆಂಗಲ್ಲಿ ತೊಡಕುವಲೆ ಕಂಬಿ ತಿತ್ತಿಯು ಸೋರೆಯ ಬುರುಡೆಗಳು ಬಿಲ್ಲು ಗೊಂಚಿಯು ಸರಳ್ಗಳ ಪಿಡಿದು . . . ಬೇಂಟೆಯಾಡುತ್ತಿರ್ದರು (ಕಾಕಶ. ೦೭-೬೭). [ಬೆನ್ + ಕಲ್ಲಿ₁]

**ಬೆನ್ನಂಟು** (ಕ್ರಿ). ಹಿಂದೆಹೋಗು; ಹಿಂಬಾಲಿಸು ; ಬೆನ್ನುಹತ್ತು : ಲಕ್ಷ್ಮಣದೇವಗಾಣತಿಯಿತ್ತು ನಾಂ ಬೆನ್ನಂಟಿ ಹರಿಣವನು (ರಾಮಾಸಂ. ೫-೨-೬೨); ಎನ್ನಿಂ ಧಿಕ್ಕೃತೆಯಾಗಿ ತನ್ನ ಜನಮಂ ಬೆನ್ನಂಟಲುದ್ಯುಕ್ತೆ ಯಪ್ಪನ್ನಂ ನಿಲ್ಲೆಲಗೇ ಎನುತ್ತೆ ಗುರುಶಿಷ್ಯಂ ಕೋಪದಿಂ ಗರ್ಜಿಸಲ್ (ಕಾಕುಕ. ೬೫-೧೪೦). [ಬೆನ್ನು (< ಬೆನ್) + ಅಂಟು₁]

**ಬೆನ್ನಟ್ಟು** (ಕ್ರಿ). = ಬೆನ್ನಂಟು : "ಬೆನ್ನಟ್ಟಿನಲು ತಗುಳ್ವುದಕ್ಕುಂ" (ಕಬಕಂ. ೨೩೦); ಕಣ್ಗೆಡೆ ಬೆನ್ನಟ್ಟಿದನಂತು ನಮ್ಮ ಹರಿಗು (ಶಂಕರಾ. ೦೦-೦೩); ಬೆನ್ನಟ್ಟಿ ಪಾರ್ಥಕುಮಾರ ಸದೆದನು ವೈರಿಮೃಗಕುಲವ (ಕುಮಾರವ್ಯಾ. ೫-೬೪). [ಬೆನ್ + ಅಟ್ಟು₂]

**ಬೆನ್ನಡಗು** (ನಾ). ಬೆನ್ನಿನ ಮಾಂಸ : ಮುನ್ನ ಮಧುಕೈಟಭರ್ನಾ ಹರಿ ಭಿನ್ನವಿಲ್ಲದೆ ಕೊಲ್ಲಲವದಿರ ಬೆನ್ನಡಗನೇ ನೀರಲೊರಸಿಕಾಯ್ತು ಮೇದಿನಿಯು (ಶಂಕಶ. ೫-೨೬). [ಬೆನ್ನು (< ಬೆನ್) + ಅಡಗು₃]

**ಬೆನ್ನಡರು** (ಕ್ರಿ). ಬೆನ್ನಿನ ಮೇಲೆ ಹತ್ತು; ಸವಾರಿ ಮಾಡು : ಬಂದನಾಗಸ ವಾರುವದ ಬೆನ್ನಡರಿದಾ ಗಜ ವಿಧಿಯ ವಶದಿಂದ (ಕೃಷ್ಣಾ. ೬-೦೪). [ಬೆನ್ನು (< ಬೆನ್) + ಅಡರು₁ (< ಅಡರ್)]

**ಬೆನ್ನನೆ** (ಅ). ೧. ಹಿಂದುಗಡೆ; ಹಿಂಭಾಗದಲ್ಲಿ : ಗಿಳಿಯ ಬೆನ್ನನೆ ಮೆಲ್ಲನೆ ಗದ್ಗದಸ್ವನಂ ಕಂಚುಕಿ ಬಂದು ಕಂಡನನುರಾಗದಿನಾ ವನಜೇಂದ್ರ ಚಂದ್ರನಂ (ಕಾದಂಪೂ. ೬೩); ಹೊನ್ನೆಯ ಮೊಱಡಿಯ ಬೆನ್ನನೆ ಸನ್ನಾ

ಪೂರ್ವ್ವದೆ ಕೂಡಿತ್ತು (ಎಕ. VIII, ೨೦೯-೧೦ ; 10ನೆಯ ಶತ). ೨. ಕೂಡಲೆ; ಹಿಂದೆಯೇ : ಉನ್ನತಗುರುಶ್ರೀಪಾದಮಂ ಮರ್ಚಿ ಬೆನ್ನನೆ ಪೋದಂತಿರೆ ಮೂರ್ಛೆವೋದನರಸಂ ವ್ಯಾಮೋಹಮೋಗೆಯ್ಯುದೋ (ಅರ್ಧನೇ. ೨-೯೬).

**ಬೆನ್ನನೆಬರ್, ಬೆನ್ನನೆಬರು** = ಅನುಸರಿಸು; ಹಿಂದೆಯೇ ಬರು: ನೀಮುಮಗಲ್ದೆಯಿನ್ನೆನಗೆ ಪೇೞ್ ಪೆಜಿರಾರೆನಗಾಸೆ ನಿನ್ನನಿನ್ನಾನುಮಗಲ್ವೆನೇ ಕೆಳೆಯ ಬೆನ್ನನೆ ಬಂದಪೆಂ (ಶಂಕರಾ. ೦೩-೩); ಮಿಂಚಿನ ಬಟ್ಟೆಯ ಮೊಟಗುಪೋಲ್ ಬೆನ್ನನೆ ಬಂದಳ್ (ಕಾಂತಿಪು. ೭-೨೮); ಬನಕೆ ಶಂಬಿನು ಪೋಗುತಿರೆ ಮುತ್ತಿನ ಸರವು ಹಱಿದೋಗಲು ತಾಂ ಬೆನ್ನನೆ ಬರುತ ನಿರ್ನಾಮಿಕನು ಬಿಡದಾಯ್ದುಕೊಳುತಿರಲು (ಕಾಳ್ಮಶಾ. ೨೦-೬೨).

[ಬೆನ್ + — ಅನೆ$_1$]

**ಬೆನ್ನಲೆ** (ಕ್ರಿ). ಹಿಂಭಾಗದಲ್ಲಿ ತೂಗಾಡು, — ಒಲೆ : ಬಲಿದ ಮುಂಗೈ ಹೊದೆಯ ಬಿರುದಿನೊಳುಲಿವ ಘಂಟೆಯ ಬೆನ್ನಲಿವ ಬತ್ತಳಿಕೆಗಳಲ್ಲೆದಿತ್ತು ಬಲ್ಲಾಳುಭಯಸೇನೆಯಲಿ (ಕುವ್ಯಾಶೀ. ೯-೧೧). [ಬೆನ್ನು (< ಬೆನ್) + ಅಲೆ$_1$]

**ಬೆನ್ನಾನ್** (ಕ್ರಿ). ಬೆನ್ನಿಗೆ ಏರಿಸಿಕೊಳ್ಳು; ಬೆನ್ನಿನಲ್ಲಿ ಹೊರು : ನಿಜವಾಗಿ ಶಿರಳಬೇಕಾಯಿತಾದಡೆ ಜೀಯ ಬಿಜಯಾಡಿ ಬೆನ್ನಾಂತುಕೊಂಬೆ (ನೋಚಕ. ೩೬-೩೬). [ಬೆನ್ನು (< ಬೆನ್) + ಆನ್$_1$]

**ಬೆನ್ನಿ** (ನಾ). [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : "ಬೆ, ಬೆನ್ನಿ, ಯಮ . . . ದಂಪತಿ ಇಂತಿನಿತುಂ ಎಕ್ಕೆ ಪೆಸರು" (ವ್ಯವಹಾ. ೦೦-೦೦). [?]

**ಬೆನ್ನಿಕ್ಕು** (ಕ್ರಿ). ೧. ಬೆನ್ನಿನ ಹಿಂದೆ ಇರುವಂತೆ ಮಾಡು : ತನ್ನ ಬಲಮುಂ ಬೆನ್ನಿಕ್ಕಿಕೊಂಡು ನಿಂದಾಗಳ್ (ಆದಿಪು. ೦೯-೬ ವ); ನಿನ್ನಧಿಪನ ಮಂದಿರಕ್ಕೆ ಕಟೆವುವನೊಲವಿಂ ಕನ್ನೆ ನಡೆಯೆಂದು ಸತಿಯುಂ ಬೆನ್ನಿಕ್ಕಿ ಬಟಕ್ಕಮೊರ್ಮೊದಲ್ ನಡೆಗೊಂಡೆಂ (ದಶಕು. ೬-೦೦೦). ೨. ಬೆನ್ನು ತೋರಿಸು; ಹಿಮ್ಮೆಟ್ಟು : ಓಡಿದರು ರಿಪುಭಟರು . . . ಬೆನ್ನಿಕ್ಕಿ ಸುರುಬಲಕೆ (ಜಿಹಾಗ. ೬-೦೦-೨೦). ೩. ವಿಮುಖವಾಗು : ಭಾರತವನ್ನು ಬಿಟ್ಟು ಕರ್ನಾಟಕವಿಲ್ಲ ಎಂಬ ಸತ್ಯಕ್ಕೆ ಬೆನ್ನಿಕ್ಕದೆ (ಪತ್ರಿಕೆ. ೩ ಮುನ್ನುಡಿ).

[ಬೆನ್ + ಇಕ್ಕು]

**ಬೆನ್ನಿಕೆ** (ನಾ). ಒಂದು ಬಗೆಯ ತೆರಿಗೆ : ಆ ಕೆಯ್ಗೆ ಬೆನ್ನಿಕ್ಕೆಯಿಲ್ಲ ಬೆನ್ನಿಕ್ಕೆಯೆಂದವಂ ಶ್ವಾನ ಗಾರ್ದ್ದಭ ಚಾಣ್ಡಾಳ[ರ] (ಎಕ. XIX. ೨೦೯-೬; 1037); ಇಪ್ಪತ್ತೆರಡು ಮತ್ತರ್ಕೆಯ್ಗೆ ಬೆನ್ನಿಕೆಯಿಲ್ಲವು (ಕಇ. II, ೦೦-೨೦; 1080). [?]

**ಬೆನ್ನೀ** (ಕ್ರಿ). ೧. ಬೆನ್ನು ತಿರುಗಿಸು ; ಬೆನ್ನು ತೋರಿಸು ; ವಿಮುಖವಾಗು : ದಿವ್ಯಪುರುಷನ ಹಸ್ತಪ್ರಹಾರಮೆಂಬ ಮುದ್ಗರಾಪೀಡೆಯಿಂ ತ್ರಸ್ತನಾಭಿಭೂತನಾಗಿ ಬೆನ್ನಿತ್ತೋಡಿದಂ (ವಡ್ಡಾರಾ. ೩೬-೧). ೨. ಪಲಾಯನ ಮಾಡು ; ಸೋತು ಓಡಿಹೋಗು : ನಿನ್ನ ತಮ್ಮನ ಕೆನ್ನೆತ್ತರ ನೀಂಟುವಲ್ಲಿ ಭಯದಿಂದಲ್ಕುತ್ತೆ ಬೆನ್ನಿತ್ತುದಂ ನೆನೆ (ಗದಾಯು. ೭-೩೯); ಭೀಮಂಗಂಡ ಸುಯೋಧನಪ್ರಭೃತಿಗಳ್ ಮುನ್ನಾಂತು ಬೆನ್ನಿತ್ತಪೋಲ್ (ಎಕ. XI, ಚಿತ್ರದು. ೦೩-೨೨; 1124 ?); ಬೇಡರನು ಬೆನ್ನೀಯೆ ನೆತ್ತಿಯ ಬೀಡೆ ಬಿರಿಯಲು ಬಿದ್ದ ಲೌಡೆಗಳೆಡೆಜಿ ಮಿವಬಿಚಾತುರಂಗದ ಚಪಳಚೂಣಿಯಲಿ (ಕುವ್ಯಾಕ. ೦೦-೦೦). [ಬೆನ್ + ಈ$_2$]

**ಬೆನ್ನೀರ್** 'ಬಿಸುನೀರ್' ನೋ.

**ಬೆನ್ನೀರು** 'ಬಿಸುನೀರ್' ನೋ.

**ಬೆನ್ನೀಹ** (ನಾ). ಬೆನ್ನು ತೋರಿಸುವಿಕೆ ; ಓಟ : ಪಲಾಯನ : "ಪೋಜ ವಾಜಿಯಿಂದು ಬೆನ್ನೀಹಂ" (ಕವಿಪ. ಪ. ಕಿರಿ. ೩೬೪). [ಬೆನ್+ಈಹ$_1$]

**ಬೆನ್ನು** 'ಬೆನ್' ನೋ.

**ಬೆನ್ನುಕಟ್ಟು** (ಕ್ರಿ). ೧. ಹಿಂಬಾಲಿಸು ; ಅನುಸರಿಸು : ಗುಡಗೆ ಕರೆಯೋವಾಗ ಒಲ್ಲೆ ಅಂತೀಕನಬೇಕೆಂದು ನಾನೂ ಅವನ ಬೆನ್ನುಕಟ್ಟಿದೆ (ಮುಂಗಾಪು. ೬೩). ೨. ಪಕ್ಷವಹಿಸು ; ಬೆಂಬಲವಾಗು ; ಸಮರ್ಥಿಸು : ಆಕೆ ಮಗನ ಬೆನ್ನುಕಟ್ಟಿದಳು (ಕ್ರೀಡಾಶ್ರ. ೨೯೬); ನಾನು ಯಾವಾಗಲೂ ನಿರ್ಬಲರ ಬೆನ್ನುಕಟ್ಟುತ್ತೇನೆ (ಜಿರಜ್ಞಾ. ೬೪); ನೀನು ಬೆನ್ನುಕಟ್ಟುವ ಬದಿ ಯಾವುದು ? (ಜಾಜಿ. ೬೬). [ಬೆನ್ನು (<ಬೆನ್) + ಕಟ್ಟು$_{II}$]

**ಬೆನುಕೊಡು** 'ಬೆಂಗೊಡು' ನೋ.

**ಬೆನ್ನುಗಾವಲು** 'ಬೆಂಗಾವಲ್' ನೋ.

**ಬೆನ್ನುಡಬ್ಬೆ** (ನಾ). ಸೀಳಿರುವ ಬಿದಿರಿನ ಮೇಲು ಭಾಗ: (೬).

[ಬೆನ್ನು (<ಬೆನ್) + ಡಬ್ಬೆ$_1$ (<ದಬ್ಬೆ$_1$)]

**ಬೆನ್ನುಫಣಿ** (ನಾ). ಬೆನ್ನಿನಲ್ಲಿ ಏಳುವ ಕುರು : ಶ್ರೀರಂಗರಾಯರಿಗೆ ಬೆನ್ನುಫಣಿ ಎಂಬ ವ್ರಣಜಾಡ್ಯವು ಸಂಭವಿಸಿ ಬದುಕುವುದು ಅಸಾಧ್ಯವೆಂದು ತೋರಿತು (ಮೈರಾಸ್ಮ. ೦೨೮). [ಬೆನ್ನು(<ಬೆನ್) + ಫಣಿ$_1$]

**ಬೆನ್ನುಬಲ** 'ಬೆಂಬಲ' ನೋ.

**ಬೆನ್ನುಬೀಳು** 'ಬೆಂಬೀೞ್' ನೋ.

**ಬೆನ್ನುಮೂಳೆ** (ನಾ). ೧. ಬೆನ್ನಿನ ಎಲುಬು ; ಕಶೇರು : "ತ್ರಿಕಂ. ಪೃಷ್ಠವಂಶಾಧರೇ, ಬೆನ್ನುಮೂಳೆಗೆ ಬುಡ, ಬೆನ್ನೆಲುವಿನ ಕೆಳಗಡೆ" (ಸಿದ್ಧಾಂತಿ. ೦೯೦). ೨. (ಆಲಂ) ಆಧಾರ : ಹಳ್ಳಿಗಳೇ ಬೆನ್ನುಮೂಳೆಯಾದ ನಮ್ಮ ರಾಷ್ಟ್ರವು ಪ್ರಗತಿಯಾಗಬೇಕಾದರೆ ಮೊದಲು ಹಳ್ಳಿಗಳು ಪ್ರಗತಿಯನ್ನು ಹೊಂದಬೇಕಲ್ಲವೇ? (ಕನ್ನಜಾ. ೯೦). [ಬೆನ್ನು (<ಬೆನ್) + ಮೂಳೆ$_1$]

**ಬೆನ್ನುರಿ, ಬೆಚ್ಚುರಿ** (ನಾ). ಅತಿ ಬಿಸಿಯಾದ ಉರಿ : ಬೆನ್ನುರಿ, ಬೆಚ್ಚುರಿ (ಕಟ್ಟಾ.ಪು. ೩೯೩ ಪ್ರಯೋ). **ಬೆಚ್ಚುರಿ** : ಮೇಲಿನ ಪ್ರಯೋಗವನ್ನು ನೋಡಿ. [ಬೆಂ$_2$ (< ಬಿಸಿದು) ಉರಿ$_1$]

**ಬೆನ್ನುಹಂಚು** (ನಾ). ಛಾವಣಿಯ ಮೇಲ್ಭಾಗದಲ್ಲಿ ಬೋರಲು ಹಾಕುವ ಹಂಚು : ಸೂರಿಗೆ ಬೆನ್ನುಹಂಚು ಹಾಕಿದ್ದಾರೆ (ರೂಢಿ).

[ಬೆನ್ನು (<ಬೆನ್) + ಹಂಚು$_3$ (<ಪೆಂಚು$_2$)]

**ಬೆನ್ನುಹತ್ತು** 'ಬೆಂಬತ್ತು' ನೋ.

**ಬೆನ್ನುಹುಣ್ಣು** (ನಾ). = ಬೆನ್ನುಫಣಿ : ಶಿರಮಾಲೆಗೆ, ಬೆನ್ನುಹುಣ್ಣಿಗೆ, ಲೊಕ್ಕಿಯ ಹುಣ್ಣಿಗೆ, ದಂತಬೇನೆಗೆ—ಪಚ್ಚೆತುತ್ತ, ಜಾಪಾಳ, ಹಿರಿಬಜೆ, ನಿರ್ವಿಷವತ್ಸನಾಭಿ . . . ನುಂಗುವುದು (ವಿಶ್ವಪಿ. ೦೯೪).

[ಬೆನ್ನು (<ಬೆನ್) + ಹುಣ್ಣು (<ಪುಣ್)]

**ಬೆನ್ನುಹುರಿ** (ನಾ). ಬೆನ್ನುಮೂಳೆಯ ಸುತ್ತ ಹರಡಿಕೊಂಡಿರುವ ಹುರಿಯಂತಹ ರಚನೆ : ಈ ಆಟದಿಂದ ಹೆಣ್ಣುಮಕ್ಕಳಿಗೆ ಕಿಪ್ಪೊಟ್ಟೆ, ಯಕೃತ್ತು, ಬೆನ್ನುಹುರಿ ಮೊದಲಾದ ಅಂಗಗಳಿಗೆ ಸಾಕಷ್ಟು ವ್ಯಾಯಾಮ ದೊರೆಯುವುದು (ಕನ್ನಜಾ. ೩೯); ಅಂಗಿ ತೆಗೆಯಲು ಕೈ ಮೇಲೆ ಚಾಚುವಾಗ ಬೆನ್ನುಹುರಿಯಲ್ಲಿ ನೋವಾಯಿತು (ರಕ್ತರೂ. ೯೦).

[ಬೆನ್ನು (< ಬೆನ್) + ಹುರಿ$_3$ (<ಪುರಿ$_3$)]

**ಬೆನ್ನೆತ್ತು** (ನಾ). ಬೆನ್ನಿನ ಮೇಲೆ ನೊಗವನ್ನು ಹೊತ್ತು, ಉಳಲು ಸಿದ್ಧವಾದ ಎತ್ತು : ಕಜಿವ ಹಸುವ ಉಳುವ ಬೆನ್ನೆತ್ತ ಮೊಲೆವುಂಬ ಕಜುವ ಕಾಜುಹಸಜಿಯದೆ ಕಾಯಬಹುದೆ (ಶಂಜುಗಾ. ೩-೩).

[ಬೆನ್ನು (<ಬೆನ್) + ಎತ್ತು$_2$ (<ಎಟ್ಟು$_1$)]

**ಬೆನ್ನೆಲುಬು** 'ಬೆನ್ನೆಲುವು' ನೋ.

**ಬೆನ್ನೆಲುವು, ಬೆನ್ನೆಲುಬು** (ನಾ). ೧. = ಬೆನ್ನುಮೂಳೆ ೧ : "ಕಶೇರುಕಾ—ಪೃಷ್ಠಾಸ್ಥಿ, ಬೆನ್ನೆಲುವಿನ ಹೆಸರು" (ಸಿದ್ಧಾಂತಿ. ೦೯೯); ಬದಿ ಮುಂದಲೆ ಎಡಿದು ಬಾಗಿಸಿ ಕೊಯ್ದುನಾತನ ಕೊರಳನೆಡದಲಿ ಪೊಯ್ದು ಮುರಿದನು ಬರಿಯುಲಪ್ಪಳಿಸಿದನು ಬೆನ್ನೆಲುವ (ಕುವ್ಯಾದ್ರೋ. ೦೯-೨). ಬೆನ್ನೆಲುಬು : ೨.

=ಬೆನ್ನುಮೂಳೆ ೨ : ನಮ್ಮ ದೇಶದಲ್ಲಿ ಒಂದು ಆರ್ಥಿಕ ಸ್ಪರ್ಧೆಯು ಬೆಳೆದು ಬಂದು ರಾಜಕೀಯ ಚಳವಳಿಯ ಬೆನ್ನೆಲುಬಾಗಿ ಬಲಿಯಿತು (ವಾಪಾದ. ೯೬). [ಬೆನ್ನು (< ಬೆನ್) + ಎಲುವು (<ಎಲ್ವು)]

**ಬೆನ್ನೇರು** 'ಬೆನ್ನೇಱು' ನೋ.

**ಬೆನ್ನೇಱು, ಬೆನ್ನೇರು** (ಕ್ರಿ). ೧. ಬೆನ್ನಿನ ಮೇಲೆ ಹತ್ತು : ಬೆನ್ನೇಱಿದ ಮಗುವಿನಂತೆ (ಧರ್ಮಾಮೃ. ೬-೦೯೭ ಅವತರ್); ಭೃಂಗಕುಂತಲವನು ಬಾಗಿಸಿ ನಿಖಿಳಗೋಪಾಂಗನೆಯರು ಜಡೆವೆಣೆಯ ತುಂಗಸ್ತನದ ಕೊಪ್ಪರಿಗೆಯ ಕಾವ ಭುಜಂಗನವೊಲು ಬೆನ್ನೇಱಿದುವು (ಮೋಹತ. ೦೯-೯೨). **ಬೆನ್ನೇರು** : ೨. ಅನುಸರಿಸು ; ಹಿಂಬಾಲಿಸು : ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ (ಜಾದರ್. ೬೯-೦); ಸೊಗದ ವಿಲಾಸೆಯ ಸರಿಯು, ಮಿಗೆ ಮಾನದೈಸಿರಿಯ ಬಗೆಯು, ಬೆನ್ನೇರಿ, ಮೈಗೊತ್ತಿ, ಸೊಗ ವಿಹಾರಿ . . . ನಗುತಲಿದೆ (ಕಾಜ. ೯೨-೬). ೩. (ಅಲಂ) ಅಧಿಕಾರ ಸ್ಥಾಪಿಸು : ಹೀಗೆಯೇ ಸಲುಗೆ ಕೊಟ್ಟರೆ ಈ ಪಾದ್ರಿಯ ಮಗ ಬೆನ್ನೇರಿಯಾನು (ಕುಸರು. ೨೫).

[ಬೆನ್ನು (< ಬೆನ್) + ಏಱು$_1$ (< ಏಱ್$_1$)]

**ಬೆನ್ನೋಡು, ಬೆಚ್ಚೋಡು** (ನಾ). ಬಿಸಿಯಾದ ಹೆಂಚು ; ಕಾದ ಓಡು. —ಕಾವಲಿ : ಬೆನ್ನೋಡು, ಬೆಚ್ಚೋಡು (ಶಬ್ದಸಾ. ೩೯೩ ಪ್ರಯೋ). **ಬೆಚ್ಚೋಡು** : ಬೆಚ್ಚಡಿ, ಬೆಚ್ಚೋಡು (ಶಾಕಾಶೂ. ೦೯೩ ಉದಾ).

[ಬೆಂ$_2$ (< ಬಿಸಿದು) + ಓಡು$_2$]

**ಬೆಪೋದು** (ನಾ). ಒಂದು ಸ್ಥಳದ ಹೆಸರು : ಪುಲ್ವಿನಾಡುಸಾಸಿರಮು ಬೆಪೋದು ಸಾಸಿರಮು (ಎಕ. X. ಶ್ರೀಬಿಜಾ. ೫೭-೫ ; 770). [ ? ]

**ಬೆಪ್ಪ** 'ಬೆಳ್ಪ' ನೋ.

**ಬೆಪ್ಪಟ್ಟಿ** (ನಾ). ಒಂದು ಊರಿನ ಹೆಸರು ; P ಧಾರವಾಡ ಜಿಲ್ಲೆಯ ಈಗಿನ ಬ್ಯಾಹಟ್ಟಿ: ಬೆಪ್ಪಟ್ಟಿನಾಮ ಗ್ರಾಮೇ (ಎಇ. IX, ೨೦೯-೭೦ ; 750).

[? + ಪಟ್ಟಿ$_1$]

**ಬೆಪ್ಪತಕ್ಕಡಿ** ' ಬೆಪ್ಪುತಕ್ಕಡಿ ' ನೋ.

**ಬೆಪ್ಪನೆ** (ಅ). ಸುಮ್ಮನೆ ; ತೆಪ್ಪಗೆ : ರಂಗಣ್ಣ ಬೆರಗಾಗಿ ಬೆಪ್ಪನೆ ಕುಳಿತನು (ದಾಸಕು. ೯). [ಬೆಪ್ಪು (< ಬೆಳ್ಪು$_2$) + –ಅನೆ$_1$]

**ಬೆಪ್ಪಳ** ' ಬೆಳ್ಪಳ ' ನೋ.

**ಬೆಪ್ಪಳಿಸು** ' ಬೆಳ್ಪಳಿಸು ' ನೋ.

**ಬೆಪ್ಪಾಲೆ** (ನಾ). ಒಂದು ಬಗೆಯ ಸಸ್ಯ : ಬೆಪ್ಪಾಲೆ, ಕುಡ, ಕೊಡ್ಸೀಗೆ, ಪಾಲೆ, ಕೊಡಮುರ್ಕ (ವೃಕ್ಷಔ. ೭೬-೦೬೦೩) ; ಮರಗಳು : ಹೆಸವ . . . ಬಿಲ್ಲು, ಹೂವರಸಿ, ಬೆಪ್ಪಾಲೆ, ಹಾಲೆ (ವನ್ಯಪು. ೨೩೭). [ ? ]

**ಬೆಪ್ಪಿ** (ನಾ). ದಡ್ಡಿ; ತಿಳಿಗೇಡಿಯಾದವಳು : ನೋಡಾಕೆ ಬೆಪ್ಪಿ ಇದ್ದಾಗೆ ಇದ್ದೀಯ! ಏನು ಜಾಣಮಾತು ಕಲ್ತು ಬಿಟ್ಟೀಯೆ ನೀನು ? (ಹುಳಕು. ೨೭೨).

[ಬೆಪ್ಪ (< ಬೆಳ್ಪ) + – ಇ$_2$]

**ಬೆಪ್ಪು** ' ಬೆಳ್ಪು$_2$' ನೋ.

**ಬೆಪ್ಪುತಕ್ಕಡಿ, ಬೆಪ್ಪತಕ್ಕಡಿ** (ನಾ). ಮಂಕ : ದಡ್ಡ; ತಿಳಿಗೇಡಿ : P ವ್ಯಕ್ತಿ, ವಸ್ತು ಮುಂತಾದುವುಗಳ ಬೆಲೆಯನ್ನು ತೂಗಿ ನೋಡುವ ವಿವೇಚನೆಯಿಲ್ಲದವನು : ಅವನೊಬ್ಬ ಬೆಪ್ಪುತಕ್ಕಡಿ (ಕುಸರು. ೩೩೧) ; ಪರವಾಯಿಲ್ಲ. ಅಣ್ಣ ಏನೋ ಬೆಪ್ಪುತಕ್ಕಡಿ ಎಂದು ತಿಳಿದುಕೊಂಡಿದ್ದೆ (ಪಾಕ್ಲೌ. ೧೩೦) ; ನಾನೇ ತಪ್ಪುತಪ್ಪು ಊಹಿಸಿ ಬೆಪ್ಪುತಕ್ಕಡಿಯಾಗ ಬಾರದು (ಶಾಟಕ. ೭೯). **ಬೆಪ್ಪತಕ್ಕಡಿ** : ನಿಧಾನವೆಂದು ಹೇಳುವೆಯಾ ? ಬೆಪ್ಪತಕ್ಕಡಿ. ಈಗಲೇ ಸಮಯ (ಹುತಾತ. ೦೨೦).

[ಬೆಪ್ಪು (< ಬೆಳ್ಪು$_2$) + ತಕ್ಕಡಿ$_1$]

**ಬೆಪ್ಪುತನ** (ನಾ). ದಡ್ಡತನ; ತಿಳಿಗೇಡಿತನ ; ಮೌಢ್ಯ: ಮೈಸೂರು ರಸಿಕ ಜೀವಾನರೂ . . . ಪ್ರೋತ್ಸಾಹ ಯಾವ ರೀತಿಯಿಂದ ನಿರೀಕ್ಷಿಸುವುದೂ ಬೆಪ್ಪುತನ (ಬಮತ್ತೆ. ೯೨); ಇಳವರಸನ ಮುಖದ ನಗೆ ಮಾಯವಾಗಿ ಬೆಪ್ಪುತನ ಮೂಡಿತು (ಹಸುಹೂ. ೩೦೦).

[ಬೆಪ್ಪು (< ಬೆಳ್ಪು$_2$) + – ತನ]

**ಬೆಬಡೆ** (ನಾ). ಒಂದು ಬಗೆಯ ಸಸ್ಯ: "ಕಂಡೂವೋಷಿ—ಬೆಬಡೆ, ಮಂ(ಜಿ)ಷ್ಠೆ" (ಓಷಧಿ. ೨೯) ; ರಾಮಂಚ . . . ಬೆಬಡೆಬೀಜ, ಮರದರಿಶಿನ, ಇವು ಪ್ರತ್ಯೇಕ ೮ ತೂಕ, ಇವೆಲ್ಲವನ್ನು ಹಾಲಲ್ಲಿ ಅರೆದು . . . ಮಂಡೆ ಗೊತ್ತಲು ಅಸ್ಥಿಯ ಕಟ್ಟೂ ವಾತಪಿತ್ತಶ್ಲೇಷ್ಮದಿಂದಾದ ಮಂಡೆಶೂಲೆ ಯೆಲ್ಲಾ ಮಾಣ್ಗುಂ (ಖವೈಖ. ೭೯). [ ? ]

**ಬೆಬ್ಬಕ್ಕಿ** (ನಾ). ಒಂದು ಬಗೆಯ ಹಕ್ಕಿ: "ಜೀವಂಜೀವಃ—ನೌಲುರೆಕ್ಕೆ, ಬೆಬ್ಬಕ್ಕಿ" (ಸಿದ್ಧಾಂತ. ೧೭೩). [? + ಪಕ್ಕಿ]

**ಬೆಬ್ಬನೆ** (ಅ). ಅತಿಯಾಗಿ : ಬಹಳವಾಗಿ : ಅಪರಿವರೆನ್ನದೆ ಚರಣಕ್ಕೆಱಗಲು ಅಯ್ಯತನವೇಱಿ ಬೆಬ್ಬನೆ ಬೆಱೆತೆ ನಾನು (ಬಸವ. ೨೫೩): ಬೆಬ್ಬನೆ ಬೆಱೆತು ಬಿಬ್ಬನೆ ಬೀಗಿ ಅಹಂಕಾರಭರಿತನಾಗಿಪ್ಪವನ ಮನೆಯ ಲಿಂಗಸನುಮತರು ಹೊಗರು (ದೇವಾವ. ೨೯-೫೦). ' ಬಿಬ್ಬನೆ ' ಪರಾ. [? + –ಅನೆ$_1$]

**ಬೆಬ್ಬರ** (ನಾ). ದಿಗ್ಭ್ರಮೆ ; ದಿಗ್ಭ್ರಾಂತಿ : ಕಾಮರಾಜನು ಅಕಸ್ಮಾತ್ತಾಗಿ ಬೆಬ್ಬರದಲ್ಲಿದ್ದ ಹುಮಾಯುನನ ಪಾಳಯದ ಮೇಲೆ ಬಿದ್ದನು (ಮೋಪಾದ. ೫೭).

ಬೆಬ್ಬರ ಬೀಳು=ಬೆಚ್ಚಿ ಬೀಳು; ಮೆಟ್ಟಿ ಬೀಳು; ತಲ್ಲಣಿಸು: ಕುಮುರೆ ಯುವನು ರವಷ್ಟು ತೂಕಡಿಸಿ ಬೆಬ್ಬರಬಿದ್ದು ದಿಕ್ಕುಗಳು ನೋಡುತ್ತಾನೆ (ಕಥಾಮಂ. IV, ೯೫) ; ಅಫಜುಲನು ದೂರ ನಿಂತು ಬೆಬ್ಬಳುಗೊಂಡು ಬೆಬ್ಬರಬಿದ್ದಿದ್ದ ಸೈನಿಕರನ್ನು ಸಂಬೋಧಿಸಿ . . . ಹೇಳಿದನು (ಕೋಹಿನೂ. ೦೯). 'ಬೆಳ್ಪಳ' ಪರಾ.

**ಬೆಬ್ಬರಬೆಸೆ** (ಕ್ರಿ). ಬಹಳವಾದ ಅಹಂಕಾರದಿಂದ **ಕೂಡಿರು** : ಮಾನಕಷಾಯಮೆಂಬುದು ತಮ್ಮಿಂದಗ್ಗಳವಿಲ್ಲೆಂದು ಬೆಬ್ಬರಬೆಸದಿರ್ಪ(ರ್ಪ) ರಿದೇನಾಶ್ಚರ್ಯಮೋ (ಜೀವಸಂ. ೦೯೫-೨೩ ವ). [ಬೆಬ್ಬರ ? + ಬೆಸೆ$_2$]

**ಬೆಬ್ಬರಿಸು** (ಕ್ರಿ). ಬೆದರು ; ಗಾಬರಿಯಾಗು : ಕುರಿಗಳನ್ನು ಸದೆಬಡಿವ ದೇತರ ಬಿರುದು ಮದಕೇಸರಿಗೆ ಯಿಾ ಬೆಬ್ಬರಿವ ದನುಜರ ಕೊಂದಡತಿಶಯ ವೇನು (ಅನಂರಾ. ೭-೨೦-೨೯) ; ಬೆರೆದಂತೆ ಮೈಮುರಿವ ಬೆಬ್ಬರಿಸಿ ಪಲ್ಗಿರಿವ ಮರಪಂತಿರುವನೊಪ್ಪ್ಪೆ (ವೆಂಕಾರಾ. ೨-೩೫-೨೩). ' ಬೆಳ್ಪಳಿಸು$_1$' ಪರಾ.

[ಬೆಬ್ಬರ + – ಇಸು$_3$. / ತೆಲು. ಬೆಬ್ಬರಿಲ್ಲು]

**ಬೆಬ್ಬಳ** ' ಬೆಳ್ಪಳ ' ನೋ.

**ಬೆಬ್ಬಳಂಗೊಳ್, ಬೆಬ್ಬಳಗೊಳ್, ಬೆಬ್ಬಳಗೊಳು, ಬೆಬ್ಬಳಿಗೊಳ್, ಬೆಬ್ಬಳುಗೊಳ್ಳು** (ಕ್ರಿ). ೧. ಭಯದಿಂದ ಅಸ್ಥಿರವಾಗು,—**ಚಂಚಲ** ವಾಗು ; ಅಧೀರವಾಗು : ಇಂತು ಬೆಬ್ಬಳಂಗೊಂಡು ನಾವೆಲ್ಲರುಂ . . . ಇವರಂ ಗೆಲ್ವುದೆಮಗರಿದೆಂದೆಣಿಸಿ ನಿಲ್ಲದೆ (ಮಠಾತ. ೨-೯೦ ವ). **ಬೆಬ್ಬಳಗೊಳ್** : ೧. ಕಂಡವರು ಬೆಱಗಾಗಿ ಬೆಬ್ಬಳಗೊಂಡು ನೋಡುತಲಿರ್ದರು (ಶ್ರೀಕುಮೀ. ೨೨-೩೮). **ಬೆಬ್ಬಳಗೊಳು** : ೧. ಅಬ್ಬರಿಸಿ ಬೊಬ್ಬೆಯಂ **ಕೊಟ್ಟೆಬ್ಬಿಸಿದೊಡೆ** ಶಾಪಮಿಾಗುಮಿಾತನೆನುತ್ತಂ ಬೆಬ್ಬಳ[ಪಾಠಾಂ. ಳಿ]ಗೊಳುತುಂ **ಬ್ರಹ್ಮನೆಬ್ಬು** ಸಲನುಮಾನಮಂ ಮನಸ್ಸಿಂ ಬಗೆದರ್ (ಧರ್ಮಾಶ. ೩-೭೯). **ಬೆಬ್ಬಳಿಗೊಳ್** : ೨. ಭ್ರಮೆ ಹೊಂದು : ಪತಿಯೊಲಿಯೆ ಉಬ್ಬರಿಸದೆ ಕಡುಮುಬ್ಬನೊಳಾದದೆ ಬೆಬ್ಬಳಿಗೊಳ್[ಪಾಠಾಂ. ಳಿಯಾಗ]ದೆಳೀ ಸಾಧ್ವಿ (ಜಸವ. ೦೦-೭೩). **ಬೆಬ್ಬಳು ಗೊಳ್ಳು** : ೧. ಅಫಜುಲನು ದೂರ ನಿಂತು ಬೆಬ್ಬಳುಗೊಂಡು ಬೆಬ್ಬರ ಬಿದ್ದಿದ್ದ ಸೈನಿಕರನ್ನು ಸಂಬೋಧಿಸಿ . . . ಹೇಳಿದನು (ಕೋಹಿನೂ. ೦೯).

[ಬೆಬ್ಬಳ (<ಬೆಳ್ಪಳ) + ಕೊಳ್$_1$]

**ಬೆಬ್ಬಳಂಬೋಗು** ' ಬೆಳ್ಪಳಂಬೋಗು ' ನೋ.

**ಬೆಬ್ಬಳಗೊಳ್** ' ಬೆಬ್ಬಳಂಗೊಳ್ ' ನೋ.

**ಬೆಬ್ಬಳಗೊಳಿಸು** (ಕ್ರಿ). ಭಯಪಡಿಸು ; ಅಂಜಿಸು : ಬೊಬ್ಬೆಯಬ್ಬರ ದಿಕ್ಪಾಲಕರನು ಮಿಗೆ ಬೆಬ್ಬಳ [ಪಾಠಾಂ. ಬೊಬ್ಬೆ]ಗೊಳಿಸಿ ದಾನವನ ಕೊಬ್ಬಿದ ಬಲವೆಯ್ತಂದು ಮುತ್ತಿತು ರಾಮನೊಬ್ಬನನಾ ಕಳದೊಳಗೆ (ಕುಂರಾಮಾ. ೪೩-೯೫). [ಬೆಬ್ಬಳಗೊಳ್ (<ಬೆಬ್ಬಳಂಗೊಳ್) + _ ಇಸು₂]

**ಬೆಬ್ಬಳಗೊಳು** 'ಬೆಬ್ಬಳಂಗೊಳ್' ನೋ.

**ಬೆಬ್ಬಳವಾತು** (ನಾ). ದಿಗ್ಭ್ರಮೆ ಹಿಡಿಸುವ ಮಾತು: ನಾಮಿಾ ಸಬ್ಬವ ಕಾಜಿನ ಬೆಬ್ಬಳವಾತಿಂಗೆ ಬೆಕ್ಕಸವಡದೇತರ್ಕಾವೆಕ್ಕತಳಂಗೊಬುದು (ಜಕಾ. ೬೭೭ ಪ). [ಬೆಬ್ಬಳ (<ಬೆಳ್ಪಳ) + ಮಾತು₁]

**ಬೆಬ್ಬಳವೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳಿ** 'ಬೆಳ್ಪಳ' ನೋ.

**ಬೆಬ್ಬಳಿಗ** (ನಾ). ಹೆದರಿದವನು; ಭಯಪಟ್ಟವನು : 'ಬೆಬ್ಬಳಿಗಿತಿ' ಪರಾ. [ಬೆಬ್ಬಳಿ (<ಬೆಳ್ಪಳ) + _ ಗ₂]

**ಬೆಬ್ಬಳಿಗಿತಿ** (ನಾ). ಹೆದರಿದವಳು ; ಗಾಬರಿಗೊಂಡವಳು : ಅವನಿಗೆ ಕಣ್ಣೆತ್ತಲೂ ಆರದ ಬೆಬ್ಬಳಿಗಿತಿಯಾಗಿ, ಅಂತಹ ಸುಸಮಯವನ್ನು ಹಾಳೇರಿಸಿ ವ್ಯರ್ಥಮಾಡಿ ಕಳೆದೆ ! (ಮಂತ್ರಕ. ೩೯-೦೮). [ಬೆಬ್ಬಳಿಗ + _ ಇತಿ₁ (<— ಇತ್ತಿ) ]

**ಬೆಬ್ಬಳಿಗೊಳ್** 'ಬೆಬ್ಬಳಂಗೊಳ್' ನೋ.

**ಬೆಬ್ಬಳಿತ** (ನಾ). ಅಧೀರನಾದವನು : ಒಬ್ಬಳುಂ ತಲೆಯಡರ್ದಳೊಬ್ಬಳುಂ ತೊಡೆಯಡರ್ದು ಕೊಬ್ಬುತ್ತಲಹರೆ ಯಿನ್ನೊಬ್ಬಳುಂ ಪಡಬಡಿಸಿಯೆಲ್ಲಿಟ್ಟು ಕೊಂಬೆಯೆನಲು ಬೆಬ್ಬಳಿತನಾಗಿ ನಿನಗೊಂದು ಲಂಚವನೀವೆ ತುಬ್ಬಸದಿರೀ ಮಾತ ಭಕ್ತರೊಳಗೆಂದೆನುತೆ (ಕೃಶುಪು. ೬-೯೬). [ಬೆಬ್ಬಳಿ (<ಬೆಳ್ಪಳ) + _ ತ₂]

**ಬೆಬ್ಬಳಿಯೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳಿವೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳಿಸು** 'ಬೆಳ್ಪಳಿಸು' ನೋ.

**ಬೆಬ್ಬಳು** 'ಬೆಳ್ಪಳ' ನೋ.

**ಬೆಬ್ಬಳುಗೊಳ್ಳು** 'ಬೆಬ್ಬಳಂಗೊಳ್' ನೋ.

**ಬೆಬ್ಬಳೆ** 'ಬೆಳ್ಪಳ' ನೋ.

**ಬೆಬ್ಬಳೆಪೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳೆಯೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳೆವೋಗು** 'ಬೆಳ್ಪಳಂಬೋಗು' ನೋ.

**ಬೆಮರ್₁**, ಬೆಮರು₁, ಬೆವರು₁, ಬೆವೆ (ಕ್ರಿ). ಬೆಮರ್ತು, ಬೆವತು. ಬೆವರ್ತು (ಭೂತಕೃ). ೧. ಚರ್ಮರಂಧ್ರಗಳಿಂದ ಘರ್ಮಜಲ ಹೊರಸೂಸು; ಸ್ವೇದಗೊಳ್ಳು : "ಬೆಮರ್—ಸ್ವೇದಭಾವೇ" (ಶಮಧಾ); ಮಂದೆಯೊ ಪಾಪಡರ್ದಂತುಮ್ಮನೆ ಬೆಮರುತ್ತುಮಿರ್ದ ಕರ್ಣನಂ ದುರ್ಯೋಧನಂ ಕಂಡು (ಪಂಪಭಾ. ೨-೬೨ ವ); ಆ ರವಮಂ ನಿರ್ಜಿತಕಂಠೀ ರವರವಮಂ ನಿರಸ್ತಘನರವಮಂ ಕೋಪಾರುಣನೇತ್ರಂ ಕೇಳ್ದಾ ನೀರೊಳಗಿರ್ದು ಬೆಮರ್ತನುರಗಪತಾಕಂ (ಗದಾಯು. ೭-೨೨). ೨. ಭಯಪಡು; ಹೆದರು : "ಸಡೆದಂ . . . ಬಳ್ಕಿದನೆಂದೆಡೆವಿಡದೆಯೆ ಬೆಮರ್ತನೆನಲ್ಕೊಡ ಸೆಯೆ ಭಯಭರಿತನಕ್ಕು" (ಶಬ್ದಮ. ೧೦೯). **ಬೆಮರು₁** : ೧. ಮೊಗ ಬೆಮರೆ ಶೇಕುತಂ ಪರಿತಂದು (ಬಸವ. ೯-೯೬); ಗಾಳಿ ಬೆಮರುವುದುಂಟೆ (ಶಿವಾನುಭ. ೪-೪೦); ಬೆಮರುವಂಗ ಕಡುಗೆಂಪು ಪರಿದು ರಾಜಿಸುವಧರಗಳ ಸುರತಾಂತಶ್ರಮದಿಂದಪರಿರ್ವರು ಮೆಚಿದರು (ಶಂಪಬ. ೦೦-೩೦); ಜಲದ ಒಳಗಿನ ಕಲ್ಲು ಸಲೆ ಬೆಮರಬಲ್ಲುದೆ (ಸರ್ವಜ್ಞ. ೦೬೦). **ಬೆವರು₁** : ೧. ಒಮ್ಮೊಮ್ಮೆ ಬೆವರುತ್ತಂ ಆನಂದಜಳಮಂ ಸೂಸುತಂ . . . ಸಂಗನ ಬಸವಂ ಶರಣರ ಸಮಿಾಪಕಿದಿರ್ವಂದು ಹರುಷದಿಂ ಪರಮಸುಖಿಯಾಗಿರ್ದಂ (ಬಸವ. ೬-೦೦೨); ಬೆವತುವು ದಿವ್ಯಲಿಂಗಗಳಳುಕಿ ಪರ್ವತದಂತೆ ಬಿದ್ದುದು ಪೀಠ ಹೊಗೆ ಮಸಗಿ (ಶಿಕಿಂ. ೦೯-೩); ಉರಿಯುವ ಸುಡುಬಿಸಿಲಿಗೆ ಬೆವರುತ್ತ ನಡೆದೆ (ರೂಪಸಂ. ೬). **ಬೆವೆ** : ೧. ಅಂಗೈ ಅಂಗಾಲುಗಳು ಬೆವೆಯುವುದು ಅಂದರೆ ಹಸಿಯಾಗುವುದು (ಬ್ರಹ್ಮಪ. ೨೩).

**ಬೆವತು ಹೋಗು** = ೧. ಹೆದರಿಕೆ, ಅವಮಾನಗಳಿಂದ ಬೆವತು ಕೊಳ್ಳು. ೨. (ಬೆವರುವುದರಿಂದ) ಆಯಾಸ ಹೊಂದು: ಬಿಸಿಲ ಝಳಕ್ಕೆ ಮಗು ಬೆವತು ಹೋಗಿದೆ (ರೂಢಿ).

[ದೇ.॥ ತಮಿ. ವೆಯರ್, ವೇರ್, ವಿಯರ್ ; ಮಲ. ವಿಯರ್ ; ತುಳು. ಬೆಗರು, ಬೆಗಪು; ಕೊಡ. ಬೆವರ್]

**ಬೆಮರ್₂**, ಬೆಮರು₂, ಬೆವರ್, ಬೆವರು₂ (ನಾ). ಸ್ವೇದಜಲ; ಘರ್ಮ : ಸುರಿಯೆ ಬೆಮರ್ ಕುರುಳ್ಪಿಡಿದು ಮುತ್ತುಗಳಂ ಮಣಿದುಂಬಿ ಕಾಣುವಂತಿರೆ (ಪಂಪಭಾ. ೯-೬೦); ಬೆಮರಿಂ ಮುಟುಗಿದಪೆಂ ಸಂಭ್ರಮದಿಂ ಬಿಟ್ಟಿಪ್ಪೆಂ (ಕಾದಂಬ. ೩೭); ಕೆದಱಿದಳಕವಕ್ಕಾಡುವ ಬೆಮರ್ (ಹರಿಶ. ೯-೨೯). **ಬೆಮರು₂** : ಮೈಯಲಿ ಸುರಿವ ಬೆಮರಿನ ಚರಣದೆತಹುಗಳೊತ್ತಿಗಲ್ಲುಗಳ (ಶಿವಾಪು. ೬೦೩. ೪-೦೨); ಪಣೆಯೊಳುದಿಸೆ ಬೆಮರಾತನ ರೌದ್ರಕೆ ಮಣಿದಳುಕಿದ ಗುರುನಾಥ (ಜೈಮಂಗಾ. ೬-೩೦). **ಬೆವರ್** : ಅಂತು ನೋಡಿ ಬೆವರೊಳ್ ಮುಳುಂಗಿ ನಡುಗುತ್ತಂ (ಕಾದಂಬ. ೨೬೬). **ಬೆವರು₂** : ಬವರವಾದರೆ ಹರನ ವದನಕೆ ಬೆವರ ತಹೆನು (ಶಿವಾನುಭ. ೪-೩೬); ಮೈ ಮೇಲೆ ಹೊಲಸು ಇದ್ದರೆ ಅದು ರೋಮರಂಧ್ರಗಳ ಬಾಯಿಗೆ ಕೂತು ಬೆವರಿಗೆ ಅಡ್ಡಿಮಾಡುತ್ತದೆ (ಮುಂಬಯಿ. ೪-೨೪); ನಿಮ್ಮ ಕೆನ್ನೆಯ ಬೆವರ ಒರಸಾಳೆ (ಪಾಶವ. ೦೨೬).

**ಬೆವರಾಡು** = ಬೆವರು ಬರು ; ಸ್ವೇದಗೊಳ್ಳು : ತ್ರಿದೋಷದಲ್ಲಿ ಸಾಪವನ ನಾಡಿ ಅತಿಶೈತ್ಯವಾಗಿ ತುಪ್ಪವ ತೊಡೆದ ಹಾಗೆ ನಯವಾಗಿ ಬಂಕೆ ಬೆವರಾಡುವದು (ವೈದ್ಯಸಾ. I. ೩). **ಬೆವರಿಳಿಸು** = ೧. ಕಷ್ಟಪಡು; ಶ್ರಮವಹಿಸು : ಬೆವರಿಳಿಸಿ ಸಂಪಾದಿಸಿದ ಹಣ ಕೈಗೆ ಹತ್ತುತ್ತದೆ (ರೂಢಿ). ೨. (ಆಲಂ) ಅವಮಾನ ಮಾಡು; ತೇಜೋವಧೆಗೊಳಿಸು : ಮನೆಗೆ ಬಂದ ಅವನನ್ನು ಬೆವರಿಳಿಸಿ ಕಳಿಸಿದರು (ರೂಢಿ). **ಬೆವರುಸುರಿಸು** = ೧. ಮೈಯಿಂದ ಬೆವರು ಇಳಿಯುವಂತೆ ಮಾಡು. ೨. ಕಷ್ಟಪಡು ; ಶ್ರಮಿಸು : ಬೆವರುಸುರಿಸಿ ತಂದ ಅನ್ನ (ಪಾಥೋಲಿ. ೦೦). **ಬೆವರೂರು** = ಬೆವರಿನಿಂದ ನೆನೆ, — ಒದ್ದೆಯಾಗು : ಬಟ್ಟೆಬರೆಗಳೂ ಹೊರೆಯಾದುವು; ಬೆವರೂರಿತು, ವಾದ್ಯಗಳು ಬೆನ್ನೇರಿದುವು (ಗಾಂಧಿ. ೦೩ ಕಥಾಸಾರ). **ಬೆವರೊಡೆ** = ಬೆವರೂರು : ರಾಮಪ್ಪನ ಮುಖ ಬೆವರೊಡೆಯಿತು (ಬಿಡ್ತಿಯ. ೨೦); ಮೈತುಂಬ ಬೆವರೊಡೆದುಹೋಯ್ತು (ಇಶ್ಮತ. ೨೯೬). [< ಬೆಮರ್₁. / ತಮಿ. ವೆಯರ್, ವೇರ್, ವಿಯರ್ ; ಮಲ. ವಿಯರ್ಪ್ಪು, ವೇರ್; ತುಳು. ಬೆಮರ್, ಬೆಗರ್ ; ಕೊಡ. ಬೆವರ್]

**ಬೆಮರಾನ್** (ಕ್ರಿ). ಬೆವರನ್ನು ಹೊಂದು : ಮಳಲೊಟ್ಟಲನೇಱು ಪಾಱು ಗುಪ್ಪೆಯನಾಡಿ ಬಳಲ್ದುವಯುವ ಬೆಮರಾಂತು ಕೆಳದಿಯ ಕೈಮುಟ್ಟಲು ಸೌಖ್ಯಂಗಳ ತಳೆದುವನೇಕ ಪುಷ್ಪಗಳು (ಸೋಮಶ. ೪-೩೮). [ಬೆಮರು₂ (<ಬೆಮರ್₂)+ಆನ್₁]

**ಬೆಮರಿಡು**, ಬೆವರಿಡು (ಕ್ರಿ). =ಬೆಮರ್₁ ೧: ಮೋಱೆಗಳು ಬೆಮರಿಡುತ ಹೊಯ್ಲಂ ತೋಱುತ (ಚನ್ನಪು. ೩೨-೦೩); ಜಲಜಮುಖಿ ಬೆಮರಿಡಲು ಕೊರಳಿನ ಲಲಿತ ಮುಕ್ತಾಹಾರವಲ್ಲಾಡಲು ಸೆಱಗನಳವಡಿಸಿ ನಿಂದಳು ಬಳಲಿ ಬಿಸುಸುಯ್ಯು (ಪಳತ. ೨-೩೪). **ಬೆವರಿಡು** : ಆ ಮಾತು ಕೇಳಿ ನನಗೆ ಬೆವರಿಟ್ಟಿತು (ರೂಢಿ). [ಬೆಮರ್₂ + ಇಡು₁]

**ಬೆಮರಿಳಿ**, ಬೆವರಿಳಿ (ಕ್ರಿ). ಬೆವರು ಸುರಿ : ಬೆಮರಿಳಿದು ಬಿಸುಸುಯ್ದು ಮುಡಿ ಬಿರ್ಚಿ ಮುನಿಸುರ್ಕಿ (ತತ್ತ್ವಂಗ. ೩೩-೦೯೩೦). **ಬೆವರಿಳಿ** : ಬರಿಯ

ಉದ್ವೇಗದಿಂದಲೆ ಆಯಾಸಗೊಂಡಂತೆ ಅವನ ಮುಖದ ಮೇಲೆ ಬೆವರಿಳಿಯು ತೊಡಗಿತ್ತು (ಮರಿಮು. ೦೮೩) : ಅವರೆದುರಿಗೆ ನನಗೆ ರೋಮಾಂಚವಾಗಿ ಬೆವರಿಳಿದು ಮಾತೇ ಮರೆತುಹೋಗುವುದು (ಧೂಳಾ ಕ. ೨೦೩).
[ಬೆಮರ್₂ + ಇಳಿ₁ (< ಇೞಿ)]

**ಬೆಮರು₂** 'ಬೆವರ್₁' ನೋ.

**ಬೆಮರು₃** 'ಬೆವರ್₂' ನೋ.

**ಬೆಮರ್ಚು** (ಕ್ರಿ). ಬೆವರುವಂತೆ ಮಾಡು; ಬೆವರು ತರಿಸು: "ಬೆಮರ್ಚು— ಸ್ವೇದಕರಣೇ" (ಶಮಾ). [ಬೆಮರ್₁ + —ಚು₁]

**ಬೆಮರ್ವಡೆ** (ಕ್ರಿ). = ಬೆವರಾಗು : ಕಕ್ಷಸೂನೆ ಬೆಮರ್ವಡೆದ ಸೊಗಡ ವಾಸಿಸುತ ಬಿಡೆಯಿಲ್ಲದ ಕುಚ ಬಿಗುಹೇೞ ರುತುಕಾಲವಡೆದ ಪುಷ್ಪಿಣಿಯ ರೂಪ್ಪಿದರು (ಪ್ರೋಹಕ. ೦೬-೩೨). [ ಬೆಮರ್₂ + ಪಡೆ₁ ]

**ಬೆಮರ್ವನಿ,** ಬೆವರುಹನಿ (ನಾ). ಬೆವರಿನ ಹನಿ; ಸ್ವೇದಜಲ: ಬೆಮರ್ವನಿ ಕೈವಿಗೆ ಲಜ್ಜಾನವಿತಾನನೆ . . . ನೋಡಿದಳ್ (ಕಂಠೀರವ. ೬-೦೩); ನುತರೋಮಾಂಚಂಗಳೇಳಲ್ ಬೆಮರ್ವನಿ ನೆಗೆಯಲ್ ಗದ್ಗದಂ ಪೊಣ್ಮೆ (ರತ್ನಕ. ೬೪); ಅಮರ್ದಪ್ಪಿ ಚುಂಬಿಸಿ ನೆರೆಯೆ ಬೆಮರ್ವನಿ ತೊಟ್ಟಿಟ್ಟು ಸುಯ್ಯಲರುಬ್ಬಿತೆಂದಮವು ಕೋವಿದರಾಡಬಹುದೆ (ಶಠಕ. ೦೦-೦೬೯). **ಬೆವರುಹನಿ :** ಓಡಿಬಂದುದರಿಂದ ಅವನ ಹಣೆಯ ಮೇಲೆ ಬೆವರುಹನಿ ಸಾಲುಗಟ್ಟಿದ್ದವು (ರೂಪ). [ ಬೆಮರ್₂ + ಪನಿ₂ ]

**ಬೆಮರ್ಸಾಲೆ,** ಬೆವರುಸಾಲೆ (ನಾ). ಬಿಸಿಲಿನ ಜಳದಿಂದ ಉಂಟಾಗುವ ಒಂದು ಬಗೆಯ ಗುಳ್ಳೆ; ಬೆವರುಗುಳ್ಳೆ: (೪). **ಬೆವರುಸಾಲೆ :** ಬೆವರುಸಾಲೆಯಿಂದ ಮಗುವಿಗೆ ತೊಂದರೆಯಾಗಿದೆ (ರೂಪ).
[ಬೆಮರ್₂ + ಸಾಲೆ₁]

**ಬೆಮಿಸು** (ಕ್ರಿ). ಭ್ರಾಂತಿಗೊಳ್ಳು; ಭ್ರಮಿಸು : " ಬೆಮಿಸು (ಬೆವಿಸು)— ಭ್ರಮಿಸು " (ಕನ್ನಕೋ. ೩೨); ಧುಮುಕಿ ಸರಸಿಜಲದಿ ಸೊಗದಿ ಮಿಂದು ಬೆಮಿಸುವ (ಕೋಹಿಸೂ. ೧೦೨). [ < ಭ್ರಮಿಸು ]

**ಬೆಮೆ** (ನಾ). ಭ್ರಾಂತಿ; ಭ್ರಮೆ: "ಬೆಮೆ (ಬೆರ್ಮೆ)—ಭ್ರಮ=ಗಲಿಬಿಲಿ" (ಕನ್ನಕೋ. ೩೨); ಸೊಸಿದ ಮುಡಿಯಿಂಸಡಿಗಡಿಗೆ ಸೂಸುವ ಬಿಸುಮಲ್ಲಿಗೆಯ ಕಂಪಿನೊಡವರ್ಪಳಿಗಳ್ಗೆ ನಡೆವಳ್ಳಿಯ ಬೆಮೆಯುಂ ಪುಟ್ಟಿಸಿಯುಂ (ರಾಜಶೇಖ. ೩೯-೦೦); ಕೆಂದಾವರೆಯು ಕೊಳಂಗಳ್ ಬೆಳ್ದಾವರೆಯ ಕೊಳಂಗಳವೆನುತ್ತ ಬೆಮೆಯೊದವಿಸುಗುಂ (ಮಲ್ಲಿನಾ. ೩-೨೯); ಇಲ್ಲಿ ಯಾವುದಾದರೂ ನಾಡಿನ ಮಹಾರಾಣಿಯವರು ಬೀಡುಬಿಡುವರೆಂದು ನಿಮಗೆ ಯಾರಾದರೂ ಬೆಮೆ ಹುಟ್ಟಿಸಿದರೋ? (ಸಹ. ೬೬). [ < ಭ್ರಮೆ ]

**ಬೆಮೆಗೊಳ್,** ಬಮೆಗೊಳ್, ಬೆಮೆಗೊಳು (ಕ್ರಿ). ೧. ಭ್ರಾಂತಿಗೊಳ್ಳು; ಭ್ರಮಿಸು : ಮಂಗಳಾಚ್ಯುತನ ಮೂರ್ತಿಯನು ಕಂಗಳಿಂದಲೆ ನೋಡಿ ಬೆಮೆಗೊಂಡು ನವ್ಯಪುಷ್ಪಂಗಳಿಂದಿಟ್ಟರಚ್ಯುತನ (ಮೋಹತ. ೪೨-೨೬); ಸುಮಶರಂಗಳು ನಾಂಟೆ ಹೃದಯದೊಳಮಿವು ಕಡುಬೆಮೆಗೊಂಡ ಕಾಮಿನಿಯು ಕಮಲಲೋಚನೆಯೆಡೆಗೆ ಬಂದನು (ರಾಜಶೇಸಂ. ೩-೪-೩೩); ಭೂಮಿ ಬರಿದೋಣಿ ಕಣೊ! ತಾಯಿಮಡಿಲೆಂದೇಕೆ ಬರಿದೆ ಬೆಮೆಗೊಂಡಿರುವೆ? (ಪಾಂಚಜ. ೩೦-೦೬). **ಬಮೆಗೊಳ್ : ೨.** ಮರುಳಾಗು; ಮನೋವಿಕಲತೆಯನ್ನು ಹೊಂದು : ಶವರ ಪಿತರ್ ಖಳರಿಕ್ಕಲ್ ಬಮೆಗೊಂಡ ನರಂಗೆ ಮಿಾಯಲೆಳಿಪುವು ಪಾಲಿಂ (ಶಬ್ದಮ. ೦೪-೬೨). **ಬೆಮೆಗೊಳು :** ೧. ಲೋಕವೆಲ್ಲವು ಛೀಳಿರೆನಲಾಕಾಶ ಕೂಗಲು ಸೂರ್ಯ ಬೆಮೆಗೊಳಲು (ಕೋಹಿಸೂ. ೧೦-೬೦). [ ಬೆಮೆ + ಕೊಳ್₁ ]

**ಬೆಮೆಗೊಳು** 'ಬೆಮೆಗೊಳ್' ನೋ.

**ಬೆಮ್ಮರ** (ನಾ). ೧. ಕಟ್ಟಡದ ಮೇಲ್ಛಾವಣಿಯಲ್ಲಿ ಹಾಕುವ ಮುಖ್ಯವಾದ ತೊಲೆ,—ನಡುವಿನ ತೊಲೆ: ನಂಜಿನ ಭೂಮಿಯ ಮೇಲೆ ಸಂದೇಹದ ಕವರ ನೆಟ್ಟು ಮುಜುಳದ ಮಾಳಿಗದ ಮುಂಡಿಗೆಯ ನಟ್ಟು ಸರಂಗದ ಸುಮನದ ಡೊಂಕಜಿತ ಬೆಮ್ಮರನ ಹಾಕಿ (ಸಕವ. I. ೧೩೬-೦೦೯). ೨. (?) : ಕಡಿದೋಣಗಿರ್ದ ಬೆಂದುಡಿದ ಕೊಂಬುಗಳಿಲ್ಲದ ಬಳ್ಳಿ ಸುತ್ತು ಗೊಂಡಡರಿದ ಬೆಮ್ಮರಂಗಳೊಡನೊಂದಿದ . . . ಬಂಜೆ ಕೈಪೆಮರ ನೊಂದದ ಬಾಧೆಗಳೊಂದುಮಿಲ್ಲದಿರ್ಪೆಡೆಗಳ್ (ರಾಜಕೋಶ. ೦೨-೩೩); ಮೂಳೆಯ ಕಂಭಮಿಲ್ಲಿ ನಿಡುಯೆಲ್ಬಿನ ಬೆಮ್ಮರನಂತೆ ಪತ್ರಿಕೊಂಡೋಳಿಯ ನೀಳ್ದು ನಿಂದ ಬಚಿಯೆಲ್ಗಳ್ (ಜೀವಸಂ. ೦೩೦-೨೨). [ ಬೆನ್ + ಮರ₁ ]

**ಬೆಮ್ಮಾಡು** (ನಾ). ಹಿಂದಕ್ಕೆ ಬಾಗಿರುವ ಮಾಡು; ಒಪ್ಪಾರು: ಇದೇ ಮನೆ ಎಡಗಡೆಯದು . . . ಬೆಮ್ಮಾಡಿರುವಂಥಾದ್ದು (ರೂಪಸಂ. ೩).
[ಬೆನ್ + ಮಾಡು₂ (< ಮಾಡ₁) ]

**ಬೆಮ್ಮಾರಲು** ' ಬೆಳ್ಮಾರಲು ' ನೋ.

**ಬೆಯ್** ' ಬೇ₁ ' ನೋ.

**ಬೆಯ** ' ಬಿಯಂ ' ನೋ.

**ಬೆಯ್ವೊಲ** (ನಾ). ಸುಟ್ಟ ನೆಲ; ಬೆಂದ ನೆಲ: ಬಱಿಯನುಱಿಯದೆ ಪರಿಯೆ ಕೆಯ್ವೊಲನುಮಂ ಬೆಯ್ವೊ[ಪಾಠಾಂ. ಬೆಳ್ವೆ]ಲನುಮಂ ಕಱುಂಬು ಮನಿಜಱಬುಮಂ ತಾಗುವಂ ಬಾಗುವಂ (ಲೀಲಾವ. ೩-೨೦ ವ).
[ ಬೆಯ್ (< ಬೇ₁) + ಪೊಲ ]

**ಬೆರಂಜು** (ಕ್ರಿ). ಒಟ್ಟುಗೂಡಿಸು; ಕಲೆಹಾಕು : "ಬೆರಂಜು—ಚಯನೇ (ಒಟ್ಟುಗೂಡು)" (ಶಮಾ). [ ? ].

**ಬೆರಕಿ** ' ಬೆರಕೆ ' ನೋ.

**ಬೆರಕೆ,** ಬೆರಕಿ, ಬೆರ್ಕೆ (ನಾ). ೧. ಸೇರಿರುವುದು; **ಮಿಶ್ರಣ :** ಪ್ರಸಾದನಿಷ್ಠ ಬೆರಕೆಯುಲ್ಲಿ ಬೀಯಮಾಯಿತ್ತು (ಬಸವ. ೮೬೩); **ಪರಿಪರಿಯ** ರನ್ನದೊಡವಿನ ಬೆರಕೆಯ ಬೆಳಗಡರೆ (ಕನ್ನಕಾ. ೦೪೯). **' ಕಲಬೆರಕೆ '** ಪರಾ. **೨. ಕೂಟ;** ಕೂಡುವುದು : ಬೆರಕೆಗೆ ಪೇಸುವಳ್ ಬೊಜಗರವ್ವರ ನಂಟರೊಳಂಗಹೀನರುಂ ತರುವಲಿ ಗಂಡರುಂ ಮನೆಗೆ ಬಂದೊಡೆ ನಾಣ್ಚುವಳ್ (ಲೀಲಾವ. ೨-೬೦). ೩. ಹೊಂದಾಣಿಕೆ; **ಹೊಂದಿಕೆ;** ಸಾಮರಸ್ಯ : ಬೆರಕೆಯೇ ಬಾಳ ಸವಿ ಬೆರಕೆಯಿಲ್ಲದ ಬಾಳ್ವೆ ಹಿರಿನರಕ ಕೇಳು (ಜಾಗ. ೬೩-೨). **ಬೆರಕಿ :** ೪. (ಉಕ) ಚುರುಕಾದ **ವ್ಯಕ್ತಿ;** ಚಾಲಾಕಿರುವ ವ್ಯಕ್ತಿ: ಹುಚ್ಚೆರೇ ಆಗಲಿ . . . ' ಬೆರಕಿ 'ಗಳೇ ಆಗಲಿ ಯಾರೇ ಆದರೂ ತ್ರಿಷಷ್ಠಿಗಳು ಬೇಕೇ ಬೇಕು (ಕುಂಂಗಾಥ. ೬); ಇವ ಮಾತ್ರ ಬಾಳ ಬೆರಕಿ ಆಕ್ಕಾನು (ರಕ್ತರ್ಮ. ೦೧). (ಗು). **೫. ಚಾಲಾಕಿ** ನಿಂದ ಕೂಡಿರುವ; ಚುರುಕಾದ: ಬಲೆ ಬೆರಕಿ ಹುಡುಗಿ ಬಾಲಿ (ಮಣ್ಣುತ. ೪೩). **ಬೆರ್ಕೆ :** ೪. ಶೀನ್ಯಾ! ಬೆರ್ಕೆ! ನಮ್ಮನ್ನು ಕರೆಯದೆ ಶಾಲೆಗೆ ಬಂದೆಯಾ? (ಬಾಂತ. ೬೫). ೫. ಅಲ್ಲದೆ ಬೆರ್ಕೆದೇಸಾಯಿ ತನ್ನ ಸವಿ ಮಾತುಗಳ ಮೇಲೆ ತಣ್ಣೀರು ಸುರುವಿ ತಪ್ಪಿಸುವ ಸಂಭವವೂ ಉಂಟು (ಗಂಗಾಧರ. ೨೪೦). [ ಬೆರೆ₁ + — ಕೆ./ತುಳು. ಬೆರಕೆ. ಬೆರ್ಕೆ, ಬರಕ./ ಮರಾ. ಬೆರಕಾ, ಬೆರಕೀ]

**ಬೆರಕೆಗಂಪು** (ನಾ). ಬೇರೆ ಬೇರೆ ವಸ್ತುಗಳ ಮಿಶ್ರಣದಿಂದುಂಟಾದ ಸುವಾಸನೆ; ಮಿಶ್ರಗಂಧ: ಅಂಜದೆ ಪೊಕ್ಕು ನಡುನೀರೊಳಾಡುವ ವನದೇವಿಯರ ಸೋರ್ಮುಡಿಯಿಂ ಪರೆವರಲ ಬೆರಕೆಗಂಪಿನ ಪೊಂಪುಳಿಯೊಳ್ (ಕಾದಂಪೂ. ೦೦೭); ಮಗಮಗಿಪ ಮೃಗಮದದ ಮುಡಿದಕದಂಬ ಪ್ರಸೂನದ ಬೆರಕೆಗಂಪಿಗುರವಣಿಸಿ (ನಂಕ. ೨-೦೦೫ ವ). [ ಬೆರಕೆ + ಕಂಪು ]

**ಬೆರಕೆಗೂಟು್** (ನಾ). ಬೇರೆ ಬೇರೆ ಬಗೆಯ ಆಹಾರ; **ಮಿಶ್ರಣವಾದ** ಓಗರ: ನೀವು ಬರಲಕ್ಕೆ ನೆಱೆಯದುದಕ್ಕೆ ಮಿಕ್ಕ ಕೞಿಮೆಯುಕ್ಕೆಯುಂ ಕಲಸಿ ಮಾಡಿದವುಗೆಯ ಬೆರಕೆಗೂಟನುಂಡ ಕಾರಣವಾಗಿ ಅಗುಂಬ್ಗಳಂ ಬಿಸುಟಂ (ಧರ್ಮಾಮೃತ. ೬-೩೪ ವ). [ಬೆರಕೆ + ಕೂಟ್₁]

**ಬೆರಕೆಗೆಂಪು** (ನಾ). ವಿಧವಿಧವಾದ ಬಣ್ಣಗಳು ಸೇರಿ ಆಗಿರುವ ಹೊಸ ಬಗೆಯ ಕೆಂಪುಬಣ್ಣ : ನವಮಣಿಸಂತಾನದೊಳಗೆಸೆಯೆ ಬೆರಕೆಗೆಂಪು (ಅಜಿಂಪು. ೧೧-೩೭) ; ಬೆರಕೆಗೆಂಪಿನ ಬಂಡಾರ ವರವನಸತಿಯ ಲಾವಣ್ಯರಸದ ಪೂರದಿಂದವಾದುವಲ್ಲಿ ಕಾಸಾರ (ನೇಮಿನಾಸಂ. ೧-೭೩). [ಬೆರಕೆ + ಕೆಂಪು$_1$]

**ಬೆರಕೆಜನ** (ನಾ). ಜಾತಿಸಂಕರವಾದ ವ್ಯಕ್ತಿಗಳ ಸಮೂಹ : ಪರಿದರಿನ್ನೀ ರಾರುಲಕ್ಷವು ಬೆರಕೆಜನರಾಲಯವು ಲೆಕ್ಕನುಸರದಲಿಹವಪನೀಶ ಛತ್ರದ ನೆರಳನಾಶ್ರೈಸಿ (ಐಜ್ಞ ಪು. ೬೭-೧೫). [ಬೆರಕೆ + ಜನ]

**ಬೆರಕೆವಣ್ಣ** (ನಾ). ಸಂಕೀರ್ಣವಾದ ಬಣ್ಣ ; ಮಿಶ್ರವರ್ಣ : ತಳಿರ ಕಳಿಕೆಯ ಮಿಡಿಯ ಪೂಗುಡಿಯ ಪಣ್ಣ ದೋರೆವಣ್ಣ ಬೆರಕೆವಣ್ಣದೊಳ್ದಿರ ಪುದುವಿನಿಂ ಬೆಡಂಗುವಡೆದು . . . ರತ್ನಮಯ ಭೂಷಣಾಂಗತರುಗಳಂತಿರ್ದ ಮಾಕಂದಾನೋಕಹಂಗಳುಂ (ಚಂದ್ರಪು. ೦-೧೦೫ ವ).
[ಬೆರಕೆ + ಬಣ್ಣ ]

**ಬೆರಕೆವರಲು** (ನಾ). ನಾನಾ ವಿಧವಾದ ರತ್ನಗಳ ರಾಶಿ : ವರವರುಶನ ಬೋಧಚಾರಿತ್ರವೆಂಬ ಬಂಧುರಗುಣಮಣಿಭೂಷಣವನು ಉರುಮುದದಿಂ ಕೊಟ್ಟು ತೆಗೆದನು ಮುನ್ನಿನ ಬೆರಕೆವರಲ [ಪಾಠಾಂ. ಬಿರಕೇವಲ]ಭೂಷಣವನು (ಶ್ರೀಪಾಲ. ೦೪-೫೭) : ಬೆರಕೆವರಲ ಪೊನ್ನ ನೇವಳ ಪೊಳೆದುದು ತರುಣಿಯ ಕಟತಟಾಗ್ರದೊಳ್ (ಭರತ. ೪೦-೫೮). [ಬೆರಕೆ + ಪರಲು$_1$ (< ಪರಲ್)]

**ಬೆರಕೆವರ್ಣ** (ನಾ). = ಬೆರಕೆವಣ್ಣ : '' ಸಾರಂಗಃ, ಶಬಳಃ — ಈ ೨ ಬೆರಕೆವರ್ಣಂ'' (ಹಲಾಯು. ೦೩೦-೫೦). [ಬೆರಕೆ + ವರ್ಣ]

**ಬೆರಕೆವಾಸಿಗ** (ನಾ). ನಾನಾವಿಧವಾದ ಹೂವುಗಳನ್ನು ಸೇರಿಸಿ ಮಾಡಿದ ಬಾಸಿಗ,—ಮಾಲೆ : ಸುರಯಿಯ ಸುರಹೊನ್ನೆಯಲರ ಬಿರಿಮುಗುಳ ಬೆರಕೆವಾಸಿಗವಂ ತಲೆಸುತ್ತಿ (ಅರ್ಜನೇ. ೫-೫೫ ವ). [ಬೆರಕೆ + ಬಾಸಿಗ]

**ಬೆರಕೆವೂವು** (ನಾ). ನಾನಾ ಬಗೆಯ ಹೂವು ; ಅನೇಕ ವಿಧವಾದ ಹೂವು : ಅಸಿಯಳೊರ್ವಳು ಪಿಡಿದೆತ್ತಿದ ಸಂಪಗೆಯೆಸಳ ಬಾಸಿಗವಾಗಳ ವಳ ಮಿಸುಪ ಕಣ್ಣದಿರ್ಗಳಿಂ ಬೆರಕೆವೂವಿನ ಪೊಚ್ಚಹೊಸಮಾಲೆಯಂತೆ ಮೆಚ್ಚಿಸುದು (ಶಂಖಸಾಂ. ೨೮-೦೪). [ಬೆರಕೆ + ಪೂವು (< ಪೂ$_2$)]

**ಬೆರಕೆವೆಳಗು** (ನಾ). ಬೇರೆ ಬೇರೆ ಬಗೆಯ ಬೆಳಕು ; ಮಿಶ್ರಕಾಂತಿ : ನವರತ್ನಕೂಟಾಗ್ರದಿನುಣ್ಮುವ ಬೆರಕೆವೆಳಗು . . . ಕಣ್ಗೆಸೆದುದು (ಚಂದ್ರಪು. ೬-೪೪) : ಸಕಲಸೌಂದರ್ಯಮನೊಳಕೊಂಡ ಮೇಲ್ಕಟ್ಟಿನ ಬೆರಕೆವೆಳಗು ಮಂಟಪದೊಳಗಂ ಪೊಱಗಂ ತೆಕ್ಕನೆ ತೀವೆ (೧೦೪. ೦೦-೨೮ ವ); ನಸು ನಗೆಯ ಬೆಳುದಿಂಗಳನು ಪೊಳೆವೆಸಳುಗಂಗಳ ಬಳ್ಳಿಮಿಂಚನು ಮಿಸುಪ ತೊಡಿಗೆಯ ಬೆರಕೆವೆಳಗನು ಪಸರಿಸುತ ಬಂದು (ಶಾಳ್ವಭಾ. ೨೭-೨).
[ಬೆರಕೆ + ಬೆಳಗು$_2$].

**ಬೆರಕೆಸೊಪ್ಪು** (ನಾ). (ಒಟ್ಟಾಗಿಯೆ ಅಡುಗೆಗೆ ಉಪಯೋಗಿಸುವ) ಬೇರೆ ಬೇರೆ ಜಾತಿಗೆ ಸೇರಿದ ಸೊಪ್ಪು : ನೂಲೆಗೆಣಸು ಉಗನಿಕಾಯಿ ಬೆರಕೆಸೊಪ್ಪು ಇತ್ಯಾದಿಗಳನ್ನು ಸಂಗ್ರಹಿಸುವಾಗಲೋ . . . ಆ ಅರಣ್ಯ ಪ್ರದೇಶ ಸುಪರಿಚಿತವಾದದ್ದೆ ಆಗಿತ್ತು (ಮಲೆಮ. ೫೭೬); ಬೆರಕೆಸೊಪ್ಪಿನ ಸಾರು ಚಂದ, ಸೂಳೆ ಮಕ್ಕಳು ಚಂದ (ಗಾದೆ). [ಬೆರಕೆ + ಸೊಪ್ಪು$_2$]

**ಬೆರಗಱು** (ಕ್ರಿ). ಉಪಾಯವನ್ನು ತಿಳಿ : ನೊಂದ ಸಿಂಗದ ಮೇಲೆ ಬೆರಗಱಿಯದ ಬೆಳ್ಳಾಳ್ ಪಾಯ್ವಂತೆ ಕಿಚ್ಚು ಬಾಳ್ದಿರಸು ಪಾಯ್ವುದುಂ (ಶಂಶಭಾ. ೦೦-೦೦೩ ವ). [ಬೆರಗು$_3$ + ಅಱಿ$^2$]

**ಬೆರಗು$_1$** (ಕ್ರಿ). ಆಶ್ಚರ್ಯಪಡು ; ವಿಸ್ಮಯಹೊಂದು : ಬೆರಗಾಗು : ಮುನಿಪುಂಗವರು . . . ಬೆರಗಿ ದ್ವಾರದ ಪಾಲಕರು ಋಷಿವರರ ಚರಣಗಳನು ವಂದಿಸಿ ಬೆಸಿಸಿದರು ಗೃಹಮಧ್ಯದೊಳು ಗಿರಿವರಸಿಗರುಹಲ್ಕೆ (ಪಾರ್ವತಿಶ. ೩-೩೪) ; ರಾಜರು ಬೆರಗಿದರು ಲಾವಣ್ಯಲತಿಕೆಯ ರೂಪವನು ಕಂಡು (ಶಶಿಶಂ. ೬-೦೦). [< ಬೆಱಗು. / ತುಳು. ಬೆರಗು]

ಬೆರಗು$_2$ 'ಬೆಱಗು' ನೋ.

**ಬೆರಗು$_3$** (ನಾ). ೧. ವೇಗ : ಶೀಘ್ರತೆ : (ಕ). ೨. ಅಧಿಕಪ್ರಸಂಗತನ ; ಧೂರ್ತತೆ : ಬೆರಗಿನಿಂದ ಬೋಳನು ಹೀನವಚನಗಳೆಂಬ ವೇದಮಂತ್ರಗಳಿಂದ ಬಯ್ದು ಇದಕ್ಕೆ ಪ್ರತಿಫಲ ಕೊಡದಿರಲಾರೆನೆಂದು ಹಲ್ಲು ಕಚ್ಚಿದನು (ಕಾಲೂರ. ೯ ಕಥಾಸಾರ). ೩. ಉಪಾಯ ; ಜಾಲ : ಪಾತಕಿ ಕೊಂದಳ್ ಬೆರಗಿಂ[ಪಾಠಾಂ. ಗರದಿಂ] ಗಂಡನನಾ ಸ್ತ್ರೀಚರಿತಮುದೇಂ ಕಳೆಯಲರಿದು ಪೆಂಡಿರ ಕೃತಕಂ (ಧರ್ಮಾಮೃ. ೩-೫೦). ೪. ಕೌಶಲ : ಚಾತುರ್ಯ : ಬೆರ[ಪಾಠಾಂ.ಱ]ಗುಗಳವಸರಾನ್ವಿತಂಗಳು ಬಿಱುಸುಗಳುದಾಸೀನವೃತ್ತಿಗಳಱಿವುಗಳು ಕೇಣಂಗಳವಹಾಸ್ಯಂಗಳೆಚ್ಚಗಳು (ಐಶಪು. ೪೦-೬೦) ; ಬೆರಗು ಚೆಲುವಿನ ವಪ್ಪು ಸೀಕೃತವೆಱಕ ಜಾಣ್ಣುಡಿ ನೋಟ ಬೇಟವು (ಶಾಲ್ವಭಾ. ೦೭-೨೬). ೫. ವಿವೇಕ : ಒಡನೋಡಿದೊಂದು ಬೆರ[ಪಾಠಾಂ. ಱ]ಗಿಂಗೆ ಕೊಲಲ್ಕೆನಗಾಗದು (ಶಂಶಭಾ. ೨-೫೦) ; '' ಉತ್ಸಾಹ '' (ಶಂಶಬ. ೬೬) ; ''ಕಾರಣ'' (ಶಂಶಬಾ. ಅನುಬಾದ); '' ದಾಕ್ಷಿಣ್ಯ '' (ಶಂಶಬಾ. ಕೋಶ).
[ದೇ.॥ ತಮಿ. ವಿರೈವು, ವಿರಕು ; ಮಲ. ವಿರವು ; ಕೊಡ. ಬೆರಿಯ ; ತೆಲು. ವೆರವು, ವೆರುವು]

ಬೆರಗುಗೊಳ್ 'ಬೆಱಗುಗೊಳ್' ನೋ.

ಬೆರಗುಗೊಳಿಸು (ಕ್ರಿ). ಆಶ್ಚರ್ಯಪಡುವಂತೆ ಮಾಡು ; ವಿಸ್ಮಯ ಪಡಿಸು : ವೈದ್ಯರನ್ನೂ ವಿಜ್ಞಾನಿಗಳನ್ನೂ ಬೆರಗುಗೊಳಿಸಿತು (ಹಸುಹೂ. ೨೦೮). [ಬೆರಗು$_2$ (<ಬೆಱಗು) + ಕೊಳ್$_1$ + — ಇಸು$_3$]

ಬೆರಗುಬಡಿ (ಕ್ರಿ). ಆಶ್ಚರ್ಯಪಡು ; ವಿಸ್ಮಯಹೊಂದು : (ತುಟಿಗೆ ಕೈವೆರಳಿಟ್ಟು ಬೆರಗುಬಡಿದಂತಾಗಿ) (ಚಂದ್ರಸ. ೫-೦೮) ; ಪೀಂಚಲು ಬೆರಗು ಬಡಿದವಳಂತೆ ಗಂಡನ ಕಣ್ಣನೇ ನೋಡತೊಡಗಿದಳು (ಮಲೆಮ. ೪೬೨).
[ಬೆರಗು$_2$ (< ಬೆಱಗು) + ಬಡಿ$_1$]

ಬೆರಗುವಡು ' ಬೆಱಗುವಡು ' ನೋ.

ಬೆರಗುವಾರ್ (ಕ್ರಿ). ಉಪಾಯವನ್ನು ಅಪೇಕ್ಷಿಸು,—ನಿರೀಕ್ಷಿಸು (?) : ಅಳವಿಗೆ ಸಾರ್ದನೇ ಬೆರಗುವಾರ್ದನೆ ಮೆಯ್ವಟಿಯಿಂದೆ ಪೋರ್ದನೇ ತಿಳಿವೊಡದಿಲ್ಲ . . . ಅಪ್ಪಳಿಸಿದನೆತ್ತಿಕೊಂಡು ಧರೆಗಿಕ್ಕಿದಂ . . . ನೆಗಬ್ದಂತಕನಂ ಮುರಾಂತಕಂ (ಜಗನ್ನಾ. ೭-೨೪). [ಬೆರಗು$_3$ + ಪಾರ್$_1$]

ಬೆರಟು 'ಬಱುಂಟು ' ನೋ.

ಬೆರಟೆ ' ಬೆಟ್ಟೆ ' ನೋ.

ಬೆರಣಿ 'ಬಱಟಿ ' ನೋ.

ಬೆರಲ್, ಬೆರಲು, ಬೆರಳ್, ಬೆರಳು (ನಾ). ೧. ಕೈ ಅಥವಾ ಕಾಲಿನ ಅಂಗುಲಿ ; ಬೆಟ್ಟು : " ಅಂಗುಲೀ, ಕರಶಾಖಾ—ಈ ೨ ಬೆರಲ್ " (ಹಲಾಯು. ೮೫-೩೭೨); ನಾನಾಪ್ರಕಾರದ ಕಂಕಣಗಳುಮಂ ತೊಟ್ಟ ಮುಂಗೆಯ್ಯುಂ ಬೆರಲ್ಗಳುಂ . . . ಶುಭಲಕ್ಷಣಾಂಕಿತಮಾಗಿ (ಪಮ್ಪಾರಾ. ೦೪೮-೦೮); ಬೆರಲ ಕೊರಲ ಕೂಟಂ ಬೆರಲಂ ಮಿಡಿಯಿಸಿದುದು (ಆದಿಪು. ೯-೦೦೭); ಬೆರಲೆರಲೊರಲ್ಕೊರಲ್ಸರಲ್ . . . ಲಾಂತಮಿಮಂ ಗ್ರಾಮ್ಯ ರಱಿಯದುಚ್ಚರಿಸುವರ್ ಕುಳಾಂತಭ್ರಮೆಯಿಂ (ಶಮದ. ೨೮). ೨. ಒಂದು ಬೆರಳಿನ ಅಳತೆ : ಒಂದು ಅಂಗುಲ : ತಾನಾ ಪೇಚರೇಂದ್ರಂ ಗರ್ದೇಂ ಬೆರಲೀಂದಗ್ಗಳದಿರಾವ ಕಾವ ಗುಣಮಂ ಪೂಣ್ದಿಂದಭೂಪಾಳಕ (ಎಕ. XXVII, ೭೨-೩೦: 1114). **ಬೆರಲು** : ೧. ಕೊರಲ ಮೂರೇಬೆಯ ಮಣ್ಕೊಡೆವಳು ಸಣ್ಣ ಬೆರಲ ಕೈರೇಖೆಯುಜ್ಜುವಳು (ಶೋಹಕ. ೦೭-೬೪). **ಬೆರಳ್** : ೧. ವಿರಚಿಸಿ ಸುಕುಮಾರತೆಯುಂ ಪಿರಿದುಂ ಬೆರಳಿಂದವಂಟಿ ನೋಡಿದನೋ . . . ಎನಲಾ ತರುಣಿಯ ಗಂಭೀರನಾಭಿಮಂಡಲ ಮೆಸೆಗುಂ (ಕಾವಂಕು. ೧೦); ಎರೆಡುಂ ಪಾಡಂಗಳೆಡೆ ನಾಲ್ವೆರಳುಂಗುಷ್ಠಂಗಳೆಡೆಗಳೆರಡಱಡೆಯೊರ್ಗೆಣಾಗಿರೆ (ಸುಕುಮಾ. ೮-೫೮); ನಿಡುಬೊಟ್ಟೆಸೆಯೆ

ವರ್ಭೆ ಕರಮತಿಶಯದಿಂ ಬೆರಳೊಳ್ ರಂಜಿಸಿ (ರಶರ್ವಪು.೦-೯೩). ಬೆರಳು: ೧. ಎನ್ನ ಕಾಯುವ ದಂಡಿಗೆಯು ಮಾಡಯ್ಯ . . . ಎನ್ನ ಬೆರಳ ಕಡ್ಡಿಯ ಮಾಡಯ್ಯಾ (ಬಸವ. ೩೦೦); ಕಂಬನಿಯು ಮಿಡಿದಳು ಬೆರಳಿನಲಿ (ಪಳಹ. ೩-೦೦); ಬೆರಳು ತೋರಿಸಿದರೆ ಹಸ್ತ ನುಂಗುತ್ತಾನೆ (ಗಾದೆ). ೨. 'ಇಬ್ಬೆರಳು' ಪರಾ. ೩. (ಆಲಂ) ಸಹಾಯ: ಯಾವನೆನ್ನನು ದಿವ್ಯಗತಿಯ ಸೋಪಾನವನು ಜೀವಭಾವದ ಬೆರಳು ಕೊಟ್ಟು ಹತ್ತಿಸಿದನೋ (ಕೃಶಾ.ಕು. ೯-೬).

ಬೆರಲಂ ಮಿಡಿಯಿಸು= (ಆಲಂ) ಸೋಜಿಗವನ್ನು ಉಂಟುಮಾಡು: ಅಚ್ಚರಿಗೊಳಿಸು : ಮಿಡಿವಂ ಬೀಣೆಯನಿವನಿವಳೊಡನೆಸೆವಳ್ ಬೆರಲ ಕೊರಲ ಕೂಟಂ ಬೆರಲಂ ಮಿಡಿಯಿಸಿದುದೆನಿಸಿ (ಆದಿಪು. ೯-೦೦೬); ಬೆರಲಂ ಮಿಡಿಯಿಪ ಪುಲಕಾಂಕುರಮಂ ಪುಟ್ಟಿಸುವ . . . ಅರಮನೆ ಮಾಬ್ಬುದು ಮಯಂಗತಿವಿಸ್ಮಯಮಂ (ಕಂರಾಪು. ೦-೧೨೯). ಬೆರಲನಿತು=ಬೆರಳಿನಷ್ಟು ಅಗಲ : ನಿರುತಿಯ ಕಂಭದಿಂದಮನಿಳಾಸೆಯೊಳೆಕ್ಕುವ ಕಂಭಮಪ್ಪುದೊರ್ವೆ ರಲನಿತರ್ಕೆ ತಗ್ಗಿತದಱಿಂದೆ ಹರಾಸೆಯೊಳಿರ್ಪ ಕಂಭಮಿರ್ವೆರಲನಿತರ್ಕೆ ಪುತ್ತೆ ಕಿಱಿದಪ್ಪುದದರ್ಕೆ ದಲುದ್ದಮಪ್ಪುದೊರ್ವೆರಲನಿತುಂ ಹವಿರ್ಭುಜನ ಗೊಂಟನ ಕಂಭಮದೂರ್ಜಿತಪ್ಪುದು (ಲೋಕೋಶ. ೩-೨೮). ಬೆರಲ ಸೇವಗೆ= ಕೈಬೆರಳುಗಳಿಂದ ಹೊಸೆದು ಮಾಡುವ ಸೇವಗೆ : ವರಡಿ ಗಾವಲಿ ಯುಪ್ಪುಮಣಿ ಸಣ್ಣ ಗೋಧೂಮ ಸರವಳಿಗೆ ದೊಡ್ಡಸೇವಗೆ ಕಮಬು ವುಂಡಲಿಗೆ ಬೆರಲಸೇವಗೆಯಾದಿಯಾಗಿಯಡವಾದ ಕಜ್ಜಾಯಗಳ ತೆಗೆದು ಕೊಂಡು (ಸೂಶಾ. ೩-೬). ಬೆರಳಬದಿಗ=ಬೆರಳೆತ್ತಿ ತೋರಿಸಿದರೆ ಸೇವೆಗೆ ಸಿದ್ಧವಾಗಿರುವ ಸೇವಕ ; ಕೀಳಾಳು : ಆ ನೃಪಾಲರ ಮಗನೊ ಮೊಮ್ಮನೊ ನೀನವರ ಬಾಂಧವನೊ ಭೃತ್ಯನೊ ಸೂನವಕ್ಷನೊ ಬೆರಳ ಬದಿಗನೊ ಕುರುಳ ಕೋಮಳನೊ (ಕುಭಾ.ಸ. ೨-೬೨). ಬೆರಳು ಕಚ್ಚಿಸು= (ಆಲಂ) ಸೋಜಿಗಗೊಳಿಸು; ಅಚ್ಚರಿಗೊಳಿಸು: ಗರುಡ ಗಂಧರ್ವಕಿನ್ನರ ಕಿಂಪುರುಷರ ಬೆರಳು ಕ[ಶಾಕಾಂ. ಗ]ಚ್ಚಿಸಿ ಪುಲ್ಲುಮಿಡಿಸಿ ಉರಗ ಮಂದಿರಪೇಱಿಸಿ ನೀರ ಪೊಗಿಸಿಯೆ ತರುವನೇಱಿಸಿ ಮೇಲ್ಬಿಡುವೆ (ತ್ರಿಶಗಾಂ. ೬೦-೦೩೮); ಅವನ ಯುಕ್ತಿಗಳು ಬೆರಳು ಕಚ್ಚಿಸುತ್ತಿದ್ದವು (ಶಂಡೀ. ೩೩). ಬೆರಳು ಕಚ್ಚು= (ಆಲಂ) ಅಚ್ಚರಿಗೊಳ್ಳು; ಸೋಜಿಗಪಡು : ದಯಾ ಪಶಿಯ ಪುರುಷಾರ್ಥ, ಎದೆಗಾರಿಕೆಗಳನ್ನು ನೋಡಿ ಜಿಲ್ಲೆಯ ಇನ್ನುಳಿದ ಜಾಗೀರುದಾರರು ಬೆರಳು ಕಚ್ಚುತ್ತಿದರು (ಜಿಶಿಪಾ. ೦೧೩); ಪಾಂಡವರ ಆಗಿನ ದೌಲತ್ತಿಗೆ ಯಾರೂ ಬೆರಳುಕಚ್ಚುವಂತಿತ್ತು (ಸುಕ್ಕುಕು. ೩).

[ದೇ.॥ ತಮಿ. ಮಲ. ವಿರಲ್; ತುಳು.ಬೆರೆಲ್, ಬಿರಲ್, ಬೆರೆಳ್; ತೆಲು. ಪ್ರೇಲು, ವೇಲು; ಕೋತ. ವೆರ್ಲ್; ತೊದ. ಪೆಳ್]

ಬೆರಲಚ್ಚು, ಬೆರಳಚ್ಚು (ನಾ). ೧. ಬೆಟ್ಟನ್ನು ಒತ್ತಿದ ಗುರುತು ; ಅಂಗುಲಿಮುದ್ರೆ : ನಿಜನಿಜಗೊಂಡ ಗುಣಾರ್ಣವನ ತಲೆನವಿರ್ಗಳ್ ಲಾವಣ್ಯರಸಮನಿಡಿದಿಡಿದು ಶೀವಿದ ಕಪಾಲಾಸನನ ಬೆರಲಚ್ಚುಗಳನ್ನ ಪಾದುವು(ಕಂಶಶಾ. ೨-೩೯ವ); ಬೆರಲಚ್ಚುಗಳಚ್ಚಿಟಿದಂತೆ ಕೊಂಕುಗಳ್ ತಲೆನವಿರೊಂದಿ ಪೊದಲಿಸುವಂತೆವೊಲಿರ್ದುವು ನಮ್ಮ ವೀರಮಂ (ಕಂಶಶಾ. ೬-೩೭). ಬೆರಳಚ್ಚು : ೨. ಬೆಟ್ಟುಗಳನ್ನಾಡಿಸಿ ಅಕ್ಷರಗಳನ್ನು ಮೂಡಿಸುವ ಯಂತ್ರ; ಟೈಪ್‌ರೈಟರ್ : ಕನ್ನಡ ಬೆರಳಚ್ಚು ಈಚೆಗೆ ತುಂಬ ಜನ ಪ್ರಿಯವಾಗಿದೆ (ರೂಢಿ). 'ಬೆರಳಚ್ಚುಯಂತ್ರ' ಪರಾ. ೩. ಬೆರಳಚ್ಚು ಯಂತ್ರದಿಂದ ಮೂಡಿಸಿದ ಅಕ್ಷರ : ಬೆರಳಚ್ಚಿನ ಪ್ರತಿಗಳನ್ನು ಸಿದ್ಧಮಾಡಿಕೊಡು (ರೂಢಿ). [ಬೆರಲ್ + ಅಚ್ಚು$_3$]

ಬೆರಲಾಡಿಸು (ಕ್ರಿ). ೧. ಬೆಟ್ಟನ್ನು ಅಲ್ಲಾಡಿಸು. ೨. (ಆಲಂ) ಕಲಕು : ಕೆದಕು : ಹಿಂದಿನ ಜೀವನದ ನೆನಪು ಮೆಲ್ಲನೆ ಅವಳ ಅಂತರಾಳವಲ್ಲಿ ಬೆರಲಾಡಿಸಲಾರಂಭಿಸಿತ್ತು (ಹಾಶುಪು. ೯).

[ಬೆರಲು (< ಬೆರಲ್) + ಆಡಿಸು]

ಬೆರಲು 'ಬೆರಲ್' ನೋ.

ಬೆರಲುಂಗುರ, ಬೆರಳುಂಗುರ (ನಾ). ಬೆಟ್ಟಿನಲ್ಲಿಟ್ಟುಕೊಳ್ಳುವ ಉಂಗುರ; ಅಂಗುಳೀಯಕ : ಕೈಯಂ ನೋಡಿ ಬೆರಲುಂಗುರಮಂ ಕಾಣದೆ ... ಅಂಜಿ ದೆಸೆಗಳಂ ನೋಟ್ಟಿನ್ನೆಗಂ (ಪಶಾ.ರಾ. ೩-೬); ತೊಳಪ್ಪ ಬೆರಲುಂಗುರಮಿಂಚರ ಮಿಾವ ನೇವುರಂ (ಕಬ್ಬಕಾ. ೩೯೦). ಬೆರಳುಂಗುರ : ಘಳಿಘಳಿರೆ ನಿಮ್ಮ ಹೊಳೆವ ಬೆರಳುಂಗುರ ಕಿಣಿಕಿಣಿನಾದ (ಪುರಂದ. ೦-೦೯೦-೦) ; ಕಾಲರಾಯನ ಬೆರಳುಂಗುರದೊಳು ಗಾದೆ ಮಿರುಗುವ ಹೊಸ ಪೊಚ್ಚ ಪರಳು (ಇಂಕಾಶ. ೨೨೦-೮೯). [ಬೆರಲ್ + ಉಂಗುರ]

ಬೆರಲೆತ್ತು, ಬೆರಳೆತ್ತು (ಕ್ರಿ).(ಆಲಂ) ಮೇಲ್ಮೆ ಅಥವಾ ಶ್ರೇಷ್ಠತೆಯನ್ನು ಸಾರು : ದೊರೆವೆತ್ತ ತರ್ಕಶಾಸ್ತ್ರದ ಪರಿಣತಿಗಂ ನೆಗಟ್ಟ ಚಕ್ರವರ್ತಿಯ ಸಭೆಯೊಳ್ ಬೆರಲೆತ್ತಿದರೆಂದೊಡೆ ವಾದಿರಾಜದೇವರ ಸಮಾನಮಾರೀ ಧರೆ ಯೊಳ್ (ಸುಕುಪು. ೦-೩೯); ನನೆಯಂಬುಗಳ್ಗೆ ಬೆರಲೆತ್ತುವರಲ್ಲಿಯು ಮಾಲೆ ಗಾರ್ತಿಯರ್ (ಪುಲ್ಲಕು. ೨-೩೯) ; ಬೆರಲೆತ್ತುತ್ತೆಯ್ದೆ ಕೊಂಡಾಡಿದನವನ ಮಹಾಶೌರ್ಯಮಂ ಪಾಂಡುಪುತ್ರಂ (ಕಬಕಂ. ೯-೯೮). ಬೆರಳೆತ್ತು : ಸಲ ಭೂವಲಯಕೆ ಮೆಱೆಸುವಾತನೀ ಪೊಳಲಾಣ್ಮನೊರ್ವನೆ ಸಭಾಟಕೆಯೊಳೆಂದು ಬೆರಳೆತ್ತಿ ತೋಱಸುವಂತೆ ನೋಟಕರ ಕಣ್ಗೆ ಕಾಣಿಸಿದುವೆಣ್ದೆಸೆಯ ಡೆಂಕಣಿಯ ಪಳವಿಗೆಗಳ್ಗಳು (ಕೈಬಿಶಾ. ೦೬-೯). [ಬೆರಲ್ + ಎತ್ತು$_1$]

ಬೆರಲ್ಮಿಡಿ (ಕ್ರಿ). ೧. ಬೆರಳುಗಳ ಮೂಲಕ ಅಭಿನಯಿಸು : ಕರವಿನ್ಯಾಸ ಮಾಡು : ಸಭೆಯ ಶೋಭೆಯುಮಂ ಸಾಮ್ರಾಜ್ಯದುನ್ನತಿಯುಮನೆಡೆ ವಿಡದೆ ಬೆರಲ್ಮಿಡಿದು ಬಿಚ್ಚಳಿಸಲ್ (ವರ್ಧಪು. ೩-೯ವ). ೨. (ಆಲಂ) ಸೋಜಿಗಗೊಳ್ಳು: ಅಚ್ಚರಿಗೊಳ್ಳು : ಸೊಡಗರ್ಡಿಯೊಯ್ಯನಾಗೆ ... ಚಂದ್ರಿಕಾಪ್ರಭೆ ಮೊದಲ್ಗೊಡೆ ನಾಡೆ ವಿತರ್ಕದಿಂ ಬೆರಲ್ಮಿಡಿದು ಗುಣಾರ್ಣವಂ ನೆಱಿಯೆ ನಿಟ್ಟಿಸಿದಂ ಬೆಳಗಪ್ಪ ಜಾಪಮಂ (ಕಂಶಶಾ. ೯-೦೦೦).

[ಬೆರಲ್ + ಮಿಡಿ$_1$]

ಬೆರಲ್ಮಿಡಿಸು (ಕ್ರಿ). (ಆಲಂ) ಸೋಜಿಗವನ್ನುಂಟುಮಾಡು; ಅಚ್ಚರಿಗೊಳಿಸು : ಮದನನೈದಂಬಿನೊಳುಬ್ಬುವ ಸೌಂದರ್ಯದ ಕೈಮಿಕ್ಕಿರ ಕಾಂತೆಯು ಬೆರಲ್ ಬೆರಲ್ಮಿಡಿಸುಗುಂ (ಪುಲ್ಲಕು. ೩-೬೦).

[ಬೆರಲ್ + ಮಿಡಿಸು (< ಮಿಡಿಯಿಸು)]

ಬೆರಸು$_1$ 'ಬೆರೆಯಿಸು' ನೋ.

ಬೆರಸು$_2$ (ನಾ). ೧.ಸಂಬಂಧ; ನಂಟು : ಪರಶಿವನ ಸಲ್ಲೀಲೆವೆರಸಿನಿಂ ವಿಶ್ವ ಮಿಪ್ಪಿರವ ಗುರುರಾಯ ಸುಪಿಪೆ ಕಗೊರೆದ (ಮಮಶೀಬ. ೩ ಸೂಕಿ). ೨. ಕೂಟ : ರತಿ : ಬೆರಸು ಬೆಲ್ಲಣೆಯಿಕ್ಕಿಯಾಶೆವಾಶೆಯ ದೇಶ ಚಕ್ರ ಮಾಲಿಕೆನ ಜಾವಡಿ . . . ಸೈಪುದೋಜುವ ಸೂಳೆಗೇರಿ ಸೊಗಸಾದುದಲ್ಲಿ (ಸಂವಿಪಾ. ೨೩-೦೬). [< ಬೆರಸು$_1$]

ಬೆರಸಂ$_3$ (ಅ). ಸಹಿತ; ಒಡನೆ: ಸಂಗಡ : ಗಂಗಮಹಾನಾಯ್ಕಂಗೆ ಪೆರ್ಬ್ಬದಂಗಟನಿವೆರಸು ಮೂವತ್ತುಗುಳ ಅಯ್ಗಳ ಪಾಟು ಕೊಟ್ಟೋರ್ (ಎಕ. IX. ಹೊಸಕೋ. ೮೬-೫ ; ಸು.720); ಮಾಣಿಗಳ್ವೆರಸು ಪೊಱಪೊಟಲೊಳ್ ಬಟ್ಟಾಡುತ್ತಿರೆ (ಪಶಾ.ರಾ. ೩೬-೨೩); ಪರಿಮಿತಮಹೀಂದ್ರಸಮಾಜಂ ಬೆರಸು ರಾಜಭವನಮಂ ಪೊಕ್ಕು (ಆದಿಪು. ೬-೦೦೮ವ) ; ಸ್ಥಾಣುವೋಲ್ ನಿಶ್ಚಲತ್ವಂ ಬೆರಸಾದಂ ಸೂರ್ಯಬಿಂಬಕ್ಕಭಿಮುಖನೆನಿಪೀ ಮೌನಿ ಶಾನಿರ್ವ ತಾಣಾ (ಶಾಕುಂತ. ೦೦೨-೦೬೯). [< ಬೆರಸು$_1$]

ಬೆರಳ್ 'ಬೆರಲ್' ನೋ.

ಬೆರಳಚ್ಚು 'ಬೆರಲಚ್ಚು' ನೋ.

ಬೆರಳಚ್ಚುಮಣೆ (ನಾ). ಬೆರಳಚ್ಚು ಜೋಡಿಸಿರುವ ಮಣೆ; ಬೆರಳಚ್ಚು ಯಂತ್ರ : ಬೆರಳೊತ್ತುಮಣೆ, ಬೆರಳಚ್ಚುಮಣೆ, ಬೆರಳುಮಣೆ (Key-board. ಪತ್ರಿಪ. ೯೯). [ಬೆರಳಚ್ಚು (< ಬೆರಲಚ್ಚು) + ಮಣೆ$_1$]

**ಬೆರಳಚ್ಚುಯಂತ್ರ** (ನಾ). ಬೆರಳಚ್ಚಿನ ಯಂತ್ರ; ಟೈಪ್‌ರೈಟರ್: ಈಗ ಕನ್ನಡ ಬೆರಳಚ್ಚು ಯಂತ್ರಗಳು ಬಹಳ ಬೇಕಾಗಿವೆ (ಲಿಪಿ).
[ಬೆರಳಚ್ಚು (< ಬೆರಲಚ್ಚು) + ಯಂತ್ರ]

**ಬೆರಳಲುಕ** (ನಾ). ಬೆಟ್ಟನ್ನು ಅಲ್ಲಾಡಿಸುವುದು, –ಅಲುಗಿಸುವುದು: ಧರೆಯೊಳು ನಟ್ಟ ದಿಟ್ಟಿಯಲುಜುತ್ತಧರದೆ ಪೊರಳುವ ತುದಿನಾಲಗೆಯ ಬೆರಳಲುಕದೊಳಾಂದೋಳಿಪ ಮಸ್ತಕದರಳುಗಣ್ಣಬಲೆಯೊಪ್ಪಿದಳು (ಕಂಕಾ. ೯–೦೭೮). [ಬೆರಳು (< ಬೆರಲ್) + ಅಲುಕ]

**ಬೆರಳಾಣತಿ** (ನಾ). ಬೆಟ್ಟಿನಿಂದ ಮಾಡುವ ಅಪ್ಪಣೆ. –ಆಜ್ಞೆ: ನನ್ನಂತೆ . . . ಎಲ್ಲರೂ ಶಾಂತಲಾದೇವಿಯವರ ಬೆರಳಾಣತಿಯಲ್ಲಿ ನಡೆಯುವುದು ಒಂದು ಗೌರವ ಎಂದುಕೊಂಡಿದ್ದೇವೆ (ಶಪಾ. ೦೯೭).
[ಬೆರಳು (< ಬೆರಲ್) + ಆಣತಿ₃ (< ಆಣತಿ)]

**ಬೆರಳಿಚ** (ನಾ). ಬೆಟ್ಟಿನಲ್ಲಿ ಹುಟ್ಟಿದುದು; ಉಗುರು: ನಖ: ಬೆರಳಿಚದ ಕೂರ್ಮೊನೆಯು ಮಿಡಿವ ಹಿಂಸೆಗೆ ತಂತಿ ತಾಂ ಬೀಣೆಯಿಂಚರವೀಯುವಂತೆ (ಶ್ರೀರಾಮಾ. ೦೦೦–೩೦೫). [ಬೆರಳು (< ಬೆರಲ್) + –ಇಚ]

**ಬೆರಳಿಡು** (ಕ್ರಿ). (ಅಲಂ) ಗುರುತಿಸು; ನಿರ್ದೇಶಿಸು: ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನಾಟಕವಿತ್ರ ಇಲ್ಲವೇ ಎಂಬ ಚರ್ಚೆಯಲ್ಲಿ ಗದಾಯುದ್ಧ ಮತ್ತು ಹರಿಶ್ಚಂದ್ರಕಾವ್ಯಗಳ ನಾಟಕೀಯತೆಯ ಕಡೆ ಬೆರಳಿಡುವುದು ಸಂಪ್ರದಾಯ (ಕೂವೃಕು. ೨೬ ಅಡಿ); ಸುಂದರಕೃತಿಯೊಳು ಕುಂದಿರು ವೆಡೆಯೊಳೆ ಬೆರಳಿಡುವನು ನೋಡು ಖಳನು (ಬಂಶಾಶ. ೬೭–೨೨).
[ಬೆರಳು (< ಬೆರಲ್) + ಇಡು₁]

**ಬೆರಳಿಸು** (ಕ್ರಿ). ಬೆಟ್ಟಿನಿಂದ ಬಾಜಿಸು; ಮಿಟು; ನುಡಿಸು: ಹುರುಳಿನ ಅರಳರಳಿಸಿ ಮಾಲೆ ಮಾಡಿ ಕೊರಳಿಸಿ ಹೃದಯವೀಣೆ ಬೆರಳಿಸಿ (ಅರಳು. ೦೯–೨೦). [ಬೆರಳು (< ಬೆರಲ್) + –ಇಸು₃]

**ಬೆರಳು** ‘ಬೆರಲ್’ ನೋ.

**ಬೆರಳುಂಗುರ** ‘ಬೆರಲುಂಗುರ’ ನೋ.

**ಬೆರಳುಕಾಪು** (ನಾ). ಕೈಬೆರಳುಗಳಿಗೆ ಅಪಾಯವಾಗದಂತೆ ಹಾಕುವ ಕೈಚೀಲ: ಅರ್ಜುನನು ಚಿನ್ನದ ಕವಚವನ್ನು ತೊಟ್ಟು ಬೆರಳುಕಾಪನ್ನು ಕಟ್ಟಿಕೊಂಡು . . . ಕಾಣಿಸಿಕೊಂಡನು (ಕಕಥಾ. ೨೩).
[ಬೆರಳು (< ಬೆರಲ್) + ಕಾಪು]

**ಬೆರಳುಮುರಿ** ‘ಬೆರಳ್ಮುರಿ’ ನೋ.

**ಬೆರಳೆತ್ತು** ‘ಬೆರಲೆತ್ತು’ ನೋ.

**ಬೆರಳ್ಮುರಿ**, ಬೆರಳುಮುರಿ (ಕ್ರಿ). (ಬೆಟ್ಟಿನಿಂದ) ನೆಟಿಕೆ ತೆಗೆ; ಲಟಿಕೆ ಮುರಿ: ಎಲ್ಲ ನಾರಿಯರ್ಕದೆ ಕಂಗೆಟ್ಟು ತಾವು ಕಾಣೆಯೆನುತ್ತ ಬೆರಳ್ಮುರಿವುತೆ (ಶಬಪೊ. ೦೦–೯೩). **ಬೆರಳುಮುರಿ:** ಮುದುಕಿಯು ಕಣ್ಣೀರು ಒರೆಸಿಕೊಂಡು ಜಯಂತನ ಮುಖದೆದುರು ಕೈಯಾಡಿಸಿ ಒತ್ತಿಕೊಂಡು ಬೆರಳುಮುರಿದಳು (ಜಯಂತ. ೩೨೩). [ಬೆರಳ್ (< ಬೆರಲ್) + ಮುರಿ₁]

**ಬೆರಿಂಕ** (ನಾ). ಒಂದು ಬಗೆಯ ಜಿಂಕೆ: ಪೊದೆ ಪೊದರುಗಳಲಿ ಮೊಲ ವಾಗಲಿ, ಬೆರಿಂಕವಾಗಲಿ, ನೆಗೆದು ಅದರ ಬೆನ್ನುಹಿಡಿಯಲು ಯತ್ನಿಸು ವುದೂ ಉಂಟು (ಪಾಗಿ. ೬೭). [← ತುಳು. ಬರಿಂಕ]

**ಬೆರಿಗಿ** (ನಾ). ಪಟೇಲ ತಾನು ಅಧಿಕಾರಿಗಳ ಸತ್ಕಾರ ಮುಂತಾದುದಕ್ಕೆ ಹೆಚ್ಚಾಗಿ ವ್ಯಯಮಾಡಿದುದನ್ನು ತುಂಬಿಕೊಳ್ಳಲು ರೈತರನ್ನು ಕೇಳಿ ತೆಗೆದುಕೊಳ್ಳುವ ಒಂದು ಬಗೆಯ ತೆರಿಗೆ: ಇವು ಪೂರ್ವಕಾಲದ ತೆರಿಗೆಗಳು: ಪಾನೆತೆರಿಗೆ, ಹುಲ್ಲುಹಣ. . .ಬೆರಿಗಿ (ಪಟೇಲ ತಾನು ಹೆಚ್ಚಾಗಿ ತೆತ್ತದ್ದನ್ನು ತುಂಬಿಕೊಳ್ಳಲು ರೈತರನ್ನು ಕೇಳಿ ತೆಗೆದುಕೊಂಡದ್ದು) (ಪಪ್ಪುಪು. ೨೯೩). [?]

**ಬೆರಿಯ** ‘ಬೇರಿ₃’ ನೋ.

**ಬೆರೆ₁** (ಕ್ರಿ). ೧. ಕೂಡು; ಸೇರು; ಮಿಶ್ರವಾಗು: ಕೃತಭಪ್ಪೋತ್ಸವ ಮಾಘಶುದ್ಧದಶಮಿನಾಪುಣ್ಯಾಹಯುಕ್ತಂ ಪ್ರಜಾಪತಿಯೋಗಂ ಬೆರೆದಂದು (ಆಕಪು. ೩–೨೨): ಪರಿಚಾದ್ರುತೀರ್ಥ ಸಪ್ತತೀರ್ಥವೆಂತೆಂಬ ಹಲವು ತೀರ್ಥಂಗಳ ಬೆರೆದು (ಕಂಪಿ. ೫–೯೦); ಆಹಾರದಲ್ಲಿ ಕಬ್ಬಿಣದ ಅಂಶ ಎಷ್ಟಿದೆಯೆಂಬುದು ಮುಖ್ಯವಲ್ಲ. ರಕ್ತದೊಡನೆ ಎಷ್ಟು ಬೆರೆಯುತ್ತೆಂಬುದು ಮುಖ್ಯ (ಆರುಶಾ. ೫೯). ೨. ಸಂಭೋಗಿಸು; ನೆರೆ: ಬೆರೆವಂಗೆ ಭೋಗವೂ ಮೊರೆವಂಗೆ ರಾಗವೂ ಬರೆವಂಗೆ ಓದು ಬರುವಂತೆ ಸಾಧಿಪಗೆ ಬಾರದಿಹುದುಂಟೆ (ಸರ್ವಜ್ಞ. ೦೩೩೦): ಮತ್ತೊಂದು ದಿನ ರಾಯ ಅವಳಲ್ಲಿ ಹೋಗಿ ಬೆರೆದು ಬರುವಾಗ (ಚಿತ್ರ. ೦೨೨); ಅರೆನಿಮಿಷ ನಿನ್ನೊಡನೆ ಬೆರೆದು ಸುರವಾರಾಂಗನಾಪುರವ ನೆನೆವೆ (ಪಂಸಾಂ. ೫–೬–೫೭). ೩. ಲೀನವಾಗು; ಐಕ್ಯವಾಗು: ಉದಾತ್ತಜಸವೇಶ್ವರಾದಿಗಳವೀ ಗ್ರಹಿಸಿ ತದ್ವ್ಯಕ್ತಿಯಿಂ ವೀರಶೈವಪ್ರತಿಷ್ಠಾಚಾರ್ಯರೆನಿಸಿ ಶಿವನೊಳ್ ಬೆರೆಯರೇ (ಶಬ್ದಾ. ೩–೫).

**ಬೆರೆದಾಟ** = ಸಂಭೋಗ; ಕೂಟ; ರತಿಕ್ರೀಡೆ: ಕುರುಬಂಗೆ ಕುಜಿಯಾಸೆ ಮಜಗಳಿಗೆ ಪೊಶೆಯಾಸೆ ಸರುಪರಿಗೆ ಮಳೆಯು ಬರುವಾಸೆ ಸೂಳೆಗೆ ಬೆರೆದಾಟದಾಸೆ (ಸರ್ವಜ್ಞ. ೦೯೦೫).

[ದೇ. ॥ ತಮಿ. ವಿರಚು, ವಿರವು; ಮಲ. ವಿರಕು, ವಿರಕ್ಕು; ತುಳು. ಬಿರಾವು, ಬಿರಸು; ತೆಲು. ಬೆರಯು; ಕುರುಖ್. ಬಿರ್ಖ್‌ನಾ; ಮಾಲ್ತೊ. ಬರ್ಗೆ, ಬರ್ಗ್ರೆ]

**ಬೆರೆ₂** ‘ಬೆಚಿ₃’ ನೋ.

**ಬೆರೆತ** (ನಾ). ಜೋಡಣೆ; ಹೊಂದಾಣಿಕೆ; ಸಂಬಂಧ: ಬಗೆಬಗೆಯ ಬೆರೆತದೊಳು ತರತರದ ರಂಜನೆಯ ಧೀರಾನುಭೂತಿಗಳ ರಸವ ತಳೆದು (ಮರಿದೀ. ೪೦–೩). [ಬೆರೆ₁ + –ತ₂]

**ಬೆರೆಯಿಸು**, ಬೆರಸು₁, ಬೆರೆಸು, ಬೆಜಿಸು (ಕ್ರಿ). ೧. ಕೂಡಿಸು; ಮಿಶ್ರಮಾಡು: ಶುದ್ಧಮಪ್ಪ ಪೊನ್ನೊಳ್ ದುಷ್ಕರಪ್ಪವರ್ ತಮ್ಮ ಲಾಭ ದಾಸೆಯಿಂ ಕಿಸುಬೆಳ್ಳಿಯೆಂಬಿವಂ ಬೆರೆಯಿಸಿ ... ಪೊನ್ನೆಂದು ತೋಱಿಸುವ ತೆಱದಿಂ (ಧರ್ಮಾಮೃ. ೯–೩೯); ನಿನ್ನ ಜೀವನದಲ್ಲಿ ಈ ಸುಗಂಧವನ್ನು ಯಾರು ಬೆರೆಯಿಸಿದರು (ಶ್ಯಾಮಲಾ. ೬). **ಬೆರಸು₁:** ೧. “ಬೆರಸು– ಸಮ್ಮಿಶ್ರೇ” (ಶಮದ); ಆಗಮಕೋವಿದನಿಗದಿತಮಾರ್ಗವಿಂದಂ ಬೆರಸಲ್ಕ ಮಾಗದೀ ಸಕ್ಕದದೊಳ್ (ಕಲಾ. ೦–೫೦); ಮುತ್ತು ಪವಳಂ ಬೆರಸಿದ ಪೋ[ಲಾಯ್ತು] ಚಿನ್ನತಪಸಿಯ ಕೆಯ್ಯೊಳ್ (ಪಂಪಭಾ. ೬–೦೦); ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ (ಧರ್ಮಾಮೃ. ೦–೯೩). ೨. ಸೇರು; ಕೂಡು: ಆ ವರ ಚಕ್ರವಾಳಪುರದೊಳ್ ಕಳಭಾಷಿಣಿ ಮುಖ್ಯಮಪ್ಪ ಕಾಂತಾವಳಿಯುತ್ತರಂ ಬೆರಸಿ ತಾನಿರುತಿರ್ದ ಬಳಿಕ್ಕಂ (ಕುಸುಮಾ. ೦೩–೨೪); ಭಜಸಿದೈ ಭರ್ಗನನು ಶಾಂಭವಯಜನಸಾರಸಮಾಧಿ ಶಿವಪದದರಜವ ಬೆರಸಿತ್ತ (ಕುವ್ಯಾಕ. ೦೦–೨೭). ೩. ಸಂಭೋಗಿಸು; ನೆರೆ: ಪೆಂಡಿರ್ ಪೆಂಡಿ ರೋಲೆಂತು ಬೆರಸುವರಬಲೇ (ಕಂಕಥಾ. ೦–೬೬); ಅರಸರು ಮುಚಕ್ಕೆ ಬರಿಸಿ ಎನ್ನ ಬೆರಸಿದ ಬಳಿಕ ಆನಂಜುವಳೆ (ಬಸವ. ೬೩೪). ೪. ಐಕ್ಯವಾಗು; ಲೀನವಾಗು: ಸೇರಿಹೋಗು: ಬಿಚ್ಚು ಬೇಱಲ್ಲ ಬೆರಸಿ ಹೋದಲ್ಲದೆ ದ್ವಂದ್ವರಹಿತ ಸೌರಾಷ್ಟ್ರಸೋಮೇಶ್ವರಾ ನಿಮ್ಮ ಶರಣ (ಆದಯ. ೯೩–೨೩); ದುಃಶಸನದಿಂದಮೃತಾಹಾರವಾಯಿತ್ತು ಬೆರಸಿದಡಿನ್ನೆಂತೊ ಗುಹೇಶ್ವರಾ (ಅಲ್ಲಮ. ೦೬೬–೬೫೦); ಮಹಿಮೆಯಱಿದು ಬೆರಸುತಿರ್ಪುದೀಶ್ವರಾಂಘ್ರಿ ಯುಗದ ಭಕ್ತಿಯಿಂದ ಸಂಸ್ಕೃತಿಗಳನೊದವುಮುಕ್ತಬುಧರು ಪಡೆದು (ಕಾಸಂತ. ೬–೨೩೩ ರಗಳೆ). ೫. ತಾಗು; ಘಟ್ಟಿಸು; ಸೆಣಸು: ಎರಡು ವಳ ಗಟಕ್ಕಿದುದು ನೆಲ ಬಿರಿಯೆ ಬೆರಸಿತು (ಕುವ್ಯಾಕ. ೯–೨೯); ಅಸುರಕುಲಮಣಿ . . . ಬೊಬ್ಬಿಱಿದು ಬೆರಸಿದಂ ಬಾಹಿಯಿಂ ಪರಬಲವನು (ತಪು. ೩೯–೪)

೬. ಹಬ್ಬು ; ವ್ಯಾಪಿಸು ; ಹರಡು : ಬೀತ ಕೈದುಗಳಖಿಳದೆಳಸಂಘಾತವನು ಬಾಣಾಗ್ನಿ ಬೆರಸಿತು (ಕುಮಾ.ರಾ. ೧೯-೩೯) ; ಹರಿದು ಬೆರಸಿತು ಬೇಡಪಡೆ . . . ಆಖಿಳದೆಸೆಗಳಲಿ (ತೊರವೆ. ೩-೩-೦೩); ಏನನೆಂಬೆನು ನೃಪತಿ ಕಿಚ್ಚಿನ ಹಾನಿಯನು ಬನದೊಳಗೆ ಬೆರಸಿತು[ಪಾಠಾಂ. ಚಲಿಸುತ] ಭಾನುಮಂಡಲವಡಗೆ ಮುಸುಕಿದ ಹೊಗೆಯ ಹೊರಳಿಯಲಿ (ಶಶಿ. ೬-೬). ೭. ಗೊಂದಲಗೊಳಿಸು ; ಗೋಜುಗೊಳಿಸು : ಮುಂದೆ ಪಂಚಾಕ್ಷರಿಯನಕ್ಷರವಾಗಿ ಲಿಖಿಸುತ ಬೆರಸಿ[ಪಾಠಾಂ. ಸು]ಲೆಕ್ಕದ ಸರಿಗೆ ಬಂದಿರಲೋದುವುದನೆಜಿಯು (ಐಸಪು. ೩೩-೬೩). ಬೆರೆಸು : ೨. ಪಾಪೋತ್ಕರದೊಳ್ ಬೆರಸಿದ ಜೀವೋತ್ಕರಮುಂ ನಿವೃತ್ತಿಗೆ ನೆಗೆಯಲಾರ್ಕುಮೆ ಬೇಗಂ (ರಾಜಾಶ್ವ. ೯-೦೨೦); ವ್ಯಸನತೃಷ್ಣೆಯು ಕೀಳುಚಿತ್ತದ ಮಿಸುನಿಯೊಳು ಬೆರೆಸಿತು ಸುಬುದ್ಧಿಯ ರಸವು ಹಾಜಿತು ಹುದಿದ ರಾಗದ್ವೇಷಮ್ಮುಯಲಿ (ಕುಮಾ.ಸ. ೦೩-೪೪). △ ಬೆಱಸು : ೧. ನೊಳಂಬದಡಿಗ ರಾಚಮಲ್ಲಂ ಮಯಿನ್ದಡಿ ಗುಣ್ಡಗೆ ಗುಳ್ಳ ಎನೆಬರು ಸಮಸ್ತಬಲ ಬೆಱಸಿ ಬಿಟ್ಟೊಡೆ ಗೊಟಗೊಟ್ಟು ಯಿಟ್ಟಟಿವಲ್ಲಿ (ಎಇ. XXIV. ೨೬-೮ ; ಸು. 885).

[ಬೆರ್₁ + — ಇಸು₃]

**ಬೆರೆವೊಡಲ್** (ನಾ). ಒಂದುಗೂಡಿದ ಶರೀರ ; ಒಂದಾದ ದೇಹ : ಐಕಿಲ್ಗಂಜಿ ನಂಜುಂಡಂ . . . ಪಣೆಯ ನಡುಗಣ್ಣ ಕಿಚ್ಚನುಜ್ಜಳಿಸಿ ಸಜ್ಜನ ಬೆಂಬೂದಿಯ ಮೆಯ್ಗೆ ಪೂಸಿ ದಟ್ಟದೊವಲಂ ಪೊದೆದಗಜೆವೆರಸು ಬೆರೆವೊಡಲೊರ್ದಂ (ರಾಜಾಶ್ವ. ೦೦೩-೬). [ಬೆರ್₁ + ಒಡಲ್]

**ಬೆರೆಸು** 'ಬೆರೆಯಿಸು' ನೋ.

**ಬೆರ್ಕೆ** 'ಬೆರಕೆ' ನೋ.

**ಬೆರ್ಕು**, ಬೆಕ್ಕು (ನಾ). ಸಾಮಾನ್ಯವಾಗಿ ಮುದ್ದಿಗಾಗಿ ಪಳಗಿಸಿ ಸಾಕುವ, ನಾಲ್ಕು ಕಾಲುಗಳುಳ್ಳ ಒಂದು ಮಾಂಸಾಹಾರಿ ಪ್ರಾಣಿ ; ಮಾರ್ಜಾಲ : ಒಯ್ಯನೆ ಪಾಪುಗಳಂಗೆಯ್ದವರ್... ಬೆರ್ಕುಮೊಂತಿಯುಂ ಕಪ್ಪೆಯುಂ ಮುಂಗುರಿಯುಂ ಮೊದಲಾಗೊಡೆಯ ಸ್ಥಲಚರಂಗಳುಂ . . . ಆಗಿ ತಿರಿಕಗತಿಯೊಳ್ ಪುಟ್ಟಿ (ಶಬ್ದಾ.ರಾ. ೯೭-೬) ; ಬೆರ್ಕುಗಳದಿರೊಳಗಾಡಿದೊಡರ್ಕೋಲದಯಸಮುಯುಮುಪ್ಪಿನಂ ಪೋಗದೆ ಮಾಣ್ದರ್ಕೆ ಪಗಲರ್ಕೆ ಕಾದಿದೊಡಿರ್ಕಂದಿನ ದೆವಸಮೊಳ್ಪನಜಿಸುವ ಮನುಜಂ (ಲೋಕೋಪ. ೦೨-೦೩). ಬೆಕ್ಕು : "ಓತುಃ, ಬಿಡಾಳಃ, ಮಾರ್ಜಾರಃ, ವೃಷದಂಶಃ — ಈ ೪ ಬೆಕ್ಕು" (ಶಬ್ದಮು. ೪೦-೮೩); ಬೆಣ್ಣೆಯುಂ ತಿಂದ ಬೆಕ್ಕಿನಂತೆ ಅಜಿಯುಲೀಯದೆ ಮತ್ತೆಯುಟಿದ ಮತ್ಸ್ಯಂಗಳನೀ ತೆಜದೊಳ್ ತಿನುತಿರ್ದ (ಕಂಪಕಂ. ೮೪-೨೦) ; ಗಿಳಿಯೋದಿ ಫಲವೇನು ಬೆಕ್ಕು ಬಹುದ ಹೇಳಜಿಯದು (ಐಪವ. ೦೨೩); ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ (ಗಾದೆ).

ಬೆಕ್ಕಿನ ಕಣ್ಣು = ಬೆಕ್ಕಿನ ಕಣ್ಣಿನಂತೆ ಕಂದುಬಣ್ಣವುಳ್ಳ ಕಣ್ಣು : ಅವಳದು ಬೆಕ್ಕಿನ ಕಣ್ಣು (ರೂಢಿ).

[ದೇ.॥ ತಮಿ. ವೆರುಕು ; ಮಲ. ಪೆರುಕು, ವಿರುಕು, ಮೆರುಕು ; ತುಳು. ಬೆರು; ಕೊಡ. ಬೆಕ್ಕೀ; ಕುರುಖ್. ಬೆರ್ಖಾ; ಮಲ್ತೊ. ಬೆರ್ಗೆ]

**ಬೆರ್ಚಪ್ಪ** (ನಾ). ಹೊಲ, ಗದ್ದೆಗಳಲ್ಲಿ ಬೆಳೆಗಾಗಿ ಬರುವ ಹಕ್ಕಿಗಳನ್ನು ಹೆದರಿಸಿ ಓಡಿಸಲು ಹಾಗೂ ಬೆಳೆದ ಬೆಳೆ, ಹೊಸಕಟ್ಟಡ ಮುಂತಾದುವುಗಳ ದೃಷ್ಟಿನಿವಾರಣೆಗಾಗಿ ನಿಲ್ಲಿಸುವ ಹುಲ್ಲು ಮುಂತಾದುವುಗಳಿಂದ ಮಾಡಿದ ಮನುಷ್ಯಾಕಾರದ ಬೊಂಬೆ ಅಥವಾ ಬಣ್ಣಗಳಿಂದ ರಚಿತವಾದ ಮುಖವಾಡ : ನಾನು ಗದ್ದೆಯಲ್ಲಿ ಹುಲ್ಲಿನ ಬೆರ್ಚಪ್ಪನನ್ನು ಮಾಡಿ ನಿಲ್ಲಿಸಿದರೂ ಅದು ಬರುವುದನ್ನು ಬಿಡಲಿಲ್ಲ (ಪತಿಪಾ. II. ೦೦೩೮). [ಬೆರ್ಚು₁ + ಅಪ್ಪ₁]

**ಬೆರ್ಚಿಸು**, ಬೆಚ್ಚಿಸು (ಕ್ರಿ). ಹೆದರುವಂತೆ ಮಾಡು; ಭಯಪಡಿಸು : "ಬೆರ್ಚಿಸು — ಭಯೇ" (ಕಶಬ್ದ) ; ಘನಸ್ತನಿತಮುಂ ಕೇಕಿಸ್ವನಮುಂ ನೀರ ಧಾರೆಯುಂ ಮನಂ ಬೆರ್ಚಿರ್ಕುಮಿಂತೆತ್ತಂ ಘನಸ್ತನಿ (ಕಬಿರಾ. ೨-೦೨೦); ತಪೋವನದ ಮುನಿಜನದ ಪರಮಾನುರಾಗಮುಂ ಬೆರ್ಚಿಸಿ ಕಾಮಾನುರಾಗಮುಂ ಬೆರ್ಚಿಸಿ ತದಾಶ್ರಮದೊಳಾಶ್ರಮಕ್ಕೆ ಗುರುವಾಗಿ ಪಾಂಡುರಾಜನಿರ್ಪನ್ನೆಗಂ (ಪಂಪಭಾ. ೦-೦೦೬ ವ); ಭೂಪಾಲನ ಮೇಲಿಕ್ಕಿ ನಡೆದಾತನಂ ಬೆರ್ಚಿಸಿ ಕುಮಾರಿಯರಂ ಪಿಡಿದು ತರ್ಪುದುಂ (ಶಾಂತೀಶ. ೩-೦೦೮ ವ). ಬೆಚ್ಚಿಸು : ಕಚ್ಚುವುವೆ ನಿಮ್ಮ ಚಿಪ್ಪಿನ ಹಲ್ಲುಗಳು ಬೆಚ್ಚಿಸುವುವೆ ನಿಮ್ಮ ಬಚ್ಚಣೆಯ ರೂಪುಗಳು (ಐಸಪ. ೩೬೨); ವಿಷದುರಿಯೂರಿ ಬೆಚ್ಚಿಸಿ ಬೆದಜಿಸಿದನತಿಬಲು ವನೇಚರರ (ತೊರವೆ. ೬-೩೩-೨೯).

[ಬೆರ್ಚು₁ + — ಇಸು₃]

**ಬೆರ್ಚು₁**, ಬೆಚ್ಚು₁, ಬೆಬ್ಬು (ಕ್ರಿ). ೧. ಹೆದರು ; ಭಯಪಡು : "ಬೆರ್ಚು — ಸಂತ್ರಾಸೇ (ಭಯಪಡು), ತೃಣಪುರುಷೇ ಚ (ದೃಷ್ಟಿಪರಿಹಾರಾರ್ಥವಾಗಿ ಮಾಡಿಡುವ ಬೊಂಬೆ)" (ಕಮುಧಾ); ಶಾಪಮುನೀಗುಮೆಂದೆ ದಿಕ್ತಕ್ರಮಂಪುಂಜಿ ಬೆರ್ಚಿ ಬೆಸಕೆಯ್ವುದು (ಶಾಂತಿಪು. ೧೯-೪೩); ಬಂದೆಜಗುವ ಜಿಲ್ಲಿದುಂಬಿಗೆ ಬೆರ್ಚಿ ನಿಂದು ಸೊಲ್ಲಿಪ ಪೂಮಾಲೆಗಾರ್ತಿ (ಮೋಹತ. ೩-೦೬). ಬೆಚ್ಚು₁ : ೧. ಪೆಸರ್ಗಂ ತೇಜಕ್ಕಮೊಂದೋಜೆಗೆ ಮಹಿತಮಹೀಪಾಳಕರ್ ಬೆಚ್ಚಿ ಬಾಯ್ಕೇಳಿಸಿ (ಆದಿಪು. ೦೪-೦೯೮); ನೊರಜಿನ ಕಳಕಳಕೆ ಕರಿ ಬೆಚ್ಚುವುದೆ (ಕುಮಾ.ಸ. ೯-೪೬); ಬೊಮ್ಮನ ಸದನಕಳಿಮುಖಿ ನಾದನಗ್ಗದ ತ್ರಿದಶಪತಿ ಬೆಚ್ಚಿದವು ಪಟ್ಟಣವಾ ದಿಶಾಧಿಪರ (ತೊರವೆ. ೬-೪೩-೪೦). ೨. ಅದುರು ; ಕಂಪಿಸು : ಗಂಡುಹುಡುಗರಿಬ್ಬರೂ . . . ಕೋಲಿನಿಂದ ಹೊಡೆದಾಡಿದ್ದರು. ರಾಮುವಿನ ಮೂಗು ಬೆಚ್ಚಿ ರಕ್ತ ಸುರಿಯಿತು (ಸಂಧ್ಯಾ. ೩೬). △ಬೆಬ್ಬು : ೧. ಬೇಡರಬ್ಬೆಸೆ ಕುಟುಂಬಬ್ಬೆಟಬ್ಬಿ . . . ಧರೆಗೆ ಸಸ್ದಂ ಸಿಂಹಭೂಪಾಳಕರ (ಎಕ. VIII, ತೀರ್ಥ. ೦೮೪-೨೦; 1033).

ಬೆರ್ಚುಬೀಟು. ಬೆಚ್ಚಬೀಳು, ಬೆಚ್ಚುಬೀಳು = ಹೆದರಿಕೆಯಿಂದ ನಡುಗು: ಸಾರ್ದು ಬಂದತ್ತಿದೆ ಭೀಕರಾಕೃತಿಯದಾಂತಿರದೊಂದು ಕೃತಾಂತಮೂರ್ತಿಯೆಂದುತ್ತಮರೆಲ್ಲರಳ್ಕಲುಸುರ್ದಂ ಚರನಂದುಚ್ ಬೆರ್ಚಿ ಬಿಟುತಂ (ಅದ್ಭು.ಟಿ. ೪-೬೦) ; ಬೆಚ್ಚಿ ಬಿದ್ದತ್ತಿದ್ದಕ್ಕಿದ್ದಂತೆ ಮಣಿಪುರಂ ಧರೆ ಬಿರಿಯಲ್ಕಿರಿಯೆ ಶೋಕಭೇರೀರವಂ (ಶಶ್ರಾಂಗ. ೬೬-೨೪೩೦) ; ಅವನ ಕೆಂಪೆಡೆ ಹೊಳೆಯುವ ಕಣ್ಣು, ಕಂದುಬಣ್ಣದ ಗಡ್ಡ ಮೀಸೆಗಳು ಇವನ್ನೆಲ್ಲ ಕಂಡು ಅವಳು ಬೆಚ್ಚಿ ಬಿದ್ದು ಅವನನ್ನು ನೋಡಲಾರದೆ ಕಣ್ಣು ಮುಚ್ಚಿಕೊಂಡಳು (ಪತಿಪಾ. ೮); ಇದ್ದಕ್ಕಿದ್ದಂತೆಯೇ ಸ್ವಯದ್ ಬೆಚ್ಚು ಬಿದ್ದ (ಕತ್ತಲೆ. ೨೦).

[ದೇ.॥ ತಮಿ. ವೆರುವು; ಮಲ. ವೆರುಳು; ಕೊತ. ಬೊರಡ್, ಬೊರಟ್, ಬೊಟ್; ತೆಲು. ವೆಱ, ವೆಱಚು; ಕೋತ. ವೆರ್ಟ್, ವೆರ್]

**ಬೆರ್ಚು₂**, ಬೆಚ್ಚು₂ (ನಾ). ೧. ಹೆದರಿಕೆ ; ಭಯ : ನೋಡುವರೊಳ್ ಮನಂ ಬಯಸುವಂತಿರೆ ನಕ್ಕೆ ತುಳುಂಕೆ ಬಿಂಕದಿಂ ನೋಡುವುದ್ಯದ ಮಾತನೊಸೆದಾಡುವರೊಳ್ ಬಗೆ ಬೆರ್ಚುದೋಱ ಮಾತಾಡುವುದು (ಜಗನ್ನಾ. ೦೬-೦೨೫). ೨. = ಬೆರ್ಚಪ್ಪ : "ಬೆರ್ಚು — ಸಂತ್ರಾಸೇ (ಭಯಪಡು), ತೃಣಪುರುಷೇ ಚ (ದೃಷ್ಟಿ ಪರಿಹಾರಾರ್ಥವಾಗಿ ಮಾಡಿಡುವ ಬೊಂಬೆ)" (ಕಮುಧಾ); ಲೋಗರ ಕಣ್ಣಿಂಜಲ್ ತಾಗದಂತು ಬೆರ್ಚನಿಟ್ಟು ಪಕ್ಕಿಗಳಂ ಬೆದರ್ಚಲೊಡರ್ಚಿದ ತೋಂಟಿಗನೊಂದಾಯತಿಯುಂ ಕಂಡನಕ್ಕುಂ ರಾಮುಂ (ರಾಮಪಾಶ್ವ. ೩೩ ೨೭). ೧, ೨ : ಪಕ್ಕಿಗಳ ನೆರವಿಯೊಳ್ ಬರ್ಚು ಅಕ್ಕಿಸುವ ಮಂತ್ರದೊಳಿ ಪರ್ಚು (ಶಿಂತಂ. ೦-೦೯ ರಗಳೆ). ೩. ಗೊಂಬೆ; ಬೊಂಬೆ : ಮುಂಬಣ ದುಹಾರಾಜರೂ ತನ್ನ ಕಯ್ಯಾಟದ ಬೆರ್ಚು ಮಾತ್ರವಾಗಿರಬೇಕು (ಏಗತ. ೩೩-೦೦). ಬೆಚ್ಚು₂ : ೨. ಬೆಚ್ಚಿನ [ಪಾಠಾಂ. ಬೆಚ್ಚಿನ]ವಾಡಕೆಯಂತೆ ಬೆಚ್ಚಿಸಿಕೊಂಡಿದ್ದಡೇನಯ್ಯಾ (ಸವಚನ. ೪. ೩೯೦-೦೬೩೦) ; ಈತ

ಮಧ್ಯರಕೆ ಪೊಗ್ಗಿಬಹ ಕೀರಗಳ ಬೆದರಿಸಲಗ್ಗಳದ ಬೆಚ್ಚಹುದು (ಜಸರಾ. ೩೯-೬೪): ಬಳ್ಳಿಗಳ ಹಸಿರುಟ್ಟೆಳಿಗಳ ನಡುವೆ ನಿಂತ ಕರಿಮುಸುಡಿಯ ಬೆಚ್ಚೊಂದು ಇವಳೆಡೆಗೇ ನೋಡುತ್ತಿತ್ತು (ಮೂರುದಾ. ೨೮೩).

[< ಬೆರ್ಚು$_1$./ತಮಿ. ವೆರುಟ್ಟು]

**ಬೆರ್ಚುಗಟ್ಟು** (ಕ್ರಿ). (ಹೊಲ, ಗದ್ದೆಗಳಲ್ಲಿ ಹಕ್ಕಿ ಮೊದಲಾದವನ್ನು ಬೆದರಿಸಿ ಓಡಿಸಲು) ಮನುಷ್ಯಾಕೃತಿಯ ಬೊಂಬೆಯನ್ನು ಕಟ್ಟು: ತಾಳತೆಯುನಾರ್ಜ ನೆತ್ತಿಯ ಗಾಳಂ ಗಗನದೊಳಿಟಲ್ವ ವಾರಿಯ ಬೀರರ್ ಪಾಳಿಯೊಳಸೆದರ್ ಪಾಪದ ಜೋಳದ ಬೆಳಸಿಂಗೆ ಬೆರ್ಚುಗಟ್ಟಿದ ತೆಱದಿಂ (ಯಶೋಧ. ೦-೩೩).

[ಬೆರ್ಚು$_2$ + ಕಟ್ಟು$_1$]

**ಬೆರ್ಚುಗಣ್** (ನಾ). ಭಯದಿಂದ ಕೂಡಿದ ದೃಷ್ಟಿ; ಹೆದರಿಕೆಯ ನೋಟ: ನಡನಡನೆ ನಡುಗುತಿರ್ದಾ ಬೆರ್ಚುಗಣ್ಣಬಲೆಯಂ ಹುಬ್ಬುಗಂಟಿಕ್ಕಿ ನೋಡಿದನ್ . . . ನಿಶಾಚರೇಂದ್ರಂ (ಶ್ರೀರಾಮಪ. ೨೯೬-೪೯೯).

[ಬೆರ್ಚು$_2$ + ಕಣ್]

**ಬೆರ್ದಲೆ** 'ಬೆದ್ದಲ್' ನೋ.

**ಬೆಲಂಕು**, ಬೆಲಂಗು (ಕ್ರಿ). ೧. ಎಸೆ; ಬಿಸುಡು; ಒಗೆ: "ಜೆ(ಬೆ)ಲಂಕಿದಂ= ಈಡಾಡಿದಂ" (ಕಶಬ್ದ. ಶಂ. ೨). ೨. (ನದಿ ಮುಂತಾದುವು) ಉಕ್ಕಿ ಹೆಕ್ಕಳಿಯುಂಟಾಗು: ಅಂಗಜರಾಗಸಾಗರಂ ಬತ್ತಿ ಬೆಲಂಕಿ [ಶಾಕಾಂ. ೧] ಪೋಪುವುದು ಕಣ್ಗೆ ತಮಂ ಕವಿದಪ್ಪುದು . . . ಏಕೆ ಕಾಡಿದಪೆಯೋಪಳಿ ತೋಱು ಮುಖೇಂದುಬಿಂಬಮಂ (ಅಣಾವ. ೦೪-೬೬). **ಬೆಲಂಗು:** ೧. ನನೆಯುಂಬಂ . . . ಬಾಟಿಸ್ಸೊಂಪದೊಸ್ಸೆಕ್ಕಿ ಕೇತನಮಂ ಮಿಾಂಗೊಳ ದೊಳ್ ಬೆಲಂಗಿ ಮುನಿಪಾದೋಪಾಂತದೊಳ್ ಸಾಧುವೇಷನಿಷಣ್ಣಂ ರತಿಯಂ ಮರಳ್ಚಿ ಕಳೆದಂ (ಅನಂತ. ೩-೩೦). 'ಬಲಂಕು' ಪರಾ. [ ? ]

**ಬೆಲಂಗಯಿಸು** (ಕ್ರಿ). = ಬೆಲಂಕು ೧: ಆ ಮಹಾಮದೇಭಂ . . . ಸಪ್ತಮದಾವಸ್ಥೆಯಿಂದಾದ ಮನದ ಮಸಕದಿನಸವಸದೆ . . . ಮಂಕಡ ದಂದದಿಂ ಕಟ್ಟಿದ ಲೋಹಚರ್ಮಜಮಪ್ಪ ಮುಟ್ಟುಗಳನಿತುಮಂ ತಕ್ಕೈಸಿ ಬೆಲಂಗಯಿಸಿ ಬಿಸತಂತುಮಂ ಪಱಿವಂತೆ ಪಱಿದು (ಶಂಕ್ರಶೃ. ೯-೧೦೦ ವ).

[ಬೆಲಂಗು (<ಬೆಲಂಕು) + —ಇಸ್ಸು]

**ಬೆಲಂಗು** 'ಬೆಲಂಕು' ನೋ.

**ಬೆಲಗ** (ನಾ). ಒಂದು ಬಗೆಯ ಸಸ್ಯ: ಹಸುರುಗನ್ನಿ, ಬೆಲಗ, ಬಿಳೀ ಬೀಟಿ, ಬೆಟ್ಟದ ಹಸುರುಗೋಣಿ (ವೃಕ್ಷಿಗಿ. ೨೮-೩೯೬). [ ? ]

**ಬೆಲಗಸೆ**, ಬೆಗಸಿಲ್, ಬೆಗಸಿಲೆ (ನಾ). ಬೊಗಸೆ; ಸೇರೆ; ಅಂಜಲಿ: ಬೆಲಗಸೆಯಿನಳುರ್ಕೆಯೆ ಮೊಗೆಮೊಗೆದು ನೆತ್ತರಂ ಪವನಸುತಂ ನೆತ್ತಿ ಬೊಳಿಱಿದೆಱೆದು . . . ಜಡೆಗೊಂಡಿರ್ದುದ್ವೃತ್ತ ಕುಚಯುಗೆಯ ಕೇಶ ಮನೆತ್ತರಂ ಪಸರಿಸಿದಂ (ಕಂಪಕಾ. ೦೨-೦೫೩); ಒಡವುಟ್ಟಿದರಂ ಕೊಂದವರಡಗಂ ತಿಂದವರ ನೆತ್ತರಂ ಬೆಲಗಸೆಯೊಳ್ ಕುಡಿದೀ ನಿಸ್ತ್ರಿಂಶತೆಯಂ ಹಿಡಿಂಬಿಯಂ ಪೊರ್ದ ಕಲ್ಪನಾಗನೆ ಭೀಮಂ (ಗದಾಯು. ೩-೨೮); ಬೆಲಗಸೆಯಿಂದಮಿಾವ ಘನಸಾರದ ಬಾಯಿನಮೆತ್ತಿ ಪೊನ್ನ ಬಟ್ಟಲೊಳೆಱೆದೀವ ಕುಂಕುಮರಸಂ (ಶಂಕ್ರಶೃ. ೮-೪೬). **ಬೆಗಸಿಲ್. ಬೆಗಸಿಲೆ:** ಈ ಕವಿಲೆಯ ಕೊಂದು ನೆತ್ತರಂ ಬೆಗಸಿಲೆಯಿಂದಾಕಂಠೋಪ್ಪಂ ಕುಡಿದವನೀ ಕಯ್ಗುರುಪಣಮನಳಿವ ಮಾಡಿದ ಮನುಜಂ (ಕೊಲ್ಲಾಪು. ೦೭-೩೩; 1196).

**ಬೆಗಸಿಲದಾನಿ** = ಕೈತುಂಬ ದಾನ ಮಾಡುವವನು; ಒಂದು ಬಿರುದು: ಅವರೊಳಗೆ ನೆಗಳ್ದರಸಾಸವಾರಿಮುದನೋಗ್ರಮಹೇಶ್ವರನಾವ ಬಿಂಕನಂ ಬೆಗಸಿಲ ದಾನಿಯಾವ ಕಡುಚಾಗಿತನಂ ಜಗದೊರ್ವ್ವಗಂಡನಾದಗಣಿತವಿಕ್ರಮೋಜ್ಜಿತಗುಣಂ . . . ಮಂಡಲಿಕ ಮಲ್ಲಿದೇವಂ (ಕಶಾ I, ೨೩-೩೩; 1186 ?).

**ಬೆಲಗು** (ನಾ). ಛಾವಣಿಗೆ ಹಾಕುವ ಅಡ್ಡ ತೊಲೆ: ಮಲೆನಾಡಿನಲ್ಲಿ ಮನೆಯ ಮೇಲೆ ಹಂಚಿನ ತಟ್ಟು ಮಾಡುವರು. ಅದಕ್ಕೆ ಬೆಲಗುಗಳೂ ಎಳೆಗಳೂ ಗಳಗಳೂ . . ., ಬೇಕಾಗುತ್ತವೆ (ಮುಂಬಯಿ. ೪-೦೦೬). 'ತಲೆಬೆಲಗು' ಪರಾ. [← ತೆಲು. ಬೆಣುಗುಲು]

**ಬೆಲವಕ** (ನಾ). ಒಂದು ಬಗೆಯ ಸಸ್ಯ: ಬೆಳವನಕಾಸ, ಉಡಿವಲ್ಲಿ, ಬೆಲವಕ (ಸಸ್ಯಶಾ. ೪೪). [ ? ]

**ಬೆಲೂನು** 'ಬಲೂನು' ನೋ.

**ಬೆಲೆ$_1$**, ವೆಲೆ (ನಾ). ೧. (ವಸ್ತುವಿನ) ಕ್ರಯ; ಧಾರಣೆ; ದರ; ಮೌಲ್ಯ: "ಪ್ರಕ್ರಯಃ, ಕ್ಲಿಪ್ತಕಃ—ಈ ೨ ಬೆಲೆ" (ಶಬ್ದಮ. ೯೪-೪೦೯); ಆವಜಿ ಬೆಲೆಯುಂ ಬೆಸಗೊಂಡೊಡೆ ಲಕ್ಷದೀನಾರಂಗಳ್ ಬೆಲೆಯೆಂದು ಪೇೞ್ದೊಡೆ (ವಡ್ಡಾರಾ. ೨೩-೨೪); ನಾಕದ ಘನೆಲೋಕದಿಂದದ ಪೊಱಲ್ಗಳನೀ ಪೊಱಲೊಂದು ರಮ್ಯಹರ್ಮ್ಯದ ಬೆಲೆಗಂ ಬರಲ್ ನೆಱೆಯವೆಂಬಿನಂ . . . ಸಮೆದಂ ಪುರಮಂ ಪುರಂದರಂ (ಆದಿಪು. ೬-೮೯); ಬೆಲೆಯಿಂದಕ್ಕುಮೆ ಕೃತಿ ಗಾವಿಲ ಭುವನದ ಭಾಗ್ಯದಿಂದಮಕ್ಕುಂ (ಅರ್ಜುನ. ೦-೪೩): ಕಾಡ ಕಪಿ ಬಲ್ಲುದೆ ಮಾಣಿಕದ ಬೆಲೆಯ (ಪುರಂದ. ೨-೪೪ ಪಲ್ಲವಿ). ೨. ಸಂಬಳ; ವೇತನ: "ಭೃತಿಃ, ಭೃತ್ಯಾ, ಕರ್ಮಣ್ಯಾ, ವೇತಾ, ಮೂಲ್ಯಂ, ವೇತನಂ —ಈ ೬ ಬೆಲೆ" (ಶಬ್ದಮ. ೦೨೦-೪೩); ತೊಟ್ಟಿಸಂತೆ ಪೆಜ್ಜ ವಶಮಾಗದೆ ಕೂಲಿಯ ಬಂಟನಂತೆ ಬೆಲೆಯುಂ ಪಾರದೆ (ಧರ್ಮಾಮೃ. ೫-೯೯). ೩. ಮಹತ್ವ; ಹಿರಿಮೆ: ಪೊಗಟ್ಟಿನ್ನೆ ಧರದ ಸುಧೆ ತಾನಿದೆ ಬೆಲೆಯೊಲ್ಲರ್ಗೆನುತ್ತೆ ನವಮಧುಗಂಡೂಷದಿನಲರೆಱಿಸಿ ಕೊಯ್ದಲ್ ಸುದತಿಮಣಿಯೊರ್ವಳೆಸವ ಬಕುಳದ ಪೂವಂ (ಉದ್ಭಟ. ೯-೩೩); ಸತ್ಯದೇವತೆ ಬಹು ಬೆಲೆಯವಳವಳನು . . . ರಕ್ಷಿಸಬೇಕು (ಶಂತಾಪ. ೮೩-೦೩); ಈ ಕಾಗದದ ಬೆಲೆ ನನಗೆಷ್ಟರ ಬಹುದೆಂಬುದನ್ನು ನೀನೇ ಊಹಿಸಿಕೊ (ಅಪಕಂ. ೦). **ವೆಲೆ:** ೧. 'ವೆಲೆಕೊಳ್' ಪರಾ.

**ಬೆಲೆತೆರು** = ದಂಡ ಕೊಡು; ನಷ್ಟವನ್ನು ತುಂಬಿಸು: ಆಕೆಯ ಅವಿವೇಕಕ್ಕೆ ಆಕೆಯೇ ಬೆಲೆ ತೆರಬೇಕು (ಗಂಪಮೂಡು. ೨೯೨).

**ಬೆಲೆ ಬಾಳು** = ೧. ಕ್ರಯಕ್ಕೆ ಯೋಗ್ಯವಾಗು; ಧಾರಣೆಗೆ ಅರ್ಹವಾಗು: ಕಳಿಸಿದರೆ ಕಳಿಸು ಬೆಲೆ ಬಾಳುವಂತಹ ಸರಕು ಎಲ್ಲ ಬಂದರುಗಳಿಗೂ ಹಾದು ಬರಲಿ (ಕಂಪಮು. ೦೮-೭); ಉದ್ದವಾದ ನಾರುಗಳಿಂದ . . . ಹೆಚ್ಚು ಬೆಲೆ ಬಾಳುವ ಬಟ್ಟೆಗಳನ್ನು ತಯಾರಿಸುವರು (ಗೃಹಶಾ. ೬೯). ೨. ಮಾನ್ಯತೆಯನ್ನು ಪಡೆ: ಸಾಧಾರಣಜನತೆಗೆ ರುಚಿಸಲೂ ಬೇಕು, ನಿಜವಾಗಿ ಬೆಲೆಬಾಳುವಂಥದೂ ಆಗಬೇಕು (ಕಂಗೀತ. ಅವಿಯಾಬ).

**ಬೆಲೆಬೀಳು** = ೧. ಕ್ರಯವು ಕಡಮೆಯಾಗು,—ತಗ್ಗು: ಬೆಲೆಬಿದ್ದ ಸರಕಿನಲ್ಲಿ ಲಾಭವುಂಟೇ? (ಗಾದೆ). ೨. ಕ್ರಯವನ್ನು ಪಡೆ; ಧಾರಣೆ ಹಿಡಿ: ನೀನು ಮಾಡಿಸಿಕೊಂಡಿರುವ ಈ ಸರಕ್ಕೆ ಎಷ್ಟು ಬೆಲೆಬಿತ್ತು? (ರೂಢಿ). **ಬೆಲೆ ಮಾಡು** = ಬೆಲೆ ಕಟ್ಟು; ಧಾರಣೆಯನ್ನು ನಿರ್ಧರಿಸು: ದೊರೆಯುಱುವ ವಸ್ತುಪುರುಷರ್ಪರಿಕಿಸಿ ಬೆಲೆಮಾಡೆ . . . ಅನರ್ಘ ರತ್ನಮಾದಂ ರತ್ನಂ (ಗದಾಯು. ೦-೪೦); ಮಧ್ಯಮನ ತಾವು ಬೆಲೆಮಾಡಿದರು (ಸಂಪಕ. ಶಂ. ೦-೨೩).

[ದೇ.॥ ತಮಿ. ವಿಲೈ; ಮಲ. ವಿಲ; ತುಳು. ಬೆಲೆ, ಬಿಲೆ; ಕೊಡ. ಬೆಲೆ; ತೆಲು. ವೆಲ, ವಿಲುವ; ಕೋತ. ವೆಲ್; ತೊದ. ಪೀಲ್]

**ಬೆಲೆ$_2$** (ನಾ). ಕರ್ನಾಟಕದ ಕೆಲವು ಊರುಗಳ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ. ಉದಾ: 'ದೊಡ್ಡಬೆಲೆ', 'ಮಂಚನಬೆಲೆ', 'ಸೂಲಬೆಲೆ' ಇತ್ಯಾದಿ. [ <ಬೇಲಿ ? ]

**ಬೆಲೆಕಟ್ಟು** 'ಬೆಲೆಗಟ್ಟು' ನೋ.

**ಬೆಲೆಕೊಡು** 'ಬೆಲೆಗೊಡು' ನೋ.

**ಬೆಲೆಗಟ್ಟು**, ಬೆಲೆಕಟ್ಟು (ಕ್ರಿ). ೧. ಧಾರಣೆಯನ್ನು ನಿರ್ಧರಿಸು; ದರ

ವನ್ನು ಹೇಳು : ಆಣಿಮುತ್ತಿಗೆ ವೆಗ್ಗಳ ಬೆಲೆಗಟ್ಟುವ ವಾಣಿಜರಿರ್ದರಿಕ್ಕಲದಿ (ಪೋಹತ. ೩-೨೬). ೨. ಮಹತ್ತ್ವವನ್ನು ನಿರ್ಧರಿಸು; ಅರ್ಹತೆಯನ್ನು ತಿಳಿಯಪಡಿಸು : ಒಲಿದವರೊಲಿದರೆ ಅವನ ಸೌಭಾಗ್ಯಕೆ ಆರುಂಟು ಬೆಲೆಗಟ್ಟುವವರು (ಇಂತಾಹ. ೫೦-೪೬). **ಬೆಲೆಕಟ್ಟು :** ೧. ಕೆಲವರು ಒಂದು ತುಂಡುಬಟ್ಟೆಯನ್ನು ಮುಟ್ಟಿದ ತಕ್ಷಣವೇ ಅದರ ಸ್ಪರ್ಶದಿಂದ ಅದರ ಯೋಗ್ಯತೆ ಇಷ್ಟೇ ಎಂದು ಬೆಲೆಕಟ್ಟುವರು (ಗೃಹಾ. ೬೯). ೨. ಈ ಚೆಲುವಿಗೆ ಬೆಲೆಕಟ್ಟುವುದು ಸಾಧ್ಯವೇ ? (ಯೋಧಳ. ೨೬).

[ ಬೆಲೆ$_1$ + ಕಟ್ಟು$_1$ ]

**ಬೆಲೆಗಾಣು** (ಕ್ರಿ). ಕ್ರಯ ಬರು : ಧಾರಣೆಯು ಸಿಗು : ಚಂದನದ ಕೊರಡು ಇದ್ದ ಹಾಗೆ ಹೆಚ್ಚು ಬೆಲೆಗಾಣುತ್ತದೆ (ಮುಂಬಯಿ. ೬. ೩-೬೯).

[ ಬೆಲೆ$_1$ + ಕಾಣು (< ಕಾಣ್ ) ]

**ಬೆಲೆಗುಡಿಸು** (ಕ್ರಿ). ಕ್ರಯವು ಸಿಗುವಂತೆ ಮಾಡು ; ಧಾರಣೆಯನ್ನು ಕೊಡಿಸು : ವ್ಯಾಧನೊಂದು ಪಕ್ಕಿಯಂ ಪಿಡಿತರೆ ಕರುಣಿಸಿ ಬೇಡಂಗೆ ಬೆಲೆಗುಡಿಸಿ ಬಿಡಿಸಿದೊಡೆ (ಶಂರಾಮಾ. ೯-೫೪ ವ).

[ ಬೆಲೆ$_1$ + ಕುಡಿಸು$_2$ (< ಕೊಡಿಸು) ]

**ಬೆಲೆಗುಡು** 'ಬೆಲೆಗೊಡು' ನೋ.

**ಬೆಲೆಗೆಯ್**, ಬೆಲೆಗೈ (ಕ್ರಿ). ೧. ಧಾರಣೆ ಸಿಗು ; ವಿಕ್ರಯವಾಗು : ಕರ್ಗಲ್ಲೆನಿತು ಬಳ್ಪಾದೊಡಂ ಬೆಲೆಗೆಯ್ಗುಮೇ ರತ್ನಮಾದೊಡೆ ಬೆಲೆಗೆಯ್ಗುಂ (ರಹರಿಮ್ನ. ೬-೪೫). **ಬೆಲೆಗೈ :** ೨. ಮಾರು ; ಕ್ರಯಕ್ಕೆ ಕೊಡು : ತಮ್ಮಂತೆ ಬಾಳಲೆಳಸುವ ಬಾಲಕಿಯ ಬೀಳುಗುವರನಿಗೆ ಬೆಲೆಗೈದರೆಂಬುದ ಕೇಳಿ ಕವಿಯ ಮುಚ್ಚುವುದು (ಹರಿಬ. ೫-೦೯).

[ ಬೆಲೆ$_1$ + ಕೆಯ್$_1$ ]

**ಬೆಲೆಗೇಡು** (ನಾ). ಮೌಲ್ಯವಿಲ್ಲದುದು : ಹಿಂದಿನವರ ಅಭಿಪ್ರಾಯವು ಇಂದು ಬೆಲೆಗೇಡಾಗಿದೆ (ಕಣಾಲಿ. X, ಮುಪ್ಪು೩). [ ಬೆಲೆ$_1$ + ಕೇಡು ]

**ಬೆಲೆಗೈ** 'ಬೆಲೆಗೆಯ್' ನೋ.

**ಬೆಲೆಗೊಡು**, ಬೆಲೆಕೊಡು, ಬೆಲೆಗುಡು (ಕ್ರಿ). ೧. ಕ್ರಯವನ್ನು ಕೊಡು ; ಧಾರಣೆಯನ್ನು ತೆರು : ನೋಟ್ಟಂ ಬೆಲೆಗೊಟ್ಟು ತಾರ ಮಧುಪಂ ಮಲಯಾನಿಲನಂ ಮನೋಜನಂ ಕೌಮುದಿಯಂ (ಅರ್ಧನೇ. ೦-೪೫) ; ಕರದ್ವಯದ ಕಾಂತಿಯ ಮಾಲೆಗಳಿಂ ಪೊಸಪೂವಿನ ಮಾಲೆಗೆತ್ತು ಬೆಲೆಗೊಟ್ಟು ಕೊಂಡು ನಗಿಸಿದನೊರ್ವಂ (ಗಂಳ. ೨-೯೬). **ಬೆಲೆಕೊಡು :** ೨. ಮಹತ್ತ್ವವನ್ನು ಕೊಡು ; ಪ್ರಾಮುಖ್ಯತೆಯನ್ನು ನೀಡು : ಎಲ್ಲಕ್ಕಿಂತ ಮಿಗಿಲಾಗಿ ಮಾಸ್ತೀವ ಈ ಜೀವನದೃಷ್ಟಿಗೆ ಬಹಳ ಬೆಲೆಕೊಟ್ಟಿದ್ದಾರೆ (ಪುಸರು. ೦೯೮). **ಬೆಲೆಗುಡು :** ೧. ಕಜ್ಜಿಯಿಂದೆ ಪಾಲಂ ಬಯಸುವ ಬೆಲೆಗುಡದೆ ಬಂಡಮಾಣಿಸುವ (ಧರ್ಮಾಮೃ. ೦೨-೨೪) ; ಮನುಜೇಶ್ವರನೊರ್ವಂ ಮನೆಯಿಂ ಪೊಕ್ಕಸುರಾಗದಿ ನಡೆನೋಡುತ್ತೆನ್ನಯ ಮನಮಂ ತನ್ನ ವಿಲಾಸದ ಬೆಲೆಗುಡು[ಪಾಠಾಂ. ಗೊಳು]ತವೆ ಮಾಜಿಂಗೊಂಡಂ (ಸುಕುಮಾ. ೪-೨೫).

[ ಬೆಲೆ$_1$ + ಕೊಡು$_1$ ]

**ಬೆಲೆಗೊಳ್**, ಬೆಲೆಗೊಳ್ಳು, ವೆಲೆಕೊಳ್ (ಕ್ರಿ). ೧. (ವಸ್ತುವನ್ನು ಮಾರಿ) ಹಣವನ್ನು ಪಡೆ : ತನ್ನ ಸುಲಿಪಲ್ಲ ಸಾಲ್ಗಳ ತೋಜು ಮಲ್ಲೆಯ ಸರವಿದೆ ಕೊಳ್ಳೆಂದು ಬೆಲೆಗೊಂಡು ನಿಲ್ಲದವನ ನಾಚಿಸಿದಳು (ಶಂಸಾ. ೬-೮೪). ೨. ಕೊಂಡುಕೊಳ್ಳು ; ಕ್ರಯಮಾಡು : ಬೆಲೆಗೊಂಡ ತೊತ್ತಲ್ಲ ಬೆಳೆದ ಮನೆಯವನಾಗಿ (ಸುರಹಾ. ೦೩೫). ೩. ಬೆಲೆಬಾಳು ; ಅಮೂಲ್ಯವಾಗು : ಉಸಿರು ಪರಿಮಳವಾಗೆ ಬೆಲೆಗೊಂಬ ಹೂವೇಕೆ ರಸವೆ ಸಾಧನವಾಗೆ ಧನವೇಕೆ (ಸಿವ್ವರಾ. ೩-೦೨). **ಬೆಲೆಗೊಳ್ಳು :** ೨. ರೋಷದಿಂದ ಅವನು ಜಯಮಲ್ಲನ ತಲೆಯನ್ನು ಬೆಲೆಗೊಳ್ಳದೆ ಬಿಡನೆಂದು ಪಂತ ಮಾಡಿ ಅದರಂತೆಯೇ ಅವನನ್ನು ಕೊಂದನು (ಅಮರ್೪೬. ೨೯). **ವೆಲೆಕೊಳ್ :** ೨. ಮುಟ್ಟುವರುಂ ದೇವೇನ್ದ್ರರು ವೆಲೆಕೊಣ್ಡು ವಾಣಿಗತ್ತೊಟ್ಟಂ ತೆನ್ಕಣ್ಣಮುಂ ವಡಕಣ್ಣಮುಂ ವಿನಿತೀಶ್ವರಕ್ಕಂ ಪೊಯ್ದಾರ್ (ಎಕ. IV (B). ಶಾಶುರಾ. ೦೪೬-೬ ; ಸು. 750). [ಬೆಲೆ$_1$ + ಕೊಳ್$_1$ ]

**ಬೆಲೆಗೊಳ್ಳು** 'ಬೆಲೆಗೊಳ್' ನೋ.

**ಬೆಲೆಪಟ್ಟಿ** (ನಾ). "ಸಲ್ಲಿಸಿದ ಸಾಮಾನುಗಳ, ಅಥವಾ ಮಾಡಿರುವ ಕೆಲಸದ, ಬೆಲೆ ತೋರಿಸುವ ಪಟ್ಟಿ : ಬೆಲೆಪಟ್ಟಿ" (Bill. ೩೦೪೨).

[ ಬೆಲೆ$_1$ + ಪಟ್ಟಿ$_2$ ]

**ಬೆಲೆಯಮ್ಮ** (ನಾ). ಒಬ್ಬಾತನ ಹೆಸರು : ಈ ಕಲ್ಲ ಸಂದಿಗರ ಕುಳಿ × × × ಮುಂದ್ದನ್ನಿಱಿಸಿದೊಂ × × × ಬೆಲೆಯಮ್ಮನ ಮಗಂ (ಎಕ. VII, ಶಿಕಾರಿ. ೨೦೯-೩೩ ; 918). [ ಬೆಲೆ$_1$ + ಅಮ್ಮ$_1$ ]

**ಬೆಲೆಯಿಡಿಸು** (ಕ್ರಿ). ಬೆಲೆ ಕಟ್ಟಿಸು ; ಧಾರಣೆ ಮಾಡಿಸು : ಯಶೋಭದ್ರಾಂಬಿಕೆಯುಂ ಕಂಡು ರತ್ನಕಂಬಲಮಂ ನಿಮಿರ್ಚಿ ತೋರ್ಪುದುಮಪೂರ್ವವಸ್ತುವಪ್ಪುದನಱಿದು ವಸ್ತುಪುರುಷರಿಂ ಬೆಲೆಯಿಡಿಸಿ . . . ಕೊಂಡಳ್ (ಸುಕುಮಾ. ೦೦-೦೦೭ ವ). [ ಬೆಲೆ$_1$ + ಇಡಿಸು$_1$ ]

**ಬೆಲೆಯಿಡು** (ಕ್ರಿ). ೧. = ಬೆಲೆಗಟ್ಟು ೧ : ಬೆಲೆಯಿಡಲಱಿವೊಡೆ ಮಂಡಲಿ ಬೆಲೆಯಿಡುಗೆಮ (ಅಜಿತ. ೦೩-೩೦); ಬೆಲೆಯಿಡಲೀ ಹಯಕ್ಕೆ ಭುವನತ್ರಯಮುಂ ಬೆಲೆಯಲ್ತು (ಶಾಸುಮಾ. ೯-೬೦). ೨. =ಬೆಲೆಗಟ್ಟು ೨: ಬಾಣಾಖ್ಯನಾತ್ಮಜೆ ಕನ್ಯಾರತ್ನಕ್ಕೆ ಬೆಲೆಯಿಡುವರಂಗಾಣೆ (ಹಪಪೋ. ೨೪-೪೦).

[ ಬೆಲೆ$_1$ + ಇಡು$_1$ ]

**ಬೆಲೆವಡಿಸು** (ಕ್ರಿ). ಮೌಲ್ಯ ಬರುವಂತೆ ಮಾಡು : ತವೆ ಸ್ವಾತಿಬಿಂದುವಿಂದೊಗೆದ ಮುತ್ತಿಂಗೆ ಶಿಗಮೊಗವಾವುದೆಂದೆಣಿವರೆ ಅವ ಪರೀಕ್ಷಿಸಿ ರಂಧ್ರಗೈದು ಸರಗೊಳಿಸುತ್ತಲವನು ಬೆಲೆವಡಿಸರೆ (ಹಪಪೋ. ೦-೦೬).

[ ಬೆಲೆ$_1$ + ಪಡಿಸು ]

**ಬೆಲೆವಡೆ** (ಕ್ರಿ). ಮಾನ್ಯತೆಯನ್ನು ಪಡೆ ; ಬೆಲೆ ಬಾಳು : ಜಲಬಿಂದು ಶುಕ್ತಿಕೆಯೊಳು ಬೀಳೆ ಮುತ್ತಾಗಿ ಬೆಲೆವಡೆವಂತೆನ್ನ ಬಡನುಡಿ ಬೆಲೆವಡೆಯದೆ ಮಾಣ್ಬುದೆ ನಿಮ್ಮ ಕಿವಿ ಸೋಂಕಲು (ತ್ರಿಶುತ. ೦-೦೯) ; ಪಲಬಗೆಮಾತುಗಳಿಂದ ಬೆಲೆವಡೆದಿರ್ಪೆನೆಂದೆಣಿಸುವಳಲ್ಲ ನಿನ್ನೊಲವೊಂದನೆ ನಂಬಿಹೆನು (ಹರಿಶ. ೦-೩೩). [ ಬೆಲೆ$_1$ + ಪಡೆ$_1$ ]

**ಬೆಲೆವಣಿ** (ನಾ). ಅಮೂಲ್ಯವಾದ ರತ್ನ ; ಬಹುಬೆಲೆಯ ರತ್ನ : 'ಬೆಲೆವಣಿಗಟ್ಟು' ಪರಾ. [ ಬೆಲೆ$_1$ + ಮಣಿ$_3$ ]

**ಬೆಲೆವಣಿಗಟ್ಟು** (ನಾ). ಅಮೂಲ್ಯವಾದ ರತ್ನದಿಂದ ಮಾಡಿದುದು ; ಅನರ್ಘ್ಯರತ್ನಖಚಿತವಾದುದು : ಬಾಲಕನ ಕಣ್ಗೊಂದು ಬೆಲೆವಣಿಗಟ್ಟಿನ ದೇವಾರಂ ತೋಱಿಪ್ಪುದುಂ . . . ಒಳಪೊಕ್ಕಂ (ರಾಮಾಶ್ವ. ೬೬-೨೬). [ ಬೆಲೆವಣಿ + ಕಟ್ಟು$_2$ ]

**ಬೆಲೆವೆಂಡತಿ** (ನಾ). ಹಣಕ್ಕೆ ಸಿಗುವ ಹೆಣ್ಣು ; ಸೂಳೆ; ಗಣಿಕೆ : ನೆಲಕೆಲ್ಲಮಿಟ್ಟು ಪಡಿಗಂ ನೆಲಕಲ್ಲಂ ಸಮೆದ ಪಚ್ಚವಡಮನೆ ಮಾತ್ರಂ ನೆಲನನಿತನಿತಱ ಮುಱಲಗೆ ಬೆಲ[ಲೆ]ವೆಂಡತಿ ಬಗೆವೊಡಿಂತು ಕಿಸುಗುಳಮುಂಟೇ (ಕಸಾರ. ೨೪೪). [ ಬೆಲೆ$_1$ + ಪೆಂಡತಿ ( < ಪೆಂಡಿತಿ) ]

**ಬೆಲೆವೆಣ್**, ಬೆಲೆವೆಣ್ಣು (ನಾ). =ಬೆಲೆವೆಂಡತಿ : "ದಾರಿಕೆ ಲಂಜಿಕೆ ಪಣವಧು ವಾರಾಂಗನೆ ಗಣಿಕೆ ವೇಶ್ಯೆಯೆನೆ ಬೆಲೆವೆಣ್" (ಶಬ್ದಕೋ. ೫೩-೭); ಕಡುಪಿಲ್ಲದ ಕುದುರೆ ಗಾಡಿಯಿಲ್ಲದ ಬೆಲೆವೆಣ್ . . . ಮನಕ್ಕೆಡಂಬಡಂ ಮಾಟ್ಕುಮರ್ತಿಯಂ ಮಾಡುಗುಮೇ (ಅಜಿತ. ೬-೪೬) ; ತಳಿರುಯ್ಯಾಲಾಡುತಂ ಪಾಡುತಂ ನೋಡುತಂ ಬೆಲೆವೆಣ್ಗಳೆಸೆದಿರ್ದರು (ಶಾಂತಿ. ೦೦-೪೦). **ಬೆಲೆವೆಣ್ಣು :** ತನು ಮುಟ್ಟಿ ಮನ ಮುಟ್ಟದೆ ದೂರವಾದರಯ್ಯಾ ಬೆಲೆವೆಣ್ಣಿನಂತೆ (ಸವ್ಯವ. ೪. ೩೪೭-೮೩೪) ; ಅರ್ಶಿಯಂ ಬೆಲೆವೆಣ್ಣು ಬಿಡುವೆಣ್ಣು ಮನೆವೆಣ್ಣು . . . ನಡಯಿಸಿದನು (ಸಮ್ಯಕ್. ೦-೩೨) ; ಬೆಲೆವೆಣ್ಣು ಸೂಳೆಹೋದ

ಕೆಂದು ಅತ್ರವನು ಇವನೊಬ್ಬನೆ ಮಹಾನುಭಾವ! (ತುಂಗಶ. ೫೬).
[ಬೆಲ್$_1$ + ಪೆಣ್]

**ಬೆಲೆವೆಣ್ಣು** 'ಬೆಲೆವೆಣ್' ನೋ.

**ಬೆಲ್ಲ** (ನಾ). ೧. ಕಬ್ಬಿನ ರಸವನ್ನು ಕಾಯಿಸಿ ತಯಾರಿಸಿದ (ಬೇರೆ ಬೇರೆ ಆಕಾರದ) ಸಿಹಿಯಾದ ಘನಪದಾರ್ಥ ; ಗುಡ : ಅರಗು ಮೊದಲಾಗೆ ಘೃತ ಸಜ್ಜರಸಂ ಬೆಲ್ಲಂ ಸಣಂಬಿವೆಂಬಿವಱಿಂ ವಿಸ್ತರಿಸಿ ಸಮೆದ . . . ಅರಗಿನ ಮನೆಯಂ . . . ಪುಗಿಸೆ (ಕಂಶಭಾ. ೩-೩) : ಹಾಲ ತೊಱೆಗೆ ಬೆಲ್ಲದ ಕೆಸಱು ಸಕ್ಕರೆಯ ಮಳಲು ತವರಾಜದ ನೊರೆತೆರೆಯಂತೆ ಅದ್ಭುರ ವಚನ (ಬಸವ. ೨೯೦) : ಹಿಪ್ಪಲಿ, ಬೆಲ್ಲ, ಅಳಿಲೆಕಾಯಿ ಇವನ್ನು ಬಿಸಿನೀರಿನಿಂದ ಅರೆದು ಕುಡಿದರೆ ವಾತಜ್ವರ ಪರಿಹಾರವಾಗುವುದು (ಸಕಪ್ಪ. ೬೩). ೨. ಮುಂತ್ತು ; ಚುಂಬನ : ಜಾನಕಿಬಾಯಿಯು . . . ಅವನನ್ನು ಹಿಡಿದೆತ್ತಿಕೊಂಡು ಅವನ ಗಲ್ಲಕ್ಕೂ ಬೆಲ್ಲವನ್ನು ಕೊಟ್ಟರು (ಸಮಚಾ. ೬೨೯). ೩. (ಆಲಂ) ಸೋಗು ; ನಟನೆ ; ಕಪಟ : 'ಬೆಲ್ಲವಾತು,' 'ಬೆಲ್ಲಿಸು' ಪರಾ. ೪. ಹಿತ ; ವಿಶ್ವಾಸ : ಬೆಲ್ಲವಾಗಿರಬೇಕು ಬಂಧು ಜನರೊಳಗೆ (ಪುರಂದ. ೦-೩೨-೦).

**ಬೆಲ್ಲತೂಗು** = ತೂಕಡಿಸಂ ; ಜೂಗರಿಸಂ : ಲಲಿತೆಯಾಗಲೇ ಬೆಲ್ಲ ತೂಗುತ್ತಿದ್ದಳು (ಪಲಂಮು. ೨೦೪) : ಅರೆನಿದ್ದೆಯಿಂದ ಬೆಲ್ಲತೂಗು ತ್ತಿದ್ದ ನಂಟನು ನಕ್ಕನು (ಮರಮು. ೦೦೬). **ಬೆಲ್ಲದ ಉಂಡೆ** = ೧. ಉಂಡೆಯಾಕಾರದ ಬೆಲ್ಲ : ಕೆಲವು ಕಡೆಗಳಲ್ಲಿ ಕಾಫಿಗೆ ಸಕ್ಕರೆಯ ಬದಲು ಬೆಲ್ಲದ ಉಂಡೆಗಳನ್ನು ಉಪಯೋಗಿಸುತ್ತಾರೆ (ರೂಢಿ). ೨. ಆಲೆಮನೆ ಯಲ್ಲಿ ಮೊದಲನೆಯ ಅಡಿಗೆ ಬಂದಾಗ ಅದನ್ನು ಅಚ್ಚು ಗಳಿಗೆ ಸುರಿದು ಮಾಡುವ ಉಂಡೆಯಾಕಾರದ ಬೆಲ್ಲ : ಅವರು ಆಲೆಮನೆಯನ್ನು ನೋಡಲು ಬಂದ ಅತಿಥಿಗಳಿಗೆ ಕೊಪ್ಪರಿಗೆಯಿಂದ ಬಿಸಿಯಾದ ಬೆಲ್ಲದ ಉಂಡೆಗಳನ್ನು ತೆಗೆದು ಹಂಚಿದರು (ರೂಢಿ). **ಬೆಲ್ಲ ದಚ್ಚು** = ಅಚ್ಚಿನ ಆಕಾರದ ಬೆಲ್ಲ : ಹೊಜಗಣಂ ಬಂದ ಬೆಲ್ಲದ ಭಂಡಿಗೆ ಬೆಲ್ಲದಚ್ಚು ಹದಿನಯ್ದು (ಎಇ. XIII: ೨೨-೩೬ : ೧೨೦೩). **ಬೆಲ್ಲಬೆಲಸ, ಬೆಲ್ಲ ಬೆಲ್ಲಸ** = ಅತಿಯಾದ ಸಿಹಿಯ ಸೇವನೆಯಿಂದ ಕಟ್ಟರೆಯಾಗುವುದು : ಫೇಡೆ ತಿಂದು ಬಾಯಿ ಬೆಲ್ಲಬೆಲಸ ಆಗಿತ್ತು (ಹೊಸಂಗಾ. ೦೬೪) ; ಅರುಚಿಯೇ ಅಭ್ಯಾಸವಾದ ಬಾಯಿಗೆ ಬೆಲ್ಲವೂ ಬೆಲ್ಲಬೆಲ್ಲಸಾಗಿ ಹತ್ತುವಂತೆ (೬೦೫ಶ. ೩೫).

[ದ್ರಾ.: ತಮಿ. ಮಲ. ವೆಲ್ಲಮ್ ; ತುಳು. ಕೊಡ. ಬೆಲ್ಲ ; ತೆಲು. ಬೆಲ್ಲ. ಬೆಲ್ಲಮು, ಬೆಲ್ಲಿ]

**ಬೆಲ್ಲಂಗೋಲ್** (ನಾ). ಸಿಹಿರುಚಿಯುಳ್ಳ, ಕೋಲಿನಂತಿರುವ ಒಂದು ಬಗೆಯ ಸಸ್ಯ ; ಕಬ್ಬು.

**ಬೆಲ್ಲಂಗೋಲ್ವಿಲ್ಲ** = ಕಬ್ಬಿನ ಜಲ್ಲೆಯನ್ನು ಬಿಲ್ಲಾಗಿ ಉಳ್ಳವನು ; ಮನ್ಮಥ : ಪಲ್ಲಣಿಯ ಬೆಲ್ಲಂಗೋಲ್ವಿಲ್ಲನ ಮಲ್ಲಿಗೆಸರಲ ಜಲ್ಲಣಿಗೆ ತಲ್ಲಣಂ ಗೊಂಡು (ರಾಷಾತ್. ೬೩-೫). 'ಕರ್ವುವಿಲ್ಲ' ಪರಾ. [ಬೆಲ್ಲ + ಕೋಲ್$_1$]

**ಬೆಲ್ಲಗಣಿಕೆ** (ನಾ). ಒಂದು ಬಗೆಯ ಮರ : "ಕಾಕಮಂಚಾ, ಕಾಕ ಮಾಚಿ,—ಈ ಯೆರಡುಂ ಬೆಲ್ಲಗಣಿಕೆ" (೬೫೦. ೩೦) ; ಪುಷ್ಯನಕ್ಷತ್ರದಲ್ಲಿ ಬೆಲ್ಲ ಗಣಿಕೆಯ ಬೇರನು ತಂದು ಹಾಲಲ್ಲಿ ಕನ್ನಕಿಯ ಕೈಯಿಂದ ಅರೆಸಿ ಹಸುವಿನ ತುಪ್ಪವರಸಿ ಕುಡಿಯ ಕೊಡಿಸಲು ಮಹಾಉತ್ತಮವಾದ ಗರ್ಭ ನಿಲ್ಲುವುದು (ವೈದ್ಯಸ. II, ೪೪). [ಬೆಲ್ಲ$_?$ + ಕಣಿಕೆ$_1$]

**ಬೆಲ್ಲಗಾರಿಗೆ** (ನಾ). ಬೆಲ್ಲದಿಂದ ತಯಾರಿಸುವ ಒಂದು ಬಗೆಯ ಸಿಹಿಭಕ್ಷ್ಯ : ದೋಸೆಯ ಬಗ್ಗೆ ಬೆಲ್ಲಗಾರಿಗೆಯು ಬಣಬೆ ತಡೆತಡೆಯೆ ಪಾಯಸದ ಕಟ್ಟೆ (ಸಪ್ತಕಾ. ೭-೨೫). [ಬೆಲ್ಲ + ಗಾರಿಗೆ$_1$]

**ಬೆಲ್ಲಗೂಳು** (ನಾ). ಬೆಲ್ಲವನ್ನು ಸೇರಿಸಿ ಮಾಡಿದ ಆಹಾರಪದಾರ್ಥ : ಗಂಡನಿಕ್ಕಿದ ಪಡಿಯಸೊಲ್ಲದೆ ಬೆಲ್ಲ[ಪಾಠಾಂ. ನೆಲ್ಲು]ಗೂಳಿಗಾಸೆ ಮಾಡಿ ಸೆರೆಮನೆಗೆ ಹೋಗುವ ಬಲ್ಲಾಳಗಿತ್ತಿಗೆ ಪತಿಭಕ್ತಿ ಅಳವಡುವುದೆ ಅಯ್ಯ (ಶಸವ. ೨೦-೦೭). [ಬೆಲ್ಲ + ಕೂಳ್$_3$ (<ಕೂಟ್$_1$)]

**ಬೆಲ್ಲಗೆಡ್ಡೆ** (ನಾ). ಒಂದು ಬಗೆಯ ಗೆಣಸು : ಇಬ್ಬದಿಯ ಆಡಸೋಗೆ, ನರ್ಮಲೀಗಿಡಗಳ ಬೇಲಿಗಳಿಂದ ಬೆಲ್ಲಗೆಡ್ಡೆಯ ಬಳ್ಳಿಕ ಸುಟ್ಟ ವಾಸನೆ ಮೂಗಿಗೆ ಬಡಿಯಿತು (ಮೂರರುದಾ. ೯೦). [ಬೆಲ್ಲ+ಗೆಡ್ಡೆ (<ಗಡ್ಡೆ)]

**ಬೆಲ್ಲಗೊಟ್ಟೆ** (ನಾ). ಒಂದು ಬಗೆಯ ಔಷಧೀಸಸ್ಯ : ತ್ರಿಫಲೆ, ಬೆಲ್ಲ ಗೊಟ್ಟೆ . . . ಶ್ವೇತಗುಂಜಿ, ಗುರುಗುಂಜಿಯನ್ನು ಕಟ್ಟೆ (ವೈಶಿ. ೬೨). [ಬೆಲ್ಲ$_?$ + ಕೊಟ್ಟೆ$_4$]

**ಬೆಲ್ಲಣೆ** (ನಾ). ಮೋಸ; ವಂಚನೆ ; ಸೋಗು : ಲಿಂಗದೊಳು ಲಲ್ಲೆ ಬೆಲ್ಲಣೆ [ಣೆ] ಬೆಲ್ಲ ಗೆಲ್ಲ ಮಹಲಿಂಗದೊಳು ಪದಿರು ಬೆದುರುಂ ಬಿಂಕ ವಂಕ ಮಾಲಿಂಗದೊಳು ನಯವಿನಯ ಸ್ನೆಪ್ತವೈಪುಗಳ್ಳಿದೆ ಪುಟ್ಟಿ ಮನವುಂಟ್ಟರ್ದನು (ಸಂಬವಾ. ೦೯-೭) ; ಬೆರಸು ಬೆಲ್ಲಣೆಯಿಂಕ್ಕೆಯಾಶೆಪಾಶೆಯ ದೇಶ ಚಕ್ಕು ಮಲುಕಿನ ಚಾಪಡ . . . ಸ್ನೆಪುದೊ ಜಾವ ಸೂಳೆಗೇರಿ ಸೊಗಸಾದುದಲ್ಲಿ (ಸಂಬವಾ. ೨೩-೦೭). [ಬೆಲ್ಲ + ಅಣೆ$_2$ ?]

**ಬೆಲ್ಲಪತ್ರೆ** 'ಬೆಲ್ಲವತ್ತ' ನೋ.

**ಬೆಲ್ಲಬಿಲ್ಲ** (ನಾ). ಕಬ್ಬಿನ ಜಲ್ಲೆಯನ್ನು ಬಿಲ್ಲಾಗಿ ಉಳ್ಳವನು; ಮನ್ಮಥ : ಚಲ್ಲೆಗಂಗಳ ನೋಟ ಬೆಲ್ಲಬಿಲ್ಲನ ಸರಳಲ್ಲದುಳಿದ ಪರಿಯಲ್ಲ (ಅಂಶಶ. ೩-೬೬). [ಬೆಲ್ಲಬಿಲ್ಲು + —ಅ$_7$]

**ಬೆಲ್ಲಬಿಲ್ಲು** (ನಾ). ಕಬ್ಬಿನ ಜಲ್ಲೆಯ ಬಿಲ್ಲು : 'ಬೆಲ್ಲಬಿಲ್ಲ' ಪರಾ. [ಬೆಲ್ಲ + ಬಿಲ್ಲು$_1$ (<ಬಿಲ್$_2$)]

**ಬೆಲ್ಲವತ್ತ**, ಬಿಲ್ಪತ್ರೆ, ಬಿಲ್ಲವತ್ತೆ, ಬೆಲ್ಲಪತ್ರೆ, ಬೆಲ್ವತ್ತ (ನಾ). ಒಂದು ಬಗೆಯ ಮರ ; ಬಿಲ್ವವೃಕ್ಷ : "ಮಾಲೂರಃ, ಶ್ರೀಫಲಃ, ಬಿಲ್ವ-ಈ ೩ ಬೆಲ್ಲವತ್ತದ ಪೆಸರ್" (ಹಲಾಯು. ೩೨-೪೦); ಉತ್ತರಣೆಯ ಬೆಲ್ಲವತ್ತದ ತೊಳಂಚಿಯ ಪತ್ರೆಯನೊಂದನಿತ್ತು ಚಿಚ್ಚರವುಮರತ್ನಮಂ ಪಡೆಯಿಂ (ಸಪುಶ. ೬-೦೨) ; ಬೆಲ್ಲವತ್ತ ಕಪಿತ್ಥ . . . ಕರ್ಪೂರಕದಳಿಗಳಲ್ಲಿ ನೋಡಿವೆ ಭೂಮಿಸುತೆ ಭೂಜಾತಸಂತತಿಯ (ತೊರಾ. ೩-೦-೨೯). **ಬಿಲ್ಪತ್ರೆ**: ಶಿವಪೂಜೆಗೆ ಬಿಲ್ಪತ್ರೆ ಸರ್ವಶ್ರೇಷ್ಠ (ರೂಢಿ). **ಬಿಲ್ಲವತ್ತೆ** : ಎತ್ತ ನೋಡಿದಡತ್ತ ಬಿಲ್ಲವತ್ತೆಯ ತರುವೊತ್ತವೆಸೆದಿಪವು (ಪುರಾಣಾಂ. ೦-೩೨). **ಬೆಲ್ಲಪತ್ರೆ** : ಆ ಸುತನ ಮೇಲಣ ಭಸಿತವಂ ಬೆಲ್ಲಪತ್ರೆಯನು ಓಸರಿಸದಿಕ್ಕಲಿಕೆ ನೂಂಕಿ (ಬಸವ. ೪೬-೨೯). **ಬೆಲ್ವತ್ತ** : ಬಿಕ್ಕೆ ಕಕ್ಕೆಯು ಎಕ್ಕೆ ಲೊಕ್ಕಿ ಬೆಲ್ವತ್ತ [ಪಾಠಾಂ. ಬೆಲ್ಲವತ] ನೆಲ್ಲಿ (ಸಂಬವಾ. ೦೯-೦೨).

[<ಸಂ. ಬಿಲ್ವಪತ್ರ./ತುಳು. ಬಿಲ್ಪತ್ರೆ, ಬೆಲ್ಲಪತ್ರೆ]

**ಬೆಲ್ಲವಾತು** (ನಾ). ಸೋಗಿನ ನುಡಿ ; ನಟನೆಯ ಮಾತು : ಎಳ್ಳಿಯೂನುಂ ಬಂದು ಚಲ್ಲವೂಸ್ತನ ಬೆಲ್ಲವಾತುಗಳಿಂ ಕೈಕೊಂಡು ರಾಜ್ಯಮಂ ಕಿಡಿಸಲ್ವ ಗೆದೆಯುಪ್ಪುಡವನುಪೇಕ್ಷಿಸಲ್ ಬಾರದು (ಶಂಶಕಂ. ೦೦೫-೯) ; (ಬೆಲ್ಲವಾತಿ ನಿಂದ) ನಾನು ವೇಶ್ಯೆ (ಶುಂಕ್ರಶ. ೬೦-೦೩).

[ಬೆಲ್ಲ + ಮಾತು$_1$./ತೆಲು. ಬೆಲಿಮಾಟಲು]

**ಬೆಲ್ಲವುದಿ** (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ : ಬೆಲ್ಲವುದಿ ಬೆಲ್ಲವತ್ತ ಮಾಗುಳಿ ಬಿದಿರ ಕಳಲೆ ಪೊಸತಮುಕುಂಬಚೆಯ ಕಾಯ್ಗ ಳಿಂದ ಸಮೆದೊಪ್ಪುವುಪ್ಪಿನ ಕಾಯ್ಗಳಿಂ ಮಾಳ್ಪುದು (ಸೂಪಶಾ. ೩-೦೬).
[ ? ]

**ಬೆಲ್ಲಾಟಿ** (ನಾ). ಒಂದು ಬಗೆಯ ಮರ: ಬೆಲ್ಲಾಟಿ—ಎತ್ತರವಾಗಿ ಬೆಳೆಯು ತ್ತದೆ. ಇದರ ತೊಗಟೆಗಳನ್ನು ಇಮಾರತಿಗೆ ಬಹಳ ಹಾಕುವರು (ಕಡಾಗ. ೪೫).
[ ? ]

**ಬೆಲ್ಲಿಸು**, ಬೆಳ್ಳಿಸು (ಕ್ರಿ). (ಮುಖಸ್ತುತಿ ಮಾಡಿ) ವಂಚಿಸು ; ಮೋಸ ಗೊಳಿಸು : ಬೆಲ್ಲಿಸುತೆ ಸವಿನುಡಿಗಳಿಂದ ಮಾಯಗಳೆಸಗಿ ಮೆಲ್ಲಮೆಲ್ಲನೆ ಸಾರಿ

ಬಾಗರೆದು ಬರಿವೂತಿನಲ್ಲಿ ನೆರೆಯುಲ್ಕೆಳಸಿ ಬಹ ಕಪಟವಿಟರುಗಳ ನಿಷ್ಟಣಪೆ ನುತ್ತವರಿದು (ಶಂಕಣ. ೩-೬-೪೩). **ಬೆಳ್ಳಸು :** ಅರಿಯದ ಹುಡುಗೀನ ಬೆಳ್ಳಸೋಕೆ ನೋಡಿದೆಯಾ ಸುಂದರಪುರುಷ? (ಶಕರಾ. ೧೭೭).

[ಬೆಲ್ಲ + —ಇಸು$_3$./ತೆಲು. ಬೆಲ್ಲಿಂಚು]

**ಬೆಲ್ಲುಣಗಿ** 'ಬೆಲ್ಲುಣಿಗೆ' ನೋ.

**ಬೆಲ್ಲುಣಿಗೆ,** ಬೆಲ್ಲುಣಗಿ (ನಾ). ಹಪ್ಪಳ, ಚಪಾತಿ ಮೊದಲಾದುವುಗಳನ್ನು ಲಟ್ಟಿಸುವ ಸಾಧನ; ಲಟ್ಟಣಿಗೆ; ರತ್ನೂಡಿ : "ಬೆಲ್ಲುಣಿಗೆ—ಲಟ್ಟಣಿಗೆ" (ಜಾತಿಕೋ. ೨೪). **ಬೆಲ್ಲುಣಗಿ :** ತಾಪಹರನಾಲಯದೆ ಬೆಲ್ಲುಣಗಿಯಂ ಕದ್ದು ಕೊಂಡೊಯ್ದು (ದುರಕು. ೨೬-೯).

[←ಹಿಂ. ಬೇಲನ; ಮರಾ. ಬೇಲಣೇ=ಲಟ್ಟಿಸು]

**ಬೆಲ್ಲೂರ್** (ನಾ). ಒಂದು ಊರಿನ ಹೆಸರು: ತುರಗ ಪ್ರಧಾವನ ನಿಷ್ಪಾದಿತ ಸೀಮಾಭ್ಯಂತರೇ ಬೆಲ್ಲೂರ್‌ನಾವುಗ್ರಾಮಃ (ಎಕ. VI, ಮೂಡಿಗೆ. ೩೬-೪೪; 749). [ಬೆಲ್ಲ$_2$ + ಊರ್]

**ಬೆಲ್ವತ್ತ** 'ಬೆಲ್ಲವತ್ತ' ನೋ.

**ಬೆವಕೂಫ್** 'ಬೇಕೂಫ್' ನೋ.

**ಬೆವಟಿಕ್ಕು** (ಕ್ರಿ). ೧. ಪಾತ್ರೆ ಮುಂತಾದುವಕ್ಕೆ ಬೂದಿಯನ್ನು ಹಾಕಿ ತಿಕ್ಕು : ಹೊಳೆವ ಹೊಂಬೊಗರಿಗೆ ಬೆವಟಿಕ್ಕಿ ಕೈಯಾರ ಬೆಳಗಿದೊಡೊಪ್ಪುವೆತ್ತಂತೆ ಅಳಲುವ ರತಿಯುರಸ್ಥಳದೆ ಭಸ್ಮಾಂಕಿತ ಕಳಶಕುಚಂಗಳೊಪ್ಪಿದುವು (ಚೋಹಚ. ೬-೨೨). ೨. (ಆಲಂ) ಅನುನಯಿಸು ; ಮರ್ಜಿ ಹಿಡಿ : ಇವನಿಗೇಕಿಷ್ಟು ಬೆವಟಿಕ್ಕಬೇಕು? ಬಂದರೆ ಬರಲಿ. ಬೇಡಾದರೆ ಬಿಡಲಿ (ರೂಢಿ).

[ಬೆವಟು + ಇಕ್ಕು]

**ಬೆವಟು** (ನಾ). ಪಾತ್ರೆ ಮುಂತಾದುವನ್ನು ಬೆಳಗಲು ಉಪಯೋಗಿಸುವ ಬೂದಿ ಮುಂತಾದುವು : 'ಬೆವಟಿಕ್ಕು' ಪರಾ. [ ? ]

**ಬೆವತು** 'ಬೆಮರ್$_1$' ಪರಾ.

**ಬೆವರ್** 'ಬೆಮರ್$_2$' ನೋ.

**ಬೆವರಕ್ಕಿ** (ನಾ). ತನೆಯಿಂದ ತೆಗೆದು, ಸುಟ್ಟ ಕಾಳು ; ಕಾಚಕ್ಕಿ ; ಬೆಳಸಿ: ಹುಚ್ಚೋಳದಿಂದ ಬೆವರಕ್ಕಿ ಮಾಡಿವೆವು (ರೂಢಿ). [ ? + ಅಕ್ಕಿ$_1$]

**ಬೆವರಟ್ಟೆ** (ನಾ). ಕಾಲನ್ನು ಮುಚ್ಚುವ ಪಾದರಕ್ಷೆಯ ಒಳಗೆ ಹಾಕುವ, ಬೆವರನ್ನು ಹೀರುವ ಅಟ್ಟೆ: (ಹ). [ಬೆವರು$_2$ (<ಬೆಮರ್$_2$) + ಅಟ್ಟೆ$_2$]

**ಬೆವರಿಡು** 'ಬೆಮರಿಡು' ನೋ.

**ಬೆವರಿಸು** (ಕ್ರಿ). ೧. ಬೆವರುವಂತೆ ಮಾಡು : ಸ್ವೇದಗೊಳ್ಳುವಂತೆ ಮಾಡು : ಕಷಾಯ ಲೇಹ್ಯದಿಂದಲೂ ಧೂಮಪಾನ ಅಭ್ಯಂಗನ ಮುಂತಾದುದರಿಂದಲೂ ಬೆವರಿಸುವುದರಿಂದಲೂ ಚಿಕಿತ್ಸೆಯಂ ಪ್ರಯೋಗಿಸುವುದು (ಕಕವ್ಯ. ೨೨೪). ೨. (ಆವಿಯ) ಶಾಖದಿಂದ ನೀರೂರುವಂತೆ ಮಾಡು : ಮಡಕೆಯಲ್ಲಿ ನೀರ ಹನಿಸಿ ಒಲೆಯ ಮೇಲೆತ್ತಿ ಕಾಸಿ, ಆ ಮಡಕೆಯ ಬಾಯಿಗೆ ಪುಟ್ಟ ಪಾವಡೆಯಂ ಕಟ್ಟಿ ಅದರ ಮೇಲೆ . . . ಈ ಚೂರ್ಣವನ್ನಿಟ್ಟು ಮೇಲೆ ಮುಚ್ಚಳ ಮುಚ್ಚಿ ಬೆವರಿಸಿ (ಕಕವ್ಯ. ೨೦೮).

[ಬೆವರು$_2$ (<ಬೆಮರ್$_2$) + —ಇಸು$_3$]

**ಬೆವರಿಳಿ** 'ಬೆಮರಿಳಿ' ನೋ.

**ಬೆವರು$_1$** 'ಬೆಮರ್$_1$' ನೋ.

**ಬೆವರು$_2$** 'ಬೆಮರ್$_2$' ನೋ.

**ಬೆವರುಗುಳ್ಳೆ** (ನಾ). ಸೆಕೆಯಿಂದ ಮೈಮೇಲೆ ಏಳುವ ಬೊಕ್ಕೆ : ಸೆಕೆಗುಳ್ಳೆ : ಮಗುವಿನ ಮೈಯಲ್ಲೆಲ್ಲಾ ಬೆವರುಗುಳ್ಳೆ ಆಗಿ ಒದ್ದಾಡುತ್ತಿದೆ (ರೂಢಿ). [ಬೆವರು$_2$ (<ಬೆಮರ್$_2$) + ಗುಳ್ಳೆ$_1$ (<ಗುರುಳೆ)]

**ಬೆವರುಸಾಲೆ** 'ಬೆಮರ್ಸಾಲೆ' ನೋ.

**ಬೆವರುಹನಿ** 'ಬೆಮರ್ವನಿ' ನೋ.

**ಬೆವಸಾಯ,** ಬವಸ, ಬವಸು, ಬವಸೆ$_1$, ಬೇಸಾಯ, ಬ್ಯವಸಾಯ (ನಾ). ೧. ಉತ್ತು, ಬಿತ್ತಿ ಬೆಳೆ ತೆಗೆಯುವುದು ; ಆರಂಬ ; ಒಕ್ಕಲುತನ ; ಕೃಷಿ : ಒಬ್ಬಳೇ ಹೆಂಡತಿ ಮೂವರ್ ಪುತ್ರರ್ ಎರಡಾರ ಬೆವಸಾಯ ಹತ್ತು ಕಚಿಹ (ಹಂತಕಂ. ೬೫-೦೪) ; ಬೆವಸಾಯವ ಮಾಡಿ ಮನೆಯು ಬೀಯಕ್ಕೆ ಬತ್ತವಿಲ್ಲದಿದ್ದರೆ ಆ ಬೆವಸಾಯದ ಘೋರವೇತಕಯ್ಯ (ಅಪಕಂ. ೦೬-೬೫) ; ಮಗಧದೇಶದಲ್ಲೊಬ್ಬ ಶೂದ್ರನು ಬೆವಸಾಯಮಂ ಮಾಡಿಕೊಂಡು ಬದುಕುತ್ತಿರಲು (ಶೈರಹೂ. I. ೩೦೩). ೨. ಪ್ರಯತ್ನ; ಪರಿಶ್ರಮ : ಪುಣ್ಯವಿಲ್ಲದೆ ಬೆವಸಾಯದಿಂ ಸಿರಿಯಕ್ಕುಮೆಂಬೆಯುಪ್ಪೊಡೆ ನೆತ್ತಿ ತಱಿಂಟಾಗೆ ಪುಳ್ಳಿಯ ನಡುಕವ ಬಡವರ್ಗಂ . . . ಸಿರಿಯೇಕಾಗದು (ಧರ್ಮಾಮೃ. ೬-೦೬೩). **ಬವಸ :** ೧. "ಬವಸಂ ವ್ಯವಸಾಯ ನಾಮದೊಳ್" (ಕರ್ಣಾಶ. ೪೨). **ಬವಸು :** ೧. "ಬವಸು=ವ್ಯವಸಾಯಂ" (ಕಮುದ. ಶಂ. ೨) ; "ಬವಸೆಂದು ವ್ಯವಸಾಯಂ" (ಕರಸಾ. ೬೭-೪೮೩) ; ಬವಸಿನೊಂದು ಕಜ್ಜಮಂ ತವಿಸಿ ಬೇಸರ್ಗೆ ಕುಡಿಯರ್ . . . ಶ್ರೀರಾಮಲೀಲಾವಿನೋದಮಂ ಪಾಡುತಿರೆಯುಂ (ರಾಮಾಶ್ವ. ೨೭-೨೦). 'ಬವಸಿಗ' ಪರಾ. ೩. ಸಜ್ಜು ; ಸಿದ್ಧತೆ : ಕವಿದುಗ್ರಂ ಚಾತುರಂಗ ಬವಸ ದಳವುಳಂ ಧಾಳಿ ಸೂಳೆಚಿನಿವ್ಪಾಹವದೊಳ್ವ್ಯಾಳುಕ್ಯರಾಮಂ ಬೆಸಸೆ (ಎಕ. VII, ಶಿಕಾರಿ. ೦೩೬-೨೭ ; 1068). **ಬವಸೆ$_1$ :** ೧ "ಬವಸೆ (ಸು)_ವ್ಯವಸಾಯ" (ಶಬ್ದಕೋ. ೨೯). ೨. ದೇವರ್ ಬವವಿನೋಳಾದಂ ಬವಸೆಯುನೆ ಮಾಟ್ಟುದು (ಆದಂಕಾ. ೩೬೦); ದಾರುಣಸಂಸರಣಮಹೋರ್ವೀರುಹಮಂ ಕೀಟ್ಟು ಬವಸೆಯಿಂದಿರ್ದಪನೀ ಧೀರಂ (ಶಂಕಾಕೃ. ೨-೦೬). ೪. ಉದ್ಯೋಗ ; ಕೆಲಸ ; ವೃತ್ತಿ : ಎನಗೆ ಮನೋಭವನೆ ದೇವಂ ಬಸಸವೆ ಬವಸೆ ಬಲವೆ ಕುಲಧನಂ (ಶಂದ್ರಕೃ. ೬-೪೭ ಪ). **ಬೇಸಾಯ :** ೧. ಪಾಟುನೆಲದೊಳ್ ಬೇಸಾಯ ನೀಚಾಶ್ರಯಂ . . . ಫಲದ ಭ್ರಾಂತಿಯಂ ತೋರ್ಪುದೈ (ಸೋಮೇಶ. ೨೩) ; ಮಾನವರೆಲ್ಲರೂ ಕೂಡಿಯೆ ಬೇಸಾಯ ಸಾಗಿಸತೊಡಗಿದರು (ಪೂಪಾದ. ೬೦). **ಬ್ಯವಸಾಯ:** ೪. ಆತನ ಬ್ಯವಸಾಯ ಬ್ಯವಹಾರವೆನ್ನನೆ ಭಕ್ತಿಯ ಭಂಡ ಮೊದಲ್ ನಿಜಭಕ್ತಿಯೇ ಕೋಟಾನುಕೋಟಿಲಾಭಂ . . . ಕಲಿದೇವಸೆಟ್ಟಿ ನೆಗಳ್ದಂ ಧರೆಯೊಳ್ (ಕೌಇಇ. IX—i, ೨೪೬-೩೯ ; 1176). [<ಸಂ. ವ್ಯವಸಾಯ]

**ಬೆವಸಾಯಂಗೆಯ್,** ಬವಸೆಗೆಯ್ (ಕ್ರಿ). ಪ್ರಯತ್ನ ಮಾಡು ; ಶ್ರಮಿಸು : ಬೆವಸಾಯಂಗೆಯಲಿನ್ನುಮುಂಟೆಡೆ ಕೃಪಾಶ್ವತ್ಥಾಮರುಳ್ಳಂತೆ ಪಾಂಡವರಂ ಗೆಲ್ವುದಸಾಧ್ಯಮಾಯ್ತು (ಶಂಕಚಾ. ೦೩-೫೦). **ಬವಸೆಗೆಯ್ :** ನಿನ್ನ ಬಡುಗಡೆಯ ಗಟಿಯಿಸಲ್ ಬವಸೆಗೆಯ್ವನ್ (ಬಿಕ್ಕಶ್ರ. ೦೮-೩೫೦).

[ಬೆವಸಾಯ + ಕೆಯ್$_1$]

**ಬೆವಹಾರ,** ಬೇಹರ$_2$, ಬೇಹಾರ, ಬ್ಯವಹಾರ, ಭ್ಯವಹಾರ, ವೆವಹರ, ವೆವಹಾರ (ನಾ). ೧. ಉದ್ಯೋಗ ; ಕೆಲಸ ; ವೃತ್ತಿ : ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು (ಬಸವ. ೬೦೮) ; ಬಾಲಕರ್ ಬಾಲೆಯರ್ ಕೊಯಿದು ತಿನುತಿರೆ ಮುತ್ತಿ ಆರಂಭದೊಳ್ಕೂಡಿ ಅಲ್ಲಿಯಾಗದೆ ಪಾಚಿಗಿ ದೂಜಿಸುತೆ ಬೆ[ಪಾಠಾಂ. ವ್ಯ]ವಹಾರದಲ್ಲಿ ತಿಟ್ಟನೆ ತಿರುಗಿ (ಶಿಂಜೋರ. ೨-೫). ೨. ವ್ಯಾಪಾರ ; ಹರದು : ಕರ್ಮವ ಕಳೆದು ನಿರ್ಮಲ ಭಕ್ತಿ ಸುಜ್ಞಾನ ಧರ್ಮವಾರದ ಪೇಟೆಯ ಬೆವಹಾರ . . . ಹಿಂಡುದೈವವ ಕಂಡ ಹಿರಿಯ ಪ್ರಭುಸೆಟ್ಟಿಯೊಳು ಕೊಂಡು ಕೊಟ್ಟಾಡುವ ಘನ ಬೆವಹಾರ (ಶಿವಗೀ. ೦೮೯-೪೪೩) ; ಆ ಪುರದೊಳೊರ್ವ ವರನಂ ಸಮುದ್ರಾಂತರದ್ವೀಪಂಗಳೊಳ್ ತನ್ನ ಬೆವಹಾರಕ್ಕೈದಲ್ (ಕಬಕು. ೫೦-೩). ೩. ವ್ಯಾಪಾರದ ವಸ್ತು ; ಸರಕು : ಆಚೆಯ ಧರೆಯ ಬೆವಹಾರವ ತಂದು ಮತ್ತೆ ಈಚೆಯಲ್ಲಿ ಕಡನ ಕೊಡಲಾಗಿ ಕೊಂಡಹ ಸತ್ತ ಕೊಟ್ಟವ ಕೆಟ್ಟ (ಶಿವಗೀತಾ. ೨೩೭-೬೦೪). ೪. ನಡತೆ ; ವರ್ತನೆ ; ನಡವಳಿಕೆ : ದಾಯು ನೋಡ

ಬೆವಹಾರ ಬೆಸನಗಳಾಯತವು ಬಳಿಕುಂಟೆ ಕೇಳಾ (ಶ್ರಶುಲೀ. ೩-೬೦). **ಬೇಹರ$_2$** : ೧. ಅಕಾರಕ್ಕೆ ಏತ್ವಂ–ವ್ಯವಹಾರ, ಬೇಹಾರ, ಬೇಹರ (ಶಬ್ದಮ. ೨೬೦ ಪ್ರಯೋ). ೨. ಎನ್ನ ಬೇಹರಕೆ ದೋಸೆಯ ಹೊಯ್ಯುತಿರೆ ಹಜಿದವು ನಿನ್ನವೆಂದು ಇರದಾಡುವನಿತಕೆ ಪಟಿಯುಲವೆಲ್ಲ ಶಂಕರನುಂಡು ಬಿಟ್ಟಿಯು ಪೋದ (ಶೋಲಕೃ. ೩-೪೦). ೪. ಆವಾವ ಹರಕೆಗಳ ಕಾಣಿಕೆಗೆ ಸಂದೆ? ಬೇಹರವನೆಲ್ಲಲ್ಲಿ ಸಲುವಳಿಗೆ ತಂದೆ? (ಗಿಲಬಂ. ೨೯-೬೦). ೫. ಸಂಬಂಧ; **ಗೊಡವೆ** : ಬೆಟ್ಟ ಕೆರೆ ಬನ ಬಾನು ಬಯಲೆಲ್ಲವೊಂದಾಗ ನನಗಿವಕು ಮುದದ ಬೇಹರ ತೀರಿತೀಗ (ಗಹೇಶ. ೨೯-೦೮). **ಬೇಹಾರ** : ೧. ಬೆಳಗಾದುದೇಳು ಬೇಹಾರಕೆಂದೇಬ ಕಳವಳವದೇಕೆ (ಸರ್ವಜ್ಞ. ೩೬೨); ರಾಜಾಯದೊಳ್ಸಲ್ವ ಧನಭಾಗದಿಂದರಮನೆಯ ಬೇಹಾರವಂ ಮೊದಲಂತ ನೇಕಸಚಿವರ ಮುಖದಿಂ ನಡೆಯಿಸುತ್ತೆ (ಮಾಶಾತ. ೪-೬೩ ವ); ತನ್ನ ತಾಯಿ ಯೊಡನೆ ಗೃಹಕೃತ್ಯದ ಬೇಹಾರ ಸಾಗಿಸಲು ಬಂದಾಗ . . . ಪ್ರಸ್ತಾಪಿಸ ತೊಡಗಿದಳು (ಮಲಿಮ. ೬೯೦). ೨. ಬಣಂಜಿಗರೆತ್ತುಗಳೊಳು ಬೇಹಾರಕೋ ಸುಗ ಮಧುರೆಗಂ ಪೇಜಿಕೊಂಡೊಂದು ಘೋರಕಾಂತಾರದೊಳ್ ಪೋಗುತ್ತೆ ಬೀಡ ಬಿಟ್ಟರು (ಸಿದ್ಧೇಶ. ೨-೨೪); ಆಹಾರವುಳ್ಳಲ್ಲಿ ಬೇಹಾರ ಘನವಕ್ಕು ಆಹಾರದೊಳಗನಜಿದಿಪ್ಪ ಸೆಟ್ಟಿಗೆ ಬೇಹಾರಪಕ್ಕು (ಸರ್ವಜ್ಞ. ೨೬೬); ಬೇಸಾಯ ಬೇಹಾರ, ನೆಯಿಗೆ ಇತ್ಯಾದಿ ಹಲವು ಉದ್ಯಮಗಳನ್ನು ಕೈಗೊಂಡು ಜನರು ಬಾಳುತ್ತಿದ್ದರು (ಧಶಮಮ. ೬೪). **ಬ್ಯವಹಾರ** : ೨. ಆತನ ಬ್ಯವಸಾಯ ಬ್ಯವಹಾರವೆನ್ತೆನೆ ಭಕ್ತಿಯ ಘಂಡ ಮೊದಲ್ ನಿಜಭಕ್ತಿಯ ಕೊಟಾಸು ಕೋಟಲಾಭಂ ಶಿವಸದ್ಭಕ್ತಿಯ ಬೆಳಸಿ . . . ಕಲಿದೇವಸೆಟ್ಟಿ ನೆಗಳ್ದಂ ಧರೆಯೊಳ್ (ಕಾಇತ. IX–i. ೨೯೬-೪೦; 1176); ಭರತಿಸೆಟ್ಟಿಯ ಮಗ ತೀಕಿಸೆಟ್ಟಿಯರು ಬ್ಯವಹಾರಮಾರ್ಗ್ಗದಿಂ . . . ಕ್ರಯಸ್ವರೂಪದಿಂ ಧಾರಾಪೂರ್ವ್ವಕವಾಗಿ . . . ಕೊಂಡ ಎರೆ ಮತ್ತರೆರಡು (ಕಾಇತ. XX, ೦೯೮-೨೦; 1227). **ಭ್ಯವಹಾರ** : ೧. ನಿಂಮ ಕೆಯ್ಯ ಭಯಿರಪದೇವರ ಭ್ಯವಹಾರಕ್ಕೆ ಕೊಟ್ಟ ಯಿಪತೆಯೆಂಟು ಮಂದಿ ಸ್ಥಾನಿಕರು (ಎಕ. X (S), ಕೋಲಾರ. ೩೪೯-೩; 16ನೆಯ ಶತ). **ವೆವಹರ**: ೨. 'ವೆವಹರಿಸು' ಪರಾ. **ವೆವಹಾರ** : ೧. ನರನೊಂದು ವೆವಹಾರಕೆರಡಾಯುವೆಯ ಲೆಕ್ಕ ಹೊರಗಣ ನುಭೋಗಕೊಂದೊಳನೀತಿಗೊಂದು (ಮಂಕುತ. ೬೬೪). ೨. ಉದ್ಯೋಗ ವೆವಹಾರ ನೃಪಸೇವೆಯಾಳ್ದರು ಮಧ್ಯರಾತ್ರಿಗೆ ಬರ್ಪನಕ ನಿದ್ದೆಗೆಯ್ದಂತೆ ಮಂದಿರದೊಳು ಹಾದರವಿದ್ದಯಂಗನೆಗಳೊಪ್ಪಿದರು (ಮೋಹತ. ೦೯-೨೯).

**ಬೇಹಾರವಾಡು**=**ವ್ಯಾಪಾರಮಾಡು** : ಹಿಡಿದ ಫಲ ದೃಢದಿಂದ ಬಿಡದೆ ಬೇಹಾರವಾಡಿ ಕೊಡುವುದೊಂದು ಲಕ್ಷ ಕೊಂಬುದೊಂದು ಲಾಭ (ಶವಗೀ. ೪೯೧-೯೩೬). 'ಬೇರ$_2$' ಪರಾ. [< ಸಂ. ವ್ಯವಹಾರ]

**ಬೆವಹಾರಿ**, ಬೇಹರಿ, ಬೇಹಾರಿ (ನಾ). **ವ್ಯಾಪಾರ ಮಾಡುವವನು**; ವರ್ತಕ; ಪರದ : ತಂಮ ಪಟ್ಟಣವಾದ ಹೆಂಮರಗಾಲ ಬೆವಹಾರಿ ಗಂಗರ ಮಾಧವಸೆಟ್ಟಿಯ ಮಗ ಮಸಣಾಡಸೆಟ್ಟಿಗೆ . . . ವರಿಷಕ್ಕೆ ಗ ೧ಬ ಬಡಗೆ ಸಿದ್ಧಾಯ ಗ ೧ನೆ ತೆಜುವರು (ಎಕ. III(R). ಪಂಜವ. ೩೨೯-೦೦; 1291): ಶ್ರೀ ಚಿಕಹರಿಹರರಾಯವೊಡೆಯರ ಮನೆಯ ಬೆವಹಾರಿಗಳು (ಎಕ. IX(s), ಹೊಸಕೋ. ೦೬೬-೩; 1375). **ಬೇಹರಿ** : ವಾಣಿಜವರರಿಗೂ ಕ್ರಯ ವಿಕ್ರಯ ವ್ಯವಹರಣೆಯುಚಿತವದು ತರುಣಿರತ್ನವು ಸಲ್ಲದಾ ಬೇಹರಿಯ ನೀಕ್ಷಣ ಹಿಡಿದು ಬಿಟ್ಟಂಬುರುಹಮುಖಿಯನು ಸೆಳೆಯದಿರೆ ಹಳಿವೆಮಗೆ ಬಹುದು (ಶವಂಶ. ೯-೨೪). **ಬೇಹಾರಿ** : ಹುಸಿಯದ ಬೇಹಾರಿಯೆ. ಇಲ್ಲ ಪಾಪ ಬೇಹಾರಿಯುಪ್ಪುದಜಿಂದೆಮ್ಮ ಜಾತಿಧರ್ಮಕ್ಕೆ ಧರ್ಮಬುದ್ಧಿ ಯಧರ್ಮಬುದ್ಧಿಯಾಗಿ ಧನವಂ ಬಂಚಿಸಿಕೊಂಡೆನ್ನ ಮನೆಗುಯ್ದಂ (ಚಂಶಾ. ೦೬೬-೦೦); ಊರ ಹರದರ ಹಾರುವರ ಬೇಹಾರಿಗಳ ಬಲು ಸೂಜಿಯಾದುದು ಕೇರಿಕೇರಿಯಲಿ (ತೊರಣ. ೩-೯-೯); ಬಹುಬಗೆ ರೊಟ್ಟಿ ಸಕ್ಕರೆ ತುಪ್ಪಗಳ ಪೊಟ್ಟಗಳನು ಮಾಜುವ ಬೇಹಾರಿಗಳಿಟ್ಟಣಿಸು ತಲ್ಲೆದಿದರು (ಕೆಂಪಶ. ೦೧-೪೦). 'ಬೇರಿ$_1$' ಪರಾ. [<ಸಂ. ವ್ಯವಹಾರಿನ್]

**ಬೆವೆ** 'ಬೆಮರ್$_1$' ನೋ.

**ಬೆಸ$_1$**, ಬೆಸನ್, ಬೆಸನ$_1$, ಬೆಸನು, ವೆಸ (ನಾ). ೧. **ಕೆಲಸ; ಕಾರ್ಯ** : ಪಾಂಡವರ್ ಮುನ್ನಮೆ ನಿನ್ನ ಕೆಯ್ಗೆ ವಂದರೆನಗವಾ ಬೆಸಂ ತಪ್ಪಿದುದು (ಕುಕಥಾ. ೮-೪೩ ವ): ಬೇಟ್ಟರಂ ಪುಟ್ಟಿಸುವ ಬೆಸಂ ಬಮ್ಮನದು ಸಮಸ್ತವರಂ ರಕ್ಷಿಸುವ ಬೆಸಂ ತನ್ನದು ಗಡ ನಿಸದಂ (ಎಕ. VII, ಶಿಕಾರಿ. ೧೨೩-೨೬; 1158); ನಿನ್ನ ಅಂತಃಸತ್ವಸಾರ ಆಧಾರ! ಉಳಿದೆಲ್ಲವೂ ಬೆಸಕೆ ಬರದ ಸಿಂಗಾರ! (ಭಾರಂಗ. ೩೬-೮). ೨. **ಶಿಲ್ಪಿಯ ಕೆಲಸ; ಶಿಲ್ಪ ಕಾರ್ಯ; ಕಂಡರಣೆ** : ಪರಮೇಶ್ವರಭಟ್ಟರ ಲಿಖಿತಂ ಚನ್ದ್ರಾರ್ಕ್ಕ ಧರಾರ್ಣ್ಣವ[ಂ] ನಿ[ಲ್ಕೆ] ಇನ್ದಗೋಟೆಯ ಬೆಸಂ (ಕಾಇತ. XI–i, ೦೩-೮; 873); ಮಚ್ಚರಿಪ ಬಿನ್ನದ ರೂವಾರಿ ಮದನಮಹೇಶ ಕೇಶವದೇ(ವ) ಮಾಡಿಸಿದ ಬೆಸ (ಎಕ. V, ಬೇಲೂರು. ೩೩-೧; 1120). ೩. **ಅಪ್ಪಣೆ; ಆದೇಶ** : ಶ್ರೀಮತ್ ಕೊಜಿಗ್ಗಣಿ ಮುತ್ತರಸರಾ ಬೆಸದೆ ಕಾಡುವಟ್ಟ ದಣ್ಡಿಜಿದು ತೊವಳಾಲದುಳ್ ಏಜಿದೋರ್ ಸಿಜುವಲ್ಲವರಸ (ಎಕ. IX, ಹೊಸಕೋ. ೨೦-೩; ಸು. 750); ವಿದುರಂ . . . ಧೃತರಾಷ್ಟ್ರನ ಬೆಸದೊಳ್ ವ ರಣಾವತಕ್ಕೆ ಪೋಗಿ (ಕಂಪಭಾ. ೩-೮ ವ); ಅಗ್ರಜನಿತ್ತ ಬೆಸದಿಂ ನಡೆದೆನು (ಕುವ್ಯಾಕ. ೬೦೩. ೬-೦೦೩). 'ಬೆಸಂಬಡೆ' ಪರಾ. ೪. **ಕೇಳಂವುದು; ವಿಚಾರಿಸಂವುದು**: 'ಬೆಸಗೊಳ್' ಪರಾ. **ಬೆಸನ್** : ೧. ಎಸರನಿಡುವ ಅಕ್ಕಿಗುರ್ಚುವ ಬೆಸನಂ ಕೆಯ್ಗೆಜಿವ ಕಂಚುಗರ್ಚುವ ಬೆಸನಂ ಬೆಸನಲ್ಲದೆ ಮತ್ಸ್ಯನ ಬಾಣಸಿಗಂಗಾರಿತ್ತರೆಲವೋ ನಿನಗೀ ಬೆಸನಂ (ಗದಾಯು. ೬-೩೬): ಈ ಬೆಸನಪ್ಪೊಡೆ ದೂತರ್ಗೆ ಭಟ್ಟರ್ಗೆ ಪರಿಗರ್ಗಲ್ಲದೆ ನೀಂ ಮಾಡಲ್ಕಕ್ಕುದಲ್ಲ (ಶಾಂತಪು. ೪೨-೩). ೩. ಬೆಸನೇನೆಂದೊಡೆ ಪೇಟಿನ್ನೆನ್ನ ಬೆಸನಂ (ಶಂಖಚಾ. ೦-೬೮); ನಿಮ್ಮ ನೆಮ್ಮರಸನ ಬೆಸನಿಲ್ಲದೆ ಎಲ್ಲಿಗುಂ ಪೋಗಲೀಯೆಂ (ಅಕ್ಷು. ೬-೦೨೦ ವ); ಏಬೆಸನೆಂದು ತನು ಕರಗಿ ಮನ ಕರಗಿ ನೋಡಿ ಮಾಡುವುದು ಭಕ್ತಸ್ಥಲ (ಬಸವ. ೬೬೪). **ಬೆಸನ$_1$** : ೩. ತನ್ನ ನೊಸಲ ಕಣ್ಣಿಗೆ ಬೆಸನನಿತ್ತರೆ ನಿಲಬಲ್ಲ ಗರುವರನಾರನು ಕಾಣೆ (ಸಿದ್ಧವ. ೩೩-೧೬೬); ಕಾಳರಕ್ಕಸ ನಿನ್ನ ಹಿಡಿತರೆ ಬೆಸನ ಕೊಟ್ಟಾಳನಟ್ಟಿದ ನೋಡು ಜೀಯ (ಮೋಹತ. ೩೩-೪೦). **ಬೆಸನು** : ೨. ಖಣ್ಡಸ್ಫುಟಿತಂ ಮೊದಲಾಗೆಲ್ಲಾ ಬೆಸನುಮಂ ನಡೆಯಿಸುವ ರೂವಾರಿ ಮುಚ್ಚೋಜಂಗೆ ಮತ್ತರ್ಪ್ಪನ್ನೆರಡು (ಕಾಇತ. IX–i, ೦೦೦-೩೩; 1045). ೩. ಅವರುಂ ಗುರುಗಳ ಬೆಸನುಮನನೇಕವ್ರತಂಗಳಂ ಕೈಕೊಣ್ಡು ತೀರ್ಥಯಾತ್ರೆಗೆ ಪೋಗುತ್ತುಂ (ಕಾಇತ. XI–i, ೬೪-೨೩; 1028). **ವೆಸ** : ೨. ಈ ದೇಗುಲದ ವೆಸಕ್ಕೆ ಕಲ್ಕುಟಿಗಂ ರೇವೊಜನೊಡೆಯನಾತಂಗೆ ಗಟ್ದ ಮತ್ತ ೧ (ಕಾಇತ. XX, ೪೯-೬೬; 1076). ೩. ದಂಡನಾಯ[ಕ] ಕೇಸಿ ಮಯ್ಯಂಗಳ ವೆಸದಿಂ ಸಿಂದವಾಡಿಸಾಯಿರದ ಹೆಗ್ಗಡೆ ಮಗಂ ಚೀಯಮ ರಸರ್ ನಾಡಂ ಪ್ರತಿಪಾಳಿಸಿ (ಕಾಇತ. XI–i, ೨೪೦-೦೪; 1143).

**ಬೆಸಕುಡಿಕೆಯ ನೀರೆಜ್**=**ಕೊಡದಿಂದ ನೀರು ತುಂಬುವ ಕೆಲಸ ಮಾಡು** : ಅತೀಂದ್ರಿಯರೆಲ್ಲರು ಮದನನ ಮನೆಯ ಬೆಸಕುಡಿ[ಕೆ] ಯ ನೀರೆಜುವುದಕ್ಕೊಳಗಾದರು (ಪೇಜಿಬಂ. ೪. ೮೦-೬). **ಬೆಸದವ**=**ಕೆಲಸದ ಆಳು; ಸೇವಕ** : ಬೆಸದವಂಗೆ ಅರೆ ಅಳ್ ತಜುವೊದು (ವ್ಯಕಂ. ೦೯೨೪, ೮೦-೦೦೩; 799); ಕಾಪ್ಪಕೂಟನೆಂಬ ಬೆಸದವಂ . . . ಪೊಟಿಲ್ಗೆ ಪರ್ಪೊನಂ ಕಂಡು (ವಡ್ಡಾರಾ. ೬೬-೨೨); ಬೆಸದವರ್ ಬಸಮಲ್ಲದವರಂತುಜಿ ಉಟಿಯೆ (ರಚರ್ಮಪ್ಪು. ೨-೬೯). **ಬೆಸದಾಳು**=**ಬೆಸದವ** : ಕಿಜಿಯ ಪೊನ್ನಯ್ಯ ಬಲ್ಲಹನ ಬೆಸದಾಳು ಗಜಾಂಕುಸಚೋಟನ ಮೇಗೆ ದಣ್ಡುಪೋಗಲು (ಕಾಇತ. IX–i, ೨೩-೬; 948). **ಬೆಸನಂ ಪಾರ್**=**ಅಪ್ಪಣೆಗಾಗಿ ಕಾಯು; ಆಜ್ಞೆಯನ್ನು ನಿರೀಕ್ಷಿಸು** : ಬೆಸನಂ ಪಾರ್ವ್ವವು ಮಂತ್ರದೇವತೆಗಳ್

(ಅಂಕ. ೦-೬೯) ; ಬೆಸನಂ ಪಾರ್ದಿರೆ ಭೂಪತಿಪ್ರತತಿಗಳ್ (ನೇಮಿಪು. ೨-೯೬).
[ದೇ.॥ ತಮಿ. ವಿಯವಂ]

**ಬೆಸ$_2$** (ನಾ). ಸರಿಸಂಖ್ಯೆಯಲ್ಲದುದು ; ವಿಷಮಸಂಖ್ಯೆ : ಒಂದೆಂದಡೆ ಬೆಸ ಎರಡೆಂದಡೆ ಸರಿ (ಶ್ರೀಕೋಗ. ೪. ೩೦೦-೬೯) ; ಪೂಡುವ ಕುದುರೆ ಬೆಸಂ ಕೊಂಡೋಡುವ ತೇರ್ಗೊಂದೆ ಗಾಲಿ ಪೊಡೆವಂ ಪೆಟಿವಂ ಕೇಡಿಂಗಲಸಿ ದೊಡಕ್ಕುಮೆ ನೋಡಿರೆ ರವಿ ಕಡೆದನಸ್ತಗಿರಿಮಸ್ತಕದೊಳ್ (ಅರ್ಥನೇ. ೩-೦೪) ; ಘುತಮಾನ ಬೆಸವಾಗಿ ಬಿಗುವಾನ ಹಿರಿದಾಗೆ ಶಾಂತತೆಯು ತಳೆದಿರುವೆಯಾ? (ಅರಳು. ೮೪೪-೯). [<ಸಂ. ವಿಷಮ. / ತಮಿ. ವಿಯಮ್ ; ತೆಲು. ಬೇಸಿ]

**ಬೆಸಒಕ್ಕಲು** (ನಾ). ಒಂದು ಬಗೆಯ ತೆರಿಗೆ (?) : ಅಡತೆಱ[3] ಕುಂಬಾಱು ದೆಱ[3] ಬಿನುಗು ಬೆಸಒಕ್ಕಲು ತಗಡೂರ ಸ್ಥಳಕ್ಕೆ ಸಲುವ ಸುಂಕ (ಪ್ರೌ.ಅಂ. ೦೯೪೬, ೦೮-೨೦ ; ?). [?]

**ಬೆಸಂಗೆಯ್**, ಬೆಸಕೆಯ್, ಬೆಸಕೈ, ಬೆಸಗೆಯ್, ಬೆಸಗೈ (ಕ್ರಿ). ೧. ಕಂಡರಿಸು ; ಕೆತ್ತು : ಇವಮ್ಪರೆದೊ ಚೋರಯ್ಯನ ಪೆರ್ಗ್ಗಡೆ ಪೊನ್ನಯ್ಯ ಕಲ್ಲಪ್ಪೆಸಂಗೆಯೊ ದಗ್ಗಾಚಾರಿ (ಶಾಇಇ. IX-i. ೨೦-೦೨ ; ೪೫ಡು ೬೫). **ಬೆಸಕೆಯ್** : ೨. ಹೇಳಿದ ಕಾರ್ಯವನ್ನು ನಿರ್ವಹಿಸು ; ಸೇವೆಮಾಡು : "ವರಿವಸ್ಯಾ . . . ಆರಾಧನಃ, ಉಪಚಾರಃ– ಈ ೧೧ ಬೆಸಕೆಯ್ವುದರ್ಕೆ ಪೆಸರ್" (ಶಬ್ದಮ. ೨೦–೦೨೯); ಪುಣ್ಯಕ್ಷಯದೊಳ್ ತನ್ನ ವಿದ್ಯೆಗಳುಂ ತನಗೆ ಬೆಸಕೆಯ್ಯದಿರೆ (ಆದಿಪು. ೨-೦೪ ವ); ದುರ್ಯೋಧನ ನಾಳ್ಗೆ ನೆಲನಂ ಆತಂಗುಟಿದ ನಾಲ್ವರ್ಬೆಸಕೆಯ್ದು ಬಾಟ್ಸರ್ (ಗದಾಯು. ೬-೬೦ ವ) ; ಮುನಿಗೆ ಬೆಸಕೆಯ್ಯುತಿರಿಯೆಂದರಸನೆಲ್ಲರ್ಗೆ ಕೈಮುಗಿದನು (ಹಕಶ. ೯-೨೦). ೩. ಅಂಕೆಗೆ ಬರು: ಬೆಸಕೆಯ್ದತ್ತು ಸಮುದ್ರಮುದ್ರಿತ ಧರಾಚಕ್ರಂ (ಶಂಶಪಾ. ೦-೦೦೦) ; ಕುಮಾರನಾಡು ತಳಕಾಡುಗಳೆಂಬಿವು ಕಯ್ಗೆ ಸಾದ್ಯವತ್ತಡಿಯಿಡೆ ಮುಂಚೆ ಕಂಚಿ ಬೆಸಕೆಯ್ದುದು ವಿಷ್ಣುನೃಪಂ ಕೃಪಾಣಮುಂ ಜಡಿಯದೆ ಮುಂನೆ ಕೊಂಗನೃಪರಿತ್ರರಿಭಂಗಳನೇಂ ಪ್ರತಾಪಿಯೆನೋ (ಎಕ. V. ಬೇಲೂರು. ೦೨೪–೨೦ ; 1133). **ಬೆಸಕೈ** : ೨. ಪಗಲ್ ಬೈಗಿರುಳೆನ್ನದೆ ಸಲೆ ಬೆಸಕೈಗುಂ ಮುನಿಗಳ್ಗೆ ನಗದ ಮರ್ಕಟನಿಕರಂ (ಗಂಕ. ೦-೬೩) ; ಉಳಿದ ವರ್ಣತ್ರಯಕೆ ಬೆಸಕೈವಳತೆಯಲಿ ಶೂದ್ರನು ಕೃತಾರ್ಥನು (ಕುವ್ಯಾಪ. ೬-೦೬) ; ಅಹಿತರೇನಂಜುವರೆ ನಿರ್ಧನನಹ ನೃಪನಯನುಚರರು ಬೆಸಕೈದಿಹರೆ (ತಿಮ್ಮಶಾಂ. ೩-೩೬). **ಬೆಸಗೆಯ್**: ೧. ಬೆಸಗೆಯ್ದೊನ್ ಪ್ರಯೋಳಮನ್ (ಎಕ. IX (8), ಹೊಸಕೋ. ೯-೦೩ ; ಸು. 875) ; ಚಾಮುಣ್ಡೋಜಂ ಬೆಸಗೆಯ್ದೊಂ (ಎಕ. VIII, ಸೊರಬ. ೦೬೪-೩೦ ; 1033). ೨. ಸ್ವಸ್ತಿಶ್ರೀಸಾಸ್ತರಸಪೃಥುವೀರಾಜ್ಯದುಳ್ಳಿಗೆಗೆ ಬೆಸಗೆಯ್ವಲ್ಲಿ (ಎಕ. VI, ಕೊಪ್ಪ. ೩೯-೪ ; 700) : ಕರಮುದಾರ್ಗೆ ತೊತ್ತಾಗಿ ಬೆಸಗೆಯ್ವುದು (ಪಪ್ರಾ. ೯-೪೦) ; ಬೆಸಗೆಯ್ದು ಗೀರ್ವಾಣವೃಂದಮುಂ ಮನ್ನಿಸಿ ಕಳುಪಿ (ಶಂಕದಾ. ೦೩-೪೬). **ಬೆಸಗೈ**: ೨. ತಂಗಿ ಬೆಸಗೈದಾದರಿಸಲೀ ಯತಿಪತಿಯು (ಕುವ್ಯಾಭಾ. ೦೯-೩೩) ; ಅಜಭವ ಶಚಿಯರಸ ಮುಖ್ಯರುಗಳೇ ಬೆಸಗೈ[ಪಾಠಾಂ. ಕೈ]ವ ಸೇವಕರು (ಕೊರಡಾ. ೬-೨೬-೩೦) ; ಭೃತ್ಯರ ಗಡಣವಿದು ಬೆಸಗೈದು ಬದುಕಲಿ (ವಿಭಾಗ. ೪-೧೬-೨೮). [ಬೆಸ$_1$ + ಕೆಯ್$_1$]

**ಬೆಸಂಬಡೆ**, ಬೆಸವಡೆ (ಕ್ರಿ). ಅಪ್ಪಣೆಯನ್ನು ಪಡೆ.–ಹೊಂದು : ಕನ್ನಡದ ಅತ್ವದೊಳ್ ವಿಕಲ್ಪಬಿಂದುವಿಂಗೆ . . .ಬೆಸಂಬಡೆದುಂ, ಬೆಸವಡೆದುಂ (ಶಮದ. ೧೬೬ ಪ್ರಯೋ). **ಬೆಸವಡೆ** : ಮೇಲಿನ ಪ್ರಯೋಗವನ್ನು ನೋಡಿ. [ಬೆಸ$_1$ + ಪಡೆ$_1$]

**ಬೆಸಂಬೆಱು** (ಕ್ರಿ). = ಬೆಸಂಬಡೆ : ಪೆರ್ಮ್ಮಡಿಗಳ್ ಬೆಸಸೆ ಬೆಸಂಬೆತ್ತು (ಎಕ. XI, ಚಳ್ಳಕೆ. ೬-೨; 810); ನೆರೆದೆತ್ತಂ ಭಗಣಂ ನಿರೀಕ್ಷಿಸೆ ಬೆಸಂಬೆತ್ತೇಱ ಚಿತ್ರೋದ್ಭವಂ ಬರೆ ಲಕ್ಷ್ಮಚ್ಛಲದಿಂದಮುಬ್ಬ ಪಥವೀಥೀಭಾಗದೊಳ್ (ಶಾಂತಿಪು. ೬-೩೩). [ಬೆಸ$_1$ + ಪೆಱು$_1$]

**ಬೆಸಂಬೇಳ್** 'ಬೆಸಂಬೇೞು' ನೋ.

**ಬೆಸಂಬೇೞು**, ಬೆಸಂಬೇಳ್, ಬೆಸವೇಳ್, ಬೆಸವೇಳು, ಬೆಸವೇೞು (ಕ್ರಿ). ೧. ಆಜ್ಞಾಪಿಸು ; ಅಪ್ಪಣೆ ಮಾಡು : ಕಡಲೊಳ್ ನೀರ್ದರ್ಪುವ ಭ್ಯಾಸಿಗಳಿವು ನೆರವಕ್ಕೆಂದು ಶಕ್ರಂ ಬೆಸಂಬೇೞ್ದೊಡೆ ನಾನಾವರ್ಣದಭ್ರಾವಳಿ ನೆರೆದು (ಪುಷ್ಪಪು. ೦೧-೦೩). **ಬೆಸಂಬೇಳ್**: ೧. ಸಂದಾದ್ರೀಸ ಪೋಗಗ್ಗಣಿಗೆನುತೆ ಬೆಸಂಬೇಳ್ವರ್ (ಎಕ. VII, ಶಿಕಾರಿ. ೩-೦೩ ; 1218). **ಬೆಸವೇಳ್** : ೧. ನೊಸಲಲಿ ಧರಿಸುವುದು ಯುವರಾಜಪಟ್ಟವನೆಂದು ಬೆಸವೇಳ್ದು (ಕೊರಡಾ. ೪-೩-೨೬) ; ಇದು ಚಿತ್ರಮಾದುದು ಬೆಸವೇಳ್ವುದೆನಲಾಗಿ (ಮೋಹತ. ೩೦-೨೪). **ಬೆಸವೇಳು** : ೧. ಸಂತಸದೆ ಚಾರರಂ ಕರೆಸಿ ಬೆಸವೇಳಲತ್ಯಂತವಸ್ತುಗಳ ವಿಸ್ತಾರದಿಂ ನಗರವನನಂತವಿಭವದೆ ಸಿಂಗರದಲೊಪ್ಪವಿಟ್ಟರು (ಶಬಪು. ೬-೩೧). **ಬೆಸವೇೞ್**: ೧. ಕುಬೇರಪ್ರಿಯನಂ ನೀನೆ ಕೊಲ್ಲೆಂದು ಪೃಥುವಿಂಗೆ ಬೆಸವೇೞ[3] (ಶಾವುಂಪು. ೬೦); ಅರಸರ್ ಬೆಸವೇೞ್ದರ್ ಬೇಗು ಕ್ಷುರಭಾಂಡಮನೀಯೆಂದು ಬೇಡಿದೊಡೆ (ಶಂತಕಂ. ೬೮-೦೬); ಬೆಸವೇೞ್ದಂ ಭುವನೈಕಮಲ್ಲನುದಯಾದಿತ್ಯಂಗೆ (ಶಾಇಇ. XX. ೪೯-೦೬; 1076). ೨. (ಯುದ್ಧದ) ಕಾರ್ಯಕ್ಕೆ ನಿಯೋಜಿಸು.– ನೇಮಿಸು : ಇರುಳೊಳ್ ಬಲಂ ನಿಶಾಚರ ಬಲಕುಂಟು ಮಾಣದೆ ಘಟೋತ್ಕಚನಂ ಬೆಸವೇೞ್ವುದು (ಶಂಶಪಾ. ೦೨-೬). [ಬೆಸ$_1$ + ಪೇೞ್]

**ಬೆಸಕ** (ನಾ). ಕೆಲಸದ ಆಳು ; ಸೇವಕ : ಈ ಗದೆಗೆ ಆರಾದರೂ ಅಳುಪಿದವರು ರಗುಪತಿರಾಜವೊಡೆಯರ ಬೆಸಕರಿಗೆ ತಂಮ ಹೆಂಡಿರ ಕೊಟ್ಟವರು (ಪ್ರೌ.ಅಂ.೧೯೪೨, ೩೮-೨೩;1535). [ಬೆಸ$_1$ + –ಕ$_3$]

**ಬೆಸಕಿಲ್?** (ನಾ). ಅಗ್ಗಿಷ್ಟಿಕೆ (?) : "ಪಾವಕಿ (ಕಿ) ಯೆನಲ್ ಬೆಸಕಿಲಕ್ಕು [ಪಾಠಾಂ. ಬೆಸಕಯುಕ್ಕು. ಬೇಸಕೆಯುಕ್ಕು] " (ಮಂಗರಾ. ೬೦-೨೦).
[P ಇದು 'ಬೆಸಳಿಗೆ' ಎಂಬುದರ ಅಪಲಿಖಿತವಿರಬಹುದು]

**ಬೆಸಕೆಯ್** 'ಬೆಸಂಗೆಯ್' ನೋ.

**ಬೆಸಕೆಯ್ಸು** 'ಬೆಸಗೆಯ್ಸು' ನೋ.

**ಬೆಸಕೇಳ್** (ಕ್ರಿ). ಅಪ್ಪಣೆಯನ್ನು ಕೇಳು ; ಆಜ್ಞೆಯನ್ನು ಪಾಲಿಸು : ಇತ್ತ ವಿಕ್ರಾಂತತುಂಗನುಂ ಧರ್ಮಪುತ್ರಂಗಂ ವಾಯುಸುತಂಗಂ ಪೊಡವಟ್ಟು ಬೆಸಕೇಳ್ವೆ[ಪಾಠಾಂ. ಕೆಯ್ವೆ]ನೆಂದಾಗಳ್ ಪಾಂಚಾಳರಾಜತನೂಜೆಯಿಂತೆಂದಳ್ (ಶಂಶಪಾ. ೭-೬೬ ವ); ಇಂದ್ರಜಿತು ತಪೋವನಕೆ ಪೋದನ ಧೀಶನೆ ಪೋಗೆ ಮಾಣಲಾಗೆಂದೊಡವೋಗಲಿರ್ದೆಮದೞಂ ಬೆಸಕೇಳ್ದಪೆಂ (ಅಜಪು. ೬-೦೦೦). [ಬೆಸ$_1$ + ಕೇಳ್]

**ಬೆಸಕೈ** 'ಬೆಸಂಗೆಯ್' ನೋ.

**ಬೆಸಕೈಸು** 'ಬೆಸಗೆಯ್ಸು' ನೋ.

**ಬೆಸಕೋಲು** 'ಬೆಸೆಕೋಲ್' ನೋ.

**ಬೆಸಗಲಿ** (ನಾ). ಆದೇಶವನ್ನು ಕೂಡಲೆ ಪಾಲಿಸುವವನು ; ಅಪ್ಪಣೆಯಂತೆ ನಡೆಯುವವನು : ಆಳ್ದನ ಬೆಸನು ಮರಳಿ ಕೇಳವ ಬೆಸಗಲಿಗಳುಮಂ . . . ನೋಡಿ (ಗದಾಯು. ೯-೩೪ ವ) ; ದಾದಿಕಾಱವೆಸವಮರದೇಂ ಬೆಸಗಲಿಗಳ್ ಬರ್ಪರೊ ಮಾನಸವೇಗರ್ ಪವನವೇಗರಿರುಳುಂ ಪಗಲುಂ (ಅಜಪು. ೩-೬೬). [ಬೆಸ$_1$ + ಕಲಿ$_2$]

**ಬೆಸಗುಡು** 'ಬೆಸಗೊಡು' ನೋ.

**ಬೆಸಗೆ** 'ಬಿಸಗೆ$_1$' ನೋ.

**ಬೆಸಗೆಯ್** 'ಬೆಸಂಗೆಯ್' ನೋ.

**ಬೆಸಗೆಯ್ಸು**, ಬೆಸಕೆಯ್ಸು, ಬೆಸಕೈಸು (ಕ್ರಿ). ೧. ಕಂಡರಿಸುವಂತೆ ಮಾಡು ; ಕೆತ್ತಿಸು : ನಿಮ್ಬಚ್ಚರ ಬಮ(ಮ್ಮ)ಯ್ಯ ಬೆಸಗೆಯ್ಸಿದೊ ಮಾಧವಯ್ಯನ ಲಿಖಿತಂ (ಇಆ. XII. ೨೦೯-೨೨ ; 814). **ಬೆಸಕೆಯ್ಸು**: ೨. ಅಪ್ಪಣೆಯನ್ನು ಪಾಲಿಸುವಂತೆ ಮಾಡು ; ಅಂಕೆಗೆ

ತರು: ಚಿನ್ನರನಡಿಗೊತ್ತಿ ಮಂಡಳಿಕರಂ ಬೆಸಕೆಯ್ವ ಕುಟುಂಬರಂ ನಿರಾಕರಿಸಿ (ಶಾಸಣ ೬-೦೮); ಬೆಸಕೆಯ್ಮುದ ಮಣ್ಣ [೪] ಮಂ ಬೆಸಕೆಯ್ವುದನಂಜದಿರ್ದ ರಿಪುಭೂವರನಂಜಿಸಿದಂ (ಶಾಶಿ. ೯-೨-೦೦೯ ; 1058). ಬೆಸಕೈಸು.

ಬೆಸಕೆಯ್ಸಿಕೊಳ್, ಬೆಸಕೈಸಿಕೊಳ್ = ಕೆಲಸವನ್ನು ಮಾಡಿಸಿಕೊಳ್ಳು ; ಸೇವೆಯನ್ನು ಕೈಗೊಳ್ಳು : ನಿಮಗೆ ಬೆಸಕೆಯ್ವೆವೆಮ್ಮಂ ಕೃಪೆಯಿಂ ಬೆಸಕೆಯ್ಸಿಕೊಂಡು ನೆಲನಂ ಪೂರ್ವಕ್ರಮದಿಂದಾಳ್ವುದು (ಗದಾಯು. ೧೦-೦೬); ಅದರದಂ ಬೆಸಕೈಸಿಕೊಳ್ವನೊರ್ವೊದಲೊಳ್ ದೇವಸಂಕುಲಮಂ (ಧರ್ಮಾಮೃ. ೬-೦೬೨) ; ಕುಂತೀಸೂನುಗಳ ಬೆಸಕೈ[ಪಾಠಾಂ.ಗೈ]ಸಿಕೊಂಬುದು ಸೇರದೇ ನಿನಗೆ (ಕುಮಾ.ಭಾ. ೦೦-೦೩). [ಬೆಸ$_1$ + ಕೆಯ್$_2$]

ಬೆಸಗೈ 'ಬೆಸಂಗೆಯ್' ನೋ.

ಬೆಸಗೊಡು, ಬೆಸಗುಡಂ (ಕ್ರಿ). ಅಪ್ಪಣೆ ಕೊಡು ; ಆಜ್ಞಾಪಿಸು : ನಿಜಪರಿವಾರಕೆ ಬೆಸಗೊ[ಪಾಠಾಂ. ಗು]ಡು ವಾಗಸೇ (ಹರಿಶ. ೦೨-೬೦೮ನೆಕೆ) ; ಜಟ್ಟಿಗಳ್ಪೃತ್ಯರ್ಗೆ ಬೆಸಗೊಟ್ಟು ಹಿಡಿತರಲಟ್ಟಿದ ಖಳಕುವರನನು (ಪೋಶಶ. ೦೨-೩೩) ಬೆಸಗುಡು : ಬೆಸಗುಡು ದೈತ್ಯಾದೀಶ್ವರ ನೀ ನಿರೂಪಿಸಲಾನು ಮಿತಿಯ ವಿಚಾರಿಸುವೆನೆ (ಮೋಹತ. ೩೩-೪೦). [ಬೆಸ$_1$ + ಕೊಡು$_1$]

ಬೆಸಗೊಳ್, ಬೆಸಗೊಳು, ಬೆಸಗೊಳ್ಳು (ಕ್ರಿ). ಕೇಳು ; ವಿಚಾರಿಸು ; ಪ್ರಶ್ನಿಸು : "ಪ್ರಶ್ನಃ, ಅನುಯೋಗಃ, ಪೃಚ್ಛಾ—ಈ ಮೂಱು ಬೆಸಗೊಂಬುದಱ ಪೆಸರು" (ಅಭಿಧಾ. ೯೩); ಪ್ರಿಯಕುಶಲವಾರ್ತೆಯಂ ಬೆಸಗೊಂಡು ಸ್ಥಿರವಿರ್ದು ಪ್ರಭು ನುಡಿಯೆ (ಕಲಿಧ. ೨-೬) : ವಿರಾಟಂ ನಿನ್ನ ಬನ್ನಣಮೇನೆಂದು ಬೆಸಗೊಳೆ (ಶಂಕರಶ. ೬೭೩೩ವ) ; ವನಚರರು . . . ಕೌಶಿಕಮುನಿಯು ಬೆಸಗೊಂಡರು ಮಹೀಸುರವರ್ಗಸಂಗತಿಯ (ಕುಮಾ.ಶ. ೦೭-೦೯) ಬೆಸಗೊಳು : ಹಸೆಯ ಮೇಲಣ ಮಾತ ಬೆಸಗೊಳಲಟ್ಟಿಪರಿ ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮಪರು (ಪುರಾರೇ. ಬಿ. ೨೫-೯೬) ; ದುರ್ಯೋಧನನು ತೆಗೆದಪ್ಪಿದನು ಬೆಸಗೊಳುತಿವನ ಸಂಗತಿಯ (ಕಂಶಕ. ೦೯-೨೦); ಏನನೊ ಕೇಳುತಲಿರುವಳದೇನೆಂದು ಬೆಸಗೊಳು (ಜಂತಾಶ. ೦೬೬-೨೪). ಬೆಸಗೊಳ್ಳು : ಆಡುತ್ತ ಹಾಡುತ್ತ ಭಕ್ತಿಯ ಮಾಡಬಹುದು ಲಿಂಗಕ್ಕೆ ಅದು ಬೇಡದು ಬೆಸಗೊಳ್ಳದು (ಬಸವ. ೦೯೩) ; ಭೀಮ ಪಾರ್ಥರ ಬಲುಹ ಬೆಸಗೊಳ್ಳಾ ತದೀಯಶ್ರುಪಣವೃತ್ತಿಗಳ (ಕುಮಾ.ಶ. ೦೩-೬೦) ; ವಸುಷೇಣನು . . . ಗೃಹಮಹತ್ತರರನ್ನು ಬೆಸಗೊಳ್ಳುತ್ತಿರುವಾಗ (ಚಾವೃಶ. ೬೮). [ಬೆಸ$_1$ + ಕೊಳ್$_1$]

ಬೆಸಗೊಳು 'ಬೆಸಗೊಳ್' ನೋ.

ಬೆಸಗೊಳ್ಳು 'ಬೆಸಗೊಳ್' ನೋ.

ಬೆಸಣಿಕೆ (ನಾ). (?) : ಅಚ್ಚು ಬೆಸಣಿಕೆ ಪೋಪರ ಸರ್ವಗತಿ ಮಂದ ಅಚ್ಚು ಕಂಪನ ಗಹಗಿಕೆ ಹೆಚ್ಚು ತಿವಡಿ ವಿಷಮಂಗಳೆಂಬ ಚೌಕಳಂ ಪಚ್ಚಿತಾ ಭ್ರಂಗಿ ನಾಟ್ಯಗಳು (ದೇವಾಂಶು. ೩-೦೬೯). [ ? ]

ಬೆಸದ 'ಬೆಸ$_1$' ನೋ.

ಬೆಸದಪ್ಪು (ಕ್ರಿ). ಆಜ್ಞೆಯನ್ನು ಮೀರು ; ಅಪ್ಪಣೆಯನ್ನು ಉಲ್ಲಂಘಿಸು : ಬೆಸನೆಂದು ಪೂಣ್ದು ದೇವರ ಬೆಸನಂ ಸುಕುಮಾರರೆನಿಪ ರಾಜಕುಮಾರರ್ ಬೆಸದಪ್ಪಿದರೆನಗನಿತೊಂದು ಸೈಪೆ ಸಮನಿಸದೆ ಬಿರ್ದಿಕೆ ಬಂದೆಂ ನೃಪತೀ (ಅಜಿಪು. ೦೦-೩೨). [ಬೆಸ$_1$ + ತಪ್ಪು$_1$]

ಬೆಸನ್ 'ಬೆಸ$_1$' ನೋ.

ಬೆಸನ$_1$ 'ಬೆಸ$_1$' ನೋ.

ಬೆಸನ$_2$, ಬಸನ, ವೆಸನ (ನಾ). ೧. ಅಳಲು ; ದುಃಖ ; ವ್ಯಥೆ : "ಬೆಸನಮೆನೆ ವ್ಯಸನ" (ಕಕಾಶಿ. ೦೨೩) ; ಒದುಕಿನಲ್ಲಿ ಬೆಸನ ತುಂಬಿವಾಗ ತನ್ನ ಗೌಡತನದ ಮೇಲೇ ಅವರಿಗೆ ಜುಗುಪ್ಸೆ ಹುಟ್ಟಿತು (ಜಗಿಮಿ. ೨). ೨. ಆಸಕ್ತಿ ; ತತ್ಪರತೆ : ಪುಳಿಯರಸುತನದ ಬೆಸನದೊಳ್ ತೊಡರ್ದ್ ನಿರದಿರ್ದೆನಪ್ಪೊಡೆ ಎನ್ನ ಕೆಳೆಯನೊಳಗನಜಿವಪಂ (ಕಂತಶ. ೦೨೬-೩) ; ಬೆಸನಂ ಪತಿಹಿತದಲ್ಲಿಯೆ ಬೆಸನಂ ದ್ವಿಜದೇವಪೂಜೆಯಲ್ಲಿಯೆ ನೆಗಚ್ಚಾ ಬೆಸನಂ ನೋಂಪಿಗಳಲ್ಲಿಯೆ ಬೆಸನಂಗಳ್ ಶಾಂತಿದೇವಿಯೊಳ್ ಪೆಜಪೊಳವೇ (ಎಕ. V, ಹಾಸನ. ೦೦೬-೩೩; 1123). ೩. (ಸಪ್ತವ್ಯಸನಗಳಿಗೆ ಸಂಬಂಧಿಸಿದಂತೆ ಉಂಟಾಗುವ) ಅಭ್ಯಾಸ ; ಚಟ ; ಗೀಳು : ಬೆಸನಂಗಳ್ ತನುವಿಚ್ಚಿಗೊಯ್ವವು (ಕಾದಂಸಂ. ೩೬೯) ; ಪೇಟೆಯಂ ಬೆಸನವೊಂದಾರೇಳ ಪರ್ ಲೋಕದೊಳ್ (ಸೂಕ್ತಿಸು. ೩-೯೬). ಬಸನ : ೧. ಆ ರಚನೆಯೊಳೇ ಬಸನಂ ತನಗನಿತಱ ಬೇವಸಮೋ (ಕಲಿಧ. ೮-೦೨) ; ಬಸನಮನಂಟು ಮಾಡದಿರು ಮಹಾತ್ಮರೊಳೊಪ್ಪೆ ವಿನೀತನಪ್ಪಿಗು (ಬಂಹಾ. ೦೦-೦೯). ೨. ಬಳ್ಳಿಗಂ ಬಸನಕ್ಕಂ ಸದಿಯಪ್ಪ ಕಿಱುವೆಂಟೆಯುಂ ಪೆರ್ವೆಂಟೆಯುಂ ಮಲ್ಲದುಟದ ಬೇಂಟೆಯುಂ ಬೇಂಟೆಯೆನ್ನೆಂ (ಪಂಪಭಾ. ೩ ೯೬ ವ); ಬಸನಮಂ ಸದ್ಧರ್ಮ್ಮದೊಳ್ ತಾಳ್ದಿದಂ(ಎಇ. XIX, ೨೨೯ ೦೩ ; 1022). ೩. ಬಸನಂಗಳಲ್ಲಿ ಚಿತ್ತಂ ಬಸವಪ್ಪವೊಲುಮಳಮಪ್ಪ ಜೈನಾಗಮದೊಳ್ ಬಸದಾಗೆ ಮರ್ತ್ಯನೇಂ ಸಾಧಿಸನೇ ನಿರ್ವಾಣಪದವಿಯಂ ಕ್ರಮದಿಂದಂ (ಸಮುಶ. ೬-೩೩) ; ತನ್ನ ಗುರುಗಳ ರೂಪನೆ ಕರುವಿಡಿಸುವ ಬಡೆಯಿಸುವ ಕಂಡರಿಸುವ ಬೆಸನೆ ಬಸನಮಾಗಿ (ಅರ್ಧನೇ. ೨-೩೯ ವ). ೪. ಇಂದ್ರಿಯಾಪೇಕ್ಷೆ; ಇಂದ್ರಿಯಚಾಪಲ್ಯ : ಬಸನದೊಡಂಬಡಿಂಗಲಸಿ ಮಾಣ್ದೊಡಂ . . . ಪೇಸದವಳ್ಗೆ ಮತ್ತಮಾಟಿಸುವುದೆ (ಕಂಶಧಾ. ೯-೬೨) ; ಬಸನದ ವಸದಿಂದಂ ಪುಟ್ಟಿಸಿದಂ ಜನಕನೆ (ಸಮುಶ. ೯-೯೨) : ಪದಿಪೆಂಡಿರೆಮ್ಮ ದಿವಸದೊಳೀತಂ ಪುಟ್ಟಿದೆ ಪರಿಜು ಪ್ರಾಯಮುಂ ಸುಸಿಲುಂ ಬಸನಮುಂ ಬಱುದೋಱೆ ಯೋದುದೆನೆಯುಂ (ಅರ್ಧನೇ. ೩-೨ ವ). ವೆಸನ : ೧. ಹಸಿವು ವೆಸನ ತೃಷೆಯಾಲಸ್ಯ ಮೋಹಮೆಂಬೆಸಕವುಳ್ಳುದು ನರದೇಹ (ಕುಂಪ ೦-೦೩); ವೆಸನದಿಂ ಕಂದಿ ಕಾರ್ಶ್ಯಮನಾಂತು ಸಂತತಂ ಸುಖಲೇಶಮಂ ತಿಳಿಯದೆ . . . ಜೀವಮಂ ಧರಿಸಿರಲು ರಸಿಕೊಲೆಂತಹುದುಬ್ಬಿನೇತ್ರೆ (ವೆಂಕಾಚಂ. ೩-೯-೨) ; ವೆಸನವುಮುಸಂಸಾರದಲಿ ವಿನೋದದ ಕಾಣ್ಬ ರಸಿಕತೆಯ ಯೋಗವು (ಪಂಕಳ. ೨೪೦). [< ಸಂ. ವ್ಯಸನ]

ಬೆಸನಂಗೊಳ್ (ಕ್ರಿ). ಅಪ್ಪಣೆಯನ್ನು ಪಡೆ; ಅನುಜ್ಞೆಯನ್ನು ಹೊಂದು: ಚ್ಯವನಂ ತನ್ನಾಶ್ರಮಮಂ ಮಿಕ್ಕುಬಂದ ಋಷಿಗಳ್ಗೊಪ್ಪಿಸಿ ಬೆಸನಂಗೊಂಡು ತಾನುಂ ಸುಕನ್ನೆಯುಂ ವಾಯುಸುತನ ಪೆಗಲನೇಱಿ (ರಾಜಶೇ. ೬೦-೦೨). [ಬೆಸನ$_1$ (<ಬೆಸ$_1$) + ಕೊಳ್$_1$]

ಬೆಸನಭಾಷೆ (ನಾ). ಇಂದ್ರಿಯಸ್ಪೃಹಸನವನ್ನುಂಟುಮಾಡುವ ಮಾತು : ಸಸಿನೆ ಖಳನೆದೆಗೈದಿ ಬಸುಮಾಸ್ತ್ರನಂಗನೆಗೆ ಬೆಸನಭಾಷೆಯನಿತ್ತು ಕರೆತಂದು ನೀನು ಮೋಹಿಸಬಹುದೆ (ಪಪವಿ.೦-೬೯-೯೦). [ಬೆಸನ$_2$ + ಭಾಷೆ]

ಬೆಸನಿ, ಬಸನಿ (ನಾ). (ಸಪ್ತವ್ಯಸನಗಳಲ್ಲಿ ಯಾವುದಾದರೊಂದು) ಗೀಳಿರುವ ವ್ಯಕ್ತಿ ; ಚಟವುಳ್ಳ ವ್ಯಕ್ತಿ : ಪುಸಿವವರಂ ಕೊಲ್ವವರಂ ಬೆಸನಿಗಳಂ ಕಳ್ಳರಪ್ಪರಂ ಕಂಡೊಡೆ ಸಂಕಿಸುವರ್ ಪುರುಷರ್ (ಧರ್ಮಾಮೃ. ೯-೨೦); ಬೆ[ಪಾಠಾಂ. ಬ]ಸನಿಗಳ್ ಗೊಟ್ಟಿ ತನಗಾಗಿಸೆ ಸಂತಸದೊಡವಸಂತ್ರ ಮಾರ ಗೊಟ್ಟಿ ಕರಂ ಕಸಱಿಸಿದುದೆರ್ದೆಯನೇಂ ಸೊಗಯಿಸುಗುಮೆ ಚೋರಂಗೆ ಚಂದ್ರಿಕಾವಿಸ್ತಾರಂ (ಪರ್ವಶು. ೨-೩೩). ಬಸನಿ : ಬಸನಿಯೆ ಗೆಲ್ಲಕಾಜಿನ ನೆಗಟಿಕ್ಕೆಗೆ ಕೇಳಿಗೆ ನಾಡೆ ಗೆಂಟನಂ ಬೆಸನೊಳವೇಡ (ಅಂಶ. ೦೨-೦೯); ಬಸನಿಗಳೊಳ್ಳಗ್ಗ ಬಸನಿ (ಸಮುಶ. ೭-೩೯) ; ಪೇಟಕಾರ್ತಿನಂರಿಪತೀಕೆಗಳ್ ಬಸನಿಗಳ್ ಕಡುಬಿಪ್ಪಂಬರ್ (ಬಂಪು. ೩-೯೮). [ <ಸಂ. ವ್ಯಸನಿನ್ ]

ಬೆಸನಿಗ, ಬಸನಿಗ (ನಾ). ದುಶ್ಚಟವುಳ್ಳವನು ; ವ್ಯಸನಿ : ಅಡಗಿನ ಕಡುಬೆಸನಿಗನೊಡಲಡಗನೆ . . . ವದನದೊಳು ಗಡ ಗಿಡಿಪರ್ (ಪ್ರಾಪಂ. ೨೦-೨೦) ; ನೀಂ ಜೂದಿನ ಬೆಸನಿಗನಾತಂ ಶಿವಪೂಜಾಬೆಸನಿ (ಚಾದ್ಯದೀ. ೩-೬೬). ಬಸನಿಗ : ಅಡಗಿನ ಬಸನಿಗನ್ನೆ ಕಿನ್ ಒಡಿಯೆಂದವನ್ನಡಗನವನ

ಬಾಪೊಳ್ ಗಿಡಿವರ್ (ಆದಿಪು. ೩-೯೭) ; ಮಧು ಮದ್ಯದ ಬಸನಿಗ ಕುಡಿ ಮಧು ಮದ್ಯಮನೆಂದು ಸಪ್ತಧಾತುದ್ರವಮಂ ವಿಧಿಯಿಂ ತಂದೆಟ್ಟಿವರ್ (ಸುಕುಮಾ. ೧೦-೪೩) ; ಅಸುಕೆಯು ಕೆಂದಳಿರುಯ್ಯಲನೊರ್ವಗಪೂರ್ವ ಯವ್ವನೋನ್ನತ್ತೆ ಬಸನಿಗನನೋಲೈಸುವ ಬೇವಸೆಯಿಂದವನ ಮನವನೇಱು ವಂತೇಱೆ (ಧರ್ಮಾ. ೦೩-೬೯ ವ). [ ಬೆಸನ$_2$ + – ಇಗ ]

**ಬೆಸನಿಸು** (ಕ್ರಿ). ದುಃಖಪಡು : ಗಲ್ಲ ಹಿಡಿಯುವ ಕೆಲರು ಗಲ್ಲ ಹೊಂಡುವ ಕೆಲರು ಬೆಸನಿಸುವ ಕೆಲರು ಬೆದರಿಸುವ ಕೆಲರು (ಪಶ್ಚ. ೬-೨).

[ ಬೆಸನ$_2$ + – ಇಸು$_3$ ]

**ಬೆಸನೀ** (ಕ್ರಿ). ಆಜ್ಞೆಮಾಡು ; ಆದೇಶಿಸು : ಅಮಾತ್ಯರನನಿಬರಂ ಬೆಸನಿತ್ತು ಬಸವನನನುನಯದೊಳೊಡಗೊಂಡು ಬರಲೆಯ್ದಿಟ್ಟಲು (ಬಸಪು. ೩-೪): ಪೋಗಿಂದ್ರಕೀಲಕ್ಕೆ ಪೆಂಪಡದುರ್ದ್ಯತ್ತಪಮಾಂಪುದೆಂದು ಬೆಸನಿತ್ತಂ ವ್ಯಾಸಂ (ಕಬಿಕಾ. ೨-೦೦೭); ಶ್ರೀರಘುಜನೆನ್ನನಡವಿಯೊಳ್ ಬಿಸುಟ್ಟುದೆಂದು ಲಕ್ಷ್ಮಣಂಗೆ ಬೆಸನಿತ್ತು ಕಳಿಪಿದನೈ ! (ರಾಮಾಶ್ವ. ೪೦-೨೭).

[ ಬೆಸನ$_1$ ( < ಬೆಸ$_1$ ) + ಈ$_2$ ]

**ಬೆಸನು** 'ಬೆಸ$_1$' ನೋ.

**ಬೆಸಮಗ** 'ಬೆಸವಗ' ನೋ.

**ಬೆಸಮುಟ್ಟು** (ನಾ). ಕಾರ್ಯದ ಸಾಧನ, — ಉಪಕರಣ: ಕನ್ನಡಿಯುಂ ತಂದಿತ್ತಡೆ ಮುನ್ನಾಕಾಶಕ್ಕೆ ನೆಲಕೆ ಬೆಸಮುಟ್ಟಂಗಂ ತನ್ನಯ ಕಟ್ಟಿದ ಸುರಿಗೆಗೆ ಮನ್ನಣೆಯಿಂ ತೋಱು ಬಟ್ಟೆಕೆ ನೊರ್ಮಾರ್ಗಧರ್ (ಕವಿಪ. ೦೨-೪).

[ ಬೆಸ$_1$ + ಮುಟ್ಟು$_3$ ]

**ಬೆಸಲ್**, ಬೆಸಲು, ಬೆಸಲೆ$_1$ (ನಾ). ೧. ಹಡೆಯುವಿಕೆ ; ಹೆರಿಗೆ ; ಪ್ರಸೂತಿ: 'ಬೆಸಲಳಲ್', 'ಬೆಸಲೆ$_2$' ಪರಾ. **ಬೆಸಲು** : ೨. ಹುಟ್ಟು; ಜನನ : ನಿಸಿಯ ಬೆಸಲಿಗೆ ಸುಸಿಲ್ ಮಿಸುಕುವಂತೆ (ಗಿರಿಜಾ. ೩೭-೯). **ಬೆಸಲೆ$_1$** : ೨. 'ಬೆಸಲೆಗೊಳ್' ಪರಾ.

**ಬೆಸಲಾಗು, ಬೆಸನಾಗು** = ೧. ಹೆರು ; ಪ್ರಸವಿಸು : ಹೆತ್ತ ತಾಯಿ ಮಗನ ನುಂಗಿ ಶಿಶು ತಾಯ ಬೆಸಲಾಗಿ (ಅಪಾಂ. ೩-೦೭) ; ವಸುಧೆಗತಿಬಲ ನೊಬ್ಬ ಕಂದನ ಬೆಸಲಹೆನು (ಕುಮಾರ. ೪-೩೬). ೨. ಈಯು ; ಕರುಹಾಕು : ಬೆಸಲಾದಾವುಗಳಿಂ ಪೆರ್ಬುಲಿಯಿಂ ಮುಸುಕುವ ಬಲ್ಪಿಡಲಿಂ . . . ದಾರುಣತರಮಪ್ಪುಪಸರ್ಗಂ ಮಾಡಿದಳು (ಚಂದ್ರ. ೦೭-೦೪); ಪಶುವೆಂದುಂ ಬೆಸಲಾಗಿ ನೋಡಿ ಕಱುವಂ ಬಾಯ್ವಿಟ್ಟು (ಶೃಂಗಾ. ೯-೬೮); ತುರಂಗದ ಮೊತ್ತಗಳು ತಮತಮಗೆ ಮೋಹರಿಸುತ್ತ ಬರಸಿಡಿಲಂತೆ ಗರ್ಜಿಸಿ ಪೃಥ್ವಿ ಬೆಸನಾದಂತೆ ಬರುತಿರೆ (ದೇವೀಶ್ರ. ೩೮). ೩. ಬೆಳೆ ; ಫಲಬಿಡು : ನೆಲಸೆಲ್ಲಂ ಬೆಸಲಾಗೆ ಧಾನ್ಯತತಿಯಂ . . . ಫಲಭಾಗ್ಯಂ ದೊರೆಗಪ್ಪುದೈ (ಸೋಮೇಶ. ೩೭). ೪. ಉತ್ಪತ್ತಿಯಾಗು; ಉಂಟಾಗು : ಬಾಪತ್ತರನಿಯೋಗಂ ಬೇಱೊಂದು ಮಾಹೇಶ್ವರ ತೇಜ[ಶ್ಯ]ಲಾಕೆ ಬೆಸಲಾದಂತಿರೆ (ಸಂಪಕ. ೬-೦೬).

[ದೇ.॥ ತುಳು. ಬಿಜಿಲು, ಬಿಜೆಲು ; ಗಡಬ. ಪಂಗ್]

**ಬೆಸಲಳಲ್** (ನಾ). ಹೆರಿಗೆಯ ನೋವು; ಪ್ರಸೂತಿಯ ಬೇನೆ : ತಾಯ ಮೊಗ ನೋಡೆ ಮಗು ಬೆಸಲಳಲನೋತು ಸೈರಿಸುವಂತೆ (ಗೂರ್ಬ್ಬಾ. ೦೨-೬೪೬); ನಿನ್ನ ನೀರಂಬಾರ ಬೆಸಲಳಲ ತೊಳೆದೆ ? (ಗಿರಿಜಾ. ೨೯-೭೭).

[ ಬೆಸಲ್ + ಅಳಲ್$_2$ (<ಅಬಲ್$_2$) ]

**ಬೆಸಲು** 'ಬೆಸಲ್' ನೋ.

**ಬೆಸಲೆ$_1$** 'ಬೆಸಲ್' ನೋ.

**ಬೆಸಲೆ$_2$** (ನಾ). (ಮಗುವನ್ನು) ಹೆತ್ತವಳು; ಬಾಣಂತಿ : ಆ ಇರುಳೊಳರಸಿ ಬೆಸಲೆಯಾಗಿ ಮಗನಂ ಪೆತ್ತೊಳ್ (ಶಬ್ದಾರ. ೦೧೨-೬); ಡಿಂಡಿಭೆಗೆ ಗರ್ಭಂ ಪುಟ್ಟಿ ನವಮಾಸಂ ತೀವಿ ಬೆಸಲೆಯಾಗಿ ಪೆಣ್ಗೂಸಂ ಪಡೆದು (ಧರ್ಮಾ. ೩-೩೦ ವ): ಎಲ್ಲಿ ನೋಡಿದಡಿಳೆಯ ಬೆಸಲೆಯುಂಬಪೊಡೆಲ್ಲಿಯುಂ ಪಸರಿಸಿದ ಸೈನ್ಯಮಂ ನೋಡುತ್ತ (ಜಗನ್ನಾ. ೨೪-೨೩).

[ ಬೆಸಲ್ + – ಎ$_2$ ]

**ಬೆಸಲೆಗೊಳ್** (ಕ್ರಿ). ಹುಟ್ಟು; ಜನಿಸು : ತ್ರಿಗ್ರಹಮಲ್ಲಿರಲ್ ಬೆಸಲೆಗೊಂಡರ್ ಗಂಡನುಂ ಗಂಡುದೊಱ್ತನಿಕುಂ (ಜಾತಕ. ೨೦-೨೦).

[ ಬೆಸಲೆ$_1$ (<ಬೆಸಲ್) + ಕೊಳ್$_1$ ]

**ಬೆಸವಗ,** ಬೆಸಮಗ (ನಾ). ಒಡೆಯನ ಅಪ್ಪಣೆಯಂತೆ ನಡೆಯುವವನು; ಸೇವಿಸುವವನು : ಆ ಗೊಯ್ದಸೆಟ್ಟಿಯ ಬೆಸವಗಂ ಅಕ್ಕಸಾಲೆ ಚಟ್ಟೋಜನ ತಂಮ್ಮಂ . . . ಕೆಱೆಯಂ ಕಟ್ಟಿಸಿದಂ (ಎಕ. VII. ಶಿಕಾರಿ. ೯೩-೩೯; 1172 ?); ಆತನ ಬೆಸವಗ ತಾಳಗುಪ್ಪೆಯ ನಾಯ್ಕನ ಮಗ ಚಿಕವೊಡೆಯ ತಳ್ತಱಿದು (ಎಕ. VIII, ಸೊರಬ. ೨೦೭-೬; 1243). **ಬೆಸಮಗ** : ಶ್ರೀ ಚಣ್ಣದ ಬೆಸಮಗಂ ಕಮ್ಮಬಬಮ್ಮಂ (ಎಕ. VII, ಶಿಕಾರಿ. ೩೦೭-೪ ; 1016).

**ಬೆಸಮಕ್ಕಳ್, ಬೆಸಮಕ್ಕಳು** (ಬಹುವ) : ಇಲ್ಲಿಯ ಬೆಸಮಕ್ಕಳಾರೆಂದೊಡೆ (ಎಕ. III (R), ತಿನಸಿ. ೨೦೪-೮; 915); ಬಸಿವ ಸೊರ್ಕಿಂದಾನೆಗಳ ವಾಜಿವದನದಿಂದೊಸರ್ವ ಲಾಲಾಜಲದಿಂದ ಬೆಸಮಕ್ಕಳೊಗುವ ಪ್ಯಾಬೆಮರಿಂದಾ ಬೀದಿ ಕೆಸರ್ವಡೆದಿಹುದನವರತ (ಕುಮಾರಾ. ೪-೦೦೭).

[ಬೆಸ$_1$ + ಮಗ]

**ಬೆಸವಡೆ** 'ಬೆಸಂಬಡೆ' ನೋ.

**ಬೆಸವರಿಗೆಯ್** (ಕ್ರಿ). (ಅಲಂ) ಆಲಿಂಗಿಸಲು ಮುಂದುವರಿ (?) : ಬೆಸವರಿಗೆಯ್ವ ಬೇಸ[ಱ]ುವಿತ್ತುದನೆತ್ತುವ ಮೇಗುದೋರ್ವ ಕಂಟಿಸುವ ಕನಲ್ವ ಕಡ್ಡಯಿಸುವೇಳಿದನಂ ತಿಳಿಪಲ್ ಮನಂಗೊಳಲ್ ಬಸಯಿಸಲಿಂಬುಕೆಯ್ಸಲೊಳಪೊಯ್ಸಲೊಡಂಬಡಿಸಲ್ ಪ್ರಮೋದಮಂ ಪೊಸಯಿಸಲಾಱಿಸಲ್ ನೆರೆದುಮೊಲ್ಲದೆ ಚಿತ್ತಮುದಾತ್ತಚಿತ್ತೆಯಾ (ಶಾಂತಿಪು. ೬-೦೦೩).

[< ಬೆಸ$_2$ + ವರಿ$_2$ + ಕೆಯ್$_1$]

**ಬೆಸವೆಣ್**, ಬೆಸವೆಣ್ಣು (ನಾ). ಊಳಿಗದವಳು ; ದಾಸಿ ; ಸಿಂಗರಿಸುವ ಬೆಲೆವೆಣ್ಗಳ್ ಬಿನದಕ್ಕಂಗಣಮಂ ಸಾರುವ ಬಿಡುವೆಣ್ಗಳ್ ಪಿಂಗದೆ ಹಣಗಿ ನಡೆವ ಬೆಸವೆಣ್ಗಳ್ . . . ಸೊಗಸಿದುದು (ಚಂದ್ರ. ೦೨-೦೩); ಬೆಲೆವೆಣ್ಗಳಾಡುಂಬೊಲ ಬೆಸವೆಣ್ಗಳ ನೆಲದಾಣ (ಕುಮಾರಾ. ೪-೦೦೭). **ಬೆಸವೆಣ್ಣು** : ಬಿಡುವೆಣ್ಣು ಬೆಲೆವೆಣ್ಣು ಬೆಸವೆಣ್ಣು ಮನೆವೆಣ್ಣೊಡನೆಯ್ತಂದು ರಾಮನನು ಬಿಡದೆ ನೋಡಿದರು (ಕುಮಾರಾ. ೩೭-೬೪); ಬಿಡುವೆಣ್ಣು ಬೆಲೆವೆಣ್ಣು ಬೆಸವೆಣ್ಣುಗಳ ಮಂಗಡವಾ ಪುರದೊಳೊಪ್ಪಿದವು (ರಾಮಾ. ೩-೪೭).

[ ಬೆಸ$_1$ + ಪೆಣ್ ]

**ಬೆಸವೆಣ್ಣು** 'ಬೆಸವೆಣ್' ನೋ.

**ಬೆಸವೆಱು** (ಕ್ರಿ). ಕಾರ್ಯವನ್ನು ಒಪ್ಪಿಕೊಳ್ಳು : ಕೆಲಸವನ್ನು ಕೈಗೊಳ್ಳು : ರಟ್ಟವಾಡಿಯ ಬೆಸವೆತ್ತು ಎದಿನುವರ್ × × × ತುರಗ ಸಮೂಹಮಾ ಪೊಕ್ಕು (ಎಕ. X. ಗೌರಿಬಿ. ೭೭-೪ ; ಸು. 750) : ಪಡೆವಳ್ಳಂಗೆ ರಥಾಂಗಹೇತಿ ನಡೆಯಲ್ವೇಟು ಬೇಗಮಿಾ ನಿನ್ನ ಪೆರ್ವಡೆಯಂ ನೀನೆನೆ ನವ್ಯಮೂರ್ತಿ ಬೆಸವೆತ್ತು . . . ಪಡೆಯಂ ಕೈಸನ್ನೆಗೆಯ್ದುದ್ಧತಂ ನಡೆಯಲ್ವೇಟ್ಟೊಡೆ (ಶಾಂತಿಪು. ೩-೦೦೩). [ ಬೆಸ$_1$ + ಪೆಱು$_1$ ]

**ಬೆಸವೇಡು** (ಕ್ರಿ). ಅಪ್ಪಣೆಯನ್ನು ಕೇಳು : ಇಬೇಟಿದ ಕಾಳೆಗದಲು ಆಟ್ಟದ ಬೆಸವೇಡಿ ಸತ್ತಂ ಪೊನ್ನಯ್ಯ (ಶಾಸ. IX – i, ೨೩-೬ ; 948).

[ ಬೆಸ$_1$ + ಬೇಡು$_1$ ]

**ಬೆಸವೇಳ್** 'ಬೆಸಂಬೇಟು' ನೋ.

**ಬೆಸವೇಳು** 'ಬೆಸಂಬೇಟು' ನೋ.

**ಬೆಸವೇಟು** 'ಬೆಸಂಬೇಟು' ನೋ.

**ಬೆಸಸು$_1$** (ಕ್ರಿ). ಬೆಸುಗೆ ಹಾಕಿಸು : ಹೋಳಾದ ಕವಚವ ಹೊಲಿಸಿದರು ಬಾಹುರಕ್ಷೆ ಸವಗದ ಬಿರುಕ ಬೆಸಸಿದರು (ಕುಮಾ.ಭಾ. ೩-೩೬) ; ಸೋರುವ ಡಬ್ಬಿಯನ್ನು (ಬೆಸಸಿ) ದುರಸ್ತ ಮಾಡಬೇಕಾಗುತ್ತದೆ (ಮುಂಬಯಿ. ೨೨೯).
[ ಬೆಸೆ$_2$ (<ಬಿಸು$_1$ ) + — ಸು$_1$ ]

**ಬೆಸಸು$_2$**, ವೆಸಸು (ಕ್ರಿ). ೧. ಅಪ್ಪಣೆ ಮಾಡು ; ನಿರ್ದೇಶಿಸು ; ವಿಧಿಸು : ಸಿಯಗೆಲ್ಲರಾ ಮನೆಮಗತ್ತಿನ್ವಲ್ಲಹನಾ ಬೆಸಸಿ ಗಜ್ಜರ ವಲ್ಲಹ ×× ಕಾನಿಜಿದು ಸತ್ತ (ಎಕ. XVI. ಶುಮುಕೊ. ೮೮-೭ ; ಸು. 775) ; ಅಂ ಬೆಸಕೆಯ್ವಂ ನಿನ್ನ ಬೆಸಸಿದಂದದೊಳಿರ್ಪೆಂ (ಪಂಪಭಾ. ೮-೩೭) ; ಬೆಸಸಿ ದೂಳಿಗವನಾ ಪಡಿಹಾಜಿರಿಂದಲೊದಗಿಸಿ (ಚಂಪು. ೭-೬). ೨. (ಹಿರಿಯರು, ಅಧಿಕಾರಿಗಳೊಂದಿಗೆ ಮಾತನಾಡುವ ಸಂದರ್ಭದಲ್ಲಿ) ಹೇಳು ; ನಿರೂಪಿಸು ; ವಿವರಿಸು : ಶ್ರೀವಿದಿತಾರ್ಥಾಲಂಕಾರಾವಳಿಯಂ . . ಭಾವಿಸಿ ಬೆಸಸಿದನಖಿಳಧರಾವಲ್ಲಭಂ (ಕವಿರಾ. ೩-೦); ಬೆಸಸಿಂ ನಿಮ್ಮೊಂದಭಿಪ್ರಾಯಮಂ (ಪಂಪಭಾ. ೧೦-೯) ; ಕನಸನೀ ಹದನಾಗಿ ಕಂಡೆನು ದನುಜಹರ ಬೆಸಸಿದಡೆ ಫಲವನು ನನಗೆ (ಕುಮಾ.ದ್ರೋ. ೯-೧೦). ೩. ನೀಡು ; ದಯಪಾಲಿಸು ; ಅನುಗ್ರಹಿಸು : ದೇವ ಬಿಜಯಂಗೆಯ್ದು ಕರುಣಮಂ ಬೆಸಸುವುದು (ತಿರು. ರೀ. ೧೦-೧೦). **ವೆಸಸು** : ೧. ಬಾಯ್ಕೇಳದಿರೆ ಮುನಿದು ಕೊಲ್ಲಿಪಲ್ಲವನೊಬಿವ್ಪುಂ ನೊಬಿವ್ಪುರಾದಿತ್ಯನನ್ ವೆಸಸಲ್ ಆ ಕಾಕರಾಸರುಮೆಟ್ಟು ಪೆರ್ಗ್ಗಂಜಿಯ ಕೋಟೆಯಾನ್ ರೋಹಿಸಿಬಿಟ್ಟು (ಎಕ. VIII. ಸೊರಬ. ೦೦-೪; ಸು. 800).
[ಬೆಸ$_1$ + — ಸು$_2$]

**ಬೆಸಳಿಗೆ**, ಬಿಸಣಿಗೆ, ಬಿಸುಳಿಗೆ (ನಾ). ೧. ಅಗ್ಗಿಷ್ಟಿಕೆ : "ಅಂಗಾರಶಕಟೀ, ಹಸಂತೀ, ಹಸಂತಿಕಾ — ಈ ೩ ಬೆಸಳಿಗೆ" (ಹಲಾಯು. ೩೨-೦೫೯). ೨. ಬಾಣಲೆ, ಓಡು, ಬೋಗುಣಿ ಮುಂತಾದ ಅಗಲವಾದ ಬಾಯುಳ್ಳ (ಹುರಿಯುವ) ಸಾಧನ : ಬೆಸಳಿಗೆಯೊಳ್ ತರಂಬಡೆಯೆ ಶಾತಚಯಂಗಳನಿಕ್ಕಿ (ವಳಕಂ. ೭೦೯); ಧರ್ಮವ್ಯಾಧಂ . . . ಬಸಿಯ ಹರವಿಯ ಸಾಲ ತೊರಳಿಗೆ ಬೆಸಳಿಗೆಯ ಕುಜಿದಲೆಯ ಹಂತಿಯ ಕುಸುರಿದಲುವಿನ ಕೋಡ ಮಾನಂಗಡಿಯಲ್ತೆಂದ (ಕುಮಾ.ಅ. ೦೫-೮); ಅದಂ ಬೆಸಳಿಗೆಯೊಳಿಂಸಿ ಮೆಣಸಿನ ಹುಡಿಯ ತಳಿದು (ಸೂಪಶಾ. ೪-೩೦). **ಬಿಸಣಿಗೆ** : ೨. ಎಳೆಯ ಬಾಳೆಯ ತೋಕೆಯನು ಬಿಸಣಿಗೆಯಲಿ ಅಂತರವಕ್ಕಿ ಬೇಯಿಸುವುದು (ಲೀಪುಸೂ. ೩೭). **ಬಿಸುಳಿಗೆ** : ೨. ತಿಳಿ ತುಪ್ಪಟ್ಟ ಬಿಸುಳಿಗೆಯೊಳಗೆ ತನ್ನ ನೆಳಲನು ನೋಡಿದನು (ಪ್ರಸಭಾ. ೦೭-೨೬).

**ಬೆಸಿಗೆ** 'ಬಿಸುಗೆ$_1$' ನೋ.

**ಬೆಸು** 'ಬಿಸು$_1$' ನೋ.

**ಬೆಸುಗಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ದಿಬಿಗರ ಬೆಸುಗಿ ಕೊಟ್ಟದು ಗೋಸಹಸ್ರ ನಾಲ್ಕು ಕೆರೆಗೆ ನೆಜಿಯೆ ಗೋಸ[ಹ]ಸ್ರಂ (ಎಕ. VII. ಶಿಕಾ. ೫೩-೨೦; ಸು. 890 ?). [?]

**ಬೆಸುಗೆ** 'ಬಿಸುಗೆ$_1$' ನೋ.

**ಬೆಸುಗೆಕಾಜ** (ನಾ). ಬೆಸೆಯುವವನು : ಕೂಡಿಸುವವನು : ಸಸಿನೆ ಕಣ್ದೆಜಿದೊಲ್ದು ನೋಡೆನ್ನ ಪ್ರಾಣವ ಬೆಸುಗೆಕಾಜಾ (ಭರತ. ೦೫ ೩೦).
[ಬೆಸುಗೆ (<ಬಿಸುಗೆ$_1$) + — ಕಾಜ]

**ಬೆಸುಗೆಗಣ್** (ನಾ). ನಟ್ಟದೃಷ್ಟಿ : ಶಿವಮುಖದೊಳ್ ಬೆಸುಗೆಗಣ್ಗಳ್ ಪೆಜಿತು ಕಾಣ್ಬುವೇ (ಹರಿಶ್ಚ. ೨೦-೨). [ಬೆಸುಗೆ (<ಬಿಸುಗೆ$_1$) + ಕಣ್]

**ಬೆಸುಗೆಗಳಚು** (ಕ್ರಿ). ಕೂಡಿಕೆಯು ಬಿಟ್ಟುಹೋಗು ; ಬೇರೆಯಾಗು : ಬಿಸುಟಳೆಂದಜುತ ಶೂರ್ಪನಖಿ ನಿವಡಿಸಿದ ಕಟ್ಟಭಿಮಾನಿಪಳಿಸಿತ ಬೆಸುಗೆಗಳಚಿದ ನಾಸಿಕವನಿದಿರಲಿ ಖರಾಸುರನ (ತೊರಂ. ೩-೩-೩).
[ಬೆಸುಗೆ (<ಬಿಸುಗೆ$_1$) + ಕಳಚು (<ಕಟಲ್ಚು$_1$) ]

**ಬೆಸುಗೆಗಿಡು** (ಕ್ರಿ). ೧. =ಬೆಸುಗೆಗಳಚು. ೨. (ಅಲಂ) ಸಂಬಂಧವು ಕೆಡು, — ಹಾಳಾಗು : ಒಸೆದರ್ಜುನಂಗೆ ಮುಂ ಕಳಶಸಂಭವಂ [ಮಾಸ್ತ ಪದವಿಯಂ ಮಾಡಿದೊಡಂ] ಬೆಸುಗೆಗಿಡೆ ಪಾಟಗಿಡೆ ತನ್ನಸುವಂ ತೆಲ್ಲಟಿಗುಡುವ ತೆಜದೊಳ್ಕೊಟ್ಟಂ (ಗದಾಯು. ೨-೦೫).
[ಬೆಸುಗೆ (<ಬಿಸುಗೆ$_1$) + ಕಿಡು$_1$ (<ಕೆಡು$_1$) ]

**ಬೆಸುಗೆಗೊಳ್ಳು** (ಕ್ರಿ). ಕೂಡು ; ಜೊತೆಯಾಗು; ಸೇರು : ಅವರಿಬ್ಬರ ಹೃದಯಗಳು ಪರಸ್ಪರ ಬೆಸುಗೆಗೊಂಡಿದ್ದುವು (ಪುನರು. ೦೯೦).
[ಬೆಸುಗೆ (<ಬಿಸುಗೆ$_1$) + ಕೊಳ್ಳು$_1$ (<ಕೊಳ್$_1$) ]

**ಬೆಸುಗೆದಟ್ಟು** (ಕ್ರಿ). =ಬೆಸುಗೆಗೊಳ್ಳು : ಹೊಸಕರ್ಮ ಮುನ್ನಿರ್ದ ದ್ರವ್ಯಕರ್ಮದೊಳು ಬಂಧಿಸುವುದಾ ದ್ರವ್ಯಕರ್ಮವದು ಒಸರುವ ಭಾವಕರ್ಮದೊಳು ಗಂಟಿಪುದದು ಬೆಸುಗೆದಟ್ಟಹುದು ಜೀವನೊಳು (ಭರತ. ೩೮-೬೦).
[ಬೆಸುಗೆ (<ಬಿಸುಗೆ$_1$) + ತಟ್ಟು$_1$]

**ಬೆಸುಗೆಬಿಡಿ** (ಕ್ರಿ). = ಬೆಸುಗೆಗೊಳ್ಳು : ಬೆಸಸಿದೂಳಿಗವನಾ ಪಡಿಹಾಜಿರಿಂದಲೊದಗಿಸಿ ಕಾರ್ಯಭಾಗವಿಡಿದರಸನಿಚ್ಛೆಯನಜಿದು ಬೆಸುಗೆಬಿಡಿದಂತೆ ಹತ್ತಿಸಿ (ಚಂಪು. ೭-೬). [ಬೆಸುಗೆ (<ಬಿಸುಗೆ$_1$) + ಪಿಡಿ$_1$]

**ಬೆಸುಗೆಯಾನ್** (ಕ್ರಿ). =ಬೆಸುಗೆಗೊಳ್ಳು : ಕಮಲಕುಟ್ಮಲದೊಳು ಬೆಸುಗೆಯಾಂತುವು ತುಂಬಿಗಳು (ಕಂಪಪ. ೪-೩೯). [ಬೆಸುಗೆ (<ಬಿಸುಗೆ$_1$) + ಆನ್$_1$]

**ಬೆಸುಗೆಯೊಡೆ** (ಕ್ರಿ). =ಬೆಸುಗೆಗಳಚು : ಭೀಷ್ಮನ ಸರಳ ಗಾಳಿಗೆ ಬೆಸುಗೆಯೊಡೆದುದು ವೈರಿಬಲಮೇಘ (ಕುಮಾ.ಭೀ. ೯-೨೩); ಕುಸುರಿಂದಜಿದವು ಜೋಡುಸೀಸಕ ಬೆಸುಗೆಯೊಡೆದುದು ಘಾಯದಲಿ ಮೈಬಸಿಯೆ ಬಿರಿದುದು ಶೌರ್ಯ ಬಿಗಿದುದು ಭೀತಿ ಭೂಪತಿಗೆ (ಕುಮಾ.ದ್ರೋ.೦೫-೩೭).
[ಬೆಸುಗೆ (<ಬಿಸುಗೆ$_1$) + ಒಡೆ$_1$]

**ಬೆಸುಗೆವಡೆ** (ಕ್ರಿ). =ಬೆಸುಗೆಗೊಳ್ಳು: ಕಾಲ ಸಂಕಲೆ ಮುಟದುವೇ ಬಲು ಬೆಸುಗೆವಡೆದವು (ವಿರಾ ಗ.೦೦-೪-೦೮). [ಬೆಸುಗೆ (<ಬಿಸುಗೆ$_1$) + ಪಡೆ$_1$]

**ಬೆಸೆ$_1$** (ಕ್ರಿ). ೧. ಗರ್ವಿಸು; ಅಹಂಕಾರಪಡು; ಬೀಗು : "ಬೆಸೆ_ಗರ್ವೇ, ಕಾರ್ಪಾಸಚಾಪೇ ಚ (ಹತ್ತಿ ಎಕ್ಕುವ ಬಿಲ್ಲು)" (ಕವಿಪ್ರಾ) ; ಮುಸಗಿ ಜೆ[ಸೆದಿರ್ದ] ವಿವರಮನಸಿಯದಜಿದೆವೊತ್ತು ಪೊಕ್ಕು ಕೆಲನಂ ಕೊರ್ಬುತ್ತೆ ಸೆದು ಬಿದಿರ್ದಾರ್ದುಪೋಟ್ಗೆಟ್ಗೆ ಸಮಂಜಸನಿಕ್ಕಿ ಮಿಕ್ಕನರಿವಾಹಿನಿಯಂ (ಕಬಿರಾ.೦-೬೬); ಕೆಮ್ಮಗೆ ಬೆಸೆವವನರಸದೆಂತೊ ಪಗರಣಚರಸಂ (ಅದಿಪು.೦೨-೯೯); ಸಭೆ ಬಿಲ್ಲಂಬೆಜಿಗಪ್ಪಂತು ಜರ್ದಿ ಬೆಸೆದು ನುಡಿವುದುಂ (ಚಾವುಂಡ.೦೯೩-೯). ೨. ಕೋಪಿಸು ; ಸಿಟ್ಟಾಗು : ಒಸೆಯದೆ ಬೆಸೆಯದೆ ಪರಿಭಾವಿಸುತ್ತಮಿಂತಗ್ನಿನಾಯುಭೂತಿಗಳ ಗುಣಕ್ಕೆ ಸಮಾನಚಿತ್ತನಾಗಿಯುಮುಸಮಾನವನಸ್ಸನಾದಂ (ಸುಕುಮಾ ೩-೩೮); ಒಸೆಯದೆಯುಂ ಪದಾನತರ್ಗೆ ಸೌಖ್ಯಸಮೃದ್ಧಿಯನೀವ ದೇವ ನೀಂ ಬೆಸೆಯುದೆಯುಂ ಪದಾನತರ್ಗೆ ದುಃಖಿಸಹಸ್ರವನೀವಗಂ ವಿಸರ್ಜಿಸುವೆ (ವರ್ಧಪು.೦೬-೭೯); ಪುಸಿವ ಕುಸಿವ ಬೆಸೆವೊಸೆವ ಮನಂಗುಂದುವ ಮುಳಿವಲೆವೊಂದುಂ ದಂದುಗದೊಳಗೆ ಸಗನಿಲ್ಲಿಯುಂ ಮುನಿವರ್ಗಂ (ಪುಷ್ಪಪು.೦೨-೮೫). ೩. ನಿರ್ಲಕ್ಷಿಸು; ವಿಮುಖವಾಗು: ಪರಲೋಕಭಯಕ್ಕೆ ಬೆಸೆದು ಜಿಸನಕ್ಕೊಸೆದು ಯುಕ್ತಾಯುಕ್ತವಿವೇಕಕ್ಕೆ ಪಿಂತೆಗೆದು (ಕಾದಂಬ. ೫೬೩).
[ದೇ.೫ ತಮಿ. ವಿಚ್ಚು; ತುಳು. ಬೆಸಿ, ಬೆಸೆ]

**ಬೆಸೆ$_2$** 'ಬಿಸು$_1$' ನೋ.

**ಬೆಸೆ$_3$** (ನಾ). ಗರ್ವ; ಹೆಮ್ಮೆ: ಮುಂದುವರಿದವ್ಗಳಿಕೆ ಮುಳಿಸು ಮಾೞದಲೆ ಮೋಡಿ ಬಂದಿ ಭಾರಣೆ ಬಿಂಕ ಬೆಸೆ ಚಮತ್ಕಾರಂಗಳಿಂದೆ ಸಮವಾಗಿ ಕೈದೋಟದಿಂ ವೃಷಕೇತು ಬಭ್ರುವಾಹನನ ಮೇಲೆ (ಜೈಮಿಭಾ.೨೩-೦೫); ಬಗೆಬಗೆಯ ಬೆಡಗು ಬಿನ್ನಣ ಬೆಸೆ ಚಮತ್ಕಾರದೊಗುಮಿಗೆಯ ತೋರಿ ನೋಡಿದರು (ವಂಕಾರಾ.೫-೬-೩೭). [<ಬೆಸೆ$_1$]

**ಬೆಸೆ$_4$** (ನಾ). ೧. ಅರಳೆಯನ್ನು ಹೊಡೆದು ಹಿಂಜುವ ಒಂದು ಬಗೆಯ ಬಿಲ್ಲು : ಒಳ್ಳೆಯನೇಱಿ ಪಟ್ಟು ಬೆಸೆಯಂ ಬೆಸೆದೇಱಿಸಿ ಪಾವುಗುಳ್ಳೆಯಂ ಕೊಳ್ಳೆನಲೊತ್ತಿ ಪುಲ್ಮೊರಡಿಯಾವಲೆಯೊಳ್ ಸಿಲೆಯೊಂದನೆತ್ತಿ ನೀನೊಳ್ಳಿತು ಬೇಗುವೈ (ನೇಮಿಪು.೦೨–೨೩೦); ಇಂತು ಬಿಲ್ ಬೆಸೆಯಾಗೆ ಕಂಡು ಶತ್ರುಹಂ ಪೆಱತೊಂದು ಬಿಲ್ಲಂ ಕೊಂಡು ಕಣೆಯಂ ಪೂಡಿ (ರಾಮಾಶ್ವ.೦೫೭–೦೨); ಬೆಸೆಯ ಕಟ್ಟಗೆಯಾಗಿ ಕಾಲ್ಗಳು ಪಸಿಯ ತೊಗಲಿನ ಗಂಧ ಪೆಂಗಸು ಪಸುಧೆಯೊಳು ಹುಟ್ಟೀನು ಫಲಪ್ಪೈ (ಕಕ್ಕೊ.೪. ೪–೨೨). 'ಬೆಸೆಕೋಲ್' ಪರಾ. ೨. ಹೊಡೆತ ; ಪೆಟ್ಟು : ಇವನೊರ್ವನಿದೆಕೋ ಬಂದನೆಂದಿಸುವ ಬೆಸಗಳ್ಗೆ ದೆಸೆಗೆಟ್ಟು ಸೇನೆ ಗಜಬಜಿಸೆ ಕಂಡು (ಕೈರಬಾ.೨೦–೨೫). [<ಬೆಸ$_2$]

**ಬೆಸೆ$_5$** (ನಾ). ಮೇಕೆಯ ಕರುಳಿನ ಹುರಿ : P ಇದು ಬಹಳ ಗಟ್ಟಿಯಾಗಿದ್ದು ವೀಣೆ, ಸಾರಂಗಿ ಮುಂತಾದ ವಾದ್ಯಗಳಿಗೆ ತಂತಿಗಳಂತೆ ಬಳಸುತ್ತಾರೆ : ಇದು ಬೆಸೆ, ಗೊತ್ತಿಲ್ಲವೇ ಬೆಳ್ಳಿ ? ದೇವಾಲಯಕ್ಕೆ ಕೊಡಬೇಕಲ್ಲ–ಅಲ್ಲಿಯ ವೀಣೆ ಸಾರಂಗಿ ಇವುಗಳಿಗೆಲ್ಲಾ ಬೇಕಾಗುವ ಬೆಸೆ ನಾವೇ ಕೊಡಬೇಕಲ್ಲಾ? (ಬಂಧಮು. ೬೦). [?]

**ಬೆಸೆಕೋಲ್**, ಬೆಸಕೋಲು (ನಾ). ಅರಳೆಯನ್ನು ಹಿಂಜಲು ಬಳಸುವ ಪಿಂಜಾರನ ಕೋಲು : ಕುಡುಪೊಡೆ ನಿಸ್ತ್ರಪಂ ಕುಡುವು ದೇಱಿಸಿದು ಬೆಸೆಕೋಲನೆಂದು ಪೇಟುಸ್ ಕುಡುವುದೆ ಕನ್ನೆಯಂ ದ್ವಿಜಕುಲಂಗೆ (ಶಂಕಶಾ. ೩–೬೬); ತಲೆಕಟ್ಟು, ಬೆಸೆಕೋಲ್ (ಶಮಿದ. ೬೫ ಪ್ರಯೋ). **ಬೆಸಕೋಲು**: ಸುರಧನುವೆಂಬ ಬೆಸಕೋಲ ತುದಿಗೆ ತಳತಳಿಪ ವಿದ್ಯುಲ್ಲತೆಯ ತಿರುವನಿಟ್ಟೆಕ್ಕಿವರಲೆಯ ಪುಂಜಪುಂಜ ತೆಱದಿ ಹಳಿಹಳಿಯೊಳೇಳ್ವ ಘನಶಶಿ . . ವಿರಾಜಿಸಿದುದು (ಸಮ್ಯಕೌ. ೦–೦೪); ಒಳ್ಳೆಯನಿರದೇಱಿ ಬೆಸಕೋಲ ನೇಱಿಸಿ ಗುಳ್ಳೆಯ ಏರ್ಚೆ ಪೂರ್ಯಿಸಿ ಹೊಳ್ಳುಪೊರಡಿಯೊತ್ತಿದ ಒಲ್ಲ ತೋಱುವುದೊಳ್ಳಿತೊಳ್ಳಿತು ತುಱುಗಾಱು (ನೇಮಿಸಂ. ೩೦–೩೪). [ಬೆಸೆ$_4$ + ಕೋಲ್$_1$]

**ಬೆಸೆಗಾರ** 'ಬೆಸೆಗಾಱ' ನೋ.

**ಬೆಸೆಗಾಱ**, ಬೆಸೆಗಾರ (ನಾ). ಕೊಬ್ಬಿದವನು ; ಅಹಂಕಾರಿ : ಎನ್ನಂ ಮುನ್ನಮೂರೆಂದು ಕಿಱುಕುಳನೆಂತಂತು ಬೆಸಗೊಳ್ವ ಬೆಸೆಗಾಱ ! (ರಾಮಾಶ್ವ. ೦೪೪–೨೨). **ಬೆಸೆಗಾರ**: ಕುಸುಮಾಸ್ತ್ರನ ದೆಸೆಗಾರರ ಬೆಸೆಗಾರ! (ಮಂತ್ರಶ. ೬೦–೫). [ಬೆಸೆ$_3$ + –ಕಾಱ]

**ಬೆಸ್ತ**, ಬೆಸದ (ನಾ). ೧. ಮೀನು ಹಿಡಿಯುವವನು; ಜಾಲಗಾರ : ಕಾಲ್ಗೆಳಗೆ ಹರಹಿದ ಬೆಸ್ತನ ಜಾಲಜಾಲಗಳ ದಾಟಿ ಸಮೀಪಿಸಿದೆ ಜಲಪ್ರದೇಶ (ಪಪ್ರಪ್ರ. ೦೦–೪); ಇವ ಬೆಸ್ತ; ಇವನ ಕೈಲಿ ಜನಿವಾರ ಮಾಡಿಸೋಕೆ ಆಗದು (ಪಿತ್ರ. ೦೦). ೨. ಮೇನೆಯನ್ನು ಹೊರುವವನು ; ಬೋಯಿ : ಬೆಸ್ತ ಬಲ್ಲನೆ ಅಂದಳ ಮೊದಲಾದ ಅಷ್ಟಭೋಗಂಗಳ (ಶಸ್ವ. ೪. ೦೫–೩೨); ಅಂದಳದ ಬೆಸ್ತನನು ಕರೆಸಿ ಅವಗೆ ಇಂದುಧರವೇಷ ಪನು ಧರಿಸಿ ಹೊಂದಿ ನಿಂಬಿಪ್ಪೆಯನು ಬೆರಸಿ ನೀ ಬಾರೆಂದು ಕಳುಹಿದರು ಸತ್ಕರಿಸಿ (ಶರಂ. ೨೯೬–೨). **ಬೆಸದ** : ೧. ಮಿಲ್ಲ ಬೆಸದರ ಮುರಿದು ಲುಪುಷ್ಪರವ ಪಾಳ್ಮಾಡಿ ಪುಲ್ಲಶರನಂ ಗೆಲಿದ ಸಿದ್ಧರಾಮೇಶನೆಮಗೀಷ್ಟ ಸಂಸಿದ್ಧಿಯಂ (ರಾಘಶ. ೩–೩) ; ಮನೆಮಾರು ಮಾಡಿ ನೆಮ್ಮದಿಯಾಗಿ ಬಾಳ ದಿಂತಲೆವನೇತಕೆ ಬೆಸದರೊಡನೆ (ಗೂರಪ್ಣಕಾ. ೨–೦೬). [ದೇ.॥ ತೆಲು. ಬೆಸ್ತ]

**ಬೆಳ್$_1$**, ಬೆಳು$_1$ (ಸಪೂರೂ). 'ಬಿಳಿದು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬೆಳ್ಮುಗಿಲ್', 'ಬೆಳ್ವಕ್ಕಿ' ಪರಾ. **ಬೆಳು$_1$** : 'ಬೆಳುಮುಗಿಲು', 'ಬೆಳುವೆಟ್ಟು' ಪರಾ.
[ದೇ.॥ ತಮಿ. ವೆಳ್, ವೆಣ್; ಮಲ. ವೆಳ್; ತುಳು. ಬೊಳ್, ಬೋಲ್; ಕೋತ. ವೆಳ್; ಪರ್ಜಿ. ವಿಲ್]

**ಬೆಳ್$_2$**, ಬೆಳು$_2$, ಬೆಳ್ಳ$_2$ (ನಾ). ೧. ದಡ್ಡತನ ; ಮೂರ್ಖತನ: 'ಬೆಳ್ಪು$_1$', 'ಬೆಳ್ಳ$_2$' ಪರಾ. ೨. ಭಯ; ಅಂಜಿಕೆ : 'ಬೆಳ್ಬೆರಲೆ', 'ಬೆಳ್ಗೋಟ' ಪರಾ. ೩. ತೋರಿಕೆ ; ಹುಸಿ : 'ಬೆಳ್ಗೋಕರಿಕೆ' ಪರಾ. ೪. ಕ್ರೂರವಲ್ಲದುದು ; ಸಾಧು: 'ಬೆಳ್ಗಿಗ', 'ಬೆಳ್ಳಗ' ಪರಾ. ೫. ಬುದ್ಧಿಯಿಲ್ಲದವನು ; ದಡ್ಡ ; ಅಜ್ಞ: ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ ಪೂಣ್ದು ಪೇಳ್ದ ಬೆಳ್ಗಳ ಕೃತಿಬಂಧಮುಂ ಬರೆ[ಪ]ಕಾಱರ ಕೈಗಳ ಕೇಡು (ಶಂಕಶಾ. ೦–೦೨); ಚಿಂತಿಸಿ ಕಬಲ್ದು ಬಬಲ್ದು ಕನಲ್ದೊನಲ್ದಂ ಬೆಳ್ಳೆನಿಸುವ ಬೆಳ್ವಬೇರನಗುಟ್ದಾಗಸಕೆತ್ತದೆ ಸೂಳೆ ಮಾಣ್ದುಮೇ (ಶಾಂತಿಪು. ೮–೯೬) ; ಒಳ್ಳೆ ಕುಲದವರೆನ್ನ ಬೆಳ್ಳೆನ್ನದಿಹರೆ (ಶಂಕ ೩೯–೮). **ಬೆಳು$_2$** : ೧. 'ಬೆಳುಮಾತು' ಪರಾ. ೫. 'ಬೆಳುಗನ್ನಡಿಗ' ಪರಾ. ೬. ಕಪಟ ; ಸೋಗು : 'ಬೆಳುನಗೆ$_2$' ಪರಾ. **ಬೆಳ್ಳ$_2$** : ೭. ಕಪಟವಿಲ್ಲದಿರುವಿಕೆ ; ಮುಗ್ಧತೆ : ಇನ್ನು ಕೆಲವರು ಬೆಳ್ಳೆಯೋ ಕುಚೋದ್ಯವೋ ಎನ್ನುವುದು ತಿಳಿಯದ ರೀತಿಯಲ್ಲಿ ಓಗೆ ಕರೆಯುವರು (ಚಕರಾ. ೩೭). 'ಬೇಳ್$_2$' ಹೋ.

**ಬೆಳ್ಮಾಡು**, ಬೆಳುಮಾಡು=೧. ಮಂಕುಮಾಡು; ಮರುಳುಗೊಳಿಸು: ಧರೆಯಂ ಬೆಳ್ಮಾಡಿಕೊಂಡರೆಂಗುಂ ಲೋಕಂ (ಶಂರಾಮಾ. ೬–೦೪೦). ೨. ಪರವಶಗೊಳಿಸು ; ಮೋಹಿಸುವಂತೆ ಮಾಡು : "ಬೆಳ್ಮಾಡೆಂದು ಮರುಳ್ಗೊಳಿಪುದು" (ಕಕಾ. ೬೧–೬೨೭) ; ಕಾಂತಿಗೆ ಕೈಗನ್ನಡಿ ತೀರ್ಥಕರ ಕುಮಾರನ ಬೆಡಂಗು ಬೆಳ್ಮಾಡಿದಪುದಲಂಕರಿಸುವರಂ (ಅಸಂಪು. ೫–೬೦) ; ಮೆಯ್ಗುಣ್ಮನಂ ಪೊಸತಪ್ಪಗ್ಗದ ಗಾಡಿಯಿಂದೆ ಪಿರಿದುಂ ಬೆಳ್ಮಾಡಿ ಬೀಟ್ಟಂ ತುಟುಬ್ಬಿಸಮಂ ಮಾಡುವ ಬರ್ದೆಯರ್ ಪಲಬರುಂ ಕಣ್ಗಿಂ ಬೆಡಂಗಾದರೋ (ಕಾವ್ಯಾ. ೧೬೪); " ಬೆಳುಮಾಡೆನಲು . . . ಮರುಳ್ಮಾಡುವುದಕ್ಕೆ ಪೆಸರ್ " (ಕಶ.೬೨). **ಬೆಳ್ಳಾಗು**=೧. ಮೂಢತನದಿಂದ ಕೂಡಿರು ; ಬೆಪ್ಪಾಗು ; ಅವಿವೇಕಿಯಾಗು : ನಲ್ಲಂಬಿದಿಸೆ ಪುಷ್ಪಬಾಣನಿರ್ದೆಯಂ ಬೆಂಬಿಟ್ಟು ಬೆಳ್ಳಾಗಿ ತಕ್ಕಿಲ್ಲಂ ಕೆಟ್ಟಿರ್ದೆಗೆಟ್ಟು ಜಂಗಮಲತಾಸಲ್ಲೀಲೆಯಂ ಬಾಲೆಯರ್ ಚಿಲ್ಲಂ ಬೇಂಟದ ತೋಟಿಯೊಳ್ ತೊಡರೆ (ಕಾವ್ಯಸಾ. ೫೫೦ ಕೂದ್ರ೪) ; ಪೋದುದು ಜೌವನಂ ಕ್ರಮದಿನಾದುದು ಮುಪ್ಪಿನಸಾದೊಡಂ ಸ್ಮರೋನ್ಮಾದದೊಳೀ ವಿಮೋಹದೊಳದೇಕೆ ಗಡಂ ಬಗೆಯಂ ತಗುಳ್ಚಿ ಬೆಳ್ಳಾ [ಶಾಕಾಂ. ಬೇಳಾ]ದಪಂ (ಅಂಪು. ೨–೩೫). ೨. ಹೆದರು ; ಅಂಜು : ಪೋಗನೆ ಪೋಪ ಬಾರೆಲವೊ ಬಾರನೆ ಜೀಯ ಹಸಾದವೆಂದು ಬೆಳ್ಳಾಗುತೆ ಬರ್ಪ . . . ಸೇವೆಯ ಕಷ್ಟವೃತ್ತಿಯಂ ನೀಗಿದೆನೆಂದು ನಿಮ್ಮ ದೆಸೆಯಂ (ಶಂಶಾಶ. ೯೬).

**ಬೆಳ** (ನಾ). (?) : ಮೂಡಣ ಬೆಳದೊಳಾ ಗಳೆಯೊಳ್ ಅಗಲಂ ಗಳೆ ೩ ನೀಳಂ ಗಳೆ ೭ (ಇಆ. XIX, ೨೬೩–೩೯ ; 1054); ಘಣಿಕುಳಂಗಳೇ ದಾರವಾಗಿ ಬೊಕ್ಕಣ ಪೊಳವಸಾಪಚಯಾಗಿ ಚಕ್ರಮೇ; ಬೆಳವಾಗಿ ಕೂರಸಿಯೇ ಮರಸುರಿಗೆಯಾಗೆ (ಎಕ. VII, ಶಿಕಾ. ೦೦೬–೩೦ ; 1054). [?]

△**ಬೆಳಂಗಿಸು** 'ಬೆಳಗಿಸು' ನೋ.

△**ಬೆಳಂಗು** 'ಬೆಳಗು$_1$' ನೋ.

**ಬೆಳಂತಿಗೆ**, ಬೆಣತಿಗೆ, ಬೆಳತಿಗೆ, ಬೆಳ್ತಿಗೆ (ನಾ). ೧. ಹೊಳಪು ; ಕಾಂತಿ; ಪ್ರಕಾಶ : ಅನೇಕ ಪ್ರಕಾರ ನರನಾರೀಜನಂಗಳ್ ಬೆಳಂತಿಗೆಯುಪ್ಪಚ್ಚ ವೆಳ್ದಿಂಗಳೊಳನಂಗರಾಗರಸದೀಪಿತಾಂತರಂಗರಾಗಿ ನಲಿಯುತ್ತಿರ್ಪಿನಂ (ಧರ್ಮಪು. ೮–೯೫ ವ); ಕಬರೀಭಾರಾವಲಿಸೆ ತೊಳಪ ಬೆಳಂತಿಗೆಯೆನಿಸಿಪಚ್ಚವೆಳ್ದಿಂಗಳೊಳ್ . . . ಬೀಣೆಯಂ ಬಾಜಿಸಿದಳ್ (ಸುಕುಮಾ. ೦೦–೨೪) ; ಬಿಸಿಱಿಂ ಬಲಿದುಕ್ಕುವ ಮೋಹಾಮ್ಯುತರಸದ ಬೆಳಂತಿಗೆ ಪರಕಲಿಸಿದುದೋ (ಶಮುಕಾ. ೪–೦೬). (ಗು). ೨. ಬಿಳುಪಾದ ; ಶುಭ್ರವಾದ : ಕಾಂತಿಯೊಳೆ ಪುದಿದು ಬೆಳಪ ಬೆಳಂತಿಗೆ ಬೆಳ್ದಿಂಗಳಲರ್ದ ಪೊಸಜಾದಿ ದಿಶಾಕಾಂತೆಯ ಬೆಳ್ನಸದನವ

ದಗುಂತಿಮನೇಂ ತನಗೆ ನಾಡೆಯುಂ ಮಾಡಿದುದೋ (ಆದಿಪು. ೧೦-೯); ನೀಳ್ದ ಬೆಳಂತಿಗೆ ಬೆಳ್ಪನಾಳ್ದ ಪಂಕರುಹಮನಾಳಿಗೊಳ್ವ ನಗೆಗಣ್ (ಅನಂಪು. ೨-೨). **ಬೆಣತಿಗೆ :** ೨. ಮುನ್ನದಿನ ರಾತ್ರಿ ಬೆಣತಿಗೆ ಅಕ್ಕಿಯು ನೆನೆಯಿಕ್ಕರಿಸಿ ಬೆಳಗಾಗಿ ಆ ಅಕ್ಕಿಯೊಂದುಹಿಡಿಯಂ ಮೆಲ್ಲಲು ಮೂರು ದಿನಕ್ಕೆ ಬಿಳಿಸೀರೆ ಕೆಡುವ ರೋಗಂ ನಿಲ್ವುದು (ಸಕಲವೈ. ೦೯೬); ಒಂದಿಷ್ಟು ಬೆಣತಿಗೆಅಕ್ಕಿ ಕೊಟ್ಟರೆ ನಾವೇ ಬೇಯಿಸಿಕೊಳ್ಳುತ್ತೇವೆ (ಸಂಬಸಾ. ೦೯). **ಬೆಳತಿಗೆ :** ೧. ಬೆಳ್ದಿಂಗಳ ಬೆಳತಿಗೆಯುಂ ಪಂಸೆ ಪಾಲ್ಗೆತ್ತು ಸಾರ್ದಪ್ಪುದೊ (೦೬ಣಾಪ. ೨-೨೨). ೨. ನಿಮ್ಮಡಿಗಳಿಂದಿನ ಬೆಳತಿಗೆ ಬೆಳ್ದಿಂಗಳೊಳು ಬಿಜಯಂಗೆಯ್ದಾ ಕನ್ನೆಯು ಮನೋರಥಮುಂ ಮಾಳ್ಪುದು (ನಂಬಿರ. ೦೦-೨೫); ಬೆಳತಿಗ[ಪಾಠಾಂ.ಯ]ಕ್ಕಿಯ ಸಣ್ಣ ಹಿಟ್ಟ ಸೋದಿಸಿ ಹುರಿದುಕೊಳುತ ಬೆಲ್ಲದ ಪಾಕದೊಳು ಪಾಕಿ ಕಲಸಿ . . . ಗಾರಿಗೆಯಡುವುದು (ಸೂಶಶಾ. ೦-೨೪). ೩. ಹೊಳೆಯುವ; ಪ್ರಕಾಶಮಾನವಾದ : ಇರುಳ ತಣ್ಪಸಿಲ್ ಬೆಳತಿಗೆ ಮಿಂಚಿರ್ಪಲ್ಲದಿಂಗಡಲ್ (ಮಲ್ಲಿಪು. ೬-೪೪). ೪. " ಬಿಳಿದಾದ ಅಕ್ಕಿ " (ಸಿಂಕೋ. ೩೯೦). **ಬೆಳ್ತಿಗೆ :** ೨. ನೀನು ಉಣ್ಣುವ ಹೊತ್ತಿಗೆ ನನ್ನ ಅನ್ನವಾಗುತ್ತದೆ. ಅದಕ್ಕೆಷ್ಟು ಹೊತ್ತು? ಬೆಳ್ತಿಗೆ ಅಕ್ಕಿ (ಕದಂಬ. ೦೦).

**ಬೆಣತಕ್ಕಿ** = ಥಳಿಸಿದ ಅಕ್ಕಿ ; ಬಿಳಿಯಕ್ಕಿ : ಬೆಣತಕ್ಕಿಯ ನೆನೆಯಿಸಿ ಸಣ್ಣವಾಗಿ ಅರೆದುಕೊಂಡು (ಬಿವೈಬಿ. ೬೦). [<ಬಿಳಿದು./ತುಳು. ಬೊಳಂತೆ]

**ಬೆಳಂತಿಗೆಗಣ್**, ಬೆಳತಿಗೆಗಣ್ (ನಾ). ಹೊಳಪುಳ್ಳ ಕಣ್ಣು; ಕಾಂತಿಯುತವಾದ ಕಣ್ಣು : ಬೆಳಗಾಯ್ಮೊಲೆಯ ಬೆಳಂತಿಗೆಗಣ್ಗಳ ಸುಳಿನಾಭಿಯ ಸುಲಲಿತಲಲಿತಾಂಗದ . . . ಲಲನೆಯರ ವಿಲಾಸಂ ನೃಪನಜಿತಮನೆಳಕುಳಿಗೊಳಿಸಿದುದು (ಜಯಾ. ೨-೩). **ಬೆಳತಿಗೆಗಣ್ :** ಮಿಡುಗುವ ಬೆಳತಿಗೆಗಣ್ಗೊಣರೊಜಿತೆಯ ಜಲದೊಳಗೆ ಪೊಳೆಯೆ . . . ಎಳಮೀನ್ಗಳ್ಗೆತ್ತು (ಅಜಿತಪು. ೬-೩೦); ಬೆಳತಿಗೆಗಣ್ಗಳ ಬೆಳಗಿನಬಲೆಗಿರಪೊಳಗಾದುದಾ ವಿಟನಿಕರ (ಶಬರಿಸಂ. ೦-೬೩); ಬೆಚ್ಚಿಸುವಗಣ್ಣ ಬೆಳತಿಗೆಗಣ್ಣ . . . ಬಲ್ಬೊಗಸೆಗಣ್ಣ ಬಲೆಯರ್ . . . ಬರುತಿರ್ದರ್ (ಶಬಪು. ೩೬-೪೪). [ಬೆಳಂತಿಗೆ + ಕಣ್]

**ಬೆಳಂದಿ** (ನಾ). ಒಂದು ಬಗೆಯ ಸಸ್ಯ : ಕೆಂಪುಗಂಧಗಿರಿ . . . ಬೆಳಂದಿ, ಗಂಧಗರಿಗೆ (ವೈಶಿಶಿ. ೦೯-೩೪೮). [ ? ]

**ಬೆಳಕ** 'ಬೆಳಗು$_2$' ನೋ.

**ಬೆಳಕಂಡಿ** (ನಾ). ಬೆಳಕು ಮತ್ತು ಗಾಳಿಯು ಬರುವುದಕ್ಕಾಗಿ ಕಟ್ಟಡಗಳಲ್ಲಿ ಅಳವಡಿಸುವ ಕಿಂಡಿ; ಗವಾಕ್ಷ; ವಾತಾಯನ: ನೆಲನಗಲಕ್ಕೆ ತೀವಿದ ಕಟ್ಟಿಲೆಯುಂ ಒಳಿಯಲ್ಕೆ ಗಗನತಳದೊಳ್ಪಲವುಂ ಬೆಳಕಂ [ಪಾಠಾಂ. ಖಂ]ಡಿಗಳಿಂ ಸಮೆದಂ ಜಳಜಜನೆನೆ ತೊಳಗಿ ಬೆಳಗಿದುವು ಭಗಣಾಂಗಳ್ (ಧರ್ಮಾಕ. ೨-೦೧). ಕೆಲವು ಕಡೆಯಲ್ಲಿ ಮಾಳಿಗೆಯಲ್ಲಿ ಬೆಳಕಂಡಿಗಳನ್ನು ಬಿಡುತ್ತಿದ್ದರು (ಕಭಾಗ. ೬೦); ಜನಕಜಾತೆಯುಂ . . . ಮೃಗಚರ್ಮದಿಂ ಸಮೆದ ತನ್ನ ಕೈಪಟ್ಟಿಯುಂ ತೆರೆದಯೋಧ್ಯೆಯ ಸಿರಿಗೆ ರಚಿಸಿದಳ್ ಕಿರಿದೊಂದು ಬೆಳಕಂಡಿಯುಂ (ಶ್ರೀರಾಮಪಾ. ೦೩೬-೩೨೯). [<ಬೆಳಗು$_2$ + ಕಂಡಿ$_1$]

**ಬೆಳಕಿಂಡಿ** (ನಾ). =ಬೆಳಕಂಡಿ : ಒಳಕೊಂಡೆಯನಿಕ್ಕಿ ಪೌಗಂಡರ ನಮ್ಮ ಬೆಳಕಿಂಡಿಲಿ ಸಿಲುಕಿಸಿ ಪುಂಡನೋಡಿದನೌ (ಶ್ರಸಶಾ. ೦೬-೬); ನನ್ನ ಮನದ ಬೆಳಕಿಂಡಿಯೊಳಗಿಂದ ಅಗೊ – ಕಂಡೆ ಕಾಣುವುದು ಬೆಳಕಿನಂದ (ಗು. ೨೯-೦೫). [<ಬೆಳಗು$_2$ + ಕಿಂಡಿ]

**ಬೆಳಕು$_1$** 'ಬೆಳಗು$_1$' ನೋ.

**ಬೆಳಕು$_2$** 'ಬೆಳಗು$_2$' ನೋ.

**ಬೆಳಕುದೋಱು** (ಕ್ರಿ). ಬೆಳಕನ್ನು ಕಾಣಿಸು : ಪರಶಿವನ ಶಶಿಸೂರ್ಯನೇತ್ರಂಗಳಂ ಗಿರಿಜೆ ಸರಸದೊಳ್ ಮುಚ್ಚಲ್ ತಮಂ ಪೆಚ್ಚಲೀಶನೆಂದುರಿಗಣ್ಣನಿಂ ಬೆಳಕುದೋಱಲು (ಶಬಪು. ೯೬-೨೪).

[ ಬೆಳಕು$_2$ (<ಬೆಳಗು$_2$) + ತೋಱು ]

**ಬೆಳಕುಮಾಳಿಗೆ**, ಬೆಕ್ಕುಮಾಳಿಗೆ (ನಾ). ಬೆಳಕಂಡಿಯಿರುವ ಮಾಡ; ಗವಾಕ್ಷವಿರುವ ಮಾಳಿಗೆ : " ತಳಗಡೆ ಇರುವ ಕೋಣೆ ಮೊ.ಗಳಿಗೆ ಬೆಳಕು ಬೀಳುವುದಕ್ಕಾಗಿ ಮಾಡಿರುವ ಎತ್ತರವಾದ ಗವಾಕ್ಷಿ : ಬೆಳಕು ಮಾಳಿಗೆ" (Companion. ೩೨೪೬). **ಬೆಕ್ಕುಮಾಳಿಗೆ :** ಬೆಳಕು ಬರಲು ಮೇಲಿನ ಬೆಕ್ಕುಮಾಳಿಗೆಯೇ ಆಧಾರ (ಗಾಬಿತ್ರಿ. ೫೩).

[ಬೆಳಕು$_2$ (< ಬೆಳಗು$_2$) + ಮಾಳಿಗೆ$_1$ ]

**ಬೆಳಕ್ಕಾಲ್** (ನಾ). ಒಂದು ಪ್ರದೇಶದ ಹೆಸರು : ತೆನ್ನಣಸೀಮೆ ಬೆಳಕ್ಕಾಲ ತೆನ್ನೊಟಿಚ್ಚಿ (ವ್ಮಆರಿ. ೦೯:೭, ೦೨೨-೩೦; 808) [? + ಕಾಲ್$_2$]

**ಬೆಳಗಟಿ** (ಕ್ರಿ). ಬೆಳಕು ಇಲ್ಲದಂತಾಗು ; ಕತ್ತಲಾಗು : "ಮಸಮಸವಾದುದೇಂದು ಬೆಳಗಟಿದುದು" (ಶಶಾ. ೫೬-೨೦೬) ; "ಬೆಳಗಟಿದುದು ಮಸಮಸವಾದುದು" (ಕವ್ಯಕೈ. ೬೯). [ಬೆಳಗು$_2$ + ಅಟಿ$_1$]

**ಬೆಳಗಾಯ್**, ಬೆಳಗಾಯಿ, ಬೆಳುಗಾಯ್ (ನಾ). ಬೆಳವಲದ ಕಾಯಿ ; ಬೆಲ್ಲವತ್ತ : ವಾರಣ ನುಂಗಿದ ಬೆಳಗಾಯಂ[ಪಾಠಾಂ. ಬೆಳಲ ಪಣ್ಣಂ, ಬೇಲದ ಪಣ್ಣಂ]ತೆ (ಕುರಾಕಾಂ. ೨೬-೨); ಜಾಣತನವು . . . ಕಾಣಿಸಬೇಕು ಕಬ್ಬದೊಳು . . . ಕರಿಯುಂಡ ಬೆಳಗಾಯಂತಲ್ಲ ಕರತಳದಾಮಳಕದಂತೆ ನಿಟ್ಟಪರಿಗೆ (ಕವಿ. II, ೯೮೦, ಸೂಕ್ತಿಸುಧಾರ್ಣವ ಪತ್ರ). **ಬೆಳಗಾಯಿ :** ತಾವರೆ ಮೊಗಕೆ ಬೆಳಗಾಯಿ ಮೊಲೆಗೆ ನೈದಿಲೆ ಕಣ್ಗೆ . . . ಸೋಲ್ದವಯವಂಗಳೊಳ್ನೆಲಸಿದುವು ಪಣ್ಗಳ್ಗೆ (ಶೃಬಿಶಾ. ೩೦-೪). **ಬೆಳುಗಾಯ್:** 'ಬೆಳುಗಾಯ್ಮೊಲೆ' ಪರಾ.

[< ಬೆಳಲ್ + ಕಾಯ್$_4$]

**ಬೆಳಗಾಯಿ** ' ಬೆಳಗಾಯ್ ' ನೋ.

**ಬೆಳಗಾಯಿಮೊಲೆ**, ಬೆಳುಗಾಯ್ಮೊಲೆ (ನಾ). ಬೇಲದ ಕಾಯಿ ಆಕಾರದ ಮೊಲೆ : ಬೆಳಗಾಯಿಮೊಲೆಯ ಹೊಳೆವ ಪೊಂಗಳಸಮೊಲೆಯರಲ್ಲದೆ ಬೀಳು ಮೊಲೆಗಳ ಹೆಣ್ಣಿಲ್ಲವಲ್ಲಿ (ಕಂಪಿಪ. ೬-೦೦೦). **ಬೆಳುಗಾಯ್ಮೊಲೆ :** ಬೆಳುಗಾಯ್ಮೊಲೆಯ ಲಸದ್ಬಿಂಬಾಧರದೆಳಜವ್ವನೆ (ಜಯಾ. ೦೦-೦೬) ; ಸಿಂಗರದ ಮೊಲೆಯ ಬೆಳುಗಾ[ಪಾಠಾಂ. ಳಲ್ಗಾ]ಯ್ಮೊಲೆಯ ಬಟ್ಟಡಕೆಮೊಲೆಯ . . . ಬಿಣ್ಮೊಲೆಯ ಭಾವೆಯರ್ ಬರುತಿರ್ದರು (ಶಬಪು. ೩೬-೪೩).

[ಬೆಳಗಾಯಿ ( <ಬೆಳಗಾಯ್) + ಮೊಲೆ$_1$]

**ಬೆಳಗಾರ** ' ಬೆಳುಗಾರ ' ನೋ.

**ಬೆಳಗಿಲಿ** (ನಾ). ಬೆಳಕು ಇಲ್ಲದುದು : ' ಬೆಳಗಿಲಿಗಣ್ ' ಪರಾ.

[ಬೆಳಗು$_2$ + — ಇಲಿ$_3$]

**ಬೆಳಗಿಲಿಗಣ್** (ನಾ). ಬೆಳಕು ಇಲ್ಲದ ಕಣ್ಣು; ಕುರುಡುಗಣ್ಣು: ಲಿಕಾರಕ್ಕೆ – ಪಲ್ಲಿಲಿವಾಯ್ . . . ಬೆಳಗಿಲಿಗಣ್, ನಾಣಲಿವೆಣ್ (ಶಮದ. ೦೯೬ ಶ್ರವೃ.).

[ಬೆಳಗಿಲಿ + ಕಣ್]

**ಬೆಳಗಿಸು**, ಬೆಳಂಗಿಸು (ಕ್ರಿ). ೧. ಬೆಳಕಾಗುವಂತೆ ಮಾಡು; ಪ್ರಕಾಶಗೊಳಿಸು : ಪತ್ತುದೆಸೆಯುಂ ಬೆಳಗಿಸುವೆ ಪನ್ನೆರಡುರಾಶಿಗೊತ್ತಾಸೆಯಾಗಿರ್ಪೆ . . . ಎಂದು ದಿನಪಾಣಿಯನಾ ಲವಂ ನುತಿಸಿದಂ (ಜೈಮಿಭಾ. ೨೦-೬೨) ; ಸೂರ್ಯ . . . ಕತ್ತಲನ್ನು ಓಡಿಸಿ, ಮನೆಯನ್ನು ಬೆಳಗಿಸಲು ಒಳಕ್ಕೆ ಪ್ರವೇಶಿಸುತ್ತಾನೆ (ಶಪಂ. ೬). ೨. ದೀಪ, ಬೆಂಕಿ ಮುಂತಾದುವನ್ನು ಹಚ್ಚಿಸು,—ಹೊತ್ತಿಸು : ಘಡಘಡರ್ಜನ ಹೋಗುತಾಹೋಗಳ ಪಡದು ಸೈಂಧವನಳಿವು ಭಾಷೆಯ ನಡಸಬಲ್ಲರೆ ಬೇಗ ಬೆಳಗಿಸು ಹವ್ಯವಾಹನನ (ಕುವ್ಯಾದ್ರೋ. ೦೪-೩೦) ; ಹೊರಗೆ ಬಂದು ಚಾಪಡಿಯ ಲೈಟು ಬೆಳಗಿಸಿದಳು (ಹಳ್ಳಿಹಾ. ೦೦೯). ೩. ಆರತಿ ಮಾಡಿಸು ; ನೀರಾಜನ ಎತ್ತಿಸು : ರಂಭಾಸ್ತ್ರೀಯ ಕೀಳ್ಪಡಿಸುವ ವಧುನಿಕುರುಂಬದ ಮುತ್ತಿನಾರತಿಯ ಮೊಂಬರಿಪಾಣದಿಂ ಬೆಳಗಿಸಿ (ಬೋಹಿತ. ೪೦-೫೩). ೪. ಶೋಭಿಸುವಂತೆ ಮಾಡು : ಜಗತ್ತನ್ನು ಬೆಳಗಿಸಲು ಒಬ್ಬ ಸೂರ್ಯ ಬೇಕು ; ಬದುಕನ್ನು ಬೆಳಗಿಸಲು ಒಂದು ಪುಸ್ತಕ ಸಾಕು! (ಶಿಶಾಕ. ೨೪) ; ಸಂಗೀತ . . . ಮದುವೆ

ಮುಂಜಗಳಲ್ಲಿ ಮಂಗಳಮಂಟಪವನ್ನು ಬೆಳಗಿಸುವುದು (ಜಗಮಾ. ೬೨). **ಬೆಳಂಗಿಸು :** ೧. ಭೃಂಗಕುಲನೀಲಾಳಕಂಗಳ ಸಭಂಗಳ ಬೆಳಂಗಿಸುವ ಮಧುರವಚನಂಗಳರುಣಪ್ರವಾಳಂಗಳ ನಖಂಗಳ ಲತಾಂಗಿಯರಿನಿಪ್ಪ ಪಣ್ಯಾಂಗನಾಜನಮೆಸೆದುದು (ಶಬರ. ೪-೪೦). ℗ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. [ಬೆಳಗು₂ + — ಇಸು₃]

**ಬೆಳಗು₁**, ಬೆಳಂಗು, ಬೆಳಕು₁ (ಕ್ರಿ). ೧. ಹೊಳೆ ; ಪ್ರಕಾಶಿಸು : "ಬೆಳಗು – ಕಾಂತೌ" (ಶಮದ) ; ಜಲದದ ನೆಬಲುಂ ಪರಮುಂ ವಿಲಾಸಮುಂ ಬೆಳಗುವುದಿತ ವಿದ್ಯುಲ್ಲತೆಯುಂ ನೆಲಸವು (ಕವಿರಾ. ೩-೯೯) ; ಹರಿ . . . ನುಡಿದಂ . . . ಸಭಾಸದನಂ ತೊಳಗಿ ಬೆಳಗೆ ದಂತಪ್ರಭೆಗಳ್ (ಹರಿವಂ. ೯-೩೪) ; ತೊಳತೊಳಗಿ ಬೆಳಗುವ ತನುಚ್ಛವಿಯ . . . ವರಕುಮಾರನ ಕಂಡು (ಸಂಕರ. ೦೪-೩೩). ೨. ದೀಪ, ಬೆಂಕಿ ಮೊದಲಾದುವುಗಳನ್ನು) ಹೊತ್ತಿಸು ; ಪುಟ ಮಾಡು ; ಹಚ್ಚು : ಬೆಳಗುವ ಸೊಡರೊಳ್ಪೊಡಂ ಬೆಳಗಿ ಪಲಕೊಂಡು ಪೋಗೆಯುಂ ಕುಂದದೆ ಪಜ್ಜಳಿಸುವವೊಲ್ . . . ತವದಿತ್ತು ಮೆಚ್ಚಿವನಿಚ್ಚವಿಬೆಡಂಗಂ (ಗದಾಯು. ೦-೩೦) ; ಬೆಳಗಪ್ಪ ದಾವದಾಗಳ್ ಸೊಡರ್ಗುಡಿಗಳ ಬೆಳಗಿ ಪೂಜೆಗೆಯ್ವರೆ ದೀಪಾವಳಿಯೆಂಬುದು (ಸಮಶ. ೨-೪೫). ೩. (ಆರತಿ, ನೀರಾಜನ ಮೊದಲಾದುವುಗಳನ್ನು) ಎತ್ತು ; ನಿವಾಳಿಸು : ನೋಟವೇ ಬೆಳಗಿದಾರತಿ ಶಂಕರಂಗಲ್ಲಿ (ಶಾಂಕ. ದೀ. ೨೬೨-೫) ; ಏಕಾರತಿಯ ನೋಡುವ ಬನ್ನಿ ನಮ್ಮ ಲೋಕನಾಥನ ಸಿರಿಪಾದಕ್ಕೆ ಬೆಳಗುವ (ಪುರಂದ. ೦-೨೨೬ ಅಪಃಪ್ರಭಾ) ; ಓಣಿಯಿಕ್ಕೆಲದಲಿ ದೊರೆವೆಣ್ಣುಗಳು ಮುತ್ತುಮಾಣಿಕದಾರತಿ ಬೆಳಗಿ ಕಾಣಿಕೆಯಿತ್ತು ಕೆಯ್ಮುಗಿದರು ಹರಿನೀಲವೇಣಿಯ ಮೋಡಿ (ಮೋಹತ. ೨೪-೦೬). ೪. ಶೋಭಿಸು ; ಮೆರೆ ; ವಿಜೃಂಭಿಸು : ಬೆಳಗುವುದಿಂದ್ರಲೋಕದೊಳಗಯ್ಯನ ಮಾ[ತನಲೆ]ಮ್ಮ ಸಾಹಸಂ ಬೆಳಗುವುದೀ ಧರಾವಳಯದೊಳ್ (ಜಂಬಾ. ೬-೦೯) ; ನೊಸಲೊಳಿಂಬಿಸಿದ ವಿಭೂತಿಯ ಬೊಟ್ಟು ಬೆಳಗುತಿರೆ (ಇಹರ. ದೀ. ೩೨-೯) ; ಮುನಿವರನು ಶಾಂತಾದೆ ವಿಸಹಿತಾ ಧರಣಿಪನ ಭವನದಲಿ ಬೆಳಗಿದನಧಿಕತೇಜದಲಿ (ಕೊರಟಾ. ೦-೫-೫೯). ೫. ಪ್ರಕಟಗೊಳಿಸು ; ಪ್ರಚಾರಮಾಡು : ಬೆಳಗುವೆನಿಲ್ಲಿ ಲೌಕಿಕಮುನಲ್ಲಿ ಜಿನಾಗಮಮಂ (ಜಂಬಾ. ೦೯-೬೦); ಅತ್ತಿಮಬ್ಬೆ ಜಿನಶಾಸನಮಂ ಬೆಳಗುತ್ತಮಿರ್ದಪಳ್ (ಅಜಿತ. ೦-೬೯). ೬. (ಲೋಹ, ಗಾಜು, ಮುಂತಾದವುಗಳಿಂದಾದ ಉಪಕರಣಗಳನ್ನು) ಮೆರುಗು ಬರುವಂತೆ ತೊಳೆ ; ಹೊಳೆಯುವಂತೆ ಉಜ್ಜು : ಬೆಳಗಿದ ಮಣಿದರ್ಪಣಮಂ ತಿಳಿದ ಸರೋವರಮುನಿಟಿಸಿ ನಿರ್ಮಳಮದೆ ನಿರ್ಮಳತರಮಾಯ್ತು ಜಗತೀತಿಳಕನ ನೆಗಳ್ದಜಿತಜಿನನ ಚಿತ್ರಮುದಾತ್ತಂ (ಅಜಿತ. ೬-೫೬) ; ಉಪಾಧ್ಯಾಯರೋದಿಸಿ ಕೈಗನ್ನಡಿಯುಂದದಿಂ ಬೆಳಗುಗಂದಂದಿಂಗೆ ಮಚ್ಚಿತ್ತಮಂ (ಅರಕಿ. ೦-೫); ಹಿತ್ತಾಳೆಪಾತ್ರೆಗಳನ್ನು ಬೆಳಗುವಾಗ ಹುಣಸೆ ಹಣ್ಣನ್ನು ಉಪಯೋಗಿಸಬೇಕು (ರೂಢಿ). ೭. ತಾಪವುಂಟಾಗು ; ಬಿಸಿ ತಟ್ಟು : ಪೊಸವೇಟಕಾರ್ತಿಯರ ಬಿಸುಸುಯ್ಯೊಳ್ ಬೆಳಗಿದುದೆಂಬಿನಮೂಗಳದೇಂ ಕೊರಗಿದುದೊ ಕುಮುದಿನೀವಿಸ್ತಾರಂ (ಕಾದಂಬ. ೦೬೪). ೮. (ಅಲಂ) ಚುರುಕುಗೊಳಿಸು ; ತೀಕ್ಷ್ಣಗೊಳಿಸು : ಇದಿರೆನ್ನ ಹಳಿವರು ಮತಿಯ ಬೆಳಗುವರು (ಸರ್ವಜ್ಞ. ೬-೨೨); ಗ್ರಂಥಗಳು ಮನಸ್ಸಿಗೆ ಮುಟ್ಟುತ್ತವೆ . . . ಬುದ್ಧಿಯನ್ನು ಬೆಳಗುತ್ತವೆ (ಗ್ರಂಥಾಲ. ೪). **ಬೆಳಂಗು :** ೧. ಕಪೋಲಯುಗಂ ಬೆಳಂಗಿ ನುಣ್ಪಡೆ (ಚಂದ್ರಚು. ೪-೯). ೯. ಒಪ್ಪು ; ಅಂದವಾಗಿರು : ಪಲಉಂ ಪೂಗಿಡಂಗಳಿಂ ಬೆಳಂಗುವ ಧ[ರ್ಮ] ಶೋಂಟವಮಂ . . . ಕೊಟ್ಟು (ಶಾಸ. IV, ೨೬೬-೯೮ ; 1410). ℗ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಬೆಳಕು₁ :** ೧. ಘೃತವಿದ್ದಂತೆ ಉನ್ಮತ್ತದ ರಸಕ್ಕೆ ಬಾಜು ಬಿಡುವಂತೆ ರಸವಿದ್ದಂತೆ ಬೆಳಕುವ ಕಾಶವ ಗಳಿಸುವನಂತೆ ಇಂತೀ ರಸಿಕವನಾರು ಬಲ್ಲರು (ಮೋಹಕೂ. ೫೯-೨೨೦). [ದೇ.॥ ತಮಿ. ವಿಳಜ್ಕು, ವಿಳಕ್ಕು ; ಮಲ. ವೆಳುಕ್ಕ, ವಿಳಕ್ಕು ; ತುಳು. ಬೆಳಗು ; ಕೊಡ. ಬೊಳೀ ; ತೆಲು. ಬೆಳಗು, ಬೆಳಂಗು, ಬೆಳುಕು, ಬೆಳ್ಕು, ವೆಲುಗು, ವೆಲುಂಗು ; ಕೋತ. ವೆಳ್ಕ್]

**ಬೆಳಗು₂**, ಬೆಣಕು, ಬೆಳಕ, ಬೆಳಕು₂ (ನಾ). ೧. ಹೊಳಪು ; ಕಾಂತಿ : "ಪ್ರಕಾಶಃ, ಆಲೋಕಃ, ಉದ್ಯೋತಃ — ಈ ೩ ಬೆಳಗು" (ಶಬಾಮ. ೦೨-೬೬); ಕೊಟ್ಟ ಮಾಣಿಕಂಗಳ ಬೆಳಗಿಟ್ಟಳಂ ತನಗೊಡಂಬಡೆ (ಜಂಬಾ. ೪-೪೦). ೨. ಸೂರ್ಯೋದಯದಿಂದ ಸಾಯಂಕಾಲದ ವರೆಗಿನ ಅವಧಿ ; ಸೂರ್ಯನು ತನ್ನ ಪ್ರಕಾಶವನ್ನು ಬೀರುವ ಕಾಲ ; ದಿವಸ : ಬೆಳಗಿನೊಳಂ ಕಾಣದು ನಿಶಿಯೊಳ್ ಕಾಣ್ಬುದು ಪೆಗ್ಗಣಕ್ಕೆ (ರಸರ್ನ. ೦-೦೦೬) ; ಚೋರಂಗೆ ಬೆಳಗು ಗುಣವಪ್ಪುದೆ (ಕಾವ್ಯಸಂ. ೨೬೦-೪೫). ೩. ಸೂರ್ಯ, ದೀಪ ಮುಂತಾದುವುಗಳ ಪ್ರಕಾಶ : ಅನಿತರ್ಕೆ ಬೆಳಗಿನಂಕುರವಾದುದು (ಶಬ್ದಮ. ೬-೨) ; ಸೊಡರು ಬೀದಿಗೆ ಸುಳಿಯಲೆಲ್ಲಿಯ ಬೆಳಗು (ಕುಮಾವ್ಯಾ. ೦೩-೪೬) ; ಹುಲಿಯ ಹುಲ್ಲೆಯ ನೇಹ ಬಿಜುಗತ್ತಲೆಯ ಬೆಳಗಿನ ಮೈತ್ರಿ . . . ಇರ್ದುದು ಬನದೊಳಾ ಮುನಿಯ (ಕೊರಟಾ. ೦-೫-೪೩). ೪. (ಅಲಂ) ಅರಿವು ; ಜ್ಞಾನ ; ತಿಳುವಳಿಕೆ : ಬೆಳಗಿನೊಳಗೆ ಬೆಳಗಾಗುವ ಚಿನ್ಮಯ (ಉದ್ಭಟ. ೭-೦೦೦) ; ಬೆಳಗ ನುಂಗಿದ ಗುರುವಿನೊಳಗ ನುಂಗಿದ ಶಿಷ್ಯ (ಸರ್ವಜ್ಞ. ೦೦೩). 'ಬೆಳಗುವಡೆ' ಪರಾ. **ಬೆಣಕು :** ೧ 'ಬೆಣಕೇಲು' ಪರಾ. **ಬೆಳಕ :** ೫. ಶೋಭೆ ; ಅಂದ : ತಿಳಿಗೊಳದಿಂ ಬೆಳಗೆಯ್ವಂಗಿಳಿವಿಂಡಿಂ ಪೂತ ಪುಷ್ಪವನದಿಂ ವನದಿಂ ತೊಳಪ ಕಲಿದೇವನಿಳಿಯದ ಬೆಳಕದಿನೀ ಯೋರುಪಾಯಿ ಸೊಗಯಿಸುತಿರ್ಕ್ಕುಂ (ಶಾಸ. IX-i, ೬೨೨-೨೦ ; 1105). **ಬೆಳಕು₂ :** ೩. ಸಂದ ನಿಶೆಯೊಳಗೂಟವೇವೆನಲಿರ್ದ ಬೆಳಕೇಕೆ ಎಸಲು (ಸಂಕರ. ೦೭-೦೦೬) ; ಆವರು . . . ತೆರಳದರು ಕಪ್ಪಾಗುವ ಕತ್ತಲೆಯೊಳಗೆ ಕೈಗೊಳ್ಳಿಗಳ ಬೆಳಕಿನಲಿ (ಕೊರಟಾ. ೩-೦೦-೩೦) ; ಜ್ಞಾನದೀಪದ ಬೆಳಕಿಲಿ ಓಡಾಡಬೇಕು (ಪುರಂದ. ೦-೦೬೪-೫). ೬. ದೀಪ ; ಹಣತೆ : "ಬೆಳಕನೆ ದೀಪಂ" (ರಸ್ಸಕಂ. ೫).

ಬೆಳ್ಳಂಬೆಳಗು, ಬೆಳ್ಳಂಬೆಳಕು (ದ್ವಿರುಕ್ತಿ) : ಮಬ್ಬುಗತ್ತಲೆಯಾಗಿದ್ದರೂ ಕೂಟದ ತುಂಬೆಲ್ಲ ವಿದ್ಯುದ್ದೀಪದ ಬೆಳ್ಳಂಬೆಳಗು ಪಸರಿಸಿತ್ತು (ಮುಂಗಾರು. ೦೦೦) ; ಇಲ್ಲದಕೆ ಅಳತ ಬೆಳ್ಳಂಬೆಳಕು ಮುಸ್ಸುಕಿತ್ತು ಗುಪ್ತವಿರಿಸಿ (ಅರಳು. ೨೨೬-೦೨). **ಬೆಳಕಿಗೆ ತರು** = ಪ್ರಕಾಶಕ್ಕೆ ತರು; ಪ್ರಸಿದ್ಧಪಡಿಸು : ನಮ್ಮನು ತಂದೆ ಬೆಳಕಿಗೆ ತಂದವರು ಮುಂದೆ (ಕಂಜಾಕ. ೨೨-೪೬). **ಬೆಳಕು ಚೆಲ್ಲು** = ೧. ಪ್ರಕಾಶವನ್ನು ಬೀರು, — ತುಂಬು : ಆ ದೀಪವು ಕೋಣೆಯ ತುಂಬ ಬೆಳಕು ಚೆಲ್ಲಿದೆ (ರೂಢಿ). ೨. ಸ್ಪಷ್ಟಗೊಳಿಸು ; ಸ್ಪಷ್ಟೀಕರಿಸು : ಇಲ್ಲಿ ಕೂಡಿಸಿರುವ ಘಟನಾವಳಿಗಳೂ ದಂತಕಥೆಗಳೂ ಈ ಸಂಗೀತರತ್ನಗಳ ಹಿರಿಮೆ . . . ಇವುಗಳ ಬಗ್ಗೆ ಬೆಳಕು ಚೆಲ್ಲುತ್ತವೆ (ಸಂಗೀತ. VI, ೩೬೦೪). **ಬೆಳಕು ಬೀರು** = ಬೆಳಕು ಚೆಲ್ಲು ೨ : ಈತನ ಕಡೆಯ ಕಾಲದ ವರೆಗಿನ ಶಾಸನಗಳೆಲ್ಲವೂ ಕೇವಲ ದಾನದತ್ತಿಗಳನ್ನು ನಿರೂಪಿಸುತ್ತಿವೆಯೇ ಹೊರತು ಈತನ ರಾಜಕೀಯಚರಿತ್ರೆಯ ಮೇಲೆ ಬೆಳಕುಬೀರುವುದಿಲ್ಲ (ಹೊಯ್ಸ. ೫೬). **ಬೆಳಕು ಹರಿ** = ಬೆಳಗಾಗು ; ಸೂರ್ಯೋದಯವಾಗು : ಬೆಳಕುಹರಿದೊಡನೆಯೇ . . . ಅವರೆಲ್ಲರೂ ಹೊರಟುಹೋದರು (ಯೋಗಿಪು. ೬೩). **ಬೆಳಗಿನ ಜಾವ** = ಬೆಳಗಿನ ಸಮಯ ; ಪ್ರಾತಃಕಾಲ : ಬೆಳಗಿನ ಜಾವ ಪೂರಾ ಚಳಿ ಆಗ್ತದೆ (ಬುಲಬು. ೨೫೫). **ಬೆಳಗು ಮಾಡು** = ಶುಭ್ರಗೊಳಿಸು ; ಸ್ವಚ್ಛ ಮಾಡು : ದರ್ಪಣ ನಸುಮಾಸೆ ಬೆಳಗಿ ಬೆಳಗುವಾಡಿ ನೇರ್ಪುವಡಿಸಿ ನೋಡುವಂತೆ ಒಪ್ಪುವ ಸುಕವಿಗಳಿವಚ್ಚೊಳಗೊಂದರೆತಪ್ಪಿರೆ ತಿದ್ದಿ ಮೆಚ್ಚುವುದು (ವರ್ಧಮಾ. ೦-೪೦). **ಬೆಳ್ಳಂಬೆಳಗೂ** = ರಾತ್ರಿಯೆಲ್ಲಾ ;

ಬೆಳಗಾಗುವ ವರೆಗೂ : ತಲೆನೋವಿನಿಂದ ಬೆಳ್ಳಂಬೆಳಗೂ ನಿದ್ರೆಯೇ ಬರಲಿಲ್ಲ (ರೂಢಿ). [< ಬೆಳಗು$_1$. / ತಮಿ. ಮಲ. ವಿಳಕ್ಕು; **ಕೊಡ.** ಬೊಳಕೀ ; **ತೆಲು.** ಬೆಳುಕು, ಬೆಳ್ಕು. ವೆಲುಗು ; **ಕೋತ.** ವೆಳ್ಕ್]

**ಬೆಳಗುಂಬೊಳ್ತು**, ಬೆಳಗುಪೊಳ್ತು (ನಾ). ಬೆಳಗಿನ ಕಾಲ ; ಪ್ರಾತಃ ಕಾಲ : ಇಂದು ಬೆಳಗುಂಬೊಳ್ತು . . . ಸನ್ನಗ್ರಜಂ ನಿನ್ನನ್ನರುಹಿದನ್ ನನಗೆ (ಶಬ್ದಾಂಗ. ೨೪-೬೪೩). **ಬೆಳಗುಪೊಳ್ತು :** ಮನೋಹರಂ ಮೋಹನ ಮಯೂರಮಿಥುನಂ ಬೆಳಗುಪೊಳ್ತಿನೊಳೆ . . . ಪಾರಿದಪವೊಲ್ಪೊಯ್ಯಾರದಿಂ ಗಿರಿನೆತ್ತಿಗೆ (ಶಬ್ದಾಂಗ. ೩೩-೧೪೩೯). [ಬೆಳಗು$_2$ + ಪೊಳ್ತು (< ಪೊಬ್ತು)]

**ಬೆಳಗುಜಾವ** (ನಾ). = ಬೆಳಗುಂಬೊಳ್ತು : ಬೆಳಗುಜಾವದ ಬಲುನಿದ್ರೆಗೆ ಮನಮೆತ್ತೈಸಿದು ಕೊಲುವರನಱಿಯದೆ (ಕುಸಾ. ೧೩-೬) ; ಗುರುಸಮರ್ಚನೆಗರಲ್ದರಲೆಂದು ಕುಸುಮಕರಂಡಕವಂ ಕೊಂಡು ಬೆಳಗುಜಾವದೊಳೆಳ್ದು ಜವದಿಂ ನಡೆತಪ್ಪರ್ಗಳ್ (ವ್ರ.ಕಾ. ೨೬-೩೩ ಬ) ; ಬೆಳಗುಜಾವ ಎದ್ದಾಗ . . . ಮನಕೊಂದು ಪ್ರಸನ್ನತೆ ಬಂದಿತ್ತು ಅವಳಿಗೆ (ಶಿಲಾ. ೩೨).
[ಬೆಳಗು$_2$ + ಜಾವ$_1$]

**ಬೆಳಗುಪೊಳ್ತು** 'ಬೆಳಗುಂಬೊಳ್ತು' ನೋ.

**ಬೆಳಗುಪಡೆ** (ಕ್ರಿ). ಜ್ಞಾನವನ್ನು ಪಡೆ ; ಅರಿವನ್ನು ಹೊಂದು : ಬೆಳಗುಪಡೆಯಲೊಡಂ ಕಣ್ಬ ನಿರ್ಮಲದೃಷ್ಟಿಯಂತೆ (ಪ್ರ.ಚಂ. ೦೦೩-೭).
[ಬೆಳಗು$_2$ + ಪಡೆ$_1$]

**ಬೆಳಗೆಯ್** 'ಬೆಳಗೆಯ್' ನೋ.

**ಬೆಳಗ್ಗೆ** 'ಬೆಳಗೆಯ್' ನೋ.

**ಬೆಳಗ್ಗೆ**, ಬೆಳಿಗ್ಗೆ, ಬೆಳಿಗ್ಯೆ (ಅ). ಮುಂಜಾವಿನಲ್ಲಿ ; ಪ್ರಾತಃಕಾಲದಲ್ಲಿ : ಬೆಳಗ್ಗೆ ಹೊಲೆಯರೆಲ್ಲಾ ಹೊರಟು . . . ಮನೆಮನೆಗೆ ಹೋಗಿ ರಾಗಿ ಬತ್ತ ವಸೂಲು ಮಾಡುತ್ತಾರೆ (ಪಕ್ಷಿ. ೬೬). **ಬೆಳಿಗ್ಗೆ :** ಒಂದು ದಿನ ಬೆಳಿಗ್ಗೆ, ಒಂದು ದಿನ ಸಂಜೆಗೆ . . . ಹೀಗೆ ಅನಿಯಮಿತವಾಗಿ ಊಟ ಮಾಡಬಾರದು (ಮುಂಜಾವು. ೪-೩೩). **ಬೆಳಿಗ್ಯೆ :** ಆ ಬೆಳಿಗ್ಯೆ ಅರುಣೋದಯದ ಸಮಯದಲ್ಲಿ (ರಾಷ್ಟ್ರ. ೪). [<ಬೆಳಗು$_1$. ಇದು ಶಬ್ದವು 'ಬೆಳಗಿಗೆ' ಎಂಬ ಚತುರ್ಥಿ ವಿಭಕ್ತ್ಯಂತ ರೂಪದಿಂದ ಸಂಕ್ಷಿಪ್ತಗೊಂಡು ಅವ್ಯಯವಾಗಿದೆ]

**ಬೆಳಚವಾಡಿ** (ನಾ). ಒಂದು ಊರಿನ ಹೆಸರು : ಅರಸ ಸರೆ ನಾಡೊಳೆ ಬೆಳಚವಾಡಿಯ ಮಹಾಜನಕ್ಕೆ ನೆಲ್ಲಕ್ಕಿಯ ಬಟ್ಟನ್ (ಎಕ. III (R), ಗುಂಡ್ಲುಪೇ. ೪೩-೩; 10ನೆಯ ಶತ). [ಬೆಳಚು$_0$ + <ಪಾಡಿ$_2$]

**ಬೆಳಡಕಿಲು** (ನಾ). ಒಂದು ಬಗೆಯ ಸಸ್ಯ : "ಕುಮಾರಿ—ಲೋಯಿಸರ. . . ಬೆಳಡಕಿಲು" (೬ಕಾ. ೩೩). [ಬೆಳ್$_1$ (< ಬಿಳಿದು) + ಅಡಕಿಲು$_2$]

**ಬೆಳತಿಗೆ** 'ಬೆಳಂತಿಗೆ' ನೋ.

**ಬೆಳತಿಗೆಗಣ್** 'ಬೆಳಂತಿಗೆಗಣ್' ನೋ.

**ಬೆಳತಿಗೆಪಡೆ** (ಕ್ರಿ). ಹೊಳಪನ್ನು ಪಡೆ ; ಕಾಂತಿಯನ್ನು ಹೊಂದು : ಎಳೆಮಿಸುಣಿಸಕದ ಪಾಡಿಮದೆಳೆದೆಱಿಯಂ ತಾಳ್ದ ಗಗನಲಕ್ಷ್ಮಿಯ ತೆಱದಿಂ ತಿಳಿಕಾಮಿಶಿ ಸೊಗಸಿರ್ದಳು ಬೆಳತಿಗೆಪಡೆದಿರ್ದ ಮೆಯ್ಯ ಚೆಲುವಿಂದಾಗಳ್ (ಪುಷ್ಪದ. ೩-೩). [ಬೆಳತಿಗೆ (<ಬೆಳಂತಿಗೆ) + ಪಡೆ$_1$]

**ಬೆಳತಿಗೆಬೆಳಗು** (ನಾ). ಉಜ್ವಲವಾದ ಬೆಳಕು ; ಬೆಳ್ಳನೆಯ ಬೆಳಗು : ಇದಲ್ಲಿಯುತ್ಕಟದ ಕಂಪಿದಲ್ಲಿಯ ಬೆಳತಿಗೆವೆಳಗಿದಲ್ಲಿಯುಚ್ಚ್ರಯಿಯಾನಂದಂ ಬಂದು ನಿಂದಪುದು (ಸಂಶರ. ೦೨-೦೦೩) ; ತಿಂಗಳ್ ಬೆಳತಿಗೆವೆಳಗಿನೊಳಂ ಗಡಲೆಸೆವಂತೆ (ಧರ್ಮನಾ. ೧-೯೬). [ಬೆಳತಿಗೆ (<ಬೆಳಂತಿಗೆ) + ಬೆಳಗು$_2$]

**ಬೆಳತೂರ್** (ನಾ). ಒಂದು ಊರಿನ ಹೆಸರು : ಇದರ್ಕೆ ಸಾಕ್ಷಿ ಬೆಳತೂರಾ ಮಹಾಜನವುಂ (ಎಕ. X, ಕೋಲಾರ. ೦೦-೦೦ ; 753) ; ಕಟಲೆನಾಡ ಬೆಳತೂರ ಪಡುವಣದೆಸೆಯ ಮೊಱಡಿಯೊಳ್ (ಎಕ. III, ಮಂಡ್ಯ. ೪೦-೧೦; ೯೬೦). [ಬೆಳತ$_0$ + ಊರ್]

**ಬೆಳದಲೆ** (ನಾ). ಒಂದು ಬಗೆಯ ಸಸ್ಯ : ಜ್ವರಾತಿಸಾರಕ್ಕೆ ಬೆಳದಲೆಯನಕ್ಕ ಮೇಣರಿದಳವುಂ ನೀರಕ್ಕಿಗಚ್ಚಿನಿಂದರೆ ಕಳದೊಳ್ಕಳಿಗಂ ಉಚ್ಚ್ವವ ಜ್ವರವುಂ ಫಳಿಲನೆ ತಾನೆರೆಯಲಾಕ್ಷಣ ಉಪಶಮನಂ (ಗೋವೈದ್ಯ ೦೯೯-೩).[?]

**ಬೆಳದಿಂಗಳು** 'ಬೆಳ್ದಿಂಗಳ್' ನೋ.

**ಬೆಳಪ** 'ಬೆಳರ್$_1$' ಪರಾ.

**ಬೆಳಪು** 'ಬೆಳ್ಪು$_1$' ನೋ.

**ಬೆಳಬೆಂಜನ** (ನಾ). (?) : ಸುದೂತಿಯಸೇಗೆಯುದ್ದಂ ಬಿಡಲಾಱದೆ ನೀಂ ಬೆಳಬೆಂಜನನಾಗಿ ಭೋಗಿಸುವೆನೆಂದು ಕೊಕ್ಕಬಗುದಿದ್ದೆ (ಧರ್ಮಾಮೃ. ೭-೨೨೯) ; ವಿಜ್ಞಾನಹೀನರುಂ ದುರ್ಗತಿಭಾಜನರುಂ ಅಘಸಮೇತರುಮವಿಚಾರಿಗಳು ಮಪ್ಪ ದುರ್ಮತಿಗಳಂ ಕಂಡು ಬೆಳಬೆಂಜನನಾಗಿ (ಧರ್ಮಾಮೃ. ೦೦-೩೩). [?]

**ಬೆಳರ್$_1$** (ಕ್ರಿ). ಬೆಳಪ (ವರ್ತಕೃ). ೧. (ರಕ್ತಹೀನತೆಯಿಂದ) ಬೆಳ್ಳಗಾಗು : ಬಿಳಿಚಿಕೊಳ್ಳು : "ಬೆಳರ್—ಧಾವಲ್ಯೇ (ಬಿಳುಪಾಗು, ಕಾಂತಿಯಾಗು)" (ಶಮಾ) ; ಸುರ್ಕುಗಾಮುರುಳಿಗುರುಳ್ ನಸುಸುರ್ಕಿದ ಕುಚಚೂಚುಕಂ ಬೆಳರ್ತಧರಂ (ಆದಿಪು. ೦೦-೦೯೩) ; ಶಶಿಕಾಂತಮುಕುರದಂತಿರೆ ಶಶಿಮುಖಿಯ ಕದಂಪುಗಳ್ ಬೆಳರ್ತುವು (ಶಂಖಪಾ. ೪-೩); ನೀರುಣದ ಮುಗಿಲ್ಗಳ್ ಬೆಳರ್ತು ಬೆಂಡಾದುವು (ರಾಜಶೇ. ೩೩-೦೨). ೨. ಬೆಳಕು ಬೀರು ; ಪ್ರಕಾಶವನ್ನುಂಟುಮಾಡು : ದೀವಳಿಗೆಯ ಕಟ್ಟಲೆಯೊಳ್ ದೀವಿಗೆಗಳ್ ಬೆಳಪ ತೆಱದೆ . . . ಬೆಳಗುತಿರ್ಪರ್ಜೈನರ್ (ಸಮಶ. ೬-೬೬) ; ಸುಲಲಿತಮಾಗಿ ನೀಳ್ದ ತುಱುಗಿರ್ದಮೆಗಳ್ ತಮಮಂ ಬೆಳರ್ಪ ಕಣ್ಮಲರ್ಗಣೆಯಂದಮಂ ನೆಱೆಯೆ ಪೋಲ್ತಿರೆ (ಧರ್ಮಾಮೃ. ೭-೮೪೬). ೩. ಬೆಳ್ಳಗಾಗಿಸು ; ಬಿಳುಪೇರಿಸು : ಮಲ್ಲಿಗೆವಳ್ಳಿಗಳ್ ಲಸನ್ಮಂಜರಿಯಂ ಬೆಳರ್ತಸೆದು ಬಂದುದು ಚೈತ್ರಂ (ಉದ್ಭಟ. ೪-೩). ೪. ಹೊಳೆ; ಮಿಂಚು : ಅಲರ್ದ ಸಂಪಗೆಯಲರಂತೆ ಬೆಳರ್ತ ಬಣ್ಣಂ ಗುಣಾರ್ಣವಂಗೆ ಮಾಡಿದ ಬಣ್ಣದಂತೆ ಸೊಗಯಿಸಿ ಬಳೆದು (ಕುಶಕಾ. ೦-೦೯೩ ಬ).
[ದೇ.॥ ತಮಿ. ವೆಳಿಱು ; ಮಲ. ವಿಳರ್ ; ತುಳು. ಬೊಳಿರು, ಬೊಳೆರು ; ತೆಲು. ವೆಲರು]

**ಬೆಳರ್$_2$** (ನಾ). ಬಿಳಿಯ ಬಣ್ಣ ; ಬಿಳುಪು : ಬೆಳರಂ ಪೊಸಕಿಸುಪಂ ಕರ್ಪಂ ಪೊನ್ಬೊಳಪಂ ಪಳುಕಂ ಪಾಳಿಪ ನಿಮ್ಮಳತನುವಿನುಗಿಂದುಬಿದೆಸುವ ಮೊಗಮೈದುಂ (ಅನ್ನಂದೇ. ೬-೩). 'ಬೆಳರ್ವಣ್ಣ' ಪರಾ. ೨. ಹೊಳಪು ; ಕಾಂತಿ ; ಪ್ರಕಾಶ : ಕರಿಮುಗಿಲ ಸೊಂಪಡರ್ದ ಸೋಮರ್ಮುಡಿ . . . ಕೂರ್ಮುಗುಚರಣಾಗ್ರಿಮ ಬೆಳರ್ಮುಸುಂಕಿದ ಸೆಳ್ಳುಗುರ್ಮನೋಹರಮಾಗೆ ಪರಪೆಯೆಸೆದಳು (ಶಾಂತೀಶ. ೭-೦೦); ಬೆಳರ ಬೀಱುತಿಹ ದುಂಡುಮುತ್ತಿನ ಚೌಕುಳಿ (ಶೃಂಗಾರ. ೭-೭೯).

**ಬೆಳರ್ಮಾಡು** = ಬಿಳಿಚಿಕೊಳ್ಳುವಂತೆ ಮಾಡು ; ನಿಸ್ತೇಜಗೊಳಿಸು : ವೈರಿವಾರವನಿತಾವದನಾಂಬುರುಹಂಗಳಂ ಬೆಳರ್ಮಾಡದೆ . . . ಸಂಧಿ ಮಾಡುವನೆ ಪಾಂಡವರೊಳ್ ಫಣಿರಾಜಕೇತನಂ (ಗದಾಯು. ೩-೪೪).
[< ಬೆಳರ್$_1$./ತಮಿ. ವೆಳಿಱು ; ತುಳು. ಬೊಳ್ಪರೆ; ತೆಲು. ವೆಲರು]

**ಬೆಳರಿಸು** (ಕ್ರಿ). ಬಿಳುಪಾಗಿಸು ; ಬೆಳ್ಳಗೆ ಮಾಡು : ಸಿರಿವನೆಯಂ ಸೊದೆಯ ತೊಡೆಪದಿಂ ಬೆಳರಿಸಿ ಚಪ್ಪರಮಂ ಬೆಳ್ವಟ್ಟೆಗಳಂ ಪರುಶವಿಸಿದರಚ್ಚಮುತ್ತಿನೊಳ್ಗೊಂಚುಗಳಂ (ಶಕಾ. ೪-೨೬).
[ಬೆಳರ್$_2$ + — ಇಸು$_3$]

**ಬೆಳರ್ಗಣ್** (ನಾ). ಬಿಳುಪಾದ ಕಣ್ಣು ; ಶುಭ್ರವಾದ ಕಣ್ಣು : ಬೆಳರ್ಗಣ್ಕಿಂಪಡರ್ದಶಬ್ರುಗಿಳಿತರ್ಪಪೊಲೆಸಗೆ ಕಂಡು (ವ್ರ.ಕಾ. ೦೦-೦೦೩).
[ಬೆಳರ್$_2$ + ಕಣ್]

**ಬೆಳರ್ಗೆಂಪು** (ನಾ). ಕಾಂತಿಯುಕ್ತವಾದ ಕೆಂಬಣ್ಣ ; ಕಡುಗೆಂಪು : ಕಣ್ಗಳೊಳ್ ಕಲಂಕಿದ ಬೆಳರ್ಗೆಂಪು ಬೆಣ್ಗೆವರೆ (ಆದಿಪು. ೦೨-೩೬); ವಕ್ಷ

ಬಿಂಬಾಧರಂ ಬೆಳರ್ಗೆಂಪಂ ಸ್ಮಿತಕಾಂತಿಯಿಂ ತಳೆದುದಿಲ್ಲ (ಮಲ್ಲಿಪು. ೯-೯); ಕಳಂತಳದ ಕಾಂತಿ . . . ಬೆಳರ್ಗೆಂಪಿನುಗುರ್ವೆರಲ ಕಾಂತಿಗಳ್ ತಿಂತಿಣಿಸಿ (ಕನ್ನಡ. ೩-೩). [ಬೆಳರ್$_2$ + ಕೆಂಪು$_1$]

**ಬೆಳರ್ಚು** (ಕ್ರಿ). (ಅಲಂ) ಶೋಭೆಗೊಳಿಸು : ಈ ಜಗತಿಯನಾಳ್ವ ರಾಜನ್ಯವನೊಳ್ಪಸದಿಂ ಜಗವುಂ ಬೆಳರ್ಚಿದಂ (ಕಳಪ. ೨-೬೦). [ಬೆಳರ್$_2$ + -ಚು$_1$]

**ಬೆಳರ್ದುಟಿ** (ನಾ). ಬೆಳ್ಳಗಾದ ತುಟಿ ; ಬಿಳಿಚಿಕೊಂಡ ತುಟಿ : ಬೆಳ[ಕಾಂ. ಳು]ರ್ದುಟಿ . . . ಅಳವಳಿದಂಗವೆಸೆಯೆ ಸುರತಾಂತದ ನಳಿನಾಕ್ಷಿಯೊರ್ವಳೆಸೆದಳು (ಚಂದ್ರಸಾಂ. ೨೮-೯೦). [ಬೆಳರ್$_2$ + ತುಟಿ]

**ಬೆಳರ್ಪು** (ನಾ). ಬಿಳಿಯ ಬಣ್ಣ ; ಬಿಳುಪು : ಪುಳಿಂದರಾಜಸುಂದರಿಯರ ನೆಲೆಮೊಲೆಯ ಸಿರಿಕಂಡದಣ್ಪಿನಿಂ ಪೊರೆದು ಬೆಳರ್ಪನಾಂತ ತೆರೆಗಳೊಳಂ . . . ರಂಜಿಸುವುದು (ಕಾದಂಪೂ. ೦೦೬); ಕುಸುಮಶರನ ಪೊಸಜಸದ ಬೆಳರ್ಪು ಮುಸುಂಕಿದುದು... (ಜಯನಾ. ೯-೦೮). [ಬೆಳರ್$_2$ + -ಪು$_2$]

**ಬೆಳರ್ವೇಱು** (ಕ್ರಿ). ಬಿಳಿಚಿಕೊಳ್ಳು ; ಮ್ಲಾನವಾಗು : ಬೆಳರ್ವೇಱಿದಾ ಸ್ಫೋಜ್ಜ್ವಲಪದ್ಮಂ . . . ತಾಪದಿಂದಿರ್ದಾಱಿದಾ ಬಿಂಬಾಧರಂ (ಕುಸುಮಾ. ೦೩-೬೬). [ಬೆಳರ್ಪು + ಏಱು$_1$ (<ಏಱ್$_1$)]

**ಬೆಳರ್ಮಣ್** (ನಾ). ಬಿಳಿಯ ಮಣ್ಣು : ಬೆಳರ್ಮಣ್ಣ ಪೊಸಕಡಾಯದೊಳ್ ತುಂಬಿದ ನೀಲಿಯ ತನಿರಸದೊಂಬಂತಿರೆ ಕಳಿಂದಜೆಯ ಕರ್ಮಡುವಿನೊಂದು ಪೊಳೆಪಿಂ . . . ಕೊಳಂ . . . ಸೊಗಯಿಸಿದತ್ತು (ರಾಜಶೇಖ. ೩೨-೫೦). [ಬೆಳರ್$_2$ + ಮಣ್]

**ಬೆಳರ್ವಕ್ಕಿ** (ನಾ). ಬಿಳಿಯ ಹಕ್ಕಿ ; ಹಂಸ : ಬಾಣಾಸುರುದ್ಧರು ಸಿರಂ ಬಾಗಿ ವಂದಿಸಲು ಪಿಡಿದೆತ್ತಿ ಪರಸುತ್ತ ಬೆಳರ್ವಕ್ಕಿಯುವುಮಯಡರ್ದು (ಕಮಮೋ. ೨೮-೩೬). [ಬೆಳರ್$_2$ + ಪಕ್ಕಿ]

**ಬೆಳರ್ವಡು** (ಕ್ರಿ). ಬೆಳ್ಳಗಾಗು ; ಬಿಳುಪೇರು : ಅಡರೆ ಕವಿಲ್ಪುದೊಂದೆಡೆ ಮೃಗೋದ್ಭವದಿಂ ಬೆಳರ್ವಟ್ಟು ನಿಂದುದೊಂದೆಡೆ ಮಲಯೋದ್ಭವಪ್ರಸರದಿಂ ಕಡಿಂ . . . ಸರಸೀವಿಭಾಗದೊಳ್ (ಶಾಂತಿಪು. ೬-೨೯). [ಬೆಳರ್$_2$ + ಪಡು$_1$]

**ಬೆಳರ್ವಣ್ಣ** (ನಾ). ೧. ಬಿಳಿಯ ಬಣ್ಣ ; ಶ್ವೇತವರ್ಣ : "ಬೆಳರ್ವಣ್ಣಮೊಂದು ಧವಳಂ" (ಕಕಾ. ೦೦-೨೨೦); ಮೂವಣ್ಣಂ ಬರಿಸಿಮವರಲ್ದ ಸುತ ಹೊನ್ನೆಯ ಪೊಂಬಣ್ಣದ ಬೆಳರ್ವಣ್ಣದ ಕೆಂಬಣ್ಣದ ಕೇಸರವುಮೊಸಟ್ಗಳುಂ ಕರ್ಣಿಕೆಯುಂ (ಮಲ್ಲಿಪು. ೫-೦೫); ಇದತ್ತಂಸಂ ಕಪೋಲಂ ಕಡುಬಡವೆಸಿಕುಂ . . . ಬೆಳರ್ವಣ್ಣಂ ಮೆಯ್ಗೆ ಕೀವಿತ್ತು (ಚಾಳುಂತ. ೩೫-೬೦). ೨. ಶಿವ ; ರುದ್ರ : "ಬೆಳರ್ವಣ್ಣಂ ನೆತ್ತಿಗಣ್ಣ . . . ಸ್ಮರಹರಂಗೆ ನಾಮ" (ಕಾಶಿಂ. ೦೮). [ಬೆಳರ್$_2$ + ಬಣ್ಣ]

**ಬೆಳರ್ವಾಯ್** (ನಾ). ೧. = ಬೆಳರ್ದುಟಿ : ನಡು ಪುರ್ವು ಬಾಸೆ ಕಣ್ಗೊಂಗೆಸೆಗೆಯುನುಂಟುಮಾಟ್ಪ ಜಘನಂ ಬೆಳರ್ವಾಯ್ ಮೊಲೆಗಳ್ ಕದಂಪು ಗುರ್ವಸಿಜನೆ ನೋಡೆ (ಕುಸುಮಾ. ೯-೬೨); ಪೀರೆ ಪೊದಟ್ಟು ಪೊಂಗಿ ಬೀಗಿದ ಬೆಳರ್ವಾಯ್ . . . ತನ್ನೊಳೊಪ್ಪೆ ಸುರತಾಂತ್ಯದೊಳ್ (ರಸರ. ೦-೩೩). ೨. (ರದನಕಾಂತಿಯಿಂದ) ಬೆಳ್ಳುಪಾದ ಬಾಯಿ : ನಾಸಿಕದ ನೀಱಿಗೆ ಬೆಳರ್ವಾಯ ಭಾಗ್ಯನಿಧಿಗೆ (ಗಿಂಕ. ೩-೯೦ ಪ). [ಬೆಳರ್$_2$ + ಬಾಯ್]

**ಬೆಳಲ್**, ಬೆಳಲ, ಬೆಳಲು, ಬೆಳವಲ$_1$, ಬೇಲ, ಬೇಳ$_1$, ಬೇಳಲು (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಕಪಿತ್ಥ : ಆಮ್ರಂ ಬೆಳಲಿಂಗುಳಂ ಪನಸು ನಿಂಬಂ (ಕಾವ್ಯಸಾ. ೦೦೯೦ ಕುವಲಯ); ಗುಡದಿಂ ಬೆಳ್ಳಣ್ಣೆಯುನರೆಗುದಿಯಿಸಿ ಬೆಳೆದಿರ್ದ ಬೆಳಲ ತಿರುಳೊಳ್ ಬಟೆಕಂತದಜಿ ಸಮನಾಪ್ಪುಮಂ ಕೂಡಿದೊಡದು ಲೇಸಪ್ಪ ತುಪ್ಪವಪ್ಪುದು ಪುಸಿಯೇ (ಲೋ ೯ ಕೊ ೯ ಕ. ೬-೯೨); ಬೆಳಲನೆಟಲೊಳ್ಳಿರದುಂಪೋಗಲ್ಕೆ' ಸಲ್ಲ (ಸಮಕ. ೦೦-೬೮) ; ಅರಸೇಜಿಬಲು ಬಿಕ್ಕೆ ಬೆಳಲ್ ತಳಿರ್ತ ನಾನಾ ತರು (ದಕಂ. ೦೨-೬೯). **ಬೆಳಲ** : ಬೆಳಲ ಗರುಗಾ ಹಾರಿವಾಳ . . . ಪತ್ರೆಗಳ ನರ್ಪಿಸು ಲಿಂಗಕೆ (ಗುರುಚಾ. ೬-೦೪). **ಬೆಳಲು** : "ಕಪಿತ್ಥಮೆನೆ ಬೆಳಲುಂ" (ಮಂಗರಾ. ೩೫-೦೩); ಕದಸಿಗೆಯ ಸೊಕ್ಕನಟಿಗಂ ಪೊಡವಿಯ ಬೆಳಲಿಂಗೆ ತೊಳಸಿ ಗುಗ್ಗುಳು ಮರಿ(ಚ)ಗಳ್ (ಬಸುವ. ೨-೯೭) ; ಕಠಿಗೊಂಡ ಬೆಳಲ ಹಣ್ಣಂತೆ ಗುರುಬೋಧೆ ನೆರೆಗೊಳ್ಳಬೇಕು (ಸರ್ವಜ್ಞ. ೬೬). **ಬೆಳವಲ$_1$**: ಬೆಳವಲವು ಖರ್ಜೂರ ದಾಡಿಮ ನಿಂಬೆ (ಪದಮೋ. ೨೯-೫೦). **ಬೇಲ**: ಆಲಂ ಜಾಲ ಬೇಲಂ . . . ಬೃಹ್ಮವೃಕ್ಷಂ ಕಜಾಕ ತಜಿಯದಿಂದೊಪ್ಪುತಿರ್ದತ್ತರಣ್ಯಂ (ಗಿಂಕ. ೦-೬೨); ಬೇಲ ಸೆಳ್ಳು . . . ಪಾದರಿಯಾದಿಯಾದ ಪೆರ್ಮರಗಳ ಕಾಡೊಳ್ಳೆತರುತಮಿರ್ಪರು (ಪುಣ್ಯಾಸ್ರ. ೩-೬೩); ಪರಿವುಳದ ಪಣ್ಗಳನಾಂತು ತುಂಗದ ಬೇಲಗಳಿಪುವು (ಕಂಪಾ. ೫-೪೮). **ಬೇಳ$_1$** : "ಗಂಧಫಲಾ—ಬೇಳ, ಬೆಲ್ಲವತ್ತ, ಸಂಪಗೆ" (೬ಪಂ. ೯೬); ಕಮ್ಮಿತರಂತೆ ಬೇಳಂ ಭೂಮಿ ಪರ್ವದಂತೆ ಸೀಗೆ . . . ಮತ್ತಮೆನಿತಾನುಂ ತೆಱದ ಮರದುಱುಗಲ್ (ಬಿಂಹಂ. ೨-೩೮ ಪ). **ಬೇಳಲು**: "ಕಪಿತ್ಥ—ಬೇಳಲು, ಸಿವನ್ನಿ" (೬ಪಿ. ೨೦). [ದೇ.॥ ತಮಿ. ವಿಳವು, ವಿಳಾ, ವೆಳ್ಳಿಲ್; ಮಲ. ವಿಳಾ; ತೆಲು. ವೆಲಗ./ಸಂ. ಬಿಲ್ವ]

**ಬೆಳಲ** 'ಬೆಳಲ್' ನೋ.

**ಬೆಳಲು** 'ಬೆಳಲ್' ನೋ.

**ಬೆಳವ$_1$** 'ಬೆಳುವ$_1$' ನೋ.

**ಬೆಳವ$_2$** 'ಬೆಳುವ$_2$' ನೋ.

**ಬೆಳವಡಿಚ** 'ವೇಳೆವಡಿಚ' ನೋ.

**ಬೆಳವಣಿಗೆ**, ಬೆಳವಳಿಗೆ, ಬೆಳೆವಣಿಗೆ, ಬೆಳೆವಳಿಗೆ (ನಾ). ೧. (ಮನುಷ್ಯ, ಪ್ರಾಣಿ ಮುಂತಾದುವುಗಳ) ಅಂಗಾಂಗಗಳು ಬಲಿತು ಬೆಳೆಯುವಿಕೆ : ಗಂಡಕಕ್ಕೆ ಸರ್ತಿಗೆ ಒಂದೇ ಮರಿ ಹುಟ್ಟುವುದು . . . ಅದರ ಬೆಳವಣಿಗೆ ಪೂರ್ಣವಾಗಲಿಕ್ಕೆ ಐದುವರ್ಷ ಹತ್ತುವುದು (ಮೃಂಬಾಯ. ೯-೯೫). ೨. ಏಳಿಗೆ; ಅಭಿವೃದ್ಧಿ : ಭಾಗವ್ವ ಮಗನ ಬೆಳವಣಿಗೆಯಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಿದ್ದಳು (ರಂಗರಮೋ.೦೭). ೩. ಹೆಚ್ಚಳ ; ವೃದ್ಧಿ : ಇಂತಹ ಕೊಳಚೆ ನೀರು ಸೊಳ್ಳೆಗಳ ಬೆಳವಣಿಗೆಗೆ ಎಡೆಕೊಡುವುದು (ಆತುಶಾ. ೯೦). **ಬೆಳವಳಿಗೆ** : ೧. ನಲವಿಂದ ತಮ್ಮ ತಮ್ಮ ಮೊಲೆಗಳ ಉಂಡಲ್ಲದೆ ಬೆಳವಳಿಗೆಯಿಲ್ಲ (ಹಂಪಗುಂ.ಕ. ೨೫೬-೯೩); ಹರಿಯಂಘ್ರಿಯುಗ್ಮತರ ಬೆಳವಳಿಗೆಗಂ ಸಪ್ತಗಿರಿ ಚೂರ್ಣವಾಗೆ (ಐಕೋಪು ೦೨-೭೭). **ಬೆಳೆವಣಿಗೆ** : ೨. ಅಭಿವೃದ್ಧಿ, ವಿಕಾಸ, ಬೆಳೆವಣಿಗೆ (Development· ಕನ್ನ. ೩೦)· **ಬೆಳೆವಳಿಗೆ** : ೪. ವಿಕಾಸ : ಈ ದರ್ಶನಗಳ ಬೆಳೆವಳಿಗೆಯಲ್ಲಿ ಅನಂತರ ಉದಿಸಿದ ಪರಿಷ್ಕಾರಯುಗವೇ ಪ್ರಸ್ತುತ ಲೇಖನದ ವಿಷಯ (ತತ್ತ್ವಜ್ಞಾ.೨೯೨); ಆರಂಭಕಾಲದಿಂದಲೂ ಸಂಸ್ಕೃತನಾಟಕವು ಮಂಗಳಾಂತದ ನಿಯಮಕ್ಕೆ ಸೆರೆಸಿಕ್ಕಿದ್ದರಿಂದ ಈ ಬಗೆಯ ಬೆಳೆವಳಿಗೆಯನ್ನು ಕಳೆದುಕೊಂಡಿರಬಹುದೇ? (ಕಾವ್ಯಸ.೯). [ಬೆಳೆ$_1$ + — ವಣಿಗೆ]

**ಬೆಳವಲ$_1$** 'ಬೆಳಲ್' ನೋ.

**ಬೆಳವಲ$_2$** 'ಬೆಳ್ವೊಲ' ನೋ.

**ಬೆಳವಳಿಗೆ** 'ಬೆಳವಣಿಗೆ' ನೋ.

**ಬೆಳವಾರ** (ನಾ). ಜಾತಿಗೆಟ್ಟವನು : ಪಟಿವನ್ನಾಯುವ ನೋಡದನ್ನರೊಳೆ ವಾಜಿಟ್ಟಲ್ಲರಂ ಬಾಧಿಪಾ ತಳವಾಜಿಂ ಬೆಳವಾರನ್ನೆ (ಸೋಮೇಶ.೬೬). [ದೇ.॥ ತಮಿ. ವೆಳಿಯಾರ್=ಅಪರಿಚಿತರು; ತೆಲು. ಬೆಳ್ಲರಿ=ಅವಿವೇಕಿ]

**ಬೆಳವಿಗೆ** (ನಾ). ಏಳಿಗೆ; ಅಭಿವೃದ್ಧಿ : ಬಸವಣ್ಣಾ ನೀವು ಮರ್ತ್ಯಕ್ಕೆ ಬಂದು ನಿಂದರೆ ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲ ಪಸರಿಸಿತಯ್ಯಾ (ವಚಸಂ. ೩೬೨-೨೩); ತರುಣಸಿತಕರನ ಬೆಳವಿಗೆ ಪಿರಿದಂ ಕುಂದಲ್ಕಿಮಿತ್ತಮೆಂದೇಳಿಪುದಾ

ಕುರುಪ್ರಪಕುಮಾರಕ ನಿರಂತರವರ್ಧನದೆಸಕವುಪ್ಪ ಬೆಳವಿಗೆ ನಿಸದಂ (ಶಾಂತೀಶ್ವ. ೧೫-೨); ಸಾಲದೆ ಭರತಕುಲದಲಿ ನಿನ್ನ ಬೆಳವಿಗೆ (ಕುಮಾರವ್ಯಾ. ೩-೧೮). [ ಬೆಳವು + —ಇಗೆ ]

**ಬೆಳವಿಸಮರ** (ನಾ). ಒಂದು ಬಗೆಯ ಮರ : ಬಿಲ್ವಪತ್ರೆ, ಬಿಲ್ವ, ಬೆಳವಿಸಮರ (ವೃಕ್ಷ. ೬-೯೬). [ ? + ಮರ$_1$ ]

**ಬೆಳವು** (ನಾ). = ಬೆಳವಿಗೆ : ಭಕ್ತಿಯ ಬೆಳವಿಂಗೆ ಬಸವಣ್ಣನೇ ಕಾರಣಿಕನಾದ ಅಱಿವಿನ ಬೆಳವಿಂಗೆ ಚೆನ್ನಬಸವಣ್ಣನೇ ಕಾರಣಿಕನಾದ (ಮುಡಿಪು. ೬೪-೯೩); ಮೋಕ್ಷದ ಬೆಳವನಿದಱೊಳು ಪಡೆಯಲೆಂದಾರ್ಜಿಸಿ (ಬಿಜ್ಞಾಗ. ೩-೩-೨೬). [ಬೆಳ್$_1$ + — ವು./ತಮಿ. ವಿಳೈವು; ಮಲ. ವಿಳವು ]

**ಬೆಳಸಾಲು** 'ಬೆಳಿಸಾಲು' ನೋ.

**ಬೆಳಸಿ** 'ಬೆಳುವಸೆ' ನೋ.

**ಬೆಳಸು$_1$** 'ಬೆಳೆಯಿಸು' ನೋ.

**ಬೆಳಸು$_2$** (ನಾ). ೧. ಬೆಳೆದುದು ; ಬೆಳೆ ; ಫಸಲು ; ಪೀಕು (ಉಕ) : "ಅಚರಂಗಳಲ್ಲಿ ಬೆಳೆದುದು ಬೆಳಸೆನಿಕ್ಕುಂ" (ಶಂಶಬ. ೨೬); ನಾಡ ಕಾಡ ಬೆಳಸಿಂಬೆಳಸಾ ವಿಷಯಾಂತರಾಳದೊಳ್ (ಶಂಕಥಾ. ೧-೩೯); ಆರಾಧನೆಯ ಮಾಡಿದಡೆ ಅಮೃತದ ಬೆಳಸು ವಿರೋಧಿಸಿದಡೆ ವಿಷದ ಬೆಳಸು (ಬಸವ. ೯೨೦); ಫಲಿಸಿತರಸಾ ನಿನ್ನ ಭಾಗ್ಯದ ಬೆಳಸು (ಕುಮಾರವ್ಯಾ. ೦೫-೩). ೨. ಕೆನೆ ; ಕಾಳು : ಸಸಿಯೊಳ್ ಬೆಳಸಂ ಕೊಳ್ವವೋಲಸಾರದೊಳ್ ಸಾರವನು ಮಹೀಪತಿ ಕೊಂಡಂ (ಶಾಂತಿಪು. ೬-೦೨೫); ಜಿನಭಕ್ತಿಯೆಂಬ ಬೆಳಸಿನ ರಾಶಿಯಂ ತೋರ್ಪಂತೆ ಪಾಲ ಸಮುದ್ರದ ನೀರಿಂದಭಿಷೇಕಂ ಮಾಡಿ ಪೂಜಿಸಿ (ಧರ್ಮಾಮೃ. ೪-೨೬೩). [ ಬೆಳ್$_1$ + — ಸು$_2$ ]

**ಬೆಳಸೆ** 'ಬೆಳುವಸೆ' ನೋ.

**ಬೆಳಹು$_1$** (ಕ್ರಿ). ವೃದ್ಧಿಪಡಿಸು ; ಬೆಳೆಸು : ಮುಂದಿನ್ನು ವೀರ ಶೈವಾಗಮದೆ ನಡವಳಿಯ ಕುಡಿವರಿಸಿ ಬೆಳಹುವನೆನಿಪ್ಪಂತೆ ನಿಡುಗೇಸ ಕವಲಿಱಿದು ಬೆಳೆದುದು (ಸೌಂದಪು. ೨-೩೦).

[ ಬೆಳ್$_1$ + — ಹು$_1$ (< —ವು$_1$ ) ]

**ಬೆಳಹು$_2$** (ನಾ). = ಬೆಳವಣಿಗೆ : ತುಂಬಿನಲಿ ಕತ್ತರಿಸಿದೆಡೆಯಲಿ ಬೆಳಹಿನಲಿ ಈ ಪರಿಯ ದೋಷವು ದಂಡಿನಲಿ ತರುದೋಷ (ಶಾಳ್ಯಶಾ. ೦೮-೦೦).

[ ಬೆಳ್$_1$ + — ಹು$_2$ (< — ವು$_2$) ]

**ಬೆಳಾಕರಣ** (ನಾ). ಒಂದು ಬಗೆಯ ತೆರಿಗೆ : ಎಱದುಕೊಟ್ಟ ಸ್ಥಳಂಗಳಿಗೆ ತೆಱು ಮುಡಗಡ . . . ಬೆಳಾಕರಣ . . . ವತ್ತುಗಾಯಿ ಮೊದಲಾಗಿ (ಕ್ಷಾ. 1, ೫೯-೯; 1433 ?). [ ಬೆಳ್$_7$ + ಆಕರಣ ]

**ಬೆಳಾಕರಣೆ** (ನಾ). = ಬೆಳಾಕರಣ : ಗುತ್ತಿಗೆ ಕಾಣಿಕೆ. ಖಿಡ್ಡಾಯ ಬೆಳಾಕರಣೆ ಬೆಳುದಂಡ (ಎಪಿಕ. XV, ೨೯೬-೨೬; 1433).

[ ಬೆಳ್$_7$ + ಆಕರಣೆ$_1$ ]

**ಬೆಳಾವಡಿಚ** 'ವೇಳೆವಡಿಚ' ನೋ.

**ಬೆಳಿಗಾರ** 'ಬೆಳುಗಾರ' ನೋ.

**ಬೆಳಿಗೆ** (ನಾ). ಬೆಳವಣಿಗೆ ; ವಿಕಾಸ : ಅದರಿಂದ ಬೆಳಿಗೆ ಕಡಿಮೆಯಾಗುತ್ತದೆ (ಪುಂಬಿಹಾ. ೬-೨೬೨) ; ಈಗ ನಾವು ವಿಲಕ್ಷಣವಾದ ಬೆಳಿಗೆಯನ್ನು ಕಾಣುತ್ತೇವೆ (ಮುಕಂವಿ. ೫೦). [ < ಬೆಳ್$_1$ + —ಇಗೆ$_0$ ]

**ಬೆಳಿಗ್ಗ** 'ಬೆಳಗ್ಗ' ನೋ.

**ಬೆಳಿಗ್ಗೆ** 'ಬೆಳಗ್ಗೆ' ನೋ.

**ಬೆಳಿಯಕ್ಕಿ** (ನಾ). ತಳಿಸಿದ ಅಕ್ಕಿ ; ಬಿಳಿಯಕ್ಕಿ : × × × ಸ್ಥಿಲ್ಮಲಗೆ ದಯೆಗೆಯ್ದು ಸ್ಥ × × ಸೊಪ್ಲಗೆಯೆ ಬೆಳಿಯಕ್ಕಿಯೆಮ್ಬುದಿಲ್ಲ ಎಲ್ಲ ಕೂಟಣ ಉಣ್ಬುದು (ಎಕ. VI (R). ಶ್ರೀರಂಗ. ೯೪-೦೬ ; ಸು. ೩೫ನು ೫೫).

[☞ ಇದು 'ಬಿಳಿಯಕ್ಕಿ' ಎಂಬುವದರ ಅಪಲಿಖಿತ]

**ಬೆಳು$_1$** 'ಬೆಳ್$_1$' ನೋ.

**ಬೆಳು$_2$** 'ಬೆಳ್$_2$' ನೋ.

**ಬೆಳುಕ** (ನಾ). ೧. ಬೆಳ್ಳಗಿರುವವನು : ಅವಿಕಂ, ಬೆಳುಕರಿ, ತ್ರೋಳಕಂ (ಶಬ್ದಮ. ೨೦೫ ಪ್ರಯೋ). ೨. ಬಿಳಿದು ; ಬಿಳುಪಾದುದು : ಆ ಕಬ್ಬಿಂಗೆ ಕಿಚ್ಚನಿಕ್ಕಿ ಸುಟ್ಟು ಬೆಳು [ಪಾಠಾಂ: ಳ್ಳು] ಕನ ಮಾಡಿ ಬೆಳುಗಾರ ದಂತೆ ಮಾಡು (ಬಸವ. ೨೫೩) ; ಪಳಿಕಿನಂತೆ ಬೆಳುಕನಾಗಿ ಸಹಜೋಚಿತ ರುಚಿಯ ನಿಲೆ (ಪರ್ಣೇಶ. ೦೦-೯೬ ವ). ೩. (ಆಲಂ) ಸ್ಪಷ್ಟವಾದುದು ; ನಿಚ್ಚಳವಾದುದು : ಶ್ರುತಿಯುವಿಳಶಾಸ್ತ್ರಾರ್ಥವತಿಬೆಳುಕನಾಗಿ ಸಂತತ ಪೊತ್ತವೆಣ್ಗಳಂತಿರ್ಪವೆಂದುಂ ಜಿತಪುರನ ವಿದ್ಯೆ ಸಂತತಪತಿವ್ರತೆಯಂತೆ ಕ್ಷಿತಿಯೊಳತಿಗೋಪ್ಯವೆಂದಾ ಸ್ಕಂದವಂ (ಶಾಪಂಕ. ೩-೯).

[ ಬೆಳು$_1$ ( < ಬಿಳಿದು ) + — ಕ$_3$ ]

**ಬೆಳುಕರಿಸು** 'ಬೆಳ್ಕರಿಸು' ನೋ.

**ಬೆಳುಕು** (ಕ್ರಿ). ಮಿಂಟುಕಿಸು : ವಿಜನವುಹ ಠಾವಿನೊಳ್ಕುಳ್ಳಿರ್ದು ಬೆಳುಕ ದವೆಗಳವುಭಯದಿಟ್ಟಿಗಳ ನಾಸಾಗ್ರದಲ್ಲಿ ನೆಲೆಗೊಳಿಸೆ (ಪುಕಾಪಾ. ೨-೦೦-೨೨).

[ ←ತೆಲು. ಬೆಳಕು=ಚಲಿಸು ]

**ಬೆಳುಗತ್ತೆ** 'ಬೆಳ್ಗಟ್ಟಿ' ನೋ.

**ಬೆಳುಗದಿರ** 'ಬೆಳ್ಗದಿರ' ನೋ.

**ಬೆಳುಗದಿರು** 'ಬೆಳ್ಗದಿರ್' ನೋ.

**ಬೆಳುಗನ್ನಡ** 'ಬೆಳ್ಗನ್ನಡ' ನೋ.

**ಬೆಳುಗನ್ನಡಿಗ** (ನಾ). ಅಜ್ಞನಾದ ಕನ್ನಡಿಗ : ಎಲೆ ನಲ್ಲಳೆ ಸಕ್ಕಜವಿನ್ನಿಜೀವನ ಬಳಕೆಯ ಬೆಳುಗನ್ನಡಿಗನ ಹೊಲಬಲ್ಲ ಕೃತಿಯಿದು (ಸೊಬಸೋ. ೦-೨೩).

[ ಬೆಳು$_2$ (< ಬೆಳ್$_2$) + ಕನ್ನಡಿಗ ]

**ಬೆಳುಗವತೆ** (ನಾ). ಬೆಳಗಿನಲ್ಲೇ ಮಾಡುವ ಲೂಟಿ ; ಹಗಲುದರೋಡೆ: ಬೆಳುಗವ [ಪಾಠಾಂ. ವಿ]ತೆಯನ್ಯಾಯ ಪಂಭವ ಠಕ್ಕು . . . ನಿನ್ನೊಳಿಲ್ಲಲೆ (ಕುಮಾರವ್ಯಾ. ೦-೯೫) ; ಠಕ್ಕು ಪಳಿವು ಬೆಳುಗವತೆ ದುರ್ವ್ಯಸನಂ . . . ಚೆನ್ನಬಸವನಿಹ ರಾಜ್ಯದೊಳ್ ವಿಸುಕವೆ (ಚೆಬಪು. ೬-೯೦).

[ ಬೆಳು$_1$ (< ಬಿಳಿದು) + ಕವತೆ$_1$ (< ಕವರ್ತೆ$_1$) ]

**ಬೆಳುಗಾಯ್** 'ಬೆಳಗಾಯ್' ನೋ.

**ಬೆಳುಗಾಯ್ಮೊಲೆ** 'ಬೆಳಗಾಯಿಮೊಲೆ' ನೋ.

**ಬೆಳುಗಾರ, ಬೆಳಗಾರ, ಬೆಳಿಗಾರ** (ನಾ). ಖನಿಜಲವಣ; ಟಂಕಣ ; ಪಟಿಕ : "ಟಂಕಣಂ—ಬೆಳುಗಾರ" (ಚಿಕಧಿ. ೬೯) ; ಬೆಳುಗಾರವ ಬೆರಸಿ ಬೆಚ್ಚ ಬಂಗಾರಕ್ಕೆ ಸಂದುಂಟೆ ಹೇಳಾ (ಅವಶಂ. ೨೨೬-೦೦೨೯); ಹಿಪ್ಪಲಿ ಗುಳ್ಳ ಬೆಳುಗಾರ ಹೊಮ್ಮುಗುಳ್ಗಳ ಸಲೆಯುವಂ ಮಧುವಿಂದೆ ಕಲಸಿ (ಶವಶ. ೦೩-೯೬); ಅಲಂಪಿನ ಬೆಳುಗಾರವುನಿಟ್ಟುರುಪಿ ರತೋದ್ದೀಪನದುರಿಯಿಂ (ಚಯುಕಾ. ೮-೯೬). **ಬೆಳಗಾರ :** ಆ ಕಬ್ಬಿಂಗೆ ಕಿಚ್ಚನಿಕ್ಕಿ ಸುಟ್ಟು ಬೆಳ್ಳುಕನ ಮಾಡಿ ಬೆಳ[ಪಾಠಾಂ. ಳು]ಗಾರದಂತೆ ಮಾಡು (ಬಸವ. ೨೫೩) ; ಶರಣನಾದಡೆ ಮುರಿದ ಬಂಗಾರವ ಬೆಳಗಾರದಲ್ಲಿ ಬೆಚ್ಚಂತಿರಬೇಕು ಲಿಂಗದಲ್ಲಿ (ಅಲಂದೇ. ೨೯೩ ೬೬). **ಬೆಳಿಗಾರ :** ಕಕ್ಕೆ ಹಗಿನು ಬೆಳಿಗಾರ ಜೇನುತುಪ್ಪ ಇವಂ ಮರ್ದಿಸಿ ಲಿಂಗಲೇಪನಗೈದು ರತಿಗೈಯೆ ಸ್ತ್ರೀಯರು ಸಂತೋಷಪಡುವರು (ಕಾಮುಶಾ. ೨೬೦) ; ಕಲಬಾಗ್‌ನಲ್ಲಿ ಉಪ್ಪುಬೆಟ್ಟಗಳ ಬಳಿ, ಪಟಿಕವು (ಬೆಳಿಗಾರ) ವಿಶೇಷವಾಗಿ ತಯಾರಾಗುತ್ತದೆ (ಭೂಗೋಳ. ೬೦). 'ಬಿಳಿಗಾರ' ಪರಾ. [ ದೇ. ॥ ತಮಿ. ವೆಳ್ಳೈಕ್ಕಾರವಮ್; ಮಲ. ವೆಳ್ಳಕ್ಕರವಮ್; ತುಳು. ಬೆಳಕಾರ; ತೆಲು. ವೆಲಿಗಾರಮು]

**ಬೆಳುಗಾಲ** (ನಾ). ಆಕಾಶವು ಶುಭ್ರವಾಗಿರುವ ಕಾಲ ; ಶರತ್ಕಾಲ : ಮಳೆಗಾಲ ಪೋದುದು ಬೆಳುಗಾಲ ಬಂದುದು ದಳ ನಡೆವುದಕಿನ್ನು ಚಿನ್ನ (ಚರಕ. ೨೦-೬). [ಬೆಳು$_1$(< ಬಿಳಿದು) + ಕಾಲ]

**ಬೆಳುಗುಳ** 'ಬೆಳ್ಗೊಳ' ನೋ.

**ಬೆಳುಗೊಡೆ** 'ಬೆಳ್ಗೊಡೆ' ನೋ.

**ಬೆಳುಗೊಳ** 'ಬೆಳ್ಗೊಳ' ನೋ.

**ಬೆಳುಜೊನ್ನ** (ನಾ). ಶುಭ್ರವಾದ ಬೆಳುದಿಂಗಳು : ಸಂಜೆಯೊಳು ಶಶಿಯು ಬೆಳುಜೊನ್ನವಿರೆ ಸೊಡರಿಗೆಳಸರೇ (ಅಮಸಾ. ೧-೨-೦೪). [ಬೆಳ್$_1$ (<ಬಿಳಿದು)+ಜೊನ್ನ]

**ಬೆಳುದಂಡ** (ನಾ). ಒಂದು ಬಗೆಯ ಆದಾಯ; ದಂಡರೂಪದಿಂದ ಬರುವ ಆದಾಯ : ನೊಗಹಣವೊಕ್ಕಲು ಗುತ್ತಗೆ ಕಾಣಿಕೆ ಖಿಡ್ಡಾಯ ಬೆಳಾಕರಣೆ ಬೆಳುದಂಡ ಎಸೆ ಒಸಗೆ (ಶಾಸಇ. XV. ೨೪೬-೨೬; 1433). [ಬೆಳ್$_2$+ದಂಡ]

**ಬೆಳುದಿಂಗಳ್** 'ಬೆಳ್ದಿಂಗಳ್' ನೋ.

**ಬೆಳುದಿಂಗಳು** 'ಬೆಳ್ದಿಂಗಳ್' ನೋ.

**ಬೆಳುದುರೆ** (ನಾ). ಒಂದು ಬಗೆಯ ಸಸ್ಯ : ಉಡೀ. ಬೆಳುದುರೆ, ನೀರುದುರೆ (ಕೃಷಿಗಿ. ೩೨-೬೦೦). [ಬೆಳ್$_1$ (<ಬಿಳಿದು)+ಉದುರ್ಕೆ]

**ಬೆಳುನಗೆ$_1$** 'ಬೆಳ್ನಗೆ' ನೋ.

**ಬೆಳುನಗೆ$_2$** (ನಾ). ಕಪಟದಿಂದ ಕೂಡಿದ ನಗು; ಸೋಗಿನ ನಗು : ಅಸದಳದ ಪಡಗತಿಯು ಬೆಳುನಗೆಯು ವಕ್ರವಾಕ್ಯಸಮೂಹದವಗುಣಂಗಳ ಸಂಗದಿಂ ಕುಲಂ ಹಸಗೆಟ್ಟನಾಮಿಕೆಯರಾದರಲ್ಲದೆ ಸಂಗವಾರ ಕುಲವಂ ಕೆಡಿಸದು (ಪಶಾ. ೬-೩). [ಬೆಳ್$_2$ (<ಬೆಳ್$_2$)+ನಗೆ]

**ಬೆಳುನಗೆವೆಱು** (ಕ್ರಿ). ಮೆಲುನಗೆಯಿಂದ ಕೂಡಿರು; ಮಂದಹಾಸದಿಂದಿರು : ಬೆಳುನಗೆವೆತ್ತನ್ನ ರಂಗ ಬಾರೆಂಬ ಕೋಮಳೆಯ ಕೋಱಿಕೆಯೊಂದಾದಪುದೊ (ಕಕಾಂ. ೨೨-೪). [ಬೆಳುನಗೆ$_1$ (<ಬೆಳ್ನಗೆ)+ಪೆಱು$_1$]

**ಬೆಳುನುಡಿ** 'ಬೆಳ್ನುಡಿ' ನೋ.

**ಬೆಳುನೆಲ್ಲಿ** (ನಾ). ಒಂದು ಬಗೆಯ ನೆಲ್ಲಿ : ಎಲವ ಮುತ್ತುಗ ಪಾಲೆ ಯಳನೇಱಲು . . . ಬೆಳುನೆಲ್ಲಿ (ಶಾಲ್ಯಾ. ೫-೩). [ಬೆಳ್$_1$ (< ಬಿಳಿದು) + ನೆಲ್ಲಿ]

**ಬೆಳುನೊರೆ** 'ಬೆಳ್ನೊರೆ' ನೋ.

**ಬೆಳುಪು** 'ಬೆಳ್ಪು$_1$' ನೋ.

**ಬೆಳುಮಣ್ಣು** 'ಬೆಳ್ಮಣ್' ನೋ.

**ಬೆಳುಮುತ್ತು** (ನಾ). ಬಿಳಿಯ ಮುಚ್ಚೆ : ಬೆಳುಮುತ್ತು ಕಾರೆಳ್ಳು ಸುಪ್ರದಕ್ಷಿಣ ವಾದ ಸುಳಿ . . . ಎಸೆದುವು ಚಕ್ರಧರಗೆ (ಭರತ. ೬-೬೦). [ಬೆಳ್$_1$ (< ಬಿಳಿದು) + ಮುತ್ತು$_1$ (< ಮುಚ್ಚು$_1$)]

**ಬೆಳುಮಾತು** (ನಾ). ದಡ್ಡತನದ ಮಾತು; ಅವಿವೇಕದ ಮಾತು : ಕಲೆಪಂತರೊಲ್ಲು ಕೂಡಿದರೆಸೆ ಸಾಕು . . . ಸಳಿನಡು ತೊಡೆ ತೋಳು ಮೊಗಗಳೊಂದಿದುವೇದು ಬೆಳುಮಾತನಾಡಲದೇಕೆ (ಭರತ. ೧೦-೦೨೪). [ಬೆಳ್$_2$ (<ಬೆಳ್$_2$ +) ಮಾತು$_1$]

**ಬೆಳುವಿಮಾನ** (ನಾ). ಬೆಳಗುವ ನಕ್ಷತ್ರ; ಮಿನುಗುವ ತಾರೆ : ಪ್ರಾರ್ಥ ಕೋಟಿ ಬೆಳುವಿಮಾನ ಮಿಂಚುತಿವೆ ಬಾನಿನೊಡಲಿನಲ್ಲಿ (ಪ್ರರಸ. ೫೨-೫). [ಬೆಳ್$_1$ (<ಬಿಳಿದು) + ವಿಮಾನ]

**ಬೆಳುಮುಗಿಲು** 'ಬೆಳ್ಮುಗಿಲ್' ನೋ.

**ಬೆಳುವ$_1$**, ಬೆಳವ$_1$ (ನಾ). (ಅಪಶಕುನ ಸೂಚಕವೆಂದು ಭಾವಿಸುವ) ಒಂದು ಬಗೆಯ ಪಕ್ಷಿ; ಕಾಡುಪಾರಿವಾಳ : "ಪಿಂಗಂ ಬೆಳುವಮೆನಿಸಿಕ್ಕು" (ಮುಂಗಶಾ. ೫೨-೦೦); ಬೆಳುವ ಬೆಂಚೆಗ ಬೆಕ್ಕು ಬಕ ಮಿಸಾಬ್ಬುಲಿಗ . . . ಮಡಗೊಳಲೆ ಮುಖ್ಯವಿಹಂಗನಿಷೆ ಪೈದೇಪಿ ನೋಡು (ತೊರಶಾ. ೩-೦೪೪); ಬೆದಱುಗಣ್ಣ ಬೆಳುವನಂತೆ ನಿಸ್ಸಟಲ್ಗಟಲ್ವೆನಾನ್ (ಅಶ್ವಶಾ. ೬-೦೩೦). **ಬೆಳವ$_1$** : ಗೂಬೆ, ಕಾಗೆ, ಬೆಳವ (ಒಂದು ಬಗೆಯ ಪಾರಿವಾಳ) ಗಳ ವಿಷಯದಲ್ಲಿ ಈ ಮೂಢನಂಬಿಕೆ ಬಂದಿದೆ (ಕಶ್ರಿ. ೩೨); ಹಾಡುವ ಬೆಳವ; ಹಾರುಳ ಪಾರಿವಾಳ; ಬೊಗಳುವ ನಾಯಿ . . . ಮುಂತಾದ ದಿನದ ಸಂಸಾರದಲ್ಲಿ ಕಾಣಬರುವ ವಿಷಯಗಳನ್ನೆತ್ತಿ ಅವುಗಳಲ್ಲಿ ವೈರಾಗ್ಯ ಸಂಪತ್ತನ್ನು ತುಂಬಿ ಸೂರೆಗೊಂಡಿದ್ದಾರೆ (ಶಂಶ. ೬೪ ಕಂಕಾಣ್ಯಶಂಕರು). [ದೇ.॥ ತೆಲು. ಬೆಳವ]

**ಬೆಳುವ$_2$**, ಬೆಳವ$_2$ (ನಾ). ಒಂದು ಬಗೆಯ ಮರ; ಬಿಳಿಧೂಪದ ಮರ : ನಿಮಿತ್ತ ಲಗ್ನ ಮಾಯಾ ಮಾರವಳಿ ಬೆಳುವ ಮೂಲಿಕೆಯಿಂದ ಕಡೆಯೆ ನಿನ್ನ ಇರವು (ಮರೀವ. ೨೬೪-೩೭). **ಬೆಳವ$_2$** : ಮಾವು ಹಲಸು ಬೆಳವ[ಕಾಕಾಂ.ಲ] ದಾಡಿಮವಣ್ಣಾದಿಯಾದಾ ವೃಕ್ಷಫಲದೊಳಗೆ ಕಲಸಿ (ಸೂಪಶಾ. ೨-೩೬); ಮತ್ತಿ ಮಧುಕಂ ಮಂಗಾರೆ ಪಚ್ಚಾರಿದಿಂಡಲವಾಲಂ ಬೆಳವಿಂಗಳಂ ಪುಣಸೆ (ರಾಜಶೇ. ೫-೫೬). [?]

**ಬೆಳುವಟ್ಟೆ** 'ಬೆಳ್ವಟ್ಟೆ' ನೋ.

**ಬೆಳುವಣ್ಣ** (ನಾ). ಬಿಳಿಯ ಬಣ್ಣ : "ಬೆ[ಕಾಕಾಂ.ಬಿ]ಳುವಣ್ಣವೆನೆ ಬಿಳಿದು" (ಕಶ್ರಿ.ಮಂ.೬೯). [ಬೆಳ್$_1$ (< ಬಿಳಿದು) + ಬಣ್ಣ]

**ಬೆಳುವರಿ** (ಕ್ರಿ). ಬೆಳ್ಳಗಾಗು; ನರೆ : ಜಗುಳಿದ ಹಲ್ಲುಗಳ ಬೆಳುವರಿದ ರೋಮಾವಳಿಯೊಳ್ಬೆತರುಶಿರಲಾ ಪುರಜನ ನೋಡಿಶಾ ವೃದ್ಧನನು (ಕವಂಕ. ೦೪-೦೪). [ಬೆಳ್$_1$ (<ಬಿಳಿದು) + ಪರಿ$_2$]

**ಬೆಳುವಲ** 'ಬೆಳ್ವೊಲ' ನೋ.

**ಬೆಳುವಲು** 'ಬೆಳ್ವೊಲ' ನೋ.

**ಬೆಳುವಲೆ** 'ಬೆಳ್ವಲೆ' ನೋ.

**ಬೆಳುವಲ್ಲು** 'ಬೆಳ್ವಲ್' ನೋ.

**ಬೆಳುವಸದನ** 'ಬೆಳ್ವಸದನ' ನೋ.

**ಬೆಳುವಸದನಂಗೆಯ್** 'ಬೆಳ್ವಸದನಂಗೆಯ್' ನೋ.

**ಬೆಳುವಸೆ**, ಬೆಳಸಿ, ಬೆಳಸೆ (ನಾ). (ಇನ್ನೂ ಬಲಿಯದ) ಹಾಲು ತುಂಬಿ ಬೆಳ್ಳಗಿರುವ ಕಾಳು; ಸಿಹಿತೆನೆ; "ಬೆಳುವಸೆ ದುಗ್ಧಕಾಯ್ಯಮಕ್ಕಂ" (ಮುಂಗಶಾ. ೦೦೦-೬). **ಬೆಳಸಿ** : ಸುಟ್ಟ ಬೆಳಸಿಯು ಲೇಸು ಅಟ್ಟ ಬೋಸವು ಲೇಸು (ಸರ್ವಜ್ಞ. ೦೦೦೬); ಬೆಳಸಿಯ ಹೊರೆ ತಂದು ಇಳುಹಿದನು (ಸಿದ್ಧಕೃ. ೩-೬೬). **ಬೆಳಸೆ** : ಮಲ್ಲನು ಸುಟ್ಟು ಕೊಟ್ಟ ಬೆಳಸೆಯನ್ನು ತಿಂದು (ಪಶಂ. ೨೩). [ಬೆಳ್$_1$ (<ಬಿಳಿದು) + ಪಸೆ$_1$ (<ಪಸಿ$_3$)]

**ಬೆಳುವಾಲ**, ಬೆಳುವಾಲಿ (ನಾ). ಒಂದು ಬಗೆಯ ಸಸ್ಯ: "ದೇವಲಾಂಗಲಿಕಾ—ಬೆಳುವಾಲ" (೬ಶಂ. ೮೦); ಅಣಿಲೆ ಬೆಳುವಾಲಕುವವಿಷಮೆಣಿಸಲದೇಂ ಹೊನ್ನೆಗಭ್ಬನಾದಿಯೆ (ಅಮದ.೨-೯೬). **ಬೆಳುವಾಲಿ** : "ಭೂರಿರುಕ್ಸಾ—ಬೆಳುವಾಲಿ" (೬ಶಂ. ೦೦೨). [?]

**ಬೆಳುವಾಲಿ** 'ಬೆಳುವಾಲ' ನೋ.

**ಬೆಳುವೆ** 'ಬೇಳ್ವೆ$_2$' ನೋ.

**ಬೆಳುವೆಟ್ಟ** 'ಬೆಳ್ವೆಟ್ಟ' ನೋ.

**ಬೆಳುವೆಳಗು** 'ಬೆಳ್ವೆಳಗು' ನೋ.

**ಬೆಳುವೆಳ್ಳಿ** (ನಾ). ಹೊಳೆಯುವ ಬೆಳ್ಳಿ; ಶುದ್ಧಬೆಳ್ಳಿ : ಕಳವಿಯ ಕ್ಷತೆಗಳರ್ಚನೆ ತಾಯಿಗೊಪ್ಪ ಮತ್ತೆಳೆಮುತ್ತಿನಕ್ಷತೆಯೊಪ್ಪ ತಳಿರುತಾವರೆ ಮೊಲ್ಲೆ ಮೊದಲಾದ ಪೂವೊಪ್ಪ ಬೆಳುವೆಳ್ಳಿಮಿಸುನಿಪೂವೊಪ್ಪ (ಭರತ. ೦೪-೦೦೪). [ಬೆಳ್$_1$ (<ಬಿಳಿದು) + ಬೆಳ್ಳಿ]

**ಬೆಳುಸರಿ** 'ಬೆಳ್ಸರಿ' ನೋ.

**ಬೆಳುಹದಿಯ ಮರ** (ನಾ). ಒಂದು ಬಗೆಯ ಮರ: ಆ ಕೆಱೆಯ ಕೂಡುವ ನೀರೊತ್ತು ಮೇರೆಯು × × × ಮೇರೆಯಾಗಿ ಅಲ್ಲಿಂ ಮೂಡ ಬೆಳುಹದಿಯ ಮರ (ಶಾಸಇ. IX-i, ೨೪೬-೪೬; 1147). [ ? + ಮರ$_1$]

**ಬೆಳುಹು** 'ಬೆಳ್ಪು$_1$' ನೋ.

**ಬೆಳುಹೂಲಿ** (ನಾ). ಒಂದು ಬಗೆಯ ಸಸ್ಯ ; ಬಿಳಿಯ ಹೂಲಿ ಗಿಡ : ನೆಲ್ಲಿ ಬೆಳುಹೂಲಿಗಳ ಬೇರಿಲ್ಲಣ ಮುಳುಗೊಗ್ಗಿಯೆಂಬನಿತ್ತಱ ಪುಡಿಯಂ ಚೆಲ್ಲನೆ ಮೂಗಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ (ಖಮದ. ೬-೩೩). [ಬೆಳು₁ ( < ಬಿಳಿದು ) + ಹೂಲಿ₁ (< ಪೂಲ್ಲಿ₁ )]

**ಬೆಳೆ₁, ವೆಳೆ₁** (ಕ್ರಿ). ೧. ಮನುಷ್ಯ, ಪ್ರಾಣಿ, ಪಕ್ಷಿ ಮುಂತಾದುವು ಶಾರೀರಕವಾಗಿ, ಮಾನಸಿಕವಾಗಿ ಅಥವಾ ವಯಸ್ಸಿನಲ್ಲಿ ವೃದ್ಧಿ ಹೊಂದು : ಆತಂ ಕ್ರಮಕ್ರಮದಿಂ ಸುಖದಿಂ ಬೆ[ಶಾಕಾಂ. ಜ]ಳೆದು ನವ ಯೌವನನಾಗಿರ್ಪನ್ನೆಗಂ (ವಡ್ಡಾರಾ. ೬೦-೨೯); ಹುಟ್ಟಿದ ಶ್ರೀ ಗುರುವಿನ ಹಸ್ತ ದಲ್ಲಿ ಬೆಳೆದೆನು ಅಸಂಖ್ಯಾತರ ಕರುಣದಲ್ಲಿ (ವಚನಾದೀ. ಬಿ. ೩೯-೦೪೬); ಅದಿಳಿ ಯನಳೆದಾ ತ್ರಿವಿಕ್ರಮನಂದಕಮ್ಮಿಗಿಲೆನಲು ಬೆಳೆದನು (ತೊರವ. ೪-೧೨-೨೬). ೨. ಗಿಡ, ಮರಗಳು ವೃದ್ಧಿಯಾಗು ; ಸಸ್ಯಗಳು ಬೆಳೆ : “ ಬೆಳೆ— ಸಸ್ಯವೃದ್ಧೌ ” (ಶಮುಧಾ); ಪೂರ್ವ್ವಸ್ಯಾಂ ದಿಶಿ ನೊಲಿ ಬೆಳೆದಾ ಬೆಳ್ಗಲ್ಲೊ ಜಡಿ (ಎಪಿ. VII (R). ಶಾಗನುಂ. ೦೪೯–೬೦ ; 776); ಬೆಳೆದೊಜಿಗಿದ ಕಟಮೆ ಗಳಿಂ ತಿಳಿಗೊಳದೊಳಗಲರ್ದ ಸರಸಿಜಪ್ರತತಿಗಳುಂ ಕಳಹಂಸೆಗಳ್ಗೆ ಕೋಮಲಕವಿಳಾಸವತಿಗಳ್ಗೆ ಪಡೆಗುಮೊಸಗೆಯನಾಗಳ್ (ಕೆಲಾ. ೩-೦೬೬); ಬೆಳೆದು ಮಗಮಗಿಪ ಗಂಧಶಾಳಿಯಿಂದಲ್ಲಿ ಸುಚಿಸ್ಸ ಗೀವಿಂದಿನೋಳಿಯಿಂ . . . ನೆಱೆಯ ಸೊಗಯಿಪ (ಕಂಕಚ. ೩-೨೨ ರಗಳೆ) ; ಮುತ್ತಿನವು ಶರವಿಭದ ಮೆಯ್ಯಲಿ ಬೆತ್ತ ಬೆಳೆದದ್ರಿಯವೊಲಿದ್ದುದು ಮತ್ತಗಜ ನೊಂದಜಿಯದನಬರ ಬಾಣಹತಿಗಳಲಿ (ಕುಮ್ಮಾರ್ದ್ರೋ. ೩-೩೯). ೩. ಮೊಳೆ ; ಮೂಡು ; ಹುಟ್ಟು ; ಅಂಕುರಿಸು : ಮದವನ್ನಾತಂಗಕಪೋಲದಿನೊಜಿದೊಜಿತೆ ಯೊಳೆ ಬೆಳೆದುದೆಂಬಿನಮೆತ್ತಂ ಮದಗಂಧವೊದವೆ ಕಕ್ತಲಿಪುದು ಪುದಿದೇಲಾ ಲತಾವನೀಪ್ರೋದ್ಯಾನಂ (ಕಾದಂಪೂ. ೯೬); ಬೆಳೆದವೋ ಕೈಕಾಲು ನೀಲಾಚಲಕೆ ಹೇಳೆನೆ ಮುಗಿಲ ತುಡುಕುವ ತಲೆಯ ತೋಕೆಯ ತೋರಪತ್ತನ ಕಂಡು ಕುರುಸೇನೆ ಕಳವಳಿಸಿದರು (ಕುಮ್ಮಾರ್ದ್ರೋ. ೦೩-೩೦). ೪. (ಕೂದಲು, ಉಗುರು ಮುಂತಾದುವು) ನೀಳವಾಗು ; ಉದ್ದವಾಗು : ಬೆಳೆವ ತುಪ್ಪುಳ ಮಿಾಸೆ ಹಳಹಳನೆ ನಳನಳಿಸೆ (ಇಶರ. ದೇ. ೩೨-೧೨); ಆ ವಿಮಲ ಯತಿರೂಪವನು ಬಹಿರಾವರಣನಭಕೊತ್ತಿ ಲಯದಿನದಾ ವಿರೂಪಾಕ್ಷಂಗೆ ಪಡಿಯೆನೆ ಬೆಳೆದನಾ ಹನುಮ (ತೊರವ. ೪-೦-೦೬). ೫. ಮೇಲಕ್ಕೆ ಚಾಚು, —ನೀಡು : ಆ ಮಹಾಗಹನಮಧ್ಯದೊಳೆಂಬರವರೆಗಂ ಬೆಳೆದ ಮರದುಱುಗಲ ನಡುವೆ ನೀಳ್ದೊಪ್ಪಿ ದಿವಕ್ಕೆ ಪೋಪ ಬಟ್ಟೆಗೆ ಸೋಪಾನಂ ಗಟ್ಟದಂತೆ ತೆಜತೆಜದಿಂ ನೆಗೆದೊಗೆವ ಪೊಗೆಯುಂ ಕಂಡು (ಕಂಕಕಂ. ೦೦೬-೩); ಬೇಗಿ ಬೆಳೆದು ನಭಕಡರ್ದೊಡೆ ದೇವರ್ಕಳಾರೋಗಿಪ ಸವಿಗಾಣರ್ ಪೋಗಿ ಮಾಡುವುದೇನೆನುತ ಲಜ್ಜಿಸಿ ತಲೆವಾಗಿದಂತಿಹುದು ರಾಜಾನ್ನ (ಸೋಹಚ. ೨-೪೦). ೬. ಪೈರಿನಿಂದ ತುಂಬು ; ಸಸ್ಯಸಮೃದ್ಧವಾಗು : ಅಳುರದು ಕಿರ್ಚು ಮುಟ್ಟದು ವಿಷಾಹಿ ಮಹಾಸತಿಯಿರ್ದ ಮಂಡಲಂ ಬೆಳೆ ವುದು ಬೇಡಿದಂತೆ ಮಟ್ ಕೊಳ್ವುದು (ಅಜಪು. ೧-೬೩); ಬೆಳೆಮದು ಬಿತ್ತ ದೆಯುಂ ಭೂವಳೆಯುಂ ರವಿ ಬಿಸುಪನುಱದು ಸೊಗಯಿಸೆ ಜಗಮಂ ಬೆಳ ಗಿದನೇನೆಬುದೊ ಚಕ್ರಲಾಂಛನನ ಪುಣ್ಯದೊದವುಮಂ ತೇಜಮುಮಂ (ಕರಾಭ. ೩-೬೩). ೭. ಫಸಲನ್ನು ಕೊಡು ; ಫಲ ಬಿಡು : ಅಱು ವತ್ತುದಿಕ್ಕ ಬೆಳೆವ ಷಷ್ಟಿಕಗದ್ದೆ ಷಾಷ್ಟಿಕ್ಯಮೆಂಬುದು (ಶಬಾಡು. ೨೬-೮). ೮. ಉತ್ಪತ್ತಿ ಮಾಡು ; ಒದಗಿಸು : ಜಳನಿಧಿ ಮೇರೆಯಂ ಮಿಗದೆ ನ್ನಿಂದುದು ಧಾರುಣಿ ಧಾನ್ಯವರ್ಗಮಂ ಬೆಳೆವುದು . . . ನಿರ್ಮಳ ಗುಣ ಜೈನಯೋಗಿಗಳ ನಿಶ್ಚಳವೀರತಪಃಪ್ರಭಾವದಿಂ (ಸಮಚ. ೬-೪೪). ೯. ಮರ, ಗಿಡ ಮುಂತಾದುವುಗಳನ್ನು ಬೆಳೆಯುವಂತೆ ಮಾಡು ; ಬೆಳೆಸು : ಕುರುಧರೆಯಂ ನಿಜೋಗ್ರಗದೆಯೇರ್ಗಳನುತ್ತು . . . ತಾರ ಭೂಧರಕಿತ[ಕೀರ್ತಿ]ಯೆಂಬ ಬೆಳಸಂ ಬೆಳೆದಂ ಪರಸೈನ್ಯಭೈರವಂ (ಗದಾಯು. ೧೦-೪) : ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ (ಬಸವ. ೩೯೬) ; ಬೆಂದುದನು ಬಿತ್ತಿ ಬೆಳೆವಂದಿರನು ನಾ ಕಾಣೆ ಬೆಂದುದನು ಬಿತ್ತಿ ಬೆಳೆದುಂಬ ದಾಸೋಹಿ ಇಂದು ಧರನಕ್ಕ (ಸರ್ವಜ್ಞ. ೬೦೦). ೧೦. ಹೆಚ್ಚಾಗು ; ಅಧಿಕವಾಗು : ಉಕ್ಕಿ ಶೋಕದ ಕಡಲು ಪಾರ್ಥನ ಮುಕ್ಕುಳಿಸಿತಾ ಶೋಕಶರಧಿಯ ಹೊಕ್ಕು ಬೆಳೆದುದು ಕೋಪಶಿಖಿ ಪಡಬಾಗ್ನಿಯಂದದಲಿ (ಕುಮ್ಮಾರ್ದ್ರೋ. ೯-೦೫). ೧೧. ಏಳಿಗೆಹೊಂದು : ಪ್ರಗತಿಯನ್ನು ಪಡೆ: ಅಜನು ಪಾಳಿಯುಮಂ ಪುದುಂಗೊಳಿಸಿಕೊಂಡೀ ಭೂಮಿಯಂ ಭೂಮಿಪರ್ ನೆಱೆಯಾಳ್ಗೆಂದು ವಿಳಾತಳಂ ಬೆಳೆಯುತಿರ್ಕೆ (ಶಂದೋಂಬು. ೬-೨೬೪) ; ಸಕಲಮಹೀತಳಂ ಬೆಳೆಗೆ (ಜಾತಕ. ೨೪-೪೩) ; ಶಂತನುವಿನ ಸಂತತಿ ಬೆಳೆಯಬಲ್ಲಂಥ, ಕ್ಷತ್ರಿಯರಿಗೆ ಉಚಿತವಾದಂಥ, ಧರ್ಮವನ್ನು ನಾನು ಹೇಳುತ್ತೇನೆ (ವಚಭಾ. ೬). ೧೨. ತಾರುಣ್ಯಕ್ಕೆ ಕಾಲಿಡು ; ಪ್ರಾಯಕ್ಕೆ ಬರು : ಅವರ ಮಗಳು ಬೆಳೆದಿದ್ದಾಳೆ, ವರನನ್ನು ಹುಡುಕುತ್ತಿದ್ದಾರೆ (ರೂಢಿ). ೧೩. (ಪ್ರಯಾಣವು) ತೊಡಗು; ಆರಂಭವಾಗು: ಕಾಶಿಗೆ ಅವರ ಪ್ರಯಾಣ ಬೆಳೆಯಿತು (ರೂಢಿ). ೧೪. ಜರುಗು ; ನೆರವೇರು : ತೊಳಪ ಕಂಬೆಳಗಿಂದ ಸೈದಿಲ ಬಳಗವನು ಸಾಲಿಡುತ ನೋಳ್ಪರ ಬೆಳೆದ ಕಂಗಳ ಹಬ್ಬ ವೆನಲಮರಿಯರು ಸೊಗಯಿಪರು (ಸಾಳ್ವಭಾ. ೩೨-೦೬) ; ಉಪನಯನ ಬೆಳೆಯಿತು. ಬಂದ ನಂಟರೆಲ್ಲಾ ಅವರವರ ಊರಿಗೆ ಪ್ರಯಾಣ ಮಾಡಿ ದರು (ಮುಂಸುಗ. ೯). ೧೫. ಬಾಗು ; ಎರಗು : “ ಬೆಳೆಮದೆನಲ್ಕೆಱ ಗಿದುದು ” (ರನ್ನಕಂ. ೦). ೧೬. (ಅಲಂ) ತೀರು ; ಮುಗಿ : ಮನೆ ಯಲ್ಲಿ ಅರಿಸಿನ ಕುಂಕುಮ ಬೆಳೆದಿವೆ. ಅಂಗಡಿಯಿಂದ ತರಿಸಬೇಕು (ರೂಢಿ).

**ವೆಳೆ₁**: ೨. ಇದಾನ್ ಕೊಳೆ ಈರೆಬ್ಬತ್ತಱುಳವು ಒಕ್ಕಲ್ತನವ್ ಕಯ್ಯೂನಾ ವಿಶ್ರಿದಲ್ಲಿ ವೆಳೆಯಾದೆ ಕೆಡ೦ಗೆ (ಇಆ. XIX. ೦೪೩-೦೬ ; 680). ೬. ನೆಲನುಂ ವೆಳೆಗೆ ಪಾರ್ವ್ವರು[ವ್] ಪ್ರಜೆಯುವ್ ತಣಿಗೆ (ಇಆ. XIX. ೦೪೩-೦೬ ; 680).

**ಬೆಳೆವೆಳೆ, ಬೆಳೆಬೆಳೆ** (ದ್ವಿರುಕ್ತಿ) : ದೇವ ನೀಂ ಕೊಟ್ಟ ಕನ್ನಿ ಬೆಳೆ ವೆಳೆಯೆ ನಾಯಾಯ್ತು (ಭರತೇಶವ. ೩-೪೨) ; ವಿಪಿನಪರಿವೃತ ವಿಪುಲ ವಿಸ್ತರದ ಗದ್ದೆಕೋಗಿನಲಿ, ಪಳದಿಯ ಪೈರು ಬೆಳೆಬೆಳೆದು ಪಬ್ಬಿಯಿರೆ (ರತ್ನಾಂಗ. ೩೨-೦೯೩೨) ; ಬೆಳೆಬೆಳೆಯುತ್ತ ಮಕ್ಕಳ ಪುಣ್ಯ (ಗಾದೆ).

[ದೇ. ॥ ತಮಿ. ವಿಳೈ ; ಮಲ. ವಿಳ ; ತುಳು. ಬುಲೆ, ಬುಳೆ, ಬೊಳೆ; ಕೊಡ. ಬೊಳೆ ; ತೆಲು. ಬೆಲಯು ; ಕೋತ. ವೆಳ್ ; ತೊದ. ಪೆಳ್]

**ಬೆಳೆ₂** (ನಾ). ೧. ಬೆಳೆಮದು; ಮರ, ಗಿಡ, ಪೈರು ಮುಂತಾದ ಬೆಳಸು: ಮಱೆಯೋ ಸರ್ವಜನಾಶ್ರಯಂ . . . ಬೆಳೆಯೋ ಸರ್ವರ ಜೀವನಂ (ಸೋಮೇಶ. ೦೯) ; ಎಮ್ಮ ಪುಣ್ಯದ ಬೆಳೆಗಳೊಣಗಿದಡಮ್ಮಿ ಮಾಡುವುದೇನು (ಕುಮ್ಮಾಕ. ೦-೨೬) ; ಬೆಳೆಯ ಗುಣ ಮೊಳೆಯಲ್ಲಿ ಕಾಣಾ (ಗಾದೆ). ೨. ಬೆಳೆಯುವಿಕೆ ; ಬೆಳವಣಿಗೆ ; ಅಭಿವೃದ್ಧಿ : ತಿಳಿಯಲ್ಬರ್ಪುದು ಬೆಳೆ ಬಳವಿಗಳೆಂಬ ಭಾವವಚನದ್ವಯದೊಳ್ (ಶಮದ. ೨೦೬) ; ಬೆಳೆಯ ನ್ನದರಿಂದೆಂದು ಒಳೆಯ ಕಂಡವರೆಲ್ಲ ಮೊಳೆಯಲ್ಲಿ ಸಸಿಯನಱಿತು ತಾಂ ಮಾಳಿಯನು ತಿಳಿವವರು ಅಱಗು (ಸರ್ವಜ್ಞ. ೦೨) ; ನಮ್ಮ ಪ್ರಾಚೀನ ಸಂಪ್ರದಾಯದ ವೃಕ್ಷದ ಬುಡಕ್ಕೆ ಪಾಶ್ಚಿಮಾತ್ಯ ಸಂಸ್ಕೃತಿಯ ಕೊಡಲಿ ಪೆಟ್ಟು ಬೀಳುತ್ತಿದೆ (ಚಾರಿದ. ೩೩೪). [ < ಬೆಳೆ₁. / ತಮಿ. ವಿಳೈ ; ಮಲ. ವಿಳ ; ತುಳು. ಬುಲೆ, ಬುಳೆ ; ಕೊಡ. ಬೊಳೆ ]

**ಬೆಳೆಕಾಣಿಕೆ** (ನಾ). ಬೆಳೆಯು ಕೊಯ್ಲಿಗೆ ಸಿದ್ಧವಾದಾಗ, ಕೊಯ್ಲು ಮಾಡಲು ಅನುಮತಿ ಪಡೆಯಲು ಗುತ್ತಿಗೆದಾರನು ಭೂಮಾಲೀಕನಿಗೆ ಒಪ್ಪಿಸುವ ಹಣ್ಣು, ತರಕಾರಿ ಮೊದಲಾದ ಕಾಣಿಕೆ : (ಕಿಸಂಗ್ರಾ. ೦೭).
[ ಬೆಳೆ₂ + ಕಾಣಿಕೆ ( < ಕಾಣ್ಕೆ ) ]

**ಬೆಳೆಕೞಿ** 'ಬೆಳ್ಕೞಿ' ನೋ.

**ಬೆಳೆಗಾಡು** (ನಾ). ಮರ, ಗಿಡಗಳು ದಟ್ಟವಾಗಿ ಬೆಳೆದಿರುವ ಕಾಡು : ಹೊದಱು ಬೆಳೆಗಾಡು ಗುಂಡು ಗುಗ್ಗರಿಗಲ್ಲೊರಡಿಗಳ ಬಳಗದಿಂ ಮೆಱೆದುದಾ ವಿಪಿನ (ಶಾರಾಶಾ. ೪-೨). [ ಬೆಳ್$_1$ + ಕಾಡು$_2$ ]

**ಬೆಳೆಗಾರ** 'ಬೆಳೆಗಾಱ' ನೋ.

**ಬೆಳೆಗಾಱ, ಬೆಳೆಗಾರ** (ನಾ). ೧. ಉಕ್ಕುವಂತೆ ಮಾಡುವವನು ; ವೃದ್ಧಿಗೊಳಿಸುವವನು : ಶರಧಿಯ ಬೆಳೆಗಾಱ ನೆಯ್ದಿಲ ನನೆಗಾಱ ವಿರಹದುಬ್ಬಟೆಗಾಱ ಜೊನ್ನ ಹರವರಿಗಾಱ ಕಾವನ ಗೆಲ್ಲಗಾಱ ಚಂದಿರನುದಿಸಿದ ಮಾಡದೆಸೆಯು (ವರ್ಧ. ೬-೭). **ಬೆಳೆಗಾರ** : ೨. ಸಸ್ಯಾದಿಗಳನ್ನು ಬೆಳೆಯುವವನು ; ಬೇಸಾಯಗಾರ ; ಕೃಷಿಕ : ಕಬ್ಬಿನ ಬೆಳೆಗಾರರಿಗೆ ಈ ವರ್ಷ ಒಳ್ಳೆಯ ಆದಾಯವಾಗುವ ನಿರೀಕ್ಷೆಯಿದೆ (ರೂಢಿ).

[ ಬೆಳ್$_1$ + — ಕಾಱ ]

**ಬೆಳೆಗೆಯ್**, ಬೆಳಗೆಯ್, ಬೆಳಗ್ಗೆ, ಬೆಳೆಗ್ಗೆ (ನಾ). ಪೈರು ಬೆಳೆದು ನಿಂತ ನೆಲ ; ಸಸ್ಯಸಮೃದ್ಧವಾದ ಭೂಮಿ : ಅತಿನಿಶ್ಚಳ ಸೌಖ್ಯದಾಯಿ ಮೋಕ್ಷದ ಬೆಳೆಗೆಯ್[ಪಾಠಾಂ. ಯು] ಜಿನಧರ್ಮವೊಂದು ಬಣ್ಣಿಪುದು ಜಗಂ (ಸಮಜ. ೦೩-೨); ಬೆಳೆಗೆಯ್ಯಿಂದೆಸೆಗುಂ ಕಳಿಂಗವಿಷಯಂ (ಶಬ್ದಮ. ೩-೬೯) : ಪೂದೋಟಗಳಿಂ ತೋಱೆಗಳಿಂ ರಸದಾಳಿಯ ಬೆಳೆಗೆಯ್ಗಳಿಂ ಮೆಱೆವುದಾ ದೇಶ (ಚಂಪಶಾಂ. ೧-೩೦). **ಬೆಳಗೆಯ್** : ಬೆಳಗೆಯ್ಯಿಂ ಪೂಗಣೆಯಿಂ ಫಲತರುವಿಂದೊಳ್ಪುಯಂಗಳಿಂ ಕುಸುಮಾರಜಾನಿಳನಿಂ ಪಗರೆಯ ಮರಿಯಿಂ ತಳರದ ಸಿರಿ ಬಲ್ಲಕುಂದೆನಾಳ್ಕೆಸೆದಿರ್ಕ್ಕುಂ (ಶಾಶಾ. IX-i, ೨೯೯-೦೩ ; 1147) ; ಬೆಳ[ಪಾಠಾಂ. ಳೆ]ಗೆಯ್ಯೊಳ್ಗಂ ಫಲಶಾಲಿಯೆಂದೊಡೆ ಪೂಗಬ್ಬುದಮಂ(ಕಮಜ. ೬೯ ಶ್ರಮೋ; ಕಾವ್ಯಾವ. ೮೦ ನೋ). **ಬೆಳಗ್ಗೆ** : ನೆಲವಡಲಿಗೆಗಳೊಳ್ ನೆಲೆವಡೆದೆಳವಳಿಸುವೆಳವಚ್ಚೆಯ ಬೆಳಗ್ಗೆಯಂತೆ ಬೆಳ್ವಳಗಾಗಿ ಬಳ್ವಳಂ ಬಳೆದು ಪೊಸವಳರ ಪೊಸಸಿರಿಯ ಭಾರದಿಂ ಜೋಗಂಬೋದಂತೆ ಮುಱಿದ ಜಾಗಂಗಳುಮಂ (ಲೀಲಾವ. ೧೧-೩೯ ವ). **ಬೆಳೆಗ್ಗೆ** : ಪುಳಕದ ನೆವದಿಂದ ಪೊಣ್ಮುವ ಹರ್ಷದ ಬೆಳೆಗ್ಗೆಗೆ ನೀರೆಱೆವಂತೆ ತುಳುಕುವ ಸೊಗದಾಲಿನೀರ್ವೊನಱೆಯನು ತಂದಿಳುಪುತವನ ನಿಟ್ಟಿಪಳು (ಚಂಬ. ೬-೬೪). [ಬೆಳ್$_2$ + ಕೆಯ್$_4$]

**ಬೆಳೆಗೆಯ್ದೆರಿಗೆ** (ನಾ). ಬೆಳೆಯುವ ಜಮೀನಿಗಾಗಿ ಕೊಡುವ ತೆರಿಗೆ : ನಮ್ಮ ರಾಜಒಡೆಯರು ಆಳುತ್ತಿದ್ದ ಆಗ—ಯಾವ ಗದ್ದೆಗೆ ನಾನು ಎರಡುವರೆ ಹಣವನ್ನು ಬೆಳೆಗೆಯ್ದೆರಿಗೆಯಾಗಿ ಕೊಡುತ್ತಿದ್ದೆನೋ, ಅದಕ್ಕೇ ನಾನು ಈಗ ಉಣ್ಣೆಯಾಗಿ ಎರಡು ದುಗ್ಗೀವರಹಗಳನ್ನು ತೆರುತ್ತಿದ್ದೇನೆ (ವಿಗಡ. ೩೯-೭). [ಬೆಳೆಗೆಯ್ + ತೆರಿಗೆ (<ತೆಱೆಗೆ) ]

**ಬೆಳೆಗೆಯ್ವೊಲ** (ನಾ). = ಬೆಳೆಗೆಯ್ : ಕನ್ನೀರ್ಜಲ ಪೆಣ ಬಿತ್ತು ನೆಣ ಮೊಳೆಯಾಗೆ ರಣಭೂಮಿ ಕಾಲನ ಬೆಳೆಗೆಯ್ವೊಲದ ಸಂದಣಿಯಂತೆ ಕಣ್ಗೆ ಮೆಱೆದುದು (ಕುಅಶಾ. ೦೨-೬೩). [ಬೆಳ್$_2$ + ಕೆಯ್ವೊಲ]

**ಬೆಳೆಗೇಡು** (ನಾ). ಬೆಳೆಯು ಕೆಟ್ಟು ಹೋಗುವುದು ; ಫಸಲು ಸರಿಯಾಗಿ ಬರದೆ ಹಾನಿಯಾಗುವುದು : ಈ ಜಿಲ್ಲೆಯೊಳಗಿನ ತೀರ ಬೆಳೆಗೇಡಾದ ಒಕ್ಕಲಿಗನನ್ನು ಸಮೃದ್ಧಿಯಾಗಿ ಬೆಳೆಹೊಂದಿದ ಕೊಂಕಣದೊಳಗಿನ ಒಕ್ಕಲಿಗನು ಸಂಗಟ್ಟಲಾರನು (ಮುಂಬಯಿ. ೩-೦೯೩) ; ಈ ವರುಷ ಬೆಳೆಗೇಡಾಗಿ ಬಹಳ ನಷ್ಟಕ್ಕೆ ಒಳಗಾಗಿರುವೆ (ಜಯಂತ. ೪೩೩).

[ಬೆಳ್$_2$ + ಕೇಡು]

**ಬೆಳೆಗ್ಗೆ** 'ಬೆಳೆಗೆಯ್' ನೋ.

**ಬೆಳೆಗೊಡು** (ಕ್ರಿ). ಫಲವನ್ನು ಕೊಡು; ಫಲಕಾರಿಯಾಗು : ಈ ಪರೀಕ್ಷಿತವ ನಿಲಿಸಿಕೊಂಡಿರ್ದವನ ಸಂತಾನಕೆ . . . ಬೆಳೆಗೊಡುಗು (ತುರಂಗ. ೯೨-೦೯).

[ಬೆಳ್$_2$ + ಕೊಡು$_1$]

**ಬೆಳೆತ** (ನಾ). ಬೆಳೆಯುವುದು ; ಬೆಳವಣಿಗೆ : ಬೆಳೆತ ; ಅಭಿವೃದ್ಧಿ : ವೃದ್ಧಿ (Growth. ಇಂಕನ). 'ಬೆಳೆತಾಯ' ಪರ್ಯಾ. [ಬೆಳ್$_1$ + — ತ$_2$]

**ಬೆಳೆತಾಯ** (ನಾ). ವೃದ್ಧಿ ; ಹೆಚ್ಚಳ : ಈ ಅತಿರಿಕ್ತಮೂಲ್ಯವು ಕ್ರಯದ ಹಣದ ಬೆಲೆಯ ಬೆಳೆತಾಯವೂ ಅಲ್ಲ . . . ಅದೊಂದು ಸಾಮುದಾಯಿಕ ಸಾಮಾಜಿಕ ಘಟನೆ (ಪಶ್ಚಾದ. ೨೦೯). P 'ಉಳಿತಾಯ', 'ಮುಗಿತಾಯ' ಎಂಬ ಶಬ್ದಗಳ ಸಾಮ್ಯದಿಂದ ಮಾಡಿಕೊಂಡ ರೂಪವಿದು.

[ಬೆಳೆತ + ಆಯ$_4$]

**ಬೆಳೆದಾಳ್ದು** (ಕ್ರಿ). ಬೆಳೆಯನ್ನು ಹೊಂದು; ಸಸ್ಯಸಮೃದ್ಧವಾಗು : ಶರದಂ ಬರಲೊಡನೆ ಮೊಳೆಪೋದತ್ತಬ್ಬಕಂದಂ ಕೊಳದೊಳೆ ಬೆಳೆದಾಳ್ದತ್ತಿಳಾಮಂಡಳಂ (ರಾಜಶೇ. ೬-೨). [ಬೆಳ್$_2$ + ತಾಳ್ದು$_1$]

**ಬೆಳೆನೀರು** (ನಾ). ಬೆಳೆಗೆ ಬೇಕಾದ ನೀರು: ಪೈರಿಗೆ ಹಾಯಿಸುವ ನೀರು: ಜೆಡೆಗಳೇ ಬೇರುಗಳು ಗಂಗೆಯ ಮಡುವೆ ಬೆಳೆನೀರಂಗವೇ ತರು . . . ಎನಲ್ಕಾ ಮೃಡನೆನಿಪ ಮೂಲಾತ್ಮವೃಕ್ಷಮಾಹಾ ವಿರಾಜಿಸಿತು (ಶ್ರಷಂಕೀ. ೨-೦೪). [ಬೆಳ್$_2$ + ನೀರು$_1$ (< ನೀರ್) ]

**ಬೆಳೆನೆಲ** (ನಾ). ಬೆಳೆಯಲು ತಕ್ಕುದಾದ ಭೂಮಿ; ಸಾಗುವಳಿಜಮೀನು: ಬೆಳೆನೆಲನೊಂದು ಮೊಟ್ಟನೆಡೆಯುಂ ಬಿಡಲಿಲ್ಲದನೇಕಧಾನ್ಯಸಂಕುಳ ಬಹುವರ್ಣಪೂರ್ಣಕಣಿಶಾವಳಿಯಿಂ ನವರತ್ನರಾಶಿಯುಂ ಬೆಳೆದವೊಲಿರ್ಪುದು (ಅನಂಪು. ೦-೭೭). [ಬೆಳ್$_1$ + ನೆಲ]

**ಬೆಳೆಬಡ್ಡಿ** (ನಾ). ವೃದ್ಧಿಯಾಗುವ ಬಡ್ಡಿ ; ಚಕ್ರಬಡ್ಡಿ : ಬೆಳೆಬಡ್ಡಿಯಲು ವರುಷಕ್ಕೆ ಗದ್ಯಾಣಂ ಮೂವತುವನುಮಾ ಕೞೆಗೆ ಆ ತುಂಬಿಂಗೆ . . . ಆ ಮಹಾಜನಂಗಳು ನಡೆಸುತೆ ಬಹರು (ಎಕ. VI, ಕಡೂರು. ೯೨-೦೪ ; 1259 ?). [ಬೆಳ್$_1$ + ಬಡ್ಡಿ$_2$]

**ಬೆಳೆಯಿಡಿಸು** (ಕ್ರಿ). ಭೂಮಿಯಲ್ಲಿ ಬೆಳೆ ಬರುವಂತೆ ಮಾಡು : ಕ್ಷೇತ್ರಾಜೀವಃ, ಕರ್ಷಕಃ, ಕೃಷಿಕಃ, ಕೃಷೀವಲಃ—ಇ ಹೊಲಗದ್ದೆ ಮುಂತಾದ ಭೂಮಿಯ ಬೆಳೆಯಿಡಿಸಿ ಬದುಕುವವನ ಪೆಸರು (ನಿಘಂಟು. ೨೬೩).

[ಬೆಳ್$_2$ + ಇಡಿಸು$_1$ ]

**ಬೆಳೆಯಿಸು, ಬೆಳಸು$_1$, ಬೆಳೆಸು** (ಕ್ರಿ). ೧. ಗಿಡ ಮರಗಳು ವೃದ್ಧಿಯಾಗುವಂತೆ ಮಾಡು ; ಸಸ್ಯಾದಿಗಳನ್ನು ಬಳೆಸು : ಅನಿಬರುಂ ನಿತಂಬಿನಿಯರ್ . . . ಮುಂ ನೀರೆಱೆದು ನಡಪಿ ಬೆಳೆ[ಪಾಠಾಂ. ಬಳ] ಯಿಸಿದ ಬಾಳಾಶೋಕಪಾದಪಾದಿಗಳ್ಗೆ ಮುಕುಳಿತಾಂಜಲಿಯರಾಗಿ (ಅಜಪು. ೬-೦೧೦ ವ); ಜಿತರಿಪುಸುರೇಂದ್ರಮನ್ಯಕ್ಷಿತಿಪತಿ ರಿಪುನೃಪಕುಳಾಂಗನಾಜನ ಮನೂನ್ಮದ ತಬಾಷ್ಪಸಲಿಲಧಾರಾಪ್ರತಾನದಿಂ ಕೀರ್ತಿವಲ್ಲಿಯುಂ ಬೆಳೆ[ಪಾಠಾಂ. ಬಳ] ಯಿಸಿದಂ (ಕಂದಾವಾ. ೦-೦೩೭) ; ಕುದ್ದಾಲಹತಿಯನುಱೆ ತಾಳ್ದಿಮ್ಮನಿನ್ನೆಗಂ ಮುದ್ದಾಗೈದೀ ವಸುಧೆ ಬೆಳೆಯಿಸಿದಳು (ಕೃಶಾಮಾ. ೩-೩೦). ೨. ಅಭಿವೃದ್ಧಿಗೊಳಿಸು ; ಏಳಿಗೆಹೊಂದುವಂತೆ ಮಾಡು : ಉತ್ತರ ಕರ್ನಾಟಕದಲ್ಲಿ ಅಚ್ಚಗನ್ನಡತನವನ್ನು ಬೆಳೆಯಿಸಲು ದುಡಿದವರಲ್ಲಿ ಪ್ರಸ್ತುತ ಲೇಖಕರೊಬ್ಬರು (ಕಗದ್ಯ. ೩೪) . **ಬೆಳಸು$_1$** : ೧. ಕಂದುಗೊರಲನೊಳು ಕಾದಲ್ಕೆ ಸ್ಮರ ತನ್ನದೊಂದು ಬಿಲ್ಲದು ಸಾಲದೆಂದು ತಂದಿಲ್ಲಿ ಬೆಳಸಿದನೆಂಬಂತೆ ಬೆಳ್ಗಬ್ಬ ಸಂದಣಿಸಿತು ಬನಬನದಿ (ಮೋಹತ. ೨-೪೭) ; ಅಲರುವಿಲ್ಲಾಮೃಷ್ಟ ಬಾಣಗಳತಿಪ್ರಿಯದುಪದಕ್ಕಳಕರು ಜನರೆಂದು ಚಂದ್ರ ಅಳಿಯುವ ಬಿಲ್ಗೆ ಬೆಳಸಿದಂತೆ ಧವಳೇಕ್ಷುಗಳ ಗದ್ದೆ ರಾಜಿಸುತಿಹುವು (ಕಂಪರಾ. ೩-೭೪). ೩. ಪೋಷಿಸು ; ಸಾಕು : ಮೇದಿನಿಯೊಳಮ್ಮಮ್ಮ ತಾಯೋಪಾದಿಯಲಿ ಮೊಲೆಯೂಡಿ ಬೆಳ[ಪಾಠಾಂ. ಳ] ಸಲು ಬೆಳೆದೆ ಮಗನಾಗಿ (ಶಿಸಪು. ೨೩-೭). ೪. ಹೆಚ್ಚಿಸು; ಅಧಿಕಗೊಳಿಸು : ಪರಿಯ ಪಿಸುಣಿಕೆಯವರ ಚಿತ್ತವ ಬೆರಸಿ ವೈರವ ಬೆಳಸಿ ಬಂದವರು ಧರೆಯ ಭಾಗವ ಬೇಡಿ ಕದನವ ಮಸೆದರೆಮ್ಮೊಡನೆ (ಕುವ್ಯಾಕೀ. ೧ ೦೯) ; ನೀನಿಂದು ಮುಳಿದು ಮದಗೊಬ್ಬಿನಲಿ ವೈರವ ಬೆಳಸಿ

ಕೆಣಕಿದೊಡಾ ನೃಪಾಲಕತಿಲಕ ತೆಕ್ಕುವನೇ (ತೊರವೆ. ೩-೬-೪೦). ೫. ಉಂಟು ಮಾಡು ; ಹುಟ್ಟಿಸು : ಸಲಿಸಿದವನೋ ಮುನ್ನ ನೀನೆನ್ನವರ ಸಲಿಗೆಗಳ ನಿಲಿಸಿದವನೋ ಸೆಲೆಗೆ ಸೇರಿಸಿ ಬೆಳೆ[ಪಾಠಾಂ. ಳೆ]ಸಿದವನೋ (ಐಸಭೆ. ೪೦-೪೦). ೬. ಚಾಚು; ನೀಡು ; ನೀಳವಾಗಿಸು : ಪವನಾಭ್ಯಾಸಂಗಳಿಂದಭ್ಯಾಸಯೋಗಕ್ರಮಕ್ರಮಂಗಳಿಂ ಜಿಹ್ವೆಯು ಬೆಳಸಿ ಹಠಸಮ್ಮಿಶ್ರದಿಂ ಷಡಾಧಾರದ ಪಶ್ಚಿಮದ ಪಥವಿಡಿದು ಪ್ರಾಣಪವನನ ಮಸ್ತಕಕ್ಕೇಱಿಸಿ . . . ಮುಕ್ತ್ಯಾಂಬಿಕೆಯೊಡಗೂಡುವುದು ಲಂಬಿಕಾಯೋಗ (ಅವಪ. ೨೯-೮೭); ಉಱುವ ಬಾಲವ ಬೆಳಸಿ ದಾರಿಯ ತೆಱಪುಗೊಡದೆಡೆಯೊಡ್ಡಿ ಮನುಜನ ಮುಱುಕವನು ತಾ ಕಾಂಬೆನೆನ್ನೆನುತಿರ್ದನಾ ಹನುಮ (ಕುವ್ಯಾ.ಆ. ೬೦೩. ೦೦-೦೪). ೭. [ಗಣಿತ] ಗುಣಾಕಾರಮಾಡು ; ಗುಣಿಸು : ತಿದಿಪೊಯ್ ಪೆರ್ಚಿಸು . . . ಬಳಯಿಸು . . . ಬೆಳಸೆಂದು ಇಂತಿನಿತುಂ ಗುಣಿಸಿರ್ಪುದಕ್ಕೆ ಪೆಸರು (ವ್ಯವಗ. ೦೧-೦೦). **ಬೆಳಿಸು :** ೧. ಮೂಱಡಿ ತೂಪುಮ್ಮಂ ದೇವಭೋಗದಿಂ ಕಬನಿ ಫಲಮಾ ಕೊಣ್ಡು ಬೆಳಿಸಿ ನಾಗೊಪ್ಪೆಯುಂ ಸಾಲೆ ಊಳುವದು (ಎಕ. X, ಕೋಲಾರ. ೦೦-೯ ; ಸಂ. 753) ; ಇಳೆಯೊಳದಂಕುರಿಸಿ ಹರಿತ್ಸ್ಥಳದೊಳ್ ವರ್ಧಿಸಿಯೆ ನೀಳ್ದು ಗಗನಕ್ಕಸುಪೃತ್ಸ್ವಕನಾರೀ[ನಯನಾಂ]ಬುವೆ ಬೆಳಿಸಿದುದೆನೆ ಕೀರ್ತಿವಲ್ಲಿಯುಂ ಸತ್ತಿಗನಾ (ಗದಾಯು. ೦೦-೬); ತಿಳಿದ ಮಾತೆ ಪೊಳಿಸಿದಂತೆ ಎದೆಯ ಬೀಜ ಬೆಳಿಸಿದಂತೆ ಭಾವನಾದದಂತೆವೋಲ್ (ಸೂರ್ಯೋದ. ೬೦-೦೩). ೪. ಆನೆಗೊಂದಿ ವೆಂಕಟಪತಿರಾಯರು ಈ ರಾಜಒಡೆಯರವರ ಸಂಗಡ ಸ್ನೇಹವಂ ಬೆಳಿಸಬೇಕು (ಮೈಚಾಪಂ. I, ೨೩). [ಬೆಳ್$_1$ + — ಇಸು$_3$]

**ಬೆಳೆವಣಿಗೆ** 'ಬೆಳವಣಿಗೆ' ನೋ.

**ಬೆಳೆವತ್ತರ್** (ನಾ). ಬೆಳೆಯುವ ಭೂಮಿ : ಊರೂರ್ಗಳ್ದಪ್ಪದೆ ಮಾದಾಳಂ ಬೆಳೆವತ್ತರಂ ಪಡಲ್ದಾಣಮುನಾಹಾರಮುನಾರ್ಪಡೆಯುಮುನೀವಾರಿತಮೂರ್ತೀವರೆಂದುಮಾ ನಾಡವರ್ಗಳ್ (ವರ್ಧಮಾ. ೦೦-೮). P ಈ ಪದ್ಯದ ಅರ್ಥ ಕ್ಲಿಷ್ಟವಾಗಿದೆ. [ಬೆಳ್$_1$ + ಮತ್ತರ್ (< ಮತ್ತಲ್) ]

**ಬೆಳೆವಳಿಗೆ** 'ಬೆಳವಣಿಗೆ' ನೋ.

**ಬೆಳೆವೊಲ,** ಬೆಳೆಹೊಲ (ನಾ). ಬೆಳೆದ ಹೊಲ ; ಪೈರಿನಿಂದ ತುಂಬಿದ ಭೂಮಿ : ಬೆಳೆವೊಲನೆತ್ತಲುಂ ಕಿಱಿದೆ ಪರ್ವಿದ ಪೆರ್ವಟ್ಟೆ (ಶಬ್ದ. ಪ. ೬೬ ಶ್ರೀಕ್ಷೇ); ಅಳಿಯನ ಪಡೆಮು ನಾಲ್ವತ್ತೆಂಟುಗಾವುದದಳತೆಯೊಳೊಡ್ಡಿ ರತ್ನಗಳ ಬೆಳೆವೊಲದಂತೆ ಸಿಂಗರಿಸಿರ್ದ ಕಟಕಗ್ಗದಳವ ಕಂಡತ್ತ ಬೀಗಿದಳು (ಶಶಿ. ೩೯-೯೩); ಬೆಳೆವೊಲಂ ಗೆಯ್ಮೆಯುಂ ಗಾಳಿಯುಂ ತೂಗುತಿರೆ ಗಿಳಿವಳಗ ಮೊಲ್ಲುಲಿಯು ಒಸಗೆಯೆನೆ ಬರಲು (ಕಾಲೂರ. ೩೬-೪೨). **ಬೆಳೆಹೊಲ :** ಕೆಳಗೆ ಬೆಳೆಹೊಲ ಕಪ್ಪು, ಮೇಲೆ ಬಾನಬೊಲ ಕಪ್ಪು, ಬೆಟ್ಟಗಳು ಕಪ್ಪು (ಹೊಂಗಳ. ೦೩-೨೨). [ಬೆಳ್$_2$ + ಪೊಲ]

**ಬೆಳೆಸಾಲು,** ಬೆಳಸಾಲು (ನಾ). ಪೈರಿನ ಸಾಲು . **ಬೆಳಸಾಲು :** (ಕ). **ಬೆಳೆಸಾಲ ಕುಂಟೆ, ಬೆಳಸಾಲ ಕುಂಟೆ**=ಪೈರಿನ ಸಾಲುಗಳ ನಡುವೆ ಪರಗಿ, ಕಳೆಯನ್ನು ತೆಗೆಯಲು ಉಪಯೋಗಿಸುವ ಒಂದು ಬಗೆಯ ಸಾಧನ ; ಎಡೆಕುಂಟೆ : (ಕ). [ಬೆಳ್$_2$+ಸಾಲು$_2$ (<ಸಾಲ್$_3$) ]

**ಬೆಳೆಸು** 'ಬೆಳೆಯಿಸು' ನೋ.

**ಬೆಳೆಹೊಲ** 'ಬೆಳೆವೊಲ' ನೋ.

**ಬೆಳೊಡಕಿಲು** 'ಬೆಳ್ಳಡಕಿಲ್' ನೋ.

**ಬೆಳ್ಕನೂರ್** (ನಾ). ಒಂದು ಊರಿನ ಹೆಸರು : ದಕ್ಷಿಣಸ್ಯಾಂ ದಿಶಿ ಬೆಳ್ಕನೂರ್ ಗ್ರಾಮು (ಇಆ. VII, ೦೦೩-೨೭; ೦೦ನೆಯ ಶತ). [? +ಊರ್]

**ಬೆಳ್ಕರಿಸು,** ಬೆಳುಕರಿಸು (ಕ್ರಿ). ೧. ಬಿಳುಪಾಗು; ಬಿಳಿಯ ಬಣ್ಣವನ್ನು ಹೊಂದು : ನೊಸಲೊಳಿಕ್ಕಿದ ಮುಂದಪಪ್ಪ ಚಂದನದಣ್ಪಿನಿಂ ಪತ್ತಿ ಪಗಿಲ್ತು ಬೆಳ್ಕರಿಸಿದಳಕನಿಕರಮುಂ . . . ಎನ್ನೊಳಳವಡೆ (ಕಾದಂಪೂ. ೪೯೦); ಮುರಿದ ತೊಡಂಬೆಯೊಳ್ಮೊನಸಿ ತೋರ್ಪ ಪಸುರ್ಪನೆ ಪೋಗೆ ಬೀಗಿ ಬೆಳ್ಕರಿಸಿದ ಮೊಗ್ಗೆ ಕೂಡೆ ಬಿಳಿದಾದ ಮುಗುಳ್ (ಮಲ್ಲಿಪು. ೩-೪೭) ; ಬೆಳ್ಳಿಕಟ್ಟು ಬೆಳ್ಕರಿಪುದು ಕಿಪ್ಪುನೆಂದು ರಜತಾದ್ರಿಯಿನಿಳಿಯೆ ಬಂದು ನಿಲ್ವಿನಂ ಗಿರಿಪತಿ ಶಂಭುಮಂದಿರಮುನೆತ್ತಿಸಿದಂ ಗುಣಿಕೂಸಚಟ್ಟಿಯುಂ (ಎಕ. V, ಬೇಲೂರು. ೦೯೩-೯೩; 1161). **ಬೆಳುಕರಿಸು :** ೧. ನರೆ ನೆಗೆದು ಬೆಳುಕರಿಸಿ ತ್ರಲೆಗೆ ತಲೆದೋಱುತಿರೆ ಪರಕರಿಸಿ ಹಂಜಿಯುಂ ಹಂಜರಿಸಿ (ಬಿಂದೋರ. ೨-೦೦). ೨. ನಿಸ್ತೇಜವಾಗು ; ಬಿಳಿಚಿಕೊಳ್ಳು : ಪೊಳೆವ ಮೊಗ ಬೆಳುಕರಿಸದೆನೆ ಕೋಮಲೆ ತಳೆದ ಗರ್ಭವದು ವಸುಧಾತಳದೊಳತಿ ಸೋಜಿಗವು ಭಾವಿಸುವೊಡೆ ಜಿನಾಂಬಿಕೆಯಾ (ಸಾಳ್ವಭಾ. ೩೨-೩೯).

[ < ಬೆಳ್$_1$ + — ಇಸು$_3$ ]

**ಬೆಳ್ಕಾಡು** 'ಬೆಂಗಾಡು' ನೋ.

**ಬೆಳ್ಕು$_1$,** ಬಳುಂಕು, ಬಳುಕು$_1$, ಬಳ್ಕು$_1$ (ಕ್ರಿ). ೧. ಅಂಜು ; ಹೆದರು. P 'ಬೆಳ್ಕು' ಎಂಬುದಕ್ಕೆ ಕ್ರಿಯಾರ್ಥವಲ್ಲಿ ಕನ್ನಡದ ಪ್ರಯೋಗ ಸಿಕ್ಕಿರುವುದಿಲ್ಲ. 'ಬೆಳ್ಕುಱು' ಎಂಬ ಶಬ್ದದಲ್ಲಿ ನಾಮಾರ್ಥವಲ್ಲಿ 'ಬೆಳ್ಕು' ಎಂಬುದು ಉಪಲಬ್ಧವಾಗಿರುವುದರಿಂದ ಕ್ರಿಯಾರ್ಥದಲ್ಲಿಯೂ ಇದು ಪ್ರಯೋಗದಲ್ಲಿದ್ದಿರಬಹುದು ಎಂಬ ಆಧಾರದ ಮೇಲೆ ಇದನ್ನು ಮುಖ್ಯೋಲ್ಲೇಖ ಮಾಡಲಾಗಿದೆ. **ಬಳುಂಕು :** ೨. ಬಾಗು; ಬಗ್ಗು : ಕೊರಲೊಳ್ ತಳ್ತಗ್ಗಳಂ ತೊಂಗಲ ಪೊರಜೆವೊಲಿಂ ಬಾಗೆ ಬಾಲಂ ಬಳುಂಕುತ್ತಿರೆ ಗಾತ್ರಂ ನೆತ್ತಿಯೊಳ್ ನಟ್ಟುಗುರುಗಿಯೆ (ಲೀಲಾವ. ೮-೨೪); ಉಲಿಯೆ ಕಲಕಾಂಚಿ ಮುಡಿಯಿಂದಲರುಗೆ ಬಡನಡು ಬಳುಂಕೆ (ರಾಜಶೇ. ೦೦-೬). P ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಬಳುಕು$_1$ :** ೧. ಬಾಡುತಂ ಬಳುಕುತಂ ಹೆಜ್ಜೆಮೆಟ್ಟ ಭೀತಿಯಿಂ ಕಿಲಸಾರ್ದು (ತಿರುರ. ದೇ. ೦೩-೨೦); ಅಳುಕುತ್ತ ಬಳುಕುತ್ತ ತಂದೆ ಕರುಣಿಸು ವಿಶಾಪವನೆಂದು (ಸಿದ್ಧರಾ. ೦-೨೩); ದೋಸವುಂ ಕಂಡೊಡಾಂ ಬಳುಕುವೆಂ (ಶಾಪಕಂ. ೪-೦೦). ೨. ಲಲನೆ ಸುಳಿದಳು ಕುಚದ ಭಾರಕೆ ಬಳುಕೆ ನಡು . . . ಸುಳಿಗುರುಳೊಲೆಯಲಾ ಕಲಿಭೀಮ ನಿದಿರಿನಲಿ (ಕುವ್ಯಾ.ಆ. ೯-೦೪); ನಡು ಬಳುಕಲ್ ಕುಚಂ ಕುಣಿಯೆ. . . ರಾಜಶೇಖರಗೆಣ್ಣಿಯನೊಲ್ದು ಪೂಸಿದಳ್ (ಕಾವ್ಯಸಾ. ೬೩೦). ೩. ತೊನೆದಾಡು; ಒಲೆದಾಡು : ಭೂವನಿತೆಗೆ ಮಂಡಿಸುವ ತೆಱದಿಂದ ಬಾಗಿ ಬಳುಕುವ ತೆನೆಗಳಿಂದ (ಸಿದ್ಧರಾ. ೨-೨೩) **ಬಳ್ಕು$_1$:** ೧. ಭಾನುಮತಿ. . . ಲಂಬಣಾಂ ಪಱಿಯೆ ಮುತ್ತಿನ ಕೆಡನೆ ನೋಡಿ ನೋಡಿ ಬಳ್ಕುತ್ತಿರೆ (ಕಂಕಭಾ. ೯-೬೯); ಗಾಂಧಾರಿ ಮನದೊಳಳ್ಕಿ ಬಳ್ಕಿ ನನೆಕೊಳನೆವೋಗಿ (ಗದಾಯು. ೩-೬೬ ವ). ೨. "ಬಳ್ಕು_ನಮನೇ" (ಶಮಂಧಾ); ತುಡಿ[ಸದೆ] ಹಾರವುಂ ಪೊಲೆಯ ಬಿಣ್ಪನೊಳಂ ನಡು ಬಳ್ಕದಪ್ಪುದು (ಕಂಕಭಾ. ೩-೪೬); ಬಲ್ಪೊಂಬಳೆಯಿಂ ಬಳ್ಕಿತ್ತು ಕೌಂಗು (ಕಾದಂಉ. ೬೭೮); ಜಂಬುಕನ ಕೋಪದೊಳ್ ವಾರಣದ ರೋಮಂಗಳೇಂ ಬಳ್ಕದಪ್ಪುವೆ (ಜಬಿಪು. ೨೦-೬).

[ದೇ.II ತಮಿ. ವೆಳ್ಕು; ತುಳು. ಬಳಕು, ಬಳುಕು, ಬೊಳಕು; ತೆಲು. ವಡಕು- ವಣಕು]

**ಬೆಳ್ಕು$_2$,** ಬಳುಕು$_2$, ಬಳ್ಕು$_2$ (ನಾ). ೧. ಹೆದರಿಕೆ ; ಅಂಜಿಕೆ: ಭಯ : 'ಬೆಳ್ಕುಱು$_1$' ಪರಾ. **ಬಳುಕು$_2$ :** ೨. ಒಲೆದಾಟ; ತೊನೆತ : ಗಿಡಬಳ್ಳಿಗಳ ಬಗೆಬಗೆಯ ಬಳುಕು. . . ಒಂದು ಬಗೆಯ ರೂಪರುಚಿಯನ್ನುಂಟುಮಾಡಿವೆ (ಸೌಂದರ. ೨). **ಬಳ್ಕು$_2$:** ೧. 'ಬಳ್ಕುಱು' ಪರಾ. ೩. ನಡುಕ; ಕಂಪನ : 'ಬಳ್ಕುವೋಗು' ಪರಾ.

**ಬೆಳ್ಕನೆವೋಗು**= ಅಂಜು ; ಹೆದರು : ನಾಕಚ್ಯುತಿಯಾನಾಗಳೆಱದು ಮನದೊಳಳ್ಕಿ ಬೆಳ್ಕನೆವೋಗಿ (ಆದಿಪು. ೩-೩ ವ). [<ಬೆಳ್ಕು$_1$]

**ಬೆಳ್ಕುತ್ತ** 'ಬೆಳ್ಕುಱು$_1$' ಪರಾ.

**ಬೆಳ್ಕುತ್ತು** 'ಬೆಳ್ಕುಱು$_1$' ಪರಾ.

**ಬೆಳ್ಕುರು** 'ಬೆಳ್ಕುಱು$_2$' ನೋ.

**ಬೆಳ್ಕುಱು$_1$**, ಬಳ್ಕುಱು (ಕ್ರಿ). ಬೆಳ್ಕುತ್ತ (ಭೂತಕೃ), ಬೆಳ್ಕುತ್ತು (ಭೂತನ್ಯೂ). ೧. ಭಯಪಡು; ಅಂಜು; ಹೆದರು : "ಬೆಳ್ಕುಱು–ಭಯೇ" (ಶಬ್ದಾ. ೫); ಮತ್ತನಯನರಸನನುಜನ ಸತ್ಕಟಿಲಂ ನಿನ್ನೊಳ್ ಜನಿಲೆಂದಿರ್ದೆಂ ಬೆಳ್ಕುತ್ತಿರ್ದೆನಪ್ಪೊಡೇತೊದಳಿತ್ತಣ ದಿನನಾಥನಿತ್ತ ಮೂಡುಗುಮಲ್ತೇ (ಕ್ರಿಶಪಾ. ೦೩-೦೭೯); ಅಱಿಪಿದುದು ರೌದ್ರರಸವಂ ನಿಱಿಸಿದ ಕುಡುವುರ್ವು ಕರ್ಚಿದೌಡುರ್ಚಿದ ಬಾಳ್ ಇಱಿಯಲನುಗೆಯ್ದ ಕೈ ಬೆಳ್ಕುಱೆ ಬಿಟ್ಟನೆ ಬಿಟ್ಟ ಕಣ್ಗಳಾರೋಹಕರಾ (ಗದಾಯು. ೪-೨೭); ಗೋಪಾಲಕರ್ ಬೆಳ್ಕುಱೆ ದೈತ್ಯರ್ ಪೋಗೆ ಕೃಷ್ಣಂ ರವುಕರಗಿನಿಸಂ ಗೆಲ್ಲವೀವಂತೆ ಪೋರ್ದಂ (ಜಗಪು. ೬-೫೨). ೨. ನಡುಗು; ಕಂಪಿಸು : ತನುವಂ ತೀವ್ರಾನಿಳೋಗ್ರಾಸಿ ಭೇದಿಸೆ ಬೆಳ್ಕುತ್ತೆ ವಿಶೀರ್ಣ ಧೈರ್ಯರ್ಕವಚರ್ (ವರ್ಧಪು. ೧೧-೪೦); ಅಳ್ಕದೆ ಚಿತ್ತದೊಳ್ ಬೆದಱೆ ಬೆಳ್ಕುಱದುಗ್ರತಪೋನುತಾಪದಿಂ ಬಳ್ಕದೆ ನೋಂಪಿಯಿಂ ಗೊಳಗೆ ವಂದ ಶರೀರಗುಣಾನುರೋಧದೊಳ್ ತಳ್ಕಱದಿರ್ದು ಜೀವಶರವಂ ಬಿಡೆ ಧಾರ್ಮಿಕಚಕ್ರವರ್ತಿ (ಕಸಂಪು. ೪-೩೯). **ಬಳ್ಕುಱು** : ೧. ಕಿಂಪುರುಷರಾವ ಭುಜಬಲದ ಸೊರ್ಕಿಂ ಪುರುಷಸಿಂಹನೊಳ್ ಪೋಣರ್ವೆಮೆಂದು ಬಳ್ಕುಱೆ ಯುಂ (ಚಗಪು. ೦೩-೭೭, ೫); ಎಱಗುವ ತುಂಬಿವಿಂಡಗಿಯೆ ಬಗ್ಗಿಪ ಕೋಗಿಲೆ ಕೊಂಬುಗೊಂಡು ಬಳ್ಕುಱೆ . . . ಬಾಂದೊಱೆದಲೆಯಂ ಕನಲ್ದು ನಡೆತಂದು ಬಸಂತನ ಸೊರ್ಕು ಸೋರ್ವಿನಂ ಮುಂದೆ ನಿಂದು (ಅಭ್ಯಾ. ೩೭೦). 'ಅಳ್ಕುಱು' ಪರಾ. [ ಬೆಳ್ಕು$_2$ + ಉಱು ]

**ಬೆಳ್ಕುಱು$_2$**, ಬೆಳ್ಕುರು (ನಾ). ಅಂಜಿಕೆ ; ಹೆದರಿಕೆ ; ಭಯ : ಕಟೋಜನ ಬಂದಿಯೋಲಾದ ಆವಿನಂತಿರೆ ಮುನಿಕಾಂತೆ ಬೆಳ್ಕುಱಿಂ ಸಿಡಿಮಿಡಿಗೊಂಡು ದೆಸೆಗೆಟ್ಟು ಬಾಯ್ಬಿಟ್ಟು ಪಿಂದೆಸೆಯುನೆ ನೋಡಿನೋಡಿ . . . ಕೇಱಿದಳ್ (ರಾಜಶೇಖ. ೬೪-೨೮). **ಬೆಳ್ಕುರು** : ಅಳ್ಕೆಯನ್ನೆಲ್ಲಿರ್ಪುದಟ್ಟಾಳ್ಗಳ ಕೈತರಲ್ ಬೆಳ್ಕುರೇಂ ಬಡಿದಿಕ್ಕಿ ನಿಮ್ಮದೇನೊಸಗೆ ಆಳ್ದಾಳ್ಗೆ ಮುಂದೆಲ್ಲಿ ಬಾಳ್ವೆಯಿರ್ಪುದು ! ತಡೆಗೆ ! (ಶಾಂಚಿರ. ೦೬೦-೩೫೫). [ <ಬೆಳ್ಕುಱು$_1$ ]

**ಬೆಳ್ಗಂಗೆ** (ನಾ). ಶುಭ್ರವಾದ ಗಂಗಾನದಿ : ಸಿರಿಬಾಣೆಯ ಪೆತ್ತ ಸೊದೆಗಡಲಿಳೆಯ ತಾತ್ಪರಿಯದಿ ನೋಡಬಂದಂತೆ ಮುಱಿಮುಱಿದುರ್ವಿಯಾ ತಳದಲ್ಲಿ ಮುಂಕೊಂಡು ಪರಿದಳು ತುಂಗ ಬೆಳ್ಗಂಗೆ (ಪೋಹಚ. ೬-೫೫). [ ಬೆಳ್$_1$ ( < ಬಿಳಿದು ) + ಗಂಗೆ$_2$ ]

**ಬೆಳ್ಗಂಡ** (ನಾ). ತಿಳಿವಳಿಕೆಯಿಲ್ಲದವನು ; ಮೂಢ : ತಪೋಧನರೆಂಬ ಮಹಾಸಮುದ್ರಮುಮಂ ಶೋಷಿಸುವ ಕಲಿಕಾಲರಾಜನ ಮಹಾ ಪ್ರತಾಪಾಗ್ನಿ ಗೃಹಸ್ಥರೆಂಬ ಬೆಳ್ಗಂಡರುಮನುಱಿಪುಲೀಗುವೆ (ಕೀಪಸಂ. ೦೦೨-೨೦). [ ಬೆಳ್$_2$ + ಗಂಡ$_1$ ]

**ಬೆಳ್ಗಡಲ್** (ನಾ). ಬಿಳಿಯ ಕಡಲು; ಶ್ವೇತಸಮುದ್ರ : ಬಳ್ಳಳ ನೀಳ್ದ ಕಣ್ಮಲರ ತಳ್ತೆಮೆಯಿಂ ಕರೆಗಣ್ಮಿ ಬೆಳ್ಗಡಲ್ಗಳ್ವರಿಯಲ್ಕಮಾಟಿಸಿದೊಡೊಯ್ಯನೆ ಮಂಗಳ [ಭಂಗ]ಭೀತಿಯಿಂ ತಳ್ವದೆ ಮಾಡೆ ಬಾಷ್ಪಜಳಮಂ ಕಳೆದಟ್ಟಿಐ ನೀಯೆ (ಕಂಕಪಾ. ೭-೩೮). [ ಬೆಳ್$_1$ ( < ಬಿಳಿದು ) + ಕಡಲ್$_2$ ]

**ಬೆಳ್ಗತ್ತೆ** 'ಬೆಳ್ಗಟ್ಟಿ' ನೋ.

**ಬೆಳ್ಗದಿರ್**, ಬೆಳುಗದಿರು (ನಾ). ಚಂದ್ರನ ಬಿಳಿಯದಾದ ಕಿರಣ : ದೆಸೆಯಂ ಬಾಸಣಿಸುತ್ತೆ ಬೆಳ್ಗದಿರಿನಿಂ ಪಣ್ಯಾಂಗನಾವೀಧಿಯೊಳ್ . . . ತಾರಾವಳಿದೀವಂಗಳಿಂ ಹಸನಾಯಿತ್ತು ಪುರಂ ಗೃಹಾಂಗನೆಯರಿಂ ಚಂದ್ರೋದಯಾನಂದದೊಳ್? (ಸೂಕ್ತಿಸು. ೬-೨೩೬); ಈಶ್ವರಮಾತಸುಧಾಬ್ಧಿ ವರ್ಧಿಸೆ ಕರವೆಸೆದುದು ತನ್ನುಪೇಂದು ನಗೆವೆಳ್ಗದಿರಿಂ(ಕೃಕಪಿ.೫೬-೬೮). **ಬೆಳುಗದಿರು**: 'ಬೆಳುಗದಿರ' ಪರಾ. [ ಬೆಳ್$_1$ ( < ಬಿಳಿದು ) + ಕದಿರ್$_2$ ]

**ಬೆಳ್ಗದಿರ**, ಬೆಳುಗದಿರ (ನಾ). ಬಿಳಿಯ ಕಿರಣಗಳನ್ನುಳ್ಳವನು ; ಚಂದ್ರ : "ಜೊನ್ನೊಡಲಂ . . . ಬೆಳ್ಗದಿರಂ, ಇರುಳರಸಂ, ಚಂದಿರಂ . . . ತಿಂಗಳ್ ಈ ೨೦ ಚಂದ್ರನ ಪೆಸರ್" (ಕಚಾ. ೪೮-೨೩); ಸಿರಿಗೆ ಮನ್ಮಥ ಸರಿತ್ಪತಿಯು ದರದಲಿ ಬೆಳ್ಗದಿರ (ರುಕ್ಮಾಂಗ. ೪-೭). **ಬೆಳುಗದಿರ** : ಕಾಯುಘನಕಟ ನಡಸಿದ ವಿಚಾರಣೆಯ ಕಟ್ಟನೀತಿಗೆ ಹೇಸಿ ಬೆಳುಗದಿರನಿಳಿವೋಗೆ (ಗೂರ್ಜಾಂಖಾ. ೦-೪). [ಬೆಳ್ಗದಿರ್ + —ಅ$_7$]

**ಬೆಳ್ಗನ್ನಡ**, ಬೆಳುಗನ್ನಡ (ನಾ). ಶುದ್ಧವಾದ ಕನ್ನಡ ಭಾಷೆ; ಅಚ್ಚಗನ್ನಡ: ಅಜ್ಜನ ಹೆಸರು ಕನ್ನಡವೆಂದಷ್ಟೆ . . . ಅವನ ಹಿಂದಿನವನದು ಬೆಳ್ಗನ್ನಡ ವೆಂದಾಗಿರಬಹುದಂತೆ (ಸಪದಾ. 1, ೪೪೫). **ಬೆಳುಗನ್ನಡ** : ಒಳುಗನ್ನಡ ಬೆಳುಗನ್ನಡ ಪಳೆಗನ್ನಡ ದೇಶೀಯುಂಗಳಾ ಕನ್ನಡವಂ ತಿಳಿ ಸಕ್ಕದಗನ್ನಡ ಮುಮುಮನಿಳೆಯೊಳ್ಕವಿತಾಮಹಾತ್ಮೆಯಿಂ ಪೊಱೆವ ನರಂ (ಶಬಶ. ೪-೨); ನಿಜಗುಣಶಿವಯೋಗಿ ಬೆಳುಗನ್ನಡವಾದ ವಚನರಚನೆಗಳಿಂ ವಿವೇಕಚಿಂತಾಮಣಿಯೆಂಬ ಪ್ರಕರಣಮಂ ಪೇಳ್ದನು (ವಿಪೇಕ. ೦). [ಬೆಳ್$_1$ (<ಬಿಳಿದು) + ಕನ್ನಡ$_1$]

**ಬೆಳ್ಗಬ್ಬು** 'ಬೆಳ್ಗಬ್ಬು' ನೋ.

**ಬೆಳ್ಗರು** (ನಾ). (ಚದುರಂಗದಾಟದಲ್ಲಿ ಬಳಸುವ ಆನೆ, ಕುದುರೆ ಮುಂತಾದ) ಬಿಳಿಯ ಬಣ್ಣದ ಕಾಯಿ : ಒದವಿದ ತಾರಗೆಗಳ್ ನಿಲ್ಲದವೆಲ್ಲಂ ಪರೆದು ಪೋಗೆ ಬೆಳಗಪ್ಪಾಗಳ್ ಚದುರಂಗದ ಬೆಳ್ಗರುವುದುಗಿದ ನೀಲದ ಮಣಿ[ಣೆ]ಯ ಮಾಟಕ್ಕಿಯಾಯ್ತಾಕಾಶಂ (ಸೂಕ್ತಿಸು. ೪-೬). [ಬೆಳ್$_1$ (<ಬಿಳಿದು) + ಕರು$_2$]

**ಬೆಳ್ಗರೆ** (ಕ್ರಿ). (ದಿಗ್ಭ್ರಮೆಯಿಂದ) ಕೂಗಿಕೊಳ್ಳು; ಆಕ್ರಂದನ ಮಾಡು; ಚೀರು : ಇಟ್ಟಣಿಸಿದ ಕೋಪದಿಂದ ಬಿಲ್ಲೊಳು ಶರದೊಟ್ಟಾಮಿಗಗಳನೆಸಲು ತೊಟ್ಟನೆ ಬೆಳ್ಗರೆವುತ ತಮ್ಮಸುವನು ಬಿಟ್ಟು ನೆಲಕೆ ಬೀಳ್ದುದಾಗ (ಹೇಬಸಂ. ೬-೦೮); ಬೆಬ್ಬಳಿಪಸು ಬೆಳ್ಗರೆವ ಕೊರಲು ಮೆಯ್ಯ ಹಬ್ಬಿದ ನಡುಕ ಹೊಮ್ಮಳ್ಳೆ ದಬ್ಬುದಲೆಯ ಮಾತು ದುಱುದುಱು ಗಣ್ಣೆಂದುಬ್ಬಸಗೊಳುತಿದ್ದನವನು (ಶ್ರೀಪಾಂ. ೮-೬೨); ಮಱುಗಿ ಬಾಯ್ಬಿಟ್ಟು ಬೆಳ್ಗರೆದು ತಱುಗಿದ ನೋವಿನೊಳಗೆ ಸಾವುತಿರ್ಪನ ನೆಱೆ ಕಂಡು ಮಱುಗರಯ್ಯಯ್ಯೊ (ಅಪಂಕ. ೦೨-೦೨೬). [ಬೆಳ್$_2$ + ಕರೆ$_1$]

**ಬೆಳ್ಗರ್ಬು**, ಬೆಳ್ಗಬ್ಬು (ನಾ). ಬಿಳಿಯ ಬಣ್ಣದ ಒಂದು ಬಗೆಯ ಕಬ್ಬು; ರಸದಾಳಿ : ಬೆಳ್ಗರ್ಬಿನ ಮೆಲ್ಬಿಲ್ಲೇವುದೊಗೆದ ಕಾಮನ ಬಿಲ್ಲುಳ್ಳೊಡೆನುತ್ತೆ ಕಂತು ಮುಯ್ಯಾಂತಿರ್ಪಂ (ಶಂಕ್ರಪು. ೪-೯೩); ಕಂದು ಗೊರಲನೂಳು ಕಾದಲ್ಕೆ ಸ್ಮರ ತನ್ನದೊಂದು ಬಿಲ್ಲದು ಸಾಲದೆಂದು ತಂದಿಲ್ಲಿ ಬೆಳೆಸಿದನೆಂಬಂತೆ ಬೆಳ್ಗರ್ಬು ಸಂದಣಿಸಿತು ಬನಬನದಿ (ಮೋಹಚ. ೨-೪೭). **ಬೆಳ್ಗಬ್ಬು** : ಗಿಣ್ಣುಗೊಳ್ಳದ ಬೆಳ್ಗಬ್ಬಿನ ರಸದಂತೆ ಬಣ್ಣಿಸುವೆನು ಕಥಾಮೃತವ (ಪೋಹಚ. ೪-೨). [ ಬೆಳ್$_1$ (<ಬಿಳಿದು) + ಕರ್ಬು (<ಕರ್ವು$_1$) ]

**ಬೆಳ್ಗಲ್** (ನಾ). ೧. ಬಿಳುಪಾದ ಕಲ್ಲು. ೨. ಒಂದು ಸ್ಥಳದ ಹೆಸರು : ಅನ್ತೆ ಬನ್ದು ಬೆಳ್ಗಲ್ಲೊಱಡೆ ತೆಂಕಾಯ್ನೋಡಿಂ ಕೊಣ್ಡಾರಿಪ್ಪಣಸಿವ (ಎಕ. VI (R), ಶ್ರೀರಂಗ. ೬೬-೩೪; ಸು. 800); ಚಂಚರಿವಳ್ಳದ ತಿ(ತೀ)ರಮ ಸನ್ನಾ ಬೆಳ್ಗಲ ಸರಡೆ ಅನವಂಗೆಜಿಯ ಉತ್ತರಶೃಂಖ(ಗ)ದ × × × (ಇಕ. VIII, ೨೦೩-೨೭; 10ನೆಯ ಶತ). [ಬೆಳ್$_1$ (<ಬಿಳಿದು) + ಕಲ್$_3$]

**ಬೆಳ್ಗಲಿ** (ನಾ). ಒಂದು ಸ್ಥಳದ ಹೆಸರು : ಶ್ರೀಮತ್ ಬಂಕೆಯರಸರ(ರ್) ಬನವಾಸಿಪನ್ನಿಚ್ಛಾಸಿರಮುಮಾನ್ಪೆಳ್ಗಲಿಮೂನೂಱುಮಾಂ . . . ಆಳುತ್ತಿರೆ (ಎಇ. VII, ೨೦೩-೬; 874); ಶ್ರೀಮತ್ ಸತ್ಯವಾಕ್ಯಪೆರ್ಮಾನಡಿಯು ಗೊಟ್ಟ ಕಲ್ನಾಟು ಬೆಳ್ಗಲಿಯ ನಿಗ್ಗೆಂದ ಜಗ್ಗಿಯರಸರ್ಗೆ ಕೊಟ್ಟರ್ (ಎಕ. V, ಅರಕೆ. ೬೦-೪; 920). [ ? ]

ಗಳುಡಿದು ಬಿದ್ದವು ಕೇಣವಿಲ್ಲದೆ ತಱಿದನರಿಬಲವ (ಕುಸ್ಮಾ.ಶೀ. ೯-೦೨).
[ ಬೆಳ್$_1$ (<ಬಿಳಿದು) + ಕೊಡೆ$_2$ ]

**ಬೆಳ್ಗೊಳ,** ಬೆಳುಗುಳ, ಬೆಳುಗೊಳ, ಬೆಳ್ಗುಳ, ಬೆಳ್ಳುಗೊಳ, ವೆಳ್ಗೊಳ (ನಾ). ಒಂದು ಊರಿನ ಹೆಸರು ; **P** ಈಗಿನ ಹಾಸನ ಜಿಲ್ಲೆಯ ಶ್ರವಣಬೆಳಗೊಳ; ಪ್ರಸಿದ್ಧವಾದ ಗೊಮ್ಮಟೇಶ್ವರನ ಪ್ರತಿಮೆಯುಳ್ಳ, ಜೈನರ ಪವಿತ್ರಕ್ಷೇತ್ರ : ಬೆಳ್ಗೊಳಸಿವಾಸಿಗಳಪ್ಪ ಶ್ರೀ ವೀರಸೇನಸಿದ್ಧಾಂತದೇವರ ವರಶಿಷ್ಯಂ ಶ್ರೀ ಗೊಣಸೇನಪಣ್ಡಿತ ಭಟ್ಟಾರರ ವರಶಿಷ್ಯರ್ ಶ್ರೀಮತ್ ಅನಂತವೀರ್ಯ್ಯಯ್ಯಂಗಳ್ ಬೆಳ್ಗ್ಗೊಳ ದೂರುಂ ಪೊಸವಾಡಗವುಮನಭ್ಯಂತರಸಿದ್ಧಿಯಾಗೆ ಪಡೆದರ್ (ಎಕ. VI, ೦೦೪-೯ ; 777)· ; ರಣಪಾರಗಾವುಣ್ಡರುಂ ಅನ್ದ ಮೂಸಲಉತ್ತಮಗಾವುಣ್ಡರುಂ ನವಿಲೂರ ನಾಟ್ಟಾಮುಣ್ಡರುಂ ಬೆಳ್ಗೊಳದ ಗೋವಿಂದವಾಡಿಯ ಉxxಳ್ಳಾಮಂದಂ ಬೆಳ್ಗೊಳದಾವಟಿ ಗೋವಿಂದಪಾಡಿಗೆ ಕೊಟ್ಟದು (ಎಕ. II, ೩೩-೬ ; ಶು. ೩೦೨). **ಬೆಳುಗುಳ :** ಶ್ರೀ ತಿರುಮಲೆಯ ತಾತಯ್ಯಂಗಳು ಸಮಸ್ತರಾಜ್ಯದ ಭವ್ಯಜನಂಗಳ ಅನುಮತದಿಂದ ಬೆಳುಗುಳದ ತೀರ್ಥದಲ್ಲಿ ವೈಷ್ಣವ ಅಂಗರಕ್ಷೆಗೋಸುಕ ಸಮಸ್ತರಾಜ್ಯದೊಳಗುಳ್ಳಂತಹ ಜೈನ[ರು] ಬಾಗಿಲುಂಗಟ್ಟಳೆಯಾಗಿ ಮನೆಮನೆಗೆ ವರ್ಷಕ್ಕೆ ೧ ಹಣಕೊಟ್ಟು (ಎಕ. II (R), ೪೬೩-೨೨ ; 1368) ; ಗ್ರಾಮೋತ್ತಮಂ ಬೆಳುಗುಳಾಖ್ಯಮ್ (ದತ್ತಧೀಃ (ಎಕ. VIII, ೨೦-೦೦೦ ; 1422). **ಬೆಳುಗೊಳ :** ಹಡುವಲು ಬೆಕ್ಕನೊಳಗೆಱಿಯ ಮಾವಿನ ಕೆಱಿಯ ಗತ್ತಿಯೊಳಗಾಗಿ ಬೆಳುಗೊಳಕ್ಕೆ ಹೋದ ಬಟ್ಟೆ (ಎಕ. II(R). ೪೨-೪೪ ; 1118). **ಬೆಳ್ಗುಳ :** ನಿರ್ಮ್ಮಳಿನಂ ಘನಪುಷ್ಪವೃಷ್ಟಿ ಬಂದೆಱಗಿದುದಭ್ರದಿಂ ಧರೆಗದಭ್ರತರಾವ್ಯತ ಹರ್ಷಕೋಟಿ ಕಣ್ದೆ ಱದಿರೆ ಸಂದ ಬೆಳ್ಗುಳದ ಗೊಮಟನಾಥನ ಪಾದಪದ್ಮದೊಳ್ (ಎಕ. II, ೨೩೪-೩೭ ; 1180). **ಬೆಳ್ಳುಗೊಳ:** ಅಛಕೆಱಿಯ ವೀರ ವೀರಪಲ್ಲವರಾಯನ ಮಕಂ ಕದೆ ಸಂಖರ ನಾಯಕಂ ಬೆಳ್ಳುಗೊಳಘ×ಯೆಚ್ಚ ಬೆಳ ಬಡಿಗರ ಬಿಟಕೆ (ಎಕ. II, ४೩೩-೩ ; 13ನೆಯ ಶತ). **ವೆಳ್ಗೊಳ :** ಶ್ರೀ ಭದ್ರಬಾಹು ಸಚನ್ದ್ರಗುಪ್ತಮುನೀನ್ದ್ರಯುಗ್ಮ ದಿನೊಪ್ಪೆ ವಲ್ ಭದ್ರಮಾಗಿದ ಧರ್ಮ್ಮಮನ್ದುವಱ್ಕೆವನ್ದಿನಿಱ್ಕಲೋವಿದ್ರುಮಾಧರ ಶಾನ್ತಿಸೇನ ಮುನೀಶನಾಕ್ಕಿ ಎ ವೆಳ್ಗೊಳ ಅದ್ರಿಮೇಲಶನಾದಿವಿಟ್ಟು ಪುನರ್ಭವಕ್ಕೆಱಿ ಆಗಿ × (ಎಕ. II, ೩೦-೩ ; ಶು. 650)·
[ ಬೆಳ್$_1$ (<ಬಿಳಿದು) + ಕೊಳ್$_2$ ]

**ಬೆಳ್ಛಾಯ** (ನಾ). ಬಿಳಿಯ ಛಾಯೆ ; ಬಿಳಿಚಿಕೊಂಡ ಬಣ್ಣ : ಸಂಚಲಿಸದೆ ಮರುಳಾಗಿ ಮಿತಿ ಮಿಱಿಮದು ಮನ್ಮಥಪರವಶನಾಗಿ ಬೆಳ್ಛಾಯ ವೇಱಿ ಮೌನವಾಗಿದ್ದರೂ ಆಕಾರದಿಂದಲೆ ವಿರಹವೇದನೆಯ ಪೇಳುತ್ತ. . . ಇರುವ ಬಗೆಯನು ಕಂಡು (ವಚನಾ. ೨೬). [ಬೆಳ್$_1$ (<ಬಿಳಿದು)+ಛಾಯ]

**ಬೆಳ್ಜಸ** (ನಾ). ಶುಭ್ರವಾದ ಕೀರ್ತಿ ; ನಿರ್ಮಲವಾದ ಯಶಸ್ಸು : ಪುಣ್ಯದ ಪುಂಜದಂತೆ ಶಿವನ ಸದ್ಗುಣರಾಶಿಯಂತೆ ಭಕ್ತರ ಬೆಳ್ಜಸದಂತೆಸವ . . . ವೃಷಭೇಶ್ವರನಂ ಕಂಡು (ಹರಿಹರ. ೩-೪ ವ) ; ಜಳಿಯಾಳ್ಗಳ್ಗೊಗ್ಗಿನೊಡನೆ ನಿಸದಂ ಹಿಮಶ್ವಸನ ರಥವೇರಿ ದಾಳಿಟ್ಟು ವಸುಧೆಯಂ ನಡುಗಿಸಿದ ಹೇಮಂತನೃಪನ ಬೆಳ್ಜಸದವೋಲಾಗಳ್ಸವೆತ್ತಿಡಂ ಮಂಜು ದೆಸೆದೆಸೆಯನಾವರಿಸಿರ್ದುದು (ಶೀತರಾ. ೨೩-೦೦) ; ನಿನ್ನಯ ಪಿರಿಯರಿಂತು ಬೇಳ್ದು ಬೆಳ್ಜಸದಿಂದೆಸೆವೆಂಡಿರ್ಗೆ ಪಸದನಂಗೈದುಂ ಐರ್ದಿಲವೆಣ್ಗಳಂ ತೊಟ್ಟು ಗೊಂಡರ್ (ರಾಜಶೇಕ್ಕ. ೦೯-೨೬).· [ ಬೆಳ್$_1$(<ಬಿಳಿದು)+ಜಸ$_1$ ]

**ಬೆಳ್ಜೋತಿ** (ನಾ). ಉಜ್ಜ್ವಲವಾದ ಕಾಂತಿ ; ನಿರ್ಮಲವಾದ ಹೊಳಪು : ಚಾರುವುದಯಾದ್ರಿಪನ ನಿಟಿಲದಿ ವಿರಾಜಿಸುವ ಶ್ರೀಭಸಿತ ದಿವಿರೆ ಬಿಳಿಯೊ ವಾರಿಜಾಂಡದ ನಿಳಯ ಕತ್ತಲೆಯೊಳಂ ಬೆಳಪ ತೋಳ ಬೆಳ್ಜೋತಿಯೋ (ಸವಪೋ. ೦೭-೬೦). [ಬೆಳ್$_1$ (< ಬಿಳಿದು) + ಜೋತಿ]

**ಬೆಳ್ತನ** (ನಾ). ೧. ದಡ್ಡತನ; ಬೆಪ್ಪುತನ; ಮೌಢ್ಯ : "ಗಾಂಪು ಠಕ್ಕುತನವುಂ ಬೆಳ್ತನಂ" (ಶಂಜೀವ. ೨೭); ಸತ್ತರನೆ ಸಾಯದರಂತೆಣೆ ಸುತ್ತುಮಿರ್ಪ ಬೆಳ್ತನವನಿತಲ್ಲದಾ ಮಾರನನಾ ದವದಗ್ನಿ ಬರ್ದುಂಕಲೀಗುಮೇ (ಅಂಪು. ೯-೩೯) ; ತ್ರಿಭುವನವಿಜಯಿಯ ವೀರಮುಂ ಚಕ್ರವರ್ತಿತ್ವಮನೆಯ್ದಿದನ ವಿದ್ಯೆಯುಮಂ ಬೆಸಗೊಂಬವನ ಬೆಳ್ತನದಂತೆ (ಧರ್ಮಾಮೃ. ೨-೦೩೩); ಅವನ ಬೆಳ್ತನಕ್ಕೆ ಬೆಕ್ಕಸಂಬಟ್ಟು ಘನಸಂಭ್ರಮ ಮೋನಿದು ಪೇಳ್ವನಕ ನಿಜಸ್ಥಿತಿಯನೆಂದು ಬೆಸಗೊಳೆ ಬಸವಂ (ವೃಷಭ. ೩-೩೦ ವ). ೨. ಮೋಸಗಾರಿಕೆ ; ವಂಚನೆ : "ಗಾಂಪು ಠಕ್ಕುತನವುಂ ಬೆಳ್ತನಂ" (ಶಂಜೀವ. ೨೭). [ ಬೆಳ್$_2$ + — ತನ ]

**ಬೆಳ್ತಿಗೆ** 'ಬೆಳಂತಿಗೆ' ನೋ.

**ಬೆಳ್ತೆರು** (ಕ್ರಿ). ಬೆಳ್ಳಗಾಗು ; ಬಿಳುಪೇರು : ಉದುರಲಿಹ ತರಗೆಲೆಯು ಅದುರಿ ಬೆಳ್ತೆರುವಂತೆ (ವಿಜಯಗ. ೭-೦೪). [**P** 'ತಳ್ತೆರು', 'ಬೆಳರ್ತಿರು' ಎಂಬ ಶಬ್ದಗಳ ರೂಪಸಾಮ್ಯತೆಯ ಮೇಲೆ ಈ ಶಬ್ದದ ಬಳಕೆಯಾಗಿರಬಹುದು]

**ಬೆಳ್ದಾವರೆ** (ನಾ)· ಬಿಳಿಯ ತಾವರೆ; ಪುಂಡರೀಕ : ಮಂಡಳಿಸಿದತ್ತು ನಿಜರುಚಿಮಂಡಲವಾಗಸದೊಳೆಂಬಿನಂ ಬೆಳ್ಗೊಡೆ ಕಣ್ಗೊಂಡು ಪರಿಭವಿಸಿದುದು ಶಶಿಮಂಡಳಮಂ ಬಂದು ಕಂಡ ಬೆಳ್ದಾವರೆಯಂ (ಕಂಠಾಪ. ೦೨-೨೪); ಬೆಳೆಯದ ಪೊಲಂಗಳಂ ಬೆಳ್ದಾವರೆಗಳಲರ್ದಳೆಯದ ಕೊಳಂಗಳಂ . . . ಮನಕನವರತಸುಖಮ ಪೊಳೆಯದ ಜನಂಗಳಂ ಮುಳಿದಱಸಲಾಂ ಕಾಣೆನಾ ಮಹೀಮಂಡಲದೊಳು (ಕೃಷ್ಣರಾ. ೩-೪)·
[ ಬೆಳ್$_1$ (< ಬಿಳಿದು) + ತಾವರೆ (< ತಾಮರೆ) ]

**ಬೆಳ್ದಾಳೆ** (ನಾ). ಬಿಳಿಯ ತಾಳೆ ; ಶ್ವೇತವರ್ಣದ ಕೇದಗೆ : ನೆರೆಮುಳ್ಳ ತುಂಟವೆಸರ ಬಂಡುಗರೆವ್ವ ಪೊರೆಯೊಳಗಿರಬೆ ಡಪೆಂದು ವರವನಪುಷ್ಪಗಳ್ಬೊಱಿಡಿಸೆ ಬೆಳ್ದಾಳೆಯುರಲೊಪ್ಪಿದುವು ವನತಟದಿ (ಕಂಠಪ. ೩-೯೮). [ ಬೆಳ್$_1$ (< ಬಿಳಿದು) + ತಾಳ್$_1$ (< ತಾಱಿ) ]

**ಬೆಳ್ದಿಂಗಳ್,** ಬೆಳದಿಂಗಳು, ಬೆಳುದಿಂಗಳ್, ಬೆಳುದಿಂಗಳು, ಬೆಳ್ದಿಂಗಳು (ನಾ). ೧. ಚಂದ್ರನ ಬೆಳಕು,—ಕಾಂತಿ ; ಚಂದ್ರಿಕೆ : "ಚಂದ್ರಿಕಾ, ಕೌಮುದೀ, ಜ್ಯೋತ್ಸ್ನಾ, ಚಂದ್ರಾತಪಃ—ಈ ೪ ಬೆಳ್ದಿಂಗಳ ಪೆಸರ್" (ಕರಾಡು. ೬-೪೪) ; ಅಂಗಲತಾಲಾಲಿತ ಸಾಂದ್ರಚಂದನರಸಂ ಬೆಳ್ದಿಂಗಳೆಂಬೊಂದು ಪಂಬಲ ಬಂಬಲ್ಗೆಡೆಯಾಗೆ ಬೆಳ್ಪಸದನಂ ಕಣ್ಗೊಪ್ಪಿತಾ ಕಾಂತೆಯಾ (ಕಂಕಪಾ. ೦-೮೩); ಚಂದ್ರಕಾಂತಪ್ರೊಸರ್ವಂತಿರೆ ಗೋರಿಕಲ್ಲೊಸರ್ಗುಮೇ ಬೆಳ್ದಿಂಗಳೊಳ್ (ಜಗಾ. ೦-೦೩). ೨. ಬಿಳುಪಾದ ಚಂದ್ರ ; ಶೋಭಿಸುವ ಚಂದ್ರಬಿಂಬ : ಬೆಳ್ದಿಂಗಳನಂಗಳಮಂ ನೀಳ್ದರ ಪೊರೆಯುತ್ತಿ ರತಿಯ ಮುಖಿಗಂಧಮನಂತಾಳ್ದಿರೆ ತೊಯ್ದುಪೊಲೊಳ್ಪಂ ತಾಳ್ದಿದುವೀ ಸುರಭಿಕೇತಕೀಕುಸುಮಂಗಳ್ (ಚಾರ್ಕ್ಯಕು. ೯-೬೦). **ಬೆಳದಿಂಗಳು :** ೧. "ಚಂದ್ರಿಕಾ, ಕೌಮುದೀ, ಜ್ಯೋತ್ಸ್ನಾ—೩ ಬೆಳದಿಂಗಳ ಹೆಸರುಗಳು" (ಸಿದ್ಧಾಂತ. ೩೦) ; ಮೋಘವೆ ಜಡೆ ಬೆಳದಿಂಗಳೇ ವಿಭೂತಿ ಪರ್ವತಂಗಳೆ ರುದ್ರಾಕ್ಷಿ (ಅವಪ.೦-೩); ವೀರರಂಗವನೆತ್ತ ಬಲ್ಲರು ಹಾರುವರು ಬೆಳದಿಂಗಳಿನ ಬಿಱುಸಾರ ಸುಡುವುದು ಕೈದು ಒಡಿದರೆ ಕಲಿಗಳೇ ದ್ವಿಜರು (ಕುಮಾರದ್ರೋ.೩-೩೮) ; ನಂದಿತು ಬೆಳದಿಂಗಳ ಕಿಚ್ಚು ಪಾಪಿಷ್ಟಚಂದ್ರಮ ನಸ್ತಮಿಸಿದನು ಕಂದಿತ್ತು ನಕ್ಷತ್ರಮುಖಕಾಂತಿ ಬೆಳಗಾಗ ಬಂದಿತು ಬೆದಱದಿರವ್ವ (ನೋಹಕ. ೨೭-೬೪). **ಬೆಳುದಿಂಗಳ್ :** ೧. ದೆಸೆಯೊಳುರುಪುವ ದಾವಶಿಖಿ ಬೆಳುದಿಂಗಳಾಗಿರ್ಕು (ಐಕಪು. ೬-೨೩). **ಬೆಳುದಿಂಗಳು :** ೧. "ಜೊನ್ನ ಬೆಳುದಿಂಗಳಕ್ಕುಂ" (ಕನ್ನಕೈ·೦೦) ; ಸಂಜೆಮ ಬೀಸುವ ಗಾಳಿ ಉರಿಯಾಯಿತ್ತಪ್ಪ ಬೆಳುದಿಂಗಳು ಬಿಸಿಲಾಯಿತ್ತು ಕೆಳದಿ (ಮಹಾದೇ.ಶಿ. ४३-೦೦೦) ; ಬೆಳುದಿಂಗಳಂದ ಮಾಡಿದ ಮೂರ್ತಿಯಂದದಿಂ ಬೆಳಗು ಚೆಲುವಾಕಾರವಾದ

**ಬೆಳ್ಗವಡೆ** (ನಾ). ಬಿಳಿದಾದ ಕವಡೆ : ಭಾಸುರಶಿರಃಕಂಠಕರ್ಣಾಂಗಳೊಳ್ ಶಿಖಿಗಳೊಳ್ ಪಾದಯುಗ್ಮಂಗಳಲ್ಲಿ ಕರವೆಸೆವ ಘೋಣಾಗ್ರದೊಳಗೆ ಬೆಳ್ಗವಡೆಗಳ ಧರಿಸಿ ಕಣ್ಣಡಕಂಗಳಂ ತಾಳ್ದು . . . ಒರ್ವ ಶೋಭಿಸುವ ಭೃಂಗಿಯ ತೆಜದೆ ಮಲೆಯುತ್ತ ಪೊಕ್ಕಂ (ಅಂತಕ. ೫-೮-೩೯).

[ಬೆಳ್$_1$ (<ಬಿಳಿದು)+ಕವಡೆ]

**ಬೆಳ್ಗವಿ** (ನಾ). ದಡ್ಡನಾದ ಕವಿ : ಒಳ್ಗವಿ, ಬೆಳ್ಗವಿ, ಅಚೀಗವಿ (ಛಂಶಾಕೂ. ೦೩೩ ಉದಾ). [ಬೆಳ್$_2$ + ಕವಿ]

**ಬೆಳ್ಗಱಿ** (ನಾ). ೧. (ಹಕ್ಕಿಯ) ಬಿಳುಪಾದ ರೆಕ್ಕೆ,—ಪುಕ್ಕ : ಪೊನ್ನ ಕಡಿವಾಣದ ರನ್ನ ವೆಗಗಂಬದ ಕಿವಿಯ ಚಾಮರದ ಸುತ್ತುರ್ಕಿಯಲ್ಲಿಯ ನೆತ್ತಿಯ ಬೆಳ್ಗಱಿಯ . . . ತುರಗಸಂಘಾತದಿಂ (ರಾಜಶೇ. ೬-೦೦ ವ). ೨. ಬಾಣದ ಹಿಂಭಾಗದಲ್ಲಿರುವ ಬಿಳುಪಾದ ಗರಿ : ನಿನಿರ್ದಲರ್ಗಣ್ಣ ನುಣ್ಬೆಳಗಡರ್ಪಿವ ಕೂರಲಗಾ ಸಂಕೋಪಾಲಾಂಗವೆ ಶರಯುಷ್ಟಿ ತೊಟ್ಟಲರ ಪುಚ್ಚವೆ ಬೆಳ್ಗಱಿಯಾಗೆ ಕಾವಿನೀಸವಿತಿ ವಿರಾಜಿಸಿರ್ದಾದು (ಕುಸುಮಾ. ೫ ೦೨೯). [ಬೆಳ್$_1$ (<ಬಿಳಿದು) + ಗಱಿ]

**ಬೆಳ್ಗಟ್ಟಿ**, ಬೆಳುಗತ್ತೆ, ಬೆಳ್ಗತ್ತೆ (ನಾ). ಬಿಳಿಯ ಬಣ್ಣದ ಕತ್ತೆ : ಆದಿತ್ಯನಸ್ತಮಾನಕ್ಕೆ ಸಲ್ವುದುಮಂ . . . ಬೆಳ್ಗಟ್ಟಿ ಪೂಡಿದ ಪೊನ್ನ ರಥಮಂ ಬೆಳ್ಗಟ್ಟಿಯುಸರಸರ್ಕಳೇಱುವುದುಮಂ ಇಂತೀ ಪದಿನಾಱು ಕನಸುಗಳಂ . . . ಕಂಡಂ(ಪಶ್ಮಾರಾ. ೯೫-೩೦). **ಬೆಳುಗತ್ತೆ** : ಪರವಾಯುಂ ಪ್ಸಮುಂ . . . ಹಯಕ್ಕೆ ಮೂವತ್ತೆರಡುಪ್ಪತ್ತ್ಯುಳ್ದು ಬೆಳುಗ[ಶಾಕಾಂ. ಬೆಳ್ಗ]ತ್ತೆಗ ಕರಭಸ್ಯಂ (ಚಾತತ. ೯-೦೦) ; ಬಳಿಕ ಪುಳಿತು ನಾತು ಕೊಳೆತು ಸತ್ತು . . . ಬೆಳಗುತ್ತೆಯಾಗಿ ಸಂಜನಿಸಿ (ಶಃಖಸಂ. ೩೬-೨೫). **ಬೆಳ್ಗತ್ತೆ** : ನಾಗಶರ್ವಾಂ ಬೂದಿವೂಸಿದ ತಪೋಧನನಂತೆಯುಂ ಪುಡಿಯೊಳ್ ಪೊರಳ್ದ ಬೆಳ್ಗತ್ತೆಯಂತೆಯುಂ . . . ಮಠದಿಂ ಪೊಱಮಟ್ಟು ನಿಂದ ಛಾಂದಸ ಬ್ರಾಹ್ಮಣನಂ ಕಂಡು (ಶಂಕಶಂ. ೦೯೬-೦೬) ; ಬಡತನವಾಡಸಿ ಬಳಮಟೀದು ಪುಟೀತು ನವೆದು ಸತ್ತುವಾ ಕೌಶಂಬೀಪುರದೊಳ್ ಬಹುಕರ್ಮಿಯೆಂಬ ದೊಂಬನ ಮನೆಯೊಳ್ ಸ್ತ್ರೀ ವೇದದಿಂ ಬೆಳ್ಗತ್ತೆಯಾಗಿ ಪುಟ್ಟಿ (ಸ್ವಕುಮಾ. ೫-೦೨ ವ). [ಬೆಳ್$_1$ (< ಬಿಳಿದು) + ಕಟ್ಟಿ]

**ಬೆಳ್ಗಾಡು** (ನಾ). (ಅಲಂ) ಬಿಳಿಯ ಹೂವುಗಳಿಂದ ತುಂಬಿದ ಕಾಡು : ನಾಡುಗಳರಸನಿದೆಂಬೊಂದಾಡಂಬರದಿಂದೆ ಸತ್ತಿಗೆತ್ತಿದುವೆನೆ ಕಣ್ಗಾಡುಂ ಬೊಲನಾದುವು ಬೆಳ್ಗಾಡಿನೊಳಲರ್ದೆಸೆವ ಬಯಲ ಬೆಳ್ದಾವರೆಗಳ್ (ಶಂತ್ರಪು. ೦-೬೬). [ಬೆಳ್$_1$ (< ಬಿಳಿದು) + ಕಾಡು$_1$]

**ಬೆಳ್ಗುಂಜಿ** (ನಾ). ಬಿಳಿಯ ಗುಲಗಂಜಿ : ಕೇಸುರಿಯನುಗಾಳ್ವ ಕಣ್ಗಳ . . . ಭಾಸುರದ ಬೆಳ್ಗುಂಜಿದೊಡವುಗಳ ಮೂಡಿಗೆ ಶರಾಸನದ ಕಿಱಿಯ ಕಿಗ್ಗಟ್ಟಿನ ಕಠಾರಿಯ ಮಹಾಶಬರರೂಪದಿಂ ಶಂಕರಂ ಸುಳಿದನಾ ಸೌಂದರೇಶ್ವರನಿದಿರೊಳು (ಸೌಂದಪು. ೦೬-೩೫).

[ಬೆಳ್$_1$ (< ಬಿಳಿದು) + ಗುಂಜ]

**ಬೆಳ್ಗುಂದೂರು** (ನಾ). ಒಂದು ಊರಿನ ಹೆಸರು : ಇವಕ್ಕೆ ಸಕ್ಕಿಳೆ ಬೆಳ್ಗುನ್ದೂರುಂ ಕಿಱುಪೆಳ್ಗುನ್ದೂರುಂ ಸತ್ತಿಯೂರುಂ ಸಿಂಗೂರು ನಗರಲ ಪನ್ನಿರ್ವ್ವರು ಮಹಾಪರಿಷೆಯುಂ ಎಡೆನಾಡ ಮಾವಪನ್ನಾರ್ಬ್ಬಾಮುಣ್ಬುಗಳುಂ ಸಕ್ಕಿ (ಎಕ. III (R). ಶಂಜಸ. ೨೩೯-೬; ಸು. 10 ಶಶು ೮೪).

[ಬೆಳ್ಗುಂದ$_0$ + ಊರು$_3$ (<ಊರ್)]

**ಬೆಳ್ಗುಂಬಳ** (ನಾ). ಒಂದು ಬಗೆಯ ಕುಂಬಳ; ಬಿಳಿಯ ಕುಂಬಳ; ಬೂದುಗುಂಬಳ : ನಿಂಬದ ಬಸುರುಮಂಗಳನಾಡುಂಬರಪಂಚಕವುಸಂತೆ ನವನೀತಮುನಾಣಂಬೆಯುನನಾರತಂ ಬೆಳ್ಗುಂಬಳಮಂ ಗಿಣ್ಣಸುಣ್ಣದಿರ್ಪುದಮೋಘಂ (ಸುಕುಮಾ. ೬-೯೩); ಇರುಳೂಟಂ ಕೊಲೆಯುಱುಳ್ದು ಪಾಳ್ಮರದ ಪಣ್ಣಾಣಂಬೆ ಬೆಳ್ಗುಂಬಳಂ [ಶಾಕಾಂ. ಪಣ್ಣು ಬೆಣ್ಣೆ ಗಿಣ್ಣಲಿದೀ, ಪಣ್ಣಾಣಂಬೆ ಬೆಳಗುಂಬಳ] ಪರದ್ಯವಸ್ತು ತಿ ಕಳ್ಳು . . . ಜೂದಶಿಕಾಂಕ್ಷೆಯೆಂಬಿವಿನಿತುಂ ಜೈನಂಗೆ ಮೂಲವ್ರತಂ (ಶಶಾರ. ೪೦೯).

[ಬೆಳ್$_1$ (<ಬಿಳಿದು) + ಕುಂಬಳ]

**ಬೆಳ್ಗುಡಾರ** 'ಬೆಳ್ಗೂಡಾರ' ನೋ.

**ಬೆಳ್ಗುದುರೆ** (ನಾ). ಬಿಳಿಯ ಕುದುರೆ ; ಶ್ವೇತಾಶ್ವ : ಬೆಳ್ಗುದುರೆ ಹಗಲು ಕಡೆಗೆದ್ದು ಬಂದಿಳಿಯೆಲ್ಲ ಚೆಲ್ವಿನಲಿ ಬೆಳಗೆ (ಪಾರಶಿ. ೦೫-೩೩೨).

[ಬೆಳ್$_1$ (<ಬಿಳಿದು) + ಕುದುರೆ]

**ಬೆಳ್ಗುಹೆ** (ನಾ). ಒಂದು ನಾಡಿನ ಹೆಸರು : ಶ್ರೀಮತ್ಶಾನ್ತಿವರ್ಮ ಬೆಳ್ಗುಹೆಯೆಪ್ಪತ್ತೆಡೆ ನಾಡೆಟ್ಟಿತ್ತು ತಂದವೂರ ಪನ್ನೆರಡು . . . ಸಾಸ್ತಳಿಗೆ ಸಾಯಿರಮುಮಂ ಮುಷ್ಪಾಟವಿಕ ನಿರ್ಮೂಳನಂಮ್ಮಾಡಿ ಸಂಖದಿಂ ರಾಜ್ಯಂಗೆಯ್ಯುತ್ತಿಟ್ಟು (ಎಕ. VIII, ಸೊರಬ. ೪೭೬-೦೨; 991). [ಬೆಳ್? + ಗುಹೆ]

**ಬೆಳ್ಗುಳ** 'ಬೆಳ್ಗೂಳ' ನೋ.

**ಬೆಳ್ಗೂಡಾರ**, ಬೆಳ್ಗುಡಾರ (ನಾ). ಬಿಳಿಯ ಬಣ್ಣದ ಗುಡಾರ; ಬಿಳುಪಾದ ಡೇರೆ : ಅಂತಹ ಒಂದು ಬೆಳ್ಗೂಡಾರದೊಳಗೆ ಸೆಟ್ಟಿಯು ಕೊಳ್ಕೊಡೆಯ ನಾಯಕತ್ವವಿಲ್ಲದೆ ಹಾಳ್ಗರೆಯುತ್ತಿರುವ ಅಂಗಡಿಯಲ್ಲಿ . . . ಬಲ್ಲಪ್ಪನೂ ಬೋರೆಯೂ ಕಿತ್ತಲಗಿನ ಕಡುಗಾವಲ್ಗುಡುತ್ತಿರುವರು (ಬಯಗಂ. ೦೨-೮). **ಬೆಳ್ಗುಡಾರ** : ಮುಸುಕಿರ್ಪ ಮಂಜಿನಿಂ ಬೆಳ್ಗುಡಾರಂಗಳಂತೆಸೆಯೆ ಶೈಲಂಗಳಲ್ಲಲ್ಲಿ ಶೈವಲಿನಿಗಳ್ಸೊಸರಾಯವೀಥಿಗಳ ಪಾಂಗಿನಿಂ ಕಂಗೊಳಿಸೆ (ಕೀಶರಾ. ೨೫-೦೦).

[ಬೆಳ್$_1$ (< ಬಿಳಿದು) + ಗುಡಾರ]

**ಬೆಳ್ಗೂಳು** (ನಾ). ಬಿಳಿಯ ಅನ್ನ ; ಬಿಳುಪಾದ ಅನ್ನ : ಮಲ್ಲಿಗೆ ಮುಗುಳಂತೆ ಬೆಳ್ಗೂಳು ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು ಬೆಳ್ಳಿಪೊಂಬಿವಾಣಗಳ ತುಂಬಿ ಸುಳಿಹತ್ತಿ ಚೆಲ್ಲಿಸಿದಳು ದೆಸೆದೆಸೆಗೆ (ಮೋಹತ. ೩೦-೩೬).

[ಬೆಳ್$_1$ (<ಬಿಳಿದು) + ಕೂಳು$_1$ (<ಕೂಱ್)]

**ಬೆಳ್ಗೆಱೆ**, ಬೆಳೆಕೆಱೆ, ಬೆಟ್ಗೆಱೆ (ನಾ). ಒಂದು ಸ್ಥಳದ ಹೆಸರು : ರಾಚಮಲ್ಲಗಾಮುಣ್ಡನು ಸಿಱನುಂ ಗಂಗಗಾಮುಣ್ಡನುಂ ಮಾರೆಯನುಂ ಬೆಳ್ಗೆಱೆಯೊಡೆಯುಂ ಮೊದಳಾಗೆ ಎಟ್ಟಿದಿಂಬರುಂ ಕುನಂಗಿಲ ಯುರ್ವ್ವರುಂ ಸಾಕ್ಷಿಯಾಗೆ ಕೊಟ್ಟತ್ತು (ಎಕ. XII, ಗುಬ್ಬಿ. ೬೦-೯೬ ; 812). **ಬೆಳೆಕೆಱೆ** : ಅನ್ತ ಬನ್ದು ನಗರಿವಳ್ಳಿದಿ ಘೂಡಣ ಬೇಲಿಯಿಂ ಅನ್ತ ಬನ್ದು ಬೆಳೆಕೆಱೆಯ ಪಡುವಣ ಕಡೆಯಿಂ (ಎಕ. III (R), ಶಂಜಸ. ೨೦೪-೦೭ ; 915). **Δ ಬೆಟ್ಗೆಱೆ** : ಮಣಲ್ವೂರ ರಡಂವಣ್ದುಕ ಬರಳಿಯ ಬೆಟ್ಗೆಱೆ ಎಮ್ಮುಗೆ ಕೇಬ್ದು ಯಲಪರಿದು ಕಳಕ್ಕಿಸಿದ (ಎಕ. XII, ತಿಪಟೂ. ೩೬-೫ ; 961). [ಬೆಳ್$_1$ (<ಬಿಳಿದು) + ಕೆಱೆ]

**ಬೆಳ್ಗೊಡೆ**, ಬೆಳುಗೊಡೆ (ನಾ). (ದೇವರು, ರಾಜ, ಇವರಿಗೆ ಹಿಡಿಯುವ) ಬಿಳಿಯ ಕೊಡೆ ; ಶ್ವೇತಚ್ಛತ್ರ : ಗುಡಿ ಶಂಖಂ ಚಾಮರಂ ಬೆಳ್ಗೊಡೆ (ಎಕ. XIII, ೩೩೩-೦೩ ; 929) ; ಪೇಱ್ ಮಗನೆ ಬೆಳ್ಗೊಡೆಯಲ್ಲಿ ಮುದೆತ್ತ ಪೋಯ್ತು ಸುತ್ತಿಱಿದ ಚತುರ್ಬಲಂ ನಿನಗಮಿಯಾಯಿರವಾದುದೆ ವೈರಿಭೂಪರಿಂ (ಶಂಶಶಾ. ೦೩-೬೯) ; ಬೆಳ್ಗೊಡೆಯ ವೀರಚ್ಛಾಯೆಯೊಳ್ ವಜ್ರಪ್ರಂ ಪಿಡಿದೈರಾವತಮೋಜಿ ನಿಂದನವನಿಂದ್ರಂ ಕೇಳ್ ದನುಪ್ರೋದ್ಭವಾ (ಗಂಜ. ೬-೨೬) ; ಸೀಗುರಿಯ ಚಾಮರದ ಮೇಗಪ್ಪ ಬೆಳ್ಗೊಡೆಯ ಭೋಗ ಹಡಪಿಗರ ಪಡೆಯೊಡೆ ದಾಸವನಂ ಬೇಗ ಮಾಡುವದು (ಸರ್ವಜ್ಞ. ೬೩೦). **ಬೆಳುಗೊಡೆ** : ಭೇರಿಯ ಮದ್ದಳೆಯೂಗೆ ಬೆಳುಗೊಡೆ [ನೆ]ಳಲಾಗೆ ನೆಲಂ ಕಳನಾಗೆ . . . ನರರೊಳು ತುಂಬುಲಿಗರ್ಜುಸಂಜಿಪರಾ ವಿಶ್ವಂಭರಾಭಾಗದೊಳ್ (ಸೌಇಇ. XX, ೦೦೨-೩೬ ; 1144?) ; ಸಂದಣಿಪ ಕಲುಬಲದ ಬೆಳುಗೊಡೆಗಳೊಪ್ಪಿರಿಸೆ ಹಿಂದೆ ನಿಸ್ಸಾಳಭೇರೀರವಂ ಸಂದಣಿಸೆ (ಬಸವ. ೫-೦೬೫) ; ಮುಡ ಮೂಜಿದು ನುಗ್ಗಾಯ್ತು ರಥ ಬೆಳುಗೊಡೆ ಪತಾಕಾದಂಡ ಚಮರಿ

ದೆಂಬಂದದಿಂ (ಶಿಹಿ. ಚೀ. ೩೭-೨೦) ; ಶಿವಶಿವಾ ಬೆಳುದಿಂಗಳಲಿ ಪ್ಯಾಟೆವರು ವೃದೆ (ಕುಮ್ಯಾಕೃ೬. ೬-೭೨). ಬೆಳ್ದಿಂಗಳು : ೧. " ಬಟ್ಟವೆಳೆಯು ಬೆಳ್ದಿಂಗಳ ಹೊಂದಾವರೆವಟ್ಟಲೊಳ್ ಸೋದಿಪರುಂಟೇ (ಸೋಹಿಶ. ೬-೨೪) ; ಚಂದಿರ ನೊಳಗೆ ಕಪ್ಪುಂಟು ಬೆಳ್ದಿಂಗಳು ಕಂದಿಕುಂದಿಹುದೇ ನಿರ್ಮಲವೊ (ಕುಕ. ೧-೨೬).

**ಬೆಳುದಿಂಗಳ ಹಕ್ಕಿ** = ಬೆಳುದಿಂಗಳನ್ನೇ ಸೇವಿಸಿ ಬದುಕುವುದೆಂದು ಕವಿಸಮಯದಲ್ಲಿ ಪ್ರತೀತಿಯಿರುವ ಒಂದು ಪಕ್ಷಿ; ಚಕೋರಪಕ್ಷಿ; ಜೊನ್ನಪಕ್ಕಿ : ಸಾಕಿವಕ್ಕಿಯು ನಲ್ಮೆಯ ಪೂಣಿವಕ್ಕಿಯು ನುಡಿವಕ್ಕಿಯು ಬೆಳುದಿಂಗಳ ಹಕ್ಕಿಯು ಬಿಡುಗಣ್ಣ ಅಕ್ಕಿಯು ಬಳಗಂ ಬಳಸಿದುದು ನೃಪಪತಿಯಾ (ಕಮ್ಲಾ. ೨-೧೬). **ಬೆಳುದಿಂಗಳೂಟ** = ಬೆಳುದಿಂಗಳಿನಲ್ಲಿ ಮಾಡುವ ಊಟ : ಇನಿಯರ ಬೇಟ, ಬನದಲಿ ಬೆಳುದಿಂಗಳೂಟ (ಕಿಂಕೀರ.೩-೬). [ ಬೆಳ್$_{1}$ (< ಬಿಳಿದು) + ತಿಂಗಳ್ ]

**ಬೆಳ್ದಿಂಗಳು** 'ಬೆಳ್ದಿಂಗಳ್' ನೋ.

**ಬೆಳ್ದುಗುಲ** (ನಾ). ಬಿಳಿಯ ರೇಷ್ಮೆವಸ್ತ್ರ : ಶ್ವೇತವರ್ಣದ ಪಟ್ಟೆಸೀರೆ : ಇಂತು ಬೆಳ್ದುಗುಲವನುಟ್ಟು ಮನಂಗೊಳಿಪ ಸೌಂದರವತಿಗೆ ಕತ್ತ್ಯಾಂತೆ ಯರ್ಮಗುಬ್ದ . . . ಆರತಿಯೆತ್ತಿದರ್ (ಉದ್ಭಟ. ೩-೨೩ ವ).

[ ಬೆಳ್$_{1}$ (< ಬಿಳಿದು) + ದುಗುಲ$_{1}$ ]

**ಬೆಳ್ದುಗೊಂಡೆ** (ನಾ). ಒಂದು ಊರಿನ ಹೆಸರು : ಬೆಳ್ದುಗೊಣ್ದೆಯ ಗಾವುಣ್ಡರು ಪಾರ್ವರು ತಮ್ಮ ಕೆಱೆಯ ಪಾಣ್ಡೊಳ್ಗಣ್ಡುಗವಣ್ಣು ವಿಟ್ಟಿಡಿ ಭತ್ತವು . . . ಸಲ್ವನ್ತು ಕೊಟ್ಟರ್ (ಸೌಇಇ. IX-i, ೧೩-೧೦ : ೩೩೩). [ ಬೆಳ್$_{1}$ (< ಬಿಳಿದು) + ಕೊಂದೆ ]

**ಬೆಳ್ದೇವ** (ನಾ). ಒಬ್ಬಾತನ ಹೆಸರು : ಬೆಳ್ದೇವಂ ಬರೆದಂ ಇಳ್ವಡೆ ಮಲ್ಲಾಚಾರಿ (ಎಕ. XIV. ಎಚಕೊ. ೬೪-೪೪; ಸು. ೩೧೦).

[ ಬೆಳ್$_{1}$ (< ಬಿಳಿದು) + ದೇವ ]

**ಬೆಳ್ದೊನ್ನು** (ನಾ). ಚರ್ಮವು ಬಿಳಿದಾಗುವ ಒಂದು ಬಗೆಯ ರೋಗ : " ಶ್ವಿತ್ರವೆಂಬುದು ಬೆಳ್ದೊನ್ನು " (ಹರಾದು. ೯೯-೪೩೦).

[ ಬೆಳ್$_{1}$ (< ಬಿಳಿದು) + ತೊನ್ನು ]

**ಬೆಳ್ನಗೆ, ಬೆಳುನಗೆ$_{1}$** (ನಾ). ಶುಭ್ರವಾದ ನಗೆ; ಪ್ರಸನ್ನವಾದ ನಗೆ : ಶಿಖರಿದಶನದ್ಯುತಿಯ ಬೆಳ್ನಗೆಯು ಸೂಸಲೆಸೆ ನಖರುಚಿಯು ತೆರಳಿಕೆಯು ಹೊರಳಿಯೆನೆ . . . ಚೆಲ್ವ ತಿಳಿನೀರ ತುಂತುರ್ಮಣಿಗಳೆಸೆದಿರ್ದುವು (ಕೈಬಿಶಾ. ೩೦-೧೦); ತರುಣಿರನ್ನೆಯರ ಬೆಳ್ನಗೆ ನಮ್ಮ ಶುಭ್ರಕೆ ಸರಿಯಿಲ್ಲ ವೆಂದವ ಜಱಿದು ಪರಿಮಳಗಳ ಬೀಱುತ ದೆಸೆದೆಸೆಗಾಗಲರಳುಮಲ್ಲಿಗೆ ಗಳೊಪ್ಪಿದುವು (ಕಂಹಿ. ೩-೯೨); ಇಂತು ಮರ್ತ್ಯರಂತಿರುವಮ್ಮಳದಿಸುಬ್ಬಸಂ ಬಡುವ ರಾಜಪರಮೇಶ್ವರಂಗೆ ಬೆಳ್ನಗೆಯೊಳ್ ಬಿಜಯಂಗೆಯ್ದೋಜನವೋಜೆಯಿಂ . . . ಎನುತೆ ಪಡಿನುಡಿದು (ಅಮಾಶ. ೧೪-೨). **ಬೆಳುನಗೆ$_{1}$** : 'ಬೆಳುನಗೆವೆಱು' ಪಠಾ. [ ಬೆಳ್$_{1}$ (< ಬಿಳಿದು) + ನಗೆ ]

**ಬೆಳ್ನವಿರ್** (ನಾ). ನರೆತ ಕೂದಲು ; ಬಿಳಿ ಕೂದಲು : 'ಮೂಮೊಱೆಬಟ್ಟೆ ಱಿಗಿದ ಮಾಟ್ಕೆಯಿಂ ಮಱನವಿರ್ ಮೊದಲಿಂದೆ ಕಟಲ್ತು ಬೆಳ್ನವಿರ್ ತುಱುಗಿ ನಿರಂತರಂ ಬಳಪವಂ ತೊಡೆವಂತಿರೆ ಪ್ಯ ಬೆಳರ್ತ ಕಯ್ ಪಱಿದ ಗಜೇಂದ್ರಮಂ ನೆಱೆಯೆ ಪೋಲ್ತುದುವೆಕ್ಕಲನೊಂದು ತಾಣದೊಳ್ (ಸೂಕ್ತಿಸು. ೩-೩೭). [ ಬೆಳ್$_{1}$ (< ಬಿಳಿದು) + ನವಿರ್ ]

**ಬೆಳ್ನುಡಿ, ಬೆಳುನುಡಿ** (ನಾ). ೧. ಇನಿದಾದ ಮಾತು ; ಸವಿನುಡಿ : 'ಭವಹರನ ಹಿತ್ತಿ ಮುಂಡಾಡಿ', 'ತಪ್ಪದಲೆ ಶಿವನ ಮುದ್ದಿಟ್ಟು', 'ಕಪ್ಪು ಕಾಡಿಗೆ ಮಾಡಿ ಅಪ್ಪಿ ಮಗುವಿಗೆ ಹಚ್ಚಿ' ಮೊದಲಾದ ನುಡಿಗಳು ತಾಯ್ತನದ ಬೆಳ್ನುಡಿಗಳಲ್ಲವೇ ? (ಕನ್ನಜಾ. ೧೬೭). ೨. ತಿಳಿಯಾದ ಭಾಷೆ ; ಶುದ್ಧವಾದ ಭಾಷೆ; ಅಚ್ಚದೇಶಿ : ತಿರುಳ್ಗನ್ನಡದ ಬೆಳ್ನುಡಿಯೊಳ್ ಪುರುಳೊಂದೆ ಪೇಟ್ವುದು (ಕಾಮೀಕ್ಕ. ೬-೧೨). **ಬೆಳುನುಡಿ** : ೨. ಪಳೆಯೊಳುಗನ್ನಡಂ ವಿಶದ ತದ್ಭವ ತತ್ಸಮವಾಚ್ಯಗನ್ನಡಂ ಬೆಳುನುಡಿ ದೇಶಿ ಗ್ರಾಮ್ಯ . . . ಆ ಮರೆಗನ್ನಡ ಸಾರಗನ್ನಡಂಗಳು ಮೊದಲಾದ ಸಾಸಿರದ ಮೇಲಿರಳ್ಕೊಱುಮಿವಾದಿಯೂದವಂ . . . ಅಱಿ ಕಾಂತೇ (ಚರಿಚ. ೪-೪). [ ಬೆಳ್$_{1}$ (< ಬಿಳಿದು) + ನುಡಿ$_{2}$ ]

**ಬೆಳ್ನೇತ್ರ** (ನಾ). ಕಾಂತಿಯುಳ್ಳ ನೇತ್ರ; ಹೊಳಪುಳ್ಳ ಕಣ್ಣು : ಮಿರುಪ ಚಂಚಲನೇತ್ರೆಯರು ಚಪಲನೇತ್ರೆಯರು . . . ಸುರುಚಿರಚಕೋರನೇತ್ರೆ ಯರುಯರ್ಕಕರ್ಣನೇತ್ರೆಯರು ಬೆಳ್ನೇತ್ರದವರು (ಶಬಶೋ. ೨೪-೧೭).

[ ಬೆಳ್$_{1}$ (< ಬಿಳಿದು) + ನೇತ್ರ ]

**ಬೆಳ್ನೊರೆ, ಬೆಳುನೊರೆ** (ನಾ). ಬಿಳಿಯದಾದ ನೊರೆ; ಬಿಳುಪಾದ ಬುರುಗು; ಫೇನ : ನೇತ್ರಂಗಳೊಳ್ ಬಂದು ಬೆಳ್ನೊರೆಯಂ ಪೋಲ್ತು ದುಮ್ಮಾರ್ಪಿ ಕಾಮರ್ಗಿಲ ನೀರ್ವೋರೆ ಕೋಪದಿಂದಂ ಮದಂ ಸುರಿಯು ತ್ತಿರ್ಪುದುಮೊಪ್ಪೆ ಚಕ್ರಿಯ ಮನಂಗೊಂಡತ್ತು ಮತ್ತದ್ವಿಪಂ (ಆದಿಪು. ೧೨-೩೯); ತೆರೆಯ ಸೆಳೆಮಂಚದೊಳ್ ಬಿತ್ತರಿಸಿದ ಗಳಿತಾಬ್ಜದಳದ ಸಣ್ಣಸಿಲೊಳ್ ಬೆಳ್ನೊರೆಯ ತೆರೆಸುತ್ತಿನೊಳ್ ಪ್ರಿಯೆಗಿರದೊಳ್ಪನೆ ಬಯಸಿ ಕೋಕನಾಯ್ತು ಸಶೋಕಂ (ಚಂದ್ರಪು. ೪-೩); ತೆಳುವುಡಿಯ ನುಳಲಿಡಿಯ ಲಿಕ್ಕುಡಿಯ ತಳಗಡಿಯ ಪೊಳೆನೆರೆಯುಲುಱೆ ಪೊರೆಯುಲೊಳ್ದೊಱೆಯ ಬೆಳ್ನೊರೆಯ . . . ಅತುಳಗಂಗೆ ನುತರಂಗೆ ನೋಳ್ಪಂಗೆ ಸಲೆ ಕಣ್ಗೆಸೆದಳಂದು ದಿವಿಜಸಿಂಧು (ಕೈಬಿಶಾ. ೯-೨೪). **ಬೆಳುನೊರೆ** : ಏಱುಗಳು ಬುದುಬುದಿಸಿ ರಕ್ತದ ಕಾಱು ಕಾಳಿಜ ಖಂಡ ನೆಣ ಜಿಗಿದೋಱು ಬೆಳುನೊರೆ ಮಸಗಿ ನಸುಬಿಸಿರಕುತ ಹೊನಲಿಡಲು . . . ಮೆಣನ ಮೆದೆ ಹೇರಾಳ ಬಂಜಿಸಿತು (ಕುಮ್ಯಾಕೃ೬. ೦೦-೬).

[ ಬೆಳ್$_{1}$ (< ಬಿಳಿದು) + ನೊರೆ$_{2}$ ]

**ಬೆಳ್ಪ$_{1}$, ಬೆಪ್ಪ** (ನಾ). ೧. ಮೂರ್ಖ ; ಮುಗ್ಧ ; ದಡ್ಡ ; ತಿಳಿಗೇಡಿ : ಪಾದುಕೆಯ ಕೊಟ್ಟಂ ನಂಬಿ ಮನೆಯ ಧಾನ್ಯಮಂ ಸೂಱೆಗೊಡುವ ಬೆಳ್ಪನುಮಂ (ಶಬರೀಶಕ್ಕ. ೬-೩೦). **ಬೆಪ್ಪ** : ೧. ನಾನೊಬ್ಬ ಬೆಪ್ಪ–ಹುಚ್ಚ, ಅವಿವೇಕಿ (ಜೋಕಕ್ಕ. ೧೨); ನನ್ನ ಹಾಗಿರುವ ಮಂಕರನ್ನೆಲ್ಲಾ ಒಟ್ಟು ಗೂಡಿಸುತ್ತೇನೆ. ನೀನು ಬೆಪ್ಪರನ್ನೆಲ್ಲಾ ಒಟ್ಟುಗೂಡಿಸು. ಎಲ್ಲರೂ ಒಮ್ಮತದಿಂದ ಕೆಲಸ ಮಾಡೋಣ (ಕುಬಿಹಾ. ೩೦). ೨. ಗಾಬರಿಯಿಂದ ದಿಕ್ಕು ತೋಚದವನು ; ದಿಙ್ಮೂಢ : ಸೀತಾರಾಮು ಅವನ ಶರಟಿನ ಕಾಲರು ಬಿಗಿಯಾಗಿ ಹಿಡಿದು ಕೆನ್ನೆಯ ಮೇಲೆ ಹೊಡೆದ. ಇತರ ಹುಡುಗರು ಬೆಪ್ಪರಾಗಿ ಸುಮ್ಮನೆ ನಿಂತರು (ದೂಚಟ್ಕ. ೩೪). [ ಬೆಳ್ಪು$_{2}$ + –ಅ ]

**ಬೆಳ್ಪಡ$_{1}$** (ನಾ). ಬಿಳಿಯ ಬಟ್ಟೆ ; ಶ್ವೇತವಸ್ತ್ರ : ಎಲಪೋ ಮಡಿಪಳ ನಿನ್ನ ತೊಳಹವು ಚೆಲುವನಾದವು ನಮ್ಮ ಯಮುನೆಯಲಲುಬಿ ತೊಳೆದೊಡೆ ಕಪ್ಪಡವು ಬೆಳ್ಪಡಗಳಾಗದಿವೇ ತೊಳೆದು ಕೊಡು ನಾವುಟ್ಟುದನು (ಕಾಳ್ಗಾ. ೨೨-೩೪). [ ಬೆಳ್$_{1}$ (< ಬಿಳಿದು) + ಪಡ$_{4}$ ]

**ಬೆಳ್ಪಡ$_{2}$** 'ಬೆಳ್ಪಳ್' ನೋ.

**ಬೆಳ್ಪಡಂನುಡಿ** (ಕ್ರಿ). ಅಸ್ಥಿರಮನಸ್ಸಿನಿಂದ ನುಡಿ,—ಮಾತನಾಡು : ಬೆಳ್ಪ [ಶಾಕಾ. ಳ್ಪ]ಡಂನುಡಿದಂ (ಕಜ್ಜಾಸು. ೨೦ ವ್ಯಾಖ್ಯಾ).

[ ಬೆಳ್ಪಡ$_{2}$ (< ಬೆಳ್ಪಳ್) + ನುಡಿ$_{1}$ ]

**ಬೆಳ್ಪಡರ್, ಬೆಳ್ಪಡರು** (ಕ್ರಿ). ಬೆಳ್ಳಗಾಗು; ಬಿಳಿಯದಾಗು; ಬಿಳುಪೇರು: ಪರಿಯೆ ಪಸುರ್ಪು ಬೆಳ್ಪಡರೆ ಬಲ್ಗುಗಳೊಳ್ ಪೊರೆದೋಱೆ ತಿಂಬಿಲರ್ ಪೊರೆವೊರೆಯಂ ಸಡಿಲ್ಚೆ ಸಡು ಪೊಂಗಿರೆ ಮಲ್ಲಿಗೆಗಳ್ ವಸಂತದೊಳ್ ಬಿರಿದೊಡೆ ನಲ್ಲರಂ ನೆನೆದು ನಲ್ಲರ ಮೊಲ್ಲೆರ್ದೆಗಳ್ ನಿರಂತರಂ ಬಿರಿವುವ ದೆಂತೊ ಮಲ್ಲಿಗೆಗೆ ನಲ್ಲರ ಮೊಲ್ಲೆರ್ದೆ ಮೇಳಗೊಂಡುದೋ (ಅದಿಪು. ೦೦-೦೦೩); ಚುಂಬಿಸಿ ಬೀಗಿ ಬೆಳ್ಪಡರ್ದ ಬಾಯ್ವಱೆ . . . ಪೊರ್ಮಱೆವುಂದವೆ

ಹಂತಿವಪ್ಪಿ ತಾಜಿಂಬಜಿಯುಂ ತೆರಳ್ದ ಕುರುಳ್ (ತಂತ್ರ ಶು. ೬-೭೨); ಜಡಗ್ರಾಹಿಯಾನಾದೆನೆನುತ್ತಂ ಚಿಂತೆಯಿಂ ಬೆಳ್ಪಡರ್ದುದೆನೆ ತದಬ್ಧಂ ಶರನ್ಮೇಘವಿರ್ಕುಂ (ರಾಜಶೇ. ೬-೪). **ಬೆಳ್ಪಡರು :** ನಡು ಪೊದಳ್ದವು ವರವಳಿತ್ರಯವಡಗಿದವು . . . ಬೆಳ್ಪಡರಿ[ಪಾಠಾಂ. ಸಿ]ದವು ಮುಖ ಮಂಡಲಗಳಾ ಮಾನಿನೀತ್ರಯದ (ತೊರಟಾ. ೦-೬-೩); ಶಿಶು ಗರ್ಭ ದೊಳ್ಪೊಳಗೆ ಕೂಡಿರ್ದ ಚಂದ್ರಿಕೆವೊಲಿಂಗರುಚಿ ಬೆಳ್ಪಡರಲೊಳ್ಪನಿಂದೊಪ್ಪಿ ದರ್ಗಳುತ್ಪಲಾಕ್ಷಿ (ಶೃಬಿಷಾ. ೦೬-೩೭). [ ಬೆಳ್ಪ್$_1$ + ಅಡರ್ ]

**ಬೆಳ್ಪಡರು** 'ಬೆಳ್ಪಡರ್' ನೋ.

**ಬೆಳ್ಪಡಸು** (ಕ್ರಿ). =ಬೆಳ್ಪಡರ್: ನಡು ಪೊವಳ್ದವು ವರವಳಿತ್ರಯವಡಗಿದವು . . . ಬೆಳ್ಪಡಸಿ[ಪಾಠಾಂ. ರಿ]ದವು ಮುಖಮಂಡಲಗಳಾ ಮಾನಿನೀತ್ರಯವ (ತೊರಟಾ. ೦-೬-೩). [ ಬೆಳ್ಪ್$_1$ + ಅಡಸು ]

**ಬೆಳ್ಪರಿಗೆ** (ನಾ). ಹೊಳೆಯುವ ಗುರಾಣಿ : ಅರ್ಗ್ಗಿಸಿನ್ ಬಂದೊನನ್. ತಲೆಯಿಂದೆ ಕಾಲ್ವರಮ್ ಮೆಯ್ಯ್ ಜೋಡ ತೊಟ್ಟನನ್, ಕಯ್ಯ ಬೆಳ್ಪರಿಗೆಯನ್ ಪಿಡಿದು ಮೇಲ್‌ವಾಯ್ದನನ್, ಬೆನ್ನಿತ್ತು ಪೊದನನ್, ದೂಡುತ್ತುಮಟ್ಟಿದಯ್ ಕಡಿವಾಣವೊತ್ತಿ ನಿಟ್ಟೋಟದಿನ್ ಪರಿಯೆ (ಅಂತಿಗೊ. ೫-೯೦). [ಬೆಳ್$_1$ (< ಬಿಳಿದು ) + ಪರಿಗೆ]

**ಬೆಳ್ಪಳ, ಬೆಪ್ಪಳ, ಬೆಬ್ಬಳ, ಬೆಬ್ಬಳಿ, ಬೆಬ್ಬಳಂ, ಬೆಬ್ಬಳೆ, ಬೆಳ್ಪಡ$_2$,** ಬೆಳ್ಪಳೆ (ನಾ). ೧. ಭಯ; ಹೆದರಿಕೆ: ಗಾಬರಿ : ತೋಳ್ಪಿರಿದೆಂದು ತಾಯನುಜಿಯಪ್ಪಿ ಕೊಳಲ್ಬಗೆವಂಗೆ ಲೋಕದೊಳ್ಬೆಳ್ಪಳವಿಲ್ಲದಂತೆ ನಿಲಲಾರ್ವಳೆ ಲಕ್ಷ್ಮಿಯುಮಾಮಹೇಶ್ವರಾ (ಉಮಾಶ. ೯೭). ೨. ಚಂಚಲತೆ; ಸಂಚಲನ : "ಬೆಳ್ಪಳಂ ಸಂಚಳಂ" (ಕಮುದ. ಶಂ. ೨); ಗಳೆಯಾದತ್ತುರು ಮಂದರಂ ಕನಕಶೈಲಂ ಚಾಪಮಾದತ್ತು ಬೆಳ್ಪಳವಂ ತಾಳ್ದಿದುದೆಯ್ದೆ ರೌಪ್ಯನಗಂ (ಶೀರಬ. ೨-೭). **ಬೆಪ್ಪಳ :** ೧. 'ಬೆಪ್ಪಳಿಸು' ಪರಾ. **ಬೆಬ್ಬಳ :** ೧. " ಅಗುರ್ವು . . . ಬೆಬ್ಬಳಂ, ಅಳಜು, ಪೆಳಜು, ಮಲ್ಲಟಿ, ತಲ್ಲಟಂ, ಅದಿರ್ಪು—ಈ ೧೦ ಭಯಂ" (ಶಶಾ. ೩೭-೨೨೩). ೩. ಬೆರಗು; ಆಶ್ಚರ್ಯ; ಸೋಜಿಗ: "ಐಕ್ಕಡಿ ಬಿಗುರ್ವಗುರ್ವು ಬೆಬ್ಬಳ . . . ಮಲ್ಲಟಿಯೆನಲ್ಕೆ ಬೆಜಗಪ್ಪ ಭಾವಂ" (ಕವಿಕೈ. ೪೦); "ತಲ್ಲಣಂ . . . ಬೆಬ್ಬಳಂ ತಳಮಳವೆನಲ್ಕೆ ಸೊಲ್ಲಿಪುದು ಬೆಜಗಪ್ಪ ಭಾವದೊಳು" (ಶಬ್ದಮಂ. ೫೦). ೪. ದಿಕ್ಕುತೋಚದಿರುವಿಕೆ; ದಿಗ್ಭ್ರಾಂತಿ : "ಬೆಬ್ಬಳ ಮೆಂದೆನೆ ವಿಕಳತ್ವಮೆಂದು ತಿಳಿಗೆ ವಿದಗ್ಧರ್" (ಕಾರು. ೫೨); ಮೂಜಗ ದೊಬ್ಬ ವೀರನು ಕಂಡು ಬೆಜಗಿನ ಬೆಬ್ಬಳದಲೇಜಿದನು ಮಣಿಮಯ ದಿವ್ಯ ಪುಷ್ಪಕವ (ತೊರಟಾ. ೬-೩೭-೪); ತಬ್ಬಿಬ್ಬವಾತಿನಿಂ ಪೆಜಗುರ್ಬ್ಬೆಗಮಂ ನೆಗಬ್ದಿ ಬಜಿಯ ಬೆಬ್ಬಳಮಲ್ಕೊಳ್ಗಬ್ಬಿಗರನುಗೊಳಿಸಿದ ಪೊಸ ಕಬ್ಬದ ಪಮಣಂತುಟಪನ ಸಬ್ಬಪನುಡಿಗಳ್ (ತಳಪ. ೬-೦೦೯). ೫. ದಿಗ್ಭ್ರಾಂತಿ ಯನ್ನು ಹೊಂದಿದವನು; ದಿಕ್ಕೆಟ್ಟವನು : ಜನಕ ನುಡಿದ ಮಾತ ಕೇಳ್ದು ಕಂಗೆಟ್ಟನಾ ತನುಜ ಬೆಬ್ಬಳನಾದ ಕೂಡೆ (ಪಾಗಳು. ೩೨-೦೦೪). **ಬೆಬ್ಬಳಿ: ೪.** ಅದ್ಭುತವಾದ ಕನಸ ಕಂಡು ರಾಯನು ಉಬ್ಬಿ ಪೆದಜಿ ಕಣ್ಣಾ ತೆಜೆದು ಬೆಬ್ಬಳಿಯಾಗಿ ನೋಡಲು ನಾಲ್ಕುದೆಸೆಯನು (ಪಂಕಾಂ. ೨೪-೨೦). **ಬೆಬ್ಬಳಂ :** ೧. 'ಬೆಬ್ಬಳಂಗೊಳ್ಳು' ಪರಾ. **ಬೆಬ್ಬಳೆ :** ೪. ಕುಸಿಯದೆ ಕೂಡದರ್ಚಿಸದೆ ಬೆಬ್ಬಳೆಯಾಗದೆ (ಬೊಂಕಶಾ. ೦೯೩೩, ಶಾವೇಂ. ೫೭-೪೦; 1136); ಕುಮಾರ ರಥ ಗಜ ಪತ್ತಿ ನಿರ್ಘೋಷದಲಿ ಬೆಬ್ಬಳೆಯಾಯ್ತು ಬೇಳಂಬದ ವಿಘಾತಿಗೆ ಸಿಲುಕಿ ತೆತ್ತುದು ಸಕಲವಸ್ತುಗಳ (ಕುವ್ಯಾಕ. ೩-೫೩). **ಬೆಳ್ಪಡ$_2$ :** ೧. 'ಬೆಳ್ಪಡಂನುಡಿ' ಪರಾ. **ಬೆಳ್ಪಳೆ :** 'ಬೆಳ್ಪಳೆವೋಗು' ಪರಾ.

**ಬೆಳ್ಪಳಂಬೋಗು,** ಬೆಬ್ಬಳಂಬೋಗು, ಬೆಬ್ಬಳವೋಗು, ಬೆಬ್ಬಳಿಯೋಗು ಬೆಬ್ಬಳಿವೋಗು, ಬೆಬ್ಬಳೆಪೋಗು, ಬೆಬ್ಬಳೆಯೋಗು, ಬೆಬ್ಬಳೆವೋಗು. ಬೆಳ್ಪಳೆವೋಗು (ಕ್ರಿ). ಭಯಪಡು; ಗಾಬರಿಪೊಂದು; ಗಾಬರಿ ಯಿಂದ ದಿಕ್ಕುತೋಚದಂತಾಗು,–ದಿಙ್ಮೂಢನಾಗು: ಬೆಳ್ಪಳಂಬೋದಂ, ಬೆಳ್ಪಡಂನುಡಿದಂ (ಶಬ್ದಾಸು. ೨೦ ವ್ಯಾಖ್ಯಾ). **ಬೆಬ್ಬಳಂಬೋಗು :** ತ್ರಿಜಗ ದ್ಭೂಷಣ ಗಜಂ ಕ್ರೋಧಿಯೆಂಬ ಮದದೊಳ್ ಮತ್ತನಾಗಿ . . . ಕಟ್ಟುಪಂಜರದಿಂ ಪೊಱಮಟ್ಟು ಬರುತ್ತಬ್ಬರಿಸುವಾರಿಕಾರರ ಬೊಬ್ಬೆಗಳಿಗೆ ಬೆಬ್ಬಳಂಬೋ[ಪಾಠಾಂ. ಪೊ, ಬೊ]ಗದೆ (ಧರ್ಮಾಸ್ವ. ೨-೭ ವ); ಕಾಮ ದೇವಂ . . . ಉಬ್ಬಟೆಯ ಬಾಣಮಂ ತೊಟ್ಟು ತೆಗೆದಾಕರ್ಣಪೂರಕ್ಕೆ ನಿಲಿಸಿ ಬಿಡಲು ಪಬ್ಬಿದುದು ಬಾಣ ಪರಿದರ್ಧದಾರಿಯೊಳೆ ತಾಂ ಬೆಬ್ಬಳಂಬೊಗಿ ತಿರುಗುತ್ತಿರಲ್ಕದ ಕಾಣುತಬ್ಬರಿಸಿ ಮತ್ತೊಂದ ಹೂಡಿದಂ (ಅಶಜ. ೦೪-೫೦). **ಬೆಬ್ಬಳವೋಗು :** ನಿಟಿಲ್ಬಾರದೆನಿಸುವ ನೋವಿಂಗೆ ಬೆಬ್ಬಳವೋಗಿ . . . ಪೊನ್ನ ಮೋಹಕ್ಕೆ ಮಿಸವಂ ಬಲ್ಪಿಡಿದು (ರಪರ್ವಮ್ಯ. ೦-೧೪೪) ; ಕಾಣುತ ಮಣಿಮಯಗೋಪುರದೊಳಗಿದ್ದೀಶಾಂಕ ನಿಧಿವದನೆಯುರು ಪ್ರಾಣವಳಿದ ದೇಹದಂತೆ ಬೆಬ್ಬಳವೋಗಿ ತ್ರಾಣವಡಗಿ ಮಱುಗಿದರು (ಶ್ರೀಪಾಂ. ೬-೩೭) ; ಲಕ್ಷ್ಮಣನೀಗಳೆ ಉಟಿದು ಪೊಪಿನಂ ಕಾಡಿಂಗೆ ಕೋಳುವೋದೆನೆಂಬೊಂದು ಭೀತಿಯಿಂ ಬೆದಜಿ ಬೆಬ್ಬಳವೋಗಿ . . . ಮಜಗುತ್ತಿರ್ದಪೆ (ರಾಪಾಶ್ಮ. ೪೦-೨೯). **ಬೆಬ್ಬಳಿಯೋಗು :** ಭಯ ದೊಳಂ ತನು ಬೆಮರ್ತಳುಕಿ ಬೆಬ್ಬಳಿಯೋಗಿ ದಯೆಗೆಟ್ಟು ನಿಂದವಂ ಸಡೆದು ಸಂಚಳನಾಗಿ (ಸೀದರ. ದೀ. ೬೪-೦೭) ; ಸವಣರೆಲ್ಲಂ ಬುದ್ಧಿಗೆಟ್ಟು ಬೆಬ್ಬಳಿ ಯೋಗಿ [ಪಾಠಾಂ. ಯಾಗಿ] ತವತವಗೆ ಸುಯ್ದು ಮನವುಕ್ಕಿ ನೆಜೆ ಮರುಳಾಗೆ (ಪಾಗೀರ. ದೀ. ೨೫೭-೦೦) . **ಬೆಬ್ಬಳಿವೋಗು :** ಅರಸಂ. . . . ಕೆಲದೊಳಿರ್ದ ನಾನಾದೇಶೀಯ ಬಹುಲಿಪಿವಿಚಕ್ಷಣರಾದ ಕರಣಿಕರಂ ಕರೆದ ವಂದಿರ ಕರಾಗ್ರದೊಳೀಯಲೊಡನಾ ಲೇಖನಮನವರುಮೋದಲಜಿಯದೆ ಬೆಜಗಾಗಿ ಬೆಬ್ಬಳಿ[ಪಾಠಾಂ. ಳೆ]ವೋಗಿ (ವ್ಯಶಬ. ೫-೨೪ ವ). **ಬೆಬ್ಬಳೆ ಪೋಗು :** ಘಾಯವಡೆದನು ದ್ರುಪದಸುತ ಪೂರಾಯದೇಜಿನಲೋಡಿದರು ಮಾದ್ರೇಯರುಬ್ಬಟೆ ಮುಜಿದು ಬೆಬ್ಬಳೆಪೋ[ಪಾಠಾಂ. ವೋ]ದನವನೀಶ (ಕುವ್ಯಾಕ. ೨-೩೯). **ಬೆಬ್ಬಳೆಯೋಗು :** ಸೌಂದರನುಂ ತುಂಬುರನುಂ ಬೆಗಡುಗೊಂಡು ಬೆಬ್ಬಳೆಯೋ [ಪಾಠಾಂ. ಳಿಯಾ, ಳೆಯಾ, ಳೆವೋ]ಗಿ ನಡುಕದ ಮಳೆ ಕಜಿದು . . . ಕೌತುಕರಸದೊಳಮಾಹಪಿರ್ದು (ಪಂಬರ. ೦೬-೪೩) ; ಗುರುಪಯೋಧರಿಯನೆಳೆವೇಡಿತಿಯನೊರ್ವಳಂ ಕಂಡೊರ್ವ ಶಬರನತನುವಿ ನೆಸುಗೆಗೆ ಧರಿಸಿರ್ದ ಬಿಲ್ಲಂಬುಗಳ ಬಸುಟು ಹೆಪ್ಪಳಿಸಿ ಕರತಳವನೊಡ್ಡಿ ಬೆಬ್ಬಳೆ ಯೋದನಾ ವನದೊಳೆ (ಸೌಂದಪು. ೦೬-೩೦). **ಬೆಬ್ಬಳೆವೋಗು :** ಹೂಡಿ ದಂಬಿನ ತೋಳ ತೆಗಹಿನ ಬಾಡಿದುತ್ಸಾಹದ ವಿತಾಳದ ಬೀಡಿಕೆಯ ಬೇಳುವೆಗೆ ಬೆಬ್ಬಳೆವೋದನಾ ಪಾರ್ಥ (ಕುವ್ಯಾಕ. ೦೪-೦೦); ಗೃಹದೊಳಿರ್ದಕ್ಷಯನಿಧಿ ತಕ್ಷಣದೊಳಡಗೆ ಕಂಡು ಬೆಬ್ಬ [ಪಾಠಾಂ. ಬ್ಬ]ಳೆವೋಗಿ ತಳಮಳಗುಗೊಂಡು ಕಳವಳಿಪ ನಿಜಪತಿಯಂ ನೋಡಿ ದುರ್ಗಾಂಬೆಯಿಂತೆಂದಳ್ (ವೃಷಭ. ೦೩-೩೩ ವ). **ಬೆಳ್ಪಳೆವೋಗು :** ಆಗವಿಸುತ್ತಿರಲೆಲ್ಲರ್ ಬೇಗದೆ ನಡೆತಂದು ಪೆಳರ್ದು ಬೆಳ್ಪಳೆವೋಗುತೆ ಸಾಗಿ ವರಮೂಲಲಿಂಗದ ಸೋಗಿನ ದೇಗುಲ ಪನೆಯ್ದೆಜಗಿ . . . ಬೇಡಿಕೊಳಲೊಡಂ (ಪಾಲಾಕ್ಮ. ೦-೦೪-೦೬). [ಬೆಳ್ಪಳ+ಪೋಗು$_1$ (<ಪೋ$_1$)]

**ಬೆಳ್ಪಳಿಸು.** ಬೆಪ್ಪಳಿಸು. ಬೆಬ್ಬಳಿಸು (ಕ್ರಿ). ೧. ಹೆದರು ; ಭಯಪಡು: ಬೆರ್ಚಿ ಬೆಳ್ಪಳಿಸಿ ಬಂದಂ ಫಲ್ಗುಣನಲ್ಲಿ. (ಕಮುದ. ೦೦ ಕ್ರಿಯೆ); ಚಿಂತಾತುರ ನಾಗಿ ಬೆಳ್ಪಳಿಸಿ ಬೇಪಸಮಂ ತಳೆದಂ ಧನಂಜಯಂ (ಕಬಶಂ. ೪-೦೦೩). **ಬೆಪ್ಪಳಿಸು :** ೧. ಬೆಪ್ಪಳಿಸದಿರು ತಾತ ತೆಪ್ಪಗಿಹೆ ನಾ ನೋಡ (ಹಪ್ಪರ. ೩೫-೦೬೦); ತಪ್ಪತ್ತು ತಲೆಯೆತ್ತಿ ಹೊತ್ತಿಕ್ಕೆ ಜೊಂಗುಳಿಗೆ ಬೆಪ್ಪಳಿಸುವಾಸರಿಂ ಬೆಳ್ಳಿ ಬರುತಿಪಳು (ಕಾಂಶರ. ೦೭೭-೩೭೩). **ಬೆಬ್ಬಳಿಸಂ :** ೧. ಅಳವಳಿಸಂ ಬೆಪ್ಪಳಿಸಂ ಕಳವಳಿಸಂ . . . ತಳವಳಿಸಂ ಬೇಸಜಿಯ್ದ ಬೆಳ್ಳಾಗದಿನಿತಂ

F-6

(ಆದಿಪು. ೩-೯೦). ೨. ದಿಕ್ಕುತೋಚದಂತಾಗು ; ತಬ್ಬಿಬ್ಬುಗೊಳ್ಳು : "ಬೆಬ್ಬಳಿಸು ವಿಮೋಹೇ (ದಿಕ್ಕುತೋರದಂತಾಗು)"(ಶಬ್ದಾ): ಮುನಿಪಾಳಕಂ ವಿಷಮೇಷು ಸತ್ತರಸುಪುತ್ರನಂ ಏಳೀಳು ಲೋಹಿತಾಶ್ವಾಂಕ ಎನೆ ಬೆಬ್ಬಳಿಸು ತೆದ್ದನು (ಹರಿಶ್ಚ. ೦೯-೬); ಮದನನಿದೆ ಬಂದನೇಳೇಳೆಂದು ಕಣ್ಗೆಟ್ಟು ಬೆದರು ಕೈಕಾಲ್ಗೆಟ್ಟು ಕಳವಳಿಸಿ ಬೆಬ್ಬಳಿಸಿ ಕುದಿದೋಡಿದರ್ ತಾಪಸರ್ (ಶಬರ. ೩೩-೦೩). ೩. ಭ್ರಾಂತಿಗೊಳ್ಳು; ಭ್ರಮೆಯನ್ನು ಹೊಂದು: ಅರಸಿಯುರಾತ್ಮವಲ್ಲಭನ ಮೇಲೆ ತುಳುಂಕೆ ತದಂಬು ಮೇದಿನೀಶ್ವರನತ ಪಾದಪಂಕಜನ ಪೂಸಿದ ಚಂದನಪಂಕದೊಳ್ ಸವಿಸ್ತರವೊಡಗೂಡಿ ಬೆಳ್ಪುವಡೆದೊಪ್ಪುವುದದ್ಭುತವಾಗೆ ಮೌಕ್ತಿಕಾಭರಣಮಿದೆಂದು ಬೆಬ್ಬಳಿಸಿ ನೋಡುವ ನೋಟಕರುಂ ನರೇಂದ್ರರುಂ (ಧರ್ಮಾಮೃ. ೧೯-೦೬). ೪. ಆಶ್ಚರ್ಯಪಡು; ಬೆರಗಾಗು: ಸೋಜಿಗಗೊಳ್ಳು: ಸಭಾಸಾಮ್ರಾಜರೆಲ್ಲರು ಮಿದೇನೆಂದು ಬೆಬ್ಬಳಿಸೆ ರಘುವೀರನಚ್ಚರಿಗೊಂಡದೇನದೇನೊಲ್ಲು ತಿಳಿವುವುದೆಂದು ಬೆಸಗೊಂಡನು (೬೬೩೦೭. ೩-೦೦). ೫. ಭ್ರಾಂತಿಗೊಳಿಸು: ಮರುಳುಗೊಳಿಸು: ಮಾನವಾಹಾರನು ತಿಂದು ತೇಗದು ಬಜಿಯ ಸಂದೇಹದಿಂ ಬಲ್ಲೆನೆಂದವರ ಬೆಬ್ಬಳಿಸಿ ಕಾಡುತಿಹುದು (ಮನೋಹ. ೧-೩೯). 'ಪೆಬ್ಬಳಿಸು' ಪರಾ. [ಬೆಬ್ಬಳ್ + — ಇಸು₃]

**ಬೆಳ್ಪಾಲು** (ನಾ). ಶುದ್ಧವಾದ ಹಾಲು ; ನಿರ್ಮಲವಾದ ಕ್ಷೀರ : ಇದೊ ತಂದೆ ತನಿಗಳನು, ನನ್ನ ಮಗನಯ್ಯಂಗೆ, ಪಿತೃಗಳಿಗೆ, ತನಿಯೆರೆಯೆ:_ಅಚ್ಚಹಸು ಕರೆದ ಈ ಇನಿದಾದ ಬೆಳ್‌ಪಾಲು, ಹೂಗೆಲಸು ಚಿಟ್ಟುಹೇನಿಳಿಸಿದೀ ಚೆಂಜೇನು (ಶ್ರಾಕು. ೨೩೩-೦೯).

[ಬೆಳ್₁ (<ಬಿಳಿದು) + ಪಾಲ್₁ (<ಪಾಲ್₁)]

**ಬೆಳ್ಪಿಲ** (ನಾ). ಮೂರ್ಖತನದಿಂದ ಕೂಡಿದುದು; ದಡ್ಡತನವುಳ್ಳುದು: ಇದು ತಲೆಗೊಯ್ಯುದತ್ತು ಮುಡಿಯಲ್ ನೆಟ್ ಕಲ್ಲದು ಬೇಕುಬೇಕೆಂದದೆ ತನುವೆಲ್ಲಮಂ ಕಿಡಿಸಿಕೊಂಡು ಮುಡಲ್ ನೆಟ್ ಕಲ್ಲದಾಯ್ತು ಬೇಂಟದೊಳಿದು ಬೆಳ್ಪಿಲಂ ಕಿರ್ಚುರಾರೊಳಲ್ಲದು ನೋಡ ಬಂದ ಕಾಲದ ಪರಿಯುಂ ಮುಗುಳ್‌ವೊಲೆಯ (ಮುಹಿಲಮುಪಾಡುವುದಕ್ಕೆ ಗೋಪ್ಯಮಂ ?) (ಸೂಕ್ತಿಸು. ೬-೯೨೩). [ಬೆಳ್ಪು₂ + — ಇಲ]

**ಬೆಳ್ಪು₁**, ಬೆಳವು, ಬೆಳುಪು, ಬೆಳುಹು (ನಾ). ೧. ಬಿಳುಪು ; ಬಿಳಿಯ ಬಣ್ಣ ; ಶ್ವೇತವರ್ಣ ; ಧವಳತೆ: ಹಿಮಧವಳಾತಪತ್ರಮಾನೆ ಪೋಲೆ ಮುಟೀಂದುವ ಬೆಳ್ಪು (ಶಂಪಾ. ೦-೦೨೦) ; ಕಳಿದುದು ಮಾಗಿ ಕೂಗಿದುದು ಕೋಗಿಲೆ ಪಲ್ಲವಿಸಿತ್ತು ಮಾಮರಂ . . . ತಂಪಡೆ ನೀಂದ ಸೆಡನಂ ತಳೆದುವು ಕೂಡೆ ಕೆಂಪಿನ ಪಸುರ್ಪಿನ ಕರ್ಪಿನ ಬೆಳ್ಪಿನಂದಮಂ (ಗಿಆಕ. ೩-೩೯); ಕಂಪನ ಮೈಗಧರಕೆ ಬೆಳ್ಪು ಕಡೆಗಣ್ಗೆ ಕೆಂಪಡರಿದುದು (ಅಚ-೦೦-೦೦೨). ೨. ಕಾಂತಿ ; ಹೊಳಪು: ಪೊಸತಲರ್ದೊಂದು ತಾವರೆಯ ಗೆತ್ತು ಮುಖಾಬ್ಜಮನೊಂದು ತುಂಬಿ ಚುಂಬಿಸೆ ಸತಿ ಬೆರ್ಚಿ ಬೆಳ್ಪಳಿಸಿ ನೋಟ್ಟುದುಮಾಕೆಯು ಕಣ್ಣ ಬೆಳ್ಪುಗಳ್ ಪಸರಿಸೆ ತುಂಬಿಗಳ್ ಕಾವಲಯಂಗಳೆಲ್ಲುವೆ ಗೆತ್ತು ಮತ್ತೆಯುಂ ಮುಸುಕುವುದುಂ (ಕಂಕಚಿ. ೩-೬೩) ; ಪೊಳೆವಲರ್ಗಳಿಂ ಮಿಳಿರ್ಪ ಬೆಳ್ಪು ರಸಾತ್ಮಕವಾಗಿ ಗಂಡಮಂಡಳಕಳದಿ:ದಮಂಜಿರ್ಮಯುತಿರ್ದುದೆನಲ್ ನ ಯ ನಾ ಂ ಬು ಲೋಚನಂಗಳಿಕರ್ಮಾಣ್ಕೆ (ಕಾದಂಬ. ೬೯೯) ; ತರಳ ವಿಶಾಲಲೋಚನದ ಬೆಳ್ಪು ಕುರುಳ್ಗಳ ಚೆಲ್ವು ಭೂಷಣೋತ್ಕರದ ಬೆಡಂಗು . . . ಕಣ್ಗೆ ಪದಿರ (ಧರ್ಮಾಮೃ. ೩-೬೬). ೩. ಶುಭ್ರವಾಗಿರುವಿಕೆ ; ನಿರ್ಮಲತೆ : ಸ್ವಚ್ಛತೆ: ಶುಭ್ರತೆ : "ಬೆಳ್ಪು-ನಿರ್ಮಳಿಕೆ" (ಶಬ್ದಮ. ಸೂ. ೨) ; "ಬೆಳ್ಪೆಂದು ನಿರ್ಮಲಂ" (ಕರ್ಣಾಟ. ೩೬). ೪. ಹೊಳಪು ; ಕಾಂತಿ : 'ಬೆಳ್ಪುವಡೆ' ಪರಾ. ೫. [ಛಂದ] ಉಚ್ಚಾರಣೆಗೆ ಒಂದು ಹ್ರಸ್ವಾಕ್ಷರದಷ್ಟು ಕಾಲವನ್ನು ತೆಗೆದುಕೊಳ್ಳುವ ಅಕ್ಷರ ; ಲಘು : ಮೊದಲೊಳ್ ಛಂದದೀಯೆಡೆಯ ಲೆಕ್ಕದೆ ಕಟ್ಟುದು ವೃತ್ತಮೆಂದು ಪೇಟ್ವುದು ಬಗೆವಂ ದೊಡಾಗಳವಚಿಂಕಮನರ್ಧಿಸಿ ಬೆಳ್ಪನಿಟ್ಟುಕೊಳ್ವುದು ಸಮಭಾಗಮಿಪಾಯು ದೊಡೆ ರೂಪಯುತಾರ್ಧದೆ ಬಿಳ್ಪನಿಟ್ಟುಕೊಳ್ವುದಿ ಗಡ ಸೂತ್ರಮಿಾ ತೆಜದೆ ಕಾಣ್ಬುದು ನಷ್ಟಮಂ (ಛಂದೋಂಬು. ೬-೨೬೨). 'ಬಿಣ್ಪು' ಪರಾ.

**ಬೆಳವು** : ೨. ಒಳಗುಳ್ಳೋವಣಮಮರ್ದಿರೆ ಚಳಸಂ ಪೊಜಗೆಸೆಯೆ ಬೆಳಪನೆಯ್ದುವ ಬೆಳಗಂ ಪೋಲೆವ ಸುಲಿಪಲ್ಲೆ ಮಸುಳಿಸೆ ವಿಳಾಸದಿಂ ದರ್ಭ ಶಯ್ಯನತಳಗತನಾದಂ (ಕಾವ್ಯಾವ. ೨೯೬) ; ಕಡೆಗಣ್ಣ ಪೊಳೆವು ಸುಲಿಪಲ್ಗಳ ಪುಟಾಭರಣಗಳಾದ ಮರೀಚಿ ಮಾಣಿಕ್ಯಮಯದಿಮ್ಮಿರವ ಸೊಡರುಗಳ ದೇದೀಪ್ಯದೀಪ್ತ್ಯಾಯಮಾನದಿಂ ಶೋಭಿಸಿದವು (ಸವಶೋ. ೨೦-೬). **ಬೆಳುಪು**: ೧. ಬೆಳುಪು [ಶಾಶಾಂ. ಬೆಳ್ಪಂ] ಬೆಳೆಗುಮುನಾಗಸಕ್ಕೆ ನಿಜಮಲಿನತೆಯುಂ ಮುಂ ಬಿಡಿಸಿ ಮಾತೃನಂಗನುಮಂ ಬೇಜ್ ಜನಕ್ಕೆ ತೋಜಿದುದು ಬೆಳ್ದಿಂಗಳ್ (ತಂಧ್ರ ಪು. ೬-೪೨) ; ಅಳಿಯಿಜಗದನಿಲನಲುಗದ ರವೀರಂ ಪುಗದ ಸುಳಿ ಗೊಂಡು ದಳವೇಜು ಹಸುರಳಿದು ಬೆಳುಪುಳಿದ ಸುರಚಿರಮೆನಿಪ್ಪ ಮಿಾಸಲ ಮೊಗ್ಗೆಯುಂ ಕೋಡು (ಐಕರ. ೩-೨೦) ; ಬೆಳುಪು ನೆಜಿಯದ ಕಿಜುವೆಸಳ ನೆಯ್ದಿಲುಗಳೇ ಮಾಡದಿಯ ಕುಡಿತೆಗಂಗಳಿಗೆ ಪಡಿಯಲ್ಲ (ಐಕಪು. ೪-೨೩). ೨. ತತ್ ಕರಪ್ಪಳ ನಖಿರಣೀರವದು ಪುದಿದಿರ್ದಿರೆ ಥಳಥಳಿಸಿ ಬೆಳುಪೊದಗಿ ಬೆಳ್ಳಿಯ ಬಳ್ಳಿಗಳ ಛಂದದಿ ಬೆಳೆದು ಮೇಲ್ವೆಸೆಗೆ ಪಸರಿಸಿ ಸಲೆ ಬೆಳೆಗುತಿರಲು (ಐಕಪು. ೩೯-೩). **ಬೆಳುಹು** : ೧. ನೇಹವೆಳದಾಯಿತ್ತಾಗಿ ನೋಟ ವಿಪ್ಪಳ ವಾಯಿತ್ತು ಕಂಡೆ ಅಂಗದ ಕಳೆ ಕಂಗಳ ಮೋಹ ಎವೆಗೆವ ಸ್ಮರಿಸದು ಬೆಳುಹಿನ ಮೇಲೆ ಕೆಂಪಡರಿತ್ತು (ಸಚನ, II. ೦೪೪ ೩೦೦).[ಬೆಳ್₁ (< ಬಿಳಿದು) + —ಪ್ಪು₁]

**ಬೆಳ್ಪು₂**, ಬೆಪ್ಪು (ನಾ). ೧. ದಡ್ಡತನ; ಬುದ್ಧಿಹೀನತೆ; ಮೌಢ್ಯ; ಮಂಕುತನ : ಇನಿತೆಸಗಿಂಬುಕಿಯ್ದಿನಿತು ಬೆಳ್ಪನಿತೊಳ್ಪಿದೆನ್ನನಿನ್ನು ಮೊರ್ವನೊಳಿವಳಿಂದೊಡಂಬಡುಮವೆಲ್ಲಿಯು ಬಾಟಿನಗೆಂಬ ಪಂಬಲಿಂ ಮಾನದೊಳಟಲ್ದು ಚಿಂತಿಸಿ ಕಟಲ್ದು ಬಟಲ್ದು ಕನಲ್ದೊನಲ್ದು ಬೆಳ್ಪನಿಸುವ ಬೆಳ್ಪ ಬೇರನಗುಬುಗ್ಗಗಸಕೆತ್ತದೆ ಸೂಳೆ ಮಾಣ್ಬುವೇ (ಶಾಂತಿಪು. ೬-೯೯). 'ಬೆಳ್ಪ' ಪರಾ. **ಬೆಪ್ಪು** : ೧. ಬೆಪ್ಪಿನ ಲೆಪ್ಪ ಗೊಂಡಂತಿದ್ದ ಕಣ್ಣು, ಆ ಮುಖಮಂಡಲದ ಚೆಲುವನ್ನು ಮಾಸಲು ಗೊಳಿಸಿತ್ತು (ಶಾರೋಜ. ೩೬೯); ಮುಖವೆಲ್ಲ ಒಣಗಿ ವಿವರ್ಣವಾಗಿ ತುಟಿಗಳು ಅದುರುತ್ತಲಿವೆ, ಕಣ್ಣುಗಳಲ್ಲಿ ಬೆಪ್ಪೂ ಅಲ್ಲ, ಭಯವೂ ಅಲ್ಲ, ಏನೋ ಒಂದು ಬಗೆಯ ನೋಟ (ಒಕಳ. ೦೬); ಹುಚ್ಚಲ್ಲ, ಬೆಪ್ಪಲ್ಲ, ಶಿವಲೀಲೆ (ಗಾದೆ). ೨.ಬೆಪ್ಪನಾದವನು ; ದಡ್ಡ ; ಮಂಕ : ಮೂರ್ಖತೆಯೊಳ್ಪಿರದ ಸೊಲ್ಲು ಗಳಾಡುತಿರ್ಪ ನಿಜಕೌರ್ಯಗಳ ಬಳಕೆಯುಂ ಮರೆದು ಬೆಪ್ಪೇ (ಶಂಕಾರಾ. ೬-೨೬-೬೦) ; ನಾನು ಅಂಥ ಬೆಪ್ಪು ಎಂದು ತಿಳಿದುಕೊಂಡಿದ್ದೀಯೋ:ನು ! (ಮುಜಾಗ. ೬) : ಮೆಡಲ್ ಹೊಡೆಯೋ: ಭೂಪನೆಂದರೆ ಸಾಮಾನ್ಯವೇನೋ: ಬೆಪ್ಪೇ ? (ನವರಾ. II. ೬೨೯). [ಬೆಳ್₂ + —ಪ್ಪು₁]

**ಬೆಳ್ಪುಗಣ್** (ನಾ). ಬಿಳುಪಾದ ಕಣ್ಣು : ಬಿಳಿಚಿಕೊಂಡ ಕಣ್ಣು : ಕರ್ಣಾಲೊಡಮುಯ್ಯನೊಡಲಂ ತಬ್ಬಿ ಬಿಗಿದಪ್ಪಿ ಬಾಳ್ಗೆ ಜೀಸಂ ಸೂಸು ವೊಡಲಿಚಂ ಬೆಳ್ಪುಗಣ್ ಪೆಳ್ಪಳಿಸೆ, ಬೆರ್ಚಿ ನಿಂದಲ್ ಬರ್ದುಂಕೆ ಬೆಬ್ಬಳಿಸಿ (ಕೃಣಾಚಾ. ೦೦೬-೦೬೦). [ಬೆಳ್ಪು₁ + ಕಣ್]

**ಬೆಳ್ಪುದೋಜು** (ಕ್ರಿ). ಬಿಳಿಯ ಬಣ್ಣವನ್ನು ಹೊಂದು ; ಬಿಳುಪೇರು : ನೆಟ್ ಹಸುರಿರಲು ಮುತಜನದು ಮುಖಂ ಬೆಳ್ಪುದೋಜಿರೆ ಬೊಲ್ಲನಕ್ಕು ಕಾಲ್ಮೊಗವೆಯ್ದಿ ಬೆಳ್ಪುದೋಜಿರೆ ಮಂಗಳಂ . . . ಸಿಲ್ಕಾವ ಕುಮರ ಸೂಕಳೆನಿಕ್ಕುಂ (ಮಂಗಳ. ೬೨-೦೩). [ಬೆಳ್ಪು₁ + ತೋಜು]

**ಬೆಳ್ಪುವಡೆ** (ಕ್ರಿ). ಕಾಂತಿಯನ್ನು ಹೊಂದು ; ಹೊಳೆ : ಅಪ್ಪುವ ನಳತೋಳ್ಗಳಲ್ಲಿ . . . ಬೆಳ್ಪುವಡೆವ ಸೆಳ್ಳುಗುರ್ಗಳ ತೋಜಿಂದು ನೆಪ್ಪಿ ಸೊಳ್ ಬೆದಕಿ ನೋಡಿದಳು (ಮೋಹತ. ೮-೦೯). [ಬೆಳ್ಪು₁ + ಪಡೆ₁]

**ಬೆಳ್ಪುವೇಱು** (ಕ್ರಿ). ಬಿಳುಪನ್ನು ಹೊಂದು ; ಬಿಳಿಯ ಬಣ್ಣಕ್ಕೆ ತಿರುಗು : ತೊಂಗಲ್ಗೊಂಡಿರ್ದ ಕೆಂಪಾದಸುಗೆಯ ತಳಿರು . . . ಸೊಂಪಿನಿಂ ಬೆಳ್ಪುವೆತ್ತಿರ್ದಿಂಗೋಲಂ ಪಣ್ತ ದಾಳಿಂಬಗಳನೊಲವಿನಿಂ ತೋಂಟಿಗಂ ಕೊಟ್ಟು ಸೊರ್ವಂ (ಕಾವ್ಯಾ. ೯೮). [ಬೆಳ್ಪು$_1$ + ಪೆಱು$_1$]

**ಬೆಳ್ಪಿಸೆ** (ಕ್ರಿ). ಬಿಳಿಯ ಬಣ್ಣದಿಂದ ಶೋಭಿಸು,—ಪ್ರಕಾಶಿಸು : ಪಸುರಿಸಿದುದು ಪದ್ಮಿನಿ ಬೆಳ್ಪಿಸಿದುದು ಕುಮುದಿನಿ ನಿಶಾಮುಖಂ ನಸುಗರ್ಪಂದೆಸೆದುದು ಪಡುವಣದೆಸೆ ಕೆಂಪೆಸೆದುದು ದಿವಸಾವಸಾನಮಪ್ಪುದು ಮಾಗಳ್ (ಕಾದಂಬ. ೦೩೯) ; ನೆಲನಂ ಘಟ್ಟಿಸೆ ಶಬ್ದಮುಬ್ಬರಿಪ್ಪೊಡಂ ಮೇಣ್ ಮಿಂಚುವೆತ್ತಿರ್ಪೊಡಂ ಶಿಲೆಗಳ್ ಬೆಳ್ಪಿಸದಿರ್ಪೊಡಂ . . . ನಿಶ್ಚಯಂ ಜಲಮುಕ್ಕುಂ ಪುರುಷದ್ವಯಪ್ರಮಿತದೊಳ್ (ಲೋಕೋಪ. ೫-೦೩).

[ಬೆಳ್ಪು$_1$ + ಎಸ್$_2$]

**ಬೆಳ್ಪೇರು** 'ಬೆಳ್ಪೇಱು' ನೋ.

**ಬೆಳ್ಪೇಱು, ಬೆಳ್ಪೇರು** (ಕ್ರಿ). ೧. ಬಿಳಿಯ ಬಣ್ಣಕ್ಕೆ ಬರು : ತುಱುಗಿದಲರಿಂ ಬೆಳ್ಪೇಱಿದ ಬಕುಳಂಗಳೊಳಂ ಬನದಕ್ಕೆ ಪಕ್ಕದ ಬನಮಂ ನೋಡಲ್ವೇೞ್ಪು ದೇೞೆಂದೆಂಬುದುಂ (ಕಾವ್ಯಾ. ೯೯). ೨. ಬಿಳಿಚಿಕೊಳ್ಳು; ಮ್ಲಾನವಾಗು: ಬಸಿಱ ತೆಳ್ಪಱಿದತ್ತೆ ಮೊಗಂ ಬೆಳ್ಪೇಱಿದುದೇ . . . ಚೋದ್ಯಮಿದೆಂದು ಮಗುೞ್ದು ಬಣ್ಣಿಸಿದರಿಂದ್ರನ ಕಾಂತೆಯರಂತರ್ವರ್ತ್ನಿಯನಾ ನೃಪಪತ್ನಿಯಂ (ಆದಿಪು. ೬-೩೦); ಗಣಕರು ಲೆಕ್ಕಿಸಲಾಱದೆ ಬೆಱಗಾಗೆ ಪರಸಮಯಿಗಳ ಮೊಗಂ ಬೆಳ್ಪೇಱೆ ಬಿಜ್ಜಳನ ಮೊಗಂ ಲಜ್ಜೆಯೇಱೆ ಶರಣರ ಮೊಗಂಗಳು ಹರುಷವೇಱೆ (ಬಸವ. ೮-೦೨೮). **ಬೆಳ್ಪೇರು** : ೧. ಅಳಿಗಳುಂ ಪಾರುತಿವೆ ಪವಳ ಬೆಳ್ಪೇರುತಿವೆ (ಪಂಪಾರಾ. ೫-೬-೬೧); ಸಣ್ಣದೊಂದು ನಕ್ಷತ್ರದ ಸಮೀಪದಲ್ಲಿ ಪ್ರಕಾಶವುಳ್ಳುದಾಗಿ ಬೆಳ್ಪೇರಿ ಮಂಕಾಗಿರುವ ಜಾಲವೊಂದು ಗೋಚರವಾಗುತ್ತದೆ (ತ್ರಿನೇತ್ರರ. ೩೦).

[ಬೆಳ್ಪು$_1$ + ಏಱು$_1$ ( < ಏಱ್$_1$ )]

**ಬೆಳ್ಪೊಡೆ** (ನಾ). (ವಿಭೂತಿಯನ್ನು ಧರಿಸಿರುವುದರಿಂದ) ಬಿಳಿದಾದ ದೇಹ : ದಿಟ್ಟನೊಂದಾನೊಂದು ದಿನದೊಳು ಮುಟ್ಟಬರೆ ಯಾದವರ ಮನೆಗಳವಟ್ಟ ಭಸಿತ[ತ]ದ ಬೆಳ್ಪೊಡೆಯ ಕೆಂಚಡೆಯ ಸುಲಿಪಲ್ಲ (ಕಾವೇರ. ೫೭-೬). [ಬೆಳ್$_1$ ( < ಬಿಳಿದು ) + ಪೊಡ$_3$ ]

**ಬೆಳ್ಪೊಱಸು** (ನಾ). ೧. (ಅನಿಷ್ಟಕಾರಕವೆಂದು ನಂಬಲಾದ) ಒಂದು ಬಗೆಯ ಪಕ್ಷಿ ; ಬಿಳಿಯ ಪಾರಿವಾಳ : ನರೆಯ ಜೊಂಜಂಗಸುಮಾಸುಂ ನೆರೆದಿರ್ಪೊಡೆ ನೆರೆದು ಬಿಸದದಿಂ ನೋೞ್ಪವರಿನ್ನರಗಿಳಿಯುಂ ಬೆಳ್ಪೊಱಸುಂ ನೆರೆದುದವಿನಱಸಿಕೊಳ್ವರೆಮ್ಮೊಳಮೋಘಂ (ಸೂಕ್ತಿಸು. ೮-೪೦೮). ೨. (ಆಲಂ) ಅನಿಷ್ಟಕಾರಕ ವ್ಯಕ್ತಿ : ಎನಿತಾನುಮಂದದಿಂ ಜೂದನಿಕ್ಕಿಯುಂ ದ್ರುಪದಸುತೆಯನೆೞೆದುಯ್ಯಯುಮಿಂತಿನಿತೊಂದಾದುದು ದುಶ್ಶಾಸನನಿಂದಂ ಶಕುನಿಯೆಂಬ ಬೆಳ್ಪೊಱ[ಪಾಠಾಂ.ಬೆಳ್ಪರ]ಸಿಂದಂ (ಪಂಪಭಾ. ೭-೨೦); ಮುಱಕಿಸುವ ಧರ್ಮಮೊಂದೊಡೆ ಗುಱುಗುಱಿಸುವ ಗಂಡನಿದಿರೊಳೆದ್ದಾಡುವ ಬೆಳ್ಪೊಱಸುಗಳು ಕಿಸುಗುಳಿಯರಪಱಿವೊಡೆ ಪೋಲಿಪುದೆ ಧರ್ಮರತ್ನಾಕರೆಯಂ (ಧರ್ಮಾಮೃ. ೦೦-೬೮). [ಬೆಳ್$_1$ (< ಬಿಳಿದು) + ಪೊಱಸು]

**ಬೆಳ್ಬಳೆ** 'ಬೆಳ್ಬಳ' ನೋ.

**ಬೆಳ್ಬಳೆವೋಗು** 'ಬೆಳ್ಬಳಂಬೋಗು' ನೋ.

**ಬೆಳ್ಮಂಜು** (ನಾ). ಬಿಳಿದಾಗಿರುವ ಮಂಜು ; ಶುಭ್ರವಾದ ಹಿಮ : ಅಱಲ ಪೞಯುಟ್ಟಿರಳ್ ಪೂಗಸಿಂಗೆ ಮುಸುಕೆೞೆದು ಒರ್ಕೆಂದು, ಬೆಳಗಿನೊಳ್ ಬೆಳ್ಮಂಜ ಕಿದಱುತೆ ನೇಸಱೆಟ್ಟಿರ್ಕೆಂದು, ಪಾರ್ದು ಪಂಬಲಿಸು ವಯ್ ನೀನ್ (ಬರ್ಕೃಪ್ರ. ೨-೨೮). [ಬೆಳ್$_1$ ( < ಬಿಳಿದು ) + ಮಂಜು$_1$ ]

**ಬೆಳ್ಮಡಿ** (ನಾ). ಶುಭ್ರವಾದ ಬಟ್ಟೆ, ವಸ್ತ್ರ, ಸೀರೆ ಮುಂತಾದುವು : ಕೆಂಪಿನ ಪಸದನಮಂ ಕಳೆದು ಪಲ್ಲಂ ಸುಲಿದು ತಳಿನೀರ್ ಮಿಂದು . . . ಬೆಳ್ಮಡಿಯನುಟ್ಟು ಬಳಪದೋಲೆಯನಿಟ್ಟು ಶ್ವೇತಮಾಲೆಯನೆಟಲೆ ಬಿಟ್ಟು ಕೈಗೆಯ್ದು (ಲೀಲಾವ. ೬-೫೩ ಪ). [ಬೆಳ್$_1$ ( < ಬಿಳಿದು ) + ಮಡಿ$_2$ ]

**ಬೆಳ್ಮಣ್**, ಬೆಳುಮಣ್ಣು (ನಾ). ೧. ಬಿಳಿಯ ಮಣ್ಣು : ಬೆಳ್ಮಣ್ಬೆರಸಿದ ಮಹೀಪ್ರದೇಶಂ ನಿರಂತರಂ ಪಾಂಡುಭೂಮಿ (ಧಸ್ತುಕೋ. ೨೬-೪). **ಬೆಳುಮಣ್ಣು** : ೨. ಗೋಪೀಚಂದನ : ಸಣ್ಣದಂಡಿನ ಜೀರ್ಣಕಂತೆಯ ಥಣ್ಣಗಿಹ ದೇಹದ ನೊಸಲ ಬೆಳುಮಣ್ಣ ಮಟ್ಟಿಯ ತಕ್ಕ ಮಂಡಲ ಕೋರ ಜಪಮಣಿಯ . . . ಮುನಿ ರಂಜಿಸಿದ (ಭಾಗ. ೦೦-೨೯-೨೩).

[ಬೆಳ್$_1$ (< ಬಿಳಿದು) + ಮಣ್]

**ಬೆಳ್ಮಣೆ** (ನಾ). ಒಂದು ಸ್ಥಳದ ಹೆಸರು : ಕುಸ್ದಗೆಸೆವೆ ಕಲಿಯುಮ್ಮ ಬೆಳ್ಮಣೆಯ ಪದುಮಣ್ಣನ್ ಕರ್ಬುರಸೋಮ . . . ಇನ್ತೀ ಎನೆಬರು ಶ್ರೀಕರಣ ಸಹಿತ ಬಿಟ್ಟಾರ್ (ಎಕ. VIII, ಸೊರಬ. ೦೦-೦೨ ; ಸು. ೮೦೦).

[ಬೆಳ್$_1$ + ಮಣೆ$_3$]

**ಬೆಳ್ಮಸೆ** (ನಾ). ೧. ಬೆಳ್ಳಗಾಗುವಂತೆ ಉಜ್ಜಿದ ಸಾಣೆ; ಚೆನ್ನಾಗಿ ಹರಿತ ಮಾಡಿದ ಸಾಣೆ : ಬೆಳ್ಮಸೆಯಂಬಿನ ಸರಿಮೊನೆಯಂಬಿನ ಸೋಣೆ ಪಾರೆಯಂಬಿನ ತಂದಲ್ ಘನಮಾದುದಲ್ಲಿ (ಪಂಪಭಾ. ೦೨-೭೦); ಪೊದಬ್ದ ಬೆಳ್ಮಸೆವಿಸಿಲ್ ರಣದೇವತೆಯಟ್ಟಹಾಸದಂತೊಗೆಯೆ . . . ಪಾಯ್ದುವಂಬುಗಳ್ (ಜಗದ. ೬-೭೮). ೨. ನುಣುಪಾಗಿ ಹೊಳೆಯುತ್ತಿರುವ ಭಾಗ : ಕನ್ನಡಿಯಿರ್ಪವೊಲಿರ್ಪ ಚಕ್ರದ ಬೆಳ್ಮಸೆಯಲ್ಲಿ ನೋಡುವಳ್ತನ್ನ ಮುಖಾಬ್ಜಮಂ (ಅಸಂಪು. ೦೨-೬೬). [ಬೆಳ್$_1$ (< ಬಿಳಿದು) + ಮಸೆ$_2$]

**ಬೆಳ್ಮಳಲ್** (ನಾ). ಬಿಳಿಯ ಮರಳು; ಬೆಳ್ಳಗಿರುವ ಉಸುಕು : ನೀರ್ತಗೆಯಲ್ಕೆ ಬೆಳ್ಮಳಲ್ದಿರೆಗಳನಪ್ಪಕೆಯ್ಕೆ ತೊಱೆ . . . ಬಂದುದತಿನಿರ್ಮಲ ನೀರದವಪ್ಪ ಶಾರದಂ (ಕಾದಂಬ. ೬೩೨); ಭೃಗುದೇವತಾಪ್ರಹಾಸಮರೀಚಿ ಪ್ರಕರಮೆನೆ ಬೆಳ್ಮಳಲ್ ಪುದಿದು ಕರಂ ಕಣ್ಗೆಸೆದುದಸದಳಂ ಶ್ರಮಕುಟಿಯೊಳ್ (ಕುಸುಮಾ. ೬-೬೦).

[ಬೆಳ್$_1$ (< ಬಿಳಿದು) + ಮಳಲ್ (< ಮಣಲ್) ]

**ಬೆಳ್ಮಳೆ** (ನಾ). ಬಿಳಿಯದಾದ ನೀರಿನ ಧಾರೆ : ನೇಸರಿಂದೊ ತಣ್ಬಸಿಲ ಬೆಳ್ಮಳೆಯ ಕರೆಯುತಿದೆ (ಹಕ್ಕಿಹಾ. ೫-೬೬).

[ಬೆಳ್$_1$ (< ಬಿಳಿದು) + ಮಳೆ (< ಮೞೆ)]

**ಬೆಳ್ಮಾದೆಂಗ** (ನಾ). ಒಬ್ಬಾತನ ಹೆಸರು : ಪೊಱ್ಯಕ್ಕನ್ದ ಬೆಳ್ಮಾದೆಙ್ಗಂ ಶ್ರೀಕಂಚಿಪಯಿ ನರಸಿಗಮಙ್ಗಲದ ತೊಱುಗಳೊಳ್ಸತ್ತಮ್ (ಎಕ. X, ಶ್ರೀನಿವಾಸಪುರ. ೪೨-೩; ಸು. ೬೨೦).

[ಬೆಳ್$_1$ + ಮಾದೆಂಗ ( < ಮಾದಿಗ)]

**ಬೆಳ್ಮಾನಿಸ** (ನಾ). ಹೇಡಿ; ಅಂಜುಬುರುಕ : ಪುಲ್ವಿಡಿದಱ ಮುಣ್ಮಳಿಯನು ಮಾಳ್ಪುದಱ ಭೀರುತೆಯುಂ ಬೆಳ್ಮಾನಿಸರಪ್ಪವರ್ಗೆ ಮಱೆವೊಕ್ಕವರ ಕಾಯದು . . . ಕುಳಿಲಾಳ್ಗದು ನೆಱೆವಳಿಗೆಯ ಲೋಕವಱಿಯ (ಶ್ರೀಪಾಂ. ೮-೬೭). [ಬೆಳ್$_2$ + ಮಾನಿಸ$_1$ (< ಮಾನುಸ)]

**ಬೆಳ್ಮಾರಲ**, ಬೆಮ್ಮಾರಲು, ಬೊಮ್ಮರಲು (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : ಮುಳ್ ಪೊದೆಯ ಬೆಳ್ಮಾರಲಂ ಕಾಯ್ ತುಂಬಿ ಹಣ್ಣನಕೆ ಹಾರೈಸುತಿರ್ದುದು ಹೊಸಮಳೆ ಹರಕೆಗಾಗಿ (ಶ್ರೀರಾಮಾ. ೩೪೦-೦೦). **ಬೆಮ್ಮಾರಲು** : ದೂರದಲ್ಲಿ . . . ಬೆಮ್ಮಾರಲ ಮಟ್ಟುಗಳೂ ಅರಮರಲಗಿಡಗಳೂ ಇದ್ದುವು (ಮಲೆಮ. ೦೪೦). **ಬೊಮ್ಮರಲು** : ಬೊಮ್ಮರಲು, ಬಿಳಿಸುರಿಮುಳ್ಳು, ಸಣ್ಣಗುರಕಿ (ದ್ರವ್ಯಗು. ೬೪-೧೬೩೦). 'ಅರಮರಲು' ನೋ. [ಬೆಳ್$_1$ (< ಬಿಳಿದು) + ಮಾರಲ ?]

**ಬೆಳ್ಮಾಳ** (ನಾ). ಬಿಳಿಯ ಮಣ್ಣಿನ ಜಾಗ : ನೀರ್ದಾಣದೆಡೆಗಳೊಳ್ ಕಾಟೀಗಳಪ್ಪೆಡೆಗಳೊಳ್ ಬೆಳ್ಮಾಳ[ಪಾಠಾಂ. ಬೆಳುಮಾನ]ದೆಡೆಗಳೊಳ್ ಭೀತಂಗಳಾಗಿಯುಂ (ಅಭಿಸೂ. ೩-೨). [ಬೆಳ್$_1$ (< ಬಿಳಿದು) + ಮಾಳ$_2$]

**ಬೆಳ್ಮಿಂಚು** (ನಾ). ೧. ಬಿಳಿಯ ಬಣ್ಣದ ಮಿಂಚು; ಥಳಥಳಿಸುವ ಮಿಂಚು : ಬಲಾಹಕಂ ತಾಳ್ದ ಬೆಳ್ಮಿಂಚಿನೊಬ್ಬುಳಿಯೊ ಪೊಸತೆನೆ ಘಟಿತೋತ್ಕಚಿತನಯನು ಬಾಹುಬಲದಿಂದೆಡದ ಕಕ್ಷದೊಳಿಱುಂಕಿದ ಮಹಾ ಹಯಂ ಗಗನಮಾರ್ಗದೊಳ್ಪೈದುತಿರೆ (ಕೃಬಿಭಾ. ೯-೦೩); ಬಱಿಕ್ಕೆ ಬೆಳ್ಮಿಂಚು, ಲೋಕನಾಶಕ್ಕೆ ಕಪ್ಪಿಯ ಚಂಡಿಕೆ. ಬಿಱುಮಿಸಿಲ್ಗೆ ಕೆಮ್ಮಿಂಚು (ಕಬ್ಬಿಪು. ೨೧೮ ಪ್ರಯೋ); ಬೆಳ್ಮಿಂಚು ಮುಂಚುತಿರೆ ನೊಡರ ಕಣ್ಣೆಳಗಿನಿಂ (ಕಾಬೂಕ. ೦೨೩-೨೬೩). ೨. ಬಿಳಿಯ ಬಣ್ಣದ ಕಾಂತಿ,—ಪ್ರಕಾಶ : ಶ್ವೇತಚ್ಛತ್ರದ ಕೆಳಗೆ ಬೆಳ್ಮಿಂಚಿನ ದುಕೂಲದ ಸಜ್ಜೆ ಕಪ್ಪುಳುಡೆ ಗಳನ್ನುಳ್ಳುದೂ ಆದ ಬೆಳ್ಳಿಯ ಭದ್ರಾಸನವನ್ನು ಬಳಸುಗಟ್ಟಿ (ಜಟ್ಟಿಕ. ೩೦-೦೩). [ ಬೆಳ್$_1$ (<ಬಿಳಿದು) + ಮಿಂಚು$_2$ ]

**ಬೆಳ್ಮಿಗ** (ನಾ). ೧. ಸಸ್ಯಾಹಾರಿಯಾದ ಸಾಧುಪ್ರಾಣಿ; ಕ್ರೂರವಲ್ಲದ ಪ್ರಾಣಿ : ಬೆಳ್ಮಿಗಂ ಪಜ್ಜೆ ದಲೆಂಬುದನೆರೆದುಮಾಸಱಿವಾತನೆ ಚದುರಂ (ಶಂಶಶಾ. ೩-೯೩); ಕತ್ತಲಿಸಿರ್ದ ಪೇರಡವಿಯೊಳ್ ಸಲೆ ಕೋಟ್ಮಿಗ ಬೆಳ್ಮಿಗಂಗಳಂ ಮಿತ್ತುವಿನಂದದಿಂ ತವಿಸಿ (ದಶಕು. ೨-೧೦೯). ೨. ಒಂದು ಬಗೆಯ ಜಿಂಕೆ; ಚಿಗರೆ : "ಕೃಷ್ಣಸಾರಂ ಮಾತೃಮಿಯೆನೆ ಬೆಳ್ಮಿಗ" (ವಸ್ತುಕೋ. ೪೦-೬); ಎಮ್ಮ ಪಾಸಿದ ಚಿತ್ರಪಟಮೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಮಿಗಂಗಳುಗಳೆ ತೊಡರ್ಗುಂ (ಆದಿಪು. ೩-೯೯ ವ); ಬರಯಿಯೆಂಬ ಬೆಳ್ಮಿಗಂಗಳನಳುರ್ವ ಕಾಬ್ಕಿಚ್ಚಿನಂತೆ ಕಂಕವಾದ ಕಂಕೇಳೀಕುಜಂಗಳೊಳಂ (ಮಲ್ಲಿಪು. ೨-೩೩). 'ಕೋಟ್ಮಿಗ' ಪರಾ. [ ಬೆಳ್$_2$ + ಮಿಗ ]

**ಬೆಳ್ಮುಗಿಲ್**, ಬೆಳುಮುಗಿಲು, ಬೆಳ್ಮುಗಿಲು (ನಾ). ಬಿಳಿಯ ಬಣ್ಣದ ಮೋಡ : ಬೆಳ್ಮುಗಿಲಿಂದಂ ಮುಸುಕಿದ ಬಾಳಾರ್ಕಬಿಂಬಮಿರ್ಪಂತಿರ್ದಂ (ಆದಿಪು. ೬-೯೨); ಮಿಸುಗುವ ಬೆಳ್ಮುಗಿಲೊಳಗುದಯಿಸುವಿನಬಿಂಬದ ಪೊಲೆಸೆವ . . . ಬಾಲನಂ ನೃಪಾಲಂ ಕಂಡಂ (ಕುಸುಮಾ. ೬-೮೬). **ಬೆಳುಮುಗಿಲು** : ದಟ್ಟೈಸಿ ಬಳೆದ ಬೆಳುದಿಂಗಳಿಂ ಬೆಳುಮುಗಿಲ ಮೆಟ್ಟಿರ್ದ ಚಂದ್ರಕಳೆಯೆಂದೆಂಬ ಭಾವವಳವಟ್ಟು ಬಿಳಿಯುಪ್ಪರಿಗೆಯುಗ್ರದೊಳು ನಿಂದೊರ್ವ ಸತಿ ಕಣ್ಗೆ ಸೊಗಯಿಸಿದಳು (ಹತಶಾ. ೪-೮). **ಬೆಳ್ಮುಗಿಲು** : ತಾಪ ವೆಗ್ಗಳಿಸಿದುದವನೀಕಾಂತಗೆ ನಾ ಪರಿಹರಿಸುವೆನೆಂದು ತಾ ಪನ್ನೀರ ಬೆಳ್ಮುಗಿಲು ತುಳುಕಿದವೊಲಾ ಪರಿ ಬೆಳ್ಸರಿಯಾಯ್ತು (ಪರೇಶ. ೩-೦೦); ತೊಳಪ ಬೆಳ್ಮುಗಿಲ ಮೊಗ್ಗರದಂತೆ . . . ತೇಜಿಯ ಬಳವೊಪ್ಪಿದುವು (ಕಂಪಾ. ೨-೫೩); ಕೆಳಗಿನ ಪ್ರದೇಶ ಮೊಸರಿನ ಸಮುದ್ರದಂತೆ ಬೆಳ್ಮುಗಿಲುಗಳಿಂದ ಸಂಪೂರ್ಣ ತುಂಬಿಕೊಂಡಿತ್ತು (ಆದೂಬಿ. ೦೨೮). [ಬೆಳ್$_1$ (<ಬಿಳಿದು) + ಮುಗಿಲ್ ]

**ಬೆಳ್ಮುಗಿಲು**, 'ಬೆಳ್ಮುಗಿಲ್' ನೋ.

**ಬೆಳ್ಮುಗುಳ್** (ನಾ). ಬಿಳಿಯ ಬಣ್ಣದ ಮೊಗ್ಗು : ಬಿಳಿಮೊಗ್ಗು : ಮದನಂ ಬೆಳ್ಮುಗುಳ್ಗಂಬನಿಂದಿಸೆ ಜಗಿಲ್ತಿರ್ದಂಬುಗಳ್ ಚಿತ್ತದೊಳ್ ಮೊದೆಯುಂ ಬೈತಪೊಲಾಗೆ (ಕಾವ್ಯಸಾ. ೩೮೮ ಸೂಕ್ತಿ); ನಗೆಯ ಬೆಳ್ಮುಗುಳೊಂದು ತೊಂಡೆವಣ್ಣುಟಗಳಿನಿಯೊತ್ತಿನಿಂದರಳುತಿರೆ (ಶಶ್ರಾಂಗ. ೩೩-೯೭೨). [ ಬೆಳ್$_1$ (<ಬಿಳಿದು) + ಮುಗುಳ್$_2$ ]

**ಬೆಳ್ಮುನಿಸು** (ನಾ). ಹುಸಿಮುನಿಸು; ಸುಳ್ಳು ಕೋಪ : ಬೆಳುಕ್ಕೆ ಬೆಳ್ಮುನಿಸು ಕೈತವಮಂ ಕನಸಿನೊಳ್ ನೆನೆಯದೆ (ಜಿನಾಶಾ. ೬೮). [ ಬೆಳ್$_2$ + ಮುನಿಸು$_2$ ]

**ಬೆಳ್ಮೃಗ** (ನಾ). = ಬೆಳ್ಮಿಗ ೧ : "ಬೆಳ್ಮೃಗಮುಂ ಮೃಗಾಪ್ಯೆ" (ಪಾಪಾಕ. ೮೨); ಬೆಳ್ಮೃಗರಾಜಿಯುಂ ಪ್ರಚುರಪಕ್ಷಣಸಂತತಿಯುಂ ನಿರಂತರಂ ಬಾಳ್ಮೊದಲಾಗಿ ಗಾದ್ರತೆಗೆ ತೋರ್ಪುದು ರಮ್ಯಕಮೆಂಬ ಕಾನನಂ (ಪುಣ್ಯಾಸ್ರ. ೭-೬೪). [ ಬೆಳ್$_2$ + ಮೃಗ ]

**ಬೆಳ್ಮೊಗ** (ನಾ). ಬಿಳಿಚಿಕೊಂಡ ಮುಖ; ವಿವರ್ಣವಾದ ಮುಖ : ಪದಂಗಳೊಳೊಗದಾ ಪುಳಕಚಯಂಗಳ್ ಕಳೆದುವು ಮುಳಿಸಂ ನಲ್ಲಳ್ಗೆ ಬೆಳ್ಮೊಗಂಗೆಬ್ಬಿರೆಯುಂ (ಶಬಶಾ. ೩-೦೦೮) ; ಅತಿಬೆಳ್ಮೊಗದಿಂದಮಿಾವ ಮುಮ್ಮಲ ಮಱುಗುತ್ತುಮಿಾವ ಕಡುಲೋಭಕ ದಾನಗುಣಂಗಳಂ ಪಟುಚಲದಪುದಾರ್ತು ಕೊರ್ತು ಪಿರಿದೀವ ಗುಣಂ ಗುಣದಂಕಕಾರ್ತಿಯಾ (ಅಜಿತ. ೦೨-೦೭); ದೀರ್ಘನಿಶ್ವಾಸವನ್ನು ಬಿಟ್ಟು ಬೆಳ್ಮೊಗವನ್ನೆತ್ತಿ ಸುತ್ತ ನೋಡಿ ಹಠಾತ್ತಾಗಿ ಬಾಗಿ (ಸುಗುಗಂ. ೮-೩). [ ಬೆಳ್$_1$ ( < ಬಿಳಿದು ) + ಮೊಗ ]

**ಬೆಳ್ಮೋರೆ** (ನಾ). =ಬೆಳ್ಮೊಗ : ಬೆಳ್ವರಲ ಪಲ್ಗಳಿಂ ಬೆಳ್ಮೋರೆಯಿಂದಂ . . . ಬೆಳ್ಳಿ ಬೀರ್ದಳು ಬೆಳ್ಳಿಹೂಮರವದೊಂದು (ಕಾಬೂಕ. ೦೨೩-೨೬೩). [ ಬೆಳ್$_1$ ( < ಬಿಳಿದು ) + ಮೋರೆ ( < ಮೋಱೆ ) ]

**ಬೆಳ್ವಕ್ಕ** (ನಾ). (ಅಮಾವಾಸ್ಯೆಯ ಅನಂತರ) ದಿನದಿನಕ್ಕೆ ಬೆಳಕು ಹೆಚ್ಚಾಗುವ ದಿನಗಳು ಮತ್ತು ಆ ದಿವಸಗಳ ಕಾಲ; ಶುಕ್ಲಪಕ್ಷ ; P ಇದು 'ಶುಕ್ಲಪಕ್ಷ' ಎಂಬ ಶಬ್ದದ ಕನ್ನಡೀಕರಣ : "ಬೆಳ್ವಕ್ಕಮೆಂದು ಶುಕ್ಲಪಕ್ಷಂ" (ಶಶಾ. ೩೬-೨೯೮); ಬೆಳ್ವಕ್ಕದೊಳ್ ತೊಳಗಿ ಬೆಳಗುವ ಸುಧಾಸೂತಿ (ಶಿಬಪು. ೩೪-೩); ಮಕ್ಕಳು ಬೆಳ್ವಕ್ಕದ ಎಳವೆರೆಯನೋಪಾದಿಯಲ್ಲಿ ಬೆಳೆಯುತ್ತಾ ತಾಯ್ತಂದೆಯರ ಮನಸ್ಸಿಗೆ ಸಂತೋಷವನ್ನುಂಟು ಮಾಡಿದರು (ಮುಡಿಸ. ೬೦). [ಬೆಳ್$_1$ ( < ಬಿಳಿದು ) + ಪಕ್ಕ]

**ಬೆಳ್ವಕ್ಕಿ**, ಬೆಳ್ಳಕ್ಕಿ (ನಾ). ೧. ಬಿಳಿಯ ಬಣ್ಣದ ಒಂದು ಬಗೆಯ ಜಲಚರ ಪಕ್ಷಿ; ಬಲಾಕ ಪಕ್ಷಿ: ಬಗೆಯೊಳ್ ಬೆಳ್ವಕ್ಕಿ [ಶಾಕಾಂ. ಬೆಳ್ಳಕ್ಕಿ]ಯ ಪಿಂಡಿಂಗ ವಂದಿರಂ ಸರಿಗಂಡಂ (ಶಂಶಾಪಾ. ೯-೩೮) ; ತರದೆ ಪಾಱುವುವು ಬೆಳ್ವಕ್ಕಿ ನೂಲ್ದೆಗೆದಂತೆ ನೆರೆದ ಕಾಮನ ಬಿಲ್ಗೆ ಬಿಳಿಯದಿರು ಬಿಗಿದಂತೆ (ಅಸಂಕ್ಷ. ೯-೦೬ ರಗಳೆ); ಬೆಳ್ವಕ್ಕಿಯ ಬಿಗುರ್ಪಿಂ ನೀರೊಳೊಳಗೊಳಗೆ ಮೈಗರೆವ ವಿಹಂಗಳಂ . . . ಕಾಲ್ಪರಿವ ತೆರೆಯಿನೊಂದು ಕೊಳಂ ಪಗಲ್ವಣ್ಣ ಕೈಪಿಡಿಯೆಯಬಂತಿರೆ ಸೊಗಯಿಸಿವತ್ತು (ರಾಮಾಶ್ವ. ೩೨-೨೯). **ಬೆಳ್ಳಕ್ಕಿ** : ೧. "ಬಲಾಕಾ, ಬಿಸಕಂಠಿಕಾ — ಈ ೨ ಬೆಳ್ಳಕ್ಕಿ " (ಹಲಾಯು. ೪೨-೯೬); ಬಸವನಂ ಬೆಳ್ಳಕ್ಕಿಯು . . . ತುಂಬಿಯುಂ ತಿಳಿಯಲ್ ಸ್ವಪ್ನದಿ ಲೇಸು (ಸೋಮೇಶ. ೬೯) ; ಸಲೆ ಸಾಳುವನ ವೈರದಲಿ ಬೆಳ್ಳಕ್ಕಿಯ ಬಳಗ ಮಾಳ್ಪುಜ್ಜುಗವೇನು (ಕಂಪಾ. ೦೨-೬೦); ಜಗನ್ಮಾತೆಯ ಆಶೀರ್ವಾದದ ಬಾನಕ್ಷತೆ ಈ ಬೆಳ್ಳಕ್ಕಿ (ಅಶೀ. ೪೬-೨). ೨. ಒಂದು ಬಗೆಯ ಪಕ್ಷಿ; ಬಕ : " ಬಕೋಟಃ — ಬೆಳ್ಳಕ್ಕಿ, ಬೋದನಹಕ್ಕಿ " (ಬಿಶಂ. ೦೦೩); ಬೆಳ್ಳಕ್ಕಿಯಂತೆ ಮಾಯಾಮಾರ್ಗನುಂ ಪುಲಿಯಂತೋಜಾಯಿಲನುಂ . . . ಆಗಿ ಕೆಲವು ದಿವಸಮಿರ್ಪುದುಂ (ರಮಶಾಪ್ರ. ೬-೬೨). ೩. (ಆಲಂ) ಆಡಂಬರದ ವ್ಯಕ್ತಿ; ಪ್ರದರ್ಶನದಲ್ಲಿ ಆಸಕ್ತಿಯಿರುವ ವ್ಯಕ್ತಿ : ನಾವು ಒಳ್ಳೇ ಆಸ್ತಿವಂತರು, ಆಸ್ತಿಗೆಲ್ಲಾ ನಾನೊಬ್ಬನೇ ಮಗ, ತಕ್ಕಮಟ್ಟಿಗೆ ವಿದ್ಯಾವಂತ. ಸರಿ ಪೇಟೆ ಪಟ್ಟಣಗಳಿಂದ ಬೆಳ್ಳಕ್ಕಿಗಳು ಬಂದಿಳಿಯಲಾರಂಭಿಸಿದುವು (ಕುವಸಂ. ೪೧). [ ಬೆಳ್$_1$ ( < ಬಿಳಿದು ) + ಪಕ್ಕಿ ]

**ಬೆಳ್ವಟ್ಟೆ**, ಬೆಳುವಟ್ಟೆ, ಬೆಳ್ಳುಂಬಟ್ಟೆ (ನಾ). ಬಿಳಿಯ ಬಣ್ಣದ ವಸ್ತ್ರ ; ಬಿಳಿಯ ಬಟ್ಟೆ : ಬಳ್ಳಿವೆಳಗಂ ಕಱೆವ ಬೆಳ್ವಟ್ಟೆಯ [ಶಾಕಾಂ. ಬೆಳ್ಳುಂಬಟ್ಟೆಯ] ನೀಲದ ನಿರ್ಮಲೋದಕದ . . . ಬೆರಕೆವೆಳಗು ಮಂಟಪದೊಳಗಂ ಪೊಱಗು ತೆಕ್ಕನೆ ತೀವೆ (೧೧ಶ. ೦೦-೨೮ ವ); ಮರಸ್ನಾನವಂ ಮಾಡಿ ಬೆಳ್ವಟ್ಟೆಯ ಧೋತ್ರಮಂ ತೆಗೆದುಟ್ಟು (ಉದ್ಭಟ. ೩-೦೦೨ ವ) ; ಬೆಳ್ವಟ್ಟೆ ಅಂಚಿದುಪ್ಪುಳ್ಪಾಸಿನ ಮೇಲೆ ಸತಿಗೂಡಿ ಪಚಾಸ್ತ್ರ ಕುಳಿತನುತ್ಸವದಿ (ವೋಪಶ. ೦೬-೦೮). **ಬೆಳುವಟ್ಟೆ** : ಕಟ್ಟಿದ ಬೆಳುವಟ್ಟೆಯ ಮೇಲ್ಕಟ್ಟಿನೊಳಂ . . . ಪರಿಮಳಕ್ಕೆಱಗಿ ಮುಸುಱುವ ಮಱಿದುಂಬಿಯ ಬಂಬಲಿಂ (ಕಾದಂಪು. ೭೦); ಉಟ್ಟು ಹೊಸ ಬೆಳುವಟ್ಟೆ ತೊಮ್ಮಱ ಮುಟ್ಟ

ವಿಸೆ ಪೊಂಬಣ್ಣವಾದುದು (ಕೊಶಚ. ೩-೮-೩೦); ತಂದು ಕೊಟ್ಟರು ಬೆಳುವಟ್ಟೆಯ ಸುರಳಿಯನಂದು ರಾಯನ ಹಸ್ತದಲ್ಲಿ (ಭರತ. ೩-೬೦). **ಬೆಳ್ಳುಂಬಟ್ಟೆ :** ಬೆಳ್ಮುಗಿಲನುಟ್ಟ ಬೆಳ್ವೆಟ್ಟದಂತೆ ಬೆಳ್ಳುಂಬಟ್ಟೆಯನುಟ್ಟು (ರಾಜಾವ. ೦೨-೩೭ ಪ); ಮುಕ್ತಾವಳಿಗಳೆಂಬ ಬೆಳ್ಸರಿಯುಂ ಸುರಿವ ಶರದದ ಮುಗಿಲ ತೆಗಳಿಗೆಯುವೆನಿಪ ಮೇಲ್ಕಟ್ಟಿನ ಬೆಳ್ಳುಂಬಟ್ಟೆಯುರ (ಸಂಪ್ರಶು. ೦೨-೦೦ ಪ); ಕಾರಕ್ಕೆ : ಬೆಳ್ಳುಂಬಟ್ಟೆ (ಕಮಧ. ಪ. ೦೬೩ ಶೃಯೋ).

[ಬೆಳ್$_1$ (< ಬಿಳಿದು) + ಬಟ್ಟೆ$_2$]

**ಬೆಳ್ವಣಗೆ** (ನಾ). ಒಂದು ಊರಿನ ಹೆಸರು : ಭಟ್ಟಾರಕರಾಜ್ಯಮುತ್ತರೋತ್ತರಾಭಿವೃದ್ಧಿ ಸಲುತ್ತಿರೆ [ಬೆಳ್ವ]ಣಗೆ ಪನ್ನೆರಡು ಮ × ಳ್ಳಿಯಾಗೆಯಾಳೆ (ಕಾಇಇ. XI-i, ೨೯-೩; 912); ಬೆಳ್ವಣಗೆಗೊಳೊನ್ದು ಮಟವಿಜ್ಗ . . . ಒನ್ದು ಗದ್ಯಾಣವದಿತ್ಯಙ್ಗೆ ಕೊಟ್ಟ (ಕಾಇಇ. XI-i, ೩೩-೬; 933). [?]

**ಬೆಳ್ವಯಲ್** (ನಾ). (ಬಿಸಿಲಿನ ಝಳದಲ್ಲಿ) ಬೆಳ್ಳಗೆ ಕಾಣಿಸುವ ಬಯಲುಪ್ರದೇಶ : ಬಂದುದು ಬೇಸಗೆಕಾಲಂ . . . ತೋಜಿಗಳ್ ಪರಿಗೆಟ್ಟುವು ಬೆಳ್ವಯಲೊಳ್ ಸರಳಿಸಿದವು ಮರುಮರೀಚಿಕಾವಾಹಂಗಳ್ (ಶಂಪಾಪ. ೬-೬೬); ಬೆಳ್ಮುಗಿಲ್, ಬೆಳ್ವಲ್, ಬೆಳ್ವಯಲ್ (ಕಮಧ. ೦೭೯ ಶೃಯೋ). [ಬೆಳ್$_1$ (< ಬಿಳಿದು) + ಬಯಲ್ (< ಪಯಲ್)]

**ಬೆಳ್ವಲ್, ಬೆಳುವಲ್ಲು** (ನಾ). ೧. ಬೆಳ್ಳಗಿರುವ ಹಲ್ಲು ; ಬಿಳಿಯ ಹಲ್ಲು : ಬೆಳ್ಮುಗಿಲ್, ಬೆಳ್ವಲ್, ಬೆಳ್ವಯಲ್ (ಕಮಧ. ೦೭೯ ಶೃಯೋ). **ಬೆಳುವಲ್ಲು :** ೧. ಮುಂಡೆ ಹಾರುವಿತಿಯಂತೆ ಬೆಳುವಲ್ಲ ಮಾಡಿಕೊಂಡು (ಶಶಪ. ೩೩-೨೬). ೨. (ಅಲಂ) ಉಜ್ಜದ ಪಲ್ಲು (?) : ಬೆಳುವಲ್ಲ ಮಲಿನದೇಹದ ಲೋಚುಗೆಯ್ದ ಬೋಳ್ದಲೆಯ . . . ಪಿಶಾಚರು ನೀಚರೆಂದೆನಿಸುವವಿಚಾರ ಜಿನಗುರುಗಳೆಲ್ಲ ನೆರೆದು ಪೊಳಲನೊಳಪುಗಬಹುದೆ (ಸೌಂದಪು. ೦೨-೬೮). 'ಕೇನಿವಲ್' ಪರಾ. [ಬೆಳ್$_1$ (< ಬಿಳಿದು) + ಪಲ್]

**ಬೆಳ್ವಲ** 'ಬೆಳ್ವೊಲ' ನೋ.

**ಬೆಳ್ವಲೆ, ಬೆಳುವಲೆ** (ನಾ). ಮೋಸದ ಬಲೆ : ಬೇಗೆಜಿಗುವ ಗಿಳಿಗಳ ಬೆದಜಿಸಲೆಂದು ತಳುವದೆ ನೋಳ್ಪ ಗೋಪಿಯರ ತೊಳಪ ಕಣ್ಗಳಿರ ಬೆಳ್ವಲೆಗಳೆಂದವು ಮಡಿಗಿಳಿಯಲಮ್ಮದೆ ಬಾನೊಳಿಪವು (ಕುಂಜಕಾಂ. ೨೩-೭). **ಬೆಳುವಲೆ :** ಆರರಿತಂ ಹಾಳಾಗದು . . . ಆರಾಯತಿಗೆಡರಿಂ ನಾರಿಯ ಬೆಳುವಳಿ[ಲೆ]ಗೆ ಸಿಲುಕೆ (ಶೀತಿಸಾ. ೭೪೦). [ಬೆಳ್$_2$ + ಬಲೆ$_1$]

**ಬೆಳ್ವಸದನ, ಬೆಳುವಸದನ** (ನಾ). ಶುಭ್ರವಾದ ಹಾಗೂ ಕಾಂತಿಯುಕ್ತವಾದ ಬಿಳಿಯ ಬಣ್ಣದ ಉಡುಗೆ, -ತೊಡುಗೆ : ಜೀರಸಿರಿಯ ಬೆಳ್ವಸದನದ ಬೆಳಗಿನಂತೆ ದಂತಕಾಂತಿ ಪಸರಿಸೆ (ಕುಂಜಕಾ. ೦೨-೯೯ ಪ); ಸೊಗಯಿಪ ಬೆಳ್ವಸದನಮಂ ಪ್ರಿಯಂಗುಬವಿಶಾಲನೇತ್ರೆ ಕೆಯ್ಕೊಂಡಾಗಳ್ (ಜಾಪಪು. ೬-೦೦೦); ಪೊಸಮುತ್ತುದೊಡಿಗೆಗಳಿಂ ತೋರಮಲ್ಲಿಗೆಮಾಲೆಯಿಂ ಸುಕುಮಾರಿ ಬೆಳ್ವಸದನಮನಾಂತಾ ವಾರಿಜಾಸನ ಸೂಳ್ಗೆವಂದಳದೊಂದು ಲೀಲೆಯಲಿ (ಸಾಳ್ಪಶಾ. ೨೬-೭). **ಬೆಳುವಸದನ :** ಚೆನ್ನೆಯನು ಕಾಲೋಚಿತಕೆ ತಕ್ಕನ್ನವಹ ವಸ್ತ್ರಾದಿಯಿಂ ಸುರಕನ್ನೆಯರು ಬೆಳುವಸದನಂಗೊಳಿಸಿದರ್ಸ್ರು ಸೊಬಗಾಗಿ (ಸಾಳ್ಪಶಾ. ೩೨-೯೩). [ಬೆಳ್$_1$ (< ಬಿಳಿದು) + ಪಸದನ]

**ಬೆಳ್ವಸದನಂಕೊಳ್** 'ಬೆಳ್ವಸದನಂಗೊಳ್' ನೋ.

**ಬೆಳ್ವಸದನಂಗೆಯ್, ಬೆಳುವಸದನಂಗೆಯ್** (ಕ್ರಿ). ಶುಭ್ರವಾದ ಹಾಗೂ ಕಾಂತಿಯುಕ್ತವಾದ ಬಿಳಿಯ ಬಣ್ಣದ ಉಡುಗೆ, ತೊಡುಗೆಗಳಿಂದ ಸಿಂಗಾರಗೊಳ್ಳು : ಬಿಸಿಲಂ ಕಳೆದು ಬೆಳುದಿಂಗಳಂ ತೊಡುವ ಗಗನ ಲಕ್ಷ್ಮಿಯಂತೆ ಕೆಂಪಿನ ಪಸದನಮಂ ಕಳೆದು ತಲೆನೀರ್ಮಿಂದು ಬೆಳ್ವಸದನಂಗೆಯ್ದು (ಅರ್ಧನೇ. ೨-೦೩ ಪ). **ಬೆಳುವಸದನಂಗೆಯ್ :** ಅಂತಾ ಪಟ್ಟದರಸಿ ಪೊಸತಾಗಿಯತಿಶಯದಿಂ ಬೆಳುವಸದನಂಗೆಯ್ದನಂತರಂ (ಜಾಪಪು. ೬-೦೦೦ ಪ). [ಬೆಳ್ವಸದನ + ಕೆಯ್$_1$]

**ಬೆಳ್ವಸದನಂಗೊಳ್, ಬೆಳ್ವಸದನಂಕೊಳ್** (ಕ್ರಿ). ಶುಭ್ರವಾದ ಹಾಗೂ ಕಾಂತಿಯುಕ್ತವಾದ ಉಡುಗೆ, ತೊಡುಗೆಗಳಿಂದ ಸಿಂಗರಿಸಿಕೊಳ್ಳು : ತಂದೆಯ ರಾಜಮಂದಿರದೊಳಗಣ ತನ್ನ ಕನ್ನೆಮಾಡದೋವರಿಯೊಳೊಂದು ದಿವಸಂ ಬೆಳ್ವಸದನಂಗೊಂಡು ಸುಖಸುಪ್ತೆಯಾಗಿರೆ (ಜಗಪು. ೧೬-೦೦೩ ಪ); ಮುತ್ತಿನಾಭರಣಂ ಚಂದನವಣ್ಪು ಕಂಪಲರ್ದ ಮಲ್ಲಿಗೆದಾಮಮೆಂಬೀ ಮನೋಹರವಸ್ತೂತ್ಕರದಿಂದೆ ಬೆಳ್ವಸದನಂಗೊಂಡೊಪ್ಪಿದಳ್ ದೇವಿ (ವರ್ಧಪು. ೦೩-೩೮). **ಬೆಳ್ವಸದನಂಕೊಳ್ :** ಮತ್ತೊಂದು ದಿವಸಂ ಋತುಮತಿಯಾಗಿ ಚತುರ್ಥಸ್ನಾನಾನಂತರಂ ಬೆಳ್ವಸದನಂಕೊಂಡು ತಲ್ಪತಲದೊಳ್ ಧನಪಾಲನೊಡನೆ ಸುಖಸುಪ್ತೆಯಾಗೆ (ಭುಜ್ಯಾಸ್ತ್ರ. ೦೨-೦೩ ಪ). [ಬೆಳ್ವಸದನ + ಕೊಳ್$_1$]

**ಬೆಳ್ವಳಿ** (ನಾ). ನಿರ್ಮಲವಾಗಿರುವಿಕೆ ; ಸ್ವಚ್ಛತೆ ; ಶುಭ್ರತೆ : "ಬೆಳ್ವಳಿಯೆಸಲ್ಕೆ ನಿರ್ಮಲಮಕ್ಕು" (ಕಶಶ. ೬೨). [ಬೆಳ್$_1$ (< ಬಿಳಿದು) + - ವಳಿ$_3$]

**ಬೆಳ್ವಳಿಸು** (ಕ್ರಿ). ೧. ಬೆಳ್ಳಗೆ ಹೊಳೆ ; ಸ್ವಚ್ಛವಾಗಿರು : ತೊನೆಯುತ್ತಿರೆ ತಾರಹಾರಮುಜ್ವಳಿಸೆ ಮೊಗಂ ವಿಳಾಸಮನೆ ತೋಜಿ ವಿಲೋಚನಕಾಂತಿ ನೀಳ್ದು ಬೆಳ್ವಳಿಸೆ ... ಉಯ್ಯಾಲಾಡಿದಳ್ (ಶಾಂತೀಶ್ವ. ೦೦-೩೬). ೨. (?) : ಸಕಳಜಳಚರಮನೊಳಕೊಣ್ಡು ಕರಂ ಬೆಳ್ವಳಿಸಿದೆಗಳ ಮೂರ್ತಿಯಳಕೆ ಕುಳಮುಮೊಸ್ಟಲ್ ಅತಿಭುಂಭುಕಮೆನಿಸಿದ ಕೋಷ್ಟಕೋಟವಿಧದಿಂದೆಸೆಗುಂ (ಎಇ. XIII, ೩೩೦-೩೭ ; 929) ; ಎತ್ತಲುಂ ಮಿಳಿರ್ದ ಕೇತನರಾಜಿ ಕರಂ ವಿರಾಜಿಸಲ್ ಬಳಸಿದ ದೇವಾಲಯಮುಮಂ . . . ಬೆಳ್ವಳಿಸಿಟ್ಟ ಶಾಸ್ತ್ರದಾನಮುಮಳಮಟ್ಟಿಪ್ಪೊ ಕಾಡಿಯಮೊರೆಳಾರನ್ನೋಡುವಡೆ (ಎಇ. XIII, ೩೩೨-೪೦ ; 929). [ಬೆಳ್ವಳಿ + - ಇಸು$_3$]

**ಬೆಳ್ವಾಗಲ್** (ನಾ). ಬಿಳಿಯ ಹಾಗಲಕಾಯಿ : ಮಂಡಲಮಾರಿ ಸುವಾರುಣಿ ಮಂಡಿತಮೆಂದೆನಿಸಿ ತೋರ್ಪ ಬೆಳ್ವಾಗಲಿವಂ ಕೊಂಡರೆದು ಪೂಸೆ ಕುಡಿಸಲ್ಕಂಡ ಲೆವುದೆ ಕೊಟಿತ ಪಾವಿನುಗ್ರೋಗ್ರವಿಷಂ (ಖಮಧ. ೦೦-೭೨). [ಬೆಳ್$_1$ (< ಬಿಳಿದು) + ಪಾಗಲ್$_1$]

**ಬೆಳ್ವಾಯ್** (ನಾ). ಬಿಳಿಚಿಕೊಂಡ ತುಟಿಯುಳ್ಳ ಬಾಯಿ ; ಬಣ್ಣಗುಂದಿದ ಬಾಯಿ : ಎತ್ತಂ ಬಿಸುಸುಯ್ಯ ಬೆಂಕೆಯಲೆಪಿಂ ಪಳ್ವಿರ್ದ ಬೆಳ್ವಾಯ ದರ್ದುರಜಿಮೇಂ ಮಾಣ್ದುದೆ (ರಾಜಾವ. ೨-೬೩). [ಬೆಳ್$_1$ (< ಬಿಳಿದು) + ಬಾಯ್]

**ಬೆಳ್ವಾಳೆ** (ನಾ). ಬಿಳಿಯ ರಾಮಂಚ : ಕರಮೆಸೆದವು ಲತೆಗಳನೆಟ್ಟರದಿಂ ಪಚ್ಚೆಲೆಯ ಹೊದಕೆ ಬೆಳ್ವಾಳದ ಬೇರ್ ಸಿರಿಯಿಂದವ ಪಳಯಿಂ (ಸೂಕ್ತಿಸು. ೦೦-೭೦). [ಬೆಳ್$_1$ (< ಬಿಳಿದು) + ಬಾಳ್$_2$]

**ಬೆಳ್ವಿಟ್ಟು** (ನಾ). ಬಿಳಿಯದಾದ ಧೂಳು, -ಪುಡಿ : ಪಿಟ್ಟೆಂಬ ಪೆಸರ್ ಕಳವೆಯ ಪಿಟ್ಟಿಂಗಂ ಭೂತಳಾಗ್ರದೊಳ್ಬಾವಿಸೆ ಬೆಳ್ವಿಟ್ಟಿಂಗಮಕ್ಕುಮಾದೊಡೆ ಪಿಟ್ಟನೊಳಿರ್ಪೊಂದು ರುಚಿಯನದು ತಳೆದಪುದೇ (ರರ್ಮಾಮ್ಯ. ೦-೦೬೯); ಪರದನ ಪೆರ್ಮನೆಯೊಳ್ ರಪ್ಪುರಮಂ ಬೆಳ್ವೆ[ವ್ವಿ]ಟ್ಟೆಂದು ಚೀಟಿಕೆಯರ್ ಕತ್ತುರಿಯಂ ಹರಿನೀಲ ಮನೋಹರ ಕುಟ್ಟಿಮರಜಮಿದೆಂದು ಪೊಜಗುಗುತಿರ್ಪರ್ (ಅರ್ಧನೇ. ೩-೬೮). [ಬೆಳ್$_1$ (< ಬಿಳಿದು) + ಪಿಟ್ಟು]

**ಬೆಳ್ವಿತ್ತು** (ನಾ). ಬಿಳಿಯ ಬಣ್ಣದ ಬೀಜ : ಕಾಪದೇವನ ಜಪವಳ್ಳಿಯ ಬೆಳ್ವಿತ್ತುಗಳ ವಿಸರವೊ ಮೋಹನಲೆಸೆದವು ಕರ್ಪೂರಶಪರಗಳಾ ಪುರದೊಳಗೆ (ಕುಂಜಕಾಂ. ೩-೮೨). [ಬೆಳ್$_1$ (< ಬಿಳಿದು) + ಬಿತ್ತು$_2$ (< ಬಟ್ಟು)]

**ಬೆಳ್ವೆಟ್ಟ, ಬೆಳುವೆಟ್ಟ** (ನಾ). ಬೆಳ್ಳಿಯ ಬೆಟ್ಟ ; ರಜತಗಿರಿ ; ಕೈಲಾಸ ಪರ್ವತ : ನೀವೆನ್ನ ಬಿಟ್ಟು ಬೆಳ್ವೆಟ್ಟಕೆಯ್ದುವೆವೆಂಬ ಮಾತ ಬಿಟ್ಟೆನ್ನ ರಕ್ಷಿಸಬೇಕೆಂದು ತೆಗೆದೆತ್ತಿ ಕಟ್ಟಕ್ಕರಿಂದಪ್ಪಿಕೊಂಡ (ಭರತ. ೯೩-೫೩)

**ಬೆಳುವೆಟ್ಟು** : ಬೆಳುವೆಟ್ಟದೊಳು ಬ್ರಾಹ್ಮಿ ಸೌಂದರಿಯರ ವಕ್ಷದೊಳು ತೆಱಪಾಯ್ತೆಂದರೆಮಗೆ (ಶಶಿ. ೩೨-೯೦). 'ಬೆಳ್ಳಿವೆಟ್ಟ' ನೋಡಿ.

[ಬೆಳ್$_{1}$ (< ಬಿಳಿದು) + ಬೆಟ್ಟು]

**ಬೆಳ್ವೆಳಗು, ಬೆಳುವೆಳಗು** (ನಾ). ಹೊಳೆಯುವ ಬೆಳಕು; ಧವಳಕಾಂತಿ : ದೆಸೆಯೆಲ್ಲಂ ಚಂದನಾಸಾರದಿಂ ಮುಸುಕಿತ್ತೆಂಬಿನಮೊಂದು ಬೆಳ್ವೆಳಗು ಪರ್ಬಿತ್ತೆಯ್ದೆ ರೋದೋಂತಮಂ (ಶಬ್ದಮ. ೦೦೩) ; ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ ಸುಲಿಪಲ್ಲ ಮಿಂಚಿನಿಂ . . . ಒಡ್ಡೋಳಿಸಿದಳಾಕೆ ಪಾಲ್ಗಡಲ ಪೆರ್ದೆರೆಯೊಳ್ ಸಿರಿ ನಿಂದಳೆಂಬಿನಂ (ಅಮ್ಮ. ೭೯); ಪಿರಿಯ ಬೆಳಕಿದು ಪನಗೆ, ಅರಮನೆಗೆ, ಕಾರಿರುಳಿನಲ್ಲಿ ಬೆಳ್ವೆಳಗು (ಶಾರಸಿ. ೦೪-೩೦೯). **ಬೆಳುವೆಳಗು** : ಹೊಳೆವ ನಿಡುನಿಗ್ಗವದ ಬೆಳುವೆಳಗು ಕುಡಿಮಿಂಚುಗಳ ಬಳಗ (ಸೌಂದರ. ೩-೦೯); ಲೋಚನ ದೀಧಿತಿಯ ಬೆಳುವೆಳಗು . . . ತನುವೆಳಗೆಸೆಯೆ ಬೆಳಗಿನ ದೇವಿಯೆನಿಸಿದಳು (ಶಾಳ್ವಭಾ. ೩೨-೪೯). [ಬೆಳ್$_{1}$ (<ಬಿಳಿದು) + ಬೆಳಗು$_{2}$]

**ಬೆಳ್ವೊಗರ್** (ನಾ). = ಬೆಳ್ವೆಳಗು : ಬೆಳ್ವೊಗರ್ ಕಿರೀಟಮಂಗದೊಳ್ ಬಿಡದೆ ಪಸರಿಸೆ ಚಂದ್ರಕಾಂತದಿಂ ನಿರ್ಮಿಸಿದ ಪುತ್ರಳಿಪೊಲವಳೆಸದಳು (ಕೈಬಿಶಾ. ೦೦-೦೦). [ಬೆಳ್$_{1}$ (<ಬಿಳಿದು) + ಪೊಗರ್]

**ಬೆಳ್ವೊನಲ್** (ನಾ). ಬೆಳ್ಳಗೆ ಹೊಳೆಯುವ ಪ್ರವಾಹ,—ಹರಿವು : ಪಡುವಣ ಕಡಲ್ವೊಗೆ ಪರಿವ ಬೆಳ್ದಿಂಗಳ ಬೆಳ್ವೊನಲೊಳುರ್ಬಿದ ಬೊಬ್ಬುಳಿಕೆಗಳಂತೆ ತಾರಕೆಗಳ್ ತಲೆಗರೆಯೆ (ಶಬ್ದಮ. ೪೨೯) ; ಸಂತತಮಾ ಸುರಾಪಗೆಯು ಬೆಳ್ವೊನಲಂ ಪದೆಪಿಂದುಗುಳ್ದ ಹೇಮಂತಸಗೇಂದ್ರಮಂ ನೆನೆಯಿಸುತ್ತುಮುದಂಚಿತ ದಂತಧಾಮವೋರಂತೊಗೆಯುತ್ತಿರಲ್ (ಕುಸುಮಾ. ೦೩-೨೦); ಅನ್ನೆಗಂ ಜಾನಕಿಯ ಒಡ್ಡ ತೋಱುತು . . . ಪೆಂಪೊವವಿ ಪರಿವ ಬೆಳ್ವೊನಲ್ ದಿವಿಜನದಿಯ (ಕೈಬಿಶಾ. ೦೯-೯).

[ಬೆಳ್$_{1}$ (<ಬಿಳಿದು) + ಪೊನಲ್]

**ಬೆಳ್ವೊಲ, ಬೆಳವಲ$_{2}$, ಬೆಳುವಲ, ಬೆಳುವಲು, ಬೆಳ್ವಲ, ಬೆಟ್ವಲ** (ನಾ). ಒಂದು ನಾಡಿನ ಹೆಸರು ; P ಈಗಿನ ಧಾರವಾಡ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶ : ಶ್ರೀ ಬೆಳ್ವೊಲ ವಿಷಯಾಭ್ಯನ್ತರ(ರೇ) (ಇಅ. VII, ೨೨೦-೨೮ ; 658) ; ದೇವಣ್ಣಯ್ಯ[೦] ಬೆಳ್ವೊಲ ಮೂನೂಱುಮನಾಳುತ್ತುಮನ್ನಿಣ್ಣ (?) ಗೆಱೆಯಳ್(ಲ್)ಇರೆ (ಇಅ. XII, ೨೦೯-೦೮; 814); ಶ್ರೀಮತ್ಸ್ವಾಮ್ಯನಡಿಗಳ್ . . . ಬೆಳ್ವೊಲ ಮೂನೂಱುಮಂ ಕಿಸುಕಾಡೆಪ್ಪತ್ತುಮಂ [ಬಾಗಡೆ]ಪ್ಪತ್ತುಮಂ ನಿರಾಕುಳಮಾಳುತ್ತಿರೆ (ಸೌಇಇ. XI-i, ೪೦-೯ ; ೯೦೫). **ಬೆಳವಲ$_{2}$** : ಜೋಳದ ಬೋನಕ್ಕೆ ಬೇಳೆಯ ತೊಗೆಯಾಗಿ ಕಾಳೆಮ್ಮೆ ಕರೆದ ಹಯನಾಗಿ ಬೆಳವಲ ಮೇಳ ನೋಡೆಂದ (ಸರ್ವಜ್ಞ. ೦೬೦೭) ; ಈ ಸೀಮೆಗೆ ಕರಿನಾಡು ಎಂತಲೂ ಬೆಳವಲ ಎಂತಲೂ ಅನ್ನುವುದುಂಟು (ಕರ್ನಾ. ೮). **ಬೆಳುವಲ** : ಸ್ವಸ್ತಿಶ್ರೀ ಬೆಳುವಲ × × [ನಾ]ಗಿಯುಮ್ಮ (ಸೌಇಇ. XI-i, ೧೨-೨೩ ; 868) ; ಉದಧಿವೃತೋರ್ವಿಗೆ ಮುಖಮೆನಿಸಿದ ಬೆಳುವಲನಾಡ್ಗೆ ತಿಲಕದಂದದ ನಱುಗುಂದದ ವಿಪ್ರಕುಲೋತ್ತಮನಭ್ಯುದಿತಯಶಂ ಶ್ರೀಧರಂ (ಜಾತಕ. ೦-೯); ಪಲಸಿಗೆ ಬೆಳುವಲವೊಪ್ಪುವ ಹುದಿಗೆಱೆಯಾ ಲೊಕ್ಕಿಗುಂಡಿ ಪದ್ದೊರೆವರೆಗಂ ಕಲಿಗಳನೆ ತಗುಳ್ದು ವಿಕ್ರಮಬಲದಿಂ ಕೈಕೊಂಡ ವಿಷ್ಣು ಭೂಮಂಡಲಮಂ (ಎಕ. XVI, ಅಕ್ಕ. ೬೨೫೨ ; 1212) ; ಆಕೆ ಬೆಳುವಲ ನಾಡಿನಾಕೆ (ಕುಬಬಿರ. ೦೯೮). **ಬೆಳುವಲು** : ಆದರೂ ಚಿಕ್ಕೋಡಿಯ ತಾಲೂಕಿನೊಳಗಿನ ಪೂರ್ವದ ಅರ್ಧಭಾಗವು ಬೆಳುವಲೆಂದು ಹೇಳಬಹುದು (ಮುಂಬಯಿ. ೩-೦೯೮); ಬೈಲುಶೀಮೆ ಅಥವಾ ಬೆಳುವಲು (ಕೆಫಾಗ. ೯). **ಬೆಳ್ವಲ** : ವಿಜಯಾದಿತ್ಯ ಶಾಸನಾತ್ ಬೆಳ್ವಲವಿಷಯೇ (ಎಇ. II, ೩-೨೦; 754); ಮಾರಸಿ[೦]ಗ್ಹ(ಘ)ದೇವ[೦] . . . ಪುರಿಗೆಱೆ ಮೂನೂಱ(ಱು)ಮಂ ಬೆಳ್ವಲ ಮೂನೂಱುಮಂ ಸುಖದಿಱಿನಾಳುತ್ತಮಿರೆ (ಇಅ. XII. ೨೩೬-೦೨ ; 971) ; ಕುಂತಳದೇಸಕ್ಕಳವಟ್ಟ ಚಿನ್ನಪೂವೆನೆ ಬೆಳಗಿದುದೊಳ್ವಲಮೆನಿಪ್ಪ ಬೆಳ್ವಲದೇಶಂ (ಕಇ. I, ೨೯-೮; 1148). △**ಬೆಟ್ವಲ** : ಮಾಲೆಯೆಂಬುದೇನದಂ ಬೆಟ್ವಲವಾಗ ಮುಂತುಳಿದನಲ್ಲವೆ ಲಕ್ಷ್ಮಣನೆಂಬ ರಾವಣಂ (ಎಕ. VII, ಶಿಕಾ. ೦೩೬-೨೭; 1068). [ಬೆಳ್$_{1}$(< ಬಿಳಿದು ) + ಪೊಲ]

**ಬೆಳ್ವೊಳೆ** (ನಾ). ಶುಭ್ರವಾದ ನೀರಿನ ನದಿ ; ಧವಳವರ್ಣದ ಹೊಳೆ : ಬೆಳ್ವೊಳೆಯ ಕಪ್ಪೊಳೆಯ ಕೆಂಪೊಳೆಯು ಕೂಡಲ ತೆಱದಿ ಬೆರಕೆವೆಳಗ ಒಳಕೊಂಡು ದಿಟ್ಟಿಗತಿವಿಸ್ಮಯವನೀವುತಿರಲು (ಸೌಂದರ. ೬-೩೦).

[ಬೆಳ್$_{1}$ (< ಬಿಳಿದು) + ಪೊಳೆ$_{3}$ (< ಪೊೞೆ)]

**ಬೆಳ್ವೊಟಲ್** (ನಾ). ಒಂದು ಊರಿನ ಹೆಸರು : ಸವುಳಙ್ಗದ ಮೆಣ್ಡಿಗಾವುಣ್ಡನು ಬೆಳ್ವೊಟಲ ಬಿನಮ್ಮನು ಬಿತ್ತುವಟ್ಟ ಕೆಱೆಗೆ ಕೊಡಙ್ಗಿಯುಮುಂಚಿಕ್ಕಿ ಸಮ್ಯಮುಮು (ಎಕ. V, ಹಸ್ಸನ. ೨೩೧-೦೯; ಸು. 925). [ಬೆಳ್$_{1}$ (<ಬಿಳಿದು) + ಪೊಟಲ್]

**ಬೆಳ್ಸರಿ, ಬೆಳುಸರಿ** (ನಾ). ಬಿಳಿಯ ಧಾರೆಯಂತಿರುವ ಮಳೆ; ಧವಳವರ್ಣದ ವೃಷ್ಟಿ: ಸುರಿದಪುದು ಮುಗಿಲ ಮುತ್ತಿನ ಸರಿ ಗಗನದಿನೆನಿಸಿ ಪೊಳೆವುವೆಳಮಿಸಿಲೊಳ್ ಬೆಳ್ಸರಿ (ಆದಿಪು. ೦೦-೮); ಸೌಧಂಗಳ ಬೆಳ್ಪು ಪರ್ಬಿದುವು ಬೆಳ್ಪಿನ ಬೆಳ್ಸರಿಯಿಂ ಸುಧಾಂಶುವಾ (ರಾಜಶೇ. ೨-೨೦); ಸೋನೆಯು ಕೆಸರ್ಗಳಲರ್ದಲರ ಬೆಳ್ಸರಿ (ಕಮಂತ. ೬೮ ಕ್ರಮೋ). **ಬೆಳುಸರಿ** : ಹಂಸಕುಳವಾ ಪ್ರೀತಿಯಾನಂದಾಂಶುವೆಂಬಂತೆ ಬೆಳುಸರಿಯು ಭೂತಳಕೆ ಭೋರ್ಗರೆಯೆ (ಶಾಳ್ವಭಾ. ೨೬-೨೨). [ಬೆಳ್$_{1}$ (<ಬಿಳಿದು) + ಸರಿ$_{6}$]

**ಬೆಳ್ಸುೞಿ** (ನಾ). ೧. ಬಿಳಿಯ ಸುಳಿಯೆಲೆ : ಬೆಳ್ಸುೞಿ ಪುಟ್ಟಿ ಪುಟ್ಟಿ ಕೇವಗೆಗಳ ಸೊರ್ತು ಚೇತರಿಸಿ ಚಾದಗೆಗಂ ಚಿರಮಾಗೆ ರಾಗಮಂಚಿಗೆ . . . ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ (ಕಂದಾಮಾ. ೬-೦೩೯). ೨. ನೀರಿನ ಸುಳಿ; ಜಲಾವರ್ತ: ತೋಳ್ಗೆ ದಂತದ ಬಳೆಯಂತಿರಲ್ ಸುಳಿದು ಸುತ್ತುವ ಬೆಳ್ಸುೞಿಯೆಂಬ ಚಂದ್ರಬಿಂಬದ ಕರೆಯಂತೆ ತೋಱುದುದು ಕುಂತಳವಾಗಳನಂತನಾಥನಾ (ಅನಂಪು. ೯-೨೩).

[ಬೆಳ್$_{1}$ (<ಬಿಳಿದು) + ಸುೞಿ$_{2}$]

**ಬೆಳ್ಸಲೆ** (ನಾ). ಬಿಳಿಯ ಕಲ್ಲು : ಎಸೆದಿರೆ ನಾಯುತ್ತಿಯು ಸಂಧಿಸಿ ಸರ್ಪನ ಗೃಹಮುಮಾಗೆ ಪಡುವಣದೆಸೆಯೊಳ್ ನಿಸದಂ ಪುರುಷತ್ರಯದೊಳೊಸರ್ಗುಂ ಜಲಮಲ್ಲಿ ಕೂಡೆ ಬೆಳ್ಸಲೆ ನೆಗೆಗುಂ (ಲೋಕೋಪ. ೩-೨೦).

[ಬೆಳ್$_{1}$ (<ಬಿಳಿದು) + ಸಲೆ$_{5}$ (< ಸಿಲೆ$_{1}$)]

**ಬೆಳ್ಳ$_{1}$** (ನಾ). ೧. ಬಿಳಿಯ ಬಣ್ಣ ; ಧವಳವರ್ಣ : 'ಬೆಳ್ಳಂಗೆಡೆ' ನೋಡಿ. ೨. (ನದಿಯ) ನೆರೆ; ಪ್ರವಾಹ; ಪೂರ : ಬೆಳ್ದಿಂಗಳ ಬೆಳ್ಳದೊಳಗೆ ಬಿನದದಿ ತೇಂಕುವ ಕುಸುಮಾಯುಧನೋ (ಕಮಾಕಾ. ೦೦-೬೨); ಚೋಕೆ, ಬೆಳ್ಳ ಆಳ ಇದ್ದೀತು ! ಮಿಾನು ಕಡಿಯುವ ಹುಚ್ಚಿನಲ್ಲಿ ಮಡುವಿನ ಆಳಕ್ಕಿಳಿಯದಿರಿ (ಪಡಣ. II, ೦೦೨೩). ೩. ನೊರೆ; ಫೇನ (?) : ಉದಿರ್ದಿ ಲೋಕವಿಯತ್ತ್ರಮಾಳದಲರ್ಪೊಲ್ ನೀರೋಡಿ ಬಾಡಲ್ಕೆ ಬಂದುದು ನಕ್ಷತ್ರದ ಬಣ್ಣಪಟ್ಟಯುದೊಲ್ಪಾಸಂಪದಿಂ ಪೀರ್ದು ತೀವಿದ ಬೆಳ್ಳಂ ತಿಳಿದಿರೆ ಸಾರ್ಚಿದ ಚಕೋರೀಚಂದ್ರಿಕಾಪಾನಪಾತ್ರದವೊಲ್ಕಾಂತಿ ಕಬ್ಬಿತ್ತು ಸಾರ್ವನಪರಾಶಾದ್ರೀಂದ್ರಮಂ ಚಂದ್ರಮಂ (ಅನಂಪು. ೮-೬೧).

[ದೇ.॥ ತಮಿ. ಮಲ. ವೆಳ್ಳ; ತುಳು. ಬೊಳ್ಳ, ಬೊಳ್ಳೊ; ತೆಲು. ವೆಲ್ಲಿ, ವೆಲ್ಲಿಕ, ವೆಲ್ಲುಕ, ವೆಲ್ಲುವ]

**ಬೆಳ್ಳ$_{2}$** (ನಾ). ೧. ಬುದ್ಧಿಯಿಲ್ಲದವನು ; ದಡ್ಡ ; ಮೂರ್ಖ: ಸತ್ತುಹೊತ್ತ ಕಣ್ಣಱಿಯದ ಬೆಳ್ಳನಲ್ಲನಳಿದಂ ಧವಳಾಕ್ಷಿಯ ನೋಟದಂದಮಂ (ಕಂಪಾ. ೯-೬೭). ೨. ಏನೂ ಅರಿಯದವನು ; ನಿರಪಾಯಕರನಾದವನು; ಮುಗ್ಧ : ಪಾದಿಯು ಬೆಳ್ಳನ ಕಳ್ಳರು ತಾಗಿದಡೆ ಇನ್ನಾರಿಗೆ ಮೊರೆಗೊಡುವ (ಸರ್ವಜ್ಞ. ೨೩-೦೨೨); ಕಳ್ಳರುಂ ಕರುಣಾಕಟಾಕ್ಷದಿ ಬೆಳ್ಳರಾಗಿರೆ

ನೋಡಿ ಬಸವಂ ಸಲ್ಲಲಿತಕಾಮಿತಫಲಂಗಳನಿತ್ತವರ್ಗಳನು ಸಲ್ಲ ಭಕ್ತರನಾದು ಮಾಡಿದನೆಲ್ಲರುಂ ಕೊಂಡಾಡುತಿರಲ್ (ಬಸಪು. ೯-೦೯); ಕಳ್ಳನ ಬಾಧೆಗೆ ಸಿಕ್ಕಿದ ಬೆಳ್ಳನವೊಲು ಹಲವ ಹಲುಬಿ ಹಂಬಲಿಸುತ್ತಂ (ಶಂಕರ. ೩೯). ೩. ಒಬ್ಬಾತನ ಹೆಸರು: ಇದಕ್ಕೆ ಸಕ್ಕಿ ಮುಂದಿರೆ ಬೂವಯ್ಯ ಬೆಳ್ಳನ ಕರಕುಡಿಬಾರದರೆಜೆಯವ್ವ ಕಿದಜೆಯ ರಯ್ಯಪ (ಎಕ. IV. ಹುಣಸೂ. ೯೨-೦೦ ; ಸು. ೯೨೦). [ಬೆಳ್$_2$ +— ಅ$_7$./ತವಿ. ವೆಳ್ಳರ್=ಮುಗ್ಧರು; ತೆಲು. ಬೇಲ, ಬೇಲು. /ಸಂ. ಭೇಲ]

**ಬೆಳ್ಳಂಗ** (ನಾ). ಒಂದು ಮನೆತನದ ಹೆಸರು (?) : ಕಯ್ಯೋಗೆವಡೆಯು ಬೆಳ್ಳಜ್ಜರ ದಸವವ್ವ(ಗ)ಗಾಯಿಂಗ ತಾಗರತಿಯು ಮಹಾಜನಕ್ಕೆ ಸುವರ್ಣ್ಣದಸ ಮಂಜುಕ್ಕೊಟ್ಟು (ಎಕ. VIII. ಸೊರಬ. ೫೬-೦೦; ೯೫೧). 'ಬೆಳ್ಳ'ಪರಾ [?]

**ಬೆಳ್ಳಂಗೆಡೆ** (ಕ್ರಿ). ೧. ಬೆಳ್ಳಗೆ ಹರಡು: ಧವಳವರ್ಣವಾಗಿ ವ್ಯಾಪಿಸು : ಇಂಗಡಲೆ ಕಡಲ್ಗಳ್. . . ಗಂಗೆಯೆ ತೊಳಿಗಳಿನಲ್ ಬೆಳ್ಳಂಗೆಡೆದುದು ಕುಮುದವನದ ಸಿರಿ ಬೆಳ್ದಿಂಗಳ್ (ಪಾರ್ಶ್ವಪು. ೬-೯೨); ಜಗದ ಧೀವರೆಯರ್ಕಳ ಕಣ್ಣ ಬೆಳ್ಪು ಬೆಳ್ಳಂಗೆಡೆದತ್ತೊ ಪೇಳೆಮಸೆ ನಿರ್ಮಲವಾದುದು ನೀರಜಾಕರಂ (ಅರ್ಧನೇ. ೫-೦೦೦). ೨. ಪ್ರವಾಹವಾಗಿ ಸುರಿ.–ಬೀಳು: ಅಂತು ವೀರರಸದ ತೊಳೆಯುಂ ನೆತ್ತರ ತೊಳೆಯುಮೊಡನೊಡನೆ ಬೆಳ್ಳಂಗೆಡೆದು ಪರಿಯೆ (ಹಂಪಕಾ.೦೨-೦೬ ಕ); ಇಂತು ಮುಂಗಾರ್ ತಲೆದೋಜಿ ತಿರವೆಗ್ಗೆ ಮುಗಿಲ್ಮೊಂದಿಯೊಳ್ ಬಳ್ಳಿಪರಿವ ನೇಹದಿಂ ಬೆಳ್ಳಂಗೆಡೆವ ಸೊಗವಾಲಿನೀರನೆ ಪೊಚ್ಚಂ ಪರ್ಚೆ ಪರಿದುದು (ರಾಮಾಶ್ವ. ೩-೦೪); ನೆಗೆದು ಬೆಳ್ಳಂಗೆಡವ ನೀರ ಬೀಳ ಬೆಳ್ಪು (ಹೊಂಗಳು. ೦೬-೫). [ ಬೆಳ್$_{v1}$ + ಕೆಡೆ$_1$ ]

**ಬೆಳ್ಳಂಬರ** (ನಾ). ಬಿಳಿಯ ಬಟ್ಟೆ ; ಶ್ವೇತಾಂಬರ : ಸಂಪೂರ್ಣರಾಜಿತ ವದನೆ ಕ್ಷೀರಾಬ್ಧಿವೀಚಿ ಬೆಳ್ಳಂಬರದ ದಿವ್ಯಾಂಗಿ (ಶಶಪೋ. ೦೯-೦೭).

[ಬೆಳ್$_1$ (<ಬಿಳಿದು) + ಅಂಬರ]

**ಬೆಳ್ಳಂಬರಿ** (ಕ್ರಿ). ಪ್ರವಾಹವಾಗಿ ಹರಿ; ಕೋಡಿ ಹರಿ: ಕಂಡೆಯು! ಈ ಕಟ್ಟುರ್ವಿನ ಬೇಸಗೆಯ ಬೇಗೆಯೊಳಂ ಬತ್ತದೆ ತುಂಬಿ ಬೆಳ್ಳಂಬರಿವ ಬೆಂಜಿಯುಂ (ರಾಮಾಶ್ವ. ೩೪-೩೦). [ಬೆಳ್$_2$ + ಪರಿ$_2$]

**ಬೆಳ್ಳಂಬೆಳಕು** 'ಬೆಳಗು$_2$' ಪರಾ.

**ಬೆಳ್ಳಂಬೆಳಗು** 'ಬೆಳಗು$_2$' ಪರಾ.

**ಬೆಳ್ಳಂವಾಡಿ** (ನಾ). ಒಂದು ಸ್ಥಳದ ಹೆಸರು : ಬೆಳ್ಳಂವ್ವಾಡಿಯ ಗೊಟ್ಟ ವಾಡಿಯು . . . ನಾಟ್ಯಾಗ್ರಮುಣ್ಣಾಗಳ್ಗಂ ತಂಭುಲಶ್ರಾವಣಗೆಯ್ದು ಒಡಂಬಡಿಸಿ ಕೊಣ್ಣುದು (ಎಕ. III (R). ತಂಜಪ. ೯೦೨-೯೬ ; ೯೦೪).

[ಬೆಳ್? + ವಾಡಿ$_1$ (<ಪಾಡಿ$_2$)]

**ಬೆಳ್ಳಕ್ಕರಿಗ** (ನಾ). ವ್ಯವಹಾರಜ್ಞಾನವಿಲ್ಲದ ಪಂಡಿತ ; ಅಕ್ಷರಜ್ಞಾನಾದ ಮೂರ್ಖ: "ಕಾಲುರಿಚನೆಂದುಂ, ಬೆಳ್ಳಕ್ಕರಿಗನೆಂದುಂ ಗ್ರಾಮ್ಯಂ" (ಕಕಾಸಾ. ೬೦-೩೩೭); ಇರು ಮರುಳೆ ಶುಷ್ಕವೈಯಾಕರಣಂಗಂ ಶುಷ್ಕ ತಾರ್ಕಿಕಂಗಂ ಬೆಳ್ಳಕ್ಕರಿಗಂಗು ವಿಷಯಮೆ ಕಾವ್ಯರತ್ನಮಂತಿಚತುರಕವಿ ಕದಂಬಕವಿಷಯಂ (ಅರಪು. ೦-೨೪); ಗುಟಲೊಡೆದೋಣಗುಪಿನಂ ಬಾಯ್ಬಾಚ್ಚಿ ರೇಕೆ ಬೆಳ್ಳಕ್ಕರಿಗರ್ (ಶಿಲಾಪ. ೦-೦೭) ; ಅರೆಗಬ್ಬಂ ಬೆಳ್ಳಕ್ಕರಿಗರೊಳ್ ವಟಗಜ್ಜಂ ಪಟ್ಟಸಾಲಿಗರೊಳ್ . . . ಪಾಪರಿ ಬಸವೊಳಲ್ಲದಿಲ್ಲಂ (ರಾಮಾಶ್ವ. ೬-೨೪). [ಬೆಳ್$_2$ + ಅಕ್ಕರಿಗ]

**ಬೆಳ್ಳಕ್ಕಿ** 'ಬೆಳ್ವಕ್ಕಿ' ನೋ.

**ಬೆಳ್ಳಕ್ಕೆ** (ನಾ). ಹುಸಿ ಅಳು; ಕಳ್ಳಳು: ಮುಳಿಸು ಬೆಳ್ಳಕ್ಕೆ ಪೈಸುಮಳಿ ಪುಜಿ ಮಾಮಾಯೆ . . . ಎಂಬಿವು ಗಣಿಕಾಳೆಗೆ ಬಳಗವೆನುತ್ತಬಿಲೆ ತರಳೆಗೋದಿಸುತಿರ್ದಳ್ (ಶಿ:ರಾ. ೬-೦೨೬) ; ಮುಳಿಸು ಬೆಳ್ಳಕ್ಕೆ ಪುಸಿ ಯೊಲುಮೆ ನಸುವೇಟ ಎಲ್ಲೆಗಳೆಂಬಿವು ಬೆಲೆವೆಣ್ಣುಗಳಗತುಳಬಲವು (ಗು:ಕು:ಶ. ೬-೩೪). [ಬೆಳ್$_2$ + ಅಕ್ಕೆ$_1$ (<ಅಬ್ಬೆ$_1$)]

**ಬೆಳ್ಳಗಸೆ** (ನಾ). ಬಿಳಿಯ ಬಣ್ಣದ ಅಗಸೆ ಮರ : ಬೆಳ್ವಾಸೆ, ಬೆಳ್ಳಗಸೆ (ಕಬ್ಯಾ.ಪು. ೩೩೩ ಪ್ರಯೋ). [ಬೆಳ್$_1$ (< ಬಿಳಿದು)+ಅಗಸೆ$_2$]

**ಬೆಳ್ಳಗೆ** (ಅ). ಬಿಳುಪಾಗಿ; ಬೆಳ್ಳಗಾಗಿ : ಗಲ್ಲ ಬೆಳ್ಳಗೆ ಹುಡುಗಿ ಬಿಳಿಪೂವ ಮುಟ್ಟಿಸಿದೆ ನನ್ನ ತುಟಿಗೆ (ಕಿರಾಂ. ೬೨-೯) ; ಮೈ ಬೆಳ್ಳಗಾದವನ ನೆರಳು ಬೆಳ್ಳಗೆಯೋ ? (ಗಾದೆ).

**ಬೆಳ್ಳಂಬೆಳ್ಳಗೆ** (ದ್ವಿರುಕ್ತಿ) : ಕೇಳಿದ ಮಾತುಗಳಿಂದ ಒಂದು ಮಾತ್ರ ತಿಳಿಯುತ್ತದೆ : ನಾವು ಎಲ್ಲ ಬೆಳ್ಳಂಬೆಳ್ಳಗೆ ಎಂದು ನಂಬಿದಲ್ಲೂ ಏನೋ ಕಪ್ಪು ಇದೆ ಎನ್ನುವುದು (ಹುಚರಾಡಾ. ೦೩೪).

[ಬೆಳ್$_1$ ( < ಬಿಳಿದು ) + —ಅಗೆ$_3$]

**ಬೆಳ್ಳಚ್ಚರಿ** (ನಾ). ದಿಗ್ಭ್ರಮೆಯನ್ನು ತರುವ ಆಶ್ಚರ್ಯ : ಉರಿಯ ಊರ್ವಶಿಯೆನಲ್ಕಾ ಕಾಡುಗಿಚ್ಚೆನಿಮೆ, ನಿಟ್ಟಿಸಿದರಾ ಜಿಲ್ಲನೆಳಮಕ್ಕಳೋಲಂತೆ ಬಾಯ್ದೆರೆದ ಬೆಳ್ಳಚ್ಚರಿಗೆ ಮನಂ ಮಾರ್ಪೋದವೋಲ್ ! (ಶ್ರೀರಾಮಾ. ೦೪೭-೦೩೯). [ಬೆಳ್$_2$ + ಅಚ್ಚರಿ$_3$]

**ಬೆಳ್ಳಟ್ಟೆ** (ನಾ). ಒಂದು ಬಗೆಯ ಸಸ್ಯ : ಸಾಲಬಾಗೆ, ಬೆಳ್ಳಟ್ಟೆ, ಬಿಕುಲ್ (ಪ್ರಶಿನಿ. ೯-೬೭). [ಬೆಳ್$_1$ (< ಬಿಳಿದು) + ಅಟ್ಟೆ$_7$]

**ಬೆಳ್ಳಡಕಿಲ್**, ಬೆಳೊಡಕಿಲು, ಬೆಳ್ಳಡಕಿಲು, ಬೆಳ್ಳಡಿಕಿಲು (ನಾ). ಒಂದು ಬಗೆಯ ಸಸ್ಯ : "ವೈಶಾಕಪುಂದ–ಗಣಜಿಲೆ, ಮೂಕೊರತಿ, ಬೆಳ್ಳಡಕಿಲ್" (ಓಪಿ. ೦೩೭) ; ನಿಮುವೆಯ್ಯುಂ, ಬೆಳ್ಳಡಕಿಲ್ (ಕಬ್ಯಾ.ಪು. ೩೩ ಪ್ರಯೋ).

**ಬೆಳೊಡಕಿಲು:** ಬಹುಮುಖ್ಯವಾಗಿ ಇರುವಂಥವರುಗಳಿಗೆ . . . ಕೊಡುವಂಥಾ ಮೇಲೋಗರಗಳು—ಗಣಜಿಲೆಸೊಪ್ಪು, ಬೆಳೊಡಕಿಲಸೊಪ್ಪು, ಮುಟ್ಟಿಯ ಸೊಪ್ಪು, ಮಜ್ಜಿಗೆ (ಐಸ್ವಚಿ. ೦೫೬). **ಬೆಳ್ಳಡಕಿಲು :** "ಬೆಳ್ಳಡಕಿಲು ವಿಶಾಲಂ ಕಠಿಲ್ಲಕವೆನಿಕ್ಕು" (ಮುಂಗಣ. ೯೦-೩೦) ; ಬೆಳ್ಳಡಕಿಲ ಬೇರಂ ಅಕ್ಕಿಯನು ಕೂಡ ಕುಟ್ಟಿ ಹಿಟ್ಟು ತೊಳಸಿ ಸಪ್ಪೆ ತುಪ್ಪದಿಂದುಣಲು ಪನ್ನೆತ್ತರು ಪರಿಹರ (ಕಳವ್ಯ. ೮೯೬). **ಬೆಳ್ಳಡಿಕಿಲು :** "ದ್ವಿಪುನರ್ನವಾ–ಗಜಪಿಪ್ಪಲಿ, ಬೆಳ್ಳಡಿಕಿಲು" (ಓಶಾಂ. ೭೬).

[ಬೆಳ್$_1$ (<ಬಿಳಿದು) + ಅಡಕಿಲ್$_7$]

**ಬೆಳ್ಳಡಕಿಲು** 'ಬೆಳ್ಳಡಕಿಲ್' ನೋ.

**ಬೆಳ್ಳಡಿ** (ನಾ). ೧. ಬೂದಿ ಬಳಿದ ಪಾದ : ಬೆಳ್ಳಡಿಯ ಬೆಳ್ಳಡಿಗೆ ಮಿಸುನಿವಾಯ್ಪುಗೆಯನೊಪ್ಪಿಸಿ . . . ಕಳಿಪುವುದುಂ (ರಾಮಾಶ್ವ. ೦೩೦-೦೩). ೨. ಬೆಳ್ಳಗಿರುವ ಪಾದವನ್ನು ಹೊಂದಿದವನು ; ಶಿವ : "ಬೆಳ್ಳಡಿಯೆಂದು ಗೊರವಂ" (ಕಕಾಸಾ. ೬೪-೯೩೭) ; ಬಲ್ಲಿದನಪ್ಪನೇ ರಣಕೆ ಬಂದನೆ ಬೆಳ್ಳಡಿಯುಂದು ಹಾಸ್ಯದಿಂ ಸೊಲ್ಲಿಸಿದಂ (ಶಿ:ರಾ. ೦೦-೨೯). ೩. ಒಂದು ಬಗೆಯ ಪಕ್ಷಿ ; ಗೊರವ. ೨, ೩ : ಸುರಪತಿಯ ಬೆಳ್ಳಡಿಯ ರಥಚರಣದ ಪಾವಕನ ಮುನಿಯ . . . ಪೆಸರ ಖಗಕುಲಂ ಕರಮೆಸಗಿಗುಂ (ರಾಜಶೇ. ೫-೬೦).

[ಬೆಳ್$_1$ (<ಬಿಳಿದು) + ಅಡಿ$_1$ ]

**ಬೆಳ್ಳಡಿಕಿಲು** 'ಬೆಳ್ಳಡಕಿಲ್' ನೋ.

**ಬೆಳ್ಳಡಿಯ** (ನಾ). ಬಿಳಿಯ ಬಣ್ಣದ ಪಾದವುಳ್ಳವನು ; ಬಿಳುಪಾದ ಪಾದವನ್ನು ಹೊಂದಿದವನು ; ಶಿವ : "ಬಿಜಿಶಿನಿಯಣ್ಣ . . . ಸಾಂತ ಬೆಳ್ಳಡಿಯನೆನೆ ಶಿವಗೆ ಪೆಸರ್" (ಕಬ್ಬಕ್ಕ. ೩). [ಬೆಳ್ಳಡಿ + —ಅ$_7$]

**ಬೆಳ್ಳನೆ** (ಗು). ಬೆಳ್ಳಗಿರುವ ; ಬಿಳುಪಾಗಿರುವ : ಅಲ್ಲದ ರಸವೆಕ್ಕೆಯ ಕಾಯಿಯ ರಸ ಬೆಳ್ಳನೀರುಳ್ಳಿಯ ರಸವು (ಶಾಳ್ಳಸಾಂ. ೦೭) ; ನಡೆವಳಾಹವ ದೆಡೆಗೆ ಕವಚಗಿವಚಂ ಕಠಿಗಿತ್ತಿಗಳನೊಂದುಮಂ ಕೈಕೊಳ್ಳದೆ ,ಕೊರಳ ಜಪಮಣಿವಾಲೆ ವೇಣಾಟ್ಟ ನಾರು ಬೆಳ್ಳನೆ ಸೀರೆಯಿಲಿ ! (ಕಶ್ಯಾಂಗ. ೬೫-೨೩೯೦) ; ಕನ್ನೆದಿಲೆರೆಯನು ಬಂದನು ಕನ್ನೆಯ ಕನ್ನೆಯ ಬೆಳ್ಳನೆಯವನು (ಜಂಕಾಶ. ೦೦೦-೩೪).

[ಬೆಳ್$_1$ (< ಬಿಳಿದು) + — ಅನ್ನೆ$_2$ (< — ಅನೆಯ$_2$)]

**ಬೆಳ್ಳಬ್ಬಟೆ** (ನಾ). ಹುಸಿಯ ಆರ್ಭಟ ; ಮೃಗಗಳನ್ನು ಹೆದರಿಸುವುದಕ್ಕಾಗಿ ಉಂಟುಮಾಡುವ ಕೂಗಾಟ,—ಕಿರುಚಾಟ : ದೀಪದ ಗಿಡಗ ಹುಲಿ ಕೂಳಿಗಾಣಗಳ ಮಂತಣಗಳಿಂದೆ ಬೆಳ್ಳಬ್ಬಟೆಯನೆಸಗಿ ಮಬ್ಬಿನ ಪುತ್ತಳಿಗಳಂದದೆ (ಸಿದ್ಧೇಶ್ವ. ೯-೫); ತರದೆ ಬೆಳ್ಳಬ್ಬಟೆಯು ಗೈದು ಬಲೆಗಳನೆಲ್ಲ ಹರಹಿ . . . ಬೇಂಟೆಯಾಡುತ್ತಿರ್ದನಾ ವನದೊಳಗೆ ಮದನಮದದಲ್ಲಣಂ (ಸಿದ್ಧೇಶ್ವ. ೧೨-೮). [ಬೆಳ್$_2$ + ಅಬ್ಬಟೆ$_0$]

**ಬೆಳ್ಳಲರ್** (ನಾ). ಬಿಳಿಯ ಬಣ್ಣದ ಹೂವು ; ಬಿಳುಪಾದ ಪುಷ್ಪ : ಬೆಳ್ಳಲರವೂಲಿರ್ದಳಂದು ಗಿರಿರಾಜತನೂಭವೆ (ಉಪಶಾಕ. ೬೯). [ಬೆಳ್$_1$ (<ಬಿಳಿದು) + ಅಲರ್$_2$]

**ಬೆಳ್ಳವರೆ** (ನಾ). (?) : ಬೆಳ್ಳವರೆ ಕದಿರ್ವೊಱಱು ಮೊಗಹಿಯೆಂಬವನರ್ಚಿಸಿ ಕೂಡೆ ದೈವಮಂ ವಿರಚಿಸಿ ಪೇೞ್ವ ನಾಡ ದುಱುದುಂಬಿಯರೆಂದುದ ನೆಂದವಂದಿರೊಳ್ ನೆಱೆದೊಡಗೂಡಿ ಕಳ್ಗುಡಿಪ ಡಂಬಗಿದೊತ್ತಿರಸಾರು ಬಾರಿಪರ್ (ಜಗ್ನಾಥ. ೯೬೬). [ ? ]

**ಬೆಳ್ಳವಾಸ** (ನಾ). [ಜೈನ] ಚಳಿಗಾಲದಲ್ಲಿ ಮೊಳಕಾಲುದ್ದದ ಪ್ರವಾಹದ ನೀರಿನ ನಡುವೆ ನಿಂತುಕೊಳ್ಳುವುದು ಮತ್ತು ಹಾಗೆ ನಿಂತು ಮಾಡುವ ತಪಸ್ಸು : ತನು ಪಂಜಿವೊರ್ ಬೆಳರ್ತಿರ್ಪನೆಗಂ ಹಿಮಮುಕ್ಕಿದರಲೆವೋಲ್ ಪುದಿದಿರೆಯುಂ ತನು ತನಗಲ್ತೆಂದೇಕಾಂತ ನಿವಾಸದೊಳಿಂತು ಬೆಳ್ಳವಾಸದೊಳಿರ್ದಂ (ಆದಿಪು. ೬-೩೩): ಯೋಗ ವಶೀಕೃತಾಂ[ಗ]ಕಂ ಬೆಳ್ಳವಾಸದೊಳ್ ಮೇಘರಥಮುನೀಂದ್ರಂ ನಿಂದಂ (ಶಾಂತಿಪು. ೯-೦೦೬): ಮಳ್ಳುರಿವೊಲೆೞ್ವ ಬಿಸಿಲ್ ಹಿಮಪುಂಜಮಂ ಮುಸುಂಕಿವ ತೆಱನಾಗೆ ತನ್ಮುನಿಗೆ ಕಲ್ಮಿಲೆಯಲ್ಲಿದು ಬೆಳ್ಳವಾಸಮೆಂಬುದ ನೆಸಗಿತ್ತು ಬೇಸಗೆಯು ಬೆಟ್ಟದ ಕಲ್ಮಿಲೆ ನಿಂದ ಗೌರವಂ (ಅಪಂಪು. ೯-೦೮). [ ಬೆಳ್$_2$ + ವಾಸ$_2$ ]

**ಬೆಳ್ಳಹೋಗು** (ಕ್ರಿ). ಪ್ರವಾಹದಲ್ಲಿ ಕೊಚ್ಚಿ ಹೋಗು.— ತೇಲಿ ಹೋಗು : ಶ್ಯಾಂಪಣ್ಣನು ಆ ಹೊಳೆಯಲ್ಲಿ ಬೆಳ್ಳಹೋದನು (ಊಳಿಂ. ೩೮). [ ಬೆಳ್$_2$ + ಹೋಗು$_1$ (<ಪೋ$_1$) ]

**ಬೆಳ್ಳಾನೆ** (ನಾ). ಬಿಳಿಯ ಬಣ್ಣದ ಆನೆ; ಐರಾವತ : ಅಂತು ಬೆಳ್ಳಾನೆ ಬಳಿಗೆಯ್ಯಂ ಪೊಕ್ಕಂತಿರಾಂತ ಬಲಮಂ ಪಡಲ್ವಡಿಸೆ (ನೇಮಿಪು. ೦೯-೬೩೭); ಇಂದರನ ಬೆಳ್ಳಾನೆಯುಂ ಬಿದಿಯು ಹಂಸೆಗಳ ವೃಂದಮುಂ . . . ಮಿಂದು ಗಳೆವಮಳಧವಲಾಂಗದಿಂ ಸೊಗಯಿಸುವನಂ ದಿವ್ಯಧರ್ಮಸ್ವರೂಪನಂ ಭಜಿಸುವೆಂ (ಅನ್ನದೀ. ೦-೦೦) ; ತುಂಬು ಬೆಳ್ಳಾನೆಯು ಸುರಾಧಿಪನೆಂಬ ಮೊತ್ತಿಗೆ ತಂದು ಪೊಱಗಹನು (ಶಾಕ್ಯಶಾ. ೨-೦೧). [ಬೆಳ್$_1$ (<ಬಿಳಿದು) + ಆನೆ$_1$]

**ಬೆಳ್ಳಾಯ** (ನಾ). ಒಂದು ಬಗೆಯ ತೆರಿಗೆ,–ಸುಂಕ : ಕುಮರಿಯ ಪೆರ್ಜುಂಕದಲು ××× ಪಡ್ಡರಾವುಳದಲು ಬಿ××× ×ರ್ಜುಂಕದ ಬೆಳ್ಳಾಯದಲು ××× ದ್ರಮ್ಮ ೧ (ಶಾಸನ. XX, ೬೬-೯; 1118); ಪೆರ್ಜುಂಕದ ಬೆಳ್ಳಾಯದಲು ದ್ರಮ್ಮ ೧ (ಪೊಂಕಶಾ. ೦೯೩೭. ಜಂ೨. ೨-೮; ?). [ ಬೆಳ್? + ಆಯ$_7$]

**ಬೆಳ್ಳಾರ$_1$**, ಬೆಳ್ಳಾಲ$_2$ (ನಾ). (ಪಕ್ಷಿ, ಪ್ರಾಣಿ ಮೊದಲಾದುವುಗಳನ್ನು ಹಿಡಿಯಲು ಬಳಸುವ) ಒಂದು ಬಗೆಯ ಬಲೆ,–ಜಾಲ : "ಮೃಗ ಜಾಲಿಕಂ ವಾಗುರಂ ಬೆಳ್ಳಾರವೆನಿಸಿಕ್ಕು" (ಮಂಗರಾ. ೦೦೨-೫) ; ಬೆಳ್ಳಾರ ಬಗಿ ಹೊಮಜಿ ಹೊದ್ದಿಸುದ್ದ ಮನೇಱು ಸನ್ನದೋೞು . . . ಎಂದೊಬ್ಬರೊಬ್ಬರ ನಾಡುವಬ್ಬರದ ಬೊಬ್ಬೆ ಹಬ್ಬಿತ್ತಡವಿಯ (ಹರಶಾ. ೫-೨೫) ; ಯಮನ ನಳಿಕಿಪ ಜೂಬು ಯಮಮೃಗದ ಬೆಳ್ಳಾರವಮುಮ ಯಮ ಹರಿಣಿಗಿಕ್ಕಿದ ಬೆಟ್ಟಿದು (ಶಾಪಂತ. ೦-೯೨); ತರಳಾಪಾಂಗಮರೀಚಿಗಳ್ ಕಳಮಕೇದಾರಕ್ಕೆ ಬೆಳ್ಳಾರದೋಲಿರೆ . . . ಪಾಂಥರ್ ಬಲಮಂದು ಬೆಳ್ಳಗಮವೋಲ್ ಸಾರ್ತಂದು ಬೆಳ್ಳಾಗೆ ಪಾಮರಿಯರ್ ಕಾಮನ ಬೇಂಟೆಗಾರ್ತಿಯರೆನಿಪ್ಪಾಶಂಕೆಯಂ ಮಾಡುವರ್ (ಸೂಕ್ತಿಸು. ೯-೬೬). **ಬೆಳ್ಳಾಲ$_2$** : ಬೆಳ್ಳಾಲಂ ಗಾಳದ ಕಟ್ಟಿಗೆ ಕೌಳೀಯಕವಿತತಿ ಸೆಂಡು ಕೋಲಸಿ ಚಕ್ರಂ ಮಾತ್ರಂ ಪಲವು ಚಂದದ ಬಲೆಗಳ್ವೆರಸು ಬೇಂಟೆಗೆ . . . ಪೊಱಮಟ್ಟು (ಪಾರ್ಶ್ವಪು. ೦೨-೬೫).

**ಬೆಳ್ಳಾರ$_2$** (ನಾ). ಬಿಳಿಯ (ಮುತ್ತಿನ) ಹಾರ : ಆರೆಣೆಯೆಂಬೆನಳುಂಬದ ಬೀರಮನೀ ಜಗಮನಾವಗಂ ಸುತ್ತಿದ ಮುನ್ನೀರೆಂಬುದು ಬಿರುದಿನ ಬೆಳ್ಳಾರೆನಿಸಿದುದದಟರಾಯ ಕೋಳಾಹಳನಾ (ಯಶೋಚ. ೦-೦೫). [ಬೆಳ್$_1$ ( <ಬಿಳಿದು) + ಆರ$_2$]

**ಬೆಳ್ಳಾರಬಲೆ** 'ಬೆಳ್ಳಾರವಲೆ' ನೋ.

**ಬೆಳ್ಳಾರವಲೆ**, ಬೆಳ್ಳಾರಬಲೆ, ಬೆಳ್ಳಾಲವಲೆ (ನಾ). = ಬೆಳ್ಳಾರ$_1$ : ಪ್ರಮುಖಮೃಗ ಕಾಲವುರುಬ ಬಿದ್ದುದು ಛಳ್ಳುರಿಯ ಬೆಳ್ಳಾರವಲೆಗಳಲಿ (ಕುಮಾ.ಆ. ೨೦-೫೦) ; ಹೇಳು ಹೇಳೀನೆಲವೊ ತಗೆ ಬೆಳ್ಳಾರವಲೆಯನ್ನು ಹಂದೆಯಹೆ ನಾನಾಳುತನವೆನಗಿಲ್ಲ (ಚಿಶಾಗ. ೨-೮-೦) ; ಮುನಿಮೃಗಾವಳಿಯ ಜಂಗುಳಿಗೊಡ್ಡಿದ ಬೆಳ್ಳಾರವಲೆಯೆನೆ ಕಂಗೊಳಿಸಿತು ಸೂಳೆಗೇರಿ (ಕಂಪಂ. ೬-೯೦). **ಬೆಳ್ಳಾರಬಲೆ** : ಬೆಳ್ಳಾರಬಲೆಗಳ ಹರಹಿ ಸೊಪ್ಪಿನ ತೋಹಿನಲಿ ಸಿಲುಕಿಸಿದರಾ ಮೃಗವ (ಕುಮಾ.ಆ. ೨೩-೦೦) ; ಮರಿಮರಿಪ ಕಾಳ್ಕಿಚ್ಚು ಮುಂದುಗಡೆ ಕಾಳ್ಗುರಿಣಿ ಕಪ್ಪು ಬಲಗಡೆ ಬಟ್ಟ ಬೆಳ್ಳಾರಬಲೆ ಯೆಡಗಡೆ (ಸಮ್ಯಗ್. ೨-೯೬): ಬೆಳ್ಳಾರಬಲೆಯು ಗುದಿಯು ಸಬಳದ ಕವಲ್ಗೋಲ ಅಡಿಕಲ್ಗೂಡೆಯ ನೇಣ ಕಡಿಗತ್ತಿಯ ಬಿಲ್ಲಂಬುಗಳ ಬಲ್ಪೊಱೆವೊತ್ತು . . . ಬೇಡರ್ ಕಾಡಂ ಮುತ್ತಿಯುಂ (ರಾಜಶೇಖ. ೮೩-೨೫). **ಬೆಳ್ಳಾಲವಲೆ** : ಕಾಲುಗಣ್ಣಿಯ ಹೆಬ್ಬಲೆಯ ಬೆಳ್ಳಾಲವಲೆಗಳ [ಪಾಠಾಂ. ಹೊಱೆಗಳ] . . . ಬೇಟೆಗಾಱರು ಬಳಸಿದರು ಶಿವನ (ಕುಮಾ.ರಾ. ೫-೩೩). [ಬೆಳ್ಳಾರ$_1$ + ಬಲೆ$_1$]

**ಬೆಳ್ಳಾರ್ಪಟ** (ನಾ). = ಬೆಳ್ಳಾರ ೧ : ಬೆಳ್ಳಾರ್ಪಟಮೆರೆಬಲೆಗಳ್ . . . ದೀಪದ ಪುಲಿ ಸಿರಿತಾಸ್ತ್ರಂಗಳುಗ್ರತ್ವಮಂ ಸಂಗಡಿಸುತ್ತಿರ್ದೊಪ್ಪೆ ವಿಂಧ್ಯಾಟವಿಗೆ ನಡೆದುದುದ್ವೃತ್ತಿರಾತಪ್ರಜಾತಂ (ಗಿರಿಜಾ. ೦-೬೯); ತಡಿಕೆ ಗಳ ಬಲೆ ಗಾಣ ಕೂಳಿ ಬಿಲು ಸರಳು ನಾಯ್ ಗಿಡುಗ ನೆರೆವುದ್ದ ಬೆಳ್ಳಾರ್ಪಟಂ ತೋಱಿತ್ತು . . . ಪ್ರಕರವೆರಸಿ ಬೇಡರು ನಡೆದರು (ಹರಶಾ. ೫-೯) ; ಹಿಡಿಯೆರಳೆ ಬೆಳ್ಳಾರ್ಪಟಂಗಳು ಸರಳಿನ ಮೂಡಿಗೆಗಳೆಯ್ದತಾ ನೃಪನಿದಿರೊಳ್ (ಸಮ್ಯಗಾ. ೯-೨೨). [ಬೆಳ್ಳಾರ$_1$ + ಪಟ]

**ಬೆಳ್ಳಾಲ$_1$** (ನಾ). ಬಿಳಿ ಆಲದ ಮರ : ಮಾವರಳಿ ಬೆಳ್ಳಾಲ ಸಂಪಗೆ . . . ಸೊನ್ನೆಯದ ಮರನಾ ವನದೊಳಾಮೆಡೆಯೊಳಾವಗ ತೀವಿಕೊಂಡಿಹುವು (ತಿಮ್ಮ.ಆ. ೬-೨೦); ಬದರಿ ಬಂಗರಳಿ ತಂಡಸ ತಡಸು ಬೆಳ್ಳಾಲ ಚಮರ ಚಂಪಗಗಳಿಂದ (ಕುರಂಚ. ೦-೨೬). [ಬೆಳ್$_1$ (<ಬಿಳಿದು) + ಆಲ$_1$]

**ಬೆಳ್ಳಾಲ$_2$** 'ಬೆಳ್ಳಾರ$_1$' ನೋ.

**ಬೆಳ್ಳಾಲವಲೆ** 'ಬೆಳ್ಳಾರವಲೆ' ನೋ.

**ಬೆಳ್ಳಾಲೆ** (ನಾ). ಬಿಳಿಯ ಬಣ್ಣದ ಹಾಲೆಮರ : ಕೆಲವು ಕಡೆಗಳಲ್ಲಿ ತೇಗ, ಸಂದಿ . . . ಬೆಳ್ಳಾಲೆ . . . ಗಂಧನರಗೆ ಮುಂತಾದ ಗಗನಚುಂಬಿತ ವೃಕ್ಷಗಳು (ಕಂಜಿಸಂ. ೨). [ಬೆಳ್$_1$ (<ಬಿಳಿದು) + ಆಲೆ$_2$ (<ಪಾಲೆ$_3$)]

**ಬೆಳ್ಳಾಳ್**, ಬೆಳ್ಳಾಳು (ನಾ). ೧. ತಿಳಿವಳಿಕೆಯಿಲ್ಲದವನು; ಅವಿವೇಕಿ ; ಮೂರ್ಖ : ಪೆದ್ದ : ಕೃಷ್ಣೋರಗನು ಪಿಡಿದ ಬೆಳ್ಳಾಳಂತಾಮ್ಮನೆ ಬೆಮರುತ್ತುಮಿರ್ದ ದುಶ್ಶಾಸನನುಮಂ . . . ಕಂಡು (ಕಂಜಶಾ. ೬-೫ ವ); ಧರಣೀಸಾಮ್ರಾಜ್ಯಮಿರ್ದಂತೆ ಬಂದ್ದಳಾಗಿರ್ಪ ವಿಭೂತಿಯುಂ ಬಸುಚ್ಯೈಕ್ಷ್ಯಂಗೊಂಡು ತಾನಣ್ಣ ಬೆಳ್ಳಾಳಂ ಪೋಲನೆ ಮಂತ್ರವೈದ್ಯವಳಿಪಿಂ ಕೇಡಯ್ದಿಪಂ ಧರ್ಮಮಂ (ಧರ್ಮಾಮೃ. ೯-೯೮); ಬೆಳ್ಳಾಳೆಡೆಗೊಂಡನೊದಱು ಭಟ್ಟನೊಳೊಮಜಂ (ಶಮ್ಮ. ೮೮೦ ಪ್ರಧೋ). ೨. ಹೇಡಿ : ಅಂಜುಬುರುಕ; ಪುಕ್ಕಲ : ಬೆಳ್ಳಾಳ್ಗೆ ಪೋಳಿಪುದೋಱುವುದೊಳ್ಳಾಳ್ಗೆ ಪೊಡರ್ಪ

ದೋರ್ಪುದು (ಕಂಕಥಾ. ೦೨-೧೨); ಒಳ್ಳಾನೆಗೋಡಲರಿಯದ ಬೆಳ್ಳಾಳ ವೊಲಗಿದು ಕಂಡು ಲಾವಣ್ಯರಸಂ ತಳ್ಳಂಕುಗುಟ್ಟೆ ಮಿಳ್ಳಿಸಿ ದಳ್ಳಿಱಿದಾಡುವ ಜನೇಂದ್ರಶಿಶುವಂ (ಶಾಂತಿಪು. ೦೦-೮); ನೀಂ ಕಳ್ಳರಂ ಕಂಡ ಬೆಳ್ಳಾಳಂತೆ ಬೆದಱಿಯೆನಗಂ ಪೇಟಲೆ ಪೆಱಗಂ ನೋಡದೋಡಿ ಬಂದೆಯದೇಂ ಕಾರಣ ಮೆನೆ (ಕಂಕಕಂ. ೨೮೩-೨೩). **ಬೆಳ್ಳಾಳು : ೨.** ಕುದುರೆಯ ಚದುರೆಯ ಪದಿರೆರಡು ಒಂದಯ್ಕ ಚದುರನೇಱಿದರೆ ಕುಣಿಯುವದು ಬೆಳ್ಳಾಳ ಬದಿರಿ ಹಾಕುವದು (ಸರ್ವಜ್ಞ. ೦೭೭೭). [ ಬೆಳ್$_{2}$ + ಆಳ್$_{3}$ ]

**ಬೆಳ್ಳಾಳು** 'ಬೆಳ್ಳಾಳ್' ನೋ.

**ಬೆಳ್ಳಾಟ** (ನಾ). ಒಂದು ಬ್ರಾಹ್ಮಣ ಪಂಗಡದ ಹೆಸರು : ಬೆಳ್ಳಾಟ ಕುಲ ಬ್ರಾಹ್ಮಣ್ಯೆರ್ಷ್ಟ (ಎಕ. XIII, ೧೯೩-೦೨; ೨೦೨).

[ ದೇ.॥ ತಮಿ. ವೆಳ್ಳಾಳ್, ವೆಳ್ಳಾಟ, ವೇಳಾಳ್; ಮಲ. ವೆಳ್ಳಾಳ ]

**ಬೆಳ್ಳಿ** (ನಾ). ೧. ಒಂದು ಬಗೆಯ ಹೊಳೆಯುವ ಬಿಳಿಯ ಲೋಹ; ರಜತ : ''ರಜತಂ, ಕಳಧೌತಂ ರೂಪ್ಯಂ, ತಾರಂ — ಈ ೪ ಬೆಳ್ಳಿ'' (ಕಠಾಯು. ೨೮-೦೬); ಬೆಳ್ಳಿಯ ನಾಲ್ಕು ಗೋಪುರಂಗಳಿಂದೊಪ್ಪಿ ವಳಯಾಕೃತಿಯಾಗಿ ಬಳಸಿದ . . . ಮಧ್ಯಪ್ರದೇಶಮುಮಂ (ಆದಿಪು. ೦೦-೪೨ ವ); ಸಾಸಿರವರ್ ಕವಿಲೆಯ ಕೋಡುಮಂ ಕೋಗ(ಗುಮಮ್) ಪೊನ್ನುಂ ಬೆಳ್ಳಿಯುಮಂ ಕಟ್ಟಿ ಸಾಯಿ(ಸಿ)ರ್ಬ್ಬರ್ಪ್ಪಾರ್ವರ್ಗ್ಗೆ ದಾನಂಗೊಟ್ಟ ಫಲಂ (ಕೌಇ. XI—i, ೩೯-೦೭ ; 951); ಪುಂಡರೀಕದೆಸಳ ಬೆಳ್ಳಿಯ ಸಿಂಪಿಂ ಪರಿಮಳದ ರಸಮನೆಱೆದು ಪರಾಗದ ತಿಲಕಮನಿಕ್ಕಿ (೧೦೪. ೨-೭೦ ವ). ೨. ಬೆಳ್ಳಿಯಿಂದ ಮಾಡಿದ (ಮೂರಾಣೆಯ ಬೆಲೆಯ) ನಾಣ್ಯ.—ಹಣ : ಅಲ್ಲಿ ಇಲ್ಲಿ ಗಂಡನ ಕಡೆಯವರೂ ಹೆಣ್ಣಿನ ಕಡೆಯವರೂ ಬೆಳ್ಳಿ (ಮೂರಾಣೆ) ಹಂಚಿದರು (ಪ್ರಾಂತಕು. ೦೩). ೩. ನವಗ್ರಹಗಳಲ್ಲಿ ಒಂದು ; ಶುಕ್ರ : ಉಷೆಯ ಭಾಳದಲಿ 'ಬೆಳ್ಳಿ' ಯೊಂದೆಯೆ ಮಿರುಗುವಂದದಲಿ . . . ಹಣೆಯಲ್ಲಿ ಚಂದ್ರ ಕುಂಕುಮ ಬಿಂದುವನಿಟ್ಟು (ತಾಂ. ೦೯-೩೦೨); ಉಷೆಯ ಹಣೆಗೆ ಬೆಳ್ಳಿ ಶುಕ್ರ ತಿಲಕವಸಿಡಲಿ (ಕೂರ್ಮಾ. ೨೪-೦೦). ೧, ೩ : ಗಗನದಂತು ಬೆಳ್ಳಿಯಿಂ ಮೆಱೆದುಂ, ಕಯ್ವೊಲದಂತು ಕರ್ಪೂರ್ನ್ನಿಂ ರಂಜಿಸಿಯುಂ . . . ದಿಟ್ಟಿಯ ಬಟ್ಟಿಗೈತರ್ಪ ಲೋಹಕಾರರ ಮನೆಯಿಂ (ಶಾಪಾಕ್ಷ. ೦೦೩-೦೦). ೪. ಬೆಳ್ಳಿಯ ಬಣ್ಣ; ಬಿಳುಪು; ಶ್ವೇತವರ್ಣ : ''ಬೆಳ್ಳಿಯುಳ್ಲಿಯುಂ ಶ್ವೇತಮೆಂಬುದು'' (ಕಠಾಯು. ೦೫೦-೩); ಮುಗಿಲ ಬೆಳ್ಳಿಯ ಪೊರೆಯ ಹೊದೆದು ಸೊಗಸು ಕನಸನು ಕಾಣುವಂದದಿ ನಗುವ ಚಂದ್ರನ ಬೆಳಕಿ ನೊಳಗೆ ಕಂಡೆ ತಬ್ಬಲಿ ಮರಿಯನು (ಗಪಕ. ೪೦-೦೩). ೫. ಒಂದು ಬಗೆಯ ಔಷಧೀಸಸ್ಯ: ''ನೀಲಮಲ್ಲಿಕೀ—ಬೆಳ್ಳಿ, ಬೆಳ್ಲವತ್ತ'' (೬೪೧. ೬೯).

**ಬೆಳ್ಳಿಯ ಕಟ್ಟು** = ರಜತದ ಚೌಕಟ್ಟು—ಅಣಸು : ಚಿನ್ನದ ಹರಿಪೆ ಬೆಳ್ಳಿಯ ಕಟ್ಟು ಮುತ್ತುಗಳುನ್ನತ ಕಂಚ್ಚಿನಿಟ್ಟಿಗಳ್ ಸನ್ನಾಹದ ಬಲುಭಟರು ಕೋಟೆಯನತ್ಯುನ್ನತದಲಿ ಕಾದಿಹರು (ಕಂನಪ. ೦೦-೦೯೩).

**ಬೆಳ್ಳಿಯ ನಾಣ್ಯ** = ಬೆಳ್ಳಿನಾಣ್ಯ : ಸಾಮಾನ್ಯವಾಗಿ ಬೆಳ್ಳಿಯ ನಾಣ್ಯ ಚಲಾವಣೆಯಲ್ಲಿ ಉಳಿದುಕೊಂಡು ಚಿನ್ನದ ನಾಣ್ಯ ಮಾಯವಾಗುವುದು (ಪಾಶ್ರ. ೨೪). **ಬೆಳ್ಳಿಯ ಬೆಟ್ಟ**=ರಜತದ ಬೆಟ್ಟ ; ಕೈಲಾಸಪರ್ವತ: ಗಗನದಿಂ ನವಲೋಹಿತವೃಷ್ಟಿಗಳ್ ಪಲುಮ್ಮೆನೆ ಕೋಳಿ ನಾಂದು ಕೆಂಪೆಸೆದು ತೊಟ್ಟನೆ ಬೆಳ್ಳಿಯ ಬೆಟ್ಟಮಲ್ತು ಜಾದಿನ ನಗಮೆಂಬ ಶಂಕೆಯನೆ ಮಾಡಿ ದುದಾ ವಿಜಯಾರ್ಧಪರ್ವತಂ (ಶಾಂತಿಪು. ೪-೩೩); ಪಟ್ಟಣದ ನಡುವೆ ಬೆಳ್ಳಿಯ ಬೆಟ್ಟಂಗಳನಿಳಿಪ ಜೈನನಿಳಯಂಗಳನೀ ಶ್ರಿಷ್ಟಿಯೊಳಿ ಕೂಡೆ ಮಾಡಿದ ರಟ್ಟಂ ಶಂಪಾವನೀಶನೆನೆ ಪೊಗಳದರಾರ್ (ಸಮಪ. ೦-೩೭); ಗಂಗೆ ಬಿಟಲ್ವುವೋಲ್ನೆಲಕೆ ಬೆಳ್ಳಿಯ ಬೆಟ್ಟದ ಬಳ್ಳಿವಳ್ಳ ಬೆಳ್ಳಂಗೆಡದೊಪ್ಪೆ (ಅರಸೀ. ೨-೭೦).

**ಬೆಳ್ಳಿಯರ್**=ಬೆಳ್ಳಿ ಕೆಲಸ ಮಾಡುವವನು ; ಅಕ್ಕಸಾಲಿಗ : ನಗರೂರ ಬೆಳ್ಳಿಯರುಂ ಮರಪೂರ ವಣ್ಣಾಕರುಂ (ವ್ಯಾಕಾ. ೦೯೩೭, ೧೦೯-೪೫ ; 726); ಬೆಳ್ಳಿಯರ ಕುಲತಿಲಕ ಧಮ್ಮಗವುಡಂಗೆಯುಂ ಬೊಂವ್ಮಾಗವುಂಡಿಗೆಯುಂ ಪುಟ್ಟಿದ ಸುಪುತ್ರ ಕುಲದ್ದೀಪಕ ಚಟಿಗವುಂಡ (ಎಕ. VI(R). ಕೃಕ್ರಾ. ೬೯-೦೨; 1242) . **ಬೆಳ್ಳಿಯ ಹಬ್ಬ** = ಯಾವುದಾದರೂ ಸಂಘ, ಸಂಸ್ಥೆಗಳಿಗೆ ಇಪ್ಪತ್ತೈದು ವರ್ಷ ತುಂಬಿದ ಸಂದರ್ಭಗಳಲ್ಲಿ ಆಚರಿಸುವ ಸಮಾರಂಭ ; ರಜತಮಹೋತ್ಸವ : ''ಇಪ್ಪತ್ತೈದನೆಯ ವಾರ್ಷಿಕೋತ್ಸವ; ರಜತಮಹೋತ್ಸವ, ಪಂಚವಿಂಶತಿ ಪೂರ್ತಿ ; ಬೆಳ್ಳಿಯ ಹಬ್ಬ'' (Silver Jubilee. ಇಂಕೊ) ; ಶಿಕ್ಷಣವೃತ್ತಿಯೊಳೀ ವರ್ಷವೆನಗಿದು ಬೆಳ್ಳಿಯ ಹಬ್ಬದ ವರ್ಷ (ಇಂಡಾಕ. ೭೩-೭೦). **ಬೆಳ್ಳಿಯುತ್ತರಿಗೆ**=ಬೆಳ್ಳಿಯ ಜರಿಯ ಮೇಲುಹೊದಿಕೆ, — ಉತ್ತರೀಯ : ವರಕಮುಂಡಲವೊಪ್ಪೆ ಹಸ್ತದೊಳೋಱಿವೆತ್ತಿರೆ ಬೆಳ್ಳಿಯುತ್ತರಿಗೆ ಜನ್ನಿವರಂ ಬೆಡಂಗಳವಟ್ಟು ಬಾಲ ದಿನೇಶನಂತಿರೆ (ರಪಾಸ್ಯ. ೩-೨೦೬). **ಬೆಳ್ಳಿಯೊಸಗೆ** = ಬೆಳ್ಳಿಯ ಹಬ್ಬ : ಬೆಳ್ಳಿಬೆಟ್ಟದೊಡತಿ, ಗೌರಿ, ಬೆಳ್ಳಿಯೊಸಗೆಗೊಸಗೆ ಬೀರಿ ಕಾಯಿ ಕೃಷ್ಣನ (ಹೂಂಗಳು. ೯-೪). [ ದೇ.॥ ತಮಿ. ಮಲ. ವೆಳ್ಳಿ ; ಕೊಡ. ತುಳು. ಬೊಳ್ಳಿ ; ತೆಲು. ವೆಂಡಿ]

**ಬೆಳ್ಳಿಂದ** (ನಾ). ಒಂದು ಊರಿನ ಹೆಸರು : ಸ್ವಸ್ತಿ ಮಜ್ಜಿಗ ಬೆಳ್ಳಿನ್ದ ಗುಪ್ತ ನೂರೆತ್ತಱಿಪಾಳ್ತಿ ಪ್ರಸಿದ್ಧಾ ಗ್ರಾಮಾಃ (ಎಕ. XII, ೦೩-೯; 813).

[?]

**ಬೆಳ್ಳಿಗೆ** (ನಾ). ಬಿಳಿಯ ಬಣ್ಣದ ಹಸು : ಬೆಳ್ಳಿಗೆಯಾಕಳೆಂದರೆ ಬಳ್ಳವಾಲ ಕಱೆವವೇ ಮರುಳೆ (ಅವಕಂ. ೨೨೩-೦೦೦೦) ; ಬೆಳ್ಳಿಗೆಯಾವಿನ ಕಱುವೆಂದೊಡೆ ಬಳ್ಳವಾಲ ಕಱೆವುದೆ (ಬಸವ. ೩೨೭) ; ಕಾಳಿಯ ಕಡೆಗಣ್ಣಿತ್ತು ಏಡಿಯ ಸರ್ವಾಂಗವ ಸೀಳಿ ಅಚ್ಚ ಬೆಳ್ಳಿಗೆಯ ಹಾಲ ನಿಶ್ಚಯದಲ್ಲಿ ತೆಗೆದು ತೃಪ್ತಿಯಾಗಿ ಕೊಳ್ಳಬಲ್ಲಡೆ ಅತನೆ ಸದಾಶಿವಮೂರ್ತಿಲಿಂಗವು (ಸಕವ. I, ೮೫೦-೦೭೮). [ಬೆಳ್ಳಿ + — ಗೆ./ಕೊಡ. ಬೊಳ್ಳಿಗೆ = ಹಸು]

**ಬೆಳ್ಳಿಗೊಡೆ** (ನಾ). ರಜತದ ಛತ್ರಿ ; ಬೆಳ್ಳಿಯ ಕೊಡೆ : ಸಂಗಡಿಸೆ ತನ್ಮೊಳರುಣ ಪಿಶಂಗ ಸಿತದ್ಯುತಿಗಳೆಂಬನುಸ್ರ್ಯಮರುಚಿ ಶೃಂಗೆಸ್ತಿದ ಮಾಣಿಕಗೊಡೆ ಪೊಂಗೊಡೆ ಬೆಳ್ಳಿಗೊಡೆಯೆನಿಸಿದುದು ವಿಧುಬಿಂಬಂ (ಜಗಪ. ೦೩-೦೦೩). [ಬೆಳ್ಳಿ + ಕೊಡೆ$_{2}$]

**ಬೆಳ್ಳಿನಾಣ್ಯ** (ನಾ). ಚಲಾವಣೆಗಾಗಿ ಆಡಳಿತದ ಮುದ್ರೆಯೊತ್ತಿ ತಯಾರಿಸಿದ ರಜತದ ಬಿಲ್ಲೆ ; ಬೆಳ್ಳಿಯ ಹಣ : ಹೊರದೇಶಗಳಿಂದ ಆಮದಾಗುವ ವಸ್ತುಗಳಾವುವೆಂದರೆ : ಮಾದಕ ಪಾನೀಯ . . . ಚಿನ್ನ ಮತ್ತು ಬೆಳ್ಳಿನಾಣ್ಯ (ಕೃಪಾಇ. I, ೮೩) ; ಚಿನ್ನ ಬೆಳ್ಳಿನಾಣ್ಯವನ್ನು ಕರಗಿಸಿದರೆ ಸ್ವಲ್ಪವಾದರೂ ಲೋಹದ ಬೆಲೆಯಷ್ಟು ಮೂಲ್ಯ ದೊರೆಯುತ್ತದೆ (ಪಾಶ್ರ. ೨೭). [ಬೆಳ್ಳಿ + ನಾಣ್ಯ (<ನಾಣಯ)]

**ಬೆಳ್ಳಿಬೆಟ್ಟ** 'ಬೆಳ್ಳಿವೆಟ್ಟ' ನೋ.

**ಬೆಳ್ಳಿಮಲೆ** (ನಾ). ರಜತಗಿರಿ ; ಕೈಲಾಸಪರ್ವತ : ಗಂಗೆಯುಂ ಬೆಳ್ಳಿಮಲೆಯುಂ . . . ಹಿಂದುಗಳಿಪಮಳ ಧವಲಾಂಗದಿಂ ಸೊಗಯಿಸುವನಂ ದಿವ್ಯಧರ್ಮಸ್ವರೂಪನಂ ಭಜಿಸುವೆ (ಕಾವ್ಯಕೇ. ೦-೦೦).

[ ಬೆಳ್ಳಿ + ಮಲೆ$_{4}$ ]

**ಬೆಳ್ಳಿಮಾಣಿ** (ನಾ). ಒಂದು ಸ್ಥಳದ ಹೆಸರು : ಭೀಮಗಾಮುಣ್ಡರುಂ ಬೆಳ್ಳಿಮಾಣಿಯ ಶ್ರೀಯ ಗಾಮುಣ್ಡರುಂ . . . ರಿಸ್ಸರಾಮಗಾಮುಣ್ಡನುಂ ಎನಿಬ್ಬರುಂ ಸರಸಾಕ್ಷಿಯಾಗೆ ಪಡೆದಾವರ್ (ಎಕ. VI(R), ಶ್ರೀಕಂಗ. ೬೬-೦೯; ಸು. 800). [?]

**ಬೆಳ್ಳಿಯುಗ** (ನಾ). 'ಬೆಳ್ಳಿಯುಗ (ಮನುಷ್ಯನ ಇಳಿಗತಿಯಲ್ಲಿ ಚಿನ್ನ, ಬೆಳ್ಳಿ, ಹಿತ್ತಾಳೆ, ಕಬ್ಬಿಣ ಎಂಬ ನಾಲ್ಕು ಯುಗಗಳಲ್ಲಿ ಎರಡನೆಯದು)'' (The Silver age. ಇಂಕೊ). [ ಬೆಳ್ಳಿ + ಯುಗ ]

**ಬೆಳ್ಳಿಲಿ** (ನಾ). ಒಂದು ಬಗೆಯ ಇಲಿ ; ಬೆಳ್ಳಗಿರುವ ಇಲಿ ; ಬಿಳಿಯ ಇಲಿ : " ಉಂದುರುಃ – ಬೆಳ್ಳಿಲಿ " (೬ಕಥಿ. ೧೫); ಬೆಳ್ಳಿಲಿಯ ಬಿಲದೊಳ್ ನೀರ್ಪೊಕ್ಕಂತೆ (ರರ್ಮಾಶ್ವ. ೨-೬೦); ಬಿಸಿನೀರ ಹೊಕ್ಕ ಬೆಳ್ಳಿಲಿವಿಂಡು ಬಿದರ್ವಂತೆ (ಕೇಬುಸಂ. ೪೦-೦೬); ಸಲ್ಲ ದೇವಸಾಲೆ ಹುಲ್ಲೆಗೊಂಬತ್ತು ಮುಖ ಬೆಳ್ಳಿಲಿಗೆ ನಾಲ್ಕು ತನಿಗೋಡು ಮೂಡಿದ್ದನಿಲ್ಲಿಯೇ ಕಂಡೆ (ಸರ್ವಜ್ಞ. ೨೦೬೯). [ಬೆಳ್$_1$ (<ಬಿಳಿದು) + ಇಲಿ$_1$./ತಮಿ. ವೆಳ್ಳಿಲಿ; ತೆಲು. ವೆಲ್ಲೆಲುಕ]

**ಬೆಳ್ಳಿವಕ್ಕರಿಕೆ** (ನಾ). ಕುದುರೆ, ಆನೆ ಮೊದಲಾದುವುಗಳಿಗೆ ಹಾಕುವ ಬೆಳ್ಳಿಯ ರಕ್ಷಾಕವಚ. – ಮೈಜೋಡು : ಬಳಸಿದ ಬೆಳ್ಳಿವಕ್ಕರಿಕೆಯ ಕುದುರೆಗಳು (ಶರ್ಶಕ. ೬-೬೩). [ ಬೆಳ್ಳಿ + ಪಕ್ಕರಿಕೆ ]

**ಬೆಳ್ಳಿವಕ್ಕರೆ** (ನಾ). = ಬೆಳ್ಳಿವಕ್ಕರಿಕೆ : ಬೆಳ್ಳಿವಕ್ಕರೆಯ ತೇಜಿಯುವ ನಾರಿವನಳಿವಳ್ಳಿಯಂತಿಸಿಪ ಮೆಯ್ಯುವನು (ಸುರಾಜಾಂ. ೨೦-೯೨).
[ ಬೆಳ್ಳಿ + ಪಕ್ಕರೆ$_1$ ]

**ಬೆಳ್ಳಿವಟ್ಟಲ್** (ನಾ). ರಜತದ ಸಣ್ಣ ಪಾತ್ರೆ ; ಬೆಳ್ಳಿಯ ಬಟ್ಟಲು : ಕಳ್ಳ ಬೆಳ್ಳಿವಟ್ಟಲ್ ಬಾಯೊಳ್ ಬೆಚ್ಚಂತಿರೆ ಸತಿ ಶಶಿಯಂ ಕಚ್ಚಿ ನೆಲಕ್ಕಿಳಿದ ರಾಹುವಂ ನಡೆ ಪೋಲ್ವಲ್ (ಕಾವ್ಯಾ. ೯೬೬ ಕೊಡ್ರಕೆ); ಕರತಳಕಳಶೋದಕ ದೊಳ್ ಸುರುಚಿರ ಚಂದ್ರಮನ ನೆಳಲನೂನಂ ತೋಱುತ್ತಿರೆ ಬೆಳ್ಳಿವಟ್ಟ ಲೆಂದಾ ತರುಣಿ ಕರಂ ತೆಗೆದು ತೆಗೆದು ಬೆಱಗಾಗಿರ್ದಳ್ (ಗಿರಿಕ. ೪-೦೨೮).
[ ಬೆಳ್ಳಿ + ಬಟ್ಟಲ್ ]

**ಬೆಳ್ಳಿವಾಡ** (ನಾ). ರಜತದ ಸೌಧ ; ಬೆಳ್ಳಿಯ ಉಪ್ಪರಿಗೆ : ಬೆಳ್ಳಿವಾಡಂ ಗಳೊಳೊಲ್ದು ಸತ್ಯವತಿಗೂಡಿ ಸುಧರ್ಮನರೇಂದ್ರನೊಪ್ಪಿದಂ (ಅದ್ಭುತ. ೬-೪೩). [ ಬೆಳ್ಳಿ + ಮಾಡ$_1$ ]

**ಬೆಳ್ಳಿವೆಟ್ಟು, ಬೆಳ್ಳಿಬೆಟ್ಟು, ಬೆಳ್ಳಿವೆಟ್ಟು** (ನಾ). ರಜತಾಚಲ ; ಕೈಲಾಸ ಪರ್ವತ : " ಓಜರಿವೆಟ್ಟೆಂದು ಬೆಳ್ಳಿವೆಟ್ಟಂ " (ಕಕಾ. ೯೯-೯೫); ಬೆಳ್ಳುಗಿಲನುಟ್ಟ ಬೆಳ್ಳಿವೆಟ್ಟದಂತೆ ಬೆಳ್ಳಂಬಟ್ಟೆಯನುಟ್ಟು (ಅಜಿತಪು. ೦೨-೮೬ ವ); ಬೆಳ್ಳಿವೆಟ್ಟಕ್ಕೆ ನಿಚ್ಚಂ ಪಡಿಯೆನಿಸುವುದೆತ್ತಂ ರನ್ನಗಲ್ಲೆಂಬ ಬೆಟ್ಟಂ (ಕನ್ನಾ. ೨೪೫). **ಬೆಳ್ಳಿಬೆಟ್ಟು** : ಬೆಳ್ಳಿಬೆಟ್ಟದೊಡತಿ, ಗೌರಿ. ಬೆಳ್ಳಿಯೊಸಗೆಗೊಸಗೆ ಬೀರಿ ಕಾಯ ಕೃಷ್ಣನ (ಹೊಂಗಳು. ೪-೪). **ಬೆಳ್ಳಿವೆಟ್ಟು** : " ಬೆಳ್ಳಿವೆಟ್ಟು ಓಜರಿವೆಟ್ಟು ಪೊಗರಪ್ಪ ರಜತಾದ್ರಿಗಕ್ಕು " (ಚಿತ್ರಮಂ. ೦೦); ಬೆಳ್ಳಿವೆಟ್ಟಂಗ ವರನನುಜ್ಜೈಯನೆಳ್ಳನಿತ ಮೊಗದೊಯ್ದು . . . ಸದ್ವೃತ್ತಪತ್ತಲನಲ್ಲವೆ (ಸುರೇಪು. ೬-೫) ; ಇದೆ ಕೊಳಾ ತೋರ್ಪುದಾತೋರ್ಪುದೊಂದು ದೇಗುಲಂ ಬೆಳ್ಳಿವೆಟ್ಟನ ಪಾಂಗಿಂ (ರಾಜಶೇಖ. ೫೫-೨). [ ಬೆಳ್ಳಿ + ಬೆಟ್ಟ ]

**ಬೆಳ್ಳಿವೆಟ್ಟು** 'ಬೆಳ್ಳಿವೆಟ್ಟ' ನೋ.

**ಬೆಳ್ಳಿವೆಸ** (ಕ್ರಿ). ೧. ಬೆಳ್ಳಿಯ ಕೆಲಸ. ೨. ಬೆಳ್ಳಿಯಿಂದ ಮಾಡಿದುದು.– ತಯಾರಿಸಿದುದು : ಭೂಪಾಲನ ಸಚ್ಚರಣಾಗ್ರದೊಳಿರ್ದುದು ಭೀರಮೆನಿಸುವ ಬೆಳ್ಳಿವೆಸದ ಸಂಕಲೆಯಾಗಳ್ (ದಶಕು. ೬-೩೩).
[ ಬೆಳ್ಳಿ + ಬೆಸ$_1$ ]

**ಬೆಳ್ಳಿಸು** 'ಬೆಲ್ಲಿಸು' ನೋ.

**ಬೆಳ್ಳಿಹಬ್ಬ** (ನಾ). ಯಾವುದಾದರೂ ಸಂಘ, ಸಂಸ್ಥೆಗಳಿಗೆ ಇಪ್ಪತ್ತೈದು ವರ್ಷ ತುಂಬಿದ ಸಂದರ್ಭಗಳಲ್ಲಿ ಆಚರಿಸುವ ಸಮಾರಂಭ ; ರಜತ ಮಹೋತ್ಸವ : ಕನ್ನಡಸಾಹಿತ್ಯಪರಿಷತ್ತಿನ ಬೆಳ್ಳಿಹಬ್ಬ ವಿಜೃಂಭಣೆಯಿಂದ ನಡೆಯಿತು (ಆಧು). [ ಬೆಳ್ಳಿ + ಹಬ್ಬ (< ಪರ್ವ) ]

**ಬೆಳ್ಳುಂಬಟ್ಟೆ** 'ಬೆಳ್ವಟ್ಟೆ' ನೋ.

**ಬೆಳ್ಳುಗೊಳ** 'ಬೆಳ್ಗೊಳ' ನೋ.

**ಬೆಳ್ಳುಚಿ** (ನಾ). ಒಂದು ಬಗೆಯ ಸಸ್ಯ : " ಗೂಡೆ ಬೆಳ್ಳುಚಿ [ಪಾಠಾಂ. ಬೆ]ಯರ್ಣೆಯವನಿಯೆನೆ ಕರಿಬೇವು" (ಮಂಗರಾ. ೪೦-೩೨). [?]

**ಬೆಳ್ಳುಚ್ಚೆ** 'ಬೆಳ್ಳುಚ್ಚೆ' ನೋ.

**ಬೆಳ್ಳುಡೆ** (ನಾ). ಬಿಳಿಯ ಬಣ್ಣದ ಉಡುಪು ; ಬಿಳುಪಾದ ವಸ್ತ್ರ : ಹೊಸವಸ್ತ್ರ ಉಡುವಲ್ಲಿ ಹರಿಯ ಬೆಳ್ಳುಡೆಯನ್ನು (ಕೌಶಂಕ. ೦-೬೦-೨) ; ಉರಗವು ಪೊರೆಯನು ಕಳಚುವುದಾದರೆ ಉರಗವು ಪೊರೆ ಬಿಡುವ ಹಾಗೆ ಬೆಳ್ಳುಡೆಯಾಗುತಲಿದ್ದವು ಸತಿಯರ ನೀರಾಟವಾಡುವ ಪ್ರೈಗೆ (ಇಂಶಾಶ. ೦೪೪-೬). [ ಬೆಳ್$_1$ (< ಬಿಳಿದು) + ಉಡೆ$_2$ ]

**ಬೆಳ್ಳುಪ್ಪರಿಗೆ** (ನಾ). ಅಮೃತಶಿಲೆಯ ಉಪ್ಪರಿಗೆ ಅಥವಾ ಬಿಳಿಯ ಬಣ್ಣದ ಸೌಧ : ಮಿಸುಪ ಬೆಳ್ಳುಪ್ಪರಿಗೆಗಳೊಳು ಪಚ್ಚೆಯ ಪೊಸತಾದ ಪಟಗಳೊಪ್ಪಿರಲು (ಕಂಸರ. ೬-೫); ವರ ಮುನಿಪ ನೋಡಿದಾ ಸ್ಫಟಿಕಮಯ ಭಿತ್ತಿಯೊಳು ಸ್ಫುರಿಸುತೊಪ್ಪಿರ್ಪ ಬೆಳ್ಳುಪ್ಪರಿಗೆಗಳನು (ರಾಘಶ. ೬-೬೯).
[ ಬೆಳ್$_1$ (< ಬಿಳಿದು) + ಉಪ್ಪರಿಗೆ ]

**ಬೆಳ್ಳುರ್ಚೆ, ಬೆಳ್ಳುಚ್ಚೆ** (ನಾ). ಬುದ್ಧಿಯಿಲ್ಲದವನು ; ಬುದ್ಧಿಗೇಡಿ (?) : ನಚ್ಚುವುದೀಯರಸನನುಮ್ಮಚ್ಚಂ ಮಿಗಿಲಂಜಿ ತನುಜನಂ ತಟನಿಯೊಳೆಂದಚ್ಚರಿಯಾಗಿಕ್ಕಿದ ಬೆಳ್ಳುರ್ಚೆಯನಿವರಿರಲೆ ಹರಿಯ ಸಿರಿ ಬೆಳೆಯದುವೇಂ (ಜೀಬುಪು. ೦೦-೦೦೨). **ಬೆಳ್ಳುಚ್ಚೆ** : ಚರ್ಚಿಸಿ ಪೆಂಡಿರರ್ಚನೆಯನಾಡಿಸ ಲಾಡಲೊಡರ್ಚುತಿರ್ಪ ಬೆಳ್ಳುಚ್ಚೆಗೆ ಮತ್ತೆ ಜೈನತನಮೇಷುದವಂ ಜಿನಧರ್ಮ ದೂಷಕಂ (ಧರ್ಮಾಶ. ೪೬೯). [ < ಬೆಳ್$_2$ ? ]

**ಬೆಳ್ಳುಳ್ಳಿ** (ನಾ). (ಸಂಭಾರಪದಾರ್ಥವಾಗಿ ಅಡಿಗೆಯಲ್ಲಿ ಬಳಸುವ) ಬಿಳಿಯ ಬಣ್ಣದಿಂದ ಕೂಡಿದ, ಈರುಳ್ಳಿಯ ಜಾತಿಯ ಒಂದು ಬಗೆಯ ಗಡ್ಡೆ ; ಲಶುನ : " ಮಹೌಷಧಂ, ಲಶುನಂ . . . ರಸೋನಕಃ —ಈ ೬ ಬೆಳ್ಳುಳ್ಳಿ " (ಶಾಶರಾ. ೦೦೨) ; ನೋಡಿ ಕನಲ್ದು ಕೆಂಡದ ಮೇಲೆ ಪಟಿಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ (ಕಂಶರಾ. ೦೩-೬೦ ವ); ಅಲ್ಲಮರಿಸಿನಂ ಶುಣ್ಠಿ ಬೆಳ್ಳುಳ್ಳಿ . . . ಎಂಬಿವು ಮೊದಲಾಗಿ ತೂಗಿ ಮಾಱುವ ಭಣ್ಡಂಗಳ್ಗೆ ಹೇಱಂಗಳ್ದುಲಂ (ಎಇ. XIX. ೩೩-೩೯ ; 1135) ; ಬೆಳ್ಳುಳ್ಳಿಯನ್ನು ಸಾಧಾರಣವಾಗಿ ಒಗ್ಗರಣೆ ಚಟ್ನಿಗಳಿಗೆ ಉಪಯೋಗಿಸುತ್ತಾರೆ (ಕಅಚ. ೩೩).
[ಬೆಳ್$_1$ (< ಬಿಳಿದು) + ಉಳ್ಳಿ$_1$./ ತಮಿ. ವೆಳ್ಳುಳ್ಳಿ ; ತುಳು. ಬೊಳ್ಳುಳ್ಳಿ ; ತೆಲು. ವೆಲ್ಲುಲ್ಲಿ]

**ಬೆಳ್ಳಿ$_1$** (ನಾ). ದನಗಳಲ್ಲಿ ಒಂದು ಬಗೆ ; ಬಿಳಿಯ ಬಣ್ಣದ ರಾಸು : ಎಡಗೋಲಿನಲ್ಲಿ ಕಾರಿಯ ಹೂಡಿ ಬಲಗೋಲಿನಲ್ಲಿ ಬೆಳ್ಳಿ [ಪಾಠಾಂ. ಳ್ಳಿ]ಯ ಹೂಡಿ ಅಡಿಗೆತ್ತುವಂತೆ ಛಾಯೆಂದು ಹೊಡೆಯಲಾಗಿ ಭೂಮಿಯೊಡಗೂಡಿ ಸವೆಯಿತ್ತು (ಸರ್ವಶ. ೦೦೫-೫೬೬); ಬೆಳ್ಳಿವಿಂಡು [ಪಾಠಾಂ. ಬೆಳ್ಳಿಹಿಂಡು] ಗಳಂದ್ರದೇಶದಿಂ ಹೇಱಿ ಬಂದೆಳ್ಳ ರಾಸಿಗಳ ತೆಲ್ಲಿಗರೊಯ್ದು ಗಾಣವಾಡೊಳ್ಳೆನೆಸಿದ ತೈಲ ಕುಂಭಕೋಟಿಗಳ ತಕಿದರು (ಸಿದ್ಧರಾ. ೬-೩೦) ; ಮಲೆವ ಪುಲ್ಲೋರಿ ಬೆಚ್ಚುವ ಬೆಳ್ಳಿ ಬೆದಱಿಸುವ ಚೆಲುವ ಪ್ಪೆಲ್ಲೋರಿ . . . ನಾನಾಪರಿಯ ಕಬ್ಬಸಿಗಳೊಳಗಾವ ಪಲವು ಪರಿಯಿತ್ತು ತೊಂಭತ್ತಾಱು ಲಕ್ಷ ಮೇಳೈಸಿ ಹಿಡಿದುವು ಗಲ್ಲಕೆ (ಸಿಂಗಿರಾ. ೩೫-೬) ; ಬಟ್ಟಗಡಸು ಕೆಂಡ ಹೂರಿಗ ಕಾರಿಯು ಬೆಳ್ಳಿ . . . ಎಸೆದವು ಪಟ್ಟೆಯ ಸೀರೆಯಂದದಲಿ (ಕುವಲೇಶಾಂ. ೦-೪೦).
[ಬೆಳ್$_1$ (<ಬಿಳಿದು) + –ಎ$_2$./ ತಮಿ. ವೆಳ್ಳೈ ; ತುಳು. ಬೊಳ್ಳಿ]

**ಬೆಳ್ಳಿ$_2$** 'ಬೆಳ್$_2$' ನೋ.

**ಬೆಳ್ಳಿ$_3$** (ನಾ). ಬುದ್ಧಿಯಿಲ್ಲದವಳು ; ದಡ್ಡಹೆಣ್ಣು : ಸಿತಗೆ, ಚದುರೆ . . . ಕಳ್ಳಿ, ಬೆಳ್ಳಿ, ಹೆಡ್ಡೆ, ಎಗ್ಗೆ (ಕಬ್ಬಾಸು. ೦೪೬ ಪ್ರಯೋ).
[ಬೆಳ್$_2$ + –ಎ$_3$]

**ಬೆಳ್ಳೆದೆ** (ನಾ). ಅಂಜುವ ಹೃದಯ ; ಬೆದರುವ ಹೃದಯ : ಪಡೆಯೆಲರ್ . . . ದಡಿಗಳಂ ಬರಲು ಬೆಳ್ಳೆದೆಗಳಲ್ಕಾಡೆ (ಶಾಂಪುರ. ೦೫೬-೩೪೬). [ಬೆಳ್$_2$ + ಎದೆ (< ಎರ್ದೆ)]

**ಬೆಳ್ಳಿಮಣಿಯು** (ನಾ). ಒಬ್ಬಾತನ ಹೆಸರು: ಬಾಣಗುನ್ದೂರಾ ದೇವಡಿಗಳುಂ ಕುನ್ದಡಿಗಳುಂ . . . ಗಣಿಗೂರಾ ನರವೆವರುಂ ಬೆಳ್ಳಿಮಣಿಯರುಂ ಸನ್ನಿಗಾಲಾ ಪುಜ್ಜಿರುಂ ಬಳ್ಳವರುಂ ಪಸುಂಗಾಯ ಕಬ್ಬಾತರು ಬಿರದರುಂ ಇ ಪೊಲನಂ ನಡಯಿಸಿದೋರ್ (ಎಕ. XVI, ಗುಬ್ಬಿ. ೬೩-೩೯; 733). [?]

**ಬೆಳ್ಳಿರಲೆ, ಬೆಳ್ಳಿರಳೆ** (ನಾ). ೧. ಹೆದರಿಕೆಯಿಂದ ಕೂಡಿದ ಜಿಂಕೆ; ಹೆದರಿದ ಮೃಗ: ರಾಜಸುತಸಂದೋಹಂ ಗಜಿ ಸೋಂಕದೆ ಬೆಳ್ಳಿರಲೆಗೆ ಗಜಿಮೂಡಿದ ತೆಜದಿನೋಡಿ ಪೋದತ್ತಾಗಳ್ (ಕಂಠಾಪು. ೩-೩೬); ಪರದೇಶಾಧೀಶ್ವರರೆಮ್ಮರಸನ ಪೆಸರ್ಗೊಂಡೊಡಳ್ಕಿ ಭಯದಿಂದಂ ಬೆಳ್ಳಿರಲೆವೊಲೋಡುವರ್ (ರಘುಕು. ೯-೨೦೮); ಚಿಲಾತಾಪುತ್ರಂ ಪೊಱಮಟ್ಟುಬ್ಬೆಗದಿಂ ಬೆಳ್ಳಿರಲೆಗೆ ಗಜಿಮೂಡಿದಂತೆವೋಡಿದನಾಗಳ್ (ಪುಣ್ಯಾಸ್ರ. ೩-೨೩). ಬೆಳ್ಳಿರಳೆ: ೧. ಪೊಣರ್ದೊಂದೆ ಬಿಲ್ಗೆ ಸಲೆ ಕೊಂಕಣಿಗರು ಬೆಳ್ಳಿರಳೆಯಂತೆ ಬಿಜುತೋಡಲು (ಕವ. I. ೨೩-೯೭ : 1186); ಕಡುಗರ್ವದೊವೆತ್ತು ಬಿತ್ತರಿಪ ದೀವದೆರಳೆಗಳಂ ಬೆಳ್ಳಿರಳೆಗಳೆನಿಸಿಯುಂ . . . ಪಳಚ್ಚನೆ ಪಜ್ಜಳಿಪ ಸಾಂದ್ರಚಂದ್ರಾತಪಾಡಂಬರದೊಳ್ (ಶಾಂತೀಶ್ವ. ೦೦-೯೭ ಪ). ೨. (ಅಲಂ) ಹೇಡಿ; ಅಂಜುಬುರುಕ: ಬೆಳ್ಳಿರಳೆಗಳಪ್ಪ ಲೋಕದ ಜಡಾತ್ಮರನಂಜಿಪನೆಂದು ಧಾರಿಣೀವರವಧು ಕಾಮನಂ ನಗುವ ಭಂಗಿಯೊಳಿರ್ದಾವು ಪಾರಿಜಾತತರು (ರಘುಕು. ೦೩-೨೩). [ಬೆಳ್₂ + ಎರಲೆ]

**ಬೆಳ್ಳಿರಳೆ** 'ಬೆಳ್ಳಿರಲೆ' ನೋ.

**ಬೆಳ್ಳೆರ್ದೆ** (ನಾ). ಬಿಳಿಯ ಬಣ್ಣದ ಎದೆ,– ವಕ್ಷ: ಬೆಳ್ಳೆರ್ದೆಯ ವಾಜಿಯು ಮಣಂ ಸಳ್ಳಿಸಿತ ಪಾಂಡುರಗಳಂ . . . ಇದುವೆಯುಲ್ಲು ಧನದಂ (ಹಾರಿಶ್ಚ. ೯-೦೦-೦೦೬). [ಬೆಳ್₁ (<ಬಿಳಿದು) + ಎರ್ದೆ]

**ಬೆಳ್ಳೆಲೆ** (ನಾ). ೧. ಬಿಳಿಯ ಬಣ್ಣದ ಎಲೆ; ಬಿಳುಪಾದ ಎಲೆ: ವಲ್ಲಲದಿಂ ಸುಂದರಿಯು ತನು ತನ್ನ ಕಾಂತಿಯು ಪೊರೆಯದು ಬೆಳ್ಳೆಲೆಯ ಮರೆಯ ಕುಸುಮದ ತೆರದಿಂ (ಶಾಕುಂತ. ೯-೦೯). ೨. (ಉತ್ತಮ ದರ್ಜೆಯ ಒಂದು ಬಗೆಯ ಬಿಳುಪಾದ ವೀಳೆಯದೆಲೆ; ಬಿಳಿಯೆಲೆ: ಕುಂದಣದಗಡಿನಂತಿರ್ಪ ಬೆಳ್ಳೆಲೆಗಳನೊದಜಿಸಿಕೊಂಡ ಕೇವಣಿಸಿ ಹೊಂದಾವರೆಯಂತ ವಾಮಹಸ್ತದೊಳಾಂತ ಚಂದವನೇನ ಬಣ್ಣಿಸುವೆ (ಶೀಕೃತ. ೦೩-೩೦); ಬೆಳ್ಳೆಲೆಯುಂ ಮಡದೀವ ದಿವ್ಯ ಚಾಮರವನೆ ಬೀಸುವಗ್ಗದ ವಿದಗ್ಧೆಯರೊಪ್ಪಿರೆ ದೇವಿ ರಂಜಿಪಳ್ (ರಾಜಶೇ. ೯-೪೦); ಎಲೆಗೆ ಬೆಲೆಗೆಯ್ಯುದದು ಬೆಳ್ಳೆಲೆಯೋ ಮಾಜಾಲೆವೆಣ್ಣೆ ಮಜೆಯೇನುಸಿರಾ (ಶಿವಾ. ೬-೩೯). [ಬೆಳ್₁ (< ಬಿಳಿದು) + ಎಲೆ₁./ತಮಿ. ವೆಳ್ಳೈ]

**ಬೆಳ್ಳೆಲೆಗ** (ನಾ). ಉತ್ತಮವಾದ ಬಿಳಿಯ ವೀಳೆಯದೆಲೆಯನ್ನು ಮಾರುವವನು, — ವಿಕ್ರಯಿಸುವವನು: ಬಿಗುಜಾಜನೆಜಿಂಕೆಯಿಕ್ಕಿಲದಿ ಕೊಟ್ಟಿಗೆ ಕಾಮಾಟಕ್ರಮುಕ್ಕ ಬೆಳ್ಳೆಲೆಗರು ಜಟ್ಟಿಗ ಗೀತಪಾಠಕರು ಸಟ್ಟಿಗ ಬಲು ಚಿನ್ನವರದರು ಘಟ್ಟಿಪ ಕಟ್ಟಿಗೆಕಾಜರೇಜದರು (ಶೀಶತ. ೩೬-೯೩).
[ಬೆಳ್ಳೆಲೆ + — ಗ₂]

**ಬೆಳ್ಳೆಲೆಗವಳ** (ನಾ). ಬಿಳಿಯೆಲೆಯ ತಾಂಬೂಲ: ಪವಡಿಸಿ ಮುಸುಕಿಕ್ಕಿ ಕೈನೀಡಿ ಬೆಳ್ಳೆಲೆಗವಳವ ಕೊಡುತಿಂತು ನುಡಿದ (ಭರತ. ೦೦-೯೩).
[ಬೆಳ್ಳೆಲೆ+ಕವಳ₂ (= ಕವಲು)]

**ಬೆಳ್ಳೇಡಿ** (ನಾ). ಏಡಿಯಲ್ಲಿ ಒಂದು ಬಗೆ: ಆ ಗೊರಬುಗಳು ನಾಗಕ್ಕ ಕೂಡಿದ್ದ ಪಾಸರೆಯಿಂದಲೆ ಹೊರಟಿದ್ದುವು. ಬೆಳ್ಳೇಡಿ ಹಿಡಿಯು ವುದಕ್ಕೆ! (ಕುಶಿಪು. ೬೨೩). [ಬೆಳ್₁ (<ಬಿಳಿದು) + ಏಡಿ₁]

**ಬೆಳ್ಳೊಡಲ** (ನಾ). (ವಿಭೂತಿಯನ್ನು ಧರಿಸಿದುದರಿಂದ) ಬಿಳುಪಾದ ದೇಹವುಳ್ಳವನು; ಶಿವ: ಬೆಳ್ಳೊಡಲ ಸದ್ಭಕ್ತವತ್ಸಲನಲ್ಲವೆ (ಸುರೇಶ್ವ. ೬-೩); ಹರಿಯಿರ್ದಾಲದೆಲೆ ಬೆಳ್ಳೊಡಲನಲ್ಲವೆ ಕೇಳೊಡಂಬಡಿಸುವೆ ಶ್ರುತಿಗಳಿಂದೆ (ಶಿವತಾ. ೦೦-೬೯). [ಬೆಳ್₁ (<ಬಿಳಿದು) + ಒಡಲ್ + — ಅ₇]

**ಬೆಳ್ಳೊರೆ** (ನಾ). ಮೌಢ್ಯದ ಮಾತು: ಇರುಳಿನೂಟಂ ಜೇನು ಮಾಂಸಂ ಸುರೆ ಪರಾಂಗನೆಯುಣಬೆ ಕೊಲೆ ಬೆಳ್ಳೊರೆ ಮಹಾಮಿಥ್ಯಾಪದಂ ಪರಪೀಡೆ ಜೂಜು . . . ಗಿಣ್ಣಾತ್ಮಕರದ ದಾನಂ ಬೇಂಟೆ ಪೂವಿನ ಶಾಕ ಮೂಲವ್ರತಂ (ಶಂಕರಾ. ೦೩-೩೦). [ಬೆಳ್₂ + ಒರೆ₄]

**ಬೆಳ್ಳೊಲೆ** (ನಾ). ಒಂದು ಊರಿನ ಹೆಸರು: ಬೆಳ್ಳೊಲೆಯ ಬಟ್ಟೆಯ ಪೇರಾಟ್ಟಿ ವಳ್ಳಂಬಿಜಿಮು ಪೋಗಿ ಪಿರಿಯ ಪಳ್ಳದಳ್ಕೂಡಿ (ಶಾಇತ. IX-i, ೩೬-೨ ; 10ಶಿಪು ೩೩). [?]

**ಬೆಳ್ಳೋಕರಿಕೆ** (ನಾ). (ಬಸಿರಿಯರಿಗೆ ಪ್ರಾರಂಭದಲ್ಲಿ ತೋರುವ) ಹುಸಿಯ ಓಕರಿಕೆಯ ಅನುಭವ: ಭುವನದ ವಿಚಾರಕ್ಕೆ ಕೊಕ್ಕರಿಸುವ ಮಹಾದೇವಿಯನು ಬಸುಱೊಳ್ಳವೆ ತಳೆದ ದೂಸಱೊಳು ಬೆಳ್ಳೋಕರಿಕೆ ತೋಱದುದು (ಸುರೇಶ್ವ. ೦೩-೮). [ಬೆಳ್₂ + ಓಕರಿಕೆ]

**ಬೆಳ್ಳೋಟ** (ನಾ). ಅಂಜಿಕೆಯಿಂದ ಓಡುವ ಓಟ: ಅಂತು ಬಿಜುತು ಬೆಳ್ಳೋಟಮೋಡುವಶನಿಘೋಷನ ಭಯುರಸಮುಂ (ಶಾಂತಿಪು. ೬-೯೦ ಪ); ಅಳ್ಳಾಡೆ ನರನ ಕರ್ಗಣೆಯಳ್ಳೇಱಿಂಗಳ್ಕಿ ಬಳ್ಕಿ ಕುರುಬಲಮೆಲ್ಲಂ ಬೆಳ್ಳೋಟವೋಡೆ (ಶಾಪ್ಯಾಪ. ೨೨೪). [ಬೆಳ್₂ + ಓಟ]

**ಬೆಱಂಟು** 'ಬಱುಂಟು' ನೋ.

**ಬೆಜಗಾಗುಹ** (ನಾ). ೧. ವಿಸ್ಮಯವಾಗುವಿಕೆ; ಆಶ್ಚರ್ಯವಾಗುವುದು: "ತಳವುಳಗು-ಬೆಜಗಾಗುಹಂ" (ಕಬಿರ. ಶಂ. ೨). ೨. ದಿಗಿಲು; ತಳಮಳ: "ತಳವಳವೆನಲ್ಕೆ ತಾಂ ಬೆಜಗಾಗುಹಂ" (ಕನ್ನಕೈ. ೬೯).
[ಬೆಜಗು + ಆಗುಹ]

**ಬೆಜಗಿಡು** (ಕ್ರಿ). ಆಶ್ಚರ್ಯಪಡು; ಬೆರಗಾಗು: ಸುರರು ಬೆಜಗಿಡೆ ದಾಟಿತಲ್ಲಿಂ ಮೇಲೆ ಮೆಲ್ಲನೆ ಜೀವವಾ ವಿಳಸ (ಕಿಜಯಾ. ೩-೩-೦೯).
[ಬೆಜಗು + ಇಡು₁]

**ಬೆಜಗು, ಬೆರಗು₂** (ನಾ). ೧. ಬಿಗಿದುಕೊಂಡಿರುವಿಕೆ; ಸೆಡೆತ: ಸುರಭಿಯು ತೊರೆದ ಕುಚಂಗಳ ಬೆಜಗಂ ಬೆರಲೀಸೆ ಪರಮಹಸ್ತಪುಟಾಂತರದೊಳ್ಪ್ರೃತಮೆನೆ ಕಱಿದಾ ವರವಧು ಪುತ್ರಾರ್ಥಿ ಪಾತ್ರಸೇಪಮನುಣ್ಬಳ್ (ಧನ್ಯಪು. ೩-೦೦೯). ೨. ದೇಹವು ಸೆಟೆಯುವಂತೆ ಮಾಡುವ ಒಂದು ಬಗೆಯ ರೋಗ: ಮೂರ್ಛೆರೋಗ: ಕುಷ್ಠ, ಅಪಸ್ಮಾರ, ಬೆಜಗು, ಮಹೋದರ, ಕಾಮಿಲೆ, ಇವಕ್ಕೆ ಆದಿಯಲ್ಲಿ ದಿನಸಾಮ್ಯವಿಲ್ಲದೆ ಶೀಘ್ರದಲ್ಲಿಯೇ ಪ್ರತೀಕಾರ ಮಾಡುವುದು (ಕೃದ್ಯಶಾ. I. ೨೬). ೩. ನಿಶ್ಚೇಷ್ಟತೆ; ಸ್ತಂಭನ: 'ಬೆಜಗುವಡು' ಪರಾ. ೪. ಆಶ್ಚರ್ಯ; ವಿಸ್ಮಯ: "ವಿಸ್ಮಯಃ, ಅದ್ಭುತಂ, ಆಶ್ಚರ್ಯಂ, ಚಿತ್ರಂ-ಈ ೪ ಬೆಜಗಿನ ಪೆಸರು" (ಶಾಶರಾ. ೯೭); ಬಱಿದೆ . . . ಬೊಗಳುವ ಕುನ್ನಿಗಳ ನೋಡಿ ಎನ್ನ ಮನ ಬೆಜಗು ನಿಬ್ಬೆಜಗು ಆಯಿತ್ತಯ್ಯ (ಮಹಾದೇ. ಶಿ. ೯೬-೨೨೩); ಜೋಡರ ಧುರಚಿಮತ್ಕೃತಿ ಬೆಜಗನಿತ್ತುದು ದೇವಸುತತಿಗೆ (ಕುಮ್ಯಾಭಾ. ೯-೬೬). ೫. (ಮನಸ್ಸಿನ) ಗಲಿಬಿಲಿ; ದಿಗ್ಭ್ರಮೆ; ಗಾಬರಿ: ಆತನ ಪ್ರಾಣೇಶ್ವರಿ ಪದ್ಮಮಾಲಿನಿ . . . ನಿಶಿತಾಸಿಧೇನುವಂ ಕಿಲ್ತು ಬೆನ್ನಟ್ಟಿ ಮುಟ್ಟಿ ಬೆ[ಜ]ಗಿಲ್ಲದಾತನ ಬೆನ್ನಂ ಜನ್ನಿವರಮಿಕ್ಕಿದಂತಿರೆ ಪೊಯ್ಯೆ (ಶಾಂತಿಪು. ೯-೯೬ವ); ನೇಹದೊಳು ಕೋಪವಂ ನೆನೆದೊಳ್ ಬೆಜಗುವಂ ತನುವಿನೊಳ್ಪುಸುಪುಮಂ ಬಯ್ತಿಡುತ ಬಂದು (ಶಿರುಕ. ದೇ. ೬-೦೦); ಮೋನದೊಳರದಿರೆನ್ನಾಣೆನಲು ಬೆಜಗಿನ ಗರದ ಗಾಹಿನಲದ್ದು ಮೋನದೊಳಿದ್ದನಾ ಪಾರ್ಥ (ಕುಮ್ಯಾಭಾ. ೦೬ ೬). ೬. ಅಂಜಿಕೆ; ತಲ್ಲಣ; ಭೀತಿ; ತಳಮಳ: ಹೊತ್ತ ದುಗುಡದ ನಿಡುಸುಯ್ಲುಸುರುಗಳ ಬಿಗಿದ ಬೆಜಗಿನ ಬಿಟ್ಟ ಕಣ್ಣುಗಳ ಒಡೆಯನಿದಿರಲಿ . . . ಮಿಡುಕದಿರ್ದಾದು ರಾಯನೋಲಗದೊಳಗೆ ಪರಿವಾರ (ಕುಮ್ಯಾಭಾ. ೨-೦೬); ತಲ್ಲಣಂ ತಳವೆಳಗು . . . ತಳವಳವೆನಲ್ಕೆ ಸೊಲ್ಲಿಪುದು ಬೆಜಗಪ್ಪ ಭಾವದೊಳು

(ಶಬ್ದಮಂ. ೩೦). **ಬೆರಗು₄:** ೨. ಅಪಸ್ಮಾರ, ಬೆರಗು, ಮಹೋದರ, ಕಾಮಾಲೆ ಮುಂತಾದ ರೋಗಗಳು ಕಾಣಿಸಿದಲ್ಲಿಯೇ . . . ಪ್ರತೀಕಾರವಂ ಮಾಡಬೇಕು (ಸಕಪ್ರ. ೨೨). ೪. "ಸೋಜಿಗ, ಬೆರಗು, ಬೆಕ್ಕಸ. . . ಚೋದ್ಯ" (ಕಂಸುತು. ೯೦); ಈ ಸಮಾಪಸ್ಥ ವಸ್ತುಗಳ ನಡುವೆ ಎಷ್ಟೊಂದು ದೂರವಿದೆಯಲ್ಲ ಎಂಬ ಬೆರಗು ನನಗೆ ಉಂಟಾಗುತ್ತದೆ (ಪುರುಕಶ್ರ. ೦೭).

**ಬೆಜಗಾಗು, ಬೆರಗಾಗು** = ೧. ವಿಸ್ಮಯಪಡು; ಆಶ್ಚರ್ಯವನ್ನು ಹೊಂದು : ತಾರವಿಂ ಮೊಗವುನಿತ್ತೆನುತುಂ ಬೆಜಗಾಗೆ ಕೂಡಿದಳ್ (ಶಬ್ದಸಾ. ೧೯೪ ಶೂತ್ರ ೪); ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ ದೇಸಿಗಂ ಕಂಡು ಬೆಜಗಾಗಿ (ವಡ್ಡಾರಾ. ೬೮-೦೪); ಘೋರರಕ್ಕಸರೂಪ ನಿಟ್ಟಿಸುತ ಬೆರಗಾದನು (ಪಂಪಾರಾ. ೫-೦-೫೬); ಮಣಿಪುರದ ಸಿರಿಗೆ ಬೆರಗಾಗಿ ಕೇಳಿದನಂದು ಹಂಸಧ್ವಜನ ಕುರಿತು ನಾಡಿನರಸಾರೆಂದು (ಜೈಮಿನಿ. ೭೨-೦೯೬). ೨. ದಿಗ್ಭ್ರಮೆಯಾಗು : ನೋಡಿದೊರೆ ಸುರ್ಗಿದೆವಂ; ಬೆಜಗಾಗದು ಬೇಂಟೆ ಮುತ್ತಿದೆಮ್ (ಅಂತಿಗೂ. ೨೦-೯೦೭).

**ಬೆಜಗಿನ ರೋಗ** = ದೇಹವು ಸೆಡೆಯುವ ರೋಗ ; ಮೂರ್ಛೆ : ಅಷ್ಟಮದದಿಂದಲಿ ಬೆಜ಼್ತಿರುವಗೆ ಬೆಜಗಿನ ರೋಗ ಬಟ್ಟೆಯಲಿ ಮುಳ್ಳು ಹಾಳದವಗೆ ನೇತ್ರವ್ಯಾಧಿ (ಕವಕ. ೦೯೨-೪).

[<ಬೆಜ಼್./ತಮಿ. ವಿಯ್ಯಪ್ಪು, ವಿಯುಮ್ಮು, ವೆರುವು, ವೆಱುಪ್ಪು; ತುಳು. ಬೆರಗು; ತೆಲು. ವೆಱಂಗು, ವೆರಂಗು, ವೆರಗು, ವೆರಪು; ಕೂಃ. ಬ್ರಾ]

**ಬೆಜಗುಗೊಳ್, ಬೆರಗುಗೊಳ್** (ಕ್ರಿ). ವಿಸ್ಮಯಪಡು; ಆಶ್ಚರ್ಯ ಹೊಂದು; ಬೆರಗಾಗು : ಇಜಿಯಲೆತ್ತಿದ ಕೈಗಳೆಲ್ಲವ ತಜಿದು ಬಿಸುಟನು ಮರಳಿ ಹುಟ್ಟಲು ಬೆಜಗುಗೊಂಡನು ರಾಮ (ಕೌರಾ. ೯೨-೨); ಗಂಡರು ಬೆಜಗುಗೊಳೆ ಮೊಜೆಯಿಡುತ ಬಾಲರು ಬೆದಱಲು ಕೇರಿಕೇರಿಯಲಿ (ಜೈಮಿನಿ. ೩೦-೩೭). **ಬೆರಗುಗೊಳ್ :** ವೀರವಲ್ಗುತವೆತ್ತೆಸೆದ ಬಭ್ರುವಾಹನನ ಕಂಡು, ಪೋಲ್ವೆಗೆ ಬೆರಗುಗೊಂಡರು ಸೇನೆಯಲಿ ಪಳಬರಾದ ವರೆಲ್ಲರುಂ (ಜೈಮಿನಿ. ೬೦-೨೨೦೭). [ಬೆಜಗು + ಕೊಳ್₁]

**ಬೆಜಗುವಡು, ಬೆರಗುವಡು** (ಕ್ರಿ). ೧. ನಿಶ್ಚೇಷ್ಟಿತೆಯನ್ನು ಹೊಂದು; ಸ್ತಂಭಿತವಾಗು: ಮನಮುಂ ಕಲೆಯುಂ ತವಕಮನಿನಿಯನ ಲಾವಣ್ಯಮೂರ್ತಿಯೊಳ್ಬೆಚ್ಚು ತದುಗನೆ ಬೆಜಗುವಟ್ಟು ನಿಲ್ಪಪಳೆನೆ ರುಚಿರಸ್ತಂಭಭಾವಮಂ ಕಂಡಾಗಳ್ (ಅದ್ಭುತ. ೮-೯೭); ಶಾಂತರಸದರೇದಿಂ ಸಮೆದ ಪುತ್ಥಳಿಯೆನ ಲ್ಬೆಜಗುವಟ್ಟಂತರ್ಮುಖಾಕ್ಷಿಯುಗದಿಂ ಮಿಳಿರ್ವ ಶಿವಯೋಗಿಯಂ ಕಂಡು (ಕಪ್ಪರಾ. ೫-೪೦). ೨. = ಬೆಜಗುಗೊಳ್ : ತನುವಿನೊಳಿಂಗುವ ಪ್ಪುಳೆರ್ವನಿಯಂ ಕಂಡಾಳಿಯರ್ಬೆಜಗುವಟ್ಟು . . . ಶಿಶಿರೋಪಚಾರಮಂ ವಿರಚಿಸಿದರ್ (ಅದ್ಭುತ. ೬-೯೬); ಅನಿಮಿತ್ತಬಂಧುವ ನೋಡಿ ಬೆಜಗುವಟ್ಟೇನೆಂದಱಿಯದೆ (ಶಬ್ದರಾ. ೦೦-೬೯); ಬೆಜಗುವಟ್ಟಳು ನೀನಿದಾರೆಲೆ ಕಿಱುಮಗಳೆಯೆನೆ (ಜೈಮಿನಿ. ೩೦-೪೯). **ಬೆರಗುವಡು :** ೨. ಒಂದು ಮಟ್ಟದ ಓದುಗರು ಈ ಬೃಹದಾಕಾರದ ಕೃತಿಗಳ ಕಲ್ಪನೆಯ ನೈಪುಣ್ಯದಿಂದ ಬೆರಗುವಟ್ಟು ಪರವಶರಾಗುತ್ತಾರೆ (ಶಂಕರು. XXIV. ಮುನ್ನುಡಿ); ಅದನ್ನು ಕೇಳಿ ಶೂದ್ರಕನು ಬೆರಗುವಟ್ಟು ತನ್ನ ಪಕ್ಕಕ್ಕೆ ಅಂದನು (ತತಾ. ೯೭).

[ಬೆಜಗು + ಪಡು₁]

**ಬೆಜಗುವಡೆ** (ಕ್ರಿ). = ಬೆಜಗುಗೊಳ್ : ಬೆಜಗುವಡೆದರು ಪಾಂಡವಾದಿಗಳುರುಮುದವನಾರೆ ತಳೆದು (ಜೈಮಿನಿ. ೩೬-೭೬). [ಬೆಜಗು + ಪಡೆ₁]

**ಬೆಜಗುವೆಱು** (ಕ್ರಿ). ಆಶ್ಚರ್ಯಪಡು; ವಿಸ್ಮಯ ಹೊಂದು : ಭೂಪಳಯಾಧಿಪಂ ಬೆಜಗುವೆತ್ತು ಮುದಂ ಪೆಜಪಿಂಗೆ ಪಂದೆಯಂ ಪಾವಡರ್ವಂತೆ ತೊಟ್ಟನೆ ಕಟಲ್ದು (ಧರ್ಮ. ೦೦-೦೦೦); ಅರ್ಜುನನು ಬೆಜಗುವೆತ್ತೋದಳವಡದ ಮಟುವಿನಂತಿರ್ದನಾಪಪಡೊಳು (ಕೃಪಿಂಜಾ. ೦೬-೦೪). [ಬೆಜಗು + ಪೆಱು₁]

**ಬೆಜಗೊಂದು** (ಕ್ರಿ). = ಬೆಜಗುಗೊಳ್ : ಸಾಂಗದಿಂ ಮಾಡಿದ ಬಹು ಪದಾರ್ಥಂಗಳಂ ಪಿರಿದೋಗರಂಗಳ ಹಾಂಗೆ ಸವೆಯಲು ಗೌರಿಯಿಚ್ಚರಿವಟ್ಟು ಬೆಜಗೊಂದಿ (ಬಸವಪು. ೬-೪೪). [ಬೆಜಗು + ಒಂದು₁]

**ಬೆಜ಼ಟಿ** 'ಬಜಟಿ' ನೋ.

**ಬೆಜ಼ಟು₁** 'ಬಜುಂಟು' ನೋ.

**ಬೆಜ಼ಟು₂** (ನಾ). ಬೆರಳಿನಿಂದ ಕೆದಕಿ ನೋಡುವಿಕೆ : ಕೈಯೊಳಗಣ ಬೆಜಟು ನಿಲ್ಲದನ್ನಕ್ಕ ಹೃದಯದ ಕಾಮ ಉಡುಗದನ್ನಕ್ಕ ವಿರಕ್ತಿಕೆ ಎಲ್ಲಿಗಿಲ್ಲಿ ಯದೋ (ಪುರಾತನ. ಬ. ೦೪೫-೩೦೬). [<ಬಜುಂಟು]

**ಬೆಜ಼ಟುಗೊಳ್** (ಕ್ರಿ). ಬೆರಳಿನಿಂದ ಕೆದಕು : ಗೋರಿಕಲ್ಲೊಳಗೆ ಚಿಂತಾಮಣಿಯನಱಸಿ ಬೆಜಟುಗೊಂಡವನಂತೆ (ಅದವ. ಪು. ೬೪-೦೫೭).

[ಬೆಜ಼ಟು₁ ( < ಬಜುಂಟು) + ಕೊಳ್₁ ]

**ಬೆಜ಼ಣೆ** ' ಬಜಟಿ ' ನೋ.

**ಬೆಜ಼ಣೆ** ' ಬಜಟಿ ' ನೋ.

**ಬೆಜ಼ತ** ' ಬೆಜ಼್ ' ಪರಾ.

**∆ಬೆಜ಼ಸು** ' ಬೆರೆಯಿಸು ' ನೋ.

**ಬೆಜ಼ಳಿ** ' ಬಜಟಿ ' ನೋ.

**ಬೆಜ಼ಳಿವಲ್** (ನಾ). (ಅಲಂ) (ಬೆರಣಿಯಂತೆ) ಅಗಲವಾದ ಹಲ್ಲು : ದೊಡ್ಡ ಹಲ್ಲು : ಬಿತುವಾಯ್ ಮಿಕ್ಕುದ್ದಮಾಗಿರ್ಪೊಸಡು ಬೆಜಳಿವಲ್ ಕೊಂಕುಮೂಗುಬ್ಬಿ ಕಣ್ಣಳ್ . . . ಅಸಿಯ ಕುಚಿನೊಸಲ್ ಕೂಡೆ ನಿರ್ಭಾಗ್ಯೆಯಕ್ಕುಂ (ಲೋಕೋಪಕಾ. ೦೦-೩೮). [ಬೆಜಳಿ (<ಬಜಟಿ) + ಪಲ್]

**ಬೆಜ಼್, ಬಿಜು₁, ಬೆರೆ₂** (ಕ್ರಿ). ಬೆಜತ (ಭೂತಕೃ)ಬೆಜ಼ಿತು, ಬಿಜುತು, ಬಿಜುತ್ತು, ಬೆಜ಼ಿತು (ಭೂತನ್ಯೂ) ೧. (ಚಳಿ, ಗಾಳಿ, ಮಳೆ, ಸಾವು ಇತ್ಯಾದಿಗಳಿಂದ ದೇಹವು) ಸೆಡೆದುಕೊಳ್ಳು; ಮರಗಟ್ಟು; ಬಿಗಿದುಕೊಳ್ಳು : ದಕ್ಕನುಂಗಿದಂತೆ ಬೆಜ಼ಿತುಕೊಂಡರಬೇಡ (ಬಸವ. ೦೯೯); ದೇವಾಲಯದೊಳಗೆ ಬಡತನವ್ವೆಯ ಬೆಜತ ಪೆಣನದೆ ಕೆಡೆದು ಬಾತಿದ್ದುದು (ಬಸವು. ೫೨-೫೨); ತಾಪಸಂ ಬೆಜ಼ಿತು ಬದ್ದಿಹ ತಂದೆ ಮಕ್ಕಳಂ ಕಂಡು ಹಮ್ಮೈಸಿ ವಿಸ್ಮಿತನಾದನು (ಕೃಪಿಂಜಾ. ೩೦-೬೬). ೨. ಕಂಗಾಲಾಗು ; ಕಂಗೆಡು : ಬೆಜ಼ಿತುಜಿದೆನಾಗಿಯುಂ ತನು ಕಿಱಿದಾಗಿಯುಂ ಮತ್ತಮಾಯುಮುಂಟಾಗಿಯುಂ ಬೇಣಜಿಯುಂ ಕಣಂ ತಂದೆಯ ಗಱಿಯೊಳಗಿರ್ದ ವನೆನೆನ್ನ[ನಂದು ನೃಶಂಸಂ] (ಕಾದಂಪೂ. ೦೩೩); ಬೆಜ಼ಿತು ಬಿಬ್ಬೆಜಗಾವ ಕೈಯುಂ ಕಾಲುಮನುಡುಂಗಿ ಕುಸುಂಗಿ ಕುಳ್ಳಿರ್ದ ಕಿರಾತನನಾ ಪುರದೊಳಿರ್ಪ ಕಪೋತಶಿಖಾಮಣಿ ಕಂಡು (ಶಂಕಶಂ. ೨೯೫-೦೩). ೩. ಜಂಬಪಡು ; ಸೊಕ್ಕು ; ಗರ್ವಿಸು : "ಬೆಜ಼್_ಅಹಂಕಾರಭಾವೇ (ಗರ್ವಪಡು)" (ಧಾತು); ಜಂಗಮವ ಮುಂದೆ ದಿಟ್ಟತನದಲ್ಲಿ ಬೆಜ಼ಿತು ನಿಂದಿರಲಮ್ಮೆನು (ಬಸವ. ೩೯೬); ತಾಗಾಂದಟ್ಟಿನ ದಾಯಂಪಜಿಯದೆ ನಿನ್ನ ಕಲಿತರೆ ಕೃಷ್ಣ ಬೆಜತೆಯಲ (ಕುಮಾವ್ಯಾಸ. ೬-೩೨); ಇಂತು ರನ್ನಬಂಡಾರಿಯನೆ ಆಯ್ದೊಜಲ್ದು ಬೆರೆದು ಬೆಜ಼ಿದಿರ್ಪ ನೀರವಣ್ಣಾ ಕಡುಜಾಣ್ಮೆಗೆ ಸೋಜಿಗಂಗೊಂಡು (ರಾಜಶೇಖ. ೬೦-೨೨). **ಬಿಜು₁ :** ೨. ಎರ್ದೆಗಟ್ಟರಣ್ಯದೊಳ್ ತಿರುತಿರ್ದ ಕಣ್ಬಿಡಿಗರಿನ್ ಮಗುಟ್ದುಂ ಬಿಜುತೋಡಿ ಬೇಡರೊಳ್ ನೆರೆದಿರಲಲ್ಲದೊಡ್ಡಯಿಸಿ ಕಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೋ (ಶಂಕಶಾ. ೬-೬೫); ಕೆಲವು ಪಾಪಸಂಗಳ್ ಬಿಜ಼ಿತೋಡಿ ಕಾಡೊಳ್ಕೊಡಿರ್ದುವೆಲ್ಲಂ ಬಂದು (ಶಂಕಶಂ. ೨೦೩-೦೭) ; ಚಾಪಮಂ ಪಾಜಗಳಪ್ಪ ಭೂಪೆಂರದೆತ್ತುತೆ . . . ನೆತ್ತರಂ ಕಾಜ಼್ ಬಿಜುತ್ತು ಪೋಗೆ (ಕುಪಾಪು. ೯-೯೭) ; ಜಗಜ್ಜನದ ಜಾಡ್ಯತಮಂ ಬಿಜ಼ಿತೋಡೆ . . . ಉದಯಶೈಲಮನೇಜಿದನಂಬುಜಪ್ರಿಯಂ (ಚಕಾ. ೬-೦೦೬). **ಬೆರೆ₂ :** ೩. ಸೀಳು ದಾರಿಯ ಶಾಸ್ತ್ರನಿಚಯದ ಬೇಳುವೆಗೆ ಬೆರೆಯದೆ . . . ಪಟ್ಟಮಾಧಿಪ

ನೈದಿ ಬದುಕು (ಗಗಣ. ೦೨-೬); ಎಲೆ ಕಾಲುಂಚ ಬೆರೆಯದಿರು (ಅಕರಾ. ೦೯-೨). [ದೇ.॥ ತಮಿ. ವಿಱ್ಱು; ಮಲ. ವಿಱು]

**ಬೆಱ್ತು** ‘ಬೆಱ್’ ಪರಾ.

**ಬೆಱ್ಪು** (ನಾ). ಸೆಡೆತ : ತೊರೆದುಗುವ ಬಾಷ್ಪವಾರಿಯುನೆಱಂಕೆಗಳ್ ಸಾಂದು ಮುಗುಟಿ ವಿರಹಾನಲನಿಂ ನೆಱೆ ಬೆಱ್ಪು ಪಾಱೆ ಪಡನೇಸಱೊಳಿರ್ದು ದಗಲ್ದು ಚಕ್ರವಾಕದ್ವಂದ್ವಂ (ಕವ್ಯಾ ಸು. ೦೯೦ ಶ್ರ ಯೋ).

[ಬೆಱ್ + -ಪು₂./ತಮಿ. ವಿಱ್ಪ್ಪು]

**ಬೆೞಂಬಳ್ಳಿ** (ನಾ). ಒಂದು ಊರಿನ ಹೆಸರು : ಪುತ್ರೂರ ಕೊಙ್ಗಣಿ ಸಾಮಿಯುಗೆ ಬೆೞಪ್ಪಳ್ಳಿಯೊಳ್ ರಾಜಮಾನ ಮೂಗಣ್ಣುಗಂ (ಎಕ. X, ಮುಳಬಾ. ೦೦೨-೬; ಸು. 880). [? + ಪಳ್ಳಿ₁]

**ಬೆೞಸು** (ಕ್ರಿ). (?) : ಕೆಡೆ ಬೆೞಸುವೇೞ್ದೋರುಂ ಕಿಡಿಸಿದೋನುಕ್ಕೋಟಿ ×× ಬಾರಣಾಸಿಯುಂಳ್ಳಾಸಿವರ್ಪಾವ್ವರುಂ ಸಾ ××× ಕವಿಲೆಯುಂ ಕೊನ್ದ ಕೊಲೆವಯ್ದುಗೆ (ಎಕ. VI. ಕಡೂರು. ೦೯೩-೯ ; ಸು. 750). [ ? ]

△**ಬೆೞ್ಗಱ** ‘ಬೆಳ್ಗಱ’ ನೋ.

△**ಬೆೞ್ಚು** ‘ಬೆೞ್ರ್₁’ ನೋ.

**ಬೆೞ್ತ್ರ** (ನಾ). (?) : ಬೆೞ್ತ್ರಿಯು ಛತ್ರದೊಳ್ ನೂಱುಛತ್ರಮುಮಂ ... ಬಿಟ್ಟರ್ (ಎಕ. I (R), ೯೬-೯ ; 890).

[P ಇದು ‘ಬೆಳ್ತಿಗೆ’ ಎಂಬುದರ ಅಪಲಿಖಿತವಿರಬಹುದೆ ?]

△**ಬೆೞ್ದಲೆ** ‘ಬೆದ್ದಲ್’ ನೋ.

△**ಬೆೞ್ದಲೆ** ‘ಬೆದ್ದಲ್’ ನೋ.

**ಬೆೞ್ಪು** (ನಾ). ವಂಶ; ಕುಲ : ತಳ್ತಿಱಿದಸುಂಗೊಳ್ವನ್ನೆಗಂ ಕಾದಿ ತಾಂ ಬೆೞ್ಪಂ ಕೀರ್ತಿಸಿ ಸಪ್ತದಕ್ಕೆ ರಣದೋಳ್ನಾಸಿವ್ವರು ಕೊಂಗನಾಡೆೞ್ಪುತ್ತುಂ ವಯಗೆಯ್ದಂ (ಎಕ.V(R), ಕೃ.ಕ.ವ. ೯೧-೯ ; ಸು. (10ನೆಯ ಶತ).

[←ತಮಿ. ವಿೞುಪ್ಪು]

△**ಬೆೞ್ವಲ** ‘ಬೆಳ್ವಲ’ ನೋ.

**ಬೇ₁**, ಬೆಯ್, ಬೇಯು (ಕ್ರಿ). ಬೆಂದ (ಭೂತಕೃ), ಬೇವ (ವರ್ತಕೃ). ಬೆಂದು (ಭೂತನ್ಯೂ). ೧. ಸುಡು ; ದಹಿಸು : “ಬೇ – ದಾಹೇ (ಸುಟ್ಟುಹೋಗು)” (ಶಮಧ) ; ಬೇವ ಶವಸಂಘಾತಂಗಳಂ ಚಕ್ಕು ಮೊಕ್ಕೆಂದಾಗಳ್ ಕಡಿದುಗ್ರಭೂತನಿಕರಂ ಕೆಯ್ ಬೇಯೆ ಬಾಯ್ ಬೇಯೆ ತಿಂಬಂದಂ ತನ್ನ ಮನಕ್ಕಗುರ್ವಿಸುವಿನಂ ದುರ್ಯೋಧನಂ ನೋಡಿದಂ (ಪಂಪಭಾ. ೧೩-೬೦) ; ಬೆಂದ [ಪಾಠಾಂ. ಹುರಿದು ಬಿತ್ತಿದ] ಬೀಜಂ ಪುಟ್ಟದು (ಕಂಶತಂ. ೬೩-೯). ೨. ಕುದಿದು ಪಕ್ವವಾಗು : ಅಕ್ಕಿಗಚ್ಚಂ ಬಸಿದು ತಿಳಿನೀರನೊಳಗೆತ್ತಿ ಕಾಸಿಯುಕ್ಕಿಯ ಹಾಕಿ ಬೇವಾಗ ಕಳಿಯನೆಱೆದು ಬಳಿಕ ಬೇವಾಗಂಜಿಯು ಬಸಿದುಕೊಂಡು ಮುಚ್ಚುಳನಿಕ್ಕಿ . . . ಹೊಂಗಿಸಿ ಕೊಂಡು ಮೃದುವಾಗಿ ಮಾಡಿದುದು ತಾ ಶುದ್ಧ ಮುಷ್ಟೋದನಂ (ಸೂಶಾ. ೩-೨). ೩. (ಅಲಂ) ಸಂಕಟಪಡು ; ಯಾತನೆಪಡು ; ನರಳು : ಮರ ವಟ್ಟು ಕಡದೆ ಕಲ್ಪವಾಹೀಜಂ ಸಿಂದವು ಜಠರಾನಲನಿಂ ಬೆಂದುವು ತನು ಬಾಯ್ಬಿಡಾಯುವಾವುದು ದೇವಾ (ಅದಿಪು. ೬-೬೯); ಅಳುರುತ್ತು ಮಿರ್ಪ ಮದನಾನಳನಿಂದೊತೆಂತು ಬೇವುದನಿತಂತತಿನಿರ್ಮಳಮುಪ್ಪುದು ಲಾವಣ್ಯಂ (ಕಾವಂಲು. ೩೨೬); ರಾಜೆಯೊಳ್ಬೇವಂಗೆ ದಿವ್ಯೌಷಧಂ . . . ಗಡ ಕೈಸಾರ್ದೊಡೆ ಭಾವಿಪಂದವನೆ ಧನ್ಯಂ (ಧರ್ಮಾಮ್ಮ. ೩-೦೬); ಬೆಂದೊಡಲ ಹೊರೆವುದಕ್ಕೆ ನಾನಾಱ (ವಚಹಾರೇ. ಬ. ೦೩-೦೬). ೪. ನಾಶವಾಗು ; ಹಾಳಾಗು ; ಅಳಿವನ್ನು ಹೊಂದು ; ಅಳಿ : ಸೆನಹು ಸತ್ತಿತ್ತು ಛಾಂತು ಬೆಂದಿತ್ತು (ಶಬಶಂ. ೬೮-೨೯೮) ; ಬೆಂದುದೊಳತೋಟಿಯಲಿ ಕೌರವವೃಂದ (ಕುಮ್ಯಾದ್ರೋ. ೦೩-೦೦); ಇಂದು ನಿಮ್ಮಂಘ್ರಿಯ ಕಂಡು ಮದ್ಭವಬೀಜ ಬೆಂದುದೆಂದರು ದ್ವಿಜೋತ್ತಮರು (ಮೋಹತ. ೪೦-೬೦).

**ಬೆಯ್**: ೧. ವಿರಹಾನಲನಳುರೆ . . . ಕಾಯ್ಪಿಂದುರಿಯುತ್ತುಂ ಬೆಯ್ದ ಶೈಲಮಿರ್ಪಂತಿರ್ದಂ (ಧರ್ಮಾಮೃ. ೩-೩೨). ೩. ದಿವದೊಳ್ ಭೋಗಿಪೊಡಂ ಮಹಾನರಕದೊಳ್ ದುಃಖಾಗ್ನಿಯಿಂ ಬೆಯ್ವೊಡಂ . . . ಒರ್ವನೆ ಬೆಯ್ಗುಮೆಂಬ ಜನರ ಶ್ರೀವಾಕ್ಯಮಂ ನಂಬಿದೆಂ (ಧರ್ಮಾಮೃ. ೩-೬೦).

**ಬೇಯು** : ೧. ಉರಿಯೊಳಗೆ ಪತ್ರಾಂಗಳಂ ಹಾಯ್ಕಿ ಕರವನೆತ್ತದ ಮುನ್ನ ಬೆಂದಿತ್ತು (ಬಸಪು. ೫೦-೩೬); ನಿದಾಘಸಮಯದ ಬಿಸಿಲ ಬೇಗೆಗೆ ಬೆಂದು ನೆಲನುಚ್ಚಿಸಿತಲ್ಲಿ ಕಡುಗಾದ ಕಾವಲಿಯಂತೆ (ಕೊರಟ. ೨-೪-೦೩). ೨. ಪಾತ್ರೆ ತುಂಬ ನೀರಿಟ್ಟು ಅಕ್ಕಿ ಹಾಕಿ ಬೆಂದ ಅನಂತರ ನೀರನ್ನೆಲ್ಲ ಬಸಿದು ತೆಗೆಯುವುದು ಸಾಮಾನ್ಯವಾಗಿ ಅನ್ನ ತಯಾರಿಸುವ ವಿಧಾನವಾಗಿದೆ (ಅಡುಅ. ೬೪).

[ದೇ.॥ ತಮಿ. ಮಲ. ವೇ ; ತುಳು. ಬೇಯು ; ಕೊಡ. ಬೆಯ್ ; ತೆಲು. ವೇಗು ; ಕೋತ. ವೆಯ್ ; ತೊದ. ಪೊಯ್ ; ನಾಯ್ಕಿ. ವೀ ; ಪರ್ಜಿ. ವೇಪ್ ; ಕುಇ. ವೇಪ ; ಕುರುಖ್. ಬೀಯಿನಾ]

**ಬೇ₂** (ಕ್ರಿ). ಬೇತು₁ (ಭೂತನ್ಯೂ). ದೈನ್ಯದಿಂದ ಅಥವಾ ಆರ್ತತೆಯಿಂದ ಬೇಡು: ಕೇಳುವದನಿಯಲಿ, ಬೇತು, ಬಿಸುಸುಯ್ಯುತ, ಇನ್ನೊಬ್ಬ ನೊಲುಮೆಯನು ನಾನು ಹಾಡಿದ ಬಗೆಯ ನನ್ನೊಲುಮೆಬೇಗೆಯನು ತೆರೆದರುಹಿತು (ಇಂಗೀತ. ೪೩-೦೦).

**ಬೇತುಕೊಳ್ಳು**=ದೈನ್ಯದಿಂದ ಕೇಳಿಕೊಳ್ಳು : “ಸ್ವಾಮಿ, ಸ್ವಾಮಿ, ದಿನಾಲೂ ಒಂದು ಗಂಟೆಯಾದರೂ ಪ್ರಾಕ್ಟೀಸು ಮಾಡಿಕೊಳ್ಳೋ” ಎಂದು ರಾಜಂ ಅವನನ್ನು ಬೇತುಕೊಂಡ (ಕ್ಯಾ ಬುಸ್ಕಿ. ೦೬೬). [ ? ]

**ಬೇ₃**— (ಉಪ). ಇಲ್ಲದುದು ಎಂಬ ಅರ್ಥವನ್ನು ಕೊಡುವ ಒಂದು ಉಪಸರ್ಗ : ‘ಬೇದಿರುಸು’ ಪರಾ. [← ಪಾರ. ಹಿಂ. ಬೇ]

**ಬೇಆಬರು** (ನಾ). ಅವಮರ್ಯಾದೆ ; ತಿರಸ್ಕಾರ : “ಅವಮಾನ” (ಜಾಪಕೋ. ೨೯) : ಕಾಟಿಪ್ಪನವರ ಒಬ್ಬ ಸಭ್ಯಗೃಹಸ್ಥನ ಬೇಆಬರು ಮಾಡ್ತಾ ಇದ್ದೀರಿ ನೀವು (ಪಾಂಡಾಯ. ೬೯).

[← ಪಾರ. ಹಿಂ. ಬೇಆಬರೂ; ಮರಾ. ಬೇಆಬರೂ, ಬೇಆಬ್ರೂ]

**ಬೇಅಸಲ್** (ನಾ). ಆಧಾರವಿಲ್ಲದುದು ; ಸುಳ್ಳು : ಇಂಗ್ರೇಜಸರಕಾರದ ಸೀಮೆ, ಮೈಸೂರುಅರಸಿನ ಸೀಮೆ ಜಾಗದಲ್ಲಿ ಇದ್ದು, ನಿಮ್ಮ ಸೀಮೆಗೆ ಸಮೀಪವಾಗಿ ಇದ್ದರೆ, ತಮ್ಮ ಮನಸ್ಸಿನ ಅಂದೇಶ ಭಾವನೆ ಬೇಅಸಲ್ ಆಗುತ್ತಿತ್ತು (ರಾಜೇಂದ್ರ. ೦೯೯) ; ಮೈಸೂರುಅರಸಿನ ಸೀಮೆ ಜಾಗಾದಲ್ಲಿ ಇಂಗ್ರೇಜಬಹಾದ್ದುರಕುಂಪನಿಸರಕಾರದ ಸೀಮೆ ಆಗಿ ಇದ್ದರೆ, ತಮ್ಮ ಯೋಚನೆಗೆ ಬೇಅಸಲ್ ಆಗುತ್ತಿತ್ತಷ್ಟೆ (ರಾಜೇಂದ್ರ. ೦೯೩).

[←ಹಿಂ. ಬೇಅಸಲ್]

**ಬೇಇಮಾನ**, ಬೇಮಾನ (ನಾ). ನಂಬಿಕೆಗೆ ಅರ್ಹನಲ್ಲದವನು ; ಅಪ್ರಮಾಣಿಕ : ಕಾಲಗತಿಯಿಂದ ಸಂಭಾಜಿಯ ವಧೆಯ ನಂತರ ಸೂರ್ಯಾಜಿ ಬೇಇಮಾನನಾದ (ಪಂಶಾ. ೦೦). **ಬೇಮಾನ** : ನೀವಾದರೆ ಮುಸಲ್ಮಾನಪಾದುಷಹರು ಹೀಗೆ ಹಿಂದೂ ಬೇಮಾನನೊಂದಿಗೆ ಸೇರುವುದು ಸರಿಯಲ್ಲ (ಬಕ್ಕರು. ೮).

[←ಪಾರ. ಹಿಂ. ಬೇಈಮಾನ್ ; ಮರಾ. ಬೇಇಮಾನ್]

**ಬೇಂಕು** ‘ಬ್ಯಾಂಕು’ ನೋ.

**ಬೇಂಗಪಲ್ಲಿ** (ನಾ). ಒಂದು ಬಗೆಯ ದೊಡ್ಡಹುಲಿ : ಕಳೆದ ತಿಂಗಳಲ್ಲಿ ಒಂದು ಅಡ್ಡಬಲಿಪ್ಪನೋ, ಬೇಂಗಪಲ್ಲಿಯೋ ಒಬ್ಬ ಗೌಡನ ತೋಳನ್ನು ಕಚ್ಚಿ ಹರಿದುಬಿಟ್ಟಿತಲ್ಲ (ಪಟ್ಟಜೀ. ೨೨). P ಇದು ತಮಿಳಿನ ‘ವೇಙ್ಕೈ’ ಎಂಬ ಶಬ್ದಕ್ಕೆ ‘ಪುಲಿ’ ಎಂಬುದು (ಒಂದೇ ಅರ್ಥದ ಎರಡು ರೂಪಗಳು) ಸೇರಿ ಉಂಟಾದ ಶಬ್ದರೂಪವಿರಬಹುದು.

[ದೇ.॥ ತಮಿ. ವೇಙ್ಕೈ ; ಮಲ. ವೇಙ್ಙ ; ತೆಲು. ವೇಗಿ./ಸಂ. ವ್ಯಾಘ್ರ]

**ಬೇಂಟ**, ಬೇಟ (ನಾ). ೧. ಹೆಣ್ಣುಗಂಡುಗಳಲ್ಲಿ ಪರಸ್ಪರ ಉಂಟಾಗುವ ಮೋಹ; ಪ್ರಣಯ ; ಪ್ರೀತಿ : ಆ ಸ್ವಯಂಪ್ರಭೆ ಲಲಿತಾಂಗನಳ್ಕೆರ್ದೆಗೆ ತೊಟ್ಟನೆ ಬೇಂಟಮೆ [ಪಾಠಾಂ· ಬೇಟಮೆ] ಪುಟ್ಟೆ ಪುಟ್ಟದಳ್ (ಆದಿಪು·೨-೬೩); ಜವ್ವನೆಯ ಮೊಲೆಯಂತೆ ಬೇಂಟದ ಕೊಂಡಾಟದಂತೆ ಮಧ್ಯಾಹ್ನದರ್ಕನಂತೆ . . . ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ· ೬-೦೨೨) ; ರೂಪಂ ಕರಂ ಮೆಚ್ಚುಯುಂ ತಲೆಯಂ ತೂಗದೆ ಪಾಂಥರೀಂಟೆ ವಿಕಸತ್ತೃಷ್ಣಾತುರರ್ ಚಿತ್ರಭೂತಲದೊಳ್ ನಾಂಟಿದ ಬೇಂಟಮೋಂ ಬಗೆಗೆ ನೀರ್ಪೊಯ್ವಂತೆ ಭೃಂಗಾರಶೀತಲತೋಯಂಗಳನಾಂತು ಪಾಣಿತಳದೊಳ್ ಪೊಯ್ವರ್ ಪ್ರಪಾಕಾಂತೆಯರ್ (ಲೀಲಾವ· ೬-೦೨೯). **ಬೇಟ** : ೧. ಬಗೆಯೋಳ್ಪೇಟದ ಬೀಜಮಂ ತಳಿದು ನೀರ್ಪೊಯ್ವಂದದಿಂ ತೋಳ ಸುಸ್ಕೊಗರ್ಗಳ್ಪ್ರೀರ್ಚನಮೆತ್ತಿ ತಣ್ಗೆಳಸಮಂ ನೀರ್ಪೊಯ್ವುದುಂ (ಮಲ್ಲಿಪು. ೨-೨೯) ; ನೋಟ ವತ್ತಲು ಮನದ ಬೆಸುಗೆಯು ಬೇಟವಿತ್ತಲು . . . ನೋಟಕರಿಗರಿದಾಯ್ತು ಭಾವಿಸೆ ಬೆಡಗು ಮಾಯೆಯಲಿ (ಪ್ರಭುಲೀ. ೬-೨೯) ; ನೆಲನ ಬೇಟವ ಬಿಸುಟು ಜೀವದಲುಳಿದು ತೊಲಗೆನೆ ಪವನಸುತ ಕಳಲಿಸಿ ನಗುತವೆ ಕೌರವೇಂದ್ರಂಗೆಂದನುತ್ತರವ (ಕುಮಾ.ಭಾ. ೩-೦೨). ೨. ಆಕರ್ಷಣೆ; ಸೆಳೆತ : ಬೇಟವಿಲ್ಲದ ಬೆಲೆವೆಣ್ಣಳಲ್ಲ (ಕಾವ್ಯ.ಕಾ. ೨೬); ನೋಟದಲಿ ಮಾತಾಡಿ ಪುರ್ಬಿನ ಬೇಟದಲಿ ಬಳ್ಕಾಡಿ . . . ಸರ್ವಸ್ವವನು ನೆಱೆ ಕಪರಿ ಗೋಟು ಗೊಳಿಸುವ . . . ಬೇಟಕಾತಿಯರೊಪ್ಪಿದರು (ಕೊಂರಾ. ೦-೩-೩೦) ; ಕಡೆಗಣ್ಣ ಸವಿನುಡಿ ನಿಡುಹುಬ್ಬಿನ ಬೇಟ ಬಡನಡು ಕಡುನಿತಂಬಗಳ . . . ಮುದ್ದುಮಡದಿರನ್ನೆಯುರ್ಬೆದಿದರು (ಶಂಪ. ೨೦-೬೩). ೩. ಆಸೆ ; ಬಯಕೆ: ಬೇಟಂ ಲೇಸು ಕಾಡುವುದರಿಂದೆಂಬಂತೆ ಕೊಲೆ ಲೇಸು ಕಾವುದರಿಂದೆಂಬಂತೆ . . . ಸಂಸಾರದ ಸುಖಂ ಲೇಸು ಮೇಗಣ ನರಕದುಃಖಂಗಳರಿಯವು (ಧರ್ಮಾಮೃ·೮-೯೦). [ದೇ.॥ ತಮಿ. ವೇಟ, ವೇಟ್ಕೈ, ವೇಟ್ಟು; ಮಲ. ವೇಳ್]

**ಬೇಂಟಂಗೊಳ್**, ಬೇಟಗೊಳ್ (ಕ್ರಿ)· ಹೆಣ್ಣುಗಂಡು ಪರಸ್ಪರವಾಗಿ ಪ್ರೀತಿಯನ್ನು ಹೊಂದು ; ಪ್ರಣಯದಲ್ಲಿ ಉತ್ಸಾಹವನ್ನು ಹೊಂದು : ಆನೋರ್ವಳ್ಗೆ ಬೇಂಟಂಗೊಂಡಿರ್ದಂ (ಪಂಪಭಾ· ೦೩೦-೦೦). **ಬೇಟಗೊಳ್** : ಸ್ಮರಲೀ ಹಲವುಕಾಲ ಬೇಟಗೊಂಡಳಲನೊಂದಿರುಳ ಭೋಗದೊಳು ತೀರ್ಚಿದರು (ಭಾಷ. ೪೦-೦೬೯) ; ತಳೆದುತ್ಕಲಿಕೆಯನಾದಂ ಬೆಳರ್ತು ಕಡುಬೇಟಗೊಂಡಳಂತೆಸವ್ವದ್ಯಾನಲತೆಯನೀಕ್ಷಿಸಿ ನಾಂ ಪಾಟಲವರ್ಣಾಂಗ್ಯವೆನಿಂದು ದೇವಿಯ ಮೊಗಮಂ (ರ್ಪಾ.ಲೀ. ೮೩). [ಬೇಟ+ಕೊಳ್$_1$]

**ಬೇಂಟಗಾಱ**, ಬೇಟಕಾರ, ಬೇಟಕಾಱ$_1$ (ನಾ). ೧. ಪ್ರಣಯಾಸಕ್ತನಾದವನು ; ಪ್ರಣಯಿ. ೨. ಕಾಮುಕ : ಜಾರೆಯ ಮಾತಂ ನಂಬಿ ತನ್ನ ಪೆಂಡತಿಯಂ ಬಿಡುವ ಬೇಂಟಗಾಱನುಮಂ (ಧರ್ಮಾಮೃ. ೯ ೩೦). **ಬೇಟಕಾರ** : ೧. ಬೇಟಕಾರ ಬಂದ ಮಾದ, ಹಹ್ಹ! ಏನು ಬೇಟವೋ ! (ಶಂಗೀತ. ೩೯-೦). **ಬೇಟಕಾಱ$_1$** : ೧. ಇದಂ ಪುಗಲಿಂ ಗಡಮೆಂದು ಬೇಟಕಾಱನಿರವೂಱೆ ಸಾಱೆ ಪಡಿವಂತೆಸೆಗುಂ ಸಹಕಾರಕೋಮಲಾಂಕುರ ಪರಿತುಷ್ಟಪುಷ್ಟ ಪರಪುಷ್ಟಗಳಧ್ವನಿ ನಂದನಂಗಳೊಳ್ (ಶಂಖಾ. ೨-೦೩) ; ಕರುಣಿಸದೆ ಬೇಟಕಾಱರ ಶಿರಮಂ ಕೊಳ್ಳೆಂದು ಕಂತು ಮಧುವಿಂಗಟ್ಟಲ್ ಪರೆದಲೆಗೊತ್ತಿದರ್ಣಡಿಗೆಯುರಗನೆ ಪೋಲ್ದತ್ತು ಶೀತಕರನ ಕಳಂಕಂ (ಸೂಕ್ತಿಸು. ೮-೨೩೩). [ಬೇಂಟ +—ಕಾಱ]

**ಬೇಂಟಗ** (ನಾ). ಬೇಟೆಯಾಡುವವನು ; ಬೇಡ; ಶಬರ : ಇಡುವಲೆ ಸಿಡಿವಲೆ . . . ಬಿಡುವಲೆಗಳೆನಿಪ್ಪವೆಸೆದುವಾ ಬೇಂಟಗರೊಳ್ (ಲಬಲಂ· ೩-೨೯). [ಬೇಂಟೆ +—ಇಗ]

**ಬೇಂಟೆ**, ಬೇಟೆ (ನಾ). ೧. ಕಾಡುಪ್ರಾಣಿಗಳನ್ನು ಕ್ರೀಡೆಗಾಗಿಯೋ ಆಹಾರಕ್ಕಾಗಿಯೋ ಹಿಂಬಾಲಿಸಿ ಹಿಡಿಯುವುದು ಅಥವಾ ಕೊಲ್ಲುವುದು; ಶಿಕಾರಿ; ೭ ಸಪ್ತವ್ಯಸನಗಳಲ್ಲಿ ಒಂದು: "ಆಖೇಟಸಂ, ಮೃಗಯಾ, ಮೃಗವ್ಯಂ, ಪಾಪರ್ಧಿಃ, ಆಖೇಟಕಃ—ಈ ೫ ಬೇಂಟೆ" (ಹಲಾಯು. ೬೦-೨೮೦); ಅವರ ತಪೋಮಹಾತ್ಮ್ಯದಿಂ ಲಲಿತಘಟೆಗೊಂದುವಿಂಗ ಮಪ್ಪೊಡಂ ಬೇಂಟೆ ಸಮನಿಸದೆ (ಶಬ್ದಾ.ರಾ. ೯೩-೨೩); ನಾಮಿದನಱಿಯದಂತು ಬೇಂಟೆಯು ನೆಪದೊಳ್ ಬಟ್ಟೆಗಳಂ ಸೋದಿಸುವಂ (ಶಂಕಥಾ· ೩-೯ ಪ): ಜವ್ವನದಿ ಬೇಂಟೆಗೆನುತಾಕೆ ಕಾಡೊಳಗಲೆಯುತಿರಲೊರ್ವ ಗೈರಿಕವಸನವೇಷ ಸುರಪುರುಷನೈತರಲ್ (ಶತ್ರುಂಗ. ೬೩-೦೯೯೩)· ೨. ಬೇಟೆಗೆ ಸಿಕ್ಕಿ ಬೀಳುವ ಪ್ರಾಣಿ ; ಈಡುಮೃಗ : ದೇವರ ಧರ್ಮದೊಳೊಂದು ಬೇಂಟೆ ದೊರೆಕೊಂಡರೆ ಕೂಡಲಸಂಗಮದೇವಂಗರ್ಪಿತವ ಮಾಡುವೆ(ಬಸವ. ೯೦೬). ೩. (ಆಲಂ) ಅನಾಯಾಸವಾಗಿ ದೊರಕಿದುದು ;ಲಭ್ಯವಾದುದು : ಮೇಧಾವಿನಿಯ ಪುಣ್ಯದಿಂದೆಂತಪ್ಪ ಬೇಂಟೆ ದೊರೆತುದಿಂದು ! (ತಂದ್ರಸ. ೩೯-೨೩). **ಬೇಟೆ** : ೧. ಮೇಳಮೇಳದ ಬೇಟೆಗಳ ಹೈಹಾಳಿಗಳ ಜೂಜಿನ ಸಮಂಜಸಲೀಲೆಗಳ ಕೇಳಿಯಲಿ ಕಳೆವರು ಪಂಚವರ್ಷಗಳ (ಸಂಭವ. ೩೩-೦); ಗಾನವೆಲ್ಲಕೆ ಹಿತವಹುದದು . . . ಪುಣ್ಯಹೀನಸತಿಯರಾಟ ಬೇಟೆ ಕಾಳಗ ಬಂದರೇನೆನ್ನಬಹುದದು ಪಾಪ (ಭರತ. ೧-೯೯) ; ಎಮ್ಮೆಯ ಬೇಟೆಯನ್ನೇ ಇಚ್ಛಿಸುವ ಅವರು ನಮಗೆ ಕಷ್ಟ ಕೊಡಲಿಕ್ಕಿಲ್ಲ (ಬಂಗಾಹ·೬೦)· ೨. ಸಿಕ್ಕ ಬೇಟೆಯನ್ನು ಎಲ್ಲರೂ ಸರಿಯಾಗಿ ಹಂಚಿಕೊಳ್ಳಬೇಕು (ಮುಂಬಯಿ· ೯-೦೦); ಬಿಡದಿರು ನೀನಿಂದು ಹಿಡಿದೊಂದು ಬೇಟೆಯ ಕೈಯೊಳಗಿರು ವೊಂದು ಮೊಲವ (ಇಂತಾಹ. ೦೬೩-೦೯). ೩. ಬೇಟೆ ಬಲೆಯೊಳಗಿಂದ ಪಾರಾಗಿ ಹೋದುದಷ್ಟೇನು ಬಲ್ಲೆಳು (ಪತಂಕೀ. ೬೯). ೪. ಹುಡುಕಾಟ ; ಅರಸುವಿಕೆ : ಎರಡನೆಯ ಹೆಂಡತಿ ತೀರಿಕೊಂಡು ಆರೇಳು ತಿಂಗಳಾಗಿದ್ದವಂತೆ. ಅಷ್ಟೆ! ಈಗ ಇನ್ನೊಂದಕ್ಕಾಗಿ ಬೇಟೆಯಂತೆ (ಕಪ್ಪ.ಪ. ೩೩).

**ಬೇಂಟೆಯನ್**=ಬೇಟೆಗಾರ ; ಬೇಡ ; ಶಬರ : ತೊಟ್ಟೆಕ್ಕವಡಂ ಮರವಿಲ್ ಕಟ್ಟಿದ ಪಣೆಕಟ್ಟು . . . ತನ್ನೊಳಮರೆ ಬೇಂಟೆಯನೊರ್ವಂ ಬಂದು ಪೊಡವಟ್ಟು ಕರಿಡಿಂತೆಂದಂ (ಶಂಕಥಾ. ೩-೩೬).

[ದೇ.॥ ತಮಿ. ವೇಟ್ಟ, ವೇಟ್ಟು, ವೇಟ್ಟಲ ; ಮಲ. ವೇಟ್ಟ; ತುಳು. ಬೇಂಟೆ, ಬೇಟೆ, ಬೊಂಟೆ ; ಕೊಡ. ಬೋಟೆ ; ತೆಲು. ವೇಂಟ, ವೇಟ ; ಕೋತ.ವೆಟ್ ; ತೊದ. ಪೆಟ್ ; ನಾಯ್ಕಿ. ವೇಟ]

**ಬೇಂಟೆಕಾಱ** 'ಬೇಂಟೆಗಾಱ' ನೋ.

**ಬೇಂಟೆಗ**, ಬೇಟೆಗ (ನಾ). ಶಿಕಾರಿಯಾಡುವವನು : ಬೇಡ ; ಶಬರ; ವ್ಯಾಧ : ಒಂದೆ ಪುಲ್ಲೆ ಬೇಂಟೆಗರ ಕೆಯ್ಯೊಳಾದಂತೆ (ಶವಸಂ. ೦೯-೨೬ ಪ); ಪಸಿವಿಂದಂ ಬೇಂಟೆಗಂ ನಟ್ಟಡವಿಗೆ ನಡೆತಂದು (ಶಂಪಾಠ· ೦೩) ; ದೀಪದ ಹೋರಿಯಂ ಕಟ್ಟಿ ಬೇಂಟೆಗಂ ಮರಸು ಕುಳಿತಿರೆ ಮರದ ತುದಿಮಂಚಿಗೆಯ ಮೇಲೆ (ಶ್ರೀರಾಜ. ೩೦೦-೨೮೦). **ಬೇಟೆಗ** : ಬೇಹಿನ ಸಿಂಗ ಬೇದರ ಪೆಮ್ಮಬೇಟೆಗ[ಪಾಠಾಂ· ಬೆಟ್ಟಿಗ, ಬೇಟೆಯ]ಚೋಹದ ಹರಿಗೆಯ ಲಿಂಗ ಸೋಹಿನ ಪೆನ್ನಸವರ ಕಳುಹಿದನಂದಾ ಹುಯ್ಯಲಿಗೆ (ಕುಮಾರಾಮ. ೦೯-೮೯).

[ಬೇಂಟೆ + — ಗ$_2$]

**ಬೇಂಟೆಗಾರ್ತಿ** (ನಾ). ಬೇಡಿತಿ : ಶಬರಿ : ಪಾಂಥರ್ ಬಲವಂದು ಬೆಳ್ಳೆಗವೊಲ್ ಸಾರ್ತಂದು ಬೆಳ್ಳಾಗೆ ಪಾಪಾರಿಯರ್ ಕಾಮನ ಬೇಂಟೆಗಾರ್ತಿಯರೆನಿಪ್ಪಾಶಂಕೆಯಂ ಮಾಡುವರ್ (ಸೂಕ್ತಿಸು. ೯-೬೬) ; ಯಂಪೊಸ್ನೃಗಮಂ ಕಱತ್ತು ಕೋಲೆತ್ತುವ ಬೇಂಟೆಗಾ [ಪಾಠಾಂ. ಕಾ]ರ್ತಿಯರಪೋಲೆಸೆದರ್ ವಿಂಗೆ ಮಾಲೆಕಾರ್ತಿಯರ್ (ಗಿರಿ. ೨-೮೮).

[ಬೇಂಟೆಗಾಱ+ — ತಿ$_1$ (<—ಇತ್ತಿ)]

**ಬೇಂಟೆಗಾಱ**, ಬೇಂಟೆಕಾಱ, ಬೇಟೆಕಾಱ, ಬೇಟೆಗಾರ. ಬೇಟೆಗಾಱ (ನಾ). ಶಿಕಾರಿಯಾಡುವವನು ; ಬೇಡ ; ಶಬರ : ಕ್ರೂರರಪ್ಪ ಬೇಂಟೆಗಾಱರೊಳ್ಕೂಡಿ . . . ಬೇಂಟೆಗೆ ಪೋಪ ರೌದ್ರಾತ್ಮರ ನೆಗಱ್ತೆಯೆ ನರಕಗಮನ

ಮನಜಾವುಗುಂ (ರಶೋಕ್ಷು. ೬-೬೩) ; ಅಂತೆಯೊರ್ವ ಬೇಂಟೆಗಾಱಂ ಬಂದು ರಾಜಹಂಸೆಗೆ ಪೊಡೆಮಟ್ಟು ಇಂತೆಂದಂ (ರಕಶು. ೨-೦೦೩ ವ). **ಬೇಂಟೆಕಾಱ :** ನೋಡಿದ ಪೆಂಡಿರೆಲ್ಲಂ ಕಾಮದೇವನೆಂಬ ಬೇಂಟೆಕಾಱಂಗೊಡ್ಡಿದ ಪುಲ್ಲೆಗಳಂತರಲಂಬಿನ ಮೊನೆಗೆ ಪೂಣೆ ಪೊಱ್ಸು ಪಕ್ಕಾಗಿರೆ (ಶಂಶಧಾ. ೪-೩೬ ವ) ; ಬೇಂಟೆಕಾಱನಂತೆ ಅಡಿವಜ್ಜೆಯನಱಸಿಯುಂ (ಗದಾಯು. ೬-೨೬ ವ); ಪೇರಿಟ್ಟಿ . . . ಕವಲಂಬುಸಹಿತಂ ಭೋರನೆ ನೆರೆದತ್ತು ಬೇಂಟೆಕಾಱರ ತಂಡಂ (ಸಕಲಂ. ೬೯). **ಬೇಟೆಕಾಱ :** ಬೇಟೆಕಾಱನು ಮೃಗವನಟ್ಟಿ ಮೃಗ ಗೋರಿಗೊಳಗಾಗದಯ್ಯಾ (ಬಸವ. ೯೩೫) ; ಚರರು ಮಲ್ಲರು ಬೇಟೆಕಾಱ[ಪಾಠಾಂ. ಬೇಂಟೆಗಾಱ]ರು ಪರಿಜನಾವಳಿಸಹಿತ . . . ಪಯಣದಲರಸನೈತಂದ (ಶಂಪ್ರಾ.ಶ. ೦೬-೩೨). **ಬೇಟೆಗಾರ :** ಲಕ್ಕ್ಯಾರಿಗೆ ಮೂಡಲ ಅಗ್ನೇಯ ದಿಕ್ಕಿನಲ್ಲಿ ಬೇಟೆಗಾರನ ಆಲದ ತಾಳಿನಲ್ಲಿ ನೆಟ್ಟ ಕಲ್ಲು ೧ (ಎಕ. III, ಮೈಸೂರು. ೦೦೬-೪೦ ; 1664) ; ಬೇಟೆಗಾರನಿಂದ ತಪ್ಪಿಸಿಕೊಂಡು ಓಡುವ ಮೃಗಗಳು ವೇಗದಿಂದ ಪೊದೆಯಲ್ಲಿ ಪ್ರವೇಶಿಸುವಂತೆ ಇವು ಅಗ್ನಿಯನ್ನು ಪ್ರವೇಶಿಸುತ್ತವೆ (ಪುಣ್ಯಾ.ರ. ೨೦೦). **ಬೇಟೆಗಾಱ :** ಬೆಟ್ಟದ ನವಿಲಿಗೆ ಕಣ್ಣೀರು ಬಂದರೆ ಬೇಟೆಗಾಱಗೆ ದಯ ಪುಟ್ಟೀತೆ (ಪ್ರಭುಲಿಂ. ೦-೦೫೬-೨).

**ಬೇಟೆಗಾರನ ಹಕ್ಕಿ**=ತನ್ನ ಆಹಾರವನ್ನು ಬೇಟೆಯಾಡಿ ದೊರಕಿಸಿಕೊಳ್ಳುವ ಹಕ್ಕಿ; ಮಿಂಚುಳ್ಳಿ: (ಶ). **ಬೇಟೆಯ ರಾಯ = ಒಂದು ದೇವತೆಯ ಹೆಸರು :** ಸಕಲಜಪರಿಗಿಷ್ಟಾರ್ಥವನೀಯುತ ಭಕುತ ವತ್ಸಲನು ತಾನಾಗಿ ಅಕಳಂಕಮೂರ್ತಿ ಬೇಟೆಯ ರಾಯನಾ ಗಿರಿಶಿಖರದೊಳಗೆ ನೆಲಸಿಪನು (ಕಂಠೀ. ೫-೯). [ಬೇಂಟೆ + — ಕಾಱ]

**ಬೇಂಟೆಗೊಳವಿ** (ನಾ). ಶಿಕಾರಿಗೆ ಉಪಯೋಗಿಸುವ ತುಪಾಕಿ.– ಬಂದೂಕು : ತಮ್ಮ ನೇಹಿಗರ್ವೆರಸು ಬೇಂಟೆಗೊಳವಿಗಳಂ ತಳೆದು ಪೊಱಮಟ್ಟು ದೇಗುಲದ ಗೋಪುರಪ್ರಾಕಾರ ಮಂಟಪ ವಿಮಾನಂಗಳೊಳ್ ನೆಲಸಿರ್ಪ ಕಿಱುವಕ್ಕಿಗಳನೂದಿ ಮಿಂಟೆಗಳಿಂದಿಟ್ಟು ಕೆಡಪಿ (ಚಕವಂ. ೬-೯). [ಬೇಂಟೆ + ಕೊಳವಿ (< ಕೊಱವಿ)]

**ಬೇಂಟೆಗೋಲ್** (ನಾ). ಶಿಕಾರಿಯಲ್ಲಿ ಬಳಸುವ ಕೋಲು, – ಬಡಿಗೆ : ಪುಳಿಂದರ ಬೇಂಟೆಗೋಲ್ಗಳಂ ಬಡಿಯೆಂಬರ್ . . . ಅಡಿಯೆಂಬರಂಘ್ರಿಗಳನಲ್ಲದೇ ನುಡಿಗಳಂ ನುಡಿಯರಾ ಜನಪದದೊಳು (ಕಾವ್ಯ. ೬-೪೪). [ಬೇಂಟೆ + ಕೋಲ್$_1$]

**ಬೇಂಟೆನಾಯ್**, ಬೇಟೆನಾಯಿ (ನಾ). ಇತರ ಪ್ರಾಣಿಗಳನ್ನು ಶಿಕಾರಿಯಾಡುವ ನಾಯಿ ; ಶಿಕಾರಿಯ ತರಬೇತು ಹೊಂದಿರುವ ನಾಯಿ : ಕಂಪುವಿಡಿದಿಂತು ಬರ್ಕುಂ ಬಿಡದೆ ಬೇಂಟೆನಾಯ್ (ಅಕ್ಕಾಮಾ. ೦-೮೦). **ಬೇಟೆನಾಯಿ :** ಕ್ರಮೇಣ ಟೈಗರು ಸೊಗಸಾದ ಬೇಟೆನಾಯಿಯಾಯಿತು (ಕಾವ್ಯಕು. ೦೬೪); ಬೇಟೆಯಾಡುವುದಕ್ಕೆ ಕಲಿತ ಮಲ್ಲ ಬೇಟೆನಾಯಿಯ ಬೊಂಕ ಮುರಿದ (ಗಾಥೆ). [ಬೇಂಟೆ + ನಾಯ್]

**ಬೇಂಟೆಪಱ** 'ಬೇಂಟೆವಱ' ನೋ.

**ಬೇಂಟೆಪುಲಿ** (ನಾ). ೧. (ಅಲಂ) ಮೃಗಗಳನ್ನು ಬೇಟೆಯಾಡುವುದಕ್ಕೆ ಉಪಯೋಗಿಸುವ ಪಳಗಿಸಿದ ನಾಯಿ. ೨. ಪ್ರಾಣಿಗಳನ್ನು ಬೇಟೆಯಾಡುವುದರಲ್ಲಿ ಹುಲಿಯಂತಿರುವವನು ; ಕಲಿ; ಪರಾಕ್ರಮಿ; P ಬೇಟೆಯಾಡುವ ನಾಯಿಗಳಿಗೆ ಮತ್ತು ಪರಾಕ್ರಮಿಗಳಿಗೆ, ಅವರ ಶಕ್ತಿಯ ಹೆಚ್ಚಳದ ಗುರುತನ್ನು ಸೂಚಿಸಲು ಬಳಸುವ ಪದ: ಬೇಂಟೆಪುಲಿಗಳಿರ, ಕಲಿಯರಿರ, ನಿಮ್ಮೊಳಂ, ಅವನೊಳಂ, ಈ ಅಟ್ಟಿಹಿಸ ಪೊಱೆಯನ್ ಇಟ್ಟೆನ್ (ಅಕ್ಕಾಮಾ. ೨೩-೯೬೦). [ಬೇಂಟೆ + ಪುಲಿ]

**ಬೇಂಟೆಯಾಡು**, ಬೇಟೆಯಾಡು (ಕ್ರಿ). ಪ್ರಾಣಿಗಳನ್ನು ಹಿಂಬಾಲಿಸಿ ಹಿಡಿ ಅಥವಾ ಕೊಲ್ಲು ; ಶಿಕಾರಿಯಾಡು: ಬೇಂಟೆಯಾಡುವಮಂ ಮಧುಮನ್ಮಾಂಸಂಗಳಂ ಸೇವಿಸುವರುಂ . . . ನಾರಕರಾಗಿ ಪುಟ್ಟಿ . . . ದುಃಖಂಗಳನನುಭವಿಸುವರ್ (ಧರ್ಮಾಮೃ. ೯೬-೨೦); ನೀನುಂ ತಾನುಮೊರ್ಮೆ ಗಂಗಾನದೀತೀರದೊಳ್ ಬೇಂಟೆಯಾಡುವಲ್ಲಿ . . . ದಿವ್ಯಜ್ಞಾನಿಗಳಂ ಕಂಡು ಪೊಡೆಮಟ್ಟು (ಶಂಶಧಾ. ೯-೬೬ ವ); ದುಷ್ಟಮೃಗಗಳ ಬೇಂಟೆಯಾಡಿ . . . ಸುಜನಸರರಿಷ್ಟವನು ಪರಿಹರಿಸುತ್ತೈತಂದನು ಸರಾಗದಲಿ (ಶಂಪ್ರಾ.ಶ. ೦-೧೦). **ಬೇಟೆಯಾಡು :** ತುಱುಪಳ್ಳಿಗಳ ನೋಡಿ ಪನಾಳಿ ತಪ್ಪದೆ ಬೇ[ಪಾಠಾಂ. ಬೇಂ]ಟೆಯಾಡಿ ಸಮಸ್ತಬಲಸಹಿತ . . . ನೃಪ ಬಡಿಸಿದನು ಪಾಳಯದ (ಶಂಪ್ರಾ.ಶ. ೦೬-೦) ; ಬೇಟೆಯಾಡುತ ಬಂದ ಸ್ವಾಮಿ ಬೆಟ್ಟದ ಮೇಲೆ ನಿಂದ (ಪ್ರಭುಲಿಂ. ೦-೬೬-೨); ಅಂದು ಬೇರೆ ಬೇಟೆಯು ಸಿಕ್ಕಲೂ ಇಲ್ಲ . . . ಬೇಟೆಯಾಡುವ ಮನಸ್ಸೂ ಇರಲಿಲ್ಲ (ಶ್ರೀರಾಮ. ೫೬). [ಬೇಂಟೆ + ಆಡು$_1$]

**ಬೇಂಟೆವಸದನಂಗೊಳ್** (ಕ್ರಿ). ಶಿಕಾರಿಯ ವೇಷವನ್ನು ಹಾಕಿಕೊಳ್ಳು,– ತೊಟ್ಟುಕೊಳ್ಳು: ಬೇಂಟೆವಸದನಂಗೊಂಡು [ಕ]ಂಡಿಯ ಬಾಗಿಲೊಳು ದಾತ್ತನಾರಾಯಣನುಂ ನಾರಾಯಣನುಮಿರ್ದು ಪುಗಿಲ ಪುಲ್ಲೆಯ ಮೊದಲು ರಮಮುಂ . . . ಎಚ್ಚು ಬಿಲ್ಲ ಬಲ್ಮೆಯುಂ ಮೆಱೆದು (ಶಂಶಧಾ. ೫-೯೬ ವ). [ಬೇಂಟೆ + ಪಸದನ + ಕೊಳ್$_1$]

**ಬೇಂಟೆವಱ**, ಬೇಂಟೆಪಱ (ನಾ). ಶಿಕಾರಿಯ ತಮಟೆ,– ಡೋಲು,– ಹರೆ : ತೊಟ್ಟಿಕ್ಕವಡಂ ಮರವಿಲ್ ಕಟ್ಟಿದ ಪಱೆಪಟ್ಟು ಬೇಂಟೆವಱೆ . . . ತನ್ನೊಳ್ಳಮರೆ ಬೇಂಟೆಯನೊರ್ವಂ ಬಂದು ಪೊಡಮಟ್ಟು (ಶಂಶಧಾ. ೫-೩೬); ಪರೆಪೊತ್ತಱಿಳಿದ್ದು ಬೇಂಟೆವಱೆಯುಂ ಪೊಯ್ವರ್ (ಸಮುಕ. ಅಮಾಂ. I. ೪೬೨-೬೯); ಅಬ್ಬರಿಸಿದುದು ಬೇ[ಪಾಠಾಂ. ಬೇ]ಟೆವಱೆ (ಕೆರಾರಾ.೬-೬-೦೦); ಬೇಂಟೆವಱೆಯಬ್ಬರಮುಣ್ಮಿತು ತದ್ವನಾಂತದೊಳ್ (ಕೃಷ್ಣ. ೨೬-೯೯). **ಬೇಂಟೆಪಱ:** ಪುಚಮಹಾಶಬ್ದಮನೊಲ್ಲದೆ ಬೇಂಟೆಪಱೆಯುಂ ಪೊಯ್ಯ (ರಶೋಕ್ಷು. ೬-೬೩); [ಬೇಂಟೆ + ಪಱೆ$_1$]

**ಬೇಂಟೆವೋಗು** (ಕ್ರಿ). ಮೃಗಗಳನ್ನು ಹಿಡಿಯಲು ಹೋಗು : ಶಿಕಾರಿ ಮಾಡಲು ಹೋಗು : ಬೇಂಟೆಯ ನೆವದೊಳ್ ಬೆಟ್ಟಗಳಂ ಸೋದಿಸುವ ಮೆಂದು ನಿಚ್ಚಂ ಬೇಂಟೆವೋಗೆ (ಶಂಶಧಾ. ೩-೪ ವ); ಆತನೊಂದು ದೆವಸಂ ಬೇಂಟೆವೋಗಿ ವಯೋಧಿಕನಪ್ಪುದೊಂದು ಪುಲಿಯಂ ಕಂಡು (ಶಂಕಕಂ. ೦೦೬-೦೯). [ಬೇಂಟೆ + ಪೋಗು$_1$ (< ಪೋ$_1$)]

**ಬೇಂಟೆಸೋವು** (ನಾ). ಬೇಟೆಯನ್ನು ಅಟ್ಟಿಸಿಕೊಂಡು ಹೋಗುವುದು: ಅಟ್ಟಿದುದು ಸೆರೆಯುಡಗಿತೀ ಬೇಂಟೆಸೋವು ನೆಟ್ಟಗಾಗದೆ ಪೋಯ್ತು, ಬಱಿಯ ಮೆಯ್ನೋವು! (ಅಕ್ಕಾಮಾ. ೩೬-೬೯೩). [ಬೇಂಟೆ + ಸೋವು$_2$ (< ಸೋವು$_1$)]

**ಬೇಕ** (ನಾ). ೧. ಕಪ್ಪೆ. ೨. (ಅಲಂ) ಪುಕ್ಕಲುಮನುಷ್ಯ ; ಭೀರು ; ಹೇಡಿ : ನೀರ ತಡಿಯಲ್ಲಿ ಕಾಲಿಯವಗಂಜಿ ಗುಜ್ಜುಹೊಗುವುದು ಹೊಗಳದಿರಿ ಬಜ್ಜೆದೊಱೆವುದು ಕೀಳುಬೇಕ ಬಜ್ಜಿಸುವುದಿದು ನಿನ್ನ ಪೌರುಷವೆನುತ ತೆಗಡೆಚ್ಚ (ಕೃಷ್ಣಾ.ಚ. ೦೩-೬೦). [<ಸಂ. ಭೇಕ]

**ಬೇಕರಿ** (ನಾ). ರೊಟ್ಟಿ, ಬಿಸ್ಕತ್ತು ಮುಂತಾದವುಗಳನ್ನು ತಯಾರಿಸಿ ಮಾರುವ ಅಂಗಡಿ : ಪ್ರತಿದಿನ ಬೆಳಗಾದೊಡನೆ 'ಬೇಕರಿ'ಗೆ ಹೋಗಿ ಬ್ರೆಡ್ ತೆಗೆದುಕೊಂಡು . . . 'ಸಾಹೇಬರುಗಳಿಗೆ' ಮೋಟಾರುಗಳ ಮೂಲಕ ಕಳಿಸುವುದೂ ಅವುಗಳಲ್ಲೊಂದು ಕೆಲಸ (ಪಾಪೋಲೀ. ೦೩೬). [← ಇಂ. Bakery]

**ಬೇಕರಿಗೊಳ್** (ಕ್ರಿ). ಬೆಂದು ಕರಿಕಾಗು ; ಸೀದು ಹೋಗು ; ಸೀಯು : ಎಲ್ಲಿ ಉಡುಗಿದೆ ಎಲ್ಲಿ ಬೆಂದೆ ಎಲ್ಲಿ ಬೇಕರಿಗೊಂಡೆ ನೀನು ಎಲ್ಲಿ ಹೋದೆ (ಸಕವ. ೪. II, ೩೮-೯೯). [ಬೇ$_1$ + ಕರಿಗೊಳ್]

**ಬೇಕರಿವೋಗು** (ಕ್ರಿ). = ಬೇಕರಿಗೊಳ್ : ಬರಿಯಲ್ಬೇಱೆಟ್ಟ ಕಂಕಾಳಕ ಪೆಡತಲೆಯೊಳ್ ಪೊಕ್ಕು ಕಣ್ಣೋರ್ಪ ಕಯ್ಯಾಲ್ಸೆರೆ ಪಾಶಾಳಕ್ಕೆ ಪತ್ತಿರ್ದೊಣ

ವಸಿಬುಡುಗಿರ್ದೋಂದುರಂ ಪೂಟ್ಟಿ ಬಾಯ್ಬೇಕರಿ [ಶಾಕಾಂ. ಬೆಂಕರಿ, ಬೆಕ್ಕರಿ] ಪೋದಂತಿರ್ದ ಬಾನಂಗುಳಿ ಗಿಟಗಿಟಜಂತ್ರಂಬೊಲಾಗಿರ್ದ ಮೆಯ್ ಮೆಯ್ಸುರಿ ಚಿದ್ರೂಪಕ್ಕಿ ಪಕ್ಕಾಗಿರೆ ಚರಿಗೆಗುಣಲ್ಪುದನೋರ್ವಂ ಮುನೀಂದ್ರಂ (ಅರ್ಜಕೆ. ೬-೨; ಕಶರ. ೯-೨೦೩ ನೋ); ವಾದಿಗಳೆರ್ದೆಗಳಂತು ಬೆಂದು ಬೇಕರಿ ಪೋಗದಿರವೆಂದು ತೋರ್ಪಂತೆ ತಂದ ವಿತಾನಾಂಬರಂದೋಳ್ ತತ್ಕಥನ ಚೆಲ್ಲವಂ ವಿಜ್ಞಾಪಿಸೆ (ಶಬ್ದಾಶಾ. ೩-೦೬). [ಬೇ$_1$ + ಕರಿಪೋಗು]

**ಬೇಕಾಯದೆಶೀರ**, ಬೇಕ್ಕಾಯಿದೇಶೀರ, ಬೇಕಾಯ್ದೆಶೀರ (ಗು). ೧. ಕಾನೂನುಬಾಹಿರವಾದ; ಅಕ್ರಮವಾದ : ನನ್ನಗೂಡ ಬೇಕಾಯದೆಶೀರ ಸಂಬಂಧ ಇಟ್ಟುಗೊಂಡಿದಿ ಅಂತ. ಅದನ್ನು ಮುಚ್ಚಿಗೊಳ್ಳಾಗ ವಸ್ತ್ರಾ ಪಡವಿ ಅಂಟಿಸತಿ (ಕಶ್ಯಕ್ಕ. ೦೨೦); ಆದರೆ . . . ಬೇಕಾಯದೆಶೀರ ಮಗು. ಅಂದರೆ ಒಂದು ಸಮಸ್ಯೆಯಾಗುವುದು (ಜುಕ್ಕ. ೯೩). (ನಾ). ೨. ಕಾನೂನುಬಾಹಿರವಾದುದು; ಅಕ್ರಮ. **ಬೇಕಾಯಿದೇಶೀರ** : ೨. ಧರ್ಮ ಶಾಲೆಯ ಕೋಣೆಯನ್ನು ಬಾಡಿಗೆಯಿಲ್ಲದೇ ಆರು ತಿಂಗಳಗಟ್ಟಲೆ ಒಬ್ಬ ಲಫಂಗ ಹುಡುಗನಿಗೆ ಇರಲು ಕೊಟ್ಟುದು 'ಬೇಕಾಯಿದೇಶೀರ' ಆಗುವುದೆಂದೂ . . . ಅವರಿಗೆ ತಿಳಿಸಿದರು (ಗಂಗಾಶಾ. ೦೦೪). **ಬೇಕಾಯ್ದೆಶೀರ** : ೨. ಕಾಂಗ್ರೆಸ್ ಕಮಿಟಿಗಳು ಬೇಕಾಯ್ದೆಶೀರ ಎಂದು ನಿಶ್ಚಯಿಸಲ್ಪಟ್ಟವು (ಕಾಂಗ್ರೆಸ. ೨೬). [← ಮರಾ. ಬೇಕಾಯದೇಶೀರ್]

**ಬೇಕಾಯಿದೇಶೀರ** 'ಬೇಕಾಯದೆಶೀರ' ನೋ.

**ಬೇಕಾಯ್ದೆಶೀರ** 'ಬೇಕಾಯದೆಶೀರ' ನೋ.

**ಬೇಕಿ** (ನಾ). ೧. ಹೆಣ್ಣು ಕಪ್ಪೆ. ೨. ಕಪ್ಪೆಯ ಮರಿ ; ಸಣ್ಣ ಕಪ್ಪೆ : ಈ ಕಥೆ ಸಜ್ಜನರಿಗೆ ಕರ್ಣಾಮೃತ ಕಾಕಾಪುರುಷರ್ಗತಿವಿಷವು ಬೇಕಿ ಶಾವರೆಯೊಳು ಬಿದ್ದ ರೀತಿಯೊಳು ಮತ್ತಾ ಕುಜನರು ದೂಷಿಪರು (ಪೂಜ್ಯತ. ೦-೩೬) [<ಸಂ. ಭೇಕೀ]

**ಬೇಕು$_1$** (ನಾ). ಅವಶ್ಯಕತೆ; ಅಗತ್ಯ : ತೇಗದ ಉಪಯೋಗ ಹೆಚ್ಚಾಯಿತು; ಜನದ ಬೇಕುಗಳೂ ಅಧಿಕರಿಸಿದವು (ಹಕುತೂ. ೨೯೦) : ಹೊಸ ಹೊಸ ರುಚಿಗಳೂ ಬೇಕುಗಳೂ ಕೊನರಿದಂತೆಲ್ಲ ಸಸ್ಯಸಂಬಂಧವಾದ ಉದ್ಯಮಗಳೂ ಕಸುಬುಗಳೂ ವಿರ್ಪಡುವುದು ಅನಿವಾರ್ಯವಾಯಿತು (ಜಾಶಗಿ. ೬೦). [<ಬೇಕು$_2$]

**ಬೇಕು$_2$** (ಅ). ಇಷ್ಟವನ್ನಾಗಲೀ ಅಗತ್ಯವನ್ನಾಗಲೀ ಸೂಚಿಸುವ ಒಂದು ಅವ್ಯಯ : ಇತ್ತುದನೆ ಕೊಂಡು ತಣಿಯದೆ ಮತ್ತಿನ್ನುಂ ಬೇಕುಮೆಂದು ಪಾಯ್ವ ಮೂರ್ಖರ್ (ಸವುಶ. ಕಸುಬಂ. I, ೩೯೦-೨೬); ಬೇಕು ತನಗೊಂದ ವಳಿಯೆಂದಳು ನೋಡಿ ಸುರಗಣವ (ಸಂಶಕ. ೦೩-೯೯); ಹತ್ತೀಬೆಳೆಗೆ ಉಪ್ಪ ಹವೆ ಬೇಕು (ಹುಂಬದು. ೯-೨೬); ಶಾಯಿ ಬೇಕು ಇಲ್ಲವೆ ಬಾಯಿ ಬೇಕು (ಗಾದೆ). **ಬೇಕಾಬಿಟ್ಟಿ** = ೧. ಇಷ್ಟವಿಲ್ಲದೆ; ಮನಸ್ಸಿಲ್ಲದೆ: ಅಂಥ ಬೇಕಾಬಿಟ್ಟಿ ಕೆಲಸವನ್ನು ಮಾಡಿದವಳೂ ಅಲ್ಲ (ಸಂವಕೊ. ೨೨೯) ; ಅವನದು ಏನೋ ಬೇಕಾಬಿಟ್ಟಿ ಪಾಠ ಹೇಳುವ ವಿಧಾನವಾಗಿರಲಿಲ್ಲ (ರಾಗಿತ. ೩೩). ೨. ಸುಲಭವಾಗಿ ; ಅನಾಯಾಸವಾಗಿ : ಬೇಕಾಬಿಟ್ಟಿ ಬಂದುಬಿಡುತ್ತ ಅಂದುಕೊಂಡಿದ್ದೀಯೇನು? ಕಷ್ಟಪಟ್ಟರೆ ಫಲವುಂಟು (ಸ್ವಾಮಿಸ್ಯ. ೦೬೯). [< ಬೇಡು$_1$]

**ಬೇಕೂಪ** 'ಬೇಕೂಫ್' ನೋ.

**ಬೇಕೂಫ್**, ಬೆವಕೂಫ್, ಬೇಕೂಪ, ಬೇಕೂಫ, ಬೇವ್‌ಕೂಫ್ (ನಾ). ಅವಿವೇಕಿ; ತಿಳಿಗೇಡಿ; ಮೂರ್ಖ: ರೊಕ್ಕವಿಲ್ಲದಿದ್ರ ಮೋಟಾರ ತರಬಂತ ಯಾವ ಹೇಳಿದ್ನೋ ನಿನಗೆ ಬೇಕೂಫ್ (ಮುಗಿಸು. ೩). **ಬೆವಕೂಫ್** : ಬೆವಕೂಫ್ ಲಂಚಗುಂಡಿ ಚೋರರು ಬಹಳ ಜನಯಿಧಾರೆ (ಹೃದಶ. ೩೦). **ಬೇಕೂಪ** : ಇವನೂ, ಈ ಬೇಕೂಪ ನಮ್ಮ ಟ್ರಾನ್ಸ್‌ಪೋರ್ಟ್‌ನಾಗೆ ಹೆಂಗೆಂಗೆ ಶಾಲಿಕ್ಕಿದ . . . ನನಗೆ ಗೊತ್ತಿಲ್ಲಾ (ಸಂಗಂ. ೨೬). **ಬೇಕೂಫ** : ನೀನೆ ಕಿತ್ತು ನಿನ್ನ ಜುಟ್ಟಿನಲ್ಲಿ ಸಿಕ್ಕಿಸಿಕೊಂಡೆಯೇನೋ ಬೇಕೂಫ (ಹಕುಹೊ. ೨೦೬). **ಬೇವ್‌ಕೂಫ್**: ಯೆಲೋ ಬೇವ್‌ಕೂಫ್ ಅನಾವಶ್ಯಕ ತಲೆಬೊಲ್ಲಾ ಪರಟಬೇಡ (ಬೇಕರು. ೦೧). [← ಪಾರ. ಬೇವಕೂಫ್; ಹಿಂ. ಬೇಕೂಫ್, ಬೇವಕೂಫ್; ಮರಾ. ಬೇಕೂಬ್, ಬೇವಕೂಫ್, ಬೇವಕೂಬ್]

**ಬೇಕೂಫ** 'ಬೇಕೂಫ್' ನೋ.

**ಬೇಕೊಂಡಿ** (ನಾ). ಒಂದು ಬಗೆಯ ಔಷಧೀಸಸ್ಯ : ಬೇಕೊಂಡಿಯ ಸೊಪ್ಪಂ ಹಳೇಎಣ್ಣೆಯಲ್ಲಿ ಕಾಸಿ ಬಿಡಲು ಕಿಂಬರವು ವಾಸ್ಯಾಂ (ಬಕ್ಕಿಶಿ. ೬). [?]

**ಬೇಕೋಲು** (ನಾ). (ಉಕ) ಒಂದು ಬಗೆಯ ಕೋಲು; ಕವೆಗೋಲು (?) : ಹೊಲ ಮಾಡುವವರು ಸಹ ತಮ್ಮ ತಮ್ಮ ಈಟಿ ಬೇಕೋಲು ಮುಂತಾದ ಆಯುಧಗಳನ್ನು ತೆಗೆದುಕೊಂಡು ಅವರಿಗೆ ಬೆನ್ನಾಸರೆಯಾಗಿ ಬಂದರು (ಇಂಗ್ಲಂಡ. ೨೩). [ ? + ಕೋಲು$_1$ ( < ಕೋಲ್$_1$ ) ]

**ಬೇಗ$_1$** (ನಾ). ೧. ತ್ವರೆ; ತೀವ್ರತೆ ; ರಭಸ : ಯುವತಿ ಹಿಮೋಪಲ ಪ್ರತಿಮೆಯಂ ನಳಿತೋಳ್ಗಳಿನಾಗಳಾಗಳಪ್ಪುವ . . . ಶರಿಕಾಂತ ಪುತ್ರಿಕೆಯ ಮೇಲೆ ನಿಜಾಂಘ್ರಿಯುಗಾಗಳಾಗಳಿಕ್ಕುವ ಪಿರಿದಪ್ಪ ಬೇವಸದೊಳಂ ತಪೆದಿರ್ದಳದೊಂದು ಬೇಗವುಂ (ಕಾದಂಅ. ೨೨೬); ಗರ್ವಪರ್ವತಾರೂಢನಾಗಿ ಪರ್ವತಮಂ ತಾಗೆ ಬೇಗದೊಳ್ ಕೆಡೆವ ಕೋಡುಂ ಗಲ್ಗಳಂ ಕೋಡೊಳಾಂತು (ಹಂಪಕಾ. ೯೬-೦೦) ; ಬೇಗದಿಂ ಬರಿಯ ನೀಂ ಪೋಪೋಗು (ಶಬ್ದಶಾ. ೩೩); ಕಂಪನಬರ ಕಾಲ ಬೇಗವುಂ ಕರುಣದಿಂದಂಡಲೆಯಬಾರದೆಂದೆನುತೆ (ಕಂಥ. ೩೨-೯೩). ೨. ವೇಳೆ; ಸಮಯ; ಹೊತ್ತು : ಗೋವರ್ಧನಭಟ್ಟಾರರ್ ಪಿರಿದುಂ ಬೇಗಂ ನೋಡುತ್ತಿರ್ದಿಂತೆಂದುದ್ದೇಶಂಗೆಯ್ದರ್ (ವಡ್ಡಾರಾ. ೬೯-೩) ; ಆ ಮದದಮರ್ಗಂತ್ತೇನೆತಹೊಳಾದ್ದುದಸಿನಿಸಾನುಂ ಬೇಗದೊಳೆ ಕಳಿದು ತೋಟಿನೆ ರಣದೊಳ್ (ಆದಿಪು. ೦೯-೨೩); ಕಿಜಿದಾನುಂ ಬೇಗಕ್ಕೆ ಭೋಂಕನೆ ಪೊಣ್ಮಿದ ಭಯಂ ಬೆರಧ್ಯಾನವುಂ ಕೇಳ್ವ (ಹಂತಕಂ. ೯೦-೬). [< ಸಂ. ವೇಗ]

**ಬೇಗ$_2$** 'ಬೇಗಂ$_1$' ನೋ.

**ಬೇಗಂ$_1$**, ಬೇಗ$_2$ (ಅ). ತ್ವರೆಯಾಗಿ ; ಶೀಘ್ರವಾಗಿ; ಜಾಗ್ರತೆಯಾಗಿ : ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಜಪೋಲ್ಮಂಜುಪೋಲ್ಕೋಜ್ ಬೇಗಂ ಪಿರಿಗುಂ (ಎಕ. II (R), ೯೮-೨; ೯೩ರು ೫೫); ವಿಷಧರ ನೀಂ ವಿಷಧರನಾಗದೆ ಬೇಗಂ ವಿಷಯಾಮಿಷದಿಷಮನುಗುಟ್ಟು ನಿರ್ವಿಷನಾಗಾ (ಆದಿಪು. ೨-೦೬); ಮನವಲ್ಲದ ಮನದೊಳಗ್ಗವಣೆಪೂಗಳಂ ಬೇಗಂ ತಂದಂತಂತೆ ಪೂಜೆಗೆಯ್ದಾರೋಗಣೆಗಿತ್ತು (ಬಶರ. ೯-೯೦). **ಬೇಗ$_2$**: ತಾಯ್ಗಳುಮ್ಮಳಿಸಲಾಗದು ಕಜುಗಳಂ ಬಿಡಿರೆ ಬೇಗ ಮೊಲೆತೊರೆದು ಮಜುಗುವವು ಕಜುವುಂ ಬಿಡಿರೆ (ಬಶರ. ೯-೦೦೬); ಉದಯವಾಗದ ಮುನ್ನ ಕಳನೊಳು ಹೊದಜುಗಟ್ಟಿದರೀ ತ್ರಿಗರ್ತರು ಕದನಕಿವ್ಮೊಳಗಳವಿಗೊಡುವುದು ಬೇಗ ಬಹುದೆಂದು (ಕುಮಾದ್ಯೋ. ೨-೦೩); ಕಡಿದು ರಿಪುಗಳ ಶಿರವನಾನೆಕುದುರೆಯ ಗಡಣಗಳನು ಬೇಗ ಪಿಡಿದು . . . ಒಪ್ಪಿಸುವೆವೆಂಬ ಮನ್ನೆಯರೆಡೆವಿಡದೆಸೆದರಂ (ಕಂಶಶ. ೯-೩೯).

**ಬೇಗಬೇಗಂ, ಬೇಗಬೇಗ** (ದ್ವಿರುಕ್ತಿ) : ಕೈಯ ಕುಂಚವುಂ ಬೇಗಬೇಗಂ ಬೀಸಲೊಡನೆ (ಶಬ್ದಶಾ. ೨೬೪); ಬೇಗ ಬೇಗ ಅರ್ಚನೆ ಪೂಜನೆಯ ಮಾಡುವುದು (ಬಶವ. ೦೬೩). [<ಬೇಗ$_1$]

**ಬೇಗಂ$_2$** (ನಾ). ನವಾಬನ ಹೆಂಡತಿ; ದೊರೆಸಾನಿ; ರಾಣಿ : ನೀನೇ "ಬೇಗಂ" ಎಂಬ ಹೆಸರನ್ನು ಧಾರಣೆಮಾಡುವುದಿಲ್ಲವೇಕೆ ? ಕುಮಾರ ಸಲೀಮನು ನಿನ್ನನ್ನು ವಿವಾಹಮಾಡಿಕೊಂಡು ಖಾಸಾಬೇಗವಾಗಿ ಮಾಡಿಕೊಳ್ಳುವನೆಂದು ಕೇಳಿದೆನು (ಕಶಾಕಬ. ೬೩).

[ ← ತುರ್ಕಿ . ಹಿಂ. ಮರಾ. ಬೇಗಮ್]

**ಬೇಗಡ$_1$** (ನಾ). [ಸಂಗೀತ] ಒಂದಂ ರಾಗದ ಹೆಸರು: ನಾಗಧ್ವನಿಯೆಂಬಿವು ಗಳು ಉಪಾಂಗಗಳು; ನಂತರ ಭಾಷಾಂಗಲಕ್ಷಣದವುಗಳು (ಹೆಸರಿಸಲ್ಪಡುತ್ತವೆ): ಬಿಲಾಹುರೀ, ಬೇಗಡ, ನಂತರ ಪೂರ್ಣಚಂದ್ರಿಕಾರಾಗ (ಕಕುಶ್ರ. ೦೬೦). 'ಬೇಗಡೆ$_1$' ಪರಾ. [ಸಂ. ಬೇಗಡಾ]

**ಬೇಗಡ$_2$**, ಬಿಗಡ$_1$, ಬೇಗಡೆ$_3$ (ನಾ). (ವಜ್ರ, ರತ್ನ ಮುಂತಾದುವುಗಳಿಗೆ ಮಾಡುವ) ತೂತು; ರಂಧ್ರ : "ಬೇಗಡಮೆನೆ [ಪಾಠಾಂ. ಡೆಯೆನೆ] ಬೆಜ್ಜಮೆಂದು ತಿಳಿಗೆ ವಿದಗ್ಧರ್" (ಛಾಕಿವಿ. ೦೬) ; ರತ್ನದ ಪುಂಜವ ಬೇ [ಪಾಠಾಂ. ಬೆ]ಗಡವನಿಕ್ಕುವಲ್ಲಿ ಮೊನೆ ಮುಂದೆ ಸವೆದ ಮತ್ತೆ ಪೂರ್ವಕ್ಕೆ ಉತ್ತರವಿಲ್ಲ (ಸಕಲ.ಶ. II. ೯೯೦-೦೯೦೦). **ಬಿಗಡ$_1$** : ರತ್ನ ಮುತ್ತು ಬಿಗಡವ ನಿಕ್ಕಿದಲ್ಲಿ ಉದುರಿದ ಚೂರ್ಣದಲ್ಲಿ ಕಳೆ ಕಾಂತಿ ಇಲ್ಲ (ಮೋಳಸಾ. ೦೯೨-೬೬). **ಬೇಗಡೆ$_3$** : ಈಗಲಿ: ಕದನದಲಿ ವಜ್ರಕೆ ಬೇಗಡೆಯ ಮಾಡಿದನದಾವನು (ಶುಬ್ಬುಮೃ. ೦-೦೦); ಪರ್ವತವ ಬೇಗಡೆಯ ಕಳಿಯಲು ಸಾರ್ವ ತೆಬಿದಿ ಪಿಪೀಲಿಕಂಗಳು ಗರ್ವಿತಾಧಿಕಕರಗಳೆಪ್ಪಿದವಿಭದ ಕಾಯದಲಿ (ತತ್ವುಂ. ೫-೬೬). [ ? / ಹಿಂ. ಬೇಗಡೀ=ರತ್ನದ ಕೆಲಸ ಮಾಡುವವನು]

**ಬೇಗಡವೆಸ**, ಬೇಗಡೆವೆಸ (ನಾ). (ವಜ್ರ ಅಥವಾ ರತ್ನಗಳಿಗೆ) ವೆಜ್ಜ ಮಾಡುವ ಅಥವಾ ರಂಧ್ರ ಕೊರೆಯುವ ಕೆಲಸ : ಕಡಪದ ಕಂಡರಣೆಯ ಬೇಗಡವೆಸದ ಬೆಡಂಗು . . . ಜಡಜಜಮಯ ಸುರವರ್ಧಕಿಗೊಡರಿಸುವುವು ಕರ್ಮಕಾಶಲದ ಕೌಶಲವಂ (ಪಂಪಾಶ. ೧-೬೫) ; ಕಡಪದ ಕಂಡರಣೆಯ ಬೇಗಡೆವೆಸದ ವಿಚಿತ್ರಮಪ್ಪ ಕೆಲಸದ ಗತಿಯಂ ನಡೆ ನೋಡಿ(ಜಾರಖ. ೦-೦೫೬). **ಬೇಗಡೆವೆಸ** : ಕಡಪದ ಕಾಂತಿ ಕಂಡರಣೆಯುನ್ನತಿ ಚಿತ್ರದ ಚಿತ್ರವೃತ್ತಿ ಬೇಗಡೆವೆಸದೇಟ್ಗೆಯಲ್ಲಿ ಪೊಸತಾದುದು (ಕಂಪ್ರಕ. ೦-೦೯೪). [ಬೇಗಡ$_2$ + ಬೆಸ$_1$]

**ಬೇಗಡಿಸು** (ಕ್ರಿ). (ವಜ್ರ, ರತ್ನ ಮುಂತಾದುವುಗಳಿಗೆ) ವೆಜ್ಜ ಮಾಡು; ರಂಧ್ರಮಾಡು ; ತೂತುಕೊರೆ: ಪುಂಜವ ಬೇ[ಪಾಠಾಂ. ಬೆ]ಗಡಿಸುವ ವಜ್ರದ ಮೊನೆಯಂತೆ ಲಿಂಗದ ಭೇದಗೂಡಿಯೆ ಅಂಗ ನಿರಿಯಾಣವಾದಲ್ಲಿ ಅದು ಲಿಂಗಾಂಗಿಯ ಸ್ಥಲ (ಸಕಲ.ಶ. II. ೦೦-೫೦). [ಬೇಗಡ$_2$ + —ಇಸು$_3$]

**ಬೇಗಡೆ$_1$** (ನಾ). [ಸಂಗೀತ] ಒಂದು ರಾಗದ ಹೆಸರು : ೨೯ನೇ ಮೇಳಕರ್ತ, ಧೀರಶಂಕರಾಭರಣದಲ್ಲಿ ಜನ್ಯ . . . ವೀರರಸಪ್ರಧಾನರಾಗ (ಸಂಗೀತಂ. ೦೯೫); ಬೇಗಡೆರಾಗದ 'ತ್ಯಾಗರಾಜಾಯ ನಮಸ್ತೆ' . . . ಗರುಡಧ್ವನಿ ರಾಗದ 'ಆನಂದಸಾಗರಮೀ'— ಈ ಕೆಲವು ಕೃತಿಗಳನ್ನು ಮಾತ್ರ ಅವರು ತಮ್ಮ ಕಚೇರಿಗಳಲ್ಲಿ ಹಾಡುತ್ತಿದ್ದರು (ಸಂಗೀತ. ೫). [ಸಂ. ಬೇಗಡಾ]

**ಬೇಗಡೆ$_2$** (ನಾ). ೧. (ಅಲಂಕಾರಕ್ಕಾಗಿ ಬಳಸುವ) ಹೊಳಪಿನ ತಗಡು; ತಷರದ ರೇಕು : ಮಾಣಿಕ್ಯಮಿರ್ದಂತೆ ಗಾಜಂ ಕಟ್ಟುವರೆ ಬಂಗಾರ ವಿರ್ದಂತೆ ಬೇಗಡೆಯಂ ತೊಡುವರೆ (ಶ್ರೀಪ. ೨೯-೨೦ ಪ); ಆ ಕಂಭಗಳಿಗೆ ಸುತ್ತಿದ್ದ ಕೆಂಪು ಬಿಳಿಯ ಬಟ್ಟೆಯ ಪಟ್ಟಿಗಳನ್ನೂ ಹೊಳೆಯುತ್ತಿದ್ದ ಬೇಗಡೆಯ ಕಾಗದದ ಹೂವು ಮೊದಲಾದ ಅಲಂಕಾರಗಳನ್ನೂ . . . ನೋಡಿದರು (ಮಲೆಮ. ೬೩೫). ೨. (ಅಲಂ) ಡೌಲು ; ಆಡಂಬರ ; ವೈಭವ : ಇಂಗ್ಲೆಂಡ್‌ನಗರದ ಯಾವ ವಿಲಾಸ ವಿಭ್ರಮಗಳೂ ಬೆಡಗು ಬೇಗಡೆಗಳೂ ಅವರ ಬಳಿಗೆ ಬರಲಾರದಾಗಿದ್ದುವು (ರಾಜಚ. ೨೯); ಮುಂಬರುವ ವಿಕಾಸದಲ್ಲಿ ತಾಯಿಗರುಳಿನ ಸಹಜವಾದ ಮೊರೆಯಿದೆ. ಅಲಂಕಾರಗಳ ಬೇಗಡೆಯಿಲ್ಲ (ಕವಾಕ. ೩೫೦). [←ಮರಾ. ಬೇಗಡ, ಬೆಂಗಡ. / ತೆಲು. ವೇಗಡ=ಕಾಗೆಬಂಗಾರ]

**ಬೇಗಡೆ$_3$** 'ಬೇಗಡ$_2$' ನೋ.

**ಬೇಗಡೆಗಳೆ** (ಕ್ರಿ). ೧. = ಬೇಗಡಿಸು: ಬೇಗಡೆಗಳೆಯದ ರತ್ನವೃಷ್ಟಿಯ ವೀತರಾಗದಾ ನೃಪನೆಸಗಿದನು (ಶಶಿಕ. ೬೬-೬೦). ೨. ತೂತು ಕೊರೆ ; ಛಿದ್ರಿಸು : ಹಳಚಿದನು ದಳಪತಿಯನವನಿಪತಿಲಕನೆಚ್ಚನು ನೂಜು ಶರದಲಿ ಕಳಚಿ ಕಯ್ಯೊಡನೆಚ್ಚು ಬೇಗಡೆಗಳೆದನವನಿಪನ (ಶುಬ್ಬುಕ. ೨-೫೦). [ಬೇಗಡೆ$_3$ (< ಬೇಗಡ$_2$) + ಕಳೆ$_1$]

**ಬೇಗಡೆವೆಸ** 'ಬೇಗಡವೆಸ' ನೋ.

**ಬೇಗನೆ** (ಅ). ತ್ವರೆಯಾಗಿ; ಶೀಘ್ರವಾಗಿ : ರಾಯರು ತಮ್ಮ ಕಾರ್ಯವನ್ನು ಇಷ್ಟು ಬೇಗನೆ ಪ್ರಾರಂಭಿಸಿಬಿಡುವರೆಂದು ನಾನು ಕನಸಿನಲ್ಲಿಯೂ ಊಹಿಸಿರಲಿಲ್ಲ (ರಾಯಕ. ೫೨); ಬೇಗನೆ ಆಗಲೆಂದು ಹಾರೈಸುವುದರ ಹೊರತಾಗಿ ಹೆಚ್ಚು ಹೇಳಲು ಸಾಧ್ಯವಿಲ್ಲ (ದ್ಯಾವಿ. ೬೬). [ ಬೇಗ$_1$ + — ಅನೆ$_1$ ]

**ಬೇಗಯ್ಕೆ** (ನಾ). ವೇಗ ; ಶೀಘ್ರತೆ (?) : ಕಡುಗಯ್ಯನಾಗಿ ಶೀಘ್ರಸಂಧಾನಮಿಸುವಶ್ವಗ್ರೀವನ ತಕ್ಕುಂ ಬೇಗಯ್ಕೆಯುಂ ಕಿಡೆ (ಶಾಂತಿ. ೫-೬೦ ಪ). [ < ಬೇಗ$_1$ ]

**ಬೇಗವಣೆತು** (ನಾ). [ಸಂಗೀತ] ಒಂದು ಮುಖ್ಯತಾಯ ; ಏರುವ ಇಳಿಯುವ ಸ್ವರಗಳ ಬೆರಕೆಯಲ್ಲಿ ಸ್ವರಗಳನ್ನು ಸ್ಥಿರವಾಗಿ ಕಂಪಿಸುವುದು (?) : ನಿಸ್ಸರಡೆ ರಂಗರಕ್ತಿ ಬೇಗವಣೆತು ತರಹರಂ ಸುರಿವೊಟ್ಟಜೆ ದಾಳವಾಳಂ ಪದಿರ್ಪೊಜೆ ಕೊಂಕು ಕಮ್ಮಣೆಪೆಸರಂ ಬೆಡಂಗುಮಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೦೬-೬೬ ಪ). [ ? ]

**ಬೇಗಾರ್**, ಬೇಗಾರ, ಬೇಗಾರಿ (ನಾ). ೧. (ಸರ್ಕಾರದವರು) ಕೂಲಿಯಿಲ್ಲದೆ ಮಾಡಿಸಿಕೊಳ್ಳುವ ಕೆಲಸ ; ಬಿಟ್ಟಿಕೆಲಸ : ಬೇಗಾರ್ ಮತ್ತು ಅದೇ ರೂಪದ ಇತರ ಬಲಾತ್ಕಾರ ದುಡಿಮೆಯನ್ನು ಪ್ರತಿಷೇಧಿಸಲಾಗಿದೆ (ಶಾಸಾನ. ೦೫). **ಬೇಗಾರ** : ೨. ಬಿಟ್ಟಿಯಾಗಿ ಕೆಲಸ ಮಾಡುವವನು ; ಬಿಟ್ಟಿಚಾಕರ : ಯಿ ಗ್ರಾಮದ ಪಣಕಟ್ಟು ಆಯಾಗಾರು ಶಾನಬೋಗ ಪುಟರಂಗಪ ತಳವಾರವೋಬಾ ಬೇಗಾರ ದಾನ ತಿಮ್ಮ (ಎಕ. XI. ಹಿಂದು. ೩೬-೦೯; 1533?) ; ಗ್ರಾಮದ ಬೇಗಾರರು (ಮಾದಿಗರು) ಖಾಸಾಕುದುರೆಗೆ ದಿನ ೧ಕ್ಕೆ ಹಸಿಹುಲ್ಲು ೧೦ ಹೊರೆ ಪ್ರಕಾರ ಸರದೀ ಮೇರೆ ತರಬೇಕು (ಶಕ್ರಪ. ೪೪) ; ಒಂದೆರಡು ಸಲ ಬೇಗಾರರಿಗೆ ಕಷ್ಟವಾಗಿದ್ದಾಗ ನಾಟಕ ಆಡಿ ಒದಗಿಸಿಕೊಟ್ಟವು (ಮಲೆ. ೬೫). ೩. ಒಂದು ಬಗೆಯ ತೆರಿಗೆ : ಹೊನ್ನ ಕ್ಷೇತ್ರಲ್ಲದೆ ಹೊಲ ಮಾಡಬಾರದು ಬಿಟ್ಟಿ ಬೇಗಾರವಿಲ್ಲದೆ ಊರೊಳಗಿರಬಾರದು (ಪಕಸಂ. ೬೦-೬೦); ಆ ಪೊಸಲ ಕಯಲೂ ಮನೆದೆರೆ ಬಿಟಿ ಬೇಗಾರ ಕಾಣಿಕೆ ಕಡಾಯ ಏನನೂ ನಾಉ ಕೊಳ ಸಲ್ಲದು (ಎಕ. X. ಮುಳಬಾ. ೦೬೨-೦೯; 1496). **ಬೇಗಾರಿ**: ೨. ಚಿತ್ರದುರ್ಗ ಮೊದಲಾದ ಪ್ರಾಂತಗಳಲ್ಲಿ ಬೇಗಾರಿಗಳು ಎಂಬ ಸಂಸ್ಥೆ ಇದೆ (ಜಾನಪ. ೫೫). ೩. ಯಿ ಗ್ರಾಮದ ರೈತರಿಗೆ ಕಾಲ್ವೆಕೆಲಸ ಹೊರ್ತು ಕಡಮೆ ಬಿಟ್ಟಿ ಬೇಗಾರಿ ಮುಂತಾದ ಉಪದ್ರವುಯಿಲ್ಲದ ಹಾಗೆ ನಡ್ಸುವಂತೆಯೂ (ಮೈಕಾ. ೦೪೬೯, ೪೨-೦೦೬; 1825); ಆದವಾನಿಯಂಥಾ ಬಸಾಲತ್ ಜಂಗನ ರಾಜಧಾನಿಯಲ್ಲೂ ತಹಸೀಲಿನ ಬಿಟ್ಟಿಬೇಗಾರಿಗಳಿಗೆ ಮಿತಿಯಿರಲಿಲ್ಲ (೪ಲಪ. ೬೬೩). [←ಪಾರ. ಹಿಂ. ಬೇಗ್ಹಾರ್, ಬೇಗಾರಿ ; ಮರಾ. ಬಿಗಾರ್, ಬಿಗಾರೀ, ಬೇಗಾರ್, ಬೇಗಾರೀ]

**ಬೇಗಾರ** 'ಬೇಗಾರ್' ನೋ.

**ಬೇಗಾರಿ** 'ಬೇಗಾರ್' ನೋ.

**ಬೇಗು** (ಕ್ರಿ). ಅತಿ ಆಸೆಪಡು ; ದುರಾಸೆಪಡು : ಪಥೀ ನಿನ್ನ ಹೊಟ್ಟೆ ಕಡಿಯಾ! ಏನು ಬೇಗ್ತದೋ ಪಡಪೇಗುಟ್ಟಿದ್ದ! (ಮಲೆಮ. ೨೦). [ ? ]

**ಬೇಗುದಿ$_1$** (ಕ್ರಿ). ೧. ತೀವ್ರವಾಗಿ ಕುದಿ ; ಚೆನ್ನಾಗಿ ಬೇಯು. ೨. (ಅಲಂ) ಸಂತಾಪಗೊಳ್ಳು; ತಪಿಸು : ಆ ದೈತ್ಯನು ತಾಗಿ ಹೊದಕುಳಿಗೊಂಡು ಬೇಗುದಿದುದ್ದೈ ವ್ಯೋಮಗಾಮಿಗಳ ವೇಣ್ ಕಾಮರೂಪಿಗಳ ಕತಬಲಿಯ ಭೀಮಸೇನಾಬ್ಧಿ (ಶ್ರೀರಾಮಾ. ೬೪೨-೦೯). [ಬೇ$_1$ + ಕುದಿ$_1$]

**ಬೇಗುದಿ₂** (ನಾ). ೧. ತೀವ್ರವಾದ ಬೇಗೆ; ಅತ್ಯುಷ್ಣ: ಇಂತಪ್ಪ ಬೇಸಗೆಯೊಳ್ ಬೇಗುದಿಯಪ್ಪ ಮಹಾರಣ್ಯದೊಳ್ (ಧರ್ಮಾಮೃ. ೪-೯೭ ವ). ೨. (ಅಲಂ) ಸಂತಾಪ; ದುಃಖ; ತಳಮಳ : "ಬೇಗುದಿ, ಉಬ್ಬೆಗಂ, ಅದವಟಲ್— ಈ ೩ ಸಂತಾಪಂ" (ಕಶಬ್ದಾ. ೫೭-೨೨೭); ವೈರಾನುಬಂಧದ ಬೇಗುದಿಯು ದುಮ್ಮಾನ ದಳವೇರುದುದು ಪೇಳುತ್ತು ಭೀತಿ ಭೂಪತಿಗೆ (ಕುವ್ಯಾಗ. ೧-೬೨) ; ಯಾರ ಸಾಹಚರ್ಯದಿಂದಲೂ ಅವನ ಬೇಗುದಿ ಆರುವಂತಿರಲಿಲ್ಲ (ಕೂಕಸ. ೩೦೯). [ < ಬೇಗುದಿ₁ ]

**ಬೇಗುದಿಗೊಳ್**, ಬೇಗುದಿಗೊಳು, ಬೇಗುದಿಗೊಳ್ಳು (ಕ್ರಿ). ೧. (ಬಿಸಿಲಿನ ತಾಪ ಅಥವಾ ಝಳದಿಂದ) ಬೇಗೆ ಹೊಂದು; ಬಳಲು : ಬಿಸಿಲೊಳ್ ಬೇಗುದಿಗೊಂಡವಂ ತಣ್ಗೊಳನಂ ಪೊಕ್ಕಂತೆಯುಂ . . . ಪಿರಿದಪ್ಪ ಸಂತಸಮನೆಯ್ದಿ (ಕಬ್ಬಿಗ. ೩೨೧). ೨. ಸಂತಾಪವನ್ನು ಹೊಂದು; ತಳಮಳಿಸು : ಸಹೋದರನದೇನೆಂದಪನೊ ಹಾಯೆಂದು ಲಕ್ಷ್ಮಣಂ ಬೆಂದು ಬೇಗುದಿಗೊಂಡನು (ತೊರವೆರಾ. ೦೯-೦೩). **ಬೇಗುದಿಗೊಳು :** ೨. ಓ ರುದ್ರಸೌಂದರ್ಯವೇ ! ಇಳೆಯೊಳಗೆ ಕಳವಳಿಸಿ ಕುದಿದು ಬೇಗುದಿಗೊಳುವ ನನ್ನ ಜೀವದ ಧೈರ್ಯವೇ ! (ಕಥಾಶ. ೭೦-೩). **ಬೇಗುದಿಗೊಳ್ಳು :** ೨. ದಾಸರು ಆತ್ಮೀಯತೆಯ ತೀವ್ರ ಸೆಳೆತಕ್ಕೆ ಸಿಕ್ಕಿ ತೊಳಲಾಡುತ್ತಾ ಹೇಗೆ ಮುಂದುವರಿಯಬೇಕೆಂದರಿಯದೆ ಬೇಗುದಿಗೊಂಡರು (ಐದುಪ್ರ. ೦೨೯) ; ಅಪರಿಚಿತ ಮಲ್ಲನೊಬ್ಬನಿಂದ ತಮಗೆ ಪರಿಭವ ಒದಗಿತಲ್ಲ ಎಂದು ಅವರ ಚಿತ್ತ ಬೇಗುದಿಗೊಂಡಿತು (ಹುಂಪಾ. ೨೪೩). [ಬೇಗುದಿ₂ + ಕೊಳ್₁]

**ಬೇಗುದಿಗೊಳು** 'ಬೇಗುದಿಗೊಳ್' ನೋ.

**ಬೇಗುದಿಗೊಳ್ಳು** 'ಬೇಗುದಿಗೊಳ್' ನೋ.

**ಬೇಗುದಿಸು** (ಕ್ರಿ). ಬೇಯುವಂತೆ ತಾಪವನ್ನುಂಟುಮಾಡು : ಸುಡುವ ಬೇಗೆಗಳಲ್ಲಿ ತುಹಿಡಿಯುವ ಕೊರೆವ ಚಳಿನಡುಗಿಸಲಿ ಬೇಗುದಿಸುವ (ದ್ರ್ಯಾಕ್ಷಿದಾ. ೯-೨೨). [ಬೇ₁ + ಕುದಿಸು (<ಕುದಿಯಿಸು)]

**ಬೇಗುರಿಕ** (ನಾ). ಬೇಗುದಿಗೊಂಡವನು; ಅಸೂಯೆ ಹೊಂದಿದವನು: 'ಬೇಗುರಿಕತನ' ಪರಾ. [ಬೇಗೆ + ಉರಿಕ]

**ಬೇಗುರಿಕತನ** (ನಾ). ಬೇಗುದಿಗೊಳ್ಳುವುದು ; ಅಸೂಯೆಪಡುವಿಕೆ: ಅಸುರಾರಾತಿ ಅರಸನ ಬೇಗುರಿಕತನವಱಿದು ಶೀಘ್ರದಿನಾಗಲಾಕ್ಷಣಲೊಂದು ಭೀಮನ ರೂಪವನು ರಚಿಸಿ ಸಾಗಿ ಬಂದಾಯೆಂಧನೃಪನೆಮುರಾಗಿ ನೂಕಲ್ಕೆ (ಜಮಿನಿಭಾ. ೨-೯೭). [ಬೇಗುರಿಕ + —ತನ]

**ಬೇಗೂರ್** (ನಾ). ಒಂದು ಊರಿನ ಹೆಸರು : 'ತುಯ್ಯಲಬೇಗೂರ್' ಪರಾ. [? + ಊರ್]

**ಬೇಗೆ** (ನಾ). ೧. ಬೆಂಕಿ ; ಕಿಚ್ಚು : ಘೋರಕಾಂತಾರಮನೊಂದು ಬೇಗೆ ಪರಿವಂತು ರಥಂ ಪರಿವತ್ತು (ಸಂಶಶಾ. ೬-೯೬) ; ಕಾನನಮಂಜುವುದು ಬೇಗೆಗಯ್ಯಾ (ಬಸವ. ೭೫) ; ಶ್ರೀಗಂಧ ಧೂಪಾರ್ತಿ ಪಾಪಾರಣ್ಯದ ಬೇಗೆವೊಲ್ ಪೊಗೆ ಮುಸುಕಿದುದು (ಸೋಮಶ. ೯೨-೩೦). ೨. ಉರಿ ; ಜ್ವಾಲೆ : ಮನ್ಮಥಾನಳಶಿಖಿ ಬೇಗೆಯಾಗೆ ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ. ೬೦೨ ಕೂರ್ರ್ಯ); ಅಭ್ಯಾರುಗಳರ ಬೇಗೆದೊಳಗಣ ವಿಷಮಚಿಗಳ ತೆಱದಿ ವ್ಯಕ್ತ ಉರಿದೇ ಹೋಹಿರಿ (ಬಸಪು. ೫೭-೨೪). ೩. ಕಾವು; ತಾಪ; ಶಾಖ: ವಿಳಯಕಾಳದ ಕಾಟ್ಕಿರ್ಚಿನ ಬೇಗೆ ಸಾರ್ವಂಶಿರ್ಮಲದಳವುಂ ಕಿರ್ಚುಂ ಕಿಡಿಯುವಮಾಗೆ ತಾಗಿದಾಗಳ್ (ಶಂಶಶಾ. ೦೦-೬೩ ವ) ; ಕಿಚ್ಚಿಲ್ಲದ ಬೇಗೆಯಲಿ ಬೆಂದೆನವ್ವ (ಮಹಾದೇ. ಬ. ೩೨-೬೯); ವಿರಹತಾಪದ ಬೇಗೆ ಭೂಮಿಶ್ವರನ ಮುಸುಕಿತು (ಸಂಥಶ. ೦೩-೨೪). ೪. (ಅಲಂ) ಸಂಕಟ ; ತಳಮಳ ; ದುಃಖ : ತಂದೆ ಕಟಿದಟಲ ಬೇಗೆಯೊಳಂ ದೂರದೆ ಬಿರ್ದೊಂದು ಕಡುಸೇದೆಯೊಳಂ ಬಂದೆನ್ನಂ ಪರವಶತೆಯೊಳೊಂದಿಸಿದತ್ತಾಗಳಾ ಪಿಪಾಸೋದ್ರೇಕಂ (ಶಾಂತಿಪು. ೦೮೯): ವಿರಹಿಗೆ ಬೇಗೆಯುಂ ಪ್ರಿಯರ್ಗೆ ರಾಗಮುಮಾಗಿಸುಗುಂ ಬಸಂಗಳೊಳ್ ಪೊರೆವ ಮಂದಾಳಿ . . . ಕೂಡುವ ತುರಂಗಮು" ಘುಮ್ಮೆನುತಿರ್ಪ ಪಾರಿವಂ (ಸೂಕ್ತಿಸು. ೪-೪೧); ತನ್ನ ಒಡಲ ಬೇಗೆಯನ್ನು ತೀರಿಸಿಕೊಳ್ಳಬೇಕೆಂದು ಅರ್ಜುನನು ಅವನನ್ನು ಬೆನ್ನಟ್ಟಿ ಹೋಗಿ . . . ಎಳೆದು ತಂದನು (ಪೀಗಟ್ಟು. ೫೦). [ಬೇ₁ + —ಗೆ]

**ಬೇಗೆಗಣ್** (ನಾ). ಕೆಂಡಗಣ್ಣು; ಅಗ್ನಿನೇತ್ರ: ಈತ ಬೇಗೆಗಣ್ಣಿಂದ ದಹಿಸದೆ ಬಿಡನು (ಪವಪೊ. ೪-೨೦). [ಬೇಗೆ + ಕಣ್]

**ಬೇಗೆಗಿಚ್ಚು**, ಬೇಗೆಗಿರ್ಚು (ನಾ). ಬೆಂಕಿಯ ಜ್ವಾಲೆ: ವಿಮಳತೆವೆತ್ತ ನೀರ್ವೊಟಿಯ ತೀರದೆ ಚಾರುನಿಕುಂಜಪಂಕ್ತಿಯೊಳ್ ಸಮನಿಸೆ ಬೇಗೆಗಿಚ್ಚು ಕಟರ್ವ ಕೇಸುರಿಯಾಸುರಮಾಗೆ (ರಸರ. ಶಂ. ೦-೦೦೯). **ಬೇಗೆಗಿರ್ಚು :** ಬೇಗೆಗಿರ್ಚಿನೊಳ್ ಬೇವವೊಲಿರ್ದುವಿರ್ದಲದ ಬಿಲ್ಲಣೆಗಳ್ ರಣರಂಗಭೂಮಿಯೊಳ್ (ಶಂರಾವಾ. ೦೩-೪೮) ; ಬೆಟ್ಟವೇಸಗೆಯ ಬೇಗೆಗಿರ್ಚಿನ ಬಳಸಿಂಗೊಳಗಾದ ಸಿಂಗದ ಸಂಗಡಮಂತೆಯುಂ (ಪುಷ್ಪ್ರ. ೩-೦೭೩ ವ). [ಬೇಗೆ + ಕಿಚ್ಚು]

**ಬೇಗೆಗಿರ್ಚು** 'ಬೇಗೆಗಿಚ್ಚು' ನೋ.

**ಬೇಗೆಗೊಳ್** (ಕ್ರಿ). ಬೇಯು ; ಸುಡು : ಅಂಬುಚರಮೆಲ್ಲಂ ಬೇಗೆಗೊಂಡತ್ತು ಬಾಂಬೊಳೆ ಬತ್ತಿತ್ತು ಮರೀಚಿ ಪೊಣ್ಮಿದುದರಣ್ಯಂ ಬೇದುದಾ ಗ್ರೀಷ್ಮದೊಳ್ (ರಾಜಶೇ. ೫-೩೭). [ಬೇಗೆ + ಕೊಳ್₁]

**ಬೇಗೆಪತ್ತು** (ಕ್ರಿ). ಬೆಂಕಿಯುಂಟಾಗು ; ಕಿಚ್ಚು ಹತ್ತು : ಬೇಗೆಪತ್ತಿದ ಬೆಟ್ಟಂ ಪೊಣರ್ವಂತೆ ಪೋರ್ದುವು ಗಜವ್ಯೂಹಂ ಗಜವ್ಯೂಹದೊಳ್ (ಅಪಂಶು. ೦೪-೩). [ಬೇಗೆ + ಪತ್ತು₁]

**ಬೇಗೆಯಾಱು** (ಕ್ರಿ). ಕಿಚ್ಚು ಇಲ್ಲದಂತಾಗು ; ಬೆಂಕಿ ಆರು : ಬೇಗೆ ಯಾಱುವೊಡಾಱು ತಿಂಗಳು ತಡವುಂಟು ಹೋಗಬಹುದು ಮುಂದೆ ಮತ್ತೆ ಈಗ ನೀವೆರಡುಖಂಡದ ಮ್ಲೇಚ್ಛದವರುಕ್ಕನೀಗಾಡಿ ತಹುದಿಲ್ಲಿಗೆ (ಭರತ. ೩೦-೩). [ಬೇಗೆ + ಆಱು₁]

**ಬೇಗೆವಡೆ** (ಕ್ರಿ). ತಾಪವನ್ನು ಹೊಂದು ; ಸುಡು : ಸುಡುವ ಕನ್ನಡಿಯೊಳ್ ದೊರ್ಡೆ ನಿಜಾಸ್ಯಂ ಬೇಗೆವಡೆಯದು (ಅಮಾಶಾ. ೨-೭-೫). [ಬೇಗೆ + ಪಡೆ₁]

**ಬೇಗೆವರಿ** (ನಾ). ತಾಪವು ಹೆಚ್ಚಾಗುವಿಕೆ ; ಶಾಖವು ಹರಡುವಿಕೆ : ಬೇಗೆವರಿ ಬೆಳುದಿಂಗಳಲಿ ನವನೀತ ತೋಱಿತಲಾ (ಕುವ್ಯಾಕ. ೦೦-೨೬). [ಬೇಗೆ + ಪರಿ₃]

**ಬೇಗೆವೋಗು** (ಕ್ರಿ). ಸುಟ್ಟುಹೋಗು ; ದಹಿಸಿಹೋಗು : ಬೇಗೆವೋದ ಬೆಟ್ಟದಂತೆ ಮೆಯ್ ಬಿಸುಪನಾಗೆ (ಧರ್ಮಾಮೃ. ೦೦-೩೩) ; ಪಟು ಬೇಗೆವೋಗೆ . . . ಬಸವಳಿದುದು ಬೇಸಗೆಯ ಬಿಸಿಲೊಳೊಂದಿಭಕಳಭಂ (ಚಂಪ್ರಭ. ೯-೭೪). [ಬೇಗೆ + ಪೋಗು₁ (< ಪೋ₁)]

**ಬೇಚರಾಕ** 'ಬೇಚಿರಾಖಿ' ನೋ.

**ಬೇಚರಾಕು** 'ಬೇಚಿರಾಖಿ' ನೋ.

**ಬೇಚರಾಖಿ** 'ಬೇಚಿರಾಖಿ' ನೋ.

**ಬೇಚಿರಾಕ** 'ಬೇಚಿರಾಖಿ' ನೋ.

**ಬೇಚಿರಾಕು** 'ಬೇಚಿರಾಖಿ' ನೋ.

**ಬೇಚಿರಾಖ** 'ಬೇಚಿರಾಖಿ' ನೋ.

**ಬೇಚಿರಾಖಿ**, ಬೇಚರಾಕ, ಬೇಚರಾಕು, ಬೇಚರಾಖಿ, ಬೇಚಿರಾಕ, ಬೇಚಿರಾಕು, ಬೇಚಿರಾಖ (ನಾ). ನಿರ್ಜನವಾದ ಭೂಮಿ ; ಪಾಳು ಭೂಮಿ ; ಬೀಳು : ಒಂದು ಹಳ್ಳಿಯಲ್ಲಿ ಕೂಡ ಜನವಸತಿಯು ಉಳಿಯದಂತೆ ಬೇಚಿರಾಖಿ ಮಾಡಿದರು (ಕನ್ನಡಿ. ೦೦೭). **ಬೇಚರಾಕ :** ಆ ಹಳ್ಳಿ ಬೇಚರಾಕವಾಗಬೇಕೆ ? (ಮುನ್ನುಡಿ. ೦೦೫). **ಬೇಚರಾಕು :** ಅನಾದಿ ಬಂಜರುಭೂಮಿಯು ಬೇಚರಾಕಾಗಿರುವ ಭೂಮಿ ಸಹ ಎಷ್ಟು ಇದೆಂಬೋ

ಚನ್ನಾಗಿ ನೋಡಿ . . . ಸಾಗುವಳಿ ಮಾಡಬೇಕು (ಮಹಾಪ. II, ೬೦); ಜೋಗಿಪುರ ಆಗಲೇ ಬೇಚರಾಕು ಆಗುತ್ತಾ ಬಂದಿತ್ತು (ನನ್ನೂರು. ೦೫೦). **ಬೇಚರಾಖು :** ಕಸವಗಟ್ಟುಯೆಂಬ ದಿನ್ನೆ . . . ಬೇಚರಾಖು ಬಿದ್ದು ಇದೆ (ಮಹಾಪಂ. II, ೬೯). **ಬೇಚಿರಾಕ:** ವಾಡೇ ಮತ್ತು ಮಠ ಇವೆರಡೂ ಹೀಂಗ ಹಾಳಾದರ, ಪಾದಳ್ಳಿ ಬೇಚಿರಾಕ ಆದ್ಹಾಂಗ (ಗ್ರಾಮಾಯ. ೬೯). **ಬೇಚಿರಾಕು :** ಹಳೇಅಲೂರು ಒಂದು ಬೇಚಿರಾಕುಗ್ರಾಮ (ವ್ಯವಾಸು. ೯೬). **ಬೇಚಿರಾಖು :** ಗ್ರಾಮಗಳು ಇನಾಮಿ ಬೇಚಿರಾಖಿ ಸಹಿತ (ಕಥಾಗ. ೨).

[←ಪಾರ. ಹಿಂ. ಬೇಚಿರಾಗ್; ಮರಾ. ಬೇಚಿರಾಖ್, ಬೇಚಿರಾಗ್]

**ಬೇಜಮಿ, ಬೇಜಿಮೆ** (ನಾ). ಅಗತ್ಯದ ಪೂರೈಕೆ.—ವ್ಯವಸ್ಥೆ : ಇಪ್ಪೊತ್ತಿನ ಬೇಜಮಿ ಇವತ್ತು ಮಾಡಿಕೊಳ್ಳದಿದ್ದರೆ (ಖಿಂಡಹು. ೫೫); ಪಗಾರ ಬರೂತನಕ ನಾ ಹೆಂಗರ ಬೇಜಮಿ ಮಾಡತೀನಿ (ಅನ್ನ. ೦೨೦). **ಬೇಜಿಮೆ :** ಕ್ಷೀರ–ದಧಿ ಸುಘೃತದ ಬೇಜಿಮೆಯಾಗುತ್ತಿತ್ತು (ದೀಪಹ. I, ೬೦); ಅಮೇರಿಕೆಯಲ್ಲಿ ವಿದ್ಯಾರ್ಥಿಗಳು ಕೂಲಿ ಮಾಡಿ ದುಡಿದು ವರ್ಷದ ಖರ್ಚಿನ ಬೇಜಿಮೆ ಮಾಡಿಡುವರು (ಅಮೇಪ. ೦೨).

[← ಮರಾ. ಬೇಜಮಿ, ಬೇಗಮಿ]

**ಬೇಜವಾಬುದಾರಿ,** ಬೇಜವಾಬ್ದಾರಿ (ಗು). ೧. ಜವಾಬ್ದಾರಿ ಇಲ್ಲದ; ಹೊಣೆಗೇಡಿತನದ : ಈ ರೀತಿ ಬೇಜವಾಬುದಾರಿ ಮಾತನಾಡುವುದು ಸರಿಯಲ್ಲ (ಐಮಾಪ. ೦೫೯) ; ನೀವು ಮಾಡುತ್ತಿರುವ ಬೇಜವಾಬುದಾರಿ ಕೆಲಸದ ಬಗ್ಗೆ ಊರಲ್ಲಿ ಈಗಾಗಲೇ ಗುಲ್ಲು ಎದ್ದಿದೆ (ರಂಗರೋ. ೬೯). (ನಾ). ೨. ಜವಾಬ್ದಾರಿ ಇಲ್ಲದಿರುವಿಕೆ ; ಹೊಣೆಗೇಡಿತನ : ಬೇಜವಾಬುದಾರಿಯಿಂದ ಇಂಥ ಕೃತಿಯನ್ನು ಮುಂದುವರಿಸುವುದೂ . . . ಅಥವಾ. . .ಯಾವುದಾದರೊಂದು ಕಾಲ್ಪನಿಕ ಅಕ್ಲಿಷ್ಟ ಸುಖದೊಳಗೆ ತನ್ಮಯನಾಗಿರುವುದು (ಕೃಶಿಂದ. ೦೪). **ಬೇಜವಾಬ್ದಾರಿ :** ೧. ಬೊಂಬಾಯಿಗೆ ಹೋಗಿ ಬೇಜವಾಬ್ದಾರಿ ಬೇವರ್ಸಿಯ ಹಾಗೆ ಅಲೆದು 'ಫ್ಲೂ' ತಂದುಕೊಂಡ ನನಗೆ ಮೈಸೂರಿನಿಂದ ಟೆಲಿಗ್ರಾಂ ಬಂತು (ಹೊಸಕ್ಷಿ. ೦೨೪).

[← ಮರಾ. ಬೇಜಬಾಬ್‌ದಾರ್]

**ಬೇಜವಾಬ್ದಾರಿ** 'ಬೇಜವಾಬುದಾರಿ' ನೋ.

**ಬೇಜಾರು** (ನಾ). ಉತ್ಸಾಹವಿಲ್ಲದಿರುವಿಕೆ ; ನಿರುತ್ಸಾಹ ; ಬೇಸರ : ಅವನನ್ನು ಕೋರ್ಟಿನಲ್ಲಿ ಹಾಜರುಪಡಿಸುವ ವಿಷಯದಲ್ಲಿ ನಿಮಗೆ ಬೇಜಾರು ಬೇಡ! (ರೂಪಮಾ. ೯೪) ; ಬಲದೇವನಿಗೆ ಶಾಲೆಗೆ ಹೋಗಲು ಬೇಜಾರು (ಕಲಾಶಾ. ೨೬). 'ಬೇಸರಿಕೆ$_2$' ಪರಾ.

**ಬೇಜಾರುಗೊಳ್ಳು** = ನಿರುತ್ಸಾಹಪಟ್ಟುಕೊಳ್ಳು ; ಬೇಸರಿಸು : ಕೊನೆಗೊಮ್ಮೆ ಬೇಜಾರುಗೊಂಡು ವಿನೋದ ತನ್ನ ತಾಯಿಗೆ ಹೇಳಿಯೇ ಬಿಡುತ್ತಿದ್ದ (ಖಾರಿತ. ೦). **ಬೇಜಾರುಪಡು** = ಬೇಜಾರುಗೊಳ್ಳು : ಬೆಂಗಳೂರಿನಿಂದ ಯಾರು ಬಂದರೂ ನಮ್ಮ ಕಡೆ ಪೆಚ್ಚಿಗೆ ದಿನವಿರಲು ಬೇಜಾರುಪಟ್ಟುಕೊಳ್ಳುತ್ತಾರೆ (ಕೊಪಪೆ. ೦೬).

[← ಪಾರ. ಹಿಂ. ಮರಾ. ಬೇಜಾರ್. / ತಮಿ. ವೇಚಾಱು ; ತುಳು. ಬೇಜಾರ್; ಕೊಡ. ಬೇಜ್ಹಾರ]

**ಬೇಜಿಮೆ** 'ಬೇಜಮಿ' ನೋ.

**ಬೇಜ್ಯಾ** (ನಾ). ಉಪಯೋಗವಿಲ್ಲದುದು; ನಿಷ್ಪ್ರಯೋಜಕವಾದುದು: ಹಾಲಪ್ಪನಾಯ್ಕನ ಮಾತಿನ ಮೇಲೆ ಬಂದದ್ದು ಬೇಜ್ಯಾ ಆಯಿತ್ತು. ಇನ್ನಾಮೇಲೆ ನಾವು ಖಾಮುಷು ಇದ್ದರೆ ಪರಿಣಾಮ ಆಗೋದಿಲ್ಲ (ಮಂದತ. ೦೬-೯). [←ಹಿಂ. ಮರಾ. ಬೇಜಾನ್=ಸತ್ತ್ವವಿಲ್ಲದುದು]

**ಬೇಟ** 'ಬೇಂಟ' ನೋ.

**ಬೇಟಕಾರ** 'ಬೇಂಟಗಾಱ' ನೋ.

**ಬೇಟಕಾರ್ತಿ** (ನಾ). ೧. ಪ್ರಣಯಲಾಲಸೆಯುಳ್ಳವಳು. ೨. ವೇಶ್ಯೆ, ಗಣಿಕೆ : ಮತ್ತೊರ್ವ ಬೇಟಕಾರ್ತಿ ತಾಯ ಕಣ್ಣಂ ಬಂಚಿಸಿ ತನ್ನ ಮೋಪಿನಾಕೆಯ ಮನೆಗೆ ಪೋಪ ಬೇಟದಾಣ್ಮನಂ ಪಿಡಿದು (ಶಂಪಕಾ. ೪-೯೮ ವ); ಬೇಟಕಾರ್ತಿಯರಿವರೀಕೆಗಳ್ ಬಸನಿಗಳ್ ಕಡುಬದ್ದೆಯರೆಂದುಮಿಾ ಲತಾಂಗಿಯರೆನಿಸಿರ್ದರಂ ನಯದೆ ನೋಡಿದನಪ್ರತಿಮೈಶ್ಯಸಂಭವಂ (ಬಂಹರಿ. ೩-೪೮); ಸರ್ವಸ್ವವನು ನೆಱೆ ಕವರಿ ಗೋಟುಗೊಳಿಸುವ ಬಲ್ಮೆಗಳ ಬಲ್ಲಾಟವಿತ ಬಹುವಿಧದ ಮಾಯೆಯ ಬೇಟಕಾರ್ತಿ[ಪಾಠಾಂ. ತಿ]ಯರೊಪ್ಪಿದರು (ತೊರರಾ. ೦-೫-೩೦). [ ಬೇಟಕಾಱ$_1$ (< ಬೇಂಟಗಾಱ) +–ತಿ$_1$ (<–ಇತ್ತಿ )]

**ಬೇಟಕಾಱ$_1$** ' ಬೇಂಟಗಾಱ ' ನೋ.

**ಬೇಟಕಾಱ$_2$** (ನಾ). ಬೇಟೆಯಾಡುವವನು (?) : ಕೊಂಕಣಾಗ ಬೇಟಕಾಱ ಮಲೆಯ ತಾತಳತು × × × ಮಚತಿಸುವರಮಂ ತಳಸಾಲ ಹೊಸುವ ಗಂಟಿಲ ಗಾಳ (ಎಕ. VIII, ಸಾಗರ. ೬೬-೦೦; 1107).

[P ಇದು ' ಬೇಟೆಕಾಱ ' ಎಂಬುದರ ಅಪಲಿಖಿತವಿರಬಹುದು]

**ಬೇಟಗೊಳ್** ' ಬೇಂಟಂಗೊಳ್ ' ನೋ.

**ಬೇಟಮರುಳು** (ನಾ). ಪ್ರಣಯಲಾಲಸೆ.

**ಬೇಟಮರುಳಾಗು** = ಪ್ರಣಯಲಾಲಸೆಯಿಂದ ಮರುಳಾಗು : ನಿನ್ನನು ಬಿಡದೆ ನೋಡಿದ ಜವ್ವನಿಗರು ಬಡವಾಗದೆ ಬೇಟಮ[ಪಾಠಾಂ. ಮ]ರುಳಾಗದಿರ್ಪರೆ ಬಡನಡುವಿನ ಬಿಂಕಕಾರ್ತಿ (ಕುಂದಮಾ. ೨೪-೫೬). [ ಬೇಟ (< ಬೇಂಟ) + ಮರುಳು ( < ಮರುಳ್$_2$) ]

**ಬೇಟವಾತು** (ನಾ). ಪ್ರೇಮದಿಂದ ಕೂಡಿದ ಮಾತು ; ಲಲ್ಲೆಯ ನುಡಿ : ನಲ್ಲಳ ಬೇಟವಾತೋ ಶುಕಚಾರುನಿನಾದವೊ . . . ವಿಬುಧಾನುರಾಗವೊ (ಉದ್ಭಟ. ೦-೩೩). [ ಬೇಟ ( < ಬೇಂಟ ) + ಮಾತು$_1$ ]

**ಬೇಟವೆಣ್** (ನಾ). ಪ್ರಣಯಲಾಲಸೆಯುಳ್ಳವಳಂ ; ನಲ್ಲೆ : ವಿರಹದಿಂ ಪ್ರಿಯತಮಸಮಾಗಮಪ್ರತ್ಯಾಶೆ ಹೃದಯಮಂ ಬೇಯಿಸಲ್ಕಾ ಬೇಟವೆಣ್ ಸೋಗೆ ನವಿಲುಕಲ್ಲಿಗೆ ಮರಳಿ ಬಂದು ಕರೆವುದು ಕೇಗಿ ತನ್ನೆರೆಯನಂ (ಶಶ್ರಾಂಗ. ೫೫-೦೫೦೨). [ ಬೇಟ (< ಬೇಂಟ) + ಪೆಣ್ ]

**ಬೇಟವೆಳಸು** (ನಾ). ಪ್ರಣಯದ ವೃದ್ಧಿ ; ಪ್ರೇಮದ ಆಧಿಕ್ಯ,- ಹೆಚ್ಚಳ : ಕಾಮಿನಿ ಹುಲಿಸಾದ ಬೇಟವೆಳಸಂ [ಸಿಂ] ಕಡುಸಂತಸದಂತ ಮೆಯ್ದಿದಳ್ (ಸೂಕ್ತಿಸು. ೦೪-೪೪). [ಬೇಟ (< ಬೇಂಟ) + ಬೆಳಸು$_2$]

**ಬೇಟಹೂಡು** (ಕ್ರಿ). ಪ್ರಣಯದಲ್ಲಿ ತೊಡಗು : ಇನಿಯಳೊಡನೆ ಪಾರಿವಾಳ ಬೇಟಹೂಡಿದೆ (ಮಾಂದಳ. ೦೦-೪).

[ ಬೇಟ ( < ಬೇಂಟ ) + ಹೂಡು$_1$ ( < ಪೂಡು )]

**ಬೇಟೆ** ' ಬೇಂಟೆ ' ನೋ.

**ಬೇಟೆಕಾತಿ** (ನಾ). = ಬೇಂಟೆಗಾರ್ತಿ : ಜಾಳವಣೆಗಳ ಬಲೆಯ ಠಕ್ಕಿನ ಠೌಳಿಗಳ ತೋಹುಗಳ ನಗೆಗಳ ಮೇಲುಮುದ್ದಿನ ಬೇಟೆಕಾತಿಯರೈದಿದರು ವನವ (ತೊರರಾ. ೦-೫-೩೯); ವಿಟರಕ್ಷಿಮೃಗಂಗಳ . . . ತುಂಗಕುಚಗಳೆಂಬ ಬನಲಿ ಸಿಲುಕಿಪರನಂಗನ ಬೇಟೆಕಾತಿಯರು (ಕುಸವ. ೨೦-೬೬).

[ ಬೇಟೆ ( < ಬೇಂಟೆ ) +– ಕಾತಿ$_5$ ]

**ಬೇಟೆಕಾಱ** ' ಬೇಂಟೆಗಾಱ ' ನೋ.

**ಬೇಟೆಗ** ' ಬೇಂಟೆಗ ' ನೋ.

**ಬೇಟೆಗಾರ** ' ಬೇಂಟೆಗಾಱ ' ನೋ.

**ಬೇಟೆಗಾರಿಕೆ** (ನಾ). ಬೇಟೆಯಾಡುವಿಕೆ ; ಶಿಕಾರಿ : ಹಿಂದಿನ ಬೇಟೆಗಾರಿಕೆ ದನಕಾರಿಕೆಗಳು ಬಿಟ್ಟು ಹೋದುವು ಎಂದಲ್ಲ (ಸಾಹಿಸ. ೦೩೦).

[ ಬೇಟೆಗಾರ ( < ಬೇಂಟೆಗಾಱ) +– ಇಕೆ ]

**ಬೇಟೆಗಾಱ** ' ಬೇಂಟೆಗಾಱ ' ನೋ.

**ಬೇಟೆನಾಯಿ** ' ಬೇಂಟೆನಾಯ್ ' ನೋ.

**ಬೇಟೆಯಾಡು** ' ಬೇಂಟೆಯಾಡು ' ನೋ.

**ಬೇಟೆರಾಯ** (ನಾ). ಒಂದು ಕ್ಷುದ್ರದೇವತೆಯ ಹೆಸರು ; P ಹಿಂದೆ ಬೇಟೆಗೆ ಹೋಗುತ್ತಿದ್ದ ಜನರು, ಮೊದಲು ಈ ದೇವತೆಯನ್ನು ಪೂಜಿಸುತ್ತಿದ್ದಿರಬಹುದು : ನಗಧರ ತಿರುಮಲೇಶ್ವರ ಬೇಟೆರಾಯರು ವಿಂಗೆ ಕಾದಿಹರು ಪಟ್ಟಣವ (ಕಂಶಿ. ೭-೦೦೨).

[ ಬೇಟೆ ( < ಬೇಂಟೆ ) + ರಾಯ ]

**ಬೇಟೆವೆಸ** (ನಾ). ಶಿಕಾರಿಯ ಪ್ರವಾಸ.—ಉದ್ಯೋಗ : ಪೊಗಸಿನೊಳ್ ಪೊಗಸಿ ಬೈಗುವರೆಗಂ ಬೇಟೆವೆಸದಿನಸುವರೆಯಾಗಿ . . . ಬೇಸಱಿಸಿದ ಪುಳಿಂದಿನಿಯರ ಮನದೊಳೊಂದಿನಿಸು ಸಂದಿಸಿಯುಂ (ಚಂದ್ರ ಪು. ೯-೪೭).

[ ಬೇಟೆ ( < ಬೇಂಟೆ ) + ವೆಸ$_1$ ]

**ಬೇಡ$_1$** (ನಾ). ೧. ಬೇಟೆಯನ್ನು ವೃತ್ತಿಯಾಗಿ ಉಳ್ಳವನು : ಬಿಲ್ಲರ ಜಾತಿಗೆ ಸೇರಿದವನು ; ಶಬರ : "ವನಚರ ಕಿರಾತ ಧಾನುಷ್ಕ ನಿಷಾದ ಪುಲಿಂದ ಶಬರ ಭಿಲ್ಲಾಖ್ಯಂ ಬೇಡನವಂ" (ಅಸ್ತ್ರಕೋ. ೬೬-೯೮) ; ಕಾಡೊಳ್ ಬೇಡರಂತೆ ತೊಟಲ್ವ ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡು ವುದುಂ (ಶಂತೀಶ. ೬-೩೨ ವ) ; ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡಿದ ಬೇಡಪ ಕೈಲಾಸಕೊಯ್ದುಯ್ಯಾ (ಏಕವ. ೬೩); ವಿಟರುಗಳ ಕರಣವೆಂಬ ಮಿಗವಿಂಡನಱ್ ಬಂಧಿಸುವ ಮುಗುಳಂಬ ಬೇಡನ ಜಾಲ ದೊಲ್ ಸೂಳೆಯರಗಣಿತಗೃಹಗಳೊಪ್ಪಿಹುವು (ಕಂಶಿ. ೨-೮೮).

[ದೇ॥. ತಮಿ. ವೇಟನ್. ವೇಟ್ಟುವನ್; ಮಲ. ವೇಟನ್; ತುಳು. ಬೇಡದ]

**ಬೇಡ$_2$** (ನಾ). ಹೆದರುವವನು ; ಭೀರು ; ಹೇಡಿ : "ಬೇಡನೆನೆ ಭೀತಚಿತ್ತಂ" (ಶಬ್ದಮ. ೦೫೩); ಕನ್ನಡದೊಳ್ ಬೇಡರೇದು ಭೀತರ್ಗೆ ಪೆಸರ್ (ಅಭಿ ಶ. ೦೫೯-೩). ' ಬೇಡ ' ನೋ.

[ < ಪ್ರಾ. ಭೇಡ./ಮರಾ. ಭೇಡ್ = ಭಯ ]

**ಬೇಡ$_3$** (ಅ). ಸಲ್ಲದು, ಬೇಕಾಗಿಲ್ಲ, ಅಪೇಕ್ಷೆಯಿಲ್ಲ ಮುಂತಾದ ಅರ್ಥ ಗಳನ್ನು ಸೂಚಿಸುವ ಒಂದು ನಿಷೇಧಾರ್ಥಕ ಅವ್ಯಯ : ಬೇಡ ವಿರೋಧಮೆಂತುಮರಿಕೇಸರಿಯೊಳ್ ಸಮಸಂದು ಸಂಧಿಯಂ ಮಾಡು (ಪಂಪಭಾ. ೦೩-೩೪); ಒಲಿಯ ಬೂದಿಯ ಬಿಲಿಯಲು ಬೇಡ (ಏಕವ. ೦೦೪): ರಣದಲಿ ಶೂಲಿಯದ್ಭುತಸಿದರೆ ಹಿಡಿವೆನು ಚೀಂತೆ ಬೇಡಿದಕೆ (ಉತ್ತ್ರಾಸೋ. ೪-೯).

**ಬೇಡಬೇಡ, ಬೇಡಬೇಡ** (ದ್ವಿರುಕ್ತಿ) : ಅಮರಾಪಗಾಸುತ ಕೃಪ ದ್ರೋಣಾದಿಗಳ್ ಬೇಡವೇಡೆನೆಯುಂ ಮಾಣದೆ . . . ದುರಾತ್ಮನಸಂ . . . ಕೆಗೆವಂ ಧಮ್ಮಿಲ್ಲಮಂ ಕೃಷ್ಣೆಯಾ (ಗದಾಯು. ೭-೩) ; ಇದೇಕೆ ಬೇಡ ವೇಡೆನೆಯುಂ ಕಿವಿಯೊಳ್ ತೊಡರ್ಚಿ ಪೋದಳೇ ಕುಸುಮಾವಂಜರಿಯಂ (ಶಾಕುಂ. ೬೬೮) ; ಗಾಡಿಗನನೀರಲೀಸಲಾಗದು ಬೇಡಬೇಡಾವಂದದಿಂದೆ ಬೀದಿನಲಿ ಹೊಱಪಡಿಸಿಯುತ್ತಲಿ ತಗುಳುವುದು ಮಂತವು (ಐಶ್ವ. ೪೨-೩೨) : ಬೇಡಬೇಡಾ ಸಾಹಸಂ, ದೇವಿ ; ಬೇಡುವೆನು (ತತ್ತ್ವಂಗ. ೩೭ ೧೦೪೯).

**ಬೇಡನ್** = ಬೇಡವಾದವನು ; ಅನರ್ಹನಾದವನು : ಭೂಪೋತ್ತಮಾ ನಿಂ ಬಿಸಟ್ಟಿರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ (ಶಬರಾ. ೯-೬೯) : "ಬೇಡನಲ್ಲನೇ—ಯಾರಿಗೂ ಬೇಡವಾದವನಲ್ಲವೇ, ಅಥವಾ ಕಿರಾತನಾಗುತ್ತೇ ನಲ್ಲವೇ ?" (ಶಂಶರ. ೩೨೯). [ದೇ.॥ ತಮಿ. ವೇಣ್ಡಾವರ್: ಮಲ. ವೇಣ್ಟಾ]

**ಬೇಡಕೊಟ್ಟ** ' ಬೇಡಗೊಟ್ಟ ' ನೋ.

**ಬೇಡಗೊಟ್ಟ, ಬೇಡಕೊಟ್ಟ** (ನಾ). ಶಬರರ ವಾಸಸ್ಥಾನ: ಬೇಡರ ಪಳ್ಳಿ : ಬೇಡಗೊಟ್ಟಮಾರಾಗಿಯುಂ ಪಟ್ಟಣವಾಗದಂತೆ . . . ದೂರ ಭವ್ಯರುಮಭವ್ಯರುಂ ಶ್ರಾವಕರಾಗಿಯುಂ ಗುಣಿಯರಾಗಿಯುಂ ಮೋಕ್ಷ ಗಾಮಿಗಳಲ್ಲರ್ (ವಡ್ಡಾರಾ. ೦೦-೦೮೩). **ಬೇಡಕೊಟ್ಟ** : ಧನ್ವಂತರಿಯುಂ ಮಂತೆ ನಾಲ್ವರುಂ ಕರೆದು ನೀವೀ ಬೇಡಕೊಟ್ಟದೊಳ್ ಮಾಂಸಮಂ ತನ್ನಿ ಮೆಂದಟ್ಟುವುದುಂ (ವಡ್ಡಾರಾ. ೨-೧೯೯). [ಬೇಡ$_1$ + ಕೊಟ್ಟ$_8$]

**ಬೇಡತಿ** ' ಬೇಡಿತಿ ' ನೋ.

**ಬೇಡಪಡೆ** ' ಬೇಡವಡೆ ' ನೋ.

**ಬೇಡಬಲೆ** (ನಾ). ಶಬರರು ಬೇಟೆಯಲ್ಲಿ ಬಳಸುವ ಬಲೆ.— ಜಾಲ : ಬೆಕ್ಕುಗಳ್ ನುಂಗಿದುವೊ ಪೋಲ್ ಬೇಡಬಲೆಗಳೊಳ್ ಸಿಕ್ಕಿದುವೊ . . . ಶಕ್ಕಿಗೊಳಗಾದುವೋ (ತಿಲಪು. ೪೬-೩). [ಬೇಡ$_1$ + ಬಲೆ$_1$ ]

**ಬೇಡರಸ** (ನಾ). ಶಬರರ ಮುಖಂಡ : ಕಿರಾತರ ಒಡೆಯ ; ಬೇಡರ ನಾಯಕ : ನಾಡರಸಂ ತಗುಳ್ವು . . . ನಾಡನವಂ ಕಡಿದಿಕ್ಕಿ ಮೆಚ್ಚಿದಂ ಬೇಡರಸಂ ತರಂಗತಮನಾನಿರೆ ಬೇಡರಸಂಬ ಗರ್ವದಿಂ (ಶಂರಾಮ. ೪-೩೪): ತಮ್ಮಾಳ್ದನಪ್ಪ ಬೇಡರಸಂಗೆ ದೇವತೆ ಬಂದು ಭೀಮವನದೊಳಿರ್ದಳಲ್ಲಿಗೆ ಪೋಗಿ ನಿಮ್ಮ ಬೇಟ್ಟ ವರಮಂ ಬೇಡಿಕೊಳ್ಳಿಮೆಂದು ಬಿನ್ನಪಂಗೆಯ್ವುದುಂ (ವಡ್ಡಾರಾ. ೩-೯೩). [ಬೇಡ$_1$ + ಅರಸ$_1$ ]

**ಬೇಡವಟ್ಟ** (ನಾ). ಶಬರರ ನಾಡು.—ಊರು : ಅನಂತೆ ಪೋಗೆಪೋಗೆ ಪೊಲಸಿನ ಗಂಧಮುಂ ಪೊತ್ತು ಕಱುಕಪ್ಪರೆಗೊಳ್ವ ಕಾರ ಪೊಗೆಯಿನಱಿಯಲಾದ ಬೇಡವಟ್ಟಮಂ ಕಂಡಂ (ಕಾದಂಬ. ೭೪೩). [ಬೇಡ$_1$ + ಪಟ್ಟ$_3$]

**ಬೇಡವಟ್ಟು** (ನಾ). = ಬೇಡವಟ್ಟ: ಆ ಪಕ್ಷಿಯುಮಪಶಮುಕ್ಕೆ ಪಕ್ಕುಗೊಟ್ಟ ಸುವಂ ಬಿಟ್ಟು ಬೇಡವಟ್ಟಂಗೊಯ್ವೆನಾದುದು (ಶಂರಾಮ. ೯-೩೪ ವ) ; ಅಗುರ್ವೊವೆತ್ತಱಿಕೆಯ ಬೇಡವಟ್ಟುಗಳ . . . ಕಿಡಿಸಲಂತದ ಮುನ್ನಿನ ಚಕ್ರವರ್ತಿಗಳ್ ಪೆಱರಳವಲ್ತು ಮಂ ಕೆಡಿಸಿತೊಟ್ಟಜಿ ತ್ರೈಲಪಚಕ್ರವರ್ತಿಯಾ (ಶಾಸ್ತ್ರಾಪ. ೨೦೨); ಓಡದ ಬೇಡವಟ್ಟು ಪೋಗದ ಕಲಿಗೋಂಟೆ ಸಿಲ್ಕದ ವಿರೋಧಿಗಸುಹುಯ್ಯಿಯುಗೊಂಡಮಂಡಪ ಬಿಳರನ್ನಮಂಡಳದೊಳಿಲ್ಲ (ಪುಷ್ಪಪು. ೩-೩೩). [ಬೇಡ$_1$ + ಪಟ್ಟು$_4$]

**ಬೇಡವಡೆ, ಬೇಡಪಡೆ** (ನಾ). ಶಬರರ ದಳ : ಕಿರಾತರ ಸೈನ್ಯ : ಬೇಡವಡೆ ಮುಸುಱಿಕೊಂಡೇಸಾಡೆ ಸುರುಳ್ದಗಿದು ಕೊಡೆಯ ಚರ್ಮದ ಮಱಿಯೊಳ್ ಗೂಡುಗೊಳುತಿರ್ದ ಶೌರ್ಯಕ್ರೀಡೆಯ ದಿಗ್ವಿಜಯ ಮೆಸೆದುದು (ಆದಿಪು. ೦೪-೬೨); ಅಂತುತ್ಪಾತವೇತಾಳವಡೆಯಂತೆ ಭಯಂಕರಾ ಕಾರಮಾದ ಬೇಡವಡೆಯ ನಡುವೆ . . . ಬಂದಂ ಪುಳಿಂದಪ್ರಕರಬಹುಳ ಸೇನಾಪರೀತಂ ಕಿರಾತಂ (ಶಾಕುಂ. ೦೬೩) ; ತಡಿಕೆವಲೆ ತಟ್ಟವಲೆ . . . ಮಾಱಿವಲೆ ಮುಂದಸಿನವಲೆಯ ಹೊಱಗಳ ಬೇಡವಡೆ ನೆರೆದುದು (ಹರಿಶ. ೩-೮). **ಬೇಡಪಡೆ** : ಒರ್ವ ಬೇಡಪಡೆಯೊಡೆಯನೊಂದು ಕಡೆಯೊಳ್ಬೇಂಟೆ ಯಾಡುತ್ತುಮೆಸೆದಿರ್ದಂ (ಉದ್ಭಟಿ. ೨-೪೭ ವ); ಮರೆ ಲಂಬಾಯ . . . ಕರಿ ಕಳಭ ವಿಶ್ಗಿಪ್ರತಾನದ ಮೇಹುಗಾಡಿನಲಿ ಹರಿದು ಬೆರಸಿತು ಬೇಡವಡೆ (ತೊರಶ. ೩-೩-೦೩). [ಬೇಡ$_1$ + ಪಡೆ$_2$]

**ಬೇಡವಣ್ಣ** (ನಾ). ಕಿರಾತನ ಬಣ್ಣ ; ಕಪ್ಪುವರ್ಣ : ಬೇಡವೆಂದರು ಬೇಡ ಕಳುವವ ಬಿಡುವನೆ ಬೇಡವಣ್ಣದ ತುಂಬಿಯಿಂತು ಬೇಡವೆಂದರು ಬಿರಾಂತಿರ್ದ್ದುವು ತ್ಯಾಗಿಯ ಬೇಡುವ ಯಾಚಕರಂತೆ (ಶರತ. ೩-೦೩).

[ ಬೇಡ$_1$ + ಬಣ್ಣ ]

**ಬೇಡವಳ್ಳಿ** (ನಾ). ಶಬರರು ವಾಸಿಸುವ ಹಳ್ಳಿ ; ಕಿರಾತರು ನೆಲಸಿರುವ ಗ್ರಾಮ : ಉಪಶ್ರೇಣಿಕಂ ಬೇಂಟೆಯಾಡಲ್ವೋಗಿ . . . ವಿಂಧ್ಯಾಟವಿಯ ನಟ್ಟನಡುವೆ ಸುರಮ್ಯಮೆಂಬ ಬೇಡವಳ್ಳಿಯ ಸಾರೆ (ವಡ್ಡಾರಾ. ೦೬೨-೦೯) : ಕಾಲೂರ್ಗೆ ಪೋಪನು ಬಿಲ್ಲಮೆಂಬಂತೆ ಬೇಡವಳ್ಳಿಗೆ ಪದಿ ಮದ್ದಾನೆಯೆಂಬಂತೆ (ವಡ್ಡಾರಾ. ೬-೨೨೯) ; ಬಲೆದೊಡಚುವ ಬಿಲ್ಲನೊಱಿದಂಬುದಿರ್ದವ ಗೊರೆ ಗಟ್ಟುವ . . . ಬೇಡವಳ್ಳಿ ಮನಸುಳುಪುವಿಸ್ತ್ರಮಿ ಕಂಡನಾಗ (ಶ್ರೀಚಾಂ. ೬-೩೦).

[ ಬೇಡ$_1$ + ಪಳ್ಳಿ$_1$ ]

**ಬೇಡವೆಣ್** (ನಾ). ಶಬರಸ್ತ್ರೀ ; ಕಿರಾತೆ ; ಬೇಡಿತಿ : ಬಿಲ್ಗೋಲಾಂತು ನೀಂದುದು ಬೇಡವೆಣ್ಗಳು ಚಣ್ಗೆ ರಮಿಸಿ (ಪೋಪಶ. ೦೯-೭೦) ; ಬೋತು ದಾರಿಯಂ ತೆಱಿವೆಡಿಪ ಕ್ರೋಡಗಂಗಳಂ ನೀಡಂ ನೋಡಿ ನನೆಗವಲೊಳೋ

ಉಾಡುವ ಬೇಡಪೆಣ್ಗಳಿಂ . . . ವಿಜೃಂಭಿಸಿ (ರಾಜಶೇ. ೫-೫೫ ವ).

**ಬೇಡವೆಂಡಿರ್** (ಬಹುವ) : ನಿಚ್ಚಮುಂ ಭಜಿಸದೆ ಮುಳಿದು ತಿಳಿಪೆ ತಿಳಿದು ನೆರೆವ ಬೇಡವೆಂಡಿರಿಂ (ಕಬ್ಬಿಗ. ೨೦೬). [ ಬೇಡ$_1$ + ಪೆಣ್ ]

**ಬೇಡಾಧಿಪತಿ** (ನಾ). = ಬೇಡರಸ : ಹಿರಣ್ಯಧನ್ವನೆಂಬ ಬೇಡಾಧಿಪತಿಯು ಮಗನಾದ ಏಕಲವ್ಯನೆಂಬವನು (ಕೃಷಾಅ. ೨೯೭). [ ಬೇಡ$_1$ + ಅಧಿಪತಿ ]

**ಬೇಡಿ** (ನಾ). ಕಾನೂನಿನ ಅಧಿಕಾರಿಗಳು ಅಪರಾಧಿಗಳನ್ನು ಬಂಧಿಸಿ ಅವರ ಕೈಕಾಲುಗಳಿಗೆ ಹಾಕುವ ಲೋಹದ ಸಂಕೋಲೆ ; ಕೋಳ : ಅಡಿಯು ಬೇಡಿ ಒಡೆಯಲಿಲ್ಲ; ದುಡಿವ ದಾಸ್ಯ ಬಿಡಲೆ ಇಲ್ಲ! (ಬಾಂಡಜ. ೩೮-೧೦) ; ನಮ್ಮೆಲ್ಲರ ಕೈಕಾಲುಗಳಲ್ಲಿಯೂ ಬೇಡಿಗಳು ಬಿದ್ದವು ! (ಕೃಪಾಪ. ೫೯).

**ಬೇಡಿ ಹಾಕಿಸು** = ಸಂಕೋಲೆಯನ್ನು ತೊಡಿಸುವಂತೆ ಮಾಡು : ಬಂಧಿಸುವಂತೆ ಮಾಡು : ಒಂದು ದಿವಸ ಆ ತುಂಟನು ಸರಹದ್ದಿನ ಒಳಗೆ ಬಂದಲ್ಲಿ ಅವನನ್ನು ಹಿಡಿದು . . . ಅವನ ಕಾಲಿಗೆ ಬೇಡಿ ಹಾಕಿಸಿ (ರಾಜೇಂದ್ರ. ೨೦೭) ; ನಿನ್ನ ಕೈಗೆ ಬೇಡಿ ಹಾಕಿಸ್ತೀನಿ (ಮುಗಮಜ. ೨೭).

[ ← ಹಿಂ. ಮರಾ. ಬೇಡೀ ]

**ಬೇಡಿಕೆ** (ನಾ). ೧. ಬೇಡಿಕೊಳ್ಳುವಿಕೆ ; ಯಾಚನೆ ; ಕೋರಿಕೆ : ಇಳೆಯು ರಾಯರಿಗಾಯ್ತು ಬೇಡಿಕೆ ವಿಪ್ರರಂದದಲಿ (ಸಂಕಜ. ೨೩-೧೦) ; ಅವಳ ಕಣ್ಣಿನಲ್ಲಿ ಬೇಡಿಕೆಯಿತ್ತು (ಮರೆ. ೧೩೨). ೨. ಬೇಕಾದುದು ; ಅಗತ್ಯವಾದುದು : ಇವರಿಗೆ ಬೇಳೆಯ ಅಭಾವದಿಂದಾಗಲಿ, ಇತರ ಕಾರ್ಯದಿಂದಾಗಲಿ, ತಮ್ಮ ಬೇಡಿಕೆಗಳನ್ನು ತಾವೆ ಕೊಂಡು ತರಲಿಕ್ಕೆ ಸಹಜವೆನಿಸುವುದಿಲ್ಲ (ತಕ್ಕಡಿ. ೯೭).

**ಬೇಡಿಕೆ ನೀಡಿಕೆ** = ಅಗತ್ಯ ಮತ್ತು ಅದರ ಪೂರೈಕೆ : ಪ್ರಪಂಚದ ವಿವಿಧ ಭಾಗಗಳೂ ಸಹ 'ಬೇಡಿಕೆ—ನೀಡಿಕೆ' (Demand–Supply)ಗಳ ತಾಕಲಾಟದಿಂದ ಹೊಂದಿಕೊಂಡು ಒಂದೇ ಆರ್ಥಿಕಕ್ಷೇತ್ರವಾಯಿತು (ಅಂತಸಂ. ೭). [ ಬೇಡು$_1$ + —ಇಕೆ ]

**ಬೇಡಿಗೆ** (ನಾ). ಒಂದು ಬಗೆಯ ತೆರಿಗೆ,— ಸುಂಕ : ೬(ಂ)ಮ್ಮಟೇಸ್ವರ ದೇವರ ನಂದಾದೀವಿಗೆಗೆ ಬಿಟ್ಟ ದತ್ತಿ ಬೇಡಿಗೆಯ ಕಮ್ಮಟದಲು ದಳಕೆ ವೀಸ ಒಂದು (ಸೌಇಇ. IX-i, ೨೬೨-೦೭ ; ಸು. 1155) ; [ಆರತಿ] ಕಾಣಿಕೆ ಬೇಡಿಗೆ ಯನೂ ಬಿಟ್ಟು ದೇವರ ಗ್ರಾಮದಲಿ ಬಿಟ್ಟಿವಾಗಿಯೇನನು ಮಾಡಲಿಲ್ಲ (ಸೌಇಇ. IX-ii, ೫೭೦-೨೫ ; 1535). 'ಬೇಡು$_4$' ಪರಾ.

[ ಬೇಡು$_4$ + —ಇಗೆ./ ತೆಲು. ಬೇಡಿಗ]

**ಬೇಡಿತಿ, ಬೇಡತಿ** (ನಾ). ಬೇಡರ ಹೆಂಗಸು ; ಕಿರಾತೆ : ಸೂರ್ಯಾಸ್ತಮಯದೊಳ್ ಪಾರ್ವರನೊಡಿ ನಿಷಾದಿತಿಯೆಂಬ ಬೇಡಿತಿಗಮುಣ್ಬರ್ ಮಗುದಿರ್ಗಮುಣಲಿಕ್ಕದೊಡೆ ತಣಿಯುಂಡು ಬೆಂಡುಮುರಲ್ದು ಮಱಸುಂದಿದರ್ (ಶಂಶಖಾ. ೩-೯ವ) : ಗೌರೀಪತಿಯು ಬಿಸದಕ್ಕೆ ಭೂಭೃತ್ಸುತೆ ಬೇಡಿತಿಯಾದ ತೆಱನನನುಕರಿಸಿರ್ದಳ್ (ಕಾದಂಪೂ. ೯೦) ; ಅಲರ್ಗಣ್ ಪೊಂಗಿದ ಲೋಳಿವಾಯ್ ನಗೆಮೊಗಂ . . . ಚಿಲ್ವಾಗಿರೆ ನಿಂದ ಬೇಡಿತಿಯುರಂ ಕಂಡಂ ಮಹೀವಲ್ಲಭಂ (ಕಾವ್ಯಾವ. ೨೦೭). **ಬೇಡತಿ** : ಛತ್ರ(ಕಿಚ್ಚ) ಪುರದೊಳ್ ದಾರುಣನೆಂಬ ಬೇಡಂಗು ಮಾಂಗಿ (ಮಾಂಗಿಲಿ) ಯೆಂಬ ಬೇಡ[ಬಾಶಾಂ. ಡಿ]ತಿಗಂ ಅತಿದಾರುಣನೆಂಬ ಮಗನಾಗಿ ಪುಟ್ಟಿರ್ಪನು (ಶಾಪುಂಪು. ೦೬೦) ; ವಾಗುರೆಯೊಡನಾಡುವ ಬೇಡತಿಯುರ್ದೋರೆಗೆಡೆದು ಕಂಡುಂ ನೀನುಂ ನಿನ್ನ ಗಂಡನುಂ ಪುಲಿಯುಂತಿರ್ದು ನರಿಯುಂತಿರೇಕಿರ್ದಪಿರೆನೆ (ಅರ್ಧನೇ. ೩-೭೮ ವ); ಪಂಚಪುತ್ರಿಕೆಯೊಂದು ಬೇಡತಿಯೊಬ್ಬಳಿದ್ದಳು ಸಂತರು ಸಹಿತಲಿ (ಕುವ್ಯಾಕ. ೮-೮೭). [ಬೇಡ$_1$ + —ಇತಿ$_1$ (< —ಇತ್ತಿ)]

**ಬೇಡಿತು, ಬೇಡಿತ್ತು, ಬೇಡ್ಡಿದು** (ನಾ). ಯಾಚಿಸಿದುದು ; ಕೇಳಿದುದು ; ಬೇಡಿದುದು : ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಜನಕನವರಗಲಿಗಳುಮಂ . . . ನೋಡಿ ರುದ್ರಾವತಾರಂ . . . ಹಿಮವತ್ಪರ್ವತಕ್ಕೆ ಪೋಪುದುಂ (ಗದಾಯು. ೯-೩೯ ವ) ; ತುಡಿಸುವುದೇಕೆ ನಿಲ್ಲ ಪಲವುಂ ಬಳೆಯುಂ ಬಳೆಗಾಜ ನಿನ್ನ ಕಾಲ್ವಿಡಿದಪೆನಿತ್ತಪೆಂ ನಿನಗೆ ಬೇಡಿತಂ (ಲೀಲಾವ. ೨-೬೦) ; ಬೇಡಿತನೀಯದಾಕ್ರಮಿಸಿ ಚಕ್ರಧರಂಗಿದಿರಾಂಪರಾರ್ (ಪಾರ್ಶ್ವಪು. ೧೦-೬೫). **ಬೇಡಿತ್ತು** : ಈ ಕುಮಾರನನೆತ್ತಿದಂಗೆ ಬೇಡಿತ್ತಂ ಕುಡುವೆಂ (ಶಂತಕಂ. ೦೦೩-೦೫); ಧರೆಗಿಹಃಪಗೆಯಾಂಡನೆಱ ನಾಮದಿನೆಸೆದು ಶರಣರ್ಗೆ ಬೇಡಿತ್ತನಿಲ್ಲೆನ್ನದಂತೊಸೆದು ಕೊಡುತಲಿಪ್ಪಂ (ಇಹರ. ದೀ. ೨೮-೦೦) ; ಬೇಡಿತ್ತನೀವೆನೆಂದೆಂಬ ಪರಶಿವನಮಲಚರಣಾಂಬುಜಕ್ಕೆ ಶರಣು (ಲತಿಸಂ. ೦೦-೦೨). **ಬೇಡಿದು** : ಬೇಡಿದನೀವ ಭುವನೋದ್ದಂಡದೈವದ ದೃಷ್ಟಿಪಥಕಿದಿರಾಗಿ ವ್ಯೆನಡುಗಿ ತಂಡತಂಡದಲೆದ್ದು ನಮರರ ತಂಡ (ಬಿಭಾಗ. ೯-೪-೦೮).

**ಬೇಡಿದಂ** = ಯಾಚಿಸಿದವನು ; ಯಾಚಕ : ಶ್ರೀವಿಜಯಂ ವಿವಾಹಮನೊಡಂಬಡೆ ತಂಗೆಗೆ ಮಾಡಿ ಬೇಡಿದಂಗೀವುದನಿತ್ತು . . . ಮೆಚ್ಚಿದಂ ನೆರೆವನ್ನಯದೊಂದು ಮೈಮೆಯುಂ (ಶಾಂತಿಪು. ೬-೦೯); ಬೇಡಿದ ನಿಷ್ಪಮಂ ಸಲಿಪುದುಂ ಕರ್ಣಂಗೆ ಜನ್ಮವ್ರತಂ (ಕಮರ. ೬೨ ಪ್ರಮೋ).

**ಬೇಡಿದರ್** (ಬಹುವ) : ಬೇಡಿದರ್ಗೀಯದೆ ಮಱೆಗೆ ವಂದರಂ ಕಾಯದೆ ನೀಳ್ದೊದವಿದ ಜನಮನುಪಾರ್ಜಿಸದಧಮನದೇತರ್ಕೆ ಬಾರ್ತೆ ಜೀವನ್ಮೃತಕಂ (ಅದಪು. ೦೨-೯೭) ; ಬೇಡಿದರ್ಗಿಲ್ಲೆಂಬುದುಂ ಕಾದಿ ಸೋಲ್ವುದುಂ ಪೆಱವೆಣ್ಣಂ ಪೀಡಿಸುವುದುಂ ಕನಸಿನೊಳಪ್ಪುದಮಿಲ್ಲಂ (ಗದಾಯು. ೨-೭ ವ).

[ < ಬೇಡು$_1$ ]

**ಬೇಡಿತ್ತು** 'ಬೇಡಿತು' ನೋ.

**ಬೇಡಿದು** 'ಬೇಡಿತು' ನೋ.

**ಬೇಡಿಸು** (ಕ್ರಿ). ಯಾಚಿಸುವಂತೆ ಮಾಡು ; ಬಯಸುವಂತೆ ಮಾಡು : ಬೇಡಿಸುವಪ್ಪುಗಳ್ಗೊರೆವ ಲಲ್ಲೆಯ ಮೆಲ್ನುಡಿಗಳ್ಗೆ ಕೂಡೆ ನಾಣೂಡಿದ ಕೆಂದುಗಳ್ಗೆ ಬಗೆಗೊಂಡಿನಿಸಂ ತಲೆದೂಗುವಂತೆಪೋಲ್ . . . ಅಲ್ಲಾಡುವುದಾಯ್ತು . . . ತತ್ಸುರತಮಂದಿರದುಜ್ಜ್ವಳದೀಪಿಕಾಂಕುರಂ (ಶಂಶಖಾ. ೩-೯೩). [ ಬೇಡು$_1$ + —ಇಸು$_3$ ]

**ಬೇಡು$_1$** (ಕ್ರಿ). ಬೇಪ, ಬೇರ್ಪ, ಬೇಪೆ, ಬೇಳ್ಪ$_1$, ಬೇಳ್ವ$_1$, ಬೇಟ್ಟಿ (ಭೂತಕೃ). ೧. ಬಯಸು ; ಇಚ್ಛೆಪಡು ; ಆಶಿಸು : "ಬೇಡು—ಯಾಚ್ಞಾಯಾಂ, ಶಬ್ದಸಮೂಹೇ ಚ" (ಶಮದ) ; ಭಿ.ಮನಕುಳ ಸಹದೇವರ್ಕಳ್ಗೆ ದುರ್ಯೋಧನನ ತಮ್ಮನಪ್ಪ ಯುಯುತ್ಸುಗಮುವರ್ ಬೇಡಿದ ನಾಡುಗಳನೆ ಕುಡಿಸಿ ಸಂತಸಂಬಡಿಸೆ (ಶಂಶಖಾ. ೧೯-೩೭ ವ); ಬಗೆಯುಂ ಬೇರ್ಪರ್ತ್ಥಮಂ ವಾಂಛೆಯುಂ (ಎಕ. VII, ಶಿಮೊ. ೬೯-೮೦ ; 1112) ; ಬೇಹ ವರವನು ಬೇಡಿಕೊಳ್ಳು (ಸೌಶಾ. ೧೯-೩೮) ; ಈ ಮಯೊಳಾ ಸುಗ್ಗಲಾಂಬೆಗೆ ಬೇಪನಿತು ಬೋಧಿಸಲು (ದೀವಪು. ೦೬-೨); ತಲೆಗೆ ಎಣ್ಣೆ ಇಲ್ಲ, ತನು ಮೃಗನಾಭ ಬೇಡಿತು (ಗಾದ). ೨. ಕೇಳು; ಯಾಚಿಸು : ಬೇಡುವೆನರ್ಥಸಂಚಯಮಂ (ಕಬಿರಾ. ೨-೦೦೨) ; ನೀಂ ಬಾ ಪೋಪಮೆಂದಂಗೆ ಮೆಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ ಎಂಬುದುಂ (ಶಂಶಖಾ. ೦-೬೦) ; ಆಶೇಷ ಭೂಭುಜನಮಂಡಲವಲ್ಲಭನಾದ ದೇವನೀಗಾವಗಮೆಮ್ಮ ಬೇಟ್ಟ ವರ ಮನ್ನಣೆಯುಂ ಸುರವೀಂದ್ರ ವಲ್ಲಭಂ (ಶಂದೋಂಬು. ೦-೦) ; ಬೇಳ್ವರ್ತ್ಥಿಜನಕ್ಕೆ ದಾನಮಣಿ (ಎಕ. VIII, ಶಿವಮೊ. ೦೦-೦೨ ; 1085) ; ಜನಮಂ ಬೇಳ್ವಸೆಯಂ . . . ಬಿಟ್ಟು ನಿಮ್ಮಂ ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಕ. ೨೦).

**ಬೇಡಿಕೊಳ್, ಬೇಡಿಕೊಳು, ಬೇಡಿಕೊಳ್ಳು** = ಕೇಳಿಕೊಳ್ಳು ; ಯಾಚಿಸು: ನಿನಗೊಸೆದೆಂ ಬೇಡಿಕೊಳ್ ನಿನ್ನ ಬೇಡಿದುದೆಲ್ಲಮಂ ಕುಡುವೆಂ

(ವಡ್ಡಾರಾ. ೧೨೮-೫) ; ಧರಿತ್ರಿಯಂ ಜೀಯೆನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರನೊತ್ತಿಕೊಂಡುಂ (ಶಂಶಭಾ. ೧-೧); ಎನ್ನನೊಡಗೊಂಡು ಮುದದೆ ಪೋಪಂತನುಗ್ರಹಿಸೆಂದವಂ ಬೇಡಿಕೊಳಲೊಪ್ಪಿದಂ (ಕೈಶುಭಾ. ೪-೬೫); ಸ್ವಪ್ರತಿಷ್ಠೆಯ ಮತ್ತು ಆತ್ಮಸ್ತುತಿಯ ಒಂದು ಶಬ್ದವೂ ನನ್ನ ಬಾಯಿಯಿಂದ ಹೊರಬೀಳದಿರಲೆಂದು ದೇವರನ್ನು ಬೇಡಿಕೊಳ್ಳುತ್ತೇನೆ (ಶ್ಯಾಮುಶಾ. ೫). **ಬೇಹವಳು, ಬೇಹಳು** = ಇಷ್ಟವಾದವಳು ; ಬೇಕಾದವಳು : ಕಮಲ ಮುಖಿಯನು ಬೇಹವಳನೊಯ್ದು ಮಳಗುಣನಿಧಿ ಕೊಡಲೆಂದರು (ಶಬಾಗ. ೧೧-೧೧೨-೨೬) ; ದೇಹವೆರಡಕೊಂದಸುವೆಂಬಂದದಿ ಬೇಹಳ ಮಾಡಿಕೊಂಡರ್ದ ಆ ಹೂಗಣೆಯ ನೃಪವರನರ್ದಂತೆಲೆ ಭಾವಕಿ ಕಟ್ಟಿಣಿಸುವರೆ (ಪ್ರಶಂಜ. ೨-೩೬) ; ಬೇಹಳಂ[ಶಾ ಶಾಂ.ರಂ] ಮನ್ನಿಪಂತಬುಜವನಬರಿಸುತುವಿನನು ದಯಗಿರಿಯನಡರ್ದಂ (ಶಾವಶಂ. ೬-೩೪). **ಬೇಹುದು. ಬೇಳ್ಪುದು, ಬೇಟ್ಪುದು**=೧. ಬೇಕಾಗಿರುವುದು ; ಅಗತ್ಯವಾದುದು : ಶಿವಗಣ ದ್ರೋಹದ ವಚನವದು ಕಿವಿಗೆ ಸಿಲುಕಿದ ಮಾತ್ರದಲಿ ಹಗೆಯವ ನನವಿಚಾರದೊಳಿರಿಸಲ್ ಬೇಹುದು (ಬಸಪು. ೬೦-೧೪) ; ಸತಿಯರ್ಗೆ ಧೈರ್ಯಂ ಬೇಳ್ಪುದು (ಸಂಬಿಕ. ೦೬-೩೬) ; ಆನೆ ರಿಪುಸೇನೆಗೆ ಸಾಲ್ದೆನವುಂಕಿ ಪೇಡಿ ಪಾಡಿಗಟ್ಟಿಜವೆಡಗೈಯ ಕೈಯುಂಗುರೆ ಸಾಲದೆ ನಚ್ಚಿನ ಕೈದುವೇಟ್ಪುದೇ (ಕಾವ್ಯಸಾ. ೪೦೦ ಟಿಪ್ಪಣಿ). ೨. ಬೇಡಿದುದು ; ಬಯಸಿದುದು : ಬೇಟ್ಪುದಂ ಪಡಿಪ್ಪ ಕಲ್ಪದ್ರುವಿತಾನಂ . . . ವ್ಯೋಮವಿಭಾಗವ್ಯಾಪ್ತಿಯ ವ್ಯನ್ನತತನುವಿನಿತುಂ ನಿಶ್ಚಯಂ ವ್ಯರ್ಥಮಲ್ತೇ (ಶಂತ್ರಪು. ೩-೪೦). **ಬೇಹೊಡೆಯ**=ಬೇಕಾದ ಒಡೆಯ ; ಇಷ್ಟವಾದ ಸ್ವಾಮಿ : ಬೇಹೊಡೆಯ ನಾನಿರಲು ಮಾಜಿದವನಂ ಕೇಳ್ದ ಸಾಹಸವ ನೋಡು (ಹಕಣ. ೧೦-೧೧). **ಬೇಟ್ಪಂ**=ಬೇಡುವವನು ; ಯಾಚಿಸುವವನು ; ಯಾಚಕ : "ಬೇಡುವಂ ಬೇಟ್ಪಂ" (ಸಂಕೀಪ. ೨೦) ; ಬೇಟ್ಪನ ಬೇಟ್ಪ ವಸ್ತು ಕಾಂಚನಗಿರಿಯಿಂದಮಗ್ಗಳಂ (ಶಂಪಶಾ. ೫-೬೬). **ಬೇಟ್ಪರ್, ಬೇರ್ಪರು, ಬೇಹವರು, ಬೇಳ್ಪರ್, ಬೇಳ್ಪವರ್** (ಬಹುವ) : ೧. ಬೇಕಾದವರು ; ಆತ್ಮೀಯರು : ಅರಸಿಯರಣುಗರಂ ಬೇಟ್ಪರುಮಂ ಮೊನೆಗಾಜಿರಂ . . . ಚೌಪಳಿಗೆಗಳೊಳ್ ಬಳ್ಳಿರಿಸಿದರ್ (ಶಂಶಪಾ. ೨-೬೬) ; ನುಸುಳು ಗಂಡಿಯೊಳುರವಣಿಸಿದರು ಕರ್ಣ ಕೃಪ ಮೊದಲಾದ ಬೇಹವರು (ಕುವ್ಯಾದ್ರೋ. ೬-೫೬). ೨. ಬೇಡುವವರು ; ಯಾಚಕರು : ಬೇಪ್ಪರ್ಗರಿಗಾತ್ರೀವ . . . ಪರಹಿತಕಾರ್ಯ್ಯತತ್ಪರನುದಾರಗುಣಾನ್ವಿತಂ (ಕಾಇಇ. XI-ii, ೦೩೮-೨೪; 1093) ; ಪದನಜಿದಾಸೆದಪ್ಪಿಸದೆ ಬೇಳ್ಪರ ಬೇಳ್ಪುದನಿತ್ತು ಸದ್ಗುಣಾಸ್ಪದನೆನಿಸಲ್ಕೆ ನಿನ್ನ ಪೆಸರೇಂ ಗಳ ಪೊಯ್ಸಳಗೌಣ್ಡನೆಮ್ಬುದೇ (ಎಕ. VI, ಕಡೂರು. ೬೪-೨೬; 1160) ; ಬೇಳ್ಪರ್ಗೆ ಬೇಡಿದ ಪರಿಯಲೀವುತ ಪಾಪಿ ಕೋಪದಿ ಹೋಮಿಸಿದನಂದು (ಶಾಕ್ಯಶಾ. ೦೬-೦೪).

[ದೇ.॥ ತಮಿ. ವೇಣ್ಡು; ತುಳು. ಬೇಡು; ತೆಲು. ವೇಡು]

**ಬೇಡು₂** 'ಬೇಳ್₁' ನೋ.

**ಬೇಡು₃** (ನಾ). ಬೇಡರ ಸಮೂಹ ; ಶಬರರ ಗುಂಪು : "ಬೇಡು— ಯಾಚ್ಞಾಯಾಂ, ಶಬರ ಸಮೂಹೇ ಚ" (ಶಮದಾ). [<ಬೇಡ₁]

**ಬೇಡು₄** (ನಾ). ಒಂದು ಬಗೆಯ ತೆರಿಗೆ : ಬೇಡು ಬಿಟ್ಟು . . . ಸುಂಕ ಸಾದಿಲ × × × ಮೊ[ದ]ಲಾಗಿ ಆವುದೊಂದುಯಿಲ್ಲದೆ (ಕಾಇಇ. IX-ii, ೪೦೬-೩೦; 1364) ; ಯಿಾ ಕ್ಷೇತ್ರಕ್ಕೆ ತೆಜು ದೇವಸ್ವ ಅನಾಯ ನಟ್ಟೊ ಬೇಡು ಆಉಡೂ ಯಿಲ್ಲಾ (ಕಾಇಇ. IX-ii, ೪೨೬-೨೬; 1402) ; ತುಳುವದ ಶಾಸನಗಳಲ್ಲಿ ಬರುವ ತೆರುವಣಗಳು :— ತೆರು . . . ಅರವಸ್ತು, ಬೇಡು, ಅಪ್ಪಣೆ (ತುಳುಪಾ. ೨೬೦). 'ಬೇಡು₂', 'ಬೇಡಿಗೆ' ಪರಾ. [ ? ]

**ಬೇಡುಂಗೋಳು** (ನಾ). ಒಂದು ಬಗೆಯ ತೆರಿಗೆ : ಸುಂಕದ ಬೇಡುಂಗೋಳು ನಲ್ಲಿತ್ತು ಪರಿಹಾರ ಹೆಗ್ಗಡೆ ಗದ್ಯಾಣ (ಎಕ. XI. ಕೊಡಗು. ೩೩-೩; 1115 ?) ; ವ್ರಿತ್ತಿ(ವೃತ್ತಿ)ಗಳನ್ನು ನಿಧಿನಿಕ್ಷೇಪಸಹಿತವಾಗಿ ಸಿದ್ಧಾಯ ಬೆ (ಒ)ಸಗೆ ಕಾಣಿಕೆ ಬೇಡುಂಗೊಳು ಅಕರ ಸರ್ವ್ವಬಾಧಾಪರಿಹಿ[ಹೃ]ತವಾಗಿ . . . ಧಾರಾಪೂರ್ವ್ವಕವಾಗಿ ಕೊಟ್ಟರು (ಎಇ. XXVII, ೦೬೨-೬೫; 1256).

[ <ಬೇಡು₄]

**ಬೇಡುಗ** (ನಾ). ಯಾಚಿಸುವವನು; ಬೇಡುವವನು : ತಾ ಮಾಡಿದೆನೆಂದತೆ ತನ್ನ ಕೆಳಗಣವೆ ಆಣವ ಮಾಯಿಕ ಕಾರ್ಮಿಕಮಲಂಗಳು ಇವ ಕೊಂದೆನೆಂದು ಮನಕ್ಕೆ ತೋಜಿದಡೆ ತನ್ನ ಕೆಳಗಣ ಬೇಡುಗರೆ ಈ ಮೂವರು (ಷೋಕಪಾ. ೩೩-೦೩೬) ; ರಾಮರಾಯರು . . . ಬಾಗಿಲಿಗೆ ಬಂದ ಬಡ ಬೇಡುಗರನ್ನು ಬರಿಗೈಯಿಂದ ಎಂದೆಂದೂ ಮರಳಿಸುತ್ತಿರಲಿಲ್ಲ (ಸಂತಶ್ರ. ೨೩).

[ಬೇಡು₁ + —ಗ₂]

**ಬೇಡುಗಣ್ಣು** (ನಾ). ಯಾಚಿಸುವಿಕೆಯನ್ನು ವ್ಯಕ್ತಪಡಿಸುವ ಕಣ್ಣು ; ಬೇಡುವ ನೋಟ : ಭಾರತಿ ಗಂಡನ ಕಡೆ ಬೇಡುಗಣ್ಣುಗಳಿಂದ ನೋಡುತ್ತಿದ್ದಳು (ಸೂತಗ. ೫೦). [ಬೇಡು₁ + ಕಣ್ಣು (<ಕಣ್)]

**ಬೇಡುಹ** (ನಾ). ಯಾಚಿಸುವಿಕೆ; ಯಾಚನೆ : " ಅಧ್ಯೇಷಣಾ . . . ಅರ್ಥನಾ — ಈ ೬ ಬೇಡುಹ" (ಹಲಾಯು. ೫೪-೨೦೫).

[ಬೇಡು₁ + —ಹ₂ (< —ವ₂)]

**ಬೇಣ** 'ಬೆಣ' ನೋ.

**ಬೇತಾಳ** (ನಾ). ಭೂತ; ಪಿಶಾಚಿ : ತಾಳತರುವಿತತಿಯೊಳ್ ಬೇತಾಳಂಗಳ್ ಪೊಜಿದು. . . ತಳತಾಳಲಯಕ್ರಮದೆ ಕುಣಿಯೆ ಭಯಮಯನಾದೆಂ (ಕವಿರಾ. ೩-೧೪೩) ; ಆ ಜಿನಭವನಮೊಳ್ ವಸಿಯಿಸುವ ದೇವತೆಗಳೆಲ್ಲ ಮಿವರಲ್ಲದುದೂ ನೆಗಟ್ಟಿಪ್ಪರೆಂದಗುರ್ವಾಗೆ ಬೇತಾಳರೂಪುಗಳಂ ವಿಗುರ್ವಿಸಿ ಪರಿತಂದು (ಶಂರಾವಪಾ. ೦೪-೪೦ ವ) ; ಬೆನ್ನು ಹತ್ತಿದ ಬೇತಾಳ (ಗಾದೆ).

[< ಸಂ. ವೇತಾಲ]

**ಬೇತು₁** 'ಬೇ₂' ಪರಾ.

**ಬೇತು₂** (ನಾ). ೧. ಹಂಚಿಕೆ; ಯುಕ್ತಿ ; ಉಪಾಯ. ೨. ಉದ್ದೇಶ ; ಧ್ಯೇಯ : ಕಟ್ಟಿಗೆ ಮಗಳನ ಕೊಟ್ಟು ಅವನ್ನ ದತ್ತಕ ತೊಗೊಳ್ಳೊ ಬೇತು ಇದ್ದ ಹಂಗ ಕಾಣಸತದ (ಗಂವಡಾಯ. ೦೦೬). ೩. ಸಿದ್ಧತೆ ; ತಯಾರಿ : ಜನರೆಲ್ಲ ದಿಕ್ಕುಗೆಟ್ಟು ಕಣ್ಣು ತಿಕ್ಕಿಕೊಳ್ಳುತ್ತ ಜಿಲ್ಲಾ ಪಿಲ್ಲಿಯಾಗುವ ಬೇತಿನಲ್ಲಿದ್ದಾರೆ (ಹೂಸಕ್ಷ. ೨೦೭) ; ಈ ಮನೆಯಲ್ಲಿ ನಿಂತು ಅವಳಿಗೆ ಬೇಸರವೆನಿಸಿರಬೇಕು. ಕಾಲು ಕಿತ್ತುಕೊಂಡು ಪಲಾಯನ ಬೆಳೆಸುವ ಬೇತಿನಲ್ಲಿ ಇರಬೇಕು (ಗಿಡುಗ. ೪೫). ೪. (ಆಲಂ) ಅಂದಾಜು ; ಊಹೆ: ಮುಂದೆ ಯಾವ ಕಡೆಯಿಂದಲೂ ಹರಗಿದರೆ ಬರುವ ಹಾಗೆ ಮಾಡಿ ಬೇತಿನ ಮೇಲೆ ಯಾಸಿಯಾಗದೆ ಯಾವ ಕಡೆಗೆ ನೋಡಿದರೂ ಸಾಲುಗಳೇ ಕಾಣುವ ಹಾಗೆ ಮಾಡಿ (ಕೃಷಿಶ್ರ. ೬೦).

**ಬೇತು ನೋಡು**=ಅಂದಾಜು ಮಾಡು : ಮುಂದೆ ಆ ಗಿಡಗಳ ಮಧ್ಯದಲ್ಲಿ ಸಣ್ಣ ಕುಡಗಳಿಂದ ಎಡಿಯ ಹರಗುವದಕ್ಕೆ ಅಡಚಣೆಯು ಆಗದ ಹಾಗೆ ಮೊದಲೇ ಬೇತು ನೋಡಿ. . . ಗಟ್ಟಿಯಾಗಿ ಕೂಡ್ರಿಸಬೇಕು (ಕೃಷಿಶ್ರ. ೬೦). **ಬೇತು ಹಾಕು**=ಯೋಜನೆ ಹಾಕು : ಇನ್ನ ಪೋಲಿಸರ ಕೈಯೊಳಗ ಕೊಡೋದು ಅಂತ ಇವರಿಬ್ಬರೂ ಬೇತು ಹಾಕಿದ್ದರು (ಹೂಸಂಶಾ. ೦೨೬).

[←ಮರಾ. ಬೇತ್]

**ಬೇದ** (ನಾ). ವೇದ ; ಪ್ರಾಚೀನವಾದ ನುಡಿ : "ಓದು, ಪಬವಾತು, ಬೇದಂ, ಸುತಿ—ಈ ೪ ವೇದಂ" (ಕಶಾ. ೫೬-೨೪೨). 'ಬೇದಕ್ಕರಿಗ' ಪರಾ.

[<ಸಂ. ವೇದ]

**ಬೇದಕ್ಕರಿಗ** (ನಾ). ವೇದಾಭ್ಯಾಸ ಮಾಡಿದವನು; ವೇದಾಧ್ಯಯನ ಮಾಡಿದವನು : ಬೆದಕ್ಕರಿಗರ ಜಪಶಾಲೆ ಸೊಕ್ಕಾನೆಕುದುರೆಯ ವೈಹಾಳಿಯುಂ ಕಣದಿಕ್ಕೆ ಕಣ್ಣಕೆ ರಂಜಿಸಿತು (ವರ್ಧಶ. ೨-೫೫). [ಬೇದ + ಅಕ್ಕರಿಗ]

**ಬೇದನೆ** (ನಾ). ಸಂಕಟ ; ವೇದನೆ: "ವೇದನೆಯಿ ಬೇದನೆಯಿ" (ಕಶಾ೦. ೬) ; ವತ್ಸಕ್ಕೆ ಬತ್ವಂ . . . ವೇದನಾ—ಬೇದನೆ (ಕಶುಂ.೨೩೯ ಶ್ರೀಕಂ). [<ಸಂ. ವೇದನಾ]

**ಬೇದಬಿಜ್ಜೆ** (ನಾ). ವೇದವಿದ್ಯೆ : 'ಬೇದಬಿಜ್ಜೆಗ' ಪರಾ. [<ಸಂ. ವೇದವಿದ್ಯಾ]

**ಬೇದಬಿಜ್ಜೆಗ** (ನಾ). ವೇದವಿದ್ಯೆಯನ್ನು ತಿಳಿಸಿಕೊಟ್ಟವನು ; ಬ್ರಹ್ಮ : "ಪೊಂಬಸಿಱು ನುಡಿವೆಣ್ಣಾಣ್ಮಂ ಬೊಮ್ಮಂ ಬೇದಬಿಜ್ಜೆಗಂ. . . ನಾಲ್ಮೊಗನೆ ನಲಜನೆಂಬ ಪೆಸರ್" (ಕಶಂ. ೫) ; ಇರ್ವರುಂ ಬೇದಬಿಜ್ಜೆಗಂಗೆ ಸರಿಮಿಗಿ ಲೆನಿಪರ್ (ಅದ್ಯ.ಕ. ೧೦-೦೫). [ಬೇದಬಿಜ್ಜೆ + —ಗ$_2$]

**ಬೇದಮ್ಮ** (ನಾ). ಒಬ್ಬಾತನ ಹೆಸರು : ಇಂತಿವಕ್ಕೆ ಕಾಸಂಬಾಟು ಕಂಭ ಯ್ಯನುಂ ಆ ಸೂಗೊರಕ ಕನ್ನನುಂ ಪೊಸವೂರ ಬೇದಮ್ಮನು ಕನ್ನರನುಂ. . . ಸಾಕ್ಷಿ (ಎಶ. XI, ಹಕ್ರರು. ೬೯-೩೬; ೩೦೨). [ಬೇದ + ಅಮ್ಮ$_1$]

**ಬೇದಾದ** (ಗು). ವ್ಯವಸ್ಥೆಯಿಲ್ಲದ; ಅವ್ಯವಸ್ಥೆಯಿಂದ ಕೂಡಿದ: ಸಬ್ ರಿಜಿಸ್ಟ್ರಾರ ಅಥವಾ ನೋಂದಣಿಕಚೇರಿಯೆಂದರೆ ಮೊಗಲಾಯಿಯ ಒಂದು ಬೇದ್ಯಾದ ಕಚೇರಿಯೇ ಎಂದೆನ್ನಲು ಏನೂ ಅಡ್ಡಿ ತೋರುವುದಿಲ್ಲ (೦೦ತ.೦೦). [←ಪಾರ. ಹಿಂ. ಬೇದಾದ್ = ಅನ್ಯಾಯ, ಅತ್ಯಾಚಾರ]

**ಬೇದಿರುಸು. ಬೇದಿರ್ಸು** (ನಾ). ಅಧಿಕಾರದ ಪ್ರತೀಕವಾಗಿ ಧರಿಸಬೇಕಾದ ಉಡುಪನ್ನು ಬಿಟ್ಟು ಇತರರಂತೆ ಧರಿಸುವ ಸಾಧಾರಣವಾದ ಉಡುಪು : "(ಅಧಿಕಾರದ ಉಡುಪು ಧರಿಸಲುಳ್ಳವನು ತೊಡುವ) ಸಾದಾ ಉಡುಪು; ಬೇದಿರುಸು" ( Mufti, ೩೦೪೦ ). **ಬೇದಿರ್ಸು** : ಒಬ್ಬ ಸಿಐಡಿ ಬೇದಿರ್ಸಿನಲ್ಲಿ ಬಂದು ವಿಷಯಸಂಗ್ರಹ ಮಾಡಲೆತ್ನಿಸಿದ (ಮುದ್ದು. ೪೯). [ಬೇ$_3$— + ದಿರುಸು (<ದಿರಸು)]

**ಬೇದಿರ್ಸು** 'ಬೇದಿರುಸು' ನೋ.

**ಬೇದು** (ನಾ). ಶಾಖ ಬರುವಂತೆ ಕಟ್ಟುವ ಕಟ್ಟು; ಪೋಲ್ಟೀಸು (?): ಹುಲಿಗಿಲು ಹುಣಿಸೆಯು ಸೊಪ್ಪಿಂದಲಗಂ ಭೂತಾಂಶ ಕರಣೆಯಿಂಬಿನಿತ ಜಿಗೋಳಂದಲಸದೆ ಬೆರಸಂಕೋಲೆಯುನೊಲವಿಂದಂ ಬೇದುಗಟ್ಟಲಿಳಿವಿಷಘ್ನಂ (ಖಮುದ. ೦೦-೫೬); ಸೆಗ್ಗಿಲ್ ತಗಚೆ ನಿರ್ದ್ದಿಕೆ ತಗ್ಗಿಯಪಾಮಾರ್ಗದೊಡನೆ ಬೆರಸಿದುದಂ ತಾಂ ಕೊಗ್ಗಿ ಕುಮಾರಿಗಳಂ ಕುಡಿಸೊಗ್ಗಿಸಿದಂಬಿಲದೆ ಬೇದು ಗಟ್ಟು ವಿಷಘ್ನಂ (ಖಮುದ. ೦೬-೬೪). [< ಬೇ$_1$ ]

**ಬೇನಾಮಿ, ಬಿನಾಮಿ, ಬಿನಾಮಿಾ, ಬಿನಾಮೆ** (ಗು). ೧. ಹೆಸರಿಲ್ಲದ ; ಅನಾಮಧೇಯವಾದ : (ಮೈಗೆಶ. IV, ೬೬೪). ೨. ತನ್ನ ಹೆಸರನ್ನು ಬಿಟ್ಟು, ಬೇರೆಯವರ ಹೆಸರನ್ನು ಹೊಂದಿರುವ. (ನಾ). ೩. ಹೆಸರಿಲ್ಲದುದು ; ಅನಾಮಧೇಯವಾದುದು : ಇಂದಿನ ಹಗರಣಕ್ಕೆಲ್ಲ ಕಾರಣವಾದ ಪತ್ರ ಬೇನಾಮಿಯಾದುದು (ರೂ೦). ೪. ತನ್ನ ಹೆಸರನ್ನು ಬಿಟ್ಟು ಬೇರೆಯವರ ಹೆಸರನ್ನು ಹೊಂದಿರುವುದು. **ಬಿನಾಮಿ :** ೧. "ಓದಿ ನೋಡಿ" ಎಂದು ಆ ಬಿನಾಮಿ ಅರ್ಜಿಯನ್ನು ಅವನ ಕೈಗೆ ಕೊಟ್ಟರು (ಮುಗಿಯು. ೨೬೬). ೪. ಜಮೀನನ್ನು ಹರಾಜಿಗೆ ತಂದು, ಹರಾಜಿನಲ್ಲಿ ಬಿನಾಮಿಯಾಗಿ ಕೂಗಿಸಿ ಅನಂತರ ಆಸ್ತಿಯನ್ನು ತಮ್ಮ ಹೆಸರಿಗೆ ಮಾಡಿಸಿ ಕೊಳ್ಳುವುದು ಶಾನುಭೋಗರಿಗೆ ಚೆನ್ನಾಗಿ ಗೊತ್ತಿತ್ತು (ಹನ್ನೂರು. ೦೪೮). **ಬಿನಾಮಿಾ :** ೧. ಈ ಬಿನಾಮಿಾ ಹುಂಡಿಯನ್ನು ಈತ ಲಪಟಾಯಿಸಲೆಂದು ನಮ್ಮ ಅಂಗಡಿಗೆ ತಂದಿರಬೇಕ್ಕಾನೆ (ಪೋಜೀವ. ೯೩). **ಬಿನಾಮೆ :** ೨. ನನ್ನ ಮತ್ತು ಭಾವ ಕೃಷ್ಣರಾಯನ ಅನ್ಯೋನ್ಯತೆ ದೃಢಮೂಲವಾಗಿದ್ದುದರಿಂದ ಆತನ ಹೆಸರಿನಲ್ಲಿ ಬಿನಾಮೆ ಪ್ರೋನೋಟೊಂದನ್ನು ಸಿದ್ಧಪಡಿಸಿದೆನು (ಕುಕುಣಾ. ೦೦). [← ಹಿಂ. ಬೇನಾಮ್; ಪಾರಾ. ಬಿನಾಮಿಾ]

**ಬೇನೆ** (ನಾ). ೧. ರೋಗ ; ಜಾಯಿಲೆ ; ವ್ಯಾಧಿ : ಉಟ್ಟುದಂ ಕಳೆಯದ ಱಿಂದು ಬೇನೆ ಕೆಳರ್ದಪ್ಪುದು (ಕಾಶ್ಯಜಾ. ೯೯೪ ಕೂಶ್ರ್ಯ) ; ದುರ್ಬಲಂಗಂ ಅಸಹಾಯಂಗಂ ಪ್ರತಿಕೂಲಂಗೆಯ್ದುನಪ್ಪವಂಗಮಾವ ಕಜ್ಜಮುಂ ಬೆಜ್ಜೆಯಿಲ್ಲದ ಬೇನೆಯಂತೆ ತೀರಲರಿಯದು (ಶಂಕಶಂ. ೯೬-೨) : ಅವಳ ಪರಕೆಯ ನೋಂಪಿಯೆಂದು ಪಡೆದಬ್ಬೆಗೆ ಪರ್ಬಿದ ಬೇನೆಯೆಂದು . . . ಒರೆಯಂತೆ (ಶಶಿಎ. ೬-೯೨). ೨. ನೋವು ; ಯಾತನೆ : ಅಚ್ಚಿಕುಚ್ಚಿ ದುಕ್ಖಾಣೆ—ಎಣ್ಣ ಬಸಿಱ ಬೇನೆಗಳುಮಿಂದಿವು ಮೊದಲಾಗೊಡೆಯ (ಶಶ್ಯ.ಶಾ. ೩೬-೬); ಬೇನೆಗಳೊಳ್ ಮೊಗಂಗಳಂ ಬಿನ್ನಗೆ ಮಾಡದಿರ್ದರಳವಚ್ಚರಿಯಾಗೆ ಕೆಲರ್ ಮಹಾರಥರ್ (ಶಂಕಶಾ. ೦೦-೩) ; ರೋಮರೋಮಂದಪ್ಪದೆ ಸರ್ವಾಂಗಮುಂ ವೃಶ್ಚಿಕಸಹಸ್ರಂಗಳೊಡನೆ ಮಿಡಿದಂತಪ್ಪ ಬೇನೆಗಮನಂತ ಗುಣಮೆನಿಪ ದೇಹವ್ಯಥೆಯನೊದವಿಸುತ್ತುಂ (ವರ್ಧಶು. ೦೦-೦೫ ಪ). ೩. (ಹೆರಿಗೆಯ ಸನ್ನಿಯದಲ್ಲಿ ಉಂಟಾಗುವ) ನೋವು : ಶೂಲೆ : ಬಂಜೆ ಬೇನೆಯನಜಿವಳೆ (ಮಪಾದೀ. ಬ. ೦೪೦-೩೦೯) ; ಬೇನೆಯಿಂಸಕ್ಕಿಗಳ್ ನಸು ಮುಗುಳ್ದಿರೆ . . . ತಟಭೂಜದೊಳೊಂದು ಕರೇಣು ಸೂಲಿಸುತ್ತೇನಣವಳ್ಳಿ ಮಾಡಿದುದೊ ಬೇಡರೊಳಂ ಕರುಣಾನುಭಾವಮುಂ (ಕುಶ್ಯವು. ೩-೬೨) ; ಸುಖಪ್ರಸೂತಿಯೊಪ್ಪಿರೆ ಪಡೆದಳ್ ಭಯಂ ಗಡ ನೆಯಂ ಗಡ ಬೇನೆಯ ಸೊಜಿರ್ ಗಡೆಂದು ತತ್ಪುರದ ಪುರಂಧ್ರಿಯರ್ ಸತಿಗೆ ತೂಪಿರ್ದರ್ ಸ್ವಗೃಹಾಂತರಂಗದೊಳ್ (ಸೂಕ್ತಸು. ೬-೩೪). ೪. ಅಡಚಣೆ; ಕಷ್ಟ ; ತೊಂದರೆ : "ವೇದನಾಯಾಂ, ಬೇನೆಯೊಳ್" (ಶಬ್ದಕ್ಕ. ೦೭); ಕಾನನದೊಳು ಕಡುಕಷ್ಟವಡೆದು ನೋವು ಬೇನೆಗಳಿಗೆ ಬೇಸಱದೆ ಸಾನುರಾಗ ದೊಳನುಸರಿಸಿ ತನ್ನನಿಯನ ಜಾನಕಿ ಜನವ ಪಡೆದಳು (ಕದಿರಿ. ೩-೯೭) ; ಪರರ ಬೇನೆಯಲ್ಲಿ ಮನ ಹಿಗ್ಗುವಾತನ ಹೊಲೆಯ (ಗೀಂವಿ. ೦೬-೫).

**ಬೇನೆಬೀಳು**=ರೋಗಕ್ಕೆ ಗುರಿಯಾಗು. – ಈಡಾಗು ; ಜಾಯಿಲೆ ಬೀಳು : ಬೇನೆ ಬಿದ್ದರೆ ಪೇಸದೆ ಬೇಸಱದೆ ಸನ್ಮಾನದೊಳುಪಚರಿಸುವುದು (ಶಿವಿ೦. ೪-೦೪) ; ಅವಳು ಬೇನೆ ಬಿದ್ದು ಬಹಳ ದಿನಗಳಾದವು (ರಂಕು. ೦).

**ಬೇನೆಗುದಿ** (ಕ್ರಿ). ಪ್ರಸೂತಿಯ ನೋವಿನಂತಹ ನೋವನ್ನು ಅನುಭವಿಸು : ಬಾಳ್ಗಬ್ಬದೊಳ್ ಕರುಣೆ ತಾಂ ಬೇನೆಗುದಿದೊಡವಲ್ಲೆ ಮೆರೆದವುದು ಪೊರಪೊಣ್ಮುತಾ ಮಹಾಕಾವ್ಯಶಿಶು ತಾಂ (ಶ್ರೀರಾಮಾ. ೨-೦೦). [ಬೇನೆ + ಕುದಿ$_1$]

**ಬೇನೆಬಡಿಸು** (ಕ್ರಿ). ನೋವನ್ನುಂಟುಮಾಡು ; ಯಾತನೆಯನ್ನು ಅನುಭವಿಸುವಂತೆ ಮಾಡು : ಜ್ಞಾನಾವರಣೀಯ ದರ್ಶನಾವರಣೀಯ ಬೇನೆ ಬಡಿಪ ವೇದನೀಯಮಾ ಹೀನದ ಮೋಹನೀಯಮಾಯುಷ್ಯನಾಮಗೋತ್ರಾ ನ್ನುಗದಂತರಾಯಗಳು ಇವು ಕರ್ಮವೆಂಟು (ಧರಪ. ೬೬-೦೦೭). [ಬೇನೆ + ಪಡಿಸು]

**ಬೇನೆಯ?** (ನಾ). ಒಂದು ಸ್ಥಳದ ಹೆಸರು (?) : ಕೌಣ್ಡಿಲ್ಯಗೋತ್ರ ಬನ್ನ ಪೇಜನ ಮಗಂ ಬೇನೆಯ ಸೋಮೇಜ ಬೇನೆಯ ಸೋಮೇಜಿಯ ಮಗ[ಂ] ಮಾ[ರಂಮಾಥ]ಟ್ಟರ ಮಗಂ ಗೋಲೆಯಭಟ್ಟಮ್ ಸೂರ್ಯ್ಯಗ್ರಹಣ ದೊಳ್ಮೊಲಾಪುರುಷವಿಪ್ರ್ಪ [ತ]ತ್ಕಾಲದೊಳ್ವಾಣಗ್ರಾಹಣ[ಂ]ಗೆಯ್ದು (ಸೌಇಇ. XI – i, ೯-೮ ; 862). [ ? ]

**ಬೇನೆಯಱಿ** (ಕ್ರಿ). ೧. ಹೆರಿಗೆಯ ನೋವನ್ನು (ಅನುಭವದಿಂದ) ತಿಳಿ. – ಅರ್ಥಮಾಡಿಕೊಳ್ಳು : ಬಂಜೆ ಬೇನೆಯಱಿಯದವೊಲೀ ನುಡಿಯುಂಟೆ (ಬಸವ. ೯-೦೪೦). ೨. (ಕಾವ್ಯರಚನೆಯ) ಕಷ್ಟವನ್ನು ತಿಳಿ. – ಅರ್ಥ ಮಾಡಿಕೊಳ್ಳು : ಬೇನೆಯಱಿಯದ ನೀರಸರನೇಕ ಪುಟ್ಟಿಸಿದನಬುಜ ಭವನು (ಹತಗ. ೦-೨೩). [ಬೇನೆ + ಅಱಿ]

**ಬೇನೆಯುಟು** (ಕ್ರಿ). ರೋಗವನ್ನು ಗುಣಪಡಿಸು ; ಜಾಯಿಲೆಯನ್ನು ವಾಸಿಮಾಡು: ಕೊಲುತಿರ್ಪಯ್ಮಗಳೊದು ಬೇನೆಯಟುವಾ ತೀಕ್ಷ್ಣಾಷಧಂ . . . ಬೇಹಾರಮಿಂತೆಲ್ಲ ಮುಂ ಪಲಕಷ್ಟಂ ಕಡೆಗೊಳ್ಳಿತೈ (ಸೋಮೇಶ. ೯೬). [ಬೇನೆ + ಅಟು$_1$]

**ಬೇನೆಯೆತ್ತು** (ಕ್ರಿ). ಹೆರಿಗೆಯ ನೋವನ್ನು ಅನುಭವಿಸು, –ತಿನ್ನು : ಮಡದಿಗೆ ನವಮಾಸ ತುಂಬಿತು ಶಿವಯೋಗದೆಡೆಯೊಳು ಬೇನೆಯೆತ್ತಿದಳು (ಅನ್ನಲಿ. ೨–೯೦). [ಬೇನೆ + ಎತ್ತು$_1$]

**ಬೇಪ** 'ಬೇಡು$_1$' ಪರಾ.

**ಬೇಪತ್ತೆ** (ನಾ). ಸುಳಿವು ಇಲ್ಲದಿರುವಿಕೆ; ನಾಪತ್ತೆ : ನಿನ್ನೆ ರಾತ್ರಿ ಕೇಬಿನ್ನಿಗೆ ಯಾವಾಗ ತಿರುಗಿ ಬಂದಳೋ ನನಗೆ ಗೊತ್ತಿಲ್ಲ. ಮುಂಜಾನೆ ಯಿಂದ ಮಾತ್ರ ಬೇಪತ್ತೆ (ಹೊಸಕ. ೦೯೦) ; ಬೇಪತ್ತೆಯಾದ ನಮ್ಮ ಬಾಜೀರಾಯ ಇನ್ನೂ ಮನೆಗೆ ಬಂದಿರಲಿಲ್ಲ (ಹುತರುದಾ. ೬೯). 'ನಾಪತ್ತೆ' ಪರಾ. [ಬೇ$_3$ — + ಪತ್ತೆ$_2$]

**ಬೇಪರವಾಯಿ**, ಬೇಪರ್ವಾ (ನಾ). ೧. ಪರಿವೆ ಇಲ್ಲದಿರುವಿಕೆ; ನಿರ್ಲಕ್ಷ್ಯ : ಹೀಗೆ ತಿಳಿಸುವದು ಕೆಲಕೆಲವರಿಗೆ ಬೇಪರವಾಯಿಯ ಲಕ್ಷಣವೆಂದು ಕಂಡುಬಂದಾಗ್ಯೂ, ಸ್ವಲ್ಪ ವಿಚಾರ ಮಾಡಿದರೆ . . . ಫಾಯದೆಯ ಸಂಗತಿಯೆಂದು ಕಂಡುಬಂ ದೀತು (ಮುಂಬಣ್ಣ. ೨೦೯). **ಬೇಪರ್ವಾ :** ೨. ಲಕ್ಷ್ಯವಿಲ್ಲದ ವ್ಯಕ್ತಿ ; ಸ್ವೇಚ್ಛಾಚಾರಿ : ಅಂತೂ ಅಡ್ಡಿಯಿಲ್ಲ, ತಾಯಿ ಹಾಂಗ ಮಗಳು ಬೇಪರ್ವಾಯಿನ್ಲ (ಜಾಂಜಾಯ. ೩೬). [←ಪಾರ. ಬೇಪರವಾ, ಬೇಪರವಾಹ್, ಬೇಪರವಾಹೀ, ಬೇಪರ್ವಾ; ಹಿಂ. ಬೇಪರವಾ, ಬೇಪರವಾಈ, ಬೇಪರವಾಹ್, ಬೇಪರವಾಹೀ; ಮರಾ. ಬೇಪರವಾ, ಬೇಪರವಾಈ, ಬೇಪರ್ವಾ, ಬೇಪರ್ವಾಈ]

**ಬೇಪರ್ವಾ** 'ಬೇಪರವಾಯಿ' ನೋ.

**ಬೇಪಾರ** (ನಾ). ಕೊಳ್ಳುವ, ಮಾರುವ ವ್ಯವಹಾರ ; ವ್ಯಾಪಾರ : "ಬೇಪಾರ–ವ್ಯಾಪಾರ" (ತದ್ಭಕೋ. ೩೨); ಆ ಪರಮವಿರಾಗಿಯ ಸುಜ್ಞಾನದ ಬೇಪಾರದ ಬೆಳವಿಗೆಗಂಡೆಬಗಿನ್ನೇಪರಿಯಾಪಬೋಧೆಗಳೇಕೆಂದು ಪೊಗಳ್ದರ್ತಮ ತಮಗೆ (ಸುರೇಖ. ೨೬-೩೬); ನಾವ್ ಸಚ್ಚಾ ಬೇಪಾರ ಮಾಡತಾವ್ (ಮೋಹಿನೀ. ೯೦). 'ಬೇರ$_2$' ಪರಾ.

[←ಹಿಂ. ಮರಾ. ಬೇಪಾರ್. / ಸಂ. ವ್ಯಾಪಾರ]

**ಬೇಪಾರಿ** (ನಾ). ವ್ಯಾಪಾರವನ್ನು ಮಾಡುವವನು ; ವ್ಯಾಪಾರಸ್ಥ ; ವ್ಯಾಪಾರಿ : ಕರಿ ತುರಗದ ಬೇಪಾರಿಗಳಾಶ್ರಯದಿರವ . . . ಸಿರಿಯು ಪರ್ಣಗಳ ವಿಕ್ರಯಿಪರ ರನ್ನದೋವರಿಗಳ ನೋಡುತ್ತೀಳ್ತಂದ (ಸುರೇಖ. ೨೦-೦೮). [←ಹಿಂ. ಮರಾ. ಬೇಪಾರೀ./ಸಂ. ವ್ಯಾಪಾರಿನ್]

**ಬೇಫಾಮು** (ನಾ). ಎಚ್ಚರಿಕೆ ತಪ್ಪುವಿಕೆ ; ಅಲಕ್ಷ್ಯ ; ನಿರ್ಲಕ್ಷ್ಯ : ಗದ್ದೆ ವಗೈರೆ ಸ್ಥಳದಲ್ಲಿ ಪೆಟಿ ಮುಂತಾದ್ದರಲ್ಲಿ ದವಸವಿಟ್ಟು ಬೇಫಾಮಿ ನಿಂದ ನೋಡದೆ ದವಸವನ್ನು ಕೆಡಿಸಿದರೂ . . . ಅದರ ಜವಾಬು ಅಮಿಲನ್ನು ಕೊಡಬೇಕಾದೀತು (ಮಹಾಪಂ.II, ೬೩) [←ಮರಾ. ಬೇಫಾಮ್]

**ಬೇಫಿಕರ್** 'ಬೇಫಿಕೀರ' ನೋ.

**ಬೇಫಿಕೀರ**, ಬೇಫಿಕರ್, ಬೇಫೀಕೀರ (ಗು). ೧. ಯೋಚನೆಯಿಲ್ಲದ; ನಿಶ್ಚಿಂತೆಯಿಂದ ಕೂಡಿದ : ಬೇಫಿಕೀರ ವೃತ್ತಿಯಿಂದ ಕೋಣೆಯ ಬಾಗಿಲು ದೂಡಿ . . . ವಿಶ್ವಾನ ಕಣ್ಣಿಗೆ ಕತ್ತಲೆ ಬರುವ ಧರ್ತಿಯಲ್ಲಿ ಹೋಗಿ ಎದುರು ನಿಂತ (ದೇಶಚ. II, ೩೫೩). (ನಾ). ೨. ನಿಶ್ಚಿಂತೆಯಿಂದ ಕೂಡಿದುದು; ಯೋಚನೆಯಿಲ್ಲದುದು : ವಿಧೀ ಅನ್ನರಿ, ದೈವ ಅನ್ನರಿ . . . ಅದೆಷ್ಟು ಬೇಫಿಕೀರ ಅದ ನೋಡ್ರೀ (ದೇಶಚ. I, ೬೮). ೩. ನಿಶ್ಚಿಂತೆ ; ಆರ-ಮ. **ಬೇಫಿಕರ್ :** ೩. ನನ್ನ ಜೇಬಿನಲ್ಲಿದ್ದ ಪಿಸ್ತೂಲನ್ನು ನೆನೆದು ನನಗೆ ಎಷ್ಟೋ ಬೇಫಿಕರ್ ಆಯಿತು (ಕೆಂಪ. ೦೦೩). **ಬೇಫೀಕೀರ:** ೧. ಮುಂಚೆ ಒಮ್ಮೆ ಎಲ್ಲವನ್ನೂ ಕಳೆದುಕೊಂಡುದಕ್ಕಾಗಿ ಈಗ ಬೇರೆ ಉಪಾಯವಿಲ್ಲ ಎಂಬುವದಕ್ಕಾಗಿ ಈ 'ಬೇಫೀಕೀರ' ವೃತ್ತಿಯೆ ? (ಕುರುಜಾ. ೦೩೩). [←ಪಾರ. ಬೇಫಿಕ್ರ್; ಹಿಂ. ಬೇಫಿಕರಾ, ಬೇಫಿಕ್ರ್; ಮರಾ. ಬೇಫಿಕಿರ್, ಬೇಫಿಕೀರ್]

**ಬೇಫೀಕೀರ** 'ಬೇಫಿಕೀರ' ನೋ.

**ಬೇಬಂದಶಾಹಿ** (ಗು). ಅವ್ಯವಸ್ಥೆಯಿಂದ ಕೂಡಿದ ; ಕ್ರಮ ತಪ್ಪಿದ; ಗೊಂದಲಮಯವಾದ : ಏನು ಬೇಬಂದಶಾಹೀರಾಜ್ಯವಿದು ? (ಹುತ್ತಾತ. ೬೩). [← ಮರಾ. ಬೇಬಂದಶಾಹೀ, ಬೇಬಂದಶಾಈ]

**ಬೇಬಂದು** (ನಾ). ಕ್ರಮವಿಲ್ಲದುದು; ವ್ಯವಸ್ಥೆಯಿಲ್ಲದುದು; ಅವ್ಯವಸ್ಥೆ : (೩). [←ಪಾರ. ಮರಾ. ಬೇಬಂದ್]

**ಬೇಬಾಕ್** 'ಬೇಬಾಕಿ' ನೋ.

**ಬೇಬಾಕಿ**, ಬೇಬಾಕ್, ಬೇಬಾಕು (ನಾ). ಬಾಕಿಯಿಲ್ಲದಿರುವಿಕೆ; ತೀರ್ವೆ : ರಾಮಕೃಷ್ಣಗೌಡನು . . . ಕಂದಾಯ, ಕೌಳಿ ಮೊದಲಾದವುಗಳನ್ನು ನೋಡಿಕೊಂಡು ಎಲ್ಲವೂ ಬೇಬಾಕಿಯಾದ ಮೇಲೆ ಹಿಂತಿರುಗುವನು (ಶಾಬೀಮು. ೩). **ಬೇಬಾಕ್ :** ಉಳಿತ ಜಾಗದಲ್ಲಿಯೇ ನನ್ನ ದರ್ಪದಿಂದ ಕಂದಾಯ ಬೇಬಾಕ್ (ಚಿತ್ರ. ೨೨). **ಬೇಬಾಕು :** ನಾಳೆ ಲೆಕ್ಕಾಚಾರ ನೋಡಿ ಎಲ್ಲಾ ಬೇಬಾಕು ಮಾಡ್ತೀನಿ (ಹಲಿಜ. ೯೬೬); ಏನು ಲೆಕ್ಕ ಆದರೂ ಈ ಸುಗ್ಗಿಗೆ ಅದಷ್ಟು ಮಾಡಿ ಬೇಬಾಕ ಆಗೋ ಹಾಂಗ ಮಾಡತೀನಿ (ಬೆಳಕಾ. ೩೩). [←ಪಾರ. ಹಿಂ. ಮರಾ. ಬೇಬಾಕೀ, ಬೇಬಾಕ್]

**ಬೇಬಾಕು** 'ಬೇಬಾಕಿ' ನೋ.

**ಬೇಮನ** (ನಾ). ಮನಸ್ಸಿಲ್ಲದಿರುವಿಕೆ; ನಿರಾಸಕ್ತಿ; ನಿರುತ್ಸಾಹ : ಇನ್ನೊಂದು ಕಡೆಯೊಳಗೆ ಕಾವಿಗಳೆಂಡು ತಾಪದಿಂದಡಿಗಡಿಗೆ ಚೆಂಸಿ ಬೇಮನದಿ (ಶಾಸಂಗ. ೯). [←ಹಿಂ. ಬೇಮನ್]

**ಬೇಮಾನ** 'ಬೇಇಮಾನ' ನೋ.

**ಬೇಮಾಲುಮ್** 'ಬೇಮಾಲೂಮ್' ನೋ.

**ಬೇಮಾಲೂಮ್**, ಬೇಮಾಲುಮ್ (ನಾ). ಯಾರಿಗೂ ತಿಳಿಯದಂತಿರುವುದು; ಗುಟ್ಟು; ರಹಸ್ಯ : ಬೇಮಾಲೂಮ್ ಮಾತ್ ಆಗಿದಾವ್ (ಮೋಹಿನೀ. ೯೦). **ಬೇಮಾಲುಮ್ :** ನಾನೀ ಕೊಲೆಗಳನ್ನು ಇಷ್ಟು ಬೇಮಾಲುಮ್ ರೀತಿಯಿಂದ ಮಾಡುತ್ತಿರುವೆನೆಂಬುದು ನನ್ನ ಹೊರತು ಪ್ರತ್ಯಕ್ಷ ಅಂತಃನಿಗಾದರೂ ಗೊತ್ತಿದೆಯೋ ಇಲ್ಲವೋ ಹೇಳಲಾರೆನು (ಅಂದಕ. ೨೯). [←ಹಿಂ. ಮರಾ. ಬೇಮಾಲೂಮ್]

**ಬೇಯಿತಬಾರಿ** (ಗು). ನಂಬಿಕೆಗೆ ಅರ್ಹವಲ್ಲದ; ವಿಶ್ವಾಸಕ್ಕೆ ಯೋಗ್ಯವಲ್ಲದ : ಪ್ರಾಕಿನ ಬಾಕೀದಾರ ನಾದಾರ್ ಬೇಯಿತಬಾರಿ ಜನಕ್ಕೆ ಸಹ ಯಿಜಾರೆ ಕೊಡ ಕೆಲಸವಿಲ್ಲ (ಮಹಾಪಂ.II, ೬೦).

[←ಪಾರ. ಹಿಂ. ಬೇಏತಬಾರೀ]

**ಬೇಯಿಸು**, ಬೇಸು (ಕ್ರಿ). ೧. (ನೀರು ಅಥವಾ ನೀರಿನ ಅಂಶದೊಂದಿಗೆ ಆಹಾರಪದಾರ್ಥಗಳನ್ನು) ಕುದಿಸು; ಪಕ್ವಮಾಡು; ಅಡು : ಮಾರು ಕಟ್ಟೆಯಿಂದ ತಂದ ತರಕಾರಿಗಳನ್ನು ಮೊದಲು ತೊಳೆದು, ಅನಂತರ ಅವುಗಳನ್ನು ಬೇಕಾದಂತೆ ಕತ್ತರಿಸಿ, ಕೊನೆಗೆ ಬೇಯಿಸುವುದಷ್ಟೆ (ಅಡುಗೆ. ೦೨); ತರಕಾರಿ ಕೊಡಿ ಮೊದಲು; ಯುದ್ಧಾದರೂ ಬೇಯಿಸ್ತೀನೆ (ಹಮ್ಮಂದು. ೬೦). ೨. (ಬೆಂಕಿಯ ಮೇಲೆ ಪದಾರ್ಥಗಳನ್ನು ನೇರವಾಗಿ) ಸುಡು: ಕಾಯಿಸು : ಹೊತ್ತದಂದದೊಳು ಕೆಂಡದೊಳಿರಿಸಿ ಮೊಜದಿಂದ ಮತ್ತದಂ ಬೀಸಿ ಬೇಯಿಸಿ ತೆಗೆದುಕೊಂಡಾಚಿಸುತ್ತ ತಿಳಿದುಪ್ಪ ಸಕ್ಕರೆಯ ಕಲಸಿ ಮುಚ್ಚುಳರೊಟ್ಟಿಪೆಸರಂ ಪಡೆದುವು (ಸೂಪಶಾ. ೦-೦೦); ಕುಂಬಾರ ಮಡೆ ಹುಬ್ಬಿಕ್ಕೆ ಬೇಕಾದ ಹೊಸ ಮಡಕೆಗಳನ್ನು ಬೇಯಿಸಿ ಪಿಣಿಪಿಣಿ ಅನ್ನುವಂತೆ ಮಾಡಿರುತ್ತಾನೆ (ಕಮ್ಮರು. ೪೮). ೩. (ಆಲಂ) ನೋಯಿಸು; ಹಿಂಸಿಸು; ತಾಪಕ್ಕೆ ಒಳಗು ಮಾಡು : ಕಂದರ್ಪನ ಸುಟ್ಟ ಪಣೆಗಣ್ಣು ಮುಚ್ಚಿದೆಂದಾದೊಡೆ ಮತ್ತೆ ತೆಜೆದು ಬೆಂದ ಪಾಪಿಯ ಬೇಯಿಸಬೇಡವೆಂದು ಸುಗಂಧಾಕ್ಷತೆಯ ಮೆತ್ತಿದನು (ಪ್ರಭುಲಿ. ೨೦-೨೮); ಬಿಚ್ಚುವೆಣೆವಕ್ಕಿಗಳ ಹೃದಯವು ಬೇಯಿಸುವ ಪೊಟ್ಟೆ ಪೊಸ ಕೆಂಡಂಗಳೆನೆ . . . ಸಂಜೆದಾರೆ

ಗಳೆಸೆದುವು (ಕೃಬಿಹಾ. ೬-೯೭); ನಿನ್ನಿಂದಲ್ಲವೆ ಎನಗೀ ಪಾಪವು ಹೃದಯಾವ ಬೇಯಿವ ಸಂಕಟವು ! (ಕಶಿಸೋ. ೩೦-೦೮). **ಬೇಸು : ೧.** ಹಿರಿಮದ್ದಿನ ಬೇರು ಹಾಲಿನಲ್ಲಿ ಬೇಸಿ ನೆರಳಿನಲ್ಲಿ ಒಣಗಿಸಿ ಪುಡಿಮಾಡಿ . . . ತೆಗೆದು ಕೊಳ್ಳುವುದು (ಕಾಮಶಾ. ೨೬೩). **೨.** ತಿನ್ನುವುದಕ್ಕೆ ಬಿಸಿಬಿಸಿ ರೊಟ್ಟಿಗಳನ್ನು ಬೇಡುತ್ತಿ; ಬೇಸುವುದಕ್ಕೆ ತಿಳಿಯಲ್ಲಿಲ್ಲ ಯಾಕೆ ? (ಮುಂಡಿಯ. ೩-೦೮೬). **೪.** ಉರಿದು ಹೋಗುವಂತೆ ಮಾಡು; ದಹಿಸು : ಬೀಸದು ಬಿಜಸುಗಾಳಿ ಬಿಸಿಯ ಬಿಸಿಲವನಿಯಂ ಕಾಸದು ದವಾಗ್ನಿ ಪುಲ್ಗಳೊಳೊಂದನಾದೊಡಂ ಬೇಸದು (ಕೃಬಿಹಾ. ೦೫-೦೭). [ಬೇ$_1$ + — ಇಸು$_3$]

**ಬೇಯು** 'ಬೇ$_1$' ನೋ.

**ಬೇರ್$_1$**, ಬೇರು, ವೇರ್ (ನಾ). **೧.** ಸಸ್ಯವನ್ನು ಭೂಮಿಯಲ್ಲಿ ಹಿಡಿದಿಟ್ಟು ಅದಕ್ಕೆ ಭೂಮಿಯಿಂದ ಪೋಷಣೆಯನ್ನು ಒದಗಿಸಂವುದಕ್ಕೆ ಸಹಾಯಕವಾದ, ಭೂಮಿಯ ಕೆಳಗಡೆಯಿರುವ ಸಸ್ಯದ ಭಾಗ ; ಮರ, ಗಿಡ ಮುಂತಾದುವುಗಳ ಅಡಿಭಾಗ, —ಮೂಲ : "ಪಾದವೆನೆ ಮೂಲಮೆನೆ ಪಸರಿಸಿದ ಬೇರಕ್ಕುಂ" (ಶಬ್ದಮಣಿ. ೩೨-೨); ಭೀಮನುಮೊತ್ತಿಕಿಟ್ಟು ಬೇರೊಡನೆ ಮಹೀಜಮೋದನಿಡೆಯುಂ (ಶಂಕಾ. ೩-೦೫); ಬೇರನಜಿದವರ್ಗಲೆಯಂ ತೋಜಿದರೆಂಬಂತೆ (ರಹಸ್ಯ. ೬-೧೯). **೨.** ಬುಡ; ತಳಭಾಗ: 'ಬೇರೇಟು', 'ಬೇರ್ಬಿಡಿಸು' ಪರಾ. **೩.** (ಅಲಂ) ಮೂಲಸತ್ವ; ನೆಲೆ : ತನ್ನ ಸುತನಟಿಲೊಳರ್ಜುನನೆನ್ನುದಯಮನೆಯ್ದೆ ಪಾದರ್ಜಪಾವರ ಬೇರೊಳ್ ಬೆನ್ನೀರನೆಱೆಯದಿರಂ (ಶಂಕಾ. ೦೦-೦೩೨); ಕರ್ಮದ ಬೇರ್ಗಳಂ ಪಱಿವವೊಲ್ ನೀಲಾಳಿ ಮಾಲಾವಿಲಾಸಗಳಂ ಕೇಶಸಮೂಹಮಂ ಪಱಿಪ್ಪುದುಂ (ಆಕಾ. ೬-೦೨೪); ಮೂಲದ್ವಾರದ ಬೇರೆ ಮೆಟ್ಟಿ ಭೂಮಂಡಲವನೇಱಿದ ಆಚಾರದ ಬೇರ ಹಿಡಿದು ಐಕ್ಯದ ತುದಿಯನೇಱಿದ (ಮುಹಾರೇ. ೩. ೦೦೫-೩೬೪). **೪.** (?) : ಸವಿ ಸಮನಾಗೆ ಸುತ್ತಿಟಿದ ತೋಳ್ ಸತವಾದಿರ್ದೆಯಿಂಪಲಂಪನಪ್ಪುವ ಬಗೆ ಬೀಗಿ ಬಾಯೊಳಗೆ ಸಿಲ್ಕಿದ ಬಾಯ್ ಬೆಜಗಾದ ಬೇರ್ಗೆ ನೋಡುವ ಪವವೋಡಿದಚ್ಚರತದಚ್ಚುಡಿದಂತಿರೆ ಕಾಮಸೌಖ್ಯದಿಂ ಸವೆದಪೊಲಿರ್ಪವಲ್ಲಿ ಗಗನೇಚರದಂಪತಿಗಳ್ ರತಾಂತದೊಳ್ (ಅರಾಪ. ೯-೯೬). **ಬೇರು : ೧.** ಪನ್ನೆರಡುವರ್ಷಂ ಬೇಡರಂತಡವಿಯೊಳ್ ನಾರ ಸೀರೆಯನುಟ್ಟು ಬೇರುಮಂ ಬಿಕ್ಕೆಯುಮಂ ತಿಂದು ಕಂದಿ ಕುಂದಿ (ಶಂಕಶಂ. ೨೦೬-೦೩); ನೀರಿಲ್ಲದ ನೆಳಲಿಲ್ಲದ ಬೇರಿಲ್ಲದ ಗಿಡು ಹುಟ್ಟಿತ್ತು (ಅವಶಂ. ೧೨೩-೩೬೦); ಬೇರು ಹೋದ ಮೇಲೆ ಮರದ ಯೋಚನೆ ಯಾಕೆ? (ಗಾದೆ). **೨.** ಕೋಪಮನುಱಿ ಜಱಿದಾ ಮೋಹಮಂ ದಾಂಟಿ ಲೋಭತ್ವದ ಬೇರಂ ಕಿಳ್ತು (ರಕ್ಷಾಕ. ೭೯); ಆತ್ಮಕೇಶಾಳಿಗಳನಘದ ಬೇರಂ ತೀರೆ ಕೀಳ್ವಂತೆ ಕಿಟ್ಟಿಂ (ಪುಕ್ಕವು. ೦೩-೧೦೦೦); ಹುರಿದುದು ಭವಬೀಜದುಷ್ಕರ್ಮದಂಕುರ ಪಱಿದುದು ಕಪಟದ ಬೇರು ಸುರಿದುದಾನಂದಾಶ್ರು ಕೃಷ್ಣನಂಘ್ರಿಯ ಕಂಡು ಪುರದವರ್ ಪುಣ್ಯಮೊಂದಿದರು (ಮೋಹಕ. ೯೨-೩೦). **೩.** ಕೆಳಭಾಗದ ತಂದಿ,—ಕೊನೆ: ನೀರಿನಲಿ ಮಟ್ಟಿಯನು ಕಲಿಸಿ ಬರೆಯುತ ಮೂಗ ಬೇರನ್ನು ಪಿಡಿದು ಮುಸುಕಿಕ್ಕಲೇನುಂಟು (ಭರಂಥ. ೦-೯೯-೦). **ವೇರ್: ೨.** ವಾಣ್ಯಾಸಂ ಮಿಣ್ಣಿಸಲ್ ಚೋಳನ ವೇರಂ ಕಿತ್ತುರ್ ನೀರೊಳ್ಗಲುಗಲ ಸಲೆಯಲ್ಬಂದನಾ ಬಂದನಾ ಬಂದನೇ ತಾನೆಂಬಂತೆ ಬಂದಂ ನಿಜನಿಜಯಭ ×× ನೊಳೇಬಿಸೊಳಂ (ಸೌಇಇ. XX. ೯೯-೨೦; 1076?).

**ಬೇರುಮುಟ್ಟ ಕೀಳು** = ಮೂಲೋತ್ಪಾಟನ ಮಾಡು; ಪೂರ್ತಿಯಾಗಿ ಕೀಳು : ಆ ಕೆಟ್ಟ ಚಾಳಿಯನ್ನು ಬೇರುಮುಟ್ಟ ಕೀಳುವುದು ಕಷ್ಟ (ಕಶಪ.೨೨೮). **ಬೇರೊಳ್ಪಿಸಿನೀರಂ ಪೊಯ್** = (ಅಲಂ) ನಾಶಮಾಡು; ಹಾಳುಮಾಡು: ಚಲದಿಂ ಮಣ್ಣಾಳಿಸಗ್ಗೆ ಬೇರೊಳ್ಬಿಸಿನೀರಂ ಪೊಯ್ದಂ (ಎಕ. XI. ದಾವಣ. ೯೨-೩೨; ಸು. 1168). [ದೇಶ್ಯ. ತಮಿ. ಮಲ. ನಾಯ್ಯು. ಗಡಬ. ವೇರ್; ತುಳು. ಬೇರು; ತೆಲು. ವೇರು]

**ಬೇರ್$_2$** 'ಬೇಱು' ನೋ.

**ಬೇರ$_1$**, ವಯಿರ(ನಾ). **೧.** ಹಗೆತನ; ವೈರ; ಶತ್ರುತ್ವ: ಒಟ್ಟೈಸಿದುರ್ವೀಶರ ಬೇರಂ ಬೇರದಿಂ ಕಿರ್ತ್ತಲೆನನನುಪಮಂ ವಿಕ್ರಮಾದಿತ್ಯದೇವಂ (ಎಕ. XVI. ೩೬-೦೦; 1107) ; ಕೂರಸಿಯಿಂದಿವನ ತಲೆಯಂನರಿಯಿಂದೊರ್ಬಂ ಕ್ರೂರಾತ್ಮನ ಕಯ್ಗೆನ್ನಂ ಬೇರದೊಳಿತ್ತವರ್ಗಳತ್ತ ಪೋದರ್ (ವಕಶಂ. ೯-೯೭); ಪಿಂತಣ ಬೇರಮನೆಣಿಸದೆ ಸಂತತಮುಂ ಮಱುಕವೆರಸಿ ಮನ್ನಿಪುದೆನ್ನಂ (ಶಕಶ. ೩-೨೯). **ವಯಿರ: ೧.** ಶ್ರೀ ಪಲ್ಲವಕುಲತಿಲಕನ್ ವಯಿರಮ ಕಟ್ಟಿ ಎಱಿದು ಸಗ್ಗಾಲಯಕ್ಕೇರಿದನ್ (ಪ್ರ್ಯಾಜಂ. ೦೯೩೯, ೯೭-೨; ?). **೨.** ಹಗೆಯಾದವನು ; ಶತ್ರು; ವೈರಿ : ತನಗೆಯಿದಿರಾದ ವಯಿರರಯಿಱಿದು ರಣಖಂಡಿತವಂ ಮಾಡಿ (ಕಇ. I. ೩೬-೦೩ ; 1438).

[ < ಸಂ. ವೈರ ]

**ಬೇರ$_2$**, ಬ್ಯಾರ (ನಾ). = ಬೇಪಾರ: "ಬೇರ—೧ ವ್ಯಾಪಾರ, ೨ ವೈರ" (ತದ್ಭಕೋ. ೩೨) ; ತಾರವನು ನೀನಿತ್ತು ಬೇರವನು ಬಿಟ್ಟಿಹುದು ನೀಱಿಯವಳೆಂದು ಪರವಧುವ ಸಾರಿದರೆ ಮಾರಿ ಬಂದಿಹುದು (ಸರ್ವಜ್ಞ. ೦೬೯೫) ; ಬೇರದವಸರದಿಂ ಮೆಯ್ಗಿದು ಬಣಂಜಿಗರ ನೆರವಿ ಕವಾತವಾಗೆ ಪೊಸವರದನಿಣಿಕೆಯೊಳಿರೆಯುಂ (ರಾಮಾಕ್ಕ. ೨೨-೦೮). **ಬ್ಯಾರ :** ಕೆಲವು ಪ್ಯಾಟೆಗಳೊಳ್ ಬಗೆಬಗೆಯಾದ ಪೈರುಗಳಂ ತಂದು ತುಂಬಿ ಬ್ಯಾರವಂ ಮಾಡುವ ಬೆರಿಯುರು ಬಣಜಿಗರು . . . ನಾನಾಜಾತಿಯವರಿಗೆ ಬೇರ್ಬೇರೆ ಬೀದಿಗಳಂ ಹಱಿ (ತಗಂಧ. ೦೩೩-೩). [< ಸಂ. ವ್ಯಾಪಾರ]

**ಬೇರ$_3$** (ನಾ). **೧.** ಶರೀರ: 'ಉಜ್ಜ್ವಳಬೇರ', 'ಕುಂಕುಮಬೇರ' ಪರಾ. **೨.** ವಿಗ್ರಹ; ಪ್ರತಿಮೆ : ರುಕ್ಮಿಣೀಸತ್ಯಭಾಮಾಸಮೇತ ಪ್ರಸನ್ನ ಕೃಷ್ಣಸ್ವಾಮಿಯವರ ಪಂಚಬೇರಯುಕ್ತವಾಗಿ ಪ್ರತಿಷ್ಠೆಯಂ ಗೈದು (ಎಕ. XIV. ಮೈಸೂರು. ೩೦-೨೬; 1828). 'ಮೂಲಬೇರ' ಪರಾ.

[< ಸಂ. ವೇರ]

**ಬೇರಯಿಸು** (ಕ್ರಿ). ಬೇರೆಯಾಗಿಸು ; ಬದಲಾಯಿಸು : ಬೇರಯಿಸಿ ನಿಮಿಷನಿಮಿಷಕವೊಡಲ ಬಣ್ಣಗಳ ತೋರಿಪ ಪೂಸರವಳ್ಳಿಯಂತೇನು ಬೊಮ್ಮ ? (ಮುಂಕುಶ. ೩೬). [ಬೇರೆ$_1$ ( <ಬೇಱು$_1$) + — ಇಸು$_3$]

**ಬೇರಾಗ** (ನಾ). ಸರಿಯಾದ ರಾಗವಲ್ಲದುದು; ಅಪಸ್ವರದಿಂದ ಕೂಡಿದುದು : ನಿನ್ನ ದನಿಯ ಸವಿರಾಗದಲ್ಲಿ ಬೇರಾಗ ಮರೆಸಿ ಮರೆವ (ಮುಕ್ತಕಂ. ೨೯-೯). [ಬೇ$_3$ — + ರಾಗ]

**ಬೇರಿ$_1$**, ಬೆರಿಯ, ಬ್ಯಾರಿ (ನಾ). **೧.** ವ್ಯಾಪಾರ ಮಾಡುವವನು; ವರ್ತಕ ; ವೈಶ್ಯ : ಊರವ್ಯ: . . . ಭೂಮಿಸ್ಪೃಕ್, ವಿಟ್—೬ ವೈಶ್ಯರ ಹೆಸರುಗಳು, ಬೇರಿಯುವರು, ನಗರ್ತರು, ಕೋಮಟಿಗಳು ಮುಂತಾಗಿ (ಸಿಬ್ಬಂಕ. ೨೬೩). **ಬೆರಿಯ : ೧.** ಕೆಲವು ಪ್ಯಾಟೆಗಳೊಳ್ ಬಗೆಬಗೆಯಾದ ಪೈರುಗಳಂ ತಂದು ತುಂಬಿ ಬ್ಯಾರವಂ ಮಾಡುವ ಬೆರಿಯುರು ಬಣಜಿಗರು . . . ನಾನಾಜಾತಿಯವರಿಗೆ ಬೇರ್ಬೇರೆ ಬೀದಿಗಳಂ ಹಱಿ (ತಗಂಂ. ೦೩೩-೩). **ಬ್ಯಾರಿ : ೨.** ಕೇರಳದಲ್ಲಿರುವ ಮಹಮ್ಮದೀಯರ ಗುಂಪಿಗೆ ಸೇರಿದವನು ; ಮಾಪಿಳ್ಳೆ : ಇಬ್ಬರೂ ಮಾಪಿಳ್ಳೆ, ಲಬ್ಬೆ, ಬ್ಯಾರಿ ಮೊದಲಾದ ಮಲೆಯಾಳಿಗಳು ಉಡುವಂತೆ . . . ಅಡ್ಡಪಂಚೆ ಸುತ್ತಿ ಉದ್ದುದ್ದ ಬನೀನು ಹಾಕಿದ್ದರು (ಮಲೆಮ. ೯೩೨) ; ಬ್ಯಾರಿಗಳೆಲ್ಲ ಬರಿ ಸೈಕಲ್ಲಿನಲ್ಲೆ ಹಿಂತಿರುಗಿದರು (ಕೂಸಕ್ಕೆ. ೯೮).

[ < ಸಂ. ವ್ಯಾಪಾರಿನ್. / ತುಳು. ಬ್ಯಾರಿ]

**ಬೇರಿ$_2$** (ನಾ). ಒಂದು ಬಗೆಯ ಚರ್ಮವಾದ್ಯ; ಭೇರಿ; ನಗಾರಿ : "ಬೇರಿ — ಭೇರಿ = ನಗಾರಿ" (ತದ್ಭಕೋ. ೩೦); ಭಕಾರಕ್ಕೆ ಬಕಾರಂ— ಆರಂಭ—ಆರಂಬ . . . ಭೇರಿ—ಬೇರಿ (ಶಮದ. ೨೩೩ ಪ್ರಯೋ).

[ < ಸಂ. ಭೇರಿ ]

**ಬೇರಿಗ₁** (ನಾ). ಹಗೆ; ವೈರಿ; ಶತ್ರು : ಅರವಂಗಂ . . . **ಈ** ತೇರೇವು **ದೆಂದು** ನೆಲಕಿಟಾತಂದು ಬೇರಿಗನನಪ್ಪಳಿಸುವೆನೆಂದು ಕೋಲ್ಗಳಿಂ ತಿರು ವಾಯ್ಗೆ **ಪೂಡಿ** ಕಾದಿದಂ (ಧಾಮಾಕ. ೦೨೬-೨೮). [ಬೇರ₁ + — ಇಗ]

**ಬೇರಿಗ₂** (ನಾ). ವ್ಯಾಪಾರ ಮಾಡುವವನು ; ವರ್ತಕ; ವ್ಯಾಪಾರಸ್ಥ : ಸಂದ **ಭಕ್ತಿಯೊಳೆ** ಬೇರವನುಳಿದ ಬೇರಿಗರ ವೃಂದಂ . . . ಅಂದು **ಕಾಣಿಸಿತು** ರಕ್ಕಸವಗೆಯಗೆ (ಶ್ರೀಭಾಕು. ೪-೫೭).

[ಬೇರ₂ + — ಇಗ]

**ಬೇರೀಜ್** 'ಬೇರೀಜು' ನೋ.

**ಬೇರೀಜು, ಬೇರೀಜ್** (ನಾ). ೧. ಕೂಡುವಿಕೆ; ಸಂಕಲನ : ಗಣಿತದ **ಚತುರೋಪಾಯಗಳಾದ** ಬೇರೀಜು, ವಜಾಬಾಕಿ, ಗುಣಾಕಾರ, ಭಾಗಾಕಾರ ಗಳನ್ನು ನಾನು ಸಲೀಸಾಗಿ ಕೈಕೊಳ್ಳಬಲ್ಲೆನಾದರೂ ಕ್ರಿಯೆ ಸದೋಷ **ವಾಗುತ್ತದೆ** (ಗಾಳಕ. ೦೭೪); **ಮೊದಲು** ಬೇರೀಜು, ಮುಂದೆ ವಜಾಬಾಕಿ, **ಆಮೇಲೆ** ಗುಣಾಕಾರ ಮತ್ತು ಕಡೆಗೆ ಭಾಗಾಕಾರ ಹೀಗೆ ಸಾಮಾನ್ಯ **ಪದ್ಧತಿಯಿರುವುದು** (ಶ್ರೀಕೃಚ. ೬೩). ೨. ಒಟ್ಟು ಮೊತ್ತ : ಅಲ್ಲಿರುವ **ಒಟ್ಟು** ಮನೆಗಳ ಬೇರೀಜು ಮೂವತ್ತಕ್ಕೆ ಮಿಕ್ಕುವುದು ಕಷ್ಟ (ಕಹಾಚ. ೦೭); ಎಲ್ಲದರ ಬೇರೀಜು ಶೂನ್ಯ (ಮುಕ್ತಿ. ೦೬೨). ೩. ಒಟ್ಟು ಕಂದಾಯದ **ಮೊಬಲಗು** : ಗ್ರಾಮದ ಬೇರೀಜು ಸಾಗವಳೀ ಬರದಂನ್ನು ಪರಾಂಮರಿಸಿ **ಸರ್ವಮಾಂನ್ಯವಾಗಿ** ಅಪ್ಪಣೆ ಕೊಟ್ಟಿರುವ ವಿವರಾ (ಮೈಐ. ೦೯೩೪, ೪೨-೪೨; ೧೮೬೬) ; **ಈ ವಿರ್ಪಾಡಿನಿಂದ** ಜನಗಳಿಗೆ ಸೌಲಭ್ಯವು ಹೆಚ್ಚಿ, ಆ ರಾಜ್ಯದ **ಬೇರೀಜು** ಒಂದಕ್ಕೆ ಎರಡಾಯಿತು (ಶಾಮುಕಂ. ೩೩೪) ; ಕಂದಾಯ ಮಾಫೀ **ಮಹಾ ಜಾತಾ ಐನು ಬೇರೀಜು** ಎಷ್ಟು ಅಂತ ಹಾಕುವುದಕ್ಕೆ ಕೈಬರುತ್ತಲೇ **ಇರಲಿಲ್ಲ** (ಕಹೂಕು. ೦೫೩). **ಬೇರೀಜ್ :** ೧. ನಮ್ಮ ಭಾಷೆಯಲ್ಲಿ ಸೇರ **ಹೊಂದಿಕೊಂಡು ಹೋದ** ಮತ್ತು ಅನ್ಯದೇಶೀಯವೆಂದು ಗುರುತಿಸಲಾಗದ **ಶಬ್ದಗಳೆಂದರೆ—ಕಚೇರಿ** (ಕಚ್ಛರಿ) . . . ದರವಾಜೆ, ಬೇರೀಜ್, ಮುಜರೆ (ಶಾಹಾಶಾ. ೦೬೭).

[**<ಪಾರ. ಬರೀಜ್ ; ಹಿಂ. ಬೇರಿಜ್ ; ಮರಾ. ಬೇರೀಜ್**]

ಬೇರು 'ಬೇರ್₁' ನೋ.

ಬೇರುಂಗಾಲ್ (ನಾ). **ದೊಡ್ಡ ಕಾಲುವೆ :** ಬಳಿಕೆಜೆಯ ಕೀಟೇರಿಯ ಬೇರುಂಗಾಲಮೊಕ್ಕಲೊಳೊನ್ದು **ಪೊಜೆಯಂ** ಕೆಯುಂ ಪದಿಕ್ಕೊಳಮ್ ವತಮುಂ **ಮಿಸಲುಂ** ಬಳಿವತ್ತಮುಂ ಸಲ್ವದು (ಎಕ. III, ಕಂ೩೩. ೦೫೬-೮೦ ; ೯೭೭). [**ಈ** ಇದು 'ಪೇರುಂಗಾಲ್' ಎಂಬುದರ ಅಪಲಿಖಿತವಿರ ಬಹುದು. / **ತಮಿ. ಪೆರುಙ್ಕಾಲ್**]

ಬೇರುಗ (ನಾ). ಔಷಧದ ಗಿಡಮೂಲಿಕೆಗಳ ವ್ಯಾಪಾರ ಮಾಡುವವನು; **ಔಷಧದ** ಬೇರುಗಳನ್ನು ಮಾರುವವನು : ಉಗ ಪ್ರತ್ಯಯಕ್ಕೆ— **ನಾರುಗಂ**, ಬೇರುಗಂ, ಊರುಗಂ (ಶಮದ. ೨೦೪ ವೃ೦ೞೋ).

[ಬೇರ್₁ + — ಉಗ]

**ಬೇರುಗಾಣ್** (ಕ್ರಿ). (ಆಲಂ) ಅಂತರಂಗವನ್ನು ಅರಿತುಕೊಳ್ಳು : **ಭಂಡಾರ ಬೊಕ್ಕಸ** ಮನೆಗಳ ನೋಳ್ಪನಾ ಭಂಡಾರಿಗಳು ನೋಡುಮತ **ಕಂಡವರ್ಬ್ಲರೀ** ನೃಪನವೆಂಬರು ಬೇರುಗಂಡೆಣಿಸುವನು ತಾನೊಳಗೆ (ಕಕಕ. ೬೫-೫೩). [ಬೇರು (<ಬೇರ್₁) + ಕಾಣ್]

**ಬೇರುಗಿ** (ನಾ) ಔಷಧದ ಗಿಡಮೂಲಿಕೆಗಳ ವ್ಯಾಪಾರ ಮಾಡುವವಳು : ನಾರುಗಿ, ನಾರುಗಿತಿ ; ಬೇರುಗಿ, ಬೇರುಗಿತಿ (ಶಬ್ದಾಮ. ೦೯೩ ವೃಮೋ).

[ಬೇರುಗ + — ಇ₂]

**ಬೇರುಗಿಡಿಸು** (ಕ್ರಿ). ಬುಡ ಅಥವಾ ಮೂಲವನ್ನು ಕೆಡಿಸು,—ಹಾಳು **ಮಾಡು : ಈ ಮಹಾರಾಜನಿಗೂ** ಇವನ ಹಿಂದಣವರಿಗೂ ಆವರಿಸಿಕೊಂಡು **ಬೇರುಗಿಡಿಸಲೇಬೇಕಾಗಿದ್ದ** ಕುರುಂಡತನವನ್ನು . . . ತಪ್ಪಿಸಿ **ಕಾಪಾಡಿಕೊಂಡು** ಬರುತ್ತ . . . ಪಾವನರಾಗಿರುವ ಶೂರರ ಮನೆತನದವರು ನೀವು (**ಮುಂತ್ರಕ.** ೩೦-೦೩). [ಬೇರು₁ (<ಬೇರ್) + ಕಿಡಿಸು (<ಕೆಡಿಸು₁)]

**ಬೇರುಗಿತಿ** (ನಾ). = ಬೇರುಗಿ : ನಾರುಗಿ, ನಾರುಗಿತಿ, ಬೇರುಗಿ; ಬೇರುಗಿತಿ (ಶಬ್ದಾಮ. ೦೯೩ ವೃಮೋ).

[ಬೇರುಗ + — ಇತಿ₁(< — ಇತ್ತಿ)]

**ಬೇರುಗೊಲೆ** 'ಬೇರ್ಗೊಲೆ' ನೋ.

**ಬೇರುಡಿ** (ಕ್ರಿ). ಬೇರುಸಹಿತ ಮುರಿದು ಕೊಳ್ಳು; ಬುಡ ಕಿತ್ತುಬರು : ತೀರೆ ಗಿರಿ ಮುಟ್ಟಿಸೆ ಭುಜದಲಿ ಬೇರುಡಿಯೆ ಬೆಳಲತ್ತಿ . . . ಹೂಣಿಸಿ ನಾನಾ ಭೂರಿಭುಜಗಳಿಂದ ಹೊಯ್ದಾಡಿದರು ಸರಸದಲಿ (**ಕೊರಚ.** ೪-೪-೨೩). [ಬೇರು₁ (< ಬೇರ್) + ಉಡಿ₁]

**ಬೇರುಬಿಡು** 'ಬೇರ್ಬಿಡು' ನೋ.

**ಬೇರುವರಿ** 'ಬೇರ್ವರಿ' ನೋ.

**ಬೇರೂರಿಸು** (ಕ್ರಿ). (ಆಲಂ) ಸ್ಥಿರಪಡಿಸು ; ನೆಲೆಗೊಳಿಸು : **ಈ** ಶ್ಲೋಕದ **ಚಾರಿತ್ರಿಕತ್ವವನ್ನು** ಸಿದ್ಧಾಂತಿಸಲಿಕ್ಕಾಗಲಿ, **ಉತ್ತರಭಾಗವನ್ನು** ಆ ಕಾಳಿದಾಸನೇ ಬರೆದಿರಬೇಕೆಂಬುದನ್ನು ಬೇರೂರಿಸಲಿಕ್ಕಾಗಲಿ ನಾವು ಹವಣಿಸುವುದಿಲ್ಲ (**ಶಾತೋಚ. ೩೪೪**).

[ಬೇರೂರು (< ಬೇರೂಱು) + — ಇಸು₂]

**ಬೇರೂರು** 'ಬೇರೂಱು' ನೋ.

**ಬೇರೂಱು**, ಬೇರೂರು (ಕ್ರಿ). ೧. (ಸಸ್ಯಗಳಿಗೆ ಸಂಬಂಧಿಸಿದಂತೆ) ಭೂಮಿಯ ಕೆಳಗಿರುವ ಮೂಲದ ಬೇರೆಬೇರೆ ತುದಿಗಳು ಇನ್ನೂ ಕೆಳಕ್ಕೆ ಬೆಳೆಯುತ್ತಾ ಹೋಗು,- ಭದ್ರವಾಗಿ ನಿಲ್ಲು ; ಬೇರು ಬಿಡು : ಹಾರುವನ ಭಕ್ತಿ ಓಡಿನೊಳಗಗೆಯ ಹೊಯಿದಂತೆ ಕೆಳಯಂಕೆ ಬೇರೂಱದು ಮೇಲೆ ಫಲವಾಗದು (ಬಸವ. ೫೯೩). ೨. (ಆಲಂ) ನೆಲೆನಿಲ್ಲು; ತಳವೂರು : ನಭೋಭಾಗದಿನಿಂದ್ರ ಚಾಪಮನಿತುಂ ಭೂಭಾಗದೊಳ್ ಬಂದು **ತೊಟ್ಟನೆ** ಬೇರೂಱಿದವೋ . . . ಎಂಬಿನಮೇಂ ನಾಡೆ ಬೆಡಂಗನಾಳ್ದುದೊ ವಿಯದ್ದಿಗ್ಭೂವಿಭೂಮಂಡಲಂ (ಅಂಪು. ೬-೨೪) ; **ಇಂತು ತಪೋಬೀಜಂ ಚಿತ್ತಭೂಮಿಯೊಳ್ ಬೇರೂಱಿಯಹಂಕಾರದೊ** ಳಂಕುರಿಸಿ (ಗಿರಿಕ. ೩-೦೩ ವ) ; ಬೇಸಱಿಕೆ ಬೇರೂಱಿದುದು ಜಯದಾಸಿ **ಜಾಱಿತು** (ಕುಬ್ಬಾಸ. ೨-೦೦೪). **ಬೇರೂರು : ೨. ಈ ದೇಶದಲ್ಲಿ** ಮಹಮ್ಮದೀಯಮತವು ಬೇರೂರಿ ಬೆಳೆಯಲು ಸಾಧ್ಯವಾಯಿತು (**ರಾಚಿ.** ೫೭); ನೈತಿಕ ಮತ್ತು ದೈವೀಭಾವನೆಗಳು ಬೇರೂರುವುದು ಈ ಕಾಲದಲ್ಲೇ (ಶ್ರೀಕೃಚ. ೦೦೩). [ಬೇರ್₁ + ಊಱು₁]

**ಬೇರೆ₁** 'ಬೇಱೆ₁' ನೋ.

**ಬೇರೆ₂** 'ಬೇಱೆ₂' ನೋ.

**ಬೇರೇಟಿರ್** (ಕ್ರಿ). ಬುಡಸಹಿತ ಕಿತ್ತು ಬರು : ಭೂತಳಂ ನಡುಗೆ ಶೈಲಶ್ರೇಣಿ ಬೇರೇಟಿ[3] ವಿಶ್ವಜಗತ್‌ಕ್ಷೋಭಕರಸ್ವಭಾವಗಶಿಯಿಂ ಬಂದಂ **ವಿಹಂಗಾಧಿಪಂ** (ಜಗಂ. ೦೩-೩೭). [ಬೇರ್₁ + ಏಟಿರ್₁]

**ಬೇರೊಡೆ** (ಕ್ರಿ). ಬೇರು ಹರಡು ; ಮೂಲ ವಿಸ್ತರಿಸು : ಎಳು ಫಲುಂಗುಣ ಹರಿ ವರೂಥದ ಮೇಲೆ ಬಿಜಯಂಗೈವ ಬಹಳ ಫಲಾಳಿಯಿದೆಲಾ ನಿನ್ನ ಪುಣ್ಯದ್ರುಮದ ಬೇರೊಡೆದು (ಕುಬ್ಬಾಕ. ೭-೦೩). [ಬೇರ್₁ + ಒಡೆ₁]

**ಬೇರ್ಕೆ₁** (ನಾ). ಬೇರೆಬೇರೆ ಮಾಡುವಿಕೆ ; ಬೇರ್ಪಡಿಸುವಿಕೆ ; ವಿಂಗಡಣೆ : 'ಬೇರ್ಕೆಗೆಯ್' ಪರಾ.

[ಬೇಱ್ (< ಬೇಱೆ₁) + — ಕೆ]

**ಬೇರ್ಕೆ₂** (ನಾ). (?) : ಪುದವ ಮಣಿಲೊಳಂ **ಪೂಣಿಸಿದ** ಗಾಣದೊಳಂ **ಬಿರ್ಚಿದ** ಬೇರ್ಕೆಯೊಳಂ . . . ಮೊನೆಯಂ **ಪೂಣಿಸಿದ** ಕೊಂಕದೊಳಂ ಕೈಗೆಯ್ದು (ಅಪಂಪು. ೦೦-೬೫ ವ). [?]

**ಬೇರ್ಕೆಗೆಯ್** (ಕ್ರಿ). ಬೇರ್ಪಡಿಸು ; ವಿಂಗಡಿಸು ; ಪ್ರತ್ಯೇಕಿಸು : ಅರ್ಕಕೀರ್ತಿಗೆ ರಾಜ್ಯವಿರಲೆಂದು ಮಂತ್ರಿಗೆ ತೋರ್ಕೆಗೊಟ್ಟೈದರೊ ತಪಕೆ ಮರ್ಕಟವೈರಾಗ್ಯವೆಂಬುದು ಜಗವೆಂದು ಬೇರ್ಕೆಗೆಯ್ದೊ[ಪಾಠಾಂ. ಗೈದೊ]ಳಗೆ ಚಿಂತಿಸುವ (ಭರತ. ೩೨-೧೧೪). [ಬೇರ್ಕೆ$_1$ + ಕೆಯ್$_1$]

**ಬೇರ್ಕೆಯ್, ಬೇರ್ಕೆ, ಬೇೞುಕೆಯ್** (ಕ್ರಿ). =ಬೇರ್ಕೆಗೆಯ್ : ಮನೋವಾಕ್ಕಾಯವೃತ್ತಿಯಿಂ ನೆರಪಿದ ಕರ್ಮವಂ ಬೇರ್ಕೆಯ್ಕುಲೆನಗೆಂತಕ್ಕುಮೆಂಬ ಸಂಕಲ್ಪಂ ಪ್ರಥಮಧರ್ಮಂ (ಅತ್ತಿ. ೮-೨೬ ವ); ನಿನಗೆ ಕರ್ಮಬಂಧವುಪ್ಪ ಜೀವಮನೆಂತು ಬೇರ್ಕೆಯ್ದು ತೋಱಲ್ಬರ್ಪುದು (ರತ್ನಾಕರ. ೯-೧೨೦); ತನ್ನಂ ಬೇರ್ಕೆಯ್ದು ಮೆಯ್ಯಂ ಪಗಲಿದಿರುಳದೆಂಬೀ ವಿಭೇದಂ ದಲೇನುಂ ಕಿನ್ನಂ ಮೆಯ್ದೋಱಿತಿಲ್ಲಂ (ಶಾರದಾ. ೩-೪೩). **ಬೇರ್ಕೆ** : ಅರ್ಕಸಂತ್ರಸಿವಾತ್ಮಯೋಗವಿಂತಿಹುದೆಂದು ಬೇರ್ಕೆದು ಪಚನಿಸಲರಿದು (ಭರತ. ೨-೯೦); ಖಡ್ಗದಿಂ ಮಸ್ತಕಮನರಿದು ಬೇರ್ಕೆವದಂ [ಪಾಠಾಂ. ಬೇರ್ಕೆಯ್ದುದಂ] ಮುಂಡಮಂ ಸೀಳ್ದು (ಕೃಷ್ಣ. ೧೪-೪೬); ಗಂಗೆಯಲಿ ಬಂದು ಶಾನವಾಗಿ ಹರಿದಿಹವು ಪತ್ತು ನೀರು ಬೇರ್ಕೆವುದೆಂತು ಬಿಸಿಲಲ್ಲಿ ಬೆರೆತ ತಮದೊಂದು ಬಿರುಪೇರು ? (ಮುಕ್ತಿಕಂ. ೧೬-೧೧). **ಬೇೞುಕೆಯ್** : ಇಂತಹ ಪ್ರಳಯ ಹದಿನೆಂಟು ಕೂಡಿ ಮಹಾಂಧಕಾರ ಸಂದಿತ್ತು ಇಂತಹ ಅಂಧಕಾರ ಸಂದಿಲ್ಲದೆ ತಿರುಗುವಲ್ಲಿ ಬಯಲು ಬೇೞುಕೆಯ್ಕಿತ್ತು (ಶೂನ್ಯಸಂ. ೩-೦೬). [ಬೇೞ್ ( < ಬೇೞ್$_1$) + ಕೆಯ್$_1$]

**ಬೇರ್ಕೆ** 'ಬೇರ್ಕೆಯ್' ನೋ.

**ಬೇರ್ಗೊಲೆ, ಬೇರುಗೊಲೆ** (ನಾ). ೧. ಮೂಲವನ್ನು ಕಿತ್ತು ನಾಶಮಾಡುವುದು. ೨. (ಆಲಂ) ಸಂಪೂರ್ಣವಾಗಿ ಇಲ್ಲವಂತೆ ಮಾಡುವುದು : ಅರಿನ್ನು ಗತಿ ನಿನಗೆ ಸಂಬಂಧಿ ಬಾಣನಂ ಹಾರೈಸುವೊಡೆ ನಿನ್ನ ಬೇರ್ಗೊಲೆಗೆ ಶಿವನಪ್ಪ ಕಾರಣಮನಂಗತ್ನಮೇ ಪ್ರಾಪ್ತಮೆಂದು ಹರಿ ತನ್ನ ಸುತನಂ ಜಱಿದನು (ಕೃಷ್ಣಾ. ೬-೪೦). **ಬೇರುಗೊಲೆ** : ೨. ನಾರಿಯರು ಮಱುಗಿದರಟ ಮುದಿಹಾರುವನ ತನಿಬೇಂಟೆ ನಮ್ಮಯ ಬೇರುಗೊಲೆಯಾಗಿರ್ದುದೇ ಹಾಯೆನುತ ಬಿಸುಸುಯ್ದು (ಕುಮಾ.ಅ. ೪-೨೬); ದುರಾತ್ಮರು ಬೇರುಗೊಲೆಗಂಗೈಸಿವರು ಕುರುವಂಶಸುರಕುಜದ (ಐರಾಗ. ೩-೦-೧೧). [ಬೇರ್$_1$ + ಕೊಲೆ]

**ಬೇರ್ಗೊಳ್** (ಕ್ರಿ). ೧. ಬೇರುಬಿಡು. ೨. ಬೇರಿನಿಂದ ಪ್ರಾರಂಭಿಸು : ಬೇರ್ಗೊಂಡು ಪಣ್ತು ಪಲಸೆಳನೀರ್ಗಾಯಂ ತಳೆವ ತೆಂಗು . . . ನೇರ್ಗಿಱಿಯವು ಕಲ್ಪತರುಗೆ ಸಿರಿಯಿಂದೆನಿಕುಂ (ಸಂದ್ರಶೃ. ೦೩-೨೬). [ಬೇರ್$_1$ + ಕೊಳ್$_1$]

**ಬೇರ್ನುಡಿ** (ನಾ). ಅನ್ಯಮಾತು ; ಬೇರೆಯ ನುಡಿ : ಸಿದ್ಧನ್ನಮ ಎಂಬ ವಾಕ್ಯಮಿರೆ ಬೇರ್ನುಡಿಯೇಕೆ (ಅತಶ. ೦೯). [ಬೇೞ್ (< ಬೇೞ್$_1$ ) + ನುಡಿ$_2$]

**ಬೇರ್ನೆಲೆವೋಗು** (ಕ್ರಿ). ಬೇರೆಯ ಸ್ಥಳಕ್ಕೆ ಹೋಗು ; ಅನ್ಯಪ್ರದೇಶಕ್ಕೆ ನಡೆ : ಕಾರ್ಯಾಂತರದೆ ಬೇರ್ನೆಲೆವೋದ ನಲ್ಲನ ಪಿಂಬಡಿಯೊಳ್ ಪಂಬಲಿಸುತಿರ್ದ ಬಿಂಬಫಲದಶನವಸನೆ (ಅಸಂಕ. ೬-೨೦ ವ). [ಬೇೞ್ (< ಬೇೞ್$_1$) + ನೆಲೆ$_1$ + ಪೋಗು$_1$ (< ಪೋ$_1$) ]

**ಬೇರ್ಪ** 'ಬೇಡು$_1$' ಪರಾ.

**ಬೇರ್ಪಡಿ** (ನಾ). ಬೇರೆಯಾದ ಭೋಜನಸಾಮಗ್ರಿ,—ಎಡೆ : ಷಡುಖಂಡಪದವ ನಿಟ್ಟಿಸುವನು ಪುಣ್ಯ ಸಂಗಡಿಸೆ ಚಾತ್ರಿಯ ನೋಡುವಂತೆ ಅಡುಗೂಲಿಮನೆಯಲ್ಲಿ ಮಿಂದುಂಬನಂತೆ ಬೇರ್ಪಡಿ ನೋಡಿ ಭೋಗಿಸುತಿರ್ದ (ಭರತ. ೩೩-೩೪). [ಬೇೞ್ ( < ಬೇೞ್$_1$ ) + ಪಡಿ$_1$]

**ಬೇರ್ಪಡಿಕೆ** (ನಾ). ಬೇರೆಯಾಗಿ ಮಾಡುವಿಕೆ ; ಪ್ರತ್ಯೇಕಿಸುವಿಕೆ ; ವಿಂಗಡಣೆ : ಅನೇಕ ಜೀವಾತ್ಮರುಗಳ ಸೃಷ್ಟಿಕರ್ಮವನ್ನು 'ವಿಯೋಗ' ಎಂದೂ ಕರೆಯುವುದುಂಟು. ಎಂದರೆ, ಬೇರ್ಪಡಿಕೆಯ ಕೆಲಸ ಎಂದು (ತತ್ವಶಾ. ೫೬೮). [ಬೇರ್ಪಡು + — ಇಕೆ]

**ಬೇರ್ಪಡಿಸು** (ಕ್ರಿ). ಬೇರೆಯಾಗಿಸು ; ಪ್ರತ್ಯೇಕಿಸು : ಒಡಲ ಬಳಿನೆಳಲಿಂಗೆ ಗತಿ ಬೇರ್ಪಡಿಸಿಹುದೆ (ಕುಮಾ.ಅ. ೦-೯) ; ಕುಂದಣವನು ರಸಗೆಯ್ದೊಡಾಕ್ಷಣ ಕರುವಿಂದೆ ಬೇರ್ಪಡಿಸಿ ಪುತ್ಥಳಿಯ ತಂದಡರ್ಚಿದರು (ಪೋಟಹಿ. ೨೬-೩೮) ; ಟೊಮೆಟೊವನ್ನು ಸುಲಿದು ಬೀಜ ಮತ್ತು ತಿರುಳನ್ನು ಬೇರ್ಪಡಿಸಿರಿ (ಅಡುಗೆ. ೦೦೨). [ಬೇರ್ಪಡು + —ಇಸು$_3$]

**ಬೇರ್ಪಡಿಸುಹ** (ನಾ). ವ್ಯತ್ಯಾಸವನ್ನುಂಟುಮಾಡುವಿಕೆ : "ಬೇರ್ಪಡಿಸುಪ=ಭೇದ, ಅಂತರ" (ನಾಶಠಾ. ೬). [ಬೇರ್ಪಡಿಸು + —ಹ$_2$ (< —ಪ$_2$)]

**ಬೇರ್ಪಡು, ಬೇೞುಪಡು** (ಕ್ರಿ). ಬೇರೆಯಾಗು ; ಪ್ರತ್ಯೇಕವಾಗು : "ಬೇರ್ಪಡು —ವಿವಿಕ್ತೇ, ವಿವರೇ ಚ" (ಕಮಧಾ. ಪ) ; ಕೊರಲೊಳ್ ಯಜ್ಞೋಪವೀತಂ ಪೊಳೆಯೆ ಬರಿಗಳೊಳ್ ತೋಱುತಿರ್ಪಲ್ಗಳೊಳ್ ಪಂಜರಿಸಿರ್ದಂತೆಯೆದ್ದು ಬೇರ್ಪಟ್ಟಿರೆ ತೆರೆದುಱುಗಲ್ ಗಾಳಿಯಿಂದಾಡೆ ಯೋಗೀಶ್ವರಂ . . . ಎಸೆವ ಗಂಗಾಪ್ರವಾಹುಬೊಲಿರ್ದಂ (ಶಬ್ದಂಮ. ೨೪೦): ಉದ್ಯೋತಂ ಶ್ವೇತಕೃಷ್ಣಂಗಳನಱಪುವವೊಲ್ಪುಣ್ಯಪಾಪಂಗಳಂ ಸ್ಯಾದ್ವಿದ್ಯಾವಾದಂಗಳಿಂ ಭವ್ಯರ ಬಗೆವುಗುವನ್ನಂ ದಯಾಮೂಲಮಂ ಸಾವದ್ಯವ್ಯಾಪಾರಮಂ ಬೇರ್ಪಡೆ ತಿಳಿಪುವುಪಾಧ್ಯಾಯರಾಧೇಯರೆಮ್ಮೊಳ್ (ಮಲ್ಲಿ. ೦-೯). ೨. ಹರಡಿರು ; ಬಿಚ್ಚಿರು : "ಬೇರ್ಪಡು – ವಿವಿಕ್ತೇ, ವಿವರೇ ಚ" (ಕಮಧಾ. ಪ). ೩. ಬೇರೆ ರೀತಿಯಾಗು; ವ್ಯತ್ಯಾಸಗೊಳ್ಳು : (೬). **ಬೇೞುಪಡು** : ೧. ಬೆಸುಗೆಯಾದಂತಿದ್ದು ಬೇೞುಪಟ್ಟಿಹನಾತ್ಮ (ಭರತ. ೩-೪೬). [ಬೇೞ್$_1$ (<ಬೇೞ್) + ಪಡು$_1$]

**ಬೇರ್ಪಾಟು** 'ಬೇರ್ಪಾಡು' ನೋ.

**ಬೇರ್ಪಾಡು, ಬೇರ್ಪಾಟು** (ನಾ). ೧. ಬೇರೆಯಾಗುವುದು ; ಪ್ರತ್ಯೇಕಗೊಳ್ಳುವುದು. ೨. ವ್ಯತ್ಯಾಸ ; ಅಂತರ : ಇಲ್ಲಿ ಶಿಶಿರ ವಸಂತಗಳೆಂಬ ಬೇರ್ಪಾಡಿಲ್ಲ, ಇಲ್ಲಿರುವುದು ಒಂದೇ ಋತು – ನಿತ್ಯನಡುಬೇಸಗೆ (ಹುಹೂ. ೨೬೪). **ಬೇರ್ಪಾಟು** : ೨. ಮನಸ್ಸಿನ ಬೇರ್ಪಾಟಿನಿಂದಲೇ ಲೋಕದಲ್ಲಿ ಕಲಹವುಂಟಾಗುವುದು (ಪ್ರಶ. ೧೧೧). [< ಬೇರ್ಪಡು]

**ಬೇರ್ಬಡಪ** (ನಾ). ಬೇರೆಯಾದ ಮಳೆ,—ಧಾರಾವರ್ಷ : ಎಲೆಗಳಱುಂಬಿನೊಳ್ ಮರದ ತೂಱಲುಗೊಂಬಿನ ನೀಡನೀಡದೊಳ್ ತೊಲಗದೆ ನಿಂದಣಂ ನಡುಗುತುಂ ತನು ಕೂಡೆ ಕುಸುಂಗೆ ಕಂಠಕಂದಲ ಭರಮುಬ್ಬೊಲ್ ಕುಸಿದು ಪಕ್ಷಿಗಳಿರ್ದುವೆಱುಕೆಡುಗ್ರದಿ ಜಲಲವಬಿಂದುಗಳ್ ಸುರಿಯೆ ಬೇರ್ಪ[ರ್ಬ]ಡಪಂ ಬಿಡೆ ಸೋರ್ವಗುರ್ವಿನೊಳ್ (ಕುಸುಮಾ. ೬-೩೬). [ಬೇೞ್ (<ಬೇೞ್$_1$) + ಬಡಪ]

**ಬೇರ್ಬಿಡಿಸು** (ಕ್ರಿ). ಬುಡವು ಕಿತ್ತುಬರುವಂತೆ ಮಾಡು : ರಜತಶೈಲಮಂ, ಶಿವ ಶಿವಾಣಿಯರೊಡನೆ, ಬೇರ್ಬಿಡಿಸುತಳ್ಳಾಡಿ ನೆಗಹಿದೀದೈತ್ಯರ ದೊರೆಯ ತೋಳ್ ಸ್ಥಿರಾತ್ಮಜೆಯ ಹೃದಯದುದ್ಯಾನದೊಳ್ ಉದಿರ್ದೊಂದು ಪೂವೆಸಳ ಪೊರೆಗುರುಳ್ದುದು (ಶ್ರೀರಾಮಾ. ೬೦೯-೩೯). [ಬೇರ್$_1$ + ಬಿಡಿಸು]

**ಬೇರ್ಬಿಡು, ಬೇರುಬಿಡು** (ಕ್ರಿ). ೧. ಮರಗಿಡಗಳ ಬೇರು ಭೂಮಿಯಲ್ಲಿ ಬೆಳೆಯುತ್ತಾ ಹೋಗು,—ವಿಸ್ತಾರವಾಗಿ ಹರಡು : ತಾಪಾರ್ತಜನಕೆ ನೆರಳಾಗಿ ನೀಡಿ ವಟವೃಕ್ಷವಾದ ಜೀವ ; ತತ್‌ಬ್ರಹ್ಮದಲ್ಲಿ ಬೇರ್ಬಿಟ್ಟು ಇಳಿವ ಅಶ್ವತ್ಥದಂಥಭಾವ (ಹೃದಯ. ೦೦-೦೪). **ಬೇರುಬಿಡು** : ೧. ಬೀಜಗಳು ಹೊಸಭೂಮಿಯಲ್ಲಿ ಮೊಳೆತು ಜನಸಂಚಾರದೊಂದಿಗೆ ಕಲೆತು ಅಲ್ಲಲ್ಲಿ ಬೇರುಬಿಟ್ಟವು (ಜಾತಗ. ೩೯). ೨. (ಆಲಂ) ತಳವೂರು ; ಸ್ಥಿರವಾಗಿ ನಿಲ್ಲು ; ಬೇರೂರು : ಆ ತಂತ್ರಗಳು ಪುರಾತನಕಾಲದಿಂದ

ಸಮಾಜದಲ್ಲಿ ಬೇರುಬಿಟ್ಟಿವೆ (ತ್ರಿಸರು. ೨೪೩); ವೈದಿಕಧರ್ಮದಲ್ಲಿ ಬೇರುಬಿಟ್ಟ ಅಪ್ಪ ಯಾಕೆ ಹೀಗೆ ಬದಲಾದ ? (ಹೊಸಕ್ಷ. ೨೩೦).

**ಬೇರುಬಿಟ್ಟುಕೊಳ್ಳು**=ಶಕ್ತಿಯುತವಾಗು; ಪ್ರಬಲವಾಗು; ಸ್ಥಿರವಾಗಿ ನಿಲ್ಲು : ಪಾಂಡವರು ಇನ್ನೂ ಬೇರುಬಿಟ್ಟುಕೊಳ್ಳುವುದಕ್ಕೆ ಮುಂಚೆಯೇ ಅವರನ್ನು ಪರಾಕ್ರಮದಿಂದ ಅದುಮಿಬಿಡಬೇಕು (ಪಪಭಾ. ೬೩).
[ಬೇರ್$_1$ + ಬಿಡು$_1$]

**ಬೇರ್ಮನೆ** (ನಾ). ೧. ಬೇರೆಯ ಮನೆ; ಪ್ರತ್ಯೇಕ ಗೃಹ. ೨. ಮದುವೆಯ ಸಂದರ್ಭದಲ್ಲಿ ವರನ ಕಡೆಯವರನ್ನು ಇಳಿಸುವ ಮನೆ; ಬಿಡದಿಮನೆ : ಹೋಗಿ ಬಡಬಡ ಬೇರ್ಮನೆ (ವರನಿರುವ ಮನೆ)ಯಿಂದ ಮದಲಿಂಗನನ್ನು ಕರಕೊಂಬರ್ರಿ . . . ಬೇರ್ಮನೆಯಿಂದ ಮೆರವಣಿಗೆಯಲ್ಲಿ ಬರುವ ಮದಲಿಂಗನನ್ನು ನೋಡುವುದಕ್ಕೂ ಪುಣ್ಯ ಬೇಕು (ಸುಪಸಂ. ೩೨). ೩. ಮದುವೆಯ ನಂತರ ವಧೂವರರಿಗೆ ಏರ್ಪಡಿಸುವ ಮನೆ: ಪ್ರಸ್ತದ ಕೋಣೆ : ಮದುವೆಯ ಶಾಸ್ತ್ರಗಳೆಲ್ಲ ಮುಗಿದು ಮದುಮಕ್ಕಳನ್ನು ಬೇರ್ಮನೆಗೆ ಕಳುಹಿಸುವ ವೇಳೆಗೆ ತುಂಬ ತಡವಾಯಿತು (ರುಕ್ಕಿ). [ಬೇರ್$_2$ (<ಬೇಱ್$_1$) + ಮನೆ]

**ಬೇರ್ಮೆಯ್** (ನಾ). ಅನ್ಯಶರೀರ ; ಅನ್ಯದೇಹ : 'ಬೇರ್ಮೆಯ್ವೊಗು' ಪರಾ. [ಬೇಱ್ (<ಬೇಱ್$_1$) + ಮೆಯ್$_2$]

**ಬೇರ್ಮೆಯ್ವೊಗು** (ಕ್ರಿ). ಅನ್ಯಶರೀರವನ್ನು ಹೊಗು.– ಪ್ರವೇಶಿಸು: ಪರಕಾಯಪ್ರವೇಶ ಮಾಡು : ಇದು ಬೇರ್ಮೆಯ್ವೊಕ್ಕ ಯೋಗೀಂದ್ರನ ತನುವಿನವೊಲ್ ಮುನ್ನಿನಂತಿರ್ದುದು (ಕಾದಂಉ. ೬೦೨).
[ಬೇರ್ಮೆಯ್ + ಪೊಗು]

**ಬೇರ್ವರಿ, ಬೇರುವರಿ** (ಕ್ರಿ). ಶಾಶ್ವತವಾಗಿ ನಿಲ್ಲುವಂತೆ ಹಬ್ಬು.– ಹರಡು : ಅಳಂಕರಣವಿಳಾಸಮಂ ಮೆಱೆವ ಮೇಳಸುಮಂದಿನ ರೂಪು ಶಾಸನಂಬರೆದುದು ಬಱಿಸಿತ್ತಮರ್ದಿನದಬ್ದದಳಂಕಿದುದುರ್ಚಿ ಪೊಕ್ಕು ಬೇರ್ವರಿದುದು ಬೆಚ್ಚುದಚ್ಚುಱಿದುದೆನ್ನೆರ್ದೆಯೊಳ್ ಲಲಿತಾಂಗದೇವನಾ (ಅದಿಪು. ೩-೪೩) ; ಶಿವನಿಷ್ಠೆ ಚಿತ್ತದೊಳು ಬೇರ್ವರಿದವರ್ಕೆಲರು (ತಿರುಶ. ದೇ. ೦೪-೦೬). **ಬೇರುವರಿ** : ಊರೊಳೀ ಕಪಿವಾರ್ತೆಯಾಗಲಿಕೆ ಬೇರು ವರಿದುದು (ತೊರರಾ. ೩-೩-೦); ಚಾರುತರ ಪರಿಮೂರ್ತಿಯಲಿ ಮನ ಬೇರುವರಿದಡಿಗಡಿಗೆ ಒರಗುತ . . . ಪರಮಭಕುತಿಯ ಸಾರಸಾಮ್ರಾಜ್ಯದಲಿ ಮೆಱೆವುದು (ಶಿತಾಗ. ೩-೦೩-೪೬). [ಬೇರ್$_1$ + ಪರಿ$_2$]

**ಬೇರ್ವರೆ** (ಕ್ರಿ).=ಬೇರ್ವರಿ : ಶಿವತತ್ತ್ವಮದು ಬೇರ್ವರೆಯಲಜ್ಞಾನ ಕೂಪ ನೆಲೆಗೆಟ್ಟುದೆನೆ ನಾಭಿ ನಿಮ್ನವನುಳಿದುದು (ಕಬಪು. ೪-೦೩).
[ಬೇರ್$_1$ + ಪರೆ$_1$]

**ಬೇರ್ವೆರಸು** (ಅ). ೧. ಬೇರು ಸಹಿತವಾಗಿ; ಬುಡ ಸಮೇತ : ಅರ್ಜುನನಾಗಳ್ ಬೇರ್ವೆರಸು ಕಿಬಿಲ್ಕೆ ಬಗೆಯೆ ಸುರರೆಡೆವೊಕ್ಕರ್ (ಶಂಶಭಾ. ೧೧-೨೩); ಬೇರ್ವೆರಸು ಕಿಬ್ಬಿತ್ತು ಪಲವುಂ ನೀರ್ವೂಗಳನೊಟ್ಟಿಕೊಂಡು ಬರ್ಪ ಗಜೇಂದ್ರಂ . . . ಸುರಕರೀಂದ್ರಮೆನಿಸಿದುದಾಗಳ್ (ಕಾವ್ಯಾವ. ೬೦). ೨. ಬುಡದಿಂದ ಓಡಿದು : ಬೇರ್ವೆರಸಿ ತುದಿವರಂ ಕಾಯ್ತು ಪನಸುಗಳೆಳನೀರ್ವೊನಲುಮಂ ಕರೆವ ತೆಂಗು ಕಿಸುವಣ್ ಮುಸುಕಿ ತೋರ್ಪ ನಾರಂಗ ಜಂಬೀರಮಿನಿತುಂ ನಾಡೆ ಸಾರ್ವಕಾಲಂ ಕುಂದವು (ಕಬಪು. ೧೧-೨೨).
[ಬೇರ್$_1$ + ಬೆರಸು$_3$]

**ಬೇಲ** 'ಬೆಳಲ್' ನೋ.

**ಬೇಲಾಯಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ತುಳಜಾ ಭವಾನಿ ಬೆಲ್ಲದ ಬೇಲಾಯಿ . . . ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು (ಶಿಶಾಹು. ೩೮-೨). 'ಜೋಗಾಯಿ' ಪರಾ.
[ ? + ಆಯಿ$_2$]

**ಬೇಲಾಶಕ್, ಬೇಲಾಷಕ್** (ಅ). ನಿಸ್ಸಂಶಯವಾಗಿ; ನಿಸ್ಸಂದೇಹವಾಗಿ; ಖಾತ್ರಿಯಾಗಿ : ಬೇಲಾಶಕ್ ! ದೇಶದಾಗಿನ ಪ್ರತಿಯೊಬ್ಬರ ಸೇವಾ ಮಾಡೋದು ಕಾಂಗ್ರೆಸ್‌ಭಕ್ತನ ಧರ್ಮ ಅದ (ಬಾರಾಂ. ೦೩); ಬಾಜಾರದಾಗ ಬೇಕಾದ ಹೊತ್ತಿನಾಗ ಬೇಕಾದ ಮಾಲು ಬೇಕಾದಟು ಕೇಳಿರಿ, ಬೇಲಾಶಕ್ ಸಿಗತದ (ಅಪ್ಪ. ೨೩೩). **ಬೇಲಾಷಕ್** : ಬೇಲಾಷಕ್ ಹೋಗರಿ (ಬಾಂಧಾಯ. ೨೩); ಬೇಲಾಷಕ್ ನೀ ಹೇಳಿದ ಕಿಮ್ಮತ್ತ್ ಕೊಡತಾವ್ (ಮೋಹಿಣಿ. ೬೮). [← ಅರ. ಮರಾ. ಬೇಲಾಶಕ್]

**ಬೇಲಾಷಕ್** 'ಬೇಲಾಶಕ್' ನೋ.

**ಬೇಲಿ, ವೇಲಿ** (ನಾ). ೧. ಹೊಲ, ತೋಟ ಮೊದಲಾದುವುಗಳ ರಕ್ಷಣೆಗಾಗಿ ಸುತ್ತಲೂ ಹಾಕುವ ಪೊದೆ, ಮುಳ್ಳು, ಮುಳ್ಳುತಂತಿ ಮುಂತಾದುವುಗಳ ಆವರಣ.— ಸುತ್ತುಗೋಡೆ : "ಆವೇಷ್ಟಕಃ. ವೃತಿಃ — ಈ ೨ ಬೇಲಿ" (ಹಲಾಯು. ೪೮-೧೩೩) ; ಪನಿಯಾಲ ಕಾಲ ಬಡ (ಗ)ಣ ಬೇಲಿಯುಂ ಅನ್ತೆ ಬನ್ದು (ಎಕ. III, ಹಂಜನ. ೦೩೯-೦೬; 915 ?); ಕಾವ ಬೇಲಿ ಎದ್ದು ಹೊಲವ ಮೇದ ಮೇಲಿನ್ನೇನಿನ್ನೇನು (ಪುರಂದ. ೨-೩೬-೪). ೨. ವನ್ಯಮೃಗಗಳನ್ನು ಬೇಟೆಯಾಡಲು ದೀವದ ನೆರವಿನಿಂದ ಆಕರ್ಷಿಸುವ ಸ್ಥಳ : "ಬೇಲಿ ತೋಹತ್ತು" (ಮುಂಗರಾ. ೦೦೨-೩); ಆ ನಾರಾಯಣನುಂ ತಾನುಮಂತಃಪುರಪರಿವಾರಂಬೆರಸು ಬೇಂಟೆಗೆ ಪೊಱಮಟ್ಟು ಪರಿಯ ಶಾಣಕ್ಕೆ ವಂದು ಬೇಲಿಯ ಕೆಲದೊಳಲ್ಲದೆ ಪೆಱಗಣಾಲಿಬಾಗಮುಳ್ಳೊಳಕ್ಕಂ ಗೆಂಟಾಗಿ ಬೀಡು ಬಿಡಿಸಿ (ಶುಕಪ್ತ. ೩-೪೬ ಪ). ೩. ಭೂಮಿಯ ಒಂದು ಅಳತೆ : ಪರಸುರಾಮದೇವರ್ಗ್ಗೆ ನಿವೇದ್ಯಕಂ ಒನ್ದು ನನ್ದಾದೀವಿಗೆಗಂ ಬಿಟ್ಟ ಭೂಮಿ ದೇವಡುವಿನ್ದ ಮೂಡಲು ಒನ್ದು ಬೇಲಿ (ಎಕ. III (R), ಹಂಜನ. ೩೨೨-೦೬: 1148); ಆ ಭೂಮಿಯೊಳಗೆ ಅಲ್ಲಿಯ ಮೂಲಸ್ಥಾನದೇವರಿಗೆ ಬಿಟ್ಟ ಮಣ್ಣು ಬೇಲಿಯೊಂದು (ಎಕ. III (R), ಗುಂಡ್ಲುಪೇ. ೪೬-೦೩; 1171). ೪. ಎಲ್ಲೆ; ಸೀಮೆ : ಕಾಡ ಬೇಲಿಯುಂ ಮಾರ್ಕಾಡನಱೆಯುಲುಂ . . . ಪಡೆ ಮೆಚ್ಚಿ ನೀಂ ಬಲ್ಲೆ ನೀಂ ಮೆಚ್ಚೆ ಹರಿಗ ಕೇಳಾನೆ ಬಲ್ಲೆಂ (ಶಂಶಭಾ. ೩-೪೦). **ವೇಲಿ** : ೧. ಬಡಗಲು ವೇಲಿವಿದಿರುಂ ಈಶಾನ್ಯದೊಳ್ ಕಪಾಳೇಶ್ವರಂ ಕಲ್ಲೊಗಟ ಪೊಲದ ಸೀಮೆ (ಸೌಇಇ. IX-i, ೦೨೦-೪೯; 1057).
[ದೇ.॥ ತಮಿ. ಮಲ. ವೇಲಿ ; ತುಳು. ಬೇಲಿ; ಕೊಡ. ಬೆಲಿ; ತೆಲು. ವೆಲುಗು ; ಗೊಂಡಿ. ವೆಲ್ರುಮ್]

**ಬೇಲಿಫ, ಬೇಲೀಫ** (ನಾ). ನ್ಯಾಯಾಸ್ಥಾನದ ಅನುಜ್ಞೆಗಳನ್ನು ಜಾರಿಗೆ ತರುವ, ಸ್ವತ್ತು ಜಪ್ತಿ ಮಾಡುವ, ತಕ್ಸೀರುದಾರನನ್ನು ಹಿಡಿಯುವ ಅಧಿಕಾರವುಳ್ಳ, ಜಮೀನುದಾರನ ಕಂದಾಯ ಮುಂತಾದುವುಗಳನ್ನು ವಸೂಲುಮಾಡುವ ಕೋರ್ಟಿನ ಅಮೀನ ; ಬೇಲಿಫರು ನಿನ ಚರ–ಸ್ಥಿರ ಆಸ್ತಿಗಳ ಜಪ್ತಿಯನ್ನು ಮಾಡಿಕೊಂಡು ಹೋಗುವಾಗ್ಗೆ ನೀನು ನಿನ್ನ ಮಾನಕ್ಕೆ ಹ್ಯಾಗೆ ಹೆದರುತ್ತಿದ್ದಿಲ್ಲ ? (ಮೋಹಿಣಿ. ೦೩೦). **ಬೇಲೀಫ** : ಬೇಲೀಫ ತಲೆಬಾಗಿಲಿಗೆ ಬಂದು ನಿಂತಾಗ ಗಂಡ ಘಾಬರ್ಯಾಗಿ ಕೂತ (ಗಂಪಾಯ. ೪೯); ನಾಲ್ಕಾರುಜನ ಬೇಲೀಫರು ಆತನ ಹಾದಿಯನ್ನು ನೋಡುತ್ತ ನಿಂತಿದ್ದರು (ಜೀವಶ್ರೀ. ೦೬). [← ಇಂ. Bailiff]

**ಬೇಲಿಯಿಕ್ಕು** (ಕ್ರಿ). ಹೊಲ, ತೋಟ ಮೊದಲಾದುವುಗಳಿಗೆ ಪೊದೆ, ಮುಳ್ಳು ಮುಂತಾದುವುಗಳ ಆವರಣವನ್ನು ಹಾಕು; ಬೇಲಿ ಹಾಕು : ಕಯ್ಯಿಲ್ಲದೆ ಬೇಲಿಯಿಕ್ಕುವೆನೆಂಬ ಬಾಗಿಲಿಲ್ಲದೆ ಪೊಗುವೆನೆಂಬ . . . ಪಚ್ಚೆಪಸಿಯೆಗ್ಗನುಂ ಪೋಲ್ಕುಂ (ಧರ್ಮಾಮೃ. ೦-೬೬). [ಬೇಲಿ + ಇಕ್ಕು]

**ಬೇಲಿವಳ್ಳಿ** (ನಾ). ಸುತ್ತಲೂ ಬೇಲಿಯಿರುವ ಚಿಕ್ಕಹಳ್ಳಿ : ಡಳ್ಳಿಯ ಕೊಳೆಗೊಂಡವೆಮಗಿಲ್ಲಿದಿರೆಲ್ಲಿಯುಮೆಂದು ಬಂದೆಮೀ ಕಳ್ಳಿಯ ಬೇಲಿವಳ್ಳಿಯೊಳಗಳ್ಳಿಱಿದಾಡುತೆ ಜಳ್ಳುವೋದೆವು (ಅಶ್ರತಿ. ೦೪-೦೦). [ಬೇಲಿ + ಪಳ್ಳಿ$_1$]

**ಬೇಲಿವೀಡು** (ನಾ). ಬೇಲಿಯಿರುವ ಸ್ಥಳ : ಬೇಲಿವೀಡಂ ಪೋಲ್ತು ಸಮಿಾಪವರ್ತಿಗಳಾಗಿ ಪೊರ್ದಿಯೋಲಗಿಸುವರ್ ಪಾರಿಷತ್ಯಸುರರು (ಕಾರ. ೦೬೮). [ಬೇಲಿ + ಬೀಡು$_2$]

**ಬೇಲಿಸೌತೆ** (ನಾ). ಬೇಲಿಯ ಮೇಲೆ ಹಬ್ಬುವ ಒಂದು ಬಗೆಯ ಸೌತೆ ಬಳ್ಳಿ ಮತ್ತು ಅದರ ಕಾಯಿ : "ಪ್ಯಾಗೋರ್ವಾರು: – ಬೇಲಿಸೌತೆ" (೬ಕಾ. ೦೨೬); "ಮೃಗಾದಿನೀ–ಹಾವುಮೆಕ್ಕೆ, ಬೇಲಿಸೌತೆ" (೬ಕಾ. ೦೨೬). [ಬೇಲಿ + ಸೌತೆ (< ಸವುತೆ)]

**ಬೇಲೀಫ** 'ಬೇಲಿಫ' ನೋ.

**ಬೇಲು$_1$** (ನಾ). ಕಟ್ಟು : ಹೊರೆ ; ಪಿಂಡಿ : ಯಾವುದೋ ರೈಲ್ವೇ ರಶೀದಿ ತೆಗೆದುಕೊಂಡು ಕಾಗದದ 'ಬೇಲು' ಗಳನ್ನು ತರಲು ರೈಲ್ವೇಸ್ಟೇಷನ್ನಿಗೆ ಹೋಗಿದ್ದರೆಂದು ತಿಳಿಯಿತು (ಅವತಂ. ೦೫೩). [← ಇಂ. Bale]

**ಬೇಲು$_2$** (ನಾ). ಚಿತ್ರಗಳ ಸುತ್ತ ಇರುವ ಅಲಂಕಾರಪಟ್ಟಿಕೆ (?) : ರುಗ್ಮದಲಿ ತಿದ್ದಿದ ಲೋಹಿನಗಳು ರಜತದಲಿ ಮಾಡಿದ ಹಂಸೆಗಳು ಕುಸುಮಗಳಿಂದಲೊಪ್ಪುವ ಬೇಲುಗಳು (ಶಶಿ. ೬೬೪) : ಗೂಡುಗಳಿಗೆ ಬುಡದಿಂದ ಆನೆ, ರಾವುತರು, ಗೋಪುರಗಳುಳ್ಳ ಕಂಬಗಳು, ಬೊಂಬೆಗಳುಳ್ಳ ಬೇಲು ಈ ರೀತಿಯಾಗಿ ಚಿತ್ರದ ಸಾಲುಗಳಿವೆ (ವ್ಯಾಪ್ತಾಸ್ತು. ೦೦೦). [?]

**ಬೇಲೂರ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬೇಲೂರರಾ ಮಗ ಮಾಧ × × × ಸತ್ತನ್ (ಎಕ.X, ತಂಕಾಮು. ೦೬೮–೦; ಸು. 900 ?). [?]

**ಬೇಲೆ** (ನಾ). (ಸಮುದ್ರದ) ತೀರ ; ದಡ : ಪಡುವಲು ಸಮುದ್ರದ ಬೇಲೆ ಬಡಗಲು ಆ ಗದ್ದೆ ಒತ್ತಿಲು ಇಂತೀ ನಾಲ್ಕು ಗಡಿ (ಕಇ. I, ೫೪–೦೦ ; 1433). [< ಸಂ. ವೇಲಾ]

**ಬೇವ್‌ಕೂಫ್** 'ಬೇಕೂಫ್' ನೋ.

**ಬೇವ** 'ಬೇ$_1$' ಫರಾ.

**ಬೇವರ್ಸಿ** 'ಬೇವಾರ್ಸಿ' ನೋ.

**ಬೇವಸ** (ನಾ). ೧. ಚಿಂತೆ ; ದುಮ್ಮಾನ ; ಉಮ್ಮಳ : "ಬೇವಸಂ, ದುಮ್ಮಾನಂ, ಉಮ್ಮಳಂ—ಈ ೩ ಚಿಂತೆ" (ಕಶಾ. ೫೬–೨೨೭) ; ತನಗಿನಿತಱ ಬೇವಸಮೇಂ ಕವರ್ದವರುಮೊಳರೆ ಕವಿಯಲ್ಲದರಂ (ಕವಿರಾ. ೦–೧೨) ; ಮಾತ್ಸಾರ್ಗ್ನದ ಕಥಾವಳಿಯೆಲ್ಲಮಂ ಬಗೆದು ನೋವೆಸಗಾದುದು ನೋವಂ ತುಂತೆಸಗಾವುದು ಬೇವಸಂ (ಆದಿಪು. ೪–೪೪) ; ಏಜೀವನು ಬೇವಸದ ಬೇಳಂಬದಲಿ ಬೇಸಱುತವನ ಮಣಿರಥವ (ಕೆುರರಾ. ೩–೭–೫೦). ೨. ಅತಿಯಾದ ಇಚ್ಛೆ ; ಉತ್ಕಟವಾದ ಬಯಕೆ : ಆವ ಕಾರ್ಯವು ಎನಗಿಲ್ಲ ನಿಮ್ಮನು ಕಾಣ್ಬ ಬೇವಸದಿಂ ಬಂದೆನು (ಅಂಕತ. ೯–೦೫). [ < ಬೇ$_1$./ತಮಿ. ವೇಪವು]

**ಬೇವಸಂಗೊಳ್**, ಬೇವಸಗೊಳ್, ಬೇವಸಗೊಳು (ಕ್ರಿ). ಚಿಂತೆಯನ್ನು ಹೊಂದು ; ದುಮ್ಮಾನಗೊಳ್ಳು : ಅನೇಕಕಾಲಂ ವ್ಯಧೋರಗನಾದರ್ಪರಂಗಳಂ ಪೊತ್ತು ತಿರುಗಿ ಬೇವಸಂಗೊಂಡೊಂದುದಿವಸಂ ತನ್ನಿರ್ದ ಪುತ್ರಿಂಗೆ ವರ್ಪುದುಂ (ಶಂತಶಂ. ೭೦–೦೮). **ಬೇವಸಗೊಳ್** : ಘಾತಳಪ ಪೊಕ್ಕದಱೊಳಿರ್ಪ ಮಾನುಷ್ಯಸಂಘಾತಮಂ ಕಂಡು ಬೇವಸಗೊಂಡು ತಿರುಗಿದಂ (ಚಿನ್ನೆಪು. ೦–೯೯). **ಬೇವಸಗೊಳು** : ತಳಮಳಗೊಂಬ ಪೌರರು ಬಲುಬೇವಸಗೊಳುವ ಬಂಧುಗಳು . . . ತೀವಿದುದಾ ಪೊಳಲೊಳಗೆ (ತ್ರೀಶಾಂ. ೯–೨೫) ; ಪಿಂದು ಮುಂದನಾರಯ್ಯದೆ ಜಿದಱಿ ಬೇವಸಗೊಳದೆ ಮುಂದಃ ಪರಿದಿನಿಯನೊಳು ಮೋಹವಶದು (ನೀತಸೋ. ೦೯–೯). [ಬೇವಸ + ಕೊಳ್$_1$]

**ಬೇವಸಂಬಡಿಸು** (ಕ್ರಿ). ವ್ಯಥೆಗೊಳಿಸು ; ದುಃಖಪಡಿಸು : ನಿದಱಿಸಿ ಬೇವಸಂಬಡಿಸಿ ಬೆಂಬಿಡದೆಯ್ದಿ ವಿಡಂಬಿಸುತ್ತ ಸುತ್ತಿದ ಭವಪಾಶಮಂ ಪಱಿದು (ಎಂಕಕ. XVI ೬೮೮). [ಬೇವಸಂಬಡು + —ಇಸು$_4$]

**ಬೇವಸಂಬಡು** (ಕ್ರಿ). ದುಃಖವನ್ನು ಹೊಂದು ; ತಳಮಳಗೊಳ್ಳು : ಪ್ರಚಂಡಕಿರಣಾತಪಸಹಸ್ರಂಗಳುಮಂ ಸೈರಿಸುವ ಸರಸಿಜಂಗಳುಮಾಕೆಯು ಮೊಯ್ ಸೋಂಕಿದನಿತಱೊಳೆ ಕಱಂಗಿ ಕರಿಮುಪ್ಪುವದುಕಾರಣದಿನಕಾರಣ ದಾರುಣನಪ್ಪ ಮನ್ಮಥನಿನೆಡವಿಡದೆ ಬೇವಸಂಬಡುತಿರ್ದಳ್ (ಕಾದಂಬಾ. ೩೨೯). [ಬೇವಸ + ಪಡು$_1$]

**ಬೇವಸಂಬಡೆ**, ಬೇವಸವಡೆ (ಕ್ರಿ). = ಬೇವಸಂಬಡು : ಅಲಗೋಂಚಲಂ ಚಂಚರೀಕಶಾಬಕಂ ಕಾಣದುದ್ದೇಶಕ್ಕೆ ಬಯಲೊಳೆಱಗಿ ಬಱದೆ ಬೇವಸಂಬಡೆಯೆಯುಂ (ವರ್ಧಪು. ೬–೯೯ ೮) ; ಬೇವಸಂಬಡೆದು ಕಂಗೆಡುತೆ ಮುಂದೇಗೈಯಲೆಂದೆಣಿಸುತಿರಲು (ಕವಿಕಾ. ೯೬–೩). **ಬೇವಸವಡೆ** : ರಸಿಕಶಿರೋಮಣಿಯಿಾತಂ . . . ತಾನಸುವಂ ಬಿಟ್ಟುದರಿಂ ಬೇವಸವಡೆ ಯುದರಾಗರ್ಣಜ್ಞರಾಗಿಪ ವಿಬುಧರ್ (ಕಾಳಿಂತ. ೨೨ ಅಧ್ಯಾಯಗಳು). [ಬೇವಸ + ಪಡೆ$_1$]

**ಬೇವಸಗೊಳ್** 'ಬೇವಸಂಗೊಳ್' ನೋ.

**ಬೇವಸಗೊಳಿಸು** (ಕ್ರಿ). = ಬೇವಸಂಬಡಿಸು : ಶಶಿಧರಂ ಜಂಗಮಾಕಾರದಿಂ ಬಂದು ಸಂತಸದೆ ಕಪ್ಪರವಿಟ್ಟುದೃಶ್ಯಮಂ ಮಾಡಿ ಬೇವಸಗೊಳಿಸಲ್ . . . ಮಿಸುಪ ಕೊಳದೊಳ್ಮುಳುಗಿ ಪೊಸಪರೆಯುಮಂ ತಾಳ್ದನಸಮ ತಿರುನೀಲಕಂಠನೆನಿಪ್ಪ ಶರಣನು (ಪಾಸೋಪು. ೦೩–೫೭). [ಬೇವಸಗೊಳ್ (< ಬೇವಸಂಗೊಳ್) + —ಇಸು$_3$]

**ಬೇವಸಗೊಳು** 'ಬೇವಸಂಗೊಳ್' ನೋ.

**ಬೇವಸದಾಳು** (ಕ್ರಿ). = ಬೇವಸಂಬಡು : ಘೂವರಪುಸವ ಮುಸುಕಿತು ಬಲದೆಲ್ಲ ಬೇವಸದಾಳೆ ಸಜ್ಜನರು (ಶಿವಂಶಾಂ. ೫–೯೨). [ಬೇವಸ + ತಾಳು$_1$ (< ತಾಳ್$_1$)]

**ಬೇವಸವಡೆ** 'ಬೇವಸಂಬಡೆ' ನೋ.

**ಬೇವಾರಸಿ** 'ಬೇವಾರ್ಸಿ' ನೋ.

**ಬೇವಾರಸಿಮಾಲು**, ಬೇವಾರಸುಮಾಲು (ನಾ). ಒಡೆಯರಿಲ್ಲದ ವಸ್ತು; ವಾರಸುದಾರರಿಲ್ಲದ ಪದಾರ್ಥ : ಬೇವಾರಸಿ (ಮಾಲು), ಅಸ್ವಾಮಿಕ (ವಸ್ತು) (waif. ಇಂಕಾ). **ಬೇವಾರಸುಮಾಲು:** (೧೨) ಬೇವಾರಸುಮಾಲಿನ ವಿಲೆವಾರಿ . . . (೧೫) ನಾದಾರುಕುಳಕ್ಕೆ ತಕಾವಿ ಕೊಡುವುದು (ಮಹಾವಂ. II, ೫೬); ಹರೇಕೃಷ್ಣನ ಪಾತ್ರೆ ಪರಟ ಮೊದಲಾದವುಗಳನ್ನು ಬೇವಾರಸು ಮಾಲೆಂದು ವಶಪಡಿಸಿಕೊಂಡನು (ಶಂಕಮ. ೦೦೭). [ಬೇವಾರಸಿ (< ಬೇವಾರ್ಸಿ) + ಮಾಲು$_3$]

**ಬೇವಾರಸು** 'ಬೇವಾರ್ಸಿ' ನೋ.

**ಬೇವಾರಸುಮಾಲು** 'ಬೇವಾರಸಿಮಾಲು' ನೋ.

**ಬೇವಾರ್ಸಿ**, ಬೇವರ್ಸಿ, ಬೇವಾರಸಿ, ಬೇವಾರಸು (ಗು). ೧. ಯಾರೂ ದಿಕ್ಕಿಲ್ಲದ ; ವಾರಸುದಾರರಿಲ್ಲದ ; ಅನಾಥವಾದ : ಬೇವಾರ್ಸಿ ಹೆಣಕ್ಕೆ ರಣಹದ್ದು ಮುತ್ತಿದ ಹಾಗೆ (ಗಾಳಿ. ೨೬) ; ಬೇವಾರ್ಸಿ ಹೆಣನ ಹೂತರು (ತಂಗಿಾಂ. ೫). (ನಾ). ೨. ಯಾರೂ ದಿಕ್ಕಿಲ್ಲದ ವ್ಯಕ್ತಿ ; ಅನಾಥ ವ್ಯಕ್ತಿ : ನಾನು ನಿನ್ನ ಬೇವಾರ್ಸಿಯಾಗಿ ಮಾಡಿದೆ! (ಮನಕಾ. ೦೨) ; ನೀವು ಸಂಸಾರವಂದಿಗರು. ನನ್ನಂಥ ಬೇವಾರ್ಸಿಗಳಲ್ಲ (ಅನಾಥ. ೦೫೨). ೩. ಕೆಟ್ಟುದು, ಕೆಟ್ಟವ್ಯಕ್ತಿ ಎಂಬ ಹೀನಾರ್ಥದಲ್ಲಿ ಪ್ರಯೋಗವಾಗುವ ಒಂದು ಬಯು ಳು : ನಮ್ಮ ಪಾಡಿಗೆ ನಾವು ರಾಜ್ಯ ಆಳೋಕೆ ಬಿಡೋಲ್ಲ ಬೇವಾರ್ಸಿ (ವೃದ್ಧಿ. ೫೯): ಬೇವಾರ್ಸಿ . . . ಈ ಮನೆಗೆ ಕಾಲಿಟ್ಟರೆ ಜೋಕೆ (ಪಾತ್ರ. ೨೩೦). **ಬೇವರ್ಸಿ** : ೨. ಸಂಬಳದ ಬಾಕಿ ಇಟ್ಕೊಂಡಿರೋವಲ್ರೆ ಬೇವರ್ಸಿಗಳ ಹಾಗೂ ಜನ್ಮನ್ನ ನೋಡೊ ಈ ಗಂಡುಸಿದ್ದೇಶ ನಾಟಕಮಂಡಲಿಗೆ ನಮೋನ್ನಮಃ (ಮಾಮಹ. ೨೫). **ಬೇವಾರಸಿ :** ೧. 'ಬೇವಾರಸಿಮಾಲು' ಪರಾ. **ಬೇವಾರಸು :** ೧. 'ಬೇವಾರಸು

ಮಾಲು' ಪರಾ. ೨. ಹರೇಕೃಷ್ಣನು ಬೇವಾರಸು ಅಲ್ಲ, ಕಲ್ಕತ್ತೆಯಲ್ಲಿ ಅವನ ಮಗಳಿದ್ದಾಳೆ (ಶಿಂಕಪು. ೦೦೬).

[ ← ಮರಾ. ಬೇವಾರಶೀ. ಬೇವಾರಸಾ, ಬೇವಾರೀಸ್ ]

**ಬೇವಿಗೆ** (ನಾ). ಒಂದು ಊರಿನ ಹೆಸರು: ಶ್ರೀಬೇವಿಗೆ ಮುತ್ತುರಸರ ಮಗನು ಪೊಲೆಯಮ್ಮನ್ನದಕರಿಲ್ಲನಾಳುತ್ತುಮಿರೆ (ಎಕ. XI, ತಳ್ಳ. ೩೩-೨೦ ; ಸಂ. 805). [?]

**ಬೇವು₁** (ನಾ). ಔಷಧೀಯಗುಣವುಳ್ಳ ಕಹಿರುಚಿಯ ಎಲೆಗಳನ್ನು ಹೊಂದಿರುವ ಒಂದು ಬಗೆಯ ಮರ; ನಿಂಬ; ಅರಿಷ್ಟ: "ನಿಂಬ ಮರಿಷ್ಟಂ ಪಿಚುಮಂದಂ ಬೇವು" (ಪಸು.ಕೋ. ೩೯-೦೦); ಬೇವಿನ ಗೊಟ್ಟೆ ಯೊಳಿನವರ್ಕರ್ಸೊಳ್ ತಂಪು ... ಅಜಿಸಿ ತೊಟಲುವಾತನೆ ಗಾಂಪಂ (ರಸರ್ವಷ್ಟ. ೩-೦೬೦); ಬೇವಂ ಮೆಚ್ಚಿದ ಕಾಗೆಗೆ ಮಾಪಿಚುದಪ್ಪಂತೆ ಪತಿಯೊಳಿಚಿದಾಯ್ತು ಮನಂ (ಯಶೋಚ. ೨-೪೩); ಬೇವು ಆ ಪರಿಪಕ್ವವಾದರೆ ಹಾವುಮೆಕ್ಕೆಗೆ ಸಾಕ್ಷಿ (ಕುವ್ಯಾ.ಆ. ೦೬-೦೩).

**ಬೇವಿನೆಣ್ಣೆ** = ಪಿಚುಮಂದದ ಬೀಜದಿಂದ ತೆಗೆಯಲಾದ (ಔಷಧಿಗೆ ಉಪಯೋಗಿಸುವ) ಎಣ್ಣೆ: ಕನಲ್ವ ಕೆಂಡದ ಮೇಲೆ ಪಟ್ಟಿಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ ... ಬೇವ ಪೆಣಂಗಳ ಕ[ಂ]ಪು ನಾಱುವುದಕ್ಕೆ ಸೈರಿಸಲಾಱದೆ (ಶಂಕರಾ. ೦೩-೬೦ ಪ). **ಬೇವು ಇಳಿಸಿಕೊಳ್ಳು** = ದೇಹಕ್ಕೆ ಉಂಟಾಗಿರುವ ವಿಷಪೂರಿತವಾದ ರೋಗಗಳನ್ನು ಬೇವಿನಿಂದ ನಿವಾರಿಸಿಕೊಳ್ಳು; **P** ಅರೆದ ಬೇವಿನ ಸೊಪ್ಪನ್ನು ನೀರಿನೊಡನೆ ಮಿಶ್ರಮಾಡಿ ದೇವರ ವಿಗ್ರಹವನ್ನು ಮೀಯಿಸಿ ರೋಗಪರಿಹಾರಕ್ಕೆಂದು ಆ ನೀರನ್ನು ಮೈಮೇಲೆ ಹಾಕಿಕೊಳ್ಳುವಿಕೆ, ಮೈಮೇಲೆ ದೇವರು ಬಂದಿರುವ ಸಮಯದಲ್ಲಿ ದೇವರನ್ನು ಶಾಂತಗೊಳಿಸಲೆಂದು ಬೇವಿನ ಸೊಪ್ಪಿನಿಂದ ನಿವಾಳಿಸುವಿಕೆ ಮುಂತಾದುವು ಕೆಲವು ದೇವಾಲಯದ ಸ್ಥಳಗಳಲ್ಲಿ ಇರುವ ನಂಬಿಕೆ ಮತ್ತು ಪದ್ಧತಿ: ಆ ನಾಡದಲ್ಲಿ ಮೈಮರೆತ ಅವರಿಗೆ ... ಪಟ್ಟದ ಕಲ್ಲಿನ ಜನಸಮಾಜ 'ಬೇವು' ಇಳಿಸಿಕೊಳ್ಳುತ್ತಿರುವ ಜೋಗಿತಿ'ಯದನಿ ಕೇಳದಾಗಲೇ ಅವರಿಗೆ ಈ ಲೋಕದ ಸ್ಮೃತಿ ಬಂದುದು (ಬಪಸಿ. ೬೩). **ಬೇವು ಬೆಲ್ಲ** = ಬೇವು ಮತ್ತು ಬೆಲ್ಲ; **P** ಬೇವಿನ ಹೂವು, ಚಿಗುರುಗಳನ್ನು ಬೆಲ್ಲದ ಜೊತೆಗೆ ಮಿಶ್ರ ಮಾಡಿ ಸೇವಿಸುವುದು ಯುಗಾದಿ ಹಬ್ಬದ ಒಂದು ಆಚರಣೆ. ಬೇವು ಮತ್ತು ಬೆಲ್ಲಗಳ ಕಹಿ ಸಿಹಿಗಳಂತೆ ಬದುಕಿನ ಸುಖ ದುಃಖಗಳಲ್ಲಿ - ಸಮಾನಭಾಗಿಗಳಾಗಬೇಕೆಂಬ ತತ್ತ್ವವನ್ನು ಈ ಆಚರಣೆ ತಿಳಿಸುತ್ತದೆಂಬ ನಂಬಿಕೆಯಿದೆ: ಬೆಳ್ಳಿತಟ್ಟೆಯಲ್ಲಿ ಬೇವುಬೆಲ್ಲ, ಮುಖಗಳ ಮೇಲೆ ಆದರ ಪ್ರಭಾವ, ಇವೆಲ್ಲ ಕಣ್ಣಿಗೆ ಕಟ್ಟಿದುವು (ಬಾಳಹೂ. ೪೩); ಬೇವು ಬೆಲ್ಲದ ಯುಗಾದಿಯ ಹಬ್ಬದ ಬಾಹ್ಯಾಚರಣೆಗಳಿವು (ಕಾಪುಪ್ಪ. ೬೦). [ ದೇ.॥ ತಮಿ. ಮಲ. ವೇಮ್ಬು; ತುಳು. ಬೇವು; ತೆಲು. ವೇಪ, ವೇಮು; ಕೋತ. ವೆವ್; ಕುವಿ. ವೇತ ]

**ಬೇವು₂** 'ಬೇಮು' ನೋ.

**ಬೇಶ್**, ಬೇಷ್, ಭೇಷ್ (ನಾ). ಲೇಸು, ಒಳಿತು, ಸರಿಯಾದುದು, ಒಳ್ಳೆಯದು ಎಂಬ ಅರ್ಥವನ್ನೊಳಗೊಂಡ ಒಂದು ಕೊಂಡಾಟದ ಮಾತು: ಅವನು ಎಲ್ಲರಿಂದಲೂ ಬೇಶ್ ಎನ್ನಿಸಿಕೊಳ್ಳಬೇಕೆಂಬ ಆಸೆಯಿಂದ ಈ ಸಾರಿ ಚೆನ್ನಾಗಿ ಓದುತ್ತಿದ್ದಾನೆ (ರೂಢಿ). **ಬೇಷ್**: ಆ ಚಿಕ್ಕ ಹುಡುಗಿ ಎಲ್ಲಾ ಉಪಾಧ್ಯಾಯರಿಂದಲೂ ಬೇಷ್ ಎನಿಸಿಕೊಂಡಿದ್ದಳು (ರೂಢಿ). **ಭೇಷ್**: ಹಿರಿಯರಿಂದಾಗಲಿ, ಕಕ್ಷಿಗಾರರಿಂದಾಗಲಿ ಒಂದು ಬಾರಿಯಾದರೂ ಭೇಷ್ ಎನಿಸಿಕೊಂಡುದಿಲ್ಲ (ಅಂಕೂ. ೩೩); ಹುಡುಗರುಗಳು ಚಪ್ಪಾಳೆಗಳನ್ನು ತಟ್ಟಿ ... ಭೇಷ್ ಬಲದೇವ್ ಭೇಷ್" ಎಂದೂ ಕೂಗಿದರು (ಕಣಾಸಾ. ೪೩). [←ಪಾರ. ಮರಾ. ಬೇಶ್]

**ಬೇಷ್** 'ಬೇಶ್' ನೋ.

**ಬೇಸಗೆ**, ಬೇಸಿಗೆ, ವಯಿಸಾಖ, ವೈಶಾಗ (ನಾ). ೧. ಸೆಕೆಗಾಲ: ಬಿಸಿಲುಕಾಲ: "ನಿದಾಘಃ, ಗ್ರೀಷ್ಮಃ— ಈ ೨ ಬೇಸಗೆ" (ಕಣಾಮು. ೨೦-೦೦೬); ವಿದ್ಯೆಗಳಿಂದಮೇ ಬೇಸಗೆಯಸೆ ಮುಟ್ಟಗಾಲಂ ಮಾಡಿ ... ಕೊಜುಲಂ ಪೊಜಮಟ್ಟು (ಪಡ್ಮಾರಾ. ೦೩೯-೩); ನರನಾರಾಯಣರಿರ್ವರುಂ ... ಬೇಂಟೆಯನಾಡಿ ಬಳಲ್ದು ಬೇಸಗೆಯ ನಡುವಗಲೊಳ್ ವನಕ್ರೀಡೆಗಂ ಜಲಕ್ರೀಡೆಗಮಾಸಕ್ತರಾಗಿ ಯಮುನಾನದೀತಟನಿಕಟವರ್ತಿಗಳಾದರ್ (ಕಂಪರಾ. ೩-೩೦ ಪ). **ಬೇಸಿಗೆ**: ೧. ಜವನಿಕೆಯಾಗಳೋಸರಿಸೆ ಬೇಸಿಗೆಯಂತೆ ಪಯೋಧರಂ ಸಭೋವಿವರಮನೆಯ್ದೆ ತೀವೆ.. ನರ್ತಕಿ ನೀಡುಮೊಪ್ಪಿದಳ್ (ಶಾರ್ಙ್ಗಪು. ೦೨-೨೯); ಉಗಾಬ್ಬದ ಕೆಂಗಿಡಿಯಂ ಬೇಸಿಗೆ ಬಿಸಿಪೊಮ್ಮಿನರ್ಕ ಮಣಿಗಣಮಾಗಳ್ (ಅನ್ವಪು. ೯-೬೩); ಧ್ವನಿಯು ಸಣ್ಣದಾಗಿತ್ತು ... ಬೇಸಿಗೆಯ ನದಿಯಂತೆ ಕೃಶವಾಗಿದ್ದರೂ ನಿರ್ಮಲವಾಗಿತ್ತು (ಮಹಾಅ. ೦೮). **ವಯಿಸಾಖ**: ೨. ಒಂದು ತಿಂಗಳಿನ ಹೆಸರು: ವೈಶಾಖಮಾಸ: ಸಕವರುಷ ೧೨೯೧ನೆಯ ಕೀಲಕಸಂವತ್ಸರದ ವಯಿಸಾಖ ಬ ೩೦ ಸೋಮವಾರ ... ದೇವರ ಪ್ರತಿಷ್ಠೆಯನೂ ಮಾಡಿ (ಎಕ್ಕಅ. ೧೯೨೯, ೦೦೬-೦೦ ; 1368). **ವೈಶಾಗ**: ೧. ಏಕಾರಕ್ಕೆ ಗಕಾರು_ಮುಖಿ—ಮೊಗ; ವೈಶಾಖ–ವೈಶಾಗ (ಶಮದ. ೨೩೬ ವೃ.ಮೋ).

**ಬೆಟ್ಟಬೇಸಗೆ**, ಬೆಟ್ಟಬೇಸಗೆ = ೧. ತೀಕ್ಷ್ಣವಾದ ಸೆಕೆಗಾಲ; ಉಗ್ರವಾದ ಬೇಸಗೆ: ಬೆಟ್ಟವೇಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಕ್ಷಿಮಾರುತಂ (ಕಂಪರಾ. ೬-೦೩೯); ಒದವಿದ ಬೆಟ್ಟಬೇಸಗೆಯ ಕೂರ್ಗಿಸಿಲರ್ವಿನೆ ಬೆಟ್ಟ ವಾಯುವೇಜಿದ ಪರಿಣಂ ಸಮುತ್ಪ್ಲುತದಿ ನಿಂದುಪಬಿಜುವ ನೋಡಿ ಪೊಕ್ಕು ... ನೆಲಸಿರ್ದುದು (ಚಂದ್ರಪ್ರ. ೯-೬೬); ಕಾನನಮುರಿದುದು ರವಿಕಾಂತಾನಳನಿಂ ನಗದ ಶಿಖರಮೊಡೆದುದು ... ಬೆಟ್ಟಬೇಸಗೆ ಬಿಸಿಲೊಳ್ (ಸುಕುಚ. ೦೦-೯೯). ೨. ಸೆಕೆಗಾಲದ ಅತಿಯಾದ ತಾಪ: ಬೆಟ್ಟದೊಂದುರಿಗಳ ಬೆಟ್ಟಬೇಸಗೆ ಸುರಾಗರಸಂಗಳ ಕಾರ ಮುಂಬು ತತ್ಪುರವರದಲ್ಲಿ ಸಾತ್ವಿಕದ ವ್ಯಸನದುರಂಗಳ ಮಾಗಿಮಾಗಳುಂ (ಅರ್ಕಪಂ. ೦-೬೮).

[<ಸಂ. ವೈಶಾಖ. / ತುಳು. ಬೇಸಿಗೆ; ತೆಲು. ವೇಸಂಗಿ, ವೇಸಗಿ]

**ಬೇಸಗೆಗಾಲ**, ಬೇಸಿಗೆಕಾಲ (ನಾ). ಸೆಕೆಯ ಕಾಲ; ಗ್ರೀಷ್ಮಋತು: ನೀರಿಲ್ಲವಾಗೆ ಬಳ್ಳಿಗಿಡು ಪೆರ್ಮರಗಳ್ ಕರಯಂತ್ರನಾಳದಿಂ ಭೂರಸಮೆಲ್ಲಮಂ ತೆಗೆಯೆ ಭಾನು ... ಬಂದುದು ಬೇಸಗೆಗಾಲಂ (ಶಂಕರಾ. ೬-೬೩); ಬೇಸಗೆಗಾ[ಶಾಸಂ. ಕಾ]ಲಮೇಂಬುಳೆ ಬೆಟ್ಟುಗಳೆಂಬೊಲೆಗಳ್ಗಳಲ್ಲಿ ... ದೋಸೆಯನಟ್ಟವೋಲ್ ಮಳಲರಾಶಿಗಳೊಪ್ಪಮನಾಳ್ದುವು (ಜಾರಚ. ೯-೬೮); ಭರದ ಬೇಸಗೆಗಾ[ಶಾಸಂ. ಕಾ]ಲದೊಳಾಗಿಲುಮರನ ವಿಪಿನದೊಳೆದ್ದ ವೈಶ್ವಾನರನವೊಲು ಕೋಪದಲಿ ಕಿಡಿಕಿಡಿಯೋಗಿ ಕಲಿಹನುಮ ಧರೆಗೆ ಧುಮ್ಮಿಕ್ಕಿದನು (ತೊರಂರಾ. ೩-೬-೦೨). **ಬೇಸಿಗೆಕಾಲ**: ಕಳೆದ ಸಲದ ಬೇಸಿಗೆಕಾಲ ಬಹಳ ತಾಪದಿಂದ ಕೂಡಿತ್ತು (ರೂಢಿ).

[ ಬೇಸಗೆ + ಕಾಲ ]

**ಬೇಸಗೆರಜ**, ಬೇಸಿಗೆರಜ, ಬೇಸಿಗೆರಜೆ (ನಾ). ಶಾಲೆ, ಕಾಲೇಜು ಮೊದಲಾದುವುಗಳಿಗೆ ಸೆಕೆಗಾಲದಲ್ಲಿ ಕೊಡುವ ಬಿಡುವು. — **ರಜೆ**: ಕಂದನು ಹಿರಿಯರನೊಮ್ಮೆ ನಾ ಮೊದಲಿಗೆ ಹೋದಾಗ ಬೇಸಗೆರಜಕೆ (ಅಂತಾಶ. ೦೬-೩೯). **ಬೇಸಿಗೆರಜ**: ಈಗ ಶಾಲೆಗಳಿಗೆ ಬೇಸಿಗೆರಜ ಬಂದಿದೆ (ರೂಢಿ). **ಬೇಸಿಗೆರಜೆ**: ಅವನು... ವರುಷಕ್ಕೆ ಒಂದು ಸಾರಿ ಬೇಸಿಗೆರಜೆಗೆ ಮನೆಗೆ ಬರುತ್ತಿದ್ದ (ಗಂಡಾ. ೬೨). [ ಬೇಸಗೆ + ರಜ₂ ( < ರಜಾ ) ]

**ಬೇಸತ್ತ** 'ಬೇಸಱು₁' ಪರಾ.

**ಬೇಸತ್ತು** 'ಬೇಸಱು₁' ಪರಾ.

**ಬೇಸನ್**, ಬೇಸಿನ್ (ನಾ). ಕಡಲೆಯ ಹಿಟ್ಟು. **ಬೇಸಿನ್.**
**ಬೇಸನ್ ಉಂಡೆ** = ಕಡಲೆಹಿಟ್ಟಿನಿಂದ ಮಾಡುವ ಒಂದು ಬಗೆಯ ಸಿಹಿ ತಿಂಡಿ,–ಉಂಡೆ : ಮೆಲ್ಲನೆ ಒಂದೆರಡು ಬೇಸನ್ ಉಂಡೆಗಳನ್ನು ಎತ್ತಿಕೊಂಡು ಬಾಯಾಡಿಸಿದರೆ ಯಾರಿಗೂ ಕಾಣುವಂತಿರಲಿಲ್ಲ (ಧ್ರುವ. ೧೧). **ಬೇಸನ್‌ಲಾಡು, ಬೇಸಿನ್ ಲಾಡು** = ಬೇಸನ್‌ಉಂಡೆ : ಏನು ಕೊಡಲಿ ಸಾರ್. ಜಾಮೂನ್, ಜಲೇಬಿ, ದಂರೋಟ್, ಬಾದಾಮಿಹಲ್ವ, ಬೇಸನ್ ಲಾಡು (ಕುಹಾಂ. ೪೬); ಅವನ ಹೆಂಡತಿ ಮಾಡಿಕೊಟ್ಟಿದ್ದ ತೇಂಗೊಳಲು, ಚಕ್ಕುಲಿ ಮತ್ತು ಬೇಸಿನ್‌ಲಾಡುಗಳು ಅದರಲ್ಲಿದ್ದುವು (ರಂಗಳ. ೬೦).
[←ಹಿಂ. ಮರಾ. ಬೇಸನ್]

**ಬೇಸರ** 'ಬೇಸಱು$_2$' ನೋ.

**ಬೇಸರಗೊಳಿಸು** (ಕ್ರಿ). ಬೇಜಾರುಹೊಂದುವಂತೆ ಮಾಡು ; ಜುಗುಪ್ಸೆಯನ್ನು ಹುಟ್ಟಿಸು : ನಿಮ್ಮನ್ನು ಬೇಸರಗೊಳಿಸುವಂತೆ ಉಪನ್ಯಾಸ ಮಾಡುವ ಅಭ್ಯಾಸವು ನನಗೆ ಇಲ್ಲವೇ ಇಲ್ಲವೆಂದು ಎದೆ ತಟ್ಟಿ ಹೇಳುತ್ತೇನೆ (ರಾಜುಕ. ೪೭).
[ಬೇಸರ (<ಬೇಸಱು$_2$)+ಕೊಳ್$_1$ +– ಇಸು$_3$]

**ಬೇಸರಗೊಳ್ಳು** 'ಬೇಸಱುಗೊಳ್' ನೋ.

**ಬೇಸರಿ**, ಬೇಸ್ರಿ (ನಾ). ಹೆಂಗಸರು ಮೂಗಿನಲ್ಲಿ ಧರಿಸುವ, ಅನೇಕ ಹರಳುಗಳುಳ್ಳ ಒಂದು ಬಗೆಯ ಆಭರಣ : ಕಿವಿಯ ಓಲೆ ಮೂಗಿನ ಬೇಸರಿಯನ್ನು ಬಿಟ್ಟರೆ ಮೈಮೇಲೆ ಬೆಲೆ ಬಾಳುವ ಯಾವ ಒಡವೆಯೂ ಇರಲಿಲ್ಲ (ದರ್ಶಶ್ರೀ. ೩೯) ; ಮೂರುಹರಳಿನ ಬೇಸರಿ ಫಣಕ್, ಫಣಕ್ ಎಂದು ಮಿನುಗುತ್ತಿತ್ತು, ಅವಳ ನಾಸಿಕದಲ್ಲಿ (ಕುಣಿನಪ. ೧೩). **ಬೇಸ್ರಿ:** ಎಳಸಾದ ಮೂಗಿಗೆ ಒಪ್ಪೋಂಥ ಸೀಮೆಕಮಲದ ಬೇಸ್ರಿ (ಜಾನಪ. ೦).
[←ಹಿಂ. ಮರಾ. ಬೇಸರ್. / ತಮಿ. ಪೇಚರಿ ; ತೆಲು. ಬೇಸರಿ]

**ಬೇಸರಿಕೆ** 'ಬೇಸಱಿಕೆ' ನೋ.

**ಬೇಸರಿಸು** 'ಬೇಸಱಿಸು' ನೋ.

**ಬೇಸರು$_1$** 'ಬೇಸಱು$_1$' ನೋ.

**ಬೇಸರು$_2$** 'ಬೇಸಱು$_2$' ನೋ.

**ಬೇಸರುಗೊಳ್ಳು** 'ಬೇಸಱುಗೊಳ್' ನೋ.

**ಬೇಸರ್ನುಡಿ** (ನಾ). ಬೇಜಾರಿನಿಂದ ಕೂಡಿದ ಅಥವಾ ಬೇಜಾರನ್ನು ತರುವ ಮಾತು,–ನುಡಿ : ರೇಫಕ್ಕೆ–ಕಿಸರ್ವರ್ಗಲ್ಲಿಗೆ, ನೇಸರ್ವರ್ಗಯಣಾಂ, ಬೇಸರ್ನುಡಿ (ಕಶಬ್ದ. ೧೬೩ ಪ್ರಯೋ); ಬೇಸಱ್+ನುಡಿ, ಬೇಸರ್ನುಡಿ (ಶಬ್ದಾಸು. ೬೨ ಪ್ರಯೋ). [ಬೇಸಱ್ (<ಬೇಸಱು$_2$) + ನುಡಿ$_2$]

**ಬೇಸಱ್** (ಸಪೂರೂ). 'ಬೇಸಱು' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬೇಸರ್ನುಡಿ' ಪರಾ. [<ಬೇಸಱು$_2$]

**ಬೇಸಱ** 'ಬೇಸಱು$_2$' ನೋ.

**ಬೇಸಱಿಕೆ**, ಬೇಸರಿಕೆ (ನಾ). ಆಸಕ್ತಿಯಿಲ್ಲದಿರುವಿಕೆ ; ಜುಗುಪ್ಸೆ ; ಬೇಜಾರು : ಎನ್ನ ಚಿತ್ತದ ಬೇಸಱಿಕೆ ಬಯಲಾಯ್ತು (ಬಸವ್ಯಾಬ. ೪–೩೯); ದೇವಾರ್ಚನೆಯ ಮಾಡಿದೆನಿನ್ನು ಸಾಕೆಂದೆನುತ ಬೇಸಱಿಕೆಯಲಿ ನುಡಿದಳು ವಿಮಳೆಗಾ ಮಾಯೆ (ಪ್ರಭುಲೀ. ೭–೦೪) ; ಘಾಸಿಯಾದರು ಬಂದ ಬಟ್ಟೆಯ ಮೈಸಿರಿಯ ಪಥವಱಿಯದಗ್ಗದ ಬೇಸಱಿಕೆಯಲಿ (ತೊರವೆ. ೪–೧೧–೨೪). **ಬೇಸರಿಕೆ :** ಮುಂಗ್ಕೋಪದಿಂದ ಕೆಲಸಮಾಡಿ ಬೇಸರಿಕೆ ಮತ್ತು ಆಯಾಸದಿಂದ ಮನೆಗೆ ಹೊರಡಲುದ್ದೇಶಿಸಿ . . . ಗ್ರಾಮಾಭಿಮುಖವಾಗುವುದು ಸಹಜ (ಭೂವಿಅ. ೨೯) ; ಹಾಳುಸುರಿಯುತ್ತಿದ್ದ ಬೇಸರಿಕೆಯನ್ನು ನೀಗುವ ಸಲುವಾಗಿ ಯಾವುದಾದರೂ ಅಕ್ರಮಗಳು ನಡೆದಾವೆಯೆಂದು ಜಾಗರೂಕರಾಗಿದ್ದರು (ಕ್ಷಪರು. ೧೬೨).
[ಬೇಸಱು$_2$ + –ಇಕೆ]

**ಬೇಸಱಿಸು**, ಬೇಸರಿಸು (ಕ್ರಿ). ೧. ಆಸಕ್ತಿಯನ್ನು ಕಳೆದುಕೊಳ್ಳು ; ಬೇಜಾರು ಪಟ್ಟುಕೊಳ್ಳು; ಬೇಸರಪಡು : ಧುರದ ಶಪಥದೊಳರ್ಜುನನ ಸಂಗರಕೆ ಬೇಸಱಿಸಿದ ಪರಾಕ್ರಮಪರಿಗತರು ಪವಡಿಸಿದರಂದು ಧನಂಜಯಾಸ್ತ್ರದಲಿ (ಕುಮ್ಯಾಗ. ೨–೨೦) ; ಮೆಲ್ಲನೆ ಒತ್ತಿದಂತಾಯ್ತುವಗೆ ಕನವರಿಸುತ್ತ ಖಳ ಸುಖಸುಪ್ತನಾದನು ಸೇನೆ ಬೇಸಱಿಸೆ (ಕೌಶಿಅ. ೨೪–೬). ೨. ಆಸಕ್ತಿಯನ್ನು ಕುಗ್ಗಿಸು ; ಜುಗುಪ್ಸೆಗೊಳ್ಳುವಂತೆ ಮಾಡು ; ಬೇಸರಪಡಿಸು : ಈತನ ಕಟಕಕ್ಕೆ ನಿತ್ಯಕ್ಷಯವ್ಯಯ ಪ್ರತ್ಯವಾಯಂಗಳಂ ಮಾಡಿ ಬೇಸಱಿಸಿ ನೆಲದಿಂ ತೆರಳ್ಚುವಂ (ಅಜಿಪು. ೦೩–೩೯ ವ) ; ಒರಿದುಂ ಬೇಸಱಿಸಿದುವು ಬಿರಯಿಯುಂ ಜಳದಂಗಳ್ (ಚಂದ್ರಪು. ೪–೩೪). ೩. ದಣಿಯುವಂತೆ ಮಾಡು ; ಬಳಲಿಸು ; ಆಯಾಸಪಡಿಸು : ಬಱಸಿಡಲಾಗಿ ಪೊಯ್ದು . . . ಕಟ್ಟಲೆಯಾಗಿ ಮುತ್ತಿ ಬೇಸಱಿಸುವಗುರ್ವ ಪರ್ವ ಕವಿದರ್ದನುಜಾರಿಗತರ್ಕವಿಕ್ರಮರ್ (ಅನಂಪು. ೦೪–೪); ಬಿದ್ದವರನೊಡೆ ತುಳಿದು ಮೇಲುಬ್ಬಿದ್ದು ಕವಿಕವಿದಾಳು ಕುದುರೆಯ ಬಿದ್ದಿನಲಿ ಬೇಸಱಿಸಿದನು ಪಿತೃಪತಿಯ ಪರಿಜನವ (ಕುಮ್ಯಾಕ. ೦೦–೩೮). **ಬೇಸರಿಸು :** ೧. ಸುಂದರರಾಯರು ಇನ್ನೂ ಮಲಗಿರುವುದಕ್ಕಾಗಿ ಬೇಸರಿಸಿಕೊಂಡು ತಾನೇನು ಮಾಡಲೂ ತೋರದೆ ಬಚ್ಚಲುಮನೆಗೆ ಹೊರಟಳು (ಬದುಕು. ೪). ೪. ವ್ಯಸನಹೊಂದು ; ಕನಿಕರಪಡು : ನೀನು ಕ್ಷೀಣಿಸಿರುವುದನ್ನು ಕಂಡು ಬೇಸರಿಸುತ್ತಾರೆ (ಶಕುಂ. ೦೬). [ಬೇಸಱು$_1$ + –ಇಸು$_3$]

**ಬೇಸಱು$_1$**, ಬೇಸರು$_1$ (ಕ್ರಿ). ಬೇಸತ್ತ (ಭೂತಕೃ). ಬೇಸತ್ತು (ಭೂತನ್ಯೂ). ೧. ಬೇಜಾರುಪಡು; ಜುಗುಪ್ಸೆಯನ್ನು ಹೊಂದು; ಆಸಕ್ತಿಯನ್ನು ಕಳೆದುಕೊಳ್ಳು : ದೋಸಮಿನಿತೆಂದು ಬಗೆದುದ್ಭಾಸಿಸಿ ತಱಿಸಂದು ಕನ್ನಡಂಗಳೊಳೆಂದುಂ ವಾಸುಗಿಯುಮಱಿಯಲಾಱದೆ ಬೇಸಱುಗುಂ ದೇಶಿ ಬೇಱೆವೇಱಪ್ಪುದಱಿಂ (ಕಂದಾ. ೦–೪೬) ; ಅವರುಂ ತಮ್ಮ ಕಂಡುದಂ ಪೇೞ್ದೊಡೆ ಬೇಸಱದೆ ದಿವಸಕ್ಕಂ ಚರಿಗೆವೊಗುವುದೆಂದು ಭಟ್ಟಾರರ್ ಕಲ್ಪಿಸಿದೊಡೆ (ವಡ್ಡಾರಾ. ೮೪–೦೦) ; ಲಲಿತಾಂಗಿಯ ಶಂಕೆಯುಂ ಭಯಂಬೆರಸಿದ ನಾಣುಮಂ ಕ್ರಮದೆ ಪಿಂಗಿಸು ಬೇಸಱದಿರ್ ಗುಣಾರ್ಣವಾ (ಶಂಪಾ. ೩–೭೭) ; ಕೊಲೆಗೆ ಬೇಸಱರಿವರು ಸಾವುದಕಳುಕದವದಿರು (ಕುಮ್ಯಾಕ. ೪–೦೭). ೨. ಆಲಸ್ಯವನ್ನು ಹೊಂದು ; ದಣಿ ; ಬಳಲು : "ಬೇಸಱು – ಆಲಸ್ಯೇ" (ಕಶುಅ); ಏಬುದಿವಸಮುಂ ಬಿಡದಡವಿಗೆ ಬೇಂಟೆಯಾಡಲ್ ಪೋಗಿ ಒಂದು ಮೃಗಮುಮಂ ಪಡೆಯದೆ ಬೇಸತ್ತಬಿಲ್ಲು ಪೊಟಲ್ಗೆವೋಗಿ (ವಡ್ಡಾರಾ. ೯೩–೨೩) ; ಕಲಹದೊಳು ಕರಿಘಟೆಯ ಹೊಯ್ ಹೊಯ್ದಲಸಿ ಕೌರವನನುಜನನು ಮುಂಕೊಳಿಸಿಕೊಳ್ಳದೆ ಕಳುಹಿ ಬೇಸಱುತನಿಲಸುತ ಮಸಗಿ (ಕುಮ್ಯಾಭೀ. ೩–೬). **ಬೇಸರು$_1$:** ೧. ಉರುತರಶ್ರಮದಿಂದ ನಿಶಿಯೊಳೀ ನಗರಿಯೊಳ್ ತಿರುತಿರುಗಿ ಬೇಸರದೆ ನೋಡಿ ನಿಷ್ಫಲವಾಯ್ತು (ವೆಂಕಾರಾ. ೩–೩–೪) ; ಆಪತ್ಸಮುದ್ರದಲ್ಲಿ ಮುಳುಗುತ್ತಿರುವ ಸ್ನೇಹಿತನಿಗೆ ಬೇಸರದೆ ಮತ್ತು ಮತ್ತು ವಿವೇಕವನ್ನು ಹೇಳುತ್ತ (ಕೃವಾಲು. ೨೨೨) ; ಈ ಮಗಳ ಮೂರ್ಖತನಕ್ಕೆ ನಾನು ಬೇಸತ್ತಿದ್ದೇನೆ (ಜರಿಶಾಪ್ಪಾ. ೦೩೪).
[ದೇ.॥ ತಮಿ. ವೇಚಱು ; ತೆಲು. ವೇಸರು]

**ಬೇಸಱು$_2$**, ಬೇಸರ. ಬೇಸರು$_2$, ಬೇಸಱ (ನಾ). ೧. ಆಸಕ್ತಿಯಿಲ್ಲದಿರುವಿಕೆ ; ಬೇಜಾರು ; ಜುಗುಪ್ಸೆ : ಒಂದೆಡೆಯೊಳ್ . . . ಅಟ್ಟುವೆತ್ತ ಪೊಳೆವುಲ್ಲೆಯಾಳ್ಕೆಯಾದ ಮಾತಂ ತನ್ನ ಸೂಳೆಯ ಬೇಸಱಿಂ ಕಳೆಯಂಗಿಂತೆಂದಂ (ಆದಿಪು. ೦೨–೨೮ ವ); ನಿಮ್ಮಡಿಗಳಂ ಕಾಣದಿಪ್ಪ ಕಡುಬೇಸಱಿಂದಿರೆ ಹರಂ ಮಾಹೇಶ್ವರಜ್ವರವನಟ್ಟಿದಂ (ಪಂಬಿರ. ೧೭–೦೦೪); ಘನಸಂಗರಕೆ ಬೇಸಱು ತೋಱಿತೇ ತನ್ನಾಣೆ ಹೇಳು (ಕುಮ್ಯಾದ್ರೋ. ೩–೬೩). ೨. ಆಯಾಸ ; ಬಳಲಿಕೆ ; ದಣಿವು : ಆ ಸುದತಿಯ ಮೃದುಪದವಿನ್ಯಾಸಮುಮಂ

ಶೇಷನಾಸಲಾಱದೆ ಸುಯ್ವಂ ಬೇಸಱನೆಂದೊಡೆ ಗರ್ಭದ ಕೂಸಿನ ಬಳಿದಳವಿಯುಳವನಳಿವರುಮೊಳರೇ (ಶಂಕಥಾ. ೧-೧೨೬). **ಬೇಸರ** : ೧. ಪೊಲೆ ಪೊರ್ದ್ದಲ್ ಪೇಸಿ ಬೇಸರದಿವಳಿದ ಮಹೀಕಾಂತೆಯುಂ ರಕ್ಷಿಸಲ್ (ಎಕ. VII, ಶಿಕಶಿ. ೩-೯ ; 1218) ; ಮಂಡಲಿಯಲ್ಲಿದ್ದವರಿಗೆಲ್ಲರಿಗೂ ಅವನನ್ನು ಕಂಡರೆ ಬೇಸರ (ಬಾಜಾ. ೩೦೬); ಮನೆಕೆಲಸವನ್ನು ಮಾಡುವುದಕ್ಕೆ ಅವಳಿಗೆ ಬೇಸರವಿಲ್ಲ (ಮಹಾಕ್ಷಾ. ೩೦). ೩. ವ್ಯಸನ ; ಕನಿಕರ : ಅವಳ ದೀನಸ್ಥಿತಿಯನ್ನು ಕಂಡು ತುಂಬ ಬೇಸರವಾಯಿತು (ಕೂ೨). **ಬೇಸರ್ರು** : ೧. ನಿಮಗೆ ಬೇಸರಾಗುವ ಕೆಲಸಾ ನಾವು ಹೇಳಲಾರೆವು (ಹುಂಬಯು. ೩-೦೩೪); ಈ ಜನರಿಗೆ ನೌಕರಿಯು ಬೇಸರಾಯಿತು (ಸ್ವಾಂಬಿ. ೨೨೮) ; ಬೇಸರಿಗೆಂತ ಹೇಸರಕತ್ತೆ ಆಡಿಸಿದ (ಗಾದೆ). **ಬೇಸಱು** : ೧. ವನಜವಮುಖಿ. . . ಸತಿಯರ ಮನ್ನಣೆಗೆ ಮೈಗೊಡಳು ಬಲುಬೇಸಱಿ ಬಳಲುವಳು (ಪಶತ. ೦-೩೮). 'ಬೇಜಾರು' ಪರಾ. [< ಬೇಸಱು₁ / ತುಳು. ಬೇಸರ್]

**ಬೇಸಱುಗೊಳ್**, ಬೇಸರಗೊಳ್ಳು, ಬೇಸರುಗೊಳ್ಳು (ಕ್ರಿ). ಆಸಕ್ತಿಯನ್ನು ಕಳೆದುಕೊಳ್ಳು; ಬೇಜಾರುಪಡು ; ಜುಗುಪ್ಸೆಯನ್ನು ಹೊಂದು: ಬೇಸಱುಗೊಂಬ ತತ್ಕುವರಿಯ ಮನದೊಳಗಾಸಱು ಬಹಳ ವೆಗ್ಗಳಿಸಿ ಈಸಱಿಂದಿನ್ನು ಕಾಡುವುದೊಳ್ಳಿತಲ್ಲೆಂದು ನೇಸಱು ತಲೆಯ ತೋಱಿಸಿತು (ವೀರಕತ. ೨೭-೬೩). **ಬೇಸರಗೊಳ್ಳು** : ಅವಳು ಎಷ್ಟೇ ಪ್ರಯತ್ನಿಸಿದರೂ ಕೆಲಸ ಸಿಗಲಿಲ್ಲವೆಂದು ಬಹಳ ಬೇಸರಗೊಂಡಿದ್ದಳು (ಕೂ೨).**ಬೇಸರುಗೊಳ್ಳು**: ತನ್ನ ಉದ್ದೇಶವನ್ನು ಸಿದ್ಧಿಗೆ ಒಯ್ಯಬೇಕಾದರೆ ಎಷ್ಟೋ ಸಂಕಟಗಳು ತಟ್ಟಿದರೂ ಬೇಸರುಗೊಳ್ಳುತ್ತಿದ್ದಿಲ್ಲ (ಹುಂಬಯು. ೩-೨೦೬).

[ಬೇಸಱು₂ + ಕೊಳ್₁]

**ಬೇಸಱೆಯ್ದು** (ಕ್ರಿ). = ಬೇಸಱುಗೊಳ್: ಆ ರಾಜಸುತಂ. . . ಅಳವಳಿಸಂ ಬೆಬ್ಬಳಿಸಂ ಕಳವಳಿಸಂ . . . ಬೇಸಱೆಯ್ದಿ ಬೆಳ್ಮೊಗದಿನಿರಂ (ಅಶೀಪು. ೩-೯೦).

[ಬೇಸಱು₂ + ಎಯ್ದು]

**ಬೇಸಾಯ** 'ಬೆವಸಾಯ' ನೋ.

**ಬೇಸಾಯಗಾರ** (ನಾ). ವ್ಯವಸಾಯವನ್ನು ಮಾಡುವವನು ; ರೈತ; ಒಕ್ಕಲಿಗ : ಅರಸುಕುಲದವನಿಗೆ ಬೇಸಾಯಗಾರನ ಹೆಣ್ಣನ್ನು ತರುವುದೇ? (ಹಾಕುತ್ತ. ೬೭); ಆ ಊರಿನ ಮುಳ್ಳಿನ ಮನೆಯೇ ತನ್ನ ಮೂರುಲೋಕ ಗಳೆಂದು ತಿಳಿದುಕೊಂಡಿದ್ದ ಕೊರಗು ಎಂಬ ಬೇಸಾಯಗಾರನಿದ್ದನು (ನಾಂಕಾರ. ೦ ಕಥಾಸಾರ).

[ಬೇಸಾಯ (< ಬೆವಸಾಯ) + – ಗಾರ (< – ಕಾಱ)]

**ಬೇಸಿಗೆ** 'ಬೇಸಗೆ' ನೋ.

**ಬೇಸಿಗೆಕಾಲ** 'ಬೇಸಗೆಗಾಲ' ನೋ.

**ಬೇಸಿಗೆರಜ** 'ಬೇಸಗೆರಜ' ನೋ.

**ಬೇಸಿಗೆರಜೆ** 'ಬೇಸಗೆರಜ' ನೋ.

**ಬೇಸಿನ್** 'ಬೇಸನ್' ನೋ.

**ಬೇಶಿಸ್ತು** (ನಾ). ಶಿಸ್ತು ಇಲ್ಲದಿರುವಿಕೆ : ಬಹಾಳ ಬೇಶಿಸ್ತ ಮಾಡಿದಳವಾ ಇದೊಂದು ರುಕ್ಮಿಣಿಬಾಯಿ (ಪಹುಮು. ೬೭). [← ಪಾರ. ಮರಾ. ಬೇಶಿಸ್ತ್]

**ಬೇಸು** 'ಬೇಯಿಸು' ನೋ.

**ಬೇಸುರ**, ಬೇಸೂರ, ಬೇಸೂರು (ನಾ). ೧. [ಸಂಗೀತ] ಅಪಸ್ವರ. ೨. (ಆಲಂ) ಅಸಂಬದ್ಧವಾದುದು : ಪ್ರಳಯ ಪೂರ್ವದ ರಾತ್ರಿ, ಸದ್ದಿಲ್ಲದೇ ಸಂಚು ಯುದ್ಧಬಡುಕರ ಶುದ್ಧಶಾಂತತಾ ವಾದದೊಲು ಪರಿಣಾಮ ಬೇಸುರವಲಾ (ಸೂರ್ಯಪಾ. ೦೦೦-೦೦). **ಬೇಸೂರ** : ೧. ಬೇಸೂರ ಹಾಡಿಕೊಂತ ತೇಲಗಣ್ಣು, ಮೇಲಗಣ್ಣು ಹಾಕತಾವು (ಗ್ರಾಮಾಯ. ೦೯೩). **ಬೇಸೂರು** : ೧. ಬೆನ್ನು ಚಪ್ಪರಿಸಿದರೆ ಬೆಳತನಕ ಬೇಸೂರು ಹಾಡಬಲ್ಲ (ಕಲಮು. ೨೮-೦೩). [← ಹಿಂ. ಬೇಸುರ್; ಮರಾ. ಬೇಸೂರ್]

**ಬೇಸುರಿ** (ನಾ). ತೀವ್ರವಾದ ತಾಪ : ಬೇಸುರಿ, ಬೇಸೋಡು (ಕಜ್ಞಾಸು. ೩೪೩ ಕೃಯೋ) ; ನಿಟ್ಟುಸುರಿನ ಬೇಸುರಿಯಲಿ ಜೀವ ಮಿಡುಕುತಿರುವುದು (ಶಾರಂಗ. ೩೨-೬). [< ಬಿಸಿದು + ಉರಿ₂]

**ಬೇಸೂರ** 'ಬೇಸುರ' ನೋ.

**ಬೇಸೂರು** 'ಬೇಸುರ' ನೋ.

**ಬೇಸೋಡು** (ನಾ). ಬೆಚ್ಚಗಿರುವ ಕಾವಲಿ ; ಕಾಯ್ದ ಹೆಂಚು : ಬೇಸುರಿ, ಬೇಸೋಡು (ಕಜ್ಞಾಸು. ೩೪೩ ಕೃಯೋ).

[< ಬಿಸಿದು + ಓಡು₂]

**ಬೇಸ್ತು** (ನಾ). ೧. "ಒಂದು ತರದ ಇಸ್ಪೀಟಾಟ ; 'ಬೇಸ್ತು' ಆಟ" (Baste. ಇಂಕಕ). ೨. ಇಪ್ಪತ್ತೆಂಟರ ಇಸ್ಪೀಟಾಟದ ಮೂರು ಹಂತ ಗಳಲ್ಲಿ ಆಗುವ ಸೋಲು : ಇದು ಮೂರನೇ ಬೇಸ್ತು. ಕಡೆಯ ಆಟ (ಹಾಡಿಗೆ. ೦೦). ೩. (ಆಲಂ) ಮೋಸ : 'ಬೇಸ್ತುಬೀಳು' ಪರಾ.

[← ಇಂ. Baste]

**ಬೇಸ್ತುಬೀಳಿಸು** (ಕ್ರಿ). ಮೋಸಹೋಗುವಂತೆ ಮಾಡು ; ಪೆಚ್ಚು ಬೀಳಿಸು : ಆದಕ್ಕೇ ಮತ್ತೆ ನಮ್ಮ ಮುಳ್ಳುಮುಖದ ಸಂಪತ್ತು ಅವರಿಗೆ ಹಾಗ ಬೇಸ್ತು ಬೀಳಿಸಿದ್ದು (ಅಂಹೂ. ೨೯).

[ಬೇಸ್ತುಬೀಳು + – ಇಸು₃]

**ಬೇಸ್ತುಬೀಳು** (ಕ್ರಿ). ಮೋಸಹೋಗು ; ಪೆಚ್ಚುಬೀಳು : 'ಬೇಸ್ತು ಬಿದ್ದ' ಗಂಡನನ್ನು ಕಂಡು ಚಂಪಾವತಿಗೆ ಮೋಜೆನಿಸಿತು (ರಂಗವ. ೨೬೮); ಎಂದೂ ತಂತ್ರಿಯವರು ಅಷ್ಟು ಬೇಸ್ತು ಬಿದ್ದಿರಲಿಲ್ಲ (ಕದ್ವ್ಯಸ. ೨೩೪).

[ಬೇಸ್ತು + ಬೀಳ್₁ (< ಬೀೞ್₁)]

**ಬೇಸ್ರಿ** 'ಬೇಸರಿ' ನೋ.

**ಬೇಹ** 'ಬೇಡ್ಕು' ಪರಾ.

**ಬೇಹಕ್ಕುದಾರ** (ನಾ). ಹಕ್ಕುಬಾಧ್ಯತೆಗಳಿಲ್ಲದವನು ; ಹಕ್ಕುದಾರನಲ್ಲ ದವನು : ಇಂತಹ ಬೇಹಕ್ಕುದಾರರಿಂದ ಪಟೇಲರು ಶಾನುಭೋಗರುಗಳು ಕಂದಾಯದ ಹಣಗಳನ್ನು ತೆಗೆದುಕ್ಕೊಳ್ಳಕೂಡದು (ಗ್ರಾಮಾಕ. ೬೯).

[← ಅರ. ಬೇಹಕ್‌ದಾರ್]

**ಬೇಹಣ** (ನಾ). ಬೇಯುವಿಕೆ ; ಬೆಂಗುಹೋಗುವಿಕೆ : ಲೋಹಕುಂಭ ದೊಳೆಣ್ಣೆಯಂ ಪೊಯ್ದು ಪಾಪಿಗಳನೋಹೋ ತುಂಬುತ್ತ ಮುಚ್ಚಳ ವನಿಟ್ಟೆಳಗಿಚ್ಚನಾ ಹದಂತಪ್ಪದಂದದೆ ಬೆಳಗಿ ಬೇಯಿಸಲು ನೂಱುಸಾವಿರ ವತ್ಸರಂ ಬೇಹಣಲ್ಲದೆ ಸಾಯಲಿಲ್ಲ (ಏಕೈಪು. ೯-೦೯-೯೦).

[< ಬೇ₁ + – ಅಣ]

**ಬೇಹಣಗಾಣ** (ನಾ). ಗಾಯಂಕರಲ್ಲಿ ಒಂದು ವರ್ಗ (?) : ಆರಯ್ದು ಕೊಟ್ಟ ಶ್ರುತಿಯ ಹವಣಂ ತೊಟ್ಟು ಕೈಕೊಂಡೆಡಬಲನ ಬೇಹಣಗಾಣರ್ ಮಿಸುಕಸವ ಮಿಸುನಿಯಂ ಸರಿಗೆದೆಗೆವಂತೆ ಮಱಿದುಂಬಿಗಳ ಮಣ್ಣರಮಂ ಸೂಱೆಗೊಂಡಂತೆ ಶಾರವಿಸುತಿರೆಯುಂ (ಶಾಂತೀಶ್ವ. ೭-೯೩ವ).

[ಬೇಹಣ₁ + ಗಾಣ₃]

**ಬೇಹರ₁** 'ಬೇಹರ' ನೋ.

**ಬೇಹರ₂** 'ಬೆವಹಾರ' ನೋ.

**ಬೇಹರದರ** (ನಾ). (?) : ಬೆಲ್ಲ ಹಣುಸೇಹಣ್ಣು ಬೇವಿನ ಫಲದ ಎಲ್ಲ ಬೇಹರದರವ ಬಲ್ಲನೊಬ್ಬ ಜಾಣ ಮಲ್ಲಿಕಾರ್ಜುನಸೆಟ್ಟಿ ಮನದೊಡೆಯ (ಶಿವಗ. ೦೯೦-೯೩೨). [ ? ]

**ಬೇಹರಿ** 'ಬೆವಹಾರಿ' ನೋ.

**ಬೇಹರಿಸು**, ವೆವಹರಿಸು (ಕ್ರಿ). ವ್ಯಾಪಾರ ಮಾಡು : ಆ ಸೆಟ್ಟಿ ಬೇ [ಹಾಕಾಂ. ವ್ಯವ]ಹರಿಸಿ ಬಹುಧನಮಂ ಪಡೆದು (ರರ್ವಾಕ. ೦೦-೬೮ ವ) ; ಕಡಲೊಳ್ಕೊಳ್ಳುಸುವ ಪೆರ್ವಡಗುಗಳಿಂ ಬಂದ ದೀವದೀವದ ಮೇಲಾ

ದೊಡಮೆಗಳಂ ಬೇಹರಿಸಲ್ಗಡಣಿಪ ವಣಿಜರುಲಿವಬ್ಧಿರವಮಂ ಪಳಿಗುಂ (ಮಲಾಕ. ೬-೨೩). **ವೆವಹರಿಸು :** ಇವನನ್ನಂ ಬಿಟ್ಟು ಪೋಪವನಲ್ಲ ನಾನಾವಾವಾದೇಶಕ್ಕೆ ವೆವಹರಿಸಲ್ ಪೋದಡಿವನೆನ್ನ ಕಡೆಯು ಬಾಗಿಲ ಕಾಪಾಗಿಪ್ಪಂ (ಪಸ್ನಕಾ. ೩-೬೪). [ಬೇಹರ$_2$ (< ಬೆವಹಾರ) +— ಇಸು$_3$]

**ಬೇಹಾಗ್,** ಬೇಹಾಗು (ನಾ). [ಸಂಗೀತ] ಒಂದು ರಾಗದ ಹೆಸರು : ಅವರು ಬೇಹಾಗ್‌ರಾಗದಲ್ಲಿ ಹಾಡಿದ ತಿಲ್ಲಾನ ತುಂಬ ಸೊಗಸಾಗಿತ್ತು (ರಜಂ). **ಬೇಹಾಗು :** ಯಮುನಾಕಲ್ಯಾಣಿ, ಹುಸೇನಿ, ಬೇಹಾಗು, ಹಮೀರು, ನವರೋಜು ಮುಂತಾದ ರಾಗಗಳು ಹಲವು ನಮ್ಮಲ್ಲಿ ನೆಲೆಗೊಂಡು ಕರ್ನಾಟಕ ಗೌರವವನ್ನು ಪಡೆದಿರುವುದು ಈ ಮಾರ್ಗದಿಂದಲೇ (ಗಾನಕ. ೩೩).

[←ಹಿಂ. ಮರಾ. ಬಿಹಾಗ್./ಸಂ. ಬಿಹಾಗ್]

**ಬೇಹಾಗು** 'ಬೇಹಾಗ್' ನೋ.

**ಬೇಹಾರ** 'ಬೆವಹಾರ' ನೋ.

**ಬೇಹಾರಿ** 'ಬೆವಹಾರಿ' ನೋ.

**ಬೇಹಾರಿಗ** (ನಾ). ವ್ಯಾಪಾರ ಮಾಡುವವನು ; ವ್ಯಾಪಾರಿ ; ವರ್ತಕ : ಅಂಗಡಿಯೊಳು ಮಾಡುತಿಹ ಬೇಹಾರಿ [ಪಾಠಾಂ. ವ್ಯವಹಾರಿ]ಗಳ್ ಕಂಗೊಳಿಸಿದರು ಒಂದೆಸೆಯು (ಅಭ್ಯಶಿ. ೩-೬೬) ; ಸಂಜಶೆಟ್ಟಿ-ಮಹೀಶೂರಪುರದ ಬೇಹಾರಿಗ (ಐರುಗಂ. ೦೦-೨). [ಬೇಹಾರ (< ಬೆವಹಾರ) + — ಇಗ]

**ಬೇಹಿಗ** (ನಾ). ಗೂಢಚಾರ ; ಬೇಹುಗಾರ : ಹೊತ್ತಿಳಿಯೆ ಮನೆ ದೀಪದಂತೆ ಕಣ್ಣು ಪೆರತಂ ಕಾಣಿಪಂತೆ, ನಿನ್ನನನಿಶೇಂ ತೋರದಂತೆ ? ನಿನ್ನ ಬೇಹಿಗನೇನಿದು ? (ಗಿಳಿಂ. ೬೩-೬೪). [ಬೇಹು +— ಇಗ]

**ಬೇಹು.** ಬೇವು$_2$ (ನಾ). ಗುಪ್ತಚರ್ಯೆ ; ಗೂಢಚರ್ಯೆ: ಬಟ್ಟೆಯ ಬಡಿವ ಕಳ್ಳಂಗೆ ಬೇಹುಸಂದು ಕಳವು ದೊರಕದಂತಾಯಿತ್ತು (ಅವಚಂ. ೨೦೯-೬೪೦) ; ವನಚರರು ಬೇಹಿನಲಿ ಭೂಸುರಜನವ ಬೆಂಬತ್ತಿದರು (ಕುಮ್ಯಾ. ೪. ೦೭-೧೪) ; ಕಟ್ಟಿತು ನನ್ನನು ಮುಕ್ತಿಯು ರಾಹು ಬಾಳಿನ ಬೆನ್ನೊಳೆ ಸಾವಿನ ಬೇಹು ! (ಪಾಂಚಜ. ೩೮-೨೩). **ಬೇವು:** ಕೆಲವು ಬೇವಿನ ಜನರನ್ನು ಟಪ್ಪುಸುಲ್ತಾನರ ಸೀಮೆ ವಳಗೆ ಕಳುಹಿಸಿ (ರಾಜೇಂದ್ರ. ೬೮).

**ಬೇವು ಸೋವು** = ಗುಪ್ತವಾಗಿ ಹುಡುಕಿ ತೆಗೆಯುವಿಕೆ ; ಗೂಢಚರ್ಯೆಯಿಂದ ಶೋಧಿಸುವಿಕೆ : ಜಮೇದಾರ ಪಡೂರ ಬೈರೆಗೌಡ ಸಹಾ . . . ಆ ಕಳ್ಳನನ್ನು ಬೇವುಸೋವಿನಿಂದಾ ಪತ್ತೆ ಹತ್ತಿಸಿ ಹಿಡಿಯುವಂತೆ ಅಪ್ಪಣೆ ಕೊಟ್ಟು, ಗರವಲೆಗೆ ಕಳುಹಿಸಿಕೊಟ್ಟರು (ರಾಜೇಂದ್ರ. ೨೬೬). **ಬೇಹಿನ ಚಾವಡಿ** = (ಮೈಸೂರುಸೀಮೆಯಲ್ಲಿ ಚಿಕ್ಕದೇವರಾಜಒಡೆಯರು ಏರ್ಪಡಿಸಿದ್ದ ಎಂಭತ್ತ ನಾಲ್ಕು ಜಿಲ್ಲೆಗಳ) ಗುಪ್ತಚರ್ಯೆಯ ಕೆಲಸದ ಮೇಲ್ವಿಚಾರಣೆ ಮಾಡುತ್ತಿದ್ದ ಇಲಾಖೆ : ಬೇಹಿನ ಚಾವಡಿ—ಇದರಲ್ಲಿ . . . ಅರಮನೆಯಿಂದ ಗಡಿಗಳಿಗೆ ಬರೆಸಿದ ನಿರೂಪವನ್ನು ಕಳುಹಿಸುವಂತೆಯೂ ಕಟ್ಟಳೆಯನ್ನು ಮಾಡಿದರು (ಮಹಾವಂ. I. ೦೯೯). **ಬೇಹಿನ ಜನ** = ಗೂಢಚರ್ಯೆಯ ಕೆಲಸಕ್ಕಾಗಿ ನೇಮಿಸಲಾದ ಜನ; ಗೂಢಚಾರರು ; ಗುಪ್ತಚಾರರು : ಘಣಿತನಯ ಗಜಬೇಂಟೆಯೊಳು ಬಹುದಣಿದು ಬಂದಪ ಸಮಯಮೆನ್ನುತ ಕ್ಷಣದಿ ಬೇಹಿನ ಜನ [ಪಾಠಾಂ. ಚರ]ರು ಪೇಳಲು (ಜಾಗಿಕ. ೦೦-೬೪). **ಬೇಹಿನವ** = ಗೂಢಚಾರ; ಗುಪ್ತಚಾರ ; ಬೇಹುಗಾರ : "ಹೇರಿಗಂ = ಬೇಹಿನವಂ" (ಕವಿಪ್ರ. ಶಂ. ೨); ಕೃಷ್ಣನು . . . ದ್ವಾರಕಾಪಟ್ಟಣಕ್ಕೆ ಹೋದ ವೃತ್ತಾಂತವನ್ನೂ ಪಾಂಡವರ ಸಮಾಚಾರವನ್ನೂ ಬೇಹಿನವರ ದೆಸೆಯಿಂದ ಕೇಳಿ (ಕೃಪಾಉ. ೬) ; ವಿವಾಹಸನ್ನಾಹಂ ಮೆರೆಯುತ್ತಿರ್ದಾ ಮಾರನಾಯಕಂ ಬೇಹಿನವರಿಂ . . . ಸುದ್ದಿಯಂ ಕೇಳ್ದು (ಮಲಾತ. ೧-೩೩).

[ವೇ. II ತಮಿ. ವೇ, ವೇವು ; ಮಲ. ವೇವು ; ತುಳು. ಬೇವು ; ತೆಲು. ವೇಗು]

**ಬೇಹುಕಾತಿ** (ನಾ). ಗುಪ್ತಚರ್ಯೆ ಮಾಡುವವಳು ; ಗೂಢಚಾರಿಣಿ : ಈ ಸಮಯದಲ್ಲಿ ದೇವತೆಗಳ ಬೇಹುಕಾತಿಯಾದ ರಂಭೆಯಿಂದ ಸ್ವರ್ಗಕ್ಕೂ ಭೂಮಿಗೂ ನಿಕಟಸಂಬಂಧವೊದಗುತ್ತದೆ (ಅಹಕ್ಕೃ. XI. ಕೃಸ್ತಾವ).

[ಬೇಹು +— ಕಾತಿ$_5$]

**ಬೇಹುಕಾರ** 'ಬೇಹುಗಾಜಿ' ನೋ.

**ಬೇಹುಕಾಜಿ** 'ಬೇಹುಗಾಜಿ' ನೋ.

**ಬೇಹುಗಡಿ** (ನಾ). ಗೂಢಚರ್ಯೆಯನ್ನು ನಡೆಸುವ ಸೀಮಾ ಪ್ರದೇಶ ; ಬೇಹಿನ ಎಲ್ಲೆ : ಇರ್ದುದು ಮಹೇಂದ್ರಾಚಲಂ ದಕ್ಷಿಣಾಂಬುಧಿಗೆ ಬೇಹುಗಡಿಯಂ ಕಟ್ಟಿ (ಶ್ರೀರಾಮಪ. ೩೬೩-೩೦). [ಬೇಹು + ಗಡಿ$_1$]

**ಬೇಹುಗಾರ** 'ಬೇಹುಗಾಜಿ' ನೋ.

**ಬೇಹುಗಾರಿಕೆ** (ನಾ). ಗೂಢಚಾರನ ಕೆಲಸ ; ಗೂಢಚರ್ಯೆ : ಅಗ್ರಚಾರ . . . ಬೇಹುಗಾರಿಕೆಯಲ್ಲಿ ವಿಶೇಷವಾದ ಶಿಕ್ಷಣವನ್ನು ಪಡೆದ ಕಾರಣ ಆತನನ್ನು ಶತ್ರುವಿನ ಸಮಾಚಾರ ಸಂಗ್ರಹಿಸುವ ಕಾಲಕ್ಕೆ ಆಯ್ದುಕೊಳ್ಳುತ್ತಿದ್ದರು (ಕಕೋ. I. ೦೬೬).

[ಬೇಹುಗಾರ (<ಬೇಹುಗಾಜಿ) +— ಇಕೆ]

**ಬೇಹುಗಾಜಿ,** ಬೇಹುಕಾರ, ಬೇಹುಕಾಜಿ, ಬೇಹುಗಾರ (ನಾ). ಗೂಢಚರ್ಯೆಯನ್ನು ಮಾಡುವವನು ; ಗೂಢಚಾರ : ಜಾಜುಗಾಜಿಂ ಬೇಹುಗಾಜಿಂ (ಶಾಶಶೂ. ೦೯೨ ಕೃಷೋ); ಬೇಹುಗಾಜಿರ ಮೊಗದಿಂದರಿ ರಾಯರ ಗಾಹುಗದುಕುಗಳನರಿತು (ಕುಮಾರಾಂ. ೩೦-೬೩). **ಬೇಹುಕಾರ :** ಬೇಹುಕಾರನ ತೆರದಿ ಬೆಳ್ಳಿ ಮೂಡಿದುದು (ಸಾರಂಗ. ೩೨); ಬೇಹುಕಾರರು ಬಂದು ಹಿಂದಿನ ಮೊಕ್ಕಾಮಿನಲ್ಲಿಯೇ ಈ ಆತಿಥ್ಯದ ಸಿದ್ಧತೆಯನ್ನು ಸೇನಾಪತಿಗಳಿಗೆ ಅರಿಕೆ ಮಾಡಿದರು (ಬೆಂಕ. ೩೩). **ಬೇಹುಕಾಜಿ :** ಎಲ್ಲಿಂದ ಬಂದೆಯೆಂಬರೊ ಕೊಲ್ಲಿವನಂ ಬೇಹುಕಾಜಿನೆಂಬರೊ . . . ಎಂದು ಚಿಂತಿಸುತಿರ್ದಂ (ದಶಕು. ೨-೦೬೬); ನಳಿನಮಿತ್ರನ ಬೇಹುಕಾಜಿರ ಸುಳಿವೊ ಶಿವಿರದ ಪ್ರಳಯವ್ಯೋಯೆನೆ ನಿಳಯನಿಳಯದ ಸೊಡರು ತಳಿತುದು ಕೂಡೆ ನಗರಿಯಲಿ (ಸಂಕ್ಷಕ. ೩೨-೦೬). **ಬೇಹುಗಾರ :** ಸುಮತಿಯು ಬೇಹುಗಾರರ ಗೊತ್ತುಗಾರನಂ ನೋಡಿ (ಕೌಗಂ. ೦೩೩-೪) ; ಘಾತುಕರನ್ನೂ ಬೇಹುಗಾರರನ್ನೂ ಒಳಗೇ ಸಂಚುಮಾಡಿ ಕಳುಹಿಸಿರತಕ್ಕದ್ದೂ . . . ಗೊತ್ತಾಗಿತ್ತು (ಮುಕಗ. ೦೫೨). [ಬೇಹು +— ಕಾಜಿ]

**ಬೇಹುಗುಟ್ಟು** (ಕ್ರಿ). ಗುಪ್ತವಾಗಿ ಮಾತನಾಡು,— ಹೇಳು : ಜನಾನ್ತಿಕದಲ್ಲಿ ಸೈನ್ಯಾಧಿಪತಿಗೆ ಕ್ಷೀಣಸ್ವರದಿಂದ ಬೇಹುಗುಟ್ಟಿ, ವೀರವನ್ನದ ಮಾಡಿ ಹೊರಟುಹೋಗುವವನು (ಐರುಗಂ. ೨೬-೩). [ಬೇಹು + ಕುಟ್ಟು$_1$]

**ಬೇಹುಬರ್** (ಕ್ರಿ). ಬೇಹುಗಾರಿಕೆಯನ್ನು ನಡೆಸಲು ಬರು : ಪೊಲಗಾಪಿನವರ್ ಕಾಣುತೆ ಪಲರುಂ ಪರಿತಂದು ಬೇಹು ಬಂದವನಿವನಂ ಕೊಲೆಗೆಯ್ದಿಸಿ ಮಿನ್ನೆಂದೊಡೆ (ಜೀವಸಂ. ೩೮-೬೪) ; ನೀವ್ ತೊಲಗಿ ಭೀಮನ ಬೇಹು ಬಹುದಿರಬೇಡ ನೀಮೆಂದ (ಕುಮ್ಯಾಗ. ೪-೪೦). [ ಬೇಹು + ಬರ್ (< ವರ್) ]

**ಬೇಹುರ,** ಬೇಹರ$_1$ (ನಾ). ೧. ಗುಪ್ತಚಾರ ಜನ ; ಗೂಢಚಾರಮಂದಿ : ಏನು ಮಜುಗಿದೊಡೇನು ಪಾಂಡವಮಾನನಿಧಿಗಳ ಪುಣ್ಯದನುಸಂಧಾನ ಬೇಹುರದಲ್ಲಿ ಬೈಚಿಡು ದೇವಲೋಕದಲಿ (ಸಂಕ್ಷಕ.೦೮-೦೦೬). **ಬೇಹರ$_1$ : ೧.** ಹರಣದಾಸೆಯಂಸುಳಿದು ಹರಿದೋಡುವಹಿತಮೋಹರದೊಳಗೆ ಬೇಹ ಬೇಹರ ರೈದೆ ಸೆಣಸಿ ಸಂಹರಣಕಾಲದ ಕಾಲಹರನ ಕೋಪದೊಳಿಹುವ ಹರಹನೇಂ ಬಣ್ಣಿಸುವೆನು (ಶಿಕ್ಕ.೨೩-೦೦). ೨. ಬಹಳ ಬುದ್ಧಿವಂತನಾದವನು,— ಬುದ್ಧಿಶಾಲಿ : "ಬೇಹರಮೆ [ನ್ರ]ನೆ ಭೂರಿ ಬುದ್ಧಿಬಲಯುತನಕ್ಕುಂ" (ಭಾರಾ. ೩೦). [ < ಬೇಹು ]

**ಬೇಹುವಳ** (ನಾ). ಗೂಢಚರ್ಯೆಗಾಗಿ ನಿಯಮಿತನಾದವನು,—ನೇಮಿಸಲ್ಪಟ್ಟವನು : ನಿಮ್ಮ ದ್ರೋಹದ ಗಯ್ಮೆಗಳನ್ನೆಲ್ಲಾ ವಿಚಾರಿಸಿ ವಿವರ

ಗಳನ್ನು ವೃಹಾಸ್ವಾಮಿಯವರ ಒಳಹೊಗದ ಪರಿಶೀಲನಕ್ಕೊಳ್ಪಡಿಸಲು ಶ್ರೀಮನ್ನರು ಅಧಿಕಾರಗೊಟ್ಟಿರುವ ಹೊಸ ಬೇಹೊವಳ (ಚಿಕ್ಕ. ೫೦-೦೪).

[ ಬೇಹು + — ವಳ ]

**ಬೇಹುಪಾರಿ** 'ಬೇಹುಪಾರು' ನೋ.

**ಬೇಹುಪಾರು, ಬೇಹುಪಾರಿ** (ಗು). ೧. ಎಚ್ಚರಿಕೆಯಿಲ್ಲದ ; ನಿರ್ಲಕ್ಷ್ಯ ತನದ. (ನಾ). ೨. ಜಾಗರೂಕತೆ ಇಲ್ಲದಿರುವಿಕೆ ; ಎಚ್ಚರಗೇಡಿತನ ; ನಿರ್ಲಕ್ಷ್ಯ : ಅವನ ಕೂಡ ಹರಟುತ್ತ ಹರಟುತ್ತ ನಾನು ಬೇಹುಪಾರಾದೆ (ಶಂಗೂಂ. ೮೨). **ಬೇಹುಪಾರಿ :** ೧. ಬೇಹುಪಾರಿ ಪೋಲೀಸರಿಂದ ಉಂಟಾದ ಕಳ್ಳತನದ ನಷ್ಟವನ್ನು ನಷ್ಟ ಹೊಂದಿದವರಿಗೆ ತಪ್ಪಿತಸ್ಥರಿಂದ ವಸೂಲುಮಾಡಿ ಕೊಡುತ್ತೇವೆ (ಘೂರಾಜ. ೯೬). ೨. ನಾನೇನು ಅಷ್ಟು ಬೇಹುಪಾರಿ ಮಾತನಾಡಿದ್ದಾ (ಪಮ್ಮಿ. ೨೬).

[ ← ಪಾರ. ಮರಾ. ಬೇಹುಶಾರ್, ಬೇಹುಶಾರೀ ]

**ಬೇಹೈಸು** (ಕ್ರಿ). ಬೇಕೆನಿಸು; ಬಯಸು; ಅಪೇಕ್ಷಿಸು : ತಾಪದಲವಂ ಬಳಲುತ್ತ ಬೇಹೈಸಿಯುಂದುದಕಮಂ ಕಾಡಿಯುಲು (ಸಿದ್ಧರಾ. ೯-೨೪).

[ <ಬೇಡು$_1$ + — ಇಸು$_3$ ]

**ಬೇಳ್$_1$, ಬೇಡು$_2$, ಬೇಳು$_1$** (ಕ್ರಿ). ಬೇಳ್ದ (ಭೂತಕೃ), ಬೇಳ್ದು (ಭೂತನ್ಯೂ), ಬೇಳ್ವ$_2$ (ವರ್ತಕೃ), ಬೇಳ್ಪ$_2$ (ಭವಿಕೃ). ೧. ಹೋಮವನ್ನು ಮಾಡು ; ಹವಿಸ್ಸನ್ನು ಅರ್ಪಿಸು; ಯಜ್ಞ ಮಾಡು : "ಬೇಳ್_ಹವಿಃಪ್ರಧಾನೇ (ಆಹುತಿ ಕೊಡು), ನಿಪ್ಪದ್ದಾ ಚ (ಬೆಳವಣಿಗೆ ಇಲ್ಲದಿರು)" (ಶಬ್ದಾ); ಮಹಾಸದಮಲಸರ್ವ್ವಕ್ರಿತುಗಳನುದಾರ [ತ]ರಮಾಗೆ ಬೇ[ಳ್ವ] ವಿಪ್ರೋತ್ತಮರಂ ಕರೆಯಿಸಿ (ಶಾಸನ. XI-i, ೦೪-೦೬; 872) ; ರಾಜಸೂಯಮೆಂಬ ಯಾಗಮಂ ಬೇಳ್ವಂತೆ ಮಾಡಿ ಬನ್ನಿಂ (ಪಂಪಭಾ. ೬-೦೭ ಪ) ; ಹೋಮಸ್ತೋಮಧೂಮಂ ನೆಗೆದುದು ಮುನಿಗಳ್ ಬೇಳ್ವ ಮಂತ್ರಾಗ್ನಿಯಿಂದಂ (ಗಂಕ. ೦-೬೬) . ೨. ಆಹುತಿಯಾಗು ; ಆಹುತಿಗೊಳ್ಳು : ಮಾರಿ ಹೊಡೆದುಣ್ಗೆ ಕನ್ನೆ ಕುಮಾರಿಗೆ ಕುಜೀಯಾಗಿ ಬೇಳ್ಗೆ ಸಿಡಿಲೆಜಿಗೆ . . . ಮುಂದುಗುಂಟಣಿಯುಂ (ಸೂಕ್ತಿಸು. ೯-೩೯೦) ; ಸಯ್ವೆರಗಿನಿಂ ಬೋಳನೆಳೆದು ಕಯ್ ಸುಗಿದಂ ಬಯ್ದು ಹನಸುಗಳಿಂದ ಬೇಳ್ದ ಬಗೆ ದಳ್ಳಿಸಲ್ (ಶಾಂತಿಪು. ೦೩೦-೨೭೬). **ಬೇಡು$_2$ :** ೧. ಜಗದಾಶ್ಚರ್ಯದ ರಾಜಸೂಯಮುಖಮಂ ಬೇಡಲ್ಕಹಾತ್ಥಾರ್ಥಮಾವಗೆಮೆಯ್ದು × × × ವಿಭೀಷಣನ ಮೇಗಾಕ್ಷೇಪದಿಂ ಪೋಗಿ ವಸ್ತುಗಳಂ ಕಪ್ಪಮನಲ್ಲಿ ಕೊಣ್ದು (ಎಕ. VII, ಶಿಕಾಂ. ೦೨೭-೩ ; 1036). **ಬೇಳು$_1$ :** ೧. ಬೇಡಿತಂ ಕೊಡಬಲ್ಲ ಶೂಲಿ ಬಂದಿರೆ ಬಗೆಯುದಕಟಕಟ ಬೂದಿಯೊಳು ಬೇಳುವಂತ ಥಮದೈವವ ಮಾಡಿದಪರೆಂದು ಹೊಜವಂಟ ನಿಜಗೃಹಮನು (ಸಿದ್ಧರಾ. ೩-೩೩); ಏನೆಂಬೆನಾ ಹೋಮದ ಬೇಳುವಡೆಯೊಳು ಸಾನುರಾಗದೆ ಲಾಜೆಯನು ಭೂಸುತವೆನೆ ಬೇಳುತಿರೆ ಚಟಚಟರೆಂಬ ಧ್ವಾನವೆಸೆದುದು (ಅಂಜನ. ೩-೨೨೭); ಬೇಳುತಿರ್ಪಾಹುತಿಯುನಟ್ಟು ಷಟ್ಕರ್ಮಮಂ ಬಿಟ್ಟು ನೆಜಿ ಬೆಜಗಾಮಟ್ಟು (ಶಬರ. ೨೦-೨೪). ೩. ಸುಟ್ಟುಹಾಕು ; ನಾಶಪಡಿಸು ; ನಾಶಮಾಡು : ಒಂದುಮುಖದಲಿ ಜಗವ ಹೂಡುವನೊಂದುಮುಖದಲಿ ಜಗವ ಸಲಹುವನೊಂದುಮುಖದಲಿ ಬೇಳುವನು ನಯನಾಗ್ನಿಯಲಿ ಜಗವ (ಕುಮಾ೯ಶ. ೭-೩೨) ; ಮುಕ್ತಿ ರಾಹು ಪ್ರೇಮಜ್ವಾಲೆ ವೃಷ್ಟಿಯ ಸೃಷ್ಟಿಗೆ ಬೇಳುವ ಲೀಲೆ (ಕಾಂತಿಪ. ೩೩-೦೪). ೪. ಆಹುತಿಯಾಗಿ ಪಡೆ ; ಆಹುತಿ ತೆಗೆದುಕೊಳ್ಳು : ಹಲಿಯ ಬಾಣವು . . . ತ್ರಿಶಿರದೂಷಣರ ಖರನ ತಲೆಗಳ ಬೇಳಿದುದು (ತೊರವೆರಾ. ೦೯-೩೩).

[ ದೇ.॥ ತಮಿ. ವೇಳ್; ತೆಲು. ವೇಲು ]

**ಬೇಳ್$_2$, ಬೇಳು$_2$** (ನಾ). ೧. ದಿಗ್ಭ್ರಾಂತಿ; ಕಕ್ಕಾಬಿಕ್ಕಿ : (ಕ). ೨. ಮೋಹ; ಮರುಳು : 'ಬೇಳ್ಪಿ', 'ಬೇಳ್ವ$_2$' ಪರಾ. ೩. ಬೆಪ್ಪುತನ; ದಡ್ಡತನ. ೪. ಮೂರ್ಖನಾದವನು: ಅವಿವೇಕಿ ; ದಡ್ಡ : ಅದು ರೇಂದ್ರೋಸ್ವತಿ ಖಚರೇಂದ್ರವಿಭವಂ ಭೋಗೋಪಭೋಗಂ ಮಹೇಂದ್ರ ಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಳ್ಬಂತು ಬೇಳ್ಬೆನಿಸುತ್ತಮ ದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾಭಮುಮೋಕ್ಷಂ ದೊರೆಕೊಳ್ವುದಕ್ಕುಂ (ಆದಿಪು. ೦೦-೬೦); ಬೇಳೆನಿಸಿ ನೆಗಟ್ಟಿಗೆ ಬೆಂಬೀಟಿದೆ ತಲ್ಲಣಿಸದಾರ್ತ್ರ ಕೂರ್ತಮಯವದಿಂ ಕೇಳ ಪ್ರಭಾವನಾಂಗಮನೇಳಿಸ ದಟ್ಟಿತ್ರ್ ತಾಳ್ದವೇಟ್ಟುದು ಭವ್ಯಂ (ಧರ್ಮಾಮೃ. ೯-೦೯೬). ೫. ದುಃಖ : ಕಳವಳ : 'ಬೇಳ್ಗರೆ' ಪರಾ. **ಬೇಳು$_2$ :** ೨. "ಬೇಳಿಂದೆನೆ ಮರುಳು" (ಕಬಿಕಂ. ೨೪೪). ೫. 'ಬೇಳಂಗೊಳ್' ಪರಾ. 'ಬೆಳ್$_2$' ನೋ.

**ಬೇಳಾಗು**=೧. ಕಕ್ಕಾಬಿಕ್ಕಿಯಾಗು; ತಬ್ಬಿಬ್ಬಾಗು : ಹರಿ ವಿರಂಚ್ಯಾದಿ ಗಳ್ ಬೇಳಾದರೀಶ್ವರನ ನಿಲವನಜಿಯದೆ (ಅಬಸಂ. ೦೩-೦೦). ೨. ಹುಚ್ಚಾಗು; ಮರುಳಾಗು: ಮೋಹಗೊಳ್ಳು: ಆ ಕಾಂತೆ ಬೇಳಾದಳವನ ಚೆಲ್ವಿಕೆಗಂಡು (ತ್ರಿಕುಚ. ೨೦-೩೦); ಕುಮಾರರಾಮಗೆ ರತ್ನಿ ಬೇಳಾದಳು (ಕರಾಸಾಂ. ೨೬-೦೩). ೩. ಮೂರ್ಖನಾಗು : ಅವಿವೇಕಿಯಾಗು : ಪಿರಿದೊಂದಜ್ಞಾನದಿಂ ಯೌವನವಿಕಳತೆ ಮೈದೋಜಿ ಕಾಂತಾನಿವಾಸಾಂತರ ದೊಳ್ ಶ್ವಾನಂಗೆ ಓಹಂದಿಗೆ ಕಟಿಗೆಣೆಯಾಗಿರ್ದು ಬೇಳಾ[ಶಾಶಾಂ. ಬೇಳ್ವಾ] ಗುತಂ (ರತ್ನಕ. ೩) ; ಗುಣದ ಕಣಿ ದೇವೇಂದ್ರಚೀತಾಮಣಿಯೆನುತ ಕಾಲ್ಗೆಡದು ಬೇಳಾದೆಕೆ ಸಾಕೆಂದನಘಚರಿತೆಯನುಸುರಲೊಡಲಿಸಿದೆ (ಶಬ್ದಶಾ. ೦-೪೦) ; ಈಶಭಕ್ತಿಲಸತ್ಸುರಸುಖಾಬ್ಧಿಯಂ ತೊಜೆದು ದಲ್ಬೇಳಾಗದಿ ರ್ಪಾಜಾದೆಂ (ಕೃಷಿಪ. ೨೯-೮೨). ೪. ತಳಮಳಗೊಳ್ಳು: ಕಳವಳಿಸು : ಪಾಂಚಾಳನಂದನೆಯಂ ಕಾಣದೆ . . . ನರಂ ಧೈರ್ಯಮಂಸೊಕ್ಕು ಮಜ್ಜ ಹೃದಯಂ ಬೇಳಾದಂ (ಜೈಮಿಕಥೆ. ೦೦_೯೨) ; ಎಸೆವ ಪುರಜನವೆಲ್ಲ ಗೋ ಳಿಡುತ ಬೇಳಾಗಿ (ಮಹೀಂದ. ೭೮. ೬೩-೨೦) ; ಶರಣಜನವಿಯೋಗವ್ಯಥೆಗೆ ಬೆಂಬೀಳ್ದು ಬೇಳಾಗಿ ಪಂಬಲಿಸಿ ಹರಹರಾ ವಿಶ್ವನಾಥಾಯೆನುತ್ತುಂ (ಶಮ್ಮಿರಾ. ೬-೦೦); ಈ ದುರಂತದ ಚಿಂತೆಯಲಿ ಬೇಳಾದುದೆನ್ನಯ ಚಿತ್ತವದ್ದೆನು ಖೇದ ಪಂಕದೊಳು (ಕುಮಾ೯ಕ. ೦೦-೭). **ಬೇಳ್ಮಾಡು, ಬೇಳುಮಾಡು**=ಮರುಳಾಗಿಸು ; ಮರುಳುಮಾಡು: ಎಡಗಾಲೊಳ್ ತೊಡರಿಂ ತೊಡರ್ಚಿ ಪತಿಯಂ ಬೇಳ್ಮಾಡಿ ನಿಸ್ಸೊಂದು ಪಿಂಬಡಿನೊಳ್ ನಿಲ್ವವಳಲ್ಲೆನೆಂದು . . . ಅನ್ಯ ಕಾಮಿನಿಯರಂ ಜಿಗೋಡಾಡುವಂತಿಕ್ಕಿದಳ್ ತೊಡರಂ ಸುಗ್ಗಲದೇವಿ (ಎಕ. V, ಬೇಲೂರು. ೦೨೨-೯೦; ಸು. 1220); ದೇವ ನೀಮಲ್ಲಿಗೆ ಪಡೆಮ ಬರಲ್ ತೋರ್ಪೆನೆಂದಂತವಳ್ ತಾಪಸನಂ ಬೇಳ್ಮಾಡಿ ಬೇಗಂ ನಲವಿನೊಳೊಡ ಗೊಂಡುಯ್ದಳ್ (ದಕಳು. ೯-೫೭); ಜಾಲೆಗಾರನ ಕೈಯ ಮಾಣಿಕ್ಯ ಸಿಕ್ಕದೆ ಅಳಿಗೊಂಡಿತು ಜಗವ ಬೇಳು ಮಾಡಿ (ಸರ್ವಜ್ಞ. ೮೯-೪೯೩).

[ದೇ.॥ ತೆಲು. ಬೇಲ, ಬೇಲು./ಸಂ. ಭೇಲ]

**ಬೇಳ್$_1$** 'ಬೆಳಲ್' ನೋ.

**ಬೇಳ್$_2$** (ನಾ). ೧. ಸ್ಪರ್ಶ ; ಸೋಂಕು : ಚಂಡಾಳಿಗಳ ಬೇಳಮಾಂತಶೌಚಂ ಗಳೆಡೆಗೊಂಡ ತಾಣಮದಲ್ತು ಸುರಭಿಯುತಮಾಗಿ ನಾಮಿಂಡಲಾಶ್ರಯ ಮಲ್ತಿದೆನೆ ರಂಜಿಸಿತ್ತು ತತ್ಸರಸಿ (ಕೂಚ್ಚಪ್ರ. ೦೩-೪೦). ೨. (?) : ಚಂದ್ರಾದಿತ್ಯರ್ಕ್ಕಳಣಸಾಗೆಯುಂ ಚಕ್ರದ ಬೇಳಮಾಗೆಯುಂ ವಜ್ರ ಕಪಟದ ಕಂಚುಳಿಕೆಯಾಗೆಯುಂ . . . ಖಸೂರ್ಜ[ರು]ಸ್ವಾಮಿಗಳ್ಗೆ ಸಾಷ್ಟಾಂಗಮರಗಿ ಪೊಡವಟ್ಟು (ಕಇ. IV. ೩೫-೦೩ ; 1000 ?). [?]

**ಬೇಳ್$_3$** 'ಬೇಳು$_3$' ನೋ.

**ಬೇಳಂಬ** (ನಾ). ೧. ವಿಡಂಬನೆ ; ಅಣಕ : 'ಬೇಳಂಬಿಗ' ಪರಾ. ೨. ಕೇಡು ; ವಿಪತ್ತು : ಜಗನುದೀ ಬೇಳಂಬ ಹಸ್ತಿನನಗರಿಯಲಿ ತತ್ಪೌರಜನ ಮಾನವಗಿದು ಬಿದ್ದುದು ಶೋಕಮಯಸಾಗರದ ಮಧ್ಯದಲಿ (ಕುಮಾ೯ಶ. ೯-೯೦) ; ಕೇಳು ಧೃತರಾಷ್ಟ್ರನೃಪ ನೀ ಕೋಳು

ಪೋಪರೆ ಶೋಕದುಃಖಬೆಗೆ . . . ಬೇಳುವೆಯ ಬೇಳಂಬವದ ನಟಿಾದಾಳು (ತಿಮ್ಮಕ್ಕಿ. ೦-೩೪), ಏಳುನೆಲೆ ಉಪ್ಪರಿಗೆಯೆತ್ತೀ ಕೀಳುದಿಪ್ಪ ಯಿದೆತ್ತ ಕರ್ವವು ಮೇಳಿಸಿದ ಬೇಳಂಬವಲ್ಲದೆ ಬೇಱೆ ಪೆಱತಲ್ಲ (ಶಾಸ್ತ್ರಾ. ೦೬-೩೪). ೩. ಗೊಂದಲ ; ಗಲಿಬಿಲಿ : ಒಚ್ಚತ ಮಾಡಿ ಮಾಣ್ಬನ ಱಯೆಂ ಮತ್ತಾ ಪುರಂ ಚೆಲ್ವನಾ ಪುರಮಿಂಬಾ ಪುರಮೊಳ್ಳಿತಾ ಪುರಮದಂ ತಿಂತೆಂಬ ಬೇಳಂಬಮಂ (ಅಪಂಪ. ೦-೧೨೦). ೪. ಮರುಳು; ಆಕರ್ಷಣೆ; ಮೋಹ : ಧರೆ ವನಿತೆಯರ ಬೇಳಂಬಕೊಳಗಾಗದೆ ಜನಾರ್ದನನ ನೆನೆಯೆ ಬೇಡಿದನೀವ (ಕೃಷ್ಣಾ.ತ. ೬-೬೬). ೫. ಮೋಸ ; ವಂಚನೆ : ಪಾಡುವ ರಾಗದಂತೆ ಬೇಳಂಬದ ಪರ್ವದಂತೆ . . . ಕಡೆಯೊಳ್ ಪೇಸುಪಥಮುಮ ಶೋಭೆಯುಮಾಗದೆ ಪೋಗದು (ರಶರ್ಸ್ಮ. ೭-೦೨೨); ಸೋಲದ ಗೆಲ್ಲದ ಪಡೆಮಾತುಗಳುಮಂ ಬೇಳಂಬಾದಿ ಪುಸಿಗಳುಮಂ ರಾಗಿಸಿ ತಾಂ ಕೇಳ್ವುದು ಪರರ್ಗೆ ಪೇಲ್ವುದು ಮೊದಲಾದುವೆಲ್ಲಂ ದುಃಶ್ರುತಿಯೆಂಬ ನಾಲ್ಕನೆಯನರ್ಥದಂಡಮಕ್ಕುಂ (ಧ್ಯಾಶಾ. ೦೩೦). 'ಬೇಳ್$_2$' ನೋ.

[< ಪ್ರಾ. ವೇಲಂಬ. / ಸಂ. ವಿಡಂಬ]

**ಬೇಳಂಬಿಗ** (ನಾ). (ಹಾಸ್ಯಪರವಾದ) ಚಮತ್ಕಾರಗಳನ್ನು ಮಾಡುವವನು ; ವಿದೂಷಕ : ದಂಡದ ಬೇಳಂಬಿಗರ ಬೆದಂಡೆಯ ತಳಗೆಯ ಮಹೇಂದ್ರಜಾಲಿಗಳ ಮನಂಗೊಂಡಸವ ನೆಗ[ಟ್ವಂಚೆ]ಯ ತಂಡಂಗಳವಾವ ದೆಸೆಯೊಳಂ ಕಡುರಯ್ಯಂ (ಪರ್ಣಜಾ. ೦೦-೨೦).

[< ಪ್ರಾ. ವೇಲಂಬಗ. / ಸಂ. ವಿಡಂಬಕ]

**ಬೇಳಕೆ** (ನಾ). ಒಂದು ಬಗೆಯ ಸಸ್ಯ: "ಮಾಲೂರಃ—ವಿಶಾವಾಲುಕ, ಬೇಳಕೆ, ಬೆಲ್ಲವತ್ತ" (ಒಕಂ. ೨೩೪). [ ? ]

**ಬೇಳಲು** 'ಬೆಳಲ್' ನೋ.

**ಬೇಳಾವನ** (ನಾ). ಸಮುದ್ರತೀರದಬಳಿಯ ಅರಣ್ಯ,—ಕಾಡು : ಬೇಳಾವನಪರಿವೃತಚತುರದಧಿವಳಯವಳಯಿತಜಂಬೂದ್ವೀಪದ ಭರತಕ್ಷೇತ್ರದ ವಿನೀತಾಖಂಡದೊಳೆ ಮಗಧೆಯೆಂಬುದು ವಿಷಯಂ (ಬಂಹಂ. ೦-೦೬ ಪ). [< ಸಂ. ವೇಲಾವನ]

**ಬೇಳಿ** 'ಬೇಟಿ' ನೋ.

**ಬೇಳಿಡು** (ಕ್ರಿ). (ಹಸು ಮುಂತಾದ ಪ್ರಾಣಿಗಳು) ಅರಚು ; ಕೂಗು: ಛೀಳಿಡುತುರುಳ್ವ ಮೃಗರಾಜಯಿಂ ವಾಜಿಯಿಂ ಬೇಳಿಡುತೆ ಬೀಳ್ವ ಕಾಳ್ಪಸುಗಳಿಂ ಮುಸುಗಳಿಂ . . . ಪಾಳಾದ ಸಕಲಲೋಕಂಗಳಿಂ ಕಂಗಳಿಂ ನೋಡಲುರಿ ಘಸಮಾದುದು (ಕಂಪ. ೪೬-೨೬). [ಬೇಳ್$_2$ + ಇಡು$_1$]

**ಬೇಳಿಸು** (ಕ್ರಿ). ೧. ಹೋಮ ಮಾಡು ; ಯಜ್ಞ ಮಾಡು : ಅಪಾಪತಿ ತುಪ್ಪದಿಂ ಸಾಸಿವೆಯಿಂ ಪಾಲ್ಮರನ ಸಮಿಧೆಯಿಂ ಹುತವಹಮಂತ್ರ ವಿಧಾನದೆ ಬೇಳಿಸಿ ಕುಡೆ ಸುವರ್ಣಮಂ ದ್ವಿಜರ್ಗೆ (ಬೋಕೋಶ. ೪-೪೬). ೨. ಸುಡು : ಪಗೆಯ ಏಳುವೆನದಟರಂ ಸೀಳುವೆನಂಗಮಂ ಬೇಳಿಸುವೆನಗ್ನಿಯೊಳ್ ತಾಳಿ ಸುರರೆಂದು . . . ಹರಿ ನಡೆದನು (ಕಂಪ. ೩೦-೩೩). ೩. (ಅಲಂ) ವಶಪಡಿಸಿಕೊಳ್ಳು: ಅಂಕಿತಗೊಳಿಸು : ತಂಜಿಯ ದೊರೆ ವೇದೋಜಿಯುಮಂ ಜಗದೊಳ್ ತನಗೆ ಸಾಟಿಯಿಲ್ಲೆಂಬಾರ್ಪಿಂ ತಂಜಾವೂರಂ ಮಧುರೆಯನಂಜಿವ ದಾಮರ್ಲದೊರೆಯುಮಂ ಬೇಳಿಸಿದಂ (ಶಕಲ. ೩-೩೮).

[ಬೇಳ್$_1$ + —ಇಸು$_3$]

**ಬೇಳು$_1$** 'ಬೇಳ್$_1$' ನೋ.

**ಬೇಳು$_2$** 'ಬೇಳ್$_2$' ನೋ.

**ಬೇಳು$_3$**, ಬೇಳ$_3$ (ನಾ). ಒಂದು ಬಗೆಯ ಸಸ್ಯ: "ಶ್ಲೇಷ್ಮಾತಕಃ—ಬೇಳು, ನರುವಲು" (ಒಕಂ. ೦೬೦). **ಬೇಳ$_3$** : "ಬೇಳ ಪುಂಗಳ ತಿಳುವನಿಯೆನಿಕ್ಕು" (ಕುಂಗಶಾ. ೪೦-೩೦). [ ? ]

**ಬೇಳುಗರೆ** 'ಬೇಳ್ಗರೆ' ನೋ.

**ಬೇಳುಗೊಳ್**, ಬೇಳುಗೊಳ್ಳು (ಕ್ರಿ). ತಾಪಕ್ಕೆ ಒಳಗಾಗು : ಸಂಕಟಪಡು : ವ್ಯಸನಪಡು : ಮಡದಿ ಕಾರುಣ್ಯದೆ ಮೇಳಸಹಿತ ಬಂದೆನ್ನ ತಾಳದೆ ತಕ್ಕಿಸಲುಳಿವೆನಲ್ಲದೊಡಾನು ಬೇಳುಗೊಂಡಳಿವೆ ನಿಶ್ಚಯವು (ಅಪಂತ. ೦೬-೦೦೦). **ಬೇಳುಗೊಳ್ಳು** : ಈ ನಡೆಗೋಳದಲಿ ನೀ ಸಿಲುಕಿ ಬಱದೇ ಬೇಳುಗೊಳ್ಳದಿರೆಂದು ಬೋಧಿಸಿದಳು ನಿಜಾತ್ಮಜನ (ಶಿಶಾಗ. ೯-೦೭-೦೨).

[ಬೇಳು$_2$ (< ಬೇಳ್$_2$) + ಕೊಳ್$_1$]

**ಬೇಳುಗೊಳ್ಳು** 'ಬೇಳುಗೊಳ್' ನೋ.

**ಬೇಳುನುಡಿ** (ನಾ). ಮರುಳು ಮಾಡುವ ಮಾತು : ಆ ಬೇಳುನುಡಿಗೇಳ್ದು ಕೆಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ (ಶಂಕಥಾ. ೬-೨೪).

[ಬೇಳು$_2$ (< ಬೇಳ್$_2$) + ನುಡಿ$_2$]

**ಬೇಳುಮಾತು** (ನಾ). = ಬೇಳುನುಡಿ : ಬೇಳುಮಾತಿದು ಕುವರಿಯ ಜಿನಗೀವುದು ಕಾಲಹರಣ ಲೇಸೆಂದು (ಅಪಂತ. ೬-೭೪).

[ಬೇಳು$_2$ (< ಬೇಳ್$_2$) + ಮಾತು$_1$]

**ಬೇಳುರಿ** (ನಾ). ಹೋಮದ ಉರಿ,—ಜ್ವಾಲೆ : ಜನ್ನಗೊಂಡದ ಬೇಳುರಿ ಚಟಚಟಿಸಿ ಕಿಡಿಕಿಡಿವೋಪುದುಂ (ರಾಪಾಶ. ೪೩-೨).

[ಬೇಳು$_1$ (< ಬೇಳ್$_1$) + ಉರಿ$_2$]

**ಬೇಳುವಡು** (ಕ್ರಿ). ಕಳವಳ ಪಡು ; ತಳಮಳ ಹೊಂದು : ನೃಪತಿ ವಿಸ್ಮಯವಟ್ಟು ಮರವಟ್ಟು ಬೇಳುವಟ್ಟತಿಶಯ ಭಯವಟ್ಟು ಕೇಳಲದಱ ವೃತ್ತಾಂತವನು (ತ್ರಿಕುಶ. ೨೬-೦೪). [ಬೇಳು$_2$ (< ಬೇಳ್$_2$) + ಪಡು$_1$]

**ಬೇಳುವಡೆ** (ಕ್ರಿ). = ಬೇಳುವಡು : ಹೇಳಿದಾ ಕಪ್ಪವನು ತೆತ್ತೀ ತಲೆಯನುಳುಹಿಕೊಳು ಬೇಳುವಡೆಯದಿರೆಂದು ದೂತನು ಹೇಳೆ (ಶಾಸ್ತ್ರಾ. ೦೯-೦೦). [ಬೇಳು$_2$ (< ಬೇಳ್$_2$) + ಪಡೆ$_1$]

**ಬೇಳುವೆ$_1$** 'ಬೇಳ್ವೆ$_1$' ನೋ.

**ಬೇಳುವೆ$_2$** 'ಬೇಳ್ವೆ$_2$' ನೋ.

**ಬೇಳುವೆಗೊಳ್**, ಬೇಳುವೆಗೊಳ್ಳು (ಕ್ರಿ). ಕಳವಳಪಡು ; ತಳಮಳಿಸು: ಊಳಿಗದಂಗರಕ್ಷಕರು ತಾಳದೆ ತಲೆನವಿರ್ಗೆದಱ ಗೋಳಿಡುತಂದು ಬೇಳುವೆಗೊಂಡಯಿದ್ದರು (ಅಪಂತ. ೦೭-೪೩). **ಬೇಳುವೆಗೊಳ್ಳು**: ಕಾಲಕಾಲನ ಬಲೆಯೊಳಗೆ ಸಿಕ್ಕಿ ಬೇಳುವೆಗೊಳ್ಳುತಿದೆ ಜಗವೆಲ್ಲ (ಪತರ. ೪೩).

[ಬೇಳುವೆ$_2$ (< ಬೇಳ್ವೆ$_2$) + ಕೊಳ್$_1$]

**ಬೇಳುವೆಗೊಳ್ಳು** 'ಬೇಳುವೆಗೊಳ್' ನೋ.

**ಬೇಳುವೆದಳೆ** (ಕ್ರಿ). = ಬೇಳುವೆಗೊಳ್ : ಕಳೆದು ಕೆಲಹೊತ್ತಿನ್ನು ನಿದ್ರಾಲಲನೆ ಬೇಳುವೆದಳೆಯಲದ ಪದಗೊಳಿಸಲಾರದೆ (ಕಕುಥಾ. ೨೩-೭೦).

[ಬೇಳುವೆ$_2$ (< ಬೇಳ್ವೆ$_2$) + ತಳೆ$_1$]

**ಬೇಳುವೆಬೂದಿ** (ನಾ). ಮಂತ್ರಿಸಿದ ಬೂದಿ; ಮರುಳು ಮಾಡುವ ಬೂದಿ ; ಮಂಕುಬೂದಿ : ಹಾಲ ಚಲ್ಲಿದ ಚಂದದೊಳು ಪುಷ್ಪಬಾಣನ ಬೇಳುವೆಬೂದಿಯ ತೆರದಿ . . . ತೋರಿತು ಮೇಲಾದ ಬೆಳುದಿಂಗಳಾಗ (ಸೌಗಂಶ. ೩-೪೩). [ಬೇಳುವೆ$_2$ (< ಬೇಳ್ವೆ$_2$) + ಬೂದಿ]

**ಬೇಳುವೆಮಾತು** 'ಬೇಳ್ವೆಮಾತು' ನೋ.

**ಬೇಳೆ$_1$** (ನಾ). ೧. (ಕಡಲೆ, ಹೆಸರು, ಉದ್ದು ಇತ್ಯಾದಿ) ದ್ವಿದಳ ಧಾನ್ಯದ ಹೋಳು,—ಭಾಗ : ಕಾಳಾಗ್ನಿರುದ್ರನ ಮೇಳಾಪವನಱಿಯದಪರು ಕಾಳು ಬೇಳೆಯೆನುತಿಪ್ಪರಯ್ಯಾ (ಬಸವ. ೨೨೬) ; ಬಂದಿಸಿದ ಕಣಕ ದುಂಡೆಗಳನೊಂದೊಂದ ತೆಗೆದೊಂದಕ್ಕೆ ಬೆಂದ ಕಡಲೆಯ ಬೇಳೆಗಳನು ಮತ್ತೊಂದಕ್ಕೆ ಸೊಜ್ಜಿಗೆಯನು . . . ಇಕ್ಕಿ (ಸೂಶಕಾ. ೦-೩೦) ; ದ್ವಿದಳ ಧಾನ್ಯಗಳನ್ನು ಇಡಿಯಾಗಿ ಅಥವಾ ಬೇಳೆ ಮಾಡಿ ಉಪಯೋಗಿಸಬಹುದು (ಅತುಶಾ. ೬೩). ೨. ತೊಗರಿಬೇಳೆ : ಆ ವೇಳೆಗೆ ಬೇಳೆ ನುಣ್ಣಗಾದದ್ದರಿಂದ ಅದನ್ನು ಕೆಳಗಿಳಿಸಿ ಅನ್ನಕ್ಕೆ ಎಸರಿಟ್ಟಳು (ಮುಕ್ತ್ಯರ. ೨೩). ೩. ಭಾಗ ;

F-8 *

ಹಿಳುಕು : ಅಗಳುಹುಂಡಿ . . . ನಾರಂಬೇಳೆಯ ಬೇರು. ಚೆಳ್ಳುಳಿಯ ಸುಲಿದ ಬೇಳೆ ಇವು ಪ್ರತ್ಯೇಕ ೧೦ ಹಲವಾ ನಾಗಳ ನೀರಿನಲ್ಲಿ ಹಾಕಿ, ಕಷಾಯ ವಿಕ್ಕೆ (ಸಕವೈ. ೩೯೯). ೪. (ದ್ರವಪದಾರ್ಥಗಳನ್ನು ಅಳೆಯುವ, ಸುಮಾರು ಆರು ಸೇರುಗಳ) ಒಂದು ಅಳತೆ,—ಪ್ರಮಾಣ: ಒಳ್ಳೆಯ ಒಂದು ಬೇಳೆ ತೆಂಗಿನೆಣ್ಣೆಯಿದೆ. ಕೊಟ್ಟು ಹೋಗುವ ಎಂದು ಬಂದೆ (ಮುಕಜ್ಜ. ೩೪). ೫. ಒಂದು ನಾಣ್ಯ; ಹಾಗದ ಅರ್ಧಭಾಗ : "ಸಿಕ್ಕಿಸಲ್ಪೇಳೆಯೆರಡನೊಂದು ಪಾಗಂ" (ಪುಂಗರಾ. ೦೦೪-೧೧); ಅಯ್ವದಿಂ ಬರು ಸಾಸಿರ್ವರ(೦) ವಿರ್ದು ಬಾರಿಕೇಚಂಗೆ ಕೊಟ್ಟರು [ಪೊ] ಕ್ಕಲಲುಂ ಹಾಗ ತಲೆವೊಱಿಗೆ ಬೇಳೆ (ಶಾಇಇ. IX-i೯ ೬೬_೨೨; 991); ಹಣವಿಗೊಂದೀಸ ವಿಪ್ಪಣಕೊಂದು ಬೇಳೆಯನು ತ್ರಿಣಯನ ಮಕುಟವಾದರೂ ಆಕಸಾಲೆ ಟೊಣೆಯದೆ ಬಿಡನು (ಸರ್ವಜ್ಞ. ೦೯೦೦). ೬. (ಅಲಂ) ಉಪಾಯ; ಯುಕ್ತಿ: ತಂತ್ರ : ಲೇ ನಿನ್ನ ಕಣಿವೆ ಕೆಳಗಿನ ಬೇಳೆ ಇಲ್ಲಿ ಬೇಯೊಲ್ಲವೇ ! (ಪಕರಾ. I, ೩೦೩).

ಬೇಳೆಬೇಯಿಸು=೧. ತೊಗರಿಬೇಳೆಯನ್ನು ಪಕ್ವವಾಗುವಂತೆ ಮಾಡು : ಬೇಳೆಬೇಯಿಸುವಾಗ ಅದು ಬೇಗ ಬೇಯಲೆಂದು ಅಡುಗೆ ಸೋಡವನ್ನು ಬೇಳೆ ಎಸರಿಗೆ ಹಾಕುವರು (ಗೃಪಾ. ೩೦). ೨. (ಅಲಂ) ಯುಕ್ತಿ ಸಫಲವಾಗುವಂತೆ ಮಾಡು : ಈಗ ನನ್ನ ಮಾತೊಂದು ನಡೆಯ ಲಿಲ್ಲ. ಅವಳು ತನ್ನದೇ ಬೇಳೆ ಬೇಯಿಸಲು ಪ್ರಾರಂಭಿಸಿದಳು (ಭೂವಿಚಾ. ೬೪). ಬೇಳೆ ಬೇಯು = (ಅಲಂ) ಯುಕ್ತಿ ಸಫಲವಾಗು ; ಕಾರ್ಯ ಸಾಧನೆಯಾಗು ; ಪೋರ್ಚುಗಲ್‌ನವರು ಇಲ್ಲಿಗೆ ಬಂದ ಮೇಲೆ ತಮ್ಮ ಬೇಳೆ ಬೇಯದೆ ಹೋದ್ದರಿಂದ ಈ ರಾಜ್ಯವನ್ನು ಬಿಟ್ಟು ಒಬ್ಬೊಬ್ಬರಾಗಿ ಹೊರಟು ಹೋದರು (ಕ್ರಚಾಇ. II. ೩೩೩); ಅವನ ಮುಂದೆ ಅವರ ಬೇಳೆ ಬೇಯುಲಿಲ್ಲ (ಏಕುತ. ೦೯). ಬೇಳೆಯ ಕಾಳು=ಎರಡು ಭಾಗವಾಗು ವಂತಹ ಕಾಳು ; ದ್ವಿದಳಧಾನ್ಯ : ಬೇಳೆಯ ಕಾಳುಗಳು : ಕಡಲೆ, ಬಟ್ಟಗಡಲೆ, ತೊಗರಿ, ಚನ್ನಂಗಿ, ಉದ್ದು, ಹೆಸರು, ಅಲಸಂದಿ, ಅವರೆ (ಸಸ್ಯಶಾ. ೦೨೯). ಬೇಳೆಯ ಮಣಿ = ಬೇಳೆಮಣಿ : ನನ್ನ ಬೇಳೆಯ ಮಣಿಯೊಳಗಿನ ಬಂಗಾರವಲ್ಲವೆ ನೀನು ? (ಉದ್ಯಾ.ರಂ. ೯೯-೬).

[ದೇ.॥ ಕೊಡ. ತುಳು. ಬೇಳೆ; ತೆಲು. ಬೇಡಲು]

ಬೇಳೆ₂ (ನಾ). ಒಂದು ಬಗೆಯ ಔಷಧೀಸಸ್ಯ: "ಬೇಳೆಯೆನೆ ಮಱಪ ನಾಱಿಪವುಪಥ" (ಚತುಃ. ೦೩೦) ; ಬೇಳೆಯ ಪತ್ರಂಗಳೊಳಂ ಬೇಳೆ [ಪಾಠಾಂ. ಬಾಳೆ]ಯ ಗೆಡ್ಡೆಯನೆ ಕೂಡಿ ಮರ್ದಿಸಿ ಕುಡಲೇಂ ಪೇಟಲರಿ ದೆಂಬ ಕೊಳಕನ ಚೇಟಿನ ಪಾವರಣೆಯುಗ್ರವಿಷಮನದಟಿಗುಂ (ಖಘದ. ೦೦-೭೪). 'ನಾಱಿಂಬೇಳೆ' ಪರಾ. [ದೇ.॥ ತಮಿ. ವೇಳ್ಳೈ; ಮಲ. ವೇಳ]

ಬೇಳೆಕಾಳು (ನಾ). ೧. ತೊಗರಿ ಮುಂತಾದ ದ್ವಿದಳಧಾನ್ಯಗಳ ಹೋಳು—ಭಾಗ. ೨. (ಅಲಂ) ಶಕ್ತಿ ; ಸಾಮರ್ಥ್ಯ : "ನಾಳೆ ಗೊತ್ತಾಯ್ತದೆ ನಿನ್ನ ಬೇಳೆಕಾಳು" ಎಂದು . . . ಹೇಳಿ, ತಮ್ಮ ಮನೆಯ ಕಡೆ ತಿರುಗಿ ಆ ಮಬ್ಬುಗತ್ತಲಲ್ಲಿ ಕರಗಿ ಹೋದರು ಪಟೇಲರು (ಮುಗವೂಂ. ೨೪). [ಬೇಳೆ₁ + ಕಾಳು₂ (< ಕಾಱು₂)]

ಬೇಳೆಗೆಯ್ (ಕ್ರಿ). ಒಡೆದು ಭಾಗ ಮಾಡು,—ಚೂರು ಮಾಡು : ಒಗುಮಿಗೆ ಬೇಳೆಗೆಯ್ದು ಮೆಳಸಂ ತಳಿವಲ್ಲದ ಚಲ್ಲಯಂ ಪವಣ್ಬುಗೆ ಕಲಸಿರ್ದ ತಣ್ಣಲಸುಗೂಬಿನಿಳಾಪತಿಗಿತ್ತನಟ್ಟಿಯಿಂ (೦೯ಠಾಪ. ೩-೬೨).

[ಬೇಳೆ₁ + ಕೆಯ್₁]

ಬೇಳೆಮಣಿ (ನಾ). ತಾಳಿಯ ಜೊತೆಗೆ ಹಾಕಿಕೊಳ್ಳುವ, ಬೇಳೆಯಾಕಾರದ ಚಿನ್ನದ ಮಣಿ: ತಾಳಿದೋಲೆಯನಿಟ್ಟು ಬೇಳೆಮಣಿಯನು ಕಟ್ಟಿ ವೇಳೆಯನು ಅಱಿತು ನಡೆವವಳು ದೊರಕುವುದು ಶೂಲಿಯ ಕರುಣ (ಸರ್ವಜ್ಞ. ೦೬೬೬). [ಬೇಳೆ₁ + ಮಣಿ₃]

ಬೇಳ್ಕಟ್ಟೆ (ನಾ). ಬಲಿಪೀಠ ; ಪರುವನ್ನು ಬಲಿಕೊಡಲು ರಚಿಸಿರುವ ಜಗಲಿ : ಸರ್ಬಂಕೆಯುಂಬಿವ ಬೇಳ್‌ಕಟ್ಟೆಯೊಳ್ ಪರಿಕಿಸಲ್ ಬೇಳ್ವೆ ಯಿನ್, ಕೊಟ್ಟ ಬಲಿಯಿಂದ ಬೆಳಗಿದನ್ನಿಲ್ಲ ತಾನ್ ಅಗ್ನಿದೇವನ್ (ಆಂತಿಗೂ. ೯೨-೯೨೮) ; ಅದುಮವರಂ ಶೂನ್ಯಾರ್ಥಮಾಗಿರ್ದ ಬೇಳ್‌ಕಟ್ಟೆಯುರಿಗಳ್ಗೆ ಸೂಚ್ಯಾರ್ಥಂಗಳನ್ ಸುಸ್ಪಷ್ಟಗೊಳಿಸಿದೆನ್ ಅವರ್ಗೆ (ಐತೃಕ್ರ. ೨೬-೩೩೬).

[ಬೇಳ್₁ + ಕಟ್ಟೆ₁]

ಬೇಳ್ಕೆ (ನಾ). ಬೇಡುವಿಕೆ ; ಕೋರಿಕೆ (?) : ಮೃಡನುಡುರಾಜ ಪನ್ನಗ ವಿರಾಜಿ . . . ಸುರಾಸುರ ಕದಂಬಕಸೇವ್ಯಪದಾಂಬುಜದ್ವಯಂ ಅಡರೆ ಪ್ಪುಡಾನಿಗನ್ಯಕುಳಕ್ಕಳಕುಳಂಗಳ್ ನಾಡೆ ರಯ್ಯಮಪ್ಪೆಡೆಗಳನೆಲ್ಲಮಂ ನೆಱೆಯೆ ತೋರ್ಪುದು ಬೇಳ್ಕೆಯ ಬಂದನೀಶ್ವರಂ (ಕಾವ್ಯಾವ. ೯೩೬) : ಕೇಳುವರ ಗೊಂದಣಕೆ ಶಿಷ್ಯನ ಮೇಲುವಾಕಿನ ಬೇಳ್ಕೆಗೊಡನನುಕೂಲವಾದುತ್ತರವ ವಿಂಗೆ ಗುರುಸ್ತೂಕ್ತಿಯಿಲ್ಲದಿರೆ (ಏಬೀಶ. ೩-೦೨). [< ಬೇಡು₁ + —ಕೆ]

ಬೇಳ್ಗರೆ. ಬೇಳುಗರೆ (ಕ್ರಿ). ೧. ಅರಚುವಂತೆ ಮಾಡು ; ಆಕ್ರಂದನ ಮಾಡಿಸು (?) : ನೆರೆದು ನಾಲ್ದೆಸೆಯುಂಬುಮಯ ಮುಯಗರೆದು ಬತ್ತೀ ಸಾಯುಂಥರ[ದೆ] ಬೇಳ್ಗರೆದು ಮುತ್ತಿದರರಸ ಚಿತ್ತೈಸಾಗ ಬರ್ಬರನ (ಕಶುರಾ. ೬-೯೪). ಬೇಳುಗರೆ : ೨. ಆಕ್ರಂದನ ಮಾಡು : ಬೋಳೆಯಂಬಿನ ಗಾಯದ ಬಾಯ್ದೆಱೆಯಿಂದ ಬೀಳುತ ಗೋಣ್ಮುರಿಗೊಂಡು ಬೇಳುಗರೆವ ಹಸುಳೆಯ ನೆಕ್ಕುವ ಹುಲ್ಲೆಯೋಳಿಯುಳಿದವರೊಳಗೆ (ಪೇಏಸಂ. ೨-೩೩) ; ಒಬ್ಬೊಬ್ಬರು ಒಂದೊಂದು ಹುಲ್ಲೆಮರಿಯನ್ನು ಹಿಡಿದುಕೊಂಡು ಬಂದರು. ಅವುಗಳು . . . ತಮ್ಮ ತಾಯಿಗಳನ್ನು ಕಾಣದೆ ಬೇಳುಗರೆಯುತ್ತಿದ್ದವು (ಕಂಗಾಳ್. ೪೨೩). [ಬೇಳ್₂ + ಕರೆ₁]

ಬೇಳ್ಪು₁ 'ಬೇಡು₁' ಪರಾ.

ಬೇಳ್ಪು₂ 'ಬೇಳ್₁' ಪರಾ.

ಬೇಳ್ಪೊಲ (ನಾ). (?) : ಈಶಂಗೆ ಬೇಳ್ಪೊಲನಾವಂ ಶಿವಭಕ್ತನಾತನೆಲೆ ಸದ್ಭಕ್ತಂ (ಕಂಶಾಚ. ೩೯). 'ಬೆಳ್ಪೊಲ' ಹೋ. [? + ಪೊಲ]

ಬೇಳ್ಮೆ (ನಾ). ·ಮರುಳುಮಾಡುವಿಕೆ ; ಮೋಸಗೊಳಿಸುವಿಕೆ : 'ಬೇಳ್ಮೆ ಮಾತು' ಪರಾ. [ಬೇಳ್₂ + —ಮೆ₃]

ಬೇಳ್ಮೆಮಾತು (ನಾ). ಮರುಳುಮಾಡುವ ನುಡಿ : ನೀಚರ ಬೇಳ್ಮೆ ಮಾತನ್ನು ಕೇಳಿ ಕೆಡತಕ್ಕದ್ದೇ ಹೆಂಗಸರ ಹಣೆಯಲ್ಲಿ ಬರೆದಿದೆ (ಅದೂಟ. ೧೬೩). [ಬೇಳ್ಮೆ + ಮಾತು₁]

ಬೇಳ್ವ₁ 'ಬೇಡು₁' ಪರಾ.

ಬೇಳ್ವ₂ 'ಬೇಳ್₁' ಪರಾ.

ಬೇಳ್ವೆ₁, ಬೇಳುವೆ₁ (ನಾ). ೧. ಹೋಮ ; ಯಜ್ಞ : ಸೊಗಯಿಸುವ ಗಂಗಾದ್ವಾರದೊಳ್ ಮುನಿಜನಂಗಳ ಬೇಳ್ವೆಗಳ್ಗೆ ಪದ್ಮವಂಗೆಯ್ದು ನಿಟಾಲ ಕೋಟಿಯಂ ನಿಶಿತಶರಕೋಟಿಯಿಂದಮುಱುಟಸಿ (ಶಂಶಾ. ೪-೮೩ ವ). ೨. ಆಹುತಿ ; ಬಲಿ : ಪೊಱಲ ಬೇಳ್‌ಕಟ್ಟೆಗಳ್ ಮನೆಯ ಬೇಳ್‌ಕಟ್ಟೆಗಳ್, ಎಲ್ಲಮುಮವ್ ಪೊಳೆಗಲಸಿಯಿರ್ದತ್ತು . . . ದೇವತೆಗಳದಱಿಂದವಿನ್ ಕೊಳ್ಳರೆವ್ವಿತ್ತ ಬೇಳ್ವೆಯನ್ (ಅಂತಿಗೂ. ೯೩-೯೯೦). ಬೇಳುವೆ₁ : ೧. ಬೇಳುವೆಯ ನೋಡೆನುತ ಮುನಿಗಳತಿಕೋಪದಿಂ ಸರ್ಪಹೋಮವನು ಮಾಡೆ (೦೯೩೦. ೨೦-೯) ; ಅಶ್ವಮೇಧದ ಬೇಳುವೆಯ ಸಂಭ್ರಮದ ಧಾಳಾ ಧೂಳಿಯಲಿ ತಿವಿದಾಡಿದವು ಜಿಷ್ಣೆಗಳು ಹುತವಹನ (ತೊರರಾ. ೦-೭-೯೮); ಬೇಳುವೆಗಳ ಭಸ್ಮದ ಕೊಪ್ಪರಿಗೆಯ ಸಾಲೊಪ್ಪಿದುವು ದುರ್ಗದೊಳಗೆ (ಕಂಶಪ. ೦೦-೦೩೪). [ಬೇಳ್₁ + —ಪೆ]

ಬೇಳ್ವೆ₂, ಬೆಳುವೆ, ಬೇಳುವೆ₂ (ನಾ). ೧. ಮರುಳು ; ಮಾಯೆ ; ಮಾಟ : ತಲೆದೂಗಿ ಕೈರವಶ್ಯಾಮಳಂ ಬೇಳ್ವೆಯಿಂದಳವ್ವದೋರದೆ ಮತ್ತೆ ನಮ್ಮನೇ ನುತಿಗೈದು ಸಳಿನು ತಕ್ಕೆಯುತ್ತ ಮಾತ್ರದಂ ಮರಸಿದಂ (ಶರಬ. ೦೯-೨೦).

**ಬೆಳುವೆ :** ೧. ವಿಲಾಸದ ನಿವಾಸವು ಬೆಳುವೆಯ ಬೆಳಸಿರಿ . . . ಎನಿಪ ಬೆಲವೆಣ್ಣಳ್ಳೈತಂದರು (ಸೌಂದಕ. ೬-೩೦). P ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಬೇಳುವೆ$_2$:** ೩. ವಶೀಕರಣಮಾಡುವ ಉಪಾಯ,–ಸಾಧನ : ವೀಳೆಯದೊಳಗೆ ಮದ್ದುಂಟೊ ನಿನ್ನರಸನಾ ತೋಳೊಳುಂಟೊ ವಶ್ಯಯಂತ್ರ ಬೇಳುವೆಯುಂಟೊ ತಿಲಕದೊಳಲ್ಲದರಿಂಜು ಬೇಳಾಗಿ ನೀನು ಸಿಕ್ಕುವೆಯ (ಭರತ. ೯-೦೦೦) ; ತಾಳಿ ಹೊನ್ನುಂಗುರದವ ಬರೆ ಮೋಹದ ಬೇಳುವೆಯನು ನೀ ತಳೆದು ಮೇಲಾದೊಡಮೆಯ ಸೆಳೆ ಕೊಂಡಾತನ ಬಾಳಿಸಿ ಬಿಡು ನೀ ಮಗಳೆ (ಕಂಪರಿ. ೬–೦೩೬). ೪. ದಡ್ಡತನ; ಬೆಪ್ಪುತನ ; ಮೂರ್ಖತನ : ಸದ್ಗುರುಮುಖವನಱಿಯದಿಹ ಬೇಳು ವೆಯ ಬುದ್ಧಿಯಲಿ . . . ಖಳ ತನ್ನೋಲಗಕೆ ನಡೆತಂದು ಮಂತ್ರಿ ಪ್ರಕರಕಿಂತೆಂದ (ಅಕ್ರೂತ. ೬-೮). ೫. ಮೋಸ; ವಂಚನೆ : ಹೇಳುವೆನು ಕರ್ಣಂಗೆ ಶಕ್ರನ ಬೇಳುವೆಗೆ ಸಿಲುಕದ ಪಥಿಯನೆಂದಾಲಿಸುತ ರವಿಯಿದ್ದ ನಿತ್ತಲು (ಕುಮ್ಮಾಅ. ೩೦೩. ೨೩-೨); ಬಲಿಭೂಪತಿಯಾಳುವ ನಾಡೊಳೆಲ್ಲಿಯುಂ . . . ಬೇಳುವೆ ಕೈತವಂ ಕಳವು ಹಾದರವಿಲ್ಲನೃತಂಗಳಿಲ್ಲ (ದಶಾವ. ೬-೮೬); ಪುಲಿಕೇಶಿಯು . . . ಲಾಟರ ಆಟವನ್ನು ನಿಲ್ಲಿಸಿ ಮಾಳವರ ಬೇಳುವೆಯನ್ನು ಮುರಿದು ಗುರ್ಜರರನ್ನು ಜರ್ಝರ ಮಾಡಿದನು (ಶಕ್ಕೋಶಿ. ೦೨೨). ೬. ಮೈಮರೆವು ; ಎಚ್ಚರವಿಲ್ಲದಿರುವಿಕೆ: ಅವುಗಿದೇವಯ್ಯನರಸಿ ರುದ್ರಮ್ಮಗೆ ಕವಿದುದು ನಿದ್ರೆ ಬೇಳುವೆಯು (ಅಮುಗಾಂ. ೪-೩೬). ೭. ಕಳವಳ ; ಸಂತಾಪ : 'ಬೇಳುವೆಗೊಳ್' ಪರಾ. ೮. ಹಿಂಸೆ ; ಕಾಟ ; ಪೀಡೆ: ಕಾಮನ ಬೇಳುವೆಗೆ ಬೆಂಡಾದುದಿಬ್ಬರ ಧೈರ್ಯವಡಿಗಡಿಗೆ (ಕುಮ್ಮಾಅ. ೯-೩೬).

**ಬೇಳುವೆಮಾಡು**=ಮಾಟಮಾಡು : ತೋಳ ಮೇಲೆಸೆವ ನರ್ತಕಿ ಸಹಸ್ರ ಗಳಾಗೆ ಬೇಳುವೆ ಮಾಡಿ ನೋಟಕರ ತಾಳದಾಡಿದನಾ ಶಕ್ರನ ವಿಕ್ರಿಯದಾ ಳಾಪವೇನ ಪೇಳುವೆನು (ಅಸಂಶ. ೬-೦೬೭). **ಬೇಳ್ವೆಯ ಬೂದಿ** = ಬೇಳುವೆ ಬೂದಿ : ಅರಲ ಪರಾಗವೆಂಬ ಪೊಸ ಬೇಳ್ವೆಯ ಬೂದಿಯನಿಟ್ಟು ಮಲ್ಲಿಕಾ ತರುಣಿಯ ಭೃಂಗನೀಲಮಣಿಮಾಲೆಯನೊಯ್ವಲರೆಂಬ ಚೋರನಂ ಪರ ಭೃತನಂದು ಕಂಡು (ರಾಜಶೇ. ೦೦-೨೩). [ಬೇಳ್$_2$ + –ವೆ]

**ಬೇಳ್ವಮಾತು,** ಬೇಳುವೆಮಾತು (ನಾ). ಮರುಳಂ ಮಾಡುವ ಮಾತು; ಬಣ್ಣದ ಮಾತು : ಅವರ ಬೇಳ್ವಮಾತಿಗೆ ಮರುಳಾಗಿಬಿಟ್ಟು, ಆ ಹೆಳವೀನೇ ಹೆಂಡತೀಂದುಕೊಂಡುಬಿಟ್ಟಿರೆ, ನನ್ನ ಮನೆ ಹಾಳಾಗಿಹೋಗಿ ಬಿಡುತ್ತಲ್ಲಯ್ಯಾ! (ಉಮಾಶ. ೬೨) ; ಸಾವಿತ್ರಮ್ಮ ಏನೂ ಅರಿಯದವರು. ಬೇಳ್ವಮಾತಿಗೆ ಬಹಳ ಬೇಗ ಮೋಸಹೋಗುತ್ತಾರೆ (ತಾಯಿಳ. ೩೨). **ಬೇಳುವೆಮಾತು :** ಈ ಬೇಳುವೆಮಾತಿಗೇನಂತೆ ? ನೀನು ಮಾರ್ಟು ಮಾಡಿದರೆ ಅವಳಿಗೆ ಸೊನ್ನೆ ಬಿದ್ದಿಗೆ? (ತರಾಱು. ೬).

[ಬೇಳ್ವ$_2$ + ಮಾತು$_1$]

**ಬೇಳ್ವೊಲ** (ನಾ). (ಯಜ್ಞಭೂಮಿಯಂತಿರುವ) ಮಟ್ಟಸವಾದ ಭೂಮಿ (?) : ಆಳ್ವಲಮುಳ್ಳೊಡಶ್ವಬಲಮಿಲ್ಲ ಭಟಾಶ್ವಬಲಂಗಳು ಳ್ಳೊಡಂ ತೋಳ್ವಲಮಿಲ್ಲ . . . ಆಳ್ವಸಗೆಯ್ಯದೇಕೆ ಬಲಿವರ್ ಮಲೆಪರ್ ಮಲೆಯೆಂಬುದೇನದಂ ಬೇಳ್ವೊಲಮಾಗೆ ಮುಂ ತುಱಿದನಲ್ಲನೆ ಲಕ್ಷ್ಮಣನೆಂಬ ರಾವಣಂ (ಎಕ. VII, ಶಿಕಾ೦. ೦೩೬-೨೭; ?; ಕಾಶಮಂ. ೮೮ ನೋ). 'ಬೇಳ್ವೊಲ' ನೋ. [ಬೇಳ್$_1$ + ಪೊಲ]

**ಬೇಱ್,** ಬೇರ್$_2$, ಬೇಱು (ಸಪೂರೂ). 'ಬೇಱ್$^3$' ಎಂಬುದಕ್ಕೆ ಸಮಾಸ ಗಳಲ್ಲಿ ಬರುವ ಆದೇಶರೂಪ : 'ಬೇಱೂರ್', 'ಬೇರ್ಕೆಯ್' ಪರಾ. **ಬೇರ್$_2$ :** 'ಬೇರ್ವಣೆ' ಪರಾ. **ಬೇಱು :** ಒಂದಱಲ್ಲಿ ಒಂದು ಬಿಚ್ಚಿ ಬೇಱುಮಾಡಬಾರದಾಗಿ ಪ್ರಾಣಲಿಂಗ ಒಂದೆ ಉಪದೇಶವೊಂದೆ ಕ್ರಿಯಾಕರ್ಮ ಒಂದೆ ನೀವಿನ್ನಾವುದ ಬೇಱುಮಾಡಿ ನುಡಿವಿರಯ್ಯಾ (ಶನ್ಯಸ. ೪. ೨೦-೯೬); ಕುವಲಯವೈರಿ ಪಂಕರುಹಮಿತ್ರನ ಶೇಖರನಾಪಹರ್ತ ಮೆಂದವನಿಜನಂ ಪಿಸುಣ್ಗೆಡೆವೆಲೇ ಜಗದಂಬಿಕೆ ಬೇಱುಮಾಡಿದರ್ (ಅಪಂಶ. ೪-೦೦೬). 'ಬೇಱುದೋಱು', 'ಬೇಱುಪಡು' ಪರಾ.

[< ಬೇಱ್$^3_1$. / ತಮಿ. ಮಲ. ವೇಱು; ತೆಲು. ವೇರು. ವೇಱು; ಕೋತ. ವೆರ್]

**ಬೇಱಿರಿಸು** (ಕ್ರಿ). ಪ್ರತ್ಯೇಕವಾಗಿ ಇರಿಸು ; ಬೇರೆಯಾಗಿರಿಸು : ವ್ರತಹೀನರನನಿಬರುಮಂ ಕ್ಷಿತಿಪತಿ ಬೇಱಿರಿಸಿ ಮಾನ್ಯರಂ ಮನ್ನಿಸೆ (ಆದಿಪು. ೦೩-೦೩); ಕರಗಿ ಕಾಸಿದ ವಿದ್ಯೆಯನು ಬೇಱಿರಿಸಿ ಶುದ್ಧಬ್ರಹ್ಮವನು ಕಂಡರಿಸಿದಂತಿರಲೆಸೆವ ಶಿವನನು ಕಂಡನಬುಜಭವ (ಕುಮ್ಮಾಕ. ೬-೦೬); ಸರ್ವಜ್ಞ ಸರಸಿಜೋದರ ಕಂತುರತಿಗೆ ಗಾಂಧರ್ವವಿವಾಹವ ಮಾಡಿ ನಿವಾರಣಗೊಟ್ಟು ಬೇಱಿರಿಸೆಂದು ಮುನಿ ಗರ್ವದಿಂ ಬಿನ್ನಯಿಸಿದನು (ವೋಹತ. ೦೩-೬೨). [ಬೇಱ್$^3_2$ + ಇರಿಸು]

**ಬೇಱು** 'ಬೇಱ್' ನೋ.

**ಬೇಱುಕೆಯ್** 'ಬೇರ್ಕೆಯ್' ನೋ.

**ಬೇಱುಗಾಣ್** (ಕ್ರಿ). ಬೇರೆಯಾಗಿ ಕಾಣು ; ಪ್ರತ್ಯೇಕವಾಗಿ ಗಣಿಸು : ಭಂಡಾರ ಬೊಕ್ಕಸ ಮನೆಗಳ ನೋಳ್ಪನಾ ಭಂಡಾರಿಗಳು ನೋಡುವಂತೆ ಕಂಡವರೆಲ್ಲರೀ ನೃಪನದೆಂಬರು ಬೇಱುಗಂಡೆಣಿಸುವನು ತಾನೊಳಗೆ (ಭರತ. ೬೩-೩೩). [ಬೇಱು (< ಬೇಱ್$^3_1$) + ಕಾಣ್]

**ಬೇಱುದೋಱು** (ಕ್ರಿ). ಬೇರೆಯಾಗಿ ತೋರು,— ಕಾಣಿಸು ; ಪ್ರತ್ಯೇಕ ವಾಗಿ ನಿಲ್ಲು : ಗುರುಮಹಾತ್ಮೆಯೊಳಗೆ ಶಿಷ್ಯ ಬೆರಸಿ ಬೇಱುದೋಱದೆ ಗುರುವೆ ಶಿಷ್ಯ ಶಿಷ್ಯನೆ ಗುರುವಾದ ನಿತ್ಯಸೇವ್ಯನು (ಶಿವಗೀ. ೯೬-೪೬೭).

[ಬೇಱು (< ಬೇಱ್$^3_1$) + ತೋಱು]

**ಬೇಱುನುಡಿ** (ಕ್ರಿ). ಪ್ರತ್ಯೇಕವಾಗಿ ಹೇಳು ; ಬೇರೆಯಾಗಿ ಹೇಳು : ಬೇಱುನುಡಿವೆಡೆಯೊಳಾ ವ್ಯತಿಪೃಥಗ್ವಿನಾಂತರಮೆಂಬ ಪೆಸರ್ಗಳಕ್ಕುಂ (ಮಂಗರಾ. ೦೩೩-೬೦). [ಬೇಱು (< ಬೇಱ್$^3_1$) + ನುಡಿ$_1$]

**ಬೇಱುಪಡು** 'ಬೇರ್ಪಡು' ನೋ.

**ಬೇಱುವೋಗು** (ಕ್ರಿ). ಪ್ರತ್ಯೇಕವಾಗಿರು : ಬೇಱುಮನವಾದೀತೆಂದು ಬೇಱುವೋದಳು ನೋಡಾ ಅವ್ವಾ ಕಮ್ಮರಿವಱವಳು ನೋಡಾ ಅವ್ವಾ (ಸಳವ. II, ೨೦೨-೩೭). [ ಬೇಱು (<ಬೇಱ್$^3_1$)+ಪೋಗು$_1$ (< ಪೋ$_1$)]

**ಬೇಱೂರ್** (ನಾ). ಅನ್ಯಸ್ಥಳ; ಪರವೂರು : ನೋಂಬನಂ ಮೆಚ್ಚಿ ಬೇಱೂರ್ಗೆ ಪೋದ ನೂಳೆಯುಂತುಯ್ಯಲಾಡುವ ರಣದೇವತೆಯರಿಂ (ಕಾವ್ಯಸಾ. ೩೨೯ ಓದ್ರಕ) ; ಬೇಱೂರ್ಗೆ ಪೋದ ನಲ್ಲರ ನೆನೆದು ದೂಱುಸುವ ನೀಱೆಯರ ನಿಡುಸುಯ್ಯ ಗಡಣದಿಂ (ಕಬ್ಬಿಗ. ೩೯); ಮಗಳ್ಗೆ ಬುದ್ಧಿ ಪೇಳ್ದು ನಿಜರಮಣವೆರಸಿ ಬೇಱೂರ್ಗಮಂ ಪೋದಾಗಳ್ (ವೃಷಭ. ೯–೬೦ ವ).

[ಬೇಱ್ + ಊರ್]

**ಬೇಱ್$^3_1$,** ಬೇರೆ$_1$ (ನಾ). ೧. ಪ್ರತ್ಯೇಕವಾದುದು ; ಸಂಬಂಧವಿಲ್ಲದುದು: ದೂಱಲಱಿಯೆನು ಸುಭಟರಿಗೆ ಮನ ಬೇಱೆ ನುಡಿ ಬೇಱಾಯ್ತು ಸಮರದೊಳು (ಕುಮ್ಮಾಶ. ೬-೮). ೨. ವಿಶಿಷ್ಟವಾದುದು : ಆ ಕಾಂತೆಗಂದು ನಯಂ ಬೇಱೆ ಬೆಡಂಗು ಬೇಱೆ ಪೊಳೆಮಂಗಚ್ಛಾಯೆಯುಂ ಬೇಱೆ ತೊಟ್ಟನೆ ಮೆಯ್ವೊಱೆ (ಆದಿಪು. ೬-೨೩) : ಸಿರಿ ಗಿರಿಜಾತೆ ಶಾರದೆ ಶಚಿಮುಖ್ಯರು ಸರಿಯಲ್ಲವಿವಳಚ್ಚು ಬೇಱೆ (ಪೋಹತ. ೦೦-೩). ೩. ಇನ್ನೊಬ್ಬ ವ್ಯಕ್ತಿ; ಅನ್ಯವ್ಯಕ್ತಿ : ನೀಂ ಬೇಱೆಮಗೆ ಸುಯೋಧನನೇಂ ಬೇಱೆಯೆ (ಶಂಕಶಾ. ೬-೬೩) ; ಇವಳೆನ್ನ ಶರೀರದಿಂ ಬೇಱಲ್ಲಳ್ (ಕಾದಂಪೂ. ೮೦೬) ; ನೀಂ ಬೇಱಾಂ ಬೇಱೆಂಬ ಭಿನ್ನಬುದ್ಧಿ ನಿನಗಂ ನನಗಂ ಬೇಡ (ಶಂಶಕಂ. ೦೨೩-೪). (ಗು). ೪. ಪ್ರತ್ಯೇಕವಾದ : ಮರಕತಮಣಿವಿರಚಿತ ವಿಮಲಭಿತ್ತಿ ಪೊಗಟಲ್ಕರಮರಿದಟು ಬೇಱೆ ಭಿತ್ತಿ (ಆದಿಪು. ೪-೩೦ ರಗಳೆ) ; ಬೆಡಂಗುಗಳ ಬೇಱೆ ಭಂಗಿಗಳ ಲ ಳಿ ಗ ಳಿ ದೇ ಂ ಕಡುಜಾಣನೆ

(ಎಕ. II. ೧೪೩-೦೦೬; 982), ಆನು ಚೆನ್ನಮಲ್ಲಿಕಾರ್ಜುನಂಗೆ ಮದುವಳಿಗೆ ಎನಗೆ ಬೇಱು ಶೃಂಗಾರವೇಕೆ (ಶುಶಾದೇ. ೨. ೩೬-೬೮) ; ದೇಹಚ್ಛಾಯೆ ಗುಂಟೇ ಬೇಱು ಬೇಷ್ಟೆ (ಕುಮ್ಯಾ. ೦೨-೯೪). ಬೇರೆ₁ : ೪. ಮಹತ್ ವರ್ಗದಲ್ಲಿ ಮೊದಲಿನಿಂದಲೂ ಮೆರೆಯುತ್ತಿದ್ದ ಪ್ರತ್ಯಯಗಳನ್ನು ಹಾಗ ಬಿಟ್ಟು ಬೇರೆಡೆಗೆ ಹೋಗುವಂತೆ ಮಾಡಿತು ! (ದ್ರಾ.ಶಿ. ೨೬೬) ; ನೋಟಗಳ ಕಗ್ಗಟ್ಟು ಬಿಚ್ಚಿದಂತಾಗಿ ಮೇಣ್ ಆಟವಾಡುತಲಿಹುದು ಬೇರೆಡೆಯು ಬಿಗಿದು (ಕಾಂಚನ. ೪೩-೩೩).

ಬೇಱುವೇಱು, ಬೇರೆಬೇರೆ, ಬೇಱುಬೇಱು (ದ್ವಿರುಕ್ತಿ) : ವಾಸುಗಿಯುಂ ಮಱಿಯಲಾಱದೆ ಬೇಸಱುಗುಂ ದೇಶಿ ಬೇಱುವೇಱುಪ್ಪುದಱಿಂ (ಕಪಿಶಾ. ೦-೪೬); ದ್ವಾರವತಿಯಲ್ಲೂ ಜೋಡಿದೇವಾಲಯಗಳು ಕಟ್ಟಲ್ಪಟ್ಟವು. ಆದರೆ ವೇಲಾಪುರಿಯಲ್ಲಿದ್ದಂತೆ ಬೇರೆಬೇರೆಯಾಗಿರದೆ, ಒಂದಸ್ನೊಂದು ಅಂಟಿ ಇದ್ದವು (ಶಾಂತಲಾ. ೦೩೮) ; ಪಂಚೇಂದ್ರಿಯವೃತ್ತಿಗಳೆ ಬೇಱುಬೇಱು ರೂಪಂದಳೆದುವೆನಿಪಂಗುಳಿಗಳಿಂ ಮನಂಗೊಳಿಸುವ ಕರಕಮಲಂಗಳ ಚಂದ್ರಾಪೀಡಂ ನೀಡೆ (ಕಾದಂಬ. ೩೮).

[ದೇ.॥ ಕೊಡ. ಬೋರೆ ; ತೆಲು. ವೇರೆ]

**ಬೇಱು₃**, ಬೇರೆ₂ (ಅ). ೧. ಪ್ರತ್ಯೇಕವಾಗಿ : ಪದಿನೆಂಟುಕೋಟಿರಥಂ ಬೆರಸು ಬೇಱೊಡ್ಡಿ ನಿಂದರ್ (ಕಂಶಶಾ. ೦೦-೩೬ ಶ) ; ಎನಗೆ ಭೀಮಾರ್ಜುನರವೊಲು ನೀನನುಜನಲ್ಲದೆ ಬೇಱು ನಿನ್ನಲಿ ಮನವಿಭೇದವ ಬಲ್ಲನೇ (ಕುಮ್ಯಾ.ಶೀ. ೨-೩೯); ಕಟ್ಟೆಂಬ ನುಡಿ ಮಾಲೆಗಾರ್ತಿಯರೊಳು . . . ಕುಟ್ಟೆಂಬ ನುಡಿ ವ್ರೀಹಿಯೊಳಲ್ಲದೆ ಬೇಱು ದಿಟ್ಟಸಲಾ ನಾಡೊಳಿಲ್ಲ (ಕೆಂಪ. ೨-೦೩). ಬೇರೆ₂ : ೨. ಕೂಡ ; ಜೊತೆಗೆ : ಆರ್ಯಕ :— ಆಯುಧಪಾಣಿಗಳು ಬೇರೆ (ಆರ್ಯಕ. ೦೩). [<ಬೇಱು₁]

**ಬೇಟು ?** (ನಾ). (?) : ಸುಗವಳ್ಳಿಯಾಯ್ಯುಯ್ಯಗಾವುಣ್ಡ ಗೋಸಾಸ ವಿಟ್ಟಂ ಅಮಿತ್ರರ್ಗರಸಿಗೆ ಬೇಟಂ ಕಾಲ ಕಟ್ಟಿ ಕೊಟ್ಟರ್ (ಮ್ಯಶಿ. ೦೯೪೨. ೬೦-೦೨ ; 1002). [ ? ]

**ಬೇಟಿ**, ಬೇಳಿ (ನಾ). ೧. ಹೇಡಿ ; ಅಂಜುಪುರುಕ : ಕಾಳಾಂತಕನಂತೆ ನಾಡೆ ಹಳಿಯುಂ ಹರಿಯುಂ ಕಡುಕೆಯ್ದು ಪಾಯ್ದು ಮಾಱಾಂತಿಱ ವಲ್ಲಿ ಬೇಟಿ ಭಯದಿಂ ಬಿಱಿತೋಡ[ನೆ] ನಿನ್ನಧೀಶ[ನುಂ](ಪರ್ವಶು. ೪-೨೪). ಬೇಳಿ : ೨. ನಪುಂಸಕ ; ಷಂಡ : ಖೂಳನಂ ಮೂಳನಂ ಮೋಟನಂ ಮುಕ್ಕನಂ ಕೀಳುಜಾತಿಯನು ಪುರುಳಿದ ಮೆಯ್ಯಾದೊಡಂ ಬೇಳಿ ಬೆಲೆಯಿತ್ತೊಡವನಂ ಕಾಮನೆಂಬ ದುಶ್ಶೀಲೆಯರು ಕಣ್ಗೆಸೆದರು (ಹತಕಾ. ೪-೪೪).

[<ಪೇಡ₁]

**ಬೇಟೂರ್** (ನಾ). ಒಂದು ಊರಿನ ಹೆಸರು : ಬೇಲೂರರಾ ಮಗಂ ಮಾವಪ್ಪನ್ ಪ್ರಭುಗಾಡ ಬೇಟೂರಾ ಎಮ್ಮೆಯ ತೊಕಳೊಳ್ ಗುದ್ದಿ ಅನ್ಸಾಱಿದು ಸತ್ತನ್ (ಎಕ. X, ಕೋಲಾರ. ೨೨೬-೨ ; ಸು. 950?).

[ ? + ಊರ್]

**ಬೇಟ್ಟು** 'ಬೇಡು₁' ಪರಾ.

**ಬೈ₁** 'ಬಯ್₁' ನೋ.

**ಬೈ₂** 'ಬಯ್₂' ನೋ.

**ಬೈ₃** 'ಬಯ್₃' ನೋ.

**ಬೈ₄** (ನಾ). (ಬತ್ತದ) ಒಣಹುಲ್ಲು : 'ಬೈಸೂಡಿ', 'ಬೈಹುಲ್ಲು' ಪರಾ. [←ತುಳು. ಬೈ, ಬಯಿ]

**ಬೈಂಡು** (ನಾ). ಪುಸ್ತಕಕ್ಕೆ ಹೊದಿಸಿದ ರಟ್ಟು,— ಮೇಲುಹೊದಿಕೆ : ಬಂಗಾರದಂಚು ಮೊರೊಕೊ ಬೈಂಡು (ಅರಲೋ. ೩೩). [← ಇಂ. Bind]

**ಬೈಂದವ** (ಗು). ೧. ಬಿಂದುವಿಗೆ ಸಂಬಂಧಿಸಿದ. (ನಾ). ೨. [ಶೈವ] ನಿರ್ಮಲತೆ ; ಶುದ್ಧತೆ : ಷಡಧ್ವಾತೀತವಾದ ನವಚಕ್ರೋರ್ಧ್ವಭಾಗವ ಪರಿಗ್ರಹಶಕ್ತಿಯ ಮಸ್ತಕಾಗ್ರದಲ್ಲಿ ನಿರ್ಮಲ ಪರಿಪೂರ್ಣ ಪರಪ್ರಕಾಶಮಹಾ ಶಕ್ತ್ಯವಿನಾಭೂತ ನಿಜವಸ್ತುವಿನಲ್ಲಿ ಬೈಂದವಾನಂದಾದಿ ವಿಲಕ್ಷಣೆಯಿಂದಾದ ನಿಜಶಿವಾಭಿವ್ಯಕ್ತಿಯಿಂದಾದ (ಶಿಶಕ್ರ. ೦-೨); ಪರಮನಾದಾಕ್ಷರದಿ ವಿಕಲಸ್ವರಗಳಡಗಿ ಕರ ರಂಜಿಸದೆಯಿರ್ಪ ಮಾರ್ಗೆಯಿಂ ಬೈಂದವಂ ಪರಬಿಂದುಮಧ್ಯದೊಳಡಂಗಿದಂದದಿ (ಏಕೋತ್ತ. ೦೬-೪೩). 'ಬೈಂದವ ಶರೀರ' ಪರಾ. [ಸಂ.]

**ಬೈಂದವಶರೀರ** (ನಾ). [ಶೈವ] ಮಲರಹಿತವಾದ ಶರೀರವುಳ್ಳವನು ; ನಿರ್ಮಲದೇಹಿ : ಒಂದಾಣವದ ಮಲವನುಳ್ಳ ವಿಜ್ಞಾನಕಲರೆಂದೆರಡು ಮಲದಿನಾ ಪ್ರಳಯಾಕಲರು ಕೇಳ ಕಂದಾ ತ್ರಿಮಲದ ಸಕಲಾಕಲರು ಮೂವರಿವರೊಳಗೆ ವಿಜ್ಞಾನಕಲರೂ ಬೈಂದವಶರೀರರುಮನಾದಿಮುಕ್ತರು ಶಿವನೊಳೊಂದಿ ಶಿವಸಮದ ಸಾಯುಜ್ಯಪದಮಂ ಪಡೆವುತೆಂದೆಂದು ದುಃಕರ್ಮದೂರರಾಗಿರ್ಪರೈ (ಶಿತ್ರ. ೬-೬-೬೦) ; ಪ್ರಥಮವರ್ಗದಲ್ಲಿರುವವರು ಪರಿಪಕ್ವಮಲರಾದರೆ ಬೈಂದವಶರೀರವೆಂಬ ಶುದ್ಧಸೃಷ್ಟಿಶರೀರವನ್ನು ಕೆಲವರಿಗೆ ಕೊಟ್ಟು . . . ಪಂಚಕೃತ್ಯಾಧಿಕಾರ ಮೊದಲಾದುವುಗಳನ್ನು ಅನುಗ್ರಹಿಸುವನು (ಹಿಂವಾ. ೨೯೯). [ಸಂ.]

**ಬೈಕ** (ನಾ). ತಿರುಪೆ ; ಯಾಚನೆ ; ಭಿಕ್ಷೆ : "ಭೈಕ್ಷದೊಳ್ ಬೈಕಂ" (ಕರ್ಣಾಶ. ೩೮); ಅವಜ್ಞೆಗೆಯ್ದು ನಾಯ್ಗುಗದೆಡೆಯೊಲ್ಲಮಂ ಪುಗಿಸಿ ಬಯ್ಕ[ಬೈಕ]ದ ಭಾಜನಮಾಗೆ ಮಾಡಿ ತೊಟ್ಟಗೆ ವಿಭು ಸಾಯ ಪೊಯ್ದು ಕಿವಿಯಂ ಒಡಿದೂಡಲೊಡರ್ಚಿ ಬಂದನೇ (ಸುಕುಮಾ. ೨-೬೩). 'ಬೈಕಂಗುಳಿ', 'ಬೈಕಂದಿರಿ' ಪರಾ. [< ಸಂ. ಭೈಕ್ಷ]

**ಬೈಕಂಗುಳಿ** (ನಾ). ಭಿಕ್ಷೆ ಬೇಡುವುದೇ ವೃತ್ತಿಯಾಗುಳ್ಳವನು; ತಿರುಕ; ಯಾಚಕ : ಈತಂ. . . ಬೈಕಂಗುಳಿ ಬೇಡಿ ಪೊಱಲೆಲ್ಲಮಂ ತೊಟಲ್ದು ಬಸಿಱು ಪೊರೆವೊಂ (ಪಮ್ಪಾರಾ ೪೬-೬); ಕಿಸುಗುಳನಪ್ಪ ಬೈಕಂಗುಳಿ [ಪಾಠಾಂ. ಬಯ್ಕಂಗುಳಿ, ಬೆಸನಂಗುಳಿ, ಬೈಸಂಗುಳಿ]ಯುಮಂ ಕಟ್ಟಿಪಟ್ಟ ಕಳ್ಳನುಮಂ ಕಂಡಿದು ಮುನ್ನಿನ ಪಾಪದ ಫಲಮಿದೀಗಳಿನ ದೋಷದ ಫಲಮೆಂದು ಬಗೆದಱಿದು ನೆಗಟ್ವುದು ಗಹನಮೆ (ಶೀಶಸಂ. ೪೮-೬).

[ಬೈಕ +—ಕುಳಿ₃]

**ಬೈಕಂಗೊಳ್** (ಕ್ರಿ). ಭಿಕ್ಷೆಯನ್ನು ಪಡೆ : ಮುಂದಿಟ್ಟು ಚಿತ್ರಮಂ ತಿರಿತಂದುದುಮಂ ಪಾಳಮಿರ್ದು ಬೈಕಂಗೊಳ್ವೊಂದಂದದೆ ಕೊಂಡುದು ಮನದೇನೆಂದುನ್ನತಿ ಮಾಡಿ ಪೊಗಟ್ದೆ (ಅರಿಪು. ೦೪-೬೬); ತಿರಿವುದು ಬೈಕಂಗೊಳ್ವುದು ಮೊರೆವುದು ಮಱಿದುಂಬಿಯುಲ್ತು (ಕಾವ್ಯಾ.ಶ. ೩೯೩).

[ಬೈಕ + ಕೊಳ್₁]

**ಬೈಕಂದಿರಿ** (ಕ್ರಿ). ತಿರುಪೆಗಾಗಿ ಸುತ್ತು ; ಭಿಕ್ಷೆಗಾಗಿ ಅಲೆದಾಡು : ಇರ್ವರುಂ. . . ಕಪ್ಪಡಮುಟ್ಟು ಬೈಕಂದಿರಿದಿನ್ನಪ್ಪೊಡಮೋದುವವಂದು ತಾಯ್ಗೆ ನುಡಿದೊಡಂ (ಪಮ್ಪಾರಾ. ೩-೦). [ಬೈಕ + ತಿರಿ₁]

**ಬೈಕಂಬೇಡು** (ಕ್ರಿ). ಭಿಕ್ಷೆಕೇಳು; ಯಾಚಿಸು : ಓಡಿದ ರಾಳಂ ಕಿವಿಮಿಡಿದಾಡಿದ ಚೋಳಂ ವಿನಷ್ಟರಾಜ್ಯಂ ಬೈಕಂಬೇಡಿದ ಕಳಿಂಗಂ (ಎಕ. VII, ಶಿಕಾರಿ. ೦೩೬-೨೦; 1114); ಕೆಲರ್ . . . ಪೆಱರ ಮನೆಗಳಂ ಪೊಕ್ಕಯ್ಯೋಯೆಂದು ಬಯ್ಕಂ[ಬೈಕಂ] ಬೇಡಿ ಇಕ್ಕದ ಮನೆಯಂ ಬಯ್ದು . . .ಸತ್ತು ದುರ್ಗತಿಗಳ್ಗೆ ಸಲುವರ್ (ಶಶಾರ. ೧೮೨). [ಬೈಕ + ಬೇಡು₁]

**ಬೈಕೆ** 'ಬಯ್ಕೆ₁' ನೋ.

**ಬೈಕೆಗೊಡು** (ಕ್ರಿ). ನಿಕ್ಷೇಪವಾಗಿಡು; ನ್ಯಾಸವಾಗಿರಿಸು : ನ್ಯಾಸಾಪಹಾರ ಬೈಕೆಗೊಟ್ಟರ್ಥಪ್ರಮಾಣಮಂ ಮಱಿದು ಕಿಱಿದಂ ಬೇಟ್ಡಡನಿತೆಯೆಂಬುದು (ತಸೂತ್ರ. ೨೩೮) ; ಏನಂ ಬೇಡುವೆನೆಂದಬ್ಜಾನನೆ ಬಗೆ ಬೆದಱ ಬಗೆಗೆ ಬಂದೊಡಮೆಯನೊಲ್ದಾನೆರೆದಪೆಗಳೆ ಉಡಿಮೆಂದಾ ನೃಪತಿಗೆ ಕೈಕೆ ಬೈಕೆ ಗೊಟ್ಟಳ್ ಮೆಚ್ಚಂ (ಪಂಪರಾಮ. ೩-೩೬). [ಬೈಕೆ (<ಬಯ್ಕೆ₁) + ಕೊಡು₁]

**ಬೈಗಳು** 'ಬಯ್ಗುಳ್' ನೋ.

**ಬೈಗು** 'ಬಯ್ಗು' ನೋ.

**ಬೈಗುಂಬೊಟ್ಟು** 'ಬಯ್ಗುಂಬೊಟ್ಟು' ನೋ.

**ಬೈಗುಗಪ್ಪು** (ನಾ). ಸಾಯಂಕಾಲದ ಮಬ್ಬುಗತ್ತಲೆ; ಸಂಜೆಗತ್ತಲು: ಮತ್ತೊರ್ದಿನಂ, ಬೈಗುಗಪ್ಪಿಳಿಯುತ್ತಿರೆ ಸೀತೆ ಮರ್ಬಿನೊಳ್ ಕಂಡಳಾ ರಸೊ ಕಲ್ಲ ನೆತ್ತಿಯೊಳ್ (ಶ್ರೀರಾಮಾ. ೮೪೩-೦೦೬); ಆ ವೇಳೆಗಾಗಲೆ ಬೈಗುಗಪ್ಪು ಪಸರಿಸುತ್ತಿತ್ತು (ಮಬ್ಬು.ಹ. ೪೦).

[ ಬೈಗು (< ಬಯ್ಗು) + ಕಪ್ಪು$_4$ (<ಕರ್ಪು$_1$) ]

**ಬೈಗುಗೆಂಪು** 'ಬಯ್ಗುಕೆಂಪು' ನೋ.

**ಬೈಗುದಂಪು**: (ನಾ). ಸಂಜೆಯ ತಂಪು.— ಶೈತ್ಯ: ಬೈಗುದಂಪಲ ಗೆಳಸಿ ಸೊಗಸಿ, ಮಲೆವಲೆಗೋಡಿಸೊಂದರೆಯು ತುದಿಗೇರಿ ಕುಳಿತು ವಿಶ್ರಮಿಸಿಕೊಳುತಿರ್ದೊರ್ಮಿಳಾಪ್ರಿಯಂ ಬೆರಗಾದನೊಂದದ್ಭುತವನನು ಭವಿಸಿ (ಶ್ರೀರಾಮಾ. ೨೦೪-೨೬೬).

[ ಬೈಗು (<ಬಯ್ಗು) + ತಂಪು$_2$ (<ತಣ್ಪು$_2$) ]

**ಬೈಗುಮುಬ್ಬು** (ನಾ). = ಬೈಗುಗಪ್ಪು: ವ್ಯಾಘ್ರಮುಂ . . . ನೋಡು ತಿರೆಯಿರೆ ಬೈಗುಮಬ್ಬು ಕೀಳ್ವುತ್ತಿರ್ದ ದೃಶ್ಯವಿಸ್ತೀರ್ಣಮಂ, ಕಂಡು ದೇನನೋ! (ಶ್ರೀರಾಮಾ. ೦೪೩-೪೩).

[ ಬೈಗು (<ಬಯ್ಗು) + ಮಬ್ಬು (< ಮರ್ಬು$_2$) ]

**ಬೈಗುಮಲ್ಲಿಗೆ** (ನಾ). ಸಂಜೆಯಲ್ಲಿ ಮಾತ್ರ ಅರಳುವ ಒಂದು ಬಗೆಯ ಮಲ್ಲಿಗೆ; ಸಂಜೆಮಲ್ಲಿಗೆ: ಕಾಂತಾಜನಂ . . . ಅಲರ್ದ ಬೈಗು ಮಲ್ಲಿಗೆಯ ಜೊಲ್ಲೆಯನ ತುಱುಬಿಂ ಕಣ್ಗೆಡ್ಡಮಾದುದು (ರಾಜಶೇ. ೨೨-೦೦).

[ ಬೈಗು (<ಬಯ್ಗು) + ಮಲ್ಲಿಗೆ./ತುಳು. ಬೈಯಮಲ್ಲಿಗೆ ]

**ಬೈಗುವೊಳ್ತು** 'ಬಯ್ಗುಂಬೊಟ್ಟು' ನೋ.

**ಬೈಗುಳ್** 'ಬಯ್ಗುಳ್' ನೋ.

**ಬೈಗುಳ** 'ಬಯ್ಗುಳ್' ನೋ.

**ಬೈಗುಳು** 'ಬಯ್ಗುಳ್' ನೋ.

**ಬೈಗೆ$_1$** 'ಬಯ್ಗು' ನೋ.

**ಬೈಗೆ$_2$** (ನಾ). ಒಂದು ಬಗೆಯ ಮೀನು: ಮಾರ್ಕೆಟ್ಟಿನಲ್ಲಿ ನದಿಯ ಮೀನು ಅಲ್ಲದೆ ಸಮುದ್ರದ ಕಾಣೆ, ಕುರ್ಚಿ, ಬೈಗೆ, ಬೂತಾಯಿ ಎಲ್ಲ. . . ತಂದಿದ್ದರು (ಹೊಸಕ್ಕೆ. ೩೬). [ ? ]

**ಬೈಜರು** (ನಾ). (?): ಗಂಧದ ಮಡುವಿನೊಳ್ಮೆಟ್ಟಿ ಕೈ ಹಗರಿ ನೊಳ್ಪಂಥಿಸಿ ತಾಂಬೂಲಬೆಂಡ ತಂದು ಬಾಗಿಲಗಿಕ್ಕಿ ಕುಚಗಿರಿಗೊಯ್ದಾಗ ನಿಂದು ಬೈಜರಿಗೆ ನೂಕುವರು (ಅಶುಚಾಂ. ೩-೬೪). [ ? ]

**ಬೈಜಿಕ** (ಗು). ಬೀಜದಿಂದ ಉಂಟಾದ; ರೇತಸ್ಸಿನಿಂದ ಹುಟ್ಟಿದ: 'ಬೈಜಿಕದೋಷ' ಪರಾ. [ಸಂ.]

**ಬೈಜಿಕದೋಷ** (ನಾ). "ಗರ್ಭಾಧಾನಾದಿ ಸಂಸ್ಕಾರಗಳಿಂದ ಗರ್ಭ ಮತ್ತು ಬೀಜಸಂಬಂಧವಾದ ದೋಷಗಳ ನಿವಾರಣವಾಗಿ ಜೀವನು ಪಾಪವಿಮುಕ್ತನಾಗುತ್ತಾನೆ. ಬೀಜವೆಂದರೆ ಶುಕ್ಲ ಶೋಣಿತಗಳು. ತತ್ಸಂಬಂಧವಾದ ನಿಷಿದ್ಧಕಾಲಮೈಥುನಾದಿ ಪ್ರಯುಕ್ತವಾದ ದೋಷವೇ ಬೈಜಿಕದೋಷ" (ಶಾರದ. ೩೩): ಕುಲೀನಮನೆತನದ ಹೆಣ್ಣುಮಕ್ಕಳ ಜೀವನವನ್ನು ಹಾಳುಮಾಡುವಲ್ಲಿ ನಿಮ್ಮ ತಂದೆಯು ನಿಷ್ಣಾತನು . . . ಈ ಬೈಜಿಕದೋಷದ ಪರಂಪರೆಯನ್ನು ನಾನು ತಡೆಯಲೇ ಬೇಕು (ಸಂಕ್ರಾ. ೬೩). [ ಸಂ. ]

**ಬೈಟಕ್ಕು** 'ಬೈಠಕು' ನೋ.

**ಬೈಠಕ್** 'ಬೈಠಕು' ನೋ.

**ಬೈಠಕ್‌ಕೋಣೆ** 'ಬೈಠಕಕೋಣೆ' ನೋ.

**ಬೈಠಕ್‌ಖಾನೆ** 'ಬೈಠಕುಖಾನೆ' ನೋ.

**ಬೈಠಕ್‌ಮುಷ್ಕರ** (ನಾ). ಯಾವುದಾದರೊಂದು ಕೋರಿಕೆಯ ಪೂರೈಕೆಗಾಗಿ ನೆಲದ ಮೇಲೆ ಪಟ್ಟುಹಿಡಿದು ಕುಳಿತು ಮಾಡುವ ಸಂಪು: "ಧರಣಿಸಂಪು, ಬೈಠಕ್‌ಮುಷ್ಕರ" (Stay-in-Strike. ಹಿತ್ರಿ. ೬೮).

[ಬೈಠಕ್ (< ಬೈಠಕು) + ಮುಷ್ಕರ]

**ಬೈಠಕ** 'ಬೈಠಕು' ನೋ.

**ಬೈಠಕಕೋಣೆ**, ಬೈಠಕ್‌ಕೋಣೆ (ನಾ). ಮನೆಗಳಲ್ಲಿ ಅತಿಥಿಗಳನ್ನು ಕೂರಿಸುವ ಸ್ಥಳ; ದಿವಾನಖಾನೆ: ನನ್ನನ್ನು ಬೈಠಕಕೋಣೆಗೆ ಪುನಃ ಎಳೆದುಕೊಂಡು ಹೋದಳು (ಹೂಬಾಣ. ೦೨೦). **ಬೈಠಕ್‌ಕೋಣೆ**: ಬೈಠಕ್‌ಕೋಣೆಗಳಲ್ಲಿ ನಿಲುಗನ್ನಡಿಗಳೂ ಪಟಗಳೂ ಇಟ್ಟಿವೆ (ದಾಂಪ. ೦೦೬).

[ಬೈಠಕ (< ಬೈಠಕು) + ಕೋಣೆ$_2$ (<ಕೋಣ್)]

**ಬೈಠಕಖಾನೆ** 'ಬೈಠಕುಖಾನೆ' ನೋ.

**ಬೈಠಕಿ** 'ಬೈಠಕು' ನೋ.

**ಬೈಠಕು**, ಬೈಟಕ್ಕು, ಬೈಠಕ್, ಬೈಠಕ, ಬೈಠಕಿ (ನಾ). ೧. ಕುಳಿತು ಕೊಳ್ಳುವಿಕೆ; ಕೂರುವಿಕೆ: ಅರಸುಗಳ ಬೈಠಕಿಗೆ, ಇನ್ನೊಂದು ಎತ್ತರವಾದ ಮಂಚವಿಡುತ್ತಾರೆ (ಮುಕ್ತಾ. ೬೪). ೨. ಕುಳಿತುಕೊಳ್ಳುವ ಜಾಗ,— ಸ್ಥಳ. ೩. (ಸಂಘ, ಸಮಿತಿ ಮುಂತಾದುವುಗಳ ಸದಸ್ಯರು ಸೇರುವ) ಸಭೆ; ಅಧಿವೇಶನ: ಗಜೇಂದ್ರಸಿಂಹನ ಬೈಠಕಿನಲ್ಲಿ ಇಂದು ಮುಂಜಾನೆಯಿಂದ ಯುದ್ಧಸಮಿತಿಯ ಬೈಠಕು ನಡೆದಿದೆ (ಜಟಾಶಾ. ೦೪೦). ೪. (ಸಂಗೀತ, ನೃತ್ಯ ಮುಂತಾದುವುಗಳ) ಕಚೇರಿ; ಗೋಷ್ಠಿ: ಸುಂದರ್ರಾಸಾನಿಯ ಮನೆಯಲ್ಲಿ ಚಿಕ್ಕ ಬೈಠಕು ಕೂಡ ಆಗಿ ವಸಂತನು . . . ಐದುರೂಪಾಯಿನೋಟನ್ನು ಆಕೆಯ ಕೈಗೆ ಕೊಡೆದನು (ಗಂಹೂರು. ೨೦೬); ಆಕೆ ಅನೇಕ ಕಡೆ ಸಂಗೀತಬೈಠಕುಗಳಿಗೆ ಹೋಗಬೇಕಾಗುತ್ತಿತ್ತು. (ಸಾಹಿಗೇ. ೨೯). **ಬೈಟಕ್ಕು**: ೪. ವೇಷ ಭೂಷಣಗಳಿಲ್ಲದೆ ಒಬ್ಬೊಬ್ಬರು ಒಂದೊಂದು ಪಾತ್ರವನ್ನು ವಹಿಸಿ ಕುಳಿತ ಎಡೆಯಲ್ಲಿಯೇ ಈ ಪ್ರಸಂಗವನ್ನು ವಾಚನ ಮಾಡಬಹುದು . . . ಇದಕ್ಕೆ 'ಬೈಟಕ್ಕು' ಎಂದೂ ಹೆಸರಿದೆ (ಯಕ್ಷಗಾ. ೦೬); ನನ್ನ ಸರಿಸಮನಾಗಿ ಹಾಡಬಲ್ಲವನು ನಿಮ್ಮಲ್ಲಿ ಯಾರಿದ್ದಾರೆ . . . ಎಂದು ಗಂಭೀರವಾಗಿ ಹೇಳಿ ಅಲ್ಲೇ ಬೈಟಕ್ಕಿಗೆ ಕುಳಿತ (ಕನ್ನಹು. I, ೨೩೦). **ಬೈಠಕ್**: ೪. ಅನೇಕ ಉತ್ತರಾದಿ ಗಾಯಕರು, ತಮ್ಮ 'ಬೈಠಕ್' (ಕಚೇರಿ)ನಲ್ಲಿ, ತ್ಯಾಗರಾಜರ ಮತ್ತು ಪುರಂದರದಾಸರ ಕೃತಿಗಳನ್ನು ಹಾಡಲು ಮೊದಲುಮಾಡಿದ್ದಾರೆ (ಸಂಗೀತಂ. ೦೬೩); ಪೆಟ್ಟಿಗೆಯನ್ನು . . . ನಾನಾಸಾಹೇಬರು ಬೈಠಕಿನ ರೀತಿಯಲ್ಲಿ ಕುಳಿತು ಬಾರಿಸಲಿಕ್ಕೆ ಪ್ರಾರಂಭಿಸಿದರು (ಸಂದುಬಿ. ೪೯). **ಬೈಠಕ**: ೩. ಅ.ಭಾ.ರಾಷ್ಟ್ರೀಯಸಮಿತಿಯು ೧೯೨೧ ರ ನವೆಂಬರದಲ್ಲಿ ದಿಲ್ಲಿಯಲ್ಲಿ ಕೂಡಿದ ಬೈಠಕದಲ್ಲಿ . . . ಬಾರ್ಡೋಲಿ ಇದು ಒಂದು ವಿಶಿಷ್ಟ ತಾಲೂಕ ಎಂದು ನಿಶ್ಚಯಿಸಲ್ಪಟ್ಟಿತು (ಗಾಂಗ್ರಸ. ೦೬). ೪. ಅವರು . . . ಹಾಡುವ ಸಮಾರಂಭಕ್ಕೆ ಬೈಠಕಯೆಂದನ್ನುತ್ತಾರೆ (ಕಿಶಾಗ. ೦೪೬); ಅವನ ಒಂದು ಬೈಠಕನ್ನು ಎಲ್ಲರೂ ಕೇಳಲು ಸಾಧ್ಯವಿಲ್ಲ (ಬಾಂಶ್ರ. II, ೦೦೦೩). ೫. ಬಿಡಾರ; ಠಿಕಾಣೆ; ಮೊಕ್ಕಾಂ: ಶ್ಯಾಮರಾಯ ಊರಿಗೆ ಬಂದು ವಾಡೆಯಲ್ಲಿ ಬೈಠಕ ಹಾಕಿದ ದಿನವೇ, ರಾಚಪ್ಪ ತನ್ನ ಕಚೇರಿಯನ್ನು . . . ಸ್ಥಲಾಂತರಿಸಿದ (ದೀಶತ. II, ೫೬). **ಬೈಠಕಿ**: ೩. ಇಂದಿನ ಬೈಠಕಿಯಲ್ಲಿ ಇದೇ ವಿಷಯದ ಚರ್ಚೆಗೆ ಆರಂಭವಾಗಿತ್ತು (ಶಾಬಾ. ೨). [ ←ಹಿಂ. ಮರಾ. ಬೈಠಕ್ ]

**ಬೈಠಕುಖಾನೆ**, ಬೈಠಕ್‌ಖಾನೆ, ಬೈಠಕಖಾನೆ (ನಾ). ಸಮಾರಂಭ, ಸಭೆ ಮುಂತಾದುವುಗಳನ್ನು ನಡೆಸಲು ಅನುಕೂಲವಾಗಿರುವ

ವಿಶಾಲವಾದ ಹಜಾರ.– ಪಡಸಾಲೆ; ದಿವಾನಖಾನೆ: ಮೇಪರ ಉನ್ನೀಸೆಯು ತನ್ನ ಸ್ವಂತ ಬೈಠಕಖಾನೆಯಲ್ಲಿ ಕುಳಿತುಕೊಂಡು ಚಿತ್ರಪಟಗಳನ್ನು ಬರೆಯುತ್ತ ತಾಂಬೂಲಚರ್ವಣವನ್ನು ಮಾಡುತ್ತಿದ್ದಳು (ಕಥಾಸಂ. ೬೩). **ಬೈಠಕ್‌ಖಾನೆ:** ತಮ್ಮ ಬೈಠಕ್‌ಖಾನೆಯಾದ ಪಟ್ಟಮಂಟಪದೊಳಗೆ ಆದರದಿಂದ ಕರೆದೊಯ್ದು ದಿವ್ಯಾಸನದಲ್ಲಿ ಕುಳ್ಳಿರಿಸಿ ಕುಶಲಪ್ರಶ್ನೆಗಳನ್ನು ಮಾಡಿದರು (ಶ್ರೀರಾಮ. ೨೮); ಅತಿಥಿಗಳೆಲ್ಲರೂ ಬೈಠಕ್‌ಖಾನೆಯಲ್ಲಿ ಸೇರಿದಾಗ ಆ ಬೇಹಾಗ್ ಹಾಡನ್ನು ಹಾಡುವಂತೆ ನನ್ನನ್ನು ಕೇಳಿಕೊಳ್ಳುತ್ತಿದ್ದಳು (ಖಂಡ. II, ೮೩). **ಬೈಠಕಖಾನೆ:** ಎರಡು ಅಂತಸ್ತಿನ ಬೈಠಕಖಾನೆ; ದೊಡ್ಡ ದೇವರ ಮನೆ (ಕಲ್ಯಾಣ್. ೪); ಡಾಕ್ಟರ ರಂಗಣ್ಣನ ಮನೆಯ ಬೈಠಕಖಾನೆ (ಹೊಸಂಖಾ. ೧೧೦).

[ ಬೈಠಕು + ಖಾನೆ. / ಹಿಂ. ಬೈಠಕ್‌ಖಾನಾ ]

**ಬೈತ** 'ಬಯ್$_1$' ಪರಾ.

**ಬೈತಲಿಕ್ಕು** (ಕ್ರಿ). ಬೈತಲೆ ತೆಗೆ: ಬೈತಲಿಕ್ಕಿದೆನು ನಾನೆ ನಸ್ನ ಕೈಯಾರ (ಅರಳು. ೨೧೨–೩). [ ಬೈತಲೆ ( < ಬಯ್ತಲೆ ) + ಇಕ್ಕು ]

**ಬೈತಲೆ** 'ಬಯ್ತಲೆ' ನೋ.

**ಬೈತಲೆದೆಗೆ** 'ಬಯ್ತಲೆದೆಗೆ' ನೋ.

**ಬೈತಲೆಬಟ್ಟು**, ಬೈತಲೆಬೊಟ್ಟು (ನಾ). ಬೈತಲೆಗೆ ಧರಿಸುವ ಆಭರಣ; ಬೈತಲೆಮಣಿ: ಜಡೆಬಿಲ್ಲೆ ಬೈತಲೆಬಟ್ಟು (ಸಿದ್ಧಾ. ೦೦–೦೩). **ಬೈತಲೆ ಬೊಟ್ಟು:** ಮಂದಗಮನೆಗೆ ಮಂದಾರದ ಬೈತಲೆಬೊಟ್ಟಂ . . . ಸವೆದು ಸಿಂಗರಿಸಲೊಡಂ (ರಾಘಾಕ್ಷ. ೦೩೦–೦೦).

[ ಬೈತಲೆ ( < ಬಯ್ತಲೆ ) + ಬಟ್ಟು ]

**ಬೈತಲೆಬಟ್ಟೆ** 'ಬೈತಲೆವಟ್ಟೆ' ನೋ.

**ಬೈತಲೆಬೊಟ್ಟು** 'ಬೈತಲೆಬಟ್ಟು' ನೋ.

**ಬೈತಲೆಮಾವು** (ನಾ). ಒಂದು ಬಗೆಯ ಮಾವು: ಪುಳಿಮಾವು ಭಾವಿಸ ಲಡಿಕೆಮಾವು ಗಿಳಿಮಾವು ಬೈತಲೆಮಾವು (ಶವರ್ಮ. ೨೧–೪೯).

[ ಬೈತಲೆ ? + ಮಾವು ]

**ಬೈತಲೆವಟ್ಟೆ**, ಬೈತಲೆಬಟ್ಟೆ (ನಾ). ಬೈತಲೆ ತೆಗೆದಿರುವ ಸ್ಥಳ: ಪ್ರಸರಿಸಿದುನ್ನತತಿಮಿರಪ್ರಸರದೊಳೆಡೆಸಿಲ್ಕಿ ಮಿಱುವ ಕಿಸುಸಂಜೆಯವೋಲ್ ಮಿಸುಗುವ ಬೈತಲೆವಟ್ಟೆಯೊಳೆಸೆದುದು ಸಿಂದೂರರೇಖೆ ತನ್ವಾಲಿಕೆಯಾ (ಉದ್ಭಟ. ೩–೯೩). **ಬೈತಲೆಬಟ್ಟೆ:** ತೊಲಗದ ಕತ್ತಲೆಯಂ ಪೊಕ್ಕಲೆವಿಂದು ಮರೀಚಿಯಂತೆ ತತ್ಕಾಂತೆಯ, ಬೈತಲೆಬಟ್ಟೆಯೊಳೆಸೆದುದು ಕೋಮಲೆ ಯೊರ್ವಳೆವರ್ಣಿದೆಳೆಯ ಮುತ್ತುಮಣಿಯ ಸಾಲ್ (ಉದ್ಭಟ. ೬–೨೬).

[ ಬೈತಲೆ ( < ಬಯ್ತಲೆ ) + ಬಟ್ಟೆ$_1$ ]

**ಬೈತಲೆವಣಿ** 'ಬಯ್ತಲೆವಣಿ' ನೋ.

**ಬೈತು** 'ಬಯ್$_1$' ಪರಾ.

**ಬೈತ್ರ** 'ಬಹಿತ್ರ' ನೋ.

**ಬೈದಿತಿ** (ನಾ). ಗಿಡಮೂಲಿಕೆಯ ಔಷಧಿಯನ್ನು ಕೊಡುವವಳು: ದೇಯಿಬೈದಿತಿಯು ಕೂಡಲೆ ಎದ್ದು ತಾನು ತಂದಿದ್ದ ಔಷಧದ ಪೊಟ್ಟಳವನ್ನು ಬಿಚ್ಚಿ ಅಮ್ಮಣ್ಣನು ಮೊದಲು ಹಚ್ಚಿದ್ದ ಮದ್ದನ್ನು ತೊಳೆದು ತೆಗೆದಳು (ಕೋಟಿಚೆ. ೩). [< ಬೈದ್ಯ + –ಇತಿ$_2$ (<–ಇತ್ತಿ)]

**ಬೈದೆ** 'ಬೈದ್ಯ' ನೋ.

**ಬೈದ್ಯ**, ಬೈದೆ, ವಯಿದ್ಯ (ನಾ). ೧. ವೈದ್ಯ; ಡಾಕ್ಟರು: ವೈದ್ಯವೆಂಬುದರ ರೂಪವೇ ಬೈದ್ಯ (ತುಳುನಾ. ೨೨೨): ತಿಮ್ಮಣ್ಣ ಬೈದ್ಯನ ಮನೆಯೊಳಕ್ಕೆ ಹೋದನು (ಕಗದ್ಯ. ೬೩). ೨. ಒಂದು ಜಾತಿಯ ಹೆಸರು ಮತ್ತು ಆ ಪಂಗಡದವರು ತಮ್ಮ ಹೆಸರಿನ ಕೊನೆಯಲ್ಲಿ ಸೇರಿಸಿಕೊಳ್ಳುವ ಶಬ್ದ: ಬಿಲ್ಲವರನ್ನು ಬೈದ್ಯ ಎಂದೂ ಕರೆಯುತ್ತಾರೆ (ತುಳುನಾ. ೨೨೨); ಅವಳಿಗೆ ಏಳು ವರ್ಷ ವಯಸ್ಸು ಎಂದಾಗ ಪಂಜದಲ್ಲಿನ ಪಯ್ಯ ಬೈದ್ಯನಿಗೆ ಕೈ ಹಿಡಿಸಿ ಕೊಟ್ಟುಬಿಟ್ಟದ್ದೇವೆ (ಕೋಟಿಚೆ. ೩). **ಬೈದೆ:** ೧. ಇವರು . . . ಗಿಡಮೂಲಿಕೆಯ ಔಷಧಿಗಳನ್ನು ಕೊಡುವ ಉದ್ಯೋಗವನ್ನು ಮಾಡುತ್ತಿದ್ದುದರಿಂದಲೂ ಬೈದ್ಯ(ಬೈದೆ) ಎಂದು ಕರೆಯಲ್ಪಟ್ಟರು (ತುಳುನಾ. ೨೨೩). **ವಯಿದ್ಯ:** ೨. ವಾಸ್ತೇವವಯಿದ್ಯ ನಾರನವಯಿದ್ಯ . . . ಯಿಂತಿನಿಬರು . . . ಕೊಟ ಶಾಸನದ ಕ್ರಮವೆಂತೆಂದರೆ (ಕೌಶ. IX–ii, ೬೩೦–೦೭; 1406); ನಾರಣವಯಿದ್ಯನ ಹಾಳಿಯ × × × (ಎಕ. VIII, ತೀರ್ಥಹ. ೦೭೩–೦೦; 1424).

[ < ಸಂ. ವೈದ್ಯ./ತುಳು. ಬೈದ್ಯ ]

**ಬೈನಾಡು** (ನಾ). ಬಯಲುಸೀಮೆ,–ಪ್ರದೇಶ; ಪಾಂಡಿ, ಕೊಂಗು, ವಯನಾಡು, ತುಳು ಮತ್ತು ಪುನ್ನಾಡು ಎಂಬ ಕೇರಳದ ಐದು ಸೀಮಾಪ್ರದೇಶಗಳಲ್ಲಿ ಒಂದು; ಈಗಿನ ವೈನಾಡು: ಬೈನಾಡ ಸೀಮೆ ತಮ್ಮ ಅಧೀನ ಎಂದು, ತಾವು ಫಿರಿಯಾದಿ ಮಾಡಿದ್ದು ನಾವು ವಿಚಾರಣೆ ಮಾಡಿದ್ದರಲ್ಲಿ. . . ನಕಲು ನಮಗೆ ಬಂದು ಸೇರಿತು (ರಾಜೇಂದ್ರ. ೦೩೦).

[ ←ಮಲ. ವಯನಾಡು ]

**ಬೈನಿ** 'ಬಯಿನೆ' ನೋ.

**ಬೈನೆ** 'ಬಯಿನೆ' ನೋ.

**ಬೈಪಣೆ** (ನಾ). ಕೊಟ್ಟಿಗೆಯಲ್ಲಿ ದನಕರುಗಳಿಗೆ ಮೇವು ಹಾಕುವುದಕ್ಕಾಗಿ ಕಟ್ಟಿರುವ ತೊಟ್ಟಿ; ಗೋದಲೆ; ಗೊಂತು: ದನಗಳ ಮೋರೆ ಎಟಕುವಲ್ಲಿ ನೆಲವನ್ನು ಮಣ್ಣಿನಿಂದ ಏರಿಸಿ ಬೈಹುಲ್ಲು ಹಾಕಲು ಬೈಪಣೆ ಮಾಡಿರುವರು (ಪಾಳಿಗ. ೪೦). [ ←ತುಳು. ಬೈಪಣೆ ]

**ಬೈಬಲ್** 'ಬೈಬಲ್ಲು' ನೋ.

**ಬೈಬಲ್ಲು**, ಬೈಬಲ್ (ನಾ). ಕ್ರೈಸ್ತರ ಧರ್ಮಗ್ರಂಥ: ಪೂರ್ವೋತ್ತರ ಮೀಮಾಂಸೆಗಳೆರಡೂ. . . ಬೈಬಲ್ಲಿನ ಓಲ್ಡ್ ಟೆಸ್ಟ್‌ಮೆಂಟ್ ಮತ್ತು ನ್ಯೂ ಟೆಸ್ಟ್‌ಮೆಂಟ್ ಇದ್ದ ಹಾಗೆ (ಛಾಯಾ. ೦೩೦); 'ಶತ್ರುವು ಬಲದ ಗಲ್ಲದ ಮೇಲೆ ಹೊಡೆದರೆ ಎಡಗಲ್ಲವನ್ನೂ ಮುಂದು ಮಾಡಿ'ಯೆಂದು ಬೈಬಲ್ಲು ಹೇಳುತ್ತದೆ (ರಘುಸಾ. ೦೪೬). **ಬೈಬಲ್:** ಕ್ರೈಸ್ತರ ಒಂದು ಸಾಂಪ್ರದಾಯ . . . ಬೈಬಲ್‌ವಾಕ್ಯವನ್ನು ಪ್ರಮಾಣವಾಗಿ ತೋರಿಸಿ ಸ್ತ್ರೀಯರಲ್ಲಿ ಆತ್ಮವಿಲ್ಲನೆಂದು ವಾದಿಸುತ್ತಾರೆ (ಜೀವಾಕ್ಷ. ೦೯೩). [ ←ಇಂ. Bible ]

**ಬೈಮಾತು** (ನಾ). ಬಯ್ಯುವ ಮಾತು; ತೆಗಳಿಕೆ; ನಿಂದೆ: ಕನ್ನಡದಲ್ಲಿರುವ ನಮ್ಮ ಬೈಮಾತುಗಳನ್ನು ನೋಡು. ತೀರಾ ಏದು, ಸಪ್ಪೆ, ನೀರಸ, ನಿಷ್ಪ್ರಯೋಜಕ (ಶಶಿರಾ. II, ೮೬೩).

[ಬೈ$_2$ (<ಬಯ್$_1$) + ಮಾತು$_1$]

**ಬೈಮೂಗ** 'ಭೈಮೂಗು' ನೋ.

**ಬೈಯ** 'ಬಯ್$_3$' ನೋ.

**ಬೈಯು** 'ಬಯ್$_2$' ನೋ.

**ಬೈರ** 'ಬೈರವ' ನೋ.

**ಬೈರಗ** (ನಾ). ಒಂದು ಬಗೆಯ ಪಕ್ಷಿ: ಆ ಪನಂಗಳೊಳು ಶುಕ. . . ಬೈರಗ . . . ವಾಸಕ ಮೊದಲಾದ ಚಿತ್ರರೂಪಪಕ್ಷಿಗಳುಳ್ಳ ಪಕ್ಷಿಕುಲಂಗಳುಂ (ಅಪೀಕ. ೨೨೨). 'ಭೈರಿ' ಪರಾ. [ ? ]

**ಬೈರಗಿ** 'ಬೈರಿಗೆ' ನೋ.

**ಬೈರಗಿಬೀಟ್** (ಕ್ರಿ). (ರಂಧ್ರಮಾಡುವ ಸಾಧನದಿಂದ ಕೊರೆದಂತೆ) ತೂತು ಬೀಳು; ರಂಧ್ರವಾಗು: ಧಾರಾವಾದದಿಂದೆ ನೆಲಂ ಬೈರಗಿ ಬೀಟ್ಟುಂದದಿಂದೆ ಬಿಡುತಪ್ಪ ಮಹಾವಾರಣಘಟಿಯಿಂ ನಿಚ್ಚಂ ಕಾರಂ ಕೈಕೊಂಡು ಪೆಱೆಪುವಾತನ ರಾಜ್ಯಂ (ಸೂಕ್ತಿಸು. ೩–೪).

[ಬೈರಗಿ (<ಬೈರಿಗೆ) + ಬೀಟ್$_1$]

**ಬೈರವ, ಬೈರ** (ನಾ). ೧. ಶಿವ; ಈಶ್ವರ: ಭಕಾರಕ್ಕೆ ಬಕಾರಂ. . . ಭೈರವ ಬೈರವ, ಭೋಗ—ಬೋಗ (ಶಪುಠ. ೨೫೫ ಶ್ರಯೋ). **ಬೈರ:** ೨. ಒಬ್ಬಾತನ ಹೆಸರು: ಕಿಬ್ಬಂ ಬನ್ದನ ಬೈರನಯ್ದ ಜಯುವುಂ...ಮಾಬ್ಬಿಂ (ಎಒ. IV (R), ಕೃಕ್ಷ. ೪೦–೬; ೫೦೦). 'ಬೈರವೋಜ' ಪರಾ. [<ಸಂ. ಭೈರವ]

**ಬೈರವಾಸ** 'ಬೈರಾಸು' ನೋ.

**ಬೈರವೋಜ** (ನಾ). ಒಬ್ಬಾತನ ಹೆಸರು: ಗೋಪಾಲದೇವನ ಮಗ ಗಯಂಣನು ಬೈರವೋಜಂಗೆ . . . ಕೊಟ್ಟ ಭೂಮಿಯ ಕ್ರಮ (ಎಕ. VII, ಶಿಕಮೊ. ೯೪–೩: ?). [ಬೈರ (<ಬೈರವ) + ಓಜ$_1$ (<ಒವಜ್ಝ)]

**ಬೈರಾಗಿ** (ನಾ). ಸಂಸಾರದಲ್ಲಿ ಆಸಕ್ತಿಯನ್ನು ಕಳೆದುಕೊಂಡವನು ; ವಿರಕ್ತ; ವಿರಾಗಿ: "ಬೈರಾಗಿ—ವೈರಾಗಿನ್" (ಶಬ್ದಕೋ. ೩೨); ಕೆಲ ಬೈರಾಗಿಗಳೂ ಮಾಂತ್ರಿಕರೂ ನಾವು ಚಿನ್ನವನ್ನು ಮಾಡಬಲ್ಲೆವೆಂದು ಹೇಳುತ್ತಾರೆ (ಮುಂಬಯಿ. ೪-೦೦೬) ; ಬೈರಾಗಿಯು ಮಂಟಪದಲ್ಲಿ ಯೋಗಪಟ್ಟವನ್ನು ಹಾಕಿಕೊಂಡು ಕುಳಿತಿದ್ದನು (ಶ್ರೀರಾಮ. ೯೨). [<ಸಂ. ವೈರಾಗಿನ್]

**ಬೈರಾಗಿಣಿ** (ನಾ). ವಿರಕ್ತೆ; ವಿರಾಗಿಣಿ : ಬೈರಾಗಿಣಿಯೂ ನಾನೂ ನಾಳೆ ನಗರಕ್ಕೆ ಹೊರಡುತ್ತೇವೆ (ದೌಲತ್. ೦೦೦). [< ಸಂ. ವೈರಾಗಿಣೀ]

**ಬೈರಾಗಿತನ** (ನಾ). ವಿರಕ್ತಿ; ವೈರಾಗ್ಯ: ಬೈರಾಗಿತನಕ್ಕೆ ಮರುಳಾದವಂಗೆ ಮನೆಯ ಹೆಂಗಸಿನ ಹಂಗೆ ? (ಶಿರಾಶ. ೫೯). [ಬೈರಾಗಿ + — ತನ]

**ಬೈರಾವಳಿ** (ನಾ). ಒಂದು ಬಗೆಯ ಬತ್ತ : ಕೊಡಗು ಮಳಲಕಂತೆ ಹರಹಿನ ಡುಣ್ಣಗಳೊಡನೊಪ್ಪುತಿಹ ಬೈರಾವಳಿಯು ಕಡುಸೊಬಗಾಂತಿಹ ಚಂದ್ರೋದಯಶಾಲಿಯೆಡೆವಿಡದೆಸೆಯುವರ್ತಿಯುಲಿ (ಕಂಪು. ೫–೬೦). [ ? ]

**ಬೈರಾಸ** 'ಬೈರಾಸು' ನೋ.

**ಬೈರಾಸು, ಬೈರವಾಸ, ಬೈರಾಸ, ಬೈರ್ವಾಸ** (ನಾ). ೧. ಮೈಮೇಲೆ ಹೊದೆಯುವ ವಸ್ತ್ರ ; ಉತ್ತರೀಯ: ಕತ್ತಿ, ಎಲೆಅಡಿಕೆ ಚೀಲ, ಒಂದು ಬೈರಾಸು. ಇಷ್ಟನ್ನು ತಾನೇ ಹುಡುಕಿ ತೆಗೆದುಕೊಂಡು ಗುಡಿಸಲಿನಿಂದ ಹೊರಬಿದ್ದ (ಕುಡಕೂ. ೦೨೬). ೨. ನೀರು ಹೀರಲು ಅನುಕೂಲವಾಗಿರುವಂತೆ ಜಾಳುಜಾಳಾಗಿ ಹೆಣೆದ ವಸ್ತ್ರ; ಪಾಣಿಪಂಚೆ : ತಲೆಯೊರಸಲು ಬೈರಾಸನ್ನು ಹುಡುಕಿ ತಂದಿಟ್ಟು . . . ಕರೆಯುವಾಗ ಪಂಡಿತರು ಬಚ್ಚಲು ಮನೆಯೊಳಗೆ ಬಂದಿದ್ದರು (ಅವುರ. ೪೦); ಮೊಳಕೈವರೆಗೆ ಒಂದು ಅಂಗಿ. ಅರೇಳು ಮೊಳದ ಒಂದು ಚುಂಗು ಪಂಚೆ . . . ಹೆಗಲ ಮೇಲೊಂದು ಬೈರಾಸು (ಟಾವೆಲ್) (ಹಕ್ಕಿನೋ. ೦೫). **ಬೈರವಾಸ :** ೧. ಬಿದ್ದ ದೋತ್ರವನ್ನೂ ಬೈರವಾಸವನ್ನೂ ಎತ್ತಬೇಕು (ಪಗಗ. ೬೬). **ಬೈರಾಸ :** ೧. ಸನ್ನ ಮೈಯನ್ನು ಒಂದು ಬೈರಾಸದಿಂದ ಮುಚ್ಚಿಕೊಂಡೆ (ಬಟ್ಟಜ. ೬೪); ಸೇವಕ ಕಿರುಪಂಚೆ ಮತ್ತು ಬೈರಾಸಗಳನ್ನು ತಂದು ಪ್ರಭುಗಳಿಗೆ ಕೊಟ್ಟ (ಹುಲಿಹಾ. ೫೯). **ಬೈರ್ವಾಸ :** ೨. ಹಚ್ಚಡ ಚಂದಿಕುಪ್ಪಸಗಳನಿಂಬಿಟ್ಟು ಸ್ವಚ್ಛದ ಬೈರ್ವಾಸದೊಡನೆ ಬೆಚ್ಚದೆ ವಿಂದರು (ಮೋಹಕ. ೩–೪೩).
[ < ಸಂ. ಬಹಿರ್ವಾಸಸ್ . / ತುಳು. ಬೈರಾಸ್, ಬಯಿರಾಸ್; ತೆಲು. ಬೈರವಾಸ, ಬಯಿರವಾಸ]

**ಬೈರಿ, ಭೈರಿ$_3$** (ನಾ). ಒಂದು ಬಗೆಯ ಮರ : ಅಜ್ಜನ ಪಟ್ಟೆ, ಅರಂಜೆ, ಬೈರಿ, ಜಾಗುರಿ, ವಿಷವೃಕ್ಷ (ವೃಕಿಗ. ೭–೦೨೫). **ಭೈರಿ$_3$ :** "ಅಜ್ಜನ ಪಟ್ಟೆ, ಅರಣ್ಯಪಟ್ಟೆ, ಅರಣ್ಯ, ಅರಂಜೆ, ಭೈರಿ . . . ವಿಷವೃಕ್ಷ" (ಸಸ್ಯಶಿ. ೦೩). [ ? ]

**ಬೈರಿಗೆ, ಬೈರಗಿ** (ನಾ). ೧. (ಭೂಮಿ, ಮರ ಮುಂತಾದುವುಗಳನ್ನು) ತೂತು ಕೊರೆಯಲು ಬಳಸುವ ಒಂದು ಬಗೆಯ ಉಪಕರಣ : ಬೈರಿಗೆ . . . ಮರದ ಒಳಕ್ಕೆ ಹೋಗುವ ಆಯುಧ (ಪಮ್ಮವು. ೦೦೫); ಇದನ್ನು ಭೂಮಿಯಲ್ಲಿ ಸಾವಿರಾರು ಅಡಿಗಳ ಆಳಕ್ಕೆ ಕಂಡಿಗಳನ್ನು ಕೊರೆಯುವುದಕ್ಕಾಗಿ ತಯಾರು ಮಾಡುವ ಬೈರಿಗೆಗಳಿಗೆ ಉಪಯೋಗಿಸುವರು (ವಿಜ್ಞಾಪ. ೩೬). ೨. (ಆಲಂ) ಬೇಸರ ತರಿಸುವುದು; ತಲೆಚಿಟ್ಟು ಹಿಡಿಸುವುದು : ಅವನ ಬೈರಿಗೆ ಪ್ರಾರಂಭವಾಗಿ ಆಗಲೇ ತುಂಬಾ ಹೊತ್ತಾಯಿತು (ರೂಢಿ). ೩. ತಲೆಚಿಟ್ಟು ಹಿಡಿಸುವವನು ; ಬೇಸರವನ್ನುಂಟು ಮಾಡುವವನು : ಅವನೊಬ್ಬ ಬೈರಿಗೆ. ಅವನ ಸಹವಾಸ ಎಲ್ಲರಿಗೂ ಸಾಕಾಗಿದೆ (ರೂಢಿ). **ಬೈರಗಿ :** ೧. ಚಂಡಬಲ ನುಗ್ಗಾಯ್ತು ಬಲ ಮುಂಕೊಂಡು ಬರೆ ಬೈರಗಿಯಿನರೆದಂತಾಯ್ತು (ಸಂಥಪ. ೭–೩೬). 'ಬೈರಗಿಬೀಟಿಗ್' ಪರಾ.
[ದೇ.॥ ತುಳು. ಬೈರಿಗೆ, ಬೈರಯಿ, ಬೈರವು]

**ಬೈರಿಗೆಕೊರೆ** (ಕ್ರಿ). ೧. ರಂಧ್ರಮಾಡುವ ಸಾಧನದಿಂದ ತೂತು ಕೊರೆ : ಅವನು ಬಾಗಿಲಿಗೆ ಬೈರಿಗೆಕೊರೆದು ಅಗುಳಿಯನ್ನು ಆಳವಡಿಸಿದನು (ರೂಢಿ). ೨. (ಆಲಂ) ಇರಿ ; ಚುಚ್ಚು : ಬಾಲಕರೆಲ್ಲರ ಮನದಲ್ಲೂ ಭೀತಿ ಬೈರಿಗೆ ಕೊರೆಯುತ್ತಿತ್ತು (ವದೀಪ. ೦೬). [ಬೈರಿಗೆ + ಕೊರೆ$_1$ (< ಕೊಜ್$_1$)]

**ಬೈರೂಪ** (ನಾ). ೧. ನಾನಾ ಬಗೆಯ ರೂಪ,—ವೇಷ,—ಸೋಗು ; ಬಹುರೂಪ : ಗಡ್ಡ ಜಡೆ ಕಂಥೆ ಲಾಂಛನವ ತೊಟ್ಟಿರುವ ಬೈರೂಪದಂತೆ (ಗಣಶಾ. ೨೮೦–೨) ; ಬಹುಬಗೆಯಿಂದ್ರಜಾಲಿಗಳ್ಬೈರೂಪದವರು ತಾಳಮದ್ದಳೆಗರಿಗಳೆವ ಪಡಿಯ ರತ್ನಕೀಲಿತಗೃಹಗಳೊಪ್ಪಿದುವು (ಕಂಪು. ೨೦–೯೯) ; ತಮ್ಮ ಧರ್ಮದಲ್ಲಿನ ಉತ್ತಮಾಂಶಗಳನ್ನು ಹುಡುಕಿ ತೆಗೆಯುವುದಕ್ಕೂ ಅದರ ಅಸಹ್ಯ ಬೈರೂಪಗಳನ್ನು ಬಿಸುಡುವುದಕ್ಕೂ ಇದು ಹಿಂದುಗಳನ್ನು ಉತ್ತೇಜಿಸಿತು (ಕಸ್ತೂರ. ೫೬೬). ೨. ಸೋಗು ಹಾಕುವವನು ; ವೇಷಧಾರಿ : ಉಟ್ಟರೆ ತೊಟ್ಟರೇನಯ್ಯ ನಟ್ಟುವರಂತೆ ಕೊಟ್ಟರೆ ಕೊಂಡರೇನಯ್ಯ ವೇಶಿಯರಂತೆ ಬಿಟ್ಟರೆ ಕಟ್ಟಿದರೇನಯ್ಯ ಬೈರೂಪನಂತೆ (ಪತಸಂ. ೨೩೯–೫೯).

**ಬೈರೂಪದಾಟ** = ಬಗೆಬಗೆಯ ವೇಷಗಳನ್ನು ಹಾಕಿಕೊಂಡು ಮಾಡುವ ಪ್ರದರ್ಶನ; ವೇಷದಾಟ : ಒಂದು ದೆಸೆಯೊಳಿಂದ್ರಜಾಲವ ತೋರುವ ಮಂದಿ ಬೈರೂಪದಾಟಗಳ ಸಂದಣಿ ಹಾಸ್ಯರಸಗಳಿಂದ ಮೆಚ್ಚಿದುದಂದಿನ ಸಭೆಯಾರ್ತಿಯುಲಿ (ಕಂಪು. ೨೦–೦೦೬). [<ಸಂ. ಬಹುರೂಪ]

**ಬೈರ್ವಾಸ** 'ಬೈರಾಸು' ನೋ.

**ಬೈಲ, ಬಯಿಲ** (ನಾ). ಒಂದು ಬಗೆಯ ಬತ್ತ: "ಸಿತಶಾಲಿ ಕೆಂಗಬವೆ ಕೆಂಬತ್ತಿರಾಜಾನ್ನಮವು ಬೈಲವೆಂದಿವು ನೆಲ್ಲ ಭೇದಂಗಳಕ್ಕು" (ಚುಂಗಿಶಾ. ೦೦೦–೪). **ಬಯಿಲ:** (೪).

**ಬೈಲಾಟ** 'ಬಯಲಾಟ' ನೋ.

**ಬೈಲು** 'ಪಯಲ್' ನೋ.

**ಬೈಲುಕಡೆ** 'ಬಯಲ್ಕಡೆ' ನೋ.

**ಬೈಲುಗಂಬಾರ** 'ಬೈಲುಗಮ್ಮಾರ' ನೋ.

**ಬೈಲುಗದ್ದೆ** (ನಾ). ಸಮತಟ್ಟಾದ ಪ್ರದೇಶದಲ್ಲಿರುವ ಗದ್ದೆ ; ಬಯಲು ನಾಡಿನಲ್ಲಿರುವ ಗದ್ದೆ : ಬೈಲುಗದ್ದೆ, ಬೆಟ್ಟುಗದ್ದೆ, ಕಾಡು ಬೀಡು ಎಲ್ಲ ಕೂಡಿ ಅಷ್ಟಾಗುತ್ತದೆಯಾ ? (ಬಾಳಿಗ. ೧೫).
[ ಬೈಲು (<ಪಯಲ್) + ಗದ್ದೆ (<ಗಟ್$_3$) ]

**ಬೈಲುಗಮ್ಮಾರ, ಬೈಲುಗಂಬಾರ** (ನಾ). (ಜೀವನನಿರ್ವಹಣೆಗಾಗಿ ಊರಿಂದೂರಿಗೆ ಅಲೆಯುತ್ತ) ಊರಿನ ಹೊರಭಾಗದಲ್ಲಿ ಬೀಡು ಬಿಡುವ ಕಮ್ಮಾರರ ವರ್ಗ ಮತ್ತು ಆ ವರ್ಗಕ್ಕೆ ಸೇರಿದ ವ್ಯಕ್ತಿ: ಆ ನರಿಯು ತಿರುಗಾಡುತ್ತ ಊರ ಮುಂದೆ ಇರುವ ಬೈಲುಗಮ್ಮಾರನ ಗುಡಸಲೊಳಗೆ ಹೊಕ್ಕಿತು (ಮುಂಬಯಿ. ೨–೧೮). **ಬೈಲುಗಂಬಾರ :** ಬೈಲುಗಂಬಾರರು ಹೋರಿ ಹುಡುಕುತ್ತ ಊರಿಂದೂರಿಗೆ ತಿರುಗುತ್ತಿರುತ್ತಾರೆ. ಹೋದಲ್ಲಿ ಊರ ಹೊರಗೆ ಗುಡಾರ ಹೊಡಕೊಂಡು ಹೋರೆ ದೊರೆಯುವವರೆಗೆ ನಿಲ್ಲುವರು (ಕಠಾಗ. ೦೫೭).
[ ಬೈಲು (<ಪಯಲ್) + ಕಮ್ಮಾರ(<ಕಮ್ಮಟ) ]

**ಬೈಲುಭೂಮಿ** (ನಾ). ಬಯಲಿನಿಂದ ಕೂಡಿದ ಪ್ರದೇಶ: ಮಂಡಲಾಕಾರವಾಗಿ ಸವ್ಯಾಪಸವ್ಯವಾಗಿ ತಿರುಗಾಡುತ್ತಾ ನದೀತಟಂಗಳಂ ಹಾರುತ್ತಾ ಬೈಲುಭೂಮಿಯೊಳು ಘಾಳಿಯಂತೆ ಧಾಳಿಯಂಗೈಯುತ್ತ (ಸೌಗಂ. ೩೦೭-೬).
[ಬೈಲು (< ಬಯಲ್) + ಭೂಮಿ]

**ಬೈಶಣಿಗೆ** 'ಬಯಿಸಣಿಗೆ' ನೋ.

**ಬೈಸ** (ನಾ). ೧. ಚತುರ್ವರ್ಣಗಳಲ್ಲಿ ಒಂದು: ವೈಶ್ಯ: 'ಬೈಸಕುಳ'. 'ಬೈಸಾನ್ವಯ' ಪರಾ. ೨. ವೈಶ್ಯ ಮತ್ತು ಕುಡಿಯರ ಸಂಬಂಧದಿಂದಾದ ವಂಶ.—ಮನೆತನ: ವರವೈಶ್ಯರೊಳೊಪ್ಪರ್ಕುಡಿಯರ ಕೂಸಂ ಮದುವೆನಿಲ್ದೊಡಾ ದಂಪತಿಗಾದರದಿಂ ಪುಟ್ಟಿದ ಸುತರ್ಧರೆ ಬೈಸರೆನಲ್ಕೆ ಬೈಸರೆನಿಸಿದರವರ್ಗಳು (ಶಾ. I, ೨೩-೪೯; 1180).
[< ಸಂ. ವೈಶ್ಯ./ಹಿಂ. ಬೈಸ]

**ಬೈಸಕುಳ** (ನಾ). ವೈಶ್ಯರ ವಂಶ; ವೈಶ್ಯಕುಲ: ಬೈಸಕುಳಕಮಳಮಾರ್ತಾಣ್ಡರು ಬೈಸಕುಳಾನ್ವಯರಪ್ಪ ತೊಳಗಲಿಯ ಭೂತರಸರುಂ ಮಲ್ಲಿಗೆವರಸರುಮಿರ್ದು ಬಿಟ್ಟ ಧರ್ಮ್ಮಂ (ಕ್ಷ್ವಾ. XI-ii. ೦೫೬-೯೭; 1109).
[ಬೈಸ + ಕುಳ (= ಕುಲ)]

**ಬೈಸಣಿಗೆ₁** (ನಾ). ೧. [ಸಂಗೀತ] ವೀಣೆಯ ಬುರುಡೆಯ ಮೇಲ್ಭಾಗದಲ್ಲಿ ತಂತಿಗಳನ್ನು ಹಿಡಿದಿಟ್ಟಿರುವ (ಸೇತುವೆಯಂಥ) ಎತ್ತರವಾದ ಭಾಗ: ದಂಡ ಜಾತಿ ಮುಖ್ಯ ಬೈಸಣಿಗೆ ಮುಂತಾದವಂ ಪ್ರಮಾಣಿಸಿ . . . ತಂತ್ರಿಗಳಂ ಕಳೆಯೇಱಿಸಿ (ಲೀಲಾ. ೨೩೭); ಅದಱೊಲ್ಲಿದಂಡ ಜಾತಿ ಮುಖ ಬೈಸಣಿಗೆ ಮುಂತಾದವಂ ಪ್ರಮಾಣಿಸಿ ಆಯಾ ರಾಗಾನುಗುಣ್ಯಮಾಗಿ ಮೇಳೈಸಿ (ಶೃಂಗ. ೩-೩ ವ). ೨. ಒಂದು ರಾಗದ ಹೆಸರು (?): ಇವಱ ಠಾಯುವ ಮಾಡುವಲ್ಲಿ ಮುಖರದೊಳು ಹುಟ್ಟುವುದದೇ ಭ್ರಾಮಕಂ ಗೀತದಾಣತಿಯ ಸಂಭವದೀರ್ಘತಾಳದೊಳು ಲಲಿತಯಾಣತಿ ಗುರುತ್ವಂ ನುಡಿವ ಬೈಸಣಿಗೆಯುಂ (ಲೀಕೃ. ೯-೦-೩೩).
[←ತೆಲು. ಬೈಸಣ, ಬಯಿಸಣ]

**ಬೈಸಣಿಗೆ₂** 'ಬಯಿಸಣಿಗೆ' ನೋ.

**ಬೈಸನಿಗೆ** 'ಬಯಿಸಣಿಗೆ' ನೋ.

**ಬೈಸರು, ಬೈಸಾರಿ, ಬೈಸಾರು, ಬೈಸಾರೆ** (ನಾ). ಸಂಜೆಯ ಸಮಯ; ಸಾಯಂಕಾಲ; ಇಳಿಹೊತ್ತು: ನಿನ್ನೆ ಸಾಯಂಕಾಲ ಬೈಸರ್ನಾಗ ಇಲ್ಲಿಗೆ ಹತ್ರ ಇರೋ ಊರಿಗೆ ತಪಾಲುಬಸ್ನಾಗ ಬಂದೆ (ಹುಲಿಯ. ೭). **ಬೈಸಾರಿ**: ಸೂತಕ ನಿವಾರಣೆಯಾಗುವವರೆಗೂ ಪರ ಊರಲಿರಲಿಕ್ಕೆ ಮನಸ್ಸಿಲ್ಲದೆ ಅವನು ಬೈಸಾರಿ ಸಮಯ ಗುರುದರ್ಶನಕ್ಕೆ ಹೊರಟನು (ವಾಗ್ವಿಲಾ. ೬೪). **ಬೈಸಾರು**: ಈಗ ಮಂಗಳೂರಿಗೆ ಮೋಟಾರಿನಲ್ಲಿ ಹೊರಟದ್ದೇ ಆದರೆ ಬೈಸಾರಿಗೆ ಕಾಂಚನಕ್ಕೆ ಹೋಗುವ ಮೋಟಾರು ಸಿಕ್ಕೀತು (ಮೂಕಜ್ಜಿ. ೯೩). **ಬೈಸಾರೆ**: ಹೊತ್ತಾರೆ ಹೋದವರೇತಕೆ ಬಾರರು ಬೈಸಾರೆಯಾದರು ಇವರು (ತಂಪ್ರಲೀ. ೦೦೯-೩೬). [?]

**ಬೈಸಾನ್ವಯ** (ನಾ). = ಬೈಸಕುಳ: ಕತ್ಪಾದಪದ್ಮೋಪಜೀವಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಂ ಸಮರವಿಜಯಲಕ್ಷ್ಮೀಕಾನ್ತರ ಬೈಸಾನ್ವಯಸರೋಜವನಮಾರ್ತಣ್ಡಂ (ಕ್ಷ್ವಾ. XX. ೦೯-೮: ೧೧೩೦).
[ಬೈಸ + ಅನ್ವಯ]

**ಬೈಸಾರಿ** 'ಬೈಸರು' ನೋ.

**ಬೈಸಾರು** 'ಬೈಸರು' ನೋ.

**ಬೈಸಾರೆ** 'ಬೈಸರು' ನೋ.

**ಬೈಸಿಕಲ್ಲು, ಬೈಸ್ಕಲ್ಲು** (ನಾ). ಕಾಲುಗಳನ್ನು ಪೆಡಲುಗಳ ಮೇಲೆ ಒತ್ತಿ ನಡೆಸುವ ಎರಡು ಚಕ್ರಗಳ ವಾಹನ; ಸೈಕಲ್ಲು; ರಂಗಣ್ಣ ಬೈಸಿಕಲ್ಲಿಂದ ಇಳಿದು ನಡೆಸಿಕೊಂಡು ಹೊರಟನು (ರಂಗಸ. ೨೭). **ಬೈಸ್ಕಲ್ಲು**: ಬೂಟುಗಳನ್ನು ಎಡಗೈಯಲ್ಲಿ ಹಿಡಿದೆತ್ತಿಕೊಂಡು ಬಲಗೈಯಿಂದ ಬೈಸ್ಕಲ್ಲನ್ನು ತಳ್ಳಿಕೊಂಡು ನೀರಿನೊಳಕ್ಕೆ ರಂಗಣ್ಣ ಇಳಿದನು (ರಂಗಸ. ೨೮).
[← ಇಂ. Bicycle]

**ಬೈಸಿಕೆ, ಬಯ್ಸಿಕೆ, ಬಸಿಗೆ, ಬಸ್ಕಿ, ಬೈಸಿಗೆ** (ನಾ). ೧. ಮಂಡಿಯೂರಿ ಕುಳಿತುಕೊಳ್ಳುವುದು: ಅಳಿದೊಡೆಯನಾ ಕಂಡಾನೆ ಬೈಸಿಕೆಯಿಂದ ತೋಳೆತ್ತಿ ಕೊಡುತ ಸಲ್ಲಾಮ (ಸಾಂಗತ್ಯ. ೩-೬೦). ೨. ಕುಳಿತುಕೊಳ್ಳುವ ಭಂಗಿ—ರೀತಿ: ಯಮನಿಯಮ ನಿಷ್ಠೆಯಲಿ ಬೈಸಿಕೆ ಕಮಲಸಂಜ್ಞಿಕವೆನಲು ಪವನಕ್ರಮವನಳವಡಿಸುವನು ಮೂಱು ತದಂಗವಿಧಿಗಳಲಿ (ಚಾಮ. ೪-೦೩-೯೦). ೩. ಎರಡು ಕಾಲುಗಳ ಮೇಲೆ ಭಾರ ಬಿಟ್ಟು ಕುಳಿತು ನಿಂತು ಮಾಡುವುದು; ಊಟಬೈಸು: (೪). ೪. ಕುದುರೆ ಸವಾರಿಯಲ್ಲಿಯ ಒಂದು ಪ್ರಕಾರ; ಸವಾರಿಯಲ್ಲಿ ಎದ್ದು, ಕುಳಿತು ಮಾಡುವುದು: ಹಯಶಿಕ್ಷಾಕ್ರೀಡೆಯುಂ ತೋಱುವ ಹರಿಸುತನೋ ತಾನೆನಿಪ್ಪಂದದಿಂ ಪನ್ನಿಯ ಸೋಂಕುಂ ಬಿಂಕಮುಂ ಬೈಸಿಕೆಯ ನಿಱಿಗೆಯುಂ ನಿಶ್ಚಲತ್ರಾಣಮುಂ . . . ಪೊದಟ್ವಾಪ್ಟಿ ದಲ್ ನಾಡೆಯುಮಾ ಕಂದರ್ಪದೇವಂ ಸುರುಚಿರ ತುರಗಾರೂಢಿಯೊಳ್ ಪ್ರೌಢನಾದಂ (ಸುಕುಮಾ. ೬-೭೩). ೫. ವ್ಯಾಪಿಸಿರುವ ಎಡೆ: ಆ ನೆಲದೊಳೀರೆಂಟುಸಾವಿರದ ಯೋಜನಮಾದಾ ನಿರಂತರವು ಸುರಗಿರಿಯ ಬೈಸಿಕೆಯಾಯ್ತು (ಚತು. ೨೬-೯೭). ೬. ದೃಢತೆ; ಅಚಲತೆ: ತೂಱಿದರೆ ತನಿಪೊಟ್ಟು ಗಾಳಿಗೆ ಹಾಱುವುದು ಕುಲಗಿರಿಯ ಬೈಸಿಕೆ ಜಾಱುವುದೆ (ಕುಮಾರವ್ಯಾ. ೦೬-೪೪); ಕಳಚಿತರಸನ ನುಸದ ಧೈರ್ಯಾಚಲದ ಬೈಸಿಕೆ (ತೊರವೆ. ೦-೦೬-೩). ೭. [ನಾಟ್ಯ] (ನೃತ್ಯ, ಅಭಿನಯ ಮುಂತಾದುವುಗಳಲ್ಲಿ ಕುಳಿತಂತೆ ನಟಿಸಿ ಮುಂದೆ ಸಾಗುವ) ಒಂದು ಬಗೆಯ ಭಂಗಿ: ಸುತ್ತುವಳಿಯುಂ ತಿರುಪು ಚಾರಿ ಬೈಸಿಕೆ ಪುಟವದೊತ್ತಿ ತೋಱುವ ಪಕ್ಷಿಯನಿಕ್ಕು (ಮುಂಗಡ. ೨೩-೯). ೮. [ಸಂಗೀತ] ವಾದ್ಯಗಳನ್ನು ಬಾರಿಸುವ ಅಥವಾ ರಾಗಗಳನ್ನು ಹಾಡುವ ಒಂದು ಬಗೆ: ಕಾಳಸಿ ಬೈಸಿಕೆ ಪಟ್ಟ ಕಾಂತಿ . . . ಪೆಳ್ಳಿಕೆ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ಹಾಸಮಂ (ಜಗ. ೩-೩); ಕಬ್ಬಿನ ನಿರ್ವಾಹದ ಮೇಲೆ ಬೈಸಿಕೆ ಬೆಡಂಗಂ ಬೀಱೆ ಸಿಂದೂರ್ಮಳೋದಿದ ಆಂದೋಳದೆ ಪಲ್ಲವಾಧರೆ ವಸಂತೋತ್ಸವದ್ಯಮಂ ಗದ್ಯಮುಂ (ಅನಂತ. ೬-೭೦); ಬೈಸಿಕೆ ಸ್ಥಾಯಿ ಘನಸಂಚಾರಿ ಮುಂತಾದೆಲ್ಲ ಭಾವಗಳನ್ನು ತೋರುತ್ತವೆ . . . ಬಾಜಿಪರಾರು ಮತ್ತವನಂತೆ (ಜಗನ್ನಾ. ೨೨-೪೩). **ಬಯ್ಸಿಕೆ**: ೪. ಮಾಮರಾಜಪ್ರಿಯತನೂಜಾತ ರೂಪರೇಖೆ ಭಾವನೆ ಬಯ್ಸಿಕೆ ತೊಡೆ ಮಡ ಕಯ್ತುಪಿಯೆಂಬ ಚಡಾಯತಿಕೆಗಾಯತಿಕವಡೆದಾ ರೂಪವಿದ್ಯಾವಿಳಾಸ (ಕ್ಷ್ವಾ. IX-i, ೩೪೩-೨೦; 1226). ೮. ಠಾಯದೊಳಂ ನಿರ್ವಹಿಸಿ ನೆಲೆಗೊಳಿಸಿ ಬಯ್ಸಿಕೆ [ಪಾಠಾಂ. ಬಯಿಸಿಕೆ] ಮಹಾಚಾಳಿಯಂದಲ್ಲಿ ಪೂರ್ತಿವಡೆದುದು ರಾಗಂ (ಮುಕುಂದ. ೨-೨೯). **ಬಸಿಗೆ**: ೩. ಸ್ಥಿರಬುದ್ಧಿಯೆಂದೆಂಬ ಸಮನಾದ ನೆಲದೊಳು ಗುರುಬೋಧೆಯೆಂಬ ದಂಡೆಗಳನೊತ್ತಿ ಪರತತ್ತ್ವ ವಿಪರದ ಬಸಿಗೆಗಳನೆ ಹಾಸಿತೆಱೆವೆಂಬ ಕೋಣತವನೊತ್ತಿ ಕಟ್ಟಿ (ಕೃಷ್ಣ. ೪-೦೩-೧). **ಬಸ್ಕಿ**: ೩. ವೆಂಕಟರಮಣದಾಸರು . . . ದಿನವೂ ತಪ್ಪದೆ ಬಸ್ಕಿಗಳನ್ನೂ ದಂಡೆಗಳನ್ನೂ ಹಾಕುತ್ತಿದ್ದರು (ಸ್ವಗತ. ೬೬). **ಬೈಸಿಗೆ**: ೮. ಅಪೂರ್ವ ಲಾಲಿತ್ಯವ್ಯಾಪ್ತಿಯಿಂ ಕೂಟಮಾನಮನೆಸೆವ ಚಾಲಿಯಿಂ ಬೈಸಿಗೆಯನೆತ್ತಿ ಬಾಜಿಸುವ ಮದ್ದಳೆಗನಂ ಮನ್ನಿಸುತ್ತುಂ (ಕದ್ರಾ. ೩-೬೦).

ಬೈಸಿಗೆ ಒತ್ತು = ಊಟಬೈಸು ಹಾಕು: ರಾಮಲಿಂಗಾಚಾರಿಯು ಗರಡಿಮನೆಯಲ್ಲಿ ದಂಡಹೊಡೆಯುವುದು, ಬೈಸಿಗೆಯೊತ್ತುವುದು, ಕುಸ್ತಿಮಾಡುವುದು ಮುಂತಾದ. . .ವ್ಯಾಯಾಮವನ್ನು ಮಾಡಿಸುವನು (ತಂಗಿಯ. ೯೨). ಬೈಸ್ಕಿ ಹೊಡೆ, ಬಸಿಗೆ ಹೊಡೆ ಬೈಸಿಗೆ ಒತ್ತು: ನೋಡುವರು ಬೈಸ್ಕಿ

ಹೊಡೆಯಬೇಕಾಗುತ್ತದೆ (ಕುಕೋ. I, ೬೦೬); ಬೇಗ್ಗೆ ನಾಲ್ಕಕ್ಕೆ ಎದ್ದರೆ ಸಾವಿರಕ್ಕೆ ಕಡಿಮೆ ಇಲ್ಲದಷ್ಟು ದಂಡೆ, ಬಸಿಗೆ ಹೊಡೆಯಬೇಕು (ಶಿಕುಕಾ. ೨೦).

[ ← ಮರಾ. ಬೈಸಕ್, ಬೈಸಕಾ ]

**ಬೈಸಿಗೆ** 'ಬೈಸಿಕೆ' ನೋ.

**ಬೈಸಿಗೆದೆಗೆ** (ಕ್ರಿ). ಮಂಡಿಯೂರು; ವೀರಮಂಡಿ ಹಾಕು: ಹೂಡಿದ ಸರಳ ಕಿವಿವರೆಗುಗಿದು ಬೈಸಿಗೆದೆಗೆದು [ಪಾಠಾಂ. ಗೆಯ್ದು. ಗೈದು] ಕಾಣದಲಿ ಪರಿವಿಡಿಯುನಾರೈದು ಗರುಡಿಯ ಗುರುವ ನೆನೆದನು (ಕುಮ್ಮ. ೨೦-೧೨). [ ಬೈಸಿಗೆ (<ಬೈಸಿಕೆ) + ತೆಗೆ$_1$ ]

**ಬೈಸು$_1$** 'ಬಯ್ಯಿಸು' ನೋ.

**ಬೈಸು$_2$** (ನಾ). ಕುಳಿತುಕೊಳ್ಳುವಿಕೆ.

**ಬೈಸು ಮಾಡು** = ಕುಳಿತುಕೊಳ್ಳುವಂತೆ ಮಾಡು : ಕುಳ್ಳಿರಿಸು : ಸಂವರಣೆಗಳನ್ನು ಮಾಡುವುದಕ್ಕೋಸ್ಕರ ಆನೆಗಳನ್ನು ಬೈಸು ಮಾಡುತಲಿರುವ ಮಾವುತರ ಹೆದರಿಕೆ ಮಾತುಗಳು (ಕೃಪಾಲೀ. ೦೦೪).

[←ಮರಾ. ಬೈಸ್ = ಕುಳಿತುಕೊಳ್ಳು; ಹಿಂ. ಬೈಸನಾ=ಕುಳಿತುಕೊಳ್ಳು]

**ಬೈಸೂಡಿ** (ನಾ). ಒಣಹುಲ್ಲಿನ ಕಂತೆ,—ಹೊರೆ,—ಕಟ್ಟು: ಗಾಡಿಯ ಮೇಲೆ ಇರಿಸಿದ್ದ ಬೈಸೂಡಿಗಳನ್ನು ಎಳೆದು ತಂದು, ಬಿಚ್ಚಿ ಅವುಗಳ ಮುಂದೆ ಹರಡಿದ (ಕೃಹಿಶಾ. ೦).

[ಬೈ$_4$ + ಸೂಡಿ$_2$ (< ಸೂಡು$_2$) ]

**ಬೈಸ್ಕಲ್ಲು** 'ಬೈಸಿಕಲ್ಲು' ನೋ.

**ಬೈಹುಲ್ಲು** (ನಾ). ಒಣಗಿದ ಹುಲ್ಲು : ದನಗಳ ಮೇಲೆ ಎಟಕುವಲ್ಲಿ ನೆಲವನ್ನು ಮಣ್ಣಿನಿಂದ ಏರಿಸಿ ಬೈಹುಲ್ಲು ಹಾಕಲು ಬೈಪಣೆ ಮಾಡಿರುವರು (ಶಾಕಗ. ೪೦); ಎರಡೆರಡು ಸೂಡಿ ಬೈಹುಲ್ಲನ್ನು ಬಿಡಿಸಿ ಹಾಕಿ ಅವುಗಳ ಬೆನ್ನು ಚಪ್ಪರಿಸಿದರು (ಹಿಶ್ರಾ. ೮೬). [ಬೈ$_4$ + ಹುಲ್ಲು (< ಪುಲ್)]

**ಬೊಂಕ** 'ಬಂಕೆ$_1$' ನೋ.

**ಬೊಂಕು$_1$** (ಕ್ರಿ). ೧. ಸುಳ್ಳಾಡು; ಸುಳ್ಳುಹೇಳು: ಸಮಯ ನೋಡಿಕೊಂಡು ನಂಬಿಕೆ ಹುಟ್ಟುವಂತೆ ಬೊಂಕಿ ಎಷ್ಟು ಕೆಲಸ ಸಾಧ್ಯವೊ ಅಷ್ಟು ಮಾಡಿಕೊಂಡು ಬರಬೇಕು (ಸಕಾ. ೬೨೪); ಈ ನಿಜಾಂಶವನ್ನು ನಿಸ್ಸಂಕೋಚವಾಗಿ ಹೇಳದೆ ಮೋಹನೆಯು ತನ್ನೊಡನೆ ಬೊಂಕುತ್ತಿರುವಳೆಂತಲೂ ಲೀಲಾವತಿಯ ಮನಸ್ಸಿಗೆ ತೋರಿತು (ಕಶಾರ. ೪೩). ೨. ಹೇಳು ; ನುಡಿ : ಲೋಕದ ಕೊಂಕನು ಬೊಂಕವು-ಭಲೆ ಲೋಕದ ಕೊಂಕನು ಬೊಂಕದಲೆ ನಾವೇಕಾಂತದೊಳದ ನಗುವೆವು (ಗೋಕಸಾ. ೬೪-೨೪). ೩. ಜಂಬದಿಂದ ಹೇಳಿಕೊಳ್ಳು; ಜಂಬ ಕೊಚ್ಚು: ಈ ಯಾಗದೊಳಿನಗಾರು ಸರಿಸಹ ರಾಯರುಂಟಾ ಬೊಂಕಿ ನುಡಿದ ವಿಡಾಯನೆಂಬುದನರಿಯ ಪಾಂಡವರಿಂದ ಮುಂದೇನು (ಕಸಭಾ. ೬೬-೪೦); ಅವಳು ಬೊಂಕುವಂತೆ ಮದುವೆಗೆ ಮುಂಚೆ ಅವನನ್ನು ಕಂಡಿದ್ದರೂ ಅವನನ್ನು ಅವಳು ಮದವೆ ಮಾಡಿಕೊಳ್ಳುತ್ತಿರಲಿಲ್ಲ (ಬಂಕಿಮ. ೨೩೬).

[ದೇ.॥ ತುಳು. ತೆಲು. ಬೊಂಕು]

**ಬೊಂಕು$_2$** (ನಾ). ೧. ಬಡಾಯಿ ; ಜಂಭ : ಅವರು ನಕ್ಕರು ಅಂತ ಇವರ ಬೊಂಕು ಹೆಚ್ಚು. ಇವರು ಬೊಂಕಿದರು ಅಂತ ಅವರ ನಗು ಹೆಚ್ಚು (ಸಕಾ. ೬೨೦). ೨. ಭ್ರಾಂತಿ ; ಭ್ರಮೆ : 'ಬೊಂಕುದೀವಿಗೆ ' ಪರಾ.

[<ಬೊಂಕು$_1$./ತಮಿ. ಪೊಕ್ಕಮ್ ; ತೆಲು. ಬೊಂಕು]

**ಬೊಂಕುದೀವಿಗೆ** (ನಾ). ಭ್ರಾಂತಿಯನ್ನುಂಟುಮಾಡುವ ದೀಪ ; ಸಂಪೂರ್ಣ ಬೆಳಕು ಹರಡದ ದೀಪ : ಶಂಕೆಗೆಡೆಯಾರದು ಕತ್ತಲೆಯ ಜಗವನು ಕವಿಯ ಬೊಂಕುದೀವಿಗೆ ತಂಟೆ (ಕುಂಕಸಾ. ೪೩).

[ಬೊಂಕು$_1$ + ದೀವಿಗೆ]

**ಬೊಂಕೆ** 'ಬಂಕೆ$_1$' ನೋ.

**ಬೊಂಕೆಮಣ್ಣು** (ನಾ). ಜಿಗುಟುಮಣ್ಣು ; ಜೇಡಿಮಣ್ಣು : "ಮತ್ತಾ... ಮೃತ್ತಾ--೨ . . . ಕಮ್ಮಣ್ಣು, ಬೊಂಕೆಮಣ್ಣು" (ಸಿದ್ದಾಂತಿ. ೯೨).

[ಬೊಂಕೆ (< ಬಂಕೆ$_1$) + ಮಣ್ಣು (< ಮಣ್)]

**ಬೊಂಡ** (ನಾ). ೧. ಎಳೆಯ ತೆಂಗಿನಕಾಯಿ ; ಸೀಯಾಳ : ಕನಕಮ್ಮನವರೊಡನೆ ಮಾತಾಡಿ ಅವರಿಗೆ ಬೊಂಡ ಕೊಟ್ಟೇ ಹೋಗಬೇಕೆಂದು ಕಾಡಿದ್ದಕ್ಕೆ ಬಂದ (ಹಸಾಪ. ೦೦೬) ; ಮರ ಹತ್ತಿ ಬೊಂಡ ಇಳಿಸುವುದಕ್ಕೆ ಜನವಿದೆ (ರೇಪಹೊ. ೦೬೦). ೨. ಎಳೆಯ ಕಾಯಿ : 'ಹನೆಬೊಂಡ' ಪರಾ.

[ದೇ.॥ ತುಳು. ಬೊಂಡ; ತೆಲು. ಬೊಂಡ, ಬೊಂಡಾ, ಬೊಂಡಲ, ಬೊಂಡ್ಲ]

**ಬೊಂಡುಲ, ಬೊಂಡುಳ** (ನಾ). ಒಂದು ಬಗೆಯ ಸಸ್ಯ : ಬೊಂಡುಲ ಗಿಡ (ಕೃಶಿಗ. ೬೦-೦೨೪೩); ಬೊಂಡುಲ ಗಿಡ (ಸಸ್ಯಶಿ. ೦೦೩). ಬೊಂಡುಳ: (ಕ).

[←ತುಳು. ಬೊಂಡಲ, ಬೊಂಡೊಲಿ]

**ಬೊಂಡುಳ** 'ಬೊಂಡುಲ' ನೋ.

**ಬೊಂತೆ, ಬೊಂದು** (ನಾ). ೧. ಚಿಂದಿಬಟ್ಟೆಗಳನ್ನು ಹೊಲಿದು ಮಾಡಿದ ಹಚ್ಚಡ ; ಕವುದಿ : ಕಂತೆ ಬೊಂತೆಯ ಜಂಗಮ ಬಂದರೆ ಹೀನವೆಂದು ಕಂಡನಾದರೆ ಪಂಚಮಹಾಪಾತಕ (ಬಸವ. ೪೦೦); ಬೊಂತೆಯಂ ಕಚ್ಚುಟವನಾತನು ಮುಂತೆ ಬೇಡಲು ಮುನ್ನ ಮಡಗಿದ ಬೊಂತೆಯಂ ಕಚ್ಚುಟವನಾಜಿಯು ಕಾಣದುಮ್ಮಳಿಸಿ (ಬಸಪು. ೨೬-೪೩); ಬೊಂತಾದೆ:ವಿ ಬೊಂತೆಯಂ ಕೊಡಹುತಲನೇಕ ಹೊನ್ನಗಳನೀಯುಳೇ (ಶ್ರುತಿ:ಪು. ೭-೨೪೩). ೨. ಗುಂಜಾದುದು ; ಗೋಜಾದುದು : ಕಾಯಿ ಬಲಿತು ಮಾಗಿದಾಗ ಹಣ್ಣಿನ ಗಾತ್ರ ಕಿರಿದು . . . ಗಲ್ಲದ ದಾಡಿಯಂತೆ ನಾರಿನ ಬೊಂತೆ (ಹಸುಹೊ. ೬೦೭). 'ಬೊಂತೆಕಟ್ಟು' ಪರಾ. ೩. ಗುಚ್ಛ; ಕಟ್ಟು : ಹೂವನ್ನು . . . ಕೆಂಪೀನೇ ಒಂದು ಬೊಂತೆ ಕೂದಲು ಎತ್ತಿ ಅದರೊಳಗೆ ಭದ್ರವಾಗಿ ಸಿಕ್ಕಿಸಿಕೊಂಡಳು (ಕಮ್ಮರು. ೨೬೪); ಚೀಟಿಯ ಕಂತೆಗಳು, ಹಳೆಯ ವರ್ತಮಾನ ಪತ್ರಿಕೆಗಳ ಬೊಂತೆಗಳು (ಹಸುಹೊ. ೨೬೦); ಕಂತೆಗೆ ತಕ್ಕ ಬೊಂತೆ (ಗಾದೆ). ಬೊಂದು : ೧. 'ಬೊಂದುಕ$_1$' ಪರಾ.

[ದೇ.॥ ತಮಿ. ಪೊನ್ತ್ತು; ತೆಲು, ಬೊಂತ]

**ಬೊಂತೆಕಟ್ಟು** (ಕ್ರಿ). ಜಡೆಗಟ್ಟು; ಗಂಟಾಗು : ಗೋಜಲಾಗು : ಬೊಂತೆ ಕಟ್ಟಿ ಹೋಗಿದ್ದ ನಿನ್ನ ತಲೆ, ಮಾಸಲು ಚಿಂದಿಯ ಬಟ್ಟೆಯನ್ನು ನೋಡುತ್ತಿದ್ದಾಗೆಲ್ಲ ಪಿತ್ತ ಹೊಟ್ಟೆ ಉರಿದು ಹೋಗುತ್ತಿತ್ತು (ಕಃಪಯಾ. ೪೦).

[ಬೊಂತೆ + ಕಟ್ಟು$_1$]

**ಬೊಂತೆಕಳ್ಳಿ** 'ಬೊಂತೆಗಳ್ಳಿ' ನೋ.

**ಬೊಂತೆಗ** (ನಾ). ಕೌದಿಯನ್ನು ಹೊದ್ದಿರುವವನು : ಗ ಪ್ರತ್ಯಯಕ್ಕೆ: ಮಾತುಗಂ, ಬೂತುಗಂ, ಕಂತೆಗಂ, ಬೊಂತೆ[ಪಾಠಾಂ. ದಿ]ಗಂ (ಶಬ್ದ., ಸೂ. ೨೦೨ ಪ್ರಯೋ). [ಬೊಂತೆ + — ಗ$_2$]

**ಬೊಂತೆಗಳ್ಳಿ, ಬೊಂತೆಕಳ್ಳಿ** (ನಾ). ಒಂದು ಬಗೆಯ ಕಳ್ಳಿ ಗಿಡ : ಬೊಂತೆಗಳ್ಳಿ, ಚದರಗಳ್ಳಿ (ಕೃಶಿಗ. ೩೩-೬೪೦). ಬೊಂತೆಕಳ್ಳಿ : "ಬೊಂತೆಕಳ್ಳಿ, ಚವರಗಳ್ಳಿ, ಜಡೆಗಳ್ಳಿ, ಮುಂಡುಗಳ್ಳಿ" (ಸಸ್ಯಶಿ. ೩೬).

[ಬೊಂತೆ + ಕಳ್ಳಿ$_2$]

**ಬೊಂತೆಮೀಸೆ** (ನಾ). ಗುಂಜುಮೀಸೆ ; ಜುಂಗುಜುಂಗಾದ ಮೀಸೆ : ವಿಷಣ್ಣವದನದ ಬೊಂತೆಮೀಸೆಯ . . . ಸೇವಕನೊಬ್ಬನು ಮಂದಿರವನ್ನು ಪ್ರವೇಶಿಸಿದನು (ಕೃಶು. ೨೦). [ಬೊಂತೆ + ಮೀಸೆ]

**ಬೊಂದಬಾಳೆ** (ನಾ). ಒಂದು ಬಗೆಯ ಮರ : ಬೊಂದಬಾಳೆ(ಪಡವಳ) — ಮಧ್ಯಮ ಆಕಾರದ್ದು. ಕಟ್ಟಿಗೆ ಇಮಾರತಿಗೆ ಬರುತ್ತದೆ (ಕಶಾಗ. ೪೬). [ ? ]

**ಬೊಂದರಿಗೆ** (ನಾ). ಗೌಸು ; ಮೇಲುಹೊದಿಕೆ : ಇಕ್ಕಿದ ಪಟ್ಟೆಯ ಸುಖಾಸನಂಗಳೊಳು ಕಟ್ಟಿದ ಚೆನ್ನದ ಬೊಂದರಿಗೆಯೊಳಮೆಸೆದಿರ್ದ ಪಟ್ಟೆಮಯ ಪೀಠದೊಳೊಪ್ಪವೇಜಿ (ಕಂಕವಾ. ೪-೯೩ ಪ) ; ಸಿಂಹಾಸನ

ದೆರಡೋಳಿಯೊಳಂ ಸಾರ್ಚಿದ ಲೋಹಾಸನದೊಳ್ ಕಟ್ಟಿದ ದೇವಾಂಗದ ಬೊಂದರಿಗೆಯೊಳವಿಟ್ಟ ನೇರಾಣಿಯ ಪಡಿಗಂಗಳೊಳಂ (ಶಾಂತಿಪು. ೩-೫೦ಪ).

[ ? ]

**ಬೊಂದಿ$_1$** (ನಾ). ದೇಹ; ಶರೀರ : "ಬೊಂದಿ=ಶರೀರಂ" (ಶಮದ. ಶಂ.೨); ತನ್ನ ಬೊಂದಿಯೊಳಿರ್ದ ಹಂಸನ ನೋಡುತಿರಲವನೆಂದೆಂದು ಸುಖಿ (ಶರಶ. ೩೨-೬೬) ; ದೆಸೆದೆಸೆಯ ಕಟ್ಟಲೆಯ ಬಿಂದವೊಂದುಗೂಡಿ ಗುಂಡು ಗೊಂಡು ತಮ್ಮ ಪಗೆಯ ಬೆಂಗದಿರನ ಬೊಂದಿಯುಂ ಬಂದಿವಿಡಿವೊಂದು ರವಣೆಯಿಂ ಬಾಂದಳಮನೇಱಿ ಪೋಪುವೆನೆ . . . ನೀಲಪರ್ವತಂ . . . ವಿರಾಜಿಸಿದತ್ತು (ರಾಮಾಶ್ವ. ೬೨-೦೪). 'ಗೊಂದೆಬೊಂದಿ' ಪರಾ.

[ದೇ.॥ ತಮಿ. ಪೊನ್ತಿ; ತೆಲು. ಬೊಂದಿ./ಪ್ರಾ. ಬೋಂದಿ]

**ಬೊಂದಿ$_2$** (ನಾ). ಕಾತಿ, ನಾರು, ಹಗ್ಗ, ಮೊದಲಾದುವುಗಳ ಪೆಂಡಿ.- ಕಟ್ಟು : (*).   [ದೇ.॥ ತೆಲು. ಬೊಂದು]

**ಬೊಂದಿಗೆ** (ನಾ). ಬೀಗ ; ಕೀಲಿ (?) : ಮಱಿಹೊಕ್ಕರೆ ಕಾವ ತೊಡರ್ದರ ಡೊಂಕಿ ಬಿರಿದರ ಬಾಯ ಬೊಂದಿಗೆ ಮಿಾಸೆಯರ ಗಂಡರ ಗಂಡ ಮಾದಿಗದೇವ (ಎಕ. IX, ಕಾನಕಾ. ೦೦೬-೫; 1293).   [ ? ]

**ಬೊಂದಿಗೆವಾಯ್** (ನಾ). (?) : ಬಿದಿರಿದ ಮುತ್ತುವಲ್ಲ ಪುಱು -ಮೂಗಿನ ಬೊಂದಿಗೆವಾಯ ಪೊಂಗುಗಲ್ಲದ ಪಸುರ್ಗಣ್ಣ ಕೆಂದಲೆಯ ಕಾಳಿಗವರ್ಣದ ಬೀಡೆಗಾಲ . . . ಪೇರುರದ ಲುಬ್ಧಕರಿರ್ದರಲಬ್ಧ ಮಾರ್ದವರ್ (ಕುಸುಪು. ೫-೮೯). 'ಬಂದುಗೆವಾಯ್' ನೋ.

[ಬೊಂದಿಗೆ? + ಬಾಯ್]

**ಬೊಂದು** 'ಬೊಂತೆ' ನೋ.

**ಬೊಂದುಕ$_1$** (ನಾ). ಚಿಂದಿಯಾದ ಕೋಕುಬಟ್ಟೆಯನ್ನು ತೊಡುವವನು ; ಬೊಂತೆಯನ್ನು ಧರಿಸುವವನು : ಉಕ ಪ್ರತ್ಯಯಕ್ಕೆ . . . ಬೊಂದುಕಂ, ದಿಂಡುಕಂ (ಶಮದ. ೨೦೩ ಪ್ರಯೋ) ; ಸಣ್ಣುಕಂ, ಬೊಂದುಕಂ, ದಿಂಡುಕಂ (ಶಬ್ದಾನು. ೪೯೦ ಪ್ರಯೋ).

[ಬೊಂದು (< ಬೊಂತೆ) + – ಉಕ (< – ಉಗ)]

**ಬೊಂದುಕ$_2$** 'ಬಂದುಕ' ನೋ.

**ಬೊಂದುಗೆ** (ನಾ). (?) : ಕೆಂದಳದೊಳಮರ್ಚಿ ಬಾರಿಸುತೆ ಬೊಂದುಗೆಯಂ ಕುಱುಪಿಂಗೆ ಪೋದಳವ್ವಳಿಸುತಮಾಗಳೊರ್ವಳಭಿಸಾರಿಕೆ ವೀರವಿಡಂಬಯಾಸದಿಂ (ಸುಕುಮಾ. ೮-೦೯೨).   [ ? ]

**ಬೊಂದೆ** (ನಾ). ಕುಣಿ ; ಕುಳಿ : ಶಿಶುವಳಿಯೆ ಬೊಂದೆಯೊಳಗಿಕ್ಕಿ ಮಣ್ಣಂ ಮುಚ್ಚಿ ಬಂದಯ್ಯಗೆಱಗೆ ದಂಪತಿಗೆಂದನು ಕಂದನಂ ಬಿಟ್ಟು ಬರುವರೆ ಬೇಗ ತಾ ಹೋಗಿರಿ (ಗುರುರಾ. ೦೯-೩೯).

[ದೇ.॥ ತಮಿ. ಪೊನ್ತು=ಬಿಲ ; ತೆಲು. ಬೊಂದ]

**ಬೊಂಪು$_1$** 'ಬಂಪು$_1$' ನೋ.

**ಬೊಂಪು$_2$** 'ಬಂಪು$_2$' ನೋ.

**ಬೊಂಬಡ** 'ಬೊಮ್ಮಡಿ' ನೋ.

**ಬೊಂಬಲ್** 'ಬಂಬಲ್$_1$' ನೋ.

**ಬೊಂಬಲಮರ** (ನಾ). ಒಂದು ಬಗೆಯ ಮರ : ಬೊಂಬಲಮರದ ನೆರಳೊಳು ಕುಳಿತಂತೆ ಮರ್ಕಟಕ್ಕೆ ಮಂತ್ರಿತನ ಕೊಟ್ಟಂತೆ (ಉದ್ಭಟಶೃ. ೬-೪೨-೩).   [ಬೊಂಬಲ$_0$ + ಮರ$_1$]

**ಬೊಂಬಳ** 'ಬೊಂಬಾಳ$_1$' ನೋ.

**ಬೊಂಬಾಳ$_1$**, ಬಾಂಬೋಳ, ಬೊಂಬಳ (ನಾ). [ಸಂಗೀತ] ನಾಲ್ಕು ಧ್ವನಿಭೇದಗಳಲ್ಲಿ ಒಂದು : ತಾಳಲಯ ಬೊಂಬಾಳ ಮಿಶ್ರದ ಮೇಳವದು ತಾ ರಾಗಶುದ್ಧದ ಸಾಳಗದ ಸಂಕೀರ್ಣ ದೇಸಿಯ ವಿವಿಧ ರಚನೆಗಳ . . . ಲಯಮಾನವಱಿವವನೆ ಗಾಯಕನು (ಕಾವ್ಯಸ. ೬೦೩-೦-೯೬); ಕಾವ್ಯಳ ಬೊಂಬಾಳ [ಪಾಠಾಂ. ಬಬ್ಬೋಳ]ನಾರಾಟ ಮಿಶ್ರಿತಮೆಂಬ ಚತುರ್ವಿಧಸ್ವರಂಗಳಂ ಪರುಠವಿಸಿ (ವಿವೇಕ. ೧೮೯). **ಬಾಂಬೋಳ** : ಅನೇಕ ರಾಗಗಳಿಂದೆ ಸವಿಯಿಂಪು ಸೊಂಪು ಬಾಂಬೋಳ ಮಧುರಂ ಮಂದ್ರ ವಿವಿಧ ಸುಸ್ಥಾನಮಾನಂಗಳಿಂ ಪಾಡಲುಗ್ಗಡಿಸಿದರು ತಾಳಜ್ಞರು (ಪ್ರಭುಪು. ೨-೬೬). **ಬೊಂಬಳ** : ಕಾವುಳ ಬೊಂಬಳ ನಾರಾಟ ಮಿಶ್ರವೆಂಬ ನಾಲ್ಕಂ ಧ್ವನಿಯ ಭೇದಮನಱಿದು . . . ಬಾಜಿಸುತ್ತಿರೆಯುಂ (ಶಾಂತೀಶ್ವ. ೦೬-೬೬ ವ).   [ ? ]

**ಬೊಂಬಾಳ$_2$** 'ಬಂಬಾಳ' ನೋ.

**ಬೊಂಬಾಳ$_3$** (ನಾ). ಒಂದು ಬಗೆಯ ಅಂದಣ : 'ಚವರಬೊಂಬಾಳ' ಪರಾ.   [ ? ]

**ಬೊಂಬಾಳದೀಪ** (ನಾ). ಪ್ರಖರವಾಗಿ ಉರಿಯುವ ಪಂಜು.- ಹಿಲಾಲು : ಇನನಂದನನು ಬೊಂಬಾಳದೀಪದ ಸಂದಣಿಗಳಲಿ . . . ಕುರುಭೂಮಿಗೈತಂದ (ಕುಮಾವ್ಯಾ. ೦-೦೯); ಬೆಳಗಿದುವು ಬೊಂಬಾಳ ದೀಪಾವಳಿಗಳದ್ದೆಸೆಗಳಲಿ (ಕೊರವಂ. ೫-೩-೩೦).

[ ಬೊಂಬಾಳ$_2$ (<ಬಂಬಾಳ) + ದೀಪ$_2$ ]

**ಬೊಂಬಾಳದೀಪ್ತಿ** (ನಾ). ಪ್ರಖರವಾದ ಕಾಂತಿ.– ಪ್ರಕಾಶ: ತೋಱುತಿಹ ಬೊಂಬಾಳದೀಪ್ತಿಯ ಚಾರುಶಸ್ತ್ರಪ್ರಭೆಯಲಾ ಮುರವೈರಿಯೋಲಗಸಾಲೆ ನೆಱೆ ರಂಜಿಸಿತು ನೋಳ್ಪರಿಗೆ (ಕೋಗಮ. ೩-೩೭).

[ಬೊಂಬಾಳ$_2$ (<ಬಂಬಾಳ) + ದೀಪ್ತಿ]

**ಬೊಂಬಾಳದೀವಟಿಗೆ** (ನಾ). = ಬೊಂಬಾಳದೀಪ : ತರುಣಿಯರುಗಳ ಹಸ್ತದಲಿ ಮಿಱುಪ ಮಿಸುನಿಯ ಬೊಂಬಾಳದೀವಟಿಗೆಗಳ್ಸುರುಚಿರಪ್ರಭೆಯ ಸೂಸಿದುವು (ಕಂಪರಾ. ೮-೨೩). [ಬೊಂಬಾಳ$_2$(<ಬಂಬಾಳ) + ದೀವಟಿಗೆ]

**ಬೊಂಬಾಳದೀವಿಗೆ** 'ಬಂಬಾಳದೀವಿಗೆ' ನೋ.

**ಬೊಂಬಾಳಿಸು** 'ಬಂಬಲಿಸು' ನೋ.

**ಬೊಂಬಿಡು** 'ಬೊಬ್ಬಿಡು' ನೋ.

**ಬೊಂಬು$_1$**, ಬಂಬು$_1$ (ನಾ.) ಪೊಳ್ಳಾದ ದಪ್ಪನೆಯ ಬಿದಿರು.–ಗಳು : ಹೇಗೆ ಒಂದು ವಂಶ ಅಥವಾ ಬೊಂಬಿನಲ್ಲಿ ಪಲವು ಪರ್ವಗಳಿರುತ್ತವೋ ಹಾಗೇ ಈ ಗ್ರಂಥದಲ್ಲಿ ಹದಿನೆಂಟು ಪರ್ವಗಳಿವೆ (ಭಾರಪ. ೯೩); ಬೊಂಬುಗಳನ್ನು ತೆಗೆದುಕೊಂಡು ಹೋಗಿ ಕಾಡಿನಲ್ಲಿ ಒಂದು ಮರಕ್ಕೆ ಅಟ್ಟ ಕಟ್ಟುವಂತೆ ಆಜ್ಞಾಪಿಸಿದರು (ರಾಯುಕ. ೦೯). **ಬಂಬು$_1$** : ಮೊದಲು ಮೊದಲು ಜೋಡು ಬಂಬುಗಳಿಂದ ನಿರ್ಮಿತವಾಗಿದ್ದು ಅನಂತರ ಮರದಿಂದ ಕಟ್ಟಡಗಳು ಕಟ್ಟಲ್ಪಟ್ಟಿರಬೇಕು (ಮೈಪಾಸ್ತು. ೨೨); ಬಂಬು ಹೊರುವವನ ಸಂಗಡ ಹಂಬಲಿಸಿದರೆ ಇಂಬು ಸಿಕ್ಕೀತೆ (ಗಾದೆ).

[ದೇ.॥ ತಮಿ. ವಮ್ಬು; ಮಲ. ವಮ್ಬು; ತುಳು. ಬಂಬು]

**ಬೊಂಬು$_2$** 'ಬಂಬು$_2$' ನೋ.

**ಬೊಂಬುಜ** (ನಾ). ಒಂದು ಬಗೆಯ ವಾದ್ಯ : ಬೊಂಬುಜದ ವಾಯುಜದ ಡೋಳಿನ ಬೆಂಬಳಿಯಲಿಹೀನಾಗಸರದಿಂತೆಂಬ ನಾನಾವಾದ್ಯರಸ ತುಂಬಿತು ದಿಶಾವಳಿಯ (ದೇವೀಮ.೨-೮೯). 'ಬೊಂಬುಳಿ$_2$' ನೋ. [?]

**ಬೊಂಬುಳಿ$_1$** (ನಾ). ಹೆಚ್ಚಳ; ಆಧಿಕ್ಯ : ಚದುರ ಪೊದಱಿ ಸಂಪದದ ಬೊಂಬುಳಿ ಸತ್ಕದ ಬಿತ್ತರಂ. . . ವಿಳಾಸದ ದೇಸೆ ಕೂಡೆ ಭೋಗದ ಕಣಿಯಾಯ್ತು ತಾಂ ತನಗೆ ಪೌರಜನಂ (ಜಗಪು. ೯-೦೦೬).

[ದೇ.॥ ತಮಿ. ಪೊಮ್ಮಲ್; ತುಳು. ಬೊಂಬುಳಿ]

**ಬೊಂಬುಳಿ$_2$**, ಬೊಬ್ಬುಳಿ$_3$ (ನಾ). ಒಂದು ಬಗೆಯ ಚರ್ಮವಾದ್ಯ : "ಪಣವ–ಬೊಂಬುಳಿಯ ಪೆಸರು" (ನಾಚರಾ. ೯೬); ಕೋಟೆಹೆಗ್ಗಾಳೆಗಳು ಚಿನ್ನತಿತ್ತಿರಿ ಬೊಂಬುಳಿ ಬಡಿಸಿಕೊಂಡವು (ಹರಶಾ. ೩-೦೯); ಕೊಂಬು ಡಮರುಗ ಡಾಡೆ ಸೆಂಬಕ ಕಹಳೆ ಢಕ್ಕೆ ಬೊಂ[ಪಾಠಾಂ.ಬೊಂ]ಬುಳಿ ಕರಡೆ

ಜಗ್ಗುಟಿ ಜರ್ಝರಂಗಳಿಂ (ಶಬ್ದಮ. ೬-೫೩). **ಬೊಬ್ಬುಳಿ$_3$ :** ಪಟಹದ ಢಕ್ಕೆಯ ಧವಳಶಂಖದ ಜವಳಿಗಾಳೆಯ ತಿತ್ತಿರಿಯ ಕಿನ್ನರಿಯ ಹೊನ್ನ ಬೊಬ್ಬುಳಿ[ಪಾಠಾಂ. ಬೊಂಬುಳಿ]ಯ . . . ಕೋಳಾಹಳಂ ನೆಗಳೆ (ಗಿರಿಜ. ೬-೬೬ ವ) ; ಬೊಬ್ಬುಳಿ ಘಂಟೆ ರಣವಜ್ಜೆಪೊಜಿಲುತಿರಲಂದು ಮಜುಗಿ ಲಂಕಾನಗರಿ ಗೋಳಿಟ್ಟೊಜಲುವಂತಿರೆ ತಿರುಗಿ ನೋಡಿದ ಸಿರಿಯ ಹಿಂದಕೆ ಬೀಳುಗೊಟ್ಟನೊಯೆಂಬ ತೆಜನಾಯ್ತು (ಶಶಿರಾ. ೪೦-೦೩) [ ? ]

**ಬೊಂಬೆ**, ಬೊಮ್ಮೆ (ನಾ). ೧. ಗೊಂಬೆ; ಮೂರ್ತಿ; ಪ್ರತಿಮೆ ; ನೆಲದ ಬೊಂಬೆಯ ಮಾಡಿ ಜಲದ ಬಣ್ಣವನುಡಿಸಿ . . . ಆಡಿಸುವ ಯಂತ್ರವಾಹಕನಾರೋ (ಅಪಶಂ. ೫-೦೩); ಪಾಜುದಳ್ ಪೊಳೆದು ಪೇಚರಿ ಮಿಂಚಿನ ಬೊಂಬೆಯೆಂಬಿನಂ (ಅರ್ಜುನ. ೩-೦೭) ; ಮಾಯೆಯಾಡಿಸುವ ಮಣ್ಣ ರೂಪು ಕಪ್ಪಡದ ಹಾಹೆ ಕಲ್ಲ ಜಂತ್ರ ಹುಲ್ಲ ಬೊಂಬೆ (ಜಸರ. ೮-೨೩೪); ನಾನಾ ಜನ್ಮದಿ ಬಂದ ನಾಟಕದ ಬೊಂಬೆ ಯಿದು (ಕನಕ. ೦೮೨-೩). ೨. ಕಣ್ಣುಗೊಂಬೆ ; ಕನೀನಿಕೆ : ಅಂಬರ ವಧೂಟಿಗಾ ಪಾಮರಿಯಲರ್ಗಣ್ಣ ಬೊಂಬೆಗಳ್ ಮನವೊಸೆದು ಪಾಗುಡ ವನಟ್ಟಿದಸಿತಾಂಬರವದೆಂಬಂತೆ ತತ್ಕಳಮೆಗಳ ತೆನೆಯ ಪಾಲುಣಲ್ಕೆಂದೆಜಿಗುವಾ ಕೆಂಬಲ್ಲ ಪಕ್ಕಿಗಳುಮಂ ಸೋವುತ (ಪದ್ಮಚ. ೦-೨೪) ; ಅಲರ್ಗಣ್ಣಳ ಬೊಂಬೆಯ ಪಡಿನೆಳಲೆಂಬಾ ಚಾರುವಿಚಿತ್ರಾಂಬರವಂ ಪೊದೆಯಿಸಿ . . . ಮನೋರಮಣನಸುಪಚರಿಸಿದಳಂಗನೆಯಾ ನವಸುರತದೊಳು (ಜಯಚಾ. ೯-೫೭). ೩. ಆಕೃತಿ ; ರೂಪು : ಚಿತ್ರದ ಬೊಂಬೆಗಳಿದ್ದ ಮನೆ ಕಿಚ್ಚಿದ್ದು ಬೇವಲ್ಲಿ ಬೊಂಬೆಯ ಹೊತ್ತಿದ ಕಿಚ್ಚು ಚಿತ್ರವಾಗಿ ಉರಿವುದೆ (ಸಕಪ ಕ. I. ೪೦೦-೪೦) ; ಭಿತ್ತಿಭಿತ್ತಿಯೊಳ್ ಬರೆದ ನಾನಾ ತೆಜದೊಳೆಸೆವ ಬೊಂಬೆಗಳಿಂದೆ . . . ಕರಂ ಚೆಲ್ವಾದುದು (ಕಿರಾತ. ೫-೫೦). 'ಗೊಂಬೆ$_1$' ಪರಾ. **ಬೊಮ್ಮೆ :** ೩. ಆ ಬೊಮ್ಮೆಯಂತೆ ಈ ಬೊಮ್ಮೆ (ಸುನೀತ. ೦೪).

**ಬೊಂಬೆಯ ಬಣ್ಣ** = (ಬೊಂಬೆಯ) ಚಿತ್ರಗಳುಳ್ಳ ಸೀರೆ : ಹಳದಿ ಪೊಪ್ಪಳಿ ಚಂದ್ರಗಾವಿ ಬೊಂಬೆಯ ಬಣ್ಣ ಸುಲಿಪಲ್ಲು ಪೊನ್ನ ತಗಡಿನ ಬಿಳುವಟ್ಟೆ ನಾನಾವರ್ಣದ ಜವಳಿಯ ಮಳಿಗೆಗಳೆಸೆದುವು (ಕಂಪಂ. ೬-೭೦).

[ ದೇ.॥ ತಮಿ. ಪೊಮ್ಮೈ, ಪೊಮ್ಮಲ್ ; ಮಲ. ಬೊಮ್ಮ ; ತುಳು. ಬೊಂಬೆ ; ತೆಲು. ಬೊಮ್ಮ, ಬೊಮ ; ಕೋಲಾ. ಕುವಿ. ಬೊಮ್ಮ ]

**ಬೊಂಬೆಗಣ್ಣೆ** (ನಾ). ಒಂದು ಬಗೆಯ ಸೀರೆ : ಚಾಪಗಂಟಿಯು ಬೊಂಬೆಗಣ್ಣೆ ಚಿತ್ರಾವಳಿಯು . . . ಮಿರುಪ ಸೇತ್ರಾವಳಿಯು ಮುಖ್ಯ ನಾನಾ ವಿಧದ ಸೀರೆಗಳ ಚಿನ್ನದೆಳೆವೊಗ್ಗ ಕಂಚುಕದ ಬೇಹನಿತ ತಗದು (ಸಪಮೋ. ೦೭-೬೦). [ ಬೊಂಬೆ + ? ]

**ಬೊಂಬೆಯಾಟ** (ನಾ). ೧. ಮಕ್ಕಳು ಗೊಂಬೆಗಳನ್ನಿಟ್ಟುಕೊಂಡು ಆಡುವ ಆಟ : ಮಗುವುತನದಲಿ ಬೊಂಬೆಯಾಟಕೆ ಮಗುವನೇ ತಹೆನೆಂದು ಬಂದಳು (ಕುಮಾರ. ೩-೦೭). ೨. ಸೂತ್ರದಿಂದ ಗೊಂಬೆಗಳನ್ನು ಕುಣಿಸಿ ತೋರಿಸುವ ಆಟ. 'ಗೊಂಬೆಯಾಟ' ಪರಾ. [ ಬೊಂಬೆ + ಆಟ ]

**ಬೊಕಸ** 'ಬೊಕ್ಕಸ' ನೋ.

**ಬೊಕ್ಕ** 'ಬಕ್ಕ$_1$' ನೋ.

**ಬೊಕ್ಕಣ$_1$**, ಬಂಕಣ, ಬಕ್ಕಣ$_1$ (ನಾ). ೧. ಚೀಲ ; ಸಂಚಿ : ಫಣಿಕುಳಂಗಳೇ ದಾರವಾಗಿ ಬೊಕ್ಕಣವೊಳವಸುಂಬೆಯಾಗಿ (ಎಕ. VII. ಶಿಕಾ. ೦೦೮-೩೦ ; 1054) ; ಪಿಸುಣಂ ಪೇಚಿಕ್ಕೊಡದೇವುದೊ ಕಿಸುಜಡೆಯುಂ ಬೂದಿ ಕಚ್ಚಟಂ ಬೊಕ್ಕಣಮುಂ . . . ಪಿಸುಣರ ದೇವಗೆ ನಾರದಂಗಿದು ಸಹಜಂ (ಜಗದ. ೫-೫೩) ; ಬೊಕ್ಕಣದ ಬೂದಿಯನುಘೆಸುತೂದಿ ಮೂಗಿನೊಳ್ ಪೊಕ್ಕೊಡೆ ಸೀಂತು . . . ಪೂರ್ವಿಕ್ಯವ ಮರ್ಕಟಂ ನಗದ ತಾಪಸರಂ ನಗಿಸಿತ್ತರಣ್ಯದೊಳ್ (ಕಾವ್ಯಸಾ. ೦೦೦೮). ೨. ಕುದುರೆಯ ಬಾಯಿಗೆ ಕಟ್ಟುವ ಚೀಲ ; ತೋಬರಿ : ದುತ್ತೂರದೆಲೆಯನಿಕ್ಕಿಯೆ ಕಟ್ಟುತ ಯಿರದೀಕ್ರಮ ದಶದಿನಮಂತರಿಸದೆ ಬೊಕ್ಕಣಮನಿಕ್ಕಿ (ಅಶ್ವವೈ. ೦೭-೬೦); ಜ್ಞಾನವೆಂಬುದು ಬೀದಿಯ ಪಸಾರವೆ ? ಬೊಕ್ಕಣದೊಳಗಣ ಹುರುಳಿಯೆ ? (ಶರಷ. ೪೭೪). ೩. ಜೇಬು ; ಕಿಸೆ : ಲೆಕ್ಕದ ಪಟ್ಟಿ ಅವನ ಬೊಕ್ಕಣದಲ್ಲಿ ಸದಾ ಹಸಿದು ಬಾಯ್ದೆರೆದಿತ್ತು (ಮಲೆಮ. ೩೩೩); ಲೆಕ್ಕದ ಪುಸ್ತಕದೊಳಗೆ ಅಂಕಿ ಬಿದ್ದಷ್ಟು ರೊಕ್ಕ ಆ ಬ್ಯಾರಿಸ್ಟರಿನ ಬೊಕ್ಕಣದಲ್ಲಿ ಬೀಳುತ್ತಿದ್ದಿಲ್ಲ (ಇಪ್ಪತ. ೪೦೦). **ಬಂಕಣ :** ೩. ತನ್ನ ಹೊಲಸಾದ 'ಬಂಕಣ'ದೊಳಗೆ ಕೈಯಿಕ್ಕಿ ಎಲೆ–ಅಡಿಕೆ–ತಂಬಾಕುಗಳನ್ನು ಹೊರಗೆ ತೆಗೆದು ಒಂದೊಂದಾಗಿ ಬಾಯಲ್ಲಿ ಹಾಕಿಕೊಂಡ (ಗಂಗಾಗ. ೮೪). **ಬಕ್ಕಣ$_1$ :** ೨. ಕುದುರೆ ಕಡಲೆಯನು ಸಲೆ ತಿಂದು ಬಕ್ಕಣವನೊದಜಿ ಬಿಟ್ಟಂತೆ (ಸರ್ವಜ್ಞ. ೦೮೨೮). ೩. ತಮ್ಮ ಬಕ್ಕಣದಲ್ಲಿ ಕಾಸು ಕಪರ್ದಿಯಿಲ್ಲದಿದ್ದರೂ ಬಾಯಲ್ಲಿ ಬಕ್ಕಳ ಮಾತಿದ್ದರೆ ಸಾಕೆಂಬ ಸಂತೋಷದಿಂದ, ಜನರು ಕಾಲ ಕಳೆಯುತ್ತಿದ್ದರು (ಶ್ರೀಮಂ. ೭೪).

[ ದೇ.॥ ತಮಿ. ಮಲ. ಪೊಕ್ಕಣ ; ತುಳು. ಬೊಕ್ಕಣ ; ತೆಲು. ಬೊಂಗಣ, ಬೊಂಗನ, ಬೊಕ್ಕಣ, ಬೊಕ್ಕನ. /ಸಂ. ಬೋಕ್ಕಾಣ ]

**ಬೊಕ್ಕಣ$_2$** 'ಬಕ್ಕಣ$_2$' ನೋ.

**ಬೊಕ್ಕಣಿಕೆ**, ಬೊಕ್ಕಳಿಕೆ (ನಾ). ಒಂದು ಬಗೆಯ ಔಷಧೀಸಸ್ಯ : ನೆಲ್ಲಿಚಟ್ಟು, ಬೊಕ್ಕಣಿಕೆಕಾಯಿ, ಶುಂಠಿ . . . ಸಮಾಂಶವಾಗಿ ಅರೆದು ಕೊಡಲು ಶ್ಲೇಷ್ಮಜ್ವರ ಬಿಡುವುದು (ಸಕವೈ. ೪೭). **ಬೊಕ್ಕಳಿಕೆ :** ಹುರಿಗಿಲುಂ ಕುರುಟಿನೆಲಾವ ಬೊಕ್ಕಳಿಕೆಯಿಂತಿನಿತಂ ತುಳಿದಿಟ್ಟು (ಅಶ್ವವೈ. ೯-೫೩). [ ? ]

**ಬೊಕ್ಕತಲೆ** 'ಬಕ್ಕದಲೆ' ನೋ.

**ಬೊಕ್ಕದಲೆ** 'ಬಕ್ಕದಲೆ' ನೋ.

**ಬೊಕ್ಕನೆ** (ಅ). ಒಂದು ಅನುಕರಣಾವ್ಯಯ; ಒಮ್ಮೆಲೇ; ಇದ್ದಕ್ಕಿದ್ದಂತೆ: ದಿಕ್ಕಿಲ್ಲದ ಪಶು ಕೆಸಜಿನೊಳು ಬೊಕ್ಕನೆ ಬಿದ್ದಂತೆ ಬಿದ್ದೆ ನಾಂ ದಂದುಗದೊಳು ಪೊಕ್ಕು ತೆಗೆವವರ ಕಾಣೆಂ ಅಕ್ಕಟ ಶಿವನೇ (ಕಂಕಕು. ೬೩). [ಬೊಕ್$_0$ +— ಅನೆ$_1$]

**ಬೊಕ್ಕನೆತ್ತಿ** 'ಬಕ್ಕನೆತ್ತಿ' ನೋ.

**ಬೊಕ್ಕಬಾಯಿ** (ನಾ). ಬೋಡುಬಾಯಿ ; ಹಲ್ಲಿಲ್ಲದ ಬಾಯಿ ; ಬಚ್ಚುಬಾಯಿ : (ಆ). [ಬೊಕ್ಕ (<ಬಕ್ಕ$_1$)+ಬಾಯಿ$_1$ (<ಬಾಯ್)]

**ಬೊಕ್ಕಬೋರಲು** 'ಬಕ್ಕಬೋರಲು' ನೋ.

**ಬೊಕ್ಕರಿಸು** (ಕ್ರಿ). ಮಗುಚಿಹಾಕು ; ಎತ್ತಿಹಾಕು (?) : ಮದಜಳದ ಕಡಂ ಕದರಿ ಕೆದಜುವ ಕರ್ಣಚಾಮರದ ಕತ್ತಲೆ ಸಿಪ್ಪಿನ ಬಾಹರಕ್ಕೆಯುಂ ಬೊಕ್ಕರಿಸಿದ ತೋರಹತ್ತದಿನವನೀತಳವುಂ ಕವಳಮುಂ ಕೊಳಲೆಂದು (ಆನಂತ. ೦೪-೬ ವ) ; ತೆಕ್ಕೆಯಿಂದವಚುತ್ತ ಗಿರಿಯಂ ಬೊಕ್ಕರಿಸಿ ಹೂಂಕರಿಸುತಿತ್ತಲು ಲೆಕ್ಕವಿಲ್ಲದ ಲೋಗಗಳು ಗಡಗಡನೆ ಉರುಳುತಿರೆ (ದೇವಮ. ೫-೨೪). [ ? +— ಇಸು$_3$ ]

**ಬೊಕ್ಕಸ**, ಬೊಕಸ, ಬೊಕ್ಸ (ನಾ). ಹಣದ ಭಂಡಾರ ; ಕೋಶ ; ಖಜಾನೆ : ವ್ರತಸ್ಥನಾಗಿ ಭವಿಗಳ ಕೆಳಗೆ ಬೊಕ್ಕಸ ಭಂಡಾರ ಅಸಿ ಕೃಷಿ ವಾಣಿಜ್ಯ ಮುಂತಾದ ಕಾಯಕವ ಬಿಟ್ಟು ತನ್ನ ಸ್ವಕಾಯಕದಿಂದ ಬಂದು ಒದಗಿದ ದ್ರವ್ಯವ ಒಡೆಯನ ಮುಂದಿಟ್ಟು (ಸಕವ. I. ೪೩೮-೪೭) ; ಬೊಕ್ಕಸದ ಸೇನಬೋವ ಜನ್ನಯ್ಯನ ನರಸಿಂಹದೇವನ ಬರಹ (ದ್ವಿಆಂ. ೦೪೨೮, ೪-೦೪ ; 1369). **ಬೊಕಸ :** ಪೈದರಲ್ಲಿ ಜಹವರನು ಬೊಕಸಕೆ ವಪ್ಪಿಸ್ತನಾದ (ಕಾಇಪ. ೦೪೩೪, ೫೬೦೦. ೦೫೫-೦೪; 1759). **ಬೊಕ್ಸ :** ಅವರಿಗೆ ಸಕಲ ಸಾಂಬ್ರಾಜ್ಯವಾಗಬೇಕೆಂದು ಅವರ ಬೊಕ್ಸದ ಕವಾಳ ತಿಂಮಪ್ಪನು ಕನ್ನೆರ ಸೆಟ್ಟಿಯ ನಿಲಿಸಿದನು (ಎಕ. XI. ಹೊಳಲ್ಕೆ, ೦೨೦-೫೦; 1522); ದೇವರ ಬೊಕ್ಸಕೆ ಪಾಲು ೧ (ಕಾಇಇ. IX-ii. ೬೦೭-೯ ; 1543).

ಬೊಕ್ಕಸಗೊಲ್ಲ—ಖಜಾನೆಯ ಕಾವಲುಗಾರ : (ಎಪಿ. XX. ೩).
[ದೇ.॥ ತಮಿ. ಪೊಕ್ಕಿಶಮ್ ; ತುಳು. ತೆಲು. ಬೊಕ್ಕಸ]

**ಬೊಕ್ಕಳಿಕೆ** 'ಬೊಕ್ಕಣಿಕೆ' ನೋ.

**ಬೊಕ್ಕಿ** (ನಾ). ಬೋಡುಬಾಯಿಯವಳು ; ಹಲ್ಲಿಲ್ಲದವಳು ; ಬೊಚ್ಚುಬಾಯಿಯವಳು : (?). [ಬೊಕ್ಕ (<ಬಕ್ಕ$_1$) + —ಇ$_2$]

**ಬೊಕ್ಕುಬೋರಲು** 'ಬಕ್ಕಬೋರಲು' ನೋ.

**ಬೊಕ್ಕೆ$_1$** (ನಾ). ೧. (ಚರ್ಮದ ಮೇಲೆ ಏಳುವ, ಕೀವಿರುವ ಅಥವಾ ಇಲ್ಲದಿರುವ) ಸಣ್ಣ ಊತ,—ಉಬ್ಬು; ಗಂಧೆ : ಪಲವು ಪರಳೊತ್ತಿ ಬೊಕ್ಕೆಗಳು ಮೂಡಿ ನಡೆಗೆಟ್ಟು ಮೆಲ್ಲಡಿಯ ನಿಜವನಿತೆಯಂ ನೋಡಿ (ಹರಿ. ೯-೨೯); ನಾಲಗೆಯ ಮೇಲೆ ಬೊಕ್ಕೆಗಳೆದ್ದು ಹಳದಿವರ್ಣವಾಗಿ ಕಪ್ಪುಗೂಡಿರ್ದರೆ ಅಸಾಧ್ಯವೆಂದರಿವುದು (ಶಿಶು. ೦೯); ರಾಣಿಯವರು ಬೊಕ್ಕೆಯ ಮೇಲೆ ಬರೆಯೆಳೆಯುತ್ತಿದ್ದಾರೆ (ಹುಂಜಾ. ೦೦೪). ೨. (ಸುಡುವುದು ಮುಂತಾದುವುಗಳಿಂದ ಚರ್ಮದ ಮೇಲೆ ಉಂಟಾಗುವ) ಗುಳ್ಳೆ; ಬೊಬ್ಬೆ: ವಡಬಾನಳನುರಿಯು[ಳ್ಳ]ಅಡಲೊಲ್ಲೀ ಬಂದು ಬೊಕ್ಕೆ ನೆಗೆದವೊಲೊಳಗಿಂ ದಡಕೊತ್ತಿ ಮುತ್ತುಗಳ್ ನೆಗೆದೊಡೆವವೊಲಾ ಕಡಲ ಬುದ್ಬುದಂ ಕಣ್ಗೆಸೆಗುಂ (ಶಾಂತಿಸು. ೨-೬); ಕರಿಯನ ವಸ್ತ್ರದಲ್ಲೆಲ್ಲ ಬೆಂಕಿಯ ಕಿಡಿ ಹಾರಿ ತೂತು ಬಿದ್ದಿತ್ತು. ಅವನ ಎರಡು ಕಾಲುಗಳಲ್ಲೂ ಬೊಕ್ಕೆ ಎದ್ದಿತ್ತು (ರಕ್ತರೂ. ೩೬).
[ದೇ.॥ ತುಳು. ಪೊಕ್ಕೆ, ಭೊಕ್ಕೆ, ಬೊಕ್ಕೆ ; ತೆಲು. ಪೊಕ್ಕು]

**ಬೊಕ್ಕೆ$_2$** (ನಾ). ಬಿಲ; ಕುಳಿ; ಹೋರು : ಮೊಗಸದಾದನು ಶಾಪದಿಂದಲಿ ಪೊಗಲಿ ಬೊಕ್ಕೆಯನು (ಜಾತ್ರೆ. ೯೨-೦೯); ಈಗವನನ್ನು ಬಡಿದು ಬೊಕ್ಕೆಯಲ್ಲಿ ಹಾಕಬೇಕೆಂದಿದ್ದಾನೆ (ಹಿಂಕು. ೯೦); ಲೋಕಕ್ಕಾದರೋ, ಪೆಲವಲ್ಲಿ ಬೊಕ್ಕೆಗಳನ್ನು ತೋಡಿ ಅಲ್ಲೇ ವಾಸಮಾಡುವ ಸುಂಡಿಲಿಗಳಂತೆ, ಕಾಲಹರಣ ಮಾಡಿದರೆ ಸಾಕು . . . ಅದರಲ್ಲೇ ತಣಿವು ! (ಕ್ರೋಧಿಸ್ಬ. ೯೦).
[ದೇ.॥ ತಮಿ. ಪೊಕ್ಕುಳ್ ; ತೆಲು. ಬೊಕ್ಕ ; ಕೋಲಾ. ಪೊಕ್ಕ, ಬೊಗ್ಗ; ಪಾಯ್ಯಿ. ಪೊಕ್ಕ]

**ಬೊಕ್ಕೆಯೊಡೆ** (ಕ್ರಿ). ಗುಳ್ಳೆಯೇಳು ; ಬೊಬ್ಬೆಯೇಳು : ಮೊತ್ತ ಮೊಳೆಗಳಿಂದ ನೆತ್ತಿ ಬೇರೆಯು ಹರಳೊತ್ತಿ ಪಾದವು ಬೊಕ್ಕೆಯೊಡೆದು ಹಸ್ತಕೆ ದಾವತಿಯಿಲ್ಲವೆಂದೆನಲಾಗ ಮತ್ತೆ ಬಂದಿದಕೊ ಮಾಮಾರಿ (ಅಭಿಮಾ. ೬-೬).
[ಬೊಕ್ಕೆ$_1$ + ಒಡೆ$_1$]

**ಬೊಕ್ಸ** 'ಬೊಕ್ಕಸ' ನೋ.

**ಬೊಗದೆ** (ನಾ). ಬೆಟ್ಟಗಳಲ್ಲಿ ಕೊರೆದ ಸುರಂಗಮಾರ್ಗ: ಪ್ರಭಾ . . . ಖಂಡಾಳೆಘಟ್ಟದ ಆ ಬೊಗದೆಗಳನ್ನು ಸಾರಿಸಾರಿ ತೋರಿಸಿದಳು (ಕಹಾರ. ೦೦೯). [←ಮರಾ. ಬೋಗದಾ]

**ಬೊಗರಿ** 'ಬವರಿ' ನೋ.

**ಬೊಗರಿಗಡ್ಡ** 'ಬವರಿಗಡ್ಡ' ನೋ.

**ಬೊಗರಿದಿರುಗು** 'ಬವರಿದಿರುಗು' ನೋ.

**ಬೊಗರಿಮೊಲೆ**, ಬುಗುರಿಮೊಲೆ (ನಾ). (ಆಕಾರದಲ್ಲಿ) ಬುಗುರಿಯಂತೆ ಇರುವ ಮೊಲೆ : ಬೊಗರಿಯಂತೊಲೆದಾಡುವಳು ನಿಲುವಳು ಪೊನ್ನ ಬೊಗರಿಮೊಲೆಯ ಮೋಹನಾಂಗಿ (ಚಿತ್ರ. ೦೨-೬೯); ಬೊಗರಿಮೊಲೆಯ ಚೆಲ್ವ ಗಾಡಿಕಾತಿಯರ್ಕೃದಿದರು (ಕಂಹ. ೬-೮೦); ಬೊಗರಿಮೊಲೆಗಳಿಗೆ ಕೂರುಗುರು ತಾಗಿದವು (ಕಂಕ. ೩೩-೩). **ಬುಗುರಿಮೊಲೆ**: ನಗೆಮೊಗದ ಪೊಂಬೊಗರ ಮಿಂಚಿನ ಬುಗುರಿಮೊಲೆ[ಪಾಠಾಂ. ಬೊಗಸೆಗಂ]ಗಳ ಸೆಳೆನಡುವ ಸಳ್ಳುಗುರ ಬೆಡಗಿನ ಕಾಂತೆ ರಂಜಿಸುತಿರ್ಪಳಾ ಪುರದಿ (ಚಿತ್ರ. ೨-೨೯).
[ಬೊಗರಿ (<ಬವರಿ) + ಮೊಲೆ$_1$]

**ಬೊಗರೆ** 'ಬವರಿ' ನೋ.

**ಬೊಗಸೆ$_1$** 'ಬಗಸೆ' ನೋ.

**ಬೊಗಸೆ$_2$** (ನಾ). ಕೆಲಸ; ಉದ್ಯೋಗ : ಸೊಗಸುಬಾಳುವೆ ಲೇಸು ಬೊ[ಪಾಠಾಂ. ಬ]ಗಸೆಯುಳ್ಳವರ ಕೆಳೆ ಲೇಸು (ಸರ್ವಜ್ಞ. ೦೦೯೨). [ ? ]

**ಬೊಗಸೆಗಣ್** 'ಬಗಸೆಗಣ್' ನೋ.

**ಬೊಗಸೆಗಣ್ಣು** 'ಬಗಸೆಗಣ್' ನೋ.

**ಬೊಗಳೆ**, ಬಗಳೆ (ನಾ). ಕಷ್ಟ; ತೊಂದರೆ ; ಬವಣೆ : 'ಏನಾ ಬೊಗಳೆ ಬಂತವಾ' ಎಂದು ಸುಂದರಕ್ಕ . . . ಕಣ್ಣೀರು ಒರೆಸಿಕೊಳ್ಳುತ್ತಿದ್ದಳು (ಕೃಷಿ. ೩೯೬). **ಬಗಳೆ** : ನಮ್ಮ ಬಗಳೆ ನಿನಗ್ಯಾಕ ? (ಭೂತಾಳ. ೬೩). [?]

**ಬೊಗಳು** 'ಬಗುಳ್$_1$' ನೋ.

**ಬೊಗಳೆ** 'ಬಗುಳೆ' ನೋ.

**ಬೊಗಾಟಬುಗರಿ**, ಬಗಾಟಬಗರಿ (ನಾ). ಇಬ್ಬರು ಎದುರುಬದುರಾಗಿ ನಿಂತು ಕೈಹಿಡಿದು, ಹಿಂದಕ್ಕೆ ಬಾಗಿ ದುಂಡಗೆ ಸುತ್ತುವ ಹೆಣ್ಣುಮಕ್ಕಳ ಒಂದು ಬಗೆಯ ಆಟ; ಗಿರಿಗಟ್ಟಲೆ ಆಟ : ಸಾಬಿಯು ಬೊಗಾಟಬುಗರಿ ಆಡುವಾಗ ತನ್ನ ಒಡನಾಡಿಯನ್ನು ತಿರುಗಣಿ ಮಾಡುವಿನಲ್ಲಿ ಸಿಕ್ಕ ತೊಪ್ಪಲದಂತೆ ತಿರುಪುವುದನ್ನು ಅವಳ ತಾಯಿಯು . . . ನೋಡುತ್ತಿದ್ದಳು (ರಾಕು. ೪). **ಬಗಾಟಬಗರಿ** : ಇಬ್ಬರು ಪ್ರತಿಸ್ಪರ್ಧಿಗಳು ಕೈಕೈಹಿಡಿದು ಪಾದಕ್ಕೆ ಪಾದ ತಾಗಿಸಿ ಗರಗರನೆ ತಿರುಗುವುದುಂಟು . . . ಅದು ಹೆಣ್ಣುಮಕ್ಕಳಾಡುವ 'ಬಗಾಟಬಗರಿ' ಲೀಲೆಯಂತೆ ಕಂಡಿತು (ಯುಗ. ೬೦೯).
[ ಬೊಗಾಟ ? + ಬುಗರಿ (< ಬವರಿ) ]

**ಬೊಗುಳ್** 'ಬಗುಳು$_2$' ನೋ.

**ಬೊಗುಳಾಟ** 'ಬಗುಳಾಟ' ನೋ.

**ಬೊಗುಳಿಸು** 'ಬಗುಳಿಸು' ನೋ.

**ಬೊಗುಳು$_1$** 'ಬಗುಳ್$_1$' ನೋ.

**ಬೊಗುಳು$_2$** 'ಬಗುಳು$_2$' ನೋ.

**ಬೊಗುಳುಸನ್ನಿ** 'ಬಗುಳುಸನ್ನಿ' ನೋ.

**ಬೊಗ್ಗಡ** 'ಬಗ್ಗಡ' ನೋ.

**ಬೊಗ್ಗನೆ** (ಅ). ಒಮ್ಮೆಲೆ ; ಕೂಡಲೆ : ಪೆಗ್ಗಳ ಬಲದ ಪೇದೋಜ ಬೊಗ್ಗನೆತ್ತಂದು ಭಂಗಕೆ ಬಂದು ಮನನೊಂದು ಸಿಗ್ಗಾಗೆ ತೆರಳದನಾಗ (ಕಂಪಿ. ೦೩-೬೯); ಮಾಯೆಯ ಕೇಡು ಕಾಮಭಯದಿಂ ಬೊ[ಪಾಠಾಂ. ಬ]ಗ್ಗ ನೋಡುವ ಮುನಿಜನಕೆ ಪ್ರಭು ಪ್ರತ್ಯಕ್ಷ ಪೆಗ್ಗಳದೊಳಾದಂತೆ ಸಕಲ ಕರ್ಮಂಗಳಂ ನುಗ್ಗುಮಾಡಿ (ಶಿಶಂ. ೨-೦೭). 'ಬಗ್ಗನೆ' ಪರಾ.

**ಬೊಗ್ಗು** (ನಾ). ೧. (ಕಹಳೆಯಂತಹ) ಒಂದು ಬಗೆಯ ರಣವಾದ್ಯ : ವೀರಬೊಂಬುಳಿಯ ಬೊಗ್ಗಿನೊಗ್ಗುಗಳ ನೆಜ಼್ ಕುಂಬಿಡುವ ಕೊಂಬುಗಳ. . . ಲಗ್ಗೆವಜ಼ಗಳ ರಭಸವಡಸಿ (ಸೋಮೇಶ. ೩-೩೨); ಲಗ್ಗೆ ಮಸಗಿತು ಸೂಳುವೊಯಿಲಿನ ಬೊಗ್ಗಿನಲಿ (ಉತ್ತರಾಖಂ. ೪-೯); ಗಗ್ಗರವಜ಼್ ಗಿಡಿಬಿಡಿ ತೂಳು ಪಜ಼್ ಚಿನ್ನ ಬೊಗ್ಗಿನ ಹಜ಼್ ಜನಗಹಳೆ (ಉತ್ತರಾಭಾ. ೯೦-೬೯). ೨. (ಅಲಂ) (ಜಾತಕನಿಗೆ ವಕ್ರನಾದ) ಶನಿಗ್ರಹ; ಶನಿ : ನಮ್ಮ ಗ್ರಹಚಾರ ಬಂದಾಗ ಬೊಗ್ಗು ಎದುರಾದ (ಜಾಲಗ. ೨೬). [ ? ]

**ಬೊಗ್ಗೇಳು** (ಕ್ರಿ). ಉಬ್ಬು ; ಊದು (?) : ಹುಗ್ಗಿ. . .ಸೂಸಲುಂಡಲಿಗೆ ಬೊಗ್ಗಿದ್ದ ರೊಟ್ಟಿಯಿಡ್ಡಲಿಗೆ ದೋಸೆಯ ಸಬ್ಬಲಗ್ಗೆಯಾಹುತಿಯೊಪ್ಪಿತಲ್ಲಿ (ಚಿತ್ರ. ೨೦-೦೨೬). [ಬೊಗ್ಗು + ಏಳು$_1$ (<ಏೞ್$_1$ )]

**ಬೊಚ್ಚು$_1$** (ನಾ). (ಕೂದಲಿಗೆ ಸಂಬಂಧಿಸಿದಂತೆ) ದಟ್ಟವಾದುದು : ಬಾದುರೆಗೆ ಎಂಟನೆಯ ತಿಂಗಳಲ್ಲಿ ಮೆಯ್ಯ ಕೂದಲುಗಳು ಬೊಚ್ಚಾಗಿ ಉದ್ದವಾಗಿ ಕಾಣಿಸುವುವು (ಅಶ್ವಶಾ. ೨೨-೨).
[ದೇ.॥ ತಮಿ. ಪೊಚ್ಚು = ಕೂದಲಿನ ರಾಶಿ ; ತೆಲು. ಬೊಚ್ಚು = ಸವಿರಾದ ಕೂದಲು]

**ಬೊಚ್ಚು₃** 'ಬಚ್ಚು₃' ನೋ.

**ಬೊಚ್ಚುಬಾಯಿ** 'ಬಚ್ಚುಬಾಯಿ' ನೋ.

**ಬೊಜಂಗ, ಬೊಜಗ** (ನಾ). ೧. ವಿಟಪುರುಷ; ಜಾರ: ಪುರುಡಿಂಬಾಕ್ಕೆಸೆ ಬಿಸುಮಾಡಿಸಿ ಪೊಂದದವಂ ಬೊಜಂಗನೇ (ಆದಿಪು. ೧೨-೧೬); ಮುಂದುಪ ಬೊಜಂಗನಂ ಕಂಡ ಬೆಳವೆಣ್ಣನಂತೊಳಸಾರುತ್ತುಂ (ಧರ್ಮಾಮೃ. ೪-೬೬); ಇಲ್ಲದ ನೆವವಿಟ್ಟಗಲಿ ಬೊಜಂಗನ ಕಲ್ಲೆರ್ದೆ ಮೆಲ್ಲೆರ್ದೆಯುಂಬೊಳಗಂ ತಿಳಿ (ಜಯಗಾ. ೦೪-೯೩). ೨. ವ್ಯಾಪಾರಿಗಳ ಸಂಘ(?): 'ಎಲೆಯಬೊಜಂಗ' ಪರಾ. **ಬೊಜಗ** : ೧. "ವೇಶ್ಯಾಪತಿಃ, ಭುಜಂಗಃ, ವಿಟಃ, ಪಲ್ಲವಿಕಃ — ಈ ೪ ಬೊಜಗಂ" (ಅಭಿಧಾ. ೬೩-೨೨೬); ಈ ಪೊಟರೊಳ್ ಸುರದೇವ ನಂಬೊಂ ಬೊಜಗನಾತಂ . . . ನಾಲ್ವರ್ ಭಾರ್ಯೆಯರ್ (ಶಾಪುಂಪು. ೬೦); ಬಿಡು ಪುಸ್ತಮನಾನೊಲ್ಲೆನೆನುತ್ತೊತ್ತೆಗೊಡಂಬಡುತ್ತುಂ ಬೊಜಗರ್ವೆರಸಾಜಿಡಿಗುರುಳ್ಗಳ ಭಾಲೆಯರ್ಕಳೊಪ್ಪಿದರಾಗಳ್ (ಅನ್ನಪೂ. ೦೨-೬೭); ಗಣಿಕಾಸವಾಸಾಸಕೊಲಿದರ್ ಬೊಜಗರಂತೆ ಜೋಗಿಣಿಯಂತೆ ಮಾಧುದೂತಿಗಳಸಿದರ್ ಬಲ್ಲ ಬಿನ್ನಣಿಗರೆನೆ ಬಾಣಮುಂ ತಾಡುಕಿದರ್ (ತೊಪು. ೯೩-೪೦).
[< ಸಂ. ಭುಜಂಗ]

**ಬೊಜಂಗತನ, ಬೊಜಗತನ** (ನಾ). ವಿಟನ ವರ್ತನೆ,-ಸ್ವಭಾವ ; ವಿಟವೃತ್ತಿ: ನಿದ್ರೆಯಲ್ಲಿ ಮೆಲ್ಲಗೆ ತೊಡೆ ಮೇಲೆ ಬೀಟ್ ಮಾಡನಾವು ಬೊಜಂಗತನಕ್ಕೆ ನೋಡೆ ಸೂಳೆಗೆ ಕೊಡವೇಟ್ಟರೀ ಪಟಬರ್ಕೆರಿಗೆ ಕೊಟ್ಟನದೊರ್ವ ನೊತ್ತೆಯುಂ (ಸೂಕ್ತಿಸು. ೬-೪೮೩). **ಬೊಜಗತನ** : ಪೊಜ ಮಾಡು ಮಂದೀಯ ನಿಳದುಮಾನೀಗಳ್ ನೆಜ್ ಬೊಜಗತನದಲಂಪಂ ದುಜ್ ಮಾತ್ರೊರ್ವಳೊಳ್ ಬಿಡುಬಿಡೆನ್ನಾತ್ಮ ಚೆಮಂ (ಪ್ರಶ. ೨೯-೨೩).
[ಬೊಜಂಗ + - ತನ]

**ಬೊಜಗ** 'ಬೊಜಂಗ' ನೋ.

**ಬೊಜಗತನ** 'ಬೊಜಂಗತನ' ನೋ.

**ಬೊಜ್ಜ** (ನಾ). (ಕರಾ) ಉತ್ತರಕ್ರಿಯೆಯ ಹನ್ನೊಂದನೆಯ ದಿನದ ಕರ್ಮ ; ತಿಥಿ ; ಶ್ರಾದ್ಧ: ಸತ್ಯಭಾಮೆಯ ಬೊಜ್ಜವಾಗಿ ತಿಂಗಳೊಂದು ಕಳೆಯಿತು (ಜನಪ. ೩೬೯); ಬೊಜ್ಜಕ್ಕೆ ಮುನ್ನೂರುರೂಪಾಯಿ ವೆಚ್ಚ ಮಾಡುವುದಾಗಿ ನಿಶ್ಚಯಿಸಿದ್ದರು (ಕಾಂಗಾಪು. ೯೦). [←ತುಳು. ಬೊಜ್ಜ]

**ಬೊಜ್ಜಗೆಱೆ** (ನಾ). ಒಂದು ಕೆರೆಯ ಹೆಸರು: ಮೂಡಗೆಱೆಎ ಬೊಜ್ಜಗೆಱೆಯ ಒಳಂಗೆಱೆಎ ಕೂಡಿತ್ತು ಸೀಮೆ (ಎಕ. IV. ಕೃಷ್ಣರಾಜ. ೦೩೦-೨೫; ಪು. ೫೦೦). [ಬೊಜ್ಜ ? + ಕೆಱೆ]

**ಬೊಜ್ಜು, ಬೊಜ್ಜೆ** (ನಾ). ೧. ಉಬ್ಬಿದ ಶರೀರ: ಜಳ್ಳುಮೈ : ಹೇಗೆ ಬೆಳೆಯಿತು ಬೊಜ್ಜು ನಿನಗೆ, ಮುತ್ತಣ್ಣ ? ವಿನುಂಡೆ ? (ಗಡೀಕ ೬೮-೮); ಕಷ್ಟಪಡದೆ ಬೊಜ್ಜು ಬೆಳೆಸಿಕೊಂಡು ಸುಖವಾಗಿ ಬಾಳಬೇಕೆಂದು ನಿನಗಿಚ್ಛೆ ಇದ್ದರೆ ನೀನೂ. . . ಕಳ್ಳವ್ಯವಹಾರದಲ್ಲಿ ಕೈಹಾಕಬಹುದು (ಕಂಪಕಂ. ೦೨೦). ೨. ಡೊಳ್ಳುಹೊಟ್ಟೆ: (ಕ). **ಬೊಜ್ಜೆ** : ೧. ಸಜ್ಜೆ ಕೋಣೆಗೆ ಚಂದ ಗೆಜ್ಜೆ ಕಾಣಿಕೆ ಚಂದ ಬೊಜ್ಜೆ ಪುಡಾರಿಗೆ ಚಂದ (ಇಂತಾಪ. ೯೪-೩೬). ೩. ಹೊಟ್ಟೆ ; ಉದರ : ಸಾಲುತ್ರಿವಳಿ ಡೊಳ್ಳು ಕಿಱು ಬೊಜ್ಜೆ ಕಳನಾಭಿ ಮೇಲಾದ ಕೀಕಣೆ ಕಾಂಚಾರಾಮನ ಕಂಡೆ (ತಿಃಶತ. ೦೦೮).
[ದೇ.॥ ತಮಿ. ಪೊಚ್ಚೈ; ತುಳು. ಬೊಜ್ಜ]

**ಬೊಜ್ಜುಗ** (ನಾ). ಉಬ್ಬಿದ ಶರೀರವುಳ್ಳವನು; ಜಳ್ಳುಮೈಯವನು: "ತೀವಃ, ತೀವನಃ — ಈ ೨ ಬೊಜ್ಜುಗಂ" (ಶಾಶಬ್ದ. ೩೨); ದೊಡ್ಡ ಬೊಜ್ಜುಗ ಶೂರ್ಪಕರ್ಣ ಪೇರ್ದಡಿಕೊಂಬಿನವ (ಕಕುಪು. ೪-೬-೬).
[ಬೊಜ್ಜು + - ಗ₂]

**ಬೊಜ್ಜುಮೆಯ್**. **ಬೊಜ್ಜುಮೈ** (ನಾ). ಬೊಜ್ಜು ಬೆಳೆದ ದೇಹ ; ಜಳ್ಳುಮೈ : ವಿಂಕ (ಎಂದರೆ ಬೊಜ್ಜುಮೆಯ್ಯ ಅವ್ರ ಗಂಡ ಮಾಸ್ಲೆನಿಕೋವ್)ಯಲ್ಲಿ ಕೆಲವು ಲೋಪದೋಷಗಳಿರಬಹುದು (ಪುನರು. ೨೯೯). **ಬೊಜ್ಜುಮೈ** : ಪುಟಬಡಿದ ನಗುವಿಗೆ ಬೊಜ್ಜುಮೈ ತಾಳಹಾಕಿತ್ತು (ಬಿಳಿ. ೯೮). [ಬೊಜ್ಜು + ಮೆಯ್₂]

**ಬೊಜ್ಜುಮೈ** 'ಬೊಜ್ಜುಮೆಯ್' ನೋ.

**ಬೊಜ್ಜೆ** 'ಬೊಜ್ಜು' ನೋ.

**ಬೊಟ್ಟಂಚು** (ನಾ). ಧೋತ್ರ, ಸೀರೆ ಮೊದಲಾದುವುಗಳ ಬೆರಳಗಲದ ಸಾದಾಅಂಚು ; ದುಂಡಂಚು : (ಕ). [ಬೊಟ್ಟು₁ + ಅಂಚು₃]

**ಬೊಟ್ಟಗ** (ನಾ). (ಬೀಜ ಸಹಿತವಾದ) ಹುಣಿಸೆಹಣ್ಣಿನ ಅಥವಾ ಕಾಯಿಯ ಚಿಕ್ಕತುಂಡು : (ಕ). [<ಬೊಟ್ಟು₁./ಮರಾ. ಬೋಟೂಕ]

**ಬೊಟ್ಟಸೊಪ್ಪು** (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಸೊಪ್ಪು: ಬೊಟ್ಟಸೊಪ್ಪು ಒಂದು ಹಿಡಿ, ಶೀಟಿಕಸಿಂಧವೇರಿನ ನಾರು ಒಂದು ಹಿಡಿ. . . ಮಜ್ಜಿಗೆಯೊಂದಿಗೆ ಅರೆದು. . , ಕುಡಿಯಲು ಬಹುಮೂತ್ರ ನಿಲ್ಲುವುದು (ಸಕಶ್ರ. ಕಂ. ೩೦೦). [ಬೊಟ್ಟು₀ + ಸೊಪ್ಪು₂]

**ಬೊಟ್ಟಳ, ಬೊಟ್ಟಾಳ** (ನಾ). [ಸಂಗೀತ] ವಾದ್ಯವನ್ನು ನುಡಿಸುವುದರಲ್ಲಿ ಒಂದು ಗತ್ತು: ಅಳಗಂ ಸುಟಾಯಳಗಂ ಬೊಟ್ಟಳಮೊಳಕತ್ತರಮುಮೆಸೆವ ಪೊಱಕತ್ತರಮುಗ್ಗಳಿಸಿರೆ ನಾನಾಭೇದಂಗಳ ಪಹರಣ್ ತುಡುಕು ಮಾರಿ [ಶಾಕಾಂ. ವೋಡಿ]ಯುಂ ಬಾಜಿಸಿದಂ (ಧರ್ಮಾಪ. ೨-೨೩). **ಬೊಟ್ಟಾಳ**: ಆವುಜಿಗನಾವುಜಮುಸಳವಡಿಸಿಕೊಂಡು ರಘಂಕಾರದಂ ಪೊಯ್ಸಾಳಗ ಸುಟ್ ಯಾಳಗ ಬೊಟ್ಟಾಳು ಒಳಕತ್ತರ ಹೊಱಕತ್ತರ ವಿಷಮಕತ್ತರಮೆಂಬ ವಿಚಿತ್ರ ವಾದನದ ಬಹುಲಿಕೆಯೊಳ್ಪಿಹಿಲವೆನಿಸಿ. . . ಬಾಜಿಸುತ್ತಿರೆಯುಂ (ಶಾಂತೀಶ. ೦೬-೬೬ ವ). [ ? ]

**ಬೊಟ್ಟಳಗ** (ನಾ). ಚುಕ್ಕೆಗಳಿರುವ ಹವಳದ ಬಣ್ಣದ ಪಶು : ಶ್ವೇತ ಪೀತ ಹರಿತ ಕಪೋತ. . . ಅಳಗ ಬೊಟ್ಟಳಗ ಇಂತೀ ದಶವರ್ಣದ ಪಶು ನಾಮದ ಅನುವನಱಿತು (ಶಾಙಂಗಾ. ೩-೦೨)
[ಬೊಟ್ಟು₂(<ಬಟ್ಟು) + ಅಳಗ₁]

**ಬೊಟ್ಟಾಡು** 'ಬಟ್ಟಾಡು' ನೋ.

**ಬೊಟ್ಟಾಳ** 'ಬೊಟ್ಟಳ' ನೋ.

**ಬೊಟ್ಟಿಡಿಸು** (ಕ್ರಿ). ಹನಿಹನಿಯಾಗಿ ಬೀಳಿಸು ; ತೊಟ್ಟಿಕ್ಕಿಸು : ಅಟ್ಟ ವಾತದ ತೈಲವಂ ತಾಂ ಬೊಟ್ಟಿಡಿಸಿ ಲೇಪಿಸುತ ಪಥ್ಯಂಗೊಟ್ಟದಕೆ ತಕ್ಕನಿತು ಜೋಪಾಸನವನಾಚರಿಸಿ (ಐಸಪು. ೦೬-೮).
[ಬೊಟ್ಟಿಡು (< ಬಟ್ಟಿಡು) + - ಇಸು₃]

**ಬೊಟ್ಟಿಡು** 'ಬಟ್ಟಿಡು' ನೋ.

**ಬೊಟ್ಟು₁, ಬೆಟ್ಟು₃** (ನಾ). ೧. ಬೆರಳು ; ಅಂಗುಲಿ : ನೀಡಿದ ಬೆರಲಂ ನಾರಾಯಣಂ ತನ್ನ ಬಲದ ಕೆಯ್ಯೊಳ್ ಪಿಡಿದೊತ್ತಿದೊಡೆ ಬೊಟ್ಟನೊತ್ತಿದಂತಾದುದಿಲ್ಲ (ಬಂಹರಿ. ೦೩-೨೯ ವ) ; ಚತುರ್ದಶಿಯುಪರಾಹ್ಣದೊಳೀ ಮುಂದ್ರಿಕೆಯುಂ ಬೊ[ಶಾಕಾಂ. ಬೆ]ಟ್ಟನೊಳಿಕ್ಕಿಕೊಂಡು ಪೋಗಿ . . . ಕುಬೇರಪ್ರಿಯನ ರೂಪುಂ ಸ್ಮರಿಯಿಸಿ ಬೆರಳುಂಗುರಮುಂ ತಿರಿಪಲಾತನ ರೂಪಕ್ಕು (ಕೃಷ್ಣಾ. ೬-೦೦ ವ) ; ಬೊಟ್ಟಿಗೆ ಉಂಗುರವ ಮಾಡಿ ಎನ್ನ ಸೇರಿಸೋ (ಪುರಂದ. ೨-೨೪-೯) ; ಬೊಟ್ಟು ಸೀಪಿದರೆ ಹೊಟ್ಟೆ ತುಂಬೀತೇ? (ಗಾದೆ). ೨. ಕಾಲಿನ ತುದಿಬೆರಳು ; ತುದಿಗಾಲು : ಭೀತಿಯಿಂದೆ ಬೊಟ್ಟಿನಿಂ ನಡೆದು ಮನಂ ಮುಟ್ಟಿ ನೆರೆದುಪಪತಿಯನಟ್ಟಿ ಬಂದೊಱಗುವಳೆ ಜಾತಿಜಾರೆ (ಜಸವ. ೦೨-೬೩). ೩. (ಬೀಜ ಸಹಿತವಾದ) ಹುಣಿಸೆಹಣ್ಣಿನ ಚಿಕ್ಕ ತುಂಡು : 'ಬೊಟ್ಟಗ', 'ಬೋಟು₂' ಪರಾ. **ಬೆಟ್ಟು₃** : ೧. ಮಧುಶರ್ಕರೆಯೊಡವೆರೆದಿರ್ಪ ಬೆಟ್ಟು ಸೀಪಿಸಿದರರ್ಭಕಗೆ (ಬೊಃಪತ. ೦೩ ೨೮) ; ಈರೈದುಂಗುರವುಳ್ಳ ಬೆಟ್ಟು (ಐವಾಶ. ೦೦೩-೬); ನಾಲ್ಕುಬೆಟ್ಟು ಅಗಲ ಜರತಾರಿಯ . . . ಕುಪ್ಪಸ (ವಾಕಪೂ. ೪೦).

**ಬೊಟ್ಟು ಕಚ್ಚು, ಬೆಟ್ಟುಕಚ್ಚು** = (ಆಲಂ) ಆಶ್ಚರ್ಯಪಡು ; ಬೆರಗಾಗು ; ವಿಸ್ಮಯವನ್ನು ಹೊಂದು : ಕಟ್ಟಿದ ಮನೆಯಿದ್ದು ಬೆಟ್ಟಿಗೆಯರ ಬಟ್ಟು ಹುಟ್ಟಿದ ಶಿಶುಗಳನುಳಿದು ಕಟ್ಟಿವಿಲ್ಲಿಗೆ ಬಂದು ಬಿಟ್ಟಿಯಾಳುಗಳೆಂದು ಬೊಟ್ಟ ಕಚ್ಚಿದರು ಕಾಯೆನುತ (ಅಮುಶಾಂ. ೨-೬೦); ಇದನ್ನು ಕಂಡು ಬೇರೆ ಕೆಲವು ರಾಷ್ಟ್ರಗಳು ಬೆಟ್ಟುಕಚ್ಚಿಕೊಂಡರೆ ಅದರಲ್ಲಿ ಆಶ್ಚರ್ಯವಿಲ್ಲ (ರಾಜಶ. ೬೩).

**ಬೊಟ್ಟು₂** 'ಬಟ್ಟು₇' ನೋ.

**ಬೊಟ್ಟು₃** (ನಾ). [ಸಂಗೀತ] ಮದ್ದಳೆ ಬಾರಿಸುವುದರಲ್ಲಿ ಒಂದು ರೀತಿ (?): ಅಚ್ಚು ವೈಶಿಕ ನೇಮು ವ್ಯಾಪ್ತಿ ಬೊಟ್ಟು ಮೋಹರ ಅರಿದೆಂಬ ವಂತದಿರಾ ಎಂಬ ಕೂಟು ತಪ್ಪದೆ ಶುದ್ಧಭಾರತಿಕರಣೆಯೆಂಬ ಮದ್ದಳೆಗಳಂ ಬಾರಿಸುವ ಮದ್ದಳೆಕಾರರಿಂ (ರಕಾಶ. ೨-೦೦ ಪ).

[ ← ತೆಲು. ಬೊಟ್ಟ = ಗಾನವಿಶೇಷ ]

**ಬೊಟ್ಟುಗ.** (ನಾ). ಮೈಮೇಲೆ ಚುಕ್ಕೆಗಳುಳ್ಳ ಪ್ರಾಣಿ ; ಚಿರತೆ : ಮಸಿಯುವರ್ಣದ ಬೊಟ್ಟುಗ ಅಚುವರ್ಣದ ಅಳಗ ಐದುವರ್ಣದ ಸಂಚಿಗ ಇವಚಿೂಳಗಾದ ನಾನಾವರ್ಣದ ಅಜಕುಲ ಕುಚುವರ್ಗ ಕೊಲುವ ತೋಳನ ಕುಲ ಮುಂತಾದ ತ್ರಿವಿಧದ ಬಟ್ಟೆಯ ಮೆಟ್ಟಿದೆ (ಸರ್ವಶ. ೬೨-೪೩೩).

[ ಬೊಟ್ಟು₂ ( < ಬಟ್ಟು ) + – ಗ₂ ]

**ಬೊಟ್ಟುಗೊಳ್** (ಕ್ರಿ). ದುಂಡಾಗು ; ವೃತ್ತಾಕಾರವಾಗು : ಮೊಳೆತುವ ಬೊಟ್ಟುಗೊಂಡುವ ಪೊಗರೆದ್ದುವ ನಳಿಸಕುಟ್ಮಲಗಳೆಂಬಂತೆ ಬೆಳೆವುತಿರ್ದುವು ಮೊಲೆಗಳು ಪೊಂಗಳಸವ ಗೆಲುವಂತಾ ಕೋಮಲೆಯ (ಶಾಂಗಳ. ೦೨-೪).

[ಬೊಟ್ಟು₂ ( < ಬಟ್ಟು ) + ಕೊಳ್₁]

**ಬೊಟ್ಟುತೋರಿಸು** ' ಬೊಟ್ಟುದೋಱಿಸು ' ನೋ.

**ಬೊಟ್ಟುದೋಱಿಸು, ಬೊಟ್ಟುತೋರಿಸು** (ಕ್ರಿ). ೧. ಬೆರಳಿನಿಂದ ತೋರಿಸು ; ಬೆರಳು ಮಾಡು. ೨. (ಆಲಂ) ಸ್ಪರ್ಧೆಗಾಗಿ ಬೆರಳೆತ್ತು,—ತೋರಿಸು : ನೀನೆ ಬಲ್ಲಿದನೆಂಬರ್ ನೇಮಿಕುಮಾರಂ ಬೊಟ್ಟುದೋಱಪಂ ಬಾ (ಬಿಂಪಂ. ೦೪-೧೯ ಪ). **ಬೊಟ್ಟುತೋರಿಸು :** ೧. ಹುಡುಗ ಓಡುತ್ತಲೆ ತನ್ನ ಕುಂಗಳತ್ತ ಬೊಟ್ಟುತೋರಿಸಿ . . . ಹೊರಟುಹೋದನು (ಮೂರ್ಗಿದ. ೩೬). [ಬೊಟ್ಟು₁ + ತೋಱಿಸು]

**ಬೊಟ್ಟುಮುರಿ, ಬೆಟ್ಟುಮುರಿ** (ಕ್ರಿ). (ಆಲಂ) (ಬೆರಳು ಮುರಿದು) ಶಪಿಸು ; (ನೆಟಿಗೆ ಮುರಿದು) ಶಾಪಹಾಕು : ನೀನು ನನಗೆ ಬೊಟ್ಟು ಮುರಿದು ಶಾಪಳಸುತ್ತ ನನ್ನನ್ನು ಮನಸೋಕ್ತ ಬೈಯಬಹುದು (ವೋಹಜ. ೦೨೩) ; ಏನಾಗೇದ ವಸಂತಗ, ನೀವೆಲ್ಲಾ ಇಷ್ಟು ಬೊಟ್ಟುಮುರಿಯಲಿಕ್ಕ ? (ಜಂಶ. ೮). **ಬೆಟ್ಟುಮುರಿ :** ಅವರನ್ನು ಕಂಡರೆ ಆಗದವರು ಲಟ ಲಟನೆ ಬೆಟ್ಟುಮುರಿದು ತೃಪ್ತಿಪಟ್ಟುಕೊಂಡರು (ಕೂರಿ)

[ಬೊಟ್ಟು₁ + ಮುರಿ₁]

**ಬೊಟ್ಟುವೋರಿಸು** (ಕ್ರಿ). ೧. ಒಂದು ಬಗೆಯ ಆಟ ಆಡು (?) : ತಿಱಿಕಲ್ಲಾಡುವ ಬೊಟ್ಟುವೋರಿಸುವ ಸಂಡಂ ಪೊಯ್ವ ಬಾದಿಂಗ ಕೈನಿಱಿದೆರ್ದಾಡುವ . . . ನಾನಾಕ್ರೀಡೆಯಿಂದಿರ್ದರುಂ ತಱಿಸಂದುದ್ಧತ ಭಾವದುಬ್ಬರದಿನೇನುಮ್ಮೃತ್ತರಾಗಿರ್ದರೋ (ಸಂಕುಶೂ. ೨-೩). ೨. ಸ್ಪರ್ಧೆಗೆ ಆಹ್ವಾನಿಸು ; ಪಂಥಾಹ್ವಾನ ನೀಡು (?) : ಪಱಿರೊಳು ಪೋರ್ಬಳಿಯಿಕ್ಕುತ್ತಂ ಮೊಯ್ವೊರಿಸುತ್ತ ಬೊಟ್ಟುವ [ವೋ] ರಿಸುತ್ತುಮಿವು ಮೊದಲಾದ ಪಱಿವುಂ ರಾಗದ್ವೇಷಹೇತುಗಳಪ್ಪುವಂ ಮಾಡುತ್ತಿರ್ಪುದುಂ ವಂಚನೆ ಮೊದಲಾದ ಕ್ಷುದ್ರಿಕಗಳನುಪದೇಶಂಗೆಯ್ವುದಾರಂಭಕೋಪದೇಶ ಮಕ್ಕುಂ (ಶರಾರ. ೪೦೩). 'ಬೊಟ್ಟುದೋಱಿಸು' ಪರಾ. [ ? ]

**ಬೊಟ್ಟೆತ್ತು** (ಕ್ರಿ). ಬೆರಳೆತ್ತಿ ಹೇಳು ; ಕೈಯೆತ್ತಿ ಸ್ಪಷ್ಟ ಪಡಿಸು, – ನಿರ್ದೇಶಿಸು : ಧರಣೀಪಾಳರ್ಕಳುಂ ಮಂತ್ರಿಗಳು ವಿತರರಿಲ್ಲೆಂದು ಬೊಟ್ಟೆತ್ತಿದಂ ರಾಯರೊಳೆಂತಾ ನಾರಸಿಂಹಂ ಸಚಿವರೊಳೆಸಕಂವೆತ್ತ ಪೊಲಾಳ್ವನೀಯಿರ್ಬ್ಬರೆ . . . ಹೊಯ್ಸಳನ ಸಕಳ ಸಾಮ್ರಾಜ್ಯಮಂ ಕಾದರಿತ್ತಲ್ (ಎಕ. XI. ದಾವಣ. ೨೩-೩೬ ; ೧೭೭೪) ; ಉತ್ತಮದೇವಿ ನೀನೆ ಮೊಲೆವೊತ್ತರೊಳೆಂದು ಜಗತ್ರಯಕ್ಕೆ ಬೊಟ್ಟೆತ್ತಿದ ಮಾಟಕ್ಕಿಯುಂದೆ ಗುಡಿಗಟ್ಟಿ . . . ಉನ್ಮತ್ತಗಜೇಂದ್ರಮಿರ್ದೋಡೆ ಗಜೇಂದ್ರ ಮದಾಲಸಯಾನೆ ನೋಡಿದಳ್ (ಅಜಪು. ೪-೦೦೦) ; ಭಟ್ಟರ ಗುರುಗಳೆಂದೆನಿಸಿ ಕುಮಾರನ ಬೊಟ್ಟೆತ್ತಿ ಪೊಗಳ್ದ ಲುಬ್ಧಕರು ಕೊಟ್ಟರೊಂದೊಂದು ಕರ್ಣಾಣೆಗಳು ಬಿದ್ದು ಪೆರ್ವೆಟ್ಟಕೆ ವಿಗಿಲಾದುದೆನಿಸಿ (ಕೋಜಕ. ೦೯-೩೮).

[ಬೊಟ್ಟು₁ + ಎತ್ತು₁]

**ಬೊಡ್ಡಣ** (ನಾ). ಸೋಪಾನಗಳಿಂದ ಕೂಡಿದ, ಜಲಕ್ರೀಡೆಯಾಡುವ ಪುಷ್ಕರಿಣಿ,—ಕೊಳ : ಬಾ ನಾಮಿಾ ಬಾವಿಯೊಳ್ ಜಲಕ್ರೀಡೆಯಾಡುವಂ ಎಂದೊಡಗೊಂಡೊಯ್ವಾತನಂ ಬೊಡ್ಡಣದ ಬಾವಿಯೊಳಗೆ ಪುಗುವಂತೆ ಗೆಯ್ದು (ಶಜಶಂ. ೦೯೯_೦೭). 'ಬೊಡ್ಡಣವಾವಿ' ಪರಾ. [?]

**ಬೊಡ್ಡಣಬಾವಿ** 'ಬೊಡ್ಡಣವಾವಿ' ನೋ.

**ಬೊಡ್ಡಣವಾವಿ, ಬೊಡ್ಡಣಬಾವಿ** (ನಾ). = ಬೊಡ್ಡಣ : ಅಲ್ಲಿಯ ಕೆಱೆಗಳೆಲ್ಲಂ ಬೆಳೆಗೆಯ್ಗಳೆ ಕೊಳಂಗಳೆಲ್ಲಂ ಪೂಗೊಳಂಗಳೆ ಬಾವಿಗಳೆಲ್ಲಂ ಬೊಡ್ಡಣವಾವಿಗಳೆ (ಬಂಶಂ. ೦-೨೦ ಪ) ; "ವರ್ಧನವಾಪಿ, ತುಂಬಿದ ಬಾವಿ" (ಶಂಶಂ. ಕೋಶ). **ಬೊಡ್ಡಣಬಾವಿ :** ಸುವರ್ಣಮೆಂಬ ಮಣಿ ಕುಟ್ಟಿಮಮಪ್ಪ ಬೊಡ್ಡಣಬಾವಿಯೊಳ್ . . . ಜಲಕ್ರೀಡೆಯಂ ಮನಕ್ಕೆ ಪಂದರಸಿಯರ್ಕಳೊಡನೆ ನೀಡುಂ ಬೇಗಮಾಡುತ್ತಿರ್ಪನ್ನೆಗಂ (ವಡ್ಡಾ. ೦೪೬-೨೨) ; "ಬೊಡ್ಡಣಬಾವಿಯೊಳ್–ದೊಡ್ಡಬಾವಿಯಲ್ಲಿ, ಕೊಳದಲ್ಲಿ (?), (ಸಂ ) ವರ್ಧನವಾಪಿ (?) . . . ಇಂಥ ಬಾವಿಗೆ ನೀರನ್ನು ತುಂಬಬಹುದು, ಕೆಳಗಿರುವ ತೂಬಿನಿಂದ ನೀರನ್ನು ಹೊರಕ್ಕೆ ಬಿಡಬಹುದು, ಇದನ್ನು ಜಲಕ್ರೀಡೆಗೂ ಮಿಾಯುವುದಕ್ಕೂ ಉಪಯೋಗಿಸುತ್ತಿದ್ದರು" (ವಡ್ಡಾ. ಕೋಶ) ; ರನ್ನಮಂ ಪೋಲ್ವ ಲಾಕ್ಷಾದ್ರವದೊಳು ಬೊಡ್ಡಣಬಾವಿಯಂ ತೀವಿದೊಡದಱೊಳ್ಪೋಲಾಡಿ ಮುಕ್ಕುಳಿಸಿ ನೋಡಿ ಕೃತಕ ರುಧಿರಮಪ್ಪುದನಱಿದು (ಚಾಪುಂಕೆ. ೦೯) ; ತುಂಬಿದ ಬೊಡ್ಡಣಬಾವಿಯ ತೂಂಬಂ ತಡವರಿಸಿ ಕಂಡದಂ ಕಳೆದಲ್ಲಿಂದಂ ಬೇಗಂ ಪೊಱಮಡೆ (ಶಜಶಂ. ೦೯೯-೩೪) ; ಅರಸನೊಸದು ಜಲಕ್ರೀಡೆಯಾಡಲ್ ಬಗೆದು . . . ಪಂಚರತ್ನಶಿಲಾಖಚಿತಮಪ್ಪ ಬೊಡ್ಡಣಬಾವಿಯಂ ವನಿತಾಜನಸಹಿತಂ ಪೊಕ್ಕಾಗಳ್ (ಬಂಶಂ. ೦೪-೩ ಪ). [ಬೊಡ್ಡಣ + ಬಾವಿ./ ತೆಲು. ಬೊಡ್ಡನಬಾವಿ]

**ಬೊಡ್ಡಿ** 'ಪೊಡ್ಡಿ' ನೋ.

**ಬೊಡ್ಡಿತನ** (ನಾ). ಸೂಳೆತನ ; ಜಾರತನ : ಮನುಕುಲದೆ ಪುಟ್ಟಿ ನಿಟ್ಟುರದ ಬೊಡ್ಡಿತನಮಿಂತೇಂ ಸೂಚನನಾಯ್ತು ಬಾಚ್ಚಿ ನೀಂ ಮಗಳೇ ! (ರಾಮಚಶ್ಯ. ೬೦-೩).  [ಬೊಡ್ಡಿ (< ಪೊಡ್ಡಿ) + – ತನ]

**ಬೊಡ್ಡಿಮಗ** 'ಪೊಡ್ಡಿ' ಪರಾ.

**ಬೊಡ್ಡು** 'ಬಡ್ಡು' ನೋ.

**ಬೊಡ್ಡೆ** (ನಾ). ೧. (ಗಿಡ, ಮರ ಮೊದಲಾದುವುಗಳ) ಬುಡ ; ತಳ ; ಕೆಳಭಾಗ : ಆ ಬೇವಿನ ಮರದ ಬೊಡ್ಡೆಯು ಅವನಿಗೊಂದು ಆಸರವಷ್ಟೆ (ಶಜರು. ೦೧); ಅವರೆಲ್ಲರೂ ಬಂಡೆಯ ಬೊಡ್ಡೆಯಲ್ಲಿ ನಿಂತು ಎದುರ್ರ ಮಲೆಯ ಮೇಲಿನ ಬಾಹುಬಲಿಯತ್ತ ನೋಡಿದರು (ಸಪಕ. ೦೦೬). ೨. ಮೊದಲು ; ಆರಂಭ : ಬೊಡ್ಡೆಯಲ್ಲಿಯೇ ಅವನೊಂದು ದೊಡ್ಡ ತಪ್ಪನ್ನು ಮಾಡಿರುವನು (ಪುರುಣು. ೯೩). 'ಬುಡ' ಪರಾ.

**ಬೊದಡೆ, ಬೋದಡೆ** (ನಾ). ದಪ್ಪ ಹಾಗೂ ಒರಟಾದ ಹಚ್ಚಡದಂತಹ ಹೊದಿಕೆ : ಬೋಳು ಜಡೆಮುಡಿ ಲೋಚುಮುಂಡೆಗಳ ಸಿತಭಸಿತಭಾಳ ಭಸ್ಮಾಂಗಮುದ್ಧೂಳಿತಂ ರುದ್ರಾಕ್ಷಿಮಾಲೆ ಕಂಬಳಿ ಜಾಡಿ ಬೊಂತೆ

ಬೊವಡೆಯು ಕೌಪು ನಿರ್ವಾಣ ಕಾಶಾಂಬರ (ಗುರುಚಾ. ೩-೫೩); ಕಾವಿ ಕಾಷಾಯಾಂಬರವು ಕಂತೆ ಜಾಡಿಯು ಬೊದಡೆ ತೀವಿ ಮೈಯೊಳು ಭಸಿತ ದೇವಗಣ ನಡೆಯೆ (ಶರೇ. ೦೬೬-೩). **ಬೋದಡೆ :** ತಳೆದ ಒಡಲ ಬೂದಿಯು ಕಚ್ಚುಟದ ಕೈದಡಿಯು ನೆತ್ತಿಯು ಜಡೆಯು ಬೋದಡೆಯು ವಡೆಯರೆತ್ತ ಮಣಿಮಯಾಸನವೆತ್ತ ನೋಡು (ಮರೇಶ. ೭-೫೭).

[← ಮರಾ. ಬೋಜಡ, ಬೋದಡ]

**ಬೊದಿಲ್** (ನಾ). ಒಂದು ಅನುಕರಣ ಶಬ್ದ : ಸೂತನೆಂಬವಂ ಕಂಡು . . . ಬೊದಿಲ್ಲೆನೆ ಪಾಯ್ದು ನೀರೊಳಾ ಬಾಳನನಾದಮಾದರದೆ ಕಂಡೊಸೆದು ನಿಧಿಗಂಡವನಂತೆವೋಲ್ (ಕಂಶಭಾ. ೦-೯೭) ; ಎಳೆ ಬೊದಿಲ್ಲೆನೆ ಬಿಟ್ಟತ್ತು (ಕಂಶಭಾ. ೦೦-೬೦).

**ಬೊನೆಗಾರೆ** 'ಬೋನಂಗಾರೆ' ನೋ.

**ಬೊಪ್ಪ** 'ಬಪ್ಪ$_2$' ನೋ.

**ಬೊಪ್ಪಡೆ** (ನಾ). ಒಂದು ಬಗೆಯ ತೆರಿಗೆ : ಸಂಕರದಾಸಿವ ಕೊಟ್ಟದಾಸಿಗ ಸುಂಕದ ಹೆಗ್ಗಡೆ ಬೊಪ್ಪಡೆ ಒಳಗಾಗಿ ಸುಂಕ ಆಯದಾಯ . . . ಧಾರಾಪೂರ್ವಕ ಮಾಡಿ ಬಿಟ್ಟರು (ಎಕ. V(R), ಪ್ಪಿಕೂರು. ೨೦೫-೦೪; 1175).

[ ? ]

**ಬೊಪ್ಪಯ** (ನಾ). ತಂದೆ ; ಜನಕ : ಬೊಪ್ಪಯ. ಮುಚ್ಚುವಿರೆ ನನಗೆ ನಿವ್ಯಾತ್ಮಮಂ ಸಂಡುತ್ತಿರ್ಪಳಲ ಬೇಗೆಯುಂ (ಶ್ರೀರಾಮಾ. ೪೬೨-೪೬೫).

[ಬೊಪ್ಪ (<ಬಪ್ಪ$_2$) + ಅಯ$_1$ (<ಅಯ್ಯ$_1$)]

**ಬೊಪ್ಪಿ** (ನಾ). (ಸಾಮಾನ್ಯವಾಗಿ ಶೂದ್ರವರ್ಗಕ್ಕೆ ಸೇರಿದ) ಗ್ರಾಮ ದೇವತೆಯ ಅರ್ಚಕ : (ಕ). [ ← ಮರಾ. ಭೋಪೀ, ಭೋಪ್ಯಾ ]

**ಬೊಪ್ಪಿಬೋಯ** (ನಾ). ಒಬ್ಬಾತನ ಹೆಸರು : ಬೊಪ್ಪಿಬೋಯಸ್ಯ ಕಾಶ್ಯಾ(ಶ್ಯ)ಪಗೋತ್ರ ಕುಮಾರಶರ್ಮಣ (ಇಕ.VII, ೦೬೬-೪೨ ; 668).

[ ಬೊಪ್ಪಿ$_?$ + ಬೋಯ]

**ಬೊಬ್ಬರ** 'ಬಬ್ಬರ' ನೋ.

**ಬೊಬ್ಬರ್ಯ** (ನಾ). (ಕರಾ) ಒಂದು ಕ್ಷುದ್ರದೇವತೆಯ ಹೆಸರು : ನಿದ್ರೆಯಲ್ಲಿ ಜಟ್ಟಿಗ, ಬೊಬ್ಬರ್ಯ ಬಂದ ಹಾಗೆ ಕಾಣಿಸುಹುದು (ಸ್ವಕ್ಷಸೊ. ೮) ; ಆ ಬೊಬ್ಬರ್ಯ ನಿಮಗೆ ಕಾಣಿಸಿತ್ತೆ ? (ರೇವಹೊ. ೫೫).

[← ತುಳು. ಬಬ್ಬರ್ಯ ]

**ಬೊಬ್ಬಾಟ,** ಬಬ್ಬಾಟ (ನಾ). ೧. (ಆನಂದ, ಆವೇಶ, ರೋಷ ಮುಂತಾದುವುಗಳಿಂದ ಮಾಡುವ) ಕೂಗಾಟ ; ಚೀರಾಟ ; ಅರಚುವಿಕೆ : ಬೊಬ್ಬಿಡುದಾರುವೀ ಬೊಬ್ಬಾಟವೇತಕ್ಕೆ (ಐಸವು. ೫೬-೦೭); ನಿಜಪದಾತಿಯ ಬೊಬ್ಬಾಟ . . . ತ್ರಿಜಗಕ್ಕೆ ಭಯವ ಬೀಜಿದುವು (ಕಂಸವ. ೦೫-೨೦). ೨. ದೊಡ್ಡ ಶಬ್ದ ; ಗಟ್ಟಿಯಾದ ಧ್ವನಿ : ವಿವಿಜರ ಘಟ್ಟಿಸಲಿ ಬೊಬ್ಬಾಟವಾಯ್ತು ಗಭೀರಭೇರಿಗಳು (ಕುಮಾರ. ೦೨-೫೫) ; ಅಸುರದ ಬೊಬ್ಬಾಟ ಹಯದುರುಹೇಷಿತಧ್ವನಿ ಕರಿಯ ಬೃಂಹಿತ ಘೋಷ . . . ಅಸುರದಿ ಬೆದಱಿಸಿತು ರಾಮಸುವಾಸಿನಿಯನು (ತೊರರಾ. ೩-೬-೨೪). ೩. ಅಬ್ಬರ ; ಆರ್ಭಟ : ಆಟವಾರಂಭಿಸದು ಬಟ ಬೊಬ್ಬಾಟವೇತಕೆ ವಿಜಯಸಿರಿ ವಾಚಾಟರಿಗೆ ಮೆಚ್ಚುವಳೆ (ಕುಮಾರ. ೦೩-೪೭); ಭಂಡ ಬೊಬ್ಬಾಟವನು ಬಿಡು ಕೈಕೊಂಡು ನೋಡಿದನುಳಿದ ಗೋಪರ ತಂಡವನು ಬಳಿಕಾಹುತಿಯ ಮಾಡಾಪಡೆ (ಸಿಶಾಗ.೦೦-೬೨-೦೨); ತನ್ನ ಗಂಡನ ಬೊಬ್ಬಾಟ ರಾಧಾಬಾಯಿಗೂ ತುಸು ವಿಚಿತ್ರವಾಗಿಯೇ ತೋರಿರಬೇಕು (ವಾತ್ಸಲ್ಯ. ೭೩). ೪. ಗಲಾಟೆ; ಗಲಿಬಿಲಿ; ಗೊಂದಲ : ಅರಮನೆಯಲಾ ಬೊಬ್ಬೆ ಹಸ್ತಿನಪುರದಲೀ ಬೊಬ್ಬಾಟವಿನ್ನುಳಿವರಸುಗಳ ಪಾಡಾವುದು (ಕುಮಾರ. ೬-೬) ; ಇರುಳು ಬೊಬ್ಬಾಟದಲಿ ನಿದ್ದೆಗೆಟ್ಟ ನೆರೆಯುವರಾಸಿಸಲಿ ಹೆಸರೊಂದನಿಟ್ಟ (ನಡೆದಾ. I, ೪೪೨). ೫. ತಕರಾರು ; ತಗಾದೆ ; ವರಾತ : ಈ ಪ್ರಕಾರದ ಬೊಬ್ಬಾಟಗಳು ಪತ್ರದ್ವಾರದಿಂದ ನೇತಮಿ ನಡದಿರುತ್ತವೆ (ಮುಂಬಯಿ. ೮ ಶ್ರಕ್ಷವ). ೬. ಗುಲ್ಲು; ವೈಠಾರು: ನೀ ಅದು ಮಾಡುತೀ ಇದು ಮಾಡುತೀ ಅಂತ ಊರೆಲ್ಲಾ ಬೊಬ್ಬಾಟ ಆಗ್ತೈತಪ್ಪಾ (ಮಣ್ಣುಹೆ.೦೦೦): ರಾಚಪ್ಪ ನಿನ್ನ ಕೈಹಿಡಿದು ಕೀಳಿದಾ ಅನ್ನೂದರ ಬೊಬ್ಬಾಟ ಮಾಡಿದವ ಶ್ಯಾಮರಾಯ (ದೀಶಹ. II, ೦೯೭). **ಬಬ್ಬಾಟ : ೬.** ಸ್ವಲ್ಪದರ ಮಾತು. ಯಾತಕ್ಕ ಬಬ್ಬಾಟ ಮಾಡೋದು (ಧಸಂಶ. ೩೮); ಈಗ ಇಲ್ಲದ ಬಬ್ಬಾಟ ಮಾಡೂ ಹಂಗಿಲ್ಲ. ಯಾರೆದುರೂ ಹೇಳದ ಸುಮಾರ ಇರೂದ ಪಾಡ (ಗ್ರಾಮಾಯ. ೪೮).

[ಬೊಬ್ಬೆ$_2$ + ಆಟ./ತುಳು. ತೆಲು. ಬೊಬ್ಬಾಟ]

**ಬೊಬ್ಬಿ** 'ಬೊಪ್ಪೆ$_3$' ನೋ.

**ಬೊಬ್ಬಿಕ್ಕು,** ಬೊಬ್ಬೆಯಿಕ್ಕು (ಕ್ರಿ). ೧. ಕೂಗು ; ಅರಚು : ಲಂಘಿಸುತ ಕಾಡೆಮ್ಮೆಗಳ ತೆಕ್ಕೆಯೊಳು ಕೋಣನಿರೆ ಕಂಡು ಶಬರಿಯರು ಬೊಬ್ಬಿಕ್ಕಿ ಮಗುಳ್ದಾಲಿಸಿದರು(ಹಕಶಾ.೫-೩೯). ೨. ಗರ್ಜಿಸು; ಅಬ್ಬರಿಸು: ರಕ್ಕಸಿಯ ಕೊಂದೆತಳಹರುಷದ ಹರವರಿಯಲುಜಿ ಬೊಬ್ಬಿಕ್ಕಿ ಬಾಹಪ್ಪಳಿಸಿ ಘಟನೆಗೆದಂಬರಸ್ಥಳಕೆ . . . ಹಾಡೀದನು (ತೊರರಾ. ೫-೦-೨೪); ಶಿವ ನೀನಾದ ಕಾರಣದಿಂದೆ ಬಂದಾಹವದೊಳು ಬೊಬ್ಬಿಕ್ಕಬಹುದು (ಸೋಚಕ. ೫೪-೨೬). **ಬೊಬ್ಬೆಯಿಕ್ಕು :** ೧. ತಬ್ಬಿಬ್ಬಿಯಾಗದೆ ತಳ್ಳಂಕಗೊಳ್ಳದೆ ಬೊಬ್ಬೆಯಿಕ್ಕದೆ ಜೋಕೆಯಿಂದು ಒಬ್ಬರಿಬ್ಬರು ಮೂವರೊಂದೊಂದು ಕಲೆಯು ಮೈಯುಬ್ಬುವೊಲು ಕೇಳಿಸಿದರು (ಭರತ. ೦-೬೦). [ ಬೊಬ್ಬೆ$_2$ + ಇಕ್ಕು ]

**ಬೊಬ್ಬಿಡಿಸು** (ಕ್ರಿ). ಬಹಳ ಶಬ್ದಮಾಡಿಸು : ಮೂಗಿನಲಿ ಹಲವು ಕುಜಿ ಕೋಣಗಳ ಹೊಗಿಸುವುದುಲಿವ ಹೆಬ್ಬುಜಿಗಳನು ಕಿವಿಗಳ ಬಳಿಯ ಬೊಬ್ಬಿಡಿಸುವುದು (ತೊರರಾ. ೬-೨೬-೨೩). [ಬೊಬ್ಬಿಡು + — ಇಸು$_1$]

**ಬೊಬ್ಬಿಡು,** ಬೊಂಬಿಡು, ಬೊಬ್ಬೆಯಿಡು (ಕ್ರಿ). ೧. (ಆನಂದ, ರೋಷ, ಆವೇಶ ಮುಂತಾದುವುಗಳಿಂದ) ಕೂಗು ; ಅರಚು : ಭಿಲ್ಲಪ್ರಕರಮಡಸಿ ಕೂರ್ಗಾಯ್ಗಳಂ ಬಿಟ್ಟು ಬೊಬ್ಬಿಟ್ಟು (ಗಂಶ. ೦-೦೦೦); ಸೈನ್ಯಂ ನಡೆಯಲ್ ಬೊಬ್ಬಿಟ್ಟು ಕೋಲಂ ತುಡುಕೆ (ದಕಶು. ೬-೬೦); ಬೀಳುಬೀಳಭಿಮನ್ಯುವಿವ ವಧೆ ಬಾಳಲೀವುದೆ ನಿನ್ನನೆನುತಂಬ್ಬಾಳುತನದಲಿ ಪಾರ್ಥ ಬೊಬ್ಬಿಡೆ (ಕುಮಾದ್ರೋ. ೦೪-೪೦). ೨. ಗಟ್ಟಿಯಾಗಿ ಹೇಳು ; ಧ್ವನಿಮಾಡಿ ಹೇಳು; ಉದ್ಘೋಷಿಸು : ಬೇಡಿ ಕರುಣವನೀಯೆನುತ್ತಂ ಕೂಡೆ ಬೊಬ್ಬಿಡುತಾರು ತಾಣತಿಗೂಡಿ ತಾರ್ಕ್ಯಸುತ್ತಂ . . . ತಾಂಡವಮನಾಡುವೆನು (ಐಸವು. ೦೭-೨೦); ಶ್ರೀ ರುದ್ರವೇದ ಬೊಬ್ಬಿಡುತ್ತಿದೆ (ಗಣಭಾ. ೨೪೫-೦) ; ಕಟ್ಟಿಗೆ ಗಾಜಿರನೇಕವುಗ್ಗಡ ಬೊಬ್ಬಿಟ್ಟುದು ರಾಯನೇಳ್ಗೆಯಲಿ (ಸೋಚಕ. ೨೦-೫೪). ೩. ಆಕ್ರಂದನ ಮಾಡು ; ಮೊರೆಯಿಡು : ಚಂದ್ರಂಗೆ ರಾಹು ಅಡ್ಡ ಬಂದಲ್ಲಿ ಅಂಬುಧಿ ಬೊಬ್ಬಿಟ್ಟತ್ತೆ (ಐಸವ. ೨೫) ; ಹದ್ದು ಕಾಗೆಯ ಮನೆಗೆ ಬಾಣಸವಿದ್ದುದೋ ಗಜವೆನುತ ಬೊಬ್ಬಿಡುತಿದ್ದುದರಿಬಲ (ಕುಮಾದ್ರೋ. ೩-೪೩); ಬಾಲೆಯುರುಗಳು ಬೊಬ್ಬಿಡಲು ಗೋಪುರದಗ್ರಶಾಲೆಯ ರೋದನ ಗೇಳಿ ಲೀಲೆಗಾಜಿನ ಕೊಲ್ಲುದಿಲ್ಲೆಂದು ದುಃಖಿದ ಶೀಲೆಗೆ ಮಾತಸಟ್ಟದನು (ಸೋಚಕ. ೩೫-೫೨). ೪. ಅಧಿಕವಾಗಿ ಧ್ವನಿಮಾಡು,— ಶಬ್ದಮಾಡು : ನಡೆವೆಡೆಯೊಳಗುರ್ಬಿಂ ಬೊಬ್ಬಿಡುವಂದುಗೆ ಗೆಜ್ಜೆ ಸಜ್ಜನೆಗೆ ಸೊಗಯಿಸುಗುಂ (ಗಂಶ. ೩-೯೮); ಕಾಡಿಕುಡಿದು ಬೊಬ್ಬಿಟ್ಟಾಡುತಿರ್ದವು ಸಾಂದ್ರ ಚಂದ್ರಿಕೆಯುಲಿ ಚಕೋರಿಗಳು (ಕುಮಾದ್ರೋ. ೦೭-೦೪). **ಬೊಂಬಿಡು :** ೪. ಶಂಬಿಗಳ್ ಬೊಂಬಿಡಲ್ . . . ನಡೆದಂ ಮರುಳುಸಿದ್ಧಾಂತ ವೃದ್ಧಂ (ಚಕುವು. ೩-೦-೮). **ಬೊಬ್ಬೆಯಿಡು :** ೧. ಮಾಧವನು ತನ್ನ ಜನರನ್ನು ಗಟ್ಟಿಯಾಗಿ ಬೊಬ್ಬೆಯಿಡುವಂತೆ ಹೇಳಿದನು (ಬಂಕಿಮ. ೫೪).

[ಬೊಬ್ಬೆ$_2$ + ಇಡು$_1$]

**ಬೊಬ್ಬಿರಿ** 'ಬೊಬ್ಬಿಱಿ' ನೋ.

**ಬೊಬ್ಬಲಿ** (ನಾ). ಸ್ತ್ರೀಯರು ಕಾಲಿನ ಹೆಬ್ಬೆರಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ : ಮುತ್ತಿನ ಗೆಜ್ಜೆಗಳಿಂ ಕೂಡಿದ ವೀರಮುದ್ರಿಕೆ ಕಿರುಪಿಲ್ಲಿ ಬೊಬ್ಬಲಿಗಳನಿಟ್ಟು (ಶೌಗಂಧಿ. ೨೧೨-೬).

[← ತೆಲು. ಬೊಬ್ಬಲಿ]

**ಬೊಬ್ಬಿಱಿ, ಬೊಬ್ಬಿರಿ** (ಕ್ರಿ). ೧. (ಆನಂದ, ರೋಷ, ಆವೇಶ ಇತ್ಯಾದಿಗಳಿಂದ) ಕೂಗು ; ಅರಚು : ತಾನುಂ ಒಡಿಂಬಡಿಯುಂ . . . ಕೆನ್ನೆತ್ತರೊಳೊರ್ವರೊರ್ವರಂ ತಳ್ಕೈಱಿದುಂ ಬೊಬ್ಬಿಱಿದುಂ . . . ಆಡುವಾಗಳ್ (ಶಂಕರಾ. ೧೨-೧೩೮ ವ); ಬೇಡಪಡೆ ಬೊಬ್ಬಿಱಿದಾಡಿದುದು (ತಕಕು. ೨-೦೦೪); ಆಯೆನುತ ಬೊಬ್ಬಿಱಿದು ವಿಪ್ರನಿಕಾಯ ಕುಣಿದುದು . . . ಹರುಷದಲಿ (ಕುಮಾ.ಭಾ. ೧೩-೬೦). ೨. ದೊಡ್ಡ ಧ್ವನಿ ಮಾಡು ; ಗಟ್ಟಿಯಾಗಿ ಧ್ವನಿ ಮಾಡು ; ಉದ್ಘೋಷಿಸು : "ಬೊಬ್ಬಿಱಿ (ಬೊಬ್ಬೆ + ಇಱಿ) — ಮಹಾರವೇ" (ಶಮದ); ಸೂಳವಿಸಿ ಬೊಬ್ಬಿಱಿದವುರುನಿಸ್ಸಾಳಚಯಪದ್ರಿಗಳ ಹೆಡತಲೆ ಸೀಳೆ ಸಿಡಿಲೇಳಿಗೆಯುಲಿದ್ದವು ವಿವಿಧವಾದ್ಯರವ (ಕುಮಾ.ದ್ರೋ. ೧-೪೪) ; ಬೊಬ್ಬಿಱಿವುದು ಕೀರ್ತಿಡಿಂಡಿಮಮುಖಿಂ ಜಗದೊಳು ವಿಜಯ ಕ್ಷಿತೀಂದ್ರನಾ (ಎಕ. XI. ಚತ್ರದು. ೫-೭; ೪) ; ನಿಮ್ಮಸುಗಳು ಶರೀರವ ನೀಗಿ ಕಳೆಯಲಿ ಎಂದು ಬೊಬ್ಬಿಱಿದೆಚ್ಚನತಿರಥರ (ಕುಮಾ.ದ್ರೋ. ೧೫-೬೫). ೩. ಆಕ್ರಂದನಮಾಡು ; ಮೊರೆಯಿಡು : ಬೊಬ್ಬಿಱಿವಿನಮಾಂತಿಱಿದ ನೊರ್ವ ಭಟನರಿಭಟರಂ (ಪರ್ಶ್ವ. ೮-೫೦); ರಥ ಕಡಿವಡೆದುದಿನ್ನೆಂತೊದಗುವನೊ ಸುಕುಮಾರ ತಾನೆನುತ ಪಡೆ ಬಿಡದೆ ಬೊಬ್ಬಿಱಿಯೆ (ಕುಮಾ.ದ್ರೋ. ೬-೪೬). **ಬೊಬ್ಬಿರಿ** : ೧. ಬಣ್ಣ ಹಚ್ಚಿದವನು ಚಿತ್ರಕಾರ, ಬೊಬ್ಬಿರಿದವ ಗವಾಯಿ. ಕಾಗದ ಕಪ್ಪು ಮಾಡಿದವ ಕವಿ ಎಂಬ ದೃಷ್ಟಿಯೋ? (ಒಂಟಿದ. ೬೬); "ಇದೆಯೆ ನಿನ್ನಲ್ಲಿ ಗಂಡಸುತನ ?" ಎಂದು ಬಲವಾಗಿ ಬೊಬ್ಬಿರಿದು ಕೇಳಿದಳು (ಹಳ್ಳಿಹಾ. ೦೦೮). ೨. ಕಬ್ಬಿಲರು ಕಬ್ಬಿಗರು ತಾವೆನುತಬ್ಬರಿಸಿ ಬೊಬ್ಬಿರಿಯೆ ಕಬ್ಬವಾದುದೆ ? (ಕೊಣಗಿಲ. ೦೬-೬೪).

[ಬೊಬ್ಬೆ₂ + ಇಱಿ₁]

**ಬೊಬ್ಬಿಱಿತ** (ನಾ). ಅಬ್ಬರ; ಆರ್ಭಟ; ಗರ್ಜನೆ : ಇಱಿತ ಮುನ್ನವೊ ಸುಭಟರಿಗೆ ಬೊಬ್ಬಿಱಿತ ಮುನ್ನವೊ (ಕುಮಾ.ಕ.೦೦-೪೬); ಬಲು ಬೊಬ್ಬಿಱಿತ ಕಸುರನ ಧೈರ್ಯ ಕಾಲನ ಮಱಿಯ ಹೊಕ್ಕುದು ಹೊರಳಿಯೊಡೆದುದು ವಿಶ್ವ ರಕ್ಕಸರ (ತೊರಾ. ೬-೭-೫೦). [ಬೊಬ್ಬಿಱಿ + —ತ₂]

**ಬೊಬ್ಬುಲಿ** 'ಬಬ್ಬುಲಿ' ನೋ.

**ಬೊಬ್ಬುಳಿ₁** 'ಬಬ್ಬುಲಿ' ನೋ.

**ಬೊಬ್ಬುಳಿ₂** (ನಾ). ೧. (ನೀರಿನ) ಗುಳ್ಳೆ; ಬುದ್ಬುದ : ಇಬ್ಬರು ಗಳೊಂದಾಗಿ ಕೂಡಿಯೆ ಬೊಬ್ಬುಳಿಯನೊಡೆವಂತೆ ಕೊಂದರು ಹಲವು ಮಲ್ಲರನು (ಕುಮಾ.ಭಿ. ೬೦೫. ೪-೦೦) ; ಬೊಬ್ಬುಳಿಯ ಬೆಳನೊರೆಗಳೊಟ್ಟಲಿನೊಬ್ಬುಳಿಯನೊಪ್ಪರಿಸುತುರವಣೆಗೊಬ್ಬಿನಲಿ ಮದವೇಱಿ ಪೊಲ್ಗಡಲೆಸೆದುದಿರಿಸಲಿ (ತೊರಾ. ೦-೮-೪೫): ನೀರ ಬೊಬ್ಬುಳಿಯಂತೆ ತೋಱುತಿಹ ದೇಹದ ಸಾರವಱಿಯದಲೆ ಸುಖಿಪುದಜ್ಞಾನದ ದಾರಿಯಹುದು (ಸರ್ವಜ್ಞ. ೪೦೬). ೨. (ಗರ್ಭಾಶಯದಲ್ಲಿರುವ) ಐದನೆಯ ದಿವಸದ ಗರ್ಭಪಿಂಡ : ಪ್ರಥಮದಿನ ಕಲಲವೆಸರಂ ಪಡೆವಸವನೈದುದಿನಕೆ ಬೊಬ್ಬುಳಿಯೆನಿಸಿದಪನೇಳುದಿನದವಂ ಜನನಿಗರ್ಭದ ಮಾಂಸಪೇಸಿಯೆಂದೆನಿಪವು (ಶಾಸಂತ. ೪-೪೬).

[<ಸಂ. ಬುದ್ಬುದ./ಪ್ರಾ. ಬುಬ್ಬುಅ/ತುಳು.ಬೊಬ್ಬುಳಿ]

**ಬೊಬ್ಬುಳಿ₃** 'ಬೊಂಬುಳಿ₂' ನೋ.

**ಬೊಬ್ಬುಳಿಕೆ** (ನಾ). ೧. = ಬೊಬ್ಬುಳಿ₂ ೧ : ಬೆಳಗುವ ತಾರಕಾನಿಕರಮಾ ಕಡಲೊಳ್ ನಸುತೇಲ್ಕುದೇಂಕೆ ಬೊಬ್ಬುಳಿಕೆಗಳಂತೆ ತೋಱಿದುವು (ಅಂಭ. ೬-೪೪); ತನುವಪ್ಪೊಡೆ ನಿಲ್ಲದು ಜವ್ವನಮಪ್ಪೊಡೆ ನೀರ ಬೊಬ್ಬುಳಿಕೆ (ರಪರ್ನವ. ೪-೨೬೮) ; ನೀರ ಬೊಬ್ಬುಳಿಕೆಗೆ ಕರ್ಬುನದ ಕಟ್ಟ ಕೊಟ್ಟು ಸುರಕ್ಷಿತವ ಮಾಡುವ ಭರವ ನೋಡಾ (ಬಸವ. ೧೬೨). ೨. = ಬೊಬ್ಬುಳಿ₂ ೨: ಪಿಂಡಮಯವಾದ ಪುರುಷನ ವೀರ್ಯ ಸ್ತ್ರೀರಕ್ತದೊಡವೆರೆದೊಂದು ದಿನಕ್ಕೆ ಕಲಲಮಹುದು ಐದುದಿನಕ್ಕೆ ಬೊ[ಪಾಠಾಂ.ಬ]ಬ್ಬುಳಿಕೆಯಹುದು (ಬಿಶಿಲ. ೨೫೫) ; ಮಾತೆಯ ರಜಸ್ಸು ಪಿತೃವೀರ್ಯಂಗಳೊಂದಾಗಿ ಸಾತಿಶಯದಿಂ ಪ್ರಥಮದಿನದಲ್ಲಿ ಕಲಲಮಹುದಾ ತೆಱದೊಳೈದುರಾತ್ರಿಗೆ ಬೊ[ಪಾಠಾಂ. ಯೊ]ಬ್ಬುಳಿಕೆ (ತಂಭ. ೫೮-೫). [ಬೊಬ್ಬುಳಿ₂ + —ಇಕೆ]

**ಬೊಬ್ಬುಳಿಸು** (ಕ್ರಿ). ಗುಳ್ಳೆಯೇಳು ; ಬುದ್ಬುದವುಂಟಾಗು : ಕೆಸಱುರ್ಬುರ್ಜಿಸಿ ನೀರ್ಬೊಬ್ಬುಳಿಸಿ ಬುಳುಬುಳುಂದೇಂಕೆ ವಂದೆದ್ದು ಕಂಪಂ ಮಸಗುತ್ತುಂ ಬತ್ತೆ (ಶಗರ. ೦೬-೬೪). [ಬೊಬ್ಬುಳಿ₂ + —ಇಸು₃]

**ಬೊಬ್ಬೆ₁** (ನಾ.) ಸುಡುವುದರಿಂದ ಚರ್ಮದ ಮೇಲೇಳುವ ಗುಳ್ಳೆ, ಬೊಕ್ಕೆ : ದೇಹದ ಮೇಲೆ ಏಳುವ ಬೊಬ್ಬೆಗಳು ದೊಡ್ಡವಾಗಿ ಅಥವಾ ಸಣ್ಣವಾಗಿ ಇರುವುದುಂಟು (ಬತಕ. ೫೦) : ಅಡವಿಯಲ್ಲಿ ನನ್ನ ಸ್ಥಿತಿಗತಿಗಾಗಿ ಯಾರೂ ಅಳಲಿಲ್ಲ. ಗೋಳಾಡಿ ಅತ್ತವರೆಂದರೆ ನನ್ನ ಕಾಲ ಬೊಬ್ಬೆಗಳು (ಉರ್ದುಶಾ. ೦೦೬) ; ಬೊಬ್ಬೆ ಬಂದು ಕೈ ನೋಯಲಾರಂಭಿಸಿತು (ಘಳಿಗೆ. ೧೪).

[ದೇ.॥ ತೆಲು. ಬೊಬ್ಬ]

**ಬೊಬ್ಬೆ₂** (ನಾ). ೧. (ಆನಂದ, ರೋಷ, ಆವೇಶ ಮುಂತಾದ ಕಾರಣಗಳಿಂದ ಮಾಡುವ) ಆರ್ಭಟ ; ಕೂಗಾಟ ; ಅರಚುವಿಕೆ : "ಬೊಬ್ಬೆಯೆನಲ್ ಭಟಗರ್ಜನೆ" (ಶಬ್ದಮ. ೫೨) ; ಬೇಡರ ಬೊಬ್ಬೆಯಿಂದಡವಿಗೋಳಿಟ್ಟುದು (ಹತಕಾ. ೫-೨೬) ; ಕಳವಳಿಸಿತರಸೇನೆ ಬೊಬ್ಬೆಯೊಳುಲಿದುದೀ ನಮ್ಮವರು (ಕುಮಾ.ಕ. ೩೦-೨೪) ; ಇಷ್ಟು ಪೌರುಷದ ಬೊಬ್ಬೆಯ ಕೇಳ್ದು . . . ಯಾದವರ್ ತಱುಬಿದರ್ (ವೀರಪಾ. ೩೪-೧೬). ೨. ದೊಡ್ಡ ಶಬ್ದ ; ಮಹಾಧ್ವನಿ : "ಕೋಲಾಹಲಃ, ಕಲಕಲಃ — ಈ ೨ ಬೊಬ್ಬೆಯ ಪೆಸರು" (ನಾಚಿರಾ. ೪೬) ; ಅಬ್ಬರಿಸಿ ಬೊಬ್ಬೆಯುಂ ಕೂಟ್ಟಬ್ಬಿಸಿದೊಡೆ ಶಾಪವಿಸಾಗುವಿನಾತಂ (ರಪರ್ನವ. ೩-೭೪); ಮೆಲುನುಡಿಗೆ ಗಿಣಿ ಹೊದ್ದಿದವು ಸರದುಲಿಗೆ ಕೋಗಿಲೆಯಳೌಕಿದವು . . . ನೇವುರದ ಬೊಬ್ಬೆಗೆ ಸಿಲುಕಿದವು ಹಂಸೆಗಳು ಕಮಲಾನನೆಯ ಕೆಳದಿಯರ (ಕುಮಾ.ಭಾ. ೯-೬೦). ೩. ಆಕ್ರಂದನ ; ಪ್ರಲಾಪ : ಅರಮನೆಯಲಾ ಬೊಬ್ಬೆ ಹಸ್ತಿನಪುರದಲೀ ಬೊಬ್ಬಾಟ ವಿಸ್ಮಳಿದರಸುಗಳ ಪಾಡಾವುದು (ಕುಶ್ಶ್ಯ. ೦-೬) : ಬೊಬ್ಬೆಯಾದುದು ಬಳಿಕ ಸುಮನಸರೊಬ್ಬುಳಿಯ ಚೂಣಿಯಲಿ ಮುನಿಗಳು ಬೆಬ್ಬಳಿಸಿದರು (ತೊರಾ. ೦-೦೦-೪). ೪. ಗುಲ್ಲು ; ಪುಕಾರು : ಒಂದು ದೊಡ್ಡ ಪಾಮಬೋರರ ಗ್ಯಾಂಗು . . . ಎಷ್ಟು ಕಳವುಗಳನ್ನು ನಡೆಸುತ್ತಿದೆ ಎಂದು ಬೊಬ್ಬೆ ಎದ್ದು (ವಿಚಾ. II. ೮೫೪).

**ಬೊಬ್ಬೆಕಾಯಕ** = ಮುಳ್ಳುಗಳ ಮೇಲೆ ನಿಂತು, ಮೈಗೆ ಕತ್ತಿ ತಿವಿದುಕೊಂಡು, ಗದ್ದಲವೆಬ್ಬಿಸಿ ಭಿಕ್ಷೆಯೆತ್ತುವ ಕಾಯಕ. (ಶಿ). **ಬೊಬ್ಬೆಹಾಕು** = ಕೂಗಾಡು ; ದೊಡ್ಡದಾಗಿ ಅರಚು : ಸತ್ಯ, ಅಹಿಂಸೆ ಎಂದು ಬಾಯಲ್ಲಿ ಬೊಬ್ಬೆಹಾಕುತ್ತಾರೆ (ಕುಶೋಕಾ. ೬೫) ; ಹುಡುಗರು ಒಂದೇ ಸಮನೆ ಬೊಬ್ಬೆಹಾಕುತ್ತಾರೆ (ಕಾವೇಂ. ೯೨). **ಬೊಬ್ಬೆಹೊಡೆ** = ಬೊಬ್ಬೆ ಹಾಕು : ಕಾಂಗ್ರೆಸ್ಸೆಂದು ಬೊಬ್ಬೆಹೊಡೆದರೆ ಹೊಟ್ಟೆ ತುಂಬಲಿಕ್ಕಿಲ್ಲ (ಕುರುಕಾ.೧೩೮). [ದೇ.॥ ತುಳು. ಬೊಬ್ಬೆ ; ತೆಲು, ಬೊಬ್ಬ]

**ಬೊಬ್ಬೆ₃, ಬೊಬ್ಬಿ** (ನಾ). ಒಂದು ಬಗೆಯ ಹೊನ್ನೆಮರ; ಕಲ್ಹೊನ್ನೆ : ಮೊಳೆಹೊನ್ನೆ. ಶ್ರೀಹೊನ್ನೆ. ಕೂವೆ, ಬೊಬ್ಬೆ (ವೃಕಗಿ. ೦೬-೨೮೫). **ಬೊಬ್ಬಿ** : ಬೊಬ್ಬಿ (ಇದಯು) — ನೀರಿನ ಆಸರಕ್ಕೆ ಎತ್ತರವಾಗಿ ಬೆಳೆಯುತ್ತದೆ (ಕಪಾಗ. ೪೬) ; ಮರಗಳು . . . ಮುಳ್ಳಾಳಿ. ಕೂವೆ. ಬೊಬ್ಬಿ. ದೇವದಾರು. ಅಡವಿಗೋರಂಟೆ (ಪಶ್ಚಿಘ. ೨೫೬).

**ಬೊಬ್ಬೆಯ ಬಿಂದಿಗೆ** = ಹೊನ್ನೆಮರದಿಂದ ಮಾಡಿದ ಅಳೆಯುವ

ಸಾಧನದಿಂದ ಅಳತೆಮಾಡಿದ ಧಾನ್ಯದ ಖಂಡುಗಪ್ರಮಾಣ (?) : ಅಮೃತಪಡಿಗೆ ಭತ್ತ ಬೊಬ್ಬೆಯ ಖಂಡುಗ × × ಮಧ್ಯಾಂನದ ಪೂಜೆಗೆ ಬತ್ತ ಬೊಬ್ಬೆಯ ಖಂಡುಗ ೧೫ ದಿನ ೧೬ ಅಕ್ಕಿ ಹಾ ಲೆಕ್ಕದಲು ಅಕ್ಷತೆಗೆ ವರುಷಕ್ಕೆ ಬೊಬ್ಬೆಯ ಖಂಡುಗ ೩॥ (ಎಕ. VIII, ಸಾಗರ. ೦೬೩-೬೪ : 1488).

**ಬೊಬ್ಬೆಗುಟ್ಟು** (ಕ್ರಿ). ಕೂಗಾಡು ; ಗದ್ದಲವೆಬ್ಬಿಸು : ದುರ್ಗಕ್ಕಡರದ ರೆಂದೊದಜು ಬೊಬ್ಬೆಗುಟ್ಟಿವರದಟಿಂ (ಹರಿಶ್ಚಂ. ೩-೬). [ಬೊಬ್ಬೆ₂ + ಕುಟ್ಟು]

**ಬೊಬ್ಬೆಗುಡು** 'ಬೊಬ್ಬೆಗೊಡು' ನೋ.

**ಬೊಬ್ಬೆಗೊಡು**, ಬೊಬ್ಬೆಗುಡು (ಕ್ರಿ). ದೊಡ್ಡ ಧ್ವನಿಯಿಂದ ಕೂಗು; ಅರಚು : ಒದಜು ನೋಡಿದಳು ಬೊಬ್ಬೆಗೊಟ್ಟಾರಿ ನೋಡಿದಳಾವ ತೆಱದಿ ನೋಡಿದಡೇಂ ವಿಚಾರಿಸದೆ ಲೆಕ್ಕಿಸದೆ ಪೋಗುತಿರೆ ಕಂಡವಂ ಹೆದಜೆನೇಗುವೆಸೊದಳು (ಒಡ್ಡರಾ. ೬-೨); ಅಡುಗಬ್ಬುಗಳಿಗುರಿ ಪಬ್ಬಿಸುತ ಕೈದೀವಿಗೆಗಳಂತೆಬ್ಬಿಸಲು ಪೃಥೆ ದೆಸೆಯೊಳಾವರಿಸಲ್ಕೆ ನಿರ್ಭರದ ಬೊಬ್ಬೆ ಗೊಟ್ಟಾಲುತ್ತ. . .ಬರುತಿರಲು (ಐಕಥ. ೦೬-೨೦) ; ಬಲಮೆರಡಾಗಿ ಪೆರ್ಮೆವಡೆದೊಡ್ಡ ವಿಳಾಸದೆ ನಿಂದು ಬೊಬ್ಬೆಗೊಟ್ಟು . . . ಪಳಂಚಿದುದು (ರಾಜಶೇ. ೦೩-೬೩). **ಬೊಬ್ಬೆಗುಡು** : ಬೊಬ್ಬೆಗುಡುತುಂ ಬಂದರ್ ಪಲರ್ ಧೀವರರ್ (ಉದ್ಭ.ಟ. ೨-೫೦); ತಡೆ ವಿಲ್ಲು ಜಡಿ ಬೊಬ್ಬೆಗುಡು ಪೊದ ಜಿಗೊಳಡಗು (ಕೃಮಚಾ.೨೬-೯೩). [ಬೊಬ್ಬೆ₂ + ಕೊಡು₁]

**ಬೊಬ್ಬೆಗೊಳ್** (ಕ್ರಿ). ಗರ್ಜಿಸು ; ಅಬ್ಬರಿಸು ; ಆರ್ಭಟಿಸು : ಬೊಬ್ಬೆಗೊಂಡಿರ್ದರುಂ ತಗುಳ್ದೊದಜು ಸಾರ್ದು (ಅನುಪು. ೫-೦೪). [ಬೊಬ್ಬೆ₂ + ಕೊಳ್₁]

**ಬೊಬ್ಬೆಯಿಕ್ಕು** 'ಬೊಬ್ಬಿಕ್ಕು' ನೋ.

**ಬೊಬ್ಬೆಯಿಡು** 'ಬೊಬ್ಬಿಡು' ನೋ.

**ಬೊಮಟಿ** 'ಬೊಮ್ಮಟಿ' ನೋ.

**ಬೊಮ್ಮ**, ಬಮ್ಮ, ಬರಮ, ಬರುಮ, ಬರ್ಮ, ಬೊರ್ಮ (ನಾ). ೧. ಪರಾತ್ಪರವಸ್ತು ; ಪರಬ್ರಹ್ಮ : ಬೇಟದಲಿ ಮೂವಣ್ಣ ದಾಬೆಯ ಕೂಟದಲಿ ಕುಜುಹಾಗಿ ಮಿಗೆ ನಿರ್ಲೋಟಿಸುವ ನಿಜ ದಿಟ್ಟ ಬೊಮ್ಮವಿದು (ಕುಮಾ.ಸ. ೯-೦೬) ; ಬಳಸಬೀರದ ಬಱಯ ಬೊಮ್ಮದ ಹೊಳಪು ಸಾಕ್ಷಾತ್ಕರಿಸಿ ನೆಱೆ ನಿರ್ಮಲತಪೆತ್ತಾ ರುದ್ರನಿರುತಿರ್ದನು ವಿನೋದದಲಿ (ಕೃಶಂಕ. ೨-೯); ಬೊಮ್ಮವನು ಅಱಿದಿಹರೆ ಸುಮ್ಮನಿದ್ದಿರ ಬೇಕು ಬೊಮ್ಮವನಱಿದು ಉಸುರಿದರೆ ಕಳೆಪೋಗಿ ಕೆಮ್ಮಿ ಸತ್ತಂತೆ (ಸರ್ವಜ್ಞ. ೩೮೬). ೨. ತ್ರಿಮೂರ್ತಿಗಳಲ್ಲಿ ಒಬ್ಬ ; ಸೃಷ್ಟಿಕರ್ತನಾದ ಬ್ರಹ್ಮ : "ಅಜಂ [ಬೊಮ್ಮಂ]" (ಕಣಾಗಿ. ೯) ; ಒಡೆಗುವಬಜಾಂಡ ಮಿನ್ನುನಿಸು ಜೇಪೊತವಾಗಳೆ ಬೊಮ್ಮನುಂ ಮಾನಂಗಿಡುಗುಂ (ಶಂಕರಾ. ೨-೬೬) ; ಬೊಮ್ಮದೇವನ ಮೊಮ್ಮಂ ಶ್ರುತಿವಿಹಿತ ಕರ್ಮಾನುಷ್ಠಾನ ನಿಷ್ಮನಪ್ಪ ರಾವಣಂ (ಕಂತತಂ. ೦೬೪-೦೮) ; ಕಯ್ಯ ಬೊಮ್ಮನ ಶಿರದ ಪರಬೊಮ್ಮನೊಪ್ಪಿದಂ (ಪಾರ್ಣ. ದೇ. ೨೮೦-೦೯). ೩. ಧರ್ಮಬೋಧೆ; ವೇದಾಂತ: ಕೇಳುತಿರ್ದ್ದ ಕರ್ಣ ಬೊಮ್ಮವ ಕೇಳ ಬಂದವೆ ನಾವು ನಾಳಿನ ಕಾಳಿಗವ ಜಯಮುಖದ ಬೆಸಗೊಳ ಬಂದೆವು (ಕುಮಾರವ್ಯಾ. ೮-೬೪). ೪. ಬ್ರಹ್ಮಾಂಡ ; ವಿಶ್ವ : ತಾಂಡವಗೈಯುವ ಭೈರವ ನಾನು! ಬೊಮ್ಮ ವನೊಡೆಯುವ ಬರಸಿಡಿಲಾನು (ಕಾಂತಿ. ೦೫-೦೦). ೫. ಬ್ರಾಹ್ಮಣ : ಕಮ್ಮನೆ ತುಪ್ಪ ಕಜ್ಜಾಯ ಪಾಯಸದಿಂದೆ ದಮ್ಮನೆ ತಣಿವೆನೆಂದೆಸುತ ಬೊಮ್ಮರ ಸಂತತಿ ಸುಡಿಯುತೆ ಸಾರ್ದರು (ಪೋ.ಪತ. ೩-೫೯). ಈ ಸಾಮಾನ್ಯವಾಗಿ ಈ ಶಬ್ದವು ಈ ಅರ್ಥದಲ್ಲಿ ಏಕವಚನದಲ್ಲಿ ಪ್ರಯೋಗವಾಗಿಲ್ಲ. **ಬಮ್ಮ** : ೬. ಒಬ್ಬಾತನ ಹೆಸರು : ಶ್ರೀ ಬಮ್ಮ (ಎಕ. II, ೯೦ ; ಸು. 900) ; ಪುರಿಕರನಗರದ ಬಮ್ಮಂ ಸರಸ್ವತೀಗಣದ ದಾಸಿ ಕ [ಣ.] × × × ನಿರುತಯತಿ [ಸಟಂ] ಖಿಣ್ಣರಿಸಿದಂ ನಾಗವರ್ಮ್ಮನ ಚ್ಛಾತ್ರ[ರ] (ಕೌಇ. XI-i, ೯೬-೯೯ ; 1062). **ಬರಮ** : ೨. ತರುಣಿಯನೊಂದನೆ ಅದಕುಪಕರಣಂಗೊಡೊಡನೆ ತನ್ನ ಪೊಡೆಯ ಲರ್ಪುಡಿಯಿಂ ಬರಮನನೊಗೆಯಿಸಿಯವನೊಳೆ ಮರುಳ್ಗಳಿವಂತೊರೆದ ನೊಸೆದು ನಿಗಮದ ನೆಲೆಯಂ (ತಕಲಿ. ೦-೬೦). **ಬರುಮ** : ೬. ಪಲ್ಲವರಸ ದೇವಯ ಮೂಡಲ ಗೋವನ್ ಬರುಮಾನಟ್ಟಿದ × × × ಆಗಳು ಪಾಣ್ಣಿಯನ ಮೇಗೆಟ್ಟು ಮಾಜಿಯಜೂಜಿಜಿದೊ (ಎಕ. X, ಶ್ರೀನಿವಾ. ೫೦-೬ ; ಸು. 800 ?). **ಬರ್ಮ** : ೧. ನಾಲ್ಮೊಗಗಂದನಾದ ಖಳದಕ್ಷನ ಮೇಳದೆ ಕೆಟ್ಟಿವೀಗಳೀ ಕಲ್ಮಷಕರ್ಮವಂ ಬಳಿಕೆ ಬರ್ಮವೆನುತ್ತಮೆಯುದ್ಧ ರಾಂತಕಾ (ಶೀರವಿ. ೦೨-೬೬). ೨. ಮಾನ್ಮಡಿವವನೇಂ ಚತುರ್ಭುಜನೆ ಮಜ್ಜರಿಪಣ್ಣಲೆ ಬರ್ಮ್ಮನೊಳ್ ಬರಂಬಿಡದನೆ ಮಿಾಜು ಬಾಳ್ವಡವನೇಂ ಜವನೇ . . . ಕಲಿ ಗೋನಭೂಪನೊಳ್ (ಎಕ. VIII, ಸಾಗರ. ೦೦೯-೩೬ : 1042) ; ಬರ್ಮನುಮಾ ವಿಶ್ವಕರ್ಮನುಂ ಶೋಭೆಯಂ ನಿರ್ಮಿಸಲೆಂದು ವಧೂವರರೂಪಾಗಿ ನಿರ್ಮಿಸಿದಂತೆ ಮಿಸುಗಿತ್ತು (೦೯ಣಾವ. ೦೦-೫೨). **ಬೊರ್ಮ** : ೭. ಕ್ಷುದ್ರದೇವತೆ: ಗಾಳಿಗರುಂ ನೆಲಮುಕ್ಕ ಜಕ್ಕಿಯುಂ ಬೊರ್ಮನೆಂದು ಜೀವವಧೆಗೈದರೆ. . .ನಾರಕದುಃಖಮನೈದದಿರ್ಪರೇ (ಕ್ರಾಕ್ಷ್ಯನ್ಯಮಾಲಿಕೆ. ಶಬ್ದಶಾಸ್ತ್ರಸಾರ. ೩. ೦೨೬೯).

**ಬೊಮ್ಮಜಟ್ಟಿಗ** = ಒಂದು ಕ್ಷುದ್ರದೇವತೆ : ತಾವ್ಯಾಡಿ ಬೇಡಿ ಹೆಮ್ಮರಂಗಳ ಒಡಿದು ಬಾಧಿಸುವುದ ಕಂಡು ಬೊಮ್ಮಜಟ್ಟಿಗನ ಶಿರವರಿ ದಂತರಾತ್ತ (ಕನಕ. ೦೨೯-೪). **ಬೊಮ್ಮಜೆಟ್ಟಿ** = ಒಂದು ಕ್ಷುದ್ರದೇವತೆ : ಬೊಮ್ಮಜೆಟ್ಟಿ ಮಾಡಿದವಮ್ಮ ಒಮ್ಮೆಗಿಷ್ಟೆಲ್ಲವಾಯಿತಮ್ಮ (ಬಾಲಕೀ. ೯೩-೩).

**ಬೊಮ್ಮನ ಸತಿ** = ಬ್ರಹ್ಮನ ಪತ್ನಿ ; ಸರಸ್ವತಿ : ರತಿಯ ಚೆಲುವಕಿತಿರಲಿ ಸಿರಿ ಪಾರ್ವತಿಯ ರೂಪಂತಿರಲಿ ಬೊಮ್ಮನ ಸತಿಯ ಸೊಬಗಂತಿರಲಿಯಾ ಬಾಲಕಿಯ ರೂಪಿಂಗೆ ಪ್ರತಿಯ ಕಾಣೆನು (ಕುಮಾ.ವಿ. ೨-೦೦); ಬೊಮ್ಮ ನಿರ್ಮಿಪನೆಂಬ ದುರ್ಮತಿಯೆ ನೀ ಕೇಳು ಬೊಮ್ಮನ ಸತಿಗೆ ಮೂಗಿಲ್ಲವಾ ಮೂಗ ನಿರ್ಮಿಸನದೇಕೆ (ಸರ್ವಜ್ಞ.೨೦೦). [<ಪ್ರಾ.ಬಮ್ಹ./ಸಂ. ಬ್ರಹ್ಮನ್]

**ಬೊಮ್ಮಚರಿ** (ನಾ). ಬ್ರಹ್ಮಚರ್ಯವನ್ನು ಪಾಲಿಸುವವನು ; ಬ್ರಹ್ಮಚಾರಿ : ಪೊಡವಿಜೆಯ ಪೋಗಾಡಿ ರಾಘವ ಹಿಡಿವನೈ ಬಲು ಬೊಮ್ಮಚರಿಯುವ ಕೊಡುವರಿಲ್ಲದಜಿಂದ ನೀ ಹೊಸ ಬೊಮ್ಮಚರಿಯಾದೆ (ಕೌಶಿಕಾ. ೨೨-೦೪). [< ಸಂ. ಬ್ರಹ್ಮಚಾರಿನ್]

**ಬೊಮ್ಮಚರಿಯ**, ಬೊಮ್ಮಚರಿಯೆ (ನಾ). ಇಂದ್ರಿಯನಿಗ್ರಹ ; ಬ್ರಹ್ಮಚರ್ಯೆ : ಜಡೆಯ ಮುಡಿಯೇ ಮಕುಟ . . . ಸೊಪ್ಪು ಸೆಳೆಮಂಚ ಮಡದಿಯಿಲ್ಲದೆ ಬೊಮ್ಮಚರಿಯವು (ಕೌಶಿಕಾ. ೨೨-೯೨); ಲಲನೆಯೊಬ್ಬಳ ವ್ರತವವಗೆ ಗಡ ಹಳುವದಿರವಿಗೆ ಬೊಮ್ಮಚರಿಯದ ಬಳಕೆ ಗಡ ನಿಮಗಲೆ ನಪುಂಸಕರೆಂದಳಾ ಕಾಂತೆ (ತೊರಂ. ೩-೪-೨೦). **ಬೊಮ್ಮಚರಿಯೆ** : ನಿಲ್ಲಿಸುತ ಷಣ್ಮುಖಿಗಳರವನು ಬಲ್ಲವನು ಗಜಮುಖವನಳ್ಗಿಸಿ ಸೊಲ್ಲಿಸ ಲಧಶ್ಯಾಯಿಯೊಪ್ಪಿದ ಬೊಮ್ಮಚರಿಯೆಯುಲಿ (ಅಚಾಪು. ೨-೯-೯೯). [< ಸಂ. ಬ್ರಹ್ಮಚರ್ಯ]

**ಬೊಮ್ಮಚರಿಯೆ** 'ಬೊಮ್ಮಚರಿಯ' ನೋ.

**ಬೊಮ್ಮಟಿ**, ಬೊಮಟಿ (ನಾ). ೧. ಎಳೆಯ ಮಗು; ಹಸುಗೂಸು : ಆ ತಿಂಗಳ ಬೊಮ್ಮಟಿಯನ್ನು ಮುತ್ತಿಟ್ಟುಕೊಂಡು ಮಡದಿಯ ಕೈಗೆ ಕೊಟ್ಟು (ತಂಜ್ಞ. ೦೬); "ನಿನ್ನ ಮಾವನನ್ನು ನೋಡು ಪಾಪ" ಎಂಬ ಮೊರದಲ್ಲಿ ಮಲಗಿದ್ದ . . . ತನ್ನ ಎಳೆಯ ಬೊಮ್ಮಟಿಗೆ ಹೇಳಿದಳು (ರರ್ವಾರ್ತ. ೦೬೬). ೨. ಕೋಮಲವಾದುದು ; ಎಳೆಯದು : ರಾಜಮ್ಮ ಎಷ್ಟು ಮಗುವಿನ ಬೊಮ್ಮಟಿಯಾದ ಕೆನ್ನೆಗೆ ನಯವಾಗಿ

ಮುದ್ದಿಟ್ಟಳು (ಶೀಹಾ. ೨೩೯). **ಬೊಮಟೆ :** ೧. ಬೊಮಟೆಯ ಅಳು ವಿನ ಧ್ವನಿ ಕೇಳಿಸಿತು (ಜಾಲ್ಕಿಹು. ೧೧೨); ಗೌಡನ ಹೆಂಡತಿಯು ಆ ಬೊಮಟೆ ಯನ್ನು ತಬ್ಬಿಕೊಂಡು . . . ಕಾಡಿನಲ್ಲೆಲ್ಲ ಅಲೆದಳು (ದೀಕಾಂಕ. ೯೧).

**ಬೊಮ್ಮಡ** 'ಬೊಮ್ಮಡಿ' ನೋ.

**ಬೊಮ್ಮಡಿ,** ಬವ್ಮಡಿ, ಬೊಂಬಡ, ಬೊಮ್ಮಡ (ನಾ). ೧. ಬೊಬ್ಬೆ: ಕೂಗಾಟ : ಸಂಘಮಾಡುತ್ತಿದ್ದವರ ಬೊಮ್ಮಡಿ ಜೋರಾಯಿತು (ಕೂ೨). **ಬವ್ಮಡಿ. ಬೊಂಬಡ :** ೨. ಸದ್ದು ; ಶಬ್ದ : 'ಜರ-ಜರೋ', ಹುಯ್ಯುವ ಮಳೆ . . . ಕಿವಿ ಕರಗುವ ಬೊಂಬಡವನ್ನು ಪ್ರತಿಪ್ರತಿ ಧ್ವನಿಸಿ ಸುಗ್ಗುಮಗ್ಗಲಾದ ಮಲೆನಾಡಿನ ಬೆಟ್ಟಗಳು! (ಮಮ.೯. ೪೯). **ಬೊಮ್ಮಡ.**

ಬವ್ಮಡಿ ಬಜಾಯಿಸು. ಬೊಂಬಡ ಬಜಾಯಿಸು = ಬೊಬ್ಬೆಹಾಕು : ಕೂಗಾಡು : ಆದವಾನಿ ಕಂಪೆನಿಯವರು ಬವ್ಮಡಿ ಬಜಾಯಿಸುತ್ತಿದ್ದಾರೆ (ಅ೨ಪಾ. ೦೩); ಅದೇಕೆ ಬೊಂಬಡ ಬಜಾಯಿಸುತ್ತಿರುವೆ ? ಸ್ವಲ್ಪ ಇರು (ಕೂ೨). ಬೊಮ್ಮಡಿಹೊಡೆ. ಬೊಮ್ಮಡಹೊಡೆ = ಬವ್ಮಡಿ ಬಜಾಯಿಸು : ರೈತರೆಲ್ಲಾ ಬೊಮ್ಮಡಿ ಹೊಡೆದುಕೊಳ್ಳಾ ಅವರೆ (ಕಂನಾ೯. ೨೩೬); ಗಿರಾಕಿಗಳು ಬೊಮ್ಮಡ ಹೊಡೆವಾರು (ಸರಸ. ೨೨).

[ದೇ.॥ ತೆಲು. ಬೊಮ್ಮಿಡಿ = ಒಂದು ಬಗೆಯ ವಾದ್ಯ. / ಮರಾ. ಬೋಂಬ್ = (ದುಃಖ, ಸಂಕಟ ಇತ್ಯಾದಿಗಳಿಂದ) ಬಾಯಿ ಬಡಿದುಕೊಳ್ಳು ವುದು. ಶಂಖವಾದ್ಯ]

**ಬೊಮ್ಮತಿ** 'ಬೊಮ್ಮಹತಿ' ನೋ.

**ಬೊಮ್ಮದಂಡೆ** 'ಬ್ರಹ್ಮದಂಡೆ' ನೋ.

**ಬೊಮ್ಮಪಾಸ,** ಬೊಮ್ಮಹಾಸ (ನಾ). ೧. ಬ್ರಹ್ಮನನ್ನು ಅಧಿದೇವತೆ ಯಾಗಿ ಪಡೆದ ಅಸ್ತ್ರ; ಬ್ರಹ್ಮಶಕ್ತಿಯ ಪಾಶ ; ಬ್ರಹ್ಮಪಾಶ. ೨. (ಅಲಂ) ಸುಲಭವಾಗಿ ಬಿಡಿಸಿಕೊಳ್ಳಲಾಗದಂತಹ ಬಂಧನ,- ಕಟ್ಟು : ಆಕೆಯ ಹಾಸವೊ ಬೊಮ್ಮಪಾಸವೋ ತರುಣಿಯ ತೋಳೊ ಬಾಳೊ ಸುಡು ಸೂಳೆಯ ಕೂಟವೊ ಕಾಳಕೂಟವೋ (ಅರಾವ. ೨-೧೧೧). **ಬೊಮ್ಮಹಾಸ :** ೧. ತರತರದ ಸಪುರವಸ್ತ್ರಂಗಳಂ ಮೇಲಿರಿಸಿ ಬೊಮ್ಮಹಾಸದ ಕೆಲದ ಕೊಂಡಿಗಳೊಳಗೆ ಬಿಗಿದು ಅಮ್ಮಮ್ಮ ಪಾಶಮಂ ಕೈಕೊಳಿಸಿ ಬರೆತೆಗೆದು. . . ಕೊರಲೊಳವತರಿಸಿಕೊಂಡಂ ಬೊಮ್ಮ ಪಾಸಮಂ (ಕೊಂಗುರ. ೭೯. ೧೫೬-೭). [<ಸಂ. ಬ್ರಹ್ಮಪಾಶ]

**ಬೊಮ್ಮಬರೆಹ** (ನಾ). ಬ್ರಹ್ಮಲಿಖಿತ ; ವಿಧಿಲಿಖಿತ ; ಹಣೆಬರಹ: ಬೊಮ್ಮಬರೆ[ಪಾಠಾಂ. ರ]ಹ ಚಿತ್ರವ ವಿಹಾಹುವಪಾರಮ್ಮ ಲೋಕದೊಳು (ಶಳತ. ೩-೯೬). [ಬೊಮ್ಮ + ಬರೆಹ (< ಬರೆಪ)]

**ಬೊಮ್ಮಬೋಧೆ** (ನಾ). ಪರಬ್ರಹ್ಮದ ಬಗೆಗಿನ ಜ್ಞಾನ,—ತಿಳಿವಳಿಕೆ : ಬೊಮ್ಮಬೋಧೆಯ ಹೇಳಿ ಕೇಳಿಯು ಸುಮ್ಮನಿಹ ನೃಪಕನವು ಬಂದಿರೆ ಹೆಮ್ಮೆಯಲಿ ಹಿರಿದಾಗಿ ಕಡುವರು ಪಿತರು ಪೇಳಿದರೆ ಒಮ್ಮೆ ಕೇಳರು (ಸಂಶಿಶ. ೩-೦೨). [ಬೊಮ್ಮ + ಬೋಧೆ]

**ಬೊಮ್ಮಯ,** ಬವ್ಮಯ್ಯ (ನಾ). ೧. ಒಂದು ಕ್ಷುದ್ರದೇವತೆ : ಲಡ್ಡುಗೆಯುಂ ಬೆಸಂಗೆ ಹೊಡಮಂ ಮಾರಿಗೆ ಬೊಮ್ಮಯಂಗೆ ಚರುವಂ ಪದೆದಿತ್ತುಮೆ (ಸೂಕ್ತಿಸು. ೬-೬೪). **ಬಮ್ಮಯ್ಯ :** ೨. ಒಬ್ಬಾತನ ಹೆಸರು : ನಿಪ್ಪಿಬ್ಬರ ಬವ್ಮಯ್ಯ ಬೆಸಗೆಯ್ದಿದೊ (ಇಂ. XII. ೨೦೯-೨೨; 814). [ ಬೊಮ್ಮ + ಅಯ್ಯ₁ (< ಅಯ್ಯ₄₁ ) ]

**ಬೊಮ್ಮರಕ್ಕಸ** (ನಾ). ೧. ಧರ್ಮಭ್ರಷ್ಟನಾಗಿ ಬ್ರಾಹ್ಮಣರ ಧನ, ಪರ ಪತ್ನಿಯರನ್ನು ಅಪಹರಿಸಿದ ನೀಚಬ್ರಾಹ್ಮಣನಿಗೆ ಮರಣಾನಂತರ ಬರುವ ಪಿಶಾಚಜನ್ಮ ಮತ್ತು ಹಾಗೆ ಜನ್ಮತಾಳಿದವನು ; ಬ್ರಹ್ಮ ರಾಕ್ಷಸ : ಮಹಾರಣ್ಯದೊಳಗೆ ಬರ್ಪನನೊರ್ವ ಬೊಮ್ಮರಕ್ಕಸಂ ಕಂಡು ಪಿಡಿದು ತಿನಲೆಂದು ತೆಗೆವುದುಂ (ಕಂತಕಂ. ೧೩೨-೬) ; ಇಂದು ಮೊದಲಾಗಿ ನಿಸ್ಸೊಡಮಂದಿರ್ಪಂ ಬೊಮ್ಮರಕ್ಕಸಂ ಮತ್ತಾರಂ ಕಂಡೆಚ್ಚಿದು ನೋಡಲೀಸಂ (ದಶಕು. ೪-೧೦೦) ; ಸರ್ವ್ವೊಳೊಬ್ಬನ ಕೊಡದೆ ಕಾದಿರಿ . . . ಬೊಮ್ಮರಕ್ಕಸ ಗೀವರೇಯಿಗಾ ಹೆಮ್ಮಗನ (ಸಂಭಶ. ೨೩-೯೬). ೨. ಬ್ರಾಹ್ಮಣ ತಂದೆ ಮತ್ತು ರಾಕ್ಷಸ ತಾಯಿಯಿಂದ ಜನಿಸಿದ ವ್ಯಕ್ತಿ: ದಶರಥರಾಮಂ . . . ರಾವಣ ಕುಂಭಕರ್ಣರ್ ಮುಂತಪ್ಪ ಬೊಮ್ಮರಕ್ಕಸರಂ ಕೊಂದು ಬಂದೊಂದು ಬೊಮ್ಮೇತಿಯು ಶಾಂತಿಗೆಂದು ಮುನಿಯಾಜ್ಞೆಯಿಂ ಜನ್ನಮಂ ಕೈಕೊಂಡು (ರಾವಣಚ. ೧೨೪-೨೦). [< ಸಂ. ಬ್ರಹ್ಮರಾಕ್ಷಸ]

**ಬೊಮ್ಮರಲು** 'ಬೆಳ್ಮಾರಲ' ನೋ.

**ಬೊಮ್ಮರಸ** (ನಾ). ಒಬ್ಬಾತನ ಹೆಸರು : ಬೊಂಮರಸಗೌಡರ ಮಕ್ಕಳು (ಎಕ. VII. ಶಿವಶಿ. ೦೦೪-೦೩ : ೪೨೦). ೨. 'ಚತುರಾಸ್ಯನಿಘಂಟು' ಎಂಬ ಕೋಶವನ್ನು ಬರೆದ ಒಬ್ಬ ಕನ್ನಡಕವಿಯ ಹೆಸರು : ಕರ್ಣಾಟಕಸರಸ ಕವೀಂದ್ರರ್ಕಳೊಳ್ ತಾಮದೆನಲ್ ಬಿತ್ತರಿಸಿದನೊಲವಿಂ ಕವಿ ಬೊಮ್ಮರಸಂ (ಚತುನಿ. ೧೩೬). [ಬೊಮ್ಮ + ಅರಸ₁ ]

**ಬೊಮ್ಮವಿದ** (ನಾ). ಬ್ರಹ್ಮವಿದ್ಯೆಯನ್ನು ಬಲ್ಲವನು ; ವೇದಾಂತ ರಹಸ್ಯವನ್ನು ತಿಳಿದವನು ; ಬ್ರಹ್ಮಜ್ಞಾನಿ : ಈ ಪೃಥೂನ್ನತಿ ಬೊಮ್ಮ ವಿದರಿಗುಂಟೆ ತನಗಾ ಬ್ರಹ್ಮವಿದ್ಯೆಯನಿತ್ತು ರಕ್ಷಿಸುವುದು (ಚಿಕಾಗ. ೯-೦೯-೨೬). [<ಸಂ. ಬ್ರಹ್ಮವಿದ್]

**ಬೊಮ್ಮವಿದ್ಯೆ** (ನಾ). ವೇದಾಂತರಹಸ್ಯ ; ಬ್ರಹ್ಮತತ್ತ್ವ: ದಕ್ಷ ಹರಹರಿ ಹರಿ ತನ್ನ ಬಲವನು ಹುರಿದನೋ ಹರಿಮುಕ್ತ ಸಬಳಾಸ್ತ್ರರೊಳೊಬ್ಬರನುಳಿ ಯಲೀಸದೆ ಬೊಮ್ಮವಿದ್ಯೆಯನು ತಿರುಕುಳಿಗಳನು ಮಾಡಿದನಲಾ ಗೊರವನಾ ತನ್ನಂತೆ ಛಾಬನ್ನರಸುಮಕ್ಕಳನೀವೆನಾನಿದಕೆಂದು ಬಿಸುಸುಯ್ದು (ಚಿಕಾಗ. ೬-೩-೩೩). [< ಸಂ. ಬ್ರಹ್ಮವಿದ್ಯಾ]

**ಬೊಮ್ಮವೊಲೆಯ** (ನಾ). ಆಚಾರಗೆಟ್ಟ ಬ್ರಾಹ್ಮಣ ; ಬ್ರಾಹ್ಮಣಾಧಮ: ನೀಲಾಚಲಂ . . . ಪಟುನುಡಿಯುಂ ಪಟಿದು ವಿಹಾಹ ಜಾನಂಗಳನುಚಿದ ಬೊಮ್ಮವೊಲೆಯಂಗೆ ಬೆಸಲಾದ ಮಡದಿಯುಂ ಬಡಿವ ಮಾನಸರಕ್ಕಸಂಗೆ ಕಣ್ಗೆ ಕಾಣಲ್ಬಾರದೊಂದು ಮೈಮೆವೆತ್ತು ನಿಂದಿರ್ಕುಂ (ರಾವಣಚ. ೬೪-೪). [ಬೊಮ್ಮ + ಪೊಲೆಯ]

**ಬೊಮ್ಮಶಿರೋಸ್ತ್ರ** (ನಾ). ಒಂದು ಬಗೆಯ ಮಂತ್ರಾಸ್ತ್ರ : ಸಲಿಸು ಪಾಶುಪತಾಸ್ತ್ರವನು ವೆಗ್ಗಳದ ಬೊಮ್ಮಶಿರೋಸ್ತ್ರವನು ಕೈಗೊಳಿಸುವುದು ಕೃಪೆಯುಳ್ಳೊಡೆ (ಕುವ್ಯಾ. ೪. ೬-೯೭). [< ಸಂ. ಬ್ರಹ್ಮಶಿರೋಸ್ತ್ರ]

**ಬೊಮ್ಮಹತಿ,** ಬಮ್ಮೇತಿ. ಬೊಮ್ಮತಿ. ಬೊಮ್ಮೇತಿ. ಬ್ರಮಾತಿ. ಬ್ರಹ್ಮತಿ. ಬ್ರಹ್ಮಾತಿ. ಬ್ರಹ್ಮೇತಿ (ನಾ). ೧. ಬ್ರಾಹ್ಮಣನ ಕೊಲೆ: ಪಂಚಮಹಾಪಾತಕಗಳಲ್ಲಿ ಒಂದಾದ ಬ್ರಹ್ಮಹತ್ಯೆ: ಹೇಳಲೇನದ ಹೇಸುವುದು ಮನ ಬೊಮ್ಮಹತಿಗಾಗಿ (ಳಾಶಿದಾ. ೨೬-೧೨). **ಬಮ್ಮೇತಿ:** ೧. ಕೊಂಡವರುಂ . ಕೊಲಿಸಿದವರುಂ ಬಮ್ಮೇತಿಯನೆಸಗಿದಂಥಾ ಮಹಾಪಾತಕಿ ಗಳಿನಿಸುವರು (ಭಾರತಾಂ. ೬೩-೨೪). ೨. ಬ್ರಹ್ಮಹತ್ಯೆ ಮುಂತಾದುವು ಗಳಿಂದ ಉಂಟಾದ ದೋಷ,—ಪಾಪ : ಭೀತನುಮಂ ಖಳ ಕೃಪಾ ಕಪೋತನುಮಂ ಪಡೆದು ಲೋಕಮಂ ಕಿಡಿಸಿದ ಬಮ್ಮೇತಿಯುಳಿಯದೊಡೆ ಮೊಗದೊಳಗೇತರ್ಕೆ ಬಿಕಾಮಹಂ ಚತುರ್ಮುಖನಾದಂ (ಅರಾಶ. ೧-೩೩) ; ನಿನಗೆ ಬಮ್ಮೇತಿಯಾಗೆ ಸಾವೆನೆಂದು ಅವರ ಕಾಣ್ಬಲ್ಲಿಯೊಂದು ಮರದೊಳ್ ಬಳ್ಳಿಯಂ ಕಟ್ಟಿ ಕೊರಲೊಳ್ ಸುತ್ತಿ ನೇಲ್ದು ಸತ್ತಳ್ (ಜೀವಸಂ. ೦೬೦-೦೦). **ಬೊಮ್ಮತಿ :** ೨. ಧರ್ಮವೆಂದೆಸಗೆ ಪಸುಕರ್ಮ ಬೊಮ್ಮತಿಯಾಯ್ತು (ಶಾಸಂತ. ೪-೨೩೦) **ಬೊಮ್ಮೇತಿ :** ೨. ಕೇಳಬಾರದ ಬೊಮ್ಮೇತಿಯ ನೆಗಳ ಪೇರಾಳ ಪಾತಕಭೂಭುಜನ ತೋಳಡವಿಯ ತಱಿದೊಟ್ಟದೆಲಾ ಮಾಂದಿ ಪಾಳಿವ ತೋಱು ತನ್ನೊಡನೆ (ವಿಶ್ರಹಶ. ೪೦-೨೯) : ರಾವಣ ಕುಂಭಕರ್ಣರ್

ಮುಂತಪ್ಪ ಬೊಮ್ಮರಕ್ಕಸರಂ ಕೊಂದು ಬಂದೊಂದು ಬೊಮ್ಮೆತಿಯು ಶಾಂತಿಗೆಂದು ಮುನಿಯಾಜ್ಞೆಯಿಂ ಜನ್ನಮಂ ಕೈಕೊಂಡು (ರಾಮಾಶ್ವ. ೦೨೪-೨೨). **ಬ್ರಹ್ಮಾತಿ :** ೨. ಧರ್ಮ್ಮವನಾವನಾನುಮುಳಿದರಪ್ಪಡೆ ಗಂಗೆಯು ಬಣಪೊಸಿದೊಲ್ ಅಳಿದ ಬ್ರಹ್ಮಾತಿ (ಎಕ. XIV, ಶ್ರೀರಂಗ. ೩೪-೦೪; 1027). **ಬ್ರಹ್ಮೆತಿ :** ೩. (ಅಲಂ)ಕಷ್ಟ; ಸಂಕಟ: ತ್ರೇತೆಯಲಿ ರಘುರಾಮನಾವುದಿ ಸೀತೆಯಂ ಹೋಗಾಡಿ ದಶಶಿರದಾತನಿಂ ಬ್ರಹ್ಮತಿಗೆ ಸಿಕ್ಕಿ ತೊಳಲ್ದ ಐಸುತಿರನೇ (ಬಸವ. ೫೪-೩೯). **ಬ್ರಹ್ಮಾತಿ :** ೨. ಸಾಸಿರ್ವ್ವರು[ಂ]ಪಾರ್ವ್ವರನಟಿದ ಬ್ರಹ್ಮಾತಿಯು (ಎಕ. XII, ೨೨೩-೦೩; 916); ಸಾಸಿರವೇದಪಾರಗರುಮನಳಿದ ಬ್ರಹ್ಮಾತಿಯಕ್ಕು (ಕರಾಶ. ೦೦೬-೨೨-೩೪; 1073). **ಬ್ರಹ್ಮೇತಿ :** ೧. ಕುಲದಲ್ಲಿ ಹಾರುವವನು ಬ್ರಹ್ಮೇತಿಗೆ ಸಾರುವನು (ಬಸವ. ೩೬೪). ೨. ದೇವ ನಿನ್ನಾಜ್ಞೆಯಿಂ ನಾಂ ಬ್ರಹ್ಮರಂ ಪಲವು ಸಾವಿರವನೊಂದೊಂದು ದಿನದಲ್ಲಿ ಕೊಲ್ವೆನೆನಗಾವ ಪ್ರಕಾರದಿಂ ಬ್ರಹ್ಮೇತಿಯಿಲ್ಲ ಗಡ (ಶಿಕ್ಷ. ೨-೩. ೩೩); ಕಾಳ್ಕುಧನ ಮಡುಹುವೆಂ ಬರಲೆನ್ನ ಗಾತ್ರಕಿಂದೀಗಳುಂ ಬ್ರಹ್ಮೇತಿ (ಶಶಬ. ೨೬-೦೨); ದೇವತೆಗಳೆಲ್ಲರೂ . . . ಅಶ್ವಮೇಧಯಾಗ ಮಾಡಿಸಲು ಅವನಿಗೆ ಹಿಡಿದಿದ್ದ ಬ್ರಹ್ಮೇತಿ ಹೋಯಿತು (ವಶಭಾ. ೨೪೦). (ಗ್ರಂ). ೪. (ಅಲಂ) ಅತ್ಯಧಿಕವಾದ : ಅಗಾಧವಾದ : ಜಾನಕಿಬಾಯಿಯವರಿಗೆ ಬ್ರಹ್ಮೇತಿ ಸಿಟ್ಟು ಬಂದಿತು (ಸಮಾಜ. ೨೨); ಬೇಡವೆಂದಿದ್ದರೂ ನೀರಿಗೆ ಹೋದಳೆಂದು ಅವಳ ಮೇಲೆ ಅವನಿಗೆ ಬ್ರಹ್ಮೇತಿ ಸಿಟ್ಟು ಬಂದಿತ್ತು (ಬಂಕಿಮ. ೩೭). 'ಬ್ರಹ್ಮಹತಿ' ನೋ. [< ಸಂ. ಬ್ರಹ್ಮಹತ್ಯಾ]

**ಬೊಮ್ಮಹಾಸ** 'ಬೊಮ್ಮಪಾಸ' ನೋ.

**ಬೊಮ್ಮಾಂಡ** (ನಾ). ವಿಶ್ವ; ಜಗತ್ತು: ನಾನು ಬೆಳೆದೊಡೆ . . . ಬೊಮ್ಮಾಂಡ ಕುಸಿಯುವುದು (ಕೌತಿಪ. ೪೦-೩); ಆರು ಸರಿ ನಿನಗೆ ಬೊಮ್ಮಾಂಡದೊಳಗೆ (ಕುರಂಗ. ೨-೬೩ ಪದ್ಯ); ಬೊಮ್ಮಾಂಡವಾ ಬಾಣನ ಪುರವನೆ ಕಾಯ್ದು ಕೊಂಡಿಹವು (ಕೋಹಶ. ೨೦-೨೦). [<ಸಂ. ಬ್ರಹ್ಮಾಂಡ]

**ಬೊಮ್ಮಾರ** (ನಾ). ಬ್ರಾಹ್ಮಣರ ಅಗ್ರಹಾರ : ದೇವಾರ ಬೊಮ್ಮಾರಮಂ ನೆಗಪುತ್ತುಂ ಬೆಂಬಿದಪ್ರತೀಪ ಬರುದರ್ ಸದ್ಧರ್ಮಸತ್ಕಾನ್ವಿತರ್ (ಬ್ರಶಸೂಮ. ೬-೨೦೮). [ಬೊಮ್ಮ + < ಅಗ್ರಹಾರ]

**ಬೊಮ್ಮಿ** (ನಾ). ಒಂದು ಬಗೆಯ ವನಸ್ಪತಿ ; ಬ್ರಾಹ್ಮಿ : ಸುರವಾರುಣಿ ಲೊಕ್ಕಿ ಬೊಮ್ಮಿ ಬೇವಿಂಗು ವಿಳಂಗ . . . ತಕ್ರ ಲವಣಾಂಗಳುಮಂ ತುಟುದೊಂದುಮಾಡಿ ಸುಸ್ನಂಗಟಿದಿಕ್ಕೆ ಪೊರ್ದವುವಂ ರುಚೆಗಳ್ (ಲೋಕೋಪ. ೯-೨೨೦); ಬೊಮ್ಮಿಯು ಸೊಪ್ಪನೊಪ್ಪದಿಂ ಗಜಬಜೆಯಿಲ್ಲ ದಂತಳಿದು ತಪ್ಪುಸದಿಂದುಬಿ ಮಾಡಿ ಸಸ್ಯಮಂ ವೃಜಿನಹರಂ ವಿಪಕ್ವಂ (ಕಶುದ. ೬-೦೩). [ < ಸಂ. ಬ್ರಾಹ್ಮೀ ]

**ಬೊಮ್ಮೆ** 'ಬೋಬೆ' ನೋ.

**ಬೊಮ್ಮೇತಿ** 'ಬೊಮ್ಮಹತಿ' ನೋ.

**ಬೊಮ್ಮೇತಿಗಾಜ**, ಬ್ರಹ್ಮತಿಕಾಜ, ಬ್ರಹ್ಮೇತಿಕಾಜ (ನಾ). ೧. ಬ್ರಾಹ್ಮಣ ವಧೆಯನ್ನು ಮಾಡಿದವನು; ಬ್ರಹ್ಮಹತ್ಯೆಯ ದೋಷವನ್ನು ಹೊಂದಿದವನು : ಈತಂ ಮುನ್ನಮೊರ್ವನಂ ಪಾರ್ವನಂ ಕೊಂದ ಬೊಮ್ಮೇತಿಗಾಜಂ ಈಗಳಿದೆ ಎರೆಯಾದಂ (ರಾಮಾಶ್ವ. ೦೦೬-೨೩). **ಬ್ರಹ್ಮತಿಕಾಜ :** ೧. ಇದನಾವನಟಿದನಟಿದವಂ ಕೆಜಿಯುವಾರವೆಯುಂ ವಾರಣಾಸಿಯುಂ ಕವಿಲೆಯನಟಿದ ಬ್ರಹ್ಮತಿಕಾಜಂ (ಎಕ. IV, ಎಳಂದೂ. ೪೦-೩. ೯೪೨). **ಬ್ರಹ್ಮೇತಿಕಾಜ:** ೨. (ಅಲಂ) ಬ್ರಹ್ಮಹತ್ಯೆಯ ದೋಷವು ಬರುವಂತೆ ಮಾಡುವವನು : ಈ ವೃದ್ಧಬ್ರಾಹ್ಮಣನನೀ ಮುಪ್ಪಿನ ಮರುಳನನೀ ಗೌತಮನ ಗೋವನೀ ಬ್ರಹ್ಮೇತಿಕಾಜನನಾರ್ ಪೊಗಿಸಿದರ್ದಾರ್ ಕಣರ್ (ಸುಕುಶ. ೬-೫೨).

[ಬೊಮ್ಮೇತಿ (<ಬೊಮ್ಮಹತಿ)+ —ಕಾಜ]

**ಬೊಮ್ಮೋಪದೇಶ** (ನಾ). ೧. ಬ್ರಹ್ಮವಿದ್ಯೆಯನ್ನು ಹೇಳಿಕೊಡುವುದು; ವೇದಾಂತರಹಸ್ಯದ ಉಪದೇಶವನ್ನು ಮಾಡುವುದು : ಇಪಪರವ ಕೆಡಿಸಿವನು ಸುತರಿಗೆ ವಿಹಿತಕರ್ಮವ ಮಾಡಲೀಸದೆ ಕುಹಕಮುನಿ ಬೊಮ್ಮೋಪದೇಶವ ಮಾಡಿದಡದಹುದೇ (ಐಭಾಗ. ೬-೩-೩೬). ೨. ಉಪನಯನ ; ಬ್ರಹ್ಮೋಪದೇಶ. [< ಸಂ. ಬ್ರಹ್ಮೋಪದೇಶ]

**ಬೊರಗೆ** (ನಾ). ಬಿಲ ; ಹೋರು : ಕರಡಿ ಕಳವಳಿಸಿ ಗೋಮಾಯು ಗೊಂದಿಯೊಳಣಗೆ ಬೊರಗೆಯು ಮೊಲಂಬೊಗುತ್ತಿರಲು . . . ಲುಬ್ಧಕ ಸಮೂಹ ಬೆದಕಿದುದು ಘೋರಾರಣ್ಯವ (ಪಂಪರಾ. ೦೩-೩೨). [<ಪೋರ್$_8$]

**ಬೊರ್ಮ** 'ಬೊಮ್ಮ' ನೋ.

**—ಬೊಲ್** ' —ವೊಲ್' ನೋ.

**ಬೊಲ್ಲ$_1$** (ನಾ). ಮುಖವು ಬೆಳ್ಳಗಿರುವ ಒಂದು ಬಗೆಯ ಕುದುರೆ : "ಮುಖಂ ಬೆಳ್ಪದೋಜಿರೆ ಬೊಲ್ಲನಕ್ಕು" (ಮಂಗರಾ. ೬೨-೦೩) ; ಚೆನ್ನ ಚೇರಮರ ಬಂಟ ನಾನಯ್ಯ ಎನ್ನ ಚಾಗು ಬೊಲ್ಲನ ಕಾಪ ಗೋವನೆಂಬರು (ಬಸವ. ೩೬೬) ; ತನ್ನ ಬೊಲ್ಲನ ಕೂಡೆ ಮಂಗಳನಂ . . . ವಾಹಕರಿರಾ ನೀವು (ಬಸಪು. ೫೯-೪೦) ; ಥಳಥಳಿಸಿ ಪೊರೆದು ಮುಖದೊಳ್ ತೊಳಗುವ ಬೆಳ್ಪೆಸೆಯೆ ಬೊಲ್ಲಂ[ಜಾತಾಂ. ಬೋಟಂ] (ಅಶ್ವಶಾ. ೨-೦೨).

[ ದೇ.॥ ತೆಲು. ಬೊಲ್ಲಿಡು ]

**ಬೊಲ್ಲ$_2$**, ಬೊಲ್ಲು (ಅ). ಮೆಚ್ಚುಗೆಯನ್ನು ಸೂಚಿಸುವ ಒಂದು ಭಾವ ಸೂಚಕಾವ್ಯಯ : ಸಭೆಯೊಳೆಲ್ಲ ಪೊಣ್ಮಿತ್ತು ಜಾಂಗು ಬೊಲ್ಲ ಶುಭ ಬೊಲ್ಲ ಮಾಂಗಳಿಕ ಬೊಲ್ಲಮೆಂಬೀ ರವಂ (ಜಗಪ. ೦೦-೬೧); ನೆರೆದ ಜನ ವೆಲ್ಲಾಘೀ ಜಾಂಗು ಬೊಲ್ಲೆನುತಿರಲು (ಸಂಪರ. ೩-೬೫). **ಬೊಲ್ಲು :** ಸೊಲ್ಲಿಸಿದರು ಜಾಗು ಬೊಲ್ಲು ಶಬ್ದವ ಕೆಂಬಲ್ಲ ತಳಿಗ್ಯಾರ್ತಿಯರು (ಮೋಹತ. ೦೫-೩೭).

**ಬೊಲ್ಲವಣೆ** (ನಾ). [ಸಂಗೀತ] ಯಾವುದಾದರೂ ಚರ್ಮವಾದ್ಯಗಳಲ್ಲಿ ನುಡಿಸುವ ಪಾಟವಿನ್ಯಾಸ; P 'ಬೊಲ್ಲಾವಣಿ' ಎಂದರೆ ಒಂದು ಪಾಟವಿನ್ಯಾಸವನ್ನು ಏರ್ಪಡಿಸಿ ಅದರ ಮೊದಲು, ಮಧ್ಯ ಮತ್ತು ಕೊನೆಗಳಲ್ಲಿ ಹುಡುಕ್ಕಾ, ಪಟಹ, ಮೃದಂಗ, ಢಕ್ಕಾ, ಕರಟಾ ಇತ್ಯಾದಿ ವಾದ್ಯಗಳಿಗೆ ಪ್ರಧಾನವಾದ ಪಾಟಾಕ್ಷರವನ್ನು ಬಹುವಾಗಿ ಪ್ರಯೋಗಿಸುವುದು ; ಇಂತಹ ಖಂಡವನ್ನು ಎರಡು ಸಲ ನುಡಿಸು ವುದು ಎಂದು ಸಂಗೀತವಿದ್ವಾಂಸರು ಅಭಿಪ್ರಾಯಪಡುತ್ತಾರೆ : ಬಹುರೇಖೆಯು ಚಾರಣೆಯು ಧಿಕ್ಕವಣೆಯು ಸೇವಕೆ ಬೊಲ್ಲವಣೆಯ ಬೆಡಂಗು ಬಿತ್ತರಿಕೆಯಂ ಬೀಜ ಬಾಜಿಸುತ್ತಿರೆಯುಂ (ಶಾಂತೀಶ್ವ. ೭-೯೩ ವ).

[ ?. / ತೆಲು. ಬೊಲ್ಲಾವಣೆ=ಒಂದು ಬಗೆಯ ನಾಟ್ಯಬಂಧ]

**ಬೊಲ್ಲಿ** (ನಾ). ಕಥೆ ; ಹೇಳಿಕೆ ; ಉಕ್ತಿ : ಭಾರತಕಥೆಯ ಟೀಕು ಸಹಾ ವ್ಯಾಖ್ಯಾನಿಸಿದ ಜಕಣನಾಯಕನ ಬೊಲ್ಲಿ (ಮಹಾಕಾ-I. ೨೨೦); ಇವನ ಗ್ರಂಥ : ಪಂಚಪರಮೇಷ್ಠಿಗಳ ಬೊಲ್ಲಿ (ಕವಿಚ. I, ೪೫೪); ಪಂಚಪರಮೇಷ್ಠಿಗಳ ಬೊಲ್ಲಿಯನ್ನು ಬರೆದು . . . ಗತಿಸಿದ ಬಾಳಚಂದ್ರಪಂಡಿತನು ಮಾಘ ಣಂದಿಯ ಶಿಷ್ಯರ ಶಿಷ್ಯ (ಸಾಹಿಚ. ೦೪೦). [<ಪ್ರಾ. ಬೋಲ್ಲಿಅ]

**ಬೊಲ್ಲು** 'ಬೊಲ್ಲ$_2$' ನೋ.

**ಬೊಲ್ಲೆ** (ನಾ). ಅಸತ್ಯ ; ಸುಳ್ಳು : ಬಲ್ಲಿದ ವಾಚಾಳಿ ನಾರದಮುನಿ ನಿನ್ನ ಬೊಲ್ಲೆಯ ಮಾತದುತಿರಲಿ ಎಲ್ಲಿಂದ ಬಂದೆ ಸುದ್ದಿಯ ಪೇಳ್ವುದು (ಮೋಹತ. ೩೬-೦೪). [←ತೆಲು. ಬೊಲ್ಲು]

**ಬೊಲ್ವ** (ನಾ). ಒಬ್ಬಾತನ ಹೆಸರು : ಕೋಗಟಿಯ ಒಕ್ಕಲ್ ಶ್ರೀ ಎರ್ಮ್ಮಯರ ಮಗ ಬೊಲ್ವ ಗಂಗಗಾವುಣ್ಣನಿಜಿದು ಬಿಟ್ಟನ್ (ಎಕ. X. ಬೌರಿಂಗ್. ೦೩. ೪; ಸು. 890). [ ? ]

**ಬೊಹರಿ** 'ಬವರಿ' ನೋ.

**ಬೊಳ್ಳುಮರ** (ನಾ). ಟೊಳ್ಳಾದ ಮರ ; ಪೊಳ್ಳುಮರ : ನೋಡಲು ಇಷ್ಟು ದೊಡ್ಡದಾಗಿ ಕಂಡರೂ ಒಳಗೇನಿದೆ? ಬೊಳ್ಳುಮರವಿದ್ದ ಹಾಗೆ! (ಚಾಣ. ೮೮). [ ?. / ತುಳು. ಬೊಳ್ಳುದಮರ]

**ಬೊಳ್ಳಿಡು** 'ಬಳ್ಳಿಡು' ನೋ.

**ಬೊಳ್ಳು** 'ಬಗುಳ್ಳು$_{2}$' ನೋ.

**ಬೊಳ್ಳುಗರೆ** 'ಬಳ್ಳುಗರೆ' ನೋ.

**ಬೊಳ್ಳೆ** (ನಾ). ಹುರುಳಿಲ್ಲದಿರುವಿಕೆ; ತಿರುಳಿಲ್ಲದಿರುವಿಕೆ; ಹೊಳ್ಳುತನ: 'ಒಳಬೊಳ್ಳೆ' ಪರಾ. [<ಪೊಳ್ಳು]

**ಬೋ** (ಅ). (ಸಾಮಾನ್ಯವಾಗಿ ಗೌರವಾರ್ಹರಾದವರನ್ನು ಸಂಬೋಧಿಸುವಾಗ ಪ್ರಯೋಗಿಸುವ) ಒಂದು ಅವ್ಯಯ: ನಿಮಿಷದ ನಿಮಿಷಂ ಬೋ ಕ್ಷಣದೊಳಗರ್ಧಂ ಬೋ. . . ನೀ ಮಾಡಿದ ಮಾಯಂ ಬೋ ಅಭ್ರಚ್ಛಾಯೆಯೆಂ ಬೋ (ಬಸವ. ೦೬೮). [< ಭೋ]

**ಬೋಂಡ** (ನಾ). ಕಲಸಿದ ಕಡಲೆಹಿಟ್ಟಿನಲ್ಲಿ ಪಲ್ಯವನ್ನು ಉಂಡೆಮಾಡಿ ಅದ್ದಿ, ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ತಿಂಡಿ: ಕಡಲೆಬೇಳೆಯ ಹಿಟ್ಟನ್ನು ಬಜೆ ಮತ್ತು ಬೋಂಡಕ್ಕೆ ಅದ್ದಿಟ್ಟಾಗಿಯೂ ಸಿಹಿತಿಂಡಿಗಳನ್ನು ತಯಾರಿಸುವುದಕ್ಕೂ ಉಪಯೋಗಿಸುತ್ತಾರೆ (ಅಡುಗೆ. ೬೬); ನನಗೆ ಎರಡು ಬೋಂಡ, ಅವನಿಗೆ ಎರಡು ಬೋಂಡ ತಂದಿರಿಸಿದ ಹುಡುಗ (ಅಂಕುರ. ೫೬). [ ?. / ಮರಾ. ಬೋಂಡ]

**ಬೋಕಾಣಗಿತ್ತಿ** (ನಾ). (ಉಕ) ಮನಸ್ಸಿನ ವಿಚಾರವನ್ನು ಹೊರಗೆ ತೋರ್ಪಡಿಸದವಳು; ಗುಮ್ಮನ ಗುಸಕಿ: ಏ ಬೋಕಾಣಗಿತ್ತಿ, ಸುರುವು ಆಕೇನು? (ಸವಾಲ್. ೬೪); ಈ ಬೋಕಾಣಗಿತ್ತಿಯನ್ನು ಹೊರಗೆ ಹಾಕದಿದ್ದರೆ ಈ ಹಾರೆಯಿಂದಲೇ ತಲೆ ಜಜ್ಜಿಕೊಳ್ಳುತ್ತೇನೆ (ಸಂಕ್ರಾ. ೨೩). [<ಬೋಕಾಣ+ –ಗಿತ್ತಿ]

**ಬೋಕಾಣಿ** (ನಾ). = ಬೋಕಾಣಗಿತ್ತಿ : ಏ ಬೋಕಾಣಿ ಮುಂಜಾನೆ ಹೊತ್ತು ಎಲ್ಲಿ ಹೋಗಿದ್ದಿ ? (ಚಂದಾಮು. ೫೦) ; ನನ್ನ ಕರಿಯ ಮಾಯಿಲ ಪತ್ತಲವನ್ನು ಆ ಬೋಕಾಣಿಯೇಕೆ ಉಟ್ಟುಕೊಂಡು ಮೆರೆದಾಡುವಳು? (ಜಾನಪ್ರ. ೭೪). [ ? ]

**ಬೋಕಿ** (ನಾ). ೧. ಒಡೆದ ಮಡಕೆಯ ಚೂರು : ಪ್ರೀತಿಯಿಂದ ಆದರಣೆ ಮಾಡದೆ ಒಡೆದ ಮಡಕೆಯ ಬೋಕಿಯಲ್ಲಿ ನಿತ್ಯವೂ ಗಂಜಿ ಹೊಯ್ಯುತ್ತಾ ಇದ್ದನು (ಕಥಾಮಂ. IV, ೯) ; ಆ ಪದಾರ್ಥಗಳನ್ನು ತುಂಬುವುದಕ್ಕೆ ಹಳೆ ಮಡಿಕೆಯಾಗಲಿ, ಮಡಕುಬೋಕಿಯಾಗಲಿ ಉಪಯೋಗಿಸಕೂಡದು (ಗ್ರಾಮಕೃಷಿ. ೫೬) ; ೨. (ಆಲಂ) ಭಿಕ್ಷಾಪಾತ್ರೆ: ನೂಕೋಣ ಮನೆ ಊಟಕ್ಕಿಂತ ಬೋಕಿಯ ಊಟ ಲೇಸು (ಗಾದೆ). 'ಬಕ್ಕರೆ' ಪರಾ. [ದೇ.॥ ತೆಲು. ಬೋಕಿ]

**ಬೋಗ** (ನಾ). ಸುಖಾಸುಭವ ; ಭೋಗ : ಭಕಾರಕ್ಕೆ ಬಕಾರಂ . . . ಭೋಗ–ಬೋಗ (ಶಬ್ದ. ೨೫೫ ವೃ.ಯೋ). 'ಮೆಯ್ಬೋಗ' ಪರಾ. [< ಸಂ. ಭೋಗ]

**ಬೋಗಣಿ** 'ಬೋಗುಣಿ' ನೋ.

**ಬೋಗನ್‌ವಿಲ್ಲ, ಬೋಗೇನವಿಲಿಯ** (ನಾ). ಒಂದು ಬಗೆಯ (ಅಲಂಕಾರ) ಸಸ್ಯ ಮತ್ತು ಅದರ ಹೂವು : ಬೋಗನ್‌ವಿಲ್ಲ, ಕೆಂಪುಗೊಂಡೆ (ವೃಕ್ಷ ಶಿ. ೦೬–೨೪೦). **ಬೋಗೇನವಿಲಿಯ :** ತೊಳಗುತಿವೆ ತೋಟದಲ್ಲಿ ತರತರ ಗುಲಾಬಿ ಹೂ, ಡ್ಯಾಲಿಯಾ, ಬೋಗೇನವಿಲಿಯ (ಸುಖೀಕ. ೬–೬). [←ಇಂ. Bougainvilaea]

**ಬೋಗರ** (ಗು). (ಆಲಂ) ನಿಜವಾದ ; ದಿಟವಾದ : ನೀನು ಬರೇ ಮಾತಿನಲ್ಲೇ ಮುಗಿಸಿದೆ. ಅಷ್ಟು ಬೋಗರದುಃಖವಿದ್ದವಳು ಬಟ್ಟಲು ಹಿಡಿ, ನೋಡೋಣ (ಚಾಣ. ೯೬). [← ತುಳು. ಬೋಗರೆ=ಸುಳ್ಳು]

**ಬೋಗಾಯ್ಯು** ? (ನಾ). (?) : ಶ್ರೀಗಾಶ್ರಯವೆನೆ ತೇಜಕ್ಕಾಗರವೆನೆ ನೆಗಟ್ದ ಗಂಗವಜ್ರನ ಲಂಬ್ಬೋಗಾಯ್ಯುನೆಂಬರವರೊಳ್ಬೋಗೆಯ ಮಾಪ್ಪರ್ಚಗೊಂಡಿಂನಣ್ಣನ ಬಂಟ (ಎಕ. II., ೦೬೨–೨, ೪೪೦). [ ? ]

**ಬೋಗಾರ$_{1}$** 'ಬೋಗಾಟಿ' ನೋ.

**ಬೋಗಾರ$_{2}$** (ನಾ). ಒಂದು ಬಗೆಯ ವನಸ್ಪತಿ : ಬೋಗಾರ ಜಾಯಿಫಲ ಸೈಂಧವ . . . ಇವನ್ನು ಸಮಾನಂಗೊಂಡು ಚೂರ್ಣಮಂ ಮಾಡಿ . . . ಮೆಲ್ಲಲು ವೀರ್ಯವರ್ಧನವಕ್ಕು (ಖಗ್ರ. ೬೮). [ ? ]

**ಬೋಗಾರ$_{3}$** (ನಾ). ಒಂದು ಬಗೆಯ ಪಕ್ಷಿ: ಅರಸಿ ನೋಡಿಬೆಟೆಯಲಿ ಹುದುಗಿದ ಹರಡೆ ಹಂಗ ಮಯೂರ ಟಿಟ್ಟಿಭ ಗೊರವ ಗೀಜಗ ಲಾವುಗೆ ಬುಬ್ಬುಲೆ ಬೋಗಾರ . . . ಇತ್ತಲಿಪೆಯಿಂದ (ಕೃಷಿಕ. ೬–೦–೬೨). [ ? ]

**ಬೋಗಾಟಿ, ಬೋಗಾರ$_{1}$** (ನಾ). ಲೋಹದ ಕೆಲಸ ಮಾಡುವವನು ; ಲೋಹಕಾರ; ಕಂಚುಗಾರ : "ವ್ಯೋಕಾರಃ, ಲೋಹಕಾರಃ — ಈ ೨ ಬೋಗಾಟಂ" (ಪಠಾಯು. ೯೬–೪೬೪) ; ಬೋಗಾಟಿ ದೇವಿಸೆಟ್ಟಿ ಗ ೧ ಬೋಗಾಟಿ ಬಾಣುಸೆಟ್ಟಿ ಗ ೧ (ಎಕ. XV, ಕೇಬಾರು. ೩೪೩–೮೦ ; 1265) ; ಹುಸಿದು ಮಾಡುವನ ಶಿವಪೂಜೆ ಬೋಗಾಟಿ ಹಸರಬಿಟ್ಟಂತೆ (ಸರ್ವಜ್ಞ. ೦೭೦). **ಬೋಗಾರ$_{1}$:** ಕಂಚುಗಾರರು ಬೋಗಾರರು ಸಹ ಗುಡಾರ ೧ಕ್ಕೆ ವರ್ರುಷ ೧ ಕೆಲ್ ೧ ಹಣಪ್ರಕಾರ ಸಡಿಸಿಕೊಡಲುಳ್ಳವರು (ಎಕ. XII, ಪುತ್ತೂ. ೩೦–೪೯; 1656); ತಾಮ್ರ ಹಿತ್ತಾಳೆಗಳ ಪಾತ್ರೆಗಳನ್ನು ಮಾರುವ ಜೈನರಿಗೆ ಕಾಸಾರರೆಂತಲೂ, ಜೋಗಾರರೆಂತಲೂ, ತಾಂಬಟಗಾರರೆಂತಲೂ ಅನ್ನುವರು (ಕಥಾಗ. ೦೫೩); ಗಂದಿಗರು, ಬೋಗಾರರು . . . ಮೊದಲಾದ ಜಾತಿಯವರೂ ಅಲ್ಲಿ ವಾಸಿಸುತ್ತಿದ್ದರು (ಕರ್ನಾಟ. ೦೫೭). [< ಸಂ. ವ್ಯೋಕಾರ./ತುಳು. ಬೋಗರೆ]

**ಬೋಗಾಟದೆಱೆಗೆ** (ನಾ). ಲೋಹಕಾರರ ಮೇಲೆ ವಿಧಿಸುತ್ತಿದ್ದ ತೆರಿಗೆ : ಬೆಟ್ಟದ ಕಾವಲು ಬೋಗಾಟದೆಱೆಗೆ ಗಣಾಚಾರಿದೆರಿಗೆ ಕೋಜುಂಗಳ ತೆಱೆಗೆ (ಎಕ. III (R), ಗುಂಡ್ಲುಪೇ. ೦೩೬–೦೭; 1513). [ಬೋಗಾಟಿ + ತೆಱೆಗೆ]

**ಬೋಗಾಟದೆಱೆ$^{3}$** (ನಾ). = ಬೋಗಾಟದೆಱೆಗೆ : ಬೆಟ್ಟದ ಕಾವಲು ಬೋಗಾಟದೆಱೆ$^{3}$ ಗಣಾಕಾರತೆಱೆಗೆ . . . ಸಲಿಯೂರವೆತ್ತನೆ ಮುಂತಾದ ಸರ್ವ್ವತೆಱೆಗೆ ಕಾಲುವಳಿಯ ಗ್ರಾಮಗಳು (ಎಕ. III (R), ಗುಂಡ್ಲುಪೇ. ೦೩೪–೦೭ ; 1311). [ಬೋಗಾಟಿ + ತೆಱೆ$_{3}$]

**ಬೋಗಾಟಿಕೆ** (ನಾ). = ಬೋಗಾಟದೆಱೆಗೆ: ಬೋಗಾಟಿಕೆ ಮಾದಱಿಕೆ ಮುಂತಾದ ಏನುಳ್ಳ ಸುಲಸ್ವಾಮ್ಯವನು ಅಗುಹುಡಿ ನಂಜುಡೇಶ್ವರ ದೇವರ ಬಂಡಾರಕ್ಕೆ ಸಲಿಸುವಂತೆ ಸರ್ವಮಾನ್ಯವ ಧರ್ಮಸಾದನ (ಎಕ. III (R), ಗುಂಡ್ಲುಪೇ. ೩೯–೬; 1507). [ಬೋಗಾಟಿ + –ಇಕೆ]

**ಬೋಗಿ$_{1}$** (ನಾ). ಸುಖವನ್ನು ಅನುಭವಿಸುವವನು ; ಸುಖಿ : ಭಕಾರಕ್ಕೆ ಬಕಾರಂ . . . ಭೋಗಿ–ಬೋಗಿ (ಶಬ್ದ. ೨೫೫ ವೃ.ಯೋ); ವೀಳೆಯ ಪುಷ್ಪ ಮುಂತಾದ ಪರಿಮಳಕೆ ಬೋಗಿಯಾಗಿರುವನು (ಶಕ್ಷತೂ. ೩–೨೦). [<ಸಂ. ಭೋಗಿನ್]

**ಬೋಗಿ$_{2}$** (ನಾ). ರೈಲುಗಾಡಿಯ ಬಿಡಿಗಾಡಿ, — ಡಬ್ಬಿ : ನೆಕ್ಲುದೋವನಿಗಾಗಲಿ ಇತರರಿಗಾಗಲಿ ಬೋಗಿಗಳ ಬಳಿ ಹೋಗಲು ಅಪ್ಪಣೆ ದೊರೆತಿರಲಿಲ್ಲ (ಪುನರು. ೪೫೩). [←ಇಂ. Bogie]

**ಬೋಗುಡಿಚಿ** (ನಾ). ಒಂದು ಬಗೆಯ ಔಷಧೀ ಸಸ್ಯ : ವ್ಯೈಲತುತ್ತವಂ ಬೋಗುಡಿಚಿಸೊಪ್ಪಿನ ರಸದಲ್ಲಿ ತೇದು ಹೊಸಮೊಳೆಗೆ ತೊಡೆಯೆ ಮೊಳೆ ಮಾಣ್ಬುವುದು (ಕಲ್ಯ. ೨೯೩). [ ? ]

**ಬೋಗುಣಿ, ಬೋಗಣಿ, ಬೋಗುನಿ, ಬೋಗೋಣಿ** (ನಾ). ತಳಭಾಗವು ಗುಂಡಾಗಿದ್ದು, ಅಗಲವಾದ ಬಾಯುಳ್ಳ ಲೋಹದ ಪಾತ್ರೆ : ಏಳೆನ್ನ ಮನವನ್ನೆ ! ನೋಡು, ಪೊಳ್ತರೆ ಬಂದು ನಿಶಿಯ ಬೋಗುಣಿಯೊಳಕೆ

ಹೊಂಬುಗುರಿಯಸದು ಶಾಲಿಯರಳುಂಗಳನಲ್ಲಿಂದೆ ಚೆಲ್ಲಾಡಿಹನು (ಉಷರ.೦); ಒಲೆಯ ಬಳಿ ಒಂದು ಬೋಗುಣಿಯಲ್ಲಿ ಕಳೆದ ರಾತ್ರಿ ಉಳಿದಿದ್ದ ಅನ್ನವನ್ನು ನಾಯಿಗಳಿಗಾಗುತ್ತದೆ ಎಂದು ಸುಬ್ಬಮ್ಮ ಇಟ್ಟಿದ್ದಳು (ಕಾಷೂರು. ೩೬). ಬೋಗಣಿ : ಒಂದು ಬೋಗಣಿಗೆ ನೀರು ಸುರಿದು ಅವನ್ನೆಲ್ಲ ಸುರುವಿದೆ (ಜು.ಸಿಕ್ತ್ಯ. ೬೭) ; ಅವಲಕ್ಕಿಯನ್ನು ತೊಳೆದು ನೆನೆಯಿಸಿ ಅರ್ಧ ಬೋಗಣಿ ದೊಸರಿನೊಂದಿಗೆ ಚೆನ್ನಾಗಿ ಬೆರೆಯಿಸಿ . . . ಉಪಹಾರಕ್ಕೆ ಕುಳಿತಿದ್ದರು (ಕನ್ನ.ಸ.೯). ಬೋಗುನಿ : ಈ ಸೇವಕರು ಚಿನ್ನದ ಪಾತ್ರೆಗಳನ್ನು ಅಂದರೆ ದೊಡ್ಡ ದೊಡ್ಡ ಬೋಗುನಿಗಳನ್ನು . . . ಹೊತ್ತು ಬರುತ್ತಿದ್ದರು (ಕೃ.ಜಾಚ. ೧. ೬೮). ಬೋಗೋಣಿ : ಬೋಗೋಣಿಯಲ್ಲಿ ಸದಿನೀರು ಕಾಯಲಿಕ್ಕೆ ಇಟ್ಟು ನೀರು ಹೊಯ್ದಾಡುವಾಗ ಈ ತೊಪ್ಪಲವನ್ನು ಹಾಕಿ ಅದರ ಎಸರನ್ನು ಬಸಿದುಕೊಂಡು ಬಿಳೀಸಕ್ಕರೆಯನ್ನು ಹಾಲನ್ನು ಹಾಕಿ ತೆಗೆದುಕೊಳ್ಳುತ್ತಾರೆ (ಕೃ.ಚಿಕ್ತ. ೨೦೦) ; ಬೋಗೋಣಿಯೊಳಗಿನ ನೀರು ಹೊರಸೂಸಿ ಪರಾತದೊಳಗೆ ಬೀಳುತ್ತದೆ (ಮುಂಬಯಿ. ೩-೬೩).

[←ಮರಾ. ಬೋಗಣೀ, ಬೋಗಾಣೀ, ಬೋಘಣೀ, ಬೋಘಾಣೀ. /ತಮಿ. ಪೋಕಣಿ, ಪೋಕಿಣಿ; ತುಳು. ಬೋಗಾಣಿ]

**ಬೋಗುನಿ** 'ಬೋಗುಣಿ' ನೋ.

**ಬೋಗೇನವಿಲಿಯ** 'ಬೋಗನ್‌ವಿಲ್ಲ' ನೋ.

**ಬೋಗೋಣಿ** 'ಬೋಗುಣಿ' ನೋ.

**ಬೋಚ** (ನಾ). (ಮಕ್ಕಳ ಮಾತಿನಲ್ಲಿ) ಮೊಲೆ ; ಸ್ತನ : ಬಾಚಿ ತಬ್ಬುತಲೆನ್ನ ವುಬ್ಬಿಯಿರುತಿರ್ಪ ಬೋಚಿಯನ್ನು ಕುಡಿಯುಪ್ಪ (ಜಮಕ.. ೦೫೬). 'ಪಾಚ್ಚಿ' ಪರಾ.

**ಬೋಚಿಗ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಗೊಗ್ಗಿಯ ಮನೆಮಗತಿ ಬೋಚಿಗಧರ್ಮ್ಮಸೆಟ್ಟಿ ಉತ್ತಮಗಳ್ಪಂಕ್ರ ?ದೊಳಿ ನಿಲೆ ಎದೆವಾ ಊರ ಮಲೆವ [ಲಿ] ಸತ್ತಂ (ಪ್ರ.ಕಂ. ೦೯೩೬. ೪೦-೨ ; ಸಂ. ೫೦೨).

[?]

**ಬೋಜ** (ನಾ). ಒಂದು ಬಗೆಯ ಹೆಂಡ : ಇವರು ಜೋಳದೊಳಗೆ ಅಮೃತಬಳ್ಳಿ, ಭಂಗಿ, ಕುಂಚಲಿ, ಅಂದರೆ ವಿಷಮುಷ್ಟಿಯ ಬೀಜ, ಇವುಗಳನ್ನು ಹಾಕಿ ಕುದಿಸಿ ಬೋಜವೆಂಬ ಸರಾಯಿಯನ್ನು ಮಾಡಿ . . . ಮಾರುವರು (ಕಜಾಗ. ೨೯೩). 'ಅಕ್ಕಿಬೋಜ' ಪರಾ.

[←ಪಾರ. ಬೋಜಾಹ್; ಹಿಂ. ಬೋಜಾ; ಮರಾ. ಬೋಜಾ, ಬೋರ್ಜಾ]

**ಬೋಜಗಾರ** (ನಾ). ಬೋಜವೆಂಬ ಹೆಂಡವನ್ನು ತಯಾರಿಸುವವನು : ಬೋಜಗಾರರು ಇವರು ಹಲವು ಹಿಂದೂಜಾತಿಗಳ ವಂಶದವರೆಂದು ತೋರುತ್ತದೆ (ಕಜಾಗ. ೨೯೩). [ಬೋಜ + — ಕಾರ₁ (<— ಕಾಜ)]

**ಬೋಜಾ** 'ಬೋಜೆ' ನೋ.

**ಬೋಜಕಾರ** (ನಾ). ಮದುಮಗನ ಜೊತೆಯಲ್ಲಿರುವ ಚೆಲುವ.— ಸುಂದರ : ಬೋಜಂಕಾರನಾದ ಕರುಂಬಯ್ಯ ಚೆಂಗುವಾಣಿಯ ಕೈಹಿಡಿದು ಶಯ್ಯಾಗೃಹದ ಬಾಗಿಲಿಗೆ ಕರೆದುಕೊಂಡು ಬಂದ (ಕುಂಚಾ. ೨೩೨).

[←ಕೊಡ. ಬೋಜಕಾರ]

**ಬೋಜಗಾರ್ತಿ** (ನಾ). ಮದುಮಗಳ ಜೊತೆಯಲ್ಲಿರುವ ಚೆಲುವೆ.— ಸುಂದರಿ : ಯಾವಳೋ ಒಬ್ಬ ಬೋಜಗಾರ್ತಿ ಬಾಳ್ಯಕಾರ್ತಿಯ ಕಣ್ಣೋಟದ ಗಾಳಕ್ಕೆ ಚೆಂಗುವಾಣಿ ಸಿಕ್ಕಿ ಬಿದ್ದಿರಬೇಕು (ಕುಂಚಾ. ೦೦೩); ನೀನು ನನ್ನ ಬೋಜಗಾರ್ತಿ ಪೆಣ್ಣನ್ನು ಎಲ್ಲಿ ಕಂಡನೆಂಬುವನ್ನು ಎಂದೆಂದಿಗೂ ಮರೆಯಲಾರೆ (ಸಚಾ. ೧೧. ೦೦೬೦). [←ಕೊಡ. ಬೋಜಕಾರ್ತಿ]

**ಬೋಜೆ, ಬೋಜಾ** (ನಾ). ಭಾರ ; ಹೊರೆ : ಸಕರಿನ ಕರಾಯಿಯ ಬೋಜೆಯು ಸಂಪೂರ್ಣವಾಗಿ ಅಸಾಮಿಗಳ ಮೇಲೆ ಬೀಳುತ್ತದೆ (ಮುಂಬಯಿ. ೯೦); ಈಗ ನನ್ನ ಮೇಲೆ ಒಂದು ಬೋಜೆ ಬಂದಿದ್ದು ಆ ಬೋಜೆಯನ್ನು ನೀವೇ ಸ್ವಂತ ಖುಷಿಯಿಂದ ಹೊತ್ತಿದ್ದೀರಿ (ಗಂಡಿಕಾಮ. ೨೦೦). ಬೋಜಾ : ನಿಮ್ಮ ಮ್ಯಾಲ ಪ್ರಪಂಚದ ಬೋಜಾ ಭಾಳ ಅದ (ಸಪ:ಪ. ೦೫೬); ನಾಳೆ ಮನೀ ಬೋಜಾ ಅವರ ಮ್ಯಾಲೀ ಅಲ್ಲ (ದೀಪ. ೪೩).

[←ಹಿಂ. ಬೋರ್ಝ್; ಮರಾ. ಬೋಜಾ, ಬೋರ್ಝಾ]

**ಬೋಟ** 'ಬೋಟು₃' ನೋ.

**ಬೋಟು₁** (ನಾ). ಒಂದು ಬಗೆಯ ಆದಾಯ : ಸ್ಥಳದ ಪೂರ್ವದ ಮಾನ್ಯ ಆಯ ಸ್ವಾಮ್ಯ ಬಾಟು ಬೋಟು ಸಹ ತೋಗರಿಗಟ್ಟಿಕೆ ಸಲುವ ಉಪಗ್ರಾಮ (ಎಕ. XII. ಕುಣ್ಣಿಗ. ೪೩-೬; 1634 ?).

**ಬೋಟು₂** (ನಾ). ಹುಣಿಸೆಹಣ್ಣಿನ ಸಿಪ್ಪೆ.—ಗೋಟಂ.—ಗೊಳಲೆ (?) : ಸ್ವಾತಿನೀರಿಂ ಮುತ್ತು ಜನಿಸಿ ಶೋಭಿಪುದೈಸೆ ಬೋಟ ತೋಯದಿ ಮೌಕ್ತಿಕ ಫಲಗಳಹುದೆ (ಹಮ್ಮ. ೩೦). 'ಬೊಟ್ಟು' ಪರಾ. [?]

**ಬೋಟು₃, ಬೋಟ** (ನಾ). ನಾವೆ ; ಹರಿಗೋಲು : ಬಂದರಗಳಲ್ಲಿ ಅಲೆದಾಡುವ ಸಣ್ಣ ಪುಟ್ಟ ಮಾಲುಬೋಟುಗಳು. ಇವುಗಳ ಹೊರತು ಆ ಸಮುದ್ರದಲ್ಲಿ ಬೇರೆ ಯಾವ ಸುಳಿದಾಟವೂ ಕಾಣುತ್ತಿರಲಿಲ್ಲ (ಚರುಗಾ. ೯). ಬೋಟ : ಕತ್ತಲಲ್ಲಿ ಬೋಟಿಯ ದೀಪಗಳು ಮಾತ್ರ ಕಾಣಿಸುತ್ತವೆ (ಪ:ರಮ. ೨೦೦); ಕುಮಟೆಯ ಕಡೆಗೆ ಹೋಗುವ . . . 'ಬೋಟ' ಸಿದ್ಧವಾಗಿ ನಿಂತಿತ್ತು (ಮು:ರುಂಜ. ೩). [←ಇಂ. Boat]

**ಬೋಟೆ** (ನಾ). (?): ''ಕೂಟದಾಸಿ ಬೋಟೆಯುನಿಕರಂ'' (ಜಿತ್ತು.ಕೀ. ೫೬-೨೬).

[?]

**ಬೋಡ, ಬೋಳ₁, ಬೋಟ₁** (ನಾ). ೧. ಹಲ್ಲಿಲ್ಲದವನು; ಬೊಚ್ಚು ಬಾಯಿಯವನು : ''ಅದ್ವಿಜು ಬೋಡನಕ್ಕುಂ'' (ರುಂಗಾ. ೦೦೩-೬); ಅಡಿಗಟ್ಟಣವೇಕೆ ಬೋಡಂಗೆ ಕಬ್ಬೇಕೆ (ಸರ್ವಜ್ಞ. ೦೩೬೪). ೨. ಕೂದಲನ್ನು ತೆಗೆಸಿಕೊಂಡವನು; ಬೋಳಿಸಿಕೊಂಡವನು. ೩. ತಲೆಯಲ್ಲಿ ಕೂದಲಿಲ್ಲದವನು. ೪. ದರಿದ್ರ : ಬೋಡ . . . ಗಂಟಿಲ್ಲದವ ; ದಿವಾಳಿಖೋರ'' (ಜಾನಕೋ. ೨೩). ೫. (ಕರಾ). ಪೆದ್ದ; ದಡ್ಡ; ಬುದ್ಧಿಹೀನ. ಬೋಳ₁: ೩. ಬೋಳನಿಗೇಕೆ ಬಾಚಣಿಗೆ (ಇಂಕಾಪ. ೬೮-೬೮); ೬. ಕೊಂಬುಗಳಿಲ್ಲದ ಎತ್ತು : ನಿಲುವ ಸಂಪನು ಬೋಳ ಬಟ್ಟ ಕರಿಮಾಸ ಮುಂದೊಲೆವ ನಾನಾಪರಿಯ ಕಬ್ಬಸಿಗಳೊಳಗಾದ ಪಲವು ಪರಿಯೆತ್ತು ತೊಂಭತ್ತಾಱುಲಕ್ಷ ಮೇಳೈಸಿ ಹಿಡಿದುವು ಗೆಲ್ಲಿಕೆ (ಸಿಂಗಿರಾ. ೩೩-೬); ಕೊರಗುತಿರ್ದನು ಹೇರಿ ಹಾಕಿದ ಬೋಳನಂದದಲಿ (ಅಂಬಿಗ. ೨೩-೯೦). ೭. (ಅಲು) ಸಂನ್ಯಾಸಿ; ಪ್ರತಿ: ನಿನ್ನ ಸಂಚದ ಪರಿ ಬ್ರಹ್ಮಾದಿಗಳಚ್ಚಿಯರು . . . . ಜಡೆಯ ಮುಡಿಯ ಬೋಳರಚ್ಚಿಯರು (ಸರ್ವಪ. ೩೦_೦೩೪). ಬೋಟ₁ : ೨. ''ಮುಂಡಃ, ಮುಂಡಿತಃ — ಈ ೨ ಬೋಟನು'' (ಶಾಪರಾ. ೦೦೯). ೭. ನಾರಂದಂ . . . ಸೀತೆಯಿರ್ದ ಕನ್ಯಾಮಾಡಕ್ಕೆಯ್ಯುಪ್ಪುದಲ್ಲಿ ವಿಳಾಸಿನಿಯರಾ ಬೋಟನಂ ಕಾಣುತ್ತಾಳಿಗೊಂಡು ನೆತ್ತಿಯಂ ಹಸ್ತದಿಂ ಪೊಯ್ಯೆ (ಪಜಾ.ಸ್ರ. ೩-೬೦ ವ). [ಬೋಡು + — ಅ./ತೆಲು. ಬೋಡ]

**ಬೋಡಿ, ಬೋಳಿ** (ನಾ). ೧. ಹಲ್ಲಿಲ್ಲದವಳು; ಬೊಚ್ಚು ಬಾಯಿಯವಳು: ಕುಂಟಣಿಯುಪ್ಪೆ ಬೋಡಿಯನು ನೋಡಗ್ರಕೆ (ಜಕಮ. ೦೦-೬); ಮಂಗಳಿಗು ಸುರಿದಳು ಬಹುಯುಕ್ತಿಯುಂ ಬೋಡಿ ಪಿಸುಣತೆಯ ಹೂಡಿ (ಅಂಗಪೂ. ೨೩-೩೬). ೨. ತಲೆಯಲ್ಲಿ ಕೂದಲಿಲ್ಲದವಳು: (ಚ). ಬೋಳಿ : ೩. ತಲೆಯ ಕೂದಲನ್ನು ತೆಗೆಸಿಕೊಂಡವಳು; ಕೇಶಮುಂಡನ ಮಾಡಿಸಿಕೊಂಡವಳು: ಕೂಳಿಗೆ ಬಿದ್ದಿರುವ ಬೋಳಿಗೆ ನಿನಗಿಷ್ಟು ಗಯ್ಯಾಳಿತನವೇಕೆ (ಪುರಂದ. ೩-೩೦ ಕಲ್ಪಿ) ; ಬೋಳಿ ತುರುಬು ನೆನೆಸಿಕೊಂಡ ಹಾಗೆ (ಗಾದೆ). ೪. ಒಂದು ಬಯ್ಗುಳು.

**ಬೋಳೀಮಗ** = ಮುಂಡೆಯ ಮಗ ; ಒಂದು ಬಯ್ಗುಳು :

ಥೂ ಎಷ್ಟು ಪೊತ್ತಾಬ್ಬ್ರಾ? ಎತ್ತ ಸತ್ತ ಈ ಬೋಳೀಮಗ? (ತುಳಿಮ. ೩೩೪). [ಬೋಡ + — ಇ$_2$./ತುಳು.ಬೋಳಿ]

**ಬೋಡು**, ಬೋಳು, ಬೋಟು (ನಾ). ೧. ಬಾಯಿಯಲ್ಲಿ ಹಲ್ಲಿಲ್ಲದ ಸ್ಥಿತಿ ; ಬಾಯಿ ಬರಿದಾಗಿರುವಿಕೆ : (೪). ೨. (ತಲೆಯಲ್ಲಿ) ಕೂದಲಿಲ್ಲದ ಸ್ಥಿತಿ; ಬೊಕ್ಕು. ೩. ಬರಿದಾಗಿರುವಿಕೆ ; ಖಾಲಿಯಾಗಿರುವಿಕೆ. (ಗು). ೪. ಹಲ್ಲಿಲ್ಲದ ; ಬಾಯಿ ಬರಿದಾದ : 'ಬೋಡುವಾಯ್' ಪರಾ. **ಬೋಳು** : ೨. ಆತನಿರವು ತುಱುಬೋ ಜಡೆಯೋ ಬೋಳೋ ಅಱಯಬಾರದಣ್ಣಾ (ಪೋಕಶಾ. ೨೦೯-೬೬೨); ಮಂಡೆ ಬೋಳಿನ ಕರಕಮಂಡಲ ದಂಡಧೋತ್ರದ ಕಾಸೆ ವೇಷದ ಲಂಡಸಂನ್ಯಾಸಿಯನು ಹಿರಿಯರೆನುತ್ತ ಭಿಕ್ಷವನು ಕೊಂಡು ನೀಡಿದರೆ (ಕೌಶಿಆ. ೬-೫೦). ೫. ಕೂದಲಿಲ್ಲದ ; ಬೊಕ್ಕಾದ: 'ಬೋಳುದಲೆ' ಪರಾ. ೬. ಬರಿದಾದ; ಖಾಲಿಯಾದ : 'ಬೋಳುಗೈ' ಪರಾ. **ಬೋಟು** : ೨. ನಾವಿದಂ ಕನ್ನೆಯ ಪುರ್ವುಂ ನೊಸಲುಮಂ ಸಮಱಿ ದಾಗಳಾ ಪುರ್ವುಂ ಬೋಟು ಪುರ್ವಾಗೆ ನೊಸಲುಂ ತಱಿಟುವಂತಾಗೆ (ಶಂಶಂ. ೯-೭ ವ). ೫. 'ಬೋಟುಮಂಡೆ' ಪರಾ.

**ಬೋಡಾಗು**, **ಬೋಳಾಗು**, **ಬೋಟಾಗು** = ೧. ಹಲ್ಲಿಲ್ಲದಾಗು; ಬೊಚ್ಚು ಬಾಯಾಗು : ಹಲ್ಲುಗಳುದುರಿ ಬಾಯಿ ಬರಿ ಬೋಡಾಗಿಹುದು (ಅಮಶಂ. ೦೦-೦೪). ೨. ಬರಿದಾಗು; ಖಾಲಿಯಾಗು: ಒಂಟಿಕೊಪ್ಪಲಿನಾಚೆ ಬೋಡಾದ ಬೋರೆಯಂ . . . ಕುರಿತ್ತುಲಿವ ಗತಿಯಾಯ್ತೆ (ಕೃಣಗಿರಿ. ೦೭-೬೬); ಮಂಡೆ ಬೋಳಾದರೇನೋ ಹುಟ್ಟು ಬೋಳಾಗದನ್ನಕ್ಕರ (ಅದವ. ೯-೦೩); ಹೂವಿಲ್ಲದ ಹೆರಳು, ಹಾರವಿಲ್ಲದ ಕೊರಳು, ಬರಿಗೈ, ಬೋಳಾದ ಹಣೆ (ಅಶಕಂ. ೦೬೦). ೩. ಅಸಹಾಯಕವಾಗು ; ನಿಸ್ಸತ್ತ್ವವಾಗು : ವೀರರ ಭೂಪರ ಬಾಗಿಲೆ ಬಿರ್ದು ಬೋಡಾಗಿ ನಾಯಾಗಿ ತೇಜಂಗೆಟ್ಟು (ರಶರಾಮ್ನ. ೦೭-೦೫೫) ; ಉದಿತಾತ್ಮಗ್ರಭುಜಪ್ರತಾಪದ ಪೊಡಪ್ಪರ್ಗಿಂ ಕಂಪ . . . ಪೊಡಪ್ಪಡುಗರಾರಾನ್ನೋಡಿ ಬೋಡಾಗಿ ಪೋಗದರಾರ್ (ಎಕ. XX, ೧೨-೯ ; 1187). ೪. ಕೂದಲಿಲ್ಲವಾಗು ; ಬೊಕ್ಕವಾಗು : ಮಂಡೆ ಬೋಳಾದರೇನೋ ಹುಟ್ಟು ಬೋಳಾಗದನ್ನಕ್ಕರ (ಅದಶ. ೯-೦೩) ; ಲಲಿತಾಂಗಿಯರೊಳ್ ರಾಗದೆ ನಲಿದಾಡುವ ವಯಸ ದಂದು ಮಾಡದೆ ತಪಮಂ ಸಲೆ ಮಾಟ್ಕೆ ದೈವದಿಂದಂ ತಲೆ ಬೋಟಾಯ್ತೆನಿಪ ಮುಪ್ಪಿನೊಳ್ಬರನೇಬರ್ (ಸಮಶ. ೬-೯೦) ; ಬೋಟಾದ ತಲೆಯ ರೋಮಂ . . . ಬಳೆವ ತೆಱದಿಂ ಕೋಲಾಹಲಮಿಲ್ಲದೊದವುತಿರ್ಕುಂ ಪಾಪಂ (ರಶರಾಮ್ನ. ೯-೯೦). ೫. (ಅಲಂ) ಸಂನ್ಯಾಸಿಯಾಗು : ಪೊನ್ನಿನ ಆಪ್ಯಾಯನಕ್ಕೆ ಬೋಳಾದವನಲ್ಲ . . . ಕೂಡಲಸಂಗಮ ದೇವರಲ್ಲಿ ಎನಗಾರು ಇಲ್ಲವೆಂದು ಬೋಳಾದನೆನ್ನ ಪ್ರಭುದೇವರು (ಬಸವ. ೪. ೯೩೭-೦೦೬೦). **ಬೋಟದಲೆ** = ಬೋಳಿಸಿದ ತಲೆ ; ಕೂದಲಿಲ್ಲದ ತಲೆ : ಕರಿಯ ಕಚ್ಚುಟಮನುಟ್ಟು ಮೆಯ್ಯೆಲ್ಲಂ ಮಸಿಯಂ ಪೂಸಿ ಬೋಟದಲೆವೆರಸು ಬಾಯೊಳ್ ಕವಡಿಕೆಗಳಂ ಪಲ್ಗಳಂತೆ ಮಾಡಿ (ವಡ್ಡಾರಾ. ೦೦೯-೦೬). **ಬೋಟಮಂಡೆ** = ಬೋಟಿದಲೆ : ಕಚ್ಚುಟಂ ಗುಂಡಿಗೆ ಬೋಟಮಂಡೆ ಮಣಿದಂಡಮಿವೀಕ್ಷಣಸೌಖ್ಯಹೇತುವೇ (ಶಂರಾಮಾ. ೪-೮೦) ; ಕೆರಕಿಂ ತುಱಿಯಿಂ ತೀವಿದ ಕರಚರಣಂ ಬೋಟಮಂಡೆ ಕುಗ್ಗಿದ ದೇಹಂ (ರಶರಾಮ್ನ. ೬-೨೨೪).

[ದೇ.॥ ತಮಿ. ಪೋಟು ; ತುಳು. ಬೋಳು, ಬೋರು ; ಕೊಡ. ಕೋತ. ಬೋಳ್; ತೆಲು. ಬೋಡು]

**ಬೋಡುಕಡಲೆಸೊಪ್ಪು** (ನಾ). ಒಂದು ಬಗೆಯ ಔಷಧೀಸಸ್ಯ : ಮೂಡುಗಟ್ಟನ ಗಿಡ, ಬೋಡುಕಡಲೆಸೊಪ್ಪು, ಕರಂಡೆ, ಮುಂಡಿಗಿಡ (ಬ್ಯಾಶಿಗ. ೬೦-೦೯೬೦) : ಮೂಡುಗಟ್ಟಿನ ಸೊಪ್ಪು, ಬೋಡುಕಡಲೆಸೊಪ್ಪು, ಗರುಗಲು (ಪಮ್ನಸು. ೨೩೪). 'ಬೋಟಿಗಡಲೆ' ಪರಾ.

[ಬೋಡು ? + ಕಡಲೆ + ಸೊಪ್ಪು$_1$]

**ಬೋಡುಗೈ** (ಕ್ರಿ). ಬರಿದುಗೊಳಿಸು ; ಬೋಳುಮಾಡು : ದಂತಿ ವ್ಯಗಪತಿಯ ದಾಡೆಯ ಬೋಡುಗೈವುದೆ ಶಕುಂತೇಶನಂ ದಂದಶೂಕ ನುಂಗುವುದೆ (ಮಲೀಪ. ೨೯-೦೦). [ಬೋಡು + ಕೈ$_1$ (< ಕೆಯ್$_1$)]

**ಬೋಡುಬಾಯ್** 'ಬೋಡುವಾಯ್' ನೋ.

**ಬೋಡುಬಾಯಿ** 'ಬೋಡುವಾಯ್' ನೋ.

**ಬೋಡುವಾಯ್**, ಬೋಡುಬಾಯ್, **ಬೋಡುಬಾಯಿ** (ನಾ). ಹಲ್ಲಿಲ್ಲದ ಬಾಯಿ : ಬೊಚ್ಚು ಬಾಯಿ : ಅನೆದಲೆಯ ನೆತ್ತರ್ ಪುದಿದ ಮುತ್ತಂ ದಾಳಿಂಬಬೀಜಂಗೆತ್ತಿತ್ತಿ ಕಳ್ಳನೆ ಮುಕ್ಕಲೊಡನೆ ಪಲ್ಗಳ್ ಮುಕ್ಕುವೋಗೆ ನೋಡಿದಂಬಂತೆ ಬೋಡುವಾಯುಂ ತೆಱದೇಡಿಪ ಕೋಡ ಗಂಗಳಂ ನೀಡುಂ ನೋಡಿ (ರಾಶಿಕೆ. ೩-೩೩ ವ) ; ಶೈಲವೃದ್ಧನ ಬೋಡು ವಾಯಂತೆ ಗವಿ ಮೆರೆದುದು (ಶುಪಶಾಖ. ೯-೦೯೯). **ಬೋಡುಬಾಯ್** : ನೆರೆದಲೆಗೆ ಮುಸಿದೊಡೆದು ತೆರೆಗೊಂಡೊಡಲನು ಕತ್ತಲೆಯ ಮುಱಿಗೆಯ್ದು ಬೋಡು[ಪಾಠಾಂ. ಬೊಗಡು]ಬಾಯಿಂದಲೂಳುತ್ತ . . . ಹಣ್ಣು ಮುದುಕಿ ಸೂಳೆಯುರೆಸದರು (ಶಿಶ್ರ. ೦೦-೬೬). **ಬೋಡುಬಾಯಿ** : ಒತ್ತುಗಲ್ಲದ ಬೋಡುಬಾಯಿಗಳ ನೆತ್ತಿ ತರಟಿನ ಸೂಳೆಯರು ಮನದರ್ತಿಯಲಿ ತಿರುಗಿದರು ಶತವೃದ್ಧ ರಸಮೇಳದೊಳು (ಕೊಕ್ಕಾಶ. ೨೦೯).

[ಬೋಡು + ಬಾಯ್]

**ಬೋಣಿ$_1$** (ನಾ). ಚೆಲುವು ; ಸೌಂದರ್ಯ : 'ಚಿಗುರುಬೋಣಿ' ಪರಾ. [← ತೆಲು. ಪೋಡಿ, ಪೋಣಿ]

**ಬೋಣಿ$_2$** (ನಾ). (ವ್ಯಾಪಾರಿಯು ಮಾಡುವ) ದಿನದ ಮೊದಲನೆಯ ನಗದುವ್ಯಾಪಾರ, — ರೊಖ್ಖುವ್ಯಾಪಾರ : ನಮ್ಮ ಸಮರಕ ಖಾದುವೇ ಬೋಣಿ ಕೊಂಡವು ಭಟರ ತಲೆ ಕೇಣಿ (ಕೃಕಾರ. ೬-೬೬); ಆ ಬಕಪಕ್ಷಿಗೆ ನಮ್ಮ ಬೋಣಿ ಆಗ್ಲಿ (ಐಮಕ್ಕ. ೯೨).

**ಬೋಣಿ ಮಾಡು** = ನಗದಾಗಿ ಮೊದಲನೆಯ ವ್ಯಾಪಾರ ಮಾಡು : ಬೋಣಿಮಾಡೀ ತಾಯಿ (ವೃಕ್ಕಿಪ. ೦೨೯) ; ಕೊಸರಾಡದೆ ಬೋಣಿ ಮಾಡಿ (ಜನಪ. II, ೯೩೨). **ಬೋಣಿಯಾಗು** = ನಗದಾಗಿ ಮೊದಲನೆಯ ವ್ಯಾಪಾರವಾಗು : ಬೋಣಿಯಾಗದೆ ಕಡ ಕೊಡುವುದು ಹ್ಯಾಗೆ (ವಾಗ್ಗೆಂ. ೦೭೩); ಮಾಣಿ ಬೋಣಿಯಾಗಲಿಲ್ಲವೆಂದು ತಕರಾರು ಮಾಡಿದ್ದರಿಂದ ಹೋಟಲಲ್ಲಿ ಜಗಳ ಕಾಯಬೇಕಾಯಿತು (ಹೊಸಕ್ಷ. ೪೬).

[← ಮರಾ. ಬೋಣಿ, ಬೋಹಣಿ. ಬೋಹನೀ; ಹಿಂ. ಬೋಹನೀ. ತಮಿ. ಪೋಣಿ ; ತುಳು. ಬೋಣಿ, ಬೋನಿ; ತೆಲು. ಬೋಣಿ]

**ಬೋದ$_1$** (ನಾ). ಉಬ್ಬಿರುವುದು ; ಊದಿರುವುದು ; ಬಾತಿರುವುದು.

**ಬೋದಬೋಟೆಯಾಗು** = ಉಬ್ಬು ; ಉಬ್ಬರಿಸಿಕೊಳ್ಳು ; ಊದಿಕೊಳ್ಳು : ಹೊಟ್ಟೆಯುಬ್ಬರಿಸುವುದೇ ವಿಷ್ಕಂಭವೆನಿಸಿಕೊಳ್ಳುವುದು. ದಿನದಿನವಲ್ಲಿಯೂ ಬೋದಬೋಟೆಯಾಗಿ ಹೊಟ್ಟೆಹೋಗುತ್ತ ಇರುವುದೇ ವಿಷ್ಕಂಭವೆನಿಸಿಕೊಂಬುದು (ಸಶವೈ. ೩೩೬).

[ದೇ.॥ ತಮಿ. ಪೋನ್ನಿ ; ತುಳು. ಬೋದೆ; ಬೋಂದೆ = ಸ್ಥೂಲಕಾಯದ ವ್ಯಕ್ತಿ ; ತೆಲು. ಬೋದ, ಬೋದೆ]

**ಬೋದ$_2$** (ನಾ). ಒಂದು ಬಗೆಯ ಹಕ್ಕಿ : "ಬಕೋಟಃ —ಬೆಳ್ಳಕ್ಕಿ, ಬೋದನ ಹಕ್ಕಿ" (ಓಕಂ. ೦೦೩).

[ದೇ.॥ ತಮಿ. ಪೋತಾ ; ತೆಲು. ಬೋದ = ಹಕ್ಕಿಯ ಮರಿ]

**ಬೋದ$_3$** (ನಾ). ೧. ತಿಳಿವಳಿಕೆ ಕೊಡುವುದು ; ಉಪದೇಶ ; ಬೋಧನೆ : ತಡೆಯದೆ ಮುಂಕಿರಿದ ಶಿರಂ ಜಡೆಗಟ್ಟಲ್ಬಾರದೆಂದು ಬೋಟಿಸಿ ಬೋದಂ ಕುಡೆ ಕೊಂಡನವಂ ತಪಮಂ ಗೆಡೆಗೊಂಡಿರೆ

ದಂತು ಬೂದಿ ಸೂರೆ ರುದ್ರಾಕ್ಷಂ (ಕಣ್ಣಾಕು. ೦೨೦ ವ್ಯಾಖ್ಯಾ). ೨. (?) : ಬೋದಂ ಮೋದಗೆಗೊಂಡುದೆಂಬ ನಗೆಯುಂ ನೀಂ ಮಾಡದಿರ್ ಜೀವನೇ (ಜೀಚರಿಸಂ. ೦೭೦-೦೯). [ < ಸಂ. ಬೋಧ ]

**ಬೋದಣೆ** 'ಬೊವಡೆ' ನೋ.

**ಬೋದಣೆಗೆ** (ನಾ). (?) : ಮೊದಲೊಳ್ ತಂಬೆಲರ್ಗಾನೆ ಬೋದಣೆಗೆಗಂಪಂ ಬೀಜ್ಡೆಂ ಸುಗ್ಗಿ ಬರ್ಪುದನೀ ನಂದನಕಾನೆ ಮುಂದುದೆಗೆದಂ (ಜಗಾ. ೦೯-೬೭). [ ? ]

**ಬೋದನ** (ನಾ). ಒಂದು ಊರಿನ ಹೆಸರು ; P ಪಂಪನಿಗೆ ಆಶ್ರಯದಾತನಾಗಿದ್ದ ಅರಿಕೇಸರಿಯ ರಾಜಧಾನಿ. ಈಗಿನ ಆಂಧ್ರಪ್ರದೇಶ ಕರೀಂನಗರ ತಾಲ್ಲೂಕಿನ ಬೋಧನ: ಅಂತಾ ನೃಪತಿ ನಿಚ್ಚಲಯ್ಯೂ ಜಾನೆಯನವಗಾಹಮಿರಿಸುವಂ ಬೋದನದೊಳ್ (ಕಂಕಿರಾ. ೦-೦೭) ; ಬೋದನ ೭೦೦ಜಿಜ ಬಳಿಯ ಕಂಪಣ ೨೪ಜಿ ಮೊದಲ ಬಾಡಂ (ಶಾಂಲೀಚ್. ೦೬-೪ ; 1115). [?./ P ಮಹಾಭಾರತದಲ್ಲಿ ಬರುವ 'ಪೌದನ್ಯ' ಎಂಬ ನಗರದ ಹೆಸರಿನ ಸಾಮ್ಯವಿರುವುದು ಪರಿಶೀಲನಾರ್ಹವಾದುದು]

**ಬೋದಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮಂತು ಬೋಹಯ್ಯ ಗಣ್ಣಾಗೋವ ಪುಟಿವರ ಶೂಲ (ಎಕ. VIII. ತೀರ್ಥ. ೪೦೬-೮ ; 986). [ ಬೋದ? + ಅಯ್ಯ ]

**ಬೋದಿಗೆ, ಬೋದು₁, ಬೋದುಗೆ** (ನಾ). ಕಂಬದ ಮೇಲೆ ತೊಲೆಯನ್ನು ನಿಲ್ಲಿಸಲು ಅನುಕೂಲವಾಗುವಂತೆ (ಮರದಿಂದ ಅಥವಾ ಕಲ್ಲಿನಿಂದ) ಸಿದ್ಧಪಡಿಸಿದ ಸಾಧನ : ಪವಳದ ಜಂತೆಯೊಳಂ ಪದ್ಮರಾಗದ ಬೋದಿಗೆಯೊಳಂ . . . ಒಪ್ಪುವ ವಿವಾಹಗೇಹಮಂ ಸಮೆಯಿಸಿ (ಕಂಕಿರಾ. ೩-೬೯ ಕ) ; ಕಿಸುಗಲ್ಲ ಬೋದಿಗೆ ನವಮರಕತರತ್ನತೋರಣಂ ಪ್ರಾಕಾರಂ (ಸಂಕುಚಿತಾ. ೦೦-೯೫) ; ಚಂದ್ರಕಾಂತದ ಬೋದಿಗೆಗಳಿಂ ಇಂದ್ರನೀಲದ ನಾಗವಟ್ಟಿಗೆಯಿಂ. . .ಮಾಣಿಕದ ಪ್ರತಿಮೆಗಳಿಂದೊಪ್ಪುವ ಕೃತ್ರಿಮ ಚೈತ್ಯಾಲಯಂಗಳಂ ಕಣ್ಣಾಣಿವಿನಂ ನೋಡುತ್ತುಂ (ಧರ್ಮಾಮೃ. ೨-೦೯೩). **ಬೋದು₁**: ರತ್ನರಾಜಿಯ ಕೆಲಸದಿಂದ ರಾಜಿಪ ಕಂಬ ಬೋದು ತೊಲೆ ಪಲಗೆ ಸೂಸಕ ಲೋವೆಯಿಂದೊಪ್ಪಿ (ಚ್ರಿಕರಾ. ೦೯-೩೨) ; ವಜ್ರದ ಬೋದು ರನ್ನದೊಲೆ ಕುಟ್ಟಿಮನೀಲದ ಕೋಟಿಪಚ್ಚೆಯ ಮಪ್ಪಳಿಪಿಂದುಕಾಂತ ಫಲಕಂ (ಶೃಂಗ. ೦-೬೩). **ಬೋದುಗೆ** : ಇಂದ್ರನೀಲದ ಕಂಭ ವಜ್ರದ ಬೋದುಗೆ ಇಂದುಕಾಂತದ ಭಿತ್ತಿಯೊಳೆ . . . ಸುಂದರವಡೆಯ ಚಪ್ಪರವು (ಜಕಶಂಕಾಂ. ೦೭-೦೯) ; ಲಲಿತಪಚ್ಚೆಗಳ ತೊಲೆ ರನ್ನ ಬೋದುಗೆಗಳ ಪ್ರವಾಳಗಳಿಂದೆ ಮೇಲೆಸೆವ ಜಂತೆಗಳ್ . . . ಪೊಂಗದುಂಗಳಿಂ ಪೇಳಲಚ್ಚರಿಯಾದುದರಮನೆ (ತಂಪು. ೩-೯೮). [ದೇ.॥ ತಮಿ. ಪೋತಿಕೈ ; ಮಲ. ಪೋತಿಕ ; ತುಳು. ಬೋದಿಗೆ ; ತೆಲು. ಬೋದಿಯ, ಬೋದೆ]

**ಬೋದು₁** 'ಬೋದಿಗೆ' ನೋ.

**ಬೋದು₂** 'ಪೋದೆ' ನೋ.

**ಬೋದು₃, ಬೋದೆ** (ನಾ). ಒಂದು ಬಗೆಯ ಅಪ್ರಯೋಜಕವಾದ ಹುಲ್ಲು : ಬೋದು ಬೆಳೆದ ಹೊಲ ಹಾದೀಲಿದ್ದರೇನು, ಬೀದೀಲಿದ್ದರೇನು? (ಗಾದೆ). **ಬೋದೆ** : 'ಬೋದೆಸರ' ಪರಾ. [ ? ]

**ಬೋದುಗೆ** 'ಬೋದಿಗೆ' ನೋ.

**ಬೋದೆ** 'ಬೋದು₃' ನೋ.

**ಬೋದೆಸರ** (ನಾ). ಒಂದು ಬಗೆಯ ಜೊಂಡು : ಅಂಟುಕಾಮಿನಿಗಿಡ, ಬೋದೆಸರ (ಕೃಷಿ. ೬೨-೦೯೬೦). [ ← ತೆಲು. ಬೋದಸರ, ಬೊಡ್ಡಸರ ]

**ಬೋಧ** (ನಾ). ೧. ಕಲಿಸುವಿಕೆ ; ಬೋಧಿಸುವಿಕೆ. ೨. ಎಚ್ಚರ : ಸ್ಮೃತಿ : ಮುದುಕನನ್ನು ಸ್ವಲ್ಪ ತಂಪು ಮಾಡಿರಿ. ಅಂದರೆ ಬೋಧ ಬರುತ್ತದೆ (ತಡಕ. ೦೫೩) ; ರಾತ್ರಿಯಾಗುವಾಗ ಮತ್ತೆ ಬೋಧ ತಪ್ಪಿತು (ರಾಕಪ. ೦೨೯). ೩. ಅರಿವು ; ಜ್ಞಾನ ; ತಿಳಿವಳಿಕೆ : ಸರ್ವಾರ್ಥಸಿದ್ಧಿಯೊಳ್ ತೊಡರ್ದು ಬೋಧಂ ಭವ್ಯಸಂಸೇವ್ಯಮಾಯ್ತು (ಕುಕ್ಕೃಪು. ೦-೨೯): ಭರದಿಂದ ದೇಶಾವಧಿ ಬೋಧ ಪುಟ್ಟಿತು ಭರತೇಶ್ವರನ ಪುಣ್ಯಕೆಣೆಯು (ಗೂಟವುದೇ. ೦೩-೨೯). ೪. ವಿಚಾರ ; ಆಲೋಚನೆ. ೫. ಅರಳುವಿಕೆ ; ವಿಕಾಸ. ೬. [ಕಾವ್ಯಮಿ] ಸಂಚಾರಿಭಾವಗಳಲ್ಲಿ ಒಂದು : ಮತಿ ಲಜ್ಜೆ . . . ಬೋಧ . . . ಅಪಸ್ಮಾರಗಳೆಂಬ ೩೩ಮೂವತ್ತುಮೂಜು ಸಂಚಾರೀಭಾವಗಳಂ ಪರಿವರ್ಧಿಸಿ (ಖಿವೇ:೪. ೨೨೭). ೭. [ಛಂದ] ಒಂದು ಗಣದ ಹೆಸರು : ಮೂರು ಗುರು (— — —)ಇರುವ ಗಣ; ಮಗಣ: ಗುರುವೆರಡಾಗಿರೆ ದರ್ಶನ ಮೂಜಾಗಲ್ ಬೋಧ ನಾಲ್ಕುಮಾಗಲು ಚರಿತಂ (ಛಂದಶ್ಚಾ. ೫-೦೦.) [ಸಂ.]

**ಬೋಧಕ** (ನಾ). ಕಲಿಸುವವನು ; ತಿಳಿವಳಿಕೆಯನ್ನು ನೀಡುವವನು ; ಶಿಕ್ಷಕ : ಮೊದ್ದ ಸಂಗಕೆ ಸಲ್ಲ ಸದ್ದು ಧ್ಯಾನಕೆ ಸಲ್ಲ ಜದ್ದು ಬೋಧಕನಿಗೆ ಸಲ್ಲ (ಇಂತಾಕ. ೦೭೦-೪೩). [ಸಂ.]

**ಬೋಧದೃಷ್ಟಿ** (ನಾ). ಜ್ಞಾನದೃಷ್ಟಿ : ಜಗಮೆಲ್ಲಂ ನಿಜ ಬೋಧದೃಷ್ಟಿಯೊಳೆ ಕಾಣಲ್ ಬಂದುದು (ಜಗಾ. ೦-೬೩). [ಸಂ.]

**ಬೋಧನೆ**(ನಾ). ೧. ಕಲಿಸುವುದು ; ಹೇಳಿ ಕೊಡುವುದು : ಆ ಹಿರಿಯರ ಬೋಧನೆ ಮಕ್ಕಳ ಮೇಲೆ ಒಳ್ಳೆಯ ಪರಿಣಾಮ ಬೀರಿತು (ರೂಢಿ). ೨. (ಆಲಂ) ದುಷ್ಕಾರ್ಯಕ್ಕೆ ಚಿತಾವಣೆ ಮಾಡುವಿಕೆ : ಕೆಟ್ಟ ಕೆಲಸವನ್ನು ಮಾಡುವಂತೆ ಪ್ರೇರಿಸುವಿಕೆ : ಆ ದುಷ್ಟನ ಬೋಧನೆಯಿಂದ ಅರಿಯದ ಹುಡುಗರು ದುರ್ಮಾರ್ಗಕ್ಕೆ ಇಳಿದರು (ರೂಢಿ). [ಸಂ. ಬೋಧನ]

**ಬೋಧಾಳ** (ನಾ). (ಕರಾ) ಏನೂ ತಿಳಿಯದವನು ; ಮುಗ್ಧ : ಪ್ರಾಯದಲ್ಲಿ ಹಿರಿಯನು ; ಮಕ್ಕಳಂತೆ ಬೋಧಾಳನು (ಕೋದಂಡ. ೪೩); ಒಬ್ಬ ಮುಗನಿದ್ದಾನೆ ಅವನಿಗೆ— ಬೋಧಾಳ ಶಂಕರ (ಕಂಬಾಹು. ೨೫).
[ ಬೋಧ + ಹಾಳು (< ಪಾಟು)+ – ಅ₇ ]

**ಬೋಧಾಳು** (ನಾ). ಬುದ್ಧಿವಂತ : ನಾಡೆ ಮತ್ಸಾಮಿ ನಿನ್ನೊಳತಿಪ್ರೇಮ ಮನಪ್ಪುಕೆಯ್ವನದಱಿಂದಾನುಯ್ವೆನಾ [ತಾಣಕೀ]ಗಳೆನುತ್ತುಂ ನುಡಿದಂ ಮನಂಬುಗುವಿನಂ ಬೋಧಾಳು ಮೇಧಾವಿಳಂ (ಸುಕುಮಾ. ೦೫-೬೭). [ ಸಂ. ಬೋಧಾಲು]

**ಬೋಧಿ** (ನಾ). ೧. ಶ್ರೇಷ್ಠವಾದ ಅರಿವು ; ದಿವ್ಯಜ್ಞಾನ : ಉತ್ತಮ ದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾಭಮುಮೋಘಂ ದೊರೆಕೊಳ್ವುದಕ್ಕೆಮಗೆ (ಆದಿಪು. ೦೦-೬೦) ; ತಪದೊಳ್ ತನುವಂ ನಿಜಿಸಲಿರ್ದನಿಸುವಜಿತಮೆ ಪೆಜಿತಲ್ಲದುಮಲ್ತೆ ತಾನೆ ಬೋಧಿಯುಮಂ [ಜಾತಾಂ. ಮಯು]ಕ್ಕುಂ (ಅಜಿತ. ೬-೬೦) ; ದೀಕ್ಷೆಗೆ ಸುತಪಂ ಫಲಮೆನೆ ನೆಗೞ್ದುದದೆ ಬೋಧಿ ಫಲಂ (ಪುಷ್ಪ. ೦೩-೩೯). ೨. ಗೌತಮಬುದ್ಧನಿಗೆ ಉಂಟಾದ ಜ್ಞಾನೋದಯ : ಸಿದ್ಧಾರ್ಥನು ಬೋಧಿಯನ್ನು ಸಾಕ್ಷಾತ್ಕಾರ ಮಾಡಿಕೊಂಡು . . . ರಾಜಗೃಹಕ್ಕೆ ಬಂದನು (ಹಕ್ಕುಕು. ೬೪) ; ಬೋಧಿಯನ್ನು ಪಡೆದ ಬುದ್ಧನ ಕಣ್ಣಿಗೆ ಮನುಷ್ಯಜೀವಿತವೂ ಮನೋಹರವಾಗೇ ಕಂಡಿತು (ಶಾಂಂತಕ. ೦೨೦) ; ಬೋಧಿಯಾದ ನಂತರ ಸಿದ್ಧಾರ್ಥನು ವೃಕ್ಷದಡಿಯಲ್ಲಿ ಏಳುದಿವಸ ಚಲಿಸದೆ ಕುಳಿತಿದ್ದನು (ಪ್ರಪಾಇ. 1, ೨೩೫). ೩. ಒಂದು ಬಗೆಯ ಮರ ; ಅರಳಿ ; ಅಶ್ವತ್ಥ ; P ಈಗಿನ ಪಾಟ್ನಾನಗರದ ಬಳಿಯಿರುವ 'ಬುದ್ಧಗಯಾ' ಎಂಬಲ್ಲಿರುವ ವೃಕ್ಷ. ಗೌತಮಬುದ್ಧನು ಇದರ ಕೆಳಗೆ ಜ್ಞಾನೋದಯವನ್ನು ಪಡೆದನೆಂಬ ನಂಬಿಕೆಯಿದೆ : ''ಶ್ರೀವೃಕ್ಷಃ, ಪಿಪ್ಪಲಃ, ಅಶ್ವತ್ಥಃ, ಬೋಧಿಃ — ಈ ೪ ಅರಳಿ'' (ಹಲಾಯು. ೩೩-೯೩) ; ಸಿದ್ಧಾರ್ಥನು ಈ ಮರದಡಿಯಲ್ಲಿ ತಪಸ್ಸು ಮಾಡಿಯಲ್ಲವೇ ಬುದ್ಧನಾದದ್ದು ? ಮರಕ್ಕೂ ಬೋಧಿಯೆಂಬ ಹೆಸರು ಬಂದದ್ದು ? (ಶಾಸಗ. ೪೨). 'ಬೋಧಿವೃಕ್ಷ' ಪರಾ. [ಸಂ.]

**ಬೋಧಿದುರ್ಲಭಾನುಪ್ರೇಕ್ಷೆ** (ನಾ). [ಜೈನ] ಹನ್ನೆರಡು ಬಗೆಯ ಅನುಪ್ರೇಕ್ಷೆಗಳಲ್ಲಿ ಒಂದು : ದುರ್ಲಭಬೋಧಿಯನಱಿದು ದೃಢಧರ್ಮರಾಗಲವೇಟ್ಕುಮೆಂಬ ಚಿಂತೆ ಬೋಧಿದುರ್ಲಭಾನುಪ್ರೇಕ್ಷೆ (ಶ್ರಾತಳ. ೦೯೭-೦೭). 'ದ್ವಾದಶಾನುಪ್ರೇಕ್ಷೆ' ಪರಾ.

[ಸಂ. ಬೋಧಿದುರ್ಲಭಾನುಪ್ರೇಕ್ಷಾ]

**ಬೋಧಿವೃಕ್ಷ** (ನಾ). = ಬೋಧಿ ೩ : ರಾಜನು. . .ಬೋಧಿವೃಕ್ಷದ ಬಳಿಗೆ ಆಗಾಗ ಹೋಗಿ ಅಲ್ಲಿ ತನ್ನ ತಪ್ಪಿಗಾಗಿ ಪರಿತಾಪ ಪಡುತ್ತಿದ್ದ (ಶ್ರವಾತ. I. ೦೭೬). [ಸಂ.]

**ಬೋಧಿಸತ್ತ್ವ** (ನಾ). ೧. ಬುದ್ಧ. ೨. [ಬೌದ್ಧ] ''ಅರ್ಹತನು ನಡೆಸಬೇಕಾದ ಶೀಲಗಳನ್ನು ಕಾಪಾಡಿಕೊಂಡು, ಮುಂದಿನ ಜನ್ಮಗಳಲ್ಲಿ ಬುದ್ಧನಾಗುವ ಯೋಗ್ಯತೆಯನ್ನು ಸಂಪಾದಿಸಿ. ಬುದ್ಧನಾಗುವ ಸತ್ತ್ವವುಳ್ಳವನು'' (ಬುದ್ಧಶ. ಕೋಶ. ೨೦೯) : ಆ ಸಮಯದಲ್ಲಿ ಬೋಧಿಸತ್ತ್ವನು ಅವನಿಗೆ ಧರ್ಮ ಅರ್ಥಗಳನ್ನು ಬೋಧಿಸುತ್ತಿದ್ದನು (ಬುದ್ಧಶ. ೩೩); ಅರ್ಹತರಾಗುವುದು ಎಲ್ಲರಿಗೂ ಸುಲಭವಲ್ಲ. ಆದರೆ ಬೋಧಿಸತ್ತ್ವನಾಗುವುದು ಎಲ್ಲರಿಗೂ ಸುಲಭ. ಬೋಧಿಸತ್ತ್ವನಾಗಿ ಲೋಕದ ದುಃಖವನ್ನು ತಾನು ಪರಿಹರಿಸುವುದಕ್ಕೆ ಎಲ್ಲರೂ ಯತ್ನಿಸಬಹುದು (ಭಾರಿಧ. ೨೦೫).

[ಸಂ.]

**ಬೋಧಿಸತ್ವ** (ನಾ). = ಬೋಧಿಸತ್ತ್ವ ೨ : ಚೈತ್ಯಗಳಲ್ಲಿ ಸೊಗಸಾದ ಬುದ್ಧನ ಮತ್ತು ಬೋಧಿಸತ್ವನ ಪ್ರತಿಮೆಗಳಿವೆ (ಭಾರಿಧ. ೯೭೭) : ರಥದ ನಾಲ್ಕು ಕಡೆಯೂ ನಾಲ್ಕು ಗೂಡುಗಳನ್ನು ಮಾಡಿ ಅವುಗಳಲ್ಲಿ ಬೋಧಿಸತ್ವನಿಂದ ಸೇವೆಯನ್ನು ಕೈಗೊಳ್ಳುತ್ತಾ ಕುಳಿತಿರುವಂತಹ ಬುದ್ಧನ ವಿಗ್ರಹಗಳನ್ನು ಇಡುತ್ತಾರೆ (ಶ್ರವಾತ. I. ೦೭೨).

[ <ಸಂ. ಬೋಧಿಸತ್ತ್ವ. / ಪಾಲಿ. ಪ್ರಾ. ಬೋಧಿಸತ್ತ]

**ಬೋಧಿಸು** (ಕ್ರಿ). ಕಲಿಸು ; ಹೇಳಿಕೊಡು : ಸರ್ವಗುಪ್ತಮುನಿಗಳಂ ಕಂಡು . . . ಸಂಸಾರಶರೀರಭೋಗನಿರ್ವೇಗಮಂ ಬೋಧಿಸೆ (ಶಾಂತಿಪು. ೯-೩೩ ಪ) ; ಸನ್ಮಾರ್ಗದಿಂ ಸಲ್ವ ಸಾಧುಗಳೆಮ್ಮಂ ದಯೆಯಿಂದೆ ಬೋಧಿಸುತಮರ್ಕೆಂಮುಂ ಜನೇಂದ್ರೋಕ್ತಿಯಂ (ಸುಕುಮಾ. ೦-೩) ; ಹಡೆದುಂಬ ಸೂಳೆಯಂತೆ ಧನವುಳ್ಳವರನಱಿಯಱಿ ಬೋಧಿಸಲು ಮುನ್ನ ನಾನಱಿಯೆನಯ್ಯಾ (ಬಸವ. ೧೦೨). [ಬೋಧೆ + —ಇಸು]

**ಬೋಧೆ** (ನಾ). ೧. ತಿಳಿಯುವಿಕೆ ; ಅರಿಯುವಿಕೆ. ೨. ಜ್ಞಾನ ; ಅರಿವು ; ತಿಳಿವು : ನಿಷ್ಕುರಗಾದಿಯೊಳಗಿಹರಿಂಗೆ ಪೇಳದಿರಾದಿಗಗನಾನಂದಬೋಧೆಯಿದ (ಗಗನಾ. ೩-೨). ೩. ಬುದ್ಧಿ ; ತಿಳಿವಳಿಕೆ. ೪. ಆಲೋಚನೆ. ೫. ಅರಳುವಿಕೆ ; ವಿಕಸನ. ೬. ಎಚ್ಚರ ; ಸ್ಮೃತಿ ; ಜಾಗೃತಿ : ಸಂಕಣ್ಣನಿಗೆ. . . ಒಂದೆರಡು ದಿನಗಳಲ್ಲಿ ಜ್ವರ ಬರತೊಡಗಿತು. ಬೋಧೆಯೇ ಇಲ್ಲವೆನ್ನುವಷ್ಟು ಜ್ವರ (ಯುಗಯು. ೮೦). ೭. ಚೈತನ್ಯ. ೮. ಕಲಿಸುವಿಕೆ ; ಶಿಕ್ಷಣ ; ಬೋಧನೆ : 'ಬೋಧಿಸು' ಪರಾ.

[ಸಂ. ಬೋಧ]

**ಬೋನ₁**, ಬೋಹಣ (ನಾ). ೧. ಅನ್ನ ; ಆಹಾರ : ಪೊನ್ನ ಮಡಕೆಯೊಳ್ ಬೋನಮನೊಡ್ಡಿ (ವಡ್ಡಾರಾ. ೬೯-೦೩) ; ಎತ್ತಿದ ಬೋನದೊಳ್ ಕಲ್ಯಾಣಾಮೃತಾಹಾರಮನಾರೋಗಿಸಿ (ಸಂಶಠಾ. ೩-೭೯ ಪ) ; ನಿನ್ನ ಪಾಱಿಹೊಡಲ ನೆತ್ತರ್ ಪರಿತಿನಿವಡೆಗೆ ಪಗಲ ಬೋನದೊಂದು ಕಟಕ್ಕಂ (ರಾಜಶೇಖ. ೬೬-೨೦). ೨. ಅಡುಗೆ ಮಾಡುವಿಕೆ : 'ಬೋನಗಾಱ' ಪರಾ. ೩. ನೈವೇದ್ಯ ; ಎಡೆ : ಉಂಬ ಜಂಗಮ ಬಂದಡೆ ನಡೆಯೆಂಬರು ಉಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯ (ಬಸವ. ೦೯೯) ; ವೇಲಾಪುರಿಯ ಶ್ರೀಚೆಂನೆಯನ ಬೋನವ ಅವಸರದ ಹರಿವಾಣದ ನಯಿವೇದ್ಯಕೆ (ಎಪಿಕ. ೦೯೩೯. ೯-೬; 1482). ೪. ಮಿಂಡ್ಣೆ ; ಮುದ್ದೆ : ಅನ್ನ ಬೇದದ್ದು ಹೆಚ್ಚಾಗಿ ಬೋನವಾಗಿದೆ (ಪುರಕು. ೨೨). ೫. ರಾಶಿ ; ಸಮೂಹ : ಸಣ್ಣ ಸೀವಗೆಯ ಮೆದೆ ಎರೆಯಪ್ಪದಡಕಿಲಿಡ್ಡಲಿಗೆಗಳ ಬೋನ ದೋಸೆಯು ಲಗ್ಗೆ (ಹಬ್ಬಗೀ. ೬-೨೫). ೬. (ಚೆನ್ನಾಗಿ ನಾದ ಕೊಡುವುದಕ್ಕಾಗಿ) ತಬಲ ಅಥವಾ ಮದ್ದಳೆಯ ಚರ್ಮದ ಮೇಲೆ ದುಂಡಾಗಿ ಬಳಿಯುವ ಸರಿ : ಎರಡು ಕಡೆಗೂ ಚರ್ಮದ ಪೊರೆಗಳನ್ನು . . . ಬಿಗಿದು, ಎಡಕ್ಕೆ ಬೋನವನ್ನೂ, ಬಲಕ್ಕೆ ಕರಣೆಯನ್ನೂ ಹಾಕಿ ನುಡಿಸುತ್ತಾರೆ (ಸಂಗೀತಶಾ. ೦೨೦) ; ಯಕ್ಷಗಾನದ ಮದ್ದಲೆಯು ಗಾತ್ರದಲ್ಲಿ ಇನ್ನೂ ಚಿಕ್ಕದು. ಇದರ ತೊಗಲಿಗೆ ನಿತ್ಯವೂ ನಿತ್ಯ 'ಬೋನ' ವನ್ನು ಹಚ್ಚಬೇಕು (ಯಕ್ಷಬ. ೦೦೦).

**ಬೋಹಣ** : ೬. ಚಂದ್ರಮಂಡಳದ ಕಳಂಕಮನುದ್ದುಮಂತೆ ಲೋಹಚಕ್ರದಿಂ ಪಱಿಯ ಬೋ[ಶಾಕಂ. ಬಾ]ಹಣಮನುದ್ದಿ ಭಾರತಿಯ ಮುಖಕಮಲದೊಳ್ ಕಸ್ತುರಿಯ ಬೊಟ್ಟನಿಡುವಂತೆ ಪೊಸ ಬೋಹಣಮಂ ಪತ್ತಿಸಿ (ಧರ್ಮಾಶ. ೨-೨೩ ವ) ; ಮಣಿದೆತ್ತಿ ನೋಡಿ ಬಾರಿಯ ಕಣ್ಣನೆಡಕೆ ಬೋಹಣದ ಹದನಱಿದಿಕ್ಕಿ (ಶೀರಮ. ೦೦-೩೩). [<ಸಂ. ಭೋಜನ./ತಮಿ. ಪೋಣಮ್, ಪೋನಕಮ್; ತುಳು. ಬಜನ, ಬೋನ : ತೆಲು. ಬೋನ./ ಮರಾ. ಬೋನ, ಬೋವಣ, ಬೋಹಣ]

**ಬೋನ₂** (ನಾ). ಅಡುಗೆ ಮಾಡಲು ಬಳಸುವ ಒಂದು ಬಗೆಯ ಪಾತ್ರ : (೧). 'ಬೋಸಿ' ಪರಾ. [ ? ]

**ಬೋನಂಗಾರೆ**, ಬೊನೆಗಾರೆ, ಬೋನಗಾರೆ (ನಾ). ಒಂದು ಬಗೆಯ ಕಾರೆಗಿಡ : ಲವಣಂ ಪಿಪ್ಪಲಿ ಬಜೆ ಸಾಸಿವೆ ಬವ(ಬೋ)ನಂಗಾರೆ ಶುಂಠಿ . . . ಎನಿಪ್ಪಿವಱಿಂದಂ ನಸ್ಯವನಶ್ವಾವಳಿಗೆ ಮಾಡಿ (ಅಶ್ವಶಾಸ. ೯-೨೨೮). **ಬೊನೆಗಾರೆ** : "ಮುಗ್ಗ, ಬೊನೆಗಾರೆ, ಬೂದುಕಾರೆ" (ಸಸ್ಯಪ. ೬೪) ; ಬೊನೆಗಾರೆ, ಬುಡುಕಾರೆ, ಮುಗ್ಗ (ವೈಶಿಗ. ೩೯-೭೬೪). **ಬೋನಗಾರೆ** : ಉಪ್ಪು, ಹಿಪ್ಪಲಿ, ಬಜೆ, ಸಾಸಿವೆ, ಬೋನಗಾರೆಯ ಕಾಯ್, ಶುಂಠಿ. . . ಇವಂ ಚೂರ್ಣಮಂ ಮಾಡಿ . . . ಕಲಸಿ ನಸ್ಯಂ ಮಾಡುವುದು (ಅಶ್ವಶಾಸ. ೯-೨೨೮ ಟೀಕು) ; ಬೋನಗಾರೆಬೇರಂ ತುಪ್ಪದಿಂದ ಅರೆದು ನುಂಗಲು ಮುಟ್ಟುಕಟ್ಟು ಗುಣವಾಗುವುದು (ವಿವೈಪ. ೦೦೭). [ಬೋನ₀ + ಕಾರೆ₁]

**ಬೋನಗಾರ** 'ಬೋನಗಾಱ' ನೋ.

**ಬೋನಗಾರೆ** 'ಬೋನಂಗಾರೆ' ನೋ.

**ಬೋನಗಾಱ**, ಬೋನಗಾರ (ನಾ). ಅಡುಗೆ ಮಾಡುವವನು; ಬಾಣಸಿಗ : 'ಬೋನಗಾರ್ತಿ' ಪರಾ. **ಬೋನಗಾರ** : ದೇಸಾಯರ ಅಡಿಗೆಗಾಗಿ ಒಬ್ಬ ಬೋನಗಾರನೂ ಬಂದಿದ್ದಾನೆ (ಜನಪ. ೦೯೨).

[ಬೋನ₁ + —ಕಾಱ]

**ಬೋನಗಾರ್ತಿ** (ನಾ). ಅಡುಗೆ ಮಾಡುವವಳು; ಬಾಣಸಗಿತ್ತಿ : ನಾನಾಭಕ್ಷ್ಯಭೋಜ್ಯಂಗಳಧಿಕವಾಗಿ ಬೋನಗಾರ್ತಿಯರ ಕೈಯಿಂದೆ ಭೂನಾಥಗುಣಬಡಿಸಿ (ವೋಹಿತ. ೦೦-೯೯) ; ಮಾರುವದು ನಿನ್ನ ಬೋನಗಾರ್ತಿಯರಿಗೆ ಮಾರುವದು ನಿನ್ನ ನೀರ ಪೊತ್ತವರಿಗೆ (ಕೋಕ್ಷಿರಾ. ೭೦-೩).

[ಬೋನಗಾಱ + —ತಿ₁ (<—ಇತ್ತಿ)]

**ಬೋನಗಿತ್ತಿ**, ಬಾನಗಿತ್ತಿ (ನಾ). = ಬೋನಗಾರ್ತಿ : ಭರದ ಜವ್ವನದತಿವಿಲಾಸದ ಬೋನಗಿತ್ತಿಯರು ಮರಕಟಾಕ್ಷದ್ಯುತಿಯ ಪಸರಿಸುತುತುಱುಮುಂದದಿ ಸದ್ಯೋಘೃತವನಭಿಗರಿಸುತಿರ್ದರು (ಸವತ್ಸ. ೦೯-೬) ; ಕೆತ್ತಿದ ರತ್ನಾಭರಣಭೂಷಿತ ಬೋನಗಿತ್ತಿಯರ್ಸುರಪ್ಪಾರಿಗಳಿಗೆ ಅತ್ಯಧಿಕಾರದಿ ನೀನಿರ್ಪುದು (ಮೋಹತ. ೦೦-೯೨); ಅಷ್ಟರಲ್ಲಿ ಬೋನಗಿತ್ತಿ ಮಾಣಿಕದ ಬಂಗಾರದ ಹರಿವಾಣವನ್ನು ಇಟ್ಟು ಸುತ್ತಲು ನಾಲ್ಕು ಬಂಗಾರದ ಬಟ್ಟಲುಗಳನ್ನು ಇಟ್ಟಳು (ಯುರುಂಡ. ೦೯೯). **ಬಾನಗಿತ್ತಿ** : ಲಗ್ನ ಆದಾಗಿನಿಂದ ಬಾನಗಿತ್ತೀ ಹಾಂಗ ದುಡದು ದುಡದು ಸತ್ತೆ (ಚಾಂದಾಡು. ೫); ಛಲರೇ ಬಾನಗಿತ್ತಿಯೆಂದರೆ ಮೈಯೆಲ್ಲಾ ಮುಸಿಮಾಡಿಕೊಂಡಳು (ನಾಟ). [ಬೋನ₁ + – ಗಿತ್ತಿ]

**ಬೋನಗುಡಿಕೆ** (ನಾ). ಆಹಾರವನ್ನು ತುಂಬಿದ ಪಾತ್ರೆ : ಬೋನ ಗುಡಿಕೆಗಳಾ ಮುದ್ರೆಯಿಕ್ಕಿದ ಚೀರಗಟ್ಟುಗಳ . . . ಹೊಱೆಯನು ಹೆಗಲೊಳಗಿಕ್ಕಿ ನಡೆವರೊಪ್ಪಿದರು (ಶ್ರೀಪಾಂ. ೦೩-೮೮) ; ಮದನನೃಪಗೆಂದು ಸೇರಿಸಿ ಬಯ್ತ ಬೋನಗುಡಿಕೆಯ ತೆಱದಿ ಸಾಲ್ವಿಡಿದ ಪನಸತತಿ ಮೆಱೆದವು (ತೀರಪು. ೭-೧೦) ; ಮಾನಿನಿಯರಿಗಾತನನುಜನ ಸತಿಯರ್ಗೆ ಬೋನಗುಡಿಕೆಗಳೆಯ್ದಿದುವು (ಶರತ. ೪೦-೨೩). [ಬೋನ$_1$+ಕುಡಿಕೆ$_1$]

**ಬೋನಗೋಂಟಿಗೆ** (ನಾ). ಅಡುಗೆಯ ಕೋಣೆ : ನೀಗುತ್ತಮಾಗಿಂದಣದ ಭಾರದೋಲಟ್ಟಿ ಸಾಗಿಸಿದ ಬೋನಗೋಂಟಿಗೆಗಾಗ ರಣದೇವಿಗಾಗುತಿಹ ಭಕ್ಷರಸರುಧಿರಸ್ಥಿಖಂಡಕಂ ತಲೆಗಳೊಲೆಗುಂಡುಗಳನು (ಜನಮು. ೦೨-೨೦). [ಬೋನ$_1$+<ಗೊಂಟು]

**ಬೋನವಿಡು** (ಕ್ರಿ). ಊಟವನ್ನು ಬಡಿಸು : ಪುಟ್ಟಂ ಸಟ್ಟುಗಮಂ ಕೊಂಡಟ್ಟಾಱಿಸಿ ಬೋನಮಿಟ್ಟು ಬಂದೆಯೊ (ಗದಾಯು. ೭-೩೬). [ಬೋನ$_1$+ಇಡು$_1$]

**ಬೋನವಟ್ಟಿಗೆ** (ನಾ). ಊಟಕ್ಕೆ ಕುಳಿತುಕೊಳ್ಳುವ ಮಣೆ,-ಪೀಠ (?): ಒಡನೆ ನಾಕೆರಡೆತ್ತು ಕುದುರೆಯ ಮಡಕೆ ಚರುವಿಗೆ ಬೋನವಟ್ಟಿಗೆ ನಿಡಿಯ ಹರಿವಾಣಗಳ (ಕೊರಾ. ೩. ೨೦೬). [ಬೋನ$_1$+ಪಟ್ಟಿಗೆ]

**ಬೋನವೆತ್ತು** (ಕ್ರಿ). ಆಹಾರವನ್ನು ಸಿದ್ಧಪಡಿಸು ; ಊಟವನ್ನು ಸಿದ್ಧಗೊಳಿಸು : ಮಡದಿಗೆ ಬೋನವೆತ್ತುವೆಡೆಯಾಡುವ ಬಡ್ಡಪ . . . ವಿಳೆಯಮಂ ತೆಗೆದೀವ ದಂದುಗಂ ತೊಡರೆ ಮನಂಗೊಳಲ್ ನೆರೆದರಿಂದ್ರ ಲತಾಂಗಿಯರನ್ನಮಾಸದೊಳ್ (ಪುತ್ರಕೃ. ೯-೮೬). [ಬೋನ$_1$+ಎತ್ತು$_1$]

**ಬೋನವೇಳಿಗೆ** (ನಾ). ಅಡುಗೆಮಾಡುವ ಪದಾರ್ಥಗಳು ತುಂಬಿರುವ ಬುಟ್ಟಿ : ಅನ್ನಗಂ ಭೀಮಸೇನನುಂ ಬೋನವೇಳಿಗೆಯುಂ ಸಟ್ಟುಗಮುಂ ಮನೊರ್ವ ಪರಿಚಾರಕನಿಂ ಪಿಡಿಯಿಸಿಕೊಂಡು ಬಂದು (ಪಂಪಭಾ. ೮-೩೩ ವ). [ಬೋನ$_1$+ವೇಳಿಗೆ (<ಪೆಟ್ಟಿಗೆ)]

**ಬೋನಸ್ಸು** (ನಾ). ಸಾಮಾನ್ಯವಾಗಿ ಕೈಗಾರಿಕೋದ್ಯಮಗಳಲ್ಲಿ ಲಾಭದ ಗಳಿಕೆ ಹೆಚ್ಚಾದಾಗ ಕೆಲಸಗಾರರಿಗೂ ಶ್ರಮಜೀವಿಗಳಿಗೂ ವೇತನದ ಜೊತೆಗೆ ಉಚಿತವಾಗಿ ಕೊಡುವ ಲಾಭದ ಒಂದು ಭಾಗ,- ಅಂಶ : ಆತನು ಸತ್ತುಹೋಗಿದ್ದಲ್ಲಿ ಅಂಥಾ ಬೋನಸ್ಸಿಗೆ ಬಾಧ್ಯರೆಂದು ಆತನು ನೇಮಿಸಿದವರಿಗೆ . . . ಸಂದ ಯಾವುದಾದರೂ ಬೋನಸ್ ಮೊಬಲಗು (ಗ್ರಾಚುಕಾ. ೩೬) ; ಮೂರು ತಿಂಗಳ ಬೋನಸ್ಸು ಸಿಗಲೇಬೇಕು (ಕೃಕಾಳ. ೦೪). [← ಇಂ. Bonus]

**ಬೋನಾಶಿ** 'ಬವನಾಶಿ' ನೋ.

**ಬೋನಾಸಿ** 'ಬವನಾಶಿ' ನೋ.

**ಬೋನಿಕ್ಕು** (ಕ್ರಿ). ಪ್ರಾಣಿಗಳನ್ನು ಹಿಡಿಯುವ ಸಾಧನವನ್ನು ಒಡ್ಡು : ಮಂಗ ಹೌದಲ್ಲ, ಒಡೆಯರೆ. ಮಂತ್ರಕ್ಕೆ ಬರದೇ ಇದ್ದರೆ ಬೋನಿಕ್ಕೋದು (ಜಕರಾ. ೩೬೮). [ಬೋನು+ಇಕ್ಕು]

**ಬೋನಿಗ** (ನಾ). ಪ್ರಾಣಿಗಳನ್ನು ಹಿಡಿಯುವ ಸಾಧನವನ್ನು ಒಡ್ಡುವವನು : ನೆಲೆಯುನಂಬಿಗ ಬಲ್ಲ ಬಲೆಯ ಬೋನಿಗ ಬಲ್ಲ (ಸರ್ವಜ್ಞ. ೦೯೦೨). [ಬೋನು +-ಇಗ]

**ಬೋನು** (ನಾ). ೧. ಪ್ರಾಣಿಗಳನ್ನು ಹಿಡಿದಿಡುವ ಸಾಧನ; ಪಂಜರ; ಗೂಡು : ಕಸ್ತೂರಿಮೃಗಂಗಳಂ ವಿಸ್ತಾರವಾಗಿ ಪಿಡಿದು ಬೋನುಗಳಂ ಕೂಡುತ (ಸೌಗಂಧಿ. ೩೩-೦೩); ಅನೇಕ ನಮೂನೆಯ ಇಲಿ ಹಿಡಿಯುವ ಬೋನುಗಳಿವೆ (ಅಮುಸಾ. ೪೮). ೨. (ಆಲಂ) ಇತರರನ್ನು ಪೇಚಿಗೆ ಸಿಕ್ಕಿಸುವ ಉಪಾಯ : ತಾನು ಒಡ್ಡಿದ ಬೋನಿಗೆ ಸುನಂದ ಬಿದ್ದಿದ್ದಾಳೆ (ರೂಪಿಟ್ಟ. ೦೦೭).
[ದೇ.॥ ತಮಿ. ಪೊನ್; ತುಳು. ಬೋಣ, ಬೋನು; ತೆಲು. ಬೋನು]

**ಬೋಬಾಟ** 'ಬೋಭಾಟೆ' ನೋ.

**ಬೋಭಾಟೆ**, ಬೋಬಾಟ (ನಾ). ತಕರಾರು ; ಬೊಬ್ಬಾಟ : ಇನ್ನು ಮುಂದೆ ಇಂಥಾ ಪ್ರಕಾರದ ಬೋಭಾಟೆಗಳು ಬರಲಿಕ್ಕಿಲ್ಲವೆಂದು ನಾವು ಬಹಳ ಹವಣಿಸುತ್ತೇವೆ (ಮುಂಬಿವ್ಯಾ. ೯೩). **ಬೋಬಾಟ** : ನಮ ಮನಿಗಿ ಬಂದ್ರ ಬೋಬಾಟ ಆಗುವದು ತುರ್ತ (ಕನ್ನಪಾ. ೬೨). 'ಬೊಬ್ಬಾಟ' ಹೋ.
[←ಮರಾ. ಬೋಭಾಟ, ಬೋಭಾಟಾ]

**ಬೋಯ**, ಬೋಯಿ, ಬೋವ, ಬೋವಿ$_1$, ಬೋವು$_1$ (ನಾ). ೧. (ಇತರರಿಗಾಗಿ ಅಡುಗೆ ಮಾಡುವುದು, ಸಾರಥ್ಯಮಾಡುವುದು ಇತ್ಯಾದಿ) ಸೇವೆ ಮಾಡುವವನು ; ಸೇವಕ ; ಪರಿಚಾರಕ : ಅಲ್ಲಿ ಬಸದಿಯ ಕಸಂಗೆ(ಗ)ಳೆವ ಬೋಯ[ಪ]ದ್ದಂಗೆ ಪಾಗವೊಂದು (ಎಇ. IX, ೨೬೩-೦೦೨; 1117). 'ಬಂಡಿ$_1$' ಪರಾ. ೨. ಬೆಸ್ತ ; ಮಿನುಗಾರ : ಬೆಸ್ತ, ಭಾದೆಲ, ಬೋಯ (ತುಳುನಾ. ೦೬೩); ಬಲೆಯನ್ನು ಬೀಸಿ ಮೀನು ಹಿಡಿದರೆ "ಲೊ ಬೆಸ್ತ, ಲೊ ಬೋಯಿ" ಎಂದು ಅವನನ್ನು ಅವಮಾನ ಪಡಿಸುತ್ತಿದ್ದರು (ಪುಟ್ಟಪ. ೨೦). ೩. ಕೆಲವು ವ್ಯಕ್ತಿಗಳ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ; P ಇದು ಸಂಸ್ಕೃತದ 'ಭೋಜಕ' ದಿಂದ ಬಂದಿದ್ದು, 'ಬ್ರಾಹ್ಮಣ' ಎಂಬ ಅರ್ಥವಿದೆಯೆಂದು ಕೆಲವು ವಿದ್ವಾಂಸರ ಅಭಿಪ್ರಾಯವಿದೆ. ತೆಲುಗಿನಲ್ಲಿ ಈ ಶಬ್ದಕ್ಕೆ 'ಬ್ರಾಹ್ಮಣ' ಎಂಬ ಅರ್ಥವಿದ್ದು, ಶಾಸನಗಳಲ್ಲಿ ಪ್ರಯೋಗ ವಾಗಿದೆ ಎಂಬ ಸೂಚನೆಯೂ ಇದೆ : ಸಿಂಗಬೋಯಂ ಮಾಡಿದ ಅಗ್ರುಂ ಒನ್ದು (ಕೆಇ. III-i, ೧-೭; ಕು. 1200). 'ಬೊಪ್ಪಬೋಯ', 'ಮಂದುಬೋಯ' ಪರಾ. ೪. ಕಲ್ಲುಕುಟುಕರ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ : (೬). **ಬೋಯಿ** : ೫. ಪಲ್ಲಕ್ಕಿಯನ್ನು ಹೊರುವವನು : ಭರತಚಕ್ರಿಯ ಪೌತ್ರ ಬೋಯಿಗಳಿಗೆ ಸ್ವರ್ಗ (ಶರತ. ೭೭-೦೩೩); ನಿಮಗೆ ಪಾಲ್ಕಿ, ಬೋಯಿಗಳನ್ನು ಕರೆಯಿಸಿ ಕೊಟ್ಟು ಕಳುಹುವೆನು (ದೇವೀತಾ. ೧೩೭). **ಬೋವ** : ೧. ಲಂಚಮಿತ್ತುಂ ಪಿರಿದುಂಬರು ಬೆಸದ ಬೋವರಟ್ಟಡುಗೆಗಳಂ (ಸಮಶ. ಅಮುದಂ. I, ೦೪-೨೪); ದೇವರಿಗೆ ಬಿಟ್ಟ[ಸೀಮೆ]ಸರ್ವ್ವಮಾನ್ಯವಾಗಿ ಬೋವಂಗೆ ಬಿಟ್ಟ ಮತ್ತ ೨ (ಸೌಇಇ. XX, ೬೭-೦೮; 1107) ೨. ಬೋವರ್ಕಳಿಂದಿವರ ಮದವ ಮುಱಿಸುವೆವೆಂದು ಆವೂರ ನೆರೆಹೊರೆಯ ಬಬ್ಬಿಲರನೊಡಗೂಡಿ. . . ಕಳುಹಿದ ರಥಮರು (ಸಿದ್ಧರಾ. ೩-೦೨). 'ಬಂಡಿ$_1$' ಪರಾ. **ಬೋವಿ$_1$** : ೫. ಪಲ್ಲಕ್ಕಿ ಹೊರುವ ಉದ್ಯೋಗದಿಂದ ಬೋವಿ ಎಂಬುದಾಗಿಯೂ ಕರೆಯಲ್ಪಡುತ್ತಾರೆ (ತುಳುಪಾ. ೨೨೪): ಈ ಬಡ ಬೋವಿಗಳು ಬಿಟ್ಟಿಯ ಹಿಡಿದು ದಮ್ಮು ಹತ್ತುವಂತೆ ಓಡಿಸುತ್ತಿರಲು (ಶಾಮ್ರಕ. ೦೪೩). ೬. ಹರಿಗೋಲನ್ನು ನಡೆಸುವವನು; ಅಂಬಿಗ : ಹರುಗೋಲು ಹಾಕುವ ಬೋವಿಗಳಿಗೆ (ಎಕ. VIII, ತೀರ್ಥಹ. ೦೩೭-೨೦೦; 1702). **ಬೋವು$_1$** : ೧. ತಿಱುವಂಗಡಿ ೧ ಮತ್ತಮಂಗಡಿಗಳೊಳ್ಪಣ ೧ . . . ಜಗತಿಯ ಬೋವುಗಳೊಳ್ಪಣ ೧ (ಇಆ. V. ೩೪೩-೩೨; 1093).
[ದೇ.॥ ತಮಿ. ಪೋಯಿ, ಪೋಕಿ; ಮಲ. ಬೋಯನ್ ; ತುಳು. ಬೋಯಿ, ಬೋವಿ; ತೆಲು. ಬೋಯಿ./ಮರಾ. ಭೋಈ]

**ಬೋಯಿ** 'ಬೋಯ' ನೋ.

**ಬೋಯಿಕೆ** (ನಾ). (ಸಾರಥ್ಯ ಮಾಡುವುದು ಮುಂತಾದ) ಸೇವೆ ಮಾಡುವಿಕೆ; ಪರಿಚಾರಿಕೆ. 'ಬಂಡಿ$_1$' ಪರಾ. [ಬೋಯ +-ಇಕೆ]

**ಬೋಯಿಗ** (ನಾ). ಒಬ್ಬಾತನ ಹೆಸರು : ಕೋಣೆಯ ಗಂಗನ ಮೊತ್ತ ಮೆಲ್ಲಮಂ ಬೆದಱುವಿನಂ ಕೆರಳ್ಚಿ ತ-ಟ್ಟಲಾಳ್ಗಳನಿಕ್ಕಿ . . . ಅದಟ ನಳುಕ್ಕೆಯುಂ ಮೆಱೆದು ಸಾವುದು ಬೋಯಿಗನನ್ನಿಳಾಗ್ರದೊಳ್ (ಎಕ. II, ೦೩೮-೦೪ ; ಕು. ೨40). [ ? ]

**ಬೋಯಿತಿ**, ಬೋವಿತಿ (ನಾ). ಅಂಬಿಗರ ಜಾತಿಗೆ ಸೇರಿದವಳು: ವ್ಯಾಸ ಬೋಯಿತಿಯ ಮಗ (ಶಸ. ೫೯೦). **ಬೋವಿತಿ :** ಜನಿಸಿದನು ಬೋವಿತಿಯಲ್ಲಿಯಾ ವ್ಯಾಸನಾಮದಿಂದ (ಏಕ್ಕೃ. ೬-೧೧-೬೪).
[ ಬೋಯ + —ಇತಿ₁ (< —ಇತ್ತಿ) ]

**ಬೋಯ್ಗ್ನವರ್ಮ** (ನಾ). ಒಬ್ಬಾತನ ಹೆಸರು : ಶ್ರೀ ಮಂದಾಳು ವರ[ಸ]ರ್ ಬೋಯ್ಗ್ನವರ್ಮರ ನಾಟು ಮುದಿಮೆಯು[ಳ್] . . . ಸುಂಕಮರ್ಕ್ಕದಾಸ ಕಾದರ್ (ಎಇ. IX, ೩೦-೩; ೮೦೦).
[ಬೋಯ್ಗ ? + ವರ್ಮ₁ ]

**ಬೋರ್** (ಅ). ಒಂದು ಅನುಕರಣಾವ್ಯಯ : 'ಬೋರಾಡು' ಪರಾ.

**ಬೋರ₁** (ನಾ). ೧. ಮಾಸಲುಗೆಂಪು ಬಣ್ಣ : 'ಬೋರಗುದುರೆ' ಪರಾ. ೨. ಮಾಸಲುಗೆಂಪುಬಣ್ಣದ ಕುದುರೆ : " ತುರಗವರ್ಣಂ . . . ಬಿಳಿದುಮಾಗೊರೆದ ಕೆಂಪಿರೆ ಜನ್ಮನದು ಮಾಸೆ ಬೋರಸರುಣಂ ಮಾಸೆ ಚೀರನಕ್ಕುಂ " (ಮಂಗರಾ. ೯೦-೦೪) ; ತನ್ನ ಬೊಲ್ಲನ ಕೂಡೆ ಮಂಗಳನನಿರದೆ ಕೊಂಗಣನಸಮನಂ ತನ್ನ ಬೋರನನಿರಿಸದಿರಿ ವಾಹಕರಿರ ನೀವು (ಅಕ್ಕೃ. ೫೯-೯೦); ಸಮಸ್ತಶರೀರದ ರೋಮಂಗಳಲ್ಲಿಯೂ ಕೆಂಪುವರ್ಣವುಳ್ಳ ಶುಭ್ರ ರಕ್ತವರ್ಣಗಳು ಮಿಶ್ರವಾಗಿ ಮುಖದಲ್ಲಿ ಕಾಲು ಬಾಲಗಳಲ್ಲಿ ಕೆಂಪುವರ್ಣವುಳ್ಳ ಕುದುರೆಯು ಬೋರನೆಂದು ಪೇಳಲ್ಪಡುವುದು (ಸೌಗಂಧಿ. ೩೦೦-೬). 'ಬೋರೆ₂' ಪರಾ. [ದೇ.॥/ಮರಾ. ಬೋರ ]

**ಬೋರ₂**, **ಬೋರೆ₃** (ನಾ). ದಿವಾಳಿಯಾದವನು : ಇಂಥ ಅಪರಿಚಿತನಿಗೆ ಕೆಲಸ ಕೊಟ್ಟು ತಾನು ಬೋರನಾಗುವುದನ್ನೂ ಬಯಸಲಿಲ್ಲ (ಬಾಬಿ. ೯೪). **ಬೋರೆ₃ :** ತಾನು ಪೂರ್ಣ ಬೋರೆಯಾಗಿ ದಾನ ಮಾಡುವುದು ದುಃಖಮೂಲ (ಅರಗಿ. ೦೩೬). [←ಮರಾ. ಬೋರಾ ]

**ಬೋರಂಗಿ**, ಭೋರಂಗಿ (ನಾ). ೧. ಬಣ್ಣ ಬಣ್ಣದ ರೆಕ್ಕೆಗಳುಳ್ಳ ಒಂದು ಬಗೆಯ ಹುಳು; ಜೀರುಂಬಿ; ಜೀರುಂಡೆ : ಗುಲಾಬಿ ಗಿಡಕ್ಕೆ ಮುತ್ತುವ ಹಸುರು ಬಣ್ಣದ ಅಥವಾ ತಾಮ್ರವರ್ಣದ ಜೀರುಂಡೆ: ಗುಲಾಬಿಜೀರುಂಡೆ :—ಬೋರಂಗಿ (Rose-chafer- ಇಂಕೊ) ; ಪಿರಿಬಾರದ ಗುದ್ದ ಹ್ಯಾಂಗೇರಿದಿ ಬಸವಣ್ಣ ಬೋರಂಗಿ ಪಕ್ಕ ಸರಜಂಗು ಕಟ್ಟಿಗೊಂಡು (ಜನಗೀ. ೦೬). ೨. (ಅಲಂ) ಒಯ್ಯಾರಿ; ಬೆಡಗಿ : ಏ ಬೋರಂಗಿ, ವ್ಯೆ ತೊಳಕೊಳ್ಳಲಿಲ್ಲೇನಿನ್ನು ? (ನಾಂಜಾಮ. ೫೪). **ಭೋರಂಗಿ :** ೧. ಮಳೆ ಬಂದು ನಿಂತಾಗ . . . ಗಿಡದಿಂದ ಗಿಡಕ್ಕೆ ಭೋರಂಗಿಗಾಗಿ ಅಲೆದಾಡುವುದು (ಸುತ್ತುಮು. ೪); ಭೋರಂಗಿಯ ಒಂದು ಪಸಿರುವಕ್ಕ ಶಾಪಗ್ರಸ್ತದೇವತೆಯಂತೆ ಇವನ ಸೆರೆಗೆ ಸಿಕ್ಕಿದೆ (ಗಾಳಿಶ. ೬೪). [<ಬೋರ್]

**ಬೋರಂಟಿ**, ಭೋರಂಗ (ನಾ). ಹಾರುವಾಗ ಶಬ್ದ ಮಾಡುವ, ಬೇರೆ ಬೇರೆ ಆಕಾರದ ಒಂದು ಬಗೆಯ ಗಾಳಿಪಟ : ಆ ಹುಡುಗನು ಬೋರಂಟಿ ಹಾರಿಸುತ್ತಿದ್ದಾನೆ (ಕೂಂ). **ಭೋರಂಗ :** ಭೋರಂಗ ಆಡಿಸಲು ಬೇಕಪ್ಪ ? ನೂಲಿನ ಎಳೆಯೊಂದು ಸಾಕಿಲ್ಲವೇ ? (ಸಟೀಗೀ. ೨೯-೩೨೪).
[ < ಬೋರ್ ? ]

**ಬೋರಗುದುರೆ** (ನಾ). ಮಾಸಲುಗೆಂಪು ಬಣ್ಣದ ಕುದುರೆ : ವಾರುವದ ಬೋರಗುದುರೆಗಳೊಳ್ ಪೂಡಿದ ಪಸುರ್ಪೊನ್ನ ರಥಮನೇರ್ (ಶಬ್ದಾ. ೦೨-೩೩ ವ). [ ಬೋರ₁ + ಕುದುರೆ ]

**ಬೋರಮಾಳ**, ಬೋರಮಾಳು (ನಾ). (ಎಲಚಿಹಣ್ಣಿನ ಆಕಾರದ ಚಿನ್ನದ ಗುಂಡುಗಳಿಂದ ಮಾಡಿದ) ಒಂದು ಬಗೆಯ ಸರ : ನನ್ನ ಕೊರಳೊಳಗೆ ಬೋರಮಾಳ ಇಲ್ಲ, ಕೈಯೊಳಗೆ ಬಿಲವಾರ ಇಲ್ಲ ! (ಜಾರುಪ. ೩೨). **ಬೋರಮಾಳು :** ಕಾಸಿನ ಸರ, ಗುಂಡಿನ ಸರ . . . ಬೋರಮಾಳು, ನೆಲ್ಲಿಕಾಯಿಸರ, ಗೋಧಿಸರ (ಕಟಿಕೋ. I, ೮೨೦).
[ ←ಮರಾ. ಬೋರ್‌ಮಾಳ್ ]

**ಬೋರಮಾಳು** 'ಬೋರಮಾಳ' ನೋ.

**ಬೋರಲಿಡು** (ಕ್ರಿ). ಮಗುಚಿ ಹಾಕು; ತಳ ಮೇಲುಮಾಡು : ಬೋರಲಿಟ್ಟ ಬಟ್ಟಲಿನಂತಿರುವ ನೀಲದಿಗಂತ (ಪಸ:ಸೂ. ೨೪೪).
[ ಬೋರಲು + ಇಡು₁ ]

**ಬೋರಲು** (ನಾ). ತಲೆಕೆಳಗು : ಬುಡಮೇಲು : ಆ ಪಾತ್ರೆಗಳನ್ನು . . . ಅಲ್ಲೇ ಬೋರಲು ಹಾಕು (ಊರುಕ. ೨೩) ; ಕಂಬಳಿಯ ಮೇಲೆ ಬೋರಲಾಗಿ ಅಪೂರ್ವ ಬಿದ್ದಿದ್ದ (ಭಾರತಿ. ೦೩೪). 'ಬೋರಲಿಡು' ಪರಾ.
[ದೇ.॥ ತೆಲು. ಬೋರ್ಲ]

**ಬೋರಾಡು** (ಕ್ರಿ). ೧. ಸಂಭ್ರಮಗೊಳ್ಳು : ಸಡಗರಪಡು : ಬೋರಾಡಿ ಸಾಲವನು ಹಾಡಿಹಾಡಿ ಒಯ್ಯುವನು (ಸರ್ವಜ್ಞ. ೦೩೪೬) ; ಎಕ್ಕಿಯ ಗಿಡದಾಗ ಹಕ್ಕಿ ಬೋರಾಡಿದಂಗ (ಲೋಕಗೀ. ೬೦) ; ಹಕ್ಕಿಯಲ್ಲಿ ಕಪಿ ಮಾಡಿನ ನಾಲ್ಕು ಹೋರೆಗಳೂ, ಬೋರಾಡಿ ಹಿಂಡುವ ಮೂರು ಆಕಳುಗಳೂ, ಎರಡು ಎಮ್ಮೆಗಳೂ ಮುಸುಗುಟ್ಟುತ್ತವೆ (ಕಂಪಿ. ೦). ೨. ಧ್ವನಿಯೇರಿಸು ; ದೊಡ್ಡ ಧ್ವನಿ ಮಾಡು : ಮಗು ಅನ್ನ ಪೂರ್ಣೆಯರೂ ಬೋರಾಡಿಕೊಂಡು ಅಳತೊಡಗಿದರು (ಎಡಕ. ೦೪೮) ; ಇವನು ಮರಣ ಹೊಂದಲು ಅಕಬರನು ಬೋರಾಡಿ ಅತ್ತನು (ಹಿಂಪುಚ. ೦೦೪). 'ಭೋರಾಡು' ಪರಾ. [ಬೋರ್ + ಆಡು₁]

**ಬೋರಿ** 'ಬೋರೆ₂' ನೋ.

**ಬೋರಿಗೆ** 'ಬೋಪರಿಗೆ' ನೋ.

**ಬೋರಿಯ** (ನಾ). ರಂಗುರಂಗಿನ ಚಿತ್ರಗಳುಳ್ಳ, ನೆಲಕ್ಕೆ ಹಾಸುವ ಹಾಸು ; ಜಾಜಮು : ಪೊಂಬಟ್ಟೆಯ ಬೋರಿ[ಪಾಠಾಂ. ರೆ]ಯದೊಳ್ ತುಂಬಿದ ಬಿತುಮುತ್ತಿನಕ್ಕಿಯಂ ಮೆಟ್ಟಿದಂದೇಂ ಬಗೆವುಗಿಬುದೋ ಹೇಮಾಂಬುಜದ ಮರಾಳಮಿಥುನಮಂ ತನುಮಿಥುನಂ (ಅಪಂಕ್ಕೃ. ೬-೫೫).
[?./ಮರಾ. ಬೋರಿಯಾ]

**ಬೋರಿಸರ** (ನಾ).=ಬೋರಮಾಳ : ಕುತ್ತಿಗೆಯಲ್ಲಿರುವ 'ಬೋರಿಸರ' ಕೂಡಾ ಗುಂಡುಗುಂಡಾದ ಮಣಿಗಳಿರುವ ಪಳ್ಳಿಯ ಮಾದರಿಯದು (ಕಿ. ೦೫). [ಬೋರಿ (<ಬೋರೆ₂) + ಸರ₃]

**ಬೋರು₁** 'ಪೋರೆ' ನೋ.

**ಬೋರು₂** (ನಾ). (?) : ಅಣಲೊಳು ಗುಡಿ[ಪಾಠಾಂ. ಮಡು]ಗಟ್ಟಿದ ಬೋರು ಕೊಬ್ಬಿದ ನೆಣ ಬಾಯೊಳು ಪೊಜಿಮಡುವ ಹೊದಿದಿನ ದಡಿಗ ದೈತೇಯರು ಹೆಣ್ಗಂಡು ನೊಣ ಹಾಯಗುಡದೆ ನುಂಗುವರು (ಮೋಹತ. ೩೨-೫). [ ? ]

**ಬೋರೆ₁** 'ಪೋರೆ' ನೋ.

**ಬೋರೆ₂**, ಬಾರೆ, ಬೋರಿ (ನಾ). ೧. ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಎಲಚಿ : "ಬದರೀ, ಕುವಲೀ, ಕರ್ಕಂಧೂ — ಈ ೩ ಬೋರೆಗಿಡವೆ ಪೆಸರ್" (ಪಠಾಮು. ೩೨-೯೦) ; ಕಾರೆ ಬೋರೆ ಗುಳವತ್ತಿ ತುಂಬುರು ನಗರೆ ಮುಂತಾದ ಪಣ್ಗಳ ತಂದರಾಳ್ವನ ಬಳಿಗೆ (ಮೋಹತ. ೦೯-೫೬) ; ಗೇರು ಕಾರೆ ಬೋರೆಗಳೆಸೆದವು (ಕಂಪಿಷಾ. ೦೩-೦೩). ೨. ಎಲಚಿ ಹಣ್ಣಿನ ಬಣ್ಣ ; ಮಾಸಲುಗೆಂಪುಬಣ್ಣ : (೪). **ಬಾರೆ :** ೧. ಧರೆಯೊಳೆಸೆವುದಾ ಕಾಳಹಸ್ತೀಶ್ವರಮೆನಿಪ್ಪೊಂದು ಪೆಸರಾಂತು ಭೂಮಿಧರವು ವರಲ್ಲಿ . . . ಮೂಪುಂಬಟೆಯು ಬಾರೆ ನೆಲ್ಲಿ . . . ಜಿಲ್ವಾದಿ ಬಹುವೃಕ್ಷಂಗಳಿಂದೆ ತುಂಬಿ ಘೋರತರ ಕಾಂತಾರಮಿಹುದು (ಶುಪಾಶಿ. ೬-೦೮). **ಬೋರಿ :** ೧. 'ಬೋರಿಸರ' ಪರಾ.
[<ಪ್ರಾ. ಬೋರ್, ಬೋರೀ. / ಸಂ. ಬದರೀ./ಹಿಂ. ಬೇರ್, ಬೋರ್; ಮರಾ. ಬೋರ್, ಬೋರೀ]

**ಬೋರೆ₃** 'ಬೋರ₂' ನೋ.

**ಬೋರ್ಗರೆ** (ಕ್ರಿ). 'ಬೋರ್' ಎಂದು ಶಬ್ದಮಾಡು : 'ಬೋರ್ಗರೆಯಿಸು' ಪರಾ. [ಬೋರ್ + ಕರೆ$_1$]

**ಬೋರ್ಗರೆಯಿಸು** (ಕ್ರಿ). ಬೋರ್ ಎಂದು ಶಬ್ದಮಾಡು ; ಅಬ್ಬರಿಸು : ಪ್ರಳಯದ ದಾವಾಗ್ನಿಯು ಕುಡಿನಾಲಗೆಯುಳವೆನೆ ಬೋರ್ಗರೆಯಿಸುತ್ತ ಮುಳಿದು ಬಾಣದ ಸುಭಟರು ಮುಂದುವರಿದಾಗ ಸಲೆ ತುರುಕರನಟ್ಟಿದರು (ಕಂಹಿಎ. ೦೯-೬೩). [ಬೋರ್ಗರೆ + — ಇಸು$_3$]

**ಬೋರ್ಗಲ್ಲು** (ನಾ). (ಉಕ) ಒರಟಾಗಿ, ಉಬ್ಬಿರುವ ಕಲ್ಲು : ಅವಳ ಈ ಎಲ್ಲ ಉಪಾಯಗಳೂ ಬೋರ್ಗಲ್ಲ ಮೇಲೆ ಮಳೆಗರೆದಂತಾದುವು (ಶಂತಃ. ೦೯) ; ಫಕೀರ ಹೇಳಿಕೊಂಡುದೆಲ್ಲ ಬೋರ್ಗಲ್ಲ ಮೇಲೆ ನೀರು ಸುರುವಿದಂತಾಯಿತು (ಹಾಡುಹ. ೮೨). 'ಗೋರ್ಕಲ್ಲು' ಪರಾ.

[< ಬೋರೆ$_1$ (<ಪೋರೆ) + ಕಲ್ಲು (< ಕಲ್$_3$)]

**ಬೋರ್ಡು** (ನಾ). ೧. ಸೀಮೆಸುಣ್ಣದಿಂದ ಬರೆಯಲು ಬರುವಂತೆ ಸಿದ್ಧಪಡಿಸಿದ ಕರಿಯ ಬಣ್ಣದ ಫಲಕ ; ಕಪ್ಪುಹಲಗೆ : ರಂಗಣ್ಣನು ಬೋರ್ಡಿನ ಹತ್ತಿರ ಹೋಗಿ 'ಶತ್ರು' ಎಂದು ಸರಿಯಾಗಿ ಬರೆದು (ರಂಗಳ. ೧೩೯). ೨. ಹೆಸರು, ವಿಳಾಸ ಮೊದಲಾದುವುಗಳನ್ನು ಬರೆದು ಪ್ರದರ್ಶಿಸುವ ಫಲಕ ; ನಾಮಫಲಕ : ರಾಯರ ಮನೆಯ ಮುಂದಿರುವ ಒಂದು ಬೋರ್ಡಿನ ಜೊತೆಗೆ ಇನ್ನೊಂದು ಬೋರ್ಡು ಇಳಿಬೀಳಬೇಕೆಂದು ರಾಜಮ್ಮನವರ ಹೆಬ್ಬಯಕೆ (ರಾಯಳ. ೮೩). ೩. ಸಮಿತಿ; ಮಂಡಲಿ : ಪರೀಕ್ಷಾಬೋರ್ಡುಗಳು ಪ್ರಾದೇಶಿಕವಾಗಿದ್ದರೆ ಅನರ್ಥ ಕಡಿಮೆ (ಶಿಕ್ಷದ ೩೬೯). [← ಇಂ. Board]

**_ಬೋಲ್** '– ವೋಲ್' ನೋ.

**ಬೋಲಬಗರಿ** (ನಾ). (ಉಕ) ಕೊಬ್ಬರಿಬಟ್ಟಲಿನಲ್ಲಿ ತೂತುಕೊರೆದು ದಾರ ಸೇರಿಸಿ. ತಿರುಗಿಸುವ ಒಂದು ಬಗೆಯ ಆಟಿಕೆ : ಕಾರಹುಣ್ಣಿವೆ ಕರಿ ಹರಿದು ಮಣ್ಣೆತ್ತು ನೀರನು ಕುಡಿದವು. ಬಂತು ಪಂಚಮಿ ಬೋಲಬಗರಿಗೆ, ಹೆಣ್ಣು ತವರಿಗೆ ಮಿಡಿದವು (ಹಂಪು. ೦೨-೪). [ ? ]

**ಬೋಲಿಯಕ್ಕ** (ನಾ). ಒಬ್ಬಾಕೆಯ ಹೆಸರು : ಪಾಟಿಯಕ್ಕಂ ಬೋಲಿಯಕ್ಕಂ ಪುತ್ರಾಣಕ್ಕೆಯ್ಯಂದಿರ್ಕ್ಕಂಡುಗ ಬಿತ್ತುವುದಂ ಕೊಟ್ಟಳ್ (ಎಕ. VIII. ಹಗರ. ೯೩-೧೦ ; ೨೫೦). [? + ಅಕ್ಕ$_1$]

**ಬೋಲು** (ನಾ). [ಸಂಗೀತ] ತಾಳವಾದ್ಯಗಳ ಲಯಬದ್ಧವಾದ ನುಡಿತ : ಸ್ವರಪಾತ ಮುಗಿದ ಮೇಲೆ ನಾಗಪ್ಪ ಮೃದಂಗವನ್ನು ಕೈಗೆತ್ತಿಕೊಂಡು . . . ಆದಿತಾಳದ ಕೆಲವು ಬೋಲುಗಳನ್ನು ಸಾಂಬನಿಗೆ ಅಭ್ಯಾಸ ಮಾಡಿಸಿದ (ಮುದ್ದು. ೬೩); ಅದರ ಪೆಜ್ಜೆ, ವಿನ್ಯಾಸಗಳನ್ನು ಲೆಕ್ಕಕ್ಕೆ ಸರಿಯಾಗಿ, ತಬಲ ಮೃದಂಗಗಳ ಬೋಲಿಗೆ ಸರಿಯಾಗಿ ಕಟ್ಟಿಡಲು ಬರುವಂತಿಲ್ಲ (ಬಾಲಕ್ರ. II, ೯೮೦). [← ಹಿಂ. ಬೋಲ್]

**ಬೋವ** 'ಬೋಯಂ' ನೋ.

**ಬೋವಗಾಜಿ** (ನಾ). ಪರಿಚಾರಕರ ಮುಖಂಡ : 'ಬೋವಗಾಜಿಕೆ' ಪರಾ. [ಬೋವ (< ಬೋಯ) + —ಕಾಜಿ]

**ಬೋವಗಾಜಿಕೆ** (ನಾ). ಪರಿಚಾರಕರ ಮುಖಂಡತ್ವ—ನಾಯಕತ್ವ : 'ಬೋವಗಾಜಿಕೆತನ' ಪರಾ. [ಬೋವಗಾಜಿ + —ಇಕೆ]

**ಬೋವಗಾಜಿಕೆತನ** (ನಾ). = ಬೋವಗಾಜಿಕೆ : ಮಾಯೆ . . . ಬಳಿಕಿರಿಸಿಕೊಂಡಳು ನಾಗವಾಸದ ನೆರವಿ ಬಂದದ ಬೋವಗಾಜಿಕೆತನದಲಲ್ಲಮನ (ಪ್ರಭುಲಿ. ೩-೦೬). [ಬೋವಗಾಜಿಕೆ + —ತನ]

**ಬೋವಿ$_1$** 'ಬೋಯ' ನೋ.

**ಬೋವಿ$_2$** 'ಬೋವು$_2$' ನೋ.

**ಬೋವಿತಿ** 'ಬೋಯಿತಿ' ನೋ.

**ಬೋವು$_1$** 'ಬೋಯ' ನೋ.

**ಬೋವು$_2$, ಬೋವಿ$_2$** (ನಾ). ಒಂದು ಬಗೆಯ ಮರ : ಕಿರಲ್‌ಬೋಗಿ, ಬೋವುಮರ, ಪಿರಿಬೋಗಿ, ಕರ್ಮಲ, ಕಲ್‌ಬಾಳೆ, ಶಮಿಪಲೆಭೋಗಿ, ಸಣ್ಣೆಲೆಭೋಗಿ (ವೃಕ್ಷಿಗ. ೯೯-೮೬೩). ಬೋವಿ$_2$ : ಬಿಳಿಬಸುರಿ, ಬೋವಿಯ ಮರ (ವೃಕ್ಷಿಗ. ೩೬-೬೩೧); ಹೆಬ್ಬಲಸಿನ, ಬೋವಿನ, ಸಾಗವಾನಿಯ ಮತ್ತು ಅನೇಕತರದ ಮರಗಳು (ಗಂಗಾವ. ೩೩). [← ತುಳು. ಬೋವು]

**ಬೋಸ$_1$** (ನಾ). ೧. ಹಲ್ಲಿಲ್ಲದವನು : "ಬೋಡಃ — ಬೋಸಂ" (ಶಾಶಕ್ಕ. ೨೩೦). ೨. (ಕರಾ) ಬೆಪ್ಪ; ಪೆದ್ದ [ಬೋಸು + —ಅ$_7$]

**ಬೋಸ$_2$** (ನಾ). ಒಡವೆ ; ಆಭರಣ : ಅಲಂಕಾರ : ಕೈಲಿ ಕಾಸಿಲ್ಲ ಮೈಲಿ ಬೋಸಿಲ್ಲ (ಬೋಸ = ಭೂಷಣ) ಹೋಗೊ ಸೂಳೆ ಕಂಡು ಹುಮ್ಮಸ್ಸಿಬಿದ್ದನಂತೆ (ಮಾಮುರಾ. ೦೩೨). [< ಸಂ. ಭೂಷಾ]

**ಬೋಸಡಿ** 'ಭೋಸಡಿ' ನೋ.

**ಬೋಸರ** (ನಾ). ವಂಚನೆ : ಕಪಟ : "ಬೋಸರಂ ಕಪಟಾದರಂ" (ಕರ್ಣಾಟ. ೬೪): ನಿಚ್ಚ ಬೋಸರದ ಗರುಡಿ ಮಂಚಾತನ ಹೆಚ್ಚಿ ಬೆಳೆವ ಬಲು ನೆಲನು (ರಾಮಾ. ೩-೮೮); ಬೋಸರದಿಂದ ಕಯ್ಯಾಗಿದ (ವಿಟ್ಠಲ. ೦೯೦-೨೦).

**ಬೋಸರಗಿತ್ತಿ** (ನಾ). ವಂಚಕಿ : ಮೋಸಗಾತಿ : ಒಬ್ಬರ ಕೈಪಿಡಿದು ಒಬ್ಬರಿಗೆ ಮಾತುಗೊಟ್ಟು ಮತ್ತೊಬ್ಬರಿಗೆ ಸನ್ನೆಯ ಮಾಡುವ ಬೋಸರ [ಪಾಠಾಂ. ಪಾದರ]ಗಿತ್ತಿಯಂತೆ . . . ಕೋಟಲೆಗೊಳಲೇತಕ್ಕೆ (ಶಸ್ಯವ. ೯. ೦೦೦-೨೩೨) ; ವಂಚಕಿ ಬೋಸರಗಿತ್ತಿ ಮಂಕವರ್ಜಿತೆ . . . ತೇಪೆಯೊಡನಾಡಿದ ಪೆಂಡತಿಗುಂಟೆ ಸಜ್ಜನಂ (ಮುಕ್ತಾ. ೦೩-೬). [ಬೋಸರ + —ಗಿತ್ತಿ]

**ಬೋಸರಣೆ** (ನಾ). ಮೋಸ ; ವಂಚನೆ : ಠಕ್ಕು ಥಾಳಿಕತನ ಬಿಜು ಬೋಸರಣೆ ಬೇಳಕ್ಕೆ ವೈಶಿಕಗಳೆಂಬಿವಕೆ ಸಿಕ್ಕುವರೇ ಕೋವಿದರು (ಕುಮಾರಾ. ೨೮-೬೦); ಬಾಳಿದ ಬೀಳರ್ಪ ಬುದ್ಧಿ ಬೂತಾಟಮುಂ ಬೇಳಿಗೆಚ್ಚಿಗಳ ಬೋಸರಣೆ ಚಾಳಿವೆತ್ತರ ಭಕ್ತರೆಂದು ಬಣ್ಣಿಸಿ ಬರ್ಪುದೇಳಿಗೆಯೆಂತೊ (ಕಕಸಾಂ. ೬೬-೯೦). [ ಬೋಸರ + — ಅಣೆ$_4$ ]

**ಬೋಸರಿಗ** (ನಾ). ಮೋಸಗಾರ ; ವಂಚಕ : ಕಾಮದೇವಂಗೆ ಬೋಸರಿಗಂ ನಿಂದುಬಿರಿಯೆಂಬರಾ ಪುರದ ವೇಶ್ಯಾವಾಟದೊಳ್ ಜೇಟಿಯರ್ (ಸೂಕ್ತಿಸು. ೯-೦೩೩); ನೀನಲ್ಲದೆಯನ್ನಿಗರೆನ್ನ ತಾಯ ಸಮಾನವೆನುತ ಭಾಷೆಯ ಮಾಡಿ ಮಾನಿಸಿಗೊರ್ವ ಬೋಸರಿಗನಾಣೆಯನಿತ್ತು ತಾನಂದು ಪೊಜಿಮಟ್ಟನಾಗ (ಶ್ರೀಪಾಂ. ೦೩-೬೦); ಕೊಡದೆ ಬೂಟಕವಾತಿನಲಿ ಮನ್ಮಥ ಕೇಳಿಗೊಡನ್ನೆದುವ ಬೋಸರಿಗನ ನಡೆ ನಾಳೆ ಕರೆವೆನೆಂದೆಬ್ಬಿಸಿ ಪೊನ್ನೀವ ಕಡುದಾತನ ಕರೆ ಮಗಳೆ (ಕಂಸವ. ೩-೦೯೬). [ಬೋಸರ + —ಇಗ]

**ಬೋಸರಿಗತನ** (ನಾ). ಮೋಸ ; ವಂಚನೆ : ಬೋಸರಿಗತನದಿಂದ ಒಡಲ ಹೊರವಳಂತೆ ವಾಗಾದ್ವೈತದಿಂದ ಒಡಲ ಹೊರವ ಶಬ್ದಬೋಧಕರಿಗೆ ನಿಜಗುರುಭೋಗೇಶ್ವರಶರಣರ ಪದವೆಂತು ದೊರಕೊಂಬುದೊ (ಸಕವ. III, ೨೦೨-೩೬೨) ; ಮತ್ತೀ ದುಷ್ಟತನದ ಬೋಸರಿಗತನವೇಕೆ (ಹಕಾ. ೮-೯) ; ನನಗೆ ಬೋಸರಿಗತನಮಂ ನುಡಿದು . . . ನಿನಗೆದೇಹಾರಮಂ ಮಾಡಿದಳಿಗೆ ತಕ್ಕುಪಾಯಮಂ ಬಲ್ಲೆ ನಾನು (ಸಮ್ಯಕ್ತ್ವ. ೩-೨೩).

[ ಬೋಸರಿಗ + — ತನ ]

**ಬೋಸರಿಗೆ** (ನಾ). = ಬೋಸರಿಗತನ : ಹಾಸ್ಯರಸದ ಬಲ್ಲವಗರಸಿಚ್ಚೆಯ ಬೋಸರಿಗೆಗೆಯುಪಮಾನ ದಾಸಿಯ ಬಿಟ್ಟು ಕಠಿಣತನವಾತಂಗೆ ಲೇಸು ಸೇವೆ (ಕರ್ಣಾ. ೦೬-೨೯). [< ಬೋಸರ ]

**ಬೋಸರಿಸು** (ಕ್ರಿ). ೧. ವಂಚಿಸು ; ಮೋಸಗೊಳಿಸು : ವಿಕಟೆಲೆ ದಸುಜಾರಿ ಠಕ್ಕಿನ ಮಾತಿನಲಿ ಬೋಸರಿಸಿ ನಮ್ಮನು ಬೂತು ಮಾಡದೆ ಪೋಗು (ಅಕ್ರೂಚ. ೯-೮೦); ಸವಿನುಡಿಯಿಂ ಬೋಸರಿಸಿ ಮಾಯೆಗೈವರ್ (ರಾಜಾಕ್ಷ. ೪೦-೦೩). ೨. ಸುಳ್ಳು ಆದರವನ್ನು ತೋರಿಸು ; ಪ್ರೀತಿಸುವಂತೆ ನಟಿಸು : " ಬೋಸರಿಸು – ಮಿಥ್ಯಾದರೇ (ಕಪಟಮರ್ಯಾದೆ ಮಾಡು) "

(ಶಮುಠಾ); ನೆರೆದ ಮಿಂಡರೊಳಧಿಕನೆಂದೊಡಲಿಕ್ಕಿ ಬೋಸರಿಸಿಕೊಳ್ತೃತ್ತಿಯುಂ (ಹಕಾ. ೪-೨೦). ೩. ಪ್ರೋತ್ಸಾಹಿಸು ; ಉಬ್ಬಿಸು : ವರ ಹರಿಶ್ಚಂದ್ರ ಸತ್ಯಂಗೆಡದಿರೆಂದು ಬೋಸರಿಸುವಂತಾಗಿ (ಹಕಾ. ೨-೩೦) ; ಅಸುರದೆಡೆಯೊಳಿರಿಸಬಾರದು ಬೋಸರಿಸಿ ನಂಬಿಸಿ ನಮಿಸಿ ಕೊಂಡಾಡಿ ಮುಂಡಾಡಿ (ಬಸಪು. ೧೮-೭); ಮಾಯೆ ನಿನ್ನನಗಲಿರಬಲ್ಲಳೇ ಎಂದು ಬೋಸರಿಸುತಂ (ಪ್ರಭುಪು. ೫-೯೪). [ ಬೋಸರ + — ಇಸು$_3$ ]

**ಬೋಸಿ$_1$** (ನಾ). ಹಲ್ಲಿಲ್ಲದವಳು : "ಬೋಡೀ = ಬೋಸಿ" (ಶಾಶ್ಯ. ೨೩೦).
[ ಬೋಸು$_1$ + — ಇ$_2$ ]

**ಬೋಸಿ$_2$** (ನಾ). ಅಗಲವಾದ ಬಾಯುಳ್ಳ ಲೋಹದ ಗುಂಡನೆಯ ಪಾತ್ರೆ : ಬಚ್ಚಲಿನ ಜಗಲಿಯ ಮೇಲೆ ತಾಮ್ರದ ಬೋಸಿ, ಮರದ ಮೊರಗೆಯಲ್ಲಿ ನೀರು ಬೆರಸಿದ ಸೀಗೇಪುಡಿ (ಶಾಶಹೊ. ೧೦೫); ಗಡಿಗೆ, ಬೋಸಿ . . . ಬಾಸದ ಸಾಲು ಇವುಗಳನ್ನು ಜಾಗ್ರತೆಯಾಗಿ ಮತ್ತು ಸೂಕ್ಷ್ಮವಾಗಿ ಪರಿಚಯ ಮಾಡಿಕೊಂಡು ಹೊರಗೆ ಬರುತ್ತಾಳೆ (ಸನ್ಮೂರು. ೧೦೦). [ ? ]

**ಬೋಸು** (ನಾ). ಹಲ್ಲಿಲ್ಲದಿರುವಿಕೆ : "ಬೋಡು = ಬೋಸು" (ಶಾಶ್ಯ. ೨೩೦). 'ಬೋಸುವಾಯ್' ಪರಾ.
[ ದೇ.॥ ತೆಲು. ಬೋಸಿ = ಹಲ್ಲಿಲ್ಲದ ]

**ಬೋಸುಡಿ** 'ಭೋಸಡಿ' ನೋ.

**ಬೋಸುವಾಯ್** (ನಾ). ಹಲ್ಲಿಲ್ಲದ ಬಾಯಿ ; ಬೋಡುಬಾಯಿ : ಪಲ್ಗಳುದುರಿದ ಬೋಸುವಾಯಿಂದರಮನೆಯ ಮುಂಬಾಗಿಲೊಳು ನಿಂದ (ಶಂಕರಾ. ೭-೬೫). [ ಬೋಸು$_1$ + ಬಾಯ್ ]

**ಬೋಹಣ** 'ಬೋನ$_1$' ನೋ.

**ಬೋಹಣಿಸು** (ಕ್ರಿ). ಸರಿಯನ್ನು ಬಳಿದು ಮದ್ದಳೆಯನ್ನು ಸಿದ್ಧಪಡಿಸು : ಬೋಹಣಿಸಿ ಮದ್ದಳೆಗಳಂ ಶ್ರುತಿಮೋಹಿ ಸಂಧಿಸಿಕೊಂಡು ನಿಲ್ಲಿರೆ ಬೇಹವರು ನೀವಿದಕೆ ಗುಡ್ಡಾದೇವಿ ಮಹದೇವಿ (ಬಸಪು. ೧೨-೪೦).
[ ಬೋಹಣ (< ಬೋನ$_1$) + — ಇಸು$_3$ ]

**ಬೋಹರಿಗೆ, ಬೋರಿಗೆ** (ನಾ). ಕಸಬರಿಗೆ ; ಪೊರಕೆ : ಕೈಯ ಬೋಹರಿಗೆ ಮಂಡೆಯ ಮೇಲೆ ಸಿಂಬಿ (ಬಸವ. ೩೫೪) ; ಒಂದು ಬೋಹರಿಗೆಯಂ ಕೊಂಡು ಬೋಹರಿಸಿ ತಂದು ಗೋಮಯದಿಂದೆ ಹೇವರಿಸಿ ಸಾರೈಸಿ (ಕನ್ನ.ರ. ದೇ. ೦೩೪-೩) ; ಸಂತಸದಿಂ ಬೋಹರಿಗೆಯಾಂತು ಮಠಮಂ . . . ನಿರ್ಮಳವ ಮಾಡುತ್ತೆ (ರಾಶತ. ೦೪-೦೦೨). **ಬೋರಿಗೆ :** ಕಸಕುಪ್ಪೇರು ತಿಪ್ಪೆ ತಿಪ್ಪೆ ಬೋರಿಗೆಯಿಂದ ಕೊಡುವನು (ವಿಶಾಸು. ೬೫-೪) ; ಕೈಯಲ್ಲಿ ಬೋರಿಗೆಯನ್ನು ಕೊಟ್ಟು . . . ಕಸವ ಬಳಿಯಲಿಕ್ಕೆ ಹಚ್ಚುವನು (ಕೃಚಿತ್ರ. ೨೮೮). [ ದೇ.॥ ತೆಲು. ಬೋರಿಗ. / ಪ್ರಾ. ಬೋಹಾರೀ ]

**ಬೋಹರಿಸು** (ಕ್ರಿ). ಗುಡಿಸು ; ಕಸತೆಗೆ ; ಸ್ವಚ್ಛ ಮಾಡು : ದೇವರಾಜ ನಿಮ್ಮ ಸತ್ತಿಗೆಯ ಹಿಡಿವ ವಾಯು ನಿಮ್ಮ ಅಂಗಳವ ಬೋಹರಿಸುವ (ಶವಗೋ. ೦೮೦-೧೦) ; ಒಂದು ಬೋಹರಿಗೆಯಂ ಕೊಂಡು ಬೋಹರಿಸಿ ತಂದು ಗೋಮಯದಿಂದೆ ಹೇವರಿಸಿ ಸಾರೈಸಿ (ಕನ್ನ.ರ.ದೇ. ೦೩೪-೩) ; ರಾಜಾಂಗಣವ ಬೋಹರಿಸುವ ದಾಸಿಗೆಯಿಪ್ಪಾಸಕ್ಕಿ (ಎಕ. VI, ಕಡೂರು. ೪೯-೬೪; 1201). [ < ಬೋಹರಿಗೆ + — ಇಸು$_3$ ]

**ಬೋಳ$_1$** 'ಬೋಟಿ$_1$' ನೋ.

**ಬೋಳ$_2$** 'ಬೋಡ' ನೋ.

**ಬೋಳ$_3$** 'ಬೋಟಿ$_3$' ನೋ.

**ಬೋಳಂಗಡಲೆ** 'ಬೋಟಿಗಡಲೆ' ನೋ.

**ಬೋಳಂದರು** (ನಾ). ಒಂದು ಬಗೆಯ ಮರ : ನಂದಿ, ಬೋಳಂದರು ಬೆಳ್ತಿ (ವೃಶಿ. ೪೯-೯೬೪). [ ? + ತರು$_2$ ]

**ಬೋಳಕ** 'ಬೋಳುಕ' ನೋ.

**ಬೋಳಕ್ಕಾರು** (ನಾ). (ಕರಾ) ಹಣ್ಣಿನ ಪ್ರಾರಂಭದ ಸ್ಥಿತಿ ; ದೋರೆ : ನಿನ್ನೆ ನೋಡಿದಾಗ ಕಾಯಿ ಬೋಳಕ್ಕಾರು ಆಗಿತ್ತು. ತೆಗೆಯಲಿಕ್ಕೆ ಹೇಳಬೇಕಂತ ಇದ್ದೆ (ಮೊಮುಗು. ೬೩). [ ← ತುಳು. ಬೊಳಕರ್ ]

**ಬೋಳಗಡಲೆ** 'ಬೋಟಿಗಡಲೆ' ನೋ.

**ಬೋಳತರ** 'ಬೋಟಿತರ' ನೋ.

**ಬೋಳತರಗ** 'ಬೋಳದರಗ' ನೋ.

**ಬೋಳದರಗ, ಬೋಳತರಗ** (ನಾ). ಒಂದು ಬಗೆಯ ಔಷಧೀಸಸ್ಯ : ಗಂಡಮಾಲೆ ಒಡೆಯಬೇಕಾದರೆ ಬೋಳದರಗನ ಬೇರ ನೀರಿಂದ ಅರೆದು ಲೇಪಿಸಲು ಅವಶ್ಯ ಒಡೆವದು (ವೈದ್ಯಸಾ. II, ೦೭೨); ಕೊತ್ತುಂಬರಿ, ಬೋಳದರಗನ ಬೇರು, ಸೂರ್ಯಭಕ್ತನ ಬೇರು . . . ಪ್ರಾತಃಕಾಲದಲ್ಲಿ ಗಳ ತೂಕವಂ ಸೇವಿಸುವುದು (ಸಕವ್ಯ. ೨೦೮). **ಬೋಳತರಗ :** ಹಿಪ್ಪಲಿ, ಬೋಳತರಗ, ಹಾವುಮೆಕ್ಕೆಯ ಬೇರು ಇವಿಷ್ಟನೂ ಸಮಾನವಾಗಿ ತೆಗೆದುಕೊಂಡು ನಿಂಬೇಹಣ್ಣಿನ ರಸದಲ್ಲಿ ಅರೆದು ಕುಡಿಸಲು ಮಿನು ಕಚ್ಚಿದ ವಿಷ ಶಮನವಹುದು (ವೈದ್ಯಸಾ. II, ೨೨೦). 'ಬೋಟಿತರ' ಪರಾ. [ ? ]

**ಬೋಳಮಟೆ** (ನಾ). ಒಂದು ಬಗೆಯ ಸಸ್ಯ : "ಅರಸೆಲ್ಲಿ . . . ಗೊದ್ದನ ಮರ, ಬೋಳಮಟೆ, ಹಾಲಉಲಿಗೆ, ಗಾಂಗೇರುಕ, ಕಾಷ್ಠನೆಲ್ಲಿ, ಬಾಲಿಗೆ" (ಸಸ್ಯ. ೬೪); ಗೊದ್ದನ ಮರ, ಹಾಲಬಲಗೆ, ಬೋಳಮಟೆ (ವೃಶಿ. ೩೯-೭೬೫). [ಬೋಳ$_?$ + ಅಮಟೆ$_1$ (< ಅಂಬಟೆ)]

**ಬೋಳಯಿಸು, ಬೋಳಯ್ಸು, ಬೋಳವಿಸು, ಬೋಳೈಸು** (ಕ್ರಿ) ಪುಸಲಾಯಿಸು ; ಉತ್ತೇಜಿಸು ; ಸಮಾಧಾನ ಮಾಡು ; ಸಂತೈಸು : ಸಜ್ಜೆವನೆಗುಯ್ದು ಸಜ್ಜನಸ್ನೇಹದಿಂ ಸಾಗಿಸಿ ನೋಡಿ ಭೋಗದೊಳ್ ಬೋಳಯಿಸಿ ರಾಗದಿಂ ಮೇಳಯಿಸಿ (ಗಿಂಕ. ೨-೦೦೫ ವ) ; ಬೋಳಯಿಸುತ್ತುಮಾ ತುರಗಮಂ . . . ಉಜ್ಜ್ವಲರತ್ನಕುಂಡಲಾಂದೋಳಕಪೋಲಭಿತ್ತಿಯುಗನಿಂತೆಸೆದಂ ಬರುತ್ತುಂ ಧರಾಧಿಪಂ (ಕುಸುಮಾ. ೩-೩೨) ; ತುರಗವನು ಬೋಳಯಿಸಿ ವಾಘೆಯ ತಿರುಹಿ . . . ಕೃಷ್ಣ ಪಾರ್ಥನ ರಥವ ಲುಳಿವಡೆದ (ಕುವ್ಯಾಭೀ. ೩-೨). **ಬೋಳಯ್ಸು :** ಹರುಷ ಮಿಗೆ ಮುದ್ದಾಡಿ ಬೋಳಯ್ಸಿದ ನಿಜಾರ್ಭಕನ (ಕೌಶಿರಾ. ೩-೨೬). **ಬೋಳವಿಸು :** ಬೇಗದೊಳಾದಂ ಮನವಿಮಾಯೆ ಬೋಳವಿಸುತ್ತುಂ (ಕುಸುಮಾ. ೬-೭೦); ತೋಳ ಹಿಡಿದೆಳೆದಪ್ಪಿ ಪಾರ್ಥನ ಬೋಳವಿಸಿದನು . . . ಅರಸ ಮುಂಡಾಡಿದನು ಫಲುಗುಣನ (ಕುವ್ಯಾಕ. ೦೦-೩೨) ; ಬೋಳವಿಸಿದನು ಸಕಲಸಮರ ಭಟಾಳಿಗಳ ಸನ್ಮಾನದಲಿ (ತೊರರಾ. ೬-೨೦-೨೬) ; **ಬೋಳೈಸು :** ಪಾರ್ವತೀಪತಿ ಹರಿಶ್ಚಂದ್ರನಂ ತಲೆದಡವಿ ಬೋಳೈಸಿ ಕೌಶಿಕಂಗಿಂತೆಂದನು (ಹಕಾ. ೦೪-೦೦); ನಂಬುಗೆಯ ನುಡಿಯಲಿ ಭಾನುಮತಿಯರ ಬಗೆಯ ಸಂತೈಸೆಂದು ಬೋಳೈಸಿದನು ಸಂಜಯನ (ಕುವ್ಯಾಗ. ೩-೩೭); ಆ ನೃಪಾಲಕಂ ಸೋದರವೆಹರಸಿ ಮುನಿವರನ ಪದಕೆಱಗಿದೊಡೆ ಮಣಿದೆತ್ತಿ ಬೋಳೈಸಿ ಪರಸಿ ಮಂತ್ರಾಕ್ಷತೆಯನಿತ್ತು (ಕೃಪಿಖಾ. ೨-೦೪).
[? + — ಇಸು$_3$. / ತುಳು. ಬೋಳೈಸು]

**ಬೋಳಯ್ಸು** 'ಬೋಳಯಿಸು' ನೋ.

**ಬೋಳರೆ** (ನಾ). ಚಪ್ಪಟೆಯಾದ ಕಲ್ಲು : ತಮಟಗಲ್ಲು ತೋರುವ ಬಾಣಗಲ್ಲುಗಳು ಪೋರಂತೆ ದೊಡ್ಡ ಬೋಳರೆ ಹಿಂಡುಗಲ್ಲೆಂದು ಸಾರುತಿಹರು ಬಲ್ಲವರು (ಕ್ಷಾಜ್ಯಶ. ೦-೭೫).
[ಬೋಳು (< ಬೋಡು) + ಅರೆ$_2$ (< ಅಜ$_4$)]

**ಬೋಳವಿಸು** 'ಬೋಳಯಿಸು' ನೋ.

**ಬೋಳಹ** (ಅ). 'ಹೋಗು' ಎಂಬ ಅರ್ಥದ ಒಂದು ಕೂಗು : ತೊಟ್ಟಿಲೊಳಿರ್ದವ್ಯಕ್ತ ಕಿಱಿಗೂಸು ಬೋಳಹ ಬೋಳಹ ಭಟ್ಟಾರಾ ಎಂದತ್ತಾ

ಗಳ್ (ಶಬ್ದಾ.ಶಾ. ೯೩-೧೪) ; "ಬೋಳಹಬೋಳಹ–ಗಚ್ಛಗಚ್ಛ, ಹೋಗಂ ಹೋಗು <ಪ್ರಾ. ವೋಲ" (ಶಬ್ದಾ.ಶಾ. ಟಿಪ್ಪಣಿ. ೨೩೩). 'ದೇಹಿ₂' ನೋ. [<ಪ್ರಾ. ವೋಲ, ವೋಲಿಅ]

**ಬೋಳಾಮಸ್ತಕಿ** (ನಾ). ಒಂದು ಬಗೆಯ ಸಸ್ಯ : ಕುಷ್ಠಕ್ಕೆ :—ಬೋಳಾಮಸ್ತಕಿ, ಬಂಗಾಳಪಚ್ಚೆ, ಪಚ್ಚೆತುತ್ತ ಇಷ್ಟು ಪರಪ ತೂಕ . . . ತೊಡೆಯೆ ಗುಣ (ಏಪ್ಪಣಿ. ೦೦೪). [ ? ]

**ಬೋಳಿ** 'ಬೋಡಿ' ನೋ.

**ಬೋಳಿಸು** 'ಬೋಟಿಸು' ನೋ.

**ಬೋಳು** 'ಬೋಡು' ನೋ.

**ಬೋಳುಕ**, ಬೋಳಕ (ನಾ). ೧. ಊಳಿಗದವನು ; **ಸೇವಕ**: ಚಿನ್ನದ ಬೆಳ್ಳಿಯ ಹಾಸದ ಬಿರುದಿನ ಕುನ್ನಿಗಳನು ಬೋಳು[ಪಾಠಾಂ. ಳ]ಕರು ಮನ್ನೆಯ ಮಿಗವೇಟಕಾಱ ಕಂಪಿಲನ ಕೈಸನ್ನೆಯುಱೆದು ನಿಲಿಸಿದರು (ಕುಂರಾಸಾಂ. ೨೬-೪೦); ಮುಟ್ಟುಳಿಗದ ಬೋಳುಕರನೆಲ್ಲರ ಬೀಳುಕೊಟ್ಟೊಳ ಪೊಕ್ಕನುತ್ಸವದಿ (ವೋಸಪ. ೨೦-೬೨). **ಬೋಳಕ** : ೧. ನಿಖಿಳ ಬೋಳಕರ ಕಟ್ಟಿಗೆಗಾಱರನೇಕವೃಗ್ಗಡೆ ಬೊಬ್ಬಿಟ್ಟುದು ರಾಯನೋಲಗದಲಿ (ಮೋಹತ. ೨೦-೩೮). ೨. ಕಲ್ಬುರ್ಗಿಯ ಸುರಪುರ ತಾಲ್ಲೂಕಿನ ಕೊಡೆಕಲ್ಲಿನಲ್ಲಿ ಇರುವ ಮುಸಲ್ಮಾನ್‌ಗೋರಿಗೆ ಪೂಜೆಮಾಡುವ, ಜಾಡರ ಜಾತಿಯ, ಹಿಂದೂವ್ಯಕ್ತಿ: ಈ ಜಾಡರಲ್ಲಿ ಒಂದು ಕುಟುಂಬದವನು ಇದರ ಪೂಜಾರಿ. ಈ ಕುಟುಂಬದವರಿಗೆ ಬೋಳಕರೆಂದು ಹೆಸರು (ಕರ್ನಾಸಂ. ೦೯೦). [ ? ]

**ಬೋಳುಗರೆ** 'ಬಳ್ಳುಗರೆ' ನೋ.

**ಬೋಳುಗೈ** (ನಾ). (ಬಳೆಗಳು ಮುಂತಾದ ಆಭರಣ, ಅಲಂಕಾರಗಳಿಲ್ಲದ) ಬರಿದಾದ ಕೈ,—ಖಾಲಿಯಾದ ಕೈ : ಬಳೆಯೊಡೆದ ಬೋಳುಗೈ! ತೈಲವಿಲ್ಲದ ವೇಣಿ ಪೊದರಾಗಿಹುದು ಪಣೆಬ್ಬೊಂಡು! (ಶ್ರೀರಾಮಾ. ೬೬೦-೯೩೭). [ಬೋಳು (<ಬೋಡು) + ಕೈ₂ (<ಕಯ್₂)]

**ಬೋಳುತಲೆ** 'ಬೋಳುದಲೆ' ನೋ.

**ಬೋಳುದಲೆ**, ಬೋಳುತಲೆ (ನಾ). ಕೂದಲಿಲ್ಲದ ತಲೆ ; ಬೊಕ್ಕತಲೆ : ಸಿಡಿಲು ಹೊಡೆದಂತಸುರಸಭೆ ಬೆಂಗೆಡಲು ಮೆಱೆದುದು ಬೋಳುದಲೆಗಳು (ಕೌಶಿರಾ. ೦೭-೩೩); ಬೋಳುದಲೆಯು ಬಂದಿಯೊಡನೆ ಅವನು ಹುಚ್ಚು ಬಿಟ್ಟು ಕೂಗಾಡುತ್ತಿದ್ದನು (ಭುವರು. ೦೯೬). **ಬೋಳುತಲೆ** : ಒಂದು ತಾಟಿನ ತುಂಬ ಬೋಳುತಲೆಯ ಜಾರ್ಜರಾಜನ ರೂಪಾಯಿಗಳು (ಕಂಬಹು. ೨೦); ಬೋಳು ತಲೆಯನ್ನು ನಿಧಾನವಾಗಿ ಒರೆಸಿಕೊಳ್ಳುತ್ತ . . . ಕಣ್ಣನ್ನು ಅರಳಿಸಿದರು (ಪಾಳಪೊ. ೨). [ಬೋಳು (<ಬೋಡು) + ತಲೆ₁]

**ಬೋಳುಮಂಡೆ** 'ಬೋಟುಮಂಡೆ' ನೋ.

**ಬೋಳೆ₁** 'ಬೋಟಿ' ನೋ.

**ಬೋಳೆ₂** (ನಾ). (ಕರಾ) ಗಿಡ, ಮರಗಳಿಲ್ಲದ ಬೋರೆ; ಬೋಳುಗುಡ್ಡ ; ಹುಲ್ಲುಬೋರೆ: ದನಕರುಗಳೆಲ್ಲ ಬೋಳೆಗೆ ಮೇಯಲು ಹೋಗುತ್ತವೆ (ರೂಢಿ). 'ಬೋರೆ₁' ಪರಾ. [<ಬೋಡು]

**ಬೋಳೆ₃** 'ಭೋಳೆ' ನೋ.

**ಬೋಳೆಯ₁** 'ಬೋಟಿಯ' ನೋ.

**ಬೋಳೆಯ₂** 'ಭೋಳೆ' ನೋ.

**ಬೋಳೆಯತನ** 'ಭೋಳೆತನ' ನೋ.

**ಬೋಳೈಸು** 'ಬೋಳಯಿಸು' ನೋ.

**ಬೋಟಿ₁**, ಬೋಳ₁ (ನಾ). ೧. ಸಾವು ; ಮೃತ್ಯು : "ಬೋಟಿಂ=ಮಿಟ್ಟು; ಮುಂಡಂ; ಒಂಡೌಷಧಂ" (ಕಮುದ. ಕಂ.೦). **ಬೋಳ₁** : ೧. "ಬೋಳಯೆನಲ್ ಮೃತ್ಯು" (ಅಾರಶಿ. ೨೬). ೨. ಅಪಾಯ ; ಗಂಡಾಂತರ; ವಿಪತ್ತು: ಒಂದು ಬೋಳಕ್ಕೆ ಬದುಕಿದೆ ಶಂಬೆ ಸಾಲ್ಲುಯ್ಯ (ಸುಪ್ಪಕ. ಪೀ. ೨೦೨-೦೯); ಹರಹರ ಮಹಾದೇವೊಂದು ಬೋಳಕೆ ಬದುಕಿದೆನು (ಕುಪ್ಪಾಪೀ. ೩-೨೯); ಶಿರವ ತಡವರಿಸುತ ಮಹಾದೇವರಿಯ ಬವರದ ಬೋಳಕೊವ್ವೆಗೆ ಹರಣವುಳಿದುದೆಯೆನುತ ರವಿಸುತನೇಱಿದನು ಗಿರಿಯನು (ಕೊರರಾ. ೪-೩-೦೭).

**ಬೋಟಿರ್**=ಸಾಯುವವರು; ಮರ್ತ್ಯರು : ಈ ಬಾನ ಬನ್ನದ ಕುನ್ನಿ ಮೂಟಿರ್ ಬೋಟಿರ್! (ರಾಮಾಶ್ರ. ೦೩೩-೪).

**ಬೋಟಿ₂** 'ಬೋಡ' ನೋ.

**ಬೋಟಿ₃**, ಬೋಳ₃ (ನಾ.). ಒಂದು ಬಗೆಯ ಔಷಧೀಸಸ್ಯ: "ಬೋಟಿಂ=ಮಿಟ್ಟು; ಮುಂಡಂ; ಒಂಡೌಷಧಂ" (ಕಮುದ. ಕಂ. ೧). ಸಕಷಾಯ ಕುಜಂಗಳ ದಂತಕಾಷ್ಠದೊಳ್ ಬೋಟಿ ಕೌಂಗು . . . ತೊಯ್ದುಕೊಂಡು ಪಲ್ಲುಲಿಯೆ ದಂತ ಬಳಮಂ ಪಡೆಗುಂ (ಲೋಕೋಪ. ೭-೩) ; ಉಪ್ಪಂ ಬೋಟಿಮುಮಂ ಸಮನಪ್ಪಂತಿರೆ ಕೂಡಿ ಪ್ರರಿದು. . . ಪೂಸುವುದು ಬಜ್ಜಿ ದುಷ್ಟವ್ರಣದೊಳ್ (ಅಶ್ವಶಾ. ೦೨-೧೯). **ಬೋಳ₃** : "ಇಕ್ಷುಪತ್ರಕಂ—ಬೋ(ಬ)ಳ" (ಓಷಂ. ೦೪) ; ವಿಷಮಜ್ವರಕ್ಕೆ ಕಷಾಯ :—ಬೇವಿನ ಒಳ ನಾರು, ಅಮೃತದವಳ್ಳಿ. ಬೋಳ, ಕಓಪಡವಲ ಇವ ಕಷಾಯವ ಮಾಡಿ . . . ಕುಡಿಸಲು ಬಹುದಿನಗಳಿಂದ ಇರುವ ವಿಷಮಜ್ವರ ಮಾಣುವುದು (ಏಪ್ಪಣಿ. ೦೩೯). 'ಬಾಳ₂' ಪರಾ.

[ದೇ.॥ ತುಳು. ಬೋಳ; ತೆಲು. ಬೋಳ, ಬೋಲ./ ಮರಾ. ಬೋಳ]

**ಬೋಟಿಗಡಲೆ**, ಬೋಳಂಗಡಲೆ, ಬೋಳಗಡಲೆ (ನಾ). ಒಂದು ಬಗೆಯ ಔಷಧೀಸಸ್ಯ : "ಅಮೃತ—ಬೋಟಿಗಡಲೆ, ಹಂದಿಗಡ್ಡೆ" (ಓಷಂ. ೪). **ಬೋಳಂಗಡಲೆ** : ಶುಂಠಿ . . . ಬೋಳಂಗಡಲೆಬೇರು ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಶೀತಜ್ವರಂ ಗುಣಮಕ್ಕು (ಸಕವೈ. ೬೬). **ಬೋಳಗಡಲೆ** : "ದ್ವಿಬಲಾ—ಕಳ್ಳಂಗಡಲೆ, ಬೋಳಗಡಲೆ" (ಬಾಹಟೀ. ೨-೨-೮ ಪ) ; ಬೋಳಗಡಲೆಯ ರಸವಲ್ಲಿ ಒಂದು ಗುಳಿಗೆಯ ಕೊಡಲು ಸರ್ವಜ್ವರ ಮಾಣ್ಗುಂ (ಏಪ್ಪಣಿ. ೩೩). 'ಬೋಟಿತರ' ಪರಾ.

[ಬೋಟಿ₃ + ಕಡಲೆ]

**ಬೋಟಿತರ**, ಬೋಳತರ (ನಾ). ಒಂದು ಬಗೆಯ ಔಷಧೀಸಸ್ಯ: "ಬೋಟಿತರಮುದು ಪತಂ ಮುಂಡಿ ಭಿಕ್ಷುಮೆಂದೆನಿಸಿಕ್ಕು" (ಮಂಗರಾ. ೩೯-೨೮); ಅಳೆಯೊಳ್ ಬೋಟಿತರಂ ಸಿತಾಜ್ಯದೊಳಮಂಗುರ್ ಬೆಲ್ಲದೊಳ್ ನಾಗರಂ . . . ಆಯುಷ್ಯಕರಂ (ಲೋಕೋಪ. ೯-೪೩); ಜೀರಿಗೆಯುಪ್ಪು ಬೋಟಿತರಂ . . . ಇಕ್ಕುವುದು ವಾಜಿಗೆ ಸರ್ವರುಜಾಪಹಾರಕಂ (ಅಶ್ವಶಾ. ೭-೩೦). **ಬೋಳತರ** : "ಮುಂಡಿ=ಬೋಳತರಂ" (ಕಾಕಶ. ೨೬); ಬೆಲ್ಲಪತ್ರಂ . . . ಬನ್ನಿ ಗೌರೀದರ್ಭೆ ಬೋಳತರ ನೇತ್ರಮೋಹನದಡವಿದವನ ಗರುಗಂ ಪಾರಿವಾಳ ನೇಱಲಪಲ್ಲವಾ ಇವು ಪತ್ರೆಗಳೊಳುತ್ತಮಂ (ಪೀಕ್ಕ್ಶ. ೭-೦೦-೩೩); ಇಂಗು, ಸೈಂಧವ, ಶುಂಠಿ. . . ಬೋಳತರಂ, ವಾಯುವಿಳಂಗ ಇವಂ ಗೋಮೂತ್ರದಲ್ಲರೆದು ಕುಡಿಯ ಕೊಡಲು ಹೃದ್ರೋಗಂ ಕೆಡುಗುಂ (ಸಕವೈ. ೨೬೮). 'ಬೋಳದರಗ' ಪರಾ. [ದೇ.॥ ತೆಲು. ಬೋಡತರ]

**ಬೋಟಿಸು**, ಬೋಳಿಸು (ಕ್ರಿ). ೧. ಕೂದಲನ್ನು ತೆಗೆ; ಕ್ಷೌರ ಮಾಡು : ತಲೆ ಬೋಟಿಸಿ ಪೋತಂ ಮಿಡಿದಲೆಗುಡುವರ್ (ಸಮುಕ. ೯-೦೨೦) ; ಕಿಡೆ ಮೂಗೋಱೆಂ ಬೋಟಿಸಿ ನಡುದಲೆಯೊಳ್ ಮೆಟಿಸನೊಡೆದು (ಶಮುತ. ೧೮೮ ಕೃಯೋ) ; ಜಡೆಗಟ್ಟಿಲ್ಲಾರದೆಂದು ಬೋಟಿಸಿ (ಶಬ್ದಾಮ. ೧೨೦ ಕೃಯೋ). **ಬೋಳಿಸು** : ೧. ಆನು ನಿಮ್ಮ ಶರಣರಿಗೆ ಮಂಡೆಯ ಬೋಳಿಸಿಕೊಂಡು ಗಂಡುದೊತ್ತಾಬಿಬ್ಬಯ್ಯಾ (ಬಸವ. ೩೩೬) ; ಮಂಡೆಯಂ ನುಣ್ಪೇಳೆ ಬೋಳಿಸಿ (ಬಸಪು. ೩೮-೦೪); ದೀರ್ಘಕುಂತಳವ ಬೋಳಿಸುವಾಗ ಕಂಡು ಕೆಲದೊಳಿರ್ದವರು ಗೋಳಿಡರೆ (ಶರತ. ೬೬-೦೨೩). ೨. (ಅಲಂ) ನಿಶ್ಶೇಷವಾಗಿಸು ; ಇಲ್ಲದಂತೆ ಮಾಡು; ನಷ್ಟ ಮಾಡು : ಹಣ್ಣು ಕಾಯಿಗಳೆಲ್ಲವನ್ನೂ ಬೋಳಿಸಿದರು (ಕಹುಪೊ. ೩೪೦).

**ಬೋಳಿಸಿಕೊಳ್ಳು**=(ಆಉಂ)ಕಳೆದುಕೊಳ್ಳು; ನಷ್ಟಮಾಡಿ ಕೊಳ್ಳು: ಒಂದೆರಡು ಲಕ್ಷ ರೂಪಾಯಿಗಳನ್ನು ಬೋಳಿಸಿಕೊಳ್ಳಲು ಸಿದ್ಧನಾಗಿರುವ ಒಬ್ಬ ನಿರ್ಮಾಪಕ ಸಿಕ್ಕರೆ ಇಂತಹ ಚಿತ್ರಗಳನ್ನು . . . ತಯಾರಿಸಬಹುದು (ಚಾರಗೇ. ೩೮). [ಬೋಳು (< ಬೋಳು) + —ಇಸು$_3$]

**ಬೋಳಿಸುಹ** (ನಾ). ಕೂದಲು ತೆಗೆಯುವಿಕೆ; ಕ್ಷೌರ: "ಕ್ಷೌರಂ. ಭದ್ರಾಕರಣಂ, ಮುಂಡನಂ, ವಪನಂ — ಈ ೪ ಬೋಳಿಸುಹ" (ಹಲಾಯು. ೧೧೯-೩೬). [ಬೋಳಿಸು + —ಹ$_2$ (<—ಪ$_2$)]

**ಬೋಳು** 'ಬೋಡು' ನೋ.

**ಬೋಳುಮಂಡೆ**, ಬೋಳುಮಂಡೆ (ನಾ). = ಬೋಳುದಲೆ: ಕರದ ಕಮಂಡಲಂ ಕಿಱಿಯ ಚಂಡಿಕೆ ಮಿಂಚುವ ಬೋಳುಮಂಡೆ (ಶಾಂತೀಶ್ವ. ೭-೯೩). **ಬೋಳುಮಂಡೆ:** ಒಬ್ಬರು ಬೋಳುಮಂಡೆ ಅರಸರಿದ್ದರು ನಮಗೆ (ಸ್ವಕೃಷ್ಣ. ೧೭). [ಬೋಳು (< ಬೋಡು) + ಮಂಡೆ]

**ಬೋಳೆ**$^3$, ಬೋಳೆ$_1$ (ನಾ). ಒಂದು ಬಗೆಯ ಹರಿತವಾದ ಬಾಣ: "ಬೋಳೆ$^3$ — ಒಂದಂಬಿನ ಭೇದಂ" (ಶಮದ. ಶಾ. ೧): ಬೋಳೆಯಂಬಿನ ಸೂಟ್ಸರಿ, ನಿಡುಗಲ್ಲ ಮೊಲ್ಸರಿ, ಬಡಿಗೋಲ ಜಡಿ (ರಾಮಾಶ್ವ. ೧೪೩-೨೪). **ಬೋಳೆ$_1$** : "ಬೋಳೆಯೆಂಬಿನಲ್ ಶರಭೇದಂ" (ಶಾರಾ. ೨೭); ಹಿಳಿಕು ಕವಲಂಬು ಬೋಳೆವಿದಿರೆಲೆ . . . ಸವಿವಾಯನೆಂಬ ನಾನಾ ಸರಳನು ಸೆಳೆದು (ಸೋಮಶ. ೩-೨೭) ; ಗಱಿಯೊಂದವರಲ ಸರಲನ ಮಸೆದ ಮುಮ್ಮೊನೆಯ ಬೋಳೆಯೋ . . . ಎನಿಸಿ ಕಣ್ಗೆಡ್ಡವಾಗೆ (ಶದ್ಮರಾ. ೩-೩೨); ದುರಿಯೋಧನನ ಮೆಯ್ಯಲಿ ಮೆತ್ತಿದನು ಮುಮ್ಮೊನೆಯ ಬೋಳೆಗಳ (ಕುಮಾರವ್ಯಾ. ೧೪-೩೦).

**ಬೋಳೆಯ**, ಬೋಳೆಯ$_1$ (ನಾ). ದೇವತೆ ; ಅಮರ : "ಅಮರ್ಗಣೆ ಗಳ್, ಕನಸಿಲ್ಲವರ್ . . . ಬೋಳೆಯರ್—ಈ ೯ ದೇವರ್ಕಳ ಪೆಸರ್" (ಕಕನಾ. ೯೮-೧೯); ಇಂದ್ರನೀತನೆ ಮತ್ತಮಿವರ್ ದಿಕ್ಪಾಳರೆ ಬೋಳೆಯ ರೀಕೆಯರ್ ಚಂದ್ರವಕ್ತ್ರೆಯರಗ್ಗದ ದೇವಸ್ತ್ರೀಯರೆ . . . ಎಂದಿಂದ್ರ ಜಾಲಮನೀಕ್ಷಿಸಿ ಚೋದ್ಯಂಬಟ್ಟುದು ಭೂಪಸಭಾಜನಂ (೧೮೦ವ. ೪-೧೩೭); ದೇಸಿಗರಂ ದೇವರ್ಕಳ್ಗೊಡೆಯರ್ ಮಾಟ್ಪಿರೆ ನೀಟ್ಕರಿಸದೆ ನಿಮ್ಮ ದೊರೆಗೆ ಬೋಳೆಯರೊಳರೇ (ಕಮದ. ೨೪ ಕೃಷ್ಣೋ); ಪೊಂಬೆಟ್ಟಂ. . . ಬೋಳೆಯರ್ಗೆ ಮೇಳದೆಡೆಯುಮೆನಿಸಿ ಕಣ್ಗೊಳಿಕುಂ (ರಾಮಾಶ್ವ. ೭-೭), **ಬೋಳೆಯ$_1$** : ವಾಳದಂಡದ ಬೋಳೆಯಂಗೆ ಬಸವಣ್ಣಂ ಮೆಯ್ಯಿಕ್ಕಿ ಕಾಳ್ದಿರ್ದ (ಬಸರ. ೪-೭೦); ನೀನಲ್ಲದೆ ಕೂರ್ತು ಪಾಲಿಸಿದ ಬೋಳೆಯರಾರ್ (ಶಂಕರಶಿ. ೯೮).

**ಬೋಳೆಯರರಸ**=ದೇವತೆಗಳ ಒಡೆಯ : ದೇವಮಾನಿಗಳರಸ . . . ದೇವ ಬೋಳೆಯರರಸ (ಬಂತೋಕ. ಪ. ೩೧೯-೧೧); ನೆನೆವರಿಗೆ ತನ್ನನು ತೆತ್ತು ಬದುಕುವೆನೆಂಬ ಬೋಳೆಯರರಸ ನಡೆತಂದ (ಕುಮಾರ. ೧೦-೩೨).

**ಬೋಳೆಯರೆಱೆಯ**=ಬೋಳೆಯರರಸ : ಸುಕನ್ನಂಗಳನಿತ್ತಂ ಹರ್ಷದಿಂದೆ ಬೋಳೆಯರೆಱೆಯಂ (ವೀರಭ. ೧೨-೧೨೧). **ಬೋಳೆಯರೋಜ**,

**ಬೋಳೆಯರೋಜ**=ದೇವತೆಗಳ ಗುರು ; ಬೃಹಸ್ಪತಿ : "ಗುರುವಿನಲ್ಲಿ ಬೋಳೆಯರೋಜನೆಂದು" (ಶಬ್ದಮಂ. ೧೮); ಬೋಳೆಯರೋಜನ ಜಾಣ್ಮೆ . . . ತನ್ನೊಳೊದವೆ ಮನುವಿನ ಮಾರ್ಗದೆ ನಡೆಯುತ್ತೆ (ರಾಮಾಶ್ವ. ೧೧೪-೧೧); "ಬೃಹಸ್ಪತಿಗೆ ಪೆಸರೊರೆಗು ಬೋಳೆಯರೋಜನೆಂದು" (೯೮ರ. ೮೯).

**ಬೌಂಡರಿ** (ನಾ). ೧. ಎಲ್ಲೆ: ಮೇರೆ : ಸರಹದ್ದು. ೨. ಕ್ರಿಕೆಟ್ ಆಟದಲ್ಲಿ ಚೆಂಡನ್ನು ಹೊಡೆದಾಗ ಅದು ಮೈದಾನದ ಎಲ್ಲೆಯನ್ನು ದಾಟಿ ಹೋಗುವುದು; ೪ ಇದಕ್ಕೆ ನಾಲ್ಕು ಓಟಗಳ ಬೆಲೆಯಿದೆ : ಒಂದು ಮ್ಯಾಚಿನಲ್ಲಿ ರಾಂ ಯಾದರು ಬಾಲನ್ನು ಬೌಂಡರಿಗೆ ಕಳುಹಿಸಿದರು. ಆದರೆ ಅದು ಬೌಂಡರಿ ಗೆರೆ ದಾಟಲಿಲ್ಲ. ಈ ಕಾರಣದಿಂದ ಅಂಪೈರ್ ಅದನ್ನು ಬೌಂಡರಿ ಅಂತ ಹೇಳಲಿಲ್ಲ (ಕಾರಗೇ. ೧೩೧).

[←ಇಂ. Boundary]

**ಬೌದ್ಧ** (ಗು). ೧. ಬುದ್ಧಿಗೆ ಸಂಬಂಧಿಸಿದ; ಬೌದ್ಧಿಕವಾದ. ೨. ಬುದ್ಧನಿಗೆ ಸಂಬಂಧಿಸಿದ : 'ಬೌದ್ಧಮತ' ಪರಾ. (ನಾ). ೩. ವಿಷ್ಣುವಿನ ದಶಾವತಾರಗಳಲ್ಲಿ ಒಂಬತ್ತನೆಯದು : "ಆ ಮತ್ಸ್ಯನಾ ಕೂರ್ಮ... ಬೌದ್ಧನಾ ಕೃಷ್ಣನೆಂದಾತನವತಾರ ಹತ್ತನಿಕ್ಕುಂ" (ಮಂಗರಾ. ೭-೧೯); ರಾಮನಾಮ ರತ್ನಹಾರ ದೊರಕಿತು ಎನಗೆ . . . ಬೌದ್ಧನೆಂಬೋ ಅತಳಗಳ ಬಿಗಿದಿತ್ತು ಬಹು ಬಗೆದಂತಿತ್ತು (ಪುರಂದ. ೫-೭೪-೩); ಬೌದ್ಧ ಒಂಭತ್ತನೆಯ ಅವತಾರ (ಗಗಹಾ. ೧೯-೪೫). ೪. ಬುದ್ಧನ ಮತಾನುಯಾಯಿ ; ಬುದ್ಧನಿಂದ ಪ್ರವರ್ತಿತವಾದ ಮತದ ಅನುಯಾಯಿ : ನರಪತಿಯ ಹೊರೆಗಾ ಸಮಯದಲಿ ನೆರೆದು ಜೈನರು ಬೌದ್ಧರುಂ ಧಿಕ್ಕರಿಸಿ ಬಂದಿಂತೆಂದು ಹೇಳಿದರಾ ಮಹೀಶಂಗೆ (ಬಸವು. ೫೧-೨೧). [ಸಂ.]

**ಬೌದ್ಧಮತ** (ನಾ). ಬುದ್ಧನಿಂದ ಪ್ರವರ್ತಿತವಾದ ಮತ : ಬೌದ್ಧ ಮತದ ನಾಶದೊಂದಿಗೆ ಬೌದ್ಧಗ್ರಂಥನಾಶವೂ ಆಯಿತು (ಕಶಾ. ೧೨೬); ಬೌದ್ಧಮತವೆಲ್ಲಾ ಒಂದೇದು ತಿಳಿದು ಶೂನ್ಯವಾದವೂ ಮಸ್ತುವಾದವೆಂದು ಭ್ರಾಂತಿಗೆ ಅವಕಾಶವಾಗುವುದು (ಹಿಂದಗಾ. ೪೫). [ಸಂ.]

**ಬೌದ್ಧಾವತಾರ** (ನಾ). ವಿಷ್ಣುವಿನ ಒಂಬತ್ತನೆಯ ಅವತಾರ : ಬತ್ತಲೆ ನಿಂತಗೆ ಬೌದ್ಧಾವತಾರಗೆ . . . ಮುತ್ತೈದೆಯರಾರತಿಯೆತ್ತಿರೆ (ಪುರಂದ. ೪-೨೧೩-೩). [ಸಂ.]

**ಬೌದ್ಧಿಕ** (ಗು). ಬುದ್ಧಿಗೆ ಸಂಬಂಧಿಸಿದ : ಮುಕ್ತಾಯಕ್ಕ . . . ಬೌದ್ಧಿಕಅಜ್ಞಾನವನ್ನು ತನ್ನಲ್ಲೂ ಕಂಡುಕೊಂಡಿದ್ದಾಳೆ (ಕೂಪ್ವಳು. ೧೧೯) ; ವಿಶ್ವದ ಸಮಸ್ತ ಬೌದ್ಧಿಕ ವ್ಯಾಪಾರಗಳಿಗೆಲ್ಲ ಮನುಷ್ಯನೇ ಕೇಂದ್ರಬಿಂದು (ಗ್ರಂಥಾಂ. ೧). [ಸಂ.]

**ಬೌದ್ಧಿಕತೆ** (ನಾ). ಬುದ್ಧಿಯ ಪ್ರಧಾನತೆ : ಪಾತ್ರರಚನೆಯ ದೃಷ್ಟಿಯಿಂದ ಎಡ್ವಿನ್ ವ್ಯಕ್ತಿತ್ವದಲ್ಲಿ ಕತೆಯ ಬೌದ್ಧಿಕತೆಯನ್ನು ತೂಗಿಸಿಕೊಂಡು ಹೋಗುವ ನಿರ್ಲಿಪ್ತತೆ ಇಲ್ಲ (ಹೊಸಕ್ಷಿ. ೨೯೧). [ಸಂ. ಬೌದ್ಧಿಕತಾ]

**ಬೌಬೌ** (ನಾ). ಒಂದು ಅನುಕರಣ ಶಬ್ದ : ಬೌಬೌ ಎಂದು ನಾಯಿ ಬೊಗಳುತ್ತಲೇ ಇತ್ತು (ರೂಢಿ).

**ಬೌಲಿ**, ಬೌಳಿ (ನಾ). [ಸಂಗೀತ] ಒಂದು ರಾಗದ ಹೆಸರು: ಘನರಾಗಗಳು: ನಾಟಿ, ಗೌಲ, ವರಾಲೀ ಅಂತೆಯೇ ಬೌಲಿ, ಶ್ರೀರಾಗ (ಕಸುಶ. ೧೩೧). **ಬೌಳಿ** : ಬೌಳಿ... ೧೫ನೇ ಮೇಳಕರ್ತ ಮಾಯಾಮಾಳವಗೌಳದಲ್ಲಿ ಜನ್ಯ . . . ಬೆಳಗಿನ ಜಾವದಲ್ಲಿ ಹಾಡಬೇಕಾದ ರಾಗ (ಸಂಗೀತಕೋ. ೧೨೯). 'ಭೌಳಿ'ಪರಾ [<ಸಂ. ಬೌಲೀ]

**ಬೌಳಿ** 'ಬೌಲಿ' ನೋ.

**ಬ್ಯತಿಪಾತ** 'ಬ್ಯತೀಪಾತ' ನೋ.

**ಬ್ಯತೀಪಾತ**, ಬ್ಯತಿಪಾತ (ನಾ). [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಹದಿನೇಳನೆಯದು : ಸೂರ್ಯಗ್ರಹಣ ಸಂಕ್ರಾಂತಿ ಬ್ಯತೀಪಾತಗಳೆಂಬ ಸಕಳಪುಣ್ಯದಿನಂ ದೊರೆಕೊಂಡಂದು (ಎಕ. XII, ಗುಬ್ಬಿ. ೧೧-೪೩ ; 1226). **ಬ್ಯತಿಪಾತ** : ಉತ್ತರಾಯಣ ಸಂಕ್ರಾಂತಿ ಬ್ಯತಿಪಾತದಂದು . . . ಧಾರಾಪೂರ್ವಕಂ ಮಾಡಿ ಬಿಟ್ಟ ಗದ್ದೆ (ಎಕ. VI, ಕಡೂರು. ೧೭-೩೪; 1171). [<ಸಂ. ವ್ಯತಿಪಾತ, ವ್ಯತೀಪಾತ]

**ಬ್ಯವಸಾಯ** 'ಬೆವಸಾಯ' ನೋ.

**ಬ್ಯವಹಾರ** 'ಬೆವಹಾರ' ನೋ.

**ಬ್ಯಾಂಕ್** 'ಬ್ಯಾಂಕು' ನೋ.

**ಬ್ಯಾಂಕು, ಬೇಂಕು, ಬ್ಯಾಂಕ್** (ನಾ). ಹಣಕಾಸಿನ ವ್ಯವಹಾರದ ಒಂದು ಸಂಸ್ಥೆ ; ಖಾತೆದಾರರ ಹಣವನ್ನು ಭದ್ರವಾಗಿ ಇಟ್ಟುಕೊಂಡು ಬೇಕಾದಾಗ ಹಿಂದಿರುಗಿಸುವುದು, ಅದರ ಮೇಲೆ ಬಡ್ಡಿ ಕೊಡುವುದು ಮತ್ತು ಈ ವ್ಯವಸ್ಥೆಯಿಂದ ತನ್ನಲ್ಲುಳಿದ ಹಣವನ್ನು ಸಾಲಕೊಟ್ಟು ಲಾಭ ಸಂಪಾದಿಸುವುದು ಮುಂತಾದ ಅನೇಕ ಏರ್ಪಾಡುಗಳನ್ನುಳ್ಳ ಸಂಸ್ಥೆ : ಬ್ಯಾಂಕಿನ ಮೂಲಕ ಹಣಕಾಸಿನ ವ್ಯವಸ್ಥೆ ಮಾಡುವುದೂ ಮಾಡಿಸುವುದೂ ಅನುಕೂಲವೆಂದು ತಿಳಿದು ಬಂದಿದೆ (ಹಣಶ್ರ. ೬೭) ; ಮಗನೆನಗೋಲೆಯು ಬರೆದರೆ ಬೇಕೆಸಗರ್ಥಕೆ ಬ್ಯಾಂಕಿನ ನಂಟು (ಇಂಚಾಕ. ೦೬-೩೪). **ಬೇಂಕು** : ಬೇಂಕಿನಲ್ಲಿ ಇಟ್ಟ ಹಣವೆಲ್ಲ ವೆಚ್ಚವಾಗುತ್ತ ಬಂತು (ಶಿಧಿವ್ಯ. ೦೬೮). **ಬ್ಯಾಂಕ್** : ಅಂದು ಬ್ಯಾಂಕ್ ಇದ್ದುದರಿಂದ . . . ಬೇಸರ ಮರೆಯಲು ಸಾಧ್ಯವಾಯಿತು (ಕಾಯಾಕ. ೦೦೦). [← ಇಂ. Bank]

**ಬ್ಯಾಂಡು** (ನಾ). (ಸಾಮಾನ್ಯವಾಗಿ ಪಾಶ್ಚಾತ್ಯಪದ್ಧತಿಯ) ವಾದ್ಯ ಮೇಳ : ಒಂದು ಜೋಡು ಕರಡೀಮಜಲು, ಒಂದು ಜೋಡಿ ಬ್ಯಾಂಡು (ಕಿತುಗು ೩೪) ; ಎಲ್ಲಕ್ಕೂ ಮುಂದೆ ಬ್ಯಾಂಡು _ ಬಜಂತ್ರಿಯವರು (ಕಾರುಕ ೧). [← ಇಂ. Band]

**ಬ್ಯಾಂಡೇಜ್** 'ಬ್ಯಾಂಡೇಜು' ನೋ.

**ಬ್ಯಾಂಡೇಜು, ಬ್ಯಾಂಡೇಜ್** (ನಾ). (ಔಷಧಿ ಹಾಕಿ ಗಾಯಗಳಿಗೆ ಕಟ್ಟುವ) ಬಟ್ಟೆಯ ಪಟ್ಟಿ, -ಕಟ್ಟು : ಕಂಪೌಂಡರರು ಬಂದು ಗಾಯ ತೊಳೆದು ಬ್ಯಾಂಡೇಜು ಕಟ್ಟುತ್ತಿದ್ದರು (ಮುಂಗಾಮು. ೦೦೩);ಬ್ಯಾಂಡೇಜನ್ನು ಬಿಚ್ಚಿ ಮಾಯುತ್ತಿದ್ದ ಗಾಯಗಳಿಗೆ ಮುಲಾಮು ಹಾಕುತ್ತಿದ್ದಳು (ಬೆಂಗಬ. ೨೨೬). **ಬ್ಯಾಂಡೇಜ್** : ಹೊಸ್ಕಳದ ಮೇಲೆ ಬಿಗಿಯಲು ಬ್ಯಾಂಡೇಜ್ . . . ಇವುಗಳನ್ನು ಸಿದ್ಧಮಾಡಿಕೊಳ್ಳಬೇಕು (ಗೃಹವಿ. ೦೦೨). [← ಇಂ. Bandage]

**ಬ್ಯಾಕೀರ್ಣ** (ಗು). ಹರಡಿದ; ಚೆಲ್ಲಿದ : ದಿವಿಜದನುಜನಾಗೇಂದ್ರಭಾಸ್ವತ್ಕಿರೀಟಸ್ತೋಮಬ್ಯಾಕೀರ್ಣ್ಣನಾನಾಮಣಿಕಿರಣಸಮಾವೇಷ್ಟಪಾದಾರವಿಂದಂ (ಕಇಶಿ. ೫೨-೦೨-೬೮ ; 1124). [< ಸಂ. ವ್ಯಾಕೀರ್ಣ ]

**ಬ್ಯಾಕ್ಟೀರಿಯಾ** (ನಾ). "ಕೊಳೆಯುವ ಸಸ್ಯಜನ್ಯ ಅಥವಾ ಪ್ರಾಣಿಜನ್ಯ ದ್ರವ್ಯಗಳಲ್ಲಿ ಉತ್ಪತ್ತಿಯಾಗಿ, ರೋಗಜನಕವೂ ಜೀವಿಸಹಾಯಕವೂ ಆಗಿ ಸೂಕ್ಷ್ಮದರ್ಶಕೀಯವೂ ವಿವಿಧಾಕಾರವೂ ಆದ ಏಕಾಣುಜೀವಿಗಳ ಜಾತಿಯಲ್ಲಿ ಒಂದು : ಏಕಾಣುಜೀವಿ" (Bacterium. ಇಂಕನ್) : ನಮ್ಮ ಕಣ್ಣಿಗೆ ಕಾಣದ ನಮ್ಮ ಸುತ್ತಲು ಲೆಕ್ಕವಿಲ್ಲದಷ್ಟು ಅಣುಜೀವಿಗಳು ಆವರಿಸಿಕೊಂಡಿವೆ. ಇವುಗಳನ್ನು ಬ್ಯಾಕ್ಟೀರಿಯಾ (Bacteria) . . . ಮೈಕ್ರೋಬ್ಸ್ (Microbes) ಎಂಬ ಅನೇಕ ಹೆಸರುಗಳಿಂದ ಕರೆಯುತ್ತಾರೆ (ಸಸ್ಯಶಾ. ೦೩೪) ; ರೋಗರುಜಿನಗಳಿಗೆ ಕಾರಣವಾದಂಥ ಜೀವಿಗಳಲ್ಲಿ ಮೊದಲು ಬ್ಯಾಕ್ಟೀರಿಯಾ ವೈರಸ್ಸ್‌ಗಳನ್ನು ಪರಿಶೀಲಿಸಿದರೆ, ಇವು . . . ನಮ್ಮ ಮನೆಯನ್ನು ಹೊಕ್ಕು ಮಲಿನ ಮಾಡುವುವು (ಗೃಹವಿ. ೦೮೨). [← ಇಂ. Bacteria. / P ಇಂಗ್ಲಿಷ್‌ನಲ್ಲಿ ಇದು 'Bacterium' ಎಂಬುದರ ಬಹುವಚನರೂಪ]

**ಬ್ಯಾಖ್ಯಾನ** (ನಾ). ವಿಸ್ತಾರವಾದ ನಿರೂಪಣೆ : ಛಬ್ಬಶ್ರವ್ಯಕಾಬ್ಯನಾಟಕಾಖ್ಯಾಯಿಕಾಖ್ಯಾನಾದಿ ಬ್ಯಾಖ್ಯಾನವ್ಯಾಪಾರಾಬ್ಯಪೇತನ್ನು ಶ್ರೀಹರ್ಷಶರಸರುಹೀಶ್ವರಶ್ರವಣ ಪುಟಪೇಯಗೇಯಾಮೃತರಸಾಸ್ವಾದಸಂಜನಿತ ಸಂತತೋದ್ಧಿಷ್ಟ (ಎಕ. XI, ದಾವಣ. ೮೦-೭೭; 1148). [<ಸಂ. ವ್ಯಾಖ್ಯಾನ]

**ಬ್ಯಾಗು** (ನಾ). ಚೀಲ; ಸಂಚಿ : ಇದೋ ನಿಮ್ಮ ಬ್ಯಾಗು. ನಿಮ್ಮ ಹಣ (ಬರಬೀ. ೦೨). [← ಇಂ. Bag]

**ಬ್ಯಾಟರಿ** (ನಾ). ೧. ಒಣ ವಿದ್ಯುತ್‌ಕೋಶಗಳಿಂದ ಬೆಳಗಿಸಬಲ್ಲ ಸಣ್ಣ ಬಲ್ಬಿನ ದೀಪ; ಟಾರ್ಚು: ಅಲ್ಲೊಬ್ಬರು ಇಲ್ಲೊಬ್ಬರು ತಮ್ಮ ಕೈಯಲ್ಲಿದ್ದ 'ಬ್ಯಾಟರಿ'ಯನ್ನು ಹುಡುಗಿಯಾರ ಕಡೆ ತಿರುಗಿಸಿ ಬೆಳಕು ಚೆಲ್ಲಿದರು (ಅಂತಃ. ೦೦); ಉಪಮೆ ಈ ದೃಷ್ಟಿಯಿಂದ ಕತ್ತಲಿದ್ದಲ್ಲಿ ಬೆಳಕು ಚೆಲ್ಲುವ ಬ್ಯಾಟರಿ (ಶಿಶಾಪಂ. ೦೪೭). ೨. ಒಣ ವಿದ್ಯುತ್‌ಕೋಶಗಳ ಶ್ರೇಣಿ : ಇನ್ನೆರಡು ವಿದ್ಯುತ್ತನ್ನು ಸೃಜಿಸುವ ಬ್ಯಾಟರಿ ಎಂಬ ಪೆಟ್ಟಿಗೆಗಳಿಗೆ ಹೋಗಿವೆ (ಮನಕ. ೬೭). ೩. ತುಪಾಕಿದಳ; ತುಪಾಕಿ ಸೈನಿಕರ ತುಕಡಿ : ನಮ್ಮ ಬ್ಯಾಟರಿಯ ಸರದಿ ಬಂದಾಗ ರಣಭೂಮಿಗೆ ಹೋಗಲೇ ಬೇಕಲ್ಲ ? (ಶ್ರಬಸ. ೫೯). 'ಬತೇರಿ' ಹೋ. [← ಇಂ. Battery ]

**ಬ್ಯಾದ, ಬಿಯದ, ಬಿಯ್ಯಾದ, ಬೀಯದ** (ನಾ). ಬೇಡ ; ಶಬರ : ಶೃಗಾಳಮಂತನೆಂಬೊಂ ಬ್ಯಾದರಾಜಂ ಧನಮಿತ್ರನೆಂಬ ಸೆಟ್ಟಿಗೆ ತಂದು ಕೊಟ್ಟೊಡೆ (ಶಃಪುಂಶ. ೦೩೮). **ಬಿಯದ** : "ಬಿಯದರೆಂದುಂ, ಬಿಲ್ಲರೆಂದುಂ ವ್ಯಾಧರ್" (ಕಶಶಾ. ೫೨-೦೮೩); ಬೇಡಿದೊಡೀಯದ್ಯಡೆ ಬಿಯದರ್ ಮೃಗಮಾಂಸವ (ಕಾದಂಪು. ೦೬೬); ಮುನ್ನೋರ್ವ ಬಿಯದ ಪುಲ್ಲೆಯ ಬಿಡಲು ಮಜೀಗಣಿಸಿ ಮರಳಿ ತಾ ಬರಲಿಲ್ಲವೇ (ಶೌಶಚಾ. ೬-೪೫). **ಬಿಯ್ಯದ** : ಮಾತ್ರಿಗೆಯನು ಮಾಡಿದರು ಮೃಗಂಗಳ ಮೊತ್ತವನಲ್ಲಿ ಬಿಯ್ಯದರು (ಕುರಾಶಾಂ. ೨೬-೬೦). **ಬೀಯದ** : ಸಿಂಗಮಿಭಕುಂಭಂಬೊಯ್ಯುದಂ ಕಣಿಸುತ್ತುಂ ನಡುಕಂ ಕಿವ್ಮಿಗೆ ಬೀಯದುಂ ಭರದೆ ನೋಡುತ್ತೊಂದು ಪಾಟ್ಬವಿಯೊಳ್ ಕೆಡೆದಾಗಳ್ (ಕಶರ. ೪-೨೨೬); ಬೆದಱಿ ಶಬರಿಯ ರಕ್ಷಿಪರು ಬೀಯದರನರೆಬರು ಮರನನೇಱಿದರು (ಕಾಶ್ಯಶಾ. ೫-೩೨). P ಬಿಯ್ಯದ, ಬೀಯದ—ಇವು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪಗಳಿರಬಹುದು. [< ಸಂ. ವ್ಯಾಧ ]

**ಬ್ಯಾದಿ, ಬಿಯದ್ದಿ** (ನಾ). ರೋಗ ; ವ್ಯಾಧಿ : ಸೊಡರಂ ನೋಡಿದಾಗಳ್ ಕಣ್ಣೀರ್ಗಳ್ ಸುರಿವುದುಮಂ ಕಂಡೀಗಳೀತಂಗೆ ಬ್ಯಾದಿಗಳೆಂದು ಬಗೆದಿರ್ಪಿನಂ (ವಡ್ಡಾರಾ. ೨೬-೦೭). **ಬಿಯದ್ದಿ** : ವ್ಯಾಧಿ—ಬಿಯದಿ (ಕಮದ. ೨೩೪ ಕೃಪೋ) ; ವ್ಯಾಧಿ, ಬಿಯದಿ (ಕಶ್ಯಾಸು. ೦೬೦ ಕೃಪೋ); ಗೋಮಾಹಾತ್ಮ್ಯಯಂ ಬಣ್ಣಿಪೊಡನಗಮುಳವೆ ! . . . ಶೃಂಗಂಗಳೆಡೆಯಂ ತುಱಿಪ, ಮನುಜಂಗೆ ಬಂದ ಬಿಯದಿ ತಪ್ಪುಗುಂ (ಧಾಪಾಶ್ಯ. ೦೦೫-೦೫). [<ಸಂ. ವ್ಯಾಧಿ]

**ಬ್ಯಾಪ್ತ** (ಗು). ಆವರಿಸಿದ ; ತುಂಬಿದ ; ವ್ಯಾಪ್ತವಾದ : ಕೀರ್ತ್ತಿಬ್ಯಾಪ್ತದಿಶಂ ನಾಗತಿನೃಪಾಳನಿಂದುದಯಿಸಿದಂ (ಎಕ. XI, ದಾವಣ. ೫೨-೫೪ ; 1171). [< ಸಂ. ವ್ಯಾಪ್ತ]

**ಬ್ಯಾಪ್ತಿ** (ನಾ). ವಿಸ್ತಾರ; ಹರಹು : ಇಂದ್ರತ್ವಮಂ ಪಡೆಗೆ ದಿಮಸರಂಗಾದಿನಬ್ಯಾಪ್ತಿಯ ಕೊಟ್ಟು (ಕೌಇಇ. XX, ೦೦೫-೦ ; 1146). [< ಸಂ. ವ್ಯಾಪ್ತಿ]

**ಬ್ಯಾಬ್ಯಾ** (ನಾ). ಒಂದು ಅನುಕರಣ ಶಬ್ದ : ಒಮ್ಮೊಮ್ಮೆ ಕಳ್ಳ ಕೊದಾರಿಯೊಂದು ಮುಂದುಂದ ತಪ್ಪಿಸಿಕೊಂಡು . . . 'ಬ್ಯಾ ಬ್ಯಾ' ಎನ್ನುತ್ತಾ ರೊಪ್ಪದ ಕಡೆ ಕತ್ತಲೆಯಲ್ಲಿ ಓಡಿ ಬರುವುದನ್ನು ಕೇಳಬಹುದು (ಸಪ್ಕೃರು.೦೫).

**ಬ್ಯಾಮೋಹ** (ನಾ). ಅತಿಶಯವಾದ ಆಕರ್ಷಣೆ : ಕಾಮಬ್ಯಾಮೋಹವಿನಿಮ್ಮುಕ್ತರು . . . ಮುಕ್ತ್ಯಾಙ್ಗನಾರಾಧಕರ್ (ಎಕ. XI, ದಾವಣ. ೦೫೦-೬೦; 1101). [<ಸಂ. ವ್ಯಾಮೋಹ]

**ಬ್ಯಾರ** 'ಬೇರ₂' ನೋ.

**ಬ್ಯಾರಿ** 'ಬೇರಿ₁' ನೋ.

**ಬ್ಯಾಲ**. ಬಿಯಳ (ನಾ). ೧. ಪಳಗದಿರುವ ಆನೆ ; ಕಾಡಾನೆ ; ಉಗ್ರವಾದ ಆನೆ : ಭಾಳಲೋಚನ ವಾಹನೋಗ್ರಬ್ಯಾಲನಂ ತನ್ನಿ ಪ್ರಬಲ ಶಂಪಾಲವಿಭುವಂ ತನ್ನಿ (ಬಸಪು. ೫೯-೩೩). **ಬಿಯಳ** : ೧. ವ್ಯಾಳ_ಬಿಯಳ (ಕಮದ. ೨೩೪ ಕೃಪೋ.). ೨. ಒಬ್ಬಾತನ ಹೆಸರು : ನಾಟ್ಯಾಮುಣ್ಣ ಬಿಯಳನುಂ ಪರಿಯ ಮುಗುಳಿಯ ಕೊಮಾರಯ್ಯನುಂ

(ಎಕ್. VI. ಚನ್ನಪ. ೩-೧೩ ; 899 ?) ; ಜಕ್ಕಬೆಯ ಮಗು ಬಿಯಳ (ಮೈಕಂ. ೧೬೩೯, ೩೩-೭; 1019). [<ಸಂ. ವ್ಯಾಲ]

**ಬ್ಯಾಲೆ** (ನಾ). ಮಾತುಗಳಿಲ್ಲದೆ, ಕೇವಲ ನರ್ತನದಿಂದಲೆ ಅಭಿನಯಿಸುವ ನಾಟಕ ; ನೃತ್ಯನಾಟಕ : ಶ್ರೀ ಉದಯಶಂಕರರು . . . 'ಬ್ಯಾಲೆ' ಪದ್ಧತಿಯನ್ನು ನಮ್ಮಲ್ಲಿ ಆಚರಣೆಗೆ ತರಲು ಮುನ್ನಡೆ ಕೈಕೊಂಡರು (ಭಾರತ. ೩೬೩); ತಮ್ಮ ಗೆಲುವನ್ನು ಗಾಳಿಯಲ್ಲಿ ರೂಪಿಸುತ್ತ, ಬ್ಯಾಲೇ ಹುಡುಗಿಯರ ಹಾಗೆ ಹಗುರವಾಗಿ ತೇಲುತ್ತ . . . ನೆಲಕ್ಕೆ ಬಿದ್ದ ಎಲೆಗಳ ಮೇಲೆ ಏಡ್ವಿನ್ ಹೆಜ್ಜೆಯಿಟ್ಟ (ಹೊಸಕ್ಷಿ. ೨೬೭). [← ಇಂ. Ballet]

**ಬ್ಯಾವರ್ಣಿಸು** (ಕ್ರಿ). ಬಣ್ಣಿಸು ; ವರ್ಣಿಸು : ಸಮಸ್ತಸಾರಸೌಖ್ಯಫಲಮನಲ [ಘು]ವಾಕ್ಯಂಗಳಿಂ ಬ್ಯಾವರ್ಣಿಸಿ ದತ್ತಚಿತ್ತನಾಗಿ (ಕನ್ನಡ. XX. ೨೦೩-೨೮; 1247). [<ವ್ಯಾವರ್ಣಿಸು]

**ಬ್ಯೋಮ** (ನಾ). ಆಕಾಶ ; ಗಗನ : ಸೋಮಸುತಂ ಗೌಡಬಲ ಬ್ಯೋಮಾಂಕಂ ಸೂರನನ್ನೆ ವರ್ತಿಸುತಿರ್ಪ್ಪಂ (ಎಕ್. XI. ದಾವಣ. ೧೩-೫೩; 1271). [< ಸಂ. ವ್ಯೋಮನ್]

**ಬ್ರಜ** (ನಾ). ಗುಂಪು ; ಸಮುದಾಯ ; ಸಮೂಹ : ಪರಸಾಮನ್ತ ಕುರುಬ್ರಜೋಗ್ರ ನಿಧನಪ್ರೋದ್ಭೀಮನಂ . . . ಧರೆ ಕೀರ್ತ್ತಿಪ್ಪುದೆ (ಎಕ್. XI, ಚಿತ್ರದು. ೩೬-೩೦; 1199). [< ಸಂ. ವ್ರಜ]

**ಬ್ರಣ, ರಣ₁** (ನಾ). ಹುಣ್ಣು ; ವ್ರಣ : ನೊಣನೊಲ್ವುದೆ ಚಂದನಮಂ ಬ್ರಣದೆಳ್ಳಗ್ಗತೆಯನುಳಿಗುಮೆ ಮಾಜಿದೆಂದುಂ (ಉಶಾರ. ೯೬). **ರಣ₁** : "ರಣ-ವ್ರಣ = ಹುಣ್ಣು" (ಶಬ್ದಕೋ. ೩೭). [< ಸಂ. ವ್ರಣ]

**ಬ್ರತ, ಬತ₁** (ನಾ). ನೋಂಪಿ; ನಿಯಮ ; ವ್ರತ : ಧಾರಿಣಿಮಹಾದೇವಿ . . . ಗುರುಭಕ್ತಿಗೆಯ್ದು ಬಂದಿಸಿ ಶ್ರಾವಕಬ್ರತಂಗಳನೇಜಿಸಿಕೊಂಡು ಬಟಿಕಿಂತೆಂದಳ್ (ವಡ್ಡಾರಾ. ೬೦-೧೪); ತನುವಂ ತೆಯ್ದುಪ್ಪಳಕ್ಕ ಬ್ರತದೊಳೆಸುತೆ ಕನ್ಯಾಬ್ರತಕ್ಕಂತೆ ಪೂಣ್ದಿರ್ದಂ (ಕಾದಂಬ. ೬೯); ಬಾರದು ಬಾರದು ವಿಷಯಿಗೆ ಪಶುಪತಿಯ ಬ್ರತವು (ಬಸವ. ೬೬೦). **ಬತ₁** : ಇಂತಿದೇ ಬತವಿದೇ ಮತವಿಂತಿದೆ ಕಜ್ಜದುಜ್ಜುಗಂ (ವೃಕಪ. ೩೬-೬೦). [< ಸಂ. ವ್ರತ]

**ಬ್ರತಿ** (ನಾ). ವ್ರತನಿಷ್ಠನಾದವನು ; ಮುನಿ ; ಯತಿ : ಇದು ವಿದ್ಯಾದಾನಂ ದೇವಾರಂಗೆಯ್ವ ಬ್ರತಿಗಳುಣ್ಬುದು (ಎಕ್. III, ನಂಜನ. ೦೩೩-೦; ಸು. 970 ?); ಶ್ರೀಮತ್ಪುರೇಶ್ವರಬ್ರತಿ ಸೋಮೇಶ್ವರಚರಣಯುಗಳಸರಸಿಜ ಭೃಂಗಂ (ಎಕ್. XXVIII, ೩-೬; 1082) ; ಬ್ರತಿಗಳಿರ್ಪ ಮನೆ ಮಠವೆಂಬುದು (ಶಬ್ದಮ. ೩೦-೦೯೩). [<ಸಂ. ವ್ರತಿನ್]

**ಬ್ರಧ್ನ** (ನಾ). ೧. ಸೂರ್ಯ. ೨. ಮರದ ಬೇರು. ೩. ದಿನ; ದಿವಸ. ೪. ಎಕ್ಕದ ಗಿಡ. ೫. ಸೀಸ. ೬. ಕುದುರೆ. ೭. ಶಿವ. ೮. ಬ್ರಹ್ಮ. ೯. ಬಾಣದ ಮೊನೆ. ೧೦. ಒಂದು ರೋಗದ ಹೆಸರು. [ಸಂ.]

**ಬ್ರಪಾತಿ** 'ಬೊಮ್ಮಪತಿ' ನೋ.

**ಬ್ರಯಿ** 'ಬಿಯು' ನೋ.

**ಬ್ರಶ್ಯು, ಬ್ರಷ್ಷು** (ನಾ). (ಹಲ್ಲುಜ್ಜಲು, ಬಣ್ಣಬಳಿಯಲು, ದೂಳು ಹೊಡೆಯಲು, ಚಿತ್ರಬರೆಯಲು ಇತ್ಯಾದಿಯಾಗಿ ಅನೇಕ ರೀತಿಯಲ್ಲಿ ಉಪಯೋಗಿಸುವ) ಬಿರುಗೂದಲು, ಸಣ್ಣತಂತಿ ಮುಂತಾದುವು ಗಳಿಂದ ಮಾಡಿದ ಕುಂಚ : ಹಲ್ಲುಜ್ಜುವ ಬ್ರಶ್ಯು ಮತ್ತು ಸಾಬೂನಿನ ಪೆಟ್ಟಿಗೆ ಕೈಸೇರಿತು (ಬಕಾಂಗಿ. ೦೦೦). **ಬ್ರಷ್ಷು** : ಬ್ರಷ್ಷಿಗೆ ಪೇಸ್ಟ್ ಅಂಟಿಸುತ್ತಿದ್ದಂತೆ . . . ಹೊತ್ತಲ್ಲದ ಹೊತ್ತಿನಲ್ಲಿ ಯಾವ ಮಸಕು ಮಸಕು ಏನು ಅಸ್ಪಷ್ಟವಾಗಿ ಆಡಿತು ಎಂದು ಹುಡುಕತೊಡಗಿದ (ಶ್ರಕ್ಷಿ. ೪). [← ಇಂ. Brush]

**ಬ್ರಷ್ಷು** 'ಬ್ರಶ್ಯು' ನೋ.

**ಬ್ರಹ್ಮ** (ನಾ). ೧. ಸಕಲಸೃಷ್ಟಿಗೂ ಮೂಲಕಾರಣವಾದ, ಗುಣಾತೀತವಾದ ಪರಾತ್ಪರ ತತ್ತ್ವ ; ಪರಮಾತ್ಮ : ಬ್ರಹ್ಮವೆನಲದ ಜೆಂದಧಿಕವೇನಿಲ್ಲವದು ತನ್ನಿಂದ ತಾನೆ ತೋಱುತಿರ್ಪುದು (ಅಪ್ಪುಕ. ೦-೦೪); ಚೈತನ್ಯಸ್ವರೂಪನಾದ ಬ್ರಹ್ಮನೆಂಬ ವಸ್ತು, ಪರಬ್ರಹ್ಮ, ಅಪರಬ್ರಹ್ಮನೆಂದು ಎರಡು ವಿಧ (ಹಿಂದಗಾ. ೨೦೦); ಸತ್ಯವೆಂದರೂ ಜ್ಞಾನವೆಂದರೂ ಅನಂತವೆಂದರೂ ಬ್ರಹ್ಮವೆಂದರೂ ಒಂದೇ (ಭಾರತ. ೦೦೬). ೨. ವೇದಮಂತ್ರ. ೩. ವೇದಗಳು. ೪. ಆಗಮಗ್ರಂಥ ಸಮೂಹ. ೫. ಓಂಕಾರ; ಪ್ರಣವ. ೬. ಚತುರ್ವರ್ಣಗಳಲ್ಲಿ ಮೊದಲನೆಯದು ; ಬ್ರಾಹ್ಮಣ ವರ್ಣ. ೭. ವ್ರತಯೋಗ ; ತಪಸ್ಸು. ೮. ಬ್ರಹ್ಮಚರ್ಯ. ೯. ಮೋಕ್ಷ ; ಮುಕ್ತಿ : "ಕೈವಲ್ಯಮಪುನರ್ಭವಂ ಬ್ರಹ್ಮಮಕ್ಷರಂ . . . ಎನೆ ಮೋಕ್ಷಕ್ಕೆ ಪೆಸರೆನಿಕ್ಕುಂ" (ಮಂಗರಾ. ೬-೨೬). ೧೦. ವೇದವೇದಾಂತ ಜ್ಞಾನ ; ತತ್ತ್ವಜ್ಞಾನ. ೧೧. ಬ್ರಹ್ಮನನ್ನು ಅರಿತವನು ; ಬ್ರಾಹ್ಮಣ : ಬ್ರಹ್ಮವಿದನಾದವನೇ ಬ್ರಹ್ಮನನ್ನು ಬಲ್ಲವನೇ ಬ್ರಹ್ಮ ನಾಗುತ್ತಾನೆ (ಭಾರತ. ೦೦೦). ೧೨. ಆತ್ಮ. ೧೩. ಗಾಯತ್ರೀಮಂತ್ರ. ೧೪. ಸೋಮಯಾಗದ ಹೋತೃ, ಉದ್ಗಾತೃ, ಬ್ರಾಹ್ಮ ಮತ್ತು ಬ್ರಹ್ಮ ಎಂಬ ನಾಲ್ವರು ಋತ್ವಿಜರಲ್ಲಿ ಒಬ್ಬ : ಅಗಸ್ತ್ಯಂ ಬ್ರಹ್ಮನಿರ್ದಂ . . . ಋಷಿಗಳ್ ಅಧ್ವರ್ಯೂದ್ಗಾತೃ ಹೋತಾರರುಂ ಋತ್ವಿಜರುಂ ಸಾಮಾಜಿಕರುಮಾಗೆಸೆದರ್ (ರಾಮಾಶ್ವ. ೪೬-೨೩) ; ಯಾಗದಲ್ಲಿ ನಾಲ್ಕು ಋತ್ವಿಕ್ಕುಗಳು ಮುಖ್ಯವಾಗಿರಬೇಕು. ಹೋತನೆಂಬವನು ಋಗ್ವೇದವನ್ನು ಹೇಳುತ್ತಾನೆ . . . ಬ್ರಹ್ಮನೆಂಬವನು ಅಥರ್ವಣವೇದವನ್ನು ತಿಳಿದವನು, ಸರ್ವಜ್ಞನಾಗಿ . . . ತಪ್ಪಿದುದನ್ನು ತಿದ್ದುತ್ತ ಯಾಗವನ್ನು ಮುಖ್ಯವಾಗಿ ಪೂರ್ತಿಮಾಡಿಸುವವನು (ಹಿಂದಗಾ. ೮೭೬). ೧೫. ತ್ರಿಮೂರ್ತಿಗಳಲ್ಲಿ ಒಬ್ಬ ; ಸೃಷ್ಟಿಕರ್ತ ; ಪಿತಾಮಹ : "ಬ್ರಹ್ಮಾ, ಸ್ರಷ್ಟಾ, ಧಾತಾ . . . ಕಮಲಾಸನಃ — ಈ ೨೦ ಬ್ರಹ್ಮನ ಹೆಸರ" (ಶಬ್ದಮ. ೨-೬) ; ವಿಷ್ಣುಗೆಜಿಗಿ ನುಡಿದಂ ಬ್ರಹ್ಮಂ (ಜಗವಿ. ೦-೫೪). ೧೬. ಬ್ರಹ್ಮಲೋಕ : ಆತ್ಮದ ಬಯಕೆವಳ್ಳಿ ದಾಂಗುಡಿ ದಾಂಟಿ ಕಾಲದೇಶಾಂಡವ ನೊಡೆದು ಮಿಾಂಟಿ ಬ್ರಹ್ಮಮಂ ತಬ್ಬುವುದು (ಶಬ್ದಾಂಗ. ೬೩-೦೭,೬). ೧೭. ಬ್ರಹ್ಮಾಸ್ತ್ರ. ೧೮. ಐಶ್ವರ್ಯ ; ಸಂಪತ್ತು. ೧೯. ಆಹಾರ. ೨೦. ದಿಟ ; ಸತ್ಯ. ೨೧. ಬ್ರಾಹ್ಮಣತ್ವ. ೨೨. ಬೃಹಸ್ಪತಿ. ೨೩. ಸೂರ್ಯ. ೨೪. ಏಳುಜನ ಪ್ರಜಾಪತಿಗಳು. ೨೫. ರುದ್ರ. ೨೬. ಇಂದ್ರ. ೨೭. ಚಂದ್ರ. ೨೮. ಅಗ್ನಿ. ೨೯. ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಒಂದು. ೩೦. ಬುದ್ಧಿಜೀವಿ. ೩೧.ಒಂದು ಭೂತ ; ಕ್ಷುದ್ರದೇವತೆ : ಅಂದಿನ ಮಲೆನಾಡಿನಲ್ಲಿ ಭೂತ, ಪ್ರೇತ, ಪಿಶಾಚಿ . . . ಜಟಿಗ, ಬ್ರಹ್ಮ, ಕಲ್ಲುಕುಟಿಗ ಮುಂತಾದ ಹಲವು ಹೆಸರಿನ ಹಲವು ಜಾತಿಯ ದೆವ್ವಗಳಿದ್ದವು (ಶಂಜಶಂ. ೨). ೩೨. [ಛಂದ] ಅಂಶಗಣಗಳಲ್ಲಿ ಒಂದು ; ಎರಡು ಅಂಶಗಳ ಗಣ : 'ಬ್ರಹ್ಮಗಣ' ಪರಾ. ೩೩. [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಒಂದು : ವಿಷ್ಕಂಭ . . . ಬ್ರಹ್ಮ . . . ವೈಧೃತಿಗಳೆಂಬ ಇಪ್ಪತ್ತೇಳುಯೋಗಂಗಳುಂ (ಶಬ್ದಕ. ೨೬೨).

**ಬ್ರಹ್ಮಶೌಚ**=(ಆಲಂ) ಅತಿವಿಳಂಬವಾಗುವ ಶೌಚಕ್ರಿಯೆ : ಅವನ ಬ್ರಹ್ಮಶೌಚ ಮುಗಿಯುವವರೆಗೆ ನನಗೆ ಅವನನ್ನು ಕಾಯುವ ತಾಳ್ಮೆಯಿಲ್ಲ (ರೂಪ). [ಸಂ. ಬ್ರಹ್ಮನ್]

**ಬ್ರಹ್ಮಕಂಬಿ** 'ಬ್ರಹ್ಮಗಂಬಿ' ನೋ.

**ಬ್ರಹ್ಮಕರ್ಮ** (ನಾ). ೧. ಯಾಗದಲ್ಲಿ ಋತ್ವಿಜನಾದ 'ಬ್ರಹ್ಮ'ನು ಮಾಡುವ ಕಾರ್ಯ : ಉನ್ನತತಪಂ ಬ್ರಹ್ಮಕರ್ಮಂ ಬೆಳೆದ ಪುಣ್ಯ

**ಭಂಗಿ₂** (ನಾ). ೧. ಮುರಿಯುವುದು ; ಸೀಳುವುದು. ೨. ಒಡೆತ ; ಸೀಳು ; ಬಿರುಕು. ೩. ಬಾಗು ; ತಿರುವು : ನೆಲೆನೆಲೆ ಭಂಗಿ ಭಂಗಿ ಪದವಣ್ ಬೆಳರ್ವಾಯ್ ಪೆಱತಲ್ಲಿದೆಂತೊ ಕೋಮಲಲತೆ ಪೇೞ್ ಮೊನ್ನಿನಿಯಳಂ ಮಾಱ್ಗೊಂಡುದೊ ಸೂಱ್ಗೊಂಡುದೋ (ಶಂಶಭಾ. ೫-೦೨). ೪. ಅಸ್ಥಿರತೆ ; ಭಂಗುರತೆ. ೫. ಡೊಂಕಾದ ದಾರಿ.— ಹಾದಿ. ೬. ಅಲೆ ; ತೆರೆ. ೭. ಮೋಸ ; ವಂಚನೆ. ೮. ನೆಪ ; ವ್ಯಾಜ. ೯. ಬಗೆ ; ವಿಧಾನ ; ರೀತಿ : "ವ್ಯಾಕೂ(ಕ್ರ)ತಿಃ, ಭಂಗಿಃ —ಈ ೨ ಪರಿ" (ಕಲಾಯು. ೧೨೫-೬೬) : ಆವ ಭಂಗಿಯಿಂ ನೋಡುವೊಡೆನ್ನೊಳಿಲ್ಲ ಗುಣಲೇಶಮುಮಿಾ ತೆಱದಿಂದನುಗ್ರಹಂಮಾಡು ವುದರ್ಕೆ ದೇವಿಯರದೊಂದು ಋಜುತ್ವಮೆ ಮುಖ್ಯಕಾರಣಂ (ಶಾದಂಉ. ೦೫೧) ; ಜೋಲ್ದುಗುವ ಕುರುಳಂ ತಿದುರ್ತಮ್ಮವಿಂತೆಂದೆಳಂದಿನ ಭಂಗಿಯಿಂ (ದುಃಕೋತ. ೨-೬೧). ೧೦. ದೇಹದ ನಿಲುವು.—ವಿನ್ಯಾಸ : ಅಂಗೋಪಾಂಗದೊಳ್ ಸಂಗಳಿಸುವ ಪಲವುಂ ಭಂಗಿಯಿಂ . . . ಎಸೆದುದು ಭರತಾಂತಃಪುರಸ್ತ್ರೀಸಮೂಹಂ (ಆದಿಪು. ೧೦ ೦೨೫) ; ಪೊಸಬಿಸುಸುಯ್ಯ ಪಾಡಱ್ದ ಮೆಯ್ಯ ಕದಂಪಿನ ಕೆಯ್ಯ ಭಂಗಿ ಕಣ್ಗೆಸೆಯೆ (ಶಾಂತಿಪು. ೮-೯೮) ; ಮುರಿಮುರಿದು ನೋಟ್ಪ ಭಂಗಿಯಿಂ ತಮ್ಮ ಕೊನೆಗಣ್ಗಳ ಕಾಂತಿಯಿಂ ದೆಸೆಯನೆತ್ತಂ ಬೆಳಗಿಯುಂ (ರಾಮಾಕ. ೫೯-೦೪). ೧೧. ಚರ್ಯೆ ; ಅಭಿವ್ಯಕ್ತಿ : ನಿಲುವಿನಲಿ ಸ್ವಸ್ಥಾನದಲಿ ಕೈಚಳಕದಲಿ ಭಂಗಿಯಲಿ ಭರದಲಿ . . . ಶ್ರಮವನು ತೋಱದನು ಪಾರ್ಥ (ಕುವ್ಯಾಆ. ೬-೪೧) ; ಕಾಗದ ಕತ್ತರಿಸುವ ಚಾಕನ್ನು ತೆಗೆದುಕೊಂಡು ಅಲ್ಲಾಡಿಸುತ್ತ, ಹೀಗೆ ನಾನಾ ವಿಧವಾದ ಭಂಗಿಭಣಿತೆಗಳಿಂದ ಮಾತಿನ ವೈಖರಿಯನ್ನು ತೋರಿಸುತ್ತಿದ್ದನು (ಪುಸದು. ೩೬). ೧೨. ಪ್ರಕಾರಾಂತರದಿಂದ ಹೇಳುವ ಮಾತು ; ಉಕ್ತಿವೈಚಿತ್ರ್ಯ : ಅಪ್ರಸಿದ್ಧ ಮಾತುಗಾರಿಕೆಗಳನ್ನೂ ಮಾತಿನ ಭಂಗಿಗಳನ್ನೂ ವಿದಗ್ಧರ ಗೋಷ್ಠಿಗಳಲ್ಲಿ ನಾವು ನೋಡಿಲ್ಲವೇ ? (ವ್ಯಾಖ್ಯಲೋ. ೨೦೪). ೧೩. ಬೆಡಗು ; ಒನಪು ; ಒಯ್ಯಾರ : ನಿಲ್ಕುವು ರಸಂಗಳಿಲ್ಲಿ ಮಡಲ್ತನೆ ಭಂಗಿಯೊಳನಂಗಸಂಗಮಲತೆವೊಲ್ ನಿಲ್ಕು (ಆದಿಪು. ೯-೨೦) ; ಸುತ್ತುವ ಸೋಗೆಯ ಸುತ್ತಿನೊಳಾಡುವ ಕೇಕಿಯ ಭಂಗಿ ಲೋಕಮಂ ಸೋಲಿಸುಗುಂ (ಉಕೋಡ. ೩-೩೬). ೧೪. ಠೀವಿ ; ಗತ್ತು : ಭಂಗಿ ಮನಸಿಜನ ಗಾಡಿಗೆ ಭಂಗಮನೊಡರಿಪೆ . . . ವಿದ್ಯುದಂಗಂ ಬಂದಂ (ಶಂಶಾವೂ. ೬-೬೪). ೧೫. (?) : ಸ್ವಯಂಭುದೇವರ ಸ್ಥಾನಾಧಿಪರಪ್ಪ ದೇವರಾಸಿಜೀಯ್ಯರ ಸಿಷ್ಯಂ ವಾಮದೇವ ಭಂಗಿಯಿನೊಡ್ಡೆಳಗುಳ್ಳಂಗನೆಯುರ ಪುತ್ರಂ (ಸೌಇಇ. XX, ೨೪-೨೩ ; 1034). [ಸಂ.]

**ಭಂಗಿ₃** (ನಾ). ಬೀದಿಯ ಕಸ ಗುಡಿಸುವ ವೃತ್ತಿಯವನು; ಜಲಗಾರ ; ಜಾಡಮಾಲಿ : ಭಂಗಿಗಳು ಅಥವಾ ಹಲಾಲಖೋರರು . . . ಪಾಯಖಾನೆಗಳಲ್ಲಿಯ ಮಲವನ್ನು ತೆಗೆದು ಸ್ವಚ್ಛಮಾಡುವರು (ಕಶಾಗೆ. ೨೨೦) : ಮ್ಯುನಿಸಿಪಾಲಿಟಿಯ ಭಂಗಿಗಳು ಅದೇ ರಸ್ತೆಯನ್ನು ಗುಡಿಸಿ ಹೋಗಿದ್ದರು (ಮುಃಕರುದಾ. ೦೩೬) ; ಈ ಇಮಾರತಿಯನ್ನು ಒಬ್ಬ ಭಂಗಿಯು ಕಟ್ಟಿಸಿದನೆಂತಲೂ ಕೆಲವರು ಹೇಳುತ್ತಾರೆ (ಬಿಪದ. ೨೨).

[ ← ಹಿಂ. ಮರಾ. ಭಂಗೀ ]

**ಭಂಗಿಗ** (ನಾ). ಗಾಂಜಾ ಸೇದುವ ಚಟವುಳ್ಳವನು : ಜವ್ವನಿಗ ಭಂಗಿಗ ಕಳ್ಳುಗುಡಿ ಜೂಜಿಗ ಸುಂಕಿಗ ತಲೆಬೋಳಿಸಿ ಭಾಷೆಮಾಡೆ ನಿರ್ಧರವಿಲ್ಲ (ಕುಂಕ. ೧೦೪-೧೧). [ ಭಂಗಿ₁ + —ಗ₂ ]

**ಭಂಗಿತ** (ನಾ). ೧. ಅಪಮಾನಕ್ಕೆ ಒಳಗಾದ ವ್ಯಕ್ತಿ : ಒಲ್ಲೆನು . . . ಸಂಗನ ಶರಣರನಱಿಯದ ಉಳಿದ ಭಂಗಿತರ (ಬಸವ. ೬೩೫) ; ಅಂಗದಾಪ್ಯಾಯನಕ್ಕೆ ಲಿಂಗವನಱಿಸುವ ಭಂಗಿತರನೇನೆಂಬೆ (ಅವಚಂ. ೩೩-೦೮೨) ; ವಾದದಲಿ ತಲೆವಾಗಿ ಭಂಗಿತರಾದ ಜೈನರು ಮತ್ತೆಯುಂ ಸಂವಾದಿಸಿ ದರೀಯಾಲಪ್ವೊಂದಿದ್ದಿಹುದು . . . ಎನಲು (ಬಸಪು. ೫೦-೬೬). ೨. ಸೋತು ಹೋದವನು ; ಪರಾಜಿತ : ಇನ್ನು ಹುಟ್ಟದೆಯಿರಲಿ ನಾರಿಯರೆನ್ನ ವೊಲು ಭಂಗಿತರು ಭುವನದೊಳಿನ್ನು ಜನಿಸಲು ಬೇಡ ಗಂಡರು ಭೀಮಸನ್ನಿಭರು (ಕುವ್ಯಾವಿ. ೩-೫೬). [ಸಂ.]

**ಭಂಗಿಪಟ್ಟಿ** (ನಾ). ಭಂಗಿಗಳಿಗೆ ವೇತನ ನೀಡಲು ವಸೂಲು ಮಾಡುವ ಸುಂಕ,—ತೆರಿಗೆ : ಜಕಾತಿ, ಭಂಗೀಪಟ್ಟಿ, ಮಾರ್ಕೀಟ್ ಫೀ, ಛಕಡೀಪಟ್ಟಿ ಇವೇ ಆದಾಯದ ಮುಖ್ಯಬಾಬುಗಳು (ಕಶಾಗೆ. ೪೯೩).

[ ಭಂಗಿ₃ + ಪಟ್ಟಿ₂ ]

**ಭಂಗಿಭಾಷಿತ** (ನಾ). ಪ್ರಕಾರಾಂತರದಿಂದ ಹೇಳುವ ಮಾತು ; ಉಕ್ತಿವೈಚಿತ್ರ್ಯ : ಭಂಗಿಭಾಷಿತದಿನಾತನಂ ಪ್ರೀತನಂ ಮಾಡಿ (ಕೃಪ್ರಪು. ೬-೪೯ ವ).

[ಸಂ.]

**ಭಂಗಿಮುಕ್ಕ**. ಬಂಗಿಮುಕ್ಕ (ನಾ).= ಭಂಗಿಗ : ಲಿಂಗಲಿಂಗದೊಳಗಿರುವ ಚಿನ್ಮಯವ ತಿಳಿಯದೆ . . . ಜಂಗಮ ಸ್ಥಾವರದ ಭಾವವನು ತಿಳಿಯದೆ ಭಂಗಿಮುಕ್ಕಗಳೆಲ್ಲ ಲಿಂಗವಂತರಹರೆ (ಕವಕ. ೦೨೬-೩). **ಬಂಗಿಮುಕ್ಕ** : ನಾವು ಹೇಳಿ ಕೇಳಿ ಸೆರೆಗುಡುಕರು.ಬಂಗಿಮುಕ್ಕರು ! (ಕಲಕು. ೦೫).

[ ಭಂಗಿ₁ + ಮುಕ್ಕ₁ ]

**ಭಂಗಿವಡೆ** (ಕ್ರಿ). ಬೆಡಗನ್ನು ಹೊಂದು ; ವಿಲಾಸವನ್ನು ಪಡೆ : ಲತಾಂಗಿ ಭಂಗಿವಡೆದಿರ್ದಳ್ ಚೇಂಟವೆಂಬೊಂದು ಬಳ್ಳಿಗೆ ಪೊಯ್ಯಾರೆಱ್ ವಂದದಿಂ (ಜಗಿಪಿ. ೧೧-೧೧) ; ಭಂಗಿವಡೆವಿನೆಗವೋದಿನ ಪಾಂಗೆಸೆವಾರ ಘಟಿಯಲ್ಲಿ . . . ಮಂಗಳಪಾಠಕತೆಪೆತ್ತರರೆಬರಮರ್ತ್ಯರ್ (ವರ್ಧಪು. ೦೪-೯).

[ ಭಂಗಿ₂ + ಪಡೆ₁ ]

**ಭಂಗಿವೆಱು** (ಕ್ರಿ).=ಭಂಗಿವಡೆ : ಸುಳಿಗುರುಳೋಳಿ ಕಣ್ಗೆವರೆ ನೀಳ್ದಲರ್ಗಣ್ಕಡುರಯ್ಯಮಾಗೆ ಕೋಮಳತನು ಭಾಗಿವೆತ್ತೆಸೆಯೆ (ಧರ್ಮಾಮ್ಮ. ೬-೦೬೯) : ದೇವಗಜದಂಗಮರೀಚಿಯ ಭಂಗಿವೆತ್ತಿರಲ್ ಬಗೆಗೊಳಿಸಿತ್ತು ಚಂದನರಸಂದೊಡೆದುದದೆ ಪೂರ್ವದಿಙ್ಮುಖಂ (ಜಗಿಪಿ. ೦೬-೦೦೩).

[ ಭಂಗಿ₂ + ಪೆಱು₁ ]

**ಭಂಗಿಸು** (ಕ್ರಿ). ೧. ಮುರಿ; ಒಡೆ : ಬಂಡಿಯುಂ ಭಂಗಿಸಿದ ಬಲ್ಪಿಂದೆ . . . ಬೆಱ್ತಿರ್ದೊಡೆ ಸಂಗರದೊಳಾಳಹನೆ (ಜೈಮಿಭಾ. ೬-೫೯). ೨. ಧ್ವಂಸಗೊಳಿಸು ; ಹಾಳುಮಾಡು : ಬೆಂಗಳೂರವನ ಪರಾಕ್ರಮವನು ಬೇಗ ಭಂಗಿಸಿ ಬಿಡುವೆನು (ಕಂಪಿಬಿ. ೧೧-೫೬) ; ಭಂಗಿಸಿತು ಭರತನಳುವ ಸುಯ್ಯುಸಿರೊಂದೆ ಆ ವನ್ಯನೀರವತೆಯಂ (ಶ್ರೀರಾಮಾ. ೦೬೨-೫೪೦). ೩. ಸೋಲಿಸು ; ಪರಾಭವಗೊಳಿಸು : ಸಂದ ಕಾಮದೇವನುಮಂ ರೂಪಿನೊಳಾದಂ ಭಂಗಿಸಿ (ಧರ್ಮಾಮ್ಮ. ೪-೨೦೬) ; ಇಂತು ಸಕಲಭುವನಮಂ ಭಂಗಿಸುವ ಚತುರಂಗಸೇನೆಯ ನಡುವೆ ಕಡುಪಿಂ ನಡೆತಂದು (ಗಂಕ. ೮-೮ ವ); ಕದನದೊಳಿವನ ಭಂಗಿಸಿ ಬಿಡುವೆನು (ಕುವ್ಯಾದ್ರೋ. ೫-೪೯). ೪. ತಡೆಗಟ್ಟು; ನಿಗ್ರಹಿಸು : ಭಂಗಿಪೊಡಮೊಗೆದು ಸೂಸುವ ಶೃಂಗಾರರಸಕ್ಕೆ ಸೇತುಗಟ್ಟುವವೋಲ್ ಚಿತ್ತಂಗೊಳಿಪ ರತ್ನಕಾಂಚಿಯನಂಗನೆಯ ನಿತಂಬದೊಳ್ ತೊಡರ್ಚಿದಳೊರ್ವಳ್ (ಶಾಂತೀಶ್ವ. ೪-೨೩೨). ೫. ಅವಮಾನಗೊಳಿಸು : ನೀನೇಸು ಪರಿಯಲಿ ಬಯ್ದು ಭಂಗಿಸಿ ನಮ್ಮ ದೂಱದಡೆ ಆ ಸಿತಾಶ್ವನ ಬಿಲ್ಲನೊದೆದಾಕಾಕಶಪ್ವಳಿಸುವ ಶರಾಘಕೆ ವಿಪಾಸ ಲಱಿಯಾ ಕರ್ಣ ನಿನ್ನೊಡಲು (ಕುವ್ಯಾಕ. ೯-೨೪) ; ಜನಕನ ನಂದನೆಯ ಹಂಬಲನು ಬಿಟ್ಟರು ನೆರೆದಿಳಾಮಂಡಲದ ರಾಯರು ಬೈದು ಭಂಗಿಸುತಾ ವಿದೇಹಜನ (ತೊರರಾ. ೦-೧೫-೨೯) ; ಸಲೆ ನಾಚಿಕೆಯನು ತೊಱದು ಬಲಗೈ ಬೆರಳನೊರ್ವನಿಗಿತ್ತೆ ಮೊಣ್ಣಿಯೊಂದುಲಿದು ಭಂಗಿಸರೆ ಕಂಡವರು (ಕಂಪಿಬಿ. ೬-೦೬೪). ೬. ಕಾಡು; ಹಿಂಸಿಸು : ಬಲುಬಿಸಿಲೊಂದು ಜಡಾಳಿಕೆ ಜಗವ

ಭಂಗಿಸಿತು (ವೀರಶ. ೦೯-೮೬) ; ಏನೊಂದು ಸತಗರದಿಂದಲೈತರುವಳು ಹೊಸಬುಗ್ಗಿ ವಧುವಿನ ಹಾಗೆ ಎಷ್ಟೊಂದು ವಿಧದಿಂದಲವಳ ಭಂಗಿಸುವಳು ಮಳೆಗಾಲ ಅತ್ತೆಯ ಹಾಗೆ (ಇಂಕಾಶ. ೨೨೦-೯೦). [ಭಂಗ + –ಇಸು]

**ಭಂಗುರ** (ಗು). ೧. ಸುಲಭವಾಗಿ ಮುರಿದುಹೋಗುವ,– ಒಡೆದುಹೋಗುವ : ಚಳದನಿಳಾಹತಕ್ಷುಭಿತಭಂಗುರತುಂಗತರಂಗಮಾಳಿಕಾವಳಿನಸಮುಚ್ಚಳನ್ನಣಿಗಣಾತ್ತ . . . ಜಳಮಂ ಮನಂ ಬಯಸಿ ನೋಡಿದರರ್ಣವಮಂ ಗುಣಾರ್ಣವಂ (ಪಂಪಭಾ. ೪-೨೫). ೨. ಕ್ಷಣಿಕವಾದ; ಚಂಚಲವಾದ ; ಸ್ಥಿರವಲ್ಲದ : ಭಂಗುರವಿಭ್ರಾಜ್ಞಾನಂ ಪಿಂಗಲೊಡಂ ಹೃದಯದಮಳಸಮ್ಯಗ್‍ಜ್ಞಾನಂ ಕಂಗೊಳಿಸುವಂತಿರಿರ್ದಂ . . . ವೀರನಳಭೂಪಾಲಂ (ಪಶಂ. ೪೦೪) ; ಮಾಯೆಯೆಂದು ಅಥವಾ ಪ್ರಭುವಿನ ಭಂಗುರಲೀಲೆಯೆಂದು ಈ ಜಗತ್ತನ್ನು ಅವು ಅಲ್ಲಗಳೆದುಬಿಟ್ಟವು (ಮಹಾಪೊ. ೨೩೪). ೩. ಕೊಂಕಿದ ; ಬಾಗಿದ :ಭಂಗುರ ಕರಾಳದಂಷ್ಟ್ರಂ ಪಿಂಗಳನಯನಂ ಮತಂಗಜಂಗಳ ಮಿದುಳಂ ನುಂಗಿ ನಲಿಗೆವಜಿ ಶಿಖಿಗೆ ಲಂಘಿಸುತಿರೆ ಸಿಂಗವಂ ಜಿನಾಂಬಿಕೆ ಕಂಡಳ್ (ಸೂಕ್ತಿಸು. ೬-೩೬). ೪. ಗಂಟುಹಾಕಿದ ; ಗಂಟಿಕ್ಕಿದ : ಭಂಗುರಭೀಷಣಭ್ರುಕುಟಿದಂಷ್ಟ್ರಂ . . . ಪಿಂಗಳಿಂ ಮೃಗೇಂದ್ರನೊಸೆದಿರ್ದ್ದನತರ್ಕ್ಯಪರಾಕ್ರಮಕ್ರಮಂ (ಶಂತಕಂ. ೨೫-೦೩). ೫. ಮೋಸದ ; ವಂಚನೆಯ. (ನಾ). ೬. ಚಂಚಲವಾದುದು: ಇಂದ್ರಿಯಸಂಗದುರುಳುಗಳು ಭಂಗುರಂಗಳಸಂಗನೊಳುಪಾಶಂಗಳು . . . ಪೆಣ್ಗಳ ಕಂಗಳವು ಮತ್ತೆ (ಬಸವು. ೪೦-೫೯). ೭. ಕ್ಷಣಿಕವಾದುದು; ನಶ್ವರವಾದುದು : ಕರ್ಮಂಗಳತ್ತಣಿಂ ದೊರೆಕೊಳ್ವ ಸುಖಂ ಭಂಗುರಮಲ್ತೆ (ರಾಮಾಶ್ವ. ೧೪೦-೯). ೮. ಕತ್ತರಿಸುವುದು; ನಾಶಮಾಡುವುದು : ಸಂಗತನಿಜಹಸ್ತ ಕನಿಷ್ಠಾಂಗುಲಿಧೃತಮಂ ಪ್ರಿಯಾಮನಃಚೋದಲತಾಭಂಗುರಮಂ ರವಿಮಂಡಳದುಂಗುರಮಂ ರಘುಜನಿತ್ತನಣುವನ ಕೆಯ್ಯೊಳ್ (ಶಾಶ್ವ. ೯೪೬). ೯. ನದಿಯ ಬಾಗು,–ತಿರುವು. ೧೦. ಬಾಗಿದುದು : "ವಕ್ರಂ, ವೃಜಿನಂ, ಭಂಗುರಂ . . . ಊರ್ಮಿಮತ್—ಈ ೧೨ ಕೊಂಕಿದುದು" (ಹಲಾಯು. ೧೦೬-೦೦). [ಸಂ.]

**ಭಂಗುರಕೇಶಿ** (ನಾ). ಗುಂಗುರು ಗುಂಗುರಾದ ಕೂದಲುಳ್ಳವಳು : ಭಂಗುರಕೇಶಿ ನಲ್ಲನ ತಳಂಗಳೊಳೊಯ್ಯನೆ ಮೆಯ್ಯನಿಕ್ಕಿ (ಶಾಶ್ವ. ೯೪೫). [ಸಂ. ಭಂಗುರಕೇಶೀ]

**ಭಂಗುರವೇಣಿ** (ನಾ). ಕೊಂಕಿದ ಕೂದಲು ; ಗುಂಗುರು ಕೂದಲು : ಭಂಗುರವೇಣಿಯೆಂಬ ಬಂಧುರನದಿ ರಂಜಿಸಿತ್ತು ಮಹಿಕಾಂತೆಯ ಭಂಗುರವೇಣಿಯೆಂಬಿನಂ (ಪುಶ್ಪ. ೬-೯). [ಸಂ.]

**ಭಂಗುವಕಲ್ಲು ?** (ನಾ). (?) : ಚೋಗನ್ನು ನೆಲವಂಕಿ ಅಭ್ಯಂತರ ಸಿದ್ಧಿ ಆಳುತ್ತಿರೆ ಚೋರಯ್ಯನ ವಸದಿ ಭಂಗುವಕಲ್ಲು ಈ ಕಲ್ಲ ಮಾಜಿಪೊಕ್ಕರ ಕೊಲಲಾಗದು (ಮೈಶಾ. ೧೯೨೮, ೩೩-೪ ೯೦೧). [ ? ]

**ಭಂಗ್ಯ** (ನಾ). ಗಾಂಜಾ ಅಥವಾ ಸೆಣಬಿನ ಗಿಡಗಳು ಬೆಳೆಯಲು ಯೋಗ್ಯವಾದ ಭೂಮಿ : "ಭಂಗ್ಯಂ, ಭಾಂಗೀನಂ – ಈ ೨ ಸೆಣಬಿನ ಕೆಯ್ಯ" (ಹಲಾಯು. ೨೬-೬). [ಸಂ.]

**ಭಂಜಕ** (ನಾ). ೧. ಮುರಿಯುವಂತಹುದು. ೨. ಮುರಿಯುವಿಕೆ. ೩. ನಾಶಪಡಿಸುವಂತಹುದು : ಅವರ ವಾದವೇ ಅವರ ಸಿದ್ಧಾಂತಕ್ಕೆ ಭಂಜಕ (ಶಾತತ್ತ್ವ. ೪೨೩). ೪. ನಾಶಪಡಿಸುವವನು : ಸಾರಥಿಗಳೊಳಗೆನಿಸಿದನು ಭೂಭಾರಭಂಜಕನಸುರಹರನು (ಕುಮ್ಯಾಗ. ೯-೨೪). [ಸಂ.]

**ಭಂಜಣಿಗೆ** (ನಾ). [ಅಶ್ವಶಾ] ಕುದುರೆಯ ನಡಗೆಗಳಲ್ಲಿ ಒಂದು ಪ್ರಕಾರ ; ಮಂದಗತಿ ; ಮೆಲುನಡೆ : ಭಂಜಣಿಗೆಯಲಿ ಮೆಲ್ಲಡಿಯ ವರಮರಾಳನ ಪೋಲ್ತುದೋಮನೆ . . . ಜಾತ್ಯಶ್ವಸಂಕುಳವೆಸೆದು ಪೊಗ್ಗಿಸಲಿ (ಜೈಮಿನಿ. ೨-೩೦). [←ತೆಲು. ಭಂಜಳಿಕ]

**ಭಂಜನ** (ಗು). ೧. ಮುರಿಯುವ. ೨. ತಡೆಯುವ ; ನಿಗ್ರಹಿಸುವ. ೩. ಹಿಂಸಿಸುವ ; ಬಾಧಿಸುವ. (ನಾ). ೪. ಹಾಳುಮಾಡುವುದು : ನಾಶಪಡಿಸುವುದು. ೫. ಹಾಳು ; ನಾಶ : ಆರ ಸೆರವಿಯೊಳಂಧಕಾರದ ಭಾರವನು ರವಿ ಗೆಲುವ ನಿನ್ನೀ ವೈರಿಬಲಭಂಜನಕೆ ಗುರು ಹಂಗಹನೆ (ಕುಮ್ಯಾದ್ರೋ. ೦೬-೪೪). ೬. ದೂರಮಾಡುವುದು. ೭. ಪೀಡಿಸುವುದು. ೮. ನಾಶಪಡಿಸುವವನು : ಅಂತು ಸಮದಕುಂಜರಘಟಾಪುಂಜಭಂಜನಂ ಮೃಗಾಧಿರಾಜಂ ಕೈನೀಡಿ . . . ಬಟಿಕ್ಕೆಂತೆಂದಂ (ಶಂತಕಂ. ೩೬-೧೬) ; ಪದಿಮೂಱುಂ ಪ್ರಕೃತಿಗಳುಮೊರ್ಮೆಯೆ ನಿರ್ಮೂಲವಾಗೆ ಸಕಲಸಂಸಾರಭಾರದುಃಖಭಾರಭಂಜನನುಂ ನಿರಂಜನನುಮಾಗಿ (ಶಂಶಾಪು. ೦೬-೯೦ ವ); ಜೈನಮಾರ್ಗರಾದ್ಧಾಂತಪಯೋಧಿಗಳ್ ವಿಷಯವೈರಿಗಳುದ್ಧತರ್ಮಭ್ಯಾಜನರ್ . . . ಶುಭಚಂದ್ರದೇವಸಿದ್ಧಾಂತಮುನೀಂದ್ರರಂ ಪೊಗಳ್ವುದು (ಎಕ. II, ೦೦೭-೦೦೯ ; 1123). [ಸಂ.]

**ಭಂಜನಿ** (ನಾ). [ಜೈನ] ಒಂದು ಬಗೆಯ ವಿದ್ಯೆ ; ಬೇರೆಯವರನ್ನು ಸೋಲಿಸುವ ವಿದ್ಯೆ : ಅಮಿತತೇಜನಂ . . . ಪ್ರಜ್ಞಪ್ತಿ ಕಾಮರೂಪಿಣಿ . . . ಭಂಜನಿ . . . ಅಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದ (ಶಾಪುಂಪು. ೦೯೬). [ಸಂ. ಭಂಜನೀ]

**ಭಂಜನೆ**₁ (ನಾ). ೧. ಸೋಲಿಸುವಿಕೆ ; ಅಡಗಿಸುವಿಕೆ : ಭಂಜನೆಗೆ ಬಲುಹುಳ್ಳಡೆಯು ನಿಮಗಂಜುವರು ಗುರುಭೀಷ್ಮರಾ ಪರಿರಂಜಕರು ತಾವಲ್ಲೆನುತ ತಾಗಿದನು ಭೂಪತಿಯ (ಕುಮ್ಯಾಭೀ. ೦೦-೪೨). ೨. ನಾಶ ; ಧ್ವಂಸ : ನಂಜಿನಂತಹ ಲೋಕಕಂಟಕರ ಭಂಜನೆಯೆ ನಾವೊಲಿದ ಕರ್ತವ್ಯ (ಶಾಪ್ತಾಂಗ. ೦೩-೩೩೬). [ಸಂ. ಭಂಜನ]

**ಭಂಜನೆ**₂ (ನಾ). ವಿವರಣೆ : ಬಹುಲ ಭಂಜನೆ ಬೇಡ ಮಾಡಲೊಂದು ಪ್ರತಿಜ್ಞೆಯನರ್ಜುನಂ ನಿನ್ನ ಮುಂದೆ ಸೈರಿಸುವುದು (ಕೈಮಿಭಾ. ೦೩-೨೯). [ಸಂ. ಭಂಜನಾ]

**ಭಂಜವಣೆ** (ನಾ). ೧. ಬಾಗು ; ವಕ್ರತೆ: ಕಂಗಳಲಿ ಕುಡಿಮೀಳ ಹುಬ್ಬಿನ ಹೊಂಗಿನಲಿ ಭಂಜವಣೆ ಭಾವದ ಭಂಗಿಯಲಿ ಪತಿಕರಣೆ . . . ದ್ರೌಪದಿಯ (ಕುಮ್ಯಾಶ. ೦೩-೨೫). ೨. ತಿರಸ್ಕಾರ ; ಹೀಯಾಳಿಕೆ : ಅಂಜುವರೆ ನಿಲು ಜೂಜುಗಾಜರ ಭಂಜವಣೆಗೊಳಗಹರೆ ಬಾ ನೃಪರೆಂಜಲಿಸಿ ಬಿಡಬಹುದೆ ಪರಮದ್ಯೂತರಸಸುಧೆಯ (ಕುಮ್ಯಾಸ. ೦೬-೩೦). [ಭಂಜಿಸು + – ಅಣೆ]

**ಭಂಜಳಿ** (ನಾ). = ಭಂಜಣಿಗೆ : ಭಂಜಳಿ ಮುರಳಿ ರಝಳಂಪಿ ವಾಹಿಣಿ ರೂಪು ರಂಜಿಪ ರೇಚೆಯೆಂದೆಂಬ ಮಂಜುಳವಾದ ಪಡಂಗದೊಳಾ ಹಯ ರಂಜನೆವಡೆದುದು (ಶ್ರೀಶಾಂ. ೪-೦೨). [←ತೆಲು. ಭಂಜಳಿ]

**ಭಂಜಿ** (ನಾ). ಒಂದು ಬಗೆಯ ಸಸ್ಯ : "ತತ್ಕಾಲೀ – ನರುವಲು, ಭಂಜಿ, ಕುಂಬಳಿ" (೬ಶಂ. ೬೫). [ ? ]

**ಭಂಜಿಕೆ** (ನಾ). ಮೂರ್ತಿ ; ವಿಗ್ರಹ : ಆ ತುರಂಗದ ಮಿರಂ ಕೀಲಿಸಿತು . . . ಸಿಜತನುವಿನ ಲೀಲೆಯಡಗಿರ್ದದಾಕೃತಿಯ ಭಂಜಿಕೆ ಯೆನಲ್ (ಕೈಮಿಭಾ. ೧೦-೦೦). [ಸಂ. ಭಂಜಿಕಾ]

**ಭಂಜಿತ** (ಗು). ೧. ಅವಮಾನಗೊಳಿಸಲ್ಪಟ್ಟ; ಕೀಳುಮಾಡಲ್ಪಟ್ಟ: ತರ್ಜಿತವೀಣಾಶಿಂಜಿತಂ ಭಂಜಿತರತಿರಮಣೀರತ್ನಕಾಂಚೀಪ್ರಣಾದಂ . . . ಆ ಕನ್ನಿಕೆಯ ಮಧುರಸಪ್ತಸ್ವರೋತ್ತಾನಗಾನಂ (ಶಂಶಾಪು. ೦೦-೦೦೦); ವಿಕ್ರಿಯಾಬಳದಿಂ ತಾಂ ಬಳೆಯಲ್ಕೆ ಭಂಜಿತಮಾಹಾಮಂತ್ರಿಕ್ರಮಂ ತ್ರಿಕ್ರಮಂ (ಅರ್ಜನೇ. ೬-೨೯). (ನಾ). ೨. ಅವಮಾನಕ್ಕೊಳಗಾದವನು : ತಿರಸ್ಕೃತ : ಆ ನೃಪತಿ ಭಂಜಿ [ಶಾಂ.ಗಿ]ತನಾಗಿ ಬರುತೆ ನಾರದಮುನಿಪನಂ ಕಂಡನು (ಕೈಮಿಭಾ. ೫-೨೫). ೩. ಒಡೆಯಲ್ಪಟ್ಟುದು; ಭಗ್ನವಾದುದು ;

ಇನ್ನೊಂದಿದೋ ! ಬುಧನ ಜೊತೆಗೆ ಬಾಳಬಲ್ಲ ಗ್ರಹವು ! ಅದರ ಪ್ರಭೆಯೊಳೆಂಥ ಚಲುವಮೂರ್ತಿಯು_ಭಂಜಿತವು (ತಂಶಸ. ೩೨-೦೦). [ಸಂ.]

**ಭಂಜಿಸು** (ಕ್ರಿ). ೧. ಒಡೆ ; ಮುರಿ : (೬). ೨. ಕೀಳುಮಾಡು; ಅವಮಾನಗೊಳಿಸು: "ಭಂಜಿಸು_ಅವಮಾನೇ" (ಶಬ್ದಾ); ಕೋಟಿಶಶಿಕಾಂತಿಯಂ ರಂಜಿಸುತೆ ಭಂಜಿಸುತೆ (ಇಶರ. ೮೮. ೯೪-೦೦). ೩. ದಂಡಿಸು ; ಶಿಕ್ಷಿಸು: ಜಂಗಮಪ್ರಾಸಾದದ್ರೂಷಕರ ಭಂಜಿಸುತ (ಬಸವ. ೫೬-೨೨) ; ಕರೆಯಿಮವನ ಮಗನನು ಭಂಜಿಸುವುದಿಲ್ಲಕಟ ಭೀಮಧನಂಜಯರು ಕೊಟ್ಟಭಯವೆಂದನು ನಗುತ ಮುರಹರಿ (ಕುವ್ಯಾಸ. ೨-೦೨೨). ೪. ಸೋಲಿಸು ; ಪರಾಜಯಗೊಳಿಸು: ಸುರಾಸುರರ್ ರ‍್ಯಾಣರ‍್ಯಾಣರೆನೆ ಬಳಸಿ ಭಂಜಿಸುವ ಐರಾವತಂ ಮಲ್ಲವೇಷದೊಳಿರ್ದಾದೊಡಂ . . . ಪೊಕ್ಕರಿಸಿ ಪಿಡಿವರಿಬರುದಿನ ಕಲ್ಲ ಮಾನಸರಂತಿರ್ದ ಮಲ್ಲರ ನೆರವಿಗಳೊಳು (೧೮೫. ೨-೦೦೫೭); ಶಿಷ್ಟರುಗಳಂ ಕೃಪೆಮಾಡಿ ಸಲಹಲು ದುಷ್ಟರುಗಳಂ ಕಾದಿ ಭಂಜಿಸಲು (ಬಸವು. ೩೬-೯೩); ನಿನಗಾಂತ ರಿಪುಗಳ ಭಂಜಿಸುವ ಸಾಮರ್ಥ್ಯವನುವನು ತಳೆದು ರಂಜಿಸುವ ಅಂಜನಾಸ್ತ್ರವಸಿತ್ತೆ (ಕುವ್ಯಾಕ. ೬-೦೦೫). ೫. ಧ್ವಂಸಗೊಳಿಸು ; ನಾಶಮಾಡು : ರಂಜಕದ ಮಾತಲ್ಲ ನಿನ್ನನು ಭಂಜಿಸಲು ಬಂದವನನಟ್ಟುವೆ ನಿನ್ನ ರಕ್ಷಿಸುವೆ (ಕೋಗಮ. ೦೦-೯೬) ; ಅಂಜದಿರಿ ಚಕ್ರದಲಿ ಅಸುರರ ಭಂಜಿಸುವೆನು (ಉತ್ತಕ. ೩-೫೬). ೬. ತುಂಡರಿಸು ; ಕತ್ತರಿಸು : ಕರ್ಣಕುಮಾರನತಹಾಯಿದನು ಭೀಮನ ಭೂರಿಬಾಣದ ಪಂಜರವ ಭಂಜಿ [ಪಾಠಾಂ. ಖಂಡಿ] ಸುತ ಪಟಲದಲಿ (ಕುವ್ಯಾಕ. ೦೦-೯೮). [ಭಂಜನ + —ಇಸು$_3$]

**ಭಂಟ** 'ಬಂಟ$_1$' ನೋ.

**ಭಂಟಾಕಿ** (ನಾ). ಒಂದು ಬಗೆಯ ಬದನೆಗಿಡ ಮತ್ತು ಅದರ ಕಾಯಿ; ಮುಳ್ಳುಗಾಯಿ ; ಮುಳ್ಳುಬದನೆ : "ವಾರ್ತಾಕೀ, ಹಿಂಗುಳೀ, ಸಿಂಹೀ, ಭಂಟಾಕೀ, ದುಷ್ಪ್ರಧರ್ಷಿಣೀ_೫ ಬದನೇಗಿಡವಲ್ಲಿ ಮುಳ್ಳುಜಾತಿ. ಗುಳ್ಳ, ವಾದಿರಾಜಗುಳ್ಳ" (ಶಿವ್ಯಾಂತಿ ೦೩೮). [ಸಂ. ಭಂಟಾಕೀ]

**ಭಂಡ$_1$** (ನಾ). ಕ್ಷೌರಿಕ ; ನಾಪಿತ : ಶಮಶನಂ ಪಿಡಿತರಿಸಿ ಭಂಡರಿಂ ಮಂಡೆಯು ಕೀಟಿಸಿ ಕತ್ತಯನೇರಿಸಿ . . . ಪುರಮಂ ಪೊಜಮಡಿಸಿ (ಪುರಾ ಸ್ರ. ೯-೪೦ ಶ). [ < ಪ್ರಾ. ಭಂಡ = ಬೋಳಿಸುವಿಕೆ, ಬೋಳಿಸುವ ಕತ್ತಿ]

**ಭಂಡ$_2$** (ನಾ). ೧. ಮಾರುವ ವಸ್ತು ; ಸರಕು ; ಸಾಮಾನು : ಧನದೇವಂ ಪರದಿಗೆಂದು ಪಿರಿದುಂ ಸಾರಮಪ್ಪ ಭಂಡಮಂ ತೀವಿಕೊಂಡು. . . ದಕ್ಷಿಣಮಧುರೆಗೆ ಪೋದೊಡೆ (ವಡ್ಡಾರಾ. ೬೦-೧೮); ಮಂಜಿನ ಮಡಕೆಯೊಳಗೆ ರಂಜನೆಯ ಭಂಡವ ತುಂಬಿ ಅಂಜದೆ ಪಾಕವ ಮಾಡಿಕೊಂಡು ಭಂಡವ ಮಾಜುತಿಪ್ಪರು ನೋಡಾ (ಅವಶಂ. ೦೦೩-೯೬೬); ಮಾಜಿದ ತಲೆಯು ಭಂಡವ ಪೊತ್ತಿರದೆ ಕೈಕೊಳಲಿ ಕರ್ಣಾದಿಗಳು (ಕುವ್ಯಾದ್ರೋ. ೫-೯). ೨. ಅಸಲು ; ಮೂಲಧನ ; ಭಂಡವಾಳ : "ಭಂಡ (ಬಂಡ) –ಭಾಂಡ = ಭಂಡವಾಳ" (ತದ್ಭಕೋ. ೩೩); ಭಕ್ತಿಯು ಭಂಡ ಮೊದಲ್ ನಿಜಭಕ್ತಿಯೆ ಕೋಟಿಸಾನು ಕೋಟಿ ಲಾಭಂ (ಕಾಇಇ. IX-i, ೨೯೬-೪೦; 1176). ೩. ಪ್ರಯೋಜನ ; ಲಾಭ : 'ಪಿಭಂಡ' ಪರಾ. ೪. ವಿದೂಷಕ ; ಹಾಸ್ಯನಟ. ೫. ನಾಚಿಕೆ ; ಲಜ್ಜೆ: 'ಭಂಡಗೇಡು', 'ಭಂಡತನ' ಪರಾ. ೬. ಮಾನವಿಲ್ಲದವನು ; ನಾಚಿಕೆಗೆಟ್ಟವನು ; ಲಜ್ಜೆಗೇಡಿ : ವಿಕೃತ ವೇಷ ಧರಿಸಿಹಾನು ಭಂಡನು ಲಜ್ಜೆಭಂಡನು (ಐಶವ. ೩೩೦); ಭಂಡರ ಬೈದು ಫಲವೇನು (ಕುವ್ಯಾದ್ರೋ. ೫-೩೯) ; ಭಂಡನಾದೆನು ನಾನು ಸಂಸಾರದಿ ಕಂಡು ಕಾಣದ ಹಾಗೆ ಇರಬಹುದೆ ಹರಿಯೆ (ಪುರಂದ. ೦-೩೫-೦). ೭. ಮೊಂಡುಮಾದ ಮಾಡುವವನು : ಕೊಳಚೆನೀರೊಳಗಾಳುತೇಳುತ ಜಲಧಿ ಕಾಲ್ಕೊಳಿಯೆಂಬ ಭಂಡರ ಮುಳಿದು ಮಾಡುವುದೇನು (ಕುವ್ಯಾದ್ರೋ. ೫-೪೯). ೮. ಯಾವ ಕೆಲಸಕ್ಕೂ ಹೇಸದವನು ; ನೀಚ; ಅನ್ಯಾಯ ಮಾಡುವವನು : ಊರಿಗೆ ದ್ರೋಹ ಬಗೆವ ಈ ಭಂಡನಿಗೆ ನೆನಪಳಿಯುವಂತೆ, ಇನ್ನೊಬ್ಬರು ಊರ ಒಕ್ಕಟ್ಟಿಗೆ ಕೊಡಲಿ ಏಟು ಹಾಕದಂತೆ, ಮಾಡಿರಿ (ಮನಪ. ೦೦೩). [ಸಂ.]

**ಭಂಡಗೇಡು** (ನಾ). ನಾಚಿಕೆಗೇಡು ; ಲಜ್ಜೆಗೇಡು: ಕಂಡಕಂಡಲ್ಲಿ ಎನ್ನ ಗಂಡನೆಂದದಲಿ ನೋಡಿ ಭಂಡಗೇಡು ಮಾಡಿದನು ಪುಂಡ ನಿನ್ನ ಮಗನಮ್ಮ (ಪುರಂದ. ೩-೦೮೮-೯). [ಭಂಡ$_2$ + ಕೇಡು]

**ಭಂಡಣ** 'ಬಂಡಣ' ನೋ.

**ಭಂಡಣಾಜಿರ** (ನಾ). ಯುದ್ಧರಂಗ ; ರಣಭೂಮಿ : ಭರದಿಂ ರಾವಣಸೇನೆಯುಂ ತವಿಸಿ ಗೆಲ್ದಾ ಗಣ್ಡರುಂ ಭಣ್ಡಣಾಜಿರದೊಳ್ ಕಾರವಸೇನೆಯುಂ ತಳಿದು ಗೆಲ್ದಾ ಗಣ್ಡರುಂ (ಕಾಇಇ. XI-I, ೫೨-೦೨; 1008). [< ಸಂ. ಭಂಡನಾಜಿರ]

**ಭಂಡತನ** (ನಾ). ೧. ನಾಚಿಕೆಯಿಲ್ಲದಿರುವಿಕೆ ; ನಿರ್ಲಜ್ಜೆ : ಉಂಡು ಮೋಣಾಟ್ಟೋರಿದು ಬದುಕುವ ಭಂಡತನವೆನಗಿಲ್ಲ (ಕುವ್ಯಾವಿ. ೬-೨೫); ಕಂಡು ಸೈರಿಸಿ ಬಿಡುವುದಕಟಾ ಭಂಡತನ ಬಲುವೀರರಿಗೆ (ಕೊರರಾ. ೫-೬-೩೫) ; ಇದು ಭಂಡತನವೆ ಮಗ್ಗುಲೊಳಿದ್ದವನ ಕೊಟ್ಟಕೊಡಗಲಾಜದೆ ನಿದ್ದೆಗರೆದು ವದನಕ್ಕೆ ಮುಸಿ ಸುಣ್ಣವ ಬರೆಯಿಸಿಕೊಂಡ ಚದುರೆವೆಣ್ಣಲ್ಲವೆ ನೀನು (ಕಂಸವ. ೬-೦೮೬). ೨. ಅನ್ಯಾಯ : ನೀವು ವಂಚನೆಯಿಂದ ಅಪಹರಿಸಿದ ರಾಜ್ಯವನ್ನು ಕೊಡದೇ ಭಂಡತನವನ್ನು ಮಾಡುತ್ತಲಿರುವಿರಿ (ಕೃಬಾಲ. ೪೨). ೩. ಬೂಟಾಟಿಕೆ ; ಮೋಸ ; ಕಪಟ : ರಾಜ್ಯಯಂತ್ರವನ್ನು ಹೇಗೆ ಸಾಗಿಸಬೇಕೆಂಬ ಬಗೆಗೆ ಭಂಡತನದ ಉದ್ದಂಡಲೇಖನಗಳನ್ನು ಬರೆಯಲಾಗುತ್ತಿದೆ (ಕೃಐಂ. ೨೮). ೪. ಹಟಮಾರಿತನ : ನಮ್ಮೊಡನೆ ಭಂಡತನವನ್ನು ಮಾಡಬೇಡ. ನಮ್ಮ ಯೋಗ್ಯತೆಯನ್ನು ನೀನರಿಯೆ (ರಾಜಕೂ. ೦೯). ೫. ಕೆಟ್ಟನಡತೆ ; ಅಸಂಸ್ಕೃತಿ : ಈ ಗಂಡಸರ ಭಂಡತನದಿಂದಾಗಿ ವಾಣಿಗೆ ಸ್ವತಂತ್ರವಾಗಿ ಓಡಾಡಲೂ ಆಸ್ಪದವಿರಲಿಲ್ಲ (ಸೋತುಗೆ. ೩೬). [ಭಂಡ$_2$ + —ತನ]

**ಭಂಡನ** (ನಾ). ೧. ಕಾಳಗ ; ಯುದ್ಧ : ಸುರರಾಜ ಕಳುಪಿರ್ದ ಶರಚಾಪರಥಗಳಂ ದಯೆಯಿಂದ ಕೈಕೊಂಡು ಭಂಡನವನೆಸಗು ಜಿಯ್ಯಾ (ವಂಕಾರಾ. ೬-೩೩-೩೬) ; ಚಂಡಭಂಡನಕಂಪರಿರಾಜರೊಳೆತ್ತಿ ನಡೆವ ಗಂಡುಗಲಿಯಂ ಕುಳ್ಳಿರಿಸಿ ಕೊಂಡುಯ್ವ ಸೈಪುಳ್ಳಂಗೆ ನಿನಗಿಂದು ಪೆಣ್ಣಂ ಪೆಣ್ಗೊಳಿಗೆಂತಂತು ವನಕೆ ಕೊಂಡುಯ್ಸುದಾಯ್ತೋ ? (ರಾಮಾಶ್ವ. ೨೮-೪೦). ೨. ಕವಚ ; ಚಿಲಖತ್ತು. ೩. ತುಂಟತನ ; ದುಷ್ಟತನ. [ಸಂ.]

**ಭಂಡಬಾಳು** (ನಾ). ಹೀನವಾದ ಬದುಕು ; ಕೀಳುಮಟ್ಟದ ಜೀವನ ; ಅವರ ಕೃಪಾಮುಷ್ಟಿಯಲ್ಲಿ ಹಲವು ಜೀವಗಳು ಭಂಡಬಾಳು ಬಾಳುತ್ತಿರುವ ನಿದರ್ಶನಗಳು ಅನೇಕವಿವೆ (ಪೀಮಕೂ. ೦, ಮುನ್ನುಡಿ) ; ಭಂಡಬಾಳು ಬಾಳೊಂತೀಯಾ ? (ಜನಪ. II, ೦೦೬೦). [ಭಂಡ$_2$ + ಬಾಳು$_2$ (<ಬಾಟ್$_2$)]

**ಭಂಡವಲ** 'ಬಂಡವಾಳ' ನೋ.

**ಭಂಡವಲು** 'ಬಂಡವಾಳ' ನೋ.

**ಭಂಡವಾನೆ** ? (ನಾ). ಸರಕು ; ಸಾಮಾನು ; ವ್ಯಾಪಾರದ ವಸ್ತು (?) : ನಕರಂಗಳ್ ಹತ್ತಿ ಪಂನಿರ್ವ್ವರ್ನ್ನ ಸಮಸ್ತಭಂಡವಾನೆ ಮಾಣಿಕವೊಳಗಾಗಿ ತಾವು ಮಾಜುಗೊಂಡಂತಪ್ಪ ಭಂಡಕ್ಕೆ ಹೊಂಗರ ವೀಸಮಂ ಕೊಟ್ಟರು (ಎಇ. V, ೦೯-೩೫ ; 1165). [ ? ]

**ಭಂಡವಾಳ** 'ಬಂಡವಾಳ' ನೋ.

**ಭಂಡವಾಳಗಾರ** 'ಬಂಡವಾಳಗಾರ' ನೋ.

**ಭಂಡವಾಳಶಾಹಿ** 'ಬಂಡವಾಳಶಾಹಿ' ನೋ.

**ಭಂಡವಾಳಿಗ** 'ಬಂಡವಾಳಿಗ' ನೋ.

**ಭಂಡವಾಳು** 'ಬಂಡವಾಳ' ನೋ.

**ಭಂಡವಾಳುಗಾರ** 'ಬಂಡವಾಳಗಾರ' ನೋ.

**ಭಂಡವಿಕ್ರಯ** (ನಾ). ಸರಕಿನ ಮಾರಾಟ : ಚಾರುದತ್ತಂ . . . ಶಬರ ಶಿಬಿರದೊಳ್ ಕಾಚಮಯ ಭಂಡವಿಕ್ರಯಮಂ ಮಾಡಿ (ವೀಬುಶ್ಹಿ. ೪-೯೬ ವ). [ಸಂ.]

**ಭಂಡವಿದ್ಯೆ** (ನಾ). ವಂಚನೆ ; ಕಪಟ : ತಾನೆ ತನ್ನನೆ ಹೊಗಳಿಕೊಂಬರೆ ಮಾನನಿಧಿಯಾದವರು ಸಾಕೀ ದಾನವರ ಗರುವಾಯಿ ಭಾರಿಯ ಭಂಡವಿದ್ಯೆಗಳು (ಶುವ್ಯಾದ್ರೋ. ೦೬-೩೩). [ಸಂ. ಭಂಡವಿದ್ಯಾ]

**ಭಂಡಸಾಲೆ** (ನಾ). ವಸ್ತುಗಳನ್ನು ಸಂಗ್ರಹಿಸಿಡುವ ಸ್ಥಳ : ಉಗ್ರಾಣ ; ಕೋಠಿ : ಹುಲಿವರದ ಭಂಡಸಾಲೆಯ ಮಲ್ಲಿಸೆಟ್ಟಿ (ಕೌಇಕ. XX, ೦೦೦. ೩೯ : 1129): ಭಂಡಸಾಲೆಯಲು ನಾಗೆಂಡುಗದಲು ಭತ್ತಮೂಡೆಯೆಪ್ಪತ್ತು ಅಳಿಗೆ × × × ಐಸಿ ಕೊಂಡಲ್ಲಿ (ಕೌಇಇ. IX–ii, ೪೦೬_೦೮; 1367) ; ಇಂಗ್ಲಿಷರು . . . ಭಂಡಸಾಲೆಗಳ ಸುತ್ತು ಕೋಟೆಗಳನ್ನು ಕಟ್ಟಿಸಿದರು (ವಾಂಚ್ರ. III, ೦೩೫೨). [ <ಸಂ. ಭಂಡಶಾಲಾ]

**ಭಂಡಾಟ** (ನಾ). ೧. ನಾಚಿಕೆಯಿಲ್ಲದಿರುವಿಕೆ ; ಲಜ್ಜೆಗೇಡು : ಭಂಡಾಟದಿ ಮೈಗೊಟ್ಟ ಗೋಪಿಯರು ಪಾವನ ನಿನ್ನಿಂದೈ (ಕುರಂದ. ೦-೦೬೫-೦) ; ದೊಡ್ಡವನಾಡಿದ್ದೇ ಆಟ ಬಡವನಾಡಿದ್ದೇ ಭಂಡಾಟ (ಗಾದೆ). ೨. ಬೂಟಾಟಿಕೆ ; ಆಡಂಬರ : ಬೂಟಕದ ಮಾತುಗಳ ನುಡಿದೇ ನಾಟಕವ ನಟಿಸುವ ಕಣಾ ಭಂಡಾಟವಿದು ಗುಣವಲ್ಲ (ಕೋಗಮು. ೨೨-೯೦). ೩. ಕಷ್ಟ ; ತೊಂದರೆ ; ತಾಪತ್ರಯ : ಶಿವಪಥದ ತ್ರಿಪುಂಡ್ರವಂ ಬಿಟ್ಟು ಮಣ್ಣಟ್ಟು ಕಟ್ಟು ಕೊಂಡಾಡುತಿರೆ ಜಗದ ಭಂಡಾಟವಂ ಮನಂಗೊಂಡ ಬ್ರಹ್ಮಾಂಡಪೌರಾಣಾದಿಯಂ (ಸಾಸಂಶ. ೩-೦೨೬) ; ವೃಥಾ ಸಂಭ್ರಮಿತರಿರ ಭಂಡಾಟವೇತಕೆ ರಣಕೆ ಹೆಚಿತಗೆಯಿ (ಶುವ್ಯಾದ್ರೋ. ೦-೬೦) ; ಉಂಡು ಕೆಂಡವ ಕಾಸಿ ಉಂಡು ಶತಪದ ನಡೆದು ಉಂಡೆಡದ ಮಗ್ಗುಲಲಿ ಮಲಗೆ ವೈದ್ಯನ ಭಂಡಾಟವಿಲ್ಲ (ಸರ್ವಜ್ಞ. ೨೦೦೪). [ಭಂಡು + ಆಟ]

**ಭಂಡಾರ**, ಬಂಡಾರ, ಬಂಡಾಚಿ (ನಾ). ೧. ಬೆಲೆಬಾಳುವ ವಸ್ತುಗಳನ್ನು ಸಂಗ್ರಹಿಸಿಡುವ ಸ್ಥಳ ; ಬೊಕ್ಕಸ ; ಖಜಾನೆ : "ಭಂಡಾರವೆಂದು ಕೋಶಗೃಹಂ" (ಶಶಾ. ೬೦-೩೦೬) ; ಮೇರು[ವ]ಪೊನ್ . . . ಪರುಸವೇದಿಯ ಕಣಿ ಭಂಡಾರದೊಳುಂಟೆನೆ ಕುಡುವನಿವಾರಿತದಾನಕ್ಕೆ ಪೊಲ್ವರಾರ್ ಬದ್ದೆಗನಂ (ಶಂಶಶಾ. ೦-೨೮) ; ವಾಗ್ದೇವಿಯ ಭಂಡಾರದ ಮುದ್ರೆಯ ನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ (ಗದಾಯು. ೦-೩೮) ; ಶೂರಸೇನನ ಸವದು ನೆಜಿ ಭಂಡಾರವೆಲ್ಲವ ಕೊಂಡು . . . ಮುಂದೆ ನಡೆದನು (ಕುವ್ಯಾಸ. ೫-೨). ೨. ಖಂಡೋಬಾ, ಎಲ್ಲಮ್ಮ ಮುಂತಾದ ದೇವತೆಗಳ ಪೂಜೆಮಾಡಿದ ಮೇಲೆ ಪ್ರಸಾದರೂಪವಾಗಿ ಹಂಚುವ ಅರಿಸಿನ, ಕುಂಕುಮ ಮುಂತಾದುವು : "ಭಂಡಾರಂ=ಹೊನ್ನ ಸಂಚಯಂ, ಅರಿಸಿನದ ಪುಡಿಯುಂ" (ಕಾಶಕ್ಕ. ೨೬೦) ; ಧೂಳಿಯ ಭಂಡಾರ ಹಣೆಯೊಳಗಿತ್ತೋ (ನಾದರೀ. ೩೮-೦೮) ; ಅವರ ಹಣೆಗೆ ಭಂಡಾರ, ಅಂದರೆ ಕುಂಕುಮ ಹಚ್ಚಿ, ತೀರ್ಥವನ್ನು ಮುಖಕ್ಕೆ ಮುಾರುಸಲ ಎರಚುತ್ತಿದ್ದ (ಪಮ್ಮರು. ೩೨). **ಬಂಡಾರ**: ೧. "ಬಂಡಾರಮೆನೆ ಕೋಶಪಂಕ್ತಿ" (ಕಪಿ. ೬೫) ; ಅವನಾನೆ ಕುಮಾರೆ ಪೆಣ್ಡಿರ್ ಬಣ್ಣಾರಮುಮನ್ ಕೊಣ್ಡು (ಪ್ರಇಎ. ೦೯೨೮, ೩೦-೩ ; 1056) : ಅರಸನುಂ ಸಕಲಪರಿಜನಂ ಬೆರಸು ಪೂಜಿಸಿ ಬಂಡಾರದ ಪೊನ್ನೆಲ್ಲಮಂ ಮುಂದೆ ರಾಸಿಮಾಡುವುದುಂ (ಧರ್ಮಾಮೃ. ೩-೨೦೫) ; ಬಂಡಾರ ತುಂಬಿ ಸೀ ಬಂಡಿಯಲಿ ಹೇಱುವರೆ ಮಂಡಲವನಾಳಿ ಪೆಱೆಯುವರೆ ಒಕ್ಕಲನು ಕೊಂಡಾಡಬೇಕು (ಸರ್ವಜ್ಞ. ೬೨೮). ೨. (ಎಸಪ್ಮ. XIX. ೮). ೩. ಮೊಟ್ಟೆಯ ಒಳಗಿರುವ ಹಳದಿಬಣ್ಣದ ಲೋಳೆ: ಅಂಡಗಳ ಬೆಳವಣಿಗೆ ಪಕ್ಕದ ಪೋಷಣೆ ಜೀವಣಗಳು ಬಂಡಾರವನ್ನು (Yolk) ಸ್ರವಿಸುವುದರಿಂದ ಸಾಧ್ಯವಾಗಿದೆ (ಕುಟಿತ. ೬೨). △ **ಬಂಡಾಚಿ** : ೧. 'ಬಂಡಾಚಿಕಾಚಿ' ನೋ.

ಭಂಡಾರ ಒಡೆ= ಭೀಮನ ಅಮಾವಾಸ್ಯೆಯಂದು ಪೂಜೆಯ ನಂತರ ಹೊಸ್ತಿಲ ಪೂಜೆ ಮಾಡಿ. ಹೂರಣದೊಂದಿಗೆ ನಾಣ್ಯವನ್ನಿಟ್ಟು ಕರಿದ ಪೂರಿಯಂತಹ ಭಕ್ಷ್ಯವನ್ನು ಮೊಳಕೈಯಿಂದ ಒಡೆ. –ಮುರಿ : ನನ್ನ ತಮ್ಮ ಈ ಸಾರಿ ಭಂಡಾರ ಒಡೆಯಲು ಊರಿನಿಂದ ಬಂದಿದ್ದಾನೆ (ರೂಢಿ). ಭಂಡಾರದ ಪೆಟ್ಟಿಗೆ = ಅರಿಸಿನ ಪುಡಿ, ಕೋಲು, ಗಂಟೆ ಮುಂತಾದುವುಗಳನ್ನು ತುಂಬಿದ ಪೆಟ್ಟಿಗೆ (ಎಸಪ್ಮ. IX, ೦೦). ಭಂಡಾರದಾಟ=ಅರಿಸಿನವನ್ನು ಎರಚುತ್ತಾ ಸ್ತುತಿಸುವುದು : ಸುರಭಿಯಭಿಷೇಕದಲಿ ದೇವಿಯ ಪರಮಾಸಂತಸಬಡಿಸಿ ಪೂಜಿಸಿ ಹರಿಹರರು ಭಂಡಾರದಾಟದಿ ಸುರರು ಕುಣಿಸಿದರು (ಅಂಬಿಕಾ. ೪೫ ಸ೩೩೭).

[< ಪ್ರಾ. ಭಂಡಾರ, ಭಂಡಾಅರ, ಭಂಡಾಗಾರ. / ಸಂ. ಭಾಂಡಾರ]

**ಭಂಡಾರಕ** (ನಾ). ಬೊಕ್ಕಸದ ಮುಖ್ಯಾಧಿಕಾರಿ : ತಪಸೀರಾಯನ ಭಂಡಾರಕ ಶ್ರೀಮನ್ ಮಹಾನಾಯಕಾಚಾರ್ಯ ಬಯಲ ಹುಲಿ ಅಪರೆಗೆಱೆಯ ಗಿರಿಯಂಣನಾಯಕರ ಮಕ್ಕಳು ವಿರುಪಂಣನಾಯಕರು ಕೊಟ್ಟ ಧರ್ಮಶಾಸನದ ಕ್ರಮವೆಂತೆಂದರೆ (ಎಕ. VII (R). ನಾಗಮಂ. ೧೪೩-೨ : 1529). [ಭಂಡಾರ + – ಕ$_3$]

**ಭಂಡಾರಗರಣತನ** (ನಾ). ಬೊಕ್ಕಸದ ಅಧಿಕಾರ ; ಖಜಾನೆಯ ಮುಖ್ಯಾಧಿಕಾರಿಯ ಹುದ್ದೆ, –ಪದವಿ : ಜಯಸಿಂಹಭೂಪನನ್ ತನ್ನಯದೊಂದುಪಧಾವಿಶುದ್ಧಿಯಿಂ ಮೆಚ್ಚಿಸಿ ತದ್ದಯೆಯಿಂ ಪಡೆದೊಂ ನೆಗಟ್ಟಕ್ಷಯನಿಧಿಭಂಡಾರಗರಣತನದಾಸ್ಪದಮಂ (ಎಇ. XII, ೨೦೦-೦೪೬ ; 1077). [ಭಂಡಾರ + ಕರಣ + –ತನ]

**ಭಂಡಾರಗವಿಟ್ಟಗೆ** (ನಾ). ಒಂದು ಊರಿನ ಹೆಸರು: ಭೀಮರಥೀನದ್ಯುತ್ತರ ತಟಸ್ಥ ಭಣ್ಡಾರಗವಿಟ್ಟಗೆನಾಮಗ್ರಾಮಂ (ಎಇ. V, ೨೦೪-೬೩ ; ಸು. 757). [ ? ]

**ಭಂಡಾರಸದನ** (ನಾ). ನಿಧಿಯನ್ನಿಡುವ ಸ್ಥಳ ; ಭಂಡಾರ ; ಖಜಾನೆ : ಧರಣಿಪತಿಯೆನಿತ ಪ್ರದೇಶದ ಧರಣಿಸುರರಿಂಗಿತ್ತು ಸಂತತವಿರಿಸುವನು ಬಱಿಗೈಯಲಾ ಭಂಡಾರಸದನವನು (ಸಂಭಶ. ೨೫-೩೮). [ಭಂಡಾರ + ಸದನ]

**ಭಂಡಾರಾಲಯ** (ನಾ). =ಭಂಡಾರಸದನ : ನಾನಾಪ್ರಕಾರ ರತ್ನವಿತಾನಂಗಳ ಬಹಳರಾಶಿಯಿಂ ತುಂಬಿ ಕರಂ ಭೂನುತಭಂಡಾರಾಲಯಮಾ ನರಪ ನಿವಾಸದಲ್ಲಿ ರಂಜಿಸುತಿರ್ಕುಂ (ಪಾರ್ಶ್ವ. ೦-೦೬೪) ; ಭಂಡಾರಾಲಯದೊಳುಳ್ಳ ಮಳಮಾಣಿಕ್ಯಕಜಾಳಗೆಯ ಪೆಟ್ಟಿಗೆಯೊಳಾಯಿಸು ವರಸುರತ್ನಗಳ (ಶುವ್ಯಾಉ. ೬-೦೬). [ಭಂಡಾರ + ಆಲಯ]

**ಭಂಡಾರಿ**, ಬಂಡಾರಿ (ನಾ). ೧. ಖಜಾನೆಯ ಮುಖ್ಯಾಧಿಕಾರಿ; ಖಜಾಂಚಿ; ಕೋಶಾಧಿಕಾರಿ : ಕೂಡಲಸಂಗನ ಮಹಾಮನೆಯೊಳು ಧರ್ಮಸಂತಾನ ಭಂಡಾರಿ ಬಸವಣ್ಣನು (ಬಸವ. ೩೪೬) ; ಶಿವಪಾದಪಂಕಜಭಕ್ತಿಯುಕ್ತನು ಮೇದಿನೀಶ್ವರ ಬಿಜ್ಜಳನ ಭಂಡಾರಿ ಬಲದೇವ (ಬಸಶ್ರೀ. ೩_೯೬) ; ಎಲ್ಲರಿಗು ಸುಗುತ ಬರುವ ಭಂಡಾರಿಯ ಸೊಲ್ಲ ಕೇಳದ ಬಸವಣ್ಣ (ಸಿಜಾಂ. ೦೩-೦೩೫). ೨. (ಕೊಚ್ಚಿಯ ರಾಜರ ಮತ್ತು ದೇವಸ್ಥಾನಗಳ) ಕೆಳದರ್ಜೆಯ ಸೇವಕವರ್ಗ : ಬಸ್ತಿಯಲ್ಲಿ ಊಳಿಗ ನಡಿಸುವ ಭಂಡಾರಿಗಳ ಜನ ೨ ಕೆ . . . ಅಕ್ಕಿ ಮು ೨೦ (ಕಇ. III-i, ೦೬_೬೦; 1556). **ಬಂಡಾರಿ** : ೧. ಇಂತಪ್ಪುದಕ್ಕೆ ಸಾಕ್ಷಿಗಳು ಅತಿಕಾರಿ ಕಾಂತಸೆಟ್ಟಿ . . . ಬಂಡಾರಿ ಬರುಸಾಮಣೆ (ಎಇ. XX, ೮.೬೦; 1556).

[< ಪ್ರಾ. ಭಂಡಾರಿ, ಭಂಡಾಗಾರಿ. / ಸಂ. ಭಾಂಡಾಗಾರಿನ್]

**ಭಂಡಾರಿಗ**, ಬಂಡಾರಿಗ (ನಾ). = ಭಂಡಾರಿ ೧ : ಕಾಮವೃಷ್ಟಿಯೆಂಬ ಭಂಡಾರಿಗನುಂ. . . ಪದಿನೆಣ್ಬಾಸಿರಪೆಲ್ಲೀಚ್ಛರಾಜರುಮಾತ್ಮೀಯಸಾಮ್ರಾಜ್ಯ

ಪರಿಚ್ಛೇದವಾಗೆ (ಆದಿಪು. ೦೫-೩ ವ); ಭಂಡಾರಿಗರ್ ವಿವಿಧಪಟಳಕಂಗಳೊಳ್ ತಂದು ಮುಂದಿಟ್ಟಿದ ಸುಗಂಧಾನುಲೇಪನಕುಸುಮವಸನಭೂಷಣಂಗಳಿನರಸಿಯುಂ ತಾನುಂ ಶೃಂಗಾರಂಗೆಯ್ದು (ಚಂದ್ರಪ್ರ. ೬-೦೯೯ ವ); ಬಾಗಿಲಿಗಂ, ದ್ವಾರಿಗಂ, ಭಂಡಾರಿಗಂ (ಶಬ್ದಸು. ೯೦೬ ಪ್ರಯೋ). **ಬಂಡಾರಿಗ :** ಬಂಡಾರಿಗರ್ಪೊನ್ನಂ ಪರೀಕ್ಷಿಸುವಂತೆ (ರಪುರ್ಣಪು. ೬-೬೩). [ಭಂಡಾರ + —ಇಗ]

**ಭಂಡಾರಿಸು**, ಬಂಡಾರಿಸು (ಕ್ರಿ). ೧. ಆಯುಧವನ್ನು ಒರೆ, ಕೋಶ ಮುಂತಾದುವುಗಳ ಒಳಗಿಡು,–ಮುಚ್ಚಿಡು,–ಸೇರಿಸು: ಕಡುಮುಳಿದು ಕೂರಲಗ ಭಂಡಾರಿಸಿ ಸಮಾತೆಂದಿನಂತೆ ಪ್ರದಕ್ಷಿಣವನು ನೆನೆದು ಬರುತಿರ್ಪ ಸಿದ್ಧನ ಪದಾಬ್ಜದ ಮೇಲೆ . . . ಕೃಷ್ಣಶುನಕಂ ಬಿರ್ದುದು (ಸಿದ್ಧರಾ. ೬-೯೩); ಧುರವಿಲ್ಲದನು ಮಾರುತಿ ಭಂಡಾರಿಸು ಭರದಿನೆನುತ ಜಯಜಾಯೆ ಅರಗಿನ ಮುದ್ರೆಯಿಟ್ಟಂತಾ ಗದೆಯೊಳು ಪೊರೆದ ರಕ್ತಾಂಬುಪ್ಪೊಪ್ಪಿದುದು (ಜೈಮಿನಿ. ೩೦-೦೨೩). ೨. ಆಯುಧವು ಒರೆ, ಕೋಶ ಮುಂತಾದುವುಗಳ ಒಳಗಿರು,–ಉಪಯೋಗವಿಲ್ಲದಾಗು : ಮಿಸುಕಲಾರ್ತಿಪ್ಪ ಚಕ್ರ ಭಂ[ಪಾಠಾಂ. ಬಂ]ಡಾರಿಸಿತು ಮುನ್ನಿನ ಜವ್ವನದ ಬಲ ಮಸುಳಿತು (ಕುಮಾಬ್ಯಾ. ೦-೩೯): ಎನ್ನುದಯವಿಡಿದಿಲಿತನಕ ಸಮಬಲರ ಕಾಣದೆ ಕಲಹ ನೆಱೆ ಭಂಡಾರಿಸಿರ್ದುದು (ತೊರರಾ. ೬-೬-೫೯). ೩. ಮುದುರು; ಸಂಕೋಚಗೊಳಿಸು: ಕಾಯ್ದೊಂದು ದಂತಾವಳಂ ತೋರದೆರೆ ಮುಱಿದು ಮೂಡುವ ವಾರಣಮುಂ ಪೋಲ್ತುದಡಸಿ ನಿಡುಗಯ್ಯಂ ಭಂಡಾರಿಸಿ ಮೊಡಱಿದ ತಱಿಯಂ ಬಾರಿಯುಮಂ ಮುಱಿದು ಪೊಯ್ದು ಪೊಱಮಡುವಿಭಮುಂ (ಅರ್ಜುನ. ೫-೦೦೩). **ಬಂಡಾರಿಸು :** ೧. ತನ್ನಡಗೆಯ್ಯನೆಡೆಗೊಂಡ ಬ್ರಹ್ಮನ ಶಿರಃಕಪಾಲವಾಲ್ಲಿ ಬಂಡಾ[ಪಾಠಾಂ. ಡ]ರಿಸಿ (ಧರ್ಮನಾ. ೩-೪೯).

[ಭಂಡಾರ + — ಇಸು$_3$]

**ಭಂಡಿ$_1$** 'ಬಂಡಿ$_1$' ನೋ.

**ಭಂಡಿ$_2$** (ನಾ). ನಾಚಿಕೆಯಿಲ್ಲದವಳು; ನಾಚಿಕೆಗೇಡಿ: ಗಂಡನಂ ವಂಚಿಸುವ ಮಿಂಡಿಯೊಳು . . . ಉಣಲಿಕ್ಕ ಹಂಗಿಸುವ ಭಂಡಿಯೊಳು ಸವತಿಯಂ ಮಲಮಕ್ಕಳು ಬಳಲಲಂಡಲಿಪಳೊಳು ಕುಟಿಲೆಯೊಳ್ಕುಟಿತೆಯೊಳ್ಪುಟ್ಟಲುಂಟೆ ಮಿಗೆ ಕಾರುಣ್ಯವು (ಮಲ್ಲಕ. ೨-೨೮); ನೀನು ಭಂಡಿ, ಜಗಭಂಡಿ! (ಮಲಿಮ. ೬೬೦).

[ಭಂಡ$_2$ + — ಇ$_2$./ಮಾ. ಭಂಡೀ = ಕುಲಟೆ]

**ಭಂಡಿಕಾರ** 'ಬಂಡಿಕಾಱ' ನೋ.

**ಭಂಡಿಕಾಱ** 'ಬಂಡಿಕಾಱ' ನೋ.

**ಭಂಡಿತೆ** (ನಾ). ತುಚ್ಛಳಾದ ಹೆಂಗಸು ; ಮಾನಗೇಡಿ : ಶತದಿಕ್ಕೆಯರು ಭಂಡಿತಿ[ತೆ] [ಪಾಠಾಂ. ಬಂಡಿತೆ]ಯರಾಗಳು ಕೊಂಡೆಗಿತ್ತಿಯರು (ಬಸವ. ೯೦-೫೨). [ಸಂ. ಭಂಡಿತಾ]

**ಭಂಡಿದೆಱೆ** (ನಾ). ಗಾಡಿಗಳ ಮೇಲೆ ಹಾಕುವ ತೆರಿಗೆ : ಕುಂಬಾಱದೆಱೆ ಅಸಗದೆಱೆ ತೊತ್ತುದೆಱೆ ಭಂಡಿದೆಱೆ . . . ಇನ್ತಿನಿಸಱ ತೆಱೆಯನು ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಎಕ. IV (R), ಹುಣಸೂ. ೨೯-೪೦; 1162). [ಭಂಡಿ$_1$ (< ಬಂಡಿ$_1$) + ತೆಱೆ$_3$]

**ಭಂಡಿಲ** (ನಾ). ೧. ಅದೃಷ್ಟ. ೨. ದೂತ ; ಚಾರ. ೩. ಶಿಲ್ಪಿ. ೪. ಒಂದು ಬಗೆಯ ಮರ; ಬಾಗೆ; ಶಿರೀಷ. [ಸಂ.]

**ಭಂಡಿವಟ್ಟೆ** (ನಾ). ಗಾಡಿಗಳು ಹೋಗಲು ಅನುಕೂಲವಾಗಿರುವ ದಾರಿ; ಗಾಡಿರಸ್ತೆ : ಮಣಿಯೆರೆಯಿಂ ಪಡುವಲಡ್ಡವಿಱುವನ ಕೆಱೆಯಿಂ ಬಡಗ ಬರೆ ನೀರ್ಗುಣ್ಣಂದದ ಭಣ್ಡಿವಟ್ಟೆಯಿಂದಾನೆದೊಱೆವಿಡಿದಂತೆ ನಾರಣೋರ್ವ್ವರ ಕೆಱೆಯ ಮೂಡಣ ಕೋಡಿಯಂ ಕೂಡಿತ್ತು (ಕರ್ನಾ. IX-i, ೯೦-೩೦:1018).

[ಭಂಡಿ$_1$ (< ಬಂಡಿ$_1$) + ಬಟ್ಟೆ$_1$]

**ಭಂಡಿಸು** (ಕ್ರಿ). ೧. ಅವಮಾನಪಡಿಸು ; ಹೀಗಳೆ : ಭಂಡಿಸಿ ಬೈದ ಬೈಗುಳನೆ ಲಾಲಿಸಿ (ಪಾರಪು. ೧೫-೯೬); ಗ್ರಹ ಹೊಡೆದ ಕೋತಿಯಂತೆ ದೆಸೆದೆಸೆಗೆ ತಿರುಗಿ ಭಂಡಿಸುವನ್ಯಮೊಳವಾನಿಸರೊಳಾಡಿ ಸ್ನೇಹಮಂ ಮಾಳ್ಪನು (ದೇವಪು. ೦-೨೩). ೨. ನಾಚಿಕೆಗೊಳ್ಳುವಂತೆ ಮಾಡು : ಕಂಡು ಸತ್ರಾರ್ಜಿತೆ ತಾಂಬೂಲಪಿಂಡವ ಕೊಂಡು ಸುಗಂಧವಿದೆಂದು ಉಂಡೆಯುರೊರೆಸಲುಪೇಂದ್ರನು ಹಾಸ್ಯದಿ ಭಂಡಿಸುತ ನುಡಿದನು ನಕ್ಕು (ಕಾಮನ. ೦-೫೯). ೩. ಬಯ್ಯು; ತೆಗಳು : ಮಿಂಡಿಮೊಗಳನಗಲಿದ ಚದುರರು ತಮ್ಮ ದಂಡಿಪ ಸ್ಮರಚಾಪವೆಂದು ಭಂಡಿಪೆ[ಪ] ಗುಂಡುಗೋಲುಗಳಿಂದ ಲಡೆಗಿಕ್ಕಿ ಮಿಂಡಿಸುವರು ಕಬ್ಬುಗಳನು (ವೋಷಕ. ೨-೯೯). 'ಬಂಡಿಸು' ಪರಾ.

[ಭಂಡ$_2$ + — ಇಸು$_3$]

**ಭಂಡೀರ** (ನಾ). ೧. ಆಲದ ಮರ; ವಟವೃಕ್ಷ. ೨. ಒಂದು ಬಗೆಯ ಸಸ್ಯ; ಮಂಜಿಷ್ಠೆ : "ಭಂಡೀರಃ–ಮಂಡೂಕಪರ್ಣಿ" (ಒಷಧಿ. ೦೦೦). [ಸಂ.]

**ಭಂಡೀರಿ** (ನಾ). = ಭಂಡೀರ ೨ : "ಮಂಜಿಷ್ಠಾ . . . ಭಂಡೀರೀ, ಭಾಂಡೀ, ಯೋಜನವಲ್ಲೀ–ಈ ಮಂಜಿಷ್ಠೀ ಪೆಸರುಗಳು. ಇದು ಗ್ರಂಥಿಕ ದ್ರವ್ಯವು" (ಸಿದ್ಧಂತಿ. ೧೩೨). [ಸಂ. ಭಂಡೀರೀ]

**ಭಂಡೀಲ** (ನಾ). = ಭಂಡಿಲ ೪ : "ಶಿರೀಷಃ, ಕಪೀತನಃ, ಭಂಡೀಲಃ–ಇ ಬಾಗೇಮರದ ಹೆಸರು" (ಸಿದ್ಧಂತಿ. ೧೨೬). [ಸಂ.]

**ಭಂಡು** (ನಾ). ೧. ಅವಮಾನ : ಸಿಗ್ಗು : ಎಲೆ ಹೆಣ್ಣೆ . . . ದಂಡಿಗೆಯ ತರಿಸಿ ಕೊಂಡೊಯ್ವೆ ನಮ್ಮರಮನೆಗೆ ಭಂಡು ಜನದೊಳು ಬೇಡ ಬೇಗ ನಡೆ (ಹರಿಶ್ಚಂ. ೦೩-೦೬). ೨. ಅವಮಾನಕರವಾದ ಕೆಲಸ; ನಾಚಿಕೆಗೇಡಿನ ಕೆಲಸ : ಪೆಂಡಿರ ಪಿಡಿದನನಿದಿರ್ಗೊಂಡು ಕೊಲಲಣ್ಮದಂಡಿಸಿ ಮಱೆಯೊಳು ಕೊಲುವ ಭಂಡು ಬೇಡೆನಗೆ (ಭರತಾಸಾಂ. ೩೫-೯೮). ೩. ಬೂಟಾಟಿಕೆ; 'ಭಂಡಾಟ' ಪರಾ. (ಗು). ೪. ಅಶ್ಲೀಲವಾದ : ಭಂಡು–ಕವನಗಳನ್ನು ಹಾಡುವ ಹವ್ಯಾಸ ಅವರಿಗಿರುವುದೇನೊ ನಿಜ (ಪದರಾ. II, ೬೬೫).

**ಭಂಡಾಗು** = ನಾಚಿಕೆಯಿಲ್ಲದಿರು ; ಲಜ್ಜಾಹೀನವಾಗು : ನನ್ನಯ ಹವಣನಱಿಯದೆ ತೊಡಚಿ ನೀ ಭಂಡಾದೆ ಲೋಗದಲಿ (ಕಾಶಿರಾ. ೯೨-೬). **ಭಂಡುಮಾಡು** = ಅವಹೇಳನ ಮಾಡು ; ನಾಚಿಕೆಗೊಳ್ಳುವಂತೆ ಮಾಡು : ನಿಜಮನವ ಮುಂಕೊಂಡೆಡೆಯನು ತೊಲಗಿಸಿಯೆ ಭಂಡುಮಾಡಿ ಭ್ರಮೆಗೊಳಿಸುವೆವು (ಶ್ರೀಕೃಸಾಂ. ೦೫-೦೬೯) ; ಭಂಡುಮಾಡದೆ ನನ್ನನಿಂತು ನಿಮ್ಮಯ ಪಿರಿಯ ಹೆಂಡತಿಯ ದೆಸೆಯಿಂದಂ (ಸಾಳ್ವಭಾ. ೨೬-೦೦).

[ಭಂಡ$_2$ + — ಉ$_4$]

**ಭಂಡುಗೆಯ್** (ಕ್ರಿ). ಅವಮಾನ ಮಾಡು ; ಅವಹೇಳನ ಮಾಡು : ಎಮ್ಮ ವನಿತೆಯರ . . . ಲಜ್ಜೆಯ ಬಿಡಿಸಿ ಭಂಡುಗೆಯ್ವವನನಿಕ್ಕುವೆವು (ಶಾಸೋಪ. ೦೦-೦೮೬). [ಭಂಡು + ಕೆಯ್$_1$]

**ಭಂಡೆ$_1$** 'ಬಂಡೆ$_1$' ನೋ.

**ಭಂಡೆ$_2$** (ನಾ). = ಭಂಡಿ$_2$ : ಭಂಡೆಯರಂ(ರು)ಡಖಂಡರುಧಿರಾದಿಗಳಂ ಬೆರಸಿಕ್ಕೆ ಭೋಜ್ಯದೊಳ್ ಕೊಂಡಿರದಾಗಳಂತೆ ತಲೆಗೇಱಿದೊಡಂ . . . ನೀಲಿಯ ರಸಂಗಳನೊತ್ತುವುದು (ಜಪುದ. ೦೯-೬೩); ಭಂಡೆ, ಮುಂಡೆ, ತುಂಟೆ (ಶಬ್ದಮ. ೯೯೬ ಪ್ರಯೋ); ಒರ್ವನ ಓರೆದಿರ್ವರ್ಗೆ ಕದನವ ಬಱಿದೆ ಗಂಟಿಕ್ಕಿದ ಭಂಡೆ (ಕಂಸವ. ೬-೦೮೫). [ಭಂಡ$_2$ + — ಎ$_2$]

**ಭಂಭಾ** (ನಾ). ಒಂದು ಬಗೆಯ ಚರ್ಮವಾದ್ಯ ; ಭೇರಿ ; ನಗಾರಿ : ಪಟುಪಟಹ ತುಣವ ಭಂಭಾ ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶವೀಣಾಸ್ವರಂಗಳೆಸೆಯೆ (ಶಬ್ದರಾ. ೯೩-೨೮). [ಸಂ.]

**ಭಂಭಾರವ** (ನಾ). ನಗಾರಿಯ ಸದ್ದು ; ಭೇರಿಯ ಶಬ್ದ : ರಾಮ ಲಕ್ಷ್ಮಣರುಂ ಪೊಙ್ಕರಯೋಧ್ಯೆಯುಂ ಪುದಿವಿನಂ ಗಂಭೀರಭಂಭಾರವಂ (ಕಂರಾಪು. ೧೫-೨೮) ; ಭಟರ ಬೊಬ್ಬಾರವಂ ವಳದ ಭಂಭಾರವಂ ರಣಕಿಲಕಿಲಾರವಂ . . . ಕಿವಿಗತಿ ಕಠೋರವಂ ಕೀವಿತಂದು (ಕೈಮಿಜಾ ೨೨-೯).

[ಸಂ.]

**ಭಂಳಿ ?** (ನಾ). (?) : ಬಾಡದ ಮಹಾಜನಂ ಖರಿಯ ಕೆಱೆಗೆ ಬಿಟ್ಟ ಧರ್ಮ್ಮ ಮೆನ್ತೆಂದಡೆ ಗ್ರಾಮದ ಆವುದೊಂದು ಪ್ರಾಯಶ್ಚಿತ್ತ ದಣ್ಡದೋಷ ತಪ್ಪುಕಾರಿ ತಪ್ಪುದಾಯ ಸ ತಿಪ್ಪೆಸುಂಕವಿನಿತುಂ ಕೆಱೆಯ ಭಂಳಿಗೆ ಬಿಟ್ಟ ಧರ್ಮ್ಮ (ಎಕ. XI. ದಾವಣ. ೦೯೨-೦೨ ; ೯). [ ? ]

**ಭಕಾರ** (ನಾ). 'ಭ' ಎಂಬ ಅಕ್ಷರ : ಭಕಾರಕ್ಕೆ ಬಕಾರಂ—ಆರಂಭ—ಆರಂಬ (ಕಮದ. ೨೩೩ ಪ್ರಯೋ). [ಸಂ.]

**ಭಕ್ಕರಿ, ಬಕ್ಕರಿ, ಭಾಕರಿ** (ನಾ). (ಉಕ) ಜೋಳ, ಸಜ್ಜೆ ಮೊದಲಾದುವುಗಳ ಹಿಟ್ಟಿನಿಂದ ಮಾಡುವ ರೊಟ್ಟಿ : ಚಿಕ್ಕು ಭಕ್ಕರಿ ಮಾಡ್ವುದ ಕಂಡೆ (ತುಕಂದ. ೬-೦೩೯-೦); ಅಕ್ಕಿಯ ಭಕ್ಕರಿ ಮಾಡುವುದು ನನಗೆ ಅದೇ ಮೊದಲ ಪ್ರಸಂಗ (ಸ್ವ. ೩೩. ೫೦). **ಬಕ್ಕರಿ** : ಉಣ್ಣುವಾಗ ಬರೀ ಅನ್ನವನ್ನಾಗಲಿ ಬರೀ ಬಕ್ಕರಿಯನ್ನಾಗಲಿ ಮೊದಲಿನಿಂದ ಕಡೆಯ ತನಕ ತಿಂದರೆ ನಮಗೆ ಸಮಾಧಾನವಾಗುವುದಿಲ್ಲ (ಪುಂಡಲೀ. ೫-೩೯೬); ಬಕ್ಕರಿಗಳನ್ನು ಸುಡುವ ಕೆಲಸ ಸಾವಿತ್ರಿಯದು (ಕಪಂ. ೦೬). **ಭಾಕರಿ** : ಎರಡು ಭಾಕರಿಗಳನ್ನು ಸುಡುತ್ತೇನೆ (ಹಿರಿಶ್ವ. ೦). [← ಮರಾ. ಭಾಕರೀ, ಭಾಕರ]

**ಭಕ್ತ**₁ (ಗು). ೧. ಹಂಚಿಕೊಟ್ಟ ; ಭಾಗಮಾಡಿಕೊಟ್ಟ. ೨. ಪಾಲು ಮಾಡಿದ ; ವಿಭಾಗಿಸಲ್ಪಟ್ಟ. ೩. ಭಕ್ತಿಯಿಂದ ಕೂಡಿದ ; ಶ್ರದ್ಧೆಯುಳ್ಳ. ೪. ಆಸಕ್ತಿಯುಳ್ಳ ; ಮಗ್ನವಾದ. (ನಾ). ೫. ಪೂಜಿಸುವವನು ; ಆರಾಧಕ : ತಂದೆಯ ಭಕ್ತಂ [ಬುಧಜನ]ವೃಂದಾರಕನೆನಿಪ ನಾಪೊನಾತನ ತಮ್ಮಂ . . . ನೆಗಟ್ಟಂ (ಶಾಂತಿಪು. ೦೨-೬೨) ; ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ (ಬಸವ. ೨೪೯); ಕೆಲವು ದಿನಂಗಳಲಿ ಮನವಲರ ಬಸವನದೊಂದು ಗೀತವನೊಲಿದು ಬೆಸಸಲು ಕಲಿತು ಭಕ್ತರು ತಮ್ಮೆಡೆಗೆ ಬಂದು (ಬಸವ. ೨೨-೯೬) ; ನಕ್ಕನು ಶಂಭು ಭಕ್ತನ ಮನದ ಧೃತಿಯನು . . . ಪಾರ್ವತಿಗೆ ತೋಱಿಸುತ (ಕುಮಾ. ೬-೨). ೬. ಅಕ್ಕಿಯಿಂದ ಮಾಡಿದ ಅನ್ನ: "ಅಂಧಃ, ಕೂರಂ, ಭಕ್ತಂ . . . ಆಹಾರಃ —ಈ ೯ ಕೂಬು" (ಹಲಾಯು. ೫೩-೦೬೯) ; "ಭಿಸ್ಸಾ, ಭಕ್ತಂ, ಅಂಧಃ, ಅನ್ನಂ, ಓದನಃ, ದೀದಿವಿಃ _ ೬ ಅನ್ನದ ಹೆಸರು, ಬೋನ" (ಶಿವ್ಯಾಂಶ. ೨೯೯). ೭. [ವೀಶೈ] ಮುಕ್ತಿಸಾಧಕವಾದ ಆರುಸ್ಥಲಗಳಲ್ಲಿ ಮೊದಲನೆಯದಾದ ಭಕ್ತಿಸ್ಥಲವನ್ನು ಸಾಧಿಸಿದವನು : ಆಚಾರಲಿಂಗಭಕ್ತನಾದೊಡೆ ಸ್ವಕಾಯಕದಲ್ಲಿರಬೇಕು (ಅದವ. ೬-೦೨); ಭವಿ ಭಕ್ತರೊಳಗೆ ಕೊಡುಕೊಳೆಯುಂಟೆ (ಜ್ಯೋತಿಶಾ. ೦೩-೦೦) ; ಶುದ್ಧಾಂತಃಕರಣನಾದ ಜೀವನು ಶಿವನ ಉಪಾಸನೆ ಮತ್ತು ಧಾರಣೆಗಳಿಗೆ ಅರ್ಹತೆಯನ್ನು ಪಡೆದು ಭಕ್ತನೆನಿಸುವನು (ಶಿತ್ವಾ. ೬೨). [ಸಂ.]

**ಭಕ್ತ**₂ (ನಾ). ಅಕ್ಕಿಯನ್ನು ಕೊಡುವ ಒಂದು ಬಗೆಯ ಧಾನ್ಯ; ನೆಲ್ಲು : ಎರಡುಗದ್ಯಾಣಂ ಪೊನ್ನು ಇಪ್ಪತ್ತುಗಣ್ಡುಗಂ ಭಕ್ತಮುಂ ಇಕ್ಕೋದಿ ಕೆಱೆಗೋಡು ಪುಟ್ಟಿಗೆಯುಂ ತಸ್ಯ ಸೀಮಾನ್ತರಂ (ಎಕ. XVI. ಗುಬ್ಬಿ. ೬೫-೯೯; 733); ಮೂರ್ಕ್ಕಣ್ಣುಗ ಭಕ್ತ ಪೋಲಿಯೆ ಕೊಣ್ಡುಟ್ಟುವೊನ್ ಈ ಧರ್ಮ್ಮ (ಎಕ. X. ಕೋಲಾರ. ೬-೯; 753); ಎಡೆಬಾವಿಗೆ :—ಕಿಱುಕುಸಾಲೆ, ಭಕ್ತಕಾಳು, ಅಂಬಿಲದೊಳಗಣ ಅಕ್ಕಿ, ಹೊಸ ಪಂಚು ಇವನ್ನರೆದು ಪೂಸಲು ಎಡೆಬಾವು ಮಾಣ್ಗುಂ (ಶಿವ್ಯಾ. ೬೯). [ᴘ ಇದು 'ಭತ್ತ' ಎಂಬುದರ ಅಪಲಿಖಿತ]

**ಭಕ್ತಕವಿ** (ನಾ). ತನ್ನ ಕಾವ್ಯದ ಮೂಲಕ ಭಕ್ತಿಯನ್ನು ಬೋಧಿಸುವವನು ; ಸಂತಕವಿ : ಭಕ್ತಕವಿಗಳಲ್ಲಿ ಮೊಟ್ಟಮೊದಲನೆಯವನು ಕಬೀರ್ (ಭಾರದ. ೪೫೬). [ಸಂ.]

**ಭಕ್ತಕುಟುಂಬಕ** (ನಾ). ತನ್ನ ಭಕ್ತರನ್ನೇ ಸಂಸಾರವಾಗುಳ್ಳವನು : ಪರಮಭಕ್ತಕುಟುಂಬಕನು ನೀ ಕರುಣೆಯುಳ್ಳದೊಡೀ ಕುಟುಂಬಿಕೆ ಶರಣದಾರ್ಥೈ ಕೃಷ್ಣ (ಕುವ್ಯಾಸ. ೦೯-೦೨೦). [ಸಂ.]

**ಭಕ್ತಕುಟುಂಬಿ** (ನಾ). = ಭಕ್ತಕುಟುಂಬಕ : ನಂಬಿದವರಿಗೆ ತನ್ನ ತೆತ್ತಿಹನೆಂಬ ಬಿರುದನು ಮೆಱೆದು ಭಕ್ತಕುಟುಂಬಿ ಸಾರಥಿಯಾದನೊಲಿದರ್ಜನಗೆ ಮುರಧ್ವಂಸಿ (ಕುವ್ಯಾಉ. ೦ ಸೂಚನೆ); ಭಕ್ತಕುಟುಂಬಿ ಭಕ್ತಜನವತ್ಸಲ . . . ಪೊರೆ (ಕಬಕಂ. ೩-೦೬). [ಸಂ. ಭಕ್ತಕುಟುಂಬಿನ್]

**ಭಕ್ತತೆ** (ನಾ). ಭಕ್ತಿ ; ಶ್ರದ್ಧೆ : ಭುವನದೊಳೆಲ್ಲಿಯುಂ ಭವಿಗೆ ಭಕ್ತತೆಯಿಲ್ಲ ಬಿಡಾ (ಕತಕ. ೮೯). [ಸಂ. ಭಕ್ತತಾ]

**ಭಕ್ತಪರಾಧೀನ** (ನಾ). ಭಕ್ತರಿಗೆ ಅಧೀನನಾಗಿರುವವನು ; ಭಕ್ತರ ವಶವರ್ತಿ : ಭಕ್ತಪರಾಧೀನನಾದ ನಾನೆ ಭಕ್ತರ ಭಕ್ತಿಯಿಂದ ಸಂತುಷ್ಟನಾಗಿ ಸರ್ವವನ್ನೂ ಮಾಡುವೆನು (ಅರ್ಜನಮಾ. ೬೬) ; ದೈವವನ್ನು ಭಕ್ತಪರಾಧೀನ ಎಂದು ಹೊಗಳಿದ ಮೇಲೆ ಕಂಡ ಮೇಲೆ ಅದನ್ನು ಅನುಭವಿಸಿ ತೋರಿಸಬೇಡವೆ ಭಕ್ತನಾದವನು (ಶಾರದ. ೨೯೯). [ಸಂ.]

**ಭಕ್ತವತ್ಸಲ, ಭಕ್ತವತ್ಸಳ** (ನಾ). ಭಕ್ತರಲ್ಲಿ ವಾತ್ಸಲ್ಯವುಳ್ಳವನು : ಓಹಿಲನ ಮೆಱೆದ ಸೌರಾಷ್ಟ್ರವೆಂಬ ಮಂಡಲದಲ್ಲಿ ಕೂಡಲಸಂಗಮದೇವ ಭಕ್ತವತ್ಸಲನಾಗಿ (ಬಸವ. ೬೩೩): ದೈತ್ಯಪ್ರಳಯಪಾವಕ ಭಕ್ತವತ್ಸಲ ಭಕ್ತಸುರಧೇನು. . . ಕೇಶವ ಕರುಣಿಸೆನಗೆ (ಕುವ್ಯಾಐ. ೩-೬೯); ಭಕ್ತವತ್ಸಲ ಕೃಪಾಕರ ಮಹಾಭಯನಿವಾರಣ ನೃಸಿಂಹ ತ್ರಾಹಿ (ಕೈಬಿಡು. ೦೦-೩೬). **ಭಕ್ತವತ್ಸಳ** : ಭಕ್ತವತ್ಸಳಂ [ಪಾಠಾಂ. ಭಕ್ತಜನವತ್ಸಳಂ] ಮಗನ ಮಾತಂ ಮನ್ನಿಸಿ ಮಹಾಮಹಿಮನೊಂದು ಗುಪ್ತವೇಷಮುಂ ಕೈಕೊಂಡಧ್ವರಕ್ಕೆ ನಡೆತಪ್ಪಾಗಳ್ (ಜಂಬರ. ೦೬-೦೩೨). [ಸಂ.]

**ಭಕ್ತವತ್ಸಲತೆ** (ನಾ). ಭಕ್ತರ ಮೇಲಿರುವ ಪ್ರೀತಿ,– ವಾತ್ಸಲ್ಯ : ಆತನ ಕೋಪಮುಂ ನೆನೆಯದಾದಂ ಕೀರ್ತಿಸುತ್ತಿರ್ದನೀಶ್ವರಿಯೊಳ್ ಶಂಭುಗೆ ಭಕ್ತವತ್ಸಲತೆ ಸಲ್ಗುಂ ಮೇಣ್ ಪೆಱರ್ಗಕ್ಕುಮೇ (ಕಬಕಂ. ೪-೬೦). [ಸಂ. ಭಕ್ತವತ್ಸಲತಾ]

**ಭಕ್ತವತ್ಸಲೆ** (ನಾ). ಭಕ್ತರಲ್ಲಿ ವಾತ್ಸಲ್ಯವುಳ್ಳವಳು : ಎಲೆ ಮಾತೆ ! ನೀಂ ಭಕ್ತವತ್ಸಲೆ ಸಾಜಂ ! (ಜಾವತಕ. ೬೨-೦೦). [ಸಂ. ಭಕ್ತವತ್ಸಲಾ]

**ಭಕ್ತವತ್ಸಳ** 'ಭಕ್ತವತ್ಸಲ' ನೋ.

**ಭಕ್ತವಾತ್ಸಲ್ಯ** (ನಾ). = ಭಕ್ತವತ್ಸಲತೆ : ಒಂದು ವೇಳೆಯಾದರು ಮಾತನಾಡು, ನಿನ್ನ ಭಕ್ತವಾತ್ಸಲ್ಯವನ್ನು ತೋರು (ಪತಕ. ೩೭). [ಸಂ.]

**ಭಕ್ತವ್ಯಸನ** (ನಾ). ಭಕ್ತರ ಮೇಲೆ ಇಟ್ಟಿರುವ ಅತ್ಯಾಸಕ್ತಿ,–ಮಮತೆ : ಕುಶಲರನಿಬರು ಜೀಯ ಭಕ್ತವ್ಯಸನಭಾರವು ನಿಮ್ಮಲಿರೆ ಜೀವಿಸುವುದರಿದೇ ಪಾಂಡುನಂದನರು (ಕುವ್ಯಾಶಿ. ೦೦-೩೦). [ಸಂ.]

**ಭಕ್ತವ್ಯಸನಿ** (ನಾ). ಭಕ್ತರ ಮೇಲೆ ಬಹಳ ಆಸಕ್ತಿಯುಳ್ಳವನು,- ಮಮತೆಯುಳ್ಳವನು : ನಳಿನನಾಭ ಮುಕುಂದ ಮಂಗಳನಿಳಯ ಭಕ್ತವ್ಯಸನಿ. . . ಕರುಣಿಸೆನಗೆ (ಕುವ್ಯಾಐ. ೩-೬೯). [ಸಂ. ಭಕ್ತವ್ಯಸನಿನ್]

**ಭಕ್ತಸ್ಥಲ** (ನಾ). [ವೀಶೈ] ಷಟ್‌ಸ್ಥಲಗಳಲ್ಲಿ ಮೊದಲನೆಯದು; ಮುಕ್ತಿಸಾಧನೆಯ ಹಂತಗಳಲ್ಲಿ ಮೊದಲನೆಯದು : ಗುರುಲಿಂಗದಲ್ಲಿ ಕ್ರಿಯಾಶಕ್ತಿಯ ಪ್ರಭಾವದಿಂದ ಆಚಾರಲಿಂಗದುದಯವಾದುದು ಅದಱ ಉಪಾಸನೆಗಾಗಿ ಭಕ್ತಸ್ಥಲವುಂಟಾದುದು (ಶಿವಾಸೂ. ೯೯-೮೨); ಪಿಂಡಸ್ಥಲ ಪಿಂಡಜ್ಞಾನಸ್ಥಲ . . . ಸಹಜಮಾಟಸ್ಥಲ ಈ ೧೫ ಭಕ್ತಸ್ಥಲಂಗಳು (ಅಬಂಧ. ೨೫೦-೦೦೯); ಭಕ್ತಸ್ಥಲದಿಂದ ಐಕ್ಯಸ್ಥಲಕ್ಕೆ ದ್ವೈತಭಾವನೆಯಿಂದ ಅದ್ವೈತಸಿದ್ಧಿಗೆ ಮುಂದುವರಿಯುವುದೇ ಸಾಧನೆ (ಶೂನ್ಯಸಂ. ೭ ಹಿನ್ನೆಲೆ). [ಸಂ.]

**ಭಕ್ತಾದಾಯ** (ನಾ). ಭತ್ತದ ಮೇಲೆ ಹಾಕುವ ತೆರಿಗೆ : ಸಕಲ ಸುವರ್ಣಾದಾಯ ಭಕ್ತಾದಾಯಯೇನುಂಟಾದ ಸಾಮ್ಯವನು ಅಗುಮಾಡಿಕೊಂಡು ತೆಱುವ ಗುತ್ತಿಗೆಯ ಹೊಂನು ಗ ೩೦ (ಎಕ. III (R). ನಂಜನ. ೩೮೯-೦೦; 1502). [ಭಕ್ತ₂ + ಆದಾಯ]

**ಭಕ್ತಾನುಕಂಪಿ** (ನಾ). ಭಕ್ತರಲ್ಲಿ ಕನಿಕರವುಳ್ಳವನು,– ದಯೆಯಿರುವವನು : ಭಕ್ತಾನುಕಂಪಿ[ಶಾಕಾಂ. ಭಕ್ತ್ಯಾನುಕಂಜ] . . . ಪರವೆಯರ ಮುನಿಸ ತಿಳಿಪುತ್ತಿರ್ದಂ (ಸಂಬಂ. ೦೬ ಸೂಚಿ).
[ಸಂ. ಭಕ್ತಾನುಕಂಪಿನ್]

**ಭಕ್ತಿ** (ನಾ). ೧. ಭಾಗಮಾಡುವಿಕೆ. ೨. ಪಾಲು ; ಪಿಸ್ಸೆ ; ಭಾಗ. ೩. ದೇವರು, ತಾಯಿ, ತಂದೆ, ಗುರು ಮೊದಲಾದವರಲ್ಲಿ ತೋರುವ ನಿಷ್ಠೆ,-ಶ್ರದ್ಧೆ,—ಪೂಜ್ಯಭಾವನೆ : ಸಿದ್ಧಭಕ್ತಿಪೂರ್ವಕಂ ತ್ರಿಜಗದ್ಗುರು ವೆನಿಸಿದಸ್ಮದ್ಗುರುವೇ ಗುರುವೆಂದು ತತ್ಪದಸರಸಿಜಧ್ಯಾನಪರಾಯಣನಾಗಿ (ಅಶ್ವ. ೦೬-೬೨ ವ); ದೇವರೊಳಂ ಗುರುಗಳೊಳಮಾಗಮದೊಳಂ ನಂಬುಗೆಯುಂ ನಲ್ಮೆಯುಂ ಭಕ್ತಿಯುಂಮಸೂನವಾಗೆ ಘೋರವೀರತಪೋನಿಯಮನಿಷ್ಠಿತನಾಗಿ (ಸುಕುಮಾ. ೩-೪೬ ವ); ಭಕ್ತಿಯೆಂಬುದ ಮಾಡಬಾರದು ಕರಗಸದಂತೆ ಹೋಗುತ್ತ ಕೊಯಿಯುವುದು ಬರುತ್ತ ಕೊಯ್ವುದಕು (ಬಸವ. ೨೧೨). ೪. ಸೇವೆ; ಉಪಚಾರ : "ಪರಿಪಸ್ಯಾ. . . ಭಕ್ತಿಃ . . . ಉಪಚಾರಃ – ಈ ೧೧ ಬೆಸಕೆಯ್ವುದರ್ಕೆ ಪೆಸರ್" (ಶಬ್ದಮ. ೨೧-೦೨೯). ೫. [ತತ್ತ್ವಶಾ] ವ್ಯಂಗ್ಯಾರ್ಥವಿಲ್ಲದಿದ್ದರೂ ಹೇಳಬೇಕಾದುದನ್ನು ಬೇರೆ ರೀತಿಯಿಂದ ಹೇಳುವುದು; ಔಪಚಾರಿಕ ಪ್ರಯೋಗ; ಗೌಣ ಮತ್ತು ಲಾಕ್ಷಣಿಕ ಪ್ರಯೋಗ; ಆಲಂಕಾರಿಕ ಪ್ರಯೋಗ ; 'ಊಟ ಮಾಡಿಲ್ಲವೆಂಬುದನ್ನು ನಿನ್ನ ಮುಖವೇ ಹೇಳುತ್ತದೆ' ಎಂಬ ವಾಕ್ಯದಲ್ಲಿ 'ತಿಳಿಸುತ್ತದೆ' ಎಂಬ ಅರ್ಥದಲ್ಲಿ 'ಹೇಳುತ್ತದೆ' ಎಂಬ ಪದವಿದೆ. 'ನನ್ನ ಮನಸ್ಸನ್ನು ಸೂರೆಗೊಂಡಿರುವೆ' ಎಂಬಲ್ಲಿ 'ವಶಪಡಿಸಿಕೊಂಡಿರುವೆ' ಎಂಬ ಅರ್ಥದಲ್ಲಿ 'ಸೂರೆಗೊಂಡಿರುವೆ' ಎಂಬ ಪದವು ಪ್ರಯೋಗಿಸಲ್ಪಟ್ಟಿದೆ. ಇದಕ್ಕೆ ಭಕ್ತಿಯೆಂದು ಹೆಸರು : "ಭಕ್ತಿ"ಯೇ ಧ್ವನಿಯೆಂದು ಹೇಳಲಾದ ಪೂರ್ವಪಕ್ಷಕ್ಕೆ ಕೆಳಗಿನ ಕಾರಿಕೆಯಲ್ಲಿ ಸಮಾಧಾನ ಹೇಳುತ್ತಾನೆ (ಧ್ವನ್ಯಾಲೋ. ೪೦) ; ಪದಪದಾರ್ಥಗಳ ಸಂಬಂಧ ಶಕ್ತಿ, ಭಕ್ತಿಯೆಂದು ಎರಡು ಪ್ರಕಾರ. ಶಕ್ತಿ ಸಾಕ್ಷಾತ್ಸಂಬಂಧ. ಭಕ್ತಿ ಪರಂಪರಾಸಂಬಂಧ. ಭಕ್ತಿಯೆಂದರೆ ಭಾಗವೆಂಬ ಏಕದೇಶದಲ್ಲಿರುವುದೆಂದರ್ಥ (ಹಿಂದಶಾ. ೨೪೯). ೬. [ಜೈನ] ಸಮ್ಯಕ್ತ್ವದ ಎಂಟು ಗುಣಗಳಲ್ಲಿ ಒಂದು. [ಸಂ.]

**ಭಕ್ತಿಕ** (ಗು). ಭಕ್ತಿಗೆ ಸಂಬಂಧಿಸಿದ : ಆಗ ಸಂಗಮದೇವರಲ್ಲಿಗೆ ಹೋಗಿ ಬಸವನಸಮುಭ[ಶಾಕಾಂ. ಭಾ]ಕ್ತಿಕಜೋಗನಂ ಕಾಣುತ ನಮಿಸಿ ಬಿನ್ನೈಸಿದರು ಮುಂದೆ (ಬಸವು. ೫-೬). [ಸಂ.]

**ಭಕ್ತಿಕಂಪಿತ** (ನಾ). ಭಕ್ತರ ಭಕ್ತಿಗೆ ಮಾರುಹೋಗುವವನು,-ಪರವಶನಾಗುವವನು : ಭಕ್ತಿಕಂಪಿತ ನಮ್ಮ ಕೂಡಲಸಂಗಮದೇವ (ಬಸವ. ೨೦೪). [ಸಂ.]

**ಭಕ್ತಿಕಾಂಡ** (ನಾ). ಭಕ್ತಿಯನ್ನು ಮೈಗೂಡಿಸಿಕೊಳ್ಳುವ ಘಟ್ಟ, — ಸ್ಥಿತಿ : ಕರ್ಮಕಾಂಡ ಭಕ್ತಿಕಾಂಡ ಜ್ಞಾನಕಾಂಡ ಇಂತೀ ತ್ರಿವಿಧದಲ್ಲಿ ಪಂಚಕನಾದರೆ ಈಸು ವಿಧದೊಳಗೆ ಅಂಗವಿಲ್ಲ (ಬಸವ. ೬೬೮) ; ಕರ್ತೃತ್ವ ಸಾಕ್ಷಿತ್ವಾಭಿಮಾನಗಳನ್ನು ಬಿಟ್ಟಿರುವುದೇ ಭಕ್ತಿಕಾಂಡವು (ಶಿವಾನೂ. ೦೨೯ ಅರ್ಥ). [ಸಂ.]

**ಭಕ್ತಿಕಾಂಡಿ** (ನಾ). ಭಕ್ತಿಕಾಂಡದಲ್ಲಿ ಸಿದ್ಧಿಯನ್ನು ಪಡೆದವನು ; ಭಕ್ತಿಯನ್ನು ಸಾಧಿಸಿದವನು : ಉತ್ಪತ್ತಿ ಸ್ಥಿತಿ ಭೋಗ ಭಕ್ತಿಕಾಯವುಳ್ಳನ್ನಕ್ಕ ಭಕ್ತಿಕಾಂಡಿಯಲ್ಲ (ಬಸವ. ೬೬೮) ; ಸಕಲಕ್ರಿಯೆಗಳನೀಶ್ವರಾರ್ಪಣಂಗೈವಾತನೇ ಭಕ್ತಿಕಾಂಡಿಯೆನಿಸುವನು (ಏಪೇಕ. ೦೬).
[ಸಂ. ಭಕ್ತಿಕಾಂಡಿನ್]

**ಭಕ್ತಿಗೀತ** (ನಾ). ಭಕ್ತಿಭಾವವೇ ಪ್ರಧಾನವಾದ ಹಾಡು ; ಭಗವಂತನ ಮಹಿಮೆ ಮೊದಲಾದುವನ್ನು ಕೊಂಡಾಡುವ ಹಾಡು ; ದೇವರನಾಮ : ಎಂದಿನಂತೆ ಇಂದಾದರೂ ಆಕೆ ಕಟ್ಟಳೆ ಪ್ರಕಾರ ತನ್ನ ಭಕ್ತಿಗೀತವನ್ನು ಹಾಡಿದ್ದಳು (ಹಳ್ಳಿಚಿ. ೬೪) ; 'ಗೀತಾಂಜಲಿ'ಯು ಭಕ್ತಿಗೀತಗಳ ಸಂಗ್ರಹ (ರವೀಂಗಾ. ೩೯). [ಸಂ.]

**ಭಕ್ತಿತ್ರಯ** (ನಾ). [ವೀಶೈ] ಗುರು, ಲಿಂಗ ಮತ್ತು ಜಂಗಮರಿಗೆ ಸಲ್ಲಿಸಲಾಗುವ ಭಕ್ತಿ : ಲೋಕಮೋಹನಶೀಲ ಭಕ್ತಿತ್ರಯವಿಲೋಲ ವಿಧೂತಭವಜಾಲ (ಬಸವು. ೨೦-೨). [ಸಂ.]

**ಭಕ್ತಿದಾಸೋಹ** (ನಾ). ಭಕ್ತಿಯಿಂದ ಮಾಡುವ ಸೇವೆ : ಭಕ್ತನಾಯಿತ್ತೆ ಭಕ್ತಿದಾಸೋಹಯುಕ್ತನಾಯಿತ್ತೆ ಯುಕ್ತಿದಾಸೋಹ . . . ಈ ದಾಸೋಹದ ಅನುವ ಕೂಡಲಸಂಗಯ್ಯ ತಾನೇ ಬಲ್ಲ (ಬಸವ. ೯೩೫).
[ಭಕ್ತಿ + ದಾಸೋಹ]

**ಭಕ್ತಿಪಂಥ** (ನಾ). ಭಗವಂತನ ಅನುಗ್ರಹಕ್ಕೆ ಭಕ್ತಿಯೇ ಮುಖ್ಯ ಸಾಧನವೆಂದು ನಂಬಿರುವ ಸಂಪ್ರದಾಯ ; ರಾಮದಾಸ, ತುಕಾರಾಮ ಮೊದಲಾದ ಸಂತರಿಂದ ಪ್ರವರ್ತಿತವಾದ ಸಂಪ್ರದಾಯ : ಭಕ್ತಿಪಂಥ ಬಹಳ ಹಳೆಯದು. ಭಗವದ್ಗೀತೆಯಲ್ಲಿ ಅದರ ಸ್ವರೂಪವನ್ನು ಚೆನ್ನಾಗಿ ವಿವರಿಸಿದೆ (ಭಕಾ. ೩೨); ಸುಸಂಸ್ಕೃತರು ಆತ್ಮಶಕ್ತಿಯನ್ನು ಮರೆತು ಪೂರ್ಣವಾಗಿ ದೈವವನ್ನೇ ನಂಬಬೇಕಾಯಿತು. ಈ ಸನ್ನಿವೇಶವೇ ಭಕ್ತಿಪಂಥಕ್ಕೆ ಪ್ರೇರಕವಾಯಿತು (ಮುಕ್ತಾರ. ೦೦೦ ಟಿಪ್ಪ). [ಸಂ. ಭಕ್ತಿ'ಪಂಥಾ]

**ಭಕ್ತಿಪಥ** (ನಾ). ಪರಲೋಕಸಾಧನೆಗಾಗಿ ಹೇಳಿರುವ ಕರ್ಮಮಾರ್ಗ, ಭಕ್ತಿಮಾರ್ಗ, ಜ್ಞಾನಮಾರ್ಗಗಳೆಂಬ ಮೂರುಪ್ರಕಾರಗಳಲ್ಲಿ ಒಂದು; ಭಗವಂತನ ಭಕ್ತಿಯಿಂದ ಆತ್ಮಕಲ್ಯಾಣವನ್ನು ಸಾಧಿಸಿಕೊಳ್ಳುವ ರೀತಿ : ಅಂಗದ ಮೇಲಣ ಲಿಂಗವ ಹಿಂಗಿ ಬಂದ ಸುಖವನಾರಿಗರ್ಪಿಸುವೆ ಹಿಂಗಲಾಗದು ಭಕ್ತಿಪಥಕ್ಕೆ ಸಲ್ಲದಾಗಿ (ಬಸವ. ೬೩೩). [ಸಂ.]

**ಭಕ್ತಿಪೂರ್ವಕ** (ನಾ). ಭಕ್ತಿಯಿಂದ ಕೂಡಿಕೊಂಡಿರುವುದು ; ಭಕ್ತಿಯುಕ್ತವಾದುದು : ತತ್ಪುರಾಧೀಶಂ ದೃಢ(ಧೃತ)ಸೇನಂ ನಿಲಿಸಿ (ನಿಜಿಸಿ) ಭಕ್ತಿಪೂರ್ವಕದಿಂದಮಾಹಾರಂಗುಡೆ (ಶಾಂತಿಪು. ೯-೨೦ ವ) ; ಅವರಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತೇನೆ (ಸಂಕೋಲ. ೪. ೬೦೪). [ಸಂ.]

**ಭಕ್ತಿಭಂಡಾರ** (ನಾ). ಅತ್ಯಧಿಕವಾದ ಭಕ್ತಿ ; ನಿರತಿಶಯವಾದ ಭಕ್ತಿ : ಸಂಗನ ಶರಣರ ಭಕ್ತಿಭಂಡಾರವು ಎನಗೆಂತು ಸಾಧ್ಯವಪ್ಪುದು ಹೇಳೆನ್ನ ತಂದೆ (ಬಸವ. ೪೦೫). [ಭಕ್ತಿ + ಭಂಡಾರ]

**ಭಕ್ತಿಭಾವ** (ನಾ). ಭಕ್ತಿಯಿಂದ ಕೂಡಿದ ಮನೋವೃತ್ತಿ ; ಭಕ್ತಿಯಿಂದ ಪರಿಪೂರ್ಣವಾದ ಮನಸ್ಸು : ಮಸಮಿಕ್ಕಿಜಿಗಿ ವಿನಿರ್ಮಲ ಭಕ್ತಿಭಾವದಿಂ ಸಾಂಜಲಿನಿಟಿಲಂ ನಿಗಮವಂದ್ಯನಂ ಕೀರ್ತಿಸಿದಂ (ಶಬಶಂ. ೯-೨೦೦); ಅವರಿಬ್ಬರೂ ಪರಮಾತ್ಮನ ಬಗೆಗೆ ಉತ್ಕಟವಾದ ಭಕ್ತಿಭಾವವನ್ನು ತಳೆದಿದ್ದರು (ಶರಶ. ೬). [ಸಂ.]

**ಭಕ್ತಿಮಾರ್ಗ** (ನಾ). = ಭಕ್ತಿಪಥ : ಭಕ್ತಿಮಾರ್ಗವಿದೆಮ್ಮ ಸೊಮ್ಮು ದ್ಯುಕ್ತವೆಂ ತಾನಿನ್ನು ಮಹೌನತ್ಯಕ್ತನಾಗಿದು ಪಿತವೆಮಗೆ (ಬಸವು. ೪೬-೩೬); ಪೂಜ್ಯರಂ ತಿರಸ್ಕರಿಸದೆ ಭಕ್ತಿಮಾರ್ಗದೊಳೆ ಸಂಚರಿಸುತ್ತ (ಅಮತ. ೩); ಎಲ್ಲ ಸಂಸ್ಕೃತಿಗಳೂ ಇಂಥ ಆಧ್ಯಾತ್ಮಜ್ಞಾನದೆಡೆಗೇ ನಮ್ಮನ್ನು ಕರೆದುಕೊಂಡು ಹೋಗುತ್ತವೆ. ಅವುಗಳಲ್ಲಿ ಮುಖ್ಯವಾದವು ಮೂರು : ಜ್ಞಾನಮಾರ್ಗ, ಭಕ್ತಿಮಾರ್ಗ, ಕರ್ಮಮಾರ್ಗ (ರವೀಂಗಾ. ೨೦). [ಸಂ.]

**ಭಕ್ತಿಯುಗ** (ನಾ). ಭಕ್ತಿಯೇ ಹೆಚ್ಚು ಪ್ರಚಾರದಲ್ಲಿದ್ದ ಯುಗ : ವಿದೇಶೀಯರ ಆಕ್ರಮಣದಿಂದ ಭಾರತಜನತೆಗೆ ಇಂಥ ಪರಿಸ್ಥಿತಿಯುಂಟಾದಾಗಲೇ "ಭಕ್ತಿಯುಗ" ಆರಂಭವಾಯಿತು (ಶಾರದ. ೯೩೬). [ಸಂ.]

**ಭಕ್ತಿಯೋಗ** (ನಾ). ಭಗವಂತನಲ್ಲಿ ಎಡೆಬಿಡದೆ ಭಕ್ತಿಯನ್ನು ಹೊಂದಿರುವುದು : ವ್ಯಾಘ್ರಪಾದನು ನಂದನಗೆ ಕರಾಗ್ರವೆತ್ತಿಯೆ ಹೇಳ್ದ ವೇದಾಗ್ರ

ದೊಳಗಿಹ ಭಕ್ತಿಯೋಗವನೊರಿದು ಷಣ್ಮುಖಿಗೆ (ಷ್ಮಾಶಸಿ. ೦೭ ಸೂತಜ); ನವವಿಧವಾದ ಭಕ್ತಿಯೋಗಮಾರ್ಗವ ಬೋಧಿಸಿದನಾ ಗಗನಸದ್ಗುರು (ಗಗನ. ೩ ಸೂತಜ) ; ಗೀತೆಯಲ್ಲಿಯ ಮೊದಲಿನ ಆರು ಅಧ್ಯಾಯಗಳನ್ನು ಕರ್ಮಯೋಗ, ನಡುವಣ ಆರು ಅಧ್ಯಾಯಗಳನ್ನು ಭಕ್ತಿಯೋಗ . . . ಹೀಗೆ ವಿಂಗಡಿಸಬಹುದು (ಧರ್ಮಸಾ. ೦೦೩). [ಸಂ.]

**ಭಕ್ತಿಯೋಗಿ** (ನಾ). ಭಕ್ತಿಯೋಗದಲ್ಲಿ ನಿರತನಾದವನು ; ಭಕ್ತಿಯೋಗ ಸಾಧಕ : ಸತ್ಯಲೋಕಾಧಿಪನವಿಡಿದು ಶತಸ್ಥದೇವಗಣಾಂತ ಎಲ್ಲರು ಭಕ್ತಿಯೋಗಿಗಳೆಂದು ಕರೆಸುವರಾವ ಕಾಲದಲಿ (ಹಹಾರ. ೨೩-೦೦).

[ ಸಂ. ಭಕ್ತಿಯೋಗಿನ್ ]

**ಭಕ್ತಿರತಿ** (ನಾ). ಭಕ್ತಿಯಲ್ಲಿ ತೋರುವ ಆಸಕ್ತಿ, – ವ್ಯಾಮೋಹ : ಭಕ್ತಿರತಿಯ ವಿಕಳತೆಯ ಯುಕ್ತಿಯನೇನ ಬೆಸಗೊಂಬಿರಯ್ಯಾ ಕಾಮಿಗುಂಟೆ ಲಜ್ಜೆ ನಾಚಿಕೆ (ಬಸವ. ೫೦೬); ಮಾಟಕೂಟವೆರಡಱುವುಮತದಿಂದವೆ ಭಕ್ತಿರತಿಯಯ್ಯಾ ಕೂಡಲಚೆನ್ನಸಂಗಮದೇವಾ (ಚನ್ನಬ. ೦೭-೩). [ಸಂ.]

**ಭಕ್ತಿರಸ** (ನಾ). = ಭಕ್ತಿಭಾವ : ವಿಷಯರಹಿತನ ಮಾಡಿ ಭಕ್ತಿರಸವ ದಣಿಯೆ ಮೇಯಿಸಿ ಸುಬುದ್ಧಿಯೆಂಬುದಕವನೆಱೆದು ನೋಡಿ ಸಲಹಯ್ಯಾ (ಬಸವ. ೫೦); ಭಕ್ತಿರಸಂ ಮುಸುಕುವುದನುರಕ್ತಿರಸರಿ ಮಸಗಿ ಪರ್ವುದೇತೆಱದಿರ್ಪಂ (ಬಸಪು. ೭-೨೯೦). [ಸಂ.]

**ಭಕ್ತಿಸಾರಾಯ** (ನಾ). ೧. ಭಕ್ತಿಯ ಸಾರಾಂಶ, – ತತ್ತ್ವ : ಏನೆಗೆ ನಿನ್ನ ರೂಪು ನಿರೂಪಾದ ಬಳಿಕ ಭಕ್ತಿಸಾರಾಯದ ಪಥವನೊಲ್ಲೆನಯ್ಯ (ಶೀಲವ. ೩೯-೩೯). ೨. ಭಕ್ತಿಯ ರಹಸ್ಯವನ್ನು ತಿಳಿದುಕೊಂಡಿರುವವನು : ಭಕ್ತಿತತ್ತ್ವವನ್ನು ಆಳವಾಗಿ ಅಭ್ಯಾಸಮಾಡಿರುವವನು : ಭಾವಸಾರಾಯರ ಭಕ್ತಿಸಾರಾಯರ ತೋಱಯ್ಯಾ ನಿಮ್ಮ ಧರ್ಮ (ಬಸವ. ೫೦೩).

[ ಭಕ್ತಿ + ಸಾರಾಯ ]

**ಭಕ್ತಿಸ್ಥಲ** (ನಾ). = ಭಕ್ತಸ್ಥಲ : ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ . . . ತನು ಕರಗಿ ಮನ ಕರಗಿ ನೋಡಿ ಮಾಡುವುದು ಭಕ್ತಿಸ್ಥಲ (ಬಸವ. ೯೬೯); ಗುರುವಿಂಗೆ ತನು ಲಿಂಗಕ್ಕೆ ಮನ ಜಂಗಮಕ್ಕೆ ಧನವ ಕೊಟ್ಟೆನೆಂಬನ್ನಕ್ಕ ಭಕ್ತಿಸ್ಥಲ (ಶರಗೂ. ೨-೦೦೮). [ಸಂ.]

**ಭಕ್ತಿಹೀನ** (ನಾ). ಭಕ್ತಿಯಿಲ್ಲದವನು : ಭಕ್ತಿಹೀನನ ದಾಸೋಹವ ಸದ್ಭಕ್ತರು ಸವಿಯರು (ಬಸವ. ೬೦೬) ; ದೇವ ಇಂತಹ ಭಕ್ತಿಹೀನನ ಬಸುಱೊಳೆನ್ನುವನು ನೀವು ಹುಟ್ಟಿಸಲಹುದೆ (ಬಸಪು. ೫೦-೬೯). [ಸಂ.]

**ಭಕ್ತಿಹೀನತೆ** (ನಾ). ಭಕ್ತಿಯಿಲ್ಲದಿರುವಿಕೆ : ಅಕ್ಕಟಾ ಮೆಚ್ಚುವನೆ ಇಂತಹ ಠಕ್ಕರಿಗೆ ಕಲಿನಾಥನಿದನೆಂತಕ್ಕೆ ಕೇಳ್ದವೆ ಭಕ್ತಿಹೀನತೆಯಾದ ವಾರ್ತೆಯನು (ಬಸಪು. ೩೬-೦೭). [ ಸಂ. ಭಕ್ತಿಹೀನತಾ ]

**ಭಕ್ತೆ** (ನಾ). ಭಕ್ತಿಯುಳ್ಳವಳು ; ಭಕ್ತಿಯಿಂದ ಕೂಡಿರುವವಳು : ಗಂಡ ಶಿವಲಿಂಗದೇವರ ಭಕ್ತ ಹೆಂಡತಿ ಮಾರಿಮಸಣಿಯ ಭಕ್ತೆ (ಬಸವ. ೦೦೯); ಅವಳು ಭಕ್ತೆ (ಬಸಪು. ೯೦-೯). 'ಪತಿಭಕ್ತೆ' ಪರಾ. [ ಸಂ. ಭಕ್ತಾ ]

**ಭಕ್ಷ** (ನಾ). ೧. ತಿಂಡಿ ; ಭಕ್ಷ್ಯ : "ತೈಲಾದಿ ತುಪ್ಪದೊಳ್ ತಾಳಿಸಿದು ವೈದೆ ಭಕ್ಷಮೆನಿಕ್ಕು" (ಶಬ್ದಮಣಿ. ೬೯-೩); ಹಱಿದ ಭಕ್ಷವನುಂಡು ಕೇರಿಗೆ ಮಣ್ಣನು ಪೊಱುವರ ಕಾಡಿ ಕರಿಕಾಲಚೋಳ ಭರದಲ್ಲಿ ಪೊಯ್ಯಲು ಹರಿದಾಡಿದಂದದಿ ಕರುಣದಿ ಕಂಡೆ ನೀ (ಕೋಟಿಶ. ಅನುಬಂ. ೨೦-೦೦೦); ಪಕ್ಷವಿಲ್ಲದಿದ್ದರೂ ಭಕ್ಷಕ್ಕೆ ಕಡಿಮೆಯೆ ? (ಗಾದೆ). ೨. ಆಹಾರ; ಉಣಿಸು : ನಿಡಿಯರ್ ಬಲ್ಲಾಳಿಯದ ಬಲ್ದಡಿಗರ್ ಪಂದಿರ್ದರಯ್ವರಾಲದ ಕೆಟಗಿಂ ತೊಡರ್ದರ್ ನಮ್ಮಯ ಭಕ್ಷದೊಳ್ (ಶಂಕರಾ. ೩-೦೨); ಊಳಿಗಾಳಿಯ ಲೆರಡುಸಾಸಿರದಾಳು ಗೈವರು ಭಕ್ಷಗಳನಾ ಕೂಳ ಬಡಿಸುವಳೋರ್ವಳ್ (ಬಸ್ತಪು. ೭೯-೦೭). [ಸಂ.]

**ಭಕ್ಷಕ** (ಗು). ೧. ತಿನ್ನುವ; ಕಬಳಿಸುವ. (ನಾ). ೨. ತಿನ್ನುವವನು ; ಕಬಳಿಸುವವನು : 'ನರಭಕ್ಷಕ' ಪರಾ. ೩. ಹೆಚ್ಚು ತಿನ್ನುವ ಸ್ವಭಾವದವನು ; ಹೊಟ್ಟೆಬಾಕ : "ಭಕ್ಷಕಃ, ಘಸ್ಮರಃ, ಅದ್ಮರಃ—ಈ ೩ ತಿನ್ನಾಳಿ" (ಹಲಾಯು. ೫೮-೦೯೫). [ಸಂ.]

**ಭಕ್ಷಕಾರಿ** (ನಾ). = ಭಕ್ಷಕ ೩ : "ಅದ್ಮರಂ ಘಸ್ಮರಂ ಭಕ್ಷಕಾರಿ ತಿನ್ನಾಳಿಯುಕ್ಕುಂ" (ಪಂಗಸಾ. ೬೮-೦೦). [ ಸಂ. ಭಕ್ಷಕಾರಿನ್ ]

**ಭಕ್ಷಣ** (ನಾ). ೧. ತಿನ್ನುವುದು. ೨. ಆಹಾರ : "ವಲ್ಭನಂ . . . ಭಕ್ಷಣಂ . . . ಸ್ವದನಂ—ಈ ೧೧ ಊಟಂ" (ಹಲಾಯು. ೫೯-೦೬೦). ೩. ಲಾಡು ಮೊದಲಾದ ಭಕ್ಷ,—ತಿಂಡಿ. [ಸಂ.]

**ಭಕ್ಷಣೆ** (ನಾ). ೧. = ಭಕ್ಷಣ ೨ : ಎಲ್ಲಿಗೆಲವೋ ಹೋಗದಿರು ಕಪಿ ನಿಲ್ಲು ಬಂದವಳಾವಳೆಂಬುದ ಬಲ್ಲವಿಕೆಯಲಿ ನೋಡು ಭಕ್ಷಣೆಗಾದೆ ನೀನೆನಗೆ (ತೊರರಾ. ೫-೦-೨); ಹಸಿವಾತ ರಾಕ್ಷಸಿಯ ಭಕ್ಷಣೆಗೆ ಹೊರಗಾಗಿ ತೃಪ್ತಿಯಲಿ ಕಳೆದಿರುವೆಯಾ ? (ಅರಸು. ೯೯೯-೦೦); ದಾಕ್ಷಿಣ್ಯವಂತನು ದಕ್ಷಿಣಕ್ಕೆ ಹೋದರೆ ಭಕ್ಷಣೆ ಸಿಕ್ಕೀತೇ ? (ಗಾದೆ). ೨. ಆಹಾರವನ್ನು ರುಚಿಕರವಾಗಿ ಮಾಡುವ ವ್ಯಂಜನ : "ಉಪದಂಶಃ, ಅವದಂಶಃ, ಭಕ್ಷಣಂ—ಈ ೩ ಕುಡಿವುತ್ತೆ ಬಾಡಿಸುವುದು" (ಹಲಾಯು. ೫೯-೦೬೩). [ಸಂ. ಭಕ್ಷಣ]

**ಭಕ್ಷಿ** 'ಬಕ್ಷಿ' ನೋ.

**ಭಕ್ಷಿತ** (ಗು). ೧. ತಿನ್ನಲ್ಪಟ್ಟ ; ನುಂಗಿದ : ದಕ್ಷಮಖಕ್ಷಯಕ್ಷಮ ಭಕ್ಷಿತಕ್ಷ್ವೇಡ . . . ಅಕ್ಷಯ ರಕ್ಷಿಸೆಮ್ಮುವನು (ಬಸಪು. ೬೦-೯೩). (ನಾ). ೨. ತಿಂದುದು : "ಭಕ್ಷಿತಂ, ಚರ್ವಿತಂ . . . ಭುಕ್ತಂ—೧೪ ಭುಜಿಸಲ್ಪಟ್ಟದ್ದು" (ಸಿದ್ಧಾಂತಿ. ೩೫೨). [ಸಂ.]

**ಭಕ್ಷಿಸು** (ಕ್ರಿ). ತಿನ್ನು; ಕಬಳಿಸು; ಸೇವಿಸು : ನೀವು ಮಾಡಿದ ಬಯಲು ಭಕ್ಷಿಸಿತ್ತು ಅನಂತ ಹಿರಿಯರನು (ಬಸವ. ೫೩೭); ತಾನೇಂ ಮಾನಜರನು ಭಕ್ಷಿಸಲು ರಾಕ್ಷಸನೇ (ಬಸಪು. ೨೩-೦೬); ರಕ್ತಬೀಜಾಸುರನಂ ಭಕ್ಷಿಸುವದಕ್ಕೆ ಬಾಯ್ದೆಱೆದಿರ್ದಾ ಪರದುರ್ಗಿಯ ಪಲ್ಗಳೆಪೊಲ್ ಪಿರಿದಾಪ್ಪರಗೆಂಟಿದೆನೆಗಳೊಪ್ಪಿದವು (ಹಮ್ಮಿರ. ೦-೬೦).

[ ಭಕ್ಷಣ + – ಇಸು ]

**ಭಕ್ಷೀಸ್** 'ಬಕ್ಷೀಸು' ನೋ.

**ಭಕ್ಷೀಸು** 'ಬಕ್ಷೀಸು' ನೋ.

**ಭಕ್ಷ್ಯ** (ಗು). ೧. ತಿನ್ನಬಹುದಾದ ; ತಿನ್ನತಕ್ಕ. (ನಾ). ೨. ತಿನ್ನಲು ಯೋಗ್ಯವಾದುದು; ತಿನ್ನತಕ್ಕುದು : ಗುರುಶಿಷ್ಯ ಪಾತ್ರಾಪಾತ್ರ ಪೇಯಾಪೇಯ ಭಕ್ಷ್ಯಾಭಕ್ಷ್ಯ ಗಮ್ಯಾಗಮ್ಯ ವಧ್ಯಾವಧ್ಯಾದಿ ವಿಭಾಗ ವಿಚಾರಮನೊಡಂಬಡದೆ (ಕಸಾರ. ೦೦೦). ೩. ತಿಂಡಿ; ತಿನಿಸು; P "ಭಕ್ಷ್ಯ-೫ : (ಅ) ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯ (ವಿದ್ಯಾಕ. ೫೦). (ಆ) ಅತಿರಸ, ಹೋಳಿಗೆ, ಲಡ್ಡು, ಜಿಲೇಬಿ, ಅಪೂಪ (ಅಪ್ಪಂ) (ಸಾಂಖ್ಯ. ೫೫)" (ಶ್ರೀವತ್ಸ. ೩೦೦); ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ ನಾನಾಪ್ರಕಾರದ ಪಾನಂಗಳುಮಂ ಭಟ್ಟಾರ್ಗೆ ಬಡ್ಡಿಸಿ (ವಡ್ಡಾರಾ. ೭೮-೦೭) ; ಭಕ್ಷ್ಯಾದಿಗಳಂ ಬೇಡುವ ಮಕ್ಕಳ ಬಾಳಕ್ರೀಡೆಗಳಂ ನೋಡುತಿರ್ಪುದೊಂದಿರವಲ್ತೇ (ಸುಕುಮಾ. ೯-೦೦೦); ನಳನಳಿಪ ಬಹುವಿಧದ ಭಕ್ಷ್ಯಾವಳಿಯ ಹೆಡೆಗೆಗಳೋರಣಿಸಿ ಮಂಡಳಿಸಿ (ಕುಮಾರ. ೦೦-೨೫). ೪. ಲಾಡು, ಹೋಳಿಗೆ ಮುಂತಾದ ಸಿಹಿತಿಂಡಿ : ಸಾಮಾನ್ಯವಾಗಿ ದೇವರ ಸಮಾರಾಧನೆಯಂದು ಭಕ್ಷ್ಯಕ್ಕೆ ಹೋಳಿಗೆಯನ್ನು ಮಾಡಿಸುತ್ತಾರೆ (ರೂಢಿ). [ಸಂ.]

**ಭಕ್ಷ್ಯಕಾರ** (ನಾ). ಸಿಹಿತಿಂಡಿಯನ್ನು ಮಾಡುವವನು ; ಭಕ್ಷ್ಯವನ್ನು ಮಾಡುವವನು : "ಅಪೂಪಿಕಃ, ಕಾಂದವಿಕಃ, ಭಕ್ಷ್ಯಕಾರಃ—೩ ಬಜ್ಜಾಯ ಮುಂತಾದ ಭಕ್ಷ್ಯಗಳನ್ನು ಮಾಡುವವನಿಗೂ ಹೆಸರುಗಳು" (ಸಿದ್ಧಾಂತಿ. ೨೮೨).

[ಸಂ.]

**ಭಗ** (ನಾ). ೧. ಸೂರ್ಯ : "ಆದಿತ್ಯಃ . . . ಭಗಃ . . . ತ್ರಯೀತನುಃ — ಈ ೪೭ ಆದಿತ್ಯನ ಪೆಸರ್" (ಚಂದ್ರಕೀ. ೬-೩೫); ಬೆಳ್ಳಿ ಕರಗಿ ಬೆಳಗಾಯ್ತು ಏಳು ಹಗಲಾಗಿ ಭಗನೆ ಸುಡನೆ ? (ಕಣಿಕಾ. ೧೦೦-೪). ೨. ದ್ವಾದಿಶಾದಿತ್ಯರಲ್ಲಿ ಒಬ್ಬ : ಅನಲನ ಭುಜಂದಿಱದು ಜಿಹ್ವೆಯಂ ಕೊಯ್ದು ಪೂಷನ ಪಲ್ಗಳನುದಿರ್ಚಿ ಭಗನ ಕಣ್ಣಂ ಕಳೆದು . . . ನೋಯಿಸೆ (ಶಬ್ದ್ಕರಾ. ೦೦-೨೪೦) ; ಭಗನ ಕಣ್ಣಂ ಕಿಳ್ತನೆಂದು ಪೇಳ್ಗಂ ಮತ್ತೆ ಭಗನೇತ್ರ ಎನುತುಂ (ಅರಾಶ. ೩-೦೬_೦೬). 'ಭಗಘ್ನ' ಪಡಾ. ೩. ಕೀರ್ತಿ; ಯಶಸ್ಸು : ಪೊಗಟ್ ಜಗತೀಚಕ್ರಂ ದಿಕ್ಚಕ್ರದೊಳ್ [ಭ]ಗಮಾವಾಗಂ ನೆಗಟ್ ವಿಜಯೋದ್ಯೋಗವ್ಯಾಭಾಸಮಾನಮಹೋದಯುಂ ಮಗುಟ್ದು (ಪರ್ಶರಾ. ೨-೩೦). ೪. ಸ್ತ್ರೀಯ ಗುಹ್ಯ; ಯೋನಿ : "ಭಗಃ, ಯೋನಿಃ, ಉಪಸ್ಥಃ, ವರಾಂಗಂ, ಸ್ಮರಮಂದಿರಂ—ಈ ೫ ಉಪಸ್ಥಂ" (ಶಬ್ದಾ. ೬೫-೩೬೦); ಭಗಮುಖದರ್ ಕೆತ್ತುಗುಂ ಗುದವುಗಿಗುಂ ತೊಡೆ ನಡುಗುಗುಂ ಲತಾಂಗಿಗೆ (ಪುರಾ. ೦೦-೩೬) ; ಬಿಸುನೀರಿಂ ಪೂಸುಗೆ ತಾಂ ಕಿಸುಗುಳಿಯಪ್ಪವಳ ಭಗದ ಗಂಧಂ ಕಿಡುಗುಂ ( ಲೋಕೋಪ. ೯-೦೬೨ ). ೫. ಜನ್ಮಾಂತರಗಳಲ್ಲಿ ಮಾಡಿರುವ ಪಾಪ ಪುತ್ತು ಪುಣ್ಯಕಾರ್ಯಗಳ ಪರಿಣಾಮ,— ಫಲ. ೬. ಭಾಗ್ಯ; ಅದೃಷ್ಟ. ೭. ಸಂಪತ್ತು; ಐಶ್ವರ್ಯ. ೮. ಏಳಿಗೆ; ಅಭ್ಯುದಯ. ೯. ಘನತೆ; ಹಿರಿಮೆ. ೧೦. ಉತ್ಕೃಷ್ಟತೆ; ಶ್ರೇಷ್ಠತೆ. ೧೧. ಬಲ; ಶಕ್ತಿ; ಸಾಮರ್ಥ್ಯ. ೧೨. ಮಹಾತ್ಮೆ. ೧೩. ಪ್ರಯತ್ನ; ಸಾಹಸ. ೧೪. ತೇಜಸ್ಸು; ಕಾಂತಿ. ೧೫. ಒಲುಮೆ ; ಪ್ರೀತಿ. ೧೬. ಪವಿತ್ರತೆ ; ಪರಿಶುದ್ಧತೆ. ೧೭. ಅರಿವು ; ಜ್ಞಾನ. ೧೮. ಧರ್ಮ. ೧೯. ವಿರಕ್ತಿ; ವೈರಾಗ್ಯ. ೨೦. ಸಂಯಮ; ಯತಿ. ೨೧. ಮುಕ್ತಿ; ಮೋಕ್ಷ. ೨೨. ಜಪ; ಸ್ತುತಿ. ೨೩. ಭವಿತವ್ಯ. ೨೪. ದೇವತೆ : "ಸೂರ್ಯನೊಳು ಧರ್ಮದೊಳು ಯೋಗಿಯೊಳು ಯಶದೊಳೈಶ್ವರ್ಯದೊಳು ಜ್ಞಾನದೊಳು ವೈರಾಗ್ಯದೊಳು ದೇವವೀರ್ಯದೊಳು ಮುಕ್ತಿಯೊಳು ಶ್ರೀಯೊಳು ಮಹಾತ್ಮ್ಯೆಯೊಳು ಭರ್ಗನೊಳು ಭಗವೆನಿಕ್ಕುಂ" (ಮಂಗರಾ. ೦೫೦-೫೧); "ತಪನಂ ಸಂಯಮಿ ಧರ್ಮ ಕೀರ್ತಿ ವೈರಾಗ್ಯ ಜ್ಞಾನಮೈಶ್ವರ್ಯ ಯೋನಿ ಪವಿತ್ರಂ ಭವಿತವ್ಯ ಶಕ್ತಿ ಕಿರಣಂ ಗೀರ್ವಾಣರುಂ ಮುಕ್ತಿಯುಂ ಜಪ ಮಾಹಾತ್ಮ್ಯಂಗಳುಂ ಭಗಾಖ್ಯಂ" (ಜಾವಾರ. ೩೩). [ಸಂ.]

**ಭಗಂದರ** (ನಾ). ೧. ಗುಹ್ಯಪ್ರದೇಶದಲ್ಲಿ ಉಂಟಾಗುವ ಒಂದು ಬಗೆಯ ವ್ರಣರೋಗ : "ಭಗಂದರಃ—ಶಿಶ್ನೋಪಸ್ಥಗಳ ಬಳಿಯಲ್ಲಿ ಹುಟ್ಟುವ ಹುಣ್ಣು" (ಸಿದ್ಧಾಂತ. ೦೬೪) ; ಪಿಟಕಂ ಶೂಲ ಭಗಂದರಂ ಕುಷ್ಠ ಕ್ಷಯ ಗಂಡಶಿರೋವೇದನೆ ಮೊದಲಾಗೊಡೆಯವೇಟುನೂಱುವ್ಯಾಧಿಗಳೂರ್ಮೊದಲೆ ಮೆಯ್ಯೊಳ್ ಪುಟ್ಟಿದೊಡೆ (ಕಣ್ಣರಾ. ೬೯-೦೦) ; ಸತಿಯುಂ ವಿಚಾರಿಪಾಗಳು ಋತಿಗಂಗೆಯೊಳವನಿಪತಿ ಭಗಂದರದೊಳು ಮುಂ ಪ್ರತಿದಿನವಿಟ್ಟನ್ನವು ನುಂಡ ತೆಱಂ ತನಗಕ್ಕುಂ (ಮುದ್ರಾ. ೯-೨೦) ; ಬಾಯಿಂದ ಬಂತು ಭಗಂದರ (ಗಾದೆ). ೨. ಒಬ್ಬ ಋಷಿಯ ಹೆಸರು. [ಸಂ.]

**ಭಗಘ್ನ** (ನಾ). ಭಗನೆಂಬ ಆದಿತ್ಯನನ್ನು ಅಡಗಿಸಿದವನು ; ವೀರಭದ್ರ : ರತ್ನಮಯದಂಡಮಂತದನೆಯ್ದೆ ಒಡದು ಬರಲಾ ಭಗಘ್ನಂ . . . ನಡೆದ ಸಭವಂ (ವೀರಭ. ೨-೩-೯೫). [ಸಂ.]

**ಭಗಣ** (ನಾ). ೧. ನಕ್ಷತ್ರಗಳ ಗುಂಪು, — ಸಮೂಹ : ಭಗಣದ ಲೆಕ್ಕಮಂ ಮಟಿಯ ನೀರ್ಪನಿಯುಂ . . . ಪವಣಿಸಲ್ ಬಗೆದರ್ಪನೆ ಗಾಂಪನಾಗಸೇ (ಶಂಕರವಿಜ. ೦೩-೦೦); ನೆಗೆಬ್ದಾ ದ್ವೀಪದ ಮಧ್ಯದಲ್ಲಿ ಕಲಶಂ ಚಂಡಪ್ರಭಂ ಪಂಜರಂ ಭಗಣಂ . . . ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ದುತ್ತು ಹೇಮಾಚಲಂ (ಶಗಿಪ. ೦-೨೫) ; ಮುತ್ತಿನ ಬಿಂಬದ ಜಾಳದ ಮುತ್ತಿನ ವಿಭ್ರಮದಿನೆಸೆವ ಬೆಳ್ಗೊಡೆ ಭಗಣಂ ಸುತ್ತಿರೆ ಮಿಸುಗುವ ಶಶಿಯೆನಿಸುತ್ತಿರೆ (ಕುಕ್ಕು. ೦೦-೨೩). ೨. [ಛಂದ] ಮೊದಲನೆಯ ಅಕ್ಷರ ಗುರುವೂ ಉಳಿದೆರಡು ಲಘುಗಳೂ ಆಗಿರುವ ( – ∪∪ ) ಒಂದು ಅಕ್ಷರಗಣ : ಆದಿ ಗುರುವಾಗೆ ಭಗಣಂ (ಛಂದೋಂಬು. ೦-೪೪ ಅವತರ್ಗ). [ಸಂ.]

**ಭಗಣಮಂಡಲ** (ನಾ). ನಕ್ಷತ್ರಗಳ ಗುಂಪು : ತಾರಾಮಂಡಲ : ಒಡದು ಸರ್ವನೆ ತಿರುಹಲಮರರು ನಡುಗಿ ಕಂಗೆಟ್ಟೋಡಿತತ್ತಲು ಬಿಡದೆ ಸುಂಟರಗಾಳಿಯುಟ್ಟಿತು ಭಗಣಮಂಡಲಕೆ (ಕೌಶಿರಾ. ೨೫-೯೫). [ಸಂ.]

**ಭಗದಾಳ**, ಬಗದಳ, ಬಗದಾಳ (ನಾ). = ಭಗಂದರ ೧ : ಹೆಗ್ಗಳ್ಳದ ಬೇರು ತೂಕ ೭, ಎರಿಯುಉಮ್ಮತ್ತಿಯ ಎಲೆ ತೂಕ ೭, ತುಪ್ಪ ತೂಕ ೭ ಇವ ಅರೆದು ಪೂಸೆ ಭಗದಾಳ ಮಾಣ್ಗುಂ (ಖಗ್ಗೇಂ. ೬೩). **ಬಗದಳ** : ಕರಸ್ಥಲವೆಂಬುದು ಕೈಕೆಟ್ಟ ಹುಣ್ಣು ಅಪಳೋಕ್ಯವೆಂಬುದು ಬಾಯ ಬಗದಳ ಅಂಗಸೋಂಕೆಂಬುದು ಪಾಪದ ತವರ್ಮನೆ (ಅವಶಂ. ೦೦೪—೪೭೪) ; ಬಾಯೊಳಗಣ ಬಗದಳಕ್ಕೆ ಎನ್ನ ಕೇಳಬೇಡ (ಸವಚ. III, ೬೫-೦೩೨) ; ಶರಣರ್ಗೆ ಸರಿ ಸುರನರರೊಳಿಲ್ಲೆನಲು . . . ಸರಿಯೆಂಬ ಬಾಯ್ಗೆ ಬಗದಳ ಮಾಗದಿರ್ಪುದೇ (ಶಂಖರ. ೦೭-೦೯೨). **ಬಗದಾಳ** : ಬಾಯಿಗೆ ಬಂತು ಬಗದಾಳ ಬೆನ್ನಿಗೆ ಬಂತು ಭೇತಾಳ (ಗಾದೆ).

[←ಮರಾ. ಭಗದಳ, ಭೆಗದಡ, ಭಗದಾಡ. /ಪ್ರಾ. ಭಗಂದಲ]

**ಭಗಭಗ** (ನಾ). ಒಂದು ಅನುಕರಣ ಶಬ್ದ : ಅವರು ಮಾಡಿದ ಅನ್ಯಾಯ ನೆನೆಸಿಕೊಂಡರೆ ಹೊಟ್ಟೆ ಭಗಭಗ ಎಂದು ಉರಿದುಹೋಗುತ್ತೆ (ಆಡು).

**ಭಗರ** (ನಾ). (ಉಪವಾಸದ ದಿನ ಅಲ್ಪಾಹಾರಕ್ಕೆ ಬಳಸುವ) ಒಂದು ಬಗೆಯ ತೃಣಧಾನ್ಯ : ಅಳಿಯುವ ೮ ಘರ್ಮದ ಖಂಡಗದ ಮೇಲೆ ಧಾರಣೆ. ಇರತಕ್ಕ ಜೀನಸುಗಳು ೧. ಹವೀಜ ; ೨. ಅವಲಕ್ಕಿ; ೩. ಭಗರ (ವರಯದ ಅಕ್ಕಿ) (ಮುಂಬಯಿ. ೦೩೦). [←ಮರಾ. ಭಗರ]

**ಭಗರಿ** 'ಬವರಿ' ನೋ.

**ಭಗವ** (ನಾ). ವೈಷ್ಣವ ಸಂನ್ಯಾಸಿ : ಭಗವರೊಳಂ ಗೊರವರೊಳಂ ಸುಗತರೊಳಂ ಋಷಿಯರೊಳಮಾದೆಂದುಂ ಪಾಷಂಡಿಗಳಿಂದೆ ನೆಚ್ಚರುಂ ನಲ್ಕೆಗಳವರಾದನೆಂದುಮಿಲ್ಲ ಪಾರ್ವರಿಗೆಂದುಂ (ಶಾಸನ. ಅನುಬಂ. I, ೦೦-೩೪). [<ಸಂ. ಭಗವತ್?]

**ಭಗವಂತ** (ನಾ). ೧. ದೇವರು ; ಪರಮಾತ್ಮ : ಭಗವಂತನೆ ಕವಿ ಸಹೃದಯ ನಾಂ (ಅಕೀ. ೩೦-೨) ; ಈ ಈಶ್ವರನು ಮಹದೈಶ್ವರ್ಯಗುಣ ಪೂರ್ಣನಾದ ಭಗವಂತನು ; ಏಕಮೇವಾದ್ವಿತೀಯನು (ಶಾರದ. ೧೨೭) ; ಅರ್ಜುನನು ಮಹಾಸಂಗ್ರಾಮಕ್ಕೆ ಅಣಿಯಾಗುತ್ತಾನೆ. ಹೀಗೆ ಭಗವಂತನ ಕಾರ್ಯ ಫಲಿಸುತ್ತದೆ (ರಮಗಾ. ೦೩೬). ೨. ವಿಷ್ಣು. ೩. ಶಿವ ; ಈಶ್ವರ. ೪. ಜಿನ ; ಅರ್ಹಂತ. ೫. ಗೌತಮ ; ಬುದ್ಧ : ಆನಂದನವರನೆಬ್ಬಿಸುತೊಡನೆ ಮರಳಿ ಬರೆ, ಭಗವಂತ ಮೆಲ್ಲನಿಂತೆಂದ (ವೃಶಾಬ. ೬೫-೫); ಭಗವಂತನು ಒಂದು ಸಲ ಶ್ರಾವಸ್ತಿಯ ಜೇತವನದಲ್ಲಿ ಅನಾಥಪಿಂಡಿಕನ ಆರಾಮದಲ್ಲಿ ತಂಗಿದ್ದನು (ಬುದ್ಧಕ. ೦೫೫). ೬. ಪೂಜ್ಯರನ್ನು ಉದ್ದೇಶಿಸುವಾಗ ಬಳಸುವ ಶಬ್ದ : ಅಗ್ನಿನಾಚಾರ್ಯ ಭಗವನ್ತರಾಸ್ಥಾನಮಾನ್ ದೇವಾಚಾರ್ಯಭಗವನ್ತಗ್ಗೆ ಕೊಟ್ಟು (ಎಪಿ. X, ೦೬೫-೫; 735). [ ಸಂ. ಭಗವತ್ ]

**ಭಗವತಿ** (ನಾ). ೧. ಗೌರಿ ; ಪಾರ್ವತಿ : "ರುದ್ರಾಣೀ . . . ಭಗವತೀ, ದುರ್ಗಾ . . . ಮೇನಕಾತ್ಮಜಾ—ಈ ೨೧ ಗೌರೀದೇವಿಯ ಪೆಸರ್" (ಶಬ್ದಾ. ೪-೦೫); ಮರಿಯಸೆಯೊಳ್ ಭಗವತಿಯಂ ಪದಿಷ್ಠೆಗೆಯ್ಸಿದೊಡೆ (ಪ್ರಸಂ. ೦೯೨೪, ೩೮-೩; ೪ಶಾಸು ೯೫) ; ಆ ಭಗವತಿ ಕೊತರ್ ಬೀರಸಿರಿಯಾಗೆ ಭುಜಾಸಿಗೆ ನಾಗವರ್ಮನಾ (ಛಂದೋಂಬು. ೦-೪). ೨. ಲಕ್ಷ್ಮಿ, ಸರಸ್ವತಿ ಮೊದಲಾದ ಸ್ತ್ರೀದೇವತೆ. ೩. ತಪಸ್ವಿನಿ, ಋಷಿಪತ್ನಿ, ಮೊದಲಾದ ಪೂಜ್ಯಸ್ತ್ರೀಯರನ್ನು ಕುರಿತು ಹೇಳುವಾಗ ಬಳಸುವ ಪದ : ಎಲೌ

ಭಗವತಿಯರಿರಾ, ಮಹಾದೇವಿಯರಿರಾ ಇತ್ತ ಕಡೆಗೆ ಬರಬೇಕು (ಅರಾತ. ೯-೩ ಪ).

**ಭಗವತಿಅಂಕಕಾರ** = ದೇವಿಯ ಭಕ್ತನೆಂದು ಪ್ರಸಿದ್ಧನಾದವನು; ಒಂದು ಬಿರುದು : ಸ್ವಸ್ತಿಶ್ರೀಮನುಮಹಾಮಂಡಳೇಸ್ವರಂ ಚೋಳರ ಭೀಮ ಚೋಳನಾರಾಯಣ ಭಗವತಿಅಂಕಕಾರ ನಾಗರಸನ ಕುಮಾರವೀರ ಬೊಂಮರಸಂಗೆ ಬಸುರುಕೋಡನು . . . ಕೊಟ್ಟನು (ಎ೹ಇ. IX-i, ೩೬೬-೦೨; 1278). **ಭಗವತಿಯೇರು** = ದುರ್ಗೆಯ ಯುದ್ಧ : ದೇವೀಸಂಗರ : ಭಗವತಿಯೇರುವೇೞ್ವ ತೆಱದಿಂ ಕಥೆಯಾಯ್ತು ಮರೇರು (ಕಂಕಥಾ. ೦೦-೧೬); ಗಣ್ಡವಾತುಗಿಬಗಿ ಕೀರ್ತ್ತಿಕಂಪ್ಪ ರುಜಿಮುತ್ತರ ಮೂದಲೆ ಪೆಂಪು ವಿಕ್ರಮಂ ಭಗವತಿಯೇರು ಶೌಚಗುಣಮತ್ತಿಯ ಪಣ್ಣೆನಿಪೇಳ ಪುಣ್ಣರಂ ತೆಗಳ್ವುದುದಾರಚಾರುಚರಿತಪ್ರಭೆಯಿಂ ಪಡೆವಳ್ಳ ತೈಲನ (ಎ೹ಇ. XI-i, ೩೨-೩೯; ಶಾ. 1007); P 'ಭಗವತಿ'ಯು ಪರಾಶಕ್ತಿಯ ಒಂದು ಸ್ವರೂಪ. ಪಾರ್ವತಿಯಾಗಿ, ದುರ್ಗೆಯಾಗಿ ಅವಳು ದುಷ್ಟಶಕ್ತಿಯನ್ನು ನಾಶಮಾಡಿದ ಕಥೆ ಪ್ರಸಿದ್ಧ. ಆದುದರಿಂದ **ದೇವಿಯ ಯುದ್ಧ**, **ದೇವೀಸಂಗರ**, ಭಗವತಿಯೇರು ಎಂಬ ಪದಗಳಲ್ಲಿ ಈ ದೇವಿಯು ಮಾಡಿದ ಯುದ್ಧದ ಕಥೆ ಅಥವಾ ಪುರಾಣದ ಕಥೆ ಸೂಚಿತವಾಗುತ್ತದೆ. [ ಸಂ. ಭಗವತೀ ]

**ಭಗವತ್ಪಾದ** (ನಾ). ಮತಾಚಾರ್ಯರೇ ಮೊದಲಾದ ಪೂಜ್ಯರನ್ನು ಸಂಬೋಧಿಸುವಾಗ ಹೇಳುವ ಒಂದು ಗೌರವಾರ್ಥಕಶಬ್ದ : ಶಂಕರಭಗವತ್ಪಾದರು ಜಗನ್ಮಿಥ್ಯಾವಾದಿಗಳಾದರೂ ಅವರ 'ಮಿಥ್ಯಾ' ಪದ ಪ್ರಯೋಗದ ಅರ್ಥವೇ ಬೇರೆ (ಭಾರತ. ೦೨೨ ಅಡಿ). [ ಸಂ. ]

**ಭಗವತ್ಪಾದಿ** (ನಾ). (ವಿಷ್ಣುವಿನ ಪಾದದಿಂದ ಹುಟ್ಟಿದುದೆಂದು ಹೇಳುವ) ಗಂಗಾನದಿ : ಸುತ್ತ ಬಳಗದ ಕೂಡೆ ಕುಳಿತು ಭಗವತ್ಪಾದಿಪೆತ್ತ ದೇವನ ಸ್ಮರಣೆಮಾಡಿಕೊಳ್ಳುತ (ಐರಾಕ. ೩೨-೦).
[ < ಸಂ. ಭಗವತ್ಪದೀ ]

**ಭಗವದಿಚ್ಛೆ** (ನಾ). ದೈವೇಚ್ಛೆ ; ಈಶ್ವರಸಂಕಲ್ಪ : ಪ್ರಕಟಣೆಗಾಗಿ ಒಂದೆರಡು ಪ್ರಯತ್ನಗಳು ನಡೆದುವಾದರೂ ಪ್ರಕಟವಾಗಲಿಲ್ಲ. ಭಗವದಿಚ್ಛೆ ಹಾಗಿತ್ತು (ಸಪಾ. XV, ಶ್ರೀನಾಪ) ; ಭಗವದಿಚ್ಛೆಯಿದ್ದರೆ ಶಿಕ್ಷೆ ರದ್ದಾಗುತ್ತದೆ (ಕುಪರು. ೨೩೬). [ ಸಂ. ಭಗವದಿಚ್ಛಾ ]

**ಭಗವದ್ಗೀತೆ** (ನಾ). ಹಿಂದುಗಳ ಸುಪ್ರಸಿದ್ಧವಾದ ಧರ್ಮಗ್ರಂಥ; ಮಹಾಭಾರತದ ಭೀಷ್ಮಪರ್ವದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶ ಮಾಡಿದ ತತ್ತ್ವವನ್ನು ವಿವರಿಸುವ ಹದಿನೆಂಟು ಅಧ್ಯಾಯಗಳನ್ನೊಳಗೊಂಡ ಗ್ರಂಥಭಾಗ : ವೇದಗಳ ಸಾರಸರ್ವಸ್ವ ಉಪನಿಷತ್ತುಗಳಾದರೆ, ಉಪನಿಷತ್ತುಗಳ ಸಾರಸರ್ವಸ್ವ ಭಗವದ್ಗೀತೆ (ಭಾರತ. ೦೦೯); ಉತ್ತಮಸಂದೇಶವನ್ನು ನೀಡುವ ಭಗವದ್ಗೀತೆಯೊಡನೆ ಕೂಡಿದ ಮಹಾಭಾರತವು ಪಂಚಮವೇದವೆನ್ನಿಸಿಕೊಂಡಿತು (ಸಂಸ್ಕೃತ. ೦೦೨ ಪೀಠಿ). [ಸಂ. ಭಗವದ್ಗೀತಾ]

**ಭಗವನ್** 'ಭಗವಾನ್' ನೋ.

**ಭಗವಾ** (ಗು). ಕಾವಿ ಬಣ್ಣದ : ತಿರಿದುಂಬುವ ಕಾಮುಕರೂ, ವೇದಾಂತ ಮಾರ್ಗದ ಹೆಸರಿನಲ್ಲಿ ಗುಂಪುಕಟ್ಟಿಕೊಂಡು ತಿರುಗುವ ಭಗವಾ ವೇಷಭೂಷಣವಲ್ಲಿರುವ ಗಾಂಜಾಮೇಳದವರಿಗೂ ಸೇರುತ್ತಿರಲಿಲ್ಲ (ಕಂಠ. ೬೩ ಕರಣಾಷ್ಟಕಂಥಯು) ; ದುಡ್ಡಿನ ಅಭಾವದಿಂದ ಟಿಳಕರು ಭಗವಾಕಪನಿ ಧರಿಸಹತ್ತಿದರು (ಸ್ವ.ತಿಲ. ೯೩೩) ; ಭಗವಾ ಧ್ವಜವು ಸುಟ್ಟು ಬೂದಿಯಾಯಿತು (ಭಾರಸಂ. ೨೦). [←ಹಿಂ. ಮರಾ. ಭಗವಾ]

**ಭಗವಾನ್**, ಭಗವನ್ (ನಾ). ೧. ಗುರುಹಿರಿಯರನ್ನು ಸಂಬೋಧಿಸುವಾಗ ಬಳಸುವ ಗೌರವಸೂಚಕವಾದ ಒಂದು ಶಬ್ದ : "ತತ್ರಭವಾನ್, ಭಗವಾನ್—(ಇವೆರಡುಂ) ಈ ೨ ಪೂಜಾವಚನಂ" (ಶಬ್ದಮ. ೨೫-೦೩೯). ೨. ಬುದ್ಧ: "ಸರ್ವಜ್ಞಸ್ಸುಗತಃ, ಬುದ್ಧಃ, ಧರ್ಮರಾಜಃ, ತಥಾಗತಃ, ಸಮಂತಭದ್ರಃ, ಭಗವಾನ್. . . ಮುನಿಃ—೧೮ ಬುದ್ಧದೇವರ ಹೆಸರುಗಳು" (ಸಿದ್ಧಾಂತ. ೦೬). **ಭಗವನ್**, ೧. ಭಗವನ್, ನಾನು ಶೃಂಗಾರ (ಹಕ್ಕು ಶು. ೯೯). [<ಸಂ. ಭಗವತ್]

**ಭಗಾಂಕುರ** (ನಾ). "ಗಂಡಸಿನ ಶಿಶ್ನಕ್ಕೆ ಸರಿಹೋಲುವ ಹೆಂಗಸಿನ ಜನನೇಂದ್ರಿಯ ಭಾಗ; ಭಗಾಂಕುರ" (Clitoris. ೨೦೯೦). [ಸಂ.]

**ಭಗಿನಿ** (ನಾ). ೧. ಒಡಹುಟ್ಟಿದವಳು; ಸಹೋದರಿ : "ಭಗಿನೀ, ಜಾಮಿಃ, ಸ್ವಸಾ — ಈ ೩ ಒಡಹುಟ್ಟಿದವಳ್" (ಶಬ್ದಮ. ೬೯-೩೩೩) ; ೩ನೆಯ ಮಾಧವನು ಅಶ್ವಮೇಧಯಾಜಿಯಾದ ಕದಂಬಕೃಷ್ಣವರ್ಮನ ಭಗಿನಿಯನ್ನು ವಿವಾಹ ಮಾಡಿಕೊಂಡಿದ್ದನು (ಕರ್ನಾಟ. ೨೦). ೨. ಮಹಿಳೆಯರನ್ನು ಸಂಬೋಧಿಸುವಾಗ ಬಳಸುವ ಒಂದು ಶಬ್ದ: ಭಗಿನಿಯರೆ, ನಿಮ್ಮ ಸಮಾಜಕ್ಕೆ ನನ್ನನ್ನು ಆಹ್ವಾನಿಸಿ ಗೌರವಿಸಿದುದಕ್ಕೆ ನಾನು ಕೃತಜ್ಞನಾಗಿದ್ದೇನೆ (ಲೂ). ೩. ಪುಣ್ಯವಂತೆ; ಭಾಗ್ಯವಂತೆ. [ಸಂ. ಭಗಿನೀ]

**ಭಗಿನಿಜ** (ನಾ). ಸೋದರಿಯ ಮಗ ; ಸೋದರಳಿಯ : "ಭಗಿನಿಜಂ ಸ್ವಸ್ರೀಯ ಸೋದರಳಿಯಂ" (ಮಂಗರಾ. ೯೩-೦೯). [<ಸಂ. ಭಗಿನೀಜ]

**ಭಗನೀಪತಿ** (ನಾ). ಸೋದರಿಯ ಗಂಡ; ಅಕ್ಕ ಅಥವಾ ತಂಗಿಯ ಗಂಡ.
[ಸಂ.]

**ಭಗೀರಥ** (ನಾ). ಸ್ವರ್ಗಲೋಕದಲ್ಲಿದ್ದ ಗಂಗಾನದಿಯನ್ನು ತನ್ನ ಅಸಾಧಾರಣ ಪ್ರಯತ್ನದಿಂದ ಭೂಮಿಗೆ ತಂದನೆಂದು ನಂಬಲಾದ ಸೂರ್ಯವಂಶದ ಒಬ್ಬ ಚಕ್ರವರ್ತಿ: ದೀಕ್ಷಾಗ್ರಹಣಮನೋರಥಂ ಮಹಾರಥಂ ಭಗೀರಥಂಗೆ ಸಾಮ್ರಾಜ್ಯಪದವಿಯಂ ದಯೆಗೆಯ್ದು (ಅಜಿತ. ೦೦-೦ ಪ); ಇದು ಭಗೀರಥರಥದ ಬೆಂಕೊಂಡು ಪರಿವ ಸುರನದಿಯ ಪ್ರವಾಹಮೆನಲ್ . . . ಐತಪ್ಪ ಚತುರಂಗದ ಪದಹತಿಗೆ ಧರೆ ನಡುಗುತಿರೆ (ತ್ರೈಲೋ. ೪-೨೮).

ಭಗೀರಥಪ್ರಯತ್ನ = ವಿಶೇಷವಾದ ಪ್ರಯತ್ನ : ಗಾನಯೋಗದಾದ್ಯಂತಮುಂ ಆಹುಕೃತಿಗೊಡಮ್ಬಡದಲ್ಲಂ. . . ಭಗೀರಥಪ್ರಯತ್ನಕಮೊಳಗಾಗದು (ಅದ್ಭುತ. ೨೮-೦೨); ಆ ಹುಡುಗಿಗೆ ಗಂಡು ಗೊತ್ತುಮಾಡುವುದಕ್ಕೆ ಭಗೀರಥಪ್ರಯತ್ನ ಮಾಡಬೇಕಾಯಿತು (ರೂಢಿ). [ಸಂ.]

**ಭಗ್ಗನೆ** (ಅ). ಒಂದು ಅನುಕರಣಾವ್ಯಯ ; ಕೂಡಲೆ ; ತಟ್ಟನೆ : ಒಗ್ಗೊಡೆಯದೊತ್ತಿ ನಡೆತಹನು ಭಟರೆದೆನಡುಗಿ ರಘುಗಿದರು ಹಿಂದೆ ಹಿಂದೆ ನಿಂದ ಸೈನ್ಯ ಭಗ್ಗನೊಡೆದುದು (ಶಾಂತಿಪ. ೬೦-೦೬). [ಭಗ್$_0$+—ಅನ್$_1$]

**ಭಗ್ನ** (ಗು). ೧. ಮುರಿದ; ಒಡೆದ : ಈ ಭಗ್ನಜೋಪಡಿಯು ನಿನ್ನದೇ (ನವ್ಯಕ. ೬೬). ೨. ಸೋತ; ಸೋಲಿಸಲ್ಪಟ್ಟ. ೩. ಹಾಳುಮಾಡಲ್ಪಟ್ಟ; ನಾಶಗೊಂಡ. ೪. ಎದೆಗುಂದಿದ ; ನಿರಾಶೆಗೊಂಡ. (ನಾ). ೫. ಮುರಿದಿರುವುದಂ : ನಂದಗೋಪಂ ಪೊಱಮ್ಬೊಟಲಿಂ ಬಂದು ಭಗ್ನವಾಗಿರ್ದ ಮಹಾಸ್ಕಂಧಶಾಖಾರ್ಜುನವಿಟಪಿಯುಮಂ. . . ಕಂಡು (ಜಗದ. ೩-೩೯ ಪ); ೬. ಎರಡಾಗಿ ಒಡೆದುದು ; ಹೋಳಾದುದು : "ಭಿನ್ನಂ ಭಂಗುರ ಭಗ್ನಂ . . . ಛಿತಮುಕ್ಯಂ" (ಪಟ್ಟು ಕೋ. ೦೦೬-೯೮); ಭಗ್ನವಾದ ಮೂರ್ತಿಗೆ ಭಂಗಾರದ ಗುಡಿಯಿಂದೇನು ? (ರಕ್ತರ. ೨೩೬). [ಸಂ.]

**ಭಗ್ನಪಾಠ** (ನಾ). ಪ್ರಾಚೀನಗ್ರಂಥಗಳಲ್ಲಿ ಕಂಡುಬರುವ ತ್ರುಟಿತ ಭಾಗ ; ನಷ್ಟಪಾಠ : ಭಗ್ನಪಾಠ್ಯಂತ ತಾತ್ಕಾಲಿಕಪಾಠವೇ (stop gap) ಉತ್ತಮ ಎಂಬುದು ಅವರ ನೀತಿ (ಭಾರತ. ೬೯). [ಸಂ.]

**ಭಗ್ನಮಂದಿರ** (ನಾ). ಮುರಿದು ಬಿದ್ದ ಮನೆ ; ನೆಲಸಮವಾದ ಮನೆ : ಆ ಭಗ್ನಮಂದಿರವನ್ನು ಜೀವಪೂರ್ಣದೇಗುಲವನ್ನಾಗಿಸುವ ಕೆಲಸ ಹರೆಯಕ್ಕೆ ಬಂದ ಮಗ ಈರನದಾಗಿತ್ತು (ಮಂಗಾಮು. ೬೯). [ಸಂ.]

**ಭಗ್ನಮನ** (ನಾ). ನಿರಾಶೆಗೊಂಡ ಮನಸ್ಸು : ಭಗ್ನಮನವಲ್ಲದಚಲಿತ ಲಗ್ನವೃತಿಯಾಗಿ . . . ಪಂಚಾಗ್ನಿಯ ನಡುವಗಜೆ ವಿಪುಳತಪದೊಳ್ ನಿಂದಳ್ (ಗಿರಿಜಾ. ೯-೯). [ಸಂ. ಭಗ್ನಮನಸ್]

**ಭಗ್ನಮನೋರಥ** (ನಾ). ಕೈಗೂಡದ ಆಸೆಯುಳ್ಳವನು ; ನಿರಾಶನಾದವನು : ಭಗ್ನಮನೋರಥಂ ರತಿಸುಖಾಸವಸೇವೆಗೆ ಪಂಚಬಾಣ ಪಂಚಾಗ್ನಿ ತಪಕ್ಕೆ ನಿಲ್ವ ವಿರಹಾತುರನಂತಿರೆ (ಅರ್ಜುನ. ೪-೦೨೬) ; ಅರಮನೆಗೆ ನಡೆಯೆನಲು ತಂದೆಯು ಪರಮವಚನವಲಂಘ್ಯವೆನೆ ಕಾತರಿಸಿ ಭಗ್ನಮನೋರಥನು ವಾರಳಿದನು ಮಂದಿರಕೆ (ಕುಮಾ.ಭಾ. ೨-೨೩). [ಸಂ.]

**ಭಗ್ನಲತಾವೇಷ್ಟನ** (ನಾ). [ಕಾಮಶಾ] ಆಲಿಂಗನದಲ್ಲಿ ಒಂದು ಪ್ರಕಾರ: ನಿಂದಿರ್ದ ಪುರುಷನ ಮುಂದಲೆಯ ಹೆಡಗಯ್ಯಂ ಬರತೆಗೆದು ಅತ್ಯಂತ ಬಾಗಿಸಿ ಆತನ ಕೊರಳು ಬೆನ್ನಂ ತೊಡೆಗಳಿಂದಾಲಿಂಗಿಸಿ ಆತನ ಶಿರದಲ್ಲಿ ಕಪೋಲಗಳನ್ನಿಕ್ಕಿಕೊಂಡುಯಿಂತಿಪ್ಪಳು. ಆತನ ಕೈಗಳಿಂದೆರಡುತೊಡೆಗಳಂ ಪಿಡಿದು ಇರುತಿರ್ಪನು. ಇದು ಭಗ್ನಲತಾವೇಷ್ಟನವೆಂಬುವರಿದು (ಕಾಮಶಾ. ೨೨೩). [ಸಂ.]

**ಭಗ್ನಾಂಗ** (ನಾ). ೧. ಮುರಿದ ಅವಯವ. ೨. ಅಂಗವಿಕಲನಾದವನು : ರಿಕ್ತಕುಂಭಂ ವಿಲಾಪಿಪ ಭಗ್ನಾಂಗನ ಕುಷ್ಠಿಯುಂ ವಿಧವೆಯುಂ ಕೊಂದಾಟವುಮಂ ಧೂಮಮಂ ನಿಪುಣರ್ ಕಂಡರೆ ಪೋಗರ್ಗೆ (ಸೂಪಶಾ. ೬೪). [ಸಂ.]

**ಭಗ್ನಾವಶೇಷ** (ನಾ). ಬಹು ಭಾಗ ಹಾಳಾಗಿ, ಉಳಿದಿರುವ ಅಂಶ: ನಮ್ಮ ಸುತ್ತಮುತ್ತಲೆಲ್ಲಾ ಹಳೇ ಸಂಪ್ರದಾಯದ ಭಗ್ನಾವಶೇಷವನ್ನೇ ನೋಡುತ್ತಿದ್ದೇವೆ (ಬಾರದ. ೩೬೪). [ಸಂ.]

**ಭಗ್ನಿಸು** (ಕ್ರಿ). ಮುರಿ ; ಭೇದಿಸು : ಭಗ್ನಿಸಿ ಜೀವನಜಾವು ಬೆಳಗಿನೆ ಮೂಜು ನಗ್ನಾತ್ಮನೆಂಬಾಗಳೊಂದೆ (ಶರಶ. ೬೬-೯೭). [ಭಗ್ನ + —ಇಸು₁]

**ಭಗ್ನೋತ್ಸಾಹ** (ನಾ). ಉತ್ಸಾಹವನ್ನು ಕಳೆದುಕೊಂಡವನು : ನಿರುತ್ಸಾಹಿ : ಕ್ಷುತ್ಪಿಪಾಸಾಶೀತಾತಪ ಪ್ರಮುಖಪರೀಷಹಂಗಳಂ ಸೈರಿಸಲಾಜದೆ ಭಗ್ನೋತ್ಸಾಹರುಂ ದೂರೋತ್ಸಾರಿತಾಭಿಮಾನಿಗಳುಮಾಗಿ (ಆದಿಪು. ೯-೬೬೫). [ಸಂ.]

**ಭಚಕ್ರ** (ನಾ). ನಕ್ಷತ್ರಮಂಡಲ : ಗ್ರಹಗಳ ಚಾರವನ್ನು ನಿರ್ದಿಷ್ಟವಾಗಿ ಮಾಡಲು ಅವು ಭೂಮಿಯ ಸುತ್ತಲೂ ತಿರುಗುವ ಹಾಗೆ ಕಾಣುವ ಭಚಕ್ರವನ್ನು (zodiac) ಹನ್ನೆರಡುರಾಶಿಗಳಾಗಿ (ಮೇಷ, ವೃಷಭ ಇತ್ಯಾದಿ) ವಿಂಗಡಿಸಿದರು (ಶಿಲ್ಪಶಾ. ೪೦). [ಸಂ.]

**ಭಚಲ** (ನಾ). (?) : ಕುಡುಕೂರ ಭಚಲ ದೋರಯ್ಯನ ಮಗಂ ಮಾರಯ್ಯಂ ಬಿನವಾರನೊ × × × ಳ್ದಿಯ ಪೆಳ್ಳಿಯೂರಬಾವಿನೊಳ್ಸತ್ತಾ (ಎಕ. IV, ಹುಣಸೂ. ೩೦-೯; 997). [?]

**ಭಜಕ** (ನಾ). ಪೂಜಿಸುವವನು ; ಭಕ್ತ ; ಉಪಾಸಕ : ಭಜಕಂ ದೈವದ ಭಕ್ತಿಯುಳ್ಕೊಡೆ ಭಟಂ ನಿರ್ಭೀತ ತಾನಾದವಂ (ಸೂಪಶಾ. ೯); ಹೊಲಬುಗೆಡಿಸಿದನಖಿಳನಿಗಮಂಗಳನು ತನ್ನಟಾಕೆಯಲಿ ಭಜಕಂಗೊಲಿದು ತಾನೈತರಲು ಕರುಣದ ಘನತೆಯೆನೆ ಲೋಕ (ಕುಮಾ.ಭಾ. ೬-೦೯). [ಸಂ.]

**ಭಜನ** (ನಾ). ೧. ಭಾಗ ಮಾಡುವಿಕೆ. ೨. ಆರಾಧನೆ ; ಉಪಾಸನೆ ; ಪೂಜೆ. ೩. ಭಕ್ತಿ. ೪. ಸೇವೆ ; ಉಪಚಾರ ; ಶುಶ್ರೂಷೆ. ೫. ಹೊಂದುವುದು ; ಪಡೆಯುವುದು. ೬. =ಭಜನೆ ೩. ೭. [ಗಣಿತ] ಭಾಗಹಾರ : (೬). [ಸಂ.]

**ಭಜನೆ** (ನಾ). ೧. ಪೂಜೆ ; ಆರಾಧನೆ : ಅಹುದಹುದು ಭಕ್ತಿಭಾವದ ಭಜನೆ ಎಂತೆಂತಹುದೊ (ಅವತಂ. ೨೦೬-೯೯೯); ಪರಶಿವನ ಭಜನೆಯಿಲ್ಲದನಾಮಿಕರಂಗಳಿರಾ (ಬಸವ. ೩೦-೯೮) ; ಕಣ್ಬೇಟವೇ ಕಂಜಾಕ್ಷ ಕಾಮಾರಿಗಳ ಭಜನೆಯಲಿ (ಕೊರವ. ೦-೩-೯೯). ೨. ಸೇವೆ; ಉಪಚಾರ; ಶುಶ್ರೂಷೆ : ದುರುಳ ಮದಕರಿಗಾಂತು ಮಡಿವೆನೊ ಗುರುಭಜನೆಯಿಲ್ಲದಕೆ ಶಾಂತಿಯ ದಾವುದವಧರಿಸಿ (ಐಶಪು. ೬೦-೩೬). ೩. ದೇವರ ನಾಮ, ಸ್ತೋತ್ರ ಮೊದಲಾದುವನ್ನು ತಾಳ, ಮೃದಂಗ ಮೊದಲಾದ ವಾದ್ಯಗಳೊಂದಿಗೆ ಸಂಗಡಿಗರೊಂದಿಗೆ ಹಾಡುವುದು : ಭಜನೆಯು ಮಾಡಿ ಬಾಗಿಲ ಬಂದು ಕಾದಿಹ ದ್ವಿಜರನುಮತವ ಶೀರಿಸದ ನಿಜಲೋಭಿಶತವೆಂಬಂದದಿ ಸಾಲ್ಗಟ್ಟಿ ಕುಜವಿರ್ದುದಾ ಬನಬನವಿ (ಮೋಹತ. ೨೯-೯೬). ೪. ಸ್ತೋತ್ರ ರೂಪವಾದ ಹಾಡು: ಭೋಜನವಿಲ್ಲದಿದ್ದರೂ ಭಜನೆ ಇರಬೇಕು (ಗಾದೆ). ೫. ಆಶ್ರಯ ; ಆಸರೆ: 'ಭಜನೆಗೆಡಿಸು', 'ಭಜಿಸು' ಪರಾ.

**ಭಜನೆಮನೆ**=ಅನೇಕರು ಒಟ್ಟಾಗಿ ಒಂದೆಡೆ ಸೇರಿ ದೇವರ ಭಜನೆ ಮಾಡುವ ಸ್ಥಳ : ರಾಮನವಮಿಯಾದುದರಿಂದ ಅಂದು ಭಜನೆಮನೆಯಲ್ಲಿ ಬಹಳ ಜನ ಸೇರಿದ್ದರು (ದೊರೆ). **ಭಜನೆಮಾಡು**=ದೇವರನ್ನು ಕುರಿತು (ಗುಂಪಾಗಿ) ಹಾಡು,—ಸ್ತೋತ್ರ ಮಾಡು ; (ಸಾಮೂಹಿಕವಾಗಿ) ಸ್ತುತಿಸು : ಊರ ಹುಡುಗರು ಮತ್ತು ಹೆಂಗಸರು ಗಂಡಸರು ಆದಷ್ಟು ಹೊತ್ತು ಭಜನೆಮಾಡುತ್ತಾರೆ (ಪಕ್ಷ್ಯರು. ೯೨). [ಸಂ. ಭಜನ]

**ಭಜನೆಗೆಡಿಸು** (ಕ್ರಿ). ಆಶ್ರಯವಿಲ್ಲದಂತೆ ಮಾಡು ; ನೆಲೆಗೆಡಿಸು : ಭಜನೆಗೆಡಿಸಿದನಧುಟರನು ಸೂರ್ಯಜನ ಸರಿಭಟನಾವನಿಲ್ಲೆಂದಜಸುರರು ಕೊಂಡಾಡೆ (ಕೊಣಗದು. ೨೨-೬೯). [ಭಜನೆ + ಕೆಡಿಸು₁]

**ಭಜನೆವಂತ** (ನಾ). ದೇವರ ಭಜನೆಯಲ್ಲಿ ತೊಡಗಿದವನು: ತ್ರಿಸಂಧ್ಯಾ ಕಾಲದ ಭಜನೆವಂತರೆಲ್ಲರು ಪುರಾಣದ ಪುಣ್ಯವಂತರು (ಪೋಣಶಾ. ೦೦೬-೪೨೩). [ಭಜನೆ + —ವಂತ]

**ಭಜಾವಳಿ** (ನಾ). "ಹೆಚ್ಚು ದೀರ್ಘಸ್ವರಗಳಿಂದಲೂ ಕೆಲವೇ ಹ್ರಸ್ವಸ್ವರಗಳಿಂದಲೂ ಕೂಡಿ, ಪ್ರತಿಸ್ಥಾಯಿಯಲ್ಲೂ ತಾನ ಪ್ರಾರಂಭ ಮತ್ತು ಮುಕ್ತಾಯವಾಗುವಿಕೆ" (ಸಂಗೀತಂ. ೬೬). [?]

**ಭಜಿ, ಬಜ್ಜಿ₁, ಬಜ್ಜ₂** (ನಾ). ಕಲಸಿದ ಕಡಲೆಹಿಟ್ಟಿನಲ್ಲಿ ತರಕಾರಿ ಬಿಲ್ಲೆಗಳನ್ನು ಅದ್ದಿ ಕರಿದು ಮಾಡುವ ಒಂದು ಬಗೆಯ ಭಕ್ಷ್ಯ : ಕರಿದ ಎಣ್ಣೆಯಲ್ಲಿಯೆ ಕರಿದರೂ ಬಾಯಿಗೆ ನವೋನವವಾದ ರುಚಿಕೊಡುವ ಆ ಭಜಿ . . . ಸವಿಯಬೇಕೆಂಬ ಲವಲವಿಕೆಯಾಗುತ್ತದೆ (ಕುಂಗಾಕು. ೫೬). **ಬಜ್ಜಿ₁** : ಕಡಲೆಬೇಳೆಯ ಹಿಟ್ಟನ್ನು ಬಜೆ ಮತ್ತು ಬೋಂಡಕ್ಕೆ ಅದ್ದಿಟ್ಟಾಗಿಯೂ . . . ಉಪಯೋಗಿಸುತ್ತಾರೆ (ಅಡುಗೆ. ೭೬); ಆ ದಿನದ ಬಜೆ ದಿವ್ಯವಾಗಿತ್ತು (ದೇಶಪು. ೬೪) **ಬಜ್ಜಿ₂**: ಏನು ಕೊಡಲಿ ಸಾರ್, ಜಾಮೂನ್ . . . ಬೋಂಡಾ, ಬಜ್ಜಿ (ಮಹಾಂ ೯೬). [←ಮರಾ. ಭಜೀ]

**ಭಜಿಕೆ** (ನಾ). ಒಂದು ಬಗೆಯ ವನಸ್ಪತಿ : "ಭಜಿನಕಾ—ಭಾರಂಗಿ" (ಓಷಧಿ. ೦೦೦). [?]

**ಭಜಿಯಿಸು** 'ಭಜಿಸು' ನೋ.

**ಭಜಿಸು, ಭಜಿಯಿಸು** (ಕ್ರಿ). ೧. ಪೂಜಿಸು ; ಆರಾಧಿಸು : ತಂದೆ ಕೇಳೀರೆಳು ಲೋಕದ ತಂದೆಯುಂ ಭಜಿಸದೆ ರತೀಶನ ತಂದೆಯುಂ ಬಿದಿ ರವಿ ಶಿಖಿಗಳ ಭಜಿಸಿ ಕರ್ಮಕ್ಕೆ ತಂದೆ (ಐಶಪು. ೩-೬೦); ಮಹಿಮಾರ್ಣವನನೇಸು ಭವಂಗಳಲಿ ಭಜಿಸಿದರೊ ನಿನ್ನವರು (ಕುಮಾ.ಭಾ. ೦೩-೩೦); ಇಭಮುಖಂಗೆ ಗುಹಾವಸ್ಥವಂ ಕೊಟ್ಟು ನಿನ್ನ ಭಜಿಸಿದರಿಷ್ಟಮಹುದೆಂದು ವರವನಿತ್ತು . . . ವಿರೂಪಾಕ್ಷ ನೊಪ್ಪಿದಂ (ಶಿವಪು. ೨೬-೩೬). ೨. ಸೇವಿಸು ; ಆಶ್ರಯಿಸು: ಶಾಸ್ತ್ರ ಘನವೆಂಬೆನೆ ಕರ್ಮದ ಭಜಿಸುತ್ತಿದೆ (ಬಸವ. ೨೦೬); ಅಗಣಿತ ಧುರವಿಜಯ ದೋರ್ಬಲರು ಮಣಿಮಯಮಕುಟವರ್ಧನರು ಚರಣಕಾನತರಾಗಿ ಪಳ ಭೂಪರನ ಭಜಿಸುತಲಿರ್ದರು (ಪಳಕ. ೦-೨೬); ಪತಿಯನೆ ಪರದೇವತೆಯೆಂದು ಭಜಿಸುವ ಸತಿಯರ ಸನ್ನುತಿಸುವೆನು (ಹರಿಶ. ೨-೩). ೩. ಧ್ಯಾನಿಸು ; ಚಿಂತಿಸು : ಭಜಿಸು ನಿತ್ಯಾನಿತ್ಯವಸ್ತುವ ವಿಜಯನಹೆ ಇಹಪರಕೆ ತತ್ತ್ವದ ನಿಜವಿದೆಲೆ (ಕುಮಾ.ಉ. ೪-೦೦) ; ಆ ಯದುಕುಲೇಂದ್ರನಂ

ಭಜಿಸುವೆಂ ಚಿತ್ತಶುದ್ಧಿಯೊಳರಣ್ಯದೊಳು (ಕೈವಿಂಶಾ. ೨-೦೯). ಭಜೆಯಿಸು: ೧. ಭಜಿಯಿಪೆನೆನ್ನ ಸತ್ಕೃತಿಗೆ ಸತ್ಕೃತಿಸಾಧನಮೆಂದು ನಾಂದಿಯೊಳ್ ನಿಜಕವಿತಾನುಕೂಲಗುಣಭದ್ರನಂ (ರರ್ಮನಾ. ೧-೨೦) ; ಕದಿರ ರೇವುನಾ ಗುರುಪದಮಂ ಭಜಿಯಿಸುತೇಳುಂ ದಿನವಿದರ್ದು (ಕೃಶಪಿ. ೩೩-೨೫) ; ಮಂತ್ರಜಪಂಗಳಿಂದೆ ಸಂಭಾವಿಪರಾವನಂ ಭಜಿಯಿಪರ್ ಮುನಿಗಳ್ ಮನುಗಳ್ (ಕಹಕಂ. ೪-೦೦೬). ೨. ಆ ಭುಜದೊಳೆ ಶಂಖಚಕ್ರನಳಿನೀಗದೆಗಳ್ ಕೊಡರ್ದಂತೆ ಸೌಖ್ಯಮಂ ಭಜಿಯಿಸಿದತ್ತು (ಜಗಪ. ೫-೬೪). ೪. ಹೊಗಳು ; ಸ್ತುತಿಸು : ಭಜಿಯಿಸುವ ಪುಣ್ಯಪಾಠಕರ ಪರಕೆಗಳೊಳಗೆ ಬರುತಿರ್ದನಪ್ರತಿಮಸುಕುಮಾರಶೇಖರಂ (ಸಂಖರ. ೫-೬೦). ೫. ಅನುಸರಿಸು; ಪಾಲಿಸು : ಆದಿಯ ಚಕ್ರವರ್ತಿಗಳ್ ಭಜಿಯಿಸಿದೀ ಪದಂ ಮಸುಳ್ಗುಂ (ಶಾಂತಿಪು. ೦೦-೬೬). [ ಭಜನ + — ಇಸು₃]

**ಭಜ್ಜಿಸು,** ಬಜ್ಜಿಸು (ಕ್ರಿ). ೧. ಕಾಳು ಮೊದಲಾದುವನ್ನು ಹುರಿ. ೨. ನಾಶಪಡಿಸು ; ತಲೆಯೆತ್ತದಂತೆ ಮಾಡು : ಸಜ್ಜಿಸಿದನು ಸಕಲರು ಈಕ್ಷಿಸುತಿರೆ ಭಜ್ಜಿಸಿದನು ಎರಡು ತುಂಡುಮಾಡಿ (ಕೃಸಶಾ. ೬೦-೪). **ಬಜ್ಜಿಸು** : ೨. ಗುಜ್ಜುಹೊಗುವುದು ಹೆಂಗಳದಿರಲಿ ಬಜ್ಜೆದೊರೆವುದು ಕೀಳುಬೇಕರ ಬಜ್ಜಿಸುವುದಿದು ನಿನ್ನ ಪೌರುಷವೆನುತ ತೆಗೆದೆಚ್ಚ (ಕೃಜ್ಞಾ.ತ. ೦೫-೬೦).

[ಭರ್ಜ್ಜನ₀ (P ← ಪ್ರಾ. ಭಜ್ಜಣ. / ಸಂ. ಭರ್ಜನ) + — ಇಸು₃ ]

**ಭಟ₁** 'ಬಂಟ₂' ನೋ.

**ಭಟ₂** (ನಾ). ೧. ಯುದ್ಧದಲ್ಲಿ ಕಾದುವವನು ; ಸೈನಿಕ ; ಬಂಟ : ನಿರ್ಧರದ ಭಟ ಜೀವಗಳ ನಲ್ಲಿ ಅದ್ದಲಿಸಿಕೊಂಬನೇ (ಶರಪ. ೦೨೦-೬೨೦) ; ಭಟರಶ್ವಮನಶ್ವಂ ಗಜಘಟೆಯಂ ಗಜಘಟೆ ತೆರಳ್ದು ರಥಮಂ ರಥಮುತ್ಕಟ ಭಯದಿಂದೋಡಿ ದಿಶಾತಟಮಂ ಮಚಿಗೊಳೆ ಹಲಾಯುಧಂ ತಳ್ತಿಱಿದಂ (ಜಗಪ. ೬-೬೦); ಝಳಪಿಸಿ ಪೊಯ್ವ ಖಡ್ಗಲತೆ ಮಿಂಚು ಭಟರ್ಕಳ ಬೊಬ್ಬೆ ಯುಬ್ಬರಂ ಮೊಳಗು (ದಕಸ. ೨-೨೨). ೨. ಪರಾಕ್ರಮಶಾಲಿ; ಶೂರ : " ವೀರಃ, ಶೂರಃ, ವಿಕ್ರಾಂತಃ, ಭಟಃ, ಚಾರುಭಟಃ — ಈ ೫ ಕಲಿ" (ಹಲಾಯು. ೫೬-೦೯೯) ; ಭಟನಲ್ಲದಿರ್ದಡೆ ಬಾಣನಂದನೆಯು ಲಂಪಟಿಕೊರ್ವಸಂಘೈಸುವರೆ (ಮೋಹಶ. ೪೪-೦೨). ೩. ಬೇಡ ; ಕಿರಾತ : "ಕಿರಾತಃ, ಶಬರಃ . . . ಭಟಃ, ಮಾಳಃ, ಮ್ಲೇಚ್ಛಃ — ಈ ೮ ಬೇಡ ಮೊದಲಾಗುಳ್ಳಂತ್ಯಜಾತಿಗಳ್" (ಹಲಾಯು. ೯೮-೯೯೫). ೪. ಸೇವಕ ; ದೂತ : 'ಭಟಾಳಿ' ಪರಾ. [ಸಂ.]

**ಭಟಕ** (ನಾ). ಸೇವಕ ; ಆಳು : ಬಡಿಯುತಲಹರೆ ನಿನ್ನಯ ಭಟಕರುಗಳು ಬಡಿಸೆಂದು ತವುವೈತಂದು (ಜ್ಞಾ.ಪಶ. ೩೪-೬೬). [ಸಂ.]

**ಭಟಕಟಾಹ** (ನಾ). ಸೈನಿಕರ ಗುಂಪು,— ಸಮೂಹ : ಸೈತಿರು ನೀನಾಗೆಂದು ತನ್ನಂ ನುಡಿದು ಭಟಕಟಾಹಕ್ಕೆ ಚಣ್ಣಿಂದೆ ಸೂಸುತ್ತುರಿಯಂ ಕಲ್ಪಾಂತದುಗ್ರಾಂತಕನ ಮಸಕಮಂ ತಾಳ್ದಿದಂ ರಾಜಪುತ್ರಂ (ಸಂಕ್ರಶಿ. ೫-೦೨೬). [ಸಂ.]

**ಭಟಗುತಿಗೆ** (ನಾ). ಸೈನಿಕರಿಗಾಗಿ ಕೊಡುವ ದವಸ ಧಾನ್ಯ ಮೊದಲಾದುವು : ನಾಲು ತೆಱುಮಂತಾ ಭಟಗುತಿಗೆಯು ಸುಂಕವನೂ ಸರ್ವಮಾನ್ಯವಾಗಿ ಬಿಟೆಉ (ಎಕ. XI, ಹಿರಿಯೂ. ೯೫-೪೯ ; ?). [ಭಟ₂ + < ಗುತ್ತಗೆ]

**ಭಟಮಾನ್ಯ,** ಬಟಮಾನ್ಯ (ನಾ). ವಿದ್ವಾಂಸನಾದ ಬ್ರಾಹ್ಮಣನಿಗೆ ರಾಜನು ಕೊಡುತ್ತಿದ್ದ ತೆರಿಗೆ ಇಲ್ಲದ ಭೂಮಿ ; ಉಂಬಳಿ : ಮಹಾಮಾತೋಶ್ರೀಯವರು ಕೊಟ್ಟ ಆನಂದೂರು ಭಟಮಾನ್ಯ ೧ ಪ್ರತಿ ೧ ಸಹ ಅನುಭವಿಸಿಕೊಂಡುಯಿರುವಲ್ಲಿ (ಎಕ. V (R). ಮೈಸೂರು. ೫-೪; 1843) ; ಧರ್ಮಾದೀಕ್ಷಿತರ ಭಟಮಾನ್ಯದ ಹೊಲ (ಎಕ. IX. ಬೆಂಗಳೂ. ೩-೬ ; 1855); ಅನೇಕ ದೇವಾಲಯ ಬ್ರಹ್ಮಾದಾಯ ಭಟಮಾನ್ಯಗಳನ್ನು ಬಿಹಲ್‌ಮಾಡಿ (ಕುಚಾಪಂ. II, ೩೩). **ಬಟವಾನ್ಯ:** ಅದಕ್ಕೆ ಮೊದಲು ಬಟಮಾನ್ಯವೆಂದು ಬೆಳೆದದ್ದರಲ್ಲಿ ಅರ್ಧದಿನಸಿಯು ವೃತ್ತಿವಂತರಿಗೆ ಬರುತ್ತಿತ್ತು (ಪುಬ್ಬಿಪ. ೩).

[ < ಭಟ್ಟವಾನ್ಯ ]

**ಭಟರಾಜು** (ನಾ). (ಹಿಂದೆ ಮೈಸೂರುಮಹಾರಾಜರ ದರ್ಬಾರು ಸಂದರ್ಭದಲ್ಲಿ) ಬಿರುದುಗಳನ್ನು ಹೇಳಿ ಹೊಗಳುತ್ತಿದ್ದ ಒಂದು ಜನವರ್ಗ : ಭಟರಾಜು ಎಂದು ಕರೆಸಿಕೊಳ್ಳುತ್ತಿದ್ದವರ ವಂಶಸ್ಥರು ಇಂದಿಗೂ ಮೈಸೂರಿನಲ್ಲಿ ಇದ್ದಾರೆ (ರೂಢಿ).

[ಭಟ₁ (< ಬಂಟ₂) + ರಾಜು₀. / ತೆಲು. ಭಟ್ರಾಜು]

**ಭಟರಿ** 'ಭಟಾರಿ' ನೋ.

**ಭಟಸಂಘ** (ನಾ). = ಭಟಕಟಾಹ : ಭಟಸಂಘಕ್ಕೆದಟೆಂತುಟಂತುಟೆ . . . ದರ್ಶನಂ ಸಕಲಧರ್ಮಕ್ಕಂ (ಧರ್ಮಾಮೃ. ೦-೬೨). [ಸಂ.]

**ಭಟಹ** (ನಾ). (?) : ನರಿದಾವಿ[ಳೆ]ನಾಡುಳ್ ಮೃಗೇಶನಾಗೇನ್ದ್ರಾಭೀಳ ಭೃಗುಟಹರಪ್ಪೊರ್ ಶ್ರೀಮೃಗೇಶನಾಗಾಹ್ವಯರಿರ್ವ್ವರ್ (ಮೈಆಂ. ೦೯೩೬, ೦೬-೪; 450). [?]

**ಭಟಾಂಗ** (ನಾ). ಹೊಗಳಿಕೆ ; ಪ್ರಶಂಸೆ : ಅಖಿಳವೀರರೊಳಿಲ್ಲ ಸರಿದೊರೆ ನಿನಗೆ ಬಾಯಲಿ ಬಲ್ಲದನು ನೀನಹೆ ಭಟಾಂಗದ ಮಾತದಂತಿರಲಿ (ಕುಪ್ಪಾದ್ರೋ. ೫-೫೩); ಹಿಂದೆ ಹಿಂದೆ ತಿಂಪು; ತಿಂಪುವನ ಕೈಯಲ್ಲಿ ಚಾಮರ, ಬಾಯಲ್ಲಿ ಭಟಾಂಗ (ಪಮೊಂದ. ೬೩). 'ಭಟ್ಟಂಗಿ' ಪರಾ.

[ಭಟ₁ (< ಬಂಟ₂) + ಅಂಗ₁]

**ಭಟಾಗ್ರಣಿ** (ನಾ). ಬಹಳ ಪರಾಕ್ರಮವುಳ್ಳವನು; ಶೂರಾಗ್ರೇಸರ : ಅರರೆ ಭಾಪುರೆ ಕರ್ಣ . . . ಭಟಾಗ್ರಣಿ ನಿನ್ನ ಸರಿದೊರೆಯರಡುಯುಗದಲಿ ಕಾಣೆನು (ಕುವ್ಯಾಕ. ೨೬-೨೦). [ಸಂ.]

**ಭಟಾರ,** ಬಟಾರ₁, ಬಳಾರ, ಭಟ್ಟೋರ, ಭಳಾರ, ಭಟಾರ (ನಾ). ೧. ಪೂಜ್ಯವ್ಯಕ್ತಿ; ಗೌರವಾನ್ವಿತ ; ಮಾನ್ಯ. ೨. ಯತಿ; ಗುರು : ಗಾವುಣ್ಡ ಪ್ರಜೆರ್ ಸಕ್ಷಿಪೋವ ಕಾಪಾಳಿಗಭಟಾರರ್ ಪಡೆದೋರ್ ಮಣ್ಣಮುವ್ (ಎಕ. XI, ಚಿತ್ರದು. ೩೪-೨; ಸು. 500?); ಎನ್ನಂ ಜ್ಯೋತಿಷಮಂ ಕಲ್ಪಿಪ್ಪುದೆಂದೊಡೆ ಭಟಾರರೇದರ್ (ವಡ್ಡಾರಾ. ೫-೨೬). ೩. ಒಡೆಯ ; ರಾಜ : ಸ್ವಸ್ತಿ ಕೀರ್ತ್ತಿವರ್ಮ್ಮ[ಸತ್ಯಾ]ಶ್ರಯ ಶ್ರೀಪ್ರಿಥು[ವೀವಲ್ಲಭ] ಮಹಾರಾಜಾಧಿರಾಜ ಪರಮೇಶ್ವರಭಟಾರರ ರಾಜ್ಯಮೊಂದುತ್ತರಪಾಭಿವೃದ್ಧಿಸಲ್ (ಎಇ. XXI, ೩೪-೩; 751); ಶ್ರೀಅಕಾಲವರಿಷಭಟಾರರ್ ಪೃಥುವಿರಾಜ್ಯಙ್ಗೆಯೆ (ಎಇ. VI, ೦೬೦-೦; 765) ; ಅಮೋಘವರ್ಷ ಶ್ರೀಪೃಥಿವಿವಲ್ಲಭಮಹಾರಾಜಾಧಿರಾಜಪರಮೇಶ್ವರಭಟಾರರ್ (ಎಇ. VII, ೨೦೫-೨ ; ಸು. 874). **ಬಟಾರ₁:** ೩. ತ್ರಿಭುವನಕರ್ತಾರ ಬಟಾರರ್ತ್ತರಾಜ್ಯಂಗೆಯ್ಯುತ್ತಿರೆ (ಎಕ. X (8), ಮುಳಬಾ. ೩೦೩-೨ ; ಸು. 950). **ಬಳಾರ:** ೧. ಉರಗನ ಜೊಂಪದಂತೆ ಸುರಿಯುತ್ತಿರೆ ಪೆರ್ಮಟೆ . . . ಕಲ್ಲಬಳಾರನಪ್ಪೊರ್ ತಪೋಧನಂ ಮರವೊದಲಿರ್ದನೆನ್ನದೊಡಲೆನ್ನದೊಡಂಬಡೆ ಮೇಘಕಾಲದೊಳ್ (ಕಸಂಪು. ೪-೦೯). **ಭಟ್ಟೋರ :** ೩. ಶ್ರೀಮತ್ಕದಂಬಪನ್ನ್ಯಾಗಸಂಪನ್ನನ್ಕಲಭೋರ[ನಾ]ಅರಿ ಕಕುಸ್ಥಭಟ್ಟೋರನಾಳೆ (ಮೈಆಂ. ೦೯೩೬, ೦೬ —೩ ; ಸು. 450). **ಭಳಾರ :** ೨. ಕೇಶವನನ್ದಿ ಅಷ್ಟೋಪವಾಸಿ ಭಳಾರರ ಬಸದಿಗೆ ಪೂಜಾನಿಮಿತ್ತದಿಂ (ಎಕ. IV. ೦೬೦-೦೪ ; 1038) ; ಭಾವಶಿವಭಳಾರರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕ ಸಬ್ಬನಮಸ್ಯಮಾಗಿ . . . ಕೊಟ್ಟ ಗದ್ದೆ (ಮೈಆಂ. ೦೯೩೨, ೬೪-೦೨; ಸು. 1076). **ಭಟಾರ :** ೨. ಅವರ ತಮ್ಮೋ ಅಮ್ಮಯ್ಯಂ ದೇಗುಲಮಂ ಮಾಡಿಸಿ ಭಟಾರರ್ಗ್ಗೆ ಊರಮುನ್ದಣ ಕಿಳಾರ ಕೆಯ್ಯೊಳ್ . . . ಬಿ × × ಟ್ಟ (ಎಕ. VIII, ತೀರ್ಥಹ. ೨೬-೦೨; 929); ಭುವನಶಕ್ತಿ ಭಟಾರರ್ (ಎಕ. IX (8), ಚನ್ನಪ. ೨೬೨-೬; 10ನೆಯ ಶತ).

[< ಸಂ. ಭಟ್ಟಾರ]

**ಭಟಾರಕ** (ನಾ). = ಭಟಾರ ೨ : ಲೋಕಾಖ್ಯಳರಸತ್ಸ್ಯರ್ವಮ್ಮ ವರ್ಷನಕ್ಯಾತ್ತಿಗೆ ಕಪುಲಿಕ್ಯಖುಂಕಿ ಭಟಾರಕ ವೊಯ್ದು ವೊನ್ನೂಱುಗದ್ಯಾಣಮಂ (ಎಕ. X. ಕೋಲಾರ. ೧೧-೪; ಸು. 753). [< ಸಂ. ಭಟ್ಟಾರಕ]

**ಭಟಾರಿ, ಬಟರಿ, ಬಟಾರಿ, ಬಲಾರಿ$_1$, ಬಳರಿ, ಬಳಹರಿ, ಬಳಾರಿ, ಭಟರಿ, ಭಲಾರಿ, ಭಳಾರಿ, ಭಟಿರಿ** (ನಾ). ೧. ಒಂದು ದೇವತೆಯ ಹೆಸರು : ಮಾರಕಬ್ಬೆ ಭಟಾರಿಗೆ ಮತ್ತರ್ಪನ್ನೆರಡು ಮನೆಯೊಂದು ನ್ಯಾಸಂ (ಎಇ. XX. ೬-೨೪; 1012) ; ಪಸಾಯಮನಿತ್ತ ಮಕುಟದ ಮಣಿಕಳ ಮನಾ ಕುಮಾರಿ ಮುಡಿಯೊಳಿಟ್ಟು ಭಟಾರಿ [ಶಾಶಾಂ. ಭಟ್ಟಿತ್ತಿ, ಭಟ್ಟರಿ]ಗೆ ಪೊಡೆಪಟ್ಟು (ಅರ್ಥಣೆ. ೬-೧೮ ವ); ಈಶಾನ್ಯಾಂದಿಶಿ ಭಟಾರಿಕ್ಷೇತ್ರಂ (ಸೌಇಇ. XX. ೩-೧೧; ?). **ಬಟರಿ :** ೨. ಒಂದು ಮನೆತನದ ಹೆಸರು ( ? ) : ಬಟರಿಕುಲಾಮಲವ್ಯೋಮ ಶಾರಾಧಿನಾಥನ್ (ಪ್ರಮಿ. ೧೯೩೬. ೦೬-೫ ; ಸು. 450). **ಬಟಾರಿ :** ೨. ಬಟಾರಿಕುಲದೊಳಗಳ್ ಕದಮ್ಬನ್ನೆಳ್ದೋನ್ ಮಹಾಪಾತಕನ್ (ಪ್ರಮಿ. ೧೯೩೬. ೦೬-೦೩; ಸು. 450). **ಬಲಾರಿ$_1$ :** ೧. ಬೆನಕ ಕಾರ್ತಿಕೇಯ ಭಗವತಿ ಬಲಾರಿ ಕಾಳಿ ಮಾಕಾಳಿ (ಶ್ರಾಶ್ರಾಸ್ವಯಂಚಿ. ೧೨೫೯ ಶಾಸ್ತ್ರಾರ). **ಬಳರಿ :** ೧. "ಬಳರಿಯ ಮಾಕಾಳಿ" (ಶಶುಶಿ. ೧೧೩); ಬಳರಿಯ ಸೋಂಕಿಗೆ ಬೀದಿಗೆ ಮುಳಿವರ ಮನೆಗಳ್ಗೆ ಮದ್ಯಪಿಗಳಲ್ಲಿಗೆ ಕೋಮಳೆಯುಂ ಪೋಗಲ್ಕಿತ್ತಡೆ ಬಳರಿಗೆ ಪೂಯಿವಿಡ ಹೋದ ಕುಱಿಯಂತಕ್ಕುಂ (ಪುದತಿ. ೮-೨೮) ; ಕೂಸಿಂಗೆ ಕಾತ್ತವಾದೊಡೆ ದೇಶದ ಬಳರಿಯುರ್ಗೆ ಕುಡುವರೊಳ್ಪರ್ಚನೆಯುಂ (ಸಚುತ. ೫-೧೧೧); ಬಳರಿಯ ಬನದಿಂ ಪೊಱಮಟ್ಟಂ ಚಂಡಕರ್ಮನೆಂಬ ತಳಾಱಂ (ಯಶೋಚ. ೧-೯೩). **ಬಳಹರಿ :** ೧. ದಿಟ್ಟಿ ಬಳಹರಿ ಮಾರಿ ಬತ್ತವ ಕೊಟ್ಟಣಂಗುಟ್ಟಲು (ಅಸತ್ಪು. ೨೩-೧೯); ತಮ್ಮಯ ಬಲ್ಲತನವನೇ ಮೆಱೆ ವಣ್ಣಂಗಳ ಬಲ್ಲತನದ ಬಾಯೊಳು ಬಳಹರಿ ಬಲ್ಮನಿಸುದಳೆದು ಹೊಗಲಿ (ಶಮಾ. ೦-೦೬). **ಬಳಾರಿ :** ೧. ದುಷ್ಟಬುದ್ಧಿ ತನ್ನ ತಂದೆಯಂ . . . ಬಳಾರಿಯ ಮನೆಯಂ ಪಡೆಯ ಕುಱಿಯಂ ಪುಗಿಸುವಂತೆ . . . ಪುಗಿಸಿ (ಶಂಕಸಂ. ೧೬೫-೧೧) ; ಕರೆಯದೆ ಕಾಡಿ ಕಂಟಿಸುವ ಕೂಂಟಣಿಯಂ ಸೊಣಗಣ್ಣಿ ತಿಂಗೆ ಬೆಂಗುತ್ತುಟಿ ಬಳಾರಿ ಬಾಡಿಸುಗೆ ಚಂಡಿಕೆ ನುಂಗುಗೆ (ರೇಣಾಪ. ೨-೧೦೩); ಬಳಾರಿ ನೀನಿತ್ತ ಕೂಸಂ ನಾಳೆ ರಕ್ಕಸಂ ಕೊಲಲೆಂದಿರ್ದಪಂ (ಉಡಸಂ. ೩೯-೨೮ ವ). **ಭಟರಿ:** ೧. ಭಟರಿಯ ದೇಗುಲ ವಿನಕನ ದೇಗುಲ ಮಟವಮು [ದೇ]ರ ದೇಗುಲವ ಕೇಸವಾದಿಶ್ಯರ ದೇಗುಲ (ಸೌಇಇ. XI-i. ೪೫-೫; 933). ೨. ಶೌಯ್ಯೋರ್ಯದ್ಯಮಭೂತೋ[ನ್ನಾಪ]ಪಶುಪತಿಯೆನ್ದು ಪೊಗಟಿಪ್ಪೊಟ್ಟಣ ಪಶುಪತಿನಾಮಧೇಯನಾಸರಕ್ಕೆಲ್ಲ ಭಟರಿಯಾ ಪ್ರೇಮಾಲಯ ಸುತನ್ಗೆ (ಪ್ರಮಿ. ೧೯೩೬. ೬೩-೯; 450). **ಭಲಾರಿ :** ೧. ಭಲಾರಿ ಭುಮಿಂಗದ್ದೆ ೫೦೦ (ಇಇ. VIII. ೯೫ ; 444); ಭಲಾರೀ ಭೂಮಿ ೨೦೦ (ಇಇ. XIV. ೧೪೦-೨೯; ೧೩ನೆಯ ಶತ). **ಭಳಾರಿ :** ೧. ತೆಂಕಣಕೋಡಿಯಾಪೊಳಗಣ ಭಳಾರಿಯಾಲವಂತೆ ಹಡುವಲು ನಡೆದು (ಎಕ. VI. ಕಡೂರು. ೧೬೦-೯೩; 1137). **ಭಟಿರಿ :** ೧. ಅರಸಂ ಬನ್ದು ನೋಡಿ ಭಟಿರಿಗೆ ಬಿಟ್ಟ ಕೆಯ್ಮತ್ತರೆರಡು (ಎಕ. VIII. ಸೊರಬ. ೪೪-೧೧; 971). [ < ಸಂ. ಭಟ್ಟಾರಿಕಾ ]

**ಭಟಾಳಿ** (ನಾ). ೧. ಯೋಧರ ಗುಂಪು, – ಸಮೂಹ : ಸ್ವಾಮಿಕಾರ್ಯದ ಪೊಱೆಗೆಯುಳ್ಳ ನವಾಯ ಬಿರುದಿನ ಮುಱುವುಳ್ಳ ಭಟಾಳಿ ನಿಲುವುದು ತಡೆವುದರಿಭಟರ (ಕುಮಾರ. ೨೨-೨೬) . ೨. ಊಳಿಗದವರ ಗುಂಪು ; ಸೇವಕರ ಸಮೂಹ : ಸಲ್ವ ಭಟಾಳಿ ತಂದುಕೊಡೆ ಧೂಪವ ನೊರ್ದಿಮಗಿತ್ತು (ಉದ್ಭಟ. ೧೧-೬೦). [ ಸಂ. ಭಟಾಲಿ ]

**ಭಟಿತ್ರ** (ನಾ). ಸಲಾಕೆಯ ತುದಿಯಲ್ಲಿ ಚುಚ್ಚಿ ಸುಟ್ಟ ಮಾಂಸ : "ಶೂಲ್ಯಂ, ಭಟಿತ್ರಂ – ಈ ೨ ಸುಂಟಗೆ" (ಹಲಾಯು. ೫೪-೧೬೮); "ಶೂಲಾಕೃತಂ, ಭಟಿತ್ರಂ, ಶೂಲ್ಯಂ – ೩ ಕಾಡಗೋಲಿಗೆ ಚುಚ್ಚಿ ಪಕ್ವ ಮಾಡುವ ಭಕ್ಷ್ಯಕ್ಕೂ, ಸುಟ್ಟು ಸಂಚಿಕೊಳ್ಳುವ ಪದಾರ್ಥಕ್ಕೂ ಹೆಸರುಗಳು" (ಸಿದ್ಧಾಂತಿ. ೨೬೭). , [ ಸಂ. ]

**ಭಟ್ಟ** (ನಾ). ೧. ಅನೇಕ ಶಾಸ್ತ್ರಗಳಲ್ಲಿ ಪಾರಂಗತನಾದವನು ; ವಿದ್ವಾಂಸ : ಚಾಣಾಕ್ಯನೆಂಬ ಭಟ್ಟನಂ ನಂದಂ ಪರಿಭವಿಸಿ (ವಡ್ಡಾರಾ. ೬೫-೭); ಆ ಭಟ್ಟನೀ ದುಷ್ಟಂಗೆ ಮಱುಮಾತುಗೊಟ್ಟೊಡೇನಪ್ಪುದೆಂದು ಸಿರದೆ ನಡೆವುದುಂ (ಶಂಕಸಂ. ೧೪೬-೧೫); ವೇದಶಾಸ್ತ್ರದ ನಿಷ್ಠನೇ ಭಟ್ಟನೈ (ರೇಕ್ವಿತು. ೬-೨-೧೮). ೨. ವೈದಿಕಬ್ರಾಹ್ಮಣ ; ಸಂಪ್ರದಾಯಸ್ಥ ಬ್ರಾಹ್ಮಣ : ಕರಿಮರಿನಾಯಿ ಕುಂಯಿಗುಡುತಿತ್ತು ಭಟ್ಟರ ಬಾಯಿ ಒಟಗುಡುತಿತ್ತು (ಗಂ. ೪೪-೨); ಪಟ್ಟೀವೀಳ್ಯವಾದರೆ ಭಟ್ಟರಿಗಾಗದೇ? (ಗಾದೆ). ೩. ರಾಜರು ಮೊದಲಾದವರನ್ನು ಹೊಗಳುವ ಊಳಿಗದವನು; ಸ್ತುತಿಪಾಠಕ; ಭಟ್ಟಂಗಿ : ಗಾಣರ ಭಟ್ಟರ ಗೃಹವೀಧಿಗಳಿನಾ ಪುರಂ ರಂಜಿಸುಗುಂ (ಉದ್ಭಟ. ೧-೬೦); ಕೈನೆಗಹಿ ನೃಪಗುಣನ ಬಿರುದಾವಳಿಯ ಸಂಗತಿಯನಭಿವರ್ಣಿಸುವ ಸಮಯೋಚಿತದ ಪನ್ನಣೆವಡೆದು ಮೆಱೆದುದು ಭಟ್ಟಸಂದೋಹ (ಕುಮಾರ. ೮-೩೯); ಭಟ್ಟಡೊಂಬರಿಗಿತ್ತು ಕೆಟ್ಟು ಪೋಗಲಿಬೇಡ ಸೃಷ್ಟೀಶ್ವರನ ಶರಣರಿಗೆ ಕೊಟ್ಟಪರೆ ಶ್ರೇಷ್ಠಪದವಕ್ಕು (ಸರ್ವಜ್ಞ. ೬೩೦). ೪. ವಾರ್ತಾವಾಹಕ; ದೂತ : ಕೌರವರಾಯನಲ್ಲಿಗೆ ಕಾಳೆಗದ ಕಾಹುರಿಗರುವರಟ್ಟಿದರು ಭಟ್ಟರನು (ಕುಮಾಭೀ. ೧-೧); ಬರಹೇಳೆಂದು ಭಟ್ಟರನಟ್ಟಿದನು ಪಾಂಡವರ ಪಾಳಯಕೆ (ಕುಮಾದ್ರೋ. ೯-೨೮). ೫. ದೇವಸ್ಥಾನದ ಪೂಜಾರಿ, – ಅರ್ಚಕ : ಭಟ್ಟರು ದೇವರಿಗೆ ಮಂಗಳಾರತಿಯನ್ನು ಮಾಡಿದರು (ರೂಢಿ). ೬. ಅಡುಗೆ ಮಾಡುವ ವೃತ್ತಿಯನ್ನು ಅವಲಂಬಿಸಿರುವವನು ; ಬಾಣಸಿಗ : ಪುಣ್ಯಾತ್ಮ ಅಡಿಗೆಭಟ್ಟನನ್ನೂ ಬಂದಿರಲಿಲ್ಲ (ರೇಶತ. ೬೬) ; ಕಾಫಿಹೋಟಲಿನಲ್ಲಿ ಗಿರಾಕಿಯಂತೂ ಯಾರೂ ಇಲ್ಲದಾಗ ಭಟ್ಟರು "ನರ್ಸಿ ಹೇಗಿದ್ದೀಯಾ?" ಎಂದರು (ಹೊಸಕ್ಥೆ. ೫೮) ; ಭಟ್ಟರು ಎಲ್ಲರಿಗೂ ಬಡಿಸಿ ಹೊರಟು ಹೋದರು (ದೂಕಬ್ಬ. ೯೬). ೭. ಕೆಲವು ಬ್ರಾಹ್ಮಣರು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುವ ಪರಂಪರಾಗತವಾದ ಉಪಪದ : ಕೂಸುಗಳ್ ಸೋಮಶರ್ಮಭಟ್ಟಂಗೆ ನಿಮ್ಮ ಮಗಳ್ ರಿಸಿಯರ ಪಕ್ಕದೆ ಶ್ರಾವಕವ್ರತಂಗಳಂ ಕೈಕೊಂಡು ಬಂದಳೆನೆ (ವಡ್ಡಾರಾ. ೧೩-೧೬) ; ಈ ಪರಿಯಲಾ ಶುಕ್ರಭಟ್ಟರು ತಾ ಪರೀಕ್ಷಿಸಿಯವರ ಶಿಷ್ಯಗೆ ವ್ಯಾಪಿಸಿದ ವರತತ್ತ್ವಬೋಧೆಯನುಸಾರದುನ್ನತಿಯು (ಸಂಶತ. ೮-೩೯) ; ಜೈಮಿನೀಯ ಮೀಮಾಂಸಾಶಾಸ್ತ್ರಕ್ಕೆ ಪ್ರಮುಖ ಪ್ರಚಾರಕನು ಕುಮಾರಿಲಭಟ್ಟ (ಕಾಕದ. ೧೨೯). ೮. ಒಬ್ಬ ಪ್ರಸಿದ್ಧ ಮೀಮಾಂಸಕನ ಹೆಸರು : 'ಭಟ್ಟದರ್ಶನ', 'ಭಟ್ಟಮತ' ಪರಾ. [ಸಂ.]

**ಭಟ್ಟಂಗಿ** (ನಾ). ಹೊಗಳುಭಟ್ಟ; ಸ್ತುತಿಪಾಠಕ : ಈ ಭಟ್ಟಂಗಿಗಳ ಬಳಗದಿಂದ ಜಗತ್ತಿಗೆ ಆಗಬೇಕಾದುದಾದರೂ ಏನು (ಪುತ್ರಮ. ೨೬೬); 'ಭಟ್ಟಂಗಿಗಳು ನಾವೂ' ಎಂದುಕೊಂಡು ಹೊಗಳಿ ಹೊಗಳಿ ಭಿಕ್ಷವೆತ್ತುವ ಒಂದು ಬಗೆಯ ಭಿಕ್ಷುಕರು 'ಮಂತ್ರ ಹೇಳದ ಹಾಗೆ' ನುಡಿಯುವ ಪದಗಳು ಹಲವು (ಶಾಕದ. ೧೩೫). [<ಭಟ್ಟ]

**ಭಟ್ಟಂಗಿತನ** (ನಾ). ಹೊಗಳುವ ಕೆಲಸ : ಸಾಕು ನಿಮ್ಮ ಈ ಬಡತನದ ಭಟ್ಟಂಗಿತನ (ಹೊಸಂಶಾ. ೪). [ಭಟ್ಟಂಗಿ + –ತನ]

**ಭಟ್ಟಗುತ್ತ** (ನಾ). (?) : ಮುನಿದೊಡೆ ಭಟ್ಟಗುತ್ತನ ಛಟಾರದ ಪೊಲ್ ನೆಱ್ ತನ್ನ ಕಯ್ದು ತನ್ನನೆ ತಱಿದೊಟ್ಟಿ ದಾನವಧರಾತಳವಲ್ಲಭನಂ ಚತುರ್ಭುಜಂ (ಅಪಂಪು. ೧೪-೨೦); ಮುದ್ರೆಯ ವೋಲಗಕ್ಕೆ ಗದ್ಯಾಣಂ ಹನ್ನೆರಡು ಭಂಡಾರದೋಲಗಕ್ಕೆ ಗದ್ಯಾಣಂ ಹನ್ನೆರಡು ಭಟ್ಟಗುತ್ತರು ಎರಡಕ್ಕಂ ಗದ್ಯಾಣಂ ಇಪ್ಪತ್ತು ಕರ್ಪೂರದಾರತಿಯವರು ಎರಡಕ್ಕಂ ಗದ್ಯಾಣಂ ಪದಿನಾಱು (ಎಕ. III. ತಿರುಮ. ೯೭-೮೨; 1270). [ ? ]

**ಭಟ್ಟಗುತ್ತಿಕೆ** (ನಾ). = ಭಟಗುತಿಗೆ : ಆ ಮಹಾಜನಂಗಳು ಆ ಚಕ್ರವರ್ತಿ ದಂಣ್ಣಾಯ್ಯರಿಗೆ ಕೊಟ್ಟ ದೇವರ ಭಟ್ಟಗುತ್ತಿಕೆಯ ನಿಯೋಗ ೧ ಕೆ ಜೀವಿತ ಗ ೫ (ಎಕ. VII (R). ಶಾಗಮೊ. ೬೬-೬೯ ; 1284).
[<ಭಟಗುತಿಗೆ]

**ಭಟ್ಟಗೆಯಿ** (ನಾ). ವಿದ್ವಾಂಸರಿಗೆ ಮಾನ್ಯವಾಗಿ ಕೊಟ್ಟ ಭೂಮಿ : ಭಟಾರಿಗೆ ಮತ್ತ ೬ ಭಟ್ಟಗೆಯಿ ೬ ಚಟ್ಟಗೆಯಿ ಮತ್ತ ೭ (ಸೌಇಇ. IX-i, ೬೪-೬; 981). [ಭಟ್ಟ + ಕೆಯಿ (<ಕೆಯ್₄)]

**ಭಟ್ಟಗ್ರಾಮ** (ನಾ). ಇನಾಮು ಗ್ರಾಮ; ಜಾಗೀರು : ಬಾಳ್ಗುಳಿ ಕಾರಿಟ್ಟಗೆ ಮೊದಲಾಗೆ ಪಲವು ಭಟ್ಟಗ್ರಾಮಂಗಳುಮಂ (ಎಇ. XV. ೯೯-೨೦; 1060). [P ಇದು 'ಭತ್ತಗ್ರಾಮ' ಎಂಬುದರ ಅಪಲಿಖಿತ]

**ಭಟ್ಟತನ** (ನಾ). (?) : ಇಷ್ಟಲಿಂಗ ನಿದ್ರೆಯಲ್ಲಿ ಸ್ಖಲಿಸಿಯು ಮೇಲೆ ಬಿದ್ದು ಹೊರಳುವಾಗ ನಿಷ್ಠೆ ಮಂತರೆಂತಾದಿರೋ . . . ಹೀಗಲ್ಲದೆ ಭಟ್ಟತನಕ್ಕೆ ಹೋರುವ ಭೃಷ್ಟಭಂಡರನೇನೆಂಬೆ (ಬೋಳಬಸ. ೦೬-೬೦); "ಶ್ರೇಷ್ಠತನ, ಗೆಲುವು" (ಬೋಳಬಸ. ಕೋಶ). [ಭಟ್ಟ₁ + -ತನ]

**ಭಟ್ಟದರ್ಶನ** (ನಾ). ಕುಮಾರಿಲಭಟ್ಟನೆಂಬ ವಿದ್ವಾಂಸನು ಪ್ರತಿಪಾದಿಸಿರುವ ತತ್ತ್ವ; ಭಾಟ್ಟಮತ : ಭಟ್ಟದರ್ಶನನ್ಯಾ [ಸ] ಪ್ರಭಾಕರವ್ಯಾಖ್ಯಾತೃಗಳ್ಮೊವರ್ಗ್ಗೆಂ . . . ಸರ್ವ್ವನಮಸ್ಯಮಾಗಿ ಕೊಟ್ಟ ಕೆಯ್ (ಕಶಾ. ೬-೨-೦೯೩; 1068). [ಸಂ.]

**ಭಟ್ಟಬಾಣ** 'ಬಟ್ಟಬಾಣ' ನೋ.

**ಭಟ್ಟಮಂಡಪ** (ನಾ). ವಿದ್ವಾಂಸರು ಸಭೆ ಸೇರುವ ಮಂಟಪ : ಶ್ಲೋಕಾರ್ಥಮಂ ಮನದೊಳ್ ಬಗೆದು ಸಭಾಯನುಂ ಪೆತ್ತನೆಂದೊಸೆದುಮಾತನ ಬುದ್ಧಿಯಂ ಪರೀಕ್ಷಿಸಲ್ವೇಡಿ ಭಟ್ಟ[ಪಾಠಾಂ.ಟ್ಟ]ಮಂಡಪದೋಳ್ ಶ್ಲೋಕಮಂ ಬರೆದು ಪೋದಂ (ವಡ್ಡಾರಾ. ೦೩೯-೯) ; "ರಾಜನ ಸಭಾಮಂದಿರ" (ವಡ್ಡಾರಾ. ಬಿಶ್ಲೊ. ೨೫೦). [ಸಂ.]

**ಭಟ್ಟಮತ** (ನಾ). =ಭಟ್ಟದರ್ಶನ : "ವ್ಯವಹಾರೇ ಭಟ್ಟನಯಃ" ಎಂದು ವ್ಯವಹಾರದಲ್ಲಿ . . . ಭಟ್ಟಮತಪ್ರಕಾರ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿಯೆಂದು ಆರು ಪ್ರಮಾಣಗಳು (ಹಂದಾ. ೨೦೦). [ಸಂ.]

**ಭಟ್ಟಮಾನ್ಯ** (ನಾ). = ಭಟಮಾನ್ಯ : ಹಳೆಆಲಗೂಡುಗ್ರಾಮದಲ್ಲಿ ಭಟ್ಟಮಾಂನ್ಯದ ತೆಂಗಿನಕಾಳು ಹೊಲ ೧ (ಎಕ. V (R). ತಿರುಮ. ೦೪೦-೬೫; 1855) : ಪೂರ್ವದಿಂದ ನಡೆದು ಬರುತ್ತಿರುವ ದೇವದಾಯ ಬ್ರಹ್ಮದಾಯ ಧರ್ಮದಾಯ . . . ಸರ್ವಮಾನ್ಯ ಭಟ್ಟಮಾನ್ಯ ಉಂಬಳಿ ರಕ್ತ ಕೊಡಗೆ ಮುಂತಾದುವೇನೂ ಹೆಚ್ಚು ಕಡಮೆಯಾಗದಂತೆಯೂ. . . ಎಚ್ಚತ್ತಿರಬೇಕು (ಶಿರುಗಂ. ೩೬-೨೦). [ಸಂ.]

**ಭಟ್ಟವೃತ್ತ** (ನಾ). (?) : ದುರ್ವ್ವಿನೀತಅರಸರಾ ದಣ್ಣನಾಯಕರು ಭಟ್ಟವೃತ್ತರ್ ಸಾಸಿರ್ವ್ವರು ಒಲೆಯ ಅಯ್ನೂರ್ವ್ವರು ಬೆಯ ಮುನೂರ್ವರು ಮಿ×××ತಣ್ಣೆಯ ಮಹಾಜನಕ್ಕೆ ಧರ್ಮ್ಮನಿಮಿತ್ತ ಕೊಟ್ಟ ಸ್ಥಿತಿಯ ಕ್ರಮ ಅವುದೆನ್ನದೆ (ಎಕ. XVI, ತುಮುಕೂ. ೯೦-೪; 903). [?]

**ಭಟ್ಟವೃತ್ತಿ** (ನಾ). = ಭಟಮಾನ್ಯ : ಮಾರಕಬ್ಬೆ ಭಟಾರಿಗೆ ಮತ್ತರ್ಪನ್ನೆರಡು ಮನೆಯೊಂದು ನ್ಯಾಸಂ ಪ್ರಭಾಕರಮುಮಂ ವಕ್ಕಾಣಿಸಿ ಗುಣಶಾಸನದ ಸುಣ್ಣ ಭಟ್ಟವೃತ್ತಿ ಮತ್ತರೈವತ್ತು (ಎಇ. XX. ೬-೨೯; 1012); ಬಾಲಶಿಕ್ಷೆಗಂ ನ್ಯಾಸದ ವಕ್ಕಾಣಕ್ಕಂ ವೃತ್ತಿಯ ಭೂಮಿಯೊಳಗೆ ಬಿಟ್ಟ ಭಟ್ಟವೃತ್ತಿಯೊಂದು (ಸೌಇಇ. XX, ೯೩-೬೦; ?); ಪೌರೋಥ ಉಪಾಧ್ಯಾಯರ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಭಟ್ಟವೃತ್ತಿ ಎಂದು ಕರೆದರೆ, ಪೌರೋಥ ವಿದ್ಯಾರ್ಥಿಗಳ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಚಟ್ಟವೃತ್ತಿ ಎಂದು ಕರೆದಿದ್ದಾರೆ (ಕಶಾಅ. ೨೨೯). [ಸಂ.]

**ಭಟ್ಟವ್ರಿತ್ತಿ** (ನಾ). = ಭಟಮಾನ್ಯ : ಎಟ್ಟಿತ್ತು ಗಂಳ ಗಟಿ ಭಟ್ಟವ್ರಿತ್ತಿ ಚಾವಯ್ಯ ××× ಇದನಟಾವನ್ನವ ವಾರಣಸಿಯುಂವ ಕವಿಲೆಯುಂವ ನಟಾದೊ (ಎಕ. V (R). ತಿರುಮ. ೯೭-೯; ಸು. ೯ನೆಯ ಶ). [ಭಟ್ಟ + ವ್ರಿತ್ತಿ]

**ಭಟ್ಟಾರ** (ನಾ). =ಭಟಾರ ೩ : ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀಪೃಥಿವೀವಲ್ಲಭ ಮಹಾರಾಜಾಧಿರಾಜಪರಮೇಶ್ವರಭಟ್ಟಾರರ್ (ಎಇ. III, ೩೬೦-೨ ; 740); ಸ್ವಸ್ತ್ಯಮೋಘವರ್ಷಪೃಥುವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಭಟ್ಟಾರರ್ ರಾಜ್ಯಾಭಿವೃದ್ಧಿಯೊಸ್ತುತ್ತರಂ ಸಲೆ (ಎಇ. XXVI. ೯-೬ ; 906); ನಾಗಶ್ರೀಯುಂ ... ತನ್ನ ಮುನ್ನಿನ ಪೊಲತಿಯಾಗಿ ಪುಟ್ಟಿದ ಭವಮಂಸಜಿದು ಭಟ್ಟಾರರ ಕಾಲ್ಗೆಱಗಿ ಪೊಡವಟ್ಟು ಕುಳ್ಳಿರ್ದಾಗಳ್ (ವಡ್ಡಾರಾ. ೦೨-೨೪). [ಸಂ.]

**ಭಟ್ಟಾರಕ** (ನಾ). ೧. ರಾಜ, ಗುರು, ಹಿರಿಯರ ಹೆಸರುಗಳ ಕೊನೆಯಲ್ಲಿ ಗೌರವಾರ್ಥವಾಗಿ ಸೇರಿಸುವ ಒಂದು ಶಬ್ದ : "ಪಾವಃ, ದೇವಃ, ಭಟ್ಟಾರಕಃ — ಈ ಮೂಱುಂ ಪೆಸರ ಕಡೆಯೊಳ್ ಪೂಜ್ಯಾವ(ಚ)ನಂ" (ಶಬ್ದಮ. ೨೩-೦೩೪); ಶಿವಗುಪ್ತಭಟ್ಟಾರಕರ್ಗಾಂ ಪಾರಣೆಯಂ ಮಾಡುವೆಂ (ವಡ್ಡಾರಾ. ೬೮-೩); ತನ್ನಂಶಮಾನಾಕೆಯ ಗರ್ಭದೊಳವತರಿಸಿ ಯುವಭಟ್ಟಾರಕನಂತರ್ಧಾನಕ್ಕೆ ಸಂದಂ (ಶಂಕರಾ. ೦-೦೦೯ ವ); ವಿಜಯಾಂಬಿಕೆ ಪಡೆದಳಜಿತಭಟ್ಟಾರಕರಂ (ಶಂಪಾಬಾ. ೦೦-೬೪). ೨. ಚಾಲುಕ್ಯರ ಬಿರುದುಗಳಲ್ಲಿ ಒಂದು ಭಾಗವಾಗಿ ಬರುವ ವಿಶೇಷಣ : ಸ್ವಸ್ತಿ ನಿತ್ಯವರ್ಷ ದೇವ ಶ್ರೀಪೃಥುವೀವಲ್ಲಭ ಮಹಾರಾಜಾಧಿರಾಜ ಪರಮೇಸ್ವರ ಪರಮಭಟ್ಟಾರಕ (ಸೌಇಇ. IX-i, ೫೬-೨; 922). [ಸಂ.]

**ಭಟ್ಟಿ₁** 'ಬಟ್ಟಿ₂' ನೋ.

**ಭಟ್ಟಿ₂, ಬಟ್ಟಿ₃** (ನಾ). ೧. ಮದ್ಯ ಮೊದಲಾದುವುಗಳ ಅರ್ಕವನ್ನು ತಯಾರಿಸಲು ಬಳಸುವ ಒಂದು ಬಗೆಯ ಹಬೆಯ ಸಾಧನ : ನೀರು ಹಾಕಿದ್ದರಿಂದ ಭಟ್ಟಿಯೊಳಗಿಂದ ಆ ಹರಳಿನಲ್ಲಿ ಸೇರಿ ಗುಪ್ತವಾಗಿದ್ದ ಅನುಭೂತೋಷ್ಣತೆಯ ಅನುಭವವಾಯಿತು (ಶುಂಠಿಬು. ೫-೦೩೬) ; ಈ ಪೀಡಾಮನುಷ್ಯನನ್ನು ಭಟ್ಟಿಯಲ್ಲಿ ಹಾಕಿ ತೆಗೆದು, ಒಂದು ಫುಟ್‌ಬಾಲ್ ಮಾಡಬೇಕು (ದೇಕಪ್ಟ. ೩೦). ೨. ಕಡಲೆ, ಪುರಿ, ಅವಲಕ್ಕಿ ಮುಂತಾದುವುಗಳನ್ನು ಹುರಿಯುವ ಸ್ಥಳ : ಚಡದಂಗಡಿ, ಏಕನಾಥಶೆಟ್ಟರ ಚುರುಮುರಿಯ ಭಟ್ಟಿಗಳನ್ನು ದಾಟಿ ಅವನು . . . ಸಂಕವನ್ನು ಸಮೀಪಿಸಿದ್ದ (ಮಹಾರುದಾ. ೯೦). ೩. ಹಬೆಯ ಯಂತ್ರದಲ್ಲಿ ಕಾಯಿಸಿ ತೆಗೆದ ದ್ರವವಸ್ತು,– ಸಾರ : ವಿವಿಧರಸಗಳ ಭಟ್ಟಿ, ಸೌಂದರ್ಯಾಕಾಮೇಷ್ಟಿ ಕವಿ ಜಗತ್ಸೃಷ್ಟಿಯದು (ಶುಂಠಿಕ. ೪೬೦) ; ಒಡಲ ನರಕದ ಭಾಂಡ ಕುದಿಸಿ ಭಟ್ಟಿಯ ತೆಗೆದ ಮೋಹಿನಿಯ ಕಣ್ಣೀರ ಗುಟುಕನೆಷ್ಟೋ ಕುಡಿದೆ (ಶಿಂಮು. ೬೩-೦). ೪. (ಆಲಂ) ಹದ ; ರೀತಿ ; ರಚನಾಕ್ರಮ : ನಿನ್ನ ಪರಾಕ್ರಮಕ್ಕೆ ಇದು ಹೊತ್ತಲ್ಲ. ನಮ್ಮ ಕೆಲಸದ ಭಟ್ಟಿ ಕೆಟ್ಟೀತು (ಶಿಖಾ. ೦೦) ; ಭಟ್ಟಿ ಕೆಟ್ಟಿಲ್ಲವೆಂದು ಅವರ ಆಸೆ ಚಿಗುರಿತು (ಕ್ರೀಪುತ್ರ. ೨೦೩) ; ಒತ್ತಾಯದಿಂದ ಎಬ್ಬಿಸುತ್ತಿದ್ದರು. ಭಟ್ಟಿ ಕೆಟ್ಟದ್ದೆ ಅಲ್ಲಿ (ಗಾಳಕ. ೦೬೨). **ಬಟ್ಟಿ₃** : ೧. ಸುಣ್ಣದ ಹರಳುಗಳನ್ನು ತಂದು ಬಟ್ಟಿಗೆ ಹಾಕಿ, ಅವನ್ನು ಸುಟ್ಟು ಸುಣ್ಣ ಮಾಡಬೇಕು (ಶುಂಠಿಬು. ೯-೦೭೬) ; ಒಬ್ಬ ರೊಟ್ಟಿಗಾರನ ಬಟ್ಟಿಯು ಮಿತಿಮೀರಿ ಕಾದದ್ದೇ ಈ ಅಗ್ನಿಸಪ್ಪಕ್ಕೆ ಕಾರಣವಾಯಿತು (ಇಂಗ್ಲಂಡ. ೦೬೪) ; ಬಟ್ಟಿ ಸುಟ್ಟು ಹೋಯಿತೆಂದರೆ ಸೆಟ್ಟಿ ಬಿಟ್ಟಾನೇ ? (ಗಾದೆ). ೨. ಅಲ್ಲಿ ಅವನ ಅವಲಕ್ಕಿಯ ಬಟ್ಟಿಯಿದ್ದಿತು (ಶೇಳ. ೨).

**ಭಟ್ಟಿಯಿಳಿಸು ; ಬಟ್ಟಿಯಿಳಿಸು**=೧. (ಬೇರು, ಎಲೆ ಮುಂತಾದುವುಗಳಿಂದ) ಸಾರವನ್ನು ತೆಗೆ : ಜೀವಕನು ಒಂದು ರಾಶಿ ಅದು ಇದು ಬೇರುಗಳನ್ನು ತಂದು ಭಟ್ಟಿಯಿಳಿಸಿ . . . ಔಷಧವನ್ನು ಪಕ್ವಮಾಡಿದನು

(ತತ್ತ್ವಮು. ೧೦೩) ; ಬಿತ್ತಬಿತ್ತದ ರಸವ ಸವಿದು ಸವಿದಾಕ್ಷಣದಿ ಆಯುಷ್ಯ ಸಾರವನು ಬಟ್ಟಿಯಿಳಿಸುವ ತೆರದಿ . . . ಆವರ್ತಿ ಚೋದಿಸಿತು ? (ಸೌಂದರ. ೩೩). ೨. (ಆಲಂ) ನಕಲುಮಾಡು ; ಕಾಪಿಹೊಡೆ : ಆ ಮೂಲಗ್ರಂಥವನ್ನೇ ಇವರು ಭಟ್ಟಿಯಿಳಿಸಿದ್ದಾರೆ (ರೂಢಿ).

[← ಹಿಂ. ಮರಾ. ಭಟ್ಟೀ. / ಸಂ. ಭ್ರಷ್ಟ್ರ=ಹುರಿಯುವಿಕೆ]

**ಭಟ್ಟಿಗೆ** (ನಾ). (?) : ಇಟ್ಟು ಕಲ್ಲದೆ ಬಿಟ್ಟಿಯನು ಮಾಡುವಾಳಾದೆ ಭಟ್ಟಿಗೆ ಬಜಾಬ[ಪಾಠಾಂ. ಬಟ್ಟಿಗರಾಬನು] ನಾನಾದೆ ಕೊಟ್ಟಣವನು ಇನ್ನು ಬಟ್ಟಿ ಕೊಟ್ಟರೆ ನನಗಿಟ್ಟಿಕೆ ಭವಣೆ ಬರುವದು (ಅಮರಸಾಂ. ೩-೯೯). 'ಬಟ್ಟಿಗೆ' ಪಾಠ. [ ? ]

**ಭಟ್ಟಿಗೆಯ್** (ಕ್ರಿ). ಭಟ್ಟಿ ಇಳಿಸು ; ಕರಗಿಸಿ ಶುದ್ಧಗೊಳಿಸು : ವಜ್ರ ಮೂಷೆಯೊಳಿಕ್ಕಿ ಭಟ್ಟಿಗೆಯ್ವಂತೂದಿ ಕರಗಿಪ್ಪದುಂ (ಶಾಂತೀಶ್ವ. ೯-೧೦೦ ವ). [ಭಟ್ಟಿ$_2$ + ಕೆಯ್$_1$]

**ಭಟ್ಟಿನಿ** (ನಾ). ೧. ಒಡತಿ ; ಯಜಮಾನಿತಿ. ೨. [ಕಾವ್ಯಮೀ] ನಾಟಕಾದಿ ರೂಪಕಗಳಲ್ಲಿ ಚೇಟಿ ಮೊದಲಾದವರು ಪಟ್ಟದ ರಾಣಿಯನ್ನು ಬಿಟ್ಟು ಇತರ ರಾಜಪತ್ನಿಯರನ್ನು ಸಂಬೋಧಿಸುವಾಗ ಬಳಸುವ ಶಬ್ದ : "ಕೃತಾಭಿಷೇಕಾ, ಮಹಿಷೀ—ಈ ೨ ಪಟ್ಟದರಸಿಯರ್. ಭಟ್ಟಿನೀಯೆಂಬುದುಟಿದರಸಿಯರ್" (ಶಬ್ದಮ. ೬೯-೩೨೬). ೩. ಪೂಜಾರಿಯ ಹೆಂಡತಿ : ಇದು ತನ್ನ ಧಂದೆಗೆ ಸುಖಕರವಲ್ಲವೆಂದು ತಿಳದನೋ ಏನೋ, ಅಂತೂ ಈ ಭಟ್ಟಿನಿಯ ತಳ್ಳಿ ಬಿಟ್ಟುಬಿಟ್ಟ (ಶುಭರುದಾ. ೧೩೨). [ಸಂ. ಭಟ್ಟಿನೀ]

**ಭಟ್ಟಿಸುಂಕ, ಬಟ್ಟಿಸುಂಕ** (ನಾ). ಭಟ್ಟಿಯಿಳಿಸುವ ಸಾರಾಯಿ ಮೊದಲಾದ ಮಾದಕಪದಾರ್ಥಗಳ ಮೇಲೆ ಹಾಕುವ ತೆರಿಗೆ ; ಅಬ್ಕಾರಿ : (ಕೃಶಗ. II, ೩೯೯). ಬಟ್ಟಿಸುಂಕ: (ಶಸಂಗ್ರ. ೦೩೦). [ಭಟ್ಟಿ$_2$+ಸುಂಕ$_1$]

**ಭಟ್ಟೋಪಾಧ್ಯಾಯ** (ನಾ). ವಿದ್ವಾಂಸನಾದ ಉಪಾಧ್ಯಾಯನ ಹೆಸರಿನ ಮುಂದೆ ಸೇರುವ ಒಂದು ಉಪಪದ: ಜನ್ನಯಭಟ್ಟೋಪಾಧ್ಯಾಯರ್ಗ್ಗೆ ಕಾಲ ಮತ್ತರು ೫೦ (ಕಶಿ. ೯-೩-೩೦೯ ; 1062) ; ಮನೆವೆರ್ಗ್ಗಡೆ ದಣ್ಣನಾಯಕ ಭಾಸ್ಕರಭಟ್ಟೋಪಾಧ್ಯಾಯ ಲಾಳ ಮಾಳವ ಸೌರಾಷ್ಟ್ರಗೌಡ ವಿಷಯಂ ಮೊದಲಾಗಿಯುತ್ತರದಿಶಾವರದರಸುಮಕ್ಕಳೆಲ್ಲರುಮಾ ಶ್ರೀಮದ್ಭುವನೈಕಮಲ್ಲದೇವರ ಶ್ರೀಪಾದಾರಾಧನದೀಕ್ಷೆಯ ಕೈಕೊಳ್ವಸ (ಸೌಇಇ. XX, ೯೭-೩೩; 1072). [ಸಂ.]

**ಭಟ್ಟೋರ** 'ಭಟಾರ' ನೋ.

**ಭಡಕ್ಕನೆ** (ಅ). ಒಂದು ಅನುಕರಣಾವ್ಯಯ ; ತಟ್ಟನೆ ; ಕೂಡಲೆ: ಅವನ ನಗ್ನರೂಪ ಕಣ್ಣ ಮುಂದೆ ನಿಂತಂತಾಗಿ ಬೆಚ್ಚಿಬಿದ್ದು ಭಡಕ್ಕನೆ ಕಾಳಿತ್ರಲ್ಲಿಂದ ಎದ್ದು ನಿಂತ (ಮೂರುದಾ. ೦೮೨) ; ಅಂದ್ರು ವಸಂತಿ ಒಮ್ಮೆ ಭಡಕ್ಕನ ಹೇಳಿಬಿಡು (ಹೊಸಂಸಾ. ೦೭೯). [ಭಡಕ್$_0$+—ಅನೆ$_1$]

**ಭಡವ** (ನಾ). ೧. ವ್ಯಭಿಚಾರಕ್ಕಾಗಿ ಗಂಡು ಹೆಣ್ಣುಗಳನ್ನು ಹೊಂದಿಸುವವನು ; ತಲೆಹಿಡುಕ ; ಕುಂಟಣಿಗ. ೨. ಒಂದು ಬೈಗುಳು : ಆ ಭಡವ ತುಂಬ ಚೇಷ್ಟೆ ಮಾಡುತ್ತಿದ್ದಾನೆ (ರೂಢಿ).

[← ಹಿಂ. ಭಡುಆ ; ಮರಾ. ಭಡವಾ, ಭಡುವಾ]

**ಭಡಾಭಡಾ** (ಅ). ವೇಗವನ್ನು ಸೂಚಿಸಲು ಬಳಸುವ ಒಂದು ಅನುಕರಣಾವ್ಯಯ : ಏ ಸುಮ್ಮಾ, ದವಿನ್ನಾ ಏಳ್ರೀ ಭಡಾಭಡಾ (ಅಮೂಶಿ. ೬೯); ಭಡಾಭಡಾ ಊರು ಬಿಡಬೇಕ (ಹುಚ್ಚಾಬಿ. ೮೮).

**ಭಣಗುಟ್ಟು** (ಕ್ರಿ). ಬಿಕೋ ಎನ್ನು; ಬರಿದಾಗಿ ಕಾಣು : ಅವರೆಲ್ಲ ತೆರಳಿದ ಮೇಲಂತೂ ಇಡೀ ಮನೆಯೇ ಭಣಗುಟ್ಟುತ್ತಿರುವಂತೆ ಅವರಿಗೆ ಭಾಸವಾದುದಿದೆ (ವಾತ್ಸಲ್ಯ. ೦೩೦); ಆಕೆಗೆ . . . ಮನೆ ಬರಿದಾಗಿ ಭಣಗುಟ್ಟುವಂತೆ ಭಾಸವಾಗುತ್ತಿತ್ತು (ಬರಹಾ. ೯೯). [ಭಣ್$_0$ + ಕುಟ್ಟು$_1$]

**ಭಣಗುಡು** (ಕ್ರಿ). =ಭಣಗುಟ್ಟು: ಒಂದು ದಿನ ಆಕಸ್ಮಾತ್ತಾಗಿ ಕುಮಾರಿ ಪಂಡಿತಳು ಕಾಣದೆ ಹೋದರೆ ಅಂದು ಇಡೀ ದಿನವೆಲ್ಲ ಅವನ ಮನಸ್ಸು ಭಣಗುಡುತ್ತಿತ್ತು (ಸಮುಶೀ. ೯೦೯); ನಮ್ಮನ್ನಿಳಿಸಿದ ಮನೆ ಭಣಗುಡುತ್ತಿರಬಹುದು (ವೃಹಿ. ೯೦). [ಭಣ್$_0$ + ಕುಡು$_1$ (<ಕೊಡು$_1$) ]

**ಭಣಭಣ** (ನಾ). ಬೇಸರ, ಉತ್ಕಂಠೆ ಮೊದಲಾದ ಭಾವಗಳನ್ನು ತಿಳಿಸುವಾಗ ಬಳಸುವ ಶಬ್ದ : ಇಂದು ಏಕೆ ಭಣಭಣ ? (ನಹಿಂ. ೮-೦೭); ಅವರಿಗೊಂದು ಚಟುವಟಿಕೆ ಇಲ್ಲವಾಗಿ ಭಣಭಣ ಎನಿಸಬಹುದು (ದೇಶನ್ಯ. ೯೯).

ಭಣಭಣವೆನಿಸು=ಶೂನ್ಯವಾದಂತಾಗು; ಬಿಕೋ ಎನ್ನು: ಮಂಟಪ, ಅವಕ್ಕೆ ಕಟ್ಟಿದ ಬಾಡಿದ ತೋರಣಗಳೆಲ್ಲ ಈಗ ಭಣಭಣವೆನಿಸತೊಡಗಿದುವು (ಆಲೋಕ. ೦೮). ಭಣಭಣಸುರಿ=ಹಾಳು ಸುರಿ; ಶೂನ್ಯವಾಗು : ಅವರಿಲ್ಲದ ಸಾಲೆ ಭಣಭಣ ಸುರಿಯುವಪತ್ತಿತು (ರಂಗರೂ. ೦೭೯) ; ಖಾನಾವಳಿಯು ಭಣ ಭಣ ಸುರಿಯುತ್ತಿತ್ತು (ರಕ್ತರ್. ೦೦೮).

**ಭಣಭಣಗುಡು** (ಕ್ರಿ). =ಭಣಗುಟ್ಟು : ಮಕ್ಕಳಿಲ್ಲದೆ ಭಣಭಣಗುಡುತ್ತಿದ್ದ ಪಾರ್ವತಮ್ಮನ ಮನೆಯನ್ನು ನೊ ಡಿದ್ದ ಹಳ್ಳಿಯ ಇತರ ಹೆಂಗಸರೂ. . . ಒಪ್ಪಿಕೊಳ್ಳುತ್ತಿದ್ದರು (ಸರ್ವಮಂ. ೯). [ಭಣಭಣ+ಕುಡು$_1$(<ಕೊಡು$_1$) ]

**ಭಣಿತ** (ಗು). ೧. ಉಚ್ಚರಿಸಿದ ; ಹೇಳಿದ ; ಮಾತನಾಡಿದ. (ನಾ). ೨. ಹೇಳಿಕೆ ; ಮಾತು; ವಚನ : ಪ್ರಸ್ತುತಸರ್ಗಂಗಳ್ಗೆ ಚತುಸ್ಸ್ಥಾನಾಸು ಭಾಗಮನಂತಗುಣಿತ್ರವಾಗಿ ಕಟ್ಟುಗುಂ ಇಂತನುಭಾಗಬಂಧಂ ಭಣಿತಮಾಯ್ತು (ಕ್ಷಪಣ. ೩-೦೬) ; ಕಣ್ಮಣಿತಕೆ ನಗೆ ಭಣಿತಕೆ ಮನೆ ಹೋಯಿತು ನಡುಗಿ (ಅರಳು. ೩೩೬-೦೯). [ ಸಂ. ]

**ಭಣಿತಿ** (ನಾ). ೧. ಮಾತು; ವಚನ : ನುಡಿದ ವಕ್ರಭಣಿತಿಗಳಾಶ್ಚರ್ಯಮಂ ಪುಟ್ಟಿಸೆ (ಜಗಾ. ೮-೦೦೭ ವ) ; ದಣಿಯೆ ಭೂಸುರರನ್ನ ಪಾನದಿಂ ದಾನದಿಂ . . . ಭಣಿತಿಗಳ ಮೃದುಮಧುರಗಾನಸನ್ಮಾನದಿಂ ಭೂಭುಜರ್ ಸಂಭ್ರಮಿಸಲು (ಪಂಕಾರಾ. ೦-೮. ೦೯) ; ಭಣಿತಿ ಭಂಗಿಗಳಲ್ಲಿ ಮುಗಿದು ಕುಂಠಿತ ಮತಿಯು ಮತ್ತೆ ತಲೆಯೆತ್ತಿ ನಿಂತಿಹುದು ದಿತಿಸಂತತಿಯು (ಸೂರ್ಯಶಾ. ೯೯-೦೩). ೨. ವಾಕ್ಯರಚನೆ ; ವಾಗ್ಗುಂಫ : ಸಾಂಗತ್ಯದ ಇತರ ಕೃತಿಗಳಲ್ಲಿ ಚಿರಪರಿಚಿತವಾದ ಗಾದೆಗಳು, ಮಾತಿನ ಭಣಿತಿಗಳು ಧಾರಾಳವಾಗಿ . . .ಜಾನಪದಪ್ರಪಂಚಕ್ಕೆ ನಿಕಟವಾಗಿ ಸಂಬಂಧಿಸಿದಂತಿವೆ (ಸುವರ್ಣ.೦೦೭). [ ಸಂ. ]

**ಭಣಿತೆ** (ನಾ). ೧. ಮಾತು ; ವಚನ : ಸಕಲಸುರಾಳಿ ಭಣಿತೆಯಿಂ ಜಯ ಜಯ ಸ್ವಾಮಿಯಪಧಾರೆಂಬುದೆಣಿಸಲೇನದಜಾನೀಶಂಗಜಹರಿಮುಖಾಖಿಲಂ ಮಕ್ಕಳಾಟದಾತೆ (ಪದ್ಮರಾ. ೦೦-೩೦) ; ರಣಮುಖದೊಳೀ ಕ್ಷತ್ರಧರ್ಮದ ಕುಣಿಕೆ ತಪ್ಪದೆ ವೇದಶಾಸ್ತ್ರದ ಭಣಿತೆ ನೋಯದೆ ವೀರವೃತ್ತಿಯ ಪದವ ಪಾಡಜಾದು . . . ಜೀವದಾಸೆಗೆ ಮಣಿಯನೆಳದುವನಲ್ಲ ಬಲ್ಲರು (ಕುವ್ಯಾಗ. ೮-೯೦); ಪ್ರಣುತಿಸಿದುವಲ್ಲಿದು ಯಥಾರ್ಥದ ಭಣಿತೆಯುಹುದು (ಹಿಮ್ಮಕಾಂ. ೦೦-೭೮). ೨. ಚಮತ್ಕಾರವಾದ ಮಾತು ; ವಕ್ರೋಕ್ತಿ : ಲಾಳಿತ್ಯಯ ರಮಣೀಯ ರಸಗಳ ಸೂಳುನುಡಿಗಳ ಸಡಗರಂಗಳ ಸಾಲ ಭಣಿತೆಯ ಬಂಧದೋಜೆಯ ಕಥೆಯ ಪ್ರಥುಲತೆಯ . . . ಬಣ್ಣಿಸುವೆ (ಸೌಹಿಂರಾ. ೦-೩); ಹಲವು ಜನ ಸಾಧಕರನ್ನೂ ಸಿದ್ಧಂಪುಸ್ಕರನ್ನೂ ತನ್ನ ಬೆಳಕಿನ ತುಣುಕಿನ ಭಣಿತೆಗಳಿಂದ ಉದ್ದೀಪಿಸಿ . . . ಚಿತ್ರಿಸಿರುವ ಅಪೂರ್ವ ಕೃತಿಯಿದು ( ಅಮಂ. ೦೯ ಬೀಪಿ ). ೩. ರೀತಿ ; ಭಂಗಿ : ದೇವ ನೀನೀ ಪರಿಯ ಜಂಗಮಭಾವಭಣಿತೆಯ ಧರಿಸಿ ಬಂದರೆ ಗಾವಿಲರು ನಾವೆತ್ತ ಬಲ್ಲೆವು ನಿಮ್ಮ ಮಹಿಮೆಯನು ( ಶ್ರಶುಂ. ೦೩-೯೦ ) ; ಜಗಳದಾಡದ ಭೈರವನ ಭಣಿತಗಳಲಿರ್ದನು ಭಯರಸದ ಸೋನೆಗಳ ಸೂಸುತ ನಿಮ್ಮ ರಘುಬಾಜೇಂದ್ರ ಸೇನೆಯಬಿ (ಕುಶರಾ.೬-೩೩-೭); ಅಪರಿಮಿತ ಬಲ ಭೂಸುರ

ಮಹಾವಾರ್ಧಿ ಭಣಿತೆಯಂ ಕುಣಿಕುಣಿವ ಬಗೆಗಾಕ್ಷಣದೊಳೆಚ್ಚರಿಪಟ್ಟುದೈ (ಕೋಗಮು. ೦೬-೬೬). ೪. ಚಟುವಟಿಕೆ; ಕೈಚಳಕ : ಹೊಣಕೆಯಿಂ ಘನವಲ್ಲರಂತೆಳ್ದು ಧನುಗಳಂ ಭಣಿತೆಯಿಂದಾಂತು ಜೇವಡೆದ ರಭಸಕ್ಕರರೆ ಪೆಣದ ಪೋಲ್ ಜೀವಿಗಳ್ ನಿರ್ಜೀವವಾಗೆ (ತತುಪು. ೪-೨-೬). ೫. ಸ್ಪಷ್ಟತೆ : ಭಣಿತೆಯ ನುಡಿಯಿಂದ ಗುಣಮಣಿ ಪೇಳೀಗ ಮಣಿಮಾಗುತಿ ಯದೆಲ್ಲಿಯೆಂದ (ಮಾಗುತಿ. ೨೨-೦೦೬). ೬. [ಸಂಗೀತ] ವಾದನ ಗಾಯನ ಗಳಲ್ಲಿಯ ಒಂದು ರೀತಿ (?) : ಭಣಿತೆ ಬೆಡಂಗು ಕಾಕು ಬಿಚರಂ ಗಮಕಂ . . . ದೇಸೆ ಪೆಲ್ಲಣೆ ಕಳೆಯೆಂಬಿವಂ ಪೊಱೆದು ಬಾಜಿಸಿದಂ ಮುರವೈರಿ ವಾಸವಂ (ಜಗಾ. ೫-೩) ; ಪೊಸ ಭಣಿತೆ ಬೆಡಗು ಮಧುರಂ ನಯಂಗಳೊಳ್ ಶೋಭಿಸುವ ತಾನಂಗಳೊಳ್ ಸಕಲರಾಗಂಗಳಿಂದೊಸೆದು ತುಂಬುರ ನಾರದರ್ ಪಾಡುತಿರ್ದರೊಂದೆಸೆಯೊಳತಿವಿಭವದಿಂದೆ (ತಂಪು. ೨-೨೮). [ಸಂ. ಭಣಿತ]

**ಭತ್ತ₁** 'ಬತ್ತ' ನೋ.

**ಭತ್ತ₂** 'ಬತ್ತಾಯ' ನೋ.

**ಭತ್ತಗಾವೆ** (ನಾ). ಇನಾಮುಗ್ರಾಮ ; ಜಹಗೀರು : ಮದನಾವ ತಾರಮಂ ಕನಕದಂಡ ಚಾಮರಮಂ . . . ಭತ್ತಗಾವೆಯುಂ ಪಡೆದುದಾತ್ತ ಕವಿತಿಲಕನೆನಿಸಿದಂ ಕವಿರತ್ನಂ (ಅತಪು. ೦೨-೫೦) ; ಶ್ರೀಮನ್ಮಹಾಸಾಹಣಾಧಿಪತಿ[ಸೌ]ಚಯನಾಯಕರ್ ಬೆಳ್ವೊಲ ಮೂನೂಱಱೊಳಗಣ ಭತ್ತಗಾವೆ ಎಲೆಯ ಪಸುಣ್ಣಯುಂ ದುಷ್ಟನಿಗ್ರಹ ಶಿಷ್ಟಪ್ರತಿಪಾಳನದಿನಾಳ್ದು ಸುಖದಿನಿರೆ (ಸೌಇಇ. XI-i, ೬೩-೯; ಸು. 1026) ; ದಣ್ಡನಾಯಕ ಲಕ್ಕರಸಂ ಬತ್ತುಪ್ಪಿತ್ತಿ ಭತ್ತಗಾವೆಯೊಳಗಾಗಿ ಬೆಳ್ವಲವೆರಡಱುನೂಱುಮಂ ಪ್. . . ಆಳುತ್ತಮಿರ್ದ್ದು (ಎಇ. XVIII. ೦೯೦-೫; 1104). [ಭತ್ತ₂ (<ಬತ್ತಾಯ) + ಗಾವೆ (<ಗಾಮ) ]

**ಭತ್ತಗ್ರಾಮ** (ನಾ). =ಭತ್ತಗಾವೆ : ಜಯಸಿಂಹದೇವರು. . .ಮಣ್ಣಳಿಸಾಸಿರಮುಮಂ ಪದಿನೆಣ್ಟು ಭತ್ತಗ್ರಾಮಂಗಳಂ ಬೆಳ್ವಲಮೂನೂಱು [ಪು]ಲಿಗೆಱೆ ಮೂನೂಱುಮಂ. . .ಅರಸು[ಗೆ]ಯ್ಯುತ್ತಮಿರೆ (ಸೌಇಇ. ೦೯೩೦, ೬೬-೯ ; 1080). [ಭತ್ತ₂ (<ಬತ್ತಾಯ) + ಗ್ರಾಮ]

**ಭತ್ತವಟ್ಟೆ** (ನಾ). (?) : ಮತ್ತಂ ಭತ್ತವಟ್ಟೆಯುಂ ಗಡಿಯ ನಖರಂಗಳು ತಮ್ಮಂಗಡಿಯಲು ವರ್ಷಂಪ್ರತಿ ಚೈತ್ರಕ್ಕೆ ಹಾಗ ಮತ್ತಂ ವೈತ್ರಕ್ಕೆ ಹಾಗವುಂ ಬಿಟ್ಟರ್ (ಸೌಇಇ. XV, ೦೩೫-೫೪; 1179). [?]

**ಭತ್ತಾದಾಯ** (ನಾ). ಬತ್ತದ ಬೆಳೆಯಿಂದ ಬರುವ ಆದಾಯ : ಉತ್ಪನ್ನ: ಕೆಱೆಯ ತೆಂಕಣ ಕೋಡಿವೊ[ಳ]ಗಣ ಭತ್ತಾದಾಯ (ಎಕ. IX, ಬೇಲೂ. ೫೩-೨೫;1374); ಸಕಲ ಭತ್ತಾದಾಯ ನಿಧಿ ನಿಕ್ಷೇಪ ಜಲಪಾಷಾಣ. . . ಬಿಟ್ಟುಕೊಟ್ಟ ಧರ್ಮ (ಎಕ. XI, ಹಿರಿ. ೪೫-೦೯; 1538). 'ಬತ್ತಾಯ' ಪರಾ. [ಭತ್ತ₁ (<ಬತ್ತ) + ಆದಾಯ]

**ಭತ್ತಾಯ** 'ಬತ್ತಾಯ' ನೋ.

**ಭತ್ತೆ** 'ಬತ್ತಾಯ' ನೋ.

**ಭತ್ಯ** 'ಬತ್ತಾಯ' ನೋ.

**ಭತ್ವ** (ನಾ). 'ಭ' ಎಂಬ ಅಕ್ಷರ: "ಭತ್ವಕ್ಕೆ ಹ ಪ ಪಮಸ್ಯ್ಕಂ" (ಕಮಾದ. ೨೮೨) [ಸಂ.]

**ಭದಂತ** (ನಾ). ೧. ಪೂಜ್ಯ; ಶ್ರೇಷ್ಠ. ೨. ಗೌತಮ ಬುದ್ಧ. ೩. ಬೌದ್ಧ ಭಿಕ್ಷುಗಳನ್ನು ಸಂಬೋಧಿಸುವಾಗ ವಿಶೇಷವಾಗಿ ಬಳಸುವ ಶಬ್ದ : ಭದಂತನು ಮಸವಾರೆ ಮಾತನಾಡಲಿ (ಬುದ್ಧಕ. ೩೮ ಬಿಂದು). [ಸಂ.]

**ಭದ್ರ** (ಗು). ೧. ಮಂಗಳಕರವಾದ ; ಶ್ರೇಯಸ್ಕರವಾದ. ೨. ಶ್ರೇಷ್ಠವಾದ ; ಉತ್ತಮವಾದ : ದ್ವಿಜವರ್ಗ ರಚಿಸಿದ ತಳಿತ ಗುಡಿಗಳ ಪರ್ಣಶಾಲೆಯ ಭದ್ರಭವನಿಕೆಯ . . . ಓಲಗಶಾಲೆ ಪೊಱೆದುದು ಧರ್ಮನಂದನನ (ಕುವ್ಯಾ. ೦-೩೫) ; ಕ್ಷಮೆಯಲ್ಲಿ, ಸತ್ತ್ವದಲಿ, ಶಾಂತಗಾಂಭೀರ್ಯದಲಿ, ಭದ್ರರೂಪದಲಿ, ತನುಕಾಂತಿಯಲಿ ಮೆರೆದನಾ ಶ್ರೀರಾಮಚಂದ್ರಂ (ಶ್ರೀರಾಮಾ. ೨೬-೬೮೨). ೩. ಅಂದವಾದ; ಚೆನ್ನಾದ. (ನಾ). ೪. ಕ್ಷೇಮ; ಸುಖ ; ಶ್ರೇಯಸ್ಸು : "ಶ್ವಃ(ಸ್ವ)ಶ್ರೇಯಸಂ . . . ಭದ್ರಂ. ಮಂಗಳಂ ಈ ೧೧ ಒಳ್ಳಿತರ್ಕೆ ಪೆಸರ್" (ಹಲಾಯು. ೨೦-೦೨೨) ; ಮತ್ಕಾವ್ಯಮಂ ಮೆಚ್ಚಿ ಕೇಳ್ವ ಗುಣಂಗೊಳ್ವ ಜನಕ್ಕಮಕ್ಕೆ ವಿಭವಂ ಭದ್ರಂ ಶುಭಂ ಮಂಗಳಂ (ಅಪು. ೦೨-೨೬) ; ಸಮಸಂದಿಷ್ಟಾರ್ಥಮಂ ಮಾಟಕ್ಕೆ ಕಾಂತನ್ಯಲೋಕಸ್ತುತ ನಿನ್ನೊಳಿಂದು ವಿಜಯಂ ಭದ್ರಂ ಶುಭಂ ಮಂಗಳಂ (ಪುಷ್ಪಪು. ೮-೬೪) ; ಎಲೈ ಭೂಮಿಪತಿಯೆ ನಿನಗೆ ಭದ್ರವಾಗಲಿ (ಗಠವು. ೪-೨೫). ೫. ಜೋಪಾನ ; ಸುರಕ್ಷಿತ ; ಅಭೇದ್ಯ : ಭದ್ರಮೆನಿಸಿರ್ದ ಕುಸುಮಲಸದ್ರಸಮಂ ಶೀರ್ಷಪದದೊಳೊಪ್ಪಿತು . . . ಅಳಿನಿಕುರುಂಬಂ (ಗಿಂಕ. ೨-೬೫); ಉಮ್ಮತ್ತೂರಿನ ಐಶ್ವರ್ಯಾದಿ ಭಂಡಾರಗಳು ಭದ್ರವಾಗಿವೆ (ತ್ರೀರಾಮ. ೦೯೯); ಭದ್ರ ಮಾಡಿದಷ್ಟೂ ನಿದ್ರೆ ಬಿಡುವುದಿಲ್ಲ (ಗಾದೆ). ೬. ದೃಢ ; ಗಟ್ಟಿ : ಎಳೆಗಳನ್ನು ಸುಲಿದು ಭದ್ರವಾದ ದಾರಗಳನ್ನಾಗಿ ಮಾಡುತ್ತಾರೆ (ಗೃಶಾ. ೬೨); ಕೇಶವರಾಯನಿಗೆ ಸೆರೆಕುಡಿಯಲು ಕಲಿಸಿದುದು ಈ ಸೂರಪ್ಪನೇ ಎಂಬುದು ಸಿದ್ಧಣ್ಣನ ಭದ್ರವಾದ ನಂಬಿಕೆ (ಪಂಗಾ. ೬). ೭. ಶುಭಲಕ್ಷಣಗಳುಳ್ಳ ಒಂದು ಜಾತಿಯ ಆನೆ: "ಭದ್ರಃ, ಮಂದಃ, ಮೃಗಃ—ಎಂದಿಂತು ಆನೆಗಳ್ ಮೂಱು ತೆಱನಕ್ಕುಂ" (ಹಲಾಯು. ೩೬-೬೨) ; ನಯನಿಪುಣಸೂತ್ರಧಾರರ್ ನಿಯಮಿಸುವರ್ ಭದ್ರಮಂದಮೃಗಸಂಕೀರ್ಣಾನ್ವಯದ ನೃಪಕರಿಗಳಂ (ಪುಷ್ಪಪು. ೨-೫೬). ೪, ೭: ಉನ್ನತವಂಶನುತ್ಸವರೋತ್ತಮ ಭದ್ರಗುಣಾನ್ವಿತಂ ಜಗತ್ಸನ್ನುತದಾನಯುಕ್ತವಿಭವಂ . . . ಎನಗೀತನೆ ನಚ್ಚಿನ ಪಟ್ಟದಾನೆಯೆಂದೇಂ ನೆಱೆ ನಚ್ಚಿ ಮಾಡಿದನೊ ವಿಷ್ಣುನೃಪಂ ಧ್ವಜಿನೀಪತಿತ್ವಮಂ (ಎಕ. VI, ಚಿಕ್ಕಮ. ೦೬೦-೪೩; 1103 ?) ; ಕರಿಯಿಂ ಭದ್ರಯುತಂ ಸರೋಜದೆ ಗುಣಾಧಾರಂ ವೃಷಾಧೀಶನಿಂ ಹರಭಕ್ತಂ . . . ಕುಮಾರಂ ಪುಟ್ಟುವಂ ನಿಶ್ಚಯಂ (ರಾಜಶೇ. ೪-೨೯). ೮. ದೊಡ್ಡದು : "ಬೃಹತ್ . . . ವಿಪುಳಂ, ಭದ್ರಂ, ವರಿಷ್ಠಂ—ಈ ೧೨ ಪಿರಿದು" (ಹಲಾಯು. ೦೦೬-೦೪). ೯. ಬಂಗಾರ ; ಚಿನ್ನ. ೧೦. ಉಪ್ಪರಿಗೆ ; ಮಹಡಿ : ಅಗಲ್ ದ್ರುಪದಂ ಪಚ್ಚೆಯ ನೆಲಗಟ್ಟಿನೊಳಂ . . . ಇಂದ್ರನೀಲದ ಭದ್ರದೊಳಂ . . . ಚಂದ್ರಕಾಂತದ ಚಂದ್ರಶಾಲೆಯೊಳಮೊಪ್ಪುವ ವಿವಾಹಗೇಹಮಂ ಸಮೆಯಿಸಿ (ಕಂಕಣಾ. ೩-೬೪ ವ); ಕಾಂತೆ ಮಾಳಿಗೆಯ ಭದ್ರದ ಬಯಲೊಳಾಡಿದಳು ಪೊಡೆಸೆಂಡನು (ಹತಕಾ. ೪-೧೨) ; ಮೇಲುಗುಡಿಗಳ ಭದ್ರದುಪ್ಪರಶಾಲೆಗಳ . . . ರಾಜಾಲಯವನನುಕರಿಸಿದರು ಕುಂತೀಕುಮಾರರಿಗೆ (ಕುವ್ಯಾಆ. ೦೦-೪೪). ೧೧. ಪ್ರಮಾಣಕ್ಕೆ ಅನುಸಾರವಾಗಿ ವಿಂಗಡಿಸಿರುವ ಐದು ಪ್ರಕಾರದ ಮನುಷ್ಯಜಾತಿಗಳಲ್ಲಿ ಒಂದು : ವರಾಹಮಿಹಿರನು ಮನುಷ್ಯರನ್ನು ಶರೀರದ ಅಳತೆ ಆಕಾರದ ಮೇಲೆ ಐದು ಜಾತಿಗಳನ್ನಾಗಿ ವಿಂಗಡಿಸುತ್ತಾನೆ : ಹಂಸ, ಶಶ, ರುಚಕ, ಭದ್ರ, ಮಾಲವ್ಯ ಎಂಬುವೇ ಈ ಐದು ಜಾತಿಗಳು (ಶಾರದ. ೫೦೬). ೧೨. ಎತ್ತು; ಗೂಳಿ ; ವೃಷಭ : "ಉಕ್ಷಾನ್, ಭದ್ರಃ . . . ಗೌಃ— ೯ ಎತ್ತುಗಳ ಹೆಸರು" (ಸಿದ್ಯಾಂತಿ. ೨೯೦). ೧೩. ಒಂದು ಪರ್ವತದ ಹೆಸರು: ಬಳಿಕ ಸುಗಂಧಶಿಖಿ . . . ಭದ್ರ . . . ಪಾರಿಜಾತವೆಂಬ ಹದಿನಾಲ್ಕು ಕುಲಾಚಲಂಗಳೇ ಪೂರ್ವೋಕ್ತವಿಪುಳವೆಂಬ ಕೀಲಕಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿಹವು (ಬವೇಕ. ೨೦೫). ೧೪. ಉತ್ತಮವಾದ ಪೀಠ; ಸಿಂಹಾಸನ: ವಿದುರ ಧೃತರಾಷ್ಟ್ರರು ಸಹಿತ ಸುರನದಿಯ ಮಗನೈತಂದು ನವಭದ್ರದಲಿ ಕುಳ್ಳಿರ್ದನು ಪಸಾಯಿತ ಸಚಿವಜನಸಹಿತ (ಸಂಶಕ. ೬-೦೬). ೧೫. [ಜ್ಯೋತಿ] ಕರಣಗಳಲ್ಲಿ ಏಳನೆಯದು : ಬವ ಬಾಲವ ಕಾಲವ ತೈತುಲ ಗರಜ ವಣಿಜ ಭದ್ರಂಗಳೆಂಬೇಳು ಚರಕರಣಂಗಳುಂ (೬ವೇಕ.೩೨೦). ೧೬. ಕತ್ತರಿಸುವುದು ; ಛೇದನ :

"ಅಲಘು ಮದೇಭ ಪುಂಗವ ಸುಮಂಗಳ ಭೇದನ ಭದ್ರವಾಚಕಂ" (ಜಾತಕ. ೦೦೦). [ಸಂ.]

**ಭದ್ರಕ** (ಗು). ೧. ಶ್ರೇಯಸ್ಕರವಾದ ; ಮಂಗಳಕರವಾದ. ೨. ಅಂದವಾದ ; ಚೆನ್ನಾದ. ೩. ಪುಣ್ಯಕರವಾದ. (ನಾ). ೪. ಒಂದು ಬಗೆಯ ಮರ; ದೇವದಾರು. ೫. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಒಂಭತ್ತನೆಯದಾದ ಬೃಹತಿ ಛಂದಸ್ಸಿನ ಒಂದು ವೃತ್ತ: ರೌದ್ರವಸ್ವಿಸುರಪಾವಕಂ ಕ್ಷುದ್ರಮಲ್ಲದಿರೆ ನಾಮದಿಂ ಭದ್ರಕಂ ಸರಸಿಜಾನನೇ ಸದ್ರಸಂ ಲಯಪದಕ್ರಮಂ (ಛಂದೋಂಬು. ೨-೦೦೩).

**ಭದ್ರಕವಿದ್ರಾವಣ** = ಚಾಳುಕ್ಯರಾಜನಾದ ಆಹವಮಲ್ಲನ ಒಂದು ಬಿರುದು : ಸಮಸ್ತಭುವನಾಶ್ರಯಂ . . .ಭದ್ರಕವಿದ್ರಾವಣಂ ಕೊಂಕಣ ಭಯಂಕರಂ ಉಭಯಬಲದಲ್ಲಣಂ (ಗದಾಯು. ೬-೭ ವ). [ಸಂ.]

**ಭದ್ರಕಾಲಿ, ಭದ್ರಕಾಳಿ** (ನಾ). ೧. ಶಕ್ತಿದೇವತೆ; ದುರ್ಗೆ. **ಭದ್ರಕಾಳಿ:** ೧. ನೋಡು ಬರುತಲಿರುವಳದೋ ರುದ್ರಭದ್ರಕಾಳಿಯು ! ದೇವಿ. ಚಂಡಿ. ಚಾಮುಂಡಿ, ರಕ್ತರುಂಡಮಾಲಿಯು ! (ಜಾಂಬವ. ೯-೨). ೨. ದಕ್ಷನ ಯಾಗವನ್ನು ನಾಶಪಡಿಸಲು ಪರಮೇಶ್ವರನು ವೀರಭದ್ರನ ಸಹಾಯಕ್ಕಾಗಿ ಸೃಷ್ಟಿಸಿದ ಸ್ತ್ರೀದೇವತೆ : ಹಸ್ತದ ಹಲಗೆ ಖಂಡೆಯವನಿರದೆ ಝಳಪಿಸುತೆ ತೇರಿಂದಿಳಿದು ಸಲೆ ಭದ್ರಕಾಳಿ ಸಹಿತೆ ಗಂಡುಗಲಿವೀರಂ . . . ಬರುತಿರ್ದಂ (ತಪಕು. ೩೨-೯೩). [ಸಂ. ಭದ್ರಕಾಲೀ]

**ಭದ್ರಕಾಳಿ** 'ಭದ್ರಕಾಲಿ' ನೋ.

**ಭದ್ರಕುಂಭ** (ನಾ). ಮಂಗಳಕಲಶ ; ಪೂರ್ಣಕುಂಭ : "ಭದ್ರಕುಂಭಃ. ಪೂರ್ಣಕುಂಭಃ — ೨ ಅರಮನೆಯ ಬಾಗಿಲು ಮುಂತಾದವುಗಳಲ್ಲಿ ಮಂಗಳಕರವಾಗಿ ಇರಿಸತಕ್ಕ ಪೂರ್ಣ ಕಲಶಗಳ ಹೆಸರುಗಳು" (ಸಿದ್ಧಾಂತಿ. ೨೯೩). [ಸಂ.]

**ಭದ್ರಗಜ** (ನಾ). = ಭದ್ರ ೭ : ಅಂತಿರ್ದ ಸಕಲಶುಭಲಕ್ಷಣಾಕಾರಮುಮುತ್ತಾಯತಕರಮುಮಿಂದ್ರನೀಲಚ್ಛಾಯಮುಂ ಮಹಾಕಾಯಮುಮಪ್ಪ ಭದ್ರಗಜಮಂ ಕಂಡು (ಶಂಖಾಪಪು. ೦೦-೦೫೯ ವ) ; ಭದ್ರಗಜ ಆಜಕಾಲದಲ್ಲಿ ಘರ್ಜಿಸಿ ಕೊಂಬುದೇ (ಸರ್ವಜ. ೬೨೦) ; ಅಳಿದುದ್ಯೆ ಸೂಜಿರಸುಗಳು . . . ನುಗ್ಗಾದು ದೊಂಬೈಸೂಜು ಭದ್ರಗಜ (ಕುಮಾರರಾ. ೦೦-೨೦). [ಸಂ.]

**ಭದ್ರತಂತ್ರ** (ನಾ). ಆಗಮಗಳಲ್ಲಿ ಒಂದು ; ವೀರಾಗಮದ ಹದಿಮೂರು ಭೇದಗಳಲ್ಲಿ ಒಂದು: ಪ್ರಸ್ತರತಂತ್ರ . . . ಭದ್ರತಂತ್ರ ವೀರತಂತ್ರವೆಂದು ವೀರಾಗಮದ ಹದಿಮೂಜು ಭೇದಂಗಳು (ಏಕೋತ. ೬೦). [ಸಂ.]

**ಭದ್ರತಾಮಂಡಲಿ** (ನಾ). [ರಾಜನೀ] ಪ್ರಪಂಚದ ವಿವಿಧರಾಷ್ಟ್ರಗಳ ನಡುವೆ ಸಂಭವಿಸಬಹುದಾದ ಯುದ್ಧಗಳನ್ನು ತಪ್ಪಿಸಿ ಜಗತ್ತಿನಲ್ಲಿ ಶಾಂತಿಯು ನೆಲಸುವಂತೆ ಮಾಡಲು ಸ್ಥಾಪಿತವಾಗಿರುವ ವಿಶ್ವಸಂಸ್ಥೆಯ ಒಂದು ಅಂಗಸಂಸ್ಥೆ ; ದೇಶದೇಶಗಳ ವಿವಾದಗಳನ್ನು ಚರ್ಚಿಸಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರವುಳ್ಳ ಸಮಿತಿ : (Security council. ಪತ್ರಿಕೆ.೬೩); ಭದ್ರತಾಮಂಡಲಿಯಲ್ಲಿ ರಷ್ಯ ಖಾಯಂ ಸದಸ್ಯರಾಷ್ಟ್ರವಾಗಿದೆ (ರೂಢಿ). [ಸಂ. ಭದ್ರತಾಮಂಡಲೀ]

**ಭದ್ರತಾಸಮಿತಿ** (ನಾ). = ಭದ್ರತಾಮಂಡಲಿ : ಸಾರ್ವತ್ರಿಕಸಭೆ (General Assembly) ಭದ್ರತಾಸಮಿತಿ (Security Council) . . . ಇವು ವಿಶ್ವಸಂಸ್ಥೆಯ ಆರು ಪ್ರಧಾನಅಂಗಗಳಾಗಿವೆ (ಅಂತಸಂ. ೦೭). [ಸಂ.]

**ಭದ್ರತೆ** (ನಾ). ಈತಿಬಾಧೆಗಳಿಲ್ಲದೆ ಸ್ವಸ್ಥವಾಗಿರುವಿಕೆ ; ಸುರಕ್ಷತೆ; ಕ್ಷೇಮ : ಅನೇಕ ಸಣ್ಣ ಸಣ್ಣ ರಾಷ್ಟ್ರಗಳ ಭವಿಷ್ಯ ಆರ್ಥಿಕ ಬೆಳವಣಿಗೆ ಹಾಗು ಭದ್ರತೆಯು ಇಂತಹ ಆರ್ಥಿಕ ಒಕ್ಕೂಟಗಳ ಸ್ಥಾಪನೆಯನ್ನೇ ಅವಲಂಬಿಸಿರುವುದೆಂದು ಹೇಳಬಹುದು (ಅಂತಸಂ. ೨೪೦). [ಸಂ. ಭದ್ರತಾ]

**ಭದ್ರದಂತಿ** (ನಾ). = ಭದ್ರ ೭ : ಎಣಿಕೆಯಿಲ್ಲದೆ ಕುಂಭಕರ್ಣನು ರಣಕೆ ನೂಕಿದ . . . ಭದ್ರದಂತಿಯನೆಂಟುಕೋಟಿಯನು (ತೊರೆರಾ. ೨೩-೪). [ಸಂ. ಭದ್ರದಂತಿನ್]

**ಭದ್ರದಾರು** (ನಾ). ಒಂದು ಬಗೆಯ ಮರ ; ದೇವದಾರು : "ಚಕ್ರಪಾದಪಃ, ಪಾರಿಭದ್ರಕಃ, ಭದ್ರದಾರುಃ, ದ್ರುಕಿಲಿಮಂ, ಪೀತದಾರು, ದಾರು, ಪೂತಿಕಾಷ್ಠಂ—೭ ದೇವದಾರುವೃಕ್ಷದ ಹೆಸರು" (ಸಿದ್ಧಾಂತಿ. ೦೨೪). [ಸಂ.]

**ಭದ್ರಪದೆ** (ನಾ). [ಜ್ಯೋತಿ] ಪ್ರಸಿದ್ಧವಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಇಪ್ಪತ್ತೈದು ಮತ್ತು ಇಪ್ಪತ್ತಾರನೆಯ ನಕ್ಷತ್ರಗಳು ; ಪೂರ್ವಾಭಾದ್ರೆ ಮತ್ತು ಉತ್ತರಾಭಾದ್ರೆ ನಕ್ಷತ್ರಗಳು. [ಸಂ. ಭದ್ರಪದಾ]

**ಭದ್ರಪರ್ಣೆ** (ನಾ). ಒಂದು ಬಗೆಯ ಸಸ್ಯ : "ಗಂಭಾರೀ, ಸರ್ವತೋಭದ್ರಾ, ಕಾಶ್ಮರೀ, ಮಧುಪರ್ಣಿಕಾ, ಶ್ರೀಪರ್ಣೀ, ಭದ್ರಪರ್ಣೀ, ಕಾಶ್ಮರ್ಯಃ—೭ ಶೀವನೆಯ ಮರದ ಹೆಸರು" (ಸಿದ್ಧಾಂತಿ. ೦೨೦); "ಭದ್ರಪರ್ಣೀಗುಳ್ಳ (ಗೂಳ?)" (ಓಷ. ೦೦೦). [ಸಂ. ಭದ್ರಪರ್ಣೀ]

**ಭದ್ರಪೀಠ** (ನಾ). ೧. ಶ್ರೇಷ್ಠವಾದ ಪೀಠ ; ಸಿಂಹಾಸನ : "ಸಿಂಹಾಸನಂ ಭದ್ರಪೀಠಂ" (ಮಂಗರಾ. ೭೮-೦). ೨. (ಪ್ರತಿಮೆಗಳ ಸ್ಥಾಪನೆಯಲ್ಲಿ) ಒಂದು ವಿಶೇಷ ರೀತಿಯ ಪೀಠ,-ಆಸನ : ಆ ಶಿವಾರ್ಚನೆಗುಪಯುಕ್ತವಾಗಿ ಅನಂತಪೀಠ ಕಮಠಪೀಠ . . . ಭದ್ರಪೀಠ ಭಾವನೆಯೆಂದುಪಕಲ್ಪಿತಮಾದ ದಿವ್ಯಮಂಟಪಮಧ್ಯಗತ ಸಿಂಹಾಸನಕ್ಕೆ (ಏಕೋತ. ೦೦೪) ; 'ಮಯಮತ' ಎಂಬ ಗ್ರಂಥದಲ್ಲಿ ಪ್ರತಿಮೆಗಳಿಗೆ ಬೇಕಾದ ಪೀಠಗಳು ಅನೇಕ ವಿಧವೆಂದೂ, ಅವುಗಳಲ್ಲಿ ಮುಖ್ಯವಾದುವು ಭದ್ರಪೀಠ, ಪದ್ಮಪೀಠ . . . ಶ್ರೀಕಾಮ್ಯವೆಂದೂ ಹೇಳಿದೆ (ಭಾರತ. ೫೦೭). [ಸಂ.]

**ಭದ್ರಬಲೆ** (ನಾ). ಒಂದು ಬಗೆಯ ಸಸ್ಯ; ಸಾರಣಿ ಗಿಡ : "ಸಾರಣೀ, ಪ್ರಸಾರಣೀ, ಕಟಂಭರಾ, ರಾಜಬಲಾ, ಭದ್ರಬಲಾ — ೫ ಕಿರಿಯ ಹಸಾರಣೆ ಗಿಡ, ಸಾರಣೀಗಿಡ" (ಸಿದ್ಧಾಂತಿ. ೦೯೭). [ಸಂ. ಭದ್ರಬಲಾ]

**ಭದ್ರಬಾಹು** (ನಾ). [ಜೈನ] ಐದನೆಯ ಶ್ರುತಕೇವಲಿ; ಚಂದ್ರಗುಪ್ತನ ಜೊತೆಯಲ್ಲಿ ಉತ್ತರಭಾರತದಿಂದ ಶ್ರವಣಬೆಳಗೊಳಕ್ಕೆ ಬಂದನೆಂದು ಹೇಳಲಾದ ಜೈನಮುನಿ : ಗೋವರ್ಧನ ಭದ್ರಬಾಹು ವಿಶಾಖಪ್ರೋಷ್ಠಿಲ ಕೃತ್ತಿಕಾರ್ಯ್ಯ . . . ಮಹಾಪುರುಷಸನ್ತತಿಸಮವದ್ಯೋತಿತಾನ್ವಯ ಭದ್ರಬಾಹುಸ್ವಾಮಿನಾ (ಎಕ. II, ೦_೪; ಸು. 600) ; ಇಂತು ಪದಿನಾಱುಂ ಕಂಡ ಕನಸುಗಳ ಫಲಂಗಳಂ ಸಂಪ್ರತಿ ಚಂದ್ರಗುಪ್ತಮಹಾರಾಜಂಗೆ ಭದ್ರಬಾಹುಭಟ್ಟಾರರ್ ಪೇೞ್ದು (ವಡ್ಡಾರಾ. ೬೭-೦೬). [ಸಂ.]

**ಭದ್ರಮಂಟಪ** (ನಾ). ೧. ಮದುವೆ ಮುಂತಾದ ಮಂಗಳಕಾರ್ಯಗಳನ್ನು ನಡೆಸುವ ಮಂಟಪ; ಶುಭಕಾರ್ಯಕ್ಕಾಗಿ ಕಟ್ಟಿದ ಮಂಟಪ: ಪಾಂಚಾಲೆ ಪೊಕ್ಕಳು ಭದ್ರಮಂಟಪಶಾಲೆಯನು (ಕುಮಾವ್ಯಾ. ೦೯-೦); ದಂಡಿಗೆಯನಿಳಿದನಾರತಿಗಳ ನಿವಾಳಿಯಿಂ ಚಂದ್ರಹಾಸಂ ಭದ್ರಮಂಟಪದೊಳು (ಜೈಮಿಭಾ. ೩೦-೦೪); ಆನಂತರಮವಂಬೆರಸಲ್ಲಿಂ ಸಲ್ಲೀಲೆಯಿಂದೆಲ್ದಂದು ಭದ್ರಮಂಟಪದ ಮುಂದಣ ಮುತ್ತಿನ ಮೊಗಸಾಲೆಯೊಳ್ . . . ಓಲಗಂಗೊಟ್ಟು (ರಾಜಶೇ. ೦೩-೬೦ ವ). ೨. ಅತ್ಯುತ್ತಮವಾದ ವಿಶ್ರಾಂತಿಗೃಹ : ಕರುಮಾಡ ಭದ್ರಮಂಟಪ ರಮ್ಯಭವನದೊಳುರುತರನಾಟ್ಯಶಾಲೆಗಳು . . . ಎಸೆಗು (ಪರ್ವತ. ೦-೨೩). [< ಸಂ. ಭದ್ರಮಂಡಪ]

**ಭದ್ರಮುಸ್ತಕ** (ನಾ). ಒಂದು ಬಗೆಯ ಔಷಧಿವನಸ್ಪತಿ ; ಕೊನ್ನಾರಿ ಗೆಡ್ಡೆ: "ಭದ್ರಮುಸ್ತಕಃ, ಗುಂದ್ರಾ — ೨ ಕೆಂಪುಛಾಯೆಯ ಭದ್ರಮುಸ್ತಗಳಂ. ದೊಡ್ಡಾನೇ ಭದ್ರಮುಸ್ತಗಳು" (ಸಿದ್ಧಾಂತಿ. ೦೯೯). [ಸಂ.]

**ಭದ್ರಮುಸ್ತೆ** (ನಾ). = ಭದ್ರಮುಸ್ತಕ : "ಮುಸ್ತಕಃ, ಕುರುವಿಂದಃ, ಭದ್ರಾ, ಜಳದಃ–ಈ ೪ ಭದ್ರಮುಸ್ತೆ" (ಹಲಾಯು. ೦೦೨–೪೬೮); ಭದ್ರಮುಸ್ತೆ . . . ತಾವರೆಬಳ್ಳಿ ಇವಿಷ್ಟನ್ನು ಆಡಿನ ಹಾಲಿಂದ ಅರೆದು ಕುಡಿಯ ಕೊಡಿಸಲು ಕತ್ತೆ ಮೊದಲಾದುವುಗಳ ವಿಷ ಪರಿಹರವಹುದು (ವೈದ್ಯಸಾ. II. ೨೦೩) ; ಕೋಷ್ಟಂ ಪದ್ಮಕಂ ಕರ್ಪೂರ ಬಾಳದ ಬೇರು ಪುಷ್ಕರಂ ಭದ್ರಮುಸ್ತೆ ಯಿವಂ ಸರಿಗೊಂಡು (ಕಾಮಶಾ. ೨೬೬). [ಸಂ. ಭದ್ರಮುಸ್ತಾ]

**ಭದ್ರಯವ** (ನಾ). ಕೊಡಸಿಗೆಯ ಹಣ್ಣು : "ಕಳಿಂಗಂ, ಇಂದ್ರಯವಂ, ಭದ್ರಯವಂ . . . ಕೊಡಶಿನ ಹಣ್ಣಿನ ಹೆಸರುಗಳು" (ಸಿದ್ಧಾಂತ. ೦೨೭). [ಸಂ.]

**ಭದ್ರಯ್ಯ** (ನಾ). ಒಬ್ಬಾತನ ಹೆಸರು : ಮತ್ತಲೆರಡು ಸ್ಥಾನಮಂಗೊಟ್ಟ ಗಡಿಯ ಭದ್ರಯ್ಯನ ಕಲ ಕನ್ನಯ್ಯ ಕಟ್ಟಿಸಿದ (ಎಕ. VIII. ಸೊರಬ. ೪೪–೧೦; 971). [ಭದ್ರ + ಅಯ್ಯ$_{61}$]

**ಭದ್ರಲಕ್ಷಣ** (ನಾ). ೧. ಮಂಗಳಕರವಾದ ಗುರುತು,– ಚಿಹ್ನೆ : ಶೂದ್ರರೈಸಿರಿ ವೇಶಿಯರುಮುಹ ಭದ್ರಲಕ್ಷಣವವರ ಕೇರಿಲಿ ವಿದ್ರುಮದ್ವಾರ ಲಾಯಂಗಳು (ಬಸವಪು. ೨೦–೨೪). ೨. ಭದ್ರವೆಂಬ ಜಾತಿಗೆ ಸೇರಿದ ಶ್ರೇಷ್ಠವಾದ ಆನೆಯ ಗುರುತು, – ಚಿಹ್ನೆ. ೧, ೨: ದಾನದಿಂ ದೊಡಂಬಟ್ಟಿರೆ ಭದ್ರಲಕ್ಷಣಗುಣಾನ್ವಿತನವ್ಮನ ಗಂಧವಾರಣಂ ಪುಟ್ಟೆ ನರೇಂದ್ರ ರಾಜ್ಯಮುದಿತೋದಿತಮಾಹವಮಲ್ಲದೇವನಾ (ಗದಾಯು ೦-೦೦); ವರದಾನೋನ್ನತ ಭದ್ರಲಕ್ಷಣಪದಂ ಪದ್ಮಾನುಷಂಗಿತ್ವಮಾಗಿರೆ ಪೆಂಪಚ್ಚರಿಯಾದ ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ (ಜಗ. ೦–೩). ೩. ಉಪ್ಪರಿಗೆಯಂ ಮಣೆಯ ಲಕ್ಷಣ. – ಸ್ವರೂಪ. ೧, ೩ : ಅದು ಬೇರಸಿರಿಯ ಕರುಮಾಡದ ತೆಜದಿಂ ಭದ್ರಲಕ್ಷಣೋಪೇತಂ (ತಂಪ್ರಪು. ೪-೦೦೦). [ಸಂ.]

**ಭದ್ರವಾಹು** (ನಾ).=ಭದ್ರಬಾಹು : ಶ್ರೀ ಭದ್ರವಾಹುಸಚಂದ್ರಗುಪ್ತ ಮುನೀನ್ದ್ರಯುಗ್ಮದಿನೊಪ್ಪೆ (ಎಕ.II. ೩೧–೦; ಕ್ರಿ. 650). [<ಭದ್ರಬಾಹು]

**ಭದ್ರಶಾಲ, ಭದ್ರಶಾಳ** (ನಾ). ೧. ಅರಮನೆ ಮೊದಲಾದ ದೊಡ್ಡ ಭವನಗಳಲ್ಲಿರುವ ಶ್ರೇಷ್ಠವಾದ ಭಾಗ : ತೊಟ್ಟಿ. ೨. [ಜೈನ] ಮೇರುಪರ್ವತದ ತಳಭಾಗದಲ್ಲಿರುವ ಭದ್ರಶಾಲ. ನಂದನ. ಸೌಮನಸ ಮತ್ತು ಪಾಂಡುಕವೆಂಬ ನಾಲ್ಕು ವನಗಳಲ್ಲಿ ಒಂದು : ನಿಜಪರಿಜನಕೆಲ್ಲಂ ಪೊಗಬುತ್ತುಂ ಭದ್ರಶಾಲದಿಂ ತಗುಳ್ದು ಪಾಂಡುಕವನಂಬರಮುವಜಿ ನೆಲೆಯೊಳಿರ್ದ ಕೃತ್ರಿಮಚೈತ್ಯಾಲಯಂಗಳಂ . . . ಅರ್ಚಿಸಿ (ಆದಿಪು. ೨–೩೨ ವ); ಮಂದರಶೈಲಮಂ ದಿವಿಜನಾಯಕನೆಯ್ದಿರೆ ಭದ್ರಶಾಲದಿಂ . . . ಆ ಗಿರಿರಾಜವಿಲಾಸಮುಟ್ಟಿಯುಂ ತಂದುದು (ಶಾಂತಿಪು. ೩–೨).

**ಭದ್ರಶಾಳ** : ೨. ಘನತರಭದ್ರಶಾಳದಿನಿನಿತ್ತೆಡೆಮಾಡದೆ ನಂದನಕ್ಕೆ ನಂದನದಿನದೊಂದು ಬೇಗದೊಳೆ ಸೌಮನಸಕ್ಕೆ ತಗುಳ್ದು (ತಂಪ್ರಪು. ೦೨–೦೦೪). [ ಸಂ. ಭದ್ರಶಾಲಾ ]

**ಭದ್ರಶಾಲೆ** (ನಾ).=ಭದ್ರಶಾಲ ೧ : ಜಿನಪೂಜೆಗೈದಾತ್ಮಯೋಗದ ಮಾಡಿ ಮೋಹನದ ಶೃಂಗಾರಾಂಗನಾಗಿ ಮನೆಯೊಳಗಣ ಭದ್ರಶಾಲೆಯ ಸಿಂಹಾಸನದಲ್ಲಿ ಕುಳಿತನೆಯ್ದುಂದು (ಶಶಕ. ೪೨–೩). [ ಸಂ. ಭದ್ರಶಾಲಾ ]

**ಭದ್ರಶಾಳ** 'ಭದ್ರಶಾಲ' ನೋ.

**ಭದ್ರಶ್ರೀ** (ನಾ) .ಗಂಧದ ಮರ; ಚಂದನವೃಕ್ಷ: 'ಗಂಧಸಾರಃ, ಮಲಯಜಃ, ಭದ್ರಶ್ರೀಃ, ಚಂದನಃ –೪ ಚಂದನದ ಗಿಡ " (ಸಿದ್ಧಾಂತ. ೨೦೮). [ಸಂ.]

**ಭದ್ರಹಸ್ತಿ** (ನಾ). ಶುಭಲಕ್ಷಣಗಳುಳ್ಳ ಒಂದು ಜಾತಿಯ ಆನೆ : ಎಂಭತ್ತುನಾಲ್ಕುಲಕ್ಕೆ ಗಂಧಸಿಂಧುರಂಗಳಪ್ಪ ಭದ್ರಹಸ್ತಿಗಳುಂ (ಆದಿಪು. ೦೩–೩ ವ). [ಸಂ. ಭದ್ರಹಸ್ತಿನ್]

**ಭದ್ರಾಂಗಿ** (ನಾ). ಸುಂದರವಾದ ದೇಹವುಳ್ಳವಳು ; ಮಂಗಳಾಂಗಿ : ರುದ್ರಾಕ್ಷಿಯ ಭದ್ರಾಂಗಿಗೆ ವಿಭೂತಿಯ ವಿಳಾಸನಿಧಿಗೆ . . . ಪಶುಪತಿಯ ಪಟ್ಟದ ಮಹಾದೇವಿಗೆ (ಗಿರಿಜಾ. ೩–೯೦ ವ). [ಸಂ. ಭದ್ರಾಂಗೀ]

**ಭದ್ರಾಕರಣ** (ನಾ). ಕ್ಷೌರ ; ಮುಂಡನ : "ಕ್ಷೌರಂ. ಭದ್ರಾಕರಣಂ. ಮುಂಡನಂ, ವಪನಂ–ಈ ೪ ಬೋಳಿಸುಹ" (ಹಲಾಯು. ೦೪೪–೩೬); ಭದ್ರಾಕರಣ ಮಾಡಿಕೊಂಡರೆ ಭದ್ರವಾದೀತೇ ? (ಗಾದೆ). [ಸಂ.]

**ಭದ್ರಾಕಾರ** (ನಾ). ೧. ಭವ್ಯವಾದ ಆಕಾರ,–ಸ್ವರೂಪ. ೨. ಭವ್ಯವಾದ ಆಕಾರವುಳ್ಳವನು : ಭದ್ರಾಕಾರನುಂ ಕಾಂತಿಮಂತನುಮಭಿರೂಪನುಮಾದ ನೀತಂಗಿನಿತು ವಿಭವಮುಮೆಂತಾದುದು (ಶಾಂತಿಪು. ೪–೮೩ ವ); ಭದ್ರಾಕಾರನೀತಂಗಳುಕುವುದು ಧನು (ಕುಮಾರ. ೦೩–೦೪). ೩. 'ಭದ್ರ'ಎಂಬ ಆನೆಯ ಲಕ್ಷಣ. ೧,೩ : ಕುಂಭಕುಚದಿಂದೆ ಜವ್ವನದ ಮದದಿಂದೆ ಭದ್ರಾಕಾರದಿಂದೆ . . .ಎಸೆವ ಪೆಣ್ಗಳಾನೆಗಳ ಮೇಲೈತುದರವರಾಯುತಾಗಳಿಂದೆ (ಶೈಬಸಾ. ೦೬–೩). [ಸಂ.]

**ಭದ್ರಾಕ್ಷ** (ನಾ). ೧. ರುದ್ರಾಕ್ಷಿಮರದ ಜಾತಿಗೆ ಸೇರಿದ ಒಂದು ಬಗೆಯ ಮರ : ರುದ್ರಾಕ್ಷ ಭದ್ರಾಕ್ಷ . . . ಶಿರೀಷಾದಿ ಲತಾಗೃಹಂಗಳುಂ (ವಿವೇಕ. ೨೦೦). ೨. ಒಂದು ಬಗೆಯ ಉತ್ತಮಜಾತಿಗೆ ಸೇರಿದ ಕುದುರೆ : ಸತ್ವಯುತಂ . . . ಅತಿಸತ್ವನರತ್ರಾಸಿಕಂ ಹಯಂ ಭದ್ರಾಕ್ಷಂ (ಅಶ್ವಶಾ. ೩-೪೦). [ಸಂ.]

**ಭದ್ರಾಕ್ಷಿ** (ನಾ). =ಭದ್ರಾಕ್ಷ ೧. ಭದ್ರಾಕ್ಷಿಮರ, ಜೇನುಮರ, ರುದ್ರಾಕ್ಷಿಮರ (ವೃಕ್ಷಶಿ. ೪೧–೬೦೦) : ಸಟ್ಟುಗದ ಬೀಜವನ್ನು ಕೆಲವರು ಭದ್ರಾಕ್ಷಿಯೆಂದೂ ಕರೆಯುವುದುಂಟು (ಹಸುಕೊ. ೬೨). [< ಸಂ. ಭದ್ರಾಕ್ಷ]

**ಭದ್ರಾತಕ** (ನಾ). ಒಂದು ಬಗೆಯ ಗೆಡ್ಡೆ ; ಭದ್ರಮುಸ್ತೆ : "ಮುಸ್ತಕಂ ಮುಸ್ತೆ ಭದ್ರಾತಕಂ" (ಮಂಗರಾ. ೪೦–೩೬). [ ? ]

**ಭದ್ರಾರಮಣ** (ನಾ). ಗೋವುಗಳ ಪ್ರೀತಿಗೆ ಪಾತ್ರನಾದವನು ; ಕೃಷ್ಣ : ನಿದ್ರಾರಹಿತ ಭದ್ರಾರಮಣ ನಿರ್ವಿಕಾರ ಚಿನ್ಮೋಹ ಸರ್ವಕಾಲ ಸುಂದರಸಾರ (ವಿದ್ಯಾಕೃ. ೦೪-೦). [ಸಂ.]

**ಭದ್ರಾಸನ** (ನಾ). ೧.=ಭದ್ರಪೀಠ ೧ : "ಸಿಂಹಾಸನಂ.ಭದ್ರಾಸನಂ-ಈ ೨ ಸಿಂಹಾಸನಂ"(ಹಲಾಯು. ೬೦–೨೬೯); ನೃಪೇಂದ್ರಂ ಭದ್ರಾಸನಮನಿಕ್ಕಲ್ವೇಳ್ಕೆ ಕುಳ್ಳಿರ್ದು ವಿಜಯಾರ್ಧಕುಮಾರು (ಆದಿಪು.೦೩-೦೪ವ); ಗಿರಿಪತಿಯುಂ ಸತಿಯುಂ ವರನುಂನಿಗತಿವಿನತರಾಗಿ ಭದ್ರಾಸನದೊಳ್ ಭರದಿಂ ಕುಳ್ಳಿರಿಸುತ್ತುಂ (ಗಿರಿಜಾ. ೪–೩೪); ಕುಳ್ಳಿರ್ದಪನಂದುರು ಭದ್ರಾಸನದೊಳಗಾದರದಿಂ ಮನುರಾಜನತುಳನತಸುರಭೂಜಂ (ಹರಿವಂಶ. ೨–೨೮). ೨. ಧ್ಯಾನ ಮಾಡುವಾಗ ಕುಳಿತುಕೊಳ್ಳುವ ಒಂದು ವಿಶಿಷ್ಟ ಭಂಗಿ : (೬). [ಸಂ.]

**ಭದ್ರಿಸು** (ಕ್ರಿ).೧. ಕ್ಷೌರಮಾಡು ; ಮುಂಡನ ಮಾಡು : " ಭದ್ರಿಸು_ ಮುಂಡನಕ್ರಿಯಾಯಾಂ " (ಕಮಾ). ೨. ಸಂರಕ್ಷಿತವಾಗಿರುವಂತೆ ಮಾಡು : ವನವಾಸದಲ್ಲಿ ಪಿಂದೈತಂದ ಸಕಲಸುಜನವ ದೀಕ್ಷಿತರ . . . ಅನುವಿನಿಂದಿರಿಸಿ ಭದ್ರಿಸಿ (ಲಕ್ಷ್ಮೀಶಾ. ೦-೪). ೩. (ಆಲಂ) ಹೋಗಲಾಡಿಸು; ನಿವಾರಿಸು : ಮುದ್ರಿಸೋ ಮಂದರವನಹಿಯಲಿ ಭದ್ರಿಸೋ ಭಯರಸವ ನೆನೆಯುತುಬ್ಬಿದ್ದುದದ್ಭುತಸಿಂಹನಾದದಲುಭಯಬಲನಿಕರ (ಶಿಶಾಗ. ೮-೭-೦೬). [ ಭದ್ರ + – ಇಸು$_{3}$ ]

**ಭದ್ರೆ** (ನಾ). ೧. ಮಂಗಳರೂಪಳಾದವಳು ; ಮಂಗಳಾಂಗಿ : ಭದ್ರೆ ನೀನು ಭಯಾವೃತಳಾಗಿದ್ದೀಯೆ (ಶಾಂತಲಾ. ೦೯೩). ೨. ಹಸು ; ಆವು: 'ಭದ್ರಾರಮಣ' ಪರಾ. ೩. ದೇವಗಂಗೆ. ೪. ಕರ್ನಾಟಕದಲ್ಲಿರುವ ಒಂದು ನದಿಯ ಹೆಸರು : ವರಾಹಪರ್ವತದ ಗಂಗಾಮೂಲದಲ್ಲಿ ಉಗಮಿಸುವ ತುಂಗಾ ಮತ್ತು ಭದ್ರಾ ನದಿಗಳು . . . ಕೂಡಲಿಯ ಬಳಿ ಒಂದಾಗುತ್ತವೆ (ಕವಿಕೋ. IX. ೩೦೩). ೫. = ಭದ್ರಮುಸ್ತಕ : " ಮುಸ್ತಕಃ, ಕುರುವಿಂದಃ, ಭದ್ರಾ, ಜಳದಃ – ಈ ೪ ಭದ್ರಮುಸ್ತೆ " (ಹಲಾಯು. ೦೦೨–೪೬೮). ೬. [ಜ್ಯೋತಿ] ಹನ್ನೊಂದು ಕರಣಗಳಲ್ಲಿ ಏಳನೆಯದು : ಕರಣವೇಕಾದಶಗಳಲಿ ಚರಕರಣ ಶಕುನಿ ಚತುಷ್ಪ . . .

ಭದ್ರೆಯೆನಿಸುವ ಕರಣವಾರು ಶುಭಂಗಳು (ಗಗಣಾ. ೯-೬೦). ೭. ಚಾಂದ್ರಮಾಸದಲ್ಲಿ ಉಭಯಪಕ್ಷಗಳ ಎರಡು, ಏಳು ಮತ್ತು ಹನ್ನೆರಡನೆಯ ತಿಥಿಗಳು ; ಬಿದಿಗೆ, ಸಪ್ತಮಿ ಮತ್ತು ದ್ವಾದಶಿತಿಥಿಗಳು : ನಂದೆಯುಂ ಭದ್ರೆಯುಂ ಒಂದಾಗಿ ಅರ್ಥಿಸಲು ಅಂದಿನ ತಿಥಿಗೆ ಸವನಾಗೆ ಗ್ರಹಣ ತಾ ಮುಂದೆ ಬಂದಕ್ಕು (ಸರ್ವಜ್ಞ. ೦೩೬೦); ೩೦ ತಿಥಿಗಳಲ್ಲಿ ನಂದಾ, ಭದ್ರಾ, ಜಯಾ, ರಿಕ್ತಾ, ಪೂರ್ಣಾ ಎಂಬ ಸಂಕೇತವು ಪಾಡ್ಯ ಮೊದಲು ಪಂಚಮಿವರೆಗೂ ಆಗುವುವು (ಹಸಾರ. ೬-೨೮ ಟೀಕು). ೨ ಇನ್ನೂ ಅನೇಕ ಬಗೆಯ ಸಸ್ಯಗಳಿಗೂ ದೇವತೆಗಳಿಗೂ ಈ ಹೆಸರುಂಟು. [ಸಂ. ಭದ್ರಾ]

**ಭಪ** (ನಾ). ನಕ್ಷತ್ರಗಳ ಅಧಿಪತಿ ; ಚಂದ್ರ : ಗಗನ ಮಂದಿರದಲ್ಲಿಯ ರೌಪ್ಯಘಂಟಿಯೋ ಮತ್ತಶಿಕುಂದಪುಷ್ಪಕೃತತುಂಡಳಿತಾಂಗಜಚಾಪಮೋ ಭಪಂ (ಹರಿಶ್ಚ. ೨-೩೬). [ಸಂ.]

**ಭಪ್ಪರೆ** 'ಬಾಪ್ಪುರೆ' ನೋ.

**ಭಬ್ಯ** (ಗು). ಶ್ರೇಷ್ಠವಾದ : ಭಬ್ಯ ಶ್ರಾವ್ಯ ಕಾಬ್ಯ ನಾಟಕಾಖ್ಯಾಯಿಕಾಖ್ಯಾನಾದಿ ಬ್ಯಾಖ್ಯಾನ ವ್ಯಾಪಾರಾ × × × ತನಯ್ಯ ಶ್ರೀಹರ್ಷ (ಎಕ. XI, ದಾವಣ. ೯೦-೬೬; 1148). [<ಸಂ. ಭವ್ಯ]

**ಭಮ್ಮನ್** (ನಾ). ಒಂದು ಅನುಕರಣ ಶಬ್ದ : ಅಜಿಯದೆ ಬಂದೆವು ಕಿಮ್ಮನ್ ಪರಿಹರಿಸಯ್ಯ ಭ[ಪಾಠಾಂ. ಭಿ]ಮ್ಮನ್ (ಕುರಂದ. ೨-೬೬ ಪಲ್ಲವಿ). 'ಕಿಮ್ಮನ್' ಪರಾ.

**ಭಯ** (ನಾ). ೧. ಹೆದರಿಕೆ ; ಅಂಜಿಕೆ ; ಭೀತಿ : "ಆತಂಕಃ . ಭಯಂ . . . ಸಾಧ್ವಸಂ – ಈ ೬ ಭಯಂ" (ಹಲಾಯು. ೦೨೦-೯೦) ; ಭಯಮಱಿಯದ ಕಲಿಯುಂ ಚಾಗಿಯುಮೆನಿಸದೆ ನಾಡೆ ಲೋಭಿಯುಂ ಪಂದೆಯುಮಾಗಿಯೆ ಬಾಟ್ಟಂಗಲ್ಲದೆ ಸೂಳೆಯ ಕಣ್ ಪಾಸಗೆಯ ಕಣ್ಣುಮೋನು ಜುಗುಗುಮೇ (ಶಂಕರಾ. ೬-೬೩) ; ಅನೃತಂ ಲೋಭಂ ಭಯಮೆಂಬಿನಿತುಂ ನೀನಿರ್ದ ನಾಡೊಳಿಕ್ಕುಮೆ ರವಿನಂದನ ನನ್ನಿ ಚಾಗಮಣ್ಮೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾವಯ್ (ಗದಾಯು. ೩-೦೬): ಭಯದಿಂದ ಭಕ್ತಿ, ನಯದಿಂದ ಯುಕ್ತಿ (ಗಾದೆ). ೨. ಭೀತಿಯನ್ನುಂಟುಮಾಡುವಂತಹುದು ; ಭಯಾನಕವಾದುದು : ಮುನ್ನಿನವರು ಹೋದ ದಾರಿ ಭಯ ಕಾಂತಾರಕ್ಕೆ (ಐಸಪ. ೦೯೬). ೩. [ಕಾವ್ಯಮೀ] ಸ್ಥಾಯಿಭಾವಗಳಲ್ಲಿ ಒಂದು; ಭಯಾನಕ ರಸದ ಸ್ಥಾಯಿಭಾವ : "ರತಿಃ . . . ಭಯಂ, ಜುಗುಪ್ಸಾ, ವಿಸ್ಮಯಃ, ಶಮಃ–ಈ ೯ ಸ್ಥಾಯಿಭಾವಂಗಳ್" (ಹಲಾಯು. ೦೬-೯೦); ರತಿಪರಿಹಾಸಂ . . . ವಿಸ್ಮಯಾಶಯತ್ವಂ ಪ್ರತಿನಿಯತ ಸ್ಥಾಯಿಭಾವಮಿವು ತಾಮಕ್ಕುಂ (ಕಾವ್ಯಾವ. ೬೯೯); ರತಿ ಹಾಸ . . . ಭಯ . . . ಶೃಂಗಾರಾದಿ ನವರಸಂಗಳಿಗೆ ಬೀಜಭೂತಂಗಳಾದ ಸ್ಥಾಯಿಭಾವಂಗಳು: (ವಿವೇಕ. ೨೨೬) ; ಈ ಸ್ಥಾಯಿಭಾವಗಳು ಎಂಟು (ಅಥವಾ ಒಂಭತ್ತು) ಅವು ಯಾವುವೆಂದರೆ:– ರತಿ . . . ಭಯ, ಜುಗುಪ್ಸೆ (ಅಸಹ್ಯತೆ), ವಿಸ್ಮಯ (ಆಶ್ಚರ್ಯ), ಶಮ (ಶಾಂತಿ) (ಕೈಪಿಡಿ. ೦೯೬). ೪. [ನಾಟ್ಯ] ಮೂವತ್ತಾರು ದೃಷ್ಟಿಭೇದಗಳಲ್ಲಿ ಒಂದು; ಭಯಾನಕರಸಕ್ಕೆ ಸ್ಥಾಯಿಭಾವವಾದ ಅಂಜಿಕೆಯನ್ನು ಅಭಿನಯಿಸುವ ದೃಷ್ಟಿ : ಅಜಿಗಡಿಗೆಯುರ್ವ ಮುಗುಳ್ವ ಸಡಗರದಿಂ ಭೀತಿಸುತ್ತೆ ಚಲನಂಬೆತ್ತುಂ ಬಿಡದಾಲಿ ಬೀಳ್ವ ತೆಜದಿಂ ಗಡಣಿಸಿದೊಡೆ ಭಯಮೆನಿಪ್ಪ ನೋಟವುದಕ್ಕುಂ (ಲಾಸ್ಯರಂ. ೩-೨೩).

**ಭಯ ಭಕ್ತಿ**=೧. ಹೆದರಿಕೆ ಮತ್ತು ಶ್ರದ್ಧೆ : ಅವಳು ಸೋಮವಾರ ವ್ರತವನ್ನು ಭಯ ಭಕ್ತಿಗಳಿಂದ ಆಚರಿಸುತ್ತಿದ್ದಾಳೆ (ರೂಢಿ). ೨. ಹೆದರಿಕೆಯಿಂದ ಕೂಡಿದ ಶ್ರದ್ಧೆ : ಭಯಭಕ್ತಿಯಿಂದ ತೋಱುವೆ ಮನದಲ್ಲಿ ವಂಚನೆಯಿಲ್ಲದೆ ಭಾವಶುದ್ಧಪೂಜೆಯ ಮಾಡುವೆ (ಐಸಪ. ೬೬೯) ; ಅಂಭೋಜಾಯತಾಕ್ಷನ ಖ್ಯಾತಿಯನು ಗಾಂಗೇಯ ಭಯಭಕ್ತಿಯಲಿ ಗೆಲಿದನು ವರಸುದರ್ಶನವ (ಕುಮಾವ್ಯಾಭೀ. ೬ ಸೂಚನ). [ಸಂ.]

**ಭಯಂಕರ** (ಗು). ೧. ಭಯವನ್ನುಂಟು ಮಾಡುವ ; ಉಗ್ರವಾದ ; ಘೋರವಾದ : ಕುಮುದವನಾಭಿರಾಮೆ ಪರಚಕ್ರಭಯಂಕರಶೀಲೆ ವಾಹಿನೀರಮಣಸಮೃದ್ಧಿಸಲ್ಲಲಿತೆ ರಾಜ್ಯರಮಾವಧು ಪಂದು ಲೀಲೆಯಿಂ (ಕುಸ್ವಕ. ೯-೮೬); ಭೀಕರ ಕಾಡು, ಭಯಂಕರ ಗರ್ಜನೆ (ಕುರ್ತ್ರಮ. ೨೦-೦೯). ೨. ಅತಿಶಯವಾದ ; ಮೇಲುಮಟ್ಟದ ; ಹೆಚ್ಚಾದ : ಭಯಂಕರ ಭ್ರಮೆಗೊಂಡಿತ್ತು ಮಂತ್ರತಂತ್ರ (ಐಸಪ. ೮೦); ಭಯಂಕರ ಸಂತೋಷವೊಂದು ಅವರ ಮನಸ್ಸಿನಲ್ಲಿ ನರ್ತಿಸುತ್ತಿತ್ತು (ಮಾಹಾಪಾ. ೦೬). (ನಾ). ೩. ಭಯವನ್ನುಂಟುಮಾಡುವಂತಹುದು ; ಹೆದರಿಕೆಯನ್ನುಂಟುಮಾಡುವಂತಹುದು : ಬವರದೊಳು ಹರಿಪಾಂಚಜನ್ಯದ ರವ ಭಯಂಕರವಾಯ್ತು (ಕುಮಾವ್ಯಾದ್ರೋ. ೦೦-೦) ; ಒಂದು ಸ್ಟೇಷನ್ನಿನಲ್ಲಿ ಪೋಸ್ಟ್‌ಮಾಸ್ಟರು ಅದೇ ರಸ್ತೆಯಲ್ಲಿ ಆಗತಾನೇ ನಡೆದಿದ್ದ ಭಯಂಕರವಾದ ಕೊಲೆ ಒಂದನ್ನು ಕುರಿತು ಹೇಳಿದನು (ಮಲೆನಾ. ೦೬); ಹುಲಿಯ. . . ಹಳದಿವರ್ಣದ ದೊಡ್ಡದೊಡ್ಡ ಕಣ್ಣುಗಳೂ ಮೊನೆಯಾದ ಕೋರೆಹಲ್ಲುಗಳೂ ಭಯಂಕರವಾಗಿ ತೋರುವುವು (ಮುಂಬೆಳ. ೯-೩೩). ೪. ಬಹಳ ಸಮರ್ಥನಾದವನು ; ಸಾಹಸಿ : ಶರ್ಮ ಕಡಿಮೆ ಆಸಾಮಿ ಅಂತ ತಿಳಿದೀರೇನು ನೀವು ? ಭಯಂಕರ ಅದಾರ್ರೀ ಅವರು. ಭಯಂಕರ ಅದಾರ (ರೂಪಕ. ೮೬). ೫. = ಭಯಂಕಾರಿ : "ವೀರಂ ಭಯಂಕರಂ [ಪಾಠಾಂ. ಕಾರಿ] ದಕ್ಷಾರಿ ಶರಭನೆನೆ ವೀರಭದ್ರನೆನಿಕ್ಕು" (ಮಂಗರಾ. ೩-೦೩). [ಸಂ.]

**ಭಯಂಕಾರಿ** (ನಾ). (ದಕ್ಷನಿಗೆ) ಭಯವನ್ನುಂಟು ಮಾಡಿದವನು ; ವೀರಭದ್ರ : "ವೀರಂ ಭಯಂಕಾರಿ [ಪಾಠಾಂ. ಕರಂ] ದಕ್ಷಾರಿ ಶರಭನೆನೆ ವೀರಭದ್ರನೆನಿಕ್ಕು" (ಮಂಗರಾ. ೩-೦೩). [ಸಂ. ಭಯಂಕಾರಿನ್]

**ಭಯಂಕೃತಿ** (ನಾ). ಭಯ : ಅಂಜಿಕೆ : 'ಭಯಂಕೃತಿಗೆಯ್' ಪರಾ. [ಸಂ.]

**ಭಯಂಕೃತಿಗೆಯ್** (ಕ್ರಿ). ದಿಗಿಲನ್ನುಂಟು ಮಾಡು ; ಹೆದರಿಸು : ಶರನಿಕರ ಮಹಾಭೀಂಕೃತಿ ನೋಳ್ಪಮರರ್ಗೆ ಭಯಂಕೃತಿಗೆಯ್ದುದು (ರಾಜಶೇ. ೬-೯೬). [ಭಯಂಕೃತಿ + ಕೆಯ್$_1$]

**ಭಯಂಗೊಳ್**, ಭಯಗೊಳ್ (ಕ್ರಿ). ಅಂಜು ; ಹೆದರು : ಪೊಗಿಂ ಕಡಂಗಿ ಬೀರದೊಳೆ ಬೀಗುವ ನಿನ್ನಣುಗಾಳೆ ನೋಡೆ ನಿನ್ನಂಗನೆಯರ್ ತೊವಲ್ವೊಳೆ ಭಯಂಗೊಳೆ ಕೋಡಗಗಟ್ಟುಗಟ್ಟೆ ಚಿತ್ರಾಂಗದನುಯ್ಯೆ (ಶಂಕರಾ. ೯-೩೯); ಸರ್ಪನಂ ಮೆಟ್ಟಿದರಂತೆ ಭಯಂಗೊಂಡು (ರಮಾರ್ಣ. ೦-೦೬೮); ಗಜಱಿನಲಿ ಗಿರಿ ಬಿರಿಯೆ ದಿವಿಜವ್ರಜ ಭಯಂಗೊಳೆ (ಕುಮಾವ್ಯಾದ್ರೋ. ೦೩-೦೩). ಭಯಗೊಳ್ : ಪಾಣ್ಡ್ಯಂ ಭಯಗೊಣ್ಡನತ್ತ ಸಮುದ್ರಂ ಬುಗಿಲೆಂದು ತಲ್ಲಳಿಸಿದಂ ಚೋಳಂ ಭಯಭ್ರಾನ್ತಿಯಿಂ (ಶಾಸನ. XX. ೯೯-೦೮; 1076 ?); ಬಲವಲ್ಲಳಿ ಭಯಗೊಳೆ ದ್ರೋಣ ಹೊಕ್ಕನು ರಾಯ ಮೋಹರವ (ಕುಮಾವ್ಯಾದ್ರೋ. ೨-೩೯) ; ಸಂತೈಸಿದರು ಭಯಗೊಂಡಿಹ ನೃಪಾಲಕನ (ಪಶು. ೩-೪೬). [ಭಯ + ಕೊಳ್$_1$]

**ಭಯಂಗೊಳಿಸು**, ಭಯಗೊಳಿಸು (ಕ್ರಿ). ಹೆದರಿಕೆಯನ್ನುಂಟು ಮಾಡು; ಭಯಪಡಿಸು : ತೊಳಗುವ ದಿವ್ಯಾಸ್ತ್ರಮುಮರ್ದ ಕೋದಂಡಮುಮಂ ಗೊಳಿಸೆ ಮನಂಗೊಳಿಸೆ ಭಯಂಗೊಳಿಸೆ ಸಭಾಸದರನುಱದೆ ಕರ್ಣಂ ಬಂದಂ (ಶಂಕರಾ. ೨-೬೮) ; ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದುತ್ಕಕೀರಮದಕೋಕಿಲಗರ್ಜಿತತರ್ಜಿತಂಗಳಿಂ (ಅಪು. ೬-೨೩). ಭಯಗೊಳಿಸು : ಮಱೆತ ಧೃಷ್ಟದ್ಯುಮ್ನನನು ಭಯಗೊಳಿಸಿ ಸೋಮಕ ಸೃಂಜಯಾತನಪ್ಪಳಿಸಿದನು (ಕುಮಾವ್ಯಾಶ. ೩-೫೬). [ಭಯಂಗೊಳ್ + – ಇಸು$_1$]

**ಭಯಂದೋಱು** (ಕ್ರಿ). ಭಯವನ್ನುಂಟುಮಾಡು ; ಹೆದರಿಸು ; ಅಂಜಿಸು: ಪೆಱೆಯಂತೆ ವಕ್ರನಾಗದೆ ಸಿಡಿಲಂತೆ ಭಯಂದೋಱದೆ[ಶಾಣಂ· ಮೇದನಂತೆ ಸೀಳೆತ್ತದೆ] (ಧರ್ಮಾಮೃ. ೧-೦೯೪). [ಭಯ + ತೋಱು]

**ಭಯಂಬಡು**, ಭಯಪಡು (ಕ್ರಿ). = ಭಯಂಗೊಳ್ : ಈ ಸಂಜೀವಕ ನೆಂಬೆತ್ತು ಕಲೆದೊಡಾ ಧ್ವನಿಗೊಂದಂ ಭಾವಿಸದೆ ನೀಂ ಭಯಂಬಟ್ಟೀ ವನಮಂ ಬಿಟ್ಟು ಪೋಪೆನೆಂಬುದುಂ (ಪಂತಂ. ೯೨-೬); ಮೃಡಮಾಱ್ಪ ಮರರುಂ ಭಯಂಬಡುವಿನಂ . . . ಆರಭಟೆಯಿಂದಿರ್ದಂ ನಿಕುಂಭಾಸುರಂ (ಜಗಂ. ೦೫-೩೨). **ಭಯಪಡು** : ಬಲವಿದ್ದದ್ದು ಲಯವಾದ ಮೇಲೆ ಭಯ ಪಡುವುದೇ ಸರಿ (ಗಾದೆ). [ಭಯ + ಪಡು$_1$]

**ಭಯಂಬಡೆ** (ಕ್ರಿ). = ಭಯಂಗೊಳ್ : ಕಡೆಗಣ್ಣ ಕುಡಿವೆಳಗೆಂಬ ಬಳ್ಳಿ ಮಿಂಚಿಂಗೆ ಭಯಂಬಡೆದು ಪೆಡಂಮೆಟ್ಟುವ ರಾಜಹಂಸಸಮಾಜಮನೋ ಜೆಯಿಂ ಕರೆದು (ರಾಜಶೇ. ೫-೦೯ ವ). [ಭಯ + ಪಡೆ$_1$]

**ಭಯಂಬೆರಸು$_1$** (ಕ್ರಿ). ಭಯದಿಂದ ಕೂಡಿರು ; ಹೆದರು : ಲಲಿತಾಂಗಿಯ ಶಂಕೆಯುಂ ಭಯಂ ಬೆರಸಿದ ನಾಣುಮಂ ಕ್ರಮದೆ ಪಿಂಗಿಸು ಬೇಸಱದಿರ್ ಗುಣಾರ್ಣವಾ (ಪಂಪಭಾ. ೩-೭೭).

[ಭಯ + ಬೆರಸು$_1$ (< ಬೆರೆಯಿಸು) ]

**ಭಯಂಬೆರಸು$_2$** (ಅ). ಹೆದರಿಕೆಯಿಂದ ಕೂಡಿ : ಮೊದಲೊಳೆ ಕೆತ್ತಿದತ್ತು ಬಲಗಣ್ಣೆನಗೇನನೊಡರ್ಚಲಿರ್ದುದೋ ಬಿದಿಯೆನುತುಂ ಭಯಂಬೆರಸು ಮುನ್ನಮೆ ಶಂಕಿಸುತಿರ್ದಂ (ಕಾದಂಪೂ. ೯೯೯). [ಭಯ + ಬೆರಸು$_3$]

**ಭಯಂಗೊಳ್** ' ಭಯಂಗೊಳ್ ' ನೋ.

**ಭಯಂಗೊಳಿಸು** ' ಭಯಂಗೊಳಿಸು ' ನೋ.

**ಭಯಗ್ರಸ್ತ** (ನಾ). ಹೆದರಿದವನು ; ಭೀತ : ಚೆಟ್ಟಿಯಾರರು ಭಯ ಗ್ರಸ್ತರಾಗಿ ಕುಕ್ಕರಿಸಿ ಬಿಟ್ಟರು (ಪಟಿಶಾ. ೭೪೫).

**ಭಯಗ್ರಹಣಿ** (ನಾ). ಒಂದು ಬಗೆಯ ರೋಗ : ಪೊಂಗೆತೊಕ್ಕು, ತಪಸಿ ತೊಕ್ಕು . . . ಸೇವಿಸಲು ವಾತಗ್ರಹಣಿ, ಪಿತ್ತಗ್ರಹಣಿ, ಶ್ಲೇಷ್ಮಗ್ರಹಣಿ, ಭಯಗ್ರಹಣಿ, ಶೋಕಗ್ರಹಣಿ . . . ಮುಂತಾದ ಸಕಲರೋಗಗಳೂ ಗುಣಮಕ್ಕುಂ (ಸಕವೈ. ೩೯೦). [ ಸಂ. ]

**ಭಯಚಕಿತ** (ಗು). ೧. ಹೆದರಿಕೆಯಿಂದ ಚಕಿತಗೊಂಡ,–ಬೆರಗಾದ : ಮಾಸ್ಕೋವಾ ಸರ್ಕಾರಿವಕೀಲನ ಕಡೆಗೆ ಭಯಚಕಿತನೇತ್ರೆಯಾಗಿ ಎವೆಯಿಕ್ಕದೆ ನೋಡಿದಳು (ಕುಪರು. ೯೯). (ನಾ). ೨. ಹೆದರಿದವನು ; ಗಾಬರಿ ಗೊಂಡವನು : ಶ್ರೀಪತಿದಣ್ಣಾಧಿನಾಥನೆಸೆದಂ ಧರೆಯೊಳ್ . . . ಬಂದು ಮಾರ್ಕೊಳ್ಗರಿಭೂಪಬೃಂದ[ಪ್ರಬಿಜ್ಜಡೆ]ಗಭಯಚಕಿತಕ್ಕಾಟಿಗ ಬೆನ್ನಟ್ಟಿ ಕೊಲ್ಲುಗಂ ಕಾದೀಗಂ (ಕೌಇಇ. XX, ೭೯-೭; 1112). [ಸಂ.]

**ಭಯಜ್ವರ** (ನಾ). ಬಹಳ ಹೆಚ್ಚಾದ ಹೆದರಿಕೆಯಿಂದ ಬರುವ ಜ್ವರ : ಆಹವದೊಳರಾತಿಸೇನೆಗೆ ಭಯಜ್ವರಮೊಮ್ಮೆಯೆ ಪುಟ್ಟೆ ತೋರ್ಪ್ಪಂ (ಕೌಇಇ. XX, ೯೭-೩೨; ೪); ಹಿಂದಿನ ದಿನ ತಾನು ಮಾಡಿದ್ದೆಲ್ಲವನ್ನು ನೆನಸಿ ಕೊಂಡಾಗ, ಅವನು ಭಯಜ್ವರಪೀಡಿತನಾದನು (ಕುಪರು. ೨೨೨ ). [ಸಂ.]

**ಭಯಪಡಿಸು** (ಕ್ರಿ). ಹೆದರಿಸು ; ಗಾಬರಿಗೊಳಿಸು : ಸುಮ್ಮನೆ ಭಯ ಪಡಿಸಿದರೆ ಕೆಲಸವಾಗುವುದಿಲ್ಲ (ಕೂಂ).

[ಭಯಪಡು (<ಭಯಂಬಡು) +—ಇಸು$_3$]

**ಭಯಪಡು** 'ಭಯಂಬಡು' ನೋ.

**ಭಯರಸ** (ನಾ). ೧. ಹೆದರಿಕೆ ; ಭೀತಿ : ಅಂತು ಬಿಱುತು ಬೆಳ್ಳೊಟ್ಟ ವೋಡುವರನಿಘೋಷನ ಭಯರಸಮುಂ ಕರುತ್ತು ನಟ್ಟು ಬೆನ್ನಟ್ಟುವ ಗಗನ ಚರೇಂದ್ರನ ರೌದ್ರರಸಮುಂ . . . ಮಾಣ್ಬುದುಂ (ಶಾಂತಿಪು. ೬-೪೦ ವ): ಪಾರ್ವತೀದೇವಿಗೆ ಕೌತುಕರಸದೊಳಾನಂದಂ ಪುಟ್ಟೆ ಭಯರಸದೊಳ್ ಭಕ್ತಿಯುಣ್ಮೆ (ಗಿರಿ. ೫-೪೨ ವ). ೨. [ಕಾವ್ಯಮಿ] ನವರಸಗಳಲ್ಲಿ ಒಂದು ; ಭಯಾನಕ ರಸ : ಒಮ್ಮೆ ಇಮ್ಮೆ ಕೂಡಿ ಒಲ್ಮೆಯಿಂ ಸೊಗಸು ಪುಟ್ಟುವದರಿಂ ಭಯರಸಮಪ್ಪುದು. ಅದರಿಂ ಭೀತಿಭಾವಮಪ್ಪುದು (ಕಾವ್ಯಸಾ. ೨೩೨). [ಸಂ.]

**ಭಯರಸಕ** (ನಾ). = ಭಯರಸ ೧ : ಕಸವರದ ಸವಿಯುಮಂ ಭಯರಸಕದ ಸವಿಯುಮನದೆಂತುಮಾನಱಿಯೆನುದಂ ಮಸುಮತಿಯಱಿವುದು (ಪಂಪಭಾ. ೦೨-೦೬೦). [ಸಂ.]

**ಭಯವಿಹೀನ** (ನಾ). ಹೆದರಿಕೆಯಿಲ್ಲದುದು ; ಭಯವಿಲ್ಲದುದು ; ನಿರ್ಭಯ : ಕೌರವರೊಳಗೆ ಹಗೆಯಾಗಿಹನು ಕೀಚಕ ಬಲ ವಿರಾಟನಿಗವನ ದೆಸೆಯಿಂ ಭಯವಿಹೀನವದು (ಕುಮ್ಮಾವಿ. ೧-೪). [ಸಂ.]

**ಭಯವಿಹ್ವಲ**, ಭಯವಿಹ್ವಳ (ಗು). ಹೆದರಿದ ; ಗಾಬರಿಗೊಂಡ : ಲಯಾಂತಕಘೋಷಭೀಷಣಂ ಪುರದೊಳಗುಣ್ಮಿದತ್ತು ಭಯವಿಹ್ವಲಪೌರ ಕೃತಂ ಮಹಾರುತಂ (ಚಂದ್ರಪ್ರ. ೯-೬೪). **ಭಯವಿಹ್ವಳ** : ಭಯವಿಹ್ವಳ ಸಿಂಹಳನಾ ಕೊಳುಗುಳದಿಳೆಯಂ ಬೆಂಗೊಟ್ಟು ಜಗುಳ್ದನತಿಜವದಿಂದಂ (ರಾಜಶೇ. ೬-೦೦೦). [ಸಂ.]

**ಭಯವಿಹ್ವಳ** 'ಭಯವಿಹ್ವಲ' ನೋ.

**ಭಯವೊಂದು** (ಕ್ರಿ). = ಭಯಂಗೊಳ್: ಶ್ರಾವಕರು ಭಯವೊಂದಿ ದುಭಯಮವನೀವುದೆನುತಡಿಗಡಿಗೆ ಹೊಡಪಡಲು (ಧಸಪು. ೫೦-೭೩).

[ ಭಯ + ಪೊಂದು$_1$ ]

**ಭಯಸ್ಥ** (ನಾ). ಭೀರು; ಭಯಪ್ರಕೃತಿಯವನು: "ಭೀರು ಕರಂ ಕಾತರಂ ಭಯಸ್ಥಂ ತ್ರಸ್ತಂ" (ವಸ್ತುಕೋ. ೦೦೦-೦೨); ಆ ಹುಡುಗ ಬಹಳ ಭಯಸ್ಥ (ರೂಢಿ). [ಸಂ.]

**ಭಯಸ್ಥೆ** (ನಾ). ಭಯಗೊಂಡವಳು ; ಹೆದರಿದವಳು : ಆ ದುರ್ನಯಕ್ಕೆ ಸೀತೆ ಭಯಸ್ಥೆಯಾಗಿ ಗೃಹಮಹತ್ತರನಂ ಕರೆದಾರೇನಂ ಬೇಡಿದೊಡಮರ್ಗದಂ ಕುಡುವುದೆಂದು ಪೇೞ್ದು (ಪಂಪರಾ. ೦೫-೭೫ ವ). [ಸಂ. ಭಯಸ್ಥಾ]

**ಭಯಾಕುಳ** (ಗು). ಹೆದರಿಕೆಯಿಂದ ಕೂಡಿದ ; ಅಂಜಿದ : ಇನ್ನದಱ ಮೇಲೆ ಭಯಾಕುಳಲೋಲನೇತ್ರ ನೀಲಾಂಬುಜಲಕ್ಷ್ಮಿಯಂ ಕಿದಱೆ ಮಾಣವು ಕಾಣಗೆ ಮಾಯ್ದು ತುಂಬಿಗಳ್ (ಶಾಂತಿಪು. ೯-೬೭). [ಸಂ. ಭಯಾಕುಲ]

**ಭಯಾನಕ** (ಗು). ೧. ಭಯವನ್ನುಂಟುಮಾಡುವ ; ಭಯಂಕರವಾದ : ವಿಷ್ಟೋ ಜನ ಶ್ರದ್ಧಾವಂತರು . . . ಜೀವನದ ಅತಿದುರ್ಭರಕಷ್ಟಗಳನ್ನೂ ಭಯಾನಕ ಹಿಂಸೆಗಳನ್ನೂ ಅನುಭವಿಸಿದ್ದಾರೆ (ವೀರಯೋ. ೦೭). (ನಾ). ೨. ಭಯವನ್ನುಂಟುಮಾಡುವುದು ; ಭಯಂಕರವಾದುದು ; ಘೋರ : ಅಂತೆ ಮೇಣ್ ಇರುಳೊಳುಂ ಘೋರಾಂಧಮಧ್ಯಮುಂ ಪೀರ್ದು ಮಾರ್ಗಕ್ಕೆ ಸಂದ ಮೌನವಾತಿಸಿಷ್ಟರಂ, ಕಠಿನಂ, ಭಯಾನಕಂ (ಶ್ರೀರಾಮಾ. ೯೯-೨೯೫); ಈ ಎರಡನೆಯ ವಿಚಾರವು ರಾಘಪ್ಪನಿಗೆ ಭಯಾನಕವಾಗಿ ತೋರುತ್ತಿತ್ತು (ಗಂಮಾಆ. ೨೦೫). ೩. ಒಂದು ನರಕದ ಹೆಸರು : ದಹನ . . . ಮಹಾಸಂವರ್ತಕವೆಂಬೈದು ಮಂತ್ರಿನರಕಂಗಳೊಡಗೂಡಿ ಭಯಾನಕವೆಂಬರಸುನರಕವಿಹುದು (ವಿವೇಕ. ೧೬೦). ೪. [ಕಾವ್ಯಮಿ] ನವರಸಗಳಲ್ಲಿ ಒಂದು; ಭಯವೆಂಬ ಸ್ಥಾಯಿಭಾವದಿಂದ ಉಂಟಾ ಗುವ ರಸ : "ಶೃಂಗಾರಃ . . . ಭಯಾನಕಃ, ಬೀಭತ್ಸಃ, ಅದ್ಭುತಃ, ಶಾಂತಃ — ಈ ೯ ರಸಂಗಳ್" (ಹಲಾಯು. ೦೭-೯೨) ; ಸತತಂ ಭಯಾನ ಕೋದ್ಯತ್ಪ್ರರಸಂ ಕರಂ ವಿಷಮಬಂಧನದಿಂ . . . ಊರ್ಜಿತೋಕ್ತಿಗಳಿನಕ್ಕರಿ ರೌದ್ರರಸಂ ರಸಾವಹಂ (ಕವಿರಾ. ೨-೦೦೦) ; ನಿಗ್ರಹಶಂಕಾಭರಾತಂಕಿತ ಹೃದಯರಾದ ಅಂಗ ವಂಗಕಳಿಂಗ . . . ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆಯಿರೆ (ಜಗಂ. ೨-೩೯ ವ) ; ಹಱಿದ ಹೊಟ್ಟೆಯ ಪೊಡೆಮರಳಿದಾಲಿಗಳ ತೋಳಿನ ಕಡಿಕುಗಳ ರಣಮುಹಿ ಭಯಾನಕರಸಕೆ ಗುಱಿಯಾಯಿತ್ತು (ಕುಮ್ಮಾಭೀ. ೬-೦೬). [ಸಂ.]

**ಭಯಾರ್ತಿ** (ನಾ). ಹೆದರಿಕೆಯಿಂದ ಉಂಟಾದ ಕಷ್ಟ.—ನೋವು: 'ಭಯಾರ್ತಿಗೊಳ್' ಪರಾ. [ಸಂ.]

**ಭಯಾರ್ತಿಗೊಳ್** (ಕ್ರಿ). ಹೆದರು; ಅಂಜು : ಮಂಜಿನ ಪುಂಜವೊತ್ತರಿಸಿ ಮುತ್ತಿ ಮುಸುಂಕೆ ಭಯಾರ್ತಿಗೊಳ್ವನೇ ಕಂಜಸಖಂ (ಕಬಕಂ. ೪-೪೪). [ಭಯಾರ್ತಿ + ಕೊಳ್$_1$]

**ಭಯಾವಹ** (ನಾ). ಭಯಂಕರವಾದುದು ; ಘೋರವಾದುದು : "ಘೋರಂ, ಪ್ರತಿಭಯಂ, ಭೀಮಂ, ದಾರುಣಂ, ಭಯಾ(ನಕಂ)ವಹಂ . . . ಭಯಾ(ವಹಂ)ನಕಂ – ಈ ೧೧ ಭಯಂಕರಂ" (ಕನಾಡು. ೦೦೬-೨೦). [ಸಂ.]

**ಭಯಿಮೊಗ** 'ಭೈಮೊಗು' ನೋ.

**ಭಯೋತ್ಕಟ** (ನಾ). ೧. ಭೀತಿಯ ಆಧಿಕ್ಯ.—ಅತಿಶಯ. ೨. ಒಂದು ನರಕದ ಹೆಸರು : ನಿರುಚ್ಛ್ವಾಸ ಸುದೀರ್ಘ ಕೂಟಶಾಲ್ಮಲಿ ಅಲಿಪ್ತ ಸುಮಹನವೆಂಬ್ಯೆದು ಮಂತ್ರಿಸರಕಂಗಳೊಡನೆ ಭಯೋತ್ಕಟವೆಂಬರುಸರಕ ವಿಹುಮ (ಶಿವೇಕ. ೦೪೦). [ಸಂ.]

**ಭಯ್ಯಾ** (ನಾ). ೧. ಒಡಹುಟ್ಟಿದವನು ; ಸಹೋದರ. ೨. ಆಳು : ಸೇವಕ : ಅವರು ಸಾವಕಾಶ ಮೆಲಕಾಡಿಸುತ್ತಿರುವಂತೆ ನೀರಿನ ಭಯ್ಯಾ ಬಂದು ಎರಡು ಗ್ಲಾಸುಗಳನ್ನು ಅವರೆದುರಿಗೆ ಇಟ್ಟು (ಎತಪ. ೨೪). ೩. ಚಿಕ್ಕವರು ಮತ್ತು ಸರೀಕರನ್ನು ಕರೆಯುವ ಒಂದು ಶಬ್ದ. [← ಹಿಂ. ಭಯ್ಯಾ, ಭೈಯಾ ; ಮರಾ. ಭಯ್ಯಾ]

**ಭರ್** (ನಾ). ವೇಗವನ್ನು ಸೂಚಿಸುವ ಒಂದು ಅನುಕರಣ ಶಬ್ದ : ಗಾಳಿ ಭರ್ ಎಂದು ಬೀಸುತ್ತಿದೆ (ಲೂ).

**ಭರ** (ಗು). ೧. ಹೊರುವ ; ನಿರ್ವಹಿಸುವ. ೨. ಪೋಷಿಸುವ : ಆಶ್ರಯವನ್ನು ಕೊಡುವ ; ಬೆಂಬಲವನ್ನು ನೀಡುವ. (ನಾ). ೩. ತೆಗೆದುಕೊಳ್ಳುವುದು ; ಹೊತ್ತುಕೊಳ್ಳುವುದು. ೪. ಕಳ್ಳತನ ; ಕಳವು ; ಅಪಹರಣ. ೫. ಹೊರೆ ; ಭಾರ; ತೂಕ : ಅಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು ಪುಣ್ಯಪಾಪದಿಯು ಬಯಸಿದರೆ ಭವಪಾಲೆಯ ಭರವು ತಪ್ಪದು (ಬಸವ. ೦೨೬). ೬. ಹೊಣೆ ; ಜವಾಬ್ದಾರಿ : ನಗರೇಶ್ವರದೀ ಮಠವೊಪ್ಪಿ ತೋಜುಗುಂ ಸರಲೋಕದೊಳಂನಿಲ್ಲಿಯ ಭರವಂ ತಾಳ್ದಿಂತು ಪೆಜಗೆ ಗುರುಸಾಳಶಿಲಕಂ ಪರಮಗುರು ಬೆಸನೆ (ಕ್ಶಾಶ. XI–i, ೬೭ ೩೬ ; 1062) ; ಸೇನೆಯು ಸುತ್ತುವಳಿಯದ ಭರವ ಕೈಕೊಂಡೊಡ್ಡ ಮೆಚಿದನು ಗರುಡಿಯಾಚಾರ್ಯ (ಕುಮ್ಮಾದ್ರೋ. ೪-೦೬); ಧರಿಸು ಲೋಕದ ಭರವ ಪರಮಾರ್ಥವನು ಬಿಡದೆ ಹೊರಡು ಕರೆ ಬರಲ್ ಆಳದೆ (ಶುಂಕಶ. ೬೦೦). ೭. ಹೆಚ್ಚಳ ; ಅತಿಶಯ ; ಆಧಿಕ್ಯ : "ಅತಿಶಯಃ, ಭರಃ . . . ದೃಢಃ — ೧೪ ಅತಿಶಯದ ಹೆಸರುಗಳು" (ಸಿಜ್ಞಂಕ. ೨೩) ; ಸಿರಿಯ ಭರವುಳ್ಳಾಗ ಮಜಿಯದಿರುವವ ಜಾಣ ಕೊಡುತೆಯಾದಾಗ ಕೊಡಲು ತನಗಿಲ್ಲೆಂದು ಮಜಗುವವನೆಗ್ಗ (ಸರ್ವಜ್ಞ. ೬೯೬) ; ಕಡುಸುಗ್ಗಿಯ ಭರಕೆ ಕೈಮಂದು ಕೊನೆವೆರ್ಚಿದ ಮಾಮರನಂತೆ . . . ಶುಭರಂ . . . ಸೊಗಯಿಸಿದನಪ್ಪುದುಂ (ರಾಜಶ್ಶ. ೧೦೬-೬). ೮. ಆಸಕ್ತಿ ; ತತ್ಪರತೆ : ನೀರ ಬೊಮ್ಮಳಿಕೆಗೆ ಕಬ್ಬಿನ ಕಟ್ಟಿ ಕೊಟ್ಟು ಸುರಕ್ಷಿತವ ಮಾಡುವ ಭರವ ನೋಡಾ (ಬಸವ. ೦೬೨) ; ಎರಡು ಬಲವನು ಮಸೆದು ಕೊಲಿಸುವ ಭರವೆಯಾದವನದು (ಕುಮ್ಮಾಣ. ೬-೪೦) ; ೯. ಉದ್ರೇಕ ; ಆವೇಶ ; ಆವೇಗ : ತಲೆಹರವ ನಾ ಕಾಣೆನೋ ಮೋಹರಕೆ ಗತಿಯೇನೆನುತ ಭರದಲಿ ಕಜಿದು ತೋಜಿದನಾ ಕೃಪಾಚಾರ್ಯಂಗೆ ಕಲಿ ದ್ರೋಣ (ಕುಮ್ಮಾದ್ರೋ. ೫-೩೫) ; ಸಿಟ್ಟಿನ ಭರದಲ್ಲಿ ಏನೇನನ್ನೋ ಮಾತಾಡಿದ್ದರು (ಅಕ್ಷಪ. ೬೭). ೧೦. ರಭಸ ; ಚುರುಕು ; ವೇಗ : ಭರದಿಂದಂ ತುಳುಂಕಿದ ನೀರುರದೊಳ್ ತಾರಾಂಶುರುಚಿಯನಿರ್ಚಿಗೊಳೆ (ಅಪು. ೦೪-೦೦೬) : ತಿರುನೀಲಕಂಠಾ ಎಂದ ಸರವನೊಳಗಿರ್ದ ನಾಯಕಿ ಕೇಳಿ ಭರದಿಂದ ಎದ್ದು (ತಿರುಶ. ಪೀ. ೬-೦೪) ; ರಾಜಂ ಚಿತ್ರಾಂಬರಯುಕ್ತನಾಗಿ ಬಂದಂ ಭರದಿಂ (ಶಬ್ದಾರ್ಥ. ೩-೦೭) : ಭರದಿಂದ ಹೋಗುವವನ ಸಂಗಡ ಹೊರೆ ಹೊತ್ತೀಯಾ ಅಂದ (ಗಾದೆ). ೧೧. ಭರಾಟೆ ; ಪರಿಕೆ : ೩ ರಿಂದ ೫ನೇ ವರ್ಷದ ವರೆಗೆ ಬಳ್ಳಿಯ ಭರವು ಇರುತ್ತದೆ ; ಆರನೆ ವರ್ಷ ಆ ಭರ ಕುಂದುವುದು (ಕಂಬಾಯ. ೫-೨೦೬). ೧೨. ನೆರೆ ; ಭರ್ತಿ : ಸಿರಿ ಬಂದ ಕಾಲದೊಳಾಗದು ಉಬ್ಬುವುದ್ಯೆತಂದುದಳಿವುದು ಕೊನೆಗೆ ಭರ ಬಂದ ಕಾಲಕೆ ಬಂದಿಪುದಲ್ಲವು ಹೋಗುವುದೀತದ ಜೊತೆಗೆ (ಇಂಶಾಕ. ೨೦೬-೨೨). ೧೩. ಹಿಂದಿನ ಇಪ್ಪತ್ತು ತೊಲೆಯಷ್ಟು ತೂಕ. [ಸಂ.]

**ಭರಂಗೆಯ್**, ಭರಗೈ (ಕ್ರಿ). ೧. ತವಕಿಸು : ಅಂತೊಂದು ವರ್ಷಂಬರಂ ಭರಂಗೆಯ್ಯು ನೋಂತು (ಶಂಶಪು. ೧-೦೩೬). ೨. (ಕಾರ್ಯಭಾರವನ್ನು) ವಹಿಸಿಕೊಳ್ಳು ; ಹೊಣೆಹೊರು : ಧೃತರಾಷ್ಟ್ರಂ ನುಡಿದಾತನೇ ಹರಿ ಭರಂಗೆಯ್ದಾತನೇ ನೀಂ ಪೃಥಾಸುತರಂ ನೋಯಿಸಲಾಗದೆಂದು ನುಡಿದೇನಾ ಪಾರ್ತೆಮೇ (ಶಂಶಪು. ೦೦-೦೦). ೩. ಆರ್ಭಟಿಸು ; ಜೋರುಮಾಡು : ಎನ್ನನುಜನಾ ಪಾಂಚಾಲಿಯಂ ಪಂಚವಲ್ಲಭರುಂ ಮೋಹೆದೆಯುಮಲ್ಲಿ ಮಿಳ್ಳಿ ಳನೆನೋಡುತ್ತಿರ್ದ ಬಲ್ಲಾಳ್ಗಳಲ್ಲಿ ಭರಂಗೆಯ್ದ ಪರ್ (ನಶಾಡು. ೩-೩೬). ೪. ಧಾಳಿಮಾಡು ; ಆಕ್ರಮಿಸು ; ಮೇಲೆ ಬೀಳು : ಭೋಂಕನೆ ಸಿಂಹಧ್ವನಿಯಿಂದೆ ಗರ್ಜಿಪ ಸಭಾಸೂರ್ಯರಂಗೆಯ್ದು ದಯಾದಿತ್ಯಂಗೆ ಬಯಲ್ಗೆ ಪಪ್ಪರೊಳಲೇ ವಿಶ್ವಂಭರಾಚಕ್ರದೊಳ್ (ಎಕ. XI, ಚಕ್ರದು. ೩೪-೨೦; 1123) ; ಈ ವೀರರೊಳ್ . . . ಚಲದೆ ಮಲೆವರಿನ್ನಾರ್ ಭರಂಗೆಯ್ದಾರಿನ್ನಾರ್ . . . ಎಂಬೊಂದೆಸಕದೆಸೆಯೆ ಬಂದಂ ಜರಾಸಂಧಭೂಪಂ (ಜನು. ೬-೪೨). **ಭರಗೈ** : ೪. ತೊಳಪ ಬಿಡುಗದ ಕೊಂತ ಸಬಳ ಗದೆ ಶಕ್ತಿಗಳ ಮುಸಕದಲಿ ಭರಗೈದರ್ಕೈ (ಶಾಶ್ವತಾ. ೨೩-೦೬). [ಭರ + ಕೆಯ್$_1$]

**ಭರಂಗೊಳ್** (ಕ್ರಿ.) ಚುರುಕಾಗು : ಪೊಳೆವುಲ್ಲಂ ಮೇದು ಮಾಧ್ಯಂದಿನದ ಬಿಜುವಿಸಿಲ್ಗಾಗೆ ಬೆನ್ನಂ ಭರಂಗೊಂಡೆಳಸುತ್ತಂ . . . ಕಾಡೊಳೊಪ್ಪಂವಳಿ ದಿರ್ವತ್ತೃಭಕಾಯಂ ಪೃಥುನುಹಿಷನಿಕಾಯಂ (ರಾಜಶೇ. ೫-೬೭). [ಭರ + ಕೊಳ್$_1$]

**ಭರಂಬಡು** (ಕ್ರಿ). = ಭರಂಗೊಳ್ : ಒಂದುದಿವಸಂ ಮಧ್ಯಾಹ್ನಸಮಯ ಮಾಪ್ಪನ್ನೆಗರ ಭರಂಬಟ್ಟು ಕಿಲಸಂಗೈದು (ಶಂಶಕಂ. ೨೪-೦೪). [ಭರ + ಪಡು$_1$]

**ಭರಕತ್ತು** 'ಬರಕತ್ತು' ನೋ.

**ಭರಕಾಸ್ತು** 'ಬರಖಾಸ್ತು' ನೋ.

**ಭರಖಾಸ್ತು** 'ಬರಖಾಸ್ತು' ನೋ.

**ಭರಗಚ್ಚು** (ನಾ). ಯಥೇಚ್ಛ; ಹೇರಳ: ಪುರಿ, ಶ್ರೀವಿಂಡ . . . ಒಂದೆರಡು ಪಲ್ಯ, ಇತ್ಯಾದಿಯಿಂದ ದೊಡ್ಡ ಬಾಳೆಯೆಲೆ ಭರಗಚ್ಚಾಗಿ ತುಂಬಿದ್ದವು (ಅನ್ನ. ೨೩೬). [← ಮರಾ. ಭರಗಚ್ಚ]

**ಭರಗೆಡು** (ಕ್ರಿ). ತಡಮಾಡು ; ವಿಳಂಬಮಾಡು : ಭರಗೆಡದೆ ನೀನೊಂದು ಗುಂಡನು ಏರಿಯ ಬಳಿಗೆ ಸೇದಿ ಕೊಡು (ಶಾಶ್ವತಾ. ೦೭-೬೫). [ಭರ + ಕೆಡು$_1$]

**ಭರಗೈ** 'ಭರಂಗೆಯ್' ನೋ.

**ಭರಡಾ** 'ಬರಡಾ' ನೋ.

**ಭರಡಿ** (ನಾ). ೧. ನುಚ್ಚು ; ತರಿ. (ಗು). ೨. (ಅಲಂ) ಅಲ್ಪ ; ತುಚ್ಛ : ಹುರುಡಿಗೆ ಮಾಡುವ ಹುರುಳಿಲ್ಲದ ದಾಸ . . . ಎರಡು ಕಡೆ ಕೆಟ್ಟ ಭರಡಿ ದಾಸನು ನಾನು (ಪುರಂದರ. ೨೬-೪). [← ಮರಾ. ಭರಡೀ]

**ಭರಣ$_1$** (ನಾ). ೧. ಹೊರುವುದು ; ಧರಿಸುವುದು; ವಹಿಸುವುದು. ೨. ಪೋಷಣೆ ; ರಕ್ಷಣೆ ; ಪರಿಪಾಲನೆ : ಮುತ್ತಯ್ಯನು ನಾರಣೋಜರು ಯಿಂತೀ ಮುಂಪತ್ತಿರ್ವ್ವರ ಭರಣಾ (ಕ್ಶಾಶ. IX–i, ೨೬ ೦೦ ; ೪೮೪);

ತೋಱುತ್ತಿರ್ಪ್ಪವಾದಂ ಹರಣಭರಣಚಾತುರ್ಯಮಂ ಚಾತುರಂಗಂ (ಚಂದ್ರಪ್ರ. ೧೦-೩೦); ಮರಸನೇಱಿದರೊಳಗೆ ಪಾಂಡವರಿರಿಸಿ ಹೋದರು ಕೈದುಗಳ ಮಿಗೆ ಹರಣಭರಣಕ್ಷಮೆಗಳಲಿ ನೀನೆನಗೆ ನೀಡೆನಲು (ಕುಮಾ.ಭಾ. ೬-೩೨). ೩. ಜೀವನಕ್ಕೆ ಬೇಕಾದ ಗ್ರಾಸ; ಜೀವಿಸಲು ಬೇಕಾದ ಅನ್ನಾಹಾರ: ವಿಶಾಲಾಕ್ಷಿಯೆಂಬವಳು ಪುರುಷನಿಲ್ಲದೆ ಪ್ರಥಮ ಋತುಗಾಣೆ ಪಿತಮಾತೆ ಮಱುಗಿ ಭರಣವನಿಟ್ಟು ಕಾಳಹಸ್ತೀಶ್ವರನ ವನದಲ್ಲಿ ಬಿಟ್ಟು ಬರಲು (ಶ್ರೀಶರ. ೧೧-೨). ೪. ಸಂಬಳ; ಕೂಲಿ; ವೇತನ: "ಕರ್ಮಣ್ಯಾ . . . ಭರಣಂ, ಮೂಲ್ಯಂ, ನಿರ್ವೇಶಃ, ಪಣಃ – ೧೧ ಕೂಲಿಯ ಪೆಸರುಗಳು" (ನಾಮಲಿ. ೩೧೭). ೫. (ತೆರಪಾದ ಸ್ಥಳವನ್ನು) ತುಂಬುವುದು; ಭರ್ತಿಮಾಡುವುದು. ೬. ತುಂಬುವ ವಸ್ತು,– ಪದಾರ್ಥ. ೭. ಭೂಮಿಯ ಒಂದು ಅಳತೆ (?): ತೋಟದ ಸ್ಥಳದಲ್ಲು ಭರಣ ೬೦ಕೆ ಹಕಿದ ಅಡಕೆಮರ ೧೪೫೦೦ಕೆ ಗ ೨೫೩ (ಪ್ರಮಕ. ೧೯೩೬. ೬೬-೧೯; 1679).

**ಭರಣದ ಕೋಲ್** = ಒಂದು ಅಳತೆಯ ಕೋಲು (?): ಗೋವಣ ಪೊಲದೊಳಗೆ ಧಾರಾಪೂರ್ವ್ವಕಂ ಮಾಡಿ ಭರಣದ ಕೋಲೊಳ್ ಸರ್ವ್ವನಮಸ್ಯಂ ಬಿಟ್ಟ ನೆಲ ಮತ್ತರು ೬೦ (ಸೌಇಇ. XX, ೧೯-೩೯; 1015); ಭರಣದ ಕೋಲ ಪರಿಸಂಕಿನ ಮತ್ತರು ೩ (ಕೊಲ್ಹಾ.ಶಾ. ೦೪-೯೮; 1170). [ಸಂ.]

**ಭರಣ₂** (ನಾ). (?): ಕಡೆಪಡೆವೋಳ್ದಡಂ ಪಡುವಡಂ ಭರಣಂ ತಿಣ್ಣುತ್ತಮಿಪ್ಪಡಂ ಚರಣವನಾವಗಂ ಬಡಿವಡಂ ಪೆಱತನಿತು ಶೂಲೆ ತೋಱಿತೆಂದಱಿದು (ಅಕ್ಪ್ರ. ೧೩-೯೭). [?]

**ಭರಣಂಗೆಯ್** (ಕ್ರಿ). ಕಾಪಾಡು; ರಕ್ಷಿಸು: ಕುಡೆ ಪಡೆದಾಯೂರನಾ ಶ್ರೀಧರಭಟ್ಟರ್ ನೂಱನಾಲ್ವರ್ಮ್ಮಹಾಜನಕೆ ಭರಣಂಗೆಯ್ದು ತವಗಂ ಮಹಾಜನರ್ಕ್ಕಂ ಪ್ರಜೆಗಂ ಮಾಡಿದ ವ್ಯವಸ್ಥೆಯುಂ (ಎಇ. XX, ೬೭-೦೪; 1012): ಜಗಮೆಲ್ಲಮುಮಂ ವಿಷ್ಣುವೆ ಮಿಗೆ ಭರಣಂಗೆಯ್ಯುತಿರ್ಕುಂ (ವಿಷ್ಣು.ಪು. ೦೬-೯೬). [ಭರಣ₁ + ಕೆಯ್₁]

**ಭರಣಿ** (ನಾ). ೧. (ಒಡವೆ, ವಸ್ತು ಮೊದಲಾದುವುಗಳನ್ನು ಇಡುವ, ಮುಚ್ಚಳವಿರುವ) ಸಂಪುಟ; ಕರಂಡ; ಡಬ್ಬಿ: ಮನಸಿಜನನರ್ಘ್ಯ ಸಂಮೋಹನದ ಮರ್ದು ಮಣಿಯ ಭರಣಿಯೊಳ್ ಕೀಮಿಯ ನಚ್ಚಿನ ನಿಧಿಯ ಮೊಗದೊಳಿರಿಸಿದನೆನಲ್ಕೆ ಮಧುರಾಧರಂ ಮನೋಹರಮಪ್ಪಳಾ (ಶಬ್ದ.ಪು. ೩-೯೭); ತರಿಸಿದನು ಚೆಂದನದ ಸಾದಿನ ಭರಣಿಗಳ (ಕುಮಾ.ಸ. ೨-೯೦); ಕತ್ತಲೆ ಲೋಕವನು ಮುಸುಕಿದುದು ಭರಣಿಯ ಮುಚ್ಚು ಮಂಪದಲಿ (ಷಟ್ಪ. ೩-೦೪). ೨. [ಜ್ಯೋತಿ] ಯಮನು ಅಧಿದೇವತೆಯಾಗಿರುವ, ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಎರಡನೆಯದು: ಭರಣಿ ಮಘೆ ಪೂರ್ವೆ ಕೃತ್ತಿಗೆ . . . ವೈಶ್ವಾನರಮಂಡಳಮೆಂಬ ನಾಮಮಂ ತಳೆದಿರ್ಕುಂ (ಲೋಕೋಪ. ೪-೮೦); ಭರಣಿ ಯಾಮ್ಯಭಂ ಯಾಮ್ಯಂ, ಅಂತಕಂ ಯಮಂತಾರಕಂ ಈ ೫ ಭರಣಿನಕ್ಷತ್ರಕ್ಕೆ ಪೆಸರು (ಶಾಸ್ತ್ರ. ೬೨-೪); ವೀಳೆಯದೆಲೆಯು ಬದನೆಕಾಯಂ ಭರಣಿನಕ್ಷತ್ರದಲ್ಲಿ ತಂದು ಕೈಗೆ ಕಟ್ಟುವುದು (ಸಕಪ್ರ. ೨೨೦); ಭರಣಿಯಲ್ಲಿ ಹುಟ್ಟಿದವನು ಧರಣಿ ಆಳುವನು (ಗಾದೆ). ೩. ಭರಣಿನಕ್ಷತ್ರದಲ್ಲಿ ಬರುವ ಮಳೆ: ಮಾರಿಯ ಮೇಷದಂತೆ ಭರಣಿಯಾ ರಸದಂತೆ ಅರಿವ ರತುನ ಧರಣಿ ಸ್ವರ್ಗವು ಸ್ಥಿರವಿರಾಣಿಸಿದಂತೆ (ಶಬ್ದಕೋ. ೩-೯).

**ಭರಣಿಯ ಮಳೆ** = ಸಾಮಾನ್ಯವಾಗಿ ಏಪ್ರಿಲ್ ಕೊನೆ, ಮೇ ಆರಂಭದಲ್ಲಿ, ಸೂರ್ಯನು ಭರಣಿನಕ್ಷತ್ರದಲ್ಲಿ ಸಂಚರಿಸುವಾಗ ಬರುವ ಮಳೆ: ಭರಣಿಯ ಮಳೆ, ಧರಣಿಯ ಬೆಳೆ (ಗಾದೆ). [ಸಂ. ಭರಣೀ]

**ಭರಣಿಗ** (ನಾ). ಸಾಗುವಳಿದಾರ: ಕೆಱೆಯ ಮಹಾಜನಕ್ಕೆ ಮಾಡಿದ್ದ ಸಮೆಯಮೆನ್ತೆನೆ ಇಲ್ಲಿಯ ಕೆಯ್ಯುಂ ಮನೆಯುಂ ಜೀಪ್ಯನೊರ್ವ್ವನೊಡವೆ ಮಿಕ್ಕುದೆಲ್ಲಂ ಮೂವತ್ತಿರ್ಚ್ಛಾಸಿರ ಸಮೆಯಂ ಪೂರ್ವದ ಭರಣಿಗರ ಸನ್ತತಿಯಲ್ಲದೆ ಪೆಱರ್ಗ್ಗೆ ಕೆಯ್ಮನೆಯುಂ ಮಾಱಲಾಗದು (ಸೌಇಇ. XI-i, ೬೪-೩೪; 1028). [ಭರಣ₁ + –ಇಗ]

**ಭರಣಿಗೆ** (ನಾ). ಒಂದು ಬಗೆಯ ಸಸ್ಯ: ನವುರಾದಿ, ಪ್ಯರೊಳೆ, ಭರಣಿಗೆ (ಪ್ರ.ಶಿ. ೭೮-೦೩೯೬). [?]

**ಭರಣ್ಯ** (ನಾ). = ಭರಣ₁ ೪: "ಕರ್ಮಣ್ಯಾ . . . ಭರಣ್ಯಂ, ಭರಣಂ, ಮೂಲ್ಯಂ, ನಿರ್ವೇಶಃ, ಪಣಃ –೧೧ ಕೂಲಿಯ ಪೆಸರುಗಳು" (ನಾಮಲಿ. ೩೧೭). [ಸಂ.]

**ಭರತ₁** (ನಾ). ೧. ಅಭಿನಯಿಸುವವನು; ನಟ: "ಶೈಲಾಲೀ . . . ಭರತಃ, ನಟಃ — ಈ ೮ ನಟ್ಟುವಿಗಂ" (ಹಲಾಯು. ೯೭-೪೩೮); 'ನಟ' ಎಂದರೆ ಕುಣಿಯುವವನು ಎಂದು ಅರ್ಥ. ಇವರಿಗೆ ಭರತರು, ಶೈಲೂಷರು ಮುಂತಾದ ಹೆಸರೂ ಉಂಟು (ಸಂನಾಟ. ೨೮). ೨. ನಾಟ್ಯಶಾಸ್ತ್ರ; ಅಭಿನಯ ಕಲೆ: ಭರತಂಗೆ ಭರತಮುಮನರ್ಥಶಾಸ್ತ್ರಮುಮಂ . . . ಉಪದೇಶಂಗೆಯ್ದು (ಆದಿಪು. ೮-೬೦ ವ); ಭರತ ಛಂದೋವ್ಯಾಕರಣ ಸಂಗೀತ ಸಾಹಿತ್ಯ . . ಸ್ಮರಿಸಲೊಡನೆ ಮುಖೋದ್ಗತಂ ಬಸವಂಗೆ (ಬಸಪು. ೩-೪೨); ಕವಬಾಗಮ . . . ಸಂಗೀತ ಭರತ ಆತೋದ್ಯವೆಂದು ಪ್ರೋದ್ಗೀತಾಗಮದ ಷೋಡಶಭೇದಂಗಳು (ಏಕೋ. ೬೧). ೩. ನಾಟ್ಯಶಾಸ್ತ್ರವನ್ನು ಬರೆದ ಮುನಿಯ ಹೆಸರು: ಆ ಮುನಿಪ ಭರತನೊಲವಿಂ . . . ಗಂಧರ್ವಮರತತಿಗಿತ್ತನೊಲ್ದು ನಾಟ್ಯಶ್ರುತಿಯಂ (ರಾಜಶೇ. ೧-೦೦); ಭರತಮುನಿಪ್ರೋಕ್ತವಾದ ಭರತನಾಟ್ಯವನ್ನು ಸಂಪ್ರದಾಯಶುದ್ಧವಾಗಿ ಕಾಪಾಡಿಕೊಂಡು ಬಂದಿರುವ ನಾಟ್ಯಪದ್ಧತಿಗೆ ಭರತನಾಟ್ಯ ಎಂದು ಹೆಸರುಬಂದಿದೆ (ಭಾರತ. ೩೩೪). ೪. ಭಾರತವನ್ನಾಳಿದ ಒಬ್ಬ ಸುಪ್ರಸಿದ್ಧ ಚಕ್ರವರ್ತಿ: ಭರತನ ವಂಶದೊಳ್ ನೆಗಬ್ದ ಪಾಂಡುಗೆಪುಟ್ಟಿಯುಂ . . . ನೀಮುಮೀ ಮರದಡಿಯೊಳ್ ಶಿವಾಶಿವರವಂಗಳನೆಟ್ಟಿಱುಮಂತುಟಾದುದೇ (ಪಂಪಭಾ. ೩-೦೦); ಬಾಳಿಕೆಯುನನುಜರಿಂದೊಡಗೂಡಿ ಧರ್ಮಜಂ ತಾಳಿದಂ ಭರತ ನಳ ನಹುಷಾದಿ ರಾಜರುಂ ಪೇಳ್ಪೊಡವರ್ಗಿನಿತು ಗುಣವಿಲ್ಲವೆಂದು ಭೂಮಂಡಲಂ ಕೊಂಡಾಡಲು (ಜೈಮಿಭಾ. ೨-೪); ನಿನ್ನೀ ಕುಮಾರಂ ನೃಪೋತ್ತಮ ಭೂರಕ್ಷಣದತ್ತಣಿಂ ಭರತನಾಮಂದಾಳ್ದು ತಾಂ ಬಾಳುವಂ (ಶಾಕುಂತ ೧೦೪-೦೯೬). ೫. ದಶರಥನ ನಾಲ್ಕು ಮಕ್ಕಳಲ್ಲಿ ಒಬ್ಬ; ರಾಮನ ತಮ್ಮ: ಶುಭದಿನ ಮುಹೂರ್ತದೊಳ್ ಸುಮಿತ್ರೆ ಲಕ್ಷ್ಮಣನಂ ಕೈಕೆ ಭರತನಂ ಸುಪ್ರಭೆ ಶತ್ರುಘ್ನನಂ ಪಡೆವುದುಂ (ಪಂಪರಾಮಾ. ೩-೦೩೩ ವ); ಅರಸುತನಕೊಡಬಡದೆ . . . ನೇಮವ ಧರಿಸಿ ಮರಳಿದು ಭರತ ನಂದಿಗ್ರಾಮಕೈತಂದ (ತೊರರಾ. ೨-೬ ಸೂಚನೆ); ತೋಳಿದು ಜನನಿಯ ಜಠರವಂ ಜನಿಸಿ ಭವನದೊಳ್ಬೆಳೆದು ಲಕ್ಷ್ಮಣ ಭರತ ಶತ್ರುಘ್ನರೊಡಗೂಡಿ (ಜೈಮಿಭಾ. ೦೮-೨). ೬. ಪರಮಜ್ಞಾನಿಯಾದ ಒಬ್ಬ ಮಹರ್ಷಿ; ಜಡಭರತ: ಉತ್ತಮದ್ವಿಜಕುಲದಲುದಿಸಿ ದಬುತ್ತಮೋತ್ತಮನಾತ್ಮವಿದ್ಯೆಯ ಪುತ ಳಿಯಪೊಲಬಿಳಮಾಯಾವಿರತನಾ ಭರತ (ಭಾಗ. ೫-೬ ಸೂಚನೆ). ೭. ಭಾರತದೇಶ; ಇಂಡಿಯಾ; P ಸುಪ್ರಸಿದ್ಧನಾದ ಭರತಚಕ್ರವರ್ತಿಯು ಆಳಿದುದರಿಂದ ಈ ನಾಡಿಗೆ ಭರತವೆಂಬ ಹೆಸರು ಬಂದಿತೆಂದು ಪ್ರಾಚೀನರ ಅಭಿಪ್ರಾಯ: ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ ಹೈಮವತ . . . ಐರಾವತಂಗಳೆಂಬೇೞುಂ ಜನಪದಂಗಳಿಂದಂ . . . ಎಸೆದು (ಆದಿಪು. ೧-೪೮ ವ); ನಾನಾಕ್ಷೇತ್ರಮೊಳುತ್ತಮಂ ಭರತಮಾ ಭೂಭಾಗದೊಳ್ (ಸೌಇಇ. XX, ೪೭-೦೩; 1074); ಭರತಾರ್ಧಕ್ಕಧಿರಾಜನಪ್ಪ ಸುನನಂ ಪೆತ್ತಪ್ಪೆ ತನ್ವಂಗಿ (ಶಾಂತಿಪು. ೧೦-೧೪೦). ೮. [ಜೈನ] ಆದಿತೀರ್ಥಂಕರನಾದ ವೃಷಭ

ದೇವನ ಹಿರಿಯ ಮಗ; ಪ್ರಥಮಚಕ್ರವರ್ತಿ : ಪುರುಪರಮೇಶ್ವರ ಪುತ್ರಂ ಚರಮಾಂಗಂ ಚಕ್ರವರ್ತಿಯೆಂದೊಡೆ ಪೇಟಲ್ ದೊರೆ ಪೆಜಿರಾರ್ ಭರತನೊಳೆನೆ (ಆದಿಪು. ೧೨-೧೧೯); ಭರತಂ ಮುನ್ನಾದಿತೀರ್ಥೇಶ್ವರನ ಚರಣಮಂ . . . ಪೂಜಿಸಿದಂ (ಅಜಪು. ೮-೨೫); ಭರತನನಳ್ಕಿ ಬಾಹುಬಲಿ ತುಳ್ಕಿ ಮರಳ್ಚಿದ ಪೂಗೊಳಂ (ಅನಂಪು. ೧೧-೧೯). [ಸಂ.]

**ಭರತ₂** 'ಭರತಿ' ನೋ.

**ಭರತಕಟ್ಟಳೆ** (ನಾ). ನಾಟ್ಯಶಾಸ್ತ್ರದ ನಿಯಮ : ಪರಿ ಪಟಹಮಂ ರ್ಝಕಟು ರ್ಝಕಕೆಂದು ಬಾಜಿಸಲು . . . ಭರತಕಟ್ಟಳೆಗೆ ಕುಣಿದನೀಶಂ (ಗುರುಚಾ. ೧-೧೯). [ಭರತ₁ + ಕಟ್ಟಳೆ₁]

**ಭರತಕಳಾವಿದ** (ನಾ). ಭರತನಾಟ್ಯಶಾಸ್ತ್ರವನ್ನು ತಿಳಿದಿರುವವನು : ನೆರೆದೇಳ್ತಂದಿರ್ದುದಾಸ್ಥಾನದೊಳಮುಮ . . . ಭರತಕಳಾವಿತ್ಸ್ಯಳಂ (ರಾಜಶೇ. ೧೨-೯೩). [ಸಂ. ಭರತಕಲಾವಿದ್]

**ಭರತಕುಲ,** ಭರತಕುಳ (ನಾ). ೧. ಭರತಚಕ್ರವರ್ತಿಯ ವಂಶ: ಪಾಂಡವ, ಕೌರವರು ಹುಟ್ಟಿದ ರಾಜವಂಶ : ಭರತಕುಲಗಗನ ದಿನೇರಂ . . . ಗರ್ಭೋದಯಾದ್ರಿಯಿಂದುದಯಿಸಿದಂ (ಶಂಪಾ. ೧-೯೫); ಭರತಕುಲೇಂದುಕಲಂಕಂ. . . ಕುರುಕೇತುವೆಲ್ಲಿದಂ (ಗದಾಯು. ೬-೩೦). ೨. ಭರತಖಂಡದ ಜನತೆ,—ಪ್ರಜಾವರ್ಗ : ಶಿವನ ತಪಸ್ಸಿಗೆ ಭಂಗ ಬಂದರು ನವಕುಮಾರನ ಸಂಭವ ತಾರಕಾಸುರವಧೆಯು ಕಾದಿದೆ ಭರತಕುಲ ವಿಜಯಾಭವ (ಶಂಮು. ೯೮-೧೨). **ಭರತಕುಳ :** ೧. ಭರತಕುಳ ತಿಳಕರಿರ್. . . ನೆರೆದಿನಿಬರುಮೀ ಲಕ್ಷ್ಯಮನಿರದಕ್ಕಟ ಸರವೆ ತೆಗೆಯಲಾ ರ್ತಿರುಮಿಲ್ಲಾ (ಶಂಪಾ. ೨-೫೨). [ಸಂ.]

**ಭರತಕುಳ** 'ಭರತಕುಲ' ನೋ.

**ಭರತಕ್ಷೇತ್ರ** (ನಾ). ಭಾರತವರ್ಷ; ಭರತಭೂಮಿ : ಜಿನೇಂದ್ರಪಾದನಾ ಭಕ್ತಿಯಿಂ ಪೋದಲ್ಲಿ ಭರತಕ್ಷೇತ್ರದೊಳೀ ಯುಗದೊಳ್ ತೀರ್ಥಂಕರರುಂ ಚಕ್ರವರ್ತಿಗಳುಮಪ್ಪರೆಂದು ಸರ್ವಜ್ಞರ್ ಬೆಸಸೆ (ಆದಿಪು. ೧೨-೧೧೫ ವ); ಮನೋಹರಮುಮೆನಿಸಿದ ಭರತಕ್ಷೇತ್ರದ ಮಧ್ಯದೊಳ್ ಮಧ್ಯದೇಶಮುಂಟು (ಜಗಚ. ೨-೧ ವ). [ಸಂ.]

**ಭರತಖಂಡ** (ನಾ).= ಭರತಕ್ಷೇತ್ರ : ನಮ್ಮ ಪ್ರಾಚೀನಗ್ರಂಥಗಳಲ್ಲಿ ಈ ದೇಶಕ್ಕೆ ಭರತಖಂಡ ಇಲ್ಲವೆ ಭರತವರ್ಷ ಎಂಬ ಹೆಸರು ಕೊಡಲ್ಪಟ್ಟಿದೆ (ಪುಂರಾಯು. ೯-೧೧೧). [ಸಂ.]

**ಭರತಜ** (ನಾ). ಭರತವಂಶದಲ್ಲಿ ಹುಟ್ಟಿದವನು : ಭರತಜರೊಳ್ಮನ್ನಿಲ್ಲದ ಪರಿಭಾಷೆಯನುಂಟುಮಾಡಿ ಪೆಜಿಗಡಿಟ್ಟುಂ ಕುರುರಾಜಂ (ಗದಾಯು. ೬-೪೯). [ ಸಂ. ]

**ಭರತಜ್ಞ** (ನಾ). ಭರತಪ್ರಣೀತವಾದ ನಾಟ್ಯಶಾಸ್ತ್ರವನ್ನು ಬಲ್ಲವನು; ನಾಟ್ಯವಿದ್ವಾಂಸ : ಸ್ವರಮನಜಿಗೆ ತಾಂ ಭರತಜ್ಞನಂದದಿಂದಾಸನ ಮನಜಿಗೆ ಜಾತ್ಯಶ್ವದಂತೆ (ಪಾರತಿ. ೧೧-೬೬); ಲಲಿತತತವಿತತಾದಿ ವಾದ್ಯಾ ಕಲಿತ ಭರತಜ್ಞರಿಗೆ . . . ಭಂಡಾರಿಗಳಗೆಜಿದು (ಬಸಪು. ೫೯-೨೯); ಭರತಜ್ಞರ್ ಭಯಕಾಟ ನರ್ತಕ ನಟರ್ . . . ಒಪ್ಪುಗುಂ (ರಾಸ್ಯರಂ. ೧-೪೫). [ಸಂ.]

**ಭರತನಾಟ್ಯ** (ನಾ). ಭರತಮುನಿಯಿಂದ ನಿರೂಪಿತವಾದ ನಾಟ್ಯ : ಭರತಮುನಿಪ್ರೋಕ್ತವಾದ ಭರತನಾಟ್ಯವನ್ನು ಸಂಪ್ರದಾಯಶುದ್ಧವಾಗಿ ಕಾಪಾಡಿಕೊಂಡು ಬಂದಿರುವ ನಾಟ್ಯಪದ್ಧತಿಗೆ ಭರತನಾಟ್ಯ ಎಂದು ಹೆಸರು (ಶಾರದ. ೫೫೯). [ಸಂ.]

**ಭರತನಿಪುಣ** (ನಾ).=ಭರತಜ್ಞ : ಸರಸಕವಿಗಳು ತಾರ್ಕಿಕರು ವರಭರತ ನಿಪುಣರು ಗಾಯಕರು . . . ವೈತಾಳಿಕರು ರಂಜಿಸಿತು (ಕುವ್ಯಾಣ. ೨-೨೬). [ಸಂ.]

**ಭರತಪಕ್ಷಿ** (ನಾ). ಒಂದು ಬಗೆಯ ಹಕ್ಕಿ ; ನೀರುಕಾಗೆ: "ದಾತ್ಯೂಹಃ ಕಾಲಕಂಟಕಃ-೨ ಭರತಪಕ್ಷಿಯ ಹೆಸರು" (ಸಿದ್ಯಂತಿ. ೧೫೯). [ಭರತ₁ + ಪಕ್ಷಿ]

**ಭರತಪತಿ** (ನಾ).=ಭರತ ೮ : ಭರತಪತಿಯ ಶೋಕಾವೇಗಮಂ ವೃಷಭ ಸೇನಗಣಾಗ್ರಣಿಗಳಂತೆಂದಾಜಿಸಿದರ್ (ಆದಿಪು. ೧೬-೫೯ ವ). [ಸಂ.]

**ಭರತಭೂಮಿ** (ನಾ).=ಭರತಕ್ಷೇತ್ರ : ಭರತಭೂಮಿ ನನ್ನ ತಾಯಿ, ನನ್ನ ಪೊರೆವ ತೊಟ್ಟಿಲು (ಕೋಗಿಲೆ. ೩೯-೧). [ಸಂ.]

**ಭರತಮಂಡಲ** (ನಾ).=ಭರತಕ್ಷೇತ್ರ : ಅಂತು ಭರತಂ ಭರತಮಂಡಲ [ಪಾಠಾಂ, ಳ]ಮನೇಕಚ್ಛತ್ರಚ್ಛಾಯೆಯಿಂದಂ ಪ್ರತಿಪಾಲಿಸುತ್ತಮಿರೆಯಿರೆ (ಆದಿಪು. ೧೫-೯ವ). [ಸಂ.]

**ಭರತಯ್ಯ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಭರತಯ್ಯನ ದಿವ್ಯಲಿಕಿತ (ಎಕ. VIII, ಸೊರಬ. ೨೦೬-೧೯ ; ೯೦3). [ಭರತ₁ + ಅಯ್ಯ₁₁]

**ಭರತರ್ಘು** 'ಬರತರಘು' ನೋ.

**ಭರತವರ್ಷ** (ನಾ).=ಭರತಕ್ಷೇತ್ರ : ನಮ್ಮ ಪ್ರಾಚೀನಗ್ರಂಥಗಳಲ್ಲಿ ಈ ದೇಶಕ್ಕೆ ಭರತಖಂಡ ಇಲ್ಲವೆ ಭರತವರ್ಷ ಎಂಬ ಹೆಸರು ಕೊಡಲ್ಪಟ್ಟಿದೆ (ಪುಂರಾಯು. ೯-೧೧೧). [ಸಂ.]

**ಭರತವಾಕ್ಯ** (ನಾ). ೧. [ಕಾವ್ಯಮೀ] ನಾಟಕವೇ ಮೊದಲಾದ ರೂಪಕಗಳ ಕೊನೆಯಲ್ಲಿ ನಟನು ಬಂದು ಮಾಡುವ ಮಂಗಳಾ ಶಂಸನೆಯ ಶ್ಲೋಕ,—ಶುಭದ ಕೋರಿಕೆ : ಪೂಜ್ಯರು ಅನುಗ್ರಹಿಸು ವುದಾದರೆ ಈ ಭರತವಾಕ್ಯವು ನೆರವೇರಿಸಲ್ಪಡಲಿ (ಶಾಕುಂತ. ೧೧೫-೨೮) ; ಭರತವಾಕ್ಯಮೀ ಐಹಿಕದ ನಾಟಕಕೆ ತಾನಾದೊಡಂ ವ್ಯುತ್ಪು ತಾಂ ನಾಂದಿಯ್ಯೆಸಲಿ (ಶ್ರೀರಾಪಾ. ೧೧೯-೨೦೯) ; ಭರತವಾಕ್ಯದೊಂದಿಗೆ ನಾಟಕ ಮುಗಿಯುತ್ತದೆ (ರಪರ್ಗಾ. ೬೩). ೨. (ಅಲಂ) ಕೊನೆಯ ಮಾತು : ಅವರು ಈ ವಿಷಯಕ್ಕೆ ಸಂಬಂಧಪಟ್ಟಂತೆ ಭರತವಾಕ್ಯ ಹೇಳಿಬಿಟ್ಟರು (ಕೂಡಿ). [ಸಂ.]

**ಭರತವಿದ್ಯೆ** (ನಾ). ನಾಟ್ಯವಿದ್ಯೆ ; ನಾಟ್ಯಕಲೆ : ಆತನ ಮಹಿಮೆಯಂ ಪೇಳ್ವಡೆ . . . ಸಕಳಭರತವಿದ್ಯಾಹೃದ್ಯ ಗಂಭೀರಭಾವೋವಿಪುಳವಿಜಯ ಲಕ್ಷ್ಮೀವಲ್ಲಭೋ ವಿಷ್ಣುದೇವಃ (ಎಕ. V (R), ತಿರುಪ. ೯೦-೧೧ ; 1180); ಭರತವಿದ್ಯಾವಿಷಯದಲಿ ಪರಿಚರಿಯತನ ನಮಗಲ್ಲದೀ ಸಂಗರದ ಸಾರಥಿತನವ ಮಜಿದೆವು ಹಲವು ಕಾಲದಲಿ (ಕುವ್ಯಾವಿ. ೫-೯೦). [ಸಂ. ಭರತವಿದ್ಯಾ]

**ಭರತಶಾಸ್ತ್ರ** (ನಾ).=ಭರತವಿದ್ಯೆ : ಭಾವಂ ವಿಭಾವಮೆಸೆವನುಭಾವಂ . . . ಅಜಿಗೆ ಭರತಶಾಸ್ತ್ರಕ್ರಮದಿಂ (ಕಾವ್ಯಾವ. ೬೯೯) ; ಭರತಶಾಸ್ತ್ರಾಂಭೋಧಿ ಚಂದ್ರಂ . . . ಎಸೆದಂ (ಎಕ. II (R), ೯೮೯-೯೦ ; 1181) ; ಭರತಶಾಸ್ತ್ರ ದೊಳು ನಾಟಕದೊಳು . . . ನುಡಿದರು (ಭರತ. ೯೩-೬೮). [ಸಂ.]

**ಭರತಾಗಮ** (ನಾ).=ಭರತವಿದ್ಯೆ : ಭರತಾಗಮದೊಳ್ ಮೂವತ್ತೆರಡೆನೆ ನೆಗಟ್ದಂಗಹಾರಮುಂ (ಆದಿಪು. ೯-೨೯) ; ಭರತಾಗಮಲಕ್ಷ್ಮಿಗೆ ನಿಜಕರಣ ಮಳಂಕರಣಮಂಗಹಾರಂ ಹಾರಂ (ಶಂಪ್ರತಿ. ೧೨-೧೬೯) ; ಪರಮಭರತಾಗ ಮೋಚಿತಪರಿವರ್ತನೆಯಿಂದೆ ನಾಟ್ಯದಂತರ್ಭೇದದ ಪರಿಯಂ ಪೇಳು (ರಾಸ್ಯರಂ. ೧-೫೯). [ಸಂ.]

**ಭರತಾತ್ಮಜ** (ನಾ). ಭಾರತದಲ್ಲಿ ಹುಟ್ಟಿದವನು ; ಭಾರತೀಯ : ಸೋದರರೆಂಬಾ ಭಾವನೆ ಸರ್ವರೊಳಿರಿಸು. ಭರತಾತ್ಮಜನೆನ್ನಿಸು, ಕಂದಾ! (ಕರಿಪು. ೭-೯). [ಸಂ.]

**ಭರತಾನ್ವಯ** (ನಾ). ಭರತವಂಶ : ಸತ್ಯಸೆಂಬವಂಗೆ ಭರತನೆಂಬವನಾದಂ ಆತನಿಂ ಬಟಿಕ ಭರತಾನ್ವಯಮೆಂಬುದಾದುದು (ಗದಾಯು. ೫-೯೯ ವ). [ಸಂ.]

**ಭರತಾನ್ವಾಯ** (ನಾ). = ಭರತಾನ್ವಯ : ಭರತಾನ್ವಾಯದೊಳಂದಿನಿಂ ದುವರೆಗಂ ಸಾಪತ್ನರೊಳ್ ಬದ್ಧಮತ್ಸರದಿಂದೆಮ್ಮನಕಾರಣಂ ಕದಡಿದ್ಯೆ (ಗದಾಯು. ೬-೯). [ <ಸಂ. ಭರತಾನ್ವಯ ]

**ಭರತಿ**, ಬರತ$_1$, ಭರತ$_2$, ಭರತೆ, ಭರ್ತಿ(ಗು). ೧. ತುಂಬಿದ; ಸಂಪೂರ್ಣವಾದ: ಅಲ್ಲಿ ತೊಗಲ ಬಾವಲೀ ಚೀರತಾವ ಭರತಿ ಹಗಲಿನೊಳಗ (ಗಂಗಾತ. ೯೬-೦೩). ೨. ಅಧಿಕವಾದ; ಹೆಚ್ಚಾದ: ಒಂದುಸಲ ಆಕೆಗೆ ಭರತಿ ನೆಗಡಿ ಬಂದು ಬಿಟ್ಟಿತು (ದೀಕ್ಷ. ೦೬). ೩. ಇಡಿಯದಾದ; ಪೂರಾ. ೪. ಮಜಭೂತಾದ; ಕಟ್ಟುಮಸ್ತಾದ. (ನಾ). ೫. ಸಮುದ್ರ ಅಥವಾ ನದಿಯಲ್ಲಿ ಏಳುವ ಅಲೆಗಳ ಉಬ್ಬರ: ಭರತಿ ಅಂದರೆ ಏರುವುದು ಅಥವಾ ಉಕ್ಕುವುದು; ಓಹೋಟಿ ಅಂದರೆ ಇಳಿಯುವುದು (ಮುಂಬಯಿ. ೬-೩೬೨); ಚಿನ್ನಿಸಕ್ಕರೆಯು ಬೆರೆಯೆ ಭರತಿ ಉಕ್ಕುವುದು ಕ್ಷೀರಸಿಂಧು (ಸೂರ್ಯಕಾ. ೩೪-೦೦); ನಮ್ಮ ಸಾಹೇಬದಂಪತಿಗಳಿಗೆ ಯಾರೋ ಭರತಿ ಬರುವುದು ಎರಡು ಗಂಟೆಗೆ ಎಂದು ಹೇಳಿದ್ದರಿಂದ ಅವರು ಅದನ್ನೇ ನೆಚ್ಚಿಕೊಂಡಿದ್ದರು (ಸ್ವಾತಿ. ೯೬೪). ೬. ಹೆಚ್ಚಳ; ಅತಿಶಯ; ಆಧಿಕ್ಯ: ದುಃಖದ ಭರತಿ ಇಳಿಯುತ್ತ ಬಂತು (ಅಶೋಕ. ೦೯೬). ೭. ಜೋರು; ಭರಾಟೆ: ಸವಣೂರ ನವಾಬನು ಹೋಗುತ್ತಿದ್ದಾಗ ಜಾತ್ರೆಯು ವೈಭವಶಾಲಿ ಆಗುತ್ತಿತ್ತು; ಆದರೆ ಈಗ ಅದರ ಭರತಿಯು ಮೊದಲಿನಷ್ಟು ಇರುವುದಿಲ್ಲ (ಕಜಾಗಿ. ೩೦೬); ಜಾತ್ರೆ ಮುಗಿದು ಶಿವರಾತ್ರಿಯಾಯ್ತು ಶ್ರಾವಣಕೆ ತುಂಬು ಭರತಿ (ಪಲಮು. ೩೫-೨೦). ೮. (ತೆರವಾದ ಸ್ಥಳವನ್ನು) ತುಂಬುವುದು: ಸ್ಥಳಗಳ ಭರತಿಯ ಕಾಲಕ್ಕೆ ಅವಳು ನನಗೆ ಪ್ರತಿಸ್ಪರ್ಧಿಯಾಗಿ ಬರುವಳೆಂದು ನಾನು ಎಣಿಸಿರಲಿಲ್ಲ (ಹೀಮಂತ. ೨೬೬); ನಾನು ನನ್ನ ಶಾಲೆಯ ಭರತಿಗಾಗಿಯೇ ಎಂದು ನಾಲ್ಕಾರು ಮಕ್ಕಳನ್ನು ಒಟ್ಟುಮಾಡಿ ತಂದದ್ದುಂಟು (ಸ್ವಕ್ಷೊ. ೬). **ಬರತ$_1$**: ೫. ನೀರು ಅಷ್ಟೊಂದು ಇಳಿದಿರಲಿಲ್ಲ . . . ಬರತದ ನೀರೂ ಸೇರಿರಬೇಕು (ಮರಳು. ೩೨): ಈ ಏರಿಯ ಮುನ್ನೂರು ನಾನ್ನೂರು ಗಜ ಉದ್ದಗಲವಾದ ಹರಹು. ಬರತದ ನೀರಿಗೆ ತುಂಬಿದ ಜಲಾಶಯವಾಗುತ್ತದೆ (ಜಾರುದಾ. ೩೦). **ಭರತ$_2$**: ೫. ಓಟ ಭರತದ ಭರವಸದ ಹೊಯ್ಲಾಟದುರು ಲಹರಿಗಳ. . .ರೌದ್ರದಿಂದ ಸಮುದ್ರ ರಂಜಿಸಿತು (ಕೊರಂ. ೪-೦೨-೨); ನಾವಿಕರು ದಿಗ್ನಿರೂಪಣೆ ಮಾಡಲಸಮರ್ಥರಾಗಿ ಭರತವನ್ನು (Tide) ಬಿಟ್ಟು ಬಹಳ ದೂರ ಹೊರಟು ಹೋಗಿದ್ದರು (ಕಡಾಕಂ. ೧). **ಭರತೆ**: ೫. ಒಂದೊಂದು ಕ್ರಾಂತಿಯು ಕಾವ್ಯೋದಧಿಯಲ್ಲಿಯ ಭರತೆಯಿದ್ದಂತೆ (ಪವ್ಯಕಾ. ೨೬). **ಭರ್ತಿ**: ೩. ಅಬ್ಬಾ ಚಂಡಿಯೇ! ಭರ್ತಿ ಒಂದು ತೆಂಗಿನಮರದಷ್ಟು ಎತ್ತರವಿರುವ ಹಾಗೆ ಕಾಣಿಸಿದಳು (ಸ್ವಕ್ಷೊ. ೪೨). ೪. ಏನು ಗಟ್ಟಿಮುಟ್ಟಾಗಿದ್ದಾನೆ! ತುಂಬು ಗಲ್ಲ, ಬಾರೀಕ ಮೀಸೆ, ಭರ್ತಿ ಆಳು, ನನಗಂತೂ ಸುಬ್ಬನೇ ಬಂದಂತಾಯಿತು (ಹುಸಕ್ಷ. ೭೪). ೮. ಸೈನ್ಯಕ್ಕೆ ಭರ್ತಿಯ ಕೆಲಸ ಪ್ರಾರಂಭವಾಯಿತು (ಕೂಚಿ). ೯. ರಂಗು; ಏರಿಕೆ: ಆಟ ಒಳ್ಳೆ ಭರ್ತಿಗೆ ಬಂದಾಗ ಆಳಲಿಕ್ಕೆ ಹತ್ತಿದಿ (ಅಮಾಶ. ೮೩).

**ಭರತ ಇಳಿತ** = ಸಮುದ್ರದ ಉಬ್ಬರ ಮತ್ತು ಇಳಿತ: (*). **ಭರತವೇಳು** = ಸಮುದ್ರವು ಉಬ್ಬರಗೊಳ್ಳು. — ಉಕ್ಕೇರು: ಭರತಚಕ್ರಿಯ ಪುತ್ರರಲ್ಲವೆ ನುಡಿದರು ಭರತವೆದ್ದಂತೆ ಕ್ಷೀರಾಬ್ಧಿ (ಭರತ. ೪೩-೬೮). **ಭರತಿ ಆಗು, ಭರ್ತಿಯಾಗು** = ಪೂರ್ಣವಾಗು; ತುಂಬು: ಒಂದು ಗೋಡೆಗೆ ಹಚ್ಚಿಟ್ಟಿದ್ದ ಭಾರಿ ಸೆಲ್ಫು ಫಲಾಹಾರದ ಡಬ್ಬಿಗಳಿಂದ ಭರತಿ ಆಗಿತ್ತು (ವೈಕಿ. ೦೦); ಉತ್ತರಕಡೆ – ಘೋಲರ – ಎಂಬ ಬಂದರುಪಟ್ಟಣದಿಂದ ಹಡಗುಗಳಿಗೆ ವಿಶೇಷವಾಗಿ ಹತ್ತಿಯು ಭರ್ತಿಯಾಗುತ್ತದೆ (ಭೂಗೋಳ. ೬೪); ರಾಯರ ಮನೆಯ ದೊಡ್ಡ ಹಾಲೆಲ್ಲಾ ಜನರಿಂದ ಭರ್ತಿಯಾಗಿತ್ತು (ರಾಯುಳ. ೫೨). **ಭರತಿ ಓಹಟಿ, ಭರತಿಓಹೋಟಿ** = ಭರತ ಇಳಿತ: ಭರತಿ ಓಹಟಿಯ, ಕ್ಷಯದ ವೃದ್ಧಿಯನು ಅರಿಯದೆನ್ನ ಓಗ್ಗ (ಅರಳು. ೩೪೨-೦೩); ಸಮುದ್ರದ ನೀರು ಸ್ಥಿರವಾಗಿ ನಿಲ್ಲುವುದಿಲ್ಲ. ಸರ್ವಕಾಲವೂ ಹಿಂದಕ್ಕೆ ಮುಂದಕ್ಕೆ ಹೊಯಿದಾಡುತ್ತದೆ. ಇದಕ್ಕೆ ಭರತಿ ಓಹೋಟಿಗಳೆಂತಲೂ ಏರಿಳಿತಗಳೆಂತಲೂ ಅನ್ನುವರು (ಮುಂಬಯಿ. ೬-೩೬೨). **ಭರತಿ ಮಾಡು, ಭರ್ತಿ ಮಾಡು** = ತುಂಬು; ಪೂರ್ಣಮಾಡು: ಹುಂಡಿಗಳು ತೋರಿಸಿ ಲಾಗು ಮಾಡುವುದು ಮತ್ತು ಭರತಿ ಮಾಡುವುದು (ಮುಂಬವ್ಯಾ. ೨೬೯); ಹೀಗೆ ಹೊರ ಹೋದ ನೀರಿನ ಬದಲಿಗೆ ಬೇರೆ ನೀರನ್ನು ಆಗಾಗ ಭರ್ತಿ ಮಾಡುತ್ತಿರಬೇಕು (ಆದುಗ್. ೬೬); ರಾಜಾದಾಯವನ್ನು ಹೆಚ್ಚಿಸಿ ಬರಿದಾಗಿದ್ದ ಬೊಕ್ಕಸವನ್ನು ಭರ್ತಿ ಮಾಡಿದನು (ಕೃದೇವ. ೦೨). **ಭರತಿ ಹಾಕು** = ತುಂಬು; ಭರ್ತಿ ಮಾಡು: ನಮಗೂ ನಿಮಗೂ ನಡುವೆ ಬಿದ್ದಿರುವ ಈ ಕೊರಕಲಕ್ಕೆ ಭರತಿ ಹಾಕುವಂತಾಗಬಹುದು (ಸಂಸ್ಕಾರ. ೨ ಒಳಪುಟ). [←ಹಿಂ. ಮರಾ. ಭರತೀ]

**ಭರತೆ** 'ಭರತಿ' ನೋ.

**ಭರತೋರ್ವಿ** (ನಾ). = ಭರತಕ್ಷೇತ್ರ: ಅಪ್ಪನೆಯಿಂ ತಜ್ಜಿನಚಕ್ರವರ್ತಿ ಜಿನನಾಥಂ ಷೋಡಶಂ ಧರ್ಮಚಕ್ರನಿಯುಕ್ತಂ ಭರತೋರ್ವಿಗಾತು ಸಲೆ ನೋಂತಂ ಶಾಂತಿತೀರ್ಥೇಶ್ವರಂ (ಶಾಂತಿಪು. ೦.೦೬). [ಸಂ. ಭರತೋರ್ವೀ]

**ಭರದಂಡು**, ಬರ್ದಂಡು, ಭರದಾಂಡ್, ಭರದಾಂಡು, ಭರ್ದಂಡು (ಗು). ೧. ಭರದಿಂದ; ಪೂರ್ಣವೇಗದಿಂದ. ೨. (ಆಲಂ) ಅತಿಶಯವಾದ. (ನಾ). ೩. ಬಹಳ ವೇಗದ ಓಟ; ರಭಸವಾದ ಓಟ: ರಥ್ಯಃ . . . ಭರದಂಡು ಕುದುರೆ (ಸಿದ್ಧಾಂತಿ. ೨೫೦). **ಬರ್ದಂಡು**: ೨. ಎಂಥಾ ಆಳು ಅಂತೀರಿ? ಬರ್ದಂಡಾಳು! ಅವರನ್ನ ಕಂಡ್ರೇ ಹುಲಿ ನಡುಗಬೇಕು (ಮರಿಮು. ೩೦೦). ೩. ಗುಡ್ಡವಿಳಿದು ದೊಳ್ಳನೇನೊ ಬರ್ದಂಡು ಓಡಿದನು (ಮರಿಮು. ೪೪೯). **ಭರದಾಂಡ್**: ೩. "ಧೋರಿತಕು—ಬಿರುನಡೆ. ಭರದಾಂಡ್" (ಸಿದ್ಧಾಂತಿ. ೨೫೦). **ಭರದಾಂಡು**: ೩. ಆ ಗುಂಪು ಭರದಾಂಡು ಬಿಟ್ಟುಕೊಂಡು ಹೊರಟುಹೋಯಿತು (ನಡೆದಾ. II. ೮೫೩). **ಭರ್ದಂಡು**: ೩. ಭರ್ದಂಡು ಹೋಗಿ ಬಂದುಬಿಡ್ತೀನಿ, ಒಂದು ಎಲೆಡಕೆ ಹಾಕೋ ಹೊತ್ತಿನಲ್ಲಿ! (ಮರಿಮು. ೬೬೬). [←ಮರಾ. ಭರದವಡ, ಭರದೌಡ]

**ಭರದಾಂಡ್** 'ಭರದಂಡು' ನೋ.

**ಭರದಾಂಡು** 'ಭರದಂಡು' ನೋ.

**ಭರದ್ವಾಜ** (ನಾ). ೧. ಒಂದು ಜಾತಿಯ ಹಕ್ಕಿ; ಹೆಗ್ಗಾರ: "ಹೆಗ್ಗಾರಂ ಭರದ್ವಾಜವೆಂದೆನಿಕ್ಕುಂ" (ಮಂಗರಾ. ೫೦-೪); ಗಿಡಗಂ ಚಕೋರ ಸರಸ ಭರದ್ವಾಜಾಳಿಗಳ್ . . . ಚಾತಕಮಪಿಕರ್ಗಂ ತತ್ತರುವ್ರಾತದೊಳ್ (ಹೊಂದಕಂ. ೪-೪೬); ಮರುದಿನಂ ಕೋಕಿಲ ಭರದ್ವಾಜ ಬರ್ಹಿಕೇಕಾ ಧ್ವನಿಗಳೊಡನೆ ಮೊಗದೋರುತಿರೆ. . . ಗುಹಂ ತರಿಸಿದನು ನಾವೆಯಂ (ಶ್ರೀರಾಮಾ. ೯೮-೫೩೯). ೨. ಒಬ್ಬ ಋಷಿಯ ಹೆಸರು: ಭರದ್ವಾಜಂ ದ್ರೋಣಂಗೆ ಕೃಪನ ತಂಗೆಯಪ್ಪ ಶಾರದ್ವತೆಯಂ ತಂದು ಮದುವೆಯಂ ಮಾಡಿದೊಡೆ (ಶಂಕಾ. ೨-೪೩ ವ); ಆ ಭರದ್ವಾಜನು ನಿಜೋನ್ನತವೈಭವದಿನಾ. . . ಸುರರ ಸುಖಾಭಿಲಾಷೆಯ ಬಿಡಿಸಿದನು ವಿವಿಧೋಪಚಾರದಲಿ (ಕೊರಾ. ೨-೬-೦೫); ವಿದ್ವತ್ಸಭಾವಲಯಮಂಜುಯ ವಿರಚಿಸಿದಂ ಭರದ್ವಾಜಗೋತ್ರಭವನಣ್ಣಮಾಂಕನ ಸುತಂ (ಕೃವಿಲಾ. ೦-೦೦). [ಸಂ.]

**ಭರಪೂರ** (ಅ). ೧. ಸಂಪೂರ್ಣವಾಗಿ; ಪೂರ್ತಿಯಾಗಿ: ಒಬ್ಬರ ಕಂಡರ ಒಬ್ಬರ ಮನಸು ಅಬ್ಬರ ತುಬ್ಬರ ಆಗತೈತಿ ಇಬ್ಬರ ಕೂಡಿ ಬದುಕಿನ ಹಬ್ಬ ಮಾಡಿಲ್ಲ ಭರಪೂರಾ (ಅರಳು. ೨೯೦ ೯); ಕರಡಿಗಳು ಚಳಿಗಾಲದ ಆರಂಭದಲ್ಲಿ ಒಮ್ಮೆ ಹೊಟ್ಟೆಯನ್ನು ಭರಪೂರ ತುಂಬಿಕೊಂಡು ಗವಿಯೊಳಗೆ ಹೋಗಿ ಬಿದ್ದವೆಂದರೆ ನಾಲ್ಕು ತಿಂಗಳು ಸ್ಥಳ ಬಿಟ್ಟು ಕದಲುವುದಿಲ್ಲ (ಮುಂಬಯಿ. ೫-೦೬೮). ೨. ಯಥೇಚ್ಛವಾಗಿ; ಬೇಕಾದಷ್ಟು: ಸುರೇಶ, ಸತೀಶ್, ಕಿಶೋರರಿಗೆ ಭರಪೂರ ಅರಿವೆ-ಅಂಚಡಿ ಇದ್ದವು (ದೀಶಹ. II. ೨೦೪). [←ಹಿಂ. ಮರಾ. ಭರ್‌ಪೂರ್]

**ಭರಭರ** (ನಾ). ಒಂದು ಅನುಕರಣ ಶಬ್ದ : ಅವ್ವಾ ಭರಭರ ಬಡಿಸು. ನಾನು ಪೋಲೀಸ ಕಚೇರಿಗೆ ಹೋಗಬೇಕು (ರಕ್ತರ್ಶ. ೨೮೦).

**ಭರಭರನೆ** (ಅ). ಒಂದು ಅನುಕರಣಾವ್ಯಯ; ಬಹಳ ವೇಗವಾಗಿ; ಬಹುಬಿರುಸಾಗಿ : ಭರಭರನೆ ಹೋಗಿ ಭೈರವದೇವರ ಸಂಗಡ ಭೈರವಾಸ ಕೇಳಿದ (ಗಾದೆ). [ಭರಭರ + – ಅನೆ$_1$]

**ಭರಭರಾಟಿ, ಭರಭರಾಟೆ** (ನಾ). ೧. ಏರಾಟ ; ಪರಿಕೆ ; ಜೋರು : ಈ ಅವಧಿಯಲ್ಲಿ, ಹಿಂದುಸ್ಥಾನದಲ್ಲಿ ಮುಂಚಿನಿಂದಲೂ ಭರಭರಾಟಿಯಲ್ಲಿ ನಡೆಯುತ್ತ ಬಂದ ಅನೇಕ ಉದ್ಯೋಗಗಳು ನಾಶವಾದವು (ಮುಹಾದೋ. ೧೧); ವ್ಯವಸಾಯವು ಭರಭರಾಟಿಯಿಂದ ಬೆಳೆಯಿತು (ಕೃಶಿಗಾ. ೬೦). ೨. ಸಡಗರ : ಕೃಷ್ಣಪ್ಪ ಭರಭರಾಟಿಯಿಂದ ಪೂರ್ತಿ ಸೂಟಿನಲ್ಲಿ ಬರುತ್ತಿದ್ದರು (ಕೆಂಮುಬಿ. ೫೬). ೩. ಆಧಿಕ್ಯ; ಹೆಚ್ಚಳ : ಹವೆಯ ಭರಭರಾಟಿಯು ಕಡಿಮೆಯಾಗತೊಡಗಿತು (ನಾಕಥ. ೩೮). ಭರಭರಾಟೆ : ೧. "ಭರಭರಾಟೆ= ಏರಿಕೆ" (ಶಾವಕೋ. ೨೫). [←ಮರಾ. ಭರಭರಾಟ]

**ಭರಭರಾಟೆ** 'ಭರಭರಾಟಿ' ನೋ.

**ಭರಭರಿ** (ನಾ). = ಭರಭರಾಟಿ ೧ : ಇಲ್ಲಿಯ ವ್ಯಾಪಾರವು ಒಳ್ಳೇ ಭರಭರಿಯಲ್ಲಿ ಇರುವುದರಿಂದಲೂ . . . ಇದೇ ಮೊದಲನೇ ಪಟ್ಟಣವಾಗಿರುತ್ತದೆ (ಮುಂಬಯಿ. ೬-೧೨೬). [ ← ಮರಾ. ಭರಭರ ]

**ಭರಭಾರ** (ನಾ). ರಕ್ಷಣೆಯ ಹೊರೆ; ಕಾಪಾಡುವ ಹೊಣೆಗಾರಿಕೆ : ತಂಗೆಯರ ಭರಭಾರಕ್ಕಮುಡಿಸಿದ ಬಡತನಕ್ಕಮೆಡರ್ಗಮಳ್ಕದೆ ನೀಂ ಪೊತ್ತು ನಿತ್ಯರಿಸುತ್ತುಮಿರೆ (ಶಾಂತಿಪು. ೪-೬೬ ವ); ಗುರುವೆ ಭರಭಾರವನು ಹೊಚಿಸಲು ಕರುಣವಿಲ್ಲವೆ ನಿನಗೆ (ಶ್ರಬಂರ. ೧೬-೬); ಎನ್ನ ಭರಭಾರ ನಿಮ್ಮದು ಹಾನಿವೃದ್ಧಿಯು ನಿಮ್ಮದು (ಸಿದ್ಧಸ್ತು. ೨೪-೬). [ಸಂ.]

**ಭರಭಾರಿ** (ನಾ). ಪೋಷಣೆಯ ಭಾರವನ್ನು ಹೊತ್ತಿರುವುದು : ಬೆಳಸಿರಿಯ ಭರಭಾರಿ ತುಶ್ರಮಸಂಘಮೈರಿ . . . ಕಾವೇರಿ ಭೋರ್ಗರೆದೆಸೆದುದು (ಶಾವರಾ. ೨-೭). [ ಸಂ. ಭರಭಾರಿನ್ ]

**ಭರವತ್** 'ಭರವಮು' ನೋ.

**ಭರವಮು, ಭರವತ್, ಭರಾಮು** (ನಾ). ೧. ಮನ್ನಣೆ; ಗೌರವ : ನಮ್ಮ ಪತಾರದಲ್ಲಿ ಅಜ್ಜನ 'ಭರವಮು' ದಿನೇ ದಿನೇ ಹೆಚ್ಚುತ್ತಿದ್ದುದೂ ತಂದೆಯ ಕಾರ್ಯಕ್ಕೆ ನೆರವಾಗಿರಬೇಕು (ಪಾತಕ. ೪); ಮೂಮುಂಜಿ ತನ್ನ ಮಾತಿಗೆ ಭರವಮು ಬಾರದೆಂದು ತಿಳಿದು, ಜತೆಗೆ ಬೇರೆ ಯಾರೋ ಗುರುತದವರನ್ನು ಕೊಟ್ಟಿದ್ದ (ಮುಗಿದು. ೨೯೩). **ಭರವತ್ :** ೧. ಸರಕಾರದವರು ಆಯಾಯ ಗ್ರಾಮದಲ್ಲಿರುವ ವ್ಯಾಪಾರಿಗಳಲ್ಲಿ ಸ್ವಲ್ಪ 'ಭರವತ್' ಉಳ್ಳವರನ್ನು ಆರಿಸಿ ಅವರ ಮುಖೇನ ಕೊರತೆಯ (ಹಸುಗೆಯ) ಸಾಮಾನುಗಳ ಬಟವಾಡೆ ಮಾಡಿಸುತ್ತಿದ್ದರು (ಕಾತಂಪ್ರ. ೯). **ಭರಾಮು :** ೧. ಆ ಗ್ರಾಮದಲ್ಲಿ ತಹಶೀಲದಾರರ ಭರಾಮನ್ನು ನಾನು ಗಳಿಸಿಕೊಂಡೆ (ವ್ಯವಸಾ. ೫೦); ನನ್ನ ಮಾತಿಗೊಂದು ಭರಾಮು ಬಂದೀತೆ ? (೪ಮಕ. ೪೯). ೨. ಯೋಗ್ಯತೆ : ಭಟ್ಟರ ಭರಾಮಿಗೆ ಒಂದು ಹೊಲೆಯರ ಕುಟುಂಬವನ್ನು ಅನ್ನ ಹಾಕಿ ಸಾಕಿಕೊಂಡು ಹೋಗುವುದು ಯೋಗ್ಯವಾದ ಮಾತಾಗಿತ್ತು (ದಂಬಸಾ. ೧೧).

**ಭರಾಮಿನವರು** = ಗೌರವಸ್ಥರು; ದೊಡ್ಡಮನುಷ್ಯರು : ಅಧ್ಯಕ್ಷರು ಬೇಕು. ನಿಜ, ಭರಾಮಿನವರು ಬೇಕೆಂಬುದೂ ನಿಜ (ಮುಗಿದು. ೮೬).

[ ← ಮರಾ. ಭರವತ್ ]

**ಭರವಶ** (ನಾ). ೧. ಬಹಳ ಬಿರುಸು ; ಅತಿ ವೇಗ : ಸುಂದರಂ ಗಾಂಪನೆ ಬೆಳ್ಪರಲೆಗೆ ಗಜಮೊಡವೋಲ್ ಭರವಶದಿಂ ಪೊಕ್ಕಸೋಡಿ ಲಂಕಾಪುರಮಂ (ಜಂರಾಮಾ. ೯-೧೪೦) : ಪುಣ್ಯದೇವತೆಯುರುತರದಿ ತದ್ಧಾತ್ರಿವೇಷದಿ ಬರಲು ಕಂಡಬಳಿ ಭರವಶದಿ ಕೊಂಡುಯ್ದು ತಪಮಾಚರಿಪ ಮುನಿಗಳ ಸನ್ನಿಧಿಯೊಳೊಲಿದಿರಿಸಿ (ತುಳಂತ. ೫-೪೩). ೨. ಸ್ಪಷ್ಟ; ಖಚಿತ : ಹರನಯನ ಹೊನ್ನಿಗರ್ಗಂ ಭರವಶದಿಂ ಮೂವದಂ ಯಿದು ಖಂಡಾಗ ಮಾಗಲುಂ ಇರದೆ ಶರಾದ್ರಿ ಪೊನ್ನಿಗೆ ಭರವಶದಿಂ" ತ್ರಿಳಿಯ ಪೇಳು ಗಣಿತವಿಳಾಸ (ಬಾಸ್ಕರ. ೧೯-೧). [ಸಂ.]

**ಭರವಸ, ಬರವಸ, ಭರವಸೆ, ಭರೋಸ**(ನಾ). ೧. ನಂಬಿಕೆ: ವಿಶ್ವಾಸ : ಕಂಬಿಯಂ ಪೊತ್ತುನ್ನತೋತ್ಸುಕವೆತ್ತು ಭರವಸದಿಂ ನಡೆತರಲು (ಬಸವ. ೪೩-೨೬); ಕರುಣಾಕರ ನೀನೆಂಬುವುದೇತಕೊ ಭರವಸವಿಲ್ಲೆನಗೆ (ಪುರಂದ. ೨-೭೧ ಪಲ್ಲವಿ) ; ಭರವಸವಿಲ್ಲದ ಮಾತು ಕೇಳಿ ಬಂಡವಾಳ ಕಳಕೊಂಡ (ಗಾದೆ). ೨. ಅಪೇಕ್ಷೆ; ಆಕಾಂಕ್ಷೆ : ಅದಜಿಂ ನಿಮ್ಮಂ ಪರಿವರ್ತಿವೆರಸು ನೋಡುವ ಭರವಸದಿಂ ಪಾಂಡ್ಯದೇಶದಿಂದಂ ಬಂದೆಂ (ರವಾರಾಮ್ಯ. ೫-೧೬೦); ಪರಮಸಾಹಸನಾಗಿಯಂತಿಪ ಗಿರಿಯೊಳೆಮ್ಮಂ ನೋಡಲೆಂತೈ ಭರವಸದೊಳೆಯ್ದಿದಿರಿ (ಬಸವ. ೨೦-೬). ೩. ಆಸರೆ : ಅವಲಂಬನೆ : ಅರಸನ ಸಭೆಯೊಳಗೆ ಕುಜೀತು ಆಡಲು ಬೇಡ ಸರಸ ನಿಂದೆಯಲಿ ಇರಬೇಡ ಒರ್ವರಲಿ ಭರವಸವು ಬೇಡ (ಸರ್ವಜ್ಞ. ೬೪೩). ೪. ರಭಸ ; ವೇಗ ; ಬಿರುಸು : ಉಸುರ್ದ ಪಡಿಯಂ ಬೇಡಲೊಲ್ಲದೆ ಸಸಿನೆ ತನ್ನೊಡತಿಯ ಮನೆಗೆ ಭರವಸದೊಳೆಯ್ತಂದಿಂದುಮುಖಿಗಿಂತೆಂದಳಾ ದಾಸಿ (ಬಸವ. ೧೧-೨೦); ಗುರುಸುತನನೊಟ್ಟೈಸಿ ಶಲ್ಯನ ಭರವಸವ ನಿಲಿಸಿದನು (ಕುಮಾದ್ರೋ. ೫-೨೬); ಅಸುರಬಲ ವಾನರರ ಕುಸುರಿದಜೀಯಲು ಭರವಸದಿಂದ ಸಂಜೀವಿನಿಯ ತಂದು (ಪುರಂದ. ೨-೬೫-೬). ಬರವಸ: ೪. ದುರುಳಂ ಪ್ರಹಾರವರ್ಮಂ ಪರನೃಪತಿಯ ಕಿಬ್ಗೆ ಸಿಕ್ಕಿದಂ ರಾಜ್ಯಕಾಂಕ್ಷನರಸೆಂದು ವಿಕಟವರ್ಮಂ ಬರವಸದಿಂ ಪಟ್ಟಬದ್ಧನಾದಂ (ದಶಕು. ೨-೧೩೦). ೫. ಉದ್ದೇಶ : ಸಂಕಲ್ಪ : ಭರವಲ್ಶೆತಂದು ಶುಕ್ರಾಚಾರ್ಯರು ಕಾಣಾತಿವಲವರುಮತಿಥಿಪೂಜೆಯ ಮಾಡಿ ನೀ ಬಂದ ಬರವಸವದೇನೆಂದು ಕೇಳಲ್ಕೆ (ತುರಂಗ. ೯-೧೧). **ಭರವಸೆ :** ೧. ಈಯೊಂದು ಭರವಸೆಯೊಳು ನಾವು ನಡೆದಂದು ನಮಗಾವ ಭಂಗವು ಇರದು (ಇಂಗಾಕ. ೧೪೦-೯೨); ನನ್ನ ದುಃಖಕ್ಕೆ ಕಿವಿಗೊಟ್ಟು ಮರುಗಿದ್ದೀರಿ ಎಂಬ ಭರವಸೆಯಿಂದಲೇ ಬರೆಯುತ್ತಿದ್ದೇನೆ (೪ಮನ. ೨೩೦). ೬. ಆಶ್ವಾಸನೆ : ನಿಮ್ಮಿಂದ ಸಹಾಯದ ಭರವಸೆ ಬೇಕು (ಮಶಶಿ. ೮೫). ೭. (?) : ಭೂಮಿಯ ಹೊಜೆಯನಿಳುಹುವೆನೆಂದು ಬಂದವನಜಾಸಿ ಕಾಂಬುವುದಿದಾವ ಭರವಸೆ ಕಾದ ಬರಹೇಳು (ಕೌಶಿಕಾ. ೨೭-೬). **ಭರೋಸ :** ೧. ನಾಯಕರಿಗೆ ನಿಮ್ಮ ಮಾತಿನ ಮ್ಯಾಲ ಸಂಪೂರ್ಣ ಭರೋಸಾ ಅದ (ಭಾಗ್ಯಶ್ರೀ. ೨೫); ಅವಂದ್ಯಾನ ನನಗ ಭರೋಸ ಇಲ್ಲ ತಗೀರಿ (ಪತರಾ I. ೨೬೫).

**ಭರವಸೆ ಕೊಡು** = ಆಶ್ವಾಸನೆ ನೀಡು; ಮಾತು ಕೊಡು : ತಂದೆ ಭರವಸೆ ಕೊಟ್ಟರು (ಪತರಾ. II. ೧೧೧೯); ಮಂಜೂರು ಮಾಡಿಸಿ ಬಿಡುತ್ತೇನೆ ಎಂದು ಭರವಸೆ ಕೊಟ್ಟು ಹೋದ (ಹಸುಹೂ. ೩೨೦). **ಭರವಸೆ ನೀಡು** = ಭರವಸೆ ಕೊಡು : ಆಗಾಗ ಸರ್ಕಾರದವರು ತಕ್ಕ . . . ಭರವಸೆ ನೀಡುತ್ತಿದ್ದರೂ ಸಮಸ್ಯೆ ಮಾತ್ರ ಎಂದಿನಂತೆ ಬಗೆಹರಿಯದೆ ನಿಂತಿದೆ (ಬಿಕ್ಷರ. ೬೬೬). **ಭರವಸೆಯಿಡು** = ನಂಬು; ವಿಶ್ವಾಸವಿಡು : ನಿನ್ನಲ್ಲಿ ಭರವಸೆಯಿಟ್ಟು ಒಂದು ಮಾತು ಹೇಳುತ್ತೇನೆ (ಪತರಾ. ೬).

[ ← ಹಿಂ. ಭರೋಸಾ; ಮರಾ. ಭರಂವಸಾ, ಭರೋಸಾ ]

**ಭರವಸಿಕೆ** (ನಾ). ೧. ನಂಬಿಕೆ : ಗಿರಿಯ ತಜೀವರೆ ಶಕ್ರನಲ್ಲದೆ ನೆರೆದ ದಿವಿಜನಸಮೂಹ ಮಾಡುವ ಭರವಸಿಕೆ ತಾನೇನು (ಕುಮಾದ್ರೋ. ೩-೨೨); ಅಹಿತರಲಿ ಭಯವನು ಕಾಣದಣ್ಣನ ಭರವಸಿಕೆ ತಾನೆಲ್ಲಿಗೆ (ತೊರಾ. ೩-೮-೩೬). ೨. ಅಪೇಕ್ಷೆ; ಆಸೆ: ಧುರದ ಭರವಸಿಕೆಯೊಳ್ನಿಹೆನು (ತುರಂಗ. ೫೫-೪೧). ೩. ಬಿರುಸು ; ವೇಗ : ಅರಿ ಶಿಖಂಡಿಯ ಕೈಚಳಕ ಕಾಪುರವಲೇ

ಲೇಸಾಯ್ತು ಬಿಲ್ಲಿನ ಭರವಸಿಕೆಯುಮದೆನುತ ಕೈಕೊಂಡೆಚ್ಚನಾ ದ್ರೋಣ (ಕುವ್ಯಾದ್ರೋ. ೨-೯೦). [ಭರವಸ + — ಇಕೆ]

**ಭರವಸಿಗ**, ಬರವಸಿಗೆ (ನಾ). ೧. ನಂಬಿಕೆಯನ್ನು ಇಟ್ಟುಕೊಂಡಿರುವವನು : ದೇವರೋಳ್ ಭರವಸಿಗನಂತೆ! ಕಾಂಜೆಪು ದೇಪರೀತಸಂ ರಕ್ಷಿಸಲಿ! (ಗೊಮ್ಮಟಶಾ. ೦೨-೩೦೩). ೨ ಕಾರ್ಯ ಮಾಡುವವನು ; ಕೆಲಸಗಾರ : "ಕ್ರಿಯಾವಾನ್, ಉದ್ಯುಕ್ತಃ –ಈ ೨ ಭರವಸಿಗಂ" (ಶಬ್ದಮ. ೬೩-೨೨೮); "ಭರವಸಿಗನುದ್ಯುಕ್ತನಕ್ಕು" (ಕುಂಗಶಾ. ೬೮-೯). **ಬರವಸಿಗ** : ೧. ಬರವಸಿಗರೀ ನಮ್ಮನ್ನು ಸಾರ್ಥಕಪಡಿಸಿಕೊಳ್ಳಬೇಕೆಂದು ಪ್ರಾರ್ಥಿಸುವೆವು (ಪಂಕ್ರಕ. ೦೨೩-೨೩). [ಭರವಸ + — ಇಗ]

**ಭರವಸೆ** 'ಭರವಸ' ನೋ.

**ಭರವಹನ** (ನಾ). ಭಾರವನ್ನು ಹೊರುವಿಕೆ : ಸಪರ್ಥಮಾಯ್ತು. . . ಭರವಹನಕ್ಕೆ ಮುಂದುವರಿದೀಯುಭಯಪ್ರವಹಸ್ತವೊಂದು (ವಶ್ವಸಂ. ೦-೩). [ಸಂ.]

**ಭರಷಣ**. ಬರಷಣ. ಬರ್ಷಣ (ನಾ). ಅಹಿತ; ಅಪಥ್ಯ : ಅವರು–ಶುದ್ಧ ನಾಸ್ತಿಕರು. ಹಳೆಯ ದೇವರೆಂದರೆ ಅವರಿಗೆ ಭರಷಣ (ಶಾಶ.೬೩).**ಬರಷಣ** : ಇದೆಲ್ಲ ಶ್ಯಾಮರಾಯನಿಗೆ ಬರಷಣವೇ ಆಗಿತ್ತು (ಐಶಹ. II. ೦೦೦); ಅವರಿಗೆ ಈತನ ಹೊಸಮಾತುಗಳು ಬರಷಣವಾಗಿ ಆವರಿಂದ ಇವನ ಮೇಲೆ ಬಹಳ ಅತ್ಯಾಚಾರಗಳು ನಡೆಯುಬಹುದೆಂದು ತೋರುತ್ತಿತ್ತು (ಕಾಕಶಾ. ೨೦). **ಬರ್ಷಣ** : ಲಕ್ಷ್ಮಪತ್ರು ಕೇಶವನಿಗೆ ಬರ್ಷಣವಾಗಿತ್ತು (ಕಮಟಃ. ೬೭೦). [ ←ಹಿಂ. ಭರ್‌ಷನ್. / ಸಂ. ಭರ್ತ್ಸನ]

**ಭರಸಹ** (ನಾ). ಹೊರೆಯನ್ನು ತಾಳುವ ಸಾಮರ್ಥ್ಯವುಳ್ಳುದು : ಆರಯೆ ಮತ್ತವೇಂ ಭರಸಹಂಗಳೊ ಜಂಘೆಗಳಾಂತುವೀ ಕಟೀಭಾರಮಂ (ಕಂಪ್ರಕೃ. ೫-೦೦೯). [ಸಂ.]

**ಭರಾಟಿ**, ಭರಾಟೆ (ನಾ). ೧. ವೇಗ; ರಭಸ; ಆತುರ : ಇನ್ನು ಗ್ರಂಥ ಕರ್ತನಲ್ಲಿರಡು ಜಾತಿ . . . ತವುಗನಿಸಿದ್ದನ್ನು ಬರೆಯುವ ಭರಾಟಿಯಲ್ಲಿ ತಮ್ಮ ಬಗ್ಗೆ ಇತರರಿಗೇನು ಎನಿಸುತ್ತದೆಂಬುದನ್ನು ಮರೆಯುವ ಇನ್ನೊಂದು (ಹುತ್ತುಹು. ೬೩): ಓದಿನ ಭರಾಟಿಯಲ್ಲಿ ಬಿಡುವಿಲ್ಲದೆ ಬರೆಯುದಿರಬಹುದು. ಅಷ್ಟಕ್ಕೇ ನೀವು ಹೀಗೆಲ್ಲಾ ಆಲೋಚಿಸುತ್ತೀರಲ್ಲ ! (ಕುಸಂಸಂ. ೦೯೬). ೨. ಹೆಚ್ಚಳ; ಅತಿಶಯ; ಸಮೃದ್ಧಿ : ಅವುಗಳ ದೃಶ್ಯ, ಸ್ಪರ್ಶ, ಗಂಧಗಳ ಭರಾಟಿಯಿಂದ ಪರವಶನಾದ ನನ್ನ ಅಡಿಗೆಯವನು (೯೮ಶ. ೦೫೬); ಆಗ ನಮ್ಮ ಹೊಲದಲ್ಲಿ ಸೊಪ್ಪಿನ ಕಡ್ಡೆ ಬಹಳ ಭರಾಟಿಯಾಗಿ ಬೆಳೆದಿತ್ತು (ಕೃಕರ್ಜ. ೬೬). **ಭರಾಟೆ**: ೧. ನನ್ನ ತಂಗಿಯರಿಗೆ ಓದಿನ ಭರಾಟೆಯಲ್ಲಿ ಮನೆಗೆಲಸಕ್ಕೆ ಬಿಡುವಾಗಲೊಲ್ಲದು (ಅಶಾಪು. ೦೪); ಸಂಜೆಯೆಲ್ಲ ಭರಾಟೆಯಿಂದ ಆಡಿದ ಮೇಲೆ ದಣಿವಾಗದೆ ಇರುತ್ತದೆಯೇ ? (ತ್ರಾಶುಕ್ಕೆ. ೦೯೯). ೩. ಜೋರು ; ಜರಬು : ಡೆಪ್ಯುಟಿ ಕಮಿಷನರ್ ಗಾರ್ಡನ್ನನ ಅಡಳಿತವು ಭರಾಟೆಯಿಂದ ಸಾಗಿತು (ಮೂರಾಡ. ೦೬೬); ಹೌದಯ್ಯ ಮಿತ್ರ ನನ್ನ ಭರಾಟೆಯ ಕಾಲದಲ್ಲಿ ನನ್ನನ್ನು ನೀನು ನೋಡಲಿಲ್ಲ (ಮರಿಶಾ. ೬೯); ಹಿಂದಿನ ಕೆಲಸದ ಭರಾಟೆ ಈಗಿಲ್ಲ (ಕುಶಾಮ. ೦೦). [← ಮರಾ. ಭರಾಟಾ]

**ಭರಾಟೆ** 'ಭರಾಟಿ' ನೋ.

**ಭರಾಕ್ಮೌಲಿ** (ನಾ). ಚಂದ್ರಶೇಖರ ; ಶಿವ : ಚಕ್ರಧರನೇತ್ರವನಪಿಕ್ರಮ ಭರಾಕ್ಮೌಲಿ . . . ಪರಚನ್ನವೀರೇಶ ರಕ್ಷಿಸುವನು (ಪುರಪು. ೨೩-೦). [ಸಂ.]

**ಭರಾಭರಿ** 'ಬರಾಬರಿ' ನೋ.

**ಭರಾಭರಿಗೊಡು** (ಕ್ರಿ). ಓರಣವಾಗಿ ನಿಂತು ಮುಜರೆ ಮಾಡು : ವ್ಯವಸ್ಥೆಯಿಂದ ನಿಂತು ಗೌರವ ಸೂಚಿಸು : ಸೇತುಗಟ್ಟಾಗಿ ಭರಾಭರಿಗೊಟ್ಟು ಪದಾತಿಯು ಪಯು ಗುಜ ರಥವಾ ಭೂತನಾಥನು ನೋಡುತ (ಶರತ. ೨೫-೬೮); ಪಟ್ಟಗದ್ದುಗೆಗಳ ಕೊಡಿಸಿ ಕುಳ್ಳಿರಲರ್ತಿಪಟ್ಟು ಚಕ್ರೇಶನೊತ್ತಿನೊಳು ನಿಟ್ಟಿಸಿ ಕೈಮುಗಿದೊಡನೆ ಭರಾಭರಿಗೊಟ್ಟು ನಿಂದುದು ಸುರಸೇನೆ (ಶರತ. ೬೯-೨೮). 'ಭಾರಿ ಮಾಡು' ಪರಾ. [ಭರಾಭರಿ (< ಬರಾಬರಿ$_1$) + ಕೊಡು$_1$]

**ಭರಾಮು** 'ಭರವಮು' ನೋ.

**ಭರಾಯಿಸು**, ಬರಾಯಿಸು (ಕ್ರಿ). ಭರ್ತಿಮಾಡು; ತುಂಬು : ಪರೀಕ್ಷಾ ಬಂದ ಕಾಲಕ್ಕೆ ಎಲ್ಲಾ ಗೋಳೇ ಮಾಡಿ ಪೇಪರಿನಾಗ ಭರಾಯಿಸಿ ! (ಕಮಟ. ೦೫೩). **ಬರಾಯಿಸು** : ಅವರ ಹೇಳಿಕೆಯಂತೆ ಅರ್ಜಿ ಬರಾಯಿಸಿ ಅದರ ಮೂಲಕವೇ ತಹಶಿಲ್ದಾರರಿಗೆ ಕಳುಹಿಸಿದನು (ಹಹಸ. ೭೦). [ಭರ್ತ್$_0$ (P ← ಹಿಂ. ಭರಾಈ) + — ಇಸು$_3$]

**ಭರಿ** (ನಾ). ಆನೆಯ ಸೊಂಡಿಲು : ಲಿಂಗಪ್ರಾಣ ಪ್ರಾಣಲಿಂಗವಾದ ನಿರಂಗನಿರವು ಹೇಗಿರಬೇಕಂದಡೆ ಉಡಿಯೊಳಗಣ ಮಣಿಸರದಂತೆ . . . ಕರಿಯೊಳಗಣ ಭರಿಯಂತೆ ಮಣಿಯೊಳಗಣ ವಿಧ್ರದಂತೆ (ಶೂನ್ಯಸಂ. ೦೬೩-೬೦೬). [?]

**ಭರಿಕರ** (ನಾ). ಆನೆಯ ಸೊಂಡಿಲು : ಭರಿಕರ ಭರಿಕರದೊಳು ಕೊಡು ಕೊಂಡಿಲಿ ಶಿರ ಶಿರದೊಳು ತಾಗೆ ವೈರಿಗಳು ಪೊಣರ್ದವು ಮಾವಟಿಗರು ಮೇಲೆ ಶರವಾಳುಗಳೊಳು ಪೊಯ್ದಾಡೆ (ಪರಕ. ೬-೦೦೬). [ಭರಿ + ಕರ್$_3$]

**ಭರಿಕೆಯ್**, ಬರಿಕೆಯ್, ಬರಿಕ್ಕೈ$_2$, ಭರಿಕ್ಕೈ (ನಾ). = ಭರಿಕರ : ನೀರಡಿಕೆ ನೆರೆದೊಳಗುದೋಜಿ ಬಾಯೊಳ್ ಭರಿಕೆಯ್ಯನಿಟ್ಟೊಡಲೊಳಗೆ ಪೂಜಿ ಪಾಜಿ ಬೆಂದ ಪುಷ್ಕರಮಂ ಭೋರೆಂಕನೆ ತೆಗೆದು (ಗಂಕ. ೯-೨೭ ಪ); ನಿಡಿದಪ್ಪ ಕದಳಿಯ ಕಂಬ ಪೊಡವಿಯನಿಡಿದಿಜೀಡಾನೆಯ ಭರಿಕೆ[ಶಾಶಾಂ. ಕ]ಯ್ಯ ಪಡಿಯೆನೆ ರಂಜಿಸಿತು (ಶ್ರೀಶಾಂ. ೭-೨೨); ಭರಿಕೆಯ್ಯೊಳಡಸಿ ಕುದುರೆಯ ಹಿಂಡುಹಿಂಡನಿಟ್ಟೊರಿಸಿ . . . ಹೊಡೆಚೆಂಡಾಡುತಿರ್ದಂ ಗಜಾಸುರಂ ಸಂಗರದೊಳು (ತಿಶಿ. ೨೮-೨೩); ಇಂತಿದು ಭ [ಶಾಶಾಂ. ಬ] ರಿಕೆಯ್ಯನಾನದ ಮಹಾಗಜದಾನವನೋ . . . ಪೇಟಿನೆ ತೋಜಿದುದಾ ವರಾಹಕಂ (ಕಾಕಂ. ೯-೩). **ಬರಿಕೆಯ್** : ಬರಿಕೆಯ್ಯ [ಶಾಶಾಂ. ಬರಿಕ್ಕೆ]ಗ್ಗಳಂ ನೀಡಿ ಪಣ್ಣಾಯ ಲರ್ಗಳಂ ದಂತಿಗಳ್ಕೊಡುತಿರ್ಪುವು . . . ತಪೋವನದೊಳಾವಾಸವಾಗಿರ್ಪರ್ಗೆ (ಕೃವಿಶಾ. ೦೫-೨೦).**ಬರಿಕ್ಕೈ$_2$** : ಎಲವೊ ಸಾತ್ಯಕಿ . . . ಹೋಗೆನುತ ಹೆಡತಲೆಯನೊದೆದನು ನಿಂದು ಬರಿಕ್ಕೈ ಮುರಿದ ಗಜದಂತೆ (ಕುವ್ಯಾದ್ರೋ. ೦೯-೨೦); ಇರದೆ ಕಿರಾತರಾರ್ದಿಸುದಿನು ಬರಿಕ್ಕೈ ಪರಿದಾರ್ತನಿಂದೆ ಸಂಚರಿಸುವ ಮತ್ತವಾರಣಸಮೂಹವೊ (ಬಿಃರಶಾ. ೯-೯೯). **ಭರಿಕ್ಕೈ** : ಸದಮದ ಭರಿಕ್ಕೈಯೊಳಗೆ ಈರೇಳುಭುವನವನು ಒದಜಿ ಹಾಯ್ಕಿ ತಾನೆ ನಿಂದುದಲ್ಲಾ (ತನ್ಪವ. ೯. ೫೯೬-೦೩೩೨); ಕಳಚಿದನು ದಾಡೆಗಳ ಭರಿಕ್ಕೈಗಳನು ತುಂಡಿಸಿ ವಾಲಧಿಯ ಬರಸೆಳೆದು ಕೊಸಹಿದನಾನೆಗಳ (ಕುವ್ಯಾಗ. ೦-೫೮); ನೆಗಪಿ ಭರಿಕ್ಕೈಯುಸಬ್ಬಾಂಬುಗಳಂ ಬರೆ ಪೀರ್ದು ಕರ್ಣಚಾಲನದಿನವಂ ಮಿಗೆ ಪರಿಯಿಪ ಮದಕರಿಗಳ್ಪಗೆಗೊಂಡೊಡನೊಡ್ಡಿ ನಿಂದುವೆರಡುಂ ಬಲದೊಳ್ (ರಾಜಶೇ. ೬-೭೦). [ಭರಿ + ಕೆಯ್$_2$]

**ಭರಿಕೆಯ್ಬಿಲ** (ನಾ). ಸೊಂಡಿಲಿನ ತೂತು,– ರಂಧ್ರ : ನೀಡಿದ ಭರಿಕೆಯ್ಬಿಲದೊಳ್ ಕಾದೊಡೆಯುಂ ಪೊಡೆದ ಬಾಣದಿಃಭದುಸ್ತಕದೊಳ್ ಮೂಡಿದುದು (ಶಬಶಂ. ೩-೫೮). [ಭರಿಕೆಯ್ + ಬಿಲ]

**ಭರಿಕ್ಕೈ** 'ಭರಿಕೆಯ್' ನೋ.

**ಭರಿತ** (ಗು.) ೧. ತುಂಬಿರುವ; ಪೂರ್ಣವಾಗಿರುವ : ಸ್ಫುರಿಯಿಸದೆ ದಶನವಸನಾಂತರಂ . . . ಭರಿತಭ್ರೂಕುಟಿಕಲನಾಗಿರದೆ ಮುಖಂ ಗೆಲ್ದನಿಂತುಮರಿನೃಪಬಲಮಂ (ಶಬಶಾ. ೩-೦೨೨) ; ಭರಿತ ಸಪಯೌವನಸ್ತ್ರೀ ತರುಣಿಯ ಕೇಳೀವಿಶಾಳಿಕ್ಕೆಳಸ್ವಯುದಂತಿರೆ . . . ಎಸೆವತ್ತು ಕೋಮಳೆಯ ಕುಚಯುಗಳಂ (ಶಾಂತೀಶ್ವ. ೧೩-೦೯೨) ; ಭರಿತಸರಸಾಂದಲೋಚನಶರಧಿ

ಮೇಲ್ವರಿದೊತ್ತಿ ಪಸರಿಸೆ (ಬಸವ. ೬೦-೬೦). ೨. ಪೋಷಿಸಲ್ಪಟ್ಟ; ರಕ್ಷಿಸಲ್ಪಟ್ಟ. ೩. ಭಾರವನ್ನು ಹೊತ್ತಿರುವ. ೪. ಹಸುರಾದ. (ನಾ). ೫. ತುಂಬಿರುವುದು; ಪರಿಪೂರ್ಣವಾಗಿರುವುದು: ''ಆಚಿತಂ . . . ಭರಿತಂ, ಪೂರ್ಣಂ — ಈ ೯ ಸಂದಣಿ'' (ಶಬ್ದಮ. ೦೦೬-೦೭); ಬಲ್ಸರಿಗಳ ಭರಿತಂ ಸರಿಗಳ ಕಲ್ಲೋಲಕುಲಂ ಸರಿಗಳ ಘೂರ್ಣಿತದಿಂದಂ ಶರಧಿ ಕವಿದಂತೆ ಕಜ್ಜದುದಿಳೆಯೊಳ್ ವರ್ಷಂ (ಗಿರಿಜಾ. ೯-೩೦); ಧನಧಾನ್ಯ ಗೋಧನ ಸಂಪದಾದಿಗಳ್ ಭರಿತವಾಗಿಹವಾ ಮುನಿಪನಿಹ ಧರಣಿಯುಲಿ (ಕೊರಟಾ. ೦-೩-೬೦). ೬. ಹಸುರಿನಿಂದ ಕೂಡಿದುದು: ಭರಿತವಹ ಪೆರ್ಗಾನು . . . ನೋಟಕೆ ಶರಧಿ ತಾನೆಂಬಂತೆ ಪೆರ್ಗಾನೆಸೆವುದು (ಮಹಾಬ. ೦೩-೬). [ಸಂ.]

**ಭರಿತಬೋನ** (ನಾ). ದೇವತಾಪ್ರಸಾದವೆಂದು ಸೇವಿಸುವ ಆಹಾರ,- ಪ್ರಸಾದ: ಭರಿತಭೋನ ಭರಿತಬೋನವೆಂದು ಭ್ರಮೆಗೊಂಡು ಭ್ರಮಿತ ರಾದಿರಿ ಲೋಕವೆಲ್ಲ ಭರಿತಬೋನವೆ ದಿಟವಾದರೆ ಮರ್ತ್ಯದಲ್ಲಿ ಸಾಯ ಲುಂಟೆ (ಅವಶಂ. ೨೪೮-೦೦೩೦). [ಭರಿತ + ಬೋನ$_1$]

**ಭರಿತಾರ್ಪಣ** (ನಾ). ಪರಿಪೂರ್ಣವಾದ ಸಮರ್ಪಣೆ; ಎಲ್ಲವನ್ನೂ ದೇವರಲ್ಲಿ ಅರ್ಪಿಸುವುದು: ಇಂತೀ ಭರಿತಾರ್ಪಣವನಂಗೀಕರಿಸಿದ ಸರ್ವವ್ಯವಧಾನಿಯ ಎಚ್ಚರಿಕೆಯು ಮುಟ್ಟು (ಶರಣ. ೦೩೦- ೬೩೬); ಬಂದುದ ಸಾಕೆನ್ನದೆ ಬಾರದು ತಾಯೆನ್ನದೆ . . . ಲಿಂಗಕ್ಕೆ ಬಂದು ಸಂದುದ ಆನಂದದಿಂದ ಸ್ವೀಕರಿಸಿ ನಿಂದುದೆ ಭರಿತಾರ್ಪಣ (ಬಲೀಶ್ವ. ೦೪೨). [ಸಂ.]

**ಭರಿಸು** (ಕ್ರಿ). ೧. ತಾಳು; ಸಹಿಸು: ಯೌವನದಲ್ಲಿ ಬಹಳ ಕಷ್ಟವನ್ನು ಭರಿಸಲಾರದೆ ಕಾರ್ಖಾನೆಯಲ್ಲಿ ಸಿಗುವ ನಗದು ಕೂಲಿಗೆ ಆಸೆಪಟ್ಟು ನಗರಕ್ಕೆ ತೆರಳಿದರು (ಅಮ್ಮಾವ. ೦೪); ಆ ಸಂತೋಷವನ್ನು ಭರಿಸಲಾಗದೆ, ಆ ಭಾವವನ್ನು ಭರಿಸಲಾಗದೆ . . . ಬಳಲುತ್ತಿವೆ (ಬೆಳಂಬಾ. ೬೦). ೨. ಹೊರು; ವಹಿಸು; ನಿರ್ವಹಿಸು: ವಿಶ್ವಸತ್ತ್ವದ ಲಹರಿ ನಮ್ಮ ಹೊರಗೊಳಗುಗಳಲಿ ಸಂತತ ನೆರೆದು ಹರಿಯುತ್ತ ಭರಿಸುತಿರುವುದು ಬಾಳ (ಪುಂಶಾಳ. ೨೨೩). ೩. ಹೊಂದು; ಪಡೆ: ನೂರಿಂಥ ಕಾಯ ಭರಿಸಿದರು ನಿನ್ನಂಥ ತಾಯಿ ಸಿಕ್ಕಾಳೇ? (ಅರಳು. ೪೩೪-೦೩). [<ಭರಣ$_1$ + — ಇಸು$_3$]

**ಭರೂಟಕ** (ನಾ). ಕರಿದ ಮಾಂಸ: '' ತಾಳಿಸಿದಡಗು ಭರೂಟಕವೆಂಬುದು'' (ಶಬ್ದಮ. ೩೪-೦೬೮). [ಸಂ.]

**ಭರೋಸ** 'ಭರವಸ' ನೋ.

**ಭರ್ಗ** (ನಾ). ೧. ಕಾಂತಿ; ಶೋಭೆ. ೨. ಶಿವ; ಪರಮೇಶ್ವರ: ''ಈಶಾನಃ . . . ಭರ್ಗಃ, ಕೃತ್ತಿವಾಸಾಃ . . . ನೀಲಲೋಹಿತಃ — ಈ ೪೫ ಮಹಾ ದೇವರ ಪೆಸರ್'' (ಶಬ್ದಮ. ೩-೦೨); ಆನೊಂದು ಯಾಗಮನೊಡರ್ಚಿದಪೆ ನಲ್ಲಿಯುಗ್ರಪೂಜೆಗೆ ಭರ್ಗನಂ ಬಿಜಯಂಗೆಯ್ಸಿ ಕೊಡಲ್ವೇಳ್ಪುದು (ಸಂಬರ. ೦೬-೦೨೦); ಪೂಜಾಗಾರದೊಳ್ ಪೂಜಿಸಿದನವಮ ಸದ್ಭಕ್ತಿಯಿಂ ಭರ್ಗನಂ (ರಾಜಶೇ. ೦೨-೦೦೬). [ಸಂ.]

**ಭರ್ಚಿ** 'ಬರ್ಚಿ' ನೋ.

**ಭರ್ಜಕ** (ನಾ). ವಡೆ, ಚಕ್ಕುಲಿ, ಮಾಂಸ ಮೊದಲಾದುವನ್ನು ಕರಿದು, ಮಾರಿ ಜೀವಿಸುವವನು: ತೈಲಿಕರು ಹಂಚುರಿಯ ಮೂಲದಿ ಜೀವಿಸುವ ಭರ್ಜಕರು ಕಟುಕರು (ಬವೇಶ. ೪-೬೪). [ಸಂ.]

**ಭರ್ಜನ** (ನಾ). ೧. ಹುರಿಯುವುದು; ಬಾಡಿಸುವುದು. ೨. ಕರಿಯುವುದು: ಕ್ಷಾರತಪ್ತತೈಲಾವಸೇಚನಾಯುಃಸ್ತಂಭೀಪಾಕಾಂಬರೀಷಭರ್ಜನ [ವೈತರಣೀ ಮಜ್ಜನ] ಯಂತ್ರನಿಷ್ಪೀಡನಾದಿಗಳಿಂ ನಾರಕರ್ಗೆ ಸಂಕ್ಲಿಷ್ಟಾಸುರರ್ ದುಃಖಮಂ ಪುಟ್ಟಿಸಿದೊಡಂ (ಕಕ್ಷ್ಯ. ೦೨೩). ೩. ಹುರಿಯುವ ಓಡು,- ಹಂಚು. ೪. ನಾಶಮಾಡುವುದು; 'ಭರ್ಜಿಸು' ಪರಾ. [ಸಂ.]

**ಭರ್ಜರಿ** (ಗು). ೧. ಸಂಪೂರ್ಣವಾಗಿ ಜರಿಯಿಂದ ಕೂಡಿದ: ಸರಸಿಜಾನನೆ ಕುಚಭರದಿಂ ಜಾರುವ ಭರ್ಜರಿ ಶೆರಗಂ ಸೇರಿಸಿ ತನ್ನ ವರಜಾಣತನವ ತೋರಿ (ಶಾಗಂಧಿ. ೮೩-೩). ೨. ಶ್ರೇಷ್ಠವಾದ; ಭಾರಿ: ರಾಮಮಂದಿರ ದಲ್ಲಂತೂ ಭರ್ಜರಿ ಕಚೇರಿಗಳಾಗುತ್ತಿದ್ದವು (ರಾಗಿಣಿ, ೮೬); ಭರ್ಜರಿ ವಸ್ತ್ರಗಳನ್ನು ಉಟ್ಟುಕೊಂಡು ಬಂದ ಹುಡುಗಿಯರು ಆ ದಿನ ಅಪೂರ್ವವಾಗಿ ಶೋಭಿಸಿದರು (ರಂಗರೋ. ೦೦೪). (ನಾ). ೩. ಅದ್ದೂರಿ; ಆಡಂಬರ; ಜೋರು: ಭರ್ಜರಿಯಾಗಿ ಮುಗಿದ ಮದುವೆ ಬೀಗರಲ್ಲಿ ಬಹಳ ತೃಪ್ತಿಯನ್ನುಂಟುಮಾಡಿತು (ಮಣ್ಣಮ. ೦೩); ಯಾರು ಯಾರಲ್ಲಿಗೇ ಹೋಗಲಿ-ಅತಿಥಿದೇವರಿಗೆ ಆಗತಕ್ಕ ಅನನ್ಯ ಉಪಚಾರಗಳು ಭರ್ಜರಿಯಿಂದ ನಡೆಯುತ್ತಿದ್ದವು (ಕಂಬಹು. ೨). [←ಮರಾ. ಭರ್ಜರೀ]

**ಭರ್ಜಿ** 'ಬರ್ಜಿ' ನೋ.

**ಭರ್ಜಿಸು** (ಕ್ರಿ). ನಾಶಮಾಡು; ಧ್ವಂಸಗೊಳಿಸು: ದುಷ್ಟತಾರಕನಂ ಭರ್ಜಿಸಿದೀಶ್ವರನ ಕುಮಾರಕನಂ . . . ತುತಿಪೆಂ (ಉದ್ಯದೀ. ೦-೦೦).
[ಭರ್ಜನ + — ಇಸು$_3$]

**ಭರ್ತ$_1$** (ನಾ). ನಾಟ್ಯ; ಅಭಿನಯ: 'ಭರ್ತಶಾಸ್ತ್ರ' ಪರಾ. [<ಸಂ. ಭರತ]

**ಭರ್ತ$_2$** (ನಾ). ೧. ಗಂಡ; ಪತಿ: ''ಕಾಂತಃ . . . ಭರ್ತಾ . . . ಅನೂಕಃ — ಈ ೧೪ ಗಂಡಂ'' (ಶಬ್ದಮ. ೮೨-೩೪೩); ಭರ್ತನ್ನೈ [ಪಾಠಾಂ. ಕರ್ತನ್ನೆ] ತರೆ ಕಾಣುತಾ ಸತಿ ಕೂರ್ತಡಿಗಳಂ ಕರ್ಚಿ (ಬಸವು. ೩೦-೦೩); ವಧುಗಳಿಗೆ ಅಂದು ಪ್ರಾಣವಷ್ಟೆ ಪ್ರಿಯರಾದ ಭರ್ತ, ಭ್ರಾತೃ ಇಬ್ಬರೂ ದೊರಕಿದರು (ಶಾಂತಲಾ. ೦೦೦). ೨. ಒಡೆಯ; ಪಾಲಕ; ಪೋಷಕ: ''ಭರ್ತ (ಭರ್ತೃ)_ ಭರ್ತೃ - ರಕ್ಷಕ'' (ಕರ್ಣಕೋ. ೩೩); ಸರ್ವಕ್ಕೆ ಭರ್ತನು ಹರ್ತನುಂ ಪರಮೇಶನಲ್ಲದೆ ಭರ್ತ ಬೇರುಂಟೇ (ಬಸವು. ೩೪-೪). [ಸಂ. ಭರ್ತೃ]

**ಭರ್ತಶಾಸ್ತ್ರ** (ನಾ). ನಾಟ್ಯವಿದ್ಯೆ; ನಾಟ್ಯಕಲೆ: ನರ್ತಕಿಯರು ನಾಟ್ಯ ಶಿಕ್ಷಕ ಗಾಯಕ ಭರ್ತಶಾಸ್ತ್ರದಿ ಪರಿಣತರು (ಅಭ್ಯುದ. ೩-೦೨೬).
[ಭರ್ತ$_1$ + ಶಾಸ್ತ್ರ]

**ಭರ್ತಾರ** (ನಾ). ೧. ಗಂಡ; ಪತಿ: ಆಂ ಮುನ್ನಿನ ಜನ್ಮದೊಳ್ ಮನೋವೇಗೆಯೆನೆಂಬ ವಿದ್ಯಾಧರಿ ಎನ್ನಂದಿನ ಭರ್ತಾರಂ ಮಣಿಚೂಳನೆಂಬೊಂ ವಿದ್ಯಾಧರಂ (ಪಂಪಾರಾ. ೩೩-೨); ಆಕೆಯು ಭರ್ತಾರಂ ನಿಜಮಂದಿರಕ್ಕೆ ಬಂದು (ಕಂಠಾಮ. ೬-೦೨೩ ಪ); ಸಾರಿದಳು ಸರಸಿಜವದನೆ ಭರ್ತಾರನನು (ಕುಮಾರ. ೦೪-೬೮). ೨. ಒಡೆಯ; ಯಜಮಾನ: ಭರ್ತಾರಂ ನೀನೆ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೪೪). [ಸಂ. ಭರ್ತೃ]

**ಭರ್ತಾರಿ** (ನಾ). ಹೆಂಡತಿ: ಎನ್ನ ಭರ್ತಾರಿಯು ಮಾವಿನ ಹಣ್ಣನೇಕೆ ಬಯಸಿದಳ್ (ಧರ್ಮಾಮೃ. ೮-೪೩). [ಭರ್ತಾರ + —ಇ$_2$]

**ಭರ್ತಿ** 'ಭರತಿ' ನೋ.

**ಭರ್ತೃ** (ನಾ). ೧. ಗಂಡ; ಪತಿ: ಪ್ರಮದೋತ್ತಮೆಗಾಣ್ಮನ ದೆಯ್ವಮೆ ದೆಯ್ವಂ...ಭರ್ತೃವ ತತ್ತ್ವಮೆ ತತ್ತ್ವಂ (ಶಾಂತಿಪು. ೪-೦೪); ಆವಿರೆಯಿರೆ ಭರ್ತೃ ತಪಃಶ್ರೀಪಥುಗೆಳಸಿರ್ದಂ (ಪುಷ್ಪಪು. ೦೩-೪೪); ಪಲತೆಜದ ಭರ್ತೃದೈನ್ಯವ ನೋಡಿ ಪೆಣ್ಣುಡಿದುದು (ಜಗ್ಗರಾ. ೪-೩೬). ೨. ಒಡೆಯ; ಸ್ವಾಮಿ; ಯಜಮಾನ: 'ಭರ್ತೃನಿಂದಕ' ಪರಾ. ೩. ರಕ್ಷಕ; ಪಾಲಕ. [ಸಂ.]

**ಭರ್ತೃದಾರಕ** (ನಾ). ೧. ದೊರೆಯ ಮಗ; ರಾಜಪುತ್ರ. ೨. [ಕಾವ್ಯಮೀ] ನಾಟಕಾದಿಗಳಲ್ಲಿ ರಾಜಸೇವಕರು ರಾಜಪುತ್ರನನ್ನು ಸಂಬೋಧಿಸುವಾಗ ಬಳಸುವ ಶಬ್ದ: "ನಾಟ್ಯದಲ್ಲಿಯರಸಿಯರಂ ದೇವಿಯೆಂಬುದು ಕುಮಾರನು ಭರ್ತೃದಾರಕನೆಂಬುದು" (ಶಬ್ದಮ. ೦೬-೪೮): "ನರ್ತನದ ಸತಿ ದೇವಿಯಕ್ಕುಮಾ ನಂದನಂ ಭರ್ತೃದಾರಕನಕ್ಕುಂ'' (ಮಂಗರಾ. ೨೩-೦೦). [ಸಂ.]

**ಭರ್ತೃದಾರಿಕೆ** (ನಾ). ೧. ಅರಸನ ಮಗಳು; ರಾಜಪುತ್ರಿ. ೨. [ಕಾವ್ಯಮೀ] ನಾಟಕಾದಿಗಳಲ್ಲಿ ಸೇವಕರು ರಾಜನ ಮಗಳನ್ನು

ಸಂಬೋಧಿಸುವಾಗ ಬಳಸುವ ಶಬ್ದ : "ನಂದನಂ ಭರ್ತೃದಾರಕನಕ್ಕು ಮಲ್ಲಿಯ ಸಹೋದರಿ ಭರ್ತೃದಾರಿಕೆಯಕ್ಕು" (ಮಂಗರಾ. ೨೫-೦೦); "ಭರ್ತೃದಾರಿಕಾ, ತತ್ಸುತಾ ಅಂತಾ ಅರಸಿನ ಮಗಳ ಹೆಸರು"(ಸಿದ್ಧಾಂತಿ. ೯೦).
[ಸಂ. ಭರ್ತೃದಾರಿಕಾ]

**ಭರ್ತೃನಿಂದಕ**(ನಾ). ಒಡೆಯನನ್ನು ದೂಷಿಸುವವನು; ಸ್ವಾಮಿದ್ರೋಹಿ: ದಳಿತಮರ್ಯಾದನ ಕೃತಘ್ನನ ಭರ್ತೃನಿಂದಕನ . . . ವಿಗಳವೃತನ ಲೋಕಾವಳಿಗಳಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುಮಾ.ದ್ರೋ. ೮-೩೮). [ಸಂ.]

**ಭರ್ತ್ಸನ** (ನಾ). ೧. ಹೆದರಿಸುವುದು ; ಬೆದರಿಸುವುದು. ೨. ಹೆದರಿಕೆ ; ಭಯ ೩. ತೆಗಳಿಕೆ; ನಿಂದೆ; ಬಯ್ಗುಳ : "ಭರ್ತ್ಸನಂ, ಅಪಕಾರಗೀಃ—ಪರನಿಗೆ ಅಂಜಿಕೆಯನ್ನುಂಟುಮಾಡುವ ಅಪಕಾರವಾಕ್ಯದ ಹೆಸರು, ಬೆದರಿಕೆ ಸೊಲ್ಲು" (ಸಿದ್ಧಾಂತಿ. ೫೩); ಭರ್ತ್ಸನ . . . ದುರ್ಭೋಗ್ಯ ನಾನಾವಿಧಾಸಂಪ್ರಾಪ್ತತೀವ್ರ ವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರಣ್ಯದಿಂ ಮಾಳ್ಪ ಶಿಕ್ಷಾಲೇಶಮೆಂದೆನಿಸಿ (ಎವೀಳ. ೦೯೦). 'ಭರ್ತ್ಸನಂಗೆಯ್' ಪರಾ. ೪. ಶಾಪ. [ಸಂ.]

**ಭರ್ತ್ಸನಂಗೆಯ್** (ಕ್ರಿ). ಹೆದರಿಸು ; ಬೆದರಿಸು : ನೆಗಳ್ದವಳ ಕೌಟಿಲವಿದು ತನಗೆ ತಕ್ಕುದಂ ನೆಗಳಿದೊಡೆ ತಾನೆ ತೋಱುವಳೆಂದು ರಯದಿಂದೆ ಘುಗಿಲೆನುತ್ತಾ ವಿಪ್ರರುಂತೆ ಸೂರಾಂಬಿಕೆಯ ಭರ್ತ್ಸನಂಗೆಯ್ದುರೆದ್ದು (ಅರಾತ. ೦-೬-೩೯). [ಭರ್ತ್ಸನ + ಕೆಯ್$_1$]

**ಭರ್ತ್ಸನೆ** (ನಾ). ತೆಗಳಿಕೆ; ನಿಂದೆ : ಶ್ರೋತ್ರಿಯರ ಮಾತಿನಲ್ಲಿ ಭರ್ತ್ಸನೆಯ ಧ್ವನಿಯಿರಲಿಲ್ಲ (ಮಕವ್. ೦೯೦) ; ಆ ದನಿಯಲ್ಲಿ ನೋವು ತುಂಬಿತ್ತು, ಭರ್ತ್ಸನೆಯಿರಲಿಲ್ಲ (ಮಹಾಚ. ೬೨). [ಸಂ. ಭರ್ತ್ಸನ]

**ಭರ್ದಂಡು** 'ಭರದಂಡು' ನೋ.

**ಭರ್ಮ** (ನಾ). ೧. ಆಧಾರ ; ಬೆಂಬಲ. ೨. ವೇತನ ; ಕೂಲಿ; ಸಂಬಳ. ೩. ಬಂಗಾರ; ಚಿನ್ನ: "ಹೇಮ, ಸ್ವರ್ಣಂ, ಜಾತರೂಪಂ, ಸುವರ್ಣಂ, ಭರ್ಮಂ . . . ತಪನೀಯಂ—ಈ ೨೫ ಹೊನ್ (ಪೊನ್)" (ಹಲಾಯು. ೨೯-೦೯); ಜನಪ್ರಶಸ್ತಿಯುತ ಭರ್ಮಚತುರ್ಮುಖಶಾಸನಂಬೊಲುಜ್ಜ್ವಳಿಪುದು . . . ಪೂರ್ವಮಂದರಂ (ಕಂದ್ರಪು. ೦-೬೯). 'ಭರ್ಮಾಂಬರ' ಪರಾ. ೪. ಚಿನ್ನದ ನಾಣ್ಯ. ೫. ಹೊಕ್ಕುಳು. ೬. ಹೊರೆ; ಭಾರ. ೭. ಮನೆ.
[ಸಂ. ಭರ್ಮನ್]

**ಭರ್ಮಕರ್ಮ** (ನಾ). ಚಿನ್ನದ ಕೆತ್ತನೆಯ ಕೆಲಸ : ಭರ್ಮಕರ್ಮದ . . . ನಾನಾಯುಧಂಗಳ ೬ನತ್ಕನೀಕಾಂತಿಯಿಂ, ದಿವಿಜದೃಷ್ಟಿಗುಮೊಂದು ಪರ್ವಮಾದುದು (ಶಶ್ರಾಂಗ. ೮೦-೨೨೪೨). [ಸಂ. ಭರ್ಮಕರ್ಮನ್]

**ಭರ್ಮಹರ್ಮ್ಯ** (ನಾ). ಚಿನ್ನದ ಉಪ್ಪರಿಗೆ ಮನೆ: ಆ ಪುರಭರ್ಮಹರ್ಮ್ಯರುಚಿ ಪೊಂಬಿಸಿಲಾತಿರೆ (ರಾಜಶೇ. ೨-೮೯). [ಸಂ.]

**ಭರ್ಮಾಂಬರ** (ನಾ). ೧. ಚಿನ್ನದ ಜರಿಯುಳ್ಳ ವಸ್ತ್ರ ; ಪೀತಾಂಬರ ; ಜರಿಬಟ್ಟೆ. ೨. ಚಿನ್ನದ ಬಣ್ಣದ ಬಟ್ಟೆಯುಳ್ಳವನು; ಕೃಷ್ಣ : ನಿರ್ಮತ್ಸರದೊಳ್ ಕೃತಿಯ ಕೇಳ್ದವರಿಗೆ ಧರ್ಮಾರ್ಥಕಾಮಮೋಕ್ಷಗಳ ಭರ್ಮಾಂಬರನೀವ (ತೋಹಕ. ೯೨-೬೬). [ಸಂ.]

**ಭರ್ಮ್ಯ** (ಗು). ೧. ಚಿನ್ನದಿಂದ ಮಾಡಿದ : ಆ ದಿವ್ಯ ಭರ್ಮ್ಯಹರ್ಮ್ಯದೊಳು ಸುರಸತಿಗೆ ಸಮವಾದ ಸ್ತ್ರೀಯರ ಸುರತಕೇಳಿಯೊಳು ಸ್ಥಿತಿರ್ಪನೊಂದರಳ ಶಿವಗರ್ಪಿಸೆ (ಗುರುಶಾ. ೬-೦೯); ಪಟುವೆತ್ತು ಕಾಯ್ದ ಧರ್ಮೋದಕದ ಭರ್ಮ್ಯತಂಬುಗೆಗಳಲಿ ಮೊಗೆದೆರೆವುತೆ (ಪಪವೊ. ೦೩-೯೨). (ನಾ). ೨. ಚಿನ್ನ ; "ಭಂಗಾರ" (ಶತು೩. ೬. I. ೩೬). [ಸಂ.]

**ಭರ್ರನೆ** (ಅ). ಒಂದು ಅನುಕರಣಾವ್ಯಯ; ವೇಗವಾಗಿ; ಶೀಘ್ರವಾಗಿ : ಸರ್ರನೆ ಹೋಗವ್ವಾ ಭರ್ರನೆ ಬಾರವ್ವಾ (ಕನ್ನಬಾ. ೮೦).
[ಭರ್ + — ಅನೆ$_1$]

**ಭಲ** 'ಭಲಾ' ನೋ.

**ಭಲರೆ** (ಅ). ಮೆಚ್ಚುಗೆಯನ್ನು ಸೂಚಿಸುವ ಒಂದು ಭಾವಸೂಚಕಾವ್ಯಯ : ಅಪ್ಪು ಬಾಪ್ಪು ಭಲರೇ ಎನೆ ಸಂದನಿಳಾತಳಾಗ್ರದೊಳ್ (ಎಇ. XV. ೩೨೦-೨೩; 1172): ಭಲರೆ ನೃಪೇಂದ್ರಾ ದಯೆಯೊಳ್ ನೆಲೆಗೊಳಿಸಿದೆ ಮನಮಂ (ಮುಕೋಟ. ೦-೬೯); ಎಲೆಲೆ ಕವಿಕವಿ ಬೆರಸು ಬೆರಸಿಟ್ಟಳಿಸು ತಿವಿತಿವಿ ಭಲರೆ. . . ಹೊಯ್ ಹೊಯ್ ಚೂಣಿಗರನು (ಉಮ್ಮಾಧಿ. ೯-೩).

**ಭಲರೆಭಲರೆ, ಭಲಭಲರೆ** (ದ್ವಿರುಕ್ತಿ) : ಭಲರೆಭಲರೇ ತ್ಯಾಗಿ ಯಾಚಕ ಕುಲಕೆ ನೀನೊಬ್ಬನೆಯಲಾ (ಬಸಪು. ೨೨-೫೯); ಭಲಭಲರೆ ಗುರುಭಕ್ತಿ ತಿಲಕ (ಬಸಪು. ೯೫-೫೦). [<ಭಲಾ]

**ಭಲಾ, ಭಲ, ಭಲೆ** (ಅ). = ಭಲರೆ : ಹೊಲೆಯ ಮಾದಿಗ ಭಕ್ತನಾದಡೆ ಆತನ ಮನೆಯ ಸೊಣಗಂಗೆ ಪಂಚಮಹಾಪಾತಕವಲ್ಲಿ ಸನ್ಮಾನವ ಮಾಡೆನೆ ನೆಲನನುಗ್ಗಡಿಸಿ ಉಘೇ ಚಾಂಗು ಭಲಾ ಎಂದು (ಬಸವ. ೪. ೫೯೫) ; ಘೇ ! ಉಘೇ ! ಭಲಾ ! ಬಾಪ್ಪುರೇ ! (ಕಂದ್ರಸ. ೯೩-೧೮); ಭಲಾ ಜಟ್ಟಿ ಅಂದರೆ ಕೆಮ್ಮಣ್ಣು ಮುಕ್ಕಿದ (ಗಾದೆ). **ಭಲ** : "ಭಲ—ಅಖಂಡನೇ, ಮೆಚ್ಚಿನೊಳ್" (ಕಾಶಕ್ಕ. ೨೬೩); ಭಲ ಹೊತ್ತಿಗೆ ಮುಂಚೇನೇ ಬಂದೆನಲ್ಲ (ಮುಂಬರು. ೬). **ಭಲೆ** : ಉಘೆ ಚಾಂಗು ಭಲೆಯೆಂ[ಶಾಶಾಂ. ಲ 'ಎಂ]ದು ನೆಗೆವ ರಭಸಂಗಳೊಳು . . . ಶ್ರೀಗುರು ಪ್ರಭು ಬಂದ ಪುಣ್ಯದಿಂ (ರೇಣ್ವಚೋ. ೫೫-೦೦೩೬). ಭಲೆ! ಚೆನ್ನಾಗಿ ಹೇಳಿದೆ. ಇನ್ನೇನು ಕೇಳಿದಳು ? (ಶಾಂತಲಾ. ೯) ; ಈ ಚಪ್ಪರದ ಸೌಂದರ್ಯವನ್ನು ಕಂಡು ಮುಂದಾಳುಗಳು 'ಭಲೆ' ಎಂದರು (ಹಮ್ಮಿ. ೯೯). [← ಮರಾ. ಭಲ್ಲಾ./ತೆಲು. ಭಳಾ]

**ಭಲಾರಿ** 'ಭಟಾರಿ' ನೋ.

**ಭಲೆ** 'ಭಲಾ' ನೋ.

**ಭಲ್ಯ** 'ಬಲ್ಲೆಯ' ನೋ.

**ಭಲ್ಲ** (ನಾ). ೧. ಅರ್ಧಚಂದ್ರಾಕಾರವಾದ ತುದಿಯುಳ್ಳ ಒಂದು ಬಗೆಯ ಬಾಣ : ಭಲ್ಲದಿನೆಚ್ಚುಱೆ ಖಂಡಿಸಿ ಬಿಲ್ಲುಂ ಪ್ರತ್ಯೇಕಮಂತೆ ಕುಂಡಲಕೋಟೀರೋಲ್ಲಸಿತರಥಿಶಿರಂಗಳನೆಲ್ಲವನೊರ್ಮೊದಲೆ ಶಾರ್ಙ್ಗಪಜೀವಿನಮೆಚ್ಚುಂ (ಜಗ. ೦೨-೨೩); ಕರಯುಗ್ಮದಿಂ ಕಱಿದ ಭಲ್ಲದ ಸೆಲ್ಲದ ಪಿಂಡಿವಾಳದಿಟ್ಟಿಯ . . . ಸರಿಯಂ ಶರಾನಿಳವಿಘಾತದೆ ತೂಳ್ದದನಾಗಳ ಚ್ಯುತಂ (ಶರ್ಶ. ೮-೩೮). ೨. ಒಂದು ಬಗೆಯ ಆಯುಧ ; ಈಟಿ; ಭರ್ಜಿ : ಮುಸುಂಡಿ ಭಿಂಡಿವಾಳ ಶೂಲ ಭಲ್ಲ ಪತಾಕ (ಹರಿದಸಂ. ೩-೮ ಪ); ಗಜಹಯವರೂಥಾದಿ ರೋಷಕರ ಸಂದಣಿಯ ಬಾಯ ಭಲ್ಲಗಳ ಪಿಡಿದಿರ್ಪವರನಿಂಗ್ಲೀಷು ವಾದ್ಯದವರ (ಪರ್ಕವ. ೩-೯೬). ೩. ಕರಡಿ; ಭಲ್ಲೂಕ : "ಋಕ್ಷಃ, ಅಚ್ಛಃ, ಭಲ್ಲಃ, ಭಾಲ್ಲೂಕಃ, ಭಲ್ಲೂಕಃ — ಈ ೫ (ಕರಡಿ)" (ಹಲಾಯು. ೩೯-೬೩); ಆಳಿ ನಿಜಾಸ್ಯದಿಂ ನಿಮಿರೆ ಪುತ್ತಿನ ಬಾಯ್ದಲೆಯೊಳ್ ಪಿಪೀಲಿಕಾಮಾಳೆಗೆ ಪಾಸಿ ನಾಲಗೆಯ ನೊಂದು ಭಯಂಕರ ಭಲ್ಲಮುಲ್ಲಸದ್ಬಾಳತಮಾಳಗುಲ್ಮದೊಳಗಿರ್ಪುದು (ಪುಷ್ಪ. ೫-೬೨) ; ಘೋರಾಟವಿಯೊಳ್ ಭಲ್ಲ ವ್ಯಾಘ್ರಕ್ರೋಧಿಸಿ ೬ಲ್ಲೆರ್ದೆಯಿಂ ತನ್ನನುಟ್ಟಿದು ಪೋಪುದು ಗುಣವೇ (ಪಳಶಂ. ೫೯೯). [ಸಂ.]

**ಭಲ್ಲಾತ** (ನಾ). = ಭಲ್ಲಾತಕ : " ಭಲ್ಲಾತಮರುಷ್ಕಂ " (ಶಸ್ತ್ರಕೋ. ೩೯ ೯). [ಸಂ.]

**ಭಲ್ಲಾತಕ** (ನಾ). ಗೇರುಮರ ಮತ್ತು ಅದರ ಫಲ : " ಭಲ್ಲಾತಕಂ ಗೇರು " (ಮಂಗರಾ. ೩೫-೦೩); ತಿಲ ಭಲ್ಲಾತಕಮಂ ಮೇಣ್ ನೆಲದಾಟು ಮಸಲ್ಲದುದು ಚಿತ್ರಕಮಂ ಗೋಜಲದೊಳ್ ಕುಡಿದಳೆಗೊಬುಣೆ ಕೆಲವುದೆವಸಕ್ಕೆ ಕಿಡುಗುಮುರುಸೆಯ ಮೊಳೆಗಳ್ (ಕೋಕೋಶ. ೯-೦೯೩); ತಿಲಂ ಮಾಷಮುಂ ವರಭಲ್ಲಾತಕದಿಂದೆ ತೋವರಿ ಕಱುಂಕೆಯ್ದೋದಮಂ . . .

ಬೆಳೆಯಿಕುಂ ಜೋಳಂ ಮಹೀಭಾಗದೊಳ್ (ಅಬ್ಬಪು. ೪-೧೧). [ಸಂ.]

**ಭಲ್ಲಾತಕಿ** (ನಾ). = ಭಲ್ಲಾತಕ : "ವೀರವೃಕ್ಷಃ , ಅರುಷ್ಕರಃ, ಅಗ್ನಿಮುಖೀ, ಭಲ್ಲಾತಕೀ – ೪ ಗೇರುಮರದ ಹೆಸರುಗಳು" (ಸಿದ್ಧಾಂತ. ೧೨೦); ಒಳವುಗದರಿವಿನೊಳೊಂದಿ ಭಲ್ಲಾತಕಿಫಳಬೀಜದಂದದಿಂದೆಸೆವನು (ಶರಶೋ. ೧-೭-೧); ನೆಲ್ಲಿ ಪೇರಿಲು ಮಾವು ಬದರಿ ಬಸರೀಗಿಡಂ ಭಲ್ಲಾತಕೀ ಪೂಗತ್ಯಾಗ (ಸಿದ್ಧ ಶಾ. ೬-೦೭). [ ಸಂ. ಭಲ್ಲಾತಕೀ ]

**ಭಲ್ಲಾಸನ** (ನಾ). ಬಿಲ್ಲು: ಪಂಚಸಪ್ತತ್ಯುತ್ತರಶತಶ್ರುತಭಲ್ಲಾಸನೋತ್ಸೇಧನುಂ ಪದ್ಮಾಂಗಪ್ರಮಿತಜೀವಿತನುಮಪ್ಪ ಎಂಟನೆಯ ಮನು ಪುಟ್ಟಿ (ಆದಿಪು. ೩-೬೯ ವ). [ ಸಂ. ]

**ಭಲ್ಲುಂಕಿದಂಡ** (ನಾ). ನರಿಯ ಚಿಹ್ನೆಯುಳ್ಳ ದಂಡ (?) : ಕರಡಿಯ ಕೂದಲನ್ನು ಕಟ್ಟಿರುವ ದಂಡ (?); P ಇದು ಪ್ರಾಚೀನ ಕರ್ನಾಟಕದ ವರ್ತಕಶ್ರೇಣಿಯು ತಮ್ಮ ಗುರುತಿಗಾಗಿ ಹಿಡಿಯುತ್ತಿದ್ದ ದಂಡವಿರಬಹುದೇ? : ವೀರಬಣ್ಣಂಜುಧರ್ಮರುಂ . . . ಭಲ್ಲುಂಕಿದಂಡಹಸ್ತರುಮಪ್ಪ . . . ಜಯಪತಿಸೆಟ್ಟಿ ಮುಖ್ಯಮಾಗಿ (ಎಕ. XIII, ೨೦-೯೬ : 1024); ಭಗವತೀದೇವಿಲಬ್ಧವರಪ್ರಸಾದರುಂ ಸಮಸ್ತಭಲ್ಲುಂಕಿದಣ್ಡಹಸ್ತರಪ್ಪ ತೆಂಕಣಚಿಬಡಗ ಹಿಮಸೇತುಮಾದಿಯಾಗಿ ಸಮಸ್ತನಾನಾದೇಸಿಗಳುಂ ಸೆಟ್ಟಿಯರುಂ ಸೆಟ್ಟಿಗುತ್ತರು(೦) (ಸೌಇಇ. IX-i. ೨೨೩-೯೨; 1127). [ ಭಲ್ಲುಂಕಿ$_0$ (P ← ಪ್ರಾ. ಭಲ್ಲುಂಕೀ) + ದಂಡ ]

**ಭಲ್ಲುಕ** (ನಾ). ಒಂದು ಬಗೆಯ ಕಾಡುಪ್ರಾಣಿ ; ಕರಡಿ : "ಭಲ್ಲೂಕಃ . . . ಭಾಲ್ಲೂಕಃ – ೪ ಕರಡಿಯ ಹೆಸರುಗಳು" (ಸಿದ್ಧಾಂತ. ೦೫೩); ಒಳ್ಳೆ ಹೆಬ್ಬಾವಹುದೆ ರಾತ್ರಿಯ ಕಳ್ಳ ವೀರನೆ ಗದ್ದ ಬೆಳೆದರೆ ಭಲ್ಲುಕನು ಪಂಡಿತನೆ (ಕೌತಾ. ೨೨-೧೦); ತೃಪ್ಪಜಠರದ ಭೀಮಭೀಷ್ಮಭಲ್ಲುಕವೊಂದು ಚರಿಸುತ್ತೈತಂದು (ತತ್ತ್ವಾಂಗ. ೦೫-೩೯೯). [ ಸಂ. ]

**ಭಲ್ಲೂಕ** (ನಾ). = ಭಲ್ಲುಕ: "ಋಕ್ಷಃ , ಅಚ್ಛಃ , ಭಲ್ಲಃ , ಭಾಲ್ಲೂಕಃ, ಭಲ್ಲೂಕಃ –ಈ ೫ (ಕರಡಿ)" (ಕಬಾಮು. ೩೬-೬೩); ಕಾಳ್ಗೊಳ್ಗಣ ಕಂಟಕನೆಂಬ ಭಲ್ಲೂಕಮಲ್ಲನೆಂಬ . . . ಪರಿಪರಿಯ ಬಿರುದುಲಿವ ಬಾವುಲಿಯ ಬುನ್ನಿಗಳು ನೆರೆದವಂದವನೀಶನೋಲಗದೊಳು (ಹತಕಾ. ೫-೬); ಉಗ್ರಭಲ್ಲೂಕವೃಕಾದಿ ದುಷ್ಟಮೃಗಸಂಕುಲದಿಂ . . . ಪುದಿದರಣ್ಯವನೆಯ್ದಿದನುರ್ವರಾಧಿಪಂ (ಶಕಸಂ. ೩೨೦); ಎತ್ತಲುಂ ಮೊಱೆವ ಸಿಂಹ ಶಾರ್ದೂಲ ಭಲ್ಲೂಕ ವೃಕ ಸೂಕರಾದಿ ದುಷ್ಟಮೃಗಂಗಳ ನಿಷ್ಠುರಧ್ವನಿಗಳ್ಳುವೆನಯ್ ! (ರಾಮಾಶ್ವ. ೩೪-೩). [ ಸಂ. ]

**ಭಲ್ಲೆ** (ನಾ). ೧. ಈಟಿ ; ಭರ್ಜಿ : ಆನೆ . . . ತನ್ನ ಮೇಲೆ ಕುಳಿತಿರುವವನಿಗೆ ಪೆಟ್ಟು ಬೀಳದಿರಲೆಂದು ಶತ್ರುವು ಎಸೆದ ಭಲ್ಲೆಗೆದುರಾಗಿ ತನ್ನ ಪಾದವನ್ನು ಒಡ್ಡಿ ಮೇಲೆ ಕುಳಿತಿರುವವನನ್ನು ರಕ್ಷಿಸುತ್ತದೆ (ಕೃವಾಇ. II, ೦೩೦) ; ಬಿಲ್ಲ ಬಾಗಿಸಲಹುದು, ಭಲ್ಲೆ ಬಾಗಿಸಬಹುದೆ ? (ಹಿತ್ತಿರ. ೫-೭೦). ೨. ಭಲ್ಲೆಯಂತೆ ನೀಳವಾದ ಜೋಳದ ಕಡ್ಡಿ, – ಕಾಂಡ : ಮುಂಜಾವಿನಿಂದಲೂ ಪಕ್ಕಳಲ್ಲಿ ಭಲ್ಲೆಯ ಬಗ್ಗೆ ಮೇಲಾಟ ನಡೆದಿದೆ, ಒಬ್ಬರಿಗಿಂತಲೂ ಒಬ್ಬರು ದೊಡ್ಡ ಭಲ್ಲೆಯನ್ನು ತಮ್ಮ ಹೊಲಗಳಿಂದ ತರುತ್ತಿದ್ದಾರೆ (ಕಶಿಗ. ೦೫). [ ಸಂ. ಭಲ್ಲ ]

**ಭಲ್ಲೆಯ** 'ಬಲ್ಲೆಯ' ನೋ.

**ಭಲ್ಲೆಹ** 'ಬಲ್ಲೆಯ' ನೋ.

**ಭವ** (ನಾ). ೧. ಇರುವಿಕೆ ; ಇರವು ; ಅಸ್ತಿತ್ವ. ೨. ಹುಟ್ಟು ; ಉತ್ಪತ್ತಿ: "ಭವವೆನೆ ಪುಟ್ಟುವುದು" (ಶಾರದಾ. ೨೩) ; ಅಜ್ಞಾನದೆ ಜನನಿಯ ಜಠರದಲ್ಲಿ ಬಾರದ ಭವಂಗಳಲ್ಲಿ ಬರಿಸಿದೆ ತಂದೆ (ಬಸವ. ೨೦). ೩. ಹುಟ್ಟಿನಿಂದ ಸಾವಿನ ವರೆಗಿನ ಅವಧಿ ; ಜೀವಿತಕಾಲ : ಎನಿತೆನಿತು ಕಟಿದ ಭವವಂ ನೆನೆವಪೆಯಿನಿತೆನಿತು ಭವದ ಬಂಧುಗಳಂ ನೀಂ ನೆನೆದಪೆ (ಅಶಪು. ೨-೬೦) ; ಪೋದ ಭವಂಗಳೊಳ್ ನೆರಪಿದೊಂದು ತಪಂ ಫಲಮಾಯ್ತು (ಜಗು. ೬-೮೪) ; ಬಂದ ಭವದ ಬವಣೆಯೊಂದದಂತು ಮುಂದಣ ಭವದ ಭಾವಂ ಬಾರದಂತು ತಡೆಗೆಯ್ವುದೇ ಮೇಲ್ (ರಾಮಾಶ್ವ. ೭೬-೨). ೪. ಸಂಸಾರ ; ಪ್ರಾಪಂಚಿಕ ವ್ಯವಹಾರ : ಕೂಡಲ ಸಂಗನ ಶರಣರ ಅನುಭಾವದಿಂದ ಎನ್ನ ಭವದ ಕೇಡು ನೋಡಯ್ಯಾ (ಬಸವ. ೪. ೮೪೦) ; ಶಸ್ತ್ರಧಾರಾಪರಮತೀರ್ಥಸ್ನಾನ ತೊಳೆವುದು ಭವದ ಕಿಲ್ಬಿಷವ (ಕುಮಾರವ್ಯಾ. ೦೫-೨೦) ; ಸಮತೆ ಸಂಯಮಶಮಂಗಳಿಂ ಭವವನೋಲಗಿಸೆ ಸಮನಿಪ್ಪುದು ಮತಿಯ ಹದಮಾತ್ಮಾನುಭವಕೆ (ಮಂಕುತಿ. ೬೦೪). ೫. ಪ್ರಪಂಚದ ಉತ್ಪತ್ತಿಗೆ ಕಾರಣನಾದವನು; ಶಿವ; ಪರಮೇಶ್ವರ : "ಈಶಾನಃ . . . ಭವಃ, ಭೂತೇಶಃ . . . ನೀಲಲೋಹಿತಃ — ಈ ೪೫ ಮಹಾದೇವರ ಪೆಸರ್" (ಕಬಾಮು. ೩-೧೧) : ಭವಲಲಾಟವಿಲೋಚನಾಗ್ನಿಶಿಖೆಯಿಂ ಬೆಂದಳ್ಕಿ ಮತ್ತಂ ಮನೋಭವನೆಚ್ಚಿತ್ತೊಡೆ (ಶಬರಾ. ೭-೨೪) ; ಚಂಡಾಂಶು ಶುಭ್ರಾಂಶುಗಳ್ ಭವನೇತ್ರಂ (ಸೋಮೇಶ. ೮೬) : ಭವನ ಶಕ್ತಿಗೆ ಮಿಗಿಲು ರಾವಣನೆನುತ ನಡೆತಂದ (ಕೌತಾ. ೨೨-೧೯). ೬. ಸಂಸಾರವುಳ್ಳವನು : ಪರನಪರಾ ಭವಸಭವಂ . . . ಕ್ಷರನಕ್ಷರನೆನಿಪಗಣಿತವಿರುದ್ಧಗುಣಾ ನಿನ್ನ ನಿಜಮದೇಂ ಕೇವಳಮೋ (ಜಗು. ೩-೯೭). ೭. ಮರುಹುಟ್ಟು ; ಪುನರ್ಜನ್ಮ : "ಮರಳಿ ಹುಟ್ಟುವುದಜಲ್ಲಿ ಭವಮೆಂಬುದಕ್ಕು" (ಮಂಗರಾ. ೦೪೦-೦೦) ; "ಪುನರ್ಭವದೊಳ್ ಶಿವನೊಳ್ ಭವಾಹ್ವಯಂ" (ನಾಚಿರಾ. ೦೦೫). ೮. ಕ್ಷೇಮ ; ಸೌಖ್ಯ : "ಆ ಭವಂ ಭದ್ರಮೆಂಬುದು" (ಮಂಗರಾ. ೦೩೯-೫). ೯. [ಜೈನ] ಜಿನ ; ತೀರ್ಥಂಕರ : ಭವನ ತನು ಭಾಳಮಂಡದ ನವಮಂಡನದಿಂದಮೊಪ್ಪೆ (ಶಾಂತಿಪು. ೦೦-೬೦). ೧೦. ೬ ವಿಧ ಸಂಸಾರಗಳಲ್ಲಿ ಒಂದು : ಅವಜೊಳ್ ದ್ರವ್ಯಕ್ಷೇತ್ರಕಾಲ ಭವಭಾವಭೇದದಿಂ ಪಂಚವಿಧಂ ಸಂಸಾರಂ (ಆದಿಪು. ೦೦-೬೩ ವ). ೧೧. [ಛಂದ] ಗುರುವಿನ ಸಂಕೇತ : ನನ ಭವಯುತದಿಂ ವನರುಹವದನೇ . . . ಜನನುತ ಸುಲಭಂ (ಛಂದೋಂಬು. ೨-೬೦); ದಿವಿಜಪುರಯುಗಯುಗದೆ ನಿಲಲನಿಲಂ ಶೀತಕರತ್ರಿತಯಂ ಕಡೆಯೊಳ್ ಭವನಿರೆ ಕರಿಗಿರಿ ಗಣನೆಗಳೊಳಂ ತಟ್ಟಿಸೆಗಂ ಪದವಿಶ್ರಮಣಂ ಭುವನದೊಳತಿಶಯಮುತ್ತರಮಿದು . . . ಹಂಸಪದಂ (ಛಂದೋಂಬು. ೨-೦೯೬). [ಸಂ.]

**ಭವಂಗಬೀಜ** (ನಾ). ಒಂದು ಬಗೆಯ ವನಸ್ಪತಿ : ಟಣೀಗೊನ್ನೆ, ಭವಂಗಬೀಜ, ಗಂಗುಂಗಮಂಬು, ಕಂಗೋಂದಿಬಳ್ಳಿ, ಗವಸಗೊಂಗೆ (ವ್ಯಾಶಿಂ. ೦೯-೩೨೦). [ ? + ಬೀಜ]

**ಭವಂಗಳೆ** (ಕ್ರಿ). ಸಂಸಾರವನ್ನು ಪರಿಹರಿಸು, – ನೀಗು : ಎನ್ನಯ ಹಿಂದನೆಚ್ಚಜಿಸಿ ಕರುಣದಿಂ ಮುಂದಣ ಭವಂಗಳೆವ ತಂದೆ ನೀನಿರಲಾವ ದಂದುಗವುದಿಲ್ಲ (ಚೆಂಪು. ೬-೮). [ಭವ + ಕಳೆ$_1$]

**ಭವಂಗಿಡಿಸು** 'ಭವಗೆಡಿಸು' ನೋ.

**ಭವಂತಿ, ಬಾವಂತಿ** (ನಾ). ಮನೆಯ ನಡುವೆ ಇರುವ ಅಂಗಳ ; ತೊಟ್ಟಿ : ನಡುಮಣ ಭವಂತಿಗಂ ಪಚ್ಚೆಯರಳೆಲೆಸಾಲನೊಡರಿಚಿಯ (ಪಶಪೋ. ೨೦-೦೩); ವೇಣುಪುರದರಮನೆಯಂ ರಾಜನ ಭವಂತಿ ಪೊಸಭವಂತಿ ಐದಂಕಣಮಪ್ಪರಿಗೆ ಪಸಂತಮಹಲ್ ಚಂದ್ರಮಹಲ್ಗಳೆಂಬೀ ಸ್ಥಾನಗಳಂ ವಿಸ್ತಾರಂಗೆಯ್ಸಿ (ಕಳಪ್ಪ. ೦೦-೯೫). ಬಾವಂತಿ : ನಾಯಕರ ಮನೆಯ ದನಗಳನ್ನು ಕಾದುದಕ್ಕೆ . . . ಅವರ ಬಾವಂತಿಮನೆಯ ಒಂದು ಮೂಲೆಯಾದರೂ ಆಸರೆಯಾಗಿತ್ತು ಇವನಿಗೆ (ಶಿಲುಬು. ೨).
[←ತೆಲು. ಭವಂತಿ, ಬವಂತಿ]

**ಭವಕರ್ಮ** (ನಾ). ಸಂಸಾರಕ್ಕೆ ಕಾರಣವಾದ ಕರ್ಮ : ನಿಮ್ಮ ಮಾಣದೆ ನೆನೆವವಂಗೆ ಭವಕರ್ಮವೆಲ್ಲಿಯದೊ ಕೂಡಲಸಂಗಯ್ಯಾ (ಬಸವ. ೮೬೦).
[ಸಂ. ಭವಕರ್ಮನ್]

**ಭವಕ್ಷಯ** (ನಾ). ೧. ಸಂಸಾರದ ನಾಶ. ೨. ಸಂಸಾರವನ್ನು ನಿವಾರಿಸುವವನು : ದಕ್ಷಮುಖಕ್ಷಯಾಯ ಭವಕ್ಷಯಾಯ ನಮೋ (ಬಸವು. ೬೦-೪೬). [ಸಂ.]

**ಭವಗೆಡಿಸು, ಭವಂಗಿಡಿಸು** (ಕ್ರಿ). ೧. ಸಂಸಾರದಿಂದ ಬಿಡುಗಡೆಮಾಡು, -ಮುಕ್ತಗೊಳಿಸು : ಸಮ್ಯಜ್ಞಾನವೆಂಬ ದಳ್ಳುರಿ ಸೌರಾಷ್ಟ್ರಸೋಮೇಶ್ವರನ ತೋಱಿ ಭವಗೆಡಿಸಿತ್ತು (ಅರವ. ೩೩-೯೩). ೨. ಹಾಳುಮಾಡು ; ನಾಶಗೊಳಿಸು : ತಾಟಿ ಪಡೆದ ಮಕ್ಕಳನು ಭವಗೆಡಿಸಲೆಂದೇ ನಿಖಿಳಗೋಕುಲವ (ತಿಕಾಗ. ೦೦-೮-೨೩). **ಭವಂಗಿಡಿಸು** : ೧. ಭವಂಗಿಡಿಸುವೋಲಗಕ್ಕೆ ಭವಬೇಸಱೆಂ ಪೋಕೆ ಪೋ ಭವಂ ಭವದುಪಾಂತದಲ್ಲಿಯೆ ಮನೋಭವಧ್ವಂಸಕಾ (ಅರವು. ೦೩-೬೩). [ಭವ + ಕೆಡಿಸು₁]

**ಭವಗೆಡು** (ಕ್ರಿ). ೧. ಸಂಸಾರಬಂಧನದಿಂದ ಮುಕ್ತನಾಗು ; ಹುಟ್ಟುಸಾವುಗಳಿಂದ ಪಾರಾಗು : ಗುಹೇಶ್ವರನೆಂಬ ಲಿಂಗದ ಪೂಜಿಸಿ ಭವಗೆಟ್ಟೆ ನಾನಯ್ಯ (ಅವತಂ. ೫೯-೩೯೩); ಸೋಂಕದ ಮುನ್ನವೆ ಸಂಭಿಧಾನಪ್ರಸಾದಿ ಅರ್ಪಿಸದ ಮುನ್ನವೆ ಅವಧಾನಪ್ರಸಾದಿ ಆಱುವಜಿತು ಭವಗೆಟ್ಟ ಪರಿಣಾಮಪ್ರಸಾದಿ (ಅವತ. ೨೪-೩೩). ೨. ಸಾಂಸಾರಿಕಕ್ಲೇಶಗಳಿಂದ ತಪ್ಪಿಸಿಕೊ : ಕಾಯದ ಕರದಲ್ಲಿ ಲಿಂಗವ ಪಿಡಿದು ಬಾಯಾಱಿ ಭವಗೆಟ್ಟು ನಾಣುಗೆಟ್ಟು ನಾನಾರೆಂಬುದನಱಿಯದೆ . . . ಜೀವರ ಬೇಡುವ ಜಾರರಿಗೆಲ್ಲಿಯದೋ ಸಿ ಕಳಂಕಮಲ್ಲಿಕಾರ್ಜುನಾ (ಪೋಲಿಸವಾ. ೨೪-೯೩); ಭವಗೆಟ್ಟು ಬಂದ ಮಗಳೆಂದು ಕರುಣದಿಂ ತೆಗೆದು ಬಿಗಿಯಪ್ಪಿದರೆ ಚೆನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದೆನು (ಮಹಾದೇ. ಬಿ. ೬೬-೦೯೩) ; ಕುಲಗೆಟ್ಟೆನು ಛಲಗೆಟ್ಟೆನು ಸಂಗಾ ನಿನ್ನ ಪೂಜಿಸಿ ಭವಗೆಟ್ಟೆನು ನಾನಯ್ಯಾ (ಬಸವ. ೩೨೨).

[ಭವ + ಕೆಡು₁]

**ಭವಗೇಡಿ** (ನಾ). ೧. ಸಂಸಾರದಿಂದ ನಿವೃತ್ತನಾದವನು; ಸಂಸಾರವನ್ನು ತೊರೆದವನು : ಭಕ್ತನಾಗಿ ಭವಗೇಡಿಯಾಗಬೇಕು ಇದು ಗುಱಿ ಭವಗೇಡಿಯಾಗದವ ಬುದ್ಧಿಗೇಡಿ (ಅಶತ. ೯೭೩). ೨. ಸಂಸಾರಬಂಧನವನ್ನು ಹಾಳುಮಾಡುವವನು ; ಮೋಕ್ಷವನ್ನು ಕೊಡುವವನು : ಬೇಡಿಕೊಂಡುಣಹೋದೆ ನಿನಗಾನೂಡಿ ಮಾಡಿದುದೆಯ್ದದೇ ಭವಗೇಡಿ ಮಗನೇ (ಬಸವು. ೦೩-೨೮). [ಭವ + ಕೇಡಿ₁]

**ಭವಚಾತುಷ್ಟಯ** (ನಾ). [ಜೈನ] ದೇವ, ಮನುಷ್ಯ, ತಿರ್ಯಕ್ ಮತ್ತು ನರಕಗಳೆಂಬ ನಾಲ್ಕುಬಗೆಯ ಗತೀ–ಸಂಸಾರ : ಕಷ್ಟತರವುಂ ಕಷಾಯಚತುಷ್ಟಯದೆಡೆಗಿಡಿಪ ದೇವ ಕಿಡಿಸಿಯೆ ಭವಚಾತುಷ್ಟಯಮುಂ (ಅಶವು. ೩-೭೩). [ಸಂ.]

**ಭವತಾರಿಣಿ** (ನಾ). ಸಂಸಾರದಿಂದ ಪಾರು ಮಾಡುವವಳು : ಪರಮೇಶ್ವರಿ : ತಪಸ್ಸಿನ ಕಡಲಿನಲ್ಲಿ ಜಡವಾಗಿ ಬಿದ್ದಿದ್ದ ಸಮಾಜಪುರುಷನನ್ನು ಎಚ್ಚರಿಸಲು ಭವತಾರಿಣಿಯೇ ಬೇಕಾಗಿತ್ತು (ರಾಜ್ಯೋದ. ೪೯). [ಸಂ. ಭವತಾರಿಣೀ]

**ಭವತಿ** (ನಾ). ಗೌರವಾನ್ವಿತಳಾದ ಮಹಿಳೆ ; ಪೂಜ್ಯೆ : ಭುಜಗಪಕ್ಷಪುರಗಣಬುಜದೊಳಾಱಱಿಕೊಳಪ್ಪದುಗಣೇಳೆ ಭವತೀ (ಶಂದೋಂಬಾ. ೩-೩೦೭); " ಭವತಿ ಭಿಕ್ಷಾಂದೇಹಿ " ಎಂಬುದಿದುವೆ ಕಬ್ಬಿಗರ್ಗೆ ಸಿದ್ಧಿಸಿದ ಪೆರ್ಮೆಯ ಸಪ್ತಾಕ್ಷರೀಮಂತ್ರಂ (ರಾವತಾಕ್ಕ. ೦೦೯-೦೯). [ಸಂ. ಭವತೀ]

**ಭವತ್ಕಾಲ** (ನಾ). [ವ್ಯಾಕ] ಈಗ ನಡೆಯುತ್ತಿರುವ ಕಾಲ ; ವರ್ತಮಾನಕಾಲ : ಭಾವಿ ಭವತ್ಕಾಲಂಗಳೊಳಾ ವಿಹಿತವಿಭಕ್ತಿಯಾದಿಗಳೊಳಾಗಮದ್ವಿತಾಪೊಲ್ಲರ್ ಕೆಲಬರ್ ಭಾಷಾವಿದರುದ್ವಾದಿಯಕ್ಕುಮದುಮಂ ಪ್ರಾಯಂ (ಕಾವ್ಯಾವ. ೩೯೦). [ಸಂ.]

**ಭವದೀಯ** (ಗು). ನಿನಗೆ ಸಂಬಂಧಿಸಿದ ; ನಿನ್ನ : ಭವದೀಯ ಪದನಖ್ಯಾಲೋಲವಿಲೋಚನಮುದಿತರಾಗಮಣಿಪಿಹಿತಮಂ . . . ಪೋಲ್ಗುಂ (ಕಬರಾ. ೩-೯೩) ; ಬಂದು ತಂದೆಯಂತಿರೆ ಪದೆದಾ ಮಹಾಪುರುಷನಾಱಿಸಿದಂ ಭವದೀಯ ಶೋಕಮಂ (ಕಾದಂಪೂ. ೯೪೪) : ಭವದೀಯ ಮನೋಹರಬಾಲ್ಯವಿನೋದಾಮೃತದೊಳೆಪ್ದಿ ಶೀವಿದ ಮತ್ಸ್ವಾಂತೆವನಿಂತೀ ವಿಷದಿಂ ತೀವುವುದೇ (ಜಗಿ. ೩-೯೩). [ಸಂ.]

**ಭವದೂರ** (ನಾ). ೧. ಸಂಸಾರದಿಂದ ದೂರವಾಗಿರುವವನು; ಪ್ರಾಪಂಚಿಕ ವ್ಯವಹಾರಗಳನ್ನು ತೊರೆದಿರುವವನು ; ವಿರಕ್ತ : ಪೊರೆವುದೆಮ್ಮನು ದುರಮುಹಿಮಾಗಾರ ಬಸವಕುಮಾರ ಭವದೂರ (ಬಸವು. ೦-೬). ೨. ಶಿವ : ಸೋಮಧರ . . . ಅನತಕಲ್ಪಭೂಮಿರುಹ ಭವದೂರ(ಚೆನ್ನಿಶರಾ. ೩-೦). [ಸಂ.]

**ಭವನ** (ನಾ). ೧. ಇರುವಿಕೆ ; ಅಸ್ತಿತ್ವ. ೨. ಹುಟ್ಟು ; ಜನನ. ೩. ವಾಸಿಸುವ ಸ್ಥಳ ; ಮನೆ ; ಗೃಹ : " ಆವಾಸಃ , [ಅ]ವಸಥಂ, ಗೃಹಂ, ಭವನಂ . . . ಆಲಯಃ — ಈ ೩೧ ಮನೆ " (ಶಬ್ದಮ. ೪೯-೦೩೬). ೪. ದೊಡ್ಡಮನೆ ; ಪ್ರಾಸಾದ ; ಸೌಧ : ಧನದ ಭವನಮೆನಿಪ ಸಿರಿಯ ಬಚ್ಚರಾಪಣಂಗಳಿಂ (ಶಂಶಪಾ. ೦-೩೬ ರಗಳೆ); ವಸುಧೆಗೆ ಗುಡಿಕವಿದಂತೆಸೆಯಿಂ ಬಾಸಣಿಸಿ . . . ಎಸೆದುವು ಭುವನೈಕಭವನದಂತಾ ಭೂಜಂ (ಜಗಂ. ೪-೯೩); ಹಿರಿಯ ಭವನದ ಸುತ್ತುವಳಯದ ಮುರುಹಿನಲಿ ಮನೆಮನೆಗಳು (ಕುಮ್ಯಾಲ. ೮-೬೦). ೫. ಸ್ಥಳ ; ಜಾಗ. ೬. ಹೊಲ ; ಕ್ಷೇತ್ರ. ೭. [ಜ್ಯೋತಿ] ಗ್ರಹಗಳಿರುವ ಮೇಷ ಮೊದಲಾದ ದ್ವಾದಶರಾಶಿ : ಭವನಂ ದ್ವಾದಶಭಾಗಂ ನವಾಂಶಕಂ . . . ಇನಿತುಂ ಷಡ್ವರ್ಗಮೆಂಬ ಪೆಸರಿಂ ಪ್ರವರ್ತಿಕುಂ (ಜಾತಕ. ೦-೪೩). [ಸಂ.]

**ಭವನಮಹತ್ತರದೇವ** (ನಾ). = ಭವನವಾಸಿ : ವಿವಿಧಾರ್ಥ್ಯಕರರ್ ಕಣ್ಣುಜ್ಜುಗದಿಂ ಭವನಮಹತ್ತರದೇವರ್ ಕ್ರಮದಿಂ ಬರೆ (ಶಂಪ್ರತು. ೪-೬೩ ರಗಳೆ). [ಸಂ.]

**ಭವನವಾಸಿ** (ನಾ). [ಜೈನ] ದೇವತೆಗಳ ಒಂದು ಪಂಗಡ ; P ಇವರಲ್ಲಿ ಅಸುರಕುಮಾರರು, ನಾಗಕುಮಾರರು, ಸುಪರ್ಣಕುಮಾರರು, ದ್ವೀಪಕುಮಾರರು, ಉದಧಿಕುಮಾರರು, ವಿದ್ಯುತ್ಕುಮಾರರು, ಸ್ತನಿತಕುಮಾರರು, ದಿಕ್ಕುಮಾರರು, ಅಗ್ನಿಕುಮಾರರು ಮತ್ತು ವಾತಕುಮಾರರು ಎಂಬ ಹತ್ತು ವರ್ಗಗಳಿವೆ : ದೇವಾಃ — ದೇವರ್ಕಳ್, ಚತುರ್ನಿಕಾಯಾಃ — ಭವನವಾಸಿ ವ್ಯಂತರ ಜ್ಯೋತಿಷ್ಕ ವೈಮಾನಿಕ ಭೇದದಿಂ ಚತುಃಸಂಘಾತಮನುಳ್ಳರಪ್ಪರ್ (ತತ್ತ್ವಸೂ. ೦೭೯). [ ಸಂ. ಭವನವಾಸಿನ್]

**ಭವನವಾಸಿಕ** (ನಾ). [ಜೈನ] ಭವನವಾಸಿ ದೇವತೆಗಳು ವಾಸಿಸುವ ಲೋಕ : ಸುರನಿಳಯವು ಮೇಲೆ ಮನುಜರುಮಧ್ಯದಿ ಉರಗರು ಭುವನವಾಸಿಕ [ಕಾಕಾಂ.ಗ]ದಿ ಉರು ದಹಿಖಿಪಡುವನಾರಕರು ಕಳಗೆಯೆಂದು ಪರಮಾಗಮದಿ ಪೇಳುವದು (ಅನಂತ. ೦-೩೨). [ಸಂ. ಭವನವಾಸಿಕಾ]

**ಭವನವಾಸಿಗ** (ನಾ). = ಭವನವಾಸಿ : ಅಲ್ಲಿ ದೇವಗತಿ ನಾಲ್ಕಕ್ಕುಮೆಂತೆನೆ ಭವನವಾಸಿಗ ವಾನವ್ಯಂತರ ಜ್ಯೋತಿಷ್ಕ ಕಲ್ಪವಾಸಿ ಭೇದಭಿನ್ನತ್ವದಿಂ (ಶಾಂತಿಪು. ೦೨-೩ ವ) ; ಅಸುರ ನಾಗ ವಿದ್ಯುತ್ ಸುಪರ್ಣ ಅಗ್ನಿ ವಾತ ಸ್ತನಿತ ಉದಧಿ ದ್ವೀಪ ದಿಕ್ಕುಮಾರ ದಶವಿಧ ಭವನವಾಸಿಗರುಂ (ಕೃತಿಚಾ. ೬-೪). [ ಭವನವಾಸಿ + –ಗ ]

**ಭವನಾಂಗ** (ನಾ). [ಜೈನ] ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; ಮನೆಗಳನ್ನು ಕೊಡುವುದೆಂದು ನಂಬಲಾದ ವೃಕ್ಷ : ಭವನಾಂಗಂ ಕಲ್ಪಭೂಜಂ ಸಮೆದ ಬಹುವಿಧೋತ್ತುಂಗಹರ್ಮ್ಯಾವಳೀ ಗರ್ಭವಿಲಾಸಾವಾಸದೊಳ್ (ಶಂಪ್ರತು. ೩-೩೯). [ಸಂ.]

**ಭವನಾಂಗಭೂಜ** (ನಾ). = ಭವನಾಂಗ : ಸ್ನಿಗ್ಧದಮಾದ ಭೋಗಭೂಮಿಯ ಭವನಾಂಗಭೂಜದ ವಿಗುರ್ವಣೆ ಸಂಶಯಮೇವುದೆಂಬ ನಿಶ್ಚಯಮನೊಡರ್ಚಿ (ಮಲ್ಲಿಕು. ೨-೬೩) [ಸಂ.]

**ಭವನಾಮರ** (ನಾ). = ಭವನವಾಸಿ : ವಿಮಾನಾರೂಢಕಲ್ಪಜಜ್ಯೋತಿಷ್ಕವಾನವ್ಯಂತರ ಭವನಾಮರನಿಕಾಯಪರಿವೇಷ್ಟಿತಶೋಭಿತಮತಿರುಚಿರನಿಜಾಂಗರುಚಿಗಳೊಳಂ (ಆದಿಪು. ೧೦-೧೬ ಪ) ; ಚಮರವೈರೋಚನಪ್ರಮುಖರಪ್ಪ ಭವನಾಮರರುಮಂ . . . ಸಿರವಿಸಿ (ಚಂದ್ರಪ್ರ. ೧೨-೧೦೩ ಪ). [ಸಂ.]

**ಭವನಾಶಿ** 'ಬವನಾಶಿ' ನೋ.

**ಭವನಿಕೆ** (ನಾ). ಅರಮನೆ ; ಪ್ರಾಸಾದ : ಅವನಿಪತಿ ಮಱುದಿವಸ ಬೀಡೆತ್ತುವ ನಿಧಾನವನಱಿದು ರಾಯನ ಭವನಿಕೆಯ ಹೊಱಬಾಹೆಯಲಿ ದಂಡಿಗೆಯನವನಿಳಿದ (ಕುಮಾ.ಭಾ. ೦೩-೨೬). [ಸಂ. ಭವನಿಕಾ]

**ಭವನಿರ್ಲೇಪ** (ನಾ). ಸಂಸಾರದಲ್ಲಿ ಆಸಕ್ತಿಯಿಲ್ಲದವನು ; ವಿರಕ್ತ : ತಾಪಸರು ಬಳಿವಿಡಿದು ಬರೆ ಬಳಿಕಾ ಪುರವ ಹೊಱವಂಟು ಭವನಿರ್ಲೇಪ ಭೀಷ್ಮ ದ್ರೋಣರನು ಕಳುಹಿಸಿದನು ಮನೆಗಳಿಗೆ (ಕುಮಾ.ಭಾ. ೦೩-೮). [ಸಂ.]

**ಭವನಿವಾರಣ** (ಗು). ೧. ಸಂಸಾರವನ್ನು ಪರಿಹರಿಸುವ ; ಪ್ರಾಪಂಚಿಕ ಕ್ಲೇಶಗಳನ್ನು ನಿವಾರಿಸುವ : ಭವನಿವಾರಣ ಭಾವವ್ಯೋಹನ ಭಾವನ ಭೂಷಣ ರಾಮಕಥೆಯಿಂದ ಕವಿಕುಲೋತ್ತಮ ಹೊಗಳಿದನು ವಾಲ್ಮೀಕಿ ಮುನಿರಾಯ (ತೊರವೆ. ೧-೯೯). (ನಾ). ೨. ಸಂಸಾರವನ್ನು ಪರಿಹರಿಸುವಂಥದು : ನೈಜವಪ್ಪನುಸಾರಿವೇಷವು ಭವನಿವಾರಣವು (ಬಸವಪು. ೩-೬೮). [ಸಂ.]

**ಭವಪರಿಣತಿ** (ನಾ). ಮತ್ತೆ ಮತ್ತೆ (ರೂಪಾಂತರದಿಂದ) ಹುಟ್ಟುವಿಕೆ ; ಜನ್ಮಪರಿವರ್ತನೆ : ದಯಿತಾಸಂಬಂಧಬಂಧಂ ಭವಪರಿಣತಿ ತನ್ಮೂಲಮಿಾ ಬೇಷಸಂ ನಿಶ್ಚಯಂ (ಶಾಂತಿಪು. ೯-೦೪). [ಸಂ.]

**ಭವಪರಿಣಾಮ** (ನಾ). = ಭವಪರಿಣತಿ : ಸಂಜಯನೆಂಬೊಂ . . . ಕಾದಿ ಸತ್ತು ಭವಪರಿಣಾಮಪರಾವರ್ತನದಿಂ ಬಂದು (ಶಾಂತಿಪು. ೯-೯೦ ಪ). [ಸಂ.]

**ಭವಪರಿವರ್ತನ** (ನಾ). = ಭವಪರಿಣತಿ : ಚತುರ್ಗತಿಗಳೊಳಂ ಸರ್ವಜಘನ್ಯಮಪ್ಪಾಯುಷ್ಯದೊಳ್ ತೊಡಗಿ ಸಮಯಾದಿಕಾನುಕ್ರಮದಿಂದನೇಕ ಭವಪರ್ಯಾಯಪರಿಭ್ರಮಣದಿಂ ಬಂದು ಪುಟ್ಟುತ್ತುಂ ಕಡೆಯೊಳುತ್ಕೃಷ್ಟಾಯುಷ್ಯಮನೆಯ್ದೆ ನೆಱೆಯಿಸುವ ನೆಱವಿ ಭವಪರಿವರ್ತನಮೆಂಬುದು (ಸುಕುಮಾ. ೬-೬ ಪ). [ಸಂ.]

**ಭವಪಾಶ** (ನಾ). ಸಂಸಾರ ಬಂಧನ ; ಪ್ರಾಪಂಚಿಕ ಬಂಧನ : ಭವಬಂಧನ ಭವಪಾಶವಾದ ಕಾರಣವೇನಯ್ಯಾ (ಬಸವ. ೭) ; ಬಿಡಿಸಿ ವಧೂಜನಮನೊಡಂಬಡಿಸಿ ಪಿತೃದ್ವಯಮನಖಿಳವಿಷಯಸುಖಕ್ಕೋಗಡಿಸಿ ಭವಪಾಶಮಂ ಪಱಿಪಡಿಸಿ (ಪುಷ್ಪ. ೦೩-೬೩) ; ವಿರೋಧಿ ಷಡ್ವರ್ಗದ ವಿಕಾರವ್ಯಾಧಿಯಲಿ ಬೆಂಡಾಗಿ ಭವಪಾಶದಲಿ ಬಿಗಿವಡೆದು (ಕುಮಾ.ಭಾ. ೩-೨೯). [ಸಂ.]

**ಭವಪ್ರತ್ಯಯಜ್ಞಾನ** (ನಾ). [ಜೈನ] "ಕಾಲ ದೇಶಗಳು ಎಷ್ಟೇ ದೂರವಾಗಿದ್ದರೂ ಅಲ್ಲಿನ ವಿಷಯಗಳನ್ನು ತಿಳಿಯುವುದು ; ಹಿಂದೆ ನಡೆದ, ಮುಂದೆ ನಡೆಯುವ ಸಂಗತಿಗಳನ್ನು ಇದರಿಂದ ತಿಳಿಯಬಹುದು ; ದ್ರವ್ಯಕ್ಷೇತ್ರ ಕಾಲಭವಗಳನ್ನು ಅವಧಿಮಾಡಿಕೊಂಡು ಇಂದ್ರಿಯಗಳಿಗೆ ಅಗೋಚರವಾದ ವಿಷಯಗಳನ್ನು ತಿಳಿಯುವ ದಿವ್ಯಜ್ಞಾನ. ಇದು ದೇವ ನಾರಕರಿಗೆ ಸಹಜವಾಗಿರುತ್ತದೆ. ಹೀಗೆ ಸಹಜವಾಗಿ ಬರುವ ಅವಧಿಜ್ಞಾನಕ್ಕೆ 'ಭವಪ್ರತ್ಯಯಜ್ಞಾನ' ಎಂದೂ ಹೆಸರು" (ಕೈಪಿಡಿ. ೨೩) : ಭವಪ್ರತ್ಯಯಜ್ಞಾನಂ ತೊಟ್ಟನೆ ಪುಟ್ಟೆ ಪೂರ್ವಭವದೊಳ್ ತೊಟ್ಟೊಂದು ವೃತ್ತಾಂತಮಂ ನೆಱೆಯಱಿದು (ಆದಿಪು. ೨-೬೬) ; ಪುಟ್ಟಿತ್ತಾ ನಾಕೇಂದ್ರಂಗೆ ನಿಷ್ಕಾಕುಲಮಮಳಭವಪ್ರತ್ಯಯಜ್ಞಾನಮಾಗಳ್ (ಸುಕುಮಾ. ೯-೨೩) ; ಅಂತು ಪಲಕಾಲಮೇನಾನುಮಂ ಮಾಡಿ ಮಱೆದವಂಗೆ ನೆನವಿ ಪುಟ್ಟುವಂತೆ ಪುಟ್ಟಿದ ಭವಪ್ರತ್ಯಯಜ್ಞಾನಪ್ರಭಾವದಿಂದಂ (ಚಂದ್ರಪ್ರ. ೯-೬೩ ಪ). [ಸಂ.]

**ಭವಬಂಧ** (ನಾ). = ಭವಪಾಶ : ಪೂರ್ವಜನ್ಮನಿವೃತ್ತಿಯಾಗಿ ಗುರುಕರುಣವಿಡಿದಂಗೆ ಬಂಧನವೆಲ್ಲಿಯದೊ ಭವಬಂಧ[ಪಾಠಾಂ. ಬಂಧನ]ವೆಲ್ಲಿಯದೊ (ಬಸವ. ೬೬೦); ಎನ್ನದಾನೆಂಬೆರಡಱಿಂದವೆ ಬನ್ನಬಡುವನು ಜೀವನಲ್ಲದೆ ಮುನ್ನವಿನ್ನೆಂದೆಂದಿಗಾತ್ಮಂಗಿಲ್ಲ ಭವಬಂಧ (ಕುಮಾ.ವ್ಯಾ. ೭-೨೮). [ಸಂ.]

**ಭವಬಂಧನ** (ನಾ). ೧. = ಭವಪಾಶ : ಭವಬಂಧನ ಭವಪಾಶವಾದ ಕಾರಣವೇನಯ್ಯಾ (ಬಸವ. ೭); ಲಿಂಗವರಾಜ್ಯಮುಖಿರನಾಗಳು ಭಜಿಸಿ ಭವಬಂಧನಕ್ಕೊಳಗಾಗದೆಂತಿಹರು (ಬಸವಪು. ೩೦-೩೦) ; ಕರ್ಮದಿಂದಲ್ಲವೇ ಜೀವಿಯು ಬದ್ಧನಾಗಿ ಭವಬಂಧನದಲ್ಲಿ ಬಿದ್ದು ಒದ್ದಾಡುತ್ತಿದ್ದಾನೆ ? (ಶಾರದಾ. ೦೦೩). ೨. ಸಂಸಾರದಲ್ಲಿ ಸಿಕ್ಕಿ ಬಿದ್ದವನು : ಆಶೆಯೆಂಬ ಪಾಶದಲ್ಲಿ ಭವಬಂಧನನಾಗಿರ್ದೆನಯ್ಯಾ (ಬಸವ. ೬೯). [ಸಂ.]

**ಭವಬಡು** (ಕ್ರಿ). ಹುಟ್ಟು ಸಾವುಗಳ ಕಷ್ಟವನ್ನು ಅನುಭವಿಸು : ಅಶುಭಕರ್ಮಕೆ ಶುಭಕರ್ಮಕೆ ಸರ್ವರು ವಶರಾಗಿ ಭವಬಡುತಿಹರು (ಶರಶ. ೬೮-೦೦೩). [ಭವ + ಪಡು$_1$]

**ಭವಬದ್ಧವೈರ** (ನಾ). ಜನ್ಮಾಂತರದಲ್ಲಿ ಉಂಟಾದ ಮತ್ಸರ; ಜನ್ಮಾಂತರೀಯ ದ್ವೇಷ : ಪುಟ್ಟಲೊಡಮಱಿದು ಮೊದಲೊಳ್ ಪುಟ್ಟಿದ ಭವಬದ್ಧವೈರದಿಂ ದಿಶಿಸುತನನ್ನುಟ್ಟಾಗೆ (ಶಾಂತಿಪು. ೯-೧೯); ಭವಬದ್ಧವೈರಮಂ ತಿಳಿದು ವಿಭಂಗಜ್ಞಾನದಿಂದೆ . . . ನವಖಂಡಮಾಗೆ ಮಾಱಿದರ್ ನವನಾರಕರಂ ಪುರಾಣನಾರಕರಾಗಳ್ (ಪುಣ್ಯಪು. ೦೩-೦೬೩). [ಸಂ.]

**ಭವಬಾಧೆ** (ನಾ). ಸಂಸಾರದ ತೊಂದರೆ,–ತಾಪತ್ರಯ : ಬೋಧನಿರಾಕೃತಿಯಿಂ ಭವಬಾಧಾಪೀಡಿತಶರೀರಿಯಾದ್ಯೆ (ಸುಕುಮಾ. ೩-೨೬). [ಸಂ. ಭವಬಾಧಾ]

**ಭವಭೋಗ** (ನಾ). ಸಂಸಾರಸುಖ ; ಇಹಲೋಕದ ಸುಖ : ಅಪಾರ ಭವಭೋಗಮನಿಂತಿರೆ ಪತ್ತುವಿಟ್ಟು ಕಾನನದೊಳಿ ನಟ್ಟು ನಿಂದು (ಜಾದಂಪು. ೯೬೦). [ಸಂ.]

**ಭವಭ್ರಮಣ** (ನಾ). ಜನ್ಮಚಕ್ರದಲ್ಲಿ ಸುತ್ತುವುದು ; ಮತ್ತೆಮತ್ತೆ ಹುಟ್ಟಿ ಸಾಯುವುದು : ಇವನಾದಿಪ್ರಭವಂ ಭವಭ್ರಮಣದುಃಖೋಗ್ರಾಗ್ನಿಯೊಳ್ ಮಗ್ಗಿದಪ್ಪುದು ಜೀವಂಗಳನೆಂಬಿನಂ (ಆದಿಪು. ೦೩-೦೯). [ಸಂ.]

**ಭವಮಥನ** (ನಾ). ಜನ್ಮಕರ್ಮವನ್ನು ನಾಶಮಾಡುವವನು; ಮುಕ್ತಿದಾಯಕ : ಭವಗಹನದುಪದ್ರವಮಂ ಕಿಡಿಸು ಭವಾಂತಕಭವನಕ್ಕುಯ್ ತಡೆಯದೆನ್ನ ನೀಂ ಭವಮಥನಾ (ಆದಿಪು. ೦೦-೩೮). [ಸಂ.]

**ಭವಮಾಲೆ** (ನಾ). ಹುಟ್ಟು ಸಾವುಗಳ ಪರಂಪರೆ; ಜನ್ಮಚಕ್ರ : ಆಸೆಗೆ ಹುಟ್ಟಿದ ಪ್ರಾಣ ಆಸೆಯನೆ ಕಲಿತು ಪುಣ್ಯಪದವಿಯ ಬಯಸಿದರೆ ಭವಮಾಲೆಯ ಭರವು ತಪ್ಪದು (ಬಸವ. ೦೨೯); ವಿವೇಕಶೂನ್ಯನು ತಿರುಗುವವನು ಭವಮಾಲೆಯಲಿ ಮೋಕ್ಷವನಪೇಕ್ಷಿಸದೆ (ಅಮೃತ. ೦-೩೯) ; ಭವಮಾಲೆ ಸಱಿದು ಸುಖಿಸುವೊಡೆ ಅವ ಸದಾಶಿವನು ತಾನಕ್ಕು (ಸರ್ವಜ್ಞ. ೩೦೩). [ಸಂ. ಭವಮಾಲಾ]

**ಭವಮುಕ್ತ** (ನಾ). ಸಂಸಾರದಿಂದ ಬಿಡುಗಡೆ ಹೊಂದಿದವನು : ಶಿವಭಕ್ತಿಯುಳ್ಳಾತ ಭವಮುಕ್ತನಾದಾತ (ಸರ್ವಜ್ಞ. ೨೬೯). [ಸಂ.]

**ಭವರಮ್ಮ** (ನಾ). ಪಾರ್ವತಿಯ ಹೆಸರುಗಳಲ್ಲಿ ಒಂದು ; ಭ್ರಮರಾಂಬ : ಅವ್ವ ಅವ್ವ ಎಂದು ಭವರಮ್ಮನ ಕರೆವನು ಯಾವ ನೆವ ಎನಗೆ ಹೇಳದಿರು ನಿಮ್ಮಾಗಲಿ ಜೀವ ಬೇಸರಾಯ್ತು ಪಡೆದವ್ವ (ಸಿದ್ಧಪು. ೩-೯೩). [< ಸಂ. ಭ್ರಮರಾಂಬಾ]

**ಭವರಾಟಳ** 'ಭವಜಾಟಣ' ನೋ.

**ಭವರಿಪು** (ನಾ). ೧. ಸಂಸಾರಕ್ಲೇಶವನ್ನು ನಿವಾರಿಸುವವನು ; ಪರಮಾತ್ಮ. ೨. [ಜೈನ] ಅರ್ಹಂತ ; ಜಿನ : ಇಂದ್ರ ಭವರಿಪುವಂ

ಸ್ತುತಿಯಿಸಿ ಮುಕುಟವಿಘಟ್ಟಿತಪಾದನಾದನನುನಯದಿಂದಂ (ಶಿಕ್ಕ್ಷು. ೦೦-೩೮). [ ಸಂ. ]

**ಭವರುಜೆ** (ನಾ). ರೋಗದಂತೆ ಕ್ಲೇಶವನ್ನುಂಟುಮಾಡುವ ಸಂಸಾರ ; ಐಹಿಕವ್ಯಾಪಾರ : ನಾನಾಭವರುಜೆಯೊಳು ಬಿದ್ದೆಂ ತೊಳಲ್ದೆಂ ಬಳಲ್ದೆಂ (ಶಂಕೆಶ. XVII. ೨೩೪). [ ಸಂ. ಭವರುಜಾ ]

**ಭವರೋಗ** (ನಾ). = ಭವರುಜೆ : ಭವರೋಗವ ಗೆಲುವ ಪರಿಯ ನೋಡಾ (ಬಸವ. ೬೩೩); ಭವರೋಗಕ್ಕಿದು ಭೇಷಜಂ (ಪ್ರಶಪ. ೨೭-೨೩). [ ಸಂ. ]

**ಭವರೋಗವೈದ್ಯ** (ನಾ). ಸಂಸಾರದ ತಾಪತ್ರಯಗಳನ್ನು ಪರಿಹರಿಸುವವನು; ಪರಮೇಶ್ವರ : ಭವರೋಗವೈದ್ಯನೆಂದು ನಾ ನಿಮ್ಮ ಮರೆಹೊಕ್ಕೆ (ಬಸವ. ೯೬೨); ಪವಡಿಸು ಪರಮಾತ್ಮನೆ ನೀನು ಭವರೋಗ ವೈದ್ಯ ಭಕ್ತರ ನಿಧಿಯೆ (ಪುರಂದ. ೩-೦೩೦ ಪಲ್ಲವಿ); ಮುಂದೇನು ತೋರದೆ ದೈವವೆ ಶರಣೆಂದೆ ಭವರೋಗವೈದ್ಯನ ನೆನೆದೆ (೧೦ಶಾಶ. ೯೯-೩೯). [ ಸಂ. ]

**ಭವರೋಗಿ** (ನಾ). ಸಾಂಸಾರಿಕ ಕಷ್ಟಗಳನ್ನು ಅನುಭವಿಸುತ್ತಿರುವವನು : ರಾಗದಿಂದುರಿದೇಳುತಿಹ ಭವರೋಗಿ ನಿನ್ನಲಿ ಮಾತನಾಡಲಿಕಾಗದು (ಪ್ರಭುಲಿ. ೦೩-೨೯). [ ಸಂ. ಭವರೋಗಿನ್ ]

**ಭವಸ್ಮರಣೆ** (ನಾ). ಹಿಂದಿನ ಜನ್ಮದ ನೆನಪು ; ಜನ್ಮಾಂತರದ ಸ್ಮೃತಿ : ಮಱುಯಂಚೆಯ ಮುದ್ದುಗೆಯ್ತುಮುಸುನಂಚೆವಾಳತಿಯಾ ಮಱಯೊಳಾ ದೆಱಕಮುಮಂ ಕಂಡೆನಗೆ ತೋಱುತ್ತುಂ ಭವಸ್ಮರಣೆ ತೊಟ್ಟನೆ ಪುಟ್ಟೆ (ಪುಂಪು. ೯-೨೩). [ ಸಂ. ಭವಸ್ಮರಣ ]

**ಭವಸ್ಮೃತಿ** (ನಾ). = ಭವಸ್ಮರಣೆ : ವೇದನಿವಹಸ್ಮೃತಿಶಾಸ್ತ್ರ ಕಳಾಕಳಾಪಸಂಪನ್ನತೆಯೆಂತು ಬಂದುದು ಭವಸ್ಮೃತಿ ಪುಟ್ಟಿತೊ ಮೇಣ್ ವರಪ್ರಸಾದೋನ್ನತಿಯಾದುದೋ (ಕಾದಂಪೂ. ೯೦). [ ಸಂ. ]

**ಭವಹರ** (ನಾ). ಸಂಸಾರದ ದುಃಖವನ್ನು ನಾಶಮಾಡುವವನು : ನತವಿನೇಯವ್ರಾತ ಚೇತಸ್ಸಮೋಹರನಾಗಿರ್ದುದಱಿಂ ಹರಂ ಭವಹರಂ ಮಾಣಿಕ್ಯದೇವಂ (ಅಜಿಪು. ೦೩-೬); ಭವಹರ ನಿರೀಕ್ಷಿಸು ರಕ್ಷಿಸೆನ್ನನೆನುತ ಹೊರಳಿದನು (ಕುಮಾಲಿ. ೩-೭೩). [ಸಂ.]

**ಭವಹರೆ** (ನಾ). ಸಂಸಾರದ ದುಃಖವನ್ನು ದೂರಮಾಡುವವಳು ; ಮುಕ್ತಿದಾಯಿನಿ : ಶ್ರೀಮತ್ಪ್ರಾಲೇಯಶೈಲೋದ್ಭವೆ ಶಿವೆ . . . ಭವಹರೆ ಶರ್ವಾಣಿ (ರಾಶಶೇ. ೩-೦೩೮). [ ಸಂ. ಭವಹರಾ ]

**ಭವಜೂಟಣ, ಭವರಾಟಳ, ಭವಜೂಟಳ, ಭವಜೂಟಾಳ** (ನಾ). ಪುನಃಪುನಃ ಹುಟ್ಟುವುದು ; ಜನ್ಮಚಕ್ರ : ಭವಭವದಲ್ಲೆನ್ನ ಮನವು ಸಿಲುಕದೆ ಭವಜೂಟಣ [ಪಾಠಾಂ.-ಟಳ, ಟಾಳ]ದೊಳು ತುಂಬಿದೆ (ಬಸವ. ೬೮). ಭವರಾಟಳ : ಬೋಧಿವುರದ ಅಡಿಯಲ್ಲಿ ಭವರಾಟಳದ ಕಾರಣಗಳ ಕುಣಿಕೆಯನ್ನು ಕಂಡುಕೊಂಡನು (ತೀನಾಶ್ರೀ. ೦೦೨). **ಭವಜೂಟಳ** : ಮೇಲಿನ 'ಬಸವ' ಪ್ರಯೋಗದ ಪಾಠಾಂತರವನ್ನು ನೋಡಿ. **ಭವಜೂಟಾಳ** : ಅಱುಹು ಆಚಾರಹೀನವಾದ ಗುರುಲಿಂಗಜಂಗಮವ ದೇವರೆಂದು ಪೂಜಿಸುವ ಭಕ್ತಂಗೆ ಭವಜೂಟಾಳದಲ್ಲಿ ಸತ್ತುಸತ್ತು ಹುಟ್ಟಿಬಪ್ಪುದು ತಪ್ಪದಯ್ಯ (ಅಂದಿ. ೦೩೭-೦೦೬). [ಭವ + ಜೂಟಣ]

**ಭವಜೂಟಳ** 'ಭವಜೂಟಣ' ನೋ.

**ಭವಜೂಟಾಳ** 'ಭವಜೂಟಣ' ನೋ.

**ಭವಾಂತಕ** (ನಾ). ಸಂಸಾರದ ಕೋಟಲೆಗಳಿಗೆ ಯಮಸ್ವರೂಪನಾದವನು; ದೇವರು : ಅಂತ್ಯರಹಿತನಪ್ರಮೇಯನನಂತರೂಪನನಂಘ್ರಿ ಭುಜಭವಾಂತಕನನುದ್ದಂಡದೈವವ ಕಂಡನಬುಜಭವ (ಕುಮಾಲಿ. ೬-೦೮). [ ಸಂ. ]

**ಭವಾಂತರ** (ನಾ). ಬೇರೆಯ ಹುಟ್ಟು ; ಜನ್ಮಾಂತರ : ನೆನೆದಂ ವಿಭಂಗದಿನತೀತಭವಾಂತರಭೂರಿವೈರಮಂ (ಶಾಂತಿಪು. ೭-೦೦೪); ಈಗಳಾಗಿಯುಂ ನೆನೆದು ನಿರಾಕುಳಂ ಬಗೆದು ಭಾವಿಸು ನಿನ್ನ ಭವಾಂತರಂಗಳಂ (ಸುಕುಮಾ. ೫-೨೯) ; ಪ್ರಥಮ ಭವಾಂತರದಲ್ಲಿ ಶಿಲಾದನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಭೃತ್ಯನ ಮಾಡಿಯೆನ್ನನಿರಿಸಿಕೊಂಡಿರ್ದಿರಯ್ಯಾ (ಬಸವ. ೪); ಕಣ್ಣು ಱಯದೊಡಂ ಕರುಳ್ ಱಯದೆ ಮಱುಗಿಸದಿರ್ಪುದೆ ಭವಾಂತರವ್ಯಾಮೋಹಂ (ಮುಕುಮಾ. ೩-೪೪). [ ಸಂ. ]

**ಭವಾದ್ರಿ** (ನಾ). ಶಿವನು ವಾಸಮಾಡುವ ಬೆಟ್ಟ ; ಕೈಲಾಸಪರ್ವತ : ಮನುಜನನೆನ್ನನೀಕ್ಷಿಸಿ ಭವಾದ್ರಿಯನೇಱದೆ . . . ನಭಕ್ಕೊಗೆದಾಗಳೆ ಪೋಗದಿರ್ದೊಡೊಯ್ಯನೆ ಬೆಸಗೊಳ್ವೆಂ (ಕಾದಂಪೂ. ೬೮೩). [ಸಂ.]

**ಭವಾನಿ** (ನಾ). ಶಿವನ ಹೆಂಡತಿ ; ಪಾರ್ವತಿ : "ರುದ್ರಾಣೀ, ಶರ್ವಾಣೀ, ಕಾಳೀ, ಕಾತ್ಯಾಯನೀ, ಭವಾನೀ . . . ಮೇನಕಾತ್ಮಜಾ—ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪-೦೩); ಎಲ್ಲಿ ನದೀನದಾಳಿ ತಾನಲ್ಲಿ ಭವಾನಿ ಭಕ್ತಿ ಮಿಗೆ ಭಾವಿಸಿ ಭರ್ಗನನೊಲ್ದು ಪೂಜಿಪಳ್ (೧೦೪. ೩-೮೨); ಪಾಲಿಸೆನ್ನಂ ಭೀಮಾಘಮರ್ದಿನಿ ಭವಾರ್ದಿನಿ ನೀಂ ಭವಾನೀ (ರಾಶಶೇ. ೪-೦೨೩). [ಸಂ. ಭವಾನೀ]

**ಭವಾನೀಧವ** (ನಾ). ಪಾರ್ವತಿಯ ಪತಿ ; ಪರಮೇಶ್ವರ : "ಭವನೀಶಂ . . . ಭವಾನೀಧವನುಗ್ರಂ . . . ವಾಮದೇವಂ ವೃಷಾಂಕಂ" (ಪಟ್ಟು. ಕೋ. ೩-೦೩); ಇದು ಕೈಲಾಸಂ ಭವಾನೀಧವನ ನೆಲೆ (ಶಂಕರಪು. ೭-೭೪). [ಸಂ.]

**ಭವಾರಿ** (ನಾ). ೧. ಸಂಸಾರಕ್ಕೆ ಶತ್ರುವಾದವನು ; ಸಾಂಸಾರಿಕ ಕ್ಲೇಶಗಳನ್ನು ನಿವಾರಿಸುವವನು : ಶಿವ : ಭದ್ರಾರೂಢ ಭವಾರಿ ಭರ್ಗಮೃಡನಂ . . . ನಾಡೆ ನೆನೆದಂ (ಹರ್ಷಾರಿ. ೨-೭). ೨. ಶಿವನ ಶತ್ರು; ಮನ್ಮಥ : ಮುರಜಿನ್ನಾರಾಯಣಗರ್ಗಂ ಸಿರಿಗಂ ಶ್ರೀರಾಮೆಗಮತನುಗಂ ಭವಾರಿಗಮೈಕ್ಯಂ (ಕಾವ್ಯಾಶ. ೪೦೬). [ಸಂ.]

**ಭವಾರ್ದಿನಿ** (ನಾ). ಜನನಮರಣರೂಪವಾದ ಸಂಸಾರಬಂಧವನ್ನು ನಾಶಗೊಳಿಸುವವಳು ; ಪಾರ್ವತಿ : ಪಾರ್ವತಿ ಪಾಲಿಸೆನ್ನಂ ಭೀಮಾಘಮರ್ದಿನಿ ಭವಾರ್ದಿನಿ ನೀಂ ಭವಾನೀ (ರಾಶಶೇ. ೪-೦೨೩). [ಸಂ. ಭವಾರ್ದಿನೀ]

**ಭವಾವಳಿ** (ನಾ). =ಭವಮಾಲೆ : ಅರಸಂ . . . ನಾಲ್ವರ ಭವಾವಳಿಯುಂ ಬೆಸಗೊಳೆ (ಅಂಪು. ೫-೨ ವ); ಕತೆ ಕಿಡದೆಯುಂ ಭವಾವಳಿ ತಡಮಾಗದೆಯುಂ . . . ಆ ಜಿನಚಂದ್ರಂ ಇಂತೆಂದಂ (ಶಾಂತಿಪು. ೫-೦೦); ಹಸ್ತಿಯ ತನ್ನ ಮುನ್ನಿನ ಭವಾವಳಿಯೆಲ್ಲಮನೆಯ್ದೆ ಪೇೞೆ (ಶಂಗಾಪುಶಾ. ೦೫-೫೩). [ಸಂ. ಭವಾವಲಿ]

**ಭವಾಳಿ** (ನಾ).=ಭವಮಾಲೆ : ಅದು ನಮ್ಮನಿಬರ ಭವಾಳಿಯಿಂದೆ ನವಾಗನು ಭೂತಪೂರ್ವಂ (ಅಂಪು. ೦೩-೫೬ ವ); ಅಂತು ಭವಾಳಿಯನೋಳಿಯೆ ಪೂರ್ವಾಪರಪರಾಮರ್ಶಂಗೆಯ್ದು (ಶಾಂತಿಪು. ೫-೭ ವ). [ಸಂ. ಭವಾಲೀ]

**ಭವಿ** (ಗು). ೧. ಬದುಕಿರುವ; ಜೀವದಿಂದಿರುವ. (ನಾ). ೨. ಸಂಸಾರಬಂಧನಕ್ಕೊಳಗಾದವನು. ೩. [ವೀಶೈ] ವೀರಶೈವದೀಕ್ಷೆಯನ್ನು ಪಡೆಯದವನು : ತನು ಭಕ್ತನಾಯಿತ್ತು ಎನ್ನ ಮನ ಭವಿ ಕೂಡಲಸಂಗಮದೇವಾ (ಬಸವ. ೨೬೪); ಭವಿ ಮುಟ್ಟಬೇಡ ಬೇಡೆಂದು ಮೂಡಿಸುತ ಮಿರೆ (ಪಾಗೀರ. ದೇ. ೨೭೦-೬); ಆದಿಶಿವಭಕ್ತಂಗೆ ಮದುವೆಯನಾಧರದಿ ನಾ ಮಾಳ್ಪೆನಲ್ಲದೆ ಈ ದುಹಿತೆಯಂ ಭವಿಗೆ ಕೊಡೆನು (ಬಸಪು. ೩-೮೬); ಭಕ್ತರಿಗೆ ಭವಿಗಳಿಗೆ ಯುಕ್ತಿಯುತರವಕ್ಕು ಭಕ್ತ ತಾ ಮುಕ್ತನಾಗಿಹರೆ ಭವಿ ಭವದ ಸುತ್ತುತ್ತಲಿಹನು (ಸರ್ವಜ್ಞ. ೨೬೦). [ಸಂ. ಭವಿನ್]

**ಭವಿಕ** (ಗು). ೧. ಹಿತಕರವಾದ. ೨. ಯುಕ್ತ; ಯೋಗ್ಯ. ೩. ಸಮೃದ್ಧ. (ನಾ). ೪. ಒಳ್ಳೆಯದು : "ಶ್ವಃ(ಸ್ವ)ಶ್ರೇಯಸಂ . . . ಭವಿಕಂ, ಭಾವುಕಂ, ಶ್ರೇಯಃ, ಭವ್ಯಂ, ಭದ್ರಂ, ಮಂಗಳಂ—ಈ ೧೧ ಒಳ್ಳಿತರ್ಕೆ ಪೆಸರ್" (ಹಲಾಯು. ೨೦-೦೨೨). ೫. ಶುಭ ; ಮಂಗಳ. ೬. ಏಳಿಗೆ;

ಅಭಿವೃದ್ಧಿ. ೭. ಸುಖ ; ಸಂತೋಷ : ಎಲೆಯಕ್ಕ ತವಿದಿಂದಲ್ಲವಾಗೆ ವಸ್ಮದ ಸುಮದಿಕ್ಕೆ ಭವಿಕದಿಂದವ ನಿನ್ನ ತಕ್ಕೆಯೊಳಗಿರುವ ಮಾಳ್ಕೆಯು ಮಾಳ್ಪೆನು (ಪ್ರಭುಲಿ. ೩-೯೦); ಶಿವಪ್ರಿಯನಾಚಿಯೆಂದೆಂಬ ಗಣಿಕಾಂಗನೆಯು ಶಿವನ ವಾರಂ ಕುಲಶ್ಚರಿಯರಂ ಕರೆವುತಾ ಭವಿಕದಿಂ ರತಿಸೆಸಲ್ (ಪ್ರಭುಲಿ. ೩-೦೩೪). ೮. ಐಶ್ವರ್ಯ ; ಸಂಪತ್ತು : ಅವರೆಷ್ಟು ಧನವಂತರ್, ಇವರೆಷ್ಟು ಬಲವಂತರ್, ಅವರೆಷ್ಟು ಯುತವಂತರ್ ಎನುವ ಕರುಬಿನಲಿ ಭವಿಕ ನಿಸಗ್ಗೆಹುದೊ ಮರೆತು ನೀಂ ಕೊರಗುವುದು ಶಿವಸಿಗೆ ಕೃತಜ್ಞತೆಯೆ ? (ಮಂಕುತಿ. ೭೪೭). [ಸಂ.]

**ಭವಿತನ** (ನಾ). ಭವಿಯಾಗಿರುವಿಕೆ ; ಶಿವಭಕ್ತನಲ್ಲದಿರುವ ಸ್ಥಿತಿ : ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ ಆ ಭವಿಸಂಗ ಭಂಗವೆಂದಱಿವುದು ನೋಡಾ (ಚನ್ನಬ. ೩-೦) ; ಭವಿತನಂ ತೊಲಗಿ ಸದ್ಭಕ್ತಿಯಿಂಬಾಗಿ ಇರೆ (ಬಸರ. ೯-೬೭). [ಭವಿ + —ತನ]

**ಭವಿತವ್ಯ** (ನಾ). ೧. ಮುಂದೆ ಆಗಬೇಕಾದುದು,– ನಡೆಯತಕ್ಕುದು. ೨. ಹಿಂದೆ ಮಾಡಿದ ಪಾಪಪುಣ್ಯಗಳ ಫಲ,–ಪರಿಣಾಮ : "ಧರ್ಮ ಮೆನೆ ಪುಣ್ಯಮಕ್ಕು ಭವಿತವ್ಯಮೆನಲು ಆ ವಿಪಾಕಂ" (ಮಂಗರಾ. ೯-೨೯): ಎನ್ನ ಭಾಗ್ಯಕ್ಕಂ ಭವಿತವ್ಯಕ್ಕಂ ಅನುಸಾರಿಗಳೆ ಸಹಾಯರಾದರಿವರ ಮೇಲೆ ದೋಷಮಿಲ್ಲಂ (ಕಂತಕಂ. ೦೪೧-೨೦) ; ಅಂಡಜ ಸ್ವೇದಜ ಉದ್ಭಿಜ ಜರಾಯುಜರೆಂಬ ಪ್ರಾಣಿಗಳಿಗೆ ಭವಿತವ್ಯವ ಕೊಟ್ಟವರಾರೋ (ಬಸವ. ೨೨೩). ೩. ಉತ್ತರಕಾಲ ; ಭವಿಷ್ಯ : ಈಗಲೂ ಹಿಂದೂಸಮಾಜವು ಎಚ್ಚೆತ್ತುಕೊಳ್ಳದಿದ್ದರೆ ಭವಿತವ್ಯದಲ್ಲಿ ಹಿಂದೂ ಎಂಬುದು ಕೇವಲ ಐತಿಹಾಸಿಕಅಂಶವಾಗಿ ಉಳಿದೀತೇ ವಿನಾ ಜೀವಂತವಾಗಿ ಬದುಕುವ ಜನಾಂಗವಾಗಿ ಮುನ್ನಡೆಯುವುದಿಲ್ಲ (ರಮಣಶ್ರೀ. ೩೩೭) ; ಭವಿತವ್ಯದ ತೆರೆಯನ್ನು ಓಸರಿಸಿ ನೋಡುವೆಯೇನು ? (ಮುಕಾಜ. ೩೦). [ಸಂ.]

**ಭವಿತವ್ಯತೆ** (ನಾ). ೧. = ಭವಿತವ್ಯ ೨ : "ಭಾಗಧೇಯಂ, ಭಾಗ್ಯಂ, ವಿಪಾಕಃ, ಭವಿತವ್ಯತಾ—ಈ ೪ ಭಾಗ್ಯದ ಪೆಸರ್" (ಹಲಾಯು. ೨೦-೦೨೭); ನಿಶ್ಚಲವಾದಂಥ ಭವಿತವ್ಯತೆಯನುಂತೆ ಓಡಿ ತಪ್ಪಿಸಿಕೊಳ್ಳಲರಿದು (ಇಂಪಾಶ. ೦೨೭-೦೭). ೨. = ಭವಿತವ್ಯ ೩ : ಮಾರ್ಕ್ಸನ ಮತ ಬಂದೇ . . . ಜನತೆಯು ಸರ್ವಾಂಗಸುಂದರವಾದ ಸ್ವಾತಂತ್ರ್ಯದ ಭವಿತವ್ಯತೆಯ ಗುರಿಯನ್ನು ತೋರಿಸಿ ದಾರಿಯನ್ನು ತೆರೆಯಬಲ್ಲುದು (ವಿಜಾಪಾ. ೧೭೧). [ಸಂ. ಭವಿತವ್ಯತಾ]

**ಭವಿಷಿಯು** (ನಾ). = ಭವಿಷ್ಯ ೧ : ದಿವಸದಿಂ ದಿವಸಕ್ಕೆ, ನಿಮಿಷದಿಂ ನಿಮಿಷಕ್ಕೆ, ಭವಿಷಿಯುವ ಚಿಂತಿಸದೆ ಬದುಕ ನೂಕುತಿರು (ಮಂಕುತಿ. ೬೬೨). [< ಸಂ. ಭವಿಷ್ಯ]

**ಭವಿಷ್ಯ** (ನಾ). ೧. ಮುಂದೆ ನಡೆಯುವುದು ; ಮುಂದಿನ ಸ್ಥಿತಿಗತಿ : ಎನ್ನಾಯುಷ್ಯ ಭವಿಷ್ಯ ಎನ್ನ ಭಕ್ತರು ಕಂಡಯ್ಯಾ ಎನ್ನಾಯುಷ್ಯ ಭವಿಷ್ಯ ಎನ್ನಾ ಪ್ರಮಥರು ಕಂಡಯ್ಯಾ (ಬಸವ. ೪೦೯);ಗೊತ್ತಿಹುದೆಲ್ಲರಿಗೆಮ್ಮ ಭವಿಷ್ಯವು ನಾಳೆಗೆ ಮಣ್ಣಾಗಲಿಹೆವು (೨ಂಪಾಶ. ೦೩೩-೬೩); ತಮ್ಮ ಮನೆಯ ಭವಿಷ್ಯವೇನು ? (ಕರ್ನಕ. ೨೦೦). ೨. ಮುಂದೆ ಬರುವ ಕಾಲ; ಭವಿಷ್ಯತ್ಕಾಲ: ಭೂತಕಾಲದಲ್ಲಿ ಅನೇಕ ವಿಷಯಗಳು ನಮ್ಮ ಗಮನಕ್ಕೆ ಬಂದಿವೆ. ವರ್ತಮಾನಕಾಲದಲ್ಲೂ ಬರುತ್ತಿವೆ; ಭವಿಷ್ಯದಲ್ಲೂ ಬರತಕ್ಕವಿವೆ (೩ಕ್ಷದ. ೩೨೩). ೩. ಜೋಯಿಸರು ಜಾತಕ ಅಥವಾ ಪ್ರಶ್ನಲಗ್ನಕಾಲ ಮೊದಲಾದ ಆಧಾರದಿಂದ ಹೇಳುವ, ಮುಂದೆ ನಡೆಯುವ ವಿಷಯ : ನಮ್ಮ ಜೋಯಿಸರು ಹೇಳಿದ್ದ ಭವಿಷ್ಯ ಅಕ್ಷರಶಃ ಸತ್ಯವಾಯಿತು (ಕೂ೨). [ಸಂ.]

**ಭವಿಷ್ಯಂತಿ** (ನಾ).[ವ್ಯಾಕ] ಮೂರು ಕಾಲಗಳಲ್ಲಿ ಒಂದು; ಭವಿಷ್ಯತ್ಕಾಲ: ಭೂತವತಿ ವರ್ತಮಾನಾ ಖ್ಯಾತ ಭವಿಷ್ಯಂತಿ ಸರ್ವಸಾಧನಿಯೆಂಬಾಖ್ಯಾತ ವಿಭಕ್ತಿಗಳಕ್ಕುಮತೀತ ಭವದ್ಭಾವಿಕಾಲ ವಿಧ್ಯಾದಿಗಳೊಳ್ (ಶಾಬ್ದ್ಯಾ. ೩೭೪): ಪ್ರಥಮಪುರುಷದ ವರ್ತಮಾನ ಭವಿಷ್ಯಂತಿಗಾದ 'ಗುಂ' ಎಂಬುದು ಪರವಾದೊಡಂ ಕ್ರಿಯಾಪದದೊಳ್ ಶಿಥಿಲತ್ವಮುಂಟು (ಶಮದ. ೪೮ ವೃತ್ತಿ). [ಸಂ. ಭವಿಷ್ಯಂತೀ]

**ಭವಿಷ್ಯತ್ಕಾಲ** (ನಾ). =ಭವಿಷ್ಯತ್ತು ೩: ಭೂತ=ಭೂತಕಾಲದ, ಭವಿಷ್ಯತ್ =ಭವಿಷ್ಯತ್ಕಾಲದ, ಕ್ರಿಯೆಗಳ್=ಕ್ರಿಯಾಪದಂಗಳ್ (ಶಮದ. ೭೩ ವೃತ್ತಿ); ಭವಿಷ್ಯತ್ಕಾಲದಲ್ಲಿ : (i) ಈ ಪ್ರತ್ಯಯವು ವ ಆಗಿರುತ್ತದೆ (ಕೈಬಿ. ೪೩) ; 'ಹೊರಡುವನು' ಎಂಬುದು ಮುಂದೆ ಬರುವ ಕಾಲದಲ್ಲಿ ಎಂದರೆ ಭವಿಷ್ಯತ್ಕಾಲದಲ್ಲಿ ಕ್ರಿಯೆ ನಡೆಯುವುದನ್ನು ತಿಳಿಸುತ್ತದೆ (ಮುರ್ಕಮ. ೬೨). [ಸಂ.]

**ಭವಿಷ್ಯತ್ತು** (ಗು.). ೧. ಮುಂದೆ ಆಗಲಿರುವ,—ಜರುಗುವ : ಅಂತು ಭವಿಷ್ಯದ್ದ್ವಿಜನ್ಮವರ್ಣಾಧ್ಯಯನಾಧ್ಯಾಪನ ದಾನಪ್ರತಿಗ್ರಹಯಜನಯಾಜನ ವಿಶಿಷ್ಟವೃತ್ತಿಯುಮಂ . . . ನಿಱಿಸಿ (ಆದಿಪು. ೯-೭೩ ವ). (ನಾ.) ೨. ಬರಲಿರುವ ಕಾಲ ; ಮುಂದಿನ ಕಾಲ : ಭವಿಷ್ಯತ್ತಿನಲ್ಲಿ ಏನಾಗುವುದೋ ಯಾರಿಗೆ ಗೊತ್ತು ? (ಕೂ೨). ೩. [ವ್ಯಾಕ] ವರ್ತಮಾನ, ಭೂತ ಮತ್ತು ಭವಿಷ್ಯತ್ತು ಎಂಬ ಮೂರುಕಾಲಗಳಲ್ಲಿ ಒಂದು : ಭವಿಷ್ಯತ್ಕಾಲ : ದದಪವಕಾರಂಗಳ್ ಮೂಲದೊಳಕ್ಕುಂ ಭೂತವರ್ತಮಾನ ಭವಿಷ್ಯದ್ವಿದಿತ ವಿಭಕ್ತಿ ತ್ರಿತಯಕ್ಕದೆಲ್ಲ ವಚನಂಗಳೊಳವಿದಾಗಮಮಪ್ಪುದಕ್ಕುಂ (ಶಾಬ್ದ್ಯಾ. ೩೮೭); ಸವನಾಗಿ ಭೂತದೊಳ್ ಲಿಂಗವಚನದೊಳ್ ತಳ್ತು ವರ್ತಮಾನ ಭವಿಷ್ಯದ್ವ್ಯವೃತಿಗಳ ಗುಂ ಕುಂ ಸಲ್ವುವು ತಾವನ್ಯೆಕವಚನದೊಳ್ ನೆಲಸಿರ್ದಂ (ಶಮದ. ೨೨೭). [ಸಂ. ಭವಿಷ್ಯತ್]

**ಭವಿಷ್ಯತ್ಪುರಾಣ** (ನಾ). ಪ್ರಸಿದ್ಧವಾದ ಹದಿನೆಂಟು ಪುರಾಣಗಳಲ್ಲಿ ಒಂದು ; ಇವರಲ್ಲಿ ಹದಿನಾಲ್ಕುಸಾವಿರದ ಐನೂರು ಶ್ಲೋಕಗಳಿವೆಯೆಂದು ಹೇಳಲಾಗಿದೆ : ಬ್ರಹ್ಮಪುರಾಣ . . . ಭವಿಷ್ಯತ್ಪುರಾಣ. . . ಬ್ರಹ್ಮಾಂಡಪುರಾಣವೆಂಬಿವೇ ನಾಲ್ಕುಲಕ್ಷಗ್ರಂಥಸಂಖ್ಯೆಯುಳ್ಳ ಹದಿನೆಂಟು ಮೂಲಪುರಾಣಂಗಳ್ (ಬಿವೇಕ. ೭). [ಸಂ.]

**ಭವಿಷ್ಯನಿಧಿ** (ನಾ). ಉದ್ಯೋಗಸ್ಥರಿಗೆ ಮುಂದೆ ಸಹಾಯವಾಗಲೆಂಬ ದೂರದೃಷ್ಟಿಯಿಂದ ಪ್ರತಿ ತಿಂಗಳ ಸಂಬಳದಲ್ಲೂ ಸ್ವಲ್ಪ ಸ್ವಲ್ಪ ಹಣ ಹಿಡಿದು ಆಡಳಿತದವರೂ ತಮ್ಮ ವಂತಿಗೆಯನ್ನು ಸೇರಿಸಿ ನಿವೃತ್ತರಾದ ಮೇಲೆ ಒಟ್ಟಿಗೆ ಕೊಡಲು ಕೂಡಿಡುವ ಹಣ ; "ಕ್ಷೇಮನಿಧಿ" (Provident Fund. ಶಕ್ರಿಶ. ೬೩): ನಿವೃತ್ತಿವೇತನ . . . ಅದರಲ್ಲಿ ಹಾಗೆ ಸಲ್ಲಬೇಕಾದ ಸೇವಾನಿವೃತ್ತಿವೇತನವೂ ಹಾಗೆ ಸಲ್ಲಬೇಕಾದ ಉಪದಾನವೂ ಮತ್ತು ಭವಿಷ್ಯನಿಧಿಗಾಗಿ ಕೊಟ್ಟ . . . ಮೊತ್ತಗಳೂ ಸೇರಿರುತ್ತವೆ (ಘಾರಾನ. ೨೨೦). [ಸಂ.]

**ಭವಿಷ್ಯಪುರಾಣ** (ನಾ).=ಭವಿಷ್ಯತ್ಪುರಾಣ : ಪದ್ಮ, ಸ್ಕಾಂದ ಮತ್ತು ಭವಿಷ್ಯಪುರಾಣಗಳು . . . ತೀರ್ಥವ್ರತಗಳ ಒಂದು ಸಂಪುಟವಾಗಿ ಪರಿಣಮಿಸಿವೆ (ಭಾರದ. ೦೩೭). [ಭವಿಷ್ಯ + ಪುರಾಣ]

**ಭವಿಷ್ಯಶಾಸ್ತ್ರ** (ನಾ). ಗ್ರಹಗತಿ ಮೊದಲಾದ ಸಾಧನಗಳಿಂದ ಮುಂದೆ ಆಗುವ ಫಲವನ್ನು ತಿಳಿಸುವ ಜ್ಯೋತಿಷ್ಯಶಾಸ್ತ್ರದ ಒಂದು ಭಾಗ : ಪ್ರಶ್ನಭಾಗ : ಭವಿಷ್ಯಶಾಸ್ತ್ರವು ಅವರಿಗೆ ಮುಖಪಾಠವಾದಂತೆಯಾಗಿತ್ತು (ಹೇಮಂತ. ೯). [ಸಂ.]

**ಭವಿಸು** (ಕ್ರಿ). ಹುಟ್ಟು ; ಜನಿಸು : ಜನಹೃದಯದೊಳ್ ಭಕ್ತಿಯಿಂ ಭವಿಸಿದುದು ನವಚೇತನಂ (ಶಂಧ್ರಕ. ೬೦-೩); ರಾಮನಾಲೈಸಿದನು ಲೋಕರೋಮಾಂಚಕರವಾಣಿಯುಂ ಭವಿಸಿದಾ ಧರ್ಮದಾಮೋದಮಂ ! (ಶ್ರೀರಾಮಜ. ೦೬೯-೯೭೯). [ಭವ + — ಇಸು]

**ಭವೋತ್ತಾರಣ** (ಗು). ಸಂಸಾರದಿಂದ ಪಾರುಗಾಣಿಸುವ : ಭವೋತ್ತಾರಣ ಪಂಚವರ್ಣೆನೆಸದಂ ಕನಕಾದ್ರಿಯೊಳಿದ್ರಿಜಾನ್ವಿತಂ (ರಾಷ್ಟ್ರ. ೩-೦೦೩). [ಸಂ.]

ಭಾರಕ್ಕೆ ಮಣವು ಹತ್ತುಂ ಭಾರಕ್ಕಂಶಾಗ ದಡೆಯು ತಪ್ಪದು ಗಣಕ ಭಾರಕ್ಕೆರ್ಧಾಸಿರ ತೊಲೆಯುಂ ಭಾರಕ್ಕಂ ಕರುಷಮೆಂಟುಸಾಸಿರಮಕ್ಕುಂ ಭಾರಕೆ ಕಾಲ್ಕರುಷ ಬತ್ತಿಸಾವಿರ ಭಾರಕ್ಕಂ ಮೂವತೆರಡು ಸಹಸ್ರಪೊನ್ನಿನ ತೂಕಂ ಭಾರಕ್ಕೆ ತೊಲೆಯು ವಿಂಶತಿ (ವ್ಯವಹಾ. ೨-೧೧); P 'ವ್ಯವಹಾರ ಗಣಿತ'ದ ಈ ಭಾಗದಲ್ಲಿ 'ಭಾರ'ಕ್ಕೆ ಅಸ್ಪಷ್ಟವಾದ ಅನೇಕ ತೂಕದ ಅರ್ಥಗಳನ್ನು ಹೇಳಿದೆ : ಇಪ್ಪತ್ತು ತೊಲೆಗಳಕ್ಕುಂ ಭಾರಂ (ವ್ಯವಹಾ. ೪-೨೩); ಪೂಜಿಸುತ್ತಿರಲು ದಿನದಿನದಲೆಂಟೆಂಟು ಭಾರದ ಕನಕವನು ಮಣಿ ಕೊಡುವುದು (ಶಿಶಾಗ. ೧೧-೬೬-೬); ಆ ವಿಪ್ರರನ್ನು ಪೂಜಿಸಿ . . . ಒಂದೊಂದು ಭಾರ ಹೊನ್ನನ್ನು ಕೊಡಬೇಕು (ಬಸುಕ. ೪). ೧೧. ಒಂದು ರೂಪಾಯಿಯ ತೂಕ ; ಒಂದು ತೊಲ : (ಕ).

**ಭಾರ ಬರು** = (ಉಕ) ದೆವ್ವಹಿಡಿ ; ಭೂತಾವೇಶವಾಗು : ತುಸ ಹೊತ್ತಿನ ಮೇಲೆ ನನ್ನ ಮಾತು ಪೂರ ಕೇಳಿಕೊಳ್ಳುವ ಮೊದಲೇ ಭಾರ ಬಂದವರ ಹಾಗೆ . . . ಒದರಾಡಿದರಂತೀ (ಪುಂಡುದಾ. ೬೩). **ಭಾರವಾಗು** = ಹೊರೆಯಾಗು ; ಒಜ್ಜೆಯಾಗು : ಮಕ್ಕಳು ಮರಿಗಳು ಚಿಕ್ಕ ವರಿರುವಂದು ಸೊಂಟಕೆ ಭಾರವಾಗುವರು (ಜಂಶಾಶ. ೨೨೪-೬) ; ನಾನಾ ಬಗೆಯ ವಾಸನೆಗಳು ಹುಟ್ಟಿದ ಜಾಗಗಳಲ್ಲಿಯೇ ಭಾರವಾಗಿ ಕುಳಿತವು (ಹಸುಹೂ. ೩೦೦). **ಭಾರಹಾಕು** = ಜವಾಬ್ದಾರಿಯನ್ನು ಹೊರಿಸಂ ; ಹೊಣೆಯನ್ನು ಒಪ್ಪಿಸು : ದೇವರ ಮೇಲೆ ಭಾರಹಾಕಿ ನಿಶ್ಚಿಂತೆಯಿಂದಿರುವುದು ಅವರ ಸ್ವಭಾವ (ಕಂಠ). [ಸಂ.]

**ಭಾರಂಕ** (ನಾ). ೧. ಘೋರವಾದ ಯುದ್ಧ ; ಭಯಂಕರವಾದ ಕಾಳಗ : "ಭಾರಂಕಮೆನಲ್ಕೆ ದಂಡಿ" (ಛಾಶಿ. ೩೮) ; ಕದನವಿದ ಭಾರಂಕವಾರಭ್ಯದಯ ತಲೆದೋಱುವುದೊ ನಮಗೇಕಿದಱ ಚಿಂತೆ ಮುರಾರಿ ಬಲ್ಲನು (ಕುವ್ಯಾಶೀ. ೨-೨೦) ; ಐರಡನ್ನೆ ಭಾರಂದಾಳಿವ ತರಳನೇ ಸುರ ಗಿರಿಯನಾನುವ ಕೊರಳ ಸತ್ವವೆ ಶಿವಶಿವೆಂದುದು ಮೇಲೆ ಸುರಕಟಕ (ಕುವ್ಯಾಕ. ೩೦-೩೩). ೨. ವೀರಯೋಧ,— ಸೈನಿಕ : ವೀರ ರಾವಣಿ ಕುಂಭ ಶಿಶ್ರಿರನು . . . ಚೂರಿಸುವ ಖಡ್ಗೆಯದ ಕಡುಹಿನ ಭಾರಣೆಯ ಭಾರಂಕರಿದ್ದುದು ಭೂರಿಭೂಷಣಾಭರಿತ ವೀರಾವೇಶದುಬ್ಬಿನಲಿ (ತೊರರಾ. ೬-೧೧-೬). [<ಸಂ. ಭಾರಾಂಕ]

**ಭಾರಂಗಿ** (ನಾ). ಒಂದು ಬಗೆಯ ಗ್ರಂಥಿಕದ್ರವ್ಯವನ್ನು ಕೊಡುವ ವನಸ್ಪತಿ : "ಹಂಜಿಕಾ, ಬ್ರಾಹ್ಮಣೀ, ಪದ್ಮಾ, ಭಾರ್ಗೀ, ಬ್ರಾಹ್ಮಣಯಷ್ಟಿಕಾ, ಅಂಗಾರವಲ್ಲೀ, ಬಾಲೇಯಶಾಕಃ, ಬರ್ಬರಃ, ವಂದಕಃ— ೯ ಭಾರಂಗೀ ಹೆಸರುಗಳು, ಗಂಟುಭಾರಂಗೀ ಎಂಬುವ ಗ್ರಂಥಿಕದ್ರವ್ಯವು ಪ್ರಸಿದ್ಧವಾದದ್ದು, ಕಿರುದೇಗುಗಿಡವೆಂದು ಕೆಲವರೆನ್ನುವರು, ನಾಯಿ ತ್ಯಾಗದ ಮರ" (ಸಿದ್ಧಾಂಶಿ. ೦೩೩) ; ಪಲಸಾಲಂ . . . ಭಾರಂಗಿ ನೇಳಲೆರಂ ಪಾದರಿ ತಾಱೆತಂಡಸು (ಶಾಕ್ತಗಕ. ೦೨-೩೬).

**ಭಾರಂಗ್ಯಾದಿ ಕಷಾಯ** = ಒಂದು ಬಗೆಯ ಕಷಾಯ: ಭಾರಂಗ್ಯಾದಿ ಕಷಾಯ, ಗಂಟುಭಾರಂಗಿ, ಪುಷ್ಕರಮೂಲ . . . ನೀರಿನಲ್ಲಿ ಕಷಾಯ ವಿಕ್ಕ ಅಷ್ಟಾವಶೇಷವಾಗಿ ಕುಸಿ ಕುಡಿಯೆ ತಾಂದ್ರಿಕಸನ್ನಿ ಗುಣಮಕ್ಕುಂ (ಸಕವೈ. ೦೫೬). [ಸಂ. ಭಾರಂಗೀ]

**ಭಾರಕ** (ನಾ). ೧. ಭಾರವನ್ನು ಹೊರುವ ವ್ಯಕ್ತಿ : ಕೆಲರು ಚತುರ್ವೇದ ಭಾರಕರಾದರು (ಆದಪ. ಖು. ೯೬-೧೬) ; ಮನುಜನಾಯಕನಾ ನಿಧಾನದ ಕನಕಗಳನೆಲ್ಲವನು ಭಾರಸಜನದ ಶಿರವಲಿ ಹೊಱಿಸಿ ನಡೆಸಿದನದನು ರಕ್ಷಿಸುತ (ತಿಮ್ಮಕೃ. ೪-೨೯). ೨. ಹೊಣೆಯನ್ನು ಹೊತ್ತವನು ; ಹೊಣೆಗಾರ : ಧರ್ಮಜನ ವರಮುಂಬವನು ನಿಂದು ಮಾಡಿಸುವ ಭಾರಕನುರಹರನಾ ಮುಕುಂದನಂ ಕಾಣ್ಬುದುಳ್ಳೊಡೆ ತನ್ನ ಕೂಡೆ ನೀಂ ಬಂದು ಸೇವಿಪುದು (ಕೃಬಭಾ. ೪-೬೪). ೩. ಹೊರೆ ; ಭಾರ. ೪. ಭಾರವಾದವನು ; ಹೊರೆಯಾದವನು : ನಿನ್ನ ಮರೆದಜ್ಞತೆಯಿಂ ಚರಿಸುತ್ತ ಗರ್ವಾಂತಾ ಮಹಿತಾತ್ಮರಂ ಜರಿದು ಭೂಮಿಗೆ ಭಾರಕನಾದೆನಕ್ಕಟ (ಅವುಶ. ೩೦). ೫. ಸೈನಿಕ ; ಯೋಧ : ಊರೊಳೀ ಕಪಿವಾರ್ತೆಯಗಲಕೆ ಬೇರುವರಿದುದು ಬೆಱಗುಬಿಂಕದ ಭಾರಕರು ಭಾರಿಸಿತು ಕೋಟಾವಳಿಯುದಗ್ರದಲಿ (ತೊರರಾ. ೫-೫-೧). [ಸಂ.]

**ಭಾರಕರ್ತ** (ನಾ). (ಜಗತ್ತಿನ) ಹೊಣೆಯನ್ನು ನಿರ್ವಹಿಸುವವನು ; ದೇವರು ; ಭಗವಂತ : ಭಾರಕರ್ತನು ನೀನು ಬಹುಸಂಸಾರಿಯೆಂಬುದ ನಿಗಮತತಿ ಕೈವಾರಿಸುತ್ತಿದೆ (ಹಂಸಾ. ೫೩). [ಸಂ. ಭಾರಕರ್ತೃ]

**ಭಾರಕಾರಕ** (ಗು). ತೂಕವನ್ನುಂಟುಮಾಡುವ ; ಭಾರವನ್ನುಂಟು ಮಾಡುವ : ಈ ಸಾಂದ್ರತೆಯು ನೀರಿನ ಸಾಂದ್ರತೆಯನ್ನು ತುಸು ಮಿಗುವ ತನಕ, ನೀರು ಭಾರಕಾರಕ ಟಾಂಕಿಗಳ ಒಳಗೆ ಬರುತ್ತಲೇ ಇರುವುದು (ವಿಜ್ಞಾವಿ. ೦೦೬). [ಸಂ.]

**ಭಾರಕ್ಷಮ** (ನಾ). ಭಾರವನ್ನು ಹೊರಲು ಶಕ್ತವಾದುದು,— ಸಮರ್ಥವಾದುದು: "ಧೂರ್ವಹಃ, ಧುರ್ಯಃ, ಧೌರೇಯಃ ಧುರೀಣಃ, ಧುರಂಧರಃ— ಭಾರಕ್ಷಮಗಳಾಗಿ ಹೇಱುವ ಎತ್ತು" (ಪಾಶರಾ. ಕ). [ಸಂ.]

**ಭಾರಣೆ**[1] 'ಭಾರವಣೆ' ನೋ.

**ಭಾರಣೆ**[2] (ನಾ). ಮಾಟ ; ಮೋಡಿ ; ವಶೀಕರಣವಿದ್ಯೆ : ನೀವೇ ಲಿಂಗಜಂಗಮವಾಗಬಲ್ಲಡೆ ನಾನಾರೆಂಬುದ ವಿಚಾರಿಸಿಕೊಳ್ಳಿರಣ್ಣಾ . . . ಪೂಜೆಯ ಮಾಡುವ ಭಕ್ತಂಗೆ ಭಾರಣೆಯ ವಿದ್ಯವ ಹೊತ್ತ ವಿಧಾತನಂತಿರಬೇಕು (ಷೋಳಷಾ. ೦೯೩-೬೨೬); ಭಾರಣೆ ಮರನಾಳಿ ಕಡಲೋಟ ಮುಂತಾದ ಚಾರುಕೌಶಲ್ಯವಿದ್ಯೆಗಳ . . . ಪೇಳ್ದೀಲಾಚಾರ್ಯರ ಚಾರುಚರಣ ಶರಣೆನಗೆ (ಪಾಗಳು. ೦-೧೨) ; ಚಾರಣೆಯ ವಿದ್ಯಮಂ ಸಮರದೊಳ್ ತೋಱಿದೊಡೆ ಧೀರರೇಂ ಮೆಚ್ಚುವರೆ (ಕಬಕ. ೨೫-೨೯). 'ಭಾನುಮತಿ' ಪರಾ. [← ಮರಾ. ಭಾರಣೀ=ವಶೀಕರಣವಿದ್ಯೆ ; ಭಾರಣೇ=ಮಂತ್ರಮಾಟಗಳಿಂದ ವಶಪಡಿಸಿಕೊಳ್ಳು]

**ಭಾರತ** (ನಾ). ೧. ಭರತವಂಶಕ್ಕೆ ಸಂಬಂಧಪಟ್ಟುದು : ಚಾರುಚರಿತ್ರಂ ಭರತನಪಾರಗುಣಂ ತನ್ನ ಪೆಸರೊಳಮರ್ದೆಸೆಯೆ ಯಶೋಭಾರಂ ಕುಲಮುಂ ಕಥೆಯುಂ ಭಾರತಮೆನೆ ನೆಗಳ್ದಂ (ಪಂಪಭಾ. ೦-೬೩). ೨. ಭರತ ವಂಶದಲ್ಲಿ ಹುಟ್ಟಿದವನು. ೩. ಹಿಂದೂದೇಶ ; ಭರತಖಂಡ ; ಭಾರತವರ್ಷ : ಭಾರತಕ್ಕೆ ಒಂದು ಸ್ಪಷ್ಟ ವ್ಯಕ್ತಿತ್ವವಿದೆ ; ತನ್ನದೇ ಎನ್ನುವ ಶ್ರೇಷ್ಠವಾದ ಸಂಸ್ಕೃತಿ ಇದೆ (ಭಾರದ. ೮) ; ಭಾರತದ ರೈಲುದಾರಿ ಬೇರೆಬೇರೆ ಅಳತೆಯವು (ಭೂಚಿಪ. ೨೦೩). ೪. ಭರತವಂಶಕ್ಕೆ ಸೇರಿದ ಪಾಂಡವ ಕೌರವರ ಚರಿತ್ರೆ ಮತ್ತು ಅದನ್ನು ವರ್ಣಿಸುವ, ಸಂಸ್ಕೃತ ಭಾಷೆಯಲ್ಲಿ ವ್ಯಾಸಮಹರ್ಷಿಗಳಿಂದ ರಚಿಸಲ್ಪಟ್ಟ ಸುಪ್ರಸಿದ್ಧವಾದ ಇತಿಹಾಸಮಹಾಕಾವ್ಯ ; ಮಹಾಭಾರತ : ಒಳಪೊಕ್ಕು ನೋಡೆ ಭಾರತದೊಳಗಣ ಕಥೆಯೆಲ್ಲಮೀ ಗದಾಯುದ್ಧದೊಳಂತೊಳಕೊಂಡತ್ತೆನೆ ಸಿಂಹಾವಲೋಕನಕ್ರಮದಿನಱೆದಂ ಕವಿರನ್ನಂ (ಗದಾಯು. ೦-೪೫) ; ಭಾರತವನ್ನು ಬರೆಯಬೇಕೆಂದು ವ್ಯಾಸರಿಂದ ಪ್ರಾರ್ಥಿಸಲ್ಪಟ್ಟ ಗಣೇಶನು . . . ನಿಬಂಧನೆಯನ್ನು ಮಾಡಿದನು (ಭಾರದ. ೯೬). ೫. ಹಳಗನ್ನಡದಲ್ಲಿ ಪಂಪಕವಿಯು ರಚಿಸಿದ 'ವಿಕ್ರಮಾರ್ಜುನವಿಜಯ'ವೆಂಬ ಚಂಪೂ ಕಾವ್ಯ ; ಪಂಪಭಾರತ : ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ . . , ಧರ್ಮದೊಳ್ ನಿರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ (ಪಂಪಭಾ. ೦೪-೬೪). ೬. ಕನ್ನಡ ಭಾಷೆಯಲ್ಲಿ ಗದುಗಿನ ನಾರಣಪ್ಪನೆಂಬ ಕವಿಯಿಂದ ರಚಿತವಾದ, ಮಹಾಭಾರತದ ಕಥೆಯನ್ನು ವಿವರಿಸಿರುವ ಪ್ರಸಿದ್ಧವಾದ ಷಟ್ಪದೀ ಕಾವ್ಯ; ಕರ್ಣಾಟಭಾರತಕಥಾಮಂಜರಿ : ಕಾವ್ಯಕೆ ಗುರುವೆನಲು ರಚಿಸಿದ

ಕುಮಾರವ್ಯಾಸ ಭಾರತವ (ಕುಮ್ಯಾ.೮.೦-೦೯). ೭. ಕುರುಕ್ಷೇತ್ರದಲ್ಲಿ ಕೌರವ ಪಾಂಡವರಿಗೆ ನಡೆದ ಯುದ್ಧ ; ಮಹಾಭಾರತಯುದ್ಧ : ಮಿಕ್ಕ ತೋಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ ಭಾರತಂ ಕಲಹಮಿದಿರ್ಚುವಂ ಹರಿಗನಪ್ಪೊಡೆ ಪೊಕ್ಕಳಪೊಕ ನೀಂ ಪಳಂಚಲೆದಪೆಯಣ್ಣ (ಪಂಪಭಾ. ೦೦-೨೩) ; ಮಾರಿಗೌತಣವಾಯ್ತು ನಾಳಿನ ಭಾರತವು . . . ರಣದಲಿ ಸುಭಟಕೋಟಿಯನು ತೀರಿಸಿಯೆ ಪತಿಯವಸರಕ್ಕೆ ಶರೀರವನು ನೂಕುವೆನು (ಕುಮ್ಯಾ.೮. ೦೦-೨೦). ೮. ಮಹಾಭಾರತಯುದ್ಧವು ನಡೆದ ಪ್ರದೇಶ ; ಭರತಕ್ಷೇತ್ರ ; ಕುರುಕ್ಷೇತ್ರ : ಅಂತು ಭಾರತಂ ಸಮರಭಾರಾವತಾರಮಾಗೆ (ಗದಾಯು. ೯-೩೭ ವ). ೯. ಭರತಮುನಿಯಿಂದ ರಚಿತವಾದ ನಾಟ್ಯಶಾಸ್ತ್ರ. ೧೦. ನಟ : "ಶೈಲಾಲೀ, ಶೈಲೂಷಃ . . . ಭಾರತಃ, ನಟಃ — ೬ ನಟ್ಟುವನ ಹೆಸರು" (ಸಿದ್ಯಾಂತಿ. ೩೦೦) ; ಭಾರತನಿಯೋಗಾಳಿ ಜನಪದಪಾರವಿಭವಗಳಿಂದ ಪಾರಾವಾರ ಗಂಭೀರಗಳೆಸೆವ ನೃಪಸಭೆ ಮೆಚ್ಚಿಪುತಿರಲು (ಬಸಪು. ೩೦-೨೯). ೧೧. [ದ್ವೈತ] ವಾಯು : ಭ—ಅಂದರೆ ಪರಮಾತ್ಮ, ಅವನಲ್ಲಿ ರತರಾಗಿರುವುದರಿಂದ ಭಾರತಯೆಂದು ವಾಯುದೇವರಿಗೆ ಹೆಸರು (ಹಪಾರ. ೬-೩ ತಾತ್ಪರ್ಯ).

**ಭಾರತದ ಹುಣ್ಣಿಮೆ** = ಭಾರತಹುಣ್ಣಿಮೆ : ಈ ಆಳ್ವಿಕೆಯುಲ್ಲಿ ಅದನ್ನು ತಪ್ಪಿಸಿ ಆ ಸ್ಥಳಕ್ಕೆ ಭಾರತದ ಹುಣ್ಣಿಮೆಯಲ್ಲಿ ಹೋಗಲು ಆರಂಭ ಮಾಡಿದರು (ಪತ್ರ.ಶಾ. ೪೮). [ಸಂ.]

**ಭಾರತವರುಷ** (ನಾ). = ಭಾರತವರ್ಷ : ಹಿಮದ ಹೊಯ್ಲಿನ ಸರಸಿಜಕೆ ರವಿಯಂತೆ . . . ಸುರವಿಮಾನಶ್ರೇಣಿಗಳ ನವಪರಿಮಳದ ಪೂರದಲಿ ಭಾರತ ವರುಷಕಿಳಿದನು ಪಾರ್ಥ ಬಂದನು ಧರ್ಮಜನ ಹೊರೆಗೆ(ಕುಮ್ಯಾ.೮. ೦೦-೦೯).
[ <ಸಂ. ಭಾರತವರ್ಷ ]

**ಭಾರತವರ್ಷ** (ನಾ). ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ವ್ಯಾಪಿಸಿರುವ ಹಿಂದೂದೇಶ ; ಭಾರತ ; ಇಂಡಿಯಾ : ವಿಷ್ಣು ಪುರಾಣದಲ್ಲಿ ಪ್ರಶಂಸಿತವಾಗಿರುವ 'ಭಾರತವರ್ಷ'ದ ಪ್ರಭಾವ ಕಾಂಭೋಜಾದಿ ಪ್ರದೇಶಗಳಿಗೂ ಪ್ರಸರಿಸಿತು (ಪುಣ್ಯಾರ. ೧೦೯ ಟಿಪ್ಪಣಿ). [ಸಂ.]

**ಭಾರತಹುಣ್ಣಿಮೆ, ಭಾರತಹುಣ್ಣಿವೆ** (ನಾ). ಮಾಘಮಾಸದ ಹುಣ್ಣಿಮೆ; ವ್ಯಾಸಪೌರ್ಣಿಮೆ: ಆ ದಿವಸ ಭಾರತಹುಣ್ಣಿಮೆ. ಇನ್ನು ಫಾಲ್ಗುಣದ ಆರಂಭ ಆಗಲಿದೆ (೩ಕ್ಯ೪. ೪೦೬೭. **ಭಾರತಹುಣ್ಣಿವೆ** : ಭಾರತಹುಣ್ಣಿವೆ ಓರಣದಲಿ ಮಿಂದು ಹೂರಣದಾರತಿ ಮನೆಯೊಳಗೆ (ಪುರಂದ.ದಾ. ೩-೦೨೭-೮); ಸಿಕ್ಕಾಗ ಶಿವರಾತ್ರಿ ಇದ್ದಾಗ ಯುಗಾದಿ ಬಂದಾಗ ಭಾರತಹುಣ್ಣಿವೆ (ಕಪ್ಪಣ. ೩೮೩) ; ಮಾಘಶುದ್ಧ ೧೫ನೆಯ ದಿವಸ ಭಾರತಹುಣ್ಣಿವೆ. ವ್ಯಾಸರಚಿತವಾದ ಮಹಾಭಾರತದ ಪೂಜಾ—ಪಠನಗಳೂ ವ್ಯಾಸಋಷಿಪೂಜೆಯೂ ಈ ದಿವಸ ದೇವಾಲಯಗಳಲ್ಲಿ ನಡೆಯುತ್ತವೆ. ಈ ಕಾರಣದಿಂದ ಇದು ಭಾರತಹುಣ್ಣಿವೆ (ಬಾಹಬ್ಬ. ೦೭೩).
[ ಭಾರತ + ಹುಣ್ಣಿಮೆ (<ಪೂರ್ಣಿಮೆ) ]

**ಭಾರತಹುಣ್ಣಿವೆ** 'ಭಾರತಹುಣ್ಣಿಮೆ' ನೋ.

**ಭಾರತಾಹವ** (ನಾ). ಮಹಾಭಾರತದ ಯುದ್ಧ : ವಾರಣದ ಕುಂಭಸ್ಥಳಂಗಳ ಚಾರುಮೌಕ್ತಿಕನಿಕರವೊ ಮೇಣ್ ಭಾರತಾಹವ ಕೌತುಕೋದಯರಸಕೆ ನೆಲೆಯಾಯ್ತೊ (ಕುಮ್ಯಾ.೮೬. ೪-೮೭). [ಸಂ. ]

**ಭಾರತಿ** (ನಾ). ೧. ಭಾಷೆ ; ಮಾತು ; ನುಡಿ. ೨. ವಾಣಿ; ಸರಸ್ವತಿ : ''ವಾಕ್(ಗ್), ವಾಣೀ, ಭಾರತೀ, ಭಾಷಾ, ಗೌಃ, ಗೀಃ, ಬ್ರಾಹ್ಮೀ, ಸರಸ್ವತೀ ಈ ೮ ಸರಸ್ವತಿಯ ಪೆಸರ್'' (ಹಲಾಯು. ೩-೮) ; ರತಿಯುಂ ಕಳೆಗುಂದಿಪ ಭಾರತಿಯಂ ಜಾಣಿಂದೆ ಪಟಿವ . . . ಅಗ್ಗದ ಸತಿಯರ್ (ಜಗಪ. ೨-೩೦); ಪೌಲೋಮಿಯುಂ ಭಾಗ್ಯಮಂ ಭಾರತಿಯಿಂ ನಾನಾಕಳಾಕೌಶಲಮಂ ಪತಿಶಯ. ಬೆತ್ತಿರಲ್ . . . ಮಹಾದೇವಿ ಕಣ್ಗೆಡ್ಡಮಾದಳ್ (ಶಬ್ದಪು. ೩-೨೩) ; ಭಾರತಿಯ ಪದ್ಮಪೀಠಂಬೋಲ್ ಮುಖಕಮಲಮೊಪ್ಪಿರೆ . . . ವಾಲ್ಮೀಕಿ ತಾನಾ ಬಟ್ಟೆಯೊಳೆ ಬರುತುಮಿರ್ದಂ (ರಾಮಾಶ್ವ. ೪೦-೨೩೭). ೩. ಪಂಡಿತ; ವಿದ್ವಾಂಸ : ''ಭಾರತಿಯೆನಲ್ಕೆ ವಿದ್ವಾಂಸನೆನಿಸಿಕ್ಕು'' (ಮುಂಗರಾ. ೩೭-೨) . ೪. ಆದಿಶಂಕರಾಚಾರ್ಯರ ಪರಂಪರೆಗೆ ಸೇರಿದ ಕೆಲವು ಜಗದ್ಗುರುಗಳು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುವ ಉಪಪದ: ಶೃಂಗೇರಿಯ ರಾಮಚಂದ್ರಭಾರತಿ ೧೫೦೮ ರಿಂದ ೧೫೬೦ರ ವರೆಗೆ ಪಟ್ಟದಲ್ಲಿದ್ದಂತೆ . . . ತೋರುತ್ತದೆ (ಕಪಶ. II. ೨೦೦). ೫. ಒಂದು ಬಗೆಯ ಸಸ್ಯ ; ಒಂದೆಲಗ ; ಬ್ರಾಹ್ಮೀ. ೬. [ಕಾವ್ಯಮೀ] ನಾಟಕಲಕ್ಷಣ ಪ್ರಕರಣದಲ್ಲಿ ಹೇಳಿರುವ ನಾಲ್ಕು ವೃತ್ತಿಗಳಲ್ಲಿ ಒಂದು : ಭಾರತಿ ಸಾತ್ವತಿ ಕೈಶಿಕೆಯಾರಭಟಿಯುಮೆಂಬ ವೃತ್ತಿಯೊಳ್ ರಸಮಂ ಸಂಚಾರಿಸುವ ಭಾವಮಂ ವಿಸ್ತಾರಿಸುವ ಬೆಡಂಗು ಬೇಚಿ ನೀರಾಂಜನೆಯಾ (ಅಂಪು. ೯-೨೩); ಭಾರತಿ ಸಾತ್ವತಿ ಕೈಶಿಕೆಯಾರಭಟಿಯೆನಿಪ್ಪ ವೃತ್ತಿಗಳ್ ನಾಲ್ಕಕ್ಕುಂ (ಕಾವ್ಯಾವ. ೬೩೭) ; ವೃತ್ತಿ ಎಂದರೆ ನಾಟಕದಲ್ಲಿ ಅಭಿನಯಿಸತಕ್ಕ ವಿಷಯಗಳ ಸ್ವರೂಪ ವಿಶೇಷ ; ಇದು ಕೈಶಿಕೀ, ಸಾತ್ವತೀ, ಆರಭಟೀ, ಭಾರತೀ ಎಂದು ನಾಲ್ಕು ವಿಧ (ಸಂಪಾಟಿ. ೦೩). ೭. [ಸಂಗೀತ] ತಂತ್ರೀವಾದ್ಯಗಳಲ್ಲಿ ಒಂದು : ತಂತ್ರೀವಾದ್ಯಂಗಳು :—ಏಳಕ ವಿಪಂಚಿಕೆ . . . ಬ್ರಹ್ಮವೀಣೆ ಸ್ವರವೀಣೆ ಭಾರತಿ ಅಲಾಬುಪಲ್ಲಕಿ ಆಕಾಶವೀಣೆ . . . ಎಂಬ ಮೂವತ್ತುಮೂಱು ತಂತ್ರೀವಾದ್ಯಂಗಳಲ್ಲಿ (ಶಿಪೀಠ. ೨೩೭). ೮. [ದ್ವೈತ] ಮುಖ್ಯಪ್ರಾಣದೇವರ ಪತ್ನಿ ; ವಾಯುದೇವರ ಪತ್ನಿ : ಶರಣು ಭಾರತಿದೇವಿಗೆ ಶರಣು ವಾಯುರಮಣಿಗೆ (ಪುರಂದ. ೦-೦೮೯ ಪಲ್ಲವಿ) ; ಭಾರತಿ ವಾಣಿ ಈರ್ವರಿಗೆ ಮರುತ ಬ್ರಹ್ಮರು ಉತ್ತಮರು (ಹಪಾರ. ೨೩-೦೦).

**ಭಾರತೀಕರ್ಣಪೂರ** = ೧. ಸರಸ್ವತಿಯ ಓಲೆ, — ತಾಟಂಕ. ೨. ಕವಿ ನಾಗಚಂದ್ರನ ಒಂದು ಬಿರುದು : ಆನಂದಾಶ್ರುವಂ ತಾಳ್ದಿದನ ಮಲಿಯಿಂ ಭಾರತೀಕರ್ಣಪೂರಂ (ಪಂಪಾರಾ. ೨-೭೭). **ಭಾರತೀಭಾಗಧೇಯ** = ಸರಸ್ವತಿಯಂ ಭಾಗ್ಯದಂತಿರುವವನು ; ಸರಸ್ವತಿಯನ್ನು ಅಭಿವೃದ್ಧಿ ಪಡಿಸುವವನು ; ವಿದ್ವಾಂಸ : ದಾನೋತ್ಕರದೊಳ್ ಉದಾತ್ತಮೆಂತಂತೆಸೆದನಭಿನವಂ ಭಾರತೀಭಾಗಧೇಯಂ (ರಾಜಶೇ. ೪-೦೨೪). **ಭಾರತೀಭಾಳನೇತ್ರ**=ವಿದ್ಯೆಯಲ್ಲಿ ಪರಮೇಶ್ವರನಂತಿರುವವನು ; ಉದ್ದಾಮ ಪಂಡಿತ : ನಂದನಂ ತದ್ಧರಣೀಶಾವಾಸದೊಳ್ ಶೋಭಿಸುತಿರೆ ಬೆಳೆದಂ ಭಾರತೀಭಾಳನೇತ್ರಂ (ಪಂಪ್ರಪು. ೩-೦೦೪). [ಸಂ. ಭಾರತೀ]

**ಭಾರತಿಕ** (ಗು). ೧. ಭರತಮುನಿಗೆ ಸಂಬಂಧಪಟ್ಟ ; ಭರತಮುನಿಯಿಂದ ಪ್ರವೃತ್ತವಾದ : 'ಭಾರತಿಕವಿದ್ಯೆ' ಪರಾ. (ನಾ). ೨. ನಾಟ್ಯಕಲಾವಿದ ; ನಟ : ದೆಸಸಿಂ ಭಾರತಿಕಂಗೆ ನಾಟ್ಯಘಟನ ಪ್ರಸ್ತಾವನಾಟೋಪಮಂ (ಅದಿಪು. ೯-೦೨) ; ಗೀರ್ವಾಣಪುಂಗಳಗಾಯರೆ ಸಂಗೀತಗಾಯಕರಾಗೆ ನಿಳಿಂಪ ಭಾರತಿಕರೆ ನಟ್ಟುವರಾಗೆ ಸನ್ಮಾರ್ಗನಾಟಕಾರಂಭಪ್ರಸ್ತುತಪವಿತ್ರಸೂತ್ರಧಾರನೆ ಮುಂದೆ ನಿಂದು ಪುಷ್ಪಾಂಜಲಿಯಂ ಕೆದಱೆ (ಶಾಂತಿಪು. ೦೦-೩೦ ವ) ; ಭಾರತಿಕನಾಗೆ ಮಂದಸಮೀರಂ ಕೈನಿಜದುಮುತ್ಸವಧ್ವಜತತಿಗಳ್ (ಪಂಪಾಮಾ. ೪-೨೭). [ಸಂ.]

**ಭಾರತಿಕವಿದ್ಯೆ** (ನಾ). ಭರತಮುನಿಯಿಂದ ಪ್ರವೃತ್ತವಾದುದೆನ್ನಲಾದ ವಿದ್ಯೆ ; ನಾಟ್ಯಶಾಸ್ತ್ರ ; ನಾಟ್ಯಕಲೆ : ಭಾರತಿಕವಿದ್ಯೆಯೊಳ್ ತೂರ್ಯತ್ರಿತಯಮಾಧರ್ಯಮಾನಭಾವಭಂಗಿಯುಮಂ ನೀತಿಶಾಸ್ತ್ರದೊಳ್ ಧರ್ಮಾರ್ಥಕಾಮೋಪಲಬ್ಧಿತಾತ್ಪರ್ಯಮುಮಂ ಪ್ರತ್ಯೇಕಮಭಿವ್ಯಂಜನಮುಮಂ ಮಾಟ್ಪಂ (ಅಪಂಪು. ೬-೯ ವ). [ಸಂ. ಭಾರತಿಕವಿದ್ಯಾ]

**ಭಾರತೀಪತಿ** (ನಾ). ಸರಸ್ವತಿಯಂ ಗಂಡ ; ಬ್ರಹ್ಮ : ಭಾರತೀಪತಿ ಚತುರಪರಿಮಿತೋದಾರ ಗಂಭೀರಭಾಷಿತಂಗಳಿಂ ಬಿನ್ನಪಂಗೆಯ್ಯೆ (ಜಗಪ. ೨-೩೩ ವ). [ಸಂ.]

**ಭಾರತೀಯ** (ಗು). ೧. ಭಾರತಕ್ಕೆ ಸಂಬಂಧಪಟ್ಟ; ಭಾರತದೇಶಕ್ಕೆ ಸೇರಿದ : 'ಭಾರತೀಯ ಸಂಪ್ರದಾಯ' ಪರಾ. (ನಾ). ೨. ಭರತ ಖಂಡದಲ್ಲಿ ಹುಟ್ಟಿದವನು; ಭಾರತರಾಷ್ಟ್ರದ ಪ್ರಜೆ: ಭಾರತವೆಲ್ಲ ಒಂದೇ ದೇಶ, ಭಾರತೀಯರೆಲ್ಲ ಒಂದೇ ಜನಾಂಗವೆಂಬುದು ಈ ದೇಶದಲ್ಲಿ ಈ ಜನದಲ್ಲಿ ಒಂದೇ ಸಂಸ್ಕೃತಿ ಇರುವುದರಿಂದ ಇದಕ್ಕೆ ಸಂದೇಹವೇ ಇಲ್ಲ (ಭಾರದ. ೪); ಪ್ರಾಚೀನಭಾರತೀಯರ ತತ್ತ್ವವಿಚಾರಗಳ ಭಾಷಾಂತರ ಅಥವಾ ಸಂಗ್ರಹವು ಸ್ವಾಭಾವಿಕವಾಗಿಯೇ ಬಹು ವ್ಯಕ್ತಾಪದವಾಗಿರಬಹುದು (ಭಾತತ್ತ್ವ. ೦೦ ಮುಖಪ್ಟ). [ಸಂ.]

**ಭಾರತೀಯತೆ** (ನಾ). ಭಾರತೀಯನಾಗಿರುವಿಕೆ; ಭಾರತೀಯತ್ವ: ಈ ತರನಾದ ದೇಶಪ್ರೇಮ ಮತ್ತು ಭಾರತೀಯತೆ ಆತನ ವೇಷಭೂಷಣ ದಲ್ಲಿಯೂ . . . ಎದ್ದು ಕಾಣುತ್ತಿದ್ದವು (ಸಸ್ಕಳ. ೦೩೦). [ಸಂ. ಭಾರತೀಯತಾ]

**ಭಾರತೀಯತ್ವ** (ನಾ). = ಭಾರತೀಯತೆ : ಒಮ್ಮೆಗೇ ಪಾತಿವ್ರತ್ಯ, ಉದ್ದೀಪನ, ಮೃದುತ್ವ – ಲಕ್ಷಣಗಳನ್ನು ವ್ಯಕ್ತಪಡಿಸುವ ಅಜಂತಾ ಹೆಣ್ಣುಗಳಲ್ಲಿ ಒಂದು ವಿಶಿಷ್ಟ ಭಾರತೀಯತ್ವವನ್ನು ಕಾಣಬಹುದು (ಭಾರದ. ೩೨೩). [ಸಂ.]

**ಭಾರತೀಯಸಂಪ್ರದಾಯ** (ನಾ). ಭರತಖಂಡದಲ್ಲಿ ಅನೂಚಾನವಾಗಿ ನಡೆದುಕೊಂಡು ಬಂದಿರುವ ನಡವಳಿಕೆ, – ಪದ್ಧತಿ, – ಆಚಾರ : ಸಂಸ್ಕೃತಿಯ ದೃಷ್ಟಿಯಿಂದ ಹಿಮವತ್ಸೇತುಪರ್ಯಂತ ಒಂದೇ ವಿಧವಾದ ಭಾರತೀಯಸಂಪ್ರದಾಯ ಸ್ಥಿರವಾಯಿತು (ಮುಕ್ನಾರ. ೦೨೮ ಟೀಕೆ). [ಸಂ.]

**ಭಾರತೀಯಸಂಸ್ಕೃತಿ** (ನಾ). ಭರತಖಂಡದ ಜನತೆಯ ಮಾನಸಿಕ ಸಾಧನೆ; ಭಾರತೀಯರ ಬೌದ್ಧಿಕಸಿದ್ಧಿ : ಭಾರತೀಯಸಂಸ್ಕೃತಿಯನ್ನು ವೈದಿಕಸಂಸ್ಕೃತಿ ಎಂದು ಹೇಳುವುದರಲ್ಲಿ ಔಚಿತ್ಯವಿದೆ (ಮುಕ್ನಾರ. ೯೭ ಟೀಕೆ). [ಸಂ.]

**ಭಾರತೇಯ** (ನಾ). = ಭಾರತೀಯ ೨ : ಪ್ರಾಣಿಮಾತ್ರದಲ್ಲಿ ಜೀವವನ್ನು ಆದಿಯಿಂದ ಒಪ್ಪಿಕೊಂಡು ಬಂದಿರುವವರು ಭಾರತೇಯರು (ಜೀವಾತ್ಮ.೦೯೧). [ಸಂ.]

**ಭಾರದಡಿ** (ನಾ). (ಉಕ) ದೊಡ್ಡತನ; ಗೌರವ : ಸಾಮಂತನು ಏನಾದರೂ ಕೃಷ್ಣತನಯನ ಮೇಲೆ ಅವಲಂಬಿಕೆ ಮಾಡತಕ್ಕ ಮನುಷ್ಯನೇ ಇದ್ದಿಲ್ಲ. ಮೇಲಾಗಿ ಆವರ ತಾಯಿಯು ' ಭಾರದಡಿ 'ಯ ಹೆಣ್ಣುಮಗಳು (ಶಿವಭಾ. ೦೦೨).

[←ಮರಾ. ಭಾರಧಡೀ = ಭಾರವಾದ ವಸ್ತು; ದೊಡ್ಡಸಾಮಾನು]

**ಭಾರದ್ವಾಜ** (ನಾ). ೧. ಭರದ್ವಾಜನೆಂಬ ಮಹರ್ಷಿಗೆ ಸಂಬಂಧಿಸಿದುದು: ಭಾರದ್ವಾಜವಿಶಾಲಗೋತ್ರಮನುದಂಚದ್ಭಾರತಕ್ಷೇತ್ರಮಂ . . . ಸಾರಂಚಿ ತ್ರಿಸವಂತಲಂಕರಿಸಿತೆಂಬಾಗಳ್ (ಧರ್ಮಾಪ. ೦-೮೦). ೨. ಭರದ್ವಾಜ ಮುನಿಯಿಂದ ಪ್ರವೃತ್ತವಾದ ಗೋತ್ರದಲ್ಲಿ ಹುಟ್ಟಿದವನು. ೩. ಭರದ್ವಾಜನ ಮಗ; ದ್ರೋಣ : ಅಂತು ಭಾರದ್ವಾಜನಾಗಾಮಿಕ ಸಂಗ್ರಾಮರಂಗಕ್ಕೆ ಪಾತ್ರಂಗಳಂ ಸಮೆಯಿಸುವ ಸೂತ್ರಧಾರನಂತೆ ಶಸ್ತ್ರವಿದ್ಯಾಭ್ಯಾಸಂಗೆಯ್ಯುತ್ತಿರೆ (ಪಂಪಭಾ. ೨-೩೯ ವ); ಓಜಂ ಗಡ ಚೀ ಭಾರದ್ವಾಜಂ ಗಡ ಬಿಲ್ಲ ಬಲ್ಮೆಯುಂ ಕುಲಮುಂ ನಿರ್ವ್ಯಾಜಂ ಮಸುಳ್ದುವು ಪಾಂಡುತನೂಜರ ಪಕ್ಕದೊಳೆ ಪಾಟಿಗಿಡೆ ನೆಗಳ್ದುದಟಿಂ (ಗದಾಯು. ೨-೦೮); ನೃಪಾಲಶ್ರೇಣಿಯನು ಶಸ್ತ್ರಾಸ್ತ್ರ ಕಳೆಯಲಿ ಜಾಣರನು ಮಾಡಿದನು ಭಾರದ್ವಾಜಮುನಿಯಂದು (ಕುಮಾವ್ಯಾ. ೬-೨೨). ೪. ಸಪ್ತರ್ಷಿ ಗಳಲ್ಲಿ ಒಬ್ಬ; ಭರದ್ವಾಜ. ೫. ಒಂದು ಬಗೆಯ ಹಕ್ಕಿ; ಹೆಗ್ನಾರ : ವಲಿಯ ಭಾರದ್ವಾಜ ಪಿಕ ಪಿಂಗಲಿ . . . ಶಿಖಿ ಮಡ ಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡೆಂದ (ತೊರರಾ. ೩-೦-೩೩); ಹರಿಣ ಭಾರದ್ವಾಜ ಹಂಗಂಗಳು ತಡೆಯೆ ನರಿ ನವಿಲು ನಕುಳ ವಾಯಸಂ ಗಳು ತಿರ್ದೆ ಶುಭಶಕುನಂಗಳು (ಪಿಠೀಳ.೦೨೩); ಕಂಗೊಳಿಪ ಕೊಂಚೆ ಭಾರದ್ವಾಜ ಚೆಂಬೋತ . . . ಪಿಂಗಳಿಕ ಸಾಲ್ವ 'ನರಳಿಗನಸಗವಕ್ಕಿಗಳ ಸಂಗಮೊಪ್ಪಿರ್ದವಲ್ಲಿ (ರುಕ್ಮಾಂಗ. ೦೦-೩). ೪. ೫ : ಬಂಧುರ ಭಾರದ್ವಾಜ ಶಾಂಡಿಲ್ಯಕ ಶುಕ ವಿಮದಾಗಸ್ತ್ಯಕಂ ತಾಪಸಪ್ರೋತ್ಕರಮಂ ಸೋಮಾರ್ಕ ರುಕ್ಷಾಂಚಿತಮದು ನಭಮಂ ಪೋಲ್ತು ಚೆಲ್ವಾಯ್ತರಣ್ಯಂ (ರಾಜಶೇ. ೩-೭೩). ೬. ಅಗಸ್ತ್ಯ. ೭. ಅಂಗಾರಕಗ್ರಹ. [ಸಂ.]

**ಭಾರದ್ವಾಜತನೂಜ** (ನಾ). ಭಾರದ್ವಾಜಋಷಿಯ ಮಗ : ದ್ರೋಣ : ಭಾರದ್ವಾಜತನೂಜಂ ಚಾರುಗುಣಂ ದ್ರೋಣನೆಂಬಂ. . . ಜನವಿನುತ ಚಾಪವಿದ್ಯಾಧಾರಂ (ಬಂಶಂ. ೦೦-೩೩). [ಸಂ.]

**ಭಾರದ್ವಾಜಿ** (ನಾ). ಕಾಡುಹತ್ತಿಗಿಡ : "ಆ ಹತ್ತಿಯ ಗಿಡು ಅಡವಿಯಲ್ಲಿ ಹುಟ್ಟಿದರೆ ಭಾರದ್ವಾಜಿಯೆನಿಸುಗು" (ಪಾಜಶಾ. ೦೦೦). [ಸಂ. ಭಾರದ್ವಾಜೀ]

**ಭಾರಯಷ್ಟಿ** (ನಾ). ಭಾರವನ್ನು ಹೊರುವ ಕಂಬಿ,–ಅಡ್ಡೆ: "ಭಾರ ಯಷ್ಟಿಃ, ವಿಹಂಗಿಕಾ—ಈ ೨ ಕಾ(ಚಿ)ಸಿನ ಕಂಬಿ" (ಪಠಾಯು. ೦೨೩-೭೩). [ಸಂ.]

**ಭಾರಯಿಸು** 'ಭಾರಿಸು' ನೋ.

**ಭಾರವಡ್ಡಿಗೆ** 'ಬಾರವಟ್ಟಿಗೆ' ನೋ.

**ಭಾರವಣೆ, ಭಾರಣೆ₁** (ನಾ). ೧. ಹೊರೆ; ತೂಕ; ಭಾರ. ೨. ಹೆಚ್ಚಳ; ಆಧಿಕ್ಯ; ಅತಿಶಯ: ಶಿವನರ್ಚನೆಯ ಹರಿವರಿಯ ಶರಣರ ತಿರುತಿಣೆಯ ಭಾರವಣೆಯ ಮೇಲೆ ಮೆಲ್ಲನೆ ನರ್ತನದ ನಟನೆ ಮೈಸಂದು ಕೈವೀಸಿ ನಡೆದು ಬರೆ (ಶೀಶರ. ೦೦೦-೦); ಯುಧಿಷ್ಠಿರ ವೀರನಿಂದಿಮ್ಮಡಿಯ ನೇಹದ ಭಾರ ವಣೆ ತೋಜುವುದಿದೇನೈ ಕರ್ಣನಾರೆಂದ (ಕುಮಾವ್ಯಾ. ೨೬-೨೪); ಬರುತ ಕಂಡನು ತೊಳಗಿ ತೋಜುವ ಶಿರದ ಸಿರಿಪಾದುಕೆಯ ಪುಳಕಾಂಬರದ ಭಾರ ವಣೆಯಲಿ ಬಳುಕುವ ಭದ್ರಕಾಯನನು (ಪಶಾಗ. ೩-೦-೩೬). ೩. ಹಿರಿಮೆ; ಪೆಂಪು; ಘನತೆ; ಠೀವಿ : ಕಡುಮನದ ಕಲಿ ರಾಜಪುತ್ರರ ನಡುವೆ ಮೈ ಪರಿಮಳದಿ ದೆಸೆ ಕಂಪಿಡಲು ಭಾರವಣೆಯಲಿ ಬಂದನು ಕರ್ಣನೋಲಗಕೆ (ಕುಮಾದ್ರೋ. ೧-೨೪). ೪. ಆಡಂಬರ; ಅಟಾಟೋಪ; ಕೋಲಾಹಲ : ಬವರಿಯಲಿ ಪಯಪಾಡಿನಲಿ ಮೈಲವಣಿಯಲಿ ಬಿನ್ನಾಣದಲಿ ಭಾರವಣೆ ಯಲಿ. . . ಕೌರವಮಹೀಪತಿ ತೋಜಿದನು ಶ್ರಮವನು ಕಠಾರಿಯಲಿ (ಸಂಭಶ. ೦೮-೪೯); ಪ್ರತಿಭಟನಭಾರವಣೆ ಲೇಸೈ ಕರ್ಣ (ಕುಮಾವಿ. ೮-೦೩).

**ಭಾರಣೆ₁** : ೧. "ಭಾರಣೆಯೆನೆ ಬಲುಭಾರಂ" (ಶಾಠ. ೩೯); ಸಾರಪರಿಮಳ ವಸ್ತುಗಳ ಬಲುಭಾರಣೆಯ ಪೆಟ್ಟಿಗೆಗಳೊಟ್ಟಿತು (ಕುಮಾವ್ಯಾ. ೦೭-೨೮); ಜಗತಿ ಜರಿದುದು ರಣದ ಹೆಣಪೆಟ್ಟಿಗಳ ಭಾರಣೆಗೆ (ತೊರರಾ. ೬-೧೩-೨); ಭಾರಣೆಯ ಗಂಡಶೈಲಗಳೆಲ್ಲ ಗಮನದುರು ಮಾರುತನ ಗತಿವಿಡಿದು ಪಡಿಬಲವು ಮುಂಕೊಂಡು ಧಾರಿಣೀಶನ ಸುತ್ತಿ ಪೋಪಂತದೇಂ ಬೆಡಗ ತೋರುವುದೊ ತತ್ಸಮಯದಿ (ವೆಂಕಾರಾ. ೩-೦-೨೦). ೨. ಕುಣಿವ ಕುದುರೆಯ ಮದದ ಬಲುಭಾರಣೆಯಲೊಲೆವಾನೆಗಳ. . . ತಿವಿದಗಿವ ಭಟರೊಡ್ಡಣೆ ಸಘಾಡಿಸಿತೆರಡು ಬಲದಲಿ (ಕುಮಾಭೀ. ೨-೩); ಅಧಿಕಭೀತಿಯ ಭಾರಣೆಯಲಿರಲುರಿ ಭಡಾಳಿಸಿ ಭೋರೆನುತ ಹಬ್ಬಿದುದು (ತೊರರಾ. ೬-೩೬-೦೦); ಭಾರಣೆಯ ಬಲದೊಡನೆ ಕುದುರೆಗಾವಲೊಳಿರ್ದ ವೀರತಾಮ್ರಧ್ವಜನ ಮಂತ್ರಿ ನಕುಲಧ್ವಜಂ ದೂರದೊಳ್ ಕಂಡನು (ಜೈಮಿಭಾ. ೨೩-೯). ೩. ಅದಟನೊಳ್ವೀರದೊಳ್ಭಾರಣೆಯೊಳು . . . ಕಾಣೆನ ವರಿರ್ವರ್ಗೆ ಸಮರಾದ ಕಲಿಗಳಂ (ಜೈಮಿಭಾ. ೨೨-೦೨); ವಿಚಾರವಳಿದಾರೂಢ ಯೋಗಿಯ ಭಾರಣೆಯಲಕ್ರೂರನೆಸೆದನು ಭಕ್ತಕೇಳಿಯಲಿ (ಅಕ್ರೂಚ. ೨-೩೭). ೪. ಭೈರವನ ಭಾರಣೆ ರಕ್ಕಸರುರ್ಬು ಮಿಬ್ಬು ಮೊತ್ತಂ ಗಣನಾತಿರೇಕಮೆನ ಲೊಪ್ಪುವವೋಲ್ ನೆರೆದಿರ್ದುದಾಕ್ಷಣಂ ಸಂಗರದುಜ್ಜುಗಕ್ಕೆ ಚತುರಂಗಬಲಂ

(ದಶಕು. ೬-೪೯); ಕಾಳಗದೊಳಿದಿರಾರು ಭೀಮಾರ್ಜುನರ ಭಾರಣೆಗೆ (ಕುಮಾ.ಗ. ೩-೪೦); ಆರು ಮುರಹರನಲ್ಲದಸುವನು ಹೀರುವರು ಪೂತನಿಯ ಶಕಟನನಾರೊದೆದು ಹುಡಿಹುಡಿಯ ಮಾಳ್ಪರು ಮಾರುತಾಸುರನ ಭಾರಣೆಯ ಬಲುಗೈವ ವೀರರದಾರು (ಪಿಭಾಗ. ೨-೩-೧೭). ೫. ಹೊಣೆಗಾರಿಕೆ; ಕಾರ್ಯನಿರ್ವಹಣೆಯ ಜವಾಬ್ದಾರಿ : ತಿಳಿಯಲುಟ್ಟದ ಸಾತ್ಯಕಿಗೆ ಕೊಳುಗುಳದ ಭಾರಣೆಯಾಯ್ತು (ಕುಮಾ.ದ್ರೋ. ೧೨-೩); ಊರ ನೇಣುಗಳು ದರವೇಷ್ಟನಭಾರಣೆಗೆ ಬಾರದುದನೊಂದೇ ಸೇರಿದುದನರ್ಜುನ ಮಹಾವಿಟಪಿಗಳನೀ ಧರೆಗೆ ಬೇರುಸಹಿತೆಡಗೆಡಹುವುದ . . . ನೆಟ್ ಕಂಡೆ ನಾನೆಂದ (ಪಿಭಾಗ. ೧೦-೩೨-೨೮).

[<ಸಂ. ಭಾರ. /ಮರಾ. ಭಾರಾವಣೇ=ಬಹಳ ಭಾರವಾಗು]

**ಭಾರವಹ** (ನಾ). ೧. ಹೊರೆಯನ್ನು ಹೊರುವವನು. ೨. ಹೊಣೆಯನ್ನು ಹೊರುವವನು; ಹೊಣೆಗಾರ : ತುರಗವಾರಗಜಶಿಕ್ಷಾಭಾರವಹರಿಂ ಮಿಳದಪಾರಧನರಿಂ ಪೊಣ್ಗುವಮಾ ರುಚಿರಪಟ್ಟಣಮಿಳಾರಮಣಯುಕ್ತಂ (ರಾಜಶೇ. ೨-೯೦). [ಸಂ.]

**ಭಾರವಾಸಿ** (ನಾ). ಹೆಚ್ಚು ಭಾರ; ಅಧಿಕವಾದ ತೂಕ : ಪಾರಜಾಗೀರು ಹೊನ್ನಿನ ಚೀಲಚೀಲಗಳು ಭಾರವಾಸಿಯ ಸ್ವರ್ಣರಜತದಿಂ ಅಂಬಾರಿಸಹ ಅಶ್ವಗಜಸಮೂಹ . . . ಧವಳಛತ್ರಗಳನಾರಾರಿಗೀವುದೀವೃತ್ತಿರಲು ರಾಜ ಚೂಡಾಮಣಿಯ ಸಭೆಯೊಳೊಲವಿಂ (ಕೃಕೃಪಿ. ೫-೫೫). [ಭಾರ + ವಾಸಿ$_1$]

**ಭಾರವಾಹ** (ನಾ). ಭಾರವನ್ನು ಹೊರುವವನು; ಹೊರೆಯಾಳು : "ಭಾರವಾಹಃ, ಭಾರಿಕಃ — ೨ ಹೊರೆ ಹೊರುವವನ ಪೆಸರು" (ಸಿದ್ಧಾಂತಿ. ೩೦೨). [ಸಂ.]

**ಭಾರವಾಹಕ** (ನಾ). = ಭಾರವಾಹ : ಯುವರಾಜಂಗರಸಂ ರಾಜ್ಯವಿಳಾಸಮನಿತ್ತು . . . ಭಾರವಾಹಕಂ ಪೊಱೆಯನಿೞಿಪಿದಂತೆವೊಲಾದಂ (ಪುಲ್ಪು. ೯-೦೩೦). [ಸಂ.]

**ಭಾರವಾಹಿ** (ನಾ). = ಭಾರವಾಹ : ಕರ್ತೃಶಾಲಿಯಾದ ಪುರುಷನು, "ಯಃಕ್ರಿಯಾವಾನ್ ಸ ಪಂಡಿತಃ", ಉಳಿದವರೆಲ್ಲರೂ ಭಾರವಾಹಿಗಳು (ಶ್ರಿಹೃತಿ. ೦೨೭). [ಸಂ. ಭಾರವಾಹಿನ್]

**ಭಾರವಿಸು** 'ಭಾರಿಸು' ನೋ.

**ಭಾರಸಂಖ್ಯೆ** (ನಾ). ಅಧಿಕ ಸಂಖ್ಯೆ; ಬಹುಸಂಖ್ಯೆ : ಮರಕತದ ಮಧುಪಾತ್ರೆ ನೀಲದ ಕರಗ ವೈಡೂರಿಯದ ಪಡಿಗವ ಚರರು ತಂದೊಟ್ಟಿದರು ಬಂಡಿಗೆ ಭಾರಸಂಖ್ಯೆಯಲಿ (ಕುಮಾ.ಗ. ೪-೦೫); ತಂದು ಬಳಿಕೊಟ್ಟಿದರು ಪರಿಮಳಚಂದನದ ನೀರಸಕುಜಂಗಳನಂದಮಿಗೆ ಮಧ್ಯದಲಿ ಸುರಿದರು ಭಾರಸಂಖ್ಯೆಯಲಿ ಒಂದು ತಾಳುತ್ಸೇಧದಲಿ ಹಳುಕೊಂದಿದುತ್ತಮಕರ್ಪೂರವನು (ತೊರವೆ. ೬-೫೩-೮೮). [ಸಂ. ಭಾರಸಂಖ್ಯಾ]

**ಭಾರಾಂಕ** (ನಾ). ೧. ಅತಿಶಯವಾದ ಯುದ್ಧ, -ಕದನ : ಬವರದೊಳು ಹರಿಪಾಂಚಜನ್ಯದ ರವ ಭಯಂಕರವಾಯ್ತು ಬಹಳಾಹವದೊಳಗೆ ಪಾರ್ಥಂಗ ಬಿದ್ದುದು ಭಟರ ಭಾರಾಂಕ (ಕುಮಾ.ದ್ರೋ. ೧೦-೧). ೨. ಯೋಧ; ಪರಾಕ್ರಮಿ: ನೀರಜಭವನ ಮಾನಸಪುತ್ರ ನೀನಲ್ಲದಾರಾದೊಡೀ ಮಾತುಗಳ ಭಾರಾಂಕನಾಗಿಯೆಸ್ಸೊಡನೆ ಪೇಳ್ದೊಡೆ ಸೀಳಿ ತೋರಣಗಟ್ಟುವೆನೆಂದ (ಬೊಃಹಶ. ೦೨-೩೦). [ಸಂ.]

**ಭಾರಾಮಾರ್ಗ** 'ಬಾರಾಮಾರ್ಗ' ನೋ.

**ಭಾರಾವತಾರ** (ನಾ). ಹೊರೆಯನ್ನು ಇಳಿಸುವಿಕೆ; ಕಷ್ಟವನ್ನು ಪರಿಹರಿಸುವಿಕೆ : ಮುನ್ನಂ ಕೃತಯುಗದೊಳ್ . . . ನೆಗಟ್ತೆಯ ದೈತ್ಯರೆಲ್ಲ ಮೆನ್ನ ಚಕ್ರಘಾತದೊಳಟ್ಗಿ ಮಟ್ಗಿದಂತಾದರದೊಂದು ಧರಾವನಿ[ತೆ]ಯ ಭಾರಾವತಾರದೊಳೆನಿತಾನುಂ ಘಸಣಿ ಪೋದುದು (ಕಂಕಭಾ. ೬-೨೪ ವ). [ಸಂ.]

**ಭಾರಾಳಸ** (ನಾ). ಭಾರದಿಂದ ಉಂಟಾಗುವ ಆಲಸ್ಯ; ತೂಕದಿಂದ ಉಂಟಾಗುವ ಜಡತ್ವ : ತನ್ನ ನಡೆಯಿಂ ನಡೆಗಲ್ತೊಡವರ್ಪ ಕೇಳಿಹಂಸಾಳಿಯ ಬೆನ್ನೊಳ್ಳೈದೆ ನಡೆಯಲ್ ಬಸಮಲ್ಲದೆ ನಿಂದು . . . ಭಾರಾಳಸದಿಂದವಾದ ಗಮನಾಲಸವೃತ್ತಿಯನೇನನೆಂದಪೆಂ (ಜಗಾ. ೨-೯೭).

[ಸಂ. ಭಾರಾಲಸ]

**ಭಾರಿ$_1$** (ಗು). ೧. ಹೆಚ್ಚಾದ; ಅತಿಶಯವಾದ; ಅಧಿಕವಾದ : ಭಾರಿ ಧನವನು ತಂದು ಧರೆಗಿಳುಹಿದರು (ಕುಮಾ.ಆ. ೦೪-೩); ನನಗೆ ಬಲು ಭಾರಿ ದಾನ ಮಾಡಿದಿ (ಮುಂಶಿಪಾ. ೨೯). ೨. ದೊಡ್ಡದಾದ; ಗಾತ್ರವಾದ : ಜಾಲಿ ಜೇನೊಡವಿಪ್ಪೆ ಪಿಪ್ಪಲಮಾಲೆಯಿಂವ ನೋಡಬಲೆ ಲತೆಗಳ ಮೇಲು ಹೊದಕೆಯ ಬಂದಣಿಕೆಗಳ ಭಾರಿಪೊಱೆಗಳಲಿ (ತೊರವೆ. ೩-೮-೨೮). ೩. ಕಟ್ಟುಮಸ್ತಾದ; ಸ್ಥೂಲವಾದ : ಅವರು ಭಾರಿ ಆಳುಗಳಾಗಿದ್ದಾರೆ (ದೇಶೀಆ. ೪೦). ೪. ಬೆಲೆ ಬಾಳುವ; ಅತಿ ಬೆಲೆಯ : ಆಕೆ ದಿನವೂ ಭಾರಿ ಸೀರೆಯನ್ನೇ ಉಡುತ್ತಾರೆ (ರೂಢಿ). ೫. ತೀವ್ರವಾದ; ಅತಿಯಾದ : ಮೈಯಲ್ಲಿ ಭಾರಿ ಜ್ವರ. ಪೂರಾ ನಿಶ್ಶಕ್ತಿ (ವಾಕ್ಪೋಲಿ. ೦೦೫). ೬. ಭಯಂಕರವಾದ; ಭೀಕರವಾದ: ಭಾರಿಯಾಹವವಾದೆಡೆಗೆ ನಿಮ್ಮನಿದಾರು ಬಿಟ್ಟರುಪಾಯದಲಿ (ಕುಮಾ.ಕ.೪-೦೧). ೭. ಐಶ್ವರ್ಯವುಳ್ಳ; ಸಿರಿಯುಳ್ಳ : ಆತ ಹಲವಾರು ಜನರನ್ನು ತನ್ನ ಕೈಕೆಳಗೆ ಸಂಬಳಕ್ಕಿಟ್ಟುಕೊಳ್ಳಬಹುದು ಎನ್ನುವಷ್ಟು ಭಾರಿ ಮನುಷ್ಯ (ರೂಢಿ). (ನಾ). ೮. ಭಾರವಾದುದು; ತೂಕವಾದುದು. ೯. ದೊಡ್ಡದಾದುದು; ಗಾತ್ರವಾದುದು : ಭಾರಿಯ ತಲೆವರಿಗೆಗಳಲೊತ್ತಿದರು ಹೊಗಿಸಿದರು ದುರ್ಗವನು (ಕುಮಾ.ಸ. ೩-೫೦); ಭಾರಿಯ ದಂತಿ ಮಹದಾಹವದೊಳಿದುದು (ಕುಮಾ.ದ್ರೋ. ೩-೦೦). ೧೦. ಹೆಚ್ಚಾದುದು; ಅತಿಶಯವಾದುದು : ಭಾರಿಯ ಭಟರ ಗಡಣದಲಿ ಭಾರಣೆಯಲೈತಪ್ಪ ನಿಜಪರಿವಾರವನು ಬೋಳೈಸಿ (ಕುಮಾ.ದ್ರೋ. ೦೦-೪); ಬಳಿಕಲಾ ದಮಯಂತಿ ಭಾರಿಯ ಬಳಲಿಕೆಯನನುಭವಿಸಿ ತಂದೆಯ ನಿಳಯವನು ಸಾರಿದಳು (ತೊರವೆ. ೩-೨-೦೫). ೧೧. ದಪ್ಪವಾದುದು; ಸ್ಥೂಲವಾದುದು : ಕರವ ನೊಸಲಲಿ ಚಾಚಿ ಭಾರಿಯ ಭುಜವನೊದಱಸುತ ಅರಸಗಭಿವಂದಿಸುತ (ಕುಮಾ.ದ್ರೋ. ೪-೫೦). ೧೨. ಪ್ರಶಸ್ತವಾದುದು; ಶ್ರೇಷ್ಠವಾದುದು : ಇತ್ತ ಭೂರಿಶ್ರವನು ಭಾರಿಯ ಹತ್ತುಸಾವಿರರಥ ಸಹಿತ ಕೈಗುತ್ತಿದನು ರಣವಿಜಯಲಕ್ಷ್ಮಿಯ ಲಲಿತಃಬರಿಯಲಿ (ಕುಮಾ.ದ್ರೋ. ೦೪-೦); ಈರೇಳುಲೋಕದ ಪರಗಂಡನೆಂದೆಂಬ ಭಾರಿಯ ಬಿರುದಿನ ಕಡೆಯ ವೀರದಾನವನೆತಗಾಲಿನೊಳಗೆ . . . ಒಪ್ಪುತಿಹುದು (ಕೃಶಾಂ. ೬-೬೩).

**ಭಾರಿಯಾಳು** = ಮಹಾಶೂರ; ಅತಿ ಪರಾಕ್ರಮಿ; ಶ್ರೇಷ್ಠ ಯೋಧ: ಭಾರಿಯಾಳ್ಗೆ ದ್ರೋಣನಾತನು ತೀರಿದನು (ಕುಮಾ.ದ್ರೋ. ೦೬-೫೭); ವೀರ ವಿಕ್ರಮ ಶೌರ್ಯದಾಗರ ಭಾರಿಯಾಳಧಟುಗಳ ಬಂಟಂ . . . ಮಾರಿಮುಖ ನೆಂಜವನು ಬಂದವ ರಾವಣನ ಮಂತ್ರಿ (ತೊರಾ. ೩೩-೦೦).

[< ಸಂ. ಭಾರ. / ತೆಲು. ಭಾರೀ. / ಹಿಂ. ಮರಾ. ಭಾರೀ]

**ಭಾರಿ$_2$** (ನಾ). ಸಿಂಹ.

**ಭಾರಿನಿಗಳಾಂಕ** = ಸಿಂಹಕ್ಕೆ ಬೇಡಿಯನ್ನು ಹಾಕಿದವನು; ಮದಕರಿ ನಾಯಕನ ಒಂದು ಬಿರುದು : ಆಗ ಭಟರು "ಮಹಾರಾಜ ಛತ್ರಪತಿ ಖಡೆಯಶೋವಂತ . . . ಅರಿಕಲಭಕಂಠೀರವ ವೀರಮದಕರಿರಾಜ ಭಾರಿನಿಗಳಾಂಕ ಜಯ ಜಯ" ಎಂದು ಹೊಗಳಿದರು (ಚಿತ್ರಪ. ೪೮). [ಸಂ.]

**ಭಾರಿಕ** (ನಾ). ಹೊರೆಯನ್ನು ಹೊರುವವನು : "ಭಾರವಾಹಃ, ಭಾರಿಕಃ — ೨ ಹೊರೆ ಹೊರುವವನ ಪೆಸರು" (ಸಿದ್ಧಾಂತಿ. ೩೦೨.) [ಸಂ.]

**ಭಾರಿಮಾಡು** (ಕ್ರಿ). (ವ್ಯವಸ್ಥೆಯಿಂದ ನಿಂತು) ಮುಜರೆ ಮಾಡು; ಗೌರವ ಸೂಚಿಸು : ಕರಿಯ ಕುಂಭಸ್ಥಳಕಂಕಣಗಳನೊತ್ತಿ ಭರದಲಿ ನಡಿಸಿ ತಂದಾಗ ನರಸೇಂದ್ರನಂಘ್ರಿಗೆ ನಮಿಸಿ ಜೋದರುಗಳು ಹರುಷದೆ

ಭಾರಿಮಾಡಿದರು (ಕಂಪಾ. ೨೦-೩೩); ತುರಗಾರೋಹಕರ್ಕೈತಂದು ಕುದುರೆಯ ಬಿರುದಿನೇಱಾಟವ ತೋಱ ದೊರೆರಾಯ ಕಂಠೀರವಗೆ ಕೈಮುಗಿದಾಗ ಹರುಷದೆ ಭಾರಿಮಾಡಿದರು (ಕಂಪಾ. ೨೦-೩೬). 'ಬರಾಬರಿ₁', 'ಭರಾಭರಿ ಗೊಡು' ಪರಾ. [ ಭಾರಿ ? + ಮಾಡು₁ ]

**ಭಾರಿಸು, ಭಾರಯಿಸು, ಭಾರವಿಸು, ಭಾರ್ಯೈಸು** (ಕ್ರಿ). ೧. ಭಾರವಾಗು; ಹೊರೆಯಾಗು; ತೂಕವಾಗು. ೨. ಜಡವಾಗು; ಚೈತನ್ಯಹೀನವಾಗು; ಚಟುವಟಿಕೆಯಿಲ್ಲದಾಗು : ಭಾರಿಸಿತು ಮೈ ಮುಷ್ಟಿಯಲಿ ಲುಳಿ ಸಾರತರ ಲಂಬಿಸಿತು (ಕುಮಾ.ದ್ರೋ. ೧೧+೨೩). ೩. ಹೊರೆಯನ್ನು ಹೇರು; ಭಾರವನ್ನು ತುಂಬು : ಭಾ[ಪಾಠಾಂ. ಬಾ]ರಿಸಿದ ಬಲುಹೊಱೆಯ ಭಂಡಿಗಳೋರಣಿಸಿದವು ಪಯಣದಲಿ (ಕೂರರಾ. ೦-೩-೩). ೪. ಹೆಚ್ಚಾಗು; ಅಧಿಕವಾಗು: ನಮಗೀಯರಿಯ ಭಯ ಭಾರಿಸಿತಿದೇನು ನಿಮಿತ್ತವಿದಕೆನಲು (ಕುಮಾ.ಗ.೬-೩೦):ಘುಡುಘುಡಿಪ ಕೋಪದಲಿ ದುರ್ಗದ ಹೆಡಕುಪರಿಯಂತೇಱ ಪುರ ಗಡಬಡಿಸಿ ಬೆಚ್ಚಿತು ಭಾ[ಪಾಠಾಂ. ಬಾ]ರಿಸಿತು ಭಯವಿನತನೂಜಂಗೆ (ಕೂರರಾ. ೪-೬-೨೦) ; ಕೌರವಂ ಮುನ್ನಿರ್ದ ಸರಸಿಗೈತಂದು . . . ಭಾರಿಸಿದ ಬಳಲಿಕೆಯ ನೀಗಿ ಸರಸಿಯಲಿ (ತುರಂಗ. ೬೬-೨೦). ೫. ಗುಂಪುಗೂಡು ; ಸೇರು ; ನೆರೆ : ಊರೊಳೀ ಕಪಿವಾರ್ತೆಯಗಲಕೆ ಬೇರುವರಿದುದು ಬೆಜಗುಬಿಂಕದ ಭಾರಕರು ಭಾರಿಸಿತು ಕೋಟಾವಳಿಯದಗ್ರದಲಿ (ಕೂರರಾ. ೩-೩-೦); ಭಾರಿಸಿದುದೆಡಬಲಕೆ ಸಾಂಬಾಕ್ರೂರ ಸಾತ್ಯಕಿ . . . ಪ್ರವೀರಕರು (ಶಿಶಾಗ. ೦೦-೬೦-೨೬). ೬. ಹರಡು ; ವ್ಯಾಪಿಸು : ಶಿವಶಿವೆಂದುದು ನಿಖಿಳಜಗ ಕೌರವರು ಕಂಪಿಸಿ ಘಟ್ಟಿಗೆಡೆದರು ಭುವನದಲಿ ಭಾರಿಸಿತು ಜಯಜಯ ಜಯ ಮಹಾಧ್ವಾನ (ಕುಮಾ.ಉ. ೬-೩೬) ; ಫಲುಗುಣಂ ಬಿದ್ದನೆಂದು ಭಾರಿಸಿತು ವಾರ್ತೆಗಳ್ಪುರದೊಳಗೆ ದಳದೊಳಗೆ (ತುರಂಗ. ೮೨-೨೯). **ಭಾರಯಿಸು** : ೨. ಕುರುಬಲದ ಹತ್ತಿರಕ್ಕೆ ನಡೆದಂತೆಲ್ಲ ಕುಮಾರನಿಗೆ ತನು ಭಾರಯಿಸಿತು (ಕಪಾತ. ೯೪) ; ಹೃದಯ ನರ್ತಿಸುವುದಿಲ್ಲ –ಭಾರಯಿಸಿದೆ. ಇನ್ನೂ ಭಾರಯಿಸುತ್ತದೆ (ಶಿಶಿಂಧ-II, ೦೬೪). ೭. ತೀವ್ರವಾಗು; ಅತಿಶಯವಾಗು: ಇದೆತ್ತಣ ವಾದ್ಯ ಇದೆತ್ತಣ ಗಾನ ಎನ್ನುವಂತೆ ನೃತ್ಯರಸಾನುಭವ ಭಾರಯಿಸಿತು (ಕಾಶುಕ. ೦೦೮). **ಭಾರವಿಸು**: ೧. ನೆಲ ಭಾರವಿಸಿತಹಿಪನ ಶಿರಕೆ (ಕೂರರಾ. ೬-೩೮-೦೪). ೪. ಅವನಿಯೆಡೆಗೆಡೆ ಭಂಡಿಗಳು ಭಾರವಿಸಿ ನೂಕಿತು (ಶಿಶಾಗ. ೦೦-೩೪-೪೪). ೮. ಒಟ್ಟುಗೂಡಿಸು; ಸೇರಿಸು : ಕ್ರೂರಕರ್ಮರು ತುಡುಕಿ ದ್ರೌಪದಿಯನಾ ಪೆಣಕೆ ಭಾರವಿಸಿ ಬಿಗಿದು ಕಟ್ಟಿದರಾಗಲು (ತರಂಗ. ೩೩-೬೨). **ಭಾರ್ಯೈಸು** : ೨. ಹರನ ಕರುಣಕ್ಕೆ ಹಾರೈಸಿ ಭಕ್ತಿಭರದಿಂ ಭಾರ್ಯೈಸಿ ಮನದ ಮೊನೆಯಂ ಕೋರೈಸಿ (ಐಕ೨. ೪-೬೦); ಮಾರವಿಜಯನ ಕಾಣುತ ಭಕ್ತಿ ತಲೆಗೇಱ ಭಾರ್ಯೈಸಿ ಬೀಳುವಂದದೊಳು ಧಾರಣಿಯೊಳು ಸಾಷ್ಟಾಂಗನಮಿತನಾದನಾ ರಾಯರ ದೇವನಂದು (ತ್ರೀಶಪ್ರ. ೬-೬೨). ೪. ಮೇರೆಯಿಲ್ಲದ ರಾಜ್ಯ ಮಗನೆ ನಿನಗೆ ವ್ರತಭಾರವಗ್ಗಳವೆಂಬ ಚಿಂತೆ ಭಾರ್ಯೈಸಿ ನವಗಿದ್ದುದಿಂದು ಹೋಯ್ತೆಂದು ಕುಮಾರನ ಕೂಡೆ ನುಡಿದಳು (ಭರತ. ೦೪-೦೦೪); ನುಡಿ ಮೆಲ್ಲನಾಗೆ ಬಡನಡು ದೊಡ್ಡಿತಾಗೆ ತವೆ ಬಿಡುವ ನಿಟ್ಟುಸಿರು ಭಾರ್ಯೈಸೆ (ಶ್ರೀಶರಾ. ೪-೪೩); ತನ್ನ ಕೆಲಸವೆ ತನಗೆ ಭಾರ್ಯೈಸಿ, ಅಕಳಿಕ ಮೈಮುರಿತವೆಡೆಗೊಳಲು (ರಾಕ್ಷಮು. ೪೮). ೯. ದೊಡ್ಡದಾಗು; ದಪ್ಪವಾಗು : ಸಾರಿ ಸಂಸರ್ಗಪೂಜೆಯ ನನುಗೊಳಿಸಿ ಮಾತ್ರಾ ರಾಯ ಕೈಕೊಳುತಿರ್ದ ಭಾರ್ಯೈಸಿ ಬೆಳೆದೊಂದು ಕುರುವನತ್ತಿತ್ತೊತ್ತಿ ಧೀರನೊಬ್ಬನು ಸೋರಿಪಂತೆ (ಭರತ. ೬೩-೬೩).

[ಭಾರ + — ಇಸು₃]

**ಭಾರುಂಡ** (ನಾ). ಒಂದು ಬಗೆಯ ಕಾಲ್ಪನಿಕ ಪಕ್ಷಿ; ಎರಡು ತಲೆಯುಳ್ಳ ಹಕ್ಕಿ ; ಗಂಡಭೇರುಂಡ : 'ಭಾರುಂಡವನ', 'ಭೇರುಂಡ' ಪರಾ.

[ಸಂ.]

**ಭಾರುಂಡವನ** (ನಾ). ೧. ಭಾರುಂಡ ಪಕ್ಷಿಗಳು ವಿಶೇಷವಾಗಿ ವಾಸಿಸುವ ಕಾಡು,–ಅರಣ್ಯ. ೨. ಒಂದು ಅರಣ್ಯದ ಹೆಸರು : ಗಂಗಾಸರಸ್ವತಿಗಳ ಪೊಲಬಂಟುತುತ್ತರದ ವೀರಮತ್ಸ್ಯಾದಿಗಳ ಚೆಲುವ ಭಾರುಂಡವನ ಮನಸಿಯೆ ಕುಳಿಂಗಾಖ್ಯ ಲಲಿತಹ್ಲಾದಿನೀಶೈಲಯುತಮಾದ ಕಾಳಿಂದಿಯೆಡೆಗೈತಂದನು (ವಂಕಾರಾ. ೨-೨೪-೪೪). [ಸಂ.]

**ಭಾರ್ಯೈಸು** 'ಭಾರಿಸು' ನೋ.

**ಭಾರೋಪಜೀವಿ** (ನಾ). ಹೊರೆಯನ್ನು ಹೊತ್ತು ಜೀವಿಸುವವನು ; ಭಾರವಾಹ : " ಭಾರೋಪಜೀವಿ = ಹೊರೆಯನ್ನು ಹೊತ್ತು ಜೀವಿಸುವವನು" (ಪಾಪಾರ. ೬೭ ೬೬೪೭). [ಸಂ. ಭಾರೋಪಜೀವಿನ್]

**ಭಾರ್ಗವ** (ನಾ). ೧. ಭೃಗುಮಹರ್ಷಿಯ ಮಗ; ಚ್ಯವನಮಹರ್ಷಿ : ಭಾರ್ಗವನು ನಾನು. ಚ್ಯವನನೆಂದು ಕರೆಯುವರು (ಪಶಿರಾ. II. ೭೪೪೩). ೨. ಶುಕ್ರಾಚಾರ್ಯ : "ಉಶನಾ, ಶುಕ್ರಃ, ಕಾವ್ಯಃ, ದೈತ್ಯಗುರುಃ, ಭಾರ್ಗವಃ, ಕವಿಃ, ಧಿಷ್ಣ್ಯಃ – ಈ ೭ ಶುಕ್ರನ ಪೆಸರ್" (ಹರಾಯು. ೪-೪೮); ಪೋದುದು ಬೊಮ್ಮಂಗೆ ಶಿರಸ್ಸು ಭಾರ್ಗವನು ಕಣ್ಣಾಣಂ . . . ವಿಧಿಯಂ ಮಿಱುವನಾವನ್ನೆ (ಶೋಪಾಶ. ೨೭). ೩. ಶುಕ್ರಗ್ರಹ : ದಿವಸಕರಂಗೆ ಭಾರ್ಗವ ದಿನೇಶಸುತರ್ . . . ಪಗೆವರ್ ನಿರಂತರಂ (ಪಾಶ. ೨-೦೬). ೪. ಭೃಗುವಂಶದಲ್ಲಿ ಹುಟ್ಟಿದವನು ; ಪರಶುರಾಮ : ವಾಯುಪಥದೊಳ್ ಶಿತಾಸ್ತ್ರಂಗಳ್ ಪೋ[ಕ]ಂಗಿಡಿಸೆ ಸುಗಿದಂ ಭಾರ್ಗವಂ (ಕಂಪಶಾ. ೦-೮೦); ಕಲಿವೀರವೈರಿಭಟ ಭಾರ್ಗ್ಗವನೀ ನರಸಿಂಹನೆಂದು ಕಾದದೆ ಸರಣೆಂದು ಬಂದಹಿತವರ್ಗ್ಗವಮ ಹೇಳದೆ ವೀರದೇಳ್ಗೆಯಂ (ಎಕ. XII, ತಿಪಟೂ. ೦೨೩-೨೩; ೧೨೮೬); ಮುನ್ನಂ ಭಾರ್ಗವಂ ತಂದೆಯ ನನ್ನಿಗೆ ಮಾತೆ ರೇಣುಕೆಯಂ ಕೊಲ್ಲನೆ! (ರಾಪಾಶ. ೨೬-೦೯). ೫. ಬಿಲ್ಲುಗಾರ; ಧನುರ್ಧರ : ಅಂತು ಕಲ್ತು ಮುನ್ನಮೆ ಚಾಪವಿದ್ಯೆಯೊಳೆರಿಂದಮಿಾತನೆ ಭಾರ್ಗವನೆನಿಸಿದ ಭಾರ್ಗವಂಗೆ ತಾನೆ ಭಾರ್ಗವನಾಗಿ (ಕಂಪಶಾ. ೦-೬೮ ವ); ಸಿಡಿಲ ಬಳಗವಿದೆಂಬಿನೆಗಂ ತಾಗಿದತ್ತು ಭಾರ್ಗವಸೈನ್ಯಂ (ಕಂರಾಪು. ೦೩-೩೪) ; ಬಿಲ್ಲ ಬಲ್ಲಣಿಯ ತೆರಳ್ಕೆ ಭಾರ್ಗವರ ಮೊಗ್ಗರದೊಬ್ಬುಳಿ ಕುಂತದಾಳ ತಿಂತಿಣಿ ನೆಱ ತಮ್ಮ ತಮ್ಮ ಬಿರುದಂ . . . ಇಳಾವಳಯಕ್ಕಱ ಪುತ್ತುಮಿರ್ಪನಂ (ಶ್ರೀಪೂ. ೩-೦೨). ೬. ಶಿವ ; ಪರಮೇಶ್ವರ. ೭. ಗಜ ; ಆನೆ. ೮. ಕುಂಬಾರ ; ಕುಲಾಲ. ೯. ಬಾಣ ; ಶರ : ಬಾಳ್ಗಡಿಯಿಂ ಸಿಡಿಲ್ವ ಕಿಡಿಯಿಂ ಬೆನ್ನಟ್ಟಿ ನೋಟ್ಪಂಬರೇಚರರಂ ಕಾಗಿದುದುಗ್ರಭಾರ್ಗವಚಯಂ ವಿತ್ರಸ್ತಲೋಕತ್ರಯಂ (ಪರ್ವಶ. ೮-೪೮).

[ಸಂ.]

**ಭಾರ್ಗವಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು ; ಭೃಗುಮಹರ್ಷಿಯಿಂದ ಪ್ರೋಕ್ತವಾದ ಪುರಾಣ: ಸನತ್ಕುಮಾರಪುರಾಣ ನಾರಸಿಂಹಪುರಾಣ . . . ಭಾರ್ಗವಪುರಾಣವೆಂಬವೇ ಆಯಾ ನಾಮಧೇಯ ಮುಳ್ಳವರಿಂ ನಿರೂಪಿತವಾದ ಹದಿನೆಂಟು ಉಪಪುರಾಣಂಗಳು (೭ವೀಳ. ೬).

[ಸಂ.]

**ಭಾರ್ಗವಿ** (ನಾ). ೧. ಲಕ್ಷ್ಮಿ : "ಇಂದಿರಾ, ಲೋಕಮಾತಾ, ಮಾ, ರಮಾ, ಮಂಗಳದೇವತಾ, ಭಾರ್ಗವೀ, ಲೋಕಜನನೀ, ಕ್ಷೀರಸಾಗರತನ್ಯಕಾ --೮ ಲಕ್ಷ್ಮಿಯ ಹೆಸರುಗಳೆಂತಲೂ ಅಧಿಕಪಾಠ ಹೇಳುವರು" (ಸಿದ್ಧಾ೦ಶಿ. ೦೮). ೨. ಪಾರ್ವತಿ. ೩. ಗರಿಕೆ. [ಸಂ. ಭಾರ್ಗವೀ]

**ಭಾರ್ಗವೀಪತಿ** (ನಾ). ಲಕ್ಷ್ಮೀಪತಿ ; ವಿಷ್ಣು : ಭಾರ್ಗವೀಪತಿಗಮುಳ ಸತ್ವಾಂತರ್ಗತಮದಾಗಿಹುದು (ಕಂಕರಾ. ೦೨-೪೬). [ಸಂ.]

**ಭಾರ್ಯ** (ನಾ). ೧. ಭಾರವನ್ನು ವಹಿಸಿಕೊಳ್ಳಬೇಕಾದುದು ; ಆಶ್ರಯ ನೀಡಬೇಕಾದುದು. ೨. ಸೈನಿಕ ; ಯೋಧ. ೩. [ಗಣಿತ] ಒಂದು ಅಳತೆ : ದ್ರೋಣದಿ ಷೋಡಶಭಾಗವ ಕಾಣುತಲಂ

ಭಾರ್ಯೆಮೆನ್ನುತದು . . . ದ್ರೋಣದಲಿ ಹದಿನಾಱಱೊಳಗೆ ವಂದು ಭಾಗೆ ಭಾರ್ಯವೆನಿಸಿಕೊಂಬುದು (ಶಾಸ್ತ್ರ. ೬೪-೧). [ಸಂ.]

**ಭಾರ್ಯಾದೂತಿ** (ನಾ). ನಾಯಕ–ನಾಯಿಕೆಯರ ಸಮಾಗಮಕ್ಕೆ ಸಾಧಕರಾದ ದೂತಿಯರಲ್ಲಿ ಒಬ್ಬಳು : ದೂತಿಯು ಪ್ರಯತ್ನದಿಂದ ನಾಯಕನ ಹೆಂಡತಿಯಂ ನಂಬಿಸಿ ಆ ಗಂಡನ ಅರಿಕೆಯಿಂದಲೆ ಮೊದಲ್ಲಿ ಅಭಿಲಾಷೆಯ ಕುರುಹಾದರೆ ಆ ಬಟ್ಟೆಯಿಂ ನಾಯಕಿಯು ಪಾದರಕ್ಕೆ ನಡೆಸುವಳು. ಅವಳು ಭಾರ್ಯಾದೂತಿಯೆನಿಸಿಕೊಂಬಳು (ಕಾಮಶಾ. ೨೩೯). [ಸಂ. ಭಾರ್ಯಾದೂತೀ]

**ಭಾರ್ಯೆ** (ನಾ). ಹೆಂಡತಿ ; ಪತ್ನಿ : "ದಾರಾಃ, ಕ್ಷೇತ್ರಂ, ಕಳತ್ರಂ, ಭಾರ್ಯಾ . . . ಗೃಹಾಃ — ಈ ೧೩ ಹೆಂಡತಿ" (ಹಲಾಯು. ೮೨-೩೪೦); ಆರ್ಯಮನ ಬಳಿಗೈದಿದನು ಫಣಿವರ್ಯನೆಂದಾದರಿಸಿ ನಿನ್ನಯ ಭಾರ್ಯೆ ನುಡಿಯಲು ನಿಂದೆನೀ ವನದಲ್ಲಿ ನಾನೀಗ (ತಿಮ್ಮಣಾಂ. ೦೦-೬೯); ನಿನ್ನ ಕೀರ್ತಿಯನ್ನು ನೀನು ಮೆಚ್ಚಿಕೊಂಡರೆ, ನಿನ್ನ ಭಾರ್ಯೆಯು ಸುಮ್ಮನಿರುವುದಕ್ಕಾದೀತೆ ? (ಆರ್ಯಕ. ೩೨). [ಸಂ. ಭಾರ್ಯಾ]

**ಭಾಲ, ಭಾಳ** (ನಾ). ಹಣೆ ; ನೊಸಲು : ತನ್ನ ದೈವರೇಷೆ ಬರೆಯುವಂತೆ ತಾನೆ ಭಾಲಾ (ನಾರಲೀ. ೯೪-೦೦). 'ಫಾಲ', 'ಭಾಲಪಟ್ಟ' ಪರಾ. **ಭಾಳ** : "ನಿಟಿಳಂ ಭಾಳಮಳಿಕಮಱಗೆ ಲಲಾಟಂ" (ವಸ್ತುಕೋ. ೭೦-೦೬); ಅಗಣಿತಶೋಭಿವೆತ್ತ ಪುರಲಕ್ಷ್ಮಿಯು ಭಾಳದ ಲೋಚನಾಂಶುಮಾಲೆಗಳೆನೆ ಕಾಂತಿಸಂತತಿ ದಿಶಾವಳಿಯೊಳ್ ಕುಡಿಯಿಟ್ಟು . . . ಅಗ್ಗಳಿಸಿ ತೋರ್ಪುದು ತತ್ಪುರವೀಧಿವೀಧಿಯೊಳ್ (ಕುಸುಮಾ. ೨-೦೦೦); ಸರಸಿಜಾರಿಯ ಕಿರಣ ದೋಳಿಯ ವಿರಚಿಸಿದ ಸಿಂಧೂರಭಾಳದಿ ಕುಣಿವ ಕುಂತಳದ . . . ಗಣಪತಿ ಮಾಡೆಮಗೆ ನಿರ್ವಿಘ್ನದಾಯಕವ (ಕುಮಾರ. ೦-೩); ಭಸ್ಮತ್ರಿಪುಂಡ್ರಂ ತೊಳಪುದ್ಯದ್ಭಾಳಂ . . ವಿಸುಗೆ ಚರಿಯಿಪರ್ ತಪ್ಪಲೊಳ್ ತಾಪಸೇಂದ್ರರ್ (ರಾಜಶೇ. ೦-೦೩೨). [ಸಂ.]

**ಭಾಲಪಟ್ಟ, ಭಾಳಪಟ್ಟ** (ನಾ). ೧. ಹಣೆ ; ನೊಸಲು ; ನೆತ್ತಿ : ರಾಷ್ಟ್ರ ನಿರ್ಮಾಣದಲ್ಲಿ ಕವಿಯ ಕಾರ್ಯವಿದೆ. ವಿಶ್ವದ ಭಾಲಪಟ್ಟದಲ್ಲಿ ಅವನ ಸಾಲುಗಳೂ ಇವೆ (ಸಾಹಿ. ೩೭). **ಭಾಳಪಟ್ಟ** : ೧. ಅವರ ಭಾಳಪಟ್ಟದ ಮೇಲೆ ಮೂಡಿನಿಂತ ಗೆರೆಗಳು ಇದನ್ನು ತುಂಬಾ ಸೂಚಿಸುವವು (ಮುಗಿಮ. ೬). ೨. (ಸಂಚಾರದ ಬಗೆಗೆ ವಿವರಣೆಯಿರುವ) ಯಜ್ಞಾಶ್ವದ ಹಣೆಪಟ್ಟೆ,—ಲಲಾಟಪಟ್ಟ : ಕುದುರೆ ತನ್ನಿಚ್ಛೆಯಿಂದೈದೆ ಕಂಡು ಭಾಳಪಟ್ಟದ ಲೇಖನವನೋದಿಕೊಂಡು ನೀಲಾಳಕೆಯರಾಗ ನಡೆತಂದು . . . ಸಂಭ್ರಮದೊಳಿಂತೆಂದರು (ಕೃಷ್ಣಾ. ೦೬-೦). [ಸಂ.]

**ಭಾಲಾಂಬಕ, ಭಾಳಾಂಬಕ** (ನಾ). ೧. ಹಣೆಗಣ್ಣು. ೨. ಹಣೆಯಲ್ಲಿ ಕಣ್ಣುಳ್ಳವನು ; ಹಣೆಗಣ್ಣ; ಶಿವ : ಭಾಲಾಂಬಕ ದುಷ್ಟಕಾಲಾರಿ ಖಡ್ಗಾದಿ ಶೂಲಾಯುಧ ತ್ರಿಪುರಕೋಲಾಹಲ (ವೀಶೈಶಿ. ೯-೦೩-೦). **ಭಾಳಾಂಬಕ** : ೨. ವಿಕಳಬಲನಿವನೇನು ಭಾಳಾಂಬಕನೊ ಬಲಿಬಂಧಕನೊ ಸುರಪಾಲಕನೊ ಘಡಘಡ ಎನುತ ಕವಿದುದು ಕರ್ಣನಿದಿರಿನಲಿ (ಕುಮಾರ. ೦೨-೩); ತರಣಿಯುಱುಬೆಗೆ ಧರಣಿ ಕಲ್ಪದ ಹರನ ಭಾಳಾಂಬಕದ ಶಿಖಿ ಸೀಪರಿಸಿದಂತಾಯ್ತೇನನೆಂಬೆನು ನವಗ್ರಹಾಗಮವ (ಕೊರಡಾ. ೦-೩-೦೩); ಬೂಟಕದಿಂದ ಭಾಳಾಂಬಕನ ಭಜಿಸಿಯಾಡಂಬರಂ ಮೆಱೆವರೊಳು ಕೂಡದಿರು (ಹಂಪಿ. ೩-೬೪). [ಸಂ.]

**ಭಾಲಾಕ್ಷ, ಭಾಳಾಕ್ಷ** (ನಾ). ೧.=ಭಾಲಾಂಬಕ ೧. ೨.=ಭಾಲಾಂಬಕ ೨ : ಆಲಿಸೈ ಸಿದ್ಧರಾಮೇಶ ಕನಕಾಂಬಕಂ ಭಾಲಾ[ಶಾಕಾಂ. ೪ಾ]ಕ್ಷನಂ ಕುಱಿತು ಪುತ್ರನಂ ಬೇಡಿ ಬಹುಕಾಲಮಿಯುಂತರಂ ತಪವನಾಚರಿಸಲು (ತಿಬಳ. ೪೭-೨). **ಭಾಳಾಕ್ಷ** : ೧. ಮೃಡನ ಭಾಳಾಕ್ಷದನಲನೊಳಿಟ್ಟು ಕಾಸಿ ಗಿರಿಯಡಿಗಲ್ಲ ಮೇಲಿಟ್ಟ ಕೆಂಡಗೆವಱುನ ಬಟ್ಟೆದೆನೆ ದಿನಪನೆಯ್ತಂದನು (ಹರಿಶ್ಚ. ೪-೩೭); ಹೆಱೆದುಱುಬಿನಿಂದೆ ಶೃಂಗಾರ . . . ಕಿಡಿಗೆದಱುವ ಭಾಳಾಕ್ಷದಿಂ ರೌದ್ರ . . . ಕ್ಷಮತ್ವದಿ ಶಾಂತ ಮೆಱೆಯೆ ಶ್ರೀಕೃಷ್ಣ ನಿದಿರಿನಲಿ ನವರಸಭರಿತನಾಗಿರ್ದನಗಜೇಶನು (ರಾಜಶೇ. ೩-೪೨). ೨. ಭಿಕ್ಷಾನ್ನಮನುಂಡಾ ಭಾಳಾಕ್ಷಂ ಸಾರೂಪ್ಯಪತಿಗತುಳಗುಗ್ಗುಳಮಂ ಸುಕ್ಷಮೆಯಿಂದರ್ಪಿಸುತೊಳ್ದಕ್ಷಯಸುಖದೊಳ್ಪನೋಹಿಲಂ ಪಡೆದಿರ್ದಂ (ಉದ್ಭಟ. ೦೦-೯೦); ಭದ್ರಾರೂಢ ಭವಾರಿ ಭರ್ಗ ಮೃಡನಂ ಭಾಳಾಕ್ಷ ಪಾದಾಕ್ಷನಂ . . . ಹೃದ್ರಾಜೀವದೊಳಿಟ್ಟು ನಾಡೆ ನೆನೆದಂ ಮದ್ರಾಜನುರ್ವೀಶ್ವರಂ (ಹರಿಶ್ಚ. ೨-೬); ಭಾಳಾಕ್ಷನ ಮೂಲಮಂತ್ರವೊಂದೇ ಸಾಲದೆ (ಅಱಂಡೆ. ೩೦-೩). [ ಸಂ. (ಭಾಲ + ಅಕ್ಷಿ +–) ]

**ಭಾಲೆ** 'ಬಲ್ಲೆಯು' ನೋ.

**ಭಾಲ್ಲುಕ** (ನಾ). = ಭಾಲ್ಲೂಕ : "ಭಲ್ಲೂಕಮಚ್ಛಭಲ್ಲ[ಮೆನೆ ಕರಡಿ] ಭಾಲ್ಲೂಕಮುಕ್ಕ್ಯಂ" (ವಸ್ತುಕೋ. ४೦-೩). [ಸಂ.]

**ಭಾಲ್ಲೂಕ** (ನಾ). ಕರಡಿ ; ಭಲ್ಲೂಕ : "ಋಕ್ಷಃ, ಅಚ್ಛಃ, ಭಲ್ಲಃ, ಭಾಲ್ಲೂಕಃ, ಭಲ್ಲೂಕಃ – ಈ ೫ ಕರಡಿ" (ಹಲಾಯು. ೩೯-೭೫). [ಸಂ.]

**ಭಾವ₁**, ಬಾವ (ನಾ). ೧. ಸೋದರಿಯ ಗಂಡ ; ಅಕ್ಕ ಅಥವಾ ತಂಗಿಯ ಪತಿ : ನಿಮ್ಮ ಭಾವಂ ಕುಬೇರಪ್ರಿಯಂ ಉಪವಾಸಪೂರ್ವಕಂ ರಾತ್ರಿ ಪ್ರತಿಮೆ ನಿಲೆ (ಶಾಪುಂಶಿ. ೬೯); ಭಾವನೀಗಳೆ ಹೋಗಿ ಬೇಡಿದಡೀವ ನಾಗಳೆ ಬಸವರಾಜನು (ಬಸಪು. ೦೦-೨೩); ಓತಳ್ಳೆ ಶ್ರೀದೇವಿ ಹರಿಯಲ್ಲೋತು ತೊತ್ತಾಗಿಹಳದೆನಲಿಕ್ಕಾತನಿಂದತ್ಯಧಿಕಸಮಬಲರಿಲ್ಲ. . . ದಿನಕರ ಶೀತಕರರಿಗೆ ಭಾವ ವರುಣನಿಗಳಿಯ ಕೇಳೆಂದ (ಸಂಭವ. ೬-४೭). ೨. ಗಂಡನ ಅಣ್ಣ : ಆವ ಚೆನ್ನಿಗನೀತನಾವನೀ ಜಾಣನಿವನಾವನೀ ಗಾಡಿಕಾಱ ಶಿವಾ ಯೆಂದತ್ತೆ ಮಾವ ಮೈದುನ ಭಾವ ಗಂಡರಿರೆ ಮನೆಗಳಂ ಬಿಟ್ಟು . . . ಪರಿತಂದದೇವೇಳ್ವೆನಜ್ಜಾಕ್ಷಿಯರ್ ಮದನಲಕ್ಷ್ಮಿಯರ್ ನಿಟ್ಟಿಸಿದರೀಶನಿರವ (ಶಿಬಸ. ೨೦-೦೬). ೩. ಸೋದರಮಾವನ ಮಗ : ಸುದಾಮೆಯೆಂಬ ಕನ್ಯೆ. . . [ಗ]ಂಗೆಯಂ ವಿವಾಹಾಗಳ್ ನೆಗಟ್ಟ್ ಬಂದು ಕಾಲಂ ಪಿಡಿದೊಡೆ . . . ತಮ್ಮ ಭಾವನಂ ಧನದೇವನಂ ಕರೆದೀ ನೆಗಟಂ ಬಿಡಿಸೆಂಬುದುಂ (ಸುಕುಮಾ. ೬-೦೩ ವ). ೪. ಹೆಂಡತಿಯ ಅಣ್ಣ : ತಮ್ಮ ಭಾವಂ ಕೃಪನ ಮನೆಯೊಳಪಗತಪರಿಶ್ರಮನಾಗಿರ್ದೊಂದು ದಿವಸಂ ಪಾಂಡವರುಂ ಕೌರವರುಂ ಪೊಱವೊಟಲೊಳ್ ನೆರೆದಿಸುತಿರೆ. . . ಕಂಡು ನಕ್ಕಂ ದ್ರೋಣಂ (ಪಂಪಭಾ. ೨೩-೦ ವ); ರಾವು ಫಲುಗುಣಯೆನುತ ಪಾರ್ಥನ ಭಾವ ಕುಡಿ ಚಮ್ಮಟಿಗೆಯಲಿ ತುರಗಾವಳಿಯನದುಹಿದನು ಸುಳಿಸಿದನಾಹವಕೆ ರಥವ (ಕುಮಾರವ್ಯಾ. ೯-೩೭). ೫. ಸೋದರತ್ತೆಯರ ಮಗ : ಅವನು ನಮ್ಮ ಸೋದರತ್ತೆಯ ಮಗ, ನನಗೆ ಭಾವನೇ ಆಗಬೇಕು (ರೂಢಿ). ೬. ಬಂಧುತ್ವವಿಲ್ಲದಿದ್ದರೂ ಆತ್ಮೀಯತೆಯನ್ನು ಸೂಚಿಸಲು ಬಳಸುವ ಶಬ್ದ : ಆ ಜಂಬುಕನೊಂದುದಿವಸಂ. . . ವಾಯಸನಿರ್ದಲ್ಲಿಗೆ ಬರ್ಪುದುಮಾ ವಾಯಸು ಇದಿರ್ವಂದು ಎಲೆ ಭಾವ ಏಂ ಬಡವಾದಿರೆನೆ (ಪಂಚತಂ. ४೦-೨೦); ಭಾವಚಿತ್ರ ತೆಗೆಯುವಷ್ಟರಲ್ಲಿ ಸಾರ್ವಜನಿಕ ಭಾವಂದಿರು ಅವರನ್ನು ಸುತ್ತುವರಿದಿದ್ದರು (ದೇವದೂ. ೨೦೬). **ಬಾವ** : ೧. ಪುನುವಬಪಳ್ಳಿಯ ಗಾವುಣ್ಡನಗ್ಗಸೆರ್ ಎಳವರಿ ತಮ್ಮ ಬಾವಂಗೆ ಪರೋಕ್ಷವಿನಯಂಗೆಯ್ದು ಕಲ್ಲಂ ನಿಱಿಸಿದಂ (ಎಕ. VIII, ಸೊರಬ. ೩೩೦-೦೦; 979).

ಬಾವನ ಬಂಟ = ಒಂದು ಬಿರುದು ; ಭಾವನಾದ ರಾಜನಿಗೆ ನಚ್ಚಿನ ಸಹಾಯಕ : ಪರನಾರೀಪುತ್ರಕ . . . ಬಾವನ ಬಣ್ಟ ಗುಣ್ಡ ಚಕ್ರಜೆಡ್ಡುಗರಿ (ಎಕ. II, ३೦೬; ಸು. 950). **ಭಾವನ ಕೇಸರಿ** = ಒಂದು ಬಿರುದು : ಸತ್ಯಯುಧಿಷ್ಠಿರಂ ಪ್ರತಿಪನ್ನಮೇರು ಭಾವನ ಕೇಸರಿ ನಾಮಾದಿ ಸಮಸ್ತಪ್ರಸಸ್ತಿ (ಕ೩. IV, ४೦-೦೦; ಸು. 11ನೆಯ ೩೩). **ಭಾವನ ಗಂಧವಾರಣ** = ಚಾಲುಕ್ಯ ತ್ರೈಲೋಕ್ಯಮಲ್ಲದೇವನ ಕಾಲದ

ಒಬ್ಬ ಮಾಂಡಲಿಕನ ಬಿರುದು : ದಿಶಾಗಜವ್ರಜಂ ಬೆದಱೆ ವಿರೋಧಿಯಂ ತುಳಿದು ಕೊಲ್ವುದು ಭಾವನ ಗನ್ಧವಾರಣಾ (ಶಾಇ. XI-i, ೦೦೬-೫; ೯). ಭಾವನ ಸಿಂಗ = ಭಾವನ ಕೇಸರಿ : ಶ್ರೀಸೋಮೇಸ್ವ[ರ] ದೇವ ಪಾದಾರವಿಂದ × × ×ಣ ಕಮಳಭೃಂಗಂ ಭಾವನ ಸಿಂಗಂ ಶ್ರೀಮತ್ಪೆಗ್ಗಡೆ ಚಂಗದೇವಯ್ಯ (ಶಾಇ. XX, ೬೦-೦೨; 1088).

[< ಸಂ. ಭಾವ]

**ಭಾವ₂** (ನಾ). ೧. ಇರುವಿಕೆ ; ಇರುವುದು; ಅಸ್ತಿತ್ವ; ಸತ್ತೆ : ವಸ್ತು ಸತ್ತೆಯೇ ಭಾವವೆಂದು ಹೇಳಲ್ಪಡುವುದು (ಶಿವಾಸೂ. ೯೬); ಅಭಾವದಿಂದ ಭಾವ ಹೊರಡದು (ಪುಣ್ಯ.ರ. ೯ ೩೬೦೯); ಪ್ರಪಂಚದಲ್ಲಿರುವ ವಸ್ತುಗಳು ಭಾವ, ಅಭಾವ ಎಂದು ಎರಡು ವಿಧ (ಹಿಂದಶಾ. ೦೩೧). ೨. ಆಗುವುದು; ಸಂಭವಿಸುವುದು; ಉಂಟಾಗುವಿಕೆ. ೩. ಹುಟ್ಟು; ಜನ್ಮ. ೪. ನಿಜಸ್ಥಿತಿ ; ಸತ್ಯ. ೫. ಪರಮಾತ್ಮ : ದೇವನಾರೆಂದೆನಲು ಬುದ್ಧಿಯ ಭಾವದಲಿ ಭಾವವನಱಿವ ಸದ್ಭಾವರೂಪನು (ಅಧ್ಯ.ಕ. ೩-೦೯೬). ೬. ಮನಸ್ಸು; ಅಂತರಂಗ ; ಚಿತ್ತ : "ಬಗೆಯೊಳಾತ್ಮನೊಳು ಘೋರ ಜನ್ಮದೊಳು ಚೇಷ್ಟೆಯೊಳು ಭಾವವೆನಿಕ್ಕು" (ಪಂಚತಾ. ೦೯೫-೩೦); ಭಾವಶುದ್ಧವಿಲ್ಲದವಂಗೆ ಭಕ್ತಿ ನೆಲೆಗೊಳ್ಳದು ಕೂಡಲಸಂಗಯ್ಯನೊಲಿದಂಗಲ್ಲದೆ (ಬಸವ. ೬೫೯); ಆವ ಪರಿಯು ದೇಸಿಯರ್ಥಾಣ್ಮಗೆ ಬಗೆವರ್ಪುದಾ ವಿಧಗಳ ನಾರೈದು. . . ಭಾವವ ಬಂದಿಗೊಳುವುದು (ಹರಿಬ. ೩-೦೬). ೭. ಪ್ರಾಣಿಗಳ ಸ್ವಭಾವ,—ಪ್ರಕೃತಿ; ಜೀವಿಗಳ ನೈಸರ್ಗಿಕ ಗುಣ,—ಪ್ರವೃತ್ತಿ. ೮. ಮನೋಧರ್ಮ; ಭಾವನೆ; ಚಿತ್ತವೃತ್ತಿ; ಸಂವೇದನೆ : ಮರುಳುತಲೆ ಹುರುಳುತಲೆ ನೀನೇ ದೇವಾ. . . ಕೂಡಲಸಂಗಮದೇವಾ ಭ್ರಾಂತಳಿದು ಭಾವ ನಿಂದುದಾಗಿ (ಬಸವ. ೯೦೬); ಭಾವಂ ಭಾಸುರತತ್ತ್ವಗರ್ಭಮಯನಂ ಚಾರಿತ್ರಗರ್ಭಂ (ಶಂಧ್ರ.ಪು. ೦-೨೪); ಭಾವದಿಂ ತಲ್ಲಣಿಸಿತದೆಯುರ್ಬಿ ಕಣ್ ತೊಯ್ದುದಿರ್ಕೆನಿಂ (ಶಬ್ದಾಂಗ. ೩೯-೦೦೩೦). ೯. ಅಭಿಪ್ರಾಯ ; ಆಶಯ ; ಇಂಗಿತ : ಭಾವವೆಂಬುದಕ್ಕಂ ಕವಿಗಳಾ ಭಾವಿಸಿ ಮನದ ಬಗೆಯೊಂದಿದರ್ಥಂ (ಕವಿರಾ. ೩-೨೦೯) ; ಪದಮೆಪದಂ . . . ಭಾವಂ ಪೊಣ್ಮಿದ ಸದ್ಭಾವಂ ದನಿಯಿಂ ಪೊದವಿದ ದನಿಯೆನಿಸೆ ಪೇಟ್ದಪಂ ಕವಿತಿಲಕಂ (ಪುಷ್ಪ.ಪು. ೧-೬೨) ; ಈ ಸಹದೇವನೀ ಸಾತ್ಯಕಿ ಯುಧಾಮನ್ಯೂತ್ತಮೌಜಸರ ಭಾವವೆಮ್ಮದು (ಕಾವ್ಯಾ.ಅ. ೭-೦). ೧೦. ಕಣ್ಣಿಗೆ ಗೋಚರಿಸುವ ವಸ್ತು ; ಪ್ರತ್ಯಕ್ಷ ವಿಷಯವಾಗುವ ಪದಾರ್ಥ : ಪ್ರಪಂಚದಲ್ಲಿರುವ ವಸ್ತುಗಳು ಭಾವ, ಅಭಾವ ಎಂದು ಎರಡು ವಿಧ. ಭಾವಗಳಾದ ಘಟಪಟಾದಿಗಳು ಹೇಗೆ ಪದಾರ್ಥಗಳೋ ಅವುಗಳ ಅಭಾವಗಳೂ ಪದಾರ್ಥಗಳು (ಹಿಂದಶಾ. ೦೩೦). ೧೧. ಸ್ವರೂಪ ; ಚರ್ಯೆ ; ತೋರಿಕೆ : ಆ ಚಿತ್ರದಲ್ಲಿ, ಹುಡುಗಿಯ ಮುಖದ ಭಾವ ತುಂಬ ಚೆನ್ನಾಗಿ ಮೂಡಿಬಂದಿದೆ (ರೂಢಿ). ೧೨. ಆಂಗಿಕ ಚಲನೆ,—ಕ್ರಿಯೆ : ಅವರ ಮುಖದ ಭಾವದಿಂದ ಅವರಿಗೆ ಕೋಪ ಬಂದಿರುವುದು ಎದ್ದು ಕಾಣುತ್ತಿದೆ (ರೂಢಿ). ೧೩. ಅರುವತ್ತು ಸಂವತ್ಸರಗಳಲ್ಲಿ ಎಂಟನೆಯದು : ಮತ್ತಮಾ ವರುಷವೇ ಪ್ರಭವ ವಿಭವ ಶುಕ್ಲ ಪ್ರಮೋದೂತ ಪ್ರಜೋತ್ಪತ್ತಿ ಆಂಗಿರಸ ಶ್ರೀಮುಖ ಭಾವ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ಶಿವೇಳ. ೩೨೦) ; ಶಾಲಿವಾಹನ ಶಕ ೧೨೫೩ನೆಯ ಭಾವಸಂವತ್ಸರ ಕಾರ್ತಿಕಮಾಸ. ಅಂದು ಪೂರ್ಣಿಮೆಯ ಸಂಜೆ (ಶ್ರೀಬಿದ್ಯಾ. ೦). ೧೪. [ವ್ಯಾಕ] ಕ್ರಿಯೆ ನಡೆಯುವುದರಿಂದ ಉಂಟಾಗುವ ಸ್ಥಿತಿ : ತನಮಿಕೆಯುಮೆಂಬಿವುಂ ಚೇತನಭಾವಮೊಳಕ್ಕುಂ (ಶಬ್ದಾ.ದ. ೩೯೩). ೧೫. ಭಾವನಾಮ : ಚರಮಕ್ಕತ್ವದ ವಿಧಿಯುಂ ಧಾತುಗೆ ಭಾವದೊಳಕ್ಕುಂ ಧಾತು ನಿಜದೆ ಭಾವಮುದಕ್ಕುಂ (ಕಮುದ. ೨೦೩). ೧೬. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : "ವಸುಧಾಭಾವಂ ಕೇಶವದಿಶವಂಕಂ ಭಾವರಂಧ್ರ . . . ನಿಧಿ ರತ್ನ ನವಮವೊಂಭತ್ತೆನಿಸಂ (ವ್ಯ.ಕಹ. ೯-೯). ೧೭. [ನಾಟ್ಯ] ಸೂತ್ರಧಾರನನ್ನು ಸಂಬೋಧಿಸುವಾಗ ಪ್ರಯೋಗಿಸುವ ಶಬ್ದ : "ಸೂತ್ರಧಾರನಂ ಭಾವ ಎಂಬುದು" (ಹಲಾಯು. ೦೬-೯೯) ; "ಶಿಕ್ಷಕಂ ಭಾವನಕ್ಕುಂ" (ಸಂಗರಾ. ೨೫-೯). ೧೮. [ಕಾವ್ಯಮೀ] ಶೃಂಗಾರ ಮೊದಲಾದ ರಸಗಳನ್ನುಂಟುಮಾಡುವ ರತಿ, ಶೋಕ ಮೊದಲಾದ ಚಿತ್ತವೃತ್ತಿ ; ವಿಶೇಷ ರಸ ನಿಷ್ಪಾದನೆಗೆ ಕಾರಣಗಳಾದ ಸ್ಥಾಯಿಭಾವ ಮತ್ತು ಸಂಚಾರಿಭಾವ : "ಬಾಹ್ಯಮಪ್ಪರ್ಥಮಂ ಆಶ್ರಯಿಸಿ ಪುಟ್ಟುವ ಮನದ ವಿಕಾರಮಂ ಭಾವಮೆಂಬುದು" (ಹಲಾಯು. ೦೬-೯೦) ; ಭಾವದನುಬಾವದೆಸೆವ ವಿಭಾವದ ಪಸುಗೆಗಳೊಳೊಸರ್ವ ರಸದಭಿನಯಮಂ ಭಾವಿಸು ವೊಡಾದಿದೇವನ ದೇವೇಂದ್ರನ ಬಗೆಗಮಸದಳಂ ನರ್ತಕಿಯಾ (ಆದಿಪು. ೯-೨೬) ; ರಸಭಾವವಿಳಾಸದಿಂ . . . ಸರಸ್ವತಿ ದಯೆಗೆಯ್ಗೆ (ಕಾದಂಪೂ. ೨) ; ಹಾವಭಾವವಿಲಾಸವಿಭ್ರಮವಿಲಾಸಿನಿಯರಾ ವಿಟ ವಿದೂಷಕಂ ನಾಗರಿಕಪೀಠಮರ್ದಾವಳಿಯನಂದು . . . ಬರಿಸಿದಂ (ಹರಿಶ್ಚ. ೨೦೬ ಕು). ೧೯. (ಪ್ರಾಚೀನರ ಮತದಂತೆ) ಅರ್ಥಾಲಂಕಾರಗಳಲ್ಲಿ ಒಂದು ; ಒಬ್ಬರು ಹೇಳಿದ ಮಾತಿಗೆ ಸಂದರ್ಭ ಪರ್ಯಾಲೋಚನೆಯಿಂದ ಬೇರೊಂದರ್ಥವು ತೋರುವುದು : ವಿತರ್ಕಕ್ರಮದಿಂದರ್ಥಾಂತರಮಂ ಸಮನಿಸುವೊಂದುಕ್ತಿ ಭಾವಮೆನೆ ಪೆಸರ್ವಡೆಗುಂ (ಕಾವ್ಯಾವ. ೬೦೩). ೨೦. [ಜ್ಯೋತಿ] ಜಾತಕನಿಗೆ ಸಂಭವಿಸುವ ಫಲ ವಿಚಾರವನ್ನು ತಿಳಿಸುವ ಸ್ಥಾನ : ಕ್ರಮದಿಂ ತನು ಧನ ಸಹಜಾತ ಮಿತ್ರಪುತ್ರಾರಿ ಯುವತಿ ನೈಧನ ಧರ್ಮೋದ್ಯಮ ಲಾಭವ್ಯಯಮೆಂದಿಂತು ಮಿವಕ್ಕುಂ ಲಗ್ನಭಾವನಾಮಫಲಂಗಳ್ (ಜಾತಿ. ೦-೩೩) ; ಲಗ್ನದಿಂದ ಕ್ರಮವಾಗಿ ತನು, ಧನ, ಸಹಜ (ಸಹೋದರ), ಮಿತ್ರ, ಪುತ್ರ, ಅರಿ (ಶತ್ರು), ಯುವತಿ (ಕಳತ್ರ), ನೈಧನ (ಮೃತ್ಯು), ಧರ್ಮ, ಉದ್ಯಮ (ಉದ್ಯೋಗ), ಲಾಭ, ವ್ಯಯ (ಖರ್ಚು) ಇವು ಹನ್ನೆರಡು ಭಾವಗಳ ಹೆಸರು ; ಈ ವಿಚಾರಗಳ ಫಲವನ್ನು ಆಯಾ ಭಾವಗಳು ತಿಳಿಸುತ್ತವೆ (ಜಾತಿ. ೦-೩೩ ಟೀಕೆ). ೨೧. [ಜೈನ] ಜೀವನ ಪರಿಣಾಮ ; ಔಪಶಮಿಕ, ಕ್ಷಾಯಿಕ, ಕ್ಷಯೋಪಶಮಿಕ, ಔದಯಿಕ ಮತ್ತು ಪಾರಿಣಾಮಿಕ ಎಂಬ ಮುಖ್ಯವಾದ ಐದು ಭೇದಗಳುಳ್ಳದು : ಭಾವಮೆಂಬುದು ಕರ್ಮಂಗಳ ಕ್ಷಯದಿನುಪಶಮದಿಂ ಕ್ಷಾಯೋಪಶಮದಿನಪ್ಪಾತ್ಮನ ಪರ್ಯಾಯಂ (ಶಾಪುಂಪು. ೬). [ಸಂ.]

**ಭಾವಂಜಿ** 'ಬಾಗುಜಿ' ನೋ.

**ಭಾವಕ** (ಗು). ೧. ಆಗಲು ಕಾರಣವಾದ ; ಉಂಟುಮಾಡುವ. ೨. ಶ್ರೇಯಸ್ಸನ್ನುಂಟು ಮಾಡುವ ; ಶ್ರೇಯಸ್ಕರವಾದ. ೩. ಕಲ್ಪನೆ ಮಾಡುವ ; ಊಹಿಸುವ. ೪. ಸೌಂದರ್ಯದಲ್ಲಿ ಆಸಕ್ತಿಯನ್ನುಹೊಂದಿರುವ; ಸುಂದರವಸ್ತುಗಳನ್ನು ಅಭಿಲಾಷಿಸುವ. ೫. ರಸಾಸ್ವಾದನೆಯಲ್ಲಿ ಅಭಿರುಚಿಯುಳ್ಳ, (ನಾ). ೬. ಮನೋಭಾವ ; ಚಿತ್ತವೃತ್ತಿ. ೭. ಸೊಗಸಾದುದರಲ್ಲಿ ಅಭಿರುಚಿಯುಳ್ಳವನು ; ಕಲಾಭಿರುಚಿಯುಳ್ಳವನು ; ರಸಿಕ ; ಸಹೃದಯ : ಭಾವಕನೆಂದೊಡಂ ಚದುರನೆಂದೊಡಮಾರ್ ಪೆಱರಾರೊ ನೀನೆ (ಶಂಕಪ್ರ. ೪-೯೬) ; ಈವ ಗುಣಂ ಬೇಡಲೊಡಂ ಕಾವ ಗುಣಂ ಭೀತಿಯಿಂದೆ ಮಱೆವುಗಲೆನಸುಂ ಭೂವಿನುತವಾಗಿ ತೋರ್ಪ್ಪವು ಭಾವಕನಿಧಿ ನಾರಸಿಂಹಗೌಂಡನೊಳೆನಸುಂ (ಎಕ. V, ಅರಸೀ. ೬೨-೯೬ ; 1117) ; ತೀವಿದರು ಹೊರವಳಯದಲಿ ನಾನಾ ವಿಧದ ನಾಟಕದ ನರ್ತನ ಭಾವಕ. . .ಮಲ್ಲಚಿತ್ರಕರು (ಕುವ್ಯಾ.ಆ. ೦೨-೨೦) ; ಭಾವಕರ ಕಿವಿದೊಡವಿಗೊವವಿದ ಹಿರಣ್ಯಮಿದುಭೂತಳದೊಳೆನೆ ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯರಚನೆ (ಜೈಮಿ. ೩೪-೯೬) [ಸಂ.]

**ಭಾವಕತ್ವ** (ನಾ). ೧. ಭಾವಕನ ಧರ್ಮ; ಭಾವಕತನ ೨. [ಕಾವ್ಯಮೀ] ಸಹೃದಯರು ರಸಾಸ್ವಾದನೆ ಮಾಡಲು ಸಹಾಯಕವಾದ ಒಂದು ವ್ಯಾಪಾರ,—ಕ್ರಿಯೆ ; P ಕಾವ್ಯಾರ್ಥಬೋಧೆಯಾದ ಮೇಲೆ ಸೀತೆ ಯೆಂಬ ರಮಣಿಯು ರಾಮನೆಂಬ ರಮಣನಲ್ಲಿ ಪ್ರಣಯವುಳ್ಳವಳು ಎಂಬ ಅಂಶದಲ್ಲಿ ಸೀತಾಂಶವನ್ನೂ ರಾಮಾಂಶವನ್ನೂ ನಿವಾರಿಸಿ ಕೇವಲ ಕಾಮಿನೀತ್ವ— ಕಾಮುಕತ್ವ ಭಾವನೆ ಬರುವಂತೆ ಮಾಡಿ ಕಾಮಿನಿಯು ಕಾಮುಕನಲ್ಲಿ ಪ್ರಣಯವುಳ್ಳವಳೆಂಬ ಭಾವನೆಯುಂಟು ಮಾಡುವ ಸಾಧಾರಣೀಕರಣ; ಇದಂ ಭಟ್ಟನಾಯಕನ ಮತ : ಕಾವ್ಯ ನಾಟಕಗಳಲ್ಲಿ ವರ್ಣಿತವಾಗಿರುವ ವಿಭಾವಾದಿಗಳಿಗೆ ಸಾಧಾರಣತ್ವವನ್ನುಂಟು ಮಾಡಿ ಅವು ರಸವಿಷಯವಾಗುವಂತೆ ಮಾಡುವುದು ಭಾವಕತ್ವ (ಭಾರಮೀ. ೩೭೭) ; ಕಾವ್ಯನಾಟಕದಲ್ಲಿ . . . 'ಭಾವಕತ್ವ', 'ಭೋಜಕತ್ವ' ಎಂಬ ಮತ್ತೆರಡು ಶಕ್ತಿಗಳಿವೆ (ಕೃಬಿತಿ. ೧೮೨). [ಸಂ.]

**ಭಾವಕಿ** (ನಾ). ೧. ಚೆಲುವೆಯಾದ ಸ್ತ್ರೀ ; ಸುಂದರಿ : ಗಿಳಿಯೊಡನೋದಿ ಯೋದಿ ನುಡಿಗಲ್ತು . . . ಕಳಾಗುಣಂ ಪೊದಲ್ದಳವಡೆ ಬಾಲಭಾವದೊಳೆ ಭಾವಕಿಯರು ಬಳೆವರ್ ನಿರಂತರಂ (ಚಮಚ. ೦೭೩ ಕೃದೋ) ; ಭಾವಕಿ ಯೆನ್ನನೊರ್ಮೆವಳೆ ಕಾಣಲೊಡಂ ಬೆಮರುಣ್ಮೆ ವಿಸ್ಮಯಂ ತೀವಿ . . . ಮರವಟ್ಟವೊಲಿರ್ದಳ್ (ದಕಚ. ೦೦-೭೪) ; ಸುರಿಯೆ ಮುತ್ತುಗಳರರೆ ಮುಸುರದಿ ಪರಿಪರಿಯ ಚಾರಿಗಳ ತಂದಚ್ಚರಿಯೆನಿಸಿ ನಟಿಸಿದಳು ಭಾವಕಿ ನಾಟ್ಯರಂಗದಲಿ (ಕವಕು. ೪-೧೯). ೨. ರಸಿಕಳಾದ ಸ್ತ್ರೀ: ಪಾಂಥರಿರವಜಾ ದೀಯುತುಂ ಜರಾಭೀರುವಂ ಕಾಣಿಸಿ ಛಳಪುತೆಸೆದರೇಂ ಜಾತಿಭಾವಕಿಯರೋ (ಶಮ್ರಾ. ೬-೦೩) ; ಮುದ್ದುಮೊಗದ ಭಾವಕಿಯರ ಲಲ್ಲೆನುಡಿಯೆಂಬ ನಯಗತ್ತಿ ಎಲ್ಲರ ಹೃದಯವ ಕೊಚಿಕೈತ್ತಿದೆ ನೋಡಾ (ಸಿಲ್ಲೀವ. ೪೦-೦೦೭); ಭಾವಕಿಯರ್ ತೊಡಗಿದರತಿಕೋವಿದೆಯರ್ . . . ಜಲಕೇಳಿಗೆ (ಹಮ್ಮಿರ. ೪-೨೨). [ಭಾವಕ + ~ ಇ]

**ಭಾವಕೃದಂತ** (ನಾ). [ವ್ಯಾಕ] ಧಾತುವಿನಿಂದ ಹುಟ್ಟುವ ಭಾವನಾಮ; ಕೃದಂತಭಾವನಾಮ : ಕೆಲವು ಧಾತುಗಳು ನಿಜರೂಪದಿಂದಲೇ ಭಾವ ಕೃದಂತಗಳಾಗುವುವು. ಉದಾ:—ಆಗು, ಉರ್ಚು, ಓದು (ಕೃಬಿತಿ. ೦೭). [ಸಂ].

**ಭಾವಗಮ್ಯ** (ನಾ). ಮನಸ್ಸಿಗೆ ಗೋಚರಿಸುವುದು ; ಊಹೆಯಿಂದ ತಿಳಿಯತಕ್ಕುದು : ವಿಚಿತ್ರರತಪ್ರೌಢತೆ ಭಾವಗಮ್ಯಮೆನಿಸಕುಂ ಶ್ರೀರೂಪ ಕಂದರ್ಪನಾ (ಕಾವ್ಯನಾ. ೬೩೩). [ಸಂ.]

**ಭಾವಗರ್ಭಿತ** (ನಾ). ಅಭಿಪ್ರಾಯದಿಂದ ಕೂಡಿರುವುದು; ಇಂಗಿತದಿಂದ ಕೂಡಿರುವುದು : ಹುಡುಗಿಯರು ಒಬ್ಬರನೊಬ್ಬರು ಭಾವಗರ್ಭಿತವಾಗಿ ನೋಡಿಕೊಂಡು ಗುಸುಗುಸುಪಟ್ಟುಕೊಂಡರು (ಹಮುಹೂ. ೨೯೮). [ಸಂ.]

**ಭಾವಗೀತ** (ನಾ). ಕವಿಯ ಆತ್ಮೀಯವಾದ ಭಾವನೆಗಳನ್ನು ಚಿತ್ರಿಸುವ ಹ್ರಸ್ವವಾದ ಕವನ; P ಹಾಡಲು ಅನುಕೂಲವಾಗಿದ್ದು, ಸಾಮಾನ್ಯ ವಾಗಿ ಒಂದು ಭಾವಗೀತೆಯಲ್ಲಿ ಒಂದೇ ಭಾವನೆ ನಿರೂಪಿತವಾಗಿರು ತ್ತದೆ. ಇದು ಇಂಗ್ಲಿಷಿನ 'Lyric' ಎನ್ನುವ ಪದದ ಅನುವಾದ : ಭಾವಗೀತ, ಅಷ್ಟಪಟ್ಪದಿ . . . ಎಲ್ಲವೂ ಇಂದು ಕನ್ನಡದಲ್ಲಿ ನೆಲೆಗೊಂಡಿವೆ (ಕಕ್ವಕಾ. ೨೯) ; ನಿಬ್ಬಣಕೆ ಹೊರಟಂತೆ ಹಾಡುಗಬ್ಬಗಳ ಕೋಲ್ಸಾರಿ ಬಂಡಿ. ಭಾವಗೀತ ಒಪ್ಪಿದರೆ ಚಂದ ವಧೂವರ ಜೋಡಿ (ಕಿಂಮು. ೩೩-೯); ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸಾ ಮಾತು ಮಾತು ಮಥಿಸಿ ಬಂದ ನಾವದ ನವನೀತಾ . . . ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತಾ (ನಾದಲೀ. ೬೩-೦೦). [ಸಂ.]

**ಭಾವಗೀತೆ** (ನಾ). = ಭಾವಗೀತ : ಭಾವಗೀತೆಯ ಹಾಗೆ ಹಳ್ಳಿಯ ಜೀವನ ದೇವನೆ ಈ ಗೀತಕಾರ (ಇಂಚಾಶ. ೦೨೮-೨೩); ಕವಿಯ ಭಾವಪ್ರಧಾನವಾದ ಕಾವ್ಯ ಭಾವಗೀತೆ ಎಂದೆವು (ಕಾವಗೀ. ೦೨); ಭಾವಗೀತೆಯಲ್ಲಿ ಕೇವಲ ರಸ ಮಾತ್ರ ಇರುತ್ತದೆ (ಕಾರದ. ೪೭೯). [ಸಂ. ಭಾವಗೀತಾ]

**ಭಾವಚಿತ್ರ** (ನಾ). ೧. ಒಬ್ಬ ವ್ಯಕ್ತಿಯ ಆಕಾರವನ್ನು ತೋರಿಸುವ ಚಿತ್ರ ; ಪ್ರತಿಕೃತಿ : ಮನದಿ ಯೋಚಿಸಿದ [ಯು] ವನ ಭಾವಚಿತ್ರ ಮನೊಳಿದು ಘನಪ್ರಚುರವಾಗಿ ಚಿತ್ರಿಸಿಕೊಂಡು (ವಿಕಮೋ. ೨೩-೨೮) ; ನನ್ನ ಬಯ್ಕೆಯಿಂದ ಬರೆದ ಪೂಜ್ಯಳಾದ ಶಕುಂತಳೆಯ ಭಾವಚಿತ್ರವನ್ನು ತೆಗೆದು ಕೊಂಡು ಬಾ (ಶಾಕುಂತ. ೬೪-೩); ಪ್ರೀತಿಯಿಂದೈತಂದು ನೀನಂದು ನನಗಿತ್ತ ನಿನ್ನ ಆ ಭಾವಚಿತ್ರವನು ನೋಡುತ್ತ (ಕಂಶ್ರಶೀ. ೦೦೪-೦೭). ೨. ಕ್ಯಾಮರಾ ಎಂಬ ಯಂತ್ರದ ಮೂಲಕ ಗ್ರಹಿಸಿದ ಪ್ರತಿಬಿಂಬ ; ಛಾಯಾಚಿತ್ರ ; ಫೋಟೊ : ಮೇಜಿನ ಮೇಲಿದ್ದ ಭಾವಚಿತ್ರ ತನ್ನ ಕಣ್ಣಿಗೆ ಸ್ಪಷ್ಟವಾಗಿ ಕಂಡಿತ್ತು (ದೂಪಲ್ಲಿ. ೦೩೩). [ಸಂ.]

**ಭಾವಚೇಷ್ಟೆ** (ನಾ). ಮನಸ್ಸಿನಲ್ಲಿ ತೋರುವ ಭಾವಗಳ ನಿರೂಪಣೆಗೆ ಬಹಿರಂಗವಾಗಿ ತೋರುವ ಶಾರೀರಿಕಕ್ರಿಯೆ ; ಶೃಂಗಾರಚೇಷ್ಟೆ : ಆತನಿನಾದ ಬೇಟಮಭಿಜಾತತೆಯಿಂ ನೆಗಟ್ಟೊಂದು ಧೈರ್ಯವಂತು . . . ಚೇತದೊಳುಣ್ಮಿ ಕನ್ನೆ ತಳೆದಳ್ ಕಿಲಿಕಿಂಚಿತ ಭಾವಚೇಷ್ಟೆಯಂ (ಕಾದ್ರಶಿ. ೩-೧೨೨). [ಸಂ. ಭಾವಚೇಷ್ಟಾ]

**ಭಾವಜ** (ನಾ). ೧. ಮನಸ್ಸಿನಲ್ಲಿ ಹುಟ್ಟುವುದು. ೨. ಮನಸ್ಸಿನಲ್ಲಿ ಜನಿಸಿದವನು ; ಮನ್ಮಥ ; ಕಾಮ : ಮೂವತ್ತಾಱುಂ ಗುಣದಿಂ ಭಾವ ಜನಂ ಕಟ್ಟಿ ಪೆಟ್ಟುವೆಟಿದರ್ ವೃಷದಿಂ (ಮಲ್ಲಿಶಿ. ೦-೨೦) ; ಭಾವತಪದಿಂದೆ ಬೆದಱಿಸಿ ಭಾವಜನಂ ಪರಮಸಂಯಮೋಪಾಯಮ್ಮನುಜ್ಜೀವಿಸಿದ ವಾಸು ಪೂಜ್ಯತ್ರೈವಿದ್ಯಪದಂಗಳಲ್ತೆ ಲೋಕನುತಂಗಳ್ (ಶಾಕ್ಯಗಶಿ. ೦-೩೦) ; ಜಾತಿ ಜಾಣ್ಬಡೆಯ ಭಾಮ ಭಾವಜನ ಹೂವಿನಂಬಿನಂತೆ ಮನಮಂ ನಾಂಟಿ (ರಾಜಶೇ. ೩-೦೯ ಪ).

ಭಾವಜನಯ್ಯ = ಮನ್ಮಥನ ತಂದೆ ; ವಿಷ್ಣು : ಭಾವಜನಯ್ಯನ ದಿನದಿ ಉಂಡವರನು ಕೀವಿನೊಳಗೆ ಹಾಕಿ ಕುದಿಸುವ ಯಮನು (ಶಿಲಂದ. ೦-೦೩೪-೦) ; ಬಾರೊ ಬಾರಯ್ಯ ಮನೆಗೆ ಭಾವಜನಯ್ಯ (ಕವಕ. ೯೭ ಕಲ್ಲಿ). ಭಾವಜನರಸಿ = ಮನ್ಮಥನ ರಾಣಿ ; ರತಿ : ಅಂಗಲತೆಯು ಅತಿ ಬೆಂದು ಭಾವಜನರಸಿ ಬರವರಲು ತನ್ವನಂ ಕಂಗೊಳಿಸಿತ್ತೇವೇಳ್ವೆನೊ (ವಿವಮೋ. ೬-೨೪). [ಸಂ.]

**ಭಾವಜಜನಕ** (ನಾ). ಮನ್ಮಥನ ತಂದೆ ; ವಿಷ್ಣು : ದ್ವಾಪಾರದಲಿ ಭಾವಜಜನಕನಾಗುದವಿಸಿದನು ತ್ರಿಜಗವಱಿಯಲು ಬಾದರಾಯಣನೆಂಬ ನಾಮದಲಿ (ಐಸಕು. ೩೪-೩೨). [ಸಂ.]

**ಭಾವಜಾಂತಕ** (ನಾ). ಮನ್ಮಥನನ್ನು ನಾಶಪಡಿಸಿದವನು ; ಶಿವ : ಭಾವಜಾಂತಕ ಜಯವೆನುತ . . . ಪೊಂದೊಟ್ಟಿಲಂ ತರಿಸಿ ಶಿಶುವನೆತ್ತಿ ಪಿಡಿದು (ಶ್ರೀಶರ. ೯-೯೭). [ಸಂ.]

**ಭಾವಜಾರಿ** (ನಾ). = ಭಾವಜಾಂತಕ : ಭಾವಜಾರಿಯು ಹರಿಯು ಕಮಲಜಾಮರಾದರು ಪೂಜಿಸಲುಬೇಕೀ ಮಹಾಗಣಪತಿಯ (ಗಗಣ. ೩-೦೦). [ಸಂ.]

**ಭಾವಜೀವಿ** (ನಾ). ಮಾನಸಿಕ ಕಲ್ಪನೆಗಳಲ್ಲಿ ತನ್ಮಯತೆಯನ್ನನು ಭವಿಸುವ ವ್ಯಕ್ತಿ; ವಾಸ್ತವತೆಗಿಂತಲೂ ಕಾಲ್ಪನಿಕಭಾವನೆಗಳಿಗೇ ಹೆಚ್ಚು ಮಾರುಹೋಗುವ, ಕಾವ್ಯ ನಾಟಕಾದಿಗಳಲ್ಲಿ ತೋರಿ ಬರುವ ಉದಾತ್ತಧ್ಯೇಯಗಳನ್ನು ಆದರ್ಶವಾಗಿಟ್ಟುಕೊಳ್ಳುವ ವ್ಯಕ್ತಿ: ಹೀಗೆ ಮನದಲ್ಲಿಯೇ ಎಣಿಕೆ ಹಾಕುತ್ತಿದ್ದಳು ಆ ಭಾವಜೀವಿಯಾಗಿದ್ದ ಬಾಲಕಿ (ಶರಶ. ೦೯) ; ಬುದ್ಧಿನಿಷ್ಠನು ಭಾವಜೀವಿಯನ್ನು ಬೈದು ಮುಂಚುತ್ತಾನೆ (ಕಕ್ವಕಾ. ೦೯) ; ಕನ್ನಡಿಗರು ಭಾವಜೀವಿಗಳು, ಬುದ್ಧಿಜೀವಿ ಗಳಲ್ಲ (ವಿಚಾವಾ. ೦೦). [ಸಂ. ಭಾವಜೀವಿನ್]

I.7.0

**ಭಾವಜ್ಞ** (ನಾ). ಇತರರ ಮನಸ್ಸಿನ ಭಾವನೆಗಳನ್ನು ತಿಳಿಯಬಲ್ಲವನು; ರಸಿಕ ; ಸಹೃದಯ : ಬಲ್ಲಂದಟ್ಟು ಅದೆಲ್ಲಿದ್ದರು ತನ್ನ ವೇದನೆಯ ಬಿಡದು ಭಾವಜ್ಞರ ಮನೆಯ ಬಾಗಿಲಲ್ಲಿದ್ದರೂ ಸ್ವಜಾತಿಯ ಗುಣವಲ್ಲದೆ ನೀತಿಯ ಗುಣವಿಲ್ಲ (ಶೋಭನಾ. ೫೩-೨೨೮); ಭೂಪಾಲನನು ಸಾಮದಲಿ ಮುರರಿಪು ಬೋಳವಿಸಿ ಭಾವಜ್ಞ ನಂದಿಸಿದನು ಮನೋವ್ಯಥೆಯ (ಕಾವ್ಯ. ೪. ೧೩-೦); ಸೋತಡೆಯು ಸುಖದೈವದಲಿ ಧೈರ್ಯಾತಿಶಯದಲಿ ಕಾದಿ ಕೀರ್ತಿಯ ಬೈತಲೆಯನಪ್ಪುವುದೆ ಭಾವಜ್ಞರಿಗೆ ಗುಣ (ಕೂರಂ. ೬-೪೪-೪೩). [ಸಂ.]

**ಭಾವತೀವ್ರತೆ** (ನಾ). ಆಲೋಚನೆಯ ಗಾಢತೆ; ಭಾವನೆಯ ತೀವ್ರತೆ: ಅವನ ಭಾವನಾವಿವೇಕಶಕ್ತಿಯು ಭವಿತವ್ಯ ಕಲಾಕೃತಿಯ ಏರಡುಕೊರಡಿಗೆ ಬಣ್ಣವಿಡುತ್ತದೆ. ಮತ್ತು ಭಾವತೀವ್ರತೆಯನ್ನೊದವಿಸುತ್ತದೆ (ಪಶ್ಚಾ. ೦೨೦). [ಸಂ. ಭಾವತೀವ್ರತಾ]

**ಭಾವತ್ರಯ** (ನಾ). [ವೀಶೈ] ಭಾವ, ಸದ್ಭಾವ ಮತ್ತು ನಿರ್ಭಾವ ಎಂಬ ಮೂರು ಭಾವಗಳು : ಭಾವತ್ರಯಂಗಳು ತಾಪತ್ರಯಂಗಳು ಷಟ್ಕರಣಂಗಳು ಇಂತಿವು ಆದಿಯಾಗಿ ತೋಱುವ ತೋಱಿಕೆಯೆ ನಾನಲ್ಲ ಎನ್ನವೆ ಅಲ್ಲ (ಷಟ್ಸ್ಥಲ. ೩. ೦೦೦-೨೪೩) ; ಭಾವಸದ್ಭಾವ ನಿರ್ಭಾವ ಎಂಬ ಭಾವತ್ರಯಂಗಳುಳ್ಳವರ ದೇವರೆಂದೆನ್ನೆ (ಬಸವ. ೬-೨೩) : ತಾಪತ್ರಯಂಗಳ ಬಣ್ಣಗೆಡಿಸಿ ದುರ್ಭಾವತ್ರಯಂಗಳ ದೂರಮಾಡಿ ಮನತ್ರಯಂಗಳ ಮರ್ದನ ಮಾಡಿ (ಅಲಂಪ್ರ. ೦೪೪-೦೪). [ಸಂ.]

**ಭಾವದ್ಯೋತಕ** (ನಾ). ಭಾವದ ಅರ್ಥವನ್ನು ಪ್ರಖರಗೊಳಿಸುವುದು : ಮುದ್ರೆಗಳು ಭಾವದ್ಯೋತಕ ; ಆಸನಗಳು ರಾಮಾಯಣ (ಭಾರತ. ೩೦೩). [ಸಂ.]

**ಭಾವಧ್ವನಿ** (ನಾ). [ಕಾವ್ಯಮೀ] ಕಾವ್ಯದಲ್ಲಿ ದೇವತೆ, ಗುರು ಮೊದಲಾದವರಲ್ಲಿ ಇಟ್ಟಿರುವ ರತಿಯೂ ಮತ್ತು ವ್ಯಭಿಚಾರಿ ಭಾವಗಳೂ ಪ್ರಧಾನವಾಗಿ ತೋರುವುದು ; ಭಾವವು ಮುಖ್ಯವಾಗಿ ವ್ಯಂಗ್ಯವಾಗಿರುವುದು : ಉದ್ರಿಕ್ತಾವಸ್ಥೆಯನ್ನು ತಳೆದ ವ್ಯಭಿಚಾರಿ ಭಾವವು ಚಮತ್ಕಾರಕಾರಿಯಾದಾಗ 'ಭಾವಧ್ವನಿ' (ಧ್ವನ್ಯಾಲೋ. ೫೬). [ಸಂ.]

**ಭಾವನ** (ನಾ). [ಜೈನ] ನಾಲ್ಕು ಬಗೆಯ ದೇವಸಮೂಹದಲ್ಲಿ ಒಂದು ವರ್ಗಕ್ಕೆ ಸೇರಿದ ದೇವತೆ ; ಭವನವಾಸಿದೇವ : ನಿರುತಂ ಭಾವನರುಂ ವನಾವಸಥರುಂ ಜ್ಯೋತಿಷ್ಕರುಂ ಕಲ್ಪವಾಸರುಮೂರ್ಗಿರ್ವ ಚತುರ್ವಿಧಾಮರರು ದಾರರ್ ಸ್ತೋಮದೊಳ್ ಕೂಡೆ (ಪುಷ್ಪ. ೦೦-೦೩). [ಸಂ.]

**ಭಾವನಾಜೀವಿ** (ನಾ). = ಭಾವಜೀವಿ : ನಿನ್ನ ವ್ಯವಹಾರದಿಂದ ನೀನು ಭಾವನಾಜೀವಿಯೆಂದು ಕಂಡುಬರುವುದು (ಪೀಠಿಕಾ. ೨೩೦). [ಸಂ. ಭಾವನಾಜೀವಿನ್]

**ಭಾವನಾಮ** (ನಾ). [ವ್ಯಾಕ] ಭಾವವನ್ನು ತಿಳಿಸುವ ನಾಮಪದ: ಒಂದು ಕ್ರಿಯೆ ನಡೆಯುವುದರಿಂದ ಉಂಟಾಗುವ ಸ್ಥಿತಿಯನ್ನಾಗಲಿ ಒಂದು ವಸ್ತುವಿನ ಸ್ಥಿತಿ ಸ್ವಭಾವಗಳನ್ನಾಗಲಿ ತಿಳಿಸುವ ನಾಮವಾಚಕಕ್ಕೆ ಭಾವ ನಾಮವೆಂದು ಹೆಸರು (ಶಬ್ದ. ಮ. ೨೬). [ಸಂ.]

**ಭಾವನಾಮಯಿ** (ನಾ). ೧. ವಾಸ್ತವತೆಯ ಜಗತ್ತಿನಿಂದ ಬೇರೆಯಾದ ಕಲ್ಪನಾಲೋಕದಲ್ಲಿ ವಿಹರಿಸುವ ವ್ಯಕ್ತಿ : ಆಕೆ ತುಂಬ ಭಾವನಾಮಯಿ (ಹೊ). ೨. [ಬೌದ್ಧ] ಸಂಸ್ಕಾರನಿವೃತ್ತಿಗೆ ಕಾರಣವಾದ ಪ್ರಜ್ಞಾ ಪಾರಮಿತಾ ಎಂಬ ಸದಾಚಾರದ ಮೂರು ಭೇದಗಳಲ್ಲಿ ಒಂದು : ಈ ಸಾಕ್ಷಾತ್ಕಾರವೆಂಬ ಭಾವನೆಯು ವೇದಾಂತಿಗಳ ಶ್ರವಣ ಮನನ ನಿದಿಧ್ಯಾಸಗಳಂತೆ ಶ್ರುತಿಮಯೀ, ಚಿಂತಾಮಯೀ, ಭಾವನಾಮಯೀ ಎಂಬ ಕ್ರಮದಿಂದ ಪ್ರಜ್ಞಾಪಾರಮಿತಾ ಎಂಬ ನಾಮಧೇಯದಿಂದ ಪ್ರಸಿದ್ಧ ವಾಗಿರುವುದು (ಹಿಂದಣ. ೪೦). [ಸಂ. ಭಾವನಾಮಯೀ]

**ಭಾವನಾಲವಣ** (ನಾ). [ವೈದ್ಯಶಾ] ಒಂದು ಬಗೆಯ ಔಷಧ : ಔಷಧಿದ್ರವ್ಯಗಳೊಡನೆ ಭಾವನೆ ನೀಡಿದ ಉಪ್ಪು : ಭಾವನಾಲವಣ– ಆಡುಸೋಗೆ, ಎಲಹುರಿ . . . ಲೋಳಸರ – ಈ ರಸಗಳಲ್ಲಿ ಮಾಡಿ ಕೇರಿದ ಚೊಕ್ಕಟವಾದ ಲವಣ ಸೇರು ಳನ್ನು ಪ್ರತ್ಯೇಕವಾಗಿ ಒಂದೊಂದು ದಿನ ಭಾವನೆಯಂ ಕೊಟ್ಟು ನೆಳಲಲ್ಲಿ ಒಣಗಿಸಿ ಇರಿಸಿಕೊಂಡು . . . ಸೇವಿಸಲು ಹುಟ್ಟುಗೂರಲು, ಹುಟ್ಟುಶ್ವಾಸವು ಪರಿಹರವಹುದು (ಸಕವೈ. ೨೨೭). [ಸಂ.]

**ಭಾವನಾಲೋಕ** (ನಾ). ಭಾವನಾಪ್ರಪಂಚ : ಮಾನಸಿಕ ಕಲ್ಪನೆ : ಅವಳ ಮಾತು ಭಾವನಾಲೋಕಕ್ಕೆ ಇಳಿಯತೊಡಗಿತು (ಶ್ಯಾಜಾ. ೬೨). [ಸಂ.]

**ಭಾವನಾವಾದಕ್ಕಿ** (ನಾ). [ವೈದ್ಯಶಾ] ಒಂದು ಬಗೆಯ ಔಷಧ ; ಭಾವನೆ ಕೊಟ್ಟ ಓಮ, – ಅಜಮೋದ : ಭಾವನಾವಾದಕ್ಕಿ – ಕೇರಿ ಮಾಡಿದ ವಾದಕ್ಕಿ ಸೇರು ಳನ್ನು ಆಡಿನ ಮೂತ್ರದಲ್ಲಿ ಭಾವನೆಯಂ ಮಾಡಿಕೊಟ್ಟು . . . ಸೇವಿಸೆ ಕಾಸರೋಗಶ್ವಾಸ . . . ಅಗ್ನಿಮಾಂದ್ಯ ಮುಂತಾದ ರೋಗಗಳು ಸಹ . . . ಶೀಘ್ರವಾಗಿ ಗುಣಮುಕ್ಕುಂ (ಸಕವೈ. ೨೨೭). [ (ಸಂ. ಭಾವನಾ) + ವಾದಕ್ಕಿ ]

**ಭಾವನಾಶಕ್ತಿ** (ನಾ). ಊಹಿಸುವ ಸಾಮರ್ಥ್ಯ : ನಿಮಗೆ ಭಾವನಾಶಕ್ತಿ ಸ್ವಲ್ಪವೂ ಇಲ್ಲ (ಹಸುಹೋ. ೭೭). [ಸಂ.]

**ಭಾವನಿರ್ದ್ವಂದ್ವ** (ನಾ). ೧. ಪ್ರೀತಿಯ ಅಭೇದ ; ಅಭಿನ್ನ ಪ್ರೀತಿ : ಆತ್ಮೀಯತೆಯಲ್ಲಿ ಏಕರೂಪತೆ. ೨. ಸಮಭಾವನೆಯುಳ್ಳವನು ; ಸಮಾನಪ್ರೀತಿಯುಳ್ಳವನು : ತನಯನಂ ಪಿತೃಳ್ ಗಡಂ ನಿನ್ನ ಪತ್ನಿ ಯಶೋದಾಪಥು ತತ್ತನೂಜನೊಡನಿಂಬಿಂ ಭಾವನಿರ್ದ್ವಂದ್ವನಾಗಿಯೆ ನೀಂ ರಕ್ಷಿಸು ರೌಹಿಣೇಯನೆನಿಪಸ್ಮತ್ಪುತ್ರನಂ (ಜಗ. ೩-೨೩). [ಸಂ.]

**ಭಾವನಿಷ್ಠ** (ಗು). ಒಬ್ಬ ವ್ಯಕ್ತಿಯ ಭಾವವನ್ನು ಆಶ್ರಯಿಸಿಕೊಂಡಿರುವ ; ಭಾವಕ್ಕೆ ಅಧೀನವಾದ ; ಭಾವಪ್ರಧಾನವಾದ : ಮನಸ್ಸಿನ ಮತ್ತು ಭಾವನೆಯ ಪರಿಣಾಮಗಳನ್ನು ದರ್ಶಿಸುವ ಭಾವನಿಷ್ಠಕಲ್ಪನೆ (subjective imagination) ಹೀಗೆ ಇವೆಲ್ಲ ಕವಿಯ ಕಾವ್ಯಸೃಷ್ಟಿಯ ಉಪಕರಣಗಳು ಮಾತ್ರ (ಕಾಂಡಕ. ೩೦). 'ಭಾವನಿಷ್ಠಕಾವ್ಯ' ಪರಾ. [ಸಂ.]

**ಭಾವನಿಷ್ಠಕಾವ್ಯ** (ನಾ). ಆಧುನಿಕ ಸಾಹಿತ್ಯವಿಮರ್ಶಕರು ಸೂಚಿಸಿರುವ ವಸ್ತುನಿಷ್ಠಕಾವ್ಯ, ಭಾವನಿಷ್ಠಕಾವ್ಯ ಎಂಬ ಕಾವ್ಯಭೇದಗಳಲ್ಲಿ ಒಂದು ; ಭಾವವೇ ಪ್ರಧಾನವಾಗಿರುವ ಕಾವ್ಯ : ಕವಿಪ್ರಜ್ಞೆ ತನ್ನ ಕಾವ್ಯವಸ್ತುವಿಗಾಗಿ ಬಾಹ್ಯಜಗತ್ತಿನ ವಸ್ತುಗಳನ್ನು ವಿಶೇಷವಾಗಿ ಆಶ್ರಯಿಸದೆ, ಆಶ್ರಯಿಸಿದರೂ ನಿವಾರ್ಯವಾದ ಉಪಲಂಬವನ್ನಾಗಿ ಮಾತ್ರ ಮಾಡಿಕೊಂಡು, ತನ್ನ ಅಂತರಂಗದ ಆಳಕ್ಕೆ ಇಳಿದು, ತನ್ನ ಅನುಭವ, ಆಲೋಚನೆ, ಭಾವ ಇವುಗಳಿಗೆ ಅಭಿವ್ಯಕ್ತಿಯನ್ನು ನೀಡುವುದು. ಇದನ್ನು 'ಭಾವನಿಷ್ಠ' ಕಾವ್ಯ ಎಂದು ಕರೆಯಬಹುದು (ಭಾರತೀ. ೦). 'ವಸ್ತುನಿಷ್ಠಕಾವ್ಯ' ಪರಾ. [ಸಂ.]

**ಭಾವನಿಷ್ಠುರ** (ನಾ). ಕ್ರೂರವಾದ ಅಭಿಪ್ರಾಯವುಳ್ಳದು : ಮುರಮಥನ ಚಿತ್ತೈಸಿದೈ ತರುಮರಿಯ ಸಾಭಿಪ್ರಾಯವಾಕ್ಯಸ್ಫುರಣವನು ಸಭ್ಯಾಂಗಘಾತಿತಭಾವನಿಷ್ಠುರವ (ಕಾವ್ಯ. ೪. ೨೦-೨೮). [ಸಂ.]

**ಭಾವನೆ** (ನಾ). ೧. ಮನಸ್ಸಿನ ಅಭಿಪ್ರಾಯ, – ಆಶಯ ; ಅಂತರಂಗದ ಆಲೋಚನೆ, – ಅನಿಸಿಕೆ : ವರಗುಣಂಗಳನೊಂದನೊಂದಂ ಪರಿವಿಡಿಯೋಳೀಶ್ವರನೊಳರ್ಪಿಸಿ ಪರಿಕಿಪೊಡೆ ತಾನೆಂಬ ಭಾವನೆಯಿಲ್ಲದೆ (ಬಸವ. ೩೩-೩೮) ; ಈ ಪೂಜ್ಯಭಾವನೆಗೆ ಅನುಗುಣವಾದ ಪುರಾಣಗಳೂ ಕಥೆಗಳೂ ಹುಟ್ಟಿಕೊಳ್ಳುವುದು ಸಹಜವಷ್ಟೆ (ವಚನ. ೬) ; ಅವರ ಮುಖಗಳಲ್ಲಿ . . . ಇನ್ನಾವ ಭಾವನೆಯೂ ಬೆಳಗುತ್ತಿರಲಿಲ್ಲ (ಮಹಾತ್ಮಾ. ೦೪೦).

೨. ಧ್ಯಾನ ; ಪದೇಪದೇ ಮಾಡುವ ಅನುಸಂಧಾನ : ತನು ತನುವಾಗೆ ನೋಂತು ಪರಮಾಗಮಭಾವನೆಯೊಳ್ ನಿರಂತರಂ ಮನಮಿರೆ (ಅಜಪು. ೩-೨) ; ನಿನ್ನ ರೂಪಭಾವನೆಯೊಳೆ ಕೂಡಿ ನಿನ್ನತುಳನಾಮಜಪಕ್ರಿಯೆಯಲ್ಲಿ ನಿಟ್ಟೆವಟ್ಟು (ಶಂಪ್ರಪು. ೯-೮೩). ೩. ಆಲೋತ್ತರ ; ಅಭಿಲಾಷೆ : ಉಮೆಯು ಭಾವನೆಯನೊಡಗೂಡಿಸುವ. . . ದೇವ ಗಂಗಾಧರಂ ಪೂರೆಗೆ ನಿಚ್ಚಂ ನವ್ಮನು (ಕೃಬಿಶಾ. ೦-೨). ೪. [ವೈದ್ಯಶಾ] ಯಾವುದಾದರೂ ಚೂರ್ಣವನ್ನು ದ್ರವದಲ್ಲಿ ಕಲಸಿ ಒಣಗಿಸುವುದು ; ವಾಸನೆ ಕಟ್ಟು ವುದು : ಲೋಹದ ಅರಹುಡಿಯನ್ನು . . . ಮಾಲಂಗೀರಸದಿಂದ ಭಾವ ನೆಯನ್ನು ಮಾಡಿ . . . ಚೂರ್ಣಮಾಡಲು ಶುದ್ಧಸಿಂಧೂರವಾಗುವುದು (ಸಕವೈ. ೯೩); ಜೇನುಮೇಣಯುಕ್ತದ ಹಾಲು ಮುಂಡಗಳ್ಳಿಹಾಲುಗಳಿಂದ ಏಳು ಬಾರಿ ಭಾವನೆಯ ಮಾಡಿ ಕಾಸಿ ವೃಶ್ಚಿಕದಂಶಕ್ಕೆ ಕಾಸಿ ವತ್ತಲು ವಿಷಹರ (ವಿಕತ. ೧೬-೦); ಎಲಚಿಮರದ ಸೊಪ್ಪನ್ನು ಚೂರ್ಣಮಾಡಿ ಹಾಲಿನಿಂದ ಅನೇಕಸಾರಿ ಭಾವನೆ ಮಾಡಬೇಕು (ಚೂರ್ಣವನ್ನು ದ್ರವದಲ್ಲಿ ಕಲಸಿ ಒಣಗಿಸುವುದಕ್ಕೆ ಭಾವನೆಯೆಂದು ಹೆಸರು) (ಶೀವಶಾ. ೬ ಅಧ್ಯ). 'ಭಾವನೆಗೆಯ್' ಪರಾ. ೫. [ದ್ವೈತ] ಜೀವರುಗಳಲ್ಲಿರುವ ಒಂದು ಸಂಸ್ಕಾರ : ಸರ್ವಜೀವರಿಗೂ ಸಂಸ್ಕಾರವೆಂಬ ಭಾವನೆಯಿರುವುದು. ಸಾಮಾನ್ಯವಾಗಿ ಸಂಸ್ಕಾರವು ಭಾವನಾ, ವೇಗ, ಹಠಾಖ್ಯಯೋಗ್ಯತಾ, ಸ್ಥಿತಸ್ಥಾಪಕಗಳೆಂದು ನಾಲ್ಕು ಪ್ರಕಾರವಾದ ಮನಃಪರಿಣಾಮವು . . . ಭಾವನೆ ಅನುಭವದಿಂದುಂಟಾಗಿ ಸ್ಮೃತಿಹೇತುವಾಗಿರುವುದು (ಹಿಂದಶಾ. ೨೮೯). [ಸಂ. ಭಾವನಾ]

**ಭಾವನೆಗೆಯ್**, ಭಾವನೆಗೈ (ಕ್ರಿ). ೧. ನೆನೆಯಿಸು ; ದ್ರವಪದಾರ್ಥದೊಂದಿಗೆ ಮಿಶ್ರಮಾಡು : ತನಿಪಾಲಿನೊಳಗೆ ಭಾವನೆಗೆಯ್ದು ಸೊಜ್ಜಿಗೆಯನಿನಿಸು ಕಿಸವೆರಸಿ ಬೆಣ್ಣೆಯನಿಕ್ಕಿ ಮತ್ತೆ ಕಿವುಚನುಗೆಯ್ದು ಹಂಚಿನೊಳು ನಸುತುಪ್ಪವೆಚಿದು ಬೇಯಿಸಲದುವೆ ಕಿವುಚುರೊಟ್ಟಿ (ಸೂಶಾ. ೦-೦೯). ೨. ದ್ರವದ್ರವ್ಯದಲ್ಲಿ ನೆನೆಸಿ ಒಣಗಿಸು ; ವಾಸನೆ ಕಟ್ಟು : ಲಸದ್ವಿದ್ರುಮದ ರುಚಿಯನೊತ್ತಿ ಬರುವಿಂದದ ರಂಗಂ ಭಾವನೆಗೆಯ್ದುರಲಂಬಿಸ ತೇಜದೊಳಳ್ದಿ ಕರಂ ಹರಿಸದಿ ಬಿದಿ ನಿರ್ಮಿಸಿದಂದದಿನೊಪ್ಪಿದುವವಳಂಘ್ರಿಗಳು (ಶಯುಶಾ. ೩-೨೬). **ಭಾವನೆಗೈ** : ೨. ಛಾಯೆಯಿಲ್ಲದ ಮಾಣಿಕಕ್ಕೆ ಮಾದಳರಸದಿ ಪ್ರಿಯಂದಿಂದಲತಿಗೆಯ ರಸದಿ ಭಾವನೆಗೆಯ್ಯಲಾಯತದಿ ಗಜನಿಂಬೆ ಹುಳಿಯಲೇಳುಂವೇಳೆ ಭಾವನೆಗೈಯಲದನು (ರತ್ನಶಾ. ೨೩-೦). [ಭಾವನೆ + ಕೆಯ್$_{1}$]

**ಭಾವನೆಗೈ** 'ಭಾವನೆಗೆಯ್' ನೋ.

**ಭಾವಪರವಶ** (ನಾ). ಭಾವೋದ್ರೇಕದಿಂದ ಮೈಮರೆತವನು; ಭಾವಾವೇಶಕ್ಕೆ ಒಳಗಾದವನು : ಪ್ರತಿಸಾರಿಯೂ ಭಾಷಣ ಮಾಡುವಾಗ ಪ್ರಕೃತಘಟ್ಟ ತಲುಪಿದ ಕೂಡಲೆ ಅವನು ಭಾವಪರವಶನಾಗುತ್ತಿದ್ದನು (ಭೃವರು. ೩೪೬). [ಸಂ.]

**ಭಾವಪರವಶತೆ** (ನಾ). ಭಾವೋದ್ರೇಕದಿಂದ ಮೈಮರೆಯುವಿಕೆ : ವ್ಯಕ್ತಿನಿಷ್ಠವಾದ ದೃಷ್ಟಿಕೋನದ ಮೂಲಕ ಬಂದ ಭಾವಪರವಶತೆಯಿಂದ . . . ಮುಳುಗೇಳುವ ಕೃತಿಗಳಿಗೆ ಲೆಕ್ಕವೇ ಇಲ್ಲ (ಹೊಸಕ್ಷಿ. ೨೬೯). [ಸಂ. ಭಾವಪರವಶತಾ]

**ಭಾವಪರಿವರ್ತನ** (ನಾ). ೧. ಅಭಿಪ್ರಾಯವು ವ್ಯತ್ಯಾಸವಾಗುವುದು. ೨. [ಜೈನ] ಜೀವಗಳ ಭಾವವು ಕ್ರಮವಾಗಿ ಬದಲಾವಣೆಯಾಗುವಿಕೆ; P ಇದರಲ್ಲಿ ಸ್ಥಿತಿಸ್ಥಾನ, ಕಷಾಯಾಧ್ಯವಸಾಯಸ್ಥಾನ, ಅನುಭಾಗಾಧ್ಯವಸಾಯಸ್ಥಾನ ಮತ್ತು ಯೋಗಸ್ಥಾನ ಎಂಬ ನಾಲ್ಕು ಪ್ರಕಾರಗಳಿವೆ : ಮೂಲೋತ್ತರಪ್ರಕೃತಿಗಳೊಳ್ ಸರ್ವಜಘನ್ಯ ಸ್ಥಿತಿಯಂ ಮೊದಲ್ಗೊಟ್ಟ ತತ್ಸಾನ್ಯಶ್ಯ ಸಂಪರಾಯ ವ್ಯವಸ್ಥಾಯ ಯೋಗದಿಂ ಪ್ರಪ್ರದೇಶಾನುಭಾಗ ಬಂದಸ್ಥಾನಂಗಳೊಳಗಲಿಸಿ ಸಮಯೋತ್ತರಾನುಕ್ರಮದಿನುತ್ಕೃಷ್ಟಸ್ಥಿತಿವರಂ ಪರಿವಡಿದಪ್ಪದೆ ಕಿಟ್ಟುವುದಂ ಭಾವಪರಿವರ್ತನ ಮೆಂಬುದು (ಸುಕುಮಾ. ೬-೬ ವ); ಇಂತೀ ಸರ್ವಸಮುದಾಯಂ ಭಾವ ಪರಿವರ್ತನಂ . . . ಭಾವಪರಿವರ್ತನಕಾಲಂ ಅನಂತಗುಣಂ ಅತೀತಕಾಲದೊಳ್ ಭಾವಪರಿವರ್ತನವಾರಂಗಳನಂತಂ (ಕಕ್ಷ್ಯಕ್ರ. ೯೦). [ಸಂ.]

**ಭಾವಪುಷ್ಟಿ** (ನಾ). ಭಾವನೆಯ ಆಧಿಕ್ಯ ; ಆಳವಾದ ಭಾವನೆ : 'ಅಶ್ವತ್ಥಾಮನ್' ನಾಟಕದಲ್ಲಿ ತೋರುವ ಭಾವಪುಷ್ಟಿ, 'ಪಾರಸಿಕರು' ನಾಟಕದಲ್ಲಿಲ್ಲ (ರೂಢಿ). [ಸಂ.]

**ಭಾವಪೂರ್ಣ** (ಗು). ೧. ಭಾವನೆಯಿಂದ ತುಂಬಿದ; ರಸಭರಿತವಾದ. (ನಾ). ೨. ಭಾವನೆಯಿಂದ ಕೂಡಿದುದು ; ರಸಭರಿತವಾದುದು : ಅವರ ಹಾಡುಗಾರಿಕೆ ಭಾವಪೂರ್ಣವಾಗಿತ್ತು (ರೂಢಿ). ೩. ಅಸ್ತಿತ್ವದಿಂದ ತುಂಬಿರುವುದು ; ಸತ್ತಾಭರಿತವಾದುದು ; ಸ್ಥಿರವಾದುದು : ಅಶೋಕನ ಪರಮತಸಹಿಷ್ಣುತೆಯ ನೀತಿ ಅಭಾವಸೂಚಕವಾದುದಲ್ಲ, ಭಾವಪೂರ್ಣವಾದುದು (positive) (ಭಾರದ. ೩೩೧). [ಸಂ.]

**ಭಾವಪ್ರಧಾನ** (ಗು). ಚಿತ್ತವೃತ್ತಿ ಅಥವಾ ಮನೋಧರ್ಮಗಳ ನಿರೂಪಣೆಯನ್ನೇ ಮುಖ್ಯವಾಗುಳ್ಳ : ನವೋದಯಕವಿಗಳು ಅಧಿಕವಾಗಿ ಭಾವಪ್ರಧಾನ ಕವನಗಳನ್ನು ಬರೆದರು (ರೂಢಿ). [ಸಂ.]

**ಭಾವಫಲ** (ನಾ). ೧. ಮನಃಕಲ್ಪನೆಯ ಪರಿಣಾಮ ; ಮನೋವೃತ್ತಿಯ ಪರಿಣಾಮ. ೨. [ಜ್ಯೋತಿ] ಲಗ್ನವೇ ಮೊದಲಾದ ಹನ್ನೆರಡು ಭಾವಗಳಲ್ಲಿ ಶುಭಾಶುಭಗ್ರಹಗಳಿದ್ದಾಗ ಅವು ಜಾತಕನಿಗೆ ಕೊಡುವ ಫಲ : ಮಿತ್ರಾರಿ ಪರೋಚ್ಚ ಸ್ವಕ್ಷೇತ್ರಸ್ಥಿತರಾಗೆ ಶುಭ ಶುಭಾನ್ಯರ್ ಲಗ್ನಕ್ಷೇತ್ರಾದಿ ಭಾವಫಲಮಂ . . . ಅಱಿವುದು (ಜಾತತಿ. ೦೯-೦೬) ; ಯಾವ ಭಾವಫಲವನ್ನು ನಿರ್ಣಯಿಸಬೇಕಾದರೂ ಆ ಭಾವವನ್ನೇ ಲಗ್ನವೆಂದು ಭಾವಿಸಿ ಆಯಾ ಭಾವದ ಫಲವನ್ನು ವಿವರವಾಗಿ ತಿಳಿಯಬೇಕು (ಜಾತತಿ. ೦೯-೦೬ ಟೀಕೆ). [ಸಂ.]

**ಭಾವಬಿದಿಗೆ** (ನಾ). (ಉಕ) ಕಾರ್ತಿಕ ಶುದ್ಧ ಬಿದಿಗೆಯಂದು ಸೋದರಿಯರು ಅಣ್ಣತಮ್ಮಂದಿರನ್ನು ಬರಮಾಡಿಕೊಂಡು ಸತ್ಕರಿಸುವ ಹಬ್ಬ ; ಸೋದರಬಿದಿಗೆ ; ಯಮದ್ವಿತೀಯೆ ; P ಯಮನು ತನ್ನ ತಂಗಿಯಾದ ಯಮುನೆಯ ಮನೆಗೆ ಹೋಗಿ ಬಂದನೆಂದು ನಂಬಲಾದ ಈ ದಿನ ಸಹೋದರರು, ಸಹೋದರಿಯರ ಮನೆಗೆ ಹೋಗಿ ಮಂಗಳದ್ರವ್ಯಗಳನ್ನು ಕೊಟ್ಟು ಊಟಮಾಡಿಕೊಂಡು ಬರುವ ವಾಡಿಕೆಯಿದೆ : ಕಾರ್ತಿಕಶುದ್ಧದ್ವಿತೀಯೆಗೆ ಭಗಿನಿಯರು ತಮ್ಮ ಸೋದರರನ್ನು ಬರಮಾಡಿಕೊಂಡು ಆರತಿ ಅಕ್ಷತೆಗಳಿಂದ ಸತ್ಕರಿಸುತ್ತಾರೆ, ಸವಿಯೂಟದಿಂದ ಸಂತೋಷಪಡಿಸುತ್ತಾರೆ. ಈ ಸಮಯದಲ್ಲಿ ಬಂಧುಗಳು ತಮ್ಮ ಅಕ್ಕ-ತಂಗಿಯರಿಗೆ ಬೆಲೆಯುಳ್ಳ ಉಡುಗರೆಗಳನ್ನು ಕೊಡುವ ರೂಢಿಯಿದೆ . . . ಈ ಹಬ್ಬ ಭಾವಬಿದಿಗೆಯಾಗಿದೆ (ಶಾಹಬ್ಬ. ೦೩೦); ನಾನು ಅವನಿಗೆ ಭಾವಬಿದಿಗೆಯ ದಿನ ಬಂಧುತಿಲಕವನ್ನು ಸಹ ಮಂದಿಯ ಮುಖಾಂತರ ಕಳಿಸುತ್ತಿದ್ದೆ (ಇಶ್ಯಕ. ೪೪೨).

[ ಭಾವ$_{0}$ ( P ← ಮರಾ. ಭಾವ = ಭ್ರಾತೃ ) + ಬಿದಿಗೆ ]

**ಭಾವಭವ** (ನಾ). ಮನಸ್ಸಿನಲ್ಲಿ ಹುಟ್ಟುವವನು ; ಮನಸಿಜ ; ಕಾಮ ; ಮನ್ಮಥ : ಭಾವಭವಧ್ವಂಸಕನಾಭೂವಿಶ್ರುತ ಭೂಧರೇಂದ್ರದಗ್ರದ ಸದ್ವಂಶಾವನಿಜದಧಸ್ಥಮಣಿಗ್ರಾವದ ಮೇಗಚಳಯೋಗದಿಂದಂ ನಿಂದಂ (ಸೀಬಿಪು. ೦೩-೯೪); ಭಾವಭವನೆನಗೆ ಮುಳಿದು ನಿಶಿತಾಕುಸುಮ ಬಾಣಾವಳಿಗಳನೆಸುತಿರ್ದಪಂ ನಿರ್ದಯಂ (ಕುಮುರಾ. ೪೪-೯೦); ಬುಧಸೌಜನ್ಯ ಹತಭವಜನ್ಯ ನಿರ್ಜಿತಭಾವಭವಸೈನ್ಯ (ಬಸವು. ೪೬-೩೦). [ ಸಂ. ]

**ಭಾವಮೈದ** 'ಭಾವಮೈದುನ' ನೋ.

**ಭಾವಮೈದುನ**, ಭಾವಮೈದ (ನಾ). ಗಂಡನ ಅಥವಾ ಹೆಂಡತಿಯ ಅಣ್ಣ ಅಥವಾ ತಮ್ಮ. – ಸಹೋದರ : ಭಾವಮೈದುನನಣ್ಣನಿಂತೆನೆ ಭಾವನಿಗೆ ನೀನಂಜಬೇಡಂದೋವಿ ಕರುಣಾಸಿಂಧು ಸಂತೈಸಿದನು ಧರ್ಮಜನ (ಕುಮ್ಮಾಭ. ೬೦೨. ೬–೯೩). **ಭಾವಮೈದ** : ಕೊಠಡಿಯ ಬಾಗಿಲನ್ನು ತೆರೆದುಕೊಂಡು ಅವನ ಭಾವಮೈದ ರಘು ಒಳಗೆ ಬಂದು . . . ಹೇಳಿದನು (ಮಹಾಗ. ೦೫). [ಭಾವ$_1$ + ಮೈದುನ (< ಮೆಯ್ದುನ)]

**ಭಾವಮೋಕ್ಷ** (ನಾ). [ಜೈನ] ಸರ್ವಕರ್ಮನಿವೃತ್ತಿಯನ್ನುಂಟು ಮಾಡುವ ಆತ್ಮನ ಶುದ್ಧಸ್ವರೂಪ ; "ಮೋಕ್ಷಭೇದ – ಘಾತಿಕರ್ಮ ಕ್ಷಯ : ಅರ್ಹಂತಾವಸ್ಥೆ : ಆತ್ಮನಿಗೆ ಸಂಬದ್ಧವಾಗಿರುವ ಸಮಸ್ತ ಕರ್ಮಗಳ ನಾಶಕ್ಕೆ ಕಾರಣವಾದ ಆತ್ಮನ ಪರಿಣಾಮ" (ಜೈನಕೋ. ೧೯೨) : ಆತ್ಮನಲ್ಲಿ ಉಂಟಾಗುವ ರಾಗದ್ವೇಷಾದಿ ಭಾವನೆಗಳು ನಷ್ಟವಾಗುವುದೇ ಭಾವಮೋಕ್ಷವು (ಜೈನಸಿ. ೫೦೦). [ಸಂ.]

**ಭಾವಯಿತ್ರೀ** (ನಾ). [ಕಾವ್ಯಮೀ] ಕಾವ್ಯದ ಸ್ವಾರಸ್ಯವನ್ನು ತಿಳಿಯಲು ಸಹೃದಯನಲ್ಲಿರಬೇಕಾದ ಪ್ರತಿಭೆ : ಸಹೃದಯನಿಗೆ ಆವಶ್ಯಕವಾದ ಪ್ರತಿಭೆಗೆ ರಾಜಶೇಖರನು "ಭಾವಯಿತ್ರೀ" ಎಂದು ಹೆಸರು ಕೊಡುತ್ತಾನೆ (ಕಾಲಮೀ. ೨೨೪). 'ಕಾರಯಿತ್ರೀ' ಪರಾ. [ಸಂ.]

**ಭಾವಯೋಗ** (ನಾ). ೧. [ಜೈನ] "ಮನೋವಚನಕಾಯಂಗಳನ್ನು ಅವಲಂಬಿಸುವ ಸಂಸಾರಿಜೀವಿಗೆ ತ್ರಿಕರಣಗಳಿಂದ ಬೇರೆ ಕರ್ಮಾಣುಗಳನ್ನು ಎಳೆದುಕೊಳ್ಳುವ ಸಾಮರ್ಥ್ಯವಿರುತ್ತದೆ. ಇಂಥ ಸಾಮರ್ಥ್ಯವು ಭಾವಯೋಗ ಎನಿಸುವುದು" (ಜೈನಸಿ. ೨೯೬). ೨. [ಯೋಗ] ನಿದಿಧ್ಯಾಸಯೋಗದ ಒಂದು ಬಗೆ : ಸ್ವರ್ಗವೇ ಮೂರ್ಧ್ನಿ ದಿಕ್ಕೇ ಶ್ರೋತ್ರ ಚಂದ್ರಾರ್ಕರೇ ನೇತ್ರ ಅಗ್ನಿಯೇ ಮುಖ ಅಂತರಿಕ್ಷವೇ ನಾಭಿ ಭೂಮಿಯೇ ಪಾದಂಗಳಾದೀಶ್ವರನ ವಿರಾಡ್ರೂಪಮಂ ನೆನೆದು ಅಲ್ಲದೆ ಭುಜಾಸ್ತ್ರಾಭರಣಾದಿಸಹಿತನಾದೀಶ್ವರನ ದಿವ್ಯಮೂರ್ತಿಯಂ ಪರಿಭಾವಿಸಿ ಬಳಿಕ್ಕದಱವಯವಂಗಳೊಂದೊಂದಂ ಬಿಟ್ಟೀವ ಅವಯವಮಾತ್ರಮಾದ ಸದ್ರೂಪಬ್ರಹ್ಮದಲ್ಲಿ ಮನೋಲಯಮಪ್ಪುದೇ ಭಾವಯೋಗವೆನಿಸುವುದು (ಶಿವೇಶ. ೫೦). [ಸಂ.]

**ಭಾವರತಿ** (ನಾ). ಮನಸ್ಸಿನಲ್ಲಿ ಉಂಟಾದ ಪ್ರೀತಿ ; ಮನಃಪ್ರೀತಿ : ಮೃಡನ ನಿಡುದೋಳ ಬಾಳನ ಕಡುಪೊಗರಿನ ಪೊಳಪನುರಗಿಗೆತ್ತುರಗೇಂದ್ರಂ ತೊಡರ್ದಲ್ಲಿ ಭಾವರತಿಯಿಂದೊಡನೊಗೆದಂ ಸಿನ್ನನಖಿಳಭುವನಾನಂದಂ (ಎಪಿ. XIV, ೨೭೦–೨೬ ; 1173). [ಸಂ.]

**ಭಾವಲಹರಿ** (ನಾ). ಮನಸ್ಸಿಗೆ ಹೊಳೆಯುವ ಭಾವನೆಗಳ ಪ್ರವಾಹ ; ಒಂದರ ಮೇಲೆ ಒಂದಾಗಿ ಬರುವ ಭಾವನೆ : ಅವರು ತಮ್ಮ ಆಲೋಚನೆಗಳನ್ನು, ಆಧ್ಯಾತ್ಮಿಕ ಚಿಂತನೆಗಳನ್ನು, ಭಾವಲಹರಿಗಳನ್ನು ವಚನರೂಪಕ್ಕಿಳಿಸುವಾಗ...ಉಪಮೆಗಳನ್ನೂ ಬಳಸಿದ್ದಾರೆ (ಸಾಹಿಸಂ. ೯). [ಸಂ.]

**ಭಾವಲಿಂಗ** (ನಾ). [ವೀಶೈ] ಮಾನಸಿಕಪೂಜೆಗಾಗಿ ಮನಸ್ಸಿನಲ್ಲೆ ಕಲ್ಪಿಸುವ ಲಿಂಗ ; ಕ್ರಿಯೆಯಂತೆ ಭಾವವೂ ಕೂಡ ಯಾವ ಲಿಂಗದಲ್ಲಿ ಲಯವನ್ನು ಹೊಂದುವುದೋ ಅದು : ಭಾವ ಸದ್ಭಾವ ನಿರ್ಭಾವವೆಂಬ ಭಾವತ್ರಯಂಗಳಲ್ಲಿ ಭರಿತವಾಗಿ ಭಾವಬ್ರಹ್ಮವೆಂಬ ಭೇದವಿಲ್ಲದೆ ಸನ್ನಿಹಿತಭಾವದಿಂದಿಪ್ಪುದೆ ಭಾವಲಿಂಗ (ಅನುಭ. ಮು. ೦೪೯–೨೩೩); ಲಿಂಗಸ್ಥಲವು ಮೂರು ಪ್ರಕಾರವಾಗಿರುವುದು. ಎಂದರೆ — ಒಂದನೆಯದು ಭಾವಲಿಂಗವು . . . ಭಾವಲಿಂಗವು ನಿಷ್ಕಳವು. ಅದು ಭಾವದಿಂದ ಗ್ರಹಿಸತಕ್ಕುದಾಗಿ ಭಾವಗ್ರಾಹ್ಯವೆನಿಸಿರುವುದು (ಶಿವಾಸೂ. ೬೯–೫ ಟೀಕೆ); ಭಾವಲಿಂಗವು ನಿಷ್ಕಳವು ಪರಕ್ಕೆ ಪರವು. ಇದು ಸದ್ಭಾವದಿಂದ ಗ್ರಹಿಸಲು ಯೋಗ್ಯವಾದುದು (ಅಷ್ಟಾವ. ೨). [ಸಂ.]

**ಭಾವಲಿಪಿ** (ನಾ). ಒಂದು ಬಗೆಯ ಲಿಪಿ. – ಅಕ್ಷರ : "ವಸ್ತುವಿನ ಹೆಸರನ್ನು ವ್ಯಕ್ತಪಡಿಸದೆ ಕೇವಲ ಭಾವವನ್ನು ಮಾತ್ರ ಸಂಕೇತವಾಗಿ ತಿಳಿಸುವ ಲಿಪಿ: ಭಾವಲಿಪಿ (ಉದಾ. ಚೀನಾಲಿಪಿ)" (Ideograph. ಇಂಕನ್ನ). [ಸಂ.]

**ಭಾವಲೇಶ್ಯ** (ನಾ). [ಜೈನ] ಕಷಾಯದಿಂದ ಅನುರಂಜಿತವಾದ ಮನಸ್ಸು, ವಚನ, ಕಾಯಗಳ ಪ್ರವೃತ್ತಿ; ಕಷಾಯಗಳ ಉದಯದಿಂದ ಅನುರಂಜಿತವಾಗುವ ಮನೋವಾಕ್ಕಾಯ ಪ್ರವೃತ್ತಿ; P ಇದರಿಂದಲೇ ಸಂಸಾರಿಯಾದ ಜೀವವು ಪಾಪಪುಣ್ಯಗಳಿಂದ ಬಂಧಿತವಾಗುತ್ತದೆ.– ಲೇಪನಹೊಂದುತ್ತದೆ : ಭಾವಲೇಶ್ಯೆಯ ಕಲ್ಪನೆಯು ಪ್ರಾಚೀನವಾಗಿದ್ದು ಅದಕ್ಕೆ ಹಿಂದಿನಿಂದ ದ್ರವ್ಯಲೇಶ್ಯೆಯ ಕಲ್ಪನೆಯನ್ನು ಜೋಡಿಸಲಾಗಿದೆ (ಜೈನಸಿ. ೫೪೦). [ಸಂ. ಭಾವಲೇಶ್ಯಾ]

**ಭಾವವಚನ** (ನಾ). [ವ್ಯಾಕ] ಒಂದು ವಸ್ತುವಿನ ಧರ್ಮವನ್ನು ಅಥವಾ ಧಾತ್ವರ್ಥವನ್ನು ತಿಳಿಸುವ ಪದ; ಭಾವವನ್ನು ಅಥವಾ ಕ್ರಿಯೆಯ ಸ್ಥಿತಿಯನ್ನು ತಿಳಿಸುವ ಪದ ; ಭಾವನಾಮ : ವಿನುತ ಕ್ರಿಯಾತ್ಮಕಂಗಳುಮೆನಿಸುವ ಸಂಸ್ಕೃತದ ಭಾವವಚನಂಗಳನಾಯ್ದು ನಿತರ್ಕಮಿಸುಪ್ರತ್ಯಯವನೆ ಪತ್ತಿಸಿ ನಿಱಿಸೆ ಏರ್ಕುಮಾ ಕೃಲ್ಲಿಂಗಂ (ಶಮದ. ೬೪); ಬೆಳೆಯೆಂಬ ಧಾತುವಿನ ಭಾವವಚನಂ ಬೆಳೆಯೆಂದುಂ ಬೆಳಸೆಂದುಮಿರ್ಪುದು (ಶಮದ. ೨೦೬ ವೃತ್ತಿ). [ಸಂ.]

**ಭಾವವಾಚಿ** (ನಾ). = ಭಾವವಚನ : ಸಂಸ್ಕೃತದ=ಸಕ್ಕದದ, ಭಾವವಚನಂಗಳಂ = ಭಾವವಾಚಿಗಳಂ, ಆಯ್ದು=ಆಯ್ದುಕೊಂಡು (ಶಮದ. ೬೪ ಟೀಕೆ). [ಸಂ. ಭಾವವಾಚಿನ್]

**ಭಾವವಿದ** (ನಾ). = ಭಾವಜ್ಞ : ವಿವಿಧಕಳಾಭಿಜ್ಞಂ ಭಾವವಿದಂ ರಸರಸಿಕಂ . . . ನೃಪತತಿಮಹಿತಂ (ಪುಷ್ಪಕ. ೦–೬೩). [ಸಂ. ಭಾವವಿದ್]

**ಭಾವಶಬಲತೆ** (ನಾ). [ಕಾವ್ಯಮೀ] ಅನೇಕ ವ್ಯಭಿಚಾರಿಭಾವಗಳು ಒಟ್ಟಿಗೆ ಸೇರುವುದು ; P ಈ ವ್ಯಭಿಚಾರಿಭಾವಗಳ ಮೇಳನವು ಕಾವ್ಯದಲ್ಲಿ ಪ್ರಧಾನವಾಗಿ ವ್ಯಂಗ್ಯವಾದರೆ 'ಧ್ವನಿ' ಎಂಬ ಹೆಸರನ್ನು ಪಡೆಯುವುದಂ: ಆಸ್ವಾದ್ಯವಾಗುವ ಭಾವದಲ್ಲಿ ಆಲಂಕಾರಿಕರು ಭಾವೋದಯ, ಭಾವಶಾಂತಿ, ಭಾವಸಂಧಿ, ಭಾವಶಬಲತೆ ಎಂಬ ನಾಲ್ಕು ದಶೆಗಳನ್ನು ವಿಂಗಡಿಸುತ್ತಾರೆ. . .ಒಂದನ್ನು ಒತ್ತರಿಸಿ ಮತ್ತೊಂದರಂತೆ ಅನೇಕ ಭಾವಗಳು ಒದಗುವುದು ಭಾವಶಬಲತೆ (ಕಾಲಮೀ. ೯೨೪); ಹಿಂದೆ ಇದ್ದ ಒಂದೊಂದು ಭಾವವನ್ನು ಹೊಸಹೊಸದಾಗಿ ಹುಟ್ಟಿದ ಮತ್ತೊಂದೊಂದು ಭಾವವು ಮುಚ್ಚುವಂತೆ ನಾನಾಭಾವಗಳನ್ನು ಚಿತ್ರಿಸಿದರೆ ಅದಕ್ಕೆ 'ಭಾವಶಬಲತೆ' ಯೆಂದೂ ಹೆಸರು (ಕೃಪಿಠ. ೨೦೪); P 'ಎಲ್ಲಿಯ ಕಾರ್ಯಮೆಲ್ಲಿ ಶಶಿಯಾ ಸುಕುಲಂ ಪ್ರಿಯೆ ಮತ್ತೆ ಕಾಂಬಳೇ! ಪೊಲ್ಲದ ನೊತ್ತಲಲ್ತೆ ತಿಳಿವೀ ಮೊಗಮೇಂ ಮುನಿದುಂ ಮನೋಹರಂ! ಬಲ್ಲರಕಲ್ಮಷರ್ ನುಡಿವರೇಂ ಕನಸಲ್ಲಿಯುಮಿಾಕೆ ಕಾಣಳ! ನ್ನಿಲ್ಲಿ ಸುಧೀರನಾಗು ಮನವೇ ಮಿಗೆ ಚುಂಬಿಪ ಧನ್ಯನಾವನೋ' (ಧ್ವನ್ಯಾಲೋ. ೧೭೦). ವಿಕ್ರಮೋರ್ವಶೀಯದ ನಾಲ್ಕನೆಯ ಅಂಕದ ಈ ಪದ್ಯದಲ್ಲಿ ಊರ್ವಶಿಯನ್ನು ಮೋಹಿಸಿ ಕಾಮಪರವಶನಾದ ಪುರೂರವಸ್ಸಿನ ಸ್ಥಿತಿಯ ವರ್ಣನೆಯಲ್ಲಿ ಮೊದಲಿಂದ ವಿತರ್ಕ–ಔತ್ಸುಕ್ಯ, ಮತಿ–ಸ್ಮೃತಿ, ಶಂಕೆ–ದೈನ್ಯ, ಧೃತಿ–ಚಿಂತೆ ಈ ಸಂಚಾರಿಭಾವಗಳು ಕ್ರಮವಾಗಿ ಹಿಂದಿನದನ್ನು ಮುಂದಿನ ಭಾವವು ಬಾಧಿಸುತ್ತಾ ಒಟ್ಟಿಗೆ ಸೇರಿ ಚಮತ್ಕಾರವನ್ನು ಕೊಡುತ್ತವೆ. ಇದು ಧ್ವನಿಯ ಒಂದು ಪ್ರಭೇದ. [ಸಂ. ಭಾವಶಬಲತಾ]

**ಭಾವಶಬಲತ್ವ**, ಭಾವಶಬಳತ್ವ (ನಾ). = ಭಾವಶಬಲತೆ: ಇಲ್ಲಿ ಜೈತಜಿಯ ವೃತ್ತಾಂತಮಂ ಕೇಳ್ದವಂಗೌತ್ಸುಕ್ಯ ಧೈರ್ಯ ನಿರ್ವೇದಾನಂದಭಾವಂಗಳ್

ತಱುವಾಯಿಂದೊಂದಱ ಮೇಲೊಂದು ಉದಿಸುವದು ಭಾವಶಬಲತ್ವಂ (ಅಕ್ರತಿ. ೧೪೬-೧೧). **ಭಾವಶಬಳತ್ವ** : ಪೂರ್ವಪೂರ್ವಭಾವಂಗಳನುತ್ತರೋತ್ತರಭಾವಂಗಳುಪಮರ್ದಿಸೆಯದು ಭಾವಶಬಳತ್ವಂ (ಅಕ್ರತಿ. ೧೪೬-೧೩). [ಸಂ.]

**ಭಾವಶಬಲಾಲಂಕಾರ** (ನಾ). [ಕಾವ್ಯಮಿ] ಒಂದನ್ನೊಂದು ಉಪಮರ್ದಿಸುತ್ತಾ ಸೇರಿರುವ ಅನೇಕ ಭಾವಗಳು ವ್ಯಂಗ್ಯವಾದರೂ ಪ್ರಧಾನತೆಯನ್ನು ಹೊಂದದೆ ಮತ್ತೊಂದು ರಸ ಅಥವಾ ಭಾವಕ್ಕೆ ಅಂಗವಾಗಿರುವುದು: ಇಲ್ಲಿ ಜೈತಜಿಯ ವೃತ್ತಾಂತಮಂ ಕೇಳ್ದವಂಗೌತ್ಸುಕ್ಯಧೈರ್ಯನಿರ್ವೇದಾನಂದಭಾವಂಗಳ್ ತಱುವಾಯಿಂದೊಂದಱ ಮೇಲೊಂದು ಉದಿಸುವದು ಭಾವಶಬಲತ್ವಂ ಇದು ಕವೀಶ್ವರನ ಪ್ರಭುವಿಷಯಮಾದ ಪ್ರೀತಿಭಾವಕ್ಕಂಗಮಾಗಿರ್ಪುದಱಿಂದಿದು ಭಾವಶಬಲಾಲಂಕಾರಂ (ಅಕ್ರತಿ. ೧೪೬-೧೨). [ಸಂ.]

**ಭಾವಶಬಳತ್ವ** 'ಭಾವಶಬಲತ್ವ' ನೋ.

**ಭಾವಶಬಳತ್ವಾಲಂಕಾರ** (ನಾ). = ಭಾವಶಬಲಾಲಂಕಾರ : ಪೂರ್ವಪೂರ್ವಭಾವಂಗಳನುತ್ತರೋತ್ತರ ಭಾವಂಗಳುಪಮರ್ದಿಸೆಯದು ಭಾವಶಬಳತ್ವಂ ಒಂದು ರಸಕ್ಕಾದೊಡಂ ಭಾವಕ್ಕಾದೊಡಮಂಗಮಾಗೆಯದು ಭಾವಶಬಳತ್ವಾಲಂಕಾರಂ (ಅಕ್ರತಿ. ೧೪೬-೧೪). [ಸಂ. ಭಾವಶಬಲತ್ವಾಲಂಕಾರ]

**ಭಾವಶಾಂತಿ** (ನಾ). [ಕಾವ್ಯಮಿ] ಒಂದು ಧ್ವನಿಪ್ರಭೇದ ; ಉತ್ಪನ್ನವಾಗಿದ್ದ ಒಂದು ಭಾವವು ಶಾಂತವಾದಂತೆ ವರ್ಣಿಸುವುದು ; P ಉದಾ: ಕಾಂತನು ವಿಲಂಬ ಮಾಡಿದನೆಂದು ಹುಬ್ಬುಗಂಟು ಹಾಕಿದ್ದ ಕಾಂತೆಯು, ನಾಯಕನು ಬಂದು ಕಾಲಿಗೆರಗಿದ ಕೂಡಲೆ ಮಂದಹಾಸವನ್ನು ಬೀರುವಳು. ಇಲ್ಲಿ ಮೊದಲು ಕೋಪ (ಅಮರ್ಷ)ವೆಂಬ ಭಾವವಿದ್ದು ಅದು ಶಾಂತವಾಯಿತೆಂದು ನಿರೂಪಿತವಾಗಿದೆ. ಆದ್ದರಿಂದ ಭಾವಶಾಂತಿಯಾಗುತ್ತದೆ : ಒಂದು ಭಾವವು ಶಾಂತ (ಅದೃಶ್ಯ) ವಾಯಿತು ಎಂದು ವರ್ಣಿಸಿದರೆ ಅದಕ್ಕೆ 'ಭಾವಶಾಂತಿ'ಯೆಂದೂ . . . ಹೆಸರು (ಕೈಪಿಡಿ. ೩೦೪); ಆಸ್ವಾದ್ಯವಾಗುವ ಭಾವದಲ್ಲಿ ಆಲಂಕಾರಿಕರು ಭಾವೋದಯ, ಭಾವಶಾಂತಿ, ಭಾವಸಂಧಿ, ಭಾವಶಬಲತೆ ಎಂಬ ನಾಲ್ಕು ದಶೆಗಳನ್ನು ವಿಂಗಡಿಸುತ್ತಾರೆ. . . ಏರಿದ್ದ ಭಾವಲಯ ಹೋದುವುದು ಭಾವಶಾಂತಿ (ಕಾರಪಿಡಿ. ೪೨೩). [ಸಂ.]

**ಭಾವಶುದ್ಧ** (ನಾ). = ಭಾವಶುದ್ಧಿ ೧ : ಭಾವಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯ ನೀನು (ಮಹಾದೇ. ಬ. ೧೨-೯). [ಸಂ.]

**ಭಾವಶುದ್ಧಿ** (ನಾ). ೧. ಮನಸ್ಸಿನ ಸ್ವಚ್ಛತೆ ; ಹೃದಯನೈರ್ಮಲ್ಯ ; ಚಿತ್ತಶುದ್ಧಿ : ಸ್ಕಂದನನು ಫಾಗುನನನು ಹನುಮನ ಭೀಮಸೇನನ ವಿನತೆಯಾತ್ಮಜನಿಂತಿದೈವರ ಭಾವಶುದ್ಧಿಯಲಿ ನೆನೆದವರ ದುರಿತಂಗಳೋಡುವವು (ಕುವ್ಯಾಉ. ೩-೧೩೨); ಬಸವಣ್ಣನರ ಭಕ್ತಿಭಂಡಾರಕ್ಕೆ ಭಾವಶುದ್ಧಿಯೇ ಬಾಗಿಲು (ಸಾಹಿತಂ. ೨). ೨. [ಜೈನ] "ಅಷ್ಟಶುದ್ಧಿಗಳಲ್ಲೊಂದು; ದೇಹ ಭೋಗದಲ್ಲಿ ವೀತರಾಗನಾದಾಗ ರಾಗದ್ವೇಷಾದಿ ಮಲಗಳು ನಿರ್ಮೂಲವಾಗಿ ಮನಸ್ಸು ಶುದ್ಧವಾಗುವುದು" (ಜೈಪಕೋ. ೧೯೨) : ಭಾವಶುದ್ಧಿ ವಿಶೇಷದಿಂದಮನಿಂದಿತೆಯುಮಪ್ಪಾರ್ಯನಾಗೆ ಸತ್ಯಭಾಮೆ ತದಾರ್ಯಿಯಾದಳ್ (ಶಾಂತಿಪು. ೬-೧೨೪ ವ); ಜ್ಞಾನದಿಂದ ಸಂಸಾರ, ದೇಹಗಳ ಭೋಗದ ವಿಷಯದಲ್ಲಿ ಉತ್ಪನ್ನವಾದಂಥ ವೀತರಾಗತ್ವವೇ ಸಂಪೂರ್ಣರಾಗ-ದ್ವೇಷಾದಿ ಮಲಗಳನ್ನು ಇಲ್ಲದಂತೆ ಮಾಡಿ ಮನವನ್ನು ನಿರ್ಮಲಗೊಳಿಸುತ್ತದೆ. ಈ ನಿರ್ಮಲತೆಗೇನೇ ಭಾವಶುದ್ಧಿ ಎನ್ನುವರು (ಶ್ರಾವಕಾ. ೪೦೦). 'ಶುದ್ಧಿ' ಪರಾ. [ಸಂ.]

**ಭಾವಶುದ್ಧಿಗೆಡು** (ಕ್ರಿ). ಚಿತ್ತಶುದ್ಧಿಯನ್ನು ಕಳೆದುಕೊಳ್ಳು; ಮನಸ್ಸಿನ ನಿರ್ಮಲಿನತೆಯನ್ನು ಕಳೆದುಕೊಳ್ಳು : ಗುರೂಪದೇಶಂಗೊಳ್ಳದೆ. . . ಅನುಮಿಂತೆ ತಪಂಗೆಯ್ವೆನೆಂದು ಪಂಚಾಗ್ನಿತಾಪತಪ್ತನಾಗಿ ಭಾವಶುದ್ಧಿಗೆಟ್ಟು ಕೋಪಾಗ್ನಿ ಪೆರ್ಚೆ (ಶಂಕಕಂ. ೬೦-೧೨). [ ಭಾವಶುದ್ಧಿ + ಕೆಡು$_1$ ]

**ಭಾವಸಂಧಿ** (ನಾ). [ಕಾವ್ಯಮಿ] ಧ್ವನಿಯ ಒಂದು ಪ್ರಭೇದ; ಪರಸ್ಪರ ವಿರುದ್ಧವಾದ ಅಥವಾ ಅಲ್ಲದ ಎರಡು ಭಾವಗಳು ಒಟ್ಟಿಗೆ ಸೇರಿರುವುದು; P ಹರ್ಷವಿಷಾದಗಳು ಅನೇಕ ಸಂದರ್ಭಗಳಲ್ಲಿ ಏಕಕಾಲದಲ್ಲಿ ಬರುವುದುಂಟು. ಅವು ಪ್ರಾಧಾನ್ಯದಿಂದ ವ್ಯಂಗ್ಯವಾದರೆ ಭಾವಸಂಧಿ ಎನಿಸುತ್ತದೆ : ಭಿನ್ನಕಾರಣಗಳಿಂದ ಉಂಟಾದ ಎರಡು ಭಾವಗಳ ಮಿಲನ ಭಾವಸಂಧಿ (ಕಾರಪಿಡಿ. ೪೨೪); ಪರಸ್ಪರ ವಿರುದ್ಧವಾದ ಎರಡು ಭಾವಗಳು ಏಕಕಾಲದಲ್ಲಿ ಇದ್ದುವು ಎಂದು ವರ್ಣಿಸಿದರೆ ಅದಕ್ಕೆ ಭಾವಸಂಧಿಯೆಂದೂ. . . ಹೆಸರು (ಕೈಪಿಡಿ. ೩೦೪). [ ಸಂ. ]

**ಭಾವಸಂಧ್ಯಲಂಕಾರ** (ನಾ). [ಕಾವ್ಯಮಿ] ಒಂದು ಅಲಂಕಾರ; ಎರಡು ಭಾವಗಳ ಮೇಳನವು ತನ್ನ ಪ್ರಾಧಾನ್ಯವನ್ನು ಬಿಟ್ಟು ಮತ್ತೊಂದಕ್ಕೆ ಅಂಗವಾಗಿರುವುದು : ಪೆಱಪೆಱತಪ್ಪ ಭಾವಂಗಳ ಸಂಧಿ ಒಂದು ರಸಕ್ಕಾದೊಡಂ ಭಾವಕ್ಕಾದೊಡಮಂಗಮಾಗೆಯದು ಭಾವಸಂಧ್ಯಲಂಕಾರಂ (ಅಕ್ರತಿ. ೧೪೬-೧೩). [ ಸಂ. ]

**ಭಾವಸಂವರೆ** (ನಾ). [ಜೈನ]ಕರ್ಮಗಳನ್ನು ಉಂಟುಮಾಡುವ ಭಾವಗಳನ್ನು ತಡೆಯುವುದು; ಸಂಸಾರವನ್ನು ವರ್ಧಿಸುವ ಕ್ರಿಯೆಗಳನ್ನು ತಡೆಯುವುದು : ಕರ್ಮಸ್ಕಂದ ಪರಿಣಾಮಂ ತಗರಲ್ಕೆ ಕಾರಣಮಪ್ಪ ಪರಿಣಾಮಂ ಭಾವಸಂವರೆಯೆಂಬುದು (ಚಾಸ್ತಟೀ. ೧೪೪-೧). [ ಸಂ. ಭಾವಸಂವರ ]

**ಭಾವಸಮಾಧಿ** (ನಾ). ಮನಸ್ಸಿನ ಏಕಾಗ್ರತೆ ; ಏಕಾಗ್ರಚಿತ್ತದಿಂದ ಮಾಡುವ ಧ್ಯಾನ : ಕಾಯಸಮಾಧಿ ಕರಣಸಮಾಧಿ ಭಾವಸಮಾಧಿಯಾದ ಬಳಿಕ ಗುಹೇಶ್ವರಲಿಂಗದಲ್ಲಿ ಬಯಲುಭ್ರಮೆಯಳಿದು ಜ್ಞಾನಸಮಾಧಿಯನೆಯ್ದಬಲ್ಲಡೆ ಅದೇ ನಿಜಸಮಾಧಿ (ಅವಚಂ. ೧೯೨-೯೬೬). [ ಸಂ. ]

**ಭಾವಸಾರಾಯ** (ನಾ). ೧. ಭಾವದ ತಿರುಳು. ೨. (ಪರಮೇಶ್ವರನಲ್ಲಿ) ಚಿತ್ತವೃತ್ತಿಯುಳ್ಳ ವ್ಯಕ್ತಿ : ಭಾವಸಾರಾಯರ ಭಕ್ತಿಸಾರಾಯರ ತೋಱಿಯ್ಯಾ ನಿಮ್ಮ ಧರ್ಮ (ಬಸವ. ೩೦೩). [ಭಾವ$_2$ + ಸಾರಾಯ$_2$]

**ಭಾವಸೂಚಕಾವ್ಯಯ** (ನಾ). [ವ್ಯಾಕ] ಸುಖ, ದುಃಖ, ಸಂತೋಷ ಮೊದಲಾದ ಭಾವಗಳನ್ನು ಸೂಚಿಸುವ ಅವ್ಯಯ ; ಅಹಹ, ಅಯ್ಯೋ, ಭಲಾ ಮೊದಲಾದ ಉದ್ಗಾರ : ಆಶ್ಚರ್ಯ, ಸಂಭ್ರಮ, ಪ್ರಶ್ನೆ, ಸಂಶಯ ಮೊದಲಾದ ಮನಸ್ಸಿನ ಭಾವಗಳನ್ನು ತೋರಿಸುವ ಅವ್ಯಯಗಳಿಗೆ ಭಾವಸೂಚಕಾವ್ಯಯಗಳೆಂದು ಹೆಸರು (ಮರ್ಧಮ. ೧೩೬). [ ಸಂ. ]

**ಭಾವಸೂತಕ** (ನಾ). [ವೀಶೈ] ಭಾವಲಿಂಗೋಪಾಸನೆಗೆ ಪ್ರತಿಬಂಧಕವಾದ ಚಂಚಲಚಿತ್ತತ್ವವೇ ಮೊದಲಾದ ಮೈಲಿಗೆ.—ಅಡ್ಡಿ : ಮನಸ್ಸಿನ ಅನಧಿಕಾರತ್ವ : ಎನ್ನ ತನುಸೂತಕವ ಕಳೆದ ಬಸವಣ್ಣ. . . ಭಾವಸೂತಕವ ಕಳೆದ ಬಸವಣ್ಣ (ವಚಸಂ. ೩೮೨-೨೬). [ ಸಂ. ]

**ಭಾವಳಯ** (ನಾ). ಕಾಂತಿಯ ವಲಯ,-ವರ್ತುಲ : ಭಾವಳಯ ವಿಲಸಿತಾಶೋಕಮಂದಾರ ವರ್ಷಚ್ಛಾಯಾಚ್ಛನ್ನಾಂಗನಾದ್ಯಂ ತ್ರಿಭುವನ ವಿನುತಂ ನೇಮಿ ರಕ್ಷಿಕ್ಕೆ ನಮ್ಮಂ (ಅರ್ಣವೇ. ೧-೧). [ಸಂ. ಭಾವಲಯ]

**ಭಾವಾಜಿ** (ನಾ). ಭಾವನನ್ನು ಗೌರವದಿಂದ ಕರೆಯುವಾಗ ಅಥವಾ ನಿರ್ದೇಶಿಸುವಾಗ ಉಪಯೋಗಿಸುವ ಮಾತು : ಅಕ್ಕ ಭಾವಾಜಿಯಿಂದೆಮ್ಮ ಮನೆಗೆ ಬಂದು ಹೋಕ್ಕಾಗ ಗಿಳಿಯಿಂದ ನಾನು ಮಿಕ್ಕು ಸರಸವಾಡಿಸುವೆನೀಗ ಜಾಣ್ನುಡಿ ಲೆಕ್ಕದೋಱುವೆನು (ಶರಕ. ೯-೩೯); ನಮ್ಮ ಭಾವಾಜಿಯವರೂ ಸ್ವಲ್ಪ ಜೈನಸಂಪ್ರದಾಯದವರು (ಹೆಂಗಾಳ್ಕ. ೩). 'ಅಕ್ಕಾಜಿ', 'ಅಣ್ಣಾಜಿ' ಪರಾ. [< ಭಾವ$_1$ + -ಜಿ ]

**ಭಾವಾತಿರೇಕ** (ನಾ). ಮನಸ್ಸಿನ ಉದ್ರೇಕ; ಉದ್ವೇಗ; ಭಾವಗಳ ಉಜ್ಜ್ವಲತೆ: ಭಾವಾತಿರೇಕದಿಂದ ಅವರು ಬಿರುಸಾಗಿ ಮಾತನಾಡಿದರು (ಕೊಂ). [ಸಂ.]

**ಭಾವಾತ್ಮ** (ನಾ). ತತ್ತ್ವವಿಚಾರಗಳನ್ನು ತಿಳಿದವನು; ತತ್ತ್ವಜ್ಞ: ಜೀವಂ ಬೇಱೆ ಶರೀರಂ [ಭಾವಿ]ಸೆ ಬೇಱೆಂಬ ಪರಮತತ್ತ್ವಾರ್ಥವ ಸದ್ಭಾವ ವಿಚಾರಮನಱಿವಾ ಭಾವಾತ್ಮಂ ಮೆಯ್ಯನೋವನೇನಱಿದಪನೇ (ಸುಕುಮಾ. ೧೨–೨೬). [ಸಂ. ಭಾವಾತ್ಮನ್]

**ಭಾವಾತ್ಮಕ** (ನಾ). ಚಿತ್ತವೃತ್ತಿರೂಪವಾದುದು; ಭಾವಪ್ರಧಾನ ವಾದುದು: ಕಾವ್ಯಾತ್ಮಕವೆಂದರೆ ಭಾವಾತ್ಮಕ ಮತ್ತು ಕಲ್ಪನಾತ್ಮಕ ಎಂದು ನಮ್ಮ ಅರ್ಥ (ಸಾಹಿಶ್ರ. ೬೨). [ಸಂ.]

**ಭಾವಾನುಗುಣ** (ನಾ). ಮನಸ್ಸಿಗೆ ಅನುಸಾರವಾಗಿರುವುದು; ಅವರವರ ನಂಬಿಕೆಗೆ ಅನುಸಾರವಾಗಿರುವುದು; ಭಾವನೆಗೆ ತಕ್ಕಂತಿರುವುದು: ದೈವವು ಮಂತ್ರವು ತೀರ್ಥವು ವೈದ್ಯವು ದ್ವಿಜನು ದೈವಜ್ಞನು ಗುರುವು ಲೋಗರಿಗಿವು ದಿಟ ಸಿದ್ಧಿಯನೀವುವು ಆ ಸಿದ್ಧಿ ಭಾವಾನುಗುಣವು (ಇಂಜಾಕ. ೬೬–೬೬). [ಸಂ.]

**ಭಾವಾನುವಾದ** (ನಾ). ೧. ಕಾವ್ಯ ಅಥವಾ ಹಿಂದಿನ ಗ್ರಂಥದ ಭಾವವನ್ನು ಆಧುನಿಕ ಸರಳಗದ್ಯದಲ್ಲಿ ಬರೆಯುವುದು; ಗದ್ಯಾನುವಾದ: ಪರಿಷತ್ತು ಅನೇಕ ಹಳಗನ್ನಡಕಾವ್ಯಗಳನ್ನು ಭಾವಾನುವಾದದ ಸಮೇತ ಪ್ರಕಟಿಸಿದೆ (ಕೊಂ). ೨. ಒಂದು ಭಾಷೆಯ ಕಾವ್ಯ ಅಥವಾ ಯಾವುದೇ ಗ್ರಂಥದ ಭಾವವನ್ನು ಇನ್ನೊಂದು ಭಾಷೆಯಲ್ಲಿ ಬರೆಯುವುದು: ಈ ರೀತಿಯ ಭಾವಾನುವಾದ ಮಾಡುವಲ್ಲಿ ಮೂಲದ ವಸ್ತುವಿನ ರಸ, ಗುರಿ ಇವುಗಳಿಗೆ ಧಕ್ಕೆಯುಂಟಾಗದಿರುವುದು ಮುಖ್ಯ (ಜೀರಹೋ. xii, ೮೫೩); ಸಂಸ್ಕೃತಸಾಹಿತ್ಯದ ಅನೇಕ ಕೃತಿಗಳ ಭಾವಾನುವಾದ, ಛಾಯಾನುವಾದ ಮತ್ತು ಅನುವಾದಗಳೂ ಬಂದವು (ಭಾರರ. ೪೭೩). [ಸಂ.]

**ಭಾವಾನುಸಾರ** (ನಾ). ಭಾವನೆಗೆ ಅನುಸಾರವಾದುದು: ಅವಿದ್ಯೆಯು ದಿಟ್ಟಿಪರ ಭಾವಾನುಸಾರದಿ ತೋರುತಿಹಳು (ಗಗತಾ. ೦೪–೦೪). [ಸಂ.]

**ಭಾವಾಭಾಸ** (ನಾ). [ಕಾವ್ಯಮಿಾ] ಉಚಿತವಲ್ಲದ ಸ್ಥಾನವಲ್ಲಿ ಪ್ರವರ್ತಿಸುವ ಸಂಚಾರಿಭಾವ; P ಮುನಿಪತ್ನಿ, ಗುರುಪತ್ನಿಯರನ್ನು ಅಥವಾ ಒಲ್ಲದ ತರುಣಿಯರನ್ನು ಕಾಮಿಸಿ ಚಿಂತೆ, ದೈನ್ಯ ಮೊದಲಾದ ಚಿತ್ತವೃತ್ತಿಗಳನ್ನು ತಳೆಯುವಂತೆ ವರ್ಣಿಸುವುದು, ಸಾತ್ವಿಕರಾದ ಹಾಗೂ ಶಾಂತರಾಗಿರುವ ವ್ಯಕ್ತಿಗಳ ಮೇಲೆ ಬಲಪ್ರದರ್ಶನೋತ್ಸುಕ್ಯ, ಗುರುಗಳ ಮೇಲೆ ಉಗ್ರತೆ ಇವುಗಳು ಭಾವಾಭಾಸವೆನಿಸುತ್ತವೆ; ರಾವಣನು ಸೀತೆಗಾಗಿ ಸಂತಾಪಗೊಂಡಂತೆ ವರ್ಣಿಸುವಾಗ ಭಾವಾಭಾಸವಾಗುತ್ತದೆ. ಈ ಭಾವಾಭಾಸವು ಪ್ರಾಧಾನ್ಯದಿಂದ ಅಭಿವ್ಯಕ್ತವಾದರೆ ಭಾವಾಭಾಸಧ್ವನಿಯಾಗುತ್ತದೆ: ಭಾವವೂ ಅನೌಚಿತ್ಯದಿಂದ 'ಭಾವಾಭಾಸ' ವಾಗಬಹುದು (ಕೈಶಿಧ. ೨೦೪); ರಸ, ಭಾವ, ರಸಾಭಾವ, ಭಾವಾಭಾಸ, ಭಾವಶಾಂತಿ ಇವು ಎಂದೂ ವಾಚ್ಯವೇ ಅಲ್ಲ (ಧ್ವನ್ಯಾಲೋ. ೦೬); ಭಕ್ತಿಯೆಂಬುದೊಂದು ಉಚ್ಚತರಗತಿಯ ಭಾವಾಭಾಸ (Pathetic Fallacy)ವೆಂದು ತಿಳಿದಿದ್ದರೋ ತಿಳಿಯದು (ಸಾಹಿಧ. ೪೬). [ಸಂ.]

**ಭಾವಾಭಿನಯ** (ನಾ). ಮನಸ್ಸಿನ ಹರ್ಷ, ವಿಷಾದ ಮೊದಲಾದ ಚಿತ್ತವೃತ್ತಿಗಳನ್ನು ಕಣ್ಣಿನ ಚಲನೆ, ಮುಖವಿಕಾರ ಮೊದಲಾದ ಶಾರೀರಿಕಚೇಷ್ಟೆಗಳಿಂದ ಪ್ರದರ್ಶಿಸುವುದು: ಮನುಷ್ಯ ಹೃದಯದಲ್ಲಿನ ಭಾವೋನ್ಮೇಷಗಳನ್ನು . . . ಅಂಗವಿನ್ಯಾಸ ಭಾವಾಭಿನಯಗಳ ಮೂಲಕ ತೋರ್ಪಡಿಸುವುದನ್ನು ಕಲಿತ (ಭಾರತ. ೫೪೮). [ಸಂ.]

**ಭಾವಾಭಿವ್ಯಕ್ತಿ** (ನಾ). ಅಂತರಂಗದ ಆಶಯವನ್ನು ಪ್ರಕಾಶಪಡಿಸುವುದು: ತನ್ನ ಭಾವಾಭಿವ್ಯಕ್ತಿಗೆ ಸರಿಯಾದ ಪದ ಹೊಳೆಯಲಿಲ್ಲವಾದ್ದರಿಂದ ಅವನು ಕೋಪಾರೂಢನಾದನು (ಶೂದರು. ೪೨೩); ಶಿಲ್ಪಿಗೆ ಕಲ್ಲು. ವರ್ಣಶಿಲ್ಪಿಗೆ ಬಣ್ಣಕಾಗದ, ಕವಿಗೆ ಭಾಷೆ, ಇವೆಲ್ಲವೂ ಅವನ ಭಾವಾಭಿವ್ಯಕ್ತಿಯ ಮಾಧ್ಯಮಗಳು (ಸೌಂದಸ. ೬೨). [ಸಂ.]

**ಭಾವಾರ್ಥ** (ನಾ). ೧. ಕಾವ್ಯ ಮೊದಲಾದುವುಗಳ ತಾತ್ಪರ್ಯ; ಯಾವ ಉದ್ದೇಶವನ್ನಿಟ್ಟುಕೊಂಡು ಕವಿಯು ಪ್ರಯೋಗ ಮಾಡಿದ್ದಾನೋ ಆ ಉದ್ದೇಶ,—ಆಶಯ: ಸಮ್ಯಗ್ದರ್ಶನಾದಿ ಗುಣಾಧಾರ ನಿಜಶುದ್ಧಾತ್ಮಂ ಉಪಾದೇಯಮೆಂಬುದು ಭಾವಾರ್ಥಂ (ತತ್ತ್ವಸ್ತ್ರ. ೬); ಮುನ್ನ ತಾಂ ಬರೆಸಿ ಕಳುಹಿದ ಪತ್ರಮಂ ತರಿಸಿ ನೋಡಿಕೊಂಡದಱೊಳಿರ್ದ ಛಿನ್ನಿಸಿದ ಭಾವಾರ್ಥಮಂ ತಿಳಿದು (ಕೈಮಾಶಾ. ೩೦–೩೫). ೨. [ವ್ಯಾಕ]ಒಂದು ವಸ್ತುವಿನ ಭಾವವನ್ನಾಗಲಿ, ಧಾತ್ವರ್ಥವನ್ನಾಗಲಿ ತಿಳಿಸುವ ಅರ್ಥ: ಈ ಸಾಪೇಕ್ಷಕ್ರಿಯಾರೂಪಗಳಿಗೆ ಕಾಲಭೇದ ಅರ್ಥಭೇದಗಳು ಮಾತ್ರ ಉಂಟು. . . 'ಹೊರಟರೆ' ಎಂಬುದಕ್ಕೆ ಪಕ್ಷಾರ್ಥದ ರೂಪವೆಂದೂ, 'ಹೊರಡಲು' ಎಂಬುದಕ್ಕೆ ಭಾವಾರ್ಥದ ರೂಪವೆಂದೂ ಹೆಸರು (ಮುಧ್ಯಮ. ೬೫). [ಸಂ.]

**ಭಾವಾರ್ಪಿತ** (ನಾ). [ವೀಶೈ]ಮನಃಪೂರ್ವಕವಾಗಿ ಶಿವನಲ್ಲಿ ಸಮರ್ಪಣೆ ಮಾಡಲ್ಪಡುವುದು: ಶ್ರೇಷ್ಠವಾದ ಅವುದಾನೊಂದು ಪರಮಾತ್ಮಸ್ವರೂಪವಾದ ಶಿವಂಗೋಸುಗ ಮೊದಲಲ್ಲಿ ಸಮರ್ಪಿಸಲ್ಪಡುತ್ತಿಹುದು ಅದು ಭಾವಾರ್ಪಿತವೆಂದು ಇಚ್ಛೈಸಲ್ಪಡುತ್ತಿಹುದು (ಕೈವಬೀ. ೪೫). [ಸಂ.]

**ಭಾವಾವಿಷ್ಟ** (ನಾ). ಮನಸ್ಸಿನಲ್ಲಿ ಹುಟ್ಟುವ ಹರ್ಷ, ಶೋಕ ಮೊದಲಾದ ಭಾವಗಳಿಂದ ಪರವಶನಾದವನು; ಭಾವಪರವಶ: ಅವರು ಭಾವಾವಿಷ್ಟರಾಗಿ ಕೋಡುಗಲ್ಲಿನ ಬಳಿ ನಿಂತುಕೊಂಡು ನೋಡಿದರು (ರಾಕ್ಷೋದ. ೦೬೫); ಆಶುಬಾಬುಗಳು ಇದಕ್ಕೇನುತ್ತರ ಕೊಟ್ಟಾರು? ಅವರು ಭಾವಾವಿಷ್ಟರಾಗಿ ಕುಳಿತುಬಿಟ್ಟರು (ಶೇಶ್ರಕ್ಷ. ೨೬೦). [ಸಂ.]

**ಭಾವಾವೇಗ** (ನಾ). ಮನಸ್ಸಿನ ಭಾವಗಳ ಉತ್ಕಟತೆ,—ತೀವ್ರತೆ: ಆ ಭಾವಾವೇಗದ ಪರಿಣಾಮವಾಗಿ ಅವನ ಮುಖದ ಮೇಲೆ ನಗು ಹಸರಿಸಿತ್ತು (ಕೃವರು. ೨೦೦). [ಸಂ.]

**ಭಾವಾವೇಶ** (ನಾ). ಮನಸ್ಸಿನ ಭಾವದ ಉದ್ವೇಗ,—ಉದ್ರೇಕ: ಸನ್ನಿವೇಶ ಅಂಥ ಭಾವಾವೇಶವನ್ನು ಉಂಟುಮಾಡಿದ್ದರಿಂದ ಹಾಗೂ ಆಗಬಹುದು ಎಂದು ಸಮಾಧಾನಮಾಡಿಕೊಳ್ಳಬಹುದು (ಜೀರಹೋ. VIII, ಮುನ್ನುಡಿ); ಭಾವಾವೇಶದಲ್ಲಿ ಮುಳುಗಿದ್ದ ಅವನಿಗೆ ಬಾಹ್ಯಪ್ರಪಂಚದ ಅರಿವೇ ಇರಲಿಲ್ಲ (ಶೇಶ್ರಕ್ಷ. ೦೬೮); ವಿವಾದಗಳೆಲ್ಲ ನನಗಿರಲಿ ಎಂದು ಚಾಮುಂಡರಾಯ ಭಾವಾವೇಶದಿಂದ ಮಾತಾಡಿದನು (ದಾಪಹಂ. ೪೮). [ಸಂ.]

**ಭಾವಾಷ್ಟಕ** (ನಾ). [ತತ್ತ್ವಶಾ]ಸಾಂಖ್ಯಮತದಂತೆ ಬುದ್ಧಿಗೆ ಇರುವ ಎಂಟುಭಾವಗಳು: ಬುದ್ಧಿಗೇ ಸುಖ ದುಃಖ ಜ್ಞಾನ ಇಚ್ಛಾರಾಗ ದ್ವೇಷ ಮೊದಲಾದುವು; ಅದಕ್ಕೇನೆ ಪುಣ್ಯ ಪಾಪ ಸ್ವರ್ಗ ನರಕ ಬಂಧ ಮೋಕ್ಷ; ಇದರಲ್ಲೇ ಧರ್ಮ ಅಧರ್ಮ ಜ್ಞಾನ ಅಜ್ಞಾನ ಐಶ್ವರ್ಯ ಅನೈಶ್ವರ್ಯ ವೈರಾಗ್ಯ ಅವೈರಾಗ್ಯವೆಂಬ ಭಾವಾಷ್ಟಕವಿರುವುದು (ಹಿಂದಸಾ. ೫೯). [ಸಂ.]

**ಭಾವಿ₁** 'ಬಾವಿ' ನೋ.

**ಭಾವಿ₂** (ಗು). ೧. ಮುಂದೆ ಆಗುವ; ಅನಂತರ ಉಂಟಾಗುವ; ಮುಂದಿನ ಕಾಲದ: ಭಾವಿಭರತೇಶಪದಮುಮಿಳಾವಿಪುಳಪ್ರೇಮಭರಮುಮೆರ್ದೆಗೊಂಡಿರೆ ಸದ್ಭಾವದಿನಿಟ್ಟುದು ಬಂಧುಜನಾವಳಿ ಕೂಸಿಂಗೆ ಭರತನೆಂಬೀ ಪೆಸರಂ (ಆಂಪು. ೬–೩೭); ಆದಿಜಿನೇಶ್ವರಂ ಮೊದಲ ಚಕ್ರಿಗೆ ಭಾವಿಜಿನೇಂದ್ರಸಾಮತೀರ್ಥೋದಯಮಾಳಿಯಂ ಬೆಸಸೆ (ರಾಂಕಪು. ೦೦–೭೯); ಭಾವಿ ಉನ್ನತಿಗಾಗಿ ಶುಭಪ್ರಸಂಗಕ್ಕಾಗಿ . . . ಒಂದು ಮಾತು ಕೇಳ

ಬೇಕಾದ್ದರಿಂದ ಕೇಳಿದೆವು ಅಷ್ಟೆ (ಕುರುಕ್ಷಾ. ೧೨೫). (ನಾ). ೨. (ಕರ್ಮವಶದಿಂದ ಅಥವಾ ಕಾರಣಾಂತರದಿಂದ) ಆಗಿಯೇ ತೀರಬೇಕಾದುದು.–ನಡೆಯಲಿರುವುದು : ಭಾವಿಯೆನಿಸಿರ್ದ ಭೋಗದೊಳಾವುದು ನಿಶ್ಚಯಮತೀತಮದತೀತಮೆನಲ್ (ಶಂಧ್ರಪು. ೨-೩೬); ಭಾವಿಯೆನಿಸಿರ್ದುದದು ಪರಿಭಾವಿಸಿ ಕಳೆಯಲ್ಕೆ ಸಾಧ್ಯಮಾಗದು ಜಗದೊಳ್ (ರಾಜಶೇ. ೧೩-೧೧). ೩. ಭಾವನೆಯನ್ನು ಹೊಂದಿರುವವನು ; ಭಾವನೆಯುಳ್ಳವನು; ಭಾವಿಸುವವನು : ನಿನಗೆ ಮಜ್ಜನವ ಮಾಡುವಲ್ಲಿ ನಾನು ಮಲದೇಹಿ ನೀನು ನಿರ್ಮಲದೇಹಿ . . . ನಿನಗೆ ಧೂಪವನಿಕ್ಕುವಲ್ಲಿ ನಾ ಭಾವಿ ನೀ ನಿರ್ಭಾವಿ (ಪೋರ್ಪವಾ. ೩೬-೧೫೦); ಶೈವರೊಳು ಲಿಂಗಾವಧಾನದ ಭಾವಿಯಾದಡೆ ಪೊಲಬುಗೆಟ್ಟ ಮನೋವಿಕಾರದ ಮಾತುಗಳನಾಡಲಿಕುಚಿತವಹುದೆ (ಬಸವು. ೪೦-೨೬). ೪. [ವ್ಯಾಕ] ಮುಂದೆ ಬರುವ ಕಾಲ; ಭವಿಷ್ಯತ್ಕಾಲ: ನೆಗಟ್ಗಂ ಸಂಪ್ರತಿಗಂ ಭಾವಿಗಮನ್ನೆಗಮನ್ನಮಿನೆಗಮಿನಮೆಂಬಿವು ಸೂರಿಗಳಿಂ (ಶಮದ. ೨೪೭). [ಸಂ. ಭಾವಿನ್]

**ಭಾವಿಕ** (ಗು). ೧. ನೈಜವಾದ ; ಸ್ವಾಭಾವಿಕವಾದ ; ವಾಸ್ತವವಾದ. ೨. ಭಾವಾತಿರೇಕವುಳ್ಳ ; ಭಾವಪೂರ್ಣವಾದ ; ಭಾವಪ್ರಧಾನವಾದ. (ನಾ). ೩. ಒಳ್ಳೆಯದು; ಶುಭವಾದುದು; ಮಂಗಳಕರವಾದುದು : "ಶ್ವೋವಶೀಯಂ ಶಿವಂ ಶ್ವಶ್ರೇಯಸಂ ಶುಭಂ ಭಾವಿಕಂ ಮಂಗಳಂ ಭವ್ಯವಾ ಭದ್ರಂ . . . ಕಲ್ಯಾಣಮೆಂದೆನಲ್ಕೊಳ್ವತಕೆ ಪೆಸರೆನಿಕ್ಕುಂ" (ಮಂಗರಾ. ೮-೨೬). ೪. ಅರಿತವನು ; ತಿಳಿದವನು ; ಬಲ್ಲವನು : ರಾವಣನ ಮಗನಿವನು . . . ಶಸ್ತ್ರಾಸ್ತ್ರದಲಿ ಪರಿಣತನು ಭಾವಿಕನು ಕರಿತುರಗರಥದಲಿ (ತೊರಾ. ೨೬-೧೨); ಭಾವಿಕನೇ ಅವರ ಸ್ವರೂಪವನ್ನು ಬಲ್ಲನು. 'ಭಾವಿಕ ಬಲ್ಲನು ಅದರ ಹುಯಿಲಾ ! ಎಂದು ಕವಿಯು ಹೇಳುವನು (ಕಠಶ. ೨೨೦). ೫. [ಕಾವ್ಯಮೀ] ಪ್ರಬಂಧವನ್ನೆಲ್ಲ ವ್ಯಾಪಿಸುವ, ಹಿಂದಿನ ಮತ್ತು ಮುಂದಿನ ಸಂಗತಿಗಳನ್ನೆಲ್ಲ ಕಣ್ಣೆದುರಿಗೆ ಈಗ ನಡೆಯುವಂತೆ ವರ್ಣಿಸುವ ಒಂದು ಗುಣ : ಭಾವಮೆಂಬುದಕ್ಕುಂ ಕವಿಗಳಾ ಭಾವಿಸಿ ಮನದ ಬಗೆಯೊಂದಿದರ್ಥಂ ಕೇವಲಮದಱಿಂ[ಳ]ಲಂಕೃತಿ ಭಾವಿಕಮೆಂಬುದಕ್ಕುಂ ನೃಪತುಂಗದೇವಮತದಿಂ (ಕಂರಾ. ೩-೨೦೬) ; ಭಾವಿಕಮೆಂದರೆಬರ್ ಕವಿ ಭಾವಗತಾರ್ಥಮನೆ ತಾಮಲಂಕೃತಿಗಳೊಳುದ್ಭಾವಿಸಿ ಪೇಳ್ವರ್ ಶಕ್ತಿಸಮಾವಿರ್ಭೂತ ಪ್ರಬಂಧವಿಷಯಮದಕ್ಕುಂ (ಕಾವ್ಯಾವ. ೭೭೬); ಭಾವಿಕಮೆನಿಕುಂ ಸತ್ಕವಿಭಾವಗತಾರ್ಥಂ . . . ಕವಿಗಳ ಕಾವ್ಯಭಾವನೆಯೆ ಭಾವಿಕಮೆಂಬುದದುಂ ಪ್ರಬಂಧವಾಸ್ತವವಿಷಯಂ (ಉದಯಾ. ೬೪). ೬. ಅರ್ಥಾಲಂಕಾರಗಳಲ್ಲಿ ಒಂದು ; ಹಿಂದೆ ಅನುಭವಿಸಿದ ಅಥವಾ ಮುಂದೆ ನಡೆಯಬಹುದಾದ ವಿಷಯವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸುವುದು : ಒಂದೆ ಪೋದುದಂ ಮುಂತೆ ಬರ್ಪುದನಾವುದನಾದೊಡಮೊಂದು ರಸಾವೇಶದಿಂ ಪ್ರತ್ಯಕ್ಷದಂತೆ ಕಾಣ್ಬುದು ಭಾವಿಕಮೆನಿಪುದು (ಅಶ್ರತಿ. ೧೫೩-೨೩). 'ಭಾವಿಕಾಲಂಕಾರ' ಪರಾ. [ಸಂ.]

**ಭಾವಿಕತನ** (ನಾ). ಆಸ್ತಿಕತನ ; ಭಾವನೆಯ ಆಧಾರದ ಮೇಲೆ ಪರಲೋಕವಿದೆಯೆಂಬ ನಂಬಿಕೆ : ವೈಜ್ಞಾನಿಕಯುಗ ಉದಿಸುವ ಮುನ್ನ ಜನತಾಯುಗದಲ್ಲಿಯೇ ಮನುಷ್ಯನ ಭಾವಿಕತನ ಕೊನೆಗೊಂಡಿತ್ತು (ಕಾಲಯಾ. ೧೧೨). [ ಭಾವಿಕ + –ತನ ]

**ಭಾವಿಕತೆ** (ನಾ). = ಭಾವಿಕತನ : ತೀರ್ಥಪ್ರಸಾದರು ಮೊಗ್ಗಾವಿಗೆ ಬಂದಂದಿನಿಂದ ಅವರ ಭಾವಿಕತೆಗೆ ಸೀಮೆಯೇ ಇರಲಿಲ್ಲ (ಸಮಾಜೀ. ೪೦). [ ಸಂ. ಭಾವಿಕತಾ ]

**ಭಾವಿಕಾಲ** (ನಾ). ಭವಿಷ್ಯತ್ಕಾಲ ; ಮುಂದೆ ಬರುವ ಕಾಲ : ಭೂತವರ್ತಿ . . . ಆಖ್ಯಾತವಿಭಕ್ತಿಗಳಕ್ಕುಮತೀತಭವದ್ಭಾವಿಕಾಲವಿದ್ಯಾದಿಗಳೊಳ್ (ಕಾವ್ಯಾವ. ೩೭೪). [ ಸಂ. ]

**ಭಾವಿಕಾಲಂಕಾರ** (ನಾ). = ಭಾವಿಕ ೬ : ಭೂತಭಾವ್ಯಾರ್ಥಸಾಕ್ಷಾತ್ಕಾರ ಪೇಳೆ ಭಾವಿಕಾಲಂಕಾರ . . . ಭೂತ ಭಾವಿಕವಾದರ್ಥವನು ಸಾಕ್ಷಾತ್ಕಾರವಾಗಿ ಪೇಳಲ್ಕೆ ಭಾವಿಕಾಲಂಕಾರ (ಕುವಲ. ೧೭೯-೧) ; ಒಂದೆ ನಡೆದ ವೃತ್ತಾಂತಮನಾದೊಡಂ ಮುಂದಾಗುವ ವೃತ್ತಾಂತಮನಾದೊಡಂ ಈಗಳ್ ಪ್ರತ್ಯಕ್ಷವಾಗಿ ಕಾಣುವಂತೆ ಪೇಳ್ವುದೇ ಭಾವಿಕಾಲಂಕಾರಮಪ್ಪುದು (ಶಶಿ. ೩೦೯ ವೃತ್ತಿ). [ ಸಂ. ]

**ಭಾವಿಕೇವಲಿ** (ನಾ). [ಜೈನ] ಮುಂದೆ ಕೇವಲಿಯಾಗಲಿರುವವನು : ಸುಧರ್ಮಶ್ರುತಕೇವಳಿಗಳು ಜಂಬೂನಾಮ ಭಾವಿಕೇವಲಿ[ಗಳಾ. ೪]ಗಳ್ಗೆ ಪೇಳ್ದ ತ್ರಿಷಷ್ಟಿಲಕ್ಷಣಮಹಾಪುರಾಣದೊಳಾದಿಪುರಾಣಕಥಾನಿಬಂಧಂ (ಶಾವುಂಪು. ೯). [ ಸಂ. ಭಾವಿಕೇವಲಿನ್ ]

**ಭಾವಿತ** (ಗು). ೧. ಸೃಷ್ಟಿಸಿದ ; ಉಂಟುಮಾಡಿದ ; ಉತ್ಪಾದಿಸಿದ. ೨. ಪಡೆದ ; ಹೊಂದಿದ ; ಪ್ರಾಪ್ತವಾದ. ೩. ತೋರ್ಪಡಿಸಿದ ; ಪ್ರದರ್ಶಿಸಿದ. ೪. ಊಹಿಸಿದ; ಕಲ್ಪಿಸಿದ. ೫. ಒಪ್ಪಿರುವ ; ಅಂಗೀಕೃತ. ೬. ಚಿಂತಿಸಿದ; ವಿಚಾರಮಾಡಿದ; ಧ್ಯಾನಮಾಡಿದ. ೭. ಸ್ಫೂರ್ತಿಗೊಂಡ; ಉತ್ತೇಜಿತವಾದ. ೮. (ದ್ರವದಲ್ಲಿ) ನೆನೆಯಿಸಿದ; ನೆನೆಹಾಕಿದ. ೯. ಮಿಶ್ರಿತವಾದ; ಬೆರೆತ. ೧೦. ವಾಸನೆ ಕಟ್ಟಿದ; ಸುವಾಸಿತ. (ನಾ). ೧೧. ಪಡೆದುದು ; ಪ್ರಾಪ್ತವಾದುದು : "ಲಬ್ಧಂ, ಪ್ರಾಪ್ತಂ, ವಿನ್ನಂ, ಭಾವಿತಂ, ಆಸಾದಿತಂ, ಭೂತಂ – ೬ ಹೊಂದಲ್ಪಟ್ಟಿರುವುದು, ಪಡೆಯಲ್ಪಟ್ಟಿರುವುದು, ಆಗಿ ಬಂದಿರುವುದು" (ಸಿದ್ಧಾಂತಿ. ೩೫೦). ೧೨. ವಾಸನೆ ಕಟ್ಟಿದುದು ; ಸುವಾಸನೆಗೊಳಿಸಿದುದು: "ಭಾವಿತಂ, ವಾಸಿತಂ – ೨ ವಾಸನೇ ಕಟ್ಟಿದ ವಸ್ತುವಿನ ಪೆಸರುಗಳು" (ಸಿದ್ಧಾಂತಿ. ೨೦೯). ೧೩. [ಗಣಿತ] ಗುಣಾಕಾರ ಮಾಡಿ ಪಡೆದ ಸಂಖ್ಯೆ; ಗುಣಲಬ್ಧ. [ ಸಂ. ]

**ಭಾವಿತಾತ್ಮ** (ನಾ). ಸ್ಫೂರ್ತಿಗೊಂಡ ಮನಸ್ಸುಳ್ಳವನು ; ಪರಿಪಕ್ವವಾದ ಮನಸ್ಸುಳ್ಳವನು ; ವಿಚಾರಶೀಲ : ಅಂತು ಭಾವಿತಾತ್ಮನ ಧ್ಯಾತ್ಮವಿಶಾರದನಾಗಿ ಪರಮಾತ್ಮನೊಳ್ ಕೂಡಿದಂ (ಶಂಶರಾ. ೧೨-೫೫ ವ) ; ರಾಜರಾಜಂ ನದೀತನೂಜನಂ ಮಾಣಿಸಿ ನೀವಪ್ಪೊಡೆ ವಿದಿತವೇದಿತಜ್ಞರುಂ ಭಾವಿತಾತ್ಮರುಮಾಗಿರ್ದ ಜ್ಞಾನಿಗಳ್ ಅಂತೆ ನೆಗಟಿಲಾಗದೆಂದು ಅಱಿಪಿದೊಡೆ (ಗದಾಯು. ೫-೪೪ ವ) ; ದೃಢಚಿತ್ತನಾಗಿ ಭಾವಿಸಿದನೊ ಭಾವಿತಾತ್ಮನೆನೆ ಷೋಡಶಭಾವನೆಯಿಂ ಮುನೀಶ್ವರಂ (ಪುಣ್ಯಾ. ೧೧-೫೫). [ಸಂ. ಭಾವಿತಾತ್ಮನ್]

**ಭಾವಿಸು** (ಕ್ರಿ). ೧. ತಿಳಿ ; ಗೊತ್ತುಪಡಿಸಿಕೊಳ್ಳು : ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಳಯವಿಲೀನವಿಶದವಿಷಯವಿಶೇಷಂ (ಕವಿರಾ. ೧-೩೬) ; ತನ್ನ ಮನಮುಮನೆರ್ದೆಯುಮನುಱಿ ಸೆಱೆವಿಡಿದಿರ್ದಪೂರ್ವರೂಪೆಯ ರೂಪುಮಂ ಮನದೊಳೆ ಬಗೆದು ಭಾವಿಸಿ ಮತ್ತಮಿಂತೆಂದಂ (ಪಂಪಭಾ. ೪-೭೦ ವ) ; ಕನ್ಯೆಯದೊಂದು ಭಕ್ತಿಯಂ ಭಾವಿಸಿ ನೀನಿದಂ ನೃಪತಿ ಕೈಕೊಳವೇಳ್ಪುದು ರಾಜಕೀರಮಂ (ಕಾದಂಪೂ. ೫೬). ೨. ಆಲೋಚಿಸು ; ವಿಚಾರಮಾಡು : ಮಣಿಹಾರಂಬೋಲ್ ಸೊಗಯಿಸುವ ವಚನವಿರಚನೆ ನೆಗಟ್ಗಂ ಭಾವಿಸುವೊಡದಱಿ ಪೆಂಪತಿಸುಲಭಂ (ಕವಿರಾ. ೧-೧೩) ; ಆಗಮಮಂ ಪರಿವಿಡಿಗೆಯ್ಯುತ್ತುಮರ್ಥಮಂ ಭಾವಿಸುತ್ತುಂ (ವಡ್ಡಾರಾ. ೯೬-೩) ; ನೆಟ್ಟನೆ ಮನದೊಳ್ ಭಾವಿಪ್ಪೊಡಸಾರಮಿಾ ಸಂಸಾರಂ (ಅಜಪು. ೨-೬೬). ೩. ನೆನಪು ಮಾಡಿಕೊಳ್ಳು ; ಜ್ಞಾಪಿಸಿಕೊಳ್ಳು ; ಸ್ಮರಿಸು : ನಭೋಮಧ್ಯದೊಳಿರ್ದಾನಂದೆ ಪೇಱಿದ್ದೆನ್ನಯ ನುಡಿಯುನದು ಭಾವಿಸಂಭೋಜನೇತ್ರೇ (ಕಾದಂಬ. ೭೪೦) ; ತಿಂಗಳವರೆಕೆ ಬಹನೆಂಬ ಭಾಷೆಯುಮಂ ಭಾವಿಸುತೆ (ಶಬ್ದಾಂಗ. ೫೬-೧೫೩೪). ೪. ಧ್ಯಾನಿಸು ;

ಅನುಸಂಧಾನ ಮಾಡು : ಪೂಣ್ಕೆಯೊಳ್ಪಿಂದಮೋರಂತೆ ಭಾವಿಸಿ ತಾಂ ತನ್ಮಯನಾಗಿ ತಚ್ಚರಿತಮಂ ಕಾವ್ಯಂಗಳೊಳ್ಕೂಡೆ ಬಣ್ಣಿಸಿ ಪೇಳ್ವಾತನ ಕರ್ಮನಿರ್ಜರೆಯನಂಶಿಂತುಂತೆನಲ್ಬರ್ಕುಮೇ (ಆದಿಪು. ೦-೬೭) ; ಧರೆಯಂ ನೋಯಿಸದಿರ್ ಜಿನೇಶ್ವರಪದಾಂಭೋಜಾತಮಂ ಭಾವಿಸುತ್ತಿರು (ಧರ್ಮಾಮೃ. ೯-೨೭೦) ; ಚೌತಿಯ ದಿನದೊಳು ಬೆನಕನ ಭಾವಿಸೆ ನನ್ನ ಬಳಿಗೊಂದು ಮೂಷಿಕ ಧಾವಿಸೆ (ಗಣೇಶ. ೦-೦೭). ೫. ಗಮನವಿಡು ; ಲಕ್ಷ್ಯಕೊಡು ; ಆಸಕ್ತಿಯಿಡು : ಭೂವಲ್ಲಭಸೋತ್ಕಂಠವಭ್ರೂವಿಲಸಿತದತ್ತವಾಚನಾದೇಶಮಿದಂ ಭಾವಿಸಿಮೆಂದತಿಮಧುರೋದ್ಭಾವಿತಗಂಭೀರನಾದದಿಂ ಬಾಜಿಸಿದಂ (ಆದಿಪು. ೦೯-೯೭) ; ಕೊಳ್ ನಿನ್ನ ನಚ್ಚಿನ ಪಾಂಡವರ ತಲೆಗಳಿವೆಯೆಂದು ದುರ್ಯೋಧನನ ಮುಂದಿಕ್ಕಿದೊಡಾ ಮಹಾನುಭಾವನಾ ತಲೆಗಳಂ ನೀಡುಂ ಭಾವಿಸಿ ನೋಡಿ (ಗದಾಯು. ೯-೩೨ ವ) ; ಇರದದನಟ್ಟಿರಿಂದಡರೆ ಭಾವಿಸಿ ಭಾವಿಸಿ ನೋಡಿ ನೋಡಿ ಚಿಚ್ಚರಮವನೀತಳಂ ತನಗೆ ಸಾರ್ದಮೊಲೊರ್ಮೊದಲುಣ್ಮೆ ಪೊಣ್ಮೆದಂ (ಧರ್ಮಾಮೃ. ೬-೮೦). ೬. ಗೌರವಿಸು ; ಆದರಿಸು : ಕರ್ಪೂರಿಕೆಯು . . . ನರವಾಹನದತ್ತನನ್ನು ಸ್ನಾನಾದಿ ಉಪಚಾರಗಳಿಂದ ಭಾವಿಸಿದಳು (ಕಸಂ. ೧೩೧). ೭. ಮಾಡು; ರಚಿಸು; ನಿರ್ಮಿಸು : ಕರಿಯ ನೆಯ್ದಿಲ ಕಾವಿನೊಳ್ ಭಾವಿಸಿದ ನೂಪುರಮುಮಂ . . . ಕೊಟ್ಟು (ಕಂಕಣ. ೫-೬ ವ) ; ಬೆಳಗುವ ಕನ್ನಡಿಯ ಶೀವ್ರುವ ಕಳಶದ ಭಾವಿಸುವ ಬಣ್ಣಪುರದ . . . ಕೋಳಾಹಳಮೆಸೆಯೆ (ಅಪಂಪು. ೯-೫೯ ವ). ೮. ವಾಸನೆ ಕಟ್ಟು ; ಭಾವನೆ ಕೊಡು : ವಿಳಾಸಿನೀಕಬರಿಕಾಬಂಧಂಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು (ಕಂಕಣ. ೪-೮೦) ; ಹಿಮರೋಚಿಃ-ಕಳಿಕಾಕದಂಬಕಮನಿಂಬಿಂ ತಿರ್ದಿ ಮೇಳೈಸಿ ಕುಂಕುಮದಿಂ ಭಾವಿಸಿ (ಅಪಂಪು. ೯-೦೯). ೯. ನೆನೆಯಿಸು ; ನೆನೆಹಾಕು : ಅರೆದಜಮೂತ್ರದೊಳೊಂದಿರೆ ಸುರದಾರುಮನೆಚ್ಚದಂದು ಮೇಣೇಳುದಿನಂ ಸುರಭಿಯ ಜಳದೊಳ್ ಭಾವಿಸಿ ಹರೀತಕಿಯನೆಚ್ಚೊಡಂದಣಂಗಳ್ ಕಿಡುಗುಂ (ಲೋಕೋಪ. ೯-೬೫) ; ಮಾವಿನ ಬಿತ್ತಿಳೆಯ ಕರಿಕೆ ಶರ್ಕರೆಯಿನಿತಂ ಭಾವಿಸುವುದಕ್ಕಿಗಚ್ಚಿಂ (ಕಲ್ಯಾಣ. ೫-೦೩).

[ (ಸಂ. ಭಾವನಾ) + — ಇಸು₃ ]

**ಭಾವು** (ನಾ). (ಉಕ) ಬಂಧು ; ಭ್ರಾತೃ ; ಅಣ್ಣ ಅಥವಾ ತಮ್ಮ : ಭಾವು, ಭಾವೂರಾಯ ರಾಮಾ ! ಏಕೆ ಓಗೊಡಲಾರೆಯೋ ? (ಹಾರುಜಾ. ೫೫-೦೬). 'ಭಾವೂರಾಯ' ಪರಾ.

[ ← ಮರಾ. ಭಾಉ, ಭಾವೂ. /ಸಂ. ಭ್ರಾತೃ. /ಪ್ರಾ. ಭಾಉ]

**ಭಾವುಕ** (ಗು). ೧. ಆಗುವ ; ಇರುವ. ೨. ರಸಾಸ್ವಾದನೆ ಮಾಡಬಲ್ಲ ; ರಸಿಕನಾದ : ಸಹೃದಯನಾದ ; ರಸಜ್ಞನಾದ. ೩. ಆತ್ಮೀಯವಾದ ; ಪ್ರೀತಿಪೂರ್ವಕವಾದ ; ಹಾರ್ದಿಕವಾದ: ಅಂತಹ ಒಂದು ಭಾವುಕಪ್ರೇಮ ತನ್ನ ಮತ್ತು ಇಂದುಮತಿಯಲ್ಲಿ ಇದೆ (ಅಶಪಾ. ೨೯೫). ೪. ಸುಖಕರವಾದ ; ಒಳ್ಳೆಯ ; ಮಂಗಳಕರವಾದ. (ನಾ). ೫. ಮಂಗಳ ; ಶುಭ ; ಶ್ರೇಯಸ್ಸು : "ಶ್ವಃ(ಸ್ವ)ಶ್ರೇಯಸಂ, ಕಲ್ಯಾಣಂ, ಶ್ವೋವಶೀಯಂ, ಶಿವಂ, ಶುಭಂ, ಭವಿಕಂ, ಭಾವುಕಂ, ಶ್ರೇಯಃ, ಭವ್ಯಂ ಭದ್ರಂ, ಮಂಗಳಂ — ಈ ೧೧ ಒಳ್ಪಿತರ್ಕೆ ಪೆಸರ್" (ಹಲಾಯು. ೨೦-೦೨೨); "ಶ್ವಶ್ಶ್ರೇಯಸಂ . . . ಭಾವುಕಂ, ಭವುಕಂ, ಭವ್ಯಂ, ಕುಶಲಂ, ಕ್ಷೇಮಂ, ಶಸ್ತಂ— ಈ ೧೨ ಶುಭದ ಪೆಸರುಗಳು" (ನಿಘಂಟು. ೪೨). ೬. ರಸಿಕ; ಸಹೃದಯ; ರಸಜ್ಞ : ಪ್ರಕಟತರಂ ಶಬ್ದಂ ಶಾಬ್ದಿಕಸಮ್ಮತಮರ್ಥದೃಷ್ಟಿ ಮನಃಕೌತುಕಜನಕಂ ಭಾವಂ ಭಾವುಕಭಾವ್ಯಂ ಕಾವ್ಯತತಿಯೊಳಗ್ಗಳ ನಿನ್ನಾ (ಚಂದ್ರಪ್ರ. ೦-೩೮); ಬಲ್ಲವರು ಭಾವುಕರು ಭಕ್ತಿಯ ಬಲ್ಲಿದರು ಲಾಲಿಸುವುದೀ ಪ್ರಭುಲಿಂಗಲೀಲೆಯುಲಿ (ಪ್ರಭುಲೀ. ೦-೮). ೭. ಸಂಪ್ರದಾಯ ಶ್ರದ್ಧೆಯುಳ್ಳ ವ್ಯಕ್ತಿ: ಅಳಲಿನ ಬೆನ್ನ ಮೇಲೆ ಮೂರು ಗೆರೆಗಳು ಬಂದಿವೆಯೆಂದು ಭಾವುಕರು ನಂಬುತ್ತಾರೆ (ಕರ್ನಾಟ. I, ೬-೩೯); ಭಾವುಕರ ಪಾಲಿಗೆ ಯವನರು ಕಲಿಯುಗದಲ್ಲಿ ಹುಟ್ಟಿದ ರಾಕ್ಷಸಸಂತಾನವೇ ಆಗಿದ್ದರು (ರಾಷ್ಟ್ರೋದ. ೨); ತುಂಬ ಭಕ್ತರೂ ಭಾವುಕರೂ ಇರುವ ನಾಡಿನಲ್ಲಿ ಒಂಟಿಒಂಟಿಯಾಗಿ ಯಾತ್ರೆ ಮಾಡಲಾರದ ಜನರು . . . ಯಾತ್ರಾಸ್ಪೆಶಲ್ ಬಂಡಿಗಳನ್ನು ನುಗ್ಗುತ್ತಾರೆ (ಅಳಿ. ೨). ೮. ಅಕ್ಕ ಅಥವಾ ತಂಗಿಯ ಗಂಡ ; ಭಾವ : "ಒಡಹುಟ್ಟಿದಳ ಮದವನಂ ಭಾವುಕನೆಂಬುದು" (ಹಲಾಯು. ೦೬-೯೯). [ಸಂ.]

**ಭಾವುಕತೆ** (ನಾ). ಭಾವನಾಮಯತೆ : ಮತ್ತಿನ್ನೇನು ? ಭಾವುಕತೆಗೂ ವಿಚಾರಕ್ಕೂ ನಡೆಯುವ ಸಂಘರ್ಷಣೆ (ದೂರಸ. ೨೮); ರೂಪಚಂದನು . . . ಭಾವುಕತೆಯಿಂದ ಎಲ್ಲ ಕೆಲಸಗಳನ್ನು ಮಾಡುತ್ತಿದ್ದ (ಜಬಾಪಾ. ೦೩೦).

[ಸಂ. ಭಾವುಕತಾ]

**ಭಾವುಕಸಾಹಿತ್ಯ** (ನಾ). ರಸಪ್ರಧಾನವಾದ ಸಾಹಿತ್ಯ ; ಕೇವಲ ಆನಂದವನ್ನುಂಟುಮಾಡುವ ಸಾಹಿತ್ಯ : ಮಹಾಯುದ್ಧದಿಂದಾದ . . . ರಾಷ್ಟ್ರೀಯಜಾಗೃತಿಗಳಿಂದಾಗಿ ಭಾವುಕಸಾಹಿತ್ಯಸೃಷ್ಟಿಗಿಂತ ಜನಜಾಗೃತಿಯುಂಟುಮಾಡುವ ಸಾಹಿತ್ಯಸೃಷ್ಟಿ ಅಗತ್ಯವೆಂಬ ಮನೋಭಾವ ಸಾಹಿತಿಗಳಲ್ಲಿ ಉಂಟಾಯಿತು (ಶಾರದ. ೯೬೮). [ಸಂ.]

**ಭಾವುಕಿ** (ನಾ). ಸಹೃದಯವುಳ್ಳವಳು; ರಸಜ್ಞೆ : ವಾಸುದೇವನನ್ನು ಹಡೆದ ವಸುದೇವನ ದೇವಕಿ ಭಗವಂತನ ಲೀಲೆಗಾಗಿ ದೇಹವೆತ್ತ ಭಾವುಕಿ (ಅರಗು. ೨೯೮-೬). [ಭಾವುಕ + —ಇ₂]

**ಭಾವುಕೆ** (ನಾ). = ಭಾವುಕಿ : ಭಾವುಕೆ ನೀಂ ಪೇಟ್ದಂದದಿನಾ ವನದೊಳಗಿರ್ದನಂ ತದುರ್ವಿಪಸಚಿವಂ ಪಾವನಚರಿತಂ ಬರಲೆಲ್ಲಾ ವಿವರಮನಱಿದೆಂ (ಅನ್ನಬಿ. ೭-೩೨). [ಭಾವುಕ + —ಎ₂]

**ಭಾವೂರಾಯ** (ನಾ). (ಉಕ) ಪ್ರೀತಿಯಿಂದ ಕರೆಯುವಾಗ ಬಳಸುವ ಶಬ್ದ ; ಬಂಧು ; ಅಣ್ಣ ಅಥವಾ ತಮ್ಮ : ಭಾವು ಭಾವೂರಾಯ ! ಏಕೆ ಓಗೊಡಲಾರೆಯೋ ? (ಹಾರುಜಾ. ೫೫-೦೬). [ < ಭಾವು + ರಾಯ]

**ಭಾವೆ** (ನಾ). ೧. ಚೆಲುವೆಯಾದ ಹೆಣ್ಣು ; ಸುಂದರಸ್ತ್ರೀ : ಭಾವೆ ಭಾವಿತನೂಭವಾನುಕ್ರಮ ಪ್ರಭವಭಾವಂಗಳಂ ಭಾವಿಸಿ ಪಲುಂಬಿ ಪಂಬಲಿಸಿಯುಂ (ಚಂದ್ರಪ್ರ. ೩-೫೦ ವ); ಭಾವೆ ನೂಕದಿರೆನ್ನ ವರರಾಜೀವಮುಖಿ ಕೃಪೆಮಾಡು (ಕುಮಾರ. ೨-೨೭); ಬಟ್ಟ ಬಲ್ಮೊಲೆಯ ಭಾವೆಯರಾಯತಿವೆತ್ತು ಪಟ್ಟಣದಿಂ ಪೊಱಮಟ್ಟು (ಮೋಹತ. ೫-೨೯); ದೇವದುಂದುಭಿಮೊಳಗೆ ಸ್ವರ್ಗದ ಭಾವೆಯರು ನರ್ತಿಸಲು (ಕೋಗಯು. ೨೭-೯೮). ೨. [ಕಾವ್ಯಮೀ] ಚಿತ್ರಕಾವ್ಯಕ್ಕೆ ಸೇರಿದ ಪ್ರಹೇಳಿಕೆಗಳಲ್ಲಿ ಒಂದು : ಭಾವೆಯುಂ ಸುಸುಳಂ . . . ಕೇವಲಮವಱ ಭೇದಮಂ ಸುಸಮಸ್ತೀಮಂ . . . ಅವಯವದೇಕೆ ಕಳೆಯವೇಟ್ದಿಂ ಪ್ರಿಯೆಯಂ (ಕವಿರಾ. ೨-೦೯೯).

[< ಸಂ. ಭಾಮಾ]

**ಭಾವೇಂದ್ರಿಯ** (ನಾ). [ಜೈನ] ದ್ರವ್ಯೇಂದ್ರಿಯ ಮತ್ತು ಭಾವೇಂದ್ರಿಯ ಎಂಬ ಎರಡು ಬಗೆಯ ಇಂದ್ರಿಯಗಳಲ್ಲಿ ಒಂದು; P ಇದರಲ್ಲಿ ಎರಡು ವಿಧ: "ಲಬ್ಧಿ ಮತ್ತು ಉಪಯೋಗ (ಜ್ಞಾನಾವರಣೀಯಕರ್ಮದ ಕ್ಷಯೋಪಶಮವಿಶೇಷ ಮತ್ತು ಆತ್ಮನಂ ದ್ರವ್ಯೇಂದ್ರಿಯದಿಂದಾಗಿರುವ ನಿರ್ವೃತ್ತಿಯ ಕಡೆಗೆ ಪ್ರವರ್ತಿತನಾದಾಗ ಅದರಿಂದಾಗುವ ಆತ್ಮನ ಪರಿಣಾಮ)" (ಜೈನಕೋ. ೦೯೩) : ದ್ರವ್ಯೇಂದ್ರಿಯಮುಂ ಭಾವೇಂದ್ರಿಯಮುಂ ಎಂದಿಂತು ಇಂದ್ರಿಯಂಗಳೆರಡು (ತತ್ತ್ವಸೂ. ೯೬) ; ಮತಿಜ್ಞಾನಾವರಣಕರ್ಮವು ಕಡಿಮೆ ಆದಂತೆ ಆತ್ಮನಲ್ಲಿ ಉಂಟಾಗುವ ವಿಶುದ್ಧಿಗೆ ಈ ವಿಶೆ ಷಶುದ್ಧಿಯಿಂದ ಉತ್ಪನ್ನವಾಗುವ ಉಪಯೋಗಾತ್ಮಕ ಜ್ಞಾನಕ್ಕೆ ಭಾವೇಂದ್ರಿಯವೆಂದು ಕರೆಯಲಾಗುತ್ತದೆ (ಜೈಪಶ. ೨೯೫). [ಸಂ.]

**ಭಾವೋದಯ** (ನಾ). ೧. ಸುಖ, ದುಃಖ ಮೊದಲಾದ ಭಾವಗಳ ಉತ್ಪತ್ತಿ,-ಹುಟ್ಟು. ೨. [ಕಾವ್ಯಮೀ] ಧ್ವನಿಯಲ್ಲಿ ಒಂದು ಭೇದ ;

ಯಾವುದಾದರೂ ಒಂದು ಸಂಚಾರಿಭಾವವು ಹೊಸದಾಗಿ ಹುಟ್ಟಿ ಅದು ಕಾವ್ಯದಲ್ಲಿ ಪ್ರಧಾನವಾಗಿ ವ್ಯಂಗ್ಯವಾಗಿ ತೋರುವುದು : ಆಸ್ವಾದ್ಯವಾಗುವ ಭಾವದಲ್ಲಿ ಆಲಂಕಾರಿಕರು—ಭಾವೋದಯ, ಭಾವಶಾಂತಿ ಭಾವಸಂಧಿ, ಭಾವಶಬಲತೆ ಎಂಬ ನಾಲ್ಕು ದಶೆಗಳನ್ನು ವಿಂಗಡಿಸುತ್ತಾರೆ . . . ಹೊಸದಾಗಿ ಒಂದು ಭಾವ ಉದಿಸುವುದೇ ಭಾವೋದಯ (ಕಾರಲಾ. ೯೨೩); ಒಂದು ಭಾವವು . . . ಹೊಸದಾಗಿ ಹುಟ್ಟಿತು ಎಂದು ವರ್ಣಿಸಿದರೆ ಅದಕ್ಕೆ 'ಭಾವೋದಯ'ವೆಂದೂ . . . ಹೆಸರು (ಕ್ವಲಾ. ೨೦೯). ೩. ಒಂದು ಅಲಂಕಾರ ; ಹೊಸದಾಗಿ ಹುಟ್ಟುವ ಒಂದು ಭಾವವು ರಸಕ್ಕಾಗಲಿ, ಭಾವಕ್ಕಾಗಲಿ ಅಂಗವಾಗುವುದು : ಒಂದು ರಸಕ್ಕಾದೊಡಂ ಭಾವಕ್ಕಾದೊಡಂ ಭಾವೋದಯಮಂಗಮಾಗೆಯುದು ಭಾವೋದಯಾಲಂಕಾರಮೆನಿಪುದು (ಅಶ್ರತಿ. ೦೯೯-೨೧). [ಸಂ.]

**ಭಾವೋದ್ದೀಪನ** (ನಾ). ಮನಸ್ಸಿನ ಭಾವನೆಗಳನ್ನು ಉಜ್ಜ್ವಲಗೊಳಿಸುವುದು,– ತೀವ್ರಗೊಳಿಸುವುದು : ಇಲ್ಲಿ 'ಭಾವ' ವಾಸ್ತವವಾಗಿಯೂ ಲೋಕಭಾವದ ಅತಿಶಯದ ರೂಪವಲ್ಲದಿದ್ದ ಪಕ್ಷದಲ್ಲಿ ಅದಕ್ಕೆ ಹೃದಯಸ್ಥ ಭಾವೋದ್ದೀಪನಶಕ್ತಿ ಬರಲು ಸಾಧ್ಯವಾಗುತ್ತಿರಲಿಲ್ಲ (ಶಾಂತಸ. ೭೯). [ಸಂ.]

**ಭಾವೋದ್ಭವ** (ನಾ). ೧. ಮನಸ್ಸಿನಲ್ಲಿ ಹುಟ್ಟಿದವನು ; ಮನಸಿಜ ; ಕಾಮ ; ಮನ್ಮಥ : ನವಯೌವನದೊಳ್ಗುಣದೋಷವಿಚಾರಮನಿಂತು ಮಾಡಲೀಯದ ಭಾವೋದ್ಭವನಿಂ ಪರವಶೆಯಾದೆಂ (ಕಾದಂಪೂ. ೭೯೩); ಕುಸುಮಾಸ್ತ್ರಾವಳಿಯಿಂದೋಲೈಸಿದ ಭಾವೋದ್ಭವನೀಗೆ ನಮಗೆ ಸುಖಸಂಪದಮಂ (ಮದಕ ೧-೧): ಅವರ್ಗ್ಗಗ್ರಸೂನು ಭಾವೋದ್ಭವಮೂರ್ತ್ತಿ ಸುಧಾಂಶುವಿಶದಕೀರ್ತ್ತಿ ಜಯಶ್ರೀದೇವಂ. . . ಸಗರಮಾರ್ತ್ತಣ್ಡನೃಪಂ (ಶಾಇತ. XX. ೯೭-೦೬ ; 1074). ೨. ತನ್ನ ಇಚ್ಛೆಯಿಂದಲೇ ಹುಟ್ಟಿರುವವನು ; ಸ್ವಯಂಭೂ ; ಬ್ರಹ್ಮ ; ವಿಧಿ : ಮರಣಂ ಲಗ್ನಭವಂಗೆ ಸಂಭವಿಸುಗುಂ ಭಾವೋದ್ಭವಂ ಕಾವೊಡಂ (ಜಾತಿ. ೬-೦೨). [ಸಂ.]

**ಭಾವೋದ್ವಿಗ್ನತೆ** (ನಾ). ಮನಸ್ಸಿನ ಕಳವಳ,–ವ್ಯಾಕುಲತೆ : ಮಾಸ್ಲೋವ ಅವನ ಭಾವೋದ್ವಿಗ್ನತೆಯನ್ನು ಗಮನಿಸಿ, ಅವನನ್ನು ಗುರುತಿಸಿದಳು (ತ್ವರು. ೦೯೦). [ಸಂ. ಭಾವೋದ್ವಿಗ್ನತಾ]

**ಭಾವೋನ್ಮತ್ತ** (ನಾ). ಭಾವನೆಯಲ್ಲಿ ಪರವಶನಾದವನು: ಕವಿ ಉನ್ಮತ್ತ! ಭಾವೋನ್ಮತ್ತ ! (ಅಶೇ. ೯೯-೦೦). [ಸಂ.]

**ಭಾವೋನ್ಮೇಷ** (ನಾ). ಭಾವನೆಗಳು ಹೊರಹೊಮ್ಮುವಿಕೆ : ಮನುಷ್ಯ ಹೃದಯದಲ್ಲಿನ ಭಾವೋನ್ಮೇಷಗಳನ್ನು . . . ಅಂಗವಿನ್ಯಾಸ ಭಾವಾಭಿನಯಗಳ ಮೂಲಕ ತೋರ್ಪಡಿಸುವುದನ್ನು ಕಲಿತ (ಕಾರರ. ೩೯೬). [ಸಂ.]

**ಭಾವ್ಯ** (ಗು). ೧. ಜರುಗಲಿರುವ ; ನಡೆಯಲಿರುವ. ೨. ಯೋಚಿಸಲು ತಕ್ಕುದಾದ; ಊಹಿಸಲು ಯೋಗ್ಯವಾದ. (ನಾ). ೩. ಆಗತಕ್ಕುದು; ಆಗಬೇಕಾದುದು : ಸುಸ್ಥಿರಂ ಶ್ರೀವಿಭವಂ ಜೀವಕ್ಕೆ ಸಮನಿಕುಂ ಯದ್ಭಾವ್ಯಂ ತದ್ಭವತಿಯೆಂಬ ನುಡಿಯುಳ್ಳುದಱಿಂ (ಪಾರ್ಶ್ವ. ೬-೭). ೪. ಸವಿಯಲ್ಪಡತಕ್ಕುದು ; ಆಸ್ವಾದ್ಯವಾದುದು : ಭಾವಂ ಭಾವುಕ ಭಾವ್ಯಂ ಕಾವ್ಯತತಿಯೊಳಗ್ಗಳ ನಿನ್ನಾ (ಕಂಪ್ರತ. ೦-೩೬) ; ರಾಮಾಯಣ ಕಾವ್ಯವು ಅಜರ ಅಮರ ಧರೆಯೊಳು ಬಹುಭಾವ್ಯವು! (ಶ್ರೀಂತರ್. ೪೯-೦೯). ೫. [ಕಾವ್ಯವಿ] ಪ್ರಹೇಳಿಕೆಗಳಲ್ಲಿ ಒಂದು ವಿಧ : ನುಸುಳೊರ್ನುಡಿ ಭಾವ್ಯ [ಪಾಕಾ. ಮೆ] ಮನಕ್ಕೆಸೆವ ಸ್ಪಷ್ಟಾರ್ಥಮುಟೀವು ನಾಮಾಂತರಿತಂ ಕುಸುರಿಯ ನುಡಿಯೆಂಬಿವು ಭಾವಿಸೆ ಪೇಳಿಕೆಗಳೊಳೆ ಪೇಟ್ವ ಭೇದಮಾಪಕ್ಕಂ (ಕಾವ್ಯಾವ. ೩೯೯). [ಸಂ.]

**ಭಾಷಣ** (ನಾ). ೧. (ಸಭೆ ಮೊದಲಾದ ಕಡೆಗಳಲ್ಲಿ) ಮಾತನಾಡುವುದು ; ಉಪನ್ಯಾಸ : ವೇದಿಕೆಯ ಮೇಲೆ ನಿಂತು ಭಾಷಣ ಮಾಡಲು ನನಗೆ ಸುಸಮಯ ಕೊಟ್ಟಿದ್ದಕ್ಕಾಗಿ . . . ವಂದನೆಗಳನ್ನರ್ಪಿಸುತ್ತೇನೆ (ರಾಯು೪. ೯೩) ; "ಶ್ರೀ" ಯವರನ್ನು ಸ್ಮರಿಸಿಕೊಂಡಾಗ ಭಾಷಣದ ಸ್ವರೂಪ . . . ಬೋಧೆಯಾಗಿ, ನನ್ನ ಸಂದೇಹ ಶಿಥಿಲವಾಗುತ್ತದೆ (೪೭ಜಾ. XIV, ೬೭೦೪). ೨. ಮಾತು ; ಉಕ್ತಿ ; ಸಲ್ಲಾಪ ; ಸಂಭಾಷಣೆ : "ಮಿಥಃ, ಭಾಷಣಂ_ಪ್ರೀತಿಯಿಂದ ಅನ್ಯೋನ್ಯವಾಗಿ ಮಾತಾಡುವುದಕ್ಕೆ ಹೆಸರು" (ಸಿದ್ಧಾಂತಿ. ೩೯). [ಸಂ.]

**ಭಾಷಣಕಲೆ** (ನಾ). (ಸಭೆ ಮುಂತಾದ ಕಡೆಗಳಲ್ಲಿ) ಮಾತನಾಡುವ ಜಾಣ್ಮೆ,– ಚಾತುರ್ಯ : ಬಾಷಣಕಲೆ ಎಲ್ಲ ಭಾಷಣಕಾರರಿಗೂ ಸಿದ್ಧಿಸಿರುವುದಿಲ್ಲ (ಕೂಎ). [ಸಂ. ಭಾಷಣಕಲಾ]

**ಭಾಷಣಕಾರ** (ನಾ). ಭಾಷಣ ಮಾಡುವವನು ; ಉಪನ್ಯಾಸಕ : ಸಭಾಂಗಣದ ಮಧ್ಯೆ ಭಾಷಣಕಾರರಿಗಾಗಿ ತೋಳುಳ್ಳ ಕುರ್ಚಿಯೊಂದನ್ನಿರಿಸಲಾಗಿತ್ತು (ಕುಹು. ೪೯೩) ; ಅವನು ಭಾಷಣಕಾರರಂತೆ ಒಂದೇ ರಾಗದಲ್ಲಿ ಬೇಸರ ಬರುವಂತೆ ಹೇಳುತ್ತಿದ್ದಾಗ (ಕಾಲಮ. ೮೨). [ಸಂ.]

**ಭಾಷಾಂಗ** (ನಾ). [ಸಂಗೀತ] ರಾಗಗಳಲ್ಲಿ ಒಂದು ಪ್ರಭೇದ : ಲಿಂಗವ ಸೋಂಕಿದ ಮನಕ್ಕೆ ಲಿಂಗಾಭಿಮಾನವಾವುದೆಂದಡೆ ಶೇಷನ ಅವಸಾನದಂತಿರಬೇಕು ತ್ರಾಸಿನ ವಾಸದ ಭಾಷಾಂಗದಂತಿರಬೇಕು (ಮೋಳಿಮಾ. ೦೬೬-೭೦೩) ; ಸರಸಭಾಷಾಂಗಕ್ರಿಯಾಂಗೋತ್ಕರದ ನಾಟಕ ಗದ್ಯ ಪದ್ಯ ವಿಸರ ಮಧುರಗೀತೋಕ್ತಿಯಿಂ . . . ಸಿರಿಯಾಳಚರಿತೆಯನೊರೆದೊರೆದು ವಿರಚಿಪರು ಭಕ್ತಸಭಾಂತರಂಗಳೊಳು (ಬಸಪು. ೨೩-೨೦) ; ಭಾಷಾಂಗರಾಗ – ಜನಕರಾಗಗಳಲ್ಲಿಲ್ಲದ ಅನ್ಯಸ್ವರಗಳನ್ನು ತಮ್ಮ ಆರೋಹಣದಲ್ಲಾಗಲೀ, ಅವರೋಹಣದಲ್ಲಾಗಲೀ ಅಥವಾ ವಿಶೇಷ ಪ್ರಯೋಗಗಳಲ್ಲಾಗಲಿ ಹೊಂದುವ ರಾಗಗಳು (ಸಂಗೀಶಂ. ೪೪). [ಸಂ.]

**ಭಾಷಾಂಗಕಾಪಿ** (ನಾ). [ಸಂಗೀತ] ಒಂದು ರಾಗದ ಹೆಸರು : ಕರ್ನಾಟಕಸಂಗೀತದ ಲಕ್ಷ್ಯದಲ್ಲಿ ಮೂರು ಬಗೆಯ ಕಾಪಿರಾಗಗಳಿವೆ . . . ಮೂರನೆಯದು ಭಾಷಾಂಗಕಾಪಿರಾಗ (ಸಂಗೀತ. ೩೦). [ಭಾಷಾಂಗ + ಕಾಪಿ₁]

**ಭಾಷಾಂಗಿ** (ನಾ). [ಸಂಗೀತ] ಒಂದು ಶ್ರುತಿಯ ಹೆಸರು ; ಧೈವತದ ಎರಡನೆಯ ಶ್ರುತಿ : ಸ್ವರದಿಂ ಶ್ರುತಿ ಸಮುತ್ಪತ್ತಿ . . . ಭಾಷಾಂಗಿ ವರ್ತಕಿ ಸಂಪೂರ್ಣೆಯೆಂಬ ಮೂಱು ಶ್ರುತಿಗಳೇ ಧೈವತಸ್ವರದಿಂದುದ್ಭವಿಸಿದವು (ಎಪೀಶ. ೦೬೭). [ಸಂ. ಭಾಷಾಂಗೀ]

**ಭಾಷಾಂತರ** (ನಾ). ೧. ಭಾಷೆಗಳ ನಡುವಿನ ಅಂತರ,–ವ್ಯತ್ಯಾಸ: ಉಭಯಭಾಷಾಂತರವ ತಿಱಿದು ಪ್ರಸಿದ್ಧದಿಂದಭಿನವನಿಘಂಟನಭಿನವಮಂಗನುಸಿರ್ದನು (ಮಂಗರಾ. ೨-೩). ೨. ಬೇರೆ ಭಾಷೆ ; ಪರಭಾಷೆ ; ಅನ್ಯಭಾಷೆ. ೩. ಒಂದು ಭಾಷೆಯಲ್ಲಿರುವುದನ್ನು ಬೇರೆಭಾಷೆಗೆ ಮಾಡುವ ತರ್ಜುಮೆ,–ಅನುವಾದ : ದುರ್ಗೇಶನಂದಿನಿಯು 'ಐವನ್‌ಹೋ' ವಿನ ಭಾಷಾಂತರವೆಂದಾಗಲಿ ಭಾವಾಂತರವೆಂದಾಗಲಿ ಯಾರೂ ಹೇಳುವಂತಿಲ್ಲ (ಬಂಕಿಮ. ೦೩೦). ೪. ಬೇರೆಯ ಶಬ್ದ ; ಪ್ರತಿಶಬ್ದ : ಭಾರತದೊಳ್ಪನ ನುಡಿಯಂ ಚಾರು ಸುದೇಶೀಯುವೆಂಬ ಭಾಷಾಂತರಮಂ ಸೂರಿಜನ ಮೆಚ್ಚಿ ಪೇಳ್ವೆಂ (ಕಾರಾ. ೨).

**ಭಾಷಾಂತರ ಮಾಡು** = ಬೇರೆ ಭಾಷೆಗೆ ತರ್ಜುಮೆ ಮಾಡು,— ಅನುವಾದ ಮಾಡು : ಗುರುಗಳು ಪಂಚತಂತ್ರದೊಳಗಿನದೊಂದು ಕಥೆಯನ್ನು ಭಾಷಾಂತರ ಮಾಡಲಿಕ್ಕೆ ಕೊಟ್ಟಿದ್ದಾರೆ (ಮುಂಕು. ೪-೦೩೨). [ಸಂ.]

**ಭಾಷಾಂತರಿಸು** (ಕ್ರಿ). ಬೇರೆಭಾಷೆಗೆ ಪರಿವರ್ತಿಸು, – ಅನುವಾದ ಮಾಡು : ಅವರು ಇಂಗ್ಲಿಷಿನ ಕೆಲವು ಕವನಗಳನ್ನು ಭಾಷಾಂತರಿಸಿದ್ದಾರೆ

(ಶವಶರಣೋ. ೧೧) ; ನಕಾಶಗಳ ಸಹಾಯದಿಂದ ಅವರು ಹಲವು ಹಳೆಯ ಲೇಖನಗಳನ್ನು ಭಾಷಾಂತರಿಸಿದರು (ಕತ್ನಗೊ. ೧೧).
[ಭಾಷಾಂತರ + — ಇಸು₃]

**ಭಾಷಾಧೀಶ** (ನಾ). ಸರಸ್ವತಿಯ ಗಂಡ ; ಬ್ರಹ್ಮ : ಶ್ರೀಶ ಭಾಷಾಧೀಶರುಂ . . . ದೇವೇಶಮುಖ್ಯಾಧೀಶರುಂ ನೆನೆದೋಲಯಿಸುತಿರಲು (ಬಸತ್ಪು. ೨೪-೯೮). [ಸಂ.]

**ಭಾಷಾಪತ್ರ** (ನಾ). ಪ್ರತಿಜ್ಞೆ ಮಾಡಿದುದನ್ನು ನಡಸಿಕೊಡುವುದಾಗಿ ಬರೆದುಕೊಟ್ಟ ಪತ್ರ ; ಪ್ರತಿಜ್ಞಾಪತ್ರ : ಮಜ್ಜನಕ್ಕೆಚಿವುದು ಲಿಂಗ ಅದು ಲಿಂಗಕರಸ್ಥಲದ ದಿಬ್ಯ ಗುರುವಚನ ಭಾಷಾಪತ್ರ ಶಿವಕರದಲ್ಲಿ (ಬಸವ. ೬೪೪) ; ಈ ಅರ್ಥದ ಆತನ ಸ್ವಹಸ್ತಾಕ್ಷರದ ಭಾಷಾಪತ್ರಕ್ಕೆ . . . ಕಯ್ಬರೆಹದ ಸಾಕ್ಷ್ಯಗಳನ್ನೂ . . . ತೋರುವವನಾಗು (ಬಸುಗಂ. ೩೭-೧).
[ಸಂ.]

**ಭಾಷಾಪತ್ರಿಕೆ** (ನಾ). = ಭಾಷಾಪತ್ರ : ಮೊದಲು ಕೊಡಗಿನ ಮಹಾರಾಜರ ಕಡೆಯಿಂದ ಮಿತ್ರತ್ವವಾಂಛಲ್ಯವಿಟ್ಟು ಶಾಶ್ವತವಾಗಿ ನಡದು ಬರಬೇಕು ಎಂಬುದಾಗಿ ಭಾಷಾಪತ್ರಿಕೆ ಬರೆಸಿ (ರಾಜೇಂದ್ರ. ೮೪).
[ಸಂ. ಭಾಷಾಪತ್ರಿಕಾ]

**ಭಾಷಾಪರ್ಯಾಪ್ತಿ** (ನಾ). [ಜೈನ] ಆರುಬಗೆಯ ಪರ್ಯಾಪ್ತಿಗಳಲ್ಲಿ ಒಂದು ; ವಚನರೂಪವನ್ನುಂಟು ಮಾಡಲು ಕಾರಣವಾದ ಜೀವನ ಪರಿಪೂರ್ಣತೆ ; P ಸ್ವರವೆಂಬ ಕರ್ಮದ ಉದಯದಿಂದ ಭಾಷಾವರ್ಗಣಾರೂಪವಾದ ಪುದ್ಗಲಸ್ಕಂಧಗಳಿಗೆ ಸತ್ಯ, ಅಸತ್ಯ, ಉಭಯ, ಅನುಭಯ ಎಂಬ ಭಾಷಾರೂಪವಾದ ಪರಿಣಾಮದ ಶಕ್ತಿಯ ನಿಷ್ಪತ್ತಿ : ಯದುದಯಾದಾಹಾರಾದಿ ಪರ್ಯಾಪ್ತಿ ನಿವೃತ್ತಿ ಸತ್ಪರ್ಯಾಪ್ತಿನಾಮ ತತ್ ಷಡ್ವಿಧಮಾಹಾರಪರ್ಯಾಪ್ತಿನಾಮ . . . ಭಾಷಾಪರ್ಯಾಪ್ತಿನಾಮ ಮನಃಪರ್ಯಾಪ್ತಿನಾಮ ಚೇತಿ (ಗೊಮ್ಮಸಾ. ೩-೨). 'ಪರ್ಯಾಪ್ತಿ' ಪರಾ. [ಸಂ.]

**ಭಾಷಾಪ್ರೌಢಿ** (ನಾ). ಭಾಷೆಯಲ್ಲಿಯ ಪಾಂಡಿತ್ಯ, — ವಿಶೇಷಜ್ಞಾನ, — ಪಾರಂಗತತ್ವ : ಅವುಗಳ ವರ್ಣನೆಯಲ್ಲಿ ಭಾಷಾಪ್ರೌಢಿಯೂ, ಕಾವ್ಯಮಯವಿವೇಚನೆಯೂ . . . ಏರಿತು (ಸಾಹಿಸ. ೯). [ಸಂ.]

**ಭಾಷಾಮರ್ಯಾದೆ** (ನಾ). ಭಾಷೆಯ ರೀತಿ, — ಸ್ಥಿತಿ : ಪ್ರಥಮಾವಿಭಕ್ತಿಗೆ ಪ್ರತ್ಯಯ ಹೇಳಿರುವುದು ಕೇವಲ ಸಂಸ್ಕೃತ ಭಾಷಾಮರ್ಯಾದೆಯನ್ನು ಅನುಸರಿಸಿ (ಶ್ರಾಶಬ್ದ. ೨೦೭). [ಸಂ. ಭಾಷಾಮರ್ಯಾದಾ]

**ಭಾಷಾರೂಢಿ** (ನಾ). ಭಾಷೆಯ ಬಳಕೆ, — ಪ್ರಯೋಗ : ಇವುಗಳ ಪ್ರಯೋಗವು ತೊಡಕಾಗಿರುವುದರಿಂದ ಭಾಷಾರೂಢಿಯನ್ನು ನೋಡಿ ತಿಳಿದುಕೊಳ್ಳಬೇಕು (ಶುದ್ಧಮ. ೫೦). [ಸಂ.]

**ಭಾಷಾವಿಜ್ಞಾನ** (ನಾ). ಭಾಷೆಯ ಉತ್ಪತ್ತಿ, ಬೆಳವಣಿಗೆ ಮೊದಲಾದ ವಿಷಯಗಳಿಗೆ ಸಂಬಂಧಪಟ್ಟ ಶಾಸ್ತ್ರ ; ಭಾಷಾಶಾಸ್ತ್ರ : ಭಾಷಾವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳು ಕನ್ನಡಪತ್ರಿಕೆಗಳಲ್ಲಿ ಆಗಾಗ್ಗ ಬೆಳಕು ಕಾಣುತ್ತಿದ್ದರೂ ಈವರೆಗೆ ಪ್ರಕಟವಾಗಿರುವ ಗ್ರಂಥಗಳು ಕೇವಲ ಮೂರೇ ಮೂರು (ಶ್ರಾಶಬ್ದ. IV, ಮುಖ್ಯ). [ಸಂ.]

**ಭಾಷಾವಿಜ್ಞಾನಿ** (ನಾ). ಭಾಷಾವಿಜ್ಞಾನವನ್ನು ಬಲ್ಲವನು ; ಭಾಷಾಶಾಸ್ತ್ರಪಂಡಿತ : ಕನ್ನಡದಲ್ಲಿ ಭಾಷಾವಿಜ್ಞಾನಿಗಳು ಪ್ರಥಮಾವಿಭಕ್ತಿಯಿಲ್ಲವೆನ್ನಲು ಕೊಡುವ ಕಾರಣಗಳನ್ನು ಕೆಳಗಿನಂತೆ ಸಂಕ್ಷೇಪಿಸಬಹುದು (ಸಂಕೋರ. ೫೨). [ಸಂ. ಭಾಷಾವಿಜ್ಞಾನಿನ್]

**ಭಾಷಾವಿದ** (ನಾ). ಭಾಷೆಯನ್ನು ಬಲ್ಲವನು ; ಭಾಷೆಯಲ್ಲಿ ಪಾಂಡಿತ್ಯವುಳ್ಳವನು : ದೋಷಂಗಳಿಂತು ಪಿಂಗೆ ಸಂಶ್ಲೇಷದೊಳಾದುದು ಸಕಲವಿದ್ವತ್ಸಭೆಯೊಳ್ ದೂಷಿಸುಗುಂ ಕೃತಿವಧುವಂ ಭಾಷಾವಿದರ್ (ಕವಿರಾ ೧ ೧೧೧); ಭಾಷಾವಿದರ್ಕವಿತ್ವವಿಶೇಷಜ್ಞನಿರ್ಕಷರಪ್ಪೊಡಪ್ಪುದು ಸಭೆಯೊಳ್ (ಅಭಿಪು. ೧-೨೧) ; ಇಂಥ ಸಂದರ್ಭಗಳಲ್ಲಿ ಮೂಲಗ್ರಂಥಗಳ ಭಾವವು ದೇಶಭಾಷೆಗಳಲ್ಲಿ ಹೇಗೆ ವ್ಯಕ್ತವಾಗಿದೆಯೆಂಬುದನ್ನು ಭಾಷಾವಿದರು ತುಲನಾತ್ಮಕ ದೃಷ್ಟಿಯಿಂದ ಅರಿಯಬೇಕು (ಕಮಶಾಂ. ೧೧೮). [ಸಂ. ಭಾಷಾವಿದ್]

**ಭಾಷಾಶಾಸ್ತ್ರ** (ನಾ). = ಭಾಷಾವಿಜ್ಞಾನ : ಅಲ್ಲಿಂದ ಮುಂದೆ . . . ಅವರೇ ಭಾಷಾಶಾಸ್ತ್ರವನ್ನು ಬೋಧಿಸಿದರು ( ಶ್ರಾಶಬ್ದ. X, ಮುಖ್ಯ ) ; ಸ್ವರೂಪನಿಷ್ಪತ್ತಿಯನ್ನು ಸಾಹಜಿಕವಾಗಿ ವಿವೇಚಿಸುವ ಭಾಷಾಶಾಸ್ತ್ರದಲ್ಲಿಯೂ ವಿಭಕ್ತಿಗಳ ವಿವರಣವು ಅನಿವಾರ್ಯವಾಗುತ್ತದೆ (ಸಂಕೋರ. ೩೮). [ಸಂ.]

**ಭಾಷಾಸಂಸ್ಕರಣ** (ನಾ). ಭಾಷೆಯಲ್ಲಿರುವ ತಪ್ಪುಗಳನ್ನು ತಿದ್ದಿ ಶುದ್ಧಿಗೊಳಿಸುವಿಕೆ ; ಭಾಷೆಯ ಪರಿಷ್ಕಾರ : ಭಾಷಾಸಂಸ್ಕರಣಪ್ರಮಾಣನಯನಿಕ್ಷೇಪರ್ ಜಿನೇಂದ್ರಾಗಮಾಶೇಷಜ್ಞರ್ ನಿಜಪಜ್ಞರಪ್ಪುದುಚಿತಂ ವಿದ್ವತ್ಸಭಾಮಧ್ಯದೊಳ್ (ಸುಕುಮಾ. ೧-೯೭). [ಸಂ.]

**ಭಾಷಾಸಮಿತಿ** (ನಾ). [ಜೈನ] ಸಾಧುಗಳು ಆಚರಿಸಬೇಕಾದ ಐದು ಸಮಿತಿಗಳಲ್ಲಿ ಒಂದು; P "ದೂಷಿತ ಭಾಷೆಯನ್ನು ಪರಿತ್ಯಜಿಸಿ ಸದಾ ಸತ್ಯಪ್ರಿಯಕಲ್ಯಾಣಕಾರಿಯಾದ ವಾಣಿಯನ್ನೇ ಉಪಯೋಗಿಸಬೇಕೆಂಬ ಪ್ರತಿಜ್ಞೆ ; ದುರ್ಭಾಷಣ ರಹಿತನಾಗಿರುವುದು" (ಜೈಪಕೋ. ೧೯೪); ಕರ್ಮಕ್ಷಯನಿಮಿತ್ತಂ ಅನರ್ಥಕ ಬಹುಪ್ರಲಾಪವಿರಹಿತಮುಂ ಸ್ಫುಟಾರ್ಥಮುಂ ವ್ಯಕ್ತಾಕ್ಷರಮುಮಾಗಿ ಮಾತ್ಸರ್ಯಾನೃತಭ್ರಾಂತಿಕಷಾಯೋಪಹಾಸ್ಯಾಸಭ್ಯನಿಷ್ಠುರಧರ್ಮವಿರೋಧೀ ದೇಶಕಾಲವಿರೋಧ್ಯತಿಸಂಸ್ತವಾದಿ ವಾಗ್ದೋಷವಿರಹಿತಮಪ್ಪ ನುಡಿ ಭಾಷಾಸಮಿತಿ (ಚತ್ತ್ವಕ್ರಿ. ೩೨೫); ನಿರ್ಗ್ರಂಥಸಂಪ್ರದಾಯದಲ್ಲಿ ಭಾಷಾಸಮಿತಿಗೆ ಬಹಳ ಮಹತ್ತ್ವದ ಸ್ಥಾನವಿದೆ (ಜೈಪಶ. ೫೩೭). 'ಪಂಚಸಮಿತಿ' ಪರಾ. [ಸಂ.]

**ಭಾಷಿಕ** (ಗು). ೧. ಭಾಷೆಗೆ ಸಂಬಂಧಿಸಿದ. (ನಾ). ೨. ಮಾತನಾಡುವವನು; ಹೇಳುವವನು : ಭಾಷೆಯೊಳಗಿನ ಪದಗಳಿಗೆ ಪ್ರಾಪ್ತವಾದ ಅರ್ಥ—ಭಾವಗಳಿಂದ ಆಯಾ ಭಾಷಿಕರ ಮನಸ್ಸಿನ ಸಂಸ್ಕಾರ—ಸಂಸ್ಕೃತಿಯು ವ್ಯಕ್ತವಾಗುತ್ತಿರುತ್ತದೆ (ಕರ್ನಾಟಿ. ೧೫). [ಸಂ.]

**ಭಾಷಿತ** (ನಾ). ೧. ಹೇಳಲ್ಪಟ್ಟದ್ದು; ಮಾತು ; ವಚನ : "ಉಕ್ತಂ, ಭಾಷಿತಂ, ಉದಿತಂ . . . ಲಪಿತಂ — ೭ ಹೇಳಲ್ಪಟ್ಟದ್ದು, ನುಡಿಯಲ್ಪಟ್ಟದ್ದು" (ಸಿದ್ಧಾಂತಿ. ೩೫೨) ; ತಜ್ಜನಭಾಷಿತಮಾತ್ಮಚಿತ್ತಮಂ ಭೇದಿಸಿದಂತೆ ಲೋಕಪತಿಗಿಟ್ಟಂ . . . ಹರಿ ಶಾಂತಿನಾಮಮಂ ( ಶಾಂತಿಪು. ೧೧-೭೯ ) ; ತದೀಯ ಪರುಷಭಾಷಿತಂ ತನಗೆ ಕರ್ಣಶೂಲಮಾಗೆ . . . ನೀಡುಂ ನೋಡುತ್ತುಮಿರೆ (ಜಗಪು. ೩-೦೪ ವ). ೨. ಭಾಷೆ : "ಬ್ರಾಹ್ಮೀ, ಭಾರತೀ, ಭಾಷಾ . . . ಭಾಷಿತಂ, ವಚನಂ, ವಚಃ — ೧೩ ಮಾತಿನ ಹೆಸರುಗಳು, ಅಂದರೆ ನುಡಿಯ ಹೆಸರು" (ಸಿದ್ಧಾಂತಿ. ೪೯). [ಸಂ.]

**ಭಾಷಿಸು** (ಕ್ರಿ). ಮಾತನಾಡು; ನುಡಿ ; ಹೇಳು : ತಾ ಮುಸುಡನೆತ್ತೀಗ ಭಾಷಿಸನೋ (ಬಸಪು. ೮೭-೧೧). [ಭಾಷಣ + — ಇಸು₃]

**ಭಾಷೆ** (ನಾ). ೧. ಮಾತು ; ನುಡಿ ; ಜನರು ತಮ್ಮ ಅಭಿಪ್ರಾಯವನ್ನು ಇತರರಿಗೆ ತಿಳಿಸಲು ಉಪಯೋಗಿಸುವ ಸಾಧನ; ಪದಪ್ರಯೋಗ : ತಿಳಿದವನ ಮತಿವಿದನ ಭಾಷಾವಳಿ ಲಿಪಿಜ್ಞನ ಸಾಕ್ಷರನ . . . ಸುಂದರಮುಷ್ಕರ ತಿಳಿವ ಹೃದಯನ ಸಂಧಿವಿಗ್ರಹರೆನಿಸಬೇಕೆಂದ (ಕುಮಾರಾ. ೩-೮೪) ; ಭಾಷೆಯಲ್ಲಿರುವ ಪದಗಳು ಹಲವು ; ವರ್ಣಗಳು ಕೆಲವು (ಶುದ್ಧಮ. ೧೧); ಅಕ್ಷರರೂಪದಿಂದ ಅಭಿವ್ಯಕ್ತವಾದ ಮನೋಭಾವನೆಯೇ ಭಾಷೆ (ಸಂಕೋರ. ೧). ೨. ಕನ್ನಡ, ತಮಿಳು, ಸಂಸ್ಕೃತ ಮೊದಲಾದ ಬೇರೆಬೇರೆಯ ಮಾತು—ವಾಙ್ಮಯ : ಸಂಸ್ಕೃತಂ ಪ್ರಾಕೃತಂ ಅಪಭ್ರಂಶಿಕಂ ಪೈಶಾಚಿಕವೆಂಬ ಮೂಱುಮವರೆ ಭಾಷೆಗಳೊಳ್ ಪುಟ್ಟುವ ದ್ರವಿಡಾಂಧ್ರ ಕರ್ಣಾಟಕಾದಿ ಷಟ್ಪಂಚಾಶತ್ ಸರ್ವವಿಷಯಭಾಷಾಜಾತಿಗಳಕ್ಕುಂ (ಛಂದೋಂಬು. ೧-೯೬ ವ);

ಕನ್ನಡದೊಳ್=ಕನ್ನಡ ಭಾಷೆಯಲ್ಲಿ (ಕವಿರಾ. ೬. ೫೬೪). ೩. ವಿದ್ಯಾಭಿಮಾನಿಯಾದ ದೇವತೆ; ಸರಸ್ವತಿ; ವಾಣಿ : "ವಾಕ್(ಗ್), ವಾಣಿ, ಭಾರತೀ, ಭಾಷಾ. . .ಸರಸ್ವತೀ–ಈ ೮ ಸರಸ್ವತಿಯ ಪೆಸರ್" (ಹಲಾಯು. ೩-೬); ಶ್ರುತದೇವಿ ವಾಣಿ ವಾಗ್ಭಾರತಿ ವಚನಂ ಭಾಷೆ ವಾಚಿ ಗೀರ್ ಬ್ರಾಹ್ಮಿ ಸರಸ್ವತಿ ವರದೆಯಾಗಿ . . . ತಿರ್ದುಗೆ ದಯೆಯಿಂ (ಧರ್ಮಕೋ. ೨-೭); ದೂಷಿಸಿದೊಡಾ ವೀರಭದ್ರನು ಪೂಷನೆಂಬನ ಹಲ್ಲನುದುರ್ಚನೆ ಭಾಷೆ ಮುಖಿಕೆಯಿತಂದಡಾಕೆಯ ನಾಸಿಕವನರಿದ (ಬಸವ. ೫೪-೫೨). ೪. ಆಣೆ ; ಶಪಥ ; ಪ್ರತಿಜ್ಞೆ : ಹಣ ಬಂಗಾರವಸ್ತ್ರ ಕಪ್ಪಡ ಬಟ್ಟೆಯಲ್ಲಿ ನೆಟ್ಟನೆ ಬಿದ್ದಿರಲು ಕಂಡು ಕಾತರಿಸಿ ಕೈಮುಟ್ಟೆ ಎತ್ತರದ ಭಾಷೆ (ಆಪು. ೨೦-೫೨); ವಿಪ್ರರ ಕರಸಿ ವೈದಿಕದಿಂದ ರಚಿಸಿದರಗ್ನಿಯನು ಮಾಡಿದರು ಭಾಷೆಗಳ (ಕುಮಾರವ್ಯಾ. ೨-೩); ಐರಾವಣನು ಕಂಟಕವೆತ್ತಿ ಬಂದರೆ ತನ್ನ ನೆನೆಯೆಂದಿತ್ತ ಭಾಷೆಯ ನೆನಪು ಬಂದುದನಜಿತು ಚಿಂತಿಸಿದ (ಕೌಶಿರಾ. ೩೯-೨೦); ತಿಂಗಳಾರಕೆ ಮರಳಿ ಬಹೆನೆಂಬ ಭಾಷೆಯಂ ಭಾವಿಸುತ್ತೆ ಭಾಮಿನಿ ಸಮಾಧಾನಬುದ್ಧಿಯಿಂ. . . ನಡೆದಳ್ ಶಿಬಿರವೆಡೆಗೆ (ಜೈಮಿಂಗ. ೫೩-೦೫೩೩). ೫. [ಜೈನ] ಪಾರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು : ಭಾಷೆಯೆಂಬುದು ಪರಮಭಾಷಾಸುಂದರ ವದನಾರವಿಂದನಪ್ಪ ಜಿನಪತಿಯನಾರಾಧಿಸಿ ವಾಕ್‌ಸಮಿತಿಯಿಂ ತಪದೊಳ್ ನೆಗಟ್ದೊಡೆ ದಿವ್ಯಾದಿ ಭಾಷೆಗಳಂ ಪಡೆಗುಂ (ಶಾಪುಂಪು. ೨೩).

**ಭಾಷಾ ಚತುರ್ಭುಜ**=ನಾಲ್ಕು ಭಾಷೆಗಳಲ್ಲಿ ಪಾರಂಗತನಾದವನು: ಒಂದು ಬಿರುದು : ದಣ್ಣನಾಯಕಸಿಖಾಮಣಿ ಭಾಷಾ ಚತುರ್ಭುಜಂ ಸುಜನಮುಖರಧ್ವಜಂ [ಶಾ]ನ್ತ್ರಕೌನ್ತೇಯುಂ . . . ಶ್ರೀಮದ್ದಣ್ಣನಾಯಕ ದಾಮಪಯಂ ಉಚಂಗಿ ಮೂವತ್ತುಮನಾಲುತ್ತಮಿಬ್ದು (ಕೌಶಿ. VI, ೫೭೦-೩೫; 1070). **ಭಾಷಾವಾರು**=ಭಾಷೆಗೆ ಅನುಸಾರವಾದ ; ಭಾಷೆಯನ್ನು ಆಧಾರವಾಗಿ ಪರಿಗಣಿಸಿದ : ನಾವು ಈಗ ತಾನೆ ಭಾಷಾವಾರು ಪ್ರಾಂತರಚನೆಯ ಫಲವಾಗಿ ವಿಶಾಲಮೈಸೂರುಪ್ರಾಂತವನ್ನು ಗಳಿಸಿಕೊಂಡಿದ್ದೇವೆ (ಗ್ರಸಂ. iii, ಮುನ್ನುಡಿ). **ಭಾಷೆಗಳನೊದಗಿಸು**=ಪ್ರತಿಜ್ಞೆಗಳನ್ನು ಪೂರ್ಣಗೊಳಿಸು ; ಶಪಥಗಳನ್ನು ನೆರವೇರಿಸು : ಭಾಷೆಗಳನೊದಗಿಸಲಸಮಭಕ್ತಿಯನು ವೇದಿಸಲು . . . ಈ ಮಣಿಹವಾಗಿಳೆಗೆ ಬಂದ ಮಹಾಮಹಿಮ ಹರಮೂರ್ತಿ. . . ಮಾಚಯ್ಯ (ಬಸವ. ೩೭-೪೨). **ಭಾಷೆಗೆ ತಪ್ಪು**= ಆಡಿದ ಮಾತನ್ನು ನಡೆಸದಿರು ; ಕೊಟ್ಟ ಮಾತಿಗೆ ತಪ್ಪು : ಅವರ ಎಂದೂ ಭಾಷೆಗೆ ತಪ್ಪುವವರಲ್ಲ (ರೂಢಿ). **ಭಾಷೆಗೆ ತಪ್ಪುವ ರಾಯರ ಗಂಡ**= ವಚನಭ್ರಷ್ಟರಾದ ರಾಜರನ್ನು ದಂಡಿಸುವವನು ; ಒಂದು ಬಿರುದು : ಶ್ರೀಮನ್ಮಹಾಮಂಡಲೇಶ್ವರಂ ಅರಿರಾಯವಿಭಾಡ [ಭಾಷೆಗೆ ತಪ್ಪುವ ರಾ]ಯರ ಗಂಡ ಶ್ರೀ ವೀರಬುಕಂಣವೊಡೆಯರ ರಾಜ್ಯಾ[ಭ್ಯು]ದಯದಲೂ (ಕೌಶಿ. IX–ii, ೪೦೫-೩; 1357) ; ಭಾಷೆಗೆ ತಪ್ಪುವ ರಾಯರ ಗಂಡಃ ರೋಷಕೃದರ್ಥಿಷುಯೋ ರಣಚಂಡಃ (ಎಕ. VII, ಶಿವಮೊ. ೦-೭೩; 1513). **ಭಾಷೆ ಮುಟ್ಟಿಸು**=ಪ್ರತಿಜ್ಞೆಯನ್ನು ನೆರವೇರಿಸು ; ವಾಗ್ದಾನವನ್ನು ನಡೆಸು : ಅವನು ಭಾಷೆ ಮುಟ್ಟಿಸಿ ಎಲ್ಲರಿಂದಲೂ ಭಲಾ ಎನ್ನಿಸಿಕೊಂಡ (ರೂಢಿ). **ಭಾಷೆಯಂ ಕೊಡು**= ಮಾತು ಕೊಡು ; ವಚನ ನೀಡು : ಭಾಷೆಯಂ ಕೊಟ್ಟು ತಪ್ಪುವನಲ್ಲ ನೀನಾ ವಿಶೇಷಮಂ ಕಂಡು ಬಲ್ಲೆವು (ಕೃಮಾಭಾ. ೨-೬೦). **ಭಾಷೆಯಂ ನೀಗು**=ಪ್ರತಿಜ್ಞೆಯನ್ನು ಕಳೆ; ಶಪಥಕ್ಕೆ ಭಂಗವನ್ನು ತರು ; ಮಾತಿಗೆ ತಪ್ಪು : ಉದರ ನಿಮಿತ್ತಕೆ ಭಾಷೆಯಂ ನೀಗಿ (ಬಸವ. ೩೯-೦೭). **ಭಾಷೆಯಂ ಪ್ರತಿಪಾಲಿಸು**= ಕೊಟ್ಟ ಮಾತಿನಂತೆ ನಡೆ; ಕೊಟ್ಟ ಮಾತನ್ನು ನಡೆಸು : ಜಿನಸಮಯ ದುರುಶಿರವಸರಿಪೆನು ಭಾಷೆಯಂ ಪ್ರತಿಪಾಲಿಸುವೆನು (ಬಸವ. ೪೯-೦೩). **ಭಾಷೆಯಂ ಸಲಿಸು**= ಕೊಟ್ಟ ಮಾತನ್ನು ಉಳಿಸು ; ಶಪಥವನ್ನು ನಡೆಸು.– ಪೂರ್ಣಗೊಳಿಸು : ನಿನ್ನ ಅಂದಿನ ಭಾಷೆಯಂ ಸಲಿಸಿನ್ನು ತದ್ರೋಹಿಯನಪಹರಿಸಿ ನನ್ನಿಯಂ ಮೆಱೆ (ಬಸವ. ೬೦-೭). **ಭಾಷೆಯನುಳಿ**=ಭಾಷೆಗೆ ತಪ್ಪು : ನಾಂ ಬೇಡೆಂದು ನಿಲಿಸಲು ಮದಿಸಿ ಭಾಷೆಯನುಳಿದು ಕೈದುವನೆನ್ನ ಮೇಲುರ್ಚಿ ಗದಱಿದನ ತಲೆಯಂ ಪಱಿದು ಹಾಯ್ಕಿದೆನು (ಬಸವ. ೨೬-೪೩). **ಭಾಷೆಯನೊದವಿಸು** = ಭಾಷೆಯಂ ಕೊಡು : ಎನ್ನ ಸ್ವಾಮಿ ಸಂಗಯ್ಯ. . .ಚಿತ್ತದ ಮಲಿನಮಂ ಕಳೆದು ಭಾಷೆಯನೊದವಿಸಿದನೆನಗೆನುತ ಪ್ರಾಣವನಂತು ಬಿಡಲು (ಬಸವ. ೩೭-೨೦). **ಭಾಷೆಯ ಬಂಟ**=ಪ್ರತಿಜ್ಞೆಗೆ ದಾಸನಾಗಿರುವವನು ; ಶಪಥವನ್ನು ನೆರವೇರಿಸಲು ಶ್ರಮಿಸುವವನು : ಮನೆಯಲ್ಲಿ ವೀರ ಧೀರ ರಣದಲ್ಲಿ ಓಸರಿಸದ ಮತ್ತೆ ಭಾಷೆಯ ಬಂಟನಲ್ಲ (ಮೋಹನತ. ೨೬೩-೫೩). **ಭಾಷೆಯಾಡು**=ಮಾತನಾಡು : ನಮ್ಮ ದೇಶದಲ್ಲಿ ಬೇರೆ ಬೇರೆ ಕಡೆ ಬೇರೆ ಬೇರೆ ಭಾಷೆಯಾಡುವ ಜನರಿದ್ದಾರೆ (ರೂಢಿ). **ಭಾಷೆಯಿಡು**=ಆಣೆಯಿಡು ; ವಾಗ್ದಾನ ಮಾಡು; ಪ್ರತಿಜ್ಞೆಮಾಡು : ಭಾಷೆಯಿಟ್ಟು ಹೇಳಿದ್ದೇನೆ ಕೇಳು, ನಿನ್ನನ್ನು ಮನೆಗೆ ಸೇರಿಸುವುದಿಲ್ಲ (ರೂಢಿ). **ಭಾಷೆಯೊಳಿರು**= ಕೊಟ್ಟ ಮಾತಿಗೆ ಬದ್ಧನಾಗಿರು; ಆಡಿದ ಮಾತಿಗೆ ತಪ್ಪದಿರು : ತನ್ನಿದಿರೊಳಾದನ್ಯಶಬ್ದವನು ಪೆಸರುಗೊಂಡವನಂ ಕೊಲುವೆನೆಂಬನಮ ಭಾಷೆಯೊಳಿರುತಿರಲು ಛಾಂದಸನದೊರ್ಬನು . . . ಮನೆಗೆಯ್ತರಲು (ಬಸವ. ೫೩-೩೯). [ಸಂ. ಭಾಷಾ]

**ಭಾಷೆಕಾಱ** (ನಾ). ಪ್ರತಿಜ್ಞೆ ಮಾಡಿದವನು ; ಆಣೆಯಿಟ್ಟುಕೊಂಡವನು: ತೆಱಪ ಕೊಡು ಕೊಡು ಭಾಷೆಕಾಱನು ಮೆಱೆದು ಹೋಗಲಿ ಮಹ್ಮಕುಂಡದೊಳೊಱಗುವುದ ನೋಡುವೆವೆನುತ ತನಿಗೆವಱತರಿಸೇನೆ (ಕುಮಾರವ್ಯಾ. ೦೪-೩೬). [ಭಾಷೆ + – ಕಾಱ]

**ಭಾಷೆಕೊಡು** 'ಭಾಷೆಗೊಡು' ನೋ.

**ಭಾಷೆಗಳ್ಳ** (ನಾ). ಕೊಟ್ಟ ಮಾತಿಗೆ ತಪ್ಪುವವನು : ಕೆಲವೆಡೆಯೊಳುಂ ಪುಸಿಗರುರುಭಾಷೆಗಳ್ಳರುಂ ಕೆಲವೆಡೆಯೊಳುಂ ಸದಾ ಪರವಧೂಸಂಗದಲಿ ಹೃನ್ಮಗ್ನರಾಗಿರ್ಪರು (ದುರಹ. ೨-೦೫). [ಭಾಷೆ + ಕಳ್ಳ$_1$]

**ಭಾಷೆಗೆಡು** (ಕ್ರಿ). ಕೊಟ್ಟ ಮಾತಿಗೆ ತಪ್ಪು : ಭಾಷೆಗೆಟ್ಟಿರ್ದವನ ಸಭೆಯಲಿ ದೋಷವಲ್ಲಾ ಕುಳ್ಳಿತಿದ್ದಡೆ ಶೇಷಭೂಷಣಭಕ್ತರಿದ್ದಹರವರೆ ಸಾಕಿನ್ನು (ಬಸವ. ೩೭-೦೨). [ಭಾಷೆ + ಕೆಡು$_1$]

**ಭಾಷೆಗೊಡು, ಭಾಷೆಕೊಡು** (ಕ್ರಿ). ಮಾತುಕೊಡು; ವಾಗ್ದಾನ ಮಾಡು : ನಿಂದುರ್ಬಿತೆ ಭಾಷೆಗೊಟ್ಟನಚಳಿತವೀರಂ (ಗಂಳ. ೬-೫೨). **ಭಾಷೆಕೊಡು** : ಭಾಷೆಕೊಟ್ಟವನು ಘೋಷಣೆ ಮಾಡನೆ ? (ಗಾದೆ). [ಭಾಷೆ + ಕೊಡು$_1$]

**ಭಾಷೆತಪ್ಪುಕ** (ನಾ). = ಭಾಷೆಗಳ್ಳ : ಆತ ದ್ರೋಹಿ ಭಾಷೆತಪ್ಪುಕನವನು ಭವದಲ್ಲಿ ಬಳಲುವನು (ದೇದಾಕೃ. ೦೨೩-೦೦೫). [ಭಾಷೆ + ತಪ್ಪುಕ]

**ಭಾಷೆವಂತ** (ನಾ). ಕೊಟ್ಟ ಮಾತನ್ನು ಪಾಲಿಸುವವನು ; ಆಡಿದ ಮಾತಿಗೆ ತಪ್ಪದಿರುವವನು ; ಲೇಸೆನಿಪ ಪಾಲಂಕಱವಮ ಭಾಷೆವಂತನು ಬಂಕಿದೇವನು (ಬಸವ. ೯-೩೬). [ಭಾಷೆ + —ವಂತ]

**ಭಾಷ್ಟಿಗೆ, ಬಷ್ಟಿಗೆ, ಭಾಟಿಗೆ** (ನಾ). (ಉಕ) ನಿಶ್ಚಿತಾರ್ಥ : ಆದೇ ಮುಂಜಾನೆ ನಾಲ್ಕನಾಲ್ಕು ಸಾರೆ ಎಡತಾಕಿದರೂ ಭಾಷ್ಟಿಗೆಗೆ ಸೆಟ್ಟಿಯೂ ಇಲ್ಲ ಮಗದುಮನೂ ಇಲ್ಲ (ಎಕೋಳ. ೪). **ಬಷ್ಟಿಗೆ** : ಬಷ್ಟಿಗೆಯ ಹಾಕಿ ಕನ್ನೆಯನ್ನು ನಿಶ್ಚಯಮಾಡಿದ ಮೇಲೆ ವೇದೋಕ್ತ ಸಮ್ಮತ ಪ್ರಕಾರ ಲಗ್ನವಾಯಿತೇ ಹ್ಯಾಗೇ ? (ಶ್ರೀಬಿಸ. ೩೩೦). **ಭಾಟಿಗೆ** : ನೆಗಿಯಾಣನ ಕರಕೊಂಡು ಬಾಲನ ಭಾಟಿಗ್ಗೆ ಬರಬೇಕ (ಮಲ್ಲಗ. ೫೦) ; ಆ ಕಾಲದ ನೈಮಿತ್ತಿಕಕಾರ್ಯಕ್ಕೆ ಭಾಟಿಗೆ ಅಥವಾ ಭಾಷ್ಟಿಗೆ ಹಾಕುವುದು ಎನ್ನುವರು (ಮಲ್ಲಗ. ೦೨೭ ಟೀಕೆ). 'ಭಾಸದಿ' ಪರಾ. [ ? ]

**ಭಾಷ್ಯ** (ನಾ). ೧. ವ್ಯಾಕರಣ, ವೇದಾಂತ ಮೊದಲಾದ ಶಾಸ್ತ್ರಗಳ ಮೂಲಭೂತವಾದ ಸೂತ್ರಗಳ ಅರ್ಥವನ್ನು ವಿವರಿಸುವ ಗ್ರಂಥ ; ಸೂತ್ರಾನುಸಾರವಾದ ಪದಗಳಿಂದ ಸೂತ್ರಾರ್ಥವನ್ನು ವಿವರಿಸುವ ಹಾಗೂ ವಿವರಣೆಗಾಗಿ ಕೊಟ್ಟ ಪದಗಳನ್ನು ಮತ್ತೆ ವಿಸ್ತಾರವಾಗಿ ವಿವರಿಸುವ ಸೂತ್ರವ್ಯಾಖ್ಯಾನ : ಈ ವಿಚಾರದಲ್ಲಿ ವ್ಯಾಸರು ಒಂದು ಸೂತ್ರವನ್ನು ಸಿದ್ಧಾಂತರೂಪಕವಾಗಿ ಬರೆದಿರುತ್ತಾರೆ . . . ಈ ಸೂತ್ರಕೆ ಶ್ರೀ ಶಂಕರರ ಭಾಷ್ಯವು ವಿಚಾರಣೀಯವಾಗಿದೆ (ತೀಣಾಕ್ಕ. ೩೮) ; ಪೂರ್ವ ಕಾಲದಲ್ಲಿ ಈ ರೀತಿ ಸ್ಪಷ್ಟವಾಗಿತ್ತು ಎಂಬುದು ಭಾಷ್ಯಗಳ ಮೇಲೆ ಹೊರಟಿರುವ ವಾರ್ತಿಕವೆಂಬ ಗ್ರಂಥದ ಅರ್ಥದಿಂದಲೇ ಸ್ಪಷ್ಟವಾಗುತ್ತದೆ (ಹಿಂದಣ. ೦೩೦). ೨. ತತ್ತ್ವವಿಚಾರಗಳನ್ನು ಪ್ರತಿಪಾದಿಸುವ ಉಪನಿಷತ್ತು, ಗೀತೆ ಮೊದಲಾದ ಉದ್ಗ್ರಂಥಗಳ ಪ್ರೌಢವಾದ ವ್ಯಾಖ್ಯಾನ ; ಯಾವುದೇ ಗಹನವಾದ ಮೂಲಗ್ರಂಥದ ವಿವರಣ ಗ್ರಂಥ : ಪಟಗಾಂಪರ ನುಡಿ ಮುತ್ತುಂಮೆಟಸುಂಗೋದಂದದಕ್ಕೆ ಭಾಷ್ಯಮನೊರ್ವಂ ಕಟಿಯೋದಿದಾತನಲ್ಲದೆ ಬಟಿಪಟಿಯಿಂ ಬೇದು ಬರೆಯಲಾಗದಗಣ್ಯಂ (ಚಾಂತಿಪು. ೦೦-೦೬೦) ; ಭಗವತ್ಪಾದರಾದ ಶ್ರೀ ಶಂಕರರೇ ಭಗವದ್ಗೀತೆಗೆ ಭಾಷ್ಯ ಬರೆದವರಲ್ಲಿ ಪುರಾತನರು (ಶಾರದ. ೦೦೯). ೩. ಪಾಣಿನಿಯ ಸೂತ್ರಗಳಿಗೆ ಪತಂಜಲಿಯು ಬರೆದಿರುವ ಪ್ರಸಿದ್ಧವಾದ ವ್ಯಾಖ್ಯಾನ. [ಸಂ.]

**ಭಾಷ್ಯಕಾರ** (ನಾ). ೧. ಯಾವುದೇ ಸೂತ್ರಗ್ರಂಥದ ವ್ಯಾಖ್ಯಾನವನ್ನು ರಚಿಸಿದವನು.—ಭಾಷ್ಯವನ್ನು ರಚಿಸಿದವನು : ತಮ್ಮ ಸಿದ್ಧಾಂತದಲ್ಲೂ ಭಾಷ್ಯಕಾರರ ಕೆಲವು ಅಭಿಪ್ರಾಯಗಳನ್ನು ವಾರ್ತಿಕಕಾರರು ನಿರಾಕರಿಸಿ ಭಾಷ್ಯಕಾರರ ಅರ್ಥವನ್ನು ಆದರಿಸಬಾರದೆಂದು ಬರೆಯುತ್ತಾರೆ (ಹಿಂದಣ. ೦೫೦); ನಿರುಕ್ತಕಾರರಾದ ಯಾಸ್ಕರೂ, ನಿರುಕ್ತದ ಭಾಷ್ಯಕಾರರಾದ ಸ್ಕಂದಸ್ವಾಮಿ ಮತ್ತು ದುರ್ಗಾಚಾರ್ಯರೂ . . . ಉಲ್ಲೇಖಿಸಿದ್ದಾರೆ (ಶಾರದ. ೩೬). ೨. ಪಾಣಿನಿಯ ಸೂತ್ರಗಳಿಗೆ ಭಾಷ್ಯವನ್ನು ಬರೆದ ಪತಂಜಲಿ. ೩. ಬ್ರಹ್ಮಸೂತ್ರಗಳಿಗೆ ಭಾಷ್ಯಗಳನ್ನು ಬರೆದ ಶಂಕರ, ರಾಮಾನುಜ ಮತ್ತು ಮಧ್ವ ಆಚಾರ್ಯರು : ವಾಣಿ ರಾಮಾನುಜರ್ಗಿಂತಿರದತಿಸನ್ಮಾನಂಗೆಯ್ದು . . . ತಳ್ಳೈಸಿ ಭೂಮಿಯಲ್ಲಿ ನಿಮಗಿಂ ಶ್ರೀ ಭಾಷ್ಯಕಾರಾಹ್ವಯಂ ಸಮನಿಕ್ಕೆಂದತಿಹೃಷ್ಟೆಯಾದಳ್ (ರಾಜ್ಯಶ.೦೩-೩೩೪); ದ್ವೈತವೇದಾಂತಮತವನ್ನು ಸ್ಥಾಪಿಸಿ ಭಾಷ್ಯಕಾರರೆನಿಸಿದ ಶ್ರೀಮನ್ಮಧ್ವಾಚಾರ್ಯರವರು ಭರತಖಂಡದಲ್ಲೆಲ್ಲಾ ತಮ್ಮ ಮತವನ್ನು ಪ್ರಚುರಗೊಳಿಸಿ ಪ್ರಖ್ಯಾತರಾದರು (ಆರು. ೦೦) [ಸಂ.]

**ಭಾಷ್ಯೆ** (ನಾ). ವಿವರಣೆ ; ವ್ಯಾಖ್ಯಾನ : ನಿನಗೆ ಸೂಚನೆ ಮಾತ್ರ ಬೇಕಾಗಿತ್ತಲ್ಲವೆ ? ಸೂಚನೆ ಕೊಟ್ಟಿರುವೆ. ಅದರ ಭಾಷ್ಯೆ ಹೇಳಲು ನನಗೆ ಸಾಧ್ಯವಿಲ್ಲ (ಮುಕ್ತಿ. ೨೦೬). [ಸಂ. ಭಾಷ್ಯ]

**ಭಾಸ** (ನಾ). ೧. ಹೊಳಪು ; ಪ್ರಕಾಶ ; ಕಾಂತಿ. ೨. (ಮನಸ್ಸಿಗೆ) ತೋರುವುದು ; ಹೊಳೆಯುವುದು : ಇಲ್ಲಿ ತನ್ನ ಅಭಿವ್ಯಕ್ತಿಗಿಂತ ಅನ್ಯಪ್ರಯೋಜನವನ್ನು ಅದು ಕಾಣದು. ತನ್ನ ಅನುಭವಗಳಲ್ಲದೆ ಅನ್ಯಾನುಭವಭಾಸಗಳಿಗೆ ಇಲ್ಲಿ ಎಡೆಯಿಲ್ಲ (ಕಾವ್ಯಾ. ೩). ೩. ಒಂದು ಬಗೆಯ ಪಕ್ಷಿ ; ಹಾಲಕ್ಕಿ : "ಶಕುಂತಃ, ಭಾಸಃ_ಈ ೨ ಪಿಂಗಲಿ" (ಹಲಾಯು. ೪೦-೯೮); ದ್ರೋಣನು . . . ಶಿಲ್ಪಿಯಿಂದ ಒಂದು ಕೃತ್ರಿಮವಾದ ಭಾಸಪಕ್ಷಿಯನ್ನು ಮಾಡಿಸಿ ಅದನ್ನು ಅವರಿಗೆ ತಿಳಿಯದಂತೆ ಒಂದು ಮರದ ತುದಿಗೊಂಬೆಗೆ ಕಟ್ಟಿಸಿ (ಪಕಥಾ. ೨೦). ೪. ಹದ್ದು ; ಗೃಧ್ರ : ಈಸು ದೊಡ್ಡಿತು ಮಾಡಲೇನಾ ಭಾಸನನು ಸಾಕಿಂದು ಪಾಲಿ ಹುತಾಶನರ ನಂದನರು ಕೆದಱಿದರುರುಪರಾಕ್ರಮವ (ಕೊರಣ. ೦-೯-೨೬). ೫. ಹುಂಜ ; ಕುಕ್ಕುಟ. ೬. ದನಗಳ ಕೊಟ್ಟಿಗೆ ; ಗೋಷ್ಠ. ೭. ಒಬ್ಬ ಸುಪ್ರಸಿದ್ಧನಾದ ಸಂಸ್ಕೃತ ನಾಟಕಕಾರ : ವಿದ್ವಾಂಸರು ಭಾಸನ ನಾಟಕಗಳನ್ನು . . . ಬೆಂಕಿಯಲ್ಲಿ ಹಾಕಲು ಅವುಗಳಲ್ಲಿ ಸ್ವಪ್ನವಾಸವದತ್ತವನ್ನು ಬೆಂಕಿ ಸುಡಲಿಲ್ಲ (ಸಂಪಾಟಿ. ೬೦).

ಭಾಸವಾಗು = ಕಾಣು ; ತೋರು : ಒಬ್ಬರಿಗೆ ಅಮೃತದಂತೆ ಕಂಡದ್ದು ಇನ್ನೊಬ್ಬರಿಗೆ ವಿಷದಂತೆ ಭಾಸವಾಗಬಹುದು (ಸುಭಸಂ. ೩) ; ಪಾಠ ಮೊದಲಿನಿಂದ ಕೊನೆಯವರೆಗೂ ಮಕ್ಕಳಿಗೆ ಲೀಲೆಯಂತೆ ಭಾಸವಾಗಬೇಕು (ಶಿಕ್ಷಣ. ೨೬೯). [ಸಂ.]

**ಭಾಸಕ** (ಗು). ೧. ಬೆಳಕು ಬೀರುವ ; ಪ್ರಕಾಶಪಡಿಸುವ. ೨. ತೋರಿಸುವ ; ಸ್ಪಷ್ಟಪಡಿಸುವ. ೩. ಸ್ಪಷ್ಟವಾದ ; ತಿಳಿಯಲಾಗುವ ; ಸುಗಮವಾದ ; ಸರಳವಾದ. (ನಾ). ೪. ತೋರಿಸುವುದು ; ಪ್ರಕಾಶಪಡಿಸುವುದು : ಇದೇ ರೀತಿ ಪದವ್ಯಂಗ್ಯವೆಂಬ ಧ್ವನಿಯಲ್ಲಿ ಯಾದರೂ ಅನ್ಯನಿರಪೇಕ್ಷವಾದ ಪದವೇ ಸ್ವಾರ್ಥವನ್ನು ನೆನಪಿಗೆ ತರುವ ಮೂಲಕ ರಸಾಭಿವ್ಯಕ್ತಿಯೋಗ್ಯವಾದ ಅರ್ಥಕ್ಕೆ ಭಾಸಕವೆನಿಸಬಹುದು (ಧ್ವನ್ಯಾಲೋ. ೦೩೩ ಅವತಿ). [ಸಂ.]

**ಭಾಸದಿ** (ನಾ). (?) : ಅರಸನನುಮತಿಯಿಂದ ದೃಢರಥ ತರುಣೆಗೆನ್ನೆಯನೊತ್ತಿಸಿದ ಬಂಧುರವಿ ಪುಷ್ಪಾಸ್ತ್ರನಿಗೆ ಭಾಸದಿಯಿಕ್ಕುವೇದದಲಿ ಸುರ ಸತಿಗೆ ಸವದಿವ್ಯವೃದಕವನೆರೆವ ಸುರಕಾಂತೆಯರ ತೆರದೊಳು ಹರುಷದೊಳು ಮಜ್ಜನವ ವಿರಚಿಸಲಾಳಿರನ್ನೆಯರು (ಜಮಿ. ೦೯-೨). 'ಭಾಷ್ಟಿಗೆ' ಪಠಾ. [ ? ]

**ಭಾಸಾಧಿಪ** (ನಾ). ಪ್ರಕಾಶಕ್ಕೆ ಒಡೆಯನಾದವನು ; ಸೂರ್ಯ : ದಾಶರಥಿಗಳ್ ಸ್ನಾನಮಂ ಮಾಡಿ ಬೇಗದಿಂ ಭಾಸಾಧಿಪಂಗರ್ಘ್ಯವಿತ್ತಾಹ್ನಿಕ ಕ್ರಿಯೆಯ ರಚಿಸಿ (ಪಂಪರಾ. ೦-೦೨-೩). [ ಸಂ. ]

**ಭಾಸಿಸು** (ಕ್ರಿ). ೧. ಹೊಳೆ ; ಪ್ರಕಾಶಿಸು. ೨. ಶೋಭಿಸು ; ಕಂಗೊಳಿಸು : ಭಾಸಿಸುವ ಜಿಹ್ವೇಂದ್ರಿಯದೊಳೆ ಗುರುಲಿಂಗ ಕಂಭೋಮುಖದೆ ರಸವನಿತ್ತು (ಶಬ್ದಣ. ೦೨-೩೬) ; ಭಾಸಿಪ ರಂಭೆಯೂರ್ವಶಿ ತಿಲೋತ್ತಮೆ . . . ಈ ಸುಂದರಿಗೇನು ಸಾಟಿ (ಸೋಪಕ. ೦೦-೪) ; ತಾಪಗಳಿಲ್ಲದನವರತ ಭಾಸಿಸುವ ಮುನಿಜನೋಪಾಸಿತದಖಂಡತೇಜೋರಾಶಿ . . . ಬೆಳಗಿತಾ ಮುನಿಯ ಕಣ್ಣ (ಪಂಪರಾ. ೦-೨-೪೯).

[ (ಸಂ. ಭಾಸನ) + — ಇಸು₃ ]

**ಭಾಸುರ** (ಗು). ೧. ಹೊಳೆಯುವ ; ಪ್ರಕಾಶಮಾನವಾದ. ೨. ಅಂದವಾದ ; ಶೋಭಿಸುವ ; ಭವ್ಯವಾದ : ಅನುಮಂ ಕಂಡಂ ಪರಮಾನುಭಾವಭಾಸುರ ಸುರರಾಜೋಪಮಿತ ವಿವಿಧವಿಭವೋದಯನಂ (ಶಬರಾ. ೨-೯೦) ; ಪ್ರಾಸಾಭಾಸಂ ಮೂಱುಂ ಭಾಸುರಕೀರ್ತ್ಯಯತಾಕ್ಷಿ ಕೇಳದ ನೊರೆವೆಂ (ಛಂದೋಂಬು. ೦-೯೭ ಅವತ್ಯ) ; ಭಾಸುರ ವಾರಣಾಸಿಯಂ ಪೊಕ್ಕನುತ್ತಮನೃಪಂ (ಪಕಾ. ೦೦-೩೩) ; ಭಾಸುರಕುಸುಮಗಳಿಂದೆ ಹರನಂ ಯಜಿಪಂ (ಕಬ್ಬಿಗ. ೨-೩೦). (ನಾ). ೩. ಅಂದ ; ಶೋಭೆ ; ಸೌಂದರ್ಯ : ಬಿಜ್ಜಳನೃಪತಿಯುಲ್ಲಾಸದಿಂ ಭಂಡಾರಿ ಬಸವನಚೇಶನಂ ನವರತ್ನಮಯಸಿಂಹಾಸನದ ಮೇಲೆ ಭಾಸುರಂ ಮಿಗೆ ಕುಳ್ಳಿರಿಸಿ (ಬಸವ. ೩೯-೩೬). ೪. ಶೂರ ; ಕಲಿ. [ ಸಂ. ]

**ಭಾಸೆ** 'ಬಾಸ್ಸೆ' ನೋ.

**ಭಾಸ್ಕರ** (ಗು). ೧. ಬೆಳಕನ್ನುಂಟುಮಾಡುವ ; ಹೊಳೆಯುವ ; ಪ್ರಕಾಶಿಸುವ. (ನಾ). ೨. ನೇಸರು ; ರವಿ ; ಸೂರ್ಯ : "ಆದಿತ್ಯಃ, ಸವಿತಾ . . . ಭಾಸ್ಕರಃ, ತಿಗ್ಮಾಂಶುಃ, ದ್ವಾದಶಾತ್ಮಾ, ತ್ರಯಿಯಾತನುಃ _ ಈ ೪೭ ಆದಿತ್ಯನ ಪೆಸರ್" (ಹಲಾಯು. ೬-೩೫) ; ಸಿತನುಂ ಭಾಸ್ಕರನುಂ ನಿಲೆ ಚತುರ್ಥದೊಳ್ . . . ಜನಪತಿಯಕ್ಕುಂ (ಜಾತಕ. ೦೨-೨೫) ; ಮನದೊಳ್ ಭಾಸ್ಕರನಂ ಬೇಡಿ ಮತ್ತಂ ಪ್ರಕಾಶದೊಳ್

ಇದೆ ರಥಂ ಸಿದ್ಧಮಪ್ಪುದರಿಮೆನೆ (ರಾಜಶೇಖ. ೨೬-೨೨). ೩. 'ಜೀವಂಧರ ಚರಿತೆ' ಎಂಬ ಷಟ್ಪದಿ ಕಾವ್ಯವನ್ನು ರಚಿಸಿದ ಕನ್ನಡದ ಒಬ್ಬ ಕವಿಯ ಹೆಸರು: ಈ ಕೃತಿರಚಿತ ಕವಿವರನು ವಿತತ ವಿಶ್ವಾಮಿತ್ರ ಗೋತ್ರಾನ್ವಿತ ಸರಸಬಸವಾಂಕಸುತವಿಶ್ರುತನು ಭಾಸ್ಕರನು (ಜೀವಂಚ. ೦-೩೩); ಭಾಸ್ಕರನು ಕುಮಾರವ್ಯಾಸಭಾರತದಿಂದ ಕಾವ್ಯಭಾಗಗಳನ್ನು ಒಂದೆರಡು ಕಡೆಗಳಲ್ಲಿಯಾದರೂ ಎರವಲಾಗಿ ತೆಗೆದುಕೊಂಡಂತಿದೆ (ಕಕಾಚ. ೨೫೩). ೪. 'ಬೇಹಾರಗಣಿತ' ಎಂಬ ಗ್ರಂಥವನ್ನು ರಚಿಸಿದ ಕನ್ನಡದ ಒಬ್ಬ ಕವಿಯ ಹೆಸರು: ಭಾಸ್ಕರ. ಸು. ೧೬೫೦– ಈತನು ಬೇಹಾರಗಣಿತವನ್ನು ಬರೆದಿದ್ದಾನೆ (ಕಚ. II, ೩೩೦). ೫. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ: ಇಂದುಗಣಂ ಶರಸಂಖ್ಯೆ ಯೊಳೊಂದಿರೆ ಚಂದ್ರಧರಂ ಬಂದು ಪದಾಂತದೊಳಿರ್ದೊಡೆ ಭಾಸ್ಕರನೊಳ್ ಯತಿಯುಂ ನಿಂದು ವಿರಾಜಿಸೆ ನಾಕಿಗನಿಂ ಪಡೆದತ್ತು ಜಗದ್ವಂದಿತಂ (ಛಂದೋಂಬು. ೨-೦೬೦). ೬. [ಛಂದ] ಎರಡು ಲಘುಗಳ ಮಧ್ಯೆ ಒಂದು ಗುರುವಿರುವ ಗಣ; ಜಗಣ (∪–∪): ಉರ್ವೀಪಪಾರುತ ಭಾಸ್ಕರಾ ನಿಲವಿಯದ್ವಂದ್ವಂ ಪದಾಂತಂಗಳೊಳ್. . . ಶಾರ್ದೂಲವಿಕ್ರೀಡಿತಂ (ಛಂದೋಂಬು. ೨-೦೬೩). [ಸಂ.]

**ಭಾಸ್ಕರನಂದನ** (ನಾ). ೧. ಸೂರ್ಯನ ಮಗ. ೨. ಕರ್ಣ: ಹಿಂದೆಣಿಗೆ ತಿರುಗಿದನು ಭಾಸ್ಕರನಂದನನು ಬಲಮಂಕದಲಿ (ಕುಮಾದ್ರೋ. ೬-೩೦). ೩. ಯಮ. ೪. ಶನಿ. ೫. ಸುಗ್ರೀವ. [ಸಂ.]

**ಭಾಸ್ಕರವಾರ** (ನಾ). ಸೂರ್ಯನು ಅಧಿದೇವತೆಯಾಗಿರುವ ವಾರ; ಭಾನುವಾರ; ಆದಿತ್ಯವಾರ: ಕೃಷ್ಣಸಪ್ತಮಿಯೊಳ್ ಭಾಸ್ಕರವಾರದಂದು (ಎಕ.VI, ಕಡೂರು. ೫೦-೩೮; 1169). [ಸಂ.]

**ಭಾಸ್ಕರಸುತ** (ನಾ). =ಭಾಸ್ಕರನಂದನ ೨: ಭಾಸ್ಕರಸುತನಿಂ ನಾಲ್ವಡಿ ಮುರಹರನಿಂದೈವಡಿ ನೆಗಟ್ತೆಯುದಟರ ಭೀಮಂ (ಕವಿಜ. ೬೭ ಶ್ಲೋ). [ಸಂ.]

**ಭಾಸ್ಕರಸ್ವರ** (ನಾ). ಸೂರ್ಯಸ್ವರ; (ಮನುಷ್ಯನ) ಬಲಭಾಗದ ಮೂಗಿನ ಹೊಳ್ಳೆಯಿಂದ ಹೊರಡುವ ವಾಯು: ಒಂದು ದಿನ ತನು ವಿನಲಿ ನಡೆವುದು ಇಂದುಭಾಸ್ಕರಸ್ವರಗಳಿಪ್ಪತ್ತೊಂದು ಸಾವಿರದಾಜುನೂಜನು ಯೋಳುಭಾಗದಲಿ ಬಂದುದನು . . . ತಂದು (ಹಂಸಾ. ೯೮); ಇಂದು ಭಾಸ್ಕರ=ಸೂರ್ಯ ಚಂದ್ರರ, ಸ್ವರ=ಶ್ವಾಸಗಳು, (ಒಳಹೊರಶ್ವಾಸಗಳು) (ಹಂಸಾ. ೯೮ ಟೀಕೆ). [ಸಂ.]

**ಭಾಸ್ಕರಾಪತ್ಯ** (ನಾ). [ಜ್ಯೋತಿ] ಶನಿಗ್ರಹ: ಭಾಸ್ಕರಾಪತ್ಯನುಮಂಗಾರ ಕನುಂ ಪೋಣ್ ಕೂಡಿರೆ ದಾರಕನಬ್ದದ್ವಯಕ್ಕೆ ಲಯಮಾಗದಿರ (ಜಾತಕ. ೬-೦೯). [ಸಂ.]

**ಭಾಸ್ಕರಿ** (ನಾ). =ಭಾಸ್ಕರಾಪತ್ಯ: ಇರೆ ನೀಚಾಂಶಕದೊಳ್ ಹಿಮಾಂಶು ಮೃಗಕುಂಭಕ್ಷೇತ್ರದೊಳ್ ನೋಡೆ ಭಾಸ್ಕರಿ (ಜಾತಕ. ೯-೨೩). [ಸಂ.]

**ಭಾಸ್ವರ** (ಗು). ೧. ಹೊಳೆಯುವ: ಪ್ರಕಾಶಮಾನವಾದ. ೨. ಭವ್ಯವಾದ; ಉಜ್ಜ್ವಲವಾದ: ಭಾಸ್ವರಭಕ್ತಿಯಿಂದೆಜಿಗೆ ದೇವಗಣಂ (ಪುಷ್ಪ. ೦೦-೦೯). (ನಾ). ೨. ಒಂದು ಮೂಲಧಾತು; ರಂಜಕ: "ಸಾಮಾನ್ಯ ಶಾಖದ ವಾತಾವರಣದಲ್ಲಿ ಆಮ್ಲಜನಕದೊಡನೆ ಸಂಯೋಗ ಹೊಂದಿ ನಿಧಾನವಾಗಿ ಸುಡುತ್ತ, ಈ ಕಾರಣದಿಂದ ಕತ್ತಲೆಯಲ್ಲಿ ಹೊಳೆಯುವ, ಥಳದಿ ಛಾಯೆಯ, ಮೇಣದಂಥ, ಒಂದು ಅಲೋಹಮೂಲಧಾತು: ರಂಜಕ; ಭಾಸ್ವರ" (Phophorus. ಇಂಕೋ). [ಸಂ.]

**ಭಾಸ್ವರಬೋಧ** (ನಾ). ೧. ದಿವ್ಯಜ್ಞಾನ. ೨. ಭವ್ಯವಾದ ಜ್ಞಾನವನ್ನು ಪಡೆದಿರುವವನು; ದಿವ್ಯಜ್ಞಾನಿ: ಭಾಸ್ವರಬೋಧ ನೀನಜಾಪಿದ್ದೆ ನುಡಿಯೊಳ್ ನೃಪನೀತಿಸಾರಸರ್ವಸ್ವಮಂ (ಶಾಂತಿಪು. ೨-೩೯). [ಸಂ.]

**ಭಾಸ್ವರರೂಪ** (ನಾ). ಪ್ರಕಾಶಮಾನವಾದ ಆಕಾರ: ಕಾಂತಿಯುಕ್ತವಾದ ಸ್ವರೂಪ: ಶುಕ್ತಿಯಲ್ಲಿ ರಜತಜ್ಞಾನವು ಹುಟ್ಟುವ ಕ್ರಮ ಹೇಗೆಂದರೆ—ಇಂದ್ರಿಯಸಂಪ್ರಯೋಗದಿಂದ ಶುಕ್ತಿಗೆ ವ್ಯಕ್ತಿಯೂ ಭಾಸ್ವರ ರೂಪದಿಂದ ಸಹಿತವಾಗಿ ಗೃಹೀತವಾಗುವುದು (ಭಾತತ್ವ. ೩೮೯). [ಸಂ.]

**ಭಾಹದರು** 'ಬಹಾದೂರ್' ನೋ.

**ಭಾಹೊ** (ಅ). ಮೆಚ್ಚುಗೆ, ಹರ್ಷ ಮೊದಲಾದ ಭಾವಗಳನ್ನು ಸೂಚಿಸುವ ಒಂದು ಅವ್ಯಯ: ಚಕ್ರೇಶ ಚಲದಂಕಮಲ್ಲ . . . ಭಾಹೊಯೆನೆ ವಕ್ರವಿಲ್ಲದೆ ಬರುತಿರ್ದ (ಶಶಿ. ೫೦-೩೩).

**ಭಾಳ** 'ಭಾಲ' ನೋ.

**ಭಾಳನಯನ** (ನಾ). ಹಣೆಯಲ್ಲಿ ಕಣ್ಣುಳ್ಳವನು; ಹಣೆಗಣ್ಣ; ಶಿವ: ಭಾಳನಯನಪ್ರತಿಮಕರುಣಾಲೋಲಮಾನಸ (ಬಸಪು. ೨೨-೫೨). [ಸಂ. ಭಾಲನಯನ]

**ಭಾಳನೇತ್ರ** (ನಾ). ೧. (ಶಿವನ) ಹಣೆಗಣ್ಣು: ಆ ಗಣಂಗಳ ನಡುವೆ ಮೆರೆಯುತಿಂಡನೊಪ್ಪಿದಂ . . . ಭರ್ಗನ ಭಾಳನೇತ್ರದಂತೊಪ್ಪಿದಂ (ಪಂಚಶಿ. ದೀ. ೬೨-೦೦); ಮುಚ್ಚಿದಭವನ ಭಾಳನೇತ್ರದ ಮುಚ್ಚುಳವ ತೆಗೆದುರಿವ ಕಿಚ್ಚನು ಬಿಚ್ಚಿ ಬೀಸಿದ ತೆಜವಲುಚ್ ಅಟ್ಟಿದನು ಮರ್ಕಟರ (ಕೌಶಿರಾ. ೨೦-೩೯). ೨. = ಭಾಳನಯನ: ಭಾಳನೇತ್ರಂಗೆ ತಾಂ ಸದೃಶನೀ ಕೌಶಿಕಂ (ಶ್ರೀರಾಮಪ. ೪೦-೬೦). [ಸಂ. ಭಾಲನೇತ್ರ]

**ಭಾಳಪಟ್ಟ** 'ಭಾಲಪಟ್ಟ' ನೋ.

**ಭಾಳಲಾಂಛನ** (ನಾ). ಹಣೆಯಲ್ಲಿ ಧರಿಸುವ ವಿಭೂತಿ ಮೊದಲಾದ ಗುರುತು,-ಚಿಹ್ನೆ: ಬೇರೆಯ ಕೆಲವರು 'ಭಸಿತ_ಗಂಧಾಕ್ಷತೆ'ಗಳವ್ನೂ 'ಭಾಳಲಾಂಛನ'ವನ್ನಾಗಿ ಮಾಡಿಕೊಂಡರು (ಕರ್ನಾಕ. ೯೭). [ಸಂ. ಭಾಲಲಾಂಛನ]

**ಭಾಳಲಿಪಿ** (ನಾ). ಹೀಗೆ ಹೀಗೆ ಆಗಬೇಕೆಂದು ಬ್ರಹ್ಮನು ಹಣೆಯಲ್ಲಿ ಬರೆದಿರುವನೆಂದು ನಂಬಲಾದ ಅಕ್ಷರ,— ಬರವಣಿಗೆ; ಹಣೆಯ ಬರಹ; ವಿಧಿಬರಹ: ಕಾಳೆಗದಲಿಂದಹಿತರಾಯರ ಭಾಳಲಿಪಿಗಳ ನೊರಸುವೆನು (ಕುಮಾಕ. ೨೦-೨); ಕೊಡೆವೋ ತೋರ್ಪೀ ನಿಶಾಚರಪಡೆಯ ಭಾಗ್ಯದ ಭಾಳಲಿಪಿಯನು (ಕೊರಟಾ. ೩-೬-೯). [ಸಂ. ಭಾಲಲಿಪಿ]

**ಭಾಳಲೋಚನ** (ನಾ).=ಭಾಳನಯನ: ಭಾಳಲೋಚನನಾದೊಡಂ ಕಾದಿ ತಂದಪೆವು (ಇಜಕ. ದೀ. ೩೬-೬); ಬರಹೇಳಲಾವರೆ ಕರೆ ಸಹಾಯಕೆ ಭಾಳಲೋಚನನ (ಕುಮಾದ್ರೋ. ೨-೦೩); ಅಂಗದನು ತಿರುಗಲು ಭಾಳಲೋಚನ ಮೆಚ್ಚುತಿರೆ ಭೂಪಾಲ ರಾಘವನಂಗಚಿತ್ರವನಿತ್ತು ಮನ್ನಿಸಿದ (ಕೌಶಿರಾ. ೨೦-೩೯); ಕೋಳಿ ಕೂಗದ ಮುನ್ನ ಏಳುವದು ನಿತ್ಯದಲಿ ಭಾಳಲೋಚನನ ಭಕ್ತಿಯಿಂ ನೆನೆದರೆ ಆಳಿನಾಳಯ್ಯ (ಸರ್ವಜ್ಞ. ೨೯೬). [ಸಂ. ಭಾಲಲೋಚನ]

**ಭಾಳವಿಲೋಚನ** (ನಾ). = ಭಾಳನಯನ: ಸನ್ನುತಾಮಳಸುಚರಿತಂ ಪ್ರಚ್ಛನ್ನಭಾಳವಿಲೋಚನನು (ಬಸಪು. ೫೦-೨). [ಸಂ. ಭಾಲವಿಲೋಚನ]

**ಭಾಳಾಂತರ** (ನಾ). ಹಣೆಯ ಮಧ್ಯಭಾಗ,-ಮಧ್ಯ: ಬರೆಯಬಲ್ಲನು ಬರೆದ ಬರಹವನೊರಸಲರಿಯೆನು ಜಗದ ಭಾಳಾಂತರದಲೀ ಸಚರಾಚರದ ತತ್ಕರ್ಮಫಲವಿಡಿದು (ಕೊರಟಾ. ೦-೬-೬೦); ಶಿಶುವಿನ ಭಾಳಾಂತರ ದೊಳಿಟ್ಟಳು ಮಂತ್ರಿಸಿದ ವಿಭೂತಿಯ ಬೊಟ್ಟು (ಮೋಹಕ. ೯-೭೩). [ಸಂ. ಭಾಲಾಂತರ]

**ಭಾಳಾಂಬಕ** 'ಭಾಲಾಂಬಕ' ನೋ.

**ಭಾಳಾಕ್ಷ** 'ಭಾಲಾಕ್ಷ' ನೋ.

**ಭಾಳಾಕ್ಷರ** (ನಾ). = ಭಾಳಲಿಪಿ: ಬರೆಯಬಲ್ಲನು ಬರೆದ ಬರಹವ ನೊರಸಲರಿಯೆನು ಜಗದ ಭಾಳಾಂತರದಲಿ . . . ನಿರ್ಭರದ ಭಾಳಾಕ್ಷರದ ವಿಧಿಗೆ ವಿಧಾತ್ರ ನೀನೆಂದ (ಕೊರಟಾ. ೦-೬-೬೦). [ಸಂ. ಭಾಲಾಕ್ಷರ]

**ಭಾಳಾಕ್ಷಿ** (ನಾ). [ಜೈನ] ಹಣೆಯಲ್ಲಿ ಕಣ್ಣುಳ್ಳವಳು; ಜ್ವಾಲಾಮಾಲಿನಿ: ಚಳದ್ಭಾಳಾಕ್ಷಿ ಸಂಪ್ರೀತಿಯಿಂ ಜ್ವಾಲಾಮಾಲಿನಿ ಮಾಟಕ್ಕೆ ಮತ್ಕೃತಿಗೆ ನಿರ್ವಿಘ್ನೋಕ್ತಿನಿರ್ವಾಹಮಂ (ಶಂಪ್ರಶು. ೦-೯). [ಸಂ. ಭಾಲಾಕ್ಷೀ (ಭಾಲ + ಅಕ್ಷಿ + —)]

**ಭಾಳೇಕ್ಷಣ** (ನಾ). ೧. ಹಣೆಗಣ್ಣು : ಶಿವನಿಂತೇಳ್ತಂದು ಭಾಳೇಕ್ಷಣಮ ನೆರೆಯೆ ಶಾಂ ಕೊಟ್ಟು ತನ್ನಾಯಿಯುಂ ತೂಳ್ದು . . . ಗೆಲ್ದೊಪ್ಪಿದಂ (ವೃಶಪು. ೬-೯೭). ೨. = ಭಾಳನಯನ : ಬಿನ್ನೈಸಿದಳು ಭಾಳೇಕ್ಷಣಂಗಾ ವಾಸುದೇವಸ್ತುತಿಪರಾಯಣೆ ಗೌರಿದೇವಿಯರು ಭಾಸುರಾನುಗ್ರಹ ರಹಸ್ಯಮನಱುಪಬೇಕೆಂದು (ಕೂರಾಣ. ೦-೨-೬). [ಸಂ. ಭಾಲೇಕ್ಷಣ]

**ಭಿಂಗಾರ** 'ಬಂಗಾರ' ನೋ.

**ಭಿಂಡಿಮಾಲ** (ನಾ). = ಭಿಂಡಿವಾಲ. [ಸಂ.]

**ಭಿಂಡಿವಾಲ, ಭಿಂಡಿವಾಳ** (ನಾ). ಕೈಯಿಂದ ಎಸೆಯುವ ಸಣ್ಣ ಭಲ್ಲೆ ಯಂತಹ ಆಯುಧ : ಶಕ್ತಿ, ಪ್ರಾಸ, ಹಾಟಕ, ಭಿಂಡಿವಾಲ, ಶೂಲ . . . ಮೊದಲಾದ ಆಯುಧಗಳಿಂದ ತಂಬಿರುವ ಈ ಸಮಂತಪಂಚಕವು ಎಷ್ಟು ಭಯಂಕರವಾಗಿರುವುದು ! (ಭಾಕಸಾ. ೦೦೨) ; ತೋಮರ ಭಿಂಡಿವಾಲ ಗಳ ಯುದ್ಧ ಗಜಗಜಗಳ ಹೋರಾಟ . . ಅನಂತಾನಂತವಾಗಿ ಕೆತ್ತಲ್ಪಟ್ಟಿದ್ದುವು (ಶಾಂಕಶಾ. ೦೯೦). **ಭಿಂಡಿವಾಳ** : ತೋಮರಮುಸಲ ಮುಸುಂಡಿಭಿಂಡಿವಾಳಮುದ್ಗರಗದಾದಿವಿವಿಧಾಯುಧಂಗಳೊಳಮತಿಪ್ರವೀಣ [ನು]೦ . . . ಆಗಿ (ಶಂಶಶಾ. ೨-೩೪ ಪ) ; ಕುದುರೆಯ ಮೇಲೆ ಬಿಲ್ಲರಸು ಸೂಲಿಗೆ ತೀರಿಕೆ ಭಿಣ್ಣಿವಾಳಮೆತ್ತಿದ ಕರವಾಳಂ (ಎಕ. VII, ಶಿಕಾ. ೦೩೬-೨೬ ; 1068) ; ಪರಿಘಚಕ್ರಮುಸುಂಡಿತೋಮರಭಿಂಡಿವಾಳಚಯ . . . ವರಧನುರ್ದಂಡಾದಿ ಶಸ್ತ್ರೋತ್ಕರದಲನಿಬರು ಕುಶಲರಾದರು ಮುನಿಯ ಗರುಡಿಯಲಿ (ಸಂಭಶ. ೦೭-೦೦೯). [ಸಂ.]

**ಭಿಂಡಿವಾಳ** 'ಭಿಂಡಿವಾಲ' ನೋ.

**ಭಿಂದಪಾಲ** (ನಾ). = ಭಿಂಡಿವಾಲ. [ಸಂ.]

**ಭಿಂದಿಸು** (ಕ್ರಿ). ಭೇದಿಸು ; ಪೀಡೆಯನ್ನುಂಟುಮಾಡು : ಸೋಲ್ಚುದು ಗೆಲ್ವುದು ಮಗುಟ್ದುಂ ಸೋಲ್ಚುದು ಭಿಂದಿಸಿದುದು . . . ಗೃಹಂಗಳಿಂದಱ ಮುನ್ನಂ (ಅಸ್ಸಿಪು ೭-೯೯). 'ಭೇದಿಸು' ಪರಾ. [ಭಿಂದು + —ಇಸು₃]

**ಭಿಂದು** (ನಾ). ೧. ಮುರಿಯುವಿಕೆ ; ಹಾಳುಮಾಡುವಿಕೆ ; ನಾಶ ಪಡಿಸುವಿಕೆ : 'ಭಿಂದಿಸು' ಪರಾ. ೨. ಹಾಳುಮಾಡುವವನು ; ನಾಶಪಡಿಸುವವನು. ೩. ಗರ್ಭದಲ್ಲೇ ಸತ್ತ ಮಗುವನ್ನು ಪಡೆ ಯುವವಳು ; ಮೃತಜಾತ ಶಿಶುವಿನ ಜನನಿ : "ನಕ್ಷತ್ರಸೂತಿಃ, ಭಿಂದುಃ — ಈ ೨ ಮಕ್ಕಳ್ ಬಾೞದವಳ್" (ಹಲಾಯು. ೬೦-೩೩೯) ; "ಮಕ್ಕಳುೞಿ ಸಾವ ಸತಿ ಭಿಂದುವಕ್ಕು" (ಮಂಗಾಜ. ೮೯-೩). [ಸಂ.]

**ಭಿಕಾರಿ** 'ಬಿಕಾರಿ' ನೋ.

**ಭಿಕ್ಕನೆ** (ಅ). ರಭಸ ಮೊದಲಾದುವುಗಳನ್ನು ಸೂಚಿಸುವ ಒಂದು ಅನುಕರಣಾವ್ಯಯ : ಸರಸಿರುಹಗರ್ಭಾಂಡ ಭಿಕ್ಕನೆ ಬಿರಿಯೆ ಪ್ರಳ ಯಾಂತಕನ ಕೋಪವಸ್ಫುರಣೆಗಿಂ ಮಿಗಿಲೆಂದೆನಲು ಬೀಸಿದುದು ಬಿರುಘಾಳೀ (ಅನಂದಾ. ೦-೬-೨೩). [ಭಿಕ್$_0$ + — ಅನೆ$_1$]

**ಭಿಕ್ಷ** (ನಾ). ೧. ಇನ್ನೊಬ್ಬರನ್ನು ಬೇಡುವುದು ; ತಿರುಪೆ ; ಯಾಚನೆ : ಮೃಡದೇವಾ ಶರಣೆಂದು ಭಿಕ್ಷಕ್ಕೆ ಹೋದರೆ ಅಲ್ಲಿ ನಡೆ ದೇವಾ ಎಂದೆನಿಸು ಕೂಡಲಸಂಗಮದೇವಾ (ಬಸವ. ೯೩೬) ; ಅಕಾರಮಕಾರಮುಂ ಅಕಾರಮುಮಾದುದರ್ಕೆ — ಗ್ರೀವಾ, ಭಿಕ್ಷಾ—ಎಂಬೆರಡು ಶಬ್ದಂಗಳ್ಗೆ ಗ್ರೀವ, ಗ್ರೀವೆ ; ಭಿಕ್ಷ, ಭಿಕ್ಷೆ — ಎಂದು ನಿಱಸುವುದು (ಶಶುವ. ೬೨ ಪ್ರಯೋ) ; ದ್ವಾರಾವತಿಯ ಪೊಕ್ಕು . . . ಭಿಕ್ಷವ ಬೇಡುತೆಯ್ದು ಮಮನಾರಿಯಲ್ಲಿಂದ ಶ್ರೀಕೃಷ್ಣನರಮನೆಯ ನೋಡುವೆನೆಂದು ನಡೆತಂದನು (ಭಕ್ತಾ. ೨ ಸೂತಪ). ೨. ಬೇಡಿದಾಗ ಕೊಡುವ ಅನ್ನ, ಆಹಾರ ಇತ್ಯಾದಿ : ಅಕ್ಷಯನ ಭಕ್ತರ್ಗೆ ಒಕ್ಕೈ ಭಿಕ್ಷಮಂ ತಂದಿಕ್ಕಿದು ತ್ರಮಮನಕ್ಷಯದ ಫಲಕೇಂ ಸಮವಹುದೇ (ಬಸಪು. ೬೦-೩೩) ; ರಾಗಿ ತಂದಿರ್ಯಾ ಭಿಕ್ಷಕೆ ರಾಗಿ ತಂದಿರ್ಯಾ (ಪುರಂದ. ೦-೭೯ ಪಲ್ಲವಿ) ; ರಾವಣನು ಸನ್ಯಾಸಿಯ ವೇಷವನ್ನು ಹಾಕಿಕೊಂಡು ಈ ಪರ್ಣಶಾಲೆಗೆ ಬಂದು ಭಿಕ್ಷವನ್ನು ಕೇಳಿದನು. ಈ ತಂತ್ರವನ್ನರಿಯದ ಸೀತೆ ಭಿಕ್ಷವನ್ನು ನೀಡಿದಳು (ಹಿತಕಾ. IV, ೨೩). ೩. ಸಂನ್ಯಾಸಿಗಳಿಗೆ ನೀಡುವ ಭೋಜನ, — ಊಟ: ಸ್ವಾಮಿಗಳನ್ನು ಈ ದಿನ ಭಿಕ್ಷಕ್ಕೆ ಕರೆದಿದ್ದೇವೆ (ರೂಢಿ). [ಸಂ. ಭಿಕ್ಷಾ]

**ಭಿಕ್ಷಾಂದೇಹಿ** (ಅ). ೧. 'ಭಿಕ್ಷೆಯನ್ನು ಕೊಡಿ' ಎಂಬರ್ಥದಲ್ಲಿ ಬಳಕೆ ಯಾಗುವ ಸಂಸ್ಕೃತದ ವಾಕ್ಯ : 'ಭವತಿ ಭಿಕ್ಷಾಂದೇಹಿ' ಎಂಬುದಿದುವೆ ಕಬ್ಬಿಗರ್ಗೆ ಸಿದ್ಧಿಸಿದ ಪರ್ಯಾಯ ಸಪ್ತಾಕ್ಷರೀಮಂತ್ರಂ (ರಾವಶಕ್ಕ. ೦೦೬-೦೯). ೨. (ಆಲಂ) ಭಿಕ್ಷೆಯನ್ನು ಕೊಡಿ ಎಂದು ಬೇಡುವವನು ; ತಿರುಕ ; ಭಿಕ್ಷುಕ : ಅಶನ ದೊರೆಯದಡೆ ಉಪವಾಸಿ ತಾನೆಂದೆಂದು . . . ದೆಸೆ ದೆಸೆಗಳಂ ತಿರುಗಿ ಭಿಕ್ಷಾಂದೇಹಿಯಾದ ಸಂದೇಹಿಗಳ ಶಿವನೊಲ್ಲನು (ಬಸಗೀ. ೩೩-೨೬೦) ; ನನಗೆ ಭಾವೈದನಾಗಿ ಭಿಕ್ಷಾಂದೇಹಿಯಾಗಬಾರದೆಂದು ಅಧಿ ಕಾರವನ್ನು ಕೊಡಿಸಿದರೆ ಹೀಗೆ ಹೀನಜನಾಶ್ರಿತನಾಗಿ ಉಭಯಭ್ರಷ್ಟತ್ವವನ್ನು ಹೊಂದಿರುವೆ (ಬಜ್ಞಶ. ೭ ಕಥಾಸಾರ). 'ದೇಹಿ' ಪರಾ. [ಸಂ.]

**ಭಿಕ್ಷಾಟನ** (ನಾ). ಭಿಕ್ಷೆಗಾಗಿ ತಿರುಗಾಡುವುದು ; ಭಿಕ್ಷೆ ಬೇಡುವುದು : ನಿಮ್ಮುಮನೆ ಜಱದೆನರಿದ ತಲೆಯ ಬಾಯೊಳಗೆ ರಕ್ತವನೆ ಎರೆಯಿಸುವಂದ ದಿಂದ ಭಿಕ್ಷಾಟನವನೆನಗಬೇಕಭವ (ಶೀಕೃಶ. ೨-೨-೩೭); ದೇವಸುತ್ತವದಿಂದ ಭಿಕ್ಷಾಟನಕ್ಕೆ ನಡೆದ ಶೀವಿಯನದೇವೊಗಳ್ವೆನು (ಭಿಕ್ಷಾಶ. ೦-೦೦). [ಸಂ.]

**ಭಿಕ್ಷಾಟನಂಗೆಯ್** (ಕ್ರಿ). ಭಿಕ್ಷೆಗಾಗಿ ತಿರುಗು; ಯಾಚನೆಗಾಗಿ ಮನೆಮನೆಗೆ ಹೋಗು ; ತಿರುಪೆ ಬೇಡು : ಭಿಕ್ಷಾಟನಂಗೆಯ್ಯಬೇಕೆಂದು ಮನಸಂದು ಗುಹ ಗಣಪರುಗಳಯ್ಯ ಸಿಂಗರವಾದನು (ಭಿಕ್ಷಾಶ. ೧-೦೨). [ಭಿಕ್ಷಾಟನ + ಕೆಯ್₁]

**ಭಿಕ್ಷಾಟನೆ** (ನಾ). = ಭಿಕ್ಷಾಟನ : ಐಶ್ವರ್ಯ ಕಳೆದುಕೊಂಡವರಿಗೆ, ನಿರ್ಗತಿಕ ರಾದವರಿಗೆ ಈ ಭಿಕ್ಷಾಟನೆಯೇ ಆಶ್ರಯ (ಭಿಕ್ಷಾಶ. ೨ ಪ್ರಸ್ತಾವನೆ). [ಸಂ. ಭಿಕ್ಷಾಟನ]

**ಭಿಕ್ಷಾನ್ನ** (ನಾ). ೧. ಭಿಕ್ಷೆಯಿಂದ ದೊರಕುವ ಅನ್ನ ; ಮನೆಮನೆಗೆ ಹೋಗಿ ಬೇಡಿ ತರುವ ಅನ್ನ,—ಆಹಾರ: ಭಿಕ್ಷಾನ್ನಮನುಂಡಾ ಭಾಳಾಕ್ಷಂ ಸೌರಾಷ್ಟ್ರಪತಿಗತುಳಂಗಳಮಂ ಸುಕ್ಷಮೆಯಿಂದರ್ಪಿಸುತೊಳ್ಪಕ್ಷಯಸುಖ ದೊಳ್ಪನೋಹಿಲಂ ಪಡೆದಿರ್ದಂ (ಅಶ್ವಟಿ. ೦೦-೯೦) ; ಇವಂಗೆ ಭಿಕ್ಷೆಯನಿಕ್ಕ ದೊಡೆ ತಾನೆ ಪೊಱಮಟ್ಟು ಪೋಪನೆಂದು ಭಿಕ್ಷಾನ್ನಂ ಪುಟ್ಟಿಪಂತೆಸಗಲು (ವೃಶಪು. ೨೯-೮೭ ಪ) ; ಈ ವಜ್ರವನ್ನು ಕೊಂಡುಕೊಂಡರೆ ನನಗೆ ಮುಂದೆ ಭಿಕ್ಷಾನ್ನವೇ ಗತಿ (ಮುಹಿಕ. ೨೭). ೨. ಬೇಡಿದವರಿಗೆ ನೀಡುವ ಅನ್ನ,— ಆಹಾರ : ನೀಱೆಯೊರ್ವಳನುರಾಗದಿಂ ಭಿಕ್ಷಾನ್ನಮಂ ಕಂದು ನೀಡಿ ನಿಂದಾಗಳ್ (ಅಕ್ಷಾಶ. ೨-೩೬); ಅಲ್ಲಿ ನಮ್ಮ ಜನ ಬೇಕಾದಷ್ಟು ಇರಬೇಕಲ್ಲವೆ ಭಿಕ್ಷಾನ್ನ ಹಾಕುವುದಕ್ಕೆ ? (ಹೊಸಕ್ಷಿ. ೩೯). [ಸಂ.]

**ಭಿಕ್ಷಾಪಾತ್ರ** (ನಾ). ೧. = ಭಿಕ್ಷಾಪಾತ್ರೆ. ೨. ಭಿಕ್ಷಾಪಾತ್ರೆಯನ್ನು ಹಿಡಿದವನು; ಶಿವ : ಎಲ್ಲಿಂದ ಬಂದನೋ ಈ ಮೋಹನದ ಸಿದ್ಧಂ . . . ತಾನೆಲ್ಲಿಂದ ಬಂದನೋ ವಿಸ್ಮಯಾಕಾರ ಕಾರುಣಿಕ ಭಿಕ್ಷಾಪಾತ್ರನು (ಭಿಕ್ಷಾಶ. ೨-೩೭). [ಸಂ.]

**ಭಿಕ್ಷಾಪಾತ್ರೆ** (ನಾ). ಭಿಕ್ಷೆ ಬೇಡಲು ಉಪಯೋಗಿಸುವ ಪಾತ್ರೆ ; ತಿರುಪೆ ಗಾಗಿ ಹಿಡಿದುಕೊಂಡು ಹೋಗುವ ಪಾತ್ರೆ : ಭಿಕ್ಷಾಪಾತ್ರೆ ಹಿಡಿಯುವ ಜನ ಇನ್ನೂ ನಮ್ಮಲ್ಲಿ ಕಡಮೆಯಾಗಿಲ್ಲ (ರೂಢಿ). [ಸಂ. ಭಿಕ್ಷಾಪಾತ್ರ]

**ಭಿಕ್ಷಾಶನ** (ನಾ). = ಭಿಕ್ಷಾನ್ನ ೧: ತಂದ ಭಿಕ್ಷಾಶನವನ್ನವರು ನಂದನರು ತಾಯಿಗೆ ನಿವೇದಿಸಲು (ಕುವ್ಯಾಕ. ೦೦-೪). [ಸಂ.]

**ಭಿಕ್ಷಿಸು** (ಕ್ರಿ). ತಿರುಪೆ ಬೇಡಂ ; ಯಾಚಿಸು ; ಭಿಕ್ಷೆಬೇಡು : ಅಜನ ಕಪಾಲವಂ ಪಿಡಿದಸಮನೇತ್ರನು ಭಿಕ್ಷಿಸುವನೆಂದುಸುರ್ವನು (ಬಸವ. ೩೬-೨೨). [ಭಿಕ್ಷ + -ಇಸು₃]

**ಭಿಕ್ಷು** (ನಾ). ೧. ಭಿಕ್ಷೆ ಬೇಡುವವನು ; ಯಾಚಕ ; ಭಿಕ್ಷುಕ : ವಿಜುವ ಪಳಿಕಿನ ಕುಂಡಲವ ಕಿವಿಯೊಳಿಂಬಿಟ್ಟು . . . ಮೆಜುಯ ಫಣೆಯೊಳು ತ್ರಿರೇಖೆಯು ಬೊಟ್ಟು ಭಿಕ್ಷುವೇಷವ ತಾಳ್ದನಳ್ಳಿವಟ್ಟು (ಐರಾಕ. ೧-೦೦). ೨. ಸಂಸಾರದಲ್ಲಿ ವಿರಕ್ತನಾಗಿ ಭಿಕ್ಷೆಯಿಂದ ಪ್ರಾಣಧಾರಣೆ ಮಾಡಿಕೊಂಡು ಮೋಕ್ಷಕ್ಕಾಗಿ ಪ್ರಯತ್ನಿಸುವ ಸಂನ್ಯಾಸಿ ; ನಾಲ್ಕನೆಯ ಆಶ್ರಮವನ್ನು ಕೈಗೊಂಡಿರುವ ತಪಸ್ವಿ : "ಪರಾಶರೀ, ಬ್ರತೀ, ಭಿಕ್ಷುಃ . . . ತಾಪಸಃ—ಈ ೯ ತಪಸ್ವಿ" (ಹಲಾಯು. ೬೮-೨೫೫). ೩. ಬೌದ್ಧ ಸಂನ್ಯಾಸಿ : ನಾನು ತಂದೆಯ ಬಲಾತ್ಕಾರಕ್ಕಾಗಿ ಭಿಕ್ಷು ಆಗಲಿಲ್ಲ (ಕ್ರಬಾಇ. I. ೦೫೬); ಆನಂದ ಏಳನ್ನು ಭಿಕ್ಷುಗಳನೆಚ್ಚರಿಸು (ಪ್ರಬಾಬ. ೬೫-೦); ಸ್ತೂಪಗಳಲ್ಲಿ ಭಿಕ್ಷುಗಳು . . . ಮೆರವಣಿಗೆಯಲ್ಲಿ ಹೋಗುತ್ತಿರುವ ಶಿಲಾಶಿಲ್ಪಗಳು ಬೇಕಾದಷ್ಟು ದೊರೆತಿವೆ (ಬಾಕಗ. ೪೪). ೪. ಜೈನ ಸಂನ್ಯಾಸಿ; p "ಸನ್ಯಾಸಿ, ಇವರಲ್ಲಿ ನಾಲ್ಕು ವಿಧ:- ೧. ಅನಗಾರ. ೨. ಯತಿ. ೩. ಮುನಿ. ೪. ಋಷಿ" (ಕೈಶಕೋ. ೦೯೪). [ಸಂ.]

**ಭಿಕ್ಷುಕ** (ನಾ). ೧. ಭಿಕ್ಷೆಯನ್ನು ಬೇಡಿ ಜೀವಿಸುವವನು ; ತಿರುಕ; ಯಾಚಕ : ಪುರಹರನು ಭಿಕ್ಷುಕನಾಗಿ ದ್ವಾರಾವತಿಗೆ ಬಂದ ಪರಿಯನದ ವರ್ಣಿಸುವೆನು (ಐಕ್ಷುತ. ೦ ಸ.೨೪). ೨. ವಿರಕ್ತ ; ಸಂನ್ಯಾಸಿ : ಈ ದೇಗುಲಮನೊಳಪುಗಲ್ವೇಡ ನೀನೆಂದೊಡಂ ಗರ್ವಂ ತಳ್ತಾಮೆಂದುದಂ ಲೆಕ್ಕಿಸದೊಳಪುಗುವಂ ಭಿಕ್ಷುಕಂಗೇಕಿವಂಗೀ ಪಂತಂ (ಪ್ರಸಂ. ೨೯-೯೫). ೩. ಜೈನಯತಿ ; ಸಂನ್ಯಾಸಿ ; ಶ್ರಮಣ : ಆರ್ಹತದೊಳ್. . . ಬ್ರಹ್ಮಚಾರಿಯುಂ ಗೃಹಸ್ಥನುಂ ವಾನಪ್ರಸ್ಥನುಂ ಭಿಕ್ಷುಕನುಮೆಂದು ನಾಲ್ವರಪ್ಪರ್ (ಶಾವುಂಕ. ೨೨೬) : ತದಾಶ್ರಮಿಯಪ್ಪ ಲೋಹಿತಾಶ್ವನೆಂಬ ಭಿಕ್ಷುಕಂ ಬಂದು ಚಾರುದತ್ತನ ಸಮಕ್ಷದೊಳಿರ್ದೆತ್ತಣಿಂ ಬಂದಿರೆತ್ತ ಪೋದಪಿರ್ ಎಂಬುದುಂ (ಕೀಬುಕ. ೪-೮೪ ಪ). [ಸಂ.]

**ಭಿಕ್ಷುಕಿ** (ನಾ). ೧. ಭಿಕ್ಷೆಯನ್ನು ಬೇಡಿ ಜೀವಿಸುವವಳು ; ಯಾಚಕಿ : ತೆಗೆದುಕೋ! ಭಿಕ್ಷುಕಿ! (ದಾಲಶ್ ೨೨೬.); ತಿಂಮನ ಮನೆಯ ಬಾಗಿಲಲ್ಲಿ ಭಿಕ್ಷುಕಿಯೊಬ್ಬಳು ಕೂಗುತ್ತಿದ್ದಳು (ತಿಂಮ್ಮಕ ೦೦೬). ೨. ಜೈನ ಸಂನ್ಯಾಸಿನಿ; ಕಂತಿ : "ಶ್ರಮಣಾ, ಭಿಕ್ಷುಕೀ, ಮುಂಡಾ—ಈ ೩ ಕಂತಿ" (ಹಲಾಯು. ೪೦-೩೩೩). [ಸಂ. ಭಿಕ್ಷುಕೀ]

**ಭಿಕ್ಷುಣಿ** (ನಾ). ಬೌದ್ಧಸಂನ್ಯಾಸಿನಿ : ಇಂಥ ದಿವ್ಯವಾದ ದೃಷ್ಟಿಯ ಭಗವಂತ ತಾನು ತನ್ನ ಶಿಷ್ಯರ ಸಂಗವನ್ನು ಸ್ಥಾಪಿಸಿದ ಬಹುಕಾಲಕ್ಕಾದರೂ ಸ್ತ್ರೀಯರನ್ನು ಭಿಕ್ಷುಣಿಯರನ್ನಾಗಿ ಸ್ವೀಕರಿಸಿರಲಿಲ್ಲ (ಬಾಪುಬಾ. ೦೬); ಬುದ್ಧ, ಧರ್ಮ, ಸಂಘಗಳಿಗೆ ಶರಣಾಗುವುದರಿಂದ ಭಿಕ್ಷುಗಳೂ ಭಿಕ್ಷುಣಿಯರೂ ಮುಕ್ತಿ ಪಡೆಯಬಹುದೇ ಹೊರತು ಅವನ ಸ್ಥಾನವನ್ನು ಪಡೆಯುವುದು ಸಾಧ್ಯವಿಲ್ಲವೆಂಬ ಭಾವನೆ (ಕಕ್ಯಾ. ೦೬೩); ಪ್ರಾಯಶಃ ಇದು ಭಿಕ್ಷುಣಿ ಮತ್ತು ದೇವದಾಸಿಪದ್ಧತಿಯಿಂದ ಪ್ರಾರಂಭಿಸಿರಬಹುದು (ಚುಶಾರಾಕ. ೬೦). [ಸಂ. ಭಿಕ್ಷುಣೀ]

**ಭಿಕ್ಷೆ** (ನಾ). ೧. ತಿರಿಯುವುದು; ಬೇಡುವುದು ; ತಿರುಪೆ ; ಯಾಚನೆ : "ಯಾಚ್ಞಾ, ಭಿಕ್ಷಾ, ಅರ್ಥನಾ, ಅರ್ದನಾ-೪ ಬೇಡುವಿಕೆ, ಕೇಳುವಿಕೆ, ತಿರಿದಾಡುವಿಕೆ" (ಸಿದ್ಯಾಂಕ. ೩೫೬); ಗ್ರೀವಾ, ಭಿಕ್ಷಾ—ಎಂಬೆರಡು ಶಬ್ದಂಗಳ್ಗೆ ಗ್ರೀವ, ಗ್ರೀವೆ, ಭಿಕ್ಷ, ಭಿಕ್ಷೆ ಎಂದು ನಿಜಿಸುವುದು (ಶಮುದ. ೮೨ ಪ್ರಯೋ). ೨. ಬೇಡಲು ಬಂದವರಿಗೆ ಕೊಡುವ ದಾನ,–ಅನ್ನ, ವಸ್ತ್ರ, ಹಣ ಮೊದಲಾದುವು : ಕರೆದು ಭಿಕ್ಷೆಯ ನೀಡೆ ಗೋಪ್ಯವಮ್ಮ ನಿಮ್ಮ ತರಳ ಗೋಪಾಲನಿಗೆ (ಪುರಂದ. ೩-೦೫೨ ಕಲ್ಯಾ); ಇವಂಗೆ ಭಿಕ್ಷೆಯನಿಕ್ಕದೊಡೆ ತಾನೆ ಪೊಱಮಟ್ಟು ಪೋಪನೆಂದು ಭಿಕ್ಷಾನ್ನಂ ಪುಟ್ಟದಂತೆಸಗಲು(ಪ್ರಸಂ. ೨೯-೯೬ ಪ). ೩. ಸಂನ್ಯಾಸಿಗಳು ಮತ್ತು ಮಠಾಧಿಪತಿಗಳಿಗೆ ನೀಡುವ ಭೋಜನ: ಇಂದು ಸ್ವಾಮಿಗಳನ್ನು ನಮ್ಮ ಮನೆಗೆ ಭಿಕ್ಷೆಗೆ ಕರೆದಿದ್ದೇವೆ (ರೂಢಿ).

**ಭಿಕ್ಷೆನೀಡು**=ಬೇಡಲು ಬಂದವರಿಗೆ ಏನನ್ನಾದರೂ ಕೊಡು ; ತನ್ನ ಹೃದಯವನ್ನೇ ತಂಡುಲರೂಪವಾಗಿ ಭಿಕ್ಷೆನೀಡಿದಳು (ಚಿಕಂಬಾ. ೦೦೬). **ಭಿಕ್ಷೆ ಬೇಡು**=ಯಾಚನೆ ಮಾಡು ; ತಿರಿ : ಮುಂದಿನ ಮನೆಗೆ ಹೋಗಿ ಭೀಕ್ಷೆಬೇಡು (ಅಕ್ರಬು. ೨೬). [ಸಂ. ಭಿಕ್ಷಾ]

**ಭಿಡಿಯ** 'ಬಿಡೆಯ₁' ನೋ.

**ಭಿಡೆಯ** 'ಬಿಡೆಯ₁' ನೋ.

**ಭಿತ್ತ** (ನಾ). ಚೂರು ; ಖಂಡ : "ಭಿತ್ತಂ, ಶಕಲಂ, ಖಂಡಂ, ಅರ್ಧಃ—೪ ಮುರುಕು ಚೂರುಗಳ ಹೆಸರು" (ಸಿದ್ಯಾಂಕ. ೨೯). [ಸಂ.]

**ಭಿತ್ತರಿ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ : ಬಂಡಿಕೋಲಿನ ಕೆಳಗಡೆಯಲ್ಲಿ ಬಂಡಿಕೋಲಿನಿಂದ ಮುಟ್ಟಿಸಿ ಭ್ರಮಣವನ್ನು ಮಾಡಿ ತೊಡೆಯಲ್ಲಿ ಏಟು ಆದದು ಅದು ಭಿತ್ತರಿಯೆಂದು ಸಮ್ಮತವು (ಖಡ್ಗಲಿ. ೫-೬೦). 'ತಳಭಿತ್ತರಿ' ಪರಾ. [ ? ]

**ಭಿತ್ತಿ** (ನಾ). ೧. ಮುರಿಯುವುದು ; ಒಡೆಯುವುದು ; ಬೇರ್ಪಡಿಸುವುದು. ೨. ಚೂರು ; ಮುರುಕು ; ತುಂಡು. ೩. ಒಡೆದು ಹೋಗಿರುವ ಅಥವಾ ಭಾಗವಾಗಿರುವ ಯಾವುದಾದರೂ ವಸ್ತು. ೪. ಬಿರುಕು; ಸೀಳು ; ಛಿದ್ರ. ೫. ಗೋಡೆ ; ಕುಡ್ಯ : "ಭಿತ್ತಿಃ, ಕುಡ್ಯಂ—೨ ಗೋಡೆಯ ಹೆಸರುಗಳು" (ಸಿದ್ಯಾಂಕ. ೪೪); ಇದಿರೊಳ್ ಪೊಳೆವ ಪಳುಕಿನ ಭಿತ್ತಿಯಂತೆ ಸುತ್ತಿದ ನೇತ್ರದುಕೂಲದೊಳಂ (ಶಾರಂಪು. ೬೯); ಭಿತ್ತಿ ಮೂಱು ಮೇಲೆ ಚಿತ್ರ ಬರೆಯಿತ್ತು (ಅವಕಂ. ೯೨-೪೦೯). ೬. ಚಿತ್ರವನ್ನು ಬರೆಯುವ ಮೂಲ ಆಧಾರ ; ಹಲಗೆ, ಬಟ್ಟೆ, ಗೋಡೆ ಮೊದಲಾದ ಸಾಧನ : "ಭಿತ್ತಿಯನೆ ಪುಸ್ತಕಂ" (ಚುಂಗರಾ. ೮೦೬-೦೫); ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ (ಬಸವ. ೩೯೮); ಭಿತ್ತಿಯೊಂದಿಲ್ಲದಿರೆ ಚಿತ್ರದೆಂತಿರಲಹುದು ? ಚಿತ್ರವಿಲ್ಲದೆ ಭಿತ್ತಿ ಸೊಗಸಹುದೆಂತು ? (ಮಂಕುಕ. ೦೦೫). ೭. ಮೂಲ ; ತಳ : ಅರ್ಚನೆಯವನರ್ಚಿಸಿದಲ್ಲಿ ಪುಣ್ಯದ ಫಲ ಭಕ್ತಿಯಿಂ ದ್ರವ್ಯವ ಕೊಡುವುದು ಮುಕ್ತಿಲೋಕದೊಳಗು ಈ ಉಭಯದ ಭಿತ್ತಿಯನಱಿದು ನಿತ್ಯವ ತಿಳಿದವಂಗೆ ಏನೂ ಎನಲಿಲ್ಲ (ಶೋಧಿಪಾ. ೦೬-೬೦). ೮. ಜೀವನ ನಡೆಸಲು ಅಥವಾ ದೇವತೋತ್ಸವಾದಿಗಳು ನಡೆಯಲು ಸ್ಥಾಪಿಸುವ ಆಧಾರಭೂತವಾದ ಶಾಸನವುಳ್ಳ ಭೂಮಿ, ಇಡುಗಂಟು ಮೊದಲಾದುವು; ಆಶ್ರಯನಿಧಿ: ಉತ್ಸವಗಳು ನಡೆಯತಕ್ಕ ಬಗೆ ನಮ್ಮ ಹತ್ತು ಮಂದಿ ಒಪ್ಪಿ ಭಿತ್ತಿ ಮಾಡಿ ಕೊಟ್ಟಿರುವುದೇನೆಂದರೆ (ಎಕ. IX (S), ಆನೇಕ. ೦೦೬ ೬; 1802). ೯. ಹಿನ್ನೆಲೆ : "ಮುಂದುಗಡೆ ಇರುವ ಮುಖ್ಯ ವ್ಯಕ್ತಿಗಳಿಗೆ ಅಥವಾ ವಸ್ತುಗಳಿಗೆ ಪ್ರಾಧಾನ್ಯಕೊಡುವಂಥ ದೃಶ್ಯ . . . ಹಿನ್ನೆಲೆ ; ಭಿತ್ತಿ ; ಮರೆ ; ಅಪ್ರಸಿದ್ಧಿ" (Back-ground. ಇಂಕ). [ಸಂ.]

**ಭಿತ್ತಿಚಿತ್ರ** (ನಾ). ಗೋಡೆಯ ಮೇಲೆ ಬರೆದಿರುವ ಚಿತ್ರ : ಭಿತ್ತಿಚಿತ್ರಾಳೋಕೇಕವಿನೋದದಿಂ. . . ರಯ್ಯಮೆನಿಸಿತ್ತುರ್ವೀಶಶಯ್ಯಾಗೃಹಂ (ಪುಷ್ಪಕ. ೯-೯೬); ಪ್ರಕೃತ ಅವಲೋಕನದಲ್ಲಿ . . . ಚೋಳರ ಕಾಲಗಳ ವರೆಗೆ, ಆ ಮೇಲೆ ತಿರುವಾಂಕೂರು—ಕೊಚ್ಚಿ ಭಿತ್ತಿಚಿತ್ರಗಳಿಂದ ಲೇಪಾಕ್ಷಿ ಕಲೆಯ ವರೆಗೆ . . . ಪರಿಚಯ ಮಾಡಿಕೊಡಲು ಉದ್ದೇಶಿಸಲಾಗಿದೆ (ಭಾರದ. ೫೨೨); ಅಜಂತಗುಹಾಲಯದಲ್ಲಿ ಭಿತ್ತಿಚಿತ್ರಗಳಿರುವ ಸಂಗತಿ ಅನೇಕರಿಗೆ ತಿಳಿದದ್ದೇ (ಬಾಕಗ. ೦೨). [ ಸಂ. ]

**ಭಿತ್ತಿದೋಷ** (ನಾ). [ಕಾವ್ಯಮೀ] ಒಂದು ಬಗೆಯ ಕಾವ್ಯದೋಷ ; ಸಂಧಿ ಮಾಡಬೇಕಾದ ಸ್ಥಳದಲ್ಲಿ ಸಂಧಿಯನ್ನು ಮಾಡದಿರುವುದು; ವಿಸಂಧಿ : ಮುನ್ನಂ ಪೇಟ್ದಿರ್ದರ್ಥಂ ಭಿನ್ನಪ್ರಸ್ತಾರ ಭಿತ್ತಿದೋಷಿಇನು ಗತಂ (ಕವಿರಾ. ೦-೯೭). ☞ "ಜನಪತಿಗೆ ಒಸಗೆಯಂ ಪುರಜನಮೆಲ್ಲಂ ಬೀಱುತಿರ್ಪರಾಗಳ್ ತಾಮುಂ" ಎಂಬಲ್ಲಿ 'ಜನಪತಿಗೊಸಗೆಯಂ' ಎಂಬುದನ್ನು, ಒಂದು ಮಾತ್ರೆ ಕಡಮೆ ಬೀಳುವುದೆಂದು ಕವಿ 'ಜನಪತಿಗೆ ಒಸಗೆಯಂ' ಎಂದು ಬಿಡಿಸಿದ್ದಾನೆ. ಹೀಗೆ ಒಡೆಯ ಬಾರದ ಸ್ಥಳದಲ್ಲಿ ಒಡೆದರೆ ಭಿತ್ತಿದೋಷ. [ಸಂ.]

**ಭಿತ್ತಿಪತ್ರ** (ನಾ). ಯಾವುದಾದರೂ ಒಂದು ವಿಷಯವನ್ನು ಪ್ರಚಾರ ಮಾಡುವುದಕ್ಕಾಗಿ ಜನರಿಗೆ ಚೆನ್ನಾಗಿ ಕಾಣಲೆಂಬ ಉದ್ದೇಶದಿಂದ ಗೋಡೆಗಳಿಗೆ ಅಂಟಿಸುವ ಪತ್ರ; ಪ್ರಚಾರಪತ್ರ : ಆಕಾಶದ ಬೆನ್ನ ಮೇಲೆ ಭಿತ್ತಿಪತ್ರ ಓದಿದೆ (ಅಕಕೋ. ೦೯); ಸಾಂಡರ್ಸ್ ಕೊಲೆ ಸಂಬಂಧದ ಭಿತ್ತಿಪತ್ರಗಳನ್ನು ಭಗತ್‌ಸಿಂಗ್ ಬರೆದುದೂ ತಿಳಿಯಬಂತು (ಅತ್ಯಾಕ್ರ. ೦೦೯); ಈ ಕಾಯಿಲೆಯ ವಿಚಾರವನ್ನು ಭಿತ್ತಿಪತ್ರಗಳ ಮೂಲಕವಾಗಲಿ. . . ನಾಗರಿಕರಿಗೆ ಅರಿವಾಗುವಂತೆ ವಿವರಿಸಬೇಕು (ಕಂಕೋ. ೮೦). ☞ ಇದು ಇಂಗ್ಲಿಷಿನ 'Wall Poster' ಎಂಬುದರ ಕನ್ನಡ ಅನುವಾದ. [ಸಂ.]

**ಭಿದುರ** (ಗು). ೧. ಮುರಿಯುವ; ಒಡೆಯುವ ; ಸೀಳುವ. (ನಾ). ೨. ಮುರಿಯುವವನು ; ಒಡೆಯುವವನು : ಮದವದರಿಹಸ್ತಿಮಸ್ತಕಭಿದುರಂ [ಭಯ]ವಿಧುರನನ್ಯಬಾಣಚ್ಛಿದುರಂ. . . ವೃಷಸೇನಂ (ಗದಾಯು. ೯-೬೩). ೩. ಇಂದ್ರನ ವಜ್ರಾಯುಧ; ಅಶನಿ : "ಪವಿಃ, ಅಶನಿಃ. . . ಗೌಃ, ಭಿದುರಂ. . . ಶಂಬಃ — ಈ ೧೨ ಇಂದ್ರನ ವಜ್ರಾಯುಧದ ಪೆಸರ್" (ಹಲಾಯು. ೦೦-೩೩) ; ಅರಿಭೂಭೃದ್ಗಿರಿದುಗ್ಗ ಸಂಗಭಿದುರ ಜ್ವಾಲಾನಳಂ . . . ಬಲ್ಲಾಳನೃಪಾಲ ಭೈರವತರಪ್ರೋದ್ಯತ್ಪ್ರತಾಪಾನಳಂ (ಎಕ. VI, ಕಡೂರು. ೦೨೯-೨೨ ; 1218) ; ತಾವು ಗೋಚರವಾಗದಿರೆ ಕೋಪ ವೆಗ್ಗಳಿಸಿ ಶಿವ ಭಿದುರೋಪಮಿತಶಬ್ದವೇಧಿಯ ತೆಗೆದು ತಾವವನ್ನರಿದು ಕೊಂದಪೆ ನೆನಲು (ಪಂಪಾಶ. ೦-೦೨-೯೨). ೪. ವಜ್ರಾಯುಧವನ್ನುಳ್ಳವನು, ಇಂದ್ರ; ದೇವೇಂದ್ರ: ಅರಿರಾಯಗರ್ವಪರ್ವತದಳನಭಿದುರನುರುತರವಿಪಕ್ಷ ಪ್ರಬಲಸೇನಾಬ್ಧಿಬಾಡಬಂ (ಅಶಾಶ. ೦-೦-೯೯). ೫. ಸುಲಭವಾಗಿ ಒಡೆಯುವಂತಹುದು; ಭಂಗುರವಾದುದು. ೬. ಬೆರಕೆಯಾದುದು ; ಮಿಶ್ರವಾದುದು. ೭. ಆನೆಯ ಕಾಲಿನ ಸರಪಳಿ. ೮. ಸಿಡಿಲು. [ಸಂ.]

**ಭಿದೆ** (ನಾ). ೧. ಒಡೆಯುವುದು; ಮುರಿಯುವುದು : "ಭಿದೆ ಸ್ಫುಟನಮಕ್ಕುಂ" (ಷಟ್ಕನಿಘ. ೦೦೯-೨೨). ೨. ವ್ಯತ್ಯಾಸ ; ಭೇದ : ರೂಪನಾಮ ಪಿಡಿದು ಭಿದೆಯಂ ಸ್ಥಾಪಿಸಲು (ಶಿವತ. ೦೨-೯೦). ೩. ರೀತಿ; ವಿಧ; ಬಗೆ. [ಸಂ. ಭಿದಾ]

**ಭಿದ್ಯ** (ನಾ). ದಂಡೆಯನ್ನು ಭೇದಿಸಿಕೊಂಡು ರಭಸದಿಂದ ಹರಿಯುವ ಹೊಳೆ ; ಗಂಡುಹೊಳೆ ; ನದ : "ಭಿದ್ಯಃ, ಉದ್ಯಃ, ನದಃ —ಈ ೩ ಗಂಡುದೊಱೆ" (ಹಲಾಯು. ೦೦೦-೯೯). [ಸಂ.]

**ಭಿನ್ನ** (ಗು). ೧. ಒಡೆದ ; ಮುರಿದ. ೨. ವಿಭಾಗಿಸಿದ ; ಬೇರ್ಪಡಿಸಿದ. ೩ ಬಿಡಿಸಿದ ; ತೆರೆದ. ೪. ಅರಳಿದ; ವಿಕಾಸಹೊಂದಿದ. ೫. ಬೇರೆಬೇರೆಯಾದ ; ಪ್ರತ್ಯೇಕವಾದ : ಭಿನ್ನ ಅಂಕಿ ಅಂಶಗಳನ್ನು ಹೋಲಿಸುವಾಗ ಪ್ರಶ್ನೆಗಳು ತುಂಬಾ ಸಹಾಯವಾಗುತ್ತವೆ (ಶಿಕ್ಷಣ. ೨೭೯). ೬. ವ್ಯತ್ಯಾಸಗೊಂಡ ; ವ್ಯತ್ಯಯಹೊಂದಿದ. (ನಾ). ೭. ಒಡೆದು ಹೋದುದು ; ಸೀಳಿಹೋದುದು ; ಹಾಳಾದುದು : "ಭಗ್ನಮೆನೆ ರುಗ್ಣಮೆನೆ ಶಿನ್ನಮೆನೆ . . . ಭಿನ್ನಮೆನೆ ಕೆಟ್ಟುದು" (ಮಂಗರಾ. ೦೩೨-೨೩) ; ಜಲಧಿ ನುಂಗಿತ್ತಯ್ಯಾ ಎನ್ನ ಕರವು ಪತ್ರೆಯ ನುಂಗಿತ್ತಯ್ಯಾ ಶಿಖಿ ಎನ್ನಯ ಮಂತ್ರ ಭಿನ್ನವಾಯಿತ್ತು (ಬಸವ. ೯೩೩) ; ಭಿನ್ನವಾದ ಗಡಿಗೆ ಹೊನ್ನು ಕೊಟ್ಟರೆ ಸಮನಾದೀತೆ ? (ಗಾದೆ). ೮. ತುಂಡು ; ಚೂರು ; ಶಕಲ. ೯. ಬೇರೆಯಾದುದು ; ಪ್ರತ್ಯೇಕವಾದುದು ; ಅನ್ಯ : ನೀನೆ ಸರ್ವೇಶ ಸರ್ವಗಸರ್ವಾತ್ಮಕ ಸರ್ವಭೂತಮಯ ನಿನ್ನಿಂ ಭಿನ್ನವಾಗಿರ್ಪ ವಸ್ತುಗಳಿಲ್ಲ (ಜಗಂ. ೫-೯೯) ; ಅಭವನೊಳ್ಪೆರೆದಾ ಮನವುಂ ನೆನಹುಂ ವಾಂಛೆಯುಮುನ ವರತಂ ಭಿನ್ನವಿಲ್ಲದಿರ್ಕುಂ ನಿಜದಿಂ (ಹರಿಶ್ಚಂದ್ರ. ೨-೩೯). ೧೦. ಅರ್ಧಭಾಗ : "ಖಂಡಃ, ಅರ್ಧಃ (ರ್ಧಂ), ನೇಮಃ, ಶಕಲಂ, ಭಿನ್ನಂ, ಸಾಮಿ — ಈ ೬ ಅರ್ಧಂ" (ಹಲಾಯು. ೦೦೮-೨೫) ; "ಶಕಲಮೆನೆ ನೇಮಮೆನೆ ಭಿನ್ನಮೆನೆ ಖಂಡಮೆನಲರ್ಧಕ್ಕೆ ನಾಮಂ" (ಮಂಗರಾ. ೦೨೯-೦೪). ೧೧. ಕುಂದು ; ಕೊರತೆ ; ದೋಷ : ತನ್ನ ಭಿನ್ನವನಱಿಯದೆ ಅನ್ಯರನೆಂಬ ಕುನ್ನಿಯನೇನೆಂಬೆ . . . ದೇವಾ (ಬಸವ. ೦೦೫) ; ದೇವಗೊಂದಿಷ್ಟು ಭಿನ್ನವಾದರೆ ಭಾಮಿಸರು (ಬಸ್ತಿಪು. ೭೨-೯೦). ೧೨. ಸೀಳಲ್ಪಟ್ಟವನು ; ಭೇದಿಸಲ್ಪಟ್ಟವನು ; ನಾಶಮಾಡಲ್ಪಟ್ಟವನು : ನಿನ್ನಿಂ ಭಿನ್ನವಾಗಿರ್ಪ ವಸ್ತುಗಳಿಲ್ಲೀ ರಿಪು ಭಿನ್ನನಾದನಿದು ಚಿತ್ರಂ ಪದ್ಮಪತ್ರಾಂಬಕಾ (ಜಗಂ. ೫-೯೯). ೧೩. ಬೇರೆಯಾದವನು ; ಬೇರೆಯಾದ ವ್ಯಕ್ತಿ: ಭಿನ್ನನಂತಿಸೆ ತೋಱೆ ಭಿನ್ನಾಭಿನ್ನನೆನಿಸಿಯೆ ಮೆಱೆವ ತಿಳಿಯಲಭಿನ್ನನೈ ಮುರವೈರಿ (ಉತ್ತರಾ. ೯-೭೦). ೧೪. [ಗಣಿತ] ಭಾಗಿಸುವುದು ; ಭಾಗಾಹಾರ ; ಸತ್ತುತಗೆಯಂ ಸಂಹೃತಂ ತವೆ ಭಕ್ತಿ ಭಿನ್ನ ಚಿನ್ನದಿತಂ ದಾಪ್ತಭಾಷೆಗಳ್ ಭಾಗಿಸೂದೆಂದಱೆ ನೀನಪಂ ಬುಧಾ ? (ವ್ಯವಹಾ. ೦೨-೦೫). ೧೫. [ಸಂಗೀತ] ರಾಗ ಜಾತಿಗಳಲ್ಲಿ ಒಂದು : ರಾಗಜಾತಿಗಳು ಶುದ್ಧ ಭಿನ್ನ ಗೌಡ ಅಷ್ಟ ಸಾಧಾರಣ ಸಪ್ತಸಾಧಾರಣ ಷಟ್ಸ್ವರವೆಂಬಾಱುಜಾತಿಗಳು (ಶಿವತ. ೯೭). [ಸಂ.]

**ಭಿನ್ನಂಗೆಯ್**, ಭಿನ್ನಗೈ (ಕ್ರಿ). ೧. ಸೀಳು ; ನಾಶಮಾಡು : ಲೋಕಾಳಿ ಸಂತಾಪಮಂ ಭಿನ್ನಂಗೆಯ್ಯಲೊಡರ್ಚೆ ಪಾಲ್ಗಡಲನೆಯ್ದಾಲೋಡನಂಗೆಯ್ದು (ಹರಿಶ್ಚಂದ್ರ. ೨-೫೮). **ಭಿನ್ನಗೈ** : ೨. ಭೇದಮಾಡು ; ಪಕ್ಷಪಾತವನ್ನು ಮಾಡು : ತನ್ನನಿಯಳ ತನ್ನೊಡವೆ ಮೈಬಳಗವ್ ಭಿನ್ನಗೈಯದೆ ಬೆರಸುವುದು (ಹರಿಭ. ೬-೯೩). [ಭಿನ್ನ + ಕೆಯ್$_1$]

**ಭಿನ್ನಕರ್ತೃ** (ನಾ). [ವ್ಯಾಕ] ಕ್ರಿಯಾಪದ ವಾಚ್ಯವಾದ ಕ್ರಿಯೆಯನ್ನು ಮಾಡುವ ವ್ಯಕ್ತಿಯನ್ನು ಪ್ರೇರಿಸುವವನು ; ಕ್ರಿಯೆಯನ್ನು ನಿರ್ವಹಿಸುವ ವ್ಯಕ್ತಿಯಿಂದ ಬೇರೆಯಾದ ವ್ಯಕ್ತಿ ; ಪ್ರಯೋಜಕ ಕರ್ತೃ ; ಪ್ರೇರಕ ಕರ್ತೃ : ಭಿನ್ನಕರ್ತೃವಿನೊಳಿಸುವಿಲ್ಲ (ಶಮದ. ೨೩೦. ಪ್ರಯೋ). [ಸಂ.]

**ಭಿನ್ನಕರ್ತೃಕ** (ನಾ). ೧. = ಭಿನ್ನಕರ್ತೃ : ಅಥ ಭಿನ್ನಕರ್ತೃಕ ಪ್ರಯೋಗೇ _ ಪೆರ್ಚಿಸು _ ವರ್ಧನೇ, ಬೆರ್ಚಿಸು – ಭಯೇ (ಕರ್ಣಾ. ೬). ೨. ಪ್ರಧಾನ ಕ್ರಿಯೆಯ ಕರ್ತೃವಿನಿಂದ ಭಿನ್ನವಾದ ಕರ್ತೃವನ್ನು ಹೊಂದಿರುವ ಅಪೂರ್ಣಕ್ರಿಯಾಪದ : ಅಪೂರ್ಣಕ್ರಿಯಾಪದಗಳು . . . ಇವುಗಳಲ್ಲಿ ಏಕಕರ್ತೃಕ, ಭಿನ್ನಕರ್ತೃಕ ಎಂದು ಎರಡು ವಿಧಗಳಿವೆ . . . ಕಡೆದೊಡೆ ಪಾಲ್ಗಡಲ್ ವಿವಿಧ ವಸ್ತುವನೀಯದೆ ಎಂಬಲ್ಲಿ ಕಡೆವ ಕ್ರಿಯೆಯೂ ಈವ ಕ್ರಿಯೆಯೂ ಒಂದೇ ಕರ್ತೃವಿನಿಂದ ಆದುವಲ್ಲ ; ಭಿನ್ನಕರ್ತೃಕವಾದುವು (ಕೃಶಿಪ. ೯೯). [ಸಂ.]

**ಭಿನ್ನಕುಂಭ** (ನಾ). ಒಡೆದ ಗಡಿಗೆ,– ಮಡಕೆ : ಭಿನ್ನಕುಂಭದೊಳಿಱಿದುದಕದಂತೆ ನೆಳಲುಗೆಟ್ಟ ಮಹೀಜದಂತೆ (ಬಸವು. ೬೦-೫೦). [ಸಂ.]

**ಭಿನ್ನಕೌಶಿಕ** (ನಾ). [ಸಂಗೀತ] ಒಂದು ರಾಗದ ಹೆಸರು : ಭಿನ್ನಷಡ್ಜ ಭಿನ್ನತಾನ ಭಿನ್ನಕೌಶಿಕ ಮಧ್ಯಭಿನ್ನವೆಂದು ನಾಲ್ಕು ರಾಗಂಗಳು ಗೌಡ ಜಾತೀಯಂಗಳು (ಶಿವತ. ೨೩೩). [ಸಂ. ಭಿನ್ನಕೌಶಿಕೀ]

**ಭಿನ್ನಗಣ್ಣು** (ನಾ). ತಪ್ಪುದೃಷ್ಟಿ ; ಸರಿಯಲ್ಲದ ನೋಟ : ತನ್ನಲ್ಲಿ ತಾ ಸುಮಧಾನಿಯಾಗಿ ನೋಡಲಱಿಯದೆ ಭಿನ್ನಗಣ್ಣಲಿ ನೋಡಿಹೆನೆಂದು ತಮ್ಮ

ಮುಟಿದು ಇನ್ನುಳಿದಂದು ಅಱಿಸುವ ಅಣ್ಣಗಳಿರಾ ನೀವು ಕೇಳಿರೋ (ಅಂಗಪ. ೦೩–೩೦). [ಭಿನ್ನ + ಕಣ್ಣು (< ಕಣ್)]

**ಭಿನ್ನಗ್ಗೈ** 'ಭಿನ್ನಂಗೆಯ್' ನೋ.

**ಭಿನ್ನತಾನ** (ನಾ). [ಸಂಗೀತ] ಒಂದು ರಾಗದ ಹೆಸರು : ಭಿನ್ನಷಡ್ಜ ಭಿನ್ನತಾನ ಭಿನ್ನಕೌಶಿಕ ಮಧ್ಯಭಿನ್ನವೆಂದು ನಾಲ್ಕು ರಾಗಂಗಳು ಗೌಡ ಜಾತೀಯಂಗಳು (ಬವೇಶ. ೨೩೩). [ಸಂ.]

**ಭಿನ್ನತೆ** (ನಾ). ಬೇರೆಬೇರೆಯಾಗಿರುವಿಕೆ ; ವ್ಯತ್ಯಾಸ : ಮನುಷ್ಯನಲ್ಲಿ ಸಾಹಸ, ಹೇಡಿತನ ಮುಂತಾದುವು ಸ್ನಾಯುಸಂಸ್ಥಾನದ ಭಿನ್ನತೆಯಿಂದುಂಟಾಗುತ್ತದೆ (ಶೀವಾತ್ಮ. ೫೭); ಕಲಿಯುವ ಭಾಷೆಗೂ ಆಡುವ ಭಾಷೆಗೂ ತುಂಬ ಭಿನ್ನತೆ ಇದೆ (ಶಿಕ್ಷದ. ೦೨೯). [ಸಂ. ಭಿನ್ನತಾ]

**ಭಿನ್ನಪಂಚಮ** (ನಾ). [ಸಂಗೀತ] ಒಂದು ರಾಗದ ಹೆಸರು : ಗಾನಸಾಮವರಾಲಿಯ ಮೇಳದಲ್ಲಿ ಪೂರ್ವವರಾಲಿ(ಕಾ), ಭಿನ್ನಪಂಚಮರಾಗ ಹೀಗೆ ಎರಡು ರಾಗಗಳನ್ನು ಹೇಳಿದೆ (ತತಾಶ್ರ. ೦೨೯). [ಸಂ.]

**ಭಿನ್ನಪದ** (ನಾ). [ವ್ಯಾಕ] ಸಮಾಸವಾಗದೆ ಇರುವ ಬೇರೆಬೇರೆ ಪದ : ವ್ಯಸ್ತಪದ : ಭಿನ್ನಪದದೊಳಂ ಸಮಾಸಪದದೊಳಂ ಣಕಾರಕ್ಕೆ ಪರಮಾದ ನಕಾರಂ ಣಕಾರಮನೆಯ್ದುಗುಂ (ಶಮಂದ. ೦೫೯ ವೃತ್ತಿ). [ಸಂ.]

**ಭಿನ್ನಪಾಠ** (ನಾ). ಸಂಪಾದಿತ ಗ್ರಂಥಗಳಲ್ಲಿ ಸೂಚಿಸಿರುವ ಬೇರೆ ಪಾಠ ; ಪಾಠಾಂತರ : ಇಲ್ಲಿ ನಮಗೆ ಎರಡು ಪಾಠಗಳಲ್ಲಿ ಒಂದನ್ನು ಆಯುವ ಅವಕಾಶವಿದೆ. ಇವುಗಳನ್ನು ಭಿನ್ನಪಾಠಗಳು (variants) ಎಂದು ಕರೆಯುತ್ತಾರೆ (ಛಾರಶ. ೫೩). [ಸಂ.]

**ಭಿನ್ನಪಾಠವಾಹಕ** (ನಾ). ಒಂದು ಮೂಲಪ್ರತಿಯಿಂದ ಜನ್ಯವಾಗಿರಬಹುದಾದ ಪಾಠಾಂತರಗಳನ್ನುಳ್ಳ ಹಸ್ತಪ್ರತಿಗಳಲ್ಲಿ ಒಂದು : ಇವರೆಡರಲ್ಲಿ ಒಂದು 'z' ಪಾಠವಾಗಿರಬಹುದು. ಇಂಥ ಸಂದರ್ಭಗಳಲ್ಲಿ 'x', 'y' ಮತ್ತು 'A' ಗಳನ್ನು 'z' ಮೂಲಪ್ರತಿಯ ಭಿನ್ನಪಾಠವಾಹಕಗಳು (Variant bearers) ಎಂದು ಕರೆಯಬಹುದು (ಛಾರಶ. ೫೩). [ಸಂ.]

**ಭಿನ್ನಭಾಜನ** (ನಾ). ೧. ಮಡಕೆಯ ಚೂರು ; ಓಡು ; ಬೋಕಿ : ವಿಜ್ಞಾನಮಾತ್ರಮೆ ತತ್ತ್ವಮಾತ್ಮಾದಿ ತತ್ತ್ವಮಿಲ್ಲೆಂಬ ನಿನ್ನ ಮಾತು ಭಿನ್ನಭಾಜನಸಮಾನಮೆಂದು ಸಂಭಿನ್ನಮತಿಗಂ ಪ್ರತಿಭಾಭಂಗಮಂ ಮಾಡಿ (ಆಪು. ೨–೦೦ ವ). ೨. (ಆಲಂ) ಅಪ್ರಯೋಜಕ ವ್ಯಕ್ತಿ : ಪುತಮಂ ಕೈಕೊಂಡೆಡೆಯೊಳ್ ಬಿಸುಟ್ಟವನೆ ಭಿನ್ನಭಾಜನಮಲ್ತೇ (ಶಂರಾಮಾ. ೧೦–೦೬೦). [ಸಂ.]

**ಭಿನ್ನಭಾವ** (ನಾ). ಬೇರೆಯ ಭಾವನೆ ; ಅನ್ಯಭಾವ : ಅಂಬುಧಿಯೊಳಗೆ ಬಿದ್ದ ಆಲಿಕಲ್ಲಂತೆ ಭಿನ್ನಭಾವವಱಿಯದೆ ಶಿವಾಶಿವಾ ಎನುತಿರ್ದೆನು ನಾನು (ಬಸವ. ೯೯೦) ; ಭಿನ್ನಭಾವಪ್ರಕೃತವಿಕೃತೋತ್ಪನ್ನಭೂತಂಗಳು . . . ವಾರಸತಿಯರ ಮನಸುಗಳು ಮತ್ತೆ (ಬಸಪು. ೪೦-೬೬) ; ಭಿನ್ನಭಾವಗಳಲ್ಲಿ ಸಹಾನುಭೂತಿ ಇದ್ದ ಕಾಲದಲ್ಲಿ ಭಾರತದ ಸಂಸ್ಕೃತಿ ಸರ್ವತೋಮುಖವಾಗಿ ಬೆಳೆಯಿತು (ಭಾರತ. ೩೩೪). [ಸಂ.]

**ಭಿನ್ನಮುಖ** (ನಾ). ವಿರೋಧ : ತನ್ನ ಚಿಂತೆಯದೊಂದು ದೈವದಗನ್ನಗತಕವದೆರಡು ಭಾವದ ಬಿನ್ನಣಿಯ ಬಗೆ ಮೂಱು ದೈವದ ಭಿನ್ನಮುಖ ನಾಲ್ಕು (ಕುಮಾವ್ಯಾಉ. ೩-೫). 'ಅಭಿಮುಖ' ಪರಾ. [ಸಂ.]

**ಭಿನ್ನಮುಹೂರ್ತ** (ನಾ). [ಜೈನ] ಒಂದು ಮುಹೂರ್ತ ಅಥವಾ ಎರಡು ಘಳಿಗೆಯಿಂದ ಅತ್ಯಲ್ಪ ಕಡಮೆಯಾಗಿರುವ ಕಾಲ : ಒಂದು ಮುಹೂರ್ತದಲ್ಲಿ ಒಂದು ಸಮಯದಷ್ಟು ಕಡಮೆಯಾಗಿರುವ ಕಾಲ : ಒಂದು ಮುಹೂರ್ತದೊಳಗಿಂದ ಒಂದು ಸಮಯವು ಕಡಿಮೆಯಾದರೆ, ಅದು ಭಿನ್ನಮುಹೂರ್ತವೆನಿಸುವುದು (ಕೃಪಶ. ೩೦೭). [ಸಂ.]

**ಭಿನ್ನಯಿಸು** 'ಭಿನ್ನಿಸು' ನೋ.

**ಭಿನ್ನರಾಶಿ** (ನಾ). ೧. [ಗಣಿತ] ಒಂದು ಪೂರ್ಣಾಂಕವನ್ನು ಒಡೆದರೆ ಬರುವ ಭಾಗ ; ಒಂದು ಎಂಬ ಸಂಖ್ಯೆಗಿಂತ ಕಡಮೆಯಾದ ಭಾಗ; ಕಾಲು, ಅರ್ಧ ಮೊದಲಾದುವು ; ಅಪೂರ್ಣಾಂಕ ; ಭಿನ್ನಾಂಶ : ಸುಮಾರು ಕ್ರಿ. ಪೂ. ೨೪೦೦ಕ್ಕೆ ಸೇರುವ ಶಾಸನಗಳಲ್ಲಿ ಪದಾರ್ಥಗಳ ಅಳತೆ, ತೂಕ ಮುಂತಾದುವುಗಳೂ, ಬಡ್ಡಿಯ ವ್ಯವಹಾರವೂ $\frac{೧}{೩}$, $\frac{೧}{೪}$, $\frac{೩}{೪}$ ಎಂಬ ಭಿನ್ನರಾಶಿಗಳೂ ಕಂಡುಬರುತ್ತವೆ (ಗಪಠ. ೫). ೨. ಅಪೂರ್ಣಾಂಕ ಲೆಕ್ಕ : ಭಿನ್ನರಾಶಿಗೆ ಸಂಬಂಧಿಸಿದ ಸಂಕಲನ, ವ್ಯವಕಲನ ಮೊದಲಾದ ಲೆಕ್ಕಗಳು : ಸ್ವಾಮಿನಾಥ ಅರ್ಧಗಂಟೆಹೊತ್ತು ಕುಳಿತು ಭಿನ್ನರಾಶಿ ಲೆಕ್ಕ ಮಾಡಿದ (ಸ್ವಾಮಿಸ್ನೇ. ೫೯). [ಸಂ.]

**ಭಿನ್ನರುಚಿ** (ನಾ). ೧. ಬೇರೆಬೇರೆ ರೀತಿಯ ರುಚಿ ,– ಸ್ವಾದ : ಸಕ್ಕರೆ, ಉಪ್ಪು ಎರಡೂ ಭಿನ್ನರುಚಿಯ ಪದಾರ್ಥಗಳು (ರಜಂ). ೨. ಬೇರೆಬೇರೆ ರೀತಿಯ ಅಭಿರುಚಿ, – ಆಸಕ್ತಿ, – ಅಪೇಕ್ಷೆ : ಅವರಿಬ್ಬರೂ ಅಣ್ಣತಮ್ಮಂದಿರಾದರೂ ಭಿನ್ನರುಚಿಯುಳ್ಳ ವ್ಯಕ್ತಿಗಳು (ರಜಂ). ೩. ಬೇರೆ ಬೇರೆ ರೀತಿಯ ಅಭಿರುಚಿಯುಳ್ಳ ವ್ಯಕ್ತಿ : ಭಿನ್ನರುಚಿಗಳಾಗಿ ತಂತಮ್ಮ ಮೆಚ್ಚನಿಚ್ಚೆಯ ಪೂಗಳನೆ ಪೊಗಟೆ (ಆದಿಪು. ೦೦-೦೨೩ ವ). [ಸಂ.]

**ಭಿನ್ನಲಿಂಗ** (ನಾ). [ವ್ಯಾಕ] ಬೇರೆಬೇರೆಯ ಲಿಂಗ : ಭಿನ್ನಲಿಂಗದ ಅನೇಕ ಕರ್ತೃಪದಗಳಿರುವಲ್ಲಿ ಕ್ರಿಯಾಪದಕ್ಕೆ ಕಡೆಯ ಕರ್ತೃಪದದ ಲಿಂಗವು ಬರುವುದು. ಉದಾ :— ಆನೆಯುಮರಸನುಮರಸಿಯುಂ ಬಂದರ್ (ಕೈಪಿಡಿ. ೫೯). [ಸಂ.]

**ಭಿನ್ನವಿದ್ಯ** (ನಾ). ವಿದ್ಯಾಬಲವನ್ನು ಕಳೆದುಕೊಂಡವನು : ಬಹುರೂಪದಿಂ ಕಾಡುತ್ತಿರ್ದಸುರಂ ದೀನಜನತಾಕಲ್ಪಾಂಘ್ರಿಪನಿಂ ಭಿನ್ನವಿದ್ಯನುಮಭಿನ್ನಸನ್ನಾಹನುಮಾಗಿ ಪೆಱತಗೆದು ಪೋಗಿ (ಶಾಂತಿಪು. ೬–೩೮ ವ). [ಸಂ. (ಭಿನ್ನ + ವಿದ್ಯಾ + —)]

**ಭಿನ್ನವಿಸು** 'ಭಿನ್ನಿಸು' ನೋ.

**ಭಿನ್ನವೃತ್ತ** (ನಾ). [ಛಂದ] ಕಾವ್ಯಗಳಲ್ಲಿ ಉಂಟಾಗುವ ಒಂದು ಬಗೆಯ ವಾಕ್ಯದೋಷ ; ಒಂದು ವೃತ್ತದಲ್ಲಿ ನಿಯಮಿತವಾಗಿರುವ ಗುರು ಲಘುಗಳಂ ವ್ಯತ್ಯಾಸವಾಗಿ ಅಕ್ಷರವಾಗಲಿ ಮಾತ್ರೆಯಾಗಲಿ ಹೆಚ್ಚು ಕಡಮೆಯಾಗುವಿಕೆ ; ಛಂದೋಭಂಗ : ಸುವಿದಿತ ಯತಿಭಂಗಂ ಭಿನ್ನವೃತ್ತಮೆಂದಿಂತು ವಾಕ್ಯದೋಷಮಿದಕ್ಕುಂ (ಕಾವ್ಯಾವ. ೪೫೫) ; ಗುರುಲಘುರಚನೆಗೆ ನಿರ್ದಿಷ್ಟರೂಪಹೀನಾಧಿಕಾಕ್ಷರಂ ಛಂದದೊಳೊಂದಿರೆ ಭಿನ್ನವೃತ್ತಮೆಂಬುದು ಮರುಕ್ತಮತ್ಯಂತ ದೋಷಮಕ್ಕುಂ ಕೃತಿಯೊಳ್ (ಕಾವ್ಯಾವ. ೪೬೮). [ಸಂ.]

**ಭಿನ್ನಷಡ್ಜ** (ನಾ). [ಸಂಗೀತ] ಒಂದು ರಾಗದ ಹೆಸರು : ಭಿನ್ನಷಡ್ಜ ಭಿನ್ನತಾನ ಭಿನ್ನಕೌಶಿಕ ಮಧ್ಯಭಿನ್ನವೆಂದು ನಾಲ್ಕು ರಾಗಂಗಳುಂ ಗೌಡ ಜಾತೀಯಂಗಳು (ಬವೇಶ. ೨೩೬) ; ಭಿನ್ನಷಡ್ಜವೆಂಬ ರಾಗವು ಭೂಪಾಲ ಮೇಳದಿಂದ ಹುಟ್ಟಿದೆ (ತತಾಶ್ರ. ೬೦). [ಸಂ.]

**ಭಿನ್ನಾಭಿಪ್ರಾಯ** (ನಾ). ವಿರುದ್ಧಾಭಿಪ್ರಾಯ ; ಅಭಿಪ್ರಾಯಭೇದ : ಈ ವಿಷಯಕ್ಕೆ ಇಬ್ಬರಿಗೂ ಭಿನ್ನಾಭಿಪ್ರಾಯ ಬಂದು ಕೊನೆಗೆ ಇಬ್ಬರಿಗೂ ಮಾತು ಕೂಡ ನಿಂತುಹೋಗಿತ್ತು (ಸಂಗೀತ. ೦೯) ; ಈ ಬಗೆಯ ಉಚ್ಚ ಭಿನ್ನಾಭಿಪ್ರಾಯದಲ್ಲಿ ಯಾವದೇ ನಿರ್ಣಯವನ್ನು ಕೊಡುವುದು ಕಠಿಣವಾಗುವುದು (ಧರ್ಮಶಾ. ೦೯೯). [ಸಂ.] .

**ಭಿನ್ನಿಸು, ಭಿನ್ನಯಿಸು, ಭಿನ್ನವಿಸು** (ಕ್ರಿ). ೧. ಬೇರ್ಪಡು; ಸಡಿಲವಾಗು: ವಿಪ್ರನುನ್ನತತಪೋಬಲದೊಳಂಘ್ರಿಯುಂ ಬದಿರಲ್ಕೆ ಭಿನ್ನಿಸದೆ ಬಗೆದರ್ದ ಬಳ್ಳೆಗಳ ದಂತಂಗಳುಡಿದುವದನೇನೆಂಬೆನು (ಕೃಬಿಚಾ. ೦೩–೩೦) ; ತೋಯದದ ಕಪ್ಪಿನೊಳು ವಿದ್ಯುತು ಛಾಯ ಭಿನ್ನಿಸಿ ತೋರುವ್ವೋಲು

(ಶಾಗಕ. ೦೨-೬೨). ೨. ಪ್ರತ್ಯೇಕವಾಗು; ಬದಲಾಗು; ವ್ಯತ್ಯಾಸವಾಗು; ಭಿನ್ನವಾಗು: ಮುನ್ನ ತಾಂ ಬರೆಸಿ ಕಳುಹಿದ ಪತ್ರಮಂ ತರಿಸಿ ನೋಡಿಕೊಂಡದಱೊಳಿರ್ದ ಭಿನ್ನಿಸಿದ ಭಾವಾರ್ಥಮಂ ತಿಳಿದು (ಕೃಶಿಕಾ. ೩೦-೩೪); ನನ್ನ ಅಭಿಪ್ರಾಯವು ಭಿನ್ನಿಸುತ್ತದೆ (ದೇಶೀಕ್ತಿ. ೦೦೯). ೩. ಭಗ್ನವಾಗು; ಚೂರಾಗು: ಭಿನ್ನಿಸದೆ ಕಚ್ಚಿದೆಯ ಸತಿಯರಾಮಸುವಿಡಿದೆವು (ಕೃಶಿಕಾ. ೨೩-೩೯). ೪. ಚೂರುಮಾಡು: ತೆಂಗಾಯ ಬಲುಹಿಂದ ಭಿನ್ನಿಕ[ಸಿ]ಳನೀರ ಸೇವಿಸಬೇಕು (ಶವಸೋ. ೨೬-೩). ೫. ಮುರಿದು ಹಾಕು; ಹಾಳುಮಾಡು; ನಾಶಮಾಡು: ಮನ್ನಿಸಲಿ ವಿಧಿ ನಿನ್ನ ಬೇಡಿಕೆಯ, ಭಿನ್ನಿಸಲಿ, ನಿನ್ನ ಬಲವನು ಮೆರಸೊ (ಶಂಕುಳ. ೩೩೦). ಭಿನ್ನಯಿಸು: ೨. ಒಂದೇ ಮರದಲ್ಲಿ ಅವಸ್ಥಾಭೇದದಿಂದ ಬರುವ ರಸವೈವಿಧ್ಯ, ಗುಣವೈವಿಧ್ಯಗಳನ್ನು ಬೀಜವೂ ಕ್ಷೇತ್ರಬಲದಿಂದ ರಸ, ಪಾಕ ಮೊದಲಾದುವುಗಳಲ್ಲಿಯೂ ಭಿನ್ನಯಿಸುವುದನ್ನೂ ಗಮನಿಸಿ (ಶುಪಾ೩. ೩೦೯ ಸಂಧ್ಯಾವಂದನೆ). ೬. ಬೇರೆಮಾಡು; ಪ್ರತ್ಯೇಕಿಸು: 'ನಾನು ಇದ್ದೇನೆ' ಎಂಬ ವಿಷಯವನ್ನು ಎಲ್ಲರೂ ಒಪ್ಪುತ್ತಾರಾಗಲಿ ನನ್ನ ಸ್ವರೂಪದ ವಿಷಯದಲ್ಲಿ ಭಿನ್ನಯಿಸುತ್ತಾರೆ (ಶೀಪಾಕ್ಯ. ೦೬). **ಭಿನ್ನವಿಸು**: ೨. ಮನುಷ್ಯನು ಕರ್ಮಯೋನಿ ಭೋಗಯೋನಿ ಎರಡೂ ಆಗಿರುವುದಾದರೆ ಕರ್ಮ ಮತ್ತು ಭೋಗಗಳ ಅನುಪಾತವು ಒಂದೇ ಆಗಿರದೆ ಭಿನ್ನವಿಸುತ್ತದೆ (ಶೀಪಾಕ್ಯ. ೨೬೩).

[ಭಿನ್ನ + — ಇಸು$_3$]

**ಭಿನ್ನೋದರ** (ನಾ). ಮಲತಾಯಿಯ ಮಗ; ಮಲಅಣ್ಣ ಅಥವಾ ಮಲತಮ್ಮ: ರಾಜಒಡೆಯರ ಕಾಲದಲ್ಲಿ ಆ ಗ್ರಾಮವನ್ನು ಲಕ್ಷ್ಮೀಕಾಂತಯ್ಯವೆಂಭಾತನು ಅನುಭವಿಸುತ್ತಾ ಭಿನ್ನೋದರರಾದ ತನ್ನ ಸಹೋದರರನ್ನು ಪೋಷಿಸುತ್ತಿದ್ದನು (ಚಿಕ. ೦೯). 'ಏಕೋದರ' ಪರಾ.

[ಸಂ.]

**ಭಿನ್ನೋಪಪಾಠ** (ನಾ). ಗ್ರಂಥಸಂಪಾದನೆಯಲ್ಲಿ ಒಂದೆರಡು ಮಾತೃಕೆಗಳ ಆಧಾರದಿಂದ ಕಲ್ಪಿಸಿರುವ ಪೂರಕ ಪಾಠಾಂತರ: ಇವುಗಳಲ್ಲಿ ಒಮ್ಮತವಿಲ್ಲದಾಗ ಈ ಭಿನ್ನೋಪಪಾಠ (Sub-Variant) ಗಳಲ್ಲಿ ಯಾವುದಾದರೊಂದನ್ನು ಆರಿಸಿಕೊಳ್ಳಬೇಕಾಗುತ್ತದೆ (ಶಾಠಶ. ೩೩): ಈ ಪ್ರತಿಗಳನ್ನು ಭಿನ್ನೋಪಪಾಠವಾಹಕಗಳೆಂದು (Sub-Variant Carriers) ಉಪಪ್ರಧಾನಮಾತೃಕೆಯ ದೃಷ್ಟಿಯಿಂದ ಕರೆಯಬಹುದು (ಶಸ್ತ್ರಸಂ. ೦೬೬).

[ಸಂ.]

**ಭಿಮ್ಮೆನು** (ಕ್ರಿ). ಶಬ್ದದಿಂದ ತುಂಬು; ಪ್ರತಿಧ್ವನಿಸು: ಜಿನಪೂಜೆಗೆಂದು ಮುನ್ನವೆ ಶುಚಿಮೆತ್ತರ ಮನೆಯಿಂದ ಬಂದಿರ್ದರತ್ತೆ ಅನುಪಮ ಪೂಜೆಗೈದರು ವಾದ್ಯಕೋಟಿ ಭೋರೆನೆ ದಶದಿಶ್ಯ ಭಿಮ್ಮೆನಲು (ಶರಕ. ೩೯-೨೦).

[ಭಿಂ$_0$ + ಎನು ( < ಎನ್$_1$ ) ]

**ಭಿಮ್ಸನ್** (ನಾ). ಒಂದು ಅನುಕರಣ ಶಬ್ದ: ಅಱಿಯದೆ ಬಂದವು ಕಿಮ್ಸನ್ ಪರಿಹರಿಸಯ್ಯ ಭಿ [ಶಾಶಾಂ. ಭ] ಮ್ಸನ್ (ಕುರಂದ. ೨-೩೬ ಶಳ್ಳಿ); ಮತ್ಸ್ಯಾವತಾರಗೆ ಕಿಮ್ಸನ್ ಕೂರ್ಮಾವತಾರಗೆ ಭಿ [ಶಾಶಾಂ. ಭ] ಮ್ಸನ್ (ಕುಲಂದ. ೨-೩೬-೦). P ಮಹಮ್ಮದೀಯರು ತಮ್ಮ ಮತದ ಉತ್ಸವಗಳಲ್ಲಿ ಕ್ಯಾ ಹುಸೇನ್, ಬಾ ಹುಸೇನ್ ಎಂಬ ಶಬ್ದಗಳನ್ನು ಮತ್ತೆ ಮತ್ತೆ ಉಚ್ಚರಿಸುವುದನ್ನು ನೋಡಿ ಈ ರೀತಿಯಲ್ಲಿ ಕನ್ನಡ ಪದಗಳನ್ನು ಸೃಷ್ಟಿಮಾಡಿಕೊಂಡಿರಬಹುದೆಂದು ಕೆಲವರು ಊಹಿಸುತ್ತಾರೆ. 'ಕಿಮ್ಸನ್' ಪರಾ.

[ ? ]

**ಭಿರಿಂಗನೆ** (ಅ). ಒಂದು ಅನುಕರಣಾವ್ಯಯ; ತಟ್ಟನೆ; ಕೂಡಲೆ; ಇದ್ದಕ್ಕಿದ್ದಂತೆ; ಧಿಡೀರನೆ: ಸಿಟ್ಟಿಗೆದ್ದು ಭಿರಿಂಗನೆ ಇನ್ನೊಂದು ಮೂಲೆಗೆ ಯಾರೂ ಇಲ್ಲವೆಂದು ಹೋಗಿ ಕೂಡುವಳು (ಅಮೂ. ೬೭).

[ ? + — ಅನೆ$_1$ ]

**ಭಿರ್ಕ್$_1$** (ನಾ). ಬಿರುಡೆಮಾತು; ಪೊಳ್ಳುಮಾತು: ಅದಕ್ಕೆ ಸರಿಯಾಗಿ ಏನು ಹೇಳಬೇಕೋ ತಿಳಿಯಲಿಲ್ಲ. ಆದರೂ ಅಲ್ಲಿಗೇ ಬಿಟ್ಟರೆ ತನಗೆ ಅವಮಾನ ಎಂದು, ಏನೋ ಒಂದು ಭಿರ್ಕ್ ಹೊಡೆದ (ಮುಳ್ಳ. ೦೦೯).

[ ← ಮರಾ. ಭಿರಕಾ ]

**ಭಿರ್ಕ್$_2$**, ಬೃಗ (ನಾ). [ ಸಂಗೀತ ] ರಾಗಾಲಾಪನೆಯಲ್ಲಿ ದ್ರುತ (ಕಾಲ)ದಲ್ಲಿ ಹಾಡುವಿಕೆ: ಒಮ್ಮೊಮ್ಮೆ ಒಂದೇ ಸಮನಾಗಿ ೨ ಸ್ಥಾಯಿಗಳ ವ್ಯಾಪ್ತಿಯುಳ್ಳ ಬೃಗಗಳನ್ನು (ಭಿರ್ಕ್) ಅದ್ಭುತವಾದ ವೇಗ ಮತ್ತು ಸುಲಭ ರೀತಿಗಳಲ್ಲಿ ಹಾಡುತ್ತಿದ್ದರು (ಸಂಗೀತ. ೩). **ಬೃಗ**: ಕೇಳುವವರಿಗೆ ದೀಪಾವಳಿಯ ಮದ್ದು ಮತಾಪುಗಳ, ಬಾಣಬಿರುಸುಗಳ ಮಿಣುಕು ಬೆಳಕಿನ ಕಣ್ಣು ಕೋರೈಸುವ ಸೌಂದರ್ಯ ಸೊಗಸುಗಳು ಈ ಬೃಗಗಳಲ್ಲಿ ಕಾಣುತ್ತಿದ್ದವು (ಸಂಗೀತ. ೩).

[ ? ]

**ಭಿರ್ರನೆ** (ಅ). ಒಂದು ಅನುಕರಣಾವ್ಯಯ; ಬೇಗನೆ; ಚುರುಕಾಗಿ: ಭಿರ್ರನೆ ಸಮಸ್ತ ಕುರುಸೇನೆಗಳ್ಬೆಲ್ಲೆ ಗಜ ಕಿರ್ರೆನಲ್ (ಕುರಂಗ. ೩೦-೩೦).

[ ? + — ಅನೆ$_1$ ]

**ಭಿಲ್ಲ** (ನಾ). ಬೇಡ; ವ್ಯಾಧ: "ಬಿಯದರ್ ಭಿಲ್ಲರ್ ವ್ಯಾಧರ್ ನಯದಿಂ" (ಶಬ್ದಶ. ೯೦); ಒಂದೊಂದೆಡೆಯ ಮುಳ್ಪಡುಗಳೊಳ್ ತೊಡರ್ದ ಮೆಯ್ಮವಿರ್ ಪಱಿಗುಮೆಂದು ವಿಡುಕಲೊಲ್ಲದಲ್ಲಿಯೆ ನಿಂದು ಬಿ[ಭಿ]ಲ್ಲರ್ಗೆ ತಮ್ಮಿಂ ತಾಮೆ ಪಡುಮಿಗಂಗುಡುವ ಚಮರೀಮೃಗಂಗಳುಂ (ಚಂದ್ರಪು. ೩-೬೩ ವ); ಭಿಲ್ಲಗಾರ್ದುದೇ ಗೋಪುರಂ (ಸೋಮೇಶ. ೩೦).

[ ಸಂ. ]

**ಭಿಲ್ಲಜಕರ** (ನಾ). [ಸಂಗೀತ] ಒಂದು ರಾಗದ ಹೆಸರು: ಸಾಳಗ ನಾಟ ಭಿಲ್ಲಜಕರಂಯೆಂಬೆರಡುಂ ರಾಮಕ್ರಿಯೂರಾಗಕ್ಕೆ ಉಪಾಂಗಗಳು (ಶಿವೇಕ. ೨೩೪).

[ ? ]

**ಭಿಲ್ಲಪಲ್ಲಿ** (ನಾ). ಬೇಡರು ವಾಸಿಸುವ ಗ್ರಾಮ; ಬೇಡರ ಹಳ್ಳಿ: ಸೊಗಯಿಪುದೀ ಕಾನನೋದ್ದೇಶಮೋರಂತಿರೆ ನಾನಾಭಿಲ್ಲಪಲ್ಲೀಖನಮೃಗಲತಿಕಾವೃಕ್ಷಗುಲ್ಮಾವಕಾಶಂ (ಕುಸ್ತ್ರಪು. ೩-೬೯). [ಸಂ. ಭಿಲ್ಲಪಲ್ಲೀ]

**ಭಿಲ್ಲಪಳ್ಳಿ** (ನಾ). = ಭಿಲ್ಲಪಲ್ಲಿ: ದರಿಸರಿಯಾನೆಗಳ್ ಗಱಿಕೆ ಮೇವ ಮುಗಿಲ್ ದೊಣೆ ಭಿಲ್ಲಪಳ್ಳಿ ಕಿನ್ನರಮಿಥುನಾಳಿಗಳ್ ವಿಷಯಮಾಗಿರೆ ತೀರ್ವುದು ಶೈಲವರ್ಣನಂ (ಸೂಕ್ತಿಸು. ೩-೦). [ಭಿಲ್ಲ + ಪಳ್ಳಿ$_1$]

**ಭಿಲ್ಲಿ** (ನಾ). ಬೇಡರ ಹೆಂಗಸು; ಬೇಡಿತಿ: ವನವನದಿ ಬನದಿಪ ಭಿಲ್ಲಿಯರ ಬಿಸ್ಸಣವ ತೋಱಿದುದು (ಮುರೇಶ. ೩-೩); ಭಿಲ್ಲಿಯ ವಿಳಾಸಮನಾಳ್ದೆಸೆದಂದು ಸರ್ವಮಂಗಳೆ ನಿಜಕಾಳರಾತ್ರಿವೆಸರಂ ಮಿಗೆ ಸಾರ್ಥಕಮಂ ನೆಗಳ್ಚಿದಳ್ (ಶಬ್ದಶ. ೩-೬); ಆ ಶಿವದೀಕ್ಷಾಪರಾಯಣೆಯು ಯಾರಿರಬೇಕು? ಭಿಲ್ಲಿಯ ವೇಷಧಾರಿಯಾದ ದಾಕ್ಷಾಯಣಿಯಾಗಿರಬೇಕು (ಶ್ರೀಶಾಮ. ೨೭೭).

[ಸಂ. ಭಿಲ್ಲೀ]

**ಭಿವೊಮ್ಮ** (ನಾ). ಒಬ್ಬಾತನ ಹೆಸರು (?): ಸ್ವಸ್ತಿಶ್ರೀ ಭಿವೊಮ್ಮ ಕೂರಾಳಿಗದ ಅಲರೊಳೆ ಕೊಣಮಿರುಗಂಗ ದುರದುಳ್ ದುಗ್ಗಮಾರರ ಪಡೆಬಟ್ಟೆ ಎಱಿದು ಬಿಬ್ದ (ಎಕ. IX, ದೇವಹ. ೩೭-೦; ಶಾ. 780).

[ ? + ಅಮ್ಮ$_1$]

**ಭಿಷಗ್ಜನ** (ನಾ). ವೈದ್ಯರ ಗುಂಪು: ಶರೀರರಕ್ಷಣೆಗಂ ಪರಿಚರ್ಯೆಗಂ ಸಮಯೋಚಿತಕುಶಲರಪ್ಪ ಗುರುಜನ ಭಿಷಗ್ಜನ ಗಣಕಜನ ಗಣಿಕಾಜನ ಧಾತ್ರೀಜನ ಕುಲಮಹತ್ತರಿಕಾಜನಮಂ ಸಮರ್ಪಿಸುವುದುಂ (ಮುಳ್ಳಶ. ೪-೯೩).

[ಸಂ.]

**ಭಿಷಗ್ದೋಷ** (ನಾ). ವೈದ್ಯನ ತಪ್ಪು: ಮತ್ತಮಾತುರನೌಷಧಭೀರುವಾದೊಡಂ ಭಿಷಗ್ದೋಷಮಾಗದಂತೆ ನಿಮ್ಮ ಪೇಱ್ವುದನುಪೇಕ್ಷಿಸಿದೊಡೆನ್ನ ದೋಷಂ (ಶಾಂತಿಪು. ೪-೦೦೦ ವ).

[ಸಂ.]

**ಭಿಷಗ್ವರ** (ನಾ). ೧. ಶ್ರೇಷ್ಠನಾದ ವೈದ್ಯ. ೨. ಉತ್ತಮವಾದ ಮದ್ದು,– ಔಷಧ : ಮನೋರೋಗಕಾ ಕ್ರೀಮಮೇ ಭಿಷಗ್ವರಂ (ಶ್ರೀರಾಪರಿ. ೨೭೪–೬೦೬). [ಸಂ.]

**ಭಿಷಜ** (ನಾ). ವೈದ್ಯ : "ದೋಷಜಿತ್ ಭಿಷಜಂ ಚಿಕಿತ್ಸಕಂ ವೈದ್ಯನಕ್ಕು" (ಮಂಗರಾ. ೧೧೫–೬): ಕಾಕುಂಬಡತನವಡೆಸಿ ನರಳುವಾತನ ಮನೆಗೆ ಜೋಕೆಯಿಂ ನಿಧಿ ತಾನೆ ಬಂದವೋಲ್ ರಂಜಿಸಿರೆ ನೂಕದಳಲುವನ ಮನೆಗಾರೈದು ಭಿಷಜ[ಜ]ನಂದೆಯ್ತಂದ ಮಾಳ್ಕೆಯಂತೆ . . . ಶಿವಮಂತ್ರ ಮೆನಗೀಗ ದೊರೆಕೊಂಡುದು (ಚಂದೀ. ೩–೧೧). [ಸಂ. ಭಿಷಜ್]

**ಭಿಸ್ಸಟೆ** (ನಾ). ಸೀದುಹೋದ ಅನ್ನ : "ಭಿಸ್ಸಟ, ದಗ್ಧಿಕಾ–೨ ಅನ್ನದ ಸೀಕು; ಸೀದುಹೋದ ಅನ್ನ" (ಚಿಮ್ಮ. ೩೯೮). [ಸಂ. ಭಿಸ್ಸಟಾ]

**ಭಿಸ್ಸೆ** (ನಾ). ಬೋನ; ಅನ್ನ : "ಅಂಧಃ, ಕೂರಂ, ಭಕ್ತಂ. ದೀದಿವಿಃ, ಅನ್ನಂ. ಓದನಂ, ಭಿಸ್ಸಾ, ಅಶನಂ. ಆಹಾರಃ – ಈ ೯ ಕೂಟುಗ್" (ಕರಾಮ. ೫೩–೨೬೪). [ಸಂ. ಭಿಸ್ಸಾ]

**ಭೀ** (ನಾ). ಹೆದರಿಕೆ; ಭಯಂ; ಭೀತಿ : ಏಕಾಕ್ಷರಕ್ಕೆ – ಜ್ಯಾ. ಮಾ. ಪ್ಯಾ, ಶ್ರೀ. ಸ್ತ್ರೀ, ಭೀ. ಭ್ರೂ. ಕೂ – ಎಂಬಿವು ಮೊದಲಾದ ಏಕಾಕ್ಷರ ಶಬ್ದಂಗಳರ್ದ ಕೆಜದಿಂ ವಿಭಕ್ತಿಯಂ ಪಡೆವುವು (ಶಮದ. ೯೩ ತ್ರಯೋ); ಅನೇಕ ಸ್ವರಸ್ಯೇತಿ ಕಿಂ? ಶ್ರೀ, ಹ್ರೀ, ಭೀ. ಧೀ (ಶಬ್ದಾ.ಮ. ೧೧೫ ತ್ರಯೋ); ಕೋಡಿ ಖರದೂಷಣರ ಭೀಯಿಂದೋಡಿ ಪೋದಂಥಲ್ಲ ಮುನಿಗಳು ಕೂಡಿ ಪುನರಪಿ ಬಂದು . . . ಸೌಖ್ಯದಿಂವಾವಾಸ ಮಾಡಿಹರು (ರಘು:ಸಂ. ೧೩–೨೨). [ಸಂ.]

**ಭೀಂಕೃತ** (ನಾ). ಬಾಣದ ಧ್ವನಿ : ಭೀಂಕೃತಂ ಬಾಣದೊಳು ಛೀತ್ಕೃತಂ ಕಲಭದೊಳು ಬೃಂಹಿತಂ ಮದಗಜದೊಳು (ಮಂಗರಾ. ೨೭–೬). [ಸಂ.]

**ಭೀಂಕೃತಿ** (ನಾ). = ಭೀಂಕೃತ : ಕಣೆವೃತಿದೆ ರಣಭೂತ ರಾಮನ ಕಣೆಯ ಭೀಂ[ಪಾಠಾಂ. ರೆಘೀಂ]ಕೃತಿರವಕೆ ನಭದಲಿ (ತೊರರಾ ೩–೬–೩೫); ಬಿಲ್ಲಾಳಿರ ಗುಣಠಂಕೃತಿ ಚಾಪಪ್ರಯುಕ್ತ ಶರನಿಕರ ಮಹಾಭೀಂಕೃತಿ ನೋಳ್ಪಮರರ್ಗೆ ಭಯಂಕೃತಿಗೆಯ್ವುದು (ಶಾಂತಿ. ೬–೪೬). [ಸಂ.]

**ಭೀಕರ** (ಗು). ೧. ಭಯವನ್ನುಂಟುಮಾಡುವ ; ಹೆದರಿಕೆಯನ್ನುಂಟು ಮಾಡುವ : ಭೀಕರಕರಿಮಕರನಿಕರಭಿನ್ನತರಂಗಾಸೀಕಲವಣಾಂಬು ರಾಶಿವೃತಾಕೃತಿ ಕಮನೀಯಮುಂಟು ಜಂಬೂದ್ವೀಪಂ (ಶಾಂತಿಪು. ೧–೫೬); ಪುರಹರಂ ಪೊಡೆಯೆ ತೋಳ್ಪಡಿದ ಭೀಕರಗಜಾಸುರನೊ . . . ಎಂದೆಂಬ ಸಂದೇಹಕೆಡೆಯಾದ ಸೊಕ್ಕಿದೆಕ್ಕಲನನೊಂದಂ ಕಂಡಂ (ಹಕಾ. ೬–೨೦); ಉರವಣಿಸಿ ನಾವೆಸುವ ಭೀಕರ ಸರಳ್ಗಳಿಂ ತಪ್ಪಿಸಿಕೊಳುತ (ಬಸವ. ೩೪–೨೭). (ನಾ). ೨. ಭಯವನ್ನು ಉಂಟುಮಾಡುವಂಥದು ; ಹೆದರಿಕೆಯನ್ನುಂಟುಮಾಡುವಂಥದು : ಭೀಕರಮಪ್ಪ ಶೂಲಿಯಭಿಲಾಷೆಯೊಳ್ ತಪವಾತನೇಕೆ ನೀನೇಕೆ ಕೃಪಾಣವೇಕೆ . . . ಸಿಡಿಲೇಕೆ ಮರಾಳನದೇಕೆ ಲೋಕದೊಳ್ (ಗಿರಿ. ೯–೧೦೨); ಕುಸುಮಧವಳರೋಮಂಥಫೇನಂ ಕರಂ ಭೀಕರಮಾಗಲೊಪ್ಪುಗುಂ ಕಾನನದೊಳಿಭುವಮಾನಂ ಬಿಲಾಯುಪ್ರತಾನಂ (ವಿಕ್ರ. ೪–೨೪); ತರಳನ ಕೊರ್ಗಣೆಯಿಂದೆ . . . ಕೊರಲರೆಗಡಿದು ಕತ್ತರಿಸಲು ತಲೆ ಬಿದ್ದು ಹೊರಳಲು ಭೀಕರವಾಯ್ತು (ಮೋಹತ. ೩೫–೧೪). ೩. ಭಯಾನಕತೆ : ನರಹರಿಯು ವೇಷಂದಳೆದು ಭೀಕರದೊಳಂದು ಹಿರಣ್ಯಕನ ಸಂಹರಿಸಿದನು (ಬಸವ. ೫೭–೨೫). [ಸಂ.]

**ಭೀಕರವಡೆ** (ಕ್ರಿ). ಭಯಂಕರತೆಯನ್ನು ಹೊಂದು ; ಭಯಂಕರವಾಗು: ತೊಡೆದರೆ ಹೊಡೆದು ಡೊಕ್ಕರಿಸಿ . . . ಭೀಕರವಡೆದು ಹೊಯ್ದಾಡಿದು ಮೆರೆದು (ಮೋಹತ. ೩೮–೨೮). [ಭೀಕರ + ಪಡೆ$_1$]

**ಭೀಕರಿಸು** (ಕ್ರಿ). ಭಯವನ್ನುಂಟುಮಾಡು ; ಹೆದರಿಸು : ಬಿತದೆ ಭುಸ್ಸನೆ ಘೂತ್ಕರಿಸುತಡಿಗಡಿಗೆ ಕೋಪಾಟೋಪದಲಿ ಭೀಕರಿಸು[ಸಿ]ತಾ ಶಯ್ಯೆ (ಶಾಕ್ಯಶಾ. ೨೨–೨೪); ಆಕಾಶದೊಳು ಬಾಣ ಚುಮ್ಮು ಭೋರ್ಚುರ್ಯ್ಯೆಂದು ಭೀಕರಿಸುತ ಹೋದುದತ್ತ (ಶರತ. ೨೪–೩೪); ರಣವಂದು ಭೀಕರಿಸಿದುದು ಸುರಥನೃಪಾಲ ಕೇಳೆಂದ (ರಾ:ಶೀಮ. ೩–೨೫).

[ಭೀಕರ + – ಇಸು$_3$]

**ಭೀತ** (ಗು). ೧. ಭಯಗೊಂಡ ; ಹೆದರಿದ. (ನಾ). ೨. ಅಂಜು ಬುರುಕ; ಹೇಡಿ ; ಪುಕ್ಕ : "ದರಿತಃ. ಚಕಿತಃ, ಭೀತಃ . . . ಶಂಕಿತಃ ಈ ೮ ಪ(ಹ)ಂದೆ" (ಕರಾಮ. ೫೮–೧೯೪) ; ಭೀತನನಲಸಿದನಂ ಕಾರ್ಯಾತುರನಂ ಪಸಿದನಂ . . . ಅಜಿದಜಿದು ಬಿನ್ನವಿಪ್ಪಂ ಗಾಂಪಂ (ಶಂಕಸಂ. ೨೭–೧೨). ಭೀತಂ ಲೋಚಂ ಶರಂ ನಿಗುರ್ಣಿ ಕಿಸುಗುಳಿಗು ನಿರ್ಲಜ್ಜಂ ಪಾಪಿ ಕಳ್ಳಂ (ವಃರಹ. ೬–೧೪). ೩. [ಸಂಗೀತ] ಹೆದರಿಕೆಯಿಂದ ಹಾಡುವವನು : ಭೀತ = ಭಯದಿಂದ ಹಾಡುವವನು (ಸಂಗೀಸಂ. ೧೧೩).

[ಸಂ.]

**ಭೀತಿ** (ನಾ). ೧. ಹೆದರಿಕೆ ; ಅಂಜಿಕೆ ; ಭಯ : ಜಗತ್ತ್ರಯ ರಕ್ಷಾಪ್ರಿಯನಪ್ಪ ಕೃಷ್ಣನ ಚರಿತ್ರಂ ಭೀತಿಯಂ ಮಾಟ್ಪುಮೇ (ಜಗು. ೩–೩೪); ಭೀತಿಯನುಂಟುಮಾಡುಗುಮಿವಳಿಗೆ ಶರಾಸನ ಬಾಣಜಾಲಂ (ಕುಸುಮಾ. ೧೧–೩೦); ಕರುಣದಲಿ ಬಿಟ್ಟಾತನನು ಮುಂದರುಣಪಟಪರಿಧಾನ ಶೌರ್ಯಾಭರಣ ಧಾಳಿಯನಿಕ್ಕಲೋಡಿದನನಿಲ ಭೀತಿಯಲಿ (ತೊರರಾ. ೦–೮–೩೭). ೨. ಅಪಾಯ. ೩. ನಡುಕ; ಕಂಪನ. [ಸಂ.]

**ಭೀತಿಗೊಳಿಸು** (ಕ್ರಿ). ಅಂಜಿಸು; ಹೆದರಿಸು : ದ್ವಿತಯ ಕಾಮುರ್ಗಕ ನಿಷ್ಠುರದಿಂದಖಿಳದೇವತೆಗಳೆಲ್ಲರ ಭೀತಿಗೊಳಿಸಿ (ಮೋಹತ. ೧೨–೫೪); ಪಾತಾಳಗಡಿಯಾದಗಳು ದಿಟ್ಟಿಗೆ ನೆಟಿ ಭೀತಿಗೊಳಿಸುವ ಕೊತ್ತಳವು (ಸಂಪರಿ. ೧೮–೫೫). [ಭೀತಿಗೊಳು + – ಇಸು$_3$]

**ಭೀತಿಗೊಳು** (ಕ್ರಿ). ಹೆದರು; ಅಂಜು; ಗಾಬರಿಯಾಗು; ಭಯಗೊಳ್ಳು: ಮುಂದಸ್ಮಿತಮುಖಾಂಬುಜನಾಗಿ ಭೀತಿಗೊಳುತ್ತಮಿಪ್ಪವರ ವಿತತಭಯಮಂ ಪರಿಹರಿಸಿ (ಬಸವ. ೨–೨೭) ; ಭೀತಿಗೊಂಡನು ದ್ರೋಣ ಸೋಲಿಕೆ ಕೇತು ವಾದನು ಶಲ್ಯ (ಕುಮಾರರಾಮ. ೧೩–೧೩); ಪಲ್ಲಿಯ ಹುಲ್ಲೊಳಡಗಿ ಭೀತಿಗೊಂಡಾಗ ನಿಲ್ಲದೆ ದೆಸೆಯ ನಿಟ್ಟಿಸುತ (ಸಂಪರಿ. ೧೫–೯೪).

[ಭೀತಿ + ಕೊಳು (<ಕೊಳ್$_1$)]

**ಭೀತಿಯುಕ್ತ** (ನಾ). ಹೆದರಿದವನು ; ಅಂಜಿದವನು : ಭೀತಿಯುಕ್ತನಾಗಿ ಆತ ಯೋಚಿಸಿದ (ಅಕ್ರಮ. ೧೩೪). [ಸಂ.]

**ಭೀತಿವಡಿಸು** (ಕ್ರಿ). = ಭೀತಿಗೊಳಿಸು : ವರ ದುಗ್ಧಾಬ್ಧಿಯ ಮಥನದಿಂ ತುಸುಮಾತ್ರ ಗರಳವ ಬಿಡಲಾಕ್ಷಣದಿ ಸುರಮುಖ್ಯರ ಭೀತಿವಡಿಸಿದ ಧರಣೀಧರ ಫಣಿರಾಜ ರಕ್ಷಿಪುದು (ಮೋಹತ. ೦–೧೪).

[ಭೀತಿವಡು + – ಇಸು$_3$]

**ಭೀತಿವಡು** (ಕ್ರಿ). = ಭೀತಿಗೊಳು : ಪೂಸಿದ ಸಿರಿಗಂಧ ಕರಿಕಾದುದು ಸದ್ವಿಳಾಸಿನಿಯರು ಭೀತಿವಡಲು (ಮೋಹತ. ೨೮–೦೭); ರಣದೊಳ್ ಕಲಿಪಾರ್ಥಂ ಭೀತಿವಟ್ಟು ಬೆನ್ಗೊಟ್ಟಪನೇ (ಶಂಪು. ೪–೬೯). [ಭೀತಿ + ಪಡು$_1$]

**ಭೀತಿಸು** (ಕ್ರಿ). = ಭೀತಿಗೊಳು : ನೆಲೆಯನಿಸಿದೆನಗೆ ಶಿವಾಂಘ್ರಿಯೆಂದು ಭೀತಿಸಿ ಬೇಡಿಕೊಳುವೆ (ಕೈಶಿ. ೩೩–೧); ಮದ್ದಾನೆಗೆ ಸಿಂಹ ಮಲೆತಂತೆ ಸುಭಟಾನಿರುದ್ಧ ನಿಂದಿರ್ದ ಭೀತಿಸದೆ (ಮೋಹತ. ೩೫–೧೮).

[ಭೀತಿ + – ಇಸು$_3$]

**ಭೀತೆ** (ನಾ). ಹೆದರಿದ ಹೆಂಗಸು : ನಿಜನಾಥಭೀತೆ ಸುಚರಿತ್ರ ಗುಣಪತಿ ಮಾನಿನಿ ಜನಾಪವಾದವಿರಹಿತೆಯೆನಿಪ ನಾರಿ ನನ್ನಿಜನಾರ್ದನಾದಿನಿರ್ಜರ ವರ್ಯವಿನುತೆಯುತಳು (ಕೃಬಾಶಾ. ೫–೫೦). [ಸಂ. ಭೀತಾ]

**ಭೀಮ** (ಗು). ೧. ಹೆದರಿಕೆಯನ್ನುಂಟುಮಾಡುವ; ಅಂಜಿಕೆಯನ್ನುಂಟು ಮಾಡುವ ; ಭೀಕರವಾದ : ಜವಂ ಕೊಲ್ವವೊಲೆಯ್ದೆ ಬಂದು ಜವದಿಂ

ಗಂಧಾಂಧನಾ ಭೀಮಸಾಮಜಮುಂ ವಿಸ್ಮಯಮಪ್ಪಿನಂ ಭರತನಂ ಕಂಡಾಯ್ತು ಜಾತಿಸ್ಮರಂ (ಶಂರಾಶು. ೦೫-೩೦). (ನಾ). ೨. ಹೆದರಿಕೆ ಯನ್ನುಂಟುಮಾಡುವುದು; ಭಯಂಕರವಾದುದು; ಭೀಕರವಾದುದು: "ಘೋರಂ, ಪ್ರತಿಭಯಂ, ಭೀಮಂ . . . ಭಯಾನಕಂ—ಈ ೧೦ ಭಯಂಕರಂ" (ಹಲಾಯು. ೦೦೭-೨೦); ಭೀಮಂ ಭಯಂಕರಂ ಪೆಜತೇ ಮಾಜೀ ಕೂಸಿನಂತವನಾತನ ಪೆಸರುಂ ಭೀಮನೆ (ಶಂಕಶಾ. ೧-೦೨೮). ೩. ಶಿವ; ಶಂಭು; ಈಶ್ವರ: "ಈಶಾನಃ . . . ಭೀಮಃ, ಭರ್ಗಃ, ಕೃತ್ತಿವಾಸಾಃ . . ಮಹಾದೇವಃ, ಮೃಡಃ (ಸ್ಯಾತ್). ನೀಲಲೋಹಿತಃ— ಈ ೪೫ ಮಹಾದೇವರ ಪೆಸರ್" (ಹಲಾಯು. ೩-೦೨); ಭೀಮ . . . ವಿರೂಪಾಕ್ಷ ಕರುಣಿಸುವುದಮಗೆ (ಹಕಶಾ. ೦-೩). ೪. ಪಾಂಡುರಾಜನ ಮಗ; ಯುಧಿಷ್ಠಿರನ ತಮ್ಮ: "ಕುರುವೈರಿ ವಾಯುಪುತ್ರಂ ವೃಕೋದರನೆನಲು ಭೀಮನಕ್ಕುಂ" (ಶಬ್ದಗಶಾ. ೭೮-೩); ಆಗಳಶ್ವತ್ಥಾಮಂ ಹೇಮಪುಂಖಾಂಕಿತ ಭೀಮಸಾಯಕನಿರ್ಘಾತದಿಂದಟಿಯೆ ನೊಂದು (ಶಂಕಶಾ. ೧೨-೭೪ ಕ); ಕುರುವಂಶಾಧೀಶನಂ ಮೊದಲಿಸಿದನದಟಂ ಭೀಮನುದ್ದಾಮಭೀಮಂ (ಗದಾಯು. ೭-೦೪). ೧, ೪: ಮತ್ತಮಾ ಮಹಾಹವಂ . . . ಪಾಂಡವಪ್ರಕರದಂತಾತ್ತ ಭೀಮನಕುಲದ್ರುಪದಮುಂ ಅರ್ಜುನೋರ್ಜಿತಮುಂ (ಶಂಧ್ರಕೃ. ೫-೩೨ ಕ). ೫. ಯಮ. ೩, ೪, ೫: ಭೀಮ ಬಲಮದರಾತಿಸೇನಾಭೀಮ ಕುರುಕುಲಕುಸುಮ ಮಾರ್ಗಣ ಭೀಮ ಮಹಿದ್ವೈ ಮಾನಿನಿಯ ಮಾನಾಪಮಾನಗಳ (ಕುಬ್ಜಾ ಉ. ೩-೨೩). ೬. ವಿದರ್ಭದೇಶವನ್ನು ಆಳಿದ ಒಬ್ಬ ರಾಜ; ದಮಯಂತಿಯ ತಂದೆ: ಭೀಮನೃಪಾಲಕಂ ಪೆರೆದ ನಿಬ್ಬಣಿಗರ್ಗೆ ವಿಚಿತ್ರವಸ್ತ್ರ ಮುಕ್ತಾಮಯಭೂಷಣಂಗಳನನೇಕಮನಿತ್ತು (ಪಶಕಂ. ೪೬೨); ಎಸೆದುದಲ್ಲಿ ವಿದರ್ಭನಗರಮದು . . . ಅಲ್ಲಿಗಧಿಪತಿ ಭೀಮನೃಪ (ಪಳಕ. ೦-೩೬). ೭. 'ಬಸವಪುರಾಣ' ಎಂಬ ಕಾವ್ಯವನ್ನು ರಚಿಸಿದ ಕನ್ನಡದ ಒಬ್ಬ ಕವಿಯ ಹೆಸರು: ಒದವಿದಖಿಳಕಳಾಪ್ರಪೂರಿತಹೃದಯ ಭೀಮಕವಿ ಪ್ರಣೀತಾಭ್ಯುದಯ ಬಸವಪುರಾಣಕಥೆಯೊಳು (ಬಸಪು. ೬೦-೯೭). ೮. ಸಂಸ್ಕೃತದಲ್ಲಿ ಧಾತುಪಾಠವನ್ನು ಬರೆದ ಒಬ್ಬ ವೈಯಾಕರಣನ ಹೆಸರು: ವೇದಸಮನಾಗಿ ಭೀಮನಿನಾದುದು ಸಂಸ್ಕೃತದ ಧಾತು (ಕಶುರ. ೩-೦). ೯. ಒಂದು ನರಕದ ಹೆಸರು: ಪೂತಿವಕ್ತ್ರ ರಕ್ತಪೂತಿ ಮೃತ್ತಿಕೆ ಕಣಧೂಮವೆಂಬ್ಬೆದು ಮಂತ್ರಿನೆರಕಂಗಳಿಂ ಸುತ್ತಿ ಭೀಮವೆಂಬರಸುನರಕ ವಿಹುದು (ಏಪೀಳ. ೦೫೦). ೧೦. (ಆಲಂ) ಹೆಚ್ಚಾಗಿ ಊಟಮಾಡುವವನು; ಹೊಟ್ಟೆಬಾಕ: ಭೀಮನಿಗೆ ಭಾನುವಾರವಾದರೇನು ? ಭೌಮವಾರವಾದರೇನು ? ಭೋಜನ ಸಿಕ್ಕಿದರೆ ಸೈ. (ಗಾದೆ).

ಭೀಮಗದೆ = ಭೀಕರವಾದ ಗದೆ: ದುರ್ಯೋಧನಾನುಜ ದುಶ್ಶಾಸನ ಭೀಮ ಭೀಮಗದೆಯಿಂ ಪಂಚತ್ವಮಂ ಪೊರ್ದಿದೈ (ಗದಾಯು. ೫-೫); ಮಂದಿ ಪೋಟಿಟ್ಟ ಸಬಳ ಭೀಮಗದೆ ಕೊಂತ ಮುಂದುಗಡಿಸುವ ಕೈದುಗಳ ಸಂದಣಿ ಖಣಿಖಿಟಿಲೆನೆ (ಕುಣಾಶಕು. ೦೦-೪೨). ಭೀಮನ ಅಮಾವಾಸ್ಯೆ = ಆಷಾಢಮಾಸ ಮುಗಿದು ಶ್ರಾವಣಮಾಸ ಆರಂಭವಾಗುವಾಗ ಬರುವ ಅಮಾವಾಸ್ಯೆ: ಇಂದು ಭೀಮನ ಅಮಾವಾಸ್ಯೆಯಾದ್ದರಿಂದ ಶಾಲೆಗೆ ರಜ (ಲೋಕ). ಭೀಮನ ಬಿಲ್ಲು = ಕಾಮನ ಬಿಲ್ಲು: ರಾಮನು ಹೊರಗೆ ಬಂದು ಪಡುವಿನಲ್ಲಿ ಉಂಟಾದ ಭೀಮನ ಬಿಲ್ಲನ್ನು ಕಂಡು 'ಅಮ್ಮಾ, ಅಮ್ಮಾ, ಇಲ್ಲಿ ನೋಡು!' ಎಂದು ಕೂಗಿ ಹೇಳಿದನು (ಮಕಪು. ೪೨೨). [ಸಾ.]

ಭೀಮಕಾಯ (ನಾ). ದಪ್ಪವಾಗಿಯೂ ಎತ್ತರವಾಗಿಯೂ ಇರುವ ದೇಹವುಳ್ಳವನು: ಒಪ್ಪುವ ಉರುಯಜ್ಞಚರ್ಮಾಸನಂ ಭೀಮಕಾಯನುಂ (ಅದಾಕ. ೪-೪-೨೦); ಭೀಮಕಾಯನಾದರೂ ಕೌಶಿಕನು ಆ ರುದ್ರಮೂರ್ತಿಯ ಮುಂದೆ ಮಗುವಿನಂತಿದ್ದಾನೆ (ಪುಪಾಶ. ೩೬). [ಸಂ.]

ಭೀಮಗಾಮುಂಡ (ನಾ). ಒಬ್ಬಾತನ ಹೆಸರು: ಮರವೂರ ಉರ್ಕ್ಕಾಣ ಗಾಮುಂಡ್ಡರುಂ ಭೀಮಗಾಮುಂಡ್ಡರುಂ . . . ಎನೆಬ್ಬರುಂ ನರಸಾಕ್ಷಿಯಾಗೆ ಪಡೆದಾವು (ಎಕ. VI (R), ಶ್ರೀರಂಗ. ೩೩-೦೯; ಸು. ೮೦೦).
[ ಭೀಮ + ಗಾಮುಂಡ ]

ಭೀಮನಕಡ್ಡಿ (ನಾ). ಒಂದು ಬಗೆಯ ಸಸ್ಯ: ವಿಷಬೊದ್ದಿ, ವಿಷಕಡ್ಡಿ, ಭೀಮನಕಡ್ಡಿ (ಸ್ಯ ಕಿ. ೬೦-೦೯೨೮). [ ? + ಕಡ್ಡಿ ]

ಭೀಮನಸೊಪ್ಪು (ನಾ). ಒಂದು ಬಗೆಯ ಸೊಪ್ಪು: (ಸ್ಯ ಕಿ. ೩೭-೦೩೬೩). [ ? + ಸೊಪ್ಪು ]

ಭೀಮನಹಂಚಿ (ನಾ). ಒಂದು ಬಗೆಯ ಹುಲ್ಲು: ಬೆಟ್ಟಂಚಿಹುಲ್ಲು, ಭೀಮನ ಹಂಚಿ, . . . ಗಂಟುಕಾಚಿ (ಸ್ಯ ಕಿ. ೭೪-೦೩೦೧). [? + ಹಂಚಿ]

ಭೀಮಪರಾಕ್ರಮ (ನಾ). ೧. (ಶತ್ರುಗಳಿಗೆ) ಭಯವನ್ನುಂಟು ಮಾಡುವ ಶಕ್ತಿಯುಳ್ಳವನು. ೨. ಭೀಮನಂತೆ ಶಕ್ತಿಯುಳ್ಳವನು: ಊರ್ಜಿತತೇಜಂ ಭೀಮಪರಾಕ್ರಮನೆನೆಸಿದನೀ ಮಹಿಯೊಳ್ ಪೃಥ್ವೀಪಾಮ ನನುಪಮರೂಪಂ (ಕ್ಲಾಇ. XX, ೦೪-೦೦; ೯೮೦). [ಸಂ.]

ಭೀಮಪಾಕ (ನಾ). (ಆಲಂ) ಅತ್ಯಂತ ರುಚಿಕರವಾದ ಅಡುಗೆ; P ಭೀಮನು ರುಚಿಕರವಾದ ಅಡುಗೆ ಮಾಡುವುದರಲ್ಲಿ ತುಂಬಾ ಸಮರ್ಥನಾಗಿದ್ದನೆಂದು ಪ್ರಸಿದ್ಧವಾಗಿದೆ: ಷಡ್ರಸಗಳನ್ನು ಸೇರಿಸಿ ನಳಪಾಕ ಭೀಮಪಾಕಗಳನ್ನು ಇಳಿಸುವವರೇ ಪಾಕಕಲಾನಿಪುಣರು (ಕಲಾಕ್ಸ.೦೬೨). 'ನಳಪಾಕ' ಪರಾ. [ಸಂ.]

ಭೀಮಬಲ (ನಾ). (ಆಲಂ) ಅತಿಶಯವಾದ ಬಲ,-ಶಕ್ತಿ: ಭೀಮಬಲದಿಂದ ತನ್ನ ಮುಂದಿರುವ ಒಂದು ವಿದ್ಯುತ್ ಬಳ್ಳಿಯನ್ನು ಕಟ್ಟಿಗೆಯ ಕಮಚ ಹೊದ್ದು ಕೊಂಡದ್ದನ್ನು ಹಿಡಿದು ಸೆಳೆದಳು (ಹಕ್ಕಶಾ. ೦೨೦). [ಸಂ.]

ಭೀಮಭೀಷಣ (ನಾ). ಒಂದು ನರಕದ ಹೆಸರು: ತುಷಾಗ್ನಿ ಕ್ರಿಮಿಸಂಘ ಅಮೇಧ್ಯ ಪ್ರತಿಷ್ಠ ಮೂತ್ರಕೂಪ ದುರ್ಗಂಧವಾಸಗಳೆಂಬ್ಬೆದು ಮಂತ್ರಿನರಕಂಗಳಿಂದೊಡಗೂಡಿ ಭೀಮಭೀಷಣವೆಂಬರಸುನರಕವಿಹುದು (ಏಪೀಳ. ೦೫೦). [ಸಂ.]

ಭೀಮಯ್ಯ (ನಾ). ಒಬ್ಬಾತನ ಹೆಸರು: ಭೀಮಯ್ಯನ ಮಗಂ ಪೆರ್ಗ್ಗಡೆ ಬೇಣಾಯ್ಯಂ ಗಂಗರಾಣಿಯ ಕುಮ್ಮಸ್ಥಳಕ್ಕೆ ಕುದುರೆಯಂ ಪಾಯ್ಸಿ ಸತ್ತೊಡೆ (ಎಕ. XII, ಮಧ್ಯಗಿ. ೬೦-೭; ಸು. ೯೨೦); ಬಿಟ್ಟಿಗನ ಪೆರ್ಗ್ಗಡೆ ದಾಸಯ್ಯನ ಮಗಂ ಭೀಮಯ್ಯಂ ಬರೆದ (ಎಕ. VIII, ಸೊರಬ. ೫೪೦-೯; 979).
[ ಭೀಮ + ಅಯ್ಯ ]

ಭೀಮರ (ನಾ). ಕಾಳಗ; ಯುದ್ಧ. [ಸಂ.]

ಭೀಮರಕ್ಷೆ (ನಾ). ಯಾವ ಭೀತಿಯೂ ತಟ್ಟದಿರಲೆಂದು ದೇಹದಲ್ಲಿ ಲೇಪಿಸುವ ಕಾಡಿಗೆ, ಕಟ್ಟುವ ಯಂತ್ರ ಮೊದಲಾದುವು: ರೋಮ ರೋಮಗಳಲ್ಲಿ ಭೀಮರಕ್ಷೆಯು ಬಲ ಕೊರಳಾಗ ಕಟ್ಟಿರಿ ಒಂದಾನ (ಜಾನಪದಗೀತಾ. ೫೪_೦೩). [ ಸಂ. ಭೀಮರಕ್ಷಾ ]

ಭೀಮರಥಿ (ನಾ.) ೧. ದಕ್ಷಿಣ ಭಾರತದಲ್ಲಿ ಹರಿಯುವ ಒಂದು ನದಿ; ಕೃಷ್ಣಾನದಿಯ ಉಪನದಿ; ಭೀಮಾನದಿ. ೨. ಒಬ್ಬ ಮನುಷ್ಯನ ಜೀವಮಾನದಲ್ಲಿ ಬರುವ ಒಂದು ದುಷ್ಕಾಲ; ಎಪ್ಪತ್ತೇಳನೆಯ ವರ್ಷದ ಏಳನೆಯ ತಿಂಗಳ ಏಳನೆಯ ದಿನದ ರಾತ್ರಿ; P ಇದು ಬಹಳ ಅನಿಷ್ಟಪ್ರದವಾದ ಕಾಲವಾದುದರಿಂದ ಶಾಂತಿಯನ್ನು ಮಾಡಬೇಕೆಂದು ಶಾಸ್ತ್ರಗಳಲ್ಲಿ ಹೇಳಿದೆ. ಆ ಶಾಂತಿಗೆ ಭೀಮರಥಿಶಾಂತಿ ಎಂದು ಹೇಳುತ್ತಾರೆ. [ ಸಂ. ಭೀಮರಥೀ ]

ಭೀಮರಾಜ (ನಾ). ಪಶ್ಚಿಮಸಮುದ್ರತೀರದ ಕಾಡುಗಳಲ್ಲಿ ವಾಸಿಸುವ, ಕಪ್ಪುಬಣ್ಣದ 'ನೀಳವಾದ ರೆಕ್ಕೆಗಳುಳ್ಳ' ಮಧುರವಾದ ಕಂಠಧ್ವನಿಯುಳ್ಳ ಒಂದು ಬಗೆಯ ಹಕ್ಕಿ: (೬). [ ಸಂ. ? ]

**ಭೀಮಸೇನ** (ನಾ). ೧. = ಭೀಮ ೪ : ಭೀಮಸೇನಚರಣಪ್ರಹರಣಗಳಿತಶೋಣಿತಾರ್ದ್ರಮಾಳಿಯುಮಾಗಿ (ಪಂಪಭಾ. ೧೩-೧೧೨ ವ); ಭೂಮಿಪತಿ ಹೇಳುವೆನದೇನನು ಭೀಮಸೇನನ ಜನನದದ್ಭುತವ (ಕುಮಾವ್ಯಾ. ೪-೪೯). ೨. ಒಂದು ಬಗೆಯ ಕರ್ಪೂರ. [ಸಂ.]

**ಭೀಮಸೇನಿಕ** (ನಾ). =ಭೀಮಸೇನ ೨ : ಅಡಸಿದ ಪಾರಿಜಾತಕದ ಕಪ್ಪುರವಳ್ಳಿಯ ನೀಲವತ್ತಿಯಾಪ್ಪುಡಕೆಯ ಭೀಮಸೇನಿಕದ ತುಬುಲದಿಂ (ಶಾಂತಿಪು. ೧೧-೯೩). [ಸಂ.]

**ಭೀಮಾಟವಿ** (ನಾ). ಭಯಂಕರವಾದ ಕಾಡು ; ಮಹಾರಣ್ಯ : ಆ ಭೀಮಾಟವೀಸರಸ್ತೀರದೊಳಿರಿಸಿ ಪೋಪುದುಂ ನಾಮಲ್ಲಿ ಧೈರ್ಯಮನೆ ಮನದೊಳವಳಂಬಿಸಿ ಚತುರ್ವಿಧಾಧಾರ ಶರೀರಪ್ರತ್ಯಾಖ್ಯಾನಪೂರ್ವಕಂ ಸನ್ಯಸನದಿಂ ಮುಡಿಪಿ (ಶಾಂತಿಪು. ೪-೯೭ ವ); ರಾಮಂ ಕಲಿಸಿದ ತೆಱದಿಂ ರಾಮೆಗೆ ಪುಸಿ ನುಡಿದು ರಥಮನೇಱಿಸಿಕೊಂಡಾ ಭೀಮಾಟವಿಯುಂ ಕರಿಹರಿಭೀಮಾಟನಮಂ ಕೃತಾಂತಮುಖಮೆನೆಯ್ತಂದಂ (ಕಂರಾಪು. ೧೫-೬೫). [ಸಂ.]

**ಭೀಮೆ** (ನಾ). ೧. ದುರ್ಗೆಯ ಒಂದು ಹೆಸರು. ೨. ಭೀಮಾನದಿ: ಸೋಪಾನ ಕಟ್ಟಿ ಭೀಮೆಯೊಳು ಇಳಿಯುದಕೆ ಸೋಪಾನವಾನೆ ವತನಿತ್ತ (ಕಬ್ಬಸಾ. ೩೦೬). [ಸಂ. ಭೀಮಾ]

**ಭೀರು** (ನಾ). ೧. ಅಂಜಿಕೆಯುಳ್ಳ ವ್ಯಕ್ತಿ : "ಜರಿತಃ, ಚಕಿತಃ, ಭೀತಃ, ತ್ರಸ್ತಃ, ಭೀರುಃ, ಕಾತರಃ, ಕ್ಷುಭಿತಃ, ಶಂಕಿತಃ—ಈ ೮ ಪ(ಹ)ಂದೆ" (ಹಲಾಯು. ೩೮-೧೯೯): ಭೀರುಗಳಂ ಶರಣ್ಬುಗುವರಂ. . . ಇಱಿಯಲ್ಕೆ ಪೇಸಿ (ಎಇ. XX. ೧೨-೨೩ ; 1167) ; ನೀನಿನಿಯುಳ್ ವಿಷಪಾತಂ . . . ನೀನುರುತರ ಭೀರು ಸರ್ಪಭೂಷಣನಾತಂ (ಗಿರಿಕ. ೯-೧೦೩). ೨. ನರಿ. ೩. ಹುಲಿ. ೪. ಒಂದು ಬಗೆಯ ಕಬ್ಬು. ೫. ಬೆಳ್ಳಿ. ೬. ಆಡು. ೭. ನೆರಳು ; ಛಾಯೆ. ೮. ಸಾವಿರಕಾಲಿನ ಹುಳು ; ಜರಿ. [ಸಂ.]

**ಭೀರುಕ** (ಗು). ೧. ಅಂಜುವ ; ಹೆದರುವ. (ನಾ). ೨. =ಭೀರು ೧: "ತ್ರಸ್ನುಃ, ಭೀರುಃ, ಭೀರುಕಃ, ಭೀಲುಕಃ—೪ ಹೆದರುವವನ ಹೆಸರು. ಭಯಪಡುವ ಪಿರಿಕ" (ಸಿದ್ಧಾಂತಿ. ೩೨೯). ೩. ಹುಲಿ. ೪. ನರಿ. ೫. ಕರಡಿ. ೬. ಗೂಬೆ. ೭. ಒಂದು ಬಗೆಯ ಕಬ್ಬು. [ಸಂ.]

**ಭೀರುತನ** (ನಾ). ಹೆದರಿಕೆ; ಹೇಡಿತನ : ಆರು ಕಲಿಸಿದರೆಲವೊ ಸಂಗರಭೀರುತನವನು ನಿನಗೆ ಯಾದವವೀರರಲಿ ಮುನ್ನಿಲ್ಲದಪಯಶವಾಯ್ತು (ಜಭಾಗ. ೧೧-೮೦-೩೪). [ಭೀರು + —ತನ]

**ಭೀರುತೆ** (ನಾ). = ಭೀರುತನ : ಶೈವಾಲವಾಪರಿಸಿದೆಳೆಯ ತಾವರೆಯಂತೆ ಚಾರುಭೀರುತೆ ಮರೆಯೆ ನಾರಿಯ ದುಕೂಲಮಂ ತಳೆದು (ಚಕ್ರಾಂಗ. ೧೯-೩೦೦). [ಸಂ. ಭೀರುತಾ]

**ಭೀರುತ್ವ** (ನಾ).=ಭೀರುತನ : ಭೀರುತ್ವಮೇಗೆಯ್ಯದೋ (ಶಾಂತಿಪು. ೭-೩೯); ಅಂತುಪಶಮಭಾವಮುಂ ಪಾಪಭೀರುತ್ವಮುಂ ತನಗೆ ತೊಟ್ಟನೆ ಪುಟ್ಟೆ (ಕಂರಾಬಾ. ೪-೧೯ ವ). [ಸಂ.]

**ಭೀರುತ್ವಪ್ರತ್ಯಾಖ್ಯಾನ** (ನಾ). [ಜೈನ] ಸತ್ಯವ್ರತದ ಐದು ವಿಧವಾದ ಭಾವನೆಗಳಲ್ಲಿ ಒಂದು; ಭಯವನ್ನು ಬಿಡುವುದು; ೫ ಕ್ರೋಧಪ್ರತ್ಯಾಖ್ಯಾನ, ಲೋಭಪ್ರತ್ಯಾಖ್ಯಾನ, ಭೀರುತ್ವಪ್ರತ್ಯಾಖ್ಯಾನ, ಹಾಸ್ಯಪ್ರತ್ಯಾಖ್ಯಾನ ಮತ್ತು ಅನವೀಚಿಭಾಷಣ—ಇವು ಸತ್ಯವ್ರತದ ಐದು ಭಾವನೆಗಳು: ಭೀರುತ್ವಪ್ರತ್ಯಾಖ್ಯಾನ—ಭಯಮಂ ತೊಱೆವುದು . . . ಈಯಯ್ದುಂ ಸತ್ಯವ್ರತದ ಭಾವನೆಗಳಪ್ಪುವು (ತತ್ತ್ವಸೂ. ೨೭೦). [ಸಂ.]

**ಭೀಲುಕ** (ನಾ).=ಭೀರು ೧: "ತ್ರಸ್ನುಃ, ಭೀರುಃ, ಭೀರುಕಃ, ಭೀಲುಕಃ—೪ ಹೆದರುವವನ ಹೆಸರು. ಭಯಪಡುವ ಪಿರಿಕ" (ಸಿದ್ಧಾಂತಿ. ೩೨೯). [ಸಂ.]

**ಭೀಷಣ** (ಗು). ೧. ಭಯವನ್ನುಂಟುಮಾಡುವ ; ಭಯಂಕರವಾದ : ಪ್ರಕುಪಿತ ಮೃಗಪತಿ ಶಿಶುಸನ್ನಿಕಾಶ ರಶಿವಿಕಟ ಭೀಷಣಭ್ರೂಭಂಗರ್ ನಕುಲ ಸಹದೇವರ್ (ಪಂಪಭಾ. ೬-೮); ಭೀಷಣಬಲರಸ್ತುಹೃದ್ಬಲಶೋಷಣದಕ್ಷರ್. . . ಕುಂಭಕರ್ಣ ವಿಭೀಷಣರೆಂಬರ್ (ಕಂರಾಪು. ೧೧-೨೨೮); ಅದರ ಭೀಷಣ ಪರಿಣಾಮವನ್ನು . . . ಕಾಣಲು ನಾವು ಐದನೆಯ ಅಂಕಕ್ಕೆ ಹೋಗಬೇಕು (ರಘುನಾ. ೬೦). (ನಾ). ೨. ಭಯಂಕರವಾದುದು: ದಾರುಣವಾದುದು : "ಘೋರಂ. . . ಭೀಷಣಂ, ಭೀಷ್ಮಂ, ಭೈರವಂ, ಭಯಾ(ವಹ)ನಕಂ—ಈ ೧೦ ಭಯಂಕರಂ" (ಹಲಾಯು. ೦೦೬-೨೦). ೩. ಭಯಂಕರನಾದವನು : ಸಂಸ್ಫಾಳಿತೋದ್ಧತ ಚಪಳಚಾಪಕರಾಳಮೌರ್ವೀನಾದಭೀಷಣನಾದನಾ ಭೀಮ (ಕುಮಾವ್ಯಾ. ೦೨-೦೩). ೪. ರುದ್ರ; ಶಿವ. ೫. 'ತಾಸೆ' ಎಂಬ ಒಂದು ವಾದ್ಯ: ಭದ್ರಕವೆಂಬ ಕರಾಡ ಶಾಸಕವೆಂಬ ನಗಾರಿ ಭೀಷಣವೆಂಬ ತ್ರಾಸಾ . . . ಘೋರಘಂಟಿಕೆಯೆಂಬ ಘಂಟೆ ಇತ್ತೆಱದ ದಶವಾದ್ಯಂಗಳಂ ಬಾರಿಸಲುಳ್ಳ ವಿಚಕ್ಷಣರಿಂ ವಿನುತರಾಗಿ (ಶಿವತ. ೨೩೬). 'ಪಂಚಮಹಾವಾದ್ಯ' ಪರಾ. ೬. [ಕಾವ್ಯಮೀ] ಎಂಟುರಸಗಳಲ್ಲಿ ಒಂದು ; ಭಯಾನಕರಸ : ಬಳಿಕ ಹಸಿತವ್ಯ ಶೋಚ್ಯ ದ್ವೇಷ್ಯ ಪ್ರತಿಭಟ ಭೀಷಣ ಜುಗುಪ್ಸನೀಯ ಆಶ್ಚರ್ಯ ಸಾಮ್ಯಾಸ್ಪದಂಗಳೆಂಬ ರಸಾಷ್ಟಕರೂಪವಾಗಿ ತತ್ತ್ವದ್ವಾಚ್ಯಮಹುದು (ಶಿವತ. ೨೪೪). [ಸಂ.]

**ಭೀಷ್ಮ** (ಗು). ೧. ಭಯವನ್ನುಂಟುಮಾಡುವ ; ಭಯಂಕರವಾದ : ಜಾಜ್ವಲ್ಯಮಾನಾನಲಾಭ್ಯರ್ಣಸ್ಥಂ ಬಹುಬಂಧನಂಬಡೆದು ಭೀಷ್ಮಧ್ಯಾನನಿರ್ದಂ ಚಿರಂ (ಧರ್ಮಪ. ೦೨-೮) ; ತೃಪ್ತಜಠರದ ಭೀಮಭೀಷ್ಮಭಲ್ಲುಕವೊಂದು ಚರಿಸುತ್ತೈತಂದು (ಚಕ್ರಾಂಗ. ೦೩-೩೯೪). (ನಾ). ೨. ಭೀಕರವಾದುದು; ಭಯಂಕರವಾದುದು : "ಘೋರಂ . . . ಭೀಷ್ಮಂ, ಭೈರವಂ ಭಯಾ(ವಹ)ನಕಂ—ಈ ೧೦ ಭಯಂಕರಂ" (ಹಲಾಯು. ೦೦೬-೨೦) ; ಮುತ್ತುಗಳ್ ಸುತ್ರುಲುಂ ಸಿಡಿಯುತ್ತಿರ್ಪಿನಮಿದರ್ದೊಂದತಿಮದೇಭಂ ಭೀಷ್ಮದೊಳ್ ಗ್ರೀಷ್ಮದೊಳ್ (ಗಿರಿಕ. ೯-೨೪); ಮೇಘಚುಂಬಿತ ಗಿರಿಯ ಚೂಡದಿಂದಾರ್ಭಟಿಸಿ ದುಮ್ಮಿಕ್ಕುವಬ್ಧಿಯಾಘಾತದಿಂ ಭೀಷ್ಮವಹ ಜಲಪಾತವ್ರಾತಂಗಳಿಂ ಭೀಕರಮರಣ್ಯಂ! (ಶ್ರೀರಾಮಾ. ೮೮-೨೯೦). ೩. ಭಯ ; ಭೀತಿ : ದೊರೆಕೊಳ್ಳುಂ ಯಾಮಿನೀ ಸ್ವಾಮಿಯಿನೊಗೆವ ಮಹಾರಿಷ್ಟ ಭೀಷ್ಮ [ಪಾಠಾಂ. ಭೀಷ್ಮ, ಭೇಷ್ಮ]ಕ್ಕಭಂಗಂ (ಜಾತಕ. ೬-೦೦). ೪. 'ಶಂತನು' ಎಂಬ ರಾಜನಿಗೆ ಗಂಗಾದೇವಿಯಲ್ಲಿ ಹುಟ್ಟಿದವನು ; ಪಾಂಡವ, ಕೌರವರ ಅಜ್ಜ ; ಗಾಂಗೇಯ : "ಗಾಂಗೇಯನೆನೆ ಭೀಷ್ಮನಕ್ಕು" (ಚುಂಗರಾ. ೬೮-೨); ತಂದನಂದಂಬೆಯುಂಬಿಕೆಯುಂಬಾಲೆಯರೆಂಬ ಬಾಲೆಯ[ರನೀಂ] ಭೀಷ್ಮಂ ಯಶೋಭಾಗಿಯೋ (ಪಂಪಭಾ. ೦-೬೪) ; ಕೌರವೇಂದ್ರನ ಮೋಹರದ ಗುರುಭಾರ ಭೀಷ್ಮಂಗಾಯ್ತು (ಕುಮಾವ್ಯಾ. ೦-೩೨); ಯದ್ಯಪಿ ಮತಣಿ ಭಾಗವತಮಸ್ತಕಮಣಿ ಬೃಂದಾರ ಕೋಪಮಂ ಸತ್ಯಸಂಧಂ ಭೀಷ್ಮಂ (ಕೃಷ್ಣಭಾ. ೯-೩೦). ೫. (ಆಲಂ) (ಒಂದು ಮನೆತನ ಅಥವಾ ಒಂದು ಊರು ಮುಂತಾದ ಕಡೆಗಳಲ್ಲಿ) ಬಹಳ ವಯಸ್ಸಾದವನು ; ಹಿರಿಯ ವ್ಯಕ್ತಿ : ರಾಜಮಾತೆಯವರ ಕರ್ಮಾಂತರಗಳು ಮುಗಿಯುತ್ತಿದ್ದಂತೆಯೆ ಭೀಷ್ಮರ ಆರೋಗ್ಯ ಕೆಟ್ಟಿತು (ಶಾಂತಲಾ. ೦೮೪). [ಸಂ.]

**ಭೀಷ್ಮತೆ** (ನಾ). ಭಯಂಕರತೆ ; ಭೀಕರತೆ : ಬಲಶಾಲಿಗಳ್ ತಣಿಕತಂದಿಟ್ಟ ಕಾಮರ್ಮಕದ ಭೀಮ ಭೀಷ್ಮತೆಯುಜ್ಜ್ವಲಿಸಿದತ್ತು (ಶ್ರೀರಾಮಾ. ೪೬-೪೯೨). [ಸಂ.]

**ಭೀಷ್ಮಪ್ರತಿಜ್ಞೆ** (ನಾ). (ಆಲಂ) (ಮಹಾಭಾರತದ ಭೀಷ್ಮನು ಮಾಡಿದಂಥ) ಪ್ರತಿಜ್ಞೆ : ಅಚಲವಾದ ಪ್ರತಿಜ್ಞೆ; ದೃಢಪ್ರತಿಜ್ಞೆ : ಗೌಡರು ಈ ಬಿಟ್ಟಲಿಯಲ್ಲಿ ಭೀಮಪ್ಪನಿಗೆ ಶಿಕ್ಷೆಮಾಡಿಸುವ ಭೀಷ್ಮಪ್ರತಿಜ್ಞೆ ಮಾಡಿ ನಿಂತರು (ಮಂಶಿ. ೬). [ಸಂ. ಭೀಷ್ಮಪ್ರತಿಜ್ಞಾ]

**ಭೀಷ್ಮಪ್ರಯತ್ನ** (ನಾ). (ಆಲಂ) ಅಚಲವಾದ ಪ್ರಯತ್ನ; ಎಷ್ಟೇ ಕಷ್ಟ ಬಂದರೂ ಬಿಡದೆ ಸಾಧಿಸುವಿಕೆ; ಹಟದಿಂದ ಕಾರ್ಯವನ್ನು ಮುಂದುವರಿಸುವಿಕೆ: ಸರ್ವಾಪರಾಧವನ್ನು ನನ್ನ ತಲೆಯ ಮೇಲೆ ಹೊರಿಸಿ ಅವಳನ್ನು ನಿರಪರಾಧಿಯನ್ನಾಗಿ ಮಾಡುವ ಈ ನಿನ್ನ ಭೀಷ್ಮ ಪ್ರಯತ್ನವೇಕೆ ? (ಶಕ್ತ್ಯ. ೨೬೮). [ಸಂ.]

**ಭೀಷ್ಮಾರಿ** (ನಾ). ಭೀಷ್ಮನ ವೈರಿ ; ಶಿಖಂಡಿ : ಬೊಬ್ಬಿರಿವುತಂ ಬಂದು ಭೀಷ್ಮಾರಿಯುಂ ಮನೆಯನೊಳಪೊಕ್ಕನು ಘಡಯಿಸುತಲಿರಿದನು ಶಿಖಂಡಿಯುಂ (ತುರಂಗ. ೭೭-೪೭). [ಸಂ.]

**ಭೀಷ್ಮಿಸು** (ಕ್ರಿ). ಉಗ್ರವಾಗು : ಉಸಿರ್ದಂ ವಸುದೇವಂ ಭೀಷ್ಮಿಸೆ ಕೋಪಾರಕ್ತನೇತ್ರನತಿಬಳಜೈತ್ರಂ (ನೇಮಿಪು. ೫-೩೨); ಇಸೆ ಪರಿಯೆ ರಥ ಹರಿಗಳ್ ಮಿಸುಗುವ ಸಂಕಲೆಯ ಕಣ್ಣಿಗಳ್ ಭೋಂಕೆನೆ ಭೀಷ್ಮಿಸೆ ದೆಸೆಗೆ ಹರಿಗಳೋಡಲ್ ಪೊಸರಥಮುಮನೇಱು ಮತ್ತೆ ನಿಲೆ ಸಿಂಹರಥಂ (ನೇಮಿಪು. ೫-೪೬). [ಭೀಷ್ಮ + — ಇಸು$_3$]

**ಭು** (ನಾ). ಒಂದು ಅನುಕರಣ ಶಬ್ದ; ಶಂಖ ಮೊದಲಾದ ವಾದ್ಯಗಳ ಧ್ವನಿಯನ್ನು ಅನುಕರಿಸುವ ಶಬ್ದ : ಭು ಭೂ ಭೂ ಎಂದು ಪೂರಯಿಸಿದುದು ಶಂಖಂ (ಕಬುರ. ೧೦ ಕ್ರಯೋ).

**ಭುಂಕರಿಸು** (ಕ್ರಿ). ೧. ಭುಂ ಎಂದು ಶಬ್ದಮಾಡು. ೨. ಸಶಬ್ದವಾಗಿ ಬಂಧಿಸು : ಸಂಕಲೆಯನಳವಡಿಸಿಯುಗಳಿಯ ಭುಂಕರಿಸಿದನು (ವ್ಯರಾಟ. ೩-೪೦). [ಭುಂಕರಣ$_8$ + — ಇಸು$_3$]

**ಭುಂಕಾರ** (ನಾ). ಭುಂ ಎಂಬ ಧ್ವನಿ : ಭೋರಂಗಿಗಳ ಭುಂಕಾರ (ಸಬಗ. ೬೦-೧೦). [ ? ]

**ಭುಂಗಾ** 'ಭೋಂಗಾ' ನೋ.

**ಭುಂಜಕ** (ನಾ). ತಿನ್ನುವವನು ; ಉಣ್ಣುವವನು : ಭಕ್ಷಿಸುವವನು : ಆತ ಪ್ರಸಾದವಿಡಿದು ಭುಂಜಿಸುವ ಭುಂಜಕನಾಗಿ ವೇಶವಿಡಿದು ರಂಜಿಸುವ ರಂಜಕನಲ್ಲ (ಶವಗೋ. ೦೦೭-೯೭); ನೆರೆ ಹೊಲ್ಲ ಜಾರ ಚೋರಕರ ನೆರೆ ಹೊಲ್ಲ ಬ್ರಹ್ಮೇತಿಕಾರರ ನೆರೆ ಹೊಲ್ಲ ಸುರೆಯ ಭುಂಜಕರ (ಅಪಂಡೇ. ೦೨೮-೯೨). [<ಪ್ರಾ. ಭುಂಜಗ. / ಸಂ. ಭೋಜಕ]

**ಭುಂಜನ** (ನಾ). ತಿನ್ನುವುದು: 'ಭುಂಜಿಸು' ಪರಾ. [< ಪ್ರಾ. ಭುಂಜಣ. / ಸಂ. ಭೋಜನ]

**ಭುಂಜಿಸು**, ಭುಜಿಸು (ಕ್ರಿ). ೧. ಆಹಾರವನ್ನು ಸೇವಿಸು ; ತಿನ್ನು; ಊಟ ಮಾಡು : ಏಕವ್ರತದ ಭೂಸುರರು ಏಕಾಂತನಿಳಯದೊಳೇಕವಾಗಿರೆ ಸ್ವಯಂಪಾಕವ ಮಾಡಿ ಭುಂಜಿಪರು (ಕೋಹಕ. ೭-೩೩); ಭುವನಜನವಂಜದಿರ ನೋಟಕರ್ ಭು[ಪಾಠಾಂ. ಭುಂ]ಜಿಸುವೆನೀ ಕಾಳಕೂಟಮಂ ನಾನೆನುತೆ ಕರವೆತ್ತಿ ಬಾರೆನೆಲ್ಕೆ (ಪಿಂಶು. ೨೨-೦೯) ; ಸ್ವಾದುವಾದ ಫಲವಂ ಭುಂಜಿಸಿ (ಸೌಗಂಧಿ. ೨೮೫-೪). ೨. ಸುಖವನ್ನು ಅನುಭವಿಸು ; ಸವಿ : ನನೆಯುಂದಿರದ ಪೊಸ ಕಮ್ಮಂಗಳವೆಯ ತನೆಯ ತುದಿಯ ತನಿಗಂಪಂ ಭುಂಜಿಸಲೆನುತನುರಾಗ ದಿನಪಱೊಳ್ಕಳ್ಳಿದರ್ಜಡಿವಸುಳೆಗಳು (ಜಯಕಾ. ೦-೩೯) ; ಜಗದುಪರ ಕೊಟ್ಟುದನು ಭುಂಜಿಸು (ಜಗರಾ. ೦೯೩); ಹಾನಿ ವೃದ್ಧಿ ಜಯಾಪ ಜಯಗಳು ಏನು ಕೊಟ್ಟುದ ಭುಂಜಿಸುತ ಲಕ್ಷ್ಮೀನಿವಾಸನ ಕರುಣವನೆ ಸಂಪಾದಿಸನುದಿನದ (ಕಹಾಶಾಂ. ೦೦೯). **ಭುಜಿಸು**: ೧. ಮುಡಿಯಿಕ್ಕಿ ರಾಘವನ ಚರಣದೆಡೆ ಕಾಣಿಕೆಯ ನೀಡಿದನು ತರತರದ ಪಣ್ಗಳಂ, ಪೂಗಳಂ ಮಾಂಸಾನ್ನಮುಂ ಭುಜಿಸಿ ಸರ್ವರುಂ ತಣಿಯುತಂ . . . ಕಳೆದರಾ ರಾತ್ರಿಯುಂ ಸುಖದ ನಿದ್ರೆಯುಲಿ (ಶ್ರೀರಾಪಾ. ೯೭-೫೩೭). 'ಭೋಜಿಸು' ಪರಾ. [ಭುಂಜನ + — ಇಸು$_3$. / ತೆಲು. ಭುಜಿಂಚು]

**ಭುಂಭುಕ** 'ಬುಂಭುಕ' ನೋ.

**ಭುಕ್ತ** (ಗು). ೧. ತಿಂದ ; ಊಟಮಾಡಿದ. ೨. ಅನುಭವಿಸಿದ. (ನಾ). ೩. ತಿಂದುದು ; ಊಟಮಾಡಿದುದು : "ಭಕ್ಷಿತಂ, ಚರ್ವಿತಂ . . . ಅಶಿತಂ, ಭುಕ್ತಂ—೧೪ ಭುಜಿಸಲ್ಪಟ್ಟದ್ದು, ತಿನ್ನಲ್ಪಟ್ಟದ್ದು, ಅಗಿಯಲ್ಪಟ್ಟದ್ದು, ನುಂಗಲ್ಪಟ್ಟದ್ದು, ಮೆದ್ದದ್ದು" (ಸಿದ್ಧಾಂತ. ೩೫೨). ೪. ತಿನ್ನುವಿಕೆ ; ಊಟಮಾಡುವುದು : "ಭುಕ್ತಿಃ, ಭುಕ್ತಃ . . . ಭೋಜನೀಯಂ—ಈ ೭ ಹೊರೆತವೂ, ಊಟವುಂ" (ಶಾಕಶ್ಯ. ೨೩೫). ೫. ಅನ್ನ ; ಆಹಾರ : "ಕೂರವನ್ನಂ ಭುಕ್ತವೋ[ಪಾಠಾಂ. ಭಕ್ತವೋ]ದನಂ ಭಿಕ್ಷಮಾಹಾರಮಶನಂ ಬಲಿಯೆನಲ್ಕೆ ಮೋಗರಮಕ್ಕು" (ಪ್ರಂಗರಾ. ೬೩-೦). ೬. (ಆಲಂ) ಸಾಂಸಾರಿಕ ಸುಖಗಳನ್ನು ಅನುಭವಿಸುವವನು ; ವಿಷಯಲಂಪಟ : ಶಿವಭಕ್ತಿಯುಳಿದ ಭುಕ್ತಂಗೆ ಎಂದೆಂದು ಭವಮುಕ್ತಿಯಿಲ್ಲ (ಸರ್ವಜ್ಞ. ೨೭೯). [ಸಂ.]

**ಭುಕ್ತಶಾಲೆ** (ನಾ). ೧. ಊಟದ ಮನೆ ; ಭೋಜನಗೃಹ. ೨. ಪ್ರಯಾಣಿಕರಿಗೆ ಧರ್ಮಾರ್ಥವಾಗಿ ಊಟಕ್ಕೆ ಏರ್ಪಾಡು ಮಾಡುವ ಮನೆ ; ಅನ್ನಸತ್ರ : ಮಠ ಭುಕ್ತಶಾಲೆ ಕಂಪೆಸೆವ ಘಟಪೂರಿತ ಗಂಧ ಶೈತ್ಯೋದಕದಜವಟಿಗೆಯ ಮನೆಗಳೊಪ್ಪಿಸುವುದು (ಮೋಹಕ. ೨-೨೭). [ಸಂ. ಭುಕ್ತಶಾಲಾ]

**ಭುಕ್ತಶೇಷ** (ನಾ). ಉಂಡು ಮಿಕ್ಕ ಅನ್ನ; ಎಂಜಲು ; ಉಚ್ಛಿಷ್ಟ: "ವಿಘಸಃ, ಭುಕ್ತಶೇಷಃ—ಈ ೨ ಉಂಡು ಮಿಕ್ಕುದು" (ಹರಾಯು.೫೪-೦೭೦); ಕೊಳೆತ ಬೆರಳನು ಭುಕ್ತಶೇಷದೊಳಿಳುಹಿದರೆ ಕಂಡೀಕೆ ಚಿತ್ತದೊಳಳುಕದುಪ ಭೋಗಿಸೆ (ಕುಮಾರ. ೦೭-೪೫). [ಸಂ.]

**ಭುಕ್ತಿ** (ನಾ). ೧. ಊಟ ಮಾಡುವುದು; ಊಟ ; ಭೋಜನ : "ಭುಕ್ತಿಃ, ಭುಕ್ತಂ . . . ಭೋಜನೀಯಂ—ಈ ೭ ಹೊರೆತವುಂ ಊಟವುಂ" (ಶಾಕಶ್ಯ. ೨೩೫); ತೃಪ್ತಿಯರಿಯದ ವಾಂಛೆ ಜೀರ್ಣಿಸದ ಭುಕ್ತಿಪೊಲು ಗುಪ್ತದಲಿ ಕೊಳೆಯುತ್ತೆ ವಿಷಬೀಜವಾಗಿ (ಪ್ರಂಕುಶ. ೩೭೯); ಪುರುಷನ ಒಕ್ಕಲು ಮದುವೆ ಯೆಲ್ಲಾ ಆದ ಮೇಲೆ ಜಾತಿಪದ್ಧತಿಯನ್ನನುಸರಿಸಿ ಊಟಹಾಕಿಸುತ್ತಿದ್ದರು. ಇದಕ್ಕೆ 'ಭುಕ್ತಿ' ಎಂದು ಹೆಸರು (ಹುಟ್ಟಹ. ೦೪). ೨. ಸುಖಾನುಭವ : ಭೋಗ : "ಕಾಮದೊಳು ಭುಕ್ತಿಯೊಳು ಸಂಭೋಗಮೆಂದೆನಿಕು" (ಪ್ರಂಗರಾ. ೦೪೩-೨೦); ಕರ್ತನನಱಿಯದವನು ವಿಪ್ರನಾದರೇನು ಚತುರ್ವೇದಿಯಾದವ ರೇನು ಭುಕ್ತಿಕಾರಣ ಲೋಕದ ಇಚ್ಛೆಗೆ ನುಡಿದು ನಡೆವರಯ್ಯಾ (ಬಸವ. ೬೨೮); ಮಲತ್ರಯಂಗಳಗೆ ತಲೆಗೊಡಹಿ ಭೋಗಮುಂ ನೀಗಿ ಭುಕ್ತಿಯುಂ ತೊತ್ತಳ ದುಳಿದು (ಶಪಪ. ೨೭-೨೨). ೩. [ಜ್ಯೋತಿ] ಸೂರ್ಯಾದಿ ಗ್ರಹಗಳು ಯಾವುದಾದರೂ ರಾಶಿಯನ್ನು ಪ್ರವೇಶಿಸಿ ಮುಂದುವರಿಯುತ್ತಿರು ವಾಗ ಅತಿಕ್ರಮಿಸಿದ ಕಾಲ : ಆಯಿದನು . . . ರಿಪುಭಟನಾಯಕಪದ ಕಡವಗಲ ಭುಕ್ತಿಯ ಶಕ್ತಿಯನು ನೃಪತಿ (ಕುಮಾರ. ೩-೬೫). ೪. ವ್ಯಕ್ತಿಯ ಜೀವಮಾನದಲ್ಲಿ ಯಾವ ಕಾಲದಲ್ಲಿ ಯಾವ ಫಲ ನಡೆಯು ವುದೆಂಬುದನ್ನು ಕಂಡುಹಿಡಿಯಲು ಜ್ಯೋತಿಃಶಾಸ್ತ್ರಜ್ಞರು ನಿರ್ಣಯಿಸಿರುವ ಸೂರ್ಯಾದಿಗ್ರಹಗಳು ಫಲಕೊಡುವ ಕಾಲ ವಿಶೇಷ ; ಒಬ್ಬ ಮನುಷ್ಯನು ೧೨೦ ವರ್ಷಗಳ ಕಾಲ ಬದುಕು ವುದಾದರೆ ಆತನ ಜೀವಮಾನದಲ್ಲಿ ಒಂಭತ್ತುಗ್ರಹಗಳ ದೆಶೆಗಳೂ ನಡೆಯುತ್ತವೆ. ಪ್ರತಿಯೊಂದು ದೆಶೆಯಲ್ಲೂ ಒಂಭತ್ತು ಗ್ರಹಗಳ ಭುಕ್ತಿಗಳು ನಡೆಯುತ್ತವೆ. ಪ್ರತಿಯೊಂದು ಭುಕ್ತಿಯಲ್ಲೂ ಬೇರೆ ಬೇರೆ ಫಲಗಳು ನಡೆಯುತ್ತವೆ. ಈ ದೆಶೆ ಮತ್ತು ಭುಕ್ತಿಗಳ ಕಾಲನಿರ್ಣಯಕ್ಕೆ ನಿರ್ದಿಷ್ಟವಾದ ಗಣಿತವಿದೆ. ಉದಾಹರಣೆಗೆ ಕೃತ್ತಿಕಾನಕ್ಷತ್ರದಲ್ಲಿ ಒಬ್ಬನು ಜನಿಸಿದರೆ ಅವನಿಗೆ ಜನನಕಾಲದಲ್ಲಿ ರವಿದಶೆಯು ಪ್ರಾರಂಭವಾಗುತ್ತದೆ. ಬಳಿಕ ಚಂದ್ರದಶೆ ಇತ್ಯಾದಿ. ರವಿದಶೆಯು ಆರುವರ್ಷಗಳು ನಡೆಯುತ್ತದೆ. ಆಗ ರವಿ, ಚಂದ್ರ, ಕುಜ, ರಾಹು, ಗುರು, ಶನಿ, ಬುಧ, ಕೇತು, ಶುಕ್ರ

ಗ್ರಹಗಳ ಭುಕ್ತಿಗಳು ಕ್ರಮವಾಗಿ ಲೆಕ್ಕಾಚಾರದಂತೆ ನಡೆಯುತ್ತವೆ : ಯುಕ್ತಿವಂತನು ಶುಕ್ರನ ಭುಕ್ತಿಯಲ್ಲಿ ಮುಕ್ತಿ ಪಡೆದನಂತೆ (ಗಾದೆ): ಮಾಘಮಾಸದ ಹೊತ್ತಿಗೆ ಶುಕ್ರಭುಕ್ತಿ ಪ್ರಾರಂಭವಾಗುತ್ತದೆ. ಆಗ ಮದುವೆಯಾಗುತ್ತದೆ (ರೂಢಿ). [ಸಂ.]

**ಭುಕ್ತಿಗೆಯ್** (ಕ್ರಿ). ಊಟಮಾಡು : ವರಮಂತ್ರಮುಂ ಪುಗುತಂದಲ್ಲಿರುತಂ ಸಲೆ ಭುಕ್ತಿಗೆಯ್ದು ಶಯನಂಗೊಂಡಿರೆ (ಹರಿಶ್ಚ. ೪-೦೪-೦೬). [ಭುಕ್ತಿ + ಕೆಯ್$_1$]

**ಭುಕ್ತಿಗೆಯ್ಸು** (ಕ್ರಿ). ಊಟಮಾಡಿಸು ; ಭೋಜನ ಮಾಡಿಸು : ಸಡಗರದಿಂದುಪಚರಿಸುತೆ ಮೆಲ್ಲನೆ ಪಡೆದಳಾ ರತಿಯು ಚಿತ್ರವನು . . . ಮಜ್ಜನ ಭುಕ್ತಿಗೆಯ್ಸಿ (ಮೋಹತ. ೦೦-೨೦). [ಭುಕ್ತಿ + ಕೆಯ್ಸು]

**ಭುಕ್ತಿದ** (ನಾ). ಸುಖವನ್ನು ಕೊಡುವವನು; ಐಹಿಕಸುಖವನ್ನುಂಟು ಮಾಡುವವನು : ಭುಕ್ತಿದರು ದೇವತೆಗಳಲ್ಲದೆ ಮುಕ್ತಿದರು ತಾವಾಗರು (ಐವೇಶ. ೬-೩೦). [ಸಂ.]

**ಭುಕ್ತೋಚ್ಛಿಷ್ಟ** (ನಾ). ಊಟಮಾಡಿ ಬಿಟ್ಟ ಎಂಜಲು ಅನ್ನ : "ಭುಕ್ತೋಚ್ಛಿಷ್ಟಂ, ಫೇಳಿಕಾ–ಈ ೨ ಮುಡಗೂಟು" (ಹಲಾಯು. ೫೪-೦೬೦). [ಸಂ.]

**ಭುಗ್** (ನಾ). ಒಂದು ಅನುಕರಣ ಶಬ್ದ; ಬೆಂಕಿಯು ತಟ್ಟನೆ ಹತ್ತಿಕೊಳ್ಳುವುದನ್ನು ಸೂಚಿಸುವ ಶಬ್ದ : ಒಮ್ಮೆ ಹೊಗೆಗಟ್ಟುವುದೊಮ್ಮೆ ಭುಗ್ಗೆನುವುದು ಬರ್ನರು ಕೆಟ್ಟ ಲಾಟೀನು (ಇಂಚಾಹ. ೨೦೫-೬೫).

**ಭುಗಭುಗ** (ನಾ). ಒಂದು ಅನುಕರಣ ಶಬ್ದ : 'ಭುಗಭುಗನೆ' ಪರಾ.

**ಭುಗಭುಗನೆ** (ಅ). ಒಂದು ಅನುಕರಣಾವ್ಯಯ ; 'ಭುಗಭುಗ ಎಂದು ಧ್ವನಿಯಾಗುವಂತೆ : ಭುಗಭುಗನರ್ಚಿ ಪಾಯ್ವ ಬಿಸುನೆತ್ತರ ಸುಟ್ಟುರೆಯಿಂ ನೆಲಕ್ಕೆ ಪರ್ದುಗಳುಗಲೀಯದವ್ವಳಿಸಿ ಪೀರ್ದಿಸಂ (ಶಂಕರಾ. ೦೦-೮೦). [ಭುಗಭುಗ + — ಅನೆ$_1$]

**ಭುಗಿಭುಗಿ** (ನಾ). ಒಂದು ಅನುಕರಣ ಶಬ್ದ : ಛಟಿ ಛಟೀ ಛಟಿ ಭುಗಿಲು ಭುಗಿಭುಗಿ (ಅಕಥ. ೫೬-೩೨) ; ಭುಗಿಲು ಭುಗಿಭುಗಿ ಧಗಿಲು ಧಗಿಲೆಂದೊಗೆದು ದಳ್ಳುರಿಯುಗುಳಲು (ಕೌಶಿಕ. ೩೬-೭೪).

**ಭುಗಿಭುಗಿಸು** (ಕ್ರಿ). ಭುಗಿಭುಗಿ ಎಂದು ಧ್ವನಿ ಬರುವಂತೆ ಉರಿ, — ಜ್ವಲಿಸು ; ಹೆಚ್ಚಾಗಿ ಜ್ವಾಲೆಗಳನ್ನು ತೋರ್ಪಡಿಸುತ್ತಾ ಜ್ವಲಿಸು ; ಹೆಚ್ಚಾಗಿ ಉರಿ : ಭುಗಿಭುಗಿಸಿ ರಿಪುವನಾಕರದಲಿ ಸಲೆ ಬೇದಿವರಿದುದು ಭೀಮದಾವಾಗ್ನಿ (ಶಬ್ದಾಭ್ರ. ೦೨-೨೪) ; ಭುಗಿಭುಗಿಸೆ ಕೋಪಾಗ್ನಿ ಮೂಡಿಗೆಯ ಕೋಲ್ಗಳಂ ತೆಗೆತೆಗೆದು . . . ಬಿಲ್ಲನಿಕ್ಕಡಿಗೈದು ಬೊಬ್ಬಿರಿದನು (ಕೈಮಿನಿ. ೦೨-೨೨). 'ಭುಗುಭುಗಿಸು' ಪರಾ. [ಭುಗಭುಗಿ + — ಇಸು$_3$]

**ಭುಗಿಲ್, ಭುಗಿಲು** (ನಾ). ೧. ಒಂದು ಅನುಕರಣ ಶಬ್ದ : ಅನುಕರಣಾವ್ಯಯಗಳು . . . ಚಿಟಿಲ್, ಪಟಿಲ್, ಭುಗಿಲ್, ಭೋರ್ . . . ಇತ್ಯಾದಿ (ಶಬ್ದ. ೫೨). **ಭುಗಿಲು** : ೧. ಛಟಿ ಛಟೀ ಛಟಿ ಭುಗಿಲು ಭುಗಿಭುಗಿ (ಅಕಥ. ೫೬-೩೨); ಭುಗಿಲು ಭುಗಿಭುಗಿ ಧಗಿಲು ಧಗಿಲೆಂದೊಗೆದು ದಳ್ಳುರಿಯುಗುಳಲು (ಕೌಶಿಕ. ೩೬-೭೪). ೨. ತಾಪ; ಝಳ : ಎರಡುಹನಿಯಾದರೂ ಕಣ್ಣೀರು ಉದುರಬಾರದೆ ? ಆ ಒಳಗಿನ ಭುಗಿಲು ಸ್ವಲ್ಪವಾದರೂ ಹೊರಮುಖವಾಗಬಾರದೆ ? (ಶಾಂತಲಾ. ೩೦೩); ತಲೆಯಲ್ಲಿ ಹುಯಿಲು ಎದೆಯಲ್ಲಿ ಭುಗಿಲು (ಚಂದ್ರವೀ. ೩-೫).

ಭುಗಿಭುಗಿಲ್, ಭುಗಿಭುಗಿಲು, ಭುಗಿಲ್ಭುಗಿಲ್, ಭುಗುಭುಗಿಲ್, ಭುಗ್ಭುಗಿಲ್, ಭುಭುರ್ಗಿಲ್ (ದ್ವಿರುಕ್ತಿ) : ದೆಸೆಗಳಂ ದಹಿಸುತ್ತೆ ರಸೆಯುನಲ್ಲಾಡಿಸುತೆ ಭುಗಿ[ಪಾಠಾಂ. ಗು]ಭುಗಿಲ್ ಛಿಳಿಛಿಟಿಲನೊಗೆವುದು ಮಹಾವಿಷಂ (ಕಂಠೀ. ೦-೦೩) ; ಉರಿಗೆ ಹವಿಯಂ ಕೊಡಲೊಡನೆ ಸೆಕೆ ಏರಿದು ಭುಗಿಭುಗಿಲೆನುತ (ಅಕಥ. ೫೬-೦೮) ; ಬಿಸುನೆತ್ತರ ಧಾರೆಗಳ್ ಭುಗಿಲ್ಭುಗಿಲೆನೆ ಪಾಯ್ದು ಪೊಣ್ಮಿದುವು (ಶಂಕಾಶಾ. ೦೩-೮೦) ; ಭುಗ್ಭುಗಿಲ್ ಭುಗಿಭುಗಿಲು ಧಗಧಗ ಧಗಿಧಗಿಲುಧಲೆಂದೊದಚಿದುರಿ ನಾಲಿಗೆಗಳನು ನೀಡಿದುವು (ಕೌಶಿಕಾ. ೫-೮-೫೯) ; ದಳ್ಳೆಂಬ ಭೋರೆಂಬ ಭುಗ್ಭುಗಿಲೆಂ[ಪಾಠಾಂ. ಭುಭುರ್ಗಿಲೆಂ]ಬೇಟ್ಗೆಯನಾಂತು ಕೇಸುರಿಗಳಂ ಸೂಸುತ್ತು ಗುರ್ವಿಪ್ಪಿನಂ (ಜಗ. ೦೫-೪೦) ; ನೆಗೆದುರಿ ಭುಭುರ್ಗಿಲ್ ಭುಗಿಲೆನುತು ಮುಗುರ್ದಿಸಿ ಪರ್ವೆ (ಮುಹಾತೀ. ೦೬-೩೮).

**ಭುಗಿಲನೆ** (ಅ). ಒಂದು ಅನುಕರಣಾವ್ಯಯ ; ಭುಗಿಲ್ ಎಂದು ಧ್ವನಿಯಾಗುವಂತೆ : ಧಗಿಲನೆ, ಭುಗಿಲನೆ, ಭೋರನೆ ಎಂಬನುಕರಣ ಪದಂಗಳ್ . . . ಅವ್ಯಯುಪದಂಗಳಪ್ಪುವು (ಕಮಃದ. ೩೦೦ ಪ್ರ.ಪ್ರ).

ಭುಗಿಭುಗಿಲನೆ (ದ್ವಿರುಕ್ತಿ) : ಧಗಧಗಸ್ವನಂ ನಿಮಿರೆ ವನಂ ಭುಗಿಭುಗಿಲನುರಿದುದು [ಪಾಠಾಂ. ಭುಗಿಲನುರಿದ್ದುದು] (ರಾಜಶೇ. ೫-೩೬). [ಭುಗಿಲ್ + — ಅನೆ$_1$]

**ಭುಗಿಲಿಡಿ** (ಕ್ರಿ). ತಳಮಳವು ತುಂಬು, — ವ್ಯಾಪಿಸು : ರಾಗದಿಂ ಟಂಕಾರಗೈಯ್ಯ ದಶದಿಶಿ ಬೆಸುಗೆ ಬಿಚ್ಚಿತ್ತು ತನ್ನಾದದೀ ಶ್ರೀಗಿರೀಶನ ಹೃದಯ ಭುಗಿಲಿಡಿದು ತನುಕಂಪನಾಗಿ ಜರ್ಝರಿಸಿ ತಲ್ಲಣಗೊಳುತಿರಲು (ನವಮೋ. ೬-೪೮). [ಭುಗಿಲ್ + ಇಡಿ$_2$]

**ಭುಗಿಲಿಡು** (ಕ್ರಿ). ೧. ಉರಿ ; ಜ್ವಲಿಸು ; ಧಗಧಗಿಸು : ಹುಟ್ಟಿದುರಿ . . . ಭುಗಿಲಿಟ್ಟು ಕವಿದುದು ತುದಿಗೆ ಬಹುಶಾಖೋಪಶಾಖೆಗಳ (ಶಬ್ದಾಆ. ೨೦-೫೫) ; ಅದು ಬಳಿಕ ಭುಗಿಲಿಡುತ ಬೆಂಬತ್ತಿದುದು ಬಿಡದಾಕಾಕನನು (ಕೌಶಿಕಾ. ೨-೬-೦೦). ೨. ಬಹಳ ಶಬ್ದವನ್ನು ಮಾಡು ; ಭೋರ್ಗರೆ : ಕಹಳೆಗಳ ಕಳಕಳದ ಬೊಗ್ಗುಗಳ ಮೇಳವಣೆ ಭುಗಿಲಿಡಲು (ಶಬ್ದಾಭೀ. ೩-೪). ೩. ತಟ್ಟನೆ ಹೊರಸೂಸು, — ಚಿಮ್ಮು ; ಮೇಲಕ್ಕೆ ಉಕ್ಕು : ತಗರಾಗಿ ಕಾದಿ ನೆತ್ತರ್ ಭುಗಿಲಿಡೆ ತಲೆಯೊಡೆದು ಸತ್ತು ಗಂಗಾತಟದೊಳ್ ಸೊಗಯಿಪ ವೃಷಭಂಗಳಾಗಿಯೂ ಮಿಗೆ ಕ್ರೋಧಗೊಂಡು ಕಾದಿಯುಬೀದು (ಧರ್ಮಾಸ್ತ್ರ. ೪-೬). ೪. ಸಿಟ್ಟುಗೊಳ್ಳು ; ಕೋಪವನ್ನು ತೋರಿಸು : ಎನ್ನ ಕಂಡರೆ ಭುಗಿಲಿಡಲದೇಕಯ್ಯ ಶರಣರ ಮಿಗಿಲು ನುಡಿಗಾನವ್ಮೆನು (ಶ್ರಶುಕೀ. ೦೬-೮); ಕಿದಿಯೂದುಗಿಚ್ಚಿನ ಹೊದಚಿನಂತಿರೆ ಬಿಡದೆ ಭುಗಿಲಿಡುತ (ಶಬ್ದಾಕ. ೬-೨೮). [ಭುಗಿಲ್ + ಇಡು$_1$]

**ಭುಗಿಲು** 'ಭುಗಿಲ್' ನೋ.

**ಭುಗಿಲೆನ್** (ಕ್ರಿ). ಭುಗ್ಗನೆ ಹತ್ತಿಕೊಳ್ಳು; ತಟ್ಟನೆ ಉರಿಯೇಳು; ಜ್ವಲಿಸು : ಕೆಣಕಿದರೆ ಭುಗಿಲೆಂದುದೀತನ ರಣಪರಾಕ್ರಮವಹ್ನಿ (ಶಬ್ದಾಕ. ೩-೮); ಪಶು ಹವಿಗೆ ಭುಗಿಲೆಂದುಲಿದು ನಲಿದಾಡಿದನು ಹುತವಹನಶ್ವಮೇಧದಲಿ (ಕೌಶಿಕಾ. ೦-೬-೪೯); ಬಿಂಕದುರಿ ಮಸಗಿದುದು ಭುಗಿಲೆಂದು ವೀರನಾರಿಯ ಮನದಿ (ಜಾಗ್ರಂಗ. ೦೨-೩೨೬). [ಭುಗಿಲ್ + ಎನ್$_1$]

**ಭುಗಿಲ್ಗರೆ** (ಕ್ರಿ). ಭುಗಿಲೆಂದು ಶಬ್ದಮಾಡು : ದನುಜಾರಿಯುಂ ದನುಜನುಂ . . . ಭುಗಿಲ್ಗರೆವಿನಂ ಪೊಯ್ದರ್ ಗದಾದಂಡದಿಂ (ಜಗ. ೯-೬೫). [ಭುಗಿಲ್ + ಕರೆ$_1$]

**ಭುಗುಭುಗಿಸು** (ಕ್ರಿ). ಭುಗುಭುಗು ಎಂದು ಶಬ್ದಮಾಡು : ಸಗಾಢದ ಲುಚ್ಚಿ ಭುಗುಭುಗಿಸಿ ಉಚ್ಚಳಿಸಿದವು ಹರಹಿನಲಿ ನಾಲಗೆ ಹವ್ಯವಾಹನನ (ಶಬ್ದಾಸ. ೦೨-೨); ಎರಿಗಿರಿಯೊಳು ದಗದಗಿಸಿ . . . ಭುಗುಭುಗಿಸಿ ಬಿರುದಿನ ಮನ್ನೆಯ ಭಟರ ಪ್ರತಾಪಾಗ್ನಿ ಮೆಚಿದುದು ರಿಪುವನದೊಳಗೆ (ಶಂಪ. ೦೫-೫೫). 'ಭುಗಿಭುಗಿಸು' ಪರಾ. [ಭುಗುಭುಗು + — ಇಸು$_3$]

**ಭುಗುಭುಗು** (ನಾ). ಒಂದು ಅನುಕರಣ ಶಬ್ದ : ಭುಗುಭುಗು ಛಟಿಛಟಿಲೆಂದು ಲೋಚನದಿಂದೊಗೆದ ದಳ್ಳುರಿ ಸುತ್ತಿ ಸ್ಮರನ ಬಿಗಿದ ಬತ್ತಲಿಕೆ ಕರ್ಪವಿಲ್ಲುಸಹಿತೆ ಸುಟ್ಟುಗಿದುದು ಉರಿ ನಭಸ್ಥಳಕೆ (ಚೋಹಶ. ೬-೩೯);

ಧಗಧಗಧಗನೆ ಪೊತ್ತುವ ಜ್ವಾಲೆಗಳ ಮಾಲೆ ಭುಗುಭುಗು . . . ಎಂದು ಡಾವರಿಸೆ (ಶ್ರೀವಿಜಾ. ೯-೩೪).

**ಭುಗ್ನ** (ಗು). ೧. ಬಗ್ಗಿದ ; ಡೊಂಕಾದ : ವಕ್ರವಾದ. (ನಾ). ೨. ಬಗ್ಗಿರುವುದು; ಡೊಂಕಾದುದು; ಬಾಗಿರುವುದು; ವಕ್ರವಾದುದು : "ವಕ್ರಂ ... ಭುಗ್ನಂ, ಅರಾಳಂ, ಕುಟಿಳಂ, ವ್ಯಾಕುಂಚಿತಂ, ಊರ್ಮಿಮತ್ — ಈ ೧೨ ಕೊಂಕಿದುದು" (ಹಲಾಯು. ೧೧೬-೧೧); "ಭುಗುರ ಮರಾಳಂ ಭುಗ್ನಮಾವಿದ್ಧಂ . . . ವೃಜಿನಮೆನಲು ಪೊರೆದ ಕೊಂಕಕ್ಕು" (ಶಬ್ದಗಾ. ೦೫೬-೭). ೩. [ಕಾಮಶಾ] ರತಿಬಂಧದಲ್ಲಿ ಒಂದು ಬಗೆ : ತೊಡೆಗಳನೊತ್ತಿ ಕೂಡಿ ಕೂಡುವನೊಳಾಯ್ತೇರಂತಿ[ರೆ] ಭುಗ್ನಕರಣಮೆಂಬುದು (ಜವಕ. ೯-೨೦). ೪. [ನಾಟ್ಯ] ಮುಖದ ಒಂದು ಅಭಿನಯ ; "ಲಜ್ಜೆಯಿಂದ ಮುಖವನ್ನು ಕೆಳಕ್ಕೆ ಮಾಡುವುದು" (ಅಾಸ್ತ್ರಂ. ೨೬೫ ಗದ್ಯಾನುವಾದ) : ವ್ಯಾಭುಗ್ನ ಭುಗ್ನ ಉದ್ವಾಹಿತ ವಿಧುತ ವಿವೃತ ವಿನಿವೃತ್ತ —ಈ ಆಱು ವದನಭೇದಂಗಳ್ (ಅಾಸ್ತ್ರಂ. ೩-೧೨೪ ವ). [ಸಂ.]

**ಭುಜ** (ನಾ). ೧. ತೋಳು; ಬಾಹು : "ದೋಃ ಪ್ರವೇಷ್ಟಃ. ಭುಜಃ, ಬಾಹುಃ, ಭುಜಾ—ಈ ೫ ತೋಳ್" (ಹಲಾಯು. ೯೬-೩೭೮); ಪನ್ನತರ ನಡುವನುಡಿಯಲ್ಕೆನ್ನ ಭುಜಾರ್ಗಳವೆ ಸಾಲ್ಗುಂ (ಪಂಪಭಾ. ೬-೨೬) : ಭುಜಕೆ ಜಯಮೇಚಿ ರಿಪುಭೂಭುಜರ್ಗಂ ಭಯಮೇಚಿ (ತ್ರಿಷಷ್ಟಿ. ೨೪-೩೯೯). ೨. ಹೆಗಲು : ನಾನು ಎರಡು ಮೂರು ವರ್ಷದ ಎಳೆಯ ಬಾಲಕನಿದ್ದಾಗ ನೆರೆಹಳ್ಳಿಯ ಒಂದು ಬಯಲಾಟಕ್ಕೆ ಯಾರದೋ ಭುಜವನ್ನೇರಿಕೊಂಡು ಹೋಗಿದ್ದೆ (ಮುಕ್ತಿ. ೦೪೦). ೩. ಆನೆಯ ಸೊಂಡಿಲು. ೪. ಡೊಂಕು; ವಕ್ರತೆ. ೫. (ಅಲಂ) ಪರಾಕ್ರಮ : 'ಭುಜಾಕ್ರಾಂತ' ಪರಾ. ೬. [ರೇಖಾಗ] ಎರಡು ಕೋನಗಳನ್ನು ಸೇರಿಸುವ ರೇಖೆ : ಅ, ಆ ಎಂಬುವುದೆ ತಾನು ನಡೆಯುತ್ತಿರುವ ಸರಳರೇಖೆಯು. ಇ ಈ ಯೆಂಬುವುದು ಆ ಸರಳರೇಖೆಗೆ ಭುಜಗಳಾಗಿರುತ್ತೆ (ಕೂಪಾಂಕ. ೧೯). ೭. ದೂರದ ಒಂದು ಅಳತೆ: ಹತ್ತುಯೋಜನ(?) : ದಂಡವೆಂದೆಂಬ ಸಾವಿರದ ನೆರ ಕೂಡೆ ತೋಱಿರುವ ಕ್ರೋಶ ಚತುರುಸ್ನತಕೆ ಯೋಜನವನೀರ್ಕೈದ ಕೂಡೆ ಭುಜವೆ (ಅಾಸ್ತ್ರ. ೩೨-೧).

**ಭುಜ ತಟ್ಟಿಕೊಳ್ಳು**=ಜಂಭ ಕೊಚ್ಚಿಕೊಳ್ಳು : ಆತ್ಮಪ್ರಶಂಸೆ ಮಾಡಿಕೊಳ್ಳು : ಉನ್ನತಾಧಿಕಾರದಲ್ಲಿರುವ ಜನ ಹಿಂಸಾತ್ಮಕವಾದ ತಮ್ಮ ಅಧಿಕಾರದ ಬಗ್ಗೆ ಭುಜತಟ್ಟಿಕೊಳ್ಳುವಾಗ ನಾವು ಅಂಥದೇ ವಿಚಿತ್ರ ವ್ಯಾಪಾರವನ್ನು ಗಮನಿಸಬಹುದಲ್ಲವೆ ? (ಪ್ರಸರು. ೧೯೭). [ಸಂ.]

**ಭುಜಂಗ** (ನಾ). ೧. ಹಾವು; ಸರ್ಪ : "ಭುಜಂಗಕ್ಕೆಲರುಣಿ" (ಕಬೆಂ. ೨೩೪); ಅಂತಜಾತಶತ್ರು ಶತ್ರುಪಕ್ಷಕ್ಷಯಕರಕರವಾಳದಂಷ್ಟ್ರಾಭೀಳ ಭುಜಂಗಮೂರ್ತಿ ವಿಶ್ವವಿಶ್ವಂಭರಾಧಾರವಪ್ಪ ರಿಕ್ಷೇಸರಿಯ ತೋಳ್ವಲದೊಳ್ ರಾಜ್ಯಂಗೆಯ್ಯುತಿರ್ಪನ್ನೆಗರ (ಪಂಪಭಾ. ೪-೧೧ ವ). ೨. ವಿಟ; ಜಾರ : "ವೇಶ್ಯಾಪತಿಃ, ಭುಜಂಗಃ, ವಿಟಃ, ಪಲ್ಲವಿಕಃ — ಈ ೪ ಬೊಜಗಂ" (ಹಲಾಯು. ೬೩-೨೨೭); ತಿಸುಳಿಯುಂ ದೇವಚಯುವೇಶ್ಯಾಭುಜಂಗನುಂ . . . ನುತಿಸಿದಂ (ಉದ್ಭಟ. ೩-೩೦); ವಿಳಾಸದಿಂ ಸುಳಿದೊಡಿನ್ನುಮಿವಳ್ಸಳಿದ್ಯೆ ದಳೀಯೆನುತ್ತಾಡೆ ಭುಜಂಗರು (ಅಾಬಿಕ. ೧೧-೧೧೧). ೩. ಪತಿ; ಒಡೆಯ. ೪. ಪಂಡಿತ ; ವಿದ್ವಾಂಸ : ಪೆಸರ್ವೆತ್ತಿರ್ದಾದಿರಾಜರ್ಕಳುಮನಿಱಿಸಿದಂ ರಾಜವಿದ್ಯಾಭುಜಂಗಂ ವಸುಧಾಲಕ್ಷ್ಮೀಭುಜಂಗಂ . . . ಸಹಜ ಮಧುರ ಸಂಗೀತಗೋಷ್ಠೀಭುಜಂಗಂ ರಸವದ್ವಾಣೀಭುಜಂಗಂ ನೃಪಗುಣನಿಳಯಂ (ಶಾಸಪಂ. ೩೯-೨೦೦ ; 1112). ೫. ತಪಸ್ಸು ಮಾಡುವವನು : ಋಷಿ : ಮುನಿ : "ವಿಟ ತಪೋನಿಧಿ ಭೋಗಿಗಳುಂ ಭುಜಂಗಮಕ್ಕುಂ" (ಶಾಶಾರು. ೪೭) : "ಪಾವನಮುನಿ ವಿಟ ಸರ್ಪಂ ಶೀವಿದ ಮೂರುಂ ಭುಜಂಗಶಬ್ದಂ ಜಗದೊಳ್" (ನಾನಾಕಂ. ೭೭). [ಸಂ.]

**ಭುಜಂಗತ್ರಾಸ** (ನಾ). [ನಾಟ್ಯ] ಹದಿನಾರು ವಿಧವಾದ ಮಾರ್ಗದ ಆಕಾಶಚಾರಿಗಳಲ್ಲಿ ಒಂದು; P "ಒಂದು ಕಾಲನ್ನು ಕುಂಚಿತ [ಚರಣ ೩] ಮಾಡಿ ಹಿಮ್ಮಡಿಯನ್ನು ನಿತಂಬಕ್ಕೆದುರಾಗಿರಿಸಿ ಮೊಣಕಾಲನ್ನು ತನ್ನ ಪಾರ್ಶ್ವಕ್ಕೆ ತಿರುಗಿಸಿ ಅಂಗಾಲನ್ನು ಮೇಲಕ್ಕೆ ಮಾಡಿ ಸೊಂಟದಿಂದ ಮೊಳಕಾಲವರೆಗೂ ಅಡಿಯನ್ನು ಚಲಿಸುವುದು. [ಅಂಗಾಲನ್ನು ಮೇಲಕ್ಕೆ ಮಾಡಿ ಸೊಂಟ ಮೊಳಕಾಲು ಇವೆರಡನ್ನೂ ಚಲಿಸಬೇಕು. ಎಂದು ಭರತನಾಟ್ಯ ಮತ್ತು ಸಂಗೀತ ರತ್ನಾಕರದಲ್ಲಿದೆ]" (ಅಾಸ್ತ್ರಂ. ೩೧೯ ಗದ್ಯಾನುವಾದ) : ಅತಿಕ್ರಾಂತ, ಅಪಕ್ರಾಂತ, ಪಾರ್ಶ್ವಕ್ರಾಂತ, ಮೃಗಪ್ಲುತ, ಊರ್ಧ್ವಜಾನು, ಅಲಾತ, ಸೂಚೀ, ನೂಪುರಪಾದ, ಡೋಲಪಾದ, ದಂಡಪಾದ, ವಿದ್ಯುದ್ಭ್ರಾಂತ, ಭ್ರಮರಿ, ಭುಜಂಗತ್ರಾಸ, ಅಕ್ಷಿಪ್ತ, ಆವಿದ್ಧ, ಉದ್ವೃತ್ತ ಈ ಪದಿನಾಱು ಮಾರ್ಗದ ಆಕಾಶಚಾರಿಗಳು (ಅಾಸ್ತ್ರಂ. ೬-೧೭ ವ). [ಸಂ.]

**ಭುಜಂಗತ್ರಾಸಿತ** (ನಾ). [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು: P "ಭುಜಂಗತ್ರಾಸಿತ ಚಾರಿಯನ್ನು ಮಾಡಿ, ಕುಂಚಿತ ಪಾದವನ್ನು ಎತ್ತಿ, ಸೊಂಟ ತೊಡೆ ಮತ್ತು ಮೊಳಕಾಲುಗಳಿಂದ ತ್ರ್ಯಸ್ರಾಕಾರವನ್ನು ಮಾಡಿ ತಿರುಗಿಸಿ [ಸುತ್ತಿ] ಒಂದು ಕೈಯನ್ನು ವ್ಯಾವರ್ತ ಮತ್ತು ಪರಿವರ್ತ ಮಾಡಿ ದೋಲಹಸ್ತದಲ್ಲೂ ಇನ್ನೊಂದನ್ನು ಕಟಕಾಮುಖ ಹಸ್ತದಲ್ಲೂ ಹಿಡಿಯುವುದು" (ಅಾಸ್ತ್ರಂ. ೨೪೦ ಗದ್ಯಾನುವಾದ) : ತಲಪುಷ್ಪಪುಟ. . . ಭುಜಂಗತ್ರಾಸಿತ. . . ಗಂಗಾವತರಣ—ಈ ನೂಱೆಂಟು ಕರಣಂಗಳ್ (ಅಾಸ್ತ್ರಂ. ೪-೪೨ ವ). [ಸಂ.]

**ಭುಜಂಗನಿಲಯ** (ನಾ). ೧. ಹಾವುಗಳ ವಾಸಸ್ಥಾನ; ಹಾವಿನ ಹುತ್ತ; ಗೆದ್ದಲುಹುತ್ತ. ೨. ಪಾತಾಳಲೋಕ : ಭುಜಂಗನಿಲಯಂ [ಶಾಶಾಂ. ಭವನಂ]ಕ್ರೂರಂ ತ್ರಿಶೂಲಾಹ್ವಯಂ (ಶಾಶಾರ. ೯೩). [ಸಂ.]

**ಭುಜಂಗಪ್ರಯಾತ** (ನಾ). [ಛಂದ] ವರ್ಣಛಂದಸ್ಸಿನಲ್ಲಿ ಹನ್ನೆರಡನೆಯದಾದ ಜಗತಿಯಲ್ಲಿ ಒಂದು ವೃತ್ತ; ಪ್ರತಿಪಾದದಲ್ಲೂ ನಾಲ್ಕು ನಾಲ್ಕು ಯಗಣವಿರುವ ವೃತ್ತ : ಕುಶಂ ವಾರ್ಧಿಪರ್ಯಾಯಮಕ್ಕುಂ ವಿರಾಮಂ ದಿಶಾಸಂಖ್ಯೆಯಕ್ಕುಂ ಪಯೋಜಾಯತಾಕ್ಷೀ ವಿಶೇಷಂ ಕವೀಂದ್ರಸ್ತುತಂ ನಾಕಿಗಂಬೋಲ್ ಪ್ರಶಸ್ತಂ ಸಮಸ್ತಂ ಭುಜಂಗಪ್ರಯಾತಂ (ಛಂದೋಂಬು. ೨-೧೨೭). [ಸಂ.]

**ಭುಜಂಗಭೋಗ** (ನಾ). ೧. ಹಾವಿನ ಶರೀರ. ೨. ಹಾವಿನ ಹೆಡೆ : 'ಭುಜಂಗಭೋಗಾಶ್ರಿತೆ' ಪರಾ. [ಸಂ.]

**ಭುಜಂಗಭೋಗಾಶ್ರಿತೆ** (ನಾ). ೧. ಆದಿಶೇಷನ ಹೆಡೆಗಳನ್ನು ಆಶ್ರಯಿಸಿಕೊಂಡಿರುವವಳು; ಆದಿಶೇಷನ ಹೆಡೆಗಳ ಮೇಲೆ ಇರುವವಳು. ೨. ಜಾರರೊಂದಿಗೆ ಸುಖಿಸುವವಳು. ೧, ೨ : ಸತತಂ ಭುಜಂಗಭೋಗಾಶ್ರಿತೆ ನಿನ್ನ ಕಳತ್ರಮಾ ಧರಾವಧು ಮತ್ತೆಂತತಿಶಯದೆ ಮಹಾಪುರುಷವ್ರತಮಂ ತಾಳ್ದುವಳುದಾರಚರಿತಕ್ರಮದಿಂ [ಇಂತು] ವ್ಯಾಜಸ್ತುತ್ಯಲಂಕಾರಂ (ಕವಿರಾ. ೩-೧೭೩). [ಸಂ. ಭುಜಂಗಭೋಗಾಶ್ರಿತಾ]

**ಭುಜಂಗಮ** (ನಾ). ೧.= ಭುಜಂಗ ೧: "ವಿಷಧರಃ . . . ದರ್ವೀಕರಃ, ದೃಕ್ಶ್ರುತಿಃ, ಭುಜಂಗಮಃ — ಈ ೨೫ ಹಾವಿನ ಪೆಸರ್" (ಹಲಾಯು. ೧೧೩-೧೯): "ಉರಗಂ ಸರೀಸೃಪಂ ಕುಂಭೀನಸಂ ಭೋಗಿ ಮರುತಾಶನಂ ದಂದಶೂಕಂ ಭುಜಂಗಮಂ . . . ಸರ್ಪಂಗೆ ನಾಮಂ" (ಶಬ್ದಗಾ. ೧೧೯-೧). ೨. ಪಾತಾಳವಾಸಿಯಾದ ನಾಗ : ಸಿದ್ಧ ವಿದ್ಯಾಧರರು ವಸುಗಳು ಮನುಗಳಾದಿತ್ಯರು ಭುಜಂಗಮರು . . . ಎಸೆದರು ರೋಮ ರೋಮದ ಸಾಲಿಯ ಚೌಕದಲಿ (ಕುವ್ಯಾಪ. ೯-೩೯). ೩. ರಾಹು. ೪. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ. ೫. [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಒಂಬತ್ತನೆಯದು; ಆಶ್ಲೇಷ. [ಸಂ.]

**ಭುಜಂಗಯಾಗ** (ನಾ). ಸರ್ಪಗಳನ್ನು ಹವಿಸ್ಸನ್ನಾಗಿ ಹೋಮ ಮಾಡುತ್ತಿದ್ದ ಯಾಗ ; ಸರ್ಪಯಾಗ : ತಂದೆಗಂ ಸರ್ಪದಷ್ಟಮಿರ ದಾದುದೆನುತ್ತ ಭುಜಂಗಯಾಗಮಂ ಕುಂದಿನಿತಿಲ್ಲದಂತೆ ರಚಿಸುತ್ತಿರಲಾಗ (ಕಣಕಂ. ೨೮). [ಸಂ.]

**ಭುಜಂಗಲೋಕ** (ನಾ). ನಾಗಲೋಕ ; ಪಾತಾಳ : ರಂಗನಾಥನ ಪದಪತಿಗೆ ರಣರಂಗಭೀತನು ಬಿದ್ದನಿರದೆ ಭುಜಂಗಲೋಕಕೆ (ಸಿಶಾಗ. ೧೦-೫೩-೬೦). [ಸಂ.]

**ಭುಜಂಗವಳಿ** (ನಾ). [ಶೈವ] ಕಾಳಾಮುಖ ಸಂಪ್ರದಾಯದ ಒಂದು ಶಾಖೆ : ಸಮುದ್ರದ ಬಲಗೆನಿತೊನ್ನು ಗರ್ದ್ದೆ ಬೆಯುವುದೆನಿತುವಂ ಕೊಟ್ಟರೀ ಸ್ಥಾನಕ್ಕೆ ಭುಜಂಗವಳಿ ಕಾಳಾಮುಖಿಂ ನೈಷ್ಠಿಕತಪೋಧನನೆ ನಡೆಯಿಸುವ . . . ಈ ಧರ್ಮ್ಮಮಂ ಪ್ರತಿಪಾಳಿಸಿದವಂಗೆ ವಾರಣಾಸಿಯೊಳ್ಕೋಟಿ ಚತುರ್ವೇದಪಾರಗರ್ಗ್ಗೆ ಕವಿಲೆಯುಂ ಕೊಟ್ಟ ಫಲವಕ್ಕುಂ (ಕಇಅ. ೨೨-೬-೩೭ ; 1083). [ಭುಜಂಗ ? + ಬಳ್ಳ₃ (<ಬಟ್ಟು₃)]

**ಭುಜಂಗವಿಜೃಂಭಿತ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಇಪ್ಪತ್ತಾರ ನೆಯ ಉತ್ಕೃತಿಯಲ್ಲಿ ಒಂದು ವೃತ್ತ ; ಪ್ರತಿಪಾದದಲ್ಲೂ ಇಪ್ಪತ್ತಾರು ಅಕ್ಷರಗಳು ಇರುವ ನಾಲ್ಕುಪಾದಗಳುಳ್ಳ ವೃತ್ತ : ಆದಿಕ್ಷ್ಮಾಯುಗ್ಮಾಕಾಶಾಗ್ರಂ ಪುರಮಿತಸುರಪುರಸಹಿತಂ . . . ಸ್ತನಭರ ವಿನಮಿತ ಪೆಸರಿಂ ಭುಜಂಗವಿಜೃಂಭಿತಂ (ಛಂದೋಂಬು. ೨-೦೯೭). [ಸಂ.]

**ಭುಜಂಗವೀಣೆ** (ನಾ). ಒಂದು ಬಗೆಯ ವೀಣೆ : ಇವಲ್ಲದೆ ಪ್ರಾಚೀನ ಗ್ರಂಥಗಳು, ಕಿನ್ನರಿ, ಪಿನಾಕಿ, ರುದ್ರವೀಣೆ, ಆಲಾಪವೀಣೆ, ಬ್ರಹ್ಮವೀಣೆ, ಭುಜಂಗವೀಣೆ, ರಾವಣಹಸ್ತ ಮುಂತಾಗಿ ನಾನಾ ರೀತಿಯ ವೀಣೆಗಳನ್ನು ನಮೂದಿಸುತ್ತವೆ (ಸಂಗೀಸಂ. ೩೦೦). [ಸಂ. ಭುಜಂಗವೀಣಾ]

**ಭುಜಂಗಶಯನ** (ನಾ). ಆದಿಶೇಷನನ್ನು ಹಾಸಿಗೆಯಾಗಿ ಉಳ್ಳವನು : ವಿಷ್ಣು : ಮಾತಂಗವರದ ವಿಹಂಗಗಮನ ಭುಜಂಗಶಯನ (ಐರಾಕ್ಷ. ೪೭-೧). [ಸಂ.]

**ಭುಜಂಗಾಂಚಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : P "ಬಲಗಾಲಿನಿಂದ ಭುಜಂಗತ್ರಾಸಿತಚಾರಿಯನ್ನು ಮಾಡಿ ಬಲಗೈ ಯಿಂದ ರೇಚಿತವನ್ನೂ ಎಡಗೈಯಿಂದ ಲತಾಕರವನ್ನೂ ಮಾಡು ವುದು" (ಶಾಸ್ತ್ರರ. ೨೧೧ ಗದ್ಯಭಾಗ) : ಭುಜಂಗಾಂಚಿತಮೊದಲು ಭುಜಂಗತ್ರಾಸಿತಮದು ಬಲಗಾಲೊಂದಿ ಮಗುಳ್ದು ಬಲಗೈ ರೇಚಿತಮೊಡವೆ ಲತಾಕರಮುಮದು ವಾಮದೊಳಿರೆ ಭುಜಂಗಾಂಚಿತಾಖ್ಯಕರಣಮೆನಿಕ್ಕುಂ (ಶಾಸ್ತ್ರರ. ೪-೯೨). [ಸಂ.]

**ಭುಜಂಗಾಂಚಿತಕ** (ನಾ). =ಭುಜಂಗಾಂಚಿತ : ತಲಪುಷ್ಪಪುಟ ಲೀನ. . . ಭುಜಂಗಾಂಚಿತಕ . . . ಗಂಗಾವತರಣ – ಈ ನೂಱೆಂಟು ಕರಣಂಗಳ್ (ಶಾಸ್ತ್ರರ. ೪-೪೨ ವ). [ಸಂ.]

**ಭುಜಂಗಾಕ್ಷಿ** (ನಾ). ಒಂದು ಬಗೆಯ ಸಸ್ಯ ; ಸರ್ಪಾಕ್ಷಿ ಗಿಡ : "ನಾಕುಲೀ, ಸುರಸಾ, ನಾಗಸುಗಂಧಾ, ಗಂಧನಾಕುಲೀ, ನಕುಲೇಷ್ಟಾ ಭುಜಂಗಾಕ್ಷೀ, ಛತ್ರಾಕೀ, ಸುವಹಾ, ೮ ಸರ್ಪಾಕ್ಷಿಗಿಡದ ಹೆಸರುಗಳು" (ಸಿದ್ಧೌಷಿ. ೧೩೬). [ಸಂ. ಭುಜಂಗಾಕ್ಷೀ]

**ಭುಜಂಗಾಧಿಪ** (ನಾ). ಹಾವುಗಳ ಒಡೆಯ ; ಸರ್ಪರಾಜ ; ಆದಿಶೇಷ : ಉರುಭುಜಂಗಳ್ ಭುಜಂಗಾಧಿಪಂಗೆ ಪಡೆವನ್ನಂ ಸೋಲವುಂ . . . ಜಯಾವನಶ್ರೀ ಪಡೆನುದು ನೃಪಪುತ್ರಾಂಗದೊಳ್ ನಾಣ ಚೆಲ್ವಂ (ಚಂದ್ರಪ್ರ. ೨-೨೯). [ಸಂ.]

**ಭುಜಂಗಾಸ್ತ್ರ** (ನಾ). ಒಂದು ಬಗೆಯ ಮಂತ್ರಾಸ್ತ್ರ ; ಸರ್ಪಾಸ್ತ್ರ : ವಿಗೇಂದ್ರಾಸ್ತ್ರಂ ಭುಜಂಗಾಸ್ತ್ರಮಂ ಗೆಲೆ ಗೆಲ್ದಾಸಯಿಸಂದು ಕೇಶವ ನಿಕುಂಭರ್ ತಮ್ಮೊಳ್ಚಿಟ್ಟಾಡಿದರ್ (ಜಗ. ೦೩-೩೦). [ಸಂ.]

**ಭುಜಂಗಿ** (ನಾ). ೧. ಹೆಣ್ಣುಹಾವು : ವೀರಶ್ರೀ ಭುಜಂಗೀಸಮಾಶ್ರಯ ಶ್ರೀಖಂಡಕಾಂಡಂಗಳುಮಪ್ಪ ದೋರ್ದಂಡಂಗಳಿಂದಮುತಿನಿಬಿಡಾಲಿಂಗನಂ ಗೆಯ್ದು (ಆದಿಪು. ೦೯-೯೩ ವ). ೨. ನಾಗಸ್ತ್ರೀ. ೩. ಸೂಳೆ ; ವೇಶ್ಯೆ : ಇಂತನಂತಚರಿತ್ರದಿಂ ಲಂಕಿಣಿ ತಾಟಕಿ ಪಾಬಾಪತ್ಮ ರತಿ ಭಾರತಿ ಸಾಗರ ಸುತೆಯುವಂತೊಪ್ಪುವ ಭುಜಂಗಿಯರಂ . . . ನೋಡಿ (ಮುದ್ರಾರ. ೨-೯೨). [ಸಂ. ಭುಜಂಗೀ]

**ಭುಜಂಗೇಂದ್ರ** (ನಾ). ೧. ಶ್ರೇಷ್ಠವಾದ ಸರ್ಪ. ೨. ಆದಿಶೇಷ : ತರುಹೋತ್ತುಂಗ ಶಶಾಂಕಖಂಡಮೆ ಸುಧಾಬೀಜಂ ಭುಜಂಗೇಂದ್ರನಂಕುರಂ . . . ಶಂಕರ ಕಲ್ಪದ್ರುಮನೀಗಭೀಷ್ಟಫಲಮಂ ಚಾಳುಕ್ಯನಾರಾಯಣಂ (ಗದಾಯು. ೦-೨). [ಸಂ.]

**ಭುಜಕಿರೀಟ** (ನಾ). ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ : ನಮ್ಮ ಕರ್ಣಕುಂಡಲ, ಭುಜಕಿರೀಟ, ಆಲಂಕಾರಗಳ ರೀತಿ ಹಾಗಿಲ್ಲ (ಹುಕ್ಕಬು. ೦೩೮). [ಸಂ.]

**ಭುಜಕೀರ್ತಿ** (ನಾ). = ಭುಜಕಿರೀಟ : ನಳಿತೋಳ್ಗಂಬಹಿಗಳ ಪೆಡೆಯೊಳು ಥಳಥಳಿಸುವ ರತ್ನಗಳಂತೆ ಒಳಸಕುಚಿಗೆ ರನ್ನದ ಭುಜಕೀರ್ತಿಯನಳವಡಿಸಿದರು ನಾರಿಯರು (ಶಿವಂಕಾಂ. ೧೦-೦೬); ಮುತ್ತಿನ ಮೂಗುತ್ತಿ ಮುಂಕಡಿಟ್ಟು ಭುಜಕೀರ್ತಿ ವೃತ್ತಕುಚದ ನಡುವೆಸೆವ ಕತ್ತೂರಿಯಣ್ಣನ ಕಾಂತೆಸೊಬಗಿ ಯದನ ವೃತ್ತಾಂತವನುಸುರುವೆನು (ಕುರಾಕಾಂ. ೦-೧೦೩) ; ಭುಜವಲ್ಲರಿಯ ಮಂಜರಿಯ ಸಿರಿಯುಂ ಭುಜಕೀರ್ತಿ ಕಳೆದು ತೆರಂಬೊಳೆಯೆ (ರಾಜಶೇ. ೬-೦೦ ವ). [ಭುಜ + ಕೀರ್ತಿ₁. / ತೆಲು. ಭುಜಕೀರ್ತಿ]

**ಭುಜಗ** (ನಾ). = ಭುಜಂಗ ೧ : "ವಿಷಧರಃ . . . ಭುಜಗಃ . . . ಭುಜಂಗಮಃ –ಈ ೨೫ ಹಾವಿನ ಪೆಸರ್" (ಶಬ್ದಾಯು. ೦೦೩-೦೬); ಭುಜಗನ ಫಣಾಮಣಿನಿವಾಳಿ ಬೇಕೆಂದಡಂ ಕೋಡಿದನೆ ಕೊಂಕಿದನೆ ಕಂದಿದನೆ ಕುಂದಿದನೆ (೦ಸರ. ೬-೬೧) ; ಕೊಡಹಿದರೆ ಕಟ್ಟಿಜುಹೆಗಳು ಬೆಂಬಿಡದೆ ಭುಜಗನ ನಳಲಿಸುವವೋಲ್ (ಉತ್ತರಭ್ಯು. ೦೬-೩). ೨. =ಭುಜಂಗ ೨ : ಪುರವ ಪೊಗುವನಿತಱೊಳಗಲ್ಲಿಪ್ಪ ಭುಜಗ[ಪಾಠಾಂ. ಭುಜಂಗ]ನೀ ತೆಱನಱಿದು ತನ್ನ ಮಧುವೆಂದು ಹಸ್ತವ ಪಿಡಿಯೆ (ಶ್ರೀರಾ. ೨-೦೩). ೩. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ. [ಸಂ.]

**ಭುಜಗತ್ರಾಸ** (ನಾ). [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು ; P "ಭುಜಂಗತ್ರಾಸಿತಚಾರಿಯನ್ನು . . . ಮಾಡಿ ಎರಡು ಕೈಗಳಿಂದಲೂ ಎಡಪಾರ್ಶ್ವದಲ್ಲಿ ರೇಚಿತ ಮಾಡುವುದು" (ಶಾಸ್ತ್ರರ. ೨೧೧ ಗದ್ಯಭಾಗ): ಭುಜಗತ್ರಾಸಿತಚಾರಿಯ ಬುಜುವಿಂದಂ ಮಾಡುತೆರಡು ಕೈಗಳನೆಡದೊಳ್ ನಿಜದಿಂ ರೇಚಿತಮಾಗಲ್ ಭುಜಗತ್ರಸ್ತಾಖ್ಯಮೆಂಬ ಕರಣಮೆನಿಕ್ಕುಂ (ಶಾಸ್ತ್ರರ. ೪-೯೦). [ಸಂ.]

**ಭುಜಗದ್ವೇಷಿ** (ನಾ). ೧. ಹಾವುಗಳ ವೈರಿ ; ಗರುಡ. ೨. ವಿಟರನ್ನು ದ್ವೇಷಮಾಡುವವಳು ; ಜಾರಶತ್ರು. ೧, ೨ : ವೈನತೇಯನ ಚಿತ್ತಪ್ರವೃತ್ತಿಯಂತೆ ಭುಜಗದ್ವೇಷಿಯಾಗಿರ್ದು(ದ)ನಱಿದುರಗವನಿತೆಯಂತೆ ಕೋಳ್ವಟ್ಟಿ ಮುಂಳಿದಿರ್ದಳಂ (ಶಾಂತಿಪು. ೬-೬೩ ವ). [ಸಂ. ಭುಜಗದ್ವೇಷೀ]

**ಭುಜಗಧಾರಿ** (ನಾ). ೧. ಹಾವನ್ನು ಆಭರಣವನ್ನಾಗಿ ಧರಿಸಿರುವವನು; ನಾಗಭೂಷಣ ; ಶಿವ. ೨. [ಛಂದ] ರುದ್ರಗಣಪ್ರಸ್ತಾರದ ಹದಿನಾರುಭೇದಗಳಲ್ಲಿ ಒಂದು : ೧. ಗಂಗಾಧರಂ . . . ೧೨. ಭುಜಗಧಾರಿ (ಛಂದೋಂಬು. ೩-೨೧೦ ವ). [ಸಂ. ಭುಜಗಧಾರಿನ್]

**ಭುಜಗಧ್ವಜ** (ನಾ). ೧. ಹಾವಿನ ಚಿಹ್ನೆಯಿರುವ ಬಾವುಟ, — ಧ್ವಜ ; ಸರ್ಪಧ್ವಜ. ೨. ಹಾವಿನ ಚಿಹ್ನೆಯಿರುವ ಬಾವುಟ ವನ್ನುಳ್ಳವನು ; ದುರ್ಯೋಧನ : ಒದವಿದರುನ್ನತಮೂರ್ತಿಗಳೊದವಿ ಗದಾಯುಧದೆ ಭೀಮ ಭುಜಗಧ್ವಜರುಂ (ಗದಾಯು. ೬-೩). [ಸಂ.]

**ಭುಜಗನಾಯಕ** (ನಾ). ೧. ಸರ್ಪಗಳ ನಾಯಕ. ೨. [ಜೈನ] ನಾಗಕುಮಾರರಲ್ಲಿ ಅಗ್ರಗಣ್ಯನಾದವನು : ವಂದನಾಭಕ್ತಿಗೆ ವಂದನಂ ಭುಜಗನಾಯಕನಂ ನಡೆನೋಡಿ (ಶಾಂತಿಪು. ೦-೯೬). [ಸಂ.]

**ಭುಜಗಪುರಿ** (ನಾ). ನಾಗಲೋಕದ ರಾಜಧಾನಿ ; ಭೋಗವತಿ : ಭುಜಗಪುರಿಧನದ[ನ ಪುರಿ ದಿತಿಜ]ಪುರಿ ಪಡೆದೂರ್ಗಳೆಂತಿವೆಂಬಂತಿರೆ(ಶಾಂತೀಶ. ೧೩-೦೨೬). [ಸಂ.]

**ಭುಜಗಬಂಧ** (ನಾ). ಮಲ್ಲಯುದ್ಧದಲ್ಲಿ ಒಂದು ಪಟ್ಟು; ನಾಗಬಂಧ : ತಳಹತ್ತಂ ದಣುವಟ್ಟಿ . . . ಭುಜಗಬಂಧಂ ತೋರಹತ್ತಂ ಶಿರೋವಳಯಂ ಬಾಹುತಳಂ ಚಮತ್ಕರಿಸೆ ನಾನಾ ಕೌಶಲಂದೋಜಿದರ್ (ಕಬಕಂ. ೪-೭೫). [ಸಂ.]

**ಭುಜಗಭೂಷ** (ನಾ). ಸರ್ಪಗಳನ್ನು ಆಭರಣವಾಗಿ ಧರಿಸಿರುವವನು ; ಸರ್ಪಭೂಷಣ ; ಶಿವ : ತಾಪತ್ರಯಾಪಹಾರಿ ವಿರೂಪಾಕ್ಷಂ ಭುಜಗಭೂಷಂ . . . ಕಣ್ಗೆಸೆದಂ ( ಕಬಕಂ. ೦-೭೫).

[ ಸಂ. (ಭುಜಗ + ಭೂಷಾ + – ) ]

**ಭುಜಗಭೋಜನ** (ನಾ). ಹಾವಿಗೆ ಆಹಾರವಾದುದು ; ಇಲಿ : 'ಭುಜಗ ಭೋಜನಗಮನ' ಪರಾ. [ಸಂ.]

**ಭುಜಗಭೋಜನಗಮನ** (ನಾ). ಇಲಿಯ ಮೇಲೆ ಸಂಚರಿಸುವವನು ; ಮೂಷಕವಾಹನ ; ಗಣಪತಿ : ಚಿರರಸಮಂ ಮಾಳ್ಕೆ ಭುಜಗಭೋಜನ ಗಮನಂ (ಹರ್ಮ್ಯಕ. ೦-೬). [ಸಂ.]

**ಭುಜಗಮರ್ದನ** (ನಾ). (ಕಾಳಿಂಗ) ಸರ್ಪವನ್ನು ಹಿಂಸಿಸಿದವನು ; ಶ್ರೀಕೃಷ್ಣ ; ಕಾಳಿಂಗಮರ್ದನ : ಕಡಿಕೆಯಿದು ಕಾದಲೆಂದೊಡರಿಸುವಾತ ನೇಂ ಭುಜಗಮರ್ದನನೇ ಕಲಿಗೋನಭೂಪನೊಳ್ (ಎಕ. VIII, ಸಾಗರ. ೦೦೯-೩೭ ; 1042). [ಸಂ.]

**ಭುಜಗರ್ಬ** (ನಾ). ತೋಳಿನ ಮದ,—ಕೊಬ್ಬು,—ಗರ್ವ : ಕರವಿುದ ಸಾಧ್ಯವೆಂಬ ಕೊಳನಂ ಭುಜಗರ್ಬದೆ ಕೊಂಡನುಗ್ರಸಂಗರಜಯಿ ನಾಗವರ್ಮವಿಭು (ಶಾಂಕೇಶ. ೩-೦೯ ; 1074).

[ ಭುಜ + ಗರ್ಬ ( < ಗರುವ₂ ) ]

**ಭುಜಗಲೋಕ** (ನಾ). ನಾಗಲೋಕ ; ಪಾತಾಳ : ಬಿದಿ ಮನದಟ್ಟಿಯಿಂ ಭುಜಗಲೋಕದ ಮಾನವಲೋಕದಿಂದ್ರಲೋಕದ ಬಹುಸಾರವಸ್ತುಗಳ ನೊಂದೆಡೆಗೆಯ್ದು ತರಲ್ಕೆ ತಂದು (ಜಗಂ. ೨-೦೨). [ಸಂ.]

**ಭುಜಗಶಯನ** (ನಾ). ಹಾವನ್ನು ಹಾಸಿಗೆಯಾಗಿ ಉಳ್ಳವನು ; ಶೇಷ ಶಾಯಿ ; ವಿಷ್ಣು : ಎನಗೊಬ್ಬ ದೊರೆಯು ದೊರಕಿದನು . . . ಭುಜಗ ಶಯನನಾದ. ತ್ರಿಜಗವಂದಿತನಾದ (ತುರಂಚ. ೦-೦೯೯-೨). [ಸಂ.]

**ಭುಜಗಶಿಶುಸೃತ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಒಂಬತ್ತನೆಯ ದಾದ ಬೃಹತಿಯಂಲ್ಲಿ ಒಂದು ವೃತ್ತ : ಸೃಜಯಿಸೆ ನನಮುಂ . ಮತ್ತಂ ಗಜಪತಿಗಮನೇ ವೃತ್ತಂ ತ್ರಿಜಗದೊಳದು ಸಂಸಿದ್ಧಂ ಭುಜಗಶಿಶುಸೃತಂ ನಾಮಂ (ಛಂದೋಂಬು. ೨-೦೦೯). [ಸಂ.]

**ಭುಜಗಾಭರಣ** (ನಾ). ಹಾವನ್ನು ಆಭರಣವಾಗಿ ಉಳ್ಳವನು ; ಶಿವ : ಶರಣಸಂಗವ್ಯಸನ ಭುಜಗಾಭರಣನಮರಕಿರೀಟಮಂಡಿತಚರಣ . . . ಸಲಹುಗೆ ಭಕುತಜನರನು ಪಾರ್ವತೀರಮಣ (ಕುಮ್ಯಾಕ. ೦-೨). [ಸಂ.]

**ಭುಜಗಾರಿ** (ನಾ). ಹಾವುಗಳ ಶತ್ರು ; ಗರುಡ : ಕುರುಕುಲಮಂ ಬಕಾರಿ ಭುಜಗವ್ರಜಮಂ ಭುಜಗಾರಿ ದಾನವೇಶ್ವರಕುಲಮಂ ಮುರಾರಿ . . . ಕೊಂದ ಮೊಬ್ಬೆಯಿಂ (ಶಂಕಕಂ. ೩೩೯-೦೫). [ಸಂ.]

**ಭುಜಗೇಂದ್ರ** (ನಾ). ೧. ನಾಗರುಗಳ ಒಡೆಯ ; ಹಾವುಗಳ ಒಡೆಯ; ನಾಗೇಂದ್ರ: ಘನಪರಾಕ್ರಮಿ ಭೀಮಸೇನಗೆ ವಿನುತ ಭುಜಗೇಂದ್ರಂಗೆ ದುಶ್ಶಾಸನನ ಜೀವಾನಿಳನ ಪಾರಣೆ ಸಮರಭೂಮಿಯಲಿ (ಕುಮ್ಯಾಕ. ೦೯-೬೨); ಎಚ್ಚು ಕೆಡಪಿದನಾತನುರುಭುಜವನ್ನೆವೆಡೆಯ ಭುಜಗೇಂದ್ರನಂದದಿಂ ಧರೆಯೊಳ್ ಪೊರಳ್ದು ( ಕೈಬಿಜಾ. ೧೯-೦೯ ). ೨. = ಭುಜಗ ನಾಯಕ ೨ : ಭುಜಗೇಂದ್ರರ್ ಭವನಪ್ರಕಾಶನದಿನನೂನವ್ಯಂತರರ್ (ಶಂಪ್ರಶು. ೦೨-೯೨). [ಸಂ.]

**ಭುಜಪತ್ರ**, ಭುಜಪತ್ರೆ, ಭೋಜಪತ್ರೆ (ನಾ). ಒಂದು ಬಗೆಯ ಮರ ; ಭೂರ್ಜವೃಕ್ಷ : "ಭೂರ್ಜ, ಚರ್ಮಿ, ಮೃದುತ್ವಕ್—೩ ಭುಜಪತ್ರಗಿಡದ ಹೆಸರುಗಳು" (ನಿಘಂಟು. ೦೨೨). ಭುಜಪತ್ರೆ: ''ಭೂತಘ್ನಿ—ಭುಜಪತ್ರೆ" (೬ಕಂ. ೦೦೨) ; ದೇವದಾರು, ಭುಜಪತ್ರ, ರಾಸ್ನೆ . . . ಇವುಗಳ ಕಷಾಯ ವನಿಕ್ಕಿ ತೆಗೆದುಕೊಳ್ಳಲು ವಾತಜ್ವರಂ ಕಡುಗುಂ (ಕಳವೈ. ೬೫). ಭೋಜ ಪತ್ರೆ : (ವೈಶಿಗ. ೦೩-೨೨೨).

[<ಪ್ರಾ. ಭುಜ್ಜಪತ್ರ. / ಸಂ.ಭೂರ್ಜಪತ್ರ./ಮರಾ. ಭುಜಪತ್ರ]

**ಭುಜಪತ್ರೆ** ' ಭುಜಪತ್ರ ' ನೋ.

**ಭುಜಬಲ**, ಭುಜಬಳ (ನಾ). ೧. ತೋಳಿನ ಕಸುವು, – ಶಕ್ತಿ : "ತೋಳ್ವಲಂ ಭುಜಬಲಂ" (ಕಬ್ಬಕ. ೯೬); ಭುಜಬಲಮಂ ಪವಣ್ಬಡಿಪೊಡ ಪ್ರತಿಮಂ . . . ಮತ್ತೆ ಸಾಧಿಸಿದಪಂ ಬಹುರೂಪಿಣಿಯಂ ದಶಾನನಂ (ಕಂಬಾಕು. ೦೯-೮೫) ; ಆ ಸುಧನ್ವಂ ತನ್ನ ಭುಜಬಲದೊಳಾರ್ದು ನಿಜಧನುವ ನೊದರಿಸುತಿರ್ದನು (ಕೈಬಿಜಾ. ೦೩-೯೫). ೨. ಶೂರ ; ಪರಾಕ್ರಮಿ : ಕಳಕಳವಿದೇಕೆನುತ್ತಂ ಭುಜಬಲರು ದೌವಾರಿಕರು ಹೋ ಎನುತ ವಾರಿಸಲು (ಬಸಪು. ೦-೯೯). ಭುಜಬಳ.

ಭುಜಬಳಮಲ್ಲ = ಪರಾಕ್ರಮದಲ್ಲಿ ಜಟ್ಟಿಯಂತಿರುವವನು ; ಶೂರ ; ಒಂದು ಬಿರುದು : ರಿಪುಮದನಮಹೇಶ್ವರ ರಾಯಮುರಾರಿ ಭುಜಬಳಮಲ್ಲ ಶ್ರೀಸೋವಿದೇವರಸರು (ಕಾಶಿ. ೬೯-೦೨-೦೯; 1170). [ಸಂ.]

**ಭುಜಬಲಿ** (ನಾ). ೧. ಪರಾಕ್ರಮಶಾಲಿ ; ಶೂರ. ೨. [ಜೈನ] ಆದಿ ತೀರ್ಥಂಕರನ ಎರಡನೆಯ ಮಗ ; ಬಾಹುಬಲಿ : ಪುರುತನಯರ್ ಭುಜಬಲಿಯುಂ ಭರತನುಮೆನೆ ದೊರೆಗೆವಂದೊಡೆ (ಆದಿಪು. ೦೯-೮೦).

[ಸಂ. ಭುಜಬಲಿನ್]

**ಭುಜಬಳ** ' ಭುಜಬಲ ' ನೋ.

**ಭುಜಭವ** (ನಾ). ಪರಬ್ರಹ್ಮನ ತೋಳಿನಿಂದ ಉತ್ಪತ್ತಿಯಾದವನೆಂದು ಹೇಳಲಾದ ವ್ಯಕ್ತಿ : ಕ್ಷತ್ರಿಯ : ಭುಜಭವಗುಣಚಿತಂ ಶಿಷ್ಟಪ್ರಜ ಪಾಲನೆ (ಬಸವಪು. ೩-೨-೭೦). [ಸಂ.]

**ಭುಜಮಧ್ಯ** (ನಾ). ತೋಳುಗಳ ಮಧ್ಯಭಾಗ ; ಎದೆ : " ಭುಜ ಮಧ್ಯಂ, ಉರಃ, ವಕ್ಷಃ, ಹೃದಯಂ, ವತ್ಸಃ — ಈ ೫ ಉರಂ" (ಹಲಾಯು. ೮೭-೩೭೩). [ಸಂ.]

**ಭುಜವಲಯ** (ನಾ). ತೋಳುಗಳಿಗೆ ತೊಡಿಸುವ ಆಭರಣ ; ತೋಳು ಬಳೆ : ಲಲನೆಗೆ ಮಿಸುಪ ಭುಜವಲಯ [ಪಾಠಾಂ. ಭುಜವಳೆಯ, ಭುಜವಳಿಯ] ಭುಜಕೀರ್ತಿಗಳನಂಕಿಸಿ ಕಡಗ ಕಂಕಣ ಸೂಡಗವನಿಕ್ಕಿ (ಬಸಪು. ೪-೩೭). [ಸಂ.]

**ಭುಜವಿಕ್ರಮ** (ನಾ). = ಭುಜಬಲ ೧. ಕಳಾವಿಭವದೊಳ್ ಭುಜ ವಿಕ್ರಮದೊಳ್ . . . ನಿನಗಾರ್ ದೊರೆ ಮಾನವರೀ ಧರಿತ್ರಿಯೊಳ್ (ಕುಕ್ಕುಶ. ೮-೭೭). [ಸಂ.]

**ಭುಜವಿಕ್ಷೇಪ** (ನಾ). ೧ ತೋಳುಗಳನ್ನು ಕೊಡಹುವಿಕೆ ; ತೋಳು ಗಳನ್ನು ಒದರುವುದು. ೨. [ನಾಟ್ಯ] ನೃತ್ಯದಲ್ಲಿ ನಿರ್ದಿಷ್ಟ ರೀತಿ ಯಿಂದ ಮಾಡುವ ಬಾಹುಚಲನೆ : ಈರಯ್ದನಿಸಿದ ಭುಜವಿಕ್ಷೇಪದಿಂ ದಿಗ್ವಿಭಾಗಂ ಪರಭಾಗಂಬೆತ್ತುಮೊಂಭತ್ತನಿಪ ನಯನಭೇದಗಳಿಂದೆಂಬಿನಂ ನಿರ್ಭರಹರ್ಷಾಯತ್ತಚಿತ್ತಂ ದಿವಿಜಪರಿವೃಢಂ ತಾಂಡವಪ್ರೌಢಿವೆತ್ತಂ (ಮಲ್ಲಿಪು. ೦೩-೯೩). [ಸಂ.]

**ಭುಜವೊಯ್** (ಕ್ರಿ). ತೋಳುಗಳನ್ನು ತಟ್ಟಿಕೊಳ್ಳು; ಬಾಹುಗಳನ್ನು ಅಪ್ಪಳಿಸು; **ಸದ್ದು ಹೊಡೆ**: ಬಳಿಕ್ಕೇವೇಳುವೆನು ಬಲಿದಂಘ್ರಿಯನು ಭುಜವೊಯ್ದು ಬೊಬ್ಬಿರಿದ (ಕೂಕಂ. ೯-೦೨-೨೭). [ಭುಜ + ವೊಯ್$_1$]

**ಭುಜಶಿಖರ** (ನಾ). ತೋಳಿನ ಮೇಲುಭಾಗ; ಹೆಗಲು: ಕುಲಶಿಖರಿ ಶಿಖರೋತ್ತುಂಗಂಗಳಾದ ಭುಜಶಿಖರಂಗಳುಂ . . . ಆತ್ಮೀಯಯೌವನ ಪ್ರಾದುರ್ಭಾವಮಂ ಪ್ರಕಟಂ ಮಾಡೆ (ಅಜಿಪು. ೩-೯ ವ); ಭುಜಶಿಖರಾಗ್ರದಲ್ಲಿ ಘನಕುಂಕುಮದಿಂ ಬರೆದಿರ್ದ ಪತ್ರಕವ್ರಜದಿಂ (ಧರ್ಮಾ. ೬-೧೧೨). [ಸಂ.]

**ಭುಜಶಿರ** (ನಾ). = ಭುಜಶಿಖರ: "ಸ್ಕಂಧಃ, ಭುಜಶಿರಃ, ಅಂಸಃ — ೩ ಹೆಗಲು ಪೆಸರು, ಭುಜಶಿರಸ್ಸು" (ಸಿದ್ಧಾಂತಿ. ೧೯೨); ಹೊಯ್ದನಾ ಪವನಜನ ಭುಜಶಿರವ ಸೀಸಕಕವಚವಜೂಜಿಯಾಗೆ ಬೀಳೆನುತರಸ ಬೊಬ್ಬಿರಿದ (ಕುವ್ಯಾಗ. ೭-೩೫); ಗುರುಕುಚವಂ ಮುಸುಕುತ್ತೆ ಭುಜಶಿರದೊಳ್ ಕುರು ಗಂಟನಾಂತ ವಲ್ಕಲದಿಂ (ಶಾಕುಂತ. ೯-೧೯). [ಸಂ.]

**ಭುಜಶಿರಸ್ಸು** (ನಾ). = ಭುಜಶಿಖರ: "ಸ್ಕಂಧಃ, ಭುಜಶಿರಃ, ಅಂಸಃ — ೩ ಹೆಗಲ ಪೆಸರು, ಭುಜಶಿರಸ್ಸು" (ಸಿದ್ಧಾಂತಿ. ೧೯೨). [ಸಂ. ಭುಜಶಿರಸ್]

**ಭುಜಾಕ್ರಾಂತ** (ಗು). (ಅಲಂ) ಪರಾಕ್ರಮದಿಂದ ಅಧೀನ ಮಾಡಿಕೊಂಡಿರುವ: ಅಜಿತಂಜಯಮಹಾರಾಜಂ ಯುವರಾಜಂಬೆರಸು ನಿಜ ಭುಜಾಕ್ರಾಂತಪ್ರತ್ಯಂತರಾಜಸಮಾಜಂಬೆರಸು . . . ಅಖಿಳಪ್ರಧಾನ ಪರಿವಾರಪರಿಕೃತನುಮಾಗಿರೆ (ಶಂಕ್ರಪು. ೫-೨ ವ). [ಸಂ.]

**ಭುಜಾಗ್ರ** (ನಾ). = ಭುಜಶಿಖರ: "ಭುಜಾಗ್ರಃ, ಅಲಸಂ_ಈ ೨ ಮುಯ್ಯು" (ಹಲಾಯು. ೬೭-೩೬೦); ನಾಭಿಯಲಭವ ಪರಭುಜಾಗ್ರದೊಳಖಿಳ ದಿಗುಪಾಲಕರು ರಂಜಿಸಿತು (ಕುವ್ಯಾಶಾ. ೯-೫೬). [ಸಂ.]

**ಭುಜಾಸ್ಫಾಲನ**, ಭುಜಾಸ್ಫಾಳನ (ನಾ). ತೋಳನ್ನು ತಟ್ಟಿಕೊಳ್ಳುವುದು: ಅಂತು ಬಿಸುಟ್ಟು ಮಲ್ಲಯುದ್ಧಸನ್ನದ್ಧರಾಗಿರ್ವರುಂ ಭುಜಾಸ್ಫಾಲನಂ ಮಾಡಲೊಡಂ (ಶಂಕ್ರಪು. ೫-೭೬ ವ); ಅವನ ಪ್ರದರ್ಶನಕಾರ್ಯವು ಮುಗಿಯುತ್ತ ಬರಲು . . . ಬಾಗಿಲ ಹತ್ತಿರ ಹಠಾತ್ತಾಗಿ ಸಿಡಿಲಿನಂಥ ಭುಜಾಸ್ಫಾಲನವು ಕೇಳಬಂತು (ಪತಿವ್ರ. ೨೪). **ಭುಜಾಸ್ಫಾಳನ**: ಭಟಭಟ ಭಟಭಟನೆ ಭುಜಾಸ್ಫಾಳನಂ ಮಾಡಿ (ಶಬರ. ದೀ. ೪೦-೧೩). [ಸಂ.]

**ಭುಜಾಸ್ಫಾಳನ** 'ಭುಜಾಸ್ಫಾಲನ' ನೋ.

**ಭುಜಿಷ್ಯ** (ನಾ). ೧. ಆಳು; ಸೇವಕ: "ಚೇಟಃ, ಭುಜಿಷ್ಯಃ, ಕಿಂಕರಃ — ಈ ೩ ಬಂಟಂ" (ಹಲಾಯು. ೬೦-೨೦೦); "ಭೃತ್ಯಃ, ದಾಸೇರಃ, ಭುಜಿಷ್ಯಃ, ಪರಿಚಾರಕಃ — ಈ ೧೧ ಬಂಟನ ಪೆಸರು, ಚಾಕರಿಯವನು" (ಸಿದ್ಧಾಂತಿ. ೩೦೨). ೨. ದಾಸ್ಯದಿಂದ ಬಿಡುಗಡೆಹೊಂದಿದವನು: ಪಂಚನಿವಾರಣಗಳು ಹೋದ ಮೇಲೆ, ತಾನು ಅನೃಣ್ಯ, ಆರೋಗ್ಯ, ಬಂಧನಮೋಕ್ಷ, ಭುಜಿಷ್ಯ, ಕ್ಷೇಮಾಂತಭೂಮಿಗಳಲ್ಲಿ ಇದ್ದಂತೆ ಕಾಣುವನು (ಬುದ್ಧಕ. ೧೯೩). ೩. ಜೊತೆಗಾರ. ೪. ಹಸ್ತಸೂತ್ರ; ಕಂಕಣ. ೫. ರೋಗ; ಬಾಯಿಲೆ. [ಸಂ.]

**ಭುಜಿಷ್ಯೆ** (ನಾ). ೧. ದಾಸಿ; ಸೇವಕಿ: ಕಳಿಂಗೇಶನ ಮುಂದೆ ನಿಜಾಸಿ ನೃಪಕನ್ನೆಯುನಿಂತೆಂಗುಂ ಭುಜಿಷ್ಯೆ ಮದನನ ಭೃಂಗೀಧ್ವನಿ ತನ್ನ ದನಿಗೆ ಸಮನೆನಿಸುವಿನಂ (ಶಾಂತಿಪು. ೫-೧೩೨). ೨. ಸೂಳೆ; ಗಣಿಕೆ. [ಸಂ. ಭುಜಿಷ್ಯಾ]

**ಭುಜಿಸು** 'ಭುಂಜಿಸು' ನೋ.

**ಭುಜೆ** (ನಾ). ೧. ತೋಳು; ಭುಜ: "ದೋಃ, ಪ್ರವೇಷ್ಟಃ, ಭುಜಃ, ಬಾಹುಃ, ಭುಜಾ—ಈ ೫ ತೋಳ್" (ಹಲಾಯು. ೬೭-೩೭೮). ೨. ಹಾವಿನ ತೆಕ್ಕೆ,-ಮಂಡಲ. ೩. ಕ್ಷೇತ್ರದ ಅಳತೆಯ ಒಂದು ಪ್ರಮಾಣ (?): ಧಾರಾಪೂರ್ವಕಂ ಮಾಡಿ ಕುಡಲು ಮಾರ್ತಂಡಯ್ಯನಾಯಕಂ ಪಡೆದು ಬಿಟ್ಟ ಸ್ಥಳಂ ಕುರವಸ ಕೇರಿಯಾದಿತ್ಯದೇವರ ಕಯ್ಯಿಂ ಪತ್ತಿರೆ ಬಡಗ ತೋರಣಗಾವುಂಡಗೆಯು ನವಿಲಮತ್ತರು ಹತ್ತುಕಮ್ಮ ೪೪೫ ಭುಜೆ ಪಡುವ ೨೭ ಬಡಗ ೧ ॥ ಮೂಡ ೨೪ ॥ ತೆಂಕ ೨೭ ॥ ಮತ್ತರು (ಎಕ. IX-i, ೧೯೭-೪೭; 1119); ಪೂಜೆ ಪುನಸ್ಕಾರ ನಿವೇದ್ಯಕ್ಕಂ ಜೀರ್ಣೋದ್ಧಾರಕ್ಕ ಮಂದು ಬಿಟ್ಟ ಭೂಮಿಯಯ್ವತ್ತಾಜು ಗೇಣ ಘಳೆಯು(ಂ) ನೀಳದ ಭುಜೆಯಂ ದ್ವಿಗುಣಿಸಿಯಗಲದೊಳೊಂದ ಕೂಡಿ ಗುಣಿಸುವೀ ಕ್ರಮದಳತೆಯಲು (ಎಕ. IX – i, ೨೯೯-೭೭; 1147); ಭುಜೆಗಳನಿಱಿದನಿತಱೊಳಂ ಭುಜೆಯೊಂದುಮನುಳಿದು ಕೂಡಿ ಭುಜೆಸಂಖ್ಯೆಯೊಳಂ ನಿಜದಿಂ ಪ್ರತಿಗಳ ಕೂಡಿಯ ಭುಜೆಸಂಖ್ಯೆಯೊಳೊಂದ ಕಳೆಯಲುಳಿದುದು ಹಾರಂ (ಕ್ಷೇತ್ರಗ. ೨೭-೧೧). [ಸಂ. ಭುಜಾ]

**ಭುದಿಂಗನೆ** (ಅ). ಒಂದು ಅನುಕರಣಾವ್ಯಯ: ಥಟ್ಟನೆ; ಫಕ್ಕನೆ: ಇದ್ದಕ್ಕಿದ್ದಂತೆ: 'ಉಪ್ಪು-ನೀರ'ನಲ್ಲಿ ಭುದಿಂಗನೆ 'ಹಿಮಗಿರಿ ತಿಮಿಂಗಲ' ಬಂದು 'ತಪ್ಪು ಯಾರದು?' ಎಂದು ಕೇಳುವಂತಾಗಿದೆ (ಸಂಮು. VIII, ಮುನ್ನುಡಿ). [ ? + – ಅನೆ$_1$ ]

**ಭುರ್ರನೆ** (ಅ). ಒಂದು ಅನುಕರಣಾವ್ಯಯ: ಭುರ್ ಎಂದು ಶಬ್ದವಾಗುವಂತೆ: ಭರಭರನೆ ಪೋಗಿ ಭುರ್ರನೆ ಹಾರಿ ಬಂದ ಹಾಗೆ (ಗಾದೆ). [ ಭುರ್$_0$ + — ಅನೆ$_1$ ]

**ಭುಲತಾಪಿ**, ಭುಲತಾಪೆ (ನಾ). ಸುಳ್ಳುಭರವಸೆ: ಮೋಸದ ಆಶ್ವಾಸನೆ: ಪಡದಪ್ಪನ ಭುಲತಾಪಿಯಿಂದ ಬಾಪೂಸಾಹೇಬ ಅವರಿಗೆ ಭೂಮಿ ಮತ್ತು ವಾಡೇದ ಕಬಜಾ ಕೊಡಲಿಕ್ಕೆ ಸಾಫ ಒಲ್ಲೆಂದಾಗ, ಆ ಹೆಣ್ಣುಮಗಳು ಏನು ಮಾಡಬೇಕು? (ಗ್ರಾಮಾಯ. ೩೦೪). **ಭುಲತಾಪೆ**.

**ಭುಲತಾಪಿ ತುಂಬು, ಭುಲತಾಪೆ ತುಂಬು** = ಸುಳ್ಳು ಭರವಸೆಯನ್ನುಂಟುಮಾಡು; ಸುಳ್ಳು ನಂಬಿಕೆಯನ್ನು ಹುಟ್ಟಿಸು: ಇಲ್ಲದ ಭುಲತಾಪಿ ತುಂಬಿ ಈ ಕೇಶಾಗ ನಿನ್ನ ತಂಗಿನ್ನ ಗಂಟು ಹಾಕಿ ಅವನ ತಲಿ ಕೆಡಿಸಿಟ್ಟಿ! (ಸಜ್ಜಕ. ೪೬೨); ಲಗ್ನ ಆಗತೀನಿ ಅಂತ ಭುಲತಾಪಿ ತುಂಬಿ (ಗ್ರಾಮಾಯ. ೧೯); ಯಾರಾದರೂ ಭುಲತಾಪೆ ತುಂಬ್ಯಾರು ಜೋಕಿ (ಗಂಮಾಯ. ೨೦). **ಭುಲತಾಪಿ ಹೊಡೆ** = ಸುಳ್ಳು ಹೇಳು; ಬುರುಡೆ ಹೊಡೆ: ಅವರಿಗೆ ಭುಲತಾಪೀ ಹೊಡೆದು ನಿನ್ನ ಊರಿಗೆ ಕರಕೊಂಡು ಹೋಗತಾನ (ಶೀಕಥ. II, ೨೦೬).

[ ← ಮರಾ. ಭುಲತಾಪ, ಭುಲಥಾಪ, ಭೂಲತಾಫ, ಭೂಲಥಾಪ ]

**ಭುಲತಾಪೆ** 'ಭುಲತಾಪಿ' ನೋ.

**ಭುಲ್ಲಣೆ** 'ಬುಲ್ಲವಣೆ' ನೋ.

**ಭುಲ್ಲಯಿಸು** 'ಬುಲ್ಲವಿಸು' ನೋ.

**ಭುಲ್ಲವ** (ನಾ). ೧. ಸಡಗರ; ಸಂಭ್ರಮ: ಎಲ್ಲಾ ಶಸ್ತ್ರಮನಾಂತತಿ ಭುಲ್ಲವದಿಂ ವೀರರಥಟನಿಂ ಪರಿಯುಟ್ಟರ್ (ತ್ರಿಪುರ. ೬-೬). ೨. ಆಧಿಕ್ಯ; ಅತಿಶಯ: ಎಲ್ಲಿ ನೋಡಲು ರೋದನದ ಪೆಚ್ಚಲ್ಲಿ ನೋಡಿದಡಲ್ಲಿ ಚಿಂತಾ ಭುಲ್ಲವವು ಯೆಲ್ಲೆಲ್ಲಿ ನೋಡಿದೊಡಲ್ಲಿ ಸಂತಾಪವು (ಶಿವ್ಯಸ್ತ್ರೀ. ೦-೦೬).

[ < ಬುಲ್ಲವಣೆ, / ತೆಲು. ಬುಲುವು ]

**ಭುಲ್ಲವಣೆ** 'ಬುಲ್ಲವಣೆ' ನೋ.

**ಭುಲ್ಲವಣೆ** 'ಬುಲ್ಲವಣೆ' ನೋ.

**ಭುಲ್ಲವಿಸು** 'ಬುಲ್ಲವಿಸು' ನೋ.

**ಭುಲ್ಲಿಸು** 'ಬುಲ್ಲವಿಸು' ನೋ.

**ಭುಲ್ಲೈಸು** 'ಬುಲ್ಲವಿಸು' ನೋ.

**ಭುವ** (ನಾ). ೧. ಬೆಂಕಿ. ೨. ಭೂಮಿ: ಭೂರ್ಭುವಂ ಸ್ವರ್ಮಹಂ ಜನತಪಂ ಸತ್ಯಮೆಂದೇಳು ಮೇಲಣ ಲೋಕಮಕ್ಕು" (ಪಂಗಣ. ೧೧-೩೨). ೩. ವಾಯುಮಂಡಲ. [ಸಂ.]

**ಭುವನ** (ನಾ). ೧. ಜಗತ್ತು; ಪ್ರಪಂಚ; ಲೋಕ: ಭುವನಂ, ವಿಷ್ಟಪಂ, ಲೋಕಃ, ಜಗತ್ – ಈ ೪ ಜಗದ ಪೆಸರ್" (ಹಲಾಯು. ೨೨-೧೩೩);

ಭುವನಂಗಳ್ ಪದಿನಾಲ್ಕುಮಂ ನಡುಗಿಸಲ್ ಸಾಮರ್ಥ್ಯಮುಳ್ಳೆನ್ನ ಕೆಯ್ದುವಿನೊಳ್ ತೀರದುದಾವ ಕೆಯ್ದುವಿನೊಳಂ ತೀರ್ದಪುದೇ (ಶಂಕರಾ. ೧೨-೪೪); ಭುವನಂಗಳ್ ಪದಿನಾಲ್ಕು ನಾಲ್ಕು ಪೆಸರಿಂ ವಾರಾಶಿಗಳ್ . . . ಎಲ್ಲಿ ಪೊಕ್ಕು ಬರ್ದುಕಲ್ಕಕ್ಕುಂ ಭುಜಂಗಧ್ವಜಂ (ಗದಾಯು. ೬-೨೦); ಭುವನಂ ಸಹಸ್ರಶತವಾದವಟಿಬಿ ನಿಲ್ವ ಹಿರಣ್ಯಗರ್ಭನುಮಂ ನುಂಗುವ . . . ಹರಿಗರಿದುಂಟೇ (ಜಗ. ೩-೮೮). ೨. ಮನುಷ್ಯರು ವಾಸಮಾಡುವ ಲೋಕ; ಭೂಮಿ : ಭುವನದ ಕನ್ನಡ ಸಕ್ಕದಗವಿಗಳ್ ಸಲೆ ಸಾಲೆ ಸೋಲೆ (ಶಾಂತಿಪು. ೧-೯); ಭುವನಜನಮೆಲ್ಲಮೂರ್ವೆಯೆ ಸವಿದುದೆನಲ್ (ಕಾದಂಬ. ೪೬೩); ಭುವನಜನವಿನುತಪಾದಂ ದಿವಸಕರಂ . . . ದಿವಿಜಾಶಾಶಿಖರಿಶಿಖರ ಶೇಖರನಾದಂ (ಶಂಕರಂ. ೬೮-೧೩೬). ೩. ಮನುಷ್ಯವರ್ಗ; ಜನತೆ : ನೀವಧಾರ್ಮಿಕರು ಮುಯ್ವನಾನುವುದವರ್ಗೆ ಭವನವು ಬೈವುದೈ ನಿಮ್ಮ ನಿಬರನು (ಕುಮಾ.ಭಾ. ೧-೨೩). ೪. ನೀರು ; ಜಲ : "ಅಪ್‍(ಪ್), ತೋಯಂ . . . ನೀರಂ, ಭುವನಂ, ಅಮೃತಂ, ಜೀವನಂ, ಜೀವನೀಯಂ — ಈ ೨೬ ನೀರ್" (ಹಲಾಯು. ೧೦೬-೨೬). ೧, ೪ : ಶ್ರೀನಾರೀಜನ್ಮಗೇಹಂ ಭುವನ ವಿನುತ ಮುದ್ದಾಮಸತ್ವಪ್ರಯುಕ್ತಂ ನಾನಾರತ್ನಪ್ರಕೀರ್ಣಂ. . . ಪೊಯ್ಸಳೋರ್ವೀಶವಂಶಂ (ಎಕ. V, ಚನ್ನರಾ. ೨೦೯-೩; 1178); ರಥದಂತೆ ಚಕ್ರ ವಿಸ್ತರಿಮುರುಪದ್ಮಜಾಂಡದವೊಲಾತ್ತಲಸದ್ಭುವನಾಶ್ರಯಂ . . . ಕೊಳಂ (ಗಿರಿಜಾ. ೨-೩೪). ೫. ವಾಸಿಸುವ ಮನೆ, — ಗೃಹ. ೬. ಅಭಿವೃದ್ಧಿ ಹೊಂದುವಿಕೆ ; ಏಳಿಗೆಯಾಗುವಿಕೆ. ೭. ಸಮುದ್ರ; ಸಾಗರ. ೮. ಬಾನು; ಆಕಾಶ : "ಲೋಕದೊಳು ನಭದೊಳಂಬುಧಿಯೊಳುದಕದೊಳ್ ಭುವನಾಖ್ಯಮಕ್ಕುಂ" (ಮಂಜುರಾ. ೧೫೦-೩೩). ೯. ಕಾಡು; ಅರಣ್ಯ. ೧೦. ಯುದ್ಧ : "ಲೋಕಂ ರಣವಿಪಿನೋದಕವಾಕಾಶವಿವೈದು ಭುವನ ಶಬ್ದಂ" (ನಾನಾರ್ಥ. ೨೩). ೧೧. [ಗಣಿತ] ಹದಿನಾಲ್ಕು ಎಂಬ ಸಂಖ್ಯೆಯ ಸಂಕೇತ : "ಮನು ಭುವನ ಪದಿನಾಲ್ಕು" (ಕಂಗರಾ. ೧೦೪-೯); ನವಪುರ ಶಶಿಗುಣತ[ಕ]ವನುಟ[3] ನವಕೂಡಿದ ಶತಕದಿಂದ ಗುಣಿಸಲು ಮತ್ತಾ ಭುವನಂ ಶರ ಶಶಿ ಕುಸುಮಂ ಪವಣಿಸಿ ಧರೆಯೊಬ ಲಬ್ಧ ತಪ್ಪದೆ ಬಪ್ಪುಂ (ಛಾಸ್ಕರ. ೪೩-೧).

ಭುವನಯ್ಕಮಲ್ಲ=ಜಗತ್ತಿನಲ್ಲಿ ಬಹಳ ಶೂರನಾದವನು; ಲೋಕೈಕ ವೀರ : ಆತನ ತಮ್ಮಂ ಭುವನಯ್ಕಮಲ್ಲನೆನಿಸಿದ ದಸವರ್ಮ್ಮದೇವ (ಸೌಇಇ. XX, ೦೯-೨೨ ; 1015). ಭುವನೈಕ ಮಾನ್ಯ = ಜಗತ್ತಿನಲ್ಲಿ ಮತ್ತಾರೂ ಸಮಾನರಿಲ್ಲದಂತಹ ಗೌರವಸ್ಥ : ಶಿವಶಿವಾ ಭುವನೈಕ ಮಾನ್ಯರನವಗಡಿಸಲಂಗೈಸಿದೈ ಮಾಣೆಂದನಾ ಶಕುನಿ (ಕುಮಾ.ಸ. ೧೨-೦೪). ಭುವನೈಕರಾಮ -ಅದ್ವಿತೀಯನಾದ ಸುಂದರ : ಆನೆಯ ಮೇಲೆಯುಂ ಆಳ ಮೇಲೆಯುಂ ಕುದುರೆಯ ಮೇಲೆಯುಂ ಪರಿದುದೊಂದೆ ಗಜಂ ಭುವನೈಕರಾಮನಾ (ಚಟುದ. ೦೨೦ ಕ್ರ ಚೋ). ಭುವನೈಕವೀರ = ಜಗತ್ತಿನಲ್ಲಿ ತನ್ನ ಸರಿಸಮಾನರಿಲ್ಲದ ಶೂರ,— ಬಲಶಾಲಿ ; ಲೋಕದಲ್ಲಿ ಅಪ್ರತಿಮಶೂರ; ಅಸಹಾಯಶೂರ: ಮಂಡಳಿಕಮಕುಟಚೂಡಾಮಣಿ ಶ್ರೀಮಚ್ಚ × × × ಪೆರ್ಮ್ಮಾಡಿ ಭುವನೈಕವೀರನುದೆಯಾದಿತ್ಯನುಂ (ಎಕ. VII, ಶಿಕಾರಿ. ೨೨೦-೨೩; 1075). [ಸಂ.]

ಭುವನಕಂಟಕ (ನಾ). ೧. ಪ್ರಪಂಚಕ್ಕೆ ಆಗುವ ಹಾನಿ. ೨. ನೀರಿನಲ್ಲಿ ಇರುವ ಮುಳ್ಳು; ತಾವರೆದಂಟಿನ ಮುಳ್ಳು. ೧, ೨ : ಸಕಲಂಕತೆ ಚಂದ್ರಮನೊಳ್ . . . ಭುವನಕಂಟಕಂ ಬಿಸದೊಳಲ್ಲದಿಲ್ಲ ನಾಡೊಳ್ (ಗಿರಿಜಾ. ೨-೬). [ಸಂ. ]

ಭುವನಕುಕ್ಷಿ (ನಾ). ೧. ನೀರನ್ನು ಒಳಗೊಂಡಿರುವುದು ; ಸರೋವರ : ವನಮಾಲಿಯಂದದಿಂ ಪದ್ಮಿ ಪದ್ಮಿಯುವೊಲ್ಬುವನಕುಕ್ಷಿ ಭುವನಕುಕ್ಷಿಯು ತೆಜದೆ ಹಂಸಲೋಚನಶೋಭಿ. . .ಎನೆ ರಂಜಿಸುವ ಕಾಸಾರಮಂ (ಕೃಷ್ಣರಾ. ೧೩-೦೨). ೨. ಜಗತ್ತುಗಳನ್ನು ಗರ್ಭದಲ್ಲಿ ಹೊಂದಿರುವವನು ; ವಿಶ್ವಂಭರ; ನಾರಾಯಣ. [ಸಂ.]

ಭುವನಖ್ಯಾತಿ (ನಾ). ಲೋಕದಲ್ಲಿ ಹೆಸರುವಾಸಿಯಾಗಿರುವಿಕೆ ; ಲೋಕಪ್ರಸಿದ್ಧಿ : ಭುವನಖ್ಯಾತಿಯು ಜಾತರೂಪಭರದಿಂ . . . ಸರ್ವೇರು ವೆನಿಪ್ಪಂ ಶ್ರುತಕೀರ್ತಿಸನ್ಮುನಿವರಂ (ಶಾಂತೀಶ್ವ. ೧-೪೪). [ಸಂ.]

ಭುವನಗರ್ಭಿತ (ನಾ). ೧. ಜಗತ್ತಿನ ಒಳಭಾಗದಲ್ಲಿ ಆವರಿಸಿಕೊಂಡಿರುವುದು. ೨. ಪ್ರಪಂಚವನ್ನೆಲ್ಲಾ ತನ್ನಲ್ಲಿ ಅಳವಡಿಸಿಕೊಂಡಿರುವುದು. ೧, ೨ : ಭುವನಗರ್ಭಿತವಾದುದಾ ಮಾಧವನ ಜಠರದವೋಲು ಪರಭಾಗ ವತನಂತಿರೆ ವಿಷ್ಣುಪದಸಂಸಕ್ತನುವಾಯ್ತು (ಕುಮಾ.ಭೀ. ೮-೧೨). [ಸಂ.]

ಭುವನಜ (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : ಶಾಂತಿ ಜನರ ಪಾದಭುವನಜಗಳಿಗೆಜಗುವೆನು [ಶಾಕಾಂ. ಪಾದಕವನತನಾಗುವೆ ಮುದದಿ] (ತ್ರಿಶೋಕಾಂ. ೧-೩). [ಸಂ.]

ಭುವನಜನಕ (ನಾ). ೧. ಜಗತ್ತಿನ ಸೃಷ್ಟಿಗೆ ಕಾರಣನಾದವನು; ಬ್ರಹ್ಮ. ೨. ಜನರಿಗೆ ತಂದೆಯಂತಿರುವವನು ; ರಾಜ: ಘನರಥನರನಾಥನ ಬವಣಿಯೊಳ್ ತಾವ್ಬುಚಳಂಗಳಾಗಿ ಪೋರುತ್ತುಮಾಮಿರೆ ಭುವನಜನಕಂ ಬೆಸಗೊಳೆ ನೀಂ ಪೇಟ[3] (ಶಾಂತಿಪು. ೯-೭೦ ವ). [ಸಂ.]

ಭುವನಜಭವ (ನಾ). (ವಿಷ್ಣುವಿನ ನಾಭಿ)ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ.

ಭುವನಜಭವಾಂಡ = ಬ್ರಹ್ಮಾಂಡ : ಭುವನಜಭವಾಂಡಭವನಕೆ ಸಮೆದುರು ರವಿಬಿಂಬಮೆಂಬ ಬಾದಣದೊಳಪೊಕ್ಕವಿರಳತದಂಡದ ಬಹಿ ಸುಪರ್ಣರುಚಿ ಪರ್ಬಿದಂತೆ ಕೆಂಬಿಸಿಲೆಸೆಗುಂ (ರಾಜಶೇ. ೪-೨೪). [ಸಂ.]

ಭುವನಜ್ಯಾಯ (ನಾ). ಪ್ರಪಂಚಕ್ಕೇ ಹಿರಿಯನಾದವನು,-ಶ್ರೇಷ್ಠನಾದವನು : ಭುವನಜ್ಯಾಯನ ತಂದೆ ತದ್ವಿಭುವ ತಾಯೆಂಬೊಂದು ಸಯ್ಪಂಗೆ ನೋಂತವರಾರ್ ನಿಮ್ಮವೊಲು (ಚಂದ್ರಪು. ೦೨-೧೬೮). [ಸಂ. ಭುವನಜ್ಯಾಯಸ್]

ಭುವನತ್ರಯ (ನಾ). (ಸ್ವರ್ಗ, ಮರ್ತ್ಯ, ಪಾತಾಳವೆಂಬ) ಮೂರು ಲೋಕಗಳು : ಭುವನತ್ರಯ ದುರ್ಲಭಮೆನಿಸುವ ವಸ್ತುಗಳನ್ನುಮೊಳವೆ (ಕಾದಂಬ. ೪೩೯); ಭುವನತ್ರಯಂಗಳೊಳಗುಳ್ಳ ವಸ್ತುಗಳ್ ದೇವ ಕರತಳಾ ಮಳಕಸಮಾನವೆ ನಿಶ್ಚಯಮಾದವು (ಸುಕುಮಾ. ೪-೩೦). [ಸಂ.]

ಭುವನತ್ರಿಣೇತ್ರ (ನಾ). ಲೋಕಕ್ಕೆ ರುದ್ರನಂತಿರುವವನು ; ಜನರಿಗೆ ಭಯವನ್ನುಂಟುಮಾಡುವವನು : ಭುವನತ್ರಿಣೇತ್ರರುಚಿಯಂ ಕೈಕೊಂಡನಾ ಪಾಂಡವಂ (ಚಟುದ. ೨೪೧ ಕ್ರ ದೋ). [<ಸಂ. ಭುವನತ್ರಿನೇತ್ರ]

ಭುವನದಯಿತ (ನಾ.) ಲೋಕಕ್ಕೆ ಒಡೆಯನಾದವನು : ಅದ್ಭುತಂಗಜಿತಂಗೆ ಭುವನದಯಿತಂಗಾಗಳ್ ದೈತೇಂದ್ರರೆಲ್ಲಮೆಜಗಿದರ್ (ಅಜಿತಪು. ೩-೩). [ಸಂ.]

ಭುವನದಲ್ಲಣ (ನಾ). ೧. ಪ್ರಪಂಚದ ಭಯ ; ಜನರ ಗಾಬರಿ : ಒಱಲಿದುದು ಜನನಿವಹವೆದೆ ಬಾಯಬಿತು ಬಸವಳಿದಖಿಳ ಸಚರಾಚರ ನಿರೋಧ ವನೇನನೆಂಬೆನು ಭುವನದಲ್ಲಣವ (ಶಿಶಾಗ. ೩-೩-೦೪). ೨. ಪ್ರಪಂಚಕ್ಕೆ ಭಯವನ್ನುಂಟುಮಾಡುವವನು : ಸುರನರ ಭುಜಂಗಮ ಭುವನದಲ್ಲಣ ದಶವದನನುತ್ಸವದಿನೊಡ್ಡೋಲಗದೊಳಿದ್ದನು (ತೊರಾ. ೩-೬-೨). [ಭುವನ + ತಲ್ಲಣ (<ತಲ್ಲಟ)]

ಭುವನನಯನ (ನಾ). ಲೋಕಕ್ಕೆ ಕಣ್ಣಾಗಿರುವವನು ; ಸೂರ್ಯ: ನಯನಕರ್ಣಾಹಾರವಾಹನನಯನ ಭುವನೇಶಯುವನ ಭುವನನಯನ (ಶಿಸ್ತು. ೬೦-೩೦). [ಸಂ.]

ಭುವನನಾಥ (ನಾ). ಭೂಮಿಗೆ ಒಡೆಯನಾದವನು; ಅರಸು ; ರಾಜ: ಚರಿಗೆವುಗೆ ಬೋಧನಿಧಿ ದಮವರಮುನಿಯಂ ಭುವನನಾಥನಿದಿರ್ಗೊಂಡು . . . ಕಂಡೆ (ಶಾಂತಿಪು. ೯-೯೩). [ಸಂ.]

**ಭುವನಪ್ರಾಣ** (ನಾ). ಜಗತ್ತಿಗೆ ಪ್ರಾಣಸ್ವರೂಪನಾದವನಂ; ವಾಯು : ಮಾಣು ಭಯವನು ಭೀಮ ಭೂಪನ ಕಾಣು ಹೋಗೆನೆ ನಡುಗಿ ಭುವನ ಪ್ರಾಣನಾತ್ಮಜ ಬದ್ದನಾ ಧೃತರಾಷ್ಟ್ರನಂಘ್ರಿಯಲಿ (ಕುಮಾ.ಗ. ೧೧-೯೦). [ಸಂ.]

**ಭುವನಬುಂಭುಕ, ಭುವನಭುಂಭುಕ** (ಗು). ೧. ಜಗತ್ತಿನಲ್ಲಿ ಹೆಸರುವಾಸಿಯಾದ ; ಲೋಕಪ್ರಸಿದ್ಧವಾದ : ಭುವನಬುಂಭುಕದೇವಿ ಮಹಿಮೆಯನಿವಹವಾರರುಹಕ್ಕು (ಜಜಾ. ೦-೦೬). (ನಾ). ೨. ಜಗತ್ತಿನಲ್ಲಿ ಹರಡಿರುವುದು,-ವ್ಯಾಪಿಸಿರುವುದು : ಭುವನಬುಂಭುಕವಾಗಿ ಶಿಖಿ ತದ್ಭುವನವೆಲ್ಲವ ದಹಿಸಲು (ಜಜಾ. ೦೩-೩೦). ೩. ಜಗತ್ತಿನಲ್ಲಿ ಪ್ರಸಿದ್ಧನಾದವನು,-ಕೀರ್ತಿವಂತ : ತದನುಜನಪರಿಮಿತ ಗುಣಾಸ್ಪದ ನೆಸೆವಂ ಭುವನಬುಂಭುಕಂ . . . ದೋಣಂ (ಎಇ. XVI, ೩೦-೦೯, 1081); ಭೀಷ್ಮನು ಭುವನಬುಂಭುಕನೈದಿ ಪೊಕ್ಕನು ಹಸ್ತಿನಾಪುರವ (ಜಜಾ. ೯-೩೯). **ಭುವನಭುಂಭುಕ** : ೧. ಪೂವರೆ ಧಾತ್ರಿಯೊಳು ಭುವನಭುಂಭುಕ ದಾನಿಗಳುರ್ವರಾಗ್ರದೊಳು ಪೂವರೆ ರಾಜನೀತಿನಿಳಯರ್ಧರೆಯೊಳು ಸುಚರಿತ್ರಪಾತ್ರರುಂ (ಎಕ. VIII, ಸಾಗರ. ೦೩೯-೦೬; 1159); ಎಸೆದುದು ವಸುಧಾಧರನ ಭುವನಭುಂಭುರ್ತೇಜಂ (ರಘುಕಾ. ೩-೦೯); ಕವಿಜನವಿತತಿ ಕೋಕಿಲ ಮಾತಂಗ[ ಮಾಕಂದ ] ಭೂಭುವನಭುಂಭುಕ ಕೀರ್ತಿಯುತನು (ಶ್ರೀಶಾಂ. ೩-೬೬). ೨. ಜಗತ್ಕಾಂತನ ಕೀರ್ತಿಯಂ ಭುವನಭುಂಭುಕನೆ (ಎಇ. XIII, ೩೦೯-೩೬; 1125) ; ಭುವನಭುಂ [ಶಾಶಾಂ.ಬುಂ]ಭುಕವಾದ ತನ್ನ ಮಗಳ ವಿಚಿತ್ರನೃತ್ಯ ವಿದ್ಯಾವಿಳಾಸಮಂ ಕಂಡು ಜಿತಶತ್ರು ಮಹಾರಾಜಂ . . . ಬರಿಸಿ (ಅರ್ಹಚ. ೩-೯೬ ಬ); ಅಡಲದೇನೋ ಭೂಭುವನಭುಂ[ಭು]ಕವಾದು[ದು]ಕೀರ್ತಿ (ಶಾಇಇ. IV, ೨೬೭-೩೨; 1380). ೩. ಉನ್ನತಕೀರ್ತಿ ಭುವನಭುಂಭುಕನೊಪ್ಪಿದನು (ಣಪುಂ. ೬-೩೦). [ಭುವನ + ಬುಂಭುಕ]

**ಭುವನಭುಂಭುಕ** 'ಭುವನಬುಂಭುಕ' ನೋ.

**ಭುವನವಾಸ** (ನಾ). [ಸಂಗೀತ] ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು : ಹದಿನೆಂಟಂಗುಳ ಮೊದಲಾಗಿ ಒಂದಂಗುಳ ಪರ್ಯಂತಮಾದ ಪರಿಣಾಮಕ್ರಮವಿಡಿದು ಜಾತಿವಾಸ . . . ಭುವನವಾಸ . . . ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವಱಿಶು (ಶಿವೀಕ. ೨೩೬). [ಭುವನ + ವಾಸ$_1$]

**ಭುವನಾಂತರ** (ನಾ). ೧. ಭೂಮಿಯ ಮಧ್ಯಪ್ರದೇಶ,-ಒಳಭಾಗ. ೨. ಭೂಮಿಯ ಎಲ್ಲಾ ಭಾಗ : ಶಾಂತಿಕಥೆಯುಂ ಭುವನಾಂತರದೊಳ್ ನಿಮಿರ್ಚಿದೊಂದಂದಮನೊಂದೆ ನಾಲಗೆಯೊಳೇವೊಗಟ್ಟಿಂ ನೆಗಟ್ದತ್ತಿ ಮುಬ್ಬೆಯ (ಶಾಂತಿಪು. ೧-೯ ಹಂ); ಭುವನಾಂತರಮಂ ಸಿಂಪಿಸುವವೊಲ್ . . . ನಿಜಲಾವಣ್ಯರಸದ ಪೆರ್ಪೊನಲಿಂದು (ಣದಂಪು. ೯೯೯); ಭುವನಾಂತರಮಂ ಭೇರೀರವಮುದು ಶೀವಳ್ಕೆ (ತ್ರಿಪುರ. ೨-೬೦). ೩. ಬೇರೆಲೋಕ ; ಲೋಕಾಂತರ. [ಸಂ.]

**ಭುವನಾದಿತ್ಯ** (ನಾ). ೧. ಭೂಮಿಗೆ ಸೂರ್ಯನಂತಿರುವವನು. ೨. ಒಬ್ಬಾತನ ಹೆಸರು : ಕಿಱಿಯ ರಾಚಮಲ್ಲ ಮನ್ನೆ ಬೇಡಿದೊಳರೆನೆಲನುಂ ಭಣ್ಡಾರವುಮಂ ಕೊಟ್ಟಾನೆನ್ದು ಒಸ್ದು ಭುವನಾದಿತ್ಯಂ ಬರೆ (ಎಕ. IV, ಹುಣಸ. ೦೦೬-೩; ಸು. 930). [ಸಂ.]

**ಭುವನಾಧಿಪ** (ನಾ). ಭೂಮಿಯ ಒಡೆಯ; ರಾಜ : ಭುವನಾಧಿಪನಂ ಮೆಚ್ಚಿಸಿ ಜವದಿಂ ಕೈಲಾಸಕೊಲ್ದು ತಳರ್ಪೋಹಿಲನಂ ಸವಿಲಾಸಂಬಡೆದೀಕ್ಷಿಸಿ (ಅದ್ಭುಬಿ. ೦೨-೬). [ಸಂ.]

**ಭುವನಾಧಿಪತ್ಯ** (ನಾ). ೧.-ಪ್ರಪಂಚದ ಒಡೆತನ,-ಪ್ರಭುತ್ವ. ೨. ಜಗತ್ತಿನ ಪ್ರಭುತ್ವವನ್ನು ಹೊಂದಿರುವವನು ; ಪರಮೇಶ್ವರ : ಶರಣ[ಸಾ]ಂಗತ್ಯಂಗೆ ಭುವನಾಧಿಪತ್ಯಂಗೆ ಸುರಗಣಾದಿತ್ಯಂಗೆ . . . ಮಯ್ಯಕ್ಕಿ ನಿಂದಿರೆ ವಿರೂಪಾಕ್ಷಲಿಂಗಕ್ಕೆ (ಶಂಬಿರ. ೦೯-೧೫೯). [ಸಂ.]

**ಭುವನಾಧಿಪವಾಸ** (ನಾ). [ಸಂಗೀತ] ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು : ಬಳಿಕ ಹದಿನೆಂಟಂಗುಳ ಮೊದಲಾಗಿ ಒಂದಂಗುಳ ಪರ್ಯಂತಮಾದ ಪರಿಣಾಮಕ್ರಮವಿಡಿದು ಜಾತಿವಾಸ. . . ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣಮಱಿದು (ಶಿವೀಕ. ೨೩೭). [ಭುವನಾಧಿಪ + ವಾಸ$_1$]

**ಭುವನಾಧೀಶ** (ನಾ). ಭೂಪತಿ; ರಾಜ : ಭುವನಾಧೀಶನನೀಕ್ಷಿಪೊಂದು ತವಕಂ ಕೆಯ್ಗಣ್ಮೆ (ರಘುಕಾ. ೯-೪೬). [ಸಂ.]

**ಭುವನಾಧ್ವ** (ನಾ). [ವೀಶೈ] ಮಂತ್ರ, ಪದ, ವರ್ಣ, ಭುವನ, ತತ್ತ್ವ, ಕಲಾ ಎಂಬ ಆರು ಮಾರ್ಗಗಳಲ್ಲಿ ಒಂದು : ತತ್ತ್ವಾಧ್ವ, ಕಲಾಧ್ವ ಭುವನಾಧ್ವ (ಇವು ಮೂರು ಅರ್ಥಾಧ್ವಗಳು) (ಶಿವಾಸೂ. ೨-೦ ಅಬು). [ಸಂ. ಭುವನಾಧ್ವನ್]

**ಭುವನಾಭಿರಾಮ** (ನಾ). ಲೋಕಕ್ಕೇ ಅತ್ಯಂತ ಸುಂದರನಾಗಿರುವವನು: ರಾಮನಂ ಭುವನಾಭಿರಾಮನಂ ಗುಣರತ್ನಧಾಮನಂ. . . ಸಂತತಂ ನಾಮನಂದಣಿಯೆ ರಮಿಸದೆ ಬಾಳ್ವೆನೆಂತೆಂದಳು (ಕೃಶಿ:ಶಾ. ೦೯-೨೨). [ಸಂ].

**ಭುವನಾಯ್ತ** (ನಾ). ಒಬ್ಬಾತನ ಹೆಸರು : ರಾಚಮಲ್ಲಂಗಲ್ಲದೆ ರಾಜ್ಯಮಂ ಗೆಯಲೀಯಮೆನ್ದು ಭುವನಾಯ್ತನ ಮಾಗುಣ್ಡಿಯೊಳ್ಕಾದಿದನ್ದು.(ಎಕ. IV, ಹುಣಸ. ೧೦೬-೬; ಸು. 930). [ ? ]

**ಭುವನಾರಾಧ್ಯೆ** (ನಾ). ಜಗತ್ತಿನ ಜನರಿಂದ ಪೂಜಿಸಲ್ಪಡತಕ್ಕವಳು ; ಲೋಕಪೂಜ್ಯೆ : ಶ್ರೀಮತ್ಪ್ರಾಲೇಯಶೈಲೋದ್ಭವೆ ಶಿವೆ ಭುವನಾರಾಧ್ಯೆ ಕಲ್ಯಾಣಿ (ರಾಜಶೇ. ೬-೦೩೬). [ಸಂ. ಭುವನಾರಾಧ್ಯಾ]

**ಭುವನಾಲಯ** (ನಾ). ನೀರಿಗೆ ವಾಸಸ್ಥಾನವಾದುದು ; ಸಮುದ್ರ : ಶಿವದೇವರ ವರಸದನಂ ಭುವನಾಲಯಮಬ್ಜಗೇಹ . . . ಶರಧಿ ಮಹಿಮಾವಾಸಂ (ಹರಿಶ್ಚ. ೦-೩೬). [ಸಂ.]

**ಭುವನಾಶ್ರಯ** (ನಾ). ೧. ಪ್ರಪಂಚಕ್ಕೆ ಆಶ್ರಯನಾಗಿರುವವನು. ೨. ನೀರಿಗೆ ಆಶ್ರಯವಾಗಿರುವುದು. ೧, ೨ : ಪಂಕರುಹಭವನಂತೆ ಸಕಲ ಭುವನಾಶ್ರಯಂ ಶಕ್ರನಂತನಿಮಿಷನಿಕರಕಾಂತನು . . . ತಾನೆಂದುದಧಿ ಮೆಱೆದುದು (ಕೃಶಿಶಾ. ೬-೩). [ಸಂ.]

**ಭುವನೇಜ** (ನಾ). ನೀರಿನಲ್ಲಿ ಹುಟ್ಟಿರುವುದು; ತಾವರೆ ; ಕಮಲ : ನಯನಭುವನೇಜಾರ್ಚಿತಕ್ರಮ ನಯನಕರ್ಣವಿಪಕ್ಷಲಕ್ಷಣ ಜಯತು ಸಿದ್ಧೇಶ (ಬಸಪು. ೨೦-೩೭). [ಸಂ.]

**ಭುವನೇಶ** (ನಾ). ೧. ರಾಜ ; ಅರಸು : ಭುವನೇಶಂ ಬೆಸಗೊಳೆ ವಿನಯವಚಃಪ್ರಸರಂಗಳೆಸೆದೊಡಂಬಡೆ ನುಡಿದಂ (ಅದಿಪು. ೦೩-೨೯); ಈ ಭುವನೇಶಂ ಬಾಯ್ಕೇಳದೊಡವಂ ತಡೆಯದೊಂ ತ್ರಿಪೃಷ್ಠನಂಬಾಧಿತಟದೊಳ್ (ಶಾಂತಿಪು. ೩-೦೩೯). ೨. ಶಿವ; ಪರಮೇಶ್ವರ : ಭುವನೇಶಂ ಭೂತಿಯುಕ್ತ ಭುಜಗಧರನಜೇಯಂ (ಕಬಕಂ. ೩-೦೬). [ಸಂ.]

**ಭುವನೇಶಯನ** (ನಾ).=ಭುವನೇಜ : ನಯನಕರ್ಣಾಹಾರವಾಹನನಯನ ಭುವನೇಶಯನ ನಯನಾನಯನ ಭುವನತ್ರಯನಯನ (ಬಸಪು. ೨೦-೩೭). [ಸಂ.]

**ಭುವನೇಶ್ವರ** (ನಾ).=ಭುವನೇಶ ೧: ಹರನೊಡನೆ ಹೊಯ್ದಾಡಿದಗ್ಗದ ನರನು ತಂದೆ ಸಮಸ್ತ ಭುವನೇಶ್ವರನಲ್ಲಾ ಮುರವೈರಿ ಮಾವನು ನಿನ್ನ ತನಯನಿಗೆ (ಕುಮಾದ್ರೋ. ೬-೨೬). [ಸಂ.]

**ಭುವನೇಶ್ವರಿ** (ನಾ). ೧. ಜಗತ್ತಿಗೆಲ್ಲ ಒಡೆಯಳಾದ ಶಕ್ತಿದೇವತೆ ; ಆದಿಶಕ್ತಿ. ೨. [ವಾಸ್ತು] ದೇವಸ್ಥಾನದ ಶಿಖರಗಳ ಒಳಮೈ,- ಒಳಭಾಗ; ಫಲಕವಿಮಾನದ ಎತ್ತರದ ಪರಮಾವಧಿ : ಮನೆ

ಮನೆಯ ಮೇಲೆ ಗೋಪುರದ ಭುವನೇಶ್ವರಿಯು ಪರಿಜನಾವಳಿಸಿ (ಶ್ರೀರಾಪ. ೪೪೮-೬೧); ಈ ರೀತಿಯ ಕಟ್ಟಡಗಳಲ್ಲಿ ಆಶ್ಚರ್ಯದಿಂದ ಬೆರಗುಮಾಡುವ ಭಾಗವೆಂದರೆ ಅವುಗಳ ಭುವನೇಶ್ವರಿಗಳು (ವ್ಯಾಶಾಸ್ತ್ರ. ೪೧).
[ಸಂ. ಭುವನೇಶ್ವರೀ]

**ಭುವರ್ಲೋಕ** (ನಾ). ಭೂಮಿಯೇ ಮೊದಲಾದ ಮೇಲಿನ ಏಳು ಲೋಕಗಳಲ್ಲಿ ಎರಡನೆಯದು : ಭುವರ್ಲೋಕದ ಸ್ವಾವರಕ್ಕೆ ಸತ್ಯ ಲೋಕದ ಅಗ್ರವಣಿಯಲ್ಲಿ ಮಜ್ಜನಕ್ಕೆಚಿದು (ಅವತಂ. ೪೭-೧೯೭). ಪರಮ ಜಂಗಮದಲ್ಲಿ ಹದಿನಾಲ್ಕು ಲೋಕಂಗಳಡಗಿರ್ಪವು . . . ಕುಕ್ಷಿಯಲ್ಲಿ ಭುವರ್ಲೋಕ (ಅಬಂಡೆ. ೧೪೨-೧೨೪); ಈ ಮಹಾಪುರುಷನ (ವಿರಾಟನ) . . . ಕುಕ್ಷಿಯಲ್ಲಿ ಭುವರ್ಲೋಕವಿರುವುದು (ನಾನಾಗು. ೯-೧೩). [ಸಂ.]

**ಭುಸ್** (ನಾ). ಒಂದು ಅನುಕರಣ ಶಬ್ದ : ಹಾವಿನ ಫೂತ್ಕಾರ. ದೀರ್ಘನಿಶ್ವಾಸ ಮೊದಲಾದುವನ್ನು ಅನುಕರಿಸುವ ಶಬ್ದ : ಅಲಂಗೆ ಭುಸ್ಸೆಂದೆಂಬ ಫಣೆಗಳಾಭರಣಮವು ತೊಳಗೆ . . . ವಿರೂಪಾಕ್ಷನಿರ್ದಂ ವಿಲಾಸದಿಂದೆ (ತರಪು. ೨-೨೨); ನಡೆಮದೆ ಶಡಂ ಲಕ್ಷೋಪಲಕ್ಷ ಹೆಡೆಗಳನ್ನೆತ್ತಿ ಭುಸ್ಸೆಂಬ ಸಾಸಿರಶಿರದ ಮಹಾಫಣಿಯಂತೆ (ತತ್ತ್ವಂಗ. ೭೭-೧೮೦೨).

**ಭುಸುಂಡಿ** (ನಾ). ಒಂದು ಬಗೆಯ ಆಯುಧ : ವಿಸುವ ಚಕ್ರ ಭುಸುಂಡಿ ಲುಡಿಗಳ ಸರಳ ಸಮಕ್ಕೈದುಗಳಿಂದ ದಾನವ ಮುಸುಕಿದನು ಬೊಬ್ಬಿಡುತ ರಿಪುಸಂಹಾರಭೈರವಿಯಾ (ದೇಶೀಪು. ೧-೦೨). [< ಸಂ. ಭುಶುಂಡೀ]

**ಭುಸುಗುಟ್ಟು** (ಕ್ರಿ). ೧. (ಹಾವು) ಭುಸ್ ಎಂದು ಶಬ್ದ ಮಾಡು. ೨. (ಅಲಂ) (ರೋಷದಿಂದ) ವೇಗವಾಗಿ ಉಸಿರುಬಿಡು : ಉದ್ವೇಗವನ್ನು ಹೊಂದು : ಕೆಂಪುಸೀರೆಯ ಹುಡಿಗೆ, ತಡೆಯನ್ನು ತುಳಿಸಿಕೊಂಡ ನಾಗರಹಾವಿನಂತೆ ಭುಸುಗುಟ್ಟಿದಳು (ತೆಂಡುಳಿ. ೪೦); ಗೆಲುವಾದ ಗಂಡುಕುದುರೆಯು . . . ಒಂದು ಸಲ ಭುಸುಗುಟ್ಟಿ ಕತ್ತನ್ನು ಗಂಭೀರವಾಗಿ ಅಲುಗಿಸಿ, ಅನಂತರ ಚಲಿಸದೆ ಸುಮ್ಮನೆ ನಿಂತುಬಿಟ್ಟಂತೆ ತೋರುತ್ತಿದ್ದಿತು (ಪುಲಿದಾ. ೭೦). [< ಭುಸ್ + ಕುಟ್ಟು$_1$]

**ಭುಸುಗುಡು** (ಕ್ರಿ). = ಭುಸುಗುಟ್ಟು ೨ : ಆದರೂ ಗೋಪಾಲನು ಭುಸುಗುಡುತ್ತಾ ಅನಂತನ ಮೇಲೆ ನೆಗೆದು ದಬ್ಬಿದನು (ಏಪ್ರಿಲ. ೧೨೭); ಗೆಲುವಾದ ಮನಸ್ಸು . . . ಎಲ್ಲ ಬಿಟ್ಟು ನೆರೆಮನೆಯ ಪಾರ್ವತಕ್ಕನ ಮಾತನ್ನು ನೆನೆದು ಭುಸುಗುಡಹತ್ತಿತು (ಮೂರುದಾ. ೨೩೯).
[< ಭುಸ್ + ಕುಡು$_1$ (< ಕೊಡು$_1$)]

**ಭೂ** (ನಾ). ೧. ಭೂಮಿ; ಧರಣಿ; ನೆಲ : "ಭೂಃ, ಭೂಮಿಃ, ವಸುಧಾ, ಅವನಿಃ . . . ಧರಾ, ಆಧಾರಾ – ಈ ೩೭ ಭೂಮಿಯ ಪೆಸರ್" (ಶಬ್ದಮ. ೨೭-೧). ೨. ಭೂಲೋಕ : "ಬಿತ್ತರದ ಭೂರ್ಭುವಂ ಸ್ವರ್ಮಹಂ ಜನತಪಂ ಸತ್ಯಮೆಂದೇಳು ಮೇಲಣ ಲೋಕಮೆಕ್ಕು" (ಪುಂಗಲ. ೧೧-೩೨). ೩. ಪಂಚಭೂತಗಳಲ್ಲಿ ಒಂದು ; ಪೃಥ್ವಿ : ಭೂ ತೋಯ ಪಾವಕ ಸಮೀರಣ ಅಂಬರಾದಿ ಗಳೆಲ್ಲ ಆದಿಯಾಧಾರದ ಪರಮಾತ್ಮಲಿಂಗದಲ್ಲಿ (ಬಸವ. ೯೪೯). ೪. [ಛಂದ] ಮೂರುಗುರುಗಳನ್ನು ಹೊಂದಿರುವ ಗಣ ; ಮಗಣ (— — —) : ಬಲಿಶ ಭೂ ಯುಗ್ಮಂ ನೆಲಸಿದುದಕ್ಕಂ ಜಲಜಪತ್ರಾಕ್ಷೀ ಸುಲಲಿತವೃತ್ತಂ (ಛಂದೋಂಬು. ೨-೬೦); ಭೂ ನಾಕಾಂತದೊಳಿರೆ ತೋಯೇಶಂ ತಾನೆಂಬುಂ ಪವಣಕ ನಾಮಂ (ಛಂದೋಂಬು. ೨-೧೧೭). [ಸಂ.]

**ಭೂಂಕೃತಿ** (ನಾ). ಹಾವಿನ ಫೂತ್ಕಾರದ ಶಬ್ದ : ಅಖಿಳ ಭೂಂಕೃತಿ ಪೊಣ್ಮೆ ಮೊರೆವುತ್ತೇಳುತ ವಿಜೃಂಭಿಸುವ ಸರ್ಪಟಸರ್ಪನಂ ನೋಡಿ (ಬಸಪು. ೩೦-೩೯). [ಸಂ.]

**ಭೂಕಂದಾಯ** (ನಾ). ಜಮೀನಿನ ಮೇಲೆ ಹಾಕುವ ಕಂದಾಯ.— ತೆರಿಗೆ : ಭೂಕಂದಾಯ ಕಂದಾಯದ ನಿರ್ಧಾರವೂ ವಸೂಲಿಯೂ ಭೂಅಭಿಲೇಖಗಳನ್ನು ಇಟ್ಟಿರುವುದೂ . . . ಕಂದಾಯದ ಪರಭಾರೆಯೂ ಸೇರಿ (ಶಾಶಾಸ. ೨೯೦). [ಭೂ + ಕಂದಾಯ]

**ಭೂಕಂಪ** (ನಾ). ಭೌತಿಕಕಾರಣದಿಂದ ಆಗುವ ಭೂಮಿಯ ಕಂಪನ : ಭೂಮಿಯು ನಡುಗುವುದು : ದೊಡ್ಡದೊಡ್ಡ ದ್ವೀಪಗಳಲ್ಲಿ ಎತ್ತರ ವಾದ ಪರ್ವತಗಳಿವೆ . . . ಅನೇಕ ಜ್ವಾಲಾಮುಖಿಗಳಿವೆ. ಆಗಾಗ್ಗೆ ಭೂಕಂಪಗಳುಂಟಾಗುತ್ತವೆ (ಭೂಗೋಳ. ೧೨೨) ; ಕಾಲನೆಂಬುವ ಪ್ರಾಣಿ . . . ಆಕಾಶದಲ್ಲಿ ಮಿಂಚಿ, ಭೂಕಂಪದಲ್ಲಿ ಗದಗದ ನಡುಗಿ, ಜ್ವಾಲಾಮುಖಿ ಯೊಳಗೆ ಸಿಡಿದು ನುಚ್ಚುನೂರಾಗಿ . . . ನಮ್ಮೆದೆಯಲ್ಲಿ ತುಡಿವ ತಬಲ ವಾಗಿದ್ದಾನೆ (ನಲಮು. ೩೦-೩). [ಸಂ.]

**ಭೂಕಂಪನ** (ನಾ). = ಭೂಕಂಪ : ಇದೆ ಭೂಕಂಪನವಿದೆ ರಕುತದ ಮಳೆ . . . ಇದೆ ಧೂಮಕೇತು ಮುಂಗಡೆಯೊಳಗಾ ರಾಮನಿದಿರಾಗದಿರ ನೆಮಗೇದ (ಕುರಾಶಾಂ. ೪೦-೯). [ಸಂ.]

**ಭೂಕಡವ** (ನಾ). ಒಂದು ಬಗೆಯ ಸಸ್ಯ : "ಭೂಮಿಜಾ—ಭೂಕಡವ" (೬ಕಂ. ೧೧೨). [ಭೂ + ಕಡವ$_1$ (< ಕಡಂಬ)]

**ಭೂಕಾಂತ** (ನಾ). ಭೂಮಿಯ ಪತಿ ; ರಾಜ : ಉಪವಾಸವಿಸರಕ್ಕಾ ಪುಣ್ಯತಿಥ್ಯುತ್ಕರಂ ತಾನೆಯ್ದುತ್ತಣವಿಲ್ಲದೇಂ ನಿಂತರೋ ಭೂಕಾಂತನಂ ಕಾಂತೆಯುಂ (ಚಂದ್ರಪು. ೩-೬೨) ; ಜಸಂಬಡೆದ ಹಸ್ತಿನಾಪುರದಲ್ಲಿ ಗರಸೆನಿಸುವ ಭೂಕಾಂತ ಜನಮೇಜಯಂ (ಜೈಮಿಭಾ. ೨-೨). [ಸಂ.]

**ಭೂಖಂಡ** (ನಾ). ಭೂಮಿಯ ಭಾಗ : ಭೂಖಂಡಗಳ ಸಮೀಪದಲ್ಲಿಯೂ ಅವುಗಳ ಪಕ್ಕಗಳಲ್ಲಿರುವ ದ್ವೀಪಗಳ ಸಮೀಪದಲ್ಲಿಯೂ ಸಾಗರದ ನೀರಿನ ಆಳ ಕಡಮೆ (ಭೂರಚ. II, ೩೭) ; ನಮ್ಮದು ಬಹಳ ದೊಡ್ಡ ಭೂಖಂಡ (ಯುಕ್ಷಬ. ೨). [ಸಂ.]

**ಭೂಖರ್ಜೂರ** (ನಾ). ಒಂದು ಬಗೆಯ ಸಸ್ಯ : "ಭೂಮಿಖರ್ಜೂರೀ — ಭೂಖರ್ಜೂರ" (೬ಕಂ. ೧೧೩). [ಸಂ.]

**ಭೂಗತ** (ಗು). ೧. ಭೂಮಿಯ ಒಳಗಿರುವ : ಯಾವುದೇ ನಾಡಿನಲ್ಲಿ ಭೂಗತ ಖನಿಜಸಂಪತ್ತನ್ನು ಕಂಡುಹಿಡಿಯುವುದು ಮುಖ್ಯವಾದುದು (ಕೂಡ). ೨. ಬಹಿರಂಗವಾಗಿ ಕಾಣಿಸಿಕೊಳ್ಳದ : ಅನೇಕ ರಾಷ್ಟ್ರ ಗಳಲ್ಲಿ ಭೂಗತನಾಯಕರು ಸರ್ಕಾರಕ್ಕೆ ಕಿರುಕುಳವನ್ನು ಕೊಡುತ್ತಿದ್ದಾರೆ (ಕೂಡ). (ನಾ). ೩. ಭೂಮಿಯಲ್ಲಿ ಮುಚ್ಚಿಹೋದುದು.— ಹೂತುಹೋದುದು : ಆದರೆ ಹತ್ತಿರದಲ್ಲಿದ್ದ ಊರುಗಳೆಲ್ಲವು ಭೂಗತ ವಾದವು (೪ಶಪು.೩-೧೪೩). ೪. ಹಾಳು ; ನಾಶ : ಜೀವ ಹಾಚು ಕಾಯ ಕೆಡೆದು ಭೂಗತವಾಗಿ ವಾಯುಪ್ರಾಣಿಯಾಗಿ ಹೋಹಾಗ ಆಗ ಮುಕ್ತಿಯ ಬಯಸಿದರುಂಟೆ (ಸಿದ್ಧೇವ. ೨೦೭-೩೪೨) ; ಒಂದೇ ದಿನದಲ್ಲಿ ಐದುನೂರು ಹೊಯಿಸಳಸೇನೆ ಭೂಗತವಾಯಿತು (ಕಾಂತಲಾ. ೨೨೦). ೫. ನಾಶವಾದವನು : ಲೆಕ್ಕದಲ್ಲಿ ಲೇಖಿತವಾಹರಿಗೇಕೆ ಅಜಾತನ ಸುದ್ದಿ . . . ಇವರೆಲ್ಲರು ಈಶನ ಭಾಷೆಯಲ್ಲಿ ಸಿಕ್ಕಿ ಭೂಗತರಾದರು (ಮೋಳಿಪಾ. ೧೨-೪೪).

**ಭೂಗತ ಮಾಡು** = ೧. ನೆಲದೊಳಗೆ ಮುಚ್ಚಿಡು; ಹೂತಿಡು : ಅವನು ಹಣವನ್ನೆಲ್ಲ ಭೂಗತ ಮಾಡಿ ಹಠಾತ್ತಾಗಿ ಸತ್ತುಹೋದುದ ರಿಂದ ಅದು ಮಕ್ಕಳಿಗೆ ಸೇರದಂತಾಯಿತು (ಕೂಡ). ೨. ಹಾಳುಮಾಡು : ಅವನಲ್ಲಿದ್ದ ಪಾಶವೀಶಕ್ತಿ . . . ಆ ದಿನ ಸುಳುಹುದೋರಿದ್ದ ದೈವೀ ಪ್ರವೃತ್ತಿಯನ್ನು ಮೆಟ್ಟಿ ತುಳಿದು ಭೂಗತಮಾಡಿತು (ಕುವರು. ೭೩).
[ಸಂ.]

**ಭೂಗರ್ಭ** (ನಾ). ಭೂಮಿಯ ಒಳಭಾಗ : ಭೂಗೋಳದ ವ್ಯಾಸವು ಅಥವಾ ಭೂಗರ್ಭದ ಪಾರಳತೆಯು ೭೯೧೨ ಮೈಲುಗಳುಳ್ಳದ್ದಾಗಿದೆ (ಭೂಗೋಳ. ೩); ಭೂಗರ್ಭವನ್ನು ಸೀಳಿ ನೋಡಿದರೆ ಅಲ್ಲೂ ಅದೇ ಹಾಡು (ಶಾಂಕ್ರ. I, ೧೨೧). [ಸಂ.]

**ಭೂಗರ್ಭಜಲ** (ನಾ). ಭೂಮಿಯ ಒಳಗಿರುವ ನೀರು : ಭೂಗರ್ಭಜಲ (ಗುಪ್ತ ಜಲ) (ಭೂವಿವ. ೧೨೩). [ ಸಂ. ]

**ಭೂಗರ್ಭಶಾಸ್ತ್ರ** (ನಾ). ಭೂಮಿಯ ಒಳಗಿರುವ ವಸ್ತುಗಳ ವಿಷಯವನ್ನು ತಿಳಿಸುವ ಶಾಸ್ತ್ರ : ಭೂಮಿಯ ಚಿಪ್ಪಿನ ವಿಚಾರವನ್ನು ಪರಿಶೀಲಿಸುವ ಶಾಸ್ತ್ರ ಭೂಗರ್ಭಶಾಸ್ತ್ರ ( ಭೂವಿವ. ೧೧೭); ಭೂಗರ್ಭಶಾಸ್ತ್ರ ಪ್ರವರ್ತಕನಾದ ಲಿ ಮತ್ತು ಅರ್ಥವಾದಿಯಾದ ಮಾಲ್ಥ್ಯಸ್ ಮುಂತಾದವರ ಸಂಶೋಧನೆಗಳೂ ಪರಿಣಾಮವಾದಕ್ಕೆ ಪುಷ್ಟಿಯನ್ನು ಕೊಟ್ಟುವು (ಮುಕ್ತಾರ. ೩೫ ೩೬೮). [ ಸಂ. ]

**ಭೂಗರ್ಭಶಾಸ್ತ್ರಜ್ಞ** (ನಾ). ಭೂಗರ್ಭ ಶಾಸ್ತ್ರವನ್ನು ಬಲ್ಲವನು : ಭೂಗರ್ಭಶಾಸ್ತ್ರಜ್ಞರು ಭೂಮಿಯ ಪದರಗಳ ವಿಷಯವನ್ನು ಚೆನ್ನಾಗಿ ಪರಿಶೀಲಿಸಿ . . . ನಿರ್ಧರಿಸಿದ್ದಾರೆ (ಶಿಾಹು ಟ್ಪು. ೯೯). [ ಸಂ. ]

**ಭೂಗುಗ್ಗಳ** (ನಾ). ಒಂದು ಬಗೆಯ ಸಸ್ಯ : "ಮೇದಜಃ_ಭೂಗುಗ್ಗಳ" (೬೫೨. ೧೨೯). [ಸಂ. ಭೂಗುಗ್ಗುಲ]

**ಭೂಗುಗ್ಗಳು** (ನಾ). = ಭೂಗುಗ್ಗಳ : "ಅಸುರಸಂಭವಾ-ಭೂಗುಗ್ಗಳು" (೬೫೦. ೯). [ಸಂ. ಭೂಗುಗ್ಗುಲು]

**ಭೂಗುಣ** (ನಾ). ನೆಲದ ಸತ್ತ್ವ,-ಗುಣ: ಪೂರ್ವಕಡೆಯಲ್ಲಿರುವ ಬೆಂಗಳೂರು . . . ಇದರ ಭೂಗುಣವು ಇಂಡಿಯದಲ್ಲಿ ಅತ್ಯಂತ ಉತ್ತಮವಾದದ್ದು (ಭೂಗೋಳ. ೮೯). [ ಸಂ. ]

**ಭೂಗೃಹ** (ನಾ). ನೆಲದೊಳಗೆ ಕಟ್ಟಿರುವ ಮನೆ ; ನೆಲಮನೆ : ನೆಲಮಾಳಿಗೆ : ಭೂಗೃಹದೊಳ್ ಮಾಡಿಸಿಟ್ಟು ಮೋಹ್ ಸುದತಿಯರ್ಗಳ ರೂಪಿನೊಳಂ ಮೆಯ್ಯೊಳ್ ಮೋಣ್ಗೆಂಚಿಸಿ ಪಾಣ್ಬನೊಳಾಡುವರ್ (ವಃದ೩. ೮-೨೩). [ ಸಂ. ]

**ಭೂಗೋಚರ** (ನಾ). ಭೂಮಿಯ ಮೇಲೆ ವಾಸಮಾಡುವವನು; ಮನುಷ್ಯ : ತಕ್ಕುಗಿಡೆ ಕಿಂಕರಭಾವಂ ನಿನಗೆ ಸಮನಿಸಿತ್ತು . . . ನೀಚ ಭೂಗೋಚರರೊಳ್ (ಶಂರಾಮ. ೧೪-೧೧). [ಸಂ.]

**ಭೂಗೋಲ**, ಭೂಗೋಳ (ನಾ). ೧. ಗೋಲಾಕಾರವಾದ ಭೂಮಿ: ಭೂಮಂಡಲ : ಆವ ದೇವಿ ರವಿಯ ಸುತ್ತ ಭೂಗೋಲವ ತಿರುಗಿಸುತ್ತ ತನ್ನ ರುಂದ್ರಲೀಲೆಯತ್ತ ಸಾಗುತಿರುವಳೋ (ಅನೀಕ. ೧೨ ೧೧). ೨. = ಭೂಗೋಳಶಾಸ್ತ್ರ : ಅರ್ಥಶಾಸ್ತ್ರ . . . ಭೂಗೋಲ, ಗಣಿತ . . . ಅನುಭವಶಾಸ್ತ್ರ, ಇತ್ಯಾದಿ ವಿಷಯಗಳ ಮೇಲಿನ ಮೂಲಭೂತತತ್ತ್ವಗಳನ್ನೊಳಗೊಂಡ ಗ್ರಂಥಗಳನ್ನು ಅರಿಸಿಕೊಳ್ಳಬೇಕು ( ಗ್ರಂಥಾರಿ. ೯ ). **ಭೂಗೋಳ**: ೧. ಆದಿವರಾಹರೂಪದೊಳ್ ನೀನಂದೆತ್ತಿದ್ಯೆ ಗೋಮಿನೀಧವ . . . ಭೂಗೋಳಮುಂ (ಜಗಬ. ೧-೩೭) ; ಭೂಗೋಳದ ಮೇಲ್‌ಭಾಗವು ಭೂಗೋಳಪಠದಲ್ಲಿ . . . ಎರಡು ಗೋಳಗಳಾಗಿ ವಿಂಗಡಿಸಲ್ಪಟ್ಟಿವೆ (ಭೂಗೋಳ. ೧೨). ೩. ಭೂಗೋಳಶಾಸ್ತ್ರದ ಪಾಠ,- ಬೋಧೆ : ಮೂರನೆಯ ಘಂಟೆ ನಮಗೆ ಭೂಗೋಳವಿತ್ತು (ಶಾರಿಮ. ೧೧). [ಸಂ.]

**ಭೂಗೋಳ** 'ಭೂಗೋಲ' ನೋ.

**ಭೂಗೋಳಶಾಸ್ತ್ರ** (ನಾ). " ಭೂಮಿಯ ಮೇಲ್ಮೈ, ಆಕಾರ, ಪ್ರಕೃತಿ ಲಕ್ಷಣಗಳು, ಸ್ವಾಭಾವಿಕ ಮತ್ತು ರಾಜಕೀಯ ವಿಭಾಗಗಳು, ವಾಯುಗುಣ, ಉತ್ಪನ್ನಗಳು, ಜನಸಂಖ್ಯೆ, ಮೊ. ವಿಷಯಗಳನ್ನೊಳಗೊಂಡ ಶಾಸ್ತ್ರ ; ಭೂಗೋಳಶಾಸ್ತ್ರ : ಭೂವಿವರಣೆ" (Geography. ಐಂಕಾ): ಭೂಮಿಯನ್ನು ವಿವರಿಸುವ ಗ್ರಂಥಕ್ಕೆ ಭೂಗೋಳಶಾಸ್ತ್ರವೆಂದು ಹೆಸರು (ಭೂಗೋಳ. ೧); ಭೂಗೋಳಶಾಸ್ತ್ರದ ಅಭ್ಯಾಸಕ್ಕೆ ತೊಡಗುವ ಮೊದಲು ಭೂಮಿಯ ಆಕಾರದ ವಿಷಯವನ್ನು ವಿಚಿತವಾಗಿ ತಿಳಿದುಕೊಂಡಿರಬೇಕು (ಭೂವಿವ. ೧). [ಸಂ. ಭೂಗೋಲಶಾಸ್ತ್ರ]

**ಭೂಚಕ್ರ** (ನಾ). ೧. ಚಕ್ರಾಕಾರವಾದ ಭೂಮಿ; ಭೂಮಂಡಲ: ಪೆಂಪಚ್ಚರಿಯಾದ ದೇವಗಣಮಂ ರಕ್ಷಿಕ್ಕೆ ಭೂಚಕ್ರಮಂ (ಜಗಬ. ೬-೫); ಚಕ್ರಸಹಾಯನಾಕ್ರಮಿಸಿದಂ ಭೂಚಕ್ರಮಂ ಪಾದದಿಂ (ಪುಷ್ಪಕ. ೯-೨೩); ಧರ್ಮಾರ್ಜನ ಕೀರ್ತಿ ಭೂಚಕ್ರಮಂ ಮುಸುಕಿದಂತೆ ಬೆಳ್ಪಿಂಗಳರೆ (ಕೃಂಬಾ. ೯-೨೭). ೨. ಭೂಮಧ್ಯರೇಖೆ : ಸಮಭಾಜಕವೃತ್ತ. ೩. ಅರಸುಗಳಿಗೆ. ದೇವರುಗಳಿಗೆ ಉತ್ಸವಕಾಲದಲ್ಲಿ ಎತ್ತಿಹಿಡಿಯುವ ನೀಳವಾದ ದಂಡವನ್ನು ಹೊಂದಿರುವ ಹೆಚ್ಚು ಅಗಲವಾದ ಕೊಡೆ,—ಛತ್ರಿ: ಭೂಚಕ್ರಗಳನ್ನು ಭೂಪತಿಗಳಾದ ಅರಸುಗಳು ಹಿಡಿಸಿಕೊಳ್ಳುವುದರಿಂದ ಐಶ್ವರ್ಯವುಂಟಾಗಿ ಪುಷ್ಟಿಯನ್ನು ಕೊಡುತ್ತ ಮಹಾಮೋಹನಕರವಾಗಿರುವುದು (ಸಕಪ್ರ. ೩೫). ೪. ರಥ, ಸಿಂಹಾಸನಗಳಿಗೆ ಅಳವಡಿಸುವ ಛತ್ರಿ: ನವರತ್ನ ರಚಿಸಿದ ಲಾವೆಗಳಿಂದ ಪೊಳೆಯುವ. . . ಭೂಚಕ್ರ ಕೊಡೆಯಿಂದ ಪೊಳೆವ ಕಳಶಂಗಳ ಸೋಜಿಗದಿರುತಿರ್ಪ ರಥವು (ಸಾನಂಗ. ೨೫). ೫. ಹತ್ತಿಸಿದಾಗ ಕಿಡಿಗಳನ್ನು ಕಾರುತ್ತಾ, ಚಕ್ರದಂತೆ ವೃತ್ತಾಕಾರವಾಗಿ ನೆಲದ ಮೇಲೆ ಸುತ್ತುವ ಒಂದು ಬಗೆಯ ಪಟಾಕಿ: ಮಕ್ಕಳು ಭೂಚಕ್ರ, ವಿಷ್ಣುಚಕ್ರ, ಮತಾಪು ಮುಂತಾದ ಹಲವಾರು ಬಗೆಯ ಪಟಾಕಿಗಳನ್ನು ಆನಂದದಿಂದ ಸುಟ್ಟರು (ರೂಢಿ). [ಸಂ.]

**ಭೂಚಕ್ರಬಳ್ಳಿ** (ನಾ). ಒಂದು ಬಗೆಯ ಬಳ್ಳಿ: ಸರಂಜಿಬಳ್ಳಿ, ಅಸುರಾಣಿ ಬಳ್ಳಿ, ಭೂಚಕ್ರಬಳ್ಳಿ (ವೃಕ್ಷಿಗ. ೨೪-೯೯೯). [ಭೂಚಕ್ರ + ಬಳ್ಳಿ]

**ಭೂಚಕ್ರಿ** (ನಾ). ಭೂಮಿಯನ್ನೆಲ್ಲ ಆಳುವವನು : ಚಕ್ರವರ್ತಿ : ನಿಜಾಯುಷ್ಯಾಂತದಿಂದಂ ಪ್ರಜಾಪತಿ ಭೂಚಕ್ರಿಗೆ ಬಂದು ಪುಟ್ಟೆ ಬಲದೇವಂ ವಾಸುದೇವಂ (ಶಾಂತಿಪು. ೭-೬೨). [ಸಂ. ಭೂಚಕ್ರಿನ್]

**ಭೂಚರ** (ನಾ). ೧. ಭೂಮಿಯ ಮೇಲೆ ನಡೆಯುವಿಕೆ; ಭೂಸಂಚಾರ : ಆಚಾರವಿಹುದೆಂದು ಲೋಚಗುಂಡಿಗೆವಿಡಿದು ಭೂಚರದಿ ಸತ್ತ ನವಿಲ ಗರಿ ಹಿಡಿಯುವುದು ನೀಚವಲ್ಲೇನು (ಸರ್ವಜ್ಞ. ೧೧೧೯). 'ಭೂಚರತ್ವ' ಪರಾ. ೨. ಭೂಮಿಯ ಮೇಲೆ ಚಲಿಸುವ ಪ್ರಾಣಿ. ೩. ಮನುಷ್ಯ; ಮಾನವ: ಪುಟ್ಟಿದಳ್ ಸ್ವಯಂಪ್ರಭೆ ಮಗಳಾಕೆ ಪಾರ್ಶ್ವಚರ ಭೂಚರ ಖೇಚರ ನೇತ್ರ ಪುತ್ರಿಕಾನಿಭೆ (ಶಾಂತಿಪು. ೫-೧೭); ಈಗಳಿನ ಪೊತ್ತಪ್ಪುದು ಖೇಚರನಿಶಾಚರದ್ಯುಚರಸಂಚಾರಮಲ್ಲದೆ ಭೂಚರ ಗೋಚರಮಲ್ಲೆಂದು ಮುಟ್ಟೆನೆಪ್ಪುದುಂ (ಸುಕುಮಾ. ೭-೦೬ ವ); ಪುರಂಜನನಾದಿಯಾಗೆ ಜನಪುಂಗವರುಂ. . . ಚಕ್ರಿಗಳು ಮೋಗಳ ಭೂಚರರಲ್ಲದಾರೊ ಖೇಚರರ್ (ಶಂರಾಮ. ೫-೨೪). [ ಸಂ. ]

**ಭೂಚರತ್ವ** (ನಾ). ೧. ಭೂಮಿಯ ಮೇಲೆ ಸಂಚರಿಸುವಿಕೆ. ೨. ಭೂಮಿಯಲ್ಲಿ ಸಂಚಾರ ಮಾಡುವ ವಿಷಯದಲ್ಲಿ ವಿಶೇಷ ಪ್ರಾವೀಣ್ಯವನ್ನು ಹೊಂದುವ ಕಲೆ : ಮೂಲಿಕಾಸಿದ್ಧಿ ಭೂಚರತ್ವ ಖೇಚರತ್ವ . . . ಘುಟಿಕಾಸಿದ್ಧಿ ಮಂತ್ರತಂತ್ರ ಸಿದ್ಧಿ ಇವೆಲ್ಲವ ಕಲಿತಡೇನೋ (ಮಂಡಿಮಾ. ೯೬-೬೦): ಭೂಚರತ್ವದಿ ಪೊರಳ್ದು ಪೊರಳ್ದು ತೆರಳ್ದ ಲಿಂಗೋತ್ಕರವನಿಲವೇಗದೊಳೆಡೆವಿಡದೆ ನಡೆವ ಲಿಂಗಚಯ (ಬಸವು. ೩೭-೪೫). [ಸಂ.]

**ಭೂಚಿಕ್ಕೆಗೆಡ್ಡೆ** (ನಾ). ಒಂದು ಬಗೆಯ ವನಸ್ಪತಿ: ಮೂಲವ್ಯಾಧಿಗೆ:- ಭೂಚಿಕ್ಕೆಗಡ್ಡೆ ಪುಡಿಮಾಡಿ ಗುಳಿಯನಗೆದು ಬಿಂದಾಗಿ ಇದಕ್ಕೆ ಕೆಂಡವನ್ನು ಮಾಡಿ ಅದರ ಮೇಲೆ ಈ ಪುಡಿಯನ್ನು ಹಾಕಿ ಆ ಹೊಗೆಯನ್ನು ಆಸನಕ್ಕೆ ಹಿಡಿಸಿದರೆ ಮೊಳೆಕರಗಿ ಹೋಗುವುದು (ಐಪ್ರಾ. ೦೭೭). 'ಭೂಮಿಚಕ್ರಗಡ್ಡೆ' ಹೋ. [ ಭೂಚಿಕ್ಕೆ + ಗೆಡ್ಡೆ (<ಗಡ್ಡೆ )]

**ಭೂಚ್ಛಾಯ** (ನಾ). ೧. ಕತ್ತಲೆ ; ಇರುಳು : "ಧ್ವಾಂತಂ, ಅಂಧಕಾರಂ . . . ತಮಿಸ್ರಂ, ಭೂಚ್ಛಾಯಂ _ಈ ೭ ಕತ್ತಲೆ" (ಹಲಾಯು. ೦೬.೦೦೦). ೨. ರಾಹು. [ಸಂ.]

**ಭೂಚ್ಛಾಯೆ** (ನಾ). ಭೂಮಿಯ ನೆರಳು : ಭೂಚ್ಛಾಯೆಯು ಚಂದ್ರನ ಮೇಲೆ ಬೀಳುವದರಿಂದ ಚಂದ್ರಗ್ರಹಣಗಳುಂಟಾಗುತ್ತವೆ (ಭೂಗೋಳ. ೨). [ಸಂ. ಭೂಚ್ಛಾಯಾ]

**ಭೂಚ್ಛೇದಕ** (ನಾ). (ಗಾಡಿ, ರಥ ಮೊದಲಾದ ವಾಹನಗಳು ಮುಂದೆ ಹೋಗಲು ಅನುಕೂಲವಾಗುವಂತೆ) ನೆಲವನ್ನು ಕೆತ್ತುವವನು : ಎತ್ತ ನೋಡಲು ಮುದ್ದುಗುಂಡಿನ ಪೇರುಗಳ್ ಎತ್ತ ನೋಡಲು ಭೂಚ್ಛೇದರು (ಬಿಜ್ಜರಾ. ೧೨-೨೨). [ಸಂ.]

**ಭೂಜ$_1$** (ನಾ). ಒಂದು ಬಗೆಯ ಮರ ; ಭೂರ್ಜ : ಮಧ್ಯಇಂಡಿಯಾ ಮತ್ತು ಉತ್ತರ ಇಂಡಿಯಾದಲ್ಲಿ ಜನರು ಭೂಜಮರದ ತೊಗಟೆಯ ಮೇಲೆ ಬರೆಯುತ್ತಾರೆ (ಕೃವಾಇ. I, ೩೭೩).

[< ಪ್ರಾ. ಭೂಜ, ಭುಜ್ಜ./ಸಂ. ಭೂರ್ಜ]

**ಭೂಜ$_2$** (ನಾ). ಭೂಮಿಯಲ್ಲಿ ಹುಟ್ಟುವುದು : ಮರ : ಗಿಡ ; ವೃಕ್ಷ : "ಗಿಡು ಬಳ್ಳಿ ಮರನೆಯ್ದೆ ಭೂಜಮುಮಕ್ಕುಂ" (ಮಂಗರಾ. ೪೩-೪೬) : ಕಕುಭಾಶೋಕ ಕದಂಬಲುಂಗಲವಲೀಭೂಜಾರ್ಜುನಾನೋಕಹಪ್ರಾರಂ (ಶಂಶಪ್ರಾ. ೩-೬೨) ; ಬಳೆವೆತ್ತ ಮದನನರಮನೆ ವಸಂತನ ಬೀಡುಮೆಲ್ಲೆಲತೆಗಳಿಕ್ಕೆ ನಾನಾಭೂಜದಾಗರಂ (ಹತಕಾ. ೩-೨೬) : ಇದು ಶೈವಶಾಸ್ತ್ರಭೂಜದ ಘನ ಮೂಲಂ . . . ಷಡ್ವರ್ಣಮಂತ್ರಂ (ರಾಜಶೇ. ೪ ೮೪). [ಸಂ.]

**ಭೂಜಟೆ** (ನಾ). ಒಂದು ಬಗೆಯ ಗಿಡ ; ಗೌರಿಜಡೆ : "ಭೂಜಟೆಯೆನಲು ಗೌರಿಜಡೆ" (ಮಂಗರಾ. ೪೦-೩೩). [ಸಂ. ಭೂಜಟಾ]

**ಭೂಜಾಂಗವೃತ್ತಿ** (ನಾ). ಪ್ರವಾಹಕ್ಕೆ ಸಿಕ್ಕಿದ ನದಿಯ ದಡದ ಮರದಂತೆ ವರ್ತಿಸುವುದು : P ನದಿಯ ದಡದಲ್ಲಿ ಬೆಳೆದಿರುವ ದೊಡ್ಡ ಮರವು ಪೂರ್ಣಪ್ರವಾಹ ಬಂದಾಗಲೂ ಯಾವ ರಕ್ಷಣೆಯನ್ನೂ ಮಾಡಿಕೊಳ್ಳದೆ ನಿಂತ ಹಾಗೆಯೆ ನಿಂತಿರುತ್ತದೆ. ಆಗ ಬೇರುಸಡಿಲವಾಗಿ ನದಿಯ ವೇಗದಲ್ಲಿ ಕೊಚ್ಚಿಹೋಗುತ್ತದೆ. ಹಾಗೆಯೇ ಪ್ರಬಲವಾದ ಶತ್ರು ಮೇಲೇರಿಬಂದಾಗ ಸಮಯೋಚಿತವಾಗಿ ವರ್ತಿಸದೆ ಇದ್ದಂತೆಯೆ ಅವನನ್ನು ಪ್ರತಿಭಟಿಸುವ ರಾಜನು ಸೋತು ಹೋಗುತ್ತಾನೆ. ಇಂತಹ ವರ್ತನೆಗೆ ಭೂಜಾಂಗವೃತ್ತಿಯೆಂದು ಹೇಳಲಾಗುತ್ತದೆ : ಭೂಜಾಂಗವೃತ್ತಿಯಂ ಬಿಸುಟಾ ಜಗದಧಿಪಂಗೆ ವೈತಸಾವಳಿ ಪರಿವಂಪಾ ಜಳಕೆಜಿಗುವವೋಲ್ ನಯಭಾಜನರೆಜಿಗಿದರಜಿಂಪರೆನಿಸಿಪ ಸುಪ್ಪುರ್ (ಶಾಂತಿಪು. ೧೦-೧೩೯). [ಸಂ.]

**ಭೂಜಾತ** (ನಾ). = ಭೂಜ$_2$ : ಪಲ್ಲವಿತ ಕುಸುಮಿತ ಮುಕುಲಿತ ಫಲಿತ ಮಂಜರೀರಂಜಿತ ಚೂತ ಭೂಜಾತಂಗಳಂ . . . ಅಲ್ಲಲ್ಲಿಗೆ ನಿಂದು ಮೆಲ್ಲಮೆಲ್ಲನೆ ನೋಡುತ್ತುಂ (ಸುಕುಮಾ. ೯-೧೦೭ ವ) ; ತದ್ವನಂ ಪಣ್ಗಳಿಂ ಪೂಗಳಿಂ ತಳ್ತ ಭೂಜಾತನಿಕುರುಂಬಸಚ್ಛಾಯದಿಂದಂ ತಣ್ಣದಿರನಂತೆ ಸೌಮ್ಯಮನೀಯುಲ್ (ಮಾಹಾಪು. ೧೨-೮). [ ಸಂ. ]

**ಭೂಜಾತೆ** (ನಾ). ಭೂಮಿಯಲ್ಲಿ ಹುಟ್ಟಿದವಳು : ಭೂಮಿಯ ಮಗಳು ; ಸೀತೆ : "ಶಿರಃಸ್ನಾತೆ ! ಭೂಜಾತೆ ! ರಾಕ್ಷಸಪ್ರಿಯುಂತೆ ! ಅಲಂಕೃತೆ!" ಎನುತ್ತೆನುತೆ . . . ಕೋಮಲೆಯ ಹೃದಯಮಂ ಜಾಗಂಪ್ರಗೆಯ್ಮೆ ವಿರದೂಷಣಾನಿಷೂದನಂ (ಶ್ರೀರಾಮಪ. ೮೪೨-೪೩೧).

[ ಸಂ. ಭೂಜಾತಾ ]

**ಭೂಜಾನಿ** (ನಾ). ಭೂಪತಿ; ರಾಜ : ಆ ನಿಲಿಂಪೋದ್ಭೂತ ಪರಮಾನ್ನವನ್ನು ಭೂಜಾನಿ ಕೊಡಲತಿಮುದದಿ ಪ್ರಾಶಸಂಗೈದರಾ ಮಾನಿನಿಯರು (ತೊರಾರಾ. ೦-೯-೩೯) ; ಮತ್ತಮನಿತಜಿಂೞ್ ಸುಗ್ರೀವಾದಿ ಮರ್ಕಟರುಂ ಸುಭುಜಭೂಜಾನಿಯುಂ ಬಂದೊದವಿದರ್ (ರಾಮಚಕ್ಕ. ೧೩೩-೧೧).

[ ಸಂ. (ಭೂ + ಜಾಯಾ + –) ]

**ಭೂತ** (ಗು). ೧. ಆದ; ಇರುವ. ೨. ಉಂಟಾದ. ೩. ನಡೆದಿರುವ; ಸಂಭವಿಸಿರುವ. ೪. ಸರಿಯಾದ; ಉಚಿತವಾದ; ಯೋಗ್ಯವಾದ. ೫. ಕಳೆದ; ಅತೀತವಾದ : 'ಭೂತಕಾಲ' ಪರಾ. ೬. ಸೇರಿಕೊಂಡಿರುವ; ಕೂಡಿರುವ. ೭. ಸಮಾನವಾದ ; ಸದೃಶವಾದ. (ನಾ). ೮. ನಿಜ; ಸತ್ಯ. ೯. ಕಳೆದುಹೋದುದು : ಹಿಂದೆ ಆದುದು: ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಗೋಚರವಾದ ವಸ್ತುಗಳು ಪ್ರಮಾಣವ್ಯಾಪಾರಕ್ಕಿಂತ ಮೊದಲೇ ಇರುವುದರಿಂದ ಅವು ಭೂತವೆನಿಸುವುವು (ಬ್ರಸ್ಕಂ. ೨೨ ೮೩೬). ೧೦. ಪಡೆದುದು : "ಲಬ್ಧಂ. ಪ್ರಾಪ್ತಂ. ವಿನ್ನಂ, ಭಾವಿತಂ, ಆಸಾದಿತಂ. ಭೂತಂ—೬ ಹೊಂದಲ್ಪಟ್ಟಿರುವುದು, ಪಡೆಯಲ್ಪಟ್ಟಿರುವುದು, ಆಗಿ ಬಂದಿರುವುದು" (ಸಿದ್ಧಾಂತ. ೩೩೦). ೧೧. ಶಿವ : ಪರಮೇಶ್ವರ. ೧೨. ಶಿವಗಣ ; ಪ್ರಮಥಗಣ. ೧೩. ಜಗತ್ತಿನ ಪ್ರಾಣಿವರ್ಗ : ಚರಾಚರಾತ್ಮಕ ಜೀವರಾಶಿ : ಸಲಭೂತಂಗಳಿಲಿ ನೆಱೆ ಕೃಪೆಯ ಸವನಿಸಲು ನೀನಾರು (ಶಿಭಾಗ. ೧೦-೬೩-೧೦) ; ಸಕಲಭೂತಂಗಳ ಮನಸ್ಸನ್ನೂ ತಿಳಿದು . . . ಮತ್ತೊಬ್ಬ ಮನುಷ್ಯನ ಉಪಾಯವನ್ನು ತಿಳಿದವನೂ ಪಂಡಿತನೆನಿಸಿಕೊಳ್ಳುವನು (ಕೃವಾಸಾ. ೪೩); ಚರಾಚರಭೂತಗಳಲ್ಲಿ ಕಂಡುಬರುವ ಜನನಮರಣಗಳ ವ್ಯವಹಾರ ಆತ್ಮನ ವಿಚಾರದಲ್ಲಿ ಮುಖ್ಯವಲ್ಲ : ಗೌಣ (ಶಂಭಾಕ್ಕ. ೨೬೬). ೧೪. (ಕಣ್ಣಿಗೆ ಗೋಚರವಾಗದೆ ಮನುಷ್ಯರನ್ನು ಕಾಡಿಸುವ) ದೆವ್ವ : ಪಿಶಾಚಿ : ಲೋಕದವರನೊಂದು ಭೂತ ಹಿಡಿದಡೆ ಆ ಭೂತದಿಚ್ಛೆಯಲ್ಲಿ ನುಡಿವುತಿಪ್ಪರು (ಅವಚ. ೧೦೬-೪೮೪); ಭೂತಪತಿಯೊಗೆವುದುಂ ತನ್ನಾತ ವಲಂ ಮಡಿವಳ್ಳುಮಲ್ಲದೊಡಾತಂ ಪ್ರೇತಾವಾಸದೊಳಾಡುವ ಭೂತಂಗಳ ಕೂಡೆ ವಿಹರಣಂಗೆಯ್ದುವನೆ (ವ್ರಶಂ. ೯-೧೦೨); ತಂತ್ರಿಯವರು ಕೂಡ ಹೇಳುತ್ತಾರೆ. . . ನಾನೇ ನಾಲ್ಕು ಭೂತಗಳನ್ನು ಬಂಧಿಸಿ ಆ ಜಾಗಕ್ಕೆ ಕಳುಹಿಸಿದ್ದೇನೆ ಎಂದು (ಶದ್ರಕ. ೨೬); ಪ್ರೇತಕ್ಕೆ ಹೆದರುವವ ಭೂತಕ್ಕೆ ಹೆದರನೇ ? (ಗಾದೆ). ೧೫. ನಿಜವಾಗಿಯೂ ನಡೆದುದು; ವಸ್ತುಸ್ಥಿತಿ; ವಿಷಯ. ೧೬. ಜಗತ್ತು; ಪ್ರಪಂಚ; ಲೋಕ. ೧೭. ಕಲ್ಯಾಣ : ಕ್ಷೇಮ. ೧೮. ದೇವತೆಗಳಲ್ಲಿ ಒಂದು ವರ್ಗ : "ಯಕ್ಷಃ, ರಾಕ್ಷಸಃ. . . ಭೂತಃ, ಪೈಶಾಚಃ. . . ದೇವಯೋನಿಃ — ಇಂತಿವೆಲ್ಲಂ ದೇವಜಾತಿಯೆಂಬುದು" (ಶಬ್ದಮ. ೦೩-೮೬). ೧೯. ಕೈವಿಯಾರಿ ಹೋದುದು : "ವಿಗಾಡಿದುದಜೊಳು ದೇವಯೋನಿಯೊಳು ಜಾತಿ(ಯೊಳು) ಭೂತದೊಳು ಭೂತಮಕ್ಕುಂ" (ಮಂಗರಾ. ೦೪೩-೩೦). ೨೦. ನವಗ್ರಹಗಳು. ೨೧. ಆರ್ಯ: ಪೂಜ್ಯ : "ಗ್ರಹನಿಕರ ಮರುಳ್ ಪಂಚಭೂತಾತ್ಮಮುಂ ವಿಪ್ರರುಮುಂ ಜಾತಾಸಮೂಹಾದ್ಯರು ಜನಿತವಿಪ್ರಂ ಭೂತಶಬ್ದಂ ಪ್ರಸಿದ್ಧಂ" (ನಾನಾರ. ೬೯). ೨೨. ಪ್ರಪಂಚದ ಸೃಷ್ಟಿಗೆ ಮೂಲವೆನಿಸಿದ ಪೃಥ್ವಿ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶ ಎಂಬ ಐದು ಪದಾರ್ಥಗಳು : ಭೂತವೈದಜಿಂದ ಸ್ಥೂಲತನು (ಅವಚ. ೪. ೪೪೨ ೦೩೩೨); ಭಾವಿಸಲು ಭೂಮ್ಯಾದಿ ಭೂತಪಂಚತ್ವವೆನಿಸುವುದು (ಗಗಶಾ. ೩-೨೨); ನಾಲ್ಕು ಭೂತಗಳ ಜೊತೆಗೆ ಐದನೆಯ ಭೂತವಾದ ಆಕಾಶವಿದೆಯೆಂತಲೂ ಇವರ ವಾದ (ಕೃವಾಇ. I. ೩೦). ೨೩. (ಅಲು) ದೊಡ್ಡದು ; ಗಾತ್ರವಾದುದು : 'ಭೂತಗನ್ನಡಿ', 'ಭೂತಾಕಾರ' ಪರಾ. ೨೪. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಕಾದಿರಲ್ಕತಿ ಭೂತದೊಳರ್ದಂದೋದೆ ಕಲ್ಪಮೇಲೇ ಮಣಿರುಗಂ (ಛಂದೋಂಬು. ೨-೧೦೧) : ಪುರಹರ ವಕ್ತ್ರಂ ಪಂಚಂ ಪರಮ ವ್ರತಭೂತಮಿಂದ್ರಿಯಂ. . .ಐದಱ ನಾಮಂ (ನ್ಯವಹಾ. ೯-೩) ೨೫. = ಭೂತಕಾಲ ೨ : ದವಪವಕಾರಂಗಳ್ ಮೂಲದೊಳಕ್ಕುಂ ಭೂತ ವರ್ತಮಾನ ಭವಿಷ್ಯದ್ವಿದಿತವಿಭಕ್ತಿಕ್ರಿಯಾಕ್ಕದೆಲ್ಲ ವಚನಂಗಳೊಳಮಿಂದಾಗಮಮಕ್ಕುಂ (ಶಾಬ್ದ್ಯ. ೪೮೬) ; ರೇಫಾಂತಗಳಪ್ಪನೇಕಾಕ್ಷರಧಾತುಂಗಳ್ಗೆ ಭೂತ ವರ್ತಮಾನ ಭವಿಷ್ಯಂತಿಗಾದ ದ, ದಪ, ವ ಎಂಬಿವು ಪರಮಾದೊಡಾ (ಕವಿರ. ವ. ೩೪ ವೃತ್ತಿ).

**ಭೂತ ಬಡಿ** = ಪಿಶಾಚಿ ಮೆಟ್ಟಿಕೊಳ್ಳು : ಏನೋ ಭೂತ ಬಡಿದವಳಂತೆ ವಿಮನಸ್ಕಳಾಗಿದ್ದವಳು . . . ಬೆಳಗಾವಿಗೆ ಬಂದು ಅಲ್ಲಿಯ ವಾತಾವರಣಕ್ಕೆ ಪೂರ್ಣಚಂದ್ರನಂತಾದಳು (ಶಪಾರ. ೪೨). **ಭೂತ ಹಿಡಿ** :

ಭೂತ ಬಡಿ : ನನಗೆ ಭೂತ ಹಿಡಿದಿದೆ . . . ಎಂದು ಅವನು ಹೆದರಿದ ಹಾಗೆ ಕಾಣುತ್ತದೆ (ಮೂಕಜ್ಜ. ೬೩). [ಸಂ.]

**ಭೂತಕರುಳು** (ನಾ). ಒಂದು ಬಗೆಯ ಗಿಡ : ಎತ್ತಮುರಿ, ಮುರುಗಿ ಕಾಯಿ, ಭೂತಕರುಳು, ಕಾಡತ್ತಲ್ಕಾರು, ಕೌರಿ, ಕವರ್ಗಿ (ವೈ.ತಿ. ೪೨–೬೩೨). [?]

**ಭೂತಕಾಲ** (ನಾ). ೧. ಕಳೆದುಹೋದ ಕಾಲ : ಭವಿಷ್ಯ ಹಾಗಾದರೂ ಭೂತಕಾಲ ಹಾಗಲ್ಲವಲ್ಲ. ನಮ್ಮ ಅನುಭವದಿಂದ ಕೇಳಿದ್ದನ್ನು ಅದು ನಡೆದಿದೆ ಅಥವಾ ಇಲ್ಲ — ಎಂಬುದನ್ನು ಸ್ಪಷ್ಟವಾಗಿ ತೀರ್ಮಾನಿಸಬಹುದು (ಮೂಕಜ್ಜ. ೧೩೦) : ಭೂತಕಾಲದಲ್ಲಿ ಅನೇಕ ವಿಷಯಗಳು ನಮ್ಮ ಗಮನಕ್ಕೆ ಬಂದಿವೆ (ಶಿಕ್ಷಣ. ೩೨೩). ೨. [ವ್ಯಾಕ] ವರ್ತಮಾನಕಾಲ, ಭೂತಕಾಲ, ಭವಿಷ್ಯತ್ಕಾಲಗಳೆಂಬ ಮೂರು ಕಾಲಗಳಲ್ಲಿ ಒಂದು: ಹಿಂದೆ ನಡೆದುದನ್ನು ಸೂಚಿಸುವ ಕಾಲ : ಕೊಳ್, ಉಣ್, ಕಾಣ್ ಧಾತುಗಳಲ್ಲಿ ಭೂತಕಾಲದಲ್ಲಿ ಡ ಪ್ರತ್ಯಯವು ಸೇರುವುದು (ಕೈಪಿಡಿ. ೯೬) ; ಕಳೆದುಹೋದ ಕಾಲಕ್ಕೆ ಭೂತಕಾಲವೆಂದೂ, ಈ ಕ್ರಿಯಾಪದರೂಪಕ್ಕೆ ಭೂತಕಾಲದ ರೂಪವೆಂದೂ ಹೆಸರು (ವ್ಯಾಕ್ಯಮು. ೬೨). [ಸಂ.]

**ಭೂತಕಾಲಕ್ರಿಯೆ** (ನಾ). [ವ್ಯಾಕ] ಭೂತಕಾಲದ ಅರ್ಥವನ್ನು ತಿಳಿಸುವ ಕ್ರಿಯಾಪದ: ಭೂತಕಾಲಕ್ರಿಯೆಯೊಳ್ ಪ್ರತಿಷೇಧಮನುಸಿರ್ದ ಅದೆ ಎಂಬುದು ಪರಮಾದೊಡಂ ನ ಣ ಲ ಯ ಳಂಗಳ್ಗೆ ದ್ವಿತ್ವವೃತ್ತಿನಿತ್ಯಂ (ಶಮದ. ೬೦ ವೃತ್ತಿ). [ಸಂ. ಭೂತಕಾಲಕ್ರಿಯಾ]

**ಭೂತಕೇಶ** (ನಾ). ಒಂದು ಬಗೆಯ ಹುಲ್ಲು : "ಗೋಲೋಮಿ, ಭೂತಕೇಶಃ — ೨ ಜಟಾಮಾಂಸಿಯ ಹೆಸರುಗಳು. ಭೂತಕೇಶವೆಂಬ ಹುಲ್ಲಿಗೆ ಹೆಸರೆಂದು ಕೆಲವರನ್ನುವರು" (ನಿಘಂಟು. ೩೦೭). [ಸಂ.]

**ಭೂತಕೇಶಿ** (ನಾ). ಒಂದು ಬಗೆಯ ಗಿಡ : "ಭೂತಕೇಶೀ = ಬಿಳಿಯ ಲೊಕ್ಕಿ" (ಓಷಧಿ. ೧೦೨). [?./ಸಂ. ಭೂತಕೇಶೀ=ತುಳಸೀಗಿಡ]

**ಭೂತಕೋಲ** (ನಾ). (ಕನಾ) ಭೂತದ ವೇಷವನ್ನು ಹಾಕಿಕೊಂಡು ಕುಣಿಯುವ ಒಂದು ಹಬ್ಬ : ಭೂತಕೋಲ ಮೊದಲಾದ ವರ್ಷಾವಧಿ ನಡೆಯುತ್ತಕ್ಕ ಕ್ರಿಯೆಗಳಿಗೆ ವಂತಿಗೆ ಸಂತಿಗೆ ಮೊದಲಾದುವು ಸಲ್ಲಬೇಕು (ಕುರುಣಾ. ೪೧) ; ಹರಿಜನರ ವರ್ಗವಾದ 'ನಳಿಕೆ' ಜಾತಿಯವರು ಈ ಭೂತ ಕೋಲವನ್ನು ಕಟ್ಟುತ್ತಾರೆ (ಕಜಳ. ೧೧೦). [ಭೂತ + ಕೋಲ$_1$]

**ಭೂತಗಣ** (ನಾ). ೧. ದೆವ್ವಗಳ ಗುಂಪು ; ಪಿಶಾಚಿಗಳ ಸಮೂಹ : ಎಲವೋ ನಿನ್ನಿಷ್ಟಾನಪಕ್ಷಿಶೀ ಹೊಳಲ ಸಾಡುವೆನು ನಿನ್ನ ಸೀಳಿದು ಬಲಿಯ ಕೊಡುವೆನು ಭೂತಗಣಕೆ (ಕುಮಾ.ವಿ. ೬–೩೩). ೨. ಪರಮೇಶ್ವರನ ಪರಿವಾರದೇವತೆಗಳ ಗುಂಪು ; ಪ್ರಮಥಗಣ : ಭೂತಗಣಂಗಳವರ್ ಪರಿಭೂತರ್ ಪ್ರಮಥೇಂದ್ರರಿರ್ಪರಿನ್ನುಂ ಕೇಳ್ ವಿಖ್ಯಾತರ್ ನಂದೀಶಾದಿಗಳ್ (ಶಾಂತಿಸ್ಥ. ೧–೬–೨೬). [ಸಂ.]

**ಭೂತಗಣೇಶ** (ನಾ). ೧. ಪ್ರಮಥಗಣಗಳ ಒಡೆಯ : ಶಿವ. ೨. [ಛಂದ] ಗುರು ಎಂಬುದರ ಸಂಕೇತ : ಭೂತಗಣೇಶಂ ಭೂತಶರಾಶಾಗಜಮೊಳಿ ಯತಿಗಣಮೆಸೆದಿರೆ . . . ಕ್ರೌಂಚಪದಂ (ಛಂದೋಂಬು. ೦–೦೬೪). [ಸಂ.]

**ಭೂತಗನ್ನಡಿ** (ನಾ). ವಸ್ತುಗಳನ್ನು ಇರುವುದಕ್ಕಿಂತ ದೊಡ್ಡದು ಮಾಡಿ ತೋರಿಸುವ ಕನ್ನಡಿ ; ರಾವುಗನ್ನಡಿ : ಆಗ ಭೂತಗನ್ನಡಿಯೊಳಗಿನಿಂದ ಹಾದು ಬರುವ ಬೆಳಕಿನ ಕಿರಣದಂತೆ, ನಿನ್ನ ಬಯಕೆಯೂ ಪ್ರಭಾವಶಾಲಿಯಾಗುತ್ತದೆ (ಹಂಗಿಸಿ. ೯೬) ; ಸರಾಫನು ಕಿಸೆಯಲ್ಲಿರುವ ಭೂತಗನ್ನಡಿಯನ್ನು ಒಂದು ಕಣ್ಣಿಗೆ ಇಟ್ಟುಕೊಂಡು, ರತ್ನ ಪರೀಕ್ಷೆಯನ್ನು ನಿಧಾನವಾಗಿ ಓರೆಕಣ್ಣಿನಿಂದ ಮಾಡುತ್ತಾ ಇದ್ದನು (ಬಿಂಧ್ಯ. ೨೯). [ಭೂತ + ಕನ್ನಡಿ$_1$]

**ಭೂತಚತುಷ್ಟಯ** (ನಾ). ಪೃಥ್ವಿ, ಅಪ್ಪು, ತೇಜಸ್ಸು, ವಾಯು ಎಂಬ ನಾಲ್ಕು ಬಗೆಯ ಮೂಲವಸ್ತುಗಳು : ಈ ನಿಮ್ಮ ಜನಮತದ ಜೀವ ಸಂಭಾವನೆಯೊಳ್ ಪೃಥಿವ್ಯಪ್ತೇಜೋವಾತಾಭಿಧಾನ ಭೂತಚತುಷ್ಟಯ ದಿಂದಂ ಬೇರೆ ಜೀವತ್ವಗ್ರಾಹಕಪ್ರಮಾಣಮಿಲ್ಲಂ (ಶಾಂತಿಪು. ೬–೦೨೮ ವ) ; ಭೂತಚತುಷ್ಟಯಂಯೋಗದೆ ಚೇತನನುದಯಿಸುಗುಂ (ರರ್ಮಣಾ. ೩–೦೨೦). [ಸಂ.]

**ಭೂತಚಿಕಿತ್ಸೆ** (ನಾ). ದೆವ್ವ, ಪಿಶಾಚಿಗಳು ಹಿಡಿದಿರಬಹುದೆಂದು ನಂಬಿ ಮಾಡುವ ಚಿಕಿತ್ಸೆ ; ಯಂತ್ರ ಮಂತ್ರಗಳನ್ನು ಮಾಡುವುದು: ಇಂಡಿಯಾ ದೇಶದಲ್ಲಿ ಔಷಧಿಚಿಕಿತ್ಸೆ ಎಂಟು ವಿಧ ; ಒಂದನೆಯದು ಹುಣ್ಣುಗಳ ಚಿಕಿತ್ಸೆ . . . ನಾಲ್ಕನೆಯದು ಭೂತಚಿಕಿತ್ಸೆ (ಕ್ರಿಪಾತ. I, ೨೯೬). [ಸಂ. ಭೂತಚಿಕಿತ್ಸಾ]

**ಭೂತಚೇಷ್ಟೆ** (ನಾ). ಪಿಶಾಚಿಗಳಿಂದಾಗುವ ತೊಂದರೆ, — ಕಾಟ : ಈ ಭೂತಚೇಷ್ಟೆ ನಿಜವಾಗಿಯೂ ಹಾಸ್ಯಮಯವಾಗಿತ್ತು (ಸವುಜ. ೯೯೩). [ಸಂ. ಭೂತಚೇಷ್ಟಾ]

**ಭೂತದಯ** (ನಾ). ಪ್ರಾಣಿಗಳ ಬಗೆಗೆ ಇರುವ ಕರುಣೆ, — ದಯೆ : ಸರ್ವಜೀವದಯಾಪಾರಿಯೆಂದು ಭೂತದಯಕ್ಕಿಕ್ಕುವವನ ಮನೆ ಸಯಿಧಾನದ ಕೇಡು (ಬಸವ. ೨೨೬) ; ಯಾವ ಕಾರಣದಿಂದಲಾಗಲೀ ಪ್ರಾಣಿಗೆ ಹಿಂಸೆಯು ಪ್ರಾಪ್ತವಾದರೆ ಯಥಾಶಕ್ತಿಯಾಗಿ ಅದರ ದುಃಖವನ್ನು ನಿವಾರಿಸಬೇಕೆಂದು ಹೃದಯದಲ್ಲಾಗುವ ಪ್ರೇರಣೆಯು ಭೂತದಯವು (ಅರ್ಥಶಾ. ೬೨). [ಸಂ. ಭೂತದಯಾ]

**ಭೂತದಯೆ** (ನಾ). = ಭೂತದಯ : ಹರುಷದಿಂ ಶಾಂತಿ ಸತ್ಯಂ ಭೂತದಯೆಗಳಂ ದೊರಕಿಸಿಯೆ . . . ಮುನೀಶ್ವರರೆನಿಸಿ (ಕಕಶಾ. ೬–೦೬) ; ಭೂತದಯೆಯಿಲ್ಲದನ ಮಾಟಂ ಶಾಂತಿಯಿಲ್ಲದ ತಾಪಸನ ತಪವು . . . ಭಕ್ತಿ ಪ್ರವರ್ಧನವಹುದೆ (ಬಸವ. ೩೭–೩೯) ; ದುರಭಿಮಾನವಿಲ್ಲದಲ್ಲಿಯೇ ಔದಾರ್ಯ ನೆಲೆಸುತ್ತದೆ. ಅಲ್ಲಿಯೇ ಭೂತದಯೆ ಇದೆ (ಕರ್ನಾಕ. ೪೦). [ಸಂ. ಭೂತದಯಾ]

**ಭೂತದೇಹಿ** (ನಾ). ಪಂಚಭೂತಾತ್ಮಕವಾದ ಶರೀರವುಳ್ಳವನು ; ಮನುಷ್ಯ : ಭೂಮಿಯ ಮೇಲೆ ಹುಟ್ಟಿದ ಕಲ್ಲ ತಂದು ಭೂತದೇಹಿಗಳ ಕೈಯಲ್ಲಿ ಕೊಟ್ಟು ಕೊಟ್ಟ ಕೂಲಿಯ ತೆಕ್ಕೊಂಡು ಹೊಟ್ಟೆಯ ಹೊರೆವ ಭ್ರಷ್ಟರಿಗೆ ಪ್ರಸಾದವೆಲ್ಲಿಯದೋ (ಸಿದ್ಧೇಶ. ೦೩೯–೪೦೬). [ಸಂ. ಭೂತದೇಹಿನ್]

**ಭೂತಧಾತ್ರಿ** (ನಾ). ಭೂಮಿ ; ಧರಣಿ : " ಭೂಃ, ಭೂಮಿಃ . . . ಭೂತಧಾತ್ರೀ, ರತ್ನಗರ್ಭಾ, ವಸುಂಧರಾ, ಧರಾ, ಆಧಾರಾ— ಈ ೩೭ ಭೂಮಿಯ ಪೆಸರ್" (ಶಬ್ದಮ. ೨೬–೨) ; ಭೂ[ತ]ಧಾತ್ರಿಯೊಳೋರಂತೆ ಸೆಗಟ್ಟು . . . ಸೆಟ್ಟಿಯ ಬಳ್ಳಂ ಕಿಚ್ಚೆಂಬುದೊಂದು ನುಡಿಯಂ ನೀಂ ನಿಕ್ಕುವಂ ಮಾಡಿದ್ಯ (ಶಂಕರಾ. ೧೨–೦೬೩); ದಾಡೆಯಲಿ ದಾನವನ ಕೋದು ಹಾಕೀ ಭೂತಧಾತ್ರಿಯ ಕಾದಿಲಾ ಕಾರುಣ್ಯಸಿಂಧುವೆ (ಕುಮ್ಯಾಕ. ೦೯–೦೦೩). [ಸಂ. ಭೂತಧಾತ್ರೀ]

**ಭೂತನಾಥ** (ನಾ). ಪ್ರಮಥಗಣಗಳ ಅಧಿಪತಿ; ಶಿವ : ಕರ್ಣಾರ್ಜುನರೆಚಂ ನೋಡಲ್ಕೆ ಭೂತನಾಥಂ ಬಂದಂ (ಕಂಪಶಾ. ೦೨–೦೩೯)) ; ವಾತಜನ ಮೂಲಿಕೆಗೆ ಕಪಿಬಲ ಚೇತರಿಸಿದುದು ಬೇಡ ತತ್ತರೆ ಭೂತನಾಥನ ತತವನೆಂದನು ದನುಜ ರಘುಪತಿಗೆ (ಕೌಶಿರಾ. ೩೭–೨೦). [ಸಂ.]

**ಭೂತನುಜೆ** (ನಾ). ಭೂಮಿಯಲ್ಲಿ ಜನಿಸಿದವಳು ; ಸೀತೆ : ಪೂರ್ಣಗರ್ಭಿಣಿಯಾದ ಭೂತನುಜೆಯಂ ಕಾನನದೊಳಿರಿಸಿ ಬಂದೆನಲ್ಲದ ಮುಂದಜ್ಞೆಯೆಂದನು (ಕೈಪಿಡಿ. ೨೦–೩೯). [ಸಂ. ಭೂತನುಜಾ]

**ಭೂತನ್ಯೂನ** (ನಾ). [ವ್ಯಾಕ] ಒಂದು ಪ್ರಧಾನಕ್ರಿಯೆ ನಡೆಯುವುದಕ್ಕೆ ಮೊದಲು ನಡೆದಿರುವ ಮತ್ತೊಂದು ಕ್ರಿಯೆಯನ್ನು ತಿಳಿಸುವ ಅಪೂರ್ಣಕ್ರಿಯಾರೂಪ ; ಸಾಪೇಕ್ಷ ಕ್ರಿಯಾವಾಚಕರೂಪ : ಅತ್ತು

ಅತ್ತು ಅವಳ ಕಣ್ಣು ಕೆಂಪಗಾಯಿತು . . . ಹೀಗೆ ಅರ್ಥಪೂರ್ತಿಗಾಗಿ ಬಂದಿರುವ ಕ್ರಿಯಾಪದದ ಕಾರ್ಯ ನಡೆಯುವುದಕ್ಕೆ ಮುಂಚೆ ಸಾಪೇಕ್ಷ ಕ್ರಿಯಾಪದದ ಕಾರ್ಯ ನಡೆದಿರುತ್ತದೆಂಬುದನ್ನು ತೋರಿಸುವ ರೂಪಗಳಿಗೆ ಭೂತಸ್ನಾನರೂಪಗಳೆಂದು ಹೆಸರು (ಮವ್ಯಮ. ೦೦೨). [ಸಂ.]

**ಭೂತಪಂಚಕ** (ನಾ). ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ ವೆಂಬ ಐದು ಪದಾರ್ಥಗಳು ; ಪಂಚಮಹಾಭೂತಗಳು : ಧರಣಿ ಮೊದಲೆನೆ ಭೂತಪಂಚಕ ಮರುತಪಂಚಕ ವಿಷಯೇಂದ್ರಿಯ ಕರಣ ವಿಪ್ಪತ್ತೈದು ತತ್ವಾತ್ಮಕನ ಚಿಂತಿಸಿದ (ಕುವ್ಯಾಅ. ೩-೦) ; ಭೂತಪಂಚಕ ಬುದ್ಧ್ಯಹಂಕೃತಿ ಸಾತಿಶಯಂದವ್ಯಕ್ತ ದಶವಿಧ ಜಾತವಾದಿಂದ್ರಿಯನಿಕರ ಪ್ರಾಣಾದಿವಾಯುಗಳು (ಅಮ್ಮಕ. ೩-೩೨) ; ಇವನ್ನು ಭೂತಪಂಚಕ, ತನ್ಮಾತ್ರಪಂಚಕ . . . ಎಂದು ಐದು ಪಂಚಕವಾಗಿ ವಿಭಜಿಸುವರು (ಹಿಂದಸಾ. ೩೩). [ಸಂ.]

**ಭೂತಪತಿ** (ನಾ). = ಭೂತನಾಥ : ಭೂತಪತಿಗಾನಾದದಂ ಬಡವಾತ ಯಾಗಿ ಸಮುದ್ಧರಿಸುವೆನು (ಜಸಪು. ೦೩-೭). [ಸಂ.]

**ಭೂತಪದಿ** (ನಾ). ಹದಿನಾರು ಬಗೆಯ ರೂಪಾಯಿ ನಾಣ್ಯಗಳಲ್ಲಿ ಒಂದು : ೧. ಗಜಪತಿ . . . ೧೧. ಭೂತಪದಿ (ಕಭಾಗ. ೨೬೦).

[ ? ]

**ಭೂತಪುಣ್ಯ** (ನಾ). ಹಿಂದೆ ಮಾಡಿದ ಸತ್ಕರ್ಮಗಳ ಫಲ ; ಸಂಚಿತ ಪುಣ್ಯ : ಇತ್ತ ಶ್ರೀಷೇಣಂಗಮಾ ಮೂವರುಮಂಗನೋತ್ತಮೆಯರ್ಗ ಮುತ್ತಮಪಾತ್ರದಾನದ ದಾನಾನುಮೋದದ ಭೂತಪುಣ್ಯದಿಂ (ಶಾಂತಿಪು. ೩-೯೭ ವ). [ಸಂ.]

**ಭೂತಪೂಜೆ** (ನಾ). ೧. (ಕರಾವಳಿಯಲ್ಲಿ ಆಚರಣೆಯಲ್ಲಿರುವ) ದೆವ್ವಗಳ ಆರಾಧನೆ : ಭೂತಪೂಜೆ ಎಂದರೆ ಪ್ರಕೃತಿಯ ಮತ್ತು ಸಂಸಾರದಲ್ಲಿಯ ವಿಶೇಷದರ್ಶನಗಳನ್ನು ಅಥವಾ ಸಂಭವಗಳನ್ನು ಇಲ್ಲವೆ ಕೆಲವೊಮ್ಮೆ ವ್ಯಕ್ತಿಗಳನ್ನು, ಪ್ರಪಂಚ ಕಣ್ಣಿಗೆ ಕಾಣುವ ಹಾಗೂ ಮನಸ್ಸಿನಲ್ಲಿ ಒತ್ತುವ ವಿಷಯಗಳನ್ನು, ವ್ಯಕ್ತೀಕರಿಸಿ ಹಾಗೂ ಅವನ್ನು ದೇವೀಕರಿಸಿ ಆರಾಧಿಸುವಿಕೆ (ತುಳುಪಾ. ೨೩೦). ೨. ಪಂಚಭೂತಗಳ ಹಾಗೂ ನದಿ, ಪರ್ವತ ಮೊದಲಾದ ಪ್ರಕೃತಿವಸ್ತುಗಳ ಪೂಜೆ,— ಆರಾಧನೆ : ವೇದದಲ್ಲಿ ಮೊದಲು ಭೂತಪೂಜೆ (Nature worship) ಇರುವುದು. ಭೂತ ಪೂಜೆಯಿಂದ ವಿವಿಧ ಭೂತಗಳಿಗೆ ನಿಯಾಮಕವಾದ ವಿವಿಧದೇವತೆಗಳ ಪೂಜೆ (Polytheism) ಪ್ರಸಕ್ತವಾಯಿತು (ಭಾತತ್ತ್ವ. ೩೩).

[ಸಂ. ಭೂತಪೂಜಾ]

**ಭೂತಬಲಿ** (ನಾ). ದೇವತೆ, ಭೂತ, ದೈವ ಮೊದಲಾದುವುಗಳ ತೃಪ್ತಿಗಾಗಿ ಕೊಡುವ ಬಲಿ,— ಆಹುತಿ : ಕುಂಕುಮ ಹಣಿದದ . . . ದಂಡೆಯಲಿ ಕಲಸಿದ ಕೂಳ ಮುದ್ದೆಗಳ ಹೊಜಗೆ ಬಡಿಸಿದ ಭೂತಬಲಿ ಬೊಬ್ಬಿರಿತ ದೊಡನುಬ್ಬೇಳ್ವ ಬಗ್ಗೆಯ ಹಜೆಗಳಬ್ಬರವಾಯ್ತು ಕರ್ಣನ ಶಸ್ತ್ರಪೂಜೆಯಲಿ (ಕುವ್ಯಾಕ. ೬-೬). [ಸಂ.]

**ಭೂತಭಾಗ್ಯ** (ನಾ). ಅದೃಷ್ಟಶಾಲಿ ; ಭಾಗ್ಯವಂತ : ಆತುಕೊಳಲಿಂದೀ ಸುಯೋಧನ ಜಾತಪುಣ್ಯನೊ ಧರ್ಮಪುತ್ರನೆ ಭೂತಭಾಗ್ಯನೊ ಕಾಣಲಹುದ್ದೆ ಶಲ್ಯ ಕೇಳೆಂದ (ಕುವ್ಯಾಕ. ೨೦-೦೦). [ಸಂ.]

**ಭೂತಯಜ್ಞ** (ನಾ). (ಗೃಹಸ್ಥನು ಪ್ರತಿದಿನವೂ ಆಚರಿಸಬೇಕೆಂದು ಧರ್ಮಶಾಸ್ತ್ರಗಳಲ್ಲಿ ಹೇಳಿರುವ) ಪಂಚಯಜ್ಞಗಳಲ್ಲಿ ಒಂದು : ಪ್ರಾಣಿಗಳನ್ನು ಉದ್ದೇಶಿಸಿ ಕೊಡುವ ಬಲಿ : ಶ್ರುತಿಪಠಣವೋ ತರ್ಪಣವೋ ಮೇಣತಿಥಿಪೂಜೆಯೊ ಭೂತಯಜ್ಞವೊ ಹುತವಹಾರಾಧನೆಯೊ ರಣವೀಯೆಯ್ಯುರೊಳಗೇನು (ಕುವ್ಯಾದ್ರೋ. ೦೬-೩೭); ಬಳಿಕ ದೇವಯಜ್ಞ ಪಿತೃಯಜ್ಞ ಮನುಷ್ಯಯಜ್ಞ ಭೂತಯಜ್ಞ ಬ್ರಹ್ಮಯಜ್ಞಾದಿಗಳಂ ಮಾಳ್ಪಾತನಾಗಿ (ಏವೇಕ. ೦೩೪); ಬ್ರಹ್ಮಯಜ್ಞ, ಪಿತೃಯಜ್ಞ, ದೈವಯಜ್ಞ, ಭೂತಯಜ್ಞ, ಮನುಷ್ಯಯಜ್ಞ — ಈ ಐದು ಮಹಾಯಜ್ಞಗಳು . . . ಬಲಿಹರಣವು ಭೂತಯಜ್ಞವು (ಆರ್ಯಧ. ೦೬೭). [ಸಂ.]

**ಭೂತರೂಪ** (ನಾ). [ವ್ಯಾಕ] ಭೂತಕಾಲದ ರೂಪ : ಬಿಸುಡು ಎಂಬ ಧಾತುವಿಗೆ ಭೂತರೂಪದಲ್ಲಿ ಬಿಸುಟ್ಟಂ, ಬಿಸುಟಂ ಎಂಬ ರೂಪಗಳು ಬರುವುವು (ಕೈಬಿ. ೯೭). [ಸಂ.]

**ಭೂತಲ, ಭೂತಳ** (ನಾ). ೧. ಭೂಮಿಯ ಮೇಲ್ಮೈ : ಭೂಮಿಯ ಮೇಲುಭಾಗ. ೨. ಭೂಮಿ : ಭೂತಲಮನಾ ತರಲಾದಿವರಾಹನಾದೆಂ (ಸಂಶಭಾ. ೦೧-೭೬) ; ಈ ಸುಂದರವಾದ ಭೂತಲದ ಮೇಲೆ ಅವನು . . . ಮಸಿಯ ಒಂದು ಕರ್ಕಶ ಮುಚ್ಚೆಯಂತಿದ್ದ ! (ಶೀರಯೋ. ೩೩). **ಭೂತಳ** : ೨. ರಸೆಯಿಂ ಭೂತಳದಿಂ ಕುಳಾದ್ರಿಕುಳದಿಂ . . . ಅಜಾಂಡತಟದಿಂದತ್ತೆಲ್ಲ ಪೊಕ್ಕಿರ್ದಮಿಂ ಮಿಸುಪಲ್ ತಿಗುರ್ಮ (ಪಂಶಭಾ. ೧೦-೦೦೬) ; ನಿಮ್ಮಯ ಭೂತಳವನಾಳುವಿರೆ ನೀವೆಂದೆನ್ನನಾ ಭೀಷ್ಮ (ಕುವ್ಯಾಭಿ. ೬-೩೩). ೩. ಲೋಕದ ಜನ ; ಮಾನವಸಮೂಹ : ಸೀತೆ ಭೂತಳವರಿಯೆ ಪರಿಶುದ್ಧೆ (ತೈಬಾ. ೨೦-೬೩). [ಸಂ.]

**ಭೂತಲಪತಿ** (ನಾ). ಭೂಮಿಯ ಒಡೆಯ; ಅರಸು; ರಾಜ : ನಿಬಲೊಡ ಮನಿಬರುಮಂ ಭೂತಲಪತಿ ಬಟಿಯಟ್ಟಿ ಬರಿಸೆ (ಆದಿಪು. ೦೩-೦೦); ಭೂತಲಪತಿ ಬಂದನುಚ್ಚಿ ತಸಿತಾತಪವಾರಣಪುಷ್ಪಿತಾಂಬರಂ (ಪಂಪ್ರಪು. ೩-೩೦). [ಸಂ.]

**ಭೂತಲೀಲೆ** (ನಾ). ೧. ದೆವ್ವದ ಆಟ. ೨. (ಆಲಂ) ಗೊತ್ತುಗುರಿಯಿಲ್ಲದ, ವಿಚಾರಶೂನ್ಯವಾದ ವ್ಯವಹಾರ : ಸಣ್ಣಸಣ್ಣ ಮಾತಿನ ಸಲುವಾಗಿ ವಾದವಿವಾದದ ಭೂತಲೀಲೆ ನಡೆದು ಜೀವದ ಸಂವಾದವು ಮರೆತುಹೋಗಿ ಹೃದಯವು ರಣರಂಗವಾಗುತ್ತದೆ (ಗೊತ್ತುಗು. ೦೩೪).

[ಸಂ. ಭೂತಲೀಲಾ]

**ಭೂತಲೇಶ, ಭೂತಳೇಶ** (ನಾ). ಭೂಮಿಯ ಒಡೆಯ; ಅರಸು; ರಾಜ : ಶೀತಕರಧರನೊಲಿದ ಭಕ್ತನು ಭೂತಲೇ [ಪಾಠಾಂ. ಳೇ]ಶನು ನಗಲೊಡನೆ ತನ್ನಳಿನಮುಖಿ ನೋಡಿ (ಬಸಪು. ೯೩-೯). **ಭೂತಳೇಶ** : ಪೂತುರೆಯೆಂದು ಕೊಂಡಾಡಿ ತನ್ನಯ ತನುಜಾತರುಗಳನಾಹವಕೆ ಭೂತಳೇಶ[ಪಾಠಾಂ. ಧಾತ್ರೀಶ್ವರ]ನು ಬೀಳ್ಕೊಡಲು (ತ್ರಿಪುರಾಂ. ೦೬-೦೯೯); ಪ್ರಾತಿಕಾಮಿಕ ಬಾ ಯುಧಿಷ್ಠಿರ ಭೂತಳೇಶನ ಕರೆದು ತಾರೆ (ಕುವ್ಯಾಸ. ೦೭-೨೩). [ಸಂ.]

**ಭೂತವತಿ** (ನಾ). [ವ್ಯಾಕ] ಭೂತಕಾಲ : ಭೂತವತಿ ವರ್ತಮಾನಂ ಖ್ಯಾತ ಭವಿಷ್ಯಂತಿ ಸರ್ವಸಾಧನಿಯೆಂಬಾಖ್ಯಾತವಿಭಕ್ತಿಗಳಕ್ಕುಮತೀತಭವದ್ಭಾವಿಕಾಲ ವಿದ್ಯಾದಿಗಳೊಳ್ (ಕಾವ್ಯಾವ. ೩೭೯); ಭೂತವತಿಯ ಕೃತ್ತಿಂಗೆ 'ನಲಿವಂ' ಎಂಬಲ್ಲಿ ಅಮ್ ಎಂಬ ವಿಭಕ್ತಿಯಂ ಕಳೆದು, ನಲಿದ ಎಂಬ ಕೃತ್ತನಿರಿಸಿ, ನಾಮವಿಭಕ್ತಿಯಂ ಪತ್ತಿಸಿ, ನಲಿದಂ, ನಲಿದನಂ, ನಲಿದನಿಂ ಎಂದು ಮಾಳ್ಪುದು (ಶಮದ. ೭೩ ಪ್ರ ಯೋ). [ಸಂ. ಭೂತವತೀ]

**ಭೂತವಾದಿ** (ನಾ). [ತತ್ತ್ವಶಾ] ಭೂಮಿ, ಜಲ, ತೇಜಸ್ಸು, ವಾಯುವೆಂಬ ಭೂತಗಳ ಸಂಯೋಗದಿಂದ ಉಂಟಾಗುವ ಚೈತನ್ಯವನ್ನೇ ಜೀವವೆಂದು ವಾದಿಸುವವನು ; ನಾಸ್ತಿಕ : ಚಾರ್ವಾಕ : ಶರೀರವೃದ್ಧಿಯೊಳ್ ಚೈತನ್ಯವೃದ್ಧಿಯೆಂಬುದುದ್ವೃದ್ಧಿಯೊಳ್ ಅಂಕುರವೃದ್ಧಿಯೆಂತಂತೆ ಸಹಕಾರಿಕಾರಣಮೆಂದನೇಕಯುಕ್ತ್ಯೋಕ್ತಿಗಳಿಂ ಭೂತವಾದಿಯುಪ್ಪ ಮಹಾಮತಿಯಂ ನಿರಾಕರಿಸಿ (ಆದಿಪು. ೨-೦೦ ವ).

[ಸಂ. ಭೂತವಾದಿನ್]

**ಭೂತವಾಸ** (ನಾ). ಒಂದು ಬಗೆಯ ಮರ ; ತಾರೆ : 'ಭೂತಾವಾಸ' ಪರ್ಯಾ. [ಸಂ.]

**ಭೂತವೇಶಿ** (ನಾ). ಒಂದು ಬಗೆಯ ಸಸ್ಯ ; ನಿರ್ಗುಂಡಿ : "ಶ್ವೇತಸುರಸಾ. ಭೂತವೇಶಿ. ಸಿತಾಸಾ, ಬಿಳೀಹುವ್ವುಗಳುಳ್ಳ ಲಕ್ಕಿಲಿ" (ನಿಘಂ. ೧೨೯). [ಸಂ. ಭೂತವೇಶೀ]

**ಭೂತಶಂಕೆ** (ನಾ). ದೆವ್ವಗಳಿಂದಾಗುವ ಭಯ ; ದೆವ್ವ, ಪಿಶಾಚಿಗಳ ಭಯ : ಅವಳಿಗೆ ಭೂತಶಂಕೆಯಾಗಿರಬೇಕು. ಒಂದು ಯಂತ್ರ ಕಟ್ಟಿಸಬೇಕು (ರೂ೨). [ಸಂ. ಭೂತಶಂಕಾ]

**ಭೂತಶುದ್ಧಿ** (ನಾ). [ಶೈವ] ಶಿವೋಪಾಸನೆಯ ಅಂಗವಾಗಿ ಮಾಡುವ ಸಂಸ್ಕಾರ ; ಪೂಜಾದಿಗಳ ಪ್ರಾರಂಭದಲ್ಲಿ ದೇಹಾರಂಭಕವಾದ ಪಂಚಭೂತಗಳನ್ನು ಶೋಧಿಸುವುದು, ಬೀಜಮಂತ್ರಪೂರ್ವಕವಾಗಿ ಎಡಹೊಟ್ಟೆಯಲ್ಲಿರುವ ಪಾಪಪುರುಷನನ್ನು ಸುಟ್ಟು ಶರೀರವನ್ನು ಶುದ್ಧಿಗೊಳಿಸುವುದು. ಇದರ ಕ್ರಮವು ಆಗಮಗ್ರಂಥಗಳಲ್ಲಿ ನಿರೂಪಿತವಾಗಿದೆ : ಭೂತಶುದ್ಧಿಯೇ ಮೊದಲಾದ ಭಾವನಾಸಂಸ್ಕಾರಗಳಿಂದ ಪರಿಶುದ್ಧವಾದ ದೇಹದಲ್ಲಿ ಮಾನಸಿಕವಾಗಿ ಧ್ಯಾನಯೋಗದಿಂದ ಮಾಡುವ ಉಪಾಸನೆಯು "ಅಂತರ್ಯಾಗ" ವೆಂದೂ . . . ಉಕ್ತವಾಗಿದೆ (ಶಾರದ. ೯೨). [ಸಂ.]

**ಭೂತಸಂಜ್ಞೆ** (ನಾ). ಪದಾರ್ಥಗಳ ಸಂಕೇತ : "ಮನು ಭುವನ ಪದಿನಾಲ್ಕು . . . ದಂತ ಮೂವತ್ತೆರಡುಮಿಂತಿವೆಲ್ಲಂ ಭೂತಸಂಜ್ಞೆಯಕ್ಕುಂ" (ಮಂಗರಾ. ೧೦೪-೬). [ಸಂ. ಭೂತಸಂಜ್ಞಾ]

**ಭೂತಸಂತುಷ್ಟಿ** (ನಾ). ದೆವ್ವ, ಪಿಶಾಚಿ. ಕ್ಷುದ್ರಶಕ್ತಿಗಳೇ ಮೊದಲಾದ ಅಮಾನುಷಸತ್ವಗಳ ತೃಪ್ತಿ ; ಕ್ಷುದ್ರಶಕ್ತಿಗಳ ತೃಪ್ತಿ : ಭೂತಸಂತುಷ್ಟಿಯಪ್ಪಂತೆ ಕುಜಿ ಕೋಣಂಗಳಂ ಪೊಯ್ಸಿ ಬಣ್ಣಗೂಳಂ ಪಸರಿಸಿ (ಶ್ರೀಭಾ. ೩-೬೨). [ಸಂ.]

**ಭೂತಸಂಹಾರಿ** (ನಾ). ಒಂದು ಬಗೆಯ ಸಸ್ಯ : "ಭೂತಾಂಕುಶಂ ಭೂತಸಂಹಾರಿಯಕ್ಕುಂ" (ಮಂಗರಾ. ೪೭-೦೮). [ಸಂ. ಭೂತಸಂಹಾರಿನ್]

**ಭೂತಸಿದ್ಧಿ** (ನಾ). ಪಂಚಮಹಾಭೂತಗಳನ್ನು ವಶಪಡಿಸಿಕೊಳ್ಳುವ ಒಂದು ಬಗೆಯ ಯೋಗಸಿದ್ಧಿ : ಧರೆ ಜಲಾನಲ ಮಾರುತಾಂಬರವಿರುವ ತತ್ವಗಳಿವನು ಜಯಿಸಲು ದೊರೆಯುತಿಹುದಾ ಭೂತಸಿದ್ಧಿಯು ಪರಿಪರಿಯುಪಲವಗೆ (ಗಗಶಾ. ೪-೧೨೮). [ಸಂ.]

**ಭೂತಸ್ಥಾನ** (ನಾ). (ಕರಾ) ಭೂತಗಳ ಪೂಜೆ ನಡೆಯುವ ಸ್ಥಳ, – ಬೀಡು : ತುಳುರಾಜ್ಯದಲ್ಲಿ ಬ್ರಾಹ್ಮಣರ ಅನಂತರ ೨ನೇ ಮರ್ಯಾದೆಯು ಎಲ್ಲಾ ದೇವಸ್ಥಾನಗಳಲ್ಲಿಯೂ ಭೂತಸ್ಥಾನಗಳಲ್ಲಿಯೂ ಇವರಿಗೆ ಸಲ್ಲುತ್ತದೆ (ತುಳುನಾ. ೩೦). [ಸಂ.]

**ಭೂತಹಿತ** (ನಾ). ಜನತೆಯ ಕ್ಷೇಮ : ಭೂತಹಿತಕಾರುಣ್ಯಸುಧೆಗಡಲ್ವಾತ ದುರ್ಧರಕರ್ಮಕೋಟಿವಿಘಾತನಂ (ಬಾಗಪ. ೦೪-೯೦); ಒಂದಾನೊಂದು ದಿನಮುಮಾ ದೇವಿಯು . . . ತಾನೆಳಸಿದ ಭೂತಹಿತಪ್ರಯೋಜನವನ್ನು ಆ ಪರಮೇಶ್ವರನಿಂದಲೇ ತಿಳಿಯೆ ಕೇಳ್ವೆನೆಂಬಿಚ್ಛೆಯಿಂದ . . . ವಿಜ್ಞಾಪನಂಗೆಯ್ವಲ್ಲಿ (ಸಕಪ್ತ. ೩). [ಸಂ.]

**ಭೂತಳ** 'ಭೂತಲ' ನೋ.

**ಭೂತಳೇಶ** 'ಭೂತಲೇಶ' ನೋ.

**ಭೂತಾಂಜನ** (ನಾ). ದೆವ್ವ, ಪಿಶಾಚಿ ಮೊದಲಾದ ಕಣ್ಣಿಗೆ ಕಾಣದ ವಸ್ತುಗಳನ್ನು ಕಾಣುವಂತೆ ಮಾಡುವ ಸಾಮರ್ಥ್ಯವನ್ನು ಹೊಂದಿರುವುದೆಂದು ನಂಬಲಾದ ಕಾಡಿಗೆ : (ಕಿ). [ಸಂ.]

**ಭೂತಾಕಾರ** (ನಾ). ದೊಡ್ಡ ಆಕಾರ, — ಗಾತ್ರ : ಹೆಂಗುಸಾದ ಚಿಕ್ಕಿಯ ಮನಸ್ಸನ್ನು ಅದು ಹೊಕ್ಕ ಮೇಲೆ ಕೇಳಬೇಕೆ ? ಕ್ಷಣದಲ್ಲಿ ಭೂತಾಕಾರವನ್ನೇ ತಾಳಿತು ಅದು ! (ಕುವಕೂ. ೩೭). [ಸಂ.]

**ಭೂತಾಗ್ರಣಿ** (ನಾ). ೧. ಶಿವ. ೨. [ಛಂದ] ರುದ್ರಗಣಪ್ರಸ್ತಾರದ ಪದಿನಾರು ಭೇದಗಳಲ್ಲಿ ಒಂದು: ರುದ್ರಗಣಮೆಂತೆಂದೊಡೆ :-೧. ಗಂಗಾಧೀಶಂ ... ೧೩. ಭೂತಾಗ್ರಣಿ (ಛಂದೋಂಬು. ೩-೨೪೦ವ). [ಸಂ. ಭೂತಾಗ್ರಣೀ]

**ಭೂತಾಡನಂಗೆಯ್** (ಕ್ರಿ). ನೆಲವನ್ನು ಒದೆ.–ಘಟ್ಟಿಸು: ಪ್ರಕರಣದೊಳ್ ಕಿಂದಳಂ ಕಿಂದಳಿರಂತೆ ತೋಳಗೆ ದೀರ್ಘಾಂಗುಳಿಯಿಂ ಪಿಡಿದು ಗರುಡನೊಪ್ಪಮಂ ಗಾಳಿಯ ನುಸುಳುಮಂ ಕೈಕೊಂಡು ಕೊಂಡಾಡಿ ಮನಮೆ ಮಾನಸವಾದಂತೆ ಪರಿದು ಪರಿಯಾಳ್ ಬಳಲ್ಚಿ ಕುಡೆಂಬ ತಿಂಥಿಮೊಳಗಿಂ ಬೆಂಗೆ ಬಾ ಎಂಬಂತೆ ಭೂತಾಟ[ಡ]ನಂಗೆಯ್ದು ಗಜದ ಬೆಂಗೆ ಸಿಂಗದಂತೆ ಲಂಘಿಸಿಯಾನೆಯ ಪೊರಜೆಯಾಗೆ ಪೂರ್ವಾಸನದೊಳ್ ಪದುಳಮಿರ್ದು (ಅರ್ಜನೀ. ೩-೧೧೩ ವ). [ಭೂ + ತಾಡನ + ಕೆಯ್$_1$]

**ಭೂತಾತ್ಮ** (ನಾ). ೧. ಪಂಚಭೂತಸ್ವರೂಪವಾದುದು ; ದೇಹ ; ಶರೀರ: 'ಭೂತಾತ್ಮ', 'ಇಂದ್ರಿಯಾತ್ಮ'. ಎಂದು ಪ್ರಯೋಗ ಮಾಡಿರುವುದು ಕಂಡುಬರುತ್ತದೆ(ಯಾದ್ದರಿಂದ ಮುಖ್ಯವೃತ್ತಿಯಿಂದಲೇ ಅಚೇತನವನ್ನು ಆತ್ಮಬಲದಿಂದ ಕರೆಯಬಹುದೆಂದು ಗೊತ್ತಾಗುತ್ತದೆ) (ಬ್ರಿಹ್ಮಭಾ. ೯೦). ೨. ಎಲ್ಲಾ ಭೂತಗಳಲ್ಲೂ ಆತ್ಮರೂಪದಿಂದ ಇರುವವನು ; ಪರಮಾತ್ಮ ; ಶಿವ : ಎನಗೆ ನೈಜಾತ್ಮನಾಗುತ್ತಾ ಸಮಸ್ತ ಭೂತಾತ್ಮನಾಗುತ್ತಮಿರ್ಪ ಅನಘಗುರುವೇ ನಿನಗೆ ವಂದಿಸುವೆ (ಶೀಕ್ಷ್ಮಪು. ೦-೦-೦೪). ೩. ವಿಷ್ಣು. ೪. ಜೀವಾತ್ಮ ; ಜೀವ. [ಸಂ. ಭೂತಾತ್ಮನ್]

**ಭೂತಾಪಕಾರಿ** (ನಾ). ೧. ಜಗತ್ತಿಗೆ ಧಗೆಯನ್ನುಂಟುಮಾಡುವವನು,– ತಾಪವನ್ನುಂಟುಮಾಡುವವನು. ೨. ಪ್ರಾಣಿಗಳಿಗೆ ಕೆಡುಕನ್ನುಂಟುಮಾಡುವವನು. ೧, ೨ : ಪೊನಲೊಳ್ ಮುಟುಗಿಸಿ ಹಿಮಕರ ದಿನಕರರಂ ಮುಸುಳಿಸಿತ್ತು ಜನಸವನಪ್ರಯೋಂಬುನಿಕಾಯಂ ದೋಷಾಕರನೆನಿಪನ ಭೂತಾಪಕಾರಿಯೆನಿಪನ ಸಿರಿಯೇಂ (ಪುಷ್ಪಕು. ೦೧-೩೯). [ಸಂ. ಭೂತಾಪಕಾರಿನ್ (ಭೂ + ತಾಪಕಾರಿನ್ ; ಭೂತ + ಅಪಕಾರಿನ್)]

**ಭೂತಾಮರ** (ನಾ). [ಜೈನ] ವ್ಯಂತರದೇವತೆಗಳಲ್ಲಿ ಒಂದು ಪಂಗಡ,- ಭೇದ : ನೆನೆದ ಮನದಿಂ ಮುನ್ನಂ ಭೂತಾಮರರ್ ಬರೆ (ಶಾಂತಿಪು. ೯-೯೦). [ಸಂ.]

**ಭೂತಾರಾಧನೆ** (ನಾ). = ಭೂತಪೂಜೆ ೧ : ಹೀಗೆ ಭೂತಾರಾಧನೆಯು ಕ್ರಮಬದ್ಧ ಜೀವನದ ಮೊತ್ತ ಮೊದಲಿನ ವ್ಯವಸ್ಥೆಯೆಂದೂ . . . ಎಣಿಸಬಹುದು (ತುಳುನಾ. ೨೩೦); ಇದೇನು ಭೂತಾರಾಧನೆ ? ಇದಾವ ಬಗೆಯ ಪೂಜೆ ಎಂಬುದು ಅವನಿಗೆ ಹೊಳೆಯದೆ ಹೋಯಿತು (ಸ್ವಸ್ವಹೂ. ೨೪೨). [ಸಂ. ಭೂತಾರಾಧನಾ]

**ಭೂತಾವಾಸ** (ನಾ). ೧. ಶರೀರ. ೨. ಶಿವ. ೩. ವಿಷ್ಣು. ೪. ಒಂದು ಬಗೆಯ ಮರ; ತಾರೆಮರ: "ವಿಭೀತಕಃ, ಅಕ್ಷಃ, ತುಷಃ, ಕರ್ಷಫಲಃ ಭೂತಾವಾಸಃ, ಕಲಿದ್ರುಮಃ- ೬, ತಾರೇಗಿಡದ ಹೆಸರುಗಳು" (ನಿಘಂ. ೦೨೩). 'ಭೂತವಾಸ' ಪರಾ. [ಸಂ.]

**ಭೂತಾಳ** (ನಾ). ಒಂದು ಬಗೆಯ ಮರ : ತಮಾಳ ಭೂತಾಳ ತಾಳ ವೃಕ್ಷವನರನೆಲ್ಲಿಯು ಕರ್ಪೂರವಾಳೆಯನವ ಕಂಡನಲ್ಲಿ (ರಾಮಾಬಿ. ೦೦-೦೦೭). [ಸಂ. ಭೂತಾಲ]

**ಭೂತಾಳಕ್ರಿಯೆ** (ನಾ). [ಸಂಗೀತ] ಒಂದು ಉಪಾಂಗರಾಗದ ಹೆಸರು : ದೇವಕ್ರಿಯೆ ತ್ರಿಣೇತ್ರಕ್ರಿಯೆ ಭೂತಾಳಕ್ರಿಯೆಯೆಂಬ ಮೂಱುಂ ಕೋಲಾಹಲರಾಗಕ್ಕುಪಾಂಗಂಗಳು (ವಿವೇಳ. ೨೩೪). [ಸಂ. ಭೂತಾಲಕ್ರಿಯಾ]

**ಭೂತಾಳಿ** (ನಾ). ಒಂದು ಬಗೆಯ ಮರ : "ಭೂತಾಳಿ – ನೆಲದಾಳು, ನೆಲಹಾದರಿ" (೬ಶಿ೦. ೦೦೨) ; ಗೊರಟೆಹೂಗಳ ಹಳದಿಯ ನಡುವೆ . . . ಭೂತಾಳಿಯ ರಕ್ತವರ್ಣದ ಎಲೆಯ ರೂಪದ ಹೂಗಳೂ ರಂಜಿಸಿದ್ದುವು (ಮಲೆಮ. ೯೮). [ಸಂ. ಭೂತಾಲೀ]

**ಭೂತಾಳಿ** (ನಾ). ೧. = ಭೂತಾಳ : ಭೂತಾಳಿ ಬೂರುಡೆ ಬಿಟ್ಟಿಲಿಯು ದಿಂಡ ಪಾತಂಗ ಮುಂಗುಳಿಯು ಮರನು . . . ಅಲ್ಲಿಹವು (ಶಬಸಾಂ. ೧-೩೩): ಕೆಂವಡಸ ಭೂತಾಳಿ . . . ಪಾಲೆ ಬಿಳ್ವಾಲೆ (ರುಕ್ಮಾಂಗ. ೧೦-೨). ೨. ಜೇಲಿ. ಸರಹದ್ದು ಮೊದಲಾದುವುಗಳಿಗಾಗಿ ಬೆಳೆಸುವ, ನಾರನ್ನು ತೆಗೆಯಲು ಬರುವ, ತಾಳೆ ಜಾತಿಗೆ ಸೇರಿದ ಒಂದು ಬಗೆಯ ಗಿಡ : ನಮ್ಮ ತೋಟದ ಬೇಲಿಯುದ್ದಕ್ಕೂ ಭೂತಾಳಿಗಿಡಗಳಿವೆ (ರೂಢಿ)

[ ಸಂ. ಭೂತಾಲ ]

**ಭೂತಿ** (ನಾ). ೧. ಇರುವಿಕೆ ; ಅಸ್ತಿತ್ವ. ೨. ಹುಟ್ಟು ; ಜನ್ಮ. ೩. ಏಳಿಗೆ ; ಅಭ್ಯುದಯ ; ಅಭಿವೃದ್ಧಿ. ೪. ಐಶ್ವರ್ಯ ; ಸಂಪತ್ತು: ಭೌತವಿಜ್ಞಾನದಾ ರಾಷ್ಟ್ರಸಂಸ್ಥೆಗಳಾ ನೂತನವಿವೇಕಪ್ರಯೋಗಗಳನಾದೀತು ಭೂತಿ ಸಂಪದ ಜಗಕೆ (ಮಂಕುತಿ ೩೭೭). ೫. ಘನತೆ ; ಗೌರವ : ಬೆಳಗುವುದಿಂದ್ರಲೋಕದೊಳಗಯ್ಯನ ಭೂತಿ ದಲೆ[ಬಾಹುಮಾತಿನೊಳೆ]ಮ್ಮ ಸಾಹಸಂ ಬೆಳಗುವುದೀ ಧರಾವಳಯದೊಳ್ (ಶಂಖಾ. ೭-೦೯). ೬. ಬೂದಿ ; ಭಸ್ಮ ; ವಿಭೂತಿ : "ಭೂತಿಃ_೧. ಬೂದಿ. ಸಂಪತ್ತು ೨." (ಸಿದ್ಧಾಂತಿ. ೩೯೦) ; ಸುರರಲ್ಲ ಮೇಣು ಸಂತ್ಯಕ್ತವಪ್ಪ ದ್ವಿಜರು ಓರಿಯಾಗಿ ಭೂತಿಯ ಧರಿಸಿಹರು (ಸರ್ವಜ್ಞ. ೦೬೩-೭೪೩) ; ತುಂಗಭದ್ರಾನದೀತೀರದೊಳಿರ್ದುತ್ತುಂಗಹಸ್ತಂ ಮುಕುಲಿತನಯನಂ ಭೂತಿ ಸರ್ವಾಂಗನಾಗಿರ್ದು (ರಕ್ಷಾ.ಶ. ೬೦); ಪಾತಕವ ಪರಿಹರಿಸಿ ಪರಮಪದವೀಯು ಕೊಡುವ ಭೂತಿಯನು ಧರಿಸದಿಹ ಮನುಜನಂ (ಪ್ರಾರಂ. ೦೫-೩). ೭. ಆನೆಗಳ ಮೈಮೇಲೆ ಬಣ್ಣದ ಪಟ್ಟೆಗಳಿಂದ ಮಾಡುವ ಅಲಂಕಾರ. ೮. ತಪಸ್ಸು, ಯೋಗ ಮುಂತಾದುವುಗಳಿಂದ ಪಡೆದು ಕೊಂಡ ಅತಿಮಾನುಷಸಾಮರ್ಥ್ಯ : ಅಣಿಮಾದಿ ಸಿದ್ಧಿಗಳು : "ವಿಭೂತಿಃ, ಭೂತಿಃ, ಐಶ್ವರ್ಯಂ – ೩. ಅಷ್ಟಧಾ . . . ಅಣಿಮಾದಿಕಂ ಎಂಟುಬಗೆಯಾಗಿರುವ ಅಣಿಮಾದಿ ಸಿದ್ಧಿಗಳು" (ಸಿದ್ಧಾಂತಿ. ೦೯). ೯. ಸುಟ್ಟಮಾಂಸ : "ಸುಟ್ಟಡಗು ಭೂತಿಯೆಂಬುದು" (ಹಲಾಯು. ೩೪-೦೭೮). ೧೦. ಶಿವ. ೧೧. ವಿಷ್ಣು. [ಸಂ.]

**ಭೂತಿಕ₁** (ನಾ). ೧. ದೆವ್ವ, ಭೂತಗಳನ್ನು ವಶಪಡಿಸಿಕೊಂಡಿರುವವನು ; ದೆವ್ವ, ಪಿಶಾಚಿಗಳ ಉಪಾಸಕ. ೨. ಕಣ್ಣುಕಟ್ಟು ಮಾಡುವವನು ; ಇಂದ್ರಜಾಲ ಮಾಡುವವನು ; ಐಂದ್ರಜಾಲಿಕ : ಭೂತಿಕನ ಸೀರೆಯ ಸಾತ್ವಿಕ ನೆಜವುಟ್ಟರೆ ಭೂತಿಕ ಸಾತ್ವಿಕನಾದ ಸಾತ್ವಿಕ ಭೂತಿಕನಾದ (ಬಸವ. ೯೦೦) ; ಭೂತಿಕಗೆ ಸಾಹಸ್ರವರಹದ ಭೂತಳವನಿತ್ತೆನಗೆ ಸರಿಯುನ್ನೀ ತಳದೊಳಿಲ್ಲೆಂದುಯೆಸೆದ ಪ್ರಧಾನಿ ಬಸವಣ್ಣ (ಐಶ್ವ.ಪು. ೪೦-೦೮). ೩. [ವೀಶೈ] ಭೂತಿಕ, ನೈಷ್ಠಿಕ ಎಂಬ ಎರಡು ಬಗೆಯ ಶಿವಧರ್ಮಗಳಲ್ಲಿ ಒಂದು : ಶಿವಧರ್ಮವಾ ಭೂತಿಕಂ ನೈಷ್ಠಿಕಯುಮೆನುತ್ತವು ಯುಗ್ಮದಲ್ಲಿ ಭೂತಿಕವೆ ಸುವ್ರತ ಮೋಕ್ಷವಿವು ಯುಗಳಯುಕ್ತವಾವ್ರತವದು (ಶೀಕ್ಷೆ.ಪು. ೭-೭-೭೨). [ < ಸಂ. ಭೌತಿಕ ]

**ಭೂತಿಕ₂** (ನಾ). ೧. ಒಂದು ಬಗೆಯ ಸಸ್ಯ ; ನೆಲಬೇವು. ೨. ಒಂದು ಬಗೆಯ ಹುಲ್ಲು ; ಕಾಚಿ ಹುಲ್ಲು : "ಭೂತಿಕಂ – ನೆಲಬೇವು, ಕಾಚೀಹುಲ್ಲು, ಪಂಚೀಹುಲ್ಲು" (ಸಿದ್ಧಾಂತಿ. ೩೭೩) ; "ಭೂತೀಕಂ – ಗಂಜಳಿಕೆಯ ಹುಲ್ಲು" (೬೩೦. ೦೦೨). ೩. ಕರ್ಪೂರ. ೪. ಗಂಧದ ಮರ. [ಸಂ.]

**ಭೂತಿಪಟ್ಟ** (ನಾ). [ವೀಶೈ] "ಅಗಮೋಕ್ತಸ್ಥಾನಗಳಲ್ಲಿ ಆಯಾಯ ಮಂತ್ರಗಳಿಂದ ಭಸ್ಮಧಾರಣವನ್ನು ಮಾಡುವುದೇ ಭೂತಿಪಟ್ಟವೆನಿಸುವುದು" (ಅಷ್ಟಾ.ಬಿ. ೦). 'ವಿಭೂತಿಪಟ್ಟ' ಪರಾ. [ಸಂ.]

**ಭೂತೃಣ**(ನಾ). ಒಂದು ಬಗೆಯ ಹುಲ್ಲು : "ಗವಿಮಃ – ಭೂತೃಣ" (೬೩೦. ೪೩); "ಭೂತಿಕಾ – ಭೂತೃಣ" (೬೩೦. ೦೦೨). [ಸಂ.]

**ಭೂತೇಶ** (ನಾ). ೧. ಜೀವಿಗಳ ಒಡೆಯ. ೨. ಬ್ರಹ್ಮ. ೩. ವಿಷ್ಣು. ೪. ಪ್ರಮಥಗಣಗಳ ಅಧಿಪತಿ; ಶಿವ : "ಈಶಾನಃ, ಶಶಿಶೇಖರಃ . . . ಭೂತೇಶಃ, ಪರಮೇಶ್ವರಃ . . . ನೀಲಲೋಹಿತಃ – ಈ ೪೫ ಮಹಾದೇವರ ಪೆಸರ್" (ಶಬ್ದಮ. ೩-೦೦) ; ಧರೆಯೊಳಗೀ ಭಕ್ತರ್ಗಾರ್ ದೊರೆಯೆನುತಂ ನುಡಿದನಾಗಳಾ ಭೂತೇಶಂ (ಶ್ರೀಪು. ೦೯-೯೨) ; ಭೂತೇಶಗೆ ಜಿಗುಪ್ಸೆಯು ಜಾತಿಮಾದಿಗನಲ್ಲ ಜಾತಿಯಲಿ ಹುಟ್ಟಿ ಶಿವನಿಗೆ ಶರಣೆನ್ನದಾತ ಮಾದಿಗನು (ಸರ್ವಜ್ಞ. ೯೭೭). ೫. [ಜ್ಯೋತಿ]ರುದ್ರನು ಅಧಿಪತಿಯಾಗಿರುವ ನಕ್ಷತ್ರ; ಆರಿದ್ರಾನಕ್ಷತ್ರ : ಸ್ವಾತಿ ಫಣಿ ಭರಣಿ ಶತಭಿಷೆ ಭೂತೇಶಂ ಜ್ಯೇಷ್ಠೆ ಮುಂತೆ ಕಜಿದೊಡೆ ಮಬ್ ಧಾತ್ರೀತಳಕೆ ನೆಜಿಯೆ ಕಜಿಯದು (ಅಭ್ಯಿಮ. ೬-೦೦೬). [ಸಂ.]

**ಭೂತೊಳಸಿ** (ನಾ). ಒಂದು ಬಗೆಯ ತುಳಸಿ : ಕಷಾಯಗಳು— ಭೂತುಳಸಿಬೇರು, ವಿಷ್ಣುಕ್ರಾಂತಿ, ಶುಂಠಿ ಇವಂ . . . ಒಪ್ಪಲಿಪ್ರತಿ ಪಾಕವಿಕ್ಕಿ ಕೊಡಲು ಶೀತಜ್ವರಂ ಮಾಣ್ಗುಂ (ಸಕವೈ. ೬೪). [ಭೂ + ತೊಳಸಿ]

**ಭೂತೋಚ್ಚಾಟನೆ** (ನಾ). ದೆವ್ವದ ಕಾಟದಿಂದ ತೊಂದರೆಗೊಂಡಿರುವ ಸ್ಥಳ ಅಥವಾ ವ್ಯಕ್ತಿಯನ್ನು ಬಿಟ್ಟು ದೆವ್ವವು ಓಡಿಹೋಗುವಂತೆ ಮಾಡುವುದು : ಮದೊಪದಿಗೆ ಬರುವ ಭೂತೋಚ್ಚಾಟನೆ ಮುಂದದಿಂದ ಉದಕ ಸ್ಪರ್ಶ ಪ್ರಣವ ಮಿಗಿಲಾದ ವಿಧಿಗಳು ತಿಳಿದು (ವಿಶಾಮ. ೦೦೮೪) ; ಭೂತೋಚ್ಚಾಟನೆ, ರೋಗನಿವಾರಣೆಗಾಗಿ ಅಥರ್ವವೇದದಲ್ಲಿ ಉಕ್ತವಾದ ಮಂತ್ರಗಳು ಈ ತಾಯಿತಿಗಳ ಮೇಲೆ ಬರೆಯಲ್ಪಟ್ಟಿವೆ ಎಂಬ ಸಿದ್ಧಾಂತವೇ ನಮಗೆ ಸೂಕ್ತವೆಂದು ಕಂಡುಬರುತ್ತದೆ (ಶಾರದ. ೨೬).

[ಸಂ. ಭೂತೋಚ್ಚಾಟನ]

**ಭೂದಾನ** (ನಾ). ಭೂಮಿಯನ್ನು ದಾನವಾಗಿ ಕೊಡುವುದು ; ದಶದಾನಗಳಲ್ಲಿ ಒಂದು : ಭೂದಾನಂ ಧನದಾನಂ ಶ್ರೀದಾನಂಗುಡುತು ಮೊಪ್ಪಿದಂ ಗಿರಿರಾಜಂ (ಗಿರಿಜಾ. ೩-೬೩) ; ರಾಜನು ಕೌಂಡಿನ್ಯಗೋತ್ರದ ಕೋಂಡಮಾನನೆಂಬ ಬ್ರಾಹ್ಮಣನಿಗೆ ಭೂದಾನ ಮಾಡುವಂತೆ ಮಹಾವಲ್ಲಭನೆಂಬ ತನ್ನ ಅಧಿಕಾರಿಗೆ ಅಪ್ಪಣೆಕೊಟ್ಟನೆಂದು ತಿಳಿಯುತ್ತಿವೆ (ಕರ್ನಾಶಿ. ೩) ; ಭೂದಾನಕ್ಕಿಂತಲೂ ಶ್ರೇಷ್ಠವಾದ ದಾನ ಬೇರೊಂದಿಲ್ಲ (ಶಾಸನ. ೫). 'ದಶದಾನ' ಪರಾ. [ಸಂ.]

**ಭೂದಾರ** (ನಾ). ೧. (ಕೊನ್ನಾರಿಗೆಡ್ಡೆಗಾಗಿ ಮೂತಿಯಿಂದ) ಭೂಮಿಯನ್ನು ಅಗೆಯುವ ಪ್ರಾಣಿ ; ಹಂದಿ ; ವರಾಹ : "ಭೂದಾರಃ – ಕಾಡುಹಂದಿ" (ಸಿದ್ಧಾಂತಿ. ೦೫೩); ವ್ಯಾಳಗಜ ಭೂದಾರ ವೃಕ ಶಾರ್ದೂಲ ಸಿಂಹಾದಿಗಳ ಭಯವಾ ಕೀಳ ದೈತ್ಯಪ್ರಕರವಹುದೆನ್ನ ಮಜಿವೆಯಲಿ (ಕುಮಾ.ಆ. ೯-೯) ; ಆ ರವ ಧ್ವನಿಗೆಡುವುದನು ಭೂದಾರವೇಬೇ ಬಗೆದು ಹೂಡಿದ ಕೂರಲಗು ಬಿಡೆ ಬಿದ್ದುದುರದಲಿ ವೈಶ್ಯಮುನಿವರನ (ಕೊರಣ. ೨-೩-೦೨). ೨. ವರಾಹಾವತಾರವನ್ನೆತ್ತಿದ ವಿಷ್ಣು : ದಾನವಹೃತ ಮೇದಿನಿಯಂ ದಂಷ್ಟ್ರಾಗ್ರದೊಳಿರಿಸಿ, ಭೂದಾರಂ ಪಾತಾಳವನುಳಿದೆದ್ದನೊ ಎನಿಸಿ ದೂರದಿಗಂತದೊಳೊಪ್ಪಿದೆ ರವಿಮಂಡಿತಶೃಂಗಂ (ಪಂಪಭಾ. ೪೨-೩).

[ಸಂ.]

**ಭೂದಿವಿಜ** (ನಾ). ಬ್ರಾಹ್ಮಣ ; ಭೂಸುರ : ಬವರಮುಖದಲಿ ವೈರಿರಾಯರನವಗಡಿಸಿ ತಂದಾ ಧನವ ಭೂದಿವಿಜಸಂತತಿಗಿತ್ತ ಫಲವಿನಿತೆಂದು ಗಣಿಸುವಡೆ ದಿವಿಜಪತಿಗಾಗದು ಕಣಾ (ಕುಮಾ.ಉ. ೩-೦೦). [ಸಂ.]

**ಭೂದುರ್ಗ** (ನಾ). ಶತ್ರುಗಳಿಂದ ರಕ್ಷಿಸಿಕೊಳ್ಳುವುದಕ್ಕಾಗಿ ಕಾಡಿನ ಮಧ್ಯದಲ್ಲಿ ಕಟ್ಟುತ್ತಿದ್ದ ಕೋಟೆ ; ನೆಲಗೋಟೆ : ಪರಂಪರೆಯ ಹೇಳಿಕೆಯಂತೆ ದುರ್ಗಗಳು ಮೂರು ಬಗೆಯವಿರುವುವು ; ಗಿರಿದುರ್ಗ, ಜಲದುರ್ಗ, ವನದುರ್ಗ ಅಥವಾ ಭೂದುರ್ಗ (ಕರ್ನಾಪ. ೪). [ಸಂ.]

**ಭೂದೇವ** (ನಾ). =ಭೂದಿವಿಜ : "ದ್ವಿಜಾತಿಃ, ಅಗ್ರಜನ್ಮಾ, ಭೂದೇವಃ, ಬಾಡವಃ, ವಿಪ್ರಃ, ಬ್ರಾಹ್ಮಣಃ – ೬ ಬ್ರಾಹ್ಮಣನ ಹೆಸರುಗಳು"

(ಸಿದ್ಧಾಂತ. ೨೦೪); ಭೂದೇವನಾತ್ಮಜನಂ ಪೊಯಿುದನಾ ಜನ್ನಿವಾರದಲಿ (ಜಸಳೃ. ೩೦-೬); ದೇವಪಿತೃತರ್ಪಣಾವನಾ ಭೂದೇವತುಷ್ಟಿಯನಾ ಯಶೋದಾದೇವಿ ವಿರಚಿಸಿ (ಶಿರಾಗ. ೦೦-೬-೩೩). [ಸಂ.]

**ಭೂಧರ** (ನಾ). ೧. ಬೆಟ್ಟ; ಪರ್ವತ: ಸಕಲಗಜರಥಭೂಧರಾಧಿತ್ಯಕೆಯೊಳಗೆ ಭುಗಿಭುಗಿಸಿ ರಿಪುವನನಿಕರದಲಿ ಸಲೆ ಬೀದಿವರಿದುದು ಭೀಮದಾವಾಗ್ನಿ (ಕುಮಾರವ್ಯಾ. ೦೨-೨೪); ಪೋಪ ಮುಗಿಲ್ಗಳಿಂ ಮುಸುಕಿ ಮೋಹಿಪ ಭೂಧರವೊಂದು ಪಕ್ಕದೊಳ್ ತಾವರೆಗಣ್ಣನಂತಿರೆ (ರಾಜಶೇ. ೦-೦೦೬); ಭೂಧರವು ಶಿರವೊಲೆದುದೆನೆ ವಿಪಿನಾಳಿ ತೂಗಿದತ್ತೆಡಬಲಕೆ (ತತ್ತ್ವಾಂಗ. ೪೬-೦೩೦೦). ೨. (ವರಾಹಾವತಾರದಲ್ಲಿ ಕೋರೆದಾಡೆಗಳ ಮೇಲೆ) ಭೂಮಿಯನ್ನು ಹೊತ್ತವನು; ವಿಷ್ಣು: ಮಾಧವಮಹನೀಯಪಾದ ಮಂದರಧರಸಾಧಿತ ಸರ್ವಶಾಸ್ತ್ರಾರ್ಥಭೂಧರ ಭುವನೈಕವೀರ . . . ಸಲಹೆನ್ನ (ಕತಶಾಂ. ೬೦-೪). ೩. ಕೃಷ್ಣ: ಕೂರ್ಮೆಯಿಂ ವಿಶ್ವ ಬಂದ ಪುದಿವರ್ಕೆಗೆಯ್ವೆನೇನೆಂಬೆನಾಂ ಮಜ್ಜಿದಂ ಮುನ್ನಿನದೊಂದು ವೈರಮನಿಂದಿಂತೇಕಾರಣಂ ಭೂಧರಾ (ಶಂಕಥಾ. ೦೨-೨೦೬). ೪. ಶಿವ. ೫. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ. ೬. [ವೈದ್ಯಶಾ] ರಾಸಾಯನಿಕ ಅಥವಾ ವೈದ್ಯಕೀಯಪ್ರಯೋಗಗಳಿಗೆ ಬಳಸುವ ಒಂದು ಬಗೆಯ ಉಪಕರಣ: 'ಭೂಧರಯಂತ್ರ' ಪರಾ. [ಸಂ.]

**ಭೂಧರಧರ** (ನಾ). ಗೋವರ್ಧನಪರ್ವತವನ್ನು ಎತ್ತಿ ಹಿಡಿದವನು: ಕೃಷ್ಣ: ಅಂತು ಭೂಧರವಿರೋಧಿ ಭೂಧರಧರಂಗೆ ಕ್ರುದ್ಧನಾಗಿ (ಜಗಪು. ೪-೬೪ ವ). [ಸಂ.]

**ಭೂಧರಯಂತ್ರ** (ನಾ). = ಭೂಧರ ೬: ಶರಾವೆಯ ಮುಚ್ಚಿ ಸಂಧಿಲೇಪವಂ ಮಾಡಿ ಒಣಗಿಸಿ ಭೂಧರಯಂತ್ರದಲ್ಲಿ ಪಾಕವ ಮಾಡುವದು. ಭೂಧರಯಂತ್ರವೆಂತೆಂದರೆ ಭೂಮಿಯಲ್ಲಿ ಗೇಣು ಆರಂಗುಲ ಉದ್ದ ಚೌಕವಾಗಿ ಹಳ್ಳವ ತೆಗೆದು ಆ ಹಳ್ಳದಲ್ಲಿ ಸಂಪುಟಿಸಿದ ಶ್ರಾವೆಯನಿರಿಸಿ ಆ ಶರಾವೆ ಮುಳುಗಿಯೂ ಮೇಲೆ ಎರಡಂಗುಲ ಪ್ರಮಾಣ ಪರ್ಯಂತ ಮಳಲ ತುಂಬಿ ಮೇಲೆ ಕಾಡ ಬೆರಣಿಯ ತುಂಬಿ ಪುಟವ ಹಾಕುವುದು, ಇದು ಭೂಧರಯಂತ್ರವೆನಿಸಿಕೊಂಬುದು (ವೈದ್ಯಶಾ. I, ೬೬). [ಸಂ.]

**ಭೂಧವ** (ನಾ). ಅರಸು; ರಾಜ: ಅವನಿಪತಿ ಕೇಳ್ತನ್ನ ನಿಜಭಾಗ್ಯವನು ರಕ್ಷಿಸಿಕೊಂಬುದಕೆ ಭೂಧವರ ವಿಶ್ವಾಸತ್ವ ಬೇಕೆಲ್ಲರಿಗೆ (ತಮ್ಮಣ್ಣ. ೪-೨೦). [ಸಂ.]

**ಭೂಧ್ರ** (ನಾ). ಬೆಟ್ಟ; ಪರ್ವತ: ತತ್ತ್ತಾಪವಲ್ಲರಿ ರವಿರೋಚಿಯೆಂಬ ವಿಷದಿಂ ದಶದಿಕ್ಕನೆ ಪರ್ಬಿ ಪೆತ್ತುದೋ ಖರಕರಪುಷ್ಪಮುಂ ಕನಕಭೂಧ್ರಬೃಹತ್ಫಳಮುಂ ಮಹೀಶನಾ (ಲೀಲಾ. ೩ ೩). [ಸಂ.]

**ಭೂನಾಗ** (ನಾ). ೧. ಭೂಮಿಯಲ್ಲಿರುವ ಒಂದು ಬಗೆಯ ಹುಳು; ಎರೆಹುಳು: ಭೂನಾಗನಾಕೃತಿಯನು ವ್ಯಾಳೇಶನ ಹೋಲಿಸಿದರೆ ವ್ಯಾಳೇಶನಾಗಲಱಿವುದೆ (ಜಸವ. ೩೨೯); ಶಂಬೂಕ ಮಾತೃವಾಹ ಶಂಖಶುಕ್ತಿ ಗಂಡುವಾಳ ಜಲೂಕ ಭೂನಾಗಾ ಪಾದೋದರಕ್ರಿಮ್ಯಾದಿ ದ್ವೀಂದ್ರಿಯಗಳ್ (ತತ್ತ್ವಸೂ. ೪೮). ೨. ಒಂದು ಬಗೆಯ ಮರ: "ಭೂಮಿಲತಾ–ಭೂನಾಗ" (ಚಿಕಂ. ೦೦೩); ಬೆಟ್ಟದಾವರೆಮರಂ ಭೂನಾಗ ಚಾಂಪೇಯಮುಂ . . . ಇರ್ದುಂ (ಹರಿಶ್ಚ. ೬-೪೬). ೩. ಪಾದರಸದಂತಿರುವ ಒಂದು ಬಗೆಯ ಧಾತು; ಕ್ಷಿತಿನಾಗ: "ಭೂಜಂತು – ಭೂನಾಗ" (ಚಿಕಂ. ೦೦೦).

**ಭೂನಾಗಕಲ್ಕ** = ಭೂನಾಗವನ್ನು ಸೇರಿಸಿ ಮಾಡಿರುವ ಗಟ್ಟಿನಂತಹ ಔಷಧದ್ರವ್ಯ: ಭೂನಾಗಕಲ್ಕ ಒಂದು ಪಲ, ಮೆಣಸು ನಾಲ್ಕು ಪಲ, ಬೆಳ್ಳುಳ್ಳಿ ಒಂದು ಪಲ ಪೂರನು ಕಲ್ಕವ ಮಾಡಿ (ಚಿಕಂ. ೨೦). [ಸಂ.]

**ಭೂನಾಗಸತ್ತ್ವ** (ನಾ). ೧. ಎರೆಹುಳುವಿನ ಸಾರ. ೨. ಪಾದರಸದಂತಹ ಒಂದು ಬಗೆಯ ಧಾತುವಿನ ಸತ್ತ್ವ: ಗರುಡಪಂಚಾಕ್ಷರಿಯ ಮಂತ್ರೋಚ್ಚಾರಣೆಯಲಿ ಭೂನಾಗಸತ್ತ್ವದ ಬೆರಳ ಮುದ್ರಿಕೆಗಳಲಿ . . . ವಿಷಸಂಹರಣ ವಿವಿಧೋಪಾಯದಲಿ ನೃಪವರರು ನಿಂದುದು (ಕುಮಾರವ್ಯಾ. ೨೩-೨೨); P ಎರೆಹುಳುವನ್ನು ಸುಟ್ಟು ಆ ಭಸ್ಮವನ್ನು ಹಾವಿನ ವಿಷದ ಪರಿಹಾರಕ್ಕಾಗಿ ಉಪಯೋಗಿಸುತ್ತಾರೆ ಎಂದು ಹೇಳಲಾಗುತ್ತದೆ. ಭೂನಾಗವೆಂದರೆ ಭೂಮಿಯಲ್ಲಿ ಸಿಗುವ ಪಾದರಸದಂತಹ ಒಂದು ವಸ್ತು. ಇದಕ್ಕೆ ವಜ್ರವನ್ನು ನಾಶಪಡಿಸುವ ಗುಣವಿದ್ದು, ಇದರ ಸತ್ತ್ವವು ನಾಗರಹಾವಿನ ವಿಷವನ್ನು ಪರಿಹರಿಸುತ್ತದೆ ಎಂಬ ಬೇರೆ ರೀತಿಯ ವಿವರಣೆಯೂ ಇದೆ. [ಸಂ.]

**ಭೂನಾಥ** (ನಾ). ಭೂಮಿಯ ಒಡೆಯ; ಅರಸ; ರಾಜ: ಭೂನಾಥಂ ಮದ್ರರಾಜನನಿಂತೆಂದಂ (ಶಂಕಥಾ. ೦೩-೨೦ ವ); ಇಳೆಯ ಭೂನಾಥರೊಳು ಸತ್ಯರಾರೆಂದು ಬೆಸಗೊಂಡಡೀ ನಾಡ ಮಾತು ಪಾಜುತ್ತರವೆ (ಹರಿಶ್ಚ. ೨-೦೩). [ಸಂ.]

**ಭೂನಿಂಬ** (ನಾ). ಒಂದು ಬಗೆಯ ಸಸ್ಯ: ನೆಲಬೇವು: "ಕಿರಾತತಿಕ್ತಃ, ಭೂನಿಂಬಃ, ಅನಾರ್ಯತಿಕ್ತಃ – ೩ ನೆಲಬೇವು. ಇದರಲ್ಲಿ ದೇಶಾವರವನ್ನೇ ಚಿರಾಯಿತವೆನ್ನುವರು" (ಸಿದ್ಧಾಂತ ೨೪೩); ಭೂನಿಂಬ . . . ಕಷಾಯವಿಕ್ಕಿ ಕೊಡಲು . . . ಪುರಾಣಜ್ವರ ಸಹ ಮಾಣ್ಗುಂ (ಕಳವೈ. ೦೨೩). [ಸಂ.]

**ಭೂನೆಲ್ಲಿ** (ನಾ). ಒಂದು ಬಗೆಯ ಗಿಡ; ನೆಲನೆಲ್ಲಿ ಗಿಡ: "ತಾಮಲಕಿ – ಭೂನೆಲ್ಲೀಗಿಡ" (ಗಂಗಾಮ. ೦೩೦). [ಭೂ + ನೆಲ್ಲಿ$_1$]

**ಭೂಪ** (ನಾ). ೧. ಭೂಮಿಯನ್ನು ಪಾಲಿಸುವವನು; ದೊರೆ; ಅರಸ: "ರಾಜಾ . . . ಭೂಪಃ, ಮಹೀಕ್ಷಿತ್ – ೭ ಪ್ರಜೆಗಳನ್ನು ಸಲಹುವ ಕ್ಷತ್ರಿಯನಾದ ಅರಸಿಗೂ. . . ದಿವಾನ ಮುಂತಾದವರಿಗೂ ಹೆಸರುಗಳು" (ಸಿದ್ಧಾಂತ. ೨೩೪): ನಿನಗವಿನಾಭಿರವಾದುದೆ ವೈರಿಭೂಪರಿಂ (ಶಂಕಥಾ. ೦೩-೬೪); ಭೂಪರಿಗೆ ಬಡಹಾರುವರಿಗೆತ್ತಣದು ಸಖತನವೆಂದನಾ ದ್ರುಪದ (ಕುಮಾರವ್ಯಾ. ೬-೩೪); ಭಾಪುರೇ ಜಗದೀಶ ತಪಸಿಯ ರೂಪದಲಿ ತಲೆಗಡಿದೆಯೆಂದಾ ಭೂಪರೆಲ್ಲರ (ಕೌಶಿಕಾ. ೪೩-೪೬). ೨. (ಆಲಂ) ತನ್ನ ಇಚ್ಛೆಯಂತೆ ನಡೆಯುವವನು; ನಿರಂಕುಶವ್ಯಕ್ತಿ: ಅವನು ಭೂಪ, ಕುಡಕ, ಕಳ್ಳ, ಘಾಟಿ, ಬೇಟೆಗಾರ (ಮಲೆಗಾ. ೬೪); ಹಣ ತೆಗೆದುಕೊಂಡೇ ಬಂದಿದ್ದ ಭೂಪ (ನಾಕುತಂ. ೨೦೩). ೩. [ಗಣಿತ] ಹದಿನಾರು ಎಂಬ ಸಂಖ್ಯೆಯ ಸಂಕೇತ.

**ಭೂಪಮಾಂಧಾತ**=ರಾಜರ ಮಧ್ಯದಲ್ಲಿ ಮಾಂಧಾತಚಕ್ರವರ್ತಿಯಂತೆ ಹೆಸರಾಂತವನು; ಬಹಳ ಪ್ರಸಿದ್ಧನಾದವನು; ಒಂದು ಬಿರುದು: ತದಗ್ರಜಂ ಸಮಸ್ತಭುವನಜನವಿಖ್ಯಾತಂ ಚಾಳುಕ್ಯಾನ್ವಯಪ್ರಸೂತಂ ಪರಿಜನಪಾರಿಜಾತಂ ಭೂಪಮಾನ್ಧಾತಂ (ಕ್ಶಾಶ. XX, ೬೦-೬; 1109). [ಸಂ.]

**ಭೂಪಟ** (ನಾ). ಭೂಮಿಯ ಪ್ರಕೃತಿಲಕ್ಷಣಗಳನ್ನು, ರಾಜಕೀಯ ವಿಭಾಗ ಮೊದಲಾದ ವಿವರಗಳನ್ನು ಗುರುತಿಸಿರುವ ನಕ್ಷೆ.—ಪಟ: ಭೂಪಟಗಳಲ್ಲಿ ಒಂದು ಖಂಡದ ಅಥವಾ ದೇಶದ ಆಕಾರವನ್ನು ಸಾಕಾದಷ್ಟು ದೊಡ್ಡದಾಗಿ ಬರೆದು ಬೇಕಾದಷ್ಟು ವಿಷಯಗಳನ್ನು ಗುರುತು ಮಾಡಿ ಏಕಕಾಲದಲ್ಲಿ ಕಣ್ಣಿಗೆ ಕಾಣುವಂತೆ ತೋರಿಸಬಹುದು (ಭೂಠಕ. II. ೨೬); ಈ ರೇಖೆಗಳನ್ನು ನೋಡಿದ ಕೂಡಲೆ ಭೂಪಟವನ್ನು ನೋಡಿರುವ ಯಾರಿಗಾದರೂ ಅಕ್ಷಾಂಶ ರೇಖಾಂಶಗಳ ನೆನಪು ಬರುತ್ತದೆ (ನಕ್ಷತ್ರ. ೩೨). [ಸಂ.]

**ಭೂಪತಿ** (ನಾ). ೧.=ಭೂಪ ೧: ಮಗನಟಲೊಂದು ಭೂಪತಿಯ ತಮ್ಮನೊಳಾದಟಲೊಂದು . . . ತನ್ನನಾವಗೆಯುರಿಯುಬ್ಬವೋಲಳುರೆ (ಶಂಕಥಾ. ೦೨-೦೭೦): ಈತ ಧನುವಿನಲೀತ ಖಡ್ಗದಲೀತ ಪರಿಘದಲೀತ ಕುಂತದಲೀತ ಬಲುಹಂದಂಥಭೂಪತಿಗಜುಹಿದನು ವಿದುರ (ಕುಮಾರವ್ಯಾ. ೮-೭-೨೪);

ಪಾಪಿಯಾವವ ಭೂಪತಿಯಾದಾನೇ ? (ಗಾದೆ). ೨. = ಭೂಪ ೨ : ಆ ಭೂಪತಿ ಎಲ್ಲಿಗೆ ಹೋಗಿದ್ದಾನೆಂಬುದು ಅವನ ತಾಯಿಗೂ ಗೊತ್ತಿರಲಿಲ್ಲ (ಹುಲಿಕ್ಷ. ೨೦೪). ೩. ಹಿಮಾಲಯ ಪರ್ವತದಲ್ಲಿ ದೊರಕುವುದೆನ್ನಲಾದ ಗಡ್ಡೆಯುಳ್ಳ ಒಂದು ಬಗೆಯ (ಔಷಧೀಯಗುಣವುಳ್ಳ) ಸಸ್ಯ : 'ಭೂಪತಿಮಾತ್ರೆ' ಪರಾ. [ಸಂ.]

**ಭೂಪತಿಮಾತ್ರೆ** (ನಾ). [ವೈದ್ಯಶಾ] ಭೂಪತಿ ಎಂಬ ಸಸ್ಯದಿಂದ ತಯಾರಿಸಿದ ಒಂದು ಬಗೆಯ ಗುಳಿಗೆ : ಭೂಪತಿಮಾತ್ರೆಯನು ಮೆಣಸು ಚವ್ಯ ಜೇನುತುಪ್ಪನಲ್ಲಿ ಸೇವಿಸಲು ಮಾಣ್ಗು (ನಾಭಿವಾತಲಕ್ಷಣ) (ವಾತಾ. ೧೩-೬). [ಸಂ. ಭೂಪತಿಮಾತ್ರಾ]

**ಭೂಪಥ** (ನಾ). ಭೂಮಿಯು ಸೂರ್ಯನನ್ನು ಸುತ್ತುವ ಮಾರ್ಗ : ಭೂಮಿ ಸೂರ್ಯನ ಸುತ್ತಲೂ ಸುತ್ತಿ ಬರುವ ದಾರಿಗೆ ಭೂಪಥವೆಂದು ಹೆಸರು (ಖಗೋಳ. ೦೩); ಸೂರ್ಯನನ್ನು ಬಳಸಿರುವ ಭೂಪಥ ಒಂದೇ ಸಮತಲದಲ್ಲಿದೆ (ಅಣಕ. ೦೬). [ಸಂ.]

**ಭೂಪದಿ** (ನಾ). ಒಂದು ಬಗೆಯ ಮಲ್ಲಿಗೆ : "ತೃಣಶೂನ್ಯಾ, ಮಲ್ಲಿಕಾ, ಭೂಪದೀ, ಶೀತಭೀರುಃ– ೪ ಮಲ್ಲಿಗೇಗಿಡದ ಹೆಸರುಗಳು" (ಸಿದ್ಧೌಷ. ೦೨೮). [ಸಂ. ಭೂಪದೀ]

**ಭೂಪಾಲ**, ಭೂಪಾಳ (ನಾ). ೧. ಭೂಮಿಯನ್ನು ಕಾಪಾಡುವವನು ; ಅರಸು ; ರಾಜ : ಜಾತಮಾತ್ರಕೆ ಜನನ ಮರಣದ ಭೀತಿ ಬೆಂಬಿಡದಂತೆ ಗೋತ್ರಜಭೀತಿ ಭೂಪಾಲರಿಗೆ ಪಿರಿದಹುದೆಂದನಾ ಶಕುನಿ (ಕುಮಾ.ಭಾ. ೬-೪೪). **ಭೂಪಾಳ** : ೧. ಏಕಾಕಿಯೆ ಆಗಿ ದೇವ ರಿಪುಭೂಪಾಳರ್ಕಳೊಳ್ ಕಾದುವೈ (ಶಬ್ದಮ. ೦೩-೩೦). ೨. [ಸಂಗೀತ]ಒಂದು ರಾಗದ ಹೆಸರು: ಭೂಪಾಳಾದಿ ರಾಗಂಗಳ್ (ಸೌಗಂಧಿ. ೦೪೭-೦೬). [ಸಂ.]

**ಭೂಪಾಳ** 'ಭೂಪಾಲ' ನೋ.

**ಭೂಪಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮನುಜರು ಭೂಪಾಳಿ ಧನ್ಯಾಸಿಗಳ ಪಾಡೆ ಇನ ಮೂಡವೆಟ್ಟನೊಳ್ ಮೂಡೆ (ಶೀವಂಶಾಂ. ೦೬-೩೪) : ಬಳಿಕ ಸಮಸ್ತರಾಗಂಗಳೊಳಗೆ ರಾಮಕ್ರಿಯೆ ಭೂಪಾಳಿ . . . ಮಧ್ಯಮಾವತಿಯೆಂಬ ಮೂವತ್ತಾರು ರಾಗಂಗಳೇ ಮುಖ್ಯವಾಗಿ (ಐವೇಕ. ೨೩೪) ; ಸಂಗೀತಚಯದಿಂದೊಲಿದು ರತಿವೆತ್ತು ಭೂಪಾಳಿಯಂ ಪಾಡೆ (ಪವಮಾನ. ೦೪-೩೦). [ಸಂ. ಭೂಪಾಲೀ]

**ಭೂಪುಟ** (ನಾ). [ವೈದ್ಯಶಾ] ಔಷಧಿಗಳನ್ನು ನೆಲದಲ್ಲಿ ಪುಟಕ್ಕೆ ಹಾಕುವುದು : ಹಾವುಮೆಕ್ಕೆಕಾಯಿಗಳನ್ನು . . . ಏಳು ದಿನ ಭೂಪುಟದಲ್ಲಿರಿಸಿ ತೆಗೆದು . . . ಒಂದೊಂದು ಹೋಳ ಮೆಲ್ಲಲು ಕೆಮ್ಮು ಉಬ್ಬಸ ಪರಿಹರ (ಸಕವೈ. ೨೦೬); ತಾಪಿಸುತೆ ತಣಿಯಿಸುತೆ ಕಲುಕಿಸುತೆ ಋತುವೈದ್ಯ ಭೂಪುಟದಿ ಜೀವರಸಗಳ ಪಚಿಸುವಂತೆ (ಕುಂಕುಕ. ೦೩೪). [ಸಂ.]

**ಭೂಪುತ್ರಿ** (ನಾ.) ಭೂಮಿಯ ಮಗಳು ; ಸೀತಾದೇವಿ : ಭೂಪುತ್ರಿ ಸಂನ್ಯಾಸಿಯೆಂದಡಿಯಿಟ್ಟಳ್ ದಶಕಂಠನುಯ್ದುವಳನಂದಾಯುಷ್ಯಮಂ ನೀಗಿದಂ (ಸೋಮೇಶ. ೪೩). [ಸಂ. ಭೂಪುತ್ರೀ]

**ಭೂಪೇಂದ್ರ** (ನಾ). ರಾಜರುಗಳ ಒಡೆಯ ; ಚಕ್ರವರ್ತಿ : ಭೂಪೇಂದ್ರ ಬೆಸಸು ಬೆಸಸೆಮ್ಮಂ ನೀನೆಂದುದನೆ ಬಯಸಿ ತೀರ್ಚಲ್ ಬಂದೆವು (ಶಾಂತಿಪು. ೪-೬೦); ಮಾತೃನಿಕಟದರ್ಭಕನಾದಂ ಸಾಂದ್ರಾನಂದಮನಾ ಭೂಪೇಂದ್ರನ ಹೃನ್ನಯನಜಲರುಹಕ್ಕೊದವಿಸಿದಂ (ಚಂದ್ರಪು. ೩-೯೪). [ಸಂ.]

**ಭೂಪ್ರದಕ್ಷಿಣ** (ನಾ). ಭೂಮಿಯನ್ನು ಸುತ್ತು ಹಾಕುವುದು : ನೂಜಿಪ್ಪತ್ತು ವೇಳೆ ಭೂಪ್ರದಕ್ಷಿಣವ ಮಾಡಿದರಿಲ್ಲ ಕಾಣೆರಣ್ಣ (ಸಿದ್ಧೇಶ. ೮೩-೨೩೪). [ಸಂ.]

**ಭೂಪ್ರದಕ್ಷಿಣೆ** (ನಾ). = ಭೂಪ್ರದಕ್ಷಿಣ : ದೇವಸ್ಥಾನವನ್ನು ಮೂರು ಸಲ ಪ್ರದಕ್ಷಿಣೆ ಮಾಡಿದರೆ ಮೂರು ಸಲ ಭೂಪ್ರದಕ್ಷಿಣೆ ಮಾಡಿದಷ್ಟು ಪುಣ್ಯ ಬರುತ್ತದೆ ಎಂದು ಹೇಳುತ್ತಾರೆ (ಲೋಕ). [ಸಂ. ಭೂಪ್ರದಕ್ಷಿಣ]

**ಭೂಬಲ** (ನಾ). ೧. ರಾಜನಿಗಿರುವ ರಾಜ್ಯದ ಬಲ, — ಶಕ್ತಿ : ಬಲಕ್ಕೆ — ಆಳ್ಬಲ . . . ಭುಜಬಲ, ಭೂಬಲ (ಕವಿರ. ೨೯೭ ಕ್ರ.ಪೂ.). ೨. [ಜ್ಯೋತಿ] ಜಾತಕನ ಅಧೀನಕ್ಕೆ ಬರುವ ನಿವೇಶನ, ಜಮೀನು ಮುಂತಾದುವುಗಳಿಂದ ಒದಗುವ ಸುಖ ಇತ್ಯಾದಿ : ಆ ಪ್ರತಾಪ ಚಕ್ರವರ್ತಿ ಸಿಂಘಣರಾಯನೆಂಬ ಯಾದವನಾರಾಯಣನ ಅವತಾರಕ್ಕೆ ತಾರಾಬಲಂ ಅಯಿಶ್ವರ್ಯ್ಯಕ್ಕೆಯಾದಿತ್ಯಬಲಂ ಚತುರೋಪಾಯಕ್ಕೆ ಚಂದ್ರಬಲಂ ಭೋಗಕ್ಕೆ ಭೂಬಲಂ ದಿಗುವಿಜಯೋದ್ಯೋಗಕ್ಕೆ ಯೋಗಿಣೀಬಲಂ (ಸೌಇಇ. XX. ೨೨೨-೦೦; 1244). [ಸಂ.]

**ಭೂಭರ** (ನಾ). ೧. ಭೂಮಿಯ ಹೊರೆ, — ಭಾರ : ದಿತಿಸುತರಂ ಕಂಸಾದ್ಯರನತಿಬಲರಂ ಕೊಲ್ವೆನಿಬೀವುವೆಂ ಭೂಭರವಂ (ಜಗಂ. ೦-೭೪). ೨. ರಾಜ್ಯವನ್ನು ಆಳುವ ಹೊಣೆ; ರಾಜ್ಯಭಾರ : ಸುತನೊಳಜಿತಂ ಜಯಂ ವಿಸ್ತೃತಮಂ ಭೂಭರಮನೆಯ್ದೆ ಯೋಜಿಸಿ ನಿಶ್ಚಿಂತತೆಯ ನೊಳಕೆಯ್ದಂ (ಚಂದ್ರಪು. ೬-೩). [ಸಂ.]

**ಭೂಭಾಗ** (ನಾ). ಭೂಮಿಯ ಭಾಗ,— ಪ್ರದೇಶ : ಭೂಭಾಗ ನಭೋವಿಭಾಗಪರಮುಳ್ಳುದೆ ತಳ್ತಿಜಿದರ್ ವಿರೋಧಿಗಳ್ (ಶಂಕರಾ. ೦೦-೦೪೦); ಪ್ರವಿಲಸದ್ವಾಕ್ಸುಂದರೀಕಂಠಕುಮಾಂಕಿತಕೇಳೀಭವನಾಚಿರೋಪಮಮುಖಂ ಭೂಭಾಗದೊಳ್ ನಾಕಿಗಂ (ಕಾವ್ಯಾವ. ೭೭೪) ; ಭೂಭಾಗದ ಕೆಲವು ಕಡೆಗಳಲ್ಲಿ ತುಂಬಾ ಶೀತ (ಜಾಂಕ್ರ. I. ೨೦). [ಸಂ.]

**ಭೂಭಾರ** (ನಾ). = ಭೂಭರ ೧ : ಭೂಭಾರಚ್ಛೇದವಿನೋದಿ ಕೃಷ್ಣನೆಸಗೀಗಾನಂದಸಂದೋಹಮಂ (ಜಗಂ. ೦-೦). [ಸಂ.]

**ಭೂಭಾರಕ** (ನಾ). ಭೂಮಿಗೆ ಭಾರವಾಗಿರುವವನು : ಸದಾಚಾರ ಸದ್ಭಕ್ತಿಯಿಲ್ಲದವರನೊಲ್ಲನಯ್ಯಾ . . . ನಿಚ್ಚನಿಚ್ಚ ಪ್ರಾಯಶ್ಚಿತ್ತರನೊಲ್ಲ ಕೂಡಲಸಂಗಮದೇವ ಭೂಭಾರಕರ (ಬಸವ. ೬೩೨). [ಸಂ.]

**ಭೂಭಾರಕತನ** (ನಾ). ಭೂಮಿಗೆ ಭಾರವಾಗುವಿಕೆ : ಪೊಡವಿಪನ ರಾಘವನ ಧನುವಿಂ ಕಡಿವಡೆದುಳಿದ ಗಂಧಮಾದನದಡರುವಿಕೆ ಕಾನೆನಿತು ಭೂಭಾರಕತನದ ಮಾತು (ಐರಾ. ೮೬-೩೦). [ಭೂಭಾರಕ +— ತನ]

**ಭೂಭುಜ** (ನಾ). ದೊರೆ; ಅರಸಂ; ರಾಜ : ಕ್ಷಿತಿಯೊಳಗುಳ್ಳ ಭೂಭುಜರ ಬಿತ್ತು ಮೊದಲ್ಗಿಡೆ ಮುನ್ನಮೇಕವಿಂಶತಿ ಪರಿಸಂಖ್ಯೆಯಿಂ ತವಿಸಿ (ಶಂಕರಾ. ೨-೪೩); ಚತುರಬ್ಧಿ ಮೇಖಲಾವಳಯಿತ ಭೂಮಿಗಾವನೆಣೆಯಂ . . . ಶೂದ್ರಕನೆಂಬ ಭೂಭುಜಂ (ಕಾದಂಪೂ. ೬); ರಾಜ್ಯಮನಾರಾಳ್ದರೊ ಪದ್ಮರಾಜನವೊಲುರ್ವಿಭಾಗದೊಳ್ ಭೂಭುಜರ್ (ಧನ್ಯಪು. ೩-೨೦). [ಸಂ. ಭೂಭುಜ್]

**ಭೂಭೃತ್ತು** (ನಾ). ೧. ಬೆಟ್ಟ; ಪರ್ವತ : ಎತ್ತಲೆಂದಬಾಯದು ಮಹಾಗಜ ಮುತ್ತಿದಾ ದ್ವಿಪಕರಗಳನು ಭೂಭೃತ್ತಟದ ಹೆಬ್ಬಾವುಗಳ ಹೋಲಿಕೆಯೊಳೊಪ್ಪಿದುವು (ತಿಮ್ಮಭಾ. ೩-೬೩). ೨. ಅರಸಂ; ರಾಜ : ಅಂತು ಪಾಂಡುರಾಜನಧಿಕತೇಜನುಮುಪನತವೈರಿಭೂಭೃತ್ಸಮಾಜನುಮಾಗಿ ನೆಗಳುತ್ತಿರ್ದಂ (ಶಂಕರ್ತ. ೦-೦೦೦ ಪ). ೩. ವಿಷ್ಣು. ೪. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ. [ಸಂ. ಭೂಭೃತ್]

**ಭೂಭೃದ್ವರ** (ನಾ). ೧. ರಾಜರಲ್ಲಿ ಶ್ರೇಷ್ಠನಾದವನು; ರಾಜಶ್ರೇಷ್ಠ : ಅಂತಿರ್ಪ ಭೂಭೃದ್ವರನೊಳ್ ಸೈಪಿನ ಬಿತ್ತಿನಂತೆ ಶ್ರೀಮತಿಯೆಂಬೊಂದು ಪೆಣ್ಮಣಿ ಪುಟ್ಟಿದುದು (ಅದ್ಭುತ. ೭-೨೩). ೨. ಬೆಟ್ಟಗಳಲ್ಲಿ ಶ್ರೇಷ್ಠವಾದುದಂ. ೧, ೨ : ಪದುಮದ ಸಿರಿಯನು ದೊರೆಕೊಳುತ ಮತ್ತದೆ ಸಿರಿಯನೆ ಸೋಲಿಸುತ ಭೂಭೃದ್ವರರಾ ತಲೆಯಲೆ ಮೆರೆಯುತ ಮೋಣಮಾರರ ಶಿರಭಾಗದಲಿ ಆ ಎರಡೂ ದಿನಪನ ಪಾದಗಳು ಸೌಖ್ಯವ ತರಲೆಮಗನವರತ (ಕೃಷ್ಣಶೋ. ೪೬). [ಸಂ.]

**ಭೂಭೃನ್ನಾಥ** (ನಾ). ೧. ರಾಜರುಗಳ ಒಡೆಯ ; ಚಕ್ರವರ್ತಿ. ೨. ಪರ್ವತಗಳ ಒಡೆಯ ; ಹಿಮಾಚಲ. ೧ . ೨ : ವಿಪುಳತರಕಟಕ ಸುದ್ಯದ್ದ್ವಿಪಹ[ರಿ] ಮಹೀಜನಿಷೇವ್ಯನುನ್ನತಪಾದಂ ವ್ಯಪನೀತ ಶ್ರೀಫಲದಂ ವಿಪರೀತಕನಪ್ಪನಂತು ಭೂಭೃನ್ನಾಥಂ (ಶಬರ. ೩-೧೦೦). [ಸಂ.]

**ಭೂಭ್ರಮಣ** (ನಾ). ೧. ಭೂಮಿಯನ್ನು ಸುತ್ತುವುದು; ದೇಶಸಂಚಾರ ಮಾಡುವುದು. ೨. ಭೂಮಿಯು ತನ್ನ ಅಕ್ಷದ ಮೇಲೆ ತಿರುಗುವಿಕೆ: ಇನ್ನು ಒಂದು ದಿನಕ್ಕೆ ೨೪ ಘಂಟೆಗಳು, ಒಂದು ಭೂಭ್ರಮಣದ ಕಾಲ ಇದಕ್ಕಿಂತ ಸುಮಾರು ೪ ನಿಮಿಷಗಳು ಕಡಮೆ ಎಂಬ ವಾಕ್ಯಗಳಲ್ಲಡಗಿರುವ ಸಂಬಂಧವನ್ನು ತಿಳಿದುಕೊಳ್ಳಬೇಕಾಗಿದೆ (ನಕ್ಷತ್ರ. ೩೯). [ಸಂ.]

**ಭೂಮ** (ಗು). ೧. ಅತಿಶಯವಾದ ; ಮಹತ್ತರವಾದ : ಕೈಕೊಳ್ವ ನೊಂದನೀ ಭೂಮಸಾಧನೆಗಳಲಿ ಮೇಲಾದುದಂ ! (ಶ್ರೀರಾಮ. ೬೨೪-೪೨೮). (ನಾ). ೨. ಹೆಚ್ಚಳ ; ಅತಿಶಯ ; ಸಮೃದ್ಧಿ : ಅಲ್ಪವೊ ಭೂಮವೊ ಹಿರಿದೋ ಕಿರಿದೋ ಸಿಹಿಯೋ ಕಹಿಯೋ (ಅಶ್ವ. ೩೦-೦); ಶ್ರೀಗುರುವಿನ ಐಹಿಕವ್ಯಾಪಾರದ ತ್ಯಾಗದಲ್ಲಿಯೂ ಭೂಮವಾದ ದರ್ಶನವನ್ನೇ ಪಡೆದಿದೆ ಕವಿಯ ಹೃದಯ (ಶಾಂತಿ. ೬೬). ೩. ಮದುವೆಯ ದಿನದಂದು ವಧೂವರರೂ ಎರಡುಕಡೆಯ ಬೀಗರೂ ಒಂದೇ ಪಂಕ್ತಿಯಲ್ಲಿ ಕುಳಿತು ಮಾಡುವ ಭೂರಿಭೋಜನ,–ಮೃಷ್ಟಾನ್ನದ ಊಟ : ಈರ್ವರನು ಸ್ಥಿರದಂಪತಿಗಳೆನಿಸಿ ನಿಜಮಂದಿರಕೆ ಕರೆದೊಯ್ದು ಸದ್ಗೋತ್ರ ಮುತ್ತೈದೆಯರ್ವೆರಸಿ ಭೂಮಾದಿಗಳನು ತೀರ್ಚಿ (ಪಪಮೋ. ೩೪-೧೦); ಭೂಮ ಮಾಡುವ ಲಗ್ನದ ನೇಮದ ಮುಂದೊರಿಸೆ ಕಾಮಿನಿಯರು ತಂದರು ಸಾಹಿತ್ಯಪದಗಳ ಪ್ರೇಮದಿ ಹಾಡಿ ಹರಸಿದರು (ಸಿದ್ಧ. ೨೦-೧೩) ; ಓಲಗ ಊದಿಸಿ ಭೂಮ ಹಾಕಿದ್ದು ಮುಗಿದು ಹೋಯಿತು ! (ಶಿಂದೆ. ೪೮). ೪. ಆಹಾರ : ಹೋಮ ಸಾಕು ಭೂಮ ಬೇಕು ಭೂದೇವಿಯ ಬೇಡಿಕೆ (ಅರಳು. ೨೯೮-೯). ೫. ವಿರಾಟ್ಪುರುಷ ; ಪರಮಾತ್ಮ: ಪರಬ್ರಹ್ಮ: ಎಲ್ಲಿ ಮತ್ತೊಂದನ್ನು ಕಾಣುವುದಿಲ್ಲವೋ . . . ಮತ್ತೊಂದನ್ನು ಅರಿಯುವುದಿಲ್ಲವೋ ಅದು ಭೂಮವು (ಬ್ರಹ್ಮಶಾ. ೧೪೪) ; ವ್ಯಕ್ತಿಯಾದವನು ತನ್ನ ಜೀವನದ ಎಲ್ಲ ವ್ಯವಹಾರಗಳಲ್ಲೂ ಭೂಮದರ್ಶನದ ಸಾಹಸಕ್ಕೆ ಪ್ರಯತ್ನಿಸಬೇಕು (ಜುಕಾರ. ೨ ಬಿ:೪೬); ಅವರು ಭೋಗವೈಭವಗಳ ನಡುವೆ ಬಾಳಿದರೂ ಅವರ ದೃಷ್ಟಿ ಅದರಾಚೆಗಿರುವ ಭೂಮದೆಡೆಗೆ (ಶಂಬೀ. ೩೮). ೬. ಭೂಮಿ; ಧರಣಿ.

ಭೂಮದ ಪದ=ಭೂಮದ ಊಟ ಮಾಡುವಾಗ ಎರಡು ಕಡೆಯ ಬೀಗರು ವಿನೋದಕ್ಕಾಗಿ ಪರಸ್ಪರರ ಮೇಲೆ ದೋಷಾರೋಪಣೆ ಮಾಡುತ್ತಾ ಹಾಡುವ ಹಾಡು,– ಜರೆಯುವ ಹಾಡು : ಕೆಲ ರಸಿಕರಮಣಿಯರು ಮರೆತಿರುವ ಊಟಣೆ ಹಾಡುಗಳನ್ನು ಭೂಮದ ಪದಗಳನ್ನು ನೆನಪು ಮಾಡಿಕೊಳ್ಳುವುದರ ಸಲುವಾಗಿ (ದೇಯಾಜ. ೧೫೨). ಭೂಮದ ಹಾಡು=ಭೂಮದ ಪದ : P ವಧೂವರರಿಗೆ ಭೂಮದ ಸಂದರ್ಭದಲ್ಲಿ ಆರತಿ ಎತ್ತುವಾಗ ಕೃಷ್ಣ–ರುಕ್ಮಿಣಿ, ಶಿವ–ಪಾರ್ವತಿ ಮೊದಲಾದ ದೇವತೆಯರಿಗೆ ಹೋಲಿಸಿದಂತೆ ಹೇಳುವ ವಿವರಣೆಗಳಿವೆ. ಆಧುನಿಕಸಮಾಜದಲ್ಲಿ ಮದುವೆಯ ಸಂದರ್ಭದಲ್ಲಿ ಹೇಳುವ 'ಬೀಗರಹಾಡು' ಗೂ 'ಭೂಮದ ಹಾಡು' ಎಂದು ಕರೆಯುತ್ತಾರೆ : ಭೋಜನ ಮಾಡುತ್ತಿರುವಾಗ ಎರಡೂ ಪಕ್ಷದ ಸ್ತ್ರೀಯರು ಪರಸ್ಪರರ ಮೇಲೆ ಕೋಟಿಗಳನ್ನು ಮಾಡಿ ಭೂಮದ ಹಾಡು ಹಾಡಹತ್ತಿದರು (ತುಳಸೀ. ೩೨); ಸುಂದರಕ್ಕ ಇದ್ದರೆಂದೇ ಭೂಮದ ಹಾಡಿನಲ್ಲಿ ಗಂಡಿನವರದ್ದೇ ಮೇಲುಗೈ ಆಯಿತು (ವೃಶಿ. ೨೩). ಭೂಮದೂಟ= ಮದುವೆಯ ಸಂದರ್ಭದಲ್ಲಿ ವಧೂವರರೂ ಎರಡು ಕಡೆಯ ಬೀಗರೂ ಒಂದೇ ಪಂಕ್ತಿಯಲ್ಲಿ ಕುಳಿತು ವಿನೋದದಿಂದ ಮಾಡುವ ಊಟ,–ಭೋಜನ: P ಈ ಸಂದರ್ಭದಲ್ಲಿ ವಧೂವರರ ಮುಂದೆ ಅಗ್ರದ ಬಾಳೆಯೆಲೆಗಳನ್ನು ಜೋಡಿಸಿ ರಂಗವಲ್ಲಿ ಮುಂತಾದುವುಗಳಿಂದ ಅಲಂಕರಿಸಿ, ಎಲೆಗಳಿಗೆ ಅನೇಕ ಬಗೆಯ ಅಡುಗೆಗಳನ್ನು ಬಡಿಸುತ್ತಾರೆ. ಈ ಸಮಯದಲ್ಲಿ ಎರಡು ಕಡೆಯವರೂ ವಧೂವರರಲ್ಲಿ ಸಲಿಗೆಯನ್ನು ಹೆಚ್ಚಿಸಲು ಪರಸ್ಪರರ ಎಂಜಲು ತಿನ್ನಿಸುವ ವಿನೋದ ನಡೆಯುತ್ತದೆ. ಆಗ ಹಾಡುವ ಹಾಡುಗಳಲ್ಲಿ 'ಬೀಗರ ಹಾಡು'ಗಳನ್ನು ಹೇಳುವುದೂ ಉಂಟು : ನಾನಿನ್ನು ಬರ್ತೀನಿ ದೇವರೂ . . . 'ಉಂಟೇ, ರಾತ್ರಿ ಭೂಮದೂಟ ನೋಡಿಕೊಂಡು . . . ' (ದೂಬಿಲ್ಲ. ೧೩). [ಸಂ. ಭೂಮನ್]

**ಭೂಮಂಡಲ, ಭೂಮಂಡಳ** (ನಾ). ೧. (ಮಂಡಲಾಕಾರವಾದ) ಭೂಮಿ : ಧರಣಿ : ಪಾಂಡುರಂಗನ ಭಕ್ತರು ಭೂಮಂಡಲದೊಳಗೆ ಸುಳಿವ ಜಂಗಮಪುಂಡಳಿಗಳು ಕರಸಿದರು (ಬಸವ. ೪-೫); ಮಗನೆ ಸಕಲ ಭೂಮಂಡಲಂ ದ್ವಿಜರದಲ್ಲವೆ (ಕೈಶಿಭಾ. ೨-೬೩) ; ಈ ಭೂಮಂಡಲದ ಸುತ್ತಳತೆ ೨,೫೨,೦೦೦ ಸ್ಟೇಡಿಯಂ ಎಂದು ಅವನು ಕಂಡುಹಿಡಿದ (ಭೂವಿಜ್ಞಾ. ೭). **ಭೂಮಂಡಳ** : ೨. ಸ್ಥಳ ; ಎಡೆ ; ಜಾಗ ; ಪ್ರದೇಶ : ಭೂನಾಥಂ ಪೊಕ್ಕಂ ಭವ್ಯಾನಂದನಸಮವಸರಣಭೂಮಂಡಳಮಂ (ಶಾಂತಿಪು. ೮-೧೫೬). [ಸಂ.]

**ಭೂಮಂಡಳ** ' ಭೂಮಂಡಲ ' ನೋ.

**ಭೂಮಂಡಳಪತಿ** (ನಾ). ಭೂಮಿಯ ಒಡೆಯ ; ರಾಜ: ಭೂಮಂಡಳಪತಿ ಬುಧಚಿಂತಾಮಣಿ ಜಿನಚಂದ್ರನಿರೆ ಸಭಾಮಂಡಳದೊಳ್ (ಶಾಂತಿಪು. ೬-೦). [ಸಂ. ಭೂಮಂಡಲಪತಿ]

**ಭೂಮತೆ** (ನಾ). ಹಿರಿಮೆ ; ಉದಾತ್ತತೆ ; ಮಹತ್ತ್ವ : ನಿನ್ನ ಈ ದಿವ್ಯ ನಿರ್ಲಕ್ಷ್ಯತಾಸ್ಥಿರತೆಯಂ ಭೂಮತೆಯ ಭವ್ಯತೆಯ ಬ್ರಹ್ಮಗಾಂಭೀರ್ಯಮಂ ದಯಪಾಲಿಸೆನಗೆ (ಅಗ್ನಿಹಂ. ೬೩). [ಸಂ. ಭೂಮತಾ]

**ಭೂಮಧ್ಯಪ್ರದೇಶ** (ನಾ). ಭೂಮಿಯ ಮಧ್ಯಭಾಗ : ಅಫ್ಘಾನಿಸ್ಥಾನ, ನೇಪಾಳ, ಲಾವೋಸ್ ಇಂತಹ ಭೂಮಧ್ಯಪ್ರದೇಶಗಳಿಗೇ(Land Locked Countries) ಇತರ ರಾಷ್ಟ್ರಗಳ ಮೂಲಕ ರೇವುಪಟ್ಟಣಗಳಿಗೆ ಹಾದು ಹೋಗುವ ಅನುಕೂಲ ಒದಗಿಸುವುದರಲ್ಲಿ ಇಕಾಫೆಯು ವಿಶೇಷ ಆಸಕ್ತಿ ವಹಿಸಿದೆ (ಅಂತಸಂ. ೫೩). [ಸಂ.]

**ಭೂಮಧ್ಯರೇಖೆ** (ನಾ). ಭೂಗೋಳವನ್ನು ಪೂರ್ವಪಶ್ಚಿಮವಾಗಿ ಎರಡು ಸಮಭಾಗಗಳಾಗಿ ವಿಭಜಿಸುವಂತೆ ಮಧ್ಯದಲ್ಲಿ ಕಲ್ಪಿಸಿರುವ ರೇಖೆ ; ಸಮಭಾಜಕವೃತ್ತ : " ಭೂಮಿಯ ಎರಡು ಧ್ರುವಗಳಿಗೂ ಸಮಾನದೂರದಲ್ಲಿರುವ ಭೂಮಿಯ ದೊಡ್ಡವೃತ್ತ ; ಸಮಭಾಜಕವೃತ್ತ; ವಿಷುವದ್ವೃತ್ತ ; ನಿರಕ್ಷರೇಖೆ; ಭೂಮಧ್ಯರೇಖೆ " (Equator. ೨೦೪೬) ; ಭೂಮಧ್ಯರೇಖೆಯಿಂದ ಬಡಗಕ್ಕೂ ತೆಂಕಣಕ್ಕೂ ಹೋದ ಹಾಗೆ ಗುರುತಿನ ಚಿಕ್ಕಿಗಳು. . . ದೃಷ್ಟಿಗೆ ಬೀಳಹತ್ತುತ್ತವೆ (ಮುಂಬಯಿ. ೪-೬೭); ಭೂಮಿಯು ಮೇರುಭಾಗದಲ್ಲಿ ಸ್ವಲ್ಪ ಚಪ್ಪಟೆಯಾಗಿಯೂ, ಭೂಮಧ್ಯರೇಖೆಯ ಸಮೀಪದಲ್ಲಿ ಸ್ವಲ್ಪ ಉಬ್ಬಿಕೊಂಡೂ ಇದೆ (ಭೂವಿಜ್ಞಾ. ೫). [ಸಂ. ಭೂಮಧ್ಯರೇಖಾ]

**ಭೂಮಧ್ಯರೇಷೆ** (ನಾ). = ಭೂಮಧ್ಯರೇಖೆ : ಭೂಮಧ್ಯರೇಷೆಯ ಮೇಲೆ ಯಾವಾಗಲೂ ಹನ್ನೆರಡು ತಾಸಿನ ದಿನಮಾನವಿರುತ್ತದೆ (ಮುಂಬಯಿ. ೪-೬೭). [ಸಂ. ಭೂಮಧ್ಯರೇಷಾ]

**ಭೂಮಾನ** (ನಾ). ೧. ಭೂಮಿಯ ತೂಕ : ಓಜಾಯಿತರೋಜೆಯೊಳವರದ ಭೂಮಾನಕ್ಕಂ ಸಕ್ಕಸಮನಾಗಿ ತೂಗಿದಂತೆ (ಅಪಂಪು. ೨-೩೦ ವ). ೨. ಮಲ್ಲಯುದ್ಧದ ನಿರ್ದಿಷ್ಟವಾದ ಎಲ್ಲೆಯುಳ್ಳ ಸ್ಥಳ ; ಕುಸ್ತಿಯ ಕಣ : ಅಖಾಡ: ಒರ್ವರೊರ್ವರಂ ಮೂದಲಿಸಿ ನುಡಿಯುತ್ತುಮಿರ್ವರುಂ ಭೂಮಾನದಳವಿಯೊಳ್ ಪರಿಯಲನುಗೆಯ್ವಾಗಳ್ (ಅಪಂಪು. ೧೦-೫೩ ವ). [ಸಂ.]

**ಭೂಮಾನುಭೂತಿ** (ನಾ). ಬ್ರಹ್ಮಸಾಕ್ಷಾತ್ಕಾರ : ಬ್ರಹ್ಮಾನಂದದ ಅನುಭವ : ಚೈತ್ರರವಿಯ ಸೌಂದರ್ಯವು ತಿಮ್ಮಯ್ಯನಂತಹವರಿಗೂ ಹೃದಯದಲ್ಲಿ ಭೂಮಾನುಭೂತಿ ಸಂಚಾರವಾಗುವಂತೆ ಮಾಡಿತ್ತು (ಮಲೆಮ. ೨೬೦) ; ತನಗೆ ಆಧ್ಯಾತ್ಮಿಕಭೂಮಾನುಭೂತಿಯನ್ನು ನೀಡಿದ ಶ್ರೀಗುರುವಿನ ಐಹಿಕವ್ಯಾಪಾರದ ತ್ಯಾಗದಲ್ಲಿಯೂ ಭೂಮಾವಾದ ದರ್ಶನ ವನ್ನೇ ಪಡೆದಿದೆ ಕವಿಯ ಹೃದಯ (ಕಾವಗೀ. ೬೬). [ಸಂ.]

**ಭೂಮಾಲೀಕ** (ನಾ). ಜಮೀನಿನ ಪೂರ್ಣಾಧಿಕಾರವನ್ನು ಹೊಂದಿರು ವವನು ; ಭೂಸ್ವಾಮ್ಯವುಳ್ಳವನು : ಭೂಮಾಲೀಕರು ಜೀತದಾಳುಗಳಿಗೆ ಈಗಲೂ ಸ್ವಾತಂತ್ರ್ಯ ನೀಡಲು ಇಷ್ಟಪಡುವುದಿಲ್ಲ (ಕೂಶ).

[ಭೂ + ಮಾಲೀಕ]

**ಭೂಮಿ** (ನಾ). ೧. ಮನುಷ್ಯರು ವಾಸಮಾಡುತ್ತಿರುವ ಲೋಕ ; ಭೂಲೋಕ : ನಾನು ಭಕ್ತನಾದಡೆ ನೀನು ದೇವನಾದಡೆ . . . ಭೂಮಿ ಯಾಕಾಶವನೊಂದುಮಾಡಿ ಚಂದ್ರ ಸೂರ್ಯರಿಬ್ಬರ ತಾಳವ ಮಾಡಿ ಆಡುವೆ (ಅಶಕಂ. ೫೪-೨೩೪) ; ಭೂಮಿಗೆ ಶರನಿಧಿ ಸೆಜಗೆಂಬಾ ಮಾತಂತಿರ್ಕೆ (ದಶಕು. ೨-೩೬) ; ಭೂಮಿ ಒಂದು ದೊಡ್ಡ ಗೋಳದ ಹಾಗೆ, ಚಂಡಿನ ಹಾಗೆ ಇದೆ (ಕೂಶಪ. ೦). ೨. ನೆಲ : ವಿಮಾನ ಭೂಮಿಗಿಳಿಯಲು ಇನ್ನೂ ಇಪ್ಪತ್ತು ನಿಮಿಷಗಳಿವೆ (ಕೂಶ). ೩. ಹೊಲ, ಗದ್ದೆ, ತೋಟ ಮೊದಲಾದುವು; ಜಮೀನು : ಕಪ್ಪು ಮಣ್ಣಿನ ಭೂಮಿಯನ್ನು ವರ್ಷೇ ವರ್ಷೇ ಉಳುವ ಅಗತ್ಯವಿರುವುದಿಲ್ಲ (ಕೃಪಮ. ೪) ; ಭೂಮಿ ಮಾರಿ ನಾಮ ಹಾಕಿ ಕೊಂಡ (ಗಾದೆ). ೪. [ಛಂದ] ಮೂರು ಗುರುಗಳುಳ್ಳ ಗಣ ; ಮಗಣ (— — —) : "ಗುರು ಮೂಱಿರಲ್ ಭೂಮಿಯಕ್ಕು" (ಮಂಗರಾ. ೦೦೬-೨೦) ; ಮಗಣಂ ಭೂಮಿಯೆನಿಕ್ಕುಂ (ಛಂದೋಂಬು. ೦-೩೬ ಅವತರ್ಯ).

**ಭೂಮಿಕಾಣಿ**=ಹೊಲಗದ್ದೆ ಮೊದಲಾದ ಜಮೀನು. – ಆಸ್ತಿ : ಅವನನ್ನು ರಾಜ ತನ್ನ ಆಸ್ಥಾನೀಕನಾಗಿ ಮಾಡಿ ಬೇಕಾದಷ್ಟು ಭೂಮಿ ಕಾಣಿಗಳನ್ನು ಕೊಟ್ಟನು (ಕೃಶಾಇ. II, ೨೨೬); ನಮಗೆ ಅನೇಕ ಗ್ರಾಮಗಳೂ ಭೂಮಿಕಾಣಿಯೂ ದಾನವಾಗಿ ದೊರಕಿದ್ದುವು (ಕೃಶಾಕ. ೦೬). **ಭೂಮಿಗಿಳಿ**= (ಅಲಂ) ಚಿಂತೆ ಮೊದಲಾದ ಕಾರಣದಿಂದ ಕುಸಿ; ಎದೆಗುಂದು: ಈಗ ಅವನ ನಡತೆಯನ್ನು ನೋಡಿದೊಡನೆ ಸುಂದರಿ ಭೂಮಿಗಿಳಿದು ಬಿಟ್ಟಳು (ಹಳ್ಳಿಹಾ. ೩೨). **ಭೂಮಿಗೆ ಭಾರ** = ಉಪಯೋಗವಿಲ್ಲದ ಹೊರೆ; ಅಪ್ರಯೋಜಕವಾದುದು : ದೂರದಲ್ಲಿಯೆ ಸಾಲು ನಿಂತ ಪರ್ವತಶಿಖರ ಆಗಿಲ್ಲ ಭೂಮಿಗೆ ಭಾರ (ವೆಂಕು. ೩೦-೨೦). **ಭೂಮಿ ತೂಕದ ಮನುಷ್ಯ** = ದೊಡ್ಡ ವ್ಯಕ್ತಿ; ಉದಾತ್ತಸ್ವಭಾವದವನು: ಭೂಮಿ ತೂಕದ ಮನುಷ್ಯ ರಾದ ಅವರನ್ನು ಕಂಡರೆ ಎಲ್ಲರಿಗೂ ಗೌರವ (ಕೂಶ). [ಸಂ.]

**ಭೂಮಿಕಂಪ** (ನಾ). ಭೂಮಿಯು ನಡುಗುವುದು : ಭೂಕಂಪ : ಕಲಿ ರಾಧೇಯ ಬರುತಿರೆ . . . ವಾಯಸದ ತಡೆ ಭೂಮಿಕಂಪ . . . ಗಜಾಶ್ವ ನಿಕಾಯ ರಥವಾಜಿಗಳ ಕಂಬನಿ ಕಾಣಲಾಯ್ತು (ಕುವ್ಯಾಕ. ೯-೨೬). [ಸಂ.]

**ಭೂಮಿಕಾಶ್ರಯ** (ನಾ). ೧. ಉಪ್ಪರಿಗೆಯ ಮನೆಗಳಿಂದ ಕೂಡಿ ಕೊಂಡಿರುವುದು. ೨. ವೇಷಾಂತರಗಳಿಂದ ಕೂಡಿರುವುದು ; ಪಾತ್ರ ಗಳುಳ್ಳುದು. ೧, ೨ : ಆ ಪುರಂ . . . ಅನೇಕಭೂಮಿಕಾಶ್ರಯ ಮಾಗಿಯುಂ ಕ್ಷಣಭಂಗಿಶೋಭಾಸಂಗತಮಲ್ತು (ಕಂದ್ರಕೃ. ೦-೦೩೬). [ಸಂ.]

**ಭೂಮಿಕೆ** (ನಾ). ೧. ನೆಲ ; ಭೂಮಿ. ೨. ಮನೆಯ ಅಂತಸ್ತು; ಉಪ್ಪರಿಗೆ: ದಿವಿಜೇಂದ್ರಾರ್ಚಿತನುಚ್ಚಗಂ ದಶಮದೊಳ್ ನಿಂದಂ ದೆರಟ್ಬೊಱ ನಾಲ್ಕು ಮಲಂ ಭೂಮಿಕೆಯಕ್ಕುಮುಚ್ಚವಶದಿಂ ಗೇಹಕ್ಕೆ (ಜಾತಕ. ೪-೦೪); ರಾಜಮಂದಿರಮಂ ಪೊಕ್ಕು ಕರುಮಾಡದ ಮೊದಲ ಭೂಮಿಕೆಯೊಳಿಕ್ಕಿದ ವಿಶಾಲಹಂಸತೂಲದೊಳರಸಿಯುಂ ತಾನುಂ ಕುಳ್ಳಿರ್ದು (ಕಂಪ್ರಕೃ. ೬-೯೬ ವ). ೩. ಹಂತ ; ಮಟ್ಟ : ಮೆಟ್ಟಿಲು : ಗೀತೆಯ ಕಾರ್ಯ ಅಜ್ಞಾನಿಗಳನ್ನು ಜ್ಞಾನಿಯ ಭೂಮಿಕೆಗೇರಿಸುವುದಕ್ಕಿಂತ . . . ಭಗವಲ್ಲೀಲೆಯಲ್ಲಿ ಭಕ್ತರ ಕರ್ಮಯೋಗಕ್ಕೆ ಇಂಬು ಮಾಡಿಕೊಡುವುದಾಗಿದೆ (ಮಜಾಹಿ. ೦೫); ಇಲ್ಲೆಲ್ಲಾ ಲಾಲಿತ್ಯದಿಂದ ಭವ್ಯತೆಯವರೆಗೆ ವಿವಿಧ ಭೂಮಿಕೆಗಳಲ್ಲಿ ವ್ಯಾಪಿಸುವ ದೇವತೆಯ ಚಿತ್ರಗಳಿವೆ (ಸೌಂದಕ. ೯೯). ೪. ಮುನ್ನುಡಿ ; ಪ್ರಸ್ತಾವನೆ. ೫. ನಿಲುವು : ತನ್ನ ಭೂಮಿಕೆಯನ್ನು ಕುಮಾರಿಯು ಸ್ಪಷ್ಟಗೊಳಿಸಿದಳು (ಸಮಾಜ. ೬೪೦). ೬. ಹಿನ್ನೆಲೆ ; ತಳಹದಿ : ಅದಕ್ಕೆ ಬೇಕಾದ ಭೂಮಿಕೆ ಯನ್ನು ನಿರ್ಮಿಸಿ ಆ ವಿಚಾರವನ್ನು ರಾಜನ ಕಿವಿಯವರೆಗೆ ಹಾಕಿದರೆ ಕಾರ್ಯಕಾರಿಯಾಗಬಹುದೋ ? (ಮಹಕ. ೬೪). ೭. ಶಾಸನ ಮುಂತಾದು ವನ್ನು ಬರೆಯುವ ಶಿಲಾಫಲಕ : ಕೀರ್ತಿ ಪ್ರಶಸ್ತಿಯು ಸ್ಫಟಿಕಭೂಮಿಕೆ ಯಂತೆ (ವೃಕಾಇ. ೪೦-೬೨೬). ೮. [ಕಾವ್ಯಮೀ] ನಾಟಕಾದಿ ರೂಪಕಗಳ ಪಾತ್ರ,–ವೇಷ : ಭಕ್ತನು ಕಲ್ಪಿಸಬಹುದಾದ ತಂದೆ, ತಾಯಿ, ಬಂಧು, ಒಡೆಯ, ಸಖ, ನಲ್ಲ ಈ ಮುಂತಾದ ಯಾವ ಬೇಕಾದ ಅಥವಾ ಎಲ್ಲ ಭೂಮಿಕೆಗಳನ್ನು ಪರಮಾತ್ಮನು ಕೈಕೊಳ್ಳಬೇಕಾಗುವುದು! (ಭಕರ. ೬೦); ಜೈನಪುರಾಣಗಳಲ್ಲಿ ಕಾಮನ ಭೂಮಿಕೆಯು ಬೇರೆ ವಿಧವಾಗಿದೆ (ಸಾಹಿಸ. ೦೬೩). ೯. [ವೇದಾಂತ] ಮೋಕ್ಷಸಾಧಕನಿಗೆ ಹೇಳಿರುವ ಸುಶೇಚ್ಛೆ, ಸದಾತ್ಮವಿಚಾರ, ನಿಸ್ಸಂಗ, ವಾಸನಾಕ್ಷಯ, ಆನಂದಿನಿ, ತುರೀಯ, ತುರೀಯಾತೀತವೆಂಬ ಏಳುಸ್ಥಲಗಳು : ಪೇಳುವೆ ನಿನಗೆ . . . ಭೂಮಿಕೆಗಳಭ್ಯಾಸದಿರವುಗಳ (ಅಷ್ಯಕ. ೦-೦೬). ೧೦. ಮೋಕ್ಷಸಾಧನೆಯ ಬಾಲಲೀಲೆ, ಅಕ್ಷರಾಭ್ಯಾಸ, ಕಾವ್ಯನಾಟಕಾದಿ ಸಾಹಿತ್ಯಾಭ್ಯಾಸ, ದರ್ಶನಾಭ್ಯಾಸ, ಶಾಸ್ತ್ರಾಭ್ಯಾಸ, ಪೂರ್ವಮೀಮಾಂಸಾಧ್ಯಯನ, ವೇದಾಂತಾಧ್ಯಯನ, ವಿವಿದಿಷಾ, ವಿಚಾರಣಾ, ತನುಮಾನಸಾ, ಸತ್ವಾಪತ್ತಿ, ಅಸಂಸಕ್ತಿ, ಪದಾರ್ಥಭಾವಿನೀ ಮತ್ತು ತುರ್ಯಗಾ ಎಂಬ ಹದಿನಾಲ್ಕು ಹಂತಗಳು: ಅಭ್ಯಾಸಕ್ರಮದಲ್ಲಿ ಏಳು ಭೂಮಿಕೆಗಳು ಸಾಧನಾನುಷ್ಠಾನಗಳಲ್ಲಿ, ಜ್ಞಾನಭೂಮಿಕೆಗಳೇಳು ಒಟ್ಟು ಹದಿನಾಲ್ಕು ಭೂಮಿಕೆಗಳು (ಕಾರಡ. ೨೨೬). [ಸಂ. ಭೂಮಿಕಾ]

**ಭೂಮಿಗೃಹ** (ನಾ). ನೆಲದೊಳಗೆ ಕಟ್ಟಿರುವ ಮನೆ; ನೆಲಮನೆ; ನೆಲಮಾಳಿಗೆ : ಮಹಾಶನಿರಕ್ಷೋಪಾಯಮಂ ಬೆಸಗೊಳೆ ಭೂಮಿಗೃಹ ಪ್ರವೇಶ ಮಂಜೂಷಿ ಜಯಾ[ಮಂಜೂಷಾಜಲಾ]ವಗಾಹಾದಿ ರಕ್ಷೋ ಪಾಯಂಗಳನೇಕಂಗಳಂ ಮಂತ್ರಿಗಣಂ ನುಡಿದು ತೋಱೆ (ಶಾಂತಿಪು. ೬-೨೫ ವ). 'ಭೂಗೃಹ' ಪರಾ. [ಸಂ.]

**ಭೂಮಿಗೋಚರ** (ನಾ). ಮನುಷ್ಯ ; ಮಾನವ : ವಿಶ್ವವಿದ್ಯಾಧರ ಭೂಮಿಗೋಚರಕಿರೀಟಶಿಖಾಮಣಿ ಚುಂಬಿತಕ್ರಮಾ (ಶಾಂತಿಪು. ೯-೬) ; ವಿಯಚ್ಚರಪತಿಯಪ್ಪ ರಾವಣನಿರಲ್ ಕರಮೋಳಿದರಪ್ಪ ಭೂಮಿಗೋಚರ ರೊಳಸೇವ್ಯರೊಳ್ ತನಗೆ ಕಿಂಕರಭಾವಮನಪ್ಪುಕೆಯ್ದಂ (ಪಂಪಾಭಾ. ೦೦-೦೦೪). 'ಭೂಗೋಚರ' ಪರಾ. [ಸಂ.]

**ಭೂಮಿಚ್ಛಿದ್ರನ್ಯಾಯ** (ನಾ). ಭೂಮಿಯನ್ನು ಹಂಚುವ ಬಗ್ಗೆ ರಾಜನು ಅನುಸರಿಸಬೇಕಾದ ನಿಯಮ,–ವಿಧಾನ : (ಕೋಟಸ. ೦೪೨). P 'ಭೂಮಿಚ್ಛಿದ್ರ' ಎಂದರೆ ಕೃಷಿಗೆ ಅನರ್ಹವಾಗಿರುವ ಭೂಮಿ ಎಂದರ್ಥ. ಈ ವಿಷಯವು ಕೌಟಿಲ್ಯನ ಅರ್ಥಶಾಸ್ತ್ರದ ೨ನೆಯ ಅಧಿಕರಣದಲ್ಲಿ 'ಭೂಮಿಚ್ಛಿದ್ರವಿಧಾನಂ' ಎಂಬ ೨೦ನೆಯ ಪ್ರಕರಣದಲ್ಲಿ ಸೂಚಿತವಾಗಿದೆ. ಅದರಲ್ಲಿ ವ್ಯವಸಾಯಕ್ಕೆ ಯೋಗ್ಯ ವಲ್ಲದ ಭೂಮಿಯನ್ನು ಗೋಮಾಳ, ತಪೋವನ, ಹೂದೋಟ, ಮೃಗವನವಾಗಿ ಪರಿವರ್ತಿಸುವ ವಿಧಾನ, ಬೇಡರ ಕಾಟದಿಂದ ನುಸುಳಿಕೊಂಡು ಬರುವ ಜಿಂಕೆಗಳಿಗಾಗಿ "ಸರ್ವಾತಿಥಿಮೃಗ" ಎಂಬ ವನವೊಂದನ್ನು ನಿರ್ಮಿಸುವುದು ಮೊದಲಾದ ಭೂಮಿಯ ಹಂಚಿಕೆಗೆ ಸಂಬಂಧಪಟ್ಟ, ರಾಜನು ಅನುಸರಿಸಬೇಕಾದ ವಿಧಾನಗಳ

ವಿವರಣೆ ಇದೆ. ಇದಲ್ಲದೆ 'ಭೂಮಿಚ್ಛಿದ್ರಾಪಿಧಾನನ್ಯಾಯ' ಎಂಬ ಮತ್ತೊಂದು ನ್ಯಾಯವೂ ಇದೆ. [ಸಂ.]

**ಭೂಮಿಜ** (ನಾ). ೧. ಭೂಮಿಯಲ್ಲಿ ಹುಟ್ಟುವುದು ; ಮರ : ಪಾರಿಜಾತಕ್ಕೆ ಭೂಮಿಜಂಗಳು ಸರಿಯೆ (ಶಶಪು. ೩೪-೨೨); ಗಿರಿಗಳಿಂ ಭೂಮಿಜಗಳಿಂ ತಳ್ತ ಬನಂಗಳಿಂ (ಕುವಲಾ. ೨-೪). ೨. ಭೂದೇವಿಯ ಮಗ ; ಕುಜ ; ಭೌಮ. ೩. ನರಕಾಸುರ. ೪. ಮನುಷ್ಯ. ೫. [ಅಶ್ವಶಾ] ಕುದುರೆಗಳಲ್ಲಿ ಒಂದು ಬಗೆ : "ಭೂಮಿಜಂಗಳಂ ಆಜಾನೇಯಂಗಳೆಂಬುದು" (ಹಲಾಯು. ೬೨-೨೮೩). ೬. [ವಾಸ್ತು] ಒಂದು ಬಗೆಯ ಶಿಲ್ಪಶೈಲಿ (?) : ವಿಶ್ವಕರ್ಮ ನಭಪಂಗೆಂದೊಲಿದು ಸವ್ಯಕ್ತಿಯೊಳ್ ಭರದಿಂ ಕಂಡರಿಸಿಟ್ಟನೆಂಬನೆಗನೇಕ ದ್ರಾವಿಡಂ ಭೂಮಿಜಂ ಬಿರಿದುಂ ನಾಗರಮೆಂಬ ಬಹುವಿಧದ ಭದ್ರೋಪೇತದಿಂ ಕಣ್ಗೆವಂದಿರೆ ಕೋಟೀಶಭವಾಲಯಂ ಸುಲಲಿತಂ ಸೌಷ್ಠವಂ (ಎಕ. VIII, ಸೊರಬ. ೨೬೩-೬; 1231). [ಸಂ.]

**ಭೂಮಿಜಂಬುಕೆ** (ನಾ). ಒಂದು ಬಗೆಯ ನೇರಳೆ; ನೆಲನೇರಿಳೆ : "ನಾದೇಯಿಕಾ ಭೂಮಿಜಂಬುಕಾ—೨ ನೆಲನೇರಳೇ ಹೆಸರುಗಳು" (ನಿಘಂ. ೦೩೪). [ಸಂ. ಭೂಮಿಜಂಬುಕಾ]

**ಭೂಮಿಜೆ** (ನಾ). ಭೂಮಿಯಲ್ಲಿ ಜನಿಸಿದವಳು; ಸೀತೆ : ಆ ತಪಸ್ವಿಗಳ್ . . . ಭೂಮಿಜೆಯಂತೆ ಕುಶಲವಾಧಿಷ್ಠಿತರುಂ . . . ಎಸೆದಿರ್ದರ್ (ಗಂಕ. ೦-೬೯ ವ); ಬೆರೆಸಿದುದು ಲಜ್ಜೆ ಭೂಮಿಜೆಗಂದು (ಕೈಪಿಶಾ. ೦೪-೮೦). [ಸಂ. ಭೂಮಿಜಾ]

**ಭೂಮಿತಿ** (ನಾ). [ಗಣಿತ] ರೇಖೆ, ಕ್ಷೇತ್ರ, ಘನಾಕೃತಿ—ಇವುಗಳ ಲಕ್ಷಣಗಳ ಮತ್ತು ಪ್ರಮಾಣಸಂಬಂಧಗಳ ಪರಿಚಯವನ್ನುಂಟುಮಾಡಿ ಕೊಡುವ ಗಣಿತಶಾಸ್ತ್ರ; ರೇಖಾಗಣಿತ : ಇಂದು ಕಾಮಿನಿಗೆ ಭೂಮಿತಿ ಕಲಿಸುವಾಗ ಅವಳ ಕೈಯ ಮೇಲೆ ನನ್ನ ಕೈಯನ್ನಿಡಬೇಕು (ಮುಕ್ತಿ. ೬೯); ಹೊಲಸುಗೋಡೆಯ ಮೇಲೆ ಇದ್ದಲಿಯಿಂದ ತೆಗೆದ ಭೂಮಿತಿಯ ಆಕೃತಿ ರೇಖೆಗಳು ಇನ್ನೂ ಕಾಣುತ್ತಿವೆ (ಇಪ್ಪ. ೩೯೬). 'ಜ್ಯಾಮಿತಿ' ಪರಾ. [ಸಂ.]

**ಭೂಮಿದುಂದುಭಿ** (ನಾ). ಒಂದು ಬಗೆಯ ವಾದ್ಯ : ಭೂಮಿಯಲ್ಲಿ ಹಳ್ಳ ತೋಡಿ ಅದರ ಬಾಯಿಗೆ ಚರ್ಮ ಬಿಗಿದು 'ಭೂಮಿದುಂದುಭಿ' ಎಂದು ಹೆಸರು ತಾಳಿದ ಈ ವಾದ್ಯ . . . ತಾಳವಾದ್ಯವಾಗಿ ಪ್ರಯೋಗದಲ್ಲಿತ್ತೆಂದು ಕೃಷ್ಣಯಜುರ್ವೇದ ಸಾಹಿತ್ಯ ತಿಳಿಸುತ್ತದೆ (ಸಂಗೀಸಂ. ೩೦೪). [ಸಂ.]

**ಭೂಮಿದೇವ** (ನಾ). ಬ್ರಾಹ್ಮಣ ; ಭೂಸುರ : ಕಾಮಧೇನು ಸಹಸ್ರ ಕಪಿಲೆಯ . . . ಶತಭೂಮಿದೇವರಿಗಿತ್ತ ಫಲವಹುದೀ ಮಹಾಭಾರತದೊಳೊಂದಕ್ಷರವ ಕೇಳ್ದರಿಗೆ (ಕುವ್ಯಾಆ. ೦-೨೦); ಆ ವೇಳೆಯಲ್ಲಿ ಕೃತಕದ ಪಶುವನಾ ಭೂಮಿದೇವರೆಲ್ಲರೂ ಕೂಡಿ ರಚಿಸಿಯಾತನ ಪೊಲದ ಠಾವಿನೊಳಗಿರಿಸಿದರು (ಜೈಕೃಪು. ೪-೨-೬). [ಸಂ.]

**ಭೂಮಿಧರ** (ನಾ). ೧. ಬೆಟ್ಟ; ಪರ್ವತ : ಪರಮಗಂಭೀರ ಸದ್ವಟ ಫಲಾಧರೆ ಭೂಮಿಧರಜಘನೆ . . . ಕರುವಿಟ್ಟೆಚಿದ ಸುವರ್ಣದ ಬೊಂಬೆಯಂತೆ ನಿಂದಿರೆ ಕಂಡನರಸನಾಗ (ಶ್ರೀಶಠಾ. ೩-೨೬). ೨. ರಾಜ; ಅರಸ. ೩. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : 'ಭೂಧರ' ಪರಾ. [ಸಂ.]

**ಭೂಮಿಪ** (ನಾ). ೧. ಭೂಮಿಯನ್ನು ಪಾಲಿಸುವವನು; ದೊರೆ; ರಾಜ : ಭೂಮಿಪನುಪ್ಪಟನ ಶರಸ್ತೋಮಮನೆಡೆಯಲ್ಲಿ ಕಡಿದು . . . ಪೆರ್ಚಿದನಸುರಂ (ಅರ್ಕಪ್ರಿ. ೪-೯೩); ಎನಗೆ ಭೀಮಾರ್ಜುನರ ಕೊಡು ರಿಪುರಮಣಿಯರ ಸೀಮಂತಮಣಿಗಳ ನಿಮಿಷದಲಿ ತರಿಸುವೆನು ಹಜಿಸುವೆ ನಸಿತಭೂಮಿಪರ (ಕುವ್ಯಾಕ. ೨-೩೨). ೨. ಕ್ಷತ್ರಿಯ : ಭೂಮಿಪರನುಜ್ಜಿಜಜಿದ ಭಾರ್ಗವರಾಮನನು ಗೆಲಿದು (ಕೊರಠಾ. ೦-೦೭ ಪೂಪದ). [ಸಂ.]

**ಭೂಮಿಪತಿ** (ನಾ). ಭೂಮಿಯ ಒಡೆಯ ; ದೊರೆ : ಕೌರವ ಭೂಮಿಪತಿಜೊಡ್ಡಿದನು ಧರ್ಮಜ ಹೆಸರಿಸಿದ ಧನವ (ಕುವ್ಯಾಸ. ೦೩-೪೪); ಭೂಮಿಪತಿ ಕೇಳ್ಬಳಿಕ ಸೌರಾಷ್ಟ್ರದಿಂದೆ ಸುತ್ರಾಮಸುತನು ನಡೆತರುತಿರ್ದನು (ಕೈಪಿಶಾ. ೨೮-೦). [ಸಂ.]

**ಭೂಮಿಪಾಲ** (ನಾ). = ಭೂಮಿಪ ೧ : ಕನಕಶೈಲಮೆನಿಸಿ ನೆಗಟ್ದ ಭೂಮಿಪಾಲಭವನದಿಂ ಸಮಸ್ತವಸ್ತುಭುವನದಿಂ (ಜಂಪಠಾ. ೦-೩೮ ರಗಳೆ) ; ಕರುಣಿಸು ಭೂಮಿಪಾಲಯೆಂದಡಿಗೆಱಗಿ ಬೀಳ್ಕೊಂಡು ನಿಂದಳಾಪುರಿಯಿದಿರೊಳು (ಕಠಾ. ೦೦-೨೩). [ಸಂ.]

**ಭೂಮಿಪಾಲಕ** (ನಾ). = ಭೂಮಿಪ ೧ : ಜಿನೇಶ್ವರಂ ಬೆಸಸೆ ಕೇಳ್ದು ಜಿತಂಜಯ ಭೂಮಿಪಾಲಕಂ ... ದೀಕ್ಷೆಗೆ ಮನಂದಂದು (ಶಂಪ್ರಪು. ೭-೨೮); ಭೂಮಿಪಾಲಕ ಕೇಳು ಪೇಳ್ವೆನು (ಬಸಪು. ೫೬-೨). [ಸಂ.]

**ಭೂಮಿಭೃತ್ತು** (ನಾ). ೧. ದೊರೆ ; ಅರಸ; ರಾಜ : ಮೇರುವಿಂ ಭೂಮಿಭೃದ್ವರನಬ್ಧಿಹಿತನಿಂ ಕಳಾನಿಧಿಕುಮಾರಂ ಪುಟ್ಟುವಂ ನಿಶ್ಚಯಂ (ರಾಜಶೇ. ೪-೨೯). ೨. ಬೆಟ್ಟ ; ಪರ್ವತ. [ಸಂ. ಭೂಮಿಭೃತ್]

**ಭೂಮಿರುಹ** (ನಾ). ಭೂಮಿಯಲ್ಲಿ ಬೆಳೆಯುವುದು ; ಗಿಡ, ಮರ ಮುಂತಾದುವು : ಈವ ನೆಗಟ್ಚಿ ಕಲ್ಪಭೂಮಿರುಹದಿನಗ್ಗಳಂ (ಎಕ. II, ೦೩೩-೨೬ : ೯೩೭). [ಸಂ.]

**ಭೂಮಿರೇಖೆ** (ನಾ). ಲೋಹದ ತಗಡಿನಲ್ಲಿ ಯಂತ್ರಗಳನ್ನು ಲಿಖಿಸುವಾಗ ಹಾಕುವ ಗೀರು, — ಗೆರೆ : ಗಳರೇಖಾಕೃತಿ ಭೂಮಿರೇಖೆ . . . ಕಾಶ್ಮೀರಾದಿ ಲಿಪ್ತಂ ಮನಂಗೊಳೆ ಕಂದರ್ಪನ ಪತ್ರಯಂತ್ರಮೆನಿಸಿತ್ತಾಸ್ಯಂ ಸರೋಜಾಸ್ಯೆಯಾ (ಗದಾಯು. ೮-೩೨). [ಸಂ. ಭೂಮಿರೇಖಾ]

**ಭೂಮಿಲಂಬ** (ನಾ). ಭೂಮಿಯಷ್ಟು ದೊಡ್ಡದಾದುದು ; ಭೂಮಿಯ ಅಗಲವನ್ನು ವ್ಯಾಪಿಸಿಕೊಂಡಿರುವುದು : ರಾಮಣೀಯಕವಹ ಸುಶಕುನಸ್ತೋಮವನು ವಿವರಿಸುತ ಹೊಕ್ಕರು ಭೂಮಿಲಂಬದ ನೃಪರ ನೆರವಿಯ ದ್ರುಪದಪಟ್ಟಣವ (ಕುವ್ಯಾಆ. ೦೨-೦) ; ಮಗಧನೃಪಾಲನಾಹವಕೆ ಭೂಮಿಲಂಬದ ಬಲಸಹಿತ ಸಂಗ್ರಾಮಧೀರನು ಬರುತ (ಕಿಶಾಗ. ೦೨-೫೫-೨೬). [ಸಂ.]

**ಭೂಮೀವಲ್ಲಭ** (ನಾ). = ಭೂಮಿಪತಿ : ಈ ಮಹಾರಾಷ್ಟ್ರಕ್ಕೆ ಶಾನೀ ಭೂಮಿವಲ್ಲಭನಲ್ಲದೇ ಮತ್ತೀ ಮಹಿಯೊಳಗೆ ಪೇಳಲಿಲ್ಲೆಂದೆಂಬ ಬುದ್ಧಿಯದು (ಬಸಪು. ೫೦-೦೬). [ಸಂ.]

**ಭೂಮಿವಿಲಗ್ನ** (ನಾ). [ನಾಟ್ಯ] ಅಂಗಾಲಿನ ಆರು ಭೇದಗಳಲ್ಲಿ ಒಂದು ; ನೆಲದ ಮೇಲೆ ಪಾದವನ್ನು ಸರಿಯಾಗಿ ಊರಿರುವುದು : ಪತಿತಾಗ್ರ, ಉಚ್ಛ್ರಿತಾಗ್ರ, ಭೂಮಿವಿಲಗ್ನ, ಉದ್ವೃತ್ತ, ಕುಂಚಿತಮಧ್ಯ, ತಿರಶ್ಚೀನ — ಈ ಆಱುಂ ಅಂಗಾಲ ಭೇದಂಗಳ್ (ಮಾಸ್ತರಂ. ೩-೦೨೦ ವ). [ಸಂ.]

**ಭೂಮಿಸ್ಪರ್ಶ** (ನಾ). ಮಗು ಹುಟ್ಟಿ ಭೂಮಿಗೆ ತಗುಲುವುದು ; ಶಿಶುವಿನ ಜನನ : ಜಾತಕನ ಭೂಮಿಸ್ಪರ್ಶವಾದುದು ಪ್ರಾತಃಕಾಲ ಎಂಟು ಗಂಟೆಗೆ (ರಜಾ). [ಸಂ.]

**ಭೂಮಿಸ್ಪೃಶ** (ನಾ). ೧. ಮನುಷ್ಯ. ೨. ವೈಶ್ಯ : "ಆರ್ಯಾಃ, ಭೂಮಿಸ್ಪೃಶಃ, ವೈಶ್ಯಾಃ, ಊರವ್ಯಾಃ, ವಿಶಃ — ಈ ೫ ವೈಶ್ಯಂ" (ಹಲಾಯು. ೯೩೪-೦೬). ೩. ಕುರುಡ; ಅಂಧ. ೪ ಕುಂಟ ; ಹೆಳವ. [ಸಂ. ಭೂಮಿಸ್ಪೃಶ್]

**ಭೂಮಿಹುಣ್ಣಿಮೆ** (ನಾ). ಭಾದ್ರಪದ ಶುದ್ಧ ಹುಣ್ಣಿಮೆ : ಭೂಮಿಹುಣ್ಣಿಮೆ ಹಬ್ಬದಲ್ಲಿ ಸೂಲಿಗೆಣಸು, ಉಗನಿಕಾಯಿ, ಬೆರಕೆಸೊಪ್ಪು ಇತ್ಯಾದಿ

ಗಳನ್ನು ಸಂಗ್ರಹಿಸುವಾಗಲೋ . . . ಗುತ್ತಿಗೆ ಸಹ್ಯಾದ್ರಿಯ ಆ ಅರಣ್ಯ ಪ್ರದೇಶ ಸುಪರಿಚಿತವಾದದ್ದೆ ಆಗಿತ್ತು (ಮಲೆಮ. ೩೭೭).

[ ಭೂಮಿ + ಹುಣ್ಣಿಮೆ (< ಪುಣ್ಣಮೆ) ]

**ಭೂವಿಜಾಪ** (ನಾ). =ಭೂಮಿಜ ೧ : ಭೂಮಿಜಾಪದಿಂ ತಣ್ಣೆರಲಿಂ ಮಾರ್ಗಂ . . . ಎಸೆಗುಂ ದೇಶದೊಳ್ಳಂದಜಸ್ರಂ (ರಾಜಶೇ. ೨-೨೭). [ಸಂ.]

**ಭೂಮಿಧ್ರ** (ನಾ). ಬೆಟ್ಟ ; ಪರ್ವತ : ತುಹಿನಭೂಮಿಧ್ರಕ್ಕೆ ಸಾರ್ದಂ ಪರಪ್ರಿಯನಾವರ್ತಿಸೆ ತಳ್ತು ನಾಲ್ದೆಸೆಯುಮಂ ಗ್ರೀಷ್ಮಪ್ರತಾಪೋದಯಂ (ಚಂದ್ರಪ್ರ. ೯-೬೭) ; ತಾಮರಸಮಿತ್ರ ಶುಚಿ ತಾಮರಸನ್ವೈರಿನಯನಾ . . . ರುಂದ್ರ ಭೂಮಿಧ್ರ ಘನಭಿದುರಾ ಪಾಲಿಸೆಮ್ಮುವಂ ಪ್ರೇಮದಿಂ (ಅರಾಕ. ೦-೦-೦). [ಸಂ.]

**ಭೂಮಿಶ** (ನಾ). = ಭೂಮಿಪತಿ : ಈ ಸಮಂಜಸದಿವಸದಲಿ ಸಿಂಹಾಸನ ದಲಭಿಷೇಕವನು ಭೂಮಿಶ ವಿಸ್ತರಿಸುವೆನು (ಕುಮಾ.ವಿ. ೧೧-೨೨) ; ಆ ಮಾಧವಂ . . . ಭೂಮಿಶದರ್ಶನೋತ್ಸವಕ್ಕೆ ಬಿಜಯಂಗೈದನು (ಕೃಬಾಭಾ. ೭-೧೩). [ಸಂ.]

**ಭೂಮಿಶ್ವರ** (ನಾ). = ಭೂಮಿಪತಿ : ಗುರುಶಿಕ್ಷಾವಚನಂಗಳಂ ಹೃದಯದೊಳ್ . . . ತಾಳ್ದಿದನುತ್ತರೋತ್ತರತೆಯಿಂ ಶ್ರೀವರ್ಮ ಭೂಮಿಶ್ವರಂ (ಚಂದ್ರಪ್ರ. ೪-೨೫) ; ತಿರಿಪ ಹಾರುವರೊಡನೆ ಭೂಮಿಶ್ವರ ರಿಗೆತ್ತಣ ಮೈತ್ರಿ (ಕುಮಾ.ಆ. ೬-೩೧). [ಸಂ.]

**ಭೂಯಿಷ್ಠ** (ಗು). ೧. ಹೆಚ್ಚಾದ ; ಅತಿಶಯವಾದ : ಕಷ್ಟಭ್ರಷ್ಟ ಕನಿಷ್ಠ ದಕ್ಷವಿಳಸದ್ಭೂಯಿಷ್ಠ ಬೃಂದಿಷ್ಠನಾದಿಷ್ಠೋತ್ಕೃಷ್ಟನಿಜೇಷ್ಟದಾಧ್ವರ ಹರಂ (ಹಮ್ಮೀ.ರ. ೦-೭). (ನಾ). ೨. ಅಧಿಕವಾದುದು ; ಪ್ರಚುರ ವಾದುದು : "ಪ್ರಭೂತಂ . . . ಭೂಯಿಷ್ಠಂ, ಸ್ಫಾರಂ, ಭೂಯಃ, ಭೂರಿ — ೧೨ ಅಧಿಕವಾದದ್ದರ ಹೆಸರುಗಳು". (ನಿಘಂಶಿ. ೩೪೦) ; ತುಂಗ ತುರಂಗಮ ಭೂಯಿಷ್ಠಂಗಳ್ ಕೊಟ್ಟಜದ ಕೊಟ್ಟ ಕಪ್ಪದ ಭಂಡಾರಂಗಳ್ ನಿಂದುವು ರಾಜಗೃಹಾಂಗಣದೊಳ್ (ಶಾಂತಿಪು. ೧೧-೨೮) ; ತತ್ವ ನಿರೂಪಣೆಯು ಇಲ್ಲಿ ಭೂಯಿಷ್ಠವಾಗಿದ್ದರೂ ಇದು ತತ್ವಪ್ರಧಾನ ಕಾವ್ಯಂಬರಿಯಲ್ಲ (ಸಮಾಜ. ೩೭ ಡಿ:೦೮). ೩. ಪರಿವಾರ ; ಬಳಗ : ಮಹಾ ಸ್ವಾಮಿಯ ಪಾದಸ್ಪರ್ಶದ ಐಶ್ವರ್ಯಸುಖಕ್ಕೆ ಪ್ರಸ್ತುತ ಮನೆಯ ಭೂಯಿಷ್ಠವು ಪಾತ್ರವಾಗದೇ ಇರುವುದೇ ದೊಡ್ಡ ಲೋಪವಲ್ಲವೆ ಮಹಾ ಪ್ರಭು ? . . . ನಿಮ್ಮ ಮನೆಯ ಭೂಯಿಷ್ಠ ಪರಿಶುದ್ಧವಾಗುವುದೆಂಬ ಮಾತು ಉಪಚಾರೋಕ್ತಿ (ಮೂಮಿರಾ. ೬೬). [ಸಂ.]

**ಭೂಯುಗ** (ನಾ). ಭೂಮಿಯ ಪ್ರಾಕೃತಿಕ ಸ್ವರೂಪ ಹಾಗೂ ಸ್ಥಾವರ ಜಂಗಮ ವಸ್ತುಗಳು ಬದಲಾವಣೆಯಾಗುವ ಕಾಲ ; ಭೂಮಿಯ ಪರಿವರ್ತನಕಾಲ : ಭೂಮಿಯ ಮೇಲೆ ಮನುಷ್ಯನು ಮೊದಲು ಕಾಣಿಸಿ ಕೊಂಡಿದ್ದು ಸುಮಾರು ಐದುಲಕ್ಷ ವರುಷಗಳ ಹಿಂದೆ ಎಂದು ತೋರುತ್ತದೆ, ಈ ಕಾಲವನ್ನು ಭೂಗರ್ಭಶಾಸ್ತ್ರಪಂಡಿತರು ಮೂರನೆಯ ಭೂಯುಗ (Pleistocene) ವೆನ್ನುತ್ತಾರೆ (ಶಿಲ್ಪಶಾ. ೧೮). [ ಸಂ. ]

**ಭೂಯೋನುಗ್ರಹನ್ಯಾಯ** (ನಾ). ಕಡಮೆಯಾಗಿರುವ ದೋಷಗಳನ್ನು ಗಣಿಸದೆ ಹೆಚ್ಚು ಗುಣಗಳುಳ್ಳ ವ್ಯಕ್ತಿ ಅಥವಾ ವಸ್ತುವಿಗೆ ಪುರಸ್ಕಾರ ವನ್ನು ಕೊಡುವ ದೃಷ್ಟಾಂತ : ಲೋಕದಲ್ಲಿ ಪ್ರಾಯಃ ಪ್ರತಿಯೊಂದು ವಿಷಯದಲ್ಲೂ ಸರಿಯಾಗಿರುವುದು ಹೆಚ್ಚು, ಕೆಟ್ಟು ಹೋಗುವುದು ಕಡಿಮೆ . . . ಹೀಗೆ ಸಕಲವಿಷಯಗಳಲ್ಲೂ ಸರಿಯಾಗಿರುವುದು ಹೆಚ್ಚು ಎಂಬುದಕ್ಕೆ ಭೂಯೋನುಗ್ರಹನ್ಯಾಯವೆಂದು ಹೆಸರು (ಹಿಂದಗಾ. ೧೩೭). [ಸಂ.]

**ಭೂಯೋಪಾಧ್ಯ** (ನಾ). ಅನೇಕ ವಿದ್ಯೆಗಳನ್ನರಿತವನು ; ಮಹಾ ವಿದ್ವಾಂಸ : ಬಗೆಯುಪನ್ಯಾಸದ ಸುಶಾಖೆಗಳ ಬೀಳಲು ಬೆಳೆದ ಗಡ್ಡದ ವಿಗಡಭೂಯೋಪಾಧ್ಯರಿದ್ದುದು [ಪಾಠಾಂ. ವಿದ್ಯರಿದ್ದರು] ರಾಜ ಸಭೆಯೊಳಗೆ (ಕುಮಾ.ಉ. ೮-೩೭). [ < ಸಂ. ಭೂಯೋಪಾಧ್ಯಾಯ]

**ಭೂಯೋವಿದ್ಯ** (ನಾ). = ಭೂಯೋಪಾಧ್ಯ : ಬಗೆಯುಪನ್ಯಾಸದ ಸುಶಾಖೆಗಳ ಬೀಳಲು ಬೆಳೆದ ಗಡ್ಡದ ವಿಗಡಭೂಯೋವಿದ್ಯರಿದ್ದರು [ಪಾಠಾಂ. ಪಾಧ್ಯರಿದ್ದುದು] ನೃಪನ ಸಭೆಯೊಳಗೆ (ಕುಮಾ.ಉ. ಹಿಂಪ. ೮-೩೭). [ಸಂ.]

**ಭೂರಣ** (ನಾ). ಖಡ್ಗಯುದ್ಧದ ಒಂದು ವರಸೆ (?) : ಸೈಪಾರಿಸಿ ಕಂಡ ಭೂರಣದೆ ರೂಪಿಸಿದಂ ಪೊಯ್ಸ್ ಕಾಳವಟ್ಟದಿಂ (ಅನಂಪು. ೧೧-೬೦).

[ ? ]

**ಭೂರಥ** (ನಾ). ಭೂಮಿಯನ್ನೇ ರಥವಾಗಿ ಮಾಡಿಕೊಂಡವನು ; ಶಿವ : ಅಂಧಕಾಸುರಮೋಘಮವಮಾನ ಭೂರಥ ಜಲಂಧರಾಸುರಕುಜಕುಠಾರ (ಪ್ರಭುರಾ. ೧೭-೧). [ ಸಂ. ]

**ಭೂರಮಣ** (ನಾ). = ಭೂಮಿಪತಿ : ಭೂರಮಣೋದ್ಭಟಾಂಕ ನೃಪಕುಂಜರ ನೊಯ್ಯನೆ ತುಳ್ಕದಚ್ಛಕಸ್ತೂರಿಯ ವಾರಿಯಿಂ ನೆನೆದು (ಜಾನ್ನಲಿ. ೯-೧೧೪) ; ಭೂರಮಣನೈತಂದು ಪೊಕ್ಕನು ಹಸ್ತಿನಾಪುರವ (ಕುಮಾ.ಸ. ೧೨-೧೦೦). [ಸಂ.]

**ಭೂರಿ** (ಗು). ೧. ಹೆಚ್ಚಾದ ; ಅಧಿಕವಾದ ; ಅತಿಶಯವಾದ : ಸಮುಚ್ಚಯಜಾತದೋಷಮುಂ ಭೂರಿವಿಕಲ್ಪದೋಷಮುಂ . . . ವಿಶಂಕಾ ರಚಿತೋರುದೋಷಮುಮನೀ ತೆಜದಿಂ ತಜೆಸಲ್ಗೆ ಪಂಡಿತರ್ (ಕವಿರಾ. ೦-೧೧೩) ; ಇತ್ತ ವಿಶಾಖಭೂತಿಯುಂ ಭೂರಿತಪೋಭಾರಮಂ ನಿರ್ವಹಿಸಿ ಶತಾರಕಲ್ಪದೊಳ್ ಸಾಮಾನಿಕದೇವನಾದೊಂ (ಶಾಂತಿಪು. ೭-೫೯ ವ) ; ಪಾಂಡುನೃಪಾಲಕರ ವಳ ನಡೆದು ಬಂದುದು ಭೂರಿರಭಸದಲಿ (ಕುಮಾ.ಕ. ೧೦-೦). ೨. ಅಧಿಕ ಸಂಖ್ಯೆಯ ; ಅಸಂಖ್ಯಾತ ವಾದ : ಮನುಜ ವೇಷದಲಿ ಭೂರಿದನುಜರನೊರಸಿದನು ಕೈಯಾರ (ಕುಮಾ.ಉ. ೩-೨೦) ; ಭೂರಿಭೂರಿಪುಸಂಘಸಂಹೃತಿಶಕ್ತಿ ಶಕ್ತಿಸಮನ್ವಿತೇ (ರಾಜಶೇ. ೩-೧೧೪). ೩. ವಿಶಾಲವಾದ ; ವಿಸ್ತಾರವಾದ : ಅತ್ಯು ದಾರತರ ನೂತನ ಗುಣಾನ್ವಿತ ಚಂದ್ರಕೀರ್ತಿಭಟ್ಟಾರಕರೆಂದು ಬಣ್ಣಿಪುದು ವಾರಿಧಿವೇಷ್ಟಿತ ಭೂರಿಭೂತಳಂ (ಸುಕುಮಾ. ೦-೨೨). (ನಾ). ೪. ಹೆಚ್ಚು : ಅಧಿಕ ; ಅತಿಶಯ : "ಪ್ರಾಜ್ಯಂ, ಭೂರಿ, ಪ್ರಭೂತಂ . . . ಅದಭ್ರಂ — ಈ ೧೮ ಮೊಕ್ಕಳಂ" (ಕಲಾಯು. ೦೦೬-೦೬) ; ಬಸವರಸನಾಗ ಸ್ಮೇರಮುಖ ನಾಗುತ್ತ ಕೂಡಿದಪಾರಪಟುಗರಳಂಗಳೆಲ್ಲಂ ಭೂರಿಯಾಗಲು ಪೊನ್ನ ಕೊಪ್ಪರಿಗೆಗಳೊಳಗೆ ಕೀವಿ (ಬಸಪು. ೫೮-೫೭) ; ಭೂರಿಯಲಿ ಮಿಗೆ ಭರಿತ ದಕ್ಷಿಣೆ ಮೃಷ್ಟಭೋಜನವುಂಟು ನಮಗೆ (ಕುಮಾ.ಆ. ೧೧-೭). ೫. ವಿಷ್ಣು. ೬. ಬ್ರಹ್ಮ. ೭. ಶಿವ. ೮. ಇಂದ್ರ. ೯. ಚಿನ್ನ ; ಸುವರ್ಣ : "ಹೇಮ, ಸ್ವರ್ಣಂ . . . ಭೂರಿ, ಚಂದ್ರಂ . . . ತಪನೀಯಂ — ಈ ೨೫ ಹೊನ್ (ಪೊನ್)" (ಕಲಾಯು. ೨೯-೦೯) ; ಮೇರುವಂ ನೋಂಕಿದ ಧರಾ ತದ್ಭೂರಿವರ್ಣದೋಳಹುದು ಕಾಗೆ ವಿಚಾರಿಸಲು ಲಿಂಗೈಕ್ಯಭಾವರ ಕುಲವನಱಸುವರೆ (ಬಸಪು. ೫೭-೬೮). ೧೦. ಬಹುಜನಕ್ಕೆ ಕೊಡುವ ದಾನ ; ಸಾಮೂಹಿಕ ದಾನ ; ಭೂರಿದಕ್ಷಿಣೆ : ಮುತ್ತುಮಾಣಿಕಂಗಳಂ ಚೆಲ್ಲಾಡಿ ಮೊಗೆಮೊಗೆದು ವಿತ್ತಮಂ ಭೂರಿಯಂ ಮಾಡಿ (ಶರಬ. ೩೭-೦೭) ; ಭೂಮಿಸುರಚಯಕೆ ಭೂರಿಯನ್ನಿತ್ತು ಶುಭವಾದ್ಯಗಡಣಮಂ ಮೊಳಗಿಸುತ್ತೆ (ಪಪಮೋ. ೦೫-೨೭). ೧೧. ಕಟ್ಟಿಗೆ : ಕಾಷ್ಠ. ೧೨. ಅವಜ್ಞೆ ; ಉದಾಸೀನ ; ತಿರಸ್ಕಾರ : "ಕಾಷ್ಠಮನೇಕಕಾಂಚನಮವಜ್ಞೆಯು ಭೂರಿ ಸಮಾಪ್ತಿ" (ನಾನಾರ. ೭೦). ೧೩. [ಗಣಿತ] ಏಕಸ್ಥಾನದಿಂದ ಹಿಡಿದು ಪರಾರ್ಧವೆಂಬ ಹದಿನೆಂಟನೆಯ ಸಂಖ್ಯೆಯಾದ ಮೇಲೆ ಹೇಳುವ ಪದ ; ಅಸಂಖ್ಯೇಯವೆಂಬ ಅರ್ಥವನ್ನು ತಿಳಿಸುವ ಪದ ; ಹತ್ತೊಂಬತ್ತನೆಯ ಸ್ಥಾನ : ಕೆಲವು ಹಿಂದೂಗಳು ಹತ್ತೊಂಬತ್ತನೆಯ

ಶ್ರೇಣಿಯೂ ಇದೆಯೆಂದು ಹೇಳುತ್ತಾರೆ. ಅದನ್ನು ಭೂರಿ ಎಂದು ಕರೆಯುತ್ತಾರೆ (ಕೃಪಾಇ. I. ೪೫೭). P "ಏಕಂ, ದಶಂ, ಶತಂ, ಸಹಸ್ರಂ, ಅಯುತ, ಲಕ್ಷ, ಪ್ರಯುತ, ಕೋಟಿ, ನ್ಯರ್ಬುದ, ಪದ್ಮ, ಖರ್ವ, ನಿಖರ್ವ, ಮಹಾಪದ್ಮ, ಶಂಖ, ಸಮುದ್ರ, ಮಧ್ಯ, ಅಂತ್ಯ ಮತ್ತು ಪರಾರ್ಧ" (ಪ್ರವಾಇ. I. ೩೫೭) ಎಂದು ದಶಕವೃದ್ಧಿ ಸ್ಥಾನಗಳ ಹೆಸರುಗಳನ್ನು ಕೊಟ್ಟಿದ್ದಾರೆ. ಬೇರೆ ಗ್ರಂಥಗಳಲ್ಲಿ ಹೆಸರು ಮತ್ತು ವೃದ್ಧಿಸ್ಥಾನಗಳಲ್ಲಿ ವ್ಯತ್ಯಾಸವು ಕಂಡುಬರುತ್ತದೆ. [ಸಂ.]

**ಭೂರಿಗುಡು** (ಕ್ರಿ). ಎಲ್ಲರಿಗೂ ಹಂಚು.—ವಿತರಿಸು : ಕುಸುಮಕಂಕಣ ತೋಳ್ವಂದಿ ಮೊದಲಾದ ಪೂದೊಡವುಗಳು. ಇದನ್ನು ಹೂವಟ್ಟಿಗಳ ರಾಶಿಗಳಿಂದ ಎಲ್ಲರಿಗೂ ಭೂರಿಗುಡುತ್ತಿರುವ . . . ಸುಸ್ದರೀಚೇಟಿಯರು ಎಡೆಯಾಡುತ್ತಿರುವರು (ಕಬ್ಬಿ. ೬೨-೮೪). [ಭೂರಿ+ಕುಡು₁ (<ಕೊಡು₁)]

**ಭೂರಿದಕ್ಷಿಣೆ** (ನಾ). ನೆರೆದಿರುವವರಿಗೆಲ್ಲ ಕೊಡುವ ದ್ರವ್ಯದಾನ; ಸಾಮೂಹಿಕದಾನ : ಕೃಪಾಚಾರ್ಯನು ಧನಾಧ್ಯಕ್ಷನಾಗಿ ಭೂರಿದಕ್ಷಿಣೆಯನ್ನು ಕೊಡುವ ಕಾರ್ಯವನ್ನು ವಹಿಸಿದನು (ಶೀಪ್ಯಕ. ೧೦೦); ಬ್ರಾಹ್ಮಣರು ಭೂರಿದಕ್ಷಿಣೆಗಳನ್ನು ಪಡೆದು ಹರಸಿದರು (ಚಕಚಾ. ೪೪೦) ; ಭೂಮಿ ಇದ್ದವನಾದರೆ ಭೂರಿದಕ್ಷಿಣೆ ಕೊಟ್ಟಾನೆ ? (ಗಾದೆ). [ಸಂ. ಭೂರಿದಕ್ಷಿಣ]

**ಭೂರಿದತ್ತಿ** (ನಾ). ದೊಡ್ಡ ಕೊಡುಗೆ.—ಉಂಬಳಿ : ಆ ಬಸದಿಗೆ ಅರಮನೆಯಿಂದ ಭೂರಿದತ್ತಿಗಳನ್ನು ಕೊಟ್ಟು, ಸತ್ತ ಗಂಗರಾಜನ ಆತ್ಮವನ್ನು ತೃಪ್ತಿಗೊಳಿಸಿದರು (ಶಾಂತಲಾ. ೯೦೨). [ಸಂ.]

**ಭೂರಿದಾನ** (ನಾ). ಸಾಮೂಹಿಕವಾಗಿ ವಸ್ತ್ರ, ಧನ ಮೊದಲಾದುವುಗಳನ್ನು ಕೊಡುವ ದಾನ : ಕರಕರದು ಗಜತುರಗಭೂಕನ್ಯಧನವಸ್ತ್ರವಿರದೆ ಬ್ರಾಹ್ಮರಿಗೆ . . . ಭೂರಿದಾನ . . . ಇತ್ತು (ಪಪಹೋ. ೦೪-೫೬); ಮಧುವೆ ಮುಂಜಿಗಳಾದರೆ ಹಾರುವರಿಗೂ, ಪಷ್ಪಮಯ್ಯ, ಆಚಾರ್ರು ಮುಂತಾದವರಿಗೂ ಭೂರಿದಾನ ಮಾಡುತ್ತಿದ್ದರು (ಪಪ್ಪುಕು. ೦೨೦). [ಸಂ.]

**ಭೂರಿನಯನ** (ನಾ). ಅನೇಕ ಕಣ್ಣುಗಳನ್ನುಳ್ಳವನು; ಸಹಸ್ರಾಕ್ಷ : ಇಂದ್ರ : ಭೂರಿನಯನನ ಮನೆಗೆ ಹೋಗಿರಲಾರು ತಾನೆಂದೆನ್ನಲಾತನ ನಾರಿ ಪರಿಭವಿಸಿದಳು ಗರ್ವದಲೆಂದಳೆಬುಜಾಕ್ಷಿ (ಕಿಶಾಗ. ೦೦-೬೦-೩೨). [ಸಂ.]

**ಭೂರಿಷು** (ನಾ). ಭೂಮಿಯ ಜನಸಮೂಹದ ವೈರಿ; ರಾಕ್ಷಸ; ಭೂರಿ ಭೂರಿಷುಸಂಘಸಂಹೃತಿಶಕ್ತಿ ಶಕ್ತಿಸಮನ್ವಿತೇ (ಶಾಪಿಕೀ. ೪-೦೦೯). [ಸಂ.]

**ಭೂರಿಫೇನ** (ನಾ). ಒಂದು ಬಗೆಯ ಗಿಡ : "ಸಪ್ತಲಾ, ವಿಮಲಾ, ಸಾತಲಾ, ಭೂರಿಫೇನಾ, ಚರ್ಮಕಷಾ — ೫ ಸಮ್ಮಗಾರಯೆಂಬುವದು" (ಸಿದ್ಧೌಷಿ. ೦೯೫). [ಸಂ. ಭೂರಿಫೇನಾ]

**ಭೂರಿಬಲ** (ನಾ). ಮಹಾ ಪರಾಕ್ರಮಶಾಲಿ : ಭೂರಿಬಲ ಗುರುಸೂನು ಶಕುನಿ ಮಹಾರಥಾದಿಯು ಕೂಡಿಕೊಂಡನು ನರನ ಸಂಗರಕೆ (ಕುಮ್ಯಾದಿ. ೬-೨೬). [ಸಂ.]

**ಭೂರಿಭೋಜನ** (ನಾ). ಅನೇಕ ಜನರಿಗೆ ಮಾಡಿಸುವ ಸಂತರ್ಪಣೆ : ಯಾರು ಬೇಕಾದರೂ ಬಂದು ಊಟ ಮಾಡಬಹುದಾದ ಸಾಮೂಹಿಕ ಸಂತರ್ಪಣೆ : ಸೀರೆ ಕುಪ್ಪಸ ಬೇಡ ಹಾರ ಓಲೆಯೂ ಬೇಡ ಭೂರಿ ಭೋಜನ ಬೇಡ ನಾವು ದೀನರಮ್ಮಾ (ಕುಪ್ರು. ೪೪-೫); ಆ ಹದಿನೆಂಟು ದಿನಗಳೂ ಭೂರಿಭೋಜನಾದಿಗಳು ನಡೆದುವು (ಶಾಂತಲಾ. ೨೪೭). [ಸಂ.]

**ಭೂರಿಮಾಯು** (ನಾ). ಹೆಚ್ಚು ಮೋಸ ಮಾಡುವ ಪ್ರಾಣಿ; ಬಳ್ಳು; ನರಿ : "ಗೋಮಾಯುಃ, ಭೂರಿಮಾಯುಃ — ಈ ೨ ಬಳ್ಳು" (ಶಬಾಡು. ೪೮-೬೭). [ಸಂ.]

**ಭೂರಿವಸರ** (ನಾ). ಅನೇಕ ಸಾಮಾನುಗಳಿಂದ ಕೂಡಿದ ಅಂಗಡಿ; ದೊಡ್ಡ ಅಂಗಡಿ : ಓರಂತೆ ಕಣ್ಗೆಸೆದುವು ಕಂಚುಗಾಜಿನ ಭೂರಿವಸರಗಳು (ಕುಮಾರಾ. ೪-೬೯). [ಭೂರಿ + ವಸರ]

**ಭೂರುಂಡಿ** (ನಾ). ಒಂದು ಬಗೆಯ ಗಿಡ; ಅನೇಕಿವಿ ಗಿಡ; ಹಣ್ಣಿಗಿಡ : "ಶ್ರೀಹಸ್ತಿನೀ, ಭೂರುಂಡೀ—೨ ಹಣ್ಣೀಗಿಡದ ಹೆಸರುಗಳು. ಗುರುಗಲಗಿಡ" (ಸಿದ್ಧೌಷಿ. ೦೨೭). [ಸಂ. ಭೂರುಂಡೀ]

**ಭೂರುಗ** 'ಬುರುಗು₂' ನೋ.

**ಭೂರುಹ** (ನಾ). = ಭೂಮಿರುಹ : ನಿಶ್ಚೇತನಂಗಳುಮಿರ್ದಪ್ಪುವು ಪಾರ್ಶ್ವದೊಳ್ ನಿಯಮಮಂ ತಾಳ್ದಿರ್ದಪೋಲ್ ಭೂರುಹಂಗಳೆಂದೆಂದು ಮುನೀಂದ್ರನುನ್ನತಿಯನುತಿಂತುಂತೆನಲ್ ಬಕ್ರಮೇ (ಕಾದಂಪೂ. ೨೫೯); ಕುಬೇರನ ಗರ್ವಭೂರುಹವ ಬೇರುಳಿಯದೆ ಕಿತ್ತು ಬಿಸುಡುವೆನು (ತ್ರಿಪುಸಾಂ. ೦೦-೦೨೭). [ಸಂ.]

**ಭೂರ್ಗ** 'ಬುರುಗು₂' ನೋ.

**ಭೂರ್ಜ** (ನಾ). ಒಂದು ಬಗೆಯ ಮರ; ಭುಜಪತ್ರಮರ: "ಭೂರ್ಜಃ, ಚರ್ಮಿ, ಮೃದುತ್ವಕ್- ೩ ಭುಜಪತ್ರಗಿಡದ ಹೆಸರುಗಳು" (ಸಿದ್ಧೌಷಿ. ೦೨೨); ಏಳಾಲುಂಗಲವಂಗಭೂರ್ಜಲವಲೀನಾರಂಗಜಂಬೀರಹಿಂತಾಳಾನೋಕಹ ಸಂಕುಳಂ ಬಳಸಿ ತಟ್ಟು (ಶಾಂತಿಪು. ೯-೦೯೪): ಹಸುರು ಕಾಣದಾಗಿದ್ದ ಕಾಂಪೌಂಡಿನ ಆಚೆಗೆ ಭೂರ್ಜಮರಗಳ ತೋಪು (ಬಳಪ. ೬೮). [ಸಂ.]

**ಭೂರ್ಜತ್ವಕ್ಕು** (ನಾ). ಭೂರ್ಜವೃಕ್ಷದ ತೊಗಟೆ : ಪ್ರಾಚೀನಗ್ರಂಥವಾವುದಾದರೂ ತಾಳಪತ್ರವೋ ಭೂರ್ಜತ್ವಕ್ಕೋ ದೊರೆತ ಕೂಡಲೆ . . . ವಿಷಯವನ್ನು ಅದರಿಂದ ಹೀರಿ ಉಪಯೋಗಿಸುವರು (ಶಾಇಕ್ರ. ೦೦). [ಸಂ. ಭೂರ್ಜತ್ವಚ್]

**ಭೂರ್ಜಪತ್ರ** (ನಾ). = ಭೂರ್ಜತ್ವಕ್ಕು : ಆಗ ಚಿಂತೆಯಿಂದ ಅದರ ಹಸಿರು ಎಲೆಗಳು ಭೂರ್ಜಪತ್ರದಂತೆ ಬಿಳಿಚಿಕೊಂಡುಹೋಗುತ್ತವೆ (ಶಿವಂಧ. II. ೯೦೨); ಬಖ್‌ಶಾಲಿ ಎಂಬಲ್ಲಿ ದೊರೆತ ಭೂರ್ಜಪತ್ರ ಹಸ್ತಪ್ರತಿ ೭"×೪" ಅಂಗುಲಗಳ ಅಳತೆಯಿದೆ (ಕನ್ನಸಂ. ೪೭). [ಸಂ.]

**ಭೂರ್ಜಾರ** (ನಾ). ಒಂದು ಬಗೆಯ ಮರ : "ಭೂಕ್ತಾ — ಭೂರ್ಜಾರ" (೬ಕಾ. ೦೦೦). [ ? ]

**ಭೂಲೋಕ, ಭೂಳೋಕ** (ನಾ). ಮನುಷ್ಯರು ವಾಸಿಸುತ್ತಿರುವ ಲೋಕ; ಭೂಮಿ: ಭೂಲೋಕವದಿರಿತು ಸರ್ವಜೀವಿಗಳವನಿಗೊಬಿಗಿದವು (ಬಸಪು. ೫೯-೬೦); ದೇವಲೋಕಕ್ಕೆ ಹೋದರೂ ಭೂಲೋಕ ತಪ್ಪದು (ಗಾದೆ). **ಭೂಳೋಕ** : ಭೂಳೋಕಾದನೇಕದ್ರ × × × (ಎಕ. II. ೫೯-೯೦; 974 ?). [ಸಂ.]

**ಭೂಲೋಲ** (ನಾ). ರಾಜ; ಅರಸು : ಕಿಷ್ಕಿಂಧಕ್ಷಿಲದ ಮಹಾಮರ್ಕಟಾಧಿಪರ ನೋಡುತ್ತ ಭೂಲೋಲನಿರಲು (ಹಕಾ. ೫-೩೦); ಭೂಲೋಲ ಕೇಳ್ಕಕ್ಯಮಹಿಗಿರ್ದುದಾ ಕಲ್ಲೊಳಾ ಲಲಿತವಾಜಿ (ಕೈಬಕಾ. ೦೦-೦೦). [ಸಂ.]

**ಭೂವರ** (ನಾ). ದೊರೆ; ರಾಜ; ಅರಸು: ಭೂವರರೊಳ್ ತ್ಯಾಗಿಗಳಿಲ್ಲಮೇ ಕವಿಗೆ ವಿದ್ಯಾಪಾತ್ರವೇಂ ಬಂಜೆಯೇ (ಸೋಮೇಶ. ೪೮); ಭೋಜ್ಯಾಭೋಜ್ಯವನು ತಿಳಿದು ಪರಿಹರಿಸಬಲ್ಲವರುಗಳು ಘನತರದ ಸುಕೃತವನೈದುವರು ಭೂವರರೊಳಗೆ (ಕುವ್ಯಾಲ. ೪-೬೨). [ಸಂ.]

**ಭೂವಲಯ, ಭೂವಳಯ** (ನಾ). ಭೂಮಿ; ಧರಣಿ : ಭೂವಲ[ಯಾಂ. ೪]ಯದೊಳು ಕೇಳು ಮತ್ತೆಯು ಭೂವರೇಣ್ಯಂ . . . ಆಗ್ರಹಿಸಿ (ಬಸವು. ೨೯-೮೯). **ಭೂವಳಯ** : ಇದೇವುದೊ ಷಟ್ಖಂಡಮಂಡಿತಂ ಭೂವಳಯಂ (ಆದಿಪು. ೦೮-೨೯). [ಸಂ.]

**ಭೂವಲ್ಲಭ** (ನಾ). = ಭೂವರ : ಭೂವಲ್ಲಭ ಸೋತ್ಕ್ಷೇಪ ಭ್ರೂವಿಲಸಿತ ದತ್ತವಾಚನಾದೇಶದಿಂದಂ ಭಾವಿಸಿಮೆಂದತಿಮಧುರೋದ್ಭಾವಿತಗಂಭೀರನಾದದಿಂ ಬಾಜಿಸಿದಂ (ಆದಿಪು. ೦೯-೯೭). [ಸಂ.]

**ಭೂವಳಯ** 'ಭೂವಲಯ' ನೋ.

**ಭೂವಿಕ್ರಮ** (ನಾ). ಒಬ್ಬ ರಾಜನ ಹೆಸರು : ನಿರವದ್ಯಚರಿತಃ ಪ್ರತಿದಿನಮಭಿವರ್ಧಮಾನಪ್ರಭಾವೋ ಭೂವಿಕ್ರಮನಾಮಧೇಯಃ ಅಪಿ (ಎಕ. XII. ತಂಜಾವ. ೨೬೯–೦೩; ೨೦೬). [ಸಂ.]

**ಭೂವಿಜ್ಞಾನ** (ನಾ). ಭೂಮಿಯ ಸ್ತರಗಳು, ಅವುಗಳಿಗಿರುವ ಸಂಬಂಧ ಹಾಗೂ ಅವುಗಳಲ್ಲಿ ಉಂಟಾಗುವ ಮಾರ್ಪಾಡುಗಳನ್ನು ಕುರಿತ ಶಾಸ್ತ್ರ : ಭೂವಿಜ್ಞಾನ . .·. ಭೂಮಿಯ ಜೀವನವೃತ್ತಾಂತ, ಇತಿಹಾಸಗಳ ಸಮಗ್ರಅಧ್ಯಯನ ಇದರಲ್ಲಿ ಮಾಡಲಾಗುತ್ತದೆ (ಕವಿಕೋ. XII. ೯೦೨). [ಸಂ.]

**ಭೂವಿಬುಧ** (ನಾ). ಬ್ರಾಹ್ಮಣ ; ಭೂಸುರ : ದೈವದಾಧೀನದಲಿ ಜಗವಾ ದೈವ ಮಂತ್ರಾಧೀನ ಮಂತ್ರವು ಭೂವಿಬುಧರಾಧೀನವಾಗಿಹುದಾಗಿ ಲೋಕದಲಿ ದೈವವೇ ಬ್ರಾಹ್ಮಣನು (ಕುವ್ಯಾಜಾ. ೯–೫೦). [ಸಂ.]

**ಭೂವಿಶ್ರುತ** (ಗು). ೧. ಭೂಮಿಯಲ್ಲಿ ಹೆಸರುವಾಸಿಯಾದ; ಪ್ರಸಿದ್ಧನಾದ; ಕೀರ್ತಿವಂತನಾದ : ಅಶಾವನಿತೆಗೆ ಶೇಖರಮೆನೆ ಭೂವಿಶ್ರುತ ವಿಭವನಾದನಭಿನವಪಂಪಂ (ಮಲ್ಲಿಪು. ೫–೦) ; ಭೂವಿಶ್ರುತ ಯೋಗಿನಾಥ ಯೋಗಾಹ್ಲಾದಂ (ಚಂದ್ರಪು. ೫–೨೯). (ನಾ). ೨. ಭೂಮಿಯಲ್ಲಿ ಹೆಸರುವಾಸಿಯಾದವನು,—ಪ್ರಸಿದ್ಧನಾದವನು : ಆ ವಿಪ್ರೋತ್ತಮನ ಮಗಂ ಭೂವಿಶ್ರುತನೀಶ್ವರಾರ್ಯಂ (ಶಂಖಕಾ. ೯–೦೯) ; ಭೂವಿಶ್ರುತನೆನೆ ಸುಕೌಶಲ ವ್ರತಿಪತಿ ಕಪದಿಂ ಶ್ರುತದಿನಾರುಮಂ ಗೆಲೆವಾದಂ (ಶಂಚಾಪಾ. ೨–೫೦). [ಸಂ.]

**ಭೂವೇಷ್ಟಿ** (ನಾ). ಜಾಯಿಕಾಯಿ (?) : ಒಪ್ಪುವ ಲವಂಗ ಭೂವೇಷ್ಟಿ ಜಾತಿಭರ್ಸಚೂರ್ಣಕಕ್ಕೋಲಜಂ ಕರ್ಪೂರವೂ ಹಿಂಗೆಯೂ ಪಂಚಸೌಗಂಧಿಕಂ ಮುಖವಾಸನಂಗಳೇ ಶ್ರೇಷ್ಠ (ಶೀಕ್ಷಪು. ೬–೦೦–೮೯). [ ? ]

**ಭೂಶಯ್ಯೆ** (ನಾ). ನೆಲದ ಮೇಲೆ ಮಲಗುವಿಕೆ : ಸುಕುಮಾರಶ್ರೀಯ ನಾಳ್ದಾ ನಿತಂಬಿನಿ ಭೂಶಯ್ಯೆಗೆ ಜಾಗರಕ್ಕನಶನಕ್ಕೆ . . . ಒಡಲಂ ನಿಯೋಜಿಸಿದಳ್ (ಮಲ್ಲಿಪು. ೯–೯೬). [ಸಂ. ಭೂಶಯ್ಯಾ]

**ಭೂಶಾಯಿ** (ನಾ). ನೆಲದ ಮೇಲೆ ಮಲಗುವುದು ; ಭೂಮಿಯ ಮೇಲೆ ಒರಗುವುದು.

**ಭೂಶಾಯಿಯಾಗು** = ಸತ್ತುಬೀಳು : ಕನ್ನಡ ಕಟ್ಟಾಳುಗಳು ಬೊಬ್ಬಿರಿದು ರಣಕೋಲಾಹಲವೆಸಗಲು ಇನ್ನೂ ನಾಲ್ಕು ಸಹಸ್ರ ಶತ್ರು ಹಯ ಭೂಶಾಯಿಯಾದವು (ಅಳಿಳ. ೨೨). [ಸಂ. ಭೂಶಾಯಿನ್]

**ಭೂಶಾಯಿತ** (ನಾ). ಭೂಮಿಯ ಮೇಲೆ ಮಲಗಿರುವಂತಹುದು : ಈಗ ಅವೆಲ್ಲ ಭೂಶಾಯಿತವಾಗಿವೆ (ಶಂಥಾಕ್ರ. ೨೬). [ಸಂ. ಭೂಶಾಯಿತಾ]

**ಭೂಶಿರ** (ನಾ). ಸಮುದ್ರದೊಳಗೆ ಚಾಚಿಕೊಂಡಿರುವ ಭೂಭಾಗ : ಭೂಶಿರ ಪಕ್ಕದಲ್ಲಿರುವ ಪ್ರದೇಶಗಳಿಗಿಂತ ಹೆಚ್ಚಾಗಿಯೂ, ಇಕ್ಕಟ್ಟಾಗಿಯೂ, ಸಮುದ್ರದೊಳಕ್ಕೆ ಚಾಚಿಕೊಂಡಿರುವ ಭೂಮಿ (ಉದಾ. ಕನ್ಯಾಕುಮಾರಿ) (ಕೂರಿಶ. I. ೨೬) ; ಸಮುದ್ರದೊಳಕ್ಕೆ ಚಾಚಿಕೊಂಡಿರುವ ಭೂಭಾಗವು "ಭೂಶಿರವು ಅಥವಾ ಕೇಪ್" . . . ಎಂದು ಕರೆಯಲ್ಪಡುತ್ತದೆ (ಕೂಗೋಳ. ೦೦). [ಸಂ.]

**ಭೂಶುದ್ಧಿ** (ನಾ). ಮನೆಯನ್ನು ಕಟ್ಟುವಾಗ ಪ್ರಾರಂಭದಲ್ಲಿ ಶಂಕುಸ್ಥಾಪನೆ ಕಾಲದಲ್ಲಿ ನೆರವೇರಿಸಬೇಕಾದ ಸ್ಥಳಪರಿಶುದ್ಧಿ ; P ದೇವತಾವಿಗ್ರಹ ಪ್ರತಿಷ್ಠೆ, ಪೂಜೆ, ಜಪ ಮೊದಲಾದುವಕ್ಕೆ ಕುಳಿತುಕೊಳ್ಳುವ ಸಂದರ್ಭ, ಧ್ವಜಸ್ಥಾಪನೆ ಮೊದಲಾದುವುಗಳಿಗೂ ಭೂಶುದ್ಧಿಯು ಅವಶ್ಯಕ : ಭೂಶುದ್ಧಿಯಂ ವಿನೂತನ ಪಟ್ಟಿಕ್ರಿಯೆಗಳಿಂ ಪೆಗಳ್ (ಕುಶಾಪು. ೨–೫೬). [ಸಂ.]

**ಭೂಶೋಧನೆ** (ನಾ). ನೆಲವನ್ನು ಅಗೆದು ಪರೀಕ್ಷಿಸುವುದು : ಅರಮನೆಯ ನಿವೇಶನದಲ್ಲಿ ನಡೆದ ಭೂಶೋಧನೆಯ ಫಲವಾಗಿ ಒಂದು ಪ್ರೇಕ್ಷಕರ ಹಜಾರವು . . . ಸಿಕ್ಕಿತು (ಶಾರಿತ. ೯೯೯) ; ಹೆಚ್ಚಾಗಿ ಭೂಶೋಧನೆ ನಡೆದರೆ ಕೆಲವು ಕುರುಹುಗಳು ಕಂಡುಬರಬಹುದು (ಪೊದ್ಯಾಣಾ. ೬). [ಸಂ. ಭೂಶೋಧನ]

**ಭೂಷಣ** (ನಾ). ೧. ಅಂದವನ್ನುಂಟುಮಾಡುವಿಕೆ ; ಅಲಂಕರಣ : ''ಭೂಷಣಂ, ಅಲಂಕ್ರಿಯಾ–೨ ಅಲಂಕರಿಸುವಿಕೆ, ಅಲಂಕಾರಮಾಡುವಿಕೆ'' (ಸಿದ್ಧಾಂತಿ. ೦೯೮). ೨. ಅಲಂಕಾರ ; ಶೃಂಗಾರ : ''ಪರಿಷ್ಕಾರಃ, ಭೂಷಣಂ – ಈ ೨ ಅಲಂಕಾರಂ'' (ಹಲಾಯು. ೯೯–೩೮೬) ; ಗಣನಾಕ್ಷ ಸೂತ್ರಮಣಿಯೊಳ್‌ತ್ಕೋಜ್ವಲಂ ಭೂಷಣಂ (ಗದಾಯು. ೦–೩) ; ಗುಣಗಳಿಗೆಲ್ಲಕೆ ಭೂಷಣ ರೂಪವು ಶೀಲಕೆ ಭೂಷಣ ಕುಲವು (ಜಂಜಾಶ. ೬೦–೯೩). ೩. ಒಡವೆ ; ತೊಡವು ; ಆಭರಣ : "ಭೂಷಣಃ, ಅಳಂಕಾರಃ, ನೇಪಥ್ಯಂ. ಆಭರಣಂ – ಈ ೪ ತುಡುಗೆ'' (ಹಲಾಯು. ೯೯–೩೮೫) ; ಇದು ಕೊರಲಿಂತಿದಾರಮಿದು ಭೂಷ್ಯಮಿದರ್ಕಿದು ಭೂಷಣಂ ದಲೆಂಬುದನೆನವೇಡ (ಶಾಂತಿಪು. ೩–೯೦) ; ಒಂದು ಸ್ವರ್ಣವೆ ಕೃತನ ಚತುರತೆಯಿಂದ ಬಹುಭೂಷಣಗಳಾದಂತೆ (ಗಗಶಾ. ೦೯–೬). [ಸಂ.]

**ಭೂಷಣಾಂಗ** (ನಾ). [ಜೈನ] ಹತ್ತು ಕಲ್ಪವೃಕ್ಷಗಳಲ್ಲಿ ಒಂದು ; ನಾನಾತರದ ಆಭರಣಗಳನ್ನು ಕೊಡುವ ಕಲ್ಪವೃಕ್ಷ : ಜಂಗಮ ಕಲ್ಪವೃಕ್ಷಮೆನೆ ಕೊಟ್ಟೀ ಮಾಟ್ಕೆಯಿಂ ಭಾಜನಾಂಗದ ಮಾಲ್ಯಾಂಗದ ಭೂಷಣಾಂಗದವಳವಂ ಚಕ್ರೇಶ್ವರಂ ತಾಳ್ದಿದಂ (ಆದಿಪು. ೯–೩೫) ; ಭೂಷಣಾಂಗಮೆಂಬುದು ಕಟಕ ಕಟಿಸೂತ್ರ ಕುಂಡಲ ಕೇಯೂರ ಹಾರ ನೂಪುರಾದಿ ಪುರುಷಯೋಗ್ಯಭೂಷಣವಿಶೇಷಂಗಳನೀವುದು (ಶಾಪುಂಪು. ೯). 'ದಶಾಂಗಕಲ್ಪಕುಜ' ಪರಾ. [ಸಂ.]

**ಭೂಷಿತ** (ಗು). ೧. ಅಲಂಕೃತವಾದ. (ನಾ). ೨. ಅಲಂಕೃತನಾದವನು : ''ಮಂಡಿತಃ, ಪ್ರಸಾಧಿತಃ, ಅಲಂಕೃತಃ, ಭೂಷಿತಃ, ಪರಿಷ್ಕೃತಃ – ೫ ಅಲಂಕರಿಸಲ್ಪಟ್ಟವನ ಹೆಸರುಗಳು'' (ಸಿದ್ಧಾಂತಿ. ೧೯೮) ; ದೈವ ಹೊಡೆದಂದದಲಿ ಬೆಱತು ಸಭಾವಲಯದಲಿ ಗರ್ವವಿಭ್ರಮಭಾವಭೂಷಿತನಾಗಿ ವೈಹಾಯಸವನೀಕ್ಷಿಸುತ (ಕುವ್ಯಾಕ. ೬–೩೬). [ಸಂ.]

**ಭೂಷಿಸು** (ಕ್ರಿ). ೧. ಚೆನ್ನಾಗುವಂತೆ ಮಾಡು : ಮನುಷ್ಯನನ್ನು ಭೂಷಿಸುವುದು ಒಡವೆಗಳಲ್ಲ, ಗುಣಗಳು (ಕೂಡಿ). ೨. ಹೊಗಳು ; ಪ್ರಶಂಸಿಸು : ದೂಷಿಸಲಿ ಅಥವಾ ಭೂಷಿಸಲಿ ಧೀರರಾದವರು ನ್ಯಾಯ ಮಾರ್ಗದಲ್ಲಿಟ್ಟ ಹೆಜ್ಜೆಯನ್ನು ಎಂದಿಗೂ ಚಲಿಸುವುದಿಲ್ಲ (ಶೀತಿಶಂ. XI, ೪ ಅವಿಟ) ; ನೀನು ಯಾವಾಗಲೂ ನಮ್ಮನ್ನು ದೂಷಿಸಿ ನಮ್ಮ ಹಗೆಗಳನ್ನು ಭೂಷಿಸುತ್ತೀಯೆ (ಶೀಕ್ಷತ. ೦೦೬). [ಭೂಷಣ + – ಇಸು]

**ಭೂಷೆ** (ನಾ). ಒಡವೆ ; ಆಭರಣ : ಆರ್ಹಂತ್ಯಧರ್ಮಂ ತನಗಾಮರ್ಗಂ ಭೂಷೆ ರತ್ನತ್ರಯಮನೆ ನೆಗಳ್ದಂ ಧಾತ್ರಿಯೊಳ್ ಶಾಂತಿನಾಥಂ (ಸುಕುಮಾ. ೦–೫೫) ; ಕರ್ಣಪೂರತೆಗೆ ಕೆಂದಳಮ್ಮೆತಾದುದು ಹಾರಂ ಕಣ್ಬನಿಯಿಂದಾದತ್ತು ಬೀದ ಭೂಷೆಯಂ ದೂಷಿಪವೋಲ್ (ಚಂದ್ರಪು. ೫–೦೨೮). [ಸಂ. ಭೂಷಾ]

**ಭೂಷ್ಣು** (ನಾ). ೧. ಬಾರಿಬಾರಿಗೂ ಹುಟ್ಟುವ ಸ್ವಭಾವವುಳ್ಳದು : "ಭೂಷ್ಣುಃ, ಭವಿಷ್ಣುಃ, ಭವಿತಾ – ೩ . . . ಬಾರಿಬಾರಿಗೂ ಹುಟ್ಟುವ ಸ್ವಭಾವವುಳ್ಳ ಕೇಶವಾದಿಗಳ ಹೆಸರೆಂದು ಕೆಲವರೆನ್ನುವರು" (ಸಿದ್ಧಾಂತಿ. ೩೩೦). ೨. ಚೆನ್ನಾಗಿ ಬದುಕಿ ಬಾಳಬೇಕೆಂಬ ಅಭಿಲಾಷೆ ; ಪುರೋಭಿವೃದ್ಧಿಗೆ ಬರಬೇಕೆಂಬ ಇಷ್ಟ. ೩. ವಿಷ್ಣು ; ನಾರಾಯಣ: ಭಗವಂತ ಸುಗತ ಶುದ್ಧಾತ್ಮ ಸುಶ್ರುತ ಸರ್ವದರ್ಶನ ಭಗವನ್ ಭೂಷ್ಣು ವಿಭೂಷ್ಣು (ಜ್ಞಾನಸ. ೯೯–೦೦೨). [ಸಂ.]

**ಭೂಷ್ಯ** (ಗು). ೧. ಅಲಂಕರಿಸಲು ಯೋಗ್ಯವಾದ ; ಶೃಂಗರಿಸಲು ಅರ್ಹವಾದ : ನೋಡಿದರ್ ಘಟಿಕಚಿಯರ್ ಸಮಂದರುತುಮಾಕೆಯ

ಭೂಷ್ಯವಿಭೂಷಣಂಗಳಂ (ಶಂಶ್ರಶೃ. ೬-೬೭). (ನಾ). ೨. ಅಲಂಕರಿಸ ಬೇಕಾದುದು : ಇದು ಕೊರಲಿಂತಿದಾರವಿದು ಭೂಷ್ಯವಿದರ್ಕಿದು ಭೂಷಣಂ ದಲೆಂಬುದನೆನವೇಡ (ಶಾಂತಿಪು. ೩-೯೦). ೩. ಹೊಗಳಿಕೆಗೆ ಪಾತ್ರವಾದುದು ; ಸ್ತುತ್ಯವಾದುದು. ೪. ಹೊಗಳಿಕೆ ; ಸ್ತುತಿ : ಜನರ ಪರಿಪರಿ ದೂಷ್ಯ ಭೂಷ್ಯವ ನೆನೆವೆನೇ ತಮ್ಮಡಿಯ ಸಂಭಾವನದ ಬಲುಹಿರಲಾವ ಭಯವೇಕೆ (ಗಗಶಾ. ೦೭-೬೯). [ಸಂ.]

**ಭೂಸಕ್ಕರೆ** (ನಾ). ಒಂದು ಬಗೆಯ ಸಸ್ಯ ಮತ್ತು (ಔಷಧಿಗೆ ಬಳಸುವ) ಅದರ ಗಡ್ಡೆ : ಭದ್ರಮುಸ್ತೆ, ಕೋಷ್ಟ, ಭೂಸಕ್ಕರೆ ತಾವರೆನಾಳ . . . ಇಷ್ಟು ಔಷಧಗಳನ್ನು ಸರಿಯಾಗಿ ಕೂಡಿ . . . ಮಜ್ಜಿಗೆಯಲ್ಲಿ ಕದಡಿಕೊಡುವುದು (ಶಿಶ್ವಕಿ. ೪೪); ಚೆನ್ನೆಗ್ಗಿಲು . . . ತುಪ್ಪ ಉಳಿವಂತೆ ಕಾಸಿ ಅದರಲ್ಲಿ ಭೂಸಕ್ಕರೆ ಕಲ್ಲ ನಾರು . . . ಚೂರ್ಣವ ಮಾಡಿ ಹಾಕಿ . . . ಜೇನುತುಪ್ಪವ ಪನಿಸಿ ಸೇವಿಸಲು ಅಸ್ಥಿಸ್ರಾವ ಪರಿಹರ (ಸಕವ್ಯ. ೨೦೩). [<ಸಂ. ಭೂಶರ್ಕರಾ]

**ಭೂಸವೆತ** (ನಾ). ಭೂಮಿಯು ಸವೆದು ಹೋಗುವುದು : ಕತ್ತಾಳೆ ಗಳನ್ನು ಮಟ್ಟವಲ್ಲದ ಭೂಮಿಯ ಬದುಗಳಲ್ಲಿನ ಭೂಸವೆತವನ್ನು ತಡೆಯುವುದಕ್ಕೂ ಬೆಳೆಸುತ್ತಾರೆ (ಕಶಕೋ. 1, ೦೭೪). [ಭೂ + ಸವೆತ]

**ಭೂಸಾರ** (ನಾ). ನೆಲದಲ್ಲಿರುವ ಸಸ್ಯಗಳು ಬೆಳೆಯಲು ಕಾರಣವಾದ ರಾಸಾಯನಿಕ ವಸ್ತು ; ಗೊಬ್ಬರ. [ಸಂ.]

**ಭೂಸಾರತೆ** (ನಾ). ನೆಲದ ಸಾರ,-ಸತ್ತ್ವ : ಶಿಳಿವ ತಡಿದಡಿಯ ಮಡಿಗಳ ಜಳದೊಳ್ ರಂಜಿಸುವ ಧಾನ್ಯಮಂಜರಿಯ ನೆಟಿಲ್ ಪೊಳೆಯೆ ತೆನೆವೋದುವಿವು ಬೇರ್ಗಳೆನಿಪುವು ಬೆಳೆದ ಕಟಿವೆ ಭೂಸಾರತೆಯಿಂ (ಶಂಶ್ರಶೃ. ೦-೯೨). [ಸಂ. ಭೂಸಾರತಾ]

**ಭೂಸುತೆ** (ನಾ). ಭೂಮಿಯ ಮಗಳು ; ಸೀತೆ : ಭೂಸುತೆಯಾಣ್ಮ ನೊಲ್ದು ಬೆಸನಂ ಕುಡೆ ಲಂಕೆಗೆ ಪೋಗಿ ದಾನವಾಧೀಶನ ರಾಜಮಂದಿರ ಮನಂಜದೆ ಪೊಕ್ಕು (ರಶೀಕಶ. ೯-೯೨). [ಸಂ. ಭೂಸುತಾ]

**ಭೂಸುರ** (ನಾ). ೧. ಬ್ರಾಹ್ಮಣ : ಮಹಿಯೊಳ್ ಭೂಸುರವೇಷದಿಂದ ಕಲಿಯಲ್ ಕರ್ಣಂ ಧನುರ್ವೇದಮಂ ರಹಿಗೆಟ್ಟಂ (ಸೋಮಚ. ೪೨); ನೀ ನೆನೆಮದು ಭಗೀರಥಪುತ್ರನೆಂದುದು ಭೂಸುರವ್ರಾತ (ಕುಮ್ಯಾರಾ. ೦೩-೧೦) ; ಭೂಸುರರ್ ದಾನ ದಕ್ಷಿಣೆಗಳಿಂ ತಣಿವರ್ (ರಾಮಾಕ್ಷ. ೨೦-೮೬). ೨. ಒಂದು ಬಗೆಯ ರತ್ನ : ಪಳುಕಿನಂದದಿ ನಿರ್ಮಲತ್ವದಿಂ ತೋರಿ ಶಶಿಕಳೆಯ ತೋರುವದು ಭೂಸುರಜಾತಿಯಕ್ಕುಂ (ರತ್ನಶಾ. ೯). [ಸಂ.]

**ಭೂಸ್ತೃಣ** (ನಾ). = ಭೂತೃಣ : "ಮಾಲಾತೃಣಕಂ, ಭೂಸ್ತೃಣಂ—೨ ಮಾರವಳೀ ಹುಲ್ಲಿನ ಹೆಸರು" (ಸಿದ್ಧಾಂತಿ. ೧೭೩). [ಸಂ.]

**ಭೂಸ್ಥಾಪನೆ** (ನಾ). ಭೂಮಿಯಲ್ಲಿ ಹೂತಿಟ್ಟುದು ; ಭೂಮಿಯ ಒಳಗೆ ಇರುವುದು : ಬ್ರಾಹ್ಮಣನೊಬ್ಬನು . . . ಭೂಸ್ಥಾಪನೆಯಾದ ಸಿಂಹಾಸನ ವನ್ನು ನೋಡಿ ಅಲ್ಲಿಂದ . . . ದಕ್ಷಿಣದೇಶಕ್ಕೆ ಹೊರಟುಹೋದನು (ಕುಕಟಾ. ೦೬೩). [ಸಂ. ಭೂಸ್ಥಾಪನ]

**ಭೂಸ್ಥಿತಿ** (ನಾ). ೧. ಭೂಮಿಯ ಲಕ್ಷಣ,-ಸ್ಥಿತಿ : ನಾವು ಪ್ರಪಂಚದ ಸಮಗ್ರಭೂಸ್ಥಿತಿಯನ್ನು ಸ್ಥೂಲವಾಗಿ ವಿಮರ್ಶೆ ಮಾಡಿದೆವು (ಜಾಲಕ್ರ. III, 1748). ೨. ಹೊಲಗದ್ದೆ ಮೊದಲಾದ ಸ್ಥಿರವಾದ ಸ್ವತ್ತು; ಸ್ಥಿರ ಆಸ್ತಿ : (೬). [ಸಂ.]

**ಭೂಸ್ವಾಮ್ಯ** (ನಾ). ಭೂಮಿಯ ಒಡೆತನ,—ಪಾಲೀಕತ್ವ : ಅತ್ಯಂತ ವಿಸ್ತಾರವಾದ ಆಸ್ತಿಪಾಸ್ತಿಗಳಿಗೆ ಅವನು ವಾರಸುದಾರನಾಗಿದ್ದರೂ, ಭೂಸ್ವಾಮ್ಯಸಂಬಂಧವಾದ ಸ್ಪೆನ್ಸರ್‌ನ ಅಭಿಪ್ರಾಯಗಳು ಅವನ ಮನಸ್ಸಿನ ಮೇಲೆ ತುಂಬ ಪ್ರಭಾವಕಾರಿಯಾದವು (ಭೂಕರು. ೩೪). [ಸಂ.]

**ಭೂಳೋಕ** 'ಭೂಲೋಕ' ನೋ.

**ಭೃಂಗ** (ನಾ). ೧. ತುಂಬಿ ; ಬಂಡುಣಿ : "ಅಳಿ ಚಂಚರೀಕಮಿಂದಿಂದಿರಂ ತುಂಬಿ ಪುಷ್ಪಲಿಹಂ ಮಧುವ್ರತಂ ಭೃಂಗಂ . . . ಮಧುಪಮಾ ಭ್ರಮರ ಮಕ್ಕುಂ" (ಶಬ್ದಗಣ. ೩೨-೧೦) ; ಯಾಚಕಭೃಂಗಕೋಟಿ ಕೈಕೊಂಡು ನಿರಂತರಂ ತಗಳ್ದು ಕೀರ್ತಿಸೆ . . . ಪ್ರಚಂಡಮಾರ್ತಾಂಡನಲರ್ಚುಗೆನ್ನ ಹೃದಯಾಂಬುಜಮಂ ನಿಜವಾಙ್ಮರೀಚಿಯಿಂ (ಶಂಕಶಾ. ೦-೩) ; ಪುಷ್ಪ ವೊಂದು ಬಟಲಲ್ ಭೃಂಗಕ್ಕೆ ಪೂವಿಲ್ಲವೇ(ಸೋಮಶ. ೨೬); ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸ (ಪಾದರೀ. ೮೯-೧). ೨. ಒಂದು ಬಗೆಯ ಕಡಜದ ಹುಳು: 'ಭೃಂಗಕೀಟನ್ಯಾಯ' ಪರಾ. ೩. ಒಂದು ಬಗೆಯ ಪಕ್ಷಿ: "ಕಳಿಂಗಃ, ಭೃಂಗಃ, ಧೂಮ್ಯಾಟಃ — ೩ ಕುಕ್ಕುಟಿಯೆಂಬ ಹಕ್ಕಿಯ ಹೆಸರುಗಳು" (ಸಿದ್ಧಾಂತಿ. ೦೫೬). ೪. ವ್ಯಭಿಚಾರಿ; ಸ್ವೇಚ್ಛಾ ಚಾರಿ. ೫. ಬಂಗಾರದ ಕಳಶ. ೬. ಒಂದು ಬಗೆಯ ಸಸ್ಯ ; ಗರುಗ: "ಗರುಗ ಮಂಗಾರಕಂ ಭೃಂಗಮದು" (ಶಬ್ದಗಣ. ೩೯-೨೮). ೭. ಒಂದು ಬಗೆಯ ಸಸ್ಯ : (ವೃಕ್ಷಿಗಿ. ೨೦-೩೮೯) ೮. ಕಾಗೆಬಂಗಾರ ; ಅಭ್ರಕ : "ಭೃಂಗಮಭ್ರಕಮಕ್ಕುಂ" (ಶಬ್ದಗಣ. ೩೦-೬) ; ದಂತದ ಪಾವುಗೆ ಭೃಂಗ ದೋಲೆ ಮೆಯ್ವೆತ್ತಿರೆ ರಾತ್ರಿಯೊಳು ಸುಳಿವ ಬ್ರಹ್ಮೆಯನೀಗಮಗಿಪ್ಪ ಸಿದ್ದಿಯಾ (ಎಕ. V, ಅರಸೀ. ೬೦-೨ ; 1184). ೯. ಮೋಡ ; ಮೇಘ. ೧೦. ಕತ್ತಲೆ; ಅಂಧಕಾರ. ೧೧. ಕಪ್ಪುಬಣ್ಣ ; ಕೃಷ್ಣವರ್ಣ : "ಭ್ರಮರಾಭ್ರಂ ಗರುಗಾಭ್ರಕಂ ತಿಮಿರಮುಂ ಕೃಷ್ಣಾದಿ ಭೃಂಗಾಹ್ವಯಂ" (ಪಾಪಾರ. ೯೬). ೧೨. [ನಾಟ್ಯ] ನೃತ್ಯದ ಒಂದು ಭಂಗಿ : ಒಂದು ಕಾಲನೆತ್ತಿಕೊಂಡು ಒಂದು ಕಾಲ ನೆಲದಲ್ಲಿಟ್ಟುಕೊಂಡು ಚಕ್ರದೋಪಾದಿ ತಿರುಗುವಣ ಇದು "ಭೃಂಗ"ವೆನಿಸಿಕೊಂಬುದು (ಕುಶಕ. ೩೩). [ಸಂ.]

**ಭೃಂಗಕೀಟನ್ಯಾಯ** (ನಾ). ಕಡಜವು ತನ್ನ ಗೂಡಿನಲ್ಲಿ ಕೀಟವೊಂದನ್ನು ತಂದಿಟ್ಟುಕೊಂಡು ಅದರ ಸುತ್ತಲೂ ಗುಯ್‌ಗುಡುತ್ತ ಸುತ್ತು ತ್ತಿದ್ದರೆ, ಆ ಕೀಟವು ಕಡಜ ತನ್ನನ್ನು ಚುಚ್ಚಿ ತಿನ್ನುವುದೆಂದು ಇದರತ್ತಲೇ ಲಕ್ಷ್ಯವನ್ನಿಟ್ಟುಕೊಂಡಿದ್ದು ಕಡೆಗೆ ತಾನೂ ಕಡಜದ ಆಕಾರಕ್ಕೆ ಪರಿವರ್ತನೆಗೊಳ್ಳುವ ದೃಷ್ಟಾಂತ : ಯುವತಿಯೊರ್ವಳ್ಮ ೪ಮ ತೊಲಗಿದಾತ್ಮೇಶ್ವರನ ತವಕದಿಂದಾವಗಂ ಮನವಂಟ ನೆನೆಯಲ್ಕೆ ಯುವತಿತ್ವಮುಡುಗಿ ಪುರುಷತ್ವಮೆಯ್ದುಗುವಂತೆ ಭೃಂಗಕೀಟನ್ಯಾಯದಿಂ (ಅರಾಶ. ೦-೦೩-೯೭). 'ಭ್ರಮರಕೀಟನ್ಯಾಯ' ಪರಾ. [ಸಂ.]

**ಭೃಂಗಕುಂತಳೆ** (ನಾ). ತುಂಬಿಯಂತೆ ಕಪ್ಪಾದ ತಲೆಗೂದಲುಳ್ಳವಳು: ಜಲವಿಹಾನೇಕ್ಷಣೆಯರ್ ಮೃಣಾಳಭುಜೆಯರ್ ಪದ್ಮಾಸ್ಯೆಯರ್ ಭೃಂಗ ಕುಂತಳೆಯರ್ (ಕೃಷ್ಣಪು. ೦೨-೦೦೨). [ಸಂ. ಭೃಂಗಕುಂತಲಾ]

**ಭೃಂಗಗಾವುಂಡ** (ನಾ). ಒಬ್ಬಾತನ ಹೆಸರು : ಸಕಕಾಲಂ ಎಣ್ಬುನೂಱ ತೊಂಬತ್ತನಾಲ್ಕನೆಯ ಪ್ರಜಾಪತಿಸಂವತ್ಸರಂ ಪ್ರವರ್ತಿಸೆ ಭೃಂಗಗಾವುಣ್ಡನ ಮಮ್ಮರ್ನ್ ಗಾವುಣ್ಡಯ್ಯನ ಕಲ್ಲು (ಎಕ. XI, ಹಿಂಯೂ. ೩೦-೦ ; 971). [ಭೃಂಗ + ಗಾವುಂಡ (<ಗಾವುಂಡ)]

**ಭೃಂಗಗುಣ** (ನಾ). ತುಂಬಿಗಳೇ ಬಿಲ್ಲಿನ ಹೆದೆಯಾಗಿ ಉಳ್ಳವನು ; ಕಾಮ; ಮನ್ಮಥ ; P ಮನ್ಮಥನಿಗೆ ತುಂಬಿಗಳೇ ಹೆದೆಯೆಂಬುದು ಕವಿಸಮಯ.

**ಭೃಂಗಗುಣಹರ** = ಮನ್ಮಥನನ್ನು ಸಂಹರಿಸಿದವನು ; ಶಿವ : ಭೃಂಗಗುಣಹರ [ಶಾಶಾಂ. ತಂಗವಿರಧರ] ಕೊಡುವನೆಂದು ಬಲುಸೊಕ್ಕಿಂದ ಪೊಂಗಳಂ ಕೊಡ ಬಂದ ಗಂಧರ್ವಭಾರತಿಯ ಜಱಿದು (ಶ್ರೀಕರಾ. ೦೫-೨೬). [ಸಂ.]

**ಭೃಂಗಗುರುಳಿ** (ನಾ). =ಭೃಂಗಕುಂತಳೆ : ಅದಾವ ಕವಿಯು ಬಣ್ಣಿಸುವನ್ನೆ ಭೃಂಗಗುರುಳೀ (ಶಶವೋ. ೩-೨೨). [ಭೃಂಗ + ಕುರುಳು$_1$ (< ಕುರುಳ್$_1$) + — ಇ$_2$]

**ಭೃಂಗಬೋದಿಗೆ** (ನಾ). ಕಾಗೆಬಂಗಾರದಂತೆ ಹೊಳೆಯುವ ಬೋದಿಗೆ : ಅಂಗಡಿಯ ಬೀದಿಗಳು ರಂಗಶಾಲೆಗಳು ಶೃಂಗರದೊಳೊಪ್ಪುತಿಹ ಭೃಂಗ ಬೋದಿಗೆಯುಂ (ಹಮ್ಮಿ. ೬೬). [ಭೃಂಗ + ಬೋದಿಗೆ]

**ಭೃಂಗರಾಜ** (ನಾ). ೧. ಒಂದು ಬಗೆಯ ಸಸ್ಯ; ಗರುಗ : "ಮಾರ್ಕವಃ, ಭೃಂಗರಾಜಃ—೨ ಗರಗದ ಸೊಪ್ಪು" (ಸಿದ್ಧಾಂತ. ೦೯೬); "ಭೃಂಗರಾಜಃ— ಹೊಂಗರುಗ" (೬೫೦. ೦೦೩). ೨. ಒಂದು ಬಗೆಯ ದೊಡ್ಡ ದುಂಬಿ. [ಸಂ.]

**ಭೃಂಗವಲ್ಲಿ** (ನಾ). = ಭೃಂಗರಾಜ ೧ : "ಭೃಂಗಾಹ್ವಾ —ಗರುಗ, ಭೃಂಗ ವಲ್ಲಿ" (೬೫೦. ೦೦೩). [ ಸಂ. ಭೃಂಗವಲ್ಲೀ ]

**ಭೃಂಗಾಯಿ** (ನಾ). ಒಂದು ಬಗೆಯ ಗಿಡ ಮತ್ತು ಅದರ ಫಲ : ತೆಂಗಾಯಿ ಪಲಸು ಕಿತ್ತಳೆ ಮಾವು ಮಾದಲ ಭೃಂಗಾಯಿವಣ್ಣಾಳು ಸಹಿತ ಹಿಂಗದ ಬಹುಫಲಾದಿಗಳ ತೋಂಟಿಗರು ಸಾರಂಗಪಾಣಿಗೆ ಸಾರ್ಚಿದರು (ವೋಪಶ. ೪-೬೨). [ ? ]

**ಭೃಂಗಾರ** (ನಾ). ೧. ಚಿನ್ನದ ಗಿಂಡಿ; ಸುವರ್ಣಕಲಶ; P ರಾಜರ ಪಟ್ಟಾಭಿಷೇಕದಲ್ಲಿ ಉಪಯೋಗಿಸುತ್ತಿದ್ದ ಕಲಶವು ಚಿನ್ನ, ಬೆಳ್ಳಿ, ಮಣ್ಣು, ತಾಮ್ರ, ಸ್ಫಟಿಕ, ಗಂಧದ ಮರ, ಕಬ್ಬಿಣ ಮತ್ತು ಕೊಂಬು ಎಂಬ ಎಂಟು ಪದಾರ್ಥಗಳಿಂದ ನಿರ್ಮಿತವಾಗಿದ್ದು ಆಕಾರ, ಅಳತೆಗಳಲ್ಲೂ ಭೇದವಿರುತ್ತಿತ್ತೆಂದೂ ಹೇಳಲಾಗಿದೆ : "ಭೃಂಗಾರಃ, ಕನಕಾಲುಕಾ—ಈ ೨ ಬಿಂಗಾರಿ" (ಹಲಾಯು. ೩೨-೦೬೦); ಧ್ವಜ ದರ್ಪಣ ಚಂಚಚ್ಚಮರಜ ಮಣಿ ಭೃಂಗಾರ ಸುಪ್ರತಿಷ್ಠಿತ ತಾಳವೃಂತ ಕಳಶಾತಪತ್ರಂ ತ್ರಿಜಗತ್ಪತಿ ಗಷ್ಟಮಂಗಳಂ ಸೊಗಯಿಸುಗುಂ (ಆಪು. ೪-೪೦); ಹರಿನೀಲಸ್ತಂಭಮಂ ಜಾಗದ ಪಡಲಿಗೆಯುಂ ತುಂಗಭೃಂಗಾರಮುಂ ನಿರ್ವಿರೆ . . . ಬೆಡಂಗಾದು ದುವ್ವಾಹಗೇಹಂ (ಶಂರಾಪು. ೩-೦೦೨). ೨. ಪಾತ್ರೆ; ಕಲಶ : ತುಂಗ ಕನಕಭೃಂಗಾರವಿರಾಜಿ ರಾಜನ್ಮರಕತಮಯುಖಕವಿರಾಜಿ (ಆಪು. ೪-೩೦ ಕಗಳ); ಗಂಧಸಲಿಲಸಂಭೃತ ವಿಶಾಲಹರಿನೀಲಭೃಂಗಾರಂಗಳಿಂ. . . ಮನಂ ಗೊಳಿಪ ದೇವಪೂಜಾಗೃಹಮಂ ಪೊಕ್ಕು (ಶಂರಾಪು. ೦೨-೨ ವ); ಪಳಿಕಿನ ಭೃಂಗಾರದ ಬೆಳ್ಳಿಳಗುಂ ಜಾಗಂಗಳಿಸೆವ ಪಸುರ್ವೆಳಗುಂ. . . ಪಸರಿಪ್ಪವು ಸುರಶರಾಸನಶತಮಂ (ತಂಪ್ರಪು. ೬-೩೦). ೩. ಚಿನ್ನ; ಬಂಗಾರ : 'ಭೃಂಗಾರವನೆ' ಪರಾ. [ಸಂ.]

**ಭೃಂಗಾರವನೆ** (ನಾ). ಚಿನ್ನದಿಂದ ನಿರ್ಮಿಸಿರುವ ಮನೆ; ಬಂಗಾರದ ಮನೆ : ಭೃಂಗಾರವನೆಯ ಭೋಗಂ ಮಂಗಳಕಳಶಂ . . . ಸಪ್ತಸ್ವರ ಕಂಗೆಸೆಯಲ್ ಮೆಱೆದುದಾ ಸ್ವಯಂವರಗೇಹಂ (ಪಶಂ. ೨೬೪). [ ಭೃಂಗಾರ + ಮನೆ ]

**ಭೃಂಗಾರಿ** (ನಾ). ೧. = ಭೃಂಗಾರ ೨ : ತೋರಮೊಲೆಗಳ ಮೊಗಂಗಳ್ ರಾರಾಜಿಸಿ ಕರ್ಪುರಮೆತ್ತು ಮೋಹನಧೂಮೋದ್ಗಾರಿಗಳಂ ಕಾಂಚನಭೃಂಗಾರಿಗಳಂ ಪೋಲ್ತುವರಸಿಗಂದೆಳಮಸಿಱಿೊಳ್ (ಶಂರಾಪು. ೩-೯೩) : ಪೊಸಬಾಸಿಗವಂ ಬಿಸುಡುತೆ ವಿಸುನಿಯಿ ಭೃಂಗಾರಿಗಳ ಘಟಂಗಳನೊಡೆವುತ್ತಸಪಸದ ಕರ್ಪುರಮಂ ತಾಪಸನುರು ಮುಳಿಸಿಂದೆ ಮಾಡುತಿರಲ್ (ತ್ರಿಶೂಪು. ೨-೮೬). ೨. ರೆಕ್ಕೆ ಇರುವೆ ; ಜೀರುಂಡೆ : "ಭೃಂಗಾರೀ, ಜೀರಿಕಾ, ಚೀರೀ, ಝಿಲ್ಲಿಕಾ—ಳ ರೆಕ್ಕೆಗಳುಳ್ಳ ಇರುವೆಗಳ ಹೆಸರುಗಳು. ಚಿಮ್ಮಂಡೆ ಹುಳ ವೆನ್ನುವರು" (ಸಿದ್ಧಾಂತ. ೬೬೦). [ ಸಂ. ಭೃಂಗಾರೀ ]

**ಭೃಂಗಾರು** (ನಾ). = ಭೃಂಗಾರ ೧ : ಗೃಹೀತಚಾಮರತಾಳವೃಂತ ಭೃಂಗಾರುವಾರಾಂಗನಾಸಹಸ್ರಸಂಗತಮುಂ . . . ಅಪ್ಪ ರಾಜಮಂದಿರಮಂ ಪೊಕ್ಕು (ಕಾದಂಬ. ೪೩೪); ವಿರದಂಡಾಂಕುಶ ಝಷಚಾಮರದರ್ಪಣ ಕಲಶ ಶಂಖ ಭೃಂಗಾರು ನಿಶಾಕರಶಕ್ತಿ ಖಡ್ಗ ಮುಸಲೋತ್ಕರಮಂ ವಾಜಿಗಳ ಪೊಡ್ರಪಾದನುಕರಿಸೆ ಶುಭಂ (ಅಸ್ತ್ರಾ. ೩-೪). [ಸಂ.]

**ಭೃಂಗಾರುಧಾರಿ** (ನಾ). ಚಿನ್ನದ ಕಲಶವನ್ನು ಹಿಡಿಯುವ ವ್ಯಕ್ತಿ : ವಿಜಯಿ . . . ನಂದಿವರ್ಧನೆಯೆಂಬೆಣ್ಬರುಂ ದಿಗ್ವನಿತೆಯರಂ ಪರಮಜಿನ ಜನ್ಮೋತ್ಸವದೊಳ್ ಶೃಂಗಾರಂಬೆರಸು ಭೃಂಗಾರುಧಾರಿಗಳಾಗಲುಂ . . . ಬೆಸಸುವುದುಂ (ಆಪು. ೬-೩ ವ). [ಸಂ. ಭೃಂಗಾರುಧಾರಿನ್]

**ಭೃಂಗಾರುಧಾರಿಣಿ** (ನಾ). ಚಿನ್ನದ ಕಲಶವನ್ನು ಹಿಡಿಯುವವಳು : ತಾಂಬೂಲತಾಳವೃಂತಾಂಗರಾಗ ಭೃಂಗಾರುಧಾರಿಣಿಯರಪ್ಪ ವಾರವಿಳಾಸಿನಿಯರೊಳಂ (ಕಾದಂಬ. ೪೯೩); ಜಿನೇಂದ್ರಜನ್ಮಕಲ್ಯಾಣದೊಳ್ ಭೃಂಗಾರು ಧಾರಿಣಿಯರಾಗಿ (ತಂಪ್ರಪು. ೦೦-೦೨೩ ವ). [ಸಂ. ಭೃಂಗಾರುಧಾರಿಣೀ]

**ಭೃಂಗಾಲಕ**, ಭೃಂಗಾಳಕ (ನಾ). ತುಂಬಿಯಂತೆ ಕಪ್ಪಾದ ಮುಂಗುರುಳು; ನೀಲಕುಂತಲ : ಒಬ್ಬ ಉತ್ತಮ ದೇವಶಿಲ್ಪಿ ಕೊರೆದ ಕಣ್ಣು-ಮೂಗಿನ ಮಾಟ; ಕಣ್ಣನ್ನು ಸೆರೆಹಿಡಿಯುವ ಭೃಂಗಾಲಕಗಳು (ಕನ್ನಡ. ೬೪೬). **ಭೃಂಗಾಳಕ** : ನವಕನಕಮಣಿಬಂಧನಿಗಳಂಗಳಿಂ ಭೃಂಗಾಳಕಂಗಳಿಂದೆ . . . ಎಸೆವ ಪೆಣ್ಗಳಾನೆಗಳ ಮೇಲ್ಮೆತಂದರು (ಕೃಷ್ಣಾ. ೦೬-೩); ಸುಲಿಪಲ್ಕೆಂಬವಳಂ ಬೊಲೊಪ್ಪುವಧರಂ ಭೃಂಗಾಳಕಂ . . . ಪದಾಬ್ಜಂ ಮಂಜುಳಂ ಕಾಂತೆಯಾ (ರಾಜಶೇ. ೩-೦೬). [ಸಂ.]

**ಭೃಂಗಾಳಕ** 'ಭೃಂಗಾಲಕ' ನೋ.

**ಭೃಂಗಿ**[1] (ನಾ). ೧. ಪರಮೇಶ್ವರನ ಪ್ರಮಥರುಗಳಲ್ಲಿ ಒಬ್ಬ : ಅವರಿದರಾಗಿ ಬಹ ಭೃಂಗಿಯಂ ಕಂಡು ನಸುನಕ್ಕರು (ಸಿದ್ಧರಾ. ೦-೨೪); ಆದ್ಯರೊಳೆದ್ದು ಕೋಡಗದಾಟವಾಡುವ ಭೃಂಗಿಯೆಯ್ತಂದ (ಬಸಪು. ೨೮-೬). ೨. ಅಂಜೂರದ ವೃಕ್ಷ. [ಸಂ. ಭೃಂಗಿನ್]

**ಭೃಂಗಿ**[2] (ನಾ). ಹೆಣ್ಣುದುಂಬಿ; ಭ್ರಮರಿ : ಸರಸಕಂಠಕಕುಟ್ಮಳಸಂಗಿ ಭೃಂಗಿಯಂಗೆಲೆ (ಜಗಪು. ೨-೩೬). [ಸಂ. ಭೃಂಗೀ]

**ಭೃಂಗಿನರ್ತನ** (ನಾ). ೧. (ಪರಮೇಶ್ವರನ ಸಭೆಯಲ್ಲಿ) ಭೃಂಗೀಶ್ವರನು ಮಾಡುವ ನರ್ತನ. ೨. [ವೀರಶೈ] ವೀರಶೈವ ಮಠಗಳಲ್ಲಿರುವ ಪರಂಪರಾಗತವಾದ ಒಂದು ಬಿರುದು (?) : (ಸಾಧಾರಣ ಬಿರುದುಗಳು)—ಉಡುಕುವಾದ್ಯ, ಭೃಂಗಿನರ್ತನ, ದುಂದುಭಿ, ಭೇರಿ, ಕಹಳೆ, ಕರ್ನೆ (ಗುರುಚ. ೧೧). [ಸಂ.]

**ಭೃಂಗಿಪ** (ನಾ). = ಭೃಂಗಿ[1] ೧ : ಗರುಡನ ಗಱಿಯ ಗಾಳಿಯೊಳ್ಸಿಕ್ಕಿ ಬೆಂಡಾಗಿ ತಿರುಗಿ ಬಂದಭವಂಗೆ ಭೃಂಗಿಪಂ ಬಿನ್ನೈಸುತಿರೆ ಕೇಳ್ದು (ಕೃಷ್ಣಾ. ೦೪-೨೦). [ಸಂ.]

**ಭೃಂಗಿರಿಟಿ** (ನಾ). = ಭೃಂಗಿ[1] ೧ : ಭೃಂಗಿರಿಟಿಯ ಮೆಲ್ಲಡಿಗಳಿನ್ನಯ ಮಸ್ತಿಗೆ ಸಕ್ತವಿವಾಪುತ್ತಿರ್ಕೆ ನಿರ್ಮಳತ್ವಮಂ (ಅರಾತ. ೦-೧-೦೬). P ಭೃಂಗಿಗೆ ಶಿವಗಣದಲ್ಲಿ ಬಹಳ ಉನ್ನತಸ್ಥಾನವಿದೆ. ಭೃಂಗಿರಿಟಿ, ಭೃಂಗೇರಿಟಿ, ಭೃಂಗಿರೀಟಿ, ಭೃಂಗರಿಟಿ, ಭೃಂಗರೀಟ, ಭೃಂಗಿರೀಟ, ಭೃಂಗೀರಿಟ ಎಂಬ ವ್ಯತ್ಯಾಸವು ಹೆಸರಿನಲ್ಲಿ ಕಂಡುಬರುತ್ತದೆ. ಇವನು ದುಂಬಿಯಂತೆ ಧ್ವನಿ ಮಾಡುತ್ತಿದ್ದುದರಿಂದ (ಭೃಂಗ ಇವರಟತಿ ಎಂದು) ಇವನಿಗೆ ಈ ಹೆಸರುಗಳು ಬಂದಿವೆ. ಪರಮೇಶ್ವರನು ಪಾರ್ವತಿಯೊಂದಿಗೆ ಬೆರೆತಾಗ ತನ್ನ ವೀರ್ಯವನ್ನು ಅಗ್ನಿಯಲ್ಲಿ ಬಿಟ್ಟನು. ಆಗ ಅದರ ಎರಡು ಕಣಗಳು ಬೆಟ್ಟದ ಮೇಲೆ ಸಿಡಿದು ಬಿದ್ದುವು. ಅದರಿಂದ ಇಬ್ಬರು ಮಕ್ಕಳು ಹುಟ್ಟಿದರು. ಬ್ರಹ್ಮನು ಆ ಮಕ್ಕಳಲ್ಲಿ ದುಂಬಿಯಂತೆ ಕಪ್ಪುಬಣ್ಣವುಳ್ಳ ಒಬ್ಬನಿಗೆ ಭೃಂಗೀ ಎಂದು ಹೆಸರಿಟ್ಟನು. ಕಾಡಿಗೆಯಂತೆ ಬಹಳ ಕಪ್ಪಾಗಿದ್ದ ಮತ್ತೊಬ್ಬನಿಗೆ ಮಹಾಕಾಲನೆಂದು ನಾಮಕರಣ ಮಾಡಿದನು. ಪಾರ್ವತೀ ಪರಮೇಶ್ವರರು ಆ ಮಕ್ಕಳನ್ನು ಬಹಳ ಪ್ರೀತಿಯಿಂದ ಸಲಹಿದರು. ಶಿವನು ಅವರನ್ನು ಗಣಾಧಿಪತಿಗಳನ್ನಾಗಿ ಮಾಡಿದನು. ಅವರಿಬ್ಬರೂ

ದ್ವಾರಪಾಲಕರಾಗಿದ್ದು ಶಿವಸೇವೆಯನ್ನು ಮಾಡುತ್ತಿದ್ದರಂ ಎಂದು ಕಾಳಿಕಾಪುರಾಣದ ೪೫ನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. [ಸಂ.]

**ಭೃಂಗೀಶ** (ನಾ). =ಭೃಂಗಿ$_1$ ೧ : ಭೃಂಗೀಶ ವೀರಗಣೇಶರುಂ ರುದ್ರೇಶ ಯೋಗಾಚಾರ್ಯರುಂ ನೆರೆದೋಲಯಿಸುತಿರಲು (ಬಸವ. ೨೪-೪೮) : ಗಗನ ಪಥದೊಳ್ ಪಿನಾಕಿ ಕಂಡಳ್ಕಿಯಿಂದಾ ತಲೆಗೆ ಕಳುಹಿದಂ ಭೃಂಗೀಶನಂ ಮುದದೊಳು (ಶೈಬಸ. ೧೪-೧೮). [ಸಂ.]

**ಭೃಗು** (ನಾ). ೧. ಬ್ರಹ್ಮನ ಹೃದಯದಿಂದ ಜನಿಸಿದವನು : ಒಬ್ಬ ಬ್ರಹ್ಮರ್ಷಿ : ಹರನಿಳಯದೊಳು ಹುಗುವ ನಂದೀಶ್ವರನೊ . . . ವರಮುನಿಪ ದೂರ್ವಾಸನೋ ಭೃಗುವೋ (ಬಸವ. ೪೩-೪೦) ; ರಕ್ಷೋಘ್ನ ಮಂತ್ರದಿಂದೆಂಟುಬಾಗಿಲ್ಗಳಂ ರಕ್ಷಿಸುವರಾಗಿ ವಿಶ್ವಾಮಿತ್ರ ಭೃಗು . . . ಅಕ್ಷಯತಪೋಧನದ ವರಮುನಿಗಳೆಲ್ಲರುಂ ಲಕ್ಷಿತದ ಪೂಜೆಗಳನನುಕರಿಸಲು (ಶೈವಿಶಾ. ೩೩-೪೦) ; ಭೃಗುಮುನಿಯ ಶಾಪದಿಂ ಪನ್ನಗಶಯನಂ ಪತ್ತು ಯೋನಿಯೊಳ್ ಪುಟ್ಟಿದನು (ಶ್ರೀಪ. ೩೬-೪೦). ೨. ಪರಶುರಾಮನ ತಂದೆ; ಜಮದಗ್ನಿ: 'ಭೃಗುಸುತ' ನೋಡಿ. ೩. ದೈತ್ಯಗುರು ; ಶುಕ್ರ : "ಉಂಗವಾನ್ ಕಾವ್ಯನಾ ಕವಿ ಭಾರ್ಗವಂ ಭೃಗು ಸಿತಾಂಗನುಶನನಸುರಗುರು ವೆಂದೆನಲು ಶುಕ್ರನು" (ಚುಂಗರಾ. ೧೨-೩) ; ಕವಿರಿಪು ಗುರು ಗುರುರಿಪು ಭೃಗುವವರೇಪರೆನಲ್ ಧರಿತ್ರಿ ಕವಿಗುರು ಜನತೋದ್ಭವವೊವವೆ ಮಂತ್ರ ಗುಣಮೊಪ್ಪುವುದು ಮಹಾದೇವದಣ್ಣನಾಥೋತ್ತಮನೊಳ್ (ಎಕ. VIII. ತೀರ್ಥ. ೨೮-೪೬ ; 1208?). ೪. ಬೆಟ್ಟದ ಇಳಿಜಾರು,— ಕಡಿದಾದ ಭಾಗ : " ಸಾನುಕಟಕಂ ಭೃಗು ಪ್ರಸ್ಥಂ ತಟಂ ನಿತಂಬಂ ಗಿರಿಯ ಹೊರೆ ಯಕ್ಕು " (ಚುಂಗರಾ. ೩೦-೨). ೫. ಶುಕ್ರವಾರ. ೬. ಶುಕ್ರನೀತಿ ಶಾಸ್ತ್ರ : ವರಸೂಪಶಾಸ್ತ್ರ ಭೃಗು ಚಿತ್ರ ರಸಾಳಂಕಾರ ಗಣಿತ ಗಜ ಹಯ ವೈದ್ಯಂ ಸ್ವರ ಶಕುನ ಕಾವ್ಯನಾಟಕ ಭರದಿ ಕಳಾವಿದನೆನಿಪ್ಪುದತಿ ಚಮತ್ಕೃತಿ (ಪುಶತಿ. ೧೦-೧೮). ೭. [ಜ್ಯೋತಿ] ಶುಕ್ರನು ಅಧಿದೇವತೆಯಾದ ಗ್ರಹ ; ಶುಕ್ರಗ್ರಹ. [ಸಂ.]

**ಭೃಗುಜ** (ನಾ). ೧. ಭೃಗುಋಷಿಯ ಮಗ : ಶುಕ್ರಾಚಾರ್ಯ. ೨. [ಜ್ಯೋತಿ] ಶುಕ್ರಗ್ರಹ : ಭೃಗುಜನಿಪ್ಪತ್ತೇಳಂಶದೊಳ್ ನಿಂದೊಡಲ್ಲಿ ನಿಜೋಚ್ಚಾಲಯಭಾಗದಲ್ಲಿ ಪರಮೋಚ್ಚಸ್ಥಾಯಿ ತಾನಾ ಗ್ರಹಂ (ಜಾತಿ. ೧-೪೦). [ಸಂ.]

**ಭೃಗುಜೆ** (ನಾ). ೧. ಭೃಗುಋಷಿಯ ಮಗಳು ; ಲಕ್ಷ್ಮಿ ; ಭಾರ್ಗವಿ. ೨. ಒಂದು ಬಗೆಯ ಮರ ; ಕಿರುದೇಗು : "ಸ್ವಸು ಭೃಗುಜೆ ಕಾಸಳ್ಳಿ ಕಿಚುದೇಗೆನಿಸ್ಕುಂ" (ಚುಂಗರಾ. ೪೭-೧೮). [ಸಂ. ಭೃಗುಜಾ]

**ಭೃಗುಪತನ** (ನಾ). ಬೆಟ್ಟದ ಕಡಿದಾದ ಪ್ರದೇಶದಿಂದ ಕೆಳಕ್ಕೆ ಬೀಳುವುದು ; P ಮಹತ್ತರವಾದ ಪಾಪವನ್ನು ಮಾಡಿದವರು ಬೆಟ್ಟದಿಂದ ಧುಮುಕಿ ಆತ್ಮಹತ್ಯೆ ಮಾಡಿಕೊಂಡರೆ ಪಾಪಪರಿಹಾರವಾಗುವುದೆಂದು ಧರ್ಮಶಾಸ್ತ್ರಗಳಲ್ಲಿ ಹೇಳಿದೆ : ಜಮುಕು ದುರ್ಭರವಾದಾಗ ಬೆಟ್ಟದ ಶಿಖರದಿಂದ ಹಾರಿ ಪ್ರಾಣವನ್ನು ಕಳೆದುಕೊಳ್ಳುವ ಭೃಗುಪತನವೂ ಪುರಾಣೇತಿಹಾಸಕಾಲಗಳ ವೀರರ ಆತ್ಮಾರ್ಪಣೆಯ ಉದಾಹರಣೆಗಳು (ಶಾಂತಲಾ. ೩೪೨ ಟಿಪ್ಪಣಿ). [ಸಂ.]

**ಭೃಗುವಾರ** (ನಾ). ಶುಕ್ರವಾರ : ಅಂದಿದೊ ವಸಂತಪೂರ್ಣಿಮೆಯು ಭೃಗುವಾರದಾ ನಡುಹಗಲ ಸಿರಿ ಹೊತ್ತು (ಗೊರೂಶಾ. ೧೧-೨೭೦). [ಸಂ.]

**ಭೃಗುವಿದ್ಯೆ** (ನಾ). (?) : ಚಿತ್ರಮೆಂಬ ಭೃಗುವಿದ್ಯೆಯೊಳಾರ್ದೊರೆ ರೇಚಭೂಪನೊಳ್ (ಮಚರಿ. ೧-೨೦). [ ? ]

**ಭೃಗುಸುತ** (ನಾ). ೧. ಜಮದಗ್ನಿಯ ಮಗ ; ಪರಶುರಾಮ : ಬಲವಂತಂ ಭೀಮನಿಂದಂ ಛಲಿ ಭೃಗುಸುತನಿಂದಂ . . . ಸಮರವಿಜಯ ವಿಕ್ರಾಂತರಂಹಂ ನೃಸಿಂಹಂ (ಎಕ. XI. ದಾವಣ. ೨೫-೨೬; 1224); ಇಪ್ಪತ್ತೊಂದು ದಿನ ಭೃಗುಸುತನೊಡನೆ ಕಾದಿದನು ವಿರಥನ ಮಾಡಿದನು ಭೀಷ್ಮ (ಕುವ್ಯಾಉ. ೨-೩೬). ೨. ಶುಕ್ರಾಚಾರ್ಯ. ೩. [ಜ್ಯೋತಿ] ಶುಕ್ರಗ್ರಹ : ನಿಶಾಪತಿಸುತನಿಂ ಮಲ್ಲಂ ಭೃಗುಸುತನಿಂ ಪರದಾರಶೀಲನೆನಿಕುಂ ಮನುಜಂ (ಜಾತಿ. ೧೫-೩). [ಸಂ.]

**ಭೃಗುಸೂನು** (ನಾ). = ಭೃಗುಸುತ ೩ : ಸೋಮಸೂನು ಭೃಗುಸೂನು ಸುಧಾಕರರೇಕಾದಶದೊಳ್ ನಿಲೆ ಪರಾಕ್ರಮೋನ್ನತಿಯೆನಿಪ್ಪ ಭೂಪತಿಯಕ್ಕುಂ (ಜಾತಿ. ೧೨-೪). [ಸಂ.]

**ಭೃತ** (ಗು). ೧. ಕಾಪಾಡಿದ ; ರಕ್ಷಿಸಿದ : ಧಾರಿಣಿ ಬಣ್ಣಕುಂ ನಿಜಯಶೋವಲ್ಲೀ ವೃತಾಂಭೋದಮಾರ್ಗನನಾರಾಧಿತ ಭರ್ಗನಂ ಭೃತವಿಪಶ್ಚಿದ್ವರ್ಗನಂ ದುರ್ಗನಂ (ಚಂಶಸಂ. ೧೧-೧೬); ಧೃತಶಶಿಖಂಡ ಜಿತಸುಮಕಾಂಡ ವಿತರಣಶೌಂಡ ಭೃತಜಗದಂಡ ಪಾಲಯ . . . ಮಹೇಶ (ಶಾಶುಂತ. ೧೬೬ ಅಡಿಟಿ). ೨. ತುಂಬಿರುವ; ತುಂಬಿದ. (ನಾ). ೩. ಕೂಲಿಯ ಆಳು; ಸೇವಕ. ೪. ಅರ್ಥಪೂರ್ಣವಾದುದು : ಗಜಜೌ ಗರ್ಜಿಸುವುದು ಮಮಳರುವಿಾ ಬೇಳ್ವೆಯ ಮಾತಂ [ತೆ]ಮಳೆ ನುಡಿದೊಡೆಮ್ಮ ಗಂಡ[ವಾ] ತುಮಳುಂಬಂ ಭೃತಮಕ್ಕುಮೆಂದು ಮೆಯ್ಯೇಮೆಯ್ಗೆ ಬೆಸನೆಂಬುದುಂ (ಚಂಶಭಾ. ೬-೨೬ ವ); "ಭೃತಮಕ್ಕುಂ – ಹೀನವಾಗುತ್ತದೆ" (ಚಂಶಟೀ.೨೨೨). [ಸಂ.]

**ಭೃತಕ** (ಗು). ೧. ಪೊರೆದ ; ಪೋಷಿಸಿದ. ೨. ಕೂಲಿ ತೆಗೆದುಕೊಳ್ಳುವ; ಸಂಬಳವನ್ನು ಪಡೆಯುವ. (ನಾ). ೩. ವೇತನವನ್ನು ತೆಗೆದುಕೊಂಡು ಸೇವೆ ಮಾಡುವವನು; ಸೇವಕ : "ಭೃತಕಃ, ಭೃತಿಭುಕ್, ಕರ್ಮಕರಃ, ವೈತನಿಕಃ – ೪ ಕೂಲಿಯವನ ಹೆಸರು" (ಸಿದ್ಧಾಂತಿ. ೩೦೨); ಭೃತಕಂ ಕೃತಕಪ್ರಣಯಮೆಂದೆಣಿಯದೆ ನೆಜ್ ಕೂರ್ತಳೆಗೆತ್ತು (ಸುಕುಮಾ. ೭-೨೮ ವ); ಕೂಲಿಕಾಜಿರೆಣಿಯನಂದು. . . ಭಕ್ತಿಯಿರ್ದ ನೆಲೆಗೆ ಗಮಿಸಿ ಯಬ್ಬೆಗೆ ಭೃತಕನಿರ್ಣಯಿಂದೊರ್ಡುಸಿರ್ಪುದೆನಗೆ ಸಮಮದಾಗೆ ಮಾಳ್ಪೆ ನಾನೆ ಕೂಲಿಯುಂ ದಿಟಂ ಸಮಂತು ಎನೆ (ಹಾಲಾಸ್ಯ. ೪-೧೩-೧ ರಗಳೆ). [ಸಂ.]

**ಭೃತವಂಶ** (ನಾ). ೧. ಕೊಳಲನ್ನು ಹಿಡಿದಿರುವವನು. ೨. ಕುಲವನ್ನು ಪೋಷಿಸುವವನು ; ಕುಲರಕ್ಷಕ. ೧, ೨ : ಭೃತವಂಶನಾಗಿಯುಂ ವ್ಯಪಗತರಾಗಾಸಕ್ತ ಸಿಂಹನಂದ್ಯಾಚಾರ್ಯವ್ರತಿಪತಿ ಸತ್ತ್ವತ್ವಸಮನ್ವಿತನಾಗಿಯುಂ ಮಾತ್ರತತ್ತ್ವಚಯಚಾತುರ್ಯಂ (ಚಂದ್ರಪ್ರ. ೧-೧೯). [ಸಂ.]

**ಭೃತಿ** (ನಾ). ೧. ರಕ್ಷಣೆ; ಪೋಷಣೆ. ೨. ಕೂಲಿ; ವೇತನ; ಸಂಬಳ : "ಕರ್ಮಣ್ಯಾ, ವಿಧಾ, ಭೃತ್ಯಾ, ಭೃತಿಃ . . . ಪಣಃ – ೧೧ ಕೂಲಿಯ ಹೆಸರುಗಳು" (ಸಿದ್ಧಾಂತಿ. ೩೦೬). ೩. ಅಸಲು ; ಮೂಲಧನ ; ಬಂಡವಾಳ. ೪. ಆಹಾರ. ೫. ಕೂಲಿ ಪಡೆದು ಮಾಡುವ ಸೇವೆ. ೬. ಕೊಡುವುದು ; ದಾನ : " ವಿಶ್ರಾಣನಂ, ವಿಹಾಯಸಂ, ಭೃತಿಃ . . . ದಾನಂ — ಈ ೧೦ ಕುಡುವುದು" (ಹಲಾಯು. ೩೯-೨೬೩). ೭. ಸಂಪಾದನೆ ; ಗಳಿಕೆ : ಶತಲಕ್ಷಧನದ ಲೆಕ್ಕವ ಬಾಯಿ ನುಡಿದೊಡೇಂ? ಭೃತಿಯೆಷ್ಟು ವೆಚ್ಚಕ್ಕೆ ? (ಮಂಕುತಿ. ೭೫೫). [ಸಂ.]

**ಭೃತಿಭುಜ** (ನಾ). ಕೂಲಿಯನ್ನು ಪಡೆಯುವವನು : ಸೇವಕ : "ಭೃತಕಃ, ಭೃತಿಭುಕ್, ಕರ್ಮಕರಃ. ವೈತನಿಕಃ —೪ ಕೂಲಿಯವನ ಹೆಸರು " (ಸಿದ್ಧಾಂತಿ. ೩೦೨). [ಸಂ. ಭೃತಿಭುಜ್]

**ಭೃತ್ಯ** (ನಾ). ೧. ಆಳು ; ಸೇವಕ : "ಭೃತ್ಯಃ, ದಾಸೇರಃ . . . ಪರಿಚಾರಕಃ — ೧೧ ಬಂಟನ ಹೆಸರು" (ಸಿದ್ಧಾಂತಿ. ೩೦೨): ಈ ವರ್ಣಮಿಾ ವರ್ಣಶೂನ್ಯನ ಭೃತ್ಯಂಗೆಸೆವಂದಮುಚ್ಚರಿ (ಜಗನ. ೧-೫೦) ; ಒಲಿಸತೀರದು ನೃಪರ ಸೇವೆಯ ಮಾಡಿ ಭೃತ್ಯರಿಗೆ (ಕೌತಿರಾ. ೩೮-೫೬); ಬುದ್ಧಿ ಪರಾಕ್ರಮ ವಿರಬೇಕು ಭೃತ್ಯಗೆ ಭಕ್ತಿಯೊಂದಿರಬೇಕು ಜೊತೆಗೆ (ಇಂಚಾಪ. ೧೩೯-೮೦).

೨. ಸಚಿವ; ಮಂತ್ರಿ. ೩. ಪ್ರಜೆ.

**ಭೃತ್ಯಚಿಂತಾಮಣಿ**=ಸೇವಕರ ಇಷ್ಟಾರ್ಥಗಳನ್ನು ಪೂರೈಸುವವನು: ಒಂದು ಬಿರುದು : ಸುಭಟಚೂಡಾಮಣಿ ಭೃತ್ಯಚಿನ್ತಾಮಣಿ (ಶಾಸನ. XX. ೦೬-೦೭: 875). [ಸಂ.]

**ಭೃತ್ಯತೆ** (ನಾ). ಆಳುತನ ; ದಾಸ್ಯ : ಎನ್ನಯ ಭೃತ್ಯತೆ ಪೋದೊಡ ಮೆನ್ನರಸನಾಜ್ಞೆಯುಳಿದೊಡಪ್ರೀಂ . . . ಮಾದೇವನೊಳ್ಕೈವೃತ್ತಿಯೀಂ ಸಮನಿಸುವುದೇ (ಶಾಸಕೇ. ೮೯-೩೪). [ಸಂ. ಭೃತ್ಯತಾ]

**ಭೃತ್ಯತ್ವ** (ನಾ). ೧. = ಭೃತ್ಯತೆ : ದಾಸತ್ವ ವೀರದಾಸತ್ವ ಭೃತ್ಯತ್ವ ವೀರ ಭೃತ್ಯತ್ವ . . . ಎಂಬ ಷಡ್ವಿಧ ಸಜ್ಜನತ್ವಯುಕ್ತನಾಗಿ (ಏಕೋಷ. ೯೭). ೨. ವಿನಯ : ದಾಸಭಾವ ಇಂತೆಂದು ಖಿಳರಾಯನಧಿಕದೈನ್ಯದಲಿಯತ್ಯಂತ ಭೃತ್ಯತ್ವದಿಂ ಬೇಡಿಕೊಳ್ಳಲು (ಷಷಭಾ. ೯-೯೭). [ಸಂ.]

**ಭೃತ್ಯಭಾವ** (ನಾ). = ಭೃತ್ಯತೆ : ಅವರ ದೇಶನಾಮಕುಲಗೋತ್ರಂಗಳಂ ನೆಱೆಯೆ ತಿಳಿಯೆ ಬಿನ್ನಪಂಗೆಯ್ದು ಭೃತ್ಯಭಾವಮಂ ಪೂಣಿಸಿ (ಅಂಡಿ. ೦೩-೪೦ ಕ). [ಸಂ.]

**ಭೃತ್ಯಾಚಾರ** (ನಾ). [ವೀಶೈ] ಪಂಚಾಚಾರಗಳಲ್ಲಿ ಒಂದು ; ಭೃತ್ಯನಂತೆ ಸೇವೆ ಸಲ್ಲಿಸುವುದು : ಲಿಂಗ ಜಂಗಮವ ಪೂಜಿಸಿ ಭಕ್ತನಾದೆ ನೆಂದರೆ ಭೃತ್ಯಾಚಾರ ಸದಾಚಾರವೆ ಮೊದಲು ನೋಡಾ (ಅಪಶ್ಚ. ೨೨೫-೦೦೨೦) ; ಭಕ್ತರೆಲ್ಲರೂ ಕೂರ್ತು ಹತ್ತೆ ಕರೆಯುತಿರೆ ಮತ್ತೆ ಕೆಲಕ್ಕೆ ಹೋಗಿ . . . ಭೃತ್ಯಾಚಾರವ ನುಡಿದು (ಏಕವ. ೨೪೩) ; ಬಸವಣ್ಣನವರ ಬಾಳಿನ ಘನತೆಯ ಗುರುತು , ಅವರ ಭೃತ್ಯಾಚಾರ (ಶಿಕ. ೦೨೯). 'ಪಂಚಾಚಾರ' ಪರಾ. [ಸಂ.]

**ಭೃತ್ಯಾಚಾರಿ** (ನಾ). [ವೀಶೈ] ಭೃತ್ಯಾಚಾರವನ್ನು ಪಾಲಿಸುವವನು : ಇಕ್ಕುಳ ಕೈಯುಗಿದರೇನು ಭೃತ್ಯಾಚಾರಿಯಾಗಬಲ್ಲುದೆ (ಏಕವ. ೦೨೩); ಲಿಂಗಕ್ಕೆ ಕೊಟ್ಟು ಕೊಂಡಡೆ ಪ್ರಸಾದಿ ಇದು ಕಾರಣ ಇಂತಪ್ಪ ಭೃತ್ಯಾಚಾರಿಗಲ್ಲದೆ ಪ್ರಸಾದವಿಲ್ಲ ಗುಹೇಶ್ವರ (ಅವಕಂ. ೩೮-೦೬೬). [ಸಂ. ಭೃತ್ಯಾಚಾರಿನ್]

**ಭೃತ್ಯೆ** (ನಾ). ೧. ಪೋಷಿಸುವುದು ; ಸಲಹುವುದು. ೨. ಆಧಾರ; ಬೆಂಬಲ. ೩. ಆಹಾರ. ೪. ಕೂಲಿ ; ಸಂಬಳ ; ವೇತನ : "ಭೃತಿಃ, ಭೃತ್ಯಾ . . .ವೇತನಂ—ಈ ೬ ಬೆಲೆ" (ಹಲಾಯು. ೦೨೦-೪೩). ೫. ಸೇವೆ. [ಸಂ. ಭೃತ್ಯಾ]

**ಭೃಶ** (ಗು). ೧. ಪ್ರಬಲವಾದ ; ಪ್ರಚಂಡವಾದ : ಭೃಶವಿಶ್ವ ಜೀವಿತ ಗಭೀರತೆಯ ದರ್ಶನದ ರಸವದದ್ಭುತ ಮೌನ (ಪಾಂಚಜ. ೪೭೬). (ನಾ). ೨. ಆಧಿಕ್ಯ; ಅತಿಶಯ : "ಅತಿಶಯಃ, ಭರಃ, ಅತಿವೇಲಂ, ಭೃಶಂ . . . ದೃಢಂ — ೧೪ ಅತಿಶಯದ ಹೆಸರುಗಳು" (ಸಿದ್ಧಾಂತ. ೨೫). ೩. ದೊಡ್ಡದಾದುದು; ಅತಿಶಯವಾದುದು : "ಕಾಮಂ, ಪ್ರಕಾಮಂ, ಪರ್ಯಾಪ್ತಂ, ನಿಕಾಮಂ, ಭೃಶಂ . . . ಅತಿವೇಳಂ—ಈ ೮ ಪಿರಿದಾಗಿ ರ್ದುದು" (ಹಲಾಯು. ೦೦೯-೩೪). ೪. ಸಂಕಟ : "ಭೃಶದೊಳಂ ನೆಗಟ್ದು ಸಂಬಾಧಮೆಂದೆನಿಕುಂ" (ಮಂಗರಾ. ೦೩೩-೨೦). ೫. ಆಣೆ : ಪ್ರತಿಜ್ಞೆ : "ಭೃಶ=ಸಂಬಾಧ, ಸೂರುಳು" (ನಾಚರಾ. ೦೩೭ ೬). [ಸಂ.]

**ಭೃಷ್ಟ** (ಗು). ಹುರಿದ; ಸುಟ್ಟ : ಸೊಗಯಿಸುವ ದೇಹಾದಿ ನಿಷಹಂಗಳೆಯ್ದೆ ತೊಟ್ಟಗೆ ದಗ್ಧಪಟ ಭೃಷ್ಟಬೀಜಂಗಳಂತೆ ಕವ್ವಗೆ ಕೆಟ್ಟು ಪೋಕುಂ (ಅಂಡಕ. ೩-೬-೩೪). [ಸಂ.]

**ಭೆಂಡೆವಾಡ** (ನಾ). ಒಂದು ಊರಿನ ಹೆಸರು: ಪಶ್ಚಿಮತಃ ಭೆಂಡೆವಾಡೋ ನಾಮಗ್ರಾಮಃ (ಇಕ. XVI. ೨೪-೭೬ ; 1009). [ ? ]

**ಭೆಟ್ಟಿ** 'ಭೇಟಿ' ನೋ.

**ಭೇಕ** (ನಾ). ೧. ಕಪ್ಪೆ; ಮಂಡೂಕ : "ಮಂಡೂಕಃ, ಪ್ಲವಗಃ, ಭೇಕಃ . . . ಪ್ಲವಂಗಃ—ಈ ೮ ಕಪ್ಪೆ" (ಹಲಾಯು. ೦೦೯-೪೦); ಕೆಂತುವೀ ಬಂದನೆನುತ್ತುಂ ಗರ್ಜಿಪಂತಾದುದು ವಿರಹಿಗಳಂ ಕೇಕಿ ಭೇಕಪ್ರಣಾದಂ (ಶಗಿಶ. ೯-೨೦); ಕಾಳಸರ್ಪನ ಹೆಡೆಯ ನೆಳಲಲಿ ಬಾಳಲೆಳಸಿದ ಭೇಕನಂತಿಹುದನ್ಯಸತಿ ಬೇಟ (ಕೌರವ. ೩೮-೮). ೨. ಪುಕ್ಕಲ ; ಭೀರು. ೩. ಮುಗಿಲು ;ಮೋಡ. [ಸಂ.]

**ಭೇಕವೈರಿ** (ನಾ). ಕಪ್ಪೆಯ ಶತ್ರು ; ಹಾವು : ಸೂಕರನ ತುಂಬಿಯ ಮರಾಳನ ಭೇಕವೈರಿಯ ಕಾರುರಗ ೯ಪಿ ಕೋಕಿಲನ. . .ಒಂದು ಗುಣವಿರ ಬೇಕು ನೃಪರಿಗೆ (ಕುವ್ಯಾಕ. ೦-೩೪). [ಸಂ. ಭೇಕವೈರಿನ್]

**ಭೇಕಾಸನ** (ನಾ). [ಯೋಗ] ಒಂದು ಬಗೆಯ ಆಸನ : ಭೇಕಾಸನ . . . ಈ ಆಸನದಲ್ಲಿನ ಚಲನವಲನಗಳು ಕಪ್ಪೆಯನ್ನು ಹೋಲುವುದರಿಂದ ಇದಕ್ಕೆ ಈ ಹೆಸರು (ಯೋಗದ. ೦೦೦). 'ಮಂಡೂಕಾಸನ' ಪರಾ. [ಸಂ.]

**ಭೇಕಿ** (ನಾ). ಹೆಣ್ಣು ಕಪ್ಪೆ : "ಭೇಕಿ ವರ್ಷಾಭುಯೆನೆ ಪೆಣ್ಗಪ್ಪೆಯಕ್ಕುಂ" (ಮಂಗರಾ. ೦೨೨-೮). [ಸಂ. ಭೇಕೀ]

**ಭೇಕಿಸು** (ಕ್ರಿ). (ಅಲಂ) ವಟಗುಟ್ಟು; ಅರಚು: ಹುಲುಗೊಡ್ಡು ಮೋಡ ಮುಸಿಗುಡುಗಿದಾಗ ಕೆಲ ಜೀವ ಭೇಕಿಸುವುವು (ಅಕಲು. ೩೯-೬). [ಭೇಕ +— ಇಸು₃]

**ಭೇಟಿ, ಬೆಟ್ಟಿ, ಭೆಟ್ಟಿ** (ನಾ). ಒಬ್ಬರನ್ನೊಬ್ಬರು ಸಂಧಿಸಿ ಮಾತನಾಡುವುದು ; ಸಂದರ್ಶನ : ಇನ್ನು ಕಡೆಯ ಭೇಟಿಯನ್ನು ನನಗೊಮ್ಮೆ ಕೊಟ್ಟು ಆಮೇಲೆ ಏನು ಮಾಡಬೇಕೆಂದು ಹೇಳು (ಮುಂಬಯಿ. ೬-೦೬೪); ಸ್ಟಾಲಿನ್ ಟ್ರೂಮನ್ ಭೇಟಿಗೆ ನೂರ್ಮಡಿ ಮುಖ್ಯಂ ಭವ್ಯಂ ಕವಿಗೀ ನೀರ್ಕಡಿ! (ಅಕೀ. ೩೩-೦೫). **ಬೆಟ್ಟಿ**: ಮೂರು ಕುರ್ಚಿಗಳು ಒಂದು ಮೇಜಿನ ಹತ್ತಿರವಿದೆ; ಮತ್ತೊಂದನ್ನು ಅದರ ಮುಂದುಗಡೆ ಮುಖ್ಯೋಪಾಧ್ಯಾಯರ ಬೆಟ್ಟಿಗೆಂದು ಬಂದವರು ಕೂಡುವುದಕ್ಕಾಗಿ ಇಟ್ಟದೆ (ಶ್ರತಿಶಂ. ೩೩); ಬೆಟ್ಟಿಯ ಆವಶ್ಯಕತೆಯು ತಿಳಿಯಲಿಲ್ಲ. ಬೆಟ್ಟಿಯು ಅನುಚಿತವೆಂದೂ ತಿಳಿದನು (ಸಂಕೇಶ. ೦೦೦). **ಭೆಟ್ಟಿ**: ಒಡೆಯದೇವರಿಗೆ ಕೊಟ್ಟಲ್ಲದೆ ಕೊಳ್ಳೆನೆಂಬ ವ್ಯಡನ ಭಕ್ತರ ನೋಡಾ ಒಡೆಯಂಗೆ ಭೆಟ್ಟಿ ಮನೆಯೊಡೆಯಂಗೆ ತುಪ್ಪ ಕಟ್ಟುಮೊಸರು ವ್ಯಪ್ಪಾನ್ನ (ಬೋಳಶೂ. ೨೨-೬೩): ಬುಚ್ಚಿಗೆ ದಯವಿಟ್ಟು . . . ಸದಯಳಿಗೆ ಭೆಟ್ಟಿಯನೆ ಕೊಟ್ಟ (ಶ್ರೀಕೃಪಾ. ೬೦) ; ಮನೆಯ ಒಳಗೇ ಕುಳಿತು ಕಾತರಿಸಿಹೆನು ಗೆಳೆಯರ ಭೆಟ್ಟಿಗೆ (ಚಂಬಯ. ೦೩-೪).

[<ಪ್ರಾ. ಭಟ್ಟಿ, ಭಿಟ್ಟಣ./ಹಿಂ. ಭೇಂಟ್; ಮರಾ. ಭೇಟ./ತೆಲು. ಭೇಟೀ]

**ಭೇಣ** (ನಾ). ಸಮತಟ್ಟಾದ, ಗಿಡಮರಗಳಿಲ್ಲದ ಬರಿದಾದ ನೆಲ: ಹಕ್ಕಲು ಹಳಗಾಡು ಭೇಣ ಭಿಳರು ಭೆಟ್ಟು ಚಿಟೆ ಮುಂತಾದ ಸೀಮೆ ಸಾಮ್ಯ (ಕಇ. III-i, ೯-೨೨; 1538). [ಕ್ರ ಇದು 'ಬೆಣ' ಎಂಬುದರ ಅಪಲಿಖಿತ]

**ಭೇದ** (ನಾ). ೧. ಮುರಿಯುವುದು; ಒಡೆಯುವುದು. ೨. ಹರಿಯುವುದು ; ಸೀಳುವುದು. ೩. ಭಾಗ ಮಾಡುವುದು; ಬೇರ್ಪಡಿಸುವುದು. ೪. ಬಿರುಕು ; ಛಿದ್ರ. ೫. ಗಾಯ ; ಪೆಟ್ಟು. ೬. ವಿಂಗಡಣೆ; ಪಂಚಿಕೆ. ೭. ವ್ಯತ್ಯಾಸ ; ಅಂತರ ; ಬೇರೆಯಾಗಿರುವುದು : ಕಾಯದ ಜೀವದ ಹೊಲಿಗೆಯ ಅಳಿದ ಭೇದವ ತಿಳಿಯಬಲ್ಲಡೆ ನಮ್ಮ ಗುಹೇಶ್ವರಲಿಂಗದ ಅಱಿವು ಸಾಧ್ಯವಪ್ಪುದು ಕಾಣಾ (ಅವಕಂ. ೨೭೩-೦೨೩೭); ಕನ್ನಡದ ನುಡಿಯೆಂದುಪೇಕ್ಷಿಸಲಿನ್ನು ಹಿರಿಯರಿಗಂಜಿ ನುಡಿವೆನು ಕನ್ನಡಿಯ ದರ್ಪಣವಿದಲ್ಲದೆ ಭೇದವೇನಿದಕೆ (ಅಪ್ಯಾಕ. ೦-೪); ಪಿರಿದು ಕಿಱಿದುಗಳ ಭೇದವನೆಣಿಸದೆ ನಿರವಿಸಿದುದನೆಸಗುವುದು (ಹರಿ. ೩-೩೩). ೮. ಬಗೆ ; ವಿಧ; ಪ್ರಕಾರ: ವೇದಾಂಗಂ ಸ್ಮೃತಿ ವೇದಮೆಂದಿನಿತುಮಂ ಪೂರ್ಣೋದಿದಂ ಸತ್ಕಳಾಭೇದಂಗಳ್ ಪದಿನೆಂಟುಮಂ ತಿಳಿದೆಂ (ಸುಕುಮಾ. ೩-೯೩). ೯. ಗುಟ್ಟನ್ನು ರಟ್ಟುಮಾಡುವುದು ; ರಹಸ್ಯವನ್ನು ಬಹಿರಂಗ

ಪಡಿಸುವಿಕೆ. ೧೦. ಮಾರ್ಪಾಡು; ಬದಲಾವಣೆ. ೧೧. ಭಿನ್ನಾಭಿಪ್ರಾಯ; ಪರಸ್ಪರವಿರೋಧ: ಇಂದಿರಮ್ಮನವರ ಕೈಲಿ ಭೇದದ ಬೀಜ ಬಿತ್ತಿಸಬೇಕೆಂದು ಕಾದಿದ್ದ ಭಾಗೀರತಮ್ಮನಿಗೆ ಸದವಕಾಶ ಸಿಕ್ಕಿತು (ಕೊನೆಶೇ. ೬೮). ೧೨. ಹಗೆ: ಶತ್ರು. ೧೩. ಎರಡು ಎಂಬ ಭಾವ: ದ್ವೈತ. ೧೪. ಮಲವಿಸರ್ಜನೆ. ೧೫. ಕ್ಷೋಭೆ. ೧೬. ಸೋಲು: ಅಪಜಯ. ೧೭. (ಕೈ, ಕಾಲುಗಳಲ್ಲುಂಟಾಗುವ) ನೋವು. — ಚಳಕು. ೧೮. ಪಾರ್ಶ್ವವಾಯು: ಲಕ್ವ. ೧೯. ಕುಗ್ಗುವಿಕೆ: ಸಂಕೋಚನ. ೨೦. ಗ್ರಹಗಳ ಕೂಟ,–ಸೇರುವೆ. ೨೧. ನೀರು: ಜಲ: "ತಂತ್ರಾಂ ಗಜಸಂತ್ರಾಸಂ ಸಪತ್ನಾಂಬುಗಳವು ಚತುರಂ ಭೇದಮಪ್ಪುದು" (ರಾಜಾರ. ೬೩). ೨೨. [ರಾಜನೀ] ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಬಗೆಯ ಪ್ರಸಿದ್ಧವಾದ ಉಪಾಯಗಳಲ್ಲಿ ಒಂದು: ತನಗೆ ಶತ್ರುಗಳಾದವರಲ್ಲಿ ಪರಸ್ಪರ ಜಗಳ ತರುವುದು; ಶತ್ರುಪಕ್ಷದಲ್ಲಿ ಒಡಕು ಹುಟ್ಟಿಸಿ ಒಳಜಗಳವನ್ನುಂಟುಮಾಡುವುದು: "ಉಪಜಾಪಃ· ಭೇದಃ–ಈ ೨ ಒಳಗುಗೊಡುವುದು" (ಶಬ್ದಮ. ೦೨೮-೯೩); ಭೇದಂ ಕೃತ್ಯಪೇಕ್ಷೋಪೇತ ಭೂಪಾಲಪ್ರಾಪ್ತಂ (ಶಾಂತಿಪು. ೨-೯೩ ಪ); ತನ್ನ ಪಗೆಗಾತನ ಪಿತರ್ಗನ್ನತಿಯುಂ ಭಿನ್ನವೆಸಗೆ ತಾನದು ಭೇದಂ (ಹರಿಶ್ಚ. ೨-೦೨೦). 'ಚತುರುಪಾಯ' ಪರಾ. ೨೩. [ಸಾಂಖ್ಯ] ಮೂಲಭೂತವಾದ ಹತ್ತುಬಗೆಯ ಪ್ರಕೃತಿಧರ್ಮಗಳಲ್ಲಿ ಒಂದು: ಮೂಲಭೂತಗಳಾದ ಪ್ರಕೃತಿಧರ್ಮಗಳು ಹತ್ತು: — ಅಸ್ತಿತ್ವ· ಏಕತ್ವ· ಅರ್ಥವತ್ತ್ವ· ಅನ್ಯತ್ವ· ಪರಾರ್ಥತ್ವ· ಭೇದ· ಸಂಯೋಗ, ವಿಯೋಗ, ಶೇಷತ್ವ· ಅಕರ್ತೃತ್ವ–ಇವುಗಳು (ಹಿಂದಶಾ. ೫೭). ೨೪. [ತತ್ತ್ವಶಾ] (ಮರಕ್ಕೂ-ಕೊಂಬೆಗೂ ಇರುವಂತೆ) ದೊಡ್ಡ ವಸ್ತುವಿಗೂ ಅದರ ಅಂಶವಾದ ಸಣ್ಣವಸ್ತುವಿಗೂ ಇರುವ ವ್ಯತ್ಯಾಸ: ಅವಚ್ಛೇದ· ಅವಚ್ಛೇದಕ· ಅವಚ್ಛಿನ್ನವೆಂಬ ಪದಗಳಿಗೆ ಪರ್ಯಾಯಪದಗಳಾಗಿ . . . ಭೇದ· ಭೇದಕ, ಭೇದ್ಯ . . . ಎಂದು ವ್ಯವಹರಿಸುವರು (ಹಿಂದಶಾ. ೦೯೯). ೨೫. [ಜೈನ] ಪುದ್ಗಲಸ್ಕಂಧಗಳು ವಿಭಾಗವಾಗುವಿಕೆ: ಪುದ್ಗಲಸ್ಕಂಧವು ಒಡೆದು ಅಣುಗಳು ಚದರುವುದು 'ಭೇದ'ವೆಂದೂ ಹೇಳಿದ್ದಾರೆ (ಜೈದಶ. ೪೨೭). ೨೬. [ವೇದಾಂತ] ವಿವಕ್ಷಿತವಾದ ಎರಡು ಪದಾರ್ಥಗಳಲ್ಲಿ ಒಂದಕ್ಕೊಂದಕ್ಕೆ ಒಂದು ದೃಷ್ಟಿಯಿಂದ ಇರುವ ಪರಸ್ಪರ ವ್ಯತ್ಯಾಸ: ಜ್ಞಾನಕ್ಕೂ ಜೀವನಿಗೂ ಭೇದ· ಅಭೇದ ಭೇದಾಭೇದಗಳೆಂಬ ಮೂರು ಪಕ್ಷಗಳು ಸಮ್ಮತವಾಗಿವೆ (ಹಿಂದಶಾ. ೯೩). 'ಭೇದಾಭೇದ' ಪರಾ. ೨೭. [ನಾಟ್ಯ] ಇಪ್ಪತ್ತು ಬಗೆಯ ಕರಕರ್ಮಗಳಲ್ಲಿ ಒಂದು: ಧೂನನ . . . ಭೇದ, ಸ್ಫೋಟನ· ಮೋಟನ, ವಿಸರ್ಜನ· ಆಹ್ವಾನ· ತರ್ಜನ ಈ ಇಪ್ಪತ್ತು ಕರಕರ್ಮಭೇದಂಗಳ್ (ರಾಕ್ಮರಂ. ೪-೧೩ ವ). [ಸಂ.]

**ಭೇದಂಬಡು** (ಕ್ರಿ). ಬೇರೆಯಾಗು; ದೂರವಾಗು: ದುರ್ವಾದದಿಂದಿನ್ನಿಗಂ ಭೇದಂಬಟ್ಟಿರ್ದಗೆಟ್ಟು ಕಟ್ಟಿನಿತುಂ ಕಾಲಂಗಳಿಂ ಬರ್ಪಮೋ (ಸುಕುಮಾ. ೩-೪೩). [ಭೇದ + ಪಡು₁]

**ಭೇದಂಬಡೆ** (ಕ್ರಿ). ಬೇರೆಬೇರೆ ವಿಧಗಳನ್ನು ಹೊಂದು: ಪಾದವಿಪರ್ಯಾಸದೊಳ್ ಭೇದಂಬಡೆದೇಕವರ್ಣಹೀನಾಧಿಕದಿಂದಾದಂದರ್ಥಸಮಂ ಪೆಸರಾದುದು (ಛಂದೋಂಬು. ೩-೨೦೦). [ಭೇದ + ಪಡೆ₁]

**ಭೇದಕ** (ಗು). ೧. ಮುರಿಯುವ; ಸೀಳುವ; ಒಡೆಯುವ. ೨. ಪ್ರತ್ಯೇಕಿಸುವ; ಬಿಂಗಡಿಸುವ; ಬೇರ್ಪಡಿಸುವ. ೩. ನಿಷ್ಕೃಷ್ಟವಾಗಿ ತಿಳಿಸುವ. (ನಾ). ೪. ಮುರಿಯುವುದು; ನಾಶಮಾಡುವುದು. ೫. ಮುರಿಯುವವನು; ನಾಶಮಾಡುವವನು. ೬. (ಪದಾರ್ಥಗಳನ್ನು) ವಿಶ್ಲೇಷಣೆಮಾಡುವಿಕೆ: ಪದಾರ್ಥಗಳ ಒಳಹೊಕ್ಕು ತತ್ತ್ವವನ್ನು ಗ್ರಹಿಸುವುದು: ಜ್ಞಾನಕ್ಕೆ ಲೇಪವಾದವನರವು ತುಪ್ಪದ ಸಂಬಿದ ಬತ್ತಿಯಂತೆ ಕಾದ ಲೋಹದ ಜಲದಿರವಿನಂತೆ. . . ಇದಾರಿಗೆ ಭೇದಕ ಇದ ಶೋಧಿಸಬೇಕು (ಷೋಳಪ. ೪-೦೦). ೭. (ಪದಾರ್ಥಗಳನ್ನು ವಿಶ್ಲೇಷಣೆ ಮಾಡಿ ತತ್ತ್ವವನ್ನು ಗ್ರಹಿಸುವವನು.–ವಿಚಾರ ಮಾಡುವವನು: ಆ ಶರಣನು. . . ವೇದ ಶಾಸ್ತ್ರ ಪುರಾಣ ಛಂದಸ್ಸು ನಿಘಂಟುಗಳೆಂಬವಕ್ಕೆ ಭೇದಕನಲ್ಲ (ಅಶತಂ. ೨೫೦-೦೦೪೩). ೮. [ವ್ಯಾಕ] ಒಂದು ವಸ್ತುವನ್ನು ಬೇರೆ ವಸ್ತುವಿನಿಂದ ಬೇರ್ಪಡಿಸಬೇಕಾದಾಗ ಪ್ರಯೋಗಿಸುವ ಗುಣ ವಿಶಿಷ್ಟ ಪದ: P ಒಂದು ಕೊಟ್ಟಿಗೆಯಲ್ಲಿ ಬೇರೆ ಬೇರೆ ಬಣ್ಣದ ಕರೆಯುವ ಹಸುಗಳಿದ್ದು, ಕೆಂಪುಹಸುವಿನ ಹಾಲನ್ನು ಕರೆದುಕೊಂಡು ಬಾ ಎಂದು ಹೇಳಿದರೆ, ಆಗ ಕೆಂಪು ಎಂಬ ಪದವು ಭೇದಕ. ಏಕೆಂದರೆ ಅದು ಕರೆಯಬೇಕಾದ ಹಸುವನ್ನು ಅಲ್ಲಿದ್ದ ಕರಿಯ ಮತ್ತು ಬಿಳಿಯ ಹಸುಗಳಿಂದ ಬೇರ್ಪಡಿಸುತ್ತದೆ: ಅಲ್ಲದೆ ಕರೆಯಬೇಕಾದ ಹಸುವನ್ನು ನಿರ್ದಿಷ್ಟವಾಗಿ ತಿಳಿಸುತ್ತದೆ: ಭೇದ್ಯಂ ವಿಶೇಷ್ಯಂ; ಭೇದಕಂ ವಿಶೇಷಣಂ (ಶಬ್ದಾನು. ೦೦೦ ವೃತ್ತಿ). ೯. [ತತ್ತ್ವಶಾ] ಒಂದು ದೊಡ್ಡ ಪದಾರ್ಥವನ್ನು ಚಿಕ್ಕದನ್ನಾಗಿ ಮಾಡಿಕೊಳ್ಳುವುದಕ್ಕಾಗಿ ಉಪಯೋಗಿಸುವ ಸಾಧನ: P ಬ್ರಹ್ಮವಸ್ತು ಸರ್ವವ್ಯಾಪಿ. ಇದು ಒಂದರಲ್ಲಿ ಅಡಕವಾಗಿಲ್ಲವಾದುದರಿಂದ ಅಪರಿಚ್ಛಿನ್ನ. ಇದು ಪರಿಚ್ಛಿನ್ನವಾದರೆ ಜೀವವೆನಿಸಿಕೊಳ್ಳುತ್ತದೆ. ಸರ್ವವ್ಯಾಪಿಯಾದ ಬ್ರಹ್ಮ ಪ್ರಾಣಿಗಳ ಅಂತಃಕರಣದಲ್ಲೂ ಇರಲೇಬೇಕಷ್ಟೆ. ಆ ಅಂತಃಕರಣದಲ್ಲಿ ಇರುವ ಬ್ರಹ್ಮವೇ ಜೀವ. ಈಗ ಅಂತಃಕರಣವು ಬ್ರಹ್ಮನನ್ನು ವಿಶಾಲಜಗತ್ತಿನಿಂದ ಪ್ರತ್ಯೇಕಿಸಿ ತನ್ನೊಳಗಿರುವ ಅವನಿಗೆ ಜೀವವೆಂಬ ಹೆಸರನ್ನು ಕೊಟ್ಟಿತು. ಹೀಗೆ ಪ್ರತ್ಯೇಕಿಸಿದ್ದು ಆ ಅಂತಃಕರಣ. ಇದನ್ನು ಭೇದಕ ಅಥವಾ ಅವಚ್ಛೇದಕ ಎಂದು ಶಾಸ್ತ್ರಗಳು ಹೇಳುತ್ತವೆ: ಅವಚ್ಛೇದಕ, ಅವಚ್ಛಿನ್ನವೆಂಬ ಪದಗಳಿಗೆ ಪರ್ಯಾಯಪದಗಳಾಗಿ . . . ಭೇದ, ಭೇದಕ· ಭೇದ್ಯ . . . ಎಂದು ವ್ಯವಹರಿಸುವರು (ಹಿಂದಶಾ. ೦೯೯). [ಸಂ.]

**ಭೇದಕಾತಿಶಯೋಕ್ತಿ** (ನಾ). [ಕಾವ್ಯಮೀ] ಎಂಟುಬಗೆಯ ಅತಿಶಯೋಕ್ತಿಗಳಲ್ಲಿ ಒಂದು: P ವರ್ಣಿಸಬೇಕಾದ ವಸ್ತುವು ಜಗತ್ತಿನಲ್ಲಿರುವ ಒಂದು ವಸ್ತುವಾಗಿದ್ದರೂ ಅದು ಲೋಕಾತೀತವಾದುದು. ಅಂದರೆ ಪ್ರಪಂಚದ ವಸ್ತುಗಳಿಗಿಂತ ಬೇರೆಯಾದುದು ಎಂದು ವರ್ಣಿಸುವುದು: ವರ್ಣ್ಯಮಾದ ವಸ್ತುವಂ ಲೋಕದೊಳಿರ್ಪ ವಸ್ತುವತ್ತಣಿಂ ಬೇಱೆಂದು ಪೇೞ್ವುದು ಭೇದಕಾತಿಶಯೋಕ್ತಿಯೆನಿಪುದು (ಅಪ್ರತಿ. ೩೩-೦೩); ಲೋಕಪ್ರಸಿದ್ಧಪದಾರ್ಥಕ್ಕಿಂತಲೂ ಬೇರೆಯಾಗದೆ ಇದ್ದರೂ ಬೇರೆಯೆಂದು ತೋರುವಂತೆ ವರ್ಣಿಸುವುದೇ ಭೇದಕಾತಿಶಯೋಕ್ತಿ (ಕೃಚಂ. ೨೭೪). [ಸಂ.]

**ಭೇದಗೆಡು** (ಕ್ರಿ). ವ್ಯತ್ಯಾಸವು ಇಲ್ಲವಾಗು; ಅಭೇದವುಂಟಾಗು: ಗುಹೇಶ್ವರನ ಬೆರಸಿ ಭೇದಗೆಟ್ಟು ಬೆಳತ ಮತ್ತೆ ಸಂಗವ ಮಾಡಿಹೆನು ತಪಕವೇಕಯ್ಯಾ (ಪ್ರಭುವ. ೨೦೩). [ಭೇದ + ಕೆಡು₁]

**ಭೇದತಂತ್ರ** (ನಾ). ಒಡಕನ್ನು ಹುಟ್ಟಿಸುವ ಉಪಾಯ: ಶ್ರೀರಾಮನಿಗೆ ಭೇದತಂತ್ರವನ್ನಟ್ಟಿಸುವ ಹಾಗೂ ಕೈಕೆಯಿದೇವಿಗೆ ಅತ್ಯಂತ ಮನೋವ್ಯಥೆ ಹುಟ್ಟುವ ಹಾಗೂ ಆಕೆಯನ್ನು ಕುರಿತು. . . ನುಡಿವಳು (ಕಗಾ. ೬೩). [ಸಂ.]

**ಭೇದದರ್ಶನ** (ನಾ). ವಸ್ತುತಃ ಒಂದೇ ಆದರೂ ಬೇರೆಯಾಗಿ ಕಾಣುವುದು: ಈ ಅವಿದ್ಯೆಗೆ ಆವರಣಶಕ್ತಿ, ವಿಕ್ಷೇಪಶಕ್ತಿ ಎಂದೆರಡು ಸ್ವಭಾವಗಳು ಇರುವುವು. ಆವರಣಶಕ್ತಿಯಿಂದ ವಸ್ತುಸ್ವರೂಪವು ಮುಚ್ಚಲ್ಪಡುವುದು. ವಿಕ್ಷೇಪಶಕ್ತಿಯಿಂದ ವಸ್ತು ವಿಚಿತ್ರವಾಗಿ ಕಾಣುವುದು. ಇದಕ್ಕೆ ಭೇದದರ್ಶನವೆಂದು ಹೆಸರು (ಹಿಂದಶಾ. ೨೦೪). [ಸಂ.]

**ಭೇದದೃಷ್ಟಿ** (ನಾ). ಜೀವಾತ್ಮ ಮತ್ತು ಪರಮಾತ್ಮನು ಬೇರೆ ಬೇರೆ ಎಂಬ ಭಾವನೆ; ದ್ವೈತ: ಜೀವನು . . . ಭಕ್ತನಾದ ಮೇಲೆ . . .

ದ್ವೈತವೇದಾಂತದ ಭೇದವೃಷ್ಟಿ ಜೀವನದಲ್ಲಿ ಸಹಜವಾಗಿ ನೆಲಸಿರುತ್ತದೆ (ಜ್ಞಾ. ೦೦೦). [ಸಂ.]

**ಭೇದನ** (ನಾ). ೧. ಒಡೆಯುವುದು: ಮುರಿಯುವುದು: ಸೀಳುವುದು. ೨. ಬೇರೆ ಮಾಡುವುದು; ಬೇರ್ಪಡಿಸುವುದು. ೩. ಮನಸ್ತಾಪವನ್ನುಂಟುಮಾಡುವುದು: ಭಿನ್ನಾಭಿಪ್ರಾಯ ಬರುವಂತೆ ಮಾಡುವುದು. ೪. ಶಿಥಿಲಗೊಳಿಸುವುದು; ಸಡಿಲಗೊಳಿಸುವುದು. ೫. ಗುಟ್ಟನ್ನು ಬಿಟ್ಟುಕೊಡುವುದು. ೬. ಭೇದ; ಒಡಕು; ವೈಮನಸ್ಯ. ೭. ಇಂಗು. ೮. ಭೇದಿಯಾಗುವುದು. ೯. ಭೇದಿ ಮಾಡಿಸುವ ಔಷಧ; ವಿರೇಚಕ. ೧೦. ಹಂದಿ. [ಸಂ.]

**ಭೇದಬುದ್ಧಿ** (ನಾ). ಒಬ್ಬರಿಗೊಂದು, ಮತ್ತೊಬ್ಬರಿಗೊಂದು ಮಾಡುವ ಮನೋಭಾವ; ಪಕ್ಷಪಾತಭಾವನೆ: ಈ ಪ್ರಕಾರ ಪ್ರತ್ಯಕ್ಷ ತಮ್ಮ ಹೊಟ್ಟೆಮಕ್ಕಳಲ್ಲಿ ಭೇದಬುದ್ಧಿ ಮಾಡುವುದರ ಕಾರಣವನ್ನು ದೇವರೇ ಬಲ್ಲನು (ಮುಂಬಯಿ. ೪-೦೦೪). [ಸಂ.]

**ಭೇದಭಾವ** (ನಾ). ಬೇರೆಬೇರೆ ಎಂಬ ಭಾವನೆ: ಶಿವನು ಪ್ರೇರಕನೂ, ಜೀವನು ಪ್ರೇರ್ಯನೂ ಆದ ಮೇಲೆ ಶಿವ – ಜೀವರಿಗೆ ಭೇದಭಾವ ಸಹಜವಾಗಿ ಇರುವುದರಿಂದ ಅದ್ವೈತವನ್ನು ಭಾವಿಸುವುದು ಯುಕ್ತವಾಗದು (ಶಕ್ತಿ. ೦೦೬); ಭಾವನೆ ಸಂಕುಚಿತವಾಗಿದ್ದಾಗ ತನ್ನದು ಪರರದು ಎಂಬ ಭೇದಭಾವ ಇದ್ದದ್ದೇ (ಹೊಸಕ. ೩೦). [ಸಂ.]

**ಭೇದಶ್ರುತಿ** (ನಾ). [ವೇದಾಂತ] "ಚಿತ್ತು, ಅಚಿತ್ತು, ನಾರಾಯಣ ಈ ಮೂರಕ್ಕೂ ಇರುವ ಪರಸ್ಪರ ಭೇದಸ್ವರೂಪವನ್ನು ತಾತ್ವಿಕವಾಗಿ ಬೋಧಿಸುವುದಕ್ಕೋಸ್ಕರ ಹೊರಟಿರುವುದಕ್ಕೆ 'ಭೇದಶ್ರುತಿ' ಎಂದು ಹೆಸರು" (ತತ್ವಶು. ೦). [ಸಂ.]

**ಭೇದಾಭೇದ** (ನಾ). [ವೇದಾಂತ] ವಿವಕ್ಷಿತವಾದ ಎರಡು ಪದಾರ್ಥಗಳಲ್ಲಿ ಒಂದಕ್ಕೊಂದಕ್ಕೆ ಒಂದು ದೃಷ್ಟಿಯಿಂದ ಪರಸ್ಪರ ಭೇದವೂ ಮತ್ತೊಂದು ದೃಷ್ಟಿಯಿಂದ ಅಭೇದವೂ ಇರುವಿಕೆ; P ಉದಾಹರಣೆಗೆ ಚಿನ್ನದ ಸರ ಮತ್ತು ಡಾಬು – ಈ ಎರಡು ಪದಾರ್ಥಗಳಲ್ಲಿ ಸರವನ್ನೂ ಡಾಬನ್ನೂ ಆಕಾರದೃಷ್ಟಿಯಿಂದ ನೋಡಿದರೆ ಸರವೇ ಬೇರೆ, ಡಾಬೇ ಬೇರೆ— ಹೀಗೆ ಭೇದವಿದೆ. ಆದರೆ ಎರಡೂ ಚಿನ್ನದಿಂದಲೇ ಆಗಿವೆ. ಕರಗಿಸಿದಾಗ ಆಕಾರ ಹೋದರೆ ಎರಡೂ ಚಿನ್ನವೇ ಆಗಿಬಿಡುತ್ತವೆ. ಆದ್ದರಿಂದ ಮೂಲದ್ರವ್ಯದ ದೃಷ್ಟಿಯಿಂದ ಎರಡಕ್ಕೂ ಅಭೇದವೇ ಇರುತ್ತದೆ: ಜ್ಞಾನಕ್ಕೂ ಜೀವನಿಗೂ ಭೇದ, ಅಭೇದ, ಭೇದಾಭೇದಗಳೆಂಬ ಮೂರು ಪಕ್ಷಗಳೂ ಸಮ್ಮತವಾಗಿವೆ (ಹಿಂದಸಾ. ೯೩); ಶಿವ ಜೀವರಿಗೆ ಭೇದಾಭೇದಗಳೆರಡೂ ಕಾಲಭೇದದಿಂದಲೂ ಅವಸ್ಥಾಭೇದದಿಂದಲೂ ಯಥಾರ್ಥವಾಗಿ ಅನ್ವಯಿಸುತ್ತವೆ (ಶಕ್ತಿ. ೨೦). [ಸಂ.]

**ಭೇದಿ** (ಗು). ೧. ಒಡೆಯುವ: ಸೀಳುವ; ಭಾಗ ಮಾಡುವ. (ನಾ). ೨. ಮಲವು ನೀರಾಗಿ ಗುದದ್ವಾರದಿಂದ ಹರಿಯುವುದು: ವಿರೇಚನ; ಜುಲಾಬು: ಇದ್ದಕ್ಕಿದ್ದ ಹಾಗೆ ಅನೇಕ ಸಲ ಭೇದಿಯಾಗಲು ಆರಂಭವಾಗುತ್ತದೆ (ಗೃಹಔ. ೦೪೪).

ಭೇದಿ ಕಟ್ಟು = ಜುಲಾಬಾಗುವುದು ನಿಲ್ಲು: ಭೇದಿ ಕಟ್ಟುವುದಕ್ಕೆ ಬೇರೆ ಚೂರ್ಣವನ್ನು ಕೊಟ್ಟಿದ್ದೇನೆ (ರೂಢಿ). ಭೇದಿಗೆ ಕೊಡು = ೧. ಜುಲಾಬಾಗುವಂತೆ ಔಷಧಿಯನ್ನು ಕೊಡು: ವೈದ್ಯನು ಮಗುವಿಗೆ ಭೇದಿಗೆ ಕೊಟ್ಟನು (ರೂಢಿ). ೨. (ಆಲಂ) ಭಯವನ್ನುಂಟುಮಾಡು; ಗಾಬರಿಪಡಿಸು: ಅವನಿಗೆ ಸರಿಯಾಗಿ ಭೇದಿಗೆ ಕೊಟ್ಟಿದ್ದೇನೆ (ರೂಢಿ). ಭೇದಿಮಾತ್ರೆ = ಭೇದಿಯನ್ನು ಮಾಡಿಸುವ ಜಾಪಾಳ ಮೊದಲಾದುವುಗಳಿಂದ ಮಾಡಿರುವ ಮಾತ್ರೆ, – ಗುಳಿಗೆ: ಪಂಡಿತರು ಭೇದಿ ಮಾತ್ರೆಯನ್ನು ಕೊಟ್ಟು ಕಳುಹಿಸಿದರು (ರೂಢಿ). [ಸಂ. ಭೇದಿನ್]

**ಭೇದಿಗ** (ನಾ). ಒಡಕನ್ನು ಹುಟ್ಟಿಸುವವನು; ಜಗಳ ತಂದುಹಾಕುವವನು: ಹಾದಿಯ ಮನೆ ಹೊಲ್ಲ ಬೀದಿಯ ಸಸಿ ಹೊಲ್ಲ ಹಾವರದ ಹೆಣ್ಣು ನೆರೆ ಹೊಲ್ಲ ಹಳ್ಳಿಯಲಿ ಭೇದಿಗನೆ ಹೊಲ್ಲ (ಸರ್ವಜ್ಞ. ೦೦೦೦). [ಭೇದ + – ಇಗ]

**ಭೇದಿತ** (ಗು). ೧. ಮುರಿದ; ಒಡೆದ; ಸೀಳಿದ; ಭಿನ್ನವಾದ. (ನಾ). ೨. ಒಡೆದುಹೋದುದು; ಸೀಳಿದುದು: "ದಾರಿತಃ, ಭಿನ್ನಃ, ಭೇದಿತಃ—೩ ಸೀಳುವುದಕ್ಕೆ ಯೋಗ್ಯವಾಗಿರುವುದು, ಕಡಿಯಲ್ಪಟ್ಟದ್ದು" (ಸಿದ್ಧಾಂತ. ೩೩೦). [ಸಂ.]

**ಭೇದಿಸು** (ಕ್ರಿ). ೧. ಒಡೆ; ಮುರಿ: ಸೀಳು; ಭಾಗ ಮಾಡು: ಬೆಸಸಿದೊಡದು ಮಹಾಕರ್ಮಗಳ್ಗೆ ಬೆಸನಂ ಬಲವಂದು ಬಾಹುಬಲಿಯನಣಂ ಭೇದಿಸಲಾಱದು ದಱಿನಿರ್ದುದು. . .ಕೆಲದೋಳ್ (ಆದಿಪು. ೦೪-೦೦೭); ಬೆಟ್ಟತಪ್ಪ ಕಲ್ಲುಂಗಳಿಳ್ಳ ಬೆಟ್ಟಮುಂ ಸಿಡಿಲುಂ ನೀರುಂ ಭೇದಿಸುವಹಾಗೆ (ಶಂಕರಾ. ೦೬೬-೨೦); ಹೊನ್ನ ಪೆಟ್ಟಿಗೆಯ ಭೇದಿಸಿ ತೆಗೆದು ನಾನಾ ವಸ್ತುಗಳನು ಸಂಪಾದಿಸಿಕೊಂಡನರ್ಥಿಯಲಿ (ಪ್ರೋಹಕ. ೧೮-೨೦). ೨. ಸೋಲಿಸು; ಪರಿಭವವನ್ನುಂಟುಮಾಡು: ಶರೌಘದಿಂ ಭೇದಿಪ ಬಿನ್ನಣಂ ಗಡ ಜಿತಾಂತಕನೋಳ್ . . . ಚಿತ್ರಮಲ್ಲವೇ (ಶಬಕಾ. ೪-೦೩೧). ೩. ಪರಿಹರಿಸು; ನಿವಾರಿಸು: ಕಯ್ದಾವಿಗೆಗಳ ಬೆಳಗಿಂ ಕಾಯ್ದೆಸೆವ ಸಹಸ್ರಕಿರಣನಿಂ ಭೇದಿಸಲೇಗೆಯ್ದುಂ ಬಾರದುದಲ್ ತವೆ ಮಾಯ್ದು ಜಪ್ಪನದೊಳೊಡಲೊಳಡಿರ್ದ ತಮಂ (ಕಾದಂಪೂ. ೩೨೮). ೪. ಅಭಿಪ್ರಾಯವನ್ನು ಖಂಡಿಸು: ನಿರಾಕರಿಸು: ಲೋಕಾಯತವೆನಿಸಿದ ಚಾರ್ವಾಕೋಕ್ತಿಯುಂ . . . ಜಿನಚಂದ್ರಭೂಭುಜಂ ಭೇದಿಸಿದಂ (ಶಾಂತಿಪು. ೬-೦೩೩). ೫. ಛಿದ್ರಿಸಿ ಒಳಹೊಗು: ಸೀಳಿಕೊಂಡು ಒಳನುಗ್ಗು: ಅಸಮಪದ್ಮವ್ಯೂಹವನು ಭೇದಿಸುವನಾವವನೆನಲು ಕೇಳಿದು ಶಿಶುತನದಲಾಹವಕೆ ನಡೆದನು (ಕುವ್ಯಾದ್ರೋ. ೬-೨೨); ಭೀಮಸೇನ, ನಕುಲ, ಸಹದೇವರು ಯಾರೂ ಪದ್ಮವ್ಯೂಹವನ್ನು ಭೇದಿಸಿ ಒಳಗೆ ನುಗ್ಗಲಾರದೆ ಹಿಂತಿರುಗಿದ್ದು (ಹಂಗಾಳ. ೨೦). ೬. ಗುಟ್ಟನ್ನು ಕಂಡುಹಿಡಿ: ರಹಸ್ಯವನ್ನು ತಿಳಿ; ಪತ್ತೆ ಮಾಡು: ಭೇದಿಸಿ ಸಹದೇವಿಗೆ ಮಗನಾದುದನೋರ್ವಂ ಧನಾರ್ಥಿ ಮೆಚ್ಚಂ ಪಡೆವೊಂದಾದರದಿನಱಿಪೆ (ಶಂಗಾಮಾ. ೨-೩೩); ಕೃಷ್ಣನ ನೊಳಗುಮಾಡುವ ಮುಹದಿ ಬಂದನು ಕೌರವೇಂದ್ರನು ದ್ವಾರಕಾಪುರಿಗೆ ಇದನು ಭೇದಿಸಿ ಬೇಹಿನವರುಸುರಿದರು ಕುಂತೀಸುತರಿಗೆ (ಕುವ್ಯಾಉ. ೦-೦೭); ಆದಿದೈವವನು ತಾ ಭೇದಿಸಲಿಕಱಿಯದಲೆ ಹಾದಿಯ ಕಲ್ಲಿಗೆಡೆಮಾಡಿ ನಮಿಸುವ ಮಾದಿಗರ ನೋಡು (ಸರ್ವಜ್ಞ. ೦೯೯). ೭. ಭೇದೋಪಾಯಕ್ಕೆ ಒಳಗು ಮಾಡು; ಪಕ್ಷಾಂತರ ಮಾಡಿಳು: ಈ ಮೃದುಂಹೃದಯನಪ್ಪ ಸಂಜೀವಕನಂ ಭೇದಿಸುವುದಾವ ಗಹನಂ (ಪಂಚತಂ. ೦೩೨-೦೪). ೮. (ಒಂದು ವಿಷಯವನ್ನು) ಚೆನ್ನಾಗಿ ಆಲೋಚನೆಮಾಡು, – ವಿಚಾರಿಸು: ಇದಱೊಳಗೊಂದು ಕುಂದಿಲ್ಲ ಭೇದಿಸುವೊಡೀ ಕೃತಿಗೆ ಪ್ರತಿಯಿಲ್ಲ (ಪಶಾ. ೦-೦೪); ಪಸಗೆಟ್ಟು ತನುಸುಖಕೊಲಿಯದೆ ಕೆಲರು ಭೇದಿಸಿ ನಿಜಸುಖವ ಭೋಗಿಪರು (ಪಶ. ೦-೦೦೬); ವೇದದೊಳು ಮನ್ವಾದಿ ಧರ್ಮಶಾಸ್ತ್ರದೊಳು ಭೇದಿಸಿ ಓರಿಯರು ಪೇಳಿದುದನೆ ಕೃತಿಗೈದಾನು ಕಿವಿಗೊಳಿಸಿದೆನು (ಹರಿ. ೦-೩೦). ೯. ವ್ಯತ್ಯಾಸವನ್ನು ಗ್ರಹಿಸು; ಭೇದವನ್ನು ಕಾಣು: ದೆಸೆಯಿದಾಗಸ ಭೂಮಿಭಾಗವೆನುತ ಭೇದಿಸಬಾರದವಮರನಿಕರಕೆ ಮಸೆದ ಕೂರ್ಗಣೆಯಲಿ ಭುವನವ ಕೂಡೆ ಮುದ್ರಿಸಿದರು ಕೈಚಳಕದಲಿ (ಭರತ. ೬-೦೨). ೧೦. ಬೇರೆಯಾಗು: ಪಾದದೆ ಷೋಡಶಷೋಡಶ ಮಾತ್ರೆಯು ಭೇದಿಸಿ ಮೂಜನೆಯಾಱನೆಯೆಡೆಯೊಳ್ ಲಘುವಿರ್ಪತ್ತಾಱು ಸಾವರವಿಂತಾಱಡಿಯೊಳ್ ಗುಣೆಯಿಸೆ (ಛಂದೋಂಬು. ೫-೨೫೮ ರ ಅಂಕಿತದ್ಯ). [ಭೇದ + – ಇಸು]

**ಭೇದಿಸೊಪ್ಪು** (ನಾ). (ಭೇದಿಯಾಗುವುದಕ್ಕೆಂದು ಕಷಾಯಮಾಡಲು ಬಳಸುವ) ಒಂದು ಬಗೆಯ ಸೊಪ್ಪು : (ಮೈಶಿಗ. ೪೫-೬೯). [ಭೇದಿ + ಸೊಪ್ಪು೩]

**ಭೇದೋಪಾಯ** (ನಾ). = ಭೇದ ೨೨ : ರಾಜ್ಯವನ್ನು ಪುನಃ ಪಡೆಯಲು ಸಾಮ, ದಾನ ಮತ್ತು ಭೇದೋಪಾಯಗಳನ್ನು ಬಳಸಿ ವಿಫಲವಾದ ಮೇಲೆ . . . ಯುದ್ಧಸನ್ನಾಹವಾಗುತ್ತದೆ (ಚಾಕದ. ೯೯). [ಸಂ.]

**ಭೇದ್ಯ** (ಗು). ೧. ಒಡೆಯಲು ಯೋಗ್ಯವಾದ ; ಮುರಿಯಬಹುದಾದ. ೨. ಒಳನುಗ್ಗಬಹುದಾದ ; ಪ್ರವೇಶಿಸಲು ಸಾಧ್ಯವಾದ. 'ಅಭೇದ್ಯ' ಪರಾ. ೩. ಸುಲಭವಾಗಿ ಒಡೆಯುವ ; ಭಂಗುರವಾದ. ೪. ತಪ್ಪು ದಾರಿಗೆ ಎಳೆಯಲು ಸಾಧ್ಯವಾದ ; ದುಷ್ಟಪ್ರೇರಣೆಗೆ ಒಳಗಾಗುವ. (ನಾ). ೫. ಭೇದಿಸಲು ಸಾಧ್ಯವಾಗಿರುವುದು. ೬. [ವ್ಯಾಕ] ವಿಶೇಷಣವನ್ನು ಹೊಂದುವ ನಾಮಪದ ; ವಿಶೇಷ್ಯ : ಭೇದ್ಯಂ ವಿಶೇಷ್ಯಂ, ಭೇದಕಂ, ವಿಶೇಷಣಂ (ಶಬ್ದಾನು. ೦೦೦ ವೃತ್ತಿ). ೭. [ತತ್ತ್ವಶಾ] ಭೇದ, ಭೇದಕ, ಭೇದ್ಯವೆಂಬ ತ್ರಿಪುಟಿಯಲ್ಲಿ ಒಂದು : ಪ್ರತ್ಯೇಕಿಸಿ ಗುರುತಿಸಬೇಕಾದುದು ; ಉದಾಹರಣೆಗೆ ಕೆಂಪು ಹೂವು ಎಂಬಲ್ಲಿ ಹೂವು ಎಂಬುದು ವಿಶೇಷ್ಯ ಅಥವಾ ಭೇದ್ಯ, ಕೆಂಪು ಎಂಬ ಪದಾರ್ಥದ ಸಂಬಂಧದಿಂದ ಹೂವು ಬಿಳಿಹೂವು ಮೊದಲಾದುವುಗಳಿಂದ ಬೇರ್ಪಡುತ್ತದೆ : ಅವಚ್ಛೇದ, ಅವಚ್ಛೇದಕ, ಅವಚ್ಛಿನ್ನವೆಂಬ ಪದಗಳಿಗೆ ಪರ್ಯಾಯಪದಗಳಾಗಿ ವ್ಯಾವೃತ್ತಿ, ವ್ಯಾವರ್ತಕ, ವ್ಯಾವರ್ತ್ಯ, ವಿಶೇಷ, ವಿಶೇಷಣ, ವಿಶೇಷ್ಯ, ಭೇದ, ಭೇದಕ, ಭೇದ್ಯ . . . ಎಂದು ವ್ಯವಹರಿಸುವರು (ಹಿಂದಶಾ. ೦೯೯). [ಸಂ.]

**ಭೇನ** (ನಾ). ನಕ್ಷತ್ರಗಳ ಒಡೆಯ ; ಚಂದ್ರ : ಸೇನಾಧಿಪತಿಜನಕ ಭೇನಾನಲಾರ್ಕಾಕ್ಷಿ ಕೀನಾಶದರ್ಪಹರ (ಗುರುಚಾ. ೦-೯). [ಸಂ.]

**ಭೇನಚೂಡ** (ನಾ). ನಕ್ಷತ್ರಗಳ ಒಡೆಯನಾದ ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಚಂದ್ರಚೂಡ ; ಶಿವ : ಆನಿರಲು ಏನು ಸಂಶಯ ಬೇಡ ನಿನಗೆಂದು ಬೇ [ಭೇ] ನಚೂಡಂ ನಂಬಿಸಿದ ಮಹಾನಿಃಕಾಮಗಣವುಂಟು ಮಾಯಿಯೆಂದು ವಿಮಲೆ ಪೇಳಲು (ಪ್ರಭುಲಿ. ೫-೦೩೯). [ಸಂ.]

**ಭೇರ** (ನಾ). ಒಂದು ಬಗೆಯ ಚರ್ಮವಾದ್ಯ ; ನಗಾರಿ ; ದುಂದುಭಿ : ಗಾಳಿಪಟಕ್ಕೆ ಭೇರಬಿರಿಕೆಯ ಕಟ್ಟಿ ನುಡಿಸುವ ತೆರದಂತೆ ತೇಜವಾಗಿ (ಅಬಂಧೀ. ೩೨೮-೨೯). [ಸಂ.]

**ಭೇರಿ** (ನಾ). = ಭೇರ : ''ವಿಸ್ತರ ಭೇರಿ ದುಂದುಭಿಯೆನಿಕ್ಕು'' (ಮಂಗರಾ. ೨೪-೭); ಧರೆ ನಡುಗೆ ಪೊಡೆವ ಭೇರಿಯ ಘನಧ್ವನಿಯೊಳಗೆ (ಶಂಕರ. ೭-೦೨೦); ಧರಧುರದ ನಿಸ್ಸಾಳಸೂಳಿನ ಮೊಳಗಿವ ಭೇರಿಯ ರಾಯಗಿಡಿಗನ ಜಡಿವ ಚಂಬಕನ (ಕುಮ್ಯಾಭ. ೦೪-೩೩) ; ತಂಬಟೆ ಹೋಗಿ ಭೇರಿಗೆ ದೂರು ಹೇಳಿದ ಹಾಗೆ (ಗಾದೆ). [ಸಂ. ಭೇರೀ]

**ಭೇರುಂಡ** (ಗು). ೧. ಭಯಂಕರವಾದ ; ಕ್ರೂರವಾದ; ಭೀಷಣವಾದ. (ನಾ). ೨. ಎರಡು ತಲೆಗಳುಳ್ಳ, ಭಯಂಕರವಾದುದೆಂದು ತಿಳಿಯಲಾದ ಒಂದು ಬಗೆಯ ಕಾಲ್ಪನಿಕ ಹಕ್ಕಿ ; ಗಂಡಭೇರುಂಡ : "ಬಿಡದಮುಳ್ದಲೆವಕ್ಕಿಯುಮೆಂದೊಡೆ ಭೇರುಂಡಕ್ಕೆ ನಾಮಂ" (ಕವಿಕಂ. ೬೦); ಸಕಲ ಶಕುನಿಗಣಂಗಳೊಳಗೆ ಸತ್ತ್ವದೊಳಂ ಸಾಹಸದೊಳಮಧಿಕಮಪ್ಪ ಭೇರುಂಡಮಂಡಳಿಯುಂ . . . ಇರ್ದಂತೆ (ಶಂತಶಂ. ೨೨೫-೨೦); ನಮ್ಮ ಮಂದಿಗಳಂ ಸಿಂಹ ಶರಭ ಭೇರುಂಡ ಶುಂಡಾಲ . . . ರೂಪಂಗಳಿಂ ಬಾಧಿಸದಂತು ಶಾಂತಿಯಂ ಮಾಡಲ್ವೇಳ್ಪುದು (ಜಗದ. ೪-೬೭ ವ). [ಸಂ.]

**ಭೇರುಂಡಗಳೆ** (ನಾ). (ಬಳ್ಳಿಗಾವೆಯ ಭೇರುಂಡೇಶ್ವರದೇವರ ಅಧಿಕಾರದಲ್ಲಿ ಸ್ಥಾಪಿತವಾಗಿದ್ದ) ಭೂಮಿಯನ್ನು ಅಳೆಯುವ ಒಂದು ಅಳತೆ ಮತ್ತು ಅಳತೆಗೋಲು (?) : ಊರಿಂ ಮೂಡಣ ಭೇರುಣ್ಡೇಶ್ವರದ ತಳವೃತ್ತಿ ಪುಲ್ಲೆಯ ಬಯಲ ಮೂಡಣಪತ್ತುಗೆಯಲ ಭೇರುಣ್ಡಗಳೆಯ ಲ್ಕೊಟ್ಟ ಗಟ್ಡಿ (ಎಕ. VII, ಶಿಕಾ. ೦೫೦-೯೦೯ ; 1047) ; ಬಳ್ಳಿಗಾವೆಯ ಪುಲ್ಲೆಯ ಬಯಲೊಳ್ ಭೇರುಣ್ಡಗಳೆಯೊಳ್ ಕೊಟ್ಟ ಗಟ್ಡಿ ಮತ್ತರಯ್ದು (ಶಿಕ. IV, ೦೬೦-೦೭; 1048). [ಭೇರುಂಡ + ಗಳೆ (<ಗಟಿ³) ]

**ಭೇರುಂಡವಕ್ಕಿ** (ನಾ). = ಭೇರುಂಡ ೨ : ಭೇರುಂಡವಕ್ಕಿಯಾಗಿ ಪುಟ್ಟಿ ಸತ್ತು (ಪಞ್ಚಾ. ೦೭೬-೨೫); ಶರಭಂ ಬೆಂಕೊಳ್ವ ಭೇರುಂಡವಕ್ಕಿಗಳಂ ನೋಡಿದ ನೋಟದಾಸೆಯುಗಿವನ್ನಂ ಕಂಡಂ (ಶಂರಾಮಾ. ೦೦-೬೮). [ಭೇರುಂಡ + ಪಕ್ಕಿ]

**ಭೇಲ್**. ಭೇಳ (ನಾ). ಒಂದು ಬಗೆಯ ತಿಂಡಿ ; ಎರಡು ಮೂರು ತಿಂಡಿಗಳನ್ನು ಸೇರಿಸಿರುವ ಮಿಶ್ರಣ; ಚೌಚೌ; ಮಿಸಳ (ಉಕ): ಇನ್ನೊಂದು ಕಡೆ ಕಡಲೆಕಾಯಿ, ಭೇಲ್, ಮಿಠಾಯಿ ಮಾರುವ ಹುಡುಗರು ಬಂದು ಕೊಳ್ಳಿರೆಂದು ಎಲ್ಲರನ್ನು ಬಲವಂತ ಪಡಿಸುತ್ತಿದ್ದರು (ಸೋಕುಗ. ೭೦). **ಭೇಳ** : ಆರ್ಡರ್ ದೊರೆತೊಡನೆ ಸಂತುಷ್ಟನಾದ ಭಯ್ಯಾ . . . ಓಡುತ್ತ ಹೋಗಿ ಭೇಳ (ಚೌಚೌ)ನ್ನು ಎರಡು ಎಲೆಗಳಲ್ಲಿ ತಂದು ಅವರ ಮುಂದಿರಿಸಿದ (ಎಡಹ. ೨೪). [ ← ಮರಾ. ಭೇಲ್. / ಪ್ರಾ. ಭೇಲ್, ಭೇಳ್]

**ಭೇಶ** (ನಾ). ೧. ನಕ್ಷತ್ರಗಳ ಒಡೆಯ ; ಚಂದ್ರ : ದುರಿತವಾರಿಜಭೇಶ ಜಗದೀಶ (ಶ್ರೀರಾ. ೪-೦). ೨. ಕಾಂತಿಯ ಒಡೆಯ ; ತೇಜಸ್ಸಿಗೆ ಒಡೆಯನಾದವನು : ಭೂವಂದ್ಯ ಭೇಶ ಭೈಷಜ್ಞ . . . ಎನೆ ಕಾಯ್ದ ಹರಿಯೆ (ಕಶಾಂ. ೭೭-೯೨). [ಸಂ.]

**ಭೇಶಚೂಡ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿರುವವನು ; ಚಂದ್ರಚೂಡ ; ಶಿವ : ಬಸವ ಭೇಷ[ಶ]ಚೂಡನ ಧ್ಯಾನದೊಳು ರಾಜ್ಯವೈಭವದಿ ಮೋಸಹೋಗದೆ (ಪ್ರಭುಲಿ. ೭-೩೦). [ಸಂ.]

**ಭೇಷ್** 'ಬೇಶ್' ನೋ.

**ಭೇಷಜ** (ನಾ). ೧. ಮದ್ದು; ಔಷಧಿ : ''ಭೈಷಜ್ಯಂ. ಭೇಷಜಂ, ಜಾಯುಃ, ಅಗದಂ, ತಂತ್ರಂ, ಔಷಧಂ— ಈ ೬ ಮದ್ದು'' (ಹಲಾಯು. ೦೦೦-೪೫೯); ನಿನ್ನೀ ಸ್ತವಭೇಷಜದಿಂದಘ ಕರಗುವುದಲ್ತೆ (ಕವಾಲಿ. ೨೨); ದಿವ್ಯಶಸ್ತ್ರಪ್ರಹರಣ ಭರಮನಪಹರಿಸುವ ಭೇಷಜಪ್ರಯೋಗಮನೊಡರಿಸುವಮೆಂದು ಶೋಕೋದ್ರೇಕಮನುಪಶಮಿಸುವುದುಂ (ಶಂರಾಮಾ. ೦೪-೩೪ ವ). ೨. ಪರಿಹಾರೋಪಾಯ ; ನಿವಾರಣೆ : ಕಾಮಿನಿಯರ ಕುಚಾಲಿಂಗನವನುಳಿದೊಡೆತ್ತಣದು ಹಿಮಕೆ ಭೇಷಜಮೆಂದು ವಿರಹಿಗಳ್ಕ್ಕಾರ್ತರನಜುಕಿರ್ದರು (ಕೈಬಿಲಾ. ೨೮-೩); ಪ್ರೀತಿಯಲ್ಲದೆ ಬೇರೆ ಭೇಷಜಂ ಪೋ ಭ್ರಾಂತಿಯೆಂಬಿನಂ, ಕೇಳಾರ್ಯೆಕೆ ಮಾಡಿದಳೊ (ಶ್ರೀರಾಮಾ. ೨೭೪-೩೦೫). [ಸಂ.]

**ಭೇಷಜನಿವಾಸ** (ನಾ). ಔಷಧಗಳು ಸಿಗುವ ಸ್ಥಳ ; ಆರೋಗ್ಯಗೃಹ : ''ಭೇಷಜನಿವಾಸಮೆನಲು ಆರೋಗ್ಯಗೃಹಮಕ್ಕು'' (ಮಂಗರಾ. ೫೮-೦೦). [ಸಂ.]

**ಭೇಳ** 'ಭೇಲ್' ನೋ.

**ಭೈ** (ನಾ). ಒಂದು ಅನುಕರಣ ಶಬ್ದ : ಪೂರಿತ ರಣಶಂಖ ಗಭೀರಾರಾವಂ ದೆಸೆಯ ಕೋಣ ಕುಸುಕುಟಿ ಗಜಘಂಟಾರವಮನುಜಿದೆ ಪೆಜಗಿಡೆ ಭೈ ರವಮೆಸೆದತ್ತು ಚರದ ಬಲಜಲನಿಧಿಯೊಳ್ (ಶಾಂತಿಪು. ೩-೯೭).

**ಭೈಭೈ** (ದ್ವಿರುಕ್ತಿ) : ದೋರ್ಗರ್ಬ್ಬದಗುರ್ವನಲ್ಲಿ ಮೆಚಿವೆಂ ಭೈಭೈ ಎನುತ್ತಾಗಳೀಜಿದ ಮತ್ತದ್ವಿಪಮಂ ನೃಸಿಂಹಮಹಿಪಂ (ಎಕ. VI, ಕಳ್ಳಮ. ೨೦-೦೪; 1219) ; ಒಡೆದದ್ರಿಕ್ಷಿತಿಸಂಧಿ ಪತ್ತುವಿಡೆ ಭೈಭೈಯೆಂಬಿನಂ ಕಟ್ಟು (ಕವಾದ. ೫೩ ಪ್ರಯೋ).

**ಭೈಕಾರ** (ನಾ). ಭೈ ಎಂಬ ಅಕ್ಷರ : ಬತ್ವದ ಭೈಕಾರಕ್ಕೆ—ಬಹಿತ್ರ—ಭೈತ್ರ (ಕವಂದ. ೨೬೫ ಪ್ರಯೋ).

**ಭೈಭೈಕಾರ** (ದ್ವಿರುಕ್ತಿ) : ಆ ಕುವಲಯಾಪೀಡಗಜಮಂ ಕಂಡು

ಗಜಾಸುರಸಂ ಕಂಡ ಬೀಡಪರಶುವಿಸಂತುದ್ಬಟಾರಭಟಿಯಿಂದಾರ್ದ ಭೈಭೈಕಾರದಿಂದಾ ದ್ವಿರದದಿದಿರಂ ನಡೆಯೆ (ಜಗದ. ೬-೩೦ ವ). [ಸಂ.]

**ಭೈಕೃತ** (ನಾ). ಭೈಯೆಂಬ ಕೂಗು : ದಿಶಿಜಾರಿಯ ಭೈಕೃತದೊಡನೆ ತಗುಳ್ದುಣ್ಮಿದುದು ಕೆಳರ್ದಿಭೇಂದ್ರದ ಗಳಬೃಂಹಿತವುಂ . . . ಮದಗಂಧ ವಿಚಲದಳಿರಝಂಕೃತಮುಂ (ಜಗದ. ೬-೩೦). [ಸಂ.]

**ಭೈಕ್ಷ** (ನಾ). ೧. ಭಿಕ್ಷೆ ಬೇಡುವುದು ; ಭಿಕ್ಷಾಟನೆ ; ತಿರುಪೆ. ೨. ಭಿಕ್ಷೆಯಿಂದ ತಂದ (ಆಹಾರ) ಪದಾರ್ಥ : "ಭೈಕ್ಷಂ, ಭಿಕ್ಷಾಕದಂಬಕಂ — ೨ ತಿರಿದು ತಂದ ಪದಾರ್ಥಗಳ ಗುಂಪಿನ ಹೆಸರುಗಳು" (ಸಿದ್ಧಾಂತಿ. ೨೨೯). ೩. ಕರುಣೆಯನ್ನು ಯಾಚಿಸುವುದು ; ಕೃಪೆಗಾಗಿ ಪ್ರಾರ್ಥನೆ ಮಾಡುವುದು : ಸೊರ್ಕೆಟ್ಟ ವಾಕ್ಯಮೋಗಿ ಕಡೆಯೊಳ್ ಭೈಕ್ಷಕ್ಕೆ ಪಕ್ಕಾದಿರೇ (ಸುಕುಮಾ. ೪-೨೬). ೪. ಭಿಕ್ಷಾದಾನ : 'ಪುರುಷಭೈಕ್ಷ' ಪರಾ. [ಸಂ.]

**ಭೈಕ್ಷಶುದ್ಧಿ** (ನಾ). [ಜೈನ] ಆಚಾರ್ಯವ್ರತದ ಐದು ಭಾವನೆಗಳಲ್ಲಿ ಒಂದು ; ಆಹಾರಶುದ್ಧಿ : ಆಚಾರಸೂತ್ರೋಕ್ತಮಾರ್ಗದಿಂ ಭೈಕ್ಷಶುದ್ಧಿಯುಂ . . . ಅಸ್ತೇಯವ್ರತದ ಭಾವನೆಗಳೈದು (ತತ್ತ್ವಸೂ. ೨೭೦) ; ಅನ್ಯಾಯ ಮತ್ತು ಅಭಕ್ಷ್ಯಗಳನ್ನು ತ್ಯಾಗಮಾಡಿ ಭೋಗಾಂತರಾಯದ ಕ್ಷಯೋಪಶಮಕ್ಕನುಸರಿಸಿ ಲಭಿಸುವಂಥ ಸರಸವಾಗಿರಲಿ ನಿ[ನೀ]ರಸವಾಗಿರಲಿ . . . ಅದನ್ನೇ ಸ್ವೀಕರಿಸುವುದಕ್ಕೆ ಭೈಕ್ಷಶುದ್ಧಿಭಾವನೆ ಎನ್ನುವರು (ಶ್ರಾವಕಾ. ೩೦೪). [ಸಂ.]

**ಭೈಕ್ಷುಕ** (ನಾ). ಭಿಕ್ಷುಕರ ಗುಂಪು, — ಸಮೂಹ : ಭೈಕ್ಷುಕಕ್ಕಂಜಿ ಅಟ್ಟುಂಬುದಂ ಮಾಣಬೇಡ (ಪಾದತಿ. ೦-೩೮ ವ). [ಸಂ.]

**ಭೈಕ್ಷೆ** (ನಾ). ಯಾಚನೆ ; ಭಿಕ್ಷೆ : 'ಪುರುಷಭೈಕ್ಷೆ' ಪರಾ. [ಸಂ. ಭೈಕ್ಷ]

**ಭೈತು** (ನಾ). ನೃತ್ಯದಲ್ಲಿ ಒಂದು ಬಗೆ : ಚಿಂದು ಜಕ್ಕಡಿ ಕವಿಲು ಗಜಲು ಭೈತು ತುರಿಗೆ ಆಂದೋಳಿತ ಮೊದಲಾದ ಆಟಗಳಂ ನೋಟಕರ ದಿಟ್ಟಿಗೆ ಮಧುರಮಾಗೆ ಮೆಚ್ಚೆ ನಟಿಯೊತ್ತಿರ್ದಳ್ (ವಿರೂಪಾ. ೯೦). [ ? ]

**ಭೈತ್ರ** 'ಬಹಿತ್ರ' ನೋ.

**ಭೈತ್ರಕಾಜ** (ನಾ). ಹಡಗನ್ನು ನಡೆಸುವವನು ; ನಾವಿಕ : ಭೈತ್ರಕಾಜರಿಂ ದ್ವೀಪಗಳಂ ಜೋಯಿಸರಿಂ ಗ್ರಹಣಮುಮಂ ಜೀವಂತೆ (ರಾಮಾಶ್ವ. ೯-೬೮). [ಭೈತ್ರ (<ಬಹಿತ್ರ) + —ಕಾಜ]

**ಭೈತ್ವ** (ನಾ). = ಭೈಕಾರ : ಆದಿಯ ಬತ್ವಂ ಭೈತ್ವ ವೈತ್ವ ವಿಧಿಯತ್ವ ದಾತ್ವದೊಳ್ ದೊರೆಕೊಳ್ಗುಂ (ಕವಿಮಾ. ೬೬೩). [ಸಂ.]

**ಭೈಮಂಗ** 'ಭೈಮೂಗು' ನೋ.

**ಭೈಮುಂಗು** 'ಭೈಮೂಗು' ನೋ.

**ಭೈಮೂಗು**. ಬೈಮೂಗ, ಭಯಿಮೂಗ. ಭೈಮಂಗ, ಭೈಮುಂಗು (ನಾ). (ಉಕ) ನೆಲಗಡಲೆ ; ಶೇಂಗಾ : ಇಲ್ಲಿ ಭತ್ತ, ಜೋಳ, ಸಜ್ಜೆ, ಕುಸುಬೆ, ಭೈಮೂಗು ಚನ್ನಾಗಿ ಬೆಳೆಯುತ್ತವೆ (ಮುಂಬಭೂ. ೧೩೦). **ಬೈಮೂಗ** : ಎಣ್ಣೆಯ ಪ್ರಕಾರವು . . . ಕುಸುಬಿ, ಬೈಮೂಗ, ಗಣಜಲ (ಮುಂಬವ್ಯಾ. ೦೬೨). **ಭಯಿಮೂಗ** : ಬಜಿ, ಭಯಿಮೂಗದ ಕಾಯಿ (ಶೇಂಗಾದ ಕಾಯಿ) ಈ ಮಾಲಿನ ಕಿಮ್ಮತ್ತು ಸೂರ್ತಿ ಚಪಾಳಾ ೨೦ ಮಣದ ಖಂಡುಗದ ಮೇಲೆ ಇರುತ್ತದೆ (ಮುಂಬವ್ಯಾ. ೦೦೩). **ಭೈಮಂಗ** : ಭೈಮಂಗ ಮಾರಾಟದ ಹಣ ಬೆಳಗಾಂವಿಯ ಅಡತಿಯಲ್ಲಿತ್ತು (ದೀಕಥ: II. ೨೪೬). **ಭೈಮುಂಗು** : ಅನೇಕ ದಿನ ಬರಿ ಹಾಲು ಕುಡಿದು ಭೈಮುಂಗು ತಿಂದಿದ್ದೆ ನಾನು (ಸಮಾಜ. ೩೬೬). [← ಮರಾ. ಭುಇಮೂಗ್]

**ಭೈರವ** (ಗು). ೧. ಭಯವನ್ನುಂಟುಮಾಡುವ ; ಭಯಂಕರವಾದ : ಭೈರವನ ಭೈರವಾಡಂಬರಕ್ಕೆರ್ದೆ ಬಿರಿದು ತಾರಕಾಕ್ಷಂ ಮುರಿದಂ (ಶಂಪು. ೩೪-೩೯) ; ಗಂಗಾಗಾತ್ರಭವ್ಯದಿಂ ಪರ್ವತ ಸಹೋದರತೆಯಾಂತುದು ವಿಯುಚ್ಚುಂಬಿ ಭೈರವಬೃಹತ್ತುರುವರಂ (ಶ್ರೀರಾಮಾ. ೨೫೬-೭೫೨). ೨. ಶಿವನಿಗೆ ಸಂಬಂಧಿಸಿದ. (ನಾ). ೩. ಭಯಂಕರವಾದುದು : ಭೀತಿಯನ್ನುಂಟು ಮಾಡುವಂತಹುದು : ಘೋರಂ, ಪ್ರತಿಭಯಂ . . . ಭೈರವಂ, ಭಯಾ(ವಹಂ)ನಕಂ —ಈ ೧೦ ಭಯಂಕರು" (ಹಲಾಯುಧ. ೦೦೩-೨೦) : ಮಲೆತುದು ಮುಂದೆ . . . ಕರ್ಕಶಂ ಭೈರವಂ ಜನಸಂಗಮೋನ್ನಂ ಮಹದ್ವನಂ (ಶ್ರೀರಾಮಾ. ೦೨೭-೩೬). ೪. ಪರಮೇಶ್ವರನ ರೂಪಗಳಲ್ಲಿ ಒಂದು : "ಘೋರಮೂರ್ತಿಯು ಖಡ್ಗಹಸ್ತಂ ದಿಗಂಬರಂ ಭೈರವನ ಪೆಸರಕ್ಕು" (ಮಂಗರಾ. ೩-೦೩) ; ಭೈರವನಂತೆ ಭಾಂಕಾರಂಗೆಯುತಿರ್ಪ ಸಾಧುಖಂ . . . ಅತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಕೂದ್ರಕ) ; ಪರಸೈನ್ಯಭೈರವನೊಳಜೀವನೆಂಬ ಪಟುವಗೆಯೊಳ್ ಭೈರವಂಬಾಯ್ದಂತೆ ಬಂದು ನಿಂದ ಪುರಂದರನಲ್ಲಿಗೆ ಸರಸಿಜಸಂಭವಂ ಬಂದು ಮಾರ್ಕೊಂಡು (ಶಂಕರಾ. ೩-೦೦೦ವ). ೫. ಈಶ್ವರನ ಪ್ರಮಥ ಗಣ : ಎಡೆವಿಡದೆ ಕಿಕ್ಕಿರಿದು ಕುಳಿತಿರ್ಪ ಭೈರವರ ಗಡಣ ತರತರದಿ ನಿಖಿಳಾಯುಧಮನಾಂತು ಕಾಯ್ದಿಹರುಯತಿ ಜಾಗ್ರದಿಂದೇ (ನವನೋ. ೨೪-೬೭). 'ಭೈರವಾಳಿ' ಪರಾ. ೬. ಮಹಾಮಂತ್ರಗಳಲ್ಲಿ ಒಂದು : ಗಾಯತ್ರಿ . . . ಭೈರವಾದಿ ಮಹಾಮಂತ್ರಂಗಳಂ . . . ಬೇಜ್ಬೇಜ್ ವಿವೇಕಿಸಿ ನೋಡಿ (ಶಿವೇಕ. ೭೩) ೭. ಒಡೆಯನಿಗಾಗಿಯೇ ಬದುಕಿ ಅವನೊಡನೆಯೇ ಮಡಿಯುವುದೆಂಬ ದೀಕ್ಷೆಯನ್ನು ಕೈಗೊಂಡಿರುವ ವೀರ : ಲಿಂಕರಾಯನೆಂಬ ಒಬ್ಬ ಸೈನಿಕ ತಾನು 'ಭೈರವ'ನಾಗಲು ನಿರ್ಧರಿಸಿ . . . ವೀಳೆಯ ಅಪ್ಪಣೆಯಾಗಬೇಕು ಎಂದ (ಕಾಂತಿಲಾ. ೨೨೯). 'ಗರುಡ' ಪರಾ. ೮. ಭಯ ; ಹೆದರಿಕೆ. ೯. ಪರ್ವತ ; ಬೆಟ್ಟ. ೧೦. [ಸಂಗೀತ] ಒಂದು ರಾಗದ ಹೆಸರು : ಮೇಗವಾಹಿನೀ ಮೇಳದ ಲ್ಲಾದರೋ ಭಾಷಾಂಗ (ರಾಗ)ವಾದ ಭೈರವವು ಹುಟ್ಟಿತು (ತತ್ತ್ವ. ೦೨೯) ; ಕೇಶವಲಾಲನು . . . ಶುದ್ಧಸ್ವರದಿಂದ ಭೈರವರಾಗದಲ್ಲಿ ಭಜನೆಯ ಹಾಡು ಹಾಡುತ್ತ ಮನೆಗೆ ಮರಳುತ್ತಿದ್ದನು (ತತ್ತ್ವಕ. ೦೯೬). [ಸಂ.]

**ಭೈರವಾಂಜನ** (ನಾ). ಒಂದು ಬಗೆಯ ಅಂಜನ : ಭೈರವಾಂಜನ—ಹಿಂಗು, ಸೈಂಧವ, ಹಿಪ್ಪಲಿ ಇವನ್ನು ಗೋಮೂತ್ರದಲ್ಲಿ ತೇದು ಅಂಜನ ವಿಡಲು ಸನ್ನಿಪಾತಜ್ವರಗಳು ಮಾಣುವುವು (ಸಕಲ್ಯ. ೪೨೨ ಪಂ). [ಸಂ.]

**ಭೈರವಾವಳಿ** (ನಾ). ಭೈರವದೇವರ ಸಮೂಹ, — ಗುಂಪು ; ℗ ಇವರು ಎಂಟು ಜನ :—ವಿದ್ಯಾರಾಜ, ಕಾಮರಾಜ, ನಾಗರಾಜ ಸ್ವಚ್ಛಂದರಾಜ, ಲಂಬಿತರಾಜ, ದೇವರಾಜ, ಉಗ್ರರಾಜ ಮತ್ತು ವಿಘ್ನರಾಜ— ಎಂದು ವಾಮನಪುರಾಣದ ೬೭ನೆಯ ಅಧ್ಯಾಯದಲ್ಲೂ ಅಸಿತಾಂಗ, ರುರು, ಚಂಡ, ಕ್ರೋಧ, ಉನ್ಮತ್ತ, ಕಪಾಲ, ಭೀಷಣ ಮತ್ತು ಸಂಹಾರ—ಎಂದು ತಂತ್ರಸಾರದಲ್ಲೂ ಹೇಳಿದೆ. ಈ ರೀತಿ ಈ ಎಂಟು ಜನ ಭೈರವರಿಗೆ ಇನ್ನೂ ಬೇರೆ ಬೇರೆ ಹೆಸರುಗಳಿವೆ : ಆ ಮಹಾವನಂ . . . ಭೈರವಾವಳಿಯಂತೆ ರುರುಪರಿಚಿತಮುಂ ಪಿತಾಮಹಾಸನದಂತೆ ಸಾಮಜ ಪದಾಭಿರಾಮಮುಂ . . . ಅಲ್ತು (ಚಂದ್ರಪು. ೩-೩೨ ವ). [ಸಂ. ಭೈರವಾವಲಿ]

**ಭೈರವಾಸನ** (ನಾ). [ಯೋಗ] ಒಂದು ಬಗೆಯ ಆಸನ : ಮೊದಲು 'ಭೈರವಾಸನ'ವನ್ನು ಅಭ್ಯಸಿಸಿ . . . 'ಏಕಪಾದಶೀರ್ಷಾಸನ'ಕ್ಕೆ ಮತ್ತೆ ಹಿಂದಿರುಗಬೇಕು (ಯೋಗದೀ. ೨೦೭) ; ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು. ೧. ಉತ್ತಾನಾಸನ . . . ೭೯. ಭೈರವಾಸನ (ಶಾರದ. ೦೬೭). [ಸಂ.]

**ಭೈರವಿ** (ನಾ). ೧. ದುರ್ಗಾದೇವಿಯ ಒಂದು ರೂಪ : "ಚಾಮುಂಡಿ ಚರ್ಚೆ ಭೈರವಿಯೆನಲು ವನದೇವಿ" (ಮಂಗರಾ. ೪-೦೪) ; ರೋದನದಿಂ ಸುತನ ಶಿರಶ್ಛೇದನವಟಲಾಜಿನಾಟುಗುಂ ರಿಪುರುಧಿರಾಸ್ವಾದನದಿನೆಂದು ವಿಲಜೋತ್ಪಾದನ ಭೈರವಿಯ ಮನಕಮಂ ಕೈಗೊಂಡಳ್ (ಶಂರಾಮಾ. ೯೩೩) :

ಈಕೆಯುದಾವಳೊ ಮೃತ್ಯುವೊ ಮಾಕಾಳಿಯೊ ಚಂಡಿಯೋ ಮಹಾಭೈರವಿಯೋ (ಜಗವ. ೩-೦೫). ೨. [ಸಂಗೀತ] ಒಂದು ರಾಗದ ಹೆಸರು: ಕಾಂಭೋದಿ ಭೈರವಿ ಮೊದಲಾದವನು ಸಾರವಡೆದು ಸವಿಧಾನಗಳಿಂ ಸುರನಾರಿಯರೊಲಿವಂತೆ ಪಾಡೆ (ಕೀವಂಸಾಂ. ೦೬-೪೬) ; ಶ್ರೀರಾಗ ಭೈರವಿ ವರಾಳಿ ಹುಸಾನಿ ಗುಂಡಾಕ್ರೀ . . . ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹನ್ನುರ. ೨-೪೦) ; ಭೈರವಿರಾಗದ . . . ಕೆಲವು ಕೃತಿಗಳನ್ನು ಮಾತ್ರ ಅವರು ತಮ್ಮ ಕಚೇರಿಗಳಲ್ಲಿ ಹಾಡುತ್ತಿದ್ದರು (ಸಂಗೀತ. ೫). [ಸಂ. ಭೈರವೀ]

**ಭೈರವೇಶ್ವರ** (ನಾ). = ಭೈರವ ೪ : ಆ ಭೈರವೇಶ್ವರದೇವರ ನಾಲ್ಕು ವೃತ್ತಿಯ ಪ್ರಾಪ್ತಿಯೊಳಗಾದ ಗ್ರಿಹಕ್ಷೇತ್ರ (ಎಕ. IV. ಕೃಕ್ರಾ. ೦೨-೩೫ ; 1267). [ಸಂ.]

**ಭೈರಿ$_1$** (ನಾ). ಒಂದು ಬಗೆಯ ಹಕ್ಕಿ : ಆ ಮೃಗಶಾಲೆಯಲ್ಲಿ ಹುಲಿ, ಕರಡಿ . . . ಗಿಡಗ, ಭೈರಿ ಮುಂತಾದ ನಾನಾಬಗೆಯ ಮೃಗಗಳಿದ್ದವು (ಬಿಕ. ೫೫) ; ದೊರೆಗಳವರು . . . ಗೌಜಲಹಕ್ಕಿ, ಲಾವಕಹಕ್ಕಿ ಗಿಡಗ ಭೈರಿ ಮುಂತಾದ ಅನೇಕ ಮೃಗಪಕ್ಷಿಗಳನ್ನೂ ಚೆನ್ನಾಗಿ ಕಾಪಾಡುತ್ತಿದ್ದರು (ಮಹಾವ. I, ೦೬೨).

[ದೇ. II ತೆಲು. ಭೈರಿ. ಬೈರಿ. ಬಯಿರಿ. ಭೈರವಿ. /ಮರಾ. ಭೈರೀ. ಬಹಿರೀ]

**ಭೈರಿ$_2$** (ನಾ). ಒಬ್ಬ ದೇವತೆಯ ಹೆಸರು ; ಭೈರವ : ಶಿವಜೋಗಿಗಳು . . . ಇವರು ಭೈರಿ, ವಿಠೋಬ, ಹನುಮಂತ ಮುಂತಾದ ದೇವರಿಗೆ ನಡದುಕೊಳ್ಳುವರು (ಕಜಾಗಿ. ೨೬೯). [←ಮರಾ. ಭೈರೀ]

**ಭೈರಿ$_3$** 'ಬೈರಿ' ನೋ.

**ಭೈಷಜ್ಯ** (ನಾ). ೧. ವೈದ್ಯಕೀಯ ಚಿಕಿತ್ಸೆ : ಔಷಧೋಪಚಾರ : ಅಥರ್ವವೇದದಲ್ಲಿ ಭೈಷಜ್ಯಕ್ಕೆ ಪ್ರಾಧಾನ್ಯ (ಕರ್ನಾಟಿ. ೦೬). ೨. ಮದ್ದು ; ಔಷಧ : "ಭೈಷಜ್ಯಂ. ಭೇಷಜಂ. ಜಾಯುಃ, ಅಗದಂ, ತಂತ್ರಂ, ಔಷಧಂ —ಈ ೬ ಮದ್ದು" (ಶಬ್ದಮ. ೦೦೦-೪೫೯); ಭೈಷಜ್ಯಜ್ಞಾನಮೆ ಮಾಡುಗುಮೆ ವೇದನಾನಿಗ್ರಹಮಂ (ಚಂದ್ರಪ್ರ. ೬-೨೬) ; ಆ ಜನಪದಂ . . . ಭೈಷಜ್ಯಸಂಗ್ರಹದಂತೆ ಬಹುಧಾನ್ಯಕಧಾತ್ರೀಸಂಯುಕ್ತಮುಂ ಸಾರರಸೌಷಧಿಸಮೇತಮುಂ . . . ಎನಿಸಿ ರಮಣೀಯಮಾಗಿರ್ದುದು (ರಾಜಶೇ. ೨-೨೮ ವ). ೩. ರೋಗವನ್ನು ಗುಣಪಡಿಸುವ ಸಾಮರ್ಥ್ಯ. [ಸಂ.]

**ಭೈಷಜ್ಯಕ** (ನಾ). ಒಂದು ಬಗೆಯ ಜ್ವರ.– ತಾಪ : ಶರ್ವಂ . . . ನಂದಿಪ್ರಮುಖನಿಖಿಲಪ್ರಮಥಯೂಥಮನಲ್ಲಿಂ ಪೆಱಗೆ ಭೈಷಜ್ಯಕವೆಂದಿಪ್ಪ ಜ್ವರಮುಮಂ ಬೆಸಸೆ (ಜಗ೬. ೦೮-೯ ವ). [ಸಂ.]

**ಭೈಷಜ್ಯಶಾಸ್ತ್ರ** (ನಾ). ವೈದ್ಯಶಾಸ್ತ್ರ : ಧರೆಯೊಳ್ ಭೈಷಜ್ಯಶಾಸ್ತ್ರಂ ಸುಖಕರಮಖಿಳರ್ಗೆ (ಕಲ್ಯಾ. ೪ ಪ್ರಶಸ್ತಿ). [ಸಂ.]

**ಭೊಂ** (ನಾ). ಒಂದು ಅನುಕರಣ ಶಬ್ದ.

**ಭೊಂಭೊಂ** (ದ್ವಿರುಕ್ತಿ) : ರಂಭೆಯುದೋರ್ವಳ್ . . . ಭೊಂಭೊಂ ಭೋಂಭೋಂಬೆಂಬೀ ಶಂಖಧ್ವನಿ ಪೊಣ್ಮೆ ಧಕ್ಕೆಯುಂ ಬಾಜಿಸಿದಳ್ (ವಾರಪು. ೬-೮೯).

**ಭೊಗ್ಗನೆ** (ಅ). ಒಂದು ಅನುಕರಣಾವ್ಯಯ : ಕೂಡಲೆ. ತಟ್ಟನೆ : ಕೋಟೆಯನು ಭೊಗ್ಗನೆ ವಶಮಾಡಬೇಕೆಂಬ ನುಡಿಗಳು ಕಗ್ಗಲಿಗಳೊಳೊಪ್ಪಿದವು (ಚಂದ್ರಸಾ. ೮-೨೦) ; ಭೊಗ್ಗನಯ್ಯನ ಕಾಣಲೊಡನೆ ರೋಮಾಂಚದ ಸುಗ್ಗಿ ಚಿತ್ತದೊಳುಗರೆಯುತ್ತಿದರು (ಭರತ. ೫೮-೪೯). [ಭೊಗ್$_0$ + – ಅನೆ$_1$]

**ಭೊಪ್ಪರ** (ನಾ). (?) : ಪೂರ್ವಕಟಳೆ ಪೂರ್ವಮರಿಯಾದೆ ಹಾಗುವ ಪೊಲೆಯ ಕೋಲಿಸಲು ತೆಗವಂಥಾ ದೇವಿಯು ಭೊಪ್ಪರವನು ಪೂರ್ವಮರಿಯಾದೆಯಲು ಎರಡು ಕೇರಿಯ ಹಲರು ಸಟಿಕಾಜಿರು ಆ ದೇವ್ಯಿದೇವರಿಗೆ ನಡಸಿ ಬಹರು (ಕರ್ನಾ. IX—ii, ೪೫೬-೦೬ ; 1455). 'ಬೊಪ್ಪರ' ಪರಾ. [?]

**ಭೋ** (ಅ). ೧. (ಸಾಮಾನ್ಯವಾಗಿ ಗೌರವಾರ್ಹರಾದವರನ್ನು ಸಂಬೋಧಿಸುವಾಗ ಹೇಳುವ) ಒಂದು ಅವ್ಯಯ : ತೊಱೆಯ ಮಾವಣ್ಣಗಳಿರಾ . . . ಪರನಾರಿಯ ಸಂಗವ ತೊಱೆಯಿಂ ಭೋ (ಬಸವ. ೬೪೪); ಗುಹೇಶ್ವರಲಿಂಗವ ತನ್ನೊಳಱಿದೆನೆಂಬ ಮಹಾಂತಂಗೆ ಸತ್ಕ್ರಿಯಾಚರಣೆಯ ಸಾಧನೆ ಕಾಣೆ ಭೋ (ವಚನ. ೮೯). ೨. ದುಃಖ, ಗಾಬರಿ, ಅಪಘಾತ ಮುಂತಾದ ಸಂಕಟಪ್ರಸಂಗಗಳಲ್ಲಿ ಉದ್ಗರಿಸುವ ಶಬ್ದ; ಅಯ್ಯೋ ಎಂಬ ಅರ್ಥವನ್ನು ಕೊಡುವ ಶಬ್ದ : ಬ್ರಹ್ಮರ್ ಭೋಯೆನಲುಂ ಬಲ್ಲಿರ್ಕೊಲೆಧೋಯೆನಲುಂ ಬಲ್ಲರಿಱಿಯಲವರೆತ್ತಱಿವರ್ (ಗದಾಯು. ೨-೦೬); ಈಯೆಡೆಯಿಂ ಪೋಗೆಲೆ ಪಾರ್ವಾಯೆನೆತಲ್ಲಣಿಸಿ ಪಾರ್ವನಬ್ರಾ(ಬ್ರ)ಹ್ಮಣ್ಯಂ ಭೋಯೆಂದು ಪುಯ್ಯಲಿಡುತುಂ . . . ನೃಪೇಂದ್ರಸಭೆಯಂ ಪೊಕ್ಕಂ (ಸುಕುಮಾ. ೬-೪೧) : ಭೋಯೆಂದುದನಖಿಳಪರಿವಾರಮುಡಿಗಡಿಗೆ ಹಾಹಾಯೆಂದು ಮಱುಗಿದುದು (ತ್ರಿಲೋ. ೦೧-೩೪). [ಸಂ. ಭೋಸ್]

**ಭೋಂಕನೆ** (ಅ). ಒಂದು ಅನುಕರಣಾವ್ಯಯ : ತಟ್ಟನೆ; ಬೇಗನೆ : ಸಿದ್ಧಾರ್ಥಂ . . . ಪುತ್ರಮುಖಮಂ ನೋಱ್ಪೆನೆಂದು ಭೋಂಕನೆ ನಲ ಮನೆಯೊಳಗಂ ಪೊಕ್ಕು ನೋಱ್ಪನ್ನೆಗಂ (ವರ್ಧಮಾ. ೪೪-೨೦); ಸೂರ್ಯಜಂ . . . ಮಂಗಳಲಕ್ಷಣೆಯನಂದು ಭೋಂಕನೆ ಕಂಡು (ಕಂಕರಾ. ೯-೬೩): ಮಾಧವಂ ತನ್ನ ಗಿಳಿಗಳ ಮಱಿಗೋಗಿಲೆಗಳ ಸಹಾಯದಿಂ ಕೂಡಿ ಭೋಂಕನೆಬ್ಬು (ರಾಜಶೇ. ೫೬-೦೪). [? + – ಅನೆ$_1$]

**ಭೋಂಕರಿಸು** (ಕ್ರಿ). ಧ್ವನಿಮಾಡು ; ಘೋಷಿಸು ; ಮೊಳಗು : ಬಿಂದುದುಬುಜಭವಾಂಡವೆನೆ ಭೋಂಕರಿಸಿದವು ನಿಸ್ಸಾಳತತಿ (ಕುವ್ಯಾ. ೪. ೮-೦೪); ಭೋಂಕರಿಸುತೊಗ್ಗಿದರ್ಕವಿದು ಜೇನ್ನೊಣದಂತೆ . . . ಪಟುಭಟರ್ (ತ್ರಿಬುಧಾ. ೮-೩೨). [ಭೋಂಕರಣ$_0$ + – ಇಸು$_3$]

**ಭೋಂಕಲ್** (ಅ). = ಭೋಂಕನೆ : ನಿಮಿದೋಳಿಂದಪ್ಪಿ ಭೋಂಕಲ್ ಭಯದೆ ನಡುಗುತಂ . . . ತಾನದೇನೆಂದಱಿಯದಬಲೆ ನಾನಾರಸಾಕ್ರಾಂತೆಯಾದಳ್ (ಕಾದಂಬ. ೬೮೮) ; ದೇವಂಗೊಗೆತಂದುದವಧಿಬೋಧಂ ಭೋಂಕಲ್ (ಶಾಂತಿಪು. ೧-೧೦೧) ; ಭೋಂಕನೆ ಚೆಕ್ಕನೆ ಭೋರನೆ ಭೋಂಕಲ್ . . . ಕೂಡಿರೆ ತವೊಳ್ಕೊದವುಗಂ ಶೀಘ್ರಾರ್ಥಂ (ಶಮದ. ೩೦೫). [ ? ]

**ಭೋಂಗಾ**, **ಭೊಂಗಾ** (ನಾ). ಕಾರ್ಖಾನೆ, ಗಿರಣಿ ಮುಂತಾದುವುಗಳಲ್ಲಿ ಕೆಲಸಗಾರರನ್ನು ಎಚ್ಚರಿಸಲು ಇರುವ ಯಂತ್ರ ಮತ್ತು ಅದರ ಮೂಲಕ ಹೊರಡಿಸುವ ಸಿಳ್ಳು : ನಿದ್ರೆಗೆಟ್ಟು ಬಳಲಿದ ದೇಹವನ್ನು ಎಳೆದುಕೊಂಡು ಕಚೇರಿಗೆ ಬಂದು . . . ಕೊಠಡಿಗೆ ಬಂದಾಗ ಗಿರಣಿಯ ಭೋಂಗಾ ಭೋರಿಡುತ್ತಿತ್ತು (ನಾಳೀ೧೦೬. ೯೬). **ಭೊಂಗಾ** : ಗಿರಣಿಯ ಭೊಂಗಾ ಜೋರಿನಿಂದ ಸೀಳುಹಾಕಿತು (ಚಂದ್ರಾ. ೪೩).

[← ಮರಾ. ಭೋಂಗಾ]

**ಭೋಕು** (ನಾ). ತೂತು ; ರಂಧ್ರ : ಅವಳ ತಲೆಯಲ್ಲಿ ಭೋಕು ಬಿದ್ದು ರಕ್ತ ಪುಟಿಯ ಹತ್ತಿತು (ಕಸಬಾ. ೩೦). [←ಮರಾ. ಭೋಕ್, ಭೋಂಕ್]

**ಭೋಕ್ತೃ** (ನಾ). ೧. ಅನುಭವಿಸುವವನು : ಭೋಗಿಸುವವನು : ನಾವು ಕರ್ತರೂ ಅಲ್ಲ ಭೋಕ್ತರೂ ಅಲ್ಲ (ರಾಂಕಲಾ. ೪೯) ; ಪುರುಷನಿಗೆ ಕೈವಲ್ಯ ಬೇಕಾಗಿರುವುದರಿಂದ ಪ್ರಕೃತಿ ಪ್ರಾಕೃತ ವಸ್ತುಗಳಿರಬೇಕು. ಆ ವಸ್ತುಗಳು ಭೋಗ್ಯಗಳಾದುದರಿಂದ ಭೋಕ್ತೃವು ಬೇಕು (ಹಿಂದಸಾ. ೫೯). ೨. ತಿನ್ನುವವನು : ಭೋಜ್ಯ ಭೋಜನವಲ್ಲ, ಭೋಕ್ತ ನಾನಲ್ಲ (ಅಗ್ನಿಪು. ೬೪). ೩. ಅನುಭವಿಸುವುದು ; ಭೋಗಿಸುವುದು : "ಉಪಭೋಗಮೆನಲು ನಿರ್ದೇಶವೆನೆ ಭೋಕ್ತ್ರಂ" (ಮಂಗರಾ. ೦೩೫-೩೫). [ ಸಂ. ಭೋಕ್ತೃ ]

**ಭೋಕ್ತವ್ಯ** (ನಾ). ೧. ತಿನ್ನಲು ಯೋಗ್ಯವಾದುದು ; ತಿನ್ನಬಹುದಾದುದು. ೨. ಅನುಭವಿಸಬೇಕಾದುದು ; ಭೋಗಿಸಬೇಕಾದುದು :

ಸ್ವಾಧ್ಯಾಯಪರನಪ ಭೂಸುರೋತ್ತಮನ ಭವ್ಯನೆಂದುಂ ವಂದನೆಯು ಭೋಕ್ತೃವ್ಯವಸ್ಥೋ ಜೇಡಿವತಿಥಿಗೆ ಸೇವ್ಯಭಿಕ್ಷವನಿತ್ಯುವುದು ನಡೆಯೆಂಬು ದಿಲ್ಲವಡೆ ಇಂದು ಕೊಲುವರೆ (ಬಸವ. ೩೩-೪೧) ; ವಿಪ್ರಾಳಿ ವಧೆಯಾತಂಗೆ ಬಂದುದು ಹೇಳಲದು ಭೋಕ್ತೃವ್ಯತಿಪಾತಕದ ಫಲವೆಂದ (ಶಬ್ದಾ ೪. ೧೭-೧೬). [ಸಂ.]

**ಭೋಕ್ತೃ** (ನಾ). ೧. ಅನುಭವಿಸುವವನು : ಭೋಗಿಸುವವನು : ಮಾಯೆ ತ್ರಿಪುಟಿಯ ರೂಪು ತ್ರಿಪುಟಿನಿಕಾಯಮೇ ಜಗಜ್ಜೀವಕರಣ ನಿಕಾಯವವು ತಿಳಿ ಭೋಗ ಭೋಗ್ಯವು ಭೋಕ್ತೃವೆನಿಸುವವು (ಅಮ್ಮ ಕ. ೪-೩); ಆತ್ಮವೆಂಬುದು ಶರೀರಕ್ಕಿಂತ ಭಿನ್ನವಾದುದು. ಅದು ಸಂಸಾರದಲ್ಲಿ ಕರ್ತೃವೂ ಭೋಕ್ತೃವೂ ಆಗಿರುತ್ತದೆ (ಜೀವಾತ್ಮ. ೧೭). ೨. ರಾಜ; ಅರಸ. ೩. ನಲ್ಲ : ಪ್ರಿಯಂಕರ. ೪. ಚೆನ್ನಾಗಿ ಸುಖವನ್ನು ಅನುಭವಿಸುವವನು : ಸುಖಿ : ಭೋಗಿ : ರವಿಜಂ . . . ಶನಿಗೇಹ ದೊಳ್ ನಿಲೆ ಪುಳಿಷ್ಟಂ ಭೋಕ್ತೃ ಸಸ್ವಂ ಧನಂ (ಜಾತಕ. ೧೭-೩೩). ೫. [ತತ್ತ್ವಶಾ]ರಜೋಗುಣದಿಂದ ಕೂಡಿದ ಚೇತನ : ಸ್ವಲ್ಪ ಸತ್ತ್ವ ಸಹಿತವಾದ ರಜೋಗುಣದ ರೂಪಕ್ಕೆ ಭೋಕ್ತೃ ಎಂದು ಹೆಸರು (ಛಾತತ್ತ್ವ. ೬೭೨): ಕೊಂಚ ಸತ್ತ್ವಗುಣ ಮತ್ತು ಹೆಚ್ಚು ರಜೋಗುಣಗಳಿಂದ ಕೂಡಿದ ಚೇತನವು ಭೋಕ್ತೃ ಅಥವಾ ಜೀವವೆನಿಸುವುದು (ಕೆತ್ರಿ. ೫೬). ೬. [ದ್ವೈತ] ವಿಷ್ಣು : ಜಯಾಪತಿಯಾದ ಸಂಕರ್ಷಣನು ಪಿತೃಗಳನ್ನು ಆವಾಹನ ಮಾಡಿರುವ ಬ್ರಾಹ್ಮಣರಲ್ಲಿದ್ದು ಶ್ರಾದ್ಧಾನ್ನವನ್ನು ಭುಂಜಿಸಿ, ಭೋಕ್ತೃ ಎನಿಸುವನು (ಹರಿಕ. ೧೪-೧ ತಾತ್ಪರ್ಯ). [ ಸಂ. ]

**ಭೋಕ್ತೃತ್ವ** (ನಾ). ಅನುಭವಿಸುವ ಸಾಮರ್ಥ್ಯ : ಆತ್ಮವಸ್ತುಗಳಿಗೆ ಚೇತನತ್ವ ಜ್ಞಾತೃತ್ವ ಕರ್ತೃತ್ವ ಭೋಕ್ತೃತ್ವ ಮೊದಲಾದ ವ್ಯವಹಾರ ಗಳಿರುವುವು (ಹಿಂದಸಾ. ೨೪೯); ಆತ್ಮನಿಗೆ ಸುಖದುಃಖ ಭೋಕ್ತೃತ್ವವು ಇಲ್ಲ ವಾದರೆ ಜಗದ್ವ್ಯಾಪಾರವು ಹೇಗೆ ಸಂಭವಿಸುವುದು ? (ತ್ರಿಸಪ. ೧೩). [ಸಂ.]

**ಭೋಗ** (ನಾ). ೧. ಉಣ್ಣುವುದು : ತಿನ್ನುವುದು. ೨. ಭೋಗಿಸು ವುದು : ಅನುಭವಿಸುವುದು. ೩. ಸುಖವನ್ನು ಅನುಭವಿಸು ವುದು.—ಹೊಂದುವುದು : ಸುಖಾನುಭವ : ಬೆರಸಿ ಯೋಗದೆ ದುಡಿವ ಭೋಗದೆ ಮೆರೆವನೇ ಸುಖಮನುಜನ್ಮ (ಕಬ್ಬ. ೪೦-೪) : ಪ್ರತಿ ಪುರುಷನೂ ಕ್ರಮಕ್ರಮವಾಗಿ ಭೋಗದಿಂದ ವಿರಕ್ತನಾಗಿ ಮೋಕ್ಷವನ್ನು ಪಡೆಯುವುದಕ್ಕಾಗಿಯೇ ಪ್ರಕೃತಿಯ ವ್ಯಾಪಾರವು (ಹಿಂದಸಾ. ೬೩). ೪. ಪೂರ್ವಜನ್ಮದಲ್ಲಿ ಮಾಡಿದ ಪುಣ್ಯ ಅಥವಾ ಪಾಪದ ಪರಿಣಾಮ ; ಕರ್ಮಫಲ : ಹುಟ್ಟಿದ ಬಳಿಕ ಕೊಟ್ಟ ಭೋಗಂಗಳ ತಪ್ಪಿಸಿಹೆನೆಂದರೆ ತಪ್ಪದು ನೋಡಯ್ಯಾ (ಬಸವ. ೬೮೮) ; ಹಿಂದೆ ಮಾಡಿದ ಕರ್ಮವೆಂದಿಗೂ ಬೆಂಬಿಡದು ಬಂದ ಭೋಗವನು ತಿಂದು ತೀರಲೆ ಬೇಕು ನೊಂದೆನೆನಬೇಡ (ಸರ್ವಜ್ಞ. ೮೬೯). ೫. ಸೌಖ್ಯ ; ಸುಖ : ಹಿಂದಣ ಜನನವೇನಾದೊಡಾಗಲಿ ಇಂದಿನ ಭೋಗವು ಕಯ್ಯ ಮೇಲೆ (ಬಸವ. ೦೭೦): ಶಿವನ ಭೋಗಂ ರಾಗದಿಂದೆ ಬಳೆವಂದದಿಂ ಭವನ ಭಾಗ್ಯಂ ಮೂರ್ತಿಗೊಂಡು ಬಳೆವಂದದಿಂ (ಸುಬಸ. ೦-೦೧೬). ೬. ಸುಖವನ್ನುಂಟುಮಾಡುವ ವಸ್ತು. —ಸಾಮಗ್ರಿ : ಅಮರಾಧಿಪಪ್ರಹಿತಸುರತರುಪ್ರಸೂನಗ್ರಥಿತ . . . ಸುರಭಿವಿಲೇಪನಪ್ರಮುಖಭೋಗೋಪಭೋಗಂಗಳೊಳ್ (ಆದಿಪು. ೮-೩೮): ರಾಜ್ಯದಿನೇಂ. ಭಾಗ್ಯದಿನೇಂ ? ಆನೊಲ್ಲೆನೀ ಕ್ಷಣಭಂಗುರದ ಭೋಗಂಗಳಂ (ರಾಮಾಶ್ವ. ೬೨-೨೦). ೭. ಧನ: ಸಂಪತ್ತು. ೮. ದೇವಾಲಯದಲ್ಲಿ ದೇವತಾಮೂರ್ತಿಗೆ ಮಾಡಿಸುವ ಸ್ನಾನ, ಗಂಧಲೇಪನ ಮುಂತಾದ ಸೇವೆ. —ಉಪಚಾರ : ನಗರೇಶ್ವರದೇವರ ಭೋಗಕ್ಕಂ ಖಣ್ಡಸ್ಫುಟಿತಕ್ಕಂ . . . ಧಾರಾಪೂರ್ವಕಂ ಮಾಡಿಬಿಟ್ಟ ನೆಲಂ (ಎಕ. XX, ೨೦-೩೩ : 1019) ; ಸಿದ್ಧಾಯದಲು ಸ್ವಯಂಭುದೇವರ ಭೋಗಕ್ಕೆ ವರ್ಷಂಪ್ರತಿ ಕುಡುವ ಗದ್ಯಾಣ ಹತ್ತು (ಎಕ. XX, ೬೦-೫೬: 1109) ; ವಿಗ್ರಹದ ದೇಹಕ್ಕೆ ಸಲ್ಲುವ ಭೋಗ ಎಂದರೆ ಸ್ನಾನ, ಗಂಧಲೇಪನ, ಧೂಪ, ದೀಪ, ಪುಷ್ಪ ಇತ್ಯಾದಿಗಳು ಅಂಗಭೋಗಗಳು (ಕಶಾಅ. ೦೮೦). 'ಅಂಗಭೋಗ', 'ರಂಗಭೋಗ' ಪರಾ. ೯. ಹಾವಿನ(ಬಿಚ್ಚಿದ) ಹೆಡೆ: ಶ್ರೀಮನ್ನಾಗೇಂದ್ರ ಭೋಗಸ್ಫುರದರುಣಮಣಿದ್ಯೋತಿಸಂಧ್ಯಾನುಬದ್ಧಪ್ರೇಮಂ (ಕಾದಂಪೂ.೧); ಮೆರೆವಳು ಕೈಕೆ ಮುಂಥರೆಯು ತೊಡೆಯಲ್ಲಿ ಕಾಳಾಹಿಭೋಗದಲಿ ಹೊಳೆವ ಹೆಡೆಮಣಿಯಂತೆ (ಶ್ರೀರಾಮಪ. ೨೩-೬೦೭). ೧೦. ಹಾವಿನ ಶರೀರ, ದೇಹ : "ಭೋಗವೆಂಬುದು ಹಾವಿನ ಒಡಲ್" (ಶಬ್ದಮ. ೦೦೭-೨೦). ೧೧. ವಿಷಯಸುಖಾನುಭವ: ಸಂಭೋಗ : 'ಭೋಗಿಸು' ಪರಾ. ೧೨. ಸೂಳೆಗೆ ಕೊಡುವ ಹಣ : ಒತ್ತೆ. ೧೩. ನಾಡಿನ ಒಂದು ಭಾಗ, — ಪ್ರದೇಶ : ಮಂಡಲ : 'ಭೋಗನಾಯಕ' ಪರಾ. ೧೪. ರಕ್ಷಣೆ : ಪಾಲನೆ. ೧೫. ಚಿಂತೆಯಿಲ್ಲದಿರುವಿಕೆ: ನಿಶ್ಚಿಂತೆ. ೧೬. ಸೈನ್ಯ: ಪಡೆ : ಪರಿವಾರ : "ನಿರ್ವ್ಯಸನದೊಳು ಪಾಲನೆಯೊಳು ಧನದೊಳಹಿಕಾಯದೊಳ್ ವ್ಯವಹಾರದೊಳ್ ಪಣ್ಯವನಿತೆಯೊಳ್ಪಡೆಯೊಳತಿ ಸುಖದೊಳಂ ಭೋಗವುಕ್ಕು" (ಮಂಗರಾ. ೦೫೦-೫೦). ೧೭. ಜಹಗೀರು : ಉಂಬಳಿ. ೧೮. ತೆರಿಗೆ ; ಕರ. ೧೯. ಬೆಳೆಯಿಂದಾದ ಗಳಿಕೆ: ಅಚಕಟನ ಗದೆಯಾಸಂ ಬೆಳೆದ ಭೋಗ ನಾಲ್ಕು ಭೋಗಮಾನ್ಯವಾಗಿ (ಎಕ. ೦೯೩೪, ಕುಂಗವರು. ೧೫೬-೯: 1419). ೨೦. =ಭೋಗಷಟ್ಪದಿ: ಶರ ಕುಸುಮ ಭೋಗ ಭಾಮಿನಿ ಪರಿವರ್ಧಿನಿ ವಾರ್ಧಕಗಳೆಂದಾಚು ತೆಱಂ (ಛಂದೋಂಬು. ೫-೨೫೯); ಇದು ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ ಎಂದಾರು ವಿಧವು (ಕೃಬಿ೩. ೯೫). ೨೧. [ದ್ವೈತ] ಮುಕ್ತಿಯ ಭೇದಗಳಲ್ಲಿ ಒಂದು : ಸಾರೂಪ್ಯಪ್ರಾಪ್ತಿ : ಈ ಪುರುಷಾರ್ಥವನ್ನು ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂದು ವಿಂಗಡಿಸಿ . . . ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಸಾರೂಪ್ಯ ಪ್ರಭೇದ ದಿಂದ ನಿರೂಪಿಸಿರುವರು (ಭಾರದ. ೨೭೬); ಇದರಿಂದ ಬರುವ ಮೋಕ್ಷ ಕರ್ಮ ಕ್ಷಯ . . . ಭೋಗ ಎಂದು ನಾಲ್ಕು ಪರ್ವಗಳುಳ್ಳದ್ದು (ಹಿಂದಸಾ. ೨೯೨).

**ಭೋಗದ ಸೂಳೆ** = ದೇವಾಲಯದಲ್ಲಿ ನಾಟ್ಯವಾಡಲು ನಿಯಮಿತ ಳಾಗಿರುವ ಸೂಳೆ ; ದೇವದಾಸಿ : ಭೋಗದ ಸೂಳೆಯಾಗ್ಗೆ ಸರ್ವ್ವಬಾಧಾಪರಿಹಾರವಾಗೆ ಬಿಟ್ಟ ಮನೆ ಪನ್ನೆರಡು (ಎಕ. XX, ೩೫-೦೨ ; 1055). [ಸಂ.]

**ಭೋಗಕ್ಷಿತಿ** (ನಾ). = ಭೋಗಭೂಮಿ ೩ : ಹುಸಿ ಹುಸಿವಾವುದು ಮಾಲುಲವಸುಂಧರಾಪಿ ಕ್ರೂರಸತ್ತ್ವಬಾಧೆಗಳಿವು ವರ್ತಿಸವೆನೆ ಭೋಗಕ್ಷಿತಿಗಳೆ ನಿಸವಂ ಸಗ್ಗಕ್ಕಮಗ್ಗಳಂ ತಾಮಲ್ತೇ (ಜಂದ್ರಪ್ರ. ೩-೩೩). [ಸಂ.]

**ಭೋಗಚೌಪದಿ** (ನಾ). [ಛಂದ] ಭೋಗಷಟ್ಪದಿಯನ್ನು ನಾಲ್ಕು ಪಾದ ಗಳಲ್ಲಿ ಅಳವಡಿಸುವ ಆಧುನಿಕ ಪದ್ಯಭೇದ: P ಇದರಲ್ಲಿ ಒಂದು ಮತ್ತು ಮೂರನೆಯ ಸಾಲುಗಳಲ್ಲಿ ೨೪ ಮಾತ್ರೆಗಳೂ ಎರಡು ಮತ್ತು ನಾಲ್ಕನೆಯ ಸಾಲುಗಳಲ್ಲಿ ೧೯ ಮಾತ್ರೆಗಳೂ ಇರುತ್ತವೆ : ಭೋಗಚೌಪದಿ : ಭೋಗಷಟ್ಪದಿಯನ್ನು ನಾಲ್ಕು ಪಾದಗಳಲ್ಲಿ ಏರ್ಪಡಿಸಿದ ರೂಪವಿದು (ಛಂದೋಲ. ೨೬೦). [ಭೋಗ + ಚೌಪದಿ]

**ಭೋಗತಲ್ಪ** (ನಾ). ಹಾವಿನ ಹಾಸುಗೆ : ಶೇಷಶಯ್ಯೆ : ಆ ಗರುವೆ ಮೊಕ್ಕಳು ಮಹಾಹಿಯ ಭೋಗತಲ್ಪದ ಹರಿಯೊಲಿಪ ಶತಮಾಗಸುತನನು ಕಂಡಳಂಗನೆ ಮಣಿಯ ಮಂಚವಲಿ (ಶಬ್ದಾ ೮. ೮-೦೪). [ಸಂ.]

**ಭೋಗತೃಷ್ಣೆ** (ನಾ). ಸುಖವನ್ನು ಅನುಭವಿಸಬೇಕೆಂಬ ಉತ್ಕಟೇಚ್ಛೆ : ತನ್ನ ಭೋಗತೃಷ್ಣೆಯಂ ತಾನೆ ತನ್ನ ಮನದೊಳ್ ನಿಂದಿಸುತ್ತುಂ (ಆದಿಪು. ೦೬-೬೦ ವ). [ಸಂ. ಭೋಗತೃಷ್ಣಾ]

**ಭೋಗನಾಯಕ** (ನಾ). ಪ್ರದೇಶಪಾಲಕ; ಮಂಡಲಾಧಿಪ : ಭೋಗಿಗಳ್ ಭೋಗಿಗಳೆಂಬ ಭೋಗಿಗಳ್ ಭೋಗಿಗಳಲ್ಲಿಯು ಭೋಗನಾಯಕರ್ (ಶಂಶ್ವಾ. ೪-೧೬). [ಸಂ.]

**ಭೋಗಪಟ್ಟ** (ನಾ). ಆಸ್ತಿಯನ್ನು ಅನುಭವಿಸುವ ಹಕ್ಕಿಗಾಗಿ ಬರೆದು ಕೊಡುವ ಪತ್ರ : ಆ ಬಳಚೋಡಿನ ಜೋಯಿಸರಿಗೆ ಮಕ್ಕಳಿಲ್ಲದ್ದರಿಂದ ಈ ನಾಯಕರ ಹತ್ತಿರವಿದ್ದ ಇಬ್ಬರು ಪೂಜಾರಿಗಳ ಹುಡುಗರನ್ನು ಭೋಗ ಪಟ್ಟ ಬರಿಸಿಕೊಟ್ಟು ತಮ್ಮ ತರುವಾಯಕ್ಕಾಗಿ ನಿಯಮಿಸಿಕೊಂಡರು (ಕೆಂಕ. ೦೦೭). [ಭೋಗ + ಪಟ್ಟ$_2$]

**ಭೋಗಪಟ್ಟೆ** (ನಾ). = ಭೋಗಪಟ್ಟ : ಬಳಚೋಡುಸ್ಥಳದ ಪಂಚಾಂಗದ ಜೋಯಿಸರು ನಷ್ಟಸಂತಾನರಾಗಿದ್ದದರಿಂದ . . . ಈ ಕರಿಜೋಯಿಸ ವಿರೂಪಾಕ್ಷಜೋಯಿಸರಿಗೆ ಭೋಗಪಟ್ಟೆ ಬರಸಿಕೊಟ್ಟು ಅವರನ್ನು ಸ್ಥಳಕ್ಕೆ ಜೋಯಿಸರನ್ನಾಗಿ ನೇಮಿಸಿದರು (ಇಕ್ಕೇಶಾ. ೪). [ಭೋಗ + ಪಟ್ಟ$_3$]

**ಭೋಗಪಾತ್ರ** (ನಾ). ದೇವಾಲಯದ ರಂಗಭೋಗದಲ್ಲಿ ನಡೆಸುವ ನಾಟ್ಯದ ಸೇವೆ : ಸೂಚಿಯಿಪ್ಪತಒಂದು ಹೊಸನೂ ಕಾಲಕಾಲಕ್ಕೆ ಯೆತ್ತಿಕೊಂಡು ಯೆರಡುಹೊತಿನ ಭೋಗಪಾತ್ರದ ಊಳಿಗವನೂ ನಡೆಸಿಕೊಂಡು ಬಹಿರಿ (ಸೌಇಇ. IX-ii, ೪೫೬-೦೩; 1451). [ಸಂ.]

**ಭೋಗಬ್ರಹ್ಮವ್ರತ** (ನಾ). [ಜೈನ] ಒಂದು ಬಗೆಯ ವ್ರತ; P ಬ್ರಹ್ಮಚರ್ಯವಲ್ಲಿದ್ದಾಗ ಮೂಗು, ಕಣ್ಣು, ಕಿವಿ ಎಂಬ ಭೋಗೇಂದ್ರಿಯಗಳಿಂದ ಗಂಧ, ರೂಪ, ಶಬ್ದಗಳ ಅನುಭವವನ್ನು ಮಾತ್ರ ಮಾಡತಕ್ಕುದು; ಗೃಹಸ್ಥಾಶ್ರಮಕ್ಕೆ ಬಂದ ಮೇಲೆ ಕಾಮಬ್ರಹ್ಮವ್ರತ ಅಂದರೆ ರಸ, ಸ್ಪರ್ಶ ಇವುಗಳನ್ನು ಅನುಭವಿಸತಕ್ಕುದು : ಭೋಗಬ್ರಹ್ಮವ್ರತಮಂ ಪತ್ತುವಿಟ್ಟು ಕಾಮಬ್ರಹ್ಮವ್ರತಮನುತ್ತರಕ್ರಿಯೆಯರ್ಪಿನೆಗಂ ನಡಯಿಸುವುದು ವ್ರತಾವತರಣಕ್ರಿಯೆ (ಚಾವುಂಪು. ೨೦೩). 'ಕಾಮಬ್ರಹ್ಮವ್ರತ' ಪರಾ. [ಸಂ.]

**ಭೋಗಭಾಗ್ಯ** (ನಾ). ಸುಖಕೊಡುವ ಸಂಪತ್ತು: ಸುಖವನ್ನು ಅನುಭವಿಸಲು ಸಾಧಕವಾದ ಐಶ್ವರ್ಯ : ಭೋಗಭಾಗ್ಯವ ಬಯಸಿ ಮುಕ್ತಿಯ ನೀಗಿ ನಿಮ್ಮನು ಭಜಿಸಲಱಿಯದ ಯೋಗಿಗಳ ಮಾತೇನು (ಹಂಶಾ. ೦೭): ನಾನು ರಾಜನಾದಾಗ ನನ್ನ ರಾಜ್ಯವನ್ನೂ ಅದರ ಸಮಸ್ತ ಭೋಗಭಾಗ್ಯಗಳನ್ನೂ ಮಿತ್ರನಾದ ನಿನ್ನೊಡನೆ ಹಂಚಿಕೊಂಡು ಅನುಭವಿಸುತ್ತೇನೆ (ವಚಶಾ. ೦೮). [ಸಂ.]

**ಭೋಗಭೂತಲ** (ನಾ). = ಭೋಗಭೂಮಿ ೩ : ತನ್ನೊಳ್ ಸರಿದೊರೆ ಸುರರೇಂ ಭೋಗಭೂತಲಂ ಸುಖಮಯಮೋ (ಶಂದ್ರಪು. ೩-೩೭). [ಸಂ.]

**ಭೋಗಭೂಮಿ** (ನಾ). ೧. ಭೂಲೋಕದಲ್ಲಿ ಹುಟ್ಟಿ ಪುಣ್ಯವಂತನಾಗಿ ಬಾಳಿ, ಸತ್ತ ಮೇಲೆ ಪುಣ್ಯಫಲಗಳನ್ನು ಅನುಭವಿಸುವುದಕ್ಕಾಗಿ ಇರುವುದೆಂದು ನಂಬಲಾದ ಲೋಕ : ಸ್ವರ್ಗಲೋಕ; ಊರ್ಧ್ವಲೋಕ. ೨. ವ್ಯವಸಾಯಕ್ಕೆ ಉತ್ತಮವಾದ ಭೂಮಿ : ಫಲವತ್ತಾದ ಭೂಮಿ : ಸುಕ್ಷೇತ್ರ : ಚಾವುಣ್ಣಸೆಟ್ಟಿಯರು ಕಾರಿಗಾವುಣ್ಣನ ಕಯ್ಯೊಳು ಮತ್ತಂ ಭೋಗಭೂಮಿಯಂ ಪೊನ್ನಂ ಕೊಟ್ಟು ಮಾಱಿಕೊಂಡು ಆ ತೋಟಮಂ ಮಾಡಿಸಿ (ಸೌಇಇ. XI-ii, ೦೫೮-೩೭; 1109). ೩. [ಜೈನ] ಭೂಮಿಯ ಮೇಲೆಯೋ ಇರುವುದೆಂದು ಹೇಳಲಾದ, ಪುಣ್ಯವಂತರು ಹುಟ್ಟುವ ಪ್ರದೇಶ; ಭೂಮಿಯಲ್ಲಿ ಅತ್ಯಂತ ಸಂತೋಷವನ್ನು ಪಡೆಯುವ ಸ್ಥಳ : P ಇಲ್ಲಿ ಕೇಳಿದುದನ್ನು ಕೊಡುವ ಹತ್ತುಬಗೆಯ ಕಲ್ಪವೃಕ್ಷಗಳಿದ್ದು, ಈ ಭೂಮಿಯಲ್ಲಿ ಊರು, ನಗರ, ಮನೆ, ಇತ್ಯಾದಿ ಯಾವುದೂ ಇರುವುದಿಲ್ಲ. ಒಂದು ಸಂಸಾರದಲ್ಲಿ ಗಂಡ ಹೆಂಡಿರು ಮಾತ್ರ ಇದ್ದು ಪೂರ್ವಜನ್ಮದ ಪುಣ್ಯಫಲವನ್ನು ಅನುಭವಿಸಿ, ಸತ್ತ ಮೇಲೆ ಸ್ವರ್ಗಕ್ಕೆ ಹೋಗುತ್ತಾರೆ. ಇಲ್ಲಿ ರೋಗ ರುಜಿನಗಳಿರುವುದಿಲ್ಲ ಎಂದು ನಂಬಲಾಗಿದೆ : ಪುಣ್ಯಫಲದಿಂದಲೂ ಜಂಬೂದ್ವೀಪದ ಮಂದರಮಹೀಧರದುತ್ತರದಿಗ್ಭಾಗದೊಳಿರ್ದುತ್ತರಕುರುವೆಂಬುತ್ತಮಭೋಗಭೂಮಿಯೆ ಜನ್ಮಭೂಮಿಯಾದುದು (ಆದಿಪು. ೫-೨೬ ವ) : ಈ ಭರತಾವನಿಭೋಗಭೂಮಿ ಭೂಭಾಗಿ ಸುಖಾತ್ತಿಯಂ ಪಡೆದುದು (ಶಾಂತಿಪು. ೦೨-೨೪). [ಸಂ.]

**ಭೋಗಮಂಟಪ** (ನಾ). ಉತ್ಸವಮೂರ್ತಿಗೆ ಅಲಂಕಾರ, ಕಲ್ಯಾಣೋತ್ಸವ, ಶಯನೋತ್ಸವ ಮೊದಲಾದುವನ್ನು ಮಾಡುವ ದೇವಾಲಯದ ಕಟ್ಟಡ : ಕಲ್ಯಾಣಮಂಟಪ: ಸೋಮವಾರ ದಿನ ಕಲ್ಲೂರ ಕಲ್ಲಯ್ಯದೇವರ ಭೋಗಮಂಟಪ ಆಯಿತು (ಬಾಕಕ. ೪೪-೩೮). [< ಸಂ. ಭೋಗಮಂಡಪ]

**ಭೋಗಮಾನ್ಯ** (ನಾ). ಮಾನ್ಯವಾಗಿ ಕೊಡುವ (ತೆರಿಗೆ ವಿನಾಯಿತಿ ಪಡೆದ) ಭೂಮಿ : ಅಚಕಟನ ಗದೆಯನಂ ಬೆಳೆದ ಭೋಗ ನಾಲ್ಕು ಭೋಗಮಾನ್ಯವಾಗಿ (ಸೌಇಇ. ೦೯೩೪. ಕ್ರಂಗನೂರು. ೦೫೬-೯; 1419). [ಸಂ.]

**ಭೋಗಯುತ** (ನಾ). ೧. ಸುಖದಿಂದ ಕೂಡಿಕೊಂಡಿರುವವನು. ೨. ಆದಿಶೇಷನ ದೇಹದ ಮೇಲೆ ಮಲಗಿರುವವನು. ೧-೨ : ಧರಧಾರಕನೆಂಬ ಭೋಗಯುತನೆಂಬುದ್ಯದ್ವಲಾಸ್ತೀತನೆಂಬ . . . ವಿಷ್ಣುಭರೇಶಂ ಸಲೆ ವಿಷ್ಣುವೋಲು ಸೊಗಯ್ಪಂ ಲಕ್ಷ್ಮೀಮನೋವಲ್ಲಭಂ (ಎಕ. V, ಅರಸೀ. ೩೮-೭; ಸು. 1200). [ಸಂ.]

**ಭೋಗರತ್ನ** (ನಾ). ನಾಗರಹಾವಿನ ಹೆಡೆಯಲ್ಲಿರುವುದೆಂದು ಹೇಳಲಾಗುವ ಮಣಿ : ಹೆಡೆಮಣಿ: ವಿಶ್ವಂ ವಿಷವಹ್ನಿಯಿಂ ವಿಳಯಕಾಲಜ್ವಾಲೆಯಂ ಭೋಗರತ್ನದ ಚೆಲ್ವಿಂ ದ್ಯುತಿಮಾಲಿಯಂ ಮಸಕದಿಂದಂಭೋಳಿಯುಂ ಕಾಳಿಯುಂ (ಜಗದ. ೩-೮೪). [ಸಂ.]

**ಭೋಗರಾಜ** (ನಾ). ಹಾವುಗಳ ಒಡೆಯ : ಭೋಗರಾಜನ ನಗರದಂತನುವಾಗಿ ರಾಜಿಪ ನಗರವನು ಸುತ್ತಾಗಿ ಶೋಭಿಪ ಸಲಿಲಖಾತಿಯು ಮುಟ್ಟುತಿಹುದಡಿಯಾ (ಐಶ್ವಪು. ೨೦-೦೪). [ಸಂ. ಭೋಗರಾಜನ್]

**ಭೋಗವತಿ** (ನಾ). ೧. ಪಾತಾಳಲೋಕದ ರಾಜಧಾನಿ : ಅದು ಕೊಯ್ದುದಳಕೆಯುಳಕಮನದು ಮಿಕ್ಕುದು ಭೋಗವತಿಯ ಭೋಗಮಂ . . . ಎನಲ್ ವೀತಶೋಕಪುರವರಮೆಸೆಗುಂ (ಮಲ್ಲಿಪು. ೨-೩೨); ಮುತ್ತು ಪಚ್ಚೆ ಮುಂತಾದ ರಾಶಿಗಳಿಂದಲೂ ರಾಜಬೀದಿಯು ನೋಡಿಯದು ತೇಜೋವತಿಯೊ ಅಲ್ಲದೆ ಭೋಗವತಿಯೊಯೆಂದು ಸಂದೇಹಪಡುತ್ತ ಬರುತಿರುವ ಸುರಸುಂದರಿಯರಂ ನೋಡಿ (ಸೌಗಂಧಿ. ೫೦೯-೦೮). ೨. ಪಾತಾಳಲೋಕದ ನದಿ ; ಪಾತಾಳಗಂಗೆ : ವಿವಿಧೋಪಚಾರಕೃತ ಪೂಜೆಗಳ ನಾನಾವಿಭವದಿಂದೆಸೆವ ಮಹಾಹಾಟಕೇಶ್ವರನೆಂಬ ಶಿವಲಿಂಗಮಂ ಭೋಗವತಿಯ ತಟದೊಳ್ಕಂಡು ಪುಂಡರೀಕಂ ಮಣಿದನು (ಸ್ಕಂದಪು. ೨೪-೦೪). [ಸಂ. ಭೋಗವತೀ]

**ಭೋಗವಾಡಗೆ** (ನಾ). ಪರಕೀಯವಾದ ಮನೆ ಮೊದಲಾದುವನ್ನು ಅನುಭವಿಸಲು ಮಾಲೀಕನಿಗೆ ಕೊಡುವ ಪ್ರತಿಫಲರೂಪವಾದ ಶುಲ್ಕ: ಬಾಡಿಗೆ : ಮನೆವೊಂದು ಭೋಗವಾಡಗೆ ಗದ್ಯಾಣಂ ನಾಲ್ಕು (ಎಇ. XV, ೩೪೨-೩೦ ; 1072). [ಭೋಗ + ಬಾಡಗೆ]

**ಭೋಗಷಟ್ಪದಿ** (ನಾ). [ಛಂದ] ಕನ್ನಡಭಾಷೆಯಲ್ಲಿ ಪ್ರಸಿದ್ಧವಾದ ಷಟ್ಪದಿಗಳಲ್ಲಿ ಒಂದು : ಪೇಳ್ವ ಮೊದಲಿನೆರಡುಪದದೆ ಬೞಿಕ ಚರಣದೆರಡುಮೆಡೆಗೆ ಕಳೆಗಳರ್ಕಸಂಖ್ಯೆಯಾಱು ಮೂಜಣಂಘ್ರಿಗೆ ತಿಳಿಯಲಿರ್ಪತಿರ್ಪತಿಂತು ಕಳೆಗಳೆಂಬತೆಂಟಱಿಂದೆ ತೊಱವುದಾಗಲೊಡನೆ ಪಲನೆ ಭೋಗಷಟ್ಪದೀ (ಛಂದೋಂಬು. ೫-೨೩೪ ಅವತರ); ಮೂರುಮಾತ್ರೆಯ ಗಣವು ಒಂದೆರಡು ನಾಲ್ಕಯ್ದನೆಯ ಪಾದಗಳಲ್ಲಿ ನಾಲ್ಕುನಾಲ್ಕೂ, ಮೂರಾರನೆಯ ಪಾದಗಳಲ್ಲಿ ಆರಾರೂ ಒಂದು ಗುರುವೂ ಬರಲು ಭೋಗಷಟ್ಪದಿಯಾಗುವುದು (ಕೈಪಿಡಿ. ೯೩). [ಸಂ. ಭೋಗಷಟ್ಪದೀ]

**ಭೋಗಾಂಗ** (ನಾ). ೧. ಸುಖಾನುಭವಕ್ಕೆ ಬೇಕಾದ ಸಾಧನ : ಭೋಗಾಂಗವಾಗಿಯುಂ ಕೃಷ್ಣಾಗರುಧೂಪಂ ಮುಸುಂಕಿ ಕೊಂದಿಕ್ಕಿದುದಾ ಭೋಗಿಗಳಂ(ಆದಿಪು. ೫-೨೫). ೨. [ವೀಶೈ] ಅಂಗಸ್ಥಲದ ಮೂರು ಭೇದ ಗಳಲ್ಲಿ ಒಂದು ; ಜೀವನು ತನ್ನ ಭೋಗವನ್ನು ಮೊದಲು ಶಿವ ನಿಗರ್ಪಿಸಿ ನಂತರ ಅದನ್ನು ಪ್ರಸಾದರೂಪವಾಗಿ ಪರಿಗ್ರಹಿಸುವುದು: ಯೋಗಾಂಗ ಶಾನೆ ಕಾರಣತನುವೆನಿಪ್ಪುದಾ ಭೋಗಾಂಗವೇ ಸೂಕ್ಷ್ಮತನು ವಾಚಕಂ ಮಹಾತ್ಯಾಗಾಂಗವೇ ಸ್ಥೂಲತನುವೆನಿಸಿ ವಿವಿಧಭೇದದೊಳಿಪ್ಪು ದಂಗತ್ರಯಂ (ಅನಿತಂ. ೫೦-೪) ; ಇನ್ನು ನ್ಯೂನಭಾವವನ್ನು ಹೊಂದಿದ ಅಂಗಸ್ಥಲವು (ಶುದ್ಧಜೀವನು) ಯೋಗಾಂಗ, ಭೋಗಾಂಗ, ತ್ಯಾಗಾಂಗ ವೆಂದು ಮೂರುವಿಧವಾಯಿತು (ಶಾರದ. ೨೫೪). 'ತ್ಯಾಗಾಂಗ'. ಪರಾ. ೩. ತನ್ನ ಭೋಗವನ್ನು ಮೊದಲು ಶಿವನಿಗರ್ಪಿಸಿ ನಂತರ ಅವನ್ನು ಪ್ರಸಾದರೂಪವಾಗಿ ಪರಿಗ್ರಹಿಸುವ ಜೀವ : ಉದ್ಯಾಪನ ವ್ಯಾಪಾರ ಕೃತಭೇದ ಸರ್ವವನಱಿದು ತ್ಯಾಗಾಂಗನಾಗಿ ಭೋಗಾಂಗನಾಗಿ ಯೋಗಾಂಗ ನಾಗಿ . . . ಆತನ ಲಿಂಗವೇ ಅಂಗವಾದ ಕಾರಣ ಪೃಥಕ್ ಎಂಬುದಿಲ್ಲ (ವೀರಶೈವ. ೯೬-೧೯೦). [ಸಂ.]

**ಭೋಗಾಂಗಿ** (ನಾ). =ಭೋಗಾಂಗ ೩ : ಜಂಗಮಲಿಂಗದ ಎಚ್ಚಱಿನ ಬಲದಿಂದ . . . ಲಿಂಗಭೋಗೋಪಭೋಗಿಯಾಗಿ ಭೋಗಾಂಗಿಯಾದೆ (ಶಿವಶ. ೪೯-೩೨); ಭೋಗಾಂಗಿಯಾಗಿ ತನ್ನ ಭೋಗವೆಲ್ಲವನ್ನೂ ಶಿವನಿಗರ್ಪಿಸಿ ಶಿವಪ್ರಸಾದರೂಪದಿಂದ ಸ್ವೀಕರಿಸುವನು (ಶಾರದ. ೨೦೬).
[ಸಂ. ಭೋಗಾಂಗಿನ್]

**ಭೋಗಾಂತರಾಯ** (ನಾ). [ಜೈನ] ಮೋಕ್ಷಸಾಧಕನಿಗೆ ಸಾಧನ ಮಾರ್ಗದಲ್ಲಿ ಉಂಟಾಗುವ ಐದುಬಗೆಯ ವಿಘ್ನಗಳಲ್ಲಿ ಒಂದು : ಸುಖಾನುಭವಕ್ಕೆ ವಿಘ್ನವನ್ನುಂಟುಮಾಡುವ ಕರ್ಮ : ಭೋಗಾಂತ ರಾಯ : ಭೋಗದ ಇಚ್ಛೆ ಸಾಧನಗಳೆಲ್ಲ ಇದ್ದೂ ಭೋಗಿಸಗೊಡದ ಕರ್ಮಪ್ರಕೃತಿ (ಜೈನಸ. ೪೭೭). 'ಅಂತರಾಯಪಂಚಕ' ಪರಾ. [ಸಂ.]

**ಭೋಗಾಧಿ** (ನಾ). ಒಬ್ಬನಿಗೆ ಸೇರಿದ ಆಸ್ತಿಯನ್ನು ಮತ್ತೊಬ್ಬನಿಗೆ ಅನುಭವಿಸಲು ಕೊಡುವಿಕೆ; ಭೋಗ್ಯ; ಒತ್ತೆ; ಅಡವು.

**ಭೋಗಾಧಿಯ ಪತ್ರ** = ಆಸ್ತಿಯನ್ನು ಭೋಗ್ಯಮಾಡಿರುವ ಬಗ್ಗೆ ಬರೆದುಕೊಡುವ ದಾಖಲೆಪತ್ರ : ಭೋಗ್ಯಪತ್ರ : ಭೂಮಿಯ ಭೋಗಾಧಿಯ ಪತ್ರದ ಕ್ರಮ (ಎಕ. VI, ಕಡೂ. ೫೮-೪; 1592 ?) [ಸಂ.]

**ಭೋಗಾಭೋಗ** (ನಾ). ಭೋಗಸಾಮಗ್ರಿಗಳಿಂದ ದೊರಕುವ ಸುಖಾನುಭವ : ವಿದ್ಯುತ್ ಕ್ಷಣಿಕಂ ನಿಚ್ಚಿಯೆ ತನುಭೃದ್ಗಣಯೌವನ ರೂಪವಿಭವಭೋಗಾಭೋಗಂ (ಆದಿಪು. ೪-೭೫). [ಸಂ.]

**ಭೋಗಾರುಹ** (ನಾ). ಸುಖಕ್ಕೆ ಯೋಗ್ಯವಾದುದು : ನಗರದ ಸುತ್ತ ಹೊಱವಳಯದಲಿ ಕಾಣಿಸಿ ಕತ್ತಲಿಸುವ ಸಮಸ್ತಭೋಗಾರುಹದ ತರುಲತೆಯ . . . ಉದ್ಯಾನವನು ಪ್ರಭು ಕಂಡ (ಪ್ರಭುಲಿ. ೦೪-೮).
[<ಸಂ. ಭೋಗಾರ್ಹ]

**ಭೋಗಾವತಿ** (ನಾ). ೧. ಪಾತಾಳಲೋಕದ ರಾಜಧಾನಿ: ಭೋಗವತಿ: ಬಸುಭೋಗಿಗಳುಳ್ಳೊಡೇಂ ಫಲಂ ವಿಷಧರನಿವಾಸಮಾ ಭೋಗಾವತೀಪುರಂ (ಶಾಂತಿ.೧೧-೪೬). ೨. ಲಕ್ಷ್ಮಿ. ೩. ಪಾತಾಳಲೋಕದ ನದಿ : ಪಾತಾಳ ಗಂಗೆ : "ನಗರಂ ೩೦ ಪಾತಾಳಂ ನದಿ ನಾಲ್ಕುಱ್ ಭೋಗಾವತಿಯ ನಾಮಮೆನಿಕುಂ ಜಗದೊಳ್" (ನಾನಾಳಂ. ೫೯); "ರಮೆ ಪಾತಾಳತರಂಗಿಣಿ ನಗರಮುಂ ಭೋಗಾವತೀವಾಚಕಂ" (ನಾನಾರ. ೨೩).
[<ಸಂ. ಭೋಗವತೀ]

**ಭೋಗಿ**$_1$ (ನಾ). ೧. ಮಕರಸಂಕ್ರಾಂತಿಯ ಹಿಂದಿನ ದಿನ (ಕೆಲವು ಕಡೆ) ಆಚರಿಸುವ ಒಂದು ಹಬ್ಬ: ಮಕರಸಂಕ್ರಮಣ ಎರಡುದಿವಸಗಳ ಹಬ್ಬ: ಭೋಗಿ, ಸಂಕ್ರಮಣ. ಭೋಗಿಹಬ್ಬದ ಆಚರಣೆ ಉಪವಾಸವ್ರತಕ್ಕೆ ಸಮಾಪವಾದುದೆಂದು ಹೇಳಬಹುದು . . . ಭೋಗಿ ಪೊಂಗಲ ಪ್ರಥಮ ದಿವಸದ ಹಬ್ಬ (ಕಾಪಬ್ಬ. ೦೬೭). ೨. ನರಕಚತುರ್ದಶಿಯ ಹಿಂದಿನ ದಿನದ ಹಬ್ಬ : ಮಗಳು, ಅಳಿಯ ಭೋಗಿಹಬ್ಬದಂದು ಊರಿಗೆ ಬಂದರು (ರೂಢಿ). [←ತಮಿ. ಪೋಕಿ./ಮರಾ. ಭೋಗೀ]

**ಭೋಗಿ**$_2$ (ಗು). ೧. ತಿನ್ನುವ: ಉಣ್ಣುವ. ೨. ಸಹಿಸುವ ; ತಾಳುವ. ೩. ಉಪಯೋಗಿಸುವ ; ಬಳಸುವ. ೪. ಉಪಭೋಗಿಸುವ; ಅನುಭವಿಸುವ. ೫. ಇಂದ್ರಿಯಸುಖಲೋಲುಪನಾದ ; ಇಂದ್ರಿಯ ಸುಖಪರವಶನಾದ. ೬. ಸಂಪತ್ತಿನಿಂದ ಕೂಡಿದ; ಐಶ್ವರ್ಯವುಳ್ಳ. (ನಾ). ೭. ಸುಖವನ್ನು ಅನುಭವಿಸುವವನು ; ವಿಲಾಸಿ: ನಾಗಕನ್ನೆಯರ ರೂಪುಗಳಿಟ್ಟಳಮಾಗೆ ಭೋಗಿಗಳ್ ಭೋಗಿಗಳ್ (ಶಾಂತಿಪು. ೪-೦೬); ಜಲದೊಳ್ ಪುಟ್ಟಿದ ವಸ್ತುವಿಂ ಪೆಱರ ಪೊನ್ನಿಂ ಭೋಗಿ . . . ಎನಿಕುಂ ವಿನಾಶಾಲಯಪ್ರೋಕ್ತವಂ (ಶಾಂತಿ. ೦೬-೦೨); ಭೋಗಿಗೆ ಲೋಭಿಗೆ ಯೋಗಿ ತ್ಯಾಗಂ ಹಿತಮಾಗದೆಂದು ನುಡಿದಂ ಭೂಪಂ (ಹರಿಶ್ಚಂ. ೨-೫). ೮. ಜಿಡಗಿ : ವಿಲಾಸವತಿ : ನಡೆತಂದರ್ ಸಂತಸದೆ ಪೊನ್ನ ಕಳಸದ ದಂತದ ಸಿವಿಗೆಗಳನೇಱ್ ಭೋಗಿಪುರರೆಪುರ್ (ಶಾಂತಿಪು. ೯-೧೦೦); ವಾಚ್ಯ ಲಿಂಗಮೆಂದು ವಿಶೇಷ್ಯಾಧೀನಲಿಂಗಕ್ಕೆ–ನೇರಿದನಿವಂ, ನೇರಿದಳಿವಳ್, ನೇರಿತ್ತಿದು . . . ಭೋಗಿ, ಸುಖಿ, ಹೇಡಿ, ಕಲಿ, ಗುರು, ಲಘು – ಇವು ತೆಱದೆ ಸಲ್ವುವು (ಶಮದ. ೬೬ ಪ್ರಯೋ). ೯. ಹಾವು : ಸರ್ಪ : "ವಿಷಧರಃ . . . ನಾಗಃ, ಭೋಗೀ, ಅಹಿಃ . . . ಭುಜಂಗಮಃ -- ಈ ೨೫ ಹಾವಿನ ಪೆಸರ್" (ಹಲಾಯು. ೦೦೫-೦೮); ನಾಗರ ನಾಗಕನ್ನೆಯರ ರೂಪುಗಳಿಟ್ಟಳ ಮಾಗೆ ಭೋಗಿಗಳ್ ಭೋಗಿಗಳೆಂಬ ಭೋಗಿಗಳ್ ಭೋಗಿಗಳಲ್ಲಿಯ ಭೋಗ ನಾಯಕರ್ (ಶಾಂತಿಪು. ೪-೦೬); ಭೋಗಿಕುಲ ಪಾತಾಳಕೆ ಪೋಗಲು (ಗುರುಪಾ. ೦-೩೦). ೭, ೯ : ಇದು ನೋಡ ನಾಗಲೋಕದವೊಲನಂತಭೋಗಿಜನ ಸೇವಿತಂ (ಎಕ. VIII. ೪೦; 1112; ಶಾಸಮಂ-೨೦೫ ನೋ); ಭೋಗಿಯಾಗಿಯುಂ ಪ್ರವಿಗತವಕ್ರಮಾರ್ಗಂ . . . ಆ[ದನಾ] ನೃಪಂ (ಕುಸುಮಾ. ೦೩-೭) ; ನಾಡಿಗರೊಳೆಲ್ಲರುಂ ಭೋಗಿಗಳ್ ಕುಟಿಲಗಾಮಿಗಳಲ್ತು (ರಾಮಾಶ್ವ. ೭-೨೨). ೧೦. ಕಾಮುಕ ; ವಿಷಯಾಸಕ್ತ. ೧೧. ದೊರೆ ; ರಾಜ. ೧೨. ಹಳ್ಳಿಯ ಮುಖಂಡ ; ಗ್ರಾಮಾಧಿಪತಿ. ೧೩. ಜಹಗೀರುದಾರ : ಶ್ರೀನೇಟ್ಟಭಂಜದೇವಃ ಕುಶ(ಸ)ಲೀ ನಾನಾಖಂಡವಿಷಯೇ ಯಥಾ ನಿವಾಸಿನ್(ಸ) ಕರಣ ಸಾಮಂತ ಭೋಗ್ಯಾದಿ ಜನಪದಾನ್ ಯಥಾರ್ಹಂ ಮಾನಯತಿ (ಎಇ. XXVIII, ೨೬೨-೧೨; 11ನೆಯ ಶತ). ೧೪. ಹಜಾಮ ; ಕ್ಷೌರಿಕ. ೧೫. ಒಂದು ನಿರ್ದಿಷ್ಟವಾದ ಖರ್ಚಿಗಾಗಿ ಹಣವನ್ನು ಕೂಡಿಡುವವನು,– ಸಂಗ್ರಹಿಸುವವನು. ೧೬. ಒಂದು ಬಗೆಯ ಪೊದೆ. ೧೭. ಒಂದು ಬಗೆಯ ಮರ : ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು, ಬಲಿಗೆ, ದೂಪ, ಜಂಭೆ, ಭೋಗಿ, ಮತ್ತಿ . . . ಮುಂತಾದ ಗಗನಚುಂಬಿತ ವೃಕ್ಷಗಳಿದ್ದರೆ ಕೆಲವು ಕಡೆಗಳಲ್ಲಿ ಗುರಗಿ, ಬಿದಿರು, ಕೆಂಜಿಗಿ, ವಾಟೆ . . . ಮುಂತಾದ ಗಿಡ ಬಳ್ಳಿ ಪೊದೆಗಳಿದ್ದವು (ಕಂಜಿಕಂ. ೨).
[ಸಂ. ಭೋಗಿನ್]

**ಭೋಗಿಕಟಕ** (ನಾ). ಹಾವುಗಳನ್ನು ಕಂಕಣವನ್ನಾಗಿ ಮಾಡಿಕೊಂಡಿರು ವವನು : ಶಿವ : ಭೋಗಿಕಟಕನ ಗಾಣಪತ್ಯಕೆ ಹೋಗನೇ ತಂತ್ರಂ ಬೆರಸಿ ಶಿವಯೋಗದಿಂದ ಕುಮಾರಪಾಲಕ ಗುರ್ಜರನು ಮುನ್ನ (ಬಸವ. ೫೯-೭೫).
[ಸಂ.]

**ಭೋಗಿತ** (ನಾ). ಊಟಮಾಡಿದವನು : ಭೋಜನಮಾಡಿದವನು : ಇದುವಲಾ ನಿಜಪದವಿಗಳಿಗಾಸ್ಪದವೆನುತ್ತಂ ತತ್ಪ್ರಸಾದಸಮುದಿತ ಭೋಗಿತ ನಾಗಿ ತತ್ಪದನಾಂಗಣಕೆ ಬಂದು (ಬಸವ. ೩೦-೦೨). [< ಭೋಗ]

**ಭೋಗಿತಲ್ಪ** (ನಾ). ಆದಿಶೇಷನನ್ನು ಹಾಸುಗೆಯಾಗುಳ್ಳವನು; ವಿಷ್ಣು. **ಭೋಗಿತಲ್ಪಾತ್ಮಜ** = ವಿಷ್ಣುವಿನ ಮಗ; ಮನ್ಮಥ: ಭೋಗಿತಲ್ಪಾತ್ಮಜನ ಪಂಕೆ ಸೋಲದರಾರು (ಶ್ರೀರಾ. ೩-೪೦). [ಸಂ.]

**ಭೋಗಿತ್ವ** (ನಾ). ೧. ಸುಖಪಡುವಿಕೆ; ಉಪಭೋಗಿಸುವಿಕೆ. ೨. ಹಾವಿನ ಗುಣ. ೧. ೨: ಅಸಿಯುಳುಸಿರೆಲರನಾಸ್ವಾದಿಸುತಫರಾಪ್ಯುತಪನೀರಿಟಿ ಭೋಗಿತ್ವದುನಾಂತಸಮುಕುಚಕಲಶನಿಧಿಗಾದೆಸೆವಂಗೆ ಭುಜಂಗನಾವುಮೇಂ ಬಗೆವುಗದೇ (ರಾಜಶೇ. ೧೦-೧೪೬). [ಸಂ.]

**ಭೋಗಿನಿ** (ನಾ). ೧. ಹೆಣ್ಣುಹಾವು; ನಾಗಿಣಿ: ಪೆಡೆಯುಡುಗದ ಭೋಗಿನಿಯೆವೊಮಿಡುಕಂ ಸಂಗಳಿಸಿಪವಂರಿ . . . ಎಂಬೀ ನುಡಿಗೆಡೆಗೊಟ್ಟಳ್ ಲತಾಂಗಿ ನವತರುಣಿಮದೊಳ್ (ಶಂಕ್ರಪ್ರ. ೩-೦೦೦). ೨. ಪಟ್ಟದಮಹಿಷಿಯಲ್ಲದ ರಾಣಿ: ರಾಜನ ಪಟ್ಟದರಸಿಯು ಮಹಿಷೀಯೆನ್ನಲ್ಪಡುವಳು . . . ಮಿಕ್ಕ ರಾಜಸ್ತ್ರೀಯರೆಲ್ಲಾ ಭೋಗಿನಿಗಳೆನ್ನಲ್ಪಡುವರು (ಗುರು. ೩-೨೦೦). 'ಭಟ್ಟಿನಿ' ಪರಾ. [ಸಂ. ಭೋಗಿನೀ]

**ಭೋಗಿಪ** (ನಾ). ಹಾವುಗಳ ಒಡೆಯ: ನಾಗರಾಜ: ಆದಿಶೇಷ: ಭೋಗಿಪಭೋಗತಳ್ಪತಳದೊಳ್ ಸದ್ಯೋಗನಿದ್ರಾಪರಂ ಕಮಳಾವಲ್ಲಭ... (ಎಕ. XI, ದಾವಣ. ೪೩-೯; ಕ್ರಿ. 1160): ಹುದುಗಿದಂ ಭೋಗಿಪಂ ಗವಗಡಿಸಿತಾ ಸಾಯುವ ಬಿಸಿಗೆ ಬ್ರಹ್ಮಾಂಡಂ (ಕೃಷ್ಣ. ೦೩-೯೭); ಕಮಠನ ಕೊರಲ್ ಕುಸಿಯೆ ಭೋಗಿಪನ ಭೋಗಂ ನಸಿಯೆ . . . ಸಬ್ಬಸಬ್ಬರಂ ಕಡಿದಾಯ್ತು (ಲಕ್ಷ್ಮೀಶ. ೦೩೦-೩೩). [ಸಂ.]

**ಭೋಗಿಪತಿ** (ನಾ). = ಭೋಗಿಪ: ಭೋಗಿಪತಿ ತನ್ನ ಸಹಸ್ರಫಣಾಮಣಿದ್ಯುತಿ ವ್ಯಾಪಿಸೆ ಸುತ್ತಿ ನಿಂದನೆನೆ ಕೋಂಟೆಯು ಪೊಂದೆನೆಗಳ್ ವಿರಾಜಿಕುಂ (ಜಗ. ೨-೦೯). [ಸಂ.]

**ಭೋಗಿಭೋಗ** (ನಾ). ೧. ಹಾವಿನ ಹೆಡೆ: ಸಂಸ್ಕೃತಿಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್ (ಆದಿಪು. ೩-೨೫). ೨. ಹಾವಿನ ದೇಹ: ಚೇಗೆಯಲಿ ಬಿದ್ದಂತೆ ಜನ ನದಿಗಾಗಿ ಹರಿತಂದಾ ಜಲಾಂತದ ಭೋಗಿಭೋಗ ಪರೀತನಾಗಿಹ ಕೃಷ್ಣನನು ಕಂಡು (ಕಿರಾತ. ೦೦-೦೬-೨೮). [ಸಂ.]

**ಭೋಗಿವಿಷ** (ನಾ). ಹಾವಿನ ನಂಜು: ಸರ್ಪದ ವಿಷ: ಅಗದುಸವುದುನ್ನಾಯು ವಿಭಾಗಕಳಿಕಾಲ ಲೋಕವೇಕವಿರುದ್ಧಂ ಭೋಗಿವಿಷಂಬೋಲ್ ಪ್ರಾಣತ್ಯಾಗವುನಾಗಿಸುಗುವುದುಮೆಳಕೃತಿ ಪಥುಗಿನಿತುಂ (ಕಬ್ಬಿಗ. ೦-೭೦). [ಸಂ.]

**ಭೋಗಿಶಯನ** (ನಾ). ೧. ಹಾವಿನ ಹಾಸುಗೆ: ಸಾಗರಪತಿಯಾಗಿ ಭೋಗಿಶಯನದಲ್ಲಿ ಯೋಗನಿದ್ರೆಯೊಳಿಪ್ಪ ಆ ರಂಗನ . . . ತೂಗಿ ನೋಡುವ ಪುಣ್ಯವೆಲ್ಲಿ ಪಡೆವೆನೊ (ಪುರಂದ. ೯-೦೦೩-೨). ೨. ಹಾವಿನ ಮೇಲೆ ಮಲಗುವವನು: ಶೇಷಶಾಯಿ: ವಿಷ್ಣು: ಭೋಗಿಶಯನನ ಚರಣದಲಿ ತಲೆವಾಗಿ ಪರಿತೋಷದಲಿ ಪುಳಕಿತ್ತಂಗಾತ್ತವೆ ಬೀಳ್ಕೊಂಡರಳೀ ಪುರಿಗೆ ಧನುಜರ್ರು (ಕಿರಾತ. ೦೦-೧೦-೩೩): ಭೋಗಿಶಯನ ಶ್ರೀ ಪುರಂದರವಿಠಲನ ಆಗ ನೆನೆಯಲಿಲ್ಲಾ (ಪುರಂದ. ೧-೩೯-೩). [ಸಂ.]

**ಭೋಗಿಸು** (ಕ್ರಿ). ೧. ತಿನ್ನು: ಸೇವಿಸು: ಆವ ಪದಾರ್ಥವಾದಡೇನು ತಾನಿದ್ದೆಡೆಗೆ ಬಂದುದ ಲಿಂಗಾರ್ಪಿತವ ಮಾಡಿ ಭೋಗಿಸುವುದೆ ಆಚಾರ (ಬಸವ. ೭೭೪): ರಾಜಾನ್ನದಕ್ಕಿಯಂ ಬೋನವಂ ಮಾಡಿ ಇತ್ತು ಶಲ್ಲಿಂಗ ಪ್ರಸಾದವನರ್ಪಿಸಿಯುಂ ಭೋಗಿಸಲು (ಬಸವಪು. ೨೭-೦೩). ೨. (ಸುಖ ದುಃಖಗಳನ್ನು) ಅನುಭವಿಸು; ಉಪಭೋಗಿಸು: ನಿತ್ಯಲಕ್ಷ್ಮಿಯಾ ಬಿಯ್ಯದಾ ವಿನೋದವಾ ಪಸದನದಾ ವಿಲಾಸದೊಳೊಡಂಬಡೆ ಭೋಗಿಸಿದಂ ಗುಣಾರ್ಣವಂ (ಪಂಪಭಾ. ೦೯-೩೦); ಮುಂದೆ ನೀಂ ಭೋಗಿಸುವ ಸಕಳ ಭಾಗ್ಯಕ್ಕೆ ಬೀಜಭೂತಮಾಗಿರಲ್ಕೆ (ಸಂಪ್ರದ. ೯-೨೯); ಭಾಗೀರಥಿ ನಿನ್ನ ಸೋಂಕಿನ ತಂಗಾಳಿ ತಾಗಿದ ಸಕಲಜಂತುಗಳು ಯೋಗತೆವಡೆದು ಸ್ವರ್ಗವ ಸೌಖ್ಯಂಗಳ ಭೋಗಿಸುತಿಹರು ಸಂತತ (ಪುರಂದ. ೬ ೪೨). ೨. ಸೇರು: ಕೂಡು: ಸಂಭೋಗಿಸು: ಬಸನದಿಂ ವನಿತೆಯರೊಳ್ ಭೋಗಿಸುವುದು ಸಚ್ಚರಿತಂಗಾಗದು (ಸುಕು. ೩-೬೨): ಪರಿಪರಿಯ ವೇಷಿಯರ ಮನೆಗಳೊಳಿರವಿನಲಿ ಭೋಗಿಸುವವರು ಹನ್ನೆರಡುಸಾವಿರ ವಿಂಡುಜಂಗಮವು (ಬಸವಪು. ೬-೩೩): ಓಪರೊಳ್ವೆರೆದು ವಿರಹಿಗಳ್ ಲಯುಜದ ಘನಸಾರದೊಳ್ ತಂಪುವೆತ್ತು ನಿಚ್ಚಳದ ಕರುವಾಡದೊಳ್ ಭೋಗಿಸಿದರೆಂದು ಚೈತ್ರಾಗಮದ ಸಂಭ್ರಮದೊಳು (ಕೃಷ್ಣ. ೮-೩). [ಭೋಗ + -ಇಸು]

**ಭೋಗೀಂದ್ರ** (ನಾ). = ಭೋಗಿಪ: ಇಂದ್ರನೆ ಭೋಗೀಂದ್ರನೆ ಚೇವೇಂದ್ರನೆ ದಲ್ ಭೂಪೇಂದ್ರನೆಂಬನ್ನೆಗಂ ಮನುವಂಶಪ್ರಭು ಮೆರೆದಿತ್ತು ಶರ್ಮದಿಂ (ಆದಿಪು. ೦೦-೦೩೩). [ಸಂ.]

**ಭೋಗೀಶ್ವರ** (ನಾ). ೧. ಸುಖವನ್ನು ಅನುಭವಿಸುವವರಲ್ಲಿ ಅಗ್ರಗಣ್ಯ: ಬಹಳ ಸುಖವನ್ನು ಅನುಭವಿಸುವವನು. ೨. = ಭೋಗಿಪ. ೧. ೨: ಅಂತು ವೀರಮಹೇಂದ್ರ . . . ವಿಶೇಷ ಭೋಗೀಶ್ವರನಾಗಿರ್ದಾಂ ಶೇಷಫಣೀಶ್ವರನಲ್ಲ (ಪಂಪ ೨. ೬ ೩ ೭). [ಸಂ.]

**ಭೋಗ್ಯ** (ಗು). ೧. ಭೋಗಿಸಲು ಯೋಗ್ಯವಾದ ಉಪಭೋಗಿಸಬೇಕಾದ. ೨. ಅನುಭವಿಸಬೇಕಾದ: ಸಹಿಸಬೇಕಾದ. (ನಾ) ೩. ಸುಖಾನುಭವಕ್ಕೆ ಯೋಗ್ಯವಾದ ವಸ್ತು: ಭೋಗಪರಿಕರ: ಭೋಗ್ಯ ಭೋಕ್ತೃಗಳೊಳಗೆ ಪರಿ ತಾ ಭೋಗ್ಯಭೋಕ್ತನು ಎನಿಸಿ ಯೋಗ್ಯಾಯೋಗ್ಯರನಗಳ ದೇವದಾನವರಿಗೆ ಉಣಿಸುವನು (ಹರಿಕ. ೦೬-೬೨): ತೊಳಗಿವರ್ಗೆ ಭೋಗ್ಯಮಾನ್ ನೀಡೆ ಮಾಚಿಕ್ತಿರೇನೊ ದಾತೃಜನವರ್ಗಳ್ ತಪಮಂ (ಶಬರ. ೦-೨೭); ಆ ವಸ್ತುಗಳು ಭೋಗ್ಯಗಳಾದುದರಿಂದ ಭೋಕ್ತನು ಬೇಕು (ಸಿಂದಗಿ. ೩೯). ೪. ಒಬ್ಬನಿಂದ ಸಾಲವನ್ನು ಪಡೆದು ಆತನಿಗೆ ಧನರೂಪವಾಗಿ ಬಡ್ಡಿಯನ್ನು ಕೊಡುವ ಬದಲು ಆಸ್ತಿಯನ್ನೇ ಅಸಲು ತೀರುವವರೆಗೂ ಬಿಟ್ಟು ಕೊಡುವುದು; ಆಧಾರ; ಈಡು; ಅಡಮಾನ: ತಾನು ಭೋಗ್ಯಕ್ಕೆ ಕೊಟ್ಟಿರೊ ಮನೇನ ಬಿಡಿಸಿಕೋಬೇಕು (ಶರಣ. ೪೩); ಕಾನೂನಿನ ಪ್ರಕಾರ ಕೆಳಮನೆಯ ಆಸ್ತಿಯನ್ನೆಲ್ಲ ತನ್ನ ಹೆಸರಿಗೆ ಭೋಗ್ಯಮಾಡಿಸಿಕೊಂಡ (ಗಂಗಾ. ೦೪). [ಸಂ.]

**ಭೋಗ್ಯಕ** (ನಾ) = ಭೋಗ್ಯ ೩: ಈ ಮೂರು ಜಾತಿಯ ದ್ರವ್ಯಗಳನ್ನು ರಾಮಾನುಜಗೀತಾಭಾಷ್ಯದಲ್ಲಿ ಧಾರಕ, ಪೋಷಕ, ಭೋಗ್ಯಕ ಎಂದು ಕರೆದಿದೆ (ಶಾರದ. ೩೩೩). [ಸಂ.]

**ಭೋಗ್ಯಡವು** (ನಾ). ಒಬ್ಬ ವ್ಯಕ್ತಿಯು ಸಾಲ ಕೊಂಡಾಯ ವೊದಲಾದ ಉತ್ಪತ್ತಿಗಳನ್ನು ತೆಗೆದುಕೊಳ್ಳುವಂತೆ ಇಡುವ ಸ್ಥಿರಾಸ್ತಿಯ ಒತ್ತೆ: ಭೋಗ್ಯರೂಪವಾದ ಒತ್ತೆ: ಪೈವರನು ಕೋಲಾರಪ್ರಾಂತವನ್ನು ಪೇಶ್ವೆಗೆ ಭೋಗ್ಯಡವು ಮಾಡಿಕೊಡಬೇಕು (ತಂಜಾ. ೦೯೨). [ಭೋಗ್ಯ + ಅಡವು (< ಅಡರ್ಪು)]

**ಭೋಗ್ಯದಾರ** (ನಾ). ಜಮೀನನ್ನು ಭೋಗ್ಯಮಾಡಿಕೊಂಡಿರುವವನು: (ರೈತಗಿ. II. ೩೯೩). [ಭೋಗ್ಯ + -ದಾರ್]

**ಭೋಗ್ಯಪತ್ರ** (ನಾ). ಜಮೀನು ಮನೆ ಮೊದಲಾದುವನ್ನು ಭೋಗ್ಯ ಮಾಡಿರುವ ಬಗ್ಗೆ ಬರೆದುಕೊಡುವ ದಾಖಲೆ ಪತ್ರ.—ದಸ್ತಾವೇಜು; "ಗುತ್ತಿಗೆ ಕರಾರು; ಗೇಣುಚೀಟಿ: ಭೋಗ್ಯಪತ್ರ" (Lease- ಇಂಕ.). [ಸಂ.]

**ಭೋಗ್ಯಾಧಿ** (ನಾ). = ಭೋಗಾಧಿ: ಆ ಗದ್ದೆಯನ್ನು ಭೋಗ್ಯಾಧಿಗೆ ಹಾಕಿದ್ದಾರೆ (ಕೂಕ). 'ಭೋಗ್ಯಾಧಿಪತ್ರ' ಪರಾ. [ಸಂ.]

**ಭೋಗ್ಯಾಧಿಪತ್ರ** (ನಾ). ಆಸ್ತಿಯನ್ನು ಭೋಗ್ಯಕ್ಕೆ ಹಾಕಿ ಬರೆದುಕೊಡುವ ದಾಖಲೆಪತ್ರ.—ದಸ್ತಾವೇಜು: ಸಾಲ ತೀರಿದ ಮೇಲೆ ಭೋಗ್ಯಾಧಿಪತ್ರವನ್ನು ಮರಾ ಬರಸಿ ಹಿಂದಕ್ಕೆ ತೆಗೆದುಕೊಳ್ಳಬೇಕು (ಕೂಕ). [ಸಂ.]

**ಭೋಜ** (ನಾ). ೧. (ಸಂಸ್ಕೃತಸಾಹಿತ್ಯದಲ್ಲಿ ಕವಿಯಾಗಿಯೂ ಕವಿಗಳಿಗೆ ಪ್ರೋತ್ಸಾಹಕನಾಗಿಯೂ ಇದ್ದ) ಮಾಳವದೇಶದ ಮಹಾರಾಜನ ಹೆಸರು : ವಿನುತ ಭೋಜನ ಘಲ್ಲಟನ ಭಾರವಿಯ ಪದವ ನೆನೆದು ಬಲಗೊಂಡು ತೊಡಗಿದೆನೀ ಮಹಾಕೃತಿಯನು (ಹರಿಶ್ಚ. ೧-೧೪). ೨. ಯಾದವರ ಒಂದು ಒಳಪಂಗಡ : ಅಂಧಕವೃಷ್ಣಿ ಭೋಜರೆನಿಪ ಬಳಿಯಾದವಕುಲದ ವಟುಘಟುಸಮಾಜವುಂ ಪ್ರದ್ಯುಮ್ನನೊಡನೆ ಸುರಥನ ರಥಕ್ಕೆಣೆಯೊಡ್ಡಿ (ಪಂಪಭಾ. ೧೪-೩). ೩. ಒಂದು ರಾಜವಂಶದ ಹೆಸರು : ವಿಜಯ ವ್ಯಷಭೇನೆ ಮೇಟಾತ್ ಭೋಜಾನಾಂ ಪೃಥಿವೀ ಮಲ್ಲವರ್ಮ್ಮಣೋ ವಚನಾತ್ ದೇಶೇ ಕುಪಲ[ವ]ಕಟಾಹಾರೇ ಗ್ರಾಮೋ ಘಾಗಲಪಲಿ[ಲ್ಲಿ]ಕಾಯಾಂವರ್ತ್ತಮಾನ ಭವಿಷ್ಯದ್ ಭೋಜಕಾಯುಕ[ಕ್ತ]ಕ ಸ್ಯಾಮ್ಯಾದಯೋ [ವಕ್ತವ್ಯಾ:] (ಎಇ. XXXIII, ೬೨-೧ ; ೧೫೦೦ ಕಕ ?). ೪. ಭರತಖಂಡದ ಪ್ರಾಚೀನ ದೇಶಗಳಲ್ಲಿ ಒಂದು : "ಭೋಜಃ. ಕಾಂಭೋಜಃ — ಈ ೨ ದೇಶಂ " (ಶಾಕಕ್ಕ. ೨೨೨). 'ಕಾಂಭೋಜ' ಪರಾ. [ಸಂ.]

**ಭೋಜಕ** (ನಾ). ೧. ಭೋಜನಮಾಡುವವನು : ತಿನ್ನುವವನು. ೨. =ಭೋಜ ೨ : ಭೋಜರು ಅಥವಾ ಭೋಜಕರುಗಳ ನೆಲೆವೀಡು ವಿದರ್ಭವೆಂದು ಸಿದ್ಧವಾಗುತ್ತದೆ (ಕರ್ನಾ.೩.೦೩೬). ೩. ಜಹಗೀರುದಾರ : ಘಾಗಲಪಲಿ[ಲ್ಲಿ]ಕಾಯಾಂವರ್ತ್ತಮಾನ ಭವಿಷ್ಯದ್ ಭೋಜಕಾಯುಕ [ಕ್ತ]ಕ ಸ್ಯಾಮ್ಯಾದಯೋ [ವಕ್ತವ್ಯಾ:] (ಎಇ. XXXIII. ೬೨-೧ ; ೧೫೦೦ ಕಕ ?): ಒಂದು ಅಥವಾ ಹೆಚ್ಚು ಗ್ರಾಮಗಳ ಮೇಲೆ ನಿರಾಬಾಧಸ್ವಾಮ್ಯವುಳ್ಳವರೇ ಭೋಜಕರು (ಕರ್ನಾಶಿ. ೧೦). [ಸಂ.]

**ಭೋಜಕತ್ವ** (ನಾ). ೧. ಊಟಮಾಡುವಿಕೆ. ೨. [ಕಾವ್ಯಮೀ] ಸಹೃದಯನಿಗೆ ಕಾವ್ಯನಾಟಕಗಳಿಂದ ರಸಾಸ್ವಾದವನ್ನುಂಟು ಮಾಡುವ ಒಂದು ಕಾರ್ಯವಿಶೇಷ : ಕಾವ್ಯ ನಾಟಕದಲ್ಲಿ ಮುಖ್ಯವಾದ ಅರ್ಥವನ್ನು ಕೊಡುವ ಅಭಿಧಾವೃತ್ತಿ ಅಥವಾ 'ಶಕ್ತಿ' ಇರುವಂತೆ 'ಭಾವಕತ್ವ', 'ಭೋಜಕತ್ವ' ಎಂಬ ಮಾತ್ರೆರಡು ಶಕ್ತಿಗಳಿವೆ . . . ಎರಡನೆಯ 'ಭೋಜಕತ್ವ' ಎಂಬ ಶಕ್ತಿಯಿಂದ ಈ ಸಾಧಾರಣವಾಗಿ ಮಾಡಲ್ಪಟ್ಟ ರತ್ಯಾದಿಗಳು ಅನುಭವಿಸಲ್ಪಟ್ಟು ಸುಖಗೊಳಿಸುತ್ತವೆ (ಭಾಕ. ೦೧೪): ಇಲ್ಲಿಂದ ಮುಂದಕ್ಕೆ "ಭೋಜಕತ್ವ" . . . ಎಂಬ ಮೂರನೆಯ ವ್ಯಾಪಾರವು ಪ್ರವರ್ತಿಸುತ್ತದೆ. ರಸವು ಇದರ ಬಲದಿಂದ ಸಾಮಾಜಿಕನಿಗೆ ಭೋಗವಿಷಯವಾಗುತ್ತದೆ (ಕಾದಮೀ. ೩೬೬). [ಸಂ.]

**ಭೋಜನ** (ನಾ). ೧. ಆಹಾರಸೇವನೆ : ತಿನ್ನುವುದು ; ಉಣ್ಣುವುದು. ೨. ಅನುಭವಿಸುವುದು: ಭೋಗಿಸುವುದು. ೩. ಊಟ: ಆಹಾರ : "ವಲ್ಭನಂ . . . ಅಹಾರಃ, ಭೋಜನಂ, ಸ್ವದನಂ—ಈ ೧೧ ಊಟಂ" (ಶಬ್ದಮ. ೫೧-೦೭೦) : ರಕ್ಷಿಸಿಯ ಮನೆಯಲ್ಲು ಭೋಜನವುಂಡು ತೃಪ್ತಿ ಯಾಯಿತ್ತೆಂದು ಬೆಸಗೊಂಡರೆ ಪೇಳಿಹೆನು (ಶಬರ. ೬೨೦) ; ಮಜ್ಜನ ಭೋಜನಾದಿ ವಿವಿಧವ್ಯಾಪಾರಂಗಳಂ ತೀರ್ಚಿ (ಕೃಕೃ. ೪-೬೬ ವ). ೪. ಊಟವನ್ನು ನೀಡುವುದು; ಆಹಾರವನ್ನು ಕೊಡುವುದು. [ಸಂ.]

**ಭೋಜನಂಬಡೆ** (ಕ್ರಿ). ಊಟವನ್ನು ಪಡೆ.— ದೊರಕಿಸಿಕೊಳ್ಳು : ರಾಜಕುಮಾರರ್ ಭೋಜನಂಬಡೆಯಂದರಂತೆ ಬಡವಾಗಿ (ವಡ್ಡಾರ. ೨-೬೪). [ಭೋಜನ + ಪಡೆ₁]

**ಭೋಜನಕೂಟ** (ನಾ). ಯಾವುದಾದರೂ ಒಂದು ವಿಶೇಷ ಸಂದರ್ಭದಲ್ಲಿ ನೀಡುವ ಸವಿಯಾದ ಊಟ: ಔತಣಕೂಟ : ಸಿದ್ಧನಾಥನನ್ನು ಕಂಡಿದ್ದ ಅಪರಿಚಿತನು ಭೋಜನಕೂಟದಲ್ಲಿ ಸಮ್ಮಿಳಿತನಾಗಿದ್ದ (ಅಕ್ಷರು. ೮೬). [ಭೋಜನ + ಕೂಟ₁]

**ಭೋಜನಗೆಯ್** (ಕ್ರಿ). ಊಟಮಾಡು : ಇತ್ತ ಶಂಬರಾಸುರ ವಿಂದು ಭೋಜನಗೆಯ್ದು ಪರರತ್ನಮಂಟಪದೆಡೆಗೈದಿ . ಸಿಂಹಪಿಷ್ಟರದಲ್ಲಿ ಕುಳಿತ ವೈಭವದಿ (ಪ್ರಭು. ೦೦-೬೪). [ಭೋಜನ + ಕೆಯ್₁]

**ಭೋಜನಪ್ರಿಯ** (ನಾ). ತಿನ್ನುವುದರಲ್ಲಿ ಬಹಳ ಆಸಕ್ತಿಯುಳ್ಳವನು : ಇಂತು ಗಂಧಾಕ್ಷತಾ ಭೋಜನಪ್ರಿಯರಾದ ಸಂತತಂ ಸದ್ವ್ಯಾಪ್ತಿಗಣರ ಕೆಂ ಪಂದೆಸೆಯು (ನವರಸ. ೨-೩೮). [ಸಂ.]

**ಭೋಜನಭೂಮಿ** (ನಾ). ಊಟಮಾಡುವ ಸ್ಥಳ.—ಮನೆ ; ಭೋಜನ ಶಾಲೆ : ವಿಕಸಿತಾಂಭೋಜ ಹೇಮಕಮಲಮಸೋಹರತರಶ್ರೀಯಿಂ ತಾಳ್ದಿರ್ದ ಭೋಜನಭೂಮಿಗೆ ರಾಜಹಂಸ ವಿಳಾಸದಿಂ ಬಿಜಯಂಗೆಯ್ದು (ಆದಿಪು. ೧೦-೨೩ ವ). [ಸಂ.]

**ಭೋಜನಶಾಲೆ** (ನಾ). ಊಟದ ಮನೆ : ಚಿತ್ರಶಾಲೆ ಚಂದ್ರಶಾಲೆ ಶಿಶಿರಶಾಲೆ . . . ಭೋಜನಶಾಲೆ ಮಜ್ಜನಶಾಲೆ (ಲೀಲಾ. ೨೦೩); ಸಿದ್ಧನಾಥನ ಜೊತೆಗೆ ಮುಕ್ತಾ ಭೋಜನಶಾಲೆಯಲ್ಲಿ ಪ್ರವೇಶಿಸಿದಳು (ಅಕ್ಷರು. ೮೬). [ಸಂ. ಭೋಜನಶಾಲಾ]

**ಭೋಜನಾಂಗ** (ನಾ). [ಜೈನ] ಭೋಗಭೂಮಿಯಲ್ಲಿರುವ ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; ಬಯಸಿದ ಆಹಾರವನ್ನು ಕೊಡುವುದೆಂದು ಭಾವಿಸಲಾದ ಮರ : ತೇಜೋಬಲಾಯು ರಾರೋಗ್ಯಸಮೇತಮನಮೃತಾನ್ನಮನೊಲ್ದೀಗುಮಾಗಳುಂ ಭೋಜನಾಂಗ ಕಲ್ಪಾವನಿಜಂ (ಆದಿಪು. ೩-೫೯) : ಭೋಜನಾಂಗಮೆಂಬುದು ತೇಜೋಬಲಾ ಯುರಾರೋಗ್ಯತುಷ್ಟಿಪುಷ್ಟಿಪ್ರತಿಭಾಪ್ರೀತಿಪ್ರದಾಯಿಗಳಪ್ಪಮೃತಾನ್ನಂಗಳ ನೀವುದು (ಶಾಂತಿಪು. ೯). [ಸಂ.]

**ಭೋಜಪತ್ರ** 'ಭೂರ್ಜಪತ್ರ' ನೋ.

**ಭೋಜಿಸು** (ಕ್ರಿ). ೧. ಊಟಮಾಡು ; ಆಹಾರವನ್ನು ಸೇವಿಸು : ಅರಮನೆಗೊಯ್ದುಕಂಪಾಂಕ ಮನ್ನಿಸಿ ತನ್ನರಸಿ ಕೂರ್ತಿಯ್ದು ಭೋಜಿಸಿದ (ಶರಶ. ೫೬-೦೩): ಸೇವಿಸುವಂ, ವಾಲಿಸುವಂ, ಭೋಜಿಸುವಂ (ಶಬ್ದಾನು. ೫೩೩ ಕ್ರಿ ಪೋ). ೨. (ಸುಖವನ್ನು) ಅನುಭವಿಸು ; ಸವಿ : ಕುಮಾರೆಯು ಮನ್ ಇಜಿದು ಪಲರಂ ಕೋದು ಸೂರ್ಯ್ಯಮಂಡಲಮಂ ಭೋಜಿಸಿದರ್ (ಎಇ. XVIII. ೨೦೦-೬ ; ೧೧೦೭). [ಭೋಜನ + — ಇಸು₃]

**ಭೋಜ್ಯ** (ಗು). ೧. ತಿನ್ನಲು ಯೋಗ್ಯವಾದ ; ತಿನ್ನಬಹುದಾದ. (ನಾ). ೨. ತಿನ್ನಲು ಯೋಗ್ಯವಾದುದು ;ತಿನಿಸು; ಆಹಾರಪದಾರ್ಥ: ಅಸಿನಿತು ಭೋಜ್ಯಮಿಂ ಜೆಜಿಕ್ಕೇನುಮನುಣಿಸೊಲ್ಲೆಂ (ಸುಕುಮಾ. ೪-೬) : ನೆರೆದ ಸಹಚಾರಕರವಿಲ್ಲದೆಲ್ಲವೂ ನರರ ನಿಜಭೋಜನಕೆ ಜನಿಸಿದವರಸ ಕೇಳದ ಜಗೊಳಗೆ ಭೋಜ್ಯಾಭೋಜ್ಯವನು ತಿಳಿದು ಪರಿಹರಿಸಬಲ್ಲವರುಗಳು ಘನ ತರದ ಸುಕೃತವನೈದುವರು (ಸುದ್ರಾಣಾ. ೩-೬೨) : ಅಡಿಗೆಮನ್ನುಗಳು ಅಷ್ಟೇ ಅಗಿದ್ದರೂ ಸಿದ್ಧಪಡಿಸಿದ ಭೋಜ್ಯ ಮಾತ್ರ ಹೊಸದು ( ಕ್ಷೀರ. ೦೩೩ ). ೩. ಉತ್ತಮವಾದ ಆಹಾರ; ರಸಕವಳ : ವ್ಯಪ್ಯಾನ್ನಭೋಜನ: ರಚಿತರುಚಿನಿಚಿತರುಚಿ ಸಾಜ್ಯಭೋಜ್ಯಾಳಿಯಿಂ . . . ರಾಜಿಸುತ ನಲ್ಮೆಯಿಂ ಪೂಜಿಸಿದನೊಲ್ಮೆಯಿಂ (ರಾಜಶೇ. ೦೩-೩೦ ಪದ). ೪. ಅನುಭವಿಸಲು ಯೋಗ್ಯವಾದುದು ; ಭೋಗವಸ್ತು : ಪ್ರಾಜ್ಯವೈಭವದಿಂದ ರಂಜಿಸುವ ಧರೆಯ ಸಾಮ್ರಾಜ್ಯಾಧಿಪತ್ಯದ ಮಹಾಧನಂ ಸುರವಿಪ್ರಭೋಜ್ಯಮಪ್ಪ ಪೊಲು (ತಪ್ಪಿದಾ. ೩-೨೪). [ಸಂ.]

**ಭೋಜ್ಯಾಂಗ** (ನಾ). ಭೋಜನಾಂಗ : ತ್ರಿದಶಾಮೃತಾನ್ನಮಂ ಕುಡುವುದರ್ಗೆ ಭೋಜ್ಯಾಂಗ ತರುಗಳಲ್ಪಮಹೀಜಂ (ಶಾಂತಿಪು. ೬-೦೦೩). [ಸಂ.]

**ಭೋದರಿಯೂರ್** (ನಾ). ಒಂದು ಊರಿನ ಹೆಸರು : ಕೂಡಲೂರ ಭೋದರಿಯೂರ ಮನ್ನುನ್ದಕ್ಕೆ ಬಿಟ್ಟ ಶ್ರೀಕೃಷ್ಣಮಾಪ್ಪುದು ಎನ್ನದ (ಎಕ. IX. ಚನ್ನ. ೦೬೨-೫ ; ೪೧೨). [ ? + ಊರ್ ]

**ಭೋರ್** (ಅ). ಒಂದು ಅನುಕರಣಾವ್ಯಯ : ಆಗಳಶ್ವತ್ಥಾಮಂ . . . ನೊಂದು ಭೋರೆಂದು ಕವಿವ ಬಿಸುನೆತ್ತರ್ ಕಣ್ಣಂ ಕವಿಯೆ ಸೀಂಟಿ ಕಳೆದು (ಶಂಖಾ. ೦೨-೭೪೫) ; ಘೋರೆಂಬ ಭೋರೆಂಬ ಕೂರಸಿಗಳುರವಣೆಯು ದನಿ ಯುತಸುತಂ ಪುಟ್ಟೆ (ಇಹಕ. ದೀ. ೪೨-೨).

**ಭೋಭೋರ್** (ದ್ವಿರುಕ್ತಿ): ಭೋಭೋರೆನೆ ಪಾಯ್ವುದು ಓಪುನಗಕ್ಕೆ ಗಂಗಾಸ್ರೋತ್ರಂ (ತಕುದ. ೦೯೫ ಪ್ರಯೋ) ; ಬೊಬ್ಬುಳಿತೆರೆಯನು ದಡಕ್ಕೆ ಹೊಮ್ಮಿಸಿ, ಅಬ್ಬರವಲಿ ಭೋರ್‌ಭೋರೆನೆ ಗುಮ್ಮಿಸಿ, ಬರುತಿದೆ . . . ತೆಂಕಣಗಾಳಿಯು ಕೊಂಕಣಸೀಮೆಗೆ (ಕನ್ನಡ. ೦೨೧).

**ಭೋರಂಗ** 'ಬೋರಂಟಿ' ನೋ.

**ಭೋರಂಗಿ** 'ಬೋರಂಗಿ' ನೋ.

**ಭೋರಜಗುಲಿ** 'ಭೋರ್ಜಗಲಿ' ನೋ.

**ಭೋರನೆ** (ಅ). ೧. ಒಂದು ಅನುಕರಣಾವ್ಯಯ; ಭೋರೆಂದು ಶಬ್ದವಾಗುವಂತೆ : ಘೋರನೆ ಕೊಂಡುದಾಗಳಂಬಿನ ಮಟ[3] (ಶಂಖಾ. ೦೩-೪೯): ಭೋರನಬ್ಬರಿಸಿದುವು ದಿವಿಜರ ಭೇರಿಗಳು (ಕೊಳ್ರಾ. ೧-೬-೮). ೨. ಶೀಘ್ರವಾಗಿ : "ಭೋರನೆಯೆನೆ ಭೋಂಕನೆನಲು . . . ಶೀಘ್ರಾರ್ಥಂ" (ಶಬ್ದಮಂ. ೧೦೦); ತರಳಿಕೆ ಮಹಾಶ್ವೇತೆಯಂ ಬಿಟ್ಟು ಭೋರನೆ ಚಂದ್ರಾಪೀಡಶರೀರಮಂ ಸಾರ್ದು (ಕಾದಂಸಾ. ೫೭೯). ೩. ಥಟ್ಟನೆ : ಕೂಡಲೆ : ನಾರಿಯರ್ಕೆಪರ ಕೂಡಿಕೊಂಡು ನಾ ದಾರಿಸಂಗಡವಾಗಿ ಬರುತಿರಲು ಭೋರನೆ ಶ್ರೀಶೈಲ ಚೆನ್ನಮಲ್ಲೇಶಂಗೆ ಓರಂತೆ ಮನಸೋತೆ (ಶಿವಗೀ. ೦೩೪-೭೭೨).

[ ಭೋರ್ + — ಅನೆ$_1$ ]

**ಭೋರಾಟ** (ನಾ). ಭೋರೆಂಬ ಶಬ್ದ: ಆರ್ಭಟ; ಮೊರೆತ : ಬಿರುಮಳೆಯು ಸೂಜನೆ ಗಾಳಿಯ ಭೋರಾಟದಿಂದಲೂ . . . ಗುಡುಗುಗಳ ಆರ್ಭಟದಿಂದಲೂ ರೌದ್ರವಾಗಿದೆ (ಚಂದ್ರಸ. ೦೦೯-೫) ; ತೊರೆಯ ನೀರಿನ ಭೋರಾಟವನ್ನು ಆಲಿಸಿ (ಪುರಕು. ೫). [ಭೋರ್ + ಆಟ]

**ಭೋರಾಡು** (ಕ್ರಿ). ಹೆಚ್ಚು ಧ್ವನಿಮಾಡು ; ಗೋಳಾಡು : ಅವಳು ನಿಂತ ಸ್ಥಳದಲ್ಲಿಯೇ ಕುಸಿಬಿದ್ದು ಭೋರಾಡಿ ರೋದಿಸತೊಡಗಿದಳು (ಸ್ವಾರಂಬ. ೦೭೮); ಇವರ ದಶರಥನ ಪಾಟ್ರ್ ನೋಡಿದವರೆಲ್ಲ ಭೋರಾಡಿ ಅತ್ತರು (ಸ್ವತಂತ. ೨೭). [ಭೋರ್ + ಆಡು$_1$]

**ಭೋರಿಡು** (ಕ್ರಿ). ೧. ಘೋಷಿಸು : ನೀರಜಾಕ್ಷ ನಿರ್ಜರಪತಿ ಹರಿಯೆಂದು ಚೀಜ[3] ಹಾಜ[3] ಭೋರಿಡುತಲಿ ಕುಣಿಯೊ (ಪುರಂದ. ೨-೭೭-೦). ೨. ಗೋಳಾಡು ; ರೋದಿಸು : ಕಳೆದ ಸುಖ-ಸೊಬಗುಗಳ ಗೋರಿಗೀತವ ಕಟ್ಟಿ ಭೋರಿಡುವ ಮಾನವನ ನಿತ್ಯಮಿಡುಕು (ಬಿಜಾಕ. ೬-೮). ೩. ಅಬ್ಬರಿಸು : ಮೊರೆ : ಗಂಗತ್ತೆಯ ಗೋಳು ಬೊಬ್ಬೆಗಳು ಭೋರಿಡುವ ಮಳೆಯನ್ನು ಭೇದಿಸಿಕೊಂಡು ದೂರಕ್ಕೆ ಹೋಗಲೇ ಇಲ್ಲ (ಬಿಷ್ಣು. ೫).

[ಭೋರ್ + ಇಡು$_1$]

**ಭೋರೆನ್** (ಕ್ರಿ). ೧. ಭೋರೆಂದು ಶಬ್ದಮಾಡು ; ಅಬ್ಬರಿಸು : ಮದವತ್ಕರಿಸೆಜ[3]ಯಂ ಪಜ[3]ದೊವವಿದ ಮುಳಿಸಿಂದೆ ಭೋರೆನೆಯ್ತಂದೊಡ ದಕ್ಕ್ರದಿರದಿರೆ ಭಕ್ತಿಯಿಂದವು ಪದಯುಗಕೆಱಗಿದುದು ದಾನಚಿಂತಾಮಣಿಯ (ಕರ್ನಾಶಾ. XI-i, ೫೨-೩೦; 1007). ೨. ರಭಸದಿಂದ ಕೂಡು: ವೇಗವಾಗು : ಸಂಜೀವಕಂ ನಿಮ್ಮಲ್ಲಿ ಮುನ್ನಂ ಬರ್ಪಂದಮಲ್ಲದೆ ಭೋರೆನೆ ಬಂದು (ಪಂಚತಂ. ೦೩೨-೨). [ಭೋರ್ + ಎನ್$_1$]

**ಭೋರ್ಗರೆ** (ಕ್ರಿ). ಭೋರೆಂದು ಶಬ್ದಮಾಡು; ಅಬ್ಬರಿಸು : ಭೋರ್ಗರೆ ದೂದುವ ಗಾಳಿ ಸಿಡಿದು ಪೊಯ್ವ ಸಿಡಿಲ್ (ಆದಿಪು. ೬-೫೨); ನಭದೊಳ್ ಭೋರ್ಗರೆದಪುಂತಿರೆ ಸುರದುಂದುಭಿ (ವರ್ಧಪು. ೦೨-೪೩) ; ಸೊಂಡಿಲ ನೆಗಹಿ ಭೋರ್ಗರೆವ ನೀರಾನೆಯ ತಂಡ . . . ಜಲಚರ ತುಂಬಿ ಕಣ್ಗೆ ಶ್ರೀಖಂಡವಾಗಿರ್ದಳಾ ಗಂಗೆ (ಮೋಹತ. ೬-೩೭). [ಭೋರ್ + ಕರೆ$_1$]

**ಭೋರ್ಗಱೆ[3]** (ಕ್ರಿ). ಬಿರುಸಿನಿಂದ ಸುರಿಸು, — ವರ್ಷಿಸು : ಧರೆಗೆ ಪೊಸತೆನೆ ಕೂಕಿಱಿದು ಭೋರ್ಗಱೆ[3]ದರಂಬಿನ ಬಲುಮಳೆಯ ಬೇಡರು (ಕಾಳ್ಗಾ. ೩೦-೨೩). [ಭೋರ್ + ಕಱೆ$^3_1$]

**ಭೋರ್ಜಗಲಿ**, ಭೋರಜಗುಲಿ, ಭೋರ್ಜಗುಲಿ (ನಾ). ೧. (ಉಕ) ಮದುಮಕ್ಕಳನ್ನು ಕೂರಿಸಿ ಧಾರೆ, ಮಾಂಗಲ್ಯಬಂಧನ ಮೊದಲಾದ ಮಂಗಳಕಾರ್ಯಗಳನ್ನು ಮಾಡುವುದಕ್ಕಾಗಿ ಏರ್ಪಡಿಸಿರುವ ಜಗಲಿ (?) : ಈ ಗದ್ದಲದಲ್ಲಿ ಸ್ಥೂಲಕಾಯಳಾದ ಮೆಹಬೂಬ ಭೋರ್ಜಗಲಿಯಿಂದ ದೂರವೇ ಉಳಿದಳು (ಗಂಖಾಯ. ೦೪೪). **ಭೋರಜಗುಲಿ :** ೧. ತೆಲಗುಬಣಜಿಗರು :— ಇವರು ಲಗ್ನದಲ್ಲಿ ಭೋರಜಗುಲಿಯ ಬಿಡಬಲವಲ್ಲಿ ಹೊಸಗಡಿಗೆಗಳ ಅಡಿಕಿಲುಯೇರಿಸಿ ಇಡುವರು (ಕಜಾಗ. ೦೦೩). **ಭೋರ್ಜಗುಲಿ :** ೨. ಸಂಪ್ರದಾಯ ಬದ್ಧವಾದ ರೇಖಾವಿನ್ಯಾಸಗಳನ್ನು ಬರೆದು ಸಿದ್ಧಪಡಿಸಿರುವ ಸ್ಥಳ (?) : ಮದುಮಕ್ಕಳು ಕೂಡುವ ಹಸೆಮಣೆಯ ಹಿಂದೆ ಗೋಡೆಯ ಮೇಲೆ ಬರೆದಿರುವ ರೇಖಾಕೃತಿ (?) : ಅವರು ತಮ್ಮ ಮಗಳನ್ನು ನಿನಗೆ ತೋರಿಸಬೇಕೂ ಎಂದು ಅನ್ನುತ್ತಿದ್ದರು . . . ಒಪ್ಪಿತವಾದರೆ ಎರಡು ಭೋರ್ಜಗುಲಿ ಎದುರೆದುರು ಬರೆಯಿಸಬಹುದು (ಜಾಬಂ. ೩೭). [ ? + ಜಗಲಿ]

**ಭೋರ್ಜಗುಲಿ** 'ಭೋರ್ಜಗಲಿ' ನೋ.

**ಭೋಷ** 'ಭೌಷೆ' ನೋ.

**ಭೋಷವಂತ** (ನಾ). ಮರ್ಯಾದಸ್ಥ : ಪರಮಪವಿತ್ರ ಸದ್ಗತಿಯರಿತ ಯುಂಟೇ ಭೋಷವಂತರಿಗೆ (ಶಂಕರಾ. ೬-೫೫).

[ ಭೋಷ (< ಭೌಷೆ ) + —ವಂತ ]

**ಭೋಸಡಿ**, ಬೋಸಡಿ, ಬೋಸುಡಿ, ಭೋಸುಡಿ (ನಾ). ೧. ಹೆಂಗಸಿನ ಜನನೇಂದ್ರಿಯ : ಯೋನಿ : (*). ೨. (ಆಲಂ) ಅಶ್ಲೀಲವಾದ ಒಂದು ಬಯ್ಗುಳ ; ಹಾದರಗಿತ್ತಿ : ರಮಾಬಾಯರು ವೆಂಕಮ್ಮನವರನ್ನು "ಭೋಸಡಿ" ಎಂದು ಬಯ್ದುದಲ್ಲದೆ . . . ಮೋರೆಗೆ ಕೃತಿವಿದಿದ್ದರು (ಸಮುಕ. ೩೭) ; ಈಗ ತಾನೆ ಮೊಗ ಹೆತ್ತ ಬಾಣಂತಿ ಹಂಗೆ ಕುಂತುಗೊಂಡಿದ್ದೀಯಲ್ಲೇ ? ಎದ್ದು ಬದುಕು ಮಾಡೆ ಭೋಸಡಿ (ಸರ್ಪಬಾ. ೩೫೩). **ಬೋಸಡಿ :** ೨. ಈ ಬೋಸಡಿಯು ಎಂತಹ ಬೇಡಿಕೆಯನ್ನು ಬೇಡಿದಳು ನೋಡು (ಶಿಲಾ. ೩೦). **ಬೋಸುಡಿ :** ೨. ಇನ್ಯಾವ ಮರ್ವಾದಸ್ತ ಬೋಸುಡಿ ಬಂದಾಳು ಇಲ್ಲೆ ಅಮ್ಮಾನಿ (ಶಂಗಾ. ೦೦೩). **ಭೋಸುಡಿ :** ೨. "ಮನಗೇ ಭೋಸುಡಿ" ಗದರಿಕೊಂಡಳು ಸೋನೂಬಾಯಿ (ಶಂಗಾ. ೦೭೦).

[← ಮರಾ. ಭೋಸಡೀ]

**ಭೋಸುಡಿ** 'ಭೋಸಡಿ' ನೋ.

**ಭೋಳಾಶಂಕರ** (ನಾ). ೧. ಶಿವ ; ಶಂಕರ : ಭಸ್ಮಾಸುರಬಾಧಿತನಾದ ಭೋಳಾಶಂಕರನೆಂಬ ಮೊಮ್ಮನಂ ಪಾಲಿಸಲಾ ನಿಶಾಚರನ ಮಾಯದಿಂ ಮೋಹಿಸಿ (ಅಕ್ಷಾಶಿ. ೨೫-೦೩ ಕ). ೨. ಏನೂ ಅರಿಯದವನು ; ಮುಗ್ಧ : ಅವರ ಸರಳತೆ ಔದಾರ್ಯಗಳ ದುರುಪಯೋಗ ಮಾಡಿಕೊಂಡು ಅವರನ್ನು ಮೋಸಗೊಳಿಸಿದ ಜನರೂ ಉಂಟು. ಅಂತೆಯೇ ಜನರು ಅವರಿಗೆ ಆಗಾಗ 'ಭೋಳಾಶಂಕರ' ಎಂದು ಚೇಷ್ಟೆ ಮಾಡುವರು (ಗಂಗಾಶಾ. ೨೫).

[ ← ಮರಾ. ಭೋಳಾಶಂಕರ್ ]

**ಭೋಳೆ**, ಬೋಳೆ$_3$, ಬೋಳೆಯ$_2$ (ನಾ). ೧. ಸಾಧುಸ್ವಭಾವದವನು ; ಕಪಟವನ್ನರಿಯದವನು : ಮುಗ್ಧ : ಗರುಡ ಊರು ಹಾಳು ಮಾಡುವ ಪ್ರಚಂಡ ಗಟ್ಟಿಗ, ನಿಮ್ಮ ಹಾಗೆ ಭೋಳೇ ಅಲ್ಲ (ಶಂಕಾ. ೩೫) ; ನಾನು ಇಷ್ಟು ಭೋಳೆ ಇಲ್ಲ — ಎನ್ನ ಮುಂದೆ ಮೋಸದಾಟ ನಡೆಯುದು

(ಹೋತಹ. ೧೫೦). (ಗು). ೨. ಸಾಧುಸ್ವಭಾವದ ; ಮುಗ್ಧವಾದ : ನೀವು ಹಳೇ ಕಾಲದ ಮಂದಿ ; ಬಹಳ ಭೋಳೇ ಮಂದಿ (ಹೊಸಂಸಾ. ೦೦೪); "ಭೋಳೇ" ಜನರನ್ನು ಬಗಲಿಗೆ ಹಾಕುವ ಚಾತುರ್ಯವೂ ಅವರಲ್ಲಿದೆ (ಮಂಜಹು. ೪೯). ಬೋಳೆ₃ : ೨. ಹಳ್ಳಿಯ ಬೋಳೇಜನದ ಮಾತು ಹೇಳಬೇಕೆ? (ಸುಪಸಂ. ೧). ಬೋಳೆಯ₂ : ೧. ಬೋಳೆಯನೆಂದು ಸಂಬಟೇಡ ಥಾಳಕನವನು ಜಗದ ಬಿನ್ನಾಣ (ಮುಹಾದೇ. ೪. ೨೬-೭೨).

ಬೋಳೆಯ ಮಾತು = ನಿಷ್ಕಪಟವಾದ ನುಡಿ : ನಗುನಗುತ್ತಲೆ ಬೋಳೆಯ ಮಾತುಗಳನ್ನಾಡುತ್ತಾ, ತಮಾಷೆ ಮಾಡುವವರಂತೆಯೆ ಕಸಿದು ಕೊಳ್ಳುತ್ತಿದ್ದರು (ಮುಳಿಮು. ೪೨೬).

[ ← ಹಿಂ. ಭೋಲಾ ; ಮರಾ. ಭೋಳಾ ]

**ಭೋಳೆತನ**. ಬೋಳೆಯತನ (ನಾ). ೧. ಸರಳಸ್ವಭಾವ ; ಮುಗ್ಧತೆ : ಉರಿಯ ಹಸ್ತವ ಕೇಳಲಾ ಶಂಕರನು ತಿಳಿಯದೆ ಭೋಳೆತನದಲಿ ಕೊಟ್ಟು ಮರುಳ್ಗೆಗೊಡೆಯನಾದನಲಾ (ಅಶ್ವಾಲ. ೩-೨೮) ; ಅವಳ ಆ ಮಾತು ಕೇಳಿ, ನನ್ನ ಭೋಳೇತನದ ಅರಿವಾಗಲು ನನಗೆ ನಗು ಬಂದಿತು (ಹಿಂತ್ಕೆ. ೦೫೫) ; ನಮ್ಮ ತಂದೆ ಭೋಳೆತನದಿಂದ . . . ತಮ್ಮ ಎಲ್ಲಾ ಆಸ್ತಿಯನ್ನು ನಾಶಮಾಡಿಕೊಂಡರು (ಇತಿಶ್ರೀ. ೨೦೨). ಬೋಳೆಯತನ : ೨. ಮೂರ್ಖತನ ; ಅಜ್ಞಾನ : ಜನಪನೀತಿಯೊ ಮೇಣು ಬೋಳೆಯ ತನವೊ . . . ನಾವಜರಿಯೆವು (ಕುವ್ಯಾಅ. ೨೦-೩೩) ; ಕೇಳು ಸನ್ನಾತನ ವಿನೋದದ ಖೂಳ ಬೋಳೆಯತನದಲೊದಗಿದ ಬಾಳಿಕೆಯ ಬೇಸರವನು (ಕುವ್ಯಾಕ. ೧-೦೭). [ ಭೋಳೆ + –ತನ ]

**ಭೋಳೆಭಾವಿಕ** (ನಾ). = ಭೋಳೆ ೧ : ಬಾದಶಹ ತನ್ನ ಮಿತಿಮೀರಿದ ಠಕ್ಕತನ ತೋರಿಸಿ ಭೋಳೆಭಾವಿಕರಿಂದ ದೊಡ್ಡ ಸತ್ಪುರುಷನೆಂದೆನಿಸಿಕೊಳ್ಳುತ್ತಿದ್ದ (ತಃಣಾ. ೦೦೦). [ಭೋಳೆ + ಭಾವಿಕ ]

**ಭೋಳೆಭಾವಿಕತನ** (ನಾ). = ಭೋಳೆತನ ೧ : ಆತನ ಭೋಳೆಭಾವಿಕತನಕ್ಕೆ ಮೋಹಿತನಾಗಿ ಆತನನ್ನು ತೀರ ಹತ್ತಿರ ಕುಳ್ಳಿರಿಸಿಕೊಂಡು ಕುಶಲ ಪ್ರಶ್ನೆಗಳನ್ನು ಕೇಳಿದನು (ತುಳಸೀ. ೦೩೪). [ಭೋಳೆಭಾವಿಕ + —ತನ]

**ಭೋಳೇಸ್ವಭಾವ** (ನಾ). = ಭೋಳೆತನ ೧ : ನೀನು ಶುದ್ಧ ಭೋಳೇ ಸ್ವಭಾವದವ (ಕುರುಕಾ. ೪೪). [ ಭೋಳೆ + ಸ್ವಭಾವ ]

**ಭೌಗೋಳಿಕ** (ಗು). ೧. ಭೂಗೋಳಕ್ಕೆ ಸಂಬಂಧಿಸಿದ. ೨. ಭೂಮಿಯಂತಿರುವ: ಅವು ಭೌಗೋಳಿಕ ಗ್ರಹಗಳಿಗಿಂತಲೂ (ಅಂದರೆ ಭೂಮಿ, ಬುಧ, ಶುಕ್ರ, ಮಂಗಳ ಗ್ರಹಗಳು) ಹೆಚ್ಚುಹೆಚ್ಚು ಸ್ಥೂಲ ಮತ್ತು ಗಾತ್ರ (ಊಹುಬ್ಬು. ೭). [ಸಂ. ಭೌಗೋಳಿಕ]

**ಭೌತ** (ಗು). ೧. ಪೃಥ್ವಿ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶಗಳೆಂಬ ಪಂಚಭೂತಗಳಿಗೆ ಸಂಬಂಧಿಸಿದ. ೨. ಭೂತ, ಪಿಶಾಚಿಗಳಿಗೆ ಸಂಬಂಧಿಸಿದ ; ಅತಿಮಾನುಷವಾದ. ೩. ಉನ್ಮತ್ತವಾದ; ಹುಚ್ಚುಹಿಡಿದ. (ನಾ). ೪. ಪಂಚಭೂತಗಳಿಂದ ಹುಟ್ಟಿದುದು ; ಪಂಚಭೂತಾತ್ಮಕವಾದುದು : ಶರೀರವೂ ಭೌತ, ಅದರಲ್ಲಿನ ರಕ್ತ, ಮೂಳೆ, ಮಾಂಸ, ಮಜ್ಜಾದಿಗಳೆಲ್ಲವೂ ಭೌತ (ತೀವಾತ್ಕ. ೦೦೪). ೫. ಪಿಶಾಚಿಗಳ ಆರಾಧಕ ; ಭೂತಗಳ ಉಪಾಸಕ. ೬. ದೇವರ ಪೂಜೆಯ ಆಧಾರದಿಂದ ಜೀವಿಸುವವನು ; ದೇವಲ. ೭. ಗೃಹಸ್ಥನು ಪ್ರತಿದಿನವೂ ಆಚರಿಸಬೇಕಾದ ಪಂಚಯಜ್ಞಗಳಲ್ಲಿ ಒಂದು : ಭೂತಯಜ್ಞ. ೮. (ದೆವ್ವ, ಭೂತ ಮೊದಲಾದ) ದುಷ್ಟಶಕ್ತಿಗಳ ಸಮೂಹ. [ಸಂ.]

**ಭೌತವಸ್ತು** (ನಾ). ಪಂಚಭೂತಗಳಿಂದಾದ ವಸ್ತು ; ಪದಾರ್ಥ : ಭೌತವಸ್ತುಗಳು ಭೌತವಿಜ್ಞಾನಕ್ಕೆ ಸಂಬಂಧಪಟ್ಟವುಗಳು (ತೀವಾತ್ಕ. ೪೨). [ಸಂ.]

**ಭೌತವಾದಿ** (ನಾ). ಪಂಚಭೌತಿಕವಸ್ತುಗಳಿಗಿಂತ ಭಿನ್ನವಾದ ಆತ್ಮನನ್ನು ಒಪ್ಪದಿರುವ ಮತದವನು ; ಚೇತನಶಕ್ತಿಯೊಂದಿಲ್ಲದೆ ಆತ್ಮನ ಎಲ್ಲ ಕಾರ್ಯಗಳೂ ಭೌತದ್ರವ್ಯದಿಂದಲೇ ಆಗುವುದೆಂಬುದನ್ನು ಪ್ರತಿಪಾದಿಸುವವನು : ಭೌತವಾದಿಗಳು (ಲೋಕಾಯತಿಕರು) ಸ್ಪಷ್ಟವಾಗಿ ಇದೆಲ್ಲ ಅಸಂಬದ್ಧ ಎನ್ನುತ್ತಾರೆ (ಪವ್ಯಕಾ. ೦೨೬) ; ಅಭೌತ ಆತ್ಮವೆಂಬ ಬೇರೊಂದು ವಸ್ತು ಅನಾವಶ್ಯಕವೆಂದು ಭೌತವಾದಿಗಳ ವಾದ (ತೀವಾತ್ಕ. ೦೦೯). [ ಸಂ. ಭೌತವಾದಿನ್ ]

**ಭೌತವಿಜ್ಞಾನ** (ನಾ). ಪ್ರಕೃತಿಯ ಶಕ್ತಿಗಳನ್ನು ತಿಳಿಸುವ ಶಾಸ್ತ್ರ ; "ದ್ರವ್ಯದ ಮತ್ತು ಶಕ್ತಿಯ ಲಕ್ಷಣಗಳನ್ನೂ ಅಥವಾ ಶಕ್ತಿಯ ನಾನಾರೂಪಗಳು ದ್ರವ್ಯದ ಮೇಲೆ ಉಂಟುಮಾಡುವ ಪರಿಣಾಮವನ್ನೂ ಕುರಿತ ಶಾಸ್ತ್ರ" (Physics. ಇಂಕಹ) : ಯಾಂತ್ರಿಕವಾದದಿಂದ ಜಗತ್ತನ್ನು ವಿವರಿಸಲು ಹೊರಟ ಭೌತವಿಜ್ಞಾನದ ಪ್ರಗತಿಯು ಎರಡನೆಯ ಘಟ್ಟವೆನ್ನಬಹುದು (ಜುಕ್ಕಾರ. ೬ ೩೬೦೪). [ಸಂ.]

**ಭೌತಶರೀರ** (ನಾ). ಪಂಚಮಹಾಭೂತಗಳಿಂದಾದ ದೇಹ : ಶಾಂತಲೆಯ ಈ ಸುಂದರಸ್ವಪ್ನ ಅಲ್ಲಿಗೇ ಕೊನೆಗಂಡಿತು. ಆಕೆಯ ಭೌತಶರೀರ ಆಗ ಎಚ್ಚರಗೊಂಡಿತು (ಶಾಂತಲಾ. ೪೨). [ಸಂ.]

**ಭೌತಶಾಸ್ತ್ರ** (ನಾ). = ಭೌತವಿಜ್ಞಾನ : "ಅಥಾತೋ ವಸ್ತುಜಿಜ್ಞಾಸಾ" ಎಂಬೀ ಸೂತ್ರದಿಂದ ನಾವು ಭೌತಶಾಸ್ತ್ರವನ್ನು ಪ್ರಾರಂಭಿಸಿದರೆ ಉಚಿತವಾಗಿರುವುದು (ಭೌಶಾ. ೧) ; ಒಂದು ನಕ್ಷತ್ರದಿಂದ ಹೊರಟ ಕಿರಣವು ಕಣ್ಣಿನ ತಂತುವಿನ ತನಕ ಹೇಗೆ ಬರುತ್ತದೆ ? ಎಂಬ ವಿಚಾರವನ್ನು ಭೌತಶಾಸ್ತ್ರವು ಚಿತ್ರಿಸಬಲ್ಲದು (ತೀವಾತ್ಕ. ೧೦೨). [ಸಂ.]

**ಭೌತಿಕ** (ಗು). ೧. ಭೂಮಿ ಮೊದಲಾದ ಪಂಚಭೂತಗಳಿಂದಾದ ; ಐಹಿಕವಾದ : ಈ ಧರಣೀಭಾರಮನಾಂ ಬಿಸುಟ್ಪೊಡದು ಚೀ ಲೋಕಕ್ಕೆ ಬಾತ್ಸಾಸಮೀಕರಣಂ ಭೌತಿಕಮೋದಕಪ್ಯತಿಕರಂ ತಾನೆಂಬುದಂ ಮಾಡದೇ (ಅಂಕ್ರು. ೪-೮೦). ೨. ಜೀವಿಗಳಿಗೆ ಸಂಬಂಧಿಸಿದ. ೩. ಭೂತ, ಪ್ರೇತಾದಿಗಳಿಗೆ ಸಂಬಂಧಿಸಿದ. (ನಾ). ೪. ಪಂಚಭೌತಿಕವಾದುದು ; ಶರೀರ ಮುಂತಾದುವು. ೫. ಜ್ಯೋತಿಶ್ಶಾಸ್ತ್ರವನ್ನು ಬಲ್ಲವನು ; ಜ್ಯೋತಿಷಿ : ಮುಲೆಯ[ದೆ] ಶಾಂಬ್ಯ ಮಟ್ಟವಿರು ಭೌತಿಕ ಪೊಂಗಿ ಕಡಂಗಿ ಬಾಗದಿರ್ (ಎಕ. II. ೬೯-೩೭ ; 1100) ; ದುರ್ಭಿಕ್ಷಾದಿ ರಾಜ್ಯಾರಿಷ್ಟಕ್ಕೇನಂ ಮಾಳ್ಪೆನೆಂದು ಭೌತಿಕರಂ ಬರಿಸಿ ಕೇಳ್ವುದುಂ (ರಾಜಾವ. ೬೫). ೬. ತಪಸ್ವಿ ; ತಾಪಸಿ : ಆ ಭೌತಿಕನರಸಂ ತಾನೆಂದು ಕಾಡುವೆನಲ್ಲಿಂ ಕನ್ಯಾಮರೆಯಿಂ ಗತಯೌವನರ್ಗನಲುರಿದಂ ವಿರಹಾಗ್ನಿ ಪರ್ಚೆ ಶಾಂತನು ಭೂತಂ (ನೇಮಿಪು. ೩-೨೬). ೭. ಶಿವ : ಈಶ್ವರ. ೮. ಮುತ್ತು ; ಮೌಕ್ತಿಕ. ೯. ಜೀವಿ ; ಪ್ರಾಣಿ. ೧೦. ಭೂತ, ದೆವ್ವ ಮುಂತಾದ ದುಷ್ಟ ಶಕ್ತಿಗಳಿಂದ ಆವೃತವಾಗುವುದು ; ದೆವ್ವ ಹಿಡಿಯುವುದು. [ಸಂ.]

**ಭೌತಿಕತೆ** (ನಾ). ೧. ಐಹಿಕವಿಚಾರಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡುವ ಪ್ರವೃತ್ತಿ : ಸ್ಟೂಅರ್ಟನ ಕಣ್ಣಿಗೆ ಮಾತ್ರ ಇದು ಭಾರತೀಯ ಯುವಕರ ಭಯಂಕರವಾದ ಭೌತಿಕತೆಯೆಂದೇ ಕಾಣುತ್ತದೆ (ಹೊಸಕ್ರ. ೨೯೬). ೨. ಪಂಚಭೂತಗಳಿಂದ ಆಗುವಿಕೆ : ಈ ರೀತಿ ಭೌತಿಕತೆ, ಪಾರಮಾರ್ಥಿಕತೆ ಹಾಗೂ ದಾರ್ಶನಿಕತೆ ಇವು ಈ ಲಿಂಗಗಳ ಮೂರು ಪ್ರಧಾನಸ್ವರೂಪಗಳು (ಶರಪ. ೦೯೬). [ಸಂ. ಭೌತಿಕತಾ]

**ಭೌಮ** (ಗು). ೧. ಭೂಮಿಗೆ ಸಂಬಂಧಪಟ್ಟ ; ಭೂಮಿಗೆ ಸೇರಿದ : ಕಣ್ಗೊಂಡುದೆತ್ತಂ ಪರಿಯುತ್ತುಂ ಭೌಮವೈಹಾಯಸವಧವಿಧಮುಂ ತೋಱುತರಿ ದಂತಿಸೈನ್ಯಂ (ಜಗಪು. ೭-೬೦). ೨. ಮಣ್ಣಿನಿಂದ ಮಾಡಿದ. (ನಾ). ೩. ಭೂದೇವಿಯ ಮಗ ; ಅಂಗಾರಕ ;

ಮಂಗಳ: ಕುಜ: "ಅಂಗಾರಕಃ ಕ್ಷಿತಿಸುತೋ ಭೌಮಂನೆನೆ ಮಂಗಳಾಖ್ಯಂ" (ಚುಂಗರಾ. ೧೦-೬): ಧ್ರುವಮಬ್ಬಾಹಿತನೊಂದು ಭೌಮನೆರಡಿಂದುತ್ತನ್ನ ನೊಯಿತ್ತು . . . ಸಂವತ್ಸರಕ್ಕೀಶರಪ್ಪವರ್ (ಶಾಂತಿ. ೯-೦೪); ಭೌಮನು ದಗ್ಗಗ್ರಾಹದೊಳ್ . . . ಧಿಷಣಂ ಕರ್ಕಿಯೊಳ್ಸೆಂತಮಿಂತಿರ್ಪಿನಂ . . . ಪುತ್ರನಂ ಪೆತ್ತಳಿಂಗಳ್ (ಸುಕುಮಾ. ೦೧-೨೬): ಜೀವ ಭಾಸ್ಕರ ಭೌಮ ರಾಹುಕ್ಷಾಯಿಗಳು ಗುರು ಮಂದರಭಿಭವದಾಯಿಗಳು ವಿಪರೀತ ದೆಸೆ ಬುಧ ಶುಕ್ರ ರಾಹುಗಳ ಯಾಯಿಗಳಿಗಪಜಯ ನಿವಾಸಸ್ಥಾಯಿಗೊಳ್ಸಿತು (ಕುಬ್ಜಾ. ೨೨-೪). 'ಭೌಮವಾರ' ಪರಾ. ೪. ಭೂದೇವಿಯ ಮಗ: ನರಕಾಸುರ: ಚೋದಿತರಥನಸುರಾರಿಗೆ ಮಾರಾಂತನಾಜಿಭೀಮ ಭೌಮಂ (ಹರಿ. ೦೨-೩೫): ಭೌಮ ನಿರುದ್ಧ ಕನ್ಯಾನಿಳಯುವನು ದೈತ್ಯಾರಿ ಹೊಕ್ಕನು (ಕಥಾಗ ೦೦-೬೯-೪೯). ೫. ಭೂಮಿಯಲ್ಲಾಗುವ ಉತ್ಪಾತ; ಭೂಕಂಪನ: ಭೂಮಿಯೊಳಪ್ಪುವ ಭೌಮಂ ಜೀಮೂತದೊಳಪ್ಪುದಾಂತರಿಕ್ಷಂ ಗ್ರಹದಿಂ ತಾಮಪ್ಪುದು ದಿವ್ಯಮೆನಲ್ ಈಮೂತ್ರಯುದೀಂದ್ರಮಸೆವುತ್ಪಾತಂಗಳ್ (ಚಿಲ್ಲು. ೫-೦). ೬. ಭೌತಿಕವಾದ ವಸ್ತು; ಭೌತದ್ರವ್ಯ. ೭. ನೀರು: ಜಲ. ೮. ಬೆಳಕು; ಪ್ರಕಾಶ. ೯. ಆಕಾಶ; ಗಗನ. ೧೦. ಅತ್ರಿ ಮುನಿಯ ಹೆಸರು. ೧೧. ಕಾಳು; ಧಾನ್ಯ. ೧೨. [ಅಶ್ವಶಾ] ಕುದುರೆ ಸವಾರಿಯ ಒಂದು ರೀತಿ: ಪರಿಬಂಧನಮುಂ ಭೌಮಂ ಪ್ರೈಹಾಯಸಂ ವಯಸ ಯಂತ್ರಕ್ಷೇತ್ರ ಪಹಳಿ ಸತ್ಕಂ ದ್ವಾರಮೆಂಬ ಭೇದಂಗಳಿಂದಶ್ವಮ ನೇರಿಲು ರೇಚಿಗನ್ನಪತಿ ಶಾನೆ ಬಲ್ಲಂ (ಚಂದ್ರಪ್ರ. ೦-೨೦). [ಸಂ.]

**ಭೌಮಚಾರಿ** (ನಾ). [ನಾಟ್ಯ] ಭೌಮ ಮತ್ತು ಆಕಾಶವೆಂಬ ಚಾರಿಗಳಲ್ಲಿ ಒಂದು ಬಗೆ: ಕಾಲು ನೆಲವನ್ನು ಬಿಟ್ಟಿರದೆ ಚಲಿಸುವ ಒಂದು ಬಗೆಯ ಚಲನೆ: ಭೌಮಚಾರಿಗಳನ್ನು ಮುಖ್ಯಯುದ್ಧ, ಅಂಗಹಾರ, ನಾಟ್ಯ ಇವುಗಳಲ್ಲಿ ಉಪಯೋಗಿಸಬೇಕು (ಲಾಸ್ಯರಂ. ೩೦೬ ಗದ್ಯಾನುವಾದ). [ಸಂ. ಭೌಮಚಾರೀ]

**ಭೌಮನಿಮಿತ್ತ** (ನಾ). [ಜೈನ] ಎಂಟು ಬಗೆಯ ನಿಮಿತ್ತಗಳಲ್ಲಿ ಒಂದು: ಭೂಮಿಯ ಮೇಲೆ ಸಂಭವಿಸುವ ಆಗುಹೋಗುಗಳಿಂದ ಶುಭಾಶುಭ ಫಲಗಳನ್ನು ತಿಳಿದುಕೊಳ್ಳುವುದು: ೧ ಭೂಮಿಯ ಘನ, ಸುಷಿರ, ಸ್ನಿಗ್ಧತೆ, ರೂಕ್ಷತೆ ಮೊದಲಾದುವುಗಳಿಂದ ತಾಮ್ರ, ಕಬ್ಬಿಣ, ಬೆಳ್ಳಿ, ಬಂಗಾರಗಳ ಹಾನಿ ಅಥವಾ ವೃದ್ಧಿಯನ್ನು ತಿಳಿಯುವುದು: ಭೂಮಿಯ ಕಾಟಿತವರ್ಮೊದಲಾದುದಂ ನೋಡಿ ನಯಾನಯಂ ಪೇಳ್ವುದಂ ಭೌಮನಿಮಿತ್ತಮೆಂಬುದು (ಶ್ರಾವಕಾ. ೬೩-೭೭). 'ನಿಮಿತ್ತ' ಪರಾ. [ಸಂ.]

**ಭೌಮಮಂಡಲ** (ನಾ). [ನಾಟ್ಯ] ಚಾರಿಗಳ ಸಮುದಾಯವಾದ ಭೌಮಮಂಡಲ ಮತ್ತು ಆಕಾಶಮಂಡಲ ಎಂಬ ಮಂಡಲದ ಎರಡು ಬಗೆಗಳಲ್ಲಿ ಒಂದು: ಭ್ರಮರ, ಆಸ್ಕಂದಿತ, ಆವರ್ತ, ಶಕಟಾಸ್ಯ, ಅಡ್ಡಿತ, ಸಮೋಸರಿತ [ಮತ್ತಲ್ಲಿ], ಅಧ್ಯರ್ಧಿಕ, ಪಿಲಕಾಕ್ರೀಡಿತ, ಪಿಷ್ಟಕುಟ್ಟ, ಚಾಷಗತಿ ಈ ಹತ್ತು ಭೌಮಮಂಡಲಂಗಳ್ (ಲಾಸ್ಯರಂ. ೯-೪೨). [ಸಂ.]

**ಭೌಮವಾರ** (ನಾ). ಮಂಗಳವಾರ: ಭೀಮನಿಗೆ ಭಾನುವಾರವಾದರೇನು? ಭೌಮವಾರವಾದರೇನು? ಭೋಜನ ಸಿಕ್ಕಿದರೆ ಸೈ (ಗಾದೆ). [ಸಂ.]

**ಭೌಮವಾಸರ** (ನಾ). ಭೌಮವಾರ: ಸಂಕಲ್ಪ ಹೇಳುವಾಗ ಭೌಮ ವಾಸರ ಎಂದು ಹೇಳುವುದು ಪದ್ಧತಿ (ರೂಢಿ). [ಸಂ.]

**ಭೌಮವಿಹಾರ** (ನಾ). ಭೂಲೋಕದಲ್ಲಿ ಮಾಡುವ ವಿನೋದಾರ್ಥವಾದ ಸಂಚಾರ: ಎನ್ನಂತಿನ ಭರ್ತಾರಂ ಪಾಣಿಪೀಡನಂಬೋಂ ವಿದ್ಯಾಧರನಾತ ನೊಡನೆ ಭೌಮವಿಹಾರಾರ್ಥಂ ತೊಟಲ್ಗಲ್ಲಿ (ಪಾರ್ಶ್ವಾ. ೩೩-೨); ಭವನವಾಸಿ ಗಳೊಳನಂತವೀರ್ಯನುಂ ಮಹಾಬಲನುಮೆಂಬ ಪೆಸರೊಳಸುರರಾಗಿ ಪುಟ್ಟಿ ಭೌಮವಿಹಾರಾರ್ಥಂ ಪೋಗಿ (ಚಂದ್ರಪ್ರ. ೯-೭೭ ವ). [ಸಂ.]

**ಭೌಮಾಗ್ನಿ** (ನಾ). ಭೂಮಿಯಲ್ಲಿರುವ ಮರ, ಕಲ್ಲು ಮೊದಲಾದುವು ಗಳಿಂದ ಉಂಟಾಗುವ ಬೆಂಕಿ: ತರು ಪಾಷಾಣಾದಿ ಗರ್ಭಸ್ಥಮಾಗಿ ವ್ಯಕ್ತಮಪ್ಪ ಭೌಮಾಗ್ನಿ . . . ಸೂಕ್ಷ್ಮ ಬಿಂದುರೂಪ ಪಂಚಾಗ್ನಿಗಳನುಂ (ವಿವೇಕ. ೦೪೪). [ಸಂ.]

**ಭೌಮಾಷ್ಟಮಿ** (ನಾ). ಮಂಗಳವಾರದಂದು ಬರುವ ಅಷ್ಟಮಿ: ಆ ನೃಪತಿ ಬಟಿಕೆ ತಾಯುಂ ತಾನುಂ ಚಂಡಿಕೆಯ ಪೂಜೆಗೆಂದೆಟ್ಟಿಂದಾ ನಾನಾವಿಧವರ್ಚನೆಯಿಂ ಮಾನೋಮಿಯ ಮುಂದೆ ಬಂದ ಭೌಮಾಷ್ಟಮಿ ಯೊಳ್ (ಯಶೋಚ. ೩-೨೩). 'ಜೀವದಯಾಷ್ಟಮಿ' ಪರಾ. [ಸಂ. ಭೌಮಾಷ್ಟಮೀ]

**ಭೌರಿಕ** (ನಾ). ಅರಮನೆ ಮುಂತಾದವುಗಳ ಭಂಡಾರದ ಅಧಿಕಾರಿ; ಕೋಶಾಧಿಕಾರಿ: "ಭೌರಿಕಃ ಕನಕಾಧ್ಯಕ್ಷಃ—ಭಂಗಾರದ ಅಧಿಕಾರವುಳ್ಳವನು, ಖಜಾನೇ ಅಧಿಕಾರಿ" (ನಿಘಂ. ೨೪೭); ಕಣ್ಗೊಳಿಪ ಭಂಡಾರದ ಮನೆಯು ನೆಯ್ಯಿ ಕಾಳ್ಗಿರ್ದು ತದ್ಭೌರಿಕಂಗೆ ಪೇಳ್ಲು (ಕದ್ಯಾ. ೫-೪೦). [ಸಂ.]

**ಭೌಷೆ, ಭೋಷ** (ನಾ). ಮರ್ಯಾದೆ: ಎಲ್ಲರುಂ ಮೆಲ್ಲನೆ ಕಯ್ಯುಮಂ ಕಾಲುಮಂ ಪಿಡಿದೆತ್ತಿ ಕೊಂಡು ಹೋಗಿ ತಮ್ಮಾರಂಭ್ಯ ಭೌಷೆ [ಪಾಠಾಂ. ಕಲುಷೆ, ಬಾಷ್ಪ]ಗಳಂ ಪೂಜಿಸುವಂತೆ ಚಪ್ಪರದ ಪೂಜಗೆ ಮೆಲ್ಲನಿಳಿಪಿ (ವಡ್ಡಾರಾ. ೬-೩೩). **ಭೋಷ**: ಹುಮ್ಮಿನಿಂದಪಕಿರವ ನೀಗಿದ ಹಮ್ಮಿನಿಂ ಸುರ ರಾಜ ಭೋಷವ ಹೋಗಲಾಡಿದನು (ತುಕಿರಾ. ೬-೩೦); ದೇಶಾವರಕ್ಕೆ ಹೋಗಿ ಭೋಷ ಕಳೆದುಕೊಂಡ (ಗಾದೆ): ಸಹಾಪರಾಯನ ಭೋಷ ನಾಕದಲ್ಲಿ ಹೋಯಿತು (ಗಾದೆ). 'ಭೋಷವಂತ' ಪರಾ. [ ? ]

**ಭೌಳಿ** (ನಾ). [ಸಂಗೀತ] ಒಂದು ರಾಗದ ಹೆಸರು: ಸಮಸ್ತರಾಗಂ ಗಳೊಳಗೆ ರಾಮಕ್ರಿಯೆ . . . ಭೌ[ಪಾಠಾಂ. ಬೌ]ಳಿ . . . ಮಧ್ಯಮಾವತಿ ಯೆಂಬ ಮೂವತ್ತಾರುರಾಗಂಗಳೇ . . . ಪ್ರಸಿದ ಗೂಂಡಿರ್ಪವು (ವಿವೇಕ. ೨೩೪). [ಸಂ. ಭೌಲೀ]

**ಭ್ಯವಹಾರ** 'ಬೆವಹಾರ' ನೋ.

**ಭ್ರಂಶ** (ನಾ). ೧. ಕೆಳಕ್ಕೆ ಬೀಳುವುದು; ಕುಸಿಯುವುದು: ಪತನ. ೨. ಓಡಿ ಹೋಗುವುದು; ಪಲಾಯನ. ೩. ಕಮ್ಮಿಯಾಗುವುದು; ಕುಗ್ಗುವುದು. ೪. ಬೇರೆಯಾಗುವುದು; ಅಗಲುವುದು. ೫. ನಷ್ಟ; ಹಾನಿ. ೬. ನಾಶ; ಹಾಳು. ೭. ಕ್ರಮ ತಪ್ಪುವುದು; ಹಾದಿ ತಪ್ಪುವುದು. ೮. ಮರೆಯಾಗುವುದು; ಅದೃಶ್ಯವಾಗುವುದು. ೯. [ಕಾವ್ಯಮೀ] (ನಾಟಕದಲ್ಲಿ) ಉದ್ರೇಕದಿಂದ ಬಾಯಿ ತಪ್ಪುವುದು. [ಸಂ.]

**ಭ್ರಂಶಿಸು** (ಕ್ರಿ). ಭ್ರಂಶವನ್ನುಂಟುಮಾಡು: ತತ್ತ್ವಜ್ಞಾನರೂಪದರಿ ಭ್ರಂಶಿಸುವ ಮಾಯಾಗುಣಪ್ರಧ್ವಂಸನವನಭಿವಾಸಿಸುವನಾ ಕಂಸಹರನು (ಕಥಾಗ. ೨-೩-೪೯). [ಭ್ರಂಶ + — ಇಸು]

**ಭ್ರಕುಂಸ** (ನಾ). ಹೆಣ್ಣುವೇಷವನ್ನು ಧರಿಸಿರುವ ನಟ: "ಭ್ರಕುಂಸಃ, ಭ್ರುಕುಂಸಃ, ಭ್ರೂಕುಂಸಃ—೩ ಸ್ತ್ರೀವೇಷಧಾರೀ—ಹೆಣ್ಣುವೇಷವನ್ನು ಧರಿಸಿದ—ನರ್ತಕಃ—ಪುರುಷಃ, ಕುಣಿಯುವ ಗಂಡಿನ ಹೆಸರುಗಳು" (ನಿಘಂ. ೬೦). [ಸಂ.]

**ಭ್ರಕುಟಿ** (ನಾ). (ಕೋಪ ಮೊದಲಾದ ಕಾರಣಗಳಿಂದ) ಹುಬ್ಬು ಗಂಟಿಕ್ಕಿಕೊಳ್ಳುವುದು: "ಭ್ರಕುಟಿಃ, ಭ್ರುಕುಟಿಃ, ಭ್ರೂಕುಟಿಃ—೩ ಕಣ್ಣಿನ ಹುಬ್ಬುಗಳನ್ನು ಗಂಟಿಕ್ಕುವದಕ್ಕೆ ಹೆಸರುಗಳು" (ನಿಘಂ. ೭೦). [ಸಂ.]

**ಭ್ರಮ** (ನಾ). ೧. ಅಲೆದಾಡುವುದು; ಸುತ್ತಾಟ. ೨. (ದುಂಬಿ ಮೊದಲಾದ ಕೀಟಗಳಂತೆ) ಹಾರಾಡುವಿಕೆ; ಭ್ರಮಣ. ೩. ವೃತ್ತಾಕಾರದ ಚಲನೆ: ಗುಂಡಗೆ ತಿರುಗುವುದು: "ಭ್ರಮಃ, ಭ್ರಮಿಃ — ೨ ತಿರುಗುವಿಕೆ, ಸುತ್ತುವಿಕೆ" (ನಿಘಂ. ೩೩೭). ೪. ಸುಳಿ; ಆವರ್ತ;

"ಆವರ್ತಃ. ಅಂಭಸಾಂ. ಭ್ರಮಃ — ನೀರುಗಳ ಸುಳಿಗುಂಡೀ ಹೆಸರು" (ಸಿದ್ಧಾಂತ. ೬೬). ೫. ದಾರಿ ಬಿಟ್ಟುಹೋಗುವುದು; ಅಡ್ಡದಾರಿ ಹಿಡಿಯುವುದು. ೬. ತಪ್ಪು: ದೋಷ. ೭. ತಲೆಸುತ್ತುವಿಕೆ; ತಲೆ ತಿರುಗುವಿಕೆ. ೮. ತಪ್ಪುತಿಳಿವಳಿಕೆ; ಭ್ರಾಂತಿ: "ಭ್ರಾಂತಿಃ, ಮಿಥ್ಯಾಮತಿಃ, ಭ್ರಮಃ — ೩ ಭ್ರಾಂತಿ. ಅಂದರೆ ಒಂದನ್ನು ಮತ್ತೊಂದನ್ನಾಗಿ ತಿಳಿದು ನಂಬುವಿಕೆ" (ಸಿದ್ಧಾಂತ. ೪೩): ಜನಿತ ಕುದೃಷ್ಟಿ ಭ್ರಮಮತಿಘನಮೋಹತಮಃಸಮಾವೃತಂ ಜಗಂ (ತಂತ್ರಕೌ. ೯-೩೦). ೯. ತೊರೆ; ಸಣ್ಣಹೊಳೆ. ೧೦. ಕುಂಬಾರನ ಚಕ್ರ; ತಿಗುರಿ. ೧೧. ಬೀಸುವ ಕಲ್ಲು. ೧೨. ಛತ್ರಿ; ಕೊಡೆ. ೧೩. ವೃತ್ತ; ಮಂಡಲ. ೧೪. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು: ಒಂದು ವಸ್ತುವನ್ನು ಸಾಮ್ಯದಿಂದ ಬೇರೊಂದೆಂದು ತಿಳಿದುಕೊಳ್ಳುವುದು; ಭ್ರಾಂತಿಮದಲಂಕಾರ: ಚಿತ್ರಮೋಹನಂ ಭ್ರಮಮಾಕ್ಕುಂ (ಕಾವ್ಯಾವ. ೬೦೬). [ಸಂ.]

**ಭ್ರಮಣ** (ನಾ). ೧. ತಿರುಗಾಟ: ಅಲೆದಾಟ: ಸಂಚಾರ: ಸುತ್ತಮುತ್ತಲೂ ಇದ್ದ ರಮಣೀಯಸ್ಥಳಗಳಲ್ಲಿ ಭ್ರಮಣ ಮಾಡುವುದೆಂದು ಅವನು ನಿಶ್ಚಯಿಸಿಕೊಂಡನು (ವ್ಯಾಸಂ. ४೦). ೨. ಗುಂಡಗೆ ತಿರುಗುವುದು; ಪರಿಭ್ರಮಣ: ಅವಜಿನವಿರಳವಾ ತೂಳಿಕಾಭ್ರಮಣಪರಿಗತ ತೂಳಿಕಾತಳಮಪ್ಪ ಮನಕ್ಕಂತಾನುಂ ಕಾಲಲಬ್ಧವಶದಿಂ ನಿವೃತ್ತಿಪರಿಣತಿಯೊಳ್ ಪರಿಣಮಿಸಿದ ಸುಸ್ಥತೆಯುಂ ವ್ಯರ್ಥಂ ಮಾಡದೆ (ತಂತ್ರಕೌ. ೯-೧೬ ವ). ೩. ಮಲ್ಲಯುದ್ಧದ ಒಂದು ವರಸೆ; ಜಟ್ಟಿಕಾಳಗದ ಒಂದು ಭಂಗಿ: ನಂದಗೋಪನಂದನಂ . . . ನಿರ್ವರ್ತನಾವರ್ತನ ಭ್ರಮಣ ವಲ್ಗನ ಪ್ಲವನಾವಸ್ಥಾನಾದಿ ಕ್ರಿಯಾಪರಿಣತಂ ತಿರಿಪಿ(ದೊಕ್ಕಿಸಿ)ನಿಂದಾಗಳ್ (ಜಗನ್ನಾಥ. ೩೯೧). ೪. ಗ್ರಹಗಳು ತಿರುಗುವ ಪಥ: ಕಕ್ಷೆ. ೫. ಅದುರುವಿಕೆ; ಕಂಪನ: ಓಷ್ಠಭ್ರಮಣ ಮೋಚಾಗರ್ವಮೋಚಮೆನಿಸುವ ವಾಮೆಯೂರು ಚಾಂಚಲ್ಯಮಾಗಿ ಪ್ರಮುದಿತಾಂತಃಕರಣಮಾಗಲ್ (ವಿಂಶಾಂ. ೫-೧೧-೪೩). ೬. ತತ್ತರಿಸುವಿಕೆ; ಅಸ್ಥಿರತೆ. ೭. ಕಂಗೆಡುವಿಕೆ; ತಬ್ಬಿಬ್ಬು: ದಿಗ್ಭ್ರಮೆ. ೮. ತಲೆ ಸುತ್ತುವಿಕೆ; ತಲೆ ತಿರುಗುವಿಕೆ. ೯. ತಪ್ಪು ಮಾಡುವಿಕೆ. ೧೦. ಸುತ್ತಿಸುವಿಕೆ: ತಿರುಗಿಸುವಿಕೆ. ೧೧. ಪ್ರವಾಸ; ಯಾತ್ರೆ. ೧೨. ಕಟ್ಟಡದ ಅರ್ಧಗೋಲಾಕಾರದ ಮೇಲ್ಛಾವಣಿ; ಗುಮ್ಮಟ. ೧೩. [ನಾಟ್ಯ] ಕಣ್ಣಿನ ಚಲನೆಯ ಒಂದು ಬಗೆ: P "ಅಲಿಗಳನ್ನು ರೆಪ್ಪೆಗಳ ಮಧ್ಯದಲ್ಲಿ ಮಂಡಲಾಕಾರವಾಗಿ ಜಾಗ್ರತೆ ಸುತ್ತಿಸುವುದು" (ಲಾಸ್ಯರಂ. ೨೬೪ ಗದ್ಯಾನುವಾದ): ಭ್ರಮಣ, ವಲನ, ಪಾತ, ಚಲನ, ಪ್ರವೇಶ, ವಿವರ್ತನ, ಸಮುದ್ವೃತ್ತ, ನಿಷ್ಕ್ರಾಮ, ಪ್ರಾಕೃತ—ಈ ಒಂಭತ್ತು [ಸ್ವನಿಷ್ಟ] ಅಲಿಯ ಭೇದಂಗಳ್ ಎರಡೆವೆಗಳ ಮಧ್ಯದೊಳಂ ತಿರುಗಲ್ ಪಟುವಾಗಿ ತಾರೆಗಳ್ ಭ್ರಮಣಾಖ್ಯಂ (ಲಾಸ್ಯರಂ. ೩-೫೪ ವ). ೧೪. (ಅಲಂ) ಹುಟ್ಟುಸಾವುಗಳ ಪರಂಪರೆ; ಭವಾವಳಿ: ಪುಟ್ಟಿ ಕಟ್ಟಿದಾಯುಷ್ಯದ ವಿರಾಮದೊಳ್ ಸತ್ತು ನಾನಾ ಭ್ರಮಣದಿಂ ಒಂದು ಪೂರ್ವೋಕ್ತಸಮಯದ ತದ್ವಿತೀಯಾದಿ ಸಮಯದೊಳ್ ಪುಟ್ಟುತ್ತುಂ ಸಾಪುತ್ತುಂ (ಸಃಶಃವಪ. ೬-೬ ವ). [ಸಂ.]

**ಭ್ರಮಣಿ** (ನಾ). ೧. (ಪ್ರಿಯ, ಪ್ರೇಯಸಿಯರು ಸೇರಿ ಆಡುವ ವೃತ್ತಾಕಾರದ ಚಲನೆಯುಳ್ಳ) ಒಂದು ಬಗೆಯ ಆಟ. ೨. ಜಿಗಣೆ. ೩. ಕ್ರೀಡಾಸಂಚಾರ; ವಿನೋದವಿಹಾರ. [ಸಂ. ಭ್ರಮಣೀ]

**ಭ್ರಮಣೆ** (ನಾ). ೧. ಸುತ್ತುವಿಕೆ: ತಿರುಗುತಿರ್ದುದು ಮರೂಥಂ ಕಾಲಾಲಚಕ್ರದವೊಲಸವಳಿದಂ ಕಜೇಶ್ವರಂ ಭ್ರಮಣೆಯಿಂ ಧ್ವಜದ ಮೇಲೆ (ಶ್ರೀಬಾಹು. ೧೩-೨೦). ೨. ಭ್ರಾಂತಿ: ಭ್ರಮಣೆಯಿಂದಪ್ಪಾಂಗಯೋಗವನು ಮಾಳ್ಪರಿಗೆ ಲಿಂಗಾಂಗಯೋಗಮಿಲ್ಲ (ವ್ಯಾಖ್ಯಾನ ೩-೩೨). [ಸಂ. ಭ್ರಮಣ]

**ಭ್ರಮನಿರಸನ** (ನಾ). ತಪ್ಪು ಕಲ್ಪನೆಯನ್ನು ಹೋಗಲಾಡಿಸುವುದು; ಭ್ರಾಂತಿನಿವಾರಣೆ: ಶೀನೂ ಕುಸುಮಾರ ಬಗ್ಗೆ ನರಹರಿಯಲ್ಲಾದ ತಪ್ಪು ತಿಳಿವಳಿಕೆ ಕೂಲಂಕಷವಾಗಿ ಚಿತ್ರಿಸಲ್ಪಟ್ಟಿದೆ. ಶೀನೂನ ಭ್ರಮನಿರಸನವೂ ಹಾಗೆಯೇ (ಕಮಲ. ೨೭ ೬:೦೪); ಗೋವಿಂದರಾಯರಿಗೆ ಕೊನೆಯ ಗಳಿಗೆಯಲ್ಲಿ ಭ್ರಮನಿರಸನವಾಗಲು ಅವರು ತಮ್ಮ ಔದಾರ್ಯವನ್ನೇ ಇನ್ನಷ್ಟು ಹಿಗ್ಗಿಸಬೇಕಾಯಿತು (ಮಗುವು. ೬೧). [ಸಂ.]

**ಭ್ರಮರ** (ನಾ). ೧. ದುಂಬಿ; ಭೃಂಗ; ಅಳಿ: "ಮಲ್ಲಿಕಾ . . . ಮಾಯಿಸ್ಕರಡಿಯೊಂದೆಲ್ಲಿಯುಮಲರುಣಿಯುಂ ತಾಂ ಬಲ್ಲವರಿಂ ಭ್ರಮರ ಮಕ್ಕುಂ" (ಕವಿಕಂ. ೬೯); ಕಮಳವಿಮೋಹದಿನೀ ನಿನ್ನ ಮೊಗಕ್ಕೆಳಗುವುದು ತೊಳಚುವುದಾ ಸರಸಿಜಮಂ ಭ್ರಮರಂ (ಕವಿರಾ. ೩-೬೯); ತಂದೆ ಜಿನೇಂದ್ರ ಪಾದಕಮಲಭ್ರಮರಂ ಜಿನವಲ್ಲಭೇಂದ್ರಂ (ಆದಿಪು. ೦೨-೪೬); ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ (ಬಸವ. ೩೬೪). ೨. ಕುಂಬಾರನ ಚಕ್ರ; ತಿಗುರಿ. ೩. ಕಾಮುಕ: ವಿಟ. ೪. ಮೋಡಗಳ ಘರ್ಷಣೆಯಿಂದ ಉಂಟಾಗುವ ಬೆಳಕು: ಮಿಂಚು: "ಮಿಂಚು ಭುಜಂಗ ಕಾಮುಕ ಮಧುವ್ರತ ಭ್ರಮರಾಂಕಿತಂ" (ನಾನಾರ. ೬೪). ೫. ತಲೆ ಸುತ್ತುವಿಕೆ: ತಲೆ ತಿರುಗುವುದು. ೬. ಬುಗುರಿ. ೭. [ಕಾಮಶಾ]ಸಂಭೋಗದಲ್ಲಿ ಒಂದು ವಿಧ: ಅಲ್ಲಿ ಪುರುಷನ ಲಿಂಗದಲ್ಲಿ ತನ್ನ ಯೋನಿಯಂ ಸಿಕ್ಕಿಸಿ ಪುರುಷನು ಎರಡು ಕಾಲಂ ನೀಡಿ ಮಲಗಿರೆ ಬುಗುರಿಯಂತೆ ಪದ್ಮಾಸನಂಗಳ ಮಾಡಿ ತಿರುಗುತಿರ್ಪುದು ಭ್ರಮರವೆಂಬುದು (ಕಾಮಶಾ. ೨೩೮). ೮. [ನಾಟ್ಯ] ಸ್ಥಿರಹಸ್ತ ಮೊದಲಾದ ಮೂವತ್ತೆರಡು ಬಗೆಯ ಅಂಗಹಾರಗಳಲ್ಲಿ ಒಂದು; P ನೂಪುರ, ವಿಕ್ಷಿಪ್ತಕ, ಅಲಾತ, ಆಕ್ಷಿಪ್ತ, ಉರೋಮಂಡಲ, ನಿತಂಬ, ಕರಿಹಸ್ತ, ಕಟೀಛಿನ್ನ ಎಂಬ ಕರಣಗಳನ್ನು ಕ್ರಮವಾಗಿ ಪ್ರಯೋಗಿಸುವಿಕೆ: ಸಲೆ ನೂಪುರ ವಿಕ್ಷಿಪ್ತಕಮಲಾತಮಾಕ್ಷಿಪ್ತವೆಸವುರೋಮಂಡಲಮುಂ ನೆಲೆಗೊಂಡ ನಿತಂಬಂ ಕೇಳ್ ಬಲನೇ ಕರಿಹಸ್ತಮುಂ ಕಟೀಛಿನ್ನಾಖ್ಯಂ ಇಂತೊಪ್ಪುವೆಂಟುಕರಣಮುಮಂ ತವೆ ಮಾಡಿದೊಡಂಗಹಾರಮೆನಿಕ್ಕುಂ ಸಂತತ ಭರತಾಗಮದೊಳ್ ಕಾಂತೇ ಕೇಳ್ ಭ್ರಮರಮೆಂಬ ಪೆಸರಂ ತಾಳ್ಗುಂ (ಲಾಸ್ಯರಂ. ೫-೨೨). ೯. ಹತ್ತು ಬಗೆಯ ಭೌಮಮಂಡಲಗಳಲ್ಲಿ ಒಂದು: ಚಂದದ ಶಕಟಾಸ್ಯಮಪಸ್ಯಂದಿತವೆಡಪಾದದಿಂದೆ ಬಲದಿಂ ಭ್ರಮರಂ ಸ್ಯಂದಿತಮದು ವಾಮಂ ಬಲದಿಂದಂ ಶಕಟಾಸ್ಯವೆಡದ ಚಾಷದ ಗತಿಯುಂ ಬಲಪಾದಂ ಭ್ರಮರಮನೆಡಗೆಲಪಾದಂ ಸ್ಯಂದಿತಾಖ್ಯಮುಂ ಸಮೆಯುಲೊಡಂ ಬಲನೇ ಕೇಳ್ ಭ್ರಮರ[ದ] ಮಂಡಲಮೆಂಬೀ ಪೆಸರನಾಂತು ರಂಜಿಸಿ ತೋರ್ಕುಂ (ಲಾಸ್ಯರಂ. ೯-೬). [ಸಂ.]

**ಭ್ರಮರಕ** (ನಾ). ೧. ದುಂಬಿ; ಭ್ರಮರ: ಅನುನಯದಿನೆಜಗಿದಳ್ ಸೀತೆ ನಗುವಿನಂ ಭ್ರಮರಕಂ ಭ್ರಮದ್ಭ್ರಮರಕಮುಂ (ಕಂಠಾಭ. ೬-೪೧). ೨. ಮುಂದಲೆಯ ಗುಂಗುರುಕೂದಲು; ಮುಂಗುರುಳು: "ನೊಸಲನಲೆವ ಕುರುಳ್ ಭ್ರಮರಕಮೆಂಬುದು" (ಕಲಾಯು. ೯೬-೩೬೬); ಬಿಂಡೇಂದುಭಾಲಸ್ಥಲಾಗ್ರಮುಮಮಂ ಕಾಗೆ ಚೆಳಲ್ಲಸದ್ಭ್ರಮರಕಂ ಸಂಭೋಗಿನೀ ಪ್ರಾಂತದೊಳ್ ಸಮಸತ್ತ್ವಂಬಡುವಂತಿರಾಯ್ತು ಸುರತಪ್ರಾರಂಭ ಕೋಳಾಹಳಂ (ಕಾವ್ಯಸಾ. ೬೫೬); ಬಾಷ್ಪಸರಿದ್ವ್ಯಾಲಗ್ನಕೀರ್ಣಭ್ರಮರಕಮಮ್ಲಾನಪಾಂಡುಗಂಡಸ್ಥಲಂ . . . ವ್ಯಥಾನಲ್ಪಸಂಕಲ್ಪಚಿತ್ತಂ ಮುಸುಕಿದರ್ಲಸ್ಯಭಾವಂ ನೆಗಳ್ದಿರೆ ವಿರಹಾಕ್ರಾಂತೆ ಕಾಂತೆಯಿರ್ದಳ್ (ರಾಜಶೇ. ೬-೬೬). ೩. ನೀರಿನ ಸುಳಿ; ಆವರ್ತ. ೪. (ಸುತ್ತು ತಿರುಗುವಾಗ) ಮೊರೆಯುವ ಬುಗುರಿ. [ಸಂ.]

**ಭ್ರಮರಕೀಟ** (ನಾ). ಕಣಜದ ಹುಳು: 'ಭ್ರಮರಕೀಟನ್ಯಾಯ' ಪರಾ. [ಸಂ.]

**ಭ್ರಮರಕೀಟನ್ಯಾಯ** (ನಾ). ಕಣಜದ ಹುಳುವಿನ ಗೂಡಿನಲ್ಲಿರುವ ಯಾವುದಾದರೊಂದು ಹುಳುವು, ಕಣಜವು ಬಂದು ತನ್ನನ್ನು ಚುಚ್ಚುವುದೆಂಬ ಭೀತಿಯಿಂದ ಸದಾ ಅದನ್ನೇ ನೆನೆಯುತ್ತಿದ್ದು, ಕೊನೆಗೆ ಕಣಜದ ಹುಳುವಿನ ಆಕಾರವನ್ನೇ ಪಡೆಯುವ ದೃಷ್ಟಾಂತ: ಭ್ರಮರಕೀಟನ್ಯಾಯದಂದದಲಿ ನೀನೊಲಿಯೆ ತೃಣ ಪರ್ವತವು ಪುಸಿಯೇನು (ಹರಿಕಾ. ೪೦); ಶಿವಾಗಮವು ಭ್ರಮರಕೀಟನ್ಯಾಯದಿಂದ ಶಿವ ಜೀವೈಕ್ಯವನ್ನು ಪ್ರತಿಪಾದಿಸುತ್ತದೆ (ಶಿತ್ವ. ೬೭). [ಸಂ.]

**ಭ್ರಮರವಿಲಸಿತ** (ನಾ). ೧. ತುಂಬಿಯ ಲೀಲೆ.–ವಿಲಾಸ; ತುಂಬಿಯ ಹಾರಾಟ. ೨. [ಛಂದ] ಪ್ರತಿಯೊಂದು ಸಾಲಿನಲ್ಲೂ ಹನ್ನೊಂದು ಅಕ್ಷರಗಳುಳ್ಳ, ತ್ರಿಷ್ಟುಪ್ ಛಂದಸ್ಸಿಗೆ ಸೇರಿದ ಒಂದು ವೃತ್ತ; ಪ್ರತಿಯೊಂದು ಸಾಲಿನಲ್ಲೂ ಮಗಣ, ಭಗಣ, ನಗಣ, ಲಘು ಮತ್ತು ಗುರು –ಹೀಗೆ ಗಣನಿಯಮವುಳ್ಳ ವೃತ್ತ: ಪವಮಾತುರ್ವೀ ಶಿಖಿ ದಿವಿಜ ಲಗಂ ತಾಮೊತ್ತಂ ಬಂದಿರೆ ಯತಿ ಚತುರೋದ್ವಾಮಂ ವೃತ್ತಂ ಘನಜಘನೆಯುಗೇ ನಾಮಂ ಶ್ರೀಮದ್ಭ್ರಮರವಿಲಸಿತಂ (ಛಂದೋಂಬು. ೨-೦೨೦). [ಸಂ.]

**ಭ್ರಮರವೃತ್ತಿ** (ನಾ). ೧. ನಾನಾ ಬಗೆಯ ಹೂವುಗಳಿಂದ ರಸವನ್ನು ಸಂಗ್ರಹಿಸುವ ದುಂಬಿಯ ಕೆಲಸ: ತೊಟ್ಟು ಹನಿ ರಸಕ್ಕಾಗಿ ಹುಡುಕುವ ಹುಚ್ಚು ಹಿಡಿದಿಹ ಹುಳಿಕೆ ಭ್ರಮರವೃತ್ತಿಯು ಬಿಡಿಸಿ ಸುಗ್ಗಿಸು ಒಳಿಕೆ ಬೆಳಕಿನ ಕಳಿಕೆ (ಹೃದಸ. ೦೪-೦೪). ೨. ಚಾಂಚಲ್ಯ; ಅಸ್ಥಿರಪ್ರವೃತ್ತಿ: ಮೊದಲಿನಿಂದಲೂ ಬಲ್ಲೆ ನಿಮ್ಮ ಭ್ರಮರವೃತ್ತಿ, ಎದುರಿಗಿರುವ ಹೂವಿನಿಂದ ಸೆಳೆಯಲ್ಪಟ್ಟು ಅದರಲ್ಲಿಯೇ ರಮಮಾಣನಾಗುವುದು (ದಾಕಹು. ೬೦). [ಸಂ.]

**ಭ್ರಮರಹಿತ** (ನಾ). ೧. ದುಂಬಿಗೆ ಅನುಕೂಲವಾದುದು.—ಹಿತವನ್ನುಂಟುಮಾಡುವುದು. ೨. ಭ್ರಾಂತಿ ಅಥವಾ ತಪ್ಪುಕಲ್ಪನೆ ಇಲ್ಲದುದು; ಯಥಾರ್ಥಜ್ಞಾನವುಳ್ಳುದಂ. ೧, ೨: ಭ್ರಮರಹಿತಂ ವ್ಯಭಾತಿಕಸಮೀರನೆಸಗಿದುದು ಪೋಲ್ವು ಸುವಿಧಿಯ ಬಗೆಯಂ (ಶಿಶ್ಪಪು. ೦೩-೩೪); ಭ್ರಮರಹಿತಾಮೋದಪ್ರದ ಸುಮನೋಗಣಹೃದ್ಯಂ . . . ನೀತಿ ಸುರಪಮೀರುಹಂ (ರಾಜಶೇ. ೦೩-೦೬). [ ಸಂ. ( ಭ್ರಮರ + ಹಿತ; ಭ್ರಮ + ರಹಿತ )]

**ಭ್ರಮರಾಳಕಿ** (ನಾ). ದುಂಬಿಯಂತೆ ಕಪ್ಪಾದ ಮುಂಗುರುಳುಳ್ಳವಳು: ಲೀಲೆಯೊಳ್ ತಾಮ ನಡೆಪದ ಕೇಳೀವನಲತೆಗಳಂ ನಿರೀಕ್ಷಿಸಿ ಸುಯ್ವಾವಾಳವಳಯಂಗಳಂ ಭ್ರಮರಾಳಕಿಯರ್ ಬಾಷ್ಪವಾರಿಯಿಂ ಪೂರಿಸಿದರ್ (ಪುಷ್ಪಪು. ೦೩-೯೯). [ ಸಂ. ಭ್ರಮರಾಲಕೀ ]

**ಭ್ರಮರಿ** (ನಾ). ೧. ಹೆಣ್ಣುದುಂಬಿ. ೨. ಬುಗುರಿ: ವಾಯಸದಂತೆ ನೋಡು ಬಕನಂತಿರೆ ಮೆಲ್ಲನೆ ಮೆಟ್ಟು ಕಚ್ಛಪೋಪಾಯದವಡಂಗು [ಪಾಠಾಂ. ೧] ನಿಲ್ ಭ್ರಮರಿವೊಲ್ [ಪಾಠಾಂ. ಯೊಳ್] ಭ್ರಮಿಯಂತಿರೆ ಬೆಚ್ಚರಾಗು (ಶಪುದ. ೨೪೦ ಕೃಯೋ; ಕಾವ್ಯಾವ. ೪೦೨ ನೋ). ೩. ಸುತ್ತುವುದು; ತಿರುಗುವುದು: 'ಭ್ರಮರಿಗುಡು', 'ಭ್ರಮರಿಗೊಳಿಸು' ಪರಾ. ೪. ಸುತ್ತಿಸುವುದು; ತಿರುಗಿಸುವುದು: (೩). ೫. [ಯೋಗ] ಪ್ರಾಣಾಯಾಮದ ಒಂದು ಭಾಗವಾದ ಕುಂಭಕದಲ್ಲಿನ ಒಂದು ಪ್ರಕಾರ: ಸೂರ್ಯಭೇದನ ಉಜ್ಜಾಯಿ ಸೀತ್ಕಾರಿ ಸೀತಳ ಭಸ್ತ್ರಿಕೆ ಭ್ರಮರಿ ಮೂರ್ಛೆ ಕೇವಲವೆಂಬ ಅಷ್ಟಕುಂಭಕಪ್ರಕಾರಂಗಳಂ (ಒಜೀಳ. ೦೬೮). ೬. [ನಾಟ್ಯ] ಮಾರ್ಗ ಆಕಾಶಚಾರಿಗಳಲ್ಲಿ ಒಂದು: "ಅತಿಕ್ರಾಂತಚಾರಿಯಂತೆ . . . ಕಾಲನ್ನಿರಿಸಿ [ಕುಂಚಿತವಾದವನ್ನೆತ್ತಿ] ತ್ರ್ಯಸ್ರಾಕಾರವಲ್ಲಿ ತೊಡೆಯನ್ನೂ ಮೇಲಕ್ಕೆತ್ತಿ ಇನ್ನೊಂದು ಕಾಲಿನ ಅಂಗಾಲಿನಿಂದ ಸುತ್ತುವುದು" (ಕಾಸ್ಯರಂ. ೩೦೯ ಗದ್ಯಾಷ್ಟಾದ): ನೇವಣೆಕರಣ ಭ್ರಮರಿಗಳನಜಿದು ತರುಣಿ ರಂಗಸ್ಥಲದಲಿ ನರ್ತಿಸಿದಳು (ಕಿಶಂಕಾಂ. ೯-೯೪); ಅತಿಕ್ರಾಂತಚಾರಿಯಂ ಸಮೆದತಿತ್ರ್ಯಸ್ರದಿನೂರುಮೂರ್ಧ್ವವರ್ತನವಾಗಲ್ ಸತಿ ಕೇಳ್ ಮತ್ತೊಂದಂ ಪದದ ತಲದಿನಾಜ್ ತಿರುಪುಗೆಯ್ದು ಭ್ರಮರಿಯೆನಿಕ್ಕುಂ (ಕಾಸ್ಯರಂ. ೬-೩೨). ೭. ಒಂದು ಬಗೆಯ ವಿದ್ಯೆ: ಪ್ರಜ್ಞಪ್ತಿ ಕಾಮರೂಪಿಣಿ . . . ಭ್ರ[ಪಾಠಾಂ. ಭ್ರಾ]ಮರಿ ಆಭೋಗನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಪುಂಕೃ. ೦೯೬). [ ಸಂ. ಭ್ರಮರೀ ]

**ಭ್ರಮರಿಗುಡು** (ಕ್ರಿ). ವರ್ತುಳಾಕಾರವಾಗಿ ಸುತ್ತು, – ತಿರುಗು: ಭ್ರಮರಿಗುಡುತ್ತೆ ಕಂತುಕಮನಂಗನೆ ಪೊಯ್ಯಲಲಾತಚಕ್ರದಂತಮರ್ದಿರೆ ಸೆಂಡು ವೃತ್ತತೆಯೊಳಂಗನೆ ಮಧ್ಯದೊಳೊಪ್ಪುತ್ತಿರ್ದಳುತ್ತಮಪರಿವೇಷಮಧ್ಯದ ಶಶಾಂಕಕಳಾಕೃತಿಯಂತೆ (ಧರ್ಮಾ. ೦೨-೩೦). [ ಭ್ರಮರಿ + ಕುಡು₁ ( < ಕೊಡು₁ ) ]

**ಭ್ರಮರಿಗೊಳಿಸು** (ಕ್ರಿ). ವರ್ತುಳಾಕಾರವಾಗಿ ಸುತ್ತಿಸು: ತೂಗಿ ತೊನೆವ ನಳತೋಳ್ಗಳ ಕಂಕಣದ ಝುಂಕಾರಂ ಭ್ರಮರಮಾಲೆಯಂ ಭ್ರಮರಿಗೊಳಿಸೆಯುಂ (ಅನಂಪು. ೭-೦೦ ವ). [ ಭ್ರಮರಿ + ಕೊಳ್₁ + – ಇಸು₃ ]

**ಭ್ರಮರೀಗೀತ** (ನಾ). ಹೆಣ್ಣುದುಂಬಿಯ ಝೇಂಕಾರ. – ಮೊರೆತ: ಭ್ರಮರೀಗೀತಸಮೇತ ಹೇಮನಳಿನಶ್ರೀಸಂಗೆಯಂ ನೋಡಿ ನಾಡೆ ಮನಂಗೊಂಡಾನೀಶ್ವರಂ ಲಲಿತಮತ್ಸ್ಯಾಂಗನೆಯಂ ಗಂಗೆಯಂ (ಅಂಪು. ೨೦-೩೪). [ ಸಂ. ]

**ಭ್ರಮಾಂತುಕ** ? (ನಾ). ಸಾಮಾನುಗಳನ್ನು ಹೊತ್ತುಕೊಂಡು ಊರೂರು ತಿರುಗುತ್ತ ವ್ಯಾಪಾರ ಮಾಡುವವನು; ಸಂಚಾರೀ ವ್ಯಾಪಾರಿ (?): ಲಕ್ಷ್ಮೀಶ್ವರದೇವರ ಅಂಗಭೋಗಕ್ಕಂ ನಿವೇದ್ಯಕ್ಕಂ ಚೈತ್ರಪವಿತ್ರಾದಿಗಳ್ಗಂ ೧ × ವಿಳ್ಳಿಯ ತಳದೊಕ್ಕಲುಂ ಪೊಜಗಣ ಭ್ರಮಾಂತುಕರುಂ ಮಾಜಿದ ಸೀರೆಗಂ ಅಡಕೆಗಂ ಪೊಂಗೊಂದು ಸಲಿ ವೀಸಮಂ ಆಯಂ ಮಾಡಿಬಿಟ್ಟರು (ಕಇಶಿ. ೦-೦-೮; ೧೦೯೭). [?]

**ಭ್ರಮಾಳ** (ನಾ). [ಸಂಗೀತ] ಒಂದು ರಾಗದ ಹೆಸರು: ನರ್ತಕಿ ಕಕುಭ ಷಡ್ಜಕೌಶಿಕ ಭ್ರಮಾಳ ಪಂಚಮಭ್ರಮಾಳ ಪಂಚಮಗಾಂಧಾರ ರೂಪಸಾಧಾರಣವೆಂಬೀಳು ಸಪ್ತಸಾಧಾರಣಜಾತಿಯಿಂದಾದ ರಾಗಂಗಳು (ಒಜೀಳ. ೦೮೬). [ ? ]

**ಭ್ರಮಿ₁** (ನಾ). ಭ್ರಮೆಯುಳ್ಳವನು; ನಿಶ್ಚಯಜ್ಞಾನವಿಲ್ಲದವನು: ಭ್ರಾಂತನಾದವನು: ವಾಯಸದಂತೆ ನೋಡು ಬಕನಂತಿರೆ ಮೆಲ್ಲನೆ ಮೆಟ್ಟು ಕಚ್ಛಪೋಪಾಯದಡಂಗು [ಪಾಠಾಂ. ೧] ನಿಲ್ ಭ್ರಮರಿವೊಲ್ [ಪಾಠಾಂ. ಯೊಳ್] ಭ್ರಮಿಯಂತಿರೆ ಬೆಚ್ಚರಾಗು (ಶಪುದ. ೨೪೦ ಕೃಯೋ; ಕಾವ್ಯಾವ. ೪೦೨ ನೋ): ಭ್ರಮಿ ನಾನು ಭ್ರಮರ; ನಿಃಶಂಕಿ ನೀನು. ಈ ಜಾತಶಂಕೆಯನ್ನು ಶಮಿಯಾಗಿ ಶಮಿಸಿ, ನೀನಾಗಿ ಹೊಸೆದು ಹೊತ್ತಿಸಿದೆ ಬೆಂಕಿಯನ್ನು (ಹೃದಸ. ೨೨-೯). [ಸಂ. ಭ್ರಮಿನ್]

**ಭ್ರಮಿ₂** (ನಾ). ೧. ತಿರುಗುವುದು; ಅಲೆಯುವುದು: ಭ್ರಮಣ: "ಭ್ರಮಃ, ಭ್ರಮಿಃ—೨ ತಿರುಗುವಿಕೆ, ಸುತ್ತುವಿಕೆ" (ಸಿದ್ಧಾಂತ. ೩೫೭). ೨. ಮಂಡಲಾಕಾರವಾಗಿ ಸುತ್ತುವುದು. ೩. ಸೈನ್ಯದ ಮಂಡಲಾಕಾರವಾದ ರಚನೆ; ಚಕ್ರವ್ಯೂಹ: ಅೞದುಳಿದ ರಿಪುವಾಹಿನೀಭ್ರಮಿಗಳು ಪರೆದುವೆಣ್ದೆಸಗಳ್ಗೆ (ಕೃಪಿಶಾ. ೨೦-೬೨). ೪. ಒಂದು ನಿರ್ದಿಷ್ಟವಾದ ಸಂಖ್ಯೆಯ ಆಳು, ಕುದುರೆ, ರಥ ಮತ್ತು ಆನೆಗಳನ್ನು ಹೊಂದಿರುವ ಸೇನೆ: ನೂಱುಆಳಿಗೊಂದು ಹಯವಿರುತಿರ್ಪುದಾ ಹಯಂ ನೂಱು ಕಿರುತಿಹುದು ಪೋಣೊಂದು ರಥಮಾ ರಥಂ ನೂಱಕಿಭಮೊಂದಿರ್ಪುದಿಂತಿಭ ಸಹಸ್ರಮಿರೆ ಭ್ರಮಿಯೆಂದೆನಿಸಿಕೊಳ್ವುದು (ಕೃಪಿಶಾ. ೨೦-೪೪).

೫. ಸುಂಟರಗಾಳಿ. ೬. ನೀರಿನ ಸುಳಿ; ಜಲಾವರ್ತ. ೭. ಕುಂಬಾರನ ಚಕ್ರ; ತಿಗುರಿ. ೮. ತಪ್ಪು: ದೋಷ. ೯. ಚರಕಿ ಯಂತ್ರ; ಕಡೆತದ ಯಂತ್ರ. [ಸಂ.]

**ಭ್ರಮಿತ** (ಗು). ೧. ಸುತ್ತಿಸಿದ; ತಿರುಗಿಸಿದ: ನೀಳ್ದ ಗುರ್ವಿನಸೆ ಬಾಹು ಭ್ರಮಿತಾಭ್ರು ವಿಭ್ರಮಂಗಡಂ ಕೌರವ್ಯರಂ ತಿಂದ ರಕ್ಕಸನೋ ಈತನೊ ಭೀಮಸೇನಂ (ಗದಾಯು. ೬-೩೩). ೨. ಹರಡಿದ; ಪ್ರಸರಿಸಿದ: ಅಮಿತ ಕರುಣಾಪೂರ್ತಿ ದಶದಿಗ್ಭ್ರಮಿತಕೀರ್ತಿಯುದಾರಧೀರಂ (ಬಸವ. ೧೯-೩). (ನಾ). ೩. ಭ್ರಾಂತಿಯನ್ನು ಹೊಂದಿದ ವ್ಯಕ್ತಿ: ಕೂಡಲಸಂಗನವಚಿಯದ ದ್ವಿಜರೆಲ್ಲಾ ಭ್ರಮಿತರು (ಬಸವ. ೫೯೯); ಹಿಂಗದಾಲೋಕಂಗಳುಂ ಭ್ರಮಿತಂಗಳಪವಿತ್ರಂಗಳಂಪತಾಪಂಗಳಾಪಾಸಂಗಳು (ಬಸವು. ೪೦-೫೯). ೪. [ನಾಟ್ಯ] ಪ್ರತ್ಯಂಗಾಭಿನಯದಲ್ಲಿ ಐದು ಬಗೆಯ ಮುಂಗೈಯ ಭೇದಗಳಲ್ಲಿ ಒಂದು; ಮುಂಗೈಯನ್ನು ಸುತ್ತಿಸುವುದು (ಲಾಸ್ಯರಂ. ೨೬೪ ಗದ್ಯಾನುವಾದ): ಪ್ರಕಟ ನಿಕುಂಚಿತಮಾಕುಂಚಕ ಚಲಮುಂ ಭ್ರಮಿತ ಸಮರಗಳುಂ ಪರಿಣತಿಯಿಂ ಸಖಿ ಕೇಳ್ ಮಣಿಬಂಧಂ ಕೌತುಕದಿಂದೈದುಂ ವಿಭೇದದಿಂ ರಂಜಿಸಿಗುಂ (ಲಾಸ್ಯರಂ. ೨-೧೫೦). [ಸಂ.]

**ಭ್ರಮಿಯಿಸು** 'ಭ್ರಮಿಸು' ನೋ.

**ಭ್ರಮಿಷ್ಟ** (ನಾ). ಬುದ್ಧಿಯು ಸ್ಥಿಮಿತದಲ್ಲಿಲ್ಲದವನು: ಹುಚ್ಚ: ಆ ವನದ ಭವ್ಯವಾದ ದರ್ಶನವನ್ನು ಬಿಟ್ಟುಕೊಟ್ಟು ಭ್ರಮಿಷ್ಟನಂತೆ ಆಕಾರವನ್ನು ನೋಡುತ್ತ ಕುಳಿತುಕೊಂಡಿದ್ದನು (ಕಗದ್ಯ. ೧೧-೨೦); ಭ್ರಮಿಷ್ಟರಂತೆ ಅಲೆಯುವ ಅವರ ಜೀವಕ್ಕೆ ಯಾವ ತೊಂದರೆಯೂ ಬಾರದಿರಲಿ (ದುರಸ. ೧೫೨). [ಸಂ.]

**ಭ್ರಮಿಸು, ಭ್ರಮಿಯಿಸು** (ಕ್ರಿ). ೧. ಅಲೆದಾಡು; ಸುತ್ತಾಡು: ತಿರುಗಾಡು: ಭ್ರಮರದಂತೆ ಕುಸುಮಮಂಜರೀರಂಜಿತಲತಾಭವನಂಗಳೊಳ್ ಭ್ರಮಿಸಿಯುಂ (ಕಾದಂಪೂ. ೩೨೪); ಓರೊರ್ವ್ವ ಸುರಭಿ ಪರಿಮಳೋದ್ಗಾರಿಸ್ಮೇರ ಕುಸುಮಮಂಜರೀನಿಕರಭರವಿನತಲತಿಕಾಗೃಹಂಗಳೊಳ್ ಭ್ರಮರಮಿಥುನದಂತೆ ಪುಷ್ಪಾಪಚಯದಿಂ ಭ್ರಮಿಸಿಯುಂ (ಚಂದ್ರಪ್ರ. ೩-೨೯ ವ): ಸರಸಿಜದೊಳ್ಭ್ರಮಿಸುವ ಮರಿದುಂಬಿಗಳ ವೃಂದಮುಂ ಕೂಡಿ ಕೊಂಡೆಳವೆಲರ್ಬಂದುದು (ಕೃಷಿಲಾ. ೬-೨). ೨. ಆಸೆ ಪಡು: ಮರುಳಾಗು; ಮೋಹಗೊಳ್ಳು: ಭಾವಲಿಂಗವಾದರೆ ಸಕಲವಿಷಯಂಗಳಿಗೆ ಭ್ರಮಿಸುವುದೆ (ಆದಪ. ೩೨-೯೨): ಭ್ರಮಿಸಿ ಮಗಳಂ ಹರಿಣರೂಪದಿ ರಮಿಸುವಾ ನೀರೇಜಭವನಂ ನಿಮಿಷದಲಿ ಹರಿಸಿದನತಿ ಮೃಗವ್ಯಾಧರುದ್ರನಲಾ (ಬಸವು. ೫೪-೪೬): ಇಂತು ಯೋಜನಗಂಧಿಯುರೆ ಬೇಟೆಗೈತಂದು ಶಂತನಿವಳಂ ಕಂಡು ಭ್ರಮಿಸಿ ಕರೆಯುಲ್ಕೆ (ತಿವಿಕ್ರ. ೫೪-೯). ೩. ಭ್ರಾಂತಿಗೆ ಒಳಗಾಗು: ಸರಿಯಲ್ಲದುದನ್ನು ಸರಿಯೆಂದು ತಿಳಿದುಕೊಳ್ಳು: ತಪ್ಪಾಗಿ ಭಾವಿಸು: ಭ್ರಮಿಸಿ ನಸಿನೆ ಇದ್ದಂತಿರ್ದ ತುಂಬಿರ್ದಸಮಸಭೆಯೊಳು ಅಂಜದಿರುಬೆನುತೊಸೆದು ತೋಳ್ಗಳನೆತ್ತಿ ನೀಡುತ ಹಿಡಿದುದೇನೆನಲು (ಬಸವು. ೨೦-೩): ಲೋಕಪೊಂಬುದು ವರ್ಣಧರ್ಮವನೌಕ ನಡೆವುದು ವೈದಿಕಕ ನಾವಾಕೆವಾಳರು ತಪ್ಪಿ ನಡೆದರೆ ಭ್ರಮಿಸುವರು ಬುಧರು (ಕುಮ್ಯಾದ್ರೋ. ೦೮-೫೬): ಕೆಟ್ಟದ್ದನ್ನು ಒಳ್ಳೆಯದೆಂದು ಭ್ರಮಿಸುತ್ತೇವೆ (ಕಾಂಪಜ. ೮೫). ೪. ದಿಗ್ಭ್ರಮೆ ಹೊಂದು; ತಬ್ಬಿಬ್ಬಾಗು: ಭ್ರಮಿಸಿ ನುಡಿಯಂದೆ ಸುಮ್ಮನಿರ್ದ ಹರಿಯಂ ಕಂಡು ಕ್ಷಮಿಸಿ ನುಡಿದಂ (ತಿವಿಕ್ರ. ೩೩-೯): ಎನಿತೊ ಅರಸರ ಗಲ್ಲನಾದರೂ ಒಮ್ಮೆಯೂ ಕರ್ತವ್ಯಮಂ ಕ್ಷಾತ್ರಮೊಂದವನು ಭ್ರಮಿಸಲಿಲ್ಲ (ಚಂದ್ರಕ. ೫೦-೨). ೫. ಬೆರಗಾಗು: ಅಚ್ಚರಿಗೊಳ್ಳು: ಅದೇ ತೆರನಾದ ತಪಸ್ಸನ್ನು ಆಚರಿಸುತ್ತಿದ್ದ ಋಷಿಗಳೂ ಯೋಗಿಗಳೂ ಪಾರ್ವತಿಯ ಉಗ್ರತಪಸ್ಸನ್ನು ಕಂಡು ಭ್ರಮಿಸುತ್ತಿದ್ದರು (ಬಂಕರು. ೬೪). ೬. ...

**ಭ್ರಮಿಯಿಸು**: ೧. ಎಮಗೀ ಪೊಟಲೊಳ್ ನಿಚ್ಚಂ ಭ್ರಮಿಯಿಸಿ . . . ಗ್ರಾಸಮಾತ್ರಮಿಲ್ಲಾಯ್ತು ಸೂರ್ಯಮಿತ್ರಸ್ವಾಮಿ (ಸುಕುಮಾ. ೨-೫೬). ೬. ಭವಾಳಿಯಲ್ಲಿ ತಿರುಗು: ಸಂಸಾರಚಕ್ರದಲ್ಲಿ ತೊಳಲು: ರತ್ನಕಂಠಕನುಂ ರತ್ನಾಯುಧನುಮೆಂಬರ್ ಸಂಸಾರದೊಳ್ ಭ್ರಮಿಯಿಸಿ ಮಹಾಬಲ ಅತಿಬಲರೆಂಬ ಅಸುರರಾಗಿ ಪುಟ್ಟಿ (ಶಾಂತಿಪು. ೨೦೫): ಸಮನಿಸಿದ ನಿಷ್ಟಸಂಯೋಗಮನಿಷ್ಟ ವಿಯೋಗಮುಂ ಚತುರ್ಗತಿಗಳೊಳಂ ಭ್ರಮಿಯಿಸಿ ಕೈಕೊಳ್ಗುಂ (ಕಂಠಾಪಜ. ೪-೦೨೬). [ಭ್ರಮು + – ಇಸು$_3$]

**ಭ್ರಮೆ** (ನಾ). ೧. ಇದ್ದುದನ್ನು ಇದ್ದ ಹಾಗೆ ಗ್ರಹಿಸದೆ ಬೇರೆ ರೀತಿಯಲ್ಲಿ ಗ್ರಹಿಸುವುದು; ವಸ್ತುಸ್ಥಿತಿಗೆ ವ್ಯತಿರಿಕ್ತವಾದ ಜ್ಞಾನ; ಭ್ರಾಂತಿ: ಈ ಮನದ ಭ್ರಮೆಯನೆಲ್ಲವ ಮಾಚಿಸಿ ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸಿ (ಬಸವ. ೨೫೬); ಭಾವವಿಲ್ಲದ ಭ್ರಮೆಯು ಭ್ರಮೆಗೊಳಿಸಿ ಭಾವಕ್ಕೆ ತಂದಾತ ನಮ್ಮ ಬಸವಣ್ಣನು (ಸೀಂಪ. ೪. ೬-೯); ಅವಳ ಭ್ರಮೆಯನ್ನು ಮತ್ತಷ್ಟು ಉಲ್ಬಣಗೊಳಿಸುವ ಘಟನೆಯೊಂದು ನಡೆಯಿತು (ಶರ್ಮಸ. ೮೦). ೨. ಹುಚ್ಚು: ಉನ್ಮಾದ: ಅಳಲೆಕಾಯಿ, ಪರ್ಪಾಟಕ . . . ಕಷಾಯ ಹಾಕಿ ಶೋಧಿಸಿ ದ್ರಾಕ್ಷಿಹಣ್ಣು ಹಾಕಿ ಕೊಡಲು ಪ್ರಲಾಪ. ಮೂರ್ಛೆ, ಭ್ರಮೆ . . . ಪೈತ್ಯಜ್ವರ ಮಾಣುವುವು (ಸಕವ್ಯ. ೮೨). ೩. ಮೋಹ: ವಾಂಛೆ; ಅಕ್ಕರೆ. [ಸಂ. ಭ್ರಮ]

**ಭ್ರಮೆಗವಿ** (ಕ್ರಿ). ಭ್ರಾಂತಿಯು ಆವರಿಸು: ದಿಕ್ಕು ತೋಚದಂತಾಗು: ಎವೆಯಿಕ್ಕದೆ ನೋಡುತಂ ಭ್ರಮೆಗವಿದೆದೆಗಳುಚಿ ರ್ಝಲ್ಲೆನುತ್ತ (ಬಸವು. ೯-೩). [ಭ್ರಮೆ + ಕವಿ$_1$]

**ಭ್ರಮೆಗೊಳ್** (ಕ್ರಿ). ದಿಗ್ಭ್ರಾಂತವಾಗು: ಕಕ್ಕಾಬಿಕ್ಕಿಯಾಗು: ಭಯಂಕರ ಭ್ರಮೆಗೊಂಡಿತ್ತು ಮಂತ್ರ ತಂತ್ರ (ವಸಪ. ೬೦). [ಭ್ರಮೆ + ಕೊಳ್$_1$]

**ಭ್ರಮೆಗೊಳಿಸು** (ಕ್ರಿ). ಭ್ರಾಂತಿಯನ್ನುಂಟುಮಾಡು: ದಿಕ್ಕು ತೋಚದಂತೆ ಮಾಡು: ಅಮರಾಧಿಪನ ಮಂಚಿಸಿ ಸುರನಿಕರವ ಭ್ರಮೆಗೊಳಿಸಿಯೆ . . . ಕಾಡುತಿಹನು (ಶ್ರೀಕೃಷಾಂ. ೬-೬೬). [ಭ್ರಮೆಗೊಳ್ + – ಇಸು$_3$]

**ಭ್ರಷ್ಟ** (ಗು). ೧. ಕೆಳಗೆ ಬಿದ್ದ. ೨. ದಾರಿತಪ್ಪಿದ; ಪತಿತ. ೩. ಧರ್ಮವನ್ನು ಬಿಟ್ಟ; ಧರ್ಮಹೀನವಾದ: ಇಷ್ಟಲಿಂಗದಲ್ಲಿ ಅವಿಶ್ವಾಸ ಮಾಡುವ ಭ್ರಷ್ಟಭವಿಗಳ ಮುಖವ ನೋಡಲಾಗದಯ್ಯ (ಅಕಂದೇ. ೦೦೯-೫೦); ಶಿಷ್ಟ ಸಾತ್ವಿಕತೆ ನಡೆಯುವುದೆ ಭ್ರಷ್ಟ ರಾಕ್ಷಸ ನೀತಿ? (ಶ್ರೀರಾಪಾ. ೨೯೦-೦೫೮); ಭ್ರಷ್ಟ ಋಷಿಯೆ ಎಲ್ಲರಿಗೂ ವೇದವ ಓದದೆಯೆ ಬರಬೇಕೆಂದು ನೀನು ತಪಸ್ಸು ಮಾಡಿದರೆ ಅದು ಸಾಗೀತೆ? (ನೀತಿಶಂ. ೧೩-೧೭). ೪. ಹಾಳಾದ. ೫. ಕಳೆದುಹೋದ; ನಷ್ಟವಾದ. ೬. ಅಗಲಿದ. ೭. ಕೆಟ್ಟತನದಿಂದ ಕೂಡಿದ; ನೀಚವಾದ. (ನಾ). ೮. ಕೆಳಗೆ ಬಿದ್ದು ಹೋದುದು: "ಸ್ರಸ್ತಂ. ಧ್ವಸ್ತಂ. ಭ್ರಷ್ಟಂ . . . ಗಳಿತಂ ___೭ ಜಾರಿ ಬಿದ್ದುದು" (ಸಿದ್ಧಾಂತ. ೩೫೦): ೯. ನಾಶ; ಹಾಳು: ಹುಟ್ಟಿಸಿದವರನು ಭ್ರಷ್ಟ ಮಾಡುವರೇನೊ (ಪುರಂದ. ೩-೮೯-೨): ನಮ್ಮ ಹೊಲ. ನಮ್ಮ ಮನೆ . . . ನಮ್ಮ ಮಕ್ಕಳು ಎಲ್ಲರನ್ನೂ ಎಲ್ಲವನ್ನೂ ಭ್ರಷ್ಟ ಮಾಡಿದ್ದೀರಿ (ಕಾಟೀಮು. ೫೮). ೧೦. ತಪ್ಪಿಹೋಗಿರುವುದು; ಕಳೆದುದು: ಅಟವಿಯ ಕುಟಿಲಪಥದಲಿ ಹಠಾತ್ತನಲ್ ಭ್ರಷ್ಟಮಾದುದು ಪರಿಚಿತಾಧ್ವಂ (ಶ್ರೀರಾಪಾ. ೩೫-೨೦೮). ೧೧. ಧರ್ಮಹೀನನಾದವನು: ಹರಿನಾಮವನು ದಿನದಿ ಸ್ಮರಿಸದಾತನು ಭ್ರಷ್ಟ (ಪುರಂದ. ೪-೦೫೮-೫). ೧೨. (ಗೌರವ, ಅಧಿಕಾರ, ಜಾತಿ, ಧರ್ಮ ಮೊದಲಾದುವುಗಳಿಂದ) ಹೊರಗೆ ಹಾಕಲ್ಪಟ್ಟವನು: ಮಾತ್ರೀಗಳವುಗಳಂ ಬೇಡವೆಂಬುವ ನೆಮದಿ ಪರ್ಭ್ರಷ್ಟನಂ ಮಾಡಿ ರವಿಪಾಲಯಶೋದೀಪ್ತಿಯಂ ನನ್ನಿಂದೆ ಮುಸುಳಿಸುವ ಪ್ರಾಣಮಂ ನೆನೆವೆ! (ಶ್ರೀರಾಪಾ. ೬೨-೯೯೬). 'ಜಾತಿಭ್ರಷ್ಟ', 'ದೇಶಭ್ರಷ್ಟ' ಪರಾ.

**ಭ್ರಷ್ಟಳಾಗು** = ಪತಿತಳಾಗು ; ದಾರಿತಪ್ಪು : ನಿಷ್ಠೆಯಿಂದಿರುವರಿಥ ಸತಿಯು ಭ್ರಷ್ಟಳಾಗುವುದಿಲ್ಲವಿದನು ನೀನರಿತಿರು (ಇಚಾಕ. ೧೧೧–೬೬).

[ಸಂ.]

**ಭ್ರಷ್ಟಗೊಳಿಸು** (ಕ್ರಿ). ಹೊರತುಗೊಳಿಸು ; ಹೊರತು ಮಾಡು: ನನ್ನನ್ನು ಯಾವ ಗೃಹಿಣೀಪದದಿಂದ ನೀಚನಾದ ನೀನು ಒಮ್ಮೆ ಭ್ರಷ್ಟಗೊಳಿಸಿರುವೆಯೋ ಆ ಪೂಜ್ಯಪದವು ಜನ್ಮಜನ್ಮಾಂತರದಲ್ಲಿಯೂ ನನಗೆ ದುರ್ಲಭವಾಗಿ ಬಿಟ್ಟಿತು (ಉಂಬೆ. ೧೬).

[ಭ್ರಷ್ಟ + ಕೊಳು (< ಕೊಳ್$_1$) + — ಇಸು$_2$]

**ಭ್ರಷ್ಟತೆ** (ನಾ). ಧರ್ಮದ ಲೋಪ : ಕರ್ಮಗಳ ಸನುಮತದಲಾರ್ಜಿಸಲು ಶಿಷ್ಟತೆ ಜನಕ ಕರ್ಮವಿಲೋಪ ಭ್ರಷ್ಟತೆ ಎನುತ ವಿಧಿಯಿರಲು (ಗಗಕಾ. ೦೬–೪೦).           [ಸಂ. ಭ್ರಷ್ಟತಾ]

**ಭ್ರಷ್ಟಾಚರಣೆ** (ನಾ). ಧರ್ಮವಿರುದ್ಧವಾದ ಕೆಲಸವನ್ನು ಮಾಡುವಿಕೆ; ದುರಾಚಾರ; ನೀತಿಬಾಹಿರವಾದ ಆಚರಣೆ : ಸಮಾಜವೇ ಭ್ರಷ್ಟಾಚರಣೆಯಿಂದ ಕೂಡಿರುವಾಗ ಸರ್ಕಾರೀನೌಕರರು ಅದರಿಂದ ವಿರಹಿತರಾಗಿರುವುದು ಕಷ್ಟವೇ ಸರಿ (ಶ್ರಮಾವ. ೦೩೯).           [ಸಂ. ಭ್ರಷ್ಟಾಚರಣ]

**ಭ್ರಷ್ಟಾಚಾರ** (ನಾ). ೧. = ಭ್ರಷ್ಟಾಚರಣೆ : ಗ್ರಂಥಾಲಯದ ಕಾರ್ಯವಾಹಕರು ಈ ಬಗೆಯ ಭ್ರಷ್ಟಾಚಾರಗಳನ್ನು ತಡೆಯುವಲ್ಲಿ ಬಹು ಎಚ್ಚರಿಕೆ ವಹಿಸಬೇಕು (ಗ್ರಂಕಾಂ. ೬೬); ದೇವರ ಹೆಸರಿನಲ್ಲಿ ಭ್ರಷ್ಟಾಚಾರ, ಜಾತಿಯ ಬೆಲೆಕೊಂಡ ಸ್ಥಾನಗೌರವ! (ಕೀಮುಕಿ. ೨ ಮುಮ್ಮುಖ). ೨. ಧರ್ಮವಿರುದ್ಧವಾದ ಕೆಲಸಗಳನ್ನು ಮಾಡುವವನು : ದುರಾಚಾರಿಯಾದವನು : ನೀನೆತ್ತಲೀ ಚಂಡಾಲಕರ್ಮದೊಳ್ ತೊಡರ್ದು ಇಂತು ಭ್ರಷ್ಟಾಚಾರನಾದೆ ನಿನ್ನಂ ಮುಟ್ಟಲಾಗದೆಂದವಂ ಕಟಿದು ಪೋಪುದುಂ (ಶಂಕತಂ. ೦೭೬–೨೦). ೩. ಲಂಚ ತಿನ್ನುವುದು ; ಲಂಚಗುಳಿತನ.           [ಸಂ.]

**ಭ್ರಷ್ಟಾಚಾರನಿರೋಧ** (ನಾ). ಅನೀತಿಯುತವಾದ ಲಂಚ ಮೊದಲಾದ ಕೆಟ್ಟ ನಡವಳಿಕೆಗಳನ್ನು ಪ್ರತಿಬಂಧಿಸುವುದು, — ತಪ್ಪಿಸುವುದು : "ಭ್ರಷ್ಟಾಚಾರನಿರೋಧ, ಲಂಚನಿರೋಧ" (Anti - corruption. ಶಶ್ರಿ. ೩) ; ಭ್ರಷ್ಟಾಚಾರನಿರೋಧವನ್ನು ಕೈಗೊಳ್ಳದಿದ್ದರೆ ದೇಶವು ಹಾಳಾಗುತ್ತದೆ (ಲೂಠಿ).           [ಸಂ.]

**ಭ್ರಷ್ಟೆ** (ನಾ). ಪತಿತೆ ; ನೀತಿಗೆಟ್ಟವಳು : ವಿಶ್ವಕೆ ನಾಸೇಕಾಕಿನಿ . . . ಆಸತಿ ಅನಾತ್ಮೆ ಭ್ರಷ್ಟೆ ಹೇಸಿಕೆ ಎಲ್ಲರ ಮನಕು (ಅಹಲ್ಯ. ೦೦೩–೭).

[ಸಂ. ಭ್ರಷ್ಟಾ]

**ಭ್ರಷ್ಟೆಬ್ಬಿಸು** (ಕ್ರಿ). ಭ್ರಷ್ಟರನ್ನಾಗಿ ಮಾಡು : ದಾರಿ ತಪ್ಪಿಸು : ಪರಸಿದ್ಧ ಸಾಧಕರ ಮುನಿ ತಪೋಧನರುಗಳಯುಲರಂಬಿನಿಂದೆಚ್ಚು ವಿರಹಾಗ್ನಿಯಿಂದವರ ಬೇಗುದಿಗೊಳಿಸಿ ಭ್ರಷ್ಟೆಬ್ಬಿಸಿ ತರುಣಿಯರ ತೋಳ್ತೊಡೆಯ ನಿರಿಮುರಿಯೊಳಂ ಪೂಗಿಸಿ (ಪಪರೋ. ೦೩–೯೦).

[ಭ್ರಷ್ಟ + ಎಬ್ಬಿಸು (< ಎಟ್ಬಿಸು)]

**ಭ್ರಾಂತ** (ಗು). ೧. ಅಲೆದಾಡಿದ. ೨. ಗುಂಡಗೆ ತಿರುಗಿದ,–ಸುತ್ತಿದ. ೩. ಕಂಗೆಟ್ಟ; ದಿಕ್ಕುತೋಚದಂತಾದ : ಭ್ರಾಂತಮುನಿ ನಾನೊಬ್ಬ ಸಾಲದೇ ಸ್ತ್ರೀಬಾಲರೆಂತಾದಡಂ ನುಡಿವರಮುಚ್ಚಿಯೇ (ಹತಶಾ. ೬–೯೩). (ನಾ). ೪. ತಿರುಗುವವನು ; ಸಂಚರಿಸುವವನು : "ಭ್ರಮನ್ . . . ಭ್ರಾಂತಃ–ಈ ೪ ತಿರುಗುವಂ" (ಅಶಕ್ಟ. ೦೯೬). ೫. ಭ್ರಮೆಗೊಂಡವನು ; ತಪ್ಪಾಗಿ ತಿಳಿದುಕೊಂಡವನು : ಇಷ್ಟಲಿಂಗ ಪ್ರಾಣಲಿಂಗ ಒಂದೇಯೆಂದರಿಯದೆ ಭಿನ್ನವಿಟ್ಟು ನುಡಿವ ಭ್ರಾಂತರ ಮಾತ ಕೇಳಲಾಗದು (ಅಲಂಪ್ರೀ. ೦೦೯–೩೦). ೬. ರಥದ ಚಲನೆಗಳಲ್ಲಿ ಒಂದು : ಆಗಳ್ ಸವ್ಯಾಪಸವ್ಯ ಭ್ರಾಂತೋದ್ಭ್ರಾಂತಂಗಳೆಂಬ ರಥಕಲ್ಪವಿಶೇಷವಿನ್ಯಾಸಂಗಳ ನಱಿದು (ಶಂಕಕಾ. ೦೨–೬೩ ವ). ೭. ದಿಕ್ಕುತಪ್ಪಿದ. ೮. ಮದಿಸಿದ ಆನೆ. ೯. [ಕಾಮಶಾ] ಒಂದು ಬಗೆಯ ಚುಂಬನ : ಓಪಳಂ ಕರ(?) ದಿಂ ಕುಟಿವಿಡಿಸುತ್ತ ಚುಂಬಿಸಲ್ ಭ್ರಾಂತಾಖ್ಯಂ (ಮಸ್ಮಿ. ೦೨–೦೧). ೧೦. [ನಾಟ್ಯ] ಅಭಿನಯದಲ್ಲಿ ಉಪಾಂಗವಾದ ಉಸಿರಿನ ಒಂದು ಭೇದ ; "ಒಳಗೊಳಗೇ ಉಸುರಾಡುವುದು" (ಅಶ್ವಕೇ. ೨೬೮ ಗದ್ಯಾಮುವಾದ) : ಸಮ, ಭ್ರಾಂತ, ವಿಲೀನ . . . ಸೀತ್ಕೃತ – ಈ ಹತ್ತು ಮೊದಲ ಒಂಬತ್ತುಗೂಡಿ ಒಟ್ಟು ಹತ್ತೊಂಬತ್ತು ಭೇದಂಗಳ್ (ಅಶ್ವರಂ. ೩–೭೯ ವ).           [ಸಂ.]

**ಭ್ರಾಂತಕ** (ನಾ). [ಕಾಮಶಾ] ಚುಂಬನದ ಒಂದು ಪ್ರಕಾರ : ಒಂದಣ ಮೆಯ್ಯುಂ ಬಂದಿನೆಯಂ ತಲೆಯಿಂದ ಮೊಗಂಗುಡೆ ಮೊಗವೆತ್ತಿ ಸಂದುಜಿ ಚುಂಬಿಸುವಂದಂ. . . ಭ್ರಾಂತಕಂ (ಜವವ. ೭–೦೬) ; ನಿಮಿತ್ತಕ ಸಂಘಟಕ ಸ್ಫುರಿತಕ ಭ್ರಾಂತಕ . . . ಜಿಹ್ವಾಯೋಗವೆಂಬ ದ್ವಾದಶಚುಂಬನ ಸಂಭ್ರಮಿಗಳಂ (ಬಿಟೀಕ. ೦೮೩).           [ಸಂ.]

**ಭ್ರಾಂತತೆ** (ನಾ). ಭ್ರಮೆ; ಭ್ರಾಂತಿ : ಇರವಧಿಕಭ್ರಾಂತತೆಯುಂ ಧರಿಯಿಸಿ ಕಡುಗಂದಿ ಜನಗುವಾಜಿಡಿಯಾದಂತಿರೆ ತೋರ್ಪೀ ಪರಿಜನವುಂ ಹರಿಸದೊಳೊಡಗೂಡಿ ತೋಱಿ ಚರಣಾಂಬುಜಮಂ (ಶಂಪ್ರಕ. ೫–೦೫).

[ಸಂ. ಭ್ರಾಂತತಾ]

**ಭ್ರಾಂತಾತ್ಮ** (ನಾ). ಭ್ರಾಂತಿಗೊಂಡ ಮನಸ್ಸುಳ್ಳವನು ; ಮರುಳ : ಅಶ್ವಗ್ರೀವನೆಬ್ಬಂದಹಿತನ ಮೊನೆಯತ್ತತ್ತಣಂ ಜೇಟ್ ತ್ರಿಪೃಷ್ಠಂ ಭ್ರಾಂತಾತ್ಮಂ ತೋಱಿ ತೋಱೆಂದೊದಱ (ಶಾಂತಿಪು. ೫–೫೯).

[ಸಂ. ಭ್ರಾಂತಾತ್ಮನ್]

**ಭ್ರಾಂತಿ** (ನಾ). ೧. ತಿರುಗುವಿಕೆ ; ಸುತ್ತುವಿಕೆ. ೨. ತಿರುಗಾಟ; ಸಂಚಾರ : ಅರಿಸೇನಾಚಕ್ರಚಕ್ರಂ ಪೊರಳೆ ರಿಪುಕುಭೃತ್ಪುಂಗವಭ್ರಾಂತಿ ತಳ್ತೊಪ್ಪಿರೆ . . . ನವಘಟೀಯಂತ್ರದಿಂ ವಿಷ್ಣು ಯುದ್ಧಾಜಿರವಾರ್ಷೀ ವೈರಿರಕ್ತಾಂಬುವನೆ ನಿಜಯಶೋವಲ್ಲಿಗೆತ್ತುತ್ತುಮಿರ್ಪಂ (ಎಕ. V. ಹಾಸನ. ೦೩೦–೦೦ ; 1147). ೩. ಒಂದನ್ನು ಮತ್ತೊಂದೆಂದು ತಿಳಿದುಕೊಳ್ಳುವುದು ; ತಪ್ಪುತಿಳಿವಳಿಕೆ ; ಭ್ರಮೆ : ಅಂಬಿಗರ ಮಗನೆಂಬ ಭ್ರಾಂತಿಯು ಕೃಷ್ಣನಿಂ ಕೇಳಿ ನಂಬಿ ಕರ್ಣಗೆ ಬಿಟ್ಟ ಪರಿ (ಗದಕಾ. ೦೩–೯೦); ಒಂದು ವಸ್ತುವನ್ನು ಮತ್ತೊಂದೆಂದು ತಪ್ಪಾಗಿ ತಿಳಿಯುವುದೇ ಅಧ್ಯಾಸವು. ಅಧ್ಯಾಸ, ಭ್ರಾಂತಿ, ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ ಇವೆಲ್ಲ ಪರ್ಯಾಯ ಶಬ್ದಗಳು (ಬೃಹ್ಮಶಾ. ೨–೦೦) ; ಸರ್ವತ್ರ ಚೆನ್ನಾಗಿ ತಿಳಿಯದಿರುವಿಕೆಯೇ ಭ್ರಾಂತಿ (ಹಿಂದಶಾ. ೨೯೦). ೪. ತಲೆ ತಿರುಗುವುದು ; ತಲೆ ಸುತ್ತುವುದು : ಸುರುಸುರಿಕೆಸೊಪ್ಪಿನ ರಸದಲ್ಲಿ ಜೀರಿಗೆಯಂ ಭಾವನೆ ಮಾಡಿ ಏಲಕ್ಕಿ ಸಕ್ಕರೆವೆರಸಿ ಸೇವಿಸೆ ಭ್ರಾಂತಿ ಮಾಣ್ಗುಂ (ಕಕಪ್ರ. ೦೩೨). ೫. ದಿಕ್ಕು ತೋಚದಿರುವಿಕೆ ; ದಿಗ್ಭ್ರಾಂತಿ : ಮವಿಭಯಭ್ರಾಂತಿಯಿಂದಂ ಶರಣೊಕ್ಕುಕ್ಕುದು ತನ್ನಂ ಗೋತ್ರಧಾತ್ರೀಧರತತಿಯೆನೆ ಪೆಂಪಣ್ಗವಕ್ಕೇನೊ ಚೋದ್ಯಂ (ಜಗಾ. ೦–೯೫). ೬. ಸಂದೇಹ ; ಸಂಶಯ ; ಅನಿಶ್ಚಿತತೆ : ಭ್ರಾಂತಿಯನುಟಿದಂತಿಂತಂತೆಂಬಿವು ಶಾಂ ಪ್ರಕಾರ ಕಾಲ್ಯಾರ್ಥಂಗಳ್ (ಕಮಿರ. ೩೨೦). ೭. = ಭ್ರಾಂತಿಮದಲಂಕಾರ : ಒಂದನ್ನು ಬೇರೊಂದನ್ನಾಗಿ ತಿಳಿಯುವುದೇ ಭ್ರಾಂತಿ. ಸಾದೃಶ್ಯಮೂಲಕವಾಗಿ ಉಕ್ತವಾಗಿರುವ ಭ್ರಾಂತಿ ಭ್ರಾಂತ್ಯಲಂಕಾರ (ಕೃಬಿಬ. ೨೬೬). ೮. [ಸಾಂಖ್ಯ] ಒಂದು ವಸ್ತುವಿನಲ್ಲಿ ಮುಖ್ಯಾಂಶವನ್ನು ಗ್ರಹಿಸದೆ ಸಾಧಾರಣಾಂಶವನ್ನು ಮಾತ್ರ ಗ್ರಹಿಸುವುದು : ಎದುರಿಗಿರುವ ವಸ್ತುವಿಗೆ ಸಮಾನವಾದ ಬೇರೊಂದು ವಸ್ತುವಿನ ಸ್ಮರಣೆ ಬೆರತು ಭ್ರಾಂತಿ ಎಂದು ವ್ಯವಹರಿಸಲ್ಪಡುವುದು (ಹಿಂದಶಾ. ೩೦). ೯. [ಕಾಮಶಾ] ಚುಂಬನದಲ್ಲಿ ಒಂದು ಬಗೆ : ಪುರುಷಂ ಸ್ತ್ರೀಕೂದಲ ಚಿಬುಕವುಂ ಎರಡು ಕೈಗಳಂ ಪಿಡಿದು ಅವಳ ಹಿಂದೆ ನಿಂದಿರ್ದು ಮೋರೆಯ ಸ್ವಲ್ಪ ತಿರುಗಿಸಿ ಹಿಡಿದು ಅವಳ

ಕೆಳಗಣ ತುಟಿಯುಂ ತಾಂ ಪಿಡಿದು ಅವಳ ಕೈಯಿಂದ ತನ್ನ ಕೆಳಗಣ ತುಟಿಯುಂ ಅಂಗುಷ್ಠ ತರ್ಜನಿಗಳಿಂ ಪೀಡಿಸಿ ಚುಂಬಿಸುವ ಭಾವಂ ಭ್ರಾಂತಿಯೆಂಬ ಚುಂಬನಂ (ಕಾಮಶಾ. ೩೨೫). [ಸಂ.]

**ಭ್ರಾಂತಿಗೊಳ್** (ಕ್ರಿ). ದಿಕ್ಕು ತೋಚದಂತಾಗು : ಕಂಗೆಡು : ಮುಂತೆ ಗೌರೀಶನ ಶರೀರದೊಳೆಂತು ಮಾಡಿದಡಂತಲಾ ನಾಂ ಭ್ರಾಂತಿಗೊಂಡಡಿದು (ಬಸಪು. ೦೬-೯) ; ತನ್ನ ಪ್ರಾಣೇಶನ . . . ಕಾಣದೆ ಕಂಗೆಟ್ಟಳು ಭ್ರಾಂತಿಗೊಂಡಳು ಮಾಣದೆ ಮಗುಳಳಿಸಿದಳು (ಸೋಶತ. ೨೬-೪೬).
[ ಭ್ರಾಂತಿ + ಕೊಳ್₁ ]

**ಭ್ರಾಂತಿಗೊಳಿಸು** (ಕ್ರಿ). ಅಜ್ಞಾನವನ್ನುಂಟುಮಾಡು ; ಭ್ರಮಿಸುವಂತೆ ಮಾಡು : ಶಂಬರಾಸುರನ ಭ್ರಾಂತಿಗೊಳಿಸಿ ಮಹದಾದಿವಿದ್ಯವ ಸೈಪಿಂ ತೋಱಿಸಿದನು ಕಂತುವಿಗೆ (ಸೋಶತ. ೦೧-೬೦).
[ ಭ್ರಾಂತಿಗೊಳ್ + — ಇಸು₃ ]

**ಭ್ರಾಂತಿಜನ್ಯ** (ನಾ). ಭ್ರಾಂತಿಯಿಂದ ಉಂಟಾದುದು ; ಅಜ್ಞಾನದಿಂದ ಉಂಟಾದುದು : ಸರ್ವಾಧಿಷ್ಠಾನವಾದಂಥಾ ಆತ್ಮಸ್ವರೂಪವನು ತಿಳಿಯದ್ದರಿಂದಾ ಬಂದದೆ ಆಗಲಾಗಿ ಇದಕ್ಕೆ ಭ್ರಾಂತಿಜನ್ಯವೆಂದು ಹೆಸರು (ತತ್ವಸ. ೨೯-೦೦). [ಸಂ.]

**ಭ್ರಾಂತಿಮದಲಂಕಾರ** (ನಾ). [ಕಾವ್ಯಮೀ] ಪರಸ್ಪರ ಹೋಲಿಕೆಯುಳ್ಳ ಎರಡು ವಸ್ತುಗಳಲ್ಲಿ ಒಂದು ವಸ್ತುವನ್ನು ನೋಡಿ ಆ ಬೇರೊಂದು ವಸ್ತುವೇ ಇದು ಎಂಬ ಭ್ರಾಂತಿಯನ್ನು ಉಂಟುಮಾಡುವ ಅಲಂಕಾರ ; ಉದಾಹರಣೆಗೆ — ' ಈ ದುಂಬಿಯು ನಿನ್ನ ಮುಖವನ್ನು ಕಮಲವೆಂದು ತಿಳಿದುಕೊಂಡುಬಿಟ್ಟಿದೆ ' — ಎಂಬ ಈ ವಾಕ್ಯದಲ್ಲಿ ಸುಂದರಿಯೊಬ್ಬಳ ಮುಖಕ್ಕೂ ಕಮಲಕ್ಕೂ ಸಾದೃಶ್ಯವಿರುವುದರಿಂದ ದುಂಬಿಗೆ ಮುಖದಲ್ಲಿ ಕಮಲವೆಂಬ ಭ್ರಾಂತಿಯುಂಟಾಯಿತು ಎಂದು ವರ್ಣಿಸಿರುವುದರಿಂದ ಇದು ಭ್ರಾಂತಿಮದಲಂಕಾರ : ಒಂದು ವಸ್ತುವಂ ಪೆಱತೊಂದು ವಸ್ತುವೆಂದು ಭ್ರಮಿಸುವುದು ಭ್ರಾಂತಿಮದಲಂಕಾರಂ ಎಂದುಂ (ಅಪ್ರತಿ. ೯೩-೦೫) ; ಸಾದೃಶ್ಯಮೂಲಕ ಸ್ಮೃತಿ ಸಂದೇಹ ಭ್ರಾಂತಿಗಳಿಂ ಪ್ರತ್ಯೇಕಮಾಗಿ ಸ್ಮೃತಿಮದಲಂಕಾರಂ ಸಂದೇಹಾಲಂಕಾರಂ ಭ್ರಾಂತಿಮದಲಂಕಾರಂ ಎಂಬಿವಕ್ಕುಂ (ಪಶಿ. ೨೪). [ಸಂ.]

**ಭ್ರಾಂತಿಯೋಗ** (ನಾ). (ಆಲಂ) ಇತರರಿಗೆ ಭ್ರಮೆಯನ್ನುಂಟುಮಾಡುವ ಸ್ಥಿತಿ : ಸೊಗಸು ಮಿಗಲರೆದೆಱೆದ ಲೋಚನಯುಗಳ ಸಮತಳಿಸಿದ ಸುಷುಪ್ತಿಯ ಬಿಗುಹಿನಲಿ ಪರಮಾತ್ಮನೆಸೆದನು ಭ್ರಾಂತಿಯೋಗದಲಿ (ಕುಮಾ ಉ. ೦-೨೬). [ಸಂ.]

**ಭ್ರಾಂತಿವಡೆ** (ಕ್ರಿ). ಭ್ರಾಂತಿಯನ್ನು ಹೊಂದು : ಎಂತು ಸೈರಿಪೆ ಕನಸಿನಲ್ಲಿ ಕಂಡ ವಿರಹದ ಭ್ರಾಂತಿವಡೆದ ನೀಱೆ ತನ್ನ ಅಂತಕಾಲದೆ ನೀ ಜೀವಿಸಲಾಱೆಂದು ಸಂತವಿಡಿದನು ಮಾನಿನಿಯ (ಸೋಶತ. ೪೪-೩೦).
[ ಭ್ರಾಂತಿ + ಪಡೆ₁ ]

**ಭ್ರಾಂತಿವಿಡಿ** (ಕ್ರಿ). ಭ್ರಾಂತಿಯನ್ನು ಹೊಂದು ; ತಪ್ಪುತಿಳಿವಳಿಕೆಯನ್ನು ತಾಳು : ಅರಿಯದೆ ಭ್ರಾಂತಿವಿಡಿದೇ ತೀರ್ಥಯಾತ್ರೆಗಳೆಂತವಿಲ್ಲದೆ ತಿರುತಿರುಗಿ ಬೇಸತ್ತು ಬೆಂಡಾಗಿ (ಗಗಶಾ. ೯-೪೯). [ಭ್ರಾಂತಿ + ಪಿಡಿ₁]

**ಭ್ರಾಂತಿಸು** (ಕ್ರಿ). ತಪ್ಪಾಗಿ ತಿಳಿ ; ಭ್ರಮೆಗೆ ಒಳಗಾಗು : ಪ್ರಿಯಕಾಂತಾ ಭ್ರೂವಿಭ್ರಮಗ್ರಹಾಗ್ರಹವಶದಿಂ ಭ್ರಾಂತಿಸದುಪಶಾಂತಮನಂ ಶಂತನು ಗಿತ್ತಂ ಸಮಸ್ತರಾಜ್ಯಶ್ರೀಯಂ (ಕುಶಕಾ. ೦-೬೬) ; ಗ್ರಂಥಕಾರನ ಸಂಕಲನೆಯೊಳು ವಿರೋಧಿಸಲ್ಪಡುಗುಮೆಂದು ಭ್ರಾಂತಿಸಲ್ವೇಡ (ಗೊಮ್ಮಟ. ೩೬-೬).
[ ಭ್ರಾಂತಿ + — ಇಸು₃ ]

**ಭ್ರಾಂತು** (ನಾ). ೧. ತಪ್ಪು ತಿಳಿವಳಿಕೆ ; ಭ್ರಮೆ : ಹಾವು ನೇಣೆಂಬ ಭ್ರಾಂತುಳ್ಳನ್ನಕ್ಕ ನಾನು ಭಕ್ತನೆಂತಪ್ಪೆನು (ಬಸವ. ೪೦೩) ; ಅವನಿಯೊಳಾಂ ಕ್ಷುಲ್ಲಕಂ ತಪ್ಪದೆಂಬೀ ಭ್ರಾಂತಂ ಬಿಟ್ಟಿರ್ಪುದಿನ್ನಾದಪೆ ನಿಖಿಳಜನಾನೀಕದಿಂ ಪೂಜ್ಯನುಂ (ಜಾರಪು. ೬-೬೨) ; ವಿರಕ್ತನಾದ ಬಳಿಕ ಚಿಂತೆ ಭ್ರಾಂತುಗಳನಳಿದು . . . ಮಹಾಬಯಲ ನಿಜವಾಸಿಯಾಗಿರಬೇಕು (ಅಖಂಡೇ. ೦೩೯-೦೨೧). ೨. ಸಂದೇಹ ; ಸಂಶಯ : ಭ್ರಾಂತೇಂ ಜಗತ್ಪ್ರಸಿದ್ಧ ಚಿರಂತನ ನೂತನ ಮಹಾಕವೀಶ್ವರಕೃತಿ ಶಾಸ್ತ್ರಾಂತರಸ್ಮಾರತೆ ನಿಸ್ಸೆ ನಿರಂತರ ಮಸ್ಮತ್ಪ್ರಣೀತ ಜಾತಕಕೃತಿಯೊಳ್ (ಜಾತಿ. ೦-೩) : ಮಿನಕ್ಕಂ ಕೂರ್ವ ಕ್ಕಂತೇನೊಂದಂ ಪೊಡರೇಪೆ ಪೋಲ್ತೊಡವಿರ್ಪತ್ತಾನಾಲ್ಕು ವರ್ಷದೊಳ್ ಸಾವಾನುಂ ಭ್ರಾಂತಿಲ್ಲದಕ್ಕು (ಜನ್ಮಶಾ. ೩-೩೦). ೩. ಭ್ರಮೆಗೊಳಗಾದವನು ; ಮರುಳ : ಭ್ರಾಂತುಗಳಿರಾ ಶಿವಮಥನಸುಖಮೇಕಹುದು ನಿಮಗೆ (ಬಸಪು. ೩೦-೨೫). [ < ಸಂ. ಭ್ರಾಂತಿ ]

**ಭ್ರಾಂತುಮಾರಿ** (ನಾ). ಭ್ರಮೆಗೊಂಡವನು ; ಭ್ರಾಂತಿಶೀಲ : ಜಗದ ಪಾತಕರ ಘಾತಿಸದೆ ವಿಷಯುವನಱಿಯದೆ ಆಶೆಯಲ್ಲಿ ಸುಳಿವ ಭ್ರಾಂತುಮಾರಿಗಳನೇನೆಂದಱಿಯದೆ (ಮೋಹಶಾ. ೪೯-೦೯೩). [ಭ್ರಾಂತು + —ಮಾರಿ₁]

**ಭ್ರಾಂತುವಿಡಿ** (ಕ್ರಿ). ಭ್ರಮೆಯನ್ನು ಹೊಂದು : ಅಜ್ಞಾನದಿಂದ ಕೂಡಿರು : ಭ್ರಾಂತುವಿಡಿದು ಲಿಂಗಕೋಗಿವನಱಸುವ ಪಾತಕರ ಮೆಚ್ಚ ಕೂಡಲಸಂಗಮದೇವ (ಬಸವ. ೬೬೨). [ಭ್ರಾಂತು + ಪಿಡಿ₁]

**ಭ್ರಾಜಿತ** (ಗು). ೧. ಹೊಳಪುಗೊಂಡ ; ಪ್ರಕಾಶಮಾನವಾದ ; ಕಾಂತಿಯುಕ್ತವಾದ : ಮುಂದೊಂದೆಡೆಯೊಳ [ದ] ಭ್ರಾಭ್ರವಿಭ್ರಮಭ್ರಾಜಿತೋತ್ತುಂಗಶೈಲಮಂ ಕಂಡು (ಕುಶಕಾ. ೪-೨೫ ಪ) ; ಅಭ್ರಂಕಷಹರ್ಮ್ಯಾಗ್ರತಳಭ್ರಾಜಿತ ಮತ್ತವಾರಣಸ್ಥಿತ ಕಾಂತಾವಿಭ್ರಮನಿರೀಕ್ಷಣೋಪಗತಭ್ರಮದಿಂದಮರಸವಿತಿಗಾಯ್ತನಿಮೇಷಂ (ಶಂಕ್ರಪು. ೦-೦೨೬). (ನಾ). ೨. ಪ್ರಕಾಶಮಾನವಾದುದು ; ಕಾಂತಿಯುಕ್ತವಾದುದು : ಅನತಿಶಿಪ್ರೋಷ್ಠಭ್ರಾಜಿತ ಮಾಯ್ನಾನನ ಶುಭ್ರಾಂಬುಜಮಾತ್ಮಭಾವನಾತತ್ಪರನಾ (ಚಂದ್ರಪು. ೦೪-೦೯). ೩. ಪ್ರಕಾಶಮಾನನಾದವನು ; ಕಾಂತಿಯುಕ್ತನಾದವನು : ಧವಳಾತಪತ್ರಚಾರುಚಾಮರಚತುಷ್ಟಯಭ್ರಾಜಿತನುಂ (ಗಜಾಂಕಶಾ. ೯-೬೯ ಪ). [ಸಂ.]

**ಭ್ರಾಜಿಷ್ಣು** (ಗು). ೧. = ಭ್ರಾಜಿತ ೧. (ನಾ). ೨. = ಭ್ರಾಜಿತ ೩ : "ವಿಭ್ರಾಟ್, ಭ್ರಾಜಿಷ್ಣುಃ, ರೋಚಿಷ್ಣುಃ — ೩ ಭೂಷಣಾದಿಗಳಿಂದ ಪ್ರಕಾಶಿಸುತ್ತಿರುವವನ ಹೆಸರುಗಳು" (ಸಿದ್ಧಾಂತಿ. ೧೯೯) ; ಬಂದನೀಕ್ಷಿಸುವ ಲಂಪಿಂ ವಜ್ರಿ ಗೋವರ್ಧನಾಚಳಭಾರೈಕಸಹಿಷ್ಣುವಂ ಜಳಧರಭ್ರಾಜಿಷ್ಣುವಂ ವಿಷ್ಣುವಂ (ಜಗನ್ನಾ. ೪-೯೯) ; ನುತಿಗೆಯ್ದಂ . . . ಸಿತ ಶೂಲಾಹತನಾಗನಾಗಭರಣ ಭ್ರಾಜಿಷ್ಣುವಂ ಜಿಷ್ಣುವಂ (ರಾಜಶೇ. ೩-೪೫). ೩. ಶಿವ : ಭ್ರಾಜಿಷ್ಣು ಭದ್ರಂ . . . ರಕ್ಷಿಕ್ಕೆ ವೀರೇಶ್ವರಂ (ಹರಿಶ್ಚ. ೦-೬). ೪. ವಿಷ್ಣು. [ಸಂ.]

**ಭ್ರಾತೃ** (ನಾ). ೧. ಅಣ್ಣ ಅಥವಾ ತಮ್ಮ ; ಒಡಹುಟ್ಟಿದವನು : "ಸಹಜಾತಂ ಸಹೋದರಂ ಸೋದರಂ ಭ್ರಾತೃವೆನಲೊಡಹುಟ್ಟಿದಂ" (ಶಬ್ದಮಣಿ. ೯೨-೦೦) ; ಅಂತಃಕಲಹದಿಂದಾಗಿ ಭ್ರಾತೃಗಳಲ್ಲಿ ಯುದ್ಧ ಪ್ರಾರಂಭವಾಯಿತು (ಸೌಳಂಬಿ. ೩೨). ೨. [ಜ್ಯೋತಿ] ಲಗ್ನದಿಂದ ಮೂರನೆಯ ಸ್ಥಾನ ; ಸಹೋದರಸ್ಥಾನ : ಲಗ್ನದಿಂ ಚತುಸ್ತನು ದಶಲಾಭಂಪು ಭ್ರಾತೃವಿನೊಳ್ [ಜಾತಕ. ತ್ರರಾಶಿಯೊಳ್] . . . ಶುಭಪ್ರದನಸಿತಂ (ಜಾತಿ. ೦೦-೦೫). [ಸಂ.]

**ಭ್ರಾತೃಜ** (ನಾ). ಅಣ್ಣನ ಅಥವಾ ತಮ್ಮನ ಮಗ ; ದಾಯಾದಿ : "ಭ್ರಾತ್ರೀಯಃ, ಭ್ರಾತೃಜಃ — ೨ ಒಡಹುಟ್ಟಿದವನ ಮಗ, ಅಣ್ಣನ ಮಗ, ತಮ್ಮನ ಮಗ" (ಸಿದ್ಧಾಂತಿ. ೮೬೬). [ಸಂ.]

**ಭ್ರಾತೃಜಾಯೆ** (ನಾ). ಸಹೋದರನ ಹೆಂಡತಿ : "ಪ್ರಜಾವತೀ, ಭ್ರಾತೃಜಾಯಾ — ೨ ಒಡಹುಟ್ಟಿದವನ ಹೆಂಡತಿ" (ಸಿದ್ಧಾಂತಿ. ೦೬೫).
[ ಸಂ. ಭ್ರಾತೃಜಾಯಾ ]

**ಭ್ರಾತೃದ್ರೋಹ** (ನಾ). ಒಡಹುಟ್ಟಿದವರು ಪರಸ್ಪರರಿಗೆ ಮಾಡುವ ಮೋಸ,-ವಿಶ್ವಾಸಘಾತ : (೬). [ಸಂ.]

**ಭ್ರಾತೃಪುತ್ರ** (ನಾ). = ಭ್ರಾತೃಜ : "ಭ್ರಾತೃವ್ಯಃ, ಭ್ರಾತೃಪುತ್ರಃ, ಭ್ರಾತ್ರೀಯಃ, ಭ್ರಾತೃಜಃ — ಈ ೪ ಒಡಹುಟ್ಟಿದನ ಮಗಂ" (ಹಲಾಯು. ೬೪-೪೫೨); ಧರ್ಮರಿಗೆ ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರು ನನ್ನ ಸಮೀಪಬಂಧು. ಭ್ರಾತೃಪುತ್ರರು ಎಂಬಂಶವು ತಿಳಿದಿರಲಾರದು (ಕಶಿ. III, XXXVII, ಅವತರಣಿಕೆ). [ಸಂ.]

**ಭ್ರಾತೃರೇಖೆ** (ನಾ). [ಸಾಮುದ್ರಿ] ಅಣ್ಣ ತಮ್ಮಂದಿರ ವಿಚಾರವನ್ನು ತಿಳಿಸುವ ಅಂಗೈಯಲ್ಲಿರುವ ಗೆರೆ : ಕಿರುಬೆರಳ ತಾಳಿನಲ್ಲಿ ಭ್ರಾತೃರೇಖೆ ಯಿರುವುದು (ಸಾಮುಂ. ೯೬-೬). [ಸಂ. ಭ್ರಾತೃರೇಖಾ]

**ಭ್ರಾತೃವಧು** (ನಾ).=ಭ್ರಾತೃಜಾಯೆ : "ಪ್ರಜಾವತೀ, ಭ್ರಾತೃವಧೂಃ — ಈ ೨ ನಾ(ದಿ)ದುನಿ" (ಹಲಾಯು. ೬೪-೪೫೦). [ಸಂ.]

**ಭ್ರಾತೃವ್ಯ** (ನಾ). ೧. = ಭ್ರಾತೃಜ : "ಭ್ರಾತೃವ್ಯಃ, ಭ್ರಾತೃಪುತ್ರಃ, ಭ್ರಾತ್ರೀಯಃ, ಭ್ರಾತೃಜಃ — ಈ ೪ ಒಡಹುಟ್ಟಿದನ ಮಗಂ" (ಹಲಾಯು. ೬೪-೪೫೨). ೨. ಶತ್ರು ; ಹಗೆ. [ಸಂ.]

**ಭ್ರಾತ್ರೀಯ** (ಗು). ೧. ಸಹೋದರನಿಗೆ ಸಂಬಂಧಿಸಿದ ; ಸಹೋದರ ನಿಗೆ ಸೇರಿದ. (ನಾ). ೨. = ಭ್ರಾತೃಜ : "ಭ್ರಾತೃವ್ಯಃ, ಭ್ರಾತೃ ಪುತ್ರಃ, ಭ್ರಾತ್ರೀಯಃ, ಭ್ರಾತೃಜಃ — ೪ ಒಡಹುಟ್ಟಿದನ ಮಗಂ" (ಹಲಾಯು. ೬೪-೪೫೨). [ಸಂ.]

**ಭ್ರಾಮು** (ನಾ). ೧. ಅಲೆದಾಟ ; ತಿರುಗಾಟ. ೨. ಭ್ರಾಂತಿ ; ಭ್ರಮೆ. [ಸಂ.]

**ಭ್ರಾಮಕ** (ಗು). ೧. ತಿರುಗುವಂತೆ ಮಾಡುವ ; ಸುತ್ತಿಸುವ. ೨. ಭ್ರಮೆಯನ್ನುಂಟುಮಾಡುವ ; ತಪ್ಪುತಿಳಿವಳಿಕೆಯನ್ನು ಕೊಡುವ ; ಮಿಥ್ಯಾಜ್ಞಾನವನ್ನುಂಟುಮಾಡುವ : ಆತುರಾತುರದೊಳು ಮದುವೆ ಯಿಂದನು ಅಲ್ಲದು ಭ್ರಾಮಕಸುಖದೊಳು ಸಂದು (ಜಂಶಾಶ. ೨೦೩-೮೨) : ಅನೇಕ ಭಾಷೆಗಳ ಲಿಂಗವಿಂಗಡಣೆಯಲ್ಲಿ ಚಂಚಲ ಹಾಗೂ ಭ್ರಾಮಕ ಅಂಶ ಗಳು ಇರುವುದೇ ಈ ಅಪಹಾಸ್ಯಕ್ಕೆ ಕಾರಣವಿದ್ದಿರಬೇಕು (ಭ್ರಾ.ಶಿ. ೨೮೬). ೩. ಮೋಸದ ; ಕಪಟದ. (ನಾ). ೪. ತಪ್ಪುತಿಳಿವಳಿಕೆ : ಭ್ರಾಂತಿ ; ಭ್ರಮೆ : ಭ್ರಮೆಯೊಳಗೆ ತನ್ನಯ ಭ್ರಾಮಕ ಹಿಂಗಿದಲ್ಲದೆ ಕಂಡುದ ಕಾಣ ಬಾರದೆಂಬುದಕ್ಕೆ ಸೂಚನೆ (ಶೂನ್ಯಸಂ. ೧೯೦-೬೨೦) ; ಪಾಶವಜಿತು ಗುರು ವಾಗಬೇಕು ವೇಷವಜಿತು ಚರವಾಗಬೇಕು ಭ್ರಾಮಕವಜಿತು ಲಿಂಗವಾಗಬೇಕು (ಶವಗೋ. ೫೦-೦೦೩). ೫. ಮೋಹ : ವಾಂಛೆ : ಪರಮಪತಿವ್ರತೆ ಯಾಗಿರ್ದು ತನಗೀ ತರಳನ ಮೇಲೆ ಭ್ರಾಮಕದ ಇರಲೀಯದೊಡಲನೀಡಾಡು ವೆನು (ಶೂಶತ. ೦೦-೯೩). ೬. ಭ್ರಮೆಯನ್ನುಂಟುಮಾಡುವುದು ; ಸುಳ್ಳನ್ನು ನಿಜವೆಂದು ನಂಬಿಸುವುದು : ಮೋಸ : ಭೂಮಿಶನತ್ತಪನೆ ತನ್ನ ತನುಭಾಗವುಂ ಭ್ರಾಮಕವಿದೆಂದು ಜಱಿದು (ಕೈಬಿಶಾ. ೨೬-೯೦). ೭. ಸೂಜಿಗಲ್ಲು ; ಅಯಸ್ಕಾಂತ : "ಚುಂಬಕಃ, ಭ್ರಾಮಕಃ ಮೊದ ಲಾದುವು ಅಯಸ್ಕಾಂತದ ಭೇದಂಗಳ್" (ಹಲಾಯು. ೨೬-೦೫) ; ತತ್ತ ರಣಿಯ ಬಱಿವಟಾಯುಂ ಪತ್ತಿ . . . ಮುನಿಪಂ ಭ್ರಾಮಕದತ್ತೆಳಸುವ ಪಚ್ಚೆಗರ್ಬುನಕ್ಕೆಣೆಯಾದಂ (ಸಂಗಾಪಾ. ೯-೬೩) ; ಇವುಗಳ ವಿದ್ಯುಜ್ಜನಕ ಗಳಲ್ಲಿ ಒಂದೇ ಚಾಲಕದಂಡದ (Driving shaft) ಮೇಲೆ ಅನೇಕ ಭ್ರಾಮಕ ಗಳನ್ನು ಜೋಡಿಸಿರುತ್ತಾರೆ (ಶಿಲ್ಪ. ೨೧೨). ೮. ಧೂರ್ತ ; ಮೋಸ ಗಾರ. ೯. ನರಿ. ೧೦. ಸೂರ್ಯಕಾಂತಿ ಹೂವು. [ಸಂ.]

**ಭ್ರಾಮಕಗೊಳ್ಳು** (ಕ್ರಿ). ಮರುಳಾಗು ; ಮೋಹಗೊಳ್ಳು : ಸತ್ಕೋವು ಲಾಂಗಿಯ ಪೇರುರದ ಹೇಮಾಬ್ಜಮುಕುಳಸ್ತನ ಬಗಿವಚೆದಿರೆಭ್ರಾಮಕಗೊಂಡು ವೀಕ್ಷಿಸಿದ (ಶೂಶತ. ೦೭-೩೭). [ಭ್ರಾಮಕ + ಕೊಳ್ಳು$_1$ (< ಕೊಳ್$_1$)]

**ಭ್ರಾಮಕರತಿ** (ನಾ). [ಕಾಮಶಾ] ಒಂದು ಬಗೆಯ ರತಿ : ಪ್ರಪಂಚದಲ್ಲಿ ಸ್ತ್ರೀಯರೆ ಅವರ ಮನಃಪೂರ್ವಕ ಮನಸ್ಸಿಟ್ಟು ರಮಿಸಿದರೆ ಮಹಾರತಿ. ಆಕೆ ಮನಸ್ಸಿಲ್ಲದೆ ರಮಿಸುವದು ಭ್ರಾಮಕರತಿ ಎಂದು ತಿಳಿಯುವದು (ಕಾಮಶಾ. ೨೫೦). [ಸಂ.]

**ಭ್ರಾಮಕವಡಿಸು** (ಕ್ರಿ). ಮೋಹಗೊಳಿಸಂ : ಮರುಳುಮಾಡು : ನಿನ್ನನ್ನು ಕಾಮರಸಾಸ್ತ್ರದೊಳೆಚ್ಚು ಭ್ರಾಮಕವಡಿಸಿದನಿವನೀಗ ನೋಡೆಂದು ಕಾಮನ ರೂಹ ತೋಱಿದಳು (ಶೂಶತ. ೬೦-೩೦). [ಭ್ರಾಮಕ + ಪಡಿಸು]

**ಭ್ರಾಮಕವಡೆ** (ಕ್ರಿ). ಮರುಳಾಗು ; ಮೋಹಗೊಳ್ಳು : ಕಾಮನ ತರಳ ವಿಗ್ರಹದ . . . ಮಾನಿನಿ ಕಂಡು ಭ್ರಾಮಕವಡೆದಳಾಕ್ಷಣದಿ (ಶೂಶತ. ೦೩-೯೩). [ಭ್ರಾಮಕ + ಪಡೆ$_1$]

**ಭ್ರಾಮಕಾಸ್ತ್ರ** (ನಾ). ದಿಗ್ಭ್ರಮೆ ಹಿಡಿಸುವ ಅಸ್ತ್ರ ; ಸಮ್ಮೋಹನಾಸ್ತ್ರ : ಭ್ರಾಮಕಾಸ್ತ್ರಗಳಂ ಸಂಧಿಸಿಯುಂ ಕಡುಕೆಯ್ದು ವೃಷ್ಟಲನೊಳ್ ಚಿತ್ರಂ ಚಿತ್ರತರವಾಗೆ ಕೈಗೆಯ್ದುನ್ನತಿರ್ದಂ (ಚಾವಚ. ೯೬-೯). [ಸಂ.]

**ಭ್ರಾಮರ** (ನಾ). ೧. ದುಂಬಿಯಿಂದಾದುದು ; ದುಂಬಿಗೆ ಸಂಬಂಧ ಪಟ್ಟದು. ೨. ಜೇನುತುಪ್ಪ. ೩. ಸುತ್ತುವಿಕೆ ; ತಿರುಗುವಿಕೆ. ೪. (ಆಲಂ) ಮನಸ್ಸಿನ ಅಲೆದಾಟ ; ಭ್ರಾಂತಿ ; ಅಜ್ಞಾನ : ತ್ಯಾಗಾಂಗ ಭೋಗಾಂಗ ಯೋಗಾಂಗ ಸ್ವರ್ವಸಮಾಧಾನ ಸುಚಿತ್ತವಿರ್ದು ಮತ್ತ ಇತ್ಯಾದಿಗಳಲ್ಲಿ ಸೋಡಿಹೆನೆಂಬ ಭ್ರಾಂತು ಭ್ರಾಮರವೇತಕ್ಕೆ (ಶೂನ್ಯಸಂ. ೧೯೦-೬೦೫). [ಸಂ.]

**ಭ್ರಾಷ್ಟ್ರ** (ನಾ). ೧. ಹುರಿಯುವ ಓಡು ; ಬಾಂಡಲೆ : "ಅಂಬರೀಷಃ, ಭ್ರಾಷ್ಟ್ರಂ — ಈ ೨ ಹುರಿಗಾವಲಿ" (ಹಲಾಯು. ೩೨-೦೫೬) ; "ಭ್ರಾಷ್ಟ್ರ ಮಂಬರೀಷಂ ಹುರಿವ ಹಂಚಕ್ಕು" (ಶಂಗಣಾ. ೬೨-೨೯). ೨. ಬೆಳಕು ; ಪ್ರಕಾಶ. ೩. ಆಕಾಶ. [ಸಂ.]

**ಭ್ರಾಷ್ಟ್ರಕ** (ನಾ). = ಭ್ರಾಷ್ಟ್ರ ೧. [ಸಂ.]

**ಭ್ರುಕಂಸ** (ನಾ). ಹೆಂಗಸಿನ ವೇಷಧಾರಿಯಾದ ನಟ : "ಭ್ರುಕಂಸಃ, ಭ್ರುಕುಂಸಃ, ಭ್ರೂಕುಂಸಃ — ೩ ಸ್ತ್ರೀವೇಷಧಾರೀ— ಹೆಣ್ಣುವೇಷವನ್ನು ಧರಿಸಿದ, ನರ್ತಕಃ, ಪುರುಷಃ, ಕುಣಿಯುವ ಗಂಡಿನ ಹೆಸರುಗಳು" (ಸಿದ್ಧಾಂಶಿ. ೬೦). [ಸಂ.]

**ಭ್ರುಕುಟಿ** (ನಾ). ೧. (ಕೋಪ ಮೊದಲಾದ ಕಾರಣದಿಂದ ಉಂಟಾ ಗುವ) ಹುಬ್ಬುಗಂಟು ; ಭ್ರೂಭಂಗ : ಪಿರಿದುಂ ಪ್ರಯತ್ನದಿಂದಮೆ ವಿರಚಿಸೆ ಚಣ್ಗೆಸವ ಭೀಷಣಭ್ರುಕುಟಿ ಪೊದಟ್ಟಿರೆ (ಕಾದಂಪೂ. ೬೦೦); ಭ್ರುಕುಟಿ ಪೊದಳ್ದೆಡೆಗೊಂಡಿರೆ ಕೋಪಾಗ್ನಿಯ ಪೊಡರ್ಪು ರೂಪಾಂತ ತೆಱದ ಘುಡುಘುಡಿಸುತ್ತುಂ (ರಾಜಶೇ. ೦೯-೬). ೨. [ನಾಟ್ಯ] ಅಭಿನಯದಲ್ಲಿ ಹುಬ್ಬಿನ ಏಳು ಭೇದಗಳಲ್ಲಿ ಒಂದು ; "ಎರಡು ಹುಬ್ಬುಗಳನ್ನು ಜಾಗ್ರತೆ ಮೇಲೆತ್ತುವುದು" (ಶಾಸ್ತ್ರರಂ. ೨೮೩ ಗದ್ಯಾನುವಾದ) : ಸಹಜ, ಪತಿತ, ಉತ್ಕ್ಷಿಪ್ತ, ರೇಚಿತ, ಕುಂಚಿತ, ಭ್ರುಕುಟಿ, ಚತುರ — ಈ ಏಳು ಹುಬ್ಬಿನ ಭೇದಂಗಳ್ . . . ಫಲಿಲನೆಯೆತ್ತಲ್ಕೆರಡುಂ ಜಲಜಾಕ್ಷೀ ಭ್ರುಕುಟಿ ಯೆಂಬ ಪುರ್ಬೆಸೆದಿರ್ಕುಂ (ಶಾಸ್ತ್ರರಂ. ೩-೯೩). [ಸಂ.]

**ಭ್ರೂಕಂಸ** (ನಾ). = ಭ್ರುಕಂಸ : "ಭ್ರುಕಂಸಃ, ಭ್ರುಕುಂಸಃ, ಭ್ರೂಕುಂಸಃ — ೩ ಸ್ತ್ರೀವೇಷಧಾರೀ — ಹೆಣ್ಣುವೇಷವನ್ನು ಧರಿಸಿದ ನರ್ತಕ, ಪುರುಷ, ಕುಣಿಯುವ ಗಂಡಿನ ಹೆಸರುಗಳು" (ಸಿದ್ಧಾಂಶಿ. ೬೦). [ಸಂ.]

**ಭ್ರೂಕುಟಿ** (ನಾ). = ಭ್ರುಕುಟಿ ೧ : "ಭ್ರುಕುಟಿಃ, ಭ್ರೂಕುಟಿಃ — ೨ ಹುಬ್ಬು (ಪುರ್ಬು) ಗಂಟಿಕ್ಕುವುದು" (ಹಲಾಯು. ೦೨೬-೯೦). [ಸಂ.]

**ಭ್ರೂಕೋಟಿ** (ನಾ). ಹುಬ್ಬಿನ ಕೊನೆ,— ತುದಿ : ಈ ಜಗದೊಳ್ ಬದ್ದೆಗ ನನ್ನನಾತನಟೆಸುಂ ಭ್ರೂಕೋಟಿಯುಂ ಕೋಟಿಯುಂ (ಶಂಶಪಾ. ೦-೨೬);

ಕಾರುಣ್ಯದೃಷ್ಟಿಯೊಳಿತ್ತುಂ ಧರಣೀಶ್ವರರು ಕನಕಮಂ ಭ್ರೂಕೋಟಿಯಿಂ ಕೋಟಿಯುಮಂ (ಮಲ್ಲಿಪು. ೫-೯೪). [ಸಂ.]

**ಭ್ರೂಣ** (ನಾ). ೧. ಗರ್ಭಸ್ಥ ಶಿಶು ; ಪಿಂಡ : " ಗರ್ಭಃ, ಭ್ರೂಣಃ —ಈ ೨ ಗರ್ಭಂ " (ಕರ್ಣಾಟ. ೬೨-೩೯೫); ತಾಯಿಯ ಗರ್ಭದಲ್ಲಿ, ತಾಯಿಯಿಂದಲೇ ಆಹಾರವನ್ನು ಪಡೆದು ಬೆಳೆಯುವ ಮನುಷ್ಯನ ಭ್ರೂಣವೂ (Embryo) ಕೂಡ ಶಾಸ್ತ್ರೀಯವಾಗಿ ನೋಡಿದರೆ ಪರತಂತ್ರಜೀವಿಯೇ (ಪರೋ. ೮). ೨. ಕೂಸು ; ಶಿಶು ; ಮಗು. ೩. ಹುಡುಗ ; ಬಾಲಕ. ೪. ಬಸುರಿ ; ಗರ್ಭಿಣಿ ; " ಬಸುಱ ಸತಿಯೊಳ್ ಭ್ರೂಣಮೆಂಬುದು " (ಮಂಗರಾ. ೦೪೦-೦೨). ೫. ಸಸ್ಯದ ಅಂಕುರ ; ಮೊಳಕೆ : ಈ ಅಂಡವು ಪರಾಗನಳಿಕೆಯು ದ್ರವದೊಂದಿಗೆ ಸ್ಪರ್ಶವಾದ ಮೇಲೆಯೇ ಭ್ರೂಣವು ತಯಾರಾಗುವುದೆಂದೂ ಖಚಿತವಾಗಿ ನಿರ್ಧರಿಸಲ್ಪಟ್ಟಿತು (ಸಸ್ಯಕ. ೦೬) ; ಭತ್ತದ ಉಮಿ ಅಥವಾ ಹೊರಕವಚವನ್ನು ತೆಗೆದರೆ ಬರುವ ಅಕ್ಕಿಯಲ್ಲಿ ಮೇಲ್ಭಾಗದಲ್ಲಿ ಭ್ರೂಣ . . . ಮತ್ತು ಒಳಗೆ ಪಿಷ್ಟದ ಭಾಗ ಇರುತ್ತವೆ (ಅಡುಗೆ. ೬೨). ೬. ಮೂಲಾವಸ್ಥೆಯಲ್ಲಿರುವ ವಸ್ತು ; ಮೂಲವಸ್ತು : ಈ ಹಂತದಲ್ಲಿ ರೂಪುಗೊಂಡ ವಸ್ತುಗಳನ್ನು ಸೌರವ್ಯೂಹದ ಗ್ರಹಗಳ ಮತ್ತು ಇತರ ವಸ್ತುಗಳ ಭ್ರೂಣಗಳೆಂದು ವರ್ಣಿಸಬಹುದು (ಭೂಹುಟ್ಟು. ೩೮). ೭. (?) : "ಗರ್ಭಿಣೀ ಜ್ವಾಲೆಯಶೀವ ಬಾಲಕರುಮಿಂತಿವು ಭ್ರೂಣಮೆನಿಕ್ಕು" (ನಾನಾರ. ೧೩೪). [ಸಂ.]

**ಭ್ರೂಣಹತ್ಯ** (ನಾ). ಗರ್ಭದಲ್ಲಿರುವ ಶಿಶುವನ್ನು ನಾಶಪಡಿಸುವುದು,- ಕೊಲ್ಲುವುದು : ಅಂದು ಕಣ್ಣಪ್ಪನ ನಯನಮಿರೆ ಇಂದುಜೂಟಂ ಭ್ರೂಣಹತ್ಯಕೆ ಬಂದು ನಿಲುವನೆ (ಬಸವಪು. ೦೬-೪೦); ಆತ್ಮಹತ್ಯ ಭ್ರೂಣಹತ್ಯದೋಷಂಗಳೊಮ್ಮೊದಲೊಳೆ ಬಂದೊದವುಗುಮೆಂದೆ ಮಾಣ್ದಂ (ರಾಜಶೇಖ. ೪೨-೩). [ಸಂ.]

**ಭ್ರೂಣಹತ್ಯಾಪಾತಕ** (ನಾ). ೧. ಗರ್ಭದಲ್ಲಿರುವ ಶಿಶುವನ್ನು ಕೊಂದುದರಿಂದ ಬರುವ ಪಾಪ. ೨. ಹಸುಳೆಯನ್ನು ಕೊಂದುದರಿಂದ ಉಂಟಾಗುವ ಪಾಪ ; ಬಾಲವಧೆಯಿಂದ ಬರುವ ದೋಷ : ಕರೆ ನಿಮ್ಮಾತಗಳನೀ ಭ್ರೂಣಹತ್ಯಾಪಾತಕಕ್ಕಂಜುವೆನು (ಕುಮಾರದ್ರೋ. ೫-೨೩) ; ಈ ತರಳನ ಮರ್ದಿಸಿ ಭ್ರೂಣಹತ್ಯಾಪಾತಕವನು ಕಟ್ಟಿಕೊಳಲು ಏತಕೆ (ಬೋಜಚ. ೦೦-೨೬). [ಸಂ.]

**ಭ್ರೂಣಹತ್ಯಾಪಾತಕಿ** (ನಾ). ಬಾಲಕನನ್ನು ಕೊಂದ ಪಾಪಿ : ಆತುಕೊಳ್ಳಲು ಭ್ರೂಣಹತ್ಯಾಪಾತಕಿಯೆ ಪಡಿತಳಿಸು ವಿಶಿಖವ್ರಾತವಿದೆಯೆನುತೆಚ್ಚ ನಿನ ಸುತನನಿಲನಂದನನ (ಕುಮಾಕ. ೦೦-೪೦). [ಸಂ. ಭ್ರೂಣಹತ್ಯಾಪಾತಕಿನ್]

**ಭ್ರೂಣಹತ್ಯೆ** (ನಾ). =ಭ್ರೂಣಹತ್ಯ : ಭ್ರೂಣಹತ್ಯೆ ನಮ್ಮ ಮೊದಲನೆಯ ಹೆಜ್ಜೆ (ಚಂದ್ರವಾ. ೪೫-೨೦). [ಸಂ. ಭ್ರೂಣಹತ್ಯಾ]

**ಭ್ರೂಭಂಗ** (ನಾ). = ಭ್ರುಕುಟಿ ೧ : ಪ್ರಕುಪಿತಮೃಗಪತಿಶಿಶುಸನ್ನಿಕಾಶರತಿವಿಕಟಭೀಷಣಭ್ರೂಭಂಗರ್ ನಕುಲ ಸಹದೇವರ್ (ಪಂಪಭಾ. ೬-೮) ; ನಿಮಗಿನಿತು ಭಂಗಮಂ ಮಾಡಿದಂಗವಾದಿಗಳಂ ಭ್ರೂಭಂಗಮಾತ್ರದೊಳೆ ಸೆಱೆಗೆಯ್ದು ತಂದು . . . ಪರಿಭವಿಸುವೆಂ (ಶಂರಾಮಾ. ೦೪-೦೦೬ ವ); ಕಂಗಳಿಂದನುಯೋಗ ನಿಜಹಸ್ತಾಂಗುಲಿಯೊಳುತ್ತರ ಲಸದ್ಭ್ರೂಭಂಗದರಿ ಸಂದೇಹ ಮುಖವಿಕೃತಿಯಲಿ ದುರ್ನೀತಿ (ಕುಮಾಗ. ೦೪-೯೩). [ಸಂ.]

**ಭ್ರೂಭ್ರುಕುಟಿ** (ನಾ). =ಭ್ರುಕುಟಿ ೧ : ಕೃತಾಂತಭ್ರೂಭ್ರುಕುಟಿಕುಟಿಲಮಂ ಜಯಲಕ್ಷ್ಮೀಕಾಂತಂ ಕಾರ್ಮುಕಮಂ ತಳೆದು (ಚಂದ್ರಪು. ೬-೩೦). [ಸಂ.]

**ಭ್ರೂಮಧ್ಯ** (ನಾ). ಎರಡು ಹುಬ್ಬುಗಳ ಮಧ್ಯಪ್ರದೇಶ : ಮೂಲನಾಭಿಸ್ಥಿತನೆ ಕಂಠಮುಖನಾಸಾಗ್ರಲೋಲನೇ ಭ್ರೂಮಧ್ಯನಾದ ಮಧ್ಯಸ್ಥನೆ (ವೀರ್ಯಪು. ೩-೦೭-೬೨) ; ದ್ವಾರಗಳೊಂಭತ್ತು ಮುಚ್ಚಿ ನಿಲ್ಲಿಸಿ ಧ್ಯಾನ ಭ್ರೂಮಧ್ಯದಿ (ಪುರಂದ. ೩-೮೦ ಅನುಬಂಧ). [ಸಂ.]

**ಭ್ರೂಲಾಸ್ಯ** (ನಾ). ಹುಬ್ಬನ್ನು ಆಡಿಸುವುದು ; ಹುಬ್ಬನ್ನು ಕುಣಿಸುವಿಕೆ : ಇದು ನಿನ್ನರ್ಚಿಸುವಿಕ್ಷುಚಾಪಂ . . . ಎಂದು ತೋರ್ಪ ತೆಱದಿಂ ಭ್ರೂಲಾಸ್ಯಮಂ . . . ತೋಱದಳ್ (ಆದಿಪು. ೮೦-೦೭). [ಸಂ.]

**ಭ್ರೂಲೇಖೆ** (ನಾ). ಹುಬ್ಬಿನ ರೇಖೆ,-ಗೆರೆ : ಮುಂದೆ ನಿಂದ ಸಕಳಮಕುಟಬದ್ಧರನುನ್ನಮಿತಭ್ರೂಲೇಖೆಯಿಂ . . . ಬೀಡಿಂಗೆ ಬೆಸಸೆ (ಮಲ್ಲಿಪು. ೯-೫೨). [ಸಂ. ಭ್ರೂಲೇಖಾ]

**ಭ್ರೂವಿಕ್ಷೇಪ** (ನಾ). = ಭ್ರೂಲಾಸ್ಯ : ಆ ಪುರಸ್ತ್ರೀಭ್ರೂವಿಕ್ಷೇಪಕ್ಕೆ ಸೇನಾಪತಿಪದವಿಯನಿತ್ತಂ ಮನೋಜಾತಂ (ಮಲ್ಲಿಪು. ೨-೫೭). [ಸಂ.]

**ಭ್ರೂವಿಕ್ಷೇಪಣ** (ನಾ). = ಭ್ರೂಲಾಸ್ಯ : ತದ್ಭ್ರೂವಿಕ್ಷೇಪಣಪ್ರೇರಿತಂ ಮೇಘನಾದನಾದರದಿಂ ಬಂದು (ರಾಜಶೇ. ೬-೩೦ ವ). [ಸಂ.]

**ಭ್ರೂವಿಭ್ರಮ** (ನಾ). ಹುಬ್ಬಿನ ರಮಣೀಯವಾದ ಚಲನೆ,-ವಿಲಾಸ : ಕಂತುಶರಭವ[ನ]ನಾ ಪ್ರಿಯಕಾಂತಾಭ್ರೂವಿಭ್ರಮಗ್ರಹಾಗ್ರಹವಶದಿಂ ಭ್ರಾಂತಿಸದುಪಶಾಂತಮನಂ ಶಂತನುಗಿತ್ತಂ ಸಮಸ್ತರಾಜ್ಯಶ್ರೀಯಂ (ಪಂಪಭಾ. ೦-೬೬) ; ಆಕೆಯರ ಸಪ್ತವಿಧಭ್ರೂವಿಭ್ರಮದಿಂ ಮದನನ ಮದೆವಿಲ್ಗಳಂ ಕೆದಱದಂತೆಯುಂ . . . ಅತಿ ಮನೋಹರವಾಗೆ (ಚಂದ್ರಪು. ೧೨-೦೯೪ ವ). [ಸಂ.]

**ಭ್ರೂವಿಲಾಸ** (ನಾ). = ಭ್ರೂವಿಭ್ರಮ : ಭ್ರೂವಿಲಾಸಸ್ಥಿತಿಯೊಳೇ ಸುತ್ಪತ್ತಿಯಾಗದೆ ಬ್ರಹ್ಮಕೋಟಿಗಳು . . . ದೇವ (ಕುಮಾರಾ. ೬-೪೨). [ಸಂ.]

**ಭ್ರೂಸಂಜ್ಞೆ** (ನಾ). ಹುಬ್ಬಿನಿಂದ ಮಾಡುವ ಸನ್ನೆ : ವಿವಾಹಮಂಗಳಕಿದೇ ಭ್ರೂಸಂಜ್ಞೆಯೆಂಬಂತೆ ಚೆಲ್ವನದೇಂ ಶ್ಮಶ್ರುವಿಕಾಸರೇಖೆ ತಳೆದತ್ತೀಗಳ್ ಕುಮಾರಾಸ್ಯದೊಳ್ (ಅದಂಅ. ೪೦೦). [ಸಂ. ಭ್ರೂಸಂಜ್ಞಾ]

*

# ಮ



**ಮ** (ನಾ). ೧. ಕನ್ನಡ ವರ್ಣಮಾಲೆಯ ನಲವತ್ತೈದನೆಯ ಅಕ್ಷರ : ಪಫಬಭಮಯರಲವಶಷಸಹ (ಶಬ್ದಮ. ೩ ಸೂ.) ; ಅಚ್ಚಗನ್ನಡದಲ್ಲಿ ೪೭ ಅಕ್ಷರಗಳಿವೆಯೆಂದು ಕೇಶಿರಾಜನು ಹೇಳಿರುತ್ತಾನೆ . . . ವ್ಯಂಜನಗಳು . . . ಪಫಬಭಮ (ಶಬ್ದ. ೩). ೨. ಚಂದ್ರ. ೩. ಬ್ರಹ್ಮ. ೪. ವಿಷ್ಣು. ೫. ಶಿವ. ೬. ಯಮ. ೭. ಸಮಯ ; ಕಾಲ. ೮. ವಿಷ. ೯. ನೀರು. ೧೦. ಸುಖ ; ಕ್ಷೇಮ. ೧೧. [ಛಂದ] ಮೂರು ಗುರುಗಳನ್ನು ಒಳಗೊಂಡಿರುವ ಒಂದು ಅಕ್ಷರ ಗಣ ; ಮಗಣ ( — — — ) : ಮಯರಸತಜಭನಲಿ ಗುವಿನಿಚಯಮೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ (ಛಂದೋಂಬು. ೧-೩೩). ೧೨. [ಸಂಗೀತ] ಸರಿಗಮಪಧನಿ ಎಂಬ ಸಪ್ತ ಸ್ವರಗಳಲ್ಲಿ ನಾಲ್ಕನೆಯದು ; ಮಧ್ಯಮ : ಅವಱಲ್ಲಿ ತೋಱುವಕ್ಷರಾದಿ ಸಂಜ್ಞೆಗಳು ಪುಟ್ಟಿದುವು ಸರಿಗಮಪಧನಿಯೆಂಬಿವು (ಸಂಗರಾ. ೨೩-೩) ; ಸಪ್ತಸ್ವರ ಕ್ರಮವಾಗಿ ಸ, ರಿ, ಗ, ಮ, ಪ, ಧ, ನಿ ಎಂಬ ಸಂಕೇತಾಕ್ಷರಗಳಿಂದ ಪ್ರಯೋಗದಲ್ಲಿವೆ (ಸಂಗೀತಂ. ೧೫). ೧೩. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ ; P ಜ್ಯೋತಿಷ್ಯದಲ್ಲಿ ಅಕ್ಷರಗಳಿಂದ ಸಂಖ್ಯೆಯನ್ನು ಗುರುತಿಸುವ ಒಂದು ಕ್ರಮವಿದೆ. 'ಪಾದಿ ಪಂಚ' ಎಂದರೆ–ಪ ಎಂದರೆ ೧, ಫ = ೨, ಬ = ೩, ಭ = ೪, ಮ = ೫ — ಈ ರೀತಿ ಲೆಕ್ಕ ಮಾಡುತ್ತಾರೆ. [ಸಂ.]

**ಮಇಂದ** 'ಮೆಯಿಂದ' ನೋ.

**ಮಇದು** 'ಮೆಯ್ದುನ' ನೋ.

**ಮಂಕ** (ನಾ). ೧. ಕಳೆಗುಂದಿದವನು ; ಪೆಚ್ಚುಮೋರೆ ಹಾಕಿಕೊಂಡಿರುವವನು : ಯಾಕೆ ಮಂಕನಾಗಿ ಕುಳಿತುಕೊಂಡಿದ್ದೀಯ ? (ಲೂಇ). ೨. ದಡ್ಡ ; ತಿಳಿಗೇಡಿ ; ಮೂಢ : ಕುರುಬನೆಂಬ ಮಾತು ಮಂಕನೆಂಬ ಅರ್ಥದಲ್ಲಿ ರೂಢಿಯಾಗಿರುವುದು (ಕಥಾವಂ. IV. ೨೩) ; ಆಗ ನಾನು ಮಂಕನಂತೆ ಕುಳಿತು ಬಿಡುತ್ತೇನೆ (ಶಾಲಪು. ೨೭).

[ ಮಂಕು + – ಅ$_7$ ]

**ಮಂಕಡ** 'ಮಕ್ಕಡ' ನೋ.

**ಮಂಕಣಿ** 'ಮಕ್ಕರಿ$_1$' ನೋ.

**ಮಂಕಬ್ಬೆ** (ನಾ). ಒಬ್ಬಾಕೆಯ ಹೆಸರು : ಪದ್ಮಣನ್ದಿಭಟಾರರ ಮಾಳವೆ ಕನ್ತಿಯರ ಸಿಸಿತ್ತಿಯರಪ್ಪ ಮಂಕಬ್ಬೆಕನ್ತಿಯರ್ (ಎಕ. IX (S). ಚಂದ್ರಕೂ ೯೩–೯; ಸು. 1000). [ಮಂಕ ? + ಅಬ್ಬೆ$_1$]

**ಮಂಕರಿ** 'ಮಕ್ಕರಿ$_1$' ನೋ.

**ಮಂಕಿ** (ನಾ). ಬುದ್ಧಿಯಿಲ್ಲದವಳು ; ದಡ್ಡಿ : ಕಂಕಿ ಹೋಹುದಱಿಂದ ಮಂಕಿ ಹೋಹುದು ಲೇಸು (ಸರ್ವಜ್ಞ. ೧೬೨೨). [ಮಂಕ + – ಇ$_2$]

**ಮಂಕು** (ನಾ). ೧. ಮಸುಕು ; ಮಬ್ಬು : ಅವಳ ಕಣ್ಣ ಬೆಳಕಿನಲ್ಲಿ ಹಗಲು ಮಂಕು ಚಿದುರಿತು (ಶಾಪಗೀ. ೩೦೯). ೨. ಜಡತೆ ; ಆಲಸ್ಯ ; ನಿರುತ್ಸಾಹ : ಗೆಲವು ಹೋಗಿ ಮಂಕು ಕವಿಯಿತು (ಮುಂಜಾವು. ೩); ನಿವಾರಿಸಲಾಗದ ಮಂಕು ಕಳಸಾಪುರವನ್ನು ಕವಿದಂತೆ ಅವರಿಗೆ ತೋರಿತು (ಕಳಸು. ೯೦). ೩. ದಿಗ್ಭ್ರಮೆ; ಕಕ್ಕಾಬಿಕ್ಕಿ : ಅರಿವೊ ಮಾಯೆಯ ಮಂಕೊ (ಅಸೀಗೀ. ೧೨–೧). ೪. ಮಂದಬುದ್ಧಿ ; ಅಜ್ಞಾನ : ಮಂಕಿನ ಜಿಡ್ಡು ಕವಿದರೆ ಮಾಜಿಪರೇ ಮಾಡಿದ ಮಹಾತ್ಮಕರ (ಸುಜ್ಞಾ. ೩೦. ೨–೩೪). ೫. ತಿಳಿವಳಿಕೆ ಇಲ್ಲದ ವ್ಯಕ್ತಿ; ಬುದ್ಧಿಗೇಡಿ : ಕೋಕಿಗುರುಳಿನ ರಂಭೆ ಕಂಕಣವು ಕಟಿಸೂತ್ರ ಪಂಕಜಮುಖಿಯು ಎಸಬೇಡ ತಾನೊಲಿದ ಮಂಕೆ ಮಾಣಿಕವು (ಸರ್ವಜ್ಞ. ೧೭೦೦). (ಗು). ೬. ಬುದ್ಧಿಯಿಲ್ಲದ; ದಡ್ಡತನದಿಂದ ಕೂಡಿದ : ಮಂಕು ಜೀವನಾಗಿ ಮುಕ್ತಿ ಬೇಡಬಾರದು (ಕೃಷ್ಣ. ೨–೫೯–೪); ಎಲೆ ಮಂಕುಮದದ ನಿನ್ನರಳಂಬು . . . ಎನ್ನ ಕಲುವಕ್ಷದೊಳು ನಾಂಟಲರಿಯವು ಹೋಗು (ಪೋಹಕ. ೧೨–೫೮).

**ಮಂಕಾಡು** = ಹುಡುಗಾಟಿಕೆ ಮಾಡು ; ಹುಡುಗಾಟವಾಡು : ತಾಯ ಮುಂದೆ ಮಗು ಮಂಕಾಡಿದೋಪಾದಿಯಲ್ಲಿ (ಶಾಶಗಸು. ೪೦).

**ಮಂಕುಮಾಡು** = ೧. ಮರುಳುಮಾಡು; ಮೋಹಗೊಳಿಸು : ಬಿಂಕದ ಗಿಳಿಯೆ ಕೇಳಮ್ಮ ನಾಯಕ ತನ್ನ ಸೋಂಕಿದಾಕ್ಷಣವೆ ನೀಱೆಯರ ಮಂಕು ಮಾಡುವ (ಛಟ. ೩-೯೫). ೨. ಕಳೆಗುಂದಿಸು : ಕಾಂತಿಹೀನನನ್ನಾಗಿ ಮಾಡು : ಪ್ರಖರತೇಜಸ್ಸುಳ್ಳ ಸೂರ್ಯ. . . ಶಾಂತಪ್ರಕಾಶನಾದ ಚಂದ್ರನನ್ನು ಮಂಕು ಮಾಡಿ ಲೋಕದ ಕಣ್ಣಿಗೆ ಅವನ ಇರವೇ ಗೊತ್ತಾಗದಂತೆ ಮಾಡಿಬಿಡುತ್ತಾನೆ (ಕೂಪ್ಯಕು. ೧೦೩). [ದೇ.೫ ತಮಿ. ಮಕ್ಕು; ಮಲ. ಮಣ್ಣುಕ ; ತುಳು. ತೆಲು. ಮಂಕು./ಪಾಲಿ. ಮಂಕು ]

**ಮಂಕುಗೊಳಿಸು** (ಕ್ರಿ). ೧. ಮರುಳುಮಾಡು ; ವಿಸ್ಮಯಗೊಳಿಸು : ಭಾರತದ ಸನ್ಯಾಸಿಯೊಬ್ಬ ಅಮೇರಿಕೆಯ ಜನವನ್ನು ಮಂಕುಗೊಳಿಸಿದ (ರರ್ವಗಾ. ೫೦). ೨. ಹೆಚ್ಚದಂತೆ ಮಾಡು ; ಕುಂಠಿತಗೊಳಿಸು : ಆ ಹುಡುಗಿಯಲ್ಲಿ ಅಡಕವಾಗಿರುವ ಪ್ರತಿಭೆಯನ್ನು ತಾಯಿ ತಂದೆ ಮಂಕುಗೊಳಿಸುತ್ತಾರಲ್ಲಾ ಎಂದು ಸುನಂದಳಿಗೆ ವ್ಯಥೆಯಾಯಿತು (ದೂಬಿಲ್ಲು. ೧೧೧). ೩. ಮಸಕಾಗುವಂತೆ ಮಾಡು ; ಮಬ್ಬಾಗಿಸು.

[ಮಂಕು + ಕೊಳ್$_1$ + – ಇಸು$_3$]

**ಮಂಕುತನ** (ನಾ). ತಿಳಿವಳಿಕೆಯಿಲ್ಲದಿರುವಿಕೆ ; ದಡ್ಡತನ ; ಬೆಪ್ಪುತನ : ನಿನಗೀ ಮಂಕುತನವೇನೆಂದರಾ ಸಖರು (ಕೃಷ್ಣಾ. ೬–೩) ; ಏ ಚಿನ್ನಾ ಇದೇನೋ ನಿನ್ನ ಮಂಕುತನ ? (ಬಂದಯು. ೫೯). [ಮಂಕು + – ತನ]

**ಮಂಕುದಿಣ್ಣೆ** (ನಾ). ದಡ್ಡತನದ ರಾಶಿಯಂತಿರುವವನು ; ಬಹಳ ಪೆದ್ದ : ನೀನು ಬೆಳೆದ ಮೇಲೆ ಶುದ್ಧ ಮಂಕುದಿಣ್ಣೆ ಆಗುತ್ತೀಯ ನೋಡುತ್ತಿರು (ಶಾಲಪು. ೧೭) ; ಮಂಕುದಿಣ್ಣೆ ಮದುವೆಗೆ ಹೋದರೆ ವಾಲಗದವರೆಲ್ಲಾ ಅಟ್ಟಾಡಿಕೊಂಡು ಹೊಡೆದರಂತೆ (ಗಾದೆ). [ಮಂಕು + ದಿಣ್ಣೆ]

**ಮಂಕುಬಡಿ** (ಕ್ರಿ). ಏನೂ ತೋಚದಿರು ; ದಿಗ್ಭ್ರಮೆಯುಂಟಾಗು : ಮಂಕುಬಡಿದವರಂತೆ ಕುಳಿತುಬಿಟ್ಟವರು ಒಮ್ಮೆಲೇ ಚೇತರಿಸಿ ಘಟುಘಟನೆ ಅಂಗೈಯಿಂದ ಹಣೆ ಬಡಿದುಕೊಳ್ಳುತ್ತಿದ್ದರು (ಮುಕುಂದಾ. ೨೫೨); ಚಿದಂಬರನಂತೂ. . . ಮಂಕುಬಡಿದವನಂತೆ ನಿಂತುಬಿಟ್ಟ (ಹಸುಹೂ. ೬೩).

[ ಮಂಕು + ಬಡಿ$_1$ ]

**ಮಂಕುಬೂದಿ** (ನಾ). ತಾಂತ್ರಿಕಸಿದ್ಧಿಯನ್ನು ಪಡೆದವರು ಜನರ ಮನಸ್ಸನ್ನು ವಶಪಡಿಸಿಕೊಳ್ಳಲು ಪ್ರಯೋಗಿಸುವರೆಂದು ನಂಬಲಾದ ಮಂತ್ರದ ಬೂದಿ ; ವಶೀಕರಣ ಭಸ್ಮ : ಮಂಕುಬೂದಿಯನ್ನೆರಚಿದ ಮಾಟಗಾರನಿಗೆ ಶರಣು ಹೊಂದಿದವರಂತೆ ಈ ದೇಶದ ಜನರು ಪವಾಡಪುರುಷರಾದ ಮಹಾತ್ಮರನ್ನು ಹಿಂಬಾಲಿಸಿದರು (ಕಂಚಕಂ. ೬೫).

**ಮಂಕುಬೂದಿಯನ್ನೆರಚು** = (ಅಲಂ) ಮೋಸಮಾಡು ; ವಂಚನೆ ಮಾಡು : ವೃದ್ಧ ತೀರ್ಥಯಾತ್ರಿಗಳ ಮೇಲೆ ಮಂಕುಬೂದಿಯನ್ನೆರಚುವುದಂತೂ ಪಾಪ ಅವರಿಗೆ ಗೊತ್ತೇ ಇಲ್ಲ ! (ಬಾಬಾ. ೫೨) ; ಈ ವಿಘೂತಿ

ರುದ್ರಾಕ್ಷಿಗಳು ಅವನ ಕಣ್ಣಿಗೆ ಮಂಕುಬೂದಿಯನ್ನೆರಚಲಾರವು (ಶ್ರೀರಾಮ. ೨೬೩). [ಮಂಕು + ಬೂದಿ]

**ಮಂಕುಮಳೆ** (ನಾ). ದಿಗ್ಭ್ರಮೆಗೊಳಿಸುವ ಮಳೆ ; ಭಯಂಕರವಾದ ಮಳೆ: ತೆಂಕಣಗಾಳಿ ಮಂಕುಮಳೆ ಬರಸೀತು (ಗಾದೆ).
[ ಮಂಕು + ಮಳೆ ( < ಮಟ³ ) ]

**ಮಂಕುರ** (ನಾ). ಕನ್ನಡಿ ; ದರ್ಪಣ. [ಸಂ.]

**ಮಂಕುಪೊಯ್** (ಕ್ರಿ). ಮಂಕು ಆವರಿಸು ; ಭ್ರಾಂತಿಯುಂಟಾಗು ; ದಿಗ್ಭ್ರಾಂತನಾಗು : ಝೇಂಕರಿಸುವ ತುಂಬಿಗಳ ಕಂಡು ನಮಿರಾಜ ಮಂಕುವೊಯ್ದಂತಾದನೊಡನೆ (ಶರತ. ೩೯-೬೬). [ಮಂಕು + ಪೊಯ್₃]

**ಮಂಕುಹಿಡಿ** (ಕ್ರಿ). ಪೆಚ್ಚುತನ ಆವರಿಸು ; ಪೆಚ್ಚಾಗು ; ಬೆಪ್ಪಾಗು : ಅದೆಲ್ಲವನ್ನೂ ನೋಡಿ ಶ್ರೀನಿವಾಸರಾಯನು ಮಂಕುಹಿಡಿದವನಾಗಿ "ಸುಬ್ಬಣ್ಣವರೇ, ಇದೇನು ಮನೆಯೋ, ಇಲ್ಲವೆ ದೆವ್ವದ ಗುಹೆಯೋ ?" ಎಂದು ಕೇಳಿದನು (ಕೃಕಕ್ಕ. ೦೨೩). [ ಮಂಕು + ಹಿಡಿ₁ ( <ಪಿಡಿ₁ )]

**ಮಂಕ್ರಿ** 'ಮಕ್ಕರಿ₁' ನೋ.

**ಮಂಗ₁** (ನಾ). ೧. (ಮನುಷ್ಯನನ್ನು ಹೋಲುವ ಹಾಗೂ ಬಾಲವುಳ್ಳ) ಒಂದು ಬಗೆಯ ಪ್ರಾಣಿ; ಕೋತಿ; ಕಪಿ; ೩ ವಿಕಾಸವಾದದ ಪ್ರಕಾರ ಮಾನವಜನಾಂಗದ ಮೂಲಪ್ರಾಣಿ: ಮಾಡಿದ ಗಣಪತಿ ಮಂಗನಾದ ಮೇಲಿನ್ನೇನಿನ್ನೇನು (ಕೊರಂಡ. ೨-೩೬-೩); ಮಂಗನ ಕೈಗೆ ಮಾಣಿಕ್ಯ ಸಿಕ್ಕಿದ ಹಾಗಾಗಿದೆ (ದೇಕರು. ೩); ಮಂಗನ ಕೈಯಲ್ಲಿ ಕೊಳ್ಳಿ ಕೊಟ್ಟ ಹಾಗೆ (ಗಾದೆ). ೨. (ಆಲಂ) ಕುರೂಪಿ ; ಅಂದಗೇಡಿ : ಆ ಮಂಗನನ್ನು ಯಾರು ಮದುವೆ ಮಾಡಿಕೊಳ್ಳುತ್ತಾರೆ ? (ರೂಢಿ).

ಮಂಗನ ಕಾಯಿಲೆ = ಸತ್ತ ಕೋತಿಯಿಂದ ಹರಡುವ ಒಂದು ಬಗೆಯ ಸಾಂಕ್ರಾಮಿಕರೋಗ : ಸಾಗರ, ಸೊರಬ ಮುಂತಾದ ಕಡೆಗಳಲ್ಲಿರುವ ಮಂಗನ ಕಾಯಿಲೆಗೆ ಅನೇಕರು ಬಲಿಯಾಗಿದ್ದಾರೆ (ರೂಢಿ). ಮಂಗನ ಕೆಮ್ಮು=ಸಣ್ಣಮಕ್ಕಳಿಗೆ ಬರುವ ಒಂದು ಬಗೆಯ ಕೆಮ್ಮು; ಕೋಡಗಕೆಮ್ಮು ; ನಾಯಿಕೆಮ್ಮು : ಸಣ್ಣ ಹುಡುಗರ ಮಂಗನ ಕೆಮ್ಮಿನಲ್ಲಿ ಪ್ರವಾಳಭಸ್ಮವು ಬಹಳೇ ಉತ್ತಮ ಔಷಧವಾಗಿರುವುದು (ಶಿಶಿರ್. ೬೨). ಮಂಗನ ಕೈ = ಅನ್ನ ಮೊದಲಾದುವನ್ನು ತೋಡಲು ಉಪಯೋಗಿಸುವ ಸಲಕರಣೆ. ಮಂಗನ ಬಾವು = ಕೆನ್ನೆ ಹಾಗೂ ಕೊರಳು ಊದಿಕೊಳ್ಳುವ ಒಂದು ಬಗೆಯ ರೋಗ; ಕೆಪ್ಪಟರಾಯ (ಕರಾ); ಗದ್ದ ಕಟ್ಟು: "ಗದ್ದಕಟ್ಟು; ಮಂಗನ ಬಾವು" (Parotitis. ಇಂಕಂ). ಮಂಗಮಾಯ = ಕಣ್ಣಿಗೆ ಕಾಣದಂತಾಗುವಿಕೆ ; ಅದೃಶ್ಯವಾಗುವಿಕೆ : ಎಷ್ಟೆಷ್ಟು ತಡಕಿದರೂ ಅದು ಮಂಗಮಾಯವಾಗಿದೆಯಲ್ಲೇ! (ಪರಿವಾ. I, ೫೦೩).
[ ದೇ.॥ ಮಲ. ಮೊಣ್ಣ ; ತುಳು. ಮಂಗ]

**ಮಂಗ₂** (ನಾ). ೧. ದೋಣಿಯ ಮೇಲುಭಾಗ ; ನಾವೆಯ ಅಗ್ರಭಾಗ; ನೌಕಾಶಿರ : "ಪುಳಿಂದಃ, ಮಂಗಃ— ಈ ೨ ನಾವೆಯ ಬಸುಱು" (ಶಬ್ದಮ. ೦೦೦-೫೦). ೨. ಹಡಗಿನ ಪಕ್ಕ,—ಪಾರ್ಶ್ವಭಾಗ. [ಸಂ.]

**ಮಂಗಚೇಷ್ಟೆ** (ನಾ). ಕಪಿಯಂತೆ ಹುಚ್ಚು ಕುಣಿಸುವುದು, ಹಲ್ಲು ಕಿರಿಯುವುದು ಮೊದಲಾದ ಅಂಗಚಲನೆ : ಹೀಗೆ ನಾನಾತರದ ಮಂಗಚೇಷ್ಟೆಗಳಿಂದ ತನ್ನ ಸೌಂದರ್ಯವನ್ನು ತಾನೇ ಪ್ರಶಂಸಿಸಿಕೊಂಡು ಕನ್ನಡಿಯಿಂದ ಈಚೆಗೆ ಸರಿದಳು (ಅಶಬಾ. ೦೭೮). [ಮಂಗ₁ + ಚೇಷ್ಟೆ]

**ಮಂಗಟ್ಟೆ** (ನಾ). ಒಂದು ಜಾತಿಯ ಪಕ್ಷಿ : ಒಂದೆಡೆ ಮಂಗಟ್ಟೆಪಕ್ಕಿಗಳ ವಿಕಟನಾದವು ಕಾಡನ್ನು ಭಯಗೊಳಿಸುವಂತಿತ್ತು (ಕಾಸೂರು. ೪೩).

**ಮಂಗತಂಡಬೊಂಕೆಚಿ** (ನಾ). ಒಂದು ಕೆರೆಯ ಹೆಸರು : ಮಂಗತಣ್ಣಬೊಂಕೆಜೆಯೊಳ್ ಬಿತ್ತು ಜೀಟಿ ಮಾಗೊಟಿಗಟ್ಟಿಯುಂ ಮಾಗೊಟಿ ಬಾಳ್ಪುಂ ಬಿಟ್ಟರ್ (ಎಕ. X. ಶಿಂಕಾಮು. ೦೫೩-೯; ಸು. 1000). [ ? + ಕೆಜೆ³ ]

**ಮಂಗತನ** (ನಾ). ೧. ಕಪಿಯ ಮೂಲಸ್ವರೂಪ,—ಪ್ರಕೃತಿ : ಮನುಷ್ಯನು ವಿವೇಕವಂತನೂ ವಿಕಾಸಶೀಲನೂ ಆದ ಪ್ರಾಣಿಯೆಂದು ಕೇಳುತ್ತೇವೆ. ಮಂಗತನದಿಂದ ಮನುಷ್ಯತ್ವಕ್ಕೆ ಬಂದಿದ್ದಾನೆ (ದೇಕಕ್ಕ. ೦೦೯). ೨. (ಆಲಂ) ಕುಚೇಷ್ಟೆ; ಅಧಿಕಪ್ರಸಂಗ : ಹೆಣ್ಣುಹುಡುಗೇರ ತಂದೆ ಅಂದರೆ ದೇವರ ಗುಡಿ ಅಂತ ತಿಳಿದಾನೇನೋ, ಮನಸಿಗೆ ಬಂದ್ಹಾಂಗ ಮಂಗತನ ಮಾಡಲಿಕ್ಕೆ ? (ಅಶ್ವತ್ಥ. ೦೩); ತಿಪ್ಪನಲ್ಲಿ ವೈದಿಕವೃತ್ತಿಯ ಹುಡುಗರ ಮಂಗತನವೆಲ್ಲ ತುಂಬಿಕೊಂಡಿತ್ತು ( ಸಮಜ. ೦೨ ).
[ಮಂಗ₁ + -ತನ ]

**ಮಂಗತೋರಣ** (ನಾ). ಒಬ್ಬಾತನ ಹೆಸರು: ಶ್ರೀಮಂಗತೋರಣನ್ ಪ್ರಮಾದಿಯೆಮ್ಬ ಸಂವತ್ಸರದಾ[ಷಾಢ]ಸುದ್ಧ ಸಪ್ತಮಿಯಾ ಆದಿತ್ಯವಾರದನ್ದು ಬೆಳ್ವೊಲನಾಡನಾಳ್ದರ್ಕೆ (ಎಕಇ. XI-i. ೨೦-೪ ; ೮೪೨). [ ? ]

**ಮಂಗನಉಡಿದಾರ** (ನಾ). ಒಂದು ಬಗೆಯ ಬಳ್ಳಿ : ಆಕಾಶಬಳ್ಳಿ, ಮಂಗನ ಉಡಿದಾರ (ವೃಕಿಶಿ. ೦೯-೩೪೨). [ ? ]

**ಮಂಗನಬಳ್ಳಿ** (ನಾ.) = ಮಂಗನಉಡಿದಾರ : ಇದನ್ನು ಆಕಾಶಬಳ್ಳಿ ಅಥವಾ ಮಂಗನಬಳ್ಳಿ (Cuscuta) ಎಂದು ಕರೆಯುತ್ತಾರೆ (ಸಸ್ಯಶಾ. ೦೦೯). [ ? + ಬಳ್ಳಿ ]

**ಮಂಗಪೆರಸ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ನಿಜರವನ ಮಂಗವಪ್ ಮಜ್ಜಪರಸರ ಅಟಿಯ ತುಟುಗೋಳೊರಬವಿನೊಳೆಟವಡೆ ಪರಿಯಾಟ್ಟು ×× ಸತ್ತ (ಎಕ. XII, ತುಮಕೂ. ೩೯-೨ ; ಸು. ೯೦೦ ?).
[ ಮಂಗ₁ + ಅವ (< ಅಪ್ಪ₁) + ಅರಸ₁ ]

**ಮಂಗಪ್ಪೆ** (ನಾ). ಒಂದು ಬಗೆಯ ಸಸ್ಯ : (ವೃಕಿಶಿ. ೬೬-೦೫೬೯). 'ಅಪ್ಪೆಯಸೊಪ್ಪು' ಪರಾ. [ ? ]

**ಮಂಗಮಾರಿ** (ನಾ). ಒಂದು ಬಗೆಯ ಸಸ್ಯ : ಮಂಗಮಾರಿಸೊಪ್ಪು, ಹೆಣ್ಣುಕರೀತುಂಬೆ, ಹುಚ್ಚುಮುಟ್ಟೀಗಿಡ (ವೃಕಿಶಿ. ೬-೦೦೬); ಮಂಗಮಾರಿ, ತುಂಬೆ, ಶಿರಪೊಟ್ಟಲಿ (ಶಮ್ಮಸು. ೨೩೮). 'ಮಂಡಳಮಾರಿ' ಪರಾ. [?]

**ಮಂಗಮುಷ್ಟಿ** (ನಾ). ೧. ಕಪಿಯ ಮುಷ್ಟಿ,—ಹಿಡಿತ. ೨. (ಆಲಂ) ಹಿಡಿದ ಹಟವನ್ನು ಬಿಡದಿರುವುದು ; ಹಟಮಾರಿತನ : ಮಣ್ಣುಖಿನೂ ಅಷ್ಟುಸ್ಪರವನಲ್ಲ, ತುಂಬ ಹಟಮಾರಿ ! ಉಡದ ಹಿಡಿತ ಅವನದು. ಅದಕ್ಕೆ 'ಮಂಗಮುಷ್ಟಿ' ಎಂದು ಹೇಳಿದರೆ ಸಲ್ಲೀತು (ಕೂಬಿಕಾ. ೯೨). ೩. ಜಿಪುಣ ; ಲೋಭಿ : ಅವನು ಬಹಳ ಮಂಗಮುಷ್ಟಿ, ಅವನನ್ನು ಸಾಲ ಕೇಳಲೇ ಬೇಡ (ರೂಢಿ). 'ಕಪಿಮುಷ್ಟಿ' ಪರಾ.
[ ಮಂಗ₁ + ಮುಷ್ಟಿ ]

**ಮಂಗಯ್ಯ** (ನಾ). ಒಬ್ಬಾತನ ಹೆಸರು : ತೋಟಯ್ಯನ ಮಗ ಮಜ್ಜಯ್ಯಂ . . . ಕಾಳೆಗದೊಳ್ ಆನೆಯ ಮುಂದೆ ಸತ್ತು ಸಗ್ಗಕ್ಕೆ ಸಂದೊಂ (ಎಕ. XII, ಮಧ್ಯಗಿ. ೩೯-೦೨ ; ಸು. ೯೬೦). [ ಮಂಗ₁ + ಅಯ್ಯ₆₁ ]

**ಮಂಗರವಳ್ಳಿ** 'ಮಂಗುಬಿಷ್ಟಳ್ಳಿ' ನೋ.

**ಮಂಗರೆ** 'ಮಗ್ಗಾರೆ' ನೋ.

**ಮಂಗಲ, ಮಂಗಳ** (ಗು). ೧. ಶುಭಕರವಾದ ; ಕಲ್ಯಾಣಕರವಾದ : ಶಶಿಯ ಪೋಲ್ವ ಮುಖಮ್ಮೆದೆ ಕೊರಗಿತ್ತೆ ಮಂಗಲಸೌಮ್ಯವಜಿತುದೇ . . . ಗ್ರಹಬಲಂ ತಪ್ಪಿತಕಟಾಯೆಂದಳು (ಕಾದಂ. ೬-೨೬). (ನಾ). ೨. ಏಳಿಗೆ ; ಅಭಿವೃದ್ಧಿ. ೩. ಅದೃಷ್ಟ ; ಭಾಗ್ಯ ; ಮೇಲ್ಮೆ. ೪. ಕುಶಲ; ಕ್ಷೇಮ. ೫. ಸುಖ ; ಸಂತೋಷ. ೬. ಶುಭ ; ಕಲ್ಯಾಣ ; ಒಳ್ಳಿತು ; ಶ್ರೇಯಸ್ಸು : "ಶ್ವಃ(ಸ್ವ)ಶ್ರೇಯಸಂ, ಕಲ್ಯಾಣಂ . . . ಮಂಗಳಂ— ಈ ೧೧ ಒಳ್ಳಿತರ್ಕೆ ಪೆಸರ್" (ಶಬ್ದಮ. ೨೦-೦೨೨) ; ಬೆಳಗಾದುದಾ ದಿನಂ ಪೂಜೆಗೈದಂಗಜಾರಿಗೆ, ಮಧುರ

ಮಂಗಲದ ಸಂಗೀತದಿ ಸ್ತುತಿಸಿ (ಚನ್ನಾಂಗ. ೬೨-೦೭೦೬). ೭. ಕಾವ್ಯ, ಗೀತ, ಶಾಸನ ಇತ್ಯಾದಿಗಳ ಆರಂಭ ಅಥವಾ ಅಂತ್ಯದಲ್ಲಿ ಬರುವ ಇಷ್ಟದೇವತಾಪ್ರಾರ್ಥನೆ ಅಥವಾ ಶುಭವನ್ನು ಕೋರುವಿಕೆ ,—ಶುಭದ ಹಾರೈಕೆ : ಮಂಗಲವು ಕರುಣಾಂತರಂಗ ಶ್ರೀರಂಗಗೆ ಮಂಗಲವು ಸಿಂಹಾದ್ರಿ ನರಸಿಂಹಗೆ (ಪುರಂದ. ೩-೨೩೦ ಅನುಬಂಧ). 'ಜಯಮಂಗಲ'ಹೋ. ೮. ಶುಭಶಕುನ,-ನಿಮಿತ್ತ. ೯. (ಶುಭ ಕಾರ್ಯಗಳಿಗೆ ಸಂಬಂಧಪಟ್ಟಂತೆ ಮಾಡುವ) ಶುಭಾರಂಭ. ತಲವಜ್ರಾಘಾತದಿಂ ಮರ್ದಿಸಿ ರಜಕನನಾತ್ಮಪ್ರವೇಶಕ್ಕಿದೇಮಂಗಲ ಮೆಂಬಂತಾ ಪುರದ್ವಾರದೊಳವನಡಗಿಂ ಬಾತ್ರಿಯಿಟ್ಟು . . . ಪೊಕ್ಕಂ ದನುಜನ ಪೊಟಲಂ (ಜಗಂ. ೬-೦೦). ೧೦. ಮದುವೆ ಮೊದಲಾದ ಶುಭಕಾರ್ಯ, – ಉತ್ಸವ, – ಸಮಾರಂಭ : 'ಮಂಗಲಕಾರ', 'ಮಂಗಲಮಣೆ' ಪರಾ. ೧೧. ಅನೂಚಾನವಾಗಿ ಬಂದ ಆಚಾರ, –ಪದ್ಧತಿ, -ಸಂಪ್ರದಾಯ. ೧೨. ನವಗ್ರಹಗಳಲ್ಲಿ ಒಂದು ; ಕುಜ. ೧೩. ಸೈನ್ಯವು ನೆಲಸಿರುವ ಸ್ಥಳ : ವಾಸ್ತುಶಾಸ್ತ್ರದ ಪ್ರಕಾರ "ಮಂಗಲ" ಎಂದರೆ ದುರ್ಗರಕ್ಷಣಕ್ಕಾಗಿ ನಗರದ ಸೈನ್ಯವು ನೆಲೆಗೊಂಡಿರುವ ಸ್ಥಳವೆಂದರ್ಥ (ತುಳುಜಾ. ೨೦೪). ೧೪. ಕೋಟೆ ; ದುರ್ಗ : ಮಂಗಲ_ ವಾಸ್ತುಶಾಸ್ತ್ರದಲ್ಲಿ ಕೋಟೆ ಎಂಬರ್ಥ (ತುಳುವಾ. ೪೬). ೧೫. ಕೆಲವು ಊರುಗಳ ಹೆಸರಿನ ಕೊನೆಯಲ್ಲಿ ಸೇರುವ ಪದ ; ಉದಾಹರಣೆಗೆ– ನಾಗಮಂಗಲ, ನೆಲಮಂಗಲ, ಸತ್ಯಮಂಗಲ ಇತ್ಯಾದಿ. ೧೬. ಒಂದು ಊರಿನ ಹೆಸರು : ಮಙ್ಗಲಾಳ್ವ ಅಷ್ಟಶತೂ ಕ್ಷೇತ್ರ (೦) ಗೊಟ್ಟರ್ (ಇಅ. X, ೦೦೩-೯; 696 ?) ; ಮಂಗಲದ ಗರಳೋಜ ಆರ× ×ಕೊಟ್ಟ (ಎಕ. IV, ಗುಂಡ್ಲುಪೇ. ೯೭-೦೦ ; ಸು. 750). ಮಂಗಳ : ೧. ಮಂಗಳ ಮಣಿಪೀಠಂ ವಿಜಯಾಂಗನೆಗೆನೆ . . . ಭುಜಶಿಖರಮಂ ರತ್ನಾಂಗದಮಂ ಸಾರ್ಚುವೊಂದು ನೆವದಿಂ ಮೆಚ್ಚಿದಂ (ಕಂಠಾಪೂ. ೩-೩೭) ; ತುಂಗೆ ಮಂಗಳ ತರಂಗೆ (ಪುರಂದ. ೪-೪೦ ಕನ್ನಡ). ೨. ತ್ರಿಜಗವಂದಿತ ಗಣಪ ಮಾಳ್ಪುದು ಮತಿಗೆ ಮಂಗಳವ (ಕುಮಾರ. ೦-೪). ೬. "ಶ್ರೋವಶೀಯಂ ಶಿವಂ . . . ಮಂಗಳಂ . . . ಕಲ್ಯಾಣಮೆಂದೆನಲ್ಕೊಳ್ಳತಕೆ ಪೆಸರೆನಿಕ್ಕುಂ" (ಮಂಗರಾ. ೮-೨೭) ; ಮಂಗಳಮಪ್ಪ ಪಾಲ್ಗಡಲೊಳಾ ಹರಿಯುಂ ಸಿರಿಯುಂ . . . ಎಸೆ ವಂತೆ (ಕುಸುಮಾ. ೪-೩೯). ೭. ಮನದೊಳಾಟಿಸುವುದಂ ಪಡೆವರೀ ಪೋಡ ಶಸ್ತ್ರಪ್ನದ ಫಲಂಗಳಂ ಪಡೆಯಲಣಮಾಗದ ಸುಖಂಗಳಂ ಮಂಗಳಂ (ಆದಿಪು. ೭-೨೭ ವಚನ); ಮಂಗಳಂ ಪೃಥಿಲಿಗೆ ಅಂಗುಲಿಯನಿತ್ತವಗೆ (ಪುರಂದ. ೦-೨೩೦ ಅನುಬಂಧ) ; ಇಂತು ಶ್ರೀರಾಘವಂ ಸೀತಾಸಮೇತಂ ಜನ್ನಮಂ ಬೇಳ್ದು . . . ಅರಸುಗೆಯುತ್ತುಮಿರ್ದನವಂಗಂ ಮಂಗಳಂ (ರಾಮಾಶ್ವ. ೦೭೭-೨೪). ೧೦. ಮಂಗಳ ಹಸ್ತಿರವಾದೂ ಗಂಗಳ ತುಳಿಲಿಲ್ಲಂತ (ದಾಸಂವಾ. ೦೦೯). ೧೧. "ಪೂರ್ವಪದ್ಧತಿಯ ತೆಜನುಸಿರ್ವಲ್ಲಿಯುಂ . . . ಮಂಗಳಾಖ್ಯಂ" (ಮಂಗರಾ. ೦೩೪-೭೭). ೧೨. "ಅಂಗಾರಕಂ ವಕ್ರಸವನಿಜಂ ಭೌಮನೆನೆ ಮಂಗಳಾಖ್ಯಂ" (ಮಂಗರಾ. ೦೦-೬) ; ಲಿಂಗದ ಸ್ಥಲ ಲೇಸು ಮಂಗಳನ ಬಲ ಲೇಸು . . . ಶರಣರ ಸಂಗವೇ ಲೇಸು (ಸರ್ವಜ್ಞ. ೨೯೩). ೧೭. ಶುಭವನ್ನು ಕೋರುವ ಹಾಡು : ಮಂಗಳಮನೆ ಪಾಡುತ್ತುಂ ಮಂಗಳಧಾರಿಣಿಯರಕ್ಕಿಗಿ ಮುಂದಂ ನತೆಪಾಶಾಂಗನೆಯರಿಂದೆ ದಿವಿಜೇಂದ್ರಾಂಗನೆ ಕರಮೆಸೆದು ಹಂಸಗತಿಯೊಳ್ ಬಂದಳ್ (ಆದಿಪು. ೭-೪೯). ೧೮. ಒಂದು ಬಗೆಯ ಕಲ್ಲರೆ : "ಕಾಲ್ಕೊಗವೆಪ್ದಿ ಬೆಳ್ಪುದೋಚಾರೆ ಮಂಗಳಂ" (ಮಂಗರಾ. ೬೨-೦೩) ; ಬಾಲದೊಳುರದೊಳ್ ತಾಂ ಕೇಸರದೊಳಮುಶಿಶಯ ಬೆಳ್ಪದಾಗೆ ಮಂಗ(ಕ)ಳನಕ್ಕುಂ (ಅಶ್ವಶಾ. ೨-೦೯). ೧೯. ಸೊಬಗು ; ಚೆಲುವು : 'ಮಂಗಳವಡೆ' ಪರಾ. ೨೦. ಕ್ಷೌರಮಾಡುವ ವೃತ್ತಿಯವನು ; ನಾಯಿಂದ : ನಿಲಿಸಿ ಕುರುಳನು ತೆಗವನಿಗೆ ಮಂಗಳನುಯೆಂಬಾಖ್ಯದಲಿ (ಶರಂಪು. ೦೯-೬೮). ೨೧. ಕೇಡನ್ನು ಸೂಚಿಸುವ ಸಂದರ್ಭದಲ್ಲಿ ಬಳಸುವ ಸೌಮ್ಯೋಕ್ತಿ : "ನಿಷಾತ ಶಬ್ದವನು ಪೇಟ್ವಲ್ಲಿಯುಂ ಮಂಗಳಾಖ್ಯಂ" (ಮಂಗರಾ. ೦೩೪-೭೭). ೨೨. (ಅಲಂ) ಯಾವುದಾದರೂ ಉತ್ಸವ ಸಮಾರಂಭದ ಮುಕ್ತಾಯದಲ್ಲಿ ಮಾಡುವ ಆರತಿ, ನೈವೇದ್ಯ ಇತ್ಯಾದಿ ವಿಧಿ: ಆಯ್ತಾಯ್ತು ಪೇಟ್ದ ಕತೆಗೆ ಮಂಗಳಮಂ ಮಾಡು (ರಾಮಾಶ್ವ. ೦೭೩-೩). ೨೩. [ಛಂದ] ನಾಲ್ಕು ಪಾದಗಳುಳ್ಳ ಒಂದು ಅಕ್ಷರಗಣದ ಸಮವೃತ್ತ; ಪ್ರತಿ ಸಾಲಿನಲ್ಲೂ ಹದಿನಾರು ಅಕ್ಷರಗಳಿರುವ ಅಷ್ಟಛಂದಸ್ಸಿನ ಒಂದು ವೃತ್ತ : ದಂತಿಯೊಳೊಪ್ಪ ಪದ್ಧತಿಯೊಳಲ್ಲಿ ಯತಿಯುಂ ನಿಲೆ ಮಂಗಳಮೆಂಬುದೀ ಕ್ಷಿತಿಗೆ ಸಂದುದು (ಛಂದೋಂಬು. ೨-೧೩೯) ; ವಭಜಜಂ ಜಗಮುವೊಂದಿರಲಪ್ಪುದು ಮಂಗಳಂ (ಕೈಪಿಡಿ. ೬೪).

ಮಂಗಲಮಾಡಿಕೊಡು = ಮದುವೆ ಮಾಡಿಕೊಡು : ನಿನ್ನಂತಹ ಸಾಮಾನ್ಯನಿಗೆ ಅವನು ಮಗಳನ್ನು ಮಂಗಲ ಮಾಡಿಕೊಡಲಾರ (ಹುಂಜಾ. ೦೦೪). ಮಂಗಳಹಾಡು = ಪರಿಸಮಾಪ್ತಿಗೊಳಿಸು ; ಮುಕ್ತಾಯಮಾಡು : 'ಶಾಕುಂತಲ' ನಾಟಕವನ್ನು ಹಲವಾರು ಬಾರಿ ಆಡಿ ಕಡೆಗೆ ಮಂಗಳ ಹಾಡಿದರು (ಕೂಪ). [ಸಂ.]

**ಮಂಗಲಂಬಾಡು**, ಮಂಗಳಂಬಾಡು (ಕ್ರಿ). ಶುಭವನ್ನು ಕೋರುವ ಹಾಡನ್ನು ಹಾಡು : ಮುನಿವೃಂದಾರಕನ ಬರವಿನೊಸಗೆಯೊಳ್ ಮಂಗಲಂ [ಪಾಠಾಂ. ಳಂ]ಬಾಡುಮಂತಿನಿಯ ದನಿಯಂ ನೆರೆದು ಮೊರೆವ ಪೆಣ್ದುಂಬಿಗಳುಂ (ಕಂಪ್ರಪು. ೨-೦೦೩). **ಮಂಗಳಂಬಾಡು** : ನೆರೆದೊಡನೆ ಮಂಗಳಂ ಬಾಡೆ ಗಾಯಕಗಣಂ ಕರಮೆ ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಜಿಪು. ೪-೭ ವಚನ). [ಮಂಗಲ + ಪಾಡು$_1$]

**ಮಂಗಲಕಾರ** (ನಾ). ಮದುವಣಿಗ ; ವರ : ಮಂಗಲಕಾರನನ್ನು ಈ ಮೊದಲು ನಾನು ನೋಡಲೇ ಇಲ್ಲವಲ್ಲ ? (ಹುಂಜಾ. ೨೦೩).

[ಮಂಗಲ + – ಕಾರ$_1$ (< – ಕಾಱ)]

**ಮಂಗಲಕಾರ್ಯ**, ಮಂಗಳಕಾರ್ಯ (ನಾ). ಮಂಗಲಕರವಾದ ಸಮಾರಂಭ; ಶುಭಕಾರ್ಯ : ಬಂದವರು ಯಾವ ಆತಂಕವೂ ಇಲ್ಲದೆ ಮಂಗಲಕಾರ್ಯಗಳನ್ನು ನೋಡಿ ಅನುಭವಿಸಲಿ ಎಂದು ವಿಧಿಸಿದಳು (ಹತ್ತುಪಾ. ೨೯). **ಮಂಗಳಕಾರ್ಯ** : ಸ್ವಸ್ತಿಶ್ರೀ ಲಕ್ಷ್ಮೀಸೇನಭಟ್ಟಾರಕ ಸ್ವಾಮಿಗಳವರು . . . ಮಂಗಳಕಾರ್ಯವನ್ನು ನೆರವೇರಿಸಿಕೊಟ್ಟರು (ಶಿಟ್ಟೂಶಾಂ. iii, ೮೦೪). [ಸಂ.]

**ಮಂಗಲಕಾಲ** (ನಾ). ಶುಭ ಸನ್ನಿವೇಶ; ಒಳ್ಳೆಯ ಕಾಲ : ಎಲೆ ಸಖಿ, ಮಂಗಲಕಾಲದಲ್ಲಿ ನೀನಿಂತು ರೋದನ ಮಾಡುವುದು ಉಚಿತವಲ್ಲ (ಶಾಕುಂತ. ೩೦-೨೦). [ಸಂ.]

**ಮಂಗಲಗಾತ್ರೆ** (ನಾ). ಮನೋಹರವಾದ ದೇಹವುಳ್ಳವಳು ; ಸುಂದರಿ : ಕಲಹಂಸಗಮನೆ ಪೂರ್ಣೇಂದುಮುಖಿ ಚಾರುಮಂಗಲ[ಪಾಠಾಂ. ಳ]ಗಾತ್ರ [ಪಾಠಾಂ. ತ್ರೆ] ಘನ ಸೌಮ್ಯ ಸುಂದರವಿಲಾಸಿನಿ . . . ಕೇಳ್ದನ್ನ ದೆಸೆಗಿದೆ ನವಗ್ರಹಂಗಳ ಪೆಸರ ಬಲಂ (ಕೈವಲ್ಯ. ೬-೨೯).

[ಸಂ. ಮಂಗಲಗಾತ್ರಾ (ಮಂಗಲ + ಗಾತ್ರ + –)]

**ಮಂಗಲತೋರಣ**, ಮಂಗಳತೋರಣ (ನಾ). ಮದುವೆ, ಹಬ್ಬ ಮೊದಲಾದ ಶುಭಸಮಾರಂಭಗಳಲ್ಲಿ ಅಲಂಕಾರಕ್ಕಾಗಿ ಬಾಗಿಲು, ಬೀದಿ ಮುಂತಾದೆಡೆಗಳಲ್ಲಿ ಕಟ್ಟುವ ತಳಿರು, ಹೂವು, ಬಟ್ಟೆ ಮೊದಲಾದುವುಗಳ ಮಾಲಿಕೆ : ತ್ರಿಭುವನಮಂಗಲತೋರಣನಿಭಮಂ ಪ್ರವಚನಮನೆಯ್ದೆ ರೈಸ್ತಂಭಸಮಪ್ರಭರಂತರ್ನಿಭೃ ತೋನ್ನತವಿಭವರ್ ಭೂತಬಲಿಪುಷ್ಪದಂತಾಚಾರ್ಯರ್ (ಕಂಪ್ರಪು. ೦-೦೩). **ಮಂಗಳತೋರಣ** : ಉತ್ಸವದ ಸಮಯದಲ್ಲಿ ಊರ ಬಾಗಿಲಿಗೆ ಮಂಗಳ ತೋರಣ ಕಟ್ಟಿ ಅಲಂಕರಿಸಿದ್ದರು (ಕೂಪ). [ಸಂ.]

**ಮಂಗಲಪಾಠಕ,** ಮಂಗಳಪಾಠಕ (ನಾ). ಬಿರುದಾವಳಿಯನ್ನು ಹೇಳುವವನು; ಹೊಗಳುಭಟ್ಟ; ವಂದಿ : ಆಗಳ್ ಮಜ್ಜನಾವಸರವಮಂಗಲ[ಪಾಠಕ]ಪಾಠಕಮಧುರಗಂಭೀರನಿನದವಮನಾಲಿಸುತ್ತುಂ (ಆದಿಪು. ೯-೭೦ ವ). **ಮಂಗಳಪಾಠಕ :** "ಪ್ರಬೋಧಕಾಃ, ಮಗಧಾಃ . . . ಮಂಗಳಪಾಠಕಾಃ — ಈ ೬ ಮಂಗಳಪಾಠಕರ್" (ಶಬ್ದಮ. ೬೦-೩೬೦); ಮಂಗಳಪಾಠಕರವ ವಾದ್ಯಂಗಳ ರವಮಖಿಳಕಂಚುಕಿಗಳ ನಿನಾದಂ ಪೊಂಗೆ . . . ಎಸೆದನುದ್ಯತ್ಕ್ಷಿತಿಪಾಲಂ (ಅಜಿತ. ೨-೨೯); ಒಡನೆ ಮಂಗಳಪಾಠಕರು ಸಂಗಡಿಸಿ ಬಿರಿದುಗಳಂ ಪೊಗಳುತಂ ನಡೆಯೆ (ಬಸವಪು. ೫೦-೦೬). [ಸಂ.]

**ಮಂಗಲಪ್ರಸಾಧನ,** ಮಂಗಳಪ್ರಸಾಧನ (ನಾ). ಶುಭಪ್ರದವಾದ ಅಲಂಕಾರಸಾಮಗ್ರಿ : ಪರಪದಂ ತದ್ಭವಮಾದ ಸಮಾಸಕ್ಕೆ . . . ಮಂಗಲ[ಶಬ್ದಾಂ.ಳ]ಪ್ರಸಾಧನ — ಮಂಗಳಪಸದನ (ಶಬ್ದಮ. ೨೯೯ ವೃತ್ತಿ). **ಮಂಗಳಪ್ರಸಾಧನ :** ಮನ್ಮಥನ ಮೋಹನಯಂತ್ರಮಿದವ್ಪುದಲ್ಲದಂದಿನಿತುವರಂ ಮನಂಗೊಳಿಸದೆಂಬಿನಮುಜ್ಜ್ವಳಮಂಗಳ[ಶಬ್ದಾಂ.ಲ]ಪ್ರಸಾಧನಮೆ ಮನೋಜರಾಜಜಯಸಾಧನಮಾದುದು ವಜ್ರಜಂಘನಾ (ಆದಿಪು. ೯-೯೦) ; ಮಂಗಳಪ್ರಸಾಧನಸನಾಥನುಂ ವಿನೀತನುಂ (ಶಾಂತಿಪು. ೦೦-೯೯ ವ). [ಸಂ.]

**ಮಂಗಲಬೀವಣ್ಣ** (ನಾ). ಒಬ್ಬಾತನ ಹೆಸರು : ನಾಗತ್ತರನಳು ಮಂಗಲಬೀವಣ್ಣನಮ್ಮೋನು ನಾಗದೇವನಮ್ಮೋನು × × × ಕದಮ್ಮೂರ್ ತುಙುಗಳ್ಳೊಳ ಕಾದಿ ಸತ್ತ (ಎಕ. IX. ಆಕಳ. ೭೩-೩; ಸು. ೯೦೦).

[ಮಂಗಲ + ಬೀವ (< ಬೀಮ) + ಅಣ್ಣ]

**ಮಂಗಲಮಣಿ** (ನಾ). ಮದುವೆಯಲ್ಲಿ ವರನು ವಧುವಿನ ಕೊರಳಿಗೆ ಕಟ್ಟುವ ಮಾಂಗಲ್ಯದ ಬೊಟ್ಟು.— ತಾಳಿ : ನಿನ್ನ ಕೊರಳಿಗೆ ಮಂಗಲಮಣಿಯನ್ನು ಕಟ್ಟಿದ ಗಂಡಭಟ್ಟ ನಾನು (ಶ್ರಾವಂ. ೫೦).

[ಮಂಗಲ + ಮಣಿ. / ತಮಿ. ಮಙ್ಗಲಮಣಿ]

**ಮಂಗಲವತಿ** (ನಾ). ಮುತ್ತೈದೆ; ಸುಮಂಗಲಿ : 'ಚಿರಮಂಗಲವತಿ' ಪರಾ. [ಸಂ. ಮಂಗಲವತೀ]

**ಮಂಗಲವರಿಗೆ** (ನಾ). ಶುಭಸನ್ನಿವೇಶದಲ್ಲಿ ಬಾರಿಸುವ ಹಲಗೆ : "ಮಂಗಲದ ವಾದ್ಯದೊಳಗೆ ಮಂಗಲವರಿಗೆಯೆಂಬ ನಾಮಮಂ" (ಶಿಪ. ೬೩).

[ಮಂಗಲ + ಪರಿಗೆ]

**ಮಂಗಲವಾದ್ಯ,** ಮಂಗಳವಾದ್ಯ (ನಾ). ಶುಭಸಂದರ್ಭಗಳಲ್ಲಿ ಬಾರಿಸುವ ವಾದ್ಯ ; ಮಂಗಳವನ್ನು ಸೂಚಿಸುವ ವಾದ್ಯ : ಎಸೆದುದು ವಿಹಂಗಮಂಗಲವಾದ್ಯಮೆತ್ತಲುಂ (ಶಬ್ದಾಂಗ. ೯೦-೦೦೦೬). **ಮಂಗಳವಾದ್ಯ :** ಮಂಗಳವಾದ್ಯದಿಂ ಕಳಸಕ[ನ್ನ]ಡಿಯಿಂ . . . ಇದಿರ್ಗೊಳುತ್ತಂಗಜರೂಪಸನ್ನಿಭರನುರ್ವಿಪರಂ ಸ್ವಪುರಪ್ರವೇಶಮಂ ಕಂಗೊಳಿಪಂತು ಮಾಡಿಸಿದಂ (ಪಶಿಶಂ. ೪೦೩); ತಪ್ಪದೆ ಮಂಗಳವಾದ್ಯದ ಬಲುರವಮುಪ್ಪರಿಸಿದುವೆಂಟುದೆಸೆಗೆ (ಶಂಶಶ. ೨-೦೦೯). [ಸಂ.]

**ಮಂಗಲಸೂತ್ರ,** ಮಂಗಳಸೂತ್ರ (ನಾ). ವಿವಾಹಕಾಲದಲ್ಲಿ ವಧುವಿನ ಕೊರಳಿಗೆ ವರನು ಕಟ್ಟುವ ತಾಳಿಯನ್ನು ಪೋಣಿಸಿರುವ ದಾರ : ಪಡೆವುದಿನ್ನಸುರೇಂದ್ರವನಿತೆಯು ಪೆಡೆವ ಮಂಗಲಸೂತ್ರ (ಕೊರಶಾ. ೫-೨-೦೦). **ಮಂಗಳಸೂತ್ರ :** ಭಾಸುರಜ್ಯೋತಿಗಳಗರ್ಘವನೋಸರಿಸದಿಂತರ್ಪಸುತ್ತಿರೆ ನೈಸಜಿರಿ ಪೆಂಡತಿಯು ಮಂಗಳಸೂತ್ರವದು ಮೊದಲು (ಬಸಪು. ೨೭-೯) ; ಬೇಸರಾಗದೆ ಬಾಳ್ವುದೆಂದು ಮಂಗಳಸೂತ್ರ ಲೇಸಿನಲಿ ಕಂಠದಲಿ ಬಂಧಿಸುತ (ಪಶಶೋ. ೦೩-೫೬). [ಸಂ.]

**ಮಂಗಲಾಗುರು** (ನಾ). ಒಂದು ಬಗೆಯ ಸುಗಂಧದ್ರವ್ಯ : "ಮಲ್ಲಿಕಾಗಂಧ— ಮಂಗಲಾಗುರು" (೬ಶಂ. ೦೩೦). [ಸಂ.]

**ಮಂಗಲಾತ್ರಯೋದಶಿ** (ನಾ). ಒಂದು ಬಗೆಯ ವ್ರತ : ಈ ವಾರಂಗಳಲ್ಲಿ ಮಂಗಲಾತ್ರಯೋದಶಿ ಬಹಾಗ ಆ ಮಂಗಲಾತ್ರಯೋದಶಿ ನಡವ[ದ]ಂದು ವಿಶೇಷವಾಗಿ ಯಿರಿಸಿದ ಅಕ್ಕಿಮಾಡೆ ೨ (ಎಇ. XX, ೯೯-೫೦; ೧೬೬೬). [ಸಂ. ಮಂಗಲಾತ್ರಯೋದಶೀ]

**ಮಂಗಲಾನಕ,** ಮಂಗಳಾನಕ (ನಾ). ಮದುವೆ ಮೊದಲಾದ ಶುಭಸಮಾರಂಭಗಳಲ್ಲಿ ಬಾರಿಸುವ ತಮಟೆ. — ಭೇರಿ : ಆಶೀರ್ನಿನಾದವಾಶಾದೇಶವನೆಯ್ದಿದುದು ಮಂಗಲಾನಕರವಮಾಕಾಶಮನಡರ್ದುದು (ಶಂಶಾಪ. ೦೯-೭೨). **ಮಂಗಳಾನಕ :** ಜಿನಪೂಜೋತ್ಸವಮಂಗಳಾ[ಶಬ್ದಾಂ. ಲಾ]ನಕವ್ಯದುಪ್ರಥ್ವಾನದೊಳ್ . . . ಪೊಂಪುಟಪ್ಪೋಗುತಿರ್ಪುವೆರಡುಂ ವಿದ್ಯಾಧರಶ್ರೇಣಿಗಳ್ (ಆದಿಪು. ೦-೭೦) ; ಮಂಗಳಾನಕಂಗಳುಂ ಭೋರ್ಗರೆಯೆ ಪೊಜಿಮಟ್ಟು ಬರ್ಪಲ್ಲಿ (ಪುಶ್ಯಶಿ. ೦೦-೦೩ ವ). [ಸಂ.]

**ಮಂಗಲೀಶ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಮಾತ್ಪ್ರಿ(ಪ್ರ)ಥಿವಿವಲ್ಲಭ ಮಂಗ(ಲೀ)ಸ(ಶ)ನಾ ಕಲ್ಮನೆಗೆ ಇತ್ತೊದು (ಇಆ. X, ೬೦-೦; ೬೮ಸು ೮೩). [ಸಂ.]

**ಮಂಗಲೋತ್ತರ** (ನಾ). ಮೋಕ್ಷವನ್ನು ಪಡೆದವನು ; ಮುಕ್ತ : ನಿರಂಗಸಂಗವನ್ನೆದಿದ ಮಂಗಲೋತ್ತರನಂತೆ ಇದಜಿಂದದ ಸಂಗ ಇದೇ ಹಿಂಗದ ಲಿಂಗೈಕ್ಯ (ಪೋಲಶಶು. ೦೨೯-೯೬೨). [ಸಂ.]

**ಮಂಗಲ್ಯಕ,** ಮಂಗಳ್ಯಕ (ನಾ). ಒಂದು ಬಗೆಯ ಕಡಲೆ; ಕಾಡುಗಡಲೆ ; ಸಣ್ಣಗಡಲೆ. **ಮಂಗಳ್ಯಕ :** "ಮಂಗಳ್ಯಕಃ, ಮಸೂರಃ — ೨ ಚೆನ್ನಂಗಿ ಹೆಸರು, ಸಣ್ಣಬಟ್ಟಗಡಲೆ, ಕಿರಿಗಡಲೆ ; ಕಾಡುಗಡಲೆ" (ಬಿನ್ನಾಂತಿ. ೨೬೮). [ಸಂ.]

**ಮಂಗಲ್ಯೆ** (ನಾ). ೧. ಬಹಳ ಸುವಾಸನೆಯುಳ್ಳ ಒಂದು ಬಗೆಯ ಗಂಧದ ಮರ. ೨. ಶಕ್ತಿದೇವತೆ ; ದುರ್ಗೆ. ೩. ಒಂದು ಬಗೆಯ ಸುಗಂಧ ದ್ರವ್ಯ. [ಸಂ. ಮಂಗಲ್ಯಾ]

**ಮಂಗಸಮುದ್ರ** (ನಾ). ಒಂದು ಊರಿನ ಹೆಸರು : ಮಂಗಸಮುದ್ರ × × × ಗಣ್ಣಾಗನ್ ಕಳನಿಗೆಯ್ದು ಕಾಸಿಯ × × × ಚೆವಿಟ್ಟಿಗೆಯ್ದು ಈವಿ × × × (ಪ್ರಶಂ. ೦೯೨೬, ೦೨೫-೯ ; ೯೬೬). [ ? ]

**ಮಂಗಳ** 'ಮಂಗಲ' ನೋ.

**ಮಂಗಳಂಬಾಡು** 'ಮಂಗಲಂಬಾಡು' ನೋ.

**ಮಂಗಳಕರ** (ಗು). ಶುಭವನ್ನುಂಟುಮಾಡುವ ; ಶ್ರೇಯಸ್ಕರವಾದ : ಮಂಗಳಕರ ಭುವನಾಧಿಕ ಮಂಗಳನನಸಂತಬೋಧನಿಧಿಯಂ ನಿಧಿಗಳ್ ಸಂಗಡದೋಲಗಿಸುವುದುಚಿತಂ ಗಡಮೆನೆ ನೆಲಸಿ ಗೋಪುರದೊಳೋಲಗಿಕುಂ (ಶಾಶ್ವಿಕಪು. ೦೬-೬೬). [ಸಂ. ಮಂಗಲಕರ]

**ಮಂಗಳಕಷ್ಟ** (ನಾ). [ಜ್ಯೋತಿ] ಕುಜಗ್ರಹವು ವಿರುದ್ಧಸ್ಥಾನದಲ್ಲಿರುವಾಗ ಜಾತಕನಿಗೆ ಉಂಟಾಗುವ ತೊಂದರೆ : ಅಂಗಳದಲ್ಲಿ ಹೇತು ಮಂಗಳಕಷ್ಟ ಅಂದ ಹಾಗೆ (ಗಾದೆ). [ಸಂ. ಮಂಗಲಕಷ್ಟ]

**ಮಂಗಳಕಾಂಕ್ಷಿ** (ನಾ). ಶುಭವನ್ನು ಬಯಸುವ ವ್ಯಕ್ತಿ : ನೀವು ಅವರ ಮಂಗಳಕಾಂಕ್ಷಿಗಳಾಗಿದ್ದರೆ ಅವರಿಗೆ ಸತ್ಪರಾಮರ್ಶವನ್ನು ಕೊಡುತ್ತಿದ್ದಿರಿ (ಕನ್ನಡಿ. ೫೩). [ಸಂ. ಮಂಗಲಕಾಂಕ್ಷಿನ್]

**ಮಂಗಳಕಾರಣ** (ಗು). ೧. ಶುಭಕ್ಕೆ ಕಾರಣವಾದ ; ಶ್ರೇಯಸ್ಸನ್ನುಂಟುಮಾಡುವ : ಮಂಗಳಕಾರಣಪಂಚಪದಂಗಳು . . . ಅಕ್ಷಯಮಂತ್ರಪದಂಗಳನೋದುವುದು ನೆಟ್ಟನೆ ನಿಶ್ಚಲಮತಿಯಿಂ (ಆದಿಪು. ೨-೫೯). (ನಾ). ೨. ಶುಭಕಾರಿಯಾದುದು ; ಶ್ರೇಯಸ್ಕರವಾದುದು : ಚಂದನದೆಳದಳಿರ್ದೋರಣಂಗಳವು ಸೂಚಿತ ಮಂಗಳಕಾರಣಂಗಳವು (ಆದಿಪು. ೯-೪೦ ಶಳ); ಪುರುಷೋತ್ತಮನೀ ಚಳುಕ್ಯನಾರಾಯಣದೇವನೀಗೆಮಗೆ ಮಂಗಳಕಾರಣಮುತ್ಸವಂಗಳಂ (ಗದಾಯು. ೦-೦). [ಸಂ. ಮಂಗಲಕಾರಣ]

**ಮಂಗಳಕಾರ್ಯ** 'ಮಂಗಲಕಾರ್ಯ' ನೋ.

**ಮಂಗಳಕೇತು** (ನಾ). ೧. ಉತ್ಸವಕಾಲದಲ್ಲಿ ಏರಿಸುವ ಶುಭಸೂಚಕವಾದ ಬಾವುಟ. ೨. ನವಗ್ರಹಗಳಲ್ಲಿರುವ ಕುಜ ಮತ್ತು ಕೇತು ಎಂಬ ಎರಡು ಗ್ರಹಗಳು. ೧, ೨: ಮಂಗಳಕೇತುವಿರಾಜಿತಮಂಗೀಕೃತನೀಲ ಭಾನು ತಮಸಂ ಪರಿಷತ್ಸಂಗತಬುಧಗುರುಕವಿರಾಜಂಗತಿನವಗ್ರಹಪರೀತ ಮುದ್ರಾಹಗೃಹಂ (ಅಜಿತಪು. ೬-೪೬). [ಮಂಗಳ (= ಮಂಗಲ) + ಕೇತು]

**ಮಂಗಳಕ್ರಿಯೆ** (ನಾ). ಶುಭಸಮಾರಂಭಗಳಲ್ಲಿ ನಡೆಸಬೇಕಾದ ಕೆಲಸ,– ಕಾರ್ಯ : ಜನಂಗಳೆಲ್ಲಂ ಮಂಗಳ[ಪಾಠಾಂ. ಲ]ಕ್ರಿಯೆಗಳೊಳು ವಂದನ ಮಾಲೆಗಳೊಳು ಮಾಡಲು ತಗುಳ್ದರು (ಕಾವ್ಯಪು. ೫೪).

[ಸಂ. ಮಂಗಲಕ್ರಿಯಾ]

**ಮಂಗಳಗಾಯಕ** (ನಾ). ಶುಭಸೂಚಕವಾದ ಹಾಡನ್ನು ಹಾಡುವವನು : ಗೀರ್ವಾಣಮಂಗಳಗಾಯಕರೆ ಸಂಗೀತಗಾಯಕರಾಗೆ ನಿಳಿಂಪಭಾರತಿಕರ ಸಟ್ಟುವರಾಗೆ (ಶಾಂತಿಪು. ೧೧-೬೦ ವ); ಮಂಗಳಗಾಯಕರ್ . . . ಮಂಗಳ ಪಾಠಕರ್ ಗಣಿಕಸಂತತಿ ಸಂಭ್ರಮದಿಂ ಪುಗುತ್ತಿರಲ್ ಮಂಗಳಗೇಹಮಂ (ದಶಕು. ೮-೩೨೬). [ಸಂ. ಮಂಗಲಗಾಯಕ]

**ಮಂಗಳಗಾಯಿಕೆ** (ನಾ). ಶುಭಸೂಚಕವಾದ ಹಾಡನ್ನು ಹಾಡುವವಳು: ಮಂಗಳಗಾಯಿಕಾಮುಖಸರೋರುಹಗೀತಮಧುಪ್ರಸೇವನಾ ಸಂಗತ ರಾಜ ಭೃಂಗಕುಳದಿಂ . . . ಒಪ್ಪುತಿರ್ದುದು ಸರೋವರದಂತೆ ಗೃಹಂ ಮಹೀಶನಾ (ಪಾರ್ಶ್ವಪು. ೧೪-೧೧೯) : ಮಂಗಳಗಾಯಿಕಾಮಧುರಗಾನದಿ ನೆಟ್ಟನೆಯ್ದಿ ನಿತ್ಯಕೃತ್ಯಂಗಳ ಮಂಗಳಾಚರಣಮಂ ನೆಗಟ್ತೆ (ಪುಷ್ಪಪು. ೩-೦೨೦). [ಸಂ. ಮಂಗಲಗಾಯಿಕಾ]

**ಮಂಗಳಗಾಯಿನಿ** (ನಾ). = ಮಂಗಳಗಾಯಿಕೆ : ಮಂಗಳಗಾಯಿ[ಪಾಠಾಂ. ಯ]ನಿಯರ ಗೀತಂಗಳನುಪಹಾರಕುಸುಮಮಧುಪಾನವ್ಯಾಸಂಗ ದೋಳಿರ್ದಳದುಂಬಿಗಳಿಂಗೊರಲಿಪರ್ಗಿಡಿದತ್ತು ರಾಜಾಂಗಣದೊಳ್ (ಸಂಗಳಾ. ೩-೧೦೬). [ಸಂ. ಮಂಗಲಗಾಯಿನೀ]

**ಮಂಗಳಗೀತ** (ನಾ). ಶುಭಕರವಾದ ಹಾಡು : ಯುಗಪದುತ್ಥಿತ ಮಂಗಳ [ಪಾಠಾಂ. ಲ]ಗೀತೋನ್ಮಿಶ್ರಿತಾನೇಕಲಯಾನುಗತಲೀಲಾಲಾಸ್ಯಪ್ರಸಕ್ತ ಕಾಮಿನೀಕಮನೀಯಮುಮಾಗಿ (ಆದಿಪು. ೬-೩೫ ವ); ಮಂಗಳಗೀತವಾದ್ಯ ನಿನದಂಗಳಶೇಷದಿಶಾತಟಂಗಳೊಳ್ ಪೊಂಗಿರೆ (ಪರ್ಶ್ವಪು. ೦೪-೩೯).

[ಸಂ. ಮಂಗಲಗೀತ]

**ಮಂಗಳಗೀತಿ** (ನಾ). = ಮಂಗಳಗೀತ : ಮಂಗಳಗೀತಿಗಳೊಳ್ಪಗೆ ಮಂಗಳ ಪಾಠಕರವಂಗಳಿಂದೆಸೆದಿರೆ ರಾಜಾಂಗಣದೊಳ್ (ಆದಿಪು. ೦೨-೪೯).

[ಸಂ. ಮಂಗಲಗೀತಿ]

**ಮಂಗಳಗುಣ** (ನಾ). ೧. ಒಳ್ಳೆಯ ಗುಣ,– ನಡತೆ ; ಸದಾಚಾರ : ಮಂಗಳಗುಣಾನ್ವಿತ ರಥಾಂಗಧರಸೇವಿತ . . .ದಯಾದ್ರ್ರಾಪಾಂಗ ಪೊರೆಯೆನ್ನನು (ಕೃಷ್ಣಲೀ. ೪-೦೨೬). ೨. ಒಳ್ಳೆಯ ಗುಣವುಳ್ಳವನು ; ಸದಾಚಾರವುಳ್ಳವನು : ಮಂಗಳಗುಣರೇಟುಂ ನರಕಂಗಳ ನಾರಕರ ದಂಡನಾದಿಗಳಂ ದುಃಖಂಗಳನಭಿವರ್ಣಿಸಿದೊಡೆ (ಅಜಿತಪು. ೦೧-೦೩).

[ಸಂ. ಮಂಗಲಗುಣ]

**ಮಂಗಳಗೌರಿವ್ರತ** (ನಾ). ಶ್ರಾವಣಮಾಸದ ಪ್ರತಿ ಮಂಗಳವಾರ ನಡೆಸುವ ಗೌರೀದೇವಿಯ ವ್ರತಾಚರಣೆ : ಅವರ ಮನೆಯಲ್ಲಿ ಮಂಗಳಗೌರಿವ್ರತವನ್ನು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ (ರೂಢಿ).

[ಮಂಗಳ (=ಮಂಗಲ) + ಗೌರಿ + ವ್ರತ]

**ಮಂಗಳಚರಿತ** (ನಾ). ಪುಣ್ಯಕರವಾದ ನಡವಳಿಕೆಯುಳ್ಳವನು ; ಶುಭಚರಿತನಾದವನು : ತಣ್ಣೆಲರೊಳ್ ಗೋಕುಳಮಂ ನಿಮಿಸುತ್ತುಂ ಮಂಗಳ ಚರಿತಂ ಕ್ರೀಡಮಾನನೆಸೆದಂ ಕೃಷ್ಣಂ (ಜಗನ್ನಾ. ೪-೪೩).

[ಸಂ. ಮಂಗಲಚರಿತ]

**ಮಂಗಳತಾಳಿ** (ನಾ). ಮದುವೆಯಲ್ಲಿ ವರನು ವಧುವಿನ ಕೊರಳಿಗೆ ಕಟ್ಟುವ ತಾಳಿ,–ಮಾಂಗಲ್ಯ : ಸದಮಲಾರಕ್ತಸರಸಿಜಪೊ ದೇಶ್ ಪ್ರಾಗ್ದಿಶಾಸುದತಿ ಧರಿಸಿರ್ದ ಮಂಗಳತಾಳಿಯಂತೆ . . . ಬಿಸಿಗದಿರಬಿಂಬಂ ಕಾಣಿಸಿತು ಪ್ರಭಾತದೊಳ್ಕೌತುಕವೆನೆ (ಸಂಬಳಾ. ೨೨-೪೪).

[ಮಂಗಳ (=ಮಂಗಲ) + ತಾಳಿ$_1$ (=ತಾಲಿ$_1$)]

**ಮಂಗಳತೂರ್ಯ** (ನಾ). ಶುಭಸಂದರ್ಭದಲ್ಲಿ ನುಡಿಸುವ ವಾದ್ಯ : ಮೊಳಗುವ ಮಂಗಳತೂರ್ಯಂಗಳೆಸೆಯೆ (ಶಂಕರಾ. ೩-೪೬ ವ) ; ಪುಣ್ಯ ಕೃತಮಂಗಳತೂರ್ಯನಿನಾದಪೆತ್ತಲುಂ (ಪುಷ್ಪಪು. ೬-೩೦).

[ಸಂ. ಮಂಗಲತೂರ್ಯ]

**ಮಂಗಳತೆ** (ನಾ). ಸುಖ ; ಸಂತೋಷ : ತಿಳುಹಿ . . . ಸತ್ಕೃತಿಯ ಮಂಗಳತೆಯನು ಕೈಕೊಂಡು ಹಾಯ್ದನು ಹಂಸೆಯಲಿ ಮುನಿಪ (ಕೃಷ್ಣರಾ. ೦-೫-೨೫). [ಸಂ. ಮಂಗಲತಾ]

**ಮಂಗಳತೋರಣ** 'ಮಂಗಲತೋರಣ' ನೋ.

**ಮಂಗಳದ್ರವ್ಯ** (ನಾ). ೧. ಶುಭಸಮಾರಂಭಗಳಲ್ಲಿ ಉಪಯೋಗಿಸುವ ಅರಿಸಿನ, ಕುಂಕುಮ, ಗಂಧ, ಮೊದಲಾದ ಪದಾರ್ಥಗಳು : ಅನಬರಿಂದ್ರರುಮಭಿಷೇಕಮಂಗಳದ್ರವ್ಯಂಗಳಂ ಕೂಡಿ ಶಚೀದೇವಿ (ಶಕ್ರ)ಕರತಳಕ್ಕವಂ ನೋಡಿ ನೀಡೆ (ಶಾಂತಿಪು. ೦೦-೩೬ ವ); ಕೊರಳೊಳಾಭರಣದೊಳು . . . ಮಂಗಳದ್ರವ್ಯದೊಳು ಮಾತುಳಂಗದೊಳು ನಿರುತದಿಂ ರುಚಿಕಮಸ್ತು (ಮಂಗರಾ. ೦೩೨-೫೯). ೨. ಹೆಣ್ಣುಮಕ್ಕಳಿಗೆ ಗೌರಿಹಬ್ಬ, ಮೊದಲಾದ ಶುಭಕಾರ್ಯಕ್ಕೆ ಪೂಜಾದ್ರವ್ಯ ತರಲು ತೌರುಮನೆಯವರು ಕೊಡುವ ಹಣ : ತಂಗಿಗೆ ಗೌರೀಹಬ್ಬದ ಮಂಗಳದ್ರವ್ಯ ಇಪ್ಪತ್ತೈದು ರೂಪಾಯಿಗಳನ್ನು ಕಳುಹಿಸಿರುತ್ತೇನೆ (ಆಧು). [ಸಂ. ಮಂಗಲದ್ರವ್ಯ]

**ಮಂಗಳಧಾರಿಣಿ** (ನಾ). (ಶುಭ ಸಂದರ್ಭಗಳಲ್ಲಿ) ಮಂಗಳದ್ರವ್ಯಗಳನ್ನು ಹಿಡಿದಿರುವವಳು ; ಸುಮಂಗಲಿ : ಮಂಗಳ[ಪಾಠಾಂ. ಲ]ಮನೆ ಪಾಡುತ್ತುಂ ಮಂಗಳ[ಪಾಠಾಂ. ಲ]ಧಾರಿಣಿಯರಾಗಿ ಮುಂದಂ ನಡೆ ವಾಶಾಂಗನೆಯರಿಂದೆ ದಿವಿಜೇಂದ್ರಾಂಗನೆ ಕರಮೆಸೆದು ಹಂಸಗತಿಯೊಳ್ ಬಂದಳ್ (ಆದಿಪು. ೭-೪೬) ; ಅರ್ಚಿಸಿದರಷ್ಟವಿಧದರ್ಚನೆಯಿಂ ಮಂಗಳ ಧಾರಿಣಿಯರ್ ಶಕ್ರಾಂಗನೆಯುಂ ನೆಗಟ್ದ ನಾಗದೇವಾಂಗನೆಯುಂ (ಅಜಿತಪು. ೪-೭೯). [ಸಂ. ಮಂಗಲಧಾರಿಣೀ]

**ಮಂಗಳನಿಲಯ, ಮಂಗಳನಿಳಯ** (ನಾ). ಶ್ರೇಯಸ್ಸಿಗೆ ನೆಲೆಯಾಗಿರುವವನು : ಸುರಪ್ರಾವ್ಯಚರಿತ್ರನಖಿಳಮಂಗಳನಿಲಯಂ (ಧರ್ಮಪು. ೬-೪೦). ಮಂಗಳನಿಳಯ : ಮಂಗಳನಿಳಯನ ಪದಪದ್ಮಂಗಳನರ್ಚಿಸಿದರಷ್ಟವಿಧ ದರ್ಚನೆಯಿಂ (ಅಜಿತಪು. ೪-೭೯). [ಸಂ. ಮಂಗಲನಿಲಯ]

**ಮಂಗಳನಿಳಯ** 'ಮಂಗಳನಿಲಯ' ನೋ.

**ಮಂಗಳಪಾಠಕ** 'ಮಂಗಲಪಾಠಕ' ನೋ.

**ಮಂಗಳಪ್ರಸಾಧನ** 'ಮಂಗಲಪ್ರಸಾಧನ' ನೋ.

**ಮಂಗಳಬೇರ** (ನಾ). ಹವಳದ ಬಣ್ಣ ಮತ್ತು ಬಿಳುಪು ಮಿಶ್ರವಾದ ಬಣ್ಣದ ಒಂದು ಜಾತಿಯ ಕುದುರೆ : ಪವಳಾಂಗ ತನುಚ್ಛವಿ ಬೆಳ್ಪವಿರಳ ಮಾದುದು ನೋಡೆ ಮಂಗಳಬೇರಂ (ಅಶ್ವಶಾ. ೨-೦೩).

[ಮಂಗಳ ( = ಮಂಗಲ) + ಬೇರ$_3$]

**ಮಂಗಳಭೂಷಣ** (ನಾ). = ಮಂಗಲಪ್ರಸಾಧನ : ಮಂಗಳಭೂಷಣಂಗಳನಲಂಕರಿಸಿರ್ದೆಡೆಯಾಡುತಿರ್ಪವಳ್ . . . ನಿಜೇಶಂಗಿದಿರೆಟ್ದು ಬಂದು ಮಂಟಪದಲ್ ಧವಳೇಕ್ಷಣೆ ತನ್ನ ನಲ್ಮೆಯಂ (ಶೃಂಗಾರ. ೩-೬೪).

[ಸಂ. ಮಂಗಲಭೂಷಣ]

**ಮಂಗಳಮಂಡನ** (ನಾ). = ಮಂಗಲಪ್ರಸಾಧನ : ಮಂಗಳಮಂಡನಕ್ಕೆ ನೆಲೆಯಾದ ಕುಮಾರನ ಭೂಷಣಾಂಶು ದಿವ್ಯಾಂಗದ ಕಾಂತಿಯೊಳ್ ಕೊಡದುರ್

ರಂಜಿಸಲಾಜಿವೆ (ಕೃಷ್ಣಕೃ. ೦೨-೧೦೯). [ಸಂ. ಮಂಗಲಮಂಡನ]

**ಮಂಗಳಮಜ್ಜನ** (ನಾ). ಶುಭಕಾರ್ಯದ ಅಂಗವಾಗಿ ಮಾಡುವ ಸ್ನಾನ: ಶ್ರೀರಮಣೀಪ್ರಿಯಂಗಮೃತಮಂಗಳಮಜ್ಜನಮಂ ಜಿನಂಗೆ ವಿಸ್ತಾರಿಸೆ (ಶಾಂತಿಪು. ೦೦-೯೩): ಪರಮಮಂಗಳಮಜ್ಜನನವನಾಭರಣವಸನಾದಿಗಳ ನೀ ಸ್ವೀಕರಿಸಬೇಹುದು (೯೦೬ರಾ. ೯೯-೦). [ಸಂ. ಮಂಗಲಮಜ್ಜನ]

**ಮಂಗಳಮುಖಿ** (ನಾ). ಶುಭಕರವಾದ ಮುಖವುಳ್ಳವಳು; ಕಲ್ಯಾಣಿ ; ಮಂಗಳಮುಖಿ ಮಾನಿನಿ . . . ಗಿರಿಸುತೆಯೆಸೆದಳ್ (ಗಿರಿಕ. ೩-೩೮). [ಸಂ. ಮಂಗಲಮುಖೀ (ಮಂಗಲ + ಮುಖ + — )]

**ಮಂಗಳಮುಹೂರ್ತ** (ನಾ). ಶುಭಗಳಿಗೆ ಮತ್ತು ಆ ಗಳಿಗೆಯಲ್ಲಿ ನಡೆಸುವ ಶುಭಕಾರ್ಯ : ಹರುಷದಲಿ ಮಂಗಳಮುಹೂರ್ತವ ಮಾಡಿ ಯೇದನು (ಕುಮ್ಯಾ.ಪಿ. ೦೦-೬೩); ಮಂಗಳಮುಹೂರ್ತವನು ಜನತತಿಗೆ ತಿಳು ಹಿಸುತ . . . ಬರುತಿಹುದು (ಅಶ. ೦-೧೨). [ಸಂ. ಮಂಗಲಮುಹೂರ್ತ]

**ಮಂಗಳಮೂರುತಿ** (ನಾ). ಶುಭಕರವಾದ ಸ್ವರೂಪವುಳ್ಳವನು : ಗಂಗೆ ನೀ ಪಾತಾಳಕೆ ಹೆಂಗ ಬಂದಿದಿ ಹೇಳೆ ಮಂಗಳಮೂರುತಿ ಮಾರಾಯನ ಜಡೆ ಬಿಟ್ಟು (ಸಿದ್ಧ.ಕೃ. ೩-೯೩). [ಮಂಗಳ (=ಮಂಗಲ) + ಮೂರುತಿ]

**ಮಂಗಳಮೂರ್ತಿ** (ನಾ). ೧. ಶುಭಕರವಾದ ಆಕಾರ,—ಸ್ವರೂಪ : ದೇವರ ಮಂಗಳಮೂರ್ತಿಯನ್ನು ನೋಡಿ ಆನಂದಪರವಶನಾದನು (ಕೋಶ). ೨. ಶುಭಕರವಾದ ಸ್ವರೂಪವುಳ್ಳ ವ್ಯಕ್ತಿ : ಸಂಗವೆರಡುಂಟು ಒಂದ ಬಿಡು ಒಂದ ಹಿಡಿ ಮಂಗಳಮೂರ್ತಿ ನಮ್ಮ ಕೂಡಲಸಂಗನ ಶರಣರ (ಬಸವ. ೦೩೯); ಮಂಗಳಮೂರ್ತಿ ತಾಪಸಶಿರೋಮಣಿ . . . ಶಿವಯೋಗೀಸ ತಿರ್ದನದೊರ್ಬ ಭೂಸುರಂ (ರಹಸ್ಯ. ೩-೯೬); ಜಯಮಂಗಳಂ . . . ಮಾರನ್ನ ಪಡೆದ ಮಂಗಳಮೂರ್ತಿಗೆ (ಕೃಕೀರ. ೦-೨೩೩-೨). [ಸಂ. ಮಂಗಲಮೂರ್ತಿ]

**ಮಂಗಳವಡೆ** (ಕ್ರಿ). ಸೊಬಗನ್ನು ಹೊಂದು ; ಚೆಲುವಾಗು : ಸೆಕೆಯಿಲ್ಲ ದಾವಗಮುರಿವ ಕೆಂಗಿಡಿಯ ಮಾಲಿಕೆಯಂತೆ ಮಂಗಳವಡೆದ ನಿಖಿಳರತ್ನಂಗಳ ಡಸಿದ ಮುದ್ರಿಕೆ ಮಂಟಿಕೆಯನಿಟ್ಟಿರು ಬೆರಲ್ಗಳಗೆ (ಸೋಮಶ. ೨೬-೯೭). [ಮಂಗಳ ( = ಮಂಗಲ ) + ಪಡೆ$_1$ ]

**ಮಂಗಳವರೆ** ' ಮಂಗಳವಜಿ ' ನೋ.

**ಮಂಗಳವಸದನ** (ನಾ). = ಮಂಗಲಪ್ರಸಾಧನ : ಓರೊರ್ವರಾಕೆಯ ರೂಪಂ ವಕ್ರೋಕ್ತಿಯೊಳೆ ಪೊಗಟ್ಟು ಮಂಗಳವಸದನವಿಕ್ಕಿಯುಂ (ಕಂಶಬಾ. ೩-೯೬ ಪ) ; ಮಂಗಳವಸವನದಿಂದೆ ಮನಂಗೊಳಿಸುತವಿರ್ದು ಪಡೆಯ ಕಾಪಂ ಪಡೆವಳ್ಳಂಗೆ ಸಮರ್ಪಿಸಿ (ಜಾಕ್ಕಳ್ಪ. ೦೦-೯೯). [ ಮಂಗಳ ( = ಮಂಗಲ ) + ಪಸದನ ]

**ಮಂಗಳವಸದನಂಗೊಳ್** (ಕ್ರಿ). ಶುಭಪ್ರಸಂಗಕ್ಕೆ ಉಚಿತವಾದ ವೇಷ ಭೂಷಣಗಳನ್ನು ಧರಿಸು : ಪಾಂಡವರಯ್ವರುಮುನ್ಮೀಲಿತನಯನರಾಗಿ ನಿತ್ಯನಿಯಮಂಗಳಂ ನಿರ್ವರ್ತಿಸಿ ಮಂಗಳವಸದನಂಗೊಂಡು • ( ಕಂಶಬಾ. ೨-೯೩ ಪ ) : ಸೌಜನ್ಯಕಂದಾಂಕುರಂ ವಿಜಯಪ್ರಸ್ಥಾನೋದ್ಯುಕ್ತಂ ಮಂಗಳ ವಸದನಂಗೊಂಡು (ಶಾಂತಿಪು. ೦೦-೦೯೨ ಪ). [ ಮಂಗಳವಸದನ + ಕೊಳ್$_1$ ]

**ಮಂಗಳವಸ್ತು** (ನಾ). = ಮಂಗಳದ್ರವ್ಯ ೧ : ಮಂಗಳವಸ್ತುಗಳಿಂ ದೇವಾಂಗನೆಯರ್ಮಾಡೆ ಗರ್ಭಶೋಧನಮಂ (ಮಲ್ಲಿಪು. ೦೦-೯೯); ಗೌರಿಯು ಮನೆಯ ಮಗಳೆಂದು . . . ಆದರದಿಂದ ಹಸಿರುಬಳೆ, ಕುಂಕುಮ, ಅರಿಷಿಣ, ವಸ್ತ್ರಲ ಮೊದಲಾದ ಮಂಗಳವಸ್ತುಗಳನ್ನು ಇಡಿಸಹೋಗಿದ್ದಾರೆ ನಮ್ಮ ಹೆಣ್ಣುಮಕ್ಕಳು (ಕನ್ನಡಾ. ೦೬೮). [ ಸಂ. ಮಂಗಲವಸ್ತು]

**ಮಂಗಳವಜಿ**, ಮಂಗಳವರೆ (ನಾ). = ಮಂಗಲಾನಕ : ಮಂಗಳವಜಿ ಗಳ್ . . . ಶ್ವೇತಚ್ಛತ್ರಂಗಳಮರ್ದಿಸೆಯೆ ಕರ್ಣಂಗಂಗಮಹೀತಳ ವಿಭೂತಿಯಂ ನೆಜೆಯಿತ್ತಂ (ಕಂಶಬಾ. ೨-೩೯) ; ಪೊಂಗಳಸದ ನೀರಂ ತರಿಸಿ ಮಂಗಳವಜಿಗಳೆಸೆಯೆ ಧಾರೆಯನೆಜೆಯಲೆಂದಿರ್ಪುದುಂ (ರಮಾಗಕ್ಕು. ೯-೨೨೬). **ಮಂಗಳವರೆ** : ಮಂಗಳವರೆಯ ನಾದಕ್ಕೆ ನಡೆನಡೆಯ ನಿಡುವೊಸಗೆ (ತ್ರಿಣಾಪು. ೩೦-೬೯೬). [ ಮಂಗಳ ( = ಮಂಗಲ) + ಪಜಿ$_1$ ]

**ಮಂಗಳವಾಚಕ** (ನಾ). ಶುಭದ ಅರ್ಥವನ್ನು ಸೂಚಿಸುವ ಶಬ್ದ ; ಓಂ, ಶ್ರೀ ಇತ್ಯಾದಿ ಶಬ್ದಗಳು : ಭಾರತೀಯರ ಪ್ರಕಾರ ಯಾವ ಕೃತಿಯೇ ಆಗಲಿ ಮಂಗಳಶ್ಲೋಕದಿಂದ ಅಥವಾ ಮಂಗಳವಾಚಕದಿಂದ ಆರಂಭ ವಾಗಬೇಕು (ಕಶಾ. ೯೬). [ ಸಂ. ಮಂಗಲವಾಚಕ ]

**ಮಂಗಳವಾದ್ಯ** 'ಮಂಗಲವಾದ್ಯ' ನೋ.

**ಮಂಗಳವಾರ** (ನಾ). ವಾರದ ಏಳುದಿನಗಳಲ್ಲಿ ಮೂರನೆಯ ದಿನ ; ಕುಜನು ಅಧಿದೇವತೆಯಾಗಿರುವ ವಾರ ; ಕುಜವಾರ : ಆ ದಿನವೇ ಆದಿತ್ಯವಾರ ಸೋಮವಾರ ಮಂಗಳವಾರ . . . ಶನಿವಾರವೆಂದೇಳು ತೆಜ ನಾಗಿಹುದು (ಅಶೀ. ೨೬೧) ; ಹೇವಿಳಂಬಿನಾಮಸಂವತ್ಸರದ ಜ್ಯೇಷ್ಠ ಬ ೮ ಮಂಗಳವಾರಕ್ಕೆ (ಕೃಶಾ. ೦೯೩೯, ೨೬-೨ ; 1897). [ಸಂ. ಮಂಗಲವಾರ]

**ಮಂಗಳವಿಧಿ** (ನಾ). ನಿಯಮಿತ ಕಾಲದಲ್ಲಿ ಮಾಡಬೇಕಾದ ಶುಭಕಾರ್ಯ; ಸ್ನಾನ, ಪೂಜೆ ಮೊದಲಾದುವು : ಕನಕಾದ್ರಿಶಿಖಾವಳವರ್ತನಕ್ಕೆ ಲಯಮೆಳಸೆ ದಿವಿಜದುಂದುಭಿ ಶಂಖಸ್ವನದೊಡನೆ ಮೊಬಗಿದುವು ಜನಜನ ನಾಭಿಷವಪ್ರಸಂಗಮಂಗಳವಿಧಿಯೊಳ್ (ಶಾಂತಿಪು. ೦೦-೩೯); ನೃಪನೊಡರಿಬಿದಂ ಬೇಗಂ ಪ್ರತ್ಯೂಷಕೃತ್ಯಮಂಗಳವಿಧಿಯಂ (ಕೃಷ್ಣಕೃ. ೯-೨೯). [ ಸಂ. ಮಂಗಲವಿಧಿ ]

**ಮಂಗಳವೇದಿ** (ನಾ). ಶುಭಕಾರ್ಯಕ್ಕಾಗಿ ನಿರ್ಮಿಸಿದ ಜಗಲಿ,— ಕಟ್ಟೆ : ಸುತ್ತಿದ ಚಿತ್ರಕಾಂಡಪಟವಿಕ್ಕಿದ ಮಂಗಳವೇದಿ . . . ಕಣ್ಗೊಳಿಸು ತಿರ್ದುವಾ ಮಂಟಪದೊಳ್ (ಕೃಷ್ಣಕೃ. ೯-೬೮). [ಸಂ. ಮಂಗಲವೇದಿ ]

**ಮಂಗಳಶಿಖಿ** (ನಾ). ಮದುವೆ ಮೊದಲಾದ ಶುಭಕಾಲದಲ್ಲಿ ಹೋಮ ಕ್ಕಾಗಿ ಸಿದ್ಧಪಡಿಸುವ ಅಗ್ನಿ : ಮಂಗಳಶಿಖಿಗಳ್ ಚಾತ್ವಶ್ವಂಗಳ ಪೋಲ್ತಳೆದು ದಕ್ಷಿಣಾವರ್ತವಿಳಾಸಂಗಳನೇಂ ಧನದನ ರತ್ನಂಗಳ ಮರಂ ಗಳಂತೆ ಜಲಜಲಿಸಿದುವೋ (ಮಲ್ಲಿಪು. ೦೯-೯೯). [ಸಂ. ಮಂಗಲಶಿಖಿನ್]

**ಮಂಗಳಶ್ಲೋಕ** (ನಾ). ಕಾವ್ಯ, ನಾಟಕ ಮೊದಲಾದುವುಗಳ ಪ್ರಾರಂಭ ದಲ್ಲಿ ಅಥವಾ ಮುಕ್ತಾಯದಲ್ಲಿ ಮಾಡುವ ದೇವತಾಸ್ತುತಿರೂಪ ವಾದ ಪದ್ಯ : ಅಂತು ಸೂತ್ರಧಾರನು ಈ ಮಂಗಳಶ್ಲೋಕವನ್ನು ಹೇಳಿ . . . ಹೋಗುವವನು (ಕೃಶಾ. ೨೦೨) ; ಭಾರತೀಯರ ಪ್ರಕಾರ ಯಾವ ಕೃತಿಯೇ ಆಗಲಿ ಮಂಗಳಶ್ಲೋಕದಿಂದ ಅಥವಾ ಮಂಗಳವಾಚಕದಿಂದ ಆರಂಭವಾಗಬೇಕು (ಕಶಾ. ೯೬). [ಸಂ. ಮಂಗಲಶ್ಲೋಕ]

**ಮಂಗಳಸವನ** (ನಾ). = ಮಂಗಳಮಜ್ಜನ : ಮಳಯಜಮಿಶ್ರತೀರ್ಥ ಜಲಧಾರೆಗಳಿಂ ಶಶಿಕಾಂತಕಾಂತಮಂಗಳಕಲಶಾಂಬುಧಾರೆಗಳಿನಿರ್ವಾಡಿಸಿತ್ತು ವಿವಾಹಮುಖ್ಯಮಂಗಳಸವನಂ (ಶಂರಾಷು. ೩-೩೯) ; ಮಂಗಳಸವನಾನಂತರ ಮಂಗೀಕೃತಶುಭವಿಭೂಷರಂ ಮಾಡಿ (ಶಾಂತೀಶ್ವ. ೨-೦೩೯). [ ಸಂ. ಮಂಗಲಸವನ ]

**ಮಂಗಳಸಾಧನ** (ನಾ). = ಮಂಗಳದ್ರವ್ಯ ೧ : ನೆರಪಿದ ಮಂಗಳಸಾಧನಂ ಗಳಿರೆ ಸರಸಗೀತಮಂ ಪಾಡುವ ಗಾಯಕರಿಂ. . . ಪಸದನಂಬಡೆದ ಪೊಸ ಪಸುರ್ವಂದರೊಸಗೆ ಮಿಗೆ ಮಿಸುಗುತ್ತಿರ್ದುದು (ರಾಜಶೇ. ೯-೩ ಪ). [ಸಂ. ಮಂಗಲಸಾಧನ]

**ಮಂಗಳಸೂಕ್ತ** (ನಾ). ಶುಭವನ್ನು ಕೋರುವ ಮಂತ್ರ : ವೀರ ಸೇಸೆಯನಿಕ್ಕಿ ರಾಯನ ನಾರಿ ಪರಿಪಿದಳಖಿಳವಿಪ್ರರ ಚಾರು ಚಾತುರ್ವೇದ ಮಂಗಳಸೂಕ್ತಘೋಷದಲಿ ಕೇರನೇಜುದನಸುರರಿಪು (ಕುಮ್ಯಾ.ಕ. ೦೯-೦೨). [ಸಂ. ಮಂಗಲಸೂಕ್ತ]

**ಮಂಗಳಸೂತ್ರ** 'ಮಂಗಲಸೂತ್ರ' ನೋ.

**ಮಂಗಳಾಂಗ** (ನಾ). ಶುಭಕರವಾದ ದೇಹವುಳ್ಳವನು ; ಪವಿತ್ರವಾದ ಶರೀರವುಳ್ಳವನು : ಮಂಗಳಾಂಗನು ಮತ್ತೆ ಕರುಣಾಪಾಂಗದಲಿ ನೋಡುತ್ತ ನಿನ್ನತಿಸಾಂಗಭಕ್ತಿಗೆ ಮೆಚ್ಚಿದೆವು ಎನಲು (ಕಕೃ. ೩೭-೩೦) ; ಇವನಾವನು, ಕಟ್ಟಿದ ರಕ್ಷೆಯಿಂದ ಮಂಗಳಾಂಗನಾದ ನನ್ನ ಮಗನನ್ನು ಮುಟ್ಟಿ ಅಪರಿಶುದ್ಧನನ್ನು ಮಾಡುವನು ? (ಶಾಕುಂತ. ೦೦೯-೮).
[ಸಂ. ಮಂಗಲಾಂಗ]

**ಮಂಗಳಾಂಗಿ** (ನಾ). ಶುಭಲಕ್ಷಣಗಳಿಂದ ಕೂಡಿದ ದೇಹವುಳ್ಳವಳು ; ಸುಂದರಿ : ಮಂಗಳಾಂಗಿ ಮಂಜುಳಾಂಬುಜಾಸ್ಯೆ . . . ರಕ್ಷಿಸೆನ್ನದಿ ರಾಟ್ಟುತೇ (ಭೃಕಾ. ೨೭-೬೦).
[ಸಂ. ಮಂಗಲಾಂಗೀ (ಮಂಗಲ + ಅಂಗ + — ) ]

**ಮಂಗಳಾಚರಣ** (ನಾ). ಶುಭಕಾರ್ಯ ; ಮಂಗಳಕಾರ್ಯ : ಮಂಗಳ ಗಾಯಿಕಾಮಧುರಗಾನದಿನೆಬ್ಬಜನೆಯ್ದು ನಿತ್ಯಕೃತ್ಯಂಗಳ ಮಂಗಳಾಚರಣಮಂ ನೆಗಟುತ್ತೆ (ಶುಕ್ರ. ೩-೦೨೦). [ಸಂ. ಮಂಗಲಾಚರಣ]

**ಮಂಗಳಾಚ್ಚಾರ** (ನಾ). = ಮಂಗಳಾಚರಣ : ಆಗಳಾ ಗರ್ಭಸ್ಖಲನ ಸಮಯಮೆ ಋತುಸಮಯಮಾಗೆ ಚತುರ್ಥದಿವಸಮನಂತರ ಮಜ್ಜನಂ ಬೊಕ್ಕು ಮಂಗಳಾಚಾರಮನಪ್ಪುಕೆಯ್ದು (ಕಗಿ. ೨-೬೦ ಪ).
[ಸಂ. ಮಂಗಲಾಚಾರ]

**ಮಂಗಳಾನಕ** 'ಮಂಗಲಾನಕ' ನೋ.

**ಮಂಗಳಾನುಲೇಪ** (ನಾ). ಶುಭಕರವಾದ ಲೇಪನದ್ರವ್ಯ : ಅಷ್ಟರಲ್ಲಿ ನಾನೂ ಕೂಡ ಶಕುಂತಳೆಗೋಸ್ಕರ ಗೋರೋಚನ, ತೀರ್ಥಮೃತ್ತಿಕೆ, ದೂರ್ವಾಕಿಸಲಯಗಳ ಮಂಗಳಾನುಲೇಪಗಳನ್ನು ಮಾಡುವೆನು (ಶಾಕುಂತ. ೯೯-೨೦). [ಸಂ. ಮಂಗಲಾನುಲೇಪ]

**ಮಂಗಳಾರತಿ** (ನಾ). ೧. ದೇವರ ಪೂಜೆಯ ಕಾಲದಲ್ಲಿ ಬತ್ತಿ, ಕರ್ಪೂರಗಳನ್ನು ಹಚ್ಚಿ ಬೆಳಗುವುದು : ಚಿತ್ರದೊಳು ಪೂಜೆಯಚ್ಚೊತ್ತಿದಂತರ್ಚಿಸುತೆ . . . ಮಂಗಳಾರತಿಯಿತ್ತು ಚವರ ಸೀಗುಳಿಯಿಕ್ಕಿ (ಹಕ. ೦೩-೬೦); ಪಲ ಬಗೆ ಪಂಚವೊಂವ ಜ್ಯೋತಿಯ ಮಂಗಳಾರತಿಯನಿಡಲು (ಹಹಪೋ. ೩೦-೨೯). ೨. ಶುಭೋತ್ಸವಗಳಲ್ಲಿ ಮುತ್ತೈದೆಯರು ಹಿಡಿದುಕೊಳ್ಳುವ ದೀಪಾರತಿ : ತಮತಮಗೆ ಫಳವಿಡಿದು ಮಂಗಳಾರತಿ ವಿಡಿದು ಸೇಸೆವಿಡಿದಮರಕಾಮಿನಿಯರೈದೆ (ಸಿದ್ಧರಾ. ೦-೩೬). ೩. (ಅಲಂ) ಅಪಮಾನ ; ಮುಖಭಂಗ : ರಾಮರಿಗೆ ಮಂಗಳಾರತಿಯಾಗಿದ್ದು ಏನಾಶ್ಚರ್ಯ ? (ಸವಃಜ. ೬); ಕೆಣಕಿದರೆ ಮಾಡುತೀನಿ ಅವನಿಗೆ ಮಂಗಳಾರತಿ ! (ಶಾಪೋಲೀ. ೨೦೬). [ಮಂಗಳ (=ಮಂಗಲ) + ಆರತಿ]

**ಮಂಗಳಾಲಂಕಾರ** (ನಾ). ಶುಭಸನ್ನಿವೇಶಕ್ಕೆ ಉಚಿತವಾದ ವೇಷಭೂಷಣ : ಅನಂತರಂ ಭಗವಜ್ಜಿನೇಂದ್ರಪೂಜಾವಿವಿಧಮಂಗಳಮನಾಚರಿಸಿ ಮಂಗಳಾಲಂಕಾರಾಲಂಕೃತೆಯಾಗಿ (ಕೃಕೃಪು. ೩-೦೦೭ ಪ).
[ಸಂ. ಮಂಗಲಾಲಂಕಾರ]

**ಮಂಗಳಾಷ್ಟಕ** (ನಾ). ಮದುವೆ, ಮುಂಜಿ ಮೊದಲಾದ ಶುಭ ಮುಹೂರ್ತದಲ್ಲಿ ಸಾಂಪ್ರದಾಯಿಕವಾಗಿ ಹೇಳುವ ಶುಭವನ್ನು ಕೋರುವ ಎಂಟು ಶ್ಲೋಕಗಳು ; ಇವು 'ಕುರ್ಯಾತ್ ಸದಾ ಮಂಗಳಂ' ಎಂದು ಕೊನೆಗಾಣುತ್ತವೆ : ಮಾಂಗಲ್ಯಧಾರಣೆಯ ಸಮಯದಲ್ಲಿ ಮಂಗಳಾಷ್ಟಕ ಹೇಳುವುದು ಪದ್ಧತಿ (ರೂಢಿ).
[ಸಂ. ಮಂಗಲಾಷ್ಟಕ]

**ಮಂಗಳೆ** (ನಾ). ದುರ್ಗೆ; ಪಾರ್ವತಿ : ಮಾನ್ಯ ಮಾನಿನಿ ಮಹನೀಯೆ ಮಂಗಳೆ ಮಹೇಶ್ವರಿ (ಅಕಚ. ೦೩-೦೩). [ಸಂ. ಮಂಗಲಾ]

**ಮಂಗಳ್ಯಕ** 'ಮಂಗಲ್ಯಕ' ನೋ.

**ಮಂಗಜಿವಳ್ಳಿ** 'ಮಂಗುಜಿವಳ್ಳಿ' ನೋ.

**ಮಂಗಾಟ** (ನಾ). ೧. ಕಪಿಯ ಆಟ ; ಕೋತಿಚೇಷ್ಟೆ. ೨. (ಅಲಂ) ಬುದ್ಧಿಹೀನತೆಯಿಂದ ಮಾಡುವ ಕೆಲಸ ; ವಿವೇಕವಿಲ್ಲದೆ ಮಾಡುವ ಕಾರ್ಯ: ಹ್ಯಾಂಗಾರೆ ಕಣಿಕಣಿದು ಮಂಗಾಟ ನಡೆದಾಗ ಅಂಗಾತ ಬಿತ್ತೋ ಮೆಗಲಲಿ ಎತ್ತೋ (ನಾದಲೀ. ೩೮-೨೩) ; ಕಾಯಿದೆ ನಿಮ್ಮ ಕಡೆಗೆ ಇರುವದೆಂದು ಮಂಗಾಟ ನಡೆಸಬಾರದು (ಮಕ್ಕಿಮು. ೨೧೧).
[ಮಂಗ$_1$ + ಆಟ]

**ಮಂಗಾಟಿಕೆ** (ನಾ). = ಮಂಗಾಟ ೨ : ಆತ ಮಂಗಾಟಿಕೆ ಮಾಡದೆ ಹಳೆಯ ಸಂಪ್ರದಾಯವನ್ನು ಉಳಿಸಿಕೊಂಡು ಬರಬೇಕಾದುದು ಅನಿವಾರ್ಯವಾಗುತ್ತದೆ (ಮುಕ್ತಿ. ೦೧೦). [ಮಂಗ$_1$ + ಆಟಿಕೆ]

**ಮಂಗಾಡಿಸು** (ಕ್ರಿ). (ಅಲಂ) ಕಪಿಯಂತೆ ಕುಣಿಸು ; ತನಗೆ ಇಷ್ಟಬಂದಂದನ್ನು ಮತ್ತೊಬ್ಬರಿಂದ ಮಾಡಿಸು : "ನನ್ನನ್ನು ಮಂಗಾಡಿಸಿ ಬಿಟ್ಟ" ಎಂದು ಕಿಟ್ಟಪ್ಪ ಮಾಸ್ತರರು ನಾಲ್ಕು ಜನರ ಮುಂದೆ ದೂರಿ, ತಮ್ಮ ಮರ್ಯಾದೆಯನ್ನು ಉಳಿಸಿಕೊಂಡರು (ಚರುಣ. ೦೩). [ಮಂಗ$_1$ + ಆಡಿಸು]

**ಮಂಗಾರೆ** 'ಮಗ್ಗಾರೆ' ನೋ.

**ಮಂಗಾರೆಮುಳ್ಳು** (ನಾ). (ದಟ್ಟವಾಗಿಯೂ ಒರಟಾಗಿಯೂ ಇರುವ ಮುಳ್ಳುಗಳುಳ್ಳ) ಒಂದು ಬಗೆಯ ಪೊದರು ಗಿಡ : (*).
[ಮಂಗಾರೆ (< ಮಗ್ಗಾರೆ) + ಮುಳ್ಳು (< ಮುಳ್)]

**ಮಂಗಿ** (ನಾ). ೧. ಹೆಣ್ಣುಕಪಿ : ಆ ಮಂಗಿ ಮರಿಯನ್ನು ಎತ್ತಿಕೊಂಡು ಕೊಂಬೆಯಿಂದ ಕೊಂಬೆಗೆ ನೆಗೆಯುತ್ತಿದೆ (ರೂಢಿ). ೨. (ಅಲಂ) ತಿಳುವಳಿಕೆ ಇಲ್ಲದವಳು : ಅವಳು ಶುದ್ಧ ಮಂಗಿ, ಹೊಲಮನೆಯನ್ನೆಲ್ಲಾ ಅಡ್ಡಾದಿಡ್ಡಿಯಾಗಿ ಮಾರಿಬಿಟ್ಟಳು (ರೂಢಿ). [ಮಂಗ$_1$ + — ಇ$_2$]

**ಮಂಗಿನಿ** (ನಾ). ಹಡಗು; ನೌಕೆ. [ಸಂ. ಮಂಗಿನೀ]

**ಮಂಗುರವಳ್ಳಿ** 'ಮಂಗುಜಿವಳ್ಳಿ' ನೋ.

**ಮಂಗುಜವಳ್ಳಿ** 'ಮಂಗುಜಿವಳ್ಳಿ' ನೋ.

**ಮಂಗುಜಿವಳ್ಳಿ, ಮಂಗರವಳ್ಳಿ, ಮಂಗಜಿವಳ್ಳಿ, ಮಂಗುರವಳ್ಳಿ, ಮಂಗುಜವಳ್ಳಿ, ಮೊಂಗರವಳ್ಳಿ** (ನಾ). (ಚಕ್ಕುಲಿ ಮೊದಲಾದ ಭಕ್ಷ್ಯಗಳಿಗೆ ಸೇರಿಸುವ, ಚಟ್ನಿ ಮೊದಲಾದ ಅಡಿಗೆಗೂ ಮತ್ತು ಔಷಧಗಳಿಗೂ ಉಪಯೋಗಿಸುವ) ಒಂದು ಬಗೆಯ ಬಳ್ಳಿ ; ನಾಲ್ಕು ಏಣುಗಳುಳ್ಳ ಒಂದು ಬಗೆಯ ಹಸಿರು ಬಳ್ಳಿ ; ನರಳೆ : ತುಜುವೆಯ ಕಾಯ್ಗಳುಮಂ ಮಂಗುಜುವಳ್ಳಿಯನಿರಿದ ಚೂರ್ಣಮಂ ಶರ್ಕರೆಯಿಂ ನೆಜೆ ತಿಂದು ಬಿಸಿಯ ನೀರಂ ಕಿಜಿದುಗೊಳಲ್ಕುಬ್ಬಯುಮುಟಿಗುಮೇ ಕೆಯ್ಯುಸಕಂ (ಕಮದ. ೦೯-೧೨). **ಮಂಗರವಳ್ಳಿ** : ಆಡುಸೋಗೆಯೆಲೆಯು ಕಡ್ಡಿ, ಬಜೆ, ಮಂಗರವಳ್ಳಿ, ರಾಮಗುಳ್ಳ, ಶುಂಠಿ, ಕಟುಕರೋಹಿಣಿ ಇವುಗಳನ್ನು ಸಮಭಾಗ ಕಷಾಯ ಕಾಯಿಸಿ ಕೊಡಲು ಶ್ಲೇಷ್ಮಜ್ವರವು ಗುಣವಾಗುವುದು (ಕಕ್ಕ. ೯೦). **ಮಂಗಜಿವಳ್ಳಿ** : ಮಂಗಜಿವಳ್ಳಿರಸ, ಕಳ್ಳಿರಸ ಎಲಹುರಿ, ಈ ಮೂಜು ರಸಗಳಲ್ಲಿ ಪೋಡಶಾಂಶ ಶೋಧಿಸಿದ ಗಂಧಕವನ್ನಿಕ್ಕಿ (ಬಿಸ್ತಿ. ೨೩); ಬಳ್ಳಿಸುಂಡೆಯ ಸಹಮೂಲವು ಮಂಗಜಿವಳ್ಳಿ ರಸಂಗಳು ಸಹಿತ (ಶಾಸ್ತ್ರಶಾ. ೦೮). **ಮಂಗುರವಳ್ಳಿ** : "ಅಸ್ಥಿಸಂಘಾತಃ — ಮಂಗುರವಳ್ಳಿ" (ಓಷಧಿ. ೬). **ಮಂಗುಜವಳ್ಳಿ** : "ಅಸ್ಥಿವಳ್ಳಿ ಮಂಗುಜವಳ್ಳಿ" (ಮಂಗರಾ. ೯೩-೯೩). **ಮೊಂಗರವಳ್ಳಿ** : ಮೊಂಗರವಳ್ಳಿಬೇರು, ಉದ್ದರಣೆಯ ಬೇರು, ನೆಲಗುಳ್ಳದ ಬೇರು, ಹೆಗ್ಗುಳ್ಳದ ಬೇರು (ದ್ರವ್ಯಾಕೂ. ೬-೯).
[ಮಂಗುಜು$_1$ + ಬಳ್ಳಿ]

**ಮಂಗುಳಿಅಳತೆ** (ನಾ). [ಗಣಿತ] ಒಂದು ಅಳತೆ : ಕ್ಷೇತ್ರಗಣಿತ, ಮಂಗುಳಿ ಅಳತೆ, ರಾಜನೀತಿ . . . ಉತ್ಕಳಿತಗುಣಿ ಮುತ್ತಿನ ಚಿಲ್ಲನ ಗುಣಿತವುಂ ಅಷ್ಟಾದಶ ಗುಣಿತಂಗಳು (ಕ್ಷೇತ್ರಗ. ೨-೩). [? + ಅಳತೆ]

**ಮಂಗೇಶ** (ನಾ). ಶಿವ : (೬). P ಇದು ದಕ್ಷಿಣಕನ್ನಡ, ಉತ್ತರಕನ್ನಡದಲ್ಲಿ ವಾಸಿಸುವ ಕೊಂಕಣಿಭಾಷೆಯನ್ನಾಡುವ ಅನೇಕರ ಮನೆದೇವತೆಯ ಹೆಸರು. [< ಮಂಗಲ ? + ಈಶ]

**ಮಂಚ** (ನಾ). ೧. ಮಲಗಲು ಉಪಯೋಗಿಸುವ, ನಾಲ್ಕುಕಾಲುಗಳುಳ್ಳ ಮರ ಅಥವಾ ಲೋಹದ ಸಾಧನ : ಪರ್ಯಂಕ : "ಶಯನಮಾ ಪರಿಯಂಕಮಾ ಶಯ್ಯೆಯೆನೆ ಮಂಚಮೆನಿಸಿಕ್ಕುಂ" (ಮಂಗರಾ. ೬೦-೦೫) ; ನೀಂ ಮಹಾದೇವಿಯ ಮಂಚಮಂನಂಜದೇಜು ಆಕೆಯೊಡನೆ ನಗುತ್ತುಂ ತೆಗಟುತ್ತುಮಿರೆಂದು ಕಲ್ಪಿಸಿದಂ (ವಡ್ಡಾರಾ. ೦೭೭-೦೬) ; ದ್ರುಪದನಂ ತನ್ನ ಮಂಚದ ಕಾಲೊಳ್ ಕಟ್ಟುವೇಟ್ಟು (ಕಂಕಣ. ೨-೬೨ ವ) ; ಭಾಳಾಕ್ಷಿಯರ ಮನೆಯೊಳಾಳೀಳದ ದಳ್ಳುರಿಯ ಮಂಚದೊಳ್ ಪವಡಿಸಿದಯ್ (ಗಿರಿಜಾ. ೮-೬೬). ೨. ಉತ್ತಮವಾದ ಪೀಠ ; ಉನ್ನತವಾದ ಆಸನ : ಮಣಿ ಮಂಚಂ ಪಟ್ಟಂ . . . ಗಲ್ಲಂ ಮಲ್ಲಂ ತಳಮಿಂತೆಲ್ಲಂ ಕತ್ತಮುಮುಂ (ಕಮಿತ. ೨೯೭) ; ಜ್ಯೋತಿಷನಿಪುಣವರರ್ ಬಂದು ಪೊಕ್ಕಲ್ಲಿ ಮಂಚೋತ್ಕರದೊಳ್ ಕುಳ್ಳಿರ್ದರ್ (ಅಕ್ಬ್ರಕು. ೫-೫-೨೫). ೩. ವೇದಿಕೆ ; ರಂಗಸ್ಥಳ : ಪ್ರೇಕ್ಷಕರಲ್ಲಿಂದ ಸುಮಾರು ೨೫ ವಯಸ್ಸಿನವನೊಬ್ಬನು ಮಂಚದ (ವ್ಯಾಸಪೀಠ) ಕಡೆಗೆ ಬರಹತ್ತಿದನು (ದಾಸಪು. ೫೨). ೪. ಹೊಲ, ಗದ್ದೆಗಳನ್ನು ಕಾಯಲು ಎತ್ತರವಾಗಿ ಕಟ್ಟಿರುವ ಬಿದಿರು ಮೊದಲಾದುವುಗಳಿಂದ ಮಾಡಿರುವ ಅಟ್ಟಣೆ ; ಮಂಚಿಕೆ. [ಸಂ.]

**ಮಂಚಕ** (ನಾ). ೧. = ಮಂಚ ೧ : ನಿನ್ನ ನಾಲಗೆಯನ್ನು ತನ್ನ ಮಂಚಕ ಮಾಡಿ . . . ಚೆನ್ನೆ ಸರಸತಿ ನಿತ್ಯ ಪವಡಿಸುವಳಾಡಿ (ಗಂ. ೨೬-೦). ೨. = ಮಂಚ ೨ : ಒಂದು ಉತ್ತಮವಾದ ಮಂಚಕದ ಮೇಲೆ ಕುಳಿತುಕೊಳ್ಳುವಷ್ಟರಲ್ಲಿ ಅವನ ಅಣ್ಣನಾದ ಶಹರಿಯಾದನು ಅಲ್ಲಿಯೇ ಬಂದು ಕುಳಿತುಕೊಂಡನು (ಅರಕ್ಕ. II. ೦೬). [ಸಂ.]

**ಮಂಚಟಿಕೆ** 'ಮಂಜಿಟ್ಟಿಗೆ' ನೋ.

**ಮಂಚದಕಾಲಹುಲ್ಲು**, ಮಂಚದಕಾಲುಹುಲ್ಲು (ನಾ). ನಾಲ್ಕುದಳಗಳಿರುವ ಒಂದು ಬಗೆಯ ಹುಲ್ಲು : (೬). **ಮಂಚದಕಾಲುಹುಲ್ಲು** : ಮಂಚದಕಾಲುಹುಲ್ಲು, ಉಪ್ಪುಗಡ್ಡ (ಪ್ಯಾಶಿಗ. ೨೦-೩೬೮).

[< ಮಂಚ + ಕಾಲು$_1$ (< ಕಾಲ್$_1$) + ಹುಲ್ಲು (< ಪುಲ್)]

**ಮಂಚದಕಾಲುಹುಲ್ಲು** 'ಮಂಚದಕಾಲಹುಲ್ಲು' ನೋ.

**ಮಂಚಯ್ಯ** (ನಾ). ಒಬ್ಬಾತನ ಹೆಸರು : ಪಟ್ಟಣ ವಸನ್ತರ ಮಂಚಯ್ಯನು ಇಪ್ಪತ್ತಅಯ್ದರು ಕಜಿಯ ×× ಬೆಸಕೆ . . . ದ್ರವ್ಯಮ ಕೊಟ್ಟು (ಎಕ. XIV. ತಿರುಮ. ೨೦೪-೭ ; ಕಾ. 933). [ಮಂಚ ? + ಅಯ್ಯ$_1$]

**ಮಂಚಲ್**, ಮಂಚಲು$_1$ (ನಾ). ೧. ಮೋಸ ; ವಂಚನೆ : ಎನಗಿಂದಿಂಗಾಜುತಿಂಗಳ್ ಸಮನಿಸಿದಪುದಿಲ್ಲೆಲ್ಲಿಯುಂ ಬಂದಿ ಮಂಚಲ್ ಖನನಪ್ರಾರಂಭ ಚೌರ್ಯಾದಿಗಳನಶನವಿಹಾಗಳ್ ಚತುರ್ವರ್ಗಸರಂ ಭೋಜನಮಾತ್ರಂ ಬಂದೊಡಂದಾಂ ಸಕಲವಿಭವಮಂ ಪೆತ್ತಂ (ಸುಕುಮಾ. ೩-೦೬) ; ಕೈಮಾಡಕಂ ವಂಚನೆ ಮಿಕ್ಕ ಮಾನಸಿಕೆ ಮಂಚಂ ಮಂಚಲಂ ತಾನೆ ತಾಂ ಗೆಡೆವಳ್ ಪತ್ತದರಾರೊ ಧೂರ್ತವಿಟಹೃತ್ಸಂತಾಪೆಯುಂ ತೇಪೆಯಂ (ಲೀಲಾವ. ೨-೯೬) ; ಮಂಚಲ್ ಕಳವಾಜಿಡಿ ಭಯಸಂಚಯಮೆಂಬವಟಿ ಪೆಸರುಮಿಲ್ಲಾ ನಾಡೊಳ್ (ಪುಶ್ಪಕು. ೨-೫). ೨. ಬಂಧನ ; ಸೆರೆ : 'ಮಂಚಲ್ವಿಡಿ' ಪರಾ. **ಮಂಚಲು$_1$** : ೧. ಮಂಚಲು ಲಂಚಂ ಕಳವು ಓಸುಗ್ ಪಸವು ಪಜಿವಜಿವಲಸೊಲಸು ಕುತ್ತುಮಿಲ್ಲಾ ನಾಡೊಳ್ (ಅಭ್ಯಾಪು. ೦೯೦ ಪ್ರಯೋ).

ಮಂಚಲಂಬಿಡಿ = (ಅಲಂ) ಆಕರ್ಷಿಸು ; ಸೆಳೆ ; ಮರುಳುಮಾಡು: ನಡೆ ನೋಟ್ಟರ ಕಣ್ಗಳನೆಯ್ದೆ ಮಂಚಲಂಬಿಡಿವ ವಿಳಾಸಿನೀನಿವಹಮೋಜು ದುಮಿತು ಕರೇಣುಜಾಲಮಂ (ಶಾಂತೀಶ್ವ. ೦೦-೭೭).

**ಮಂಚಲು$_1$** 'ಮಂಚಲ್' ನೋ.

**ಮಂಚಲು$_2$** 'ಮಂಚಿಲ್' ನೋ.

**ಮಂಚಲ್ವಿಡಿ** 'ಮಂಚಲ್ವಿಡಿ' ನೋ.

**ಮಂಚಲ್ವಿಡಿ**, ಮಂಚಲ್ವಿಡಿ (ಕ್ರಿ). ೧. ಸೆರೆ ಹಿಡಿ ; ಬಂಧಿಸು : ಕಳ್ಳಂ ಬನ್ದಿಕಾಜಿಂ ಮಂಚಲ್ವಿಡಿವವಂ ಪಗೆವಂ ಪೊಲ್ಲಮಾನಸನನ್ತಿವರಂ . . . ಇಜಿದೊಡೆ ದಣ್ಡಂ ದೋಷಮಿಲ್ಲ (ಎಕ. XV. ೭೯-೨೫; 1050). **ಮಂಚಲ್ಪಿಡಿ** : ೨. (ಅಲಂ) ಆಕರ್ಷಿಸು ; ಸೆಳೆ : ಅಂಚೆಯ ನಡೆಯನಿದಂ ತನತೆನುತುಂ ಮಂಚಲ್ಪಿಡಿವೊಳ್ನಡೆ ರತಿರೂಪಂ ಲಂಚಂಗೊಂಡ ವಿಲಾಸದಿನೆಸೆದತ್ತಾ ರಾಣೀವಾಸ (ಜಯುಕಾ. ೨-೨). [ಮಂಚಲ್ + ಪಿಡಿ$_1$]

**ಮಂಚಾಲಿ** 'ಮಂಚಾಳ' ನೋ.

**ಮಂಚಾಳ**, ಮಂಚಾಲಿ (ನಾ). ಒಂದು ಊರಿನ ಹೆಸರು : P ರಾಘವೇಂದ್ರಸ್ವಾಮಿಗಳ ಬೃಂದಾವನವಿರುವ ಈಗಿನ ಮಂತ್ರಾಲಯ : ಶ್ರೀಮತುಕಣ್ಣಂ ಸಿಂದವಾಡಿಸಾಯಿರಮುಮನಾಳುತ್ತುಮಂಚಾಳ ಕೊಟ್ಟು ಸ್ಥಿತಿ ಅವುದೆನ್ದೊಡೆ (ಸೌಇಇ. IX-i, ೫೫-೯ ; 893). **ಮಂಚಾಲಿ** : ಶ್ರೀರಾಘವೇಂದ್ರರು ಮಂತ್ರಾಲಯ(ಮಂಚಾಲಿ)ವನ್ನು ಸೇರಿದೊಡನೆಯೇ ಮೊದಲು ಕುಲದೇವಿ ಮಂಚಾಲಮ್ಮನ ದರ್ಶನ ಮಾಡಿದರು (ಕಥಾ. ೩೫೮). [ ? ]

**ಮಂಚಿಕೆ** (ನಾ). ೧. ಪೀಠ ; ಆಸನ. ೨. ದನಕರುಗಳಿಗೆ ನೀರು ಹಾಕುವ ಹರಿದೋಣಿ, – ತೊಟ್ಟಿ. ೩. ಕಾಲುಮಣೆ : 'ಅಡೆಮಂಚಿಕೆ' ಪರಾ. ೪. ಹೊಲ, ಗದ್ದೆಗಳನ್ನು ಕಾಯಲು ಎತ್ತರವಾಗಿ ಕಟ್ಟಿರುವ ಬಿದಿರು ಮೊದಲಾದುವುಗಳಿಂದ ಮಾಡಿರುವ ಅಟ್ಟಣೆ : (೬).

[ಸಂ. ಮಂಚಿಕಾ]

**ಮಂಚಿಗೆ**, ಮಂಜಿಗೆ, ಮೆಂಚಿಗೆ (ನಾ). = ಮಂಚಿಕೆ ೪ : ಆ ಸಸಿ . . . ಫಲಕ್ಕೆ ಬರಲಾಗಿ ಚತುರ್ವಿಧಮೆಂಬ ಮಂಚಿಗೆಯಂ ಮೆಟ್ಟಿ (ಸರ್ವಾವ. ೦೦೭-೫೬೮); ಆವಿತತಿ ತೆನೆಗೆ ಪಾಯ್ದು ಪುಮರವಣೆಯಿಂದೇದದಂ ನಿವಾರಿವ ಬಗೆಯಿಂ ನೆರಪಿದ ಕಲ್ಲುಂ ಕವಣೆಯುಮಿರೆ ಮಂಚಿಗೆಯಂತಿರೆಸೆದುವಟ್ಟಳೆಪಲವುಂ (ಪಾರ್ಶ್ವಪು. ೩-೦೩೩) ; ಕಯ್ಯೆತ್ತಿ ಕೊಡಲಿಲ್ಲ ಮೆಯ್ಯು ದಂಡಿಸಲಿಲ್ಲ ಅಯ್ಯಗಳೆಲ್ಲ ಹರಿಯಲ್ಕೆ ಕೈಲಾಸ ಕಯ್ಯ ಮಂಚಿಗೆ[ಪಾಠಾಂ. ಕೆ]ಯ (ಸರ್ವಜ್ಞ. ೬೮೯) ; ಮರಸು ಕುಳಿತಿರೆ ಮರದ ತುದಿಮಂಚಿಗೆಯ ಮೇಲೆ (ತ್ರಿಲಾವಿ. ೩೧೦-೨೮೨). **ಮಂಜಿಗೆ** : ಹೊಲದಲ್ಲಿ ಹಾಕಿದ ಎತ್ತರವಾದ ಮಂಜಿಗೆಯ ಮೇಲೆ ನಿಂತುಕೊಂಡು ಒಕ್ಕಲಿಗರು ಕವಣೆಯಿಂದ ಕಲ್ಲುಗಳನ್ನು ಹೊಡೆಯುತ್ತಾ ಹಕ್ಕಿಗಳನ್ನು ಹಾರಿಸಹತ್ತಿದ್ದಾರೆ (ಮುಂಜುಳ. ೨). **ಮೆಂಚಿಗೆ**: ಪಂಚಬೀಜಗಳೆಲ್ಲ ಸಂಚರಿಸಿ ಹೊಲದೊಳಗೆ ಮೆಂಚಿಗೆಯ ನಿಲವುಬೆಳೆ ಬಂದು ನಗುತಿರಲು (ಕರತ. ೮೬); ಮೇಘದ ಮೆಂಚಿಗೆಯನ್ನೇರಿ ಮಿಂಚಿನ ಕವಣೆಯೊಳಾಲಿಯ ಕಲ್ಲನು ತೂರುವಳು (ಕರುಶ್ರಾ. ೦೭-೦).

[ < ಸಂ. ಮಂಚಿಕಾ]

**ಮಂಚಿಗೆಗಲ್** (ನಾ). (ದಾರಿಯಲ್ಲಿ ಹೊರೆಯನ್ನು ಇಳಿಸಲು ಮಾಡಿರುವ) ಎತ್ತರ ಹಾಗೂ ಸಪಾಟಾದ ಕಲ್ಲು : ನವಿಲೆಯೂಜಿಂ ಪಡುವಣ ಮಂಚಿಗೆಗಲ್ಲಿಂ ಪಡುವ ಹಳ್ಳದಿಂ ಮೂಡಲಿಬ್ಬರ್ ×× ವಾಡವಾಗಿ ಯಿಕ್ಕಿದ ಕೆಯಿ ಮತ್ತರು ೫೦ (ಸೌಇಇ. IX-i, ೨೨೬-೦೩ ; 1133). [ಮಂಚಿಗೆ + ಕಲ್$_3$]

**ಮಂಚಿಟಿಕೆ** 'ಮಂಜಿಟ್ಟಿಗೆ' ನೋ.

**ಮಂಚಿಟಿಗೆ** 'ಮಂಜಿಟ್ಟಿಗೆ' ನೋ.

**ಮಂಚಿಪತ್ರ** (ನಾ). (ಸುವಾಸನೆಯ ಎಲೆಗಳನ್ನು ಹೊಂದಿರುವ) ಒಂದು ಬಗೆಯ ಸಸ್ಯ ಮತ್ತು ಅದರ ಎಲೆ : ಮಂಚಿಪತ್ರವನ್ನು ಧರಿಸುವುದರಿಂದ ದೇವತೆಗಳಿಗೂ ಸೂರ್ಯನಿಗೂ ಪ್ರಿಯವಾಗಿ . . . ಸುಖವನ್ನುಂಟುಮಾಡುವುದು (ಸಕವ್ಯ. ೪೫). [ಸಂ.]

**ಮಂಚಿಪತ್ರೆ** (ನಾ). = ಮಂಚಿಪತ್ರ : "ದೇವಾರ್ಹಂ – ಮಂಚಿ(ಜಿ) ಪತ್ರೆ" (೬೫೦. ೭೯). [ಸಂ. ಮಂಚಿಪತ್ರ]

**ಮಂಚಿಲ್**, ಮಂಚಲು$_2$ (ನಾ). (ಬಟ್ಟೆಯಿಂದ ಮಾಡಿದ, ತೊಟ್ಟಿಲನ್ನು ಹೋಲುವ) ಡೋಲಿಯಂತಹ ಒಂದು ಬಗೆಯ ಸಾಧನ : ಅವರು ಬಂದ ಬಳಿಕ ಕಂಬಳಿಯ ಒಂದು ಮಂಚಿಲ್ ತಯಾರಿಸಿದರು (ಕೃ.ಚಿಕಾ. ೨೭೦). **ಮಂಚಲು$_2$** : ಭೋಯಿಗಳಲ್ಲದೆ . . . ಅಂಬಿಗರು ಮಂಚಲುಗಳನ್ನು ಹೊರುವ ಹೋರೆಯನ್ನು ಮಾಡುವರು (ಕಥಾಗ. ೫೭).
[← ತುಳು. ಮಂಚಿಲ್]

**ಮಂಜಟಿ** 'ಮಂಜಿಟೆ' ನೋ.

**ಮಂಜಟ್ಟೆ** 'ಮಂಜಿಟೆ' ನೋ.

**ಮಂಜಡಿ$_1$** 'ಮಂಜಿಟೆ' ನೋ.

**ಮಂಜಡಿ$_2$** 'ಮಂಜಾಡಿ' ನೋ.

**ಮಂಜತ್ತಿ** 'ಮಂಜಿಟೆ' ನೋ.

**ಮಂಜನ$_1$**, ಮಜ್ಜಣ (ನಾ). ೧. ಪವಿತ್ರವಾದ ನೀರು, ಹಾಲು ಮುಂತಾದ ದ್ರವವನ್ನು ಎರೆಯುವುದು ; ಅಭಿಷೇಕ : ರಾಮಾನುಜಾಚಾರ್ಯ್ಯರಿಗೆ ನಿತ್ಯ ತಿರುಮಂಜನಕೆ . . . ತಿರುನಾಳಿಗೆ ಗ ೬೦ ವರಹ (ಎಕ. XIV, ಶ್ರೀರಂಗ. ೨೫೯-೦೦ ; 1154) ; ಜಲದಿಂದ ಗಂಧದಿಂದಕ್ಷತೆಯಿಂ ಕಮ್ಮಲರಿಂದ ಚರು ದೀಪದಿಂದ ಕಲುಕುಮಂಜನದಿಂದ ಫಲದಿಂದಲಾ ಭೂಲಲನೇಶ ಜಿನರನರ್ಚಿಸಿದ (ರಾಮಪಿ. ೦೯-೨೨). **ಮಜ್ಜಣ** : ೨. ಸ್ನಾನ; ವಿವಾಹ ; ಜಳಕ : ಮಜ್ಜಣದ ಈ ಮನೆಯು ಎದ್ದು ನೋಡೋಣ ಬಾರ (೬೦೬ಕಗ. ೦೫). [< ಪ್ರಾ. ಮಜ್ಜಣ./ಸಂ. ಮಜ್ಜನ]

**ಮಂಜನ$_2$** (ನಾ). (ಹಲ್ಲು, ಮುಖ ಮುಂತಾದುವನ್ನು) ಉಜ್ಜಿ ಸ್ವಚ್ಛಗೊಳಿಸಲು ಉಪಯೋಗಿಸುವ ವಸ್ತು : ' ದಂತಮಂಜನ ' ಪರಾ. [<ಪ್ರಾ. ಮಜ್ಜಣ./ಸಂ. ಮಾರ್ಜನ./ಹಿಂ. ಮರಾ. ಮಂಜನ್]

**ಮಂಜರ**, ಮಂಜರೆ (ನಾ). ಬೆಕ್ಕು ; ಮಾರ್ಜಾಲ: "ಮಂಜರವೆನೆ ಮಾರ್ಜಾಲಂ" (ಶಾಠ. ೦೩) ; ನಿನ್ನ ಮನದಲ್ಲಿ ಮಾಯಾಮಂಜರ ಕೊಲುವರೆ ನಿನ್ನ ಹಂಜರ ಕಾವುದೆ ಕೂಡಲಸಂಗಮದೇವನಲ್ಲದೆ (ಬಸವ. ೦೬೩); ಪಂಜರವ ಗಿಣಿ ನೀವು ನಿಮಗೀ ಮಂಜರನ ಪಡಿಮುಖಕೆ ನಿಲುವುದು ನೀತಿಯೇ (ಕುವ್ಯಾ.ಕ. ೦೦-೬೨). **ಮಂಜರೆ:** ಪಂಜರದೊಳು ತೇಜಃಪುಂಜ ರಂಜಿಸುತಿರಲು ಅಂಜನಸಿದ್ಧ ಶಿವಯೋಗಿ ತಾ ಕುಟಿಲ ಮಂಜರೆಯ ಕಾದ (ಸರ್ವಜ್ಞ. ೪೯೫). [ <ಪ್ರಾ. ಮಂಜರ./ಸಂ. ಮಾರ್ಜಾರ, ಮಾರ್ಜಾಲ]

**ಮಂಜರದೃಷ್ಟಿ** (ನಾ). ೧. ಬೆಕ್ಕಿನ ಕಣ್ಣು. ೨. (ಅಲಂ) ಸೂಕ್ಷ್ಮವಾದ ದೃಷ್ಟಿ : ಮಂಜರದೃಷ್ಟಿಯಲ್ಲಿ ತೋರುವ ಇಂದ್ರಿಯಭೋಗಂಗಳು ಮಹೇಂದ್ರಜಾಲವಾಗಿಪ್ಪವಯ್ಯ (ಸಿದ್ಧೇಶ. ೦೦೯-೩೩೯).
[ಮಂಜರ + ದೃಷ್ಟಿ]

**ಮಂಜರನೇತ್ರ** (ನಾ). = ಮಂಜರದೃಷ್ಟಿ ೨ : ಮಂಜರನೇತ್ರದಲ್ಲಿ ಉಭಯಚಂದ್ರರ ಕಾಬುವರಾರೋ (ಅಪಸಂ. ೫೭-೨೪೦).
[ಮಂಜರ + ನೇತ್ರ]

**ಮಂಜರಿ$_1$**, ಮಂಜಲಿ (ನಾ). ಹೆಣ್ಣುಬೆಕ್ಕು : ಮಾತನಾಡುವ ಪಂಜರದ ವಿಹಂಗನದೊಂದು ಕೋಡಗ ನುಂಗಿತ್ತು ನುಂಗಿದ ಕೋಡಗವ ಮಂಜರಿ ತಿಂದಿತ್ತು (ಪೋಲೀಪಡಾ. ೨೫೫-೮೦೬). **ಮಂಜಲಿ** : ಮಂಜಲಿ[ಶಾಶಾ.ಡಳಿ]ಯ ಮಜಿ ಮಿಡುಕಿದರೆ ಕಳವಳಿಸುವುದೆ ಕಲಿಸಿಂಹೆ (ಕುವ್ಯಾ.ಸ. ೬-೯೬).
[ಮಂಜರ + –ಇ$_2$]

**ಮಂಜರಿ$_2$** (ನಾ). ೧. ಗೊಂಚಲು ; ಗುಚ್ಛ : "ವಲ್ಲರೀ, ಮಂಜರೀ –ಈ ೨ ಮರದ ಗೋಂಚಲ್" (ಪರಾಯು. ೩೦-೩೦) ; ಲಲಾಟದೊಳ್ ತುಜುಗಿದ ಸಿಂಧುವಾರ ನವಮಂಜರಿಯೊಬಿನೆಗಂ . . . ಘನಘರ್ಮಬಿಂದುಗಳ್ ಪೊಜಮಡೆ (ಆದಿಪು. ೬೯) ; ಗುರುಭರವಂ ಪಡೆಯುದವೋಲ್ ಪಂಮಳೆಮತಿಬಹಳಮಾಗಿ ಮಂಜರಿಗೆ (ಪುಲ್ಲಿಕ. ೦೦-೦೩೦). ೨. ಕಾವು ; ತೊಟ್ಟು. ೩. ಮುತ್ತು ; ಮುಕ್ತಾಫಲ. ೪. ಒಂದು ಬಗೆಯ ಮರ ; ತಿಲಕವೃಕ್ಷ. ೫. ಕುದುರೆಯ ಶರೀರದ ಒಂದು ಭಾಗ ; ಮೊಳಕಾಲು ; ಜಾನು : ಸ್ತುರಿಯಿಂ ಕೆಟಗಕ್ಕುಂ ಮಂಜರಿಯೆಂಬಾ ಪೆಸರ್ (ಅಶ್ವಶಾ. ೯-೫೫). 'ಜಾನುಮಂಜರಿ' ಪರಾ. [ಸಂ. ಮಂಜರೀ]

**ಮಂಜರಿಕೆ** (ನಾ). = ಮಂಜರಿ$_2$ ೧ : "ಮಂಜರಿಗೆ – ಮಂಜರಿಕಾ = ಹೂಗೊಂಚಲು" (ಕರ್ನಾಕೋ. ೩೩). [ಸಂ. ಮಂಜರಿಕಾ]

**ಮಂಜರಿಗ** (ನಾ). ಒಂದು ಬಗೆಯ ಪಕ್ಷಿ : ಗಳಿಗಳಂಟಿಗೆ ಸಿಲುಕಿದವು ಪಿಕ್ಕಳಿಗ ಪಿಂಜರ ಮಂಜರಿಗ ಮಿಂಬುಲಿಗ ಲಾವುಗೆ ಸರಲೆ ಬುಜುಲಿಗಳೆಚ್ಚ ಮಿಂಚೆಯುಲಿ (ತೊರವ. ೩-೩-೦೯). [ ? ]

**ಮಂಜರಿಗೆ**, ಮಂಜಳಿಕೆ (ನಾ). = ಮಂಜರಿ$_2$ ೧ : " ಮಂಜರಿಗೆ – ಮಂಜರಿಕಾ=ಹೂಗೊಂಚಲು" (ಕರ್ನಾಕೋ. ೩೩). **ಮಂಜಳಿಕೆ** : ಆಭರಣಂಗಳ ಪೆಟ್ಟಿಗೆಯುಂ ತರಿಸಿ ರತ್ನಮಂಜ[ಶಾಠಂ. ಜು]ಳಿಕೆಯ ಮುದ್ರಿಸಿದ ಮುಚ್ಚಳಂ ತೆಗೆದು ಮಾಣಿಕದ ಕರ್ಣಾವತಂಸಮಂ ಕಿವಿಗಳವಡಿಸಿ (ಬಸವ. ೬-೦೭).
[< ಸಂ. ಮಂಜರಿಕಾ]

**ಮಂಜರಿಸು** (ಕ್ರಿ). ಗೊಂಚಲಾಗು ; ಗುಚ್ಛವಾಗು : ಕೆಂಪಿನ ಕಂಪಿನ ಮಂಜರಿಯಂತೆ ಮಂಜರಿಸಿ ಮಗಮಗಿಸಿ ಮರಿಪುಗೊಂಡು ಸೊಬಗು ಕೊಂಬುಗೋಡರಿಸಿನದ ಕೊಂಬುಗಳಂ ಸೊಪ್ಪುಗಟ್ಟಿ (ಆಶಾವ. ೦೨-೬೭ ಪ).
[ಮಂಜರಿ$_2$ + –ಇಸು$_3$]

**ಮಂಜರೆ** 'ಮಂಜರ' ನೋ.

**ಮಂಜಲಿ** 'ಮಂಜರಿ$_1$' ನೋ.

**ಮಂಜಳ್**, ಮಂಜಳ$_1$ (ನಾ). ೧. ಅರಿಸಿನದ ಗಿಡ ಮತ್ತು ಅದರಿಂದ ತಯಾರಾಗುವ ಅರಿಸಿನ : 'ಮಂಜಳೆಣ್ಣೆ' ಪರಾ. ೨. ಅರಿಸಿನದ ಮೇಲೆ ವಿಧಿಸುತ್ತಿದ್ದ ಒಂದು ಬಗೆಯ ತೆರಿಗೆ : ತೆನ್ನಮರಂ ಕೊಳಂದು ವಾಳೈ ಕುರುಂಬು ಮಂಜಳ್ (ಎಪಿ. XVIII, ೦೯೨-೯೫ ; 1434). **ಮಂಜಳ$_1$** : ೧. 'ಕಳಿಮಂಜಳ' ಪರಾ.
[ದೇ.॥ ತಮಿ. ಮಞ್ಞಳ್ ; ಮಲ. ಮಞ್ಞಳ್ ; ತುಳು. ಮಂಜಲ್, ಮಂಜಳ್ ; ಕೊಡ. ಮಂಜ]

**ಮಂಜಳ$_1$** 'ಮಂಜಳ್' ನೋ.

**ಮಂಜಳ$_2$** 'ಮಂಜಾಡಿ' ನೋ.

**ಮಂಜಳಿಕೆ** 'ಮಂಜರಿಗೆ' ನೋ.

**ಮಂಜಳೆಣ್ಣೆ** (ನಾ). ಮದುವೆ ಮುಂತಾದ ಶುಭಸಂದರ್ಭಗಳಲ್ಲಿ ಮಾಡುವ ಅರಿಸಿನೆಣ್ಣೆಯೆಂಬ ವಿಧಿ : ಪಳಿ ಮಂಜಳೆಣ್ಣೆಯುಂ ದೊಡ್ಡಂಗೆ ದೂಳಿಸಿದರೆಳೆವೆಣ್ಣಳ್ (ಕಾಲೂರ. ೦೪೭-೩೨೦). [ಮಂಜಳ್ + ಎಣ್ಣೆ]

**ಮಂಜಳ್ಗೊಣಿ** (ನಾ). ಒಂದು ಪ್ರದೇಶದ ಹೆಸರು (?): ಅಂತೆ ಮಂದು ಮಂಜಳ್ಗೊಣಿವ ಬಾಚಿಕೊಟ್ಟಿವ ಸಂದು . . . ಕೂಡಿತ್ತು ಸೀಮೆ (ಪ್ರಮಲಾ. ೦೯೨೭, ೦೦೬-೯೯; 726). [ ? ]

**ಮಂಜಾಡಿ**, ಮಂಜಡಿ$_2$, ಮಂಜಳ$_2$ (ನಾ). ಒಂದು ಬಗೆಯ ಮರ ಮತ್ತು ಅದರ ಹೂವು ಹಾಗೂ ಕೆಂಪುಬಣ್ಣದ ಬೀಜವುಳ್ಳ ಅದರ ಕಾಯಿ ; P ಗುಲಗಂಜಿಯಂತೆ ಈ ಬೀಜವನ್ನು ವಜ್ರ, ಚಿನ್ನ, ಬೆಳ್ಳಿಗಳನ್ನು ತೂಗಲು ಅಕ್ಕಸಾಲಿಗರು ಉಪಯೋಗಿಸುತ್ತಿದ್ದರು : ವಜ್ರವ ತೂಗುವುದು ಮಂಜಾ[ಶಾಠಂ. ಜ]ಡಿ ೧ಕ್ಕೆ ತೂಕಂ (ಪ್ರಪಚಾ. ಅಮರಂಗ. ೦-೦೬ ೬೮೪); ಓರಂತೆ ಬಂಧರ್ಕಳಾಯನೆ ಸದಾ ಮೇಣ್ ಗುಂಜೆ ಮಂಜಾಡಿಗಳ್ ಸರಿಯಪ್ಪಂತೆಯನರ್ಘ್ಯಮಪ್ಪ ಗುಣಿಯೊಳ್ (ಶಾಪಕ. ೫೭) ; ಮಂಜಾಡಿ ಇರವಂತಿಗೆ ವನಸಂಪಿಗೆ ಸಣ್ಣಮಲ್ಲಿಗೆ ಮೊಲ್ಲೆ

ಪಾರಿಜಾತ . . . ಮೊದಲಾದ ಪುಷ್ಪಂಗಳಂ (ಶಾಶೀಪು. ೯೭-೨); ಮಂಜಡ್ಡಿ: "ಮಂಜಟ್ಟಿ, ಮಂಜಡಿ, ಆನೆಗುಲಗಂಜಿ" (ಸಸ್ಯಕೋ. ೬); ಹವಳಕ್ಕೆ ಕಣಜುಗಟ್ಟಳೆ . . . ಧ್ರುವದಿಂ ಮಂ(ಜ)ಡಿ ವಜ್ರಕೆ (ಶ್ವಶಾ. ಅನುಬಂಧ ೦-೩-೦೫). ಮಂಜಳ್ಳ$_2$ : ಎನಿತು ಪಸುರೊಳ್ ತೆರಮದೆನಿತು ಮಂಜಳ ಕೆಂಪದೆನಿತು ನಾಲಗೆ ನುಡಿಯಿಂದಿರ್ಪ ಪೊಗರೆನಿತು ? (ಕಾಬೂರ. ೦೦೯-೨೫೦).

[ದೇ.॥ ತಮಿ. ಮಂಜ್ಜಾಟಿ; ಮಲ. ಮಂಞ್ಞಾಡಿ; ತುಳು. ಮಂಜೊಟ್ಟಿ, ಮಂಜೆಟ್ಟಿ, ಮಂಜೋಟಿ ; ತೆಲು. ಮಂಜಾಡಿ, ಮಂಜಾಳಿ]

ಮಂಜಾಣ 'ಮಂಜಾಳ' ನೋ.

ಮಂಜಾಳ, ಮಂಜಾಣ (ನಾ) ೧. (ಉಕ) ತಿಳಿಗೇಡಿತನ (?): ಥೇ ನಿಮ್ಮ ಮಂಜಾಳಾ ಹೋಗಲಿ! ಅದನ್ನು ನೀವು ಕೇಳಿಯೇ ತೀರಬೇಕು (ಸಂವರ್ಧ. ೦೬); ಅಯ್ಯ! ನನ ಮಂಜಾಳ ಹೋಗಲಿ. ಮರೆತೇ ಬಿಟ್ಟಿದ್ದನಲ್ಲ (ಪೋಪಾ. ೦೨); ಥೂ ನಿನ್ನ ಮಂಜಾಳ ಹೋಗಲಿ, ಹುಟ್ಟಿಸಿದ ದೇವರು ಹುಲ್ಲ ಮೇಯಿಸತಾನೇನೋ ? (ತುಡುಗು. ೫೦). ಮಂಜಾಣ : ೨. ಮಬ್ಬು ; ಮಸುಕು (?) : ಈ ಮಲ್ನಾಡಿನ ಪ್ರದೇಶದಲ್ಲಿ ಮಂಜಾಣಾದ ಅಡವಿಯು ಹಬ್ಬಿರುತ್ತದೆ (ಕಾಗ. ೫). [ ? ]

ಮಂಜಿ$_1$ (ನಾ). (ಕರಾ) ಉದ್ದವಾದ ನಾಡದೋಣಿ ; ಒಂದೇ ಒಂದು ಪಟಸ್ತಂಭವುಳ್ಳ ದೋಣಿ: ತಾನು ಮಂಜಿಯನ್ನೇರಿ ಹೊನ್ನಹಳ್ಳಿಗೆ ಪಯಣವನ್ನು ಕೈಗೊಂಡ (ಪಾಶುತ. ೬); ದೀವಿಯಿಂದ ಮಂಜಿಗಳು ಬರಲಿಕ್ಕಾಯಿತು (ಪುಶವು. ೪೮); ಮಂಜಿಯೊಡೆದರೆ ಗುಂಜಿಗಿಂತ ಕಡೆಯೇ ? (ಗಾದೆ). 'ಮಂಚವೆ' ಪರ್ಯಾ.

[ದೇ.॥ ತಮಿ. ಮಂಞ್ಜಿ; ಮಲ. ಮಂಞ್ಜಿ; ತುಳು. ಮಂಜಿ]

ಮಂಜಿ$_2$ (ನಾ). ೧. (ಕತ್ತಾಳೆ. ಬಾಳೆ ಮೊದಲಾದುವುಗಳ) ನಾರು : ನೂಲು : ಅಲರಿಂದೆ ಮಂಜಿ ಬಿಂದುಜಿ ತಲೆಗೇಜದ ತೆಜದ (ಉದ್ಭಟ. ೫-೦೦೬). ೨. ನಾರಿನ ಗಿಡ ; ಸೆಣಬು : ಮಂಜಿಯು ಗೆಡ್ಡೆ, ಪಂಚಲವಣ, ಸರ್ಜಕ್ಷಾರ, ಯವಕ್ಷಾರ, ಇಂಗು . . . ಎಸಗದ ಬೇರು. ಇಷ್ಟನೂ ಮುಂಡುಗಳ್ಳಿಯ ಹಾಲಲ್ಲಿ ಮರ್ದಿಸಿ (ವೈದ್ಯಸಾ. I. ೩೨೨).

[ದೇ.॥ ತಮಿ. ಮಂಞ್ಜಿ : ತುಳು. ಮಂಜಿ]

ಮಂಜಿಗೆ 'ಮಂಚಿಗೆ' ನೋ.

ಮಂಜಿಟಿ 'ಮಂಜಿಟೆ' ನೋ.

ಮಂಜಿಟಿಗೆ 'ಮಂಜಿಟ್ಟಿಗೆ' ನೋ.

ಮಂಜಿಟೆ, ಮಂಜಟಿ, ಮಂಜಟ್ಟಿ, ಮಂಜಡ್ಡಿ$_1$, ಮಂಜತ್ತಿ, ಮಂಜಿಟಿ, ಮಂಜಿಟ್ಟಿ, ಮಂಜಿಷ್ಟೆ, ಮಂಜೂಠಿ (ನಾ). ೧. (ಬಟ್ಟೆಗಳಿಗೆ ಹಾಕಲು ಗಾಢವಾದ ಕೆಂಪುಬಣ್ಣವನ್ನು ತಯಾರಿಸಲು ಮತ್ತು ಔಷಧವನ್ನಾಗಿ ಉಪಯೋಗಿಸುವ) ಒಂದು ಬಗೆಯ ಸಸ್ಯ: "ಮಂಜಿಟೆಯು ಮಂಜಿಷ್ಠೆ" (ಕುಂಗರಾ. ೯೨-೩೬); ಯಷ್ಟಿಮಧುಕಂ ಮಧು ಮಂಜಿಟೆ ತುಪ್ಪವಿಂತಿವಂ ಕಲಸಿ ಹಯಕ್ಕೆ ಕೊಟ್ಟು (ಅಶ್ವಶಾ. ೦೦-೨೪). ಮಂಜಟಿ : ೧. "ಮಂಜಿಟಿ (ಮಂಜಟಿ) = ಮಂಜಿಷ್ಠಾ" (ತದ್ಭಕೋ. ೩೩). ಮಂಜಟ್ಟಿ : ೧. ಹುಣಸೆ, ಕಂಚವಾಳ, ಮಂಜಟ್ಟಿ, ಗೌಳಿಗೆ (ಸಪ್ಪುಸು. ೨೩೬). ಮಂಜಡ್ಡಿ$_1$ : ೧. ಮಂಜತ್ತಿ, ಮಂಜಡಿ, ಮಂಜಟ್ಟಿ, ದೊಡ್ಡಗುಲಗಂಜಿ, ಆನೆಗುಲಗಂಜಿ (ವೃಕಿಣ. ೩-೩೮). ಮಂಜತ್ತಿ : ೧. "ಮಂಜತ್ತಿ, ಮಂಜಡಿ. . . ಆನೆಗುಲಗಂಜಿ" (ಸಸ್ಯಕೋ. ೬). ಮಂಜಿಟಿ : ೧. "ಮಂಜಿಟಿ (ಮಂಜಟಿ) = ಮಂಜಿಷ್ಠಾ" (ತದ್ಭಕೋ. ೩೨).

ಮಂಜಿಟ್ಟಿ : ೧. ಮಂಜತ್ತಿ, ಮಂಜಡಿ, ಮಂಜಿಟ್ಟಿ, ದೊಡ್ಡಗುಲಗಂಜಿ, ಆನೆಗುಲಗಂಜಿ (ವೃಕಿಣ. ೩-೩೬). ಮಂಜಿಷ್ಟೆ : ೧. "ರಕ್ತಾಂಗೀ—ಮಂಜಿಷ್ಟೆ" (೬೩ಧಿ. ೦೩೪); ಮಂಜಿಷ್ಟೆ ಎಳ್ಳು ಅಮೃತವಳ್ಳಿಯೆಲೆಗಳು ಮಣಿಸಿಲೆಯಿವುಗಳಂ ಅರದು (ಸೌಗಂಧಿ. ೪೩೬-೧). ೨. ನಸುಕೆಂಪು ಬಣ್ಣದ ಮೂತ್ರ ಹೋಗುವ ಒಂದು ಬಗೆಯ ರೋಗ : ರಕ್ತ ವರ್ಣವಾಗಿ ಹೋಗುವ ಮೂತ್ರವನ್ನು ಮಂಜಿಷ್ಟೆ ಎಂಬುವರು (೬ವೈಶಿ. ೦೫೩). ಮಂಜೂಠಿ : ೧. ಮಂಜೂಠಿ. (ಮಂಜಿಷ್ಠ) ಎತ್ತರವಾಗಿ ಬೆಳೆಯುತ್ತದೆ . . . ಇದರಿಂದ ಕೆಂಪುಬಣ್ಣವಾಗುತ್ತದೆ (ಶಬಗ. ೯೬).

[<ಪ್ರಾ. ಮಂಜಿಟ್ಠಾ ./ ಸಂ. ಮಂಜಿಷ್ಠಾ]

ಮಂಜಿಟ್ಟಿಗೆ, ಮಂಚಟಿಕೆ, ಮಂಚಿಟಿಕೆ, ಮಂಚಿಟಿಗೆ, ಮಂಜಿಟಿಗೆ, ಮಂಜಿಡಿಕೆ$_2$, ಮಂಜಿಷ್ಟಿಗೆ (ನಾ). ೧.=ಮಂಜಿಟೆ ೧ : ಮಂಜಿಷ್ಠಕ—ಮಂಜಿಟ್ಟಿಗೆ, ಮಂಜಿಟಗೆ (ಕಮುವ. ೨೬೩ ಶ್ರಜೋ). ಮಂಚಟಿಕೆ : ೧. "ಮಂಜಿಷ್ಠಾ—ಮಂಚಟಿಕೆ" (ಬಾತಟೀ. ೨-೨-೫೦ ಪ). ಮಂಚಿಟಿಕೆ : ೨. ಕೆಂಪುಬಣ್ಣದ ಸೀರೆ ಮೊದಲಾದ ವಸ್ತ್ರ : ಪೊಸತಹ ಮಂಚಿಟಿಕೆ ಗುಜ್ಜರಿ ದುಕೂಲಗಳ ಅಳವಡಿಸಿ . . . ಶ್ರೀಕೃಷ್ಣನೋಲಗಸಾಲೆ ರಂಜಿಸಿತು (ಕೋಗರು. ೩-೩೬). ಮಂಚಿಟಿಗೆ : ೨. ಕರಮೆಸೆವ ಕಾವಿ ಮಂಚಿ [ಪಾಠಾಂ. ಜ]ಟಿಗೆ ತೋಪುಗಳಿಂದೆ ಭರದೆ ಬಾಸಣಿಸಿಸುವ ಬಲ್ಲಾಳದಟ್ಟಿ ಯೊಳಗುರುಮೋದದಿಂ ಬರ್ಪವರ್ ಕೆಲಬರ್ (ಅರಾತ. ೫-೯-೨೩); ಮಂಚಿ [ಪಾಠಾಂ. ಜ]ಟಿಗೆ ಪಲ್ಲಕ್ಕಿ ನಲ್ಲೂರ ತೆಳಗಾವಿಯೆಂಬಾ ಸೀರೆಗಳಂ ಸತಿಯ ರೊಲೆಯೊಳುರುಪಿದರಾಗಳ್ (ತ್ರಿಶಿವ. ೦೦-೨೮). ಮಂಜಿಟಿಗೆ : ೧. ಮತ್ತಗಜಮಂ ಪಾಯ್ದು ಪೊಯ್ಯೆ ಪದನಖಂಗಳೊಳ್ ಪತ್ತಿ ಜಗುಬ್ಬ ನೆತ್ತರಿಂ ಮಹೀತಳಂ ಮಂಜಿಟಿಗೆಯ [ಕೆಂಬಣ್ಣಮಂ ಪ]ತ್ತಿದಂತಾಗುತ್ತಿರೆ ಪೋದ ಕೇಸರಿಗಳ ಕೇಸಡಿವಜ್ಜೆಗಳುಮಂ (ಕುಸುಮಾ. ೦೯-೨೪೮); ಅರಿಸಿನ . . . ಮಂಜಿಟಿಗೆಯುಂ . . . ಘೃತದಿಂದಮುಟ್ಟುದುಮನುಂಜನಲೇಪನ ನಸ್ಯ ಪಾನದಿಂ ಪರಿಕಿಸೆ (೬ಜುರ. ೯-೦೯). ೨. ಪೊಸ ಪಸಗೆಯ ಮಂಜಿಟಿಗೆ [ಪಾಠಾಂ. ಕೆ]ಯ ಮಿಸುಗುವ ದೋರಿಯದ ಪಟಿಯ ಪುಲ್ಲಿಯ ಸೊಂಪಂ ಪಸರಿಸಿದ ಪಕ್ಕರೆಕ್ಕೆಗಳೆಸೆದಿರ್ದುವು ತರದಿನೊಡ್ಡಿ ದೆರಡುಂ ಪಡೆಯೊಳ್ (ಶಬ್ದಶಾ. ೨೬೦). ಮಂಜಿಡಿಕೆ$_2$ : ೨. ಚೀನದ ಬರಹದ ಸೀರೆ ೩ ಮಂಜಿಡಿಕೆ ಸೀರೆ ೨ (ಸೌಇಂ. IX–ii, ೫೪೬–೩; 1532). ಮಂಜಿಷ್ಟಿಗೆ : ೧. "ಮಂಜಿಷ್ಠಾ, ವಿಕಸಾ . . . ಯೋಜನವಲ್ಲೀ—ಈ ೯ ಮಂಜಿಷ್ಟಿಗೆ" (ಶಾಪಾ. ೦೦೯) ; ವರಮಂಜಿಷ್ಟಿಗೆ ದೇವದಾರು ಮಧುಕಂ . . . ಸರಿ ಗೊಂಡಾಜ್ಯದೊಳೀಯೆ (೬ಪುರ. ೯-೩). [ < ಸಂ. ಮಂಜಿಷ್ಠಕ ? ]

ಮಂಜಿಟ್ಟೆ 'ಮಂಜಿಟೆ' ನೋ.

ಮಂಜಿಡಿ (ಕ್ರಿ). ಮಂಜಿನಿಂದ ಮುಚ್ಚಿಕೊಂಡಿರು,–ಅವೃತವಾಗಿರು : ರಂಜಿಸುವ ಮೊಗ್ಗುಗಳು ಮಂಜಿಡಿದ ತುಟಿ ತೆರೆದು ನೋಡುತಿಹವು (ಕಾಪು. ೨೬-೨). [ಮಂಜು$_1$ + ಇಡಿ$_2$]

ಮಂಜಿಡಿಕೆ$_1$ (ನಾ). ೧. ಮಂಜು ಕವಿಯುವುದು,–ಆವರಿಸುವುದು,–ತುಂಬಿರುವುದು. ೨. (ಅಲಂ) ಮಂಕು ಕವಿಯುವುದು ; ವಿವೇಕ ವಿಲ್ಲದಂತಾಗುವುದು : ಭಯರಸಗದ್ದುಗೆಯ ಮಂಜಿಡಿಕೆಯುವದವರಿದ್ದು ಫಲವೇನೆನುತ ಕೈ ಮಾಡಿದನು ಕಲಿಕರ್ಣ (ಕುವ್ಯಾಕ. ೦೯-೨೫).

[ಮಂಜು$_1$ + ಇಡಿಕೆ]

ಮಂಜಿಡಿಕೆ$_2$ 'ಮಂಜಿಟ್ಟಿಗೆ' ನೋ.

ಮಂಜಿಪತ್ರೆ, ಮಂಜುಪತ್ರೆ (ನಾ). = ಮಂಚಿಪತ್ರ : "ಮಂಜಪರ್ಣಂ—ಮಂಜಿಪತ್ರೆ" (೬ಶಧಿ. ೦೦೯). ಮಂಜುಪತ್ರೆ : ಮಂಜುಪತ್ರೆಸೊಪ್ಪನ್ನು ಕುಟ್ಟಿ ಪಾವುರಸವಂ ತೆಗೆದುಕೊಳ್ಳಲು ಶ್ಲೇಷ್ಮ, ಉದರಶೂಲೆ ಸಹ ಮಾಣ್ಗುಂ (ಸಕವೈ. ೨೦೬). [ < ಸಂ. ಮಂಚಿಪತ್ರ ]

ಮಂಜಿಮ (ನಾ). ಸೊಬಗು ; ಸೊಗಸು ; ಸೌಂದರ್ಯ : ಕಮಳ ದಳಾಯತೇಕ್ಷಣರುಚಿಪ್ರಸರಂ ಭಸಿತತ್ರಿಪುಂಡ್ರಮಂಜಿಮಯುತಪಾಲಮಾ ಲಲಿತಕುಂಡಳಮಂಡಿತಗಂಡಮಂಡಳಂ (ರಾಜಶೇ. ೦೪-೬೪).

[ಸಂ. ಮಂಜಿಮನ್]

**ಮಂಜಿರ** (ನಾ). ೧. ಒಂದು ಬಗೆಯ ಪದ್ಯಜಾತಿ : ಸರಸಮಂಜಿರ ವೆಂಟುಕಂದಂಗಳೈನೂಱು ವಿರಚಿಸಿದ ಕೃತಿಯು ಮೂಪತ್ತಾಱು (ಗುರುತ್ತಾ. ೦೨-೬೬). ೨. [ಛಂದ] ಒಂದು ಬಗೆಯ ಛಂದಸ್ಸು.
[ < ಪ್ರಾ. ಮಂಜೀರ./ ಸಂ. ಮಂಜೀರಾ ]

**ಮಂಜಿಷ್ಟಿಗೆ** 'ಮಂಜಿಟ್ಟಿಗೆ' ನೋ.

**ಮಂಜಿಷ್ಟೆ** 'ಮಂಜಿಟೆ' ನೋ.

**ಮಂಜಿಷ್ಠ** (ಗು). ೧. ಪ್ರಕಾಶಮಾನವಾದ ಕೆಂಬಣ್ಣದ; ಗಾಢವಾದ ಕೆಂಬಣ್ಣದ : ವಜ್ರಪಟ್ಟ ಮಂಜಿಷ್ಠಪಟ್ಟ ಕ್ರಮಮನು ಪೊಸದೇಸಿಕಾಱತನ ಮಿಗಲು ಗಳಿಗಳಲು ಜೋಡಿಸಿ (ಸಿದ್ಧರಾ. ೬-೫೬). (ನಾ). ೨. ಗಾಢವಾದ ಕೆಂಬಣ್ಣ ; ಪ್ರಕಾಶಮಾನವಾದ ಕೆಂಬಣ್ಣ : ಆತ್ಮನ ಇರವು ಶ್ವೇತವೋ ಪರಿತವೋ ಕಪೋತವೋ ಮಂಜಿಷ್ಠವೋ ಕೃಷ್ಣವೋ (ಪೋಲಿಕಪ. ೮೯-೩೫೩). ೩. = ಮಂಜಿಟೆ ೧ : "ಕಾಡುಬಳ್ಳಿ, ಸೋಮಲತೆ, ಸಿರಗತ್ತಿ, ಮಂಜಿಷ್ಠ . . . ಯೋಜನವಲ್ಲಿ "(ಚನ್ನ.ಶಿ. ೦೦೪) ; ಸೋಮಲತೆ, ಮಂಜಿಷ್ಠ, ಸಿರಗತ್ತಿ (ಪ್ರಕಿಗಿ. ೬೭-೦೩೬೦). [ಸಂ.]

**ಮಂಜಿಷ್ಠಾರಾಗ** (ನಾ). ೧. ಮಂಜಿಷ್ಠೆಯ ಬಣ್ಣ. ೨. ವಿಪ್ರಲಂಭ ಶೃಂಗಾರದ ಪೂರ್ವರಾಗದಲ್ಲಿರುವ ಮೂರು ವಿಧಗಳಲ್ಲಿ ಒಂದು ; ಮೊದಲಿನಿಂದ ಕೊನೆಯವರೆಗೂ ಅತಿಶಯವಾಗಿಯೇ ಇರುವ ಪ್ರೀತಿ ; ಶಾಶ್ವತವಾದ ಪ್ರೀತಿ. 'ನೀಲೀರಾಗ' ಪರಾ. [ಸಂ.]

**ಮಂಜಿಷ್ಠೆ** (ನಾ). ೧. = ಮಂಜಿಟೆ ೧ : " ಮಂಜಿಟೆಯು ಮಂಜಿಷ್ಠೆ " (ಶಬ್ದಗಾ. ೪೨-೬೮) ; " ರಕ್ತಯಷ್ಟಿ...ಮಂಜಿಷ್ಠೆ " (ಓಷಧಿ. ೦೩೪) ; ಧಾತಕೀಕುಸುಮ, ಲೋಧ್ರ, ಮಂಜಿಷ್ಠೆ, ಲಾಮಂಚ, ಶ್ರೀಗಂಧ ಇಷ್ಟನ್ನೂ ಸಮಾಂಶವಾಗಿ ನೀರಿಂದ ಅರೆದು ಮೈಗೆ ಲೇಪಿಸಲು ಸಲಗ್ರಹಗಳು ಹರವಹವು (ವೈದ್ಯಶಾ. II, ೦೩) ; ಮಂಜಿಷ್ಠೆ ಕೋಲುಮುರುಕಿನ ಚಕ್ಕೆ(ರಿ . . . ಕುರುಟಿಗೆಗಳನು ಪರಿಹರಿಸುವದು (ದ್ರವ್ಯಕ್ಷಕೂ. ೯-೦೦). ೨. ಮಂಜಿಷ್ಠೆಯ ಬಣ್ಣ ; ಕೆಂಪುಬಣ್ಣ : ನಿಡಿದೇಹ ಸ್ವರ್ಣಚ್ಛಾಯೆ ಮಂಜಿಷ್ಠೆ ಬಾಯ್ದಿಡುವ ಪೆಣ್ಣೀನ ತಂದೆಪಳು . . . ಬೇಗಡಿಗೆಯು ಮಾತ ಹೇಳಿವಳು (ಪೋಹಕ. ೦೦-೬೭). ೩. ಕೆಂಪುಬಣ್ಣದ ಬಟ್ಟೆ : " ದಸರಿ ಗಬ್ಬುಳ ನೀಲಿಗಂಧ . . . ಮಂಜಿಷ್ಠ ದೇವಾಂಗಮೆಂದು ಪಟಭೇದಮಕ್ಕುಂ " (ಶಬ್ದಗಾ. ೦೦೦-೨೬). [ಸಂ. ಮಂಜಿಷ್ಠಾ]

**ಮಂಜೀರ** (ನಾ). ೧. ಕಾಲಿಗೆ ಹಾಕಿಕೊಳ್ಳುವ ಆಭರಣ ; ನೂಪುರ : " ಶಿಂಜಿನಿ ನೂಪುರಮಂದುಗೆ ಮಂಜೀರಂ ಹಂಸಕಂ " (ಚನ್ನ.ನಿ. ೬೬-೬) ; ಲಲಸಾಮಂಜೀರನಾದಕ್ಕೆಳಸುವ ಕಳಹಂಸಂಗಳಂ ಕಂಡು (ಶಾಂತಿಪು. ೩೩೯) ; ಮಂಜೀರನ್ನನಿಯುಂ ಸುಕಂಕಣಝಣತ್ಕಾರಂಗಳುಂ . . . ಪೊಣ್ಮೆ (ಜಗರಪು. ೬-೦೪೩). ೨. ಕಡೆಗೋಲಿನ ಹಗ್ಗವನ್ನು ಕಟ್ಟುವ ಕಂಬ. [ಸಂ.]

**ಮಂಜೀರಕ** (ನಾ).= ಮಂಜೀರ ೧ : ಸುರಗಣಿಕಾಗುಂಜನ್ಮಣಿರತ್ನಾಮಣಿ ಮಂಜೀರಕ ಮಂಜುಸಿಂಜಿತಂ ರಂಜಿಸುಗುಂ (ಅಜಿಪು. ೬-೦೬) ; ಪದದಿಂ ಮಂಜೀರಕರವಮೊಗೆಯೆ ಮಗಂ ಜಗುಟುತ್ತೇಂದೊ ತೊಟ್ಟಿಲಂ ಪಟ್ಟೊದೆವಾ (ಪುಷ್ಪಪು. ೩-೯೦). [ಸಂ.]

**ಮಂಜೀರಿಕೆ** (ನಾ). = ಮಂಜೀರ ೧ : ಏಂ ಕಡೆದುದೋ ಕರ್ಣಾಮೃತಾ ಸಾರಮುಂ ವಿವಿಧಾತೋದ್ಯಲಯಾನುಗಂ ಸುರಸತೀಮಂಜೀರಿಕಾಶಿಂಜಿತಂ (ಶಂಬಾಪಪ. ೦೬-೯೬) ; ಮಂಜೀರಿಕಾಪುಂಜಮಂಜುಶಿಂಜಾನಮೊಪ್ಪವು ವಿನಮೊದೆದ ಪದದೊಳ್ (ಶಂದ್ರಪ್ರಕೃ. ೦-೦೦೬). [ಸಂ. ಮಂಜೀರಿಕಾ]

**ಮಂಜು₁** (ನಾ). ೧. ವಾಯುಮಂಡಲದಲ್ಲಿರುವ ನೀರಿನ ಕಣ, – ನೀರಿನ ಆವಿರೂಪ ; ಇಬ್ಬನಿ ; ಕಾವಳ : ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ ಮಂಜುವೋಲ್ ಲೋಚಣ ಬೇಗಂ ಪಿರಿಗುಂ ಶ್ರೀರೂಪಲೀಲಾಧನವಿಭವ ಮಹಾರಾಶಿಗಳ್ಲಿಲ್ಲವಾಗ್ಗ್ರಂ (ಎಕ. II, ೯೯-೦; ಸಂ. 700) ; ಕಾಂಡಪಟ ದಂತಿಪರ್ವನ್ನೆಗಂ ಮಾಡಿ ಮಂಜುನಲಂಪಟ್ಟುಱನೀಯೆ ಕೂಡುವೆಡೆಯೊಳ್ ಜ್ಞಾನಸ್ವರೂಪಂ ಮಹಾಮುನಿಪಂ ಪುಟ್ಟಿದಂ (ಶಂಕಶಾ. ೦-೬೯): ದೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿದು (ಧರ್ಮಾಮೃ. ೨-೬೯). ೨. ತಂಪು ; ಶೈತ್ಯ : 'ಮಂಜುವೆಳಗ' ಪರಾ. ೩. ಮುಸುಕು ; ಆಚ್ಛಾದನೆ ; ತೆರೆ : ಮುಂದೆ ಠುಂಗಿಡುವ ನಂಜಿನ ಮಂಜುಮುತ್ತರಿಸಿ ನಡೆದನು (ಸಿದ್ಧರಾ. ೩-೯); ಕರ್ಪೂರಕಿಂಜಲ್ಕಪರಾಗದಿಂ ಮಂಜು ಮಸಗೆ ಸಜೆಯಾಯ್ತೆಂದಂಜುವ ಚಕ್ರವಾಕಂಗಳಿಂ (ಧಕಕು. ೪-೫೩ ಪ). ೪. ವಾತಾವರಣದಲ್ಲಿರುವ ಘನೀಕೃತವಾದ ಆವಿಯ ಬಿಳಿಯ ಪಲ್ಲೆ,– ಪದರ; ಹಿಮ: "ಪ್ರಾಲೇಯಂ, ಅವಶ್ಯಾಯಃ . . . ನೀಹಾರಃ – ಈ ೮. ಮಂಜು" (ಶಬ್ದಮ. ೦೦೬-೨೪). 'ಮಂಜುಪೆಟ್ಟು' ಪರಾ. ೫. (ದೃಷ್ಟಿಯ) ಮಬ್ಬು; ಮಂಸಕು : 'ಮಂಜುಗಣ್ಣು' ಪರಾ. ೬. ವಿವೇಚನೆಯಿಲ್ಲದಿರುವಿಕೆ ; ಅಜ್ಞಾನ; ಬೌದ್ಧಿಕವಾದ ಜಡತೆ : ಮಾಮರದೊಳಗೊಂದು ಮಾಗಿದ ಮಂಜು ಕವಿದರೆ ಹೂಮಿಡಿಫಲಂಗಳು ಉದುರವಿಸ್ನೇಂತೋ ಮಂಜಿನ ರಸವನುಂಡು ಫಲ ನಿಮಿರ್ದು ಬೆಳೆದರೆ ಆ ಫಲವ ನಾನು ಮುಟ್ಟೆನು (ಅಕಶಂ. ೬೬-೩೬೬).

ಮಂಜುಮುಂಜು (ದ್ವಿರುಕ್ತಿ): ಅವರಿಗೆ ಕಣ್ಣು ಮಂಜುಮಂಜಾಗುತ್ತಿವೆಯಂತೆ (ಕೂಂ). ಮಂಜಾಗು= ೧. ಮಂಜಿನಿಂದ ಕೂಡು ; ಮಂಜು ಉಂಟಾಗು : ಮಂಡಲ ಪರ್ವವಾಗಿ(ರೆ)ಕೊಂಡು ಮಂಜಾಗಿ ಕೊಂಡೊಡು . . . ಪೊಲ್ಲ ವಸುಧೆಯೊಳ್ (ಅಭಿಪು. ೩-೦). ೨. ತಂಪಾಗು; ಶೀತಲವಾಗು : ವಿಶ್ವಾಸದಿಂ ಶಿವನೇ ಎಂದು ಜಪಿಸುತ್ತಿರ್ದಂಗೆ . . . ಬೆಂಕಿ ಮಂಜಾದಪುದು (ಶಾಕಕ್ಕ. ೩೦೦). ೩. ಮಸುಕಾಗು ; ಮಬ್ಬಾಗು : ಎಲ್ಲವೂ ಮಂಜಾಯಿತು (ಮಂಕುತು. ೫೯) ; ನಕ್ಕ ಹಾಕಿ ಹಾಕಿ ಮಂಜಾದ ಕಣ್ಣು (ಶುಹಾಂ. ೬). ಮಂಜಿನ ಗಡ್ಡೆ=ಮಂಜುಗಡ್ಡೆ : ದಟ್ಟ ಮಂಜಿನ ಗಡ್ಡೆ ಹೆಪ್ಪುಗಟ್ಟಿರೆ (ಅಹಕೀ. ೨-೩). ಮಂಜಿನ ನೀರು=ಇಬ್ಬನಿಯ ಜಲ : ಮಂಜಿನ ನೀರನಕ್ಕಟ ನಂಬಿ ಬಿತ್ತುವೆನೆಂಬನುಂ . . . ಮರುಳನಲ್ಲನೇ (ಧರ್ಮಾಮೃ. ೯-೨೨) ; ಮಳೆನೀರು ಬಿಟ್ಟು ಮಂಜಿನ ನೀರಿಗೆ ಕೈ ಒಡ್ಡಿದ ಹಾಗೆ (ಗಾದೆ). ಮಂಜಿನ ಹನಿ= ಇಬ್ಬನಿಯ ಹನಿ; ಕಾವಳದ ಬಿಂದು : ಕುಳಿರ್ವ ಮಂಜಿನ ಪನಿಗಳಿಂ ಕಮಲಸಂಕುಲಂ. . . ಸಲೆ ಕಿಡುವವೊಲ್ (ಶೇಷಿ. ೬-೩). ಮಂಜಿನ ಮಟಿ, ಮಂಜಿನ ಮಳೆ=ಇಬ್ಬನಿಯ ಧಾರೆ.– ವೃಷ್ಟಿ: ಅಂತಿಸುವ ಚಾಪಧರನೀರದನಿಕರವ ಶರಾಸಾರಮಂ ಮಂಜಿನ ಮಟಿಯನಹಿಮಕಿರಣನಾತ್ಮಕಿರಣಂಗಳಿಂ ಕಿಡಿಸುವಂತೆ (ಶಾಂತಿಪು. ೯-೦೪ ವ) ; ಮುಸುಕಿದ ಮಂಜಿನ ಮಟಿಯೊಳ್ ನಸುದೋಱುವ ಶೋಣಕಮಲ [ಯುಗ]ದಂತೆ (ಕುಸುಮಪಪ. ೦೦-೫೦) ; ಮಂಜಿನ ಮಳೆಗೆ ಕುಲಗಿರಿ ಕರಗುವುದೆ (ಕುಮಾರವ್ಯಾ. ೨-೫೪); ಕಾಲಾಗ್ನಿ ಮಂಜಿನ ಮಳೆಗೆ ಮೈದೆಗೆವುದೆ (ಶೂರರಾ. ೫-೫-೨೬). ಮಂಜಿನ ಸರಿ = ಮಂಜಿನ ಮಟಿ : ಅರಳದಂಬುಜವನಕೆ ಮಂಜಿನ ಸರಿಯು ಸುರಿವಂದದಲಿ (ಕುಮಾ.ಕ. ೦೪-೫೦).

[ದೇ.॥ ತಮಿ. ಮಞ್ಞು; ಮಲ. ಮಞ್ಞು; ತುಳು. ಮಂಜು, ಮೈಂದ ; ಕೊಡ. ಮಂಜ ; ತೆಲು. ಮಂಚು]

**ಮಂಜು₂** (ಗು). ೧. ಚೆಲುವಾದ; ರಮಣೀಯವಾದ; ಮನೋಹರವಾದ : ಮಂಜು ಮಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ ಸದಾನ ಭೋಗಂ (ಕೈಂಚಿಪ. ೨೮-೬೨). 'ಮಂಜುಮ' ಹೋ. ೨. ಇಂಪಾದ ; ಮಧುರವಾದ : ಸೊಗಯಿಸಿಮುದು ಕಣ್ಗಳುಂಬಮೋರಂತೆಡೆಯಾಡುವ ಯುವತಿಜನದ ಮಂಜೀರಗುಂಜನ್ಮಂಜುಸಿನದಂ (ಸುಕುಮಪ. ೦೦-೯೯ ರಗಳೆ); ಕಳಕಾಂಚೀಮಂಜುಮಂಜೀರಾವಳಯಾರವಂ ಪೊಣ್ಮೆ (ಜಗಂ. ೫-೬೮). (ನಾ). ೩. ಸುಂದರವಾಗಿರುವುದು ; ಸೊಗಸಾಗಿರುವುದು : "ಪ್ರಾಗ್ರ್ಯ,

ಪ್ರಾಗ್ರ್ಯಹರಂ . . . ಮಂಜು, ಪ್ರಿಯಂ . . . ಪೇಶಲಂ—ಈ ೨೯ ಒಳ್ಳಿತು" (ಶಬ್ದಾಯು. ೦೦೯-೯); "ಕಮನಂ ಶುಭಂ. . . ಮಂಜು . . . ಪ್ರಪೇಕಮೆನೆ ಸೌಮ್ಯಕ್ಕೆ ನಾಮಮಕ್ಕುಂ" (ಕಂಗರಾ. ೦೨೬-೨) : ಸನ್ನುತಚಂದ್ರ(ದ)ನಂ ದಿನಪನೀಕ್ಷಿಸೆ ಚಾರಿ ಕುಜಂ ನಿರೀಕ್ಷಿಸಲ್ ಬಿನ್ನಣಮೇನೋ ಶುಕ್ರ ಶನಿ ನೋಡಿದನ(ರ)ಪ್ಪೊಡೆ ಮಂಜು (ಜಲ್ಪಮ. ೯-೩). [ಸಂ.]

**ಮಂಜು₃** (ನಾ). ಒಂದು ಬಗೆಯ ಸಸ್ಯ : ಅನಾನಸ್, ಕರಡೀಕಣ್ಣಿನ ಗಿಡ, ಮಂಜು, ಈರುಳ್ಳಿ, ಬೆಳ್ಳುಳ್ಳಿ (ಪಪ್ಪು. ೨೩೮). 'ಮಂಜ್ಜಿ' ಪರಾ. [?]

**ಮಂಜುಗಡ್ಡೆ** (ನಾ). ಗಡ್ಡೆಗಟ್ಟಿದ ನೀರು; ಬರ್ಫ; ನೀರ್ಗಲ್ಲು : ನಮ್ಮ ಮನಸ್ಸನ್ನು ಸಾಗರದಲ್ಲಿ ತೇಲುವ ಮಂಜುಗಡ್ಡೆಗೆ ಹೋಲಿಸಬಹುದು (ಶಿಕ್ಷರ. ೬೬೯) ; ಶೀತವಲಯಗಳಲ್ಲಿ ಮಳೆಗೆ ಬದಲಾಗಿ ಮಂಜುಗಡ್ಡೆಗಳು ಬೀಳುತ್ತವೆ (ಕೂಗೋಳ. ೦೭). [ಮಂಜು₁ + ಗಡ್ಡೆ]

**ಮಂಜುಗಣ್ಣು** (ನಾ). ೧. ಮಬ್ಬಾದ ಕಣ್ಣು; ಚೆನ್ನಾಗಿ ಕಾಣದಿರುವ ಕಣ್ಣು : ಬೇರಂ ಕಕ್ಕೆಯ ಎಲೆಯ ರಸದಿಂದ ಹಚ್ಚಲು ಮಂಜುಗಣ್ಣು ಮಾಣ್ಗುಂ (ಶಿವ್ಯಶಿ. ೦೩೩) ; ನೀರುಗಣ್ಣು ಕಾಚಗಣ್ಣು ಮಂಜುಗಣ್ಣು (ಬಳಸ. ೩೨೮). ೨. (ಅಲಂ) ವಿವೇಚನಾಶಕ್ತಿಯಿಲ್ಲದ ಬುದ್ಧಿ: ಹಿಂದಿನ ಮಂಜುಗಣ್ಣಿನಿಂದ, ಅಂಧಶ್ರದ್ಧೆಯಿಂದ . . . ನಮ್ಮ ಕನ್ನಡದ ಬಯಲಿಗೆ ತಿದ್ದಿಕೊಂಡ ಕಾಲುವೆಗಳನ್ನೇ ಮತ್ತೆ ನಾವು ಈಗ ತಿದ್ದ ಬೇಕಾಗಿಲ್ಲ (ಳ್ಪಜಾ. ೩೦). [ಮಂಜು₁ + ಕಣ್ಣು (< ಕಣ್)]

**ಮಂಜುಗತ್ತಲು** 'ಮಂಜುಗತ್ತಲೆ' ನೋ.

**ಮಂಜುಗತ್ತಲೆ**, ಮಂಜುಗತ್ತಲು (ನಾ). ೧. ಮಬ್ಬುಗತ್ತಲೆ; ಮಸುಕಾದ ಕತ್ತಲೆ; ನಸುಗತ್ತಲೆ : ಹಗಲು ಮುಸುಗಿತು ಮಂಜುಗತ್ತಲೆ ಗಗನದೊಳು . . . ಉದಯಾದ್ರಿಗೆ ತರಣಿ ಬಪ ಸಮಯದಲಿ ಪ್ರತಿಯಿನ ನುದಯಿಸಿದನು (ಏಕಪ್ರ. ೬೦-೧೨). **ಮಂಜುಗತ್ತಲು** : ೨. ಹಿಮದಿಂದ ಆವೃತವಾದ ಕತ್ತಲು ; ಮಂಜಿನಿಂದ ತುಂಬಿರುವ ಕತ್ತಲೆ : ತಂಗು ದಾಣದ ಮುಂಭಾಗದಲ್ಲಿ ನೇತುಹಾಕಿದ್ದ ದೀಪಗಳ ಬೆಳಕು ಆ ಮಂಜು ಗತ್ತಲಲ್ಲಿಯೂ ಬರಬರುತ್ತ ಸುಸ್ಪಷ್ಟವಾಯಿತು (ಭೂಸರು. ೩೦೬).

[ಮಂಜು₁ + ಕತ್ತಲೆ₁ (< ಕಟ್ಟಲೆ)]

**ಮಂಜುಗಾಲ** (ನಾ). ಮಂಜು ಸುರಿಯುವ ಕಾಲ ; ಚಳಿಗಾಲ : "ಐಶಿಲಿ ಹೈಮಂತಂ ಮಂಜುಗಾಲಂ" (ಶಕುಶಿ. ೬೬). [ಮಂಜು₁ + ಕಾಲ]

**ಮಂಜುಗಾಳಿ** (ನಾ). ಹಿಮದಿಂದ ಕೂಡಿರುವ ಗಾಳಿ : ಅಸಯೊಂದು ಎಂದು ಮನದಿ ಪೊಳೆವುದಂದೆ ಮಂಜುಗಾಳಿ ಬೀಸಿ ಬಂದು ಬಂದ ವೋಳಕ ಬೇರ ಕಿತ್ತು ಅಂದೆ ಅಂತೆ ತೂರಿಕೊಂಡು ಪೋಪುದೆತ್ತಲೊ (ಏಸೀಗೀ. ೬೯-೩).

[ಮಂಜು₁ + ಗಾಳಿ₁]

**ಮಂಜುಗಿರಿ** (ನಾ). ಹಿಮಾಲಯಪರ್ವತ ; ಹಿಮಾಚಲ : ಆ ಮಂಜುಗಿರಿ ಬಳಿಯಲ್ಲಿ ಪುಟ್ಟಿದ ಸಿರಿಯ ಸೋಮಕುಲಪಾವನೀ ಶರಣಸಂಜೀವನಿ (ಶೀಶರಮ. ೨೭). [ಮಂಜು₁ + ಗಿರಿ₁]

**ಮಂಜುಗ್ಗೆಯ** (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : "ಜೊನ್ನೊಡಲಂ . . . ಮಂಜುಗ್ಗೆಯುಂ . . . ತಿಂಗಳ್ — ಈ ೨೦ ಚಂದ್ರನ ಪೆಸರ್" (ಕಶಶಾ. ೯೬-೨೩) ; "ಚಳಿಗದಿರಂ . . . ಐಕಿಲ್ವೆಳಗಂ ತಣ್ಣಿದಿರ ಮಂಜುಗ್ಗೆಯುಂ ಚಂದ್ರಂ" (ಕಬಿಕಂ. ೪೩).

[ಮಂಜು₁ + ಕೈ₂ (< ಕೆಯ್₂) + –ಅ₇]

**ಮಂಜುಘೋಷ** (ನಾ). ಇಂಪಾದ ಶಬ್ದ : ಮಂಜುಘೋಷಮುಂ ಬೀಜಾವ ಸಿಂಜಿನೀವರಮಣಿಪಂಚಿಗಳಿಂಬಿವಚೀಂದದೊಂದು ಚಿತ್ರೇಚಿಃರೆ ಭೋಗಿ ಭಾಮಿನಿಯರಾ ಮಮವಿ ಪೊಜಿಮಟ್ಟರಜ್ಜಿಯುಂ (ಜಗಿಶ. ೩-೦೦೨). [ಸಂ.]

**ಮಂಜುಘೋಷೆ** (ನಾ). ೧. ಇಂಪಾದ ಧ್ವನಿಯುಳ್ಳವಳು. ೨. ಒಬ್ಬ ಅಪ್ಸರೆಯ ಹೆಸರು : ಘೃತಾಚೀ, ಮೇನಕಾ . . . ಮಂಜುಘೋಷಾ– ಇವರು ಮೊದಲಾದವರ್ ಅಚ್ಚರಸಿಯರ್ (ಶಬ್ದಾಯು. ೦೩-೬೬) : ಮೇನಕೆ . . . ಮಂಜುಘೋಷೆಯೆಂಬೀ ನೆಗಬ್ದಗ್ಗದಚ್ಚರಿಯರಚ್ಚರಿಯಪ್ಪ ವಿಳಾಸಮುಂ ನಿಜನಟನೈಕದೇಶಮೆ ತಱುಂಬಿದುದು (ಭಕ್ತ. ೨-೬೭).

[ಸಂ.ಮಂಜುಘೋಷಾ]

**ಮಂಜುಪತ್ರಿ** 'ಮಂಜಿಪತ್ರಿ' ನೋ.

**ಮಂಜುಬೆಟ್ಟ** 'ಮಂಜುವೆಟ್ಟ' ನೋ.

**ಮಂಜುಭಾಷಿಣಿ** (ನಾ). ೧. ಇಂಪಾಗಿ ಮಾತನಾಡುವವಳು; ಚೆನ್ನಾಗಿ ಮಾತನಾಡುವವಳು. ೨. [ಛಂದ] ಒಂದು ವೃತ್ತದ ಹೆಸರು; ಪ್ರತಿ ಸಾಲಿನಲ್ಲೂ ಹದಿಮೂರಂ ಅಕ್ಷರಗಳಿರುವ ಅತಿಜಗತಿಛಂದಸ್ಸಿಗೆ ಸೇರಿದ ಸಮವೃತ್ತ : ಇರೆ ಮಂಜುಭಾಷಿಣಿ ಸಜಸಜಗಮುಂ (ಛಂದೋ. ೮೨). [ಸಂ. ಮಂಜುಭಾಷಿಣೀ]

**ಮಂಜುಮ** (ಗು). ಸುಂದರವಾದ ; ರಮಣೀಯವಾದ : ಮಂಜುಮ ಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ (ಕೈಲಾಶಾ. ೨೯-೬೨); ಮಂಜಿ ನೊಲ್ ಪಸರಿಸಿದ ಮುಗಿಲ ತೇರಿಂದೊಂದು ಮೂಡಿದುದು ಮಂಜುಮ ಸ್ತ್ರೀಮೂರ್ತಿ (ಶ್ರೀರಾಮಪಟ್ಟಾ. ೨೦೩–೩೦೦). [ಸಂ. ಮಂಜುಮನ್]

**ಮಂಜುಲ**, ಮಂಜುಳ (ಗು). ೧. ಮನೋಹರವಾದ ; ಸೊಬಗಿನಿಂದ ಕೂಡಿದ ; ರಮಣೀಯವಾದ : ಮಂಜುಲವೇಣೀರಮಣೀಯು . . . ವಿಮಲಶ್ರೀಮಜ್ಜನಸ್ಥಾನೆ ಕಣ್ಗೊಳಿಕುಂ ವಾಹಿನಿ ಸೀತೆ ಪೋಲ್ತು ಭಾವನಪ್ರಖ್ಯಾತೆಯುಂ ಸೀತೆಯುಂ (ಕೃಷ್ಣಪು. ೨-೮); ಕಂಜಬಾಂಧವನಸ್ತಮಿಸೆ ಪಡುವಣವೆಣ್ಣು ಮುಂ ಚೇತನಗುಂದಿ ತನ್ನ ಮಂಜುಲ ಬಾಯ ತಂಬುಲ ವುಗುಳ್ದಂತೆ ಸಂಜೆಗೆಂಪೆಸೆದಿರ್ದುದಾಗ (ಪೆಶೀಕಶ. ೦೩-೯). ೨. ಇಂಪಾದ ; ಮಧುರವಾದ : ಸವಿಯಾದ. (ನಾ). ೩. ಚಿತ್ರವರ್ಣ; ಶಬಲವರ್ಣ. ೪. ನೀರಿನ ಬುಗ್ಗೆ ; ಊಟೆ. ೫. ಲತಾಗೃಹ ; ಬಳ್ಳಿಮಾಡ. ೬. ನೀರುಕೋಳಿ. **ಮಂಜುಳ** : ೧. 'ಮಂಜುಳವೆಳಗ' ಪರಾ. ೨. ಶುಕತತಿ . . . ಮಂಜುಳಾರಾವಂ ಪ್ರಕಟಿಸೆ ಪರ್ಬುಗೊಂಡು ಸುಖದಾಡುವುದಲ್ಲಿಯ ಕೆಯ್ಗೊಲಂಗಳೊಳ್ (ಜಗಿ. ೨-೬) ; ಮತ್ತಾರ ಮಂಜುಳಮಧುರಕಂಠದ ವಿಪಂಚೀನಾದಮುಂ ಸವಿಸವಿದು ಕಿವಿ ತಣಿಯುತ್ತೋ ಅವನ್ನಾಲಿಪನ್ನೆಗಮುಂ ಶಾಂತಿಯಿಲ್ಲೆನಗೆ (ಶ್ರೀರಾಮಪಟ್ಟಾ. ೦೬೦-೨೬೩). ೭. ಮನೋಹರವಾದುದು : "ಪ್ರಾಗ್ರ್ಯಂ . . . ಮಂಜುಳಂ, ಹೃದ್ಯಂ, ಹಾರಿ, ಮನೋಹರಂ . . . ಪೇಶಲಂ—ಈ ೨೯ ಒಳ್ಳಿತು" (ಶಬ್ದಾಯು. ೦೦೯-೯) ; ದೃಗುಮನೋಮಂಜುಳದ ಕಂಜಾಳಿಗಳ ಕತುಪರಿಮಳದ ಪಸರದ ಸೊಗಸು ಶೀವಿಶಂ (ಕುಮ್ಮಾ. ೨೩-೦೩); ಬಹುದುಗ್ಗಮನೋಹರಂ, ಬಹುಪಕ್ಷಿ ಮಂಜುಳಂ (ಶ್ರೀರಾಮಪಟ್ಟಾ. ೦೯೩-೯೩೯). [ಸಂ.]

**ಮಂಜುಲಾಸ್ಯ** (ನಾ). ೧. ಚೆಲುವಾದ ಮುಖ ; ಸುಂದರವದನ. ೨. ರಮಣೀಯವಾದ ನಾಟ್ಯ. ೧. ೨ : ಆ ತರುಣಿ . . . ನರ್ತಕಿಯಂತೆ ಮಂಜುಲಾಸ್ಯಮನೋಪ್ಪೆಯುಂ (ರಾಜಶೇ. ೬-೬೦ ಪ).

[ಸಂ. (ಮಂಜುಲ + ಆಸ್ಯ ; ಮಂಜು + ಲಾಸ್ಯ)]

**ಮಂಜುವೆಟ್ಟ**, ಮಂಜುಬೆಟ್ಟ, ಮಂಜುವೆಟ್ಟು (ನಾ). ಮಂಜು ಮುಚ್ಚಿರುವ ಪರ್ವತ ; ಕೈಲಾಸ : ಈಗಳ್ ಸಿವನೆಂಬ ದುಟ್ಟಗೊರವಂ ಮಂಜು ವೆಟ್ಟಮುಂ ಗೊಟ್ಟಂಪಾಡಿ ಕಿತ್ತಡಿಗಳಂ ಮರುಳ್ವಡೆಗಳಂ ಕೂಡಿಕೊಂಡು . . . ಮೆಯ್ಮಱೆದಿರ್ದಂ (ಕಬ್ಬಿಕಾ. ೦೯೩) ; ನೀಜಕ್ ನಿನಗೆ ಸೋತು ವಿರಹದುರಿಯ ತಾಳಲಾಱದೆ ಮಂಜುವೆಟ್ಟವನು ಏಱದನಾ ನಳಕೂಬರನು (ಕುಂಗಾತಾ. ೨೯-೬೨). **ಮಂಜುಬೆಟ್ಟ** : ಮಂಜುಬೆಟ್ಟವನು ಮೀಟು. ಹಂಸ ದ್ವಾರವನು ದಾಟು ಓಡು (ಮೇಘಶಿಮಾ. ೦೩-೭೭). **ಮಂಜುವೆಟ್ಟು** : ತಾಪರೆಯಂ ತೋಱಬಾರದ ಪೊಸಸುಗ್ಗಿಯೆಂದುಸಿರದಾರದು ತನ್ನಯ ಮಂಜುವೆಟ್ಟಿನೊಳ್ (ಕಬ್ಬಿಕಾ. ೦೯೭). [ಮಂಜು₁ + ಬೆಟ್ಟ]

**ಮಂಜುವೆಟ್ಟು** 'ಮಂಜುವೆಟ್ಟು' ನೋ.

**ಮಂಜುವೆಳಗ** (ನಾ). ತಂಪಾದ ಕಾಂತಿಯುಳ್ಳವನು ; ಚಂದ್ರ : "ಮಂಜುವೆಳಗನು ಬೆಳ್ಗದಿರನೈಕಿಲ್ವೆಳಗ ಚಂದಿರನು . . . ಕತ್ತಲೆವಣಿಯು ಶಶಿಯು ನಾಮಂ" (ಕಬ್ಬಿ. ೪೬). [ಮಂಜು$_1$ + ಬೆಳಗು$_2$ + –ಅ$_7$]

**ಮಂಜುಸಿಂಜಿತ** (ನಾ). ಇಂಪಾದ ಶಬ್ದ ; ಮಧುರವಾದ ನಾದ : ಲಂಜಿಕೆಯರ ಗುಂಜನ್ಮಣಿಮಂಜೀರಕ ಮಂಜುಸಿಂಜಿತಂ ರಂಜಿಸಿತೊ (ಅಜಿಪು. ೫-೪೨). [ಸಂ.]

**ಮಂಜುಹುಲ್ಲು** (ನಾ). ಒಂದು ಬಗೆಯ ಹುಲ್ಲು : ಮಂಜುಹುಲ್ಲು, ತಪ್ಪರಿಕೆಹುಲ್ಲು (ವ್ಯಶಿಗ. ೦೪-೨೪೬). [ಮಂಜು$_3$ + ಹುಲ್ಲು ( < ಪುಲ್ )]

**ಮಂಜುಳ** 'ಮಂಜುಲ' ನೋ.

**ಮಂಜುಳತೆ** (ನಾ). ಸೊಗಸು ; ಸೊಬಗು : 'ಮಂಜುಳತೆವಡೆ' ಪರಾ. [ಸಂ. ಮಂಜುಲತಾ]

**ಮಂಜುಳತೆವಡೆ** (ಕ್ರಿ). ಸೊಗಸಾಗು ; ಮನೋಹರವಾಗು : ನಿಳಯು ನಿಳಯುದೊಳು ಮಂಜುಳತೆವಡೆದು ದೀಪಾಳಿ . . . ಸಾಲ್ವಿಡಿದೊಪ್ಪುತ (ಗೌಂದಪು. ೦೬-೦೬). [ಮಂಜುಳತೆ + ಪಡೆ$_1$]

**ಮಂಜುಳವೆಳಗ** (ನಾ). ಮನೋಹರವಾದ ಬೆಳಕುಳ್ಳವನು ; ಚಂದ್ರ : "ಮಂಜುಳವೆಳಗನೆನೆ ಶಶಿ" (ಕಜಿ. ೬೬). [ಮಂಜುಳ ( = ಮಂಜುಲ) + ಬೆಳಗು$_2$ + –ಅ$_7$]

**ಮಂಜುಳಿ** (ನಾ). ವಿಧವಿಧವಾದ ಬಣ್ಣ ; ಚಿತ್ರವರ್ಣ : ಹಸುರು ನಸುಹುರುಮಂಜಿ ಮಂಜುಳಿ ಮಸುತ ಗೌರವ ಮತ್ಸ್ಯಮಾವಪಿ ಮುಸುಲ ಮಲ್ಲಿಗೆ ಕದಡುಚುಕ್ಕೆಗ ಚಿತ್ರಹೇಮಲತೆ ಮಿಸುನಿಚಂಪಕ ನೀಲಪಂಕಜ ಶಶಕಮಂಜರಿ ಹಲವು ವಿಲಸಿತ ಕುಶಲವರ್ಣದ ರಾಜಮೃಗತತಿ ಕಣಾ ಲಾಪುನ್ತು (ಅಂಬಿಕಾ. ೩೩-೩೬).

[ಸಂ. ಮಂಜುಲ. / ತೆಲು. ಮಂಜಿಡಿ]

**ಮಂಜೂತಿ** 'ಮಂಜಿಟಿ' ನೋ.

**ಮಂಜೂರ್** 'ಮಂಜೂರು' ನೋ.

**ಮಂಜೂರಾತಿ** (ನಾ). ಒಪ್ಪಿಗೆ ; ಅಂಗೀಕಾರ ; ಅನುಮೋದನೆ ; ಅನುಮತಿ : ರೆವಿನ್ಯೂಕಮಿಷನರ ಮಂಜೂರಾತಿಯಿಲ್ಲದೆ ಜಾಪತಿ ಮಾಡಲ್ಪಡಕೂಡದು (ಗ್ರಾಕಾನೂ. ೬) ; ೫೦೦ ರೂಪಾಯಿಗೆ ಮೀರಿದ ಕಂಟೆಂಜನ್ಸಿಮೊಬಲಗನ್ನು ಮಂಜೂರಾತಿ ಮಾಡುವ ಹಕ್ಕು ನನ್ನ ಪ್ರಿನ್ಸಿಪಾಲಿಗೂ ಇಲ್ಲ (ಹಸುಹೊ. ೨೨೬). [< ಮಂಜೂರು]

**ಮಂಜೂರಿ** (ನಾ). = ಮಂಜೂರಾತಿ : ಇದಕ್ಕೆ ಸುಬ್ಬೂನ ಮಂಜೂರಿ ಇದೆ (ಧೀಮುಕಾ. ೨೫೦). [← ಹಿಂ. ಮರಾ. ಮಂಜೂರೀ]

**ಮಂಜೂರು, ಮಂಜೂರ್** (ನಾ). = ಮಂಜೂರಾತಿ : ಅವುಗಳನ್ನು ಮಂಜೂರು ಅಥವಾ ತಿದ್ದುಪಡಿ ಮಾಡಿ ಅವರ ಡಿಕ್ರಿಗಳನ್ನು ನೋಡಿ ಅವುಗಳಿಗೆ ತಮ್ಮ ಮೊಹರು ಮಾಡುತ್ತಿದ್ದರು (ಮುಹಾಕಂ. II. ೪೫). **ಮಂಜೂರ್:** ವೈಸರಾಯಿ ವ ಗವರ್ನರ್‌ಜನರಲ್‌ಯುವರಿಂದ ಮಂಜೂರ್ ಮಾಡಲ್ಪಟ್ಟು (ಗ್ರಾಮಾಕ. ೪ ೩೬೦೪).

**ಮಂಜೂರುಮಾಡು** = ಒಪ್ಪಿಗೆ ಕೊಡು ; ಅನುಮೋದಿಸು : ಕೃಷ್ಣರಾಜವಡೆಯರವರು ದಯಮಾಡಿ ಮಂಜೂರುಮಾಡಿರುವ ಕಳಶದ . . . ಪ್ರತಿಷ್ಠೆ ಮಾಡಿರುತ್ತಾರೆ (ವ್ಯಅಂ. ೦೯೩೪. ೨೩-೫ ; 1898) ; ಈ ರಾಜೀನಾಮೆಯನ್ನು ಮಂಜೂರುಮಾಡಬೇಕು (ರಂಗರೊೀ. ೬೦).

[ ←ಅರ. ಹಿಂ. ಮರಾ. ಮಂಜೂರ್ ]

**ಮಂಜೂಷ** (ನಾ). ೧. ಪೆಟ್ಟಿಗೆ ; ಸಂದೂಕ : "ಪೇಟಾ, ಮಂಜೂಷಾ —ಈ ೨ ಪೆಟ್ಟಿಯುಂ" (ಹರಾಯು. ೫೨-೦೫೬) ; ಅಮರೇಂದ್ರೋತ್ತುಂಗ ಮಾತಂಗದ ಬಿದುವಿನ ಮುಕ್ತಾಳಿಯಿಂದಾದ ಮಂಜೂಷವಿದು (ಜಗಾ. ೬-೨೯). ೨. ಊರು ; ಪಟ್ಟಣ. ೩. ಬಿದಿರಿನ ಬುಟ್ಟಿ ; ಮಂಕರಿ. ೪. ಶಿಲೆ ; ಕಲ್ಲು. [ ಸಂ. ಮಂಜೂಷಾ ]

**ಮಂಜೂಷಿಕೆ** (ನಾ). = ಮಂಜೂಷ ೧ : ಭೂಮಿಗೃಹಪ್ರವೇಶಮಂಜೂಷಿಕಾ[ಪಾಠಾಂ. ಮಂಜೂಷಿ] ಜಯಾ[ಪಾಠಾಂ. ಲಾ]ವಗಾಹಾದಿ ರಕ್ಷೋಪಾಯಂಗಳನೇಕಂಗಳಂ ಮಂತ್ರಿಗಣಂ ನುಡಿದು ತೋಱೆ (ಶಾಂತಿಪು. ೬-೨೫ ವ).

[ ಸಂ. ಮಂಜೂಷಿಕಾ ]

**ಮಂಜೂಷೆ** (ನಾ). ೧. = ಮಂಜೂಷ ೧: "ಪಿಟಕಃ, ಪೇಟಕಃ, ೨ ಪೆಟಾರಿಗೆ ಹೆಸರುಗಳು, ಪೇಟಾ, ಮಂಜೂಷಾ ೨ ಮಂದಾಸನದ ಹೆಸರು — ಈ ೪ ಪರ್ಯಾಯಪದಗಳೆಂದು ಕೆಲವರು, ಪೆಟ್ಟಿಗೆ, ಗೌಸಣಿಗೆ" (ಸಿದ್ಧಾಂತಿ. ೩೦೫). ೨. ದೇವತಾವಿಗ್ರಹಗಳನ್ನಿಡುವ ಮರ ಅಥವಾ ಲೋಹದ ಮಂಟಪ ; ಮಂದಾಸನ : "ಪೇಟಾ, ಮಂಜೂಷಾ – ೨ ಮಂದಾಸನದ ಹೆಸರು" (ಸಿದ್ಧಾಂತಿ. ೩೦೫). [ಸಂ. ಮಂಜೂಷಾ]

**ಮಂಟಕೆ** 'ಮೆಂಟಿಕೆ' ನೋ.

**ಮಂಟಗೆ** 'ಮೆಂಟಿಕೆ' ನೋ.

**ಮಂಟಪ**, ಮಂಟಪಮೆ, ಮಂಟಯು, ಮಂಟೆಯು, ಮಂಠೆಯು, ಮಂಡಪ (ನಾ). ೧. (ಹೆದ್ದಾರಿ, ನದೀತೀರ ಮೊದಲಾದ ಕಡೆಗಳಲ್ಲಿ ಜನರ ಉಪಯೋಗಕ್ಕಾಗಿ ನಿರ್ಮಿಸುತ್ತಿದ್ದ) ಸಮತಲವಾದ ಚಾವಣಿಯುಳ್ಳ, ಬಾಗಿಲಿಲ್ಲದ ಚಪ್ಪರದಾಕಾರದ ಕಲ್ಲಿನ ಕಟ್ಟಡ : ಮಂಟಪದಲ್ಲಿ ಕುಳಿತರೂ ಕಂಟಕ ಬಿಡಲಿಲ್ಲ (ಗಾದೆ). ೨. ದೇವಾಲಯಗಳಲ್ಲಿ ಉತ್ಸವಮೂರ್ತಿಯನ್ನು ಕೂರಿಸಿ ಮಾಡುವ ಸಮಾರಂಭಗಳಿಗಾಗಿ ಕಟ್ಟಿರುವ ಕಟ್ಟಡ : ಅಪ್ರತಿಮಂಗಳಪ್ಪ ರೂಪಾರದಿನಾರುಮಂ ಬಗೆಗೊಳಲ್ ಪರಿಶೋಭಿಪ ಮಂಟಪಂಗಳಿಂ . . . ಜಿನರಾಜಗೃಹಂಗಳೊಪ್ಪುಗುಂ (ಸುಕುಮಾ. ೯-೩೮). ೩. ಅರಮನೆ, ರಾಜಭವನ ಮುಂತಾದ ಕಡೆಗಳಲ್ಲಿ ದರ್ಬಾರು ಮೊದಲಾದ ಸಮಾರಂಭಗಳನ್ನು ನಡೆಸಲು ನಿರ್ಮಿಸುತ್ತಿದ್ದ ಸಭಾಸ್ಥಾನ ; ಓಲಗಶಾಲೆ : "ಜನಾಶ್ರಯಂ ಮಂಟಪಾಖ್ಯಂ" (ಮಂಗರಾ. ೫೬-೬) : ನೆಗೆವಗರುಧೂಪಧೂಮದೊಳಮೆಸೆವಾಸ್ಥಾನಮಂಟಪದೊಳ್ ಸಮುಚಿತಾಮಾತ್ಯರಾಜಪುತ್ರಮಿತ್ರಸಮನ್ವಿತಂ ಬಂದು ಪುಗುವಲ್ಲಿ (ಕಾದಂಪೂ. ೬೯) ; ಅಚಲಸಿಂಹಾಸನವನಿಕ್ಕಿ ನಿಶ್ಚಲ ಮಂಟಪದ್‌ಸಂಚದೋಪರಿಯೊಳಗೆ ರುಚಿಗಳೆಲ್ಲವ ನಿಲ್ಲಿಸಿ (ಅಪಶಂ. ೪೬-೦೪೬) ; ಸಿಂಗರಿಸಿದ ರತ್ನಪಟ್ಟಿ ಪುಷ್ಪಮಾಲೆ ಬೆಡಂಗಾದ ಮಂಟಪದಲ್ಲಿ ಶೃಂಗಾರವನದೊಳು ಮೆಱೆವ ವಸಂತರಾಜಂಗೆಣೆಯಾದನು ಸೊಬಗ (ಭರತ. ೦-೨೯). 'ಅನುಭವಮಂಟಪ' ಪರಾ. ೪. ನ್ಯಾಯದ ಕಟ್ಟೆ, —ಚಾವಡಿ : ನಡೆಯಿ ಪೊನ್ನಾಂಬಲದ ಓರಿಯುರಿಹ ಮಂಟಪಕೆ (ತಿರುತ. ಚೆ. ೦೪-೦). ೫. ಮದುವೆ, ಪೂಜೆ, ಯಾಗ, ಸಮ್ಮೇಳನ ಮೊದಲಾದ ಸಂದರ್ಭಗಳಲ್ಲಿ ಹೆಚ್ಚು ಜನರು ಕುಳಿತುಕೊಳ್ಳಲು ಅನುಕೂಲವಾಗುವಂತೆ ನಿರ್ಮಿಸುವ ಚಪ್ಪರ : ಮಂಗಳಲಕ್ಷ್ಮಿ ತೊಟ್ಟಲಂಕಾರನಿಕಾಯದಂತಿರೆ ಮನೋಹರಮಾಯ್ತು ವಿವಾಹಮಂಟಪಂ (ಜಗಾ. ೦೦-೯೬) ; ಮಾಡಿದಾಕ್ಷಣ ಮಂಟಪಂಗಳ ರೂಢಿಯಲಿ ಕೈಗಟ್ಟಿಕೊಂಡರು ನೀಡಿದರು ಮೇಳೆಯುವ (ಸಂಭತ. ೨೪-೩೩). **ಮಂಟಪಮೆ** : ೧. 'ಅಟಮಂಟಪಮೆ' ಪರಾ. ೬. "ಮನೆಯ ಪಕ್ಕದಲ್ಲಿ ಕಟ್ಟಿರುವ ಸಣ್ಣಮನೆ" (ಅಪಂಜಾ). **ಮಂಟಯು** : ೫. ಅಂತು ಬಂದಾ ಪಾರ್ವರ ಮಂಟಯುದೊಳ್ ಕುಳ್ಳಿರ್ಪುದಾ ಸಮಯದೊಳ್ ಇಂದ್ರದತ್ತನೆಂಬ ವೃದ್ಧವೈಶ್ಯನೋರ್ವಂ . . . ಆ ಮಂಟಯುಕ್ಕೆ ಬರ್ಪುದುಂ (ಕುಣಾಸ್ತ್ರ. ೩-೯ ವ). **ಮಂಟೆಯು** : ೧. ಎಂಟುಕಾಲ ಮಂಟೆಯು ಟೆಂಟೆಣಿಸಿ ನಿಂದುವೈದು ಕಂಭ (ಮೋಳಿವಾ. ೨೫೪-೬೦೫) ; ಮಟ ಮಂಟೆಯು ದೇಗುಲ ನಿನಗೆಂದು ದಿಟದಿಂದೆನಗಿತ್ತೆಯೊ ನೀನಿಂದು (ಹಕಾ. ೦೨-೩೦ ರಗಳೆ) ; ತೀನಿ ಕೆರಳ್ದ ಡಂಗವನು ಬೂದಿಯ

ಮೇಲೆ ಪೊರಳ್ಚಿಕೊಂಡುದಾ ಶ್ವಾನನು ಮುಂಟೆಯುಕ್ಕಿ ನಡೆತಂದು ನರಳ್ವನ ಮೆಟ್ಟಲು (ಪಪ್ಪಾ. ೩-೯೭). **ಮಂಠೆಯು :** ೧. ಕೇತಾರಗುರುಗಳುಂ ಸಂದ ಹಾವಿನಹಾಳ ಕಲ್ಲಿದೇವಂಗಳುಂ ಬಂದೊಂದುದಿನವಿರುಳು ಪೊತ್ತು ಹೋಗದೆ ಕುಳ್ಳಿರ್ದ ಮಂಠೆಯುಂ ಮುಂದಿಯೊಳಗೆ. . . ಮನವುಕ್ಕಿ ಸುಜನ ನೊರ್ವಂ ಪೊಗಳ್ದಪೆ (ಸಿದ್ಧರಾ. ೭-೨); ಮಹಾಮಾತ್ಯಳಂ. . . ಚವುಬಾರದ ಮಂಠೆಯುದೊಳು ಕುಳ್ಳಿರ್ಪುದುಂ (ಪುಣ್ಯಾಸ್ರ. ೭-೭೪ ಪ). ೨. ಜೂಜಿನ ಕಟ್ಟೆ: ಜೂಜಿನ ಚಾವಡಿ : ನಾಗರೀಕನಾನಾಜನದುಂದು ಪೆಂಪೆಸೆವ ಮಂಠೆಯುದೊಳ್ ನೆರೆದುತ್ಸವಂ ಮಿಗಲ್ ಜೂಜುಗಳಂ ಸಮಗ್ರ ಮೆನಲಾಡುತಿರಲ್ ಪದೆದಲ್ಲಿಗೆಯ್ದಿದೆಂ (ಜಳಕು. ೬-೬೭). **ಮಂಡವ :** ೩. ದಿವಸಾಧಿಪ ಶ್ರೀರಂಗಧಾಮನ ರಥೋತ್ಸವವನು ನಿಟ್ಟಿಸಲೆಂದು ತವೆ ಹರುಷದೆ ಬಂದನೆಸೆ ಪೂರ್ವಗಿರಿಯ ಮಂಡವದೆ ರಾಜಿಸಿದನೇವೇಳ್ವೆ (ಕಂಠೀ. ೨೩-೬೪). ೪. ಬಳ್ಳಿಯನ್ನು ಹಬ್ಬಿಸಲು ಮಾಡಿದ ಚಪ್ಪರ : ಕಾವಣ : ಬಳಸಿದ ಬಳ್ಳಿಮಲ್ಲಿಗೆಯ ಮಂಡವದೊಳ್ ಸುಚಿವಾಡಿ (ಕಬ್ಬಿಗ. ೩೦೭). [< ಸಂ. ಮಂಡಪ. / ಪ್ರಾ. ಮಂಡವ]

**ಮುಂಟಬೆಕ್ಕು** 'ಮುಟಬೆಕ್ಕು' ನೋ.

**ಮುಂಟಮೆ** 'ಮುಂಟಪ' ನೋ.

**ಮುಂಟಯು** 'ಮುಂಟಪ' ನೋ.

**ಮುಂಟವಲ್** (ನಾ). ಒಂದು ಹಲ್ಲಿಗೆ ಮತ್ತೊಂದು ಹಲ್ಲು ಒತ್ತಿ ವಿಕಾರವಾಗಿರುವ ಹಲ್ಲುಸಾಲು : ಕಿವಿಯುಂ ಮುಂಟಿಸಿ ಮುಂಟವಲ್ಲ [ಪಾಠಾಂ. ಮುಂಡಿಸಿ ಮಾಟವಲ್ಲಿ, ಮೆಳ್ಳಿಸಿ ಮಾಟವಲ್ಲಿ. ಮೆಳ್ಳಿಸಿ ಮಾವುವಲ್ಲಿ] ಜೀದು ಕಣ್ಣಂ ಬಿಟ್ಟು ಪೆರ್ಪಿಂಗಿ . . . ತೋರ್ಪ ವಿಕಾರಂ ಸಭೆಗಾಗಲೇಂ ಪಡೆದುದೋ ವಕ್ರಪ್ರಕಾರೋದಿತಾರವಮಂ (ರಸರ. ೩-೯೮).

[< ಮುಂಟು + ಪಲ್]

**ಮುಂಟಿ** (ನಾ). ಮೃತ್ತಿಕೆ : ಉಂಟಾದ ಗುರುಪಾದತೀರ್ಥವನಿತ್ತು ತಾ ಮುಂಟಿ ಬೂದಿಯನು ಧರಿಸಿ (ಬಸ್ವರಾ. ೨-೨೪). 'ಮುಟ್ಟಿ$_{1}$', 'ಮುಡ್ಡಿ$_{1}$' ಪರಾ. [ದೇ.॥ ತಮಿ. ಮಣ್ಣ: ತೆಲು. ಮುಂಟಿ]

**ಮುಂಟಿಕೆ** 'ಮೆಂಟಿಕೆ' ನೋ.

**ಮುಂಟಿಗೆ** 'ಮೊಂಟಿಕೆ' ನೋ.

**ಮುಂಟು** (ಕ್ರಿ). ೧. ದಟ್ಟವಾಗು ; ಸಾಂದ್ರವಾಗು : 'ಮುಂಟವಲ್' ಪರಾ. ೨. ಬಾಗು ; ಬಗ್ಗು : ಸೊಂಟಮೊರಗುತ ಮುಖವು ಬಾಡಿ ಬತ್ತಿಹುದು ಮುಂಟಿ ಸಿರ ಸುಲಿದೊಂದು ಚರಣ ಮೇಲಕ್ಕೆ ಎದ್ದು ಭೂಮಿಯ ಮೇಲೆ ಬಿದ್ದಿರುವುದೊಂದು (ಕರೇ. ೩೯೯-೩). [ದೇ.॥ ತಮಿ. ಮುಣ್ಟು]

**ಮುಂಟೆ** 'ಮೊರದ್ದು' ನೋ.

**ಮುಂಟೆಯು** 'ಮುಂಟಪ' ನೋ.

**ಮುಂಠ** (ನಾ). (ಬೇಯಿಸಿ ತಯಾರಿಸುವ) ಒಂದು ಬಗೆಯ ಸಿಹಿ ತಿಂಡಿ. [ಸಂ.]

**ಮುಂಠೆಯು** 'ಮುಂಟಪ' ನೋ.

**ಮುಂಡ$_{1}$** 'ಮುಡ್ಡಿ$_{1}$' ನೋ.

**ಮುಂಡ$_{2}$** (ನಾ). ಅಂಗಡಿಯಲ್ಲಿ ವರ್ತಕನು ಕುಳಿತುಕೊಳ್ಳುವ ಸ್ಥಳ ; ಹಣದ ಪೆಟ್ಟಿಗೆ ಇಡುವ ಸ್ಥಳ ; ಗಲ್ಲ: ಆಫೀಸರಿಗೂ ಬಿಟ್ಟುಕೊಡದ ತನ್ನ ಮುಂಡದ ಉನ್ನತಾಸನವನ್ನು ಸೆಟ್ಟಿಗೆ ಬಿಟ್ಟುಕೊಟ್ಟು ಹಲ್ಲುಕಿರಿದು ನಿಲ್ಲುತ್ತಿದ್ದರು (ಬ್ರಾ. ೧೦೭). [←ತುಳು. ಮುಂಡ]

**ಮುಂಡ$_{3}$** (ನಾ). ೧. ಹಾಲಿನ ಕೆನೆ. ೨. ಅನ್ನವನ್ನು ಬಸಿದ ಗಂಜಿ. ೩. ಯಾವುದೇ ದ್ರವಪದಾರ್ಥದ ಮೇಲುಭಾಗದಲ್ಲಿ ಕೆನೆಗಟ್ಟುವ ರಸಭಾಗ : "ಮಂಡಂ—ಸರ್ವರಸಾಗ್ರೇ=ತುಪ್ಪ. ಎಣ್ಣೆ ಮುಂತಾದ ಸರ್ವರಸಗಳ ತಿಳಿಗೂ, ಮೊಸರು, ಹಾಲು, ಮುಂತಾದುವುಗಳ ಕೆನೆಗೂ; ಎಲ್ಲಾ ವಸ್ತುಗಳ ಬಸಿದ ನೀರಿಗೂ ಹೆಸರುಗಳು" (ಸಿದ್ಧಾಂತಿ. ೨೯೯). ೪. ಮದ್ಯದಲ್ಲಿರುವ ಮಾದಕಾಂಶ ; ಮಾದಕಪಾನೀಯದಲ್ಲಿರುವ ಮತ್ತುಬರುವ ಅಂಶ,—ಪದಾರ್ಥ : ಮದ್ಯವನ್ನು ಸ್ವಲ್ಪ ಭಯದಿಂದ ಸ್ವಲ್ಪವೇ ಬಾಯಿಗೆ ತೆಗೆದುಕೊಂಡನು. ಅದರಲ್ಲಿ ಮಂಡ ಕಡಮೆ. ಆದರೆ ಅದೂ ರುಚಿಯಾಗಿ ಕುಡಿಯೋಣ ಎಂಬಂತೆ ಇದ್ದಿತು (ಕಥಾಸ. VIII, ೪೪). ೫. ಹುದುಗು ಬರುವಂತೆ ಮಾಡುವ ಪದಾರ್ಥ : "ಮಂಡ, ಕಿಣ್ವ, ಹುದುಗು" (yeast. ಇಂಕಅ). ೬. ಹರಳುಗಿಡ ; ಔಡಲ : "ಕಂಟಕಿ ಯೆನಲ್ ಮಂ[ಪಾಠಾಂ. ಕಂ]ಡನೆಂಗು" (ಮಂಗರಾ. ೩೭-೧೪) ; ಮಂಡನ ಬೀಜ,ಸಾರಗದ ಕೊಂಬು, ಇಲಿಯ ಹಿಕ್ಕೆ, ಇಲ್ಲಣ ಸಹ ಮಕ್ಕಳ ಮೂತ್ರ ದಿಂದರೆದು ಗುಳಿಗೆಯುಂ ಮಾಡಿ...ತೊಡೆದು ಕಾಸಲು ಆ ಕ್ಷಣವೆ ಮೂತ್ರ ಬಿಡುವುದು (ಸಸ್ಯಪ. ೩೭೩). ೭. ತಲೆ ; ಶಿರಸ್ಸು. ೮. ಅಲಂಕಾರ ; ಆಭರಣ. ೯. ಕಪ್ಪೆ ; ಮಂಡೂಕ. ೧೦. ಸಾರ : ತಿರುಳು. ೧೧. ಹಕ್ಕಿಯ ಪುಕ್ಕ. [ಸಂ.]

**ಮುಂಡಕ$_{1}$** (ನಾ). ಗೋಧಿಯ ಹಿಟ್ಟಿನಿಂದ ಮಾಡುವ ಒಂದು ಬಗೆಯ ಭಕ್ಷ್ಯ ; ಮಂಡಿಗೆ : ಪಾಲ್ಗಡಲ ನೊರೆಯ ಪೊರೆಯ ತೆರೆಯನನುಕರಿಸಿಯುಂ ಮಲ್ಲಿದಶನದಂಶಮಾತ್ರ ಖಂಡನೀಯಕರಂಗಳೆನಿಸಿದ ಮಂಡಕಂಗಳುಮಂ . . . ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೧೦-೨೪ ವ). [ಸಂ.]

**ಮುಂಡಕ$_{2}$** (ನಾ). ಅಧೀನತೆಯನ್ನೂ ವಿನಯವನ್ನೂ ತೋರಿಸಲು ತಲೆಯನ್ನು ನೆಲಕ್ಕೆ ಮುಟ್ಟಿಸುವುದು ; P ಗುರುಹಿರಿಯರ ಮತ್ತು ರಾಜರ ಹಾಗೂ ದೇವರ ಮುಂದೆ ಮಂಡಿಯೂರಿ ಕಿವಿಗಳನ್ನು ಹಿಡಿದುಕೊಂಡು ತಲೆಯನ್ನು ನೆಲಕ್ಕೆ ಮುಟ್ಟಿಸುವ ಸಂಪ್ರದಾಯ: ಕಿವಿಗಳನ್ನು ಹಿಡಿಕೊಂಡು ನಾಲ್ಕಾರು ಬಾರಿ ಮಂಡಕವನ್ನಾಚರಿಸಿ ಮಣಿದು ಮುಖವನ್ನು ಮಣ್ಣಲ್ಲಿ ಹೊರಳಿಸಿ (ಬರುಗಂ. ೩೯-೮). [ ? ]

**ಮುಂಡಕತ್ತಿ** 'ಮೊಂಡಗತ್ತಿ' ನೋ.

**ಮುಂಡಕುಸುಬಿ** (ನಾ). ಒಂದು ಬಗೆಯ ಸಸ್ಯ : "ಚಿಪ್ಪಲಿಬೆಂಡು, ಮುಂಡಕುಸುಬಿ" (ಸಸ್ಯಪ. ೧೩೦). [? + ಕುಸುಬಿ$_{1}$ (< ಕುಸುಂಬೆ)]

**ಮುಂಡಕ್ಕಿ**, ಮೊಂಡಕ್ಕಿ (ನಾ). ಕುದಿಸಿದ ಬತ್ತವನ್ನು ಹುರಿದು ಮಾಡುವ ಅರಳು ; ಪುರಿ : ಬುರುಗು ; ಚುರುಮುರಿ (ಉಕ) : ಮಗಳ ಉಡಿಯಾಗ ಹುರೇಳ್ಡಿ ಮಡಲಾಗ ಮುಂಡಕ್ಕಿ (ರೊಕಗೀ. ೩೩); ಬದಿಯಲ್ಲಿಯೇ ಮುಂಡಕ್ಕಿ ಹುರಿಗಡಲೆಯ ರಾಶಿಗಳು ಇದ್ದುವು (ಕಸಕ. ೩-೨೩). **ಮೊಂಡಕ್ಕಿ:** ಮೊಂಡಕ್ಕಿ (ಚುರಮುರಿ) ಮುಂತಾದ ಹುರಿದ ಧಾನ್ಯವು ಸ್ತಂಭಕ (ಅಪ್ಪಂಗ. ೦೨೨ ವ-೩೭ ೮೯೯). [ಮುಂಡ$_{?}$ + ಅಕ್ಕಿ$_{1}$]

**ಮುಂಡಗನ ಗಡ್ಡೆ** (ನಾ). ಒಂದು ಬಗೆಯ ಸಸ್ಯ : ಕುರುಬನ ಗಡ್ಡೆ : (೬). [? + ಗಡ್ಡೆ]

**ಮುಂಡಗಳ್ಳಿ** 'ಮುಂಡಗಳ್ಳಿ' ನೋ.

**ಮುಂಡಗೆ**, ಮಂಡಿಗೆ (ನಾ). =ಮುಂಡಕ$_{1}$ : ಲಾವಣಿಗೆ ಘೃತಪೂರಂ ಲಡ್ಡುಗೆ ಮುಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ . . . ಮಹಾದೇವಿ ಬಡ್ಡಿಸಿದೊಡೆ (ಪಾರ್ಶ್ವಪು. ೭೬-೧೭); ಸೊಗಯಿಪ ಘೃತಪೂರಂ ಹೋಳಿಗೆ ಮುಂಡಗೆ ತಱಗು . . . ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯ ಪಾನಾಗಳ್ ಆಜ್ಯಯುತಮಪ್ಪುವಂ ಮೆಲ್ದು (ವರ್ಧಮಾ. ೧-೦೪೭); ಮೊದಲ ಪೂರಿಗೆಗೆ ಸಮೆದುಂಡೆಯೊಂದನೆ ತೆಗೆದು ಬಿದಿರ ನೇತ್ರದ ತೆಱದಿ ಗೇಣಗಲವಂ ಮಾಡಿ ಪದಪಿನಿಂ ಹಂಚಿನೊಳು ತುಪ್ಪವಂ ತಡಹಿ ಅಡಲು ಮುಂಡಗೆಯೆನಿಸಿ ಕೊಂಡುದು (ಸೂಪಶಾ. ೧-೨೪). **ಮುಂಡಿಗೆ :** ಹಾಲಲಪುಗು ಹಾಲಲುಂಡೆ ಹಾಲ ಮಂಡಿಗೆಗಳನಟ್ಟು . . . ಸುಕರಚಿತ್ರಸಜ್ಜರಿತ್ರೆ ವೈಜಕವ್ವೆ ಮಾಡಿ ನೋಡಿ (ಪ್ರಪಂ. ೨. ೨೭೭-೦) ; ಹಲ್ಲಿಗೆಯ ತತ್ಸವಿಯ ಮುಂಡಿಗೆಯಲ್ಲಿ ನವಘೃತಸೂಪನಂದಕದಲ್ಲಿ ನೋಡಲಿ ನಮ್ಮನೆಂದುದು ಧೂರ್ತಪಟುಸಿಕರ

(ಶುವ್ಯಾ. ೦೩-೬); ವಡೆ ಮಂಡಿಗೆ ಕಜ್ಜಾಯಗಳ ತಂಡತಂಡದೆ ರಾಸಿಗೈದು ನೈವೇದ್ಯವ ಚಂಡಿಕಾಂಬಿಕೆಗರ್ಪಿಸಿದರು (ಕಂಸಾ. ೨೨-೨೯).

**ಮಂಡಗೆಯುರುಳಿ** = ಮಂಡಗೆಯನ್ನು ಸುರುಳಿ ಮಾಡಿ ಕತ್ತರಿಸಿ ಬೇರೆ ಬೇರೆ ಹಣ್ಣುಗಳ ರಸಗಳಲ್ಲಿ ಹಾಕಿ ತಯಾರಿಸುವ ಒಂದು ಬಗೆಯ ಸಿಹಿಭಕ್ಷ್ಯ: ಪಲಸಿಮ್ಮಾವು ದ್ರಾಕ್ಷೆ ಖರ್ಜೂರವಣ್ಣು ರಸಂಗಳಂ ಬೇಱೆ ಬೇಱಿಕ್ಕಿಯಿವ ಸುರುಳಿ ಕುಯಿದಿಕ್ಕಲವು ತಾನದಱ ಹೆಸರ ಮುಂಡಗೆಯುರುಳಿ ಪೆಸರಾದುದು (ಸೂಶಾ. ೦-೩೯). **ಮಂಡಗೆಹೂರಿಗೆ**=ಮಂಡಗೆಯನ್ನು ಪುಡಿ ಮಾಡಿ ಅದರಿಂದ ತಯಾರಿಸುವ ಒಂದು ಬಗೆಯ ಹೂರಿಗೆ : ತುಪ್ಪ ಸಕ್ಕರೆ ಮಂಡಗೆಯು ಕಲಸಿಯೆಸೆವ ಹೂರಣವಿಕ್ಕಿ ಚೆನ್ನಾಗಿ ಪಾಕ ಮಾಡಿದುದು ಮಂಡಗೆಹೂರಿಗೆ (ಸೂಶಾ. ೦-೨೯).

[< ಸಂ. ಮಂಡಕ. /ತೆಲು. ಮಂಟಕ, ಮಂಡಗ, ಮಂಡಿಗೆ]

**ಮಂಡಗೆಙ³** (ನಾ). ಒಂದು ಊರಿನ ಹೆಸರು: ಮೂಡಣದೆಸೆಯ ವ[ರಾಹ] ಕೆಱೆ³ಯಂ ಮೂಡಣ ಪಳ್ಳ ಅದಱ ತೆಙ್ಕಣ ದೆಸೆ [ಮಣ್ಣಗೆಙ³]ಗೊಟ್ಟಂ (ಎಕ. XI-i. ೯-೨೯; ೫೬೭). [ ? + ಕೆಱೆ³ ]

**ಮಂಡಗೊಳಲೆ** (ನಾ). ಒಂದು ಬಗೆಯ ಹಕ್ಕಿ : ಬಕ ಮಂಡಗೊಳಲೆ ಹೆಬ್ಬಕ್ಕಿ . . . ನಾಗರಪಕ್ಷಿಮುಖ್ಯಂಗಳ್ ಸುಖಮಿಪ್ಪವಾ ವನದೊಳು (ಚಕೋತ. ೦೦-೩೦). 'ಮರಗೊಳಲೆ' ಪಠಾ. [ ? ]

**ಮಂಡಣ₁** (ನಾ). = ಮಂಡನ ೧ : 'ಮಂಡಣಂಗೊಳಿಸು' ಪಠಾ.

[< ಪ್ರಾ. ಮಂಡಣ. /ಸಂ. ಮಂಡನ ]

**ಮಂಡಣ₂** (ನಾ). ಸುತ್ತು ; ಸುರುಳಿ : 'ಮಂಡಣಿಸು' ಪಠಾ.

[< ಸಂ. ಮಂಡಲ]

**ಮಂಡಣಂಗೊಳಿಸು** (ಕ್ರಿ). (ಅಲಂ) ಕುಳಿತುಕೊಳ್ಳುವಂತೆ ಮಾಡು ; ಕುಳ್ಳಿರಿಸು : ಭೂಸುರವಿತಾನಮಂ ಮಾನೂ ಸಂತಸದಿ ಕರಸಿಯವರವರ ಯೋಗ್ಯಮನರಿತು ತಾಂ ತಮಗೆ ಮಂಡಣಂಗೊಳಿಸಿ (ಜಜಮೋ. ೦೪-೫೩).

[ಮಂಡಣ₁ + ಕೊಳ್₁ + – ಇಸು₃]

**ಮಂಡಣಿಸು** (ಕ್ರಿ). ಸುತ್ತು ; ಸುರುಳಿಮಾಡು : ರಣವೊ ದಾನವಕುಲ ವಿಹಿತಮಾರಣವೊ ಪರಿಯೊ ಮಾರಿಯೊ ಮಂಡಣಿಸಿ ಕಳುಹಿದ ಕೃತ್ಯಿಯೊ (ಬಿಕಾಗ. ೯-೦೭-೩೩). [ಮಂಡಣ₂ + – ಇಸು₃]

**ಮಂಡನ** (ನಾ). ೧. ಸಿಂಗರಿಸುವುದು; ಅಲಂಕರಿಸುವುದು : "ಆಲ್ಪ್ಯ ಮಂಡನಂ . . . ಪ್ರಸಾಧನಂ—ಈ ೫ ಶೃಂಗಾರಂಗೆಯ್ವುದು" (ಕರಾಯು. ೯೯-೩೯೩) : ಇತ್ತ ದೇವಿಯರುಂ ಮಜ್ಜನಮಂಡನಕ್ಷ್ವೇಳನಾದಿವಿಧಿಗಳಂ ಮಾಡಿ ಮಯೋನುರೂಪದಿಂ ಕುಮಾರಂಗನುಷ್ಪಿಸುತ್ತಿರ್ಪನ್ನೆಗಂ (ಚಾಪುಂಕೃ. ೩೪). ೨. ಆಭರಣ ; ಭೂಷಣ ; ಅಲಂಕಾರ : ಸೌಮ್ಯಸಂವತ್ಸರದೊಳ್ ಕರ್ಕಟಕರಾಶಿಯೊಳ್ ಸೌಮ್ಯಮುಖಿಂ ಗುರುವತ್ಸಳನುದಯಿಸಿದಂ ಸರಸ್ವತೀರತ್ನಮಂಡನಂ ಕವಿರತ್ನಂ (ಅಜಿಪು. ೦೨-೪೯); ಎಳೆಮಾವಿಂ ಬನವಬ್ಬದಿಂ ತಿಳಿಗೊಳಂ ಮಾಣಿಕ್ಯದಿಂ ಮಣ್ಣನಾವಳಿ ತಾರಾಧಿಪದಿಂ ನಭಂ ಶುಭದವಾಗಿರ್ಪ್ಪಂತಿರೆ (ಎಕ. II, ೬೪-೫೯; 1163). ೩. (ಶಾಸನ ಸಭೆ, ಚರ್ಚಾಕೂಟ ಮೊದಲಾದ ಕಡೆ ಆಗುವ ಗೊತ್ತುವಳಿಯ) ಪ್ರತಿಪಾದನೆ; ಸಮರ್ಥನೆ : ತದನಂತರ ಅವತರಿಸಿದ ಆಚಾರ್ಯದ್ವಯರೂ ಪ್ರಸ್ಥಾನತ್ರಯಕ್ಕೆ ಭಾಷ್ಯ ಬರೆದು ಪರಮತಖಂಡನೆ ಮತ್ತು ಸ್ವಮತಮಂಡನಕಾರ್ಯೋದ್ಯುಕ್ತರಾದರು (ಭಾರದ. ೦೦೯) ; ಹೊಸ ಸಿದ್ಧಾಂತದ ಮಂಡನ ಮತ್ತು ಆಕ್ಷೇಪಗಳ ಖಂಡನ (ರ್ಶಾಕೋ. xxii, ೬೭೪). [ಸಂ.]

**ಮಂಡನಾಯೋಗ** (ನಾ). (ಆನೆಯ ಮೇಲೆ) ಅಲಂಕಾರಕ್ಕಾಗಿ ಹೊದಿಸುವ ಜೂಲು,— ಸಬರ : ಮುತ್ತಿನ ಮಾಣಿಕದ ಮಂಡನಾಯೋಗಂಗಳೊಳ್ ನೆಱೆಯೆ ಪಣ್ಣಿದ ಮದಾಂಧಗಂಧಸಿಂಧೂರಂಗಳನೇಱೆ (ಪಂಪಭಾ. ೩-೪೯ ವ) ; ರತ್ನಮಂಡನಾಯೋಗಪರಿಗ್ರಹೀತಸುರೇಂದ್ರಕರೀಂದ್ರಪೃಷ್ಠಗತನಪ್ಪ ಮರೇಂದ್ರನನೆ ಪೋಲ್ತುಂ ಸೌಜನ್ಯಕಂದಾಂಕುರನಿರ್ಪದುಂ (ಶಾಂತಿಪು. ೩-೯೪ ವ). [ಸಂ.]

**ಮಂಡನೆ** (ನಾ). ಪ್ರತಿಪಾದನೆ; ಸಮರ್ಥನೆ : ಈ ಅವಧಿಯಲ್ಲಿ ಅಲ್ಲಲ್ಲಿ ಅಭಿಪ್ರಾಯಗಳ ಚಕಮಕಿಯೂ ಮಂಡನೆ — ಖಂಡನೆಗಳೂ ಆದುವು (ದ್ರಾಬಿ. ೦೭ ಹಿನ್ನೆಲೆ). [ಸಂ. ಮಂಡನ]

**ಮಂಡಪ** (ನಾ). ೧. = ಮಂಟಪ ೧. ೨. = ಮಂಟಪ ೨ : ಜಿನಮಂದಿರದ ಮುಂದಣ ಮಂಡಪದೊಳ್ ನಿಂದಿರ್ಪದುಂ (ಶಾಂತಿಪು. ೯-೩೭ ವ) ; ಇವೇ ಶಿಲ್ಪದಲ್ಲಿ 'ವಿಮಾನ', 'ಪ್ರಾಸಾದ', 'ಮಂಡಪ' ಗಳ ಮಾಪರಿಗಳಾಗಿ ಭಾರತೀಯ ದೇವಾಲಯಶಿಲ್ಪಕ್ಕೆ ಮೂಲವಾದುವು (ಕಸಂವಸ. ೧೨೦). ೩. = ಮಂಟಪ ೩ : "ಜನಾಶ್ರಯಃ, ಮಂಡಪಃ— ಈ ೨ ಸಭಾಮಂಟಪಂ" (ಕರಾಯು. ೫೨-೧೯೩); ಆರೋಗಿಸುವ ಮನೆ ಮಂಡಪಂ ಗುಣನೆಸಾಲೆಯೆಂಬಿನಿತುಮಂ ಗೃಹಾಂಗಂ ಕುಡುಗುಂ (ಶಾಂತಿಪು. ೬-೦೨೬); ಮಂಡಪದುಪರಿಮತಲದೊಳ್ಕಂಡರಿಸಿದ ಚಿತ್ರಮಂಡಲಂ . . . ಸೊಗಯಿಸುಗುಂ (ಕಾದಂಪೂ. ೦೦೧೩). ೪. = ಮಂಟಪ ೫ : ಪಳುಕಿನೆಸೆವಾ ಕಳಸಮಂಡಪದೊಳಗೆ ಚೆಂದಳಿರಿಂದ ಕರಮಂಗಳಮೆಯುಕ್ತೆಯಿಂದ ಮಾದಲವಣ್ಣಳಿಂ . . . ಕಾಂಚನವಿಲಸಿತದ ಮಾಲೆಗಳನೆಸೆವುದನೀಕ್ಷಿಸಿದ ಸರಸ (ಸುಕೃಶಾ. ೪-೩೪); ಮುಂದೆ ಮಗುವಿಗೆ ಎಂಟು ವರ್ಷಗಳು ಕಳೆದ ಮೇಲೆ ಕ್ರಮವಾಗಿ ಕುಂಡ, ಮಂಡಪ, ಮಂಚಕಲಶಗಳನ್ನು ಸ್ಥಾಪಿಸಿ . . . ಸಂಸ್ಕೃತವಾದ ಅಂಗದಲ್ಲಿ ಶಿವಕಲಾಸಮಾವಿಷ್ಟವಾದ ಲಿಂಗವನ್ನು ಮಂತ್ರೋಪದೇಶಪೂರ್ವಕವಾಗಿ ನೆಲೆಗೊಳಿಸುವನು (ಭಾರದ. ೨೪೯). [ಸಂ.]

**ಮಂಡಯ್ಸು** 'ಮಂಡಿಸು₂' ನೋ.

**ಮಂಡರಗಪ್ಪೆ** (ನಾ). ಒಂದು ಬಗೆಯ ದೊಡ್ಡ ಚೇಳು : ಎಮ್ಮೆಚೇಳು : ಮಂಡರಗಪ್ಪೆಯೊಂದು ಕೆಳಕ್ಕೆ ಬಿದ್ದು ಕೊಂಡಿಯನ್ನು ಮೇಲಕ್ಕೆತ್ತಿ ನೆಲದ ಮೇಲೆ ಚಲಿಸಿತು (ಹಸಂಹೂ. ೧೯೩). [ದೇ.॥ ತೆಲು. ಮಂಡ್ರಗಪ್ಪ]

**ಮಂಡರಳು, ಮೊಂಡರಳು** (ನಾ). ಅವಲಕ್ಕಿ : ಈ ಮನೆತನದ ಹುಡುಗ ಕುಲಾಯಿ ಕಟ್ಟಿಕೊಂಡು ಬೆಲ್ಲ ಮಂಡರಳು ತಿನ್ನುವದೆಂದರೇನು ? (ಇಕ್ಕ. ೩೭೩). **ಮೊಂಡರಳು :** ಮೋಂಡರಳು ಬೆಲ್ಲದಿಂದಲೇ ಅವನ ಉಪಹಾರ ಮುಗಿಯುವಂತೆ ಏರ್ಪಡಿಸಿದಳು (ಇಕ್ಕ. ೩೭೩).

[ ಮಂಡ₉ + ಅರಳು₃ (< ಅರಲ್₃) ]

**ಮಂಡರಿಸಿನ** (ನಾ). ಉತ್ತಮವಾದ ಅರಿಸಿನ : ಒಳ್ಳೆಯ ಅರಿಸಿನ (ಮಂಡರಿಸಿನ) ಮತ್ತು ಚಿಕ್ಕಣಅಡಿಕೆಗಳ ಸಮಚೂರ್ಣವನ್ನು ಜೇನುತುಪ್ಪದೊಡನೆ ಗದ್ಯಾಣ ೧ ತೂಕ ಕೊಡಲು ವಾಂತಿಭ್ರಾಂತಿ ಗುಣವಾಗುವುದು (ಸಕಪ್ರ. ಕಂ ೪೯೦). [ ಮಂಡ₁ (< ಮಣ್ಡ₁₁) + ಅರಿಸಿನ ]

**ಮಂಡಲ, ಮಂಡಳ** (ನಾ). ೧. ವರ್ತುಲಾಕಾರವಾಗಿರುವ ಸೂರ್ಯ ಅಥವಾ ಚಂದ್ರಬಿಂಬ: "ಮಂಡಲಂ, ಬಿಂಬಂ—ಈ ಎರಡು ಚಂದ್ರಮಂಡಲದ ಪೆಸರ್" (ಕರಾಯು. ೯-೪೪); ಬೆಟ್ಟ ತಲೆಯಲಿ ಕಂಡು ಹೊಳೆವ ಚಂದ್ರನನು ದಿಟ್ಟಿಸಿ . . . ತಟ್ಟನೆ ನುಡಿದೆ "ಅಲ್ಲಿ ನಾ ಪೋಗಲೇನು ? ಬಟ್ಟಲಂತಿಹ ಮಂಡಲದಲಿರುವುದೇನು ? " (ಕಂಪು. ೦೦-೪). ೨. ಸೂರ್ಯ ಅಥವಾ ಚಂದ್ರನ ಸುತ್ತಲೂ ದುಂಡಾಗಿರುವ ಪ್ರಭಾವಲಯ. – ವರ್ತುಲ ರೇಖೆ ; ಪರಿವೇಷ : "ಪರಿಧಿಃ, ಪರಿವೇಷಃ(ಸ್ತ್ರೀತ್), ಮಂಡಲಂ, ಉಪಸೂರ್ಯಕಂ — ಈ ೪ ಪರಿವೇಷದ ಪೆಸರ್" (ಕರಾಯು. ೯-೪೦). ೩. (ಚೆಂಡು, ಚಕ್ರ ಮೊದಲಾದುವುಗಳಂತೆ) ಯಾವುದೇ ದುಂಡಾಗಿರುವ ವಸ್ತು, ಆಕೃತಿ ಇತ್ಯಾದಿ : "ಚಕ್ರವಾಳ, ಮಂಡಲ ಶಬ್ದಗಳು ೨ ಮಂಡಲಾಕಾರವಾದ ಪದಾರ್ಥದ ಹೆಸರುಗಳು" (ಗುರುಶಾ ೪೩). ೪. ಸುತ್ತು ; ಇರಿಕೆ ; ಸುರುಳಿ : 'ಮಂಡಲಂಗೊಳ್ಳು' ಪಠಾ.

೫. ವೃತ್ತ; ಬಟ್ಟು: "ಬಟ್ಟೆಂದು ಮಂಡಲಂ" (ಶಬ್ದಮ. ೪೬-೨೪); "ಬಟ್ಟೆಂದು ಮಂಡಲಾಖ್ಯಂ" (ಕಬ್ಬಿಸು. ೧೭). ೬. ವರ್ತುಲಾಕಾರವಾಗಿ ನಿಲ್ಲಿಸುವ ಒಂದು ಬಗೆಯ ಸೇನಾವ್ಯೂಹ. ೭. ನಾಯಿ: ಶುನಕ. ೮. ಒಂದು ಬಗೆಯ ಹಾವು: ಮಂಡಲ ಕಚ್ಚಿದೊಡೌಷಧ ಗೊಂಡಾಕ್ಷಣಮುಟಿಗುಮಲ್ಲದಂತವನಟಿಗುಂ (ಶೀಚಿಸಾ. ೬.೨೭); ದರ್ವೀಕರ ಮಂಡಲ ರಾಜಿಗಳೆಂಬ . . . ವಿಷಗಳಲ್ಲಿ ಸಳಯ ಸಟ್ಟುಗದ ಬೇರ ನೀರಲ್ಲಿ ಅರೆದು ಕುಡಿಯಲು ವಿಷ ಹರ (ವಿಷಚ. ೧೦-೪). ೯. (ಸಾಧಾರಣವಾಗಿ ಮಾಂತ್ರಿಕನಿಂದ ಬರೆಯಲಾದ ಗೂಢಮಂತ್ರಪೂರಿತವಾದ, ವೃತ್ತಾಕಾರವಾದ) ರೇಖಾವಿನ್ಯಾಸ: ಪತಿಲಿಖಿತಮಂಡಲಸ್ಥಿತೆ ಕೃತಾಷ್ಟದಿಗ್ದೇವತಾರ್ಚನಪ್ರಕರೆ ದೃಢವ್ರತೆ . . . ಚತುಷ್ಪಥಸ್ಥಾನವಿಧಿಯನಿರುಳೊಳ್ ತಳೆದಳ್ (ಕಾದಂಸಂ. ೩೬೬). ೧೦. ಗುಂಪು; ಸಮೂಹ: ಅಗಳವರ ಮಸಕಮಂ ಕಂಡು ಭಯಂಗೊಂಡು ಖಚರಮಂಡಲಂ ಪ್ರಭಾಮಂಡಲಂಗೆ ಕನ್ನೆ ಕೈಸಾರ್ದಳೆಂದು ಪೆಜಸಾರ್ದು ನೋಡುತಿರ್ಪುದುಂ (ಶಂರಾಮಸಾ. ೫-೭೩ ವ). 'ಮಂಡಲಿಸು' ಪರಾ. ೧೧. ನಾಡು; ರಾಷ್ಟ್ರ; ದೇಶ: ತಜಿಸಂದು ಲಾಳರೊಳ್ ತ[ಳ್ತಿ]ಜಿದೇಜಿಂ ಪೇಟ್ ಕೇಳ್ದು ಮಂಡಲಮನ್ನುಂ ತಿಱುನೀರಿಕ್ಕುವುದೆನಿಸಿದ ತಜಿಸಲವಿನ ಚಲದ ಬಲದ ಕಲಿ ನರಸಿಂಹಂ (ಶಂಶಬ. ೦-೩೩); ಪುರುಷೋತ್ತಮಂ ಕ್ಷಣೆಕರಿವರ್ಕೈವರಂ ಕೂಡಿಕೊಂಡು ಬಂದನೀ ಮಂಡಲದೊಳಿರವಿಲ್ಲ ತನಗಿನ್ನು (ಕೈಪಿಜ. ೩೨-೨೬); ಕೊಂಡುವ ಕೇಳುವರಸಿನ ಮಂಡಲ ಹಾಟಕ್ಕು (ಶೀಚಿಸಾ. ೬೨೪). ೧೨. ಒಂದು ದೇಶದ ವಿಭಾಗ; ಜಿಲ್ಲೆ; ಪ್ರಾಂತ್ಯ: ಭೌಗೋಳಿಕ ಯಾ ರಾಜಕೀಯ ವಿಭಾಗಗಳು:- ಊರು, ಪುರ . . . ಮಂಡಲ, ಕುದುರು (ತುಳುಕಾ. ೨೬೦); ರಾಜ್ಯವನ್ನು ಹಲವು ಮಂಡಲಗಳಾಗಿ ವಿಭಾಗಿಸಿ, ಅವುಗಳ ಆಡಳಿತಕ್ಕಾಗಿ ಮಂಡಲೇಶ್ವರನನ್ನು ನೇಮಿಸಿದ್ದನು (ಕಪಠ. ೭-೫೦). ೧೩. ಬಿಲ್ಲುಗಾರನ ಒಂದು ಭಂಗಿ; P ಬಾಣಪ್ರಯೋಗಕಾಲದಲ್ಲಿ ಮೂರಡಿಯ ಅಗಲದಲ್ಲಿ ಕಾಲುಗಳನ್ನು ಇಟ್ಟುಕೊಳ್ಳುವುದು. ೧೪. ಮಲ್ಲಯುದ್ಧ, ಗದಾಯುದ್ಧ ಮೊದಲಾದ ದ್ವಂದ್ವಯುದ್ಧಗಳ ಒಂದು ಗತಿ: ಭೀಮನು ಅದನ್ನು ಅರ್ಥಮಾಡಿಕೊಂಡು, ಮಂಡಲಗಳು ಯಮಕಗಳು ಗೋಮೂತ್ರಿಕ ಮೊದಲಾದ ಚಿತ್ರವಿಚಿತ್ರವಾದ ಗತಿಗಳಲ್ಲಿ ಓಡಾಡುತ್ತ ಎದುರಾಳಿಯನ್ನು ಬುದ್ಧಿಭ್ರಮೆಗೊಳಿಸುವುದಕ್ಕೆ ಪ್ರಯತ್ನಪಟ್ಟನು (ವಕಠಾ. ೪೦೭). ೧೫. ವ್ರತಾಚರಣೆ, ಔಷಧಸೇವನೆ ಮೊದಲಾದ ಸಂದರ್ಭಗಳಲ್ಲಿ ಅನುಸರಿಸುವ ಕಾಲದ ಒಂದು ಗಡು; ನಲವತ್ತೆಂಟುದಿನಗಳ ಅವಧಿ: ಈ ರಸವುಂ ಒಂದು ಮಂಡಲ ಕೊಂಬುದು (ವೈಪ್ರವಿ. ೫೩); ಆದಿವಾರದ ದಿವಸ ನೆಲತಂಗನ್ನು ತಂದು . . . ಜೋರ್ಣಂಗೈದು ಜೇನು ತುಪ್ಪದಲ್ಲಿ ಲೇಹ್ಯದ ಹಾಗೆ ಕಲಸಿ ಕಾಲುಮಂಡಲ ತೆಗೆದುಕೊಳ್ಳಲು ಸಕಲ ಜ್ವರ ಹರವು (ಸಕವೈ. ೦೦೩); ಒಂದು ಮಂಡಲಕಾಲ ಚಂಡೀಯಾಗವು ನಿರ್ವಿಘ್ನವಾಗಿ ನೆರವೇರಿತು (ಶ್ರೀರಾದು. ೩೬೦). ೧೬. ಋಗ್ವೇದದ ಒಂದು ಭಾಗ; ಸಂಹಿತಾಭಾಗ: ಸಂಹಿತೆಗಳಲ್ಲಿ ಮೊದಲನೆಯದು ಋಕ್ಸಂಹಿತೆ. ಅದರಲ್ಲಿ ೧೦೨೮ ಸ್ತೋತ್ರಗಳುಂಟು. ಅವುಗಳನ್ನು ೧೦ ಮಂಡಲಗಳಾಗಿಯೂ . . . ಅಧ್ಯಯನ ಮಾಡುತ್ತಾರೆ (ಶಾಇಪ್ರ. ೨೪); ಈ ಅಗಾಧವಾದ ಸಂಹಿತೆಯ ಸೂಕ್ತಗಳನ್ನು ಹತ್ತುಮಂಡಲಗಳಾಗಿ ವಿಭಾಗ ಮಾಡಿದ್ದಾರೆ (ಕಾರಠ. ೨೦). ೧೭. ಅಥರ್ವಣವೇದದ ಒಂದು ಭಾಗ: ಇತಿಹಾಸ ಮತ್ತು ಪುರಾಣಗಳ ಸಾಹಿತ್ಯ ಅಥರ್ವವೇದದ ಹದಿನೈದನೆಯ ಮಂಡಲ ಮತ್ತು ಛಾಂದೋಗ್ಯೋಪನಿಷತ್ತಿನ ಏಳನೆಯ ಅಧ್ಯಾಯಗಳಲ್ಲಿ ಕಂಡುಬರುತ್ತದೆ (ಶಾರಠ. ೦೩೬). ೧೮. ದುಂಡಾದ ಮಚ್ಚೆಗಳುಂಟಾಗುವ ಒಂದು ಬಗೆಯ ಕುಷ್ಠರೋಗ. ೧೯. [ರಾಜನೀ] ಪನ್ನೆರಡು ಬಗೆಯ ರಾಜರ ಕೂಟ,— ಗುಂಪು; P ದಿಗ್ವಿಜಯಕ್ಕೆ ಹೊರಡುವ ರಾಜನು ಇವರನ್ನು ಮುಖ್ಯವಾಗಿ ಪರಿಗಣಿಸಬೇಕು. ೧. ಶತ್ರು. ೨. ಮಿತ್ರ. ೩. ಶತ್ರುವಿನ ಮಿತ್ರ. ೪. ಮಿತ್ರನ ಮಿತ್ರ. ೫. ಶತ್ರುವಿನ ಮಿತ್ರನ ಮಿತ್ರ. ೬. ವಿಜಿಗೀಷು. ೭. ಪಾರ್ಷ್ಣಿಗ್ರಾಹ. ೮. ಆಕ್ರಂದ. ೯. ಪಾರ್ಷ್ಣಿಗ್ರಾಹಾಸಾರ. ೧೦. ಆಕ್ರಂದಾಸಾರ. ೧೧. ಭೂಮ್ಯನಂತರ. ೧೨. ಉದಾಸೀನ. ೨೦. [ನಾಟ್ಯ] ಒಂದು ಬಗೆಯ ಪಾದಚಲನೆ: ಮೂರುಕರಣಗಳ ಜೋಡಣೆಗೆ 'ಖಂಡ' ವೆಂದು ಹೆಸರು. ಮೂರು ಅಥವಾ ನಾಲ್ಕುಖಂಡಗಳನ್ನು ಜೋಡಿಸಿದರೆ ಒಂದು ಮಂಡಲವಾಗುತ್ತದೆ (ಭಶಾಸ್ತ್ರ. ೫೦); ಆ ನರ್ತಕಿಯರಿಗೆ ನಾಟ್ಯಭೇದಗಳಾದ . . . ಮಂಡಲ, ಕರಕ್ಷೇತ್ರ ಎಂಬುವೆಲ್ಲ ಚೆನ್ನಾಗಿ ಗೊತ್ತಿದ್ದುವು (ಕರ್ಣಾಟಕ. ೦೬೮). ೨೧. ವೈಷ್ಣವ, ಸಮಪಾದ, ವೈಶಾಖ, ಮಂಡಲ, ಪ್ರತ್ಯಾಲೀಢ ಮತ್ತು ಅಲೀಢವೆಂಬ ಆರುಬಗೆಯ ಪುರುಷಸ್ಥಾನಕಗಳಲ್ಲಿ ಒಂದು; P "ಇದಕ್ಕೆ ದೇವೇಂದ್ರನು ಅಧಿದೇವತೆ. ಗಜವಾಹನ, ಧನುಸ್ಸು ಮತ್ತು ವಜ್ರಾಯುಧ ಇವುಗಳ ಪ್ರಯೋಗ, ಗರುಡ ಮೊದಲಾದ ಪಕ್ಷಿಗಳ ನೋಟ ಇವುಗಳನ್ನು ತೋರಿಸುವಾಗ ಇದನ್ನು ವಿನಿಯೋಗಿಸಬೇಕು" (ಶಾಸ್ತ್ರರಂ. ೩೨೭ ಗದ್ಯಾನುವಾದ): ಎರಡುಂ ಪಾದಂ ತ್ರ್ಯಸ್ರದಿನಿರೆ ನಡು ಗೇಣೆಡೆಯನುಳಿದು ಕಟ ಮೊಳಕಾಲ್ಗಳ್ ಸರಿಯಾಗುತೆಂತುಗೇಣರೆ ಧರೆಯಂ ಬಿಟ್ಟೊಡನೆ ನಿಲ್ವೆ ಮಂಡಲಮೆನಿಸಂ (ಶಾಸ್ತ್ರರಂ. ೭-೨೦). 'ಮಂಡಲಾಗ್ರ' ಹೋ. ೨೨. [ಕಾಮಶಾ] ಒಂದು ಬಗೆಯ ನಖಕ್ಷತ; P ಮೇಲೆ ಅರ್ಧಚಂದ್ರ ಮತ್ತು ಕೆಳಗೆ ಅರ್ಧಚಂದ್ರನಂತೆ ಕಾಣುವ ಪರಸ್ಪರ ಅಭಿಮುಖವಾಗುವ ಉಗುರಿನ ಗುರುತು: ಪಂಚನಖಯೋಗ ದ್ವಂದ್ವಯೋಗ ಅರ್ಧಚಂದ್ರಕ ಮಂಡಲ ಮಯೂರಪಥ ಶಶಪ್ಲುತ ಉತ್ಪಲದೆಂಬ ಸಪ್ತವಿಧ ವಿರೋಪಹತಿ ವಿಹಿತದಿಂ (ವಿಶಿಚ. ೦೬೪). ೨೩. [ಜೈನ] ಪಾರಿವ್ರಜ್ಯಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು: ಮಂಡಲ ಮೆಂಬುದು ಪರಮತೇಜೋಮಂಡಲಮಂಡಿತನಪ್ಪ ಜಿನಪತಿಗೆಜಿಗ ಮಣಿದೀಪ ಸ್ನೇಹದೀಪಮೆಂಬೆರಡುಮಂ ಪತ್ತುವಿಟ್ಟು ತಪದೊಳಿಸಗಿದೊಡೆ ದಿವ್ಯಾದಿ ತೇಜೋಮಳಯೋಜ್ಜ್ವಳನಕ್ಕುಂ (ಶಾಪುಂಪ್ರ. ೩೨೪). ೨೪. [ಯೋಗ] ಮೂಲಾಧಾರದಿಂದ ಹಿಡಿದು ಶಿರಸ್ಸಿನವರೆಗೆ ಇರುವ ಆರು ಸ್ಥಳಗಳು: ಮೂಲಾಧಾರ ಮೊದಲು ಮೇಲೆ ಹೇಳಿದ ಆರು ಪದ್ಮಗಳಲ್ಲೂ ಮಧ್ಯಪ್ರದೇಶಗಳಲ್ಲಿ ೬ ಮಂಡಲಗಳು ಇರುವುವು. ತ್ರಿಕೋಣಮಂಡಲ, ಷಟ್ಕೋಣಮಂಡಲ, ದ್ವಾದಶಕೋಣ, ವರ್ತುಳ ಮಂಡಲ, ತ್ರಿಕೋಣ, ವರ್ತುಳವೆಂಬ ಆರು ಮಂಡಲಗಳು ಇರುವುವು (ಹಠಾರ. ೬-೪ ಪಾತ್ರರ್ಯ). ಮಂಡಳ: ೧೦. "ನಿಕರಃ, ನಿಕಾಯಃ . . . ಮಂಡಳಂ, ಜಾಳಂ . . . ಸ್ತೋಮಃ — ಈ ೩೯ ಸಮೂಹಂ" (ಹಲಾಯು. ೦೦೫-೨); ಎರೆಗೊಳ್ಪುದಖಿಳವಿದ್ವದ್ವಿದ್ರತಾಪಿತತವುಂ ದ್ವಿಷದ್ರಾಜಮನೋಹರಮಣ್ಡಳಮುಮನವನೀವರನಾಗತಿಯರಸನತಳುಳಬಳ ಭುಜ ಭುಜಂಗಂ (ಎಕ. XI, ದಾವಣ. ೩೨-೩೭; 1171). ೧೨. ದಕ್ಷಿಣದ ಕೆಲವು ಪ್ರಾಂತ್ಯಗಳಲ್ಲಿ 'ರಾಷ್ಟ್ರ'ವು ಒಳಗೊಂಡ ಭಾಗವನ್ನು 'ಮಂಡಳ' ಎಂದು ಕರೆಯುತ್ತಿದ್ದರು (ದಕಾಇ. ೦೦೬). ೨೦. ಮಂಡಳಮುಂ ನೆರೆದಳ್ಮುಖಮಂಡಳ ಮಮೃತಾಂಶುಮಂಡಳಕ್ಕೆಣೆವರೆ ಭೂಮಂಡಳದಿಂ ನೆಗೆದು ನಭೋಮಂಡಳ ದೊಳ್ಮಿಂದು ನೀಜ್ ಪೇಣ್ದಾಶವಿಧಮುಂ (ರಾಶಕಿ. ೦೨.೪೪).

ಮಂಡಲದ ಹಾವು = ಮೈಮೇಲೆ ದುಂಡಾದ ಮಚ್ಚೆಗಳಿರುವ ಒಂದು ಜಾತಿಯ ಹಾವು: "ಚಿತ್ರ(ಕ:)ತಃ —ಚಿತ್ರಮೂಲ, ಮಂಡಲದ ಹಾವು" (೭ಕಂ. ೫೭); ಮಂಡಲದ ಹಾವಿನ ಪ್ರಧಾನಆಹಾರ ಇಲಿ, ಓತಿ, ಹಲ್ಲಿ, ಏಡಿ, ಕೆಲವು ತೆರನ ಕೀಟಗಳು (ಕಂವಿಶ. XII, ೯೬೩). ಮಂಡಲ ಹಾಕು

ಕೊಳ್ಳು = ಸುರುಳಿ ಸುತ್ತಿಕೊಳ್ಳು : ಜನರ ಗಲಾಟೆಗೆ ಹೆದರಿದ ಹಾವು ಮಂಡಲಹಾಕಿಕೊಂಡು ಹೆಡೆಯನ್ನು ಮುಚ್ಚಿಕೊಂಡಿತು (ಬೂಧ). ಮಂಡಲ ಹಾಕಿಸು = (ವಿಶೇಷವಾಗಿ ನಾಗದೇವತೆಯ ಪ್ರೀತ್ಯರ್ಥವಾಗಿ) ನಲವತ್ತೆಂಟುದಿನಗಳ ಸೇವೆಯನ್ನು ಮಾಡಿಸು : "ಪೂಜಾರಿಯ ಬಳಿ ಹೋಗಿ ಹಣ್ಣು ಹಂಪಲು ಹಣ ಕೊಟ್ಟು ಮಂಡಲ ಹಾಕಿಸಬೇಕು". "ಮಂಡಲ ಅಂದರೆ ?" "ಬಣ್ಣಬಣ್ಣಗಳಲ್ಲಿ ಹಾವಿನ ಆಕೃತಿಯನ್ನು ರಂಗೋಲೆಯಲ್ಲಿ ಎಳೆದು ಪೂಜೆ ಮಾಡಬೇಕು" (ಹಸುಹೂ. ೬೯). ಮಂಡಲ ಹಾಕು = ಮಾಟ, ಮಂತ್ರ, ತಂತ್ರ ಮುಂತಾದ ತಾಂತ್ರಿಕವಿಧಿಗಳನ್ನು ಆಚರಿಸುವ ಸಂದರ್ಭಗಳಲ್ಲಿ ಚಕ್ರಾಕಾರವಾದ ಆಕೃತಿಯನ್ನು ಬರೆ : ಮಾಂತ್ರಿಕನು ಮಂಡಲಹಾಕಿ ಪೂಜೆಗಾರಂಭಿಸಿದನು (ರೂಧ). [ಸಂ.]

**ಮಂಡಲಂಗೊಳ್ಳು** (ಕ್ರಿ). ಸುರುಳಿಸುತ್ತಿಕೊಳ್ಳು ; ಸುತ್ತುಹಾಕು : ಪೆರ್ವಾವಿನಂತೆ ಮಂಡಲಂಗೊಳ್ಳುತ್ತುಂ . . . ಲತೆಯಂತಲ್ಲಾಡುತ್ತುಂ ಕಣ್ಗೊಳಿ ಬೆಳಗಾಗೆ (ವರ್ಧಮಾ. ೦-೦೬೦). [ ಮಂಡಲ + ಕೊಳ್ಳು₁ (< ಕೊಳ್₁) ]

**ಮಂಡಲಕ** (ನಾ). ೧. ಮೈಮೇಲೆ ದುಂಡುದುಂಡಾದ ಮಚ್ಚೆಗಳುಂಟಾಗುವ ಒಂದು ಬಗೆಯ ಕುಷ್ಠರೋಗ : "ಕೋಠಃ, ಮಂಡಲಕಂ – ೨ ಮಂಡಲಾಕಾರವಾದ ಕುಷ್ಠಕ್ಕೆ ಹೆಸರು; ಕೊಳೆಮಚ್ಚೆ ಹುಣ್ಣು" (ಸಿದ್ಧಾಂಶಿ. ೦೮೪). ೨. ಯುದ್ಧದಲ್ಲಿ ಸೈನ್ಯವನ್ನು ಮಂಡಲಾಕಾರವಾಗಿ ನಿಲ್ಲಿಸುವ ಒಂದು ಬಗೆಯ ಸೈನ್ಯರಚನೆ. ೩. ಸೂರ್ಯ ಅಥವಾ ಚಂದ್ರಬಿಂಬ. ೪. ವಲಯ ; ಗೋಳ. ೫. ಕನ್ನಡಿ ; ದರ್ಪಣ. ೬. ದೇಶ; ರಾಷ್ಟ್ರ. ೭. ನಾಯಿ. ೮. [ಕಾಮಶಾ] ಒಂದು ಬಗೆಯ ನಖಕ್ಷತ; ಮಂಡಲ : ಕದಪು . . . ಎದೆಯೆನಿಪ್ಪೆಡೆಗಳಂ ಸೊಗಸುವಂತೆ ಪದೆದುಗುರ ಮೊನೆಗಳಿಂ ಕಮಂಕಿಸುವಜಾಂದಿರೊಳಜ್ಜಿಬಿಸುಗಳೆರಡಿರಲದೇ ಮಂಡಲಕವು (ಜಪವ. ೬-೩೯). [ಸಂ.]

**ಮಂಡಲಗತಿ** (ನಾ). ೧. ಯುದ್ಧ, ಕತ್ತಿವರಸೆ ಮೊದಲಾದ ಸಂದರ್ಭಗಳಲ್ಲಿ ಮಾಡುವ ಚಕ್ರಾಕಾರವಾದ ಚಲನೆ. ೨. [ನಾಟ್ಯ] ಹದಿನಾರು ಬಗೆಯ ಬಾಹುಚಲನ ಭೇದಗಳಲ್ಲಿ ಒಂದು: P "ಎಲ್ಲ ಕಡೆಗಳಲ್ಲೂ ತೋಳುಗಳನ್ನು ಸುತ್ತಿಸುವುದು.—ಕತ್ತಿವರಸೆಯನ್ನು ಅಭಿನಯಿಸುವಾಗ" (ಚಾಸ್ಕರಂ. ೨೬೦ ಗದ್ಯಾನುವಾದ) : ಮಂಡಲಗತಿ—ಎಲ್ಲಾ ಕಡೆಯಂ ತೋಳ್ಗಳ್ ನಿಲ್ಲದೆ ಸುತ್ತುಲ್ಕೆ ತಾನೆ ಮಂಡಲಗಮನಂ (ಚಾಸ್ಕರಂ. ೨-೦೨೬). [ಸಂ.]

**ಮಂಡಲನೃತ್ಯ** (ನಾ). (ಕೃಷ್ಣ ಮತ್ತು ರಾಧೆಯ ಸುತ್ತಲೂ ಗೋಪಿಯರು ನರ್ತಿಸಿದಂತೆ) ಚಕ್ರಾಕಾರವಾಗಿ ಚಲಿಸಿ ಮಾಡುವ ನೃತ್ಯ : ಗೊಂದಳದ ನೃತ್ಯವು ಮಂಡಲನೃತ್ಯ . . . ಎಂದು ಪ್ರತ್ಯಕ್ಷವಿದೆ . . . ಅದರಲ್ಲಿ ಗೊಂದಳಿಗರು ಹಾಡುತ್ತ, ಕುಣಿಯುತ್ತ, ನಡುವೆ ಇಟ್ಟ ದೀಪವನ್ನು ಸುತ್ತಿಸುತ್ತಿ ಬರುತ್ತಾರೆ (ಹನ್ನೆರ. ೬ ಮುನ್ನುಡಿ). [ಸಂ.]

**ಮಂಡಲವರ್ಷ** (ನಾ). ದೀರ್ಘಕಾಲ ನಿಲ್ಲದೆ ಸುರಿಯುವ ಮಳೆ : ಮಂಡಲವರ್ಷಮಾಗಿ(ರೆ) ಕೊಂಡು ಮಂಜಾಗಿ ಕೊಂಡೊಡಂ ತುಂತುರ್ವನಿ(ಯೊಳ್)ಯಾಗಿ ಬಿಡಪಮಂ ಕೊಂಡೊಡಂ ಪೊಲ್ಲ ವಸುಧೆಯೊಳ್ (ಅಬ್ಜಿವ. ೬-೦): ಮಂಡಲವರ್ಷಂ ಪುಷ್ಯದೆ ಚಂಡಕರಪ್ರಿಯಾತನುಜನೊಸೆದಿರ್ದಾಗಳ್ ಕೊಂಡುಂ ಮಡಗಿಡು ಧತ್ತ್ರವು ಮಂಡಲದೊಳ್ ಪಡೆಯ ಲಾಬಿರೇವರ್ ಗಾರ್ಗ್ಯರ್ (ಅಬ್ಜಿವ. ೦೨-೪೩). [ಸಂ.]

**ಮಂಡಲಸೇವೆ** (ನಾ). ೧. ಯಾವುದಾದರೂ ದೇವತೆಯ ಪ್ರೀತ್ಯರ್ಥವಾಗಿ ಕೈಗೊಳ್ಳುವ ನಲವತ್ತೆಂಟು ದಿನಗಳ ಪೂಜೆ.—ಉಪಾಸನೆ : ಹಿರಿಯರು ಹೇಳಿದಂತೆ ಮಂಡಲಸೇವೆ ಮಾಡಿದ ಮೇಲೆ ಅವಳ ಕಷ್ಟವೆಲ್ಲ ಪರಿಹಾರವಾಯಿತು (ಬೂಧ). ೨. ಕರಾವಳಿಯಲ್ಲಿ ಆಚರಿಸುವ ವಿಶಿಷ್ಟ ರೀತಿಯ ನಾಗಪೂಜೆ : ನಾಗನ ಪ್ರೀತಿಗಾಗಿ ದಕ್ಷಿಣಕನ್ನಡಜಿಲ್ಲೆಯ ಉಡುಪಿ, ಕಾರ್ಕಳ, ಕುಂದಾಪುರ ಮತ್ತು ಪುತ್ತೂರು ತಾಲ್ಲೂಕುಗಳಲ್ಲಿ 'ನಾಗಮಂಡಲ' ವೆಂಬ ಸೇವೆಯು ನಡೆಸಲ್ಪಡುತ್ತದೆ. (ವ್ಯವಹಾರದಲ್ಲಿ ಇದನ್ನು ಮಂಡಲಸೇವೆ ಅನ್ನುತ್ತಾರೆ) (ತುಳುಜಾ. ೨೩೦). 'ನಾಗಮಂಡಲ' ಪರಾ. [ಮಂಡಲ + ಸೇವೆ₁]

**ಮಂಡಲಸ್ವಸ್ತಿಕ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : P "ಚತುರಸ್ರಹಸ್ತವನ್ನು ಮಾಡಿ ಉದ್ವೇಷ್ಟನ ಮಾಡುತ್ತ ಕೈಗಳನ್ನು ನೀಡುವಾಗಲೇ ವಿಕ್ಷೇಪಚಾರಿಯನ್ನು ಮಾಡಿದ ಊರ್ಧ್ವಮಂಡಲ ಹಸ್ತದಿಂದ ಸುತ್ತಿಸುತ್ತ ಕೈಗಳನ್ನು ಸ್ವಸ್ತಿಕದಂತೆ ಹಿಡಿಯುವುದು" (ಚಾಸ್ಕರಂ. ೨೫೮ ಗದ್ಯಾನುವಾದ): ತಲಪುಷ್ಪಪುಟ, ಲೀನ, ವಿವರ್ತಿತ, ವಲಿತೋರು, ಮಂಡಲಸ್ವಸ್ತಿಕ . . . ಗಂಗಾವತರಣ— ಈ ನೂಱೆಂಟು ಕರಣಂಗಳ್ (ಚಾಸ್ಕರಂ. ೪-೪೨ ವ). [ಸಂ.]

**ಮಂಡಲಾಗ್ರ**, ಮಂಡಳಾಗ್ರ (ನಾ). ೧. ತುದಿಯಲ್ಲಿ ಬಾಗಿರುವ ಕತ್ತಿ : "ನಿಸ್ತ್ರಿಂಶಃ . . . ಮಂಡಲಾಗ್ರಂ – ಈ ೧೦ ಅಡಾಯುಧಂ" (ಹಲಾಯು. ೬೮-೩೦೮): ಮತ್ತೊರ್ವನತ್ಯುಗ್ರಮಂಡಲಾ[ಶಾಕಾಂ. ಳಾ]ಗ್ರಮನುಗೆಯ್ದು ವೀರಗ್ರಹಗ್ರಸ್ತನಾಗಿ (ಶಂಕಶಾ. ೦೦-೪೦ ವ): ಪ್ರಭಾಮಂಡಲದ ಮಂಡಲಾಗ್ರಮಂ ಚಂದ್ರಹಾಸಪ್ರಭಾಮಂಡಲದಿಂ ಹತಪ್ರಭಾಮಂಡಲಂ ಮಾಡಲುಂ (ಶಂಕಾವಜ. ೦೩-೦೩೩ ವ). ೨. ಗದಾಯುದ್ಧ ಹಾಗೂ ದ್ವಂದ್ವಯುದ್ಧಗಳಲ್ಲಿ ಅನುಸರಿಸುವ ಒಂದು ಬಗೆಯ ವರಸೆ, — ಪಟ್ಟು: ಆಲೀಢ ಪ್ರತ್ಯಾಲೀಢ ಸಮಪಾದ ವೈಷ್ಣವ ಮಂಡಲಾಗ್ರಮುಮೆಂಬ ಪಂಚವಿಧಸ್ಥಾನಕೃತಂಗಳೊಳಂ . . . ನಿಂದು (ಗದಾಯು. ೮-೦ ವ). **ಮಂಡಳಾಗ್ರ** : ೧. ಕದನಸಮುತೇಶ್ವರಂ ಪ್ರಚಣ್ಡಮಣ್ಡಳಾಗ್ರಮಣ್ಡಿತದೋರ್ದ್ದಣ್ಡಂ (ಶಾಇಇ. XX, ೪೬-೨೨; 1074). [ಸಂ.]

**ಮಂಡಲಾಧಿಪ** (ನಾ). ೧. ರಾಜ ; ದೊರೆ : ಬಸವನಾ ಮಂಡಲಾಧಿಪನೋಲಗದೊಳೊಲವಿಂದ ಕುಳ್ಳಿರ್ದ (ಬಸವು. ೦೦-೦). ೨. ಪ್ರಾಂತ್ಯದ ಒಡೆಯ. [ಸಂ.]

**ಮಂಡಲಾಧಿಪತಿ** (ನಾ). = ಮಂಡಲಾಧಿಪ ೨ : ಮುಂದೆ ಬಂದ ರಕ್ಕಸತಂಗಡಿ ಅನಾಹುತಕ್ಕೆ ಮಂಡಲಾಧಿಪತಿಗಳ ವೈಮನಸ್ಯ ನಾಂದಿಯಾಯಿತು (ಕರ್ಕೊಜೀ. I, ೦೯೬). [ಸಂ.]

**ಮಂಡಲಾಧೀಶ** (ನಾ). = ಮಂಡಲಾಧಿಪ ೨ : ಒಲಗಿಸುವ ನೃಪರಿಂ ಮಂಡಲಾಧೀಶರಿಂ . . . ವಿಶ್ವಂಭರೋರ್ವೀಶ್ವರನೆಸೆದಿರ್ಪಂ (ಶಾಸುವಜ. ೩-೨೨). [ಸಂ.]

**ಮಂಡಲಿ₁**, ಮಂಡಳಿ₁ (ನಾ). ೧. ಸುತ್ತು ; ವರ್ತುಲ ; ವಲಯ . ೨. ದುಂಡಾದ ಚಲನೆ ; ಚಕ್ರಾಕಾರವಾಗಿ ತಿರುಗುವುದು. ೩. ಗುಂಪು; ಸಮೂಹ : 'ಮಂಡಲಿಗೊಳ್' ಪರಾ. ೪. ಯಾವುದಾದರೊಂದು ಉದ್ದೇಶಕ್ಕಾಗಿ ರಚಿತವಾದ ಅಧಿಕಾರಿಗಳ ಸಮಿತಿ, ಸಂಸ್ಥೆ ಮುಂತಾದುವು : ಮಂಡಲಿಯಲ್ಲಿದ್ದವರಿಗೆಲ್ಲರಿಗೂ ಅವನನ್ನು ಕಂಡರೆ ಬೇಸರ (ಬಾದಶ. ೩೦೮). **ಮಂಡಳಿ₁** : ೩. ಆಗಳನೇಕ ಮೂರ್ಧಾಭಿಷಿಕ್ತಮಂಡಲಿಕ ಮಂಡಳೀಪರಿವೃತನಾಗಿ ಪದ್ಮರಾಜನಾ ರಾಜವಿದ್ಯಾವಿಳಾಸನಂ . . . ಕಲ್ಯಾಣಪೀಠಸಿಂಹಾಸನಂ ಮಾಡಿ (ಭುಕ್ತಿ. ೪-೮೦ ವ) ; ಗಿಳಿಜೊಡನೋದಿದೋದಿ ನುಡಿಗಲ್ತು ಮರಾಳಸರಾಜಹಂಸಮಂಡಳಿಯೊಡನಾಡಿಯಾಡಿ ನಡೆಗಲ್ತು (ಕವಿರ. ೦೯೩ ಕ್ರಮೋ) : ಪಾಂಡುರಂಗನ ಭಕ್ತರಂ ಭೂಮಂಡಲದೊಳಗೆ ಸುಳಿವ ಜಂಗಮಮಂಡಳಿಗಳಂ ಕರೆಸಿದರು ಮಡಿಹಾಸಿರಾ ಕಳುಹಿ (ಬಸವು. ೪-೩). ೪. ರಾಜನಿಗೆ ಸಲಹೆನೀಡುವ ಸಚಿವಮಂಡಳಿ ಇತ್ತೆಂಬುದಕ್ಕೆ ಸೂಕ್ತನಿದರ್ಶನಗಳಿವೆ (ರಘಾಇ. ೦೦೪).

P ಸಂಸ್ಕೃತದಲ್ಲಿ ಸಾಮಾನ್ಯವಾಗಿ ‘ ಮಂಡಲ ’ ಶಬ್ದಕ್ಕೆ ‘ ಈ ’ ಎಂಬ ಸ್ತ್ರೀವಾಚಕಪ್ರತ್ಯಯವು ಸೇರಿದಾಗ ಈ ಎಲ್ಲ ಅರ್ಥಗಳೂ ಬರುತ್ತವೆ. [ಸಂ. ಮಂಡಲೀ]

**ಮಂಡಲಿ₃**, ಮಂಡಳಿ₃ (ನಾ). ೧. ಸುತ್ತುಹಾಕುವುದು ; ಬಳಸುವುದು. ೨. ವರ್ತುಲಾಕಾರವಾಗಿ ಬರುವ ಗಾಳಿ; ಸುಂಟರಗಾಳಿ. ೩. ಹಾವು. ೪. ಮೈಮೇಲೆ ಗುಂಡನೆಯ ಚಿಹ್ನೆಗಳುಳ್ಳ ಒಂದು ಬಗೆಯ ವಿಷಸರ್ಪ. ೫. (ಇಲಿಯನ್ನು ಹಿಡಿಯಲು ಹೊಂಚುಹಾಕುತ್ತಿರುವ) ಬೆಕ್ಕು : “ ಜಾಪಕಃ, ಗಾತ್ರಸಂಕೋಚೀ, ಮಂಡಲೀ.–ಈ ೩ ಇಲಿಯಂ ಹಿಡಿಯಲನುಗೆಯ್ವ ಬೆಕ್ಕು ” (ಶಬ್ದಮ. ೪೦–೮೩). ೬. ಗೋಸುಂಬೆ. ೭. ನಾಯಿ. ೮. ಆಲದ ಮರ. ೯. ಒಂದು ಪ್ರದೇಶವನ್ನು ಆಳುವುದು : ‘ ಮಂಡಲಿನಾಡುಸಾಸಿರ ’ ಪರಾ. ೧೦. ಪ್ರಾಂತವನ್ನು ಆಳುವವನು. ೧೧. ಸೂರ್ಯ. ೧೨. (?) : ಸಂತಸದಿ ಕೇಳಿ ಮುನಿವರರೆಲ್ಲ ಮಾನವರೊಳಿಂತು ಲಕ್ಷಣಂಗಳ ತಿಳಿದು ಬೆಲೆಯ ಮಾಳ್ಪ ನಂತವನು ಮಂಡಲಿಯು ಪೆಸರಾದುದಾತಂಗೆ (ರತ್ನಶಾ. ೬–೨೩). **ಮಂಡಳಿ₂** : ೨. “ವಾತ್ಯೆ ಮಂಡಳಿಯೆನಲು ಸುಟಿಪ್ರಾನಿಲಂ ” (ಮಂಗರಾ. ೦೩–೧೧). [ಸಂ. ಮಂಡಲಿನ್]

**ಮಂಡಲಿಕ**, ಮಂಡಳಿಕ (ನಾ). ಸಾಮಾನ್ಯವಾಗಿ ಈಗಿನ ಒಂದು ಜಿಲ್ಲೆಯಷ್ಟು ವಿಸ್ತಾರವಾದ ದೇಶಭಾಗದ ಒಡೆಯ ; ಮಾಂಡಲಿಕ ; ಸಾಮಂತ : ‘‘ಮಧ್ಯಮು ಮಂಡಲೇಶಂ ಮಂಡಲಿಕನೆನಿಕ್ಕುಂ’’ (ಮಂಗರಾ. ೬೮-೦) ; ಅತಿಪ್ರಚಂಡಮಂಡಲಿ[ ಶಾಕಾಂ. ೪ ]ಕಮಹಾಸಾಮಂತಮಂತ್ರಿಪ್ರಧಾನಪುರೋಹಿತಾಂತರ್ವಂಶಿಕಾದಿಪರಿವಾರಪರಿವೃತಂ . . . ಒಡ್ಡೋಲಗಂಗೊಟ್ಟಿರೆ (ಅಭಿಪು. ೨–೨ ವ); ಮನ್ನೆಯ ಮಂಡಲಿಕರುಗಳು ಪೊಡವೀಶಗೆ ಕೈಯ ಮುಗಿದು ಎಡಬಲವನು ಸಾರಿರಲು (ಕುಂವ. ೦೧–೦೨೬). **ಮಂಡಳಿಕ** : ‘‘ಮಧ್ಯಮಃ, ಮಂಡಳೇಶ್ವರಃ — ಈ ೨ ಮಂಡಳಿಕಂ’’ (ಶಬ್ದಮ. ೬೦–೨೬೮); ಆ ಪೊಟಲನಾಳ್ದಂ . . . ಸ್ತ್ರಮಿತಸಾಗರಂ ಮಂಡಳಿಕಂ (ಶಾಂತಿಪು. ೦–೬೬); ಮಂಡಳಿಕ ಮನ್ನೆಯರಾಂಪರೇ ಚತುರಂಗಬಲಪತಿಗೆ (ಕುಮಾ.ಸ. ೩–೩).

ಮಂಡಳಿಕಕಂಠೀರವ = ಸಾಮಂತರಾಜರಿಗೆ ಸಿಂಹದಂತಿರುವವನು ; ಒಂದು ಬಿರುದು : ಮಣ್ಡಳಿಕಕಣ್ಠೀರವಂ ಪರಚಕ್ರಭೈರವಂ ರಾಯದಣ್ಡಗೋಪಾಳಂ (ಕೌಇಇ. XX. ೪೬–೯; 1074). ಮಂಡಳಿಕಚೂಡಾಮಣಿ = ಸಾಮಂತರಲ್ಲಿ ಶಿರೋಭೂಷಣಪ್ರಾಯನಾದವನು ; ಒಂದು ಬಿರುದು : ಅಜ್ಜಿವಂಶಾಂಬರದ್ಯುಮಣಿ ಮಣ್ಡಳಿಕಚೂಡಾಮಣಿ (ಎಕ. XII. ಶಿರಾ. ೪೦–೨೩; 1040). ಮಂಡಳಿಕತ್ರಿಣೇತ್ರ = ಸಾಮಂತರಾಜರಲ್ಲಿ ಪರಮೇಶ್ವರನಂತಿರುವವನು ; ಒಂದು ಬಿರುದು : ಪರಮಣ್ಡಳಿಕರ್ಕಳ ನಮ್ಮ ಸೀವು ಇ ಯೊಳಗೆ ನಿಮ್ಮ ಪನ್ನಲಿಗಳಂ ಬರಲೀಯದೆ ಕಣ್ಣ ಬಿಟ್ಟುದೇಳೆಳೆಯುಳಿಂಬಿನಂ ನೆಗಬ್ದುದೊಟ್ಟಜಿ ಮಣ್ಡಳಿಕತ್ರಿಣೇತ್ರನಾ (ಎಕ. II (R). ೬೪–೯೦; 974). ಮಂಡಳಿಕಭೈರವ = ಸಾಮಂತರಲ್ಲಿ ಭೈರವನಂತಿರುವವನು ; ಒಂದು ಬಿರುದು : ವಿಕ್ರಾನ್ತಕಣ್ಠೀರವಂ ಮಣ್ಡಳಿಕಭೈರವಂ ಶರಣಾಗತವಜ್ರಪಂಜರಂ (ಕೌಇಇ. XX. ೪೦–೦೦ ; 1056). ಮಂಡಳಿಕಮುಖದರ್ಪಣ = ಸಾಮಂತರಾಜರಿಗೆ ಕನ್ನಡಿಯಂತಿರುವವನು ; ಒಂದು ಬಿರುದು : ವಿಬುಧಸನ್ತರ್ಪಣಂ ಮಣ್ಡಳಿಕಮುಖದರ್ಪ್ಪಣನುಮಣ್ಡಳಿಕಗಜಕಂಠೀರವಂ (ಕಇ. IV. ೪೦–೬; 11 ನೆಯ ಶತ). ಮಂಡಳಿಕವೃಷಭಶಂಕರ = ಸಾಮಂತರೆಂಬ ಎತ್ತುಗಳಿಗೆ ಶಿವನಂತಿರುವವನು ; ಒಂದು ಬಿರುದು : ಗಣ್ಡರ ಗಣ್ಡಂ ಗಣ್ಡಭೇರುಣ್ಡಂ ಮೂಜುರಾಯಸ್ಥಾನಕಲಿ ಮಣ್ಡಳಿಕವೃಷಭಶಂಕರಂ (ಕಇ.IV. ೪೦–೪ ; 11ನೆಯ ಶತ). [ಸಂ.]

**ಮಂಡಲಿನಾಡುಸಾಸಿರ** (ನಾ). ಒಂದು ಆಡಳಿತಕ್ಕೆ ಒಳಗಾದ ಪ್ರದೇಶ : ಮಣ್ಡಲಿನಾಡುಸಾಸಿರಮುಮಾನಾಳೆ (ಎಕ. VII. ಶಿಕಾ. ೨೪–೩ ; 920). [ಮಂಡಲಿ₂ + ನಾಡು + ಸಾಸಿರ]

**ಮಂಡಲಿಸು**, ಮಂಡಳಿಸು (ಕ್ರಿ). ೧. ಚಕ್ರಾಕಾರವಾಗಿ ಸುತ್ತು.–ತಿರುಗು : ಕಿರುವಕ್ಕಿ ಹೊರಹೊಮ್ಮಿ ಚಿಲಿಮಿಲಿಸುತಿರೆ, ಹದ್ದು ಮಂಡಲಿಸುತಿರೆ (ಪ್ರಪಂಚ. ೬೪–೨೬೬). ೨. ಗುಂಪಾಗಿ ಸೇರು ; ಒಟ್ಟಾಗಿ ಕೂಡು : ಮಂಡಲಿ[ಶಾಕಾಂ. ೪]ಸಿರ್ದ ಬೇಚರಸಮೂಹದ ಮಧ್ಯದೊಳಿರ್ದ ಮೂರದಿಂ . . . ಕಂಡನಣುವ್ರತಪ್ರಕರಪಾಲಕನಂ (ತಂಪ್ರಶು. ೬–೮); ನೆತ್ತಿಯೊಳ್ ಪಾಱುವ ಗಿಳಿವಿಂಡು ಪಚ್ಚೆಯ ಸತ್ತಿಗೆಯಂತೆ ಮಂಡಲಿಸೆ (ಚೋಳಪ. ೨–೪೩). **ಮಂಡಳಿಸು** : ೨. ನೀರ್ವನಿಯಂ ಸುರಿವಂಬುದಾಳಿ ಮಂಡಳಿಸಿದ ಮೇಘಕಾಲಮೆನೆ ಕಣ್ಗೆಸೆದಂ ನೃಪರೂಪಚಂದ್ರಮಂ (ಕಾದಂಭೂ. ೩೮೯); ಕೊಡೆವಿಡಿದಂತೆ ಮಂಡಳಿಸೆ ಮೇಲೆ ಕಿರೀಟಮರೀಚಿ . . . ಕುಂಡಳಮಂಡಿತನೇಂ ವಿಳಾಸಮಂ ಪಡೆದನೊ (ಸಂಗಾವು. ೪–೯); ಕಲಶಪಲ್ಲವಚೌಕದಲಿ ಮಂಡಳಿಸಿದವು ಸತ್ತಿಗೆಗಳು (ಕುಮಾ.ರಾಮ. ೬–೨); ಬಂಡುಣಲೆಂದು ತಂಡತಂಡದಿಂ ಮಂಡಳಿಸಿ ಮಯ್ಯೋರಡಿಗಳ್ ಬಂದೆಱಗುಗುಂ (ರಾಜಶೇಖ. ೯–೦). ೩. ಸುತ್ತುಗಟ್ಟು ; ಆವರಿಸು; ಬಳಸು: ಮಂಡಳಿಸಿ ಮುರಿದೇಳ್ವ ಪಕ್ಷಿಯ ತುಂಡದಲಿ ತಳಿತೂಗೆದಂಬರಮಂಡಲದ ವಳಯದಲಿ ವಿಲಯಶಿಖಾಗ್ನಿಕಣದಂತೆ (ಕೊರಾ. ೩–೮–೮೨). ೪. ಸುರುಳಿಸುತ್ತಿಕೊಳ್ಳು ; ಇರಿಕೆ ಹಾಕಿಕೊಳ್ಳು : ಪೆಡೆಯ ಮೊದಲ್ಗಂ ತಂದದರೆ ಮಂಡಳಿಸಿತ್ತಹಿ ಶೇಷಕಾಯಮಂ (ತಂಪ್ರಶು. ೯–೮೨). [ಮಂಡಲ + – ಇಸು₃]

**ಮಂಡಲೀಕ**, ಮಂಡಳೀಕ (ನಾ). = ಮಂಡಲಿಕ : ಕುಡಿಯರ ಪಲ್ಲಭನುಜಿ ಮಂಡಲೀಕಪದಮಂ ಪಡೆದಂ (ಎಇ. VI. ೨೦೬–೦೦; 1057) ; ಮಂಡಲೀಕರ ಶಿರವ ಶೀಳಿದ ಗೆಲವ ತೆಗೆ . . . ಎನುತ ತೆಗೆದೆಚ್ಚರು ಮಹಾರಥರು (ಕುಮಾ.ರಾಮ. ೫೦. ೨೯೧). **ಮಂಡಳೀಕ** : ಬಾಳಿಮಮಂಡಳೀಕಶಾಂ ಪಡೆದನಪಾರಶೌರ್ಯ್ಯಮಹಿಮೋನ್ನತಿಯಂ ವಸುಧಾತಳಾಗ್ರದೊಳು (ಎಕ. VIII. ಸಾಗರ. ೦೩–೬೪ ; 1218). [< ಮಂಡಲಿಕ]

**ಮಂಡಲೆಸಾಯಿರನಾಡು** (ನಾ). ಒಂದು ಆಡಳಿತಕ್ಕೆ ಒಳಪಟ್ಟ ಪ್ರದೇಶ : ಮಣ್ಡಲೆಸಾಯಿರನಾಡ ತುಱುಗೋಳೊಳ್ ತೆರಳ್ದು ಸತ್ತಂ (ಮೈಆ. ೦೯೩೩, ೬೬–೪ ; 939). [< ಮಂಡಲಿ₂ + ಸಾಯಿರ (< ಸಾಸಿರ) + ನಾಡು]

**ಮಂಡಲೇಶ** (ನಾ). ೧. = ಮಂಡಲಿಕ : “ಮಂಡಲೇಶಂ ಮಂಡಲಿಕನೆನಿಕ್ಕುಂ” (ಮಂಗರಾ. ೬೮–೧). ೨. = ಮಂಡಲಾಧಿಪ ೧ : ಮಂಡಲೇಶನುಮ್ಮಟೇಂದ್ರನಿಟ್ಟಿ ಶೂಲಮೈದೆ ಮಾಂಕೊಂಡು ನಾಟಿ ವಕ್ಷಮಂ ಸುಶಕ್ತಿಯುಕ್ತನಾಗಿಯುಂ ಚಂಡಶಕ್ತಿಹೀನನಾಗಿ ಕೂಡೆ ನಿರ್ಜರಾರಿ ಕೈಕೊಂಡು ಪುಲ್ಲೆಯಂದದಿಂದೆ ಕೂರ್ತು ಪೋದನದ್ಭುತಂ (ಅದ್ಭಪು. ೪–೦೦೮). [ಸಂ.]

**ಮಂಡಲೇಶ್ವರ**, ಮಂಡಳೇಶ್ವರ (ನಾ). = ಮಂಡಲಾಧಿಪ ೨: ಮಹೋನ್ನತಿವೆತ್ತ ಮಣ್ಡಲೇಶ್ವರ ನಡೆಗೊಣ್ಡೆ ಸಾಯ್ಯನ ಕುಮಾರನಗ್ಗದ ಮಲ್ಲಿನಾಥನಂ ಪರಬಲಧೀರನೆನ್ದೊಲಿದು ಮನ್ನಿಸುವಂ (ಎಕ. XI. ಚಿತ್ರದು. ೨–೦೪; 1355) ; ಮಂಡಲೇಶ್ವರ ನಿನಗೆ ಕೊಡುವೆನಖಂಡಿತಾಭಿಮತಂಗಳಂ (ಜಕಪು. ೨೬–೩೩) ; ರಾಯರಾವುತ ಮನ್ನೆಯರಿಂ ಮಂತ್ರಿಮಂಡಲೇಶ್ವರರಿಂದೊಡ್ಡೋಲಗಂಗೊಟ್ಟು (ಪಂಪಭಾ. ೨–೩೩ ವ). **ಮಂಡಳೇಶ್ವರ** : ‘‘ಮಧ್ಯಮಃ, ಮಂಡಳೇಶ್ವರಃ — ಈ ೨ ಮಂಡಳಿಕಂ” (ಶಬ್ದಮ. ೬೦–೨೬೮) ; ಚಕ್ರೇಶ್ವರ ಮಂಡಳೇಶ್ವರಂ ಬೆಸಸೆ ನೆಗಟ್ದ ಕವಿ ಕವಿರತ್ನಂ (ಅಜಪು. ೦೨–೪೩). [ಸಂ.]

**ಮಂಡಪ** 'ಮಂಟಪ' ನೋ.

**ಮಂಡವಳ್ಳಿ** (ನಾ). ವಧೂವರರ ತಲೆಗೆ ಸಂಪ್ರದಾಯಬದ್ಧವಾಗಿ ತೊಡಿಸುವ ಹೂವು, ಮುತ್ತು ಮುಂತಾದುವುಗಳ ಅಲಂಕಾರಸಾಧನ : ಸರೋಜಳಿಗೆ ಮುತ್ತಿನ ಮಂಡವಳ್ಳಿಯನ್ನು ಕಟ್ಟಿ . . . ಶೃಂಗರಿಸಿದರು (ಹಂಪಾ. ೪೦). [ ← ಮರಾ. ಮಂಡವಳೀ, ಮಂಡಾವಳ, ಮುಂಡಾವಳ, ಮುಂಡಾವಳೀ]

**ಮಂಡವಿಗೆ** (ನಾ). ೧. ಸಣ್ಣ ಮಂಟಪ : ಮಂಡವಿಗೆಯ ವಿಳಾಸ ನಿವಾಸಂಗಳಿಂದಂ . . .ಅಂದಂಬಡೆದ ಪೊಱವೀಡಂ ಸೋವನ್ನ ಯಪ್ರದೀಪಂ ಪುಗುವಾಗಳ್ (ಶಾಂತಿಪು. ೧೧-೧೪೭ ವ) ; ಪವಳದ ಕಂಬಂ ಪಳಿಕಿನೆಸೆವ ತೊಲೆ ವಜ್ರದ ಮತ್ತವಾರಣಂ ಮುತ್ತಿನ ಮಂಡವಿಗೆ (ಸಂಕರ್ಷಣ. ೧೧-೪೫) : ರಾಮನರಮನೆ ಮಂಡವಿಗೆ ಗುಡಿ ಲಾಯ ಚವುಕಿಗೆ ನಿಳಿಳಭವನನಿಕಾಯವನು ತೆಗೆದೊಟ್ಟಿದರು ಬಂಡಿಗಳ ಹಂತಿಯಲಿ (ತುಪ್ಪಾಗ. ೯-೧೭). ೨. ಮೆರವಣಿಗೆ, ಉತ್ಸವ ಮೊದಲಾದ ಸಂದರ್ಭಗಳಲ್ಲಿ ಉತ್ಸವಮೂರ್ತಿ ಮೊದಲಾದುವುಗಳ ಮೇಲೆ ಎತ್ತಿಹಿಡಿಯುವ ಚತುಷ್ಕೋಣಾಕಾರದ ಮೇಲ್ಕಟ್ಟು ; ವಿತಾನ : ಸಂಪತ್ತಿನ ಚಿತ್ತರವೆತ್ತಿದ ಮುತ್ತಿನ ಮಂಡವಿಗೆ ಪೊಱಲ ಮನೆಗಳೊಳಿಲ್ಲಂ (ಶಬರಶಾ. ೩-೨) ; ಚಿತ್ತರದಿಂ ಬೆಳ್ಪಿಂಗಳ ಬಿತ್ತನೆ ತೊಳತೊಳಗೆ ತೊಳಪ ತಾರಗೆಯಿಂ ತಾಳ್ದಿತ್ತದು ಮಂದನಂಗೆತ್ತಿದ ಮುತ್ತಿನ ಮಂಡವಿಗೆಯೊಪ್ಪವಂ ಗಗನತಳಂ (ಪಾರ್ಶ್ವಪು. ೧೦-೦೯). [ < ಸಂ. ಮಂಡಪಿಕಾ]

**ಮಂಡವಿಗೆಬಲೆ** (ನಾ). ಒಂದು ಬಗೆಯ ಬಲೆ : ಹಿಂಡುವಲೆಗಳ ವಾಗುಣವಂಟಿನ ಮಂಡವಿಗೆಬಲೆ[ಪಾಠಾಂ. ಮಂಡವಿಗವಲೆ]ಗಳ ಕಿರಾತರು ಕೆದಱಿತಗಲದಲಿ (ತುಪ್ಪಾಅ. ೦೩-೨೩). [ಮಂಡವಿಗೆ? + ಬಲೆ₁]

**ಮಂಡಸೀಗೆ**, ಮಂಡೆಸೀಗೆ (ನಾ). ಒಂದು ಬಗೆಯ ಮುಳ್ಳಿನ ಬಳ್ಳಿ : ಮಂಡಸೀಗೆಯಾ ತುಱಿತಮೆನಿಪ್ಪ ಪಾಪಟೆಯ ಸದ್ದಳವುಂ ಬೆರಸುತ್ತುಂ (ಜನ್ನವ. ೦೩-೭೦). **ಮಂಡೆಸೀಗೆ** : ಮಂಡೆಸೀಗೆ ಹೇರಿಳಿಜೆಯೆಲಚಿ ತಂಡಸಿ ಮುಳ್ಳು ಬೇಲಿಗಳ್ ಸೇರಿ ಮುಟ್ಟಿಹುವಾಗಸವನು (ಕಂಪಂ. ೦೮-೩೫).
[ಮಂಡ? + ಸೀಗೆ₁]

**ಮಂಡಹಾರಕ** (ನಾ). ಮದ್ಯವನ್ನು ಬಟ್ಟಿ ಇಳಿಸುವವನು ; ಸಾರಾಯಿ ಮಾಡುವವನು : "ಶೌಂಡಿಕಃ, ಮಂಡಹಾರಕಃ — ೨ ಹೆಂಡಾ ಮಾಡುವವನ ಹೆಸರುಗಳು" (ಸಿದ್ಧಾಂತಿ. ೩೦೦). [ಸಂ.]

**ಮಂಡಳ** 'ಮಂಡಲ' ನೋ.

**ಮಂಡಳಮಾರಿ** (ನಾ). ಒಂದು ಬಗೆಯ ವನಸ್ಪತಿ : ಬೆಳಂಪೂಲಿಯ ಬೇರಂ ಮಂಡಳಮಾರಿಯ ಬೇರನಕ್ಕಿ ಪೊಳೆಯಿಂದರೆದಾ ವಿಳಸರ್ಪಕಾಡಿದೆಡೆಗಾಗಳೆ ಪೂಸಲ್ ನಿರ್ವಿಷಂ (ಖಸುಶ. ೬-೧೨). 'ಮಂಗವಮಾರಿ' ಪಠಾ. [ ? ]

**ಮಂಡಳಾಂಕ** (ನಾ). ೧. ಬಿಂಬದಲ್ಲಿ ಕಪ್ಪುಮಚ್ಚೆಯುಳ್ಳವನು : ಚಂದ್ರ. ೨. ಗ್ರಹಣಸಮಯದಲ್ಲಿ ತನ್ನ ಸುತ್ತಲೂ ನೆರಳುಳ್ಳವನು; ಸೂರ್ಯ. ೧. ೨ : ವರಮಂತಳಾಂಕನೀ ಹಿಮಕರನೆಸೆದಪನಾ ದಿನೇಶನೆನೆ ನೋಡಿರಸಾ (ರಾಜಶೇ. ೧೧-೭೬). ೩. ಯಾವುದಾದರೂ ಅಪಾರದರ್ಶಕ ವಸ್ತುವಿನ ಸುತ್ತಲೂ ಕಂಡುಬರುವ ನೆರಳಿನಂತಹ ಭಾಗ. [ಸಂ. ಮಂಡಲಾಂಕ]

**ಮಂಡಳಾಗ್ರ** 'ಮಂಡಲಾಗ್ರ' ನೋ.

**ಮಂಡಳಿ₁** 'ಮಂಡಲಿ₁' ನೋ.

**ಮಂಡಳಿ₂** 'ಮಂಡಲಿ₂' ನೋ.

**ಮಂಡಳಿಕ** 'ಮಂಡಲಿಕ' ನೋ.

**ಮಂಡಳಿಗೊಳ್** (ಕ್ರಿ). ಗುಂಪುಗೂಡು ; ಒಟ್ಟಾಗು : ಮಂಡಳಿಗೊಂಡು ಸಿಂಪಿಸುವ ಬಂಕಮವಾರಿಯ ಚಿಂಚಗೆಂಚು ಕೈಕೊಂಡು (ಅನಂತಪು. ೬-೩೦) ; ಈತಗೇಕೀ ದುಃಕೃತ್ಯವು ಮೊನೆಕೊಂಡುದು ವಿಸ್ಮಯವೆನುತ ಮಂಡಳಿಗೊಂಡು ಮಱುಗುತಿರಲು (ಶ್ರೀಕಂಠ. ೨-೦೫೩) ; 'ಮಂಡಳಿ' [ಪಾಠಾಂ. ೮] ಗೊಂಡಾಗಳ್ ಮನ್ನಾಳಾವಳಿ ನಗದ ಬಿಲದ್ವಾರದಿಂದೇಳ್ದುದು (ರಾಜಶೇ. ೬-೨).
[ಮಂಡಳಿ₁ ( = ಮಂಡಲಿ₁ ) + ಕೊಳ್₁ ]

**ಮಂಡಳಿಸು** 'ಮಂಡಲಿಸು' ನೋ.

**ಮಂಡಳೀಕ** 'ಮಂಡಲೀಕ' ನೋ.

**ಮಂಡಳೇಶ್ವರ** 'ಮಂಡಲೇಶ್ವರ' ನೋ.

**ಮಂಡಿ₁** (ನಾ). ೧. ತೊಡೆ ಮತ್ತು ಕಣಕಾಲಿನ ಮಧ್ಯದ ಕೀಲು, — ಸಂಧಿ : ತಿವಿದು ಕಡುಪಿಂ ಕೆಡೆಪಿ ಕೊಪ್ಪರದೊಳ್ ಕಾಮ್ಮಿ ಮಂಡಿಯೊಳ್ ಮಿದಿದು (೧೦೪. ೨-೦೦೫ ವ) ; ಅವರು ಮಂಡಿಯಿಂದ ಮೇಲೆ ದಟ್ಟಿ ಸುತ್ತುತ್ತಿದ್ದರು (ಮುಟ್ಟಿಹ. ೬) ; ಮಂಡಿ ಹಾಕಿ ಕೂತರೆ ಮಂಡಿಗೆ ಬಡಿಸ್ಯಾರೆ ? (ಗಾದೆ). ೨. ಮೊಳಕಾಲು ; ಜಾನು : ಬಲಿದು ಮುಂಡಿಯನೂಱಿ ಕನ್ನೆಗೆ ಸೆಳೆದು ಮುಷ್ಟಿಯ ಪಾರ್ಥಸುತನ ತಲೆಯ ನೆತ್ತನು (ತುಪ್ಪಾದ್ರೋ. ೦೯-೪೦); ಮಿಡುಕು ಕಂಠದೊಳಾಯ್ತು ಮಂಡಿಯ ಪಡಿಯ ಪದಪದ್ಧತಿಗೆ ಫಣಿಪನ ಹೆಡೆ ನಿಜಾಲುನಿಟಿಲೆಂದುದ (ಕೊರವಂ. ೯-೩-೮). ೩. ಮಲ್ಲಗಾಳಗ, ಕತ್ತಿವರಸೆ, ಬಾಣಪ್ರಯೋಗ ಮುಂತಾದ ಸಂದರ್ಭಗಳಲ್ಲಿ ಮೊಳಕಾಲನ್ನೂರಿ ಕುಳಿತುಕೊಳ್ಳುವ ಒಂದು ಭಂಗಿ : "ಕಳಾಸ ಚಾಳಿಯ ಮಂಡಿ ಸೀರಣಾ ಪಜ್ಜೆಯಕ್ಯಂ" (ಮಂಗರಾ. ೮೮-೩೮); ಆಯತ ಮಂಡಿ ದುವಾಪಡೆಕ್ಕಸರವಿಸರದುಲ್ಲಾಸ ದುಸ್ಸರಚಿವ್ವಡಿ . . . ಚಟಿಯೆಂಬ ಚತುರತಾನದ ತರಹರದೊಳು ಹಲಗೆಯ ಮಗ್ಗುಲೊಳು ಮಿದ್ದಮಂ ಜಡಿದರು (ಸೋಮನ. ೫-೦೮) ; ಕಕ್ಕಡ ಪರರು ಖಂಡೆಯ ದವರು ಮಂಡಿಸು ತೆರಳಿದಂತರು ಫಲುಗುಣನ ರಥದೆರಡುಪಕ್ಕದಲಿ ( ತುಪ್ಪಾಕ. ೨೪-೩೯ ) ; ಧ್ರುವಣದಲ್ಲಿ ಮೊಳಕಾಲಿನೊಡನೆಯೆದೆಯ ಕೂಡಿಸುವುದು ಯಾವುದು ಸಾಧನೆಯಲ್ಲಿ ಬೇರೆ ಉಂಟು ಅದರ ಹೆಸರು ಮಂಡಿಯಂಬುದು (ಐದ್ಯಟೀ. ೯-೨೨). ೪. ವಾತದಿಂದ ಮೊಳಕಾಲು ಹಿಡಿದುಕೊಳ್ಳುವ ಒಂದು ಬಗೆಯ ರೋಗ : (*).

**ಮಂಡಿಡಕ್ಕೆ** = ಮಂಡಿಗೆ ಕಟ್ಟಿಕೊಂಡು ಬಾರಿಸುವ ಒಂದು ಬಗೆಯ ವಾದ್ಯ: ಮಂಡಿಡಕ್ಕೆ ಶಲ್ಲುಕೆ ಕುಡುವೆ . . . ಶಂಖಪಾವಪ್ರಭೃತಿ ಸುಷಿರ ವಾದ್ಯಚಯಮುಂ . . . ಬಾಜಿಸುತೆ (ಶಬ್ದರಾ. ೩-೫೩). **ಮಂಡಿಯೂರು** = ಮೊಳಕಾಲನ್ನು ನೆಲದ ಮೇಲೆ ಊರಿ ಕುಳಿತುಕೊಳ್ಳು : ಪುಟ್ಟ ಲಕ್ಷ್ಮಿಯ ಆಕೃತಿ . . . ಭೂತದ ಎದುರಿಗೆ ಮಂಡಿಯೂರಿ ನಮಸ್ಕಾರ ಮಾಡಿತು (ಸಣ್ಣಕ. IV, ೫೬) ; ದೇವರ ಮುಂದೆ ಆಕೆ ಮಂಡಿಯೂರಿ ಕುಳಿತು ಪ್ರಾರ್ಥಿಸುತ್ತಿದ್ದಳು (ಕೂಡಿ). **ಮಂಡಿಯೋರು** = ಮಂಡಿಯೂರು : ಗಗನದಲಿ ರಥ ಯೋಜನಾಂತಕೆ ಚಿಗಿದು ಧರಣಿಯ ಮೇಲೆ ಬೀಳಲು ನಗುತ ಕರಣವ ಹಾಯ್ಕಿ ಮಂಡಿಯೊಲೆರ್ದನಾ ದ್ರೋಣ (ತುಪ್ಪಾದ್ರೋ. ೦೩-೦೯). **ಮಂಡಿಹೂಡು**, **ಮಂಡಿಯಹೂಡು** = ಮಂಡಿಯೂರು : (*) ; ಪರಮಶಿವಾನಂದಯೋಗದೊಳಿರಲು ಕಂಡಿಡಪಂಕದಲಿ ಘನತರುವ ಮರೆಗೊಂಡಾಗ ಮಂಡಿಯ ಹೂಡಿ ಬಿಲ್ಗಿಡಿದು . . . ಎಚ್ಚಡೆ (ಅನಂತಾ. ೧-೦೯-೦೫).

[ದೇ. ॥ ತಮಿ. ಮುಣ್ಟ; ಮಲ. ಮುಣ್ಟುಕ = ಹಿಮ್ಮಡಿಯ ಮೇಲೆ ಕುಳಿತುಕೊಳ್ಳು ; ತುಳು. ಮಂಡಿ , ತೆಲು. ಮಂಟ, ಮುಂಡಿವಿ ; **ಗೊಂಡಿ.** ಮೊಂಡಾ; ಕುಇ. ಕುವಿ. ಮೊಂಡ./ಮರಾ. ಮಾಂಡೀ]

**ಮಂಡಿ₂** 'ಮೊಂಡಿ' ನೋ.

**ಮಂಡಿ₃** (ನಾ). ಭಾರಿ ಪ್ರಮಾಣದ ವ್ಯಾಪಾರ ನಡೆಯುವ ಸ್ಥಳ ; ಸಗಟು ವ್ಯಾಪಾರದ ಅಂಗಡಿ : ಆ ಮಂಜಪ್ಪನವರು ಅಡಿಕೆಯ ಮಂಡಿಯ

ವೆಂಕಟಸ್ವಶೆಟ್ಟರು ಎಲ್ಲರು ಮಾಳೂರಿನವರು (ಇಂತಾಕ. ೬-೨೨) ; ಬಹುಶ್ರುವು ಪಟ್ಟು ಒಂದು ಮಂಡಿ ಅಂಗಡಿಯಲ್ಲಿ ಗುಮಾಸ್ತೆ ಕೆಲಸವನ್ನು ಕೊಡಿಸಿದನು (ಪಾಪಗೆ. ೧೬೭). [← ಹಿಂ. ಮಂಡೀ ; ಮರಾ. ಮಂಡಈ]

**ಮಂಡಿಕಲ್** (ನಾ). ಒಂದು ಊರಿನ ಹೆಸರು : ಮಣ್ಣಕಲ್ಲ ಕಮ್ಮಲ ದಾನವರ್ಮ್ಮ ಕಡಸಂ ಪೆರ್ಘುಲಿ ಕೊಹ್ಕೋಡೆ ಆ ಪುಲಿಯುಂ ಕೊಲ್ವೆನೆನ್ದು ಪ್ರತಿಜ್ಞೆ ಕಡಿದು (ಎಕ. X. ಮುಳಬಾ. ೧೬೩-೨ ; ಸು. 950).

[ ಮಂಡಿ$_{2}$ + ಕಲ್$_{3}$ ]

**ಮಂಡಿಗಾಲು** (ನಾ). ಕುಳಿತುಕೊಳ್ಳುವುದರಲ್ಲಿ ಒಂದು ರೀತಿ; ಕುಳಿತು ಕೊಳ್ಳುವಾಗ ಮೊಣಕಾಲನ್ನು ಊರುವುದು; ಮಂಡಿಯೂರುವುದು: ಮಂಡಿಗಾಲಲ್ಲಿ ಕುಳಿತುಕೊಳ್ಳುವುದರಿಂದ ಪಾಪಕ್ಷಯವಾಗಿ ತ್ರಿದೋಷ ಹರವಾಗಿ, ಶರೀರಕ್ಕೆ ಕಾಂತಿಯುಂಟಾಗುವುದು (ಸಕಪ್ಪ. ೩೯) ; ಮಂಡಿ ಗಾಲು ಹೂಡಿ . . . ಕಂಗೊಳಿಸುವ ಬಾಲಕೃಷ್ಣನ . . . ಶಿಲ್ಪಕಲಾವಿಶಿಷ್ಟ ವಾದ ಮೂರ್ತಿಗಳು ವಿನಾ ಬೇರೆಯವು ಭಕ್ತರ ಚೇತೋಹಾರಿಯಾಗಲು ಶಕ್ಯವಿಲ್ಲ (ಅರದ. ೬೯). [ಮಂಡಿ$_{1}$ + ಕಾಲು$_{1}$ (<ಕಾಲ್$_{1}$)]

**ಮಂಡಿಗೆ** 'ಮಂಡಗೆ' ನೋ.

**ಮಂಡಿಚಡ್ಡಿ** (ನಾ). ಮೊಳಕಾಲಿನವರೆಗೆ ಬರುವಂತೆ ಸೊಂಟದ ಕೆಳಗೆ ತೊಡುವ ಉಡುಪು ; ಚಲ್ಲಣ : ಮಂಡಿಚಡ್ಡಿಯು ಕಾಲಾಳೊಬ್ಬ ಬೆಳ್ಳಿತಟ್ಟೆಯಲ್ಲೊಂದು ಪತ್ರ ತಂದನು (ಕೃಶರು. ೩೨೯).

[ಮಂಡಿ$_{1}$ + ಚಡ್ಡಿ$_{1}$]

**ಮಂಡಿತ** (ಗು). ೧. ಶೋಭೆಗೊಂಡ ; ಅಲಂಕೃತವಾದ : ರವಿಕುಲದ ರಾಮಂ . . . ನಿಜಸತಿಯ ತೋರದೊಡೆಗಳ ಮೇಲೆ ಲಲಿತಮಣಿಮಕುಟ ಮಂಡಿತಮಸ್ತಕವನಿಕ್ಕಿ ಮಗ್ಗುಲಿಕ್ಕಿದನು (ಹತೆರಾ. ೬-೩೦) ; ಗುರು ಮಲ್ಲಿಕಾರ್ಜುನಪಂಡಿತರ ಕೃಪೆಯಿಂ ಮಂಡಿತೋಕ್ತಿಯೊಳವರ್ಗಳಿತ್ತುದ್ದಂಡ ಮತಿಯಿಂದಿಳೆಗೆ ಬಸವಣದಂಡನಾಥನ ಕೃತಿಯನೊರೆದೆನು (ಬಸೃ. ೧-೧೧). ೨. (ಅಧಿಕಾರಕ್ಕಾಗಿ) ಸ್ಥಾಪಿಸಿದ ; ನೆಲೆಗೊಳಿಸಿದ : ಕದನಮಹೇಶ್ವರಂ ಪ್ರಚಣ್ಡಮಣ್ಡಳಾಗ್ರಮಣ್ಡಿತದೋರ್ದ್ದಣ್ಡಂ (ಶಾಇಇ. XX. ೪೭-೨೨ ; 1074). (ನಾ). ೩. ಅಲಂಕೃತನಾದವನು ; ಭೂಷಿತನಾದವನು : "ಮಂಡಿತಃ . . . ಪರಿಷ್ಕೃತಃ — ೫ ಅಲಂಕರಿಸಲ್ಪಟ್ಟವನ ಹೆಸರುಗಳು" (ಸಿದ್ಧಾಂ. ೦೯೮). ೪. ಸ್ಥಾನ ; ಪದವಿ. ೫. ಕಪ್ಪೆ. ೬. ಕುದುರೆ. ೭. ಮನಸ್ಸು. ೮. ಹುಲ್ಲು : "ಮಂಡಿತಮೆನೆ ಪದಮಕ್ಕುಂ ಮಂಡಿತಮೆನೆ ಕಪ್ಪೆಯಕ್ಕು ಮಂಡಿತಮೆನೆ ತುರಗಂ ಮಂಡಿತಮೆನೆ ಮನಮಕ್ಕುಂ ಮಂಡಿತಮದು ತೃಣಮೆನಿಕ್ಕು ಶಬ್ದಾಗಮದೊಳ್" (ಕಶ್ಯಪಂ. ೨೭). ೯. ಚಂದ್ರ. ೧೦. ಹಂಸ. ೧೧. ಕಮಲ. ೧೨. ಬೆಟ್ಟ. ೧೩. ಸಿಹಿ ; ಮಧುರ : "ಮಂಡಿತಮೆನೆ ಶಶಿಯಕ್ಕುಂ ಮಂಡಿತಮೆನೆ ಹಂಸೆಯಕ್ಕುಂ ಮಂಡಿತ ಕಮಲಂ ಮಂಡಿತಮೆನೆ ಗಿರಿಯಕ್ಕುಂ ಮಂಡಿತಮೆನೆ ಮಧುರಮಕ್ಕು ಶಬ್ದಾಗಮದೊಳ್" (ಕಶ್ಯಪಂ. ೨೮). [ಸಂ.]

**ಮಂಡಿಸು$_{1}$** 'ಮುಂಡಿಸು' ನೋ.

**ಮಂಡಿಸು$_{2}$**, ಮಂಡಯಿಸು (ಕ್ರಿ). ೧. ಪೀಠ ಮೊದಲಾದುವುಗಳ ಮೇಲೆ ಕುಳಿತು ಅದಕ್ಕೆ ಶೋಭೆಯನ್ನು ತರು : ಅಂಧನೃಪನನು ಹರುಷದಲಂದು ಮುನಿ ಮಂಡಿಸಿದನುನ್ನತಸಿಂಹಪೀಠದಲಿ (ಕುವ್ಯಾ. ೧೬-೪) ; ಉಚಿತವ ಕೈಕೊಂಡು ನಾರದ ನವರತ್ನಖಚಿತಪೀಠದಲಿ ಮಂಡಿಸಿದ (ಮೋಹತ. ೩೩-೧೩). ೨. ಕುಳಿತುಕೊಳ್ಳು ; ಕೂಡು : ಮಂಡಿಸಿ ದನವನೆದೆಯಲಾ ದೋರ್ದಂಡಬಲ ಕಲಿವೃಷಭನಂದಿನ ಖಂಡಪರಶುವಿನಂತೆ ನೆಗಹಿದ ಮುಷ್ಟಿ ಕಿಡಿಗೆದರೆ (ಕೂರಾಜಾ. ೬-೩೩-೧೯) ; ಶಾಸುವರೆಗಟಿಗೆ ಕೆಲದೊಳ್ ಮಂಡಿಸಿ ಬಾಲಲೀಲೆಯಂ ನೆನೆನೆನೆದು (ರಾಮಾಶ್ವ. ೧೮-೧೮) ; ಯಜಮಾನರು ನಡುವೆ ಉಯ್ಯಾಲೆಯ ಮೇಲೆ ಮಂಡಿಸಿದ್ದಾರೆ (ಕಪಾಕ. ೩೬). ೩. ರಕ್ತಿಯನ್ನು ಕಳೆದುಕೊಂಡು ಕುಸಿದುಬೀಳು ; ಒರಗು : ಚೇತನಗುಂದಿ ದಿಗ್ದಂತಿ ಮಂಡಿಸಲಾಗ ಭೂತಳವೆಲ್ಲ ಕಂಪಿಸಿತು (ಮೋಹತ. ೩೮-೬೨). ೪. ಬಾಗಿಸು ; ಬಗ್ಗಿಸು : ಕಿವಿಯಂ ಮಂಡಿಸಿ [ಶಾಕಾಂ. ಮಂಟಿಸಿ, ಮೆಳ್ಳಿಸಿ] ಮಂಚುವಲ್ಲಿಖಿದು ಕಣ್ಣಂ ಬಿಟ್ಟು ವಕ್ರಾಂಗಿ . . . ತೋರ್ಪ ವಿಕಾರಂ ಸಭೆಗಾಗಳೀಂ ಪಡೆದುದೋ ವಕ್ರಪ್ರಕಾಶೋದಿತಾ ರವಮಂ (ಶಕರ. ೨-೯೮) ; ಬಲಗಿವಿಯಂ ಮಂಡಿಸಿ ಮಣಿವೃತ್ತಂ (ಶೃಂಗಾರ.ಪ. ೩೯-೩). ೫. ಇರು ; ನೆಲಸು : ಐಕಲ್ವೆಟ್ಟನಣುಗಿಗೆಡದೊಡಲನಿತ್ತಲ್ಲಿ ಮಂಡಿಸಿದ ಶಂಕರನಲ್ಲಯಿಂ (ಪಾಪಶಂ. ೦-೩೦) ; ವಿಸ್ತರಗೆಯ್ದು ನೋಡಿದಡೆ ಬ್ರಹ್ಮಾಂಡಸಮಸ್ತ ನಿನ್ನೊಳಡಗಿಯದು ಪ್ರಸ್ತವಿದೇನು ಕಾರಣ ಸ್ವಾಮಿ ನೀನೆನ್ನ ಹಸ್ತಾಬ್ಜದೊಳಗೆ ಮಂಡಿಸಿದೆ (ಮೋಹತ. ೨೦-೨೪). ೬. ನೆಡು ; ನಾಟು : ಮಂಡಿಸಿದವಕ್ಷಿಗಳು ತಿಳಿಗೊಳನಲಿ ತಳೋದರಿಯ (ಕೂರಾಜಾ. ೩-೮-೨೪). ೭. ವಿಷಯವನ್ನು ಮುಂದಿಡು ; ಪ್ರತಿಪಾದಿಸು : ಜ್ಞಾನ ಕರ್ಮಗಳ ತಿಕ್ಕಾಟವನ್ನು ಬಿಂಡಿಸಿ ಇಲ್ಲಿಯೂ ಸಮನ್ವಯ ಸಿದ್ಧಾಂತವನ್ನೇ ಮಂಡಿಸುತ್ತಾನೆ ಶ್ರೀಕೃಷ್ಣ (ಶಾರದ. ೦೦೩) ; ಮುಕ್ತಾಯಕ್ಕೆ ಅಲ್ಲಮನ ಮುಂದೆ ತನ್ನ ಮನದ ಸಂದೇಹಗಳನ್ನು ಮಂಡಿಸಿ ಅವನಿಂದ ಸಮರ್ಪಕವಾಗಿ ಸಂದೇಹಗಳನ್ನು ಪರಿಹರಿಸಿಕೊಂಡು . . . ಸದ್ಯೋನ್ಮುಕ್ತೆಯಾಗುತ್ತಾಳೆ (ಕೂಪ್ಪಳು. ೦೩೯). ೮. [ರಾಜನೀ] ಶಾಸನಸಭೆ ಮೊದಲಾದುವುಗಳಲ್ಲಿ ಒಪ್ಪಿಗೆಯನ್ನು ಪಡೆಯಬೇಕಾದ ನಿರ್ಣಯ ಅಥವಾ ಠರಾವನ್ನು ಸಭೆಯಲ್ಲಿ ಪ್ರಸ್ತಾಪಿಸು : ಸಂಸತ್ತಿನ ಯಾವ ಸದನದಲ್ಲಿಯೂ ಆ ವಿಧೇಯಕವನ್ನು ಮಂಡಿಸತಕ್ಕುದಲ್ಲ (ಭಾರಾಪ. ೩) ; ಕಾರ್ಯದರ್ಶಿ ಕೃಷ್ಣಮೂರ್ತಿಗಳು . . . ಬಜೆಟ್ಟಿನ ವಿವರವನ್ನು ಮಂಡಿಸಿದರು (ಮರಿ. ೦೦೭). ಮಂಡಯಿಸು : ೯. ಶೋಭಿಸು ; ಕಂಗೊಳಿಸು : ಸತಧಿಯಂ ದಾಂಟಿ ಮೆಯ್ವೆಚ್ಚ ಮತ್ತಾಗಸದೊಳ್ ಮಂಡಯಿಸ ನಕ್ಷತ್ರಮ ಬಸುಮ ಫಳಂ ಚಂದ್ರಸೂರ್ಯ್ಯರ್ಕ್ಕಳಾ ಕೀರ್ತ್ತಿ ಸುರಾವಳಿಯುಕ್ಕಾಗಿರೆ ಬಳೆಮದು (ಶಾಇಇ. IX-i. ೨೪೯-೩೦ ; 1147). [ಮಂಡನ + -ಇಸು$_{3}$]

**ಮಂಡುಕ** (ನಾ). ಕಪ್ಪೆ ; ಭೇಕ : ಅಡವಿಯ ಸೆತ್ತನಾಂಘ್ರಿಪದ ಪಶ್ಚಿಮದೊಳ್ ತ್ರಿಕಹಸ್ತದಿಂದೆ ನೋಡಗುಬಿತುಮಂತೆ ಫಂಸವರೆ ಮಂಡುಕಮಂ ಸಿತಪೀತವರ್ಣದಿಂದಪಸಿದಮಾ ಬಟಿಕ್ಕೆ ಸೆರೆ(ಲೆ)ಯಾದೊಡೆ (ಅಬ್ಬಿಮು. ೦೦೩).

[<ಪ್ರಾ. ಮಂಡುಕ./ ಸಂ. ಮಂಡೂಕ]

**ಮಂಡೂಕ** (ನಾ). ೧. = ಮಂಡುಕ : "ಮಂಡೂಕಃ, ಪ್ಲವಗಃ . . . ಪ್ಲವಂಗಂ — ಈ ೨ ಕಪ್ಪೆ" (ಹಲಾಯು. ೦೦೯-೪೦) ; ಮಂಡೂಕಂ ರದ ನಿಧಿಯಂ ಕಂಡಜಿಯದೆ ಪಳಿಗುವಬ್ಜಿಗದು ಭಂಗಮೆ (ರಸರಾಜ್ಯ. ೦-೪೯). ೨. ಒಂದು ಜಾತಿಯ ಕುದುರೆ. ೩. ಕುದುರೆಯ ಗೊರಸಿನ ತಳ ಭಾಗ. ೪. ಒಂದು ಬಗೆಯ ಸಸ್ಯ. [ಸಂ.]

**ಮಂಡೂಕಪರ್ಣ** (ನಾ). ಒಂದು ಬಗೆಯ ಮರ : "ಮಂಡೂಕಪರ್ಣಃ . . . ಶೋಣಕಃ, ಅರಳುಃ — ೧೨ ಹೆಮ್ಮರದ ಹೆಸರುಗಳು" (ಸಿದ್ಧಾಂ. ೦೨೪). [ಸಂ.]

**ಮಂಡೂಕಪರ್ಣಿ** (ನಾ). ಒಂದು ಬಗೆಯ ಗ್ರಂದಿಗೆ ದ್ರವ್ಯ ; ಮಂಜಿಷ್ಟೆ : "ಮಂಜಿಷ್ಠಾ . . . ಮಂಡೂಕಪರ್ಣೀ. ಭಂಡೀರೀ. ಭಾಂಡೀ. ಯೋಜನವಲ್ಲೀ — ೯ ಮಂಜಿಷ್ಠೆ ಹೆಸರುಗಳು, ಇವು ಗ್ರಂಥಿಕದ್ರವ್ಯವು" (ಸಿದ್ಧಾಂ. ೭೩೨). [ಸಂ. ಮಂಡೂಕಪರ್ಣೀ]

**ಮಂಡೂಕಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ: ಸಿದ್ಧಾಸನ ಸಿಂಹಾಸನ . . . ಮಂಡೂಕಾಸನ. . . ಆರ್ಧಾಸನಾದಿ ಎಂಬತ್ತು ನಾಲ್ಕು ಆಸನಭೇದಂಗಳು (ಬವೇಶ. ೦೩೦) ; ಮಂಡೂಕಾಸನ . . . ಈ ಆಸನದಲ್ಲಿನ ಚಲನವಲನಗಳು ಕಪ್ಪೆಯನ್ನು ಹೋಲುವುದರಿಂದ ಇದಕ್ಕೆ ಈ ಹೆಸರು (ಯೋಗದ. ೦೦೧). [ಸಂ.]

**ಮಂಡೂಕಿ** (ನಾ). ೧. ಹೆಣ್ಣುಕಪ್ಪೆ. ೨. ಕುದುರೆಯ ಗೊರಸಿನ ಮೇಲಿರುವ, ಕಪ್ಪೆಯಂತಿರುವ ತ್ರಿಕೋನಾಕಾರವಾದ ರೇಖೆ : ಖುರದ ನಡುವೆ ತಳವೆ(ಮಂ)ಬ ಪೆಸರಕ್ಕುಂ ತಳದ ನಡುವಣ ತ್ರಿಕೋಣರೇಖೆಗೆ ಮಂಡೂಕಿಯೆಂಬ ಪೆಸರಕ್ಕುಂ (ಅಶ್ವಶಾ. ೬೬-೨೭). [ಸಂ. ಮಂಡೂಕೀ]

**ಮಂಡೂರ** (ನಾ). ೧. ಕಬ್ಬಿಣದ ತುಕ್ಕು, — ಕಿಟ್ಟ : "ಮಂಡೂರಃ, ಸಿಂಘಾಣಂ—೨ ಕಬ್ಬಿಣದ ಕಿಟ್ಟಕ್ಕೆ ಹೆಸರುಗಳು" (ಸಿದ್ಧಾಂತಿ. ೩೦೯). ೨. ಕಬ್ಬಿಣದ ಕಿಟ್ಟದಿಂದ ಮಾಡಿದ ಕೆಂಪು ಭಸ್ಮ : ಮೆಣಸು, ಮಂಡೂರ, ರಜಸ್ಸ . . . ಪ್ರಾತಃಕಾಲದಲ್ಲಿ ಗ ೪ ತೂಕವಂ ಸೇವಿಸುವುದು (ಸಶಪ. ೨೦೬). [ಸಂ.]

**ಮಂಡೆ** (ನಾ). ೧. ತಲೆ ; ಶಿರಸ್ಸು : "ತಲೆ ನೆತ್ತಿ ಮಂಡೆ" (ಶಬ್ದಮಂ. ೬೨) ; ಉತ್ಸುಕತನದಿಂ ಪೆಟ್ಟುವೆರ್ಚೆ ಕಡುವೆಸನಂ ಪೂಣ್ಬು ಸೊಸೆ ಮಾವನ ಮಂಡೆಯಂ ಬೋಳಿಸಿದಳ್ (ರಸರ್ಶಾಸ್ತ್ರ. ೬-೩೮) ; ಮಂಡೆ ಬೋಳಾದ ರೇನೋ ಹುಟ್ಟಿ ಬೋಳಾಗದನ್ನಕ್ಕರ (ಅವಚ. ೯-೦೫) ; ಕಂಡೆ ಕರುಣಾ ನಿಧಿಯ ಗಂಗೆಯು ಮಂಡೆಯೊಳಿಟ್ಟ ದೊರೆಯ (ಪುರಂದ. ೦-೦೬೫ ಕ್ಷ೨). ೨. ತಲೆಯ ಓಡು ; ಬುರುಡೆ : 'ಮಂಡೆಗೈಯ' ಪರಾ. ೩. (ಅಲಂ) ತಲೆಗೂದಲು : ವೃದ್ಧವಿಟೆಯೊರ್ವಳ್ತನ್ನ ಮೊಗದ ತೆರೆಯುಮಂ ಮಂಡೆಯ ನರೆಯುಮಂ ಕಂಡಪಲ್ಲಿಂದಡಿಗಡಿಗೆ ಮೊಗಕ್ಕೆ ತೆರೆಯಂ ತೆಗೆವುದಂ ಕಂಡು (ಶಾಕ್ಷೇಳು. ೦೦-೬೦ ವ) ; ಬೆನ್ನಲ್ಲಿ ಬಿಟ್ಟ ಮಂಡೆಗಳ ಸುಯ್ಯು ಬಹಳದ ಭಟರು ತೊಡೆಳಸುತೊಯ್ಯನೆಂದರು (ಕುಮ್ಮಾರ. ೦೯-೬) ; ವೃದ್ಧಾಪ್ಯವಿಲ್ಲದೆ ಮಂಡೆ ನರೆವದು, ಕೆಂಪಾಗಿಹನು . . . ಈತನನ್ನು ಪಿತ್ತ ಪ್ರಕೃತಿಜನೆಂದು ಅರಿಯುವುದು (ವೈದ್ಯಶಾ. I, ೦೩). ೪. ಅತ್ಯುತ್ತಮವು ವಾದುದು ; ಶ್ರೇಷ್ಠವಾದುದು : ಬೇಡಿದ್ಯೆದೂರುಗಳು ನಮ್ಮಯ ನಾಡುಗಳ [ಪಾಠಾಂ. ನಾಡ ತಲೆ] ಮಂಡೆಗಳು (ಕುಮ್ಮಾಅ. ೯-೩೩). ೫. ದೊಡ್ಡದು ; ಗಾತ್ರವಾದುದು : 'ಮಂಡೆಕಾಗೆ' ಪರಾ. ೬. (?) : ಬಲದೋಳ್ ಪತ್ತಿದ ಮಂಡೆ ಚಮ್ಮಟಿಗೆ ಕೈವೀಣಂ ಬೆಡಂಗಾಗೆ (ಅಪಂಶು. ೦೦-೬೨); ಒಂದು ಕಾಲದಕ್ಕಿ ಸಿಕ್ಕಿದರೆ ಅಕ್ಕಿಯ ಕೊಟ್ಟು ಬಾಳೆ ಒಟ್ಟೆಸುವರು ತೋಟಕ್ಕೆ × × × ತೆಕಲ ಮಂಡೆ ೪ ನಾಲ್ಬಡರ ಒಪ್ಪ ಮುಂದ್ದಣದೇವರು (ಶಾಸನ. IX–ii, ೪೪೪-೩೬ : 1433).

**ಮಂಡೆಗೆ ನೀರು ತಳೆ** = ಅಭಿಷೇಕ ಮಾಡು : ದೇವರ ಮಂಡೆಗೆ ನೀರುತಳೆಯುವವರಿಲ್ಲ (ತಶರಾ. ೨೭). **ಮಂಡೆಬೀಳು** = ಶರೀರದಿಂದ ತಲೆಯು ಬೇರ್ಪಡು ; ಸಾಯು : ಚಂಡೀಮುಖಿಕ್ಷುತ್ಪಿಪಾಸೆಗಳ ನೀಗಿಸಲು ಮಂಡೆ ಬೀಳಲಿ ಬಿಟ್ಟು ದುರ್ಧರಕಬಂಧವ ಚರಂಡಿಯಲಿ (ಪಪ್ಪರ್ಸ. ೦೩-೬). **ಮಂಡೆಮಾಣಿಕ** = (ಅಲಂ) ಶ್ರೇಷ್ಠವ್ಯಕ್ತಿ : ಇನಿವಾತುಗಳ ಸತ್ಪದಬಂಧವ್ಯಂಗ್ಯೋಕ್ತಿ ಧ್ವನಿಯರ್ಥಗೌರವದಿಂದೆ ತನಿರಸವಡೆದ ಮುತ್ತೂತಿಯ ಚಿತ್ತೈಸೆಲೆ ವನಿತೆಯ ಮಂಡೆಮಾಣಿಕವೆ (ಪೊಂಚತ. ೨೬-೨). **ಮಂಡೆಮಾಣಿಕ್ಯ** = ಮಂಡೆಮಾಣಿಕ : ವನಿತೆಯರ ಮಂಡೆಮಾಣಿಕ್ಯ ತಾನಾದ ಕಾರಣ ತನ್ನ ಸೌಂದರ್ಯ ಮಾಜಿಕೊಂಡಿರ್ದಡೇಂ (ಶಶಮೋ. ೯-೦೦). **ಮಂಡೆಮಾರಿ**$_1$ = ತಲೆಗೆ ಕುತ್ತದಂತಿರುವವನು; ಪ್ರಾಣಾಪಾಯವನ್ನುಂಟುಮಾಡುವವನು ; ಒಂದು ಬಿರುದು : ಸ್ವಸ್ತಿಶ್ರೀಜಯ ಕಾಮನ್ನೀರಪೆಬ್ಬಾಣಾನ್ ಕಡಿತಲೆ ಮಣ್ಡೆ ಮಾರಿ ತೊಮ್ಬುತ್ತೈಪರ್ ಇಜಿಪೊ (ಎಕ. IX (೪), ದೊಡ್ಡಬ. ೩೨-೬ ; ೨೦೦). **ಮಂಡೆ ಬೋಳು** = ತಲೆಯನ್ನು ಬೋಳಿಸಿಕೊಳ್ಳು ; ಮುಂಡನಮಾಡಿಸಿಕೊಳ್ಳು : ಮಂಡೆಬೋಳಿವಾ ಹೆಂಡಿರ ದಂಡೇ ವಿವಿಧಾಲಾಪಚಂಡಪ್ರಲಾಪದ ಓಲಗ ಬಾಜಿಸಿರಿ ! (ಗಂ. ೬೬-೩). **ಮಂಡೆಯಾಜುಳ್ಳವ** = ಆರುತಲೆಗಳುಳ್ಳವನು ; ಷಣ್ಮುಖ : ಶುಂಡಲ ಮುಗನು ಮಂಡೆಯಾಜುಳ್ಳವ ಕೆಂಡಗಣ್ಣವನು ಕಂಗಳ ಗಂಡು ಮೂವರ ಚೆಲ್ವ ಹೊಸತಿ ಪೊಗಳ್ವರೆ. . . ಇಂದು ಕುಣಿಯೆಂದ (ಕೋಟಕ. ೩-೦೬೬). [ದೇ.॥ ತಮಿ. ಮಣ್ಟೈ; ಮಲ. ಮಣ್ಟ; ತುಳು. ಕೊಡ. ಮಂಡೆ; ಕೋತ. ಮಂಡ್; ತೊಡ. ಮಡ್]

**ಮಂಡೆಕತೆ** (ನಾ). (ಕರಾ) ಸಮಸ್ಯೆ; ಒಡಪು : ಒಂದು ಒಗಟನ್ನು ಬಿಡಿಸಿದಾಗ, ಒಂದು ಮಂಡೆಕತೆಯ ಗುಟ್ಟನ್ನು ಪ್ರಕಟಿಸಿದಾಗ ಆಗುವ ಆನಂದ ಅನುಪಮ (ಸಂಶೋಧ. ೦೯೬). [ಮಂಡೆ + ಕತೆ]

**ಮಂಡೆಕರಂಡೆ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು : ಮಂಡೆಕರಂಡೆ(ಬೇಸಿಗೆಯಲ್ಲಿ ಗದ್ದೆಗಳಲ್ಲಿ ಬೆಳೆಯುವ ಗೋಲಿಯಾಕಾರದ ಕೆಂಪುಗೊಂಡೆಹೂವುಳ್ಳ ಗಿಡ)ಯ ಸೊಪ್ಪಿನ ರಸ ಎರಡುತೊಲೆಯಷ್ಟನ್ನು ಬಿಸಿಮಾಡಿ ಅರ್ಧತೊಲೆ ಕಾಳುಮೆಣಸಿನ ಪುಡಿ ಬೆರೆಸಿ ಬಿಸಿಬಿಸಿ ಏಳುದಿನ ಬೆಳಗ್ಗೆ ಕುಡಿದರೆ ಪೂರ್ಣಗುಣ (ಮನೆಮ. ೯೮). [ಮಂಡೆ$_3$ + ಕರಂಡೆ]

**ಮಂಡೆಕಾಗೆ** (ನಾ). ದೊಡ್ಡ ಆಕಾರದ ಒಂದು ಬಗೆಯ ಕಾಗೆ : ಮಂಡೆಕಾಗೆ ಕಾಗೆಯಲ್ಲೆ ದೊಡ್ಡದು. ಅದರ ಕತ್ತು, ಎದೆಗಳು, ತಲೆ, ರೆಕ್ಕೆಗಳಷ್ಟು ಕಡುಪ್ಪಾಗಿಲ್ಲ (ಪಾಲಕ್ಷ. III. ೦೬೩೨). 'ಡೊಂಬಕಾಗೆ' ಪರಾ. [ಮಂಡೆ + ಕಾಗೆ./ ತುಳು. ಮಂಡೆಕಕ್ಕ]

**ಮಂಡೆಗೈಯ** (ನಾ). ತಲೆಬುರುಡೆಯನ್ನು ಕೈಯಲ್ಲಿ ಧರಿಸಿರುವವನು : ಕಪಾಲಧರ; ಶಿವ : ಜೈನರು ... ತಂಡತಂಡದಿ ಬಂದು ನೆರವುತಲಿರ್ದರ್ಣ್ಯ ಮಂಡೆಗೈಯನ ಪಳಿವುತಲಿ (ಅಣ್ಣಅ. ೯-೦೯). [ಮಂಡೆ + ಕೈ$_{12}$ (< ಕೆಪ್$_2$) + — ಅ$_7$]

**ಮಂಡೆತೆರಿಗೆ** 'ಮಂಡೆದೆರಿಗೆ' ನೋ.

**ಮಂಡೆದೂಗು** (ಕ್ರಿ). (ಆಶ್ಚರ್ಯ, ಮೆಚ್ಚುಗೆ ಮುಂತಾದುವುಗಳಿಂದ) ತಲೆಯನ್ನು ಅಲುಗಿಸು,—ಓಲೆದಾಡಿಸು : ಕುವರರು ನೋಳ್ಪರು ನಗುವರು ಮಂಡೆದೂಗುವರು ಕೈಮುಗಿವರುಬ್ಬುವರು . . . ಅಜ್ಞನ ಭುವನತ್ರಯಮಾದ್ಯುತೋಜ್ವಲಕೆ (ಭರತ. ೪೩-೩). [ಮಂಡೆ + ತೂಗು$_1$ (< ತೂಂಗ್ಕು$_1$)]

**ಮಂಡೆದೆರಿಗೆ, ಮಂಡೆತೆರಿಗೆ** (ನಾ). ಪ್ರತಿಯೊಬ್ಬ ವ್ಯಕ್ತಿಯೂ ಕೊಡಬೇಕಾದ ತೆರಿಗೆ; ತಲೆಗಂದಾಯ : ಕ್ರಿ.ಶ. ೧೩೭೭ರಲ್ಲಿ ನೆರೆದ ಪಾರ್ಲಿಮೆಂಟಿನವರು ಹಿಂದಾದದ್ದನ್ನೆಲ್ಲ ರದ್ದುಮಾಡಿದ್ದಲ್ಲದೆ ಮಂಡೆದೆರಿಗೆ ಎಂಬ ಹೊಸತೆರಿಗೆಯನ್ನು ಗೊತ್ತುಪಡಿಸಿದರು (ಇಂಗ್ಲಂಡ. ೬೩); ಜಿಜಿಯಾಯೆಂಬ ಮಂಡೆದೆರಿಗೆಯನ್ನು ಬಿಟ್ಟುಕೊಟ್ಟನು (ಅಕ್ಬರ. ೭೨೯). **ಮಂಡೆತೆರಿಗೆ** : ತಮ್ಮ ಮೇಲೆ ಮತ್ತೆಲ್ಲಿ ಮಂಡೆತೆರಿಗೆ ಬೀಳುತ್ತದೋ ಎಂಬುದಾಗಿ ಶಂಕಿಸಿದ್ದ (ಬ್ರಿಇ. ೦೯೦). [ಮಂಡೆ + ತೆರಿಗೆ (< ತೆಱಿಗೆ). / ತುಳು. ಮಂಡೆತೆರಿಗೆ]

**ಮಂಡೆದೋಱು** (ಕ್ರಿ). ಗೋಚರವಾಗು ; ಕಾಣಿಸಿಕೊಳ್ಳು : ಗಂಡು ತನವುಳ್ಳವರು ರಣದಲಿ ಮಂಡೆದೋಱುವರೆನುತ ಬಳಿಕೀ ರಂಡೆಯುಯ್ಯಲು ಬೇಡ ಕಾದುವರುಂಟೇ ಕರೆಯೆಂದ (ಕರ್ಣಾಟ. ೨೦-೩೦). [ಮಂಡೆ + ತೋಱು]

**ಮಂಡೆನೋವು** (ನಾ). ತಲೆನೋವು ; ಶಿರೋವೇದನೆ : "ಮಂಡೆ ನೋವದು ಶಿರೋವ್ಯಾಧಿಯೆನಿಕುಂ" (ಪಂಗಾರಾ. ೦೦೪-೪) ; ತೃಷೆ, ಮಂಡೆ ನೋವು, ಪ್ರಲಾಪ ಇವಿಷ್ಟೂ ಅಮ್ಲಪಿತ್ತಲಕ್ಷಣ (ವೈದ್ಯಶಾ. I. ೪೪೫). [ಮಂಡೆ + ನೋವು]

**ಮಂಡೆಬೇನೆ** 'ಮಂಡೆಪೇನೆ' ನೋ.

**ಮಂಡೆಮಣೆ** 'ಮಂಡೆಮಣೆ' ನೋ.

**ಮಂಡೆಮಲಗು** (ನಾ). ಮಲಗುವಾಗ ತಲೆಗೆ ಆಶ್ರಯವಾಗುವಂಥ ಸಾಧನ ; ತಲೆದಿಂಬು : ಮಣಿಮಂಚ ಸುಪ್ಪತಿಗೆ ಮಂಡೆಮಲಗುಗಳಡ್ಡ ಪೊಜೆಯಿಮಾಳ್ಗಳಿಟ್ಟಣಿಸಿ ನಡೆತಂದುದೇವೇಳ್ವೆನು (ಶಬ್ಧ. ೪೭-೪೦). [ಮಂಡೆ + ಮಲಗು$_2$ (< ಮಲಂಗು$_2$)]

**ಮಂಡೆಮಾರಿ$_1$** 'ಮಂಡೆ' ನೋ.

**ಮಂಡೆಮಾರಿ$_2$** (ನಾ). ತಲೆಸುತ್ತು ಮುಂತಾದ ತಲೆಗೆ ಸಂಬಂಧಿಸಿದ ರೋಗ : ಅವನಿಗೇನಾಗಿದೆ ಮಂಡೆಮಾರಿ? ಕಲ್ಲುಗುಂಡಿನ ಹಾಗೆ ಇದ್ದಾನೆ (ಬಾಳಿ. ೧೬) ; ನಿಮಗೆ ದುಡಿಯಲಿಕ್ಕೆ ಮಂಡೆಮಾರಿ. ಮನೆಯಲ್ಲಿ ಸುಮ್ಮನೇ ಕೂಡುವುದೇ ಕೂಡುವುದು (ಶರಾಪ. ೧೫೯).

[ ← ತುಳು. ಮಂಡೆಮಾರಿ]

**ಮಂಡೆಯ** (ನಾ). (?) : ಮಣ್ಣಿಯ ಗಾವುಣ್ಣನ ಮಗು ಪೃಥುವೀರಾವ ಸೆಟ್ಟಿ ಒಡವಂ ಕಟ್ಟಿಸಿದೊಡೆ (ಎಕ. X, ಮುಳಬಾ. ೨೦೬-೨೦:1000). [ ? ]

**ಮಂಡೆವಣಿ, ಮಂಡೆಮಣಿ** (ನಾ). ೧. (ಅಲಂ) ಶ್ರೇಷ್ಠವ್ಯಕ್ತಿ; ಅಗ್ರೇಸರ: ನೃಪತಿ . . . ಚಂಡಸೇನೆಯನೊಳಹೊಕ್ಕೇಱಿ ತಿವಿದನು ಮಂಡಳಿಕರ ಮಂಡೆವಣಿಯು (ಜೀವಂಕಾಂ. ೫-೫೭). **ಮಂಡೆಮಣಿ** : ೨. ಶ್ರೇಷ್ಠವಾದ ರತ್ನ : ಕಂಜಾಕ್ಷಿಯ ಮಂಡೆಯೊಳತಿರಂಜಿಸುವನುಪಮದ ಮಂಡೆಮಣಿ ನೆಲೆಸಿರ್ಕುಂ (ಪಖ್ಯಾರ. ೨-೪೫). [ಮಂಡೆ + ಮಣಿ$_3$]

**ಮಂಡೆವೇನೆ, ಮಂಡೆಬೇನೆ** (ನಾ). = ಮಂಡೆನೋವು : ಕೊಂಡಯುರಾಡಿದ ನುಡಿಯಿಂದ ಬಂದುದೊ ಮಂಡೆವೇನೆಯೊ ಸವತಿಯರ ತಂಡದಿಂದಾದುದೊ ಪೇಳೀ ಚಿಂತೆಯ (ಭರಾಕಾಂ. ೨೭-೧೪). **ಮಂಡೆಬೇನೆ** : ನಸ್ಯವಂ ಮಾಡಿಸಲು . . . ಮಂಡೆಬೇನೆ . . . ಸ್ವರಭಂಗ ಇವಿಷ್ಟನ್ನೂ ಪರಿಹರಿಸುವದು (ವೈದ್ಯಸಾ. I, ೪೫). [ಮಂಡೆ + ಬೇನೆ]

**ಮಂಡೆಶೂಲೆ** (ನಾ). = ಮಂಡೆನೋವು : ಮಂಡಶೂಲೆಗೆ :- ಹುಳಿಎಣ್ಣೆಗೆ ಕಪಿಸೋರೆಯನ್ನು ತಂದು ಅರೆದು ಸಾಮಕ್ಕಿಯನ್ನು ಹಾಕಿ ಬೇಯಿಸಿ ಮಂಡೆಗೆ ಹಾಕಿ ಕಟ್ಟು (ವೈದ್ಯವಿ. ೦೪೭). [ಮಂಡೆ + ಶೂಲೆ$_1$]

**ಮಂಡೆಸೀಗೆ** 'ಮಂಡಸೀಗೆ' ನೋ.

**ಮಂಡೆಸುತ್ತು** (ನಾ). ೧. ತಲೆತಿರುಗುವುದು : ತಲೆಸುತ್ತು ಎಂಬುವನ್ನೇ ಕೆಲವುಕಡೆಗಳಲ್ಲಿ ಮಂಡೆಸುತ್ತು ಎಂದು ಹೇಳುತ್ತಾರೆ (ರೂಢಿ). ೨. ರುಮಾಲು ; ಪೇಟ : ಒತ್ತಿ ಬೇಡುತ ಮಂಡೆಸುತ್ತಿನೊಳಿತ್ತಿ ಕಾಲಂ ಕಟ್ಟಿ (ಐಸಪು. ೪೪-೬೦). [ಮಂಡೆ + ಸುತ್ತು$_2$]

**ಮಂಡೆಹಱಿಕ** (ನಾ). ತಲೆಗೂದಲನ್ನು ಕೀಳಿಸಿಕೊಂಡವನು : ಜೈನಸಂನ್ಯಾಸಿ ; ಶ್ರಮಣ : ಕಂಡ ಮಾತ್ರದೊಳು ಕೈವಲ್ಯಸುಖವನೀವ ಪಿಂಡವಾಸವನುಱಿ ತೊಱೆದು ಮಂಡೆಹಱಿಕರ ಮಾತನು ಕೇಳ್ವುದಕೆ ಮನಗೊಂಡೆಯಲಾ (ಶೀವಿಸಂ. ೩೪-೩೫).

[ಮಂಡೆ + ಹಱಿ$_1$ ( < ಪಱಿ$_1$) + – ಕ$_3$]

**ಮಂಡೆಹುಣ್ಣು** (ನಾ). ತಲೆಯಲ್ಲಿ ಏಳುವ ಹುಣ್ಣು : ತಲೆಕಜ್ಜಿ : ಅಕ್ಕಿಹೊಡೆಯ ಸಪ್ಪೂಲವನ್ನು ಒಳ್ಳೆಣ್ಣೆಯಲ್ಲಿ ಅರೆದು ಪೂಸೆ ಮಂಡೆ ಹುಣ್ಣು ಮಾಣ್ಗುಂ (ವೈದ್ಯವಿ. ೭೬). [ಮಂಡೆ + ಹುಣ್ಣು (<ಪುಣ್)]

**ಮಂಡೋದಕ** (ನಾ). ೧. ದೋಸೆ, ಇಡ್ಲಿ ಮುಂತಾದುವು ಮೆದುವಾಗಲು ಬೆರಸುವ ಉದ್ದು ಮುಂತಾದ ಹಿಟ್ಟು : ಹುದುಗು. ೨. ಅನೇಕ ವರ್ಣಗಳಿಂದ ಕೂಡಿದುದು; ನಾನಾವರ್ಣಗಳ ಮಿಶ್ರಣ : 'ಮಂಡೋದಕಚಿತ್ರ' ನೋ. [ಸಂ.]

**ಮಂಡೋದಕಚಿತ್ರ** (ನಾ). " (ಗೋಡೆಯ, ಚಾವಣಿಯೊಳಮೈಯ) ಗಾರೆ ಒಣಗುವುದಕ್ಕೆ ಮೊದಲೇ ಅದರ ಮೇಲೆ ನೀರುಬಣ್ಣಗಳಿಂದ ಬರೆದ ಚಿತ್ರ : ಮಂಡೋದಕಚಿತ್ರ ; ಭಿತ್ತಿಚಿತ್ರ " (Fresco. ೩:೪೩): ಮನಮೋಹಕವಾಗಿ ಬರೆದಿದ್ದ ಚಿತ್ರವು ರೇಖಾಚಿತ್ರವಾಗಿರದೆ ಬಣ್ಣದಿಂದ ಬರೆದಿದ್ದ ಮಂಡೋದಕಚಿತ್ರವಾಗಿದ್ದಿತು (ಹೇಮಂಥ. ೪೯೫). [ಸಂ.]

**ಮಂಡೋಳ** (ನಾ). ಒಂದು ಬಗೆಯ ವಿಷಸರ್ಪ : ಬೇರೆ ವಿಷಯುಕ್ತ ಸರ್ಪಗಳು ಜೇಣಿಗೇಹಾವು (ಘುಸರ್ಕ), ಮಂಡೋಳ (ಘೋಣಸ) . . . ಅಜಗರ ಮುಂತಾದವುಗಳು ಪ್ರಸಿದ್ಧ ಉಂಟು (ಕಣಾಗ. ೬೭).

[← ಮರಾ. ಮಾಂಡೂಳ. ಮಾಂಢೂಳ. ಮಾಡೂಳ. ಮಾಢೂಳ]

**ಮಂತ, ಮಂತು$_1$** (ನಾ). ೧. ಕಡೆಯುವ ಕೋಲು : ಕಡೆಗೋಲು : ಥಕಾರಕ್ಕೆ ತಕಾರಂ . . . ಮಂಥ_ಮಂತ ; ಮಿಥಿಳಾ-ಮಿತಿಳೆ (ಶಮದ. ೨೫೫ ಪ್ರಯೋ). ೨. ಮೊಸರಿನ ಮೇಲಿನ ಒಡಕಲಾದ ನೀರು : ನಿಡಿ : ಮಂತಮೆಂದುಂ ಕಡೆಗೋಲುಂ ಮೊಸರ ಮೇಲಿನ ನಿಡಿಯುಮಕ್ಕುಂ (ಶಮದ. ಸ. ೨೬೯ ಪ್ರಯೋ). ೩. (?) : ಆತನಂ ನೋಯಿಪುದೇಂ ಪುರುಷಾರ್ಥಮೆ ಮಂತದೊಳೇಂ ಕಬಿ ಹರಿಯೊಳ್ ನೆಣಸಿ ಪೋರ್ದು ನಿರ್ವಹಿಸುಗುಮೇ (ಶಾಂತಿಪು. ೩-೯೫). **ಮಂತು$_1$** : ೧. ಮಂದರ ಪರ್ವತ್ರಮಂ ಮಂತುಮಾಡಿ ಪಾಲ್ಗಡಲ ಮಥನವನೆಂತು ಮಾಡಿದರೊ (ಸೌಗಂ. ೩೦೫-೪) ; ನಗುವಾತ್ಮ ಪರಿಮಳವ ಪಸರಿಸುವ ಕುಸುಮ ದುಗುಡ ವಾತ್ಮವ ಕಡೆದು ಸತ್ತ್ವವೆತ್ತುವ ಮಂತು ಬಗೆದೆರಡನುಂ ಭುಜಿಸು (ಮಂಕುಕ. ೪೩೪). ೪. ಕಡೆಯುವುದು : ಮಥಿಸುವುದು : (✦).

[< ಸಂ. ಮಂಥ]

**ಮಂತಣ$_1$, ಮಂತಣೆ$_1$** (ನಾ). ೧. ಆಪ್ತರೊಂದಿಗೆ ಯಾವುದಾದರೂ ಗಹನವಾದ ವಿಷಯವನ್ನು ಗುಟ್ಟಾಗಿ ಆಲೋಚಿಸುವುದು : ಮಂತ್ರಾಲೋಚನೆ : " ಮಂತಣಮೆಂದೇಕಾಂತಂ " (ಶಶಸಾ. ೬೭-೫೦೨); ಮಂತ್ರಿಯಿಲ್ಲದರಸು ಮಂತಣಮಿ[ಕಾಕಾಂ. ಮನ್ನಣೆಯಿ]ಲ್ಲದ ನೃಪನೋಲಗಮೆಣೆಯಿಲ್ಲದ ಪಕ್ಕಮಕ್ಕೆ ಸೊಗಯಿಸಿದಪುದೇ (ಅಜಪು. ೬-೯೭); ಮಂತಣಕಂ ನೆಗಱೆ ಬಂದರೆನಿಸಿರ್ದುಂ ತಾಂ ಮಂತಣಮುಸಿರದೆ ಕೆಲರಾಮಂತಣ ಮುಂಡಂತೆ ಪೆಱರ ನಯದೊಳೆ ತಣಿವರ್ (ಕಾವ್ಯಾವ. ೫೪೫). ೨. ಉತ್ತಮವಾದ ರಾಜನೀತಿ : ಪುಸಿವುದೆ ತಪ್ಪು ಕೊಟ್ಟುಟೆಱಿಕೊಳ್ವುದೆ ಮಂತಣಂ (ಎಕ. II, ೦೩೩-೪೫ ; ೪೮೨). ೩. ಬುದ್ಧಿವಾದ ಹೇಳುವುದು : ಸಂಜೀವಕಂ ದಾವಪಾವಕನಾದಂ ಭವದಿಷ್ಟಸೇವಕಗಣಕ್ಕೇಂ ಪರ್ಚುವೇಂ ಮಂತಣಂ (ಕಂವಕಂ. ೯೭-೨೦). ೪. ಆಲೋಚನೆ : ವಿಚಾರ : ಭವದೀಯ ವಿಯೋಗದಿಂದೇಂ ಮಂತಣಂ (ಚೇಬಸ. ೪-೯೪). ೫. ರಹಸ್ಯವಾದ ಮಾತುಕತೆಯಾಡುವ ಸ್ಥಳ ; ಮಂತ್ರಾಲೋಚನೆಯ ಸ್ಥಳ : ಚಿಂತಿಪ ಮಂತಣಂ ದುಗುಡದೋವರಿ ಜಾಡ್ಯದ ಬೀಡು (ದಕಶ. ೮-೨೩೬). ೬. (ಅಲಂ) ಗುಂಪು; ಸಮೂಹ : ವಿರಚಿಪ ಮಾಲೆಗಾರ್ತಿಯರ ಮಂತಣ ಮೊಪ್ಪುಗುಮಲ್ಲಿ ಸಂತತಂ (ರಾಜಶೇ. ೨-೦೦೪). ೭. ಒಟ್ಟಿಲು ; ರಾಶಿ : ಬಾಳೆಯ ಹಣ್ಣಿನಿಕ್ಕೆಯ ಮಧೂಫಲದ ಮಂತಣದ ನಾರಿಕೇಳದ ನೆರವಿಯ ಸರ್ವಫಲವಸ್ತುಸಂತಾನಮಂ (ಕೇಚರ. ಪ. ೩೦೪-೮೦). **ಮಂತಣೆ$_1$** : ೪. ವಿಧಾತ್ರಂ ಮಂತಣೆಯಂ ಮಾಡಿದನಪ್ಪ ಪಾಯ್ಯಲಿಯೊಳಾತ್ಮಸ್ಥಾಯ್ಯನ ಪಾಯ್ಯನಂ (ಕೌಇಇ. XX. ೨೦೨-೬೦; 1244).

**ಮಂತಣದ ತೊಟ್ಟಿ** = ರಾಜನು ಇತರರೊಂದಿಗೆ ಸಮಾಲೋಚನೆ ಮಾಡುವ ಶಾಲೆ_ಮಂಟಪ : ಮೈಸೂರ ಅರಮನೆ. ಮಂತ್ರಣದ ತೊಟ್ಟಿ (ಸುಗುಗಂ. ೪೫-೦). **ಮಂತಣದ ಮಂದಿರ** = ಮಂತ್ರಾಲೋಚನೆಮಾಡುವ ಭವನ : ಅವಳು ಪಹರೆಯವರ ನುಡಿಗೆ ಕಿವಿಗೊಡದೆ ಬಿರುಗಾಳಿಯಂತೆ ಮಂತಣದ ಮಂದಿರದೊಳಗೆ ನುಗ್ಗಿದಳು (ಹಾಮುತ. ೪೦). **ಮಂತಣದ ಸಾಲೆ** = ಮಂತಣದ ಮಂದಿರ : ಚಿತ್ರಶಾಲೆಯೊಳನಿಸೂರ್ಮ ಮಂತಣದ ಸಾಲೆಯೊಳಂದಿರದೊರ್ಮೆ . . . ಪೊಱು ಗಳೆಮಂ ಕವಿತಾಕಳಿಕಾಮ್ರಕೋಕಿಳಂ (೦ಣಾಪ. ೪-೦೨) ; ಸಾಂತಣ್ಣ ಮಂತ್ರಣದ ಸಾಲೆಯಲ್ಲಿ ಕುಳಿತು ಅಧಿಕಾರಿಗಳಿಂದ ಬಂದ ಓಲೆಗಳನ್ನು ಪರಿಶೀಲಿಸುತ್ತಿದ್ದಾಗ (ಹಾಮುತ. ೦೦೦).

[< ಪ್ರಾ. ಮಂತಣ. / ಸಂ. ಮಂತ್ರಣ]

**ಮಂತಣ$_2$, ಮಂತಣೆ$_2$** (ನಾ). ೧. ಕಡೆಗೋಲು : 'ಮಂತಣಸೂಲ' ನೋ. **ಮಂತಣೆ$_2$** : ೨. ಅಡಗಿಸುವಿಕೆ : ಹತೋಟಿಗೆ ತರುವುದು :

ಬಿನ್ನಪಂಗೆಯ್ದು ಬಸಂತನ ಮಂತಣದ ಮಾತಂ ಸೊರ್ಕಾನೆ ಮಂತಣೆಯ ಮಾಮಂತನ ಮಾತಂ ಮನ್ನಿಸುವಂತೆ ಮನ್ನಿಸಿ (ಕಬ್ಬಿಗ. ೦೬೦).
[<ಪ್ರಾ. ಮಂಥಣ./ಸಂ. ಮಂಥನ]

**ಮಂತಣಂಗೊಳ್**, ಮಂತಣಂಗೊಳು, ಮಂತಣಗೊಳು (ಕ್ರಿ). ೧. ಮಂತ್ರಾಲೋಚನೆಮಾಡು: ಸಲಹೆಯನ್ನು ಕೇಳು : ದೂತಿಯೊರ್ವಳ್ ... ಓಲಗಂ ಪರೆಯೆ ಸಚಿವಂಬೆರಸು ಮಂತಣಂಗೊಳ್ಳ ರಾಯನೆಡೆಗೈತಂದು (ಧರ್ಮಾ. ೦೯-೦೩). **ಮಂತಣಂಗೊಳು** : ೧. ಪಲವು ಪಿಸುಣರ್ ಪಾತಕರ್ ನೆರೆದು ತಾಮೆಲ್ಲರೊಲವಿಂ ಮಂತಣಂಗೊಳುತೆ ಗುಜುಗುಜು ಗುಟ್ಟಿ (ಪದ್ಮರಾ. ೬-೨). **ಮಂತಣಗೊಳು** : ೨. ಆಲೋಚಿಸು : ವಿಚಾರಮಾಡು : ಚಿಂತರಪಿತರಾಗಿಹ ತನುಜರ ಕಂಡು ಮಂತಣಗೊಂಡು ಮನದಲಿ (ಭಕ್ತ. ೦೬). [ಮಂತಣ$_1$ + ಕೊಳ್$_1$]

**ಮಂತಣಂಗೊಳು** 'ಮಂತಣಂಗೊಳ್' ನೋ.

**ಮಂತಣಂಬಡೆ** (ಕ್ರಿ). ಗುಂಪುಗೂಡು ; ಒಟ್ಟಿಗೆ ಸೇರು : ತನಂಬಿಡದ ರಾಜಪುತ್ರರಿಂ ಮಂತಣಂಬಡೆದ ಮಂತ್ರಿಗಳಿಂ . . . ಪೊಸುಪ್ರಸುರ್ವಂದ ರೊಸಗೆ ಮಿಗೆ ಮಿನುಗುತ್ತಿರ್ದುದು (ರಾಜಶೇ. ೬-೫ ವ). [ಮಂತಣ$_1$+ಪಡೆ$_1$]

**ಮಂತಣಗಾರ್ತಿ** (ನಾ). ಏಕಾಂತದಲ್ಲಿ ಸಲಹೆ ಕೊಡುವವಳು : "ಪಚ್ಚುಗೆಗಾರ್ತಿ, ಮಂತಣಗಾರ್ತಿ_ಈ ಎರಡು ಏಕಾಂತದವಳ್" (ಶಬ್ದಾ. ೬೨-೩೭೯). [ಮಂತಣ$_1$+ —ಕಾಱ+ —ತಿ$_1$ (<—ಇತ್ತಿ)]

**ಮಂತಣಗೆಯ್**, ಮಂತಣಗೈ (ಕ್ರಿ). ೧. ಮಂತ್ರಾಲೋಚನೆಯನ್ನು ಮಾಡು ; ಸಮಾಲೋಚಿಸು : ನೆನೆದು ರಣಭಂಗಮಂ ಸಕಲದೈತ್ಯರ್ ತಮ್ಮ ಮನದಹಂಕೃತಮಳಿದು ದುಃಖದಿಂ ನೋವುತ್ತಿರ್ಪನಮಂಥಕಾಸುರಂ ಕರೆಸಿದಂ ದೊರೆದೊರೆಗಳಂ ಮಂತಣಗೆಯ್ಯಲು (ತಂಕೃ. ೩೦-೨). **ಮಂತಣಗೈ** : ೨. ಆಲೋಚಿಸು ; ವಿಚಾರಮಾಡು : ಅರಸನಚ್ಚರಿ ಪಟ್ಟು ಮನದು ಮಂತಣಗೈದು ಮಗುಳವರೊಳೇಂತೆಂದನು (ಶ್ರೀಕರಂ. ೩-೯). [ಮಂತಣ$_1$ + ಕೆಯ್$_1$]

**ಮಂತಣಗೈ** 'ಮಂತಣಗೆಯ್' ನೋ.

**ಮಂತಣಗೊಳು** 'ಮಂತಣಂಗೊಳ್' ನೋ.

**ಮಂತಣಮಿರ್** (ಕ್ರಿ). ೧. ಸಮಾಲೋಚನೆ ಮಾಡು ; ಮಂತ್ರಾಲೋಚನೆ ಯಲ್ಲಿ ತೊಡಗು : ಅತಿರಥಮಹಾರಾಜಂ ಮಂತ್ರಿಯರ್ಕಳೊಡನೆ ಮಂತಣಮಿರ್ದಲ್ಲಿ ಮಂತ್ರಿಯರ್ಕಳನಿಂತೆಂದು ಬೆಸಗೊಂಡಂ (ಪದ್ಮಾರಾ. ೧೦-೨೦) ; ದುರ್ಯೋಧನ ಕರ್ಣ ಶಕುನಿ ಸೈಂಧವರೆಂಬ ದುಷ್ಟಚತುಷ್ಟಯ ದೊಳ್ ಮಂತಣಮಿರ್ದು (ಕಂಕಪಾ. ೬-೬೬ ವ). ೨. ಆಲೋಚಿಸು : ಅಂತು ಕಿಱಿದುಪೊತ್ತು ಮನದೊಳೆ ಮಂತಣಮಿರ್ದು ನಿಶ್ಚಯಿಸಲಱಿಯದೆ (ವರ್ಧಮಾ. ೩-೦೭ ವ) ; ಮನದೊಳ್ ಮಂತಣಮಿರ್ದು ಲಕ್ಷ್ಮಣಂ ಸಭೆಯಿನೆಟ್ಟು ಪೋಪುದುಂ (ಶಂಖಪಾ. ೬-೦೫೯ ವ). [ಮಂತಣ$_1$ + ಇರ್$_1$]

**ಮಂತಣಮಟ್ಟೆ** (ನಾ). ಆಲೋಚನೆಯ ಮಾರ್ಗ : ಸಲಹೆಯ ರೀತಿ : ಮಾಯಾಸಮರ್ಥರಿರ, ತಿಳಿಯುಲಾಟವೆನಿಲ್ಲಿಗೇಂ ಮುಂದೆ ಪದನೆಂಬ ನಿಮ್ಮ ಮಂತಣಮಟ್ಟೆಯುಂ (ಶ್ರೀಣಮಾ. ೫೫೬-೦೦೪). [ಮಂತಣ$_1$+ಬಟ್ಟೆ$_1$]

**ಮಂತಣಶಾಲೆ**, ಮಂತಣಸಾಲೆ (ನಾ). ಮಂತ್ರಾಲೋಚನೆ ಮಾಡುವ ಮನೆ : ಮಾರಿಯ ಮಂತಣಶಾಲೆಯೆಂದೆನಿಪಾ ಘೋರರಾಕ್ಷಸವನಾಂತ ಹೇರಾಲದಡಿಯೊಳು ವಿಕೃತಾಕಾರದ ಕೂರಾಳಿರ್ದನದೊರ್ವ (ಶ್ರೀಪಾಲ. ೬-೩೭) : ನಂಜರಾಜಯ್ಯನವರು ಟಿಪ್ಪೂಸುಲ್ತಾನರ ದಿವಾನರನ್ನು ಅರಮನೆಯ ಮಂತಣಶಾಲೆಯಲ್ಲಿ ಕುಳ್ಳಿರಿಸಿ ... ತಾವೂ ಕುಳಿತುಕೊಂಡರು (ಕೃಷ್ಣಪೂ. ೩೭). **ಮಂತಣಸಾಲೆ** : ಮಂತಣಸಾಲೆಗೆ ಬಂದನಿಂದ್ರಸಿಂಧುಗತಿ ರೇವತಿಥಿಪನುಮುಪ್ಪವನುಂ ಬರೆ ರುಕ್ಮಿಣೀಧವಂ (ಜಗಂ. ೦೩-೪೭); ಓಲಗಸಾಲೆ ಮಂತಣಸಾ[ಶಾ.ಪಾಠ. ಶಾ]ಲೆ . . . ಸುಚಿತ್ರಸಾಲೆಗಳೊಳ ಪಿಸಿದಳು ಲೋಲಲೋಚನೆ ರಾಮನನು (ರಾಘವಾಂ. ೩೩-೪೨): ರಾಜನೂ ಮಂತಣಸಾಲೆಯ ಬಾಗಿಲಲ್ಲಿ ಕಾದು ನಿಂತಿದ್ದ ಪ್ರಭಾಚಂದ್ರರನ್ನು ಕರೆದು ಕೊಂಡನು (ಸವಿ. ೨೨). [< ಸಂ. ಮಂತ್ರಣಶಾಲಾ]

**ಮಂತಣಸಾಲೆ** 'ಮಂತಣಶಾಲೆ' ನೋ.

**ಮಂತಣಸೂಲ** (ನಾ). ಕಡೆಗೋಲಿನಾಕಾರದ ಶೂಲ. —ಈಟಿ : ಜವನ ಮಂತಣಸೂಲದಂತೆ ನೆಗೆದ ಕೊಂತದ ಕೂರ್ಮೊನೆಯ ಕೋಲಾಟಕ್ಕೆ. . . ಬಿಜ್ಜೋದರಿಯರ್ ಪುಗಲಱಿಯದೆ ಸಿಡಿಮಿಡಿಗೊಳುತ್ತಿರೆಯುಂ (ಕಬ್ಬಿಗ. ೨೬೮). [ಮಂತಣ$_2$ + ಸೂಲ$_2$]

**ಮಂತಣೆ** (ನಾ). ೧. ಮೊಸರಿನ ಪಾತ್ರೆ: ಥಕಾರಕ್ಕೆ ತಕಾರಂ—ಕಥಾ—ಕತೆ . . . ಮಂಥನಿ—ಮಂತಣಿ (ಶಮದ. ೨೫೫ ಕ್ರಪೊ) ; ಹರಿ . . . ತೆಗೆದೊಂದ ಸುಬೆಗಲ್ಲನು ಮಿಕ್ಕು ಮಿಡಿಜುವ ಕೋಪದಿಂದೆತ್ತಿಕ್ಕಿದನು ಮಂಥ[ತ]ಣಿಯ ಮೇಲಿದ್ದ ನೆಯಿನೀಕ್ಷಿಸುತ (ಭಾಗ. ೦೦-೯-೨೮). ೨. ಕಡೆಗೋಲು. ಮಂತಣಿಯ ಶೂಲ=ಮಂತಣಸೂಲ : ಪರನ ಮಂತ[ಶಾ.ಪಾ. ಥ]ಣಿಯ ಶೂಲದಲ್ಲಿ ಶಿರದ ಉಂಗುಟ ಲ್ಲೂಱಿ ನೆರೆವುತ್ತಿದ್ದುದ ನಾನೇನೆಂಬೆ (ಅವತಂ. ೫೫-೨೩೮). [< ಪ್ರಾ. ಮಂಥಣೀ./ಸಂ. ಮಂಥನೀ]

**ಮಂತಣೆ$_1$** 'ಮಂತಣ$_1$' ನೋ.

**ಮಂತಣೆ$_2$** 'ಮಂತಣ$_2$' ನೋ.

**ಮಂತರ** (ನಾ). ೧. ವೇದದಲ್ಲಿರುವ ಪವಿತ್ರವಾದ ದೇವತಾಸ್ತುತಿ; ಮಂತ್ರ : "ಮಂತರ (ಮಂತುರ)_ಮಂತ್ರ= ಆಲೋಚನೆ, ವೇದೋಕ್ತಿ" (ಕರ್ನಕೋ. ೩೪); ಎಂತಪ್ಪ ಮೂರ್ಖ ಪಂಡಿತನಾಗಲಿ ಉಂತೆ ಪಂಚಾಕ್ಷರಿಯ ಮಂತು[ತ್ರ]ರವ ಜಪಿಸುವಾತಂ ತಾನೆ ಶಿವನೆಂದುದ್ದೈ ಲೈಂಗ್ಯವು (ಪ.ರಾ.ಕೇ. ೯-೦೬). ೨. ಮಾಟ, ಇಂದ್ರಜಾಲ ಮುಂತಾದುವುಗಳಲ್ಲಿ ಬಳಸುವ ವೈದಿಕವಲ್ಲದ ಪದಸಮೂಹ : ತಂತರವಿದ್ದವನಿಗೆ ಮಂತರ ಬೇಡ (ಗಾದೆ). 'ಮಂತರಿಸು' ಪರಾ. [<ಸಂ. ಮಂತ್ರ]

**ಮಂತರವರಿಜು** (ನಾ). ಮಂತ್ರರೂಪವಾದ ಆಕಾರ. —ಮೂರ್ತಿ: ಅಪಮೃಣಿವರನೆನಿಸಿ. . . ಮಂತು[ತ್ರ]ರವರಿಜುದಾಳ್ದು ನೆಟೆ ಮಱೆವ ಕಾಶಿಯೊಡೆಯಂ ತಡೆಯದೋವುಗೆಮ್ಮಂ (ಕರ್ನಾ. ೦೩-೬೫). [ಮಂತರ + ಪರಿಜು]

**ಮಂತರಿಸು** (ಕ್ರಿ). ಮಂತ್ರಹಾಕು; ಮಂತ್ರಿಸು: ಕೋಟ್ಯಾಂತರ ಸರ್ಪ ಒಡಿದ ಸವುದುದಿ ಪಂಥಣಿಯ(ತಿಂತಿಣಿಯ) ಮಧ್ಯದಡಿಯ ತೀವ್ರದಲಿ ಮಲಗಿರಲು ಮಂತರಿಸಿ ಮನೆಗೆ ಕಳುಹಿದ ಮಹಾತ್ಮಕನೆ (ಕಪಶ. ೦೦೨-೨); ಫಕೀರನು ಮಂತರಿಸಿ ಬಿಟ್ಟ ಮೇಲೆ ಅವ ಹೇಳಿದ್ದ ಪ್ರಕಾರವೇ ಇವನಿಗೆ ಜ್ಞಾನ ಬಂತು (ಕಥಾಸಿ. ೬೦). [ಮಂತರ + —ಇಸು$_3$]

**ಮಂತವ್ಯ** (ನಾ). ೧. ನೆನೆಯತಕ್ಕುದು ; ಮನನಮಾಡಬೇಕಾದುದು : "ಮನನಂ, ಮನನೀಯಂ, ಮಂತವ್ಯಂ, ಈ ೩ ನೆನೆಯಲ್ತಕ್ಕುದು" (ಕಾಲಕ್ಷ. ೨೦೨) ; ಲಲಿತಶ್ರಾವ್ಯ ಪರಮಂತವ್ಯವೆಂದೆನಿಪ ಘನತೆಯುಳ್ಳ ಸಪ್ತಸಂಖ್ಯೆಗಳನಳಭಾವದ ಸಮಿತ್ಯದಂಬಕ ಘನರು ಮಿಗೆ ಸಂಸ್ತುತಿಪರರು ವೈಶ್ವಾನರಾನಲಗೆ (ತಮ್ಮಿ. ೨-೬೫); ಪ್ರಭುದೇವರ 'ಅನಾಯಸವಾದ ಅನು', 'ಚಿಂತೆಮಿಲ್ಲದ ಅನುಭಾವ ಗೊಹೇಶ್ವರ' ಇನ್ನೂ ಶ್ರೋತವ್ಯ, ಇನ್ನೂ ಮಂತವ್ಯ (ವಚಸಂ. VIII, ೬೪೯ ಕ್ರಮೇಕ). ೨. ಅಭಿಪ್ರಾಯ; ಮತ: ಆವರೆ ದುರಭಿಮಾನಿ ಮತ್ತು ಮೂರ್ಖಳು ಎಂದು ಕೇಶವಯ್ಯನ ಮಂತವ್ಯ (ಕವಿಲೀ ೦); ಕಾರ್ಲಮಾರ್ಕ್ಸನು ತನ್ನ ಮತ—ಮಂತವ್ಯಗಳನ್ನು ಆರ್ಥಿಕ ರಾಜಕೀಯ ಶೋಧಗಳನ್ನು ಮಂಡಿಸಿದನು (ಮಾವಾದ. ೪೩). ೩. ಮನನಮಾಡಲ್ಪಡತಕ್ಕವನು ; ಧ್ಯಾನಯೋಗ್ಯನಾದವನು ; ಶ್ರೇಷ್ಠನಾದವನು : ಸೇವ್ಯನನು ಸತ್ಕೃತಿಗಳಲಿ ದೃಷ್ಟವ್ಯನನು ದೃಢ

ಚಿತ್ತದಲಿ ಮಂತವ್ಯನನು ಶ್ರೋತವ್ಯನನು ಸಂಕೀರ್ತಿತವ್ಯನನು . . . ಆಜ್ಞಾನದಲಿ ಯೋಗವ್ಯನೆಂದೇ ಸೆಣಸಿದೆವಲಾ (ಶಿವಾ.೮.೬-೬೪). [ಸಂ.]

**ಮಂತಿಡು** (ಕ್ರಿ). ಮಂತುಕೋಲನ್ನು ಇಟ್ಟು ಕಡೆ : ತಟವನುಚ್ಚಳಿಸಿತು ಕಡಲು ಮಂತಿಟ್ಟರೆ ಘಟದ ಮೊಸರು ಚೆಲ್ಲುವಂತೆ (ಧರ. ೨೪-೩೬).
[ ಮಂತು$_1$ (<ಮಂತ) + ಇಡು$_1$ ]

**ಮಂತು$_1$** 'ಮಂತ' ನೋ.

**ಮಂತು$_2$** (ನಾ). ೧. ಮಂತ್ರಿ ; ಸಚಿವ : ಇತ್ವಕ್ಕುತ್ವಂ . . . ಮಂತ್ರಿ —ಮಂತು; ಸಥಿ—ಸಂದು (ಶಮತ· ೨೬೯ ಶ್ರ.ಜೋ) ; ಐವತ್ತಾಜಿಜಿರೊಳಂ ನೀಂ ನೋಡದ ನಾಡಿಲ್ಲಕ್ಕುಂ . . . ಮಂತುಗಳೆಂತಿರವೇಡಾ (ರಾಜಶ್ಯ. ೦೨೬-೦೦). ೨. ತಪ್ಪು ; ದೋಷ ; ಅಪರಾಧ : "ವ್ಯಳೀಕಂ . . . ಮಂತುಃ ವಿಪ್ರಿಯಃ — ಈ ೫ ಅಪರಾಧಂ" (ಹಲಾಯು. ೦೨೩-೬೪) ; ನೆಟ್ಟನೆ ಚಂದ್ರನೊಳ್ ಬಿಸುಪು ಪುಟ್ಟಿದವೋಲ್ ಸ್ವರೂಪಚಂದ್ರನೊಳ್ ಪುಟ್ಟಿದು ಮಂತು (ಕಾದಂಬ. ೯೬೯). [ಸಂ.]

**ಮಂತುಗೋಲು** (ನಾ). ಕಡೆಗೋಲು : ತತ್ವದೆಂಬ ಮಂತುಗೋಲಿನಿಂ ಮಥಿಸಲು ಲಿಂಗವೆಂಬ ನವನೀತವು ಕಾಣಿಸಲಾಗಿ ಅದಂ ಪರಿಗ್ರಹಿಸಿ (ವಚಶಾ. III, ೦೩೪) ; ಸುರರೆಲ್ಲಂ ಕೂಡಿ ಭೋಗೀಶ್ವರಗುಣವಿಳಿತಂ ಮಂದರಂ ಮಂತುಗೋಲಾಗಿರೆ ದುಗ್ಧಾಂಭೋಧಿಯಂ ಪೋಣ್ ಕಡೆಯೆ (ಭ್ರಕಪ. ೯-೩೯).
[ ಮಂತು$_1$ (< ಮಂತ) + ಕೋಲು$_1$ (<ಕೋಲ್$_1$) ]

**ಮಂತುಳ್ಳಿ**; ಮಂತೇಹುಳಿ (ನಾ). ಒಂದು ಬಗೆಯ ಕಾಡುಮರ : ಮಂತುಳ್ಳಿ . . . ಈ ಮರದ ಚೌಬೀನೆಯನ್ನು ಪೆಟ್ಟಿಗೆ ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ (ಕರ್ನಾ. XII, ೯೬೭). ಮಂತೇಹುಳಿ : ಮಂತುಳ್ಳಿ . . . ಅರಸಳ. ಉಪ್ಪಾಗಿ, ಮಂತೇಹುಳಿ ಪರ್ಯಾಯನಾಮಗಳು (ಕರ್ನಾ. XII, ೯೬೭). [ ? ]

**ಮಂತೇಹುಳಿ** 'ಮಂತುಳ್ಳಿ' ನೋ.

**ಮಂತ್ರ** (ನಾ). ೧. ವೇದದಲ್ಲಿರುವ, ಛಂದೋಬದ್ಧವೂ ಪವಿತ್ರವೂ ಆದ ದೇವತಾಸ್ತುತಿ : ಪೂಜೆ, ಹೋಮ, ಅಭಿಷೇಕ ಮೊದಲಾದ ಸಂದರ್ಭಗಳಲ್ಲಿ ಪಠಿಸುವ ವೇದಭಾಗ : ದೈವವು ಮಂತ್ರವು ತೀರ್ಥವು ವೈದ್ಯವು . . . ಲೋಗರಿಗಿವು ದಿಟ ಸಿದ್ಧಿಯನೀವುವು (ಜೀವನ್ಮ. ೬೬-೬೬) ; ಮಂತ್ರಕ್ಕಿಂತ ಉಗುಳು ಜಾಸ್ತಿ (ಗಾದೆ). ೨. ದೇವತೆಗಳನ್ನು ವಶೀಕರಿಸಿಕೊಳ್ಳುವುದಕ್ಕಾಗಿ ಹೇಳುವ, ಆಯಾ ದೇವತೆಯ ಸಾಮರ್ಥ್ಯವುಳ್ಳ ವಾಕ್ಯಸಮೂಹ : ಮಗಳೆ ಬಾ ಕೊಳ್ ಐದು ಮಂತ್ರಾಳಿಗಳನಿವು ಸಿದ್ಧಪ್ರಯೋಗವು (ಶಿವಾ.೮. ೩-೦೬) ; ಕಾಟಾಯಮ್ಮನು ಬಲು ಸೌಮ್ಯದೇವತೆ . . . ಮಂತ್ರಗಳನ್ನು ಹೇಳದರೇ ಆಕೆಯ ಹೊಟ್ಟೆ ತುಂಬುತ್ತದೆ (ಮಹೋನಂ. ೦೩೪). ೩. ಮೀಮಾಂಸಾಶಾಸ್ತ್ರದ ಪ್ರಕಾರ ಛಂದೋಬದ್ಧವಲ್ಲದ ಬ್ರಾಹ್ಮಣಭಾಗವನ್ನು ಬಿಟ್ಟು ಉಳಿದ ವೇದಭಾಗ ; ಸಂಹಿತೆ ಮತ್ತು ಉಪನಿಷತ್ತು : ಅವನಿಗೆ ಮಂತ್ರಭಾಗವೆಲ್ಲ ಆಗಿದೆ. ಬ್ರಾಹ್ಮಣವನ್ನು ಇನ್ನೂ ಹೇಳಿಲ್ಲ (ರೂಢಿ). ೪. ಮಾಂತ್ರಿಕರು ಮಾಟ, ವಶೀಕರಣ ಮೊದಲಾದ ಕ್ರಿಯೆಗಳಲ್ಲಿ ಬಳಸುವ ವೈದಿಕವಲ್ಲದ ಅಕ್ಷರಸಮೂಹ : ಇನ್ನು ಕೆಲವರು ಇದು ಪಿಶಾಚಿಯ ಬಾಧೆಯೆಂದೂ ಹೇಳತೊಡಗಿದರು. ಇದಕ್ಕಾಗಿ ಮಂತ್ರ – ಹರಕೆ ಮೊದಲಾದುವುಗಳ ಸೂಚನೆಗಳು ಬಂದುವು (ಕಾದಂಬರಿ. ೦೪ ಕತಾಸಾರ). ೫. ರಾಜ ಮೊದಲಾದವರು ನಡೆಸುವ ರಹಸ್ಯಾಲೋಚನೆ.— ಮಂತ್ರಾಲೋಚನೆ : ಸತ್ಯವತಿ ತಾನುಮಾತನಂ ಮಾಳೋಚಿಸಿ ನಿಶ್ಚಿತಮಂತ್ರರಾಗಿ ಕೃಷ್ಣದ್ವೈಪಾಯನನಂ ನೆನೆದು ಬರಿಸಿದೊಡೆ (ಪಂಪಭಾ. ೧-೬೪ ವ) ; ಮಂತ್ರವುಳ್ಳವನವನೆ ಹಿರಿಯನು ಮಂತ್ರವುಳ್ಳವನವನೆ ರಾಯನು ಮಂತ್ರವುಳ್ಳವನವನೆ ಸಚಿವ ನಿಯೋಗಿಯೆನಿಸುವನು ಮಂತ್ರವಿಲ್ಲದ ಬಿಜೀಯ ಬಲುತಳತಂತ್ರದಲಿ ಫಲವಿಲ್ಲವೈ (ಕುಮಾ.ವ್ಯಾ. ಸ. ೦-೯೯) ; ಮಂತ್ರಿಯು ಹಗೆ ನೃಪನ ಕಾಂತೆಯ ಸವು ಗೋಷ್ಠಿ ಮಂತ್ರವಿಲ್ಲದನ ಒಡನಾಟ ಇವು ತನ್ನ ಆಂತ್ಯಕಾಲಕ್ಕೆ (ಸರ್ವಜ್ಞ. ೬೩೯). ೬. ಆಲೋಚನೆ; ವಿಚಾರ : ಮಂತ್ರಾಕ್ಷರನಿಮುಮುದಿಸಭಿಮಂತ್ರಿಸಿ ಬರಿಸಿದೊಡೆ ವಾಯುದೇವಂ ಬಂದೇಂ ಮಂತ್ರಂ ಪೇಟೆಸೆ (ಪಂಪಭಾ. ೦-೦೩೪). ೭. ವಿಷ್ಣು. ೮. ಶಿವ. ೯. [ಜ್ಯೋತಿ] ಐದನೆಯ ರಾಶಿ. ೧೦. [ರಾಜನೀ] ಸಾಮ, ದಾನ, ಭೇದ ಮತ್ತು ದಂಡ ಎಂಬ ನಾಲ್ಕು ಬಗೆಯ ಉಪಾಯಗಳು; ರಾಜತಂತ್ರಜ್ಞಾನ; ರಾಜನೀತಿ : "ಚತುರೋಪಾಯವುಕ್ಕು ಮಂತ್ರಂ ಕ್ಷಾತ್ರವುಟ್ಟಿ ರಾಜಪ್ರಕೃತಿಯುಕ್ಕು" (ಶಬ್ದಮಣಿ. ೭೯-೬). ೧೧. [ಜೈನ] ದೀಕ್ಷಾನ್ವಯಕ್ರಿಯೆಗೆ ಸೇರಿದ ಅವತಾರಕ್ರಿಯೆಯ ಹತ್ತು ವಿಧಗಳಲ್ಲಿ ಆರನೆಯದು : ಆಜನೆಯ ಮಂತ್ರಮೊಂದುದು ಪಂಚವಿಧಮಕ್ಕುಂ (ಆಪುಂಪು. ೨೨೦). ೧೨. ಪರಂಪರಾಗತವಾದ ಮುಕ್ತಿಸಾಧಕವೆನಿಸಿದ ಸಂಸ್ಕೃತ, ಪ್ರಾಕೃತ ಭಾಷೆಗಳ ಪವಿತ್ರವಾಕ್ಯಗಳು : ಣಮೋ ಅರಹಂತಾಣಂ . . . ಈ ಐದು ಮಂತ್ರಗಳಿಗೆ ಣಮೋಕಾರಮಂತ್ರಗಳೆಂಬ ಹೆಸರು (ತ್ರಿಪ. ೯೪). [ಸಂ.]

**ಮಂತ್ರಕರ್ತ** (ನಾ). ತನ್ನ ತಪಸ್ಸಿನ ಪ್ರಭಾವದಿಂದ ಮಂತ್ರಗಳನ್ನು ಕಂಡುಕೊಳ್ಳುವವನು; ಋಷಿ : ನಮ್ಮಲ್ಲಿ ಯಾರೂ ಮಂತ್ರದ್ರಷ್ಟರಾಗುವುದಿರಲಿ ಮಂತ್ರಕರ್ತರೂ ಆಗಿಲ್ಲ (ಮಹಾಅ. ೨೬೦). [ಸಂ.]

**ಮಂತ್ರಕೋವಿದ** (ನಾ). ೧. ವೇದಮಂತ್ರಗಳನ್ನು ಆಳವಾಗಿ ಅಭ್ಯಾಸ ಮಾಡಿರುವವನು ; ವೈದಿಕ. ೨. (ಮಂತ್ರಾಸ್ತ್ರಗಳಲ್ಲಿ) ಪಾರಂಗತನಾದವನು : ಖಳ ಮರಳ ಪುರುಷಾಸ್ತ್ರವನು ಬಿಟ್ಟನು ಮಂತ್ರಕೋವಿದನು (ಕ೦ಶಾ. ೩೬-೫೭). [ಸಂ.]

**ಮಂತ್ರಗಾರ** (ನಾ). ೧. ಮಂತ್ರಗಳ ಸಹಾಯದಿಂದ ಅಲೌಕಿಕಸಿದ್ಧಿಯನ್ನು ಪಡೆದವನು : ಮನೆಯೊಳಗೆ ನುಗ್ಗಿದ್ದ ಹಾವನ್ನು ಮಂತ್ರಹಾಕಿ ಹಿಡಿದ ಮಂತ್ರಗಾರನನ್ನು ನಾನು ಕಣ್ಣಾರ ಕಂಡಿದ್ದೇನೆ (ರೂಢಿ). ೨. ಮಾಟಮಾಡುವವನು ; ಮಾಟಗಾರ : ಆ ಮಂತ್ರಗಾರನು ಮಾಟಮಾಡುವುದರಲ್ಲಿ ಎತ್ತಿದ ಕೈ(ರೂಢಿ).
[ ಮಂತ್ರ + — ಕಾರ$_1$ (< — ಕಾಜ) ]

**ಮಂತ್ರಗಾರಿಕೆ** (ನಾ). ೧. ಮಂತ್ರಗಾರ ವೃತ್ತಿ.—ಉದ್ಯೋಗ. ೨. ಮಾಯಾವಿದ್ಯೆ; ಇಂದ್ರಜಾಲ : ಮಾನವೀಯ ವ್ಯಕ್ತಿತ್ವದ ಮೂಲದ್ರವ್ಯವನ್ನು ಮೇಲಿನ ಮಟ್ಟಕ್ಕೆ ಮಾರ್ಪಡಿಸುವ ಮಂತ್ರಗಾರಿಕೆಯನ್ನು ತರಬೇಕು (ಪಕ್ಷಿಕಾ. ೦೭). [ ಮಂತ್ರಗಾರ + — ಇಕೆ ]

**ಮಂತ್ರಗಾರ್ತಿ** (ನಾ). ಮಂತ್ರಮಾಡುವವಳು; ಯಕ್ಷಿಣೀವಿದ್ಯೆಯನ್ನು ತಿಳಿದಿರುವವಳು : ಆ ಮಂತ್ರಗಾರ್ತಿ . . . ಜವನಾಲಯಕ್ಕೆ ಸಂದಿದ್ದಳು (ಏಣಾಳ. ೬ ಮುಸ್ಸಂಜೆ).
[ಮಂತ್ರಗಾರ + — ತಿ$_1$ (<— ಇತ್ತಿ)]

**ಮಂತ್ರಗುಪ್ತಿ** (ನಾ). ರಾಜಕಾರ್ಯ ಮುಂತಾದುವುಗಳಲ್ಲಿ ಮಾಡುವ ಸಮಾಲೋಚನೆ; ಮಂತ್ರಾಲೋಚನೆ: ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆದಂ ಈ ಮಹೀನಾಥಂ ಮಂತ್ರಗುಪ್ತಿಯೊಳ್ ನೆರೆದಂ (ಆದಿಪು. ೬-೨೪ ವ). [ ಸಂ. ]

**ಮಂತ್ರಗೋಪ್ಯ** (ನಾ). ೧. ವೇದಾಗಮಗಳಲ್ಲಿ ನಿರೂಪಿತವಾಗಿರುವ ಮಂತ್ರಗಳ ಗುಟ್ಟು.—ರಹಸ್ಯ. ೨. [ವೀಶೈ] "ಈ ಮಂತ್ರಗೋಪ್ಯಕ್ಕೆ ಅರ್ಥವೇನೆಂದರೆ 'ಮಂ' ಎಂಬಲ್ಲಿ ಮನಸವೆಂದು ಪ್ರಣವ ಸ್ವರೂಪವಪ್ಪ ಪರಶಿವನ ನೆನಹು. 'ತ್ರ' ಎಂದರೆ ತ್ರಾಣವೆಂದು. ಅಂತು ಪರಶಿವನ ನೆನಹೆಂಬುದು ನೆನೆವಾತನ ಚಿತ್ತವ ಸಂಸಾರ ವ್ಯಾಪ್ತಿಯಿಂದ ಕಡೆಗೆ ದಾಂಟಿಸಿ. ಆ ಚಿತ್ತವ ತನ್ನಲ್ಲಿ ಸಂಬಂಧಿಸಿ

ಕೊಳ್ಳುತಿರ್ದ ಕಾರಣ, ಆ ನೆಸಹಿಂಗೆ ಮಂತ್ರವೆಂಬ ಅರ್ಥವಾಯಿತು" (ತಪ್ಪ.ಶಾ. ೪೭). [ಸಂ.]

**ಮಂತ್ರಘೋಷ** (ನಾ). ೧. ವೇದಮಂತ್ರಗಳ ಧ್ವನಿ ; ವೇದವನ್ನು ಪಠಿಸುವಾಗ ಕೇಳಿ ಬರುವ ಧ್ವನಿ : ಓಂಕಾರಸ್ವಾಹಾದಿಮಂತ್ರಘೋಷಂ ಬೆರಸಿ . . . ದೇವರಿಗೆ ಹವಿಯಂನರ್ಪಿಸುತಿರ್ದಂ (ಶ್ರೀರಾಮಾ. ೦೨-೩೦೦). ೨. ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂಬ ಮೂರು ಪ್ರಕಾರದ ಸ್ಥಾಯಿಗಳಲ್ಲಿ ವೇದಮಂತ್ರವನ್ನು ಹೇಳುವುದು, — ವೇದಪಠಣ : ವೈದಿಕರು ಮಂತ್ರಘೋಷ ಮಾಡುತ್ತಿದ್ದಂತೆಯೇ ದೇವರ ಮೂರ್ತಿಯನ್ನು ಪ್ರತಿಷ್ಠಾಪಿಸಿದರು (ರೂಢಿ). [ಸಂ.]

**ಮಂತ್ರಜಾಪ್ಯ** (ನಾ). ಮಂತ್ರಪಠಣ ; ಮಂತ್ರವನ್ನು ಜಪಿಸುವುದು : ಈ ಗುಹೆಯೊಳ್ ಮಹಾಗ್ನಿತ್ರಿತಯ ನೆಲಸಿರ್ದಪುದಲ್ಲಿ ಮಂತ್ರಸ್ನಾನಾಗಮ ವಿರ್ಪ ಪುಸ್ತಕಮುಮುಂಟವಜಾದಿಯ ಮಂತ್ರಜಾಪ್ಯದಿಂ ವೇಗ ದೊಳಗ್ನಿಯುಂ ಪುಗು (ದಶಕು. ೩-೨೭). [ಸಂ.]

**ಮಂತ್ರಜ್ಞ** (ನಾ). ೧. ವೇದಗಳ ಮಂತ್ರಭಾಗದಲ್ಲಿ ಪಾರಂಗತನಾದವನು : ನಮ್ಮ ಪುರೋಹಿತರು ಒಳ್ಳೆಯ ಮಂತ್ರಜ್ಞರು (ರೂಢಿ). ೨. ವಿದ್ವಾಂಸನಾದ ಬ್ರಾಹ್ಮಣ. ೩.(ರಾಜನಿಗೆ) ಸಲಹೆ ಕೊಡುವುದರಲ್ಲಿ ನಿಪುಣನಾದವನು : ವಿಶ್ವೇಶ್ವರಯ್ಯನವರು ಮೇಲ್ಮಟ್ಟದ ಆಡಳಿತಗಾರರು, ಶ್ರೇಷ್ಠ ಮಂತ್ರಜ್ಞರು (ರೂಢಿ). ೪. ಗೂಢಚಾರ ; ನಿಯೋಗಿ : "ಯಥಾರ್ಥವರ್ಣಃ, ಮಂತ್ರಜ್ಞಃ, ಸ್ಪಶಃ, ಹೇರಿಕಃ — ಈ ೪ ಹೇರಿಗಂ" (ಅಂಡಯ್ಯ. ೭೦-೨೭೧). [ಸಂ.]

**ಮಂತ್ರಣ** (ನಾ). ಗಹನವಾದ ರಾಜಕಾರ್ಯವೇ ಮೊದಲಾದುವುಗಳ ರಹಸ್ಯವಾದ ಚರ್ಚೆ ; ಮಂತ್ರಾಲೋಚನೆ : ದಶಶಿರಪ್ರಣಯ ಮಂತ್ರಣಕಾಕೆ ಸಚಿವಳ್ (ಶ್ರೀರಾಮಾ. ೩೦೯-೦೬). [ಸಂ.]

**ಮಂತ್ರದಂಡ** (ನಾ). ಇಂದ್ರಜಾಲಿಕರು ಮಂತ್ರಪ್ರಯೋಗಮಾಡುವಾಗ ಹಿಡಿಯುವ ಕೋಲು : ಮಂತ್ರವನ್ನು ಹೇಳುತ್ತಾ ಮಂತ್ರಗಾರನು ತನ್ನ ಮಂತ್ರದಂಡದಿಂದ ಮುಟ್ಟಿದ ಕೂಡಲೇ ಅದ್ಭುತವಾದ ಚಮತ್ಕಾರ ವಾಯಿತು (ರೂಢಿ). [ಸಂ.]

**ಮಂತ್ರದಾತ** (ನಾ). ಮಂತ್ರವನ್ನು ಹೇಳಿಕೊಡುವವನು ; ಗುರು ; ಪುರೋಹಿತ : ಅವನ ತಂದೆ ಊರಿನ ಮಂತ್ರದಾತರು. ಈತ ಊರಿನ ಮಂತ್ರಣದಾತ, ಸಲಹಾಕಾರ (ಬಿತ್ತ. ೩೫೭). [ಸಂ. ಮಂತ್ರದಾತೃ]

**ಮಂತ್ರದೀಕ್ಷಿತ** (ನಾ). ಯಾವುದಾದರೊಂದು ಮಂತ್ರವನ್ನು ಸಾಧಿಸುವುದಕ್ಕಾಗಿ ವ್ರತವನ್ನು ಕೈಗೊಂಡಿರುವವನು ; ಮಂತ್ರಸಿದ್ಧಿಗಾಗಿ ನಿಯಮಬದ್ಧನಾಗಿರುವವನು : ನಂಬು ! ನಿನ್ನನೆ ನಂಬು ! ಮಂತ್ರದೀಕ್ಷಿತಗೆ ಗುರಿ ತಪ್ಪದೆಂದು (ಪಾಂಚಜ. ೫೦-೦೨). [ಸಂ.]

**ಮಂತ್ರದೀಕ್ಷೆ** (ನಾ). ೧. ಯಾವುದಾದರೊಂದು ಮಂತ್ರಸಿದ್ಧಿಗಾಗಿ ಕೈಗೊಂಡಿರುವ ನಿಯಮ, — ವ್ರತ : ಅವನು ಮಂತ್ರದೀಕ್ಷೆ ತಾಳಿದ್ದಾನೆ. ಅದ್ದರಿಂದ ಸೋಮವಾರ ಉಪವಾಸ ಮಾಡುತ್ತಾನೆ (ರೂಢಿ). ೨. ಗುರುವಿನಿಂದ ಯಾವುದಾದರೊಂದು ಮಂತ್ರಸಿದ್ಧಿಗಾಗಿ ಉಪದೇಶವನ್ನು ತೆಗೆದುಕೊಳ್ಳುವುದು : ಗುರುವಿನಿಂದ ಶಿಷ್ಯನ ಕಿವಿಯಲ್ಲಿ ಉಪದೇಶಿಸಲ್ಪಡುವ ಮಂತ್ರವೇ ಮಂತ್ರದೀಕ್ಷೆಯು (ಶಿವಾಸೂ. ೭೦); ಶಿವಧ್ಯಾನಪರನಾಗಿ ಪಂಚಾಕ್ಷರಿಯ ಶಿಷ್ಯಗೊರೆವುದೇಮಂತ್ರದೀಕ್ಷೆಯುದೇವಜಾ (ವೀಶೈತ. ೬-೬-೬೩). [ಸಂ. ಮಂತ್ರದೀಕ್ಷಾ]

**ಮಂತ್ರದೇವತೆ** (ನಾ). ಮಂತ್ರಾಭಿಮಾನಿಯಾದ ದೇವತೆ : ಬೆಸನಂ ಪಾರ್ವುವು ಮಂತ್ರದೇವತೆಗಳ್ (ಆದಿಪು. ೦-೬೯) ; ಮನಸಿಜಮಂತ್ರದೇವತೆಯುವತಿಯರ್ (ಶಾಂತಿಪು. ೮-೦೯). [ಸಂ. ಮಂತ್ರದೇವತಾ]

**ಮಂತ್ರದ್ರಷ್ಟ** (ನಾ). ಮಂತ್ರಗಳ ತತ್ತ್ವಾರ್ಥವನ್ನು ಕಂಡುಕೊಳ್ಳುವವನು, — ರಹಸ್ಯಗಳನ್ನು ಕಂಡುಕೊಳ್ಳುವವನು ; ಋಷಿ : ನಮ್ಮಲ್ಲಿ ಯಾರೂ ಮಂತ್ರದ್ರಷ್ಟರಾಗುವುದಿರಲಿ ಮಂತ್ರಕರ್ತರೂ ಆಗಿಲ್ಲ (ಮಹಾಕ್ಷ. ೨೬೦). [ಸಂ. ಮಂತ್ರದ್ರಷ್ಟೃ]

**ಮಂತ್ರದ್ರಷ್ಟಾರ** (ನಾ). = ಮಂತ್ರದ್ರಷ್ಟ : ಕ್ರೌಂಚದರ್ಶನ ಕವಿಯು ಮಂತ್ರದ್ರಷ್ಟಾರ (ಕ್ರೌಂಚಪ. ೩೩-೦೩). [ಸಂ. ಮಂತ್ರದ್ರಷ್ಟೃ]

**ಮಂತ್ರಪಿಂಡ** (ನಾ). [ವೀಶೈ] ಮಂತ್ರಪೂತವಾದ ದೇಹ : ಎನಿಸಿದನು ಮಂತ್ರಪಿಂಡ ಎನಿಸದೆ ಮಾಂಸಪಿಂಡ ಎನಿಸದೆ ವಾಯುಪ್ರಾಣಿ ಎಂದು ಬಸವಣ್ಣ ಎನಿಸಿದನು ಲಿಂಗಪ್ರಾಣಿ ಎಂದು (ಸಿದ್ಧ ಪು. ೨೬-೯೯) ; ಶರೀರದಲ್ಲಿ ಲಿಂಗವನ್ನು ಧರಿಸುವುದರಿಂದ ಈ ಶರೀರವು ಮಂತ್ರಪಿಂಡವೆನಿಸಿತು (ಶಾರದ. ೪೩೩). [ಸಂ.]

**ಮಂತ್ರಪುರಶ್ಚರಣ** (ನಾ). ಏಕಚಿತ್ತದಿಂದ ಮಂತ್ರವನ್ನು ಮೆಲ್ಲಗೆ ಉಚ್ಚರಿಸುವುದು : ಮಂತ್ರಜಪ : ಯಂತ್ರೋದ್ಧಾರಣ, ಮಂತ್ರಪುರಶ್ಚರಣ . . . ಮೊದಲಾದ ವಿವರಣಗಳು . . . ಪಾಂಚರಾತ್ರಾಗಮದಲ್ಲಿಯೂ ಸುಂದರವಾಗಿ ಚಿತ್ರಿತವಾಗಿವೆ (ಶಾರದ. ೬೬). [ಸಂ.]

**ಮಂತ್ರಪುಷ್ಪ** (ನಾ). ದೇವರಿಗೆ ಮಹಾಮಂಗಳಾರತಿಯಾದ ಮೇಲೆ ಮಂತ್ರಪೂರ್ವಕವಾಗಿ ಅರ್ಪಿಸುವ ಹೂವು ಮತ್ತು ಆಗ ಹೇಳುವ ಮಂತ್ರಸಮುದಾಯ : ರಾಜಾಧಿರಾಜನೆಂಬ ಮಂತ್ರಪುಷ್ಪಗಳಿಂದ ಪೂಜಿಸಿದರು ಒಲ್ಲ ಪುರಂದರವಿಠಲನು (ಪುರಂದ. ೨-೬೯-೩); ಯಂತ್ರವಾಹಕಂಗೆ ಮಂತ್ರ[ಪಾಠಾಂ. ಸುಮಂತ್ರ]ಪುಷ್ಪಮನಿತ್ತು ನಿವ್ಯಾಜಭಕ್ತಿಯಿಂ ಪ್ರದಕ್ಷಿಣಂಗೆಯ್ದು ಪೊಡಮಟ್ಟು (ರಾಜಶೇ. ೦೩-೩೪ ವ). [ಸಂ.]

**ಮಂತ್ರಪೂತ** (ನಾ). ಮಂತ್ರದಿಂದ ಪವಿತ್ರವಾದುದು, — ಪರಿಶುದ್ಧವಾದುದು : ಮಂತ್ರಪೂತವಾದ ಈ ದರ್ಭೋದಕದಿಂದ ನಿನ್ನ ಶರೀರ ಬಾಧೆಯೆಲ್ಲಾ ಪರಿಹಾರವಾಗುವುದು (ಶಾಕುಂತ. ೪೨-೩೪). [ಸಂ.]

**ಮಂತ್ರಭ್ರಮಿತ** (ನಾ). ರಹಸ್ಯಾಲೋಚನೆಯಲ್ಲಿ ತಪ್ಪುದಾರಿಯನ್ನು ಹಿಡಿದವನು : ಸಮರಜಯಸಾಧಕರು ಮಂತ್ರಭ್ರಮಿತರಾಯ್ತಾಪಜಯ ವಧೂವಿಭ್ರಮಕಟಾಕ್ಷದ ಛಾಯದಲಿ ಕಳವಳಿಸದವರಾರು (ಕುಮಾ.ಭ. ೩-೦೩); P ಇಲ್ಲಿ 'ಭ್ರಾಂತ' ಎಂಬ ಅರ್ಥದಲ್ಲಿ 'ಭ್ರಮಿತ' ಎಂದು ಪ್ರಯೋಗವಾಗಿದೆ. [ಸಂ.]

**ಮಂತ್ರಮುಕ್ತ** (ನಾ). ಮಂತ್ರದ ಸಹಾಯದಿಂದ ಪ್ರಯೋಗಿಸುವ ಆಯುಧ ; ಮಂತ್ರಾಸ್ತ್ರ : ಅಗ್ನಿಪುರಾಣವು ಆಯುಧಗಳನ್ನು ಅಸ್ತ್ರ ಮತ್ತು ಶಸ್ತ್ರಗಳೆಂದು ಎರಡು ಭಾಗಗಳಾಗಿ ವಿಂಗಡಿಸುತ್ತದೆ. ಇವುಗಳಲ್ಲಿ ಮೊದಲನೆಯದನ್ನು (೧) ಯಂತ್ರಮುಕ್ತ, (೨) ಪಾಣಿಮುಕ್ತ, (೩) ಮಂತ್ರಮುಕ್ತ, (೪) ಮುಕ್ತಸಂಧಾರಿತ (ಬಿಟ್ಟು ಹಿಂದಕ್ಕೆ ಪಡೆದದ್ದು) ಎಂದು ನಾಲ್ಕಾಗಿ ವಿಭಾಗಿಸುತ್ತದೆ (ಕಣಾಂ. ೨೬೨). [ಸಂ.]

**ಮಂತ್ರಮುಗ್ಧ** (ನಾ). ಮಾಟ, ವಶೀಕರಣ ಮುಂತಾದ ಮಂತ್ರದ ಪ್ರಯೋಗಗಳಿಂದೆಂಬಂತೆ ಮರುಳಾದವನು, — ಪರವಶನಾದವನು : ಶ್ರೀ ರಾಮಕೃಷ್ಣಪರಮಹಂಸರ ಮಾತು ನರೇಂದ್ರನನ್ನು ಮಂತ್ರಮುಗ್ಧನನ್ನಾಗಿ ಮಾಡಿತು (ಧರ್ಮಸಾ. ೪೬); ಈ ಅದ್ಭುತಭಾವವನ್ನು ಅನುಭವಿಸಬಲ್ಲವರು ಇದರಿಂದ ಮಂತ್ರಮುಗ್ಧರಾಗುತ್ತಾರೆ (ಶಾರದ. ೩೨೯). [ಸಂ.]

**ಮಂತ್ರಯೋಗ** (ನಾ). ಮಂತ್ರಸಾಧನೆ ; ಮಂತ್ರದ ಅನುಸಂಧಾನ : ಪ್ರಣವಾದಿ ಮಂತ್ರಾನುಸಂಧಾನದಿಂ ಪರಮಾತ್ಮನಲ್ಲಿ ಮನೋಲಯಮಹುದೇ ಮಂತ್ರಯೋಗವೆನಿಸುವುದು (ಚವೇಕ. ೪೯); ಆಗಮೋಕ್ತಮಾರ್ಗದಿಂದೆ ಜಪಮಾಲಿಕೆಯಿಂದೆ ಅಂಗುಷ್ಠಮಧ್ಯಮಗಳಿಂದೆ ಉಪಾಂಶುರೂಪದಿಂದೆ ಧ್ಯಾನಪೂರ್ವಕದಿಂ ಜಪಮಂ ಮಾಡುವುದೆ ಮಂತ್ರಯೋಗವೆನಿಸಿತ್ತು (ಅಜಂದೀ. ೨೦೩-೫೨); ಈ ಮಂತ್ರಗಳ ಜಪಗಳಿಂದ ಶಾಸ್ತ್ರದಲ್ಲಿ ಹೇಳಿರುವಂತೆ ಕಾಲ

ದೇಶಗಳಿಗನುಸಾರವಾಗಿ ಅಭ್ಯಾಸಮಾಡುವುದಕ್ಕೆ "ಮಂತ್ರಯೋಗ" ವೆಂದು ಹೆಸರು (ಶಾರದ. ೧೩೪). [ಸಂ.]

**ಮಂತ್ರವಾದ** (ನಾ). ೧. ಯಕ್ಷಿಣೀವಿದ್ಯೆ; ಇಂದ್ರಜಾಲ: ಚಾಣಕ್ಯಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮನೇನೀ ಕೂಸನೋದಿಸಿದಾ (ವಡ್ಡಾರಾ. ೨೩-೧೭); ಜ್ಯೋತಿಷ ಮಂತ್ರವಾದದೆಡೆಯೊಳ್ ವಿದ್ವಾಂಸರೊಳ್ ಸ್ತ್ರೀಯರೊಳ್ ದೊರೆಗಳ್ಗೆ ಚಿತ್ತಜಂ ಬೇಕಲ್ತೆ (ಸೋಮೇಶ. ೫೭); ವಿಗಡಮುನಿ ಚಿತ್ರಾಕರುಷಣದ ಮಂತ್ರವಾದವೊ . . . ಚಿತ್ರವಾಯ್ತೂ ರ್ವಶಿಯ ಬರವಿನಲಿ (ಕುಮಾ.ಭಾ. ೬-೫). ೨. ಸನ್ಮಾರ್ಗವನ್ನು ತೋರಿಸುವುದು : ಆಚಾರ್ಯನಂತೆ ಮಾಡಲ್ಕಕ್ಕುಮದಂ ತೋರ್ಪುದೇ ಮಂತ್ರವಾದ ಮೆನಿಸುವುದು (ವಿವೇಕ. ೪). [ಸಂ.]

**ಮಂತ್ರವಾದಿ** (ನಾ). ೧. ವೇದಮಂತ್ರಗಳನ್ನು ಹೇಳುವವನು ; ಸನ್ಮಾರ್ಗವನ್ನು ತೋರಿಸುವವನು. ೨. ಯಕ್ಷಿಣೀವಿದ್ಯೆಯನ್ನು ಬಲ್ಲವನು; ಐಂದ್ರಜಾಲಿಕ: ಮಾಂತ್ರಿಕ : ವಿವಿಧ ಮಣಿಕಿರಣಚಯದಿಂ ದವನಿಪನಂ ಬಿಟ್ಟು ಕೊಟ್ಟನರ್ಥಿಜನಕ್ಕಾ ದಿವಿಜೇಂದ್ರಂ ಬಳವಿಯ ಮಂತ್ರವಾದಿಯೆನೆ ಮಕುಟಬದ್ಧಸಮಾಜಂ (ಶಾಂತಿಪು. ೧೧-೧೧). ೩. ಜನರನ್ನು ಪೀಡಿಸುವ ಭೂತಪ್ರೇತಪಿಶಾಚಾದಿ ಬಾಧೆಗಳನ್ನು ಮಂತ್ರತಂತ್ರಗಳಿಂದ ಪರಿಹರಿಸುವವನು ; ಮಾಮಾಚಾರಿ : ಬಡತನವೆಂಬ ಮಂತ್ರವಾದಿ ಹೊಗಲು ಒಡನೆ ನುಡಿವರು (ಬಸವ. ೧೩೨); ಎಲವೊ ದುಷ್ಟಗ್ರಹದ ಬಾಧೆಯ ನಿಲಿಸಲರಿಯರೆ ಮಂತ್ರವಾದಿಗಳು (ಕುಮಾ.ದ್ರೋ. ೧೩-೧೧); ಮಂತ್ರವಾದಿ ಎಂಬವನು ಊರನ್ನು ಒಣ್ಣವೆ ತಿರೆಯುವುದರೊಳಗೆ ಸುಟ್ಟು ಬಿಡಬಲ್ಲ ಶಕ್ತಿಗಾರನೆಂದು ಅವರ ತಿಳಿವು (ಶಾಲೆಪ್ರ. I, ೧೫೦).
[ಸಂ. ಮಂತ್ರವಾದಿನ್]

**ಮಂತ್ರವಾದಿನಿ** (ನಾ). ಮಾಯಾವಿದ್ಯೆಯನ್ನು ಬಲ್ಲವಳು; ಮಾಟಗಾತಿ : 'ಶನಿ'ಪೆಸರ . ಮುದುಕಿಯಾದಾ ಮಂತ್ರವಾದಿನಿಯ ಮರೆತೆಯೇಂ? (ಐಗಾಲ. ೨೭-೧). [ಸಂ. ಮಂತ್ರವಾದಿನೀ]

**ಮಂತ್ರವಿದ** (ನಾ). ೧. ಮಾಟ . ಮಂತ್ರಗಳನ್ನು ಬಲ್ಲವನು ; ಮಂತ್ರವಾದಿ : ಕನಕಲತೆಯುಮಾಕೆಗಮರಸಂಗಂ ಕ್ಷಣಮಾತ್ರ ವಿದ್ವೇಷಕಾರಿಯಪ್ಪ ಪುಷ್ಪಮಾಲೆಯಂ ಮಂತ್ರವಿದರುಪದೇಶದಿಂ ಮದ್ಯರಸನಿವೇದನವ್ಯಾಜದಿಂ ಪರಿಚಾರಿಕೆಯರ ಕೆಯ್ಯೊಳಟ್ಟುವುದುಂ (ಶಾಂತಿಪು. ೯-೫೦ ವ). ೨. ಮಂತ್ರಪ್ರಯೋಗದಿಂದ ರೋಗ. ವಿಷ ಮುಂತಾದವುಗಳನ್ನು ಹೋಗರಾಡಿಸುವವನು : ಅಪಿದಷ್ಟನಂ ಪರೀಕ್ಷಿಸಿ ದಯೆಯಿಂ ಮಂತ್ರೌಷಧಿಯಂ ಮಾಡ್ಪುದು ಮಂತ್ರವಿದಂ (ಐಮರ. ೩-೧೧೧). [ಸಂ. ಮಂತ್ರವಿದ್]

**ಮಂತ್ರವೈದ್ಯ** (ನಾ). = ಮಂತ್ರವಿದ ೨ : ಗುರೂಪದೇಶ ಮಂತ್ರವೈದ್ಯ ಜಂಗಮೋಪದೇಶ ಶಸ್ತ್ರವೈದ್ಯ ನೋಡಾ (ಬಸವ. ೬೫೩). [ಸಂ.]

**ಮಂತ್ರಶಕ್ತಿ** (ನಾ). ೧. ವೇದಾದಿ ಮಂತ್ರಗಳ ಸಾಮರ್ಥ್ಯ: ಮಂತ್ರಿಗಳ ಮಂತ್ರಕ್ಕೆ ಉದುರುವುದೆ ಮಾಂಗಾಯಿ ಮಂತ್ರಶಕ್ತಿಯು ದೈವಪಂಚಾಯತ (ಜಲಮು. ೧೯-೨೦). ೨. ಹಿಂದೆ ರಾಜನಾಗಿದ್ದ ಪ್ರಭುಶಕ್ತಿ, ಮಂತ್ರಶಕ್ತಿ ಮತ್ತು ಉತ್ಸಾಹಶಕ್ತಿ ಎಂಬ ಮೂರು ಪ್ರಕಾರದ ಶಕ್ತಿಗಳಲ್ಲಿ ಒಂದು; ರಾಜನೀತಿಯ ಸಾಮರ್ಥ್ಯ : ಕಾರ್ಯಾಂಶವಿಶೇಷಾರ್ಥಮಂ ನೆನೆದು ತಿಳಿವಾ ಧರಾಧೀಶ್ವರಂ ಮಂತ್ರಶಕ್ತಿಗೆ ಜನ್ಮಭೂಮಿಯಾದಂ (ಮಲ್ಲಿಪು. ೩-೧೧) ; ಒಲಿದರೊಳಲಂಚದಲಿ ಭಿದ್ರಿಸಿ ಕೊಲುವ ಮುನಿದೊಡೆ ಮಂತ್ರ ಶಕ್ತಿಯೊಳಳುಕಿಸುವ ಮಂತ್ರಿಗಳು ಮೆಚ್ಚಿದರು ವಾಮಭಾಗದಲಿ (ಕುಮಾ.ಅ. ೮-೩೫). ೩. ಅಭಿಚಾರ ; ಮಾಟ : ಮಂತ್ರಶಕ್ತಿಯಲ್ಲಿ ನನ್ನದು ಅದ್ಭುತ ಎಂಬ ಹೆಮ್ಮೆ ನನಗೆ (ಶಿದ್ಯಸ. ೨೫೮). [ಸಂ.]

**ಮಂತ್ರಶಾಲೆ** (ನಾ). (ಅರಸನು) ಮಂತ್ರಿಗಳೊಂದಿಗೆ ಗಹನವಾದ ವಿಷಯಗಳಿಗೆ ಸಂಬಂಧಿಸಿದಂತೆ ಸಮಾಲೋಚನೆ ನಡೆಸುವ ಮನೆ : ನಿರ್ಣೀತಮಂತ್ರರಾದ ಮಂತ್ರಿಗಣಮಂ ಸನ್ಮಾನಪುರಸ್ಸರಂ ಕ್ರಮಂವಿಪ್ಪದೆ ವಿಸರ್ಜಿಸಿ ಮಂತ್ರಶಾಲೆಯಿಂ ಪೊಱಮಟ್ಟು ಬಂದು (ಶಾಂತಿಪು. ೭೨-೧ ವ) : ವಾಲಿ ಮಂತ್ರಶಾಲೆಯಂ ಸುಗ್ರೀವಂಬೆರಸು ಪೊಕ್ಕು ಮಂತ್ರಿಮಂಡಲಮು ಮನಾಪ್ತಪರಿಜನಮುಮಂ ಬರಿಸಿ (ಪಂಪರಾ. ೧೧-೦೭೯ ವ).
[ಸಂ. ಮಂತ್ರಶಾಲಾ]

**ಮಂತ್ರಸಾಕ್ಷಾತ್ಕಾರ** (ನಾ). ತನ್ನ ತಪಸ್ಸಿನ ಪ್ರಭಾವದಿಂದ ಮಂತ್ರಗಳ ಪ್ರಯೋಜನವನ್ನು ಕಂಡುಕೊಳ್ಳುವಿಕೆ : ಈ ವಿಧವಾದ ಮಂತ್ರ ಸಾಕ್ಷಾತ್ಕಾರ ಮಾಡಿಕೊಂಡವರೇ ಋಷಿಗಳು (ಶಾರದ. ೪೭೮). [ಸಂ.]

**ಮಂತ್ರಸಾನಿ** (ನಾ). ೧. ಮಾಟಮಾಡುವವಳು ; ಮಾಟಗಾತಿ : ಆ ಮುದುಕಿ ಮಂತ್ರಸಾನಿ (ದೇವಾಂಕ. ೭೭). ೨. ಹೆರಿಗೆ ಮಾಡಿಸುವ ವೃತ್ತಿಯವಳು ; ಸೂಲಗಿತ್ತಿ : ಈ ಪೊಳಲ ಮಂತ್ರಸಾನಿಯರೆಲ್ಲರನ್ನೂ ಹಿಡಿದು . . . ದೇಶಾಂತರಕ್ಕೆ ಕಳುಹಿಸುವರಂತೆ (ಮುದ್ರಾಮಂ. ೩೯೩).
[ಮಂತ್ರ + ಸಾನಿ$_1$. / ತೆಲು. ಮಂತ್ರಸಾನಿ, ಮಂತರಸಾನಿ]

**ಮಂತ್ರಸಿದ್ಧ** (ನಾ). ಮಂತ್ರದ ಬಲವನ್ನು ವಶಪಡಿಸಿಕೊಂಡಿರುವವನು : ಮಹನೀಯಂ ಮಂತ್ರಸಿದ್ಧಂ ಬಿಡೆ ಪಿಡಿದ ಮಹಾಮುದ್ರೆಯಂ ಕಂಡು ದುಷ್ಟಗ್ರಹಮಾದಂ ಶಾಂತಿಯಂ ತಾಳ್ವುವ ತೆಱದೆ (ಶಾರ್ಙ್ಗಪು. ೪-೦೪೮). [ಸಂ.]

**ಮಂತ್ರಸಿದ್ಧಿ** (ನಾ). ೧. ಮಂತ್ರದ ಬಲವನ್ನು ಸಾಧಿಸುವುದರಿಂದ ಉಂಟಾಗುವ ಸಾಮರ್ಥ್ಯ, - ಶಕ್ತಿ : ಕಾಮೇಶ್ವರಮಂತ್ರಮಂ ಲಕ್ಷಮಂ ಜಪಿಸಿ ಅದರ ಪತ್ತನೆಯ ಭಾಗ ಮುತ್ತುಗದ ಹೂವಂ ಹೋಮಮಂ ಗೈಯಲು ಮಂತ್ರಸಿದ್ಧಿಯಪ್ಪುದು (ಕಾಮಶಾ. ೨೬೦) ; ಈ ರಾಕ್ಷಸನು ನನ್ನ ಮಗನನ್ನು ಕೊಲ್ಲಲು ಶಕ್ತನಲ್ಲ ; ಏಕೆಂದರೆ ನನ್ನ ಮಗ ತೇಜಶ್ಶಾಲಿ, ವೀರ, ಮಂತ್ರಸಿದ್ಧಿಯನ್ನು ಪಡೆದವನು (ವಕಥಾ. ೪೭). ೨. ಮಾಟ, ವಶೀಕರಣ ಮುಂತಾದ ವಿದ್ಯೆ : ಮಂತ್ರಸಿದ್ಧಿಯೊ . . . ಮೋಹ ಮರೌಷಧತಂತ್ರತಿಲಕವೊ ರಮಣಿರಿವರ್ಕೆವರ ವಶೀಕರಣ (ಕುಮಾ.ಭಾ. ೦೫-೨೨).
[ಸಂ.]

**ಮಂತ್ರಾಕ್ಷತೆ** (ನಾ). ಶುಭಕಾರ್ಯಗಳಲ್ಲಿ ಮಂತ್ರಪೂರ್ವಕವಾಗಿ ಬಳಸುವ ಅರಿಸಿನ ಅಥವಾ ಕುಂಕುಮದಲ್ಲಿ ಕಲಸಿದ ಅಕ್ಕಿ ; ಅಕ್ಷತೆ : ಆ ಪರಿತುಷ್ಟನಪ ನೃಪಗೆ ಮಂತ್ರಾಕ್ಷತೆಯನಿತ್ತು (ಹರಿಶ್ಚ. ೫-೬೩) : ನಿಖಿಲ ಭೂಸುರರುರುವ ಮಂತ್ರಾಕ್ಷತೆಯ ಕೊಳುತಳ್ಳಿಱಿವ ಜಯರವದೊಡನೆ ರಥ ವೇಱಿದನು ಕಲಿದ್ರೋಣ (ಕುಮಾ.ದ್ರೋ. ೯-೦೫) ; ಬರಲಾ ನೃಪಾಲಕಂ ಸೋದರರ್ವೆರಸಿ . . . ಪರಸಿ ಮಂತ್ರಾಕ್ಷತೆಯನಿತ್ತು (ಜೈಮಿಭಾ. ೨-೧೪).
[ ಸಂ. ಮಂತ್ರಾಕ್ಷತ ]

**ಮಂತ್ರಾಕ್ಷರ** (ನಾ). ಮಂತ್ರದಲ್ಲಿರುವ ವರ್ಣ ; ಮಂತ್ರಘಟಿತವಾದ ಅಕ್ಷರ : ಮಂತ್ರಾಕ್ಷರನಿಯಮದಿನಭಿಮಂತ್ರಿಸಿ ಬರಿಸಿದೊಡೆ ವಾಯು ದೇವಂ ಬಂದೀಂ ಮಂತ್ರಂ ಪೇಟೆನೆ (ಪಂಪಭಾ. ೧-೦೨೪); ಎನಗಂ ಸಮ್ಮೋಹನಮಾದುದಕ್ಕುಮಂದಣ್ಣನ ಸೂನೃತವಚನವೆಂಬ ಮಂತ್ರಾಕ್ಷರದಿಂ (ಗದಾಯು. ೧-೭೨). [ಸಂ.]

**ಮಂತ್ರಾಗಮ** (ನಾ). ಮಂತ್ರದ ಉಚ್ಚಾರಣೆ ; ಮಂತ್ರಪಠಣ : ಮೊರೆಯುವರ ಕೈಲಾಗುಮದ್ದಿನ ಕಮಳಜಳಮಂತ್ರಾಗಮದಲೆಚ್ಚತ್ತನೊಂದೇ ನಿಮಿಷದಲಿ ಕರ್ಣ (ಕುಮಾ.ಕ. ೦೦-೩೦). [ಸಂ.]

**ಮಂತ್ರಾಗಾರ** (ನಾ). = ಮಂತ್ರಶಾಲೆ : ಮಂತ್ರಾಗಾರದಿಂದಂ ಕ್ಷಿತಿಪತಿ ಪೊಱಮಟ್ಟಂ (ಚಂದ್ರಪ್ರ. ೯-೦೩೧). [ಸಂ.]

**ಮಂತ್ರಾಧ್ವ** (ನಾ). [ವೀಶೈ] ಮಹಾಲಿಂಗದಲ್ಲಿ ಉತ್ಪತ್ತಿಯಾದ ಸಾದಾಖ್ಯಗಳು ಜಗತ್ತಿನಲ್ಲಿ ಪ್ರಕಟವಾಗಲು ಸಹಾಯಕವಾಗಿರುವ

ಆರುಮಾರ್ಗಗಳಲ್ಲಿ ಒಂದು; ಮಂತ್ರರೂಪವಾದ ಮಾರ್ಗ: ವರ್ಣಾಧ್ವ, ಪದಾಧ್ವ, ಮಂತ್ರಾಧ್ವ (ಇವು ಮೂರು ಶಬ್ದಾಧ್ವಗಳು) (ಶಿವಾಕೊ. ೨ ೮೩೮); ಐವತ್ತೆರಡಕ್ಷರಗಳೇ ವರ್ಣಾಧ್ವ. ಈ ವರ್ಣಗಳ ಮೂಲಕ ಪದಗಳು ಉಂಟಾಗುತ್ತವೆ. ಇವೇ ಪದಾಧ್ವ. ಈ ಪದಗಳ ಮೂಲಕ ಮಂತ್ರಗಳು ಉತ್ಪನ್ನವಾಗುತ್ತವೆ. ಇವೇ ಮಂತ್ರಾಧ್ವ (ಶಿವಾಕೋ. ೨೨). 'ಷಡಧ್ವ' ಪರಾ. [ಸಂ. ಮಂತ್ರಾಧ್ವನ್]

**ಮಂತ್ರಾನುಷ್ಠಾನ** (ನಾ). ಮಂತ್ರಸಹಿತವಾದ ವಿಧಿ, – ಆಚರಣೆ: ವಿಧುವಿಶದದುಕೂಲವಸನಶೋಭಂ ನಾನಾವಿಧಮಂತ್ರಾನುಷ್ಠಾನಪ್ರಧಾನ ನುಪವಾಸದಿಂ ತ್ರಿರಾತ್ರಮನಿರ್ದಾ (ಆದಿಪು. ೧೨-೭೯); ಚಿನ್ನದಲ್ಲಿ ಮಾಡಿದ್ದ ಒಂದು ಗೋವಿನ ಉದರದೊಳಗೆ . . . ಕುಳಿತುಕೊಂಡು, ಮಂತ್ರಾನುಷ್ಠಾನ ಮಾಡಿ ಅನಂತರ ಈಚೆಗೆ ಬಂದರು (ಹಾಂಕಲಾ. ೨೩೬). [ಸಂ.]

**ಮಂತ್ರಾಲಯ**[1] (ನಾ). = ಮಂತ್ರಶಾಲೆ: ಸಚಿವರೊಡವರೆ ಪತಿ ಮಂತ್ರಾಲಯಕೆ ಬಂದು ಮಂತಣವಿರ್ದಂ (ಕುಶಪು. ೬-೫೦). [ಸಂ.]

**ಮಂತ್ರಾಲಯ**[2] (ನಾ). ಆಂಧ್ರಪ್ರದೇಶದ ಕರ್ನೂಲುಜಿಲ್ಲೆಯ ಆದವಾನಿ ತಾಲ್ಲೂಕಿನಲ್ಲಿರುವ ಒಂದು ಪುಣ್ಯಕ್ಷೇತ್ರ: ಶ್ರೀ ರಾಘವೇಂದ್ರರು ಮಂತ್ರಾಲಯ(ಮಂಚಾಲೆ)ವನ್ನು ಸೇರಿದೊಡನೆಯೇ ಮೊದಲು ಕುಲದೇವಿ ಮಂಚಾಲಮ್ಮನ ದರ್ಶನ ಮಾಡಿದರು (ಳಘು. ೩೫೬); ಮಂತ್ರಾಲಯ . . . ಇಲ್ಲಿ ರಾಘವೇಂದ್ರಸ್ವಾಮಿಗಳ ಮಠ ಹಾಗೂ ಬೃಂದಾವನವಿದೆ (ಕವಿಕೋ. XII, ೯೬೯).

[p ಇದು 'ಮಂಚಾಲೆ' (ಗ್ರಾಮ) ಎಂಬುದರ ಸಂಸ್ಕೃತೀಕರಣ]

**ಮಂತ್ರಾಲೋಚನೆ**, 'ಮಂತ್ರಾಳೋಚನೆ (ನಾ). ರಾಜಕಾರ್ಯ ಮುಂತಾದ ವಿಷಯಗಳಲ್ಲಿ ಮಾಡಬೇಕಾದ ಕರ್ತವ್ಯವನ್ನು ಕುರಿತು ಆಪ್ತರೊಂದಿಗೆ ಮಾಡುವ ಸಮಾಲೋಚನೆ, — ಚರ್ಚೆ: ವಿಶಾಖಭೂತಿ ಮಂತ್ರಾಲೋಚನೆಯೊಳ್ ಯುವರಾಜಂಗೆ ಬಟಯನಟ್ಟಿ (ಶಾಂತಿಪು. ೬-೫೩ ವ); ಧರ್ಮರಾಯನು . . . ಧೌಮ್ಯಮಹರ್ಷಿಗಳನ್ನು ಬರಮಾಡಿಕೊಂಡು ರಾಜಸೂಯಯಾಗದ ವಿಚಾರದಲ್ಲಿ ಮಂತ್ರಾಲೋಚನೆ ನಡಸಿದನು (ರಾಜಸೂ. ೬). **ಮಂತ್ರಾಳೋಚನೆ**: ದೇವಋಷಿಗಣಂ ನೆರೆದು ಬಹುವಿಧ ಮಂತ್ರಾಳೋಚನೆಯನೆಸಗಿ (ವಿಂಕಾರಾ. ೨-೩-೨೬).

[ಸಂ. ಮಂತ್ರಾಲೋಚನ]

**ಮಂತ್ರಾವಾಸ** (ನಾ). = ಮಂತ್ರಶಾಲೆ: ಮಾಣ್ದಿರದೆ ಮಂತ್ರಾವಾಸದೊಳ್ ಮಂತ್ರನಿಶ್ಚಿತನಾಗೀಗಡೆ ಕಾದಿದಲ್ಲದಿಳಿಯುಂ ನೀನೆಂತುಮೇನಿತ್ತಪಯ್ (ಶಂಕರಾ. ೮-೯೭). [ಸಂ.]

**ಮಂತ್ರಾಸ್ತ್ರ** (ನಾ). ಇಂದ್ರ, ಅಗ್ನಿ ಮೊದಲಾದ ದೇವತೆಗಳು ಆವಾಹನೆಯಾಗಿರುವರೆಂದು ನಂಬಲಾದ ಬಾಣ ಮುಂತಾದ ಅಸ್ತ್ರ: ದನುಜ ಮನದಲಿ ಕಡುಗಿ ಮಂತ್ರಾಸ್ತ್ರವನು ತೊಡಚಿದನಾಹವಾಗ್ರದಲಿ (ಕರ್ಣಾರಾ. ೨೨-೩೦); ಪೂತುರೇ ತರುಣ ಮಂತ್ರಾಸ್ತ್ರಪ್ರತೀಕಾರಚಾತುರ್ಯ ಮುಂಟಲಾ ನಿನ್ನೊಳಮ ಲೇಸು (ಕೈಮಿಭಾ. ೯-೩೬). [ಸಂ.]

**ಮಂತ್ರಾಳೋಚನೆ** 'ಮಂತ್ರಾಲೋಚನೆ' ನೋ.

**ಮಂತ್ರಿ** (ನಾ). ೧. ವೇದಪಾಠದಲ್ಲಿ ಪರಿಶ್ರಮವಿರುವವನು. ೨. ಮಂತ್ರಗಾರ; ಇಂದ್ರಜಾಲಿಕ: ಎದ್ದುದೊಂದು ರಕ್ಕಸಗಾಳಿ . . . ಮಂತ್ರಿಯ ಮುಂದೆ ಮಂತ್ರಕೆ ಬೆದರುತೋಡುವ ಮರುಳ್ಗಳನೆ ಪೋಲಿ ಧೂಳಿ ತರಗೆಲೆ ತೃಣಂ ಕಸಕಡ್ಡಿಗಳ ಹಿಂಡು ಚೆದರಿದುವು (ಶತ್ರುಂಗ. ೪೬-೦೩೦೬). ೩. = ಮಂತ್ರವಿದ ೨: ದಷ್ಪನೊಳ್ ಕರಂ ಸುರುಚಿರ ಶಾಂತಿಯಿಂ ನೆಗಟ್ ಮಂತ್ರಿ ಪೊಗಟ್ಕೆಯ ಮಂ[ಶಾಶಾಂ. ತಂ]ತ್ರಿಯಲ್ಲನೇ (ಆಪುರ. ೩-೦೦೨). ೪. ಅರಸನಿಗೆ ಸಲಹೆಯನ್ನು ಕೊಡುವವನು; ಸಚಿವ: "ಮಂತ್ರೀ, ಬುದ್ಧಿಸಹಾಯಃ, ಅಮಾತ್ಯಃ, ಸಚಿವಃ — ಈ ೪ ಮಂತ್ರಿ" (ಶಬ್ದಮ. ೬೦-೩೭೨); ಮಂತ್ರಿ ಪುರೋಹಿತ ಶ್ರೀಕರಣಮುಂ ಸಾಸಿರ್ವರುಂ ಆಜುನೂರ್ವರುಂ ಸಹಿತಂ . . . ಕೊಟ್ಟರ್ (ಎಇ. XXI. ೨೯-೬; ೩ನೆಯ ೫೫); ನಾನಾ ಚಮತ್ಕಾರವಂ ಅಣಿಯಲ್ಬಲ್ಲೊಡೆ ಮಂತ್ರಿಯಾಗು (ಸೋವಿಕ. ೬೭). ೫. ಪ್ರಜಾತಂತ್ರದಲ್ಲಿ ರಾಜ್ಯಕ್ಕೆ ಸಂಬಂಧಿಸಿದಂತೆ ಆಡಳಿತವನ್ನು ನಿರ್ವಹಿಸುವವನು: ಮಂತ್ರಿಗಳ ಮನೆಗೇ ಹೋಟಾರು ಹೋಯಿತು (ಮಹೋಸಂ. ೭೯). 'ಮಂತ್ರಿಮಂಡಲ' ಪರಾ.

[ಸಂ. ಮಂತ್ರಿನ್]

**ಮಂತ್ರಿತ** (ಗು). ೧. ಮಂತ್ರಾಲೋಚನೆ ಮಾಡಲ್ಪಟ್ಟ; ಸಲಹೆಯನ್ನು ಕೊಡಲ್ಪಟ್ಟ. ೨. ಮಂತ್ರ ಹಾಕಲ್ಪಟ್ಟ; ಅಭಿಮಂತ್ರಿಸಿದ: ವೇದವ್ಯಾಸ ಪರಮಋಷಿ ಗಂಗೆಯೊಳ್ಗಲದೇವತೆಯನರ್ಚಿಸಿದ ಮಂತ್ರಿತೋದಕವನು ವರಪುಷ್ಪಪಲ್ಲವದ ಪೊಂಗಳಸಮಂ ತುಂಬಿ . . . ಈಯಲ್ಕೆ (ಕೈಮಿಭಾ. ೪೯-೧). [ಸಂ.]

**ಮಂತ್ರಿತನ** (ನಾ). ಸಚಿವನ ಪದವಿ, – ಹುದ್ದೆ: ಆತನು ನಿನಗೆ ಮಂತ್ರಿತನಕ್ಕೆ ತಕ್ಕವನು (ಬಸಪು. ೩-೬). [ಮಂತ್ರಿ + – ತನ]

**ಮಂತ್ರಿತ್ವ** (ನಾ). = ಮಂತ್ರಿತನ: ನಮ್ಮ ಕಥಾನಾಯಕರ ಕಾಲಕ್ಕೆ ಮಂತ್ರಿತ್ವ ಹೋಗಿ ಕೇವಲ ಶಾನುಭೋಗಿಕೆ ಮಾತ್ರ ಉಳಿದಿತ್ತು (ಅರಿವು. ೫೫). [ಸಂ.]

**ಮಂತ್ರಿಪ** (ನಾ). ಮಂತ್ರಿಗಳಲ್ಲಿ ಮುಖ್ಯನಾದವನು: ಭೂಸುರವರ ವಿರೂಪಾಕ್ಷಸುತ ಲಿಂಗಮಂತ್ರಿಪಂ ವಿರಚಿಸಿದ ಕಬ್ಬಿಗರ ಕೈಪಿಡಿಯನಂಗೀಕರಿಪುದಖಿಲಸುಜನರ್ಕಳು (ಕಬ್ಬಿಕೈ. ೦೦೨); ನೀಲಗಿರಿಮಾಹಾತ್ಮ್ಯೆಯಂ ಮಂತ್ರಿಪಂ ಕಥಿಸಿದಂ (ರಾಜಾಶ್ಯ. ೬೨-೨೩). [ಸಂ.]

**ಮಂತ್ರಿಮಂಡಲ**, **ಮಂತ್ರಿಮಂಡಳ** (ನಾ). ರಾಜ್ಯಾಡಳಿತದ ಹೊಣೆಯನ್ನು ಹೊತ್ತಿರುವ ಸಚಿವಸಮಿತಿ: ವಾಲಿ . . . ಮಂತ್ರಿಮಂಡಲ [ಶಾಶಾಂ. ೪] ಮುಮನಾಪ್ತಪರಿಜನಮುಮಂ ಬರಿಸಿ (ರಂಗವಾ.೦೦-೦೬೯ ವ); ಮಹಾಪ್ರಧಾನ ಅಥವಾ ಮಹಾಮಾತ್ಯನು, ಮಂತ್ರಿಮಂಡಲದ ಮುಖ್ಯಸ್ಥನೆಂದು ಭಾವಿಸಬಹುದು (ಕರಾಇ. ೩೩೧). **ಮಂತ್ರಿಮಂಡಳ**: ಚುನಾವಣೆಯ ನಂತರ ಮೊದಲ ಬಾರಿಗೆ ಮಂತ್ರಿಮಂಡಳವು ಸಭೆ ಸೇರಿತು (ರೂಢಿ).

[ಸಂ.]

**ಮಂತ್ರಿಮಂಡಳ** 'ಮಂತ್ರಿಮಂಡಲ' ನೋ.

**ಮಂತ್ರಿಸಂಪುಟ** (ನಾ). = ಮಂತ್ರಿಮಂಡಲ: ಮಂತ್ರಿಸಂಪುಟದಲ್ಲಿ ಪಕ್ಷಗಳು ಚಾಲನಶಕ್ತಿಯನ್ನು ಮತ್ತು ನಿರ್ದೇಶನದ ತತ್ತ್ವಗಳನ್ನು ನೀಡುತ್ತ ಬಂದಿವೆ (ರಾಜಶ. ೨); ಮಂತ್ರಿಸಂಪುಟವು ದುರ್ಬಲವಾಗಿದೆಯೆಂದು ತೋರಿದಾಗ ರಾಜನು ಅದಕ್ಕೆ ಧೈರ್ಯ ಹೇಳಿ ಅದನ್ನು ಪ್ರೋತ್ಸಾಹಪಡಿಸಬಹುದು (ರಾಜ್ಯಾಂಗ. ೦೦೨). [ಸಂ.]

**ಮಂತ್ರಿಸು** (ಕ್ರಿ). ೧. ಯಜ್ಞ, ಯಾಗ, ಹೋಮ, ಪೂಜೆ ಮೊದಲಾದ ಧಾರ್ಮಿಕಸಮಾರಂಭಗಳಲ್ಲಿ ಯಾವ ವಸ್ತುವನ್ನಾಗಲಿ ಪವಿತ್ರಗೊಳಿಸಲು ಅದನ್ನು ಮುಟ್ಟಿ ವಿಧ್ಯುಕ್ತವಾಗಿ ಮಂತ್ರಗಳನ್ನು ಪಠಿಸು: ಮಂತ್ರಿಸಿದ ಪಶು ಉಪಾಕೃತವೆಂಬುದು (ಶಬ್ದಮ. ೬೯-೨೬೩). ೨. ಮಂತ್ರವನ್ನು ಉಚ್ಚರಿಸು, – ಪಠಿಸು, – ಹೇಳು: ಬ್ರಹ್ಮರ್ಷಿ ದೇವರ್ಷಿ ವಿಪ್ರೋತ್ತಮರನುಮತದಿಂ ಪ್ರಾಣಾಯಾಮಂ ಮಂತ್ರಿಸಿ . . . ಹೋಮಮಂ ಮಾಡುತ್ತಿರ್ದು (ಗಿರಿಜಾ. ೦೦-೯೭ ವ); ಮಣಿದೆಳೆಯರಂ ಪರಸಿದನು ಮಂತ್ರಿಸುತೆ ಓಂ ಶಾಂತಿಯಂ (ಶ್ರೀರಾಮಾ. ೦೭೭-೪೨). ೩. ವಿಷ, ರೋಗ ಮುಂತಾದುವನ್ನು ಪರಿಹರಿಸಲು ವಿಧ್ಯುಕ್ತವಾಗಿ ಮಂತ್ರ ಹಾಕು: ಗಾರುಡಿಗರ್ ಬಂದು ಕಂಡು ತಮ್ಮತಮ್ಮ ಜಾಣಿಂದಂ ಮಂತ್ರಿಸಿದೊಡೆಂತುಂ ನಿರ್ವಿಷಮಾಗದಿರ್ಪುದುಂ (ಶಂತಕಂ. ೦೦೩-೦೩); ಗಾರುಡಿಗರು . . . ಬಂದು ಮಂತ್ರಿಸಿ ನಾಗವಿಷದಿಂ ಮಡಿದ ರಾಯನ

ನಾಗದಯ್ಯೋ ತಮ್ಮ ಕೈಯುಲೆನುತ್ತ ತೊಲಗಿದರು (ಬಸವು. ೪೬-೨೩); ಮಂತ್ರಜಲದಲಿ ತೊಳೆದು ಘಾಯವ ಮಂತ್ರಿಸುತ ಕರ್ಪುರದ ಕವಳದ ಯಂತ್ರರಕ್ಷೆಯುಲವನಿವನ ಸಂತೈಸಿ ಮಲಗಿಸುತ (ಕುಮಾ.ಕ. ೧೦-೫೬). ೪. ಬಾಣ, ಜಲ, ದರ್ಭೆ ಮೊದಲಾದುವುಗಳಲ್ಲಿ ದಿವ್ಯಶಕ್ತಿಯನ್ನುಂಟುಮಾಡಲು ಯಾವುದಾದರೂ ದೇವತೆಯನ್ನು ಆಹ್ವಾನಿಸಿ ಮಂತ್ರ ಹಾಕು: ಹರಶರಣರಂ ನೆನೆದು ಪಂಚಾಕ್ಷರಿಯು ಮಂತ್ರದಿ ಮಂತ್ರಿಸಿದ ಸುರುಚಿರ ಭಸಿತವಂ ತಳಿದು ತಾಂ ತೊಡೆಯಲ್ಕೆ ತತ್‌ಕ್ಷಣದೆ ಪರಿಹರಿಸಲು (ಬಸವು. ೪೯-೨೯); ಬಸಿವ ರಕುತವ ತೊಳೆತೊಳೆದು ಮಂತ್ರಿಸಿದ ಸಲಿಲವ ಮುಕ್ಕಳಿಸಿ (ಕುಮಾ.ಕ. ೧೦-೩೦); ಜಗಜಗಿಸುವ ಮೂಡಿಗೆಯಿಂ ತೆಗೆದು ದಿವ್ಯಾಸ್ತ್ರವೃಂದಮಂ ಮಂತ್ರಿಸುತುಂ ಮುಗುಳ್ದೆಚ್ಚಂ (ಶಬಶಂ. ೫-೫೪). ೫. ಸಲಹೆ ನೀಡು; ಬುದ್ಧಿವಾದವನ್ನು ಹೇಳು: ಮಂತ್ರಿಸಲ್ ಶ್ರೇಷ್ಠವಾಗ್ಮಿಷ ಗುರುವಸಿಷ್ಠನೀ ವಾಲ್ಮೀಕಿಯಿಂ, ಭರತನಾಥನ ಓಂದೆ ನಡೆದನ್ (ಶ್ರೀರಾಪಟ್ಟಾ. ೧೦೬-೦೫೮). [ಮಂತ್ರ + – ಇಸು₃]

**ಮಂತ್ರೋದಕ** (ನಾ). ಮಂತ್ರಪಠಣದಿಂದ ಪವಿತ್ರಗೊಂಡ ನೀರು; ಮಂತ್ರಪೂತವಾದ ಜಲ: ಕುಡಿಸಿದರು ಮಂತ್ರೋದಕವನೊಳಗಡಸಿ ಕರುಳನು ಮುಚ್ಚಿ ಮಂತ್ರಿಸಿ ತೊಡೆದರಖಿಳೌಷಧಿಗಳನು ನೃಪಸೇನೆ ಯೆರಡರೊಳು (ಕುಮಾ.ಶ. ೫-೪೨). [ಸಂ.]

**ಮಂಥ** (ನಾ). ೧. ಕಡೆಯುವುದು. ೨. ಕಲಕುವುದು; ಅಲುಗಾಡಿಸುವುದು. ೩. ಕೊಲ್ಲುವುದು; ನಾಶಪಡಿಸುವುದು: ಅರಿಗಾ ಸಾಗರನು ಮಂಥಮಾಡೆಯನಂತು ಒಲಿದಿತ್ತನೋ ಅವನೆ ಪೊರೆಗೆಮ್ಮನು (ಕೃಷ್ಣಲೋ. ೯೯). ೪. ತುಪ್ಪದಿಂದ ಮಿಶ್ರಿತವಾದ ಹುರಿಹಿಟ್ಟನ್ನು ತಣ್ಣೀರಿನಲ್ಲಿ ಹದವಾಗಿ ಕಲಸಿ ಮಾಡಿದ ಒಂದು ಬಗೆಯ ಪಾನೀಯ. ೫. ಕಡೆಗೋಲು; ಮಂತು: "ಮಂಥಾಃ, ಮಂಥಃ . . . ಖಜಕಃ — ಈ ೫ ಕಡೆಗೋಲ್" (ಹಲಾಯು. ೪೬-೦೨೦). ೬. ಸೂರ್ಯ; ರವಿ. ೭. ಸೂರ್ಯನ ಕಿರಣ. ೮. ಒಂದು ಬಗೆಯ ಕಣ್ಣುಬೇನೆ. ೯. ಕಣ್ಣಿನ ಪಿಸುರು. ೧೦. (ಯಾಗದ) ಅಗ್ನಿಯನ್ನು ಉತ್ಪಾದಿಸಲು ಉಜ್ಜುವ ಸಾಧನ; ಬನ್ನಿಯ ಕೊರಡು; ಅರಣಿ. ೧೧. ಪದಾರ್ಥಗಳನ್ನು ತೊಳಸುವುದಕ್ಕೆ ಉಪಯೋಗಿಸುವ ಸೌಟು. ೧೨. ಒಂದು ಬಗೆಯ ಜಿಂಕೆ. [ಸಂ.]

**ಮಂಥನ** (ನಾ). ೧. ಕಡೆಯುವುದು; ಮಥಿಸುವುದು: ಮದಗಜ ಬೃಂಹಿತಧ್ವನಿ ತುರಂಗಮ ಹೇಷಿತಘೋಷಮಾದಮೊರ್ಮೊದಲೆ ಪಯೋಧಿ ಮಂಥನಮಹಾರವಮಂ ಗೆಲೆ (ಶಂಪರಾ. ೩-೨೯); ಒಲಿದು ಮಂಥನವನೆಸಗೆಂಬುದಂ ಕಡೆಯೆಂಬರು (ಕೈಬಲಾ. ೨-೯); ಅನುಭವದ ಪಾಲೊಳು ವಿಚಾರಮಂಥನವಾಣಿ ಜನಿಯಿಸಿ ಜ್ಞಾನನವನೀತವಡೆ ಸುಖದಂ (ಮಂಕುತಿ. ೫೪೪). ೨. ಕಡೆಗೋಲು; ಮಂತು. ೩. ಅರಣಿಯನ್ನು ಯಾಗಾಗ್ನಿಗಾಗಿ ಉಜ್ಜುವುದು: ಬನ್ನಿಕೊರಡನ್ನು ಚೆನ್ನಾಗಿ ಮಂಥನ ಮಾಡಿದರೆ ಬೆಂಕಿಯುಂಟಾಗುತ್ತದೆ (ರೂಢಿ). ೪. ಯಾವುದಾದರೊಂದು ವಿಷಯದ ಕೂಲಂಕಷವಾದ ಚರ್ಚೆ,-ವಿಚಾರ: ಮಾತಿಲ್ಲದೆ ಮಂಥನ [ಪಾಠಾಂ. ಮಥನ]ವ ಮಾಡಿ ಮೆಚ್ಚಿದೆ ಬಸವಾ (ಶೀಲಶ. ೪. ೦೩-೩೩). ೫. (ಮನಸ್ಸಿನ) ತುಡಿತ; ಹೊಯ್ದಾಟ: ಮಧುರಯಾತನೆಯ ಮಂಥನ ಎದೆಯಿಂದೀಳದು ಉದರಪತ್ರ ಕೊಸಳಿ (ತೂಸಕ್ಷ. ೫೨). [ಸಂ.]

**ಮಂಥನಿ** (ನಾ). ೧. ಮೊಸರು ಕಡೆಯುವ ಪಾತ್ರೆ,-ಗಡಿಗೆ: "ಮಂಥನೀ, ಗರ್ಗರೀ—೨ ಮೊಸರು ಕಡೆಯುವ ಗಡಿಗೆ. ಗುಡಾಣ" (ಸಿದ್ಧಾಂತಿ. ೨೯೬). ೨. ಮರದ ತುಂಡುಗಳನ್ನು ಉಜ್ಜಿ ಬೆಂಕಿಯನ್ನು ಹತ್ತಿಸುವಿಕೆ. [ಸಂ. ಮಂಥನೀ]

**ಮಂಥರ** (ಗು). ೧. ನಿಧಾನವಾದ; ಮಂದಗತಿಯ: ಮದಮಂಥರಗಮನಾಭಿಧಾನ ಮನ್ಮಥಶರವ್ಯಾಪಾರವಿಫಲೀಕರಣಚರಣಪರಿಣತನುಂ ಅಪ್ಪ ಜನಯೋಗಿಗೆ ನಿಕ್ಕುವಂ ಸ್ತ್ರೀಬಾಧಾಪರೀಷಹ ಜಯಮುಕ್ಕುಂ (ಶತ್ರ್ಯತ್ರ. ೩೩೪). ೨. ಆಲಸ್ಯದಿಂದ ಕೂಡಿದ; ಜಡವಾದ: ನಿರತಿಶಯಮಪ್ಸುಪದು . . . ಗುರುಜಘನಸ್ತನಭರಮಂಥರಲೀಲಾಲಸವಿಲಾಸಿನೀಚಳಿತಂಬೋಲ್ (ಳವಣಾ. ೦-೬೫): ಗುರುಕಬರೀಭರಸ್ತನಭರೋರುಭರಸ್ಥಿತಿಯಿಂ ಸ್ವಭಾವಮಂಥರಗತಿಯಪ್ಪ ತನ್ವಿಗೆ . . . ಗರ್ಭದೊಳ್ ಧರಿಯಿಸಿದಚ್ಯುತಂ ಬಳೆಯೆ (ಜಗಂ. ೨-೯೮). ೩. ದಡ್ಡತನದ; ಮೂರ್ಖತನದಿಂದ ಕೂಡಿದ. ೪. ತಗ್ಗಾದ; ಕೆಳಸ್ತರದ. ೫. ಬಾಗಿದ; ವಕ್ರವಾದ. ೬. ಅಗಲವಾದ; ವಿಸ್ತಾರವಾದ. (ನಾ). ೭. ನಿಧಾನವಾಗಿ ನಡೆಯುವವನು: "ಮಂದಗಾಮಿ, ಮಂಥರಃ — ೨ ಮೆಲ್ಲಗೆ ನಡಿಯುವವನು" (ಸಿದ್ಧಾಂತಿ. ೨೫೮). ೮. ಸೋಮಾರಿ; ಜಡ; ಆಲಸ: "ಅಲಸಃ. ಶಿಥಿಲಃ . . . ಮಂಥರಃ_ ಈ ೬ ಸೋಂಬಂ" (ಹಲಾಯು. ೬೪-೨೩೩). [ಸಂ.]

**ಮಂಥರೆ** (ನಾ). ೧. ಚಟುವಟಿಕೆಯಿಲ್ಲದವಳು; ಸೋಮಾರಿ: ಅಂತರ್ವನ್ನ್ಯಭಾರಾತಿಮಂಥರೆ ಪೆಂಡಿರ್ಗಿದು ತಕ್ಕುದಲ್ತೆನಿಪವಸ್ಥಾಭೇದವಂ ತಾಳ್ದಿದಳ್ (ಕಾದಂಬ. ೫೬೩). ೨. ಕೈಕೇಯಿಯ ಗೂನುಬೆನ್ನಿನ ಒಬ್ಬ ದಾಸಿ: ಹರೆದುದೀ ವೃತ್ತಾಂತವಿದನಾದರಿಸಿದಳಲ್ತೆ ಪೂರ್ವಮಾಯಾತರುಣಿ ಮಂಥರೆ ಮಥಿಸಿ ಮನದಲಿ ಪೂರ್ವಸೂಚಿತವ (ತೊರರಾ. ೨-೧-೨೦). [ಸಂ. ಮಂಥರಾ]

**ಮಂಥಾಚಲ** (ನಾ). ದೇವಾಸುರರು ಕ್ಷೀರಸಮುದ್ರವನ್ನು ಕಡೆಯಲು ಕಡೆಗೋಲನ್ನಾಗಿ ಮಾಡಿಕೊಂಡರೆಂದು ಭಾವಿಸಲಾವ ಬೆಟ್ಟ; ಮಂದರಪರ್ವತ: ದೇವ ಸಮುದಗ್ರಮಂಥಾಚಲೋದ್ಧರಣ ಜಯ (ಜಗಂ. ೫-೦೦೩ ರಗಳೆ). [ಸಂ.]

**ಮಂಥಾನ** (ನಾ). ೧. ಕಡೆಗೋಲು; ಮಂತು: "ಮಂಥಾಃ, ಮಂಥಃ, ಮಂಥಾನಃ, ವೈಶಾಖಃ, ಖಜಕಃ - ಈ ೫ ಕಡೆಗೋಲ್" (ಹಲಾಯು. ೪೬-೦೨೦). ೨. ಶಿವನ ಹೆಸರುಗಳಲ್ಲಿ ಒಂದು. [ಸಂ.]

**ಮಂಥಿ** (ನಾ). ೧. ಕಡೆಯುವಿಕೆ. ೨. = ಮಂಥಾನ ೧: "ವೈಶಾಖಮೆನೆ ಮಂಥಮೆನೆ ದಧಿವಿಘಾತಮೆನೆ ಮಂಥಿ ಮಂಥಾನಮೆನೆ ಕಡೆಗೋಲದು" (ಮಂಗರಾ. ೫೯-೬). [ಸಂ. ಮಂಥಿನ್]

**ಮಂಥಿಕ** (ನಾ). ಒಂದು ಬಗೆಯ ಸಸ್ಯ ಮತ್ತು ಅಡುಗೆಗೆ ಬಳಸುವ ಅದರ ಕಾಳು; ಮೆಂತ್ಯ: "ಮಂಥಿಕಮೆನಲು ಮೆಂತೆಯಕೆ ನಾಮಮಕ್ಕುಂ" (ಮಂಗರಾ. ೪೦-೩೬). [ಸಂ. ?]

ಮಂದ₁ 'ಮಂದು' ನೋ.

ಮಂದ₂ (ಗು). ೧. ನಿಧಾನವಾದ; ಚುರುಕಲ್ಲದ: 'ಮಂದಗತಿ' ಪರಾ. ೨. ಜಡವಾದ; ಆಲಸ್ಯದಿಂದ ಕೂಡಿದ. ೩. ಮಂಕಾದ; ಕಾಂತಿಹೀನವಾದ: ನಾನು ಗಿಡಗಳ ಮರೆಗಿದ್ದ ಮಂದಪ್ರಕಾಶದಲ್ಲಿ ಎರಳೆಯ ಎಳಗಂದಿನಂತೆ ಓಡಲು ತೊಡಗಿದೆ (ಶ್ರಬಸ. ೩); ಗರ್ಭಗುಡಿಯಿಂದ ಬರುವ ಮಂದಪ್ರಕಾಶದಲ್ಲಿ ಪರವಶನಾಗಿ ನನ್ನ ಹೊಂಡದ ಮಾದರಿಯಲ್ಲಿ ಕಾಲಿಟ್ಟರೆ ಏನು ಗತಿ (ದೇಕಸ್ವ. ೮೪). ೪. ದಡ್ಡತನದಿಂದ ಕೂಡಿದ; ಮೊದ್ದುತನದ: 'ಮಂದಬುದ್ಧಿ' ಪರಾ. ೫. ಮೃದುವಾದ; ಕೋಮಲವಾದ: 'ಮಂದಪವನ' ಪರಾ. ೬. ತೀಕ್ಷ್ಣತೆಯನ್ನು ಕಳೆದುಕೊಂಡ; ಪಾಟವವಿಲ್ಲದ: ಕಾಶಕ್ರೀಜ್ಯಗೃಹಸ್ಥನಾಗೆ ನೃಪರಿಂ ಶುದ್ಧಾತ್ಮಕಂ ಮಂದದೃಷ್ಟಿ ನಿಜಸ್ತ್ರೀಸುತವೈಭವಂ. . . ಅಕ್ಕುಂ ನರಂ (ಜಾತಕ. ೦೬-೩೪). ೭. (ಆಲಂ) ಆಳ್ಳಕವಲ್ಲದ; ನೀರಾಗಿರದ; ಗಟ್ಟಿಯಾಗಿರುವ. ೮. ಗಾಢವಾದ; ದಟ್ಟವಾದ: 'ಮಂದಗಟ್ಟಲೆ' ಪರಾ. (ನಾ). ೯. ನಿಧಾನಗತಿಯುಳ್ಳುದು: ಅವುಗಳಲ್ಲಿ ಕೆಲವು ಅತಿ ಮಂದ; ಇನ್ನು

ಕೆಲವು ಅತಿ ದ್ರುತ (ಕ್ಕೋಶ. ೨೦೦). ೧೦. ಮೈಗಳ್ಳ; ಸೋಮಾರಿ : "ಅಲಸಃ, ಶಿಥಿಲಃ, ಮಂದಃ, ಜಡಃ, ಜಿಹ್ಮಃ, ಮಂಥರಃ _ ಈ ೬ ಸೋಂಬಂ" (ಹಲಾಯು. ೬೪-೨೩೩). ೧೧. ಎಗ್ಗ; ದಡ್ಡ; ತಿಳಿಗೇಡಿ : "ಮೈಧೇಯಃ . . . ಮಂದಃ, ಏವರ್ಣಃ, ಮೂರ್ಖಃ, ಮಾತೃಶಾಸಿತಃ_ ಈ ೧೧ ಅಱಿಯದವಂ" (ಹಲಾಯು. ೩೬-೦೯೦); ಅಂಥ ಮಂದರಂದವ ನುಡಿದಡೆ ನೊಂದು ಬೈಯಲೇಕೆ (ಮೋಕ್ಷಮ. ೨೦-೬೪); ಇವನು . . . ಮಂದನಾಗಿದ್ದರೂ ಕಡೆಗೆ ಹೇಗೋ ಅಲ್ಲಿಂದ ಹೊರಟು ಇಲ್ಲಿಗೆ ಬಂದಂದಿನಿಂದ ನಮ್ಮ ಈ ರಾಜಪಿತನಾಗಿ ಬಹಳ ಪ್ರಸಿದ್ಧನಾಗಿದ್ದಾನೆ (ಹನಂ. ೦೯); ಕಂಧಿದವನಾದರೂ ಮಂದನಾಗಿರಬಾರದು (ಗಾದೆ). ೧೨. ತೀಕ್ಷ್ಣವಾಗಿಲ್ಲದಿರುವುದು; ಪಾಟವವಿಲ್ಲದಿರುವುದು : ಕಣ್ಣು ಮಾತ್ರ ಸ್ವಲ್ಪ ಮಂದವಾಗಿದೆ (ಚಾಕಿ. ೦೬); ಅವರ ಕಿವಿ ಸ್ವಲ್ಪ ಮಂದವಾಗಿರುವುದರಿಂದ ಮೆಲ್ಲಗೆ ಮಾತನಾಡಿದರೆ ಕೇಳಿಸುವುದಿಲ್ಲ (ರೂಢಿ). ೧೩. ಅಳ್ಳಕವಾಗಿಲ್ಲದುದು ; ಗಟ್ಟಿಯಾದುದು : ಸುರಾಮೋಹವೆಂಬುದು . . . ಕಳಗೆ ಮಂದವಾಗಿ ಗಟ್ಟಿಯಾಗಿ ಇಹುದು (ವೈದ್ಯಶಾ. ೧. ೨೬೬). ೧೪. ದಟ್ಟವಾದುದು ; ನಿಬಿಡವಾದುದು ; ಒತ್ತಾಗಿರುವುದು : "ನಿರಂತರಂ . . . ವಿರಳೇತರಂ ---ಈ ೫ ಮಂದಂ" (ಹಲಾಯು. ೦೧೯-೩೨) ; ಸಣ್ಣಂ ನಡು ತೀರ್ಣಂ ಮೊಲೆ . . . ಕಣ್ಣಲರ್ಗಣ್ಣವು ಮಂದಂ ಬಣ್ಣಿಸಲರಿವಬ್ಬ ಜಂಗಮಾಕೆಯ ರೂಪಂ (ಕಾವ್ಯಸಾ. ೨೪೦ ಕೂಪ್ರ೪) ; ಕಾಮಸಾಮ್ರಾಜ್ಯದೊಸಗೆಯೊಳ್ ಪಸರಿಸಿದ ಪಿಷ್ಟಾತಕಚೂರ್ಣದಂತೆ ಮಂದಮಾದ ಪೊಂದಾವರೆಯ ರಜದೊಳಂ (ಪುಲ್ಲಿಪು. ೨-೩೩): ಬೆಂದ ಕೆಂಡವನ್ನು ಕೋಡದ ಉದ್ಧಕ್ಕೂ ಮಂದವಾಗಿ ಹರಡುವರು (ತೋಟದಿ. ೪೯). ೧೫. ದುಷ್ಟ ; ಖಳ. ೧೬. ಭಾಗ್ಯಹೀನ: ದುರದೃಷ್ಟಶಾಲಿ: ಕಂದದೆ ಕುಂದದೆ ಬಾಳ್ವರ್ ಚಂದದಿ ಮನುರಾಜರಾಜಧರೆಯೊಳ್ಮನುಜರ್ ಮಂದರ ಮಂದರ ಮಂದರ ಮಂದರ ಕೆಳೆ ರೀತಿ ನೀತಿ ಬಗೆಯಿಲ್ಲವರೊಳ್ (ಹೇತ್ರಾರ. ೦-೪೯). ೧೭. ರೋಗ. ೧೮. ಮದವೇರಿದವನು. ೧೯. ಆಹಾರವನ್ನು ಅರಗಿಸುವ ಶಕ್ತಿಯಿಲ್ಲದಿರುವಿಕೆ : ಅಜೀರ್ಣ : ಮಗುವಿಗೆ ಮಂದವಾಗಿದೆ, ಹಾಲು ಕುಡಿಸಬೇಡ (ರೂಢಿ). ೨೦. ಸುಲಭವಾಗಿ ಜೀರ್ಣಿಸದಿರುವ ಪದಾರ್ಥ : ಆಲೂಗಡ್ಡೆ, ಗಟ್ಟಿಮೊಸರು ಮುಂತಾದುವನ್ನು ಮಂದವೆಂದು ಹೇಳುತ್ತಾರೆ (ರೂಢಿ). ೨೧. ಅಜೀರ್ಣದಿಂದ ಬರುವ ಒಂದು ಬಗೆಯ ಜ್ವರ : ಈ ರೀತಿಯಲ್ಲೇ ರಾತ್ರಿಯ ಕಾಲದಲ್ಲಿ ಬರುವ ಜ್ವರವು ಮಂದವೆಂದು ಹೇಳುವುದು (ಜ್ವರಪ್ರ. ೦೨). ೨೨. ನವಗ್ರಹಗಳಲ್ಲಿ ಒಂದು ; ಶನಿಗ್ರಹ : ಶಶಲಕ್ಷ್ಮಂ ಮಂದನೊಳ್ ಮೇಣ್ ಮಹೀಜನೊಳೊಂದಿರ್ದೊಡೆ . . . ಲಗ್ನಜಂ ಪೊಂದುಗುಂ (ಜಾತಕ. ೬-೯೨) ; ಭಾಸ್ಕರ ಭೌಮರಶುಭಸ್ಥಾಯಿಗಳು ಗುರುಮಂದರ ಖಭವದಾಯಿಗಳು (ಕುಮಾ.ಭ. ೨೨-೪). 'ಮಂದವಾರ' ನೋಡಿ. ೨೩. (ನಿಧಾನಗತಿಯ) ಆನೆಗಳಲ್ಲಿ ಒಂದು ಜಾತಿ : "ಭದ್ರಃ, ಮಂದಃ, ಮೃಗಃ. ಎಂದಿಂತು ಆನೆಗಳ್ ಮೂಱು ತೆಱನಕ್ಕುಂ" (ಹಲಾಯು. ೩೬-೬೨) ; ನಯನಿಪ್ರಣಸೂತ್ರಧಾರರ್ ನಿಯಮಿಸುವರ್ ಭದ್ರ ಮಂದ ಮೃಗಸಂಕೀರ್ಣಸ್ವಯದ ನೃಪಕರಿಗಳಂ (ಕುಕ್ಕುಪು. ೨-೫೬). ೨೪. [ಸಂಗೀತ] ಕೆಳಸ್ತರದ ಧ್ವನಿ ; ಮಂದ್ರಸ್ಥಾಯಿಯ ಧ್ವನಿ : ಆ ರಾಗಂಗಳಂ ಪಾಡುವಲ್ಲಿ . . . ಮಂದ ಮಧ್ಯ . . . ಸ್ತಂಭನ ದೀರ್ಘಭೇದಗಳಂ ರವವಿಲ್ಪಗಳಂ ತೋಱಿ (ವಿವೇಕ. ೨೩೬). [ಸಂ.]

**ಮಂದಕಾಲಿ** (ನಾ). ಒಂದು ಬಗೆಯ ಗಿಡ ; ಬಸಳೆ : "ಪೋತಕಿ ಮಂದಕಾಲಿ [ಪಾಠಾಂ. ಮಂಥಗಾಲಿ, ಮಣ್ಣದಕಾಳಿ]ಯೆನೆ ಬಸಲೆಯಕ್ಕು" (ಮಂಗರಾ. ೪೪-೪೬). [ ? ]

**ಮಂದಗತಿ** (ನಾ). ನಿಧಾನವಾದ ನಡೆ, — ಚಲನೆ : ಅಂತು ಗಗನತಳದಿನವನೀತಳಕ್ಕವತರಿಸಿದಿಂದುಗತಿ ಮಂದಗತಿಯಿಂ ಜಿನಮಂದಿರಮಂ ಬಲುಗೊಂಡೊಳಗಂ ಪೊಕ್ಕು (ಕಂಠಾಮಾ. ೩-೦೫ ವ) ; ಕಾಲ್ಬಂದಗತಿಗಲಸೆ ನಗವೊಗಂ ಬೆಳ್ಪುದೋಱೆ . . . ಸುತಲಾಂಛನದ ಗರ್ಭದಿಂದೆ (ಕೃಮಾಹಾ. ೦೬-೩೪) : ವಿಸ್ತರಣಪ್ರಗತಿ ಏಕೆ ಇಂಥ ಮಂದಗತಿಯನ್ನು ಪ್ರದರ್ಶಿಸುತ್ತಿವೆ (ಶಿಕ್ಷದ. ೭೨೩). [ಸಂ.]

**ಮಂದಗಮನ** (ನಾ). = ಮಂದಗತಿ : ಮಂದಗಮನದ ತಳಿತ ಮುಸುಕಿನ ಮೌಳಿಕಾಂತೆಯರ್ಕೈದಿತೊಗ್ಗಿನಲಿ (ಕುಮಾ.ಭ. ೦೦-೩೦) ; ರಾಜಕುಮಾರನು ಮುಂದೆ ನೀಲನದಿಯ ಮಂದಗಮನವನ್ನು ನೋಡುತ್ತಾ ಮೈಮರೆತನು (ಮುಡಿಕ. ೪೮). [ಸಂ.]

**ಮಂದಗಮನೆ** (ನಾ). ಮೆಲ್ಲಗೆ ನಡೆಯುವವಳು ; ನಿಧಾನವಾಗಿ ಚಲಿಸುವವಳು : ಮಂದಗಮನೆ ಇವನಾರೆ ಪೇಳಮ್ಮ ಮಂದರಧರಗೋವಿಂದ ಕಾಣಮ್ಮ (ಪುರಂದ. ೨-೬೦ ಕಲ್ಯಾ) ; ಮಂದಗಮನೆಯ ಮಂದಹಾಸದ ವಿಲಾಸಮಂ . . . ಏನೆಂದು ಬಣ್ಣಿಸಬಹುದು (ಕೃಮಾಹಾ. ೦೮-೨೮) ; ಅಂದಳ ಮನೇಱುವರೆ ಆಂದವಲಿ ಸುಖಿಸುವರೆ ಮಂದಗಮನೆ ಸಿರಿ ದೊರೆಯುವರೆ ಹಸಿದರಿಗೆ ಚೆಂದದಿಂದಿಕ್ಕು (ಸರ್ವಜ್ಞ. ೬೪೬). [ಸಂ. ಮಂದಗಮನಾ]

**ಮಂದಗತ್ತಲೆ** (ನಾ). ದಟ್ಟವಾದ ಕತ್ತಲೆ ; ಗಾಢಾಂಧಕಾರ : ಮಹಾವೀಥಿದ್ವಯದಿಂ ಮಹಾಗುಹಾದ್ವಾರಮನೆಯ್ದಿ ಮಂದಗತ್ತ [ಪಾಠಾಂ. ತ್ತ]ಲೆಯೊಳ್ ಮಣಿರತ್ನಕಾಕಿಣೀರತ್ನಂಗಳೊಳ್ ಬರೆದ ಚಂದ್ರಾದಿತ್ಯ ಮಂಡಲದ ಬೆಳಗು ಬೆಳಗೆ ಸಿಂಧುವಿನ ತಡಿವಿಡಿದು . . . ನಡೆದು (ಆದಿಪು. ೯-೩೪ ವ). [ಮಂದ$_2$ + ಕತ್ತಲೆ]

**ಮಂದಗಾತಿ** (ನಾ). ಮೃದುಸ್ವಭಾವದವಳು ; ನಿಧಾನಸ್ಥೆ : ಹಸ್ತದೊಳ್ ಹಸ್ತವಂ ಹಾಕುತ್ತಿರುವ ಮಂದಗಾತಿಯಂ ನೋಡಿ ರಾಯನು ಸೋತು (ಪಾಗಂ೨. ೩೩೮-೦೦). [ಮಂದ$_2$ + — ಕಾತಿ$_5$]

**ಮಂದಗಾಮಿ** (ನಾ). ೧. ನಿಧಾನಗತಿಯುಳ್ಳುದು. ೨. ಮೆಲ್ಲನೆ ಚಲಿಸುವವನು : ನಿಧಾನವಾಗಿ ನಡೆಯುವವನು : "ಮಂದಗಾಮೀ. ಮಂಥರಃ —೨ ಮೆಲ್ಲಗೆ ನಡೆಯುವವನು" (ನಿಘಂಟು. ೨೩೮).

[ಸಂ. ಮಂದಗಾಮಿನ್]

**ಮಂದಗಾಮಿನಿ** (ನಾ). = ಮಂದಗಮನೆ : ಬಹುಮಂದಗಾಮಿನಿ ಬಹುದೂರ ಸಾಗಳು ನಿನ್ನ ಸತ್ಕೀರ್ತಿಯ ಹೆಣ್ಣು (ಇಂಡಾಕ. ೨೦೩-೦೮).

[ಸಂ. ಮಂದಗಾಮಿನೀ]

**ಮಂದಜ** (ನಾ). ಕಮಲ ; ತಾವರೆ (?) : ಮಂದಜಾಯತನಯನ ಬಾರ ಮುಕುಂದ ಬಾರ ಮುರಾರಿ ಬಾರ (ಶಿಶಾಗ. ೦೦-೦೦-೪೬). [ ? ]

**ಮಂದಜಾಸನ** (ನಾ). ಕಮಲವನ್ನು ಪೀಠವಾಗಿ ಉಳ್ಳವನು ; ಬ್ರಹ್ಮ (?) : ನಿಜಮಾಯೆಯನು ಮೆಱೆದು ಮುಕುಂದನನು ಮೋಹಿಸಲು ಬಂದಾ ಮಂದಜಾಸನ ತನ್ನ ಮಾಯೆಗೆ ತಾನೆ ಗುಱಿಯಾಗಿ ನಿಂದು ಬೆಱಗಾಗುತ್ತಿರಲು (ಶಿಶಾಗ. ೦೦-೦೩-೪೪). [ಮಂದಜ + ಆಸನ]

**ಮಂದಟ್ಟು** 'ಮನದಟ್ಟು$_2$' ನೋ.

**ಮಂದತನ** (ನಾ). ಆಲಸ್ಯ; ಜಡತ್ವ: ಮಂದಿಯ ತಡೆ ಕುದುರೆಯ ಕಟ್ಟು ಜೀವಿತ ಸಂದು ಬರಲಿ ಸುಭಟರಿಗೆ ಮಂದತನದ ಬಿಡು ಮುಕ್ಕಳಾಟಿಕೆ ಬೇಡ (ಕುಂದಾಶಾ. ೩೦-೨೬) ; ಕುಂದು ಬಂದವಗೆ ಸೊಬಗೇಕೆ ಸೂಳೆಗೆ ಮಂದತನವೇಕೆ (ಸರ್ವಜ್ಞ. ೦೯೯೪). [ಮಂದ$_2$ + -- ತನ]

**ಮಂದತೆ** (ನಾ). ನಿಧಾನ : ವಿಳಂಬ ಗತಿ : ಅವಳ ಅಲಸಗತಿಗೆ ಮತ್ತೊಂದಿಷ್ಟು ಮಂದತೆ ಬಂದಿತ್ತು (ಕಣಶ. ೩೦). [ಸಂ. ಮಂದತಾ]

**ಮಂದತ್ವ** (ನಾ). ೧. ನಿಧಾನ ; ವಿಳಂಬಗತಿ. ೨. ದಡ್ಡತನ ; ಮೌಢ್ಯ. ೩. = ಮಂದತನ. ೪. ಜೀರ್ಣಶಕ್ತಿಯು ಕಡಮೆಯಾಗಿರುವುದು ; ಅಜೀರ್ಣ : ವಾತಪಿತ್ತಂಗಳಿಗೆ ಅಧಿಕ ಶ್ಲೇಷ್ಮಕ್ಕೆ ಮಂದತ್ವವೆಂಬುವ

ದೊಂದು ಸನ್ನಿಪಾತ . . . ವಾತಶ್ಲೇಷ್ಮಗಳಗಾಧಿಕ್ಯ ಪಿತ್ತಕ್ಕೆ ಮಂದತ್ವ ಮಾದುದೊಂದು ಸನ್ನಿಪಾತ (ಕಶಪ್ಪ. ೧೩೦). [ಸಂ.]

**ಮಂದದೋಷ** (ನಾ). ದೋಷಯುಕ್ತವಾದ ಪಚ್ಚೆಯು ಐದು ವಿಧಗಳಲ್ಲಿ ಒಂದು ; ನವಿಲುಗರಿಯ ಬಣ್ಣವನ್ನು ಹೊಂದಿರುವ ಪಚ್ಚೆ : ದೋಷಲೇಶಾನ್ವಿತಂ ದುಷ್ಟಂ ದೋಷಪೂರ್ಣಿತಂ ದೋಷಲೇಶಂ ಮಂದ ದೋಷಮೆಂದಿಂತೀ ಪಂಚವಿಧಮಾದ ಸದೋಷಜಾತಿ ಮರಕತಮಂ ಪೇಳ್ವೆಂ (ಹಾರಾಸ್ಯ. ೨-೧-೬೬ ವ). [ಸಂ.]

**ಮಂದಪವನ** (ನಾ). ಮೃದುವಾಗಿ ಬೀಸುವ ಗಾಳಿ ; ಮೆಲ್ಲನೆ ಬೀಸುವ ಗಾಳಿ : ಎಸಗಿತ್ತಂದನುಕೂಲಮಂದಪವನಂ (ಪಂಶಬ. ೯-೯೬) ; ಗಾಳಿಯಲ್ಲಿ ಯಾವ ಪ್ರಮಾಣದ ವೇಗವಿದ್ದರೆ ಅದನ್ನು ಮಂದಪವನವೆನ್ನಬಹುದೋ, ಎಂದರೆ ಯುವತಿಯ ಮಂದಗಮನದೊಡನೆ ಹೋಲಿಸಬಹುದೋ, ಇದು ಅದಕ್ಕಿಂತ ಹೆಚ್ಚು (ಶಿಬಂರ. II. ೧೬೨). [ಸಂ.]

**ಮಂದಪ್ರಕೃತಿ** (ನಾ). ಆಲಸ್ಯ ; ಜಡಸ್ವಭಾವ : ಸ್ವಲ್ಪ ಮಂದ ಪ್ರಕೃತಿಯ ವಿದ್ಯಾರ್ಥಿಗಳಿಗೆ ಇದೊಂದು ನೂತನವೂ ಫಲಪ್ರದವೂ ಆದ ಶಿಕ್ಷಣಕ್ರಮವೆಂದು ಉಪಾಧ್ಯಾಯರು ಗಣಿಸಬೇಕು (ಶಿಕ್ಷಣ. ೨೮೯). [ಸಂ.]

**ಮಂದಫಲ** (ನಾ). ೧. ಕಡಮೆಯಾದ ಆದಾಯ.— ಉತ್ಪತ್ತಿ : ಕಳೆದ ವರ್ಷ ಕಪ್ಪುಧಾನ್ಯಗಳ ಪೈರುಗಳು ಮಂದಫಲವನ್ನು ಕೊಟ್ಟವು (ಕೂಶಿ). ೨. [ಜ್ಯೋತಿ] " ಸೂರ್ಯನೀಚದಿಂದ (ಅಥವಾ ಚಂದ್ರ ನೀಚದಿಂದ) ಗ್ರಹಕ್ಕೆ ಅಥವಾ ಉಪಗ್ರಹಕ್ಕೆ ಇರುವ ಕೋನದೂರ ; ನೀಚಾಂತರ ; ಮಂದಫಲ, ಸೌರಶೃಂಗಾಂತರ " (Anomaly. ಇಂಕಿವಿ). [ಸಂ.]

**ಮಂದಬುದ್ಧಿ** (ನಾ). ೧. ಅಜ್ಞಾನ ; ಮೂರ್ಖತನ : ಮಂದಬುದ್ಧಿಯಿಂದ ನೀವು ಮುಕುಂದನ ಮಹಿಮೆಯರಿ (ಕೃರಂರ. ೨-೨೦೫-೫) ; ಅವನು . . . ಮಂದಬುದ್ಧಿಯ ಆಡಂಬರವ್ಯಕ್ತಿಯೆಂದು . . . ಮನದಟ್ಟಾಯಿತು (ಕೃಸರು. ೩೩೩). ೨. ಚುರುಕುಬುದ್ಧಿಯಿಲ್ಲದವನು ; ದಡ್ಡ ; ಪೆದ್ದ : ಮಂದ ಬುದ್ಧಿಯವರಿಗೆ ಅಂತಹುದು ಸಾಧ್ಯವಾಗಬಹುದು. ನಿನಗಲ್ಲ (ಮಹೋನಂ. ೮೦). [ಸಂ.]

**ಮಂದಭಾಗ್ಯ** (ನಾ). ೧. ದುರ್ದೈವ ; ದುರದೃಷ್ಟ : ತಂದೆ ತಾಯ್ಗಳ ಸೇವೆ ಒಂದುದಿನ ಮಾಡಲಿಲ್ಲ ಮಂದಭಾಗ್ಯದ[ಪಾಠಾಂ. ಗೆ] ಭವಣೆ ತಪ್ಪಲಿಲ್ಲ (ಕುರಂವ. ಶಾ. ೨-೦೯-೫). ೨. ದುರದೃಷ್ಟಶಾಲಿ : ಅದೃಷ್ಟ ಹೀನ: ಇಂದಿನಾಹವ ಲೇಸು ಲೇಸಿದು ಮಂದಭಾಗ್ಯನು ತಾನು ಸಾಕಿನ್ನೆಂದು ಮಾಡುವುದೇನು ನಿಮ್ಮೊಳು ಕದನ ಬೇಡ (ಕುಮ್ಯಾದ್ರೋ. ೧೫-೧೧); ಅಂಧಕನಿಗೆ ಕತ್ತಲೆಯಿಲ್ಲ, ಮಂದಭಾಗ್ಯನಿಗೆ ದರಿದ್ರವಿಲ್ಲ (ಗಾದೆ). [ಸಂ.]

**ಮಂದಭಾಗ್ಯತೆ** (ನಾ). ಅದೃಷ್ಟಹೀನತೆ ; ದುರದೃಷ್ಟ : ಮದೀಯ ಮಂದಭಾಗ್ಯತೆಯುಮಂ ದೈವದ ದಾರುಣತೆಯುಮಂ . . . ಭಾವಿಸಿ ನೋಡಿ (ಕಾದಂಭೂ. ೯೫೨). [ಸಂ. ಮಂದಭಾಗ್ಯತಾ]

**ಮಂದಮತಿ** (ನಾ). ೧. = ಮಂದಬುದ್ಧಿ ೧ : ತಂದೆ ಸತ್ತ ಮೇಲೆ ನೂಱುಮಂದಿ ವಿಪ್ರರಿಗುಣಿಸಿ ತಮ್ಮ ತಂದೆ ತೃಪ್ತನಾದನೆಂಬರು ಮಂದ ಮತಿಯ ಜನಗಳು ( ಕುರಂದ. ೧-೧೮೦-೪ ). ೨. = ಮಂದಬುದ್ಧಿ ೨ : ಮಂದಮತಿಯಾಗಿ ಮರುಳೆ ಕಾದದ ಕಟ್ಟದೆಮ್ಮನು ಬಱಿದೆ ಬಯಸಿದೆ (ಕುಪ್ಯಾಶಾ. ೧-೪೦) ; ಮಂದಮತಿಯೋ ನಾನು ಮದನಜನಕನು ನೀನು (ಕುರಂದ. ೪-೯೧ ಪಲ್ಲವಿ) ; ಮಂದಮತಿಯುಲಿ ತರ್ಕ ಸಲ್ಲ (ಕುಪ್ಪ. ೧೩-೯). [ಸಂ.]

**ಮಂದಮರುತ** (ನಾ). = ಮಂದಪವನ : ಪರಿವ ಪರಿವೊನಲ ಹಿಮಶೀಕರಂಗಳೊಳ್ ಪುದಿದ ಮಂದಮರುತಂ . . . ಒಗೆದ ಬೆಮರ್ವನಿಳಿಪಡಿಸುವಿನಂ (ಶಾಂತಿಪು. ೯-೬೯). [ಸಂ.]

**ಮಂದಮಾರುತ** (ನಾ). = ಮಂದಪವನ : ಅನಂತಲತಾಳಿಲತಾಂತವಾಂತ ಸೌರಭಭರವಾಂಪರಂ ಸೊಗಯಿಕುಂ ಪುರನಂದನಮಂದಮಾರುತಂ (ಶಂಪ್ರಪು. ೧-೧೧೧); ಬಗೂಮಿಗೆಯ ಪರಿಮಳದ ಕಂಪಿನ . . . ಸೊಗಸ ಸೇರಿಸಿ ಮಂದ ಮಾರುತನಟ್ಟಿದನು ಮಗನ (ಕುವ್ಯಾಅ. ೧೧-೪೩) ; ಸುಮಲತೆಗಳ ಪರಿಮಳವ ಬಿತ್ತರಿಸಿ . . . ಮಂದಮಾರುತವು ಬೀಸುತ್ತಿರಲಿನಿಸು (ಕಪು. ೨೩-೧). [ಸಂ.]

**ಮಂದಯಾನ** (ನಾ). = ಮಂದಗತಿ : ತೋರನಿತಂಬಭಾರಕಲಸುತ್ತವೆ ಪೋಪಳ ಮಂದಯಾನಮುಮಂ (ಶಾಕುಂತ. ೨೦-೩೬). [ಸಂ.]

**ಮಂದಯಿಸು**, ಮಂದಯ್ಸು, ಮಂದವಿಸು. ಮಂದೈಸು (ಕ್ರಿ). ೧. ದಟ್ಟವಾಗು : ಸಾಂದ್ರವಾಗು : " ಮಂದಯಿಸು—ಸಾಂದ್ರತ್ವೇ (ದಟ್ಟವಾಗು)" (ಶಮದ) ; ರಸೆ ಪತ್ತಿತ್ತಿತ್ತಮಾಕಾಶದೊಳನಿಲಪಥಂ ಧಾರಿಣೀ ಚಕ್ರದೊಳ್ ಕಾಳಸಗೊಂಡತ್ತೆಂಬಿನಂ ಮಂದಯಿಸಿ ನಿಜಪರಾಲೋಕನ ವ್ಯಗ್ರದೃಷ್ಟಿ ಪ್ರಸರಕ್ಕೆಲ್ಲಿತ್ತೊ ಮಾರ್ಗಂ (ಆದಿಪು. ೧೪-೯೫) ; ತಲ್ಲಿಂಗಗರ್ಭಂದೆಗೆಯೆ ಜಾಜ್ವಲ್ಯಮಾನವಾಗೊಂದು ಬೆಳಗು ಮಂದಯಿಸಿ ಪೊಱಪೊಣ್ಮೆ (ಶಮ್ಯಾ. ೧೩-೫೫) ; ಮಂದಯಿಸಿದ ಘೋರತಮಂ ಮುಸುಕಿತ್ತೆಳೆಯುಂ (ಪಾರ್ಶ್ವ. ೩-೧೪). **ಮಂದಯ್ಸು** : ೨. ಒಟ್ಟುಗೂಡು ; ಗುಂಪಾಗು : ಭೃಂಗೀವೃಂದಮನಾಱೆ ಸೋವುತ್ತುಂ ಮಂದಯ್ಸಿ ಮುಗುಳ್ತ ಗಟ್ಟವಳ್ತಿಯುರೆಸಗುಂ (ಗಿರಿಕ. ೨-೯೦). ೩. ನೀರಾಗಿಲ್ಲದಿರು ; ಗಟ್ಟಿಯಾಗು : ಪೊರೆದ ಪುಡಿಯನೊಡನೊಡನೆ ಬೆಮರ ಬಿಂದುಗಳ್ ನಾಂದೆ ಮಂದಯ್ಸಿದಳ್ಗೆ ಸಱಿಹೋಳಡಿದು ಜಿಡೆಗೊಂಡು ಸಗಮೊಗಮ ನಾಗಳಾಗಳೆ ಕರಂಗಿಸಿದ ಮಸಿಯ ಕುಂಚಿಗಳೆನಿಸಿ ನೊಸಲಂ ಮುಸುಂಕಿ ದಳಿತಪಲ್ಲವಿಗಳೊಳಂ (ಪರ್ಣಿಕೆ. ೯-೬೦ ವ). **ಮಂದವಿಸು** : ೧. ಮಂದವಿಸಿ ಮುಸುಕಿದ ಮಹೀರುಹವೃಂದವನು ಕುಶ ಕೇಳ್ಸಮಿತ್ಪ್ರಸಂದನನು ಬಳಿಕಗಿದು ಹೂಡಿದನಸಮವಾರ್ಗಣವ (ಕೊರೆಅ. ೩-೩-೨೦). **ಮಂದೈಸು**: ೧. ಮೊದಲೊಳ್ ನೀಳ್ಪು ಪೊದಟ್ಟು ಪರ್ವಿ ಪರೆಪಂ ಕೈಕೊಂಡು ಮಂದೈಸಿ ಮಾಣದೆ . . . ಪುದಿದಾ ದಂಪತಿಯುಂ ಪುದುಂಗೊಳಿಸಿ ಲೋಕಾಶ್ಚರ್ಯಮಂ ಮಾಡಿ ಕೊಂದುದು ಕೃಷ್ಣಾಗರುಧೂಪಧೂಮನಿವಹಂ (ಆದಿಪು. ೫-೨೩) ; ಮೊದಲೊಂದು ಮಂದೈಸಿದ ಮರದಡಿಯೊಳ್ ಕುಳ್ಳಿರ್ದನ್ನೆಗಂ (ಕುಶ್ಯಾಸ್ತ್ರ. ೧೨-೦೬ ವ). ೨. ಮಂದಸ್ಮಿತಮಧುರವಿಲೋಚನದಿಂ ಮಂದೈಸಿದ ನೃಪಸುತರಂ ನೋಡುತ ಕಂದರ್ಪನ ಪಟ್ಟದ ಕರಿ ಮೆಲ್ಲನೆ ನಡೆವಂತೆಯ್ದಿದಳು (ಜೈಮಿ. ೫-೪೬) ; ಮಂದೈಸಿದಲಿಜಾಲಂಪಮಂ ಕಂಡು ಪಿಂಡೆಱಗಿ ಪೊಸಜೇನನುಂಡು . . . ಮುಂಬರಿವ ಬವರಿವಿಂಡಿಂ . . . ಬನಂ ಮನಂಗೊಂಡುದು (ರಾಮಾಶ್ವ. ೫೪-೪). ೪. ಹೆಚ್ಚಾಗು : ಅಧಿಕವಾಗು: ತರುಣಿಗೆ ದೇವ ನಿಜಾನುಸ್ಮರಣದೆ ಮಂದೈಸಿ ಮೆಯ್ಯೊಳುಣ್ಮಿದ ಪುಳಕಾಂಕುರನಿಕರಂ ಕುಸುಮಾಯುಧಶರಪಾತಕ್ಕಗಿದು ತೊಟ್ಟ ಕವಚ ಮಿದೆನಿಕುಂ (ಕಾದಂಉ. ೩೩೦) ; ಹೊಗಳುತ್ತೆ ಹೊಂಗುತ್ತೆ ಮಂದೈಸಿ ಪಲ್ಲವಿಸಿ ಪುಳಕದಿಂ ಪೊಣ್ಮುತ್ತೆ (ಶಂಕರ.ದೇ. ೨೪೫-೪) ; ಮಂದೈಸಿದ ಲಜ್ಜೆಯಿಂದೆರ್ದ ನುಡಿವಳು ಮುಂದಣ ಕಾರ್ಯದ ತೆಱನ (ಶ್ರೀಶಾ. ೬-೭). [ಮಂದ$_2$ + —ಇಸು$_3$]

**ಮಂದಯ್ಸು** ' ಮಂದಯಿಸು ' ನೋ.

**ಮಂದರ$_1$** (ನಾ). [ಸಂಗೀತ] ಕೆಳಸ್ತರದ ಧ್ವನಿ ; ಮಂದ್ರಸ್ಥಾಯಿ : "ಮಂದರ–ಮಂದ್ರ = ಕೆಳದನಿ" (ಶಬ್ದಕೋ. ೩೪) ; ಮಂದ್ರಂ–ಮಂದರಂ, ಮಂದಿರಂ (ಶಬ್ದಾ.ಕು. ೧೪೭ ವ್ಯಾಖ್ಯಾ). ' ಮಂದರಶ್ರುತಿ ' ಪರಾ. [< ಸಂ. ಮಂದ್ರ]

**ಮಂದರ$_2$** (ಗು). ೧. ನಿಧಾನವಾದ ; ಮಂದವಾದ : ' ಮಂದರ ಯಾನ ' ಪರಾ. ೨. ದಟ್ಟವಾದ ; ಸಾಂದ್ರವಾದ. ೩. ದೃಢವಾದ.

೪. ಹೆಚ್ಚಾದ: ಅಧಿಕವಾದ. (ನಾ). ೫. ಒಂದು ಪರ್ವತದ ಹೆಸರು; ಇದು ಅಷ್ಟಕುಲಪರ್ವತಗಳಲ್ಲಿ ಒಂದೆಂದೂ ಕ್ಷೀರಸಮುದ್ರವನ್ನು ಕಡೆಯುವುದಕ್ಕಾಗಿ ದೇವತೆಗಳು ಇದನ್ನು ಕಡೆಗೋಲನ್ನಾಗಿ ಮಾಡಿಕೊಂಡಿದ್ದರೆಂದೂ ಭಾವಿಸಲಾಗಿದೆ : ಮಂದರಕ್ಷುಭಿತಪಯೋಧಿನಾದದಿಂ ಗಜಜಃ ಗರ್ಜಿಸಿ (ಕಂಕಕಂ. ೩೦-೪) ; ಮೊರಡಿಗಳ ನಡುವೆ ಮಂದರ [ದಾಕ್ಷ. ನಿರ] . . . ಬೆಟಂಗಳ ನಡುವೆ ಪರಹಂಸೆಯುಪ್ಪಂತೆ (ಸೋಮಚು. ೧-೧೦೬). 'ಮಂದರಧರ' ಪರಾ. ೬. ಕೈಲಾಸ : 'ಮಂದರನಿಲಯ' ಪರಾ. ೭. ಸ್ವರ್ಗ ; ದೇವಲೋಕ : ಕೋಪದಿ ಪಡಪಡಿಸಿ ಭೂಮಂದರದಂ ಸಡಗಾಗಿ (ಕಂಕಚಾ. ೨೨-೯೨). ೮. ಒಂದು ಬಗೆಯ ಮರ : ಮಂದಾರ : ಮಂದರ-ಶೋಭಿಯ ವೃಕ್ಷ. ಹೂಗಳು ತರತರದ ಬಣ್ಣಪುಳ್ಳವು. ಕಟ್ಟಿಗೆ ಗಟ್ಟಿ. ಕೆಲಸಕ್ಕೆ ಬರುತ್ತದೆ (ಕಶಾಗಿ. ೯೬). ೯. ಒಂದು ರಥದ ಹೆಸರು : ಬಾಹುಬಲಿವಿಗ್ರಹ ಸುಮಾರು ಐವತ್ತು ಎತ್ತರವಿದೆ. ಇದರ ಮುಂದಿರುವ " ತೇರಿ "ಗೆ ಮಂದರವೆಂದು ಹೆಸರು (ಪೂಜ್ಯಚಾ. ೩೦೬). ೧೦. ಎಂಟು ಅಥವಾ ಹದಿನಾರು ಎಳೆಗಳುಳ್ಳ ಮುತ್ತಿನ ಹಾರ. ೧೧. [ಜೈನ] ದೇವತೆಗಳು ತೀರ್ಥಂಕರರಿಗೆ ಪಂಚಕಲ್ಯಾಣಗಳನ್ನು ನೆರವೇರಿಸುವ ಸ್ಥಳವೆಂದು ಭಾವಿಸಲಾದ ಪರ್ವತ : ಮೇರು: ಮೂರುಲೋಕಕ್ಕೆ ಪೆಂಪಿಂದಗುಂದಲೆಯಾಗಿರ್ದುದು ದೇವದಂಪತಿರತಶ್ರೀಸುಂದರಂ ಮಂದರಂ (ಆದಿಪು. ೦-೩೦) ; ಜಗತೀವಿಶ್ರುತಮಂದರಕ್ಕೆ ನಡೆಯಲ್ ಪೇಟ್ಟು (ಕುಸ್ತು. ೦೦-೨೯). [ಸಂ.]

**ಮಂದರಧರ** (ನಾ). ೧. ಸಮುದ್ರಮಥನಕಾಲದಲ್ಲಿ ಕೂರ್ಮಾವತಾರದಿಂದ ಮಂದರಪರ್ವತವನ್ನು ತನ್ನ ಬೆನ್ನಿನ ಮೇಲೆ ಧರಿಸಿದ ವಿಷ್ಣು : [ಶರಸಿಧಿ]ಮಂದರದೀವತಿಗಭೀರಗುಣೋನ್ನತಿಯಿಂದೆ ಸಂದ ಮಂದರಧರಚಾಹುಗ್ಗಳ್ ವಸುಮತೀತಳರಕ್ಷಣವಕ್ಷರಪ್ಪ ನಾಲ್ವರುಮಾವನೀಶರಂ ವರರಥಂ ಪಡೆದಂ ತನುಜಾತರಂ (ಗದಾಯು. ೩೩೦) : ಮಂದರಧರನೀಕ್ಷಿಸಿ ಸಂಕ್ರಂದನಸಮಪುಮೇನಿಮಿತ್ತಮೆಮಗಿದು ಚಿತ್ರಂ ಎಂದು ಬೆಸಗೊಳ್ವುದುಂ (ಜಾಬ. ೯-೭೬). ೨. ಗತಿಸಿದವನು ; ಸ್ವರ್ಗಸ್ಥ : ನಂದಕವುಂ ದಿವಿಜಗಣಾನಂದಕವುಂ ಕೊಂಡು ಚೇದಿಪತಿಯೊಳ್ ಪೂರ್ವಂ ಮಂದರಧರನಾಹವದೊಳ್ ಮಂದರಧರರಾದರುಪತರೆಂದೆಂಬಿನೆಗಂ (ಜಗಾ. ೩-೯೭). ೩. [ಛಂದ] ಅಂಶಗಣಗಳಲ್ಲಿ ಒಂದು ; ವಿಷ್ಣುಗಣ : ಮಂದರಧರಗಣಮೆಸೆದಿರೆ ಮೊದಲೊಳ್ . . . ಛಂದೋವತಂಸಂ (ಛಂದೋಂಬು. ೩-೨೫೩). [ಸಂ.]

**ಮಂದರನಿಲಯ** (ನಾ). ಕೈಲಾಸದಲ್ಲಿ ವಾಸಮಾಡುವವನು : ಶಿವ : ಸಿಂಧುಪೂಜಿತನೆ ಪಾಹಿ ಶ್ಯಾಮಾಂಗಸಖಿ ಪಾಹಿ ಮಂದರನಿಲಯನೆ ಪಾಹಿ (ಬ್ರಶಚಾ. ೨೦-೯೩). [ಸಂ.]

**ಮಂದರಯಾನ** (ನಾ). ನಿಧಾನವಾದ ನಡಗೆ : ಮಂದಗಮನ : ಬಿಸರುಹನೇತ್ರೆಯೊಳ್ನಡು ಪೊರಬ್ದುದು . . . ಮಂದರಯಾನಮೊಡರ್ಚಿತು (ಕಂಚಕಂ. ೨೪೯-೦೨). [ಸಂ.]

**ಮಂದರಶ್ರುತಿ** (ನಾ). = ಮಂದರ$_1$ ; ಅವರ ತಂಬೂರಿಯ ಮಂದರ ಶ್ರುತಿಯ ತಂತಿಯು ಒಂದು ಶ್ರುತಿಗೆ ಸರಿಯಾಗಿರುತ್ತಿತ್ತು (ಕಂನೀಕ. ೨೩).
[ಮಂದರ$_1$ + ಶ್ರುತಿ]

**ಮಂದರಿ** (ನಾ). ಚಾಪೆ : ಮಕ್ಕಳಿಗೆ ಮಲಗಲಿಕ್ಕೆ ಮಂದರಿ, ಮಂದು ಹರಿದರೆ ಪಚ್ಚಡ, ಪಚ್ಚಡ ಹರಿದರೆ ಮಂದರಿ ಕೊಡಿಸಿ, ಅವನನ್ನು ಕಳುಹಿಸಿದನು (ಕೋಟಿಚ. ೬). 'ಮಂದಲಿಗೆ' ಪರಾ.
[ದೇ.॥ ಮಲ. ಮನ್ನಿರಿ ; ತುಳು. ಮಂದಿರಿ, ಮಂದ್ರಿ = ಮಗ್ಗುಲಿಂ ಹಾಸುಗೆ; ತೊದ. ಮೊದರ್ಶ. / ಮರಾ. ಮಾಂದುರೀ. / ಸಂ. ಮಂದುರಾ]

**ಮಂದಲಿಗೆ** (ನಾ). = ಮಂದರಿ : ಬಾಯಿಗಿಕ್ಕಿದ ಅಕ್ಕಿ ಒಕ್ಕವು ಮಂದಲಿಗೆಯಲ್ಲಿ ಮಂದಲಿಗೆ ಆನಲಾಜದೆ ಹಿಂಗಿ ಒಕ್ಕವು ನೆಲಕ್ಕೆ (ಪ್ರಾಚೀಕಹಾ. ೨೩೮-೬೦೪); ಅಂಗಳದಲ್ಲಿ ಒಬ್ಬರು ಒಂದು ಪಲಜೆಯನ್ನು ಹೊದೆದು ಮಂದಲಿಗೆಯ ಮೇಲೆ ಮಲಗಿದ್ದರು (ಧರ್ಮಶ್ರೀ. ೩೯).

**ಮಂದಲಿಸು** (ಕ್ರಿ). ತಪ್ಪನ್ನು ಎತ್ತಿ ಹೇಳು : ಮೂದಲಿಸು : ತನ ಸ್ತ್ರೀಯು ಕೂಡೆ ತನ್ನ ಮನೆಯಲ್ಲಿರುವ ಗಿಳಿಯು ಕೂಡೆಯೂ ಅರಸು ಮಂದಲಿಸಿದ ವೃತ್ತಾಂತಮುಂ ಪೇಳಲು (ಶುಕ. ೪) ; ನಿಮ್ಮೆಲ್ಲರನು ಕಡಿದೊಟ್ಟಿ ಖಂಡದ ಚೆಲ್ಲಿ ಭೂತಕೆ ಬಲಿಯನಿಕ್ಕುವೆ . . . ಎಂದು ಒಬ್ಬರಿಗೊಬ್ಬರಿದಿರಲಿ ಮಂದಲಿಸಿ (ಕರೀ. ೩೩೬-೦೩) ; ಅರಸಿನವರು ಮಂದಲಿಸಲಾಗಿ ನವಾಬರು ಯುದ್ಧ ಪುನಹಾ ಕೈಜೋಡಿಸಿಕೊಂಡೂ (ಸ್ಮರಬ. ೯೯). [ದೇ.॥ ತೆಲು. ಮಂದಲಿಂಚು = ಆಜ್ಞಾಪಿಸು, ಬೋಧಿಸು, ಎಚ್ಚರಿಕೆ ನೀಡು, ಬಿನ್ನವಿಸು, ಪ್ರಶ್ನಿಸು]

**ಮಂದವಾರ** (ನಾ). ಶನಿವಾರ : ದಂಡನಾಯಕರುಂ . . . ಆಷಾಢ ಬಹುಳನವಮಿಮಂದವಾರ ದಕ್ಷಿಣಾಯನಸಂಕ್ರಾಂತಿಯಲು . . . ಸರ್ಬ್ಬನ ಮಶ್ಯಂ ಮಾಡಿ (ಕೊಂಬ್ಲ ಶಾ. ೦೩-೪೯ : 1166) ; ವರಜಯ (ಸೌ)ವತ್ಸರಂ ವಿನುತಜೇಷ್ಠಯುತಂ ಸಿತಪಕ್ಷಮುಷ್ಟಮಿಪರಿಗತಂ ಮಂದ ವಾರದೊಳ್ (ಎಕ. XII, ತಿಪಟೂ. ೯೯-೨೩ : 1174 ?). [ಸಂ.]

**ಮಂದವಿಸು** 'ಮಂದಯಿಸು' ನೋ.

**ಮಂದವೇಗ** (ನಾ). [ಕಾಮಶಾ] ರತಿಭೇದದೃಷ್ಟಿಯಿಂದ ವಿಂಗಡಿಸಿದ ಮೂರು ಪ್ರಕಾರದ ಪುರುಷವರ್ಗಗಳಲ್ಲಿ ಒಂದು ವರ್ಗಕ್ಕೆ ಸೇರಿದವನು : ವೇಗಗತಿಯಿನಾಯ್ತು ಮಂದವೇಗ ಮಧ್ಯವೇಗ ಚಂಡವೇಗನೆಂಬ ಪೆಸರು ಪುರುಷರಿಂಗೆ ಸುರತದೊಳ್ (ಜಸವ. ೪-೩೬) ; ಬಗೆಗೆ ತಂದು ಸತಿಯನಿಚ್ಚೆಯೊಗೆಯೆ ನೆರೆವನವನ . . . ಮಂದವೇಗನೆಂಬವಂ (ಜಸವ. ೪-೪೦). [ಸಂ.]

**ಮಂದವೇಗಿ** (ನಾ). [ಕಾಮಶಾ] ಸಂಭೋಗದಲ್ಲಿ ಉದಾಸೀನಳಾದವಳು: ವೇಗಗತಿಯಿನಾಯ್ತು . . . ಸುರತದೊಳ್ ತೂಗಿದಂದದಿಂದೆ ಮಂದವೇಗಿ ಮಧ್ಯವೇಗಿ ಚಂಡವೇಗಿಯೆಂಬುದಾದುದುಬಲೆಯರ್ಗೆ (ಜಸವ. ೪-೩೬).
[<ಸಂ. ಮಂದವೇಗಿನೀ]

**ಮಂದವೇಗಿನಿ** (ನಾ). = ಮಂದವೇಗಿ : ಮಂದವೇಗಿನಿ ಮಧ್ಯವೇಗಿನಿ ಚಂಡವೇಗಿನಿಯೆಂಬ ತ್ರಿವಿಧರತಿಭೇದಕಾಂತೆಯರಿಂ (ವಿವೇ. ೨-೪).
[ಸಂ. ಮಂದವೇಗಿನೀ]

**ಮಂದಸ** 'ಮಂದಸು' ನೋ.

**ಮಂದಸು**, ಮಂದಸ, ಮಂದಾಸನ, ಮಂದಾಸು (ನಾ). ೧. ಪೆಟ್ಟಿಗೆ ; ಮಂಜೂಷ : ತಳಾಜಿನಂ ಮಂದಸಿನೊಳಗಿಟ್ಟುತ್ತುಬಮಾಲೆ ಪೃಥುವನೆಂದಲ್ (ಶಾಪುಂಪು. ೬೯) ; ಪಡೆಯೆ ಮಗನಂ ನಿದಾನವನುಸುತುವಂತೆಪೊಲಿಟ್ಟು ಪೊನ್ನ ಮಂದಸಿನೊಳಗಾಗದೆ ಗಡ ಬಿಟ್ಟಿರ್ಜಗುನೆಯು ಮಡುವಿನೊಳ್ (ಅರ್ಜನೀ. ೪-೯೪) ; ಉಪೇಂದ್ರನುರ್ಬಿದ ಮುಳಿಸಿಂದೆ ಮಂದಸಿನ ಮುಚ್ಚಳನುಂಗುಟದಿಂದೆ ಮೀಂಟಿ (ಜಗಾ. ೬-೩೦) ; ಪೊಗವ ನೋಡದೆ ಮಂದಸಿನೊಳು ನಿನ್ನೀ ಚೆಲ್ವ ಮಗಳನಿರಿಸಿ ಬೇಗದೊಳು ನಗರವ ಪೊಜಮಡಿಸು (ರಾಮಚು. ೬-೪೭). **ಮಂದಸ** : ೧. ಆ ಮಂದಸಮಂತು ನೀರೋಳರ್ದು ಎರಿಯದೊಂದು ಮೀನ ಬೆನ್ನಂ ತಾಗಿ . . . ಮೇಗೆ ನೆಗೆದ ಮಂದಸಂ ಸಿಡಿಲ್ ಬಡಿದು ಸುಭೌಮಂ ಸತ್ತು (ಶಾಂತಿಪು. ೦೩೯-೩) ; ಕರ್ಣಂಗಳ ತುದಿಯೊಳ್ ಸುಚಿನಿರ್ಗತಂ ತೋಜಿ ಪತಿಗೆ ಮಂತ್ರಿಗಮಾರಭ್ಯರ್ಣದೊಳ್ಗಿರ್ಪ ಮರಣಸ್ವರ್ಣದ ಕರ್ಬುನದ ಮಂದಸಂ ಪುಗಿಸಿದೊಡಂ (ಅಕ್ಷಾ. ೪-೦೯) : ಚಿನ್ನ ಭೂಮಿಯನುಳಿಸೆ ಕಂಡುದು ಹೊನ್ನ ಮಂದಸವಾ ಹಲಾಗ್ರದಿ (ಕೌಶಿಚಾ. ೨-೨). **ಮಂದಾಸನ** : ೧. ಲೋಕಾಪವಾದಕ್ಕೆ ಹೆದರಿದ ಕುಂತಿಯು ಒಂದು ಮಂದಾಸನದೊಳಗೆ ರತ್ನವನ್ನು ತುಂಬಿ ಅದರ ಮಧ್ಯದಲ್ಲಿ ಆ ಮಗು

ವನ್ನಿಟ್ಟು ಯಮುನಾನದಿಗೆ ಬಿಟ್ಟಳು (ಶಿಟ್ಮೊಕಾ. ೧೧). ೨. ದೇವರ ವಿಗ್ರಹಗಳನ್ನಿಡುವ ಮರ ಅಥವಾ ಲೋಹದ ಮಂಟಪ: ಮಂದಾಸನದಲ್ಲಿದ್ದ ದೇವರ ಮೂರ್ತಿಯು ನಯನಮನೋಹರವಾಗಿತ್ತು (ಬಂ). ಮಂದಾಸು : ೧. ಆ ಸುಕುಮಾರನನೊಂದು ಮಂದಾಸಿನೊಳ್ ರಾಸಿಮಾಡಿದ ರತ್ನಸಹಿತ ಆ ಸಹಚರಿಯುರಿರಿಸಿ (ನೇಮಿಸಂ. ೫-೧೦೫). ೩. ಪ್ರಾಣಿಗಳನ್ನು ಬಂಧಿಸಿಡುವ ಸಾಧನ; ಪಂಜರ; ಬೋನು: ಘೋಟದರಸು ಅಟ್ಟಿದ ಮಂದಾಸಿನೊಳು ಶಕಟದ ಮೇಲಿಟ್ಟೊಂದು ದುಷ್ಟವಾಜಿಯನು ಕರವೊಪ್ಪವೆತ್ತು (ಜಾಗಳ. ೬-೧).

[<ಸಂ. ಮಂಜೂಷಾ./ತೆಲು. ಮಂದಸ]

**ಮಂದಸ್ಮಿತ** (ನಾ). ೧. ನಸುನಗೆ; ಮುಗುಳುನಗೆ; ಮೆಲುನಗೆ: ಹನುಮನ ನೋಡಿ ತಲೆದೂಗಿದನು ಮಂದಸ್ಮಿತಮಧುರಮುಖಕಮಳ ನೊಲವಿನಲಿ (ಕುಮಾ.ಕ. ೨೩-೨೬); ಶಿವನುರಿಗಣ್ಣಿನ ಬೆಳುದಿಂಗಳೊ ಎನೆ ನೋಟದ ಮಂದಸ್ಮಿತರುಚಿ ತಣ್ಣನೆ ತೀವಿದ ಸೂಸುತಲೆಲ್ಲೆಡೆಗೆ ಬೆಳಗೆ (ಗಕೇಶ. ೨-೩೭). ೨. ಮಂದಹಾಸದಿಂದ ಕೂಡಿರುವವನು: ಆ ಮಹಾಪುರುಷನು ವಿನಯವಂತನಾಗಿ ಮಂದಸ್ಮಿತನಾಗಿ ಶಾಂತಲೆಯನ್ನು ನೋಡಿದನು (ಶಾಂತಲಾ. ೪೨). [ಸಂ.]

**ಮಂದಸ್ಮೇರ** (ನಾ). ಮುಗುಳುನಗೆ; ಮಂದಸ್ಮಿತ: ಮಂಜುಳ ಮಂದಸ್ಮೇರವಕ್ತ್ರಂ ಮಿಸುಗೆ (ರಾಜಶೇ. ೦-೧೩೨); ರಾಜನು ಮತ್ತೊಂದು ಮಂದಸ್ಮೇರವನ್ನು ತುಟಿಗಳಲ್ಲಿ ಮಿನುಗಿಸಿ ಸುಮ್ಮನಾದನು (ಶವಾ. ೧೦೬). [ಸಂ.]

**ಮಂದಹಸಿತ** (ನಾ). =ಮಂದಸ್ಮಿತ ೧: ಅಂದದೊತವೆಯ ಪೊನೆಗಳಿಂ ದೆಯಸೊತ್ತುವಾ ಮಂದಹಸಿತದ ಕೊಲೆಯೊ (ಮುಕುಂಶ. ೦೩೭). [ಸಂ.]

**ಮಂದಹಾಸ** (ನಾ). =ಮಂದಸ್ಮಿತ ೧: ಲಲಿತಾನನಾಂಬುಜವಲದ್ಗಸಿದಮದು ಮಂದಹಾಸಮಿಂ ಮಾರಹರನಾ (ಜಗಿ. ೩-೩೨); ಮುಂದೆ ಬರುತಿಹ ಭಟರ ಬರವಿಗೆ ಮಂದಹಾಸದಲಸುರ ನೋಡಿದೊಡೆ (ಕೌಶಿಂ. ೩೫-೦೨). [ಸಂ.]

**ಮಂದಳ** 'ಮನೆದಳ' ನೋ.

**ಮಂದಾಕಿನಿ** (ನಾ). ಗಂಗಾನದಿ; ದೇವನದಿ: "ಮಂದಾಕಿನೀ. ವಿಯದ್ಗಂಗಾ. ಸ್ವರ್ಣದೀ, ಸುರದೀರ್ಘಿಕಾ—ಇ ಆಕಾಶಗಂಗೆ ಹೆಸರುಗಳು" (ಸಿದ್ಧಾಂತ. ೨೨); ಆದಾರ್ಯವೀರ್ಯಂ ಸೂರ್ಯದಿನದಂದು ಮಂದಾಕಿನಿಯುಂ ವಿಹಾಯಲೆಂದು ಬಂದು (ಶಂಕರಾ. ೯-೭೧ ವ): ವಿಕ್ರಮಾರ್ಜಿತವಿಶುದ್ಧಕೀರ್ತಿ ಮಂದಾಕಿನೀ ಪವಿತ್ರೀಕೃತತ್ರಿಲೋಕನುಂ (ಕಾತ. ೫-೨-೦೩೭; 1058); ಮಂದಾಕಿನಿಯನ್ನು ಯಾರು (ತಲೆಯಲ್ಲಿ) ಧರಿಸಿದನೋ. . . ಆ ಅಂಧಕಾಸುರಸಂಹಾರಕನೂ . . . ಆದ ಭಗವಂತನು ನಿನ್ನನ್ನು ಸರ್ವದಾ ರಕ್ಷಿಸಲಿ (ವೃಷಾಕೋ. ೮೯).

[ಸಂ. ಮಂದಾಕಿನೀ]

**ಮಂದಾಕಿನೀನಂದನ** (ನಾ). ಗಂಗಾನದಿಯ ಮಗ; ಗಾಂಗೇಯ; ಭೀಷ್ಮ: ಮಂದಾಕಿನೀನಂದನನ ಮಾತಿಂಗೆ ಯಮುನಂದನನಾನಂದಮನಸ್ಕನಾಗಿ ದೇವಕೀನಂದನಂಗಗ್ರಪೂಜೆಯನೆತ್ತುವಾಗಳ್ (ಶಂಕರಂ. ೨೩೩-೦೩); ಮಂದಾಕಿನೀನಂದನು ನುಡಿಯೆ ಕೇಳ್ದು (ಜಗಿ. ೦೭-೦೭ ವ). [ಸಂ.]

**ಮಂದಾಕ್ರಾಂತ** (ನಾ). [ಛಂದ] ವರ್ಣಛಂದಸ್ಸಿನಲ್ಲಿ ಹದಿನೇಳು ಅಕ್ಷರಗಳ ಅತ್ಯಷ್ಟಿಯಲ್ಲಿ ಒಂದು ವೃತ್ತ: ಪ್ರತಿಸಾಲಿನಲ್ಲೂ ಕ್ರಮವಾಗಿ ಮಗಣ. ಭಗಣ, ನಗಣ. ತಗಣ. ತಗಣ ಮತ್ತು ಎರಡು ಗುರು—ಹೀಗೆ ಬರುವ ನಾಲ್ಕುಸಾಲುಗಳುಳ್ಳ ವರ್ಣವೃತ್ತ: ಯೌವನಾಕ್ರಾಂತೆ ಮಂದಾಕ್ರಾಂತೆ ವೃತ್ತಂ ನೆಗಟ್ದುದಿಳೆಯೊಳ್ (ಛಂದೋಂಬು. ೨-೧೩೩); ಮಂದಾಕ್ರಾಂತಂ ನೆರೆಯೆ ಮುಘನಂತದ್ವಯಂಗದ್ವಯಂ ಮೇಣ್ (ಕೃಬಿಾ. ೫೩). [ಸಂ. ಮಂದಾಕ್ರಾಂತಾ]

**ಮಂದಾಕ್ಷ** (ನಾ). ೧. ಮಂದವಾದ ದೃಷ್ಟಿಯುಳ್ಳವನು; ಚೆನ್ನಾಗಿ ಕಾಣದ ಕಣ್ಣುಳ್ಳವನು. ೨. ನಾಚಿಕೆ; ಲಜ್ಜೆ: "ಹ್ರೀ, ಲಜ್ಜಾ . . . ಮಂದಾಕ್ಷಂ—ಈ ೬ ಲಜ್ಜೆ" (ಹಲಾಯು. ೯೩-೪೦೩). [ಸಂ.]

**ಮಂದಾಕ್ಷಿ** (ನಾ). ೧. ದೃಷ್ಟಿಪಾಟವವಿಲ್ಲದಿರುವ ಕಣ್ಣು; ಮಂದವಾದ ಕಣ್ಣು: ಮಂದಾಕ್ಷಿ ನಮಗಿಹುದು ಬಲುದೂರ ಸಾಗದದು (ಮುಂಕುಕ. ೪೪). ೨. ದೃಷ್ಟಿಪಾಟವವಿಲ್ಲದವಳು; ಸರಿಯಾಗಿ ಕಣ್ಣುಕಾಣದವಳು: ದಯಿತಾವಿಯೋಗಾಗ್ನಿಯಿಂಧನಶರೀರನಂ. ರೂಕ್ಷರೂಪದ ರಾಮನಂ ಕಂಡು ಮಂದಾಕ್ಷಿ. ಶಬರಿ, ಬೇಡಂಗೆತ್ತಳ್ (ಶ್ರೀರಾಮಾ. ೨೬೯-೦೩೭).

[ಸಂ. ಮಂದಾಕ್ಷೀ]

**ಮಂದಾಗ್ನಿ** (ನಾ). ೧. ಪ್ರಖರವಾದ ಉರಿಯಿಲ್ಲದಿರುವ ಬೆಂಕಿ; ಹೆಚ್ಚು ಶಾಖವಿಲ್ಲದಿರುವ ಬೆಂಕಿ: ಒಳ್ಳೆಣ್ಣೆಯಲ್ಲಿ ಅರುಬಳ್ಳ ಮಜ್ಜಿಗೆಯನ್ನು ಹಸಿ. ಮಂದಾಗ್ನಿಯಿಂದ ಕಾಯಿಸಿ, ಪಾಕದಲ್ಲಿಳುಹಿ ಅಭ್ಯಂಜನವನ್ನು ಮಾಡಿಸಲು ಶ್ಲೇಷ್ಮಜ್ವರ ಪರಿಹಾರವಾಗುವುದು (ಸಕಿತ್ಸ. ೪೦). ೨. ಗುಪ್ತವಾದ ಬೆಂಕಿ; ಸುಪ್ತಾಗ್ನಿ: ಪ್ರತಿಯೊಂದು ಮರದಲ್ಲೂ ಮಂದಾಗ್ನಿ ಅಡಗಿರುವುದನ್ನು ಅವರು ಅರಿತಿದ್ದರು (ಶಾಸಗ. ೭೯). ೩. ಜಠರಾಗ್ನಿಯ ನಾಲ್ಕು ಸ್ಥಿತಿಗಳಲ್ಲಿ ಒಂದು; ಕಫದಿಂದ ಉಂಟಾಗುವ ವಿಕಾರ: ದೇಹದಲ್ಲಿ ಜಠರಾಗ್ನಿಯು ನಾಲ್ಕು ತೆರನಾಗಿರುವುದೆಂತೆಂದೊಡೆ—ಮಂದಾಗ್ನಿ ತೀಕ್ಷ್ಣಾಗ್ನಿ ವಿಷಮಾಗ್ನಿ ಸಮಾಗ್ನಿಯೆಂಬ ನಾಲ್ಕು ವಿಧವಾದ ಅಗ್ನಿಗಳಲ್ಲಿ ಶ್ಲೇಷ್ಮದಿಂ ಮಂದಾಗ್ನಿ. . . ಉಂಟಾಗಿರುವುದು (ಸಕಿತ್ಸ. ೦೩); ತಾಯಿಯು ನೋಡಿ ಮಗನಿಗೆ ಮಂದಾಗ್ನಿಯಾಗಿದೆ ಎಂದು ಒಳ್ಳೊಳ್ಳೆ ಜೀರ್ಣಕಾರಿ ಮಾತ್ರೆ ಲೇಹಗಳನ್ನು ಮಾಡಿಸಿಕೊಟ್ಟಳು (ದೇವೀಶಾ. ೫೩). ೪. ತಿಂದ ಆಹಾರವು ಪಚನವಾಗಲು ಶಕ್ತಿಯಿಲ್ಲದಂತಾಗುವ ಒಂದು ಬಗೆಯ ರೋಗ: ಅಮ್ಲಪಿತ್ತಾದಿರೋಗ . . . ಊರ್ಧ್ವತೃಷೆ. ಮಂದಾಗ್ನಿ, ಗ್ರಹಣಿ. ಸಂಗ್ರಹಣಿ ಈ ವ್ಯಾಧಿಗಳೊಳು ಹಿತವಪ್ಪುದು (ಬಿಕ್ಶಾಂ. ೧೧).

[ಸಂ.]

**ಮಂದಾನಿಲ, ಮಂದಾನಿಳ** (ನಾ). ೧. ಮೆಲ್ಲಗೆ ಬೀಸುವ ಗಾಳಿ; ಮಂದಮಾರುತ: ಮಂದಾನಿಲಂ ತೆಂಕಣಿಂ ಬರೆ ಚೈತ್ರಂ ಕುಡುವರ್ಘ್ಯಲಾಜತತಿಯೋ ಪೇಟಿಂಬಿನಂ ಪುಷ್ಪಮಂಜರಿಯುಂ ತನ್ನು ನಿಕರ್ಣಪೂರಕ ಮನತ್ಕಾರ್ಶ್ಚರ್ಯದಿಂ ನೋಡಿದಂ (ಕಾದಂಪೂ. ೭೪೦); ಪರಮೇಸಾಚಿಯರ ಮೆಯ್ಯ ಸುಗಂಧಂ ಮೊದಲಾದ ಸಕಲಪರಿಮಳವುಂ ಕವರ್ತೆಗೊಂಡಾ ಮೋದಭಾರದಿಂ ಮಂದಾನಿಲನಾಗಿ ಮೆಲ್ಲಮೆಲ್ಲನೆ ಬಂದು (ಶಂಬರ. ೦೪-೭೯). ೨. [ಛಂದ] ಮಂದಾನಿಲ, ಲಲಿತ, ಉತ್ಸಾಹ ಎಂಬ ಮೂರು ಬಗೆಯ ರಗಳೆಗಳಲ್ಲಿ ಒಂದು; ಪ್ರತಿಯೊಂದು ಸಾಲಿನಲ್ಲಿಯೂ ನಾಲ್ಕುಮಾತ್ರೆಯ ನಾಲ್ಕುಗಣಗಳಂ ಎಂದರೆ ಹದಿನಾರುಮಾತ್ರೆಗಳಿರುವ, ಆದ್ಯಂತಪ್ರಾಸವುಳ್ಳ ಹಾಗೂ ಪಾದನಿಯಮವಿಲ್ಲದ ಒಂದು ಪ್ರಕಾರ: ಮಂದಾನಿಲ ಲಲಿತೋತ್ಸವವೆಂದೀ ರಗಳೆಗಳ ನಾಮಮಕ್ಕುಂ (ಛಂದೋಂಬು. ೩-೨೨೦ ಅಧಿಕಪ); ಉತ್ಸಾಹ, ಮಂದಾನಿಲ, ಲಲಿತ ಎಂದು ಮೂರುವಿಧವಾದ ರಗಳೆಗಳು ಪ್ರಸಿದ್ಧವಾಗಿರುವುವು (ಕೃಬಿಾ. ೯೭). ಮಂದಾನಿಳ: ೧. ಮಂದಾನಿಳನಲೆವದೆ ಮಾಕಂದಂ ವಿಚಕಿಳಲತಾಸಮೇತಮರಲ್ವಂತು . . . ಬಿಸೆದುದಾ ನೃಪಚಿತ್ತಂ (ಕೃಷ್ಣ. ೩-೦೨೩).

[ಸಂ.]

**ಮಂದಾನಿಲವೃತ್ತ** (ನಾ). [ಛಂದ] ಪಂಕ್ತಿಛಂದಸ್ಸಿನಲ್ಲಿ ಒಂದು ಪ್ರಕಾರ; ಪ್ರತಿಸಾಲಿನಲ್ಲೂ ಹತ್ತುಅಕ್ಷರಗಳುಳ್ಳ ನಾಲ್ಕುಸಾಲುಗಳ ವೃತ್ತ: ಶೀತಕರೋರ್ವೀಮಾರುತಚೇತೋಜಾತಹರಂ ಬಂದಿರ್ದೊಡ ಚೆಂತುಂ ಭೂತಳಕೆಲ್ಲಂ ಸಂದುದಿದೆತ್ತಂ ನೀತಿಯುತೇ ಮಂದಾನಿಲವೃತ್ತಂ (ಛಂದೋಂಬು. ೨-೦೦೯). [ಸಂ.]

**ಮಂದಾನಿಳ** 'ಮಂದಾನಿಲ' ನೋ.

**ಮಂದಾರ** (ನಾ). ೧. ಒಂದು ಬಗೆಯ ಮರ ಮತ್ತು ಸುವಾಸನೆಯುಳ್ಳ ಅದರ ಹೂವು; P ಸುರಾಸುರರು ಕ್ಷೀರಸಮುದ್ರವನ್ನು ಕಡೆದಾಗ ಹುಟ್ಟಿದ ಐದು ಕಲ್ಪವೃಕ್ಷಗಳಲ್ಲಿ ಒಂದೆಂದು ನಂಬಲಾಗಿದೆ : "ಮಂದಾರಃ, ಪಾರಿಜಾತಕಃ, ಹರಿಚಂದನಃ, ಕಲ್ಪವೃಕ್ಷಃ, ಸಂತಾನಃ –ಈ ೫ ದೇವರ ಮರಂಗಳ್" (ಹಲಾಯು. ೨೨-೧೪೩): ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತುಂ (ವಡ್ಡಾರಾ. ೬೪-೬): ಸಿರಿಯುಂ ಮಂದಾರವಮಂ ಚಂದ್ರನನಮಲಮಣಿಶ್ರೇಣಿಯುಂ ಮಾಣದಂತಃಕರಿಸಿದರ್ಾ ಪೂರ್ಣದುಗ್ಧಾರ್ಣವ ದೊರೆಗೊಣೆವಂದತ್ತು. . . ಆಸ್ಥಾನಗೇಹಂ (ಶಂಪ್ರಪು. ೩-೩) ; ಈ ವನದಿ ಮಂದಾರ ಆಗೊಮ್ಮೆ ಈಗೊಮ್ಮೆ (ಕಲ್ಯಾ೧೦. ೩-೦). ೨. ಎಕ್ಕದ ಗಿಡ ; ಅರ್ಕ : "ಅರ್ಕಾಹ್ವಃ . . . ಮಂದಾರಃ, ಅರ್ಕಪರ್ಣಃ – ೭ ಎಕ್ಕಗಿಡ, ಯಕ್ಕೇಗಿಡ, ಸೂರ್ಯವೃಕ್ಷ" (ಸಿದ್ಧಾಂತಿ. ೦೩೦). ೩. ದತ್ತೂರದ ಗಿಡ. ೪. ಸ್ವರ್ಗ. ೫. ಆನೆ. [ಸಂ.]

**ಮಂದಾರಿ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು : ಬಗಿನಿ ಪಚಾರಿ- ಮಂದಾರಿ ದೇವದ್ಯಾರಿ . . . ಬೋರೆಗಳೆಸೆದವು (ಶಬ್ದಮ. ೦೩-೦೩). [ ಸಂ. ಮಂದಾರೀ ]

**ಮಂದಾರಿಕ** (ನಾ). ಒಂದು ಬಗೆಯ ಸಸ್ಯ : "ರೂಪ–ಮಂದಾರಿಕ, ತುಪ್ಪಕೀರೆ" (೬೩೨. ೦೪೦). [ <ಸಂ. ಮಂದಾರಕ ]

**ಮಂದಾಸನ** 'ಮಂದಸು' ನೋ.

**ಮಂದಾಸು** 'ಮಂದಸು' ನೋ.

**ಮಂದಾಸುವಲೆ** (ನಾ). ಪೆಟ್ಟಿಗೆಯಂತಿರುವ ಒಂದು ಬಗೆಯ ಬಲೆ : ತಡಿಕವಲೆ ತಟ್ಟಿವಲೆ ಹಾಸುವಲೆ ಬೀಸುವಲೆ . . . ಮಂದಾಸು [ಪಾಠಾಂ. ಮಂದಸಿನ]ವಲೆಯು ಪೊಟಿಗಳ ಮೊತ್ತಮಂ ಕಂಡನಾದಯ್ಯನು (ಸೋಮಶ. ೫೨. ೨೦೦; ಹಕಾ. ೩-೬ ನೋ). [ಮಂದಾಸು (<ಮಂದಸು) + ಬಲೆ$_1$]

**ಮಂದಿ$_1$** (ನಾ). ೧. ಜನಸಮೂಹ ; ಜನತೆ : ಸಿರಿಯೆಂಬುದೊಂದು ಸಂತೆಯು ಮಂದಿ ಕಂಡಯ್ಯಾ ಇದ ನೆಚ್ಚಿ ಕೆಡಬೇಡ (ಬಸವ. ೦೩೪): ಮಂದಿಯಿಲ್ಲದ ರಾಜ್ಯ ಕಂದನಿಲ್ಲದ ಭಾಗ್ಯ ಬಂಧುವಿಲ್ಲದ ಬಾಳುವೆಯು ಜಗದೊಳಗೆ ಚಂದವಲ್ಲ (ಸರ್ವಜ್ಞ. ೬೦೭) ; ಮಂದಿ ಹೇಳಿದರೆಂದು ಹಂದಿ ತಿನ್ನಬಹುದೆ ? (ಗಾದೆ). ೨. ಜನ ; ವ್ಯಕ್ತಿ : ಸಂದಣಿಸಿದುದು ಕೇರಿಕೇರಿಯ ಮಂದಿ ಮಾಣೆ ಮನೆ ಮೇಲೆ ಘನತರುವ್ಯಂಪದಲಿ (ಕುಮಾವ್ಯಾ. ೦೭-೭೭) : ತಂದೆ ಸತ್ತ ಮೇಲೆ ನೂರುಮಂದಿ ವಿಪ್ರರಿಗುಣಿಸಿ ತಮ್ಮ ತಂದೆ ತೃಪ್ತನಾದನೆಂಬರು ಮಂದಮತಿಯು ಜನಗಳು (ಪುರಂದ. ೦-೦೮೦-೪) ; ನೀವು ಅಷ್ಟೊಂದು ಮಂದಿ ಜನರನ್ನು ಕೊಲ್ಲಬೇಕೆಂದೆಣಿಸಿರುವಿರಿ (ದೇವಾಂ. ೦೩೩).

**ಮಂದಿಗೆ ಬರಿಸು** = ಎಲ್ಲರಿಗೂ ತಿಳಿಯುವಂತೆ ಮಾಡು ; ಬಹಿರಂಗಗೊಳಿಸು : ಕನಸಿನೊಳಾದೊಡಮಿದಿರುಪಾತಾಡದೆ ಕನಲದೆ ಕಲಹ ವೆಸಗದೆ ಮನೆಯೊಳಗಿರುವೆಷ್ಟು ಮಂದಿಗೆ ಬರಿಸದೆ ಮನದನ್ನನ ಮನವೊಲಿಸು (ಹರಿಶ. ೩-೩೯). **ಮಂದಿಗೆಳೆ** = ಬಲಾತ್ಕಾರವಾಗಿ ಜನರ ಮುಂದೆ ಬರುವಂತೆ ಮಾಡು : ಮಂದಿಗೆಳೆವನು[ಪಾಠಾಂ. ಮಂದೆಗೆಳೆಸುವ] ಪಾಪಿ ಕೌರವನೆಂದು ಮುಂದಲೆಪಿಡಿದು ಸೈಂಧವ ಬಂದು ಬಳಿಕಾರಣ್ಯವಾಸದೊಳೆನ್ನನೆಳೆದೊಯ್ದು (ಕುಮಾವ್ಯಾವಿ. ೩-೩೯). 'ಮಂದೆ' ಪರಾ.

[ದೇ.॥ ತಮಿ. ಮನ್ರು =ಸಭೆ, ಗೋಷ್ಠಿ ; ತುಳು. ಮಂದಿ, ಮಂದೆ ; ತೆಲು. ಮಂದಿ ; ಕೋಲಾ. ಮಂದೀ ]

**ಮಂದಿ$_2$** (ನಾ). (ಉಕ) ವ್ಯಾಪಾರದಲ್ಲುಂಟಾಗುವ ಪದಾರ್ಥಗಳ ಬೆಲೆಯ ಇಳಿತ ; ಅಗ್ಗ : ಈಗ ಬಟಾಟೆ ಮಂದಿಯಾಗಿದೆ (ಲೂ). [ ← ಹಿಂ. ಮರಾ. ಮಂದೀ ]

**ಮಂದಿರ** (ನಾ). ೧. ವಾಸಮಾಡುವ ಕಟ್ಟಡ ; ಮನೆ ; ಭವನ : "ಆವಾಸಃ . . . ಗೇಹಂ, ಕುಟಂ, ಮಂದಿರಂ . . . ಆಲಯಃ — ಈ ೩೧ ಮನೆ" (ಹಲಾಯು. ೪೯-೦೩೩) ; ಕಂಸಮಹಾಮಂದಿರಮಧ್ಯದ ಮಣಿಗೃಹದಿಂದಗಲದೆ ನಲಿಯುತಿರ್ದರಾ ದಂಪತಿಗಳ್ (ಜಗಂ. ೨-೩೨) ; ಆನೆಗೊಂದಿಯ ಪ್ರಮರೇಶ್ವರಪಾತ್ರನು ತನ್ನ ಮಂದಿರದಲ್ಲಿ ಕುಳಿತುಕೊಂಡು ಏನೋ ಯೋಚಿಸಿಕೊಳ್ಳುತ್ತಾ ಇರಲು ಹುಚ್ಚನು ಅವನ ಬಳಿಗೆ ಬಂದನು (ರಾಶಿ. ೦೩) . ೨. ಹೆಂಡತಿ ಮತ್ತು ಮಕ್ಕಳಿಂದ ಕೂಡಿದ ಸಂಸಾರ, – ಕುಟುಂಬ : ಮುರಾಂತಕ ನೀಂದು ಮನದೊಲವಿನಲಿ . . . ಮಂದಿರದ ಸುಕ್ಷೇಮಕುಶಲವನಂದು ಕೇಳಿದು ವೀಳೆಯವನಾ ಮಂದಿಗಿತ್ತನು ದೇವ (ಕುಮಾವ್ಯಾಉ. ೬-೨೨). ೩. ದೇವಾಲಯ ; ಗುಡಿ. ೪. ನಗರ ; ಪಟ್ಟಣ : "ಮಂದಿರಂ—೧. ಮನೆ, ೨. ನಗರ" (ಸಿದ್ಧಾಂತಿ. ೪೦೬). ೫. ಕುದುರೆಯಲಾಯ ; ಅಶ್ವಶಾಲೆ : "ವಾಜಿಶಾಲಾ, ಮಂದುರಾ—ಈ ೨ ಕುದಿರೆಯ ಮಂ(ದಿ)ದುರಂ" (ಹಲಾಯು. ೩೧-೦೪೦). [ಸಂ.]

**ಮಂದಿರಂಬೊಗು** (ಕ್ರಿ) · ಮನೆಯನ್ನು ಪ್ರವೇಶಿಸು : ಈ ಕನಕಲೋಚನಂ . . . ಪೊಳಲೊಳ್ ಪೊಕ್ಕು ಮಂದಿರಂಬೊಕ್ಕು (ನೇಮಿ. ೪೬-೩).

[ಮಂದಿರ + ಪೊಗು]

**ಮಂದಿಲ** 'ಮಂದೀಲ' ನೋ.

**ಮಂದಿವಾಳ, ಮಂದೆವಳ, ಮಂದೆವಾಳ, ಮಂದ್ಯಾಳ** (ನಾ). ೧. ಓರಿಮೆಯಿಲ್ಲದವನು ; ಜನಸಾಮಾನ್ಯ ; ನಾಡಾಡಿ : ಮಂದಿವಾಳನ ತೆಜಸ ನರನೊಳು ಸಂದುದೇ ಕಾಳಗವು ನಿನ್ನಂ ಬೆಂದುದೇಯೆನ್ನೊಡಲು (ತಿಮ್ಮಕ್ಕೀ. ೩-೩೧) ; ಓಂದೆ ದಕ್ಷನ ಯಜ್ಞಕುಂಡದಿ ಬೆಂದಿರ್ಪ ಸತಿಯೊಳು . . . ತಂದೆತಾಯ್ಗಳುಬೆಂದು ಸುಮ್ಮನೆ ಮಂದಿವಾಳರವೋಲು ಮುಂದುಗೆಡುತಿಹುದಂದವೇನ್ಸೈ (ಹುಗಳ. ೩). ೨. (ಅತಿಪರಿಚಯದಿಂದುಂಟಾದ) ಸಲುಗೆ ; ಸದರ : ಹರಿಯೊಳ್ ನಾರದ ಮಂದಿವಾಳದೆ ಮಹಾರಾವಂಗಳಂ ತಾಳನೇ (ಸೋಮೇಶ. ೬೯) ; ನಂಬಿಯೆಂಬ ವಿಚಾರದೂರನು ಮಂದಿ[ಪಾಠಾಂ. ದೆ]ವಾಳದಿ ಮಾರಮರ್ದನನೆಂದಿನಿತು ಭಯವಿಲ್ಲದಾತ್ಮದಲಿ ಕಾಳುಗೆಲಸಂಗಳಿಗೆ ಕಳುಪುತ (ಬಸವು. ೨೬-೩೬) ; ಕಾತರಿಸದಿರು ಮಂದಿವಾಳದ ಮಾತುಗಳು ಸಾಕಟ ತೊಲಗೈ (ಕುಮಾವ್ಯಾಭಿ. ೨-೨೬) ; ಮಂದಿವಾಳದೊಳಾಣ್ಮನ ಮೇಗಣ ದೂಜಿ ತಂದ ತನ್ನಣುಗಿಯನೊಡನೆ ಹಿಂದುಮುಂದೆಣಿಸದೆ ಹೀಯಾಳಿಸಿ ನಗೆ ನಿಂದಿಸಿ ನೀಕರಿಸುವುದು (ಹರಿಶ. ೩-೩೦)· ೩. ಸೊಕ್ಕು ; ಮದ ; ಔದ್ಧತ್ಯ : ಹಂದೆ ಹೋಗೆಲೆ ನಾಯೆ . . . ಬಹುವಿಕಾರದ ಮಂದಿವಾಳದ ಮಾತದೇಕೆ (ತೊರವೆ. ೩-೩-೩೩): ಕೇಳಬಾರದ ಬೊಮ್ಮಕೆಯ ನೆಗಳ್ದ ಪೇರಾಳಪಾತಕ ಭೂಭುಜನ ತೋಳಡವಿಯ ತಡಿದೊಟ್ಟದೆಲಾ ಮಂದಿವಾಳದ ತೋಟು ತನೊಡನೆ (ಸೋಮಶ. ೪೦-೨೪) ; ನಾಲಗೆದೀಣ್ಸಿಗೆ ಬಗುಳ್ದಾಡುವ ನಿನ್ನ ಅವಿಧೇಯತೆಯು—ಮಂದಿವಾಳವು ಎದೆಗೊಬ್ಬು ಅಕ್ಷಮ್ಯವಾಗಿದೆ (ಮಂತ್ರಶ. ೭೦-೧೦). ೪. ಸಡಗರ : ಸಂಭ್ರಮ : ಮಂತ್ರದ ತಂತ್ರದ ಮಂದಿವಾಳದ ಮದುವೆ ಸಂದಣಿಯಲಿ ಹೇಗೊ ಮೆರೆಯುತಿರೆ (ಸಹಗೀ. ೮-೨೯). **ಮಂದೆವಳ** : ೫. ಪ್ರೇಮ ; ಪ್ರೀತಿ : ಆ ಧರ್ಮನಾಥಕುಮಾರಂ ಮುನ್ನಮೆ ಲೋಕತ್ರಯೈಕಸ್ವಾಮಿಯಪ್ಪುದ ನಱಿದಿರ್ದಪಮಾ ಮಹಾಸೇನಮಹಾರಾಜಂ ನಿಜತನೂಜನೆಂಬೀ ಮಂದೆವಳದಿಂದೊಂದಿದ ಮೋಹನೀಯೋದ್ರೇಕ ಪರಿಪಾಕದಿಂ ಮೂರುಂಲೋಕಕ್ಕ ತೀವಕೌತುಕಮಾಪ್ಪಂತಿರೆ (ಧರ್ಮ. ೯-೯೯ ವ). **ಮಂದೆವಾಳ** : ೨. ಭೋಗದೊಳ್ ಬೋಳೈಸಿ ರಾಗದಿಂ ಮೇಳೈಸಿ ಮಂದೆವಾಳಂ ಮೆಯ್ದುಂದೊಂದೆರಡು ಪೆಂದದನುಭವದೊಳ್ ಮಂದಯಿಪ ಸುಖಮನಿತ್ತು (ನೇಮಿ. ೨-೧೦೩ ವ). ೩. ನಂಬಿಪ್ಪೆ ಸಿರಿಯಾಳನಂದನನ ಕೊಂದು ತಿರಿಗಿತ್ತಹಂಕಾರ ನಮ್ಮೊಳು ನೀಡ ಮಂದೆ[ಪಾಠಾಂ. ದಿ]ವಾಳವೆ ನಿಜದ ಭಕ್ತರೊಳಗೆಂಬವಳ ಚರಣಾಂಬುಜಕ್ಕೆ ಶರಣು (ಬಸವಾ. ೩೭-೯೦) ; ಮಂದ ದಕ್ಷಂ ಶಿವಗೆ

ಮಾರ್ಮಲತು ಯಜ್ಞವಂ ಮಂದೆವಾಳದೆ ಮಾಡಲು (ಖಃಕೃತಿ. ೨-೦-೬೮).
**ಮಂದ್ಯಾಳ** : ೫. ಒಡಹುಟ್ಟಿದೊಂದು ಮಂದ್ಯಾಳದೊಳ್ನುಡಿದನೊ ಕಿಡುವುದಱಿಯದೆ ತಾನು (ಶರತ. ೯೯-೩೦). P 'ಮಂದಿವಾಳ' ಎಂಬ ಶಬ್ದಕ್ಕೆ 'ಮಂದಿವಾಳತನ' ಎಂಬ ಶಬ್ದದ ಭಾವವಾಚಕದ ಅರ್ಥಗಳು ಅನೇಕ ಕಡೆ ಆರೋಪಿತವಾಗಿವೆ.

[ಮಂದಿ$_1$ + —ವಾಳ$_3$ (< —ವಳ). / ತೆಲು. ಮಂದೆಮೇಲು]

**ಮಂದಿವಾಳತನ**, ಮಂದೆವಾಳತನ, ಮಂದ್ಯಾಳತನ (ನಾ). ೧. ಪ್ರೀತಿ: ಪ್ರೇಮ : ಪರಮಕಾರುಣಿಕೆಯಾದಂಬಿಕೆಯೆಂದಱಿಯದೆ ತನ್ನ ಪುತ್ರಿಯೆಂಬ ಮಂದಿವಾಳತನದಿಂ ಸಲಪುತ್ತಿರೆ (ಶೃಂಗಸೂ. I, ೦೯೬). **ಮಂದೆವಾಳತನ** : ೨. (ಅತಿಪರಿಚಯದಿಂದಾದ) ಸಲುಗೆ; ಸದರ : ಅನಂಗಕೇಳಿಗೆ ಮನ ಸಂದಣಿಸಿ . . . ಭೀತಿಬಿಟ್ಟು ಮಂದೆ [ಪಾಠಾಂ. ದಿ] ವಾಳತನಂ ಮೈಸಂದು ಸೋಂಕಿ ಸವಿಗಂಡಾಲಿಂಗನಕ್ಕಾತುರಿಸಿ (ಮಲರ. ೦೦೭-೭). **ಮಂದ್ಯಾಳತನ** : ೨. ತಂದೆಯೋಲಗವೆಂಬ ಮಂದ್ಯಾಳತನವಿಲ್ಲ ಹೊಂದಿದ ಭಯಭಕ್ತಿಯಿಂದ ಮಂದಗತಿಯೊಳೊಯ್ಯನೋಸರಿಸುತ ಬಪ್ಪ ಚಂದಕೆ ನೃಪರು ಮೆಚ್ಚಿದರು (ಶರತ. ೨೭-೩೭). [ಮಂದಿವಾಳ + —ತನ]

**ಮಂದಿವಾಳಿಕೆ** (ನಾ). ಸೊಕ್ಕು; ಅಹಂಕಾರ : ಏನಿದು— ಈ ನನ್ನ ಮಂದಿವಾಳಿಕೆ ! ಅವಿನಯ ! ಸ್ವಾಮಿದ್ರೋಹ ! (ಪಟ್ಟಿ. ೦೬೩-೦೪).

[ಮಂದಿವಾಳ + — ಇಕೆ]

**ಮಂದಿವಾಳ್ಕೆ** (ನಾ). ಜನರ ಬದುಕು; ಜನಜೀವನ : ಮುಸುಗಿಹುದು . . . ರೂಪವಿಲ್ಲದ ಭೀತಿಭೂತದ ಬೃಹಚ್ಛಾಯೆ ನಮ್ಮ ನಗರದ ಮಂದಿವಾಳ್ಕೆಯಂ (ಶ್ರೀರಾಮಾ. ೩೬೩-೩೩೩). [ಮಂದಿ$_1$ + ಬಾಳ್ಕೆ (< ಬಾಳ್ಕೆ)]

**ಮಂದೀಭೂತ** (ಗು). ೧. ಕುಗ್ಗಿದ; ಕ್ಷೀಣವಾದ : ತನಯುನಾನನಮನವನೀವಲ್ಲಭಂ ಮಂದೀಭೂತಮೋಹರಸಾನುಬಂಧಿಗಳಪ್ಪ ದೃಷ್ಟಿಗಳಿಂ ನೋಡಿ (ಶಂತ್ರಕ. ೪-೦೯ ವ). (ನಾ). ೨. ಕುಗ್ಗಿದುದು; ಕ್ಷೀಣವಾದುದು : ಧ್ವನಿಯು . . . ಸಾಗರದ ಘೋಷದಲ್ಲಿ ಮಂದೀಭೂತವಾಯಿತು (ಕಪಾಕುಂ. ೨೦). [ಸಂ.]

**ಮಂದೀಲ**, ಮಂದಿಲ, ಮಂದೀಲು (ನಾ). ಜರಿಯ ರುಮಾಲು; ಜರತಾರಿ ಪೇಟ : ತನ್ನ ಅಂದವಾಗಿರುವ ಅಂಗಿಗೆ ಒಪ್ಪುವಂಥ ಹೊಸ 'ಮಂದೀಲ' ವನ್ನು ತರಬೇಕಾಗಿ ಬೇರೊಬ್ಬನು ಗುಮಾಸ್ತನನ್ನು ಜಾಗ್ರತೆಯಾಗಿ ಪೇಟೆಗೆ ಅಟ್ಟುತ್ತಿದ್ದನು (೩೦೦ನ. ೩); ಅವನ ಶೇರವಾನ್, ಅವನ ಮಂದೀಲ ಮುಂತಾದವುಗಳನ್ನು ನೋಡಲಾಗಿ ಅವನು ಒಳ್ಳೇ ಮನೆತನಸ್ಥನಾಗಿ ತೋರಿದನು (ತೊಳೆಮು. ೨೮೯). **ಮಂದಿಲ** : ಕುಮಾರನು ತನ್ನ ತಲೆಯ ಮೇಲಿನ ಮಂದಿಲವನ್ನು ತೆಗೆದು ಮಾನಸಿಂಹನ ಚರಣದೆಡೆಯಲ್ಲಿಟ್ಟು ಕೈ ಮೋಡಿಸಿ (ಶಿರೋಮ. ೦೩೭). **ಮಂದೀಲು** : ತಲೆಯ ಮೇಲೆ ಕಲಾಬತ್ತಿನ ಕುಸುರುಗಳುಳ್ಳ ಮೇಘವರ್ಣದ ಮಂದೀಲು (ರಾಜಪೋ. ೨).

[← ಹಿಂ. ಮರಾ. ಮಂದೀಲ್; ಅರ. ಮಿಂದೀಲ್]

**ಮಂದೀಲು** 'ಮಂದೀಲ' ನೋ.

**ಮಂದು**$_1$, ಮಂದ$_1$ (ನಾ). ೧. ಆವರಣವಿಲ್ಲದ ನಿವೇಶ; ಬಯಲು : ಕುಮ್ಮರಿ ಕೋಹು ಮನ್ನು ಮನೆ ಮಾನಿ ಸರುಹು ಕಾಡಾರಂಭ ಮುಂತಾದ ನಿಧಿ ನಿಕ್ಷೇಪ . . . ಸಹಿತವಾಗಿ (ಎಕ. VI, ಕೊಪ್ಪ. ೩೨-೦೭; 1403); ಹಿತ್ತಿಲು ಕೊಪ್ಪ ಮಂದು ಮನೆ ಹಲಸು (ಎಕ. VIII, ತೀರ್ಥಹ. ೦೯೯-೦೭; 1421); ಬಾವಿ ಹಕ್ಕಲು × ಮಂದು ಮರ ಫಲ ಸಹ ಮತ್ತಂ ಹಡುವಲ ಗದ್ದೆ ಚತುಸೀಮೆ (ಕೌಇಇ. IX-ii, ೪೬೩-೩೦; 1472). ೨. ಸಣ್ಣ ಹಳ್ಳಿಗಳ ಗುಂಪು : ಅಯ್ಯಂ ಮನ್ನಿನ ಸಾಸಿವರ್ ಕಂಡು ಕಾಪ್ಪರಕ್ಕೆ (ಪ್ರಮಂ. ೦೯೩೦. ೭೪-೬೯; 1053); ಅಱುವತ್ತು ನಾಡಂ ಸಮೇತ . . . ಅಯ್ದು ಮಂದಿಗೆ ಮೊದಲ ಮಂದೆನಿಸುವ (ಪ್ರಮಂ. ೦೯೩೦, ೭೦-೦೭; 1297).

**ಮಂದ**$_1$ : ೧. ಎಲೆ ಬಸವಣ್ಣಾ ನಾವು ಬಾಹುದಕ್ಕೆ ಮುನ್ನವೆ ಬಂದಹರೆಂದು ಶುಭಸೂಚನೆ ತೋಱುತ್ತೆಂದೆ ಮನೆಯ ಮಿಱು ಮಂದದ ದೈವವುಂಟೆ ಎಂಬುದ ತಿಳಿ ಗೋಹೇಶ್ವರಲಿಂಗದಲ್ಲಿ ಸಂಗನಬಸವಣ್ಣ (ಅವಸಂ. ೨೨೮-೦೦೩೦). 'ಮಂದೆ' ಪರಾ. [ದೇ. II ತಮಿ. ಮನ್ದ ಪ್]

**ಮಂದು**$_2$ 'ಮದ್ದು' ನೋ.

**ಮಂದುಬೋಯ** (ನಾ). ಒಬ್ಬಾತನ ಹೆಸರು : ಮನ್ನುಬೋಯಸ್ಯ ಭಾರದ್ವಾಜಗೋತ್ರ ಕತ್ತಿಶರ್ಮ್ಮಣ (ಇಕ. VII, ೦೬೬-೩೯; 668).

[ಮಂದು$_2$ + ಬೋಯ]

**ಮಂದುರ** (ನಾ). ಕುದುರೆಯ ಲಾಯ; ಅಶ್ವಶಾಲೆ : "ವಾಜಿಶಾಲಾ, ಮಂದುರಾ— ಈ ೨ ಕುದಿರೆಯ ಮಂ(ದಿ)ದುರಂ" (ಶಬ್ದಮ. ೩೦-೦೯೦); ವಲ್ಲಭವಾಜಿಯ ಮಂದುರದಲ್ಲಿಗೆ ಕೇಯೂರದ್ವಿತೀಯನಾಗಿ ಬಂದು (ಕಾದಂಉ. ೦೯೬); ಆ ತಗರ್ ಪರಿದು ಕುದುರೆಯ ಮಂದುರವಂ ಪೊಗುವಂತೆ ಪೊಕ್ಕು ಚರಣಯ ಪುಲ್ಲೊಳ್ ಪೊರಳಲು (ಶಂತಕಂ. ೦೭೯-೦೦); ಎಳಸಿದುವು ತುಹಿನಕರಮಂಡಳಮಂ ತೀವ್ರಾತಪಕ್ಕೆ ಸುಗಿದಿನನ ಹಯಾವಳಿ ಸಂದಿಯಮೋನಿಪುವು ಪಳುಕಿನ ಮಂದುರದೊಳಿರ್ದ ಜಾತ್ಯಶ್ವಂಗಳ್ (ಕುಲ್ಲಕು. ೨-೬೮). [ಸಂ. ಮಂದುರಾ]

**ಮಂದುರಿಗ** (ನಾ). ಕುದುರೆಯ ಲಾಯದ ಅಧಿಕಾರಿ; — ಮೇಲ್ವಿಚಾರಕ : ಮುರರಿಪು ರಾವುರ್ ಸುಬಾದರ್ ಶರಿಶಿಕ್ಷೇರಶ್ವಶಿಕ್ಷಕರ ಜೋದರ ಮಲ್ಲರ ಮಾವಂತರ ಮಂದುರಿಗರ ನೆಗಟ್ಟಾವಾಸವಾರಿಗಳ ಕೇರಿಗಳೊಳ್ (ಜಗಿಪ. ೬-೨೬); ರಾಜವಾಹನನಾದ ಮಂದುರಿಗು ತಾನುಂ ಚಿಂತೆಯಿಂ ಮಂದುರಕ್ಕೆ ವಂದಿರ್ದುದಂ ಬಾಹುಕಂ ಕಂಡು (ನಳಕಂ. ೬೬೮ ವ); ಆ ಚೆನ್ನರಂಗರನ್ನು . . . ಕಯ್ಯ ಲಸಿಗೋಲಿಂದ ಬಡಿದು ಮಂದುರಿಗರಿಂದ ಹೊರಗಣ್ಣೆ ನೂಂಕಿಸಿಬಿಟ್ಟನು (ಹಂಕ್ತ. ೬೬-೯). [ಮಂದುರ + —ಇಗ]

**ಮಂದುರೆ** (ನಾ). = ಮಂದುರ : "ಮಂದುರೆ—ಮಂದುರಾ=ಲಾಯ" (ತತ್ವಕೋ. ೩೪); ತರುಣಾಕೇಸರಿವಿಸರಭ್ರಾಂತಿಯನೊದವಿಸುವುದು ಹಯಸಂತತಿ ನೆಲಸಿರ್ದ ಹೊನ್ನ ಹೊಸ ಮಂದುರೆಯೊಳ್ (ಶಂತ್ರಕ. ೦-೦೯೦).

[ಸಂ. ಮಂದುರಾ]

**ಮಂದುವೂರ್** (ನಾ). ಒಂದು ಊರಿನ ಹೆಸರು : ಶ್ರೀಮತ್ ಶ್ರೀಪುರುಷ ಮಹಾರಾಜರ್ ಪೃಥಿವೀರಾಜ್ಯಂಗೆಯೆ ಮಂದುವೂರಾ ತೊಱುಕೊಳ್ಳಲ್ಲಿ ವಿಟ್ಟಿದ್ದೋರ್ (ಎಕ. X, ಶ್ರೀನಿವಾ. ೨೦-೪; 750). [ಮಂದು$_1$ + ಊರ್]

**ಮಂದೆ** (ನಾ). ೧. ಗುಂಪು; ತಂಡ; ಸಮೂಹ : ಅರುವಿನ ಮೇಲಣ ಎ ವರ್ಣಕ್ಕೆ—ಭಟ್ಟರೆ ಬಂದಿರೇಂ ಮಂದೆಗೆ (ಕವಿರ. ೦೨೪ ಪ್ರಯೋ); ಸಡಿಲಿದ ಮುಡುಗೆಯ ಕುಚದ ಸೆಱಗಿನ ಮುಡಿಯುರ ಮಂದೆಯ [ಪಾಠಾಂ. ಮೇಳದ]ಲಿ ಬಂದಳು ಕೌಸಲಾದೇವಿ (ತೊರಾರ. ೨-೩-೨); ಈತನೆ ಪೂರ್ವದೊಳ್ ಇಂದ್ರನಿಗೆ ಬಲವಾಗಿ ದಾನವರ ಮಂದೆಗಳನೆಲ್ಲವಂ ಕೊಂದು ಮಂದರಗಿರಿಯಂ ಧರಿಸಿದನು (ಕೌಗಂರ. ೦೬೭-೭). ೨. ಹಸು, ಎಮ್ಮೆ ಮೊದಲಾದ ಪ್ರಾಣಿಗಳ ಹಿಂಡು : ಒಂದೇ ಹೊಲದಲ್ಲಿ ಮೇದು ಮಂದೆಯಲ್ಲಿ ನಿಂದು ಸಂದೆಯ ಕಳೆದು ಉದಯದ ಸಂದೇಹವಳಿದು ವೀರಬೀರೇಶ್ವರಲಿಂಗದಲ್ಲಿಗೆ ಹೋಗುತ್ತಿರಬೇಕು (ಸರ್ವಸ. ೬೨-೪೩೩); ದೂಱುಮಾಡುವರೇನೆ ರಂಗಯ್ಯನ . . . ನಂದಗೋಕುಲದಲ್ಲಿ ಮಂದೆಗೋವುಗಳ ಮುಂದೆ ಕೊಳಲನೂದಿ ಚಂದದಿ ಬರುವನ (ಪುರಂದ. ೦-೯೯-೦); ಮಂದೆವಸುಗಳ್ ಪೊಸ ಮಂದೆಯ ಕಂಡ ಪಾಂಗಿನಿಂ ತೊಲಗುವುದೆಮ್ಮ ಬಲ್ಲಡೆಯ ನೆಟ್ಟನೆ ನಿಟ್ಟಿಸಿದಾಗಳ್ (ಶಕಾ. ೩-೯೩). ೩. ಈಗಿನ ಒಂದು ಪಂಚಾಯಿತಿಯ ಘಟಕಕ್ಕೆ ಸೇರುವಷ್ಟು ಗ್ರಾಮಗಳ ಗುಂಪು; ಫಿರ್ಕಾ : ಬೇಲೂರಿಗೆ ಸಲ್ಲುವ ಹೆತ್ತುಳಿಗನಾಡ ಬೆಳ್ಳೂರು ಮಂದೆಯೊಳಗಣ ಹೊಸವೂರಾಯೆಂಬ ಗ್ರಾಮವನು (ಎಕ. XIV, ಕಿರುಮ. ೦೬೪-೦೭; 1668); ಹೆತ್ತಿಗೆನಾಡ ಹೆತ್ತೂರ

ಮುಂದೆ ವಳಿತವಾದ ಕಿರುಕಹಳ್ಳಿ ಗೊಮ್ಮವಳಿನಾಡ ಮರತ್ತೂರ ಮಂದೆ ವಳಿತವಾದ (ಎಕ. V. ಹಾಸನ. ೧೭-೯; 1774). ೪. ದನ, ಕರು ಮುಂತಾದುವುಗಳ ಮೇವಿಗಾಗಿ ಬಿಟ್ಟಿರುವ ಸಾರ್ವಜನಿಕ ಸ್ಥಳ; ಗೋಮಾಳ; ಹುಲ್ಲುಗಾವಲು: ಅಂದು ತುಱುವಂ ಕಾಯಲೆಂದೆಯ್ತಂದು ಬಾಲಕನೊರ್ವನಡವಿಯ ಮಂದೆಯುಳಿ ನಲಿದೊಂದೆ ಮಳಲಲಿಂಗವಂ ಮಾಡಿ . . . ಹೂವನೇಱಿಸಿದ (ಬಸವ. ೩೬-೨೨). 'ಮಂದಿ₁', 'ಮಂದು₁' ಪರಾ.

[ದೇ.॥ ತಮಿ. ಮನ್ರೈ; ತುಳು. ಮಂದೆ: ತೆಲು. ಮಂದ]

**ಮಂದೆಗರುಳ್** (ನಾ). ಗುಂಪಾದ ಕರುಳು; ಬೊಂತೆಯಾದ ಕರುಳು: ಕರುಳ ಬಿಣಿಲು ಕಾಲಂ ತೊಡಂಕಯುಂ ಮಂದೆಗರುಳ್ಗಳಿಂದೆ ದಾಡೆ × × ಯುಂ (ಎಕ. VIII, ಸೊರಬ. ೧೩೯-೦೯; 1173). [ಮಂದೆ + ಕರುಳ್]

**ಮಂದೆವಳ** 'ಮಂದಿವಾಳ' ನೋ.

**ಮಂದೆವಾಳ** 'ಮಂದಿವಾಳ' ನೋ.

**ಮಂದೆವಾಳತನ** 'ಮಂದಿವಾಳತನ' ನೋ.

**ಮಂದೇಹ** (ನಾ). ಸೂರ್ಯೋದಯಕಾಲದಲ್ಲಿ ಸೂರ್ಯನಿಗೆ ಮುತ್ತಿಗೆ ಹಾಕುವರೆಂದು ನಂಬಲಾದ ಒಂದು ರಾಕ್ಷಸವರ್ಗ ಮತ್ತು ಆ ವರ್ಗಕ್ಕೆ ಸೇರಿದವನು: ಮಂದೇಹರ ಶೋಣಾಂಬುವಿನಿಂದಂ ತೊಯ್ದಂಗಮಂ ತೊಳೆಯಲೆಂದೊಲ್ದೆಟ್ಟೆದಿರದಿಟಿವಪೊಲಿಬಿಂದಂ ಕುಂದದೆ ಪಡುಗಡಲೊಳೊಪ್ಪುವಂಬುಜಮಿತ್ರಂ (ಅಜಿತ. ೩-೮೨); ಮಂದೇಹರ ಭಯದಿಂದರವಿಂದಸಖಿಂ ನಿಜಮಯೂಖಮಂ ಪಸರಿಸನೇ (ರಾಜಶೇ. ೧-೩೦); ಲೋಕವಂ ನುಂಗಲ್ಕೆಂದು ಬಂದ ಮಂದೇಹರಾಕ್ಷಸನೆನೆ ಕಟ್ಟಿಲೆದಿಂತ್ತಂ ಪರ್ಬಿದುವು (ರಾಜಶೇ. ೨೨-೨೩). [ಸಂ.]

**ಮಂದೈಸು** 'ಮಂದಯಿಸು' ನೋ.

**ಮಂದೋಷ್ಣ** (ನಾ). ಸಸುಬೆಚ್ಚಗಿರುವುದು: "ಕೋಷ್ಣಂ, ಕವೋಷ್ಣಂ, ಮಂದೋಷ್ಣಂ, ಕದುಷ್ಣಂ-೪ ಸ್ವಲ್ಪ ಬಿಸಿಯ ಪೆಸರುಗಳು" (ಸಿದ್ಧಾಂ. ೩೩). [ಸಂ.]

**ಮಂದ್ಯಾಳ** 'ಮಂದಿವಾಳ' ನೋ.

**ಮಂದ್ಯಾಳತನ** 'ಮಂದಿವಾಳತನ' ನೋ.

**ಮಂದ್ರ** (ಗು). ೧. (ಧ್ವನಿಗೆ ಸಂಬಂಧಿಸಿದಂತೆ) ಗಂಭೀರವಾದ: ಆಳವಾದ: ಶುಭಮುಹೂರ್ತದೊಳ್ ಮಂದ್ರ ಮಧುರ ಮನೋಹರ ಮಂಗಳಪಟಹಗೀತಾಶೀರ್ವಾದಕೋಳಾಹಳರವಂಗಳೆಸೆಯೆ (ಸುಕುಮಾ. ೧೦-೦೦೦ ವ); ಪೇಳ್ದನಾಶೀರ್ವಾದಮಂ, ಮಂದ್ರಗಂಭೀರ ಮಂದುಭಿಧ್ವನಿ ಸಭಾನಿಕ್ಕುಬ್ಧತೆಯ ಮಥಿಸಿ ಪೊಣ್ಮೆ (ಶ್ರೀರಾಮಪ. ೧೩-೩೩೦). (ನಾ). ೨. ತಗ್ಗಾದ ಧ್ವನಿ; ಕೆಳದನಿ: "ಮಂದ್ರಃ . . . ಮೆಲ್ಲಗೆ ನುಡಿಯಲ್ಪಡುವುದು" (ಗುಣಗಾ. ೬೬). ೩. (ಧ್ವನಿಯ)ಗಂಭೀರತೆ: ಗಾಂಭೀರ್ಯ: ಶೋಭಿಸಿತು ಸಂಧ್ಯೆ ತಾನುಮಾರಣ್ಯಾದ್ರಿ ಸಾಂದ್ರ ಸಾಯಂಧ್ವನಿಯ ಮಂದ್ರದಿಂ (ಶ್ರೀರಾಮಪ. ೨೬೦-೬೭೩). ೪. ಒಂದು ಬಗೆಯ ವಾದ್ಯ; ಮೃದಂಗ. ೫. ಒಂದು ಜಾತಿಯ ಆನೆ. ೬. [ಸಂಗೀತ] ಮಂದ್ರ, ಮಧ್ಯ ಮತ್ತು ತಾರ ಎಂಬ ಮೂರು ಬಗೆಯ ಸ್ವರಸ್ಥಾಯಿಗಳಲ್ಲಿ ಒಂದು; ತಗ್ಗಿನ ಸ್ಥಾಯಿ: ಒರ್ವಳ್ . . . ಮಂದ್ರತಾರಗೀತಿಯ ಪದನೊಪ್ಪೆ . . . ವೀಣೆಯಂ ಮಿಡಿದಳ್ (ಚಂದ್ರಪ್ರ. ೯-೦೬೬); ಅಮರ್ದಂ . . . ಕೋಗಿಲೆ ಗಿಳಿ ತುಂಬಿ ಮಹೀಶನ ಕವಿಗಾಗಳ್ ಕ್ರಮದಿತ್ತುವು ತಾರಮಧ್ಯ ಮಂದ್ರಸ್ವರದಿಂ (ತಂತ್ರಕ. ೭-೯೩); ಮಾಯುವಬಲೆಯರು . . . ಯಥೋಚಿತ ತಾರಮಧುರ ಮಂದ್ರಂಗಳಿಂ ಹಾಡಿ ಭೂಪತಿಯ ದುಗುಡವನು ತೊಳೆದರು (ಜೈಮಿ. ೭-೬). ೭. ತಂಬೂರಿ, ವೀಣೆ ಮುಂತಾದ ವಾದ್ಯಗಳಲ್ಲಿ ತಗ್ಗಿನ ಸ್ಥಾಯಿಯಲ್ಲಿ ನುಡಿಯುವ ಒಂದು ತಂತಿ: ಬಲದಿಂದ ಎಡಕ್ಕೆ ನಾಲ್ಕು ತಂತಿಗಳು ಕ್ರಮವಾಗಿ ಪಂಚಮ, ಸಾರಣಿ, ಅನುಸಾರಣಿ ಮತ್ತು ಮಂದ್ರ ಎಂದು ಕರೆಯಲ್ಪಟ್ಟಿವೆ (ಸಂಗೀತಂ. ೦೦೦). [ಸಂ.]

**ಮಂಪರ** 'ಮಪ್ಪ₂' ನೋ.

**ಮಂಪರು** 'ಮಪ್ಪ₂' ನೋ.

**ಮಂರೇಜು** 'ಮಾಮರೇಜು' ನೋ.

**ಮಕ** 'ಮೊಗ' ನೋ.

**ಮಕಮಕ** (ನಾ). (ದೀಪ ಮೊದಲಾದುವು) ಮಂಕಾಗಿರುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ: ಹೊರಗೆ ಮುಚ್ಚಂಜೆ ಮಕಮಕ ಕವಿಯುತ್ತಿತ್ತು (ಶಮಾನ. ೨೦೩). 'ಮಕಮಕಿಸು' ಪರಾ.

**ಮಕಮಕಿಸು** (ಕ್ರಿ). (ಬೆಳಕಿಲ್ಲದೆ) ಮಂಕಾಗು; ಪ್ರಕಾಶಹೀನವಾಗು: ಕತ್ತಲೆಯ ಜವ್ವನಂ ಜಾಱಲೊಡನೆ ಮಿಱುಪ ತಾರಾಳಿ ಮಕಮಕಿಸಿದುವು (ಮಾಣಿಪ್ರ. ೦೩-೯). [ಮಕಮಕ + — ಇಸು₃]

**ಮಕಮಲ್ಲು** 'ಮಖಮಲ್ಲು' ನೋ.

**ಮಕರ₁** (ನಾ). ೧. ಒಂದು ಬಗೆಯ ಜಲಚರಪ್ರಾಣಿ; ಮೊಸಳೆ: "ಮಕರ ಮೊಸಲುಗ್ರಪಾಠೀನಮಕ್ಕುಂ" (ಮಂಗರಾ. ೦೨೦-೭); ಕರಿಮಕರಂಗಳುಚ್ಚಳಿತ ಭಂಗುರತುಂಗತರಂಗಮಾಲೆಯಿಂ ಬಿರರದಸಾಗ್ರದಿಂದಿಱಿದು (ಕಾವ್ಯಸಾ. ೭೬ ಕಾವ್ಯ೪); ಮಕರಂಗಳಂ ಭಯಂಕರ ಕರಿಗಳ್ ತೆಱಂಬೊಳೆವ ಮೀಂಗಳ ನುಳ್ಕುವ ಕೈದುಗಳ್ ನಿರಾಕರಿಸಿರೆ ಪೋರೆದಪ್ಪಿ ಕವಿದತ್ತು ನರಾಧಿಪಸೈನ್ಯಸಾಗರಂ (ಶಂಕರಾ. ೩-೬೮); ಅಬ್ಧಿಪಂ ಮಕರಮಂ . . . ಏಱಿ ನಭಕ್ಕೆ ಸಲ್ವುದುಂ (ಶಗಿರಾ. ೦-೩೬). ೨. ಒಂದು ಬಗೆಯ ಮೀನು: "ಮತ್ಸ್ಯಭೇದಮಂ ಮಕರಮೆಂಬುದು" (ಶಬ್ದಮ. ೦೦೯-೩೮); ಕರಿಮಕರನಕ್ರ . . . ಜಳೂಕವ್ಯಾಳಕೋಳಾಹಳಧ್ವಾನವೆರಸಿ ಜಲನಿಧಿ ಮೆಱೆದುದು (ಜಗನ್ನಾ. ೦-೩೩). ೩. ಕುಬೇರನ ನವನಿಧಿಗಳಲ್ಲಿ ಒಂದು: ಆ ಕುಬೇರನೇ ಪದ್ಮ ಮಹಾಪದ್ಮ ಶಂಖ ಮಕರ . . . ಖರ್ವಂಗಳೆಂಬ ನವನಿಧಿಗೊಡೆಯನಾಗಿ ಈಶ್ವರನಿಗೆ ಸಖನಾಗಿರ್ದಂ (ಶಿವತ. ೦೬೭). ೪. ಮೊಸಳೆಯಾಕಾರದಲ್ಲಿ ನಿಲ್ಲಿಸಿರುವ ಸೇನೆಯ ತುಕಡಿ. ೫. ಮೀನಿನ ಗುರುತುಳ್ಳ ಧ್ವಜ: ಸನೆಯುಂಬಂ ಮಿಗೆ ಕಣ್ಮಲರ್ ಮಕರಮಂ ಕೊಳ್ಳಿಡಧ್ವಜಂ ಪೋಲೆ (ಗದಾಯು. ೦-೬). ೬. [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಒಂದು: ಅಮರಾಸಿಯುನಜ ಹರಿ ಧನುಯುಮಾಸೆಯುಂ ವೃಷಭಕನ್ಯಕಾಮಕರಂ . . . ಆಳ್ಗಂ (ಜಾತಕ. ೧-೨೯); ಶಕವರುಷದ ೧೧೮೩ನೆಯ ಮಕರದಲು ಬ್ರಹಸ್ಪತಿ ದುರ್ಮುಖಿ ಸಂವತ್ಸರದ ಮಾರ್ಗಶಿರ ಸು ೬ ಮಂ (ಸೌಇಇ. IX-i, ೩೯೩-೬; 1261): ಮಕರಕ್ಕೆ ಗುರು ಬರಲು ಮಕರತೋರಣವಕ್ಕು (ಸರ್ವಜ್ಞ. ೦೩೮೯). ೭. [ನಾಟ್ಯ] ಹದಿಮೂರು ಬಗೆಯ ಸಂಯುತಹಸ್ತಗಳಲ್ಲಿ ಒಂದು; P "ಪತಾಕಹಸ್ತಗಳೆರಡರ ಹೆಬ್ಬೆರಳುಗಳನ್ನು ಮೇಲಕ್ಕೆ ನೀಡಿ, ಅಂಗೈಗಳನ್ನು ಕೆಳಮುಖಮಾಡಿ ಕೈಗಳನ್ನು ಒಂದರ ಮೇಲೊಂದು ಇಡುವುದು" (ಅಭಿನಯದ. ೨೯೩ ಗದ್ಯಾನುವಾದ): ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತಹಸ್ತಗಳು ಯಾವುವೆಂದರೆ—೧. ಅಂಜಲಿ. . . ೧೦. ಮಕರ ೧೧. ಗಜದಂತ ೧೨. ಅವಹಿತ್ಥ ಮತ್ತು ೧೩. ವರ್ಧಮಾನ (ಅಭಿನ. ೪೯). [ಸಂ.]

**ಮಕರ₂** (ನಾ). ದೇವತಾಮೂರ್ತಿ, ನವದಂಪತಿಗಳು, ಮೈನೆರೆದ ಹುಡುಗಿ ಮುಂತಾದವರನ್ನು ಕುಳ್ಳಿರಿಸಿ ಆರತಿಯೆತ್ತಲು ರಚಿಸಿದ ಮಂಟಪ: ಮಕರ ಸಹಿತ ಎಲ್ಲಾ ಕಟ್ಟಿ ತಯಾರ ಆಗೀತೆಲ್ಲಾ? (ಏಕಗೀ. ೬೬): ಹಾಡು ಕೇಳುವುದರಲ್ಲಿ ಮೈಮರೆತ ಜನ ಮಕರದ ಕಡೆಗೆ ನೋಡುವಲ್ಲಿ ಅದಾವಾಗಲೋ ಶಾರಕ್ಕ ಬಂದು ಕುಳಿತಿದ್ದಳು (ಏಕಗೀ. ೬೯).

[← ಮರಾ. ಮಖರ್]

**ಮಕರಂದ** (ನಾ). ೧. ಹೂವಿನ ರಸ; ಜೇನು; ಮಧು: "ಮಕರಂದಃ, ಮಧು— ಈ ೨ ಪೂವಿನ ಬಂಡು" (ಶಬ್ದಮ. ೩೦-೩೯); ನಂದನನಾನಾ ಪ್ರಸವಪ್ರಭೂತ ಮಕರಂದಾಮೋದಮುಂ ತಂದು (ಸುಕುಮಾ. ೯-೯೩): ಶರದಭ್ರಮೆಂಬ ಬೆಳ್ದಾವರೆಗಳ ಮಕರಂದರೇಣು ಪವನಾಹತಿಯಿಂ ಪರೆದು (ಜಗ. ೯-೬೨); ಆರ ವದನಾರವಿಂದಮಂ ನೋಡಿ, ಮಕರಂದಮಂ ಹೀರಿ. ಜನನಯನಾಳಿ ತೃಪ್ತಿಯರಿಯವೊ ಅದನ್ನೊಸೆದು ನೋಳ್ಪನ್ನೆಗಂ ಶಾಂತಿಯಿಲ್ಲೆನಗೆ (ಶ್ರೀರಾಮಪ. ೧೩೦-೨೬೪). ೨. [ಸಂಗೀತ] ಅಟ್ಟ ತಾಳದಲ್ಲಿ ಒಂದು ಭೇದ : ನಿಃಶಂಕ. ಶಂಖ, ಶೀಲ. ಚಾರ ಸಂತರ ಮಕರಂದ ಮತ್ತು ವಿಜಯ– ಈ ಆರು ಭೇದಗಳನ್ನು ಅಟ್ಟತಾಳದಲ್ಲಿ ಹೇಳಿದೆ (ಸತುಶ್ರ. ೬೩). [ಸಂ.]

**ಮಕರಂದಪ** (ನಾ). ಹೂವಿನ ರಸವನ್ನು ಕುಡಿಯು ಜಮುಕು ವಂತಪುದು ; ಬಂಡುಣಿ ; ಜೇನುನೊಣ : ಕೃಷ್ಣನ್ನ ಪಾದಕಮಲದಲ್ಲಿ ಮಕರಂದಪನಂತೆ ನಲಿವೋದು ಭ್ರಾಂತೆ (ಶ್ರೀಕೃಪ. ೩೬). [ಸಂ.]

**ಮಕರಂದಿ** (ನಾ). [ಸಂಗೀತ] ಒಂದು ರಾಗದ ಹೆಸರು : ಶ್ರೀರಾಗ . . . ಮಕರಂದಿ ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹರಿಶ್ಚಂ. ೨-೯೦). [ ? ]

**ಮಕರಕಂಠಿ** (ನಾ). ಮೊಸಳೆ ಅಥವಾ ಮೀನಿನ ಆಕಾರದ ಚಿತ್ರಗಳುಳ್ಳ ಒಂದು ಬಗೆಯ ಕೊರಳಿನ ಆಭರಣ : ತನಗೆ ಮಹಾರಾಜರು ಬಹುಮಾನವಾಗಿ ಕೊಟ್ಟ ತೋಡಾ, ಮಕರಕಂಠಿ ಮುಂತಾದ ಒಡವೆಗಳಿಂದ ಆತನನ್ನು ಅಲಂಕರಿಸಿ (ಗಾನಕ. ೬೮). [ಸಂ. ಮಕರಕಂಠೀ]

**ಮಕರಕುಂಡಲ** (ನಾ). ಮೊಸಳೆ ಅಥವಾ ಮೀನಿನ ಆಕಾರದ ಒಂದು ಬಗೆಯ ಕಿವಿಯ ಆಭರಣ : ಮಣಿಮಯಭೂಷಣ ಮಕರ ಕುಂಡಲಯುತ ಮಣಿವ ಭಕ್ತರ ಮಹದ್ಭಾಗ್ಯ (ಶತಸಾಂ. ೬೨-೬೬) ; ಹರಿಹರನಿಗೆ . . . ಬಲಗಿವಿಯಲ್ಲಿ ನಾಗಕುಂಡಲ. ಎಡಗಿವಿಯಲ್ಲಿ ಮಕರ ಕುಂಡಲವೂ ಇವೆ (ಹೊಯ್ಸಳಾ. ೯೬). [ಸಂ.]

**ಮಕರಕೇತನ** (ನಾ). ೧. ಮೀನಿನ ಗುರುತುಳ್ಳ ಧ್ವಜ. ೨. ಮೊಸಳೆ ಮುಂತಾದ ಜಲಚರಗಳ ವಾಸಸ್ಥಾನ ; ಸಮುದ್ರ. ೩. ಮೀನಿನ ಗುರುತುಳ್ಳ ಧ್ವಜವುಳ್ಳವನು ; ಮನ್ಮಥ : ಮಲ್ಲಿಕಾರ್ಜುನನಂ ಜನಿಯಿಸಿದಂ ಭೂವಲ್ಲಭಂ × × × ಗುಣಾವಾಸಂ ಮಕರಕೇತನಂ ಪುಟ್ಟುವ ವೋಲ್ (ಕವಿಕ. ೯೦-೧-೧೯ ; 1082): ಪೆದಱಿದಂ ತನಗಂಜಿ ಮಕರ ಕೇತನಂ (ಹಂಪಕ. ೩-೩) ; ಮಕರಕೇತನರತಿಗಳಲಿ ಹೇಸಿಕೆಗಳಂ ಹುಟ್ಟಿಸುವೆನು (ಬಸವ. ೪೦-೩೦). ೨, ೩ : ಭವನಂತೆ ಗಿರಿಸುತಾನ್ವಿತನೆಂದೆನಿಸಿ ಮನೋ ಭವನಂತೆ ಮಕರಕೇತನನಾಗಿ . . . ಅರ್ಣವಂ ಕಣ್ಗೊಳಿಪುದು (ಶ್ರೀರಾಮ. ೩-೨೬). [ಸಂ.]

**ಮಕರಕೇತು** (ನಾ). ೧. = ಮಕರಕೇತನ ೧. ೨. = ಮಕರಕೇತನ ೩ : ಉಪಹಸಿತ ಸನತ್ಕುಮಾರ ನಳಕೂಬರ ಮಕರಕೇತು ಸೌಂದರ್ಯನುಂ . . . ಅಪ್ಪ ಸ್ವಮಿತ್ರಸಾಗರಮಹೀವಲ್ಲಭಂಗೆ . . . ಅರಸಿಯ ರಾದರ್ (ಶಾಂತಿಪು. ೦-೬೦ ವ) ; ಸಕಲಜಗಜ್ಜನಮಂ ಮಕರಕೇತು ಗೆಲೆ (ಅಜಿತಪು. ೬-೦೦) ; ಮಕರಕೇತುವರವಾತುಲಾಸನೆ ಸಿಂಹಮಧ್ಯೆ ವೃಷಭ ಧ್ವಜಾರಿಯ ಪಟ್ಟದಾನೆ (ಕೃಷ್ಣರಾ. ೬-೫೩). [ಸಂ.]

**ಮಕರಗುಬ್ಬಿ**, ಮಕರಡಿಬ್ಬಿ, ಮಕರದಿಬ್ಬಿ, ಮಕರಬಿಬ್ಬಿ (ನಾ). ೧. (ಹಿಂದೆ ಯುದ್ಧದ ಸಮಯದಲ್ಲಿ ಶತ್ರುಗಳ ಮೇಲೆ ಎಸೆಯುತ್ತಿದ್ದ) ಮೀನಿನಾಕಾರದ ಮೊಳೆಯುಂತಿದ್ದ ಒಂದು ಸ್ಫೋಟಕವಸ್ತು : ಎತ್ತಿದ ಕೇತು ಸುತ್ತಿದ ಬೇವಿನ ದಂಡೆ ಮತ್ತಿಱಿದರ್ದ ದಸಿಗಳು ಬತ್ತರಿ ಸಿರ್ದ ಮಕರಗುಬ್ಬಿಗಳೊಪ್ಪೆ ಪೆತ್ತುದು ಪುರ ಕೌತುಕವ (ಅಭಿಂತ. ೦೮-೯೩). **ಮಕರಡಿಬ್ಬಿ** : ೧. ರಂಗಯ್ಯನ ಬಾಗಿಲ ಕಡೆ ತ್ಯವರನ ಸೇನೆಯವರು ಭಾರಿಯಾಗಿ ಮೊಹರ್ಚೆ ಕಟ್ಟಿ ಫಿರಂಗಿಯನ್ನೂ ಮಕರಡಿಬ್ಬಿಯನ್ನೂ ಹೊರಗಿನಿಂದ ಹೊಡೆಯುತ್ತಾ ಬಂದರು (ತಕ್ರಮ. ೯೬). ೨. ಮಕರಡಿಬ್ಬಿ ಎಂಬ ಸ್ಫೋಟಕವಸ್ತುವನ್ನು ಎಸೆಯಲು ಬಳಸುತ್ತಿದ್ದ ಸಾಧನ : ಮಯ ರಚಿಸಿದನು ಕೋಟಾವಲಯ ಮುಗಿಲಟ್ಟಳೆಯ ಕೊತ್ತಳಗಳ ಮಹಾಮಂಕಣಿಯ ಕಿಮರುವ ಮಕರಡಿಬ್ಬಿಗಳಾ (ಅಸಂಪಾ. ೩-೩-೦೨) ; ಫಿರಂಗಿ ಮಕರಡಿಬ್ಬಿ ಮೊದಲಾದ ಯುದ್ಧಸಾಧನಗಳು (ಕೃಪಾಸ. ೯). **ಮಕರದಿಬ್ಬಿ** : ೧. ಸೂತ್ರದೊಳಟ್ಟಿ ಸೂಸುವ ಮಕರದಿಬ್ಬಿ (ಮೈರಾಚ. ೨-೦೬). ೨. ಬದ್ದರ ಸಾರವಾರಿ ತೊಲೆ ತೂಗುವರ ಬಲೆ ಹಗ್ಗ ಮಕರದಿ[ಪಾಠಾಂ. ಬಿ]ಬ್ಬಿ ಸಲೆ ಮೊಜೆಮುವು ಮಾರ್ಗದೊಳಗೆ (ಸುಂದಾಕಾಂ. ೩೬-೩೬) ; ನೆಗೆವ ಮಕರದಿಬ್ಬ[ ಬ್ಬಿ ] ಹುಲಿಮುಖ ಡೆಂಕಣಿ ವಿಗೆ ಚೋರ ಅಂಬುಗಂಡಿಗಳು ( ಐಸಪ. ೦-೯೦ ); ಮಕರದಿಬ್ಬಿ, ರೇಕವಿಸರ. ಗೋವಿ, ತುಪಾಕಿ ಮೊದಲಾದ ಆಯುಸಯಂತ್ರಜಾಲಗಳಿಂದಲೂ (ಕೃಪಾಸ. ೯೬). **ಮಕರಬಿಬ್ಬಿ** : ೧. ಛಡಾಳಿಸಿರ್ದ ಮಕರಬಿಬ್ಬಿಗಳು ಗಬ್ಬಿಗಳು (ತೇರಸು. ೨-೨೬); ನಡೆಚಪ್ಪರವೇಣಿ ಭದ್ರಿಕೆ ನೆಲಗುಮ್ಮ ಬೆಡಗಿನ ಮಕರಬಿಬ್ಬಿಗಳು (ಹಾಗಳು. ೦೬-೨೦); ರಾಮಡೆಂಕಣಿ ಮಕರಬಿಬ್ಬಿಯನಾಯ ವಲಿ ಹೂಡಿದರು (ಕೂಡ್ಲಸ. ೨೪೦).

[ಮಕರ$_1$ + ಗುಬ್ಬಿ$_?$. / ತೆಲು. ಮಕರಬಿಬ್ಬಿ = ಮಕರತೋರಣ]

**ಮಕರಟೆಕ್ಕೆ** (ನಾ). ಮೀನಿನ ಚಿತ್ರವುಳ್ಳ ಬಾವುಟ; ಮೀನಧ್ವಜ; P ಮೈಸೂರಿನ ರಾಜರ ಮೆರವಣಿಗೆ. ದರ್ಬಾರು ಮುಂತಾದ ಸಂದರ್ಭ ಗಳಲ್ಲಿ ಸೇವಕರು ಎತ್ತಿ ಹಿಡಿಯುತ್ತಿದ್ದ ಬಿರುದಿನ ಸಂಕೇತಗಳಲ್ಲಿ ಒಂದು : ಬಿರುದಿನ ಪಾಳು ಡಮಾಮಿ ಮಕರಟೆಕ್ಕೆಯುರುತರ ರಾಜಚಿಹ್ನಗಳ ಪರಿಯ ತೋಱುತ (ಕಂಪಂ. ೩-೩೬); ಗರುಡಧ್ವಜ. ಮಕರಟೆಕ್ಕೆ . . . ವಿಟುಂಪಾವಡೆ ಮುಂತಾದ ಬಿರುದುಗಳಿಂದಲೂ ( ಮಹಾವಂ. I. ೩೯ ); ಸಾಲುಗ್ಗಡಿ, ಮಕರಟೆಕ್ಕೆ, ಸತ್ತಿಗೆ, ಸೀಗುರಿ . . . ಕಂಠೀರವಾದಿ ಬಿರುದುಗಳು ಮುಂತಾದುವನ್ನು ಹಿಡಿದು ಊಳಿಗಗೂಡುತ್ತ (ಪಟ್ಟಾ. ೩೦-೬). [ ಮಕರ$_1$ + ಟೆಕ್ಕೆ$_1$ (< ಟೆಕ್ಕೆಯ) ]

**ಮಕರಡಿಬ್ಬಿ** ' ಮಕರಗುಬ್ಬಿ ' ನೋ.

**ಮಕರತೋರಣ** (ನಾ). ೧. ಮೀನು, ಮೊಸಳೆ ಮುಂತಾದ ಆಕೃತಿ ಗಳುಳ್ಳ ಒಂದು ಬಗೆಯ ತೋರಣ ; P ದೇವಾಲಯದ ಶಿಲ್ಪಗಳಲ್ಲಿ ಅನೇಕ ಕಡೆಗಳಲ್ಲಿ ಇದನ್ನು ಕಡೆದಿರುತ್ತಾರೆ. ರಾಜರು ಮುಂತಾದವರ ಮೆರವಣಿಗೆಗಳಲ್ಲಿಯೂ ದೇವರ ಉತ್ಸವಾದಿಗಳಲ್ಲಿಯೂ ಇಂತಹ ತೋರಣಗಳನ್ನು ಉದ್ದಕ್ಕೂ ಹಿಡಿದು ನಡೆಯುವ ವಾಡಿಕೆ ಯುಂಟು : ವರುಣರೂಪಾನುರೂಪಮುಂ ಚಾಮೀಕರಮಯಮುಮಪ್ಪ ಮಕರತೋರಣಮಂ ನೋಡುತ್ತುಂ (ಶಾಂತಿಪು. ೩-೦೯ ವ) ; ಉತ್ತಂಭಿತಮಾನ ಸ್ತಂಭ ಮಕರತೋರಣವಿರಚಿತಾಂಗಳಂ (ಕೃಪ್ಪ. ೨-೬೩ ವ); ದೇವಾಲಯದ . . . ಗೂಡುಗಳಿಗೆ ಪುಷ್ಪ ಅಥವಾ ಮಕರತೋರಣಗಳಿವೆ. ಗಂಧರ್ವ, ಯಾಳಿ, ಮುಕ್ಕೊಡೆ, ಮಕರ, ಯಕ್ಷರು ಈ ತೋರಣಗಳಲ್ಲಿರುವರು (ಹೊಯ್ಸಳಾ. ೯೯). ೨. (ಅಲಂ) ಶುಭ ; ಮಂಗಳ : ಮಕರಕ್ಕೆ ಗುರು ಬರಲು ಮಕರತೋರಣವಕ್ಕು (ಸರ್ವಜ್ಞ. ೦೩೯೯). [ಸಂ.]

**ಮಕರದಿಬ್ಬಿ** 'ಮಕರಗುಬ್ಬಿ' ನೋ.

**ಮಕರಧ್ವಜ** (ನಾ). ೧. = ಮಕರಕೇತನ ೧. ೨. = ಮಕರಕೇತನ ೩ : "ಪ್ರದ್ಯುಮ್ನಃ. ಮಕರಧ್ವಜಃ . . . ಮನೋಭವಃ — ಈ ೨೮ ಕಾಮ (ದೇವ)ನ ಪೆಸರ್" (ಶಬ್ದಮ. ೭-೩೩) ; ಓರ್ವಳುತ್ತುಂಗಸೌಧೋತ್ಸಂಗ ದೊಳ್ ನಿಂದು ಮನುವಂಶಧ್ವಜನಂ ಮಕರಧ್ವಜನೆಂದು ಬಗೆದು (ಅಂಪು. ೦೦-೦೬ ವ); ಮಕರಧ್ವಜನಂತೆ ಸದಾಸನ್ನವಿಗ್ರಹನುಂ . . . ಪುರುಷೋತ್ತಮ ಪ್ರತಿನಿಧಿಯುಮೆನಿಸಿದ ಮಹಾನುಭಾವಂ ಶಾರಾಪೀಡನಿರ್ಪಂ

(ಕಾದಂಪೂ. ೬೦೭). ೩. ಮೊಸಳೆಯ ಆಕಾರದಲ್ಲಿ ನಿಲ್ಲಿಸಿದ ಸೈನ್ಯ.—ಪಡೆ. [ಸಂ.]

**ಮಕರಪತಾಕ** (ನಾ). ೧. = ಮಕರಕೇತನ ೧. ೨. = ಮಕರಕೇತನ ೩ : ಮಕರಪತಾಕನಾಪೂರ್ವ ವನಿತಾಕೃತಿವೆತ್ತುದೊ . . . ಎನೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ (ರಕಳು. ೬-೪೦). [ಸಂ. ಮಕರಪತಾಕಾ]

**ಮಕರಪತ್ರ** (ನಾ). ಸ್ತ್ರೀಯರು ಅಲಂಕಾರಕ್ಕಾಗಿ ಕೆನ್ನೆ, ಗಲ್ಲ, ಸ್ತನ ಮುಂತಾದ ಅಂಗಾಂಗಗಳ ಮೇಲೆ ಪರಿಮಳಯುಕ್ತವಾದ ಬಣ್ಣಬಣ್ಣದ ಪುಡಿ ಮುಂತಾದುವುಗಳಿಂದ ಮೀನು, ಮೊಸಳೆ ಬಳ್ಳಿ ಮೊದಲಾದ ಆಕಾರಗಳಲ್ಲಿ ಬರೆಯುಕೊಳ್ಳುತ್ತಿದ್ದ ಚಿತ್ತಾರ; ಪತ್ರಭಂಗ : ಮಸುಳ್ದ ಮಕರಪತ್ರದ ಕದಪು . . . ಸೊಪ್ಪಾದಧರ ಮೊಪ್ಪಿತಾ ಕಾಂತೆಗೆ (ಶ್ರೀಬಾ. ೧೧-೨೫). 'ಮಕರಿಕಾಪತ್ರ', 'ಮಕರಿಕೆ' ಪರಾ. [ಸಂ.]

**ಮಕರಬಿಬ್ಬ** 'ಮಕರಗಬ್ಬಿ' ನೋ.

**ಮಕರಭೋಜನ** (ನಾ). ೧. ತಾನು ಮಾಡಿದ ಪಾಪದ ಫಲವಾಗಿ ತಿನ್ನುವ ಆಹಾರವು ಹುಳುಗಳಾಗಿ ಮಾರ್ಪಡುವುದು. ೨. ತಿನ್ನುವ ಆಹಾರವು ಹುಳುಗಳಾಗಿ ಮಾರ್ಪಡುವ ಪಾಪಿಷ್ಠವ್ಯಕ್ತಿ : ಶಿವ ಧರ್ಮದ ಕೆಡಿಸಿದವನು ಅಧರ್ಮಕ್ಕಳಿವನು ಕೂಡಲಸಂಗಮದೇವ ಸಾಕ್ಷಿಯಾಗಿ ಮಕರಭೋಜನವಾಗನೆ ವಿಚಾರಕ್ಕರಾಯನು (ಬಸವ. ೬೨೫). [ಮಕರ್ + ಭೋಜನ]

**ಮಕರಮಾಸ** (ನಾ). ಸೌರಮಾನದ ಹತ್ತನೆಯ ತಿಂಗಳು : [ಸವಿಲೇಸ್ವರ] ದೇವರಿಗೆ ಮನುಮತಸಂವತ್ಸರದ ಮಕರಮಾಸ ೧೮ನೆಯ ಸೋಮವಾರ ದಂದು . . . ಧ(ಂ)ಮ್ಮ್ರ (ಸೌಇಇ. IX-i. ೩೯೯-೯ ; 1170). [ಸಂ.]

**ಮಕರಮುದ್ರೆ** (ನಾ). ಮೀನು ಅಥವಾ ಮೊಸಳೆಯ ಆಕಾರವುಳ್ಳ ಒಂದು ಬಗೆಯ ಆಭರಣ : ಭುಜಕೀರ್ತಿ ಮರಕತಕಂಕಣಂ ತೋಳ ಭಾಪ್ಪುರಿ ಮಕರಮುದ್ರೆಗಳನೂ ಲೀಲೆಯಿಂದಳವಡಿಸಿ (ಶಬರೀ. ೫-೨೬). [ಸಂ. ಮಕರಮುದ್ರಾ]

**ಮಕರರಾಶಿ** (ನಾ). [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಒಂದು : ಮಕರರಾಶಿಯು ಅಂಗಾರಕನಿಗೆ ಕುಂಭರಾಶಿಯಂತೆಯೇ ಸಮಶತ್ರುಕ್ಷೇತ್ರ ವಾಗಿದ್ದರೂ . . . ಶುಭಫಲವೇ ಉಕ್ತವಾಗಿದೆ (ಜಾತಕ. ೧೬-೨೦ ೬೯೪). [ಸಂ.]

**ಮಕರವೃತ್ತ** (ನಾ). [ಭೂಗೋಳ] ಭೂಮಿಯ ಮೇಲೆ ಸಮಭಾಜಕ ವೃತ್ತಕ್ಕೆ ಸಮಾನಾಂತರವಾಗಿ ದಕ್ಷಿಣದಲ್ಲಿ ಇಪ್ಪತ್ತುಮೂರೂವರೆ ಅಕ್ಷಾಂಶಗಳ ಅಂತರದಲ್ಲಿ ಎಳೆದಿರುವಂತೆ ಭಾವಿಸಿರುವ ರೇಖೆ : ಮಕರಸಂಕ್ರಾಂತಿವೃತ್ತ : ವಿಷುವವೃತ್ತದ ದಕ್ಷಿಣಕ್ಕೂ ಉತ್ತರಕ್ಕೂ ೨೩½ ಅಂಶಗಳ ಅಂತರದಲ್ಲಿ ಒಂದೊಂದು ವರ್ತುಲಗಳನ್ನು ಕಲ್ಪಿಸುವರು ; ಅವುಗಳಿಗೆ ಯಥಾಕ್ರಮವಾಗಿ ಮಕರವೃತ್ತವೆಂತಲೂ ಕರ್ಕವೃತ್ತವೆಂತಲೂ ಹೆಸರುಗಳಿವೆ (ಮುಂಖಮು. ೬-೬೦). 'ಕರ್ಕವೃತ್ತ' ಪರಾ. [ಸಂ.]

**ಮಕರವ್ಯೂಹ** (ನಾ). ಮೊಸಳೆಯ ಆಕಾರದಲ್ಲಿ ಸೈನ್ಯವನ್ನು ನಿಲ್ಲಿಸುವ ಒಂದು ರಚನೆ : ಮಕರವ್ಯೂಹಮನೊಡ್ಡಿ ನಿಂದನಸುರಂ (ಅಪೂ. ೧೩-೯೪); ಅರಸನನುಜರು ಸಹಿತ ಕೃಷ್ಣನ ಬಿರಳ ಸನ್ನೆಯೊಳೈದೆ ಬಿಡೆ ಮೋಹರಿಸಿ ನಿಂದುದು ಮುರಿವ ಮಕರವ್ಯೂಹ ರಚನೆಯಲಿ (ಕುವ್ಯಾದ್ರೋ. ೪-೨೨). 'ಗರುಡವ್ಯೂಹ', 'ಪದ್ಮವ್ಯೂಹ' ಪರಾ. [ಸಂ.]

**ಮಕರಶೃಂಗಾರ** (ನಾ). ಮಕರಿಕಾಪತ್ರದ ಶೃಂಗಾರ,—ಅಲಂಕಾರ (?): ಭಿನ್ನರುಚಿಗಳಿಗೆಜಗದೆ ಕಾಮನ ಬೆಂಬಳಿವಿಡಿಯದೆ ಮಕರಶೃಂಗಾರವ ಮಾಡದೆ ಅಂಗನೆಯರ ಸಂಗವ ತೊರೆದೊಡೆ ಶೀಲವಂತರೆಂಬೆನು (ಬಸಗೀ. ೫-೦೯೯). [ಸಂ.]

**ಮಕರಸಂಕ್ರಮಣ** (ನಾ). ಸೂರ್ಯನು ಮಕರರಾಶಿಯನ್ನು ಪ್ರವೇಶಿಸುವ ದಿನ ಮತ್ತು ಅಂದು ಆಚರಿಸುವ ಹಬ್ಬ; ಎಳ್ಳು ಬೀರುವ ಹಬ್ಬ; ಪೊಂಗಲ್ : ಜನವರಿ ತಿಂಗಳ ೧೪ನೆಯ ದಿನಾಂಕಕ್ಕೆ ಪ್ರಾಯಶಃ ಮಕರಸಂಕ್ರಮಣ ಹಬ್ಬ ಬರುತ್ತದೆ (ಕಾಹಬ್ಬ. ೧೬೬). [ಸಂ.]

**ಮಕರಸಂಕ್ರಾಂತಿ** (ನಾ). = ಮಕರಸಂಕ್ರಮಣ : ಮಕರಸಂಕ್ರಾಂತಿಯಂದು ಎಳ್ಳುಬೀರುವ ವಾಡಿಕೆ ಇದೆ (ರೂಢಿ). [ಸಂ.]

**ಮಕರಸಂಕ್ರಾಂತಿವೃತ್ತ** (ನಾ). = ಮಕರವೃತ್ತ : ವಿಷುವದ್ರೇಖೆಗೆ . . . ದಕ್ಷಿಣಕ್ಕೆ ಇಪ್ಪತ್ತು ಮೂರೂವರೆ ಅಕ್ಷಾಂಶಭಾಗಗಳದೂರದಲ್ಲಿ ಮಕರ ಸಂಕ್ರಾಂತಿವೃತ್ತವೂ (Tropic of Capricorn) ಇವೆ (ಭೂಗೋಳ. ೬); ಡಿಸೆಂಬರು ೨೨ನೆ ತಾರೀಖಿನ ದಿವಸ . . . ಸೂರ್ಯಕಿರಣ ನೇರವಾಗಿ ಮಕರ ಸಂಕ್ರಾಂತಿವೃತ್ತದ ಮೇಲೆ ಬೀಳುತ್ತವೆ (ಖಗೋಳ. ೦೩). 'ಕರ್ಕಾಟಕ ಸಂಕ್ರಾಂತಿವೃತ್ತ' ಪರಾ. [ಸಂ.]

**ಮಕರಾಂಕ** (ನಾ). = ಮಕರಕೇತನ ೩ : ಮಕರಾಂಕದ್ವಿಪಮದಪಟ್ಟಿಕೆ ಯೆನಿಸಿ ಕಪೋಲಮೂಲಮಂ ಮುಟ್ಟಿದುವಾ ಚಕಿತಾಕ್ಷಿಯ ಹರಿನೀಲಾಳಕಂಗಳ್ (ಸಂಗಾಪು. ೩-೯೪) ; ಮಕರಾಂಕಂ ಬಂದೊಡಂ ಮೆಚ್ಚದ ನಿರುಪಮಸೌಭಾಗ್ಯಸಂಪನ್ನೆಯಂ ಬಾಲಿಕೆ ನಿನ್ನಂ ಕಂಡು ಕಣ್ಗೊಲಿದಿತ್ತಿರ್ದು ಮದನಾಸ್ತ್ರಾಗ್ನಿಸಂತಾಪದಿಂ × × × ನೀರ್ವನೆಯೊಳೊಡಲನಟ್ಟ್ಯಾಡು ವೋಲ್ ಮಾಡಿದ್ಯ (ರಕಳು. ೬-೨೬೯). [ಸಂ.]

**ಮಕರಾಕರ** (ನಾ). ಮೊಸಳೆ ಮುಂತಾದ ಜಲಚರಗಳ ವಾಸಸ್ಥಾನ : ಸಮುದ್ರ : ಹರಿದ ರಥಪದಧೂಳಿ ಮಕರಾಕರವ ಕುಡಿದುದು (ಕುವ್ಯಾಭೀ. ೪-೯೪). [ಸಂ.]

**ಮಕರಾಯನ** (ನಾ). ಸೂರ್ಯನು ಮಕರಸಂಕ್ರಾಂತಿವೃತ್ತದ ಮೇಲೆ ಬರುವ ಕಾಲ : ಡಿಸೆಂಬರು ೨೨ನೆ ತಾರೀಖಿನ ದಿವಸ . . . ಸೂರ್ಯ ಕಿರಣ ನೇರವಾಗಿ ಮಕರಸಂಕ್ರಾಂತಿವೃತ್ತದ ಮೇಲೆ ಬೀಳುತ್ತದೆ. ಇದನ್ನು ಮಕರಾಯನ (Inter solstice) ಎಂದು ಹೇಳುತ್ತೇವೆ (ಖಗೋಳ. ೦೩). 'ಕಟಕಾಯನ' ಪರಾ. [ಸಂ.]

**ಮಕರಿ** (ನಾ). ೧. ಹೆಣ್ಣುಮೊಸಳೆ. ೨. = ಮಕರಪತ್ರ. [ಸಂ. ಮಕರೀ]

**ಮಕರಿಕಾಪತ್ರ** (ನಾ). = ಮಕರಪತ್ರ : ಅಲಕಂ ಮಂದಾರಕೂಸ್ಮಂ ಕದಪು ಮಕರಿಕಾಪತ್ರಶೂನ್ಯಂ (ಅಪು. ೩-೧೩); ಆಸ್ಥಾನಮಂಟಪದಿಂ ಮಹೀಪಾಲನೆಬ್ಬುದುಮನೇಕಾಂಗನಮಕರಿಕಾಪತ್ರಾದಿಗಳಿಂ ಮಿಂಚು ಪೊಣ್ಮೆ ತಮ್ಮೊಳ್ ಪಳಂಚಲೆಯೆಯುಂ (ಕಾದಂಪೂ. ೬೬). [ಸಂ.]

**ಮಕರಿಕೆ** (ನಾ). = ಮಕರಪತ್ರ : "ಮೊಲೆ ಗಲ್ಲ ತೋಳ್ ಕೊರಲ್ಲಿ ತೀವಿ ಸಜೀವಿಯಿಂ ಬರೆದ ಮಸೆ ಲತೆಗಳು ಪತ್ರವಲ್ಲಿ ಮಕರಿಕೆಯೆನಿಸ್ಕುಂ" (ಮುಂಗಾರು. ೦೦೦-೨೫) ; ಶ್ರೀವಿಜಯಾರ್ಧಾಚಳಮಿಕರಾವಳಿಮಣಿಮಕುಟ ಮಕರಿಕಾನಿಕಷಣಲೇಖಾವಿಳಸಿತಪದ ಕಮಲಂ (ಆದಿಪು. ೨-೧) : ಕಿವಿದೊಡವಿನ ಮುಕ್ತಾತತಿ ನಕ್ಷತ್ರಗಣಮೆನಿಸೆ ಕಜ್ಜೆಯ ಮಕರಿಕೆಯೆನೆ ತದ್ಯುವತಿಯ ನಯನೋತ್ಪಳದಂದವನೀಕ್ಷಿಸಲ್ಕೆದಿದಿಂದುವೆನೆ ಕದಪೆಸೆಗುಂ (ರಾಜಶೇ. ೬-೫೫). [ಸಂ. ಮಕರಿಕಾ]

**ಮಕರಿಣಿ** (ನಾ). [ಸಂಗೀತ] ಆಲಾಪನೆಯಲ್ಲಿ ಒಂದು ವಿಧ ; p ಇದು ರಾಗಾಲಾಪನೆಯನ್ನು ಮುಗಿಸುವ ಖಂಡ. ಜೀವಸ್ವರದ ಸುತ್ತ ಹೆಣೆದ, ಸ್ಥಾಯಿಸ್ವರದಲ್ಲಿ ಮುಗಿಯುವ ಮೂರು ಆಲಾಪಾಂಶಗಳ ನಂತರ, ಅಂತಹುದೇ ಅಲ್ಪಸಂಚಾರವನ್ನು ಸ್ಥಾಯಿಯ ವ್ಯಾಪ್ತಿಯಲ್ಲಿ ನಡೆಸಿ ಮಧ್ಯಷಡ್ಜದಲ್ಲಿ ನ್ಯಾಸಮಾಡಿ ರಾಗಾಲಾಪನೆಯನ್ನು ಮುಕ್ತಾಯಂಮಾಡುವ ಕ್ರಮಕ್ಕೆ 'ಮಕರಿಣಿ' ಎಂದು ಹೆಸರು. ಇದಕ್ಕೆ 'ವರ್ತನೀ' ಎಂದೂ ಹೆಸರುಂಟು : ಪ್ರತಿಸ್ಥಾಯಿಯಲ್ಲೂ

ಜೀವಸ್ವರ ಹಿಡಿದು . . . ಮಂದ್ರಸ್ಥಾಯಿಯಲ್ಲಿ ಆಲಾಪನೆ ಮುಕ್ತಾಯ ಮಾಡುವುದೂ ಒಂದು ಕ್ರಮ. ಈ ಕ್ರಮ 'ಮಕರಿಣೀ' ಎಂದು ಹೆಸರುಗೊಂಡಿದೆ (ಸಂಗೀತ. ೨೯); ಸ್ಥಾಯಿಯಲ್ಲಿರುವ ಅದೇ ಯಾಡಾಪನ್ನೇ ಲೋಕದಲ್ಲಿ ಮಕರಿಣಿಯೆಂಬ ಸಂಜ್ಞೆಯಿಂದ ಕರೆಯುತ್ತಾರೆ (ಚತುಶ್ರ. ೬೯).

[ಸಂ. ಮಕರಿಣೀ]

**ಮಕರಿಸು** (ಕ್ರಿ). ೧. ಕವಿ ; ಆವರಿಸು : ಮಕರಿಸದೆ ಮಾಯಾಪ್ರಪಂಚದೊಳಬಿಳನಿಷ್ಟಾಚಾರಶೀಲಪ್ರಕಟಿತರ್ಗಹಿತಮನೀಮಂ (ಸದ್ಗುರು. ೦-೦೬) ; ಎಣಿಕೆ ಮನವನು ಮಕರಿಸುತಿದೆ (ತೊರವ. ೩-೦೦-೩); ವಿಸರಿಸುವ ಮನದೊಳಗೆ ದುಗುಡವ ಮಕರಿಸಿದುದ ಕಾಣುತಬುಜಾಂಬಕನು ನಸುನಗುತುಸುರದಿರ್ದನು ಗೂಢಭಾವದಲಿ (ಶಿಶಾಗ. ೦೦-೬೦-೭). ೨. ಹೆಚ್ಚು ; ಅಧಿಕವಾಗು ; ವರ್ಧಿಸು : ನಾಟಿ ನಲಿದುದು ಚಿತ್ತವೀ ನಟನಾಟಕನ ಸಿಕ್ಕಿಸುವ ಬಗೆಯಲಿ ಮಾಟ ಮಕರಿಸಿ ಕಾಣಲಾದುದು ಮತ್ತೆ ಮಾಯೆಯಲಿ (ಕ್ರಕುಲೀ. ೭-೩೭): ಅಕುಟಿಲೆ ಕೇಳ್ ಪ್ರವರ್ತಕನಿಷೇಧಂ ನಿವರ್ತಕವೆ ವಿಹಿತವಿಂತುಭಯಮಾಗಿ ಮಕರಿಸುವೀ ಕರ್ಮವಳಿದು ನಿಂದಾತ್ಮಣವಕಲಂಕಪರಮಾತ್ಮಕನು ತಾನೆ (ಶರಪೋ. ೦-೦೬-೦೦) ; ದಾಸಿಮಯ್ಯನ ಮನದಲ್ಲಿ ಮಮಕಾರ ಮಕರಿಸಲು ಕಾರಣವೇನೆಂದು ಹೊಳೆಯಿತು (ಶರಶ. ೩೭). ೩. ಗಾತ್ರವು ಹೆಚ್ಚಾಗು,– ದೊಡ್ಡದಾಗು: ಕಲಶೋದಕದಲಿಟ್ಟನು ಶಫರಿಯನು ತಂದನು ನಿಜಾಶ್ರಮಕೆ ಮಕರಿಸಿದುದನೊಂದುರಾತ್ರಿಗೆ ಮಕರಿಕಲಶೋದಕವನಸ್ಯಾಸಕತಿಯಲಿ ಸತ್ಯವ್ರತಂಗಿಂತೆಂದುದಳವಳಿದು (ಶಿಶಾಗ. ೬-೨೩-೦೨).೪. ಹೊಳೆ; ಪ್ರಕಾಶಿಸು: ಚಕಚಕಿಸುತ ರನ್ನಗನ್ನಡಿಯಲ್ಲಪ್ಲಿ ಮಕರಿಸೆ ಸಾಲುಸಾಲಾಗಿ (ಭರತ. ೦೨-೦೬).

[ಮಕರ₁ + – ಇಸು₃]

**ಮಕರೇಶ** (ನಾ). ಮೊಸಳೆಯನ್ನು ವಾಹನವನ್ನಾಗಿ ಉಳ್ಳವನು ; ವರುಣ : ಮಕರೇಶ ಚಾರುಚಾಮರಮರುತಂ . . . ಇದೆಂದು ವಿತರ್ಕಿಪನ್ನ ಮಸ್ಫುರಿತ ದವಾನಳಂ ಸುಟ್ಟುದುದೊಯ್ಯನೆ ಪಶ್ಚಿಮದಿಗ್ವಧಾನಿಳಂ (ಜಗಿ. ೯-೨).

[ಸಂ.]

**ಮಕಾಂ** ' ಮುಕ್ಕಾಂ ' ನೋ.

**ಮಕಾಡಿ** ' ಮೊಗ ' ಪರಾ.

**ಮಕಾಡು** ' ಮೊಗವಡ ' ನೋ.

**ಮಕಾಡೆ** ' ಮೊಗ ' ಪರಾ.

**ಮಕಾನು** (ನಾ). ವಾಸಮಾಡುವ ಸ್ಥಳ; ಮನೆ ; ನಿವಾಸ : ಹೆಳವರು, ಮೂಕರು ಮುಂತಾದ ಜನರಿಗೆಲ್ಲಾ ಜೀವನವನ್ನು ಕಲ್ಪಿಸಿ, ಮಕಾನುಗಳಿಗೂ ಕೆಲವು ನಗದನ್ನೂ ಭೂಮಿಯನ್ನೂ ಕೊಟ್ಟು . . . ಸುಖವಾಗಿರುವಂತೆ ಆಳಿದರು (ಮಹಾಕಂ. I, ೦೯೦).

[←ಅರ. ಪಾರ. ಹಿಂ. ಮಕಾನ್ ; ಮರಾ. ಮಕಾಣ್]

**ಮಕಾಬಲಿ** 'ಮೊಕಾಬಿಲೆ' ನೋ.

**ಮಕಾರ** (ನಾ). ೧. ಕನ್ನಡವರ್ಣಮಾಲೆಯ ನಲವತ್ತೈದನೆಯ ಅಕ್ಷರ: ಮೇಲಣ ಹತ್ತಕ್ಕೆ ಮಕಾರಂ–ಬ್ರಹ್ಮ–ಬೊಮ್ಮ (ಶಮದ. ೨೬೯ ಪ್ರಯೋ); ವ್ಯಂಜನಗಳಲ್ಲಿ ಕಕಾರದಿಂದ ಮಕಾರದವರೆಗೆ ಇರುವ ಇಪ್ಪತ್ತೈದನ್ನು ನೋಡಿ (ಶುಕ್ಲಪು. ೦೩). ೨. ಮದ್ಯ, ಮತ್ಸ್ಯ, ಮಾಂಸ, ಮೈಥುನ ಮತ್ತು ಮುದ್ರೆಗಳೆಂಬ ಮಕಾರದಿಂದ ಪ್ರಾರಂಭವಾಗುವ ಐದು ಬಗೆಯ ತಾಂತ್ರಿಕ ಆಚರಣೆಗಳಲ್ಲಿ ಪ್ರತಿಯೊಂದು : 'ಪಂಚಮಕಾರ' ಪರಾ.

[ಸಂ.]

**ಮಕಾಳ, ಮಖಾಳ, ಮೊಖಾಳ** (ನಾ). ೧. ಮಸುಕು ; ಮಂಕು ; ಕಾಂತಿಹೀನತೆ : ತರಲನ ಮಕಾಳವಾದ ಸ್ಮೃತಿ ಸಜೀವಮೂರ್ತಿಯಾಗಿ ಹೈಮವತಿಯ ಹೃದಯದ ಗದ್ದುಗೆಯನ್ನೇರಿ ಕುಳಿತಿತು! (ಎರಕ. ೦೦೯). (ಗು). ೨. ಮಂಕಾದ ; ಕಾಂತಿಹೀನವಾದ : "ಮಕಾಳ-ಮಬ್ಬು, ಸ್ವಚ್ಛವಲ್ಲದ ; ಕಳೆಗುಂದಿದ ; ಬಾಡಿದ" (ಜಾನಕೋ. ೨೭). ಮಖಾಳ: ೧. ನಗರದಲ್ಲಿ ಹೊಳೆಯುವ ವಿದ್ಯುದ್ದೀಪದ ಹಾಗೆ ಹೊಳೆವ ಜೀವನದ ಮುಂದೆ ಹಳ್ಳಿಯ ಹಣತೆ 'ಮಖಾಳ'ವಾಗಿ ಕಂಡಿತು (ಅರಿಯ. ೦೦೯) ; ಹೆಬ್ಬೆರಳಿನ ಗುರುತುಗಳು ಮಖಾಳವಾಗಿ ತೋರತೊಡಗಿದ್ದವು (ಗಂಪವಾಯ. ೨೦೯). ಮೊಖಾಳ : ೨. ನಾವು ಕಂಡ ತಿಂದು ಬದುಕುತ್ತಿರಲಾಗಿ ಈ ಮೊಖಾಳ ಮೋರೆಗಳು . . . ಕಾಳುತಿಂದು ಬದುಕುತ್ತವೆ (ಮುಂಬಾಯ. ೬-೨೬೬).

[ ? ]

**ಮಕಿ** 'ಮಕ್ಕಿ₁' ನೋ.

**ಮಕುಟ₁** 'ಮಗುಟ₁' ನೋ.

**ಮಕುಟ₂** (ನಾ). ೧. ತಲೆಯ ಮೇಲೆ ಧರಿಸಿಕೊಳ್ಳುವ ರತ್ನಖಚಿತವಾದ ಭೂಷಣ; ಕಿರೀಟ; ಮುಡಿ: "ಕಿರೀಟಂ, ಉಷ್ಣೀಷಂ, ಕೋಟೀರಂ, ಮುಕುಟಂ ಈ__ಳ ಮಕುಟಂ" (ಹಲಾಯು. ೯೩-೯೦೦): ಆತಂ ನಿಜಭುಜವಿಜಯಖ್ಯಾತಿಯನಾಳ್ದಾಳ್ದನಧಿಕಬಲನವನಿಪತಿವ್ರಾತಮಣಿಮಕುಟ ಕಿರಣದ್ಯೋತಿತಪಾದಂ ಸಪಾದಲಕ್ಷಕ್ಷಿತಿಯಂ (ಶಂಶಾ. ೦-೧೬); ನವಮಣಿಮಕುಟಕೇಯೂರದಾಭರಣದ . . . ಮೃಗಮದಸೊಬಗನಡಿಯಿಟ್ಟನಪ್ರತಿಮನ ಮನೀಶನು (ಹತಶಾ. ೯-೨) ; ತಲೆಯುವೊಲಿದ್ದರೆ ಗಂಡನು ಮನೆಯೊಳು ಸತಿಯೆ ಕಿರೀಟದವೊಲು ಮಕ್ಕಳುಮರಿಗಳು ಮಕುಟದ ಮಣಿಗಳು ಕಾವಲು ಆಳುಕಾಳುಗಳು (ಇಂಶಾಶ. ೨೨೦-೬೭). ೨. (ಅಲಂ) ಅಲಂಕಾರಪ್ರಾಯವಾದುದು ; ಶ್ರೇಷ್ಠವಾದುದು : ಪೂರ್ಣಜ್ಞಾನಿಯಾದಾಗ ಮೌನವೇ ಮಕುಟವಾಗುವುದು (ದಾಶತಂ. ೨).

[ಸಂ.]

**ಮಕುಟಧರ** (ನಾ). ಕಿರೀಟವನ್ನು ಧರಿಸಿದವನು : ರಾಜ : ಮಕುಟಧರಂ ಸಲೋಮಕರ್ಣಂ ಘಟಾಂತಿಮದ್ರೇಕ್ಯಾಣಾ (ಜಾಶಿ. ೦೯-೩೩) ; ಮಕುಟಧರರ್ ಮಳಯನೃಪಾಲಕ ಮಾಳವಮಹಿಪರೆಂಬ ವೀರರ್ (ಜಗಿ. ೯-೫).

[ಸಂ.]

**ಮಕುಟಬದ್ಧ** (ನಾ). = ಮಕುಟಧರ : ಮಹಾಮಂಡಳಿಕಪ್ರಮುಖಮಕುಟಬದ್ಧರ್ ಮಾಟ್ಟ ಚತುರ್ಮುಖಮುಂ (ಅಂಕ್ರ. ೦೫-೦೩ ವ). ಮುಂಡಲೀಕರ ಮಕುಟಬದ್ಧರ . . . ರಾಜಾಧಿರಾಜಕೇರಿಗಳು (ಬಾಗಕ. ೨-೬೦).

[ಸಂ.]

**ಮಕುಟಭಂಗ** (ನಾ). ೧. ಕಿರೀಟವನ್ನು ಒಡೆಯುವುದು, — ನಾಶ ಮಾಡುವುದು : ಮಕುಟಭಂಗಪ್ರತಿಜ್ಞೆಯಂ ತೀರ್ಚಲೆಂದು ಬಾರು ಕುಲಾಂತಕಂ ಮಾಮಕಂ ಮಸಗಿ (ಗದಾಯು. ೬-೩೭ ವ). ೨. ಸೋಲು ; ಅಪಜಯ : ಮಕುಟಭಂಗವ ಪಡೆದು ರಾವಣ ವಿಕಳನಾಗಿರೆ ಮಾಲ್ಯವಂತನು . . . ಬುದ್ಧಿಯ ಹೇಳಲೈತಂದ (ಕೌರಾ. ೫೩-೦).

[ಸಂ.]

**ಮಕುಟಮಣಿ** (ನಾ). ೧. ಕಿರೀಟದಲ್ಲಿರುವ ರತ್ನ : ಒದೆವ ಭರದಿಂದ ಮುಚ್ಚೆಳಸಿದ ದುರ್ಯೋಧನನ ಮಕುಟಮಣಿಗಣವೆತ್ತಂ ಕಿದಟಿದುವು (ಗದಾಯು. ೬-೯೦) ; ಮಕುಟಮಣಿ ಸೊಡರ್ಗಳೆನೆ ಮಸ್ತಕಸಹಿತಮ ನೆಗೆದು ತಿರುಗುವಾ ಪರಿಯಣಮೇಂ ಪ್ರಕಟಿಸಿದುದೊ ಕೃಷ್ಣನ ವಿಜಯಕಾಂತೆ ಗಾಕಾಶಲಕ್ಷ್ಮಿ ನಿವಳಿಪ ತೆಜದಿಂ (ಜಗಿ. ೦೭-೫೯) ; ಸುರರ ಮಕುಟಮಣಿ ರಂಜಿತಚರಣಾಬ್ಜ ಶರಣಾಗು ಪ್ರಥಮಜಿನೇಶ (ಶರಶ. ೦-೦). ೨. (ಅಲಂ) ಶ್ರೇಷ್ಠನಾದವನು : ಕರ್ನಾಟಕಸಂಗೀತದ ಮಕುಟಮಣಿಗಳಾದ ಈ ತ್ರಿಮೂರ್ತಿಗಳು ಒಂದೇ ಕಡೆಯಲ್ಲಿ ನಡೆಸಿದ ಚಟುವಟಿಕೆಯ ಅದ್ಭುತಪೂಡಿಕೆಯನ್ನು ಮಾತುಗಳಲ್ಲಿ ಅಳವಡಿಸಲು ಸಾಧ್ಯವೇ ಇಲ್ಲ (ಸಂಗೀತ. ೩೦).

[ಸಂ.]

**ಮಕುಟಮಸ್ತಕ** (ನಾ). ಕಿರೀಟವನ್ನು ಧರಿಸಿರುವ ಶಿರಸ್ಸು, — ತಲೆ : ಆ ಪುರದರಸಂ ನತಭೂಮಿಪಾಲರ ಮಕುಟಮಸ್ತಕದ ನಿಜತೇಜೋರೂಪಕಮೆ ಪದ್ಮರಾಗದ ದೀಪದವೋಲ್ ಮೆಜೆವಿನಂ ಯಶೌಘಂ ಮೆಜೆವಂ

(ಚಾಕೋಟ. ३-३) ; ನಿಯುತ ಚಾತುರ್ಬಲವೆರಡು ನಿರ್ಭಯದಲೊದಗಿತು ಮಕುಟಮಸ್ತಕಮಾಯಮಹೀತಳವೆನಲು ಹಳಚಿದು ಹೊಯ್ದುದುಭಯಬಲ (ಶುವ್ಕಾರ್ಯೋ. ೦೩-೪೧). [ಸಂ.]

**ಮಕುಟರತ್ನ** (ನಾ). = ಮಕುಟಮಣಿ ೧ : ಮಕುಟರತ್ನದ ಲಹರಿ ಬಿಡುಗದ ವಿಕಟಧಾರಾರಶ್ಮಿ ದೀಪಪ್ರಕರದಲಿ ಥಳಥಳಿಸೆ ರವಿಯುಪೊಲೆಸೆದನಾ ದ್ರೋಣ (ಕುವ್ಕಾರ್ಯೋ. ೧-೩೮). [ಸಂ.]

**ಮಕುಟವರ್ಧನ** (ನಾ). ಕಿರೀಟದಿಂದ ಹಿರಿಮೆಯನ್ನು ಪಡೆಯುವವನು ; ರಾಜ : ಕುಳ್ಳಿರ್ದೋಲಗದ ಮಕುಟವರ್ಧನರನೆಡಹುತುಂ ತಾಗುತುಂ . . . ಬಂದು ನಂಬಿಯಣ್ಣನ ಸಿಂಹಾಸನದ ಮುಂದೆ ನಿಲೆ (ಶಂಭರ. ೬-೬೩) : ಕಾರ್ಮುಕದ ಸ್ವಾಧ್ಯಾಯಸಿದ್ಧರು ಹತ್ತುಸಾವಿರ ಮಕುಟವರ್ಧನರು (ಕುವ್ಕಾಭೀ. ೩-೯) ; ಮಕುಟವರ್ಧನರ ಮಂಡಳಿಕ ಮನ್ನೆಯರ ಗೇಹಂಗಳಿಂ (ಭಾವಶಂ. ३-೦೪). [ಸಂ.]

**ಮಕುಟಸ್ವರ** (ನಾ). [ಸಂಗೀತ] ಕೃತಿಗೆ ಸೇರಿಸುವ ಸ್ವರಗಳ ಗುಂಪು : ಕೃತಿಯನ್ನು ಹಾಡುವಾಗ ಅನುಪಲ್ಲವಿ ಮತ್ತು ಚರಣದ ಪ್ರಾರಂಭದಲ್ಲಿ ಹಾಡುವ ಸ್ವರಗಳ ಸಮೂಹ : ಪ್ರತಿಭಾಗದ ರಾಗದಲ್ಲಿ ಚಿಟ್ಟೆಸ್ವರ ಹಾಡಿದ ಕೂಡಲೇ ಪಲ್ಲವಿಯ 'ಮಕುಟಸ್ವರ'ವೆಂಬ ಹೆಸರಾದ ಚಿಟ್ಟೆಸ್ವರ ಹಾಡಿ ಪಲ್ಲವಿಗೆ ಸೇರುವುದು ರೂಢಿಯಾಯಿತು . . . ಪಲ್ಲವಿಯು ಮಕುಟಸ್ವರದೊಡನೆ ಪಲ್ಲವಿಗೆ ಸೇರುವ ಮಾರ್ಗ ಏರ್ಪಾಡಾಗಿರುವುದು ಕಂಡುಬಂದಿದೆ (ಸಂಗೀಕಂ. ೬೬). **P** ೧. ಒಂದು ಕೃತಿಯ ಚಿಟ್ಟೆಸ್ವರದ ಕೊನೆಯಲ್ಲಿ ಅಥವಾ ಕಲ್ಪನಾಸ್ವರದ ಕೊನೆಯಲ್ಲಿ ಪುನರಾವರ್ತನೆಯಾಗುವ ಸ್ವರ ; ಮುಕ್ತಾಯ ಸ್ವರ. ೨. ಒಂದು ರಾಗಮಾಲಿಕಾಕೃತಿಯಲ್ಲಿ ಒಂದೊಂದು ಚರಣದ ನಂತರವೂ ಆಯಾ ರಾಗದಲ್ಲಿ ರಚಿತವಾಗಿದ್ದು ಪಲ್ಲವಿಯ ರಾಗಕ್ಕೂ ಅದರ ಧಾತುವಿಗೂ ಸಮಂಜಸವಾಗಿ ಸೇರಿಕೊಳ್ಳುವಂತೆ ನಿರ್ಮಿಸಿದ ಸ್ವರಸಮುಚ್ಚಯದ ಬಂಧ. [ಸಂ.]

**ಮಕ್ಕಡ**, ಮಂಕಡ (ನಾ). ೧. ಕೋತಿ; ಮಂಗ : "ಮಕ್ಕಡವೋಂದು ಮರ್ಕಟಂ" (ಶಶಾ. ३೦-೯೯); ಒಂದು ಮರನಿರೆ ಬಟ್ಟೆಯೆಂದು ಬಗೆದ ಡರ್ದು ಪೋಗುತ್ತಿರಲನಿತಜಲ್ಲಿ ಮಕ್ಕಡದಿರವನಾಂತುದೆನ್ನಂಗವು (ಚಾಸೋಪು. ३-೬३); ಕಲಕಲಂಗ್ಯೆವ ಮಕ್ಕಡಂಗಳ ವಂಗಡಂಗಳ್ (ಪಂಚತ. ೯-३೫ ಪ).
**ಮಂಕಡ** : ೧. ಪುಲಿಯಿರ್ಕುಮಾನೆಯಿರ್ಕುಂ ಚಲದಂಕರ ಲೆಂಕ ! ನೀನೇಂ ಮಂಕಡನಾಗ ! (ರಾಮಾಶ್ವ. ३೯-३೮). ೨. ಮಲ್ಲಯುದ್ಧದ ಒಂದು ಪಟ್ಟು.–ವರಸೆ : ಕರವಲಯಕೋರೊರ್ಮೆ ತಳಹತ್ತಕೋರೊರ್ಮೆ ಸರಿಸ ಮಂಕಡಕೊರ್ಮೆ ಬಂಧಪಟ್ಟಿಸಕೊರ್ಮೆ. . . ಕಂಡ ಡೊಕ್ಕರಕೊರ್ಮೆ ಹರಿಕಮಲಭವರೊದಗಿದರ್ (ತಂಥ. ೦೩-೪೯).

[< ಪ್ರಾ. ಮಂಕ್ಕಡ, ಮಂಕಡ./ಸಂ. ಮರ್ಕಟ]

**ಮಕ್ಕರಿ₁**, ಮಂಕಣಿ, ಮಂಕರಿ, ಮಂಕ್ರಿ (ನಾ). ೧. ಬಿದಿರು, ಈಚಲು ಮೊದಲಾದ ಕಡ್ಡಿಗಳಿಂದ ಹೆಣೆದ ಗೂಡೆ,–ಕುಕ್ಕೆ,–ಹೆಡಿಗೆ: ಮೇಲಣ ಷತ್ವಕ್ಕೆ ಕತ್ವಂ. . . ಮಷ್ಕರಿ–ಮಕ್ಕರಿ (ಶಮದ. ३೬३ ವೃತ್ತಿ) : **P** ಇಲ್ಲಿ ಸೂಚಿಸುವ 'ಮಷ್ಕರಿ' ರೂಪವು ಸಂಸ್ಕೃತಕೋಶಗಳಲ್ಲಿಲ್ಲ; ಬಾತ ಕೆಕ್ಕೆಯ ಬಲುಮಕ್ಕರಿಹೊಟ್ಟೆಯ . . . ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ಪೀಬಿಸಂ. ೬-೦೦೬); ತಡಿಕೆ ಮಕ್ಕರಿ ಸಹ ಬಹ ಕಾವಾಟದ ಬಿಡು ಮಂದಿಗೆ ಲೆಕ್ಕವಿಲ್ಲ (ಕಂಶಪ. ೦೦-೪೦); ಅವಳು ಒಗೆದು ಹಿಂಡಿದ ಬಟ್ಟೆಗಳನ್ನು ಮಕ್ಕರಿಯಲ್ಲಿಟ್ಟುಕೊಂಡು ಬಾವಿಯಿಂದ ಹೊರಕ್ಕೆ ಬಂದಳು (ಕನ್ಕ. X, ೬೬). **ಮಂಕಣಿ** : ೧. ಸಗಣಿ ಮಂಕಣಿಯನು ತೆಗದು ಕೊಂಡ್ಹೋಗಿ ಸಾರಿಸಿ ಕಣವೊಣಗಿದಾ ಬಳಿಕ ರಾಗಿಯ ಹುಲ್ಲ ಹರವುತಿರು (ಅರ್ಜಾಪ. ४೦-४೦). ೨. ಎತ್ತು, ಕತ್ತೆ ಮೊದಲಾದ ಪ್ರಾಣಿಗಳು ಸಾಮಾನುಗಳನ್ನು ಹೊರಲು ಅನುಕೂಲವಾಗುವಂತೆ ಬೆನ್ನಿನ ಎರಡು ಕಡೆಗೂ ಬರುವ ಹಾಗೆ ಬಿದಿರು, ಮರ ಮೊದಲಾದುವುಗಳಿಂದ ಮಾಡಿದ ಕುಕ್ಕೆಯಂತಹ ಸಾಧನ : ಮಂಕಣಿಹೊರುವಾ ಕೋಣನ ಮುಂದೆ ಮಹಾವೀಣೆಯನ್ನು ಹಿಡಿದು. . . ಬಾರಿಸೆ ತಿಳಿವುದೆ (ತದಾಪ. ४೬-३). ೩. ಜಲಾಶಯದಿಂದ ಕಾಲುವೆಗೆ ನೀರನ್ನು ಎತ್ತಿಹಾಕಲು ಉಪಯೋಗಿಸುವ ಬಿದಿರಿನ ಸಾಧನ : (ಕ್ಯಾಂಡರ್). **ಮಂಕರಿ** : ೧. ಮರಿಗಳಿಗನುಕೂಲವಾಗಿ ಚನ್ನಕ್ಕನು ಒಂದು ಮಂಕರಿಯಲ್ಲಿ ಸೆಲ್ಲುಹುಲ್ಲನ್ನೂ ಬಟ್ಟೆಯ ಚಿಂದಿಯನ್ನೂ ಹಾಕಿ ಅಟ್ಟದ ಮೇಲಿಟ್ಟಿದ್ದಳು (ಕಂಕಥ. ೬३); ಒಂದು ಸೇದುವ ಹಗ್ಗ ಮತ್ತು ಒಂದು ಮಂಕರಿ ಬೇಕು (ಕಳು. ೬३). **ಮಂಕ್ರಿ** : ೧. ಮುತ್ತಿನ ಗುದ್ದಿಲ್ಲಿ ಅಗೆಸ್ಯಾರು ಅರಸಣವ ಬೆಳ್ಳೀ ಮಂಕ್ರೀಗೇ ಬಳಿಯರ್ಯಾರು (ಜಪ್ಪಟ. ೦೬३): ಗೌಡನ ಹೆಂಡತಿ ಕಡುಚೆಲ್ವೆ ಯಾವರೆ ಕಸದ ಮಂಕ್ರಿ ಹೊತ್ತು ತಂದಾಗ ಕಂಡೀತು (ಗಾದೆ).

[< ಸಂ. ಮಸ್ಕರ./ತುಳು. ಮಕ್ಕರಿ; ತೆಲು. ಮಂಕೆನ; ತೊದ. ಮೊಕರಿ./ಮರಾ. ಮಾಂಕಣ]

**ಮಕ್ಕರಿ₂** (ನಾ). ಸಂನ್ಯಾಸಿ ; ಯತಿ : (*). [<ಸಂ. ಮಸ್ಕರಿನ್]

**ಮಕ್ಕಳ್** 'ಮಗು' ಪರಾ.

**ಮಕ್ಕಳು** 'ಮಗು' ಪರಾ.

**ಮಕ್ಕಾಮಕ್ಕಿ** 'ಮಕ್ಕಿ₂' ಪರಾ.

**ಮಕ್ಕಿ₁**, ಮಕಿ, ಮಕ್ಕೆ, ಮೆಕ್ಕಿ₁ (ನಾ). ಬೆಳೆ ಹುಲುಸಾಗಿ ಬೆಳೆಯದಿರುವ ಎತ್ತರವಾದ ಜಮೀನು ; ಮೇಡುಗದ್ದೆ : ಕೊಸಿಗಗೊಳದ ಕೆಲಗೆರಡು ಮತ್ತಮರ್ಕ್ಕಿಯೊಳೆರಡುಮತ್ತರ್ (ಎಕ. VIII. ತೀಹ. ೬೦-೦೩; 938); ಮನೆಯ ಬಾಗಿಲ ಗದ್ದೆ ಮಕ್ಕಿ ಸಹ ಬಿತ್ತುವದು ಮುಡಿ ೬ ಅಂತು ಬಯಲು ಮಕ್ಕಿ ಸಹ ಬಿತ್ತುವದು ಮುಡಿ ೧೮ (ಶಾಇ. IX-ii, ४४೯-೦३; 1444); ಗದ್ದೇಭೂಮಿಯಲ್ಲಿ ಮಕ್ಕಿ, ಬೈಲು, ಕಾರು ಎಂದು ಮೂರು ವಿಧವು (ಮುಂಬಂದು. ३-३೦३). **ಮಕಿ** : ಆ ಭೂಮಿಯ ಮೇಲಣ ಮಕಿ ಬೀಜವರಿ ಸ ೫ ಉಭಯ ಕಾರಗದೆ ಮಕಿ ಸಹ ಬೀಜವರಿ ಸ ೧೦ (ಎಕ. VI, ಮೂಡಗೆ ४४-३३; 1547). 'ತಲೆಮಕಿ' ಪರಾ. **ಮಕ್ಕೆ** : ಗದ್ದೆಯ ಮೇಲಣ ತೋಟ ಮನೆ ಮಕ್ಕೆ ಆರವೆ ಸಹಿತವಾಗಿ (ಎಇ. XXVII, ೦೬೦-४३; 1256); ಗದ್ದೆ ಅಲ್ಲಿ ಪಡುವ ಮಕ್ಕೆಯಲ್ಲಲೂ ಕಂನುವಕಟ್ಟೆಯ ಬಡಗಣಲು ಎರಡುಗದ್ದೆ (ಶಾಇ. IX-ii, ४೦३-೦೩; 1372). **ಮೆಕ್ಕಿ₁** : ಮಕ್ಕಿ ಮೂಡೆ ೩೦ ಮೆಕ್ಕಿ ಮೂಡೆ ೧೦ ಬಯಲು ಮೂಡೆ ४೦ ಅಂತು ಬಾಳು ನಾಗಂಡುಗದಲು ಬಿತ್ತುವ ಮೂಡೆ ೮೦ (ಶಾಇ. IX-ii, ४೦೬-೦३; 1377); ದಿಂತೀ ಚತುಃಸೀಮೆಯಿಂದೊಳಗುಳ್ಳ ಮನೆ ಬಾವಿ . . . ಮಕ್ಕಿ ಮೆಕ್ಕಿ ಬಯಲು (ಶಾಇ. IX-ii, ४३३-೦೬; 1400); ಬೀಡಿನ ಬಗೆ ಮಯ್ಯನ ಬೆಟ್ಟು ಮೆಕ್ಕಿ ಮು ೨ (ಶಾಇ. ೦೯४೦, ಕುಂದಾಪುರ. ೩६३-೦೯; 1499).

[ದೇ.॥ ತಮಿ. ಮಕ್ಕಿ = ಸುಣ್ಣಕಲ್ಲು ಸೇರಿರುವ ಭೂಮಿ ; ತುಳು. ಮಕ್ಕಿ = ಉಳುವಿಕೆ]

**ಮಕ್ಕಿ₂**, ಮಚ್ಚಿ, ಮಚ್ಚು (ನಾ). ನೊಣ ; ಮಕ್ಷಿಕ. **ಮಚ್ಚಿ** : "ಮಚ್ಚಿ = ನೊಳಂ, ನೊಣಂ" (ಶಮದ ಕಂ. ३). **ಮಚ್ಚು** : "ನೊಳವು ಮಚ್ಚೆಂದಕ್ಕು" (ಶಬ್ದ. ೯४) : ದ್ವಿತ್ವದ ಚಕಾರಕ್ಕೆ . . . ಮಕ್ಷಿ – ಮಚ್ಚು (ಶಮದ. ३೬೨ ವೃತ್ತಿ).

**ಮಕ್ಕಿಕಾಮಕ್ಕಿ, ಮಕ್ಕಾಮಕ್ಕಿ** = ಒಂದು ಕೃತಿಯನ್ನು ಇರುವಂತೆಯೇ ನಕಲುಮಾಡುವುದು,–ಯಥಾವತ್ತಾಗಿ ಪ್ರತಿಮಾಡುವುದು ; **P** ಜನಜನಿತವಾಗಿರುವ ಒಂದು ಕಥೆಯ ಪ್ರಕಾರ ಒಬ್ಬ ಸುಲ್ತಾನನು ಪ್ರತಿಕಾರನೊಬ್ಬನಿಗೆ ಕುರಾನನ್ನು ಯಥಾವತ್ತಾಗಿ ಪ್ರತಿಮಾಡಲು ಆಜ್ಞೆಮಾಡಿದಾಗ, ಪುಟದ ಮಧ್ಯೆ ಸಿಕ್ಕು ಸತ್ತ

ನೊಣವಿದ್ದುದನ್ನೂ ಬಿಡದೆ ನೊಣದ ಚಿತ್ರವನ್ನು ಬರೆದನು. ಈ ಕಥೆಯನ್ನು ಅನುಸರಿಸಿ ಪ್ರಚಲಿತವಾಗಿರುವ ನುಡಿಗಟ್ಟು ಇದು : ಅವನು ಬರೆಯುವುದೆಲ್ಲ ಮಕ್ಕಿಕಾಮಕ್ಕಿ (ಕಖ); ಇಲ್ಲಿ ಕಾಣುವುದು ಕುಮಾರವ್ಯಾಸನ ಭಾವಗಳ ಇಲ್ಲವೆ ಶೈಲಿಯ 'ಮಕ್ಕಾ ಮಕ್ಕಿ' ತೆರದ ಶುಷ್ಕಾನುಕರಣವಲ್ಲ (ಕನಾಕ. ೩೩೦); ಅಲ್ಲಿಯ ಕಥೆಯನ್ನೇ ಇಲ್ಲಿ ಮಕ್ಕಾಮಕ್ಕಿಯಾಗಿ ಅನುವರ್ತಿಸಿಲ್ಲ (ಹಕ್ಕರ. ೭ ಮುನ್ನು೨).

[<ಪ್ರಾ. ಮಕ್ಖಿ. / ಸಂ. ಮಕ್ಷಿ./ಹಿಂ. ಮಕ್ಖೀ]

**ಮಕ್ಕಿಕಾಮಕ್ಕಿ** 'ಮಕ್ಕಿ$_2$' ಪರಾ.

**ಮಕ್ಕಿಗದ್ದೆ** (ನಾ). = ಮಕ್ಕಿ$_1$ : ಮಕ್ಕಳ ಕೆಲಸ ತಿಳಿಯದು. ಮಕ್ಕಿಗದ್ದೇ ಬೆಳೆ ತಿಳಿಯದು (ಗಾದೆ). [ಮಕ್ಕಿ$_1$ + ಗದ್ದೆ (<ಗಟ್ಟಿ)]

**ಮಕ್ಕಿಭೂಮಿ** (ನಾ). ಎತ್ತರವಾದ ಪ್ರದೇಶ ; ಮೋಡು : ಮಕ್ಕಿ ಭೂಮಿಯು –ಇದು ಎತ್ತರವಾದದ್ದು. ಇದರೊಳಗೆ ವರ್ಷದಲ್ಲಿ ಒಂದು ಬೆಳೆ ಮಾತ್ರ ಬರುವುದು (ಮುಂಬಯಿ. ೩-೨೦೨) ; ಕಾಗೇರಿತೋಡಿನ ಉತ್ತರಕ್ಕಿರುವುದು ಮಾರ್ಕೋಡು ಮಕ್ಕಿಭೂಮಿ (ದೀವಹೊ. ೩೩).

[ಮಕ್ಕಿ$_1$ + ಭೂಮಿ]

**ಮಕ್ಕು** (ನಾ). ದೀಪವು ಉರಿಯುವಾಗ ಅಥವಾ ಉರಿದಾದ ಮೇಲೆ ಬತ್ತಿಯ ಕುಡಿಯಲ್ಲಿ ಕಟ್ಟಿಕೊಳ್ಳುವ ಕಿಟ್ಟ,– ಕಾಡಿಗೆ : ಮುದುಕಿ ಅದೇ ಕಡ್ಡಿಯಿಂದ ದೀಪದ ಮಕ್ಕು ಹೊಡೆದು ಬತ್ತಿಯನ್ನು ಸ್ವಲ್ಪ ಚಾಚಲು . . . ಉರಿಯತೊಡಗಿತು (ಶ್ರಣಕ. ೭೭) ; ಕೋಣೆಯಲ್ಲಿಯ ಚಿಮಣಿಯ ಮಕ್ಕಿನಿಂದ ಹೊಗೆಯು ಯಮನ ಪಾಶದಂತೆ ಸುಳಿಸುಳಿಯಾಗಿ ಮೇಲೆದ್ದಿತ್ತು (ಕಾಗಳ. ೬೦). 'ಅಂಟುಮಕ್ಕು' ಪರಾ.

**ಮಕ್ಕುಹಿಡಿ** (ಕ್ರಿ). ಕಿಟ್ಟವುಂಟಾಗು ; ಕಾಡಿಗೆಗಟ್ಟು : ದೀಪಕ್ಕೆ ಮಕ್ಕುಹಿಡಿಯದ ಹಾಗೆ ನೋಡಿಕೊಂಡು ಸದಾ ಅದಕ್ಕೆ ತೈಲ ಒದಗಿಸುತ್ತ ಇರಲು ನೀಲಕಂಠನೇ ತಕ್ಕ ಪ್ರಹಾರಿ ಅಲ್ಲವೇ ? (ಇಕ್ಕ. ೪೨೦) ; ಹೊತ್ತಿದ ಬತ್ತಿಗೆ ಮಕ್ಕುಹಿಡಿದಂತೆ ಆಗಿ ಕಾಂತಿ ಕಂದಿಹೋಗಿದೆ (ಹುತ್ತಾಟಿ. ೦೯). [ಮಕ್ಕು + ಹಿಡಿ$_1$ (<ಪಿಡಿ$_1$)]

**ಮಕ್ಕೆ** 'ಮಕ್ಕಿ$_1$' ನೋ.

**ಮಕ್ತೆ, ಮಖ್ತೆ** (ನಾ). ಗುತ್ತಿಗೆ : ಕಂಪೆನಿಯ ವ್ಯಾಪಾರದ ಮಕ್ತೆಯು ಸ್ಥಿರಗೊಳಿಸಲ್ಪಟ್ಟಿತು (ಹಿಂದುಇ. ೨೬೪) ; ಇವಳಿಗೆ ಬೇಕಾದವರು ನಮ್ಮ ಮನೆಗೆ ಬಂದರೆ ಮಾತಾಡುವ ಮಕ್ತೆ ಅವಳಿಗೆ (ಕ್ಷಿತಿ. ೩೩). **ಮಖ್ತೆ** : ಈಗ ಜೇನು, ಅಳ್ಳೀಕಾಯಿಗಳ ಮಖ್ತೆಯಾಗುತ್ತದೆ (ಶೀಳ. ೩೦).

[←ಅರ. ಮಕ್ತಅ : ಹಿಂ. ಮರಾ. ಮಕ್ತಾ, ಮಖ್ತಾ]

**ಮಕ್ತೆದಾರ, ಮಕ್ತೇದಾರ** (ನಾ). ಗುತ್ತಿಗೆದಾರ : ಕೆಲವರು ವಕೀಲರೂ ವ್ಯಾಪಾರಸ್ಥರೂ ಮಕ್ತೆದಾರರೂ . . . ಕೆಲವರು ಸಾವಕಾರರು ಇರುತ್ತಾರೆ (ಕಾಗಿ. ೮೦) ; ಮಕ್ತೆದಾರನೂ ಹೆಚ್ಚು ಮಾತನಾಡಿಸಲಿಲ್ಲ (ಪಟ್ಟಹೊ. ೩೪). **ಮಕ್ತೇದಾರ** : ಇದಕ್ಕೆಲ್ಲ ಸಂಸ್ಕೃತಿಯ ಕ್ಷೇತ್ರದಲ್ಲಿ ಮಕ್ತೇದಾರರಾದ ಧರ್ಮಗುರುಗಳೂ ಸಾಮಾಜಿಕಕ್ಷೇತ್ರದಲ್ಲಿ ಮಕ್ತೇದಾರರಾದ ರಾಜರೂ ವಿರೋಧಿಸುವರು (ಮೂಪಾದ. ೬೩). [←ಮರಾ. ಮಕ್ತೇದಾರ್]

**ಮಕ್ತೆಹಣ** (ನಾ). ಗುತ್ತಿಗೆ ಹಣ ; ಕರಾರುಹಣ : ಎಂಟು ಪಡದೆಗಳಿಗೆ ಕೂಡಿ ಒಟ್ಟು ಮಕ್ತೆಹಣ ಎಷ್ಟಾದೀತು (ಗಂಮೂರು. ೨೦೭).

[ಮಕ್ತೆ + ಹಣ (<ಪಣವು$_1$)]

**ಮಕ್ತೇದಾರ** 'ಮಕ್ತೆದಾರ' ನೋ.

**ಮಕ್ಷಿ** (ನಾ). ನೊಣ : ದ್ವಿತ್ವದ ಚಕಾರಕ್ಕೆ . . . ಮಕ್ಷಿ—ಮಚ್ಚು (ಶಮುಕ. ೨೬೨ ಪ್ರಯೋ) ; ಕಾಮಾಕ್ಷಿ ಏಕೆ ಮರುಳು ? ನಿನ್ನುದರದಿ ನಿಲ್ಲದು ಜೀರ್ಣವಾಗದಲೆ, ಈ ಮಕ್ಷಿ (ಪಪಾ. V. ೩೩). [ಸಂ.]

**ಮಕ್ಷಿಕ** (ನಾ). ೧. ನೊಣ : ಮೊರೆದೆಚಿಪ ಮಶಕ ಮಕ್ಷಿಕವುಂ ಸೋವುತ್ತುಮನವರತಮೋಲಗಿಸುತ್ತಿರ್ಪುದು ಭೂತಕೋಟಿ ದನುಜನ ಗದೆಯಂ (ಜಗ. ೪-೩೪) ; ಅರಸ ಕೇಳ್ಳೈ ನಿಮ್ಮ ಭೀಮನ ಪರಿಯನೀ ಸರ್ವಾಸ್ತ್ರಘಾತಸ್ಫುರಣಮುದಕರಿ ಮಕ್ಷಿಕಾಸಂಘಾತದಂದದಲಿ ಕೆರಳಿ ಕವಿದನು (ಕುವ್ಯಾಕ. ೦೩-೨೦). ೨. ಜೇನುನೊಣ : "ಮಕ್ಷಿಕಂ ಜೇನ ನೊಣನಕ್ಕು" (ಮಂಗರಾ. ೫೨-೪). [ಸಂ.]

**ಮಕ್ಷಿಕೆ** (ನಾ). ೧. = ಮಕ್ಷಿಕ ೧ : ದಂಶಮಶಕಮಕ್ಷಿಕಾಭ್ರಮರಪತಂಗಾದಿ ಚತುರಿಂದ್ರಿಯಂಗಳ್ ಸ್ಪರ್ಶನರಸನಘ್ರಾಣಚಕ್ಷುರಿಂದ್ರಿಯಪರಿಚ್ಛಿತ್ತ್ಯುಪೇತಂಗಳಪ್ಪುವು (ತತ್ತ್ವಸೂ. ೪೮). ೨. = ಮಕ್ಷಿಕ ೨ : ಮಧುರಾಣಿ ಸಂಭ್ರಮದಿ ಮಕ್ಷಿಕಾಮಾಲೆ (ಅರಳು. ೪೨೩-೩). [ಸಂ. ಮಕ್ಷಿಕಾ]

**ಮಕ್ಷುರಕ** (ನಾ). = ಮಕ್ಷಿಕ ೧ : ಪರಿಮಳವನಳಿ ಪೀರ್ವವೊಲು ಮಕ್ಷುರಕ ಬಲ್ಲುದೆ (ಜೈಮಿ. ೦-೨೭). [<ಸಂ. ಮತ್ಸರಕ]

**ಮಖ** (ನಾ). ಯಜ್ಞ ; ಯಾಗ : "ಯಾಗಃ . . . ಮಖಃ . . . ಸತ್ರಂ-ಈ ೧೨ ಯಾಗಂ" (ಹಲಾಯು. ೬೮-೨೬೦) ; ಆ ಮಖದ ಮಾಹಾತ್ಮ್ಯಮಂ ಪೇಟೆಸ್ವುದೆ (ಶಂಪಾ. ೬-೦೭ ಪ) ; ನಡೆತಂದನಪ್ರತಿಮನದಟಿನುರವಣೆಯಿಂದೆ ಸಮೆದ ಮಖಮಂ ಸುಡುವ ವೀರಭದ್ರನ ತೇಜದೆ (ಇಷರ. ದೀ. ೪೦-೨೧) ; ಸತ್ಯ ಶಿವ ಸೌಂದರ್ಯ ಮಖಕೆ ಕವಿಯ ಯಾಜನ (ಅಶೀ. ೨೦-೦೬).

**ಮಖದಯ್ಯ**=ಯಜ್ಞದ ಅಧಿಪತಿ; ದೇವತೆ : ಈ ಜ್ಞಾತಿಬಾಂಧವರ ಕೈಯಲರಿಗಳ ಹೊಯ್ದು ಶಿರನರಿದುಯ್ಯಲಾಡಿದರ್ಗೆ ಮೇಣ್ ಮಖದಯ್ಯಗಳಿಗಾನೊಬ್ಬಳು (ಕುವ್ಯಾಕ. ೬-೨೭). **ಮಖದೂಟ** = ಯಜ್ಞದಲ್ಲಿ (ದೇವತೆಗಳಿಗೆ) ನೀಡುವ ಆಹಾರ; ಹವಿಸ್ಸು : ಸೊರ್ಕಿದ ದೈತ್ಯರಂ . . . ಮಖದೂಟಕೊಲಿಲ್ದು ಬಂದ ದೇವರ್ಕಳನಿಕ್ಕಿದಂ (ವ್ಯಕಪ. ೦೦-೮).

[ಸಂ.]

**ಮಖಜೆ** (ನಾ). ಯಜ್ಞದಿಂದ ಹುಟ್ಟಿದವಳು ; ದ್ರೌಪದಿ : ಮೃಡ ತಾಂ ಭಿಕ್ಷವ ಬೇಡನೇ ಮಖಜೆ ತಾಂ ತೊಟ್ಟಾಗಳೇ (ಸೋಮೇಶ. ೩೨).

[ ಸಂ. ಮಖಜಾ ]

**ಮಖತುರಗ** (ನಾ). ಯಜ್ಞದ ಕುದುರೆ ; ಯಾಗಾಶ್ವ : ಆವ ಮಖತುರಗಕ್ಕೆ ಬೆಂಬಲಿವೋಪೆಯಾ ರಾಮನೊಲ್ಮೆ ನಿನಗೆ ರಕ್ಷೆಯಿರ್ಕೆ (ಣಮೂಶ. ೪೯-೦೩). [ಸಂ.]

**ಮಖಧ್ವಂಸಿ** (ನಾ). ೧. (ದಕ್ಷನ) ಯಾಗವನ್ನು ನಾಶಪಡಿಸಿದವನು ; ಈಶ್ವರ : ಅಂಜದಿರಂಜದಿರು ವರವೇಷಬಾಹಿರವಲ್ಲ ಸತಿಯರೊಳಾದಿ ಪಾತಿವ್ರತ್ಯ ನಿನಗೆಂದನು ಮಖಧ್ವಂಸಿ (ಕುವ್ಯಾಆ. ೦೭-೩೦). ೨. ವೀರಭದ್ರ.

[ಸಂ. ಮಖಧ್ವಂಸಿನ್]

**ಮಖಪುರುಷ** (ನಾ). ಯಜ್ಞದ ದೇವತೆ; ಯಜ್ಞಪುರುಷ; ವಿಷ್ಣು : "ಹರಿ ಶೌರಿ. . . ಮಖಪುರುಷಂ ಜನಾರ್ದನಂ . . . ಗೋವಿಂದನಕ್ಕುಂ" (ಮಂಗರಾ. ೬-೦೭); ಮಖಪುರುಷನಿರ್ದ ದೆಸೆಗಭಿಮುಖನಾದೊಡೆ ಪೋಯ್ತು ಘಂ (ಜಗ. ೩-೬೭). [ಸಂ.]

**ಮಖಮಲ್ಲು, ಮಕಮಲ್ಲು** (ನಾ). ಸೂಕ್ಷ್ಮನೆಯ್ಗೆಯ, ನಯವಾದ ಹೊರಮೈಯುಳ್ಳ ಒಂದು ಬಗೆಯ ರೇಷ್ಮೆಯ ದಪ್ಪಬಟ್ಟೆ ; ವೆಲ್ವೆಟ್ಟು : ಆಕೆಯ ಮೈಚರ್ಮ ಮಖಮಲ್ಲಿನ ಹಾಗೆ ಮೃದುತ್ವ ಹೊಂದಲು ಆ ಸಾಬೂನಿನ ವಿಪುಲ ನೊರೆಯೇ ಕಾರಣ (ಪಾರಿಗೀ. ೨೮೩); ಮಖಮಲ್ಲಿನಂಥ ಗುಂಜುಗಳುಳ್ಳ ಹತ್ತಿಯ ಬಟ್ಟೆ: (ರೇಷ್ಮೆ ಮತ್ತು ಹತ್ತಿಬೆರಕೆಯ) ಒಂದು ಬಗೆಯ ಮಿಶ್ರ ಮಖಮಲ್ಲು (Velvet, ೨೦೪೩). **ಮಕಮಲ್ಲು** : ತಮ್ಮ ಕೋಣೆಯೊಳಗೆ ಹೋಗಿ ಕೆಂಪುಮಕಮಲ್ಲುಬಟ್ಟೆಯ ಉಡುಪುಗಳನ್ನು ಧರಿಸಿಕೊಂಡು ಬಂದರು (ಕ್ರಪಾ೩. II, ೦೦).

[← ಪಾರ. ಮಖ್ಮಲ್; ಹಿಂ. ಮಖಮಲ್; ಮರಾ. ಮಖ್‌ಮಲ್, ಮಖಮಲ್, ಮಖ್ಮಲ್]

**ಮುಖಶಾಲೆ** (ನಾ). ಯಜ್ಞವನ್ನು ಮಾಡುವ ಸ್ಥಳ; ಯಾಗಮಂಟಪ : ಮಯನ ಮತದಲಿ ವಿಶ್ವಕರ್ಮನ ನಯವಿವೇಕದಲಮಲಮುಖಶಾಲೆಯನು ನಿರ್ಮಿಸಿದರು ಸುಲಕ್ಷಣಶಾಸ್ತ್ರಸೂತ್ರದಲಿ (ಕುಪ್ರಾ.ಸ. ೬-೨೪); ಬಹು ಸಾಧನಂಗಳಿಂ ಭೂರಿಸಂಭಾರಸಂಗ್ರಹದಿಂದೆ ಬೇಕಾದ ವಸ್ತುಸಂಜಾತದಿಂ ಮುಖಶಾಲೆ ಕಣ್ಗೆಸೆದುದು (ಶೈಮಿಶಾ. ೩೩-೩೯); ಮುಖಶಾಲೆಯುಂ ರಚಿಸಿ ಯಜ್ಞಕುಂಡಂಗೈದು (ಶ್ರೀರಾಮ. ೦೦-೨೫೪). [ಸಂ. ಮುಖಶಾಲಾ]

**ಮುಖಶಿಖಿ** (ನಾ). ಯಜ್ಞಕುಂಡದಿಂದ ಏಳುವ ಬೆಂಕಿ ; ಯಾಗಜ್ವಾಲೆ: ಮುಖಶಿಖಿ ಮುಖಸಂಭವ ಲೋಹಖುರಂಗಳವೆನಿಪ ಪಟ್ಟಸಾಹಣದ ಹಯಂ ಮುಖಲೀನ ಖಲೀನೋತ್ಥಾನಖಿಣತ್ಕೃತಮೊದವೆ ನಿಂದುವಂದರಮನೆಯೊಳ್ (ಪುಲ್ಲಕ. ೯-೩). [ಸಂ. ಮುಖಶಿಖಿನ್]

**ಮುಖಾಡೆ** 'ಮೊಗ' ಪರಾ.

**ಮುಖಾರಿ** (ನಾ). = ಮುಖಧ್ವಂಸಿ ೧ : ಮುಖಾರಿಯುಸ್ಥಿರಪರದೈವದೊಳ್ ತೊಡರದಿಂತು ಬರ್ದುಂಕಿದೆನ್ನೆ ಮಹೇಶ (ಶಂಶಾಶ. ೨೩). [ಸಂ.]

**ಮುಖಾಳ** 'ಮುಕಾಳ' ನೋ.

**ಮುಖೆ** 'ಮುಗ್ಗೆ' ನೋ.

**ಮುಖೇಡಿ** 'ಮುಖಹೇಡಿ' ನೋ.

**ಮುಖೇಡಿತನ** 'ಮುಖಹೇಡಿತನ' ನೋ.

**ಮುಖ್ತೆ** 'ಮುಕ್ತೆ' ನೋ.

**ಮುಗ** (ನಾ). ೧. ಗಂಡ ಹೆಂಡತಿಯರ ಅಥವಾ ಗಂಡು ಹೆಣ್ಣಿನ ಪರಸ್ಪರ ಲೈಂಗಿಕಸಂಬಂಧದಿಂದ ಜನಿಸಿದ ಗಂಡುಸಂತಾನ; ಪುತ್ರ ; ತನುಜ : ಶಾಸ್ತ್ರಪನ ಮಗ ದೇವರೆಜೆಯ (ಎಕ. VIII. ಸೊರಬ. ೫೬೦-೨೮; 672); ಈ ಪೊಟಲ ಪ್ರಧಾನನಪ್ಪ ಶ್ರೇಷ್ಠಿ ಇಂದ್ರದತ್ತನೆಂಬೋಂ ಪದಿನಾಱುಂ ಕೋಟಿ ಕಸವರಮನೊಡೆಯೊನಾತನ ಮಗನೀತಂ (ವಡ್ಡಾರಾ. ೦೪-೪); ಕೊಂದೆನ್ನ ಮಗನನಿಂ ಭಯದಿಂದಂ ರಸೆವೊಕ್ಕುಮುಜನ ಗುಂಡಿಗೆ ಪೊಕ್ಕುಂ . . . ವೇಣವಂ ಬರ್ದುಕುವನೇ (ಶಂಶಭಾ. ೦೨-೦೨೦); ಸೂಳೆಯು ಮಗ ಮಾಳವ ಮಾಡಿದರೆ ತಾಯ ಹೆಸರಾಯಿತ್ತಲ್ಲದೆ ತಂದೆಯ ಹೆಸರಿಲ್ಲಾ (ಬಸವ. ೨೨೬); ವೇದಪುರುಷನ ಸುತನ ಸುತನ ಸಹೋದರನ ಹೆಮ್ಮಗನ ಮಗನ ತಳೋದರಿಯ . . . ಜಠರದಲಿ ಜನಿಸಿದನಾಗಿಮೂರುತಿ ಸಲಹೊ ಗದುಗಿನ ವೀರನಾರಯಣ (ಕುವ್ಯಾಆ. ೦-೨೩). ೨. ಹಿರಿಯರು ಕಿರಿಯ ಗಂಡುಮಕ್ಕಳನ್ನು ಕುರಿತು ಪ್ರೀತಿ, ವಿಶ್ವಾಸದಿಂದ ಮಾತನಾಡುವಾಗ ಬಳಸುವ ಶಬ್ದ : ಭಟ್ಟಾರಾ ಎನಗೆ ದೀಕ್ಷೆಯಂ ದಯೆಗೆಯ್ಯುಮೆನೆ ಭಟಾರರೆಂದರೆಮಗಂತು ದೀಕ್ಷೆಯಂ ಕುಡಲಾಗಾ ಮಗನೆ (ವಡ್ಡಾರಾ. ೬೪-೦೩); ಭೀಮನಂದನನಾ ಪದದೊಳ್ ಯಮರಾಜನಂದನಂ ಕರೆದು ಮಗನೆ ನೀನಿಂದಿನಿರುಳಿನನುವರಮನೆನಗೆ ಗೆಲ್ದೀಯಲ್ವೇಟ್ಕುಮೆಂದೊಡೆ (ಶಂಶಭಾ. ೦೨-೬ ಪ). 'ದತ್ತುಮಗ', 'ಸಾಕುಮಗ' ಪರಾ.

**ಮಗಂದಿರ್, ಮಗಂದಿರು** = ೧. ಗಂಡುಮಕ್ಕಳು : ಸಾಗರಸೇನೆಗಂ ಸಾಗರದತ್ತನುಂ ಸಮುದ್ರದತ್ತನುಮೆಂಬ ಮಗಂದಿರುಂ ಸಾಗರದತ್ತೆಯೆಂಬ ಮಗಳುಮಾದರ್ (ಶಾಂತೀಶ. ೬೯); ಚಾವುಂಡನು ಕಳಚುರ್ಯ ಬಿಜ್ಜಳನ ಮಗಳಾದ ಸಿರಿಯಾದೇವಿಯನ್ನು ಮದುವೆಯಾಗಿ ಅವಳಲ್ಲಿ . . . ಇಬ್ಬರು ಮಗಂದಿರನ್ನು ಪಡೆದಿದ್ದನು (ಮೂರುಲು. ೬೪). ೨. 'ಮಗ' ಎಂಬುದಕ್ಕೆ ಗೌರವಾರ್ಥವಾಗಿ ಬಳಸುವ ಬಹುವಚನ ರೂಪ : ಲೋಕಾದಿತ್ಯ ಎಳಅರಸಮ್ಮಗನ್ದಿಮ್ಮಗಲ್ಲಡಿಯುವರ್ ಕದಮ್ಬೂರಾ ನಾಲ್ವದಿನ್ಬರು . . . ಮುನಿಗಿತ್ತು (ಎಕ. X. ಕೋಲಾರ. ೬-೩; 760); ಮಹಾರಾಜರಾ ಮಗನ್ದಿರ್ ರಣಾವಳೋಕ ಶ್ರೀಕಮ್ಬಯ್ಯನ್ ಪೃಥುವೀರಾಜ್ಯಂಗೆಯೆ (ಎಕ. II. ೩೩-೩; 800). [ದೇ.॥ ತಮಿ. ಮಲ. ಮಕನ್; ತುಳು. ಮಗ, ಮಗೆ; ತೆಲು. ಮಗ, ಮೊಗ; ಮಾಲ್ತೊ. ಮಕ್]

**ಮಗಉಕೋಲ್** (ನಾ). ಭೂಮಿಯನ್ನು ಅಳೆಯುವ ಒಂದು ಬಗೆಯ ಅಳತೆಯ ಕೋಲು (?) : ಮಗಉಕೋಲಲು ಬಳಂಬುಗೆ ಯಿಮ್ಮತ್ತರು ನೆಲನೂ (ಎಇ. IV. ೩-೦೮; 11ನೆಯ ಶತ ?). [ ? + ಕೋಲ್$_1$ ]

**ಮಗಂಬಡೆ** (ಕ್ರಿ). ಮಗನನ್ನು ಪಡೆ; ಪುತ್ರನನ್ನು ಹೊಂದು : ನೀನೆಮ್ಮಂ ಮಿಾಱದೆ ರಾಜ್ಯಾನುಷ್ಠಾನದೊಳೊಡಂಬಡೀಗಳ್ ನಿಜಸಂತಾನಕ್ಕೆ ಮಗಂ ಬಡೆಯೆ ತಪೋನಿಯಮಮಂ ಮಗನೆ ಕಡೆಯೊಳೆರ್ದಪುದಲ್ತೇ (ಆದಿಪು. ೪-೬೦); ಗಂಗಾನದಿಯೊಳು ಮಿಂದು ಲತಾಂಗಿ ಮಗಂಬಡೆದಳಪ್ಪ ಕಾರಣದಿಂದಂ (ಎಕ. VII. ಶಿವಮೊ. ೪-೦೦; 1122). [ಮಗ + ಪಡೆ$_1$]

**ಮಗಗೆಱೆ**[3] (ನಾ). ಒಂದು ಕೆರೆಯ ಹೆಸರು : ಪೂರ್ವಸ್ಯಾಮ್ ದಿಶಿ ಮಗಗೆಱೆ[3] (ಪ್ರಕಕಂ. ೦೯೨೪. ೬೦-೯೭; 799). [ಮಗ? + ಕೆಱೆ[3]]

**ಮಗಣ** (ನಾ). [ಛಂದ] ಮೂರು ಗುರುಗಳುಳ್ಳ ಒಂದು ಅಕ್ಷರ ಗಣ: (— — —) : ಗುರು ಲಘು ಮೂಱಿರೆ ಮನ ಗಣ . . . ಮಗಣಂ ಭೂಮಿಯೆನಿಕ್ಕುಂ (ಛಂದೋಂಬು. ೦-೩೯ ಅಡಕತ್ರ); ಮಗಣ_ಒದಿಂದಂ, ಆನಂದಂ (ಕ್ರಿಐ. ೬೦). [ಸಂ.]

**ಮಗದುಮಸಕ್ಕರೆ** 'ಮಗದುಮಿಸಕ್ಕರೆ' ನೋ.

**ಮಗದುಮಿಸಕ್ಕರೆ, ಮಗದುಮಸಕ್ಕರೆ, ಮೊಗದುಂಸಕ್ಕರೆ** (ನಾ). ನಸುಬಿಳುಪಾಗಿಯೂ ಹಿಟ್ಟಿನಂತೆಯೂ ಇರುವ ಒಂದು ಬಗೆಯ ಸಕ್ಕರೆ : ಕಾರಾ, ಮಗದುಮಿಸಕ್ಕರೆ, ತುಪ್ಪ, ಹಿಟ್ಟಿ, ಯಣ್ಣೆ ಮುಂತಾದ ಕಿರಾಣಿ ಜೀನಸಗಳು (ಮುಂಬವ್ಯಾ. ೨೮). **ಮಗದುಮಸಕ್ಕರೆ** : ಆ ಸಕ್ಕರೆಯಲ್ಲಿ ಜವಾರೀಸಕ್ಕರೆಗೆ ಮಗದುಮಸಕ್ಕರೆ ಎನ್ನುತ್ತಾರೆ (ಕೃಷಿಶ್ರ. ೦೬೩). **ಮೊಗದುಂಸಕ್ಕರೆ** : "ಕಬ್ಬಿನ ಹಾಲನ್ನು ಕಾಯಿಸಿ, ಇಂಗಿಸಿ, ಕಾಕಂಬಿಯನ್ನು ಹೊರಡಿಸಿ, ತಯಾರಿಸಿದ ಕಚ್ಚಾಸಕ್ಕರೆ ; ಮೊಗದುಂಸಕ್ಕರೆ" (Muscovado. ೩೦೪೨); ಅರ್ಧಪಾಕವಾಗಿ ಕಾಯಿಸಿದ ಕಬ್ಬಿನ ಹಾಲಿಗೆ . . . ಮೊಗದುಂಸಕ್ಕರೆಯೆಂತಲೂ ಕೆಲವರು ಹೇಳುವರು (ಸಿದ್ಧಾಂತ. ೨೮೬). [← ಮರಾ. ಮಗದುಮಿಸಾಖರ್]

**ಮಗಧ** (ನಾ). ೧. ಹೊಗಳುಭಟ್ಟ ; ಸ್ತುತಿಪಾಠಕ : ಕುಲದೇಟ್ಗೆಯಂ ಮಾಗಧರು ಸಾದರಮಾತ್ಮರ್ ನಿಯುಕ್ತವಾರ್ತೆಗಳಂ ನಿವೇದಿಸೆ (ಶ್ರೀರಾಶ. ೩-೩೬). ೨. ಪ್ರಸಿದ್ಧವಾದ ಐವತ್ತಾರುದೇಶಗಳಲ್ಲಿ ಒಂದು ; P ಈಗಿನ ಬಿಹಾರದ ದಕ್ಷಿಣದಲ್ಲಿದ್ದ ಒಂದು ದೇಶ : ಅಂಗ . . . ಮಗಧ . . . ಕರ್ನಾಟಕವೆಂಬೈವತ್ತಾಱುದೇಶಂಗಳಕ್ಕುಂ (ಶಬ್ದಸ. ೦೯೩). [ಸಂ.]

**ಮಗಮಗ** (ನಾ). ಸುವಾಸನೆ ; ಪರಿಮಳ : ಹಾಸಿಗಿ ಮಗಮಗ, ಮಂಚಕ ಝಗಝಗ, ನನ್ನ ಎದಿ ಮಾತ್ರ ಧಗಧಗ ಉರಿದೀತು (ನಾದಲೀ. ೩೪-೯). 'ಮಗಮಗಿಸು' ಪರಾ.

**ಮಗಮಗಿಸು** (ಕ್ರಿ). ಸುವಾಸನೆಯನ್ನು ಬೀರು ; ಕಂಪನ್ನು ಸೂಸು ; ಗಮಗುಟ್ಟು : ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಬಗೆಯಱಿದು ನೀಡುಗುಂ ಮಾಲೆಗಾಱನಂ ಪೋಲ್ತು ದಗ್ರಮಾಲ್ಯಮಹೀಜಂ (ಆದಿಪು. ೩-೩೬); ಮಗಮಗಿಪ ಕರ್ಪೂರ ಕುಂಕುಮದ ಗರುಚಂದನ ಕರ್ದಮ (ಶಾಕ್ಯಶಾ. ೩-೨೬); ಮಣ್ಣ ಮೈಯ ಮಗು ಮೂಡಿದಾಗ ಮಗಮಗಿಸಿತಣ್ಣ ಮುಗಿಲು (ಸೂರ್ಯಶಾ. ೩೪-೦೩). 'ಗಮಗಮಿಸು' ಪರಾ. [ಮಗಮಗ + —ಇಸು$_3$]

**ಮಗಮೆ** (ನಾ). ೧. (ಹಿಂದೆ ದೇವಾಲಯ, ಛತ್ರ ಮುಂತಾದುವುಗಳ ಖರ್ಚಿಗಾಗಿ ವರ್ತಕರ ಮೇಲೆ ವಿಧಿಸುತ್ತಿದ್ದ) ಒಂದು ಬಗೆಯ ತೆರಿಗೆ : ಹೊವಕೆ ಹೊಂಬಳಿ ಮಗಮೆ ವಟ್ಟ ಕಟ್ಟಿಗೆ ಸಹ . . . ದಾನಧಾರಾಪೂರ್ವಕವಾಗಿ ಕೊಟ್ಟ ತಾಮ್ರಶಾಸನ (ಪ್ರಕಕಂ. ೦೯೩೩. ೨೩-೯೯; 1384); ಮಠದ ಧರ್ಮ್ಮಕ್ಕೆ ಸಾರೋದ್ಧಾರವಾಗಿ ಅನ್ನಧಾನ ನಡದುಬರೂ

ರೀತಿಗೆ ನಾಲು ಮಗಮೆಯು ಉಂಟುಮಾಡಿದ ವಿವರಾ (ವ್ಯಕಂ. ೧೯೩೫. ೨೬-೦೯; 1751). ೨. ಹಿಂದೆ ಭೂಮಿಯ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಮಗಮೆ ಸುಂಕದಿಂದ ಧಾರಾಪುರಕೆ ವರಹವೊಂದಕೆ ಮಗಮೆ ಹಾಗವಲೆ ಕವಲು ಸೂಜುವರಹ ದಣಾಯಕರ ಕೋಟೆಯು ಮಗಮೆ ವರಹವೊಂಧಕೆ ಹಾಗದಲೆ ಕದಲು ಮಗಮೆ ಯಿಪತಐದುವರಹ (ಎಕ. XIV. ಗುಂಡ್ಲುಪೇ. ೧೨೮-೬೨; ಶ. 1410) ; ಅರಮನೆಯಿಂದ ಬಂದ ಹದಿಕೆ ಹೊದಿಕೆ ಮಗಮೆ × × × ಸಿದ್ದಾಯ ಮನೆವಾರ್ತೆ (ವ್ಯಕಂ. ೧೯೩೪, ೫೮-೨೩; 1434).

[← ಉರ್ದು. ಮುಹ್ಕಮಾ ; ಅರ. ಮುಹ್ಕಮಾ = ನ್ಯಾಯಕಚೇರಿ ; ಮರಾ. ಮುಹ್ಕಮಾ = ನೌಕರರ ಮಂಡಲಿ. / ತಮಿ. ಮುಕಮ್ಮ್]

**ಮಗರಿ** (ನಾ). ಒಂದು ಬಗೆಯ ಬಟ್ಟೆ : ಮಿಗೆ ಬೆಲೆಯೇಜಿದ ಪೂಲಿಯ ಮಗರಿಯ ದೋರಿಯುದ ಪಟಿಯ ತಳರ್ವಟ್ಟೆಯ ಕಾಡಿಗನೀರಿನ ಬಟ್ಟೆಯ ಮುಚುಗೆಗಳಿಂ ಸೋಲಿಪುವು ಸೀರೆವರವರ ಪಸರಂ (ಕನ್ನಕಾ. ೩೯) : ಮಗರಿ . . . ಗಜಾವಳಿ ಮಂಡೋದರಿ ಮೆಚ್ಚಿನ ಸೀರೆಯ ಮುಳಿಗೆಗಳಂ ಬಳುವಳನೆ ಬಳಸಿದುದನೆ ಮೂಸಿಗರಾಸುರದಿಂದೊಡರಿಸೆ (ಕುಮರಾ. ೧೫-೩೯). [?]

**ಮಗರಿಗೆ** (ನಾ). ಸ್ತ್ರೀಯರು ಅಲಂಕಾರಕ್ಕಾಗಿ ಕೆನ್ನೆ, ಗಲ್ಲ ಮುಂತಾದೆಡೆಗಳಲ್ಲಿ ಬರೆದುಕೊಳ್ಳುವ ಚಿತ್ರ ; ಮಕರಪತ್ರ : ಕಪೋಲದೊಳ್ ಮಗರಿಗೆಯುಂ ಬರೆದು (ರಾಮಾಶ್ವ. ೧೨೪-೫) ; ಸಸಿಗರೆಯೋ ತಿಮಿರವೆಣ್ಣ ಮೊಲೆ ಮಗರಿಗೆಯೋ (ತಂತ್ರಕ್ಷ್ಮು. ೦೦-೬೫). [ < ಮಕರಿಕೆ ]

**ಮಗರೂರಿ** (ನಾ). ಉದ್ಧಟತನ ; ಔದ್ಧತ್ಯ : ಈ ಚಿನ್ನವನ್ನು ಮಾತ್ರ ತರಬಾರದಿತ್ತು. ನಮ್ಮಿಂದ ಸ್ವಲ್ಪ ಮಗರೂರಿಯಾಯಿತು. ತಪ್ಪಾಯಿತು (ಶಾರುಜಾ. ೧೧೨) ; ತಿರಕನಿಗೆ ಇಷ್ಟು ಸೊಕ್ಕೇ ? ನಾನು ಕರೆಸಿದರೆ ಬರುವುದಿಲ್ಲವೆ ? ಇಷ್ಟು ಮಗರೂರಿಯೇ? (ರಾಜಾರಾ. ೭೭).

[ ← ಅರ. ಮಗರೂರೀ, ಮುಘರೂರೀ ; ಹಿಂ. ಮರಾ. ಮಗರೂರೀ ]

**ಮಗವು** ' ಮಗು ' ನೋ.

**ಮಗಳ್**, ಮಗಳು (ನಾ). ೧. ಗಂಡ ಹೆಂಡತಿಯರ ಅಥವಾ ಗಂಡು ಹೆಣ್ಣಿನ ಪರಸ್ಪರ ಲೈಂಗಿಕಸಂಬಂಧದಿಂದ ಜನಿಸಿದ ಹೆಣ್ಣುಸಂತಾನ : ಪುತ್ರಿ ; ಸುತೆ : " ದುಹಿತಾ, ತನುಜಾ, ಪುತ್ರೀ – ಈ ೩ ಮಗಳ್ " (ಹಲಾಯು. ೬೩-೩೫೦) ; ಕಾಡಚ್ಚಿಯ ಮಗಳ್ ಕಾಡಬ್ಬೆ (ಎಕ. XI, ದಾವಣ ೧೭-೭; ೫೫೯) ; ಎನ್ನ ಮಗಳಂ ಕುಡೆವೆಮ್ಮ ಮಗಳ್ಗೆ ಪುಟ್ಟಿದಾತಂ ರಾಜ್ಯಕ್ಕೊಡೆಯನುಂ ಪಿರಿಯ ಮಗನುಂ ಕ್ರಮಕ್ಕರ್ಹನುಮಪ್ಪೊಡೆ ಕುಡುವೆಂ (ಪಂಪಭಾ. ೧-೭೦ ವ) ; ಅನುಜೆಯುನಿತ್ತು ನರಂಗಾತನ ತನಯುಂಗಿತ್ತು ತನ್ನ ಮಗಳಂ (ಗದಾಯು. ೩-೪೨). ೨. ಹಿರಿಯರು ಕಿರಿಯ ಹೆಣ್ಣುಮಕ್ಕಳನ್ನು ಕುರಿತು ಪ್ರೀತಿ, ವಿಶ್ವಾಸದಿಂದ ಮಾತನಾಡುವಾಗ ಬಳಸುವ ಪದ : ಅರಸರೊಳೆಲೆ ನೀಂ ಸರಸಮನರಸಿಯುವೊಲಾಡುತಿರ್ಪೆ ನಿನಗಿದು ಗುಣಮೇ ಅರಸರ್ ಸರಸಮನಜಿಪರೆ ಸರಸಮನಾಡರಸರಲ್ಲದವರೊಳ್ ಮಗಳೇ (ಕಬಿರಾ. ೩-೨೩೩) ; ಬಗೆಗೆಟ್ಟು ಸಾವ ಬಗೆಯಂ ಮಗಳೆ ಮಹಾಶ್ವೇತೆ ಬಗೆಯದಿರ್ (ಕಾದಂಪೂ. ೯೪೦) ; ಮಗಳೇ ನಿನ್ನಜಿಯುಮೆಯಿಂ ಬಗೆಯದೆ ನುಡಿದೆಮ್ಮನಿನಿತು ದುಃಖಿಂಗಳನುಬ್ಬೆಗಪೊದವಲುಂಡೆ (ಪೇಬಿಪು. ೦೪-೦೦).

**ಮಗಳು** : ೧. ಮಂಡೋದರಿ ಕಪ್ಪೆಯ ಮಗಳು (ಬಸವ. ೫೯೦) ; ಮೇದಿನಿಯ ಸಲಿಸುವೆನು ನಿನ್ನಯ ಮಗಳ ಮಕ್ಕಳಿಗೆ (ಕುವ್ಯಾಭಾ. ೨-೨೮) ; ಜಗದ ಪಾವನೆ ಭಾಗೀರಥಿ ನಿನ್ನ ಮಗಳಯ್ಯ (ಪುರಂದ. ಪಾ. ೩-೯೯-೧) ; ತಾಯಿಯಂತೆ ಮಗಳು, ನೂಲಿನಂತೆ ಸೀರೆ (ಗಾದೆ). ೨. ಮಗಳೆ ಬಾ ಕೇಳ್ ಐದುಮಂತ್ರಾಳಿಗಳನಿವು ಸಿದ್ಧಪ್ರಯೋಗವು (ಕುವ್ಯಾಭಾ. ೩-೦೭) ; ಮಗಳೆ, ಪೇಳ್ವೆನಿದೊ ಮವಾರ್ತೆಯಂ (ಶ್ರೀರಾಮಪಟ್ಟಾ. ೩೧-೦೯೯).

ಮಗಳ್ದಿರ್, ಮಗಳುದಿರು = ೧. ಹೆಣ್ಣುಮಕ್ಕಳು : ಕನಕಮಾಲೆಯುಮಾಕೆಯ ಮಗಳ್ದಿರಪ್ಪ ಕನಕಲತೆಯುಂ ಪದ್ಮಲತೆಯುಂ ಸೌಧರ್ಮಕಲ್ಪದೊಳ್ ಮೂವರುಂ ದೇವಿಯರಾಗಿ ಪುಟ್ಟಿದರ್ (ಶಾಪುಪು. ೧೯೪) ; ಹರಡಿ ನೆಲಸಿದ ಮಗಳ್ದಿರಣುಗರು ತಾಯ ಕಾಯುತ ಬಿದ್ದರು (ಹೊಂಗಳು. ೩-೧೪) ; ಏಳು ಮಗಳುದಿರು ಚೋಳರಾಯನಿಗೆ (೨೦ಗೀತ. ೩೯-೦). ೨. 'ಮಗಳು' ಎಂಬುದಕ್ಕೆ ಗೌರವಾರ್ಥವಾಗಿ ಬಳಸುವ ಬಹುವಚನ ರೂಪ : ಶ್ರೀ ಪೃಥಿವೀವಲ್ಲಭ ಸಿಂಘಪೋತರಸರ ಮಗಳ್ದಿರ್ ಶ್ರೀ ಮಹಾದೇವಿ (ಎಕ. XI, ತಳ್ಕ. ೩೩-೪ ; ಶ. 815).

[ ಮಗ + – ಅಳ್. / ತಮಿ. ಮಕಳ್ ; ಮಲ. ಮೋಳ್ ; ತುಳು. ಮಗಳು ]

**ಮಗಳು** ' ಮಗಳ್ ' ನೋ.

**ಮಗಳ್ಮಾ** (ನಾ). ೧. ಸ್ತ್ರೀರೂಪದ ಒಂದು ಪೌರಾಣಿಕ ಪ್ರಾಣಿ : ತುರಗಾರೋಹಕನೊರ್ಬಂ . . . ಅಶ್ವಕಂಧರಮಂ ಮೊಕ್ಕನೆಪೋಗೆ ಪೊಯ್ದುಡೆಸೆದಿರ್ದಂತಾ ಶಿರಂ ಯೋಗಿನೀಶಿರದೊಳ್ ಪತ್ತಿಸಿದಂತೆ ಬಿರ್ದಡೆ ಮಗಳ್ಮಾವೆಂದವಂ ನೋಡಿದಂ (ಶಂತಂ. ೦೨-೬೩); ಕುಲಜರೊಳಂ ಮತ್ತಂತೆರಂ ಕುಲಜರೊಳಂ ಬೆರೆದು ತಾಂ ಮಗಳ್ಮಾಯೆನಿಸುತೆ ನೆಲದೊಳ್ವೋರ್ಪಳೆನುತ್ತ ವಾಗ್ಗಲನೆಯ ನಾಸಿಕಮನರಿದನಾ ವೀರೇಶಂ (ವೀರಬಿ. ೦೨-೫೮). ೨. ಗಂಡನೊಡನೆ ಇರುವವಳು (?) : "ಮಗಳ್ಮಾಯೆಂದು ಗಂಡನಂ ಪತ್ತಿಬಿಡದಾಕೆ" (ಕಮುದ. ಸ. ೩೩೫). 'ಮಾಳ್ಮಿಕಿ' ಪರಾ.

[ದೇ.॥ ತಮಿ. ಮಕಣ್ಮಾ. ಮಣ್ಮೈ = ಸ್ತ್ರೀಸ್ವಭಾವ, ಸ್ತ್ರೀತ್ವ]

**ಮಗಿಮಾವು** (ನಾ). "ಮಾವಿನ ಹಣ್ಣಿನ ಒಂದು ಜಾತಿ" (ಶಾಸಕೋ. ೨೬): ಮಾವು ಗೇಮರ್ಷು ಪುಳಿಮಾವು . . . ಮಗಿಮಾವು ಮಧುರಸಭರಿತ ಪರಿಮಳದ ಸೀರುಚಿಯನೀವ ಮಾವು (ನವಮೋ. ೨೪-೪೯) ; ಮೂರೆಂಬ ತಿಂಗಳಿಗೆ ಮೂರೇನು ಬಗಿಸ್ಯಾಳ ಮೂಡಲ ದಿಕ್ಕಿನ ಮಗಿಮಾವ ತಿಂದೇನಂಬುವಳ (ಓಳಗೀ. ೯೩). [ಮಗಿ ? + ಮಾವು]

**ಮಗಿಲ್**, ಮಗಿಲು (ನಾ). ಪ್ರಾಕಾರ ; ಪೌಳಿ : ಆ ಮಗಿಲೊಳಮೆಯ್ದೊಳ . . . ಲಕ್ಷ್ಮೀಮಂಡಪಮಿಂಬನಾಳ್ದು ಕಣ್ಗೆಸೆದಿಕ್ಕುಂ (ಪರ್ವಪಶ. ೦೩-೫೩); ಮಾನ್ಯದ ಮಗಿಲ್ ಹಸ್ತಂ ೪೦ ಬಣಂಬೆ ಹಸ್ತಂ ೪೦ (ಕೊಲ್ಹಾಶಾ. ೨೩-೩೨; 1209) : ಆ ಪುರಮಧ್ಯದೊಳೆರ್ಪುದು ಭೂಪನಿವಾಸದ ಮಗಿಲ್ . . . ವಿಚಿತ್ರಮಣಿಗಣಖಚಿತಂ (ಕಾಂತೀಕ್ಷ. ೦-೦೩೪). 'ಪೊಮ್ಮಗಿಲ್' ಪರಾ. ಮಗಿಲು : ಗ್ರಾಮಾಸ(?)ರ್ವ ೨೦೦೦ ಮಗಿಲು ಗ್ರಿಹೇ ಹಸ್ತ ೪೦ (ಇಆ. XIV, ೦೪೦-೨೪ ; 12ನೆಯ ಶತ) ; ಮಗಿಲು ಬಾಗಿಲುವಾಡದೊಳಗಣ ಜಗಲಿ ಚಪ್ಪರದುಪ್ಪರಿಗೆ . . . ಗಣಿಕೆಯರೊಗ್ಗಿನಲಿ ಮೆಜೆದುದು ಸತಿಯ ಭವನ (ಐಸ್ಕೃ. ೦೨-೮) ; ಮಂಡಳಿಸಿದ ಹೊನ್ನ ಮಗಿಲ ಮಧ್ಯದಲಿ ತ್ರಿಖಂಡ ಹರ್ಮ್ಯಗಳ ಹೊಂಗಳಸ (ಶೋಹಕ. ೨೦-೨೯). 'ಮದಿಲ್' ಪರಾ.

[ ದೇ.॥ ತೆಲು. ಮಗುಲು ]

**ಮಗಿಲು** ' ಮಗಿಲ್ ' ನೋ.

**ಮಗು**, ಮಂಗವು, ಮಗುವು (ನಾ). ೧. ಎಳೆಯ (ಹೆಣ್ಣು ಅಥವಾ ಗಂಡು) ಸಂತಾನ ; ಹಸುಳೆ ; ಶಿಶು ; ಏಕೆ ನಿರರ್ಥಕಂ ಮಗುವಿನಂದದೆ ಕೋಟಲೆಗೊಂಡೆನಕ್ಕಟ (ಕಾದಂಪೂ. ೬೨೩) ; ಮಗುವಿನ ಮಕ್ಕಳಾಟಿಕೆ ಮಾರಿಯಾಯಿತು ವೈರಿರಾಯರಿಗೆ (ಕುವ್ಯಾದ್ರೋ. ೫-೩) ; ಮಗುವಿನ ಸುಖಕ್ಕಾಗಿ ತಾಯಿ ತನ್ನ ಸುಖವನ್ನು ತ್ಯಜಿಸಬಲ್ಲಳು (ರಮಗಸಾ. ೦೩೪). ೨. ದೊಡ್ಡವರು ಚಿಕ್ಕವರನ್ನು ಪ್ರೀತಿಯಿಂದ ಸಂಬೋಧಿಸುವಾಗ ಬಳಸುವ ಮಾತು: ಬಾ ಮಗು, ಊಟಕ್ಕೆ ಹೊತ್ತಾಯಿತು (ರೂ.) **ಮಗವು** : ೧. "ಬಾಳಃ, ಪಾಕಃ . . . ಡಿಂಬಃ –ಈ ೯ ಮಗವು" (ಹಲಾಯು. ೬೩-೩೯೮); ನೆಲಹಿನ ಮೊಸರಂತೆ ಬೆಸ್ನೇಜಿದ ಮಗವಿನಂತೆ ಮಣಿಗಡಗದ ಕೀಲಿನಂತೆ (ಭವಸಾಮ್ಯ. ೮-೦೯೭ ಅಡಿ) ; ಮಗವೀತಂ ಕೊಂಗುಗೊಳ್ವಂ ಗಡ ಗಜಘಟೆ

ಯುಂ ತಪ್ಪ್ಪಣಿತಂ ಗಡ (ಎ.ಕ. V. ಬೇಲೂರು. ೧೭-೯೭: 1136) **ಮಗುವು :** ೧. ಮಗುವು ತಾನವೆ ತನ್ನ ಬಾಣಕೆ ಮಂಗುವೃತನ ಪೇಳಿಲ್ಲ (ಕುಮಾ.ರಾ. ೫-೨೦) ; ಮಗುವು ರಾಘವನೆಂದು ತಪ್ಪಿಸಿ ನುಡಿವ ನುಡಿ ನಿನಗೆ ನಿಗರವೇ (ತೊರವ. ೧-೯-೩೦).

**ಮಕ್ಕಳ್**, ಮಕಳು, ಮಕ್ಕಳು, ಮಗುಗಳು (ಬಹುವ) : p ಮಗ', 'ಮಗಳು' ಮತ್ತು 'ಮಗು'–ಮೂರಕ್ಕೂ ಬಹುವಚನದಲ್ಲಿ ಈ ರೂಪ ಬರುತ್ತದೆ : ೧. ಒಂದಕ್ಕಿಂತ ಹೆಚ್ಚು (ಹೆಣ್ಣು ಅಥವಾ ಗಂಡು) ಸಂತಾನ ; ಸಂತತಿ: ''ಮಕ್ಕಳೆನಲ್ಕೆ ಸಂತತಿಯೊಳಂ'' (ಶಬ್ದಮ. ೩೦) ; ಕೀರ್ತಿಧರನೆಂಬೊನರಸನಾತನ ಮಹಾದೇವಿಯರ್ಕಳ್ ಅರತಿ ರತಿ ಯೊಂದೊರಾ ಇರ್ವರ್ಗಂ ಮಕ್ಕಳ್ ಧರ್ಮಘೋಷನುಂ ಧರ್ಮಕೀರ್ತಿಯುಂ (ವಡ್ಡಾ.ರಾ. ೦೦೨-೦೩) ; ಭೃತ್ಯರರಸುಗಳ್ಗೆ ಪೆಂಡಿರ್ಮಕ್ಕಳೋಪಾದಿಯಲ್ಲಿ ಸಂಪತ್ತಾದೊಡಂ ವಿಪತ್ತಾದೊಡಂ ಬಿಡರ್ (ಕುಸುಮಾ. ೯೨-೨೭) ; ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ (ಬಸವ. ೬೩೯); ಓಡಿ ಬರುತಿಪ್ಪ ಹುಲುಪಜೀಯುತನ ಹೆಮ್ಮೆಯೇ ಕ್ಷತ್ರಿಯರ ಮಕ್ಕಳಿಗೆ (ಕುಮಾ.ರಾ. ೨.೩೮) ; ಮಕ್ಕಳಿದ್ದರೆ ಮನೆ, ಒಕ್ಕಲಿದ್ದರೆ ಊರು (ಗಾದೆ) ; ಮಗುಗಳ ವ್ಯಾಕಿಕ್ಕನ ಆಡಿಸಿದೆಶೋಡೆ (ಪುರಂದ. ೪-೦೬೬-೦) ; ಮನೆಯ ಮಕ್ಕಳೆಲ್ಲ ಬಿಕ್ಕಿದರು. ಒಂದೆರಡು ಮಗುಗಳು ಗಾಬರಿಯಾಗಿ ಕೂತವು (ಸಮಾಜ. ೩೦೪). ೨. 'ಮಗ' ಎಂಬುದಕ್ಕೆ ಗೌರವಸೂಚಕವಾಗಿ ಬಳಸುವ ಬಹುವಚನ ರೂಪ : ಕರುವದ ಅಂಗೀರಸಗೋತ್ರದ ಇ(ಈ)ಶ್ವರನ ಕತ್ತಿಗನ ಮಕ್ಕಳು ನಾರಾಯಣಭಟ್ಟರಿಂಗೆ . . . ಮೂಡೆ ೧೦ (ಎ.ಕ. XVII, ೦೬೨-೩೩ ; 1256) ; ಲಿಂಗಾದೀಕ್ಷಿತರ ಮಕ್ಕಳು ತಿಂಪಣಭಟ್ಟರಿಗೆ ಗ ೬ . . . ಧಾರಾ ಪೂರ್ವಕವಾಗಿ ಶಿವಾರ್ಪಣವಾಗಿ ಬಿಟ್ಟೆಹೇವೆ (ಎ.ಕ. VII, ಶಿವಮೊ. ೮೨-೨೨ ; 1683). **ಮಕ್ಕಮಕ್ಕಳು, ಮಕ್ಕಳ ಮಕ್ಕಳ್, ಮಕ್ಕಳುಕ್ಕಳ್** = ವಂಶಪರಂಪರೆ; ಸಂತತಿ : ಚಂದ್ರಸೂರ್ಯರುಳ್ಳನಕಲೂ ಅವರ ಮಕ್ಕಮಕ್ಕಳು ತರಾಂತರ ವಲ್ಲೂ . . . ಪೊಕ್ಕಲಿದ್ದರು (ಎ.ಕ. XII, ಶಿರಾ. ೭೬-೦೬ ; 1379) ; ಬೀರ ನೊಬವ್ವು ಪೆಸ್ಸಿ ಕಿಬ್ಬನಾಡ ಖರಿಯ ಬಿದಿರೂರ ಕಲ್ನಾಡುಗೊಟ್ಟಂ ಗಂಗನ ಮಕ್ಕಳ ಮಕ್ಕಳ್ವರೆಗಂ ಸಲ್ಗುಂ (ಎ.ಕ. X, ಗೌರಿಬಿ. ೪-೨೯; 920) ; ಮನೆ ದೀವಿ ಮಕ್ಕಳಂ ಪಡೆದುಬಳಾಜನಂ ನೆರೆದ ಮಕ್ಕಳ ಮಕ್ಕಳ ನೀಳ್ದೊಂದು ದುಂಗುಡಿವಿಡಿದೀವ ಚಾಗಂ . . . ವೃದ್ಧರಾಜ್ಯಮುಂಮುಂದೇನೆಸೆದತ್ತೊ ತೊಡರ್ದಿರೆ (ಆದಿಪು. ೨-೨೯) ; ಪಂಣಮಾಂಡಪಗ್ಗಡೆಯರು ತಾವು ಕೊಣ್ಣಾಕೊಟ್ಟ ನಂದಾದೀವಿಗೆ ಸೊಡರೆಣ್ಣೆಗೆ ಆ ಸ್ಥಾನಿಕ ಗೋಣಿಯಜೀಯ ಪರದೇಸಿಯುಪನವರ ಮಕ್ಕಳುಕ್ಕಳ ವಂಶೋದ್ಭವರ ವಸಂ ಹೋಗೆ ಹಾಗ ವಡ್ಡಿಯಿಂ ದೇವರ ಭಂಡಾರವಾಗಿ ಕೊಟ್ಟ ಗದ್ಯಾಣಂ ಮೂಱು (ಎ.ಕ. XIV, ತಿರುಮ. ೨೭೦-೪; 1199). **ಮಕ್ಕಳ ತಾಯಿ** = (ಎಳೆಯ ಮಕ್ಕಳಿಗೆ ತಾಯಿಯಂತೆ ಅಗತ್ಯವಾದ) ಒಂದು ಬಗೆಯ ಔಷಧಿಯ ಗುಣವುಳ್ಳ ಬೇರು ; ಬಜೆ ; ಉಗ್ರಗಂಧಿ : ''ವಚಾ, ಉಗ್ರಗಂಧ . . . ಶತಪರ್ವಿಕಾ — ೫ ಬಜೇ ಹೆಸರುಗಳು. ಇವನ್ನು ಮಕ್ಕಳತಾಯಿ ಯೆಂತಲೂ ಕಮಾವ ಕಡ್ಡಿಯೆಂತಲೂ ಅನ್ನುವರು'' (ಸಿದ್ಧಾಂತಿ. ೦೩೩). **ಮಕ್ಕಳ ಸಂತಾನಕಟ್ಟು** = ಆಸ್ತಿಯ ಹಕ್ಕು ಮಕ್ಕಳಿಗೆ ಬರುವ ನಿಯಮ; ಸಂತತಿಕಟ್ಟು : ಉತ್ತರದಲ್ಲಿರುವ ನಾಡವರೂ ದಕ್ಷಿಣದಲ್ಲಿರುವ ಬಂಟರೂ ಅಳಿಯಸಂತಾನಕಟ್ಟನ್ನೇ ಅನುಸರಿಸುತ್ತಾರೆ. ಪರಿವಾರ ಬಂಟರಿಗೆ ಮಕ್ಕಳ ಸಂತಾನಕಟ್ಟು (ಕುಳುವಾ. ೩೦). ' ಅಳಿಯಸಂತಾನಕಟ್ಟು ' ಪರಾ. **ಮಕ್ಕಳಾಟಿಕೆ** = ೧. ಮಕ್ಕಳ ಆಟದ ಸಾಮಾನು : ಆ ಅಂಗಡಿಯಲ್ಲಿ ಬಗೆ ಬಗೆಯ ಮಕ್ಕಳಾಟಿಕೆಗಳಿವೆ (ರೂಢಿ). ೨. ಮಕ್ಕಳಂತೆ ವರ್ತಿಸುವುದು ; ಹುಡುಗಾಟ : ಮ ಗು ವಿ ನ ಮಕ್ಕಳಾಟಿಕೆ ಮಾರಿಯಾಯಿತು ವೈರಿರಾಯರಿಗೆ (ಕುಮಾ.ರಾ. ೩-೩) ; ಹಾಗೆಲ್ಲ ಮಕ್ಕಳಾಟಿಕೆ ಮಾಡ ಬೇಡ (ಬಿ.ಐ. ೩೩). **ಮಕ್ಕಳುಮಱಿ**, **ಮಕ್ಕಳುಮರಿ** = ಸಣ್ಣ ಪುಟ್ಟ ಮಕ್ಕಳು : ಹಜತೆಗೆದು ಕೆಲಸಾರಿ ಮಕ್ಕಳುಮಱಿಗಳಿಗೆ ರಣಮೇಕೆ (ಕುಮಾ.ಭ. ೩-೦೭) ; ಅವರ ಮನೆತುಂಬ ಮಕ್ಕಳುಮರಿಗಳಿವೆ (ರೂಢಿ). **ಮಕ್ಕಳೊಂದಿಗ** = ಅನೇಕ ಮಕ್ಕಳಿರುವ ವ್ಯಕ್ತಿ : ನಾವು ಮಕ್ಕ ಳೊಂದಿಗರು, ಒಕ್ಕಲು ಕುಳ, ದೇವರು (ಪಶ್ಚಿಮ. ೩೪-೩). **ಮಕ್ಕಳೊಂದಿಗಳು** = ಅನೇಕ ಮಕ್ಕಳಿರುವವಳು : ಕುಟುಂಬಿನೀ, ಪುರಂಧ್ರೀ . . . ಪುತ್ರ ಭೃತ್ಯಾದಿ ಕುಟುಂಬವುಳ್ಳ ಸ್ತ್ರೀಯ ಹೆಸರು, ಮಕ್ಕಳೊಂದಿಗಳು (ಸಿದ್ಧಾಂತಿ. ೧೬೪). **ಮಕ್ಕಳೊಂದಿಗಿತ್ತಿ** = ಮಕ್ಕಳೊಂದಿಗಳು : ಮಳೆರಾಯನ ಹೆಂಡತಿ ಮಕ್ಕಳೊಂದಿಗಿತ್ತಿ (ಜಕ್ಕ.ಹು. ೪೦). **ಮಕ್ಕಳ್ಗಿಡು** = ಮಕ್ಕಳನ್ನು ಕಳೆದುಕೊಳ್ಳು : ರಾವಣನಂ ಧೂಮಂ ಸುತ್ತಿದಂತೆ ಜೀವಂಗಿಡಿಸಿ, ಲಕ್ಷ್ಮಣನಂ ಮಕ್ಕಳ್ಗಿಟ್ಟರಂತೆ ಗೋಳುಂಡಗೊಳಿಸಿ (ಧರ್ಮಾಮೃ. ೬-೯೩).

[ < ಮಗ./ತಮಿ. ಮಕವು ]

**ಮಗುಂ** ' ಮೋಘಮು ' ನೋ.

**ಮಗುಗೊಲೆ** (ನಾ). ಶಿಶುವನ್ನು ಕೊಲ್ಲುವುದು : **ಶಿಶುಹತ್ಯೆ** : ನಾ ಮೊದಲೆ ಹೇಳಲಿಲ್ಲವೆ ? ಈ ಮಗುಗೊಲೆಯ ಕೆಲಸ ಬೇಡ ಎಂದು ? (ಶಂಕ್ರಶ. ೨೩-೨೨). [ ಮಗು + ಕೊಲೆ ]

**ಮಗುಚು** 'ಮಗುಚ್ಚು' ನೋ.

**ಮಗುಚುಕಟ್ಟಿಗೆ** (ನಾ). (ಉಕ) (ಹಂಚಿನ ಮೇಲೆ ಬಿಸಿಯಾಗಿರುವ ದೋಸೆ ಮೊದಲಾದುವನ್ನು) ತಿರುವಿಹಾಕಲು ಉಪಯೋಗಿಸುವ ಮರದ ಅಥವಾ ಕಬ್ಬಿಣದ ಸಾಧನ ; ಕುರುಪಿ ; ಕಡಚಿ : ಸೀತಮ್ಮನು ಮಗುಚುಕಟ್ಟಿಗೆಯೊಡನೆ ಬರುವಳು (ಹುಚ್ಚು.ಟಿ. ೨೬).

[ ಮಗುಚು (< ಮಗುಚ್ಚು) + ಕಟ್ಟಿಗೆ$_1$ ]

**ಮಗುಚುಕೈ** (ನಾ). = ಮಗುಚುಕಟ್ಟಿಗೆ : ಮಗುಚುಕೈಯ ತುದಿಯು ತೆಳುವಾಗಿದ್ದರೆ ದೋಸೆಯನ್ನು ತೆಗೆಯಲು ಸುಲಭವಾಗುವುದು (ರೂಢಿ).

[ ಮಗುಚು (<ಮಗುಚ್ಚು) + ಕೈ$_2$ (<ಕಯ್$_2$) ]

**ಮಗುಟ$_1$**, ಮಕುಟ$_1$ (ನಾ). ೧. (ಮಡಿಗಾಗಿ ಉಡುವ) ನಾರು, ರೇಷ್ಮೆ ಮುಂತಾದುವುಗಳ ಧೋತ್ರ : ತರದ ಪಟ್ಟಾವಳಿಯ ಮಗುಟ ಗಳ ಹೇರ್ಗಳನು ತಂದು ದೇಶಂಗಳಿಂದ (ಕೃಷ್ಣಿ. ೨-೯೬) ; ಅನಂತರಾಯರು ಮಗುಟ ಉಟ್ಟು ಸಾಂಗವಾಗಿ ಪೂಜೆಮಾಡಿದರು (ಕಂಕಣ. ೦೨೨). ೨. (ಬಿಳಿಯ) ಉಣ್ಣೆಯ ಧಾವಳಿ : ಅಗಸಿಮರದಡಿಯಲ್ಲಿ ಮಗುಟ ಕಂಬಳಿ ಹಾಸಿ ಸೊಗಸು ಮಾಡ್ಯವರೆ (ಜಾನಪ. ೭೦). **ಮಕುಟ$_1$** : ೧. ಬಿಸಿ ನೀರಿನಿಂದ ಸ್ನಾನಮಾಡಿಸಿ ಅವನಿಗೆ ಮಕುಟವನ್ನು ಮಡಿಯುಡುವುದಕ್ಕೆ ಕೊಟ್ಟು (ಕಥಾಮಂ. IV, ೦೨೩) ; ಶಾಲೆಗೆ ಹೋಗುವ ಮುನ್ನ ಅವನೇ ಮಕುಟವನ್ನು ಸುತ್ತಿಕೊಂಡು ಹೊಳೆಯಿಂದ . . . ನೀರು ತಂದು ಕೊಡುತ್ತಿದ್ದ (ಘಂಶವೃ. ೩೦೨). [ ದೇ.॥ ತೆಲು. ಮುಕಟ, ಮುಕ್ಕಟ ]

**ಮಗುಟ$_2$**, ಮಗುಡ$_1$ (ನಾ). ಕಿರೀಟ ; ಮಕುಟ : ಸಗುಣಗುಣಾಢ್ಯ ಭೂಪತಿಗಳೇಕಾಂತದಿ ಮಗುಟಗಳೊಂದೊಂದೊರಸಿ ಉಗುವ ಮಾಣಿಕ ಹೇಮರಜ ನೂಱುಕೋಟಿಗೆ ಮಿಗಿದು ಕೊಟ್ಟಿಹರು ವೈಶ್ಯರಿಗೆ (ಮೋಹಿತ. ೨೦-೩೩); ಅಳವಟ್ಟ ಮಣಿಯ ಕುಂದಣದ ಮಗುಟದ ಸೊಬಗಿನ, ಕಿಱುಜವ್ವ ನದ ಬಿಂಕದ, ನಡೆವೊಂದು ಗಾಡಿಯ ಪುಷ್ಪಲಂ . . . ಪೋಪಮಸರದೊಳ್ (ರಾಮಾಶ್ವ. ೯೬-೦೬). **ಮಗುಡ$_1$** : ''ಮಗುಡಮೆಂದು ಮಕುಟಂ'' (ಶಬ್ದಮ. ೨೪-೩೦೩) ; ಟಕಾರಕ್ಕೆ ಡಕಾರಂ . . . ಮಕುಟ — ಮಗುಡ (ಶಬ್ದ. ೩೩೩ ಪ್ರಯೋ) ; ಪೊಸಜಾವನ್ನದಣ್ಣು ನಿಱುವಿಡಿದುಟ್ಟೊಳ್ಳುಡೆಯ ಸೊಗಸು ತಲೆಯ ಮಗುಡದಂದಂ . . . ಮನಂಗೊಂಡುದು (ಅದ್ಭುತ. ೩೩-೨೩).

[< ಸಂ. ಮಕುಟ ]

**ಮಗುಡ₁** 'ಮಗುಟ್ಚು₂' ನೋ.

**ಮಗುಡ₂** (ನಾ). ಒಂದು ಊರಿನ ಹೆಸರು : **P** ಈಗಿನ ಬಾದಾಮಿಯ ಸಮೀಪದ ಮಹಾಕೂಟ : ಬುಧವಾರದನ್ದು[೦] ಮಗುಡಕೆ ಮಂದು ನನ್ದು ಕೇಸ(ಶ್ವ)ರಮು(ಮಾೞ)ನೆಲ್ಲುಂಗೆಯುಮಂ ಕೊಟ್ಟ[ರು] (ಇಅ. X, ೦೦೯-೯ : 934). [ ? ]

**ಮಗುರ್ಚು** 'ಮಗುಟ್ಚು' ನೋ.

**ಮಗುವು** 'ಮಗಂ' ನೋ.

**ಮಗುವುತನ** (ನಾ). ಎಳವೆ ; ಬಾಲ್ಯ ; ಶೈಶವ : ಮಗುವುತನದಲಿ ಬೊಂಬೆಯಾಟಕೆ ಮಗುವನೇ ತಹೆನೆಂದು ಬಂದಳು (ಕುಮಾ.ಆ. ೩-೦೭) : ಜಗದ ಜೀವರ ಯಂತ್ರಮುಖಮಾಹೆಗಳನಾಡಿಸಿ ತೋರ್ಪ ನಾಟಕಿ ಮಗುವುತನದಲಿ ಬಾಲಕರ ಕೇಳೀಕಲಾಪದಲಿ ಸೊಗಸುವುದು ಸೋಜಿಗವಲಾ (ತೊರಾ. ೦-೯-೭೭). [ಮಗುವು (<ಮಗು) + —ತನ]

**ಮಗುಸಿ** (ನಾ). ಒಂದು ಊರಿನ ಹೆಸರು : ತಮ್ಮಿಷ್ಟಂ ಮಗುಸಿ ಮಾಕಳನ ದೇಗುಲಕ್ಕೆ ಮುಂದಿ × × × ಮಳ್ಗಟ್ಟಿಸಿದ (ಎಕ. VIII, ತೀರ್ಥ. ೯೭೯-೦೯ ; 954). [ ? ]

**ಮಗುಳ್** 'ಮಗುಟಿ₁' ನೋ.

**ಮಗುಳಿಚು** 'ಮಗುಟ್ಚು' ನೋ.

**ಮಗುಳು** 'ಮಗುಟಿ₁' ನೋ.

**ಮಗುಳೆ** 'ಮಗುಟಿ₃' ನೋ.

**ಮಗುಳ್ಚು** 'ಮಗುಟ್ಚು' ನೋ.

**ಮಗ್ಗುಳ್ದು** 'ಮಗುಟಿ₁' ಪರಾ.

**ಮಗುಳ್ದಂ** 'ಮಗುಟ್ದು' ನೋ.

**ಮಗುಟಿ₁, ಮಗುಳ್, ಮಗುಳು** (ಕ್ರಿ). ಮಗುಳ್ದು, ಮಗುಟ್ದು (ಭೂತನ್ಯೂ). ೧. ಹಿಂತಿರುಗು ; ಮರಳು : "ಮಗುಟಿ₁–ನಿವರ್ತನೇ (ಹಿಂದಿರುಗು)" (ಕವುಧಾ) ; ಶಂತನು ಪೊೞಲ್ಗೆ ಮಗುಟ್ದು ಪಂದವರಯ್ಯನಪ್ಪ ದಾಶರಾಜನಲ್ಲಿಗೆ ಕೂಸಂ ಬೇಡೆ ಪೆರ್ಗಡೆಗಳನಟ್ಟಿದೊಡೆ (ಪಂಭಾ. ೦-೭೦ ವ) : ಸೃಗಾಲತನಯನಂ ತದ್ರಾಜ್ಯದೊಳ್ ನಿಲಿಸಿ ಮಗುಟ್ದು ಬಂದು ಮಧುರಾಪುರದ ಪೊಱಪೊಱಲನೆಯ್ದಿದಲ್ಲಿ (ಜಗಪು. ೯-೭೩ ವ) : ಮನದನ್ನಳಪ್ಪ ಕೆಳದಿಗೆವಾನವಂ ಮುಂದಿಟ್ಟು ಬಚ್ಚಿಕ ಕಟ್ಟಿಪಿದೊಡವಳಾತನ ರೂಪುಗಂಡು ಕಣ್ಗಂ ಮನಕ್ಕಮುದ್ಗಾರವೆತ್ತು ಭೋಂಕನೆ ಮಗುಟ್ದಳ್ (ಚುಚೋಕ. ೨-೩೩). ೨. ಬೋರಲಾಗು ; ಮುಖ ಅಡಿಯಾಗು : 'ಪೆಡಂಮಗುಟಿ₁' ಪರಾ. **ಮಗುಳ್** : ೧. ಶ್ರೀಮತು ಕೃಷ್ಣಕನ್ನಿಹ ದೇವರು ಜೋತಿ ಜಾತ್ರೆಮಾಡಿ ಮಗುಳ ಬನ್ದು (ಸೌಇಇ. IX-i, ೭೯-೭; 11ನೆಯ ಶತ) ; ಅಲ್ಲಿಂ ಮಗುಳ್ದುಬರುತಾ ಬಳಿಯಲಾ ಮುನಿವರರ ಚರಣಂಗಳ ಕೆಲದಲಿಳಿಪಿದನು ಮಂಗಿಯ ಶವವನಾ ಭಟನು (ಶಾಕ್ಯಶಾ. ೨೦-೪೦). ೩. ಮಡಿಚು ; ಮಡಿಸು : ರಥದಲಿ ಮಗುಳ್ದ ಮಂಡಿಯ ದೃಷ್ಟಿಯೋರೆಯಬಾಗಿದವಯವದ . . . ಬಲುಗೈ ಕರ್ಣ ಮೂದಲಿಸಿದನು ಪವನಜನ (ಕುಮಾದ್ರೋ. ೦೩-೨೦). **ಮಗುಳು** : ೧. ಎನ್ನ ಮುಂದು ಮನೆಗೆ ಮಗುಳಿದ ಮಾಡದಿ . . . ಬೇಸರಳಿ ನಾನಿಲ್ಲದೆ ? (ಗಿರಿವಂ. ೩೪-೦೩).

**ಮಗುಟಿ₃, ಮಗುಳೆ** (ಅ). ಮತ್ತೆ : ಪುನಃ ; ತಿರುಗಿ : ಬಡವರ್ಗೆಮಗೇ ಪ್ರತಂಗಳ್ ಪಿಗೆಯ್ದುವು ೞವಂ ನಿನಗಿತ್ತವರ್ಗೆ ಮಗುಟಿ₃ ಕೊಟ್ಟು ಬರ್ಪಂ ಬಾ (ಜಾವುಂಪು. ೬೮) ; ನೀವೀ ಕಥೆಯಂ ಮಗುಟಿ₃ ಪೇೞಲ್ ಬಲ್ಲಿರಿ (ತುಕತಂ. ೨೦-೦೦) ; ಭೂಪಾಲಂ ಸೌಂದರವತಿಯುಂ ಭೋಂಕನೆ ಸಿಂಗರಿಸುಪುದೆಂದುಸುರ್ದು ಮಗುಟಿ₃ ಕಬಿಪಿದನವರಂ (ಉದ್ಯಟ. ೮-೨೦). **ಮಗುಳೆ** : ನೆಗೆಯುಲುಫೆಯುಂಫೆ ಶಬ್ದ ಒಗೆಯೆ ಮುಂಮುಖಿ ಶಿವಂ ಮಗುಳೆ ಮೂರ್ಧ್ನಿಘ್ರಾಣವೆಸಗಿ ನುಡಿದಂ (ಸಾಪಂಶ. ೧-೮೮) : ಆಗಳಲ್ಲಿಂ ಮಗುಳೆ ನೆಲಸಿದ ಬೇಗದಲಿ ಸಿರಿವೊಳಲ ನರಹರಿ (ಸಂಪಕ. ೯-೦೨೮) ; ಕಗ್ಗಲ್ಲಗಳೊಸರ್ದುವಾ ಕೊಯ್ದು ಫಲತತಿ ಮಗುಳೆ ಫಲಮಾದುವು . . . ಪಟ್ಟೆಲುಬ್ಬಿ ಪೊತಳದೊಳವತರಿಸಲು (ತಂತ್ರ. ೪-೩೪). 'ಮಗುಟ್ದಂ' ಪರಾ.

ಮಗುಟಿ₃ಮಗುಟಿ₃, ಮಗುಳೆಮಗುಳೆ (ದ್ವಿರುಕ್ತಿ) : "ಪ್ರತಿಕ್ಷಣಂ, ಅಭೀಕ್ಷ್ಣಂ, ಭೂಯಃ, ಅಸಕೃತ್, ಮುಹುಃ – ಈ ೫ ಮಗುಟಿ₃ ಮಗುಟಿ₃" (ಹಲಾಯು. ೦೨೦-೩೯) ; ದಿವ್ಯಾಹಾರವಂ ಮಗುಟಿ₃ಮಗುಟಿ₃ ಬಡ್ಡಿಸೆ (ವಡ್ಡಾರಾ. ೮೯-೨೪) : ಮಗುಳೆಮಗುಳೊಡ್ಡಿದನು ಹೇರಾಳದಲಿ ಧನವನು (ಕುಮಾಸ. ೦೪-೩೪). **ಮಗದೊಬ್ಬ**=ಮತ್ತೊಬ್ಬ ; ಬೇರೊಬ್ಬ : ಬ್ರಹ್ಮಶರ್ಮನೆಂಬ ವಿದ್ವಾಂಸನಿದ್ದನು. . . ಈತನ ಬಳಿಯಲ್ಲಿ ಒಬ್ಬ ಶಿಷ್ಯ ವ್ಯಾಕರಣವನ್ನೂ . . . ಮಗದೊಬ್ಬ ತರ್ಕವನ್ನೂ ಓದುತ್ತಿದ್ದರು (ನೀತಿಕಂ. VII, ೦೩). **ಮಗುಳೊಂದು** , **ಮಗದೊಂದು**=ಮತ್ತೊಂದು ; ಬೇರೊಂದು: ಎಚ್ಚಱು ಬಹಳ ಪೋಪರೆ ಶಕ್ಯವಿಲ್ಲೆಂದು ಮಚ್ಚರವಳಿದು ಕೊಂಡಾಡಿ ಸ್ವಚ್ಛದಿ ಮಗುಳೊಂದು ಬುದ್ಧಿಯ ನೆನೆದುಕೊಂಡುಚ್ಚರಿಸಿದ ಮನದೊಳಗೆ (ಮೋಹತ. ೦೦-೨೦); ಈ ಪ್ರಾಣಿಯ ಹಿಂದೆ ಅಂತಹುದೇ ಮತ್ತೊಂದು ಪ್ರಾಣಿ; ಅದರ ಹಿಂದೆ ಮತ್ತೊಂದು ; ಅದರ ಹಿಂದೆ ಮಗದೊಂದು (ಗಂಕ್ರ. ೩); ಕನ್ನಡಲಿಪಿಯ ಬೆಳವಣಿಗೆಯಲ್ಲಿ ಅದರ ಪ್ರಾರಂಭದಿಂದ ಕ್ರಿ.ಶ. ೫ನೆಯ ಶ.ದ ವರೆಗೆ ಒಂದು . . . ಕ್ರಿ.ಶ. ೧೪ನೆಯ ಶ. ದಿಂದ ೧೮–೧೯ನೆಯ ಶ.ವರೆಗೆ ಮಗದೊಂದು . . . ಹೀಗೆ ಐದಾರು ಮುಖ್ಯಮಾದರಿಗಳನ್ನು ಕಾಣುತ್ತೇವೆ (ದ್ರಾಭಿ. ೬೨). [ <ಮಗುಟಿ₁ ]

**ಮಗುಟ್ಚು**, ಮಗುಚು, ಮಗುರ್ಚು, ಮಗುಳಿಚು, ಮಗುಳ್ಚು, ಮೊಗಚು, ಮೊಗುಚು (ಕ್ರಿ). ೧. ಹಿಂದಿರುಗಿಸು; ಮರಳಿಸು : "ಮಗುಟ್ಚು – ಪರಾಙ್ಮುಖೀಕರಣೇ (ಹಿಂದಿರುಗಿಸು)" (ಕವುಧಾ); ತುಱುವಂ ಮಗುಟ್ಚು (ಇಂ. ೦೯೪೭, ಹಾಸುಗ.೨೦೩-೩೩; 850) ; ಗೋಗ್ರಹಣದೊಳ್ ತನಗಾಗಿ ಕಾದಿ ತುಱುವಂ ಮಗುಟ್ಚಿದುದುವಂ ನೆನೆದು (ಪಂಭಾ. ೦೨–೦೭ ವ) ; ಬಿನ್ನಾಂಡಿ ತುಱುವ ಮಗುಟ್ಚಿ ಸುರಗತಿಗೆ ಸನ್ದ (ಮೈಆಂ. ೦೯೪೦, ೨೩-೦೩; 1030). ೨. ಕಾರು; ವಾಂತಿಮಾಡು: ತೆಗೆದಂಬುಜಮಧುರಸವುಂ ಪಗಲೆಲ್ಲಂ ಕರಪುಟಂಗಳಿಂ ಪೀರ್ದುದನಾ ಗಗನಪಥಶ್ರಮದಿಂ ರವಿ ಮಗುಟ್ಚಿದಂತಾಯ್ತು ಮಿಸುಪ ಕೆಂಬಿಸಿಲುಗಳುಂ (ಕಾದಂಪೂ. ೩೦೦); ಆ ತಪನಂ ತಪನೀಯದೀಧಿತಿಪ್ರಸರಮನಟ್ಟಿಸಲ್ ನೆಱೆಯದಿಂತು ಮಗುಟ್ಚಿದನೆಂಬಿನಂ ವಿರಾಜಿಸಿದುದು ಪೊಂಬಿಸಿಲ್ (ಕುಸುಮಶ. ೪-೯); ವಿಟಬಾಯ್ಗಳಿಂ ನೆಣನುಗೆ ನೆತ್ತರುಚ್ಚಳಿಸೆ ಜಾದಿನ ಬಟ್ಟು ಮಗುಟ್ಚುವಂತೆ ಭಂಡಣದೆಡೆಯೊಳ್ ಪೊಣರ್ವ ಪಲಮಾನೆಗಳಂ ಕಡಪಿತ್ತದೊಂದು ಮನ್ನಣೆವಡೆದಾನೆ (ಕಬ್ಬಿಗಕಾ. ೨೮೪). ೩. ಅರೆ ; ಸಣ್ಣಿಸು ; ತೇಯು : ತಮ್ಮ ಮುಂ ನೆರೆಪಿದಾಯುಷ್ಯಂಬರಂ ಮಾಯಮಾಗದು ಮೆಯ್ ಸಣ್ಣಿಗೆಯೊಳ್ ಮಗುಟ್ಚಿದೊಡವೇಂ ದುಃಖಿಕ್ಕವರ್ ನೋಂತರೋ (ಅದಿಪು. ೩-೯೩) : ಗಂಧನಿಷದ್ಧರಕ್ಕೆ ನವಘರ್ಮಂ ಗಾತ್ರದೊಳ್ ಪೊಣ್ಮೆ ಪಷ್ಪಳಿಸಲ್ ಕುಟ್ಟಿ ಮಗುಟ್ಚುವರ್ ಪರವಿಳಾಸೋದ್ದಾಮೆಯರ್ ಭಾಮೆಯರ್ (ಕುಸುಮಶ ೨-೦೦೭);ತೆರಳ್ದ ಕಂಪು ನೆಲದೊಳ್ ನಱುಸುಯ್ಗಳ ಗಾಳಿ ತೋಟಿಯಿಂ ತೆಗೆದು ಮಗುಟ್ಚಿ ಕತ್ತುರಿ ಮಗುಟ್ಚುವರಲ್ಲಿಯ ಘಟ್ಟಿವಳ್ತಿಯರ್ (ಸೂಕ್ತಿಸು. ೪-೦೦೪). 'ಗಟ್ಟಿಮಗುಟ್ಚು' ಪರಾ. ೪. ನಂದಿಸಂ ; ಆರಿಸು : ಕಾಲಸೊತ್ತೆಂಗುಂ ತಂಬುಲಮಿಕ್ಕೆಂಗುಂ ತಲೆಯನೆಗುರಿಸೆಂಗುಂ . . . ಬಾಲೆ ಸೊಡರಂ ಮಗುಟ್ಚೆಂಗುಂ (ಪಂಚತ. ೦೦-೮೨). **ಮಗುಚು** : ೧. ತುಱು ಪರಿಯೆ ಕಾದಿ ತುಱುವ ಮಗುಚಿ ಸುರಲೋಕಪ್ರಾಪ್ತನಾದ (ಎಕ. VII, ಶಿಕಾ. ೩೩೩-೩; 1200); ಜನಪ ಮಾಡಿದ ಹಂಗ ಮಗುಚುವದನಗೆ

ಲೀರುವದಲ್ಲ ಚತುರಾನನಪರಮಾಯುಷ್ಯಪರಿಯಂತಂ (ತೊರಾ. ೪-೩-೨೦); ಅಂಗದೆ ಪಿಂದೆ ಹಲವು ಕಾಲಂ ತನ್ನಂಗದ ಮೇಲೆ ಧರಿಸಿಕೊಂಡಿರ್ದಾ ಪಂಗಂ ಮಗುಚುವೆನೆನುತುಜಿ³ ಭಾವಿಸಿ (ಜಯಸಾ. ೧೩-೧೧). ೫. ಹಿಂದಿರುಗು; ಮರಳು: ಪೆಗಲ ಹಿರಿಯುಬ್ಬಣವ ಕೈತಳ ಮಗುಚಲಮ್ಮದು ವಾಘೆಯಲಿ (ಕುಮ್ಯಾ. ೩-೦೩); ಕೌರವಯೋಧಶ್ರೇಷ್ಠರು ಮರಳವೇ ಹೊರಕಾಗಿ ಮಗುಚಿ ಬರುವದಿಲ್ಲವೆಂದು ಯೋಚಿಸಿ (ಕೃಪಾಳೀ. ೬೮). ೬. ಸುತ್ತು; ತಿರುಗು: ಮಗುಚುವ ಧರಕಿಡಬಿಲಕೊಳಿದಾ ತೇಜ ಮೊಗಗೊಟ್ಟು ಸರಿವಾಗ ಹಮುಕೆ ಮೊಗಗಳೆರಡೂ ನಾಲ್ಕೊ ಯೆಂಟೊ ಪೊ ಅಗಣಿತ ಮೊಗವೊಯೆಂದೆನೆ ವಿರಾಜಿಸಿತು (ಭರತ. ೨೪-೨೩). ೭. ತಳಮೇಲು ಮಾಡು; ಬುಡಮೇಲುಮಾಡು: ಬಿಜಗಾಳಿ ಗಿರಿಗಳ ಮಗುಚಿ ಮುಜಿ³ದುವು (ಕುಮ್ಯಾ. ೧೩-೪೦); ತೊಳೆಸುವಾಗ ಅಥವಾ ಮಗುಚುವಾಗ ಕೈಯನ್ನು ಹೆಚ್ಚು ಎತ್ತರಕ್ಕೆ ಎತ್ತುವಂತೆ ಆಗಬಾರದು (ಅಡುಗೆ. ೦೩). ೮. ಅಡಿಮೇಲಾಗು; ಬೋರಲಾಗು: ಎಲ್ಲಿಯುರಿ ಪತಿತ್ವವೋ ಹಡಗೆಲ್ಲಿ ಮಗುಚುವುದೊ (ಶತಕೋ. ೩೬-೧೧). ೯. ಕವಿ; ಆವರಿಸು: ಜಲನಿಧಿ ಮಗುಚಿ ಮಹಿಯನು ಮೊಗೆವ ಮಗುವಿನ ನುಡಿಗೆ ಮೈಗೊಡುವ . . . ಕೃಪೆಯುನ್ನಿನ್ನಲಿ ತೋಜಬೇಕು (ಕುಮ್ಯಾ.ಶ. ೩-೬೨); ಕೆಲವೊಮ್ಮೆ ಪ್ರವಾಹ ಹೆಚ್ಚಿ ದಡವನ್ನು ಕೊರೆಯುವುದೂ ಮೇಲೆ ಮಗುಚಿ ಪರಿಯು ವುವೂ ಸಹಜ (ಸಂಕೋರ. ೬೩); ಊರಿಗೆ ಊರೇ ಮಗುಚಿ ಬಂತು (ಸಂತಾಪ್ಮು. ೬). ಮಗುಚ್ಚಿ: ೧. ವಿಂಣ್ಣಗಾವುಣ್ಣ ಓಟೂರ ತುಜು ಗಿವಲಿ ತುಜುವ ಮಗುಚ್ಚಿ ಹಲರು ಕೊಂನ್ನು ಸುರಲೋಕಪ್ರಾಪ್ತನಾದ (ಎಕ. VIII, ಸೊರಬ. ೭೨-೫; 1034?); ಕಾದಿ ತುಜುವಂ ಮಗುಚ್ಚಿ (ಮೈ.ಆಂ. ೦೯೪೩, ೭-೬; 1150). ೧೦. (ಚೀಲ, ಬಟ್ಟೆ ಮೊದಲಾದುವು ಗಳಂತೆ) ಒಳಗನ್ನು ಹೊರಗೆ ಮಾಡು: ಪ್ರಾರಬ್ಧಸ್ವಾಂತಗವಾನಂ ಮಹಾ ಪುರುಷನ ಲಕ್ಷಣಮೆಂದಿ ಕುಸಿಯಲಾಗದೆಂದು ಖಿಂಜಂ ಪೊಳೆಗಾಗೆ ಮಗುಚ್ಚಿ ನೀಟಿಯಂ ತಿದಿಯುವುಮನೇಟಿಯಂ ಪಕ್ಕಿ ಕೊಂಡು ನೆಗೆದು (ಬಂಹಂ. ೪-೩೭ ಪ). ಮಗುಳಿಚು: ೧. ಖಂಡಿಯದ ಮೊನೆಯುಲಿ ಮಗುಳಿಚುವರೇ ತನ್ನನೆನು ದುರವಣಿಸಿತಮಳಾಸ್ತ್ರ (ಕುಮ್ಯಾ.ದ್ರೋ. ೦೯-೪೭). ಮಗುಳ್ಚು: ೧. ಬೊಪ್ಪ ನಾಡ್ಚನವರು ಸುಜುವ ಮಗುಳ್ಚಿ ಸುರಲೋಕಪ್ರಾಪ್ತರಾದರು (ಎಕ. XVI. ಕೃನಾ. ೬೦-೫; 1124); ಸಿಬಿಯ್ಯ ಹಿಡಿದು ಹಲರಂ ಕೊಂದು ತುಜುವೆಲ್ಲಂ ಮಗುಳ್ಚಿ ಸುರಲೋಕಪ್ರಾಪ್ತನಾದಂ (ಎಕ. VII. ಶಿಪಮೊ. ೩೭-೭; 1180); ಮುನಿದಹಿತಗೆಯ್ವೆಲ್ಲಿಯುಂ ಮಗುಳ್ಚಿಮಹಿತಮಂ ಗೆಯ್ಯಮೆ ಮಾಸಜಿತವರ ಹರಿಸಲಂ (ಕುಜಲ್. ೦-೩೨-೨). ೨. ಘನರಾಹುವೀದುವಂ ತಿಂದು ನಭಸ್ಥಳ ದೊಳ್ ಮಗುಳ್ಚಿದಂತೆ . . . ಮಾಂಜದೇಂ ರಂಜಿಸಿತೋ (ರಾಜಶೇ. ೯-೫). ೩. ಸುಳಿಗುರುಳಾಪೆ . . . ಕರ್ಣಪೂರಿತೋತ್ಪಲಮೊಲೆಪಾಡೆ ಗಟ್ಟಿಗಳ ನಂದು ಮಗುಳ್ಚಿದರಿಂದುವಕ್ತ್ರೆಯರ್ (ಗಂಕ. ೨-೯೦). ಮೊಗಚು: ೧೧. ತಿರುವಿಹಾಕು; ತಿರುಗಿಸು: ತಮ್ಮಲ್ಲಿದ್ದ ಪುಸ್ತಕಗಳನ್ನೆಲ್ಲ ಮೊಗಚಿದರು (ದೀಣಾಶ. ೦೦೯). ಮೊಗುಚು: ೧. ಚಿಕ್ಕಗೊಂಡನ ಮಗ ಕಾಬೈಯ ನಿಜಿದು ತುಜುವ ಮೊಗುಚಿ ಪರಲೋಕಪ್ರಾಪ್ತನಾದ (ಎಕ. III. ಮಂಡ್ಯ. ೫೩-೦೫; 1199).

ಮಗುಚಿಕೊಳ್ಳು, ಮೊಗಚಿಕೊಳ್ಳು = ೧. ಅಡಿಮೇಲಾಗಿ ಬೀಳು; ಬೋರಲಾಗಿ ಬೀಳು: ಪಾಪದ ಹೊರೆ ಹೊತ್ತು ಕೆರೆಗೋ ಬಾವಿಗೋ ಮಗುಚಿಕೊಂಡಿದ್ದಾಳೆ (ಸವಿನಾ. II, ೦೦೨೦); ದೋಣಿ ಮೊಗಚಿಕೊಂಡು ಬಿದ್ದಿತು (ಗಂಶ್ರ.೪). ೨. ಬೋರಲಾಗು; ಬೆನ್ನು ಮೇಲೆ ಮಾಡಿ ಮಲಗು: ಇಂದು ಅವರ ಮಗು ಮಗುಚಿಕೊಂಡಿತೆಂದು ಸಕ್ಕರೆ ಹಂಚಿದರು (ಜಾ). ಮೊಗಚಿಬೀಳು = ಕುಸಿದು ಬೀಳು: ಮೇಲಿನ ಕಟ್ಟಡವು ಮೊಗಚಿಬೀಳುತ್ತದೆ (ದೇವಿಣಾ. ೭೫).

[ಮಗುಚು³ + — ಚು. / ತುಳು. ಮಗುಚು, ಮಗುಪು; ತೆಲು. ಮ್ರುಗುಚು, ಮಗುಡುಚು, ಮಗುಡ್ಚು]

ಮಗುಚ್ಚಿ 'ಮಗುಚು³' ಪರಾ.

ಮಗುಚ್ಚಿಂ, ಮಗುಳ್ದಂ (ಅ). ಪುನಃ; ಮತ್ತೆ; ತಿರುಗಿ: ಮಗುಚ್ಚಿಂ ಪು[ತ್ರಿನ] ಪಾತಂ ನೆಗಚ್ಚಿರೆ ಪೇಟ್ಪಾಗಳಕ್ಕುಮಾ ವ್ಯಾವೃತ್ತಿ (ಕವಿರಾ. ೩-೨೦೦); ಪತ್ರಲೇಖೆಯುಂ ಕಟುಪಿ ಮಗುಚ್ಚಿಂ ಬಂದು ಪೊಡಮಟ್ಟು ಮೇಘನಾದನನಿದಿರೊಳ್ ಕಂಡು. . . ಚಂದ್ರಾಪೀಡನೆಂತೆಂದಂ (ಕಾದಂಬ. ೫೬೫). ಮಗುಳ್ದಂ: ಸುತೆ ನೀಂ ತನಯಾರ್ಜಿತರಾಜ್ಯನಪ್ಪ ನಿನ್ನಯ ಪತಿಯೊಡನೀಕ್ಷಿಸುವೆ ಮಗುಳ್ದವಿವಾಹಿಯಾಶ್ರವುಮಂ (ಜಾಕುಂತ. ೩೬-೯೬). 'ಮಗುಚಿ³' ಪರಾ. [< ಮಗುಚು³]

ಮಗೆ₁ 'ಮೊಗೆ₂' ನೋ.

ಮಗೆ₂, ಮಖೆ (ನಾ). ೧. ಪ್ರಸಿದ್ಧವಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹತ್ತನೆಯದು; ಮಘಾನಕ್ಷತ್ರ: "ಮಗೆ – ಮಘಾ – ಒಂದು ನಕ್ಷತ್ರ" (ಶಬ್ದಕೋ. ೩೩); ದುಡಿತ ಹೋಯಿತು ಮಗೆಯ ಮಳೆಯೋಲ್ (ಕುಷ್ಟು. ೦೯-೨೨). ೨. ಮಘಾನಕ್ಷತ್ರದಲ್ಲಿ ಬರುವ ಮಳೆ: ಬಂದರೆ ಮಗೆ ಬರದಿದ್ದರೆ ಹಗೆ (ಗಾದೆ). ಮಖೆ: ೧. ಮಖೆ ಅಂದಳದ ಹಾಗೆ ೫. . . ಹಸ್ತ ಕೈಬೆರಳಿನ ಹಾಗೆ ೫ (ಜಾತಕ. ೬೦-೩); ಮಖಾ (೧೦) ನಕ್ಷತ್ರವು ಕಾಂತಿವೃತ್ತದ ಮೇಲೆಯೇ ಇದೆ (ನಕ್ಷತ್ರ. ೬೯). ೩. (ಕರಾ) (ಶಿವರಾತ್ರಿಯಂದು ಆಚರಿಸುವ) ಒಂದು ಉತ್ಸವ: ಶಿವರಾತ್ರಿಯ ಮಖೆಯು ಅಚ್ಯುತನಿಗೆ ಹಬ್ಬವಾಗಿದ್ದರೂ ಜೈನಬಾಲಕ ನಾಗರಾಜನಿಗೆ ಹೆಚ್ಚಿನ ಹುರುಪನ್ನು ಅದು ಕೊಡಬೇಕಾಗಿರಲಿಲ್ಲ (ಮುಗಿಯ. ೦). [<ಸಂ. ಮಘಾ]

ಮಗ್ಗ (ನಾ). ೧. ಬಟ್ಟೆಯನ್ನು ನೇಯುವ ಯಂತ್ರ: ಸಮ್ಮ ದೇವರಿಗೆ ಆ ಕನ್ನೆಲ್ಲಿಯಲು ಯೆರಡು ಮಗ್ಗವನು ಸುಂಕವಾನ್ಯವಾಗಿ . . . ಕೊಟ್ಟು ಧರ್ಮ್ಮಶಾಸನ (ಎಕ. IX, ದಂಗಳೂ. ೦೨೨-೦೨; 1408); ನವುಗೊಂದು ಮಗ್ಗವ ತೋಜಿಬೇಕು (ಅಮುಗಾಂ. ೫-೦೨೦); ಹೊಲಿಗೇಯಂತ್ರ, ನೇಯುವ ಮಗ್ಗಗಳೂ ಇದ್ದುವು (ಮುಕ್ತ.ಪ. ೭); ಮಗ್ಗ ನೇಯಲಿಕ್ಕೆ ತಿಳಿಯದಿದ್ದರೂ ಹಗ್ಗ ನೇಯಲಿಕ್ಕೆ ತಿಳಿಯದೇ? (ಗಾದೆ). ೨. ನೇಯುವ ಯಂತ್ರದ ಮೇಲೆ ಹಾಕುವ ಒಂದು ಬಗೆಯ ತೆರಿಗೆ: ಚಿಕ್ಕಬೇಳಗಲಿಯ ಮಗ್ಗ ಪಟ್ಟಿ ಕಾರುಕದೆಜಿ³ಯೊಳಗೆ ನಿಬನ್ಧಿಯಾಗಿ ಸನ್ಯಾದೀವಿಗೆ ಕೊಟ್ಟ ಪ ೩ (ಎಕ. XV, ಹೊಳೆ. ೯೯-೯; 1257); ಸುಂಕ ಮಗ್ಗ × × ತಳವಾಜಿಕೆ ಕಾಣಿಕೆ ಕಡ್ಡಾಯ ಬೀಡಗೋಳು (ಎಕ. X, ಮುಳಬಾ. ೨೦-೨; 1468). 'ಮಗ್ಗದೆಜಿ³' ಪರಾ. [ದೇ.॥ ತಮಿ. ಮಲ. ಮಕ್ಕಮ್; ತುಳು. ತೆಲು. ಮಗ್ಗ./ಮರಾ.ಮಾಗ್]

ಮಗ್ಗತೆಜಿಗೆ (ನಾ). = ಮಗ್ಗ ೨: ನಸ್ಸರಸವೊಡೆಯರು ಪೂರ ನಮ್ಮ ನಾಥದೇವರ ಶ್ರೀಕಾರ್ಯಕ್ಕೆ ಬಿಟ್ಟ ಮಗ್ಗತೆಜಿಗೆ ಸಾಮ್ಯ (ಮೈ.ಆಂ. ೦೯೭೬, ೩೩-೭; ?). [ಮಗ್ಗ + ತೆಜಿಗೆ]

ಮಗ್ಗದೆರೆ 'ಮಗ್ಗದೆಜಿ³' ನೋ.

ಮಗ್ಗದೆಜಿ³, ಮಗ್ಗದೆರೆ (ನಾ). = ಮಗ್ಗ ೨: ಮಗ್ಗದೆಜಿ³ ಪಂಚಕಾರುಕ . . . ದೇವಪ್ರಸಾದ ಗದ್ಯಾಣವೆರಡ ಕೊಂಬುದು (ಎಕ. V. ಹಾಸನ. ೦೩೫-೯; 1114 ?): ಪೊಜವಾಜಿ³ಒಳವಾಜು ಮಗ್ಗದೆಜಿ³ . . . ಮನೆಸುಂಕ ನೆಜಿ³ಮಲಪತ್ತಿಯು ಸುಂಕವಿನಿತಂ (ಮೈ.ಆಂ. ೦೯೪೦, ೨೯-೪; 1173); ಕಬ್ಬಿಲದೆಜಿ³ ಮಗ್ಗದೆಜಿ³ ಕಾವಲಿದೆಜಿ³ (ಎಕ. VI. ಕಡೂರು. ೯೬-೪೦; 1201). ಮಗ್ಗದೆರೆ: ಜೇಡಿಗೆ ಬೀಜವರಿ ಮುಣುದೆರೆ ಮಗ್ಗದೆರೆ ಸುಂಕ ಸೊಡಗೆ . . . ಕುದುರೇಸುಂಕಯಿವು ಮೊದಲಾದವೆಲ್ಲಾ × × ಲವು (ಎಕ. X. ಕೋಲಾರ. ೨೪೭-೨೮; 1637). [ಮಗ್ಗ + ತೆಜಿ³]

ಮಗಲು 'ಮಗುಲ್' ನೋ.

**ಮಗ್ಗಾರೆ**, ಮಂಗರೆ, ಮಂಗಾರೆ (ನಾ). ಒಂದು ಬಗೆಯ ಕಾರೆಗಿಡ : "ಮಂಗಾರೆ ಮಗ್ಗಾರೆಯುಕ್ಕುಂ" (ಶಬ್ದಮ. ೩೬-೧೬); ಮಗ್ಗಾರೆಯ ಪಣ್ಗಳನವಚಿಗೊಗ್ಗಿನೊಳಾಗಿಸಿ ಬಚ್ಚಿಟ್ಟಮಂತಾ ಕರಿಯಿಂದಗ್ಗಳಿಕೆವಡೆದ ವಿಷಮುಂ ಮಗ್ಗುಗುಮಾ ಪಣ್ಗಳಾಜುಗುಂ (ಕಮುದ. ೦೬-೧೦೦);ಬೆಲ್ಲ . . . ಮಗ್ಗಾರೆಕಾಯಿ ಇವಿಷ್ಟನು ಎಮ್ಮೆಯ ತುಪ್ಪದಿಂದ ಮರ್ದಿಸಿ ಕಾಲಿಗೆ ಇಕ್ಕಿಸಲು ಕಾಲ ಬೀಟೆ ಹೋಗುವುದು (ವೈದ್ಯಶಾ. II. ೦೬೮) ; ಕಾರೆ ಮಗ್ಗಾರೆ ಗೂಳವು ಮುಳ್ಳುಬೊಬ್ಬುಲಿ . . . ಮುಳುಬೇಲಿಗಳ್ ಸೇರಿ ಮುಟ್ಟಿಹುವಾಗಸವನು (ಕೌಪಿ. ೦೮-೩೫). **ಮಂಗರೆ** : ಭದ್ರಮುಸ್ತೆ . . . ಮಂಗರೆಕಾಯಿ ಇವಂ ಹಸುವಿನ ಹಾಲಿನಲ್ಲಿ ಸಣ್ಣನಾಗರೆದು ಜೇನುತುಪ್ಪ ವೆರಸಿ ಸೇವಿಸೆ ಶಾಂತಿಯಹುದು (ಸಕವೈ. ೦೮೩). **ಮಂಗಾರೆ** : ಬಕುಳಂ ಮಂಗಾರೆಯಾಚಂ ಪುಲಿಂಗಿಲೆರಂ (ಧರ್ಮಪ. ೪-೫೨); ಪುಣಿಸೆ ಹೆಗ್ಗವಣೆ ಮಂಗಾರೆ . . . ಹೊನ್ನೆ ಮೊದಲಾದ ವೃಕ್ಷಂಗಳಿಂ ಗಿರಿಯು ತಪ್ಪಲದರಣ್ಯಂ ತೋರಿದತ್ತರುಣರುಚಿ ನಸುಳಲೀಯದಂತೆ (ಮಹಾಪ. ೦೬-೨೬); ಗೋಣಿ ಗೋರಂಟೆ ಮಲ್ಲಿಗೆಯು ಮಂಗಾರೆ ಬೆಟ್ಟದಾವರೆಗಳಿಂದಾ ವನಂ ಕಣ್ಗೆಸೆದುದು (ಸಿದ್ಧಕಾ. ೬-೦೬). [ ? + ಕಾರೆ$_1$]

**ಮಗ್ಗಿ** (ನಾ). [ಗಣಿತ] (೨ × ೨ = ೪ ಎಂಬಂತೆ) ಒಂದರಿಂದ ಹತ್ತರವರೆಗೆ ಅಥವಾ ಮುಂದಕ್ಕೆ ಕ್ರಮವಾಗಿ ಗುಣಿಸುವ ಅಂಕಿಗಳ ಪಟ್ಟಿ; ಅಂಕಗಣಿತದ ಕೋಷ್ಟಕ : ಒಲವಿನಾಗಮದ ಗಣಿತದ ಗುಣಿತಪ ಠಾ ಕಲಿವೆನೆನುತ ಹರಿಸೂನು ನೆಲಸಿದ ಮೊದಲ ಮಗ್ಗಿ[ಪಾಠಾಂ. ಮೊಗ್ಗೆ]ಯ ಮೂರೇಖೆಯ ಗೆಲುವಂದವಾ ತ್ರಿವಳಿಗಳು (ಶ್ರೀಪಾಂ. ೩-೫೫); ಮಗ್ಗಿಯ ಕೂಡಿ ಕಳೆಯೆನೆ ಹರಿಯ ನಾಮವ ಕೂಡಿ ಕಳೆವನು (ಶ್ರೀಹಾ.ಕ. ೬-೪); ಮಗ್ಗಿ ಕಂಠಪಾಠ ಮಾಡುವುದು . . . ಬೇಸರ ಹುಟ್ಟಿಸುವ ಕೆಲಸ (ಶಿಕ್ಷಣ. ೨೪೫).

**ಮಗ್ಗಿಯ ಸೂಜಿ** = (?) : ರಾಜಸುತರ ನುಣ್ಗೊರಳೆಂಬ ಮಗ್ಗಿಯ ಸೂಜಿಯ ಮೇಲೆ ಮಸ್ತಕವ ರಾಜಿಪ ಬೊಗರಿಯಂತೊಲೆದಾಡಿಸಿದನವ ಸೋಜಿಗವಡೆಯೆ ಗಾಯಕರು (ನಾಗಕು. ೦೨-೯೩). [ದೇ.॥ ತುಳು. ಮಗ್ಗಿ]

**ಮಗ್ಗಿಗ** (ನಾ). ದಾರಿಯಲ್ಲಿ ಹೋಗುವ ಪ್ರಯಾಣಿಕ; ಪಾಂಥ: ಮಹಾದೇವಪಟ್ಟಣಂಗಿಯರ ಬ್ರಾಹ್ಮಣ ಕಂಚಿಕಬ್ಬೆಗಳು ತಕ್ಕರ ಮಗ್ಗಿಗರ ಭೋಜನಕ್ಕೆ ಪೊಂಗೆ ಪರಿಪಕ್ಕೆ ಇಪ್ಪಣ ವೃದ್ಧಿಯಲು ಊರ ಮೇಲೆ ಕೊಟ್ಟ ಗದ್ಯಾಣ ಅಯಿದು (ಕ್ರಾಇ. XX, ೪೨-೩೯; 1122). [<ಸಂ. ಮಾರ್ಗಿಕ]

**ಮಗ್ಗಿಲು** 'ಮಗ್ಗುಲ್' ನೋ.

**ಮಗ್ಗಿಸು** 'ಮಬ್ಬಿಸು' ನೋ.

**ಮಗ್ಗು$_1$** 'ಮಬ್ಬು' ನೋ.

**ಮಗ್ಗು$_2$** 'ಮೊಗ್ಗೆ' ನೋ.

**ಮಗ್ಗುಗೆ** (ನಾ). ಕುಗ್ಗುವಿಕೆ ; ಕಡಮೆಯಾಗುವಿಕೆ : ವ್ಯಾಧಿಪ್ರಶಮಃ = ಕಾತ್ರದ ಮಗ್ಗುಗೆ (ಅಭಿಧಾ. ೯-೪೪) : ಉಪಶಾಂತಾ = ಮಗ್ಗುಗೆಯೊಳ್ (ಅಭಿಧಾ. ೨೪-೩೩). [ಮಗ್ಗು$_1$(<ಮಬ್ಬು) + —ಗೆ]

**ಮಗ್ಗುಲ್**, ಮಗ್ಗಲು. ಮಗ್ಗಿಲು. ಮಗ್ಗುಲು (ನಾ). ೧. ಬದಿ : ಪಕ್ಕ; ಪಾರ್ಶ್ವ : ಬೆಟ್ಟದ ಮೂಲೆಪಿ ಬೆಟ್ಟದ ಮಗ್ಗುಲನೆ ಬನ್ದು ಕೂಡಿತ್ತು ಪೊಲವಾರೆ (ಪ್ರಾಲೇ. ೦೯೨೦, ೯-೨೬ ; 2677) ; ಅಸಿತಾಂಬುಜದಿವ್ಯಗಂಧ ದೊಳ್ಪೂರಿದು ಮರಲ್ದು ತೂಂಕಡಿಪ ವನ್ಯಮೃಗಂಗಳ ಮಗ್ಗುಲೊಳ್ತಿರಂ ದಿರಿದು . . . ಪರೆದೆಸಗಿತ್ತತಿಪ್ರಮದಕಾರಣಕಂದು ನಿಶಾಸಮೀರಣಂ (ಕಾದಂಪೂ. ೨೮೩) ; ಒಂದು ಮಗ್ಗುಲೊಳ್ ಪಕ್ಕಯನಿತ್ತು ಸಾಕಿದುದ ನೋಡುತಲಿನ್ನಯ ನಾಯನೆಕ್ಕಲಂಗಿಕ್ಕಿದಂ (ಸೂಕ್ತಿಸು. ೩-೨೨೪). ೨. ದೇಹದ ಪಕ್ಕೆ; ಬರಿ : ನತಮುಂ ಮಾಂಸಳಮುಂ ನುಣ್ಣಿತುಮಾಗಿರ ತೋರ್ಪ ಮಗ್ಗುಲದು ಶುಭಮಂ (ಲೋಕೋಪ. ೦೦-೯). ೩. (ಆಲಂ) ಆಶ್ರಯ ; ನೆರೆ : ಮೊಲೆಯೂಡುವ ಮೇನೆಯ ಮಗ್ಗುಲೊಳಂ . . . ಗಿರಿಜಾತೆ ಶೈಶವಲೀಲೆಯನೊಳಕೊಂಡು ಕೊಳಕೊಳಗೆ ಬೆಳಬೆಳಗೆ ನಳನಳಿಸಿ ಬಳೆಯುತಿರ್ದಳ್ (ಗಿರಿ. ೩-೩೯ ಪ). **ಮಗ್ಗಲು** : ೧. ಲಲಿತಾ ಹೊರಸಿನ ಮೇಲೆ ಕೂಸನ್ನು ಮಗ್ಗಲಲ್ಲಿ ಮಲಗಿಸಿಕೊಂಡು ತಾನೂ ಮಲಗಿದಳು (ಕಪು. ೯). ೨. ಮಗ್ಗಲುಗಳು ಅತ್ಯಂತ ಉನ್ನತವಾಗಿ ದೃಢವಾಗಿ ನೀಟವಾಗಿ ಸಮವಾಗಿದ್ದರೂ (ಕ್ರಾಗಂಂ. ೩೦೦-೦೨). ೪. ಹತ್ತಿರ; ಸಮೀಪ ; ಸನಿಹ : ದೇಗುಲದ ಅಧಿಷ್ಠಾನಮಂ ಕಟ್ಟಿಸಿ ಮಠ ಮಗ್ಗಲು ಬಾವಿಯೆಂಬಿವಂ ಮಾಡಿಸಿ (ಕ್ರಾಇ. IX–i, ೦೨೬-೩೦ ; 1066). **ಮಗ್ಗಿಲು** : ೧. ಎನ್ನಯ ಮಗ್ಗಿಲೊಳ್ಗೆ ಬಳೆವ ಸುರಭಿಯ ವತ್ಸವೆ (ಅರವಿ. ೮-೩೬). ೨. ಪಾಡಚಿದೆಡದ ಮಗ್ಗಿಲಸೂಜಿ ನೃಪತಿ ಮೈನೀಡಿ ಪವಡಿಸಿದನೊಡನೆ (ಶಠತ. ೧೦-೬೦). ೫. ಕಡೆ ; ದಿಕ್ಕು ; ದೆಸೆ : ಈ ಕಲ್ಲಿಗೆ ನೈಋತ್ಯ ತೆಂಕಣ ಮಗ್ಗಿಲ ಹಳ್ಳದ ಹರದನ ಹಳ್ಳಿಗೆ ಸಲುವ ಕುಂಬಾರಗುಂಡಿಗೆ ಬಡಗಣ ಹಳ್ಳದಲ್ಲೂ ನೆಟ್ಟ ಕಲ್ಲು ೧ (ಎಕ. XIV, ಮೈಸೂರು, ೦೦೫-೩೫೯; 1674). **ಮಗ್ಗುಲು** : ೧. ರಾಜೀವೇಚೆಯ ಮಗ್ಗುಲಲಿ ಮೇಳೈಸಿ ಮೆಚಿದರು (ಕುಮ್ಯಾಸ. ೦೦-೬೯) ; ಅವಳ ಮಗ್ಗುಲಲ್ಲಿ ಮಲಗಿದ್ದ ಮಗು ಎದ್ದು ಅಳತೊಡಗಿತು (ಕೂಡಿ). ೨. ಮಚಿದು ಮಲಗಿದಳವಳ ಮಗ್ಗುಲ ಸೆಳಗ ಮೆಲ್ಲನೆ ಜಾಜಿಸುತಲಾಗರಸ ಬೆಸನವನೊಂದಿ ಮಲಗಿದ ಸತಿಯನೀಕ್ಷಿಸುತ ಮಚುಗಿದನು ಮನದೊಳಗೆ (ಭಕ್ತ. ೫-೦೬). ೪. ಹೂವಂ ಬಿಚ್ಚು ತೊಳಗಣ ಪರಿಮಳದ ತನೆಯು ಮಗ್ಗುಲೊಳೊಗ್ಗಿ ಬೆಳೆದ ಸಣ್ಣಮಪ್ಪ ನುಣ್ಣಸಳ ನೊಂದಂ ತೆಗೆದು (ಲಕರ. ೬-೬೯).

ಮಗ್ಗಲುಹಚ್ಚು = ಒಂದು ಪಕ್ಕಕ್ಕೆ ಒರಗು,—ಮಲಗು : ಮಗ್ಗಲು ಹಚ್ಚಿದ್ದೊಂದೇ ತಡ . . . ನಿದ್ರೆ ಆವರಿಸಿಬಿಟ್ಟಿತು (ಚಕ್ರಕ. ೩೪೦). ಮಗ್ಗುಲನಿಕ್ಕು = ಒಂದು ಪಕ್ಕಕ್ಕೆ ಒರಗು,—ಮಲಗು : ನಿದ್ದೆ ಮರೆ ಮಗ್ಗುಲನಿಕ್ಕುವುದಿಲ್ಲ ಬಾಗಿಲಂ ಕಿಚುತೆಚಿಯುಂಬುದಿಲ್ಲುಗುಳ್ವುದಿಲ್ಲ (ಎಕ. II, ೩೫೦-೦೮; 1119). ಮಗ್ಗುಲ ಬೇನೆ = ಒಂದು ಬಗೆಯ ಪಕ್ಕಕಾಯಿಲೆ; ಪಾರ್ಶ್ವವಾಯು : ಪಾರ್ಶ್ವರುಜಾ_ಮಗ್ಗುಲ ಬೇನೆ, ಪಕ್ಷಾಘಾತವೆಂದರ್ಥ (ಚಾಪಟೀ. ೨-೫). ಮಗ್ಗುಲ ಮುಳ್ಳಾಗು = (ಆಲಂ) ಸಮೀಪದಲ್ಲಿದ್ದೂ ಗೊತ್ತಾಗದಂತೆ ನಿರಂತರವಾಗಿ ಕಿರುಕುಳವನ್ನು ಕೊಡು : ಹಾಳು ಸಮಾಜ ನನ್ನ ಹಾದಿಯಲ್ಲಿ ಅಡ್ಡನಿಂತಿದೆ. ಅದರ ಪ್ರತಿನಿಧಿಗಳಾಗಿ ನನ್ನ ತಾಯಿ ತಂದೆ ಮಗ್ಗುಲ ಮುಳ್ಳಾಗಿದ್ದಾರೆ (ಅಂಚೂ. ೫೯). **ಮಗ್ಗುಲ ರತಿ** = **ಸಂಭೋಗದಲ್ಲಿ** ಒಂದು ಬಗೆ : ಓರಂತೆ ವಿಟನೊಳು ಮಗ್ಗುಲ ರತಿಗೈವ ವಾರಾಂಗನೆಯರೊಪ್ಪಿದರು (ಕಂಪಿ. ೬ – ೦೨೦). **ಮಗ್ಗುಲಹಾಸಿಗೆ** = ಹಾಸುಗೆಯ ಮೇಲೆ ಹಾಸುವ ಅಥವಾ ಹೊದೆಯುವ ದುಪ್ಪಟಿ : ಹಾಸುಗಯ ಮೇಲೆ ಹತ್ತಿಯ ನಯವಾದ ಮಗ್ಗುಲ ಹಾಸಿಗೆಯನ್ನು ಹಾಸಿದರೆ ಮಲಗಲು ಹಿತವಾಗಿರುತ್ತದೆ (ಕೂಡಿ). **ಮಗ್ಗುಲಾಗು** = ೧. ಪಕ್ಕಕ್ಕೆ ಸರಿ; ಓರೆಯಾಗು; ಅರುಗಾಗು : ನವವಧು ಬಹಳ ನಾಚುವಳು ಮುದ್ದಿಸಲಿನಿಯನು ಪೊಂಪುಳಿಗೊಳುವಳು ಕುಬಿದು ಮಗ್ಗುಲಾಗುವಳು (ಅಂಬಾಶ. ೨೫-೨೦). ೨. ಒಂದು ಪಕ್ಕಕ್ಕೆ ಹೊರಳು, – ತಿರುಗು : ಮೊದಲು ಮೂರು ವಾರ ತಾಯಿಯು ಹಾಸಿಗೆ ಮೇಲೆ ಮಗ್ಗುಲಾಗಿ ಮಲಗಿ ಮಗುವಿಗೆ ೨೦ ನಿಮಿಷವಾದರೂ ಸ್ತನ್ಯಪಾನ ಮಾಡಿಸಬೇಕು (ಗೃಹಿ. ೦೦೩). **ಮಗ್ಗುಲು ಮನೆ** = ಪಕ್ಕದ ಮನೆ; ನೆರೆಮನೆ : ಒಂದು ಮೈಲಿಯ ಕೊಂಡಾಪುರ ಅತ್ತಿಗೆ ಮಗ್ಗುಲುಮನೆಯಾಗಿತ್ತು (ಪುರೇ. ೯೨).

[ದೇ॥. ತಮಿ. ಮರುಙ್ಕು ; ಮಲ. ಮರುಙ್ಙು ; ತುಳು. ಮರ್ಗಿಲು ; ಕೋತ. ಮಗ್ಲ್]

**ಮಗ್ಗುಲಿಕ್ಕು** (ಕ್ರಿ). ೧. ಒಂದು ಪಕ್ಕಕ್ಕೆ ತಿರುಗಿ ಒರಗು,_ಮಲಗು : ಕಣ್ಮುಚ್ಚಿ ಮಗ್ಗುಲಿಕ್ಕಿಯಜಸ್ರಂ ತಳರದೆ ನಿದ್ರಾಸುಖದಿಂ ೭ಳಹೇಸಿರು

ಮುಚಿಗಳಿರ್ಪವಂತಾ ಕೊಳನೊಳ್ (ಗಂಗಾ. ೨-೫೫): ನೀರದನಿ ಕುಡಿದು ಸಿಂಪೆಯು ನೀರೊಳಗರೆಮುಳುಗಿ ಮುಗ್ಗುಲಿಕ್ಕಿರ್ದಪು ಮುನ್ನೀರಂ ನೀಲಾಚಲದಿಂ ಸಾರಂಗಟ್ಟಿದಪೊಲಿರೆ ಬಜಿಲ್ಪ ಲುಲಾಯಂ (ಮುಕುಂದ. ೩-೬೬); ವನಜಾಕ್ಷಿ ಮುಗ್ಗುಲಿಕ್ಕಿದಳು (ಮೋಹತ. ೯-೬೬). ೨. ಬಾಗು : ಬಗ್ಗು : ನಡುಗುವ ತೊಡೆ ಮುಗ್ಗುಲಿಕ್ಕಿದ ಮೈಸವಿರೊಡನೆ ಪೊಣ್ಮುವ ನಸುಬೆವರು ಕಡುಸೊಗಯಿಸೆ ರತಿಯಿಂ ತಣಿದೊಯ್ಯನೆ ನಡೆದಳ್ (ಶಬರಶಂ. ೨೯-೧೦); ಪದುಳಿಸದಂಗವೆಳ್ತಜದ ಕಣ್ಮಲರಾಜಿದ ಸೇದೆ ಮುಗ್ಗುಲಿಕ್ಕಿದ ಪುಲಕಂಗಳಿಂಗದ ಬೆಮರ್ (ರಸರ. ೧-೧೯) : ಪೊಂಪುಳಿ ಮುಗ್ಗುಲಿಕ್ಕಿದವೊಲಂಗದ ಬಲ್ಪೆಮರಿಂಗದಂತೆ . . . ಇಂಪಡರ್ದಂಗಜಾತ ಸುಖಮುಂ ನಿನಗೀಯದೊಡಾಂ ಭುಜಂಗನೇ (ಪ್ರಹ. ೨೮-೩೨). ೩. ಬೀಳು ; ಕೆಡೆ : ಕೆಲಕೆಲವು ನಡುದೊಡೆ ಕಾಲು ಮಂಡಿಸಿ ಬಸಿವ ನೆತ್ತರಲಾಳೆ ನೆಲವಲಿ ಮುಗ್ಗುಲಿಕ್ಕಿದವಮಿಳಪ್ಪ ಗನಿಕರ (ಕೂರ. ೩-೩-೧೬).

[ಮುಗ್ಗುಲು (<ಮುಗ್ಗುಲ್) + ಇಕ್ಕು₁]

**ಮುಗ್ಗುಲಿಸು** (ಕ್ರಿ). ೧. ಒಂದು ಪಕ್ಕಕ್ಕೆ ಹೊರಳು : ಹಲಗೆವಾಣಿಕ ದೊಟ್ಟಲಲಿ ಮುಗ್ಗುಲಿಸಿ ಮಲಗಿ ನಿರೀಕ್ಷಿಸುತೆ (ಪ್ರಭುಲಿ. ೩-೨೬). ೨. (ಸಂಭೋಗಕ್ಕಾಗಿ) ಒರಗುವಂತೆ ಮಾಡು: ಮಲಗುವಂತೆ ಮಾಡು : ಪೊಸನಸೆಯುಂ ಮೃಗಂ ಮೃಗಿಯ ಮುಗ್ಗುಲಿಸುತ್ತಿರೆ (ಸೂಕ್ತಿಸು. ೩-೨೨೯).

[ ಮುಗ್ಗುಲ್ + — ಇಸು₃ ]

**ಮುಗ್ಗುಲು** 'ಮುಗ್ಗುಲ್' ನೋ.

**ಮುಗ್ಗುಲುಹೊಡೆ** (ಕ್ರಿ). ಪಕ್ಕಕ್ಕೆ ತಿರುಗು ; ಬದಿಗೆ ಸರಿ : ಓಡುತ್ತಿದ್ದ ಕುದುರೆಯು ಚಿಗಿದು ಹಿಂಗಾಲ ಮೇಲೆ ನಿಂತು ಮುಗ್ಗುಲುಹೊಡೆದು ಹಿಂತಿರುಗುವಂತೆ ತಟ್ಟನೆ ತಿರುಗಿ (ಮುಹಾಸ. ೧೩೯).

[ ಮುಗ್ಗುಲು ( <ಮುಗ್ಗುಲ್ ) + ಹೊಡೆ₁ (< ಪೊಡೆ₁) ]

**ಮುಗ್ಗುಲೂರು** (ಕ್ರಿ). ಪಕ್ಕಕ್ಕೆ ಬೀಳು,– ಕೆಡೆ : ಉತ್ತಮದ ತಾಳಲಾಳ್ಗಳಪ್ಪ ಪದಚಾರಿಗಳ್ ಸತ್ತುದಾರರ್ಬಿದಂ ಪಂದಬ್ರಿದದ ಸಂಪೆತ್ತ ಗಜ ಮುಗ್ಗುಲೂರಿದವು (ಕೋಟಾಸು. ೯೮-೨೬).

[ ಮುಗ್ಗುಲು (< ಮುಗ್ಗುಲ್) + ಊರು₁ (< ಊಱು₁)]

**ಮುಗ್ಗೆ₁** ' ಮೊಗ್ಗೆ ' ನೋ.

**ಮುಗ್ಗೆ₂** (ನಾ). ಒಂದು ಬಗೆಯ ಸಸ್ಯ : "ಬಹುಮೂಲಃ _ ದೊಡ್ಡ ದರ್ಭೆ, ಮುಗ್ಗೆ" (ಚಿತ್ರಾ. ೧೧೬). [ ? ]

**ಮುಗ್ನ** (ಗು). ೧. ಮುಳುಗಿದ ; ಒಳಸೇರಿದ. (ನಾ). ೨. ಮುಳುಗಿದ ವ್ಯಕ್ತಿ; ಒಳಸೇರಿದ ವ್ಯಕ್ತಿ : ಭಗ್ನರಾದರ್ಕೆಲರ್ . . . ಪೆಚ್ಚಿದುರಿಗಿಚ್ಚಿನೊಳ್ಮಗ್ನರಾದರ್ಕೆಲರ್ತನ್ನ ಸೇನೆಯೊಳ್ (ಶ್ರೀಬಾಹು. ೬-೯೦). ೩. ಏಕಾಗ್ರತೆಯಿಂದಿರುವ ವ್ಯಕ್ತಿ ; ತಲ್ಲೀನನಾದವನು : ಭೀಮುಕಾಯಂ ಕಠಿನ ಗಂಭೀರನಾ ಯೋಗಿ . . . ಮಗ್ನನಾದಂ ಧ್ಯಾನದವ್ಯ್ರತನಗ್ನತೆಗೆ ! (ಶ್ರೀರಾಷು. ೧೯೩-೯೦) ; ಶ್ರೀಯುತರ ದರ್ಶನಾಕಾಂಕ್ಷಿಯಾಗಿ ನಾನು ಹೋದಾಗ ಒಂದಾನೊಂದು ಆರ್ಷಸಂಹಿತೆಯ ಚಿಂತನೆಯಲ್ಲಿ ಮಗ್ನರಾಗಿದ್ದರು (ಕೀರ್ತಿ. xi. ಮುನ್ನುಡಿ). [ಸಂ.]

**ಮಗ್ನತೆ** (ನಾ). ಏಕಾಗ್ರತೆ; ತನ್ಮಯತೆ; ಲೀನತೆ : ಮಗ್ನತೆಯಿನೆಜಗಿಸುಯ್ಯೆಲರಗ್ನಿಯಿನಬಿದಳಿಗಳುದುರುತಿರೆ ಪೊತ್ತಿದು ಸಂಲಗ್ನವಿರೆಹಾಗ್ನಿತಾಪೋದ್ವಿಗ್ನೆಯು ನಾಸಿಕಮುಭೇವದುಂ ಚಂಪಕದೊಳ್ (ಚಂದ್ರಕ. ೩-೧೩೦): ರಸನೆಯು ಸುಧೆಯಂ ಮಿಗೆ ಸವಿದು ಸವಿದು ಮಗ್ನತೆಯುಸೆಯ್ದೆ ಮಧುರಾಕ್ಷರಮುಬ್ಬಸದಿಂ ಪೊರಳುತ್ತುರುಳುತ್ತೊಸರ್ವುದೆನೆ ಗಿರಿಜೆಯೊಳ್ ತೊದಳ್ನುಡಿಯಿಸಿಗುಂ (ಗಂಗಾ. ೩-೬೬). [ ಸಂ. ಮಗ್ನತಾ ]

**ಮಗ್ನತೆಗೊಳು** (ಕ್ರಿ). ತನ್ಮಯತೆಯನ್ನು ಹೊಂದು; ಲೀನವಾಗು : ವಿಷಯಕ ಸೋತು ಮಗ್ನತೆಗೊಳದೆ ಬಂಧನಹೇತುವೆನೆ ಸಂಕಲ್ಪದಿಂ ಕೆಲಕ್ಕೆ ಬಮಕಾ (ಗಗಶಾ. ೦೬-೨೯). [ ಮಗ್ನತೆ + ಕೊಳು (< ಕೊಳ್₁) ]

**ಮಘ** (ನಾ). ೧. ಒಂದು ದ್ವೀಪದ ಹೆಸರು. ೨. ಒಂದು ದೇಶದ ಹೆಸರು. ೩. ಒಂದು ಬಗೆಯ ಔಷಧಿ. ೪. ಒಂದು ಬಗೆಯ ಹೂವು. ೫. ಉಡುಗೊರೆ. ೬. ಐಶ್ವರ್ಯ ; ಸಂಪತ್ತು. ೭. ಸಂತೋಷ ; ಆನಂದ. ೮. [ಜ್ಯೋತಿ] ಪ್ರಸಿದ್ಧವಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹತ್ತನೆಯದು: ಮಘೆ. [ ಸಂ. ]

**ಮಘಮಘ** (ನಾ). ಸುವಾಸನೆ; ಪರಿಮಳ : 'ಮಘಮಘಿಸು' ಪರಾ.

**ಮಘಮಘಿಸು** (ಕ್ರಿ). ೧. ಪರಿಮಳವನ್ನು ಸೂಸು ; ಕಂಪನ್ನು ಬೀರು : ಮಘಮಘಿಪ ಮಲಯಜದ ಸಾರದ ಸೊಗಯಿಸುವ ಸರಸಿಗಳ . . . ತಿಂಥಿಣಿ ಮೆಱೆದುದಲ್ಲಿಯು ಸುತ್ತುವಳಯದಲಿ (ಕೂರ. ೦-೧೩-೯). ೨. ಪರಿಮಳವು ತುಂಬುವಂತೆ ಮಾಡು; ಕಂಪು ಆವರಿಸುವಂತೆ ಮಾಡು : ಪೂಸುವರೆ ಕಸ್ತೂರಿ ಜವಾಜಿಗಳ್ಮೈಸಲೇ ಪರಿಮಳವು ಪೂಸದೆ ಸೂಸಿ ದೆಸೆ ಕಂಪಿಡುತ ಮಘಮಘಿಸುವಳು ಯೋಜನವ (ಶಬ್ದಾಕ. ೧೩-೦೯) : ದೆಸೆದೆಸೆಗಳನು ಮಘಮಘಿಸುತಲಾಗ ಮದನಮೋಹಿನಿ ಚೆಲ್ವಿನೊಗು ಮಿಗೆಯೊಳಗೊಪ್ಪಿದಳು (ಕಂಚೆ. ೯-೬೯). [ಮಘಮಘ + — ಇಸು₃]

**ಮಘವ** (ನಾ). ದೇವತೆಗಳ ಒಡೆಯ ; ದೇವೇಂದ್ರ : ಮಘವಂ ರಚಿಪೊತ ಚೂತದಮಂ ನಿರ್ಮಿದಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು ರಾಗದಿಂ ಸೋಮರ್ಬಿಡಿಯೊಳ್ ತಗುಳ್ದೊಡೆ ಸೂಚನೆ ಚಾರಿಸಿದಂ (ಶಂಕರಾ. ೫-೮೨); ಪುಳಕಿತಗಾತ್ರನಾಗಿ ಮಘವಂ ಮೆಱೆದಂ (ಪ್ರಸ್ತು. ೦೦-೨೨); ಮಘವನೇನೀ ಧರಾತಳವನುಂ ಹರುಷದಿಂ ಸೋಲ್ವೊಡೈತಂದನೋ (ವಂಶಾ. ೩-೯-೦೦). [ಸಂ.]

**ಮಘೆ** (ನಾ). ಪ್ರಸಿದ್ಧವಾದ ಇಪ್ಪತ್ತೇಳುನಕ್ಷತ್ರಗಳಲ್ಲಿ ಹತ್ತನೆಯದು : ಮಘಾನಕ್ಷತ್ರ : ಅಶ್ವಿನಿ. . . ಮಘೆ . . . ರೇವತಿಯೆಂಬ ಇಪ್ಪತ್ತೇಳುನಕ್ಷತ್ರಂಗಳುಂ ತಮ್ಮತಮ್ಮ ಅಧಿಕಾರಮಂ ಮಾಡುತ್ತಿರ್ಪವು (ವಿವೇಕ. ೨೦೦); ಕಾರಗಳ ಮೊತ್ತವಿಪ್ಪತ್ತೇಳರೊಳಗೆಯು ಹಸ್ತ . . . ಉತ್ತರೆಯು ಮಘೆ . . . ಉತ್ತರಾಷಾಢ (ಗಗಶಾ. ೯-೬೮) ; ಮಘಾ_ಪೂರ್ವಾ–ಉತ್ತರಾನಕ್ಷತ್ರಗಳ ಮಳೆಗೆ ಹತ್ತಿಯು ಬಿತ್ತಿಗೆಯಾಗುತ್ತದೆ (ಮುಂಬಯಿ. ೯-೨೬). [ ಸಂ. ಮಘಾ ]

**ಮಚವಾ** 'ಮಚವೆ' ನೋ.

**ಮಚವೆ**. ಮಚವಾ. ಮಚುವೆ. ಮಚ್ವೆ (ನಾ). ದೊಡ್ಡ ನಾವೆ.— ದೋಣಿ : ವ್ಯಾಪಾರಸ್ಥರು ದೊಡ್ಡದೊಡ್ಡ ಮಚವೆಗಳ ಮೇಲೆ ಸಾಮಾನುಗಳನ್ನು ತುಂಬಿಕೊಂಡು ಹೋಗುವರು (ಕಾರವ. ೩೯): ಬೈತಪೋಲವಲ್ಲಿಯ ಮಚವೆಗಳು, ಅವುಗಳಾಚೆಯ ಗುಡ್ಡ, ಇವೆಲ್ಲವುಗಳ ಮೇಲೂ ಬೇಕಿನ ಕಿಡಿಗಳು ಸಿಡಿದು ಅವುಗಳಿಗೆ ಬಂಗಾರದ ಮೆರುಗನ್ನು ತಂದಿದ್ದುವು (ಮಹಮುದಾ. ೬೫). **ಮಚವಾ** : ಫತ್ತೆಮಾರಿಗಿಂತ ಸಣ್ಣ ಆಕಾರದ ನಾವೆಗಳಿಗೆ ಮಚವಾ, ಫಡಾವ, ಗಲಬತ್, ಮಹಾಂಗಿರಿಯೆಂಬ ಹೆಸರುಗಳುಂಟು (ಕನಾಗ. ೩೦೬). **ಮಚುವೆ** : ಉಪ್ಪಿನ ಖರೀದಿ ಬರಿಯುವವರು ಜಲಮಾರ್ಗದಿಂದ ಮಚುವೆಗಳೊಳಗಿಂದ . . . ಬರಿಯುತ್ತಾರೆ (ಮುಂಬಯಿ. ೯೨ ಪ್ರಸ್ತಾವ). **ಮಚ್ವೆ** : ಆವರಿಗೆ ಸೇರಿದ ಎರಡು ಮಚ್ವೆಗಳು ಸದಾ ಗೋವೆ. ವಿರಾದಲ್. ಕೊಚ್ಚಿಗಳಿಗೆ ತಿರುಗಾಡುತ್ತಿದ್ದವು (ವಾರಿರಾ. ೯೬) ; ಆತನ ತಂದೆ ಸಾಮಾನು ತುಂಬಿದ ಕಡಲ ದೋಣಿಗಳಲ್ಲಿ-ಮಚ್ವೆಗಳಲ್ಲಿ__ಸಂಚಾರ ಮಾಡುತ್ತಿದ್ದ ನಾವಿಕ (ಅರತ್ನ. ೧೯೪). 'ಮಂಜಿ' ಪರಾ.

[←ಉರ್ದು. ಮಚ್ವಾ ; ಹಿಂ. ಮಚವಾ, ಮಛವಾ=ಮೀನು ಹಿಡಿಯಲು ಬಳಸುವ ದೋಣಿ ; ಮರಾ. ಮಚವಾ / ಸಂ. ಮತ್ಸ್ಯ ]

**ಮಚಾಯಿಸು** (ಕ್ರಿ). ಜೋಡಿಸು ; ಹೊಂದಿಸು : ನವಾಬರು . . . ಭಾರಿ ಬಿದರ ಟೊಕರೆ ಮಾತ್ರ ಬಿದ್ದುಯಿದ್ದದನ್ನು ತರಿಸಿ ದಂಡಿನ ಪರಾಲಿ

ಗಳು ಹರಿಸಿ ತಮ್ಮ ಎದುರಿಗೆ ಆ ಟೋಕರಿಗೆ ಚಿನ್ನದ ಮಚಾಯಿಸಿ ಯುದ್ಧ ನೆಗದು ಜವಾಹಿರಿ ಸಾಗಿದಷ್ಟು ಹಣದ ಥೈಲಿಗಳ ಕಟ್ಟಿಸಿ . . . ನದಿ ದಾಟಿ ಹೋದರು (ಕೃದಂ. ೯೬).

[ಮಚಾ₀ ( P ←ಹಿ. ಮಚಾನಾ=ಹಬ್ಬಿಸು, ಹರಡು) + — ಇಸು₃]

**ಮಚುವೆ** ' ಮಂಚವೆ ' ನೋ.

**ಮಚ್ಚ₁** ' ಮಚ್ಚೆ₁ ' ನೋ.

**ಮಚ್ಚ₂**, ಮಚ್ಚು₆, ಮಚ್ಚೆ₂ (ನಾ). ೧. ಚಿನ್ನ, ಬೆಳ್ಳಿ ಮುಂತಾದ ಲೋಹಗಳ ಶುದ್ಧತೆಯ ಪ್ರಮಾಣ : ಒರೆಯಂ ನೋಡದೆ ನೋಡಿ ಚಿನ್ನಮನೆ ಕಂಡಾ ಚಿನ್ನಮಂ ವರ್ಣಾಂತರಮಂ ತಪ್ಪದೆ ಪೇಟ್ಟ . . . ಮಚ್ಚಮನೆ ಲೀಲಾಮಾತ್ರದಿಂ ಕಟ್ಟುವಚ್ಚರಿಯಿಂದಾ ಪುರದಲ್ಲಿ ಚಿನ್ನವರದರ್ ತಾಮಿಂತು ವಿಭ್ರಾಜಿಸರ್ (ಚಾಂತೀಪು. ೧-೨೨೦). ೨. (ಒಡವೆಗಳನ್ನು ಮಾಡಿಸುವಾಗ) ಒರೆಹಚ್ಚುವುದಕ್ಕಾಗಿ ಅಕ್ಕಸಾಲಿಗನಿಂದ ಪಡೆದು ಕೊಂಡ ಚಿನ್ನ, ಬೆಳ್ಳಿ ಮುಂತಾದುವುಗಳ ಚೂರು : ಪಣದಿಂದೆ ತೆಗೆಯೆ ಮಚ್ಚದ ತೂಕಂ ಮಚ್ಚದ ಕಟಗಿಡಾ ರೂಪಂ ಇಚ್ಚೆಯ ಪವಣಿಂ ದಿಜಾದು ಹೀನಮಚ್ಚಮುಮುವಕೆ (ವ್ಯವಹಾ. ೬೯-೨೯) ; ಕನಕದ ಮಚ್ಚವ ತಗಡ ತಟ್ಟಿದರದ ಘನಶಕ್ತಿ ತೆಳುವಾಗುವಂತೆ (ಜ್ಞಾ ಶತ. ೯೩-೯೬). 'ಮಚ್ಚ ತೂಕ' ಪರಾ. ೩. ಒರಗಲ್ಲು ; ನಿಕಷ : "ದೃಷ್ಟಮೆನೆ ಮಚ್ಚಮುತ್ಕಂ" (ಮಾಗನಾ. ೧೦೩-೧೦); ಕೌರವನು ... ನೆನೆದ ಮತವನು ತನ್ನ ತಂದೆಯ ಮನದ ಮಚ್ಚದೊಳೊರೆದು . . . ಜನಪನಪಕೀರ್ತ್ಯಂಗನೆಗೆ ತೊಡಿಸಿದನು ಭೂಷಣವ (ಕುಮ್ಮಾಭಾ. ೨-೨೨). ಮಚ್ಚು₆ : ೨. ಸಾವಿರತೂಕ ಚಿನ್ನಕ್ಕೆ ಹಾಗ ತೂಕ ಮಚ್ಚು (ಗಾಲೆ). ಮಚ್ಚೆ₂ : ೧. ಬಲ್ಲವರೊಡಗೂಡಿ ಬಣ್ಣದಿಂದೊರೆಯಿಂ ತೂಕದಿಂ ಮಚ್ಚೆ [ಚ್ಚೆ] ಯಿಂದಂ ಪೊನ್ನೆಂತೊಪ್ಪುಗುಂ . . . ಅಂತೆ ಸಮ್ಯಕ್ತ್ವದೊಳ್ ಕೂಡಿ . . . ವ್ರತಂಗಳಿಂದಂ ಶ್ರಾವಕನುಮೊಪ್ಪುವುದು (ರತ್ನಕರಂಡ. ೦೩-೩).

[ದೇ. ತಮಿ. ಮಚ್ಚಮ್, ಮಚ್ಚು : ಮಲ. ಮಚ್ಚಮ್ : ತುಳು. ಮಚ್ಚ : ತೆಲು. ಮಚ್ಚು]

**ಮಚ್ಚ₃**, ಮಚ್ಚೆ (ನಾ). ೧. ಈಜುರೆಕ್ಕೆಗಳುಳ್ಳ, ಒಂದು ಬಗೆಯ ಕಶೇರುಕ ಜಲಚರಪ್ರಾಣಿ : ಮೀನು : " ಮಚ್ಚ (ಮಚ್ಚೆ)—ಮತ್ಸ್ಯ (ಪು) =ಮೀನು " (ಶಬ್ದಕೋ. ೩೩) ; ಕಣ್ಣಿನೊಳಗಣ ಮಚ್ಚ[ಶಾಕಂ. ತ್ಸ್ಯ]ಕ್ಕೆ ಬಲೆಯ ಬೀಸಿ ಹದ್ದಿನ ಬಾಯ ಹಾವಿಂಗೆ ಹೇಳಿಗೆಯ ಮಾಡಿ (ಕೋಟೀಶಾಂ. ೩೩-೨೩) ; ಮಚ್ಚ ಜಿಹ್ವಾಲಂಪಟದಿ . . . ಘ್ರಾಣೇಚ್ಛೆಯಲಿ ಭ್ರಮರ ಹುಚ್ಚುಗೊಂಡೊಂದೊಂದು ವಿಷಯಕೆ ಮೆಚ್ಚಿ ಕಟ್ಟಿಪ್ಪ (ಅಭ್ಯು.ಕ. ೨-೮೯) ; ಮಚ್ಚಕಂ ಬಲೆಯೊಡ್ಡಿ ಬಡಿದವರ ಶರಗಳಂ ಪೆಚ್ಚಿಂದು ಧರಿಸುವೆನೆ ಸೂತಸುತ (ಶಾಂಗನ. ೬೨-೩). ೨. ಮೀನಿನ ಆಕಾರ : ಪೊಜಮಚ್ಚ ನೇಲಲನಾ ರೇಖೆಯೊಳರ್ಜಿಸುತ್ತು ಪಿಡಿಯೆ ಸೂತ್ರಮಂ ಪಡಾವಲಿಂ ಮಾಡಲುಮಾಗಿರ್ಕುಂ ಮತ್ತಲ್ಲಿ ಮುಚ್ಚಂ ಬೀಸಿ ಬಡಗಲುಂ ತೆಂಕಲೇದಜ್ (ಲೋಕೋಪ. ೩-೦೬). ಮಚ್ಚೆ : ೧. ಕೊಚ್ಚೆನೀರಿನಲ್ಲಿ ಮಚ್ಚೆ ಹಿಡಿಯು ವವರಿಗೆ ಕೊರತೆ ಇಲ್ಲ (ತುಮ್ಮ.ಲಿ. ೦) [<ಪ್ರಾ. ಮಚ್ಛ./ಸಂ. ಮತ್ಸ್ಯ]

**ಮಚ್ಚಗಾಜಿ** (ನಾ). ಚಿನ್ನವನ್ನು ಒರೆಹಚ್ಚುವವನು ; ಅಕ್ಕಸಾಲಿಗ : ಹೊನ್ನ ನೋಟಕರು ಚಿನ್ನದ ಮಚ್ಚಗಾಜಿರು ರನ್ನಪರೀಕ್ಷ ಪ್ರಾಜ್ಞಕರು . . . ಚಿನ್ನವಾರರುಪೊಪ್ಪಿಹರು (ಸನ್ನಕಾ. ೦-೩೩). [ಮಚ್ಚ₂ + — ಕಾಜಿ]

**ಮಚ್ಚತೂಕ** (ನಾ). ಅಕ್ಕಸಾಲಿಗನಿಂದ ಒರೆಹಚ್ಚಲು ತೆಗೆದುಕೊಳ್ಳುವ ಚಿನ್ನದ ಅಥವಾ ಬೆಳ್ಳಿಯ ಚೂರಿನ ತೂಕ : ತೋಚಿದ ಬಣ್ಣಂ ನೆಜಿ ಪದಿನಾಜಾಗಲ್ ಮಚ್ಚತೂಕವೈಪಣವಾಗಲ್ . . . ಹೀನಬಣ್ಣವಹುದು ಬ ೧೨ ಮಚ್ಚತೂಕ ಹ ೨ . . . ಮಚ್ಚ(ತ್ಸ)ತೂಕ ಹ ೨ (ವ್ಯವಹಾ. ೬೦-೦೯). [ಮಚ್ಚ₂ + ತೂಕ]

**ಮಚ್ಚಧ್ವಜ** (ನಾ). ಮೀನಿನ ಗುರುತುಳ್ಳ ಬಾವುಟ ; ಮೀನಧ್ವಜ : ಹಡವ ಕನ್ನಡಿ . . . ಮಕರತೋರಣ ಮಚ್ಚಧ್ವಜವೆಂತು (ಸವಲೋ. ೯-೩೬). [ಮಚ್ಚ₃ + ಧ್ವಜ]

**ಮಚ್ಚರ** (ನಾ). ಹೊಟ್ಟೆಕಿಚ್ಚು : ಅಸೂಯೆ : "ಮಚ್ಚರಂ ಮತ್ಸರಂ" (ಶಶಾ. ೨೨-೯೩೬); ಒರ್ವರೊರ್ವರನೆ ಮಚ್ಚರದಿಂ ಗಜಾಸನ್ನೆಗಿಯ್ದುದಿರ್ದುದ ಪದದೊಳ್ ಪತತ್ರಿಮಯಮೆಂಬಿನಿತಾಯ್ತು ಸಮಸ್ತದಿಕ್ತಟಂ (ಶಂಖಚಾ. ೧೧-೮೭) ; ಎನ್ನ ಆಪತ್ತು ಸುಖದುಃಖವೆನಿಸ್ಸಾರಿಗೆ ಹೇಳುವೆ ಶರಣಸ್ಥಳ ದವರಿಗೆ ಹೇಳದರೆ ಮಚ್ಚರ (ಬಸವ. ೩೬೮) ; ಹುಚ್ಚುನಾಯಿಯು ಹೊಲ್ಲ ಮಚ್ಚರದ ಮಾಗ ಹೊಲ್ಲ (ಸರ್ವಜ್ಞ. ೦೬೩೬).

[< ಪ್ರಾ. ಮಚ್ಛರ./ಸಂ. ಮತ್ಸರ]

**ಮಚ್ಚರಕಾಜಿ** (ನಾ). (ತನ್ನ ಹೆಗ್ಗಳಿಕೆಯಿಂದ) ಬೇರೆಯವರು ಕರುಬು ವಂತೆ ಮಾಡುವವನು; ಇತರರಲ್ಲಿ ಮತ್ಸರವನ್ನುಂಟುಮಾಡುವವನು : ಮಹಾಥರ್ವಣದೊಳ್ ಮಚ್ಚರಕಾಜಂ ಭಾವಕೋತ್ಸಾದಕರಸಕವಿಸ್ತೋಮ ದೊಳ್ ನೇಮಿಚಂದ್ರಂ (ಅರ್ಧನೇ. ೧-೩೭). [ಮಚ್ಚರ + — ಕಾಜ]

**ಮಚ್ಚರಗೊಳ್ಳು** (ಕ್ರಿ). ಹೊಟ್ಟೆಕಿಚ್ಚುಪಡು : ಕರುಬು : ಎನ್ನವರನ್ನಗ ರೆನುತುಂ ಮಾಜುಕಂ ಮಚ್ಚರಗೊಳ್ಳದ ಸತ್ಕಕ್ಕಜಮೆಟ್ಟೆನಿಸುವ ಸಾಧುಸಮಿತಿ ಗತಿಸಮಂತೆಯೊಳೆಜಗುವೆನು (ಜಯ. ೧-೩).

[ಮಚ್ಚರ + ಕೊಳ್ಳು₁ (<ಕೊಳ್₁)]

**ಮಚ್ಚರದಾಣಿ** 'ಮಚ್ಚರದಾನಿ' ನೋ.

**ಮಚ್ಚರದಾನಿ** 'ಮುಚ್ಚರದಾನಿ' ನೋ.

**ಮಚ್ಚರವಳಿ** (ಕ್ರಿ). ಹೊಟ್ಟೆಕಿಚ್ಚು ಇಲ್ಲದಂತಾಗು : ಅಸೂಯೆಯು ಹೋಗು : ವಿದ್ಯಾಜು ಬಹಳ ಪೋಪರೆ ಶಕ್ಯವಿಲ್ಲೆಂದು ಮಚ್ಚರವಳಿದು ಕೊಂಡಾಡಿ ಸ್ವಚ್ಛದಿ ಮಗುಳೊಂದು ಬುದ್ಧಿಯ ನೆನೆದುಕೊಂಡುಚ್ಚರಿಸಿದ ಮನದೊಳಗೆ (ವೀಕೇಶ. ೦೦-೨೦). [ಮಚ್ಚರ + ಅಳಿ₁ (<ಅಱು₁)]

**ಮಚ್ಚರಿ** (ನಾ). ಹೊಟ್ಟೆಕಿಚ್ಚುಪಡುವವನು ; ಕರುಬುವವನು : ಹರಿಸಲಪ್ಪುದೆ ನರರು ಮಚ್ಚರಿಯ ಸಂಕಟವ ? ಕರುಬಿದನ ಹಂ ಪೊರಗೆ (ಮಂಕಾಳ. ೨೦೧). [<ಸಂ. ಮತ್ಸರಿನ್]

**ಮಚ್ಚರಿಗ** (ನಾ). = ಮಚ್ಚರಿ : "ಮಚ್ಚರಿಗನು ದೋಷಗ್ರಾಹಿಯೆನಿಸಕ್ಕು" (ಮಂಗನಾ. ೬೬-೮). [ಮಚ್ಚರ + — ಇಗ]

**ಮಚ್ಚರಿಸು** (ಕ್ರಿ). = ಮಚ್ಚರಗೊಳ್ಳು; ಇಳಾಚಕ್ರವಿಖ್ಯಾತಭೂಭೃತ್ಪ್ರಭು ಚಕ್ರಾಧೀಶನೊಳ್ ಮಚ್ಚರಿಪಪೊಲೆಸಿದಿರ್ದತ್ತು ರೌವ್ಯಾಚಳೇಂದ್ರಂ (ಆದಿಪು. ೦೩-೯೬) : ನರಪತಿ ಬೆನ್ನೊಳಜ್ಞೊಸಿದಿರಾನ್ನುದು ಪೈರಿಸಮೂಹವಿಲ್ಲಿ ಮಚ್ಚರಿಸುವರೆಲ್ಲರುಂ ಸೆರಗುವಾಟ್ಟ ಪೊರ್ (ಎಕ. III, ಮಂಂಡ್ಯ ೯೦-೦೬ ; 950) ; ಇಂದು ಸುರುಚಿ ಸಗರ್ವದಲಿ ನಿನಗೆಂದಡೇನದು ತವಗೆ ಹಿತವೆಲೆ ಕಂದ ಮಚ್ಚರಿಸದಿರು ಗುಣಕ (ಹಿಶಾಗ. ೪-೩-೦೬).

[ಮಚ್ಚರ + — ಇಸು₃]

**ಮಚ್ಚಜು** (ಕ್ರಿ). ಮೆಚ್ಚನ್ನು ಸಿಳಿ; ಒಲವನ್ನು ಅರಿ : ಮಚ್ಚಜಿದು ಮಾನಮಿಂಚೆಪಟ್ಟ ಪುರುಳಂ ಬೇಡಿ ಪೊಚ್ಚಮಿಲ್ಲದ ರಾಗರಸದಿಂ ಕುಳಿಕೋಡಿ (ಭುವ.ಕು. ೨-೯೯ ರಗಳೆ). [ಮಚ್ಚು₂ (< ಮೆಚ್ಚು₂) + ಅಜು]

**ಮಚ್ಚಿ** ' ಮಚ್ಕಿ ' ನೋ.

**ಮಚ್ಚಿಕೆ** ' ಮೆಚ್ಚಿಕೆ ' ನೋ.

**ಮಚ್ಚಿಗೆ** (ನಾ). ಮನೆಯ ಮೇಲ್ಭಾವಣೆ : ಕಸಬರಿಕೆ ಮಾಡಿ ಮನೆಯ ಮಚ್ಚಿಗೆ ಮತ್ತು ಮಾಡುಗೋಡೆಗಳನ್ನು ಗುಡಿಸಿದೆ (ಮಸಳಾ. ೯೨). ' ಮುಚ್ಚಿಗೆ ' ಪರಾ. [ < ಮುಚ್ಚು₄ ]

**ಮಚ್ಚಿಸು** ' ಮೆಚ್ಚಿಸು ' ನೋ.

**ಮಚ್ಚು₁** ' ಮೆಚ್ಚು₁ ' ನೋ.

**ಮಚ್ಚು$_2$** 'ಮೆಚ್ಚು$_2$' ನೋ.

**ಮಚ್ಚು$_3$** (ನಾ). ಮರ. ಗಿಡ ಮುಂತಾದುವುಗಳನ್ನು ಕತ್ತರಿಸಲು ಉಪಯೋಗಿಸುವ, ಮರದ ಹಿಡಿಯುಳ್ಳ, ಕಬ್ಬಿಣದ ಒಂದು ಬಗೆಯ ಸಾಧನ : ಕಡುಗೋಲ್ಕೊಡಲಿ ಕೈವಾರೆ ಗುದ್ದಲಿ ಮಚ್ಚು ಕಡುಕತ್ತಿ ದಬ್ಬುಕಗಳನು ಬಿಡದಾಂತು ನಡೆದರು ಬಿಚ್ಚುಯುವರು (ಕುರಾಸಾಂ. ೪೦-೪೮); ಕಿಚ್ಚಿಂದ ಬೇಯುನು ನೀರಿಂದ ನೆನೆಯುನು ಮಚ್ಚು ಕೊಡಲಿಗೆ ಸಂದಿಸನು ಕಿಚ್ಚು ನೀರಲಗಿನ ಬಾಧೆ ತನುವಿಗಾತ್ಮನಚ್ಚುಗವಳಿದ ಸುವಸ್ತು (ಭರತ. ೬೭-೦೩೨); ಕೈಯಲ್ಲಿ ಒಂದು ಮಚ್ಚನ್ನು ಹಿಡಿದುಕೊಂಡನು (ಉಳಫ. ೨೦). 'ಮಚ್ಚುಗತ್ತಿ' ಪರಾ. [ದೇ.॥ ತಮಿ. ತೆಲು. ಮಚ್ಚು]

**ಮಚ್ಚು$_4$** (ನಾ). ಕಟ್ಟಡದ ಮೇಲಿನ ಭಾಗ.— ಮೇಲ್ಚಾವಣಿ : ಪನಿವೊತ್ತಿನೊಳು ತಂದ ನೀರ ಕಳಸಿಗೆಬೊಳಾ ದಿನದ ಹಗಲಿರುಳು ಮಾಳಿಗೆಯ ಮಚ್ಚಿನೊಳು ಮಱುದಿನದುದಯದಲ್ಲಿರಿಸಿ (ಸೂಶಾ. ೨-೯೦); ಪುರವನಿತೆಯರು ನೋಳ್ಕೊಡೆ ಸಜ್ಜವಳಿಗೆ ಮಂದಿರಗಳ ಮಚ್ಚನೇಱಿದರು (ಕಂಪಿ. ೨೨-೦೦೦); ಎಲ್ಲರೂ ನಿದ್ರೆಹೋಗುತ್ತಿದ್ದ ಒಂದುಮನೆಯ ಮಚ್ಚಿನ ಮೇಲೆ ಇದ್ದ ಒಂದು ಒಪ್ಪಾರಿನ ಗುಜ್ಜುಕೋಣೆಯು ಎಲ್ಲಕ್ಕಿಂತಲೂ ಹೆಚ್ಚಾಗಿ ಏಕೆ ನನ್ನ ಕಣ್ಣಿಗೆ ಬೀಳುತ್ತಿತ್ತೋ ಕಾಣ (ಪಿಬಂಧ. II. ೩೭). 'ಬಿಸಿಲುಮಚ್ಚು' ಪರಾ.

[ದೇ.॥ ತಮಿ. ಮಲ. ತೆಲು. ಮಚ್ಚು: ಕೊಡ. ಮಚ್ಚಿ]

**ಮಚ್ಚು$_5$** (ನಾ). ೧. ಕಪಟ ; ಮೋಸ ; ವಂಚನೆ : "ಮಾಯೆಯನೆ ಮಚ್ಚಕ್ಕು" (ಶಂಗಣಾ. ೦೦೨-೩) ; ಮಚ್ಚು ಮಾಯಂಗಳುಂ ಮರುಳು ಕೌಟಲಗಳುಂ. . .ವಂಚನಾಲಲಿತವಾಗ್ಜಾಲವಿಷಯಂಗಳ ಎಚ್ಚರಿಂದವನಾವ ಯತಿಯಾವಡೆಮ್ಮ ಮನಮೆಚ್ಚಿ ಮುಂಗಾಣದನುಚರನಂತೆ ಚರಿಸುವಂತೊ ಚ್ಚೆತ್ತಿನಲಿ ತೋರ್ಪೆಂ (ವಂಕಾರಾ. ೧-೩-೪೦). ೨. (ಆಲು) ಮರುಳು ಗೊಳಿಸಲು ಉಪಯೋಗಿಸುವ ಪುಡಿ ; ಮಂಕುಬೂದಿ : 'ಮಚ್ಚು ಗಾರ', 'ಮಚ್ಚುಗೊಳಿಸು' ಪರಾ.

[ದೇ.॥ ತೆಲು. ಮಚ್ಚು, ಮಯಿಕ, ಮಯಿಮು, ಮೈದು]

**ಮಚ್ಚು$_6$** 'ಮಜ್ಜು$_2$' ನೋ.

**ಮಚ್ಚು$_7$** 'ಮಕ್ಕು$_2$' ನೋ.

**ಮಚ್ಚುಕತ್ತಿ** 'ಮಚ್ಚುಗತ್ತಿ' ನೋ.

**ಮಚ್ಚುಗತ್ತಿ**, ಮಚ್ಚುಕತ್ತಿ (ನಾ). = ಮಚ್ಚು$_3$ : ಕೊಂಬೆಯನ್ನು ಕತ್ತರಿಸಲು ಮಚ್ಚುಗತ್ತಿ ತೆಗೆದುಕೊಂಡು ಬಾ (ರೂ). **ಮಚ್ಚುಕತ್ತಿ** : ಅಗಲವಾದ ಅಲಗಿನ ತುಂಡುಕೊಡಲಿ ; ಕಟುಕನ ಕಡಿಗತ್ತಿ ; ಮಚ್ಚುಕತ್ತಿ (Chopper. ೨೦೪೩).

[ಮಚ್ಚು$_3$ + ಕತ್ತಿ. / ತಮಿ. ಮಚ್ಚುಕ್ಕತ್ತಿ : ತೆಲು. ಮಚ್ಚುಕತ್ತಿ]

**ಮಚ್ಚುಗಾರ** (ನಾ). (ಆಲು) ಮಾಟಮಾಡುವವನು : "ಮಚ್ಚುಗಾರ-ಮಾಟಗಾರ" (ಶಾಶಕೋ. ೨೬). [ಮಚ್ಚು$_5$ +— ಗಾರ (<— ಕಾಱ) ]

**ಮಚ್ಚುಗುಡಿಸು** (ಕ್ರಿ). ಬಹುಮಾನವನ್ನು ಕೊಡಿಸು ; ಮೆಚ್ಚುಗೆಯನ್ನು ಕೊಡುವಂತೆ ಮಾಡು : ದಮಿತಾರಿಯ ಭುಜಬಲವಿಕ್ರಮದಳವಿಗೆ ಮಚ್ಚಿ ಮಚ್ಚುಗುಡಿಸುವವೊಲ್ (ಶಾಂತಿಪು. ೪-೩೮).

[ ಮಚ್ಚು$_2$ (< ಮೆಚ್ಚು$_2$) + ಕುಡಿಸು$_2$ (< ಕೊಡಿಸು) ]

**ಮಚ್ಚುಗುಡು** 'ಮೆಚ್ಚುಗೊಡು' ನೋ.

**ಮಚ್ಚುಗೆ** 'ಮೆಚ್ಚುಗೆ' ನೋ.

**ಮಚ್ಚುಗೆವೆಱು** (ಕ್ರಿ). ಪ್ರಶಂಸೆಯನ್ನು ಹೊಂದು : ಒರ್ಮೆಗೊರ್ಮೆಗೆರ್ದೆ ಯೊಳ್ ಬೈತಿಚ್ಚೆಯೊಳ್ ಕೂರ್ಮೆ ತಳ್ತಿರವಿಂ ಮಚ್ಚುಗೆವೆತ್ತ ಪತ್ಯುಗೆಯಿನಂತಾ ನಾಲ್ವರಂದಿರ್ವರಿರ್ವರೆ ಯುಗ್ಮದ್ವಯಮಾದರ್ (ಶಾಂತಿಪು. ೬-೦೨೩). [ ಮಚ್ಚುಗೆ (< ಮೆಚ್ಚುಗೆ) + ಪೆಱು$_1$ ]

**ಮಚ್ಚುಗೊಡು** 'ಮೆಚ್ಚುಗೊಡು' ನೋ.

**ಮಚ್ಚುಗೊಳಿಸು** (ಕ್ರಿ). ಮರುಳುಗೊಳಿಸು ; ಭ್ರಾಂತಿಗೊಳಿಸು : ನೆಚ್ಚದಿರು ಸಂಸಾರ ಕಡೆಗೆ ಹಾಕುವದಲ್ಲ ಮಚ್ಚುಗೊಳಿಸುವುದು ವಿಷಯದಲಿ (ಏಡಾಶ್ಕ. ೯೮ ಪಲ್ಲವಿ). [ ಮಚ್ಚು$_5$ + ಕೊಳ್$_1$ + — ಇಸು$_3$ ]

**ಮಚ್ಚುನುಡಿ** (ನಾ). ಹೊಗಳಿಕೆಯ ಮಾತು ; ಪ್ರಶಂಸೆಯ ನುಡಿ : ಮುಂಗುಳುನುಡಿ . . . ಲಲ್ಲೆನುಡಿ ಮಚ್ಚುನುಡಿ ಸೊಗಸುನುಡಿ . . . ಬಿನ್ನಣೆಯ ನುಡಿಯ ಭಾವೆಯರು ಬರುತಿರ್ದರು (ಪಪಮೋ. ೨೩-೧೩).

[ಮಚ್ಚು$_2$ (<ಮೆಚ್ಚು$_2$ ) + ನುಡಿ$_2$]

**ಮಚ್ಚುಮದ್ದು** 'ಮೆಚ್ಚುಮದ್ದು' ನೋ.

**ಮಚ್ಚುವಡೆ** 'ಮೆಚ್ಚುವಡೆ' ನೋ.

**ಮಚ್ಚುವೆಱು** (ಕ್ರಿ). ಮಚ್ಚಿನ ಏಟನ್ನು ಹೊಂದು : ಮಚ್ಚಿನ ಪೆಟ್ಟನ್ನು ಪಡೆ : ಕಿಡುವುದು ತಾನುಂ ತನ್ನೊಳ್ ಪೊಡರ್ದವರುಮನಂತೆ ಕಿಡಿಸುವೀಯುಟಿಯೊಡಲಂ ಕಡುಮೋಹದೆ ಮಚ್ಚಿದೊಡೆ ಪಡೆವೈ ನೀಂ ಮಚ್ಚುವೆತ್ತ ಕಳ್ಳನ ಪಡೆಮಂ (ಜೀವಸಂ. ೦೨೩-೬). [ಮಚ್ಚು$_3$ + ಪೆಱು$_1$]

**ಮಚ್ಚೆ$_1$**. ಮಚ್ಚೆ$_1$ (ನಾ). ಹುಟ್ಟಿನಿಂದಲೇ ಚರ್ಮದ ಮೇಲೆ ಕಂಡು ಬರುವ ಕಪ್ಪು, ಬಿಳಿ ಮುಂತಾದ ಬಣ್ಣದ ಗುರುತು ; **ಮತ್ತಿ** : ಆ ಚಿತ್ರದ ಶರೀರದೊಳ್ ತೊಡೆಯ ಮೇಲೆ ಕಾಡಿಗೆಯ ಬಿಂದು ಬಿರ್ದುದು ಮುನ್ನುಳ್ಳ ಮಚ್ಚೆಯಾಗಿರ್ಪುದುಮಾ ಚಿತ್ರದ ರಚನೆಯುಂ ಭರತಂ ಚೇಟಕ ಮಹಾರಾಜಂಗೆ ತೋಱಿಲ್ ಕಂಡಿವನೀ ಕನ್ನಿಕೆಯ ಏಕಾಂತಪ್ರದೇಶದ ಮಚ್ಚೆಯನೆಂತಱಿದನೆಂದು ಸಂಶಯಂ ಪುಟ್ಟಿ (ಪುಣ್ಯಾಸ್ರ. ೩-೪೦ ವ); ಮೂಗಿನ ಎಡಬದಿಯಲ್ಲಿ ಕಣ್ಣಿನಿಂದ ಕೆಳಗೆ ಕಡಲೆಕಾಳಗಾತ್ರದ ಕಪ್ಪಾದ ಮಚ್ಚೆ ರೂಪವನ್ನು ಕುರೂಪಗೊಳಿಸಿತ್ತು (ತಗುಬ. ೦). **ಮಚ್ಚೆ$_1$** : ಹುಟ್ಟಿದ ದಿನದಿಂದಾ ಬೆನ್ನ ಮಚ್ಚೆವ ಕೊಟ್ಟುದಿರ್ಲಾಗ್ಯು ಭೂಪ ಬೆಟ್ಟದ ಚಾಪನ ವೀರರಸದ ಬಲುಗಟ್ಟಿಯನೇನ ಬಣ್ಣಿಸುವೆ (ಕಂಪಿ. ೩-೯೯). 'ಮತ್ತಿ$_2$' ಪರಾ.

[ ದೇ.॥ ತಮಿ. ಮಚ್ಚೆ$_4$ : ತುಳು. ಮಜೆ ; ತೆಲು. ಮಚ್ಚ ]

**ಮಚ್ಚೆ$_2$** 'ಮಜ್ಜೆ$_2$' ನೋ.

**ಮಚ್ಚೆ$_3$** 'ಮೊಚ್ಚೆಯ' ನೋ.

**ಮಚ್ಚೆನಾಲಿಗೆ** (ನಾ). ಕಪ್ಪುಮತ್ತಿಯಿಂದ ಕೂಡಿದ ನಾಲಗೆ ; ಮತ್ತಿ ನಾಲಗೆ ; P ನಾಲಗೆಯಲ್ಲಿ ಮಚ್ಚೆಯಿರುವವರು ಆಡುವ ಕೆಟ್ಟಮಾತು ಫಲಿಸುವುದೆಂದು ನಂಬಿಕೆಯಿದೆ : ಮಚ್ಚೆನಾಲಿಗೆ ಇದ್ದವನ ಸಂಗಡ ಕಚ್ಚಾಟ ಮಾಡಬಾರದು (ಗಾದೆ). [ಮಚ್ಚೆ$_1$ + ನಾಲಿಗೆ (<ನಾಲಗೆ)]

**ಮಚ್ಛ** 'ಮಚ್ಚ$_3$' ನೋ.

**ಮಚ್ಛರದಾಣಿ** 'ಮಚ್ಛರದಾನಿ' ನೋ.

**ಮಚ್ಛರದಾನಿ**, ಮಚ್ಚರದಾಣಿ, ಮಚ್ಚರದಾನಿ, ಮಚ್ಛರದಾಣಿ (ನಾ). ಸೊಳ್ಳೆಪರದೆ : ಮಚ್ಛರದಾನಿಯಿಂದ ಪರಿವೇಷ್ಟಿತವಾದ, ಚಂದನದಿಂದ ನಿರ್ಮಿತವಾದ ಪರ್ಯಂಕದ ಮೇಲೆ . . . ಶಯನ ಮಾಡಿದ್ದಾಳೆ (ಮಂಜುಳ. ೦೯) ; ಮಚ್ಛರದಾನಿ ಸಹಿತವಾದ ಪಲ್ಲಂಗಗಳು ಮುಂತಾದುವುಗಳನ್ನು ಕಂಡು ಇವರೊಳ್ಳೆ ಶ್ರೀಮಂತರಿರಬೇಕೆಂದು ಊಹಿಸಿದೆ (ಎಡಹ. ೦೨೪). **ಮಚ್ಚರದಾಣಿ** : ಬೆಳಿಗ್ಗೆಯೇ ಏಳುವಾಗ ಇಳಿಬಿಟ್ಟ ಮಚ್ಚರದಾಣಿಯನ್ನು ಇನ್ನೂ ತೆಗೆದಿರಲಿಲ್ಲ (ಸ್ವಪ್ನದ. ೦೦೯). **ಮಚ್ಚರದಾನಿ** : ದಕ್ಷಿಣಭಾಗದಲ್ಲಿ ಕಿಡಿಕಿಯ ಮಗ್ಗುಲಿಗೆ ಹಾಸಿಕೊಳ್ಳಲೇನು ಬಾಜೂಜೀ, ಮಚ್ಚರದಾನಿ ಕಟ್ಟುವ ಅವಶ್ಯಕತೆ ಬೀಳುವುದಿಲ್ಲ (ಶ್ರೀಕಾಂತ. ೬೬) ; ಮಚ್ಚರದಾನಿಯನ್ನು ಮಡಚಿ ಅತ್ತ ಇಟ್ಟನು (ವಂಶಾ. ೨೨). **ಮಚ್ಛರದಾಣಿ** : ಮಚ್ಛರದಾಣಿ, ಪೀಕದಾಣಿ . . . ಮೊದಲಾದವುಗಳಲ್ಲಿ ಕಂಡುಬರುವ ಪ್ರತ್ಯಯಗಳೂ 'ಪಾರಸಿ' ಆಗಿವೆ (ಶಾಶಾಶಾ. ೦೬೬).

[←ಹಿಂ. ಮಚ್ಛರದಾನೀ ; ಮರಾ. ಮಚ್ಛರದಾಣೀ. ಮಚ್ಛರದಾನೀ]

**ಮಚ್ಚೆ** 'ಮಚವೆ' ನೋ.

**ಮಜ** 'ಮಜಾ' ನೋ.

**ಮಜಕೂರು** (ನಾ). ೧. ಕಾಗದ, ಪತ್ರ ಮೊದಲಾದುವುಗಳಲ್ಲಿ ಬರೆಯುವ ಅಥವಾ ಬಾಯಿಯಲ್ಲಿ ಹೇಳುವ ವಿಷಯ; ಸಮಾಚಾರ; ಸುದ್ದಿ: ನಿನಗೆ ಈ ಮಜಕೂರ ತಿಳಿಸಬೇಕೆಂತ ಬಂದರ ನೀನು . . . ನಮ್ಮನ್ನು ಜಡೀಬೇಕಂತ ಮಾಡಿದ್ದಿ (ಗ್ರಾಕೂಡು. ೨೦೭); ಕೈಯಲ್ಲಿದ್ದುದನ್ನು ಓದಿ ತೋರಿಸದೆ ಅದರ ಮಜಕೂರನ್ನು ನಿವೇದಿಸಹತ್ತಿದರು (ಕೂಡುರಾ. ೦೦೨). ೨. ಪ್ರಸ್ತುತವಾದುದು; ಸಂಬಂಧಿಸಿದುದು: ತಾಲೂಕು ಮಜಕೂರು ಪೈಕಿ ಬಗುಂಜಿ ಮಾಗಣಿಯಲು ಇರುವ ಹೆಜ್ಜೆ ಶಿವ್ಯೆಯ್ಯನು . . . ಶಿಲಾಮಯ ದೇವಸ್ಥಾನಾ ಕಟ್ಟಿಸಿ (ಎಕ. VI, ಕೊಪ್ಪ. ೬೬-೨೮; 1811); ತಾಲ್ಲೂಕು ಮಜಕೂರು ಜಮಾಬಂದಿ ಕ್ರಮ (ಮಜಾವಂ.II, ೫೮). [← ಅರ. ಹಿಂ. ಮಜಕೂರ್; ಮರಾ. ಮಜಕೂರ್, ಮಜ್ಕೂರ್]

**ಮಜಡ** 'ಮದಡ' ನೋ.

**ಮಜಡು** 'ಮದಡು' ನೋ.

**ಮಜಬೂತು** (ಗು). ೧. ಗಟ್ಟಿಯಾದ; ಭದ್ರವಾದ: ಸಿಮೆಂಟು ಕಾಂಕ್ರೀಟಿನ ಮಜಬೂತ ಮನೆ (ಹೊಸಕ್ತಿ. ೦೨೯). (ನಾ). ೨. ಗಟ್ಟಿಯಾದುದು; ಬಲವಾದುದು; ದೃಢವಾದುದು: ಪರಿಹರ ಕಿಲ್ಲೆ ವಾಹಳ ಮಜಬೂತು ಯಿಥೆ. ಸ್ವಾಧೀನಕ ಬರೋದಿಲ್ಲ (ಮರಕ. ೬೦-೨); ಒಳ್ಳೆ ಮಜಬೂತಾದ ಹವಣಾದ ನಯಗೆಲಸದ ಸಣ್ಣಸಿಬಿರಿನ ತೊಟ್ಟಿಲು (ಕಜಾ. II, ೦೦೦೬). ೩. ಭರ್ಜರಿಯಾದುದು: ಎಲ್ಲರಿಗೂ ಔತಣ ಮಜಬೂತಾದ ಊಟ (ಮಲ್ಲಿ. ೦೬); ಸಣ್ಣ ಗುಲಾಬಿಯಾಕಾರದಲ್ಲಿ ವಜ್ರಗಳನ್ನು ಕೂಡಿಸಿದ್ದ ಮಜಬೂತಾದ ಉಂಗುರ (ಕೃಸರು. ೯೭).

[← ಅರ. ಹಿಂ. ಮರಾ. ಮಜಬೂತ್]

**ಮಜಮಾ**, ಮಝಮಾ (ನಾ). (ಬಹಳ ಜನರು ಒಂದೆಡೆ ಸೇರುವ) ಸಭೆ; ಕೂಟ; ಎರಡನೇ ದಿವಸ ಮಜಮಾಕ್ಕೆ ಈಪೂರ ಬ್ರಾಹ್ಮಣರು ಅನೇಕರು ಬಂದಿದ್ದರು (ಮುಸುಗ. ೦೩). **ಮಝಮಾ**: ಮಝಮಾ (ಲಾವಣಿಗಾರರ ಎರಡು ಗುಂಪುಗಳೂ ಸೇರಿ ಹಾಡುವುದಕ್ಕೆ ಕುಳಿತುಕೊಳ್ಳುವ ಸಭೆ) ಸೇರುವಾಗ ತುರಾದವರು ರಾಹುವಿರುವ ದಿಕ್ಕಿಗೆ ಎದುರಾಗಿ ಕುಳಿತುಕೊಳ್ಳುತ್ತಾರೆ (ಕರ್ನಾಸಂ. ೨೪).

[← ಅರ. ಮಜ್ಮಅ; ಹಿಂ. ಮಜಮಾ]

**ಮಜರೆ** (ನಾ). ಸಣ್ಣಹಳ್ಳಿ; ಉಪಗ್ರಾಮ: ಕೆರೆ ಮಧ್ಯೆ ಇರಲಿಲ್ಲ ಎಂದರೆ ನಮ್ಮ ಊರು ಕಲ್ಮಾಡಿಯ ಒಂದು ಮಜರೆಯಾಗುತ್ತಿದ್ದಿತೊ ಏನೊ (ಸಪ್ತ. VI. ೦). [← ಅರ. ಮಜ್ರಾ; ಮರಾ. ಮಜರಾ, ಮಜರೇ]

**ಮಜಲೀಸು** (ನಾ). ನೃತ್ಯ, ಸಂಗೀತ ಮುಂತಾದುವು ನಡೆಯುವ ಸಭೆ; ಬೈಠಕ್: ಈಗಲೂ ಹೈದರಾಬಾದಿನ ಕನ್ನಡಜಿಲ್ಲೆಗಳಲ್ಲಿ ಮಜಲೀಸು ನಡೆಯುವ ಸ್ಥಳಗಳಿವೆ (ರೂಪ). [← ಅರ. ಮಜ್ಲಿಸ್; ಹಿಂ. ಮಜಲಿಸ್; ಮರಾ. ಮಜಲಸ್, ಮಜಾಲಸ್, ಮಜಾಲೀಸ್]

**ಮಜಲು, ಮಜಲೆ** (ನಾ). ೧. ಹಂತ; ಘಟ್ಟ: ಹನ್ನೊಂದು ಹೊಡೆದು ಹನ್ನೆರಡರ ಮಜಲು ಬರಲು ತೊಡಗಿತ್ತು (ಶ್ರೀರಂಗ.೦೨೦); ನದಿಯ ಮೊದಲ ಮಜಲಿನಲ್ಲಿ ಭೂಮಿ ಉಬ್ಬುತಗ್ಗುಗಳಿಂದ ಕೂಡಿರುತ್ತದೆ (ಕರ್ನಾ. I, ೨೩೯). ೨. ಪ್ರಯಾಣಕಾಲದಲ್ಲಿ ಅಲ್ಲಲ್ಲಿ ತಂಗುವ ಸ್ಥಳ; ಟಪ್ಪೆ: ಎರಡು ಮೂರು ಹರಿದಾರಿಗಳಲ್ಲಿ ಮಧುಪುರವಿದೆ. ಒಂದೇ ಮಜಲಿನೊಳಗೆ ಕೊಲ್ಲೂರಿದೆ (ಮುಕ್ತಾ. ೨೦೯); ಶ್ರೀದೇವಿಯು ಅವರೊಡನೆ ದಾರಿ ನಡೆಯುತ್ತಿದ್ದಳು. ಒಂದೆರಡು ಮಜಲು ದಾಟುವುದರೊಳಗಾಗಿ ಶ್ರೀದೇವಿಯು ಅವರ ಗುಂಪಿನಲ್ಲಿಯೇ ಒಬ್ಬಳೆನಿಸಿಯೇ ಪರಿಗಣಿತಳಾದಳು (ಶ್ರೀರಾಜು. ೨೦೯). ೩. ದೇವರ ಉತ್ಸವ, ಮೆರವಣಿಗೆಗಳನ್ನು ಅಲ್ಲಲ್ಲಿ ನಿಲ್ಲಿಸುವ ಸ್ಥಳ: ಉತ್ತರಕರ್ನಾಟಕದಲ್ಲಿ ಒಕ್ಕಲಿಗನು . . . ತೇರೆಳೆದು, ಮಜಲುಮೋಜುಗಳನ್ನು ಮಾಡುತ್ತಾನೆ (ಕನ್ನಜಾ. ೪); ಊರವರೆಲ್ಲ ಕೂಡಿ ದುರಗಮ್ಮನ ಮುಂದೆ ಡೊಳ್ಳಿನ ಮಜಲುಮಾಡಿದರು (ಮಣ್ಣಿಮ. ೬). ೪. ಮಹಡಿ; ಉಪ್ಪರಿಗೆ: ಅವರು ಈ ಕಟ್ಟಡದ ಮೂರನೇ ಮಜಲಿನಲ್ಲಿದ್ದಾರೆ (ರೂಪ). ೫. (ಕರಾ) ಮಧ್ಯಮ ವರ್ಗಕ್ಕೆ ಸೇರಿದುದು: 'ಮಜಲುಗದ್ದೆ' ಪರಾ. ೬. ಒಂದು ಬಗೆಯ ಮಧ್ಯಮವರ್ಗದ ವ್ಯವಸಾಯದ ಭೂಮಿ; ಒಣಗದ್ದೆ: ಗದ್ದೆಬಯಲು ಮಜಲು ಬಿತ್ತುವ (ಇಂ. ೦೯೯೬, ಮಂಗಳೂರು. ೦೫೬-೦೬; 1346); ಯೆರ್ಮ್ಮಾಳ ದೇವಾಲ್ಯದ ಯಿನಾಶಾ(೦)ನ್ಯದ ಮೂಲೆಯ ಪಾಳ ದೇವರ ಮಜಲು (ಸೌಇಇ. IX - ii, ೪೨೬-೦೫; 1402); ಕಂಬಳ . . . ಉತ್ತು ಹದಮಾಡಿರುವ ಮಜಲುತರದ ಗದ್ದೆಗಳಲ್ಲಿಯೇ ಇದು ನಡೆಯುವುದು ಹೆಚ್ಚು (ಕಕಪು. ೩-೨೬). **ಮಜಲೆ**: ೪. ರಸ್ತೆಗಳ ಇಕ್ಕೆಲಗಳಲ್ಲಿ ಮೂರು ಮಜಲೆಗಳ ನಾಲ್ಕು ಮಜಲೆಗಳ ಚಾಳುಗಳು (ಅಜೋರಿ. ೦೦೪); ಮೂರನೇ ಮಜಲೆಯ ಮೇಲಿನ – ರಸ್ತೆಯ ಬದಿಯ – ಕೊನೆಯ ಎರಡು ಕೋಣೆಗಳಲ್ಲಿ ಅವಳ ಅಕ್ಕನ ಚಿಕ್ಕ ಸಂಸಾರ (ಸಡಿದಾ. II, ೦೦೭೬).

[← ಅರ. ಮಂಜಿಲ್, ಮಂಝಿಲ್; ಹಿಂ. ಮರಾ. ಮಜಲ್./ತುಳು. ಮಜಲ್ = ಮಧ್ಯಮತರಗತಿಯ]

**ಮಜಲುಗದ್ದೆ** (ನಾ). ಮಧ್ಯಮ ವರ್ಗದ ಗದ್ದೆ: ಹೆಚ್ಚಿನ ಬೆಟ್ಟು ಮತ್ತು ಮಜಲು-ಗದ್ದೆಗಳನ್ನು ಉತ್ತು ಬಿತ್ತಿದರು (ಬಾಳಿಗ. ೦೦೩); ರಸ್ತೆಯ ಎಡತ್ತಿನಲ್ಲಿ ಪಂಜುರ್ಲಿಯ ಗುಡಿಯ ಎದುರು ಮಜಲುಗದ್ದೆಯಲ್ಲಿ ತುಂಬ ಜನ ಸೇರಿದ್ದರು (ಮುಂಗಾರು. ೦೦೬). [ಮಜಲು+ಗದ್ದೆ (<ಗಟ್ಟ್$_{2}$)]

**ಮಜಲುಬಿಡು** (ಕ್ರಿ). ಪ್ರಯಾಣದ ಮಧ್ಯದಲ್ಲಿ ಬೀಡು ಬಿಡು,– ಬಿಡಾರ ಹೂಡು: ಇಪ್ಪತ್ತುಮೈಲಿ ಪ್ರಯಾಣಮಾಡಿ ಊಟಕ್ಕಾಗಿ ಮಜಲುಬಿಟ್ಟು ಸೇನೆ ಸಂಜೆಯ ವೇಳೆಗೆ ಶ್ರೀರಂಗಪಟ್ಟಣವನ್ನು ತಲುಪಿತು (ಶಕ್ಕರೇ. ೦೮೮). [ಮಜಲು+ಬಿಡು$_{1}$]

**ಮಜಲೆ** 'ಮಜಲು' ನೋ.

**ಮಜಾ**, ಮಜ, ಮಝಾ (ನಾ). ೧. ಮೋಜು; ಗಮ್ಮತ್ತು: ನಿಮ್ಮಿಬ್ಬರದೂ ಮಜಾ ಏತಿ ಬಿಡಲೇ (ಮಣ್ಣುಹ. ೯೪); ಕೇಶವರಾಯನಿಗೆ ಇನ್ನೂ ಬೆಳಕಿರುವಾಗಲೆ ಕುಡಿಯುವುದೆಂದರೆ ಅದೇನೋ ಮಜಾ ಎನ್ನಿಸುತ್ತಿರಲಿಲ್ಲ (ಶಂಗಬ. ೭). ೨. ತಮಾಷೆ; ವಿನೋದ: ಏನೋ ಮಾತಿನ 'ಮಜಾ' ದಲ್ಲಿ ಅದನ್ನೂ ಹೇಳಿಬಿಟ್ಟಿದ್ದಳು (ಕಾಹೂರು. ೦೩೬); ಸಾಹಸಮಾಡಿ ಮುಂದೆ ಹೋದರೆ ಮಾತ್ರ ಮಜಾ (ಸಾಹೇಬ್. ೩). **ಮಜ**: ೧. ರಜವನ್ನು ಮಜವಾಗಿ ಕಳೆಯಬೇಕೆಂದು ನೂರಾರು ಯೋಚನೆಗಳನ್ನು ಮಾಡಿಕೊಂಡರು (ಸ್ವಾಮಿಸ್ಕೀ. ೬೬). ೨. ಜಾರುವಂತಹ ಈ ಕಲ್ಲುಗಳ ಮೇಲೆ ಜೋರಿನಿಂದ ಹೋಗುವುದರಲ್ಲಿಯೇ ಮಜವಿದೆ (ಮುಕ್ತ. ೫೬). ೩. ಸಂತೋಷ; ಖುಷಿ: ನಾವು ಕೊಡೋ ಐನೂರು ರೂಪಾಯಿ ಕರಗೋತನಕ ಮಜವಾಗಿರುತ್ತಾನೆ (ರಂಗವ. ೦೦೭). **ಮಝಾ**: ೧. ದುಡಿದರೆ ಮಝಾ; ಇಲ್ಲದಿದ್ದರೆ ಪರದಾಟ (ಅನಾಥ. ೦೯೨). [←ಪಾರ. ಮಜಾಹ್, ಮಝಾ; ಹಿಂ. ಮರಾ. ಮಜಾ]

**ಮಜೂರ** (ನಾ). ಕೂಲಿಕೆಲಸಮಾಡುವವನು: ಎಲ್ಲರಿಗಿಂತಲೂ ಮಜೂರರಿಗೆ ನಾನು ಹೆಚ್ಚಿನ ಸಹಾನುಭೂತಿ-ಭೂತದಯೆಗಳನ್ನು ತೋರಿಸುತ್ತೇನೆ (ಸಿಕ್ಕಾಪು. ೬); ಕಾರ್ಖಾನೆಗಳಲ್ಲಿ ಕೆಲಸಮಾಡುವ ಮಜೂರರ ಪರಿಸ್ಥಿತಿಯನ್ನು ಪರಿಶೀಲಿಸಿದರೆ ಕನಿಕರ ಹುಟ್ಟದಿರದು (ಜಾತಕ. ೪೯).

[←ಹಿಂ. ಮರಾ. ಮಜೂರ್]

**ಮಜೂರಿ** (ನಾ). ೧. ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಕೊಡುವ ಹಣ; ಕೂಲಿ: ಭಕ್ಷಿಯು ಕೆಲಸಗಾರರಿಗೆ ಚೆನ್ನಾಗಿ ಮಜೂರಿ

ಕೊಡುತ್ತಿದ್ದನು (ಧರ್ಮಾ. ೦೬೨) : ದಿನದಿನದ ದುಡಿಮೆಗೆ ಕೊಡುವ ಮಜೂರಿಗೆ ಕೂಲಿ ಎನ್ನಲಾಗುತ್ತದೆ (ಗ್ರಪರಿ. ೦೯೩).

[←ಹಿಂ. ಮರಾ. ಮಜೂರೀ]

**ಮಜೆದಾರ** (ನಾ). ವಿನೋದಪೂರ್ಣವಾದುದು; ಅವರ ನಾಟಕಾನೂ ಮಜೆದಾರ ಐತಿ (ಹೊಸಂಜಾ. ೦೦೮).

[←ಪಾರ. ಹಿಂ. ಮಜೇದಾರ್; ಮರಾ. ಮಜೇದಾರ್, ಮಜಾದಾರ್]

**ಮಜ್ಜ** (ನಾ). ೧. ದೇಹದ ಧಾತುಗಳಲ್ಲಿ ಒಂದು; ಮೂಳೆಯ ಒಳಗಿನ ಸಾರವತ್ತಾದ ಭಾಗ; ಅಸ್ಥಿಸಾರ : ಒಡಲೆಂಬುದು ಮಜ್ಜದ ಪೆರ್ಮಡು (ರತ್ನಕ. ೩-೨೦); ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು, ಮೇದೋಧಾತು, ಅಸ್ಥಿಧಾತು, ಮಜ್ಜಧಾತು, ಶುಕ್ಲಧಾತು ಎಂದು ಏಳು ತರನಾಗಿವೆ (ಸಕವೈ. ೯೮). ೨. ಸಸ್ಯನಾಳದ ಒಳಭಾಗದ ಸತ್ತ್ವ; ಮರದ ಕೆಚ್ಚು; ಚೇಗು : "ಮಜ್ಜಮೆನೆ [ಪಾಠಾಂ. ಜ್ಜೆಯೆನೆ] ಸಾರಮೆನೆ ಮರದ ಕೆಚ್ಚಕ್ಕು" (ಮಂಗರಾ. ೩೨-೩).

[ಸಂ. ಮಜ್ಜಾ]

**ಮಜ್ಜಣ** 'ಮಂಜಣ$_1$' ನೋ.

**ಮಜ್ಜನ** (ನಾ). ಸ್ನಾನ; ಮಿಾಹು; ಜಳಕ : ಮಜ್ಜನಕೀಗಳೆ ರಾಜಪುತ್ರಿ ನೀಂ ನಡೆ (ಕಾದಂಪೂ. ೬೬೨); ಮಜ್ಜನಕ್ಕೆಚಿವೆಸಯ್ಯಾ ಕಾಯುವಿಕಾರಿಯಾನು (ಬಸವ. ೨೩೯); ಸಜ್ಜೆವನೆಯ ಪೊಙಮಟ್ಟು ಗುಜ್ಜುಮೆಟ್ಟಿಂದ ನಡೆದು ಪೋಗಿ ಮೆಲ್ಲನೆ ಮಜ್ಜನವನು ಮಾಡಿದಳು (ಕುರಾಶಾಂ. ೨೪-೦೬೬).

**ಮಜ್ಜನದ ಮನೆ** = ಸ್ನಾನಮಾಡುವ ಮನೆ; ಸ್ನಾನಗೃಹ : ಮಜ್ಜನದ ಮನೆಯನೊಳಪೊಕ್ಕುಜ್ವಳಿಪ ಸುವರ್ಣಪೀಠದೊಳ್ಕುಳ್ಳಿರ್ದಾ ಸಜ್ಜನೆಗ ಸುರಾಗದೆ ಯೋಜಿಪ್ಪನಮಣಿಯೊರ್ವಳಿಕ್ಕಿದಳ್ ಮಲಯಜಮಂ (ಉದ್ಭಟ. ೯-೦೮). [ಸಂ.]

**ಮಜ್ಜನಂಗೆಯ್ಸು.** ಮಜ್ಜನಗೆಯ್ಸು (ಕ್ರಿ). ಸ್ನಾನಮಾಡಿಸು; ಮಿಾಯಿಸಂ : ನಳಿನಮುಕುಳದಿಂ ಮಜ್ಜನಂಗೆಯ್ಸಿ ತಜ್ಜಳಜಧೂಳೀಗಂಧ ವಿಟ್ಟು . . . ಕಮಳೆಯರ್ಚಿಸಿದಳೋಯೆನೆ ಕೊಳದೊಳಾರ್ಯನೆಸೆದಂ (ಕನ್ನರಾ. ೮-೩೦). **ಮಜ್ಜನಗೆಯ್ಸು** : ನುಡಿಸಿದರಬಿಲೋಪಚಾರದಿಂ ಸಂಕಲೆಗಿಡಿಸಿದರ್ ಮಜ್ಜನಗೆಯ್ಸಿ ಉಡಿಸಿದು[ಉಡಿಸಿದರು] ನವ್ಯವಸ್ತ್ರವ ನಾಯಾತಣಕೆ (ಪೋಹತ. ೪೦-೩೦). [ಮಜ್ಜನ + ಕೆಯ್ಸು]

**ಮಜ್ಜನಂಬುಗಿಸು** 'ಮಜ್ಜನಂಬೊಗಿಸು' ನೋ.

**ಮಜ್ಜನಂಬುಗು** 'ಮಜ್ಜನಂಬೊಗು' ನೋ.

**ಮಜ್ಜನಂಬೊಗಿಸು, ಮಜ್ಜನಂಬುಗಿಸು** (ಕ್ರಿ). = ಮಜ್ಜನಂಗೆಯ್ಸು : ಸೊಗಸುವ ಬೋನವುಂ ಸಮೆವ ಕಾರ್ಯದೊಳು ಕೆಲರಂ ಸುಮಜ್ಜನಂ ಬೊಗಿಸುವ ಕಜ್ಜದಲ್ಲಿ ಕೆಲರಂ . . . ಅಪ್ಪೈಸಿದಳ್ (ಜಾರಪು. ೬-೬೪). **ಮಜ್ಜನಂಬುಗಿಸು** : ನಾಗಕನ್ನೆಯರುಂ ತಾಸುಂ ಮನಂಬುಗಿಸುವಂತೆ ಮಜ್ಜನಂಬುಗಿಸಿ . . . ಗುಣಾರ್ಣವನಂ ಮರುಳ್ಚಿದಳ್ (ಶಂಶಪಾ. ೪-೦೬ ವ); ತುತಮ್ಮ ಮಗಳ್ದಿರಂ ಮಜ್ಜನಂಬುಗಿಸಿ (ನೇಮಿಪು. ೦೩-೫೩ ವ) : ಮಂಗಮಾಗಿಸುತಿಹ ಪರಿಮಳದ ಪನ್ನೀರಿನಿಂ ಮಜ್ಜನಂಬುಗಿಸಿ (ಕಪು. ೩೬-೮). [ಮಜ್ಜನಂಬೊಗು + — ಇಸು$_3$]

**ಮಜ್ಜನಂಬೊಗು, ಮಜ್ಜನಂಬುಗು** (ಕ್ರಿ). ಸ್ನಾನಮಾಡು; ಮಿಾಯು : ಪ್ರಭಾವತೀಮಹಾದೇವಿ ಮಜ್ಜನಂಬೊಕ್ಕು ದಿವ್ಯವಸ್ತ್ರಮನುಟ್ಟು ಮಗುಟ್ದು ಬಂದು . . . ಇಂತೆಂದಳ್ (ಧರ್ಮಾಮೃ. ೪-೦೬೩). **ಮಜ್ಜನಂಬುಗು** : ಸುಗಂಧತೈಲದಿಂ ಮೆಯ್ಯಭ್ಯಂಗನಂಗೆಯ್ದು ಮಜ್ಜನಂಬುಗಲೆಂದಿರ್ದವಸರದೊಳ್ (ವಡ್ಡಾರಾ. ೬೬-೦); ಮಜ್ಜನಂಬುಗದಾರೋಗಿಸಲೊಲ್ಲದಿರ್ಪರ ವಿದೇಂ (ಶಂಶಪಾ. ೪-೬೩); ಲಗ್ನಕಾಂ ಬಂದು ಮಜ್ಜನಂಬುಗುವಾಗಳ್ . . . ಸುವತಿಯರ್ ಪದೆದೆಸ್ಸಯ ದೇಹಮೆಯ್ದೆ ರೆಷೋಂಚಿಸುತಿರೆ ಪೂಸಿದರ್ ಮೃದುಕರಾಂಬುಜದಿಂ ನವಗಂಧತೈಲಮಂ (ವಚಕು. ೪-೦೦೯ ವ).

[ಮಜ್ಜನ + ಪೊಗು]

**ಮಜ್ಜನಗೃಹ** (ನಾ). ಸ್ನಾನದ ಮನೆ; ನೀರುಮನೆ : ವಸುಧಾರಕವೆಂಬ ಕೋಷ್ಠಾಗಾರಮುಂ ಜೀಮೂತಮೆಂಬ ಮಜ್ಜನಗೃಹಮುಂ . . . ಎಪ್ಪತ್ತೆಣ್ಬಾಸಿರ ದುರ್ಗಾಟವಿಗಳುಂ ಪದಿನೆಣ್ಬಾಸಿರಮ್ಲೇಚ್ಛರಾಜರುಮಾತ್ಮೀಯ ಸಾಮ್ರಾಜ್ಯಪರಿಚ್ಛೇದಮಾಗೆ (ಆದಿಪು. ೧೫-೩ ವ). [ಸಂ.]

**ಮಜ್ಜನಗೆಯ್ಸು** 'ಮಜ್ಜನಂಗೆಯ್ಸು' ನೋ.

**ಮಜ್ಜನಗೊಳಿಸು** (ಕ್ರಿ). = ಮಜ್ಜನಂಗೆಯ್ಸು : ನೆರೆದಮರ ದಾದಿಯರು ಬೆನ್ನನೆ ಪರಿದು ಪಾದವ ಕಟ್ಟಿಕೊಂಡು ಪರಮನನು ಮಜ್ಜನಗೊಳಿಸುವರು ಸಜ್ಜೆಗೊಳಿಸುವರು (ಸಾಳ್ವಭಾ. ೩೩-೦೦೫).

[ಮಜ್ಜನ + ಕೊಳ್$_1$ + — ಇಸು$_3$]

**ಮಜ್ಜನಜಲ** (ನಾ). ೧. ಸ್ನಾನಮಾಡುವ ನೀರು; ಮಿಾಹದ ಜಲ : ಮಜ್ಜನಪೀಠಂ ಸುರಗಿರಿಮಜ್ಜನಜಲಮಮೃತಜಲಧಿಜಲಮಮರೇಂದ್ರಂ ಮಜ್ಜನವಳ್ಳನುಮೆನೆ ಜಿನಮಜ್ಜನಮಹಿಮೆಯ ಬೆಡಂಗನೇವಣ್ಣಿಪುದೋ (ಆದಿಪು. ೬-೧೨೩). ೨. ಸ್ನಾನಮಾಡಿದ ನೀರು. — ಅಶುದ್ಧಜಲ : ವಿವಿಧ ಜನರಾಶ್ಚರ್ಯರಾಗಿರೆ ಅಪರಿಮಿತದಿಂ ಕೇಳಿ ಪರಿತಂದವರ ಮಜ್ಜನಜಲದ ಕೆಸಱಲಿ ಪೊರಳುತಿರಲು (ಬಸಪು. ೫೬-೫೬). [ಸಂ.]

**ಮಜ್ಜನಪೀಠ** (ನಾ). ಸ್ನಾನಮಾಡುವಾಗ ಕುಳಿತುಕೊಳ್ಳುವ ಮಣೆ. — ಪೀಠ : ವಿಶದ ಯಶಸ್ಸಿದ್ಧಾಧಿಷ್ಠಾನಪೀಠಮೆನಿಪ ಮಜ್ಜನಪೀಠಮನಧಿಷ್ಠಿಸಿದಾಗಳ್ (ಆದಿಪು ೯-೬೯ ವ); ವಿಳಸನ್ಮಜ್ಜನಪೀಠಮಾದುದು ಜಿನಂಗೆಂಬೊಳ್ಪಿನಿಂ ಪೆರ್ಮೆಯಂ ತಳೆದತ್ತು (ಶಾಂತಿಪು. ೪-೬೭). [ಸಂ.]

**ಮಜ್ಜನಬಾವಿ** (ನಾ). ಸ್ನಾನಮಾಡುವ ಬಾವಿ; ಮಿಾಹದ ಬಾವಿ : ಮಜ್ಜನಬಾವಿಯೊಳಗಿರ್ದ ಸಲಿಲಮಂ ನೀನೆಱೆವುತಿರು ಪ್ರಜ್ವಳಿಸುವುವು ದೀವಿಗೆಗಳ್ (ಬಸಪು. ೫೦-೫೬). [ಮಜ್ಜನ + ಬಾವಿ]

**ಮಜ್ಜನವಡಿಸು** (ಕ್ರಿ). = ಮಜ್ಜನಂಗೆಯ್ಸು : ಮಜ್ಜನವಡಿಸಿ ಸುವರ್ಣಶೂರ್ಪದೊಳಾಂತು ಸೆಜ್ಜೆಗೆ ತಂದರಾ ಶಿಶುವ (ಪೋಹತ. ೦೬-೩೦).

[ಮಜ್ಜನ + ಪಡಿಸು]

**ಮಜ್ಜನವಳ, ಮಜ್ಜನವಳ್ಳ, ಮಜ್ಜನವಾಳ** (ನಾ). ಸ್ನಾನಮಾಡಿಸುವವನು : "ಮಜ್ಜನವಳನೆಂದು ಮಜ್ಜನಂಬುಗಿಸುವಾತಂ" (ಶಶಸಾ. ೬೦-೩೪೯); ಇಂದ್ರನೆ ಮಜ್ಜನವಳನಾಗೆ ಕ್ಷೀರಾಂಭೋರಾಶಿಯ ಜಲಮೆ ನೀರಾಗೆ . . . ಜನ್ಮಾಭಿಷೇಕ ಮಹಾಕಲ್ಯಾಣಮನೆಯ್ದಿ (ಶ್ರಾವಕಾ. ೦೬೨-೬); ಸುರರದೆಲ್ಲರು ನಿರತರುಹರೆನೆ ಸುರಗಿರಿಯೆ ಮಜ್ಜನದ ಪೀಠವು ಸುರಪ ಮಜ್ಜನವಳನಮೃತಾಂಬುಧಿಯೆ ನೀರ್ದೊಣೆಯು (ಸಾಳ್ವಭಾ. ೩೩-೬೩). **ಮಜ್ಜನವಳ್ಳ** : ಮಜ್ಜನಪೀಠಂ ಸುರಗಿರಿ ಮಜ್ಜನಜಲಮಮೃತಜಲಧಿಜಲಮಮರೇಂದ್ರಂ ಮಜ್ಜನವಳ್ಳನುಮೆನೆ ಜಿನಮಜ್ಜನಮಹಿಮೆಯ ಬೆಡಂಗನೇವಣ್ಣಿಪುದೋ (ಆದಿಪು. ೬-೦೦೩); ವೃತ್ರಾರಿ ಬಿತ್ತರದಿಂ ಮಜ್ಜನವಳ್ಳನಾಗೆ ನಿಜಜನ್ಮಸ್ನಾನಕಾರ್ಯಂ ಕರಂ ಪಿರಿದಾಶ್ಚರ್ಯಮಾದುದು (ವರ್ಧಮಾ. ೦೬-೨೫) : ಮಜ್ಜನವಳ್ಳರ ಮಣಿಹಡಾಜಿರ ಚಿಲುಬೆಜ್ಜರ ಬೆಸದಾಳುಗಳ ಅಜ್ಜರ ಕೇರಿ . . . ಮೆಱೆದಿಹುದು (ಕುರಾಶಾಂ. ೪-೦೦೫). **ಮಜ್ಜನವಾಳ** : ಮಜ್ಜನವಾಳರ ಮಣಿಹಗಾರರ . . . ನಿತುಗೇರಿಗಳು ಆ ದುರ್ಗದಲ್ಲಿ ವ್ಯವಸ್ಥೆಗೊಂಡಿವೆ (ಹಂಪಂಂಡ. ೦೨೬). [ಮಜ್ಜನ + — ವಳ]

**ಮಜ್ಜನವಳ್ತಿ** (ನಾ). ಸ್ನಾನಮಾಡಿಸುವವಳು : ಲಕ್ಷ್ಮಣಾಮಹಾದೇವಿ ಮಣಿಮಯ ಮಜ್ಜನಪೀಠಾಗ್ರಮನಳಂಕರಿಸಿದಾಗಳ್ . . . ಮಜ್ಜನಂಬುಗಿಸಿದ ರಂದಮಾರ್ತ್ಯಯರೆ ಮಜ್ಜನವಳ್ತಿಯರಾಗಿ ರಾಗದಿಂ (ಚಂದ್ರಪು. ೦೨-೩).

[ಮಜ್ಜನವಳ + — ತಿ$_1$ (< — ಇತಿ$_1$)]

**ಮಜ್ಜನವಳ್ಳ** 'ಮಜ್ಜನವಳ' ನೋ.

**ಮಜ್ಜನವಾರಿ** (ನಾ). = ಮಜ್ಜನಜಲ ೧ : ನಿನ್ನ ಪದಾಂಬುವೇ ನಿನಗೆ ಮಜ್ಜನವಾರಿ ತವಪ್ರಸಾದ ದಿವ್ಯಾನ್ನಮೆ ಭೋಜನಾನ್ನಮಿದು ತಥ್ಯಂ (ಜಿಳ. ೦೬೦). [ಸಂ.]

**ಮಜ್ಜನವಾಳ** 'ಮಜ್ಜನವಳ' ನೋ.

**ಮಜ್ಜನಶಾಲೆ** (ನಾ). = ಮಜ್ಜನಗೃಹ : ಸೊಗಯಿಪ ನಾಟ್ಯಶಾಲೆಗೆ ವಿರಾಜಿಪ ಮಜ್ಜನಶಾಲೆಗೆ . . . ಮಾಟ್ಪುದಕೃತ್ಯವಿಚಿತ್ರಶೋಭೆಯುಂ (ಪುಷ್ಪ. ೨-೯೩) ; ದ್ರುಪದನು ಬಳಿಕ ಮಜ್ಜನಶಾಲೆಗಾಯುತಮಾಡ ಹೇಳಿದನು (ಸಂಭಶ. ೬೨-೩೪). [ಸಂ. ಮಜ್ಜನಶಾಲಾ]

**ಮಜ್ಜನಸಾಲೆ** (ನಾ). = ಮಜ್ಜನಗೃಹ : ಬಾಲೆಯು ಕೈಲಾಗೊಳು ಬಾಣ ಮಜ್ಜನಸಾಲೆಯು ಸಾರ್ವನಳ್ತಿಯಲಿ (ಪೋಹಶ. ೨೦-೨).

[< ಸಂ. ಮಜ್ಜನಶಾಲಾ]

**ಮಜ್ಜಾನಲು** (ನಾ). ಬಯಲುಭೂಮಿ (?) : ಕುಂಬಾರಗೊಡಿಗಿಯ ಹತ್ತು ಖಂಡುಗ ಭೂಮಿಯು ಮಜ್ಜಾನಲು ಕ್ಷೇತ್ರವನಿಕ್ಕುವದಕ್ಕೆ ಈಸಿಕೊಂಡು ಪ್ರತಿವರ್ತನೆಯೂ ಘಟ್ಟಿಯ ಬಸವಾನಿಯುವೊಳಗೆ ಚಕ್ಕೋಡುವತ್ತಿನ ಹರು ಖಂಡುಗ ಭೂಮಿಯನು ಕಲ್ಲ ನಡೆಸಿಕೊಟ್ಟೆವಾಗಿ (ಎಕ. VII. ಶಿಕಾಪ. ೦೩೨-೯ : 1467). 'ಮಜಲ್ಲು' ಪರಾ. [ ? ]

**ಮಜ್ಜಾಸಾರ** (ನಾ). ೧. ದೇಹದ ಮೂಲಸತ್ತ್ವ : ಅಸ್ಥಿಸಾರ. ೨. ಮರದ ತಿರುಳು ; ಕೆಚ್ಚು. ೩. ಸುಗಂಧವುಳ್ಳ ಒಂದು ಬಗೆಯ ಔಷಧೀಸಸ್ಯದ ಬೀಜ. ೪. ಶ್ರೇಷ್ಠವಾದುದು. ೫. ವಸ್ತು. ೬. ಧನ. ೭. ವೀರ್ಯ. ೮. ನಿಷ್ಠೆ. ೯. ಪ್ರತಿಜ್ಞೆ. ೧೦. ಆಕಾಶ. ೧೧. ಒಂದು ಬಗೆಯ ರೋಗ ; ವಾತ. ೧೨. ದುಃಖ. ೧೩. ನಷ್ಟವಾದ ಸ್ಥಿತಿ : "ಕ್ಲೇಶದಲಿ ನಿಷ್ಠೆಯಲಿ ತೀರದೆಡೆಯಲ್ಲಿ ಆಕಾಶದಲಿ ಶುಕ್ಲದಲಿ ಧನದಲ್ಲಿ ವೊಳುಹಿಸಲಿ ಆ ಸೂರುಳಲ್ಲಿ ಮಜ್ಜಾಸಾರ ಮೆನಿಸಿರ್ಕು" (ಮಂಗರಾ. ೦೪೬-೩೩) ; "ಕ್ಲೇಶಂನಷ್ಟ ಪದೇಂದ್ರಿಯಂ ದ್ರವಿಣಸಾರಂ ಸೂರುಳುಂ ಶ್ರೇಷ್ಠಮಾಕಾಶಂ ನಿಷ್ಠೆಯುಶೀವಕಷ್ಟಮಿವು ಮಜ್ಜಾಸಾರಮಕ್ಕುಂ" (ನಾನಾರ. ೦೨೬). [ಸಂ.]

**ಮಜ್ಜಿಗೆ** (ನಾ). ೧. ಮೊಸರನ್ನು ಕಡೆದು ಬೆಣ್ಣೆ ತೆಗೆದ ಮೇಲೆ ಉಳಿಯುವ ದ್ರವ ; ಅಳೆ : "ದಧಿಮಂ(ತ)ಥಃ, ಮಸ್ತು – ಈ ೨ ಮಜ್ಜಿಗೆ" (ಹಲಾಯು. ೫೬-೦೬೬); ಇಂತಿದು ರುಚಿವೆತ್ತಿರ್ದ ಪಾನಮಿದು ಮಜ್ಜಿಗೆ ತಾನಿದು ಶಿಖರಿಣಿಯೆನುತಂ ತಿಂಬಿದಿಂಬಿ ತಂದೆಜೆಂದರಬಲೆಯರ್ ಸಿರ್ಪುಗಳಿಂ (ಸುಕುಮಾ. ೦೦-೩೦); ಭಾಗ್ಯದ ಲಕ್ಷ್ಮೀ ಬಾರಮ್ಮ . . . ಸಜ್ಜನ ಸಾಧು ಪೂಜೆಯ ವೇಳೆಗೆ ಮಜ್ಜಿಗೆಯೊಳಗಿನ ಬೆಣ್ಣೆಯಂತೆ (ಪುರಂದ. ೦-೨೦೦-೦); ದಕ್ಷಿಣ ಹಿಂದೂಸ್ಥಾನದಲ್ಲಿ ಹೆಚ್ಚಿನ ಜನರು ಮೊಸರು ಮತ್ತು ಮಜ್ಜಿಗೆಯನ್ನು ಅನ್ನದೊಡನೆ ತೆಗೆದುಕೊಳ್ಳುವರು (ಅಡುಗೆ. ೬೯). ೨. ಮಜ್ಜಿಗೆಯ ವಾಸನೆಯಿರುವ ಒಂದು ಬಗೆಯ ಸಸ್ಯ : "ಕಪಳೀಯುಕಂ– ಮಾರಮರಿಸಿಸ, ರಕ್ತಚಂದನ, ಮಜ್ಜಿಗೆ" (ನಿಘ. ೩೦). 'ಮಜ್ಜಿಗೆಗಡ್ಡೆ' ಪರಾ.

ಮಜ್ಜಿಗೆಪಳಿದ್ಯ = ತರಕಾರಿಯನ್ನು ಬೇಯಿಸಿ ಮಸಾಲೆಯೊಂದಿಗೆ ಮಜ್ಜಿಗೆ ಅಥವಾ ಮೊಸರನ್ನು ಸೇರಿಸಿ ಮಾಡುವ ಒಂದು ಬಗೆಯ ಮೇಲೋಗರ : ಮಜ್ಜಿಗೆಪಳಿದ್ಯ, ತೊಗರಿಯ ಕಟ್ಟು . . . ಇವು ಅತಿಸಾರದಲ್ಲಿ ಹಿತ (ವೈದ್ಯಸಾ. I. ೨೦೦). ಮಜ್ಜಿಗೆಹುಳಿ = ಮಜ್ಜಿಗೆ ಪಳಿದ್ಯ : ಪದ್ಮಾವತಮ್ಮ ಮಜ್ಜಿಗೆಹುಳಿಯನ್ನು ಕುದಿಯಲು ಒಲೆಯ ಮೇಲಿಟ್ಟಿದ್ದರು (ಹಿಂದಿನ. ೦೪೦).

[ದೇ.॥ ತಮಿ. ಮಜ್ಜಿಕೈ; ತೆಲು. ಮಜ್ಜಿಗ]

**ಮಜ್ಜಿಗಗಡ್ಡೆ. ಮಜ್ಜಿಗೆಗೆಡ್ಡೆ** (ನಾ). (ಮಜ್ಜಿಗೆಯ ವಾಸನೆಯಿರುವ) ಒಂದು ಬಗೆಯ ಗಡ್ಡೆ : "ಶತಮೂಲೀ . . . ಅಹೇರುಃ—೧೧ ಹಿಚ್ಚರದ ಹೆಸರುಗಳು. ಅಂದರೆ ಅಸಡಿಯನ್ನುವರು, ಆಷಾಡೀಬೇರು ಪ್ರಸಿದ್ಧ, ಮಜ್ಜಿಗೇಗಡ್ಡೆ. ಅಜ್ಜಿಗಡ್ಡೆ" (ನಿಘಂಟು. ೦೩೫). ಮಜ್ಜಿಗೆಗೆಡ್ಡೆ : ಕಳ್ಳಂಗಡಲೆ, ಜೋಳಗಡಲೆ . . . ಮಜ್ಜಿಗೆಗೆಡ್ಡೆ, ಅಳಲೆಕಾಯಿ . . . ಎಲುವನ ಸಂದಿಬೇರು ಇವಂ ಸಮಾಂಶ ಕಷಾಯವಿಕ್ಕಿ ಸೇವಿಸಲು ತ್ವಗ್ಗತ ಜ್ವರ ಗುಣಮಕ್ಕುಂ (ಸಕವೈ. ೧೦೬). [ಮಜ್ಜಿಗೆ + ಗಡ್ಡೆ]

**ಮಜ್ಜಿಗೆಗೆಡ್ಡೆ** 'ಮಜ್ಜಿಗೆಗಡ್ಡೆ' ನೋ.

**ಮಜ್ಜಿಗೆಹುಲ್ಲು** (ನಾ). (ಮಜ್ಜಿಗೆಯ ವಾಸನೆಯಿರುವ) ಒಂದು ಬಗೆಯ ಹುಲ್ಲು : ಹೊನ್ನಗನೆಬೇರು, ಮಜ್ಜಿಗೆಹುಲ್ಲಿನ ಬೇರು (ಚಾಯಬೇರು) . . . ಸಕ್ಕರೆ ಇಷ್ಟನ್ನು ಅರೆದು ಕಲಸಿ ಕೊಡಲು ಆ ತಕ್ಷಣವೇ ಮೂತ್ರ ಬಿಡುವುದು (ಸಕವೈ. ೪೪೪); ಈ ಹುಲ್ಲುಜಾತಿಗೆ . . . 'ಮಜ್ಜಿಗೆಹುಲ್ಲು' ಎನ್ನುತ್ತಾರೆ (ಹಸುಹೂ. ೨೫೮). [ ಮಜ್ಜಿಗೆ + ಹುಲ್ಲು (< ಪುಲ್) ]

**ಮಜ್ಜೆ** (ನಾ). ೧. = ಮಜ್ಜ ೧ : ಮಸಣದ ಕಿಚ್ಚಿನಿಂ ನರಕಪಾಲದ ಭಾಂಡಮನಿಟ್ಟು ಮಜ್ಜೆಯ ರಸವೆಸರಾಗೆ ಕೀಲಿಗನ ಹೆಂಡತಿ ತಾಂ ತೊಳ ಸುತ್ತ ಮೊಳೆಯೊಳೆ . . . ಮುಚ್ಚಿದಳ್ (ಧರ್ಮಾಮೃ. ೦೦-೧೬೦ ಅವತರ್ಮ); ತೊರಳೆ ತೊಗಲೆಲು ಮಜ್ಜೆ ಮಾಂಸದ ಹೊರಳಿಯಲಿ ರಣಭೂತದುಣಿಸಿಗೆ ಹರಿಯಣವನಿಟ್ಟಂತೆ ಹೊಸ ಪರಿಯಾಯ್ತು ರಣಭೂಮಿ (ಕೊರಲಾ. ೫-೬-೦೬) ; ನಾವು ತಿನ್ನುವ ಆಹಾರದಿಂದ ರಕ್ತ ಉಂಟಾಗಿ, ಅದರಿಂದ ಅಸ್ಥಿ, ಮಾಂಸ, ಸ್ನಾಯು. ಮೇದ, ಮಜ್ಜಾ ಮುಂತಾದ ಧಾತುಗಳ ಪೋಷಣವಾಗುತ್ತದೆ (ಮಾಂಬಯು. ೫-೦೬೦). ೨. = ಮಜ್ಜ ೨ : "ಮಜ್ಜಾ, ಸಾರಃ – ಈ ೨ ಮರದ ಕೆಚ್ಚು" (ಹಲಾಯು. ೩೦-೨೯).

[ ಸಂ. ಮಜ್ಜಾ ]

**ಮಝು** (ನಾ). ಕೊಂಡಾಟದ ಒಂದು ಮಾತು : ಮಝು ಭಾಪುರೆ ಜಿತಮದನಂ ಧವಳಪ್ರಕಾಶಮಂಡಿತರದನಂ (ಗಿರಿಕ. ೦೦-೫೩); ಪೂತು ಮಝು ದಳಪತಿಯ ಹರಿಬವನಾತುದೇ ಕುರುಸೇನೆ (ಕುಮಾವ್ಯ. ೦೩-೮) ; ಭಾಪುರೇ ಮಝು ಭಾಪುರೇ ಭಲೆ ಲೇಸು ಲೇಸು (ಗಿರಿಕಲ. ೩೯-೦೫).

**ಮಝುಮಾ** 'ಮಜಮಾ' ನೋ.

**ಮಝುರೆ** (ಅ). ಕೊಂಡಾಟದಲ್ಲಿ ಬಳಸುವ ಒಂದು ಅವ್ಯಯ : ಅಂಘವಣೆಯಹುದೋ ಮಹಾದೇವಂಗೆ ನೂಕದು ಪೂತು ಮಝುರೆಯ ಭಂಗನೋ ನೀನೆನುತ ಮೂದಲಿಸಿದನು ಕಲಿಭೀಮ (ಕುಮಾವ್ಯ. ೨-೦೬); ಪೊಕ್ಕರಾಹವದೊಳಗೆ ಕಾಲಾಳೊಕ್ಕಲಿಸಿ ಬರೆ ಕಂಡು ಮಝುರೆ ಚುಕ್ಕಿಗಳಿರಾ ಯೆನುತ ಹೊಯ್ದರು ಬೆರಸಿ ಪಟುಭಟರ (ಪಳತ. ೯-೨೪).

**ಮಝಾ** 'ಮಜಾ' ನೋ.

**ಮಟ, ಮಡ₃** (ನಾ). ೧. ಸಂನ್ಯಾಸಿ, ಗುರು ಮುಂತಾದವರ ವಾಸ ಸ್ಥಾನ ; ಆಶ್ರಮ ; ಮಠ : ಪೆರ್ಗ್ಗಡೆ ವೇಳೆಯುಮಂ ಬಾವಿಯುಂ ಕಟ್ಟಿಸಿ ಮಟಮಂ ಮಾಡಿಸಿದಂ (ಎಕ. VIII. ಸೊರಬ. ೬೦-೮; 938) ; ಕಲ್ಯಾಣದೊಳ್ ತುಂಬೇಶ್ವರಮುಂ ಮಟಮುಂ ದೀಪಮಾಲೆಯುಂ . . . ಮಾಡಿಸಿ (ತಾಇಶಾ. XI – i. ೦೦೩-೧೨ ; 1070) ; ಮಟದ ಬೆಕ್ಕಿನಂತೊಳಗಣ್ಣೋಡಿ ಯಾಡಿ (ಧರ್ಮಾಮೃ. ೦-೦೬೮). ೨. ಪಾಠಶಾಲೆ : ನೀಂ ಬಿಜ್ಜೆಗಲ್ತ ನಾಂಬಿನ ಮಟಮನೇಕುಳಿದೆ ? (ಸಂಸಹ. ೨೨-೩೦). ಮಡ₃ : ೧. "ಮಡ (ಮಟ)– ಮಠ = ಗುರುವಿನ ಮಠ, ಪಾಠಶಾಲೆ" (ತದ್ಭಕೋ. ೩೩) ; ಪಾರ್ವರ ಕೇರಿಯಂತೆ ಚಿಂದಂಬಡೆದ ಮಡದಿನೆಸಿದುಂ ತೇರೆನಿಸಂ ಬಾನಂತೆ ವಿಮಾನ್ಗಳಂ ತಳೆದುಂ ಮುನ್ನೀರೆನಿಸಂ (ಕಬ್ಬಿಗ. ೫೦) ; ಠಕಾರಕ್ಕೆ ಡಕಾರಂ . . . ಮಠ – ಮಡ (ಶಮದ. ೨೩೬ ವೃಯೋ). [ < ಸಂ. ಮಠ ]

**ಮಟಂಬ** 'ಮಡಂಬ' ನೋ.

**ಮಟಕಳೆ** (ನಾ). ಒಂದು ಬಗೆಯ ಸುಗಂಧ ದ್ರವ್ಯ (?) : ವಟಫಲಾಧರೆ ಯುರಾರತಿಯ ಸಿರಿವಲೆಗೊಲಿದು ಮಟಕಳೆಯ ಪೂಸಿ . . . ಕಾಯ್ದು

ಬೊದಡೆಯು ಕೌಪು ನಿರ್ವಾಣ ಕಾಶಾಂಬರ (ಗುರುಶಾ. ೩-೩೬); ಕಾವಿ ಕಾಷಾಯಾಂಬರವು ಕಂತೆ ಜಾಡಿಯು ಬೊದಡೆ ತೀವಿ ಮೈಯೊಳು ಭಸಿತ ದೇವಗಣ ನಡೆಯೆ (ಶರೀ. ೦೬೯-೩). **ಬೋದಡೆ** : ತಳೆದ ಒಡಲ ಬೂದಿಯು ಕಚ್ಚುಟದ ಕೈದಡಿಯು ನೆತ್ತಿಯು ಜಡೆಯು ಬೋದಡೆಯು ವಡಪುರೆತ್ತ ಮಣಿಮಯಾಸನವೆತ್ತ ನೋಡು (ಮರೇಶ. ೭-೩೭).

[← ಮರಾ. ಬೋಜಡ, ಬೋದಡ]

**ಬೊದಿಲ್** (ನಾ). ಒಂದು ಅನುಕರಣ ಶಬ್ದ : ಸೂತನೆಂಬವಂ ಕಂಡು . . . ಬೊದಿಲ್ಲನೆ ಪಾಯ್ದು ನೀರೊಳಾ ಬಾಳನನಾದಮಾದರದೆ ಕಂಡೊಸೆದಂ ನಿಧಿಗಂಡನಂತೆವೋಲ್ (ಶಂಕಭಾ. ೦-೯೭) ; ಎಳೆ ಬೊದಿಲ್ಲನೆ ಬಿದ್ದಿತ್ತು (ಶಂಕಭಾ. ೧೦-೭೦).

**ಬೊನೆಗಾರೆ** 'ಬೋನಂಗಾರೆ' ನೋ.

**ಬೊಪ್ಪ** 'ಬಪ್ಪ$_2$' ನೋ.

**ಬೊಪ್ಪಡೆ** (ನಾ). ಒಂದು ಬಗೆಯ ತೆರಿಗೆ : ಸಂಕರದಾಸಿವ ಕೊಟ್ಟದಾಸಿಗ ಸುಂಕದ ಪೆಗ್ಗಡೆ ಬೊಪ್ಪಡೆ ಒಳಗಾಗಿ ಸುಂಕ ಆಯದಾಯ . . . ಧಾರಾಪೂರ್ವಕ ಮಾಡಿ ಬಿಟ್ಟರು (ಎಕ. V(R). ಮೈಸೂರು. ೨೦೩-೦೪; 1175).

[ ? ]

**ಬೊಪ್ಪಯ** (ನಾ). ತಂದೆ ; ಜನಕ : ಬೊಪ್ಪಯ. ಮುಚ್ಚುವಿರೆ ನನಗೆ ನಿಮ್ಮಾತ್ಮಜಂ ಸಂಡುತ್ತಿರ್ಪಳಲ ಬೇಗೆಯಂ (ಶ್ರೀರಾಮಾ. ೪೬೨-೪೬೩).

[ಬೊಪ್ಪ (<ಬಪ್ಪ$_2$) + ಅಯ$_1$ (<ಅಯ್ಯ$_{61}$)]

**ಬೊಪ್ಪಿ** (ನಾ). (ಸಾಮಾನ್ಯವಾಗಿ ಶೂದ್ರವರ್ಗಕ್ಕೆ ಸೇರಿದ) ಗ್ರಾಮ ದೇವತೆಯ ಅರ್ಚಕ : (ಃ). [ ← ಮರಾ. ಭೋಪೀ, ಭೋಪ್ಯಾ ]

**ಬೊಪ್ಪಿಬೋಯ** (ನಾ). ಒಬ್ಬಾತನ ಹೆಸರು : ಬೊಪ್ಪಿಬೋಯಸ್ಯ ಕಾಶ್ಯ(ಶ್ಯ)ಪಗೋತ್ರ ಕುಮಾರಶರ್ಮಣ (ಇಅ.VII. ೦೯೯-೪೨ ; 668).

[ ಬೊಪ್ಪಿ? + ಬೋಯ]

**ಬೊಬ್ಬರ** 'ಬಬ್ಬರ' ನೋ.

**ಬೊಬ್ಬರ್ಯ** (ನಾ). (ಕರಾ) ಒಂದು ಕ್ಷುದ್ರದೇವತೆಯ ಹೆಸರು : ನಿದ್ರೆಯಲ್ಲಿ ಜಟ್ಟಿಗ, ಬೊಬ್ಬರ್ಯ ಬಂದ ಹಾಗೆ ಕಾಣಿಸಬಹುದು (ಸ್ವಸ್ವಹೊ. ೮) ; ಆ ಬೊಬ್ಬರ್ಯ ನಿಮಗೆ ಕಾಣಿಸಿತ್ತೆ ? (ರೇಖಹೊ. ೩೩).

[← ತುಳು. ಬಬ್ಬರ್ಯ ]

**ಬೊಬ್ಬಾಟ, ಬಬ್ಬಾಟ** (ನಾ). ೧. (ಆನಂದ, ಆವೇಶ, ರೋಷ ಮುಂತಾದುವುಗಳಿಂದ ಮಾಡುವ) ಕೂಗಾಟ ; ಚೀರಾಟ ; ಅರಚುವಿಕೆ : ಬೊಬ್ಬಿಱದಾರುಮೀ ಬೊಬ್ಬಾಟಮೇತಕ್ಕೆ (ಬಸಪು. ೩೭-೦೭); ನಿಜಪದಾತಿಯ ಬೊಬ್ಬಾಟ . . . ತ್ರಿಜಗಕ್ಕೆ ಘಮವ ಬೀಱುವವು (ಶಂಕಬ. ೦೩-೨೦). ೨. ದೊಡ್ಡ ಶಬ್ದ ; ಗಟ್ಟಿಯಾದ ಧ್ವನಿ : ದಿವಿಜರ ಥಟ್ಟಿನಲಿ ಬೊಬ್ಬಾಟವಾಯ್ತು ಗಭೀರಭೇರಿಗಳು (ಕುವ್ಯಾಆ. ೦೨-೨೩) ; ಆಸುರದ ಬೊಬ್ಬಾಟ ಹಯದುರುಹೇಷಿತಧ್ವನಿ ಕರಿಯ ಬೃಂಹಿತ ಘೋಷ . . . ಅಸುರದ ಬೆದಱಿಸಿತು ರಾಮಸುವಾಸಿನಿಯನು (ತೊರರಾ. ೩-೬-೨೮). ೩. ಅಬ್ಬರ ; ಆರ್ಭಟ : ಆಟವಾರಂಭಿಸದು ಬಱಿ ಬೊಬ್ಬಾಟವೇತಕೆ ವಿಜಯಸಿರಿ ವಾಚಾಟರಿಗೆ ಮೆಚ್ಚುವಳೆ (ಕುವ್ಯಾಸ. ೦೩-೪೭); ಘಂಡ ಬೊಬ್ಬಾಟವನು ಬಿಡು ಕೈಕೊಂಡು ನೋಡಿದನುಳಿದ ಗೋಪರ ತಂಡದನಾ ಬಳಿಕಾಹುತಿಯ ಮಾಡಾಪಡೆ (ಹರಿಗ.೦೦-೩೨-೦೨); ತನ್ನ ಗಂಡನ ಬೊಬ್ಬಾಟ ಅಭಿಧಾಬಾಯಿಗೂ ತುಸು ವಿಚಿತ್ರವಾಗಿಯೇ ತೋರಿರಬೇಕು (ವಾಶ್ರ. ೭೩). ೪. ಗಲಾಟೆ; ಗಲಿಬಿಲಿ; ಗೊಂದಲ : ಅರಮನೆಯಲಾ ಬೊಬ್ಬೆ ಹಸ್ತಿನಪುರದಲೀ ಬೊಬ್ಬಾಟವಿನ್ನುಳಿದರಸುಗಳ ಪಾಡಾವುದು (ಕುವ್ಯಾಆ. ೦-೭) ; ಇರುಳು ಬೊಬ್ಬಾಟದಲಿ ನಿದ್ದೆಗೆಟ್ಟ ನೆರೆಯವರಾಸಿನಲಿ ಹೊರೋದನಿಟ್ಟೆ (ಪರಿಶ. I. ೪೪೨). ೫. ತಕರಾರು ; ತಗಾದೆ ; ವರಾತ : ಈ ಪ್ರಕಾರದ ಬೊಬ್ಬಾಟಗಳು ಪತ್ರದ್ವಾರದಿಂದ ನೇಹಮಿ ನಡದಿರುತ್ತವೆ (ಮುಂಬಮ್ಯಾ.೮ ಪ್ರಸ್ತಾವನೆ). ೬. ಗುಲ್ಲು; ಪುಕಾರು; ನೀ ಅದು ಮಾಡುತೀ ಇದು ಮಾಡುತೀ ಅಂತ ಊರೆಲ್ಲಾ ಬೊಬ್ಬಾಟ ಆಗ್ಯೆದ್ದಾವ (ಮಾಣ್ಯ.ಪ. ೧೦೦); ರಾಚಪ್ಪ ನಿನ್ನ ಕೈಹಿಡಿದು ಕೇಳಿದಾ ಅನ್ಸೂದರ ಬೊಬ್ಬಾಟ ಮಾಡಿದವ ಶ್ಯಾಮರಾಯ (ದೀಕಹ. II, ೦೯೭). ಬಬಾಪ್ಪಟ : ೬. ಸ್ವಲ್ಪದರ ಮಾತು. ಯಾತಕ್ಕ ಬಬ್ಬಾಟ ಮಾಡೋದು (ಧವಂಕ. ೩೪); ಈಗ ಇಲ್ಲದ ಬಬ್ಬಾಟ ಮಾಡೂ ಹಂಗಿಲ್ಲ. ಯಾರೆದುರೂ ಹೇಳದ ಸುಮಾರ ಇರೂದ ಪಾಡ (ಗ್ರಾಮಾಯ. ೪೮).

[ಬೊಬ್ಬೆ$_2$ + ಆಟ./ತುಳು. ತೆಲು. ಬೊಬ್ಬಾಟ]

**ಬೊಬ್ಬಿ** 'ಬೊಬ್ಬೆ$_3$' ನೋ.

**ಬೊಬ್ಬಿಕ್ಕು, ಬೊಬ್ಬೆಯಿಕ್ಕು** (ಕ್ರಿ). ೧. ಕೂಗು ; ಅರಚು : ಲಂಘಿಸುತ ಕಾಡೆಮ್ಮೆಗಳ ತೆಕ್ಕೆಯೊಳು ಕೋಣನಿರೆ ಕಂಡು ಶಬರಿಯರು ಬೊಬ್ಬಿಕ್ಕಿ ಮಗುಳ್ದ್ದಲಿಸಿದರು(ಹಕಲ.೩-೩೪). ೨. ಗರ್ಜಿಸು; ಅಬ್ಬರಿಸು: ರಕ್ಕಸಿಯ ಕೊಂದತುಳಪರುಷದ ಹರಮರಿಯಬಱಿ ಬೊಬ್ಬಿಕ್ಕಿ ಬಾಹುಪ್ಪಳಿಸಿ ಘಟನೆಗೆದಂಬರಸ್ಥಳಕೆ . . . ಹಾಱಿದನು (ತೊರರಾ. ೩-೦-೨೪); ಶಿವ ನೀನಾದ ಕಾರಣದಿಂದೆ ಬಂದಾಹವದೊಳು ಬೊಬ್ಬಿಕ್ಕಬಹುದು (ಮೋಹತ. ೩೪-೨೬). **ಬೊಬ್ಬೆಯಿಕ್ಕು** : ೧. ತಬ್ಬಿಬ್ಬಿಯಾಗದೆ ತಳ್ಳಂಕಗೊಳ್ಳದೆ ಬೊಬ್ಬೆಯಿಕ್ಕದೆ ಜೋಕೆಯಱಿದು ಒಬ್ಬರಿಬ್ಬರು ಮೂವರೊಂದೊಂದು ಕಲೆಯ ಮೈಯುಬ್ಬುವೊಲು ಕೇಳಿಸಿದರು (ಭರತ. ೦-೭೦). [ ಬೊಬ್ಬೆ$_2$ + ಇಕ್ಕು ]

**ಬೊಬ್ಬಿಡಿಸು** (ಕ್ರಿ). ಬಹಳ ಶಬ್ದಮಾಡಿಸು : ಮೂಗಿನಲಿ ಹಲವು ಕುಱಿ ಕೋಣಗಳ ಹೊಗಿಸುವುದುಲಿವ ಹೆಬ್ಬಱೆಗಳನು ಕಿವಿಗಳ ಬಳಿಯ ಬೊಬ್ಬಿಡಿಸುವುದು (ತೊರರಾ. ೬-೨೬-೨೩). [ಬೊಬ್ಬಿಡು + – ಇಸು$_3$]

**ಬೊಬ್ಬಿಡು, ಬೊಂಬಿಡು, ಬೊಬ್ಬೆಯಿಡು** (ಕ್ರಿ). ೧. (ಆನಂದ, ರೋಷ, ಆವೇಶ ಮುಂತಾದುವುಗಳಿಂದ) ಕೂಗು ; ಅರಚು : ಭಿಲ್ಲಪ್ರಕರಮುಡಸಿ ಕೂರ್ಪಾರ್ಗಳಂ ಬಿಟ್ಟು ಬೊಬ್ಬಿಟ್ಟು (ಗಂಕ. ೦-೦೦೦); ಸೈನ್ಯಂ ನಡೆಯಲ್ ಬೊಬ್ಬಿಟ್ಟು ಕೋಲಂ ತುಡುಕೆ (ದಕಳು. ೭-೭೦); ಬೀಳುಬೀಳಭಿಮನ್ಯುವಿನ ವಧೆ ಬಾಳಲೀವುದೆ ನಿನ್ನನೆನುತುಬ್ಬಾಳುತನದಲಿ ಪಾರ್ಥ ಬೊಬ್ಬಿಡೆ (ಕುವ್ಯಾದ್ರೋ. ೦೪-೪೦). ೨. ಗಟ್ಟಿಯಾಗಿ ಹೇಳು ; ಧ್ವನಿಮಾಡಿ ಹೇಳು; ಉದ್ಘೋಷಿಸು : ಬೇಡಿ ಕರುಣಪನೀಯೆನುತ್ತಂ ಕೂಡೆ ಬೊಬ್ಬಿಡುತಾರು ತಾಣತಿಗೂಡಿ ತಾರ್ಕೈಸುತ್ತಂ . . . ತಾಂಡವಮನಾಡುವೆನು (ಬಸಪು. ೦೭-೨೦); ಶ್ರೀ ರುದ್ರವೇದ ಬೊಬ್ಬಿಡುತ್ತಿದೆ (ಗಣಭಾ. ೨೪೩-೧) : ಕಟ್ಟಿಗೆ ಗಾಱರನೇಕವುಗ್ಗಡೆ ಬೊಬ್ಬಿಟ್ಟುದು ರಾಯನೋಲ್ಗಿಯಲಿ (ಮೋಹತ. ೨೦-೩೮). ೩. ಆಕ್ರಂದನ ಮಾಡು ; ಮೊರೆಯಿಡು : ಚಂದ್ರಂಗೆ ರಾಹು ಅಡ್ಡಬಂದಲ್ಲಿ ಅಂಬುಧಿ ಬೊಬ್ಬಿಟ್ಟತ್ತೆ (ಬಸವ. ೨೩) ; ಹದ್ದು ಕಾಗೆಯ ಮನೆಗೆ ಬಾಣಸವಿದ್ದುದೋ ಗಜವೆನುತ ಬೊಬ್ಬಿಡುತಿದ್ದುದರಿಬಲ (ಕುವ್ಯಾದ್ರೋ. ೩-೪೩); ಬಾಲೆಯರುಗಳು ಬೊಬ್ಬಿಡಲು ಗೋಪುರದಗ್ರಶಾಲೆಯ ರೋದನ ಗೇಳಿ ಲೀಲೆಗಾಱನ ಕೊಲ್ವುದಿಲ್ಲೆಂದು ದುಃಖದ ಶೀಲೆಗೆ ಮಾತನಟ್ಟಿದನು (ಮೋಹತ. ೩೩-೩೨). ೪. ಅಧಿಕವಾಗಿ ಧ್ವನಿಮಾಡು,— ಶಬ್ದ ಮಾಡು : ನಡೆಪೆಡೆಯೊಳಗುರ್ಬಿಂ ಬೊಬ್ಬಿಡುವಂದುಗೆ ಗೆಜ್ಜೆ ಸಜ್ಜನೆಗೆ ಸೊಗಯಿಸುಗುಂ (ಗಂಕ. ೩-೬೪); ಕಾಡಿಕಾಡಿದು ಬೊಬ್ಬಿಟ್ಟಾಡುತಿರ್ದವು ಸಾಂದ್ರ ಚಂದ್ರಿಕೆಯಲಿ ಚಕೋರಿಗಳು (ಕುವ್ಯಾದ್ರೋ. ೦೭-೦೪). **ಬೊಂಬಿಡು** : ೪. ರಂಬೆಗಳ್ ಬೊಂಬಿಡಲ್ . . . ನಡೆದಂ ಮರುಳಸಿದ್ಧಾಂತವೃದ್ಧಂ (ಕಶುಪು. ೩-೦-೮). **ಬೊಬ್ಬೆಯಿಡು** : ೧. ಮಾಧವನು ತನ್ನ ಜನರನ್ನು ಗಟ್ಟಿಯಾಗಿ ಬೊಬ್ಬೆಯಿಡುವಂತೆ ಹೇಳಿದನು (ಬಂಕಿಮ. ೩೪).

[ಬೊಬ್ಬೆ$_2$ + ಇಡು$_1$]

**ಬೊಬ್ಬರಿ** 'ಬೊಬ್ಬಱಿ' ನೋ.

**ಬೊಬ್ಬಲಿ** (ನಾ). ಸ್ತ್ರೀಯರು ಕಾಲಿನ ಹೆಬ್ಬೆರಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ : ಮುತ್ತಿನ ಗೆಜ್ಜೆಗಳಿಂ ಕೂಡಿದ ವೀರಮುದ್ರಿಕೆ ಕಿರುಪಿಲ್ಲಿ ಬೊಬ್ಬಲಿಗಳನಿಟ್ಟು (ಸೌಗಂಧಿ. ೨೦೨-೩).

[← ತೆಲು. ಬೊಬ್ಬಲಿ]

**ಬೊಬ್ಬಿಱು, ಬೊಬ್ಬಿರಿ** (ಕ್ರಿ). ೧. (ಆನಂದ, ರೋಷ, ಆವೇಶ ಇತ್ಯಾದಿಗಳಿಂದ) ಕೂಗು ; ಅರಚು : ಶಾನಂ ಪಿಡಿಂಬೆಯುಂ . . . ಕಿನ್ನಿತ್ತರೊಳೊರ್ವರೊರ್ವರಂ ಶಳ್ಕಿಱಿದುಂ ಬೊಬ್ಬಿಱಿದುಂ . . . ಆಡುವಾಗಳ್ (ಶಂಕರಾ. ೦೨-೦೩೮ ವ); ಬೇಡಪಡೆ ಬೊಬ್ಬಿಱಿದಾಡಿದುದು (ರಶಕು. ೨-೦೦೯); ಆಯೆನುತ ಬೊಬ್ಬಿಱಿದು ಪಿಪ್ಪನಿಕಾಯ ಕುಣಿದುದು . . . ಪರುಷದಲಿ (ಕುವ್ಯಾ.ಆ. ೦೩-೩೦). ೨. ದೊಡ್ಡ ಧ್ವನಿ ಮಾಡು ; ಗಟ್ಟಿಯಾಗಿ ಧ್ವನಿ ಮಾಡು ; ಉದ್ಘೋಷಿಸು : "ಬೊಬ್ಬಿಱು (ಬೊಬ್ಬೆ + ಇಱು) — ಮಹಾರವೇ" (ಶಮದ); ಸೂಳವಿಸಿ ಬೊಬ್ಬಿಱಿದವುರುನಿಸ್ಸಾಳಚಯವಾದ್ಯಗಳ ಪೆಡತಲೆ ಸೀಳೆ ಸಿಡಿಲೇಳಿಗೆಯುಲಿದ್ದವು ವಿವಿಧವಾದ್ಯರವ (ಕುವ್ಯಾ.ದ್ರೋ. ೦-೯೪) ; ಬೊಬ್ಬಿಱುವುದು ಕೀರ್ತಿಡಿಂಡಿಮವುದುಬಿಂ ಜಗದೊಳು ವಿಜಯಕ್ಷಿತೀಂದ್ರನಾ (ಎಕ. XI. ಚಿತ್ರದು. ೫-೬; ೧) ; ನಿಮ್ಮ ಸುಗಳು ಶರೀರವ ನೀಗಿ ಕಳೆಯಲಿ ಎಂದು ಬೊಬ್ಬಿಱಿದೆಚ್ಚನತಿರಥರ (ಕುವ್ಯಾ.ದ್ರೋ. ೦೫-೩೫). ೩. ಆಕ್ರಂದನಮಾಡು ; ಮೊರೆಯಿಡು : ಬೊಬ್ಬಿಱಿವಿನಮಾಂತಿಱಿವ ನೊರ್ವ ಭಟನರಿಭಟರಂ (ವರ್ಧಮಾ. ೯-೫೦); ರಥ ಕಡಿವಡೆದುದಿನ್ನೆಂತೊದಗುವನೊ ಸುಕುಮಾರ ತಾನೆನುತ ಪಡೆ ಬಿಡದೆ ಬೊಬ್ಬಿಱಿಯೆ (ಕುವ್ಯಾ.ದ್ರೋ. ೬-೩೬). **ಬೊಬ್ಬಿರಿ** : ೧. ಬಣ್ಣ ಹಚ್ಚಿದವನು ಚಿತ್ರಕಾರ, ಬೊಬ್ಬಿರಿದವ ಗವಾಯಿ. ಕಾಗದ ಕಪ್ಪು ಮಾಡಿದವ ಕವಿ ಎಂಬ ದೃಷ್ಟಿಯೋ ? (ಒಂಟಿದ. ೬೩); "ಇದೆಯೆ ನಿನ್ನಲ್ಲಿ ಗಂಡಸುತನ ?" ಎಂದು ಬಲವಾಗಿ ಬೊಬ್ಬಿರಿದು ಕೇಳಿದಳು (ಹಳ್ಳಿಚಿ. ೦೦೯). ೨. ಕಬ್ಬಿಲರು ಕಬ್ಬಿಗರು ತಾವೆನುತಬ್ಬರಿಸಿ ಬೊಬ್ಬಿರಿಯೆ ಕಬ್ಬವಾದುದೆ ? (ಕೊಳಗಿಲ. ೦೬-೩೯).

[ಬೊಬ್ಬೆ$_2$ + ಇಱು$_1$]

**ಬೊಬ್ಬಿಱಿತ** (ನಾ). ಅಬ್ಬರ; ಆರ್ಭಟ; ಗರ್ಜನೆ : ಇಱಿತ ಮುನ್ನವೊ ಸುಭಟರಿಗೆ ಬೊಬ್ಬಿಱಿತ ಮುನ್ನವೊ (ಕುವ್ಯಾ.ಕ.೦೦-೯೬); ಬಲು ಬೊಬ್ಬಿಱಿತ ಕಸುರನ ಧೈರ್ಯ ಕಾಲನ ಮಱಿಯ ಥೊಕ್ಕುದು ಪೊರಳಿಯೊಡೆದುದು ಥಿತ್ಯ ರಕ್ಕಸರ (ತೊರವೆ. ೩-೬-೫೦). [ಬೊಬ್ಬಿಱು + —ತ$_2$]

**ಬೊಬ್ಬುಲಿ** 'ಬಬ್ಬುಲಿ' ನೋ.

**ಬೊಬ್ಬುಳಿ$_1$** 'ಬಬ್ಬುಲಿ' ನೋ.

**ಬೊಬ್ಬುಳಿ$_2$** (ನಾ). ೧. (ನೀರಿನ) ಗುಳ್ಳೆ; ಬುದ್ಬುದ : ಇಬ್ಬರು ಗಳೊಂದಾಗಿ ಕೂಡಿಯೆ ಬೊಬ್ಬುಳಿಯನೊಡೆವಂತೆ ಕೊಂದರು ಹಲವು ಮಲ್ಲರನು (ಕುವ್ಯಾ.ವಿ. ೬೦೩. ೪-೦೦) ; ಬೊಬ್ಬುಳಿಯ ಬೆಲುನೊರೆಗಳೊಟ್ಟಲಿನೊಬ್ಬುಳಿಯನಬ್ಬರಿಸುತಾರಪಣಗೊಬ್ಬಿನಲಿ ಮದವೇಱ ಪಾಲ್ಗಡಲೆಸೆದುದಿದಿರಿಸಲಿ (ತೊರವೆ. ೦-೬-೯೫); ನೀರ ಬೊಬ್ಬುಳಿಯಂತೆ ತೋಱುತಿಪ ದೇಹದ ಸಾರವಱಿಯದಲೆ ಸುಖಿಪುದಜ್ಞಾನದ ದಾರಿಯಹುದು (ಸರ್ವಜ್ಞ. ೯೦೬). ೨. (ಗರ್ಭಾಶಯದಲ್ಲಿರುವ) ಐದನೆಯ ದಿವಸದ ಗರ್ಭಪಿಂಡ : ಪ್ರಥಮದಿನ ಕಲಲಮೆಸರಂ ಪಡೆವನವನೈದುದಿನಕೆ ಬೊಬ್ಬುಳಿಯೆನಿಸಿಪವನೇಳುದಿನದವಂ ಜನನಿಗರ್ಭದ ಮಾಂಸಪೇಸಿಯೆಂದೆನಿಪವು (ಶಾಶಂತ. ೪-೯೬).

[<ಸಂ. ಬುದ್ಬುದ./ಪ್ರಾ. ಬುಬ್ಬುಅ./ತುಳು.ಬೊಬ್ಬುಳಿ]

**ಬೊಬ್ಬುಳಿ$_3$** 'ಬೊಂಬುಳಿ$_2$' ನೋ.

**ಬೊಬ್ಬುಳಿಕೆ** (ನಾ). ೧. = ಬೊಬ್ಬುಳಿ$_2$ ೧ : ಬೆಳಗುವ ತಾರಕಾನಿಕರಮಾಕಡಲೊಳ್ ನಸುತೇಲಿಕುದೇಂಕೆ ಬೊಬ್ಬುಳಿಕೆಗಳಂತೆ ತೋಱಿದುವು (ಅಂಬ. ೬-೯೯); ತನುವಿಹುದೆ ನಿಲ್ಲದು ಜವ್ವನವಿಪ್ಪೊಡೆ ನೀರ ಬೊಬ್ಬುಳಿಕೆ (ರಜಾಶಮ್ಮ. ೯-೨೬೮) ; ನೀರ ಬೊಬ್ಬುಳಿಕೆಗೆ ಕಬ್ಬಿನದ ಕಟ್ಟ ಕೊಟ್ಟು ಸುರಕ್ಷಿತವ ಮಾಡುವ ಭರವ ನೋಡಾ (ಬಸವ. ೦೬೨). ೨. = ಬೊಬ್ಬುಳಿ$_2$ ೨: ಪಿಂಡಮಯಮಾದ ಪುರುಷನ ವೀರ್ಯ ಸ್ತ್ರೀರಕ್ತದೊಡವೆರೆದೊಂದು ದಿನಕ್ಕೆ ಕಲಲವಹುದು ಐದುದಿನಕ್ಕೆ ಬೊ[ಪಾಠಾಂ.ಬ]ಬ್ಬುಳಿಕೆಯಹುದು (ಬಸವ. ೨೫೫) ; ಮಾತೆಯ ರಜಸ್ಸು ಪಿತೃವೀರ್ಯಂಗಳೊಂದಾಗಿ ಸಾತಿಶಯದಿಂ ಪ್ರಥಮದಿನದಲ್ಲಿ ಕಲಲವಹುದಾ ತೆಱದೊಳೈದುರಾತ್ರಿಗೆ ಬೊ[ಪಾಠಾಂ. ಯೊ]ಬ್ಬುಳಿಕೆ (ತಂಬ. ೫೮-೫). [ಬೊಬ್ಬುಳಿ$_2$ + —ಇಕೆ]

**ಬೊಬ್ಬುಳಿಸು** (ಕ್ರಿ). ಗುಳ್ಳೆಯೇಳು ; ಬುದ್ಬುದವುಂಟಾಗು : ಕಿಸುಱುಬ್ಬಿನರ್ವೆಱಿ ನೀಬೊರ್ಬುಳಿಸಿ ಬುಳುಬುಳುದೇಂಕಿ ವಂದಬ್ದಿ ಕಂಪಂ ಮಸಗುತ್ತಂ ಬತ್ತೆ (ಜಗದ. ೦೬-೩೪). [ಬೊಬ್ಬುಳಿ$_2$ + —ಇಸು$_3$].

**ಬೊಬ್ಬೆ$_1$** (ನಾ.) ಸುಡುವುದರಿಂದ ಚರ್ಮದ ಮೇಲೇಳುವ ಗುಳ್ಳೆ ; ಬೊಕ್ಕೆ : ದೇಹದ ಮೇಲೆ ಏಳುವ ಬೊಬ್ಬೆಗಳು ದೊಡ್ಡವಾಗಿ ಅಥವಾ ಸಣ್ಣವಾಗಿ ಇರುವುದುಂಟು (ಬಶಿ. ೫೦) : ಆಡವಿಯಲ್ಲಿ ನನ್ನ ಸ್ಥಿತಿಗತಿಗಾಗಿ ಯಾರೂ ಅಳಲಿಲ್ಲ. ಗೋಳಾಡಿ ಅತ್ತವರೆಂದರೆ ನನ್ನ ಕಾಲ ಬೊಬ್ಬೆಗಳು (ಆರ್ಯಶಾ. ೦೦೬) ; ಬೊಬ್ಬೆ ಬಂದು ಕೈ ನೋಯಲಾರಂಭಿಸಿತು (ಧರ್ಮರ. ೦೯).

[ದೇ.॥ ತೆಲು. ಬೊಬ್ಬ]

**ಬೊಬ್ಬೆ$_2$** (ನಾ). ೧. (ಆನಂದ, ರೋಷ, ಆವೇಶ ಮುಂತಾದ ಕಾರಣಗಳಿಂದ ಮಾಡುವ) ಆರ್ಭಟ ; ಕೂಗಾಟ ; ಅರಚುವಿಕೆ : "ಬೊಬ್ಬೆಯೆನಲ್ ಭಟಗರ್ಜನೆ" (ರಾಜಶ. ೫೨) ; ಬೇಡರ ಬೊಬ್ಬೆಯಿಂದಡವಿ ಗೋಳಿಟ್ಟುದು (ಹತಶಾ. ೫-೨೩) ; ಕಳವಳಿಸಿತರಿಸೇನೆ ಬೊಬ್ಬೆಯೊಳುಲಿದುದೀ ನಮ್ಮವರು (ಕುವ್ಯಾ.ಶ. ೩೦-೨೯) ; ಇಷ್ಟು ಪೌರುಷದ ಬೊಬ್ಬೆಯ ಕೇಳ್ದು . . . ಯಾದವರ್ ತಱುಬಿದರ್ (ಮೋಹಶ. ೩೯-೧೬) ೨. ದೊಡ್ಡ ಶಬ್ದ ; ಮಹಾಧ್ವನಿ : "ಕೋಲಾಹಲಃ, ಕಲಕಲಃ — ಈ ೨ ಬೊಬ್ಬೆಯ ಪೆಸರು" (ಪಾಶಂಶಾ. ೯೬) ; ಅಬ್ಬರಿಸಿ ಬೊಬ್ಬೆಯುಂ ಕೊಟ್ಟಿಬ್ಬಸಿದೊಡೆ ಶಾಪವಿನಾಗುವಿನಾತಂ (ಶಬ್ದಾಶ. ೩-೬೯); ಮೆಲುನುಡಿಗೆ ಗಿಳಿ ಹೊದ್ದಿದವು ಸರದುಲಿಗೆ ಕೋಗಿಲೆಯಾಳಿದವು . . . ನೇಪುರದ ಬೊಬ್ಬೆಗೆ ಸಿಲುಕಿದವು ಹಂಸೆಗಳು ಕಮಲಾನನೆಯ ಕೆಳದಿಯರ (ಕುವ್ಯಾ.ಶ. ೯-೦೦). ೩. ಆಕ್ರಂದನ ; ಪ್ರಲಾಪ : ಅರಮನೆಯಲಾ ಬೊಬ್ಬೆ ಹಸ್ತಿನಪುರದಲೀ ಬೊಬ್ಬಾಟ ವಿಸ್ಮಳಿದರಸುಗಳ ಪಾಡಾವುದು (ಕುವ್ಯಾ.ಶ. ೦-೬) : ಬೊಬ್ಬೆಯಾದುದು ಬಳಿಕ ಸುಮನಸರೊಬ್ಬುಳಿಯ ಜೂಣೆಯಲಿ ಮುನಿಗಳು ಬೆಬ್ಬಳಿಸಿದರು (ತೊರವೆ. ೦-೦೦-೯). ೪. ಗುಲ್ಲು ; ಪುಕಾರು : ಒಂದು ದೊಡ್ಡ ಜಮಿಜೋರರ ಗ್ಯಾಂಗು . . . ಎನ್ನಾ ಕಳವುಗಳನ್ನು ನಡೆಸುತ್ತಿದೆ ಎಂದು ಬೊಬ್ಬೆ ಎದ್ದು (ಪಶಶಾ. ೧೧, ೬೫೯).

**ಬೊಬ್ಬೆಕಾಯಕ** = ಮುಳ್ಳುಗಳ ಮೇಲೆ ನಿಂತು, ಮೈಗೆ ಕತ್ತಿ ತಿವಿದುಕೊಂಡು, ಗದ್ದಲವೆಬ್ಬಿಸಿ ಭಿಕ್ಷೆಯೆತ್ತುವ ಕಾಯಕ (?). **ಬೊಬ್ಬೆಹಾಕು** = ಕೂಗಾಡು ; ದೊಡ್ಡದಾಗಿ ಅರಚು : ಸತ್ಯ, ಅಹಿಂಸೆ ಎಂದು ಬಾಯಲ್ಲಿ ಬೊಬ್ಬೆಹಾಕುತ್ತಾರೆ (ಕುರುಕ್ಷೇ. ೬೫) : ಮುಡುಗರು ಒಂದೇ ಸಮನೆ ಬೊಬ್ಬೆಹಾಕುತ್ತಾರೆ (ಶಾಲಿ. ೯೨). **ಬೊಬ್ಬೆಹೊಡೆ** = ಬೊಬ್ಬೆ ಹಾಕು : ಕಾಂಗ್ರೆಸ್ಸೆಂದು ಬೊಬ್ಬೆಹೊಡೆದರೆ ಹೊಟ್ಟೆ ತುಂಬಲಿಕ್ಕಿಲ್ಲ (ಕುರುಕ್ಷೇ.೧೩೮). [ದೇ.॥ ತುಳು. ಬೊಬ್ಬೆ ; ತೆಲು. ಬೊಬ್ಬ]

**ಬೊಬ್ಬೆ$_3$, ಬೊಬ್ಬಿ** (ನಾ). ಒಂದು ಬಗೆಯ ಹೊನ್ನೆಮರ; ಕಲ್ಹೊನ್ನೆ : ಮೊಳೆಹೊನ್ನೆ, ಶ್ರೀಹೊನ್ನೆ, ಕೂಬೆ, ಬೊಬ್ಬೆ (ವೃಕ್ಷಗ. ೦೩-೨೮೫). **ಬೊಬ್ಬಿ** : ಬೊಬ್ಬಿ (ಇಂಡಿ) — ನೀರಿನ ಆಸರಕ್ಕೆ ಎತ್ತರವಾಗಿ ಬೆಳೆಯುತ್ತದೆ (ಕಾಗ. ೯೬) ; ಮರಗಳು . . . ಮಜ್ಜಾಳಿ, ಕೂಬೆ, ಬೊಬ್ಬಿ, ದೇವದಾರು, ಆಡವಿಗೋರಂಟೆ (ಪಶ್ಚಿಮ. ೨೩೬).

**ಬೊಬ್ಬೆಯ ತುಂಡುಗ** = ಹೊನ್ನೆಮರದಿಂದ ಮಾಡಿದ ಆಳೆಯುವ

**ಮಟ್ಟಗೋಲು**, ಮಟ್ಟಕೋಲು (ನಾ). ೧. ಕಟ್ಟಡ ಕಟ್ಟುವಾಗ ಗೋಡೆಯು ಒಂದೇಸಮನಾಗಿ ಮೇಲಕ್ಕೆ ಏರುತ್ತಿದೆಯೆ ಎಂಬುದನ್ನು ಪರೀಕ್ಷಿಸಲು ಮೇಲಿನ ಇಟ್ಟಿಗೆಯ ಸಮಕ್ಕೆ ಕೆಳಗಿನವರೆಗೂ ತೂಕವನ್ನು ಇಳಿಬಿಟ್ಟು ನೋಡುವ ಒಂದು ಸಾಧನ : ಕಟ್ಟಡ ಕಟ್ಟಲು ಮಟ್ಟಗೋಲು, ಚೆಕ್ಕೆ, ರಸಮಟ್ಟ ಮುಂತಾದ ಸಾಧನಗಳು ಬೇಕು (ಕೂ). **ಮಟ್ಟಕೋಲು** : ೨. "ವಸ್ತುಗಳು ಸಮತಲವಾಗಿವೆಯೆ ಇಲ್ಲವೆ ಎಂಬುದನ್ನು ಪರೀಕ್ಷಿಸಲು ಉಪಯೋಗಿಸುವ ಒಂದು ಸಲಕರಣೆ ; ಮಟ್ಟಕೋಲು, ಮಣಿಲೆವಮಟ್ಟ ; (ರಸ) ಮಟ್ಟ" (Level. ಇಂಶಬ). [ಮಟ್ಟ₁ + ಕೋಲು₁ (<ಕೋಲ್₁). / ತಮಿ. ಮಟ್ಟಕ್ಕೋಲ್, ಮಟ್ಟುಕ್ಕೋಲ್]

**ಮಟ್ಟತರ** (ನಾ). ೧. ಕಡಮೆ ದರ್ಜೆ; ಕೆಳತರ : (*). (ನಾ). ೨. ಎತ್ತರವಿಲ್ಲದಿರುವುದು; ಮಟ್ಟಸವಾಗಿರುವುದು : ಆಳು ಎತ್ತರವಿಲ್ಲ, ಕುಳ್ಳು ಎಂದೆನಲಾರೆ, ಮಟ್ಟತರ (ಪಸ್ಕ. ೦).

[ಮಟ್ಟ₁ + ತರ₆ (< ತರಹ). / ತಮಿ. ಮಟ್ಟತ್ತರಮ್]

**ಮಟ್ಟಬೆಳ್ಳಿ** (ನಾ). ಕಡಮೆ ದರ್ಜೆಯ ಬೆಳ್ಳಿ : (*).

[ಮಟ್ಟ₁ + ಬೆಳ್ಳಿ]

**ಮಟ್ಟಮಧ್ಯಾಹ್ನ** (ನಾ). ಹಗಲಿನ ನಡುಭಾಗ ; ಸುಮಾರು ಹನ್ನೆರಡು ಗಂಟೆ ಸಮಯ : ಮಟ್ಟಮಧ್ಯಾಹ್ನದಲ್ಲಿ ಬಿಸಿಲು ಹೆಚ್ಚು (ಕೂ). 'ಮಟಮಟ' ನೋ.

[ಮಟ್ಟ₁ + ಮಧ್ಯಾಹ್ನ. / ತೆಲು. ಮಟ್ಟಮಧ್ಯಾಹ್ನಮು]

**ಮಟ್ಟಮಾಲಂಗಿ** 'ಮಟಿಮಾಲಂಗಿ' ನೋ.

**ಮಟ್ಟಮೀಱು**, ಮಟ್ಟುಮೀರು, ಮಟ್ಟುಮೀಱು (ಕ್ರಿ). ಮೇರೆಯನ್ನು ಮೀರು ; ಮಿತಿಮೀರು ; ಅತಿಕ್ರಮಿಸು : ತೊಟ್ಟ ತೊಡಿಗೆಗಳುಡಿಯೆ ನಿನ್ನನು ತೆಗೆದಿಟ್ಟಾ ಖೂಳನೆಯ್ದಿದನು ಮಟ್ಟಮೀಱಿನ್ನೇಕವನ ಹಂಬಲು (ಕುಂಗಸಾಂ. ೩೩-೬೮). **ಮಟ್ಟುಮೀರು** : ಮಟ್ಟುಮೀರಿದ ವಿರಹಭಾರದಿ ಕಂಗೆಟ್ಟವರು ಕೆಲಂಬರು (ಜಗಂಧಿ. ೦೩೨-೦೨). **ಮಟ್ಟುಮೀಱು** ; ಎಲೆಲೆ ಮಟ್ಟುಮೀಱಿದ ಮಾಯದ ಬಾಲಕ ! ನೀಂ ದಿಟ್ಟಂ (ರಾಪಾಕ್ಕ. ೦೫೭-೦೩).

[ಮಟ್ಟ₁ + ಮೀಱು. / ತೆಲು. ಮಟ್ಟುಮೀರು]

**ಮಟ್ಟಯಿಸು**, ಮಟ್ಟೈಸು (ಕ್ರಿ). ೧. ಸಮಗೊಳಿಸು ; ಸಮಾನ ಮಾಡು : ಬಿಟ್ಟು ಪರಿಗ್ರಹಮೆರಡಂ ತೊಟ್ಟಯ್ದಾಚಾರಮುಂ ಪರೀಷಹಮುಂ ಬೆನ್ನಟ್ಟ ವಿಹಿತಮನನುಷ್ಠಿಸಿ ಮಟ್ಟಯಿಸಿದ ಕರಣಯೋಗ ಮಘನಿರ್ಹರಣಂ (ಪುಲ್ಕ. ೦೯-೬೨). **ಮಟ್ಟೈಸು** : ೨. ಹತೋಟಿಗೆ ತರು ; ಅಧೀನಗೊಳಿಸು : ಅರಿಷಡ್ವರ್ಗಮುಂ ಬಿಟ್ಟು ಪಂಚೇಂದ್ರಿಯಮುಂ ಮ[ಟ್ಟಾಂ. ಮ]ಟ್ಟೈಸಿ ಚಾತುರ್ವಿಧಕರಣಮನಂತಸ್ಸ್ಥಮಂ ತೂಗಿ (ಚಗವಿ. ೯-೫೩).

[ಮಟ್ಟ₁ + — ಇಸು₃]

**ಮಟ್ಟರಗಳೆ** (ನಾ). [ಛಂದ] ಒಂದು ಬಗೆಯ ಛಂದೋವೃತ್ತ ; ಪಾದದಲ್ಲಿ ನಾಲ್ಕುಮಾತ್ರೆಯ ನಾಲ್ಕುಗಣಗಳಿರುವ ರಗಳೆ : ಮಂದಾನಿಲರಗಳೆ : ಪಾದಪೊಂದಕ್ಕೆ ಚತುರ್ಮಾತ್ರಾಗಣವು ನಾಲ್ಕಾಗಲಿ. ಮೂರುಮಾತ್ರೆಯ ಗಣದ ಮುಂದೆ ಐದುಮಾತ್ರೆಯ ಗಣವು ಬರುವಂತೆ ಗಣಗಳೆರಡೆರಡಾಗಲಿ ಬರಲು ಅದು ಮಂದಾನಿಲರಗಳೆಯೆನಿಸುವುದು. ಇದಕ್ಕೆ ಮಟ್ಟರಗಳೆ ಎಂಬ ಹೆಸರೂ ಉಂಟು (ಕೈಬಿ. ೯೮) ; 'ಪದ್ಧಳಿ', 'ಮಟ್ಟರಗಳೆ', 'ತ್ವರಿತರಗಳೆ' ಎಂದು ಬೇರೆ ಬೇರೆ ಹೆಸರುಗಳಿವೆ. ಮಂದಾನಿಲ ರಗಳೆ ಎಂಬುದು ಈಚಿನ ಕಾಲದ ಹೆಸರು (ಕಶಂಪಜಾ. LXXXVI, ಮುಪ್ಪುಬ).

[ಮಟ್ಟ? + ರಗಳೆ]

**ಮಟ್ಟಸ** (ನಾ). ಏರುತಗ್ಗಿಲ್ಲದಿರುವುದು ; ಸಪಾಟು : ಸೊಟ್ಟುಗಳ ನೆಟ್ಟಗಾಗಿಪ ಯತ್ನ ಲೋಕದಲಿ . . . ಮಟ್ಟಸವೆ ಏರೆ ಹರವು (ಮಂಕುತಿ. ೩೩೯).

**ಮಟ್ಟಸಮಾಡು** = ಸಮತಲಮಾಡು : ಸಮಗೊಳಿಸು : ಒಂದೊಂದು ಕಡೆ ಅಸ್ಥಿರವಾದ ನೀರನ್ನು ಎರಡು ಕಯ್ಯಿಂದಲೂ ಅದುಮಿ ಅದುಮಿ ಮಟ್ಟಸಮಾಡುವಂತಿದೆ (ಬಂಗಿ. II, ೧೦೬). **ಮಟ್ಟಸವಾಗು**, **ಮಟ್ಟಸಾಗು** = ೧. ಏರುತಗ್ಗಿಲ್ಲದಿರು ; ಸಪಾಟಾಗು : ಸಮರಸ್ತೆ ಮಟ್ಟಸವಾಗಿದ್ದುದರಿಂದ ಬಂಡಿ ಮತ್ತಷ್ಟು ವೇಗವಾಗಿ ಸಾಗಿತು (ಕೃಪಸು. ೫೫೭). ೨. ಮಧ್ಯಮರೀತಿಯದಾಗು : ಡಾ. ಸದಾಶಿವರಾಯರು ಸುಮಾರು ಮೂವತ್ತೈದು ವಯಸ್ಸಿನ ಮಟ್ಟಸವಾದ ಆಳು (ವಂಶವೃ. ೮) ; ಹೊರಗೆ ಹೀಗಿದ್ದರೂ ಮನೆಯು ಮಾತ್ರ ಮಟ್ಟಸಾಗಿತ್ತು (ವರ್ಣರಿ. ೦೨೭).

[< ಮಟ್ಟ₁. / ತೆಲು. ಮಟ್ಟಸ]

**ಮಟ್ಟಸುತ್ತಿಗೆ** (ನಾ). (ಅಕ್ಕಸಾಲೆಯು ಬಳಸುವ) ಸಣ್ಣ ಸುತ್ತಿಗೆ: (*).

[ಮಟ್ಟ₁ + ಸುತ್ತಿಗೆ₁]

**ಮಟ್ಟಱಿ**, ಮೊಟ್ಟಱಿ (ನಾ). ಸಮತಲವಾಗಿರುವ ಬಂಡೆ ; ಸಪಾಟಾದ ಬಂಡೆ : ಅದಱ ತದನಾನ್ತರ ಎಣೆತೊಣೆಯ ಮಟ್ಟಱಿ ಅದರ ತದನಾನ್ತರ ಬೆಂಬುಗುಳ್ಳಿ (ಎಕ್ಟಾ. IX-i. ೪೦-೨೭ ; 11ನೆಯ ಶತ). **ಮೊಟ್ಟಱಿ** : ಈಶಾನ್ಯದ ದೆಸೆಯಿಂ ಪೋಣಿಯ ಮೊಟ್ಟಱಿ ಮೂಡಲ ದಿನ್ನೆಯ ಹೊಲಗಡಿಯಿಂದಂ ತೆಂಕ ಬರಲು ಬಿಲ್ಲಱಿ (ಎಕ. VII. ಶಿಮಿ. ೫೭-೬೮ ; 1115).

[ಮಟ್ಟ₁ + ಅಱಿ₄]

**ಮಟ್ಟಿ** (ನಾ). ೧. ಮಣ್ಣು : ಕ್ಷುತ್ತೃಷೆ ನಿದ್ರೆಯಿಲ್ಲದವರೇ ಹಿರಿಯರ್ ಪರಿಪೂಜ್ಯರಾದೊಡೀ ಕ್ಷುತ್ತೃಷೆ ನಿದ್ರೆಯಿಲ್ಲದಿಹ ಕಲ್ಮರ ಮಟ್ಟಿಗಳೇ ಸುಪೂಜ್ಯರೇ (ಕಕಕ. ೬೩) ; ಅದರ ಅರ್ಧಭಾಗ ಮಟ್ಟಿ ಕಾಮಗಾರಿಗೆ ತಗಲ ತಕ್ಕದ್ದು (೪ಂಡಿ. ೦೫೦). ೨. (ಬ್ರಾಹ್ಮಣರು ಹಣೆಯಲ್ಲಿ ಧರಿಸುವ) ಗೋಪಿಚಂದನ, ಮೃತ್ತಿಕೆ ಇತ್ಯಾದಿ : ಮಟ್ಟಿಯನಿಟ್ಟ ದ್ವಿಜರ ಮಾತದೇಕೆ (ಏಕಪ. ೫೭೮); ಇಟ್ಟ ಮಟ್ಟಿಯ ಬೊಟ್ಟು ಇಟ್ಟೆಯೊಯಿತ್ತಹೋ (ಸಾಪಂತ. ೪-೨೨೯ ರಗಳೆ) ; ಎಲವೊ ಮಟ್ಟಿಯ ಮಾದನ ದರ್ಭೆಯ ತಿಲದ ಮನ್ಮಥ (ಕುಪ್ಪಾಕ. ೦೫-೨೧) ; ಹಣೆಗೆ ನಿತ್ಯ ನೀರಿನಲಿ ಮಟ್ಟಿಯನು ಕಲೆಸಿ ಬರೆಯುತ ಮೂಗ ಬೇರನ್ನು ಪಿಡಿದು ಮುಸುಕಿಕ್ಕಲೇನುಂಟು (ಕುರಂಪ. ೦-೪೪-೦). ೩. ದಿಬ್ಬ ; ತೆವರು ; ತಿಟ್ಟು : ಉದಿಚಿ ದೆಸೆ ಕಱಿಯನ್ನೀ ಗ್ಗೊರೆ ಮಟ್ಟಿ ಈಶಾನದೆಸೆ ಆರನೆಱು (ಎಕ. X (೩), ಮುಳಬಾ. ೩೨೯-೫೩ ; 650) ; ಮಣ್ಣ ಮಟ್ಟಿಯ ಮೇಲೆ ಕಣ್ಣ ಕುಪ್ಪಿಯ ದುರ್ಗ ಬಣ್ಣ ಬೈರೂಪು ಸಣ್ಣ ಬಾಗಿಲಿಗೆ ಮೂವಣ್ಣವೈ (ವ್ಯಲಾರ. ೪೭-೬೨). ೪. ಗರಡಿ ಮನೆಯಲ್ಲಿ ಸಾಮುಮಾಡುವ ಸ್ಥಳದಲ್ಲಿರುವ ಕೆಂಪನೆಯ ಮಣ್ಣು ; ಗರಡಿಯ ಕೆಮ್ಮಣ್ಣು : ವರ್ಷಕ್ಕೊಂದು ಬಾರಿ 'ಮಟ್ಟಿ' ಮೊದಲು ತರುವುದು ಕಾಟನಾಯಕನ ಗರಡಿಗೆ (ತರೀಪ. ೨೭) ; ಸುಬ್ಬು ಕೆಳಗೆ ಸಿಕ್ಕಿ ಮಟ್ಟಿಯನ್ನು ಹಿಡಿದಿದ್ದ (ಬೀಮಣ. ೪).

**ಮಟ್ಟಿಪಡಿಕೆ** = ಮಣ್ಣು : ಬಿಡದೆ ಚಕ್ರಾದಿಯುಮನೊಡಲೊಳಂ ಕೀಸಿ ಮಟ್ಟಿಪಡಿಕೆಯಿಂದೂರ್ಧ್ವತಿಲಕಾದಿಗಳುಮಂ ನಡಯಿಪಾ ಮಂಡದೊಳುಪೊಡದೋಡುಗಳೆಂದು ಕಡುಗಲಿ ದಧೀಚಿಮುನಿರಾಯ ನೊರೆದಂ (ಸಾಪಂತ. ೨-೬೪). P ಇದೊಂದು ಕೂಡುನುಡಿ.

[< ಪ್ರಾ. ಮಟ್ಟಿಆ, ಮಟ್ಟೀ. / ಸಂ. ಮೃತ್ತಿಕಾ ]

**ಮಟ್ಟಿ₂**, ಮಟ್ಟು₄, ಮೊಟ್ಟು₃ (ನಾ). (ಗಿಡಗಳ) ಹೊದರು ; ಪೊದೆ ; ಮೆಳೆ : ಮರಗಳಿರಾ ಮಟ್ಟಿಗಳಿರಾ ಕಂಡಿರೇ (ಸಾಪಂತ. ೪-೨೩೯ ರಗಳೆ) ; ಕೇದಿಗೆಹೂ ಕೊಯ್ಯಲು ಹಳ್ಳದಲ್ಲಿ ಬೆಳೆದ ಅದರ ಮಟ್ಟಿಯೆಡೆಗೆ ಇಳಿದ (ದಾಳ್ಯ. ೯೩). **ಮಟ್ಟು₄** : ಬಿದಿರುಮಟ್ಟನಲಿ ಪುಟ್ಟಿ ವನಗಳನ್ನೆಲ್ಲ ಕಾಳ್ಗಿಚ್ಚು ಸುಟ್ಟು ತಾ ವೇಣುಗಳ ಮೆಳೆಗಳನ್ನೆಲ್ಲ ದಹಿಸುವವೋಲ್ (ಕುಕಂಗ. ೬೬-೩೫) ; ಎಂತದೋ ಸರಸರ ಅಂತು ಮಟ್ಟಿನಲ್ಲಿ, ನಂಗೆ ಹೆದರಿಕೆ

ಅಗ್ತದೆ (ತುಶಿಮು. ೯೩). ಮೊಟ್ಟು$_{3}$ : ಬಿದಿರುಹಿಂಡಲಿನಾಚೆಗಿನ ಮೊಟ್ಟಿನ ಕಡೆ ಕಣ್ಣು ಹಾಯಿಸಿದರು (ಕೃಟ್ಟಿ. ೩೭). [ ? ]

**ಮಟ್ಟಿಕಾಗೆ** (ನಾ). ಒಂದು ಬಗೆಯ ಕಾಗೆ : ಇದು ಕಾಗೆಯ ಮರಿಯೇನು ? ಅಥವಾ ಮಟ್ಟಿಕಾಗೆಯಂತೆ ಮಲೆನಾಡಿನ ಈ ಕಾಗೆ ಇಷ್ಟೇ ಚಿಕ್ಕದಾ ? ಎಂದು ಕೇಳಿದರು (ಬಾಳಿಗ. ೮೮). [ಮಟ್ಟಿ$_{?}$ + ಕಾಗೆ]

**ಮಟ್ಟಿಕೆ** ' ಮಡಕಿ ' ನೋ.

**ಮಟ್ಟಿಗ** (ನಾ). ಹಣೆಗೆ ಮೃತ್ತಿಕೆ, ಗೋಪೀಚಂದನ ಮೊದಲಾದುವುಗಳನ್ನಿಡುವವನು : ಒಡಲ ಮಟ್ಟಿಗ ದ್ವಿಜನನೆಡೆಮಟ್ಟೆಯೊಳು ಕಾಣಲೊಡನೆ ಭಸಿತವನು ಪ್ರೋಕ್ಷಿಪುದು (ಬಸಂತ. ೨-೦೩೦) ; ಮಟ್ಟಿಗರು ತಮ್ಮೊಳಗೆ ಗುಜುಗುಜುಗುಟ್ಟುತಂ ನಡೆತಂದಸಪ್ಪಂಬಟ್ಟು ಬಿಜ್ಜಳರಾಯನೊಡನಿಂತೆಂದು ಹೇಳಿದರು (ಬಸಪು. ೩೩-೩) ; ಪುರವೀಥಿಯೊಳು ಬರ್ಪ ಧೀವರನನೀಕ್ಷಿಸಿ ಮುನ್ನ ಗೇಹಮಂ ಪೊಕ್ಕು ಕುಶುಮ್ಮರಿಗೆ ಶಿವಮುದ್ರೆಯಂ ಮಾಡಿ ಕೂಡಿರೆ ಮಟ್ಟಿಗರು ಜಜಿಯೆ (ಶಾವತಂ. ೨-೨೩).
[ಮಟ್ಟಿ$_{1}$ + - ಗ$_{2}$]

**ಮಟ್ಟಿಬಡಕ** (ನಾ). = ಮಟ್ಟಿಗ : ಮಟ್ಟಿಬಡಕರ್ಕ್ಳಿವರಿಗೆ ಮುಷದಿಯಾಗುವುದು ಸಲ್ಲ ಪಟ್ಟಿಮುಂಚಿಕೊಪ್ಪುವಂತೆ ಬಾರೆಯೆಂದನು (ಕುರಂತ. ೩-೬೨-೦೦).
[ಮಟ್ಟಿ$_{1}$ + — ಬಡಕ$_{2}$ (< — ಬಡಿಕ$_{2}$)]

**ಮಟ್ಟಿಮಾವು** (ನಾ). ಒಂದು ಬಗೆಯ ಸಸ್ಯ : ವರುಣ (ಮಟ್ಟಿಮಾವು) ಇವು ಮಧುರ, ಸ್ವಲ್ಪ ಕಹಿ, ಕಫವಾತನಾಶಕ (ಅಷ್ಟಾಂಗ. ೧೩೯). [ ? ]

**ಮಟ್ಟು$_{1}$** ' ಮೊತ್ತು ' ನೋ.

**ಮಟ್ಟು$_{2}$** ' ಮಟ್ಟಿ$_{1}$ ' ನೋ.

**ಮಟ್ಟು$_{3}$** ' ಮಟ್ಯ ' ನೋ.

**ಮಟ್ಟು$_{4}$** ' ಮಟ್ಟಿ$_{2}$ ' ನೋ.

**ಮಟ್ಟು$_{5}$** (ನಾ). ವ್ಯವಸಾಯದ ಒಂದು ಉಪಕರಣ : ಕೃಷಿಯ ಒಂದು ಸಾಧನ : ಒಕ್ಕಲ ಮಕ್ಕಳು ತಮ್ಮ ಹೊಲದ ಮಟ್ಟುಗಳನ್ನು ಹೆಗಲ ಮೇಲೆ ಹೇರಿಕೊಂಡು . . . ಹಾಡುತ್ತ ಸಾಲಾಗಿ ಮನೆಗೆ ನಡೆದಿರುವರು (ಜಯಂತ. ೨೬೭). ' ಮುಟ್ಟು$_{2}$ ' ಪರಾ. [ ? ]

**ಮಟ್ಟುಗೊಳಿಸು** (ಕ್ರಿ). ಕಡಮೆ ಮಾಡು : ಶೀತೋಷ್ಣಗಳೆರಡರಿಂದೆಯುಂ ವಾತಮುಂ ಮಟ್ಟುಗೊಳಿಸಿ ದೇಹಕ್ಕೆ ಸೌಖ್ಯಮನುಂಟುಮಾಡಿಕೊಳ್ಳಬೇಕು (ಕಾರಶಾಂ. ೦೬-೦೦೩) ; ಮಮಕಾರಂಗಳನೆಲ್ಲಾ ಮಟ್ಟುಗೊಳಿಸಿ ಸರ್ವತ್ರ ಬುದ್ಧಿಯಿಂದಾ ಸಾಧುಸಂಗವನೆಡೆಬಿಡದೆ (ತತ್ತ್ವಕ. ೦-೩).
[ಮಟ್ಟು$_{2}$ (< ಮಟ್ಟು$_{1}$) + ಕೊಳ್$_{1}$ + — ಇಸು$_{3}$]

**ಮಟ್ಟುವಿಾರು** ' ಮಟ್ಟಿವಿಾಱು ' ನೋ.

**ಮಟ್ಟುವಿಾಱು** ' ಮಟ್ಟಿವಿಾಱು ' ನೋ.

**ಮಟ್ಟೆ$_{1}$**. ಮೊಟ್ಟೆ$_{1}$ (ನಾ). ೧. ತಾಳೆ, ಈಚಲು, ತೆಂಗು ಮುಂತಾದ ಮರಗಳ ಗರಿ. _ ಸೋಗೆ : ಮಟ್ಟೆಯಿಪ್ಪತ್ತ್ಯದಾಗಿ ಹೊಂಬಾಳೆ ಭಟ್ಟಿತ್ತು (ಸಳಪ. II. ೨೨೬-೭೦). ' ಕುಚ್ಚುಮಟ್ಟೆ ', ' ಗೊದಮಟ್ಟೆ$_{2}$ ' ಪರಾ. ೨. ತೆಂಗಿನ ಸಿಪ್ಪೆ : ತೆಂಗಿನ ಮಟ್ಟೆಯುಂ ತಂದು (ಗೌತುಶಂ. ೩೦-೦); ಸಾವಿತ್ರಿ ನೀರು ಕಾಯಿಸುವುದಕ್ಕೆ ತೆಂಗಿನಕಾಯಿ ಮಟ್ಟೆ ಕವರಾಕಿದ್ದಳಂತೆ (ಪಮ್ನರು. ೦೩೧). ೩. ಹೊಂಬಾಳೆ : ' ಮಟ್ಟೆದೋಱು ' ಪರಾ. ಮೊಟ್ಟೆ$_{1}$ : ೧. ತೆಂಗಿನ ಮರದಿಂದ ನಾಲ್ಕೈದು ಒಣಗಿದ ಮೊಟ್ಟೆ ಕೆಡವು (ರಜಿ). ೪. ಒಂದು ಬಗೆಯ ಸಸ್ಯ : ಗುಂಗೆ, ಮೊಟ್ಟೆ (ಪ್ರಾಶಿಗ. ೬೨-೧೪೯೧).
[ದೇ.॥ ತಮಿ. ಮಟ್ಟೈ ; ಮಲ. ತೆಲು. ಮಟ್ಟ]

**ಮಟ್ಟೆ$_{2}$** ' ಮಡಿಡೆ ' ನೋ.

**ಮಟ್ಟೆಗಟ್ಟು** ' ಮೂಡೆಗಟ್ಟು$_{1}$ ' ನೋ.

**ಮಟ್ಟೆದೋಱು** (ಕ್ರಿ). ಹೊಂಬಾಳೆ ಬಿಡು : ಮಟ್ಟೆದೋಱಿದ ತಂಗುಗಳ ಸಾಲಿಟ್ಟು ಬೆಳೆದಡಕೆಗಳ . . . ಫಲಭೂಜರಾಜಿಯು ಕಿತ್ತನಾ ಹನುಮ (ಕೂರರಾ. ೩-೪-೩). [ಮಟ್ಟೆ$_{1}$ + ತೋಱು]

**ಮಟ್ಟೆಯ** ' ಮಟ್ಯ ' ನೋ.

**ಮಟ್ಟೆಸುಂಕ** (ನಾ). ಮೂಟೆಯ ಹೇರಿನ ಮೇಲೆ ಹಾಕುವ ಸುಂಕ, – ತೆರಿಗೆ : ಆಲೆದೆಱೆ ಆಡುದೆರೆ ಮಟ್ಟೆಸುಂಕ ಕಾವಲಿದೆಱೆ ಅಡಿದೆಱೆಯಿಪ್ಪೂಪುರದ ವೀರಭದ್ರದೇವರು ಅಂಗರಂಗಭೋಗಕ್ಕೆ ಸಲುಉ ಎಂದು ಲಮೀಣಾಗ × × ಕೊಟ್ಟರಾಗಿ (ಎಕ. XIV. ಕೃಕರಾ. ೮೦-೦೦ ; 1402).
[ ಮಟ್ಟೆ$_{2}$ (< ಮೂಡೆ) + ಸುಂಕ$_{1}$ ]

**ಮಟ್ಟೈಸು** ' ಮಟ್ಟಯಿಸು ' ನೋ.

**ಮಟ್ಯ**. ಮಟ್ಟ$_{2}$, ಮಟ್ಟು$_{3}$, ಮಟ್ಟೆಯ (ನಾ). ೧. [ಸಂಗೀತ] ಒಂದು ತಾಳದ ಹೆಸರು : ಏಳಕ -ಧ್ರುವ ಮಟ್ಯ [ಶಾಂ. ಮಟಯ] . . . ಜಯತಾಳವೆಂಬವೇ ಮೊದಲಾದ ಸೂಱೊಂದು ತಾಳಂಗಳಾದೊಡೆ (ಬವೇಕ. ೦೯೨). ಮಟ್ಟ$_{2}$ : ೧. ಮಟ್ಟ ಎಂಬುದು ವಿಶಿಷ್ಟವಾದ ತಾಳವನ್ನು ಸೂಚಿಸುವ ಹೆಸರು (ಪಾಡೋಜ. ೨೬೯) ; ಅದಿತಾಳದಿಂದ ಧ್ರುವ, ಮಟ್ಟ, ರೂಪಕ, ಝಂಪೆ, ತ್ರಿವುಡೆ, ಅಟ್ಟ, ಏಕತಾಳಗಳು ಹುಟ್ಟಿದವು (ಯಕ್ಷಗಾ. ೨೩). ಮಟ್ಟು$_{3}$ : ೨. ಪದ್ಯ ಅಥವಾ ಹಾಡನ್ನು ರಚಿಸುವ ಛಂದಸ್ಸಿನ ರೀತಿ, – ಕ್ರಮ : ರಗಳೆಯ ಮಟ್ಟಿನಲ್ಲಿ ತಾವು ಹಾಡಿ ಹೊಗಳಿರುವ ಪಾಂಡ್ಯ, ಚೋಳ, ಚೇರ, ಗುರ್ಜರರು ? ಅವರೂ ರಾಜರಷ್ಟೆ ? (ತುಂಗಭ. ೯೩) ; ಕನ್ನಡದಲ್ಲಿ ಕಾವ್ಯರಚನೆಗೆ ಇದುವರೆಗಿದ್ದ ಮಟ್ಟುಗಳೇ ಸಾಲುತ್ತಿರಲಿಲ್ಲವೆ ? (ಸಮಾಲೋ. ೦೬೯). ೩. ಹಾಡಿನ ದಾಟಿ : ಹಿಂದೆ ತಾನು ಕಲಿತ ಪ್ರತಿಯೊಂದು ನಾಟಕದ ಮಟ್ಟುಗಳನ್ನು ಶ್ರಾವ್ಯವಾಗಿ ಅಂದು ತೋರಿಸುತ್ತಿದ್ದ (ಕತ್ತಿ. ೭೩). ಮಟ್ಟೆಯ : ೧. ರಷ್ಟೆಯ ಮಟ್ಟೆಯ ಪಡಿಮಟ್ಟೆಯ ಝಂಪೆಯುಮಡ್ಡತಾಳ ರೂಪಕಮೇಕತಾಳಂಗಳೆಂಬ ಸಪ್ತತಾಳಂಗಳಂ ನಿವರ್ತಿಸಗೆಯ್ದು (ಪಾರಪು. ೯-೦ ಪ). ' ಪಡಿಮಟ್ಟೆಯ ', ' ಪಡಿಮಠೆಯ ' ಪರಾ. [< ಸಂ. ಮಠ್ಯ. / ತಮಿ. ಮಟ್ಟಿಯುವ್]

**ಮಠ** (ನಾ). ೧. ಸಂನ್ಯಾಸಿಗಳು ವಾಸಿಸುವ ಕುಟೀರ ; ಸಂನ್ಯಾಸಿಗಳ ವಾಸಸ್ಥಾನ ; ಆಶ್ರಮ : "ಬ್ರತಿಗಳಿರ್ಪ ಮನೆ ಮಠಮೆಂಬುದು" (ಹಣಯು. ೩೦-೦೪೩) ; " ವ್ರತಿಗಳಿಹ ಆವದು ಮಠ " (ಮಂಗರಾ. ೩-೭೬) ; ಸನ್ಯಾಸಿಗಳ ಮಠವೆಯ್ದಿ ಬೇಯಿತ್ತು (ಬಸಪು. ೩೬-೩೩). ೨. ಧಾರ್ಮಿಕಬೋಧನೆ, ಪ್ರಸಾರ ಹಾಗೂ ವಿದ್ಯೆಯ ಬೋಧನೆ, ಪ್ರಸಾರಗಳನ್ನು ನಡೆಸುವ ಆಧ್ಯಾತ್ಮಿಕಸಂಸ್ಥೆ ಅಥವಾ ವಿದ್ಯಾಕೇಂದ್ರ ; ವಿದ್ಯೆ, ಜ್ಞಾನ, ಮತ, ಧರ್ಮಗಳ ಪ್ರಸಾರಕಾರ್ಯವನ್ನು ನಡೆಸುವ ಸ್ಥಾನ : ಸಂಸ್ಥಾನ : " ಮಠಃ, ಛಾತ್ರಾದಿನಿಲಯಃ – ಗುರುಗಳೂ, ಶಿಷ್ಯರೂ, ಸನ್ಯಾಸಿಗಳು, ಬ್ರಹ್ಮಚಾರಿಗಳೂ ಇಂಥವರು ವಾಸ ಮಾಡುವ ಸ್ಥಳ, ಮಠ, ಯತಿಸ್ಥಳ " (ಸಿದ್ಧಾಂತ. ೦೦೦) ; ಆ ಮಠಂ ಪುರಾಣ ಕಮಠನಂತೆ ಸಕಳಲೋಕಾಧಾರಮುಂ . . . ಭವಾನೀಭವನದಂತೆ ಬ್ರಹ್ಮಚಾರಿಸದಾಚಾರಸಂಭಾವಿತಮುಂಮಾಗಿರ್ಪುದು (ಎಕ. VII. ಶಿಕಾ. ೦೦೨-೩೭ ; 1156) ; ನಮ್ಮ ಪೂರ್ವಿಕರಲ್ಲಿ ಹಲವರು ಉತ್ತರಾದಿಮಠದ ಸ್ವಾಮಿಗಳಾಗಿದ್ದರು (ಕಂಪ. ೨೯೪) ; ವಿಷ್ಣುತೀರ್ಥರು ಉಡುಪಿಯ ಅಷ್ಟಮಠಗಳ ಪೈಕಿ ಸ್ವಾದೀಮಠದ ಪೀಠಗೆಗೆ ಮೂಲಪುರುಷರಾದರು (ಕಥಾ. ೦೦೯). ೩. ಮಹಾವ್ಯಕ್ತಿಗಳು ದೇಹ ತ್ಯಜಿಸಿದ ಮೇಲೆ ಅವರ ಯಾವುದಾದರೂ ಕುರುಹನ್ನು ಪೂಜಿಸುವ ಸ್ಥಳ ; P ಕಾಲಕ್ರಮೇಣ ಬೆಳವಣಿಗೆ ಹೊಂದಿ ಸಾರ್ವಜನಿಕಸೇವೆ ಇತ್ಯಾದಿಯನ್ನು ನಡೆಸುವ ಸಂಘ, _ ಸಂಸ್ಥೆ : ಚಿತೆಯಿಂದ ಚೈತ್ಯ, ಸ್ತೂಪ, ಮಠಗಳು ಮಹಾವ್ಯಕ್ತಿಗಳ ಭಸ್ಮಾವಶೇಷವನ್ನೋ ಮತ್ತಾವುದೇ ಅವರು ಬಳಸಿದ ಸಾಮಗ್ರಿಗಳನ್ನೋ ಇಟ್ಟು

ಪೂಜಿಸುವ ಸ್ಥಳಗಳಾದುವು (ತೌಂಡಕ. ೧೨೦); ಕಲ್ಕತ್ತದ ಮಹಾನಗರದಲ್ಲಿದ್ದ ಹಾಳುಮನೆಯ ಮಠದ ಇಬ್ಬರು ತರುಣಸಂನ್ಯಾಸಿಗಳು. . . ದಕ್ಷಿಣೇಶ್ವರದಲ್ಲಿ ಧ್ಯಾನ ಜಪತಪಗಳಲ್ಲಿ ಕಳೆಯಲೆಂದು ಭವತಾರಿಣಿಯ ಸನ್ನಿಧಿಗೆ ಬಂದಿದ್ದರು (ಹುಲಿಹು. ೬೬೦). ೪. (ಯಾತ್ರಾರ್ಥಿಗಳಿಗೆ. ಸಾಧುಸಂತರಿಗೆ ನಿರಂತರವಾಗಿ ಅನ್ನದಾನ ನಡೆಸುವ ದೇವಸ್ಥಾನ ಅಥವಾ ಮಠಕ್ಕೆ ಸೇರಿದ) ಭೋಜನಶಾಲೆ; ಅನ್ನಛತ್ರ : ಅವಾರಿ ಸತ್ರವ ನಡಸುವಂತಾಗಿ ಲಕ್ಷ್ಮೀನಿಬಿಯುವೆಂದ್ದು ತನ್ನ ಹೆಸರಲು ಮಠಂ × × × [ಮಾ]ಡಿಸಿ (ಎಕ. XXX. ೬೬-೦೩; 1220); ಕಾಮದೇವನಾಯಕರು ಆಚಂದ್ರಾರ್ಕ ಸ್ಥಾಯಿಯಾಗಿ ಪ್ರತಿದಿವಸವೂ ಹನೆರಡು ಪ್ರಜೆ ಬ್ರಾಹ್ಮಣಭೋಜನಕ್ಕೆಂದು ಕಟ್ಟಿಸ್ತ ಮಠದ ಚತುಸೀಮೆಯ ವಿವರ (ತೌಇ. VII. ೩೪೭-೦೩; 1387); ತುಟೀ ಕಟ್ಟಿದ ಮೇಲೆ ಮಠದ ಭೋಜನ ಯಾಕೆ ? (ಗಾದೆ). ೫. ಗುಡಿ ; ದೇವಾಲಯ : ಶ್ರೀಕೃಷ್ಣಮಠ : ಉಡುಪಿಯ ಕೇಂದ್ರ ಆಕರ್ಷಣೆಯಾದ ಶ್ರೀಕೃಷ್ಣದೇವಾಲಯ ಸಣ್ಣದಾದರೂ ಅಚ್ಚುಕಟ್ಟು (ಕವಿಕೋ. II. ೩೬೮); ಗುರುವಾರ ರಾಯರ ಮಠದಲ್ಲಿ ವಿಶೇಷಪೂಜೆ ನಡೆಯುತ್ತದೆ (ಲೂಢಿ). ೬. ನಿವಾಸ ; ವಾಸಸ್ಥಾನ : ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ ಆ ಭಕ್ತನು . . . ತನು ಕರಗಿ ಮನ ಕರಗಿ ನೋಡಿ ಮಾಡುವುದು ಭಕ್ತಿಸ್ಥಲ (ಬಸವ. ೯೬೪); ಸತ್ಯಸದ್ಭಕ್ತರ ಮಠವನರಸಿಕೊಂಡು ಹೋಗಿ ಲಿಂಗ ಮುಂತಾಗಿ ಭಕ್ತಿಭಿಕ್ಷೆಯ ಬೇಡುವೆ (ಅಲಂಪ್ರ. ೦೪೪-೦೩೩); ಪಾದೀಲಿ ಮೇಪೊ ಜಾಣ ಸಾರಗ ಹಿಂಡೆ ಗ್ಯಾನೀಸಿ ಮೇವೋ ನವಿಲ್ಹಿಂಡೆ-ಸಾರಗದ್ಹಿಂಡೆ ಜಾಣ ಗಿರಿಜೆಯ ಮಠವೆಲ್ಲಿ (ಹೇಳ್ವ. ೨೩). ೭. (ಮುಖ್ಯವಾಗಿ ಬ್ರಾಹ್ಮಣಬಾಲಕರಿಗಾಗಿ ವಿನಾಸಲಾಗಿರುತ್ತಿದ್ದ) ಪಾಠಶಾಲೆ ; ಶಿಕ್ಷಣಶಾಲೆ : ಗಿಳಿಗಳೋದುವ ಮಠ ನವಿಲ್ಗಳ ನರ್ತನಶಾಲೆಯುವು . . . ಎಂದೆನಲಾ ಪೊಳಲುಪವನವೆಸೆದಿಹುದು (ಶುಂಠಾಸಂ. ೪-೩೨); ನಿಮ್ಮ ಮನೆ ಮಾಣಿಗೆ ವರ್ಷ ಐದು ತುಂಬಿಯಾಗುತ್ತದೆ. ನಮ್ಮ ಮಠಕ್ಕೆ ಕಳುಹಿಸಬಹುದಲ್ಲ (ಮರಳು. ೦೬೯); ಊರ ದೇಗುಲದಲ್ಲಿ ಐಗಳ ಮಠವಿತ್ತು (ಜಾತುತ್. ೬೩). 'ಕೂಲಿಮಠ' ನೋಡಿ. ೮. (ಧರ್ಮಪ್ರಚಾರ ಮತ್ತು ಸಾರ್ವಜನಿಕಸೇವೆ ನಡೆಸುವ) ಕ್ರೈಸ್ತಮತೀಯರ ಧಾರ್ಮಿಕ ಸಂಸ್ಥೆ: ಕ್ರೈಸ್ತಮಿಷನರಿಸಂಸ್ಥೆ : ಕ್ರೈಸ್ತಮಠವೆನಿಸಿಕೊಳ್ಳಬೇಕಾದರೆ ಅದು ಸ್ವಯಮಾಡಳಿತಸಂಸ್ಥೆಯಾಗಿದ್ದು ಧರ್ಮಸಭೆಯ ನಿಯಮಾವಳಿಯನುಸಾರ ಸ್ಥಾಪಿತವಾಗಿರಬೇಕು (ಕವಿಕೋ. V. ೬೦೩). ೯. ವ್ಯಕ್ತಿಯ ಹೆಸರಿನ ಕೊನೆಯಲ್ಲಿ ಸೇರುವ (ಸ್ವಸ್ಥಳ ಅಥವಾ ಮನೆತನಕ್ಕೆ ಸಂಬಂಧಪಟ್ಟ) ಶಬ್ದ ; ಉದಾಹರಣೆಗೆ —'ಜಮಖಂಡಿ ಮಠ', 'ಮೈಸೂರುಮಠ', 'ಹಿರೇಮಠ', ಇತ್ಯಾದಿ. ೧೦. ಎತ್ತುಗಳು ಎಳೆಯುವ ಗಾಡಿ. [ಸಂ.]

**ಮಠದೇಜು³** (ನಾ). ಮಠದ ಆದಾಯಕ್ಕೆ ಹಾಕುತ್ತಿದ್ದ ತೆರಿಗೆ : ಸೋಮಯ್ಯದೇವರ ಪುರದ ಮಠದೇಜುಯ ಗದ್ಯಾಣ ನಾಲ್ವತ್ತು ಹೊನ್ನನು . . . ಕೊಟ್ಟರು (ಎಕ. VI. ತರೀಕೆ. ೪-೯; 1265).

[ ಮಠ + ತೆಜು³₃ ]

**ಮಠಪತಿ** (ನಾ). ಆಶ್ರಮದ ಮುಖ್ಯಸ್ಥ; ಮಠಾಧಿಪತಿ : ಅಷ್ಟವಿಧಾರ್ಚನೆ ಮಠಪತಿ ವಾಸ ವೈಷ್ಣವರಾಹಾರದಾನಕಂ ಬಿಟ್ಟ ದತ್ತಿ (ಎಕ. XIV. ನಾಗಮಂ. ೦೪೦-೬೬ ; ಸು. 1224); ಅಲ್ಲಿಯ ಮಠಪತಿಗಳಾದ ಚತುರಾನನ ಮತ್ತು ವಾಗೀಶ್ವರಪಂಡಿತರನ್ನು ಕಂಡನು (ಕನ್ನಗನಂ. ೨೯).

[ಸಂ.]

**ಮಠವೃತ್ತಿ** (ನಾ). ಮಠಕ್ಕಾಗಿ ನೀಡಿದ ತೆರಿಗೆಯಿಲ್ಲದ ಭೂಮಿ: (ಕೃಶಗ. II. ೩೩೬). [ಸಂ.]

**ಮಠಾಧಿಪತಿ** (ನಾ). ಆಶ್ರಮದ ಮುಖ್ಯಸ್ಥ-ಗುರು ; ೧ ಮಠಾಧಿಪತಿಗಳಿಗೆ ಬೇರೆ ಬೇರೆ ಮಠಗಳಲ್ಲಿ ಬೇರೆ ಬೇರೆ ಹೆಸರುಗಳಿರುತ್ತವೆ. ಉದಾಹರಣೆಗೆ ' ಗಿರಿ ', ' ತೀರ್ಥ ', ' ಭಾರತಿ '.—ಇತ್ಯಾದಿ : ಈತನಿಗೆ ಆಚಾರ್ಯ. ಕುಲಪತಿ, ಗುರು. ಜಗದ್ಗುರು, ಸ್ವಾಮಿ, ಯತಿ, ಯತೀಂದ್ರ, ದೇಶಿಕ. ದೇಶಿಕೇಂದ್ರ ಇತ್ಯಾದಿ ಹೆಸರುಗಳು ಇರುತ್ತವೆ. ಮಠಾಧಿಪತಿಗೆ ನಿಯತವಾದ ವೇಷಭೂಷಣಗಳುಂಟು (ಕವಿಕೋ. XII. ೦೦೦೪) ; ಮಠಾಧಿಪತಿಯ ಪಾತಿತ್ಯಕ್ಕೆ ತಾನೂ ಹೊಣೆಯಾಗುವುದಾಯಿತೆಂಬ ವ್ಯಸನದಿಂದ ಬೆಂಡಾದನು (ವಾಗ್ದೇವಿ. ೯). [ಸಂ.]

**ಮಠಾಧೀಶ** (ನಾ). = ಮಠಾಧಿಪತಿ : ಮಠಕ್ಕೆ ಕರತಂದು ಮಮತಾಪೂರ್ವಕ ಮಠಾಧೀಶರ ಭೇಟಿಯನ್ನು ಮಾಡಿಸಿದನು (ವಾಗ್ದೇವಿ. ೯೯). [ಸಂ.]

**ಮಠಾರಿ** (ನಾ). ಬಡಾಯಿ ಕೊಚ್ಚುವವಳು ; ಗರ್ವದ ಮಾತನಾಡುವವಳು : ಒಳ್ಳೇ ಸುಂದರಿ, ಅದಕ್ಕೆ ತಕ್ಕ ಹಾಗೆ ಲಟಕಿ ನಡತೆಯಲ್ಲಿ, ಮಾತುಕಥೆಗಳಲ್ಲಿ ಬಹು ಮಠಾರಿ (ಅಮೀಬ. ೦೬೬).

[ ← ಮರಾ. ಮಠಾರಣೇ = ಗರ್ವಿಷ್ಠನಾಗು, ಉನ್ಮತ್ತನಾಗು./ ತೆಲು. ಮಿಟಾರಿ]

**ಮಠ್ಯ** (ನಾ). [ಸಂಗೀತ] ಒಂದು ತಾಳದ ಹೆಸರು : ಮಠ್ಯವೆಂಬ ಮೂರನೆಯ ಅಲಂಕಾರವನ್ನು ಈಗ ನಿರೂಪಿಸಲಾಗುವುದು (ತತುಶ್ರ. ೨೯). 'ಮಠ್ಯತಾಳ' ನೋಡಿ. [ಸಂ.]

**ಮಠ್ಯತಾಳ** (ನಾ). = ಮಠ್ಯ : ಮಠ್ಯತಾಳದಲ್ಲಿ ರಚಿತವಾಗಿರುವುದಕ್ಕೆ ಮಠ್ಯ(ಅಲಂಕಾರ)ವೆಂಬ ಪ್ರಸಿದ್ಧಿಯಿದೆ (ತತುಶ್ರ. ೨೯) : ಧ್ರುವತಾಳ, ಮಠ್ಯತಾಳ . . . ಏಕತಾಳ ಇವೇ ಸೂಳಾದಿ ಸಪ್ತತಾಳಗಳು (ಸಂಗೀತಸಂ. ೩೯).

[ಸಂ. ಮಠ್ಯತಾಲ]

**ಮಡ₁, ಮಡಿ₃, ಮಿಡಿ₃** (ನಾ). ೧. ಪಾದದ ಹಿಂಭಾಗ ; ಹಿಮ್ಮಡಿ : "ಹಿಂದೆ ಸೆಳೆವನಲ್ಲಿಯುಂ ಮಡದಲ್ಲಿಯುಂ ಪಾರ್ಷ್ಣಿಯೆಂಬುದು" (ಹಠಾಯು. ೦೩೬-೬೬) ; ಮಡದೆಡೆ ನಾಲ್ಬೆರಲುಂಗುಟದೆಡೆಯೊಗ್ಗೇಣಾಗೆ ನಿಲವು ಋಜ್ವಾಗತಮಂ ಗೆಡೆಗೊಳೆ ವಾಚಂ ಯಮತೆಯೊಳೊಡಂಬಡು ಪಡೆದು ನಿಂದನಾದಿಮುನೀಂದ್ರಂ (ಆದಿಪು. ೯-೯೪) : ಉಂಗುಟವಂ ಮಹೀತಳದೊಳೂಜು ಮಡಂ ನಿಮಿರಲ್ಕೆ ನಿಚ್ಚ ನಿಂದು (ಜಗಂ. ೦೪-೬೩). ೨. ರಥದ ಚೌಕಟ್ಟು : ಸಿಡಿಲ್ ಪೊಡೆದಂತೊರ್ಮೆಯೆ ಸೂಸಿ ಪಾಱಿದ ಮಡಂ ಸುಗ್ಗಾದ ಕೀಲ್ . . . ಕಣ್ಗೊಂಡುದುಗ್ರಾಜಿಯೊಳ್ (ಪಂಪಭಾ. ೦೦-೯೦) ; ಕದನದೊಳಾರ್ದು ಸಾರ್ದಸೆ ಮಹಾರಥರಚ್ಚು ಸಿಡಿಲ್ದುದೀಸು ಸೂಸಿದುವರಗೀಲ್ ಕಟಿಲ್ದುದು ಮಡಂ ಕಡಿವೋದುವು (ಪಂಪಭಾ. ೦೩-೬೯) : ಪಾರ್ವರ ಕೇರಿಯಂತೆ ಚೆಂದಂಬಡೆದ ಮಡದಿನೆಸೆದುಂ ತೇರೆಸಸಂ (ಕಬ್ಬಿಗ. ೩೦) ; "ಮಡ = ಮಠ" (ಕಬ್ಬಿಗ. ಟಿಪ್ಪಣಿ). ಮಡಿ₃ : ೧. ಒಡನಿದ್ದ ಸೇವಕರೆಲ್ಲರ ತೊಲಗಿಸಿ ಮಡಿ ಮುಟ್ಟ ಧೋತ್ರವನುಟ್ಟು . . . ನಡೆದನಾ ರಾಯ (ಭರತ. ೩-೩). ಮಿಡಿ₃ : ೧. ಮಿಡಿ ಮುಟ್ಟಿದ ಕೆಂಜೆಡೆಯವನ ಮೈಯಲ್ಲಿ ವಿಭೂತಿಯ ಧರಿಸಿದವನ (ಬಸವ. ೩೦೩) ; ನಡೆವುತೆಡಹಿದ ಪಟ್ಟದಾನೆಯ ಮಿಡಿಯ ಹೊಯ್ವರೆ ಜೀಯ (ಕುಮಾರವ್ಯಾ. ೧೬-೨೬). ೨. (ಕಾಲಿನ) ಮಿಣಕಂಡ : ಮಿಡಿಯುಂ ಪಜ್ಜೆಯುಂ ಮೂಳೆಯುಂ ಮುಜ್ಜೆಯುಂ (ಆಚಾ. ೦೨-೧೦ ವ) ; ಬಲ್ಲವರು ನಡೆವ ದಾರಿಯ ಮುಗ್ಗಿದಡೆ ನಡೆಸಿಕೊಂಬುದಲ್ಲದೆ ಮಿಡಿಯ ಹಜ್ಜೆಯ ಹೊಯ್ವವರುಂಟೆ ಲೋಕದೊಳಗೆ (ತನ್ನವ. ೪. ೨೩೩-೩೦೩) ; ದಾರಿಯ ಮುಗ್ಗಿದಡೆ ವಾಗೆಯಲಿ ಆವರಿಸಬೇಕಲ್ಲದೆ ಅದ ಗಾರು ಮಾಡಿ ಹೊಯ್ಯುವರೇ ಮಿಡಿಯನು (ಪೋಸವಾ. ೩೨-೨೦೪) ; ಅಡಿ ಮಿಡಿ ತೊಡೆ ನಡುವಿನಿತಂ ಪಿಡಿವೆಡೆಯೊಳ್ ನಾಯನೋದು ಕೋಡೊಳ್ ಕ್ರೋಡಂ ಜಡಿವಡಸಿ ಪೊಡೆಯರ್ (ಸೂಕ್ತಿಸು. ೩-೨೨೩). [ದೇ.॥ ಮಲ. ಮಡಮ್ಪು ; ಕೊಡ. ಮಡಿ ; ತೆಲು. ಮಡಮು, ಮಡ್ಮ, ಮಡಿಮು]

**ಮಡ್ಡ$_2$** 'ಮಡೆ$_1$' ನೋ.

**ಮಡ್ಡ$_3$** 'ಮಟ' ನೋ.

**Δ ಮಡಂಗು** 'ಮಡಗು' ನೋ.

**ಮಡಂಬ,** ಮಟಂಬ (ನಾ). ದೇಶದ ಒಂದು ವಿಭಾಗ : ಗ್ರಾಮನಗರಖೇಡಖರ್ವಡಮಡಂಬಪತ್ತನದ್ರೋಣಾಮುಖಂಗಳಂ ವಿಹಾರಿಸುತ್ತಂ (ವಡ್ಡಾರಾ. ೬-೨) : "ದೂರಸ್ಥಲ, ಸೀಮಾಂತದಲ್ಲಿರುವ ಪುರ" (ವಡ್ಡಾರಾ. ಟಿಪ್ಪಣಿಗಳು. ೧೯೯) ; ಪಂಚಶತ ಗ್ರಾಮಪರೀತಂಗಳಪ್ಪ ಮಡಂಬಂಗಳುಮಂ (ಆದಿಪು. ೬-೬೩ ವ) ; ಗ್ರಾಮ ನಗರ ಖೇಡ ಖರ್ವ್ವಡ ಮಡಂಬದ್ರೋಣಾಮುಖಪುರಪತ್ತನ (ಎಕ. VII, ಶಿಕಾರಿ. ೧೨೯–೬೬; 1181). **ಮಟಂಬ :** ಗ್ರಾಮನಗರಖೇಟಖರ್ವಟಮಟಂಬಪತ್ತನದ್ರೋಣಾಮುಖ ಸಂವಾಹನಿಚಯನಿಚಿತಮುಂ (ಜಗನ್ನಾ. ೨-೧ ವ). [< ಪ್ರಾ. ಮಡಂಬ = ನಾಲ್ಕು ಕಡೆಗಳಲ್ಲಿ ಒಂದು ಯೋಜನದವರೆಗೆ ಯಾವ ಹಳ್ಳಿಯೂ ಇಲ್ಲದಿರುವ ಗ್ರಾಮ]

**ಮಡಕಾಲ್** 'ಮಡಗಾಲ್' ನೋ.

**ಮಡಕಿ,** ಮಟ್ಟಿಕೆ, ಮಡಿಕೆ$_4$, ಮೆಟಕಿ (ನಾ). ಒಂದು ಬಗೆಯ ದ್ವಿದಳ ಧಾನ್ಯ ; "ಅಕ್ಕಡಿಕಾಳು" (ಜಾನಪದ. ೨೬) : ಜೋಳವುಂ ನಿಬಿಲರೀವುದನು ನೀನರಿದರಿದು ಜೋಳಿಗೆಯೊಳೇಕೆ ಮಡಕಿಯನು ನೀಡಿದೆ ಗೌಡ (ಮಾಡಾಂತ. ೨೬-೨೮) ; ಮಡಕಿಯ ಬಿತ್ಯಾರ ಮಡಿಕಿಯ ಬೆಳೆದಾರ ಮಡಕಿಗೆ ನೀರ ತಿರುವ್ಯಾರ ಆ ಊರ ಬಿಡಿ ಕೀರು ಬಂದಾರ ಮದುವಿಗೆ (ಲೋಕಗೀ. ೨೬). **ಮಟ್ಟಿಕೆ :** ಹೆಸರು ಮಟ್ಟಿಕೆಗಳನ್ನು ತೊಳೆದು ತರೋಣ ನಡಿ (ಅಕೋಕ. ೧೧೯). **ಮಡಿಕೆ$_4$ :** ನರುವಲು, ನಾರಲೆ, ನರವೆ, ಮುಸ್ಸ್, ಮಡಿಕೆ (ಪ್ಯಾಕಿಗ. ೬೯-೧೩೦೦). **ಮೆಟಕಿ :** ಮುಂಗಾರಿಯ ಧಾನ್ಯವೆಂದರೆ . . . ಜೀರಿಗೆ, ಪುಂಡಿ, ಮೆಟಕಿ, ಉದ್ದು, ತಿಂಗಳದ ಅವರೆ, ಸಣಬು ಮೊದಲಾದ ಹದಿನೆಂಟು ಜೀನಸದ ಧಾನ್ಯಗಳಲ್ಲಿ ಕೆಲವು ಧಾನ್ಯಗಳು (ಕೃಷಿಕ. ೬೩). [ < ಸಂ. ಮಡಕ. / ಮರಾ. ಮಟಕೀ, ಮಡಗೇ ]

**ಮಡಕೆ$_1$** (ನಾ). ೧. ಮಣ್ಣಿನಿಂದ ಮಾಡಿದ ಪಾತ್ರೆ ; ಮಣ್ಣಿನ ಪಾತ್ರೆ : "ಉದಾ. ಸ್ಥಾಲೀ, ಚರು, ಕುಂಭೀ, ಪಿಠರ, ಕುಂಡಂ — ಈ ೬ ಮಡಕೆ" (ಶಬ್ದಮ. ೩೨-೧೩೯) : ಮಡಕೆಯ ಮಾಡುವರೆ ಮಣ್ಣೇ ಮೊದಲು (ಬಸವ. ೬೮) ; ಕುಡಿಯೊ ಗೆಳೆಯ ರಸಕೇನು ಕೊರತೆ ಏನಂತಿ ಹುದು ಮಡಕೆ ನೋಡಾ (ಅರಳು. ೧೧೩-೦೫). ೨. ಪಾತ್ರೆ ; ಭಾಜನ : ಮರದ ಕೆಱಗೆ ಪೊನ್ನ ಮಡಕೆಯೊಳ್ ಬೋನಮನೊಡ್ಡಿ (ವಡ್ಡಾರಾ. ೯೯-೧೨). [ ದೇ.॥ ತಮಿ. ಮಟಾ, ಮಿಟಾ ; ಮಲ. ಮಿಡಾವು, ಮಿಟಾವು; ತುಳು. ಮಡಕೆ ; ಕೊಡ. ಮಟ./ ಪ್ರಾ. ಮಡಕ್ಕ./ ಮರಾ. ಮಡಕೀ, ಮಡಕೀ ]

**ಮಡಕೆ$_2$** 'ಮಡಿಕೆ$_2$' ನೋ.

**ಮಡಗಾಲ್,** ಮಡಕಾಲ್ (ನಾ). ಮಂಡಿಯಿಂದ ಕಣಕಾಲಿನ ವರೆಗಿನ ಕಾಲಿನ ಭಾಗ: ಮಂಡಿಯಿಟ್ಟು ಪಿಂದೆ ಸಸಿನಂ ಮಡಗಾಲ್ಗಿಟ್ಟಿದಿರೆ (ಪುಷ್ಪದ. ೩-೩೦). **ಮಡಕಾಲ್ :** ಒಡಿಕೆಯಾ ತೀವಿದ ಕೂರ್ಗಣೆ ಮಡ ಕಾಲ್ಗುರಮಲೆದ ಕಜ್ಜಿ. . . ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಟ್ಟರ್ (ಕಂಜಾ. ೧೦-೬೦). [ ಮಡ$_1$ + ಕಾಲ್$_1$ ]

**ಮಡಗಿಸು** (ಕ್ರಿ). ಇರಿಸು ; ಇಡುವಂತೆ ಮಾಡು : ತಾವಡಿದೊಳೆದ್ದ ಕೆಂದು ಬೇಟೆ ಮಡಗಿಸುವುದು ಮರ್ಯಾದೆಯುಱತು ನೀರ ಕೊಡಗಳ ಕಾಲ ಪಾಲಕಿಯರು (ಹರಿ. ೬-೨೩). [ ಮಡಗು + — ಇಸು$_3$ ]

**ಮಡಗು,** ಮಟಗು, ಮಟುಕು, ಮಡಂಗು, ಮಡುಗು, ಮೊಡಗು (ಕ್ರಿ). ೧. ಇಡು ; ಇರಿಸು : ಅಲರ್ಗಣೆಯಿಲ್ಲದೆ ಲೋಕಮನೊಲಿಸಿದಪಂ ನಿನ್ನ ಬಸಿಱೊಳಂದಿಱುವ ಮದನಂ ಲಲನೆ ಮಱಿ ಮಡಗದಂಬು ಪೊಲಬಿರ್ಮಾಸಿಗಮಿತ್ತುಳಮಾರಿ ಸಿರಿಮುಡಿಗೊರ್ವಳ್ (ಅನಂಪು. ೯-೯೯) : ಆ ಸುದತಿ ತಾಂಬೂಲಮಂ ಮುಂದೆ ಮಡಗಿ ಬಿನ್ನೈಸಿದಳು (ಕೌಂಡಪು. ೦೬-೪೭) ; ಸತ್ಕ್ವವನೆಲ್ಲಿ ಮಡಗಿದಿರಿ ಘಟರೆನುತೆ ಮೊದಲಿಸಿದಂ ಖಳನ ಸೇನಾನಿ ಟುಂಭನಂದು (ತಿಪು. ೨೪-೦೪) ; ಬಡವ ನೀ ಮಡಗಿದ ಹಾಗಿರು (ಗಾದೆ). ೨. ಬಚ್ಚಿಡು ; ಗೋಪ್ಯವಾಗಿಡು ; ಅಡಗಿಸು : "ಮಡಗು - ಗೋಪನೇ (ಮುಚ್ಚಿಡು)" (ಕಪಾ) ; ಬಡತನವಾದಂದಿಂಗೆಂದೊಡವೆಗಳಂ ಮಡಗಬೇಡದೆಂತನೆ ಪುಣ್ಯ ಕಿಡೆ ಮಡಗಿದೊಡವೆ ಕಿಡುಗು ಕಿಡದಲ್ತೆ ಪರಾರ್ಥಮಾಗಿ ಕೊಟ್ಟವರರ್ಥಂ (ಕಂತಕಂ. ೩೦೦-೫) ; ಆಯುಷ್ಯವುಂಟು ಪ್ರಳಯವಿಲ್ಲೆಂದು ಅರ್ಥವ ಮಡಗುಮಿ (ಬಸವ. ೨೦೦). ೩. ಅಲುಗಾಡದಂತೆ ಇರಿಸು : ಚಲಿಸದಂತೆ ಇಡು : ಸಾಲದೆ ಮಣಸಿಮ್ಮಡಿ ಜೇಪಾಳದ ತಿರುಳೆಂದುಭಾಗವಾಗಿರೆ ಜಂಬೀರಾಳಿಯ ಫಲರಸದಿಂ ಪ್ರಕ್ಷಾಲಿಸಿ ತದ್ರಸಮೋರಿಸಿ ಮಡಗೆಂಟುದಿನಂ (ಖವೈದ. ೬-೩೦). ೪. ಉಳಿಸು : ಉಳಿಯುವಂತೆ ಮಾಡು : ಮನೆಹಾಳು. ಇನ್ನು ಬಾಕಿ ಏನು ಮಡಗಿವರೆ. ಎಲ್ಲಾ ಮಾಡಿಬಿಟ್ಟವರೆ (ಸಾಹುಕ್. ೩೨೦). ೫. ಇಟ್ಟುಕೊಂಡಿರು ; ರವಾವು ಮಾಡಿಕೊಳ್ಳು : ನೀನೇಕೆ ಚಾಮುಂಡೀಯ ಮಡಗಿದ್ದೀಯಾ ? (ಜಾನಗೀ. ೬೩). ೬. ಹೊಡೆ : ಬಡಿ : ತಪ್ಪಿಗೆ ಎರಡು ಮಡಗಬೇಕಾಗಿತ್ತು (ಲೀಮಣಿ. ೩೨). **ಮಟಗು:** ೭. ಗುದ್ದು ; ಮೊಟ್ಟು : ಶಿಕ್ಷಿಸಲು ಅವನ ತಲೆಯ ಮೇಲೆ ನಾಲ್ಕು ಮಟಗಿದೆನೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ (ಕವಿಕ. ೩೩). **ಮಟುಕು :** ೮. ಗದರಿಸು ; ಜಬರಿಸು: ತಪ್ಪನ್ನು ತಿದ್ದಿಕೊಳ್ಳೋದಕ್ಕೇನೇ ನೀವಿಬ್ಬರೂ ಅವಕಾಶ ಕೊಡದೇ ನನ್ನ ಮಟುಕುತಾ ಇದ್ದರೆ (ಉದಯಕ. ೯೦). **ಮಡಂಗು :** ೧. ಸಪ್ಪುಚಿಯುಟ್ಟು ತಂದು ಮಡಂಗಿದಕ್ಷುಣ್ಣಪಾಂಸನಿಕಾಯಮುಪ್ಪೊಟ್ಟದುದಾ ಸುಚಕ್ರದೊಳುದ್ಭಟಾ (ಉದ್ಭಟಕಾ. ೩-೬೬). ೨. ನಿಜಗದೊನಗು ಬೀಯಕ್ಕೆ ತಕ್ಕನಿತು ಪೊನ್ನಂ ಕೊಂಡು ಮಿಕ್ಕ ಪೊನ್ನನೆಲ್ಲಮನಲ್ಲಿಯೆ ಮಡಂಗುವಮೆನೆ (ಕಂತಕಂ. ೦೬೦-೦೨). ೯. ಸಂಕೋಚಗೊಳಿಸು ; ಹುದುಗಿಸು : ಸಮುನ್ಮುದಿತ ಸದ್ಭಕ್ತಿಯುಕ್ತರು ಹಮ್ಮಿನಿಂದಿರುತಿಹರು ಕೆಲಬರು ತಮ್ಮತಮ್ಮೊಡಲುಗಳನಂತು ಮಡಂಗಿಕೊಂಡಿಹರು (ಬಸಪು. ೦-೩೮). 'ಮುಡುಕು$_1$' ನೋ. **ಮಡುಗು :** ೨. ಪ್ರತಿಲೇಖಿಸಿಕೊಳ್ಳುದು ಮಡುಗುವುದು ಆದಾನ ನಿಕ್ಷೇಪಣಾ ಸಮಿತಿಯೆಂಬೊಂಬತ್ತನೆಯ ಮೂಲಗುಣಂ (ಶ್ರಾವಕಾ. ೬೨-೦) ; ವಿತ್ತವನ್ನುರ್ವಿಯೊಳಗೆ ಮಡುಗಿರಲ್ಕದ ಕಾವನಾವರೊಡೆಯರಿಲ್ಲದಿರಲಾಗ ದ್ರವ್ಯಂಗಳು ಭೂಪತಿಯುವಾಳ್ವರಿಗೆ ಸಲುವುದೈ (ತುರಂಗ. ೯೦-೦೦). **ಮೊಡಗು :** ೧. ಹೆಬ್ಬಾಗಿಲ ಕಲ್ಲಲಿ ಕಟ್ಟಿಸಿ ಆ ಹೆಬ್ಬಾಗಿಲು ಮೊಡಗಿ ತಾವು ಕಟಿದ ಬಾಗಿಲಸಮುವ್ರದ ಕೋಡಿ ಪರಿಯಂತರವಾಗಿ . . . ಕಟಿಸಿ (ಎಕ. XV, ಅರಸೀ. ೨-೨೬ ; 1515).

ಮಡಗಿಡು = ಜೋಪಾನವಾಗಿ ಇರಿಸು ; ಜೋಕೆಯಿಂದ ಇಡು ; ಕಾದಿರಿಸು : ಇರುಳ್ ತೊಟಲ್ದು ಭೈಕ್ಷಮಂ ತಂದು ಮಡಗಿಟ್ಟು ಪಗಲುಣ್ಬೊರಾದರ್ (ವಡ್ಡಾರಾ. ೯೨-೮) ; ಮುನಿ ನೂಱುಪಿಂಡ ಮುಂದಣಾಗಳ್ ತೀವಿದ ಕಮ್ಮನಪ್ಪ ತುಪ್ಪದ ಕೊಡದೊಳ್ ನಮಂತ್ರು ಮಡಗಿಟ್ಟೊಡೆ (ಕಂಪಾಂ. ೦-೦೩೦) ; ಸುರತ್ನಂಗಳಂ ಮಡಗಿಟ್ಟವರ್ಣ ಕರಂಡಕಂ (ಎಕ. VII, ಶಿಕಾರಿ. ೪-೬೩; 1122). **ಮಡಗಿರಿಸು** = ಮಡಗಿಡು : ಅಂತು ಅರಂ ಕೊಡದ ಕೊಳ್ವದ ಗಂಗೆಯುಂ ಸ್ವೀಕೃತಂ ಮಾಡಿ ಜಡೆಯ ನಡುವೆ ಮಡಗಿರಿಸಿಟ್ಟಂ (ರಾಜಶೇ. ೩-೬೬ ವ).

[ದೇ.॥ ತುಳು. ಮಡಗು, ಮಡುಗು]

**ಮಡಗೊಳ್** 'ಮಡೆಗೊಟಿಲ್' ನೋ.

**ಮಡಗೊಟಿಲ್** 'ಮಡೆಗೊಟಿಲ್' ನೋ.

**ಮಡಗೆದಱು** (ಕ್ರಿ). ಕಾಲನ್ನು ಜಲಿಸು : ಪರಭೃತಂ ಕಾಯ್ದು ಕಿಟ್ಕೊಂಬಿ

ನೊಳ್ ಕೈಮಿಗೆ ಪೊಕ್ಕುರ್ವೀಟಿ ತುಪ್ಪುಟ್ ಮಡಗೆದಱಿ ಕುಳಿರ್ಪೊ ಪುಗಿಲ್ ಪೋ ಪುಗಿಲ್ ಪೋಪುಗಿಲೆಂದಿಮ್ಮಾವಿನೊಳ್ ತಣ್ಮಲೆದುಮುಲಿದು ತನ್ನಿಚ್ಛೆಯಿಂದಸ್ತಪುಷ್ಪಂ (ಅನಂಪು. ೬-೬೩). [ಮಡ$_1$ + ಕೆದಱು$_1$ (< ಕೆದಱ್$_1$)]

**ಮಡಚು** 'ಮಡಿಚು' ನೋ.

**ಮಡದಿ** (ನಾ). ೧. ಹೆಂಗಸು ; ಸ್ತ್ರೀ: ನಡೆ ನೋಟ ನುಡಿ ಸೊಲ್ಲಿಡೆಯಲ್ಲಿ ಒಂದು ಕಿಚ್ಚು ಮಡದಿ ಪುರುಷರೆಡೆಯಲ್ಲಿ ಒಂದು ಕಿಚ್ಚು (ರೀಠಾವ. ೦೮-೨೬) ; ಮಡದಿಯುರಾಡುವ ಪದದೊಳ್ ಸಡಿಲ್ದ ಘನಕುಂತಳಾಳಿ ಪೋಲ್ವುದು . . . ರಾಹುಮಂಡಲಂಗಳ ತೆಱನಂ (ಗಿಂಕ. ೪-೩೦). ೨. ಹೆಂಡತಿ ; ಸತಿ : ನಿನ್ನ ಮಡದಿಗಿರಲೆಂದರೆ ಮಡದಿಯ ಕೃತಕ ಬೇಱೆ (ಬಸವ. ೨೦೦) : ರಾಮನ ಮಡದಿಯನು ರಕ್ಕಸನು ಕದ್ದನು (ಕುವ್ಯಾ.ಅ. ೨೨-೩೦) : ಮಡದಿ ಹುಟ್ಟಿದ ಮನೆಯಲಿರುವವನು ಮೂರ್ಖ (ಭರಂದ. ೦-೬೨-೨) : ಮನೆ ತಲುಪಿದೆ. ಮಡದಿ ಮುಗುಳುನಗೆಯ ಸ್ವಾಗತವಿತ್ತಳು (ಗಾಳಗು. ೬೯) [ದೇ.॥ ತಮಿ. ಮಟನ್ತೈ: ಮಲ. ಮಡಂವ; ತೆಲು. ಮಡಂತಿ, ಮಡಂದಿ]

**ಮಡಪು** 'ಮಡಿಪು$_1$' ನೋ.

**ಮಡಮುರಿ** (ಕ್ರಿ). ೧. ಹಿಮ್ಮೆಟ್ಟು : ಹಿಂಜರಿ : ಕಡುಹು ಮುಱಿದುದು ಕೌರವೇಂದ್ರನ ಪಡೆಯ ತರಹರ ದಿಕ್ಕುಗೆಟ್ಟುದು ಮಡಮುರಿಯಲು ಗೈಸಿದರು ದುಶ್ಶಾಸನಾದಿಗಳು (ಕುವ್ಯಾ.ಶ. ೯-೩೦). ೨. (ಅಲಂ) ಹಿಂದಕ್ಕೆ ಹೊರಳು, – ತಿರುಗು : ಜಡೆಯ ತುಡುಕಿ ಪಿಡಿದೊಡನೆ ಘಡಿಕ್ಕನೆ ಮಡಮುರಿದೆಸೆಪೊಳ್ಮೊಗದ . . . ಕೊಮರಿಯನೊಡಬಡಿಸುವುದು (ಹರಿಶ. ೬-೩೮) ; ಧ್ವನಿಯ ಕಡುಬೆಡಗಿನಿಂದರಿತು ಮಡ ಮುರಿಯುತ . . . ಒಡೆಯಂಗೆ ಪೇಳ್ವೆವೆಂದು ನಡೆದರು (ತುರಂಗ. ೬೪-೩೦).

[ಮಡ$_1$ + ಮುರಿ$_1$]

**ಮಡಮುರಿವು** (ನಾ). (ಅಲಂ) ಹಿಂದೆಗೆಯುವಿಕೆ : ಓಲೆಯುಕಾರಜತನವೆಮ್ಮೊಡನೆ ನೀ ವೈದೊಱಿ ಮಡಮುರಿವಿಲ್ಲದೆಚ್ಚಾಡಿದರೆ ಸಫಲವಿದು (ಕುವ್ಯಾದ್ರೋ. ೩-೨೮). [ಮಡ$_1$ + ಮುರಿವು]

**ಮಡಲ್$_1$** (ಕ್ರಿ). (ಬಳ್ಳಿಯಂತೆ) ಹಬ್ಬು ; ಬೆಳೆ : "ಮಡಲ್ __ ವಲ್ಲಿ ವೃದ್ಧೌ (ಬಳ್ಳಿಹಬ್ಬು)" (ಶಮದ) ; ಕಲ್ಪವಮೀಜದ ಪಕ್ಕದಿರ್ಕೆಲಂಬಿಡಿದು ಮಡಲ್ತು ತೋಱುವ ಲತಾವಳಿಗಳ್ ಪೆಯಾಪ್ತರಟ್ಟೆಲಂಬಿಡಿದು ಖಗೇಂದ್ರ ನೋಲಗದೊಳಿರ್ದ ವಿಲಾಸವಿಲಾಸಿನೀಜನಂ (ಆದಿಪು. ೨-೪) : ದೊರೆವೆತ್ತು ಮಡಲ್ತ ಬಳ್ಳಿಮಲ್ಲಿಗಗೆಳ ... ಅಗಣಿತಲೀಲೆ ನೋಟ್ಟ ಜನಮಾಳೆಗೆ ನೋಲ ಮನೋಟುಮಾಡುಗುಂ (ಸುಕುಮಾ. ೦-೬೨) ; ಪುತ್ರದೋಹಳದಿಂ ಸಮನಿಸಿ ದಾದ್ವೀಪನ ಭಾರವೆಂಬಮರ್ದಿನ ಮಱಿಯಿಂ ಮಡಲ್ತು ನನೆಕೊನೆ[ವೋಗಿ] (ಅರ್ಧನೇ. ೦-೯೨ ವ).

**ಮಡಲ್$_2$**. ಮಡಲು$_1$. ಮಡಿಲು$_2$ (ನಾ). ೧. ಹರಹು ; ವಿಸ್ತಾರ : ಹಬ್ಬುಗೆ : ದಾಳಿಂಬದ ಪಣ್ಗಳ ತನಿರಸದ ಪರಿಪೊನಲ್ ಪರಿನೀರಾಗೆಯುಂ ಸುರಪೊತ್ತಿ ಬೆಳೆಯುತ್ತಿರ್ದ ಕಬ್ಬಿನ ಮಡಲ್ಗಳುಮಂ (ಶಂತಶಂ. ೦೦೬-೧) ; ಇರ್ವಳ್ ಮೂಪಾಳಿಕ್ಕದೆರ್ವರೆಯೊಳ್ ಬೆಳೆಗೆ ಸಾರೆ ಕೊಳೆ ಪದವಱಿಗಳ್ ಕಬ್ಬಿನ ಮಡಲಂತೆ ಕಮಲ್ತುರ್ವಿಪ ಕೆಯ್ದೊಲಗಳೆಸಗುವೋರೊಂದೆಡೆಯೊಳ್ (ಕಾವ್ಯಾವ. ೨೦೬) ; ಒಡಲಂ ಸಂಸ್ಕೃತಿ ಲತಿಕೆಯ ಮಡಲಂ . . . ಬಿಡಲಱಿಯದಂಗೆ ನಿರ್ವೃತಿಯುಂಟೇ (ಭಕ್ತಿಶ. ೦೩-೩೩). ೨. ಪೊದೆ : ಪೊದರು : "ಕ್ಷುಪಃ ಗುಚ್ಛಃ __ ಈ ಎರಡು ಮಡಲ್" (ಶಬ್ದಮ. ೯೩-೪೨೩). ೩. ಬಳ್ಳಿ (?) : ಅಲರಲ ಗರ್ಜ್ ಮುಗುಳ್ನಗೆ ಮಡಲ್ ತೊಡೆ ತುಂಬಿ ಕುರುಳ್ ತಳಿರ್ ತಳಂ (ಶಂರಶಾ. ೩-೦೨) ; ಅಲಕಂ ತುಂಬಿ ತಳಂ ತಳಿರೆ ತೊಡೆ ಮಡಲ್ ತೋಳ್ ಶಾಖೆ (ಜಗನ. ೧೦-೬೦). ೪. ಕಂಬ : ಗೂಟ (?) : "ಧ್ರುವಮ ಶಂಬುಬಿಂ ತಾಂ ಕೊಱಡಮ ಮಡಲ್[ಲ್] ತಾಮಮೆನಿಸಂ" (ಪಸ್ತುಕೋ. ೩೦-೬). ೫. ಕೋಡುಗಲ್ಲು (?) : ವಿಜಯಾರ್ಧಶೈಲಪತಿ ಸಮೆಯಿಸಿ ತಂದೋಳಿಯೆ ನಿಱಿಸಿದ ಬೆಳ್ಳಿಯ ಶಿಲಾವೀಡಿಗೆಪೊಲಿರ್ಪವಿದಱ ಮಡಲ್ಗಳ್ (ಶಾಂತಿಪು. ೨-೦೦೪). ಮಡಲು$_1$ : ೧. ಮುಱುಜೀವಣಿಯ ಮಡು ದಿವಿಜರ ಬಾಯ್ನೀರೊಱೆವ ಸುಧೆ ಚಿಂತಾಮಣಿಯ ಮೊಱಡಿಯುಂ . . . ತೋಱಿದಂ ವೃಷ್ಟಿಕಾರೂಢನು (ಸಿದ್ಧರಾ. ೩-೪). ೬. ತಾಳೆ, ತೆಂಗು ಮುಂತಾದುವುಗಳ ಗರಿ, -ಓಲೆ ; ಸೋಗೆ : 'ಮಡಲು' ಎಂದು ತೆಂಗಿನ ಮರದ ಗರಿಗೆ ಹೆಸರು (ಸಂಕೋಶ. ೦೬೮) ; ಪಡುವಣ ಕಡಲಿನ ತೆಂಗಿನ ಮಡಲಿನ ಮರೆಯಲಿ ಮೆರೆವುದು ನಾಡೊಂದು (ಪಕ್ಷಿ. ೧-೨) ; ನಾನು ಹಳ್ಳಿಕ್ಕೆ ಹೋಗಿ ಹೆಣೆಯಲು ಮಡಲು ತರಲೇ (ತ್ಯಾಗಮ. ೦೯). ೭. ತೆಂಗಿನ ಗರಿಯಿಂದ ಹೆಣೆದ ಚಾಪೆ : ಹಸಿ ತೆಂಗಿನ ಸೋಗೆಯೊಂದನ್ನು ಹಿಡಿದು ನಾನು ಮಡಲನ್ನು ಹೆಣೆಯುತ್ತಿದ್ದೆ (ಮುಗಿಲು. ೨೩೨). ಮಡಿಲು$_2$ : ೧. 'ಮಡಿಲುಗಟ್ಟು' ಪರಾ. ೮. ಚಿಕ್ಕ ಕೊಂಬೆ ; ಕವಲು ; ಟಿಸಿಲು : ಕಡಲೆಯ ಮಡಿಲು ಹೂಮಿಡಿ ತುಂಬಿತು (ಹಲವು. ೦೨-೦೨).

ಮಡಲಾಗು = ಬೆಳೆ ; ವೃದ್ಧಿಯಾಗು : ವಿಶೇಷಮಪ್ಪ ಸನ್ನುತಗುಣದೋಳಿಯಿಂದೆ ಮಡಲಾಗಿ ದಿಗಂತಮನೆಯ್ದಿ ಪಲ್ಲ ಪಂಡಿತರ ವಿಳಾಸ ಕೀರ್ತಿಲತೆ ಪರ್ವಿದುದುರ್ವಿಗೆ ಚೋದ್ಯಮಪ್ಪಿನಂ (ಎಕ. VI (ಚ), ಕಾಗಮಂ. ೦೯-೩೮ ; 1118). [< ಮಡಲ್$_1$./ ತಮಿ. ಮಟಲ್ : ಮಲ. ಮಡಲ್, ಮಟ್ಟಲ್; ತುಳು. ಮಡಲ್, ಮಡ್ಲ್]

**ಮಡಲಿಡು** (ಕ್ರಿ). ೧. ಬೆಳೆ ; ವೃದ್ಧಿಯಾಗು : ಸವಿ ತವದಂತು ಬೇರ್ವಿಡಿದು ಪಣ್ಬರೆಗಂ ವನಮೆಯ್ದಿ ಸೇವ್ಯಮಾದ್ಯುವನಿಗೆ ಕೂಡೆ ಬೇರ್ವರಿದ ಸಾಲ್ಮಡಲಿಟ್ಟು ಕರ್ಪು ಪಲ್ಲವಿಸಿದಕೋಕಂ (ಪರ್ಶ್ವಪು. ೨-೦೬). ೨. ಹಬ್ಬುವಂತೆ ಮಾಡು ; ಹಬ್ಬಿಸು : ನುಡಿ ಬೆಡಂಗು ಬೀಱಿ ರೀತಿ ವಿಖ್ಯಾತಿಯುಂ ಮಡಲಿಡೆ . . . ಕೃತಿಯುಂ ಶಿವಾರ್ಪಿತವನೆಸಗುವ ನಿನ್ನ ಸ್ಯಪಿಂಗೆ ಸಾಟಿಯುಂಟೇ (ಶಸ್ತ್ರರಾ. ೦-೩೦). [ಮಡಲ್$_2$ + ಇಡು$_1$]

**ಮಡಲಿಱು** (ಕ್ರಿ). ೧. ಬೆಳೆ ; ವೃದ್ಧಿಯಾಗು ; ವ್ಯಾಪಿಸು : ದಟ್ಟೈಸಿ ಮಡಲಿಱುವ ಕಾಳದೋಱ ನಡುವಿರುಳು . . . ಪುಳ್ಳಿ ಮೊಱೆಯುಂ ಕಂಡಳು (ಪಶಾ. ೦೨-೨೦) ; ಭೂವರನ ಧವಳಕೀರ್ತಿ ಪ್ರಭಾಮಯವಾಗಿ ಪರಿಕಲಿಸಿ ಮಡಲಿಱುದುದು (ರಾಪಶಂ. ೩-೩೦). ೨. ಒಟ್ಟುಗೂಡಿಸು : ಒತ್ತೊತ್ತಾಗಿರುವಂತೆ ಮಾಡು ; ಸಾಂದ್ರಗೊಳಿಸು : ಕವಲೊಡೆದ ಬೆಳೆದ ಕಟವೆಯ ಕದಿರ್ಗಂಟುಂಗೆಱಗಿ ಪಱಮೊಗಮ್ಮಱಿಯಿಸುಗುಂ ಮದನಂ ಮಡದಿ[ರಿ]ಱಿದಿಱಿಪಿದ ಹೊದೆಯಂಬಿನ ಸರಲ ಗಱಿಯ ಪಿಳ್ಳಿನ ತೆಱನಂ (ಅವಂಪು. ೦-೮೦) ; ತೊಡವೆನಿತೊಳವನಿತಕ್ಕಂ ಪಡಿಚಂದಂ ಮಾಡಿ ಕಾಂತೆಯರ್ ಪೂದೊಡಮಂ ತೊಡೆ ತೊಟ್ಟು ಮರಲ ಸರಳಂ ಮಡಲಿಱುವ ಮನೋಜನಡಸಿ ವಿರಹಿಯನೆಚ್ಚಂ (ಕೂಲ್ತಿ. ೦೧-೩೨). ೩. ಸಾಂದ್ರವಾಗು; ಒಟ್ಟುಗೂಡು : ತುಱುಗಿ ತೂಳುವ ಸಿಂಧ ಸೆಳೆ ಮಡಲಿಱುವ ರ್ಝಲ್ಲರಿ ಪಲ್ಲವದ ನಿಡುದೆರೆಯ ಧವಳಚ್ಛತ್ರ ಚಮರದೊಳೊದಗಿತತಿರಥರು (ಕುವ್ಯಾಕ. ೩-೦೩). [ಮಡಲ್$_2$ + ಇಱು$_1$]

**ಮಡಲು$_1$** 'ಮಡಲ್$_2$' ನೋ.

**ಮಡಲು$_2$** 'ಮಡಿಲ್' ನೋ.

**ಮಡಲು$_3$** (ನಾ). ಒಂದು ಬಗೆಯ ಮೀನು: ಸೀಗಡಿ ಕೊರಮಂ. . . ಆನೆ ಮೂಗ ಮದ[ಡ]ಲೆಂಬಗಣಿತ ಶಫರಾಳಿಗಳನೆ ತೆಗೆದರ್ ಬೇಡರ್ (ಶ್ರೀಕೃ. ೨೬-೯೦). [ದೇ.॥ ತುಳು. ಮಡಲಮೀನ್]

**ಮಡಲುತುಂಬು** 'ಮಡಿಲುದುಂಬು' ನೋ.

**ಮಡಲ್ಗೊಳ್** (ಕ್ರಿ). ಬೆಳೆ; ಹಬ್ಬು; ವ್ಯಾಪಿಸು : ಮಡಲ್ಗೊಂಡ ಮಲ್ಲಿಗೆಯ ಮಂಡವಿಗಳೊಳಂ. . . ಬಿಟ್ಟ ಬೀಡು ಬರೆದಂತೆ ಕಂಡರಿಸಿದಂತೆ ಪಣ್ಗಸೆ ದಿರ್ದುದು (ಕಬ್ಬಿಗರ. ೨೩೮). [ಮಡಲ್$_2$ + ಕೊಳ್$_1$]

**ಮಡವಳಿಗೆ**. ಮಡವಳಿಕೆ (ನಾ). (?) : ಶ್ರೀಮನ್ಮಹಾಮಂಡಳೇಶ್ವರಂ ಹಲ್ಲವರಸರ ಪಡಿಪಾಟಿ ನಾಗದೇವನಾಯ್ಕನ ಮಡವಳಿಗೆ ಚಾಕಮಾಸು. . . ಕೊಟ್ಟ ಮತ್ತರು (ಕ೩ಕ. ೦೨೨-೨೬-೦೮; 1151). **ಮಡವಳಿಕೆ**: ಆ ಸೀಮೆಯ ದೇವರ ಸ್ಥಾನಿಕದಲು ಸ್ಥಾನೀರ ಮನೆ ಮೊದಲಾದ ಮಡವಳಿಕೆ ಸಲು × × × ಸರ್ವಮಾನ್ಯವಾಗಿ ಬಿಟೆಉ (ಎಕ. X (S), ಮುಗ್ನಾ. ೯೪-೦೬; 1406). [ ? ]

**ಮಡವಾಯ್**, ಮಡುವಾಯಿ (ನಾ). ಸಣ್ಣಕಾಲುವೆಯ ತೂಬು.— ಮುಂಭಾಗ : ಹಿರಿಯ ಕೆಱೆಯ ಬಡಗಣ ತುಂಬಿಂದ ಪಡುವ ಮುಂದಾಗಿ ಪರಿವ ಮೊದಲ ಮಡವಾಯ ಗದ್ದೆ ಕಮ್ಮ ಇಪ್ಪತ್ತುಮಂ. . . ಸರ್ವನಮಸ್ಯ ಮಾನ್ಯಮಾಡಿಬಿಟ್ಟರು (ಶಾಇವ. XVIII, ೨೯೪-೨೪; 1177): ಮೊದಲೇರಿಯ ಮಡವಾಯಲ್ಲಿ ಮೂವತ್ತಯ್ದು (ಇಂ. ೦೯೪೬, ಪಾವಗಲ್. ೨೦೨-೫೬; ೪). **ಮಡುವಾಯಿ** : ಜೌಗುಪ್ರಾಂತದಲ್ಲಿ . . . ತೂಬುಗಳು, ಮಡುವಾಯಿಗಳು, ಕಡಲ ಅಡ್ಡಗಟ್ಟುಗಳು—ಇವುಗಳ ವಿಚಾರಣೆ ನೋಡಿಕೊಳ್ಳುವುದಕ್ಕಾಗಿ ನಿಯಮಿತನಾದ ಅಧಿಕಾರಿ (Dike Reeve. ಇಂಕಾ).
[ ಮಡ₂ ( <ಮಡೆ₁ ) + ಬಾಯ್ ]

**ಮಡಸಂದು** (ನಾ). ಹಿಮ್ಮಡಿಯ ಸಂದು; ಹಿಮ್ಮಡದ ಸಂದು : ಕಟಿ ಮೊದಲಾದ ಕೀಳುದೆಸೆಯಲ್ಲಿ ಸಂದಿನ ಭೇದ ಅಂಗುಲಿಸಂದು ಇಪ್ಪತ್ತು ಮಡಸಂದೆರಡು (ಸವೇವ. ೨೨-೦೦೦). [ ಮಡ₁ + ಸಂದು₁ ]

**ಮಡಸನ್ನೆ**(ನಾ). (ಕುದುರೆ ಸವಾರಿ ಮಾಡುವಾಗ) ಹಿಮ್ಮಡಿಯಿಂದ ತಿವಿದು ಅಥವಾ ಚುಚ್ಚಿ ಮಾಡುವ ಸನ್ನೆ,–ಸೂಚನೆ : ಮಡಸನ್ನೆ ಮನದೊಳಂಕುರಿಸುವಲ್ಲಿ ಮುನ್ನಂ ಪರಿದು (ಗಂಕ. ೬-೫೫ ವ): ಸುತ್ತಿ ಕಟ್ಟಿದ ಬಲವೆಲ್ಲವ ಕಂಡು ಧೀರೋತ್ತಮ ಮಡಸನ್ನೆಗೆಯ್ದು ಚಿಸ್ತ ನಲಿದು ತುರಗವನೇಱಿ. . . ಪರಸೇನೆಯ ತತ್ತಱಿಮಱಿದನು (ಜೀವಂಸಾಂ. ೩-೩೯): ನರೇಂದ್ರಂ ತುರಂಗಮಂ ಕರತಳಾಸ್ಫಾಳನಂಗೆಯ್ದು ಮಡಸನ್ನೆಯಂ ಮನದೊಳ್ ನೆನೆವಲ್ಲಿಂ (ರಾಜಶೇ. ೦೩-೬೬ ವ). 'ತೊಡೆಸನ್ನೆ' ಪರಾ.
[ ಮಡ₁ + ಸನ್ನೆ₂ ]

**ಮಡಸಿ** (ನಾ). (ಉಕ) ಹೊಲಸು ಹೆಂಗಸು : ಆಕೆ ಬಿಟ್ಟಿಳು ಮಡಸಿ (ಕೂಂ). [ಮಡಸು + — ಇ₂ ]

**ಮಡಸು** (ನಾ). (ಉಕ) ಹೊಲಸು ವ್ಯಕ್ತಿ: ಊರು ಕಾಯೋ ಹುಡುಗನ್ನ ಕಣ್ಮರಿ ಮಾಡಲಾಕ ಹುಂಚಿಕಿ ಹಾಕ್ಯಾವ ಮಡಸಗೋಳು (ಗ್ರಾಮಜಾ. ೨೯೨). [ ? ]

**ಮಡಸೂರ್** (ನಾ). ಒಂದು ಊರಿನ ಹೆಸರು : ಗಾವುಣ್ಡ ಮಡಸೂರ ಕಳ್ಳವೊ (ವ್ಯಕಂ. ೦೯೨೩, ಕಂ-೩; 933).
[ P ಇದು 'ಮಡಸೂರ್' ಎಂಬುದರ ಅಪಲಿಖಿತ ]

**ಮಡಸೋಂಕು** (ನಾ). ಹಿಮ್ಮಡಿಯ ಸ್ಪರ್ಶ : ಮಡಸೋಂಕಂ ಮನದಂಕೆಯುಂ ತಿಳಿದು ಶಿಕ್ಷಾಪ್ರಾಢಿಯೊಳ್ ನಾಡೆ ನೇರ್ಪಡೆಯುಂ (ಕುಮುವಾ. ೬-೬೩). [ಮಡ₁ + ಸೋಂಕು₂]

**ಮಡಸ್ನಾನ** (ನಾ). ೧. (ಹರಕೆಯನ್ನು ತೀರಿಸಲು) ದೇವಸ್ಥಾನದ ಸುತ್ತಲೂ ಉರುಳುವ ಪ್ರದಕ್ಷಿಣೆ ; ಉರುಳುಸೇವೆ. ೨. (ಆಲಂ) ಹೊರಳುವಿಕೆ ; ಉರುಳಾಟ: "ಅಯ್ಯಯ್ಯೋ ಅಮ್ಮಾ ಹಾವು" ಎಂದು ಮುಳ್ಳಿನ ಮೋಟೆಯಲ್ಲಿ ಮಡಸ್ನಾನ ಹಾಕಹತ್ತಿದ (ಶಾವ. ೦೩೬).
[ ← ತುಳು. ಮಡಸ್ನಾನ, ಮಡಸ್ನಾನ ]

**ಮಡಾಸ** 'ಮಡಾಸು' ನೋ.

**ಮಡಾಸು**. ಮಡಾಸ (ನಾ). ಮುಸುಕು ; ಕವಚ : ಹೊದಿಕೆ : ಆದಕ್ಕೆಲ್ಲ ಹೊಸ ಪದ್ಧತಿಯಂತೆ ಕಬ್ಬಿಣದ ಮಡಾಸು ಮಾಡಲ್ಪಟ್ಟಿತ್ತು (ಅಂಧಕ. ೦೬೨). **ಮಡಾಸ** : ಬೀಸುವ ಕಲ್ಲಿಗೆ ಬಂಗಾರದ ಮಡಾಸವನ್ನು ಹಾಕಿದರೂ ನೀವು ಹೇರಿಕೊಳ್ಳುವವರೆ (ಜೀವಂ. ೦೩೬).
[ ← ತುಳು. ಮಡಾಯುಸುನಿ = ವಸ್ತುಕ್ಕೆ ಹೊದಿಕೆ ಹಾಕು ]

**ಮಡಿ₁** (ಕ್ರಿ). ೧. (ವಸ್ತ್ರ ಇತ್ಯಾದಿಗಳನ್ನು) ಮಡಿಕೆಯಾಗುವಂತೆ ಮಾಡು ; ಮಡಿಚು; ಮಡಿಸು : ಸಪುರಸಾದ ಕೋವಣಮಂ ಮ[ಡಿಚಿ ನಿ]ಡಿದುಟ್ಟಳಿಸುಂ ಬಿಟ್ಟಾ ವಸುಧಾಮರನೆಡಬಲವಿಡಿದ ಬಲಾದ ರೆಸಿಪ ಸೌಷ್ಯಸ್ಥಸವಿಕತಿ ನಡೆಮದತಿಮುದದಿಂದ (ಜಮಾಕಾ. ೦೯–೭೯) ; ಅಂತರಾಳದೊಳಡ್ಡಲಾಗಿ ದಟ್ಟಿಯ ಮಡಿವಂತೆ ಪ್ಯಮಡಿದು ಹಾಱುವರು (ವರಕ. ೩೩-೫೩): ನಾಗಾರಿಗಮನಾತ್ಮಜನ ಪಟ್ಟದಾನೆ ಪುನ್ನಾಗ ಸೌಗಂಧಿ ಕಡುಬಿಳಿದಾಗಿ ರಂಜಿಸುವ ನಾಗವಲ್ಲೀದಳದ ಮಡಿದೀವುತ್ತೈದಿದಳ್ ನಾಗಭೂಷಣಾಸರಸಿಗೆ (ತಿಂಪು. ೩೬-೩೬). ೨. ತಿರಿ : ಕೊಯ್ಯು ; ಕೀಳು : ಮಡಿದು ತಂದಿಟ್ಟ ಪೊಸನೆಯ್ದಿಲ ಕಾವನಾವಗಂ ಗೆಲ್ದ ರತ್ನಕುಂಡಲಂಗಳ ಪೊಳಪನೊಳಕೊಂಡಂತೆ ಸಸುನೇಲ್ದ ಕರ್ಣಾಟೀ ಕರ್ಣಪೂರನ ಪಾಲೆಗಳುಂ ಸರಸ್ವತಿಯೂಡುವ ಲೀಲಾಂದೋಳದಂತಾದುವು (ಕಂವಗಾ. ೨-೬೯ ವ). ೩. ಬಾಗಿಸು : ಬಗ್ಗಿಸು : ದಿವ್ಯಗಾತಿ ಮಡಿದಿತ್ತ ಪವಾಗ್ರಮನೇಱಿ (ಕವಂಪು. ೩-೨೯). ೪. ಜೋತುಬೀಳು ; ನೇಲು : ಮಡಿದ ಕೊಡಕೆಗಳೊಡ್ಡಿ ದೊರದೊಪ್ಪಿಡಿಯ ಸಡುವಿನ . . . ನಾಯ್ ನೂಕಿದವು ಹಾಸದ ವಿಳಾಸದಲಿ (ಕುವ್ಯಾಕ. ೦೩-೨೦). ೫. ಕುಸಿ : ಕುಗ್ಗು : ಪೆಡತಲೆ ಕೀಲಿಸಿದಂತಿರೆ ಮಡಿದುಂ ಗೋಣೊಱಗಿರಲ್ಕೆ ನಾಸಿಕದಿಂದ ಸುಡಿಯದೆ ಬಾಯ್ದೆರೆದ ದಪ್ಪಂ ವಾತಿಗಂ (ಜವುರ. ೩-೯೬): ಘಣೆಯ ಹೆಡೆಗಳು ಮಡಿದುವು (ಕುವ್ಯಾವಿ. ೪-೩೩). ೬. ಬಾಗು ; ಬಗ್ಗು : ಪಿಡಿದ ತಿಸುಳದ ಯೋಗದಂಡದ ಮಡಿದ ಖಟ್ವಾಂಗದ ಸೊಬಗಿನಿಂ ಜಡೆಯ ಶಂಕರನಿಂದ ಜಂಗಮರೂಪನಳವಡಿಸಿ (ಕಂಕದಾ. ೩-೨೦). ೭. ಮುರುಟಿಕೊಳ್ಳು ; ಸೇದಿಹೋಗು : ತಬ್ಬಿಪದಿಂ[ದಾನೆಗಳ್ಗಂ ನುಡಿಯಲ್ಕಾಗಂದಿನಿಂ] ನಾಲಗೆ ಮಡಿದುದು (ಕಾದಂಭೂ. ೬೬). ೮. ಮುಚ್ಚಿಕೊಳ್ಳು ; ಮುಗಿ : ಅನಿಮಿಷರ ಕಣ್ಣೆವೆ ಮಡಿದುದು (ಕಾಲ್ಲಾ. ೦೬-೬೯). ೯. ಸಾಯು ; ಮರಣಹೊಂದು ; ಪ್ರಾಣಬಿಡು : "ಮಡಿ – ಮರಣೇ, ಧೌತವಸ್ತ್ರೇ ಚ" (ಕಮರ) ; ಶ್ರೀ ಅಪ್ಪಿ ಆಚಾರಿಯರ ಮಗನ್ನಾಗನ್ ಮಡಿದ (ಎಕ. IX, ಹೆಂಗಳೂ. ೩೬-೫; 750) ; ವಜ್ರಸಮಾನಮುಷ್ಟಿ ಕೈಯಿಂದಂ ಕುಮಾರನಾತನ ತಗಲೆಯಂ ತಿವಿದೊಡಾತಂ. . . ಮಡಿದಂ (ವಡ್ಡಾರಾ. ೫೯-೩೦); ತೊಂಬಯ್ದಾಸಿರ್ವರ್ ನಿವ್ವಂಬಿನ ಬಂಬಲೊಳ್ ಮುಂಟಬದ್ಧರ್ ಮಡಿದರ್ (ಕಂವಧಾ. ೦೦-೨೯); ವಿಪುಳಸಂಗ್ರಾಮದಲಿ ಮಡಿದನು ಫಲುಗುಣನ ತನಯ (ಕುವ್ಯಾದ್ರೋ. ೬ ಸೂಚಿ). ೧೦. ಮುಗಿ ; ಕೊನೆಯಾಗು ; ಅಂತ್ಯವಾಗು : ಯುಗಯುಗ ಮಡಿವಂದು ದಿಗಿಲು ಘುಗಿಲೆಂದು ಮುಸುಕಿದ ಮಹಾಜ್ವಾಲೆ ಇದೇನೊ (ಸಿದ್ಧಮಿಕ. ೦೯-೫೪).

**ಮಡಿಮಡಿ₁** (ದ್ವಿರುಕ್ತಿ) : ಪೇರುರ್ಬಿನ ಕಡಲ ನಡುವಿನೊಳಡಿಗಡಿಗೆ ಗುಡಿಗಟ್ಟಿ ಮಡಿಮಡಿವ ನಿಡುದೆರೆಯ ಲೀಲೆಗೆ ಪಡಿವಡೆಂದು ಗತಿಯ ಕುದುರೆಗಳ ತಟ್ಟನಣೆದೊತ್ತುತಿಂ (ರಾಜಶೇ. ೯೦-೨೩).
[ದೇ.॥ ತಮಿ. ಮಟಿ ; ತೆಲು. ಮಡಿಯು]

**ಮಡಿ₂** (ನಾ). ೧. ಮಡಿಚುವುದು ; ಮುದುರುವುದು : 'ಕಾಲ್ಮಡಿ₂' ಪರಾ. ೨. ಮಡಿಕೆ ; ಪದರ : (೬). ೩. ಪಟ್ಟು ; ಸಲ ; ಬಾರಿ : 'ಆಯ್ದಡಿ', 'ಇರ್ಮಡಿ' ಪರಾ. ೪. ಪರಿಶುದ್ಧತೆ ; ಶುಭ್ರತೆ ; ನೈರ್ಮಲ್ಯ : ಲೋಕದೊಳ್ ಮಡಿಯ ನಿರ್ಮಲಚಿತ್ತವೈ (ಸೋಮೇಶ. ೯೬) ; ಆಸೆಯ ಬಾವುಗನ ರೋಷದುರಗನ ಕಳೆದು ಮಾಸಿದುವ ಮಡಿಯ ಮಾಡಿದ ಶಿವಯೋಗಿ ಶಾಶ್ವತನಕ್ಕು (ಸರ್ವಜ್ಞ. ೯೬೪). ೫. ಒಗೆದ ಬಟ್ಟೆ : ಶುಭ್ರ ಮಾಡಿದ ವಸ್ತ್ರ : ನೀರಿಲ್ಲದ ಬೆಳಸಿನಂತೆ ಮಡಿಯಿಲ್ಲದ ಶೃಂಗಾರದಂತೆ (ದರ್ಶನಶ್ರು. ೦೪ ೦೩೦) ; ಒಗೆಯುತ್ತು

ಮರ್ಷ ಮಡಿವಳನ ಮುಂದಣ ಮಡಿಯುವವಂ ತನ್ನೊಡನೆಯ ಗೋವಳಿಗರಟ್ಟ ಮೈಲಿಗೆಯುಮಂ ಮಧುಸೂದನಂ ಕಂಡು (ಅರ್ಜವೇ. ೯-೭೫ ವ) ; ದಿನವು ನಾನು ಮಿಂದು ಮಡಿಯನುಟ್ಟು ಗಂಧ ಪುಷ್ಪಾರ್ಚನೆಗಳ ಮಾಡೆನು (ಪುರಂದ. ೧-೯-೧). ೬. ರೇಷ್ಮೆಬಟ್ಟೆ ; ಪಟ್ಟೆವಸ್ತ್ರ : ತುಡುಗೆ ನಿಟ್ಟಲುಂ ಪಂಚರತ್ನಂಗಳುಂ ಪೊಜಿಮಡೆ ತನ್ನುಡುವುಪ್ಪಟಂಗಳ್ ಮಡಿಯೊಳಗೆಯುಂ (ಕಂಶಬಾ. ೧೪-೫೫) ; ಮಡಿಯನುಡುವಂತೆ ಸಮೆದಾಭರಣಮಂ ತುಡುವಂತೆ . . . ಕೊಲ್ಲದ ವ್ರತಮಂ ಕೈಕೊಂಡು (ಧರ್ಮಾಮೃ. ೧೧-೫). 'ನಾರುಮಡಿ' ಪರಾ. ೭. ಯಾವ ವಿಧವಾದ ಮೈಲಿಗೆಯೂ ಆಗಬಾರದೆಂಬ ಅಥವಾ ಮೈಲಿಗೆಯನ್ನು ಮುಟ್ಟಬಾರದೆಂಬ ಒಂದು ನಿಯಮ. — ಆಚಾರ : ಮಡಿ ಮಡಿ ಮಡಿಯೆಂದು ಅಡಿಗಡಿಗ್ಹಾರುವೆ ಮಡಿ ಮಾಡುವ ಬಗೆ ಬೇರುಂಟು (ಪುರಂದ. ೧-೧೧೪-೧) ; ಸದಾಕಾಲ ಮಡಿಯಲ್ಲೇ ಇರುತ್ತಿದ್ದ ಅವರು ಮಕ್ಕಳ ಕೆಲಸ ನೋಡಿಕೊಳ್ಳಬೇಕಾದರೆ ಸುಮಿತ್ರೆಯ ನೆರವು ಬೇಕಾಗುತ್ತಿತ್ತು (ಐದ್ಮ್ಯರ. ೩) ; ಈಗ ಸುಮಾರು ಹತ್ತು ವರ್ಷಕ್ಕೆ ಹಿಂದೆ ಅವರ ಮಡಿ ಇನ್ನೂ ಜೋರಾಗಿತ್ತು (ಗರುಡಾ. ೧೧೫). ೮. ಗಿಡ ಮರಗಳ ಸುತ್ತಲೂ ನೀರು ನಿಲ್ಲಲು ಮಾಡಿರುವ ಕಟ್ಟೆ ; ಪಾತಿ : ತಂಪು ಎರಿಯಲ್ಲಿ ಜೋಟು ಗೇಣು ನೀರು ನಿಂತು ಅಲ್ಲಿ ಇಮರಿ ಹೋಗುವ ಹಾಗೆ ಮಡಿಗಳನ್ನು ಮಾಡಬೇಕಾದರೆ ನಾಲ್ಕು ಐದು ಮಾರು ಅಗಲ ಹದಿನಾರು ಇಪ್ಪತ್ತು ಮಾರು ಉದ್ದ ಈ ಪ್ರಕಾರ ಮಡಿಮಾಡಿ . . . ಬೀಜ ಬಿತ್ತಬೇಕು (ಕೃಷಿಶಾ. ೭೨). ೯. ಹೊಲಗದ್ದೆಗಳಲ್ಲಿ ಬಾಳೆ, ಬತ್ತ, ಕಬ್ಬು, ಸೊಪ್ಪು ಇತ್ಯಾದಿಗಳನ್ನು ಬೆಳೆಯಲು, ಹಸನುಮಾಡಿ ಬದುಕಟ್ಟಿದ ಮಟ್ಟಸ್ಥಳ, — ಜಮೀನಿನ ಒಂದು ಭಾಗ.—ತುಂಡು : ಪುಣುಸೆ ಪುಗರಿಯೂ ಎಡೆಯೆ ಬೀಬ್ರನ್ದ ಪಳ್ಳಮೆ ಅಸ್ತಿ ಬಸ್ದು ಬಾಳೆಮಡಿಯೊಳ್ಕೂಡುಗುವರ್ (ಎಕ. IX (8), ನೆಂಗಳೂ. ೦೫೧-೫೦ ; 828) ; ಭವನವಾಸಿಗರಂ ಕರಂ ದವನದ ಮಡಿಯಂ ದಾಟ್ ಪೊಕ್ಕಂತೆ ಮಾಡಿ (ಧರ್ಮಾಮೃ. ೭-೯೫) ; ಮಡಿಯೆಂಬುದು ಮರುಗದ ತಾಣದೊಳ್ (ಕಬ್ಬಿಗಾ. ೨೫) ; ಬದುವನ್ನು ಒಡೆದು ಮಡಿಗೆ ನೀರು ಬಿಟ್ಟರು (ಕಕಪು. ೮-೧೫). 'ನೆಲ್ಲುಮಡಿ' ಪರಾ. (ಗು). ೧೦. ಆನೆಯ : 'ನಾಲ್ಮಡಿ' ಪರಾ.

ಮಡಿಮಡಿ₂ (ದ್ವಿರುಕ್ತಿ) : ಮುನ್ನಂ ನೆತ್ತಮನಜಿಯದಿನಂತವರ ದಾಯಮನಾಡೆ ಮಡಿಮಡಿಗುಜುವುದುಂ (ಕಂಶಬಾ. ೬-೭೦ ವ). ಮಡಿ ಅಡಿಗೆ = ಯಾವ ವಿಧವಾದ ಮೈಲಿಗೆಯನ್ನೂ ಬೆರಸದೆ ಮಾಡುವ ಅಡಿಗೆ; ಮಡಿಯಿಂದ ಮಾಡುವ ಅಡಿಗೆ : ಮಡಿಅಡಿಗೆಯ ಮಾಡಿದೆನೆ ಅಕ್ಕ ಗುರುವಿಗೆ ನಾನೀಗ ಕಡೆಯ ಹಾದೆ (ಜನಪ. ೭೮-೪). ಮಡಿನೀರು = ೧. ಸ್ನಾನ ಮಾಡಿಯಾದ ಮೇಲೆ ಶುದ್ಧಿಗಾಗಿ ಮತ್ತೊಮ್ಮೆ ಹಾಕಿಕೊಳ್ಳುವ, ಯಾವ ಮೈಲಿಗೆಯೂ ತಗಲದ ನೀರು ; ಮೇಲುನೀರು : ಒಳಗ ನೀರಿ ಸುಂದರಕ್ಕ, ಮ್ಯಾಲೆ ಮಡಿನೀರು ಬೇಕಾದರೆ ನಮ್ಮ ಅತ್ತೆಯವರು ಹಾಕತಾರ (ವೃಶಿ. ೧೮). ೨. (ಯಾವ ವಿಧವಾದ ಮೈಲಿಗೆಯೂ ಸೋಕದಂತೆ) ಮಡಿಯಲ್ಲಿ ತುಂಬಿಡುವ ನೀರು : ಪಿತ್ತಾಳೆ ಬಿಂದಿಗೆಯಲ್ಲಿ ಮಡಿನೀರು ತುಂಬಿಟ್ಟಿದ್ದೇನೆ (ರೂಢಿ). ೩. ಮುಟ್ಟಾದ ಮೇಲೆ ಶುದ್ಧಿಗಾಗಿ ಹಾಕುವ ನೀರು. ಮಡಿಯಾಗು = ೧. (ಬಟ್ಟೆಯ ಒಗೆದು) ಶುಭ್ರವಾಗು ; ಶುದ್ಧವಾಗು : ಮಡಿಯಾದ ಸೀರೆಯನುಡುವಂತೆ ಮದುವೆಯಾದಳಂ ಮನೆಗೆ ತರ್ಪಂತೆ (ಧರ್ಮಾಮೃ. ೧೪-೪) ; ಮಾಸಲು ತೊಳೆಯೆ ಮಡಿಯಾದ ದುಪ್ಪಟದಂತೆ (ಸಮ್ಯಕ್ತ್ವ. ೧೧-೨೦). ೨. ಯಾವ ವಿಧವಾದ ಮೈಲಿಗೆಯನ್ನೂ ಬೆರಸದಿರು : ಭವಾನಿ ಮುಂಚೆ ಸ್ನಾನ ಮಾಡಿದರೆ ತಾನೇ ಮಡಿಯಾಗಿ ಅಡಿಗೆಯನ್ನು ಮುಟ್ಟ ಬಡಿಸಬಹುದು (ಹೊಗ್ಗು. ೨೨). ೩. ವಿಧವೆಯು ಕೇಶಮುಂಡನ ಮಾಡಿಸಿಕೊಳ್ಳು : ಮಡಿಯಾಗುವ ಹಾಳುಕಲ್ಪನೆ ನಿನ್ನ ತಲೆಯಲ್ಲೂ ಸುಳಿಯಿತೇನು ? (ಸಮಾಜ. ೨೦೭). ಮಡಿಯುಟ್ಟುಕೊಳ್ಳು = (ಸ್ನಾನ ಮಾಡಿ) ಒಗೆದು ಶುಭ್ರಮಾಡಿದ ವಸ್ತ್ರವನ್ನು ಧರಿಸು.— ತೊಡು : ಮಗುವಿಗೆ ಮೈ ತೊಳೆದು ಬಿಟ್ಟು, ನಾನೂ ಸ್ನಾನ ಮಾಡಿ ಮಡಿಯುಟ್ಟುಕೊಳ್ಳುತ್ತೇನೆ (ಹೊಗ್ಗು. ೨೧). ಮಡಿಹಿಡಿ = ೧. ಏಕಾದಶಿಯಂದು ಶುದ್ಧೋಪವಾಸ ಮಾಡಿ, ಸ್ವಾಮಿಗಳಿಂದ ಮುದ್ರಾಧಾರಣೆ ಮಾಡಿಸಿಕೊಂಡು ಪರಿಶುದ್ಧವಾಗು : ಅವಳಿನ್ನೂ ಮಡಿಹಿಡಿದಿಲ್ಲವಾದ್ದರಿಂದ ಮನೆಯ ಹಿರಿಯರು ಅವಳು ಮಾಡಿದ ಅಡುಗೆ ತಿನ್ನುವಂತಿಲ್ಲ (ರೂಢಿ). ೨. (ಗಂಡನ ಮರಣಾನಂತರ ಹೆಂಡತಿಯು) ಕೇಶಮುಂಡನ ಮಾಡಿಸಿಕೊಳ್ಳು : ಸ್ತ್ರೀ ಸೌಂದರ್ಯಕ್ಕೆ ಆಧಾರವಾದ ಕೂದಲನ್ನು ತ್ಯಜಿಸಿ ಮಡಿ ಹಿಡಿದವಳ ಧರ್ಮಬುದ್ಧಿಯು ಎಷ್ಟು ದೊಡ್ಡದಾಗಿರಬೇಕು (ಮರುಜ. ೫). ೩. ಸ್ತ್ರೀಯು (ಮಧ್ಯ ವಯಸ್ಸಾದ ಮೇಲೆ) ಭಾದ್ರಪದಮಾಸದ ಶುಕ್ಲಪಕ್ಷದ ಪಂಚಮಿಯಂದು ಬರುವ ವ್ರತ (ಋಷಿಪಂಚಮಿ) ವನ್ನು ಆಚರಿಸಿ, ವಿಧಿಪೂರ್ವಕವಾಗಿ ವ್ಯವಹಾರದಲ್ಲಿ ಮೈಲಿಗೆಯನ್ನು ತ್ಯಜಿಸು. ಮಡಿಹೆಂಗಸು = (ಬ್ರಾಹ್ಮಣವರ್ಗದಲ್ಲಿ) ಗಂಡ ಸತ್ತನಂತರ ಕೇಶಮುಂಡನ ಮಾಡಿಸಿಕೊಂಡವಳು : ಗೋದಾವರಮ್ಮನೂ ಯಮುನಕ್ಕನಂತೆ ಮಡಿಹೆಂಗಸು (ಪ್ರಕೃ. ೦೪೯).

[ < ಮಡಿ₁. / ತಮಿ. ಮಟಿ ; ಕೊಡ. ತುಳು. ತೆಲು. ಮಡಿ ]

ಮಡಿ₃ 'ಮಡ₁' ನೋ.

ಮಡಿಕಟ್ಟು (ನಾ). ನೀರಾವರಿಭೂಮಿ ; ಬದುಗಳನ್ನು ಕಟ್ಟಲು ಯೋಗ್ಯವಾದ, ಮಟ್ಟವಾದ ನೆಲ ; "ಬೆಲೆಯುಳ್ಳ ಭೂಮಿ" (ಶಾಸಕೋ. ೨೭) : ಮಂಡುಭೂಮಿಯಾಗಿ, ಮಡಿಕಟ್ಟು ನೆಲವಾಗಿದ್ದರೆ ಮೊದಲು ಎಳ್ಳು ಬಿತ್ತಿ . . . ಭೂಮಿಯ ಪರೀಕ್ಷಿಸಿ ಬಿತ್ತಬೇಕು (ಕೃಷಿಶಾ. ೨೭). [ ಮಡಿ₂ + ಕಟ್ಟು₁₂ ]

ಮಡಿಕಾಡು (ನಾ). = ಮಡಿಕಟ್ಟು (?) : ತಾಟಿಜಿಯರ್ಗೆ ಎರೆಕಾಡು ಇಪ್ಪತ್ತೈಮತ್ತರು ತರೆಪರಿಯೊಳು ಐವತ್ತು ಮತ್ತರ್ಕೆಸುಕಾಡುಂ ಕೀಟಿಕ್ಕಿಟಿ ಮೂವತ್ತಮರ್ಡಿಕಾಡುಂ ಉಳ್ಳಾತ್ತರ್ನವಾ ಕಟಿಯಾ ಕೆಟಗೆ ಮತ್ತರ್ಯುಂ ಇಪ್ಪತ್ತತ್ತೊರ್ಣ್ಣಮುಂ ಇದಕ್ಕೆ ಸಾಕ್ಷಿ (ಶಾಇಕ. IX-i. ೪೭-೭; ?). [ ಮಡಿ₂ + ಕಾಡು₂ ]

ಮಡಿಕಾಯಿ (ನಾ). ಒಂದು ಬಗೆಯ ಕಾಯಿ : ನವಿಲಿನ ಗರಿ, ಮಡಿಕಾಯಿ, ಹತ್ತಿಯ ಬೀಜ, ಆಡಿನ ಕೂದಲು, ಕಹಿಬೇವಿನ ಎಲೆ, ಕಾಳುಮೆಣಸು, ಇಂಗು, ನೆಲಗುಳ್ಳದ ಕಾಯಿ, ಜಟಾಮಾಂಸಿ, ಬಜೆ, ತುಪ್ಪ ಇವನ್ನು . . . ನಾಲ್ಕಾರು ನಿಮಿಟು ಹೊಗೆಹಾಕುವುದು (ಮನೆಮ. ೭).

[ ಮಡಿ ? + ಕಾಯಿ₄ ( < ಕಾಯ್₄ ) ]

ಮಡಿಕೆ₁ (ನಾ). ೧. ಸುಕ್ಕು ; ನೆರಿಗೆ : ಆತ್ಮನು ದೇಹವ ಬಿಟ್ಟು ಒಂದು ಗಳಿಗೆ ತೊಲಗಿರಲು ಆ ದೇಹ ಮಡಿಕೆಯಾಗಿ ಹುಳಿತು ನಾಯಿ ನರಿ ತಿಂಬ ಕಾರಣ ನಿಮ್ಮ ದೇಹ ಅಪವಿತ್ರ ಕಾಣಿರೊ (ಸರ್ವಶ. ೦೭೭-೮೨೯) ; ಕೂತುಕೊಂಡರೆ ಚಣ್ಣಕ್ಕೆ ಮಡಿಕೆ ಬೀಳುವವು (ಅಕ್ಕಮೇ. ೨೫). ೨. ಮಡಿಸಿದುದು ; ಪದರ : ಕಕಾರಕ್ಕೆ — ಮಡಿಕೆ, ಹಡಿಕೆ, ಕಾಣ್ಕೆ (ಕಮುದ. ೨೦೦ ಪ್ರದೋ); ಅನಂತರ ರುಮಾಲಿಗೆ ಕೈಹಾಕಿ ಮಡಿಕೆಯಿಂದ ಒಂದು ಕಾಗದವನ್ನು ತೆಗೆದು . . . ರಾಣಿಯವರ ಕೈಗೆ ಕೊಟ್ಟ (ರಾಂಆ. ೭೯). ೩. ತುಂಡು ; ಸೀಳು : ಭಾಗ : ಭೀಮನು ಅವನನ್ನು ನೆಲದ ಮೇಲೆ ಬೋರಲಾಗಿ ಕೆಡವಿ . . . ಅವನನ್ನು ಎರಡು ಮಡಿಕೆಯಾಗುವಂತೆ ಮುರಿದು ಬಿಟ್ಟನು (ವಕಣಾ. ೪೮).

[ಮಡಿ₁ + - ಕೆ. / ತುಳು. ಮಡಿಕೆ]

**ಮಡಿಕೆ$_2$**, ಮಡಕೆ$_2$, ಮಡಿಗೆ$_2$ (ನಾ). ೧. ಉಳುಮೆಯ ಒಂದು ಸಾಧನ; ಕುಂಟೆ ; ಹಲುಬೆ : ನೇಗಲ ಮಡಿಕೆ. . . ನೊಗಗಳು ಶಿಲ್ಪಶಾಸ್ತ್ರಕ್ರಮ ದಂತೆ ಅನುವಾಗಿಯೂ ಬಲಾತ್ಕಾರವಾಗಿಯೂ ಇರಬೇಕು (ಕೃಷಿಶ. ೩೦); ಮೇಳಿ, ಕುಂಟೆ, ಕೂರಿಗೆ, ಮಡಿಕೆ ಮೊದಲಾದ ಭೂಮಿಯನ್ನುಳುವ ಸಲಕರಣೆಗಳೂ. . . ಬೆಳಕಿಗೆ ಬಂದುವು (ಕನ್ನಶಾ. ೦೩೦). ೨. ನೇಗಿಲಿನ ಹಿಡಿಕೆ : (ಕಸಂಗ್ರ. ೦೭). **ಮಡಕೆ$_2$** : ೧. ಮಡಕೆ ಕೂಚಿದ(ಗಳು) ವೊಂದೆ ಪರಿಯಲಿ ಪೂಜಿಸುವುದು (ಅಬ್ಬಿಕು. ೯-೨೮ ಪ). **ಮಡಿಗೆ$_2$** : ೧. ಮಡಿಗೆ [ಶಾಕಾಂ. ಮಡಕೆ, ಮಡಿಕೆ]ಗೆ ಸಂದ ಕೂಚಿಗೆಯ ಭಗ್ನತೆಯಿಂ ನಿಜಗೋತ್ರಹಾನಿ (ಅಬ್ಬಿಕು. ೯-೩೦). [ದೇ.॥ ತೆಲು. ಮಡಕ]

**ಮಡಿಕೆ$_3$** (ನಾ). ಒಂದು ಬಗೆಯ ಭೂಮಿ,–ಜಮೀನು : ಯಾ ಸ್ಥಳಾಂತ್ರಗಳ್ಳೂ ಬೆದ್ದಲುಗೆಯುವಂತ್ತ ಮಡಿಕೆ ೧ಕ್ಕೆ ವರ್ತ ನೆಲ್ (ಎಕ. XI. ಹಿಂದುಪು. ೯೯-೦೯; 1589) ; ವಿಂಗಡಿಸಿದ ವಿವರ ಮಡಿಕೆಯಿಂದ ಛತ್ತ ಖಂ ೩೨ (ಎಕ. VI. ಕೃಂಗೇರಿ. ೦೦-೩೭೨ ಪುಟ; 1652); ದೊಡಗಿರಿ ಯಾಸು ಮಡಿಕೆಹೊಲಾ ಸಾಲದು ಯಿಂದು ಅಂಸಲಾಗಿ (ಎಕ. XII. ಶಾಪುಗ. ೬೦-೦೦; 1705). [< ಮಡಿ$_2$]

**ಮಡಿಕೆ$_4$** 'ಮಡಕೆ' ನೋ.

**ಮಡಿಕೆಗೆಯ್**, ಮಡಿಕೆಗೈ (ಕ್ರಿ). ೧. ಮಡಿಚು ; ಮಡಿಕೆ ಮಾಡು : ಪಾವುಡಮುಂ ಕುಡುವೆನೆಂದು ಪೊದೆವ ಬಂಗಮುಂ ಬಿಯುತ್ತರಿಗೆಯುಂ ಮಡಿಕೆಗೆಯ್ವಿನಂ (ಶಕಪು. ೬-೦೬೮ ಪ). **ಮಡಿಕೆಗೈ** : ೨. ಮುಚ್ಚಿಕೊಳ್ಳು : ಭರತಂ ಕಿವಿಗಳಂ ಮಡಿಕೆಗೈಯೆ (ರಾಪಾಶಕ್ಕ. ೨೩-೦೨).

[ಮಡಿಕೆ$_1$ + ಕೆಯ್$_1$]

**ಮಡಿಕೆಗೈ** 'ಮಡಿಕೆಗೆಯ್' ನೋ.

**ಮಡಿಕೆವಲೆ** (ನಾ). ಪದರಗಳಿಂದ ಕೂಡಿರುವ ಒಂದು ಬಗೆಯ ಬಲೆ : ಗಾಢವಲೆ ಗೂಢವಲೆ ಮಡಿಕೆವಲೆ ಮಂದಿಸಿನವಲೆಯು ಹೊಚಿಗಳ ಬೇಡವಡೆ ನೆರೆದುದು (ಜಕಶಾ. ೩-೬). [ಮಡಿಕೆ$_1$ + ಬಲೆ$_1$]

**ಮಡಿಕೋಲು** (ನಾ). (ಮುಟ್ಟಿದರೆ ಮೈಲಿಗೆ ಆಗುವುದೆಂಬ ಕಾರಣ ದಿಂದ) ಮಡಿಬಟ್ಟೆಯನ್ನು ಹರವಲು ಅಥವಾ ತೆಗೆಯಲು ಉಪ ಯೋಗಿಸುವ ಉದ್ದವಾದ ಕೋಲು : ಬಾಗಿಲಲ್ಲಿದ್ದ ಮಡಿಕೋಲನ್ನು ತೆಗೆದುಕೊಂಡು ಅವನು ಬೀದಿಗೆ ಹೊರಟನು (ಗರುಡಾ. ೦೩೦); ಮಡಿ ಕೋಲೊಳಿಹುದೊಂದು ಬಿಡಮ್ಮೈಯೊಳಿಹುದೊಂದು ಇಳ್ಲೆನಗುಡೆ ಮೂರನೆ ಯದು (ತಂದ್ರಸೀ. ೦೬೯-೫೯). [ ಮಡಿ$_2$ + ಕೋಲು$_1$ (< ಕೋಲ್$_1$) ]

**ಮಡಿಗದ್ದೆ** (ನಾ). ಚಚ್ಚೌಕವಾಗಿ ಭಾಗ ಮಾಡಿರುವ ಗದ್ದೆ : ನಾಡ ಗೌಡರ ಮಡಿಗದ್ದೆ. . . ನಿನ್ನ ಕಣ್ಣ ತುಂಬಲಾರವೆ (ಜಪ್ರ.ಶ. ೫೩). 'ಗದ್ದೆ ಮಡಿ' ಪರಾ. [ ಮಡಿ$_2$ + ಗದ್ದೆ (< ಗಟ್ಟೆ) ]

**ಮಡಿಗಿಂಟ** (ನಾ). ಶುಭ್ರವಾದ ವಸ್ತ್ರ ; ಮಡಿಬಟ್ಟೆ; ಚೌಕ : ಅಪ್ಪಾಜಿ ಯು ಮುಖ ತೊಳೆದುಕೊಂಡ ಮೇಲೆ ಒಂದು ಮಡಿಗಿಂಟದಿಂದ ಅವರ ಮುಖವನ್ನು ಒರಸಿ. . . ಮಲಗಿಕೊಳ್ಳಬೇಕೆಂದೆ (ತಂಗಾಳ್ಕ. ೦೨೩).

[ ಮಡಿ$_2$ + ಗಿಂಟ ]

**ಮಡಿಗಿವಿ** (ನಾ). ಮಡಿಚಿಕೊಂಡಿರುವ ಕಿವಿ ; ಮುದುಡಿಕೊಂಡಿರುವ ಕಿವಿ : ಕೊಂಕುಗುರ ಮಡಿಗಿವಿಯ ಕಿಡಿಗಣ್ಗಳ. . . ಗಬ್ಬನಾಯ್ಗಳ ಹಾಸ ನುಗಿದು ಬಿಡೆ (ಕೈವಿಶಾ. ೨೮-೯೭). [ಮಡಿ$_2$ + ಕಿವಿ$_3$]

**ಮಡಿಗುರುಳು** (ನಾ). ಕೊಂಕುಕೂದಲು ; ಮಡಿಸಿಕೊಂಡಿರುವ ಕೂದಲು: ಮಡಿಗುರುಳ ಮೈಸಿರಿಯ . . . ಹೊಂದೊಡಿಗೆಗಳ ಕವನೀ ಯನೈತಂದೆಬಿಗಿದನು ಪದಕೆ (ಖಶಾಗ. ೭-೯-೦೬).

[ಮಡಿ$_1$ + ಕುರುಳು$_1$ (<ಕುರುಳ್$_1$)]

**ಮಡಿಗೆ$_1$** (ನಾ). ವಾಳಿಗೆಯ ಮೇಲೆ ಗೋಡೆ ಕಟ್ಟಲು ತಳಪಾಯವಾಗಿ ಉಪಯೋಗಿಸುವ ಮರದ ಚೌಕಟ್ಟು : ನೆಲದ ಮೇಲೆ ಗದ್ದಿಗೆಕಲ್ಲು ಗಳನ್ನು ಹಾಕಿ ಅವುಗಳ ಮೇಲೆ ಕಂಬಗಳನ್ನು ನಿಲ್ಲಿಸಿ ಮೇಲೆ ಮಡಿಗೆಯನ್ನು ಹೇರಿ ಮೊದಲನೇ ಅಂತಸ್ತು ಮಾಡುವರು (ಮುಂಬಯಿ. ೯-೦೦೬).

[ಮಡಿ$_2$ + – ಗೆ]

**ಮಡಿಗೆ$_2$** 'ಮಡಿಕೆ$_2$' ನೋ.

**ಮಡಿಗೊಳಿಸು** (ಕ್ರಿ). ಶುಭ್ರಮಾಡು ; ಸ್ವಚ್ಛಪಡಿಸು : ಮಡುವಾಗು ನಲ್ಲಮ್ಮ ಒಕ್ಕಲಿಹ ಮಡಿವಳತಿ ಮಡಿಗೊಳಿಸೆನ್ನೆಂದೆ ರಾಮಶರಾಮ (ಅರಕು. ೯೩೯-೮೦); ನಿರ್ಜರರ ನಾಯಕನ ಅಣ್ಣ ದತ್ತಾತ್ರಯನ ಮನವನ್ನು ಮಡಿ ಗೊಳಿಸು ಮೇರೆವರಿದು (ಸಪ್ತ[illegible]) [ಮಡಿ$_2$ + ಕೊಳ್$_1$ + – ಇಸು$_3$]

**ಮಡಿಗೊಳು** (ಕ್ರಿ). ಶುಭ್ರವಾಗು ; ಸ್ವಚ್ಛವಾಗು : ಮಕ್ಕಳಿಗೆರೆವಾಗ ಮನ ಮಡಿಗೊಳುವುದು ಕಾವ್ಯಗಂಗೆಯ ಬಿಂದುವಿಳಿದು(ಬಂಶಾಕ. ೩೩-೬೯).

[ಮಡಿ$_2$ + ಕೊಳು$_1$ (<ಕೊಳ್$_1$) ]

**ಮಡಿಚೀಲ** (ನಾ). ಪದರಗಳಿಂದ ಕೂಡಿದ ಚೀಲ : ನೊಸಲೊಳಗಿಟ್ಟ ಗಂಧವು ಮಡಿಲೊಳಗೆ ಕಟ್ಟಿದ ಮಡಿಚೀಲವು ಹಡಪಗಳಿಂದ ಸೆಟ್ಟಿಗಳಿರು ತಿಪರಲ್ಲಿ (ಕಂಶ. ೩-೬೦). [ಮಡಿ$_2$ + ಚೀಲ./ತಮಿ. ಮಟಿಚ್ಚೀಲೈ. ಮಟಿಚ್ಚೀಲೈ; ತುಳು. ಮಡಿಚೀರವು]

**ಮಡಿಚು**, ಮಡಚು (ಕ್ರಿ). ಮಡಿಕೆ ಮಾಡು : ಮಡಿಸು : ವೀಳ್ಯದ ಮಡಿ ಚಾಗ ಕಡೆ ನಿಮ ಮನಸ (ಹಜಶ. ೦೬) ; ಅವನ ಕಿವಿ ಮತ್ತು ಬಾಯಿ ಎರಡನ್ನು ಒಳಗೆ ಮಡಿಚಿ ಹೊಲಿದುಬಿಟ್ಟರೆ ಎರಡು ಅತಂಕಗಳು ಇಲ್ಲ ದಂತಾಗುತ್ತದೆ (ದೇಕಶ್ಮ. ೬೬). **ಮಡಚು** : ರೆಕ್ಕೆ ಮಡಚಿದಲಂಪು ಚಂಬ ಸುರ ಸೊಂಪು ಹಸುರು ಹೊಲದುಸುರಾಗಿ ಬೀಸುತಿರೆ ತಂಗಾಳಿ (ಗಾಬಿಶ. ೬೬-೦೦೬); ಲಟ್ಟಿಸಿದ ಮೇಲೆ ಪರೋಟದ ಮೇಲೆ ಡಾಲ್ಡ ಸವರಿ. . . ಅರ್ಧದಿಂದ ಮಡಚಿ (ಅಡುಗೆ. ೦೦೩). [ಮಡಿ$_1$ +–ಚು$_1$./ತೆಲು.ಮಡುಚು]

**ಮಡಿಪು$_1$**, ಮಡಪು, ಮಡುಪು$_1$, ಮಡುಹು$_1$ (ಕ್ರಿ). ಕೊಲ್ಲು; ಸಾಯಿಸು; ಸಂಹರಿಸು : " ಮಡಿಪು – ಮಾರಣಕರಣೇ (ಕೊಲ್ಲು) " (ಶಮದಾ) ; ಪಳಯಾಚಿಕೊಳ್ದೇವನಾಟ್ದಿಚಿದು ಮಡಿಪಿದೊಂ ಪಾಣ್ಣನನ್ (ಎಕ. XI. ಚಿತ್ರದು. ೬೬-೬೬; 937); ಎಲ್ಲೆಡೆಗಳೊಳಂ ಪ್ರಾಣಿಗಳಂ ಮಡಿಪದೆ ನೋಯಿ ಸದೆ ಕಾವುದೆಂಬಂ ಜೈನಂ (ಸಮಶ. ೩-೬). **ಮಡಪು**: ಮಿತ್ರಿದರ್ ಕೆಡಪಿ ದರ್ ಕೊಡಪಿದರ್ ಮಡಪಿದರ್ (ತಂಶು. ೩೦-೯೩); ಅವನ ಕಾಲ್ಗಳೆರಡನು ಪಿಡಿದು, ನಭಕ್ಕೆತ್ತಿ ನೂಜು ಹೋಳಪ್ಪಂತೆ ತಿಬ್ಬನೆ ತಿರುಗಿಸಿ, ಅಡಿಗಡಿಗಪ್ಪ ಳಿಸಿ ಮಡಪಿ ಮಾಣ್ದಾನು (ಕಗಾ. ೬೦; ಐಶ್ವಕು). **ಮಡುಪು$_1$** : ಬಿಜ್ಜಳನ ಪಡೆಯಂ ಮಡುಪಿ [ಶಾಕಾಂ. ಹಿ] ನುತಿಸೆ ಮಗುಳ್ದೆಸುವನಿತ್ತು (ತೆಲಶು. ೦-೦೬); ಮುನಿವರ ಕೇಳಿಂದು ಮೋಸದೋಳ್ ನಿನ್ನ ಮನೆಯ ಧೇನುವ ಮಡುಪಿದೆನು (ಕರ್ಣಕೃ. ೩-೨೩). **ಮಡುಹು$_1$** : ಹತ್ತುತಲೆಯ ರಾವಣನ ಒಂದೆ ಅಂಬಿನಲಿ ಮಡುಹಿದ (ಬಶಪ. ೬೨೯); ಭಕ್ತವತ್ಸಲನೇಪರಿಯೊಳೀ ಭಕ್ತನಂ ಮಡುಹಿದನಕಟ (ಬಸಶು. ೨೩-೨೨) ; ವಿಪ್ರರ ಮಡುಹಿದಾತನನಮಳ ಗುರುವಿನ ಮಡದಿಯರಿಗಳುಪಿದನ . . . ಗತಿಗಳಾಗಲಿ ರಣದೊಳೋಡಿದರೆ (ಕುವ್ಯಾದ್ಯೋ. ೨-೬); ಮಾವನ ಮಡುಹಿದ ಶಕಟವ ಕೆಡಹಿದ (ತುರಂದ. ೦-೦೯೦-೯). [ಮಡಿ$_1$ + – ಪು$_1$]

**ಮಡಿಪು$_2$**, ಮಡುಪು$_2$ (ನಾ೯. ಪದರ; ಮಡಿಕೆ : ಅವು ಅಗಲವಾದ ಮಡಿಪು ಗಳು (flaps). ಚುಚ್ಚಿ ಹೀರುವಾಗ ತಲೆ ಅಲ್ಲಾಡದಂತೆ ಆನಿಕೆಗಳಂತಿವೆ (ಕೀಟಶ. ೬೦). **ಮಡುಪು$_2$** : ೨. ಸುತ್ತಿರುವುದು ; ಸುರುಳಿ : ಕರ್ಪೂರ ವೆರದ ಸುಣ್ಣ ಬೆಳ್ಳೆಲೆಯಾ ಮಡುಪು ಕೊಡುತಪ್ಪೂಳಿಗದ ಜನರು ಸುಖಾಸನಗಳ ನೋಡಿ ನಿಂದಿಹರು (ಹಾಂದಶಾ. ೩-೯೩) ; ಕುಡಿನೀರ ಗಿಂಡಿ ವೀಳ್ಯದ ಮಡುಪು ಕಾಳಂಜಿ ಪಿಡಿದು (ಪಪಶೋ. ೦೦-೦೬). [ಮಡಿ$_2$ + – ಪು$_2$./ ತಮಿ. ಮಟಿಪ್ಪು ; ಮಲ. ಮಡಿಪ್ಪು: ತುಳು. ಮಡಿಪು : ತೆಲು. ಮಡುಪು]

**ಮಡಿಪೆಟ್ಟಿಗೆ** (ನಾ). (ಸಾಮಾನ್ಯವಾಗಿ ಕೃಷ್ಣಾಜಿನ, ಓಲೆಯ ಗರಿ, ಬಿದಿರು ಮುಂತಾದುವುಗಳಿಂದ ಮಾಡಿದ) ಮಡಿಬಟ್ಟೆಗಳನ್ನಿಡುವ ಪೆಟ್ಟಿಗೆ : ಪಾರ್ವತಮ್ಮ . . . ಒಂದು ಮಡಿಪೆಟ್ಟಿಗೆಯನ್ನು ಕಂಕುಳಲ್ಲಿ ಇರುಕಿಕೊಂಡು ಹೊರಡಲನುವಾಗಿದ್ದಾಳೆ (ಅಹುಶಹ. ೦). [ಮಡಿ₂ + ಪೆಟ್ಟಿಗೆ]

**ಮಡಿಮಡಿ₁** 'ಮಡಿ₁' ಪರಾ.

**ಮಡಿಮಡಿ₂** 'ಮಡಿ₂' ಪರಾ.

**ಮಡಿಮೆ** 'ಮೊಡವೆ' ನೋ.

**ಮಡಿಯಿಸು**, ಮಡಿಸು₁ (ಕ್ರಿ). ಕೊಲ್ಲು ; ಸಾಯಿಸು : ಮುಡಿಯಂ ಪಿಡಿದೆಳೆದವನಂ ಮಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನ ಮಡಿ ಬಿಸುವಿನೆಗಂ ಮುಡಿಯಂ ಮುಡಿಯೆಂ (ಕಂಕಥಾ. ೬-೦೦) ; ನಿನ್ನಂತಾಂಶ ದವತಾರಮೂರ್ತಿಯಿಂ ಲೋಕಲುಂಟಾಕರನಾದ ಪದದೊಳ್ ಮಡಿ ಯಿಸಲ್ವೇಡಿರ್ದಪುದಪರವರನಂತಂತೆ ಮಡಿಯಿಪುದು (ಜಗ. ೯-೬೬ ಪ). **ಮಡಿಸು₁** : ಸಕಲಚರಾಚರವ ಪಡೆವ ಪೊರಕ್ಷಿಸುವ ಮಡಿಸುವಶಿಬಲಸು ಜಗದೊಡೆಯ ಶಿವನೊಬ್ಬರ್ದನು (ಸೌಂದಪು.೩-೨೦). [ಮಡಿ₁ + — ಇಸು₃]

**ಮಡಿಯೊತ್ತು** (ಕ್ರಿ). ಬಗ್ಗುವಂತೆ ಅದುಮು : ಎಮ್ಮ ಪಾಪಕರದೀ ಪೀನಾಂಗುಳೀಪರ್ವಮಂ ಭರದಿಂದಂ ಮಡಿಯೊತ್ತಿಂ (ಶೇಬುಪು. ೦-೩೯). [ಮಡಿ₁ + ಒತ್ತು₁]

**ಮಡಿಲ್**, ಮಡಲು₂, ಮಡಿಲು₁ (ನಾ). ೧. ಸೀರೆ, ಉತ್ತರೀಯ ಮುಂತಾದುವುಗಳ ಎದೆ ಮುಚ್ಚುವ ಭಾಗ ; ಉಡಿ; ಸೋಗಿಲು : "ತೆರೆಪೊಡೆಯೆಂದುಂ, ಸೋಗಿಲೆಂದುಂ ಮಡಿಲ್" (ಶಬ್ದಾ. ೩೩-೩೯೬); ತನ್ನ ಮಡಿಲೊಳ್ ಮುಚ್ಚಿಸಿಕೊಂಡಿರ್ದ ಪಾಪುಗೆಯ ರತ್ನದೂರ್ಮಿಕೆಯ ಯಜ್ಞೋ ಪವೀತಮನಿರಿಸಿ (ಸಮ್ಯಕೌ. ೨-೯೩). **ಮಡಲು₂** : ೧. 'ಮಡಲುತುಂಬು' ಪರಾ. **ಮಡಿಲು₁** : ೧. ಅವಳು ಹಾಗೆ ಹೋಗಿ ಹೀಗೆ ಬಂದರೆ ಅವಳ ಮಡಿಲು ತುಂಬಾ ಸೊಪ್ಪು ಮುಡಿ ತುಂಬಾ ಹೂ (ಶಂತೌಷ್ಣ. ೦). ೨. ತೊಡೆ : ಆ ಬಾಲಕಿಯು ತನ್ನ ತಾಯಿಯ ಮಡಿಲಲ್ಲಿ ತಲೆಯನ್ನಿಟ್ಟು . . . ಅಳಲಾರಂಭಿಸಿದಳು (ಸುಂದಂ. ೦). ೩. ಪಶುಗಳ ಯೋನಿ : ಊರ ಹೊಲವ ಮೇದ ಬಸವ ಕಾಡ ಕಟ್ಟೆಯ ನೀರ ಕುಡಿದು ಕಡೆಯಲಿದ್ದ ಪಶುವಿನ ಮಡಿಲ ಮೂಸಿ . . . ಕ್ರೀಡಿಸುವಂತೆ (ಸಿದ್ಧೇಶ. ೪೦-೦೦೯). ೪. ಪ್ರದೇಶ ; ಪ್ರಾಂತ ; ಜಾಗ : ಶಿವರಾತ್ರಿಗೆ ದೇವರಿಗೆ ರಂಗಪೂ × × ಗೆಊ ಪೊಳಗಂಣ್ಣಾ ಸುತ್ತಾ ಮಡಿಲಲು ಉದಯಪರಿಯಾರರ ಅಯನ ದೀವಿಗೆ (ಸೌಇ. IX – ii, ೯೦೬-೦೩; 1364) ; ಮೂಡಕೇರಿ ಮನೆಯ ಕಟ್ಟ ಒಕ್ಕಲಾದ ಬಳಿಕ ದೇವ್ಯಿ [ದೇ]ವಾಲ್ಯದ [ತಂ]ಕಣ ಮಡಿಲ ಸರಿತದಿಂದ ಒಡಗಣ ಅಗಳನೂ (ಸೌಇ. IX-ii, ೯೩೬-೩೯ ; 1455). ೫. (ಅಲಂ) ಆಶ್ರಯ ; ನೆಲೆ : ಪ್ರಕೃತಿಯ ಮಡಿಲಿನಲ್ಲಿ ಬೆಳೆದಳು (ಕಾವ್ಯಶ. ೪೯) ; ಗಿಡ್ಡನಾಯಕ ಆಗುಂಬೆಯ ಮಡಿಲಲ್ಲಿಯೇ ಹುಟ್ಟಿ ಅಲ್ಲಿಯೇ ಬೆಳೆದು . . . ಒಕ್ಕಲುತನ ಮಾಡಿದ್ದವನು (ಹಸುಹೊ. ೨೯೬).

[< ಮಡ್ರ. / ತಮಿ. ಮಡಿ; ಮಲ. ಮಡಿ; ತುಳು. ಮಡ್ಪೆಲ್]

**ಮಡಿಲಕ್ಕಿ** (ನಾ). (ಶುಭಸಮಾರಂಭದಲ್ಲಿ) ಹೆಣ್ಣುಮಕ್ಕಳ ಉಡಿಗೆ ತುಂಬುವ ಅಕ್ಕಿ, ಬೆಲ್ಲ, ಕುಪ್ಪಸದ ಖಣ, ತೆಂಗಿನಕಾಯಿ ಮೊದಲಾದುವು ; ಉಡಿಯಕ್ಕಿ : ಬಾಣಂತಿ ಅಕ್ಕಯ್ಯ ಮುಂದ್ಗಾಕ್ಕೋ ಗುಟೀಯ ನಾನು ಹಿಡಿದಿದ್ದೆ ಮಡಿಲಕ್ಕಿ ಅಚ್ಚಿನ ಬೆಲ್ಲ (ಜಾಕರ. ೬೩): ಮಡಿಲಕ್ಕಿ ತುಂಬಿಸಿಕೊಂಡು ಸಡಗರದಿಂದ ಹೊರಟ ಹೆಣ್ಣು (ಪಪ್ಪೂಕು. ೦೦೩). [ಮಡಿಲ್ + ಅಕ್ಕಿ₁]

**ಮಡಿಲು₁** 'ಮಡಿಲ್' ನೋ.

**ಮಡಿಲು₂** 'ಮಡಲ್₂' ನೋ.

**ಮಡಿಲುಗಟ್ಟು** (ಕ್ರಿ). ಪೊದೆಯಂತೆ ದಟ್ಟವಾಗಿರು : ಒಗಚಿನ ಭರವಸಕಾ ಬಂಧಿಸಿದ ಮುಡಿ ಕೆದರಿದುದಾ ಬಂಧಕಿಯ ಒದವಿ ಮಡಿಲುಗಟ್ಟಿದಪಕೇಶಿ ವಲ್ಲರಿ ಹೊದೆಜಗೆದಚುವಂದದೊಳು (ಶೇಬಸಂ. ೦೯-೯೦). [ಮಡಿಲು₂ (<ಮಡಲ್₂) + ಕಟ್ಟು₁]

**ಮಡಿಲುತುಂಬು** 'ಮಡಿಲುದುಂಬು' ನೋ.

**ಮಡಿಲುದುಂಬು**, ಮಡಲುತುಂಬು, ಮಡಿಲುತುಂಬು (ಕ್ರಿ). ಋತು ಮತಿಯಾದ ಹುಡುಗಿ, ಮುದುಮುಗಳು, ಚೊಚ್ಚಲುಗರ್ಭಿಣಿ ಮುಂತಾದವರಿಗೆ ಉಡಿತುಂಬು. — ಮಡಿಲಕ್ಕಿ ಹಾಕು : ಪೆಟ್ಟಿಗೆಯಲ್ಲಿ ತಂದ ಸಾಮಾನುಗಳನ್ನೆಲ್ಲಾ ಹೆಣ್ಣಿಗೆ ಮಡಿಲುದುಂಬುತ್ತಾರೆ (ಹಪ್ಪೂಕು. ೬೭). **ಮಡಲುತುಂಬು** : ಐದು ಫಲಗಳಂ ಸುವಾಸಿನಿಯರ ಕೈ ಮುಟ್ಟಿಸಿ ರಾಣಿಯ ಮಡಲುತುಂಬಿ (ಸೌಗಂಧಿ. ೩೦-೪); ಒಂದಚ್ಚು ಬೆಲ್ಲ ಎಲೆ ಅಡಿಕೆ ಇಪ್ಪನ್ನೂ ತೆಗೆದುಕೊಂಡು ಹೋಗಿ ಹುಡುಗಿಗೆ ಮಡಲುತುಂಬಿದರು (ಹುಚ್ಚಿಹ. ೦೨). **ಮಡಿಲುತುಂಬು** : ಮೈನೆರೆದಾಗ ಮಡಿಲುತುಂಬುವ ಪದ್ಧತಿ ಕೆಲವೆಡೆ ಕಾಣಬರುತ್ತದೆ (ಕಶಿಕೋ. XII, ೦೦೦೯). [ಮಡಿಲು₁ (<ಮಡಿಲ್) + ತುಂಬು₁]

**ಮಡಿವಂತ** (ನಾ). ಮತೀಯ ಸಂಪ್ರದಾಯಗಳನ್ನು ಕಟ್ಟುನಿಟ್ಟಾಗಿ ಪಾಲಿಸುವವನು ; ಹೊಸಸಂಪ್ರದಾಯಗಳನ್ನು ಒಪ್ಪದವನು : ಪ್ರಾಯಶಃ ಯಾವುದೋ ಕೆಲವು ಮಡಿವಂತರಾದ ವಿಚಾರಿಗಳ ವರ್ಗ ಮಾತ್ರ ಅದನ್ನು ತರಿಸಿ ಓದುತ್ತಿದ್ದಿರಬೇಕು (ಬಂಬಿದ. ೩); ಮಡಿವಂತರ ಮನೆಯಲ್ಲಿ ಹುಟ್ಟಿ ಬೆಳೆದ ನಾನು ಪಂಚಮಹಾಪಾತಕಗಳಲ್ಲಿ ಕುಸ್ತಿ ನೋಡುವುದೂ ಒಂದೆಂಬಂತೆ ನಡೆದುಕೊಳ್ಳಬೇಕಾಗಿತ್ತು (ನಾಕಶ. ೬೩). [ಮಡಿ₂ + — ವಂತ]

**ಮಡಿವಂತಿಕೆ** (ನಾ). ೧. ಶುಭ್ರಗೊಳ್ಳುವುದು : ನಿರ್ಮಲವಾಗುವುದು: ಎರಡು ಮೂರು ಬಕೀಟು ನೀರಾದರೂ ಅವನ ಮಡಿವಂತಿಕೆಗೆ ಸಾಕಾಗು ತ್ತಿರಲಿಲ್ಲ (ಬಂಸಂ. ೦೬). ೨. ಹೊಸ ಸಂಪ್ರದಾಯಗಳನ್ನು ಒಪ್ಪದಿರುವಿಕೆ ; ಆಚಾರವಂತಿಕೆ ; ಸಂಪ್ರದಾಯನಿಷ್ಠೆ : ಅವರು 'ಮಡಿವಂತಿಕೆ'ಯ ಮನೋಭಾವವನ್ನು ಲೋಕವ್ಯವಹಾರದ ಮಟ್ಟಿಗಾದರೂ ಸಡಿಲಿಸಬೇಕಾಗುತ್ತದೆ (ಸಕಹಕೋ. ೦೯೨); ಭಾಷೆಯಲ್ಲಿ ಮಡಿವಂತಿಕೆ ಯೆಂಬುದು ಎಷ್ಟರ ಮಟ್ಟಿಗೂ ಸಾಧ್ಯವಾಗದು (ಜಾಜಾಜ. ೦೦೨). [ಮಡಿವಂತ + — ಇಕೆ]

**ಮಡಿವಂತೆ** (ನಾ). ಸಂಪ್ರದಾಯನಿಷ್ಠಳಾದ ಹೆಂಗಸು : ಅನುಸೂಯೆ ಬಹಳ ಮಡಿವಂತೆ ಹೆಂಗಸು (ಬಂಬಿದ. ೦೬೩). [ಮಡಿವಂತ + — ಎ₂]

**ಮಡಿವರ್ಗ** (ನಾ). ೧. ಒಗೆದ ಬಟ್ಟೆಗಳ ರಾಶಿ ; ಶುಭ್ರವಸ್ತ್ರಗಳ ಸಮೂಹ : ಮಡಿವರ್ಗಮಂ ಗೋಪುರಂಗಳ್ಗೆ ಸೂಚಿಗೊಟ್ಟುಸಗವೊಟಯಂ ಪುಯ್ಯಲಿಡಿಸೆ ಪೊಟಲಂ ಪುಯ್ಯಲಿಡಿಸಲೆಂದು ಪುರುಷೋತ್ತಮನಾ ಪುರದ ಗೋಪುರಮಂ ತಾಗೆವರೆ (ಅರ್ಧನೇ. ೬-೫೦ ಪ). ೨. ರೇಷ್ಮೆಬಟ್ಟೆಗಳ ರಾಶಿ : ಮಣಿ ಮಡಿವರ್ಗ ದೂರ್ವಾಂಬರ ಸಿತಾಕ್ಷತ ಧವಳ ಸರ್ಷಪ ವರ ಫಲಾವಳಿಯ ತರಿಸಿದನು (ಶುಮ್ಲಾಕ. ೦-೨೮); ಬಾಲದೊಡಿಗೆಯ ಕೊಡಿಸಿ ಮೃದುತರದ ಮಡಿವರ್ಗಮಂ ಹಾಸಿ (ಸೌಂದಪು. ೩-೩). [ಮಡಿ₂ + ವರ್ಗ]

**ಮಡಿವಸನ** (ನಾ). ಒಗೆದ ಬಟ್ಟೆ; ಶುಭ್ರವಾದ ವಸ್ತ್ರ: ಮಡಿವಸನ ವನುಟ್ಟು ಪೂರ್ವದಿಗ್ವನಿತೆಯು ಮುಡಿಯೊಳು ಹೊತ್ತ ಹೊಂಗಳಸ ನಿಡಿನಿಂದ ರಥದ ಮೇಲರ್ಧದ ರನ್ನಗನ್ನಡಿಯಂತೆ ಸೂರ್ಯ ಮೂಡಿದನು (ಶೋಕಹ. ೦೯-೦೦೯); ಮುಖ್ಯನಗೈದು ಮಡಿವಸನಮಂ ಧರಿಸಿ (ಸಂಪಾ. ೦೯-೩೦). [ಮಡಿ₂ + ವಸನ]

**ಮಡಿವಸಲೆ**, ಮದವಸಲೆ (ನಾ). ಒಂದು ಬಗೆಯ ಬಸಲೆ: "ಮಡಿವಸಲೆ—ವರುಣ, ವರಣ, ಸೇತು, ತಿಕ್ತಶಾಕ, ಕುಮಾರಕ" (ಜಾತಿರ. ೪). **ಮದವಸಲೆ:** "ವರುಣಃ . . . ಕುಮಾರಕಃ — ೫ ವಸಲೇಗಿಡ, ಮದವಸಲೇ

ಗಿಡ" (ಸಿದ್ಧಾಂತಿ. ೦೦೭): ಪಟಂಗೆ . . . ಕರ್ಣಶೂಲಪ್ಯಥೆಗೆಕ್ಕಿಯು ಮೂಲಗೆಯಾವುಂಡಲಗೆಯು ಮದ[ಪಾಠಾಂ. ಮಡ]ವಸಲೆಗಳ ದಳದೊಳೊಂದಂ ಕಿವಿಯೊಳ್ (ಲೋಕೋಪ. ೯-೬೩). [ಮಡಿ$_{2}$+ಬಸಲೆ$_{1}$./ತೆಲು. ಮಟ್ಟುಬಚ್ಚಲಿ]

**ಮಡಿವಸೆ** (ನಾ). ಮದುವೆ ಮುಂತಾದ ಶುಭಕಾರ್ಯಗಳಲ್ಲಿ ಹಾಕುವ ಪೀಠ,— ಹಸೆಮಣೆ : ಇಳುಹಿದುದು ಕಮ್ಮೆಣ್ಣೆ ಪಾಯ್ಕಿತು ಪೊಳೆವ ಮಣಿ ಮಡಿವಸೆ (ಕೊರಗ. ೩-೩-೩೪). [ಮಡಿ$_{2}$ + ಪಸೆ$_{2}$]

**ಮಡಿವಳ**, ಮಡಿವಳ್ಳ, ಮಡಿವಾಳ$_{1}$ (ನಾ). ಬಟ್ಟೆಯನ್ನು ಒಗೆದು ಶುಭ್ರ ಮಾಡುವ ವೃತ್ತಿಯವನು; ಅಗಸ : ಕಮ್ಮಾರ ಸೋವನು ಮಡಿವಳ ಕಾಳಗನು (ಎಕ. VI, ಶಿಕ್ರಪು. ೭-೩೭; 1061): ಒಗೆಯುತ್ತುಮಿರ್ಪ ಮಡಿವಳನ ಮುಂದಣ ಮಡಿಯುಮಂ . . . ಕಂಡು (ಅರ್ಜುನ. ೯-೭೩ ಪ); ವಳಕ್ಕೆ—ಅಡಪವಳಂ. ಮಾಸವಳಂ. ಮಡಿವಳಂ (ಶಮದ. ೦೯೯ ಕೃಪೋ). **ಮಡಿವಳ್ಳ** : ಪಟ ಚಿತ್ರಾವಟಾ ಜೋಗಂ ಪಟಯುಂ ದೇವಾಂಗವೆಂಬ ವಸನಂಗಳನೇಂ ಗಟಯಿಸುವವೊ ಮಡಿವಳ್ಳನ ಪಟಯುತನನೆ ಪೋಲ್ತು ವಿಶದವಸನಾಂಗಕುಜಂ (ಅದಿಪು. ೩-೩೪): ನಡೆವರ್ ಮಾಪ್ಪನವಳ್ಳರ ಮಡಿವಳ್ಳರ ಮಾಲೆಗಾಜಿರಂವದೆ ದಿವಿಜರ್ (ಅಜಿಪು. ೩-೯೦): ಅಡಪವಳಂ ಪಡೆವಳ್ಳಂ ಮಡಿವಳ್ಳಂ ಸಜ್ಜೆವಳ್ಳಂ (ಕಾವ್ಯಾವ. ೩೨೬). **ಮಡಿವಾಳ$_{1}$** : ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ (ಬಸವ. ೩೯೯): ಸುರನಿವಹ ಕುಸುಮವರುಷವ ಕಱೆಯೆ ಮಡಿವಾಳ ಮಾಚಯ್ಯ ಬಸವಣ್ಣ ಸಹಿತಾಗ ತೋಱ ಪೊಱದನ ವಿಮಲಚರಣಾಂಬುಜಕ್ಕೆ ಶರಣು (ಚೆಶಿಬಂ. ೩೭-೩೬).

[ಮಡಿ$_{2}$ + – ವಳ. / ತುಳು. ಮಡಿವಳೆ, ಮಡ್ಡೆಲಿ, ಮಡ್ಯಲೆ; ತೆಲು. ಮಡಿವೇಲು]

**ಮಡಿವಳಗಿತ್ತಿ**, ಮಡಿವಾಳಗಿತ್ತಿ (ನಾ). ಅಗಸಗಿತ್ತಿ : ಅವಳು ಕಾತ್ಯಾಯಣಿಗೆ ಮಡಿವಳಗಿತ್ತಿಯು ಕೆಲಸ ಒದಗಿಸಿ ಕೊಡುವುದಾಗಿ ಹೇಳಿದಳು (ಪ್ರನರು. ೯). **ಮಡಿವಾಳಗಿತ್ತಿ** : ಮಡಿವಾಳಗಿತ್ತಿ ಆ ಬಟ್ಟೆಯನ್ನು ಗುಡಿಸಿ ತಕ್ಕೊಂಡು ಹೋಗುತ್ತಾಳೆ (ಪಪ್ಪುರು. ೯೬). [ಮಡಿವಳ + — ಗಿತ್ತಿ]

**ಮಡಿವಳತಿ** 'ಮಡಿವಳಿತಿ' ನೋ.

**ಮಡಿವಳವಕ್ಕಿ**, ಮಡಿವಾಳಹಕ್ಕಿ (ನಾ). ಒಂದು ಬಗೆಯ ಪಕ್ಷಿ : ಆ ಪ್ರಾತಃಪೂರ್ವಪ್ರತ್ಯೂಷೆಯ ನಿಶ್ಯಬ್ದತೆಗೆ ಸಿಳ್ಳಿರಿಯೆ ತೊಡಗಿತ್ತದೊಂದು ಮಡಿವಳವಕ್ಕಿ (ಶ್ರೀರಾಮಾ. ೪೮೦-೦೦). **ಮಡಿವಾಳಹಕ್ಕಿ** : ದೂರದ ಕಣಿವೆಯಲ್ಲಿ ಸಿಳ್ಳು ಹಾಕಲು ತೊಡಗಿದ್ದ ಮಡಿವಾಳಹಕ್ಕಿಯ ಗಾನವು ಮಂಜನಿಗೆ ಕೇಳಿಸಿ (ಕಾನೂರು. ೪೨); ಅಡಗಿ ಕುಳಿತು ಮಡಿವಾಳಹಕ್ಕಿಯನ್ನು ಅನುಕರಿಸಿ ಹಾಡಿ ಪ್ರತ್ಯುತ್ತರ ಗಳಿಸಬಲ್ಲ (ಸ್ವಪ್ನಪೊ. ೨೪).

[← ತುಳು. ಮಡ್ಡೆಲಪಕ್ಕಿ]

**ಮಡಿವಳಿತಿ**. ಮಡಿವಳತಿ, ಮಡಿವಳ್ತಿ, ಮಡಿವಾಳಿತಿ (ನಾ). = ಮಡಿವಳಗಿತ್ತಿ : ಬಾಣಸಿಗಿತಿ, ಮಡಿವಳಿತಿ, ಘಟ್ಟಿವಳಿತಿ (ಶಾಕಾರೂ. ೦೬೮ ಉದಾ). **ಮಡಿವಳತಿ** : ಮಡಿವಳತಿಯ ಕಣಿತಿಯ ಸೂಲಗಿತ್ತಿಯ ಸೂಳೆಯನು ಆಲೋಚನೆಗಂತರಂಗಕೆ ಬರಿಸದೆ ಮೇಲಱಿತಿಹುದು ಮೋರೆಯೊಳು (ಹರಿಶ. ೪-೪೪). **ಮಡಿವಳ್ತಿ** : ಮಡಿಯಂ ಮಡಿವಳ್ತಿಯವೋಲ್ ಬಿಡದ ಮೃತಾಸ್ಯಮನೊಱಲ್ದು ಬಾಣಸಿಗಿತಿವೋಲ್ ಕುಡುತಿರ್ದಳ್ (ಕಾವ್ಯಾವ. ೩೩೦); ನಡೆಯುಪರನುಲೇಪನಮುಂ ಮಡಿಯುಂ ಮಾಲೆಯುಮಮರ್ತ್ಯಲೋಕದಮಂ ತಂದೆಡೆವಿಡದೆ ಘಟ್ಟಿವಳ್ತಿಯ ಮಡಿವಳ್ತಿಯ ಮಾಲೆಗಾರ್ತಿಯುಂದದಿನರೆಬರ್ (ತಂತ್ರಪು. ೦೦-೦೩೩). **ಮಡಿವಾಳಿತಿ** : ತನ್ನವರೊಲ್ಲದ ಸರಸತಿ ನವವಧು ಗಂಡನ ಮಡಿವಾಳಿತಿಯಾಗಿ ಹಿಂಡುಬಟ್ಟೆಗಳ ಹಿಂಡಲು ಬಂದಳು (ಗಹೇಶ. ೩೦-೭); ಆಗ ತಾನೇ ಸ್ನಾನಕ್ಕೆ ಹೋಗಿದ್ದ ಮಗುವನ್ನು ಮಡಿವಾಳಿತಿಯು ಒಳಗೆ ತರುತ್ತಿದ್ದಳು (ಮರಳು. ೧೦೯).

[ಮಡಿವಳ + — ಇತಿ$_{1}$ (< — ಇತ್ತಿ )]

**ಮಡಿವಳ್ತಿ** ' ಮಡಿವಳಿತಿ ' ನೋ.

**ಮಡಿವಳ್ಳ** ' ಮಡಿವಳ ' ನೋ.

**ಮಡಿವಾಗಲ್**, ಮಡಿವಾಗಲು, ಮಡಿಹಾಗಲ, ಮಡಿಹಾಗಲು, ಮಡುವಾಗಲ್, ಮಡುವಾಗಲ, ಮಡುವಾಗಲು (ನಾ). ಒಂದು ಬಗೆಯ ಸಸ್ಯ : ಮಡಿವಾಗಲದೊಪ್ಪೆಯೊಳೆಯ ನೀರುಳ್ಳಿಯ ಮಾವಿಡಿಗಳ ಪಸುಂಬರಿಯ ಸವಿದಪಗಿನ ಬಾಡುಗಳ ನೆಲದೊಳೇಂ ಬೇಯ್ಸಿಸಿದರ್ (ಸೂಕ್ತಿಸು. ೦೩-೨೯). **ಮಡಿವಾಗಲು** : " ಕಂದವಲ್ಲಿ_ಮಡಿ(ಡು)ವಾಗಲು " (೬ಪಧ. ೨೩). **ಮಡಿಹಾಗಲ** : ಮಡಿಹಾಗಲ, ಗಿಡ್ಡಹಾಗಲ. ಕಾರ್ತಿಕಾಯಿ, ಕಾರ್ಚಿಬಳ್ಳಿ (ವೈದ್ಯಶಿಗ. ೩೪-೧೦೯೩). **ಮಡಿಹಾಗಲು** : (೯). **ಮಡುವಾಗಲ್** : " ವಿಷಹಾರಿ ಕಂದೆಯೆನೆ ಮಡುವಾಗಲಕ್ಕು " (ಮಂಗರಾ. ೪೩-೪೭); ಹಿಡಿಹಿಡಿಕೆಯಾಚಕತ್ತರಿ ಮಡುವಾಗಲ್ ನೆಲ್ಲಿ ಗೋಣಿ ಕಿಱುನೆಲ್ಲಿಯ ಚೆಲ್ವೊಡರಿಸಿದೆಲೆಯಂಕೋಲದ ಗಿಡುವಳಿರುಪನಾಹಪುಳಿವಿಷಮಂ ಕಳೆಗುಂ (ಶಮದ. ೦೩-೭೭). **ಮಡುವಾಗಲ** : " ಅಂಗುಕಾ–ಮಡುವಾಗಲ " (೬ಪಾ. ೭): ಗಣಜಿಲದ ಬೇರು, ಮಡುವಾಗಲದ ಗೆಡ್ಡೆ, ಕತ್ತರಿಯ ಬೇರು, ಅಪ್ಪುಯಗೆಡ್ಡೆ. ಇವಂ ಅಕ್ಕಿಗಚ್ಚಿನಲ್ಲಿ ಅರೆದು ಪೂಸೆ ಬಾವು ಮಾಣ್ಗುಂ (ಬಿಪ್ಪಶಿ. ೭೭). **ಮಡುವಾಗಲು** : "ಕಂದಫಲಾ—ಹಾಗಲ, ಮಡುವಾಗಲು" (೬ಪಾ. ೨೩): ಭಾವಸಂಯುತವಾದ ವಾಕುಜಮಿಶ್ರಿತಂ ಮಡುವಾಗಲುಂ ಸೇವಿಸಿಂತಿ ವನಾಜ್ಯದಿಂ ಕಳೆಗುಂ ಸಮಸ್ತವಿಷಂಗಳಂ (ಕಾಲ್ಯಾಸಂ. ೨೭).

[ಮಡಿ$_{2}$ + ವಾಗಲ್$_{1}$?]

**ಮಡಿವಾಗಲು** ' ಮಡಿವಾಗಲ್ ' ನೋ.

**ಮಡಿವಾಸು** (ನಾ). ಒಗೆದ ಬಟ್ಟೆಯ ಹಾಸು ; ನಡೆಮಡಿ : ವಿಜಯ ರಾಘವನಪಿತವಿಜಯಕೆ ಬಿಜಯ ಮಾಡುವನೆಂದು ಬಂದಜನಜಕ ರಚಿಸಿದ ಮೆಲ್ಲಡಿಯ ಮಡಿವಾಸಿನತಿಶಯವೊ (ಕೊರಗ. ೭-೬-೭).

[ಮಡಿ$_{2}$ + ವಾಸು$_{2}$]

**ಮಡಿವಾಳ$_{1}$** ' ಮಡಿವಳ ' ನೋ.

**ಮಡಿವಾಳ$_{2}$** ' ಮುಡಿವಾಳ ' ನೋ.

**ಮಡಿವಾಳಗಿತ್ತಿ** ' ಮಡಿವಳಗಿತ್ತಿ ' ನೋ.

**ಮಡಿವಾಳಹಕ್ಕಿ** ' ಮಡಿವಳವಕ್ಕಿ ' ನೋ.

**ಮಡಿವಾಳಿತಿ** 'ಮಡಿವಳಿತಿ' ನೋ.

**ಮಡಿವು** (ನಾ). ಸಾವು ; ಮರಣ : ಮದನೀರ್ಗಳಿಂ ಪೆರ್ಚು ಸೆತ್ತರ ಪೆರ್ಮಟಿಯಾಗೆ ಮುಖ್ಯಮಂತ್ರಿಗೆ ಮಡಿವಕ್ಕುಂ (ಲೋಕೋಪ. ೯-೦೨); ತಡೆದಿಲ್ಲಿ ನಿಂದೆನಪ್ಪೊಡೆ ಮಡಿವಾದವುದು (ರಾಮಾಶ್ವ. ೭-೯೦): ಇಂದು ಕೊಱಯುಂಬಿನೊಳೇ ಕಾನನದ ಪೀನನಿಸೆ ಮಡಿವಾಯ್ತೇ (ನೇಮಿಪು. ೮೪-೧೦೦). [ಮಡಿ$_{1}$ + — ವು. / ತಮಿ. ಮಡಿವು]

**ಮಡಿವುಳಿಗ** (ನಾ). ಬಟ್ಟೆಯನ್ನು ಶುಭ್ರಮಾಡುವ ಸೇವೆ.–ಕೈಂಕರ್ಯ : ಬಿಡದಿವುಳಿಗದ ಲಿಂಗಣ್ಣ ಮಡಿವುಳಿಗದ ದೊಡ್ಡಯ (ಎಕ. III (R), ಗುಂಡ್ಲುಪೇ. ೬೦-೩೩ ; 1087). [ಮಡಿ$_{2}$ + ಉಳಿಗ$_{2}$ (<ಊೞಿಗ)]

**ಮಡಿವೆಡೆ** (ನಾ). ಮಡಿಸಿಕೊಂಡಿರುವ ಹೆಡೆ : ವಾಸುಗಿಯ ಮಡಿವೆಡೆಯ ಕಿಳ್ತುಂ ಧರೆಯನೊಬ್ಬೆರಲೊಳಾಳ್ದ . . . ರುದ್ರಗಣವೆಡೆವಿಡದೆ ಕಣ್ಗೆಸೆದುದು (ತಂಪು. ೨-೨೪). [ಮಡಿ$_{1}$ + ಪೆಡೆ]

**ಮಡಿವೆರಳು** (ನಾ). ಮಡಿಸಿದ ಬೆರಳು ; ಬಾಗಿಸಿದ ಅಂಗುಲಿ : ಬಲನೆಡನ ಮಡಿವೆರಳ ಮುಡಿ ಮುಂದಲೆಯ ಲಘುವಾಗದಿರಿ (ಕುಮಾವ್ಯಾ. ೨-೦೩): ಮಡಿವೆರಳ ಜಪಸರದ ಪುಲಿದೊಗಲುಡಿಯ ಕರವ ಕಮಂಡಲದ. . . ಮುನಿಯ ವೇಷವ ತೊಡಚಿಕೊಂಡಿಹ ಕಾಲನೇಮಿಪ್ಪಂತೆ ರಂಜಿಸಿದ (ತೊರವರಾ. ೭ ೩೭-೬೮). [ಮಡಿ$_{1}$ + ಬೆರಳು (<ಬೆರಲ್)]

**ಮಡಿಸೀರೆ** (ನಾ). ೧. ಒಗೆದು ಸ್ವಚ್ಛಗೊಳಿಸಿದ ಸೀರೆ : ಮಡಿಸೀರೆಯಂತೆ ಗಟ್ಟಣೆಗೆ ಬಂದು ವ್ಯೈಲಗೆಯಂತೊಗೆಹಕ್ಕೆ ಬಂದು (ರಘುಪ. ೩-೬೬). ೨. ಸಾಮಾನ್ಯವಾಗಿ ಸಂಪ್ರದಾಯಸ್ಥರ ಮನೆಗಳಲ್ಲಿ ಹೆಂಗಸರು ದೇವರ ಪೂಜೆ, ಅಡುಗೆ ಮತ್ತು ಊಟ ಮಾಡುವ ಸಮಯಗಳಲ್ಲಿ ಉಡುವ ಅಗ್ಗದ ಸೀರೆ : ಸುನಂದ ಅತ್ತಿಗೆಗೆ ಮಯಿಲ್‌ಸೀರೆಯನ್ನು ತಾಯಿಗೆ ಮಡಿಸೀರೆಯನ್ನು ತೆಗೆದುಕೊಂಡಳು (ದೂಬಲ್ಯ. ೯೫). ೩. ಮಡಿಹೆಂಗಸರು ಉಡುವ ಕೆಂಪುಬಣ್ಣದ ಸೀರೆ.
[ಮಡಿ$_2$ + ಸೀರೆ$_2$]

**ಮಡಿಸು$_1$** 'ಮಡಿಯಿಸು' ನೋ.

**ಮಡಿಸು$_2$** (ಕ್ರಿ). ಮಡಿಕೆ ಮಾಡು ; ಮಡಿಚು ; ಪದರಗೊಳಿಸು : ಪರಮಸಂಖ್ಯೆಗಳ್ಗೆ ಬಿಚ್ಚದಂತು ಮ[ಪಾಠಾಂ. ಬಿ]ಡಿಸಿ ಘಳಿಗೆ ಮಾಡಿ . . . ಸಕಲಭಕ್ತಜನಕೆ ಮನದ ಮಡಿಂಗನೀವುತಿಪ್ಪನಲ್ಲಿ (ತಿರುತೊಂ. ರೇ. ೨೬೪-೦೫): ಸತಿ ಮಡಿಸಿ ನೀಡುವೆಲೆವಿಡಿದ ಕೈ ಬಸವಳಿದುದು (ಹಕಾ. ೬-೫೨): ಫಣೀಂದ್ರನ ಫಣಾಮಂಡಲಂ ಬಿಜ್ಜಣಿಗೆಯುಂ ಮಡಿಸಿದಂತಾಯ್ತು (ತಿಬಶ್ರು. ೪೪-೨೦). [ಮಡಿ$_2$ + -ಸು$_2$]

**ಮಡಿಹಾಗಲ** 'ಮಡಿವಾಗಲ್' ನೋ.

**ಮಡಿಹಾಗಲು** 'ಮಡಿವಾಗಲ್' ನೋ.

**ಮಡು$_1$** (ಕ್ರಿ). ಹೊಂದಿಸು ; ಜೋಡಿಸು : "ಮಡು — ದೃಢಸಂಧಾನೇ (ಬಿಗಿಯಾಗಿಡು, ಒಟ್ಟಿಗಿಡು), ಅಗಾಧ ಜಲೇ ಚ" (ಶಮದ) ; ಕರದೊಳ್ಬಿಲ್ಮಂಡಲಾಕಾರದಿನಿರೆ ಪೂಜಮುಯ್ಯಂಗೆ ತೊಟ್ಟಂಬು ಮಟ್ಟಂತಿರೆ (ಅಪಂಶ್ರು. ೦೪-೦೭). 'ತಲೆವಡು' ಪರಾ. [ದೇ.II ತಮಿ. ಮಟು]

**ಮಡು$_2$**, ಮಡುಹು$_2$ (ನಾ). ೧. ನದಿ· ಹೊಳೆ ಮುಂತಾದುವುಗಳಲ್ಲಿ ಆಳವಾದ ನೀರಿರುವ ಪ್ರದೇಶ : ಗಂಗಾಮಹಾನದಿಯ ನಡುವೆ ಮಡುವಿನೊಳ್ ಭಯಂಕರಮಾಗುತ್ತಿರ್ದ ತೆರೆಯನೊಡೆಯದಜೀಯೊಳ್ ಮುಳುಗಿದೊಡೆ (ವಡ್ಡಾರಾ. ೬೨-೦೪) ; ಜಗುನೆಯ ಮಡು ಗಂಗೆಯ ಮಡುವನಿನಿಸನನುಕರಿಸಿರ್ಕುಂ (ಪಂಪಭಾ. ೫-೬೬) ; ಪರಿವ ವೈತರಣಿಯ ಮಡುಗಳೊಳ್ ಪುಡುಕುನೀರದುರ್ವುದುಂ (ಸುಕುಮಾ. ೦೦-೪೭ ವ). ೨. ಕೊಳ ; ಸರೋವರ : 'ಮಡುನೀರ್', 'ಮಡುವೊಗು' ಪರಾ. ೩. ಪ್ರವಾಹ : ಒಡೆದ ನೆತ್ತಿಗಳಿಂದ ರಕುತದ ಮಡು ಹರಿಯೆ [ಪಾಠಾಂ. ಮಡ ಹರಿದು] (ಪಳತ. ೯-೨೭). ೪. ಹಳ್ಳ; ಕೊಳ್ಳ : ಕೋಣಂ ಪೊಕ್ಕ ಮಡುವಿನಂತೆ ಮನದೊಳ್ ಕಪಡಿ (ಧರ್ಮಾಮ್ಮ. ೦೦-೬೬): ಒಂದೊಂದು ಹನಿ ಬಿದ್ದು ನಿಂದಲ್ಲಿ ಮಡುವಕ್ಕು (ಸರ್ವಜ್ಞ. ೪೨೮). ೫. ಆಶ್ರಯಸ್ಥಾನ : ರಸದ ಮಡು ಪುಣ್ಯದಾಗರವೆನಿಪ ಸಿದ್ಧರಾಮನ ಕಥೆಗೆ ಕಾವ್ಯಮಂ ವಿರಚಿಸುವಡಪ್ಪಾದಶಸ್ಥಲವ ಪೊಗಳಲೇಕೆ (ಸಿದ್ಧರಾ. ೦-೪); ಮದದ ಮಡು ಭೋಗೈಕನಿಧಿ ಸಂಪದದ ಜನ್ಮಸ್ಥಳ ಮನೋರಥದುದಯಗಿರಿ (ಕುಮಾರ. ೦೨-೪). ೬. ಬಾವಿ, ಕೆರೆ ಮುಂತಾದುವುಗಳಿಂದ ನೀರಿನ ಪೂರೈಕೆಯುಳ್ಳ ಭೂಮಿ; ನೀರಾವರಿಭೂಮಿ : ಇರ್ಬ್ಬಣ್ಣಾಗ ಮಡುವಿನ ಮಣ್ಣುಮಂ ಕೊಣ್ದು (ಮೈಆರಿ. ೦೯೩೮, ೬೭-೮; ೨೦೫); × × ವರೆ ಮಡು ಖ ೨ ಬೀಜವರಿ ಗ ಭೂಮಿ (ಎಕ. VII, ಶಿಮೊ. ೯೩-೦೯; ?). ಮಡುಹು$_2$: ೪. ನಂಜಿನ ಮಡುಹು ಹೆಬ್ಬುಲಿ ಕರಗಸಂಗಳು ಅಡಿಯನೊಜೀದರೊಡನೆ ನುಂಗುವ ಮೋಸಕೂಪಗಳು (ಅಶಿರಾ. ೦೭-೪೦); ಅಜ್ಞಾನ ಮಡುಹಿನಲಿ ಕೆಡೆವು (ಗಗಪಾ. ೦೩-೦೮). [ದೇ.II ತಮಿ. ಮಟು; ಮಲ. ಮಡು; ತೆಲು. ಮಡುವು, ಮಡುಗು· ಮಡ್ಗು, ಮಡ್ಡು]

**ಮಡು$_3$** (ನಾ). (ಕರಾ) ಮರಗಳನ್ನು ಕಡಿಯುವ ಸಾಧನ; ಕೊಡಲಿ : ಗಿಡಗಳ ಬುಡಕ್ಕೆ ತುಕ್ರ ಮಡು ಬೀಸಿದ (ಪಾಣಿ. ೬೬).
[← ತುಳು. ಮಡು]

**ಮಡುಗಟ್ಟು**, ಮಡುವುಗಟ್ಟು (ಕ್ರಿ). ೧. ಆಳವಾಗಿ ನೀರು ನಿಲ್ಲು. ೨. ಸಮೃದ್ಧವಾಗು: ಅಧಿಕವಾಗು; ತುಂಬಿಕೊಳ್ಳು : ಗುಡಿಗಟ್ಟಿತು ಸಜೀ ಮಡುಗಟ್ಟಿತ್ತು ಚಲನಾಥ ಸಂತೋಷರಸಂ (ಗಂಶ. ೩-೬೪); ಅರಿದೇಶದೊಳ್ ಭಯ × × ಸಂ ಮಡುಗಟ್ಟಿದುದಾಗಳಾವಗಂ (ಎಕ. XI, ಮೊಳಕಾ. ೨೦-೯: 1278 ?) : ಮಡುಗಟ್ಟಿ ಸುರಿವ ನೆತ್ತರ ಕಡಲೊಳ್ ತೇಂಕಾಡುತಿರ್ಪ ರಥದೊಳ್ ಗಾಯಂಬಡೆದೆನಸು ಬಬಲುತಿರ್ದಂ (ಪಳಶು. ೨-೬೬). ಮಡುವುಗಟ್ಟು: ೨. ಕಣ್ಣುಗಳಲ್ಲಿ ನೀರು ಮಡುವುಗಟ್ಟಿ ಕೆಳಗೆ ಹರಿಯುತ್ತಿದ್ದವು (ಪೋಂಪು. ೬೨). [ಮಡು$_2$ + ಕಟ್ಟು$_1$]

**ಮಡುಗು** 'ಮಡಗು' ನೋ.

**ಮಡುಗೊರ್ವು** (ನಾ). (ಮಡುವಿನಲ್ಲಿ ನೀರು ತುಂಬಿರುವಂತೆ) ಸಮೃದ್ಧವಾಗಿರುವಿಕೆ : ಪೊಳೆವ ತನುಚ್ಛಾಯೆ ಮೆಯ್ವೆರ್ಚೆ ಕೆಚ್ಚಲ್ ಮಡುಗೊರ್ವಂ ತಾಳ್ದಿ . . . ಇರ್ದುದು ಪಸುಮಹಿಷೀವೃಂದಮಾನಂದದಿಂದಂ (ಶಾಂತೀಶ್ವ. ೩-೮೮). [ಮಡು$_2$ + ಕೊರ್ವು$_2$]

**ಮಡುಗೊಳ್**, ಮಡುಗೊಳು (ಕ್ರಿ). ಸಮೃದ್ಧವಾಗು; ತುಂಬು: ಮಡುಗಟ್ಟು : ಕಿಜುಮಡುಗೊಂಡ ಬಂಡಿನೊಳಗೀಸಿ ಪೊದಟ್ಟಿಡಸಿರ್ದ ಕಾತ್ತೆಸಟ್ಟು ಜುವದೊಳೆಯ್ದಿ ಮೆಯ್ಗರೆದು . . . ಪರಾಗಪುಂಜದೊಳ್ ಪಜೀವಡಿಸಿತ್ತು ಭೃಂಗಶಿಶು ನೀರಜದೊಳ್ ನಿಜಪಾಂಸುಕೇಳಿಯಂ (ಶಂದ್ರಪು. ೭-೬೦) ; ಎಳಸೀರ್ಗಳ್ ಮಡುಗೊಂಡೋವುತ್ತುಮಿರ್ಪುವಲ್ಲಿಯ ಬನಮಂ (ಕಬ್ಬಿಗ. ೨೨). ಮಡುಗೊಳು : ಮನಮನವ ಎಳೆಗೊಂಡು ಮುಡಿವ ಮೂರ್ತಿ· ಸಮ್ಮೂರ್ತಿ ಮಡುಗೊಳುವ ಗುಡಿಯೊಳೇ ನಿನ್ನ ಕೀರ್ತಿ? (ಮಲೆದೇ. ೦೭-೦೦). [ಮಡು$_2$ + ಕೊಳ್$_1$]

**ಮಡುಗೊಳಿಸು** (ಕ್ರಿ). ಸಮೃದ್ಧವಾಗುವಂತೆ ಮಾಡು : ಆ ಕರುಣೆ ಪೆಳಗನೇ ನನ್ನೊಳಗೆ ಮಡುಗೊಳಿಸಿಯೂ ಹುರುಳ ಕಂಡು (ಮಲೆದೇ. ೩೯-೦೦).
[ಮಡುಗೊಳ್ + — ಇಸು$_3$]

**ಮಡುಗೊಳು** ' ಮಡುಗೊಳ್ ' ನೋ.

**ಮಡುದಲೆಯ** (ನಾ). ತಲೆಯಲ್ಲಿ ಸಮೃದ್ಧವಾದ ನೀರನ್ನು ತಡೆಹಿಡಿದಿರುವವನು : ತಲೆಯಲ್ಲಿ ನದಿಯನ್ನು ಧರಿಸಿರುವವನು ; ಗಂಗಾಧರ ; ಶಿವ : ಕಾಳಗ ಬೆಂದುದೆಂದಸುರಾರಿ ಪಡುಲಜ್ಜೆಗೊಂಬನಿತಜೀಯೊಳು ಷಡುಮುಖ ಶೌರಿಯೊಳ್ ಕಾಳಗ ಬೇಡೆಂದು ಮಡುದಲೆಯನು ಕರೆಸಿದನು (ಪೋಹಶ. ೩೮-೨೫). [ಮಡು$_2$ + ತಲೆ$_1$ + — ಅ$_7$]

**ಮಡುನೀರ್**, ಮಡುನೀರು (ನಾ). ಕೊಳದ ಜಲ; ಸರೋವರದ ನೀರು : ಮಡುನೀರ್ [ಪಾಠಾಂ. ಮಡುಗಿಡು] (ಶಬ್ದಸು. ೩೮೦ ಪ್ರಯೋ). ಮಡುನೀರು : ಬಿಸಿಲ ಭಡಾಳದಿ ಬೆಂದರ್ಗೆ ಮಡುನೀರು ಸಸಿನೆಳಲಿದಿರ್ದಂದಂತೆ (ಪೋಹಶ. ೨೭-೦೭). [ ಮಡು$_2$ + ನೀರ್ ]

**ಮಡುನೀರು** 'ಮಡುನೀರ್' ನೋ.

**ಮಡುಪು$_1$** 'ಮಡಿಪು$_1$' ನೋ.

**ಮಡುಪು$_2$** 'ಮಡಿಪು$_2$' ನೋ.

**ಮಡುಪುವೀಳ್ಯ** (ನಾ). ಮಡಿಚಿರುವ ತಾಂಬೂಲ : ಸುರುಳಿ ಸುತ್ತಿರುವ ತಾಂಬೂಲ,— ವೀಳೆಯ : ಮಡುಪುವೀಳ್ಯವು ಕೊಟ್ಟು ಕಳುಹುವರಲ್ಲಿ ನಾರಿಯರು (ಮುಪೋರ. ೦೦೪).
[ ಮಡುಪು$_2$ (< ಮಡಿಪು$_2$) + ವೀಳ್ಯ (< ವೀಳೆಯ) ]

**ಮಡುಬೇವು** (ನಾ). ಒಂದು ಬಗೆಯ ಬೇವು : ಪರ್ವತದ ಮಡುಬೇವಿನ ಕಾಯಿ, ಹಾಗಲದ ಗೆಡ್ಡೆ, ರುದ್ರಾಕ್ಷಿ ಇವು ಎಲ್ಲವನ್ನು ಮೊಲೆಹಾಲಲ್ಲಿ ತೇದು ನಾಲಿಗೆಗೆ ಲೇಪಿಸುವುದು (ಅಶ್ವವ. ೦೦೦). [ ? + ಬೇವು$_1$ ]

**ಮಡುವಾಗಲ್** 'ಮಡಿವಾಗಲ್' ನೋ.

**ಮಡುವಾಗಲ** 'ಮಡಿವಾಗಲ್' ನೋ.

**ಮಡುವಾಗಲು** 'ಮಡಿವಾಗಲ್' ನೋ.

**ಮಡುವಾಯಿ** 'ಮಡವಾಯ್' ನೋ.

**ಮಡುವಿಲ್** (ನಾ). (?): ಯುದ್ಧದೊಳ್ ಮಡುವಿಲ್ಮಾಡಿ ಮಹಾಪ್ರತಿಜ್ಞೆಯಿನರಾತಿಕ್ಷೇತ್ರಮಂ ಪೊರ್ದಿದಂ (ಶಸ್ಪ.ಕೃ. ...). [ ? ]

**ಮಡುವುಗಟ್ಟು** 'ಮಡುಗಟ್ಟು' ನೋ.

**ಮಡುವೆ** 'ಮೊಡವಿ' ನೋ.

**ಮಡುವೊಗು** (ಕ್ರಿ). ಕೊಳವನ್ನು ಪ್ರವೇಶಿಸು; ಸರೋವರವನ್ನು ಹೊಗು: ಕರೇಣುಚಯಂಬೆರಸು ದಂತಿ ಮಡುವೊಗುವಂತೆ (ಕಾವ್ಯಕ. ೯-೯೯). [ ಮಡು₂ + ಪೊಗು ]

**ಮಡುಹಿಸು** (ಕ್ರಿ). ಕೊಲ್ಲಿಸು; ಸಾಯಿಸು: ಒಪ್ಪೆಯೆಮ್ಮುವನು ಮಡು [ಪಾಠಾಂ. ಡಿ]ಹಿಸಲ್ಕೆಂದೊಂದುಪಾಯಂಬಡೆದು ಲೇಸಾಯ್ತುಸವುವಿಷವುಂ ಕುಡಿಸಿ ಕೊಂದೆಹೆನೆಂದು ನೆನೆದನು (ಬಸವು. ೩೮-೪೨).

[ ಮಡುಹು₁ (< ಮಡಿಪು₁) + — ಇಸು₃ ]

**ಮಡುಹು₁** 'ಮಡಿಪು₁' ನೋ.

**ಮಡುಹು₂** 'ಮಡ್ಡು₂' ನೋ.

**ಮಡೆ₁**, ಮಡ್ಡ₂ (ನಾ). ೧. ಬೇಸಾಯಕ್ಕಾಗಿ ನೀರನ್ನು ಒದಗಿಸಲು ಹಳ್ಳ ಅಥವಾ ನದಿಗಳಿಗೆ ಕಟ್ಟಲಾಗಿರುವ ಅಡ್ಡಗಟ್ಟೆ; ಒಡ್ಡು; ಅಣೆಕಟ್ಟು: (೬). ೨. ಗದ್ದೆಗಳಿಗೆ ನೀರು ಹಾಯಿಸಲು ನಾಲೆಯಲ್ಲಿ ಮಾಡಿರುವ ಕಂಡಿ; ತೂಬು: (೬). ೩. ದೇವರ ನೈವೇದ್ಯಕ್ಕೆಂದು ಬಿಟ್ಟ ಗದ್ದೆ: ಇರ್ಕಣ್ಣುಗ ಕಟನಿಯುಂ ಒನ್ದು ತೋಟ್ಟವುಂ ಇರ್ಕಣ್ಣುಗ ಮಡೆಯುಂ × × (ಎಕ. XII. ಪುದ್ಯಗಿ. ೩೦-೩; ೯೬೦). 'ಮಡೆಭೂಮಿ' ಪರಾ. ೪. ದೇವತೆಗೆ ಅರ್ಪಿಸುವ ಆಹಾರ; ನೈವೇದ್ಯ; ಎಡೆ; 'ಅರಿಸಿಣದ ಅನ್ನ, ತಂಬಿಟ್ಟು ಮುಂತಾದುವುಗಳನ್ನು ನೇಮದಿಂದ ಮಾಡುವ ದೇವರ ತಳಿಗೆ' (ಕಮ್ಮಾರು. ೩೩೦ ಕೆಳ): ಕೊನೆಗೆ ತಾಯಿ ಪ್ರಸನ್ನಳಾಗಿ ಮಡೆಯ ಅನ್ನವನ್ನುಂಡು ಸುಖನಿದ್ರೆ ಮಾಡುತ್ತಾಳೆ (ಕಮ್ಮಾರು. ೩೨). 'ಮಡೆಹಬ್ಬ' ಪರಾ. ೫. ಎಂಜಲು; ಉಚ್ಛಿಷ್ಟ: 'ಮಡೆಗೂಟ್' ಪರಾ. **ಮಡ್ಡ₂**: ೨. 'ಮಡವಾಯ್' ಪರಾ.

[ ದೇ.॥ ತಮಿ. ಮಟ್ಟೈ; ತುಳು. ಮಡೆ; ತೆಲು. ಮಡ, ಮಡವ ]

**ಮಡೆ₂** (ನಾ). (ಕರಾ) ಹುಲ್ಲಿನ ಹಗ್ಗ: 'ಮಡೆಹಗ್ಗ' ಪರಾ. [ ? ]

**ಮಡೆಗೂಟ್**, ಮಡಗೂಳ್, ಮಡಗೂಟಿ್(ನಾ). ತಿಂದು ಮಿಕ್ಕ ಅನ್ನ; ಎಂಜಲನ್ನ; ಉಚ್ಛಿಷ್ಟ: ಈತನೊಳ್ ತೊಟ್ಟ ಕಿಂಕರಭಾವಂ ನಮಗಕ್ಕಿಗೊಟ್ಟು ಮಡೆ[ ಪಾಠಾಂ. ಡ ] ಗೂಟುಣ್ಬಂದವುಂ ಪೋಲದೇ (ಆದಿಪು. ೦೯-೬೨); ಮಡೆ[ ಪಾಠಾಂ. ಡ ]ಗೂಟ್ ಬೇಟುಡೆ ಬಾಯ ತಂಬುಲವಿವಸ್ಸ್ಯಶೃಂಗೆಳೆನಲ್ಲಮೇ (ಶಂಕರಪಟ.೯-೦೬೦). **ಮಡಗೂಳ್**: ಮೆಲ್ಲ ಬಾಯ ತಂಬುಲವೆಳೆಕೊಂಡು ವುಂಡ ಮಡಗೂಳುರದಂಕುಸವಾಗಿ ಕೊಪ್ಪು ನುಣ್ಗಲೆಯವು ಕಾಗುವುವಲ್ಲದೆ ವಿರೋಧಿನೃಪರ್ಚ್ಚಲದಂಕರಾವು ನೊಳ್ ಮಲೆದಿದಿರಾದಡಾ ಕುದುರೆ ಆನೆ ರಥಂ ನೆಜ್ ಕಾಯಲಾಪ್ಪರ್ವೇ (ಎಕ. XI. ದಾಹಕ. ೯೨-೩೦; 1162); ನೀನೊರ್ವಂ ಮುಡಿದ ಮುಡಿಯ ಬಾಸಿಗಮಾ ಮೆಯ್ಯೊಳ್ ತೊಡೆದನುಲೇಪನವುಟ್ಟು ಕಳೆದ ದುಪ್ಪಟಿಯೊಜಗದ ಹಕ್ಕೆ ಮಡಗೂಳೆತದಜಂ ನಿನ್ನೊಳಗಾನೊಡವರೆವುದು ಮಾತವೇ (ಜಗನ್ನಾ. ೦೬-೯). **ಮಡಗೂಟ್**: ಕುರುಪ್ರಧಾನನೊಳ್ ಕಜುಪನೆ ನಿಜ್ಚಟಂಬಿಸುಟು ನಿನ್ನಯಂ ಪೇಟ್ಟುದುಗೆಪ್ಪು ಪಾಟಿಯುಂ [ಮೆಜಿಯೆಮ್ಮ] ಬಾಯ ತಂಬುಲದೊಳಂ ಮಡಗೂಟಿನೊಳವುಂಗವಲ್ಲಭಾ (ಶಂಕಕಾ. ೦೯-೦೦); ಪೆಜರ ಮಡಗೂಟಿ ರಾಜ್ಯಕ್ಕೆಜಗಿರ್ದುದು ತಮಗೆ ನಿಟ್ಟೆಯೆಂಬಂತೆ (ಆಕಪು. ೨-೦೦೬). [ಮಡೆ₁ + ಕೂಟ್₁]

**ಮಡೆಭೂಮಿ** (ನಾ). ಬತ್ತದ ಗದ್ದೆ: (ಕಸಂಗ್ರಾ. ೦೬). [ಮಡೆ₁+ಭೂಮಿ]

**ಮಡೆಯ** (ನಾ). ಏನೂ ತಿಳಿಯಂದವನು; ದಡ್ಡ; ಮೂರ್ಖ: ಮಡೆಯಂಗುತ್ತಮ ವಿದ್ಯೆ ಬೆಟ್ಟ (ಸೋಮೇಶ. ೬೪); ಮರುಳ, ಮಂಕ, ಮುಟ್ಠಾಳ, ಮಡೆಯ, ಮಡ್ಡಿ ಎಂಬ ಬಿರುದುಗಳನ್ನು ಹೊಂದಿದ್ದ ಐವರು ಶಿಷ್ಯರಿದ್ದರು (ಪಗಗ. ೦); ಅಪ್ರಯೋಜಕನುಂ ಮಡೆಯನುಂ ಆಗಿ ತೋರ್ಪುದುಂ ಪಲರ್ಗೆ ಕೆಲಸಕ್ಕೆ ಬಂದಪುದು (ಐಕ್ಯಕ್ರ. ೨೦-೪೯೦).

[ದೇ॥. ತಮಿ. ಮಟ್ಟೈಯನ್, ಮಟ್ಟೆಯನ್; ಮಲ. ಮಡಯನ್; ತೆಲು. ಮಡಿಯ]

**ಮಡೆಹಗ್ಗ** (ನಾ). = ಮಡೆ₂: ಕಾಲಿಗೆ ಕಟ್ಟಿದ ಮಡೆಹಗ್ಗ ಮೇಲೆ ಹತ್ತುತ್ತಿದ್ದಾಗ ತುಂಡಾಯ್ತು (ದೇಪಮೊ. ೩೮).

[ಮಡೆ₂ + ಹಗ್ಗ (< ಪಗ್ಗ)]

**ಮಡೆಹಬ್ಬ** (ನಾ). ಗ್ರಾಮದೇವತೆಗೆ ನೈವೇದ್ಯ ಸಮರ್ಪಿಸಿ ಆಚರಿಸುವ ಒಂದು ಹಬ್ಬ: ಹದಿನೈದನೇ ದಿನ ಮಡೇಹಬ್ಬ. . . ಅರಿಸಿಣದ ಹುಗ್ಗಿ ಅನ್ನವನ್ನು ಹೊಸಮಡಕೆಯಲ್ಲಿ ಮಾಡಿ, ಅದರ ಮೇಲೆ ಹೊಸ ಮುಚ್ಚಳ ಮುಚ್ಚಿ, ಮುಚ್ಚಳದ ಮೇಲೆ ತಂಬಿಟ್ಟು ಇಟ್ಟು. . . ಮಡೇ ಹೊತ್ತು ಹೋಗುತ್ತಾರೆ (ಕಮ್ಮಾರು. ೯೯). [ಮಡೆ₁ + ಹಬ್ಬ(< ಪರ್ಬ) ]

**ಮಡೆಹೊರಳು** (ಕ್ರಿ). ೧. (ದೇವರ ಸೇವೆಯ ಒಂದು ಅಂಗವಾಗಿ) ಮಡೆ ಹಾಕಿದ ಸ್ಥಳದಲ್ಲಿ ಹೊರಳು; ದೀಡುರುಳು: ಸಂಕಟ ತಾಳಲಾರದೆ ಕಮಲಾ ಮಡೆ ಹೊರಳುವಂತೆ ಹೊರಳಿದ್ದಳು (ಚಂದಿಕ. ೦೯೬). ೨. (ಆಲಂ) ಸುತ್ತಿ ಹೊರಳು: ಐದು ಬಹ ಚತುರಂಗವಾಹಿನಿಯಾಹೊಂದಿದಿಳೆ ಕುಸಿದು. . .ಕೂರ್ಮ ಮಡೆಹೊರಳೇಂದ[ ಳಿದ ] ಗಿರಿಯಲ್ಲಾಡಿದವು (ಕಕಚಾ. ೩೩-೩೩). [ಮಡೆ₁ + ಹೊರಳು₁ (< ಪೊರಳ್) ]

**ಮಡ್ಡ** (ನಾ). ೧. ಬುದ್ಧಿಯಿಲ್ಲದವನು; ದಡ್ಡ; ಪೆದ್ದ: ಶರಧರೀಲೆಯೊಳು ಹರಿ ಮಡ್ಡನ ಭಂಗಿಸಿದನೆಂದು (ಬೀಕ್ಕಕೃ. ೬-೦೬-೦೩); ದಡ್ಡರನ್ನು ಮಡ್ಡರನ್ನು ಅರಿಸಿ ಅವರಿಗನುಕೂಲವಾಗುವಂಥ ಶಿಕ್ಷಣಸಂಸ್ಥೆಗಳಲ್ಲಿ ವಿಶೇಷರೀತಿಯ ಶಿಕ್ಷಣ ಕೊಡಲು. . .ಸಾಧ್ಯವಾಯಿತು (ಶಿಕ್ಷಕ. ೩೭೨). (ಗು). ೨. ಬುದ್ಧಿಯಿಲ್ಲದ;ದಡ್ಡತನದ: ಮಡ್ಡಜೀವಿಗಳ ಕೈಯಲ್ಲಿ ದೊಡ್ಡ ಲಿಂಗವಿರ್ದಡೇನು (ಅಲ್ಲಮವ. ೨೬೮-೦೦); ಮಡ್ಡಜನ ಸ್ವಾಮಿ, ಬಾರುಕೋಲೆ ಸರಿ ಅವರಿಗೆ (ಕಳಸು. ೬೨).

[ಮಡ್ಡು₂ (<ಮಡ್ಡಿ₃)+—ಅ₇. / ತಮಿ. ಮಟ್ಟನ್]

**ಮಡ್ಡತನ** (ನಾ). ದಡ್ಡತನ; ಮೌಢ್ಯ: ಮಡಿ ಉಟ್ಟರೂ ಮಡ್ಡತನ ಬಿಡಲಿಲ್ಲ (ಗಾದೆ). [ಮಡ್ಡ + —ತನ]

**ಮಡ್ಡಮ್ಮ** 'ಮೇಡಂ' ನೋ.

**ಮಡ್ಡಿ₁**, ಮಂಡ₁, ಮಡ್ಡು₁, ಮಿಡ್ಡೆ, ಮೆಡ್ಡೆ (ನಾ). ೧. (ದ್ರವ ವಸ್ತುವಿನ ತಳದಲ್ಲಿ ನಿಲ್ಲುವ) ಗಟ್ಟಿಯಾದ ಭಾಗ; ಗಷ್ಟು; ಗಸಿ: ಹರಳೆಣ್ಣೆಯ ತಳದಲ್ಲಿರುವ . . . ಮಡ್ಡಿಯ ಗಟ್ಟಿಭಾಗ ಒಂದು ಅಡಕೆಯಷ್ಟನ್ನು . . . ಹೊಟ್ಟೆಗೆ ತೆಗೆದುಕೊಂಡು ಆಸನಕ್ಕೆ ಸವರಿದರೆ ಮೂಲದ ಅಂಕುರಗಳು ಹೋಗುವುವು (ಕಕವೃ. ೯೬೬); ಈ ಮೂರು ವಸ್ತುಗಳನ್ನು . . . ಯಂತ್ರಗಳಿಂದಲೇ ಪುಡಿಮಾಡಿ, ನೀರಿನಿಂದ ಮಡ್ಡಿಯಾಗಿ ಮಾಡಿ ಕಾದಿರಿಸಬೇಕು (ಅಬಾಬ. ೦೦೦). 'ಮಷ್ಟು' ಪರಾ. ೨. ಉಂಡೆ; ಮುದ್ದೆ: ಹೆತ್ತ ತುಪ್ಪ ಸಕ್ಕರೆಯ ಮಡ್ಡಿ ಮೆದ್ದೆಯಾ (ಪಾಂಚಿಕ. ೦೬೯-೨). ೩. ತುಂಬಾ ಬೆಂದುದು; ಗಿಜಿಲು: ನನಗೂ ಅಷ್ಟು ಹಸಿವಿರುವ ಹಾಗೆ ಕಾಣೆ. ಮಧ್ಯಾಹ್ನ ಅನ್ನ ಮಡ್ಡಿಯಾದುದಕ್ಕೋ ಏನೋ (ಪಾರಪು. ೨೮); ತೀರ ಹೆಚ್ಚಾಗಿ ಬೆಂದ ಆ ಮಡ್ಡಿಯನ್ನು . . . ಹೇಗೋ ನುಂಗಿ (ಹುಂಗಿಹುಂ. ೨೯೮). ೪. ಕುದುರೆ, ದನ ಮೊದಲಾದುವುಗಳಿಗೆ ಹಾಕುವ ಮುಸುರೆ; ಕಲಗಚ್ಚು: ಹಸುವಿಗಿಟ್ಟಳು ಹಾಲು ಓಗರ

ಬಿಸಿಮಡ್ಡಿಯ ಗಂಡಗೆ ಪಾಕಿ (ಪುರಂದ. ೧–೦೦೦–೬); ಕುದುರೆಗೆ ಕುದಿವ ಮಡ್ಡಿಯಂ ನೀಡಿಸಲು (ಗುರುಜಾ. ೨–೬); ಮಡ್ಡಿ ಕುದುರೆಗೆ ಲೇಸು (ಸರ್ವಜ್ಞ. ೦೦೩೩). ೫. ಮೃದುವಾದ ಅಂಟನ್ನು ಸ್ರವಿಸುವ ಒಂದು ಬಗೆಯ ಮರ: ಹಳದಿ ಪಾವಟೆ, ಐನ್‍ಷಿ, ಮಡ್ಡಿ (ಪ್ರ.ಶಿ. ೩೫–೦೦೯೬). ಮರಗಳು . . . ಚೌನಂಗಿ, ಮಡ್ಡಿ, ಹೊಂಗೆ, ಗೇರು (ಪಶ್ಚುಪು. ೨೩೬). ೬. ಒಂದು ಬಗೆಯ ಸುಗಂಧದ್ರವ್ಯ: ಪರಿದಗರು ಮಡ್ಡಿ ಕಾಳಾಗರು ಧೂಪದ ಹೊಗೆ ತರಲ್ದು ಮುಂದಯಿಸಿದ ಕಪ್ಪುರದ ರಜಂ ಕೆದಱಿದ ಕತ್ತುರಿ [ಯಾ ಕೆಸರಣಮದಾ]ದುದಾ ನೃಪಸಭೆಯೊಳ್ (ಪರ್ವಪು. ೩–೩೩); ಮಡ್ಡಿ ಎಂದರೆ ಸಾಂಬ್ರಾಣಿ (ಪಶ್ಚುಪು. ೦೩೬). 'ಹಾಲುಮಡ್ಡಿ' ಪರಾ. ೭. ಸುಗಂಧದ್ರವ್ಯದ ಮೇಲೆ ಹಾಕುವ ತೆರಿಗೆ: ಹುಲ್ಲುಹಣಾ ವೃಪ್ತಿನ ಮೋಳೆ ಯಾಚಲ ವೈರು ಮಡ್ಡಿ ಪತಂಗ ಪೊಪ್ಪಳಿ ಶೀಗಿ ಕೇಪುಸೂಲು (ಪ್ರ.ಅಂ. ೦೯೩೯, ೪೨–೯೯; 1825). ಮಂಡ₁: ೬. ಗುಗ್ಗುಳ ಧೂಪ, ಮಂಡಧೂಪ, ಮಡ್ಡಿಧೂಪ, ಬಾಗಧೂಪ (ಪ್ರ.ಶಿ. ೪–೩೯). ಮಡ್ಡು₁: ೧. ಜಿಡ್ಡುತುಪ್ಪಕ್ಕೆ ಮಡ್ಡು ಬಹಳ (ಗಾದೆ). ೮. ಹೊಟ್ಟು: ಉಮಿ: "ಮಡ್ಡು: ಗುಂಗು" (ಕನ್ನಶಾ. ೨೦೦). ೯. (ಅಲಂ) ಸೊಕ್ಕು: ಮದ: ರಾಜಕೀಯಾಕಾ ಅವರ ತಲೆಯಲ್ಲಿಯ ಮಾಮಲತ್ತಿಯ ಮಡ್ಡನ್ನು ಇಳಿಸಿ . . . ನಿರ್ಣಾಯಕ ಅಭಿಪ್ರಾಯ ಕೊಟ್ಟರು (ರಾಕಹ. I, ೦೬); ನೂರಾರು ವೇಷ ಕಳಿಸಿದಿರಿ ಮತ್ತ ಇಳಿಸಿದಿರಿ ಮಾನ ಬೆಳಿಸಿದಿರಿ (ಹಾಡುಜಾ. ೪೦–೦೬). 'ಜಿಡ್ಡು' ನೋ. ಮಿಡ್ಡೆ: ೩. ಅದೇನು ಅನ್ನ ಹಾಗೆ ಹಿಸುಕಿ ಹಿಸುಕಿ ನೋಡುತ್ತೀರಿ? ಮಿಡ್ಡೆಯೋ? ಸ್ವಲ್ಪ ನೀರು ಹೆಚ್ಚಾಗಿ ಬಿಟ್ಟಿತೇನೋ! (ಶ್ರೀಕಥ. ೦೪೦). ಮೆಡ್ಡೆ: ೩. ಗೆಡ್ಡೆಯ ಹೊಲ ಹೀನ ಗೊಡ್ಡುಹೆಂಡತಿ ಹೀನ ಮೆಡ್ಡೆಯ ಬೋನವೆ ಹೀನ (ಶಂಕಾಶ. ೯೬–೬೩).

[ದೇ.॥ ತಮಿ. ಮಣ್ಣ; ಮಲ. ಮಟ್ಟು; ತುಳು, ತೆಲು. ಮಡ್ಡಿ]

**ಮಡ್ಡಿ₂**, ಮಡ್ಡು₂ (ನಾ). ೧. ಮೂಢ; ದಡ್ಡ: ಇದರಿಂದ ಮಡ್ಡಿ ಎಂದರೆ ಬುದ್ಧಿ ಚುರುಕಿಲ್ಲದ ವ್ಯಕ್ತಿ ಎಂಬ ಅರ್ಥ ಬಂದಿದೆ (ಪಶ್ಚುಪು. ೦೩೬); ಇಷ್ಟಾದರೂ ಮಡ್ಡಿ ಜನಾರ್ಧನನಿಗೆ ಜಡ್ಡು ಹರಿಯಲಿಲ್ಲ (ಪುರಿಪುಂ. ೯೮); ಮರುಳ, ಮಂಕ, ಮುಟ್ಠಾಳ, ಮಡೆಯ, ಮಡ್ಡಿ ಎಂಬ ಬಿರುದುಗಳನ್ನು ಹೊಂದಿದ್ದ ಐವರು ಶಿಷ್ಯರಿದ್ದರು (ಪಗಿಗ. ೧). 'ಮಡೆಯ' ಪರಾ. (ಗು). ೨. ಮೂಢತನದ; ತಿಳಿವಳಿಕೆಯಿಲ್ಲದ: ಆಯುಷ್ಯಕ್ಕೆ ಮಡ್ಡಿ ಜನರು ಏಕೆ ಆಶೆಪಡುವರೋ (ಶಂಥಾತ್ರ. ೨೬); ನೀನು ಮಡ್ಡಿ ಹುಡುಗ (ಹಾಪುರಾ. ೩೩). ಮಡ್ಡು₂: ೨. ಹಳ್ಳಿಯವು ಮಡ್ಡುಜನಗಳಾ? (ಬೆಳಾಪು. ೨೯೩).

[ದೇ.॥ ತಮಿ. ಮಟ್ಟ; ತೆಲು. ಮಡ್ಡಿ]

**ಮಡ್ಡಿ₃** 'ಮೊರಡು₂' ನೋ.

**ಮಡ್ಡಿತನ** (ನಾ). = ಮಡ್ಡತನ: ಪುಳಕದಲಿ ಮೈಯುಬ್ಬಿ ಅಚ್ಚರಿಯ ಸವಿಯುತಿರೆ ಆಡಿ ಜರೆಯುವರೆಮ್ಮ ಮಡ್ಡಿತನಕಿವರು (ದ್ರಾ.ಕ್ಷಿರಾ. ೨೦–೭); ಮದುಮೆಯಾಗುವುದು ಮೂರ್ಖತನ; ಮಡ್ಡಿತನ (ಅಂಕಪೂ. ೩೭).

[ ಮಡ್ಡಿ₂ + — ತನ ]

**ಮಡ್ಡಿಮರ** (ನಾ). ಹಾಲುಮಡ್ಡಿಯನ್ನು ಉತ್ಪತ್ತಿಮಾಡುವ ಮರ: ಚಿಲಕಧೂಪ, ಚಿಲಕಡಿ, ಗುಗ್ಗುಳಧೂಪ, ಮಡ್ಡಿಮರ, ಮಾದಿ, ಚಿತ್ತ, ಧೂಪ (ಪ್ರ.ಶಿ. ೦೩–೨೩೬).

[ ಮಡ್ಡಿ₁ + ಮರ₁ ]

**ಮಡ್ಡಿಸಾಂಬ್ರಾಣಿ** (ನಾ). ಬುದ್ಧಿಯಿಲ್ಲದವನು; ದಡ್ಡ: ಮಡ್ಡಿ ಸಾಂಬ್ರಾಣಿ, ಗುಣಿತಪದ. ಮಡ್ಡಿ ಎಂದರೆ ಸಾಂಬ್ರಾಣಿ. ಮಡ್ಡಿ ಪದದಂತೆ ಬುದ್ಧಿ ಚುರುಕಿಲ್ಲದ ಪ್ರಾಣಿ ಎಂಬ ಅರ್ಥದಲ್ಲಿ ಬಳಕೆಯಲ್ಲಿದೆ (ಪಶ್ಚುಪು. ೦೩೬); ನೀನು ಜಾಣ, ನಿನ್ನನ್ನು ಕಟ್ಟಿಸಿದರು. ನಾನು ತಿಳಿದೇ ಇದೆ ವಸ್ತು, ಮಡ್ಡಿಸಾಂಬ್ರಾಣಿ (ಶಂಪ್ರಾರಾ. ೨೫); ಈ ಹಳ್ಳಿಯವರ ಹಾಗೆ ನಾನೂ ಮಡ್ಡಿಸಾಂಬ್ರಾಣಿ ಎಂದು ಹೇಳುವೆಯೇನು? (ಮುಂಡುಪು. ೬೬). ⊳ ಮಡ್ಡಿ ಮತ್ತು ಸಾಂಬ್ರಾಣಿ ಎಂಬ ಎರಡು ಶಬ್ದಗಳಿಗೂ ಸುಗಂಧ ದ್ರವ್ಯ ಮತ್ತು ತಿಳಿಗೇಡಿ ಎಂಬ ಅರ್ಥಗಳಿರುವುದರಿಂದ ಇದು ಚಮತ್ಕಾರದಿಂದ ಮಾಡಿದ ಒಂದು ಕೂಡುನುಡಿ.

[ ಮಡ್ಡಿ₂ + ಸಾಂಬ್ರಾಣಿ. / ತಮಿ. ಮಟ್ಟೈಯುಜಾಪ್ಪಿರಾಣಿ; ಮಟ್ಟೈ ಯಾನ್‍ಜಾಪ್ಪಿರಾಣಿ ]

**ಮಡ್ಡು₁** 'ಮಡ್ಡಿ₁' ನೋ.

**ಮಡ್ಡು₂** 'ಮಡ್ಡಿ₂' ನೋ.

**ಮಡ್ಡು₃** (ನಾ). ಪಶುಗಳ ಯೋನಿ: ಆಗ ತಾಯಿಕುರಿ ಅದರ ಮಡ್ಡು ಮೂಸಿ ತನ್ನ ಮರಿಯೇ ಅಲ್ಲವೇ ಎನ್ನುವುದನ್ನು ನೋಡಿಕೊಳ್ಳುತ್ತದೆ (ಪಪೂರು. ೮೫).

[ < ಮಡಿರ್ ]

**ಮಡ್ಡು₄** (ನಾ). ೧. ಒಂದು ಬಗೆಯ ಚರ್ಮವಾದ್ಯ: ಪಟಹ ಮೃದಂಗ ಡಿಂಡಿಮ ಮಡ್ಡು[ಬಾಶಾಂ. ಡ್ಡ]ಜಝರ್ಝರ ಪಟು ಶಂಖಕಾಪಾಸ ಭೇರಿಗಳ ಜಟಿಲಿತನಾದವೆಸೆಯೆ ಕಂಪಭೂಪನ ಕಟಕ ನಡೆವುದು (ಕುಮಾರಾಂ. ೦೪–೬೪). ೨. ಒಂದು ಬಗೆಯ ಆಯುಧ (?): ಹೊಳೆವ ಮಡ್ಡು ಕಠಾರಿ ಡೊಂಕಣಿ . . . ಕಟಿಯ ಗಂಟೆಯ ದಳವನೀಕ್ಷಿಸು (ಕುಮ್ಮಾಇ. ೩–೨೦); ಜಾರಿಪರಿದನು ದನುಜ ಮಡ್ಡು ಕಠಾರಿಯಲಿ ಕರ್ಣಾಸ್ತ್ರ ಧಾರಾಸಾರದಲಿ ಮೈ ನೆನೆದು ಹೊಸಲಿಡುವರುಣವಾರಿಯಲಿ (ಕುಮ್ಮಾದ್ರೋ. ೦೬–೪೭).

[ಸಂ.]

**ಮಣ್**, ಮಣು, ಮಣ್ಣು (ನಾ). ೧. (ಬಿಸಿಲು, ಗಾಳಿ, ಮಳೆಗಳಿಂದ ಕಲ್ಲುಗಳು ಚೂರಾಗಿ ಉಂಟಾದ) ಸಣ್ಣನಾದ ಹುಡಿ; ಮೃತ್ತಿಕೆ: "ಮೃತ್, ಮೃತ್ತಿಕಾ – ಈ ೨ ಮಣ್" (ಹಲಾಯು. ೨೬–೩); ಐರಾವತದ ಹರವೃಷಭದ ಕೋಡ ಮಣ್ಣುಮನಾಕಾಶಗಂಗೆಯ ನೀರುಮಂ . . . ತಂದ ವಾರವನಿತಾಜನಕ್ಕಂ ಸಾಮಂತಚಕ್ರಕ್ಕಮುಡಲಿಕ್ಕಿ (ಶಂಕಶಾ. ೦೪–೦೬ ಪ); ದರಿಯ ಮಣ್ಣಂ ಕೋಡೊಳೆತ್ತಿ ತಂದವರ ಮುಂದಿಕ್ಕುವ ಭದ್ರಗಜವ್ರಜ ಮುಮಂ (ಶಂಕಶಂ. ೦೦೬–೨೦). 'ತಿರುಮಣ್' ಪರಾ. ೨. ಬೆಳೆ ಬೆಳೆ ಯುವ ಭೂಭಾಗ; ಜಮೀನು; ಗದ್ದೆ: ಕೊಟ್ಟೂನ್ನಾಮಗ್ರಮಂ ಅದರ್ಕ್ಕೆ ಆ ಪುಸುರಾತದ ಕದ ಕೆಱಗೆ ದಸಕಣ್ಣುಗಂ ಮಣ್ಣದ ಬೂ ಒಡೆ ಯದು ತನಗೆಯುಂ (ಎಕ. X (೩), ಶಶ್ರಬ. ೦೦೪–೦೩; ಸು. 500 ?); ಸ್ವಸ್ತಿಶ್ರೀ ಚೆನ್ನಿಯಮ್ಮರಸರ್ ದೇವಗ್ಗ್‍ಎ ಮಣ್ಣಂ ಕೊಟ್ಟರ್ (ಎಕ. XI, ಚಿತ್ರದು. ೨೪–೦; ಸು. 500 ?); ಮಣ್ಣಿಲ್ಲದೆ ಬೆಳೆವೆನೆಂಬ . . . ಪಚ್ಚಪಸಿಯೆಗ್ಗನು ಪೋಲ್ಕುಂ (ಧರ್ಮಾಮೃ. ೦–೬೭). ಮಣು: ೧. ಮರ ದೇವರಲ್ಲ ಉರಿಯಲ್ಲಿ ಬೆಂದಿತ್ತು ಮಣು ದೇವರಲ್ಲ ನೀರಿನ ಕೊನೆಯಲ್ಲಿ ಕದಡಿತ್ತು (ಸರ್ವಜ. ೮೨–೪೩೮); ಬಿಲ್ಲ ಪರವಾದಿ ಜೈನರನಿರದೆ ಸಂಪರಿಸಿ ಹಲ್ಲುಗಳ ಕಳೆದು ಮಣುವಿನ ಮೂಱು ಖಂಡುಗವನಲ್ಲಿ ಕಣಜಂ ಕಟ್ಟಿ ತುಂಬಿಸುವರು (ಬಸವ. ೬೨–೪೦). ೨. ಮೂಲಸ್ಥಾನದ ಸೋಮಯದೇವರಿಗೆ ಖಂಡಿತವಾಗಿ ಗದೆ ಮಣುವಿನ ಮೂಗುಳ ಗದೆ ಹೊಲನು ಮೂಗುಳ (ಎಕ. X, ಬಾಗೇಪ. ೦೬–೨; 1391). ಮಣ್ಣು: ೧. ಮಾಯೆಯಾಡಿಸುವ ಮಣ್ಣ ರೂಪು ಕಪ್ಪಡದ ಹಾಹೆ ಕಲ್ಲ ಜಂತ್ರ ಹುಲ್ಲ ಬೊಂಬೆ (ಬಸವ. ೮–೦೩೮); ಕರಿಯ ನೋಂಪಿಗೆ ತನುಜರಿರ ನೀವೆ ತರಲು ಬೇಕ್ಕೆ ಮಣ್ಣನೆಂದರೆ ಹರಿದು ತಂದೊಟ್ಟಿದರು ಮಿಗೆ ಮೃತ್ತಿಕೆಯ ಗಿರಿಯಂತೆ (ಕುಮ್ಮಾಆ. ೬೦೩. ೨೦–೯); ಮಣ್ಣಿಂದ ಕಾಯ ಮಣ್ಣಿಂದ ಮಣ್ಣಿಂದ ಸಕಲ ದರುಶನಗಳೆಲ್ಲ ಮಣ್ಣಿಂದ ಸಕಲವಸ್ತುಗಳೆಲ್ಲ ಮಣ್ಣು ಬಿಟ್ಟವರಿಗೆ ಆಧಾರವಿಲ್ಲ (ಪುರಂದ. ೨–೮೦ ಅನುಪಲ್ಲವಿ). ೨. ಬಿಜಲಿ ಮಹಾದೇವಿಯಾಳುತ್ತಿರೆ ಅಲ್ಲಿ ಕೊಟ್ಟುದು ಪದಿರ್ಕಣ್ಣುಗ ಮಣ್ಣು ಬತ್ತದ ಮಣ್ಣು (ಎಕ. XII, ಶಿರಾ. ೨೪–೩೮; 900); ಮಾಱುಪಸುಮಂ . . . ಕೊಟ್ಟಂ (ಎಕ. III (R), ಗುಂಡ್ಲುಪೇ. ೩೬–೦೦; 1049); ಮಣ್ಣು ಎಂದರೆ

ಭೂಮಿಗೆ ಮೇಲ್ಮೈಸುಕಾಗಿರುವ, ಭೂಳಾಗುವ ಮತ್ತು ಸಸ್ಯಗಳಿಗೆ ಆಹಾರ ಭೂತವಾಗಿರುವ ಪದಾರ್ಥ (ವೈವಘ. ೦). ೩. ಭೂಮಿ ; ನೆಲ : ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದು ಎಂದು ನೆನೆಸಿನೆದು (ಮಹಾದೇ. ೨. ೦೯-೩೦) ; ಕಣ್ಣ ನೀರ್ಗರ್ಳುಗಳನೊಗುತಡ್ಡಬಿದ್ದನು ಮಣ್ಣೊಳಾ ಗಜದ ಮುಂದವನು (ಕರತ. ೫೬-೫೫) ; ಮಣ್ಣಿನಿಂದ ಕೌರವ ಕೆಟ್ಟ, ಹೆಣ್ಣಿನಿಂದ ರಾವಣ ಕೆಟ್ಟ (ಗಾದೆ). ೪. ಧೂಳು : ಎಳ್ಳು ಮತ್ತು ಅಗರಿ ಇವು ಘಟ್ಟ (ಮಣ್ಣು ಕಸಾ) ತೆಗಿಯುವ ಜೀನಸುಗಳಿರುವುದರಿಂದ (ಮುಂಬವ್ಯ. ಪ್ರಸ್ತಾವನೆ. ೨೯). ೫. (ಆಲಂ) ಅನಿತ್ಯವಾದುದು : ಎನ್ನ ಕಾಯ ಮಣ್ಣು ಜೀವ ಬಯಲು ಆವುದ ಹಿಡಿವೆನಯ್ಯ ದೇವ (ಮಹಾದೇ. ೨. ೦೯-೦೨).

ಮಣ್ಣಂಗಟ್ಟಿ = ೧. ಮಣ್ಣಿನ ಉಂಡೆ. — ಮುದ್ದೆ. ೨. (ಆಲಂ) ಕೆಲಸಕ್ಕೆ ಬಾರದುದು : ನಿರುಪಯೋಗಿಯಾದುದು : ಏನೋ ರಾಜ್ಯ ಕೊಳ್ಳೆ ಹೋಗುತ್ತೆ ಅಂದರೆ ಏನಿಲ್ಲ ಮಣ್ಣಂಗಟ್ಟಿ (ಶ್ರಾವಿಸ್ವೇ. ೬೬). ಮಣ್ಣಾಗು = ೧. ಮಣ್ಣು ಹತ್ತಿಕೊಳ್ಳು : ಧೂಳಾಗು : ಮಣ್ಣಾಯಿತ್ತು ಮೈಯು ಪೀತಾಂಬರವು (ಪುರಂದ. ೨-೨೦೦-೫) : ಇಳಿವುದರೊಳು ಹೊಸವರಿಸೆಯಿಂದೆಂದನು ಕುಮಾರಿಯಿಂದಿಳಿಗೆ ಬಿದ್ದವನು ಮಾಸೆಯು ಮಣ್ಣಾಗಲಿಲ್ಲವು ಬಿದ್ದರು ಎಂದುಕೊಂಡೇಳ್ವರಂತವರು (ಅಂಶಾಕ. ೨೩೫-೬೫). ೨. (ಆಲಂ) ಕೇಡುಂಟಾಗು : ಇಂದುವರೆಗಂ ತಂಗಿಯೆಂದು ಕರೆದಿಪ ಬಾಯ್ಗೆ ಮುಂದೆ ಮಣ್ಣಾಯ್ತು (ಕಾಂಜಿರ. ೦೬೮-೯೦೦). ೩. ಮಣ್ಣಿನಲ್ಲಿ ಸೇರು ; ಮಣ್ಣಿನಲ್ಲಿ ಒಂದಾಗು : ನಮ್ಮೊಂದಿರವಂತಿಂತುಟೆಂದೇನುಮಣಿಯದೆ ಮಣ್ಣಾಗಿ ಕಲ್ಲಾಗುತುಂ. . . ಎಂತಕ್ಕೆ ಬಂದೆಂ ಸರಜನ್ಮಕ್ಕಯ್ಯ (ರಕ್ಷಾಕ. ೨) ; ಗೊತ್ತಿಹುದೆಲ್ಲರಿಗೆಮ್ಮ ಭವಿಷ್ಯವು ನಾಳೆಗೆ ಮಣ್ಣಾಗಲಿಹೆವು (ಇಂಚಾಕ. ೦೯೨-೦೦೦). ಮಣ್ಣಿಗೆ ಮಣ್ಣು ತಿನ್ನಿಸು = (ಆಲಂ) ಕಷ್ಟಪಡಿಸು ; ಹಿಂಸೆಗೊಳಿಸು : ದೊಡ್ಡ ಮನುಷ್ಯನಂತೆ ಆವಾಗಲೂ ವೇಷವನ್ನು ತಾಳಿಕೊಂಡು. . .ಪೋಲೀಸಿನವರಿಗೆ ಮಣ್ಣಿಗೆ ಮಣ್ಣು ತಿನ್ನಿಸಬೇಕು (ಚನ್ನಬೇ. ೩೦). ಮಣ್ಣಿಗೆ ಮಣ್ಣು ತಿನ್ನು = (ಆಲಂ) ಕಷ್ಟಪಡು ; ಹಿಂಸೆಗೊಳ್ಳು : ಶತ್ರುಗಳೊಡನೆ ಹೋರಾಡಿ ಮಣ್ಣಿಗೆ ಮಣ್ಣು ತಿಂದು ಹೋಗಿರುವನು (ಚನ್ನಬೇ. ೦೩೦). ಮಣ್ಣಿನ ಮಕ್ಕಳು = ರೈತರು : ಮಣ್ಣಿನ ಮಕ್ಕಳು ನಾವು (ಮಣ್ಣಹು. ೨೬೦). ಮಣ್ಣು ತಿನ್ನು = ೧. ಮಣ್ಣನ್ನು ಮುಕ್ಕು ; ಮಣ್ಣನ್ನು ತಿನ್ನು : ಕಂದಾ ಬೇಡವೊ ಮಣ್ಣು ತಿನ್ನಬೇಡವೊ (ಪುರಂತ. ೨-೨೦೩ ಪಲ್ಲವಿ). ೨.=ಮಣ್ಣಿಗೆ ಮಣ್ಣು ತಿನ್ನು : ಅವರೆಲ್ಲಾ ಮಣ್ಣು ತಿಂದು ಹೋಗುತ್ತಾರೆ (ಮಣ್ಣುಪ. ೦೬೮). ಮಣ್ಣು ತಿನ್ನೋ ಕೆಲಸ = (ಆಲಂ) ನಿಕೃಷ್ಟವಾದ ಕೆಲಸ ; ಪೆಚ್ಚು ಕೆಲಸ : ನನಗೆ ಹೇಳದೇಲೇ ಮಣ್ಣು ತಿನ್ನೋ ಕೆಲಸ ಮಾಡಿ ಕೊಂಡಿದ್ದಾರೆ (ಕಲಪ. ೨೮೩). ಮಣ್ಣುಬೀಳು = ೧. ಧೂಳು ಉದುರು : ಕಣ್ಣಿಗೆ ಮಣ್ಣು ಬಿದ್ದು ಕೆಂಪಾಯಿತು (ರೂಢಿ). ೨. (ಆಲಂ) ಹಾಳಾಗು ; ನಾಶವಾಗು : ನಿಮ್ಮ ದಮ್ಮಯ್ಯ. ಅಂತಹವುಗಳನ್ನು ಪ್ರಕಟಿಸಬೇಡೀಂದ್ರ. ಎಲ್ಲಾದರೂ ಕೆಲಸದ ಬಾಯಿಗೆ ಮಣ್ಣು ಬಿದ್ದೀತು (ಸಂಧ್ಯಾರಾ. ೦೩೫). ಮಣ್ಣು ಮಸಿ = ಕೆಲಸಕ್ಕೆ ಬಾರದುದು ; ಅಪ್ರಯೋಜಕವಾದುದು : ನಾನು ಕಾಣೆನೆ ಅವಳು ಕೊಳ್ಳುವುದು. ಸ್ನೋ, ಪೌಡರು, ಚೋಳಿಪೀಸು, ಮಣ್ಣುಮಸಿ (ವೈದ್ಯ. ೧೨೯). ಮಣ್ಣು ಮುಕ್ಕಿಸು = ಮಣ್ಣಿಗೆ ಮಣ್ಣು ತಿನ್ನಿಸು : ಬಿಜಾಪುರದ ರಣದುಲ್ಲಾಖಾನನನ್ನು ಪಟ್ಟಣದ ಬಳಿ ಮಣ್ಣು ಮುಕ್ಕಿಸಿದ ವೀರ ಕುಮಾರಯ್ಯ (ತಪೀವ. ೦೦) : ಮೊಗಲ ಸಾಮ್ರಾಟ್ ಔರಂಗಜೇಬನನ್ನು ಮಣ್ಣು ಮುಕ್ಕಿಸಿದ ಮರಾಠಿಗರ ಭುಜಬಲ ಅಂತಃಕಲಹಗಳಿಂದ ಕುಗ್ಗಿ ಹೋಗಿತ್ತು (ಭಾರತ. ೯೨೫). ಮಣ್ಣು ಮುಕ್ಕು = ೧. ನೆಲದ ಧೂಳನ್ನು ತಿನ್ನು, — ಮುಕ್ಕು : ಬಲವಾದ ಉಕ್ಕಿನ ಕೈಗಳ ಹೊಡೆತದಿಂದ ಫಜ್ ಒಮ್ಮೆಲೆ ನೆಲಕ್ಕೆ ಬಿದ್ದನು. ರಕ್ತ ಮುಳುಗಿದ ಅವನ ಬಾಯಿಯು ಮಣ್ಣು ಮುಕ್ಕಿತು (ಬಂಗಾಪ. ೯). ೨. (ಆಲಂ) ಕಷ್ಟಪಡು : ಭಂಗ ಪಡು : ಹಣೆಬರಹ ಎಂದು ಕುಳಿತಿದ್ದರೆ ಒಂದಲ್ಲ ಒಂದು ದಿನ ನಾವು ಮಣ್ಣು ಮುಕ್ಕುತ್ತೇವೆ (ಕಾವೇರಿ. ೬೬) : ವೈದ್ಯನು . . . ಮಣ್ಣುಮುಕ್ಕಿದವನಂತೆ ಬೆಪ್ಪಾಗಿ ಒಂದೆಡೆಯಲ್ಲಿ ನಿಂತು ಕೊಂಡಿದ್ದನು (ಚನ್ನಬೇ. ೦೬೫). ೩. ಹಾಳಾಗು ; ನಾಶವಾಗು : ಜಗತ್ತಿನಲ್ಲಿ ಸಾಮ್ರಾಜ್ಯಗಳನ್ನಾಳಿದ ದೊರೆಗಳೂ ಚಕ್ರವರ್ತಿಗಳೂ ಮಣ್ಣು ಮುಕ್ಕಿ ಹೋಗಿದ್ದಾರೆ (ಕುಜಕು. ೧೬೮). ಮಣ್ಣು ಹೊರು = ೧. ಮಣ್ಣು ತುಂಬಿರುವ ಮಂಕರಿಯನ್ನು ತಲೆಯ ಮೇಲೆ ಹೊತ್ತು ಕೊಳ್ಳು : ಮಣ್ಣು ಹೊರುವವ ತಲೆಗೆ ಬೆಣ್ಣೆ ಹಚ್ಚಿಕೊಂಡಂತೆ (ಗಾದೆ). ೨. (ಆಲಂ) ದುಡಿ ; ಶ್ರಮಿಸು : ಅವನಿನ್ನೂ ಬಹಳ ಮಣ್ಣು ಹೊರ ಬೇಕು (ರೂಢಿ). ೩. (ಪಾಠವನ್ನು ಕಲಿಯಲು) ಶಾಲೆಗೆ ಹೋಗು : ಚಲಂ ಒಂದು ದಿನವೂ ಶಾಲೆಗೆ ಮಣ್ಣು ಹೊತ್ತಿರಲಿಲ್ಲ (ಎವೆ.ತೀಕ. ೦೫೯). ಮಣ್ಮಾಡು, ಮಣ್ಣು ಮಾಡು = ೧. (ಆಲಂ) ಹೂಳು : ಸಮಾಧಿ ಮಾಡು : ಎತೆಯೊಕ್ಲೀಸ್ ಅಣ್ಣನನ್ ಮಣ್ ಮಾಡಿ ಕಿರ್ಬ್ನೆಲದ ಕಟಿದ ರೊಳ್ ಪುಗಿಸಿ ಮನ್ನಿಸಿದನೆಂಬರ್ (ಅಂತಿಗೊ. ೩-೩೦) ; ಇಂದೊ ನಾಳೆಯೊ ಸಾಯುತ್ತಾಳೆ. ನಾನು ಇವಳನ್ನು ಮಣ್ಣು ಮಾಡಿ ಎಲ್ಲಿಯಾದರೂ ಹೊರಟು ಹೋಗುತ್ತೇನೆ (ಶ್ರೀರಾಮ. ೧೦೨). ೨. ಹಾಳು ಮಾಡು ; ನಾಶಪಡಿಸು : ಬಂಗಾರದಂತಹ ನಾ ಕೊಟ್ಟ ದಿನವನು ಮಣ್ಣುಮಾಡಿದೆಯೆಂದು . . . ನಿನ್ನನೆ ನೋಳ್ಪನು ದಿನಪನು ತಾ ಪೋಗುವಂದು (ಇಂಚಾಕ. ೦೯೯-೩೨).

[ದೇ.॥ ತಮಿ. ಮಣ್ ; ಮಲ. ಮಣ್, ಮಣ್ಣು ; ಕೊಡ. ಮಣ್ಣ್ ; ತೊದ. ಮೊಣ್ ; ತುಳು. ಮಣ್ಣು ; ತೆಲು. ಮನ್ನು, ಮನು]

ಮಣ, ಮಣವು (ನಾ). ೧. ತೂಕದ ಒಂದು ಪ್ರಮಾಣ ; (ಸುಮಾರು) ನಲವತ್ತುಸೇರು ; P ಈ ತೂಕದ ಪ್ರಮಾಣವು ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸವಾಗುತ್ತದೆ : ಆನೆಗೈದು ಮಣದ ಆಹಾರವ ತಾನೆ ತಂದು ಕೊಡುವ ದೀನರೊಡೆಯ ಶ್ರೀನಿವಾಸದಯಾನಿಧಿ (ಪುರಂದ. ೦-೫೬-೨). ೨. (?) : ಕೈವರದೊಳ್ ಒನ್ದು ಮಾನ್ಯಂ ಮಣಮುಂ ಮೂಗಣ್ಡುಗಂ . . . ಪಡೆದೊರ್ (ಎಕ. X (೪), ೩೪೭. ೦೦೬-೬೩ ; 850). ಮಣವು : ೧. ಆಱು ಮಣವಿನಂಡಗೆಯ ತಂದೆತ್ತಿಕೊಳ್ಳನೆ (ಗುರುಚಾ. ೦೯-೫).

[←ಅರ. ಹಿಂ. ಮನ್ ; ಮರಾ. ಮಣ./ಸಂ. ಮಣ]

ಮಣಕ$_1$, ಮಣಿಕ$_1$ (ನಾ). (ಪ್ರಾಯಕ್ಕೆ ಬರುತ್ತಿರುವ) ಹಸು, ಎಮ್ಮೆ ಮೊದಲಾದ ಪ್ರಾಣಿಗಳ ಕರು ; ಪಡ್ಡೆ ; ಕಡಸು : ಕಣಾಕದ ಕಡು ಬಾಗಿ ಮಣಕವಮ್ಮ ಹಯನಾಗಿ ಕುಣಿಕುಣಿದು ಕಡೆವ ಸತಿಯಾಗಿ ಬೆಳವಲದ ಅಣಕ ನೋಡೆಂದ (ಸರ್ವಜ್ಞ. ೦೬೦೯) ; ಮಣಕಕೆ ಸೇರುತುಪ್ಪ ಮನಿಯೊಳ ಗಾದರೆ ಮಣಕಕೆ ಬಂದದೇನು (ಶಿಶ್ರಸು. ೩೩-೨). ಮಣಿಕ$_1$ : ಪೊಸನಸೆಯ ಸೊವಡನಾಘ್ರಾಣಿಸಿ ಮಣಿಕದ ಮಿಡುಕುಗಚ್ಚೆಯೊಳ್ ಮೊಗವೆತ್ತುತೆಸೆದುದು ವೃಷಮುಮರರನೇಡಿಸುವವೊಲೇನುಂಟೆ ನಿಮಗಮಿಾ ಸುಖಮೆನುತಂ (ಲೀಲಾವ. ೫-೯೩); ಮಣಿಕದ ನಸೆಗಸವಸದಿಂದಣಿಯರಮಾಡುವ ಗವೇಂದ್ರನಂ ಸತಿ ಕಂಡಳ್ (ಅನಂಪು. ೯-೦೨೦). [ದೇ.॥ ತಮಿ. ಮಣಾಚ್ಚು = ಕುರಿಮರಿ]

ಮಣಕ$_2$ 'ಮಣಕು' ನೋ.

ಮಣಕ$_3$, ಮಣಗು$_2$ (ನಾ). ೧. ಮೊಸಳೆ ; ಮಕರ : ಇದ್ದಕ್ಕಿದ್ದಂತೆ ಮಣಕ ಬಂದು ಅವಳ ಕಾಲನ್ನು ಗಟ್ಟಿಯಾಗಿ ಕಚ್ಚಿ ನೀರಿಗೆ ಎಳೆಯಿತು (ಕತ್ಸ. ೨೫). ಮಣಗು$_2$ : ೨. ಅಗಲವೂ ಮತ್ತು ಉದ್ದವೂ ಆದ ಒಂದು ಬಗೆಯ ಮೀನು. [← ತುಳು. ಮಣಂಗ್]

ಮಣಕಾಲು 'ಮೊಟಿಕಾಲ್' ನೋ.

ಮಣಕು, ಮಣಕ$_2$, ಮಣಾಕು (ನಾ). ೧. ಹಳೆಯ ಎಣ್ಣೆಯ ಜಿಡ್ಡಿನ ವಾಸನೆ ; ಕಮಟುವಾಸನೆ; ದುರ್ವಾಸನೆ : "ತಿಲ_ಸ್ನೇಹನೇ, ಮಣಕಿ

ನೊಳ್" (ಗಾಕಕ್ಕ. ೨೨೬); ಅವ ಜಾತಿಯದಾರೆಂದಱಿಯದೆ ಮಿಂದು ಮುಟ್ಟುಂಕಿಯುಮಱಿಯದ ಮಣಕಿನ ಬಣಂಬೆಗೂನೆಱಗುವೆನೇ (ದುಕೋತ. ೪-೪೯); ಅವರಂ ಕರದು ಮಂಡೆಯೊಳ್ ಮಣಕೇಱಿರ್ದ ಜಡೆಗಳಂ ಲೋಚಂ ಮಾಡಿಸಿ (ಕೃಷ್ಣ. ೯-೦೯ ವ). ೨. (ಅಲಂ) ದುರ್ಗುಣ: ಗುಣಕೃತಿಯನು ಕಿವಿಯಿರ್ದು ಕೇಳದ ಮನವೆಣಿಸಿ ಮೆಚ್ಚದವರನಪ್ಪ ಮಣಕಿನಧಮಗೋದಿ ಪೇಳ್ವವ ಪೊಲ್ಲನು ಪೆಣಕೆ ಪಾಡುವ ಸುಗಾಯಕನ (ವರ್ಧಕ. ೦-೨೨). ೩. ಹೊಲಸು; ಕೊಳೆ; ಕೊಳಕು: ತಲೆಯೊಳ್ ತೀವಿದ ಹೇನು ಸೀರ್ವ ಣಕನೆಂತುಂ ಬಾರ್ಚ ತಾಂ ತಾಳ್ದಿಯಾ ತಲೆಯಂ ನಿರ್ಮಳಮಪ್ಪಿನಂ ಪಣಿಗೆ ಪಾಟ್ಟುಂ (ಧರ್ಮಕ. ೧೧-೧೨). ಮಣಕ₂: ೨. ಅಣಕವನಾಡುತ ಐವರ ಕೂಡೆ ಸೆಣಸುತ ನಾಲ್ವರ ಕೈವಿಡಿದು ಮಣಕದಿಂದಲಿ ಅಱು ಮುಂದಿಯ ಕೂಡೆ ಉಣ ಕುಳಿತಲ್ಲಿ ಮೈಮಱೆದೆನಕ್ಕ (ಶಿವನೀ. ೦೯೬-೬೪೪). ಮಣುಕು: ೩. ಬಾಳಿಕೆ ಬರುವುದೆಂದುಕೊಂಡ ಸೀರೆ ಆರು ತಿಂಗಳಿಗೇ ಹರಿಯುತ್ತ ಬಂದುದಲ್ಲದೆ ಮಣುಕು ಒಡೆದು ಗಂಜಿಯಾಗಿತ್ತು (ಅರಪ. ೦೭೦). [ದೇ.॥ ಮಲ. ಮಣಕ್ಕ = ವಾಸನೆಯುಂಟಾಗು, ವಾಸನೆ ಬರು; ತುಳು. ಮಣ, ಮಣಕ್ = ಅಂಟಿಕೊಳ್ಳುವ; ಜಿಗುಟಾಗಿರುವ]

**ಮಣಗು₁** (ಕ್ರಿ). ಹತೋಟಿಗೆ ಬರು; ವಿನೀತನಾಗು; ವಿನಮ್ರನಾಗು: ಆ ಕಾಲದಲ್ಲಿ ಅಣಗಿ ಮಣಗಿ ಇದ್ದ ಮಹಮ್ಮದೀಯರನ್ನು 'ಮುಸಲಿಮಾನು' (ಮುದಿಮರ)ಗಳೆಂದು ಗೇಲಿ ಮಾಡಿದವು (ಶಾಓಜೀ. ೯೬). 'ಅಣಗು' ಪರಾ. [ದೇ.॥ ತೆಲು. ಮಡುಂಗು, ಮಣಂಗು]

**ಮಣಗು₂** 'ಮಣಕ₃' ನೋ.

**ಮಣಮಣ** (ನಾ). ಒಂದು ಅನುಕರಣ ಶಬ್ದ: ಬಾಯಲ್ಲಿ ಮಣಮಣ ಮಂತ್ರ! (ಸ್ವಸ್ವಪೊ. ೩೦); ಅರೆತಾಸಿನ ತನಕ ತಾಳ್ಮೆಗೆಟ್ಟು ಮಣಮಣ ಅನ್ನುತ್ತಿದ್ದನು (ಶಾಂಕೃ. I. ೪೩೩).

**ಮಣಮಣಗುಟ್ಟು** (ಕ್ರಿ). ತನ್ನಷ್ಟಕ್ಕೇ ತಗ್ಗುಧ್ವನಿಯಲ್ಲಿ ಹೇಳಿಕೊಳ್ಳು; ಗೊಣಗೊಣಿಸು: ತಂತ್ರ ಅರಿಯದೇ ಮಂತ್ರ ಮಣಮಣಗುಟ್ಟೀ (ಸೂರ್ಯಪಾ. ೩-೦೩). [ಮಣಮಣ + ಕುಟ್ಟು₁]

**ಮಣಮಣೆ** (ನಾ). ಒಂದು ಅನುಕರಣ ಶಬ್ದ: ರಣವು ದಾನವಕುಲ ವಿಹಿತವಾ ರಣವೂ ಹರಿಯೋ ಮಾರಿಯೋ ಮಂಡಣಿಸಿ ಕಳಹಿದ ಕೃತ್ತಿಯೊ ಸುರರೆಮ್ಮ ವಲ್ಲಭರು ಸೆಣಸಿ ಮಡಿದರು ಶಿವಯನುತ ಮಣಮಣೆಯ ಹೊರಳುವ ದಾನವಿಯರುಬ್ಬಣವೆನಿಪ ಹಾಹಾರಭಸವಂಬರವನಲ್ಲಱಿಯೆ (ನಿಶಾಗ. ೮-೦೭-೩೩).

**ಮಣಮಣಿಸು** (ಕ್ರಿ). = ಮಣಮಣಗುಟ್ಟು: ಗೆಣೆಯನ್ನ ಕಳಕೊಂಡ ಒಣಮಾರಿ ಮಾಡಿಕೊಂಡ ಮಣಮಣಿಸಿ ಊರ ತಿರುಗ್ಯಾಳೊ (ಜನಪ. ೪೦). [ಮಣಮಣ + — ಇಸು₃]

**ಮಣಲ್**, ಮಣಲು, ಮರಳ್ಳು₂, ಮಲರ್₄, ಮಳಲ್, ಮಳಲು₂ (ನಾ). (ಸಮುದ್ರ ಅಥವಾ ನದೀತೀರ, ಮರುಭೂಮಿ ಮೊದಲಾದ ಕಡೆಗಳಲ್ಲಿ ದೊರಕುವ) ಮಳೆ, ಬಿಸಿಲುಗಳ ಪ್ರಭಾವಕ್ಕೊಳಗಾಗಿ ಸಣ್ಣ ಸಣ್ಣ ಚೂರಾಗಿರುವ ಕಲ್ಲಿನ ಕಣಗಳ ರಾಶಿ; ಉಸುಕು; ಹೊಯಿಗೆ: "ಸಿಕತಾ, ವಾಳುಕಾ _ ಈ ೨ ಮಣಲ್" (ಶಬಾಯು. ೦೦೦-೪೬); ಮುಡಿಯ ಕುಚೆಯುಗದ ಜಘನದ ಕಡುವಿಣ್ಪಿಂ ಮಣಲೊಳಟ್ಟಿ ಬರೆ ಮೆಲ್ಲಡಿಗಳ್ (ಶಂಶಭಾ. ೭-೬೩); ಅಯ್ಯ ಪುರುಷಂಬರೆಗಂ ನೆಱೆ ತೋಡುಗುಪ್ಪ ನೀರ್ ಮಣಲೊಱವಾಗಿ ಬರ್ಕುಂ (ಶೋಕೋಕ. ೩-೩೦); ಮಣಯಲ್ಲದ ಕಲ್ ಜ್ಯೋತಿಷ್ಮಣಮಲ್ಲದ ಪುಲ್. . . ಮುತ್ತಿನ ಮಣಲಲ್ಲದ ಪುಣಿಲುಮಿಲ್ಲ ತತ್ಪುರಿಸರದೊಳ್ (ಚಂದ್ರಪ್ರ. ೦೦-೪೦). ಮಣಲು: ಮಣಲ ಲಿಂಗ ವನಳ್ಳಱು ತೋಱೆ (ಚಂಶೀರ. ರೇ. ೨೯೩-೨೦); ಕಾಡವರೆ ಮಣಲು ಸುಣ್ಣವಿಮಿಡಿತ ವಜ್ರೋಪಮಾನ ಶಿಷ್ಮರೆನಿಸಿರ್ಕುಂ (ಜಪುರ. ೦೬-೨೬); ಮಣಲಿಂ ಮಹಾಲಿಂಗಮುಂ ಮಾಡಿ (ಶಾವತಂ. ೩-೧೮). ಮರಳ್ಳು₂: ಗಂಗಾನದಿಯ ಶಾಖೆಯಾದ ಹೂಗ್ಲೀನದೀಮುಖದಲ್ಲಿಯೂ ಮರಳು ಹೀಗೇ ತುಂಬುತ್ತದೆ (ಸಸಾ. ೨೩). ಮಲರ್₄: ಮರಲ್ ಅರಲ್ ಎರಲ್ ಎಂಬಿವಱ ಮಧ್ಯರೇಫಕ್ಕೆ ಲತ್ವಮುಂ ಸಮುಚ್ಚಯಾಪಶಬ್ದದಿಂದಂತ್ಯಲತ್ವಕ್ಕೆ ರೇಫಮುಮಾಗಿ ಮಲರ್ ಅಲರ್ ಎಲರ್ ಎಂದು ವಿಕಲ್ಪದಿನಕ್ಕು ಪಿರಿದೆಂಬುದಱು ಮರಲೆಂಬುದಱ ರೇಫಕ್ಕೆ ಣತ್ವಮುಮಾಗಿ ಮಣಲೆಂದು ಮುಂಟು (ಶಮದ. ೨೯ ವೃ.). P ಈ ಶಬ್ದರೂಪವು ವಿರಳವಾಗಿದ್ದು, ಬೇರೆಯ ಕಾವ್ಯ ಪ್ರಯೋಗ ದೊರೆತಿಲ್ಲ. ಮಳಲ್: ಸಾಗರಿಕೆಯಂ ಗಂಧೋದಕಕನಕದೀರ್ಘಿಕೆಗಳೊಳ್ ರನ್ನದ ಮಳಲ್ಗಳಂ ಸುರಿಯಲುಂ . . . ಕರೆದು ಪೇಟ್ಟಿ ಮನೋಹರಾಲಾಪಂಗಳಂ ಕೇಳುತ್ತಂ (ಕಾದಂಪೂ. ೦೦೦೬); ಮಳಲಂ ಪಿಱಿದಣ್ಣೆಯನಱಿಸುವ ನಿರ್ಬುದ್ಧಿಯುಮಂ ಪೋಲ್ಕುಂ (ಧರ್ಮಾಮೃ. ೬-೦೬೮); ಮಳಲೊಳ್ ತೈಲಂಗಳಂ ಹಿಂಡಲಕ್ಕು. . . ಕಱಿಯಲ್ ಬಕ್ಕುಗ್ರದ ವ್ಯಾಘ್ರಮಂ (ಸೋಮೇಕ. ೯೯). ಮಳಲು₂: "ಫುಳಿನಲು ಮಳಲು" (ಕನ್ನಕೈ. ೦೨); ಹಾಲ ತೊಱಗೆ ಬೆಲ್ಲದ ಕೆಸಱು ಸಕ್ಕರೆಯ ಮಳಲು ತವರಾಜದ ನೊರೆ ತೆರೆಯಂತೆ ಆದ್ಯರ ವಚನ (ಬಸವ. ೨೯೦); ಬಿಂಗೆ ಹುದಿದ ಬಿಸಿಯ ಮಳಲಂ ತರಿಸಿ ಬಾಯ್ದುಂಬಿಸಿದಪೆಂ (ಬಸಪು.೦೦-೦೯). [ದ್ರಾ॥ ತಮಿ. ಮಲ. ಮಣಲ್; ಕೊಡ. ಮಣ; ಕೋತ. ಮಣ್ಲ್; ಪರ್ಜಿ. ಮನ್]

**ಮಣಲಿ** (ನಾ). ಒಂದು ಊರಿನ ಹೆಸರು: ನೊಕ್ಕಿಗೋಡು ಮಣಲಿ ಮಕ್ಕಿಯುಸ್ಸ ಮುಂದುವಕ್ಕಗ್ರಾಮ (ಪ್ರಮುಅಂ. ೦೯೦೪, ೦೦-೦೦; 700); ಅತ್ತವಳಿಗೆಯ ಮಣಲಿ ನಾಡ ಮೊರಸು ಹಂನೆರಡು (ಎಕ. V, ಪೇಲೂರು. ೬೦-೨೩೬; 1117). [?]

**ಮಣಲು** 'ಮಣಲ್' ನೋ.

**ಮಣಲೆ ?** (ನಾ). ಒಬ್ಬಾತನ ಹೆಸರು (?): ವಿನೋದಿಮಣಲೆಯುರ ತಳಿಯಾರಾಳ್ವ ತಿಜ × (ಎಕ. III (R), ಗುಂಡ್ಲುಪೇ. ೪೩-೪; 750). 'ಶೌಚಮಣಲೆ' ಪರಾ. [?]

**ಮಣಲೆವಾಡಿ**, ಮಳಲವಾಡಿ (ನಾ). ಒಂದು ಊರಿನ ಹೆಸರು: ನರಸಿಂಗೇಸ್ವರವಮ್ಮಾಡಿಸಿ ಮಣಲೆವಾಡಿಯನಷ್ಟಮ್ನತರಸಿದ್ಧಿಯಾಗೆ ಬಿಟ್ಟಂ (ಎಕ. XIV, ಮೈಸೂರು. ೦೨೬-೭; 900); ಶ್ರೀವಮ್ಬರ್ಗಳದ ತೀರ್ಥಕ್ಕೆ ಮಣಲೆ ವಾಡಿಯನಷ್ಟರ್ವತರಂ ಸಿದ್ಧಿಯಾಗೆ ಬಿಟ್ಟು (ಎಕ. III, ಮೈಸೂರು. ೦೩-೦೦; 1128). ಮಳಲವಾಡಿ: ತಿಪ್ಪೂರು ಕನ್ನಂಬಾಡಿ ಮಳಲವಾಡಿಯೊಪ್ಪವ ಮನ್ನೆಯರುಗಳು ತಪ್ಪದೆ ಲಗ್ಗೆಗೇಱಿದ ಬಿಳರನು ಕೊಲ್ಲ ದಪ್ಪವನೇ ನೆಂಬೆನೆದನು (ಕಂಪಪ. ೦೯-೫೬). [ಮಣಲೆ ? + ವಾಡಿ₂]

**ಮಣಲ್ತಾಣ** (ನಾ). ಮರಳಿರುವ ಸ್ಥಳ; ಪುಳಿನ ಸ್ಥಳ: ಲತೆಯ ಪೊದಱ ಪುದುವಿಂ ಪೆಱದ ಮಣಲ್ತಾಣಂಗಳುಮಂ (ಕಾದಂಪೂ. ೨೬೬). [ಮಣಲ್ + ತಾಣ]

**ಮಣಲ್ದಿಂಟೆ**, ಮಳಲ್ದಿಂಟೆ (ನಾ). ಮರಳಿನ ದಿಬ್ಬ,—ದಿಣ್ಣೆ: ವೈತರಣಿಯ ಪಿರಿಯ ದರಿಯಂ ಮೆಟ್ಟಿ ಸುಣ್ಣಾಲಂ ಮಣಲ್ದಿಂಟೆಗೆತ್ತದಱ ಪರಿತಪ್ತ ಲೋಹರಜಸ್ಸಿಕಶಿಳತಳದೊಳ್ ನೆಯ್ಯಸೀಡಾಡುವುದುಂ (ಶಾಂತಿಪು. ೬-೧೦೩). ಮಳಲ್ದಿಂಟೆ: ಉರಿವರಿವ ಬಿಸಿಲ ಬೆಂಕಿಯ ಭರದೆ ಮಳಲ್ದಿಂಟೆ [ಶಾಕಾಂ.ಲ್ದಿಂಟೆ] ಕಾಯ್ದು ಸಿಡಿಯುತ್ತಿರೆ (ಜಗನ್ನಾ. ೧೬-೭೪); ಉಱೆ ಮಳಲ್ದಿಂಟೆಯುಂ ಶ್ರೋಣಿ ಮೀಱೆಂ ಚಪಲಾಂಗು . . . ಕಂಠಂ ಕಂಬುವಂ ತಾಂ ಪಟ್ಟಿಯಲೆಸೆದಳಾ ಕಾಂತೆ (ರಾಜ್ಯಟಿ. ೬-೬೪). [ಮಣಲ್ + ತಿಂಟೆ (< ತಿಟ್ಟು₃)]

**ಮಣಲ್ದಿಣ್ಣೆ**, ಮರಳದಿಣ್ಣೆ (ನಾ). = ಮಣಲ್ದಿಂಟೆ: ಚೆನ್ನೆಯರ್ ಪಾಱುಗುಪ್ಪೆಯನಾಡುವ ಮಣಲ್ದಿಣ್ಣೆಯ ನೋಡಿ ಹಿಗ್ಗಿದರು

(ಕೋಹಕ. ೯-೩೯). **ಮರಳುದಿಣ್ಣೆ** : ಇವೆರಡು ತುದಿಗಳ ನಡುವೆ ಮರಳುದಿಣ್ಣೆಕಲ್ಲು ಸಾಲಾಗಿವೆ (ಹೂಬಿವ. ೩೯೬). [ ಮಣಲ್ + ದಿಣ್ಣೆ ]

**ಮಣಲ್ಲೂರ್** (ನಾ). ಒಂದು ಊರಿನ ಹೆಸರು : ಮಣಲ್ಲೂರ ರಜಾವಣ್ಣಾಕ ××× ಬೆಳ್ಗಿಟಿ ಎಮ್ಮಗೆ ಕೇಟ್ಬು (ಎಕ. XII, ತಿಪಟೂ. ೩೬-೪ ; 961). [ < ಮಣಲ್ ? + ಊರ್ ) ]

**ಮಣಲ್ವಿಟ್** (ಕ್ರಿ). ಮರಳನ್ನು ಹಿಂಡು : ಅದೃಶ್ಯರಾಗಿ ಪೋಗಿ ಪಾತ್ರಮಾಯಂದದಿಂ ಮುಂದೆ ಬಂದುಯ್ಗುಟ್ಟಿಯುಂ ನೀರ್ಗಡೆದುಂ ಮಣಲ್ವಿಟ್ಟುತ್ತುಮಿರ್ದುಂ ಮುನ್ನಿನಂತೆ ನುಡಿದೊಡೆ (ಕೀಯಾಪು. ೧೪-೧೦೪ ವ). [ ಮಣಲ್ + ಪಿಟ್ ]

ಮಣವಾಳ್ಗೊಳಿ (ನಾ). ಒಂದು ಊರಿನ ಹೆಸರು : ಉಭಯುತಯೋರ್ವ್ಮಣವಾಳ್‌ಗೊಳಿ ಮಣಗಿಯುರ್ನಿಧಿಪುರವರ್ ಮಣಲಿ ನೆರೆಣ್ಣೂರ್ ಪಡೆಪ್ಪರ್ ವಾಸಿನಾವರ್ (ಪ್ರಕಾ. ೧೯೦೬,೦೦-೧೦ : 700). [ ? ]

**ಮಣವು** 'ಮಣ' ನೋ.

**ಮಣಿ$_1$** (ಕ್ರಿ). ೧. ಬಾಗು ; ಬಗ್ಗು : ಮಹಾನುಭಾವಿಗಳ ಸಂಗ ಮಣಿದ ಅಲಗಿನ ಪೊನೆಯು ಗುಣದಂತಿರಬೇಕು (ಪೋಳಿಪೂ. ೬೬-೩೩೦) ; ಇಂತು ಮದಿರಾಪಾನಮಂ ಮಾಡಿ . . . ಕುಣಿಯುತುಂ ಮಣಿಯುತುಂ . . . ಮನಂಗೊಳಿಪ ತದ್ವನಿತಾಜನಮಧ್ಯದಲ್ಲಿ (ಉದ್ಭಟ. ೫-೯೦ ವ) ; ಮಣಿದು ಹಿಡಿದೆತ್ತಿದನು ರಾಯನ ಹಣೆಯುನನುಪಮಕರುಣಾನಿಧಿ (ಕುಮಾಕ. ೭-೨೬). ೨. ಕುಸಿ ; ಕುಗ್ಗು : ಮಣಿದುದಮರಾಚಲಂ . . . ಗುಣಿಯೊಳಿಳದುದು ವಿಂಧ್ಯಪರ್ವತಂ (ಶಂಬಪೂ. ೧೦-೨೭). ೩. ವಂದಿಸು ; ನಮಸ್ಕರಿಸು : "ಮಣಿ—ನಮನೇ, ಭಯ, ರತ್ನಯೋಃ" (ಕಮಾ) ; ಅಣುರೇಣುಮಧ್ಯದಲಿ ಗುಣಭರಿತ ನೀನೆಂದು ಮಣಿವುತಿಪ್ಪೆನಯ್ಯ (ದೀಪಾಕ. ೨-೩); ನಾಗಭೂಷಣಚಿತ್ರವಲ್ಲಭೆಯಾದ ಶೈಲತನೂಜೆಯಿಂಬಾಗಿ ಕಣ್ಗೊಳಿಪಂಕ್ತಿಗಳ್ಗೆ ಸಮಂತುಟಾಂ ಮಣಿದೆಂ ಸತಿ (ಉದ್ಭಟ. ೭-೧೧೦) ; ಕರವ ನೊಸಲೊಳು ಚಾಚಿ ದಿಗುಪಾಲರಿಗೆ ಮಣಿದಳು (ಸಂಭಕ. ೨೦-೦೩೬). ೪. ವಶವಾಗು : ಸಗ್ಗು ; ಹತೋಟಿಗೆ ಬರು ; ಅಧೀನವಾಗು : ಸಂಗರದೊಳ್ ಪೊಣಾರಿ ಪೆಸರ್ಗೊಂದಿ ಮಣಿಯದೆ ರಣದೊಳ್ ಹರಿಯಂತೆ ನಿಂದರಂ ಸಂಗರದೊಳ್ . . . ನೀಂ ಗೆಲಿದೈ (ರುದ್ರೋಂಬಾ. ೬-೨೬೬ ಅಡಿಟಿಪ್ಪ); ಗಿರಿ(ಸಿರ)ಕರ್ಣಿ ನೀಲಿಜಂಜಿಗೆ ಸುರದಾಳಿಯ ಬಿತ್ತು ಗರ್ದುಗಿನೆಲೆಯೆಂಬಿವ ನೊಂದಿರೆ ಕೂಡಿ ತಿಂದೊಡಾತನೆ ಗರುಡನವಂಗಬ್ಬ ಬಳ್ಕಿ ಮಣಿಗುಂ ಫಣಿಗಳ್ (ಲೋಕೋಪ. ೧೦-೧೬); ಒಂದೆಡೆಯೊಳುಂಡೆನಪ್ಪೊಡೆ ಸಂದೀ ಬಿಲ್ವಿದ್ಯೆಯಾಗಲರಿಯದು ತಿರಿಮುಂಡುವಲ್ಲದೆ ಮೆಯ್ಮಣಿಯದು (ರಹರ್ಕಾವ್ಯ. ೦೩-೪೬); ಮಣಿದು ಬದುಕುವನಲ್ಲ ಹಗೆಯೊಳು (ಕುಮಾಉ. ೬೦೩. ೧೦-೪೬). ೫. ಅಂಜು ; ಹೆದರು ; ಭಯಪಡು : ಅಂತಣಿ ಮಣಿಯದೆ ಸೆಣಸಿ ಪೊಣರ್ದು ಕಿಚ್ಚದು ಪೊಟ್ಟು ಕಾದಿ ನಿಂದಾಗಳ್ (ಶಂಕಪೂ. ೧೦-೬೫ ವ); ಮಣಿಯದೆ ಬಂದು ಗೊಂದಣಿಸಿದದ್ದಣದೊಡ್ಡಣಮುರ್ಬು (ಕುಸ್ಕ್ರು. ೫-೦೨) : ರಣದೊಳವನಡಗೆಡೆದನಾದರೆ ಮಣಿಯುದಿಚವನು (ಕುಮಾವಿ. ೧-೩೬). ೬. ಬಾಗಿಸು ; ಬಗ್ಗಿಸು : ಉಡಲೊಂದು ವಸ್ತ್ರಮಂ ಬೇಡಿ ಪೊಟ್ಟೆ ಮಣಿಯದೆ ನಿಂದಿರ್ದ ನಂದಿಮಿತ್ರನಂ ನೋಡಿ (ಕೃಷ್ಣಸ್ವ. ೯-೭ ವ); ಮೈಮಣಿದಾಕಿ ತಿವಿದಾಡಿದರು ಸಬಳಿಗರು (ಕುಮಾಭೀ. ೬-೦೭). ೭. ಒಪ್ಪಿಗೆ ಕೊಡು ; ಅಂಗೀಕರಿಸು ; ಸಮ್ಮತಿಸು : ಕಲಶೋದ್ಭವನ ಮತದಲಿ ಬಳಿಕ ಮಣಿದನು ಕೌರವರ ರಾಯ (ಕುಮಾಭೀ. ೦-೦೪); ಹಿರಿಯರಿದ್ದಾರೆ. ಅವರ ತೀರ್ಪಿಗೆ ಮಣಿಯೋಣ (ಸವಿ. ೩). ೮. ಇಣುಕು; ಕಾಣಿಸಿಕೊಳ್ಳು ; ತಲೆ ತೋರಿಸು : ಆಪತ್ತಿನೊಳ್ ಮಣಿದುಂ ನೋಡದ ಬಂಧುವೇತಕೆ (ಸೋಮೇಶ. ೧೬).

**ಮಣಿಮಣಿ** (ದ್ವಿರುಕ್ತಿ) : ಜೋಂಪಿಸುತೆ ತನು ಜೋಲೆ ಸಾತ್ವಿಕರಸಂಮಸಗೆ ಮಣಿಮಣಿದು ಕುಣಿಕುಣಿದು (ಬಸರ. ೩-೦೦೩). **ಮಣಿದಾಡು** = ವಂದಿಸು : ಕುಣಿದಾಡಲೀವುತಂ ಮಣಿದಾಡಲೀವುತಂ . . . ದೇವಾಂಗವಸ್ತ್ರಮಂ ದೇವರ್ಗೆ ಈವುತಂ (ಅಹೀಕ. ದೇ. ೬೫-೦೩) ; ಪಶುಪಕ್ಷಿಗಳು ಉಲಿಉಲಿದು ಮಣಿದಾಡಿ ಭಕ್ತಿಯ ಹುಮ್ಮಸ್ಸನ್ನು ಹೊರಪಡಿಸುತ್ತವೆ (ಕನ್ನಪಾ. ೦೯೩). **ಮಣಿಬಲ್ಲತನ** = ಹೊಂದಿಕೊಳ್ಳುವ ಗುಣ : ಪ್ರೌಢವಾದ ಚಂಪೂರೂಪವನ್ನು ಕಂದವೃತ್ತಗಳನ್ನು ಬಳಸಿದ ಜೈನಕವಿಗಳ ಸಂಪ್ರದಾಯವು ಹಿಂದುಳಿದು ಷಟ್ಪದಿ ಸಾಂಗತ್ಯಗಳ ಹೊಸ ಸಂಪ್ರದಾಯ ರೂಢವಾದುದು ಕನ್ನಡಕವಿಗಳ ಮಣಿಬಲ್ಲತನಕ್ಕೆ ನಿದರ್ಶನವಾಗಿದೆ (ಕಸಾತ. ೩೭೭).

**ಮಣಿ$_2$** (ನಾ). ಗಂಟೆ : 'ಮಣಿಯೋಟು', 'ಮಣಿವೊರಜೆ' ಪರಾ. [ದೇ.॥ ತಮಿ. ಮಲ. ತುಳು. ಮಣಿ; ಕೋತ. ಮಯ್ಣ್; ತೊದ. ಮೊಣಿ]

**ಮಣಿ$_3$** (ನಾ). ೧. ಬೆಲೆಬಾಳುವ ಹರಳು ; ರತ್ನ, ಮುತ್ತು, ವಜ್ರ ಮುಂತಾದುವು : ಮಣಿಕನಕಂ ವಸ್ತ್ರವಿಭೂಷಣಂಗಳಂ ಕೊಟ್ಟು ಪೆಂಡಿರೊಲ್ವರೆ ಗಂಡರ್ ಗುಣಮನೆ ಮೆಚ್ಚುವುದು (ಗದಾಯು. ೨-೫); ವರಮಣಿಗಳಿಂದೆಸೆವ ಮೌಳಿಯು . . . ಗಣಪತಿ ಮಾಡೆಮಗೆ ನಿರ್ವಿಘ್ನದಾಯಕವ (ಕುಮಾಆ. ೦-೩). 'ನವಮಣಿ' ಪರಾ. ೨. ಹಾವಿನ ಹೆಡೆಯಲ್ಲಿರುವುದೆಂದು ಭಾವಿಸಲಾದ ಅಮೂಲ್ಯವಾದ ರತ್ನ ; ನಾಗಮಣಿ : ಪೆರ್ಬೆಡೆಯಿಂ ಮಣಿ ಸೂಸೆ . . . ಬೇಸಱಿಂ ಕಿಱುಕಿದನಾನಲುಮ್ಮಳಿಸಿ ಶೇಷನಶೇಷಮಹೀವಿಭಾಗಮಂ (ಶಂಕಪೂ. ೯-೯೯). ೩. (ಆಭರಣಗಳಲ್ಲಿ ಉಪಯೋಗಿಸುವ) ಮರ, ಗಾಜು, ಲೋಹ ಮೊದಲಾದುವುಗಳಿಂದ ತಯಾರಿಸಿದ, ಪೋಣಿಸಲು ಅನುಕೂಲವಾದ ದುಂಡನೆಯ ವಸ್ತು : ಎನಿತೊಳ್ಪಿತಾದೊಡು ಕಾಜಿನ ಮಣಿಗಳ್ ಪೊನ್ನ ತೊಡವನಿಟಿಕೆಯ್ಗುಮೆ (ರಹರ್ಕಾವ್ಯ. ೬-೮೪) ; ತುಱುಗಾಹಿ ಕಾಜಿನ ಮಣಿಯ ಬಲ್ಲನು ಗಡ (ಕುಮಾಕ. ೯-೦೪); ಅದು ಬಡವರೂ ಧರಿಸುವ ಬಿಳಿಯ ಮಣಿಗಳ ಸರವೆ ? (ಶಾಂತಲಾ. ೭). ೪. ಜಪಮಾಲೆಯಲ್ಲಿ ಉಪಯೋಗಿಸುವ ತಾವರೆ ಬೀಜ, ರುದ್ರಾಕ್ಷಿ, ತುಲಸಿಯ ಮಣಿ ಇತ್ಯಾದಿ : ಮಣಿಯ ಕಟ್ಟಿ ಏವೆನಯ್ಯಾ ಮನ ಮುಟ್ಟದನ್ನಕ್ಕ (ಬಸವ. ೪೭೫); ಮಣಿಯನೆಣಿಸಿ ಕಾಲವ ಕಳೆಯಬೇಡ (ಅಪಸಂ. ೦೯೦-೬೫೫). 'ಜಪಮಣಿ' ಪರಾ. ೫. ಬಯಸಿದುದನ್ನು ಕೊಡುವುದೆಂದು ಭಾವಿಸಲಾದ ಸ್ವರ್ಗಲೋಕದ ರತ್ನ ; ಚಿಂತಾಮಣಿ : ಮಣಿ ಚಿಂತಿಸಲ್ಕೆ ಕೈಗೂಡುವುದಲ್ಲದಿರ್ದ್ದಡದು ತಾಂ ಕುಡದರ್ತ್ರಿಜನಕ್ಕೆ ರಾಗದಿಂ (ಎಕ. VII, ಶಿಕಾರಿ. ೦೬-೦೭; 1168). ೬. ಕಣ್ಣಿನ ಗುಡ್ಡೆ ; ಕಣ್ಣಿನ ನಡುವಿನ ಕರಿಯ ಗೋಲ : 'ಕಣ್ಮಣಿ' ಪರಾ. ೭. (ಬೆನ್ನು)ಮೂಳೆಯಲ್ಲಿನ ಕೊಂಡಿ ; ಮೃದ್ವಸ್ಥಿಯ ಕೊಂಡಿ : ಬೆನ್ನು ಹುರಿಯ ಈ ಮಣಿಯನ್ನು ಸ್ವಲ್ಪ ಅಡಚಿ ಹಿಡಿ (ಮೂಕರುದ್ರಾ. ೯೫). ೮. ಮೇಕೆಯ ಕೊರಳ ಮೊಲೆ. ೯. ಪುರುಷಜನನಾಂಗದ ತುದಿ. ೧೦. ಹೂಸು ; ಅಪಾನವಾಯು : "ಭಾಗಗಳಸ್ತನಾವಯವಭೇದ ಸುರತ್ನಮಪಾನವಾಯು ವೈರಾಗವಿಸಮ್ರಮಿಂತು ಮಣಿಯುಕ್ಕು" (ಶಾಸಾರ. ೩೯). ೧೧. ದೊಡ್ಡಮಣ್ಣಿನ ಪಾತ್ರೆ ; ಗುಡಾಣ. ೧೨. ಹಸ್ತದ ಮೂಲಭಾಗ ; ಮಣಿಬಂಧ ; ಮಣಿಕಟ್ಟು. ೧೩. ಶ್ರೇಷ್ಠವಾದುದು; ಉತ್ಕೃಷ್ಟವಾದುದು. ೧೪. ಶ್ರೇಷ್ಠನಾದವನು : ಮುನಿಮೌಳಿಗಳ ಮಣಿ ಪರಿತೋಷದಲಿ ತಿರುಗಿದ ತಪೋವನಕೆ (ಸಂಶಕ. ೦೯-೨೬). 'ನಾಯಕಮಣಿ' ಪರಾ. ೧೫. (ಅಲಂ) ಅಚ್ಚುಮೆಚ್ಚಾದುದು ; ಪ್ರಿಯವಾದುದು : ನೋಳ್ಪರ ಕಣ್ಣ ಮಣಿಯುಂ . . . ಚಿಂತಿಸುವರ ಚಿಂತಾರತ್ನವೆನಿಪ ಸಂಗಮೇಶ್ವರನ[ು] ಕಪ್ಪಡಿಯ ಸಂಗಮ

ದೊಳೊಪ್ಪದಿಂದರ್ಚಿಸುತ್ತಮಿಪ್ಪ ಸಪ್ಪಾಯದೊಳು (ಪಂಬರ. ೪-೨). ೧೬. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : "ನಿಧಿ ಮಣಿ ಗ್ರಹ ರಂಧ್ರಮಿರಲು ಪೊಂಭತ್ತು" (ಪುಂಗಣಿ. ೦೦೪-೮).

**ಮಣಿ ಕಟ್ಟಿಸು** = (ಕೆಲವು ವರ್ಗಗಳಲ್ಲಿ, ಹೆಣ್ಣುಮಕ್ಕಳನ್ನು ಬಸವಿಯರಾಗಿ ಬಿಡುವ ಸಂಕೇತವಾಗಿ) ಕೊರಳಿಗೆ ಮಣಿಯ ಸರವನ್ನು **ಕಟ್ಟಿಸು** : ಅಂದು ಹರಿಜನರಲ್ಲಿ . . . ಕೆಲವು ಸಂದರ್ಭಗಳಲ್ಲಿ, ಹೆಣ್ಣುಮಕ್ಕಳು ಚೆಲುವೆಯರಾಗಿದ್ದರೆ, ಅವರಿಗೆ ಮಣಿ ಕಟ್ಟಿಸಿ ಅವರನ್ನು ಬಸವಿಯರನ್ನಾಗಿ ಮಾಡಬೇಕೆಂದು ಮೇಲ್ಜಾತಿಯ ಮುಂದಾಳುಗಳು ಆ ಹೆಣ್ಣುಮಕ್ಕಳ ತಂದೆ ತಾಯಿಗಳಿಗೆ ಪ್ರೋತ್ಸಾಹ ಮಾಡುತ್ತಿದ್ದರು (ಕಂಜಹಂ. ೧೦). ಮಣಿಕಟ್ಟು$_1$ = (ಕೆಲವು ವರ್ಗಗಳಲ್ಲಿ, ಹೆಣ್ಣುಮಕ್ಕಳನ್ನು ಬಸವಿಯರಾಗಿ ಬಿಡುವ ಸಂಕೇತವಾಗಿ) ಮಣಿಯ ಸರವನ್ನು **ಕಟ್ಟು** : ಭರಮಿ ಸ್ವಲ್ಪ ಧೈರ್ಯವನ್ನು ತಾಳಿ ಮಣಿಕಟ್ಟುವ ಪದ್ಧತಿ ಅಳಿಸಿ ಹೋಗುವ ಕಾಲದಲ್ಲಿ ಮಗಳಿಗೆ ಮಣಿಕಟ್ಟುವುದು ತರವಲ್ಲವೆಂದು ವಾದಿಸಿದಳು (ಕಂಜಹಂ. ೧೩೬). [ಸಂ.]

**ಮಣಿಕ$_1$** 'ಮಣಕ$_1$' ನೋ.

**ಮಣಿಕ$_2$** (ನಾ). ೧. ನೀರಿನ ಪರವಿ ; ಗುಡಾಣ : "ಮಣಿಕಃ, ಅಳಿಂಜರಃ– ಈ ೨ ಕೇಲು" (ಹಲಾಯು. ೩೩-೦೬೨). ೨. ಮೇಕೆಯ ಕೊರಳ ಮೊಲೆ. ೩. ಪುರುಷ ಜನನಾಂಗದ ತುದಿ. ೪. ಯೋನಿಯ ತುದಿ ; ಭಗಾಂಕುರ. ೫. ರತ್ನ. [ಸಂ.]

**ಮಣಿಕಂಕಣ** (ನಾ). ರತ್ನಖಚಿತವಾದ ಬಳೆ,—ಕಡಗ : ಕಂಕಣಕ್ಕೆ–ಗುಬ್ಬಿಗಂಕಣ, ಮಣಿಕಂಕಣ, ಹಸ್ತಕಂಕಣ, ಹಿಂದುಗಂಕಣ (ಕಪುದ. ೨೯೬ ಕೃಹೋ). [ಸಂ.]

**ಮಣಿಕಟಕ** (ನಾ). ೧. = ಮಣಿಕಂಕಣ. ೨. ರತ್ನಖಚಿತವಾದ ಬೆಟ್ಟದ ತಪ್ಪಲು. ೧, ೨ : ಮಣಿಮುಕಟಂ ಶಿಖರಂ ಲಂಬಣೆಗೆಯ ಪೊಸಮುತ್ತು ನಿರ್ಝರಂ ಮಣಿಕಟಕಂ ಮಣಿಕಟಕಮಾಗೆ ತದ್ಗಿರಿಗೆಣೆಯಾದಂ ತನ್ನ ಪೆಸರೊಳಂ ವಿಜಯಾರ್ಧಂ (ಆದಿಪು. ೦೩-೦೩). [ಸಂ.]

**ಮಣಿಕಟ್ಟು$_1$** 'ಮಣಿ$_3$' ಪರಾ.

**ಮಣಿಕಟ್ಟು$_2$** 'ಮಣಿಗಟ್ಟು' ನೋ.

**ಮಣಿಕಳಶ** (ನಾ). ಬೆಲೆಬಾಳುವ ಹರಳುಗಳನ್ನು ಹೊಂದಿರುವ ಕಲಶ ; ರತ್ನಖಚಿತವಾದ ಕಲಶ : ಮಣಿಕುಟ್ಟಿಮದಿಂ ಮಣಿತೋರಣದಿಂ ಮಣಿಕಳಶದಿಂ ತಮಸ್ತೋಮನಿವಾರಣದೆಡೆಗಳಿಂ ಗೃಹಗ್ರಾಮಣಿಯನಪೇಕ್ಷಿಸವು ನೃಪಕುಮಾರಗೃಹಂಗಳ್ (ಮಲ್ಲಿಪು. ೨-೬೨). [ಸಂ. ಮಣಿಕಲಶ]

**ಮಣಿಕಾರ** (ನಾ). ಮುತ್ತು, ರತ್ನ, ವಜ್ರಗಳ ಆಭರಣಗಳನ್ನು ಮಾಡಿ ವ್ಯಾಪಾರ ಮಾಡುವವನು ; ಅಕ್ಕಸಾಲೆ : "ವೈಕಟಿಕಂ ಮಣಿಕಾರಂ" (ಪಾರ್ಶ್ವಕೋ. ೬೫-೬೯). [ಸಂ.]

**ಮಣಿಕಾಲ್** 'ಮೊಟಿಕಾಲ್' ನೋ.

**ಮಣಿಕಾಲು** 'ಮೊಟಿಕಾಲ್' ನೋ.

**ಮಣಿಕುಂಡಲ,** ಮಣಿಕುಂಡಳ (ನಾ). ಬೆಲೆಬಾಳುವ ಹರಳುಗಳಿಂದ ಮಾಡಿದ ಕಿವಿಯ ಆಭರಣ ; ರತ್ನಕುಂಡಲ : ಮಣಿಕುಂಡಲಮುಂ ಕವಚಮುಂ ಮಣಿಯುದ ಚಾರಿತ್ರಮುಂಗ್ರತೇಜಮುಮಿಾಯೊಳ್ಗುಣಮುಂ ಕಲಿತನ ಮುನ್ನವೇಂ ಪ್ರಣತಾರೀಸೂತಸುತನೊಳೊಡವುಟ್ಟುಗುಮೋ (ಪಂಪಭಾ. ೦೨-೯೬) ; ಮಣಿಕುಂಡಲಕಿರಣಂಗಳ್ ಪೆಣಸುವಿನಂ ನಖಮಯೂಖದೊಳ್ ದಶರಥಧಾರಿಣೀಪತಿಯ ಪದಪಯೋಜಪ್ರಣಾಮನಮನೊಡರ್ಚಿದಂ ವಿದುಚ್ಚರತಿಲಕಂ (ಪಂರಾಮಾ. ೬-೪೦). **ಮಣಿಕುಂಡಳ** : ಕಪೋಲರಂಗತಟದೊಳ್ ಕುಣಿಯಲ್ ಮಣಿಕುಂಡಳದ್ವಯಂ (ಪುಷ್ಪಪು. ೩-೬೪). [ಸಂ.]

**ಮಣಿಕುಂಡಳ** 'ಮಣಿಕುಂಡಲ' ನೋ.

**ಮಣಿಕುಟ್ಟಿಮ** (ನಾ). ರತ್ನಖಚಿತವಾದ ನೆಲ : ತನ್ನಗಲ್ಕೆಗೆ ಬಿನ್ನನಿರ್ಪಂತೆ ಬಿನ್ನನಾಗಿರ್ಪ ವಿಮಾನದ ಮಣಿಕುಟ್ಟಿಮಭೂಮಿಗಳುಮಂ . . . ಬೋಂಕನೆ ಕಂಡು (ಆದಿಪು. ೩-೩ ವ) ; ಅಜಿತನಾಥಂ ಮಣಿಕುಟ್ಟಿಮಭೂಮಿಯೊಳ್ ಮನಂಗೊಳೆ ನಡೆದಂ (ಅಜಿಪು. ೫-೭೧) ; ಮಣಿಕುಟ್ಟಿಮಂಗಳಿಂ ಬಾಳೆಯ ರೊಟ್ಟಿನಿಂ ಸಕಲವೈಭವದಿಂದೆಸೆದಿರ್ಪುದಾ ಪುರಂ (ಜಗಂ. ೨-೩೪). [ಸಂ.]

**ಮಣಿಕುರುಜು** 'ಮಣಿಗುರುಜು' ನೋ.

**ಮಣಿಕೂಟ** (ನಾ). [ಜೈನ] ಮಾನುಷೋತ್ತರದ್ವೀಪದ ಒಂದು ಪರ್ವತದ ಹೆಸರು : ಖಚರದ್ವಯಂ ಮನೋಹರಮಣಿಕೂಟದೊಳ್ . . . ಅಂಗಜಕೇಳಿಲೀಲೆಯಿಂದಿರೆ (ಮಲ್ಲಿಪು. ೦೨-೦೦೯). [ಸಂ.]

**ಮಣಿಕೆ** (ನಾ). ನೀರಿನ ಹರವಿ,—ಗುಡಾಣ : "ಅಳಿಂಜರಂ ಮಣಿಕೆ [ಕಾಕಾ. ಜೆ]ಜಿಂಸೆ ಕಲ್ಲೆ ನಾಮಂ" (ಪುಂಗಣಿ. ೬೨-೨೩). [ಸಂ. ಮಣಿಕ]

**ಮಣಿಖಚಿತ** (ಗು). ೧. ಬೆಲೆಬಾಳುವ ಹರಳುಗಳಿಂದ ಕೂಡಿದ : ರತ್ನಖಚಿತವಾದ : ಅರಸ ಬಂದನು ಮಣಿಖಚಿತಕೇಸರಿಯ ಪೀಠವನಡರಿದನು (ಕುಮಾವ್ಯಾ. ೧೧-೬). (ನಾ). ೨. ರತ್ನಖಚಿತವಾದುದು : ಕರಮಿಂಬಾಗಿರೆ ಚಾಮರಯುಗ್ಮಮದಾಗಳೆ ನಿಲೆ ದಿವ್ಯವಿಷ್ಟರಂ ಮಣಿಖಚಿತಂ (ಆದಿಪು. ೦೪-೦೪೬). [ಸಂ.]

**ಮಣಿಗ** (ನಾ). ಒಂದು ಬಗೆಯ ಪಕ್ಷಿ : ಮಣಿಗನು ಗರುಡ . . . ಪೆರುವರ್ಪವರೊಳೊಪ್ಪಿದವು (ಶಾಲ್ಯಶಾ. ೫-೨೩). 'ರತ್ನಖಗ' ಪರಾ. [ ? ]

**ಮಣಿಗಂಟು** (ನಾ). ೧. ಕೈ ಹಾಗೂ ಮೊಳಕೈ ಕೂಡುವ ಜಾಗ : ಮಣಿಯಂತಿರುವ ಸಣ್ಣ ಸಣ್ಣ ಮೂಳೆಗಳು ಕೂಡುವ ಜಾಗ : ಮೈಯನ್ನು ಅವಳ ಮಣಿಗಂಟಿಗೆ ಸವರಿ ಮುಖವೆತ್ತಿ ನೋಡಿತು (ಬಿಶ್ವಮಾ. ೬೪) ; ಆ ಕೈಕಾಲುಗಳಿಗೂ–ನಡುವೆ ಮಣಿಗಂಟು, ಮೊಣಗಂಟುಗಳ ಸಂದಿದೆ (ಹುಕ್ಬಂ. ೦೫೦). ೨. ಬಿಡಿಸುವುದಕ್ಕಾಗದಂತಹ ಬಿಗಿಯಾದ ದಾರದ ಗಂಟು : ಪ್ರಯಾಣದ ಅನುಕೂಲಕ್ಕೆಂದು ಹಾಸಿಗೆಗೆ ಮಣಿಗಂಟು ಹಾಕಿರುವುದು ಈಗ ಬಿಚ್ಚುವುದಕ್ಕೆ ಆಗುತ್ತಿಲ್ಲ (ರೂಢಿ). [ಮಣಿ$_3$ + ಗಂಟು./ತುಳು. ಮಣಿಗಂಟ್]

**ಮಣಿಗಂಭ** (ನಾ). ಬೆಲೆ ಬಾಳುವ ಹರಳುಗಳಿಂದ ಕೂಡಿದ ಕಂಬ : ರತ್ನಖಚಿತವಾದ ಸ್ತಂಭ : ಶಂಬರವೈರಿಯೆಂದೆಂಬ ಕುಂಭಿಯ ಕಟ್ಟುವಿಂಬಿನ ಮಣಿಗಂಭದಂತೆ ಅಂಬುಜನೇತ್ರೆಯ ಪೊಂಬಾಳೆದೊಡೆಗಳು ತುಂಬಿದುವು ಕಣ್ಗೆ ಕೌತುಕವ (ಕಂಪಾಂ. ೯-೨೦). [ಮಣಿ$_3$ + ಕಂಭ]

**ಮಣಿಗಟ್ಟು,** ಮಣಿಕಟ್ಟು$_2$ (ನಾ). ೧. ಬೆಲೆಬಾಳುವ ಹರಳುಗಳಿಂದ ಮಾಡಿದ ಕಟ್ಟು ; ರತ್ನಖಚಿತವಾದ ಕಟ್ಟು : ಕಡುಗಲಿ ಕಾಮ ತನ್ನುಭಯಹಸ್ತದ ಗದೆಗಡರ್ಚಿದ ಮಣಿಗಟ್ಟನಂತೆ ಬಿಡಯವಿಲ್ಲದೆ ಕುಮರಿಯ ತೋಳ ಭಾಪುರಿ ಕಡಗ ಕಂಕಣವನಿಕ್ಕಿದರು (ಕೋಹಕ. ೨೩-೪೦) ; ಭರದಿ ಪೊಮ್ಮೂಡಿಗೆಯ ಪೊಂಗರಿಯ ವಿಸಿಖಮಂ ಮಿರುಪ ಮಣಿಗಟ್ಟನಿಂದೆಮೊರೆವ ಧನುವಿಗೆ ತೊಡಿಸಿ (ಪಪುರಾ.೦೨-೭೭). **ಮಣಿಕಟ್ಟು$_2$** : ೨. ಮುಂಗೈಯ ಹರಡು ; ಪಾಣಿಮೂಲ ; ಪ್ರಕೋಷ್ಠ : "ಪಾಣಿಬಂಧ, ಪಾಣಿ[ಣಿ]ಮೂಲ – ಈ ೨ ಮಣಿಕಟ್ಟು" (ಪಾಶಂಣ. ೦೨೦); ಒಸೆದು ಮಣಿಕಟ್ಟಂ ಎಡಗಯ್ಯಿಂ ಪಿಡಿದು (ಬಂಕ. ದೀ. ೦೯೨-೪); ಮಣಿಕಟ್ಟಿನಲ್ಲಿ ಯವರೇಖೆಯಿದ್ದರೆ ಯಜ್ಞಾದಿ ಉಂಕಣಪ್ರದವಾಗುವುದು (ಸಾಗಂರ. ೬೩೩-೯). ೩. = ಮಣಿಚೌಕಟ್ಟು : ಚಿಕ್ಕ ಮಕ್ಕಳು ಮಣಿಕಟ್ಟಿನ ಸಹಾಯದಿಂದ ಲೆಕ್ಕವನ್ನು ಸುಲಭವಾಗಿ ಕಲಿಯಬಹುದು (ರೂಢಿ). [ ಮಣಿ$_3$+ಕಟ್ಟು$_2$./ತಮಿ. ಮಣಿಕ್ಕಟ್ಟು; ತೆಲು. ಮಣಿಕಟ್ಟು, ಮನಿಕಟ್ಟು]

**ಮಣಿಗಡಗ** (ನಾ). =ಮಣಿಕಂಕಣ : ನೆಲಹಿನ ಮೊಸರಂತೆ . . . ಮಣಿಗಡಗದ ಕೀಲಿನಂತೆ (ಧರ್ಮಾಮೃ. ೬-೦೪೭ ಅದಿಪ್ರ). [ ಮಣಿ$_3$ + ಕಡಗ$_1$ ]

**ಮಣಿಗಣ** (ನಾ). ಬೆಲೆಬಾಳುವ ಹರಳುಗಳ ಗುಂಪು : ರತ್ನಸಮೂಹ : ಅನೇಕನೃಪತಿಮಕುಟತಟಘಟಿತಮಣಿಗಣಕಿರಣಜಳಧಾರಾಧೌತಾವದಾತಪೂತ ಚರಣಾರವಿನ್ದರು[ಂ] (ಶಾಇ. XX, ೪೬-೨೭ ; 1072) : ವಸುಂಧರೆ ಮತ್ತಂ ರತ್ನಗರ್ಭೆಯೆಂಬೀ ಪೆಸರ್ಗಳ್ ದೊರೆವೆತ್ತುವೆಂದೊಡೇನಚ್ಚರಿಯಾದುದೊ ಧನದಜನಿತ ಮಣಿಗಣವರ್ಷಂ (ಶಂಪು. ೦೦-೦೨೦). [ಸಂ.]

**ಮಣಿಗಣ್ಣ** (ನಾ). ಒಂದು ಬಗೆಯ ಮೀನು : ಹೆಗ್ಗಲು ಗಣೆ ಮಣಿಗಣ್ಣ ತೂತು ತೆಂತಲು ಸಿಸಿಲು ಬೊಂಪೆ ಸವಿವಾಯ ಗೊದಳೆ . . . ಆನೆಮೊಗನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದರು (ಪಕಅ. ೩-೪೩). [ ? ]

**ಮಣಿಗನ್ನಡಿ** (ನಾ). ರತ್ನಖಚಿತವಾದ ಕನ್ನಡಿ : ಎನ್ನೋರಗೆಯ ಚನ್ನೆಯರೊಲವಿಂ ಮಣಿಗನ್ನಡಿಯಂತಪ್ಪ ಸುತರ ಮನ್ನಿಸಿ ಮೊಲೆಯೂಡುವರ್ಸಲೆ ಸಿರಿಗವರೇಂ ನೋಂಪಿಯನೆಸಗಿದರೊ (ಶ್ರೀಶಾಂ. ೨-೩೪) ; ಹಣ್ಣು ಕಾಯ್ತೋರಿಸುವ ಮಣಿಗನ್ನಡಿಯ ನೆಳಲ ಮಾತನಾಡಿಸುವ (ಕಂಕ. ೫೬-೦೦).

[ಮಣಿ$_3$ + ಕನ್ನಡಿ$_1$]

**ಮಣಿಗರ್ಭೆ** (ನಾ). ಭೂಮಿ ; ವಸುಂಧರೆ ; ರತ್ನಗರ್ಭೆ : ತನ್ನಂ ಪೊತ್ತು ಮನ್ನಣೆಯಿಂ ಮುನ್ನಂ ಪೊರೆಯೇಱಿಸಿ ಪೊರೆದ ಮಣಿಗರ್ಭೆಗಣಿಪುರಂಬಾಗಿ ಬಳ್ಕಿ ಮಣಿವ ಮಾಳ್ಕೆಯಿಂ (ಕಶಕಂ. ೨-೪೩ ವ). [ಸಂ. ಮಣಿಗರ್ಭಾ]

**ಮಣಿಗಲ್ಲು** (ನಾ). ಬೆಲೆಬಾಳುವ ಹರಳು ; ರತ್ನ : ಸುತ್ತಣ ಮಣಿಗಲ್ಲ ಹೊಂಗೋಟೆ ನೋಡಲು ತತ್ತಳಗೆಯ್ವುದಕ್ಷಿಗಳ (ಪೋಶಕ. ೩-೬).

[ಮಣಿ$_3$ + ಕಲ್ಲು (< ಕಲ್$_3$)]

**ಮಣಿಗಳಸ** (ನಾ). = ಮಣಿಕಳಶ : ಪೂರ್ವಾದ್ರಿಯೆಂಬ ದೇವಗೃಹದ ಮೇಲಿಟ್ಟ ಮಣಿಗಳಸ ಪೊಂಗಳಸ ರಜತಕಳಶಂಗಳೆನೆ ಚೆಲ್ವಾದುದು (ತಶಪು. ೯-೦೮).  [<ಸಂ. ಮಣಿಕಲಶ]

**ಮಣಿಗಾರ** 'ಮಣಿಗಾಱ' ನೋ.

**ಮಣಿಗಾರ್ತಿ** (ನಾ). ರತ್ನಗಳನ್ನು ಮಾರುವವಳು : ಮಣಿಗಾರ್ತಿ, ಅಳುಗಾರ್ತಿ, ಸುಣ್ಣಗಾರ್ತಿ (ಶಾಶಾಶೂ. ೦೯೪ ಉದಾ) ; ಮರವುಲ್ಲಿಗೆ ಮೊಲ್ಲೆಗಳೊಳ್ ಬೆರಸಿದ ಮಧುಕರಕದಂಬದಿಂದಂ ನೀಲೋತ್ಕರಮಂ ಮೌಕ್ತಿಕಮಂ ಪೋಲ್ತಿರೆ ಮೆಱೆದರ್ ಮಾಲೆಗಾರ್ತಿ ಮಣಿಗಾರ್ತಿಯ ಪೋಲ್ (ಗಂಕ. ೨-೮೬). [ಮಣಿಗಾಱ + – ತಿ$_1$ (< – ಇತ್ತಿ)]

**ಮಣಿಗಾಱ, ಮಣಿಗಾರ** (ನಾ). ಬೆಲೆ ಬಾಳುವ ಹರಳುಗಳನ್ನು ಮಾರುವವನು; ರತ್ನಪಡಿವ್ಯಾಪಾರಿ : ಚಲದಂಕರಾವುತ ಮಣಿಗಾಱ ನಾಗಿಶೆಟ್ಟಿಯುಮನ್ತು ಸಮಸ್ತನಗರ ಮುಮ್ಮುರಿದಣ್ಡಮುಂ (ಇಇ. V, ೩೪೨-೦೫; 1093) ; ಅಣಿಯರಮೆಸೆದೊಪ್ಪುವ ಮಣಿಗಾಱರ ಕಂಚಗಾಱರೊಱೆಗಾಱರ ಕಿಂತಿಣಿ (ಕಾವ್ಯಾವ. ೩೨೮) ; ಮಣಿಯಂ ಮಾಡುವಂ ಮಣಿಗಾಱಂ (ಶಬ್ದಸು. ೨೪೮ ವೃತ್ತಿ). **ಮಣಿಗಾರ** : "ಮಣಿಗಾರ_ಮಣಿಕಾರ=ರತ್ನವ್ಯಾಪಾರಿ" (ತದ್ಭಕೋ. ೩೩) ; ಬಳೆಗಾರ ಮಣಿಗಾರ ಬಿಚ್ಚೋಲೆಯನ್ನು ಮಾರುವರು (ಪಪಪೋ. ೨-೪೭). [ ಮಣಿ$_3$ + – ಕಾಱ ]

**ಮಣಿಗಾಱಕೇರಿ** (ನಾ). ರತ್ನಪಡಿವ್ಯಾಪಾರಿಗಳ ಬೀದಿ : ಮಣಿಗಾಱಕೇರಿಯ ೩ ಸೆಟ್ಟಿಕಾಱರೂ ಸಮಸ್ತ ಹಲರೂ . . . ಇ ಧರ್ಮ್ಮವ ನಡಸುವರು (ಶಾಇ. VII, ೩೩೨-೦೮; ೪). [ಮಣಿಗಾಱ + ಕೇರಿ]

**ಮಣಿಗುಣ** (ನಾ). ೧. ರತ್ನದ ಗುಣ, – ಲಕ್ಷಣ. ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾಗಿರುವ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹದಿನೈದನೆಯ ಅತಿಶಕ್ವರಿಯೆಂಬ ಛಂದಸ್ಸಿನ ಒಂದು ವೃತ್ತ: ಮನುಲಘುವಿರೆ ಗುರು ಮಣಿಗ[ಗು]ಣಮೆನಿಕುಂ (ಛಂಬು. ೫೪) ; ಇಂಥ ಸಂಸ್ಕೃತವೃತ್ತಗಳಲ್ಲಿ ಕುಮುದ, ರಥೋದ್ಧತ, ಸ್ವಾಗತ, ಮತ್ತಕೋಕಿಲ, ವನಮಯೂರ, ಮಣಿಗ[ಗು]ಣ, ಮಲ್ಲಿಕಾಮಾಲೆ, ತರಳ ಮೊದಲಾದುವುಗಳನ್ನು ಹೆಸರಿಸಬಹುದು (ಛಂಬೋಧಿ. ೩೦). [ಸಂ.]

**ಮಣಿಗುರುಜು, ಮಣಿಕುರುಜು** (ನಾ). ರತ್ನಖಚಿತವಾದ ಮಂಟಪ ; ರತ್ನಮಂಟಪ : ಬಾಗಿಲ್ವಾಡದ ಬಹುಮಣಿಗುರುಜಿನ ದೇಗುಲಗಳ ಪಲವುಂ ಶಿಖರಂಗಳ . . . ಮೇಗೆ ಮಿಸುಪ ಮಿಗಗಣ್ಣ ಬಲೆಯರಸುರಾಗದಿನಿನಿವಿರಿದುಂ ನೋಡಿದರ್ . . . ವಸುಧಾವಲ್ಲಭನ (ಶಯುಕಾ. ೦೦-೩೦) ; ಕರುಮಾಡ ಮೇಗಣ ಮಣಿಗುರುಜೇಱಿ ಪರಿವ ಮೇಲಣ ಮುಗಿಲ್ಗೊನೆಯ ಪೊರೆ ಮುತ್ತಾಯ್ದು ಕೇವಣಿಸಿ ಕೊರಳ್ಗಿಟ್ಟು ಪುರವನಿತೆಯರಾಪುತಿಹರು (ಶ್ರೀಶಾಂ. ೦-೮೩). **ಮಣಿಕುರುಜು** : ಗುಡಿ ಕಲಶ ಕನ್ನಡಿಯ ಹೊಂದಳಿಗೆದೋರಣದ ಸಡಗರದ ಪಂತಿಮಣಿಕುರುಜುಗಳ್ ಬಳಪಿಡಿದು (ಪರಕು. ೮-೨೦೦). [ ಮಣಿ$_3$ + ಕುರುಜು ]

**ಮಣಿಗೆ$_1$** (ನಾ). ಬಾಗುವಿಕೆ ; ಬಗ್ಗುವಿಕೆ : ಕುತುಕಿಗೆತ್ತಣ ಬಿಡುವು, . . . ಬಾಳ್ಬಳಿಯು ದಾರಿಗನಿಗೆ ಪಯಣದಾಯಾಸವನು ಮಣಿಗೆಯೊಳು ತೀರಿಸುತ ಮರಳಿ ಕಂತೆಯ ಹೆಗಲಿಗೇರಿಸಿ ನಿಲುವನೆ ? (ಮಲೆದೇ. ೨೨-೩). [ ಮಣಿ$_1$ + – ಗೆ ]

**ಮಣಿಗೆ$_2$** (ನಾ). ಮೂಳೆಯ ಗಂಟು : ಪೃಷ್ಠಾಸ್ಥಿಯ ಗಂಟು : ಎದೆಯಿಂದ ಎರಡು ರೆಟ್ಟೆಗಳಿಂದ ಕೊರಳ ನಡುವಣ ಮಣಿಗೆಗಳಿಂದ ಶೋಭೆಯು ಚೆನ್ನಾಗಿ ಕಾಣಿಸಲು (ಅಶ್ವಶಾ. ೭೮-೦೦). [ ಮಣಿ$_3$ + – ಗೆ ]

**ಮಣಿಘಟ್ಟ** (ನಾ). ಒಂದು ಊರಿನ ಹೆಸರು : ಮಣಿಘಟ್ಟಯ ಮಾಣಿಕಾಮಣ್ಣ ಮುದುಳ ಗಾವುಂಡರ ಮಗಂ ಕಸವಯ್ಯ ಆಳ್ದೊನ ಬೆಸದೊಳ್ . . . ಕಾದಿ (ಎಕ. X, ಮುಳಬಾ. ೨೨೯-೪; 909). [ ? ]

**ಮಣಿಚೂಳಿಕೆ** (ನಾ). ರತ್ನಖಚಿತವಾದ ತುದಿ, – ಅಗ್ರಭಾಗ : ಬೆಲೆ ಬಾಳುವ ಹರಳುಗಳಿಂದ ಕೂಡಿದ ಶಿಖರ : ಈಶಾನೇಂದ್ರಂ . . . ಪದ್ಮರಾಗ(ದ) ಮಣಿಚೂಳಿಕೆಯಿಂದಂ ನಯನಮನೋಹರಮಪ್ಪ ಚಂದ್ರಕಾಂತಧವಳಾತಪತ್ರಮಂ ಪಿಡಿಯೆಯುಂ (ಶಾಂತಿಪು. ೦೦-೦೩ ವ).

[ ಸಂ. ಮಣಿಚೂಲಿಕಾ ]

**ಮಣಿಚೌಕಟ್ಟು** (ನಾ). "ಮಕ್ಕಳಿಗೆ ಲೆಕ್ಕ ಕಲಿಸುವುದಕ್ಕಾಗಿ ಬಣ್ಣದ ಗುಂಡುಗಳನ್ನು ತಂತಿಯ ಮೇಲೆ ಓಡಾಡುವಂತೆ ಅಳವಡಿಸಿರುವ ಚೌಕಟ್ಟು : ಮಣಿಚೌಕಟ್ಟು" (Abacus, ೨೦೪೩).

[ ಮಣಿ$_3$ + ಚೌಕಟ್ಟು ]

**ಮಣಿತ$_1$** (ನಾ). ೧. ಬಾಗುವುದು ; ಬಗ್ಗುವುದು : ಮಣಿತಂ, ಮಣಿವುದು ; ಕುಣಿತಂ, ಕುಣಿವುದು (ಶಬ್ದಸು. ೪೩೬ ವಾಖ್ಯ) ; ಈ ಬಿನ್ನಣಮಿಾಯೊಡಲ್ಮಣಿತಂ . . . ಶ್ರೀಚಿಕದೇವನೊಳ್ ಮೆಱೆಗುಂ (ಚಿಕಶ. ೪-೦೪೮) ; ಎನಿತೆನಿತೋ ಮಣಿತಗಳವು ಭಂಗಿಗಳವು ಭಣಿತ (ಕರುಶ್ರೀ. ೭೦-೨). ೨. [ವ್ಯಾಕ] ಅಕ್ಷರಗಳಿಗೆ ಕಾಗುಣಿತದಲ್ಲಿ ಸೇರಿಸುವ 'ಉ' ಸಂಕೇತವಾದ ಕೊಂಬು (ು) : ಈ ವರ್ಣಗಳಲ್ಲಿಯ ಒಂದು ಮಣಿತವನ್ನು ತಪ್ಪಿಸಿ . . . ಅನೇಕರು ಬರೆಯುತ್ತಿದ್ದುದನ್ನು ಕಾಣುತ್ತೇವೆ (ಶಾಶಾಶಾ. ೦೦೩). [ಮಣಿ$_1$ + – ತ]

**ಮಣಿತ$_2$** (ನಾ). ಸುರತಧ್ವನಿ; ಗಳರವ : "ಮಣಿತವೆಂಬುದು ಗಳಧ್ವನಿ" (ಪಣಾಯು. ೯೩-೪೦೩); ಸೀತ್ಕೃತಂ ಹೂಂಕೃತಂ ಘೂತ್ಕೃತಂ ಮಣಿತಮುತ್ತೂತ್ಕೃತಂ . . . ಎನಿಪೀ ಚಮತ್ಕೃತಿಯನಱಿದು ರಮಿಸುವನೆ ಚದುರಂ (ಶಪಪ. ೮-೩೦); ಮಣಿತಂ ತನುಪ್ಪೊಳ್ಗಳದೊಳ್ಮಣಿತಂ ನೆಗಳ್ದಿರೆ ವಿಳಾಸಮುಮದೊರ್ಪ್ಪಿರೆ ಪೆಣ್ಮಣಿ ತನ್ನವರತಿಚಿಂತಾಮಣಿ ತನ್ನರಪತಿಗೆ ತನ್ನ ಪರಿಜೆನೆ ನೆರೆದಳ್ (ರಾಜಶೇ. ೮-೯೯). [ಸಂ.]

**ಮಣಿತುತ್ತಿ** (ನಾ). ಒಂದು ಬಗೆಯ ಸಸ್ಯ : ಮಣಿತುತ್ತೀಗಿಡ, ಒಂಡೀಸೊಪ್ಪು (ವೃಶಿಗ. ೪೩-೮೬೨). 'ಮರತುತ್ತಿ' ಪರಾ.

[ಮಣಿ$_3$ + ತುತ್ತಿ$_1$ /ತಮಿ. ಮಣಿತುತ್ತಿ]

**ಮಣಿತೊಂಡೆ** 'ಮಣಿದೊಂಡೆ' ನೋ.

**ಮಣಿತೋರಣ** (ನಾ). ಬೆಲೆಬಾಳುವ ಹರಳುಗಳಿಂದ ಕೂಡಿದ ತೋರಣ; ರತ್ನಖಚಿತವಾದ ತೋರಣ : ರಾಜಭವನದೊಳೆಸೆವ ಮಣಿತೋರಣಂಗಳಿಂ (ಆಪು. ೯-೭ ಗದ್ಯ); ಎಳವಿಂಚಂ ಮಣಿತೋರಣಾಂಶು ಮೊಚಗಂ ವಾಮ್ಯಸ್ವನಂ . . . ಸಿರಾಕುಳದಿಂ ಪೋಲ್ತು (ಶಾಸ್ತ್ರ. ೯-೩೭). [ಸಂ.]

**ಮಣಿದರ್ಪಣ** (ನಾ). = ಮಣಿಗನ್ನಡಿ : ಭರತಂ ಕಂಡಂ ಕನ್ನೆಯ ನೆರೆಯಂ ತಳದಳಿಸಿ ಪೊಳೆವ ಮಣಿದರ್ಪಣದೊಳ್ (ಆಪು. ೦೬-೬೦); ದೊರೆವೆತ್ತ ವಿಜಯವಾಮೇತರಭುಜದೊಳ್ ನಿಂದ ಬೀರಸಿರಿಯೆಸೆವ ನೆಟಿಲ್ ಸ್ಫುರಿಯಿಸೆ ಮೆಯ್ಯೊಳ್ ಪೋಲ್ತಂ ಹರಿಸೀಳೋದ್ಯತ್ತಸನ್ನ ಮಣಿದರ್ಪಣಮಂ (ಶಾಂತಿಪು. ೨-೦೫). [ಸಂ.]

**ಮಣಿದಾರ** (ನಾ). ಮಣಿಗಳನ್ನು ಪೋಣಿಸಿದ ದಾರ : ಹಣವೇನು ಜಾತೆ ನಿನ್ನಯ ಗುಣವೆಂಬುದು ಮಣಿದಾರವಾಗೆನ್ನ ಮನವ ಕ್ಷಣದಲಿ ಬೀಜು ಗೊಂಡುದು (ಕಂಪ. ೬-೦೩೯). [ಮಣ್$_3$ + ದಾರ$_1$]

**ಮಣಿದಿ** (ನಾ). ಒಬ್ಬಾತನ ಹೆಸರು (?) : ಸ್ವಸ್ತಿಶ್ರೀ ಮಣಿಯರೋ ಮಣಿದಿಯುಂ ಸಿರಿವಕ್ಷನುಂ ಶ್ರೀಪುರುಷನುಂ . . . ಎಱದು ಸತ್ತರ್ (ಮೈ.ಕ. ೦೯೯೯, ೬-೦; ೪೦೪). [ ? ]

**ಮಣಿದೀಪ** (ನಾ). ೧. ರತ್ನಖಚಿತವಾದ ದೀಪ ; ರತ್ನದ ದೀವಿಗೆ : ತಳಿರಯ್ಯಲ್ ಮಣಿದೀಪರಾಜಿ . . . ಲತಾಮಂಟಪವೆಂಬಿವಿಲ್ಲದ ಜನಾವಾಸಂಗಳಿಲ್ಲೆಲ್ಲಿಯುಂ (ಶುಕ್ತಿ. ೨-೬೩) ; ಮಣಿದೀಪಾವಳಿಯನಮರಿ ಯರು ಪಿಡಿಯಲ್ಲು (ಜಗ. ೦೮-೬೮); ಕತ್ತಲೆಯ ಮನೆಗೆ ಮಣಿದೀಪ ಮಾದಂತೆ . . . ಕುಳಿಂದನ ಬಾಳ್ಕೆಗುತ್ತಮಕುಮಾರನಾದಂ ಚಂದ್ರಹಾಸಂ (ಜೈಮಿನಿ. ೨೮-೬೩). ೨. ದೀಪದಂತೆ ಬೆಳಗುವ ರತ್ನ. [ಸಂ.]

**ಮಣಿದೆನೆ** (ನಾ). ಬೆಲೆಬಾಳುವ ಹರಳುಗಳಿಂದ ಕೂಡಿದ ಕೋಟೆಯ ತೆನೆ ; ರತ್ನಖಚಿತವಾದ ಬುರುಜು: ಮಣಿದೆನೆಗಳ ಮಾರ್ಪೊಳಪಂ ಫಣಿಪಸ್ಫುಟಗೆತ್ತು ನೋಳ್ಪ ಖೇಚರಿಯರ ಕಣ್ಬೊಣರ್ಗಳ್ವಾರ್ಪೊಳೆವಂದ ಮನಣಕಿವುವಗಳಮುಳ್ಳೆಳೆದೊಳಂಬುಚರಂಗಳ್ (ರಾಜಶೇ. ೨-೬೪) ; ಮಣಿದೆನೆ ಗಳೆಡೆಯೆಡೆಯೊಳುಡುಗಣಮಿರುಳೊಳ್ಪುಸುಳ್ದು ಪಾಲ್ಗಡಲ ಕಡೆವಾಗಳ್ಳ ಣಿಪನ ಮಣಿಯೆಡೆಯೆಡೆಯೊಳಗಣಿತಂ ಮುಕ್ತಾಳಿ ನೆಗೆವ ಭಾವಮನಾಳ್ಗುಂ (ವೃ.ಶಾ. ೯-೬೩). [ ಮಣ್$_3$ + ತೆನೆ$_1$ ]

**ಮಣಿದೊಂಡೆ**, ಮಣಿತೊಂಡೆ (ನಾ). ಒಂದು ಬಗೆಯ ತೊಂಡೆಯ ಕಾಯಿ : ಮಣಿದೊಂಡೆ, ಹಾವುಮೆಕ್ಕೆ, ಈ ಎರಡಱ ಬೇರಂ ನಿಂಬೇ ಹುಳಿಯಲ್ಲಿ ಅರೆದು ಗಾಯಕ್ಕೆ ಪೂಸೆ ವಿಷ ಕೆಡುಗು (ವಿಷ್ಣು. ೬೧). **ಮಣಿತೊಂಡೆ:** ಮಣಿತೊಂಡೆ, ಕಾಡುಪಾವಡೆಬಳ್ಳಿ (ವೈ.ನಿ. ೩೩-೦೦೬೪). [ ಮಣ್$_3$ + ತೊಂಡೆ$_1$ ]

**ಮಣಿದೊಡವು** (ನಾ). ಬೆಲೆಬಾಳುವ ಹರಳಿನ ಒಡವೆ; ರತ್ನಖಚಿತವಾದ ಆಭರಣ : ಎಳಲತೆಯನಿಲಿನ ಸೋಂಕಿಂದಲರ ತೊಡಂಬೆಯನ್ನಿಸುಳಿಯದೆ ಬಿದಿರ್ವಂದದಿ ಮಣಿದೊಡವೆಲ್ಲವನೀಡಾಡಿ (ಪಂಪಭಾ. ೨-೫೯) ; ನೊಸಲ ನಾಮದ ಗೆಜ್ಜೆವೆಜ್ಜೆ ಗಜಕುಂಭದ ಪೊಸಮುತ್ತಿನ ಮಾಣಿಕದೊಡವೆ ಎಸೆವ ತಾರಾವಾಳಿಯೆನೆ ಬಿಯದಿಯರು ರಂಜಿಸಿದರಿರುಳ್ವೆಣ್ಣಳಂತೆ (ಶ್ರೀಚಾ. ೭-೩೪). [ಮಣ್$_3$ + ತೊಡವು]

**ಮಣಿನೂಪುರ** (ನಾ). ಬೆಲೆ ಬಾಳುವ ಹರಳುಗಳಿಂದ ಮಾಡಿದ ಕಾಲಂದುಗೆ; ರತ್ನಖಚಿತವಾದ ನೂಪುರ : ಮಣಿನೂಪುರ ಮಣಿಕಾಂಚೀ ಮಣಿಹಾರವಿಲಾಸಮೆಸೆಯೆ ಭಾಸುರವಿದ್ಯಾಮಣಿಯಿಂ ಭಾಸ್ವಚ್ಚೂಡಾ ಮಣಿಯಿಂ ಪೋಲ್ತೆಸವಳಬಲೆ ಮಣಿಪುತ್ರಿಕೆಯಂ (ಆಪು. ೨-೨೮) ; ಹೊಂಬಳೆಗಳನು ಕೈಗೆ, ಕಿಂಕಿಣಿಗಾಣಿನ್ಯೆವ ಮಣಿನೂಪುರಗಳನು ಕಾಲ್ಗೆ . . . ತೊಟ್ಟು (ಶಬ್ದಾಂಗ. ೦೯-೩೦೩). [ಸಂ.]

**ಮಣಿಪಾದ** (ನಾ). ಕಣಕಾಲು : ಬಲದ ಮಣಿಪಾದದಲ್ಲಿ ಪಟ್ಟವರ್ಧನನೆಂಬ ಗಣೇಶ್ವರನೆನಿಸಿರ್ಪರಿ ಅಯ್ಯ, ಎಡದ ಮಣಿಪಾದದಲ್ಲಿ ಚಂದ್ರಶೇಖರನೆಂಬ ಗಣೇಶ್ವರನೆನಿಸಿರ್ಪರಯ್ಯ (ಸಿದ್ಧೇಶ. ೬೪-೦೬೪). [ಸಂ.]

**ಮಣಿಪೀಠ** (ನಾ). ಬೆಲೆ ಬಾಳುವ ಹರಳುಗಳಿಂದ ಅಲಂಕೃತವಾದ ಪೀಠ ; ರತ್ನಖಚಿತವಾದ ಆಸನ : ಚಮರರುಹದ್ದಮಂ ಬೆಳಿಪ ಬೆಳ್ಗೊಡೆ ಪೂಮ[ಜೆ]ಭಾಪ್ರತಾನಮುತ್ತಮಮಣಿಪೀಠಮಿಂದ್ರಸಭೆಯೆಂಬಿವು ಪಾತಿಚತುಷ್ಕಘಾತದಿಂ ಸಮನಿಸೆ (ಶಾಂತಿಪು. ೯-೬೩) ; ಮಣಿಪೀಠಾರೂಢ ನುದ್ಯತ್ತಚಿವಚಯಸಮಾಸೇವ್ಯಮಾನಂ . . . ಬಿಜ್ಜಳೇಂದ್ರಂ (ವೃ.ಶಾ. ೬-೨). [ಸಂ.]

**ಮಣಿಪುಂಖ** (ನಾ). ರತ್ನಖಚಿತವಾದ ಬಾಣದ ಹಿಳುಕು : ಮಣಿಪುಂಖ ಚಿತ್ರಭಾನುಪ್ರಣಿತಮಂ ಚಿತ್ರಭಾನುಶರಮಂ ವಿಲಯೋಲ್ಬಣಚಿತ್ರಭಾನು ಶಿಖಿಯೊಳ್ ತೊಣೆಯೊಸಿವುದನಸುರವೈರಿ ತೊಟ್ಟಾರ್ದೆಚ್ಚಂ (ಜಗ. ೦೩-೦೦೦). [ಸಂ.]

**ಮಣಿಪುತ್ರಿಕೆ** (ನಾ). ಬೆಲೆಬಾಳುವ ಹರಳುಗಳಿಂದ ಅಲಂಕೃತವಾದ ಬೊಂಬೆ; ರತ್ನಖಚಿತವಾದ ಬೊಂಬೆ : ಒಗೆತರ್ಪ ಘರ್ಮಜಲ ಬಿಂದುಗಳಿಂ ನಮಿತಾನನಾಬ್ಜೆ ಬೆಚ್ಚನೆ ಬಸಿವಿಂದುಕಾಂತಕರಸಂಕುಳದೊಪ್ಪು ನವುಂಕಿ ಸೋಂಕಿ ಸೋಂಕಿನೊಳೊಜೆವಿಂದುಕಾಂತಮಣಿಪುತ್ರಿಕೆಯಂದದಿ ನೊಪ್ಪಿ ತೋಱದಳ್ (ಆಪು. ೯-೯೯). [ಸಂ. ಮಣಿಪುತ್ರಿಕಾ]

**ಮಣಿಪೂರ** (ನಾ). ೧. ಹೊಕ್ಕುಳು; ನಾಭಿ. ೨. [ಯೋಗ] ಶರೀರದೊಳಗಿನ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ ಎಂಬ ಆರು ಚಕ್ರಗಳಲ್ಲಿ ಒಂದು ; P ನಾಭಿಯಲ್ಲಿರುವ ಷಟ್‌ಚಕ್ರಾಂತರ್ಗತವಾದ ಒಂದು ಪದ್ಮ. ಇದು ಸುಷುಮ್ನಾನಾಡಿಯೊಳಗೆ ಷಟ್‌ಚಕ್ರಗಳ ಮಧ್ಯದಲ್ಲಿ ನಾಭಿಯಲ್ಲಿರು ವುದು : ಆಧಾರ ಸ್ವಾಧಿಷ್ಠಾನ ಮಣಿಪೂರ [ಪಾಠಾಂ. ಪೂರಕ] ಅನಾಹತ ವಿಶುದ್ಧಿ ಆಗ್ನೇಯವೆಂಬ ಷಟ್ಚಕ್ರಂಗಳುಂ (ಏಕೋತ್ತ. ೦೩೯). [ಸಂ.]

**ಮಣಿಪೂರಕ** (ನಾ). = ಮಣಿಪೂರ ೨ : ಆಧಾರ ಸ್ವಾಧಿಷ್ಠಾನ ಮಣಿಪೂರಕ ಸ್ಥಾನವನಱಯರು (ಅವಚ. ೯೩-೦೬೯); ಸರಿಯಾಗಿಯೆ ಆಧಾರವನು ಬಳಕಲಿ ಮೀಱಿ ಸ್ವಾಧಿಷ್ಠಾನವನು ಅದ ಹಾರಿ ಮಣಿಪೂರಕವ ಅನಹತಕ್ಕೆದ ಬೇಕು (ಜ್ಞಾನಸಿಂ. ೦೫-೨೩). [ಸಂ.]

**ಮಣಿಪೂರಕಚಕ್ರ** (ನಾ). = ಮಣಿಪೂರ ೨ : ಅನಾಹತಚಕ್ರದಿಂದಾಯಿತ್ತು ಮಣಿಪೂರಕಚಕ್ರ (ಶೂನ್ಯಸಂ. ೨೩೯-೦೦೦) ; ಶರೀರದಲ್ಲಿರುವ ಷಟ್ಚಕ್ರಗಳಲ್ಲಿ . . . ಮಣಿಪೂರಕಚಕ್ರದಲ್ಲಿ ಶಿವಲಿಂಗ . . . ಆಧಾರಚಕ್ರದಲ್ಲಿ ಆಚಾರ ಲಿಂಗಗಳು ವಿರಾಜಿಸುತ್ತಿರುವುವು (ಶಾರದ. ೨೩೩). [ಸಂ.]

**ಮಣಿಪ್ರವಾಳ** (ನಾ). ಸಾಮಾನ್ಯವಾಗಿ ಸಂಸ್ಕೃತಪದಗಳ ಜೊತೆಗೆ ಮಲಯಾಳ ಅಥವಾ ಇನ್ನಾವುದೇ ದೇಶೀಯಭಾಷೆಯ ಪದಗಳ ಬೆರಕೆಯಿಂದ ರಚಿತವಾದ ಒಂದು ಬಗೆಯ ಶೈಲಿ; P ಮಲಯಾಳದ ಪ್ರಾಚೀನಸಾಹಿತ್ಯದಲ್ಲಿ ಇದು ಬಹಳ ಕವಿಪ್ರಿಯವಾಗಿದ್ದಿತು : ಪಿಳ್ಳೈಲೋಕಾಚಾರ್ಯರು ಹದಿನೆಂಟು ವೇದಾಂತಗ್ರಂಥಗಳನ್ನು ತಮಿಳು ಸಂಸ್ಕೃತಮಿಶ್ರವಾದ ಮಣಿಪ್ರವಾಳವೆಂಬ ಭಾಷೆಯಲ್ಲಿ ರಚಿಸಿದರು (ಶಾರದ. ೩೯೩) ; ಮಲಯಾಳಸಾಹಿತ್ಯದ ಭಾಷೆ ಮಣಿಪ್ರವಾಳವೆಂದು ಹೇಳಬಹುದು (ಶಾರದ. ೯೦೩). [ಸಂ. ಮಣಿಪ್ರವಾಲ]

**ಮಣಿಬಂಧ** (ನಾ). ೧. ( ಅಲಂಕಾರಕ್ಕಾಗಿ ) ಮುತ್ತು, ರತ್ನ ಮುಂತಾದುವನ್ನು ಕಟ್ಟುವುದು. ೨. = ಮಣಿಗಟ್ಟು ೨ : "ಮಣಿಬಂಧ ಎಂಬುದು ಮಣಿಕಟ್ಟು" (ಶರಾಯು. ೬೬-೩೭೪); ಮಣಿಬಂಧಂ ಮಣಿಯಿಂ ಕಟೀನಿಕಟಮಾ ಚೀಂಬೊನ್ನ ಚೆಲ್ವಪ್ಪ ಕಿಂಕಿಣಿಯಿಂ . . . ಅಲಂಕೃತನಾಗಿಯುಂ (ಶಾಂತಿಪು. ೦೦-೩೩) ; ಮಣಿಬಂಧದಲ್ಲಿ ಹೇಮರೇಖೆ

ಯಿದ್ದರೆ ಬಹುಭೂಷಿತನಾಗುವನು (ಸೌಗಂಧಿ. ೬೩೩-೨೦). ೩. [ನಾಟ್ಯ] ಮುಂಗೈಯನ್ನು ಚಲಿಸುವ ಒಂದು ವಿಧ; P ಇದರಲ್ಲಿ ನಿಕುಂಚ. ಆಕುಂಚ. ಚಲ. ಭ್ರಮಿತ, ಸಮ ಎಂದು ಐದು ವಿಧಗಳಿವೆ: ಪ್ರಕಟನಿಕುಂಚಿತಮಾಕುಂಚಿಕಚಲಮುಂ ಭ್ರಮಿತಸಮಗಳುಂ ಪರಿಣತಿಯಿಂ ಸಖಿ ಕೇಳ್ ಮಣಿಬಂಧಂ ಕೌತುಕದಿಂದೈದುಂ ವಿಭೇದದಿಂ ರಂಜಿಸುಗುಂ (ಲಾಸ್ಯರಂ. ೨-೦೩೦). [ಸಂ.]

**ಮಣಿಭವನ** (ನಾ). ರತ್ನಖಚಿತವಾದ ಸೌಧ: ಬಳ್ವಳಬಳೆದು ನಿಮಿರ್ದ ಕಾಡಿಗೆಗುಡಿಗಳ ಮಹೇಂದ್ರನೀಲಮರಕತಮಣಿಭವನಂಗಳ್ ವಿಜಯಕಟಕ ಸಮದಗಜಸಾಮಜಂಗಳ್ ಕರ್ವುಗಳೆಲ್ಲಮುಂ ನೆರಂಬಡೆದು (ಆದಿಪು. ೦೨-೪ ವ): ಮೆರೆವ ಮಣಿಭವನಪನು ರವಿಜಗೆ ತೆಱಪು ಮಾಡಿದ (ಕೌರಿಶಾ. ೪೪-೩೦). [ಸಂ.]

**ಮಣಿಮಕುಟ** (ನಾ). ರತ್ನಖಚಿತವಾದ ಕಿರೀಟ: ಶ್ರೀ ವಿಜಯಾರ್ಧ್ದಾಚಲ ಖಚರಾವಲಿ ಮಣಿಮಕುಟಮಕರಿಕಾನಿಕಷಣರೇಖಾವಿಲಸಿತಪದಕಮಲನಿಲಾ ವಂದ್ಯಯಶಂ ಸರಸ್ವತೀಮಣಿಹಾರಂ (ಆದಿಪು. ೨-೧); ಕರೆಸಿದನು ಮಣಿಮಕುಟಕಿರಣದ ಗರುವರನು (ಕುಮಾ.ಉ. ೮-೨೯). [ಸಂ.]

**ಮಣಿಮಾಡ** 'ಮಣಿವಾಡ' ನೋ.

**ಮಣಿಮಾಲೆ** (ನಾ). ೧. ಬೆಲೆಬಾಳುವ ಹರಳುಗಳ ಹಾರ; ರತ್ನದ ಹಾರ: ನೀರಜಜಾತ ವಿಸ್ತರಿಸಿ ದಂಡಮುಮಂ ಮಣಿಮಾಲೆಯಾಗಿ ವಿಸ್ತಾರಿಸಿ ಹಸ್ತದಿಂ ಪಿಡಿದು . . . ಜಪಿಸುತಿಪ್ಪಳ್ ಇರುಳ್ ಪಗಲ್ ಅವಳೋರ್ವ್ವಳಾ ಭಾರತಿ ನಮ್ಮ ಜಿಹ್ವದಲನಾಳದಿಂದಿರುತಿಕ್ಕೆ ಸಂತತಂ (ಎಕ. XI, ದಾವಣ. ೩೯-೯; 1280). ೨. ಲಕ್ಷ್ಮಿ. ೩. ಸೌಂದರ್ಯ; ಸೊಬಗು. ೪. [ಕಾಮಶಾ] ಒಂದು ಬಗೆಯ ದಂತಕ್ಷತ: ಪಲ್ಗಡೆ ಮತ್ತು ಗುರೊಳೆಳೆದುಲದು ಬಿತ್ತರದ ಮಣಿಮಾಲೆ ಬಿಂದುಮಾಲೆ (ಜಿಪ. ೭-೩೧): ಕಂಕುಳು ಹಣೆ ಕೊರಳು ಅದಕ್ಕೆ ಸಮಾನಂ ಮಣಿಯು ಬಿಂದುಮಾಲೆಯುಂ ಮಣಿಬಿಂದು ಮಾಲೈಎಲ್ಲಾ ದ್ವಂದ್ವಾಂತದಲ್ಲಿ ಮಾಲಾಶಬ್ದ ಪ್ರತ್ಯೇಕ ಸಂಬಂಧಿಸಿದಡೆ ಮಣಿಮಾಲೆ ಎಂಬುದು (ಕಾಮಶಾ. ೨೨೮). [ಸಂ. ಮಣಿಮಾಲಾ]

**ಮಣಿಮೇಖಲೆ**, ಮಣಿಮೇಖಳೆ (ನಾ). ರತ್ನಖಚಿತವಾದ ಡಾಬು: ಸತಿಯ ಪೊಱಮಾಱ ಕಾಮನ ಕೇಳೀನಗಮೆಂದೆಂಬನ ನುಡಿಯೇನುಚಿತ ಮಾಯ್ತೊ ಮಣಿಮೇಖಲೆಯಿಂ (ಕೃಷ್ಣಕೃ. ೩-೬೨); ನವರತ್ನ ಸುವರ್ಣ ಮಣಿಖಚಿತವಾದ ಮಣಿಮೇಖಲೆಯನ್ನು ನಡುವಿಗೆ ಇಟ್ಟರು (ಶಾಂತಲಾ. ೦೦೪). **ಮಣಿಮೇಖಳೆ**: ಪುಳಿನಸ್ಥಳಮುಂ ಮಱೆಯಿಸಿ ತೊಳಗುವ ನಕ್ಷತ್ರ ಮಾಲೆಯುಂತಿರೆ ಮಣಿಮೇಖಳೆ ಮದನಕುಂಭಿಕುಂಭಸ್ಥಳಮಂ ನೆನೆಯಿಸು ವುದಸಿಯಳಲಘುನಿತಂಬಂ (ಮಲ್ಲಿಪು. ೩-೬೦). [ಸಂ. ಮಣಿಮೇಖಲಾ]

**ಮಣಿಮೇಖಳೆ** 'ಮಣಿಮೇಖಲೆ' ನೋ.

**ಮಣಿಯ**, ಮಣಿಹ$_{2}$, ಮಣಿಹ್ಯ, ಮಣೆ$_{2}$, ಮಣೆಯ (ನಾ). ೧. ದೇವಾಲಯ, ಮಠ, ಅರಮನೆ, ಸುಂಕದ ಕಟ್ಟೆ ಮುಂತಾದುವುಗಳ ಉಸ್ತುವಾರಿಯ ಅಧಿಕಾರ,-ಪಾರುಪತ್ಯ: 'ಮಣಿಯಗಾರಿ' ಪರಾ. ೨. ದೇವಾಲಯ, ಮಠ, ಅರಮನೆ, ಸುಂಕದ ಕಟ್ಟೆ ಮುಂತಾದುವುಗಳ ಉಸ್ತುವಾರಿಯನ್ನು ನೋಡಿಕೊಳ್ಳುವ ಅಧಿಕಾರಿ,-ಮೇಲ್ವಿಚಾರಕ,-ಪಾರುಪತ್ಯಗಾರ: ಗಣರಮ್ಮಂ ಮಣಿಯಂ ವಶಿಷ್ಟ[ಷ್ಠ]ಕುಲಸಂಭೂತ ದ್ವಿಜನ್ಮೋತ್ರಮಂ (ಎಇ. XIII, ೦೯೯-೬; 888); ನಾಲ್ಕುವರುಷದಲ್ಲಿ ಬಸವ ಅರಮನೆಯ ಮನೆವಾರ್ತೆಯ ಮಣಿಯ ಆದನು (ತಕರಾ. ೪೪). ೩. (ತಹಸೀಲ್ದಾರನ ಅಧೀನದಲ್ಲಿರುವ) ಕಂದಾಯದ ಕಚೇರಿ: (+). **ಮಣಿಹ$_{2}$**: ೧. ಶ್ರೀಹರಿಹರದೇವ[ರ] ಚತ್ರದ ಅವಸರದ ನೈವೇದ್ಯದ ತುಪ್ಪಕೆ ಸುಂಕ ತಳವಾಱಿಕೆ ಮಣಿಹ ಪಯಿಕ ಸಹ ಸರ್ವಮಾನ್ಯವಾಗಿ ಸಮರ್ಪಿಸಿ ಕೃತಾರ್ಥನಾದನು (ಎಕ. XI, ದಾವಣ. ೧೮-೨೩; 1561). ೪. ತೆರಿಗೆ: ಕಂದಾಯ: ವಿಂಗಣಿ ಮಣಿಹ ಸುಂಕ ಪೊಮ್ಮು (ಎಕ. IX, ಚೆಂಪಂ. ೩೦-೦೩; 1763). **ಮಣಿಹ್ಯ**: ೪. ನಿಮ್ಮ ಕಡೆಯಿಂದಾ ಸರಕಾರಕ್ಕೆ ಸಲ್ಲತಕ್ಕಂಥಾ ಹಣ ಮಣಿಹ್ಯವನ್ನು ಕೊಡಗಿನ ತಾಲೂಕಿಗೆ ಕೊಟ್ಟು (ರಾಜೇಂದ್ರ. ೦೨೩). **ಮಣೆ$_{2}$**: ೧. 'ಮಣೆಗಾರ' ಪರಾ. **ಮಣೆಯ**: ೧. 'ಮಣಿಯಗಾರಿ' ಪರಾ.

[ದೇ.॥ ತಮಿ. ಮಲ. ಮಣಿಯ: ತೆಲು. ಮಣಿಯ, ಮಣಿವ, ಮಣಿಗ]

**ಮಣಿಯಗಾಮುಂಡ** (ನಾ). ಒಬ್ಬಾತನ ಹೆಸರು: ಸೊಕ್ಕಗಾಮುಣ್ಡರುಂ ಎದೆಯಗಾಮುಣ್ಡರುಂ ಮೊಳೆಊದಾ ಮಣಿಯಗಾಮುಣ್ಡರುಂ (ಎಕ. VII. ಶಿಕಾ. ೦೩೪-೯; 685). [ಮಣಿಯ ? + ಗಾಮುಂಡ]

**ಮಣಿಯಗಾರ** 'ಮಣಿಯಗಾರಿ' ನೋ.

**ಮಣಿಯಗಾರಿ**, ಮಣಿಯಗಾರ, ಮಣಿಹಗಾರಿ, ಮಣಿಹಾರಿ, ಮಣಿಹ್ಯಗಾರ, ಮಣೆಗಾರ, ಮಣೆಗಾರಿ, ಮಣೆಯಗಾರಿ, ಮಣೆಹಗಾರ (ನಾ). ೧. ದೇವಸ್ಥಾನ, ಅರಮನೆ, ಸುಂಕದ ಕಟ್ಟೆ ಮುಂತಾದುವುಗಳ ಉಸ್ತುವಾರಿ ನೋಡಿಕೊಳ್ಳುವ ಅಧಿಕಾರಿ,-ಮೇಲ್ವಿಚಾರಕ,-ಪಾರುಪತ್ಯಗಾರ: ಬಣಗು ಕಮಲಜನದಕೆ ತಾನೇ ಮಣಿಯಗಾರಿನು (ಹಂಶಾ. ೬೨). **ಮಣಿಯಗಾರ**: ೧. ಮಣಿಯಗಾರನ ಹಂಗು ಹಣಗಾರನಿಗೂ ಬೇಕು (ಗಾದೆ). **ಮಣಿಹಗಾರಿ**: ೧. ವೇಸಿ ದಾಸಿ ಸುಂಕಿಗ ಮಣಿಹಗಾರಿ ವಿದ್ಯಾವಂತ ಇಂತೀ ಐವರಿಗೆ ಲಿಂಗವ ಕಟ್ಟಿದಡೆ ಗುಡಿಯ ಮುಂದಣ ಸಿಂಗಾರಗಂಟೆ (ತನ್ಮವ. ೪. ೯೯-೨೦೯); ಮಜ್ಜನವಾಳರ ಮಣಿಹಗಾರಿರ . . . ಕೇರಿಗಳಿಂದಾ ಪುರಿ ಪಜ್ಜಳಿಸುತ ಮೆಱೆದಿಹುದು (ಕುಂಞಾಂ. ೪-೦೦೩). **ಮಣಿಹಾರಿ**: ೧. ವಾಣಿಜವರನು . . . ಗಂಧರ್ವದತ್ತೆಯ ವರಸ್ವಯಂವರಕೆ ಪೊಳಲಿಗೈತಹುದೆಂದು ಸಾಱಿಸಲೊಲಿದು ಮಣಿಹಾರಿರನು ಬೇಗದಿ ಕಳುಹಿ ತವನುಜ್ಞೆಯುಲಿ ಶೃಂಗರಿಸಿದನಾ ಪುರವ (ಜೀವಂಧ. ೭-೨೦); ಮುನಿಪತಿಯ ಬಳಿಗೆ ಬಂದರು ಜನಕಭೂಪನ ಬಳಿಯ ಮಣಿಹಾರಿರು ಮಹಾಮಂಗಳೆಯ ವಿಮಳವಿವಾಹ ಪತ್ರಿಕೆಸಹಿತ ವಹಿಲದಲಿ (ತೊರರಾ. ೦-೦೨-೨). **ಮಣಿಹ್ಯಗಾರ**: ೧. ಸುಂಕದ ಮಣಿಹ್ಯಗಾರ ಶ್ಯಾನಭಾಗರ ವಹಿತ್ತ (ಮೈಆಂ. ೦೯೩೩, ೩೦-೩೯; 1737); ಸುಂಕದ ಮಣಿಹ್ಯಗಾರು ನರಹರ್ಯೆಯ್ಯನವರು (ಎಕ. XVI, ಶಿಕ್ಪಾ. ೯೦-೩೪; 1802). **ಮಣೆಗಾರ**: ೧. ಸರ್ಕಾರದ ಗೌಡ ಸೇನಬೋವರಾಗಲಿ ಸುಂಕದ ಮಣೇಗಾರನಾಗಲಿ ಆರು ಯಿದಕ್ಕೆ ವಿಗಡ ಆಚರಿಸಿದರು ಅವರ್ರು ತಂದೆತಾಯಗಳ ವಾರಣಾಸಿಯುಲಿ ಕೊಂದ ಪಾಪಕೆ ಹೋಹರು (ಎಕ. IX, ಹೊಸ್ಕೋ. ೩-೨೩; 1586); ಕೃಷ್ಣರಾಜವಡೆಯರವರು . . . ಸುಂಕ್ಕದ ಮಣೆಗಾರಗೆ ಬರಶೀ ಕಳುಹಿಸ್ತ ನಿರೂಪ (ಮೈಆಂ. ೦೯೩೫, ೨೦-೩; 1816); ಈ ಬಾಬುಗಳಲ್ಲಿ ಒಂದೊಂದಕ್ಕೆ ಒಬ್ಬೊಬ್ಬ ಮಣೆಗಾರ, ಶ್ಯಾನಭಾಗ, ಕೋಲುಕಾರ ಮುಂತಾದ ಜನಗಳನ್ನು ನೇಮಕ ಮಾಡಿ . . . ನಿಬಂಧನೆ ಮಾಡಿದರು (ಮಹಾಮಂ. I, ೦೨೪). **ಮಣೆಗಾರಿ**: ೧. ಮಣೆಗಾರಿರ ಕೇರಿ ಕಂಚುಗಾಱರ ಕೇರಿ (ಗೋಮುಟೇ. ೦-೩೮). ೨. ಸುದ್ದಿ ತರುವವನು; ದೂತ: "ಸಂದೇಶಹರಃ, ದೂತಃ—ಈ ೨ ಮಣೆಗಾಱನ ಪೆಸರು" (ನಾಚಿರಾ. ೦೩೦). **ಮಣೆಯಗಾರಿ**: ೧. ಮಣೆಯಗಾರಿರೆಪ್ಪತ್ತೇಳು ಕೋಟಿ (ಚನಕ. ೨೩೦-೬). **ಮಣೆಹಗಾರ**: ೧. ಜವಳಿ ಲಾಭಾದಾಮಂದ ಚಾವಡಿ ಮಣೆಹಗಾರ ಹರಿದಾಸಯ್ಯಗೆ . . . ತಾಂಬ್ರಶಾಸನವನ್ನು ಬರೆಸಿ ಕೊಟ್ಟು ಯಿಧೇವೆ (ಮೈಆಂ. ೦೯೨೮, ೪೮-೨; 1171).

[ಮಣಿಯ + — ಕಾರ. / ತಮಿ. ಮಣಿಯಕ್ಕಾರನ್; ಮಲ. ಮಣಿಯಕಾರನ್; ತುಳು. ಮಣಿಗಾರೆ, ಮಣೆಗಾರೆ; ತೆಲು. ಮಣಿಯಗಾಡು, ಮಣಿಯಕಾಡು]

**ಮಣಿಯಮಸೆಟ್ಟಿ** (ನಾ). ಒಬ್ಬಾತನ ಹೆಸರು : ಚಬ್ಬಿಸೆಟ್ಟಿಯ ತಮ್ಮ ಮಣಿಯಮಸೆಟ್ಟಿ ತುಱುಗೊಳೆ ತುಱುವನಿಕ್ಕಿಸಿ ಸತ್ತು ಸಗ್ಗಕ್ಕೆ ಸನ್ದ (ಎಕ. IX, ದೊಡ್ಡಬ. ೧೦-೪ ; 920).

[ಮಣಿ + ಅಮ (<ಅಮ್ಮ$_1$) + ಸೆಟ್ಟಿ]

**ಮಣಿಯವರೆ** (ನಾ). ಗುಂಡಾದ ಕಾಳುಗಳಿಂದ ಕೂಡಿರುವ ಒಂದು ಬಗೆಯ ಅವರೆ : ಮಣಿಯವರೆಯ ಕಾಳು ಅಡುಗೆಗೆ ರುಚಿಯಾಗಿರುತ್ತದೆ (ರೂಢಿ). [ಮಣಿ$_3$ + ಅವರೆ$_1$]

**ಮಣಿಯಾಲ** (ನಾ). ಒಂದು ಊರಿನ ಹೆಸರು : ತೆಂಕಾಯ್ ಮಣಿಯಾಲ ಕೊಲ್ಲಿಯ ಪಳ್ಳಮ ಪಡುವಾಯ್ ಪೆರ್ಗ್ಗೊಲ್ಲಿಯ ಸೀಮೆ (ಎಕ. III (R)' ಪೆಗ್ಗ.ಡ. ೯೦-೩೦ ; 760). [ ? ]

**ಮಣಿಯಿಸು**, ಮಣಿಸು (ಕ್ರಿ). ೧. ಸೋಲಿಸು : ಸಗ್ಗುವಂತೆ ಮಾಡು : ಕೊಲ್ಲೆವಿಂದರಂ ಪಣಿದದಿಂ ಮಣಿಯಿಸುತ್ತೆ . . . ಎಸೆದುದಬಲಾಜನಂ (ಶದ್ಮರಾ. ೬-೮೮) ; ಪಲರಾಯರ ಸಬ್ಬಸವಂ ಕಿವರ್ದುಜ್ಜ್ವಲಿಸುವವರ ತಲೆವಣಿಯಂ ಮಣಿಯಿಸಿದಲಘುಭುಜಂ ವಿಕ್ರಮಕೌರವಜಯರಾಜಶಶಾಂಕ ನೊಳು (ಜಯಕಾ. ೬-೩). ೨. ನಮಸ್ಕರಿಸುವಂತೆ ಮಾಡು ; ಶರಣಾಗಿಸು : ಮಣಿಮಂತ್ರೌಷಧಿಯಿಂದ ನಿನ್ನಯ ಕಾಲ್ಗೆ ಮಣಿಯಿಸುವೆ ರಾಮನನು (ಕುರಾಕಾಂ. ೨೩-೪೪) ; ಮಣಿಯಿಸುವ ದೈವ ಘನವಾಗಿ ಜಗಕ್ಕೆಲ್ಲ ತ್ರಿಣಯನೆ ದೈವ (ಸರ್ವಜ್ಞ. ೨೩೭). **ಮಣಿಸು** : ೧. ತರುಣ ಹೇಳುವುದೇನು ದಾನವ ಹರನ ಹವಣೇನೆಂದಱಿಯೆ ಮಿಕ್ಕರಿಗಳೀ ದಶಮುಖನ ಮಣಿಸಲು ತಕ್ಕರಿಲ್ಲ (ತೊರರಾ. ೦-೬-೫೨). ೩. ಬಾಗುವಂತೆ ಮಾಡು ; ಬಗ್ಗಿಸು : ಕಣಕಾಲ ಕುಣಿಸುವಳು ಮೊಣಕಾಲ ಮಣಿಸುವಳು (ಸರ್ವಜ್ಞ. ೦೬೯೩) ; ತೊಲೆಯ ಕಟ್ಟಿಗೆ ; ಮಣಿಸಿದರೆ ಮುರಿಯುವದು (ಕಣಗಿ. ೩೪) ; ಹುಬ್ಬನು ಕುಣಿಸುತ ಕೈಯನು ಮಣಿಸುತ ಬಿಸಜಾಕ್ಷಿ ಮಾತನಾಡುವಳು (ಇಂಕಾಶ. ೦೬೬-೨೭). [ಮಣಿ$_1$ + — ಇಸು$_3$]

**ಮಣಿಯೂರ್** (ನಾ). ಒಂದು ಊರಿನ ಹೆಸರು : ವಿಜಯಾದಿತ್ಯಮಙ್ಗಲ ಮಹಾಗ್ರಾಮದೊಳ್ ಕುಡಲ್ಕಣ್ಣನೂರು ಮಣಿಯೂರ ಚತುಸ್ಸೀಮೆ (ಎಕ. X, ಬಂಗಾ. ೪-೩ ; 950) ; ಭೀಮನದಿಯ ತಡಿಯ ಮಣಿಯೂರ ಅಪ್ಪಯಣಪೀಡಿನೊಳ್ (ಇಅ. XIX, ೨೭೩-೩೪ ; 1054).

[ ಮಣಿ$_?$ + ಊರ್ ]

**ಮಣಿಯೇಱು** (ನಾ). ಗಂಟೆಯನ್ನು ಬಾರಿಸುವಾಗ, ಅದರ ನಾಲಗೆಯು ಅದಕ್ಕೆ ಕೊಡುವ ಹೊಡೆತದಿಂದ ಉಂಟಾಗುವ ಸದ್ದು : ಮದನ ಮದಕುಂಜರದ ಮಣಿಯೇಱಿಂ ಮಿಱುವ ರಾಜಹಂಸಕೂಜಿತಮುಂ (ಶಂರಾಪು. ೩-೮೦ ವ) ; ಮಣಿಯೇಱು ಚೆಂಬೊನ್ನುಡೆವಣಿಯುಲಿ ಗೆಲೆಗೆಲ್ದನಂಗರುಚಿಯಿಂದೈರಾವಣಮಂ ಕುಮಾರಚೂಡಾಮಣಿ ಲೀಲಾಮದದೊಳಂ ಚತುರ್ದಂತದೊಳಂ (ಶಂರಾಪು. ೩-೦೭೦).

[ ಮಣಿ$_2$ + ಏಱು$_4$ ( < ಏಱ್$_4$ ) ]

**ಮಣಿರಂಗ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹತ್ತನೆಯ ಪಂಕ್ತಿಯೆಂಬ ಛಂದಸ್ಸಿನ ಒಂದು ವೃತ್ತ : ಪಾದಪಾಶನ ಮಾರುತಯುಗ್ಮಂ ಪಾದದಂತದೊಳೀಶ್ವರ ನಕ್ಕುಂ ಕಾದಿರಲ್ ಯತಿಭೂತದೊಳ್ದಂದೋದೆ ಕಲ್ಪಮೆಲೇ ಮಣಿರಂಗಂ (ಛಂದೋಂಬು. ೨-೦೦೦). [ಸಂ.]

**ಮಣಿವಚ್ಚ** (ನಾ). ರತ್ನದ ಹರಳುಗಳಿಂದ ಮಾಡಿದ ಒಡವೆ ; ರತ್ನಖಚಿತವಾದ ಆಭರಣ : ಅಬ್ಜಾಕ್ಷಿಯರ್ ಸೀತೆಯಂ ಕಮ್ಮೆಣ್ಣೆಯಂ ಪೂಸಿ ಮಿಸಿಸಿ ತುಱುಬಿಕ್ಕಿ ಕುಸುಮಗಳ ಮುಡಿಸಿ ಪೀತಾಂಬರವನುಡಿಸಿ ಮಣಿವಚ್ಚಮಂ ತುಡಿಸಿ . . . ಕರೆತಂದರೋಲಗದ ಸಭೆಗೆ (ತ್ರಿಣಾಶ. ೫-೫೦).

[ ಮಣಿ$_3$ + ಪಚ್ಚ$_2$ ]

**ಮಣಿವಟ್ಟು** (ನಾ). ರತ್ನದ ಹರಳುಗಳಿಂದ ಅಲಂಕರಿಸಿದ ರೇಷ್ಮೆಬಟ್ಟೆ ; ರತ್ನಖಚಿತವಾದ ಪಟ್ಟಾವಳಿ : ನಾವು ಪಡೆದವು ಮಿಂಡಜಂಗಮದೇವರೆ ಮಗೊಲಿದಿತ್ತ ನವವಸನಾವಳಿಗಳಂ ದಿನದಿನದೊಳಿಂತುಟ್ಟು ಭೋಗಿಸುವ ಮಲಯಜಶ್ರೀ . . . ಚಂದ್ರಾತಪಂ ಭೂತಿಳಿಕವುಂ ಮಣಿವಟ್ಟು ಪಿಂಜಾವಳಿಯು (ಬಸಪು. ೦೦-೨೪). [ ಮಣಿ$_3$ + ಪಟ್ಟು$_5$ ( < ಪಟ್ಟ$_2$ ) ]

**ಮಣಿವರೂಥ** (ನಾ). ರತ್ನಗಳಿಂದ ಅಲಂಕೃತವಾದ ರಥ ; ರತ್ನಖಚಿತವಾದ ರಥ : ಬಭ್ರುವಾಹನಂ ತರಹರಿಸುತೆಚ್ಚಱಿಕೆಗುಂದದೆ ಮಹಾಹವಕೆ ಬೇಱೊಂದು ಮಣಿವರೂಥವನಡರ್ದು (ಜೈಮಿಭಾ. ೨೨-೩೪). [ಸಂ.]

**ಮಣಿವಸರ** (ನಾ). ರತ್ನಗಳನ್ನು ಮಾರುವ ಅಂಗಡಿ : ಅಗಸಚುಂಬಿತ ಕರುಮಾಡ ಗುಡಿಗಳು ಬೀಗಲಲುಗೆ ವಾಯುವಿಂದ ತಾಗಿ ಭಗಣಗಳುದುರಿ ತಿಳಿಗಂಬವೊಲಾಗಿಸೆದುದು ಮಣಿವಸರ (ಶರಸ. ೦-೦೦೬).

[ ಮಣಿ$_3$ + ಪಸರ ]

**ಮಣಿವಾಗಿಲ್** (ನಾ). ರತ್ನಗಳಿಂದ ಅಲಂಕರಿಸಿದ ಬಾಗಿಲು ; ರತ್ನಖಚಿತವಾದ ದ್ವಾರ : ಸಂದಣಿಸಿದ ಮಣಿವಾಗಿಲೊಳೊರ್ವ ಪುಳಿಂದನಿತಂಬಿನಿ . . . ಒಂದರಗಳಿಸಹಿತಂ ನಿಂದಿರ್ದಪಳ್ (ಜಯಕಾ. ೨-೫೦) ; ಕಂತುಕೇಳಿಯಾಂತೆಳೆಯಳೊಱಲ್ದು ಬಂದು ಮಣಿವಾಗಿಲೊಳೀಕ್ಷಿಸಿದಳ್ ಮಹೀಶನಂ (ರಾಜಶೇ. ೭-೯). [ ಮಣಿ$_3$ + ಬಾಗಿಲ್ ]

**ಮಣಿವಾಡ**, ಮಣಿಮಾಡ (ನಾ). ರತ್ನಗಳನ್ನು ಕೆಚ್ಚಿದ ಮಹಡಿ ; ರತ್ನಖಚಿತವಾದ ಸೌಧ : ಎಳವೆಂಡಿರನೊಳಕೊಂಡೆಸೆದಿರ್ಪ ಮಣಿವಾಡಂಗಳ ಸಾಲ್ಗಳಿಂ . . . ರಾಜವೀಧಿ ವಿರಾಜಿಸುತ್ತಿರ್ದುದು (ಉದ್ಭಟ. ೦-೪೯ ವ); ಮದಿಲೊಳು ಮಣಿವಾಡದೊಳು ಪೊಂಬಾಗಿಲ ತುದಿಯೊಳು ಪಟ್ಟಶಾಲೆಯೊಳು ಮದನನ ಪೆಂಡವಾಸವೆನಲು ಪುರಸುದತಿಯರವನ ನೋಡಿದರು (ತ್ರಿಣಾಂ. ೦೩-೩೪). **ಮಣಿಮಾಡ** : ರತ್ನಕಂಬಳಿಯಂ ಮಣಿಮಾಡದ ನೆಲೆಯೊಳಿರ್ದಾತ್ಮೀಯಾತ್ಮಜಂಗೆ ಕೆಲದೊಳಿರ್ದ ಪರಿಚಾರಕಿಯು ಕಯ್ಯಲಟ್ಟಿದಾಗಳ್ (ಸುಕುಮಾ. ೦೦-೦೦೮ ವ) ; ಅಡಿಕಿಲ್ಗೊಂಡೊಪ್ಪುವೇೞುಂ ನೆಲೆಗಳ ಮಣಿಮಾಡಂಗಳಿಂದಂ ವಿಚಿತ್ರಂಬಡೆದಿರ್ದುತ್ತುಂಗಕೂಟಂಗಳಿಂ . . . ಕೌತುಕಕ್ಕಂದೆಡೆಯಾಯ್ತು (ಚಾರಪು. ೦-೦೫೪) ; ಏಕಾರಣಮಿಾ ಮಣಿಮಾಡಮಿರ್ದಪುದೀ ಕುಧರಾಗ್ರದೊಳು (ತ್ರಿಣಾಂ. ೪-೬೦).

[ಮಣಿ$_3$ + ಮಾಡ$_1$]

**ಮಣಿವಾಳ** (ನಾ). ರತ್ನಗಳನ್ನು ಮಾರುವವನು ; ರತ್ನಪಡಿ ವ್ಯಾಪಾರಿ : ಲಲಿತಯಮುನೆಯೊಳುಡುನಿಕರ ಮಾರ್ಪೊಳಿವವೊಲು ನೀಲಾಂಬರದಿ ಮಣಿಬಳೆಸಿರಲು ಮಣಿವಾಳರಂಗಡಿಯೆಸೆದುವು (ಜಾವಂಶ. ೨-೨೯).

[ಮಣಿ$_3$ + — ವಾಳ್$_3$ (<—ವಳ)]

**ಮಣಿವಿಭೂಷಣ** (ನಾ). ೧. ರತ್ನಖಚಿತವಾದ ಆಭರಣ. ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹದಿನೈದನೆಯ ಅತಿಶಕ್ವರಿ ಛಂದಸ್ಸಿನ ಒಂದು ವೃತ್ತ : ಪಾವಕೇಂದ್ರುಶಶಿಯುಗ್ಮದಿನತ್ತ ಹುತಾಶನಂ ಭಾವಿಸುತ್ತಿರೆ ಪದ್ಯಾಂತದೊಳಿರ್ದೊಡೆ ವಿಶ್ರಮಂ ಪೀವರಸ್ತನಭರಾನತಮಧ್ಯೇ ಕವೀಂದ್ರಸಂಭಾವಿತಂ ಮಣಿವಿಭೂಷಣಮೆಂದಱಿ ನೀನಿದಂ (ಛಂದೋಂಬು. ೨-೦೪೩). [ಸಂ.]

**ಮಣಿವೆಜ್ಜ** (ನಾ). ರತ್ನದ ಹರಳಿನಲ್ಲಿರುವ ತೂತು,-ರಂಧ್ರ : ಮಣಿವೆಜ್ಜದೊಳಡಗುವುದೆಯಾಕಾಶ (ತೊರರಾ. ೬-೫೩-೭೪). [ಮಣಿ$_3$ + ಪೆಜ್ಜ ]

**ಮಣಿವೆಸ** (ನಾ). ರತ್ನದ ಹರಳುಗಳಿಂದ ಮಾಡಿದ ಕೆಲಸ ; ರತ್ನಗಳನ್ನು ಕೆಚ್ಚುವ ಕೆಲಸ : ವಿನಿರ್ಮಿಸಿದ ಸುಯ್ಯಾಣವೆಸದ ಕತ್ತರಿವೆಸದ ಮಣಿವೆಸದ ಮೇಲ್ಗಟ್ಟಿನೊಳಂ ಮಪಪತ್ರೀಯ ಕಂಠಿಕಾಮಾಳೆಗಳಿನಿಪ್ಪ ವಿವಿಧಮಣಿತೋರಣಂಗಳೊಳಂ . . ಅಸದಳಮಾಗಿ (ವರ್ಧಪು. ೬-೩ ವ).

[ಮಣಿ$_3$ + ಬೆಸ$_1$]

**ಮಣಿವೆಳಗು** (ನಾ). ರತ್ನದ ಹರಳುಗಳಿಂದ ಉಂಟಾಗುವ ಬೆಳಕು ; ರತ್ನಪ್ರಭೆ : ಬೀಳುಗೊಟ್ಟನು . . . ಜಾಳಿಗೆಯ ಮಣಿವೆಳಗುಗಳ ವೈಹಾಳಿಗಳ ವೈಡೂರ್ಯದೀಪ್ತಿ ನಿವಾಳಿಗಳ ಸುಪತಾಕೆ ಬೆಳಗುವ ಹೇಮರಥ ಸಹಿತ (ಶಬ್ದಾ.ಶ. ೭-೦೦); ತೊಳತೊಳಗುವ ತೊಡವಿನ ಮಾಣಿಕಮಣಿ ವೆಳಗಿನ ಸೊಡರಾರತಿಯುಮ ಕಲ್ಪಿಸ ವಿಜಯಾಗರ್ಜಿಪಂತೆ ಕಿಂಪುರುಷರ ಲಲನೆಯರತಿರಂಜಿಸಿವರು (ಶ್ರೀಶಾಂ. ೦೪-೭೮); ಮಂಗಳಗೀತೆಯುಂ ಪಾಡಿ ಮಣಿವೆಳಗಿನಾರತಿಯುಂ ಬೆಳಗುವ ಭಾಸುಭಾವೆಯುಂ . . . ಪೆಂಪಸಾಳ್ದು (ಕಬಕಂ. ೦-೭೯ ವ). [ಮಣಿ$_3$ + ಬೆಳಗು$_2$]

**ಮಣಿವೊರಜೆ** (ನಾ). ಸಣ್ಣ ಸಣ್ಣ ಗಂಟೆಗಳಿಂದ ಅಲಂಕೃತವಾದ ಹಗ್ಗ : ಆ ಕಂದರದೊಳು ಅಂತ ರತ್ನಂಗಳೇ ಮಣಿವೊರಜೆ ಕಳಧೌತಕಾಂತಿ ಪೋಜೂಲೆನೆ . . . ತಿರ್ದಿ ತೋರ್ಪ ಪಟ್ಟದ ದಂತಿಯಿಂದೆಸಲ್ ಕನಕಾಚಲಂ ಮೆಱೆದುದು (ತಂಶು. ೨-೯). [ಮಣಿ$_3$ + ಪೊರಜೆ]

**ಮಣಿಶಿಲೆ** (ನಾ). ೧. ರತ್ನಗಳಿಂದ ಕೂಡಿದ ಕಲ್ಲು ; ರತ್ನಗಳು ಹುದುಗಿರುವ ಶಿಲೆ : "ರತ್ನಶಿಲೆಯೆನಲ್ ಮಣಿಶಿಲೆ" (ಮಂಗರಾ. ೩೦-೭) : ಬೆಳ್ದಾವರೆಗಳಲರ್ದಳೆಯದ ಕೊಳಂಗಳುಂ ಮಣಿಶಿಲಾರೋಚಿಯಿಂ ಪೊಳೆವುದಚಲಂಗಳುಂ . . . ಮುಳಿದಜಸಲಾಂ ಕಾಣೆನಾ ಮಹೀಮಂಡಲದೊಳು (ಕೃಬಾಶಾ. ೩-೯) ; ಚಾರುಮಣಿಶಿಲೆಯ ವಸುಗೆಸರ ಗಾರೆಯಲಿ ವಲವೇರಿ ರಚಿಸಿವರೊಯೆಂಬಂತೆ (ನಪಷೋ. ೨-೨೭). ೨. ಔಷಧಿಯಾಗಿಯೂ ಬಾಣ ಬಿರುಸುಗಳಿಗೆ ಸಿಡಿಮದ್ದಾಗಿಯೂ ಉಪಯೋಗಿಸುವ, ಕೆಂಪುಬಣ್ಣದ ಒಂದು ಬಗೆಯ ಖನಿಜ : "ಮನಶ್ಶಿಲಾ, ಮನೋಗುಪ್ತಾ, ಮನೋಹ್ವಾ. ನಾಗಜಿಹ್ವಿಕಾ — ೪ ಮಣಿಶಿಲೆಯ ಪೆಸರುಗಳು" (ಸಿದ್ಧಾಂತಿ. ೩೦೭) : ಹೊಸ ಮಣಿಶಿಲೆ ಮೂಱು ತೂಕ (ಶಾಕ್ಯಸಾಂ. ೦೯) ; ಇಂಗಲಿಕವು ಮಣಿಶಿಲೆಯು ಅಂಗಡಿಯೊಳು ಮಾಱುತಿಹ ವ್ಯವಹಾರಿಗಳ್ ಕಂಗೊಳಿಸಿದರು (ಅದ್ಭರಾ. ೩-೭೭). ೩. ಒಂದು ಬಗೆಯ ಸಸ್ಯ : ಬರಿವದಣೆ ಸುಣ್ಣಗಂದಿಗೆ ನಱುಪಲ್ಗುಳ್ಳಂ ಮಣಿಶಿ[ಶಾಶಾಂ. ಸಿ]ಲೆ ಶಿವನ್ನಿಯು ಶತಾವರಿ ಪೂಲಿಗಿಲ್ (ಅಕ್ಷಶಾ. ೦೦-೭೦). [ಸಂ. ಮಣಿಶಿಲಾ]

**ಮಣಿಶುಕ್ತಿ** (ನಾ). ಒಂದು ಬಗೆಯ ಸುಗಂಧದ್ರವ್ಯ : ಆ ವೇದೀಸ್ಥಳದೊಳ್ . . . ನವಚಂದ್ರಕಾಂತಚಷಕಂಗಳ್ ಚಂದನಕ್ಷೋದದಿಂ ತೀವಿದುವಂ ಮಣಿಶುಕ್ತಿಗಳ್ ಪರಿಮಳತ್ಕಾಶ್ಮೀರಸಾರಾಂಬುವಿಂ ತೀವಿದುವಂ ಬಱಿದಿರ್ದ ಪೋಲಿಸೆದುವಾದಂ ವರ್ಣಸಾಮಾನ್ಯದಿಂ (ಚಂದ್ರಪು. ೬-೫೪). [ಸಂ.]

**ಮಣಿಸರ** (ನಾ). ೧. ರತ್ನಗಳನ್ನು ಪೋಣಿಸಿ ಮಾಡಿದ ಸರ ; ರತ್ನಹಾರ. ೨. ಗಾಜು, ಕಲ್ಲು, ಬೀಜ ಮುಂತಾದುವುಗಳಿಂದ ಮಾಡಿದ ಬಣ್ಣಬಣ್ಣದ ಮಣಿಗಳ ಹಾರ : ಕಲ್ಲಿನಿಂದ ಮಣಿಸರಗಳನ್ನು ಮಾಡುವ ವಿಧಾನವನ್ನು ಪರೀಕ್ಷಿಸಿದರೆ ಆಶ್ಚರ್ಯವಾಗದಿರಲಾರದು (ಶಾರದ. ೦೪); ಮಣಿಸರಕ್ಕೆ ಗತಿಯಿಲ್ಲದವ ಹಣ ದಕ್ಷಿಣೆ ಕೊಟ್ಟಾನೇ ? (ಗಾದೆ). [ಸಂ.]

**ಮಣಿಸರವಳಿಗೆ** (ನಾ). ಗೋದಿಹಿಟ್ಟು ಅಥವಾ ರವೆಯನ್ನು ಹದವಾಗಿ ಕಲಸಿ ಮಾಡಿದ ಮಣಿಯಾಕಾರದ ಉರುಳೆ ಮತ್ತು ಅದರಿಂದ ಮಾಡಿದ ಪಾಯಸ : ಸರವಳಿಗೆ ಸಣ್ಣಸರವಳಿಗೆ ಮಣಿಸರವಳಿಗೆ ಮಧುರ ಪೂಸಣಂಬಂ ಸಮೆದವಂ ಶೊಳಗೆ (ಬಸರ. ೭-೦೪); ಪೊಳೆವ ಶರಚ್ಚಂದ್ರಿಕೆಯೊಳ್ಮೆಱುಂಕಿ ನಸುದೋರ್ಪ ತಾರೆಗಳ ತೆಱದಿಂ ಕಣ್ಗೊಳಿಸಿ ಮಗಮಗಿಪ ಮಣಿಸರವಳಿಗೆಯು ಪಾಯಸಮಸಸದಳಂ ಬಡ್ಡಿಸಿದರ್ (ಶಾಂತೀಶ್ವ. ೦೩-೫೭). [ಮಣಿ$_3$ + ಸರವಳಿಗೆ]

**ಮಣಿಸಿಂಹಾಸನ** (ನಾ). ರತ್ನಖಚಿತವಾದ ಸಿಂಹಾಸನ : ಮಣಿಸಿಂಹಾಸನಮಸ್ತಕಾಭರಣವಿಂದೇಕಾಗದೇಂದಾವ ಕಾರಣದಿಂ ಪೇೞೆನಿತೊಂದು ಪೊೞ್ತು ತಡೆದಿರ್ದಂ (ಕುಸುಮಾ. ೧-೫೭). [ಸಂ.]

**ಮಣಿಸಿಲೆ** (ನಾ). = ಮಣಿಶಿಲೆ ೨ : ಮೈಲಿತುತ್ತು, ಇಂಗಲೀಕ, ಮಣಿಸಿಲೆ ಒಳಗೆ ನೀರು ಹಾಕಿ . . . ಇರಿಸುವುದು (ವಿಷ್ಣು. ೦೪). [< ಸಂ. ಮಣಿಶಿಲಾ]

**ಮಣಿಸು** 'ಮಣಿಯಿಸು' ನೋ.

**ಮಣಿಸೊಡರು** (ನಾ). ರತ್ನಖಚಿತವಾದ ದೀವಿಗೆ : ಇಕ್ಕೆಲದ ಮಣಿಸೊಡರುಗಳ ಮಾಣಿಕ್ಯ ಮಣಿಭಿತ್ತಿಗಳ . . . ತನಿವೆಳಗು ತಿಗೆಯುದು ಜನದ ಕಣ್ಣಾಸವ (ಶಿಭಾಗ. ೦೦-೯೭-೦೯). [ಮಣಿ$_3$ + ಸೊಡರು ( < ಸೊಡರ್ ) ]

**ಮಣಿಸ್ತಂಭ** (ನಾ). ರತ್ನಗಳಿಂದ ಅಲಂಕರಿಸಿದ ಕಂಬ ; ರತ್ನಖಚಿತವಾದ ಸ್ತಂಭ : ಪಸೆಯೊಳ್ ಪಾಸಿದ ಬೊಂಗಮುಲ್ಲವದ ದೇವಾಂಗಂ ಮಣಿಸ್ತಂಭದೊಳ್ ಪೊಸಪತ್ಯಂಗಮಪೂರ್ವಮಾಗೆ (ಶಾಂತಿಪು. ೦೦-೭೮); ಚಂದ್ರಿಕೆಯುನಿಳಿಪ ಧವಳಾರವೃಂದಂಗ[ಳ]ಂ ಇಂದ್ರನೀಲದ ಮಣಿಸ್ತಂಭಸಾಲುಂಗ[ಳ]ು . . . ತೋಱುತುಂ (ನುಬರ. ೯-೯೨). [ಸಂ.]

**ಮಣಿಹ$_1$** (ನಾ). ೧. ಬಾಗುವಿಕೆ; ನಮನ : ವಂದನೆ : ಮಣಿಹವನು ನಾನೊಲ್ಲೆ ತುಲಸಿಯ ಮಣಿಹವನು ನಾ ಬಲ್ಲೆ ಶೌರಿಯ ಮಣಿಹವನು ನೆಱೆ ಬಲ್ಲೆ ಗುರುಹಿರಿಯರ ಪದಾಂಬುಜಕೆ ಮಣಿಹವೊಂದಿಹ ಪರದೊಳೆಲ್ಲವು ಮಣಿಹವಾಯ್ತೆನಗೀಗ (ಕೃಹಾ.ಕ. ೭-೦೩). ೨. (ಮಾಡಲೇಬೇಕಾದ) ಕೆಲಸ : ಕಾರ್ಯ; ಉದ್ಯೋಗ : ನೀ ಬೈಚಿಟ್ಟ ಬದುಕೆಯ ನಿನಗಿತ್ತೆ ನೀ ಕಳುಹಿದ ಮಣಿಹ ನಿನಗೆ ಸಂದಿತ್ತು (ಶಿಕವ. II. ೭೪೭-೦೬೪೦); ಪರಿಚರರಿಗೆಯು ನಾವು ಬೆಸಸಿದ ಪರಿಯಲಿ ಪೇಳ್ ನಿನ್ನ ಮಣಿಹದೊಳರು ಹಮುಳವೆನುತುಂ ಶವಾಸನಂ ಕಳುಹಿದನು ಹರನು (ಬಸಪು. ೪೦-೭೯); ಅನ್ನವಾಟಿಕೆಗಳೊಳ್ಪಾಕಮಂ ಮಾಡಿಸುವ ಮಣಿಹಮಂ ಕೃತವರ್ಮಕಂ ಕಾಳ್ದನು (ಕೃಬಾಶಾ. ೩೯-೭). ೩. (ದೇವರು, ರಾಜ ಮುಂತಾದವರಿಗೆ ಮಾಡುವ) ಸೇವೆ; ಕೈಂಕರ್ಯ: ಮಣಿಹದಿಂದುಣಲುಂಟು ಕೇಳ್ಗೆ ಮಣಿಹದಿಂದುಡಲುಂಟು ನೋಡ್ಯ ಮಣಿಹದಿಂದೈಶ್ವರ್ಯವದು ಕೈಸೇರುವುದು ನಿನಗೆ ಮಣಿಹ ಲೇಸೆಲೆ ಮಗನೆ ಬರೆದೀ ಮಣಿಹವನು ಕಲಿ ಬಲ್ಲರಿಳೆಯೊಳು ಮಣಿಹದಿಂದಿನ್ನಿಲ್ಲ ಬದುಕೆಂದನು ಸುರಾರಾತಿ (ಕೃಹಾ.ಕ. ೭-೦೨). [ಮಣಿ$_1$ + -- ಹ$_2$ ( < — ಪ$_2$ ) ]

**ಮಣಿಹ$_2$** 'ಮಣಿಯ' ನೋ.

**ಮಣಿಹಗಾಱ** 'ಮಣಿಯಗಾಱ' ನೋ.

**ಮಣಿಹರ್ಮ್ಯ** (ನಾ). ರತ್ನಖಚಿತವಾದ ಸೌಧ, – ಭವನ : ಮಣಿಹರ್ಮ್ಯಸ್ಥಳದಿಂ ನರೇಂದ್ರನಿೞಿದಂ (ಮಲ್ಲಿಪು. ೬-೦೭೩) ; ಮಣಿಹರ್ಮ್ಯಶ್ರೇಣಿ ಕೇಳೀವನವಿಳಸಿತಮಾ ನವ್ಯಪುಷ್ಪೋಪಹಾರೋಲ್ಬಣಮೋಕಃಪ್ರಾಂಗಣಂ (ಶಾಂತೀಶ್ವ. ೦೩-೦೭೨) ; ಅಲ್ಲಿ ಮಣಿಹರ್ಮ್ಯಪ್ರಾಸಾದದ ಮೇಲೆ ರೋಹಿಣೀಸಹಿತನಾದ ಚಂದ್ರನ ಪೂಜೆ ನಡೆಯುವುದು (ಸಂಶಾಟಿ. ೦೪೩). [ಸಂ.]

**ಮಣಿಹಾಗಲ** (ನಾ). ಮಣಿಯಾಕಾರದ ಮೃದುವಾದ ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಹಾಗಲಕಾಯಿ : ಬದನೆ ಪಡುವಲ ಮಣಿಹಾಗಲ (ಸೂಗಂಧಿ. ೩೭-೦೮). [ಮಣಿ$_3$ + ಹಾಗಲ ( < ಪಾಗಲ್$_1$ ) ]

**ಮಣಿಹಾರ** (ನಾ). = ಮಣಿಸರ ೧ : ಓರೊರ್ವರ ಕೊರಲಿಂ ಮಣಿಹಾರವುಮಂ ತೆಗೆದು. . .ಓರೊರ್ವರ ಕೊರಲೊಳಿಕ್ಕಿದರ್ ಸಂಭ್ರಮದಿಂ (ಲೀಲಾವ. ೦೦-೪೪); ಮಣಿಹಾರ ಬೇಕೆ ಸೂಕರಗೆ (ಇಂತಾಶ. ೦೦೩-೭೨). [ಸಂ.]

**ಮಣಿಹಾಱ** 'ಮಣಿಯಗಾಱ' ನೋ.

**ಮಣಿಹೆಂಬೆ** (ನಾ). ಅನಾನಸ್ ಹಣ್ಣು: P ಮಣಿಗಳನ್ನು ಪೋಣಿಸಲು ಅನಾನಸ್‌ಹಣ್ಣಿನ ಗರಿಗಳಿಂದ ತೆಗೆದ ನಾರನ್ನು ಉಪಯೋಗಿಸುತ್ತಾರೆ : ಹಣ್ಣುಹಂಪಲ್ಗಳಂ, ಸೌತೆಪಚ್ಚಡಿಗಳಂ, ಮಣಿಹೆಂಬೆಯುಂ . . . ಬೆಣ್ಣೆಯುಂ ಬಡಿಸಿ (ಶ್ರೀರಾಮಾ. ೨೭೦-೨೨೩). [ಮಣಿ$_3$ + ಹೆಂಬೆ$_1$]

**ಮಣಿಹ್ಯ** 'ಮಣಿಯ' ನೋ.

**ಮಣಿಹ್ಯಗಾರ** 'ಮಣಿಯಗಾಱ' ನೋ.

**ಮಣು** ' ಮಣ್ ' ನೋ.

**ಮಣುಕು** ' ಮಣಕು ' ನೋ.

**ಮಣುಗಸಾತ್ತ್ವ** (ನಾ). ಒಬ್ಬಾತನ ಹೆಸರು : ವಿಜ[ಸೆ]ಟ್ಟಿಗರಾ ಧರ್ಮ್ಮ ನಾಯಗನ್ ಮಣುಗಸಾತ್ತ್ವರ್ ಸರ್ವ್ವವನ್ನು ಪುಲಿಯುರ್ಮ್ಮನ್ ಈ ಒಕ್ಕಲ್ ಪಡೆದುವು (ಎಇ. IX, ೨೩-೦೩; 800). [ ? ]

**ಮಣುದೆರೆ** (ನಾ). ಭೂಮಿಯ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಬೇಡಿಗೆ ಬೀಜವರು ಮಣುದೆರೆ ಮಗ್ಗದೆರೆ ಸುಂಕ ಸೊಡಿಗೆ (ಎಕ. X, ಕೋಲಾರ. ೨೯೭-೨೮; ?).

[ ಮಣು (< ಮಣ್) + ತೆರೆ$_3$ (< ತೆಱೆ$^3{}_3$) ]

**ಮಣೆ$_1$** (ನಾ). ೧. ಮರ, ಲೋಹ ಮೊದಲಾದುವುಗಳಿಂದ ಮಾಡಿದ ತಗ್ಗಾದ ಪೀಠ,-ಆಸನ : "ವಿಷ್ಟರಂ, ಪೀಠಂ, ಆಸನಂ—ಈ ೩ ಮಣೆ" (ಹಲಾಯು. ೩೨-೦೩೩); ಅಗ್ರಾಸನದೊಳುಣಲೆಂದು ಬಂದು ಮಣೆಯನೇಱಿ ದೊರ್ಗನಿಂತೆಂದಂ (ವಡ್ಡಾರಾ. ೦೬೩-೨೩); ಏಱಿದ ಮಣೆಯುದಯನಗಂ ತೋಱಿದ ಮುಖಬಿಂಬವಿದುಬಿಂಬಮಪಾಂಗಂ ವಿರಾಜಿದ ಚಂದ್ರಿಕೆಯೆನೆ . . . ಸೌಂದರಿಯೆಸೆದಳ್ (ಗಿರಿ. ೯-೦೩೬); ಮಣೆಗೆ ಮಂಡಿಸಿ ಕುಳಿತುಂ ಬೌತಣದ ವಿದ್ಯೆಯ ಬಳ್ಳಿರಿ (ಕುಮ್ಮಾ. ೬-೦೨). ೨. ಚದುರಂಗ, ಚೆನ್ನೆ ಮುಂತಾದ ಆಟಗಳನ್ನಾಡುವುದಕ್ಕಾಗಿ ಚೌಕಾಕಾರದ ಮನೆಗಳು ಅಥವಾ ಗುಳಿಗಳನ್ನು ಒಳಗೊಂಡಿರುವ ಲೋಹ, ಮರ ಮುಂತಾದುವುಗಳಿಂದ ಮಾಡಿದ ಹಲಗೆ : ಮದಕರಿಯ ಪರಿವ ಭರದಿಂದದಿರ್ದೊಡೆ ನೆಲನೊಡ್ಡಿ ನಿಂದ ಚದುರಂಗಮುಮೊರ್ಮೊದಲೆ ನಡುಗಿದುದು ಕೂಡಿದ ಚದುರಂಗದ ಮಣೆಯನಲ್ಗಿದಂತಪ್ಪಿನೆಗಂ (ಶಂಶಅ. ೦೦-೬೦) 'ಚೆನ್ನೆಮಣೆ' ಪರಾ.

**ಮಣೆಹಾಕು** = ೧. ಪೀಠವನ್ನು ಕೊಡು; ಆಸನ ಹಾಕು : ಮಣೆ ಹಾಕಿ ತಟ್ಟೆಯಿಡು (ರೂಢಿ). ೨. (ಅಲಂ) ಗೌರವ ಕೊಡು; ಸನ್ಮಾನಿಸು : ಅಸತ್ಯಕ್ಕೆ ಮಣೆಹಾಕುವುದು ನನ್ನ ಜಾಯಮಾನಕ್ಕೆ ಬಂದಿಲ್ಲ (ಮುದ್ದು. ೩೦); ಮುಖ ನೋಡಿ ಮಣೆಹಾಕು (ಗಾದೆ). [ದೇ.॥ ತಮಿ. ಮಣೈ; ತುಳು. ಮಣೆ]

**ಮಣೆ$_2$** ' ಮಣೆಯ ' ನೋ.

**ಮಣೆಗಾರ** ' ಮಣೆಯಗಾಱ ' ನೋ.

**ಮಣೆಗಾರತನ** (ನಾ). ದೇವಸ್ಥಾನ, ಅರಮನೆ ಮುಂತಾದುವುಗಳ ಉಸ್ತುವಾರಿಯನ್ನು ನೋಡಿಕೊಳ್ಳುವ ಅಧಿಕಾರ : ಋಣವ ಕೊಟ್ಟವ ಮರುಂಟು ಋಣಮಾಡಿದವರುಂಟು ಮಣೆಗಾರತನವಿದರೊಳೊಂದಿಗೂ ಬೇಡ (ಶಗಪಾ. ೦೯). [ಮಣೆಗಾರ (< ಮಣೆಯಗಾಱ) + -ತನ]

**ಮಣೆಗಾರಿಕೆ** (ನಾ). = ಮಣೆಗಾರತನ : ಅವಳನ್ನು ಬರಾವ ಮಣೆಗಾರಿಕೆ ಮಾಡೋದೊಂದು ಬಾಕಿ (ಮಲೆಮ. ೬೦).

[ಮಣೆಗಾರ (< ಮಣೆಯಗಾಱ) + — ಇಕೆ]

**ಮಣೆಗಾಱ** ' ಮಣೆಯಗಾಱ ' ನೋ.

**ಮಣೆಬಾಬು** (ನಾ). ಕಂದಾಯದ ವಸೂಲಿಯ ಬಾಬ್ತು : ಕುಲ್ಲು ಜಮಾ ಬಂದಿ ಐವಜಿಗೆ ಐನು ಸುವರ್ಣದಾಯಕ್ಕೆ ಹೊಲಗಂದಾಯವಿಷ್ಟು ಮಣೆ ಬಾಬು ತಪ್ಸೀಲು ಪ್ರಕಾರ ಐವಜು ಇಷ್ಟು (ಮಹಾಕಂ. II, ೬೨).

[ ಮಣೆ$_2$ ( < ಮಣೆಯ ) + ಬಾಬು$_1$ ]

**ಮಣೆಯ** ' ಮಣೆಯ ' ನೋ.

**ಮಣೆಯಗಾಱ** 'ಮಣೆಯಗಾಱ ' ನೋ.

**ಮಣೆಹಗಾರ** ' ಮಣೆಯಗಾಱ ' ನೋ.

**ಮಣ್ಕುಂದ** (ನಾ). ಒಂದು ಸ್ಥಳದ ಹೆಸರು : ಕೊಡಲೂರ ಬೋದರ ಯೂರ ಮಣ್ಕುನ್ದಕ್ಕೆ ಬಿಟ್ಟ ಸ್ಥಿತಿಕ್ರಮವಾವುದು ಎನ್ದಡೆ (ಎಕ. IX, ಕನ್ನಕ. ೦೬೦-೩ ; 913). [ ಮಣ್ + ಕುಂದ$_3$ ]

**ಮಣ್ಕುಡಿಕೆ** (ನಾ). ಮಣ್ಣಿನಿಂದ ಮಾಡಿದ ಕುಡಿಕೆ : ಮುದ್ರಿಡಿದ ಮಣ್ಕುಡಿಕೆ ಒಡೆಗೊಂಡು ಸಿಡಿದ ರಾತ್ರಿಯ ನಭೋಭೋಗದಲಿ ಕಲೆವಂತೆ ಪೋಲ್ ವರ್ಣಮಯನಕ್ಷತ್ರವೃಷ್ಟಿ ? (ಇತ್ರಾಂಗ. ೬-೧೬೦).

[ ಮಣ್ + ಕುಡಿಕೆ$_1$ ]

**ಮಣ್ಕುಪ್ಪೆ** (ನಾ). ಸಮಾಧಿಯ ಮೇಲೆ ಕಟ್ಟುವ ಮಣ್ಣಿನ ದಿಬ್ಬ : ನಾನೆನ್ನ ಕಟ್ಟೊಲ್ಮೆಯಣ್ಣಂಗೆ ಮಣ್ಕುಪ್ಪೆಯಿಕ್ಕುವೆನ್ (ಅಂತಿಗೂ. ೯-೬೬).

[ ಮಣ್ + ಕುಪ್ಪೆ$_1$ ]

**ಮಣ್ಗಚ್ಚು** (ಕ್ರಿ). ಭೂಮಿಯನ್ನು ಹಿಡಿ ; ನೆಲಕಚ್ಚು : ಸೈನ್ಯಭಾರದಿಂ ಸೀರೆಯುಂ ಸುತ್ತಿದಂತೆ ಸಿವುಡಾದನಹಿರಾಜನಖಿಳದಿಗ್ಗಜರಾಜಿಯುಮೊಡನೊಱಿ ಮಣ್ಗಚ್ಚಿದುವು (ಡವಿ. ೯೮-೨೨).

[ ಮಣ್ + ಕಚ್ಚು$_1$ ( < ಕರ್ಚು$_1$ ) ]

**ಮಣ್ಗಪ್ಪರ**(ನಾ). ಮಣ್ಣಿನಿಂದ ಮಾಡಿದ ಬಕ್ಕರೆ, —ಓಡು : ಮಣ್ಗಪ್ಪರದ ಮರಸತ್ವದಿಂ ಮೆಱಿದ ತಿರುನೀಲಕಂಠಗಳ ಚರಣಾಂಬುಜಕ್ಕೆ ಶರಣು (ಚಿತಂ. ೩೩-೦). [ ಮಣ್ + ಕಪ್ಪರ$_2$ ]

**ಮಣ್ಗೊಡು**, ಮಣ್ಣುಕೊಡು (ಕ್ರಿ). ೧. ನೆಲವನ್ನು ದಾನಮಾಡು ; ಭೂಮಿಯನ್ನು ಕೊಡು : ಎಱಿಯಮೆ ದೇಗುಲ ಮಾಡಿಸಿ ಮಣ್ಗೊಟ್ಟಳ್ (ಎಕ. VII, ಶಿಕಾ. ೯೩(ಬ)-೨೮ ; ಸು. 890 ?). **ಮಣ್ಣುಕೊಡು** : ೨. ಸತ್ತ ವ್ಯಕ್ತಿಯನ್ನು ಸಮಾಧಿ ಮಾಡುವುದಕ್ಕೆ ಮೊದಲು ದೇಹದ ಮೇಲೆ ಮಣ್ಣುಹಾಕು : ನಾನೂ ಬೇಕಾದಷ್ಟು ಮಂದಿಗೆ ಮಣ್ಣು ಕೊಟ್ಟೆ (ಆಮೂ. ೩) ; ಮುದುಕಿಗೆ ಮಣ್ಣುಕೊಡಲು ಹೋಗಿದ್ದ ಗಿರಿಯ ಆ ದಿನ ಇನ್ನೂ ' ನ್ಯಾರೆ ' ಮಾಡಿರಲಿಲ್ಲ (ಮಣ್ಣುಹ. ೨೩).

[ ಮಣ್ + ಕೊಡು$_1$ ]

**ಮಣ್ಗೊಳ್** (ಕ್ರಿ). (ಅಲಂ) ನೆಲಸಮವಾಗು; ಹಾಳುಬೀಳು : ಮಣ್ಗೊಂಡ ತುತ್ತಲ್ಗಳಿಟ್ಟೆಡೆಯುಂ ಬಿಟ್ಟುಬಿದೇಗುಲಂಗಳೆಡೆಯುಂ ಕಾದಿರ್ಪ ಪಾಣ್ಬರ್ಕಳುಂ (ಸಂತಸು. ೬-೦೩೩). [ಮಣ್ + ಕೊಳ್$_1$]

**ಮಣ್ಣಱ** (ನಾ). ಧರ್ಮಕಾರ್ಯಕ್ಕಾಗಿ ಕೊಂಡುಕೊಂಡ ಭೂಮಿ (?): ಪೊನ್ನಱ ಕೊಟ್ಟು ಮಣ್ಣಱಂ ಕೊಣ್ಡು ಮ್ (ಎಕ. III (R), ಹುಣಸೂ. ೩೮-೦೦; 1021); ಪಟ್ಟವಾಳಿಯು ಪೊನ್ನಱ ಕೊಟ್ಟು ಮಣ್ಣಱ ಕೊಣ್ಡು ಬಿಡಿಸಿದಳ್ (ಎಕ. III, ನಂಜನ. ೦೬೯-೨೨; 1092) ; ಕೆಲವು ದತ್ತಿಯ ಶಾಸನಗಳಲ್ಲಿ 'ಪೊನ್ನಱ ಕೊಟ್ಟು ಮಣ್ಣಱ ಕೊಂಡು' ಎಂಬ ಉಕ್ತಿಯು ಬರುತ್ತದೆ. ಭೂಮಿಯ ಸ್ವಲ್ಪಭಾಗವನ್ನು ಹಣ ಕೊಟ್ಟು ಕೊಂಡದ್ದನ್ನು ಈ ಉಕ್ತಿಯು ಹೇಳುತ್ತದೆ (ಕಶಾಅ. ೦೬೬). P ಕನ್ನಡಶಾಸನಗಳಲ್ಲಿ ಅನೇಕ ಕಡೆ ' ಪೊನ್ನಱ ', ' ಮಣ್ಣಱ ' ಎಂಬ ಶಬ್ದಸಮುಚ್ಚಯವು ಪ್ರಯೋಗ ಗೊಂಡಿದೆ. ಇವೆರಡೂ ಸಾಮಾನ್ಯವಾಗಿ ಜೊತೆಯಾಗಿ ಬರುವುದರಿಂದ 'ಧರ್ಮಕ್ಕಾಗಿ ಕೊಟ್ಟಹಣ','ಧರ್ಮಕ್ಕಾಗಿ ಕೊಂಡ ಭೂಮಿ' ಎಂಬರ್ಥ ವನ್ನು ಸೂಚಿಸಬಹುದೆಂದು ಕಾಣುತ್ತದೆ. [ಮಣ್ + ಅಱ$_{2?}$ ]

**ಮಣ್ಣಾಟ** (ನಾ). ಮಣ್ಣಿನಲ್ಲಿ ಆಡುವ ಆಟ ; ದೂಳಾಟ : ಮಣ್ಣಾಟ ಬಿಟ್ಟು ಮನೆ ಕಟ್ಟಿನೋಡು, ಸಂಸಾರದಲ್ಲಿ ಹೂಡು (ಮುಕ್ತಕಂ. ೨೯-೦೯).

[ಮಣ್ಣು (< ಮಣ್) + ಆಟ]

**ಮಣ್ಣಿ** (ನಾ). ಮೊಳೆ : ಪಾರೋತಿಗೆ ಆ ಕರುಳಿನ ಕರೆಯೋ ಬಾರದು : ತನ್ನ ಮಗುವಿಗೆ ಮಣ್ಣಿ ಉಣಿಸುವ ಯೋಗವೇ ಕೂಡಲೊಲ್ಲದು (ಮಲಮ. ೦೬). 'ಅಮ್ಮಣ್ಣಿ$_1$' ಪರಾ.

[ದೇ.॥ ತಮಿ. ಮೊಣ್ಣಿ, ಮೊಳ್ಳಿ ; ತುಳು. ಮುಂಣ್ಣಿ, ಮುಂಣ್ಣಿ]

**ಮಣ್ಣಿಗ** (ನಾ). ಬೇಸಾಯದ ಭೂಮಿಯನ್ನು ಹೊಂದಿರುವವನು ; ಜಮೀನುದಾರ : ಕಕ್ಕರಸೆಯ ಮಣ್ಣಿಗಂ ಬೀರದ ಪೋಜಿಗಂ . . . ನಿರೂಪಿತ ನಾಗಿ ಪೆರ್ಗ್ಗಡೆತನಂಗೆಯ್ಯುತ್ತಂ (ಎಕ. VIII, ಸೊರಬ. ೯೬೮-೦೯ ; 954) ;

ಕಡೆಕೊಳಂದ ಮಣ್ಣಿಗಪ್ಪೋಜ್ಜುಲಂ (ವ್ಯಾಕರ. ೦೯೩೪, ೩೯-೨೨ ; 11ನೆಯ ಶತ).
' ಅಯ್ಮಣ್ಣಿಗ ' ಪರಾ. [ಮಣ್ + — ಇಗ]

**ಮಣ್ಣು** ' ಮಣ್ ' ನೋ.

**ಮಣ್ಣುಕೊಡು** ' ಮಣ್ಗೊಡು ' ನೋ.

**ಮಣ್ಣುಗ** (ನಾ). = ಮಣ್ಣಿಗ : ಉಗ ಪ್ರತ್ಯಯಕ್ಕೆ — ನಾರುಗಂ . . . ಪೆಣ್ಣುಗಂ, ಮಣ್ಣುಗಂ (ಶಮದ. ೨೦೪ ಶ್ರ.ಯೋ); ಪೆಣ್ಣೊಳ್ ಪ್ರವಣಂ ವ್ಯಾಕೃತಂ ಮೇಣ್ ಪೆಣ್ಣುಗಂ ಏವಂ ಮಣ್ಣುಗಂ (ಶಬ್ದಾ.ಸು. ೪೨೪ ಶ್ರ.ಯೋ).
[ಮಣ್ + — ಉಗ]

**ಮಣ್ಣುಗಾಣಿಸು** (ಕ್ರಿ). ಹೂಳು ; ಸಮಾಧಿಮಾಡು : ಹೆಣವನ್ನು ಮಣ್ಣುಗಾಣಿಸಿ ಬರುವುದರೊಳಗೆ ಸಂಜೆಯಾಯಿತು (ರೂ).
[ಮಣ್ಣು (< ಮಣ್) + ಕಾಣಿಸು]

**ಮಣ್ಣುಗೂಡು** (ಕ್ರಿ). (ಅಲಂ) ಹಾಳಾಗು ; ನಾಶವಾಗು : ತಮ್ಮ ರೈತ ಕಾಳೇಗೌಡನು ಆಡಿದ ಮಾತನ್ನು ಕೇಳಿ ಇದುವರೆಗೂ ಇದ್ದ ಆಸೆ ಧೈರ್ಯ ಎಲ್ಲಾ ಮಣ್ಣುಗೂಡಿತು ರಂಗರಾಯರಿಗೆ (ಮಗಳು. ೦೪೯) : ನಿನ್ನ ಮನೆತನದ ಘನತೆ ಗೌರವಗಳು ಮಣ್ಣುಗೂಡಿದವು (ಮಂಗಳಾ. ೪).
[ ಮಣ್ಣು (< ಮಣ್) + ಕೂಡು$_1$ ]

**ಮಣ್ಣುಣ್** (ಕ್ರಿ). (ಅಲಂ) ನಾಶವಾಗು ; ಹಾಳಾಗು : ಪರನ ಶೂಲ ಪ್ರಹಾರಗಳನ್ನು ಗಣಿಸದಿಹ ಧುರವಿಜಯನೀ ಸಮಯದೊಳು ನರನ ಶರದಿಂದ ಮಣ್ಣುಂಡುದೆಂತೊ (ವೆಂಕಟಾ. ೬-೩೦-೩೬).
[ಮಣ್ಣು (< ಮಣ್) + ಉಣ್]

**ಮಣ್ಣುಣಿ** (ನಾ). ಮಣ್ಣನ್ನೇ ಆಹಾರವಾಗಿ ಉಳ್ಳುದು ; ಎರೆಹುಳು : (ಕ). [ಮಣ್ಣು (<ಮಣ್) + — ಉಣಿ]

**ಮಣ್ಣುಪಾಲು** (ನಾ). ೧. (ಅಲಂ) ನಾಶ ; ಹಾಳು. ೨. ಸಾವು ; ಮರಣ : ಎಣ್ಣೆ ಬೆಣ್ಣೆಯ ರಿಣವು ಅನ್ನವಸ್ತ್ರದ ರಿಣವು ಹೊನ್ನು ಹೆಣ್ಣಿನ ರಿಣ ತೀರಿದಾಕ್ಷಣದಿ ಮಣ್ಣುಪಾಲು (ಸರ್ವಜ್ಞ. ೪೬೬).

**ಮಣ್ಣು ಪಾಲಾಗಿಸು** = (ಅಲಂ) ಹಾಳುಮಾಡು; ನಾಶಮಾಡು : ಮಕ್ಕಳ ಸುಖಸೌಕರ್ಯಗಳನ್ನು ಅಲಕ್ಷಿಸುವ ರಾಷ್ಟ್ರವು ತನ್ನ ಭವಿಷ್ಯವನ್ನು ಮಣ್ಣುಪಾಲಾಗಿಸುವುದರಲ್ಲಿ ಸಂದೇಹವಿಲ್ಲ (ಮಕ್ಕಳ. ೬೨). **ಮಣ್ಣು ಪಾಲಾಗು** = (ಅಲಂ) ಹಾಳಾಗು ; ನಾಶವಾಗು : ನನ್ನ ಕೆಲಸ ಮಣ್ಣುಪಾಲಾಗುತ್ತೆ (ಶಿಲಾತೆ. ೩); ನನ್ನ ಉತ್ಸಾಹವೆಲ್ಲ ಮಣ್ಣುಪಾಲಾದಂ ತಾಯಿತು (ಅಲಕೂ. ೨೪). **ಮಣ್ಣುಪಾಲುಮಾಡು** = ೧. ಮಣ್ಣಿನಲ್ಲಿ ಸೇರಿಸು,-ಬೆರೆಯುವಂತೆ ಮಾಡು : ಮಗುವನ್ನು ಏಕೆ ಮಣ್ಣುಪಾಲು ಮಾಡಿ ಹೋಗುತ್ತೀರಿ ? (ಪಶಾ. ೩೪೨). ೨. (ಅಲಂ) ಹಾಳುಮಾಡು: ಕುರುಡ ಮುದುಕಿಯೊಬ್ಬಳನ್ನು ಯಾರೋ ಹಾಯ್ದು ಕಾಳು ಚೆಲ್ಲಿ ಅವಳ ಹೊಟ್ಟೆಯ ಕರುಳನ್ನೇ ಮಣ್ಣುಪಾಲುಮಾಡಿ ಮಾಯವಾಗಿದ್ದರು (ಕವಕ. ೯೪). [ ಮಣ್ಣು (<ಮಣ್) + ಪಾಲು$_2$ (<ಪಾಲ್$_2$) ]

**ಮಣ್ಣುಪ್ಪು** (ನಾ). ಉಪ್ಪಿನ ರುಚಿಯಿರುವ ಮಣ್ಣು ; ಚೌಳುಪ್ಪು : ವಿಜಾಪುರಜಿಲ್ಲೆಯಲ್ಲಿಯೂ ಡೋಣಿಯ ದಂಡೆಯ ಮೇಲೆ ಪೂರ್ವದಲ್ಲಿ ಮಣ್ಣುಪ್ಪು ಬಹಳ ಹುಟ್ಟುತ್ತಿತ್ತು (ಕರ್ನಾ.ಗ. ೨೯).
[ ಮಣ್ಣು (< ಮಣ್ ) + ಉಪ್ಪು$_1$ ]

**ಮಣ್ಣುಬೊಂಬೆ** (ನಾ). ಮಣ್ಣಿನಿಂದ ಮಾಡಿದ ಗೊಂಬೆ : ಮಣ್ಣು ಮಣ್ಣಿನೊಳುದಿಸಲದಱಿ ಮಣ್ಣುಬೊಂಬೆಗಳಾಗಿ ರಂಜಿಸಿ ಮಣ್ಣನಾ ಹಾರದಲೆ ಜೀವವ ಹೊರೆದವುಪಜರಿಸಿ (ಹರಿ. ೯೩).
[ ಮಣ್ಣು ( <ಮಣ್ ) + ಬೊಂಬೆ ]

**ಮಣ್ಣುಮುಕ್ಕ** ' ಮಣ್ಮುಕ್ಕ ' ನೋ.

**ಮಣ್ಣುರೂಹು** (ನಾ). ಮಣ್ಣಿನಿಂದ ಮಾಡಿದ ಆಕಾರ : ಅಂಗದ ಕುಱುಹಿನ ನೆಮ್ಮುಗೆಯುಪ್ಪ ಲಿಂಗವು ಕಲಸಿದ ಮಣ್ಣುರೂಹಿಂಗೆ ಈಡಾಗದೆಂದಱಿದೆಡೆ ಆ ಲಿಂಗ ಭವಪಾಶವ ಗೆಲ್ಲುವುದು (ಮೋಳಿಗ. ೫೭-೨೩೬). [ಮಣ್ಣು ( <ಮಣ್ ) + ರೂಹು (<ರೂಪು) ]

**ಮಣ್ಣುಹುಳ** ' ಮಣ್ಣುಹುಳು ' ನೋ.

**ಮಣ್ಣುಹುಳು, ಮಣ್ಣುಹುಳ** (ನಾ). ಮಣ್ಣಿನಲ್ಲಿ ವಾಸಿಸುವ ಹುಳು ; ಎರೆಹುಳು : ಮಣ್ಣುಹುಳು, ಎರೆಹುಳು (Earthworm. ಇಂಕಕ). **ಮಣ್ಣುಹುಳ** : ಮಣ್ಣುಹುಳವನ್ನು ರೈತನ ಗೆಳೆಯ ಎಂದು ಹೇಳುತ್ತಾರೆ (ರೂ). [ ಮಣ್ಣು (<ಮಣ್) + ಹುಳು ( <ಪುೞು ) ]

**ಮಣ್ಣುಳಿಗ** (ನಾ). = ಮಣ್ಣುಹುಳು : ಉಳಿಗ ಪ್ರತ್ಯಯಕ್ಕೆ . . . ಮಣ್ಣೊಳ್ ಜೀವಿಸುವ ಪಾವು ಮಣ್ಣುಳಿಗಂ (ಶಮದ. ೨೦೦ ಶ್ರ.ಯೋ) ; ಭೋಗಿ ಬಾಪನ್ನದಿಂಪಿಗಾನಂದಿಪಂತೆ ಮಣ್ಣುಳಿಗನಾನಂದಿಪುದೆ (ಸುರೇಶ. ೧-೧೬); ಬಿಲಜೀವಿ-ಮಣ್ಣುಳಿಗನೀ ನನಗೆ ಸ್ವರ್ಗವೀರದ ವಜ್ರಾಯುಧ ಪ್ರಯೋಗವು ಹೀಗೆ ಅವತರಿಸಿದುದು ನನ್ನ ಭಾಗ್ಯೋದಯವಲ್ಲದಿಲ್ಲ (ಮಂತ್ರ.ಕ. ೦೨೬-೦೬). [ ಮಣ್ಣು + —ಉಳಿಗ$_3$ ]

**ಮಣ್ಣೂಡಿಸು** (ಕ್ರಿ). (ಅಲಂ) ಮಣ್ಣು ಮುಕ್ಕಿಸು ; ವ್ಯರ್ಥಗೊಳಿಸು : ನನ್ನ ಹೆಸರು ಜಗದಿ ನಿನ್ನಿಂ ಚಿರಸ್ಥಾಯಿಸುವೆನೆಂಬ ಪಂಥಕೇಂ ಮಣ್ಣೂಡಿಸಲೆ ? (ಹಕ್ಕಿ. ೩೪-೫೪). [ ಮಣ್ + ಊಡಿಸು ]

**ಮಣ್ಣೆ** (ನಾ). ಒಂದು ಊರಿನ ಹೆಸರು : ಮಣ್ಣೆಗ್ರಾಮಾಧಿಪತಿ (ಎಕ. VI. ಮೂಡಗೆ. ೫೬-೫೭; 749). [ ? ]

**ಮಣ್ಣೆತ್ತು** (ನಾ). ಮಣ್ಣಿನಿಂದ ಮಾಡಿದ ಎತ್ತು ; ಮಣ್ಣುಬಸವ : ಕಾರಹುಣ್ಣಿವೆ ಕರಿ ಹರಿದು ಮಣ್ಣೆತ್ತು ನೀರನು ಕುಡಿದವು (ಕಂಪು. ೦೨-೩).

**ಮಣ್ಣೆತ್ತಿನ ಅಮಾವಾಸ್ಯೆ** = ಜ್ಯೇಷ್ಠ ಬಹುಳ ಅಮಾವಾಸ್ಯೆ : ಜ್ಯೇಷ್ಠಬಹುಳಅಮಾವಾಸ್ಯೆಯನ್ನು ಮಣ್ಣೆತ್ತಿನ ಅಮಾವಾಸ್ಯೆ ಎನ್ನುವರು (ಜಾನಪ. ೯೩). [ ಮಣ್ಣು ( < ಮಣ್ ) + ಎತ್ತು$_2$ ( <ಎಱ್ತು$_1$) ]

**ಮಣ್ಣೆಯ** 'ಮಣ್ಣೆಯ' ನೋ.

**ಮಣ್ಣೊಡಲ** (ನಾ). ಮಣ್ಣಿನಿಂದ ಆದವನು ; ಮರ್ತ್ಯ ; ಮನುಷ್ಯ : ಚೋದ್ಯಮೇನೆಂಬೆನಾ ಮಣ್ಣೊಡಲರಲ್ಲಿ ತೊಡಲಲಮ್ಮನಿಬರನಿಬರು ಮಾಗ ರ್ಥಲ್ಲಿ (ಗಿರಿಜಾ. ೦೨೩-೪೦).
[ ಮಣ್ಣು ( < ಮಣ್ ) + ಒಡಲ್ + — ಅ$_7$ ]

**ಮಣ್ಣೊಡ್ಡ** (ನಾ). ಒಡ್ಡರಲ್ಲಿ ಒಂದು ಪಂಗಡ ; ಮಣ್ಣಿನ ಕೆಲಸ ಮಾಡುವವನು : (ಕ). ' ಕಲ್ಲೊಡ್ಡ ' ಪರಾ.
[ ಮಣ್ಣು ( < ಮಣ್ ) + ಒಡ್ಡ$_1$ ]

**ಮಣ್ಣೋಡು** (ನಾ). = ಮಣ್ಣಪ್ಪರ : ಇವರು ನನ್ನ ಕೈಯಲ್ಲಿ ಕೊಟ್ಟ ಮಣ್ಣೋಡು ನಾನಿಟ್ಟ ಸ್ಥಳದಲ್ಲಿಯಿಲ್ಲ (ಕುರಾ. ೬೦).
[ ಮಣ್ಣು ( < ಮಣ್ ) + ಓಡು$_2$ ]

**ಮಣ್ಬಡಿ** (ಕ್ರಿ). ಮಣ್ಣಾಗು ; ತುಕ್ಕುಹಿಡಿ : ಭೂಮಿಯೊಳಗೆ ಹೂಳ್ದ ಲೋಹ ಮಣ್ಬಡಿವುದು ಹೇಮ ಮಣ್ಬಡಿವುದೇ (ಶತಕ. ೨-೬೨).
[ ಮಣ್ + ಪಿಡಿ$_1$ ]

**ಮಣ್ಬೆಱು** (ಕ್ರಿ). ಭೂಮಿಯನ್ನು ಪಡೆ ; ಜಮೀನನ್ನು ಹೊಂದು : ರಾಗಮೊದವೆ ಬೆಲೆವೆಣ್ ಪೆಣ್ಣಂ ಪೆತ್ತಂತಿರೆ ಪಾರ್ವಂ ಮಣ್ಬೆತ್ತಂತಿರೆ ಒಱಿದು ಸಂತಸಂ ಏಗೆ (ಧರ್ಮಾಮೃ. ೦-೦೩೬); ಕಣ್ಬೆತ್ತು ಸೂರ್ಯನಂ ಕಾಣದಿರ್ದಂ ಪ್ರಭುವೆ ಮಣ್ಬೆತ್ತು ಬೆಳೆಯಲ್ಲದೀಚುವೋದಂ ವಿಭುವೆ (ಪಾರಿಜ. ಶೇ. ೨೬೦-೦೬). [ ಮಣ್ + ಪೆಱು$_1$ ]

**ಮಣ್ಮಣಸು** (ನಾ). ಮಂಕು ; ನಿಸ್ತೇಜ : ಸೈಂಧವರ ಲಾವಣ್ಯ ಮಣ್ಮಣಸು, ಮಣ್ಣುಗೂಡಿತು ಕಣಸು (ಸೂಡು:ಗಾ. ೪೯-೦೬).
[ < ಮಣ್ ? ]

**ಮಣ್ಮಳಿ₁** (ಕ್ರಿ). ಕಷ್ಟಪಡು ; ಕೋಟಲೆಗೊಳ್ಳು (?) : ಮಾನಸದ ಗುಣದೊಳುಂ ಮಣ್ಮಳಿದುಪುಸಿರುವತಿಹೀನು ಮಹಾದೀನರೊಳಗೆ ಪರಿಪೂಜ್ಯ ನಿಪನೇನೆಂದು ಕಡೆಗಣ್ಣ ನೂಕದೆನ್ನಂ ಪಾಲಿಸು (ಶ್ರಿಶಃ. ೬-೦೨೮). [?]

**ಮಣ್ಮಳಿ₂** 'ಮಣ್ಮಟಿ' ನೋ.

**ಮಣ್ಮಳಿಗೊಳ್**, ಮುಮ್ಮಳಿಗೊಳ್. ಮುಮ್ಮಳಿಗೊಳು, ಮುಮ್ಮಳಿಗೊಳ್, ಮುಮ್ಮುಳಿಗೊಳು (ಕ್ರಿ). ೧. ಭಯಂಕರವಾದ ರೀತಿಯಲ್ಲಿ ಸಾಯು,—ಮರಣಹೊಂದು : ಈಶ್ವರನಿಂ ಮುನ್ನವೆ ಮಣ್ಮಳಿಗೊಂಡ ಮದನಂಗಾ ಮಱುಪುಟ್ಟಂ ಪಡೆಯಿಸಲೊದವಿದ ಜೀವನವಾಯುವಿದು (ಜಮು. ೦-೩೦); ಪೊಡವಿ ಮೋಹರದೊಳ್ ಮಣ್ಮಳಿಗೊಂಡದಟರರಸು ಮಕ್ಕಳ ಪೆಟ್ಟುಗೆಯರ್ ಮುಂದಿಂ ತೋಳ್ಗುಡೆ ಬೇವ ಪಲವು ಕುಂಡಂ ಕಣ್ಗೊಪ್ಪಿದುವು (ಜಮು. ೬-೨೮). **ಮುಮ್ಮಳಿಗೊಳ್** : ೨. ತಳಮಳ ಗೊಳ್ಳು ; ಸಂಕಟಕ್ಕೆ ಗುರಿಯಾಗು : ಅಂತಿದಂ ಕೇಳ್ದು ಸಭೆ ಮಱುಗಿ ಮುಮ್ಮಳಿಗೊಂಡು (ತರು. ದೀ. ೧೭-೦೭). **ಮುಮ್ಮಳಿಗೊಳು** : ೨. ಕಾಮನಂಬಿಂ ಮುಮ್ಮಳಿಗೊಳುತ್ತೆ ಮಂದಾನಿಲನಿಂ ಮಲ್ಲಳಿಗೊಳುತ್ತೆ . . . ಮನಂ ಕೊರಗುತ್ತಮಿರೆ (ಪಂಚ. ೬೨-೧೧೮). **ಮುಮ್ಮುಳಿಗೊಳ್** : ೨. ಮುಸುಕಿರ್ದ ಭವಬಂಧನವ ತೆಗೆದು ಕಳೆವಂತೆ ಮುಸುಕಂ ತೆಗೆದನಲ್ಲಿ ನೋಳ್ಪರದೆ ನೋವಂತೆ ತೆಗೆಯೆ ಬೆನ್ನಿಂದಲಗುರಕ್ಕೆ ಮೂಡಿರೆ ಕಂಡು ಬೆಗಡುಗೊಳುತೆಲ್ಲರುಂ ಮಱುಗಿ ಮುಮ್ಮುಳಿಗೊಂಡು (ತೀರ. ದೀ. ೭೭-೦೭); ಪಿಂಡೊಡೆದು ಗಜಸೇನೆ ಮುಮ್ಮುಳಿಗೊಂಡು ಮುರಿದುದು (ಕುಮ್ಮಾ. ೧೦-೦೮). **ಮುಮ್ಮುಳಿಗೊಳು** : ೨. ಕಿಳಿಯೆ ತಕ್ಷಕನುಳಿಕ ಮುಖ್ಯರು ಬಲವದಹಿಪ್ರಭೀತಿಯಲಿ ಮುಮ್ಮುಳಿಗೊಳುತ್ತಿಹರು (ಜೈಗ. ೩-೧೦-೩೦); ರಿಪುಸೇನೆಗಳ್ಳುರಿಯೆ ಶರಕೆ ಭಯಗೊಂಡು ಮುಮ್ಮುಳಿಗೊಳು ತಿರಲ್ವರ್ಜುನಂ ಕೋಪಗೊಂಡು ರಪಿತನಯನಂ ತಾಕಿದನು (ಕುರುಗ. ೭೦-೪೯). [ಮಣ್ಮಳಿ₂ (< ಮಣ್ಮಟಿ) ಕೊಳ್₁]

**ಮಣ್ಮಟಿ**, ಮಣ್ಮಳಿ₂, ಮುಮ್ಮಟಿ, ಮುಮ್ಮಳಿ, ಮುಮ್ಮಳಿ, ಮುಮ್ಮುಳಿ (ನಾ). ೧. ರೂಪುಗೆಟ್ಟ ಸಾವು : ಭಯಂಕರವಾದ ಮರಣ : "ಮಣ್ಮಟಿ ರೂಪಟಿದ ಸಾವು" (ಶಮ. ೭೦. ೦). **ಮಣ್ಮಳಿ₂** : ೧. ಅಣ್ಣಿಶ್ಶಿಂದೆಂಬರನುಬ್ಬೊಕ್ಕರ ಪೆಣ್ಮಕ್ಕಳ ಪುಲ್ವಿಡದರ ಮಣ್ಮಳಿಯನು ಮಾಳ್ಪುದರ ಧೀರತೆಯಿಂ ಬೆಳ್ಮಾನಿಸರಪ್ಪವರ್ಗೆ (ಶ್ರೀಪಾ. ೩-೭೭). **ಮುಮ್ಮಟಿ** : ೧. "ಮುಮ್ಮಟಿ ರೂಪಟಿದಿರ್ದ ಸಾವು" (ಶಬ್ದಾನು. ೦೭). **ಮುಮ್ಮುಳಿ** : ೨. ತಳಮಳ ; ಸಂಕಟ : 'ಮುಮ್ಮುಳಿಕೆ' ಪರಾ. **ಮುಮ್ಮಳಿ** : ೧. "ಮುಮ್ಮಳಿಯೆನೆ ರೂಪಳಿದ ಸಾವು" (ಶಾರ. ೩೭). ೨. ನೆಮ್ಮಿ ಕಟ್ಟಾಸುರದ ವೃಷ್ಟಿ ವಿಕರ್ಮದುಬ್ಬಟೆಯಿಂದ ಶುಚಿಗಳ ಮುಮ್ಮಳಿಯುಗೊಳಿಸುವನು ದಿನದಿನಕವನು ಜಿಡದಾಗ (ಅಂಬಿಕಾ. ೬-೦೩). 'ಮುಮ್ಮಳಿಗೊಳ್' ಪರಾ. ೩. ಕೇಡು ; ನಾಶ ; ಹಾನಿ : ಕೋಪದುತ್ತುಂಗತೆಯೊಳೊಪ್ಪದಿರಲಪ್ಪುದೇ ದೇವತಾಸಭೆಗೆಮುಮ್ಮಳಿತಪ್ಪದು (ಪಂಪಾರಾ. ೩-೦೭-೨೯). ೪. ಕ್ಷೋಭೆ ; ಗೊಂದಲ ; ವಿಪ್ಲವ : ಹಿಡುತದೆ ಅಳಿಂಡೆಯನಸು ಬೀಸಾಡಿ ತಾಯಿಗೆ ಮಕ್ಕಳಾಗದೆ ಕೂಡೆ ಮುಮ್ಮಳಿಮಸಗು ತದೆ (ಕುಮ್ಮಾ. ೨೪-೦೮). **ಮುಮ್ಮುಳಿ** : ೨. 'ಮುಮ್ಮುಳಿಗೊಳ್' ಪರಾ.

ಮಣ್ಮಟಿಯಾಗು, ಮುಮ್ಮಟಿಯಾಗು, ಮುಮ್ಮಳಿಯಾಗು, ಮುಮ್ಮಟಿ ಯಾಗು — ಭಯಂಕರವಾದ ಸಾವಿಗೆ ಈಡಾಗು : ತೇರ್ ತೇರನಾನೆಯು ಮಾನೆಯುಂ ಹರಿಹರಿಯನಾಂತಾಗಳ್ ನಿಂದಣ್ಮಿ 'ಮಣ್ಮಟಿಯಪ್ಪುದುಂ (ಪಾಂತಿ. ೩-೭೩); ಉತ್ಸಾಹದುನಪ್ಪುಕಿಟ್ಟಿಱಿದು ಪೋಗದೆ ಮಣ್ಮಟಿ ಯಾಗೆ ವಾಹಕರಟ್ಟಿಯುಂ ತುರಗದಟ್ಟಿಯುಮಾಡಿಮುವಾಜಿರಂಗದೊಳ್ (ಪಂಪಾರಾ. ೦೩-೭೩); ತುರಗಸೇನೆಗಳಂತಿರಡುಂ ಕರಂ ಪರಿಸಿ ಮುಮ್ಮಟಿಯಾಗಿರೆ ಕಂಡು (ನೇಮಿಪು. ೧೧-೦೭೪); ಮಂದಿ ಮುಮ್ಮಳಿಯಾಯಿತೀ ಕಪಿವ್ರಂದ ಕಂಪಿಸಿತು (ತೊರವೆ. ೬-೮-೬೦) : ಅಸ್ಥಿರಸಂಗಳು ತವೆಮ್ಮಳಿವಿದು ಮುಮ್ಮಟಿಯಪ್ಪರ್ (ಅಭಿಮ. ೭-೨೨೩). [?]

**ಮಣ್ಮಟಿವೋಗು**, ಮುಮ್ಮಳಿಯೋಗು (ಕ್ರಿ). ಭಯಂಕರವಾದ ಮರಣಕ್ಕೆ ತುತ್ತಾಗು : ಅಂದಂದು ದೇವರ್ಕಳಿಂದಿರ್ದ ಮಣ್ಮಟಿವೋದ ರಕ್ಕಸ ರೊಳವಗೆಯು ಪಾಪದ ಪೊತ್ತಮೋ ಎನೆ . . . ಕರ್ಗಬ್ಬಲಿ ಮುಸುಂಕಿದತ್ತು (ರಾಮಾಶ್ವ. ೧೧೯-೨೩). **ಮುಮ್ಮಳಿಯೋಗು** : ಕೂಡೆ ಮುಮ್ಮಳಿಯೋ ದುದೀ ಶರ ಝಾಡಿಯಲಿ ಚತುರಂಗಬಲವಕ್ಕಾಡಿತೇನೆಂಬೆನು ಯುಧಿಷ್ಠಿರ ನೃಪನ ಪರಿವಾರ (ಕುಮ್ಮಾಗ. ೯-೯೨). [ಮಣ್ಮಟಿ + ಪೋಗು₁ (< ಪೋ₁)]

**ಮಣ್ಮಟಿಸು**, ಮುಮ್ಮಳಿಸು, ಮುಮ್ಮಟಿಸು, ಮುಮ್ಮುಳಿಸು (ಕ್ರಿ). ೧. ತಳಮಳಗೊಳ್ಳು; ಸಂಕಟಪಡು : ಶೈಳಮನೆತ್ತುವುದುಂ ಗೋಪಾಳಂ ಫಣಾಮಣಿಗಳೆಸೆಯೆ ಮಣ್ಮಟಿಸುವ ಪಾತಾಳಾಹಿದಿತತಿ ಪಾವಿನ ಪೇಟಿಗೆಯುಂ ತೆಱೆದ ತೆಱದಿನೇಂ ತೋಱಿದುದೋ (ಅರ್ಜನ. ೨-೦೩). **ಮುಮ್ಮಳಿಸು** : ೨. ಹೊಯ್ದಾಡು; ಕ್ಷೋಭೆಗೊಳ್ಳು : ಮುಮ್ಮಳಿಪ ನೊರೆ ಬುದ ಬುದವನೊಡೆಗಲಸಿ ಕದಡ ಕಂಗಳವಟ್ಟ ಲಹರಿಗಳ ಲಗ್ಗೆಯಿಂದೆಸವ ನದಿ ಯೊಪ್ಪವನದೇವೊಗಳ್ವೆನು (ಹರಿಶ್ಚ. ೧೦-೨೯). **ಮುಮ್ಮಟಿಸು** : ೧. ಮುಮ್ಮಟಿಸಿ ಪಾಂಡವಕೌರವಬಲದ [ಕಲಿಕೆ]ಯ ಪ್ರಧಾನನಾಯಕರ್ಕಳ್ . . . ಕೆಯ್ಮಿಕ್ಕು ಕಾವಲ್ ನಡೆತರ್ಪಾವೇಗದೊಳ್ (ಪಂಪಭಾ. ೨೩-೩೭ ವ). ೨. ಮುಮ್ಮಟಿಸಿದ ಪಲವುಂ ರಾಜಚಿಹ್ನಂಗಳ್ ಬೆಳ್ಗೊಡೆಗಳ್ ತಳ್ದೊಯ್ದು ದೇಂ ಕಣ್ಗೊಳಿಸಿದುದೊ ವಿಸ[ಕ್ಷ]ತ್ರಕಚ್ಛತ್ರಪಿಂಡಂ (ಪಂಪಭಾ. ೦೩-೩೮). **ಮುಮ್ಮುಳಿಸು** : ೧. ಸೂತನನಿಳುಹಿ ಹಯಪೋಡಿದವು ಮುಮ್ಮುಳಿಸಿ ತನಗುದಿಗದಿದು ಕೋಟಲೆಗೊಂಡುದರಿಸೇನೆ (ಕುಮ್ಮಾದ್ರೋ. ೦೯-೩೭). [ಮಣ್ಮಟಿ + — ಇಸು₃]

**ಮಣ್ಮುಕ್ಕ**, ಮಣ್ಣುಮುಕ್ಕ (ನಾ). ಮಣ್ಣನ್ನು ಆಹಾರವಾಗಿ ಉಳ್ಳ ಒಂದು ಬಗೆಯ ಹಾವು : ಮಣ್ಮುಕ್ಕಹಾವು . . . ಎಂದು ಪಲವು ತರನ ಹಾವುಗಳುಂಟು (ಮುಂಬದು. ೨-೩೩). **ಮಣ್ಣುಮುಕ್ಕ** : ನಿರ್ವಿಷ ಸರ್ಪಗಳಲ್ಲಿ ಹೆಬ್ಬಾವು ಶ್ರೇಷ್ಠ. ಇವಲ್ಲದೆ ಮಣ್ಣುಮುಕ್ಕ . . . ಹಸುರು ಹಾವು ಮುಂತಾದ ಜಾತಿಗಳು ಪಲವುಂಟು (ಕಪಾಗ. ೩೭). 'ನೆಲಮುಕ್ಕ' ಪರಾ. [ಮಣ್ + ಮುಕ್ಕ₁]

**ಮತ** (ನಾ). ೧. ಅಭಿಪ್ರಾಯ : ಮನೋಗತ : ಆಶಯ : ಇನ್ನು ಸೇನಾಪತಿಯದಾರ್ಕೆ ನಿಸ್ನ ಮತವೇನುದಯವಾಗದ ಮುನ್ನ ಬವರವ ಹಿಡಿಯಬೇಹುದು ವೈರಿರಾಯರಲಿ (ಕುಮ್ಮಾದ್ರೋ. ೦-೩೪); ಹನುಮನ ಮತವೇ ಹರಿಯ ಮತವು ಹರಿಯ ಮತವೇ ಹನುಮನ ಮತವು (ಪುರಂದ. ಶಾ. ೧-೯೮ ಪಲ್ಲವಿ); ನಿರಹಂಕಾರಭಾವದಲ್ಲಿ ನಿಸ್ಸಂಕೋಚಿತ ವಿಕಸಿತ ಸ್ವಭಾವದಲ್ಲಿ ಈ ಜೀವಿಯೋ ಸಮಷ್ಟಿರೂಪಿ, ಇದು ಗೀತೆಯ ಮತ (ಭಾರತ. ೦೧೩). ೨. ಉದ್ದೇಶ : ಗುರಿ. ೩. ಆಲೋಚನೆ ; ವಿಚಾರ : ಚಿಂತನೆ : ನಮ್ಮ ಪಕ್ಷದ ದೇವ ನೀ ಕೇಳಯ್ಯ ಮತವನು ಸುಧೆಯ ತಾ ಸಹಿತ (ಸಂಶಕ. ೩-೦೦೯). ೪. (ಹಿಂದು. ಜೈನ. ಕ್ರೈಸ್ತ. ಬೌದ್ಧ ಮೊದ ಲಾದ ವಿವಿಧ ಧರ್ಮಗಳಲ್ಲಿ) ಯಾವುದಾದರೊಂದು ಧರ್ಮದ ದೈವವನ್ನು ನಂಬಿ ಅನುಸರಿಸುವ ಮಾರ್ಗ ಮತ್ತು ಆಯಾ ಧರ್ಮ ಗಳಲ್ಲಿ ವಾಡಿಕೆಯಾಗಿರುವ ಧರ್ಮಸಂಬಂಧವಾದ ಆಚಾರ. — ಸಂಪ್ರದಾಯ : ಇತರ ಮತದವರಲ್ಲಿ ಪರಮತಸಹಿಷ್ಣುತೆ ಇಲ್ಲದುದ ರಿಂದ ಅವುಗಳ ಬೆಳವಣಿಗೆಗೆ ತಡೆಯುಂಟಾಗಿದೆ (ಭಾರಜ. ೩೨೮). 'ಮತಾಂತರ' ಪರಾ. ೫. ತತ್ತ್ವ ; ಸಿದ್ಧಾಂತ : ಮತಗಳಾರರೊಳಾವುದ ರೊಳಾಗಾವನತಿಭಕ್ತಿಯನು ಮಾಡೆ ಮಗುಳಾ ಪಿತದೊಳಾ ರೂಪಿಂ ಪತಿಕರಿಸುವೆ (ಅಂಬಿಕ. ೦-೦೦೦) ; ಮತಕಾಗಿ ಮಡಿವರು ಮತಕಾಗಿ ಸಿಡಿವರು ಮತಕಾಗಿ ಬದುಕರು ಜನರು (ಜಿಂತಾಶ. ೦೩೭-೬೩). ೬. ಚುನಾವಣೆ

ಮುಂತಾದ ಸಂದರ್ಭಗಳಲ್ಲಿ ಜನರು ತಮ್ಮ ಆಯ್ಕೆಯನ್ನು ಕುರಿತು ಸೂಚಿಸುವ ಅಭಿಪ್ರಾಯ ಅಥವಾ ಅಂಥ ಅಭಿಪ್ರಾಯವನ್ನು ಗುರುತಿಸಿರುವ ಚೀಟಿ ; ಓಟು : ಉಮೇದುವಾರರನ್ನು ತಿಳಿದು ಮತ ವನ್ನು ಕೊಡಲು ಅನುಕೂಲ (ರಾಯು. ೯೦) ; ಪ್ರತಿಯೊಬ್ಬನಿಗೂ ಎಷ್ಟೆಷ್ಟು ಮತಗಳು ಬಂದಿವೆಯೋ ಅಷ್ಟನ್ನು ಮಾತ್ರ ಇತರರಿಗೆ ಹಂಚಬೇಕು (ಕವಿಕೋ. VII, ೩೪೯).

**ಮತಕೊಡು** = ಮತವನ್ನು ಚಲಾಯಿಸು ; ಓಟುಮಾಡು : ಕೆಲವು ಸಲ ಒಂದು ಪಕ್ಷದವರು . . . ಇತರ ಮತದಾರರು ಮತ ಕೊಡಲು ಸಮಯ ಸಿಗದಂತೆ ಮಾಡಬಹುದು (ಕವಿಕೋ. VII, ೩೩೯). **ಮತಚಲಾಯಿಸು** = ಮತಕೊಡು : ಬಹಿರಂಗವಾಗಿ ಮತ್ತು ಬಾಯಿ ಹೇಳಿಕೆಯ ಮೂಲಕ ಮತಚಲಾಯಿಸುವ ಪದ್ಧತಿ . . . ೧೯೩೦ರ ವರೆಗೂ ಇದ್ದುವು (ಕವಿಕೋ. VII, ೩೯೩). **ಮತನೀಡು** = ಮತ ಕೊಡು : ಇತರ ದೇಶಗಳಲ್ಲಿ ಕೂಡ ಹಲವರು ಮತನೀಡದಿರುವುದು ಅಧ್ಯಯನದಿಂದ ತಿಳಿದು ಬಂದಿದೆ (ಕವಿಕೋ. VII, ೩೩೩). **ಮತಹಾಕು** = ಮತಕೊಡು : ಮತಹಾಕುವ ಸಾಧನಕ್ಕೆ (ಬ್ಯಾಲಟ್) ಶಲಾಕಾ ಎಂದು ಹೆಸರಿತ್ತಂತೆ (ಕವಿಕೋ. VII, ೩೯೩). [ಸಂ.]

**ಮತಂಗ** (ನಾ). ೧. ಆನೆ ; ಗಜ : ಇದೆ ಗದಾದಂಡದ ಹತಿಗೆ ಮುಗ್ಗಿದ ಮತಂಗ ವರೂಥಚಯವಿಲ್ಲಿದೆ (ಶುದ್ಧಾದ್ರಿ. ೦೩-೨). ೨. ಮೋಡ ; ಮುಗಿಲು. ೩. ಒಬ್ಬ ಋಷಿಯ ಹೆಸರು : ಸುಮೇರುಪರ್ವತದಲ್ಲಿ ಅತ್ರಿ . . . ಮತಂಗ . . . ಉಪಮನ್ಯು ಮೊದ ಲಾದಷ್ಟಾಶೀತಿಸಹಸ್ರಋಷೀಶ್ವರರ್ಗನಂತಾಶ್ರಯಂಗಳುಂ (ಜಿವೇ. ೦೬೩) ; ಮತಂಗಋಷಿಶಾಪದಿಂ ಬಾರನ್ಕೆಸಲೆ ಗರುಡನಿಳಿಯ ಮೇಲೆ (ತ್ರಿಬಾ. ೨೯-೨೨). [ಸಂ.]

**ಮತಂಗಜ** (ನಾ). ೧. ಆನೆ : ಗಜ : ಆಕೆಯ ಹಾವಭಾವವಿಳಾಸ ವಿಭ್ರಮ ಕಟಾಕ್ಷೇಕ್ಷಣಂಗಳ್ ಮನಮನೊನಲಿಸೆಯುಮೆರ್ದೆಯುಂ ಕನಲಿಸೆಯುಮನಂಗ ಮತಂಗಜಕೋಳಾಹಳಾಕುಳೀಕೃತಾಂತರಂಗನಾಗಿ (ಶಂಕಥಾ. ೯-೬೯ ವ) ; ಸಮನಾಗಿ ಕೂಡಿ ಕಟುಪೆರಸು ಮತಂಗಜಕಿಕ್ಕಿ ಶೂಲೆ . . . ಅರುಚಿತ್ವಮೆಂಬವಂ ಮಾಣಿಸುಗುಂ (ಲೋಕೋಪ. ೯-೨೯೩) ; ಮುಂಗು ಡಿಯ ಮುಜುದಾಕಿ ಫೀಮಂಗಂಘವಿಸಿದನು ಕ್ಷೇಮಧೂರ್ತಿ ಮತಂ ಗಜದ ಮೇಲೆಸುತ ಬಲುನಾರಾಚಸೋನೆಯುಲಿ (ಕುವ್ಯಾ. ೨-೦೩). ೨. ಒಬ್ಬ ರಾಕ್ಷಸನ ಹೆಸರರ : ಮತಂಗಜಾಸುರನು ಮುಂದುಗೆಡಸಿದವತ್ತ ವೇತಕೆ (ಬಸವ. ೦೪-೨೨). [ಸಂ.]

**ಮತಂಗಿ** (ನಾ). ದುರ್ಗೆಯ ಒಂದು ಹೆಸರು : ಸಮಿತಂ ಕರತಳ ದೊಳಿಟ್ಟು ಶುಭಮಂತ್ರೋಕ್ತದಿ ಮತಂಗಿಯ ಧ್ಯಾನಿಸುತ ಕೊಂಡು (ಕಂಸಾ. ೦೯-೦೨). [<ಸಂ. ಮಾತಂಗೀ]

**ಮತಕಟ್ಟೆ** 'ಮತಗಟ್ಟೆ' ನೋ.

**ಮತಕ್ಷೇತ್ರ** (ನಾ). ಓಟಿನ ಹಕ್ಕು ಪಡೆದ ಜನರಿರುವ ಪ್ರದೇಶ : ಚುನಾವಣೆಯ ಕ್ಷೇತ್ರ : ಅಧಿಕಾರಿಗಳ . . . ಆಯ್ಕೆ ಸ್ಥಾನಿಕವಲ್ಲದ, ಎಂದರೆ ವಿವಿಧ ತಂಡಗಳ (ಟ್ರೈಬ್ಸ್) ಮತಕ್ಷೇತ್ರದಿಂದ ಆಗುತ್ತಿತ್ತು (ಕವಿಕೋ. VII, ೩೯೯). [ಸಂ.]

**ಮತಗಟ್ಟೆ**, ಮತಕಟ್ಟೆ (ನಾ). ಓಟುಹಾಕಲು ಗೊತ್ತುಮಾಡಿದ ಸ್ಥಳ ; ಬೂತು : ಒಂದು ಪಕ್ಷದವರು ತಮ್ಮ ಬೆಂಬಲಿಗರನ್ನೇ ಮೊದಲು ಮತಗಟ್ಟೆಗೆ ತಂದು ನಿಲ್ಲಿಸಿ ಇತರ ಮತದಾರರು ಮತಕೊಡಲು ಸಮಯ ಸಿಗದಂತೆ ಮಾಡಬಹುದು (ಕವಿಕೋ. VII, ೩೩೯). **ಮತಕಟ್ಟೆ** : ಸತ್ತ ದನದಂತೆನ್ನ ಎಳೆಯ ಬೇಡ ಮತಕಟ್ಟೆ ತನಕವೂ ಎಳೆಯಬೇಡ (ಅರಕೋ. ೦೩). [ಮತ + ಕಟ್ಟೆ$_1$]

**ಮತಗಣನೆ** (ನಾ). ಓಟುಗಳ ಎಣಿಕೆ : ಮತಗಣನೆಯಾಗುವಾಗಲೂ ಅಕ್ರಮವಾಗಬಹುದು (ಕವಿಕೋ. VII, ೩೩೯). [ಸಂ. ಮತಗಣನ]

**ಮತಘರ್ಷಣೆ** (ನಾ). ೧. ಅಭಿಪ್ರಾಯಗಳ ತಿಕ್ಕಾಟ, – ಚರ್ಚೆ : ಅಂದಂದು ಮತಘರ್ಷಣೆಗಳ ದಾರುಣಘಟನೆಗಳು ನಡೆದುಹೋಗುತ್ತಿವೆ (ತಿಕ್ಷ. ೬೯). ೨. ಜಾತಿ ಅಥವಾ ಧರ್ಮಗಳ ತಾಕಲಾಟ: ಮತಘರ್ಷಣೆಗೆ ಆ ಸ್ಥಳದಲ್ಲಿ ಅವಕಾಶವೇ ಇರಲಿಲ್ಲ (ಕೂ೨). [ಸಂ. ಮತಘರ್ಷಣ]

**ಮತಚೀಟಿ** (ನಾ). ಗುಪ್ತವಾಗಿ ತನ್ನ ಅಭಿಪ್ರಾಯವನ್ನು ಸೂಚಿಸಲು ಚುನಾವಣೆಯಲ್ಲಿ ಉಪಯೋಗಿಸುವ ಪತ್ರ, – ಚೀಟಿ : ಮತಚೀಟಿಗಳ ಮೇಲೆ ನಮೂದಿಸಲಾದ ಪ್ರಥಮಪ್ರಾಶಸ್ತ್ಯ (ಅಧಿಮಾನ) ಮತಗಳಿಗೆ ಅನುಗುಣವಾಗಿ ಮೊದಲು ಅವುಗಳ ಎಣಿಕೆ ಮಾಡಲಾಗುತ್ತದೆ (ಕವಿಕೋ. VII, ೩೯೯). [ಮತ + ಚೀಟಿ$_2$ (< ಚೀಟು$_2$) ]

**ಮತದಾನ** (ನಾ). ಓಟುಕೊಡುವುದು, – ಹಾಕುವುದು : ಎಲ್ಲರೂ ಕೂಡಿ ಕಾರ್ಯಕಾರಿಮಂಡಲದಲ್ಲಿ ಇರಬೇಕಾದವರ ಒಂದು ಪಟ್ಟಿ ತಯಾರು ಮಾಡುವ, ಮತದಾನ, ಗುಪ್ತಮತದಾನ ಬೇಡ (ಬರು೫. ೦೪೯). [ಸಂ.]

**ಮತದಾರ** (ನಾ). ಚುನಾವಣೆಯಲ್ಲಿ ತನ್ನ ಅಭಿಪ್ರಾಯವನ್ನು ಚೀಟಿಯ ಮೂಲಕ ತಿಳಿಸುವವನು ; ಓಟುದಾರ : ಮತದಾರರುಗಳಿಂದ ನೇರ ವಾಗಿ ನಿರ್ವಾಚಿತರಾದ . . . ಸದಸ್ಯರುಗಳಿರತಕ್ಕುದು (ರಾಧಾ. ೯೦); ಇದರಿಂದಲೇ ತಮ್ಮ ಮತದಾರರ ವಿಶ್ವಾಸ ಗಳಿಸಿಕೊಂಡರೆನ್ನಬಹುದು (ಅಜಾ. ೦೦೬). [ಮತ + – ದಾರ$_4$]

**ಮತದಾರಕ್ಷೇತ್ರ** (ನಾ). = ಮತಕ್ಷೇತ್ರ : ರಾಷ್ಟ್ರವ್ಯವಸ್ಥೆಯ ಪ್ರತಿರಂಗದಲ್ಲೂ ಮತದಾರಕ್ಷೇತ್ರದಲ್ಲಿ, ಸಂಸತ್ತಿನಲ್ಲಿ, ಮಂತ್ರಿಸಂಪುಟದಲ್ಲಿ, ಪಕ್ಷಗಳು . . . ನಿರ್ದೇಶನದ ತತ್ತ್ವಗಳನ್ನು ನೀಡುತ್ತ ಬಂದಿವೆ (ರಾಜ. ೨). [ಮತದಾರ + ಕ್ಷೇತ್ರ]

**ಮತಪತ್ರ** (ನಾ). = ಮತಚೀಟಿ : ಕಳೆದ ವಾರ ನಡೆದ ಚುನಾವಣೆಯ ಮತಪತ್ರಗಳ ಎಣಿಕೆ ನಡೆಯುತ್ತಿದೆ (ಕೂ೩). [ಸಂ.]

**ಮತಪೆಟ್ಟಿಗೆ** (ನಾ). ಮತಹಾಕಲು ಇಟ್ಟಿರುವ ಪೆಟ್ಟಿಗೆ : ಓಟಿನ ಪೆಟ್ಟಿಗೆ : ಮತಪೆಟ್ಟಿಗೆಗಳನ್ನು ಸಾಗಿಸುವಾಗ ವಿವಿಧ ಹಂತಗಳಲ್ಲಿ ಅವನ್ನು ಬದಲಾಯಿಸಬಹುದು (ಕವಿಕೋ. VII, ೩೩೯). [ಮತ + ಪೆಟ್ಟಿಗೆ]

**ಮತಪ್ರಚಾರ** (ನಾ). (ಯಾವುದಾದರೊಂದು) ಮತದ ತತ್ತ್ವಗಳ ಪ್ರಚಾರ : ಮುಸ್ಲಿಮರು ಹಿಂದಿನ ರಾಜಕೀಯಬಲವನ್ನು ಈಗ ಕಳೆದು ಕೊಂಡಿದ್ದರೂ ಮತಪ್ರಚಾರದ ಹುಮ್ಮು ಏನೂ ಕಡಮೆಯಾಗಿಲ್ಲ (ಇಸ್ಲಾಂಸಂ. ೨೬). [ಸಂ.]

**ಮತಪ್ರವರ್ತಕ** (ನಾ.) (ಯಾವುದಾದರೊಂದು ಮತಕ್ಕೆ ಸಂಬಂಧಿಸಿದ) ತತ್ತ್ವವನ್ನು ನಿರೂಪಿಸುವವನು ; ಸಿದ್ಧಾಂತಸ್ಥಾಪಕ : ಈಶ್ವರ ಸಂಕಲ್ಪವೇ ಪ್ರಕೃತಿನಿಯಮವೆಂದು ಅರಿಯುವ ವಿಚಾರಪರತೆ ಮತಪ್ರವರ್ತಕರಲ್ಲಿರಲಿಲ್ಲ (ಜುಲ್ಯ. ೦೦ ಬಿ೩೪). [ಸಂ.]

**ಮತಭೇದ** (ನಾ). ಭಿನ್ನಾಭಿಪ್ರಾಯ ; ಅಭಿಪ್ರಾಯಭೇದ : ಮತಭೇದ ವುಂಟು ಮಾಧವಭಕ್ತಿಗಿದಕಾ ಮತಭೇದವೂ ಮಗುಳಿಲ್ಲ (ಹರಿ. ೨-೪) : ಟೀಕರ ವೇದಾಂತದ ವಿಷಯವಾಗಿ ಎಷ್ಟೋ ಮತಭೇದವಿರಬಹುದು (ದರ್ಶನ. ೦೩೯). [ಸಂ.]

**ಮತಭ್ರಷ್ಟ** (ನಾ). ತತ್ತ್ವದಿಂದ ದೂರವಾದವನು ; ಸಿದ್ಧಾಂತವನ್ನು ಬಿಟ್ಟವನು. [ಸಂ.]

**ಮತಲಪ್** 'ಮತಲಬ್' ನೋ.

**ಮತಲಪು** 'ಮತಲಬ್' ನೋ.

**ಮತಲಬ್**, ಮತಲಪ್, ಮತಲಪು , ಮತಲಬು (ನಾ). ಅಭಿಪ್ರಾಯ : ಅಭಿಮತ : ಮತಲಬ್ ಅಂತ ಎಲ್ಲಿ ಅಂದೆ ವಾದಲ್ಯಾ ನಾನು ?

(ಬೀಶಕ. II, ೪೪೦). **ಮತಲಬ್ :** ಸರದಾರರವರ ಹಾಜಿಯೊಡನೆ ಕಪಲು ಬರೆದು ಕೊಟ್ಟ ಮತಲಬ್ ಅಲಬತ್ ತಿಳಿಸಿ ಇದ್ದೇನೆ (ಶಾಮಪಂ. ೨೨೬). **ಮತಲಪು :** ಟೀಪುಸುಲ್ತಾನರು . . . ನಾನಾಪ್ರಕಾರ ವಿರುದ್ಧ ಮಾಡುವ ಮತಲಪಿನಲ್ಲಿ ಇದ್ದಾರೆ (ರಾಕೆಂಅತ್ರ. ೩೪). **ಮತಲಬು :** ಇದಕ್ಕೆ ಮುಂದೆ ಬರೆಯುವ ಮತಲಬು ಸಾಕ್ಷಿ ಇದೆ (ರಾಕೆಂಅತ್ರ. ೦೦೩) : ಈಗಲೆ ಅಪರಾಧಿಗಳ ಅರ್ಜಿಯ ಮತಲಬಿನ ಮೇಲೆ ಭಾರವಿಟ್ಟು ಅವನ ಅರಿಕೆಯನ್ನು ನಡಿಸೋಣ (ವಾಗ್ಮೀಬ. ೦೬೬).

[← ಅರ. ಮತ್‌ಲಬ್ ; ಹಿಂ. ಮರಾ. ಮತಲಬ್]

**ಮತಲಬು** 'ಮತಲಬ್' ನೋ.

**ಮತಸಹಿಷ್ಣುತೆ** (ನಾ). ಬೇರೆಯ ಮತದ ಬಗೆಗೆ ಇರುವ ಸಹನೆ. — ಸ್ಮರಣೆ : ಭಾರತೀಯರಲ್ಲಿ ಮತಸಹಿಷ್ಣುತೆ ಬೆಳೆಯಲು ಮತವಿಚಾರದಲ್ಲಿ ಭಾರತೀಯರು ಅನುಸರಿಸುವ ಸಂಶೋಧನೆಯ ಮನೋಭಾವ ಇನ್ನೊಂದು ಮುಖ್ಯಕಾರಣ (ಭಾರದ. ೩೨೬). [ಸಂ. ಮತಸಹಿಷ್ಣುತಾ]

**ಮತಸ್ಥ** (ನಾ). ಒಂದು ಮತವನ್ನು ನಂಬಿ ಆ ಮತದ ಸಂಪ್ರದಾಯಕ್ಕೆ ಬದ್ಧನಾದವನು : ಆಯಾಯ ಮತಸ್ಥರಿಗೆ ಆಯಾಯ ಆಹಾರವು ಸ್ವಾಭಾವಿಕವೇ ಸರಿ (ಕೃಬಿಶ್ರ. ೨೬೩) ; ದೇವಾನಾಂಪ್ರಿಯ ರಾಜನು ಸರ್ವ (ಪಾಷಂಡ) ಮತಸ್ಥರನ್ನೂ ಸನ್ಯಾಸಿಗಳನ್ನೂ . . . ಗೌರವಿಸುತ್ತಿರುವನು (ಭಾರದ. ೩೩೦). [ಸಂ.]

**ಮತಸ್ಥಾಪನೆ** (ನಾ). (ಯಾವುದಾದರೊಂದು ಹೊಸ) ತತ್ತ್ವ. ಆಚಾರ. ಸಂಪ್ರದಾಯಗಳನ್ನು ರೂಢಿಗೆ ತರುವಿಕೆ : ಇಂಥ ಮತಸ್ಥಾಪನೆ ಮಾಡುವುದೆಂದರೆ ನಾನೊಬ್ಬ ಸಂತನಾಗಿಯೇ ಮಾರ್ಪಡಬೇಕಾಗಿತ್ತು (ಸ್ವಾತಿ. ೦೮೧). [ಸಂ. ಮತಸ್ಥಾಪನ]

**ಮತಾಂತರ** (ನಾ). ೧. ಭಿನ್ನಾಭಿಪ್ರಾಯ : ವ್ಯಾಖ್ಯಾನಕಾರನು ಕೇಶಿರಾಜನು ಹೇಳದೆ ಬಿಟ್ಟಿರುವುದನ್ನು ಮತಾಂತರಸೂತ್ರದಿಂದ ಸ್ಪಷ್ಟಗೊಳಿಸಿರುವುದು ಸಂದೇಹಕ್ಕೆಡೆಯಿಲ್ಲದಾಗಿದೆ (ಶಬ್ದಶಾಂ. ೬೮). ೨. ಒಂದು ಮತವನ್ನು ಬಿಟ್ಟು ಮತ್ತೊಂದು ಮತವನ್ನು ಸೇರುವಿಕೆ: ಮೊಗ್ಗಲಿ ಪುತ್ತ ತಿಸ್ಸನು (ಅಶೋಕನನ್ನು ಬೌದ್ಧಧರ್ಮಕ್ಕೆ ಮತಾಂತರಗೊಳಿಸಿದವನು . . . ರಖ್ಖಿತನನ್ನು ವನವಾಸಿಗೂ (ಈಗಿನ ಬನವಾಸಿ) ಬೌದ್ಧಧರ್ಮ ಪ್ರಚಾರಕ್ಕೆ ಕಳುಹಿಸಿಕೊಟ್ಟನು (ಕಆಇ. ೦೦೩); ಕ್ರೈಸ್ತ ಮಹಮ್ಮದೀಯ ಮತಗಳಲ್ಲಿ ಮತಾಂತರಹೊಂದಿ ಮದುವೆಯಾಗಲು ಅವಕಾಶವಿದೆ (ಬಂಕಿಮ. ೨೦೩). [ಸಂ.]

**ಮತಾಂಧ** (ನಾ). ತಾನು ನಂಬಿರುವ ಮತವೇ ಎಲ್ಲ ಮತಗಳಿಗಿಂತ ಶ್ರೇಷ್ಠವೆಂಬ ಕುರುಡು ನಂಬಿಕೆಯುಳ್ಳವನು : ಇತರ ಮತಗಳ ಒಳ್ಳೆಯ ಅಂಶಗಳನ್ನು ಕಾಣದವನು : ಭಿನ್ನಮತದವರು ಮಾಡಿದ . . . ಟೀಕೆಗಳನ್ನು ಲಕ್ಷಿಸದಿದ್ದರೆ ಮತಾಂಧರಾಗಿ ನಾವು ತಿಳಿದಿದ್ದೇ ಸತ್ಯ, ಮಾಡಿದ್ದೇ ಧರ್ಮ ಎಂಬ ದುರಹಂಕಾರ ನಮ್ಮಲ್ಲಿ ಬೆಳೆಯಲು ಅವಕಾಶವಾಗುತ್ತದೆ (ಭಾರದ. ೩೩೦). [ಸಂ.]

**ಮತಾಚಾರ** (ನಾ). ಯಾವುದಾದರೊಂದು ಮತದ ಸಂಪ್ರದಾಯದ ಅನುಷ್ಠಾನ.—ಆಚರಣೆ : ಬ್ರಹ್ಮಚಾರಿ ಯತಿ ದೀಕ್ಷಿತರಿಗೆ ಸೂತಕಾದಿ ಹೊಲೆಗಳಿಲ್ಲವೆಂಬುದು ಮೊದಲಾದಾಚಾರಭೇದಮಿರ್ಪುದರಿಂ ಮತಾಚಾರ . . .ಮೊದಲಾದವುಗಳಂ ತಿಳಿದು (ಶಿವೇಶ. ೦೪೬) ; ಧರ್ಮಾಚರಣವು ಕೇವಲ ಕಾಯಕ್ಲೇಶದ ಕಲಾಪವೂ ಅಲ್ಲ ; ಕೆಲವು ಉತ್ಸಾಹಿಗಳು ಹೇಳುವಂತೆ ಬರಿಯ ಮತಾಚಾರವೂ ಅಲ್ಲ (ಆರ್ಯಾಪ. ೪೨). [ಸಂ.]

**ಮತಾಧಿಕಾರ** (ನಾ). ಓಟುಮಾಡುವ ಅಧಿಕಾರ : ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ಮತಾಧಿಕಾರಕ್ಕೆ ಕನಿಷ್ಠ ವಯೋಮಿತಿ ೧೮–೨೫ ವರ್ಷ (೪೬೪ಬೀ. VII. ೩೪೩). [ಸಂ.]

**ಮತಾನುಯಾಯಿ** (ನಾ). (ಯಾವುದಾದರೊಂದು) ಮತದ ಆಚಾರ. ವಿಚಾರ ಸಂಪ್ರದಾಯಗಳನ್ನು ಅನುಸರಿಸುವವನು : ಈ ಮತಾನುಯಾಯಿಗಳನ್ನು ಮಲಾಮತೀಯ (ನಿಂದ್ಯರು) ಎಂದು ಕರೆಯುತ್ತಿದ್ದರು (ಇಸ್ಲಾಂಸಂ. ೨೬೦). [ಸಂ. ಮತಾನುಯಾಯಿನ್]

**ಮತಾಪು** 'ಮಹತಾಪು' ನೋ.

**ಮತಾಯಿ** (ನಾ). (ಕರಾ) ಅಲೆ ; ತರಂಗ : ತೆರೆ : ನಾನು ಜಲ್ಲೆ ಜೂಲಿ. ಲಂಗರು ಬಿಟ್ಟು ದೋಣಿ ನಿಲ್ಲಿಸುತ್ತೇನೆ. ಎಷ್ಟು ಮತಾಯಿ ಬಂದರೂ ಈ ದೋಣಿ ಮುಳುಗದು (ಪ್ರಅಜಾ. ೪೬). [← ತುಳು. ಮತಾಯಿ]

**ಮತಾವಲಂಬಿ** (ನಾ). (ಯಾವುದಾದರೊಂದು) ಮತವನ್ನು ಅವಲಂಬಿಸಿರುವವನು : ಭಾರತೀಯರು ಇಸ್ಲಾಂಮತಾವಲಂಬಿಗಳನ್ನು ಕುರಿತು ಮಾತನಾಡುವಾಗ ಅವರನ್ನು ತುರುಕರು ಎಂದು ಕರೆಯುವುದುಂಟು (ಭಾರದ. ೪೦೩). [ಸಂ. ಮತಾವಲಂಬಿನ್]

**ಮತಿ** (ನಾ). ೧. ತಿಳಿಯುವ ಶಕ್ತಿ : ಜ್ಞಾನ : ತಿಳಿವಳಿಕೆ : "ಪ್ರೇಕ್ಷಾ . . .ಮತಿಃ. . .ಉಪಲಬ್ಧಿಃ—ಈ ೧೩ ಬುದ್ಧಿ" (ಹಲಾಯು. ೩೩-೦೬೪) ; ಕ್ಷಿತಿಯೊಳ್ಮಿಥ್ಯಾಮಾರ್ಗಂ ಸತತಂ ಸನ್ಮಾರ್ಗಮಾವುದೆಂದಱಿಯುವ ಸಂಸ್ಕೃತಿಯ ಮನುಜಂಗೆ ಕಣ್ಣಿಂ ಮ[ಶಾಕಾಂ. ಗ]ತಿಯುಮದೆಂತುಟಲ್ತೆ ಜಿನರಾಜಮತಂ (ಶಮಶ. ೩-೨೮) ; ಮತಿಯಿಲ್ಲದ ಮರುಳ ನಾಸಯ್ಯ (ಬಸವ. ೨೩೬) ; ಮತಿಯು ತಾಂ ಸತ್ಯರುಥಗಳ ನವನವಾಂಶಗಳ ಗತಿಯನರಸುತ ನಡೆದು (ಮಂಕುತ. ೨೨೮). ೨. ಅಭಿಪ್ರಾಯ : ಆಶಯ : ಮೇಲಿನ ಐದು ದರ್ಶನಗಳಲ್ಲಿಯ ಕುಂದುಕೊರತೆಗಳನ್ನು ನಿವಾರಿಸಿಕೊಂಡು ಸರ್ವಸಮ್ಮತವಾಗುವಂತೆ ವಿಚಾರಿಸುವುದರಿಂದ ಅವರ 'ಮತಿ' ಯೇ ಮತವಾಗಿ ಪ್ರಸಿದ್ಧವಾಯಿತು (ಭಾರದ. ೦೩೦). ೩. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು : ಮತಿ ನಿರ್ವೇದಾವಹಿತ್ಥಶ್ರಮ ಮದಜಡತಾಗ್ಲಾನಿ . . . ಇವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ.೬೪೩) : ಮತಿ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ಶಿವೇಶ. ೨೨೬) ; ಶಾಸ್ತ್ರಾದಿಗಳ ಸಹಾಯದಿಂದ ಒಂದು ನಿಶ್ಚಯಕ್ಕೆ ಬರುವುದು ಮತಿ (ಭಾರಮೀ. ೩೪೬). ೪. [ಯೋಗ] ಹೃದಯಕಮಲದಲ್ಲಿರುವ ಹನ್ನೆರಡು ದಳಗಳಲ್ಲಿ ಒಂದು : ಹೃದಯಕಮಲದಲ್ಲಿರುವ ೧೨ ದಳಗಳಲ್ಲಿ ೧೨ ರೂಪಗಳು, ಅವು ಶಕ್ತಿ, ಪ್ರತಿಷ್ಠಾ, ಸಂವಿತ್, ಸ್ಫೂರ್ತಿ, ಪ್ರವೃತ್ತಿ, ಪರಾ, ವಿದ್ಯಾ, ಮತಿ, ಸುಮತಿ, ಮಾಯಾ, ಕಾಲ, ಪುರುಷ — ಹೀಗೆ ೧೨ ರೂಪಗಳು (ಪಸಾರ. ೪-೨೬ ತಾತ್ಪರ್ಯ). ೫. [ಜೈನ] ಎಂಟು ವಿಧವಾದ ಜ್ಞಾನಗಳಲ್ಲಿ ಒಂದು ; P "ತಿಳಿದ ವಿಷಯವನ್ನು ಮನನ ಮಾಡುವುದು : ಬಾರಿಬಾರಿಗೂ ಚಿಂತಿಸುವುದು" (ಜೈಪಕೋ. ೦೪೮) : ಕುಮತಿ ಕುಶ್ರುತ ವಿಭಂಗ ಮತಿ ಶ್ರುತಿ ಅವಧಿ ಮನಃಪರ್ಯಯ ಕೇವಲಜ್ಞಾನವಿಕಲ್ಪದಿಂ ಜ್ಞಾನಮಷ್ಟವಿಧಂ (ತತ್ತ್ವಸೂ. ೦೬). [ಸಂ.]

**ಮತಿಗಿಡಿಸು** 'ಮತಿಗೆಡಿಸು' ನೋ.

**ಮತಿಗಿಡು** 'ಮತಿಗೆಡು' ನೋ.

**ಮತಿಗೆಡಿಸು, ಮತಿಗಿಡಿಸು** (ಕ್ರಿ). ತಿಳಿವಳಿಕೆಯು ಪ್ರಯೋಜನಕ್ಕೆ ಬರದಂತೆ ಮಾಡು ; ಅರಿವುಗೆಡಿಸು : ಭ್ರಾಂತಿಗೊಳಿಸು : ಬಂದ ಮನವೆನ್ನ ಮತಿಗೆಡಿಸಿ ಕಾಡಿತ್ತು (ಬಸವ. ೪೪) ; ಈ ಸತಿ ಮಾಯೆಯಲ್ಲಿ ಮತಿಗೆಡಿಸಿ ಕೆಡಿಸಿದಳುದಿಸಿ ರಕ್ಕಸರ (ತೊರೆರಾ. ೩-೮-೨೨); ಅತಿನಿಡಿಯ ಕಂಗುಡಿಯ ಹೊಯಿಲಿಂ ಮತಿಗೆಡಿಪ ಬೆಲೆವೆಣ್ಗಳೊಪ್ಪಿದ ರತುನನೆಲೆಯುಪ್ಪರಿಗೆ ತರತರದಿ ಮೆಱೆದಿಹುದು (ಸಾಳ್ವಭಾ. ೨-೦೦). **ಮತಿಗಿಡಿಸು :** ಮದ್ದು ಕುಣಿಕೆಯಂತೆ ಪಿತ್ತದಂತೆ ನಾಯ ಹಾಲಂತೆ ಮತಿಗಿಡಿಸುವ ಹೆಂಡಿರುಮು (ಚಕೋರಿಮ್ಮ. ೪-೨೩) : ಸೂಸಕದ ಸೂಸುರದಬ್ಬರದಾಮದಪ್ಪರು

ಮತಿಗಿಡಿಸಿತ್ತು ದಿಟ್ಟಿ ಸಜಿಗೆಯ್ವುದು . . . ಗಾಡಿಕಾರ್ತಿಯಾ (ಕಾವ್ಯಾವ. ೬೦). [ಮತಿಗಿಡು + — ಇಸು$_3$]

**ಮತಿಗೆಡು,** ಮತಿಗಿಡು (ಕ್ರಿ). ತಿಳಿವಳಿಕೆಯು ಪ್ರಯೋಜನಕ್ಕೆ ಬರದಂತೆ ಆಗು : **ಅರಿವಿಲ್ಲದಾಗು** : ಮತಿಗೆಟ್ಟು ಮಗಳೆ ಸಂಸ್ಕೃತಿಲತೆಯೊಳ್ ತೊಡರಲ್ಕೆ ನೀನಿವಂ ನೆಗೞ್ದೌ (ಆದಿಪು. ೩-೩೯) ; ಮತಿಗೆಟ್ಟೆನು ಮನದ ವಿಕಾರದಿಂದ ಧೃತಿಗೆಟ್ಟೆನು ಕಾಯವಿಕಾರದಿಂದ (ಬಸವ. ೯೩). **ಮತಿಗಿಡು** : ಕಳ್ಳುಡಿದರಂತೆ ಮತಿಗಿಡುತ್ತುಂ (ಧರ್ಮಾಮೃ. ೦-೦೬೦). [ಮತಿ + ಕೆಡು$_1$]

**ಮತಿಗೇಡಿ** (ನಾ). ತಿಳಿವಳಿಕೆಯಿಲ್ಲದಿರುವ ವ್ಯಕ್ತಿ; ಬುದ್ಧಿಗೇಡಿ : **ಅರಿವುಗೇಡಿ** : ಬೇಡವೆಂದು ನಿವಾರಿಸಲು ಮತಿಗೇಡಿ ಛಲದಲಿ ಮೂಗನುಚಿ ಯೋಗಾಡಿದಂತಭಿಮಾನವಂ ನೀಗಿ (ಬಸವ. ೨೨-೪೦) ; ಹೇಯವೀ ಸಂಸಾರವೆನ್ನದೆ ಮೋಹಿಸುವ ಮತಿಗೇಡಿ ಮಾನವ ಸಾಹಸಿಯೆ ಸಟೆಮಾತು (ಹಂಸಾ. ೭೯). [ಮತಿ + ಕೇಡಿ$_1$]

**ಮತಿಜ್ಞಾನ** (ನಾ). "ಇಂದ್ರಿಯಗಳ ಅಥವಾ ಮನಸ್ಸಿನ ಮೂಲಕ ವರ್ತಮಾನಕಾಲದ ಪದಾರ್ಥಗಳನ್ನು ತಿಳಿಯುವುದು. ಜ್ಞೇಯ ಪದಾರ್ಥ, ಮತ್ತು ಇಂದ್ರಿಯವಿಶೇಷದ ಸನ್ನಿಕರ್ಷದಿಂದ ಮನಸ್ಸಿನಲ್ಲಿ ಉತ್ಪನ್ನವಾಗುವ ವಸ್ತುಬೋಧ" (ಕೈಪಕೋ. ೦೯೯) : ಇರ್ಪತ್ತೊಂದು ಮತಿಜ್ಞಾನಭೇದಮುಮಂ . . . ಯಥೋಚಿತವಿಧಿಯಿಂ ನೋಂತು (ಆದಿಪು. ೩-೪೦ ವ); ಪಂಚೇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಆತ್ಮನಿಗೆ ಆಗುವ ಜ್ಞಾನವು ಮತಿಜ್ಞಾನವು (ಕೈಪಕ. ೩೬೬). [ಸಂ.]

**ಮತಿಪ್ರಕಾಶ** (ನಾ). ತಿಳಿವಳಿಕೆಯು ಗೋಚರವಾಗುವಿಕೆ ; ಜ್ಞಾನೋದಯ : ವ್ಯಾಕರಣ ಕಾವ್ಯಾದಿಗಳಂ ಪೇಳುತ್ತೆ ಮಕ್ಕಳ್ಗೆ ಮತಿಪ್ರಕಾಶಕ್ಕಂ ಜ್ಯೋತಿಷ್ಮತೀತೈಲಮಂ ಮಾಡಿ ಕುಡಿಕೆಯೊಳಿಟ್ಟು ಮಂದಮತಿಯಾಗಿರ್ದರಿಗೆ ಅರೆಬಿಂದುಮಾತ್ರಮಂ ಕುಡುತ್ತುಮಿರ್ಪುದಂ (ಕರ್ಣಾಕ. ೩೨). [ಸಂ.]

**ಮತಿಬವಣೆ** (ನಾ). ತಿಳಿವಳಿಕೆಯು ಕೆಡುವುದು : ಬುದ್ಧಿಭ್ರಮಣೆ : ದಿವಿಜರಿಪುಗಳು . . . ಕವಲುವರಿಯುವ ಚಿತ್ತದಲಿ ಸಂಭವಿಸಿದಿಂದ್ರಿಯ ಭಾವದಲಿ ಮತಿಬವಣೆಗೊಳದಿರ್ದರು ನಿರಾಹಾರದ ನುಸಿಪ್ಸೆಯಲಿ (ಜರಾಸಂ. ೪-೦೬). [< ಸಂ. ಮತಿಭ್ರಮಣ]

**ಮತಿಭೂಮ** (ನಾ). ಅತ್ಯಧಿಕ ತಿಳಿವಳಿಕೆಯನ್ನು ಪಡೆದಿರುವವನು ; ಅಪಾರಜ್ಞಾನವುಳ್ಳವನು : ಮತಿಭೂಮನಾ ಶ್ರೀರಾಮನುದ್ದಾಮನಾ ವೀರಲಕ್ಷ್ಮಣನುಮಾ ಅಲ್ಪಮಂ ಕೇಳುತಿರ್ದಾರ್ (ಶ್ರೀರಾಪಟ್ಟಾ. ೦೪೭-೦೪೯). [ ಸಂ. ಮತಿಭೂಮನ್ ]

**ಮತಿಭ್ರಮಣೆ** (ನಾ). = ಮತಿಬವಣೆ : ಆತನಿಗೆ ಮಕ್ಕಳ ಅನಾದರಣೆಯಿಂದ ಮತಿಭ್ರಮಣೆಯುಂಟಾಗಿರುವುದು (೪೬೪. ೩೯). [ ಸಂ. ಮತಿಭ್ರಮಣಾ ]

**ಮತಿಭ್ರಷ್ಟ** (ನಾ). = ಮತಿಗೇಡಿ : ಕಾಣುತ್ತ ಕಡೆಗಣಿಸಿ ಕಡಿಸಿಯಜಿಸುವ ಮತಿಭ್ರಷ್ಟ ನಾನಯ್ಯ (ಬಸವ. ೩೦೩). [ಸಂ.]

**ಮತಿಮಂತ** (ನಾ). ತಿಳಿವಳಿಕೆಯುಳ್ಳವನು ; ಬುದ್ಧಿವಂತ : ರೇವದಾಸಮೀಸೋತ್ತರದೀಕ್ಷಿತರ ಗುಣಂಗಳನೆಣಿಸುವ ಮತಿಮಂತರ ನಾನದೆಲ್ಲಿಯುಂ [ಕಣ್ಣಾ]ಜೀಯೆ (ಎಇ. XIII, ೩೩೦-೦೨; ೫೭೯). [ ಸಂ. ಮತಿಮತ್ ]

**ಮತಿಮಂದ** (ನಾ). ಮಂಕುಬುದ್ಧಿಯವನು ; ಅಜ್ಞಾನಿ : ಮತಿಮಂದನಾಗಿ ಗತಿಯ ಕಾಣದೆ ಇರ್ದೆನಯ್ಯಾ ಹುಟ್ಟುಗುರುಡನ ಕಯ್ಯ ಕೋಲ ಕೊಟ್ಟು ನಡೆಸುವಂತೆ ನಡೆಸಯ್ಯಾ ಎನ್ನಾ (ಬಸವ. ೨೩೫): ಅಹಂಕಾರ ಮಮಕಾರಗಳಿಂದ ಮತಿಮಂದನಲ್ಲಾ ನೋಡಾ ಭಕ್ತನು (ಸಿದ್ಧೇಶ. ೨೦೩-೬೩೯). 'ಮಂದಮತಿ' ಪರಾ. [ಸಂ.]

**ಮತಿಮುಱಿ**[2] (ಕ್ರಿ). = ಮತಿಗೆಡು : ಶಾ ಮತಿಮುಱಿದೆನಕಟಾ ಕೆಟ್ಟೆನು (ಕಾಶೀಗ. ೦೦-೨೩-೬). [ ಮತಿ + ಮುಱಿ$_1$ ]

**ಮತಿವಂತ** (ನಾ). = ಮತಿಮಂತ : ಪುರಾಣಚೂಡಾಮಣಿಯೆಂದಿಂತು ಪೆಸರಿಡುಗುಮೋ ಮತಿವಂತಂ ಕವಿಚಕ್ರವರ್ತಿ ಸಮೆದಿ ಕೃತಿಯಂ (ಶಾಂತಿಪು. ೦೨-೫೩) ; ಆನಂದದಿಂ ಭಕ್ತತತಿಗೀವ ಮತಿವಂತನೆನಿಸಿ ಭಕ್ತರ್ಬಂದೊಡನಿತು ಪೊರೆಯೋಜಂಮಂ (ಇಳೆರ. ದೀ. ೯೯-೪). [ ಸಂ. ಮತಿವತ್ ]

**ಮತಿವಂತೆ** (ನಾ). ತಿಳಿವಳಿಕೆಯುಳ್ಳವಳು; ಬುದ್ಧಿವಂತೆ : ಮತಿವಂತೆಯು ಧರ್ಮಜ್ಞೆಯು . . . ಸತ್ಯಾನ್ವಿತವಚನೆಯು ಕಥೆಯನೆ ಪೇಟ್ಟಿತಿಶಯದಿಂ ತನ್ನ ವಧುಗೆ (ಮದರಾ. ೯-೦೫). [ಮತಿವಂತ + — ಎ$_2$]

**ಮತಿವಿಕಲ,** ಮತಿವಿಕಳ (ನಾ). ತಿಳಿವಳಿಕೆಯು ನಾಶವಾಗಿರುವ ವ್ಯಕ್ತಿ; ಅರಿವುಗೇಡಿ : ತನ್ನ ತೀರದ ಚಿಂತೆಯಲ್ಲಿ ಮತಿವಿಕಲನಾಗಿದ್ದ ವಾಜಶ್ರವಸನಿಗೆ ಆ ಸಣ್ಣ ಮಾತೂ ಅರ್ಥವಾಗದೆ, ಕೆಣಕಿದ ಹುಲಿಯಂತೆ ಪರಿಹಾಯ್ದ (ನಚಿಕೇತ. ೨೪). **ಮತಿವಿಕಳ** : ಸಕಲಧರ್ಮದ ಸಾರವನು ಮತಿವಿಕಳನಾಗದೆ ಚಿತ್ತವಿಸು (ಕುಮಾ.ಉ. ೪-೦೫); ಸುತರ ಪರರೆಡೆಗಿತ್ತು ನಂಬಿದ ಸತಿಯ ತಂದಡವಿಯಲಿ ಮಲಗಿಸಿ ಮತಿವಿಕಳನಾದೆನು (ಹರಿಶ. ೬-೩); ಕಾಪಿನ ಭಟರ್. . . ಗತಿಯಂ ಕಾಣದೆ ಮತಿವಿಕಳರಾಗೆ (ರಾಮಾಶ್ವ. ೦೩೫-೩೦). [ಸಂ.]

**ಮತಿವಿಕಳ** 'ಮತಿವಿಕಲ' ನೋ.

**ಮತಿವಿಕಳತನ** (ನಾ). ತಿಳಿವಳಿಕೆಯಿಲ್ಲದಿರುವುದು : ಅಜ್ಞಾನ : ಬುದ್ಧಿಹೀನತೆ : ಸತ್ತ ನೀನೆಲವೆಲವೊ ಕರದಪೆ ಮೃತ್ಯುವನು ಮತಿವಿಕಳತನ ನಿನಗತ್ಯಧಿಕತರವಾಯ್ತಲಾ ಹೇಳೆವಡೆ ಬುದ್ಧಿಯನು (ಭಾಗ. ೫-೭-೧೦); ಕ್ಷಿತಿಯನೆಲ್ಲವ ಸೋತು ಜೂಜೊಳು ಪತಿ ಬಸಕೆ ಬಂದೆನ್ನನಗಲಿದ ಮತಿವಿಕಳತನದಿಂದ ತಿರುಗುತ ಬಂದೆ ತಪ್ಪುಡಿಗೆ (ಹರಿಶ. ೫-೫೬). [ ಮತಿವಿಕಳ ( = ಮತಿವಿಕಲ ) + — ತನ ]

**ಮತಿವಿಕಳತೆ** (ನಾ). = ಮತಿವಿಕಳತನ : ಮತಿವಿಕಳತೆಯಿಲ್ಲದೆಯುಂ ಹುತವಹಯುತಮಾಗೆ ಬಗೆದ ಗತಿಯುಂ ಪಡೆಗುಂ ಸತತಮದು . . . ತಪ್ಪುಗುಮೋ (ಹಂಪಕಾ. ೨೬೨-೦೯). [ ಸಂ. ಮತಿವಿಕಲತಾ ]

**ಮತಿವಿದ** (ನಾ). ಬುದ್ಧಿವಂತ : ತಿಳಿವವನ ಮತಿವಿದನ ಭಾಷಾವಳಿ ವಿಪಶ್ಚಿನ ಸಾಕ್ಷರನ . . . ಸಂಧಿವಿಗ್ರಹರೆನಿಸಬೇಕು (ಕುಮಾ.ರಾ. ೩-೮೯). [ ಸಂ. ಮತಿವಿದ್ ]

**ಮತಿವಿಹೀನತೆ** (ನಾ). = ಮತಿವಿಕಳತನ ; ಇತರರಂ ಕೂಡಿಪ್ಪುದೆಲ್ಲೆನೆ ಮತಿವಿಹೀನತೆಯಲ್ಲದೆ ಗುರುಮತವಹುದೆ ಕೇಳ್ (ಬಸವ. ೬೦-೩೭).

[ ಸಂ. ಮತಿವಿಹೀನತಾ ]

**ಮತಿಹೀನ** (ನಾ). = ಮತಿಗೇಡಿ : ಮತಿಹೀನರಪ್ಪ ಮನುಜರ್ ಪತಂಗವೃತ್ತಿಯನೆ ಕೊಂಡು ಕೊನೆಯುತ್ತಿರ್ಪರ್ (ಹಂಪಕಾ. ೨೦೭-೦) ; ಮತಿಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು (ಹಂಸಾ. ೪೯) ; ಯತಿಗಳೆಂಬವರ ಮತಿಹೀನರ ಮಾಡಿತ್ತು ನೋಡಾ ಮನವು (ಅಲ್ಲಮ. ೨೫೬-೬). [ಸಂ.]

**ಮತೀಯ** (ಗು). ೧. ತತ್ತ್ವಕ್ಕೆ ಸಂಬಂಧಿಸಿದ ; ಸಿದ್ಧಾಂತಕ್ಕೆ ಸಂಬಂಧಿಸಿದ : ಭರತವರ್ಷದ ಮತೀಯ ಇತಿಹಾಸದಲ್ಲಿ ಈ ಸಂಪ್ರದಾಯಕ್ಕೆ ವಿಸ್ತಾರವಾದ ಆಖ್ಯಾಯಿಕೆಯೇ ಇದೆ (ಶಾರದ. ೨೬೨) ; ಸಂಸ್ಕೃತಮಹಾಕಾವ್ಯಗಳಲ್ಲಿ ಸಾರ್ವಜನಿಕ ಮಹಾಕಾವ್ಯ (Secular Poetry) ಐತಿಹಾಸಿಕ ಮಹಾಕಾವ್ಯ (Historical Poetry) ಮತೀಯ ಮಹಾಕಾವ್ಯ (Religious Poetry) ಎಂಬ ಮೂರು ಭಾಗಗಳಿವೆ (ಶಾರದ. ೪೫೦). ೨. ಜಾತಿಗೆ ಸಂಬಂಧಿಸಿದ ; ಕೋಮುವಾರು : ಹಿಂದೂ ಮುಸ್ಲಿಂ ಸಂಬಂಧಗಳು ಮತೀಯಕ್ಷೇತ್ರದಲ್ಲಿ ಹೇಗೋ ಹಾಗೆ ರಾಷ್ಟ್ರೀಯ ಕ್ಷೇತ್ರದಲ್ಲೂ ಕೂಡಿಕೊಳ್ಳುತ್ತಿವೆ (ಇಸ್ಲಾಂಸಂ. ೨೬). (ನಾ). ೩. (ಯಾವುದಾದರೊಂದು) **ಮತಕ್ಕೆ ಸೇರಿದವನು** : ಈ ಮತೀಯರ ಸಂಖ್ಯೆ ನೂರಕ್ಕೆ ಎಪ್ಪತ್ತು (ಇಸ್ಲಾಂಸಂ. ೨೯). [ಸಂ.]

**ಮತ್ತೈಕ್ಯ** (ನಾ). ಅಭಿಪ್ರಾಯದ ಒಮ್ಮತ ; ಏಕಮತ : ಲಘುಬುದ್ಧಿಯುಂತೂ ನೇರವಾದ ಗೆರೆಯೆಂಬುದು ಮತ್ತೈಕ್ಯವುಳ್ಳ ವಿಚಾರವಾಗಿದ್ದು ಅದರ ಸ್ವರೂಪನಿರ್ಣಯದಲ್ಲಿ ತೊಡಕಿಲ್ಲ (ಸಂಕೋಶ. ೧೧೧). [ಸಂ.]

**ಮತ್ಕುಣ** (ನಾ). ೧. ರಕ್ತವನ್ನು ಹೀರಿ ಜೀವಿಸುವ ಒಂದು ಬಗೆಯ ಕೀಟ : ತಗಣೆ : ಪರಿತಂದು ತಿಂದು ಮಂಚಾಂತರದೊಳ್ ತಚ್ಛಿದ್ರಭಾಗಮಂ ಪೊಕ್ಕುದತಿತ್ವರಿತಗತಿ ಮತ್ಕುಣಂ (ಶಂಶಕಂ. ೧೩೦-೧೧); ಕುಂಥು ಘುಣ ಮತ್ಕುಣ ದಂಶ ಮಶಕ . . . ಕ್ರಿಮಿಕೀಟಕಾದಿ ತ್ರೀಂದ್ರಿಯಂಗಳ್ (ಕತ್ತ್ವಸೂ. ೯೬) ; ತನ್ನ ಕಡಿಯ ಬಂದ ಮತ್ಕುಣಗಳ ಸೊಸಲ ಕಣ್ಣಿನಿಂದು ರುಪಲ್ (ಶಾಸೋಕ. ೧೧-೧೩). ೨. ಗಡ್ಡವಿಲ್ಲದ ಮನುಷ್ಯ. ೩. ಕೋರೆಹಲ್ಲಿಲ್ಲದ ಆನೆ. ೪. ಕೋಣ ; ಮಹಿಷ. ೫. ತೆಂಗಿನ ಮರ. [ಸಂ.]

**ಮತ್ತ₁** 'ಮತ್ತಲ್' ನೋ.

**ಮತ್ತ₂** (ಗು). ೧. ಮದವೇರಿದ : ಅಮಲೇರಿದ : 'ಮತ್ತಕೋಕಿಲ' ಪರಾ. ೨. ಕಾಮಾತುರದಿಂದ ಕೂಡಿದ ; ನಸೆಯೇರಿದ. ೩. ಸಂತೋಷದಿಂದ ಮೈಮರೆತ. ೪. ಕೆರಳಿದ ; ರೋಷಾವೇಶದಿಂದ ಕೂಡಿದ. (ನಾ). ೫. ಮದವೇರಿದವನು ; ಅಮಲೇರಿದವನು ; ಉನ್ಮತ್ತ : ಎಲೆ ಮತ್ತ ನೀನಿಂತು ನಗೆಗೇಡಾದ ನುಡಿಗಳಂ ನುಡಿಯುತ್ತ ಮನೆಗೆ ಮುಳಿಸನಾದೊಡಂ ಪುಟ್ಟಿಸಲಿಲ್ಲಂ (ಕಾದಂಬ. ೩೬೪) ; ಮತ್ತನತಿಶ್ರಾಂತನು ಪ್ರಮದೋನ್ಮತ್ತನತಿಕುಪಿತಾನನನು . . . ಕ್ಷುತ್ತು ಘನವಾಗುಳ್ಳನಿಂತೀ ಪತ್ತು ಜನವಾವಾಗ ಧರ್ಮದ ತತ್ತ್ವವರಿಗಳನರಿಯರೈ (ಕುವ್ಯಾಉ. ೩-೬೬) : ಹೋರಾಡುವುದಕ್ಕೆ ಮೊದಲು ಅವರು ಮದ್ಯಪಾನದಿಂದ ಮತ್ತರಾಗುವರು (ಕರ್ನಾಶ. ೬೦). ೬. ಒಂದು ಬಗೆಯ ಸಸ್ಯ : ಉನ್ಮತ್ತ : ಧತ್ತೂರ. ೭. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹತ್ತನೆಯ ಪಂಕ್ತಿ ಎಂಬ ಛಂದಸ್ಸಿನ ಒಂದು ವೃತ್ತ : ಮುನ್ನಂ ಧಾತ್ರೀಶಶಿಪವನೇಶೋತ್ಪನ್ನಂ ನಿಲ್ಕುಂ ಯತಿ ಯುಗದೊಳ್ ಸೇವ್ಯಂ ಸವ್ಯಂ ಭೂತಳಕಿದು ಪೂಜ್ಯಂ ಭಿನ್ನಾಬ್ಜಾಕ್ಷೀ ಪೆಸರಜು ಮತ್ತಂ (ಛಂದೋಂಬು. ೨-೧೧೯). [ಸಂ.]

**ಮತ್ತಂ** (ಅ). ೧. ಪುನಃ ; ಮತ್ತೆ : ನುಡಿಯಿಸಿ ಕೇಳ್ವೆಂ ಪಂಗಿನ ಪಡೆಮಾತನೆ ಮಾತು ತಪ್ಪೊಡಂ ಮತ್ತಮದಂ ನುಡಿಯಿಸುಗುಂ ಮೊದಲಿಂದೆ (ಶಂಶಭಾ. ೪-೫೬) ; ಜಘನ್ಯಶರೀರಮಂ ಕೈಕೊಂಡು ಪುಟ್ಟಿ ಮತ್ತಮಾಯೆಡೆಯೊಳ್ ಪಲವುಂ ಸೂಟಿಗ್ ಲಘು ಜನ್ಮಾವಗಾಹದಿಂ ಪುಟ್ಟಿ (ಸುಕುಮಾ. ೬-೬ ವ) ; ನಾನಾವಿಧದಿಂ ದೂಷಿಸಿ ಮತ್ತಂ ಸೈರಿಸಲಾಱದೆ (ಧರ್ಮಾಮೃ. ೧-೧೧೯). ೨. ಅಲ್ಲದೆ ; ಇನ್ನು : ಕುಱಿತವರಲ್ಲದೆ ಮತ್ತಂ ಪೆಱರುಂ ತಂತಮ್ಮ ನುಡಿಯೊಳ್(ಲ್ಲರ್) ಜಾಣರ್ (ಕವಿರಾ. ೧-೩೯) ; ಮತ್ತಂ ಮುತ್ತಕುರುಡತವಸಿಗಳ ಕೈಯುಂ ಒಡೆದುಯ್ದುವರ ಗುಹೆಗಳಂ ಪುಗಿಪ ಪೊಱಮಡಿಪ ಚಪಳಕಟಿಗಳುಮಂ . . . ನೋಡಿ (ಶಂಶಭಾ. ೧-೧೧೩ ವ) ; ಬಿಟ್ಟ ದತ್ತಿ ತಟ್ಟಿಕೆಱೆ ಸರ್ವಬಾಧಾಪರಿಹಾರ ಮತ್ತಂ ಬಸದಿಯಿಂ ತೆಂಕಣಕೆಱೆಯ ಕೆಳಗೆ ತಳವೃತ್ತಿ ಗದ್ದೆ (ಎಕ. VII, ಶಿವಪ. ೪-೭೦ ; 1122). [<ಮತ್ತು₂]

**ಮತ್ತಕ** (ನಾ). ೧. ತಲೆ ; ಶಿರ : ರತ್ನಮಣಿಮಕುಟಂಗಳೈದನು ಮತ್ತಕದೊಳಳವಡಿಸಿ (ಪ್ರಭುರಾಕಾ. ೩-೪). ೨. ತುದಿ ; ಶಿಖರ ; ಅಗ್ರ : ಅಂತವರಂಬೆರಸು ಕರಂ ಸಂತಸದಿಂ ಸಾರ್ದು ಯಾದವಾದ್ರಿಯನೊಡವಂದಿಂತೆಂಬೆಣಿಕೆಗಳದ ವಟಮಂ ತಟ್ಟಲೊಳರಿಸಿ ಪತ್ತಿದಂ ಮತ್ತಕಮಂ (ಶಿವಪ. ೩-೯೦).

[< ಪ್ರಾ. ಮತ್ಥಗ, ಮತ್ಥಯ./ ಸಂ. ಮಸ್ತಕ ]

**ಮತ್ತಕಗೊಳ್** (ಕ್ರಿ). ತಲೆಯಲ್ಲಿ ಒಳಗೂಡಿರು : ತಲೆಯಲ್ಲಿರು : ಮತ್ತಕಗೊಂಡ ಬಟ್ಟಕಿಱುಚಂಡಿಕೆ ಸುತ್ತಿದ ಪೊನ್ನ ಮೊಗ್ಗೆಗಳ್ (ಶಿವ. ೩-೪೯). [ಮತ್ತಕ + ಕೊಳ್₁]

**ಮತ್ತಕಾಶಿನಿ** (ನಾ). ಮೋಹವನ್ನುಂಟುಮಾಡುವವಳು ; ಚೆಲುವೆ : ಸುಂದರಿ : "ಪರಸ್ತ್ರೀ ಮತ್ತಕಾಶಿ [ ಶಾಶಂ. ಮಿ] ನೀ — ಈ ೨ ಒಳುವೆಂಗೂಸು" (ಹರಿಯು. ೬೦-೩೩೫); ಮತ್ತೆ ಗೊಳ್ಳೆಂದುದು ನೃಪಾಲನ ಮತ್ತಕಾಶಿನಿಯರು (ಕುವ್ಯಾಸ. ೧೨-೩೯) ; ಮತ್ತಕಾಶಿನಿಯನೆಳೆದುನ್ಮತ್ತ ರಾವಣಂ ನೆಗೆದನಂಬರಕೆ (ತ್ರೀರಾಪಟ. ೨೪೭-೫೦೭). [ಸಂ. ಮತ್ತಕಾಶಿನೀ]

**ಮತ್ತಕಾಸಿನಿ** (ನಾ). = ಮತ್ತಕಾಶಿನಿ : ಉತ್ತರಾಪಥದಲ್ಲಿ ಬಳಿಕ ವಿಯತ್ತರಂಗಿಣಿ ಯಮುನೆ ದಾತನ ಮತ್ತಕಾಸಿನಿ ಕೂಡಿದೆಡೆಯೊಳು ಶ್ರೀಗಿರಿಯ ಜಡೆಯೊಳ್ (ಏಕೋಶ. ೧೫-೧೪); ಉತ್ತಮರಘುಕುಲರಘುರಾಯನಾತ್ಮಜೆ ಮತ್ತಕಾಸಿನಿ ಇಪ್ಪಳು ಕನ್ನಿಕೆಯಾಗಿ (ಕರ್ನಾಶ. ೨೬೫). [ಸಂ. ಮತ್ತಕಾಸಿನೀ]

**ಮತ್ತಕೋಕಿಲ** (ನಾ). ೧. ಮದವೇರಿದ ಕೋಗಿಲೆ ; ಸೊಕ್ಕಿದ ಕೋಗಿಲೆ: ಬಹಿರುದ್ಯಾನಾಂತರದೊಳ್ ಸಹಸೋದಿತ ಮತ್ತಕೋಕಿಲೋಚ್ಚೈರ್ಧ್ವಾನಂ ಮುಹುರಾಕರ್ಣಿಸಿ (ಕವಿರಾ. ೧-೫೫). ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹನ್ನೆರಡನೆಯ ಜಗತಿಯೆಂಬ ಛಂದಸ್ಸಿನ ಒಂದು ವೃತ್ತ! ಸುರಪುರೇಂದುದಿವಸಾಧಿಪಾಗ್ನಿಗಳ್ ಬರೆ ದಿಶಾಗಜದೊಳಾ ವಿರಾಮಮುಂತಿರೆ ಪೆಸರ್ಗೆಟ್ಟ ನಾಕಿಯಂತವೊಲ್ ನಿರುಪಮಂ ಕೆಳದಿ ಮತ್ತಕೋಕಿಲಂ (ಛಂದೋಂಬು. ೨-೧೩೦) ; ೧೨ನೆಯ ಜಗತಿಯಲ್ಲಿ . . . ನಭಜರಂಗಳಿರೆ ಮತ್ತಕೋಕಿಲಂ (ಕೃಬಿ. ೯೦). [ಸಂ.]

**ಮತ್ತಗಜ** (ನಾ). ಸೊಕ್ಕಿದ ಆನೆ ; ಮದವೇರಿದ ಗಜ : ಮತ್ತಗಜಂಗಳ ಕೋಡಂ ಕತ್ತರಿವಿಗಮಂ . . . ಕಾಣ್ಕೆಯನಿತ್ತು (ಸೂಕ್ತಿಸು. ೩-೯೬) ; ಸುತ್ತುಬೇಲಿಯ ಮಧ್ಯದಲಿ ಹಯ ಮತ್ತಗಜ ರಥ ಗೋಮಹಿಷಿ ವರ ಸೈರಿಭದ ಚಯಕೆ . . . ಇರವಾಯ್ತು (ಕುವ್ಯಾಸ. ೬-೧೫). [ಸಂ.]

**ಮತ್ತತನ** (ನಾ). ಸೊಕ್ಕು ; ಉನ್ಮತ್ತತೆ : ಸಂಸಾರವೆಂಬ ಡಾಗು ಎನ್ನ ಮತ್ತತನದಲ್ಲಿ ಕೊಂದಿತ್ತು (ಬಸವಪಟ. ೪೭-೧೯೩) ; ಅವದಿರ ಕೃತ್ಯವನು ನೀನರಿಯದಕಟಾ ಮತ್ತತನದಲಿ ನುಡಿವೆ ಅವರಾರೆಂದು ಭಾವಿಸದೆ (ಸುತ್ಸಾಶಂ. ೩-೨೪). [ಮತ್ತ₂ + — ತನ]

**ಮತ್ತತೆ** (ನಾ). = ಮತ್ತತನ : "ಮತ್ತತೆಗೆ ಮಜವೆಂಬ ನಾಮ" (ಕಬ್ಬಿಕ. ೯೦); ಧರೆಗೆಸೆದತ್ತು ತಾರಕನ ದುರ್ಗತಿ ತಾರಕನೇಳ್ಗೆ ತಾರಕಾಸುರನ ಪೊಡರ್ಪು ತಾರಕನ ಮತ್ತತೆ (೧೦೪. ೬-೧೧) ; ಪ್ರಾಯಶಃ ಈಗ ನನಗೆ ಮತ್ತತೆ ಉಂಟಾಗಿರಬಹುದು (ಬರೆಗಾ. ೧೩೬). [ಸಂ. ಮತ್ತತಾ]

**ಮತ್ತತ್ವ** (ನಾ). = ಮತ್ತತನ : ಸದ್ಭಕ್ತ ದೈವವೆಂದು ಅರ್ಚಿಸುವ ಠಾವಿನಲ್ಲಿ ಮತ್ತತ್ವ ದುಶ್ಚಾರಿತ್ರ ಪಗಡೆ ಪರಿಹಾಸಕತನ . . . ಇವೆಲ್ಲವ ಬಿಡಬೇಕು (ಬಸವಪಟ. ೫೫-೨೨೫). [ಸಂ.]

**ಮತ್ತದ್ವಿಪ** (ನಾ). = ಮತ್ತಗಜ : ಕಾವರ್ಗಿಲ ನೀರ್ಪೊಳಲ್ ಕೋಶದಿಂದಂ ಮದಂ ಸುರಿಯುತ್ತಿರ್ಪುದುಮೊಪ್ಪೆ ಚಕ್ರಿಯ ಮನಂಗೊಂಡತ್ತು ಮತ್ತದ್ವಿಪಂ (ಆದಿಪು. ೧೨-೫೮). [ಸಂ.]

**ಮತ್ತಮದ** (ನಾ). ಅಧಿಕವಾದ ಅಮಲು ಏರಿರುವವನು ; ಮದೋನ್ಮತ್ತ : ನಿಜಕುಪಿತಾಂಬುಜಮಧುರಂ ರಜೋವಿಷವಾಮೂರ್ತಿ ಮತ್ತಮದ ನಂತಿರೆ (ಶಾಂತಿಪು. ೮-೬೦). [ಸಂ.]

**ಮತ್ತಮಯೂರ** (ನಾ). ೧. ಮದವೇರಿದ ನವಿಲು : ಸೊಕ್ಕಿದ ಮಯೂರ : ಅಂಬುದಧ್ವನಿಗೆ ಪೆರ್ಚಿದ ಮತ್ತಮಯೂರದಂತೆ (ಶಾಂತಿಪು. ೫-೩೬). ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹದಿಮೂರನೆಯ ಅತಿಜಗತಿಯೆಂಬ ಛಂದಸ್ಸಿನ ಒಂದು ವೃತ್ತ : ಎತ್ತಂ ಧಾತ್ರೀವ್ಯೋಮ ಪಯೋವಾಯು ಹರರ್ಕಳ್ ಪತ್ತಿರ್ದಾಗಳ್ಪಂದು ವಿರಾಮಂ ನಿಧಿಯೊಳ್ಮೆಯ್ವೆತ್ತೊಪ್ಪುತ್ತುಂ ಬಂದಿರೆ ಸಂದಿರ್ದುದು ವೃತ್ತಂ ಮತ್ತೇಭೇಂದ್ರೋದ್ಗಾಮಿನಿ ಕೇಳ್ ಮತ್ತಮಯೂರಂ (ಛಂದೋಂಬು. ೨-೧೪೪). [ಸಂ.]

**ಮತ್ತಮಾತಂಗ** (ನಾ). ೧. = ಮತ್ತಗಜ. ೨. [ಸಂಗೀತ] ಒಂದು ಬಗೆಯ ತಾಳ : ಚಾಚಪುಟ . . . ಮತ್ತಮಾತಂಗ. . .ಜಯಾಳವೆಂಬವೇ ಮೊದಲಾದ ನೂಱೊಂದು ತಾಳಂಗಳು (ಎವೀಳ. ೦೯೨). [ಸಂ.]

**ಮತ್ತರ್** 'ಮತ್ತಲ್' ನೋ.

**ಮತ್ತರನಱ** (ನಾ). ಒಂದು ಸ್ಥಳದ ಹೆಸರು : ಪೊಂನೈದೆಱ ಆಳಗನ ಪಳ್ಳ ಎತ್ತುರುಳಿ ನರಿಗನ ಗಟ್ಟ ಮತ್ತರನಱಿಯುಂ ನಿಱುಗಲು (ಎಳ. VI, ತಂರೀ. ೬೬-೦೩; ೯೯೪). [ ? ]

**ಮತ್ತರು** 'ಮತ್ತಲ್' ನೋ.

**ಮತ್ತರ್ವಣ** (ನಾ). ಭೂಮಿಯ ಮೇಲಿನ ಒಂದು ತೆರಿಗೆ : ಪತ್ತು ಪರಿಸಂಱಱುಂ ಮತ್ತರ್ವಣಂ ಉಟ್ಟುಗೂರ್ವ್ವಱನ್ನು ಮಾಣಿಸಿಗೆ (ಕೌಇ. XI-i, ೯೩-೦೯ ; 970). [ಮತ್ತರ್ (< ಮತ್ತಲ್) + ಪಣ್ಣ]

**ಮತ್ತಲ್**, ಮತ್ತ್ರು, ಮತ್ತರ್, ಮತ್ತರು, ಮತ್ತಲು (ನಾ). ಭೂಮಿಯ ಒಂದು ಅಳತೆ : ಕೆಳಗೆ ಎಣ್ಬು ಮತ್ತಲ್ ಗಟ್ಟಿ (ಇಆ. XI, ೬೦-೦೯ ; 567) ; ಅಯ್ಮತ್ತಲ್ ಕೆಯ್ಯಂ ಕೊಟ್ಟರ್ (ಎಳ. VIII, ಸೊರಬ, ೯೩-೯; 876); ದೇವಾರಕ್ಕೆ ಜಕ್ಕಿಲಿಯೊಳ್ ನಾಲ್ಕು ಮತ್ತಲ್ಕೆಯ್ಯಂ ಕೊಟ್ಟಳ್ (ಎಳ. VII, ಶಿಕಾ. ೨೦೯-೦೬ ; 918). **ಮತ್ತ₁** : ಮಾಳೆರಾಸಿಗನು . . . ಜೇಯರ ಮೆಚ್ಚಿ ೧ ಗುಯ್ಯಲಂ ೩ ಮತ್ತ ಕೆಯ್ಯುಮಂ ಬಿಟ್ಟರ್ (ಎಳ. XI, ಮೊಳಕಾ. ೨೬-೭ ; 962) ; ಪಂಚಕೇಶ್ವರಕ್ಕೆ ಮತ್ತ ೬ ಭಳಾರಿಗೆ ಮತ್ತ ೬ ಭಟ್ಟಗೆಯಿ ಮತ್ತ ೬ ಚಟ್ಟಗೆಯಿ ಮತ್ತ ೬ (ಕೌಇಇ. IX-i, ೭೯-೬ ; 981) ; ಸ್ವಯಂಪಾಕಿಸ್ವಾಮಿಗಳ್ಗೆ ಮತ್ತ ೧ ದವಸಿಗರಿಗೆ ಮತ್ತ ೧ ಹೂದೋಟದ ಮಾಲೆಗಾರಗೆ ಕಮ್ಮ ೨೦ (ಎಳ. VII, ಶಿಕಾ. ೦೮೩-೬೨ ; 1158). **ಮತ್ತರ್** : ಒರ್ಮತ್ತರ್ಕೆಯ್ಯುಂ (ಮೈಆ. ೦೯೯೦, ೨೯-೩ ; 797) ; ತಪೋಧನರ ಸತ್ರಕ್ಕೆ ಮತ್ತರ್ಪ್ಪನ್ನೆರಡು ಅಯ್ಬುಗಾವುಣ್ಡನ ದೇಗುಲಕ್ಕೆ ಮತ್ತರ್ಯೈದು ಮನೆಯೊನ್ದು ಆದಿತ್ಯದೇವರ್ಗ್ಗೆ ಮತ್ತರ್ಯೈದು (ಎಇ. XX, ೬-೦೭ ; 1012). **ಮತ್ತರು** : ಸುಗನ್ಧಿವರ್ತಿ ಸೀಮೆಯಿನ್ದ ಪಡುವಲು ಪಿರಿಯ ಕೋಲಲು ಮತ್ತರು ೬ (ಕೌಇಇ. XX, ೦೩-೯ ; 875) : ಪ್ರಭುಗಳ ಮಾನ್ಯದಿಂ ಮೂಡಲು ಪದಿಮೂಱು ಗೇಣ ಬೆಂಕೊಳ್ವನ ಕೋಲ ಮತ್ತರು ನೂಱು (ಎಇ. XXVII, ೦೫-೯೬ ; 1114) : ಅಳತೆ ಗೋಲುಂಗಳ ಸಹಾಯದಿಂದ ಹೊಲವನ್ನು 'ಮತ್ತರು' ಮತ್ತು 'ಕಮ್ಮ' ('ಕಂಬ')ಗಳೆಂಬುದಾಗಿ ಅಳೆಯುತ್ತಿದ್ದರು (ಕಆಅ. ೩೯೩). **ಮತ್ತಲು** : ಮೂಱು ಮತ್ತಲು ಕಿಸುಕಾಡು (ಎಇ. XV, ೩೩೨-೨೪ ; 1028) ; ತಳ ವೃತ್ತಿ ಗದ್ದೆ ಗಳೆಯ ಮತ್ತಲು ಮೂಱು ಬೆದ್ದಲೆ ಗಳೆಯ ಮತ್ತವಾಱು (ಎಳ. VII, ಶಿಕಪೊ. ೯-೬೦ ; 1122). 'ಮಟ್ಟ₁' ಪರಾ.

[ ದೇ.ಶ ತಮಿ. ಮಱ್ಱುವ್ = ನದಿಯ ಪಕ್ಕದಲ್ಲಿ ಇಳಿಜಾರಾಗಿರುವ ಪ್ರದೇಶ ; ಮಲ. ಮತ್ತವ್ = ನದಿಯ ಬಳಿಯ ತಗ್ಗುನೆಲ. / ಮರಾ. ಮತ್ತರ್ ]

**ಮತ್ತಲು** 'ಮತ್ತಲ್' ನೋ.

**ಮತ್ತಲ್ಲಿ** (ನಾ.) [ನಾಟ್ಯ] ಹದಿನಾರು ಬಗೆಯ ಮಾರ್ಗಭೌಮಚಾರಿಗಳಲ್ಲಿ ಒಂದು; "ಕಣಕಾಲುಗಳನ್ನು ಸ್ವಸ್ತಿಕ ಮಾಡಿ ಪಾದಗಳನ್ನು ನೆಲದ ಮೇಲೆ ಸಮನಾಗಿರಿಸಿ ಅರ್ಧತ್ರ್ಯಸ್ರದಿಂದ ಚರಣಗಳನ್ನು ಹಿಂದಕ್ಕೂ ಮುಂದಕ್ಕೂ ಚಲಿಸುವುದು" (ಲಾಸ್ಯರಂ. ೩೦೭ ಗದ್ಯಾನುವಾದ) : ಸಮಪಾದ . . . ಮತ್ತಲ್ಲಿ, ಉತ್ಸ್ಯಂದಿತ . . . ಊರೂದ್ವೃತ್ತ ಈ ಹದಿನಾಱು ಮಾರ್ಗಭೌಮಚಾರಿಗಳು (ಲಾಸ್ಯರಂ. ೬-೦೭ ಪ). [ ಸಂ. ಮತ್ತಲ್ಲೀ ]

**ಮತ್ತವಾರಣ** (ನಾ). ೧. ಮದವೇರಿದ ಆನೆ : ದೈತ್ಯಕುಲಕದಳೀವನ ಮತ್ತವಾರಣನವಱ ಮತ್ತವಾರಣಸ್ಥಿತಿಯುಮಂ . . . ಮೆಚ್ಚಿ (ಜಗಾ. ೯-೬೩ವ) ; ಉತ್ತರೆಯ ಮನೆಯಿಂದ ಶಶಿಕುಲಮತ್ತವಾರಣ ಬಂದನಾಭೀಮಾಗ್ರಜನ ಹೊರೆಗೆ (ಕುವ್ಯಾಭಿ. ೯-೩೨). ೨. ಭವನದ ಸುತ್ತಲಿರುವ ಆವರಣ,– ಬೇಲಿ. ೩. ಕೈಸಾಲೆ : ಜಗಲಿ : ತಂತಮ್ಮ ಮನೆಗಳ ಮುಂದಣ ಪಚ್ಚೆಯ ಜಗಲಿಗಳೊಳಂ ಮಣಿಮಯಮತ್ತವಾರಣಂಗಳೊಳಂ . . . ನೆರೆದಿರ್ದ ಪೆಂಡವಾಸದೊಳ್ಳಿಂದಿರಂ ಕಂಡು (ಶಂಕಪಾ. ೯-೬೯ ವ) ; ಸೇವಕರಾಜಪುತ್ರರ್ ಒಂದೊಂದು ಮತ್ತವಾರಣದೊಳ್ ಕುಳ್ಳಿರ್ದು (ಶಂಕ್ರಕೃ. ೬-೬೨ ವ). ೪. ರಥದಲ್ಲಿ ಯೋಧನು ಬಿಲ್ಲು ಹಿಡಿದು ಯುದ್ಧಕ್ಕೆಂದು ನಿಲ್ಲುವ ಭಾಗ : ಆ ದಿವ್ಯರಥದ ಸಮೀಪಕ್ಕೆ ಬಂದು . . . ದೈತ್ಯಕುಲಕದಳೀವನಮತ್ತವಾರಣನವಱ ಮತ್ತವಾರಣಸ್ಥಿತಿಯುಮಂ . . . ನಿಜಾಗ್ರಜಂಗೆ ತೋಱಿ ನಾಡೆಯುಂ ಮೆಚ್ಚಿ (ಜಗಾ. ೯-೬೩ ವ). ೫. ಗೋಡೆಯಲ್ಲಿ ರಚಿಸಿದ ಶಂಕುವಿನಾಕಾರದ ರಚನೆ ; ಕಪೋತವಾಲಿಕೆ. ೬. ಒರಗುದಿಂಬು : "ಮತ್ತವಾರಣಮೆನಲ್ ಮಲಗುವದಲೆಗಿಂಬು" (ಮಂಗರಾ. ೬೦-೦೬). [ಸಂ.]

**ಮತ್ತವಾರಣೆ** (ನಾ).= ಮತ್ತವಾರಣ ೩ : ಇದರ ಎರಡು ಪಕ್ಕದಲ್ಲಿಯೂ ರಂಗಶೀರ್ಷದ ಬಾಗಿಲುಗಳಿಗೆ ಎದುರಾಗಿ ೮ ೮ ಹಸ್ತ ಅಳತೆಯುಳ್ಳ ಒಂದೊಂದು "ಮತ್ತವಾರಣಿ" ಅಥವಾ ಮಂಟಪವಿರುತ್ತದೆ (ಸಂಪಾಟಿ. ೨೩).

[ < ಮತ್ತವಾರಣ ]

**ಮತ್ತವೂರ್** (ನಾ). ಒಂದು ಊರಿನ ಹೆಸರು ; ₽ ಈಗಿನ ಚಿಕ್ಕಮಗಳೂರು ಜಿಲ್ಲೆಯ ಮತ್ತಾವಾರ : ಸಿದ್ಧಾಮವಲ್ಲಿ ಭತ್ತನೂಳ ನೆಟ ವಿನಯಾಯಿತನೂ ಪಂಪೆಟ್ಟಿಲೆಗಳ ಮತ್ತವೂರ ಬಸದಿಗೆ ಬಿಟ್ಟಂ (ಮೈಆ. ೦೯೩೨, ೦೬-೨೬; ೬೬(೭)). 'ಮಟ್ಟವುರ' ಪರಾ.

[ ? + ಊರ್ ]

**ಮತ್ತಸ್ಖಲಿತ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು : ಸರೆ ಮತ್ತಸ್ಖಲಿತಂ . . . ಸ್ವಸ್ತಿಕರೇಚಿತಮಿಂತುಂ ವಿಸ್ತರ ಮಾದಂಗಹಾರ ಮೂವತ್ತೆರಡುಂ (ಲಾಸ್ಯರಂ. ೩-೩). [ಸಂ.]

**ಮತ್ತಾಕ್ರೀಡ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು : ಮತ್ತಾಕ್ರೀಡಂ . . . ಸ್ವಸ್ತಿಕರೇಚಿತಮಿಂತುಂ ವಿಸ್ತರಮಾದಂಗಹಾರ ಮೂವತ್ತೆರಡುಂ (ಲಾಸ್ಯರಂ. ೩-೪). [ಸಂ.]

**ಮತ್ತಾಕ್ರೀಡೆ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಇಪ್ಪತ್ತುಮೂರನೆಯ ವಿಕೃತಿ ಛಂದಸ್ಸಿನ ಒಂದು ವೃತ್ತ : ಮುನ್ನಂ ಭೂಮಿ ದ್ವಂದ್ವಾಕಾಶಂ ಸುರವುರಗಣತತಿಯಿನಿರೆ ಬಟ್ಟಿಕ್ಕನ್ನುತ್ತುಂ ಚಕ್ರಧರಂ ಶರ್ವಂ ವಸುವಿರಚಿತ ಮಹಯುತಿ ಲಲಿತಪದೋತ್ಪನ್ನಂ ವೃತ್ತಂ ಭಿನ್ನಾಬ್ಜಾಕ್ಷೀ ಗುರುಜನಮತ ದಿನಿದತಿಶಯಮನುತಮಿಂತೆನ್ನಿಂದಾಯ್ತಾ ಮತ್ತಾ[ ಪಾಠಾಂ. ವೃತ್ತಂ ] ಕ್ರೀಡಾಹ್ವಯಮಿದನಱಿವುದು (ಛಂದೋಂಬು. ೨-೦೬೬). [ಸಂ. ಮತ್ತಾಕ್ರೀಡಾ]

**ಮತ್ತಾಣ** (ನಾ). ಒಂದು ಸ್ಥಳದ ಹೆಸರು : ಅನ್ನೆ ಬನ್ದು ಎಡಕಱಿಗಾಲ ಮೂಡಣ ಭಾಗದ ಮತ್ತಾಣಯಿಂ ಅನ್ನೆ ಬನ್ದು ಪನಿಯಾಲ ಕಾಲ ಒಡ[ಗ]ಣ ಬೇಲಿಯಿಂ (ಎಳ. III, ನಂಜನ. ೦೩೯-೦೪ ; 915 ?). [ ? ]

**ಮತ್ತಾಲಂಬ** (ನಾ). (ಸೌಧದ ಸುತ್ತಲೂ ಕಟ್ಟಿರುವ) ಕಟಕಟೆ : ಆವರಣ : ವಿಚಿತ್ರಪುತ್ರಿಕಾಕಲಿತಮತ್ತಾಲಂಬಸಂಭೃತಮುಂ . . . ಎನಿಸಿ . . . ಆ ಕರುಮಾಡಮೊಪ್ಪುಗುಂ (ಮಲ್ಲಪು. ೨-೬೯). [ಸಂ.]

**ಮತ್ತಾಳಿ** (ನಾ). ಮದವೇರಿದ ದುಂಬಿ ; ಸೊಕ್ಕಿದ ಅಳಿ : ನವನಿರ್ಯಾತ್ನಹಕಾರವಾರಿ ಮದಮುಂ ತತ್ಪಲ್ಲವಂ ಕರ್ಣಪಲ್ಲವಮುಂ ಪೂತೆಳಗೊಂಬು ಕೊಂಬನಳಿ ತದ್ಗಂಡಸ್ಥಳೋದ್ದೇಶಸಂಭವಮತ್ತಾಳಿಯುನೆಯ್ದೆ ಪೋಲೆ (ಶಾಂತಿಪು. ೯-೦೯೨), [ಸಂ. ಮತ್ತಾಲಿ]

**ಮತ್ತಿ₁** 'ಮಟ್ಟಿ₁' ನೋ.

**ಮತ್ತಿ₂** 'ಮಟ್ಟಿ₂' ನೋ.

**ಮತ್ತಿಕ** 'ಮದ್ದಿಕ' ನೋ.

**ಮತ್ತಿಕಾಯ್** 'ಮತ್ತಿಗಾಯ್' ನೋ.

**ಮತ್ತಿಗಾಯ್**, ಮತ್ತಿಕಾಯ್ (ನಾ). ೧. ಮತ್ತಿಯ ಮರದ ಕಾಯಿ. ೨. ಮತ್ತಿಯ ಕಾಯಿಯ ಆಕಾರದಲ್ಲಿ ಮಾಡಿದ ಒಂದು ಬಗೆಯ ಆಭರಣ: ಅರಳೆಲೆ ಮತ್ತಿಗಾಯ್ ಪುಲಿಯುಗುರ್ ನವರತ್ನದ ಕಂಕಣ . . . ಒಪ್ಪಿರೆ (ಶಂಬಾಪು. ೩-೧೪೦). **ಮತ್ತಿಕಾಯ್ :** ೨. ಕೆಂಜೆಡೆ ಮತ್ತಿಕಾಯ್ ಪುಲಿಯುಗುರು ಕಡಗಂ . . . ರಂಜಿಸೆ . . . ಕಣ್ಗೆಸೆದಂ ಭುವನೈಕಮೋಹನಂ (ಶರ್ಬಪು. ೦೨-೫೪). 'ಮಾಂಗಾಯ್' ಪರಾ.

[ಮತ್ತಿ$_1$ (<ಮಟ್ಟಿ$_1$) + ಕಾಯ್$_4$]

**ಮತ್ತಿನಾಲಿಗೆ** (ನಾ). ಮಚ್ಚೆಯಿರುವ ನಾಲಗೆ; ☞ ಸಾಮಾನ್ಯವಾಗಿ ನಾಲಗೆಯ ಮೇಲೆ ಮಚ್ಚೆಯಿರುವವರು ಆಡುವ ಮಾತುಗಳು ನಿಜವಾಗುತ್ತವೆ ಎಂಬ ನಂಬಿಕೆಯಿದ್ದು, ಅವರ ಬಾಯಿಯಿಂದ ಕೆಟ್ಟ ಮಾತುಗಳು ಬಾರದಂತೆ ಜನರು ಎಚ್ಚರಿಕೆ ವಹಿಸುತ್ತಾರೆ : ಅವಳದು ಮತ್ತಿನಾಲಿಗೆ. ಆಡಿದ್ದು ನಡೆದು ಬಿಡುತ್ತದೆ (ರೂಢಿ).

[ಮತ್ತಿ$_2$ ( < ಮಚ್ಚೆ$_2$ ) + ನಾಲಿಗೆ (< ನಾಲಗೆ) ]

**ಮತ್ತಿವಿಡಿ** (ಕ್ರಿ). (?) : ಮುಂತೆ ರಾಜಿಸುವ ಬತ್ತೀಸಾಯುಧಗಳ ಪಂಥದ ಮತ್ತಿವಿಡಿದರು ಸಂತತ ಓರಿಯೂರ ತಮ್ಮಣನಾಯಕನೊಂತಾದ ಬಲವೈದಿದುದು (ಕಂಜಬ. ೧೧-೦೫). [ಮತ್ತಿ$_?$ + ಪಿಡಿ$_1$]

**ಮತ್ತು$_1$** (ನಾ). ಅಮಲು; ಮದ; ಸೊಕ್ಕು : "ಪ್ರಮದಾ ಮತ್ತೇದು" (ಕಬಗಾಬ. ೬೫); ಬರವೇಟಬ್. . . ಭರದಿಂ ಸುಬ್ಬುರಾವಾಲಸಂ ಗದುಗನಂ ಮತ್ತುಳ್ಳ ಪೆರ್ಗಾಯ್ಗಳಂ (ಪಳತಂ. ೬೬): ಇತರರೂ ಮೊಸರನ್ನದ ಮತ್ತಿನಿಂದ ತೂಕಡಿಸಿಕೊಂಡು ಒರಗಿದರು (ಹಸುತೂ. ೬೬). [<ಸಂ. ಮತ್ತ]

**ಮತ್ತು$_2$** (ಅ). ಅಲ್ಲದೆ : ಜೊತೆಗೆ : ಷಷ್ಠೀವಿಭಕ್ತಿಯ ರೂಪಗಳಿಗೂ ಕೃದಂತನಾಮಗಳ ವಿಶೇಷಣರೂಪಗಳಿಗೂ ಊ–ಊ ಎಂಬುವು ಸೇರುವುದಿಲ್ಲ. ಇವನ್ನು ಕೂಡಿಸಬೇಕಾದರೆ 'ಮತ್ತು' ಎಂಬ ಅವ್ಯಯವನ್ನು ನಡುವೆ ಉಪಯೋಗಿಸಬೇಕು (ಹುಕ್ಯಪ. ೧೬೦); ದಾಸಪ್ಪ, ಕೆಂಪಿ ಮತ್ತು ಮಕ್ಕಳು ಗೋಣಿಚೀಲ ಬಿಚ್ಚಿ ಪಯಣದ ರೊಟ್ಟಿ ಎರಡೆರಡು ತಿಂದರು (ಕಹೂರು. ೨೬೫).

**ಮತ್ತಿನ, ಮತ್ತಿನ** = ಉಳಿದ ; ಬೇರೆಯ: ಎಲ್ಲರಿಂ ಪಿರಿಯಾಕೆ ನಿನ್ನಲ್ಲದೆ ಪೆಱರನೊಲ್ಲೆನೆಂದಿರ್ದೊಡೆ ಮತ್ತಿನಿರ್ವರುಮಂ ಮದುವೆಯಂ ಮಾಡಿ (ವಂಶಶಾ. ೦-೬೪ ವ) ; ವಿಸ್ತಾರಿತಪಾರುಕೀರ್ತ್ತಿ ನಿನಗಾದ್ವೋರೆ ಮತ್ತಿನ ಮಣ್ಡಳೇಶ್ವರರು (ಎಕ. XI-i, ೦೦೩-೦೫; 1074); ಮತ್ತಿನ ಮತ್ಯ್ರರೇನನಱಿದರ್ . . . ಗುಣಾಗ್ರಣಿ ರೇವದಾಸ ದೀಕ್ಷೋತ್ತರ ಸೋಮಯಾಜಿಗಳಿನೂರ್ಜ್ಜಿತಮಾಯ್ತು ಧರಾಮರಾನ್ವಯಂ (ಎಕ. XIII, ೩೩೦-೦೫; 920). ☞ ಇದು 'ಮತ್ತಿನ' ಎಂಬುದರ ಅಪಲಿಖಿತವಿರಬಹುದು. **ಮತ್ತೊಂದು** = ಬೇರೊಂದು; ಇನ್ನೊಂದು: ಇತ್ತ ಮತ್ತೊಂದು ದಿವಸಮಾ ಸಭಾಮಂಟಪದೊಳ್ ಧರ್ಮರಾಜಂ ತನ್ನ ನಾಲ್ವರ್ ತಮ್ಮಂದಿರೊಡನೆ ದೇವೇಂದ್ರಲೀಲೆಯಿಂದೋಲಗಂಗೊಟ್ಟಿರೆಯುರೆ (ಶಂಶಾ. ೬-೫ ವ) ; ಪಾಂಡವನಂದನರು ಮತ್ತೊಂದು ದೆಸೆಯಲ್ಲಿ ಮುಂದುವರಿದರು (ಕುಮಾವ್ಯದ್ರೋ. ೨-೬೦). **ಮತ್ತೊಮ್ಮೆ** = ಇನ್ನೊಮ್ಮೆ ; ಇನ್ನೊಂದು ಸಾರಿ: ತಾನೇ ಶಿವನೆಂದು ಕುಱುಹ ತೋಱುವ ಹಾಗೆ ಮರ್ತ್ಯದಲ್ಲಿ ಸುಳಿದನಲ್ಲದೆ ಕುಱುಹುಂಟೆ ಶರಣಂಗೆ ಮತ್ತೊಮ್ಮೆ ಅಱಿವು ಮಱಹುಂಟೆ (ಅವಪ. ಪು. ೦೬೩-೩೦೮); ಪರಮೋತ್ಸಾಹದಿಂದುಕ್ಕಿ ಮ್ಯೆಯುಕ್ಕಿ ಇಂದುವಶಾಳಿಯ ಕೃಪೆಗೆ ಮತ್ತೊಮ್ಮೆ ಮೈಯುಕ್ಕಿ (ಬಕರ. ೦-೩೬).

[ದೇ.॥ ತಮಿ. ಮಲ. ಮಱ್ಱು]

**ಮತ್ತೆ$_1$** (ನಾ). ಮದವೇರಿದವಳು; ಉನ್ಮತ್ತೆ : ಅತ್ತಿತ್ತ ನೋಡದೆ ಅವಮತಿಗೈಯದೆ ಮತ್ತೆಯಾಗದೆ ಮಱೆತಿರದೆ ಅತ್ತೆ ಮಾವಂದಿರಾಣತಿಯ ನಾಲಿಪುದು (ಪಶಬ. ೪-೧೧). [ಸಂ. ಮತ್ತಾ]

**ಮತ್ತೆ$_2$** (ಅ). ೧. ಬಳಿಕ ; ನಂತರ; ಆಮೇಲೆ : ಇನ್ನಂತೆ ಮತ್ತೆ ಬಱಿವಿಗೆ ಮುಂ ನಿರೆ ತಾಂ ಮೇಣ್ ಪೆಱಂ ಗಡಂ ಗಳಮೂದಂ ಕೆನ್ನನಿಲ್ಲೆಂದಿವನೆಂದುಂ ನಿಱಿಸಲ್ಕಲ್ಲದೆಡೆಗಳೊಳ್ ಕಲ್ಲದಿಂ (ಕಬಿಬ. ೨-೦೩); ಮತ್ತಾ ಪುರೋಹಿತಂ ನಾಲ್ಕು ವೇದಮುಮಾಱಂಗಮುಂ ಪದಿನೆಂಟುಧರ್ಮಶಾಸ್ತ್ರಂಗಳುಮಂ ಬಲ್ಲೊಂ (ವಡ್ಡಾರಾ. ೬೩-೦೪); ಅರಸನ ಕದಪು ಕೈಯಲಿ ಕೇಲಿಸಿತು ಹೇಳಿದನು ಸಂಜಯ ಮತ್ತೆ ಮೇಲಣ ರಣದ ವಾರ್ತೆಯನು (ಕುಮ್ಮಾಕ. ೦-೨). ೨. ಪುನಃ; ತಿರುಗಿ : ಜೈನಮಾರ್ಗಮಂ ಕಾಣದೆ ಮುನ್ನಕಟಕಟ ಕೆಟ್ಟೆ ನೀ ಮತ್ತೆ ಕೆಡದಿರು (ಸಮಕ. ೩-೫೮); ಭಾವಿಸುವೊಡೆ ತಲೆಯಲ್ಲಿ ಮತ್ತೆ ಪುಲ್ಮೊಳೆದಪುದೇ (ಧರ್ಮಾಮ್ಯ. ೦-೦೩೮); ಜಮದಗ್ನಿ ರಾಮನು ಮತ್ತೆ ಕೊಡಲಿಯ ಮಸೆದು ಹೊಕ್ಕನು ಚಿಸ್ತ್ರವಿಸು ನೆಱಿ ಕಡಿದನಾತನ ಸೈನ್ಯಕಾನನವ (ಸಂಕಶ. ೨೬-೫೦).

**ಮತ್ತೆಮತ್ತೆ, ಮತ್ತಮತ್ತೆ** (ದ್ವಿರುಕ್ತಿ) : ಪೊತ್ತು ಪೊತ್ತಿಗೆ ಮತ್ತೆ ಮತ್ತೆ ಬಲವತ್ತರದೊಳೊತ್ತಿಡಿದು ಸುತ್ತಲೆತ್ತೆತ್ತಲುಂ ಕೆತ್ತವೋಲ್ಮುತ್ತಿ ಮುಸುಕಿತ್ತು ಕಗ್ಗತ್ತಲೆ ಧರಿತ್ರಿಯಂ (ಕೈಬಶಾ. ೨೬-೬); ಮೊದಮೊದಲು ಭಾಸವಾದ ಗೆಲವೆಂಬುದು ಮುಮ್ಮತ್ತೆ ಸೋಲವಾಗಿ ಪರಿಣಮಿಸುತ್ತದೆ (ಪಾತಿಗಸು. ೦೦೫). [ಮತ್ತು$_2$ + — ಎ$_4$]

**ಮತ್ತೇಭ** (ನಾ). ಸೊಕ್ಕಿದ ಆನೆ ; ಮತ್ತ ಗಜ : ಮಿನಾಂಕಮತ್ತೇಭ ಚಾಮರವೋ ನಂದನಲಕ್ಷ್ಮಿಯೊಳ್ಗೆಯೊ ತಾಂ ಮಂದಾನಿಲಂ ಶಂಕಣಂ ಬರೆ (ಕಾದಂಪೂ. ೬೪೦); ಪರರಾಯರ್ಗಳ ಸೇನೆಯಂ ಗೆಲಿದು ಮತ್ತೇಭಂಗಳಂ ಸೀಳ್ದು ತನ್ನರಿಯೆಂದೆಂಬರನೊಕ್ಕಲಿಕ್ಕುವ ಭಟರ್ಗಂ ಗಂಜಿ ಕೇಟಬ್ನಾಯ್ಗಳಂ ನಿರುತಂ ಭೋಜ್ಯವಿಶೇಷಮಿತ್ತು ಪೊರೆವರ್ (ಸೋಮೇಶ. ೬೫). [ಸಂ.]

**ಮತ್ತೇಭವಿಕ್ರೀಡಿತ** (ನಾ). ೧. ಮದಿಸಿದ ಆನೆಯ ಆಟ; ಮತ್ತಗಜದ ಕ್ರೀಡೆ : ಮಸಕಂ ಕಾಯ್ದು ಜಮಂ ಜಮಗಮಿದಿರೊಳ್ ನೋಡಲ್ಕುಗುರ್ವಾಗೆ ಮೋದಿಸಿಮಾ ಮಂದುದು ಕೊಂದುದೇದು ಭಯದಿಂ ವಿಪ್ರರ್ ತರಳ್ದೋಡೆ. . . ಅತ್ರಮುಕ್ಕಿಂತು ಬೇವಸಮಂ ಮಾಡುವುದಾಯ್ತುದೊಂದು ವಿಭವಂ ಮತ್ತೇಭವಿಕ್ರೀಡಿತಂ (ಶಂಶಾ. ೬-೩೬). ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ, ಇಪ್ಪತ್ತನೆಯ ಕೃತಿಯೆಂಬ ಛಂದಸ್ಸಿನ ಒಂದು ವೃತ್ತ : ಅಬ್ಧಿವೇಷ್ಟಿತಭೂಚಕ್ರದೊಳೆಂತು ಮೇರುಗಿರಿಯಿಂ ಮತ್ತೊಂದು ಶೈಲೇಂದ್ರಮುನ್ನತಮಿಲ್ಲಂತುಟು ನಾಕಿಗಂಗೆನುತುಮಾ ಮತ್ತೇಭವಿಕ್ರೀಡಿತಂ ಪ್ರತಿಯಿಂದಿಂತು ತಗುಳ್ದು ಕೊಂಡುಕೊನೆಗಂ ವಿಶ್ವಂಭರಾಮಂಡಲಂ (ಛಂದೋಂಬು. ೦-೨೬) ; ಶ್ವಸನೇಂದುಜ್ವಲನಾಮರಾಪನಿ ಜಲಂ ದೈತ್ಯಾರಿ ಕಾಮಾಂತಕ ಪ್ರಸರೋಪ್ಯದ್ಗಣದಿಂ ತ್ರಯೋದಶಯುತಿಪ್ರಸ್ತಾರ ಮಾಗಿರ್ದೊಡೀ ವಸುಧಾಚಕ್ರದೊಳೆಯ್ದೆ ಸಂದುದು ಕರಂ ಮತ್ತೇಭವಿಕ್ರೀಡಿತಂ (ಛಂದೋಂಬು. ೨-೦೬೫); "ಖ್ಯಾತ ಕರ್ಣಾಟಕಂ" ಎಂದು ಪೊಗಳಿಸಿಕೊಳ್ಳುವ ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ. . . ಎಂಬ ಆರು ವೃತ್ತಗಳೇ ಕರ್ಣಾಟಕ ಕಾವ್ಯರಂಗದಲ್ಲೆಲ್ಲ ಅರ್ತಿಸಲು ನಿಂತ ಸಂಸ್ಕೃತಜನ್ಯ ವೃತ್ತಗಳು (ಕಮಾರ್ಛಂ. ೦೬೦). ೧, ೨ : ಗಿರಿದುರ್ಗಂಗಳನೇಱಿಯುನ್ನಪುರದೊಳ್ ರತ್ನಾಳಿಕೇರಾಂಬುವಂ ಮರವಾಯ್ದೊಡ್ಡಿರೆ ಕೊಂಡು ಬಂದುದ ಪರಾಂಭೋರಾಶಿಯೊಳ್ ಪುಟ್ಟುಗಪ್ಪುರದೊಳ್ಪುದಿಯನೊಟ್ಟಿಕೊಂಡು ದದಱಿಂ ಮತ್ತೇಭವಿಕ್ರೀಡಿತಂ ದೊರೆವೆತ್ತಪ್ಪನ ಗಂಧವಾರಣಮಿದೇನಸ್ವರ್ಥಮಾಗಿರ್ದುದೋ (ಗದಾಯು. ೦-೨೬). [ಸಂ.]

**ಮತ್ತೋಪಚಾರ** (ನಾ). (ಕಾಮಾತುರದಿಂದ) ಮದಿಸಿದ ವ್ಯಕ್ತಿಗೆ ಮದವಿಳಿಯಲು ಮಾಡುವ ಉಪಚಾರ : ಮದನೇಭಕ್ಕಾಮ್ರಮೊಂದು ಬಿಜಮೊರಡು ಕೊಳಂ ಮಾಜು ತೆಂಗಾಳಿ ನಾಲ್ಕುಭ್ಯುದಿತಂ ಪಿಂದೋಳ

ಮಯ್ಯುದ್ವೃತ್ತ ಪಿಕಕುಳವಾಚಾನ್ನತಾಶೋಕವೋಟಾನ್ವದಕೀರವ್ರಾತಮೆಂಟು ಚ್ಚಳಿತವಕುಳಪೊಂಭತ್ತಲರ್ ಪತ್ತು ತತ್ಕಾಮಂದಿ ಪನ್ನೊಂದುತ್ತಳಿಂ ಪನ್ನೆರಡಳಿ ಪದಿಮೂಜಿಪ್ಪೆ ಮತ್ರೋಪಚಾರಂ (ಶಾಂತಿಪು. ೯-೯೯). [ಸಂ].

**ಮತ್ಥವಟ್ಟಗೆ** (ನಾ). ತಲೆಗೆ ಸುತ್ತಿಕೊಳ್ಳುವ ವಸ್ತ್ರ ; ರುಮಾಲು, ಪೇಟ ಮೊದಲಾದ ವಸ್ತ್ರ : ಮತ್ಥವಟ್ಟಗೆ, ಕಥಾಯಂ (ಕತ್ಥಾಯಂ) (ಕವಿರಾ. ೦೩ ವೃತ್ತಿ). [<ಸಂ. ಮಸ್ತಪಟ್ಟಿಕಾ]

**ಮತ್ವ** (ನಾ). ಮ ಎಂಬ ಅಕ್ಷರ ; ಮಕಾರ : ವಿತತ ನಪುಂಸಕಲಿಂಗ ದ್ವಿತೀಯೆಯೊಳ್ ನತ್ವಮತ್ವವಿಧಿ ಮತ್ವಮೆ ಸಂಗತಿವಡೆಗುಂ ಸಂಸ್ಕೃತದೊಳ್ (ಕವಿರಾ. ೦೦೬). [ಸಂ.]

**ಮತ್ಸ** (ನಾ). ಮೀನು : 'ಮತ್ಸಕಲ್ಲು' ನೋಡಿ. [ಸಂ.]

**ಮತ್ಸಕಲ್ಲು** (ನಾ). ಮೀನಿನ ಆಕಾರವನ್ನು ಕಂಡರಿಸಿದ ಕಲ್ಲು, ತೊಲೆ, ಕಂಬ ಇತ್ಯಾದಿ : ಬ್ಯೇಲೂರ ಶ್ರೀಚೆಂನಕೇಶವನಾಥದೇವರ ಶುಕನಾಸಿಕೆಯ ಮತ್ಸಕಲ್ಲುಗಳ ಜೀರ್ಣಕ್ಕೆ ಕೊಟ್ಟು ಉಕ್ಕಂದದ ನಾಲ್ಕು ಕಂಬವನು ನಿಲ್ಸಿ ಜೀರ್ಣ್ನವನುದ್ಧರ್ರ್ಸಿದೆನು (ಎಕ. V. ಬೇಲೂರು. ೩೨-೦೩ ; 1381).

[ಮತ್ಸ + ಕಲ್ಲು ( < ಕಲ್$_3$) ]

**ಮತ್ಸರ** (ನಾ). ೧. ಹೊಟ್ಟೆಕಿಚ್ಚು ; ಕರುಬು: ಮತ್ಸರಮಹೋರಗಕ್ಕಮಾಗ್ರಹಮಹಾಗ್ರಹಕ್ಕಂ ಕೋಪಮಹಾನೇಕಪಕ್ಕಂ ಪಕ್ಕಾಗೆ ತನ್ನನೊಪ್ಪಿಸುವುದು ಮತಿವಂತಂಗೆ ಪುರುಷಾರ್ಥಮಲ್ತು (ಶಾಂತಿಪು. ೩-೭೨ ವ); ಮದಮತ್ಸರವುಳ್ಳವಂಗೆ ಹೃದಯಶುದ್ಧವೆಲ್ಲಿಯದೊ (ಜಕವ. ೦೦೯). ೨. ವೈರ ; ದ್ವೇಷ: ಮಸಿಮದಿತ್ತಂಡಕ್ಕೆ ಮತ್ಸರವಸಮಸಂಗರವೀಗ ನೀತಿಯುಸುಳಿವರ ಮನಗಾಣನೇ ಕೌರವಮಹೀಶ್ವರನು (ಕುಮಾ. ಉ. ೦೦-೨೩). ೩. ಕೋಪ ; ಕ್ರೋಧ : 'ಮತ್ಸರಿಸು' ನೋಡಿ. [ಸಂ.]

**ಮತ್ಸರಿ** (ನಾ). ಇತರರ ಏಳಿಗೆಯನ್ನು ಕಂಡು ಕರುಬುವವನು ; ಹೊಟ್ಟೆಕಿಚ್ಚಿನ ವ್ಯಕ್ತಿ : ಸೀತೆಯ ರೂಪವನ್ನು ನೋಡಿ ಮತ್ಸರಿಗಳೂ ಕುಲಾಂಗಾರರೂ . . . ಆದ ರಾಜರಿಗೆ ಅಭಿಲಾಷೆಯು ಉತ್ಪನ್ನವಾಗಿ, ಅವರು ಸಿಟ್ಟಿಗೆದ್ದರು (ಕುಶಲ. ೭೯) ; ಪರಿಸಲಪ್ಪದೆ ನರರು ಮತ್ಸರಿಯ ಸಂಕಟವ ? (ಜೈಮಿನಿ. ೨೦೧). [ಸಂ. ಮತ್ಸರಿನ್]

**ಮತ್ಸರಿಗ** (ನಾ). = ಮತ್ಸರಿ : " ಮತ್ಸರಿಗನು ದೋಷಗ್ರಾಹಿಯೆನಿಸಿಕ್ಕು" (ಬಂಗರಾ. ೯೮-೯). [ಮತ್ಸರ + — ಇಗ]

**ಮತ್ಸರಿಸು** (ಕ್ರಿ). ೧. ಕರುಬು ; ಅಸೂಯೆ ಪಡು; ಹೊಟ್ಟೆಕಿಚ್ಚು ಪಡು : ಸುರುಚಿರಸಾಲಭಂಜಿಕೆ ಬಿಮತ್ತರ್ರದೊಳ್ ಪೊಳೆಯುತ್ತಿರಲ್ಕೆ ಮತ್ಸರಿಸಿದಳ್ . . . ಲತಾಂಗಿಮಟಲ್ತು ಬಾಡಿದಳ್ (ಕಾದಂಬ. ೩೨) ; ತರುಣಿಯರ ಮೋಹನದಲುಜ್ ಮತ್ಸರಿಸದವರಾರರಸ (ಕೊರಡಾ. ೪-೨-೨೩). ೨. ರೇಗು : ರೋಷಗೊಳ್ಳು : ನಡುನಿರುಳಾಕಾಶಮಾರ್ಗದಿ ದೈತ್ಯರು ಮುಡುಮುಡು ಹಳಚಿ ಮತ್ಸರಿಸಿ ಕಡಿದಾಡುವ ಖಡ್ಗಧಾರೆಯಿಂದುದಿರ್ವ ಕಿಂಗಿಡಿಗಳ ನೋಡುತೆಯ್ದಿದಳು (ವೋಹಕ. ೨೯-೦೩). ೩. ಹುರುಡಿಸು ; ಸ್ಪರ್ಧಿಸು; ಪೈಪೋಟಿ ನಡೆಸು: ಇಳಿದರು ನೀರೊಳುಜ್ ಮತ್ಸರಿಸಿವರು ಪ್ರಣಯಪ್ರತಾಪವನೊಬ್ಬರೊಬ್ಬರಲಿ (ಕೊರಡಾ. ೨-೭-೩).

[ಮತ್ಸರ + — ಇಸು]

**ಮತ್ಸ್ಯ** (ನಾ). ೧. ಮೀನು : "ಮೀನಂ ಝಷಂ . . . ವೈಸಾರಿಣಂ ಮತ್ಸ್ಯಮೆನೆ ಮೀನ್ಗೆ ನಾಮಂ" (ಬಂಗರಾ. ೦೨೧-೬); ಹಿರಿಯ ಮೊಸಳೆಯ ಮತ್ಸ್ಯ ನುಂಗಿಯೂ ಬಾಯಿದೋಜಿದಲ್ಲಾ (ಅವತಂ. ೩೦೩-೦೩೨೦); ಜಲವ ತಪ್ಪಿದ ಮತ್ಸ್ಯ ಬದುಕುವುದೆ ಸೋಜಿಗ (ಜಕವ. ೩೬೭). ೨. ವಿಷ್ಣುವಿನ ದಶಾವತಾರಗಳಲ್ಲಿ ಮೊದಲನೆಯದು : " ಆ ಮತ್ಸ್ಯನಾ ಕೂರ್ಮನಾ ವರಾಹಂ. . . ಕೃಷ್ಣನೆಂದಾತನವತಾರ ಹತ್ತನಿಕ್ಕುಂ" (ಬಂಗರಾ. ೬-೦೯). ೩. ಒಂದು ದೇಶದ ಹೆಸರು : ಕಮ್ಮಯ್ಯರುಂ. . . ಮತ್ಸ್ಯದೇಶಮುಂ ಪುಗುತಂದರ್ (ಪಂಪಭಾ. ೮-೩೦ ವ); ಮಗಧ ಪಾಂಚಾಲ ಮತ್ಸ್ಯ ಕುರಂಗ ವಂಗ ಕಳಿಂಗ ಬಂಗಾಳ (ಬಸವ.೬-೦೩). ೪. ಆ ದೇಶದ ರಾಜ : ವಿರಾಟ : ಪಾಂಡುತನೂಜರ್ ತಲೆದೋಱಿರೆ ರಾಗಮಗುಂದಲೆಯುಂ ಪೊಂಪುಟಿಯುಂ ಪೂಣ್ದು ಮತ್ಸ್ಯಂಗಾಗಳ್ (ಪಂಪಭಾ. ೯-೪); ನಿರ್ಮದನು ಮತ್ಸ್ಯನ ಪುರಿಗೆ ಯತಿವೇಷದಲಿ ಬಂದನು (ಕುಮಾ.ವಿ. ೦-೦೭). ೫. ಪ್ರಸಿದ್ಧವಾದ ಹದಿನೆಂಟು ಮಹಾಪುರಾಣಗಳಲ್ಲಿ ಒಂದು : ಕ್ರಮವಾಗಿ ಹದಿನೆಂಟು ಪುರಾಣಗಳ ಹೆಸರುಗಳು : (೧) ಬ್ರಹ್ಮ. . . (೧೬) ಮತ್ಸ್ಯ, (೧೭) ಗರುಡ, (೧೮) ಬ್ರಹ್ಮಾಂಡ (ಭಾರತ. ೦೩೬). ೬. [ಜ್ಯೋತಿ]ಹನ್ನೆರಡು ರಾಶಿಗಳಲ್ಲಿ ಕೊನೆಯದು ; ಮೀನರಾಶಿ : ಜಾಲದ ಎಡಮಗ್ಗುಲಲ್ಲಿರುವ ರಾಶಿ ಮತ್ಸ್ಯ (ನಕ್ಷತ್ರ. ೩೦). ೭. [ನಾಟ್ಯ]ಸಂಯುತಹಸ್ತಗಳಲ್ಲಿ ಒಂದು ಬಗೆ : ಅಭಿನಯದರ್ಪಣದಲ್ಲಿ—೧. ಅಂಜಲಿ, ೨. ಕಪೋತ . . . ೧೭. ಮತ್ಸ್ಯ, ೧೮. ಕೂರ್ಮ (ಅಭಿನ. ೪೫). [ಸಂ.]

**ಮತ್ಸ್ಯಂಡಿ** (ನಾ). ಬೆಲ್ಲವಾಗುವುದಕ್ಕೆ ಸ್ವಲ್ಪ ಮುಂಚೆ ತೆಗೆಯುವ ಕಬ್ಬಿನ ಹಾಲಿನ ಪಾಕ; ಕಾಕಂಬಿ : "ಮತ್ಸ್ಯಂಡಿ ಖಂಡಸಕ್ಕರೆಯುಕ್ಕು" (ಬಂಗರಾ. ೭೪-೪); "ಕಲ್ಲುಸಕ್ಕರೆ ಪುಟಿಕೆ ಆಗುವ ಹಾಗೆ ಕಾಯಿಸಿದ ಕಬ್ಬಿನ ಹಾಲಿಗೆ ಮತ್ಸ್ಯಂಡಿಯೆಂತಲೂ . . . ಹೆಸರುಗಳು" (ಸಿದ್ಧಾಂತಿ. ೨೮೭). [ಸಂ. ಮತ್ಸ್ಯಂಡೀ]

**ಮತ್ಸ್ಯಕೃಷಿ** (ನಾ). ಮೀನುಗಾರಿಕೆ; ಮೀನುಸಾಕಣೆ : " (ಕೃತಕವಾಗಿ) ಮೀನು ಬೆಳೆ; ಮತ್ಸ್ಯಕೃಷಿ" (Pisciculture. ಇಂಗ್ಲಿ). [ಸಂ.]

**ಮತ್ಸ್ಯಕ್ಷೇತ್ರ** (ನಾ). (ನದಿ, ಕೆರೆ, ಸಮುದ್ರ ಇತ್ಯಾದಿಗಳ) ನೀರಿನಲ್ಲಿ ದೊರೆಯುವ ಮೀನು ಮೊದಲಾದ ಜಲಚರ ವಸ್ತುಗಳನ್ನು ಸಂಗ್ರಹಿಸುವ ಸ್ಥಳ : "ಮತ್ಸ್ಯಕ್ಷೇತ್ರ; ಜಲವಸ್ತುಸಂಗ್ರಹ (ಸ್ಥಳ, ಸಂಸ್ಥೆ, ಉದ್ಯೋಗ)" (Fishery. ಪತ್ರಿಗ. ೮೯). [ಸಂ.]

**ಮತ್ಸ್ಯಧ್ವಜ** (ನಾ). ೧. ಮೀನಿನ ಗುರುತಿರುವ ಪತಾಕೆ. ೨. ಮೀನಿನ ಗುರುತನ್ನು ಪತಾಕೆಯಲ್ಲಿ ಉಳ್ಳವನು; ಮನ್ಮಥ. [ಸಂ.]

**ಮತ್ಸ್ಯನ್ಯಾಯ** (ನಾ). ದೊಡ್ಡಮೀನು ಸಣ್ಣಮೀನನ್ನು ಹಿಡಿದು ನುಂಗುವುದು : ಬಲಿಷ್ಠನಾದವನು ಅಶಕ್ತನನ್ನು ಹಿಡಿದು ಪೀಡಿಸುವುದು ಎಂಬುದಂ ಲೋಕರೂಢಿ : ದಂಡಧರರಿಲ್ಲದಂದು . . . ಅಂತ ದುಷ್ಟಬಲವಷ್ಟನಗ್ರಸನದಿಂ ದುರ್ಬಲಜನದೊಳ್ ಮತ್ಸ್ಯನ್ಯಾಯಂ ಪ್ರವರ್ತಿಸುಗುಂ (ಅಂಬಿ. ೯-೭೪ ವ). [ಸಂ.]

**ಮತ್ಸ್ಯಪಿತ್ತ** (ನಾ). ಒಂದು ಬಗೆಯ ಔಷಧದ್ರವ್ಯ: ಕಟುಕರೋಹಿಣಿ: "ಮತ್ಸ್ಯಪಿತ್ತಮೆನೆ ಕಟುಕರೋಹಿಣಿ" (ಬಂಗರಾ. ೪೨-೩೮) ; "ಕಟುಃ . . . ಮತ್ಸ್ಯಪಿತ್ತಾ, ಕೃಷ್ಣಭೇದೀ, ಚಕ್ರಾಂಗೀ, ಶಕುಲಾದನೀ—ಕಟುಕರೋಹಿಣಿಯ ಹೆಸರುಗಳು . . . ಇದು ಭೇದಿಯಾಗುವ ಗ್ರಂಥಿಕದ್ರವ್ಯ" (ಸಿದ್ಧಾಂತಿ. ೦೩೦). [ಸಂ. ಮತ್ಸ್ಯಪಿತ್ತಾ]

**ಮತ್ಸ್ಯಪುರಾಣ** (ನಾ). ಹದಿನೆಂಟುಮಹಾಪುರಾಣಗಳಲ್ಲಿ ಒಂದು : ಬ್ರಹ್ಮಪುರಾಣ . . . ಮತ್ಸ್ಯಪುರಾಣ ಗಾರುಡಪುರಾಣ ಬ್ರಹ್ಮಾಂಡಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂಗಳ್ (ವಿವೇಕ. ೯) ; ಮತ್ಸ್ಯಪುರಾಣದಲ್ಲಿ, ಸಾತ್ವಿಕಪುರಾಣಗಳಲ್ಲಿ ವಿಷ್ಣುಮಹಾತ್ಮ್ಯವೂ . . . ನಿರೂಪಿತವಾಗಿದೆ (ಭಾರತ. ೦೩೭). [ಸಂ.]

**ಮತ್ಸ್ಯಬಂಧನ** (ನಾ). ಮೀನು ಹಿಡಿಯುವ ಒಂದು ಸಾಧನ ; ಗಾಳ : "ಬಡಿಶಂ, ಮತ್ಸ್ಯಬಂಧನಂ — ೨ ಗಾಳಕ್ಕೆ ಹೆಸರುಗಳು" (ಸಿದ್ಧಾಂತಿ. ೯೦). [ಸಂ.]

**ಮತ್ಸ್ಯಬಂಧಿ** (ನಾ). ಗಾಳಹಾಕುವವನು ; ಬೆಸ್ತ : "ಕೈವರ್ತಃ, ಧೀವರಃ, ದಾಶಃ, ಮತ್ಸ್ಯಬಂಧೀ, ಜಾಳಿಕ — ಈ ೫ ಜಾಲಗಾರಂ" (ಶಬ್ದಮ. ೯೭-೪೪೦). [ಸಂ. ಮತ್ಸ್ಯಬಂಧಿನ್]

**ಮತ್ಸ್ಯಬಂಧಿನಿ** (ನಾ). ಮೀನು ಹಿಡಿಯುವ ಸಾಧನ ; ಮೀನಿನ ಬಲೆ : "ಆನಾಯಃ, ಜಾಳಃ, ಕುವೇಣೀ, ಮತ್ಸ್ಯಬಂಧಿನೀ – ಈ ೪ ಬಲೆ" (ಹಲಾಯು. ೯೭-೪೪೦). [ಸಂ. ಮತ್ಸ್ಯಬಂಧಿನೀ]

**ಮತ್ಸ್ಯಯಂತ್ರ** (ನಾ). ಮಹಾಭಾರತದ ದ್ರೌಪದೀಸ್ವಯಂವರ ಸಂದರ್ಭದಲ್ಲಿ ರಾಜಕುಮಾರರ ಶಸ್ತ್ರಚಾತುರ್ಯವನ್ನು ಅಳೆಯಲು ಏರ್ಪಡಿಸಿದ್ದ ಮತ್ಸ್ಯವೆಂಬ ಲಕ್ಷ್ಯದ ಸಾಧನ : ಮಹಾಭಾರತದ ಕತೆಯಲ್ಲಿ ಮತ್ಸ್ಯಯಂತ್ರದ ಭೇದನವು ಒಂದು ಮುಖ್ಯ ಆಖ್ಯಾನ (ರೂಢಿ). [ಸಂ.]

**ಮತ್ಸ್ಯರೂಪ** (ನಾ). ಮೀನಿನ ಆಕಾರವನ್ನು ಹೊಂದಿದವನು : ಮತ್ಸ್ಯಾವತಾರಿ : ಮತ್ಸ್ಯರೂಪನಾಗಿ ಮನಸು ಕರಣಿಸಿಕೊಂಡು ಮಕ್ಕಳ ತಿದ್ದಿದ್ದು ಹೇಳಲಿ (ಪುರಂದ. ೨ಾ. ೨-೧೦೩-೧). [ಸಂ.]

**ಮತ್ಸ್ಯರೇಖೆ** (ನಾ). [ಸಾಮುದ್ರಿ] ಅಂಗೈಯಲ್ಲಿ ಇರುವ ಮೀನಿನ ಆಕಾರದ ಚಿಹ್ನೆ ; P ಇದು ಐಶ್ವರ್ಯಸೂಚಕಚಿಹ್ನೆಯೆಂದು ಹೇಳಲಾಗುತ್ತದೆ : ಪುರುಷನ ಹಸ್ತದಲ್ಲಿ ಮತ್ಸ್ಯರೇಖೆಯಿರಲು ಲಕ್ಷಾಧಿಪತಿಯಾಗುವನು (ಸಾಮುಂ. ೩೩-೦೩); ಸ್ತ್ರೀಯರ ಹಸ್ತದಲ್ಲಿ ಮತ್ಸ್ಯರೇಖೆಯಿರಲು ಸೌಭಾಗ್ಯವತಿಯಾಗುವಳು (ಸಾಮುಂ. ೦೨೯-೯). [ಸಂ. ಮತ್ಸ್ಯರೇಖಾ]

**ಮತ್ಸ್ಯಸುತ** (ನಾ). ವಿರಾಟರಾಜನ ಮಗ ; ಉತ್ತರಕುಮಾರ : ಸಾರಥಿ ಮಾಡು ಮತ್ಸ್ಯಸುತನುತ್ತರನಂ (ಕಂಕಭಾ. ೮-೯೭). [ಸಂ.]

**ಮತ್ಸ್ಯಾದ** (ಗು). ಮೀನನ್ನು ತಿನ್ನುವ. [ಸಂ.]

**ಮತ್ಸ್ಯಾವತಾರ** (ನಾ). ೧. ವಿಷ್ಣುವಿನ ದಶಾವತಾರಗಳಲ್ಲಿ ಒಂದನೆಯದು : ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದು ಮತ್ಸ್ಯಾವತಾರಕ್ಕನಂ ತುಹಿನಾದ್ರೀಂದ್ರುಮನೊತ್ತುಗೊಂಡು ನಡೆದಂ (ಶಂರಾವ.೭-೯೬); ಪರಿಹರಿಸಿ ಮತ್ಸ್ಯಾವತಾರವನುರಗಕಟಕಂ ಸುತ್ತಿದನಲಾ ಶಿರಸಿನಲಿ (ಬಸವ. ೩೪-೯೨) ; ಮತ್ಸ್ಯಾವತಾರದಲ್ಲಿ ವೇದೋದ್ಧಾರದ ಪ್ರಸಂಗವು ವರ್ಣಿತವಾಗಿದೆ (ಭಾರದ. ೦೯೩). ೨. = ಮತ್ಸ್ಯರೂಪ : ಮತ್ಸ್ಯಾವತಾರಗೆ ಮಂದರೋದ್ಧಾರಗೆ . . . ಆರತಿಯೆತ್ತಿರೆ (ಪುರಂದ. ೨ಾ. ೦-೦೩೨-೦). [ಸಂ.]

**ಮತ್ಸ್ಯೇಶ** (ನಾ). ಮತ್ಸ್ಯದೇಶದ ಅರಸ: ವಿರಾಟರಾಜ : ಮನದೊಳಗಳುಕಿದರು ಮತ್ಸ್ಯೇಶನರಸಿಯರು (ಕುಮಾ.ವಿ. ೦-೨೭). [ಸಂ.]

**ಮತ್ಸ್ಯೋದ್ಯಮ** (ನಾ). ಮೀನುಗಾರಿಕೆಯ ಉದ್ಯೋಗ: ಮೀನು ಸಾಕಣೆ : "ಮತ್ಸ್ಯೋದ್ಯಮ ; ಮೀನುಗಾರಿಕೆ" (Fishery. ಕಪ್ರ. ೩೯). [ಸಂ.]

**ಮಥನ** (ನಾ). ೧. ಕಡೆಯುವಿಕೆ; ಮಂಥನ. ೨. ಪೀಡೆ. ಹಿಂಸೆ. ೩. ಕೊಲೆ: ವಧೆ. ೪. ಕೊಂದುಹಾಕಿದವನು ; ಸಂಹಾರಕ : ರಾವಣಾಸುರಮಥನ . . . ಕಾವುದಾನತಜನವ ಗದುಗಿನ ವೀರನಾರಯಣ (ಕುಮಾ.ಭಾ. ೦-೦). ೫. ತಿಕ್ಕಾಟ; ಘರ್ಷಣೆ : ಮರಮರ ಮಥನದಿಂದ ಅಗ್ನಿ ಪುಟ್ಟಿ ಆ ಮರನೆಲ್ಲವ ಸುಡದಿಪ್ಪುದೆ (ಬಸವ. ೮೮೨). ೬. ಜಗಳ; ಕಾದಾಟ : ಮರ್ತ್ಯರೊಳ್ ಮಥನಂ ಪೆಗ್ಗಳವಲ್ಲವೈ (ಸೋಮೇಶ. ೮೮); ಅತಿಯುಕ್ತಿಯುಳ್ಳವರು ಮಥನಕ್ಕಳುಕುವರು (ಶಿವಮೋ. ೨-೪೦). ೭. ಆಲೋಚನೆ: ವಿಚಾರ : ಮಥಿಸಲು ಉದ್ಭವಿಸುವುದು ಮತಿಯುಲೀ ಪರತತ್ತ್ವಮದರಿಂ ಮಥನವನೆ ಪೊರಗೊಳಗೆ ಲಂಬಿಸಿ ಸಿದ್ಧನಾಗು (ಗಗತಾ. ೦೭-೩೪). ೮. ಚರ್ಚೆ; ವಾದ; ತರ್ಕ : ಮಥನದ ಲೀಲೆಯಲ್ಲಿ ಹುಟ್ಟುವುದೆ ಬ್ರಹ್ಮವು ಶ್ರುತಿ ಸ್ಮೃತಿಗಳಿಗೆ ಅಳವಡದು ನೋಡಾ (ಅವಶಂ. ೨೩೩-೦೮೩೦). [ಸಂ.]

ಮಥನಿಸು (ಕ್ರಿ). ೧. **ಕಡೆ: ಕಲಕು; ಕದಡು :** ಆ ಘಟೋತ್ಕಚನು ಮಥನಿಸುವ ಬಲಜಲಧಿಯ ಗನ್ನಗತಕದಿ ಕೊಲುವ ಪರಿಭವದ ವಿಷಮುರಿಗಳನ್ನು ಸೈರಿಸಲಾರದಿವರು ಛಮುಭೀತಿಯಿಂ ಕರ್ಣನಂ ಮೊರೆಹೊಕ್ಕರೈ (ತುರಂಗ. ೩೭-೪೩). ೨. ತಿಕ್ಕು: ಉಜ್ಜು : ಮರಮರ ಮಥನಿಸಿ ಕಿಚ್ಚು ಹುಟ್ಟಿ ಸುತ್ತಣ ತರುಮರಾದಿಗಳ ಸುಡಲಾಯಿತ್ತು (ಮಹಾದೇ. ೨. ೬೯-೦೭೦); ಅತಿಮಥನಿಸಿದರೆ ಶ್ರೀಗಂಧದೊಳು ಕಿಚ್ಚು ಪ್ರತಿಫಲಿಸುವುದಲ್ತೆ (ಶರತ. ೦೪-೮೭). ೩. ಘರ್ಷಣೆಯಾಗು; ತಾಕಲಾಟವುಂಟಾಗು : ಫಲುಗುಣಂಗೆ ದುಶ್ಶಾಸನಂಗಂ ಮಥನಿಸಿತು ಕಲಿಘಟೋತ್ಕಚನೊಡನೆ ಭಗದತ್ತ ತಾಗಿದನು (ತುರಂಗ. ೪೭-೨೪). ೪. ಕಾಳಗ ಮಾಡು; ಹೋರಾಡು : ದೇವತೆಗಳ ನಂಬುಗೆವಡೆದ ರಕ್ಕಸರ ಕಂಬುಚಕ್ರಾಂಕಿತ ನಿನ್ನೊಳು ಮಥನಿಸಿ ಮುಂಬರಿದರು ಮುಮ್ಮುರಿಗೆ (ಮೋಹತ. ೩೭-೩೪); ಮಥನಿಸುತ ಬರೆ ಫಲುಗುಣನ ಮರಳಿ ರಿಪುಸೇನೆ ಎತಿಮೊಳಾವರಿಸೆ (ತುರಂಗ. ೭೪-೪). ೫. ವಾದ ಮಾಡು; ಚರ್ಚಿಸು : ಮನದ ಮುಖದ ಗಂಟಿಕ್ಕಿಕೊಂಡು ಕಂಡಕಂಡವರೊಡನೆ ಮಥನಿಸುತ್ತಿಪ್ಪವರ ಲಿಂಗೈಕ್ಯಪದವು ಕಾಡುತ್ತಿದ್ದಿತು (ಕದಸೋ. ೬೮-೬). 'ಮಥಿಸು' ಪರಾ. [ಮಥನ + — ಇಸು₃]

**ಮಥಿ** (ನಾ). ಕಡೆಗೋಲು : ಮಂತು. [ಸಂ.]

**ಮಥಿಕ** (ನಾ). ಕಡೆಯುವವನು: ಮಥಿಸುವವನು : ಆಯಿನುತ ಮೊಳಗುವ ಸಿಂಹನಾದದಲಿ ತೊಡಗಿದರು ಮಥನವನು ಮಥಿಕರು ಬಿಡದೆ ಘೂರ್ಮಿಸಿ ದುಗ್ಧನಿಧಿ ಘೋಳಿಡಲು (ಶಿಭಾಗ. ೮-೪-೦). [ಸಂ.]

**ಮಥಿತ** (ಗು). ೧. ಕಡೆದ ; ಮಥಿಸಿದ : ದಾನವಾಚಳಮಥಿತಸೇನಾಂಭೋನಿಧಿಯ ಪರಿಭವದ ವಿಷಮುರಿಗಾ ನರೇಂದ್ರನಿಕಾಯ ಹೊಕ್ಕುದು ರವಿಸುತನ ಮರೆಯ (ಕುಮಾದ್ರೋ. ೦೩-೦೪). ೨. ನಾಶಗೊಳಿಸಿದ. (ನಾ). ೩. ನೀರು ಬೆರಸದೆ ಕಡೆದ ಮೊಸರು; ತಕ್ರ : "ಮಥಿತಮಾ ತಕ್ರಮೆಂದೊಡಳ್" (ಮಂಗರಾ. ೩೪-೩); ನೀರನೆರೆಯದೆ ಕೆನೆಯ ತೆಗೆದು ಕಡೆದುದು ಮಥಿತವೆಂಬ ಮಜ್ಜಿಗೆ (ಛೀಮುಸೂ. ೨೮). [ಸಂ.]

**ಮಥಿತಾರ್ಥ** (ನಾ). ವಾದವಿವಾದಗಳಿಂದ ಹೊಮ್ಮುವ ತತ್ತ್ವ : ಮುಖ್ಯಾರ್ಥ : ಇದಿಷ್ಟು ಈ ಉಪದೇಶದ ಮಥಿತಾರ್ಥ (ಕೃಸರು. ೩೯೪). [ಸಂ.]

**ಮಥಿಯಿಸು** 'ಮಥಿಸು' ನೋ.

**ಮಥಿಸು. ಮಥಿಯಿಸು** (ಕ್ರಿ). ೧. ಕಡೆ : ಮಂಥನ **ಮಾಡು** : ಮಂದರಂ ಮಥಿಸಲ್ ಕ್ಷೀರಸಮುದ್ರದೊಳ್ ಬಹುವಿಷಂ ತಾಂ ಪುಟ್ಟದೆ (ಸೋಮೇಶ. ೮೮) ; ತಳಮಳವಿದೇನಿಳೆಗೆ ? ದೇವ ದನುಜರ್ ಮಥಿಸೆ ಜಳನಿಧಿಯೊಳಾದಂತೆ ಸುಧೆಗೆ ಪೀಠಿಕೆಯೆಂ ? (ಮುಕುಳ. ೦೭). ೨. ತಿಕ್ಕು : ಉಜ್ಜು ; ಘರ್ಷಿಸು : ಮಾತಿಂಗೆ ಮಾತು ಮಥಿಸಲ್ಕೆ ವಿಧಿ ಬಂದು ಅತು ಕೊಂಡಿಪುದು (ಸರ್ವಜ್ಞ. ೦೩೪೮); ಮಥಿಸಿ ಮಥಿಸಲು ಪುಟ್ಟುವುದಲ್ಕೆ ಸುತನೆ ಕಾಷ್ಠದಲಗ್ನಿ (ಗಗತಾ. ೦೭-೩೪). ೩. ವಾದಿಸು ; ವಾಗ್ವಾದ ನಡೆಸು : ನೀನೊಡಮನೆಂದಜಾದೀಶ್ವರ ನಿಮ್ಮ ಚರ್ಚಿಸುತ್ತಿರದಿರದೆಲ್ಲರೊಳ್ ಮಥಿಸಿ ತರ್ಕಿಸಿ ನೋಯಿಸಿ ನೋಯುತಂ ವೃಥಾ ನೆರೆಮನೆಗಳು ಕಣ್ಗೆಡುವರೇಂ ಮರುಳ್ಗೊಂಡರೊ (ಕಂಶಾಶ. ೭೩). ೪. ವಿವೇಚಿಸು ; ಆಲೋಚನೆ ಮಾಡು : ಕೃತಿಯನವಧರಿಸುವುದು ಸುಕವಿಯ ಮತಿಗೆ ಮಂಗಳವೀವುದಧಿಕರು ಮಥಿಸುವುದು (ಕುಮಾಭ. ೧-೦೭) ; ಇಂತಿವನಾತ್ಮವಿವೇಕಶಕ್ತಿಯಿಂ ಮಥಿಸಿ ಜಡಾಂಗಮಂ ಬಿಸುಟು . . . ಸತ್ವಘಗತನಪ್ಪಂ (ಕಠಳ. ೦೯೮-೯೭) ; ಹರೆದುದೀ ವೃತ್ತಾಂತವಿದನಾದರಿಸಿದಳಲ್ಕೆ ಪೂರ್ವಮಾಯಾತರುಣಿ ಮಂಥರೆ ಮಥಿಸಿ ಮನದಲಿ ಪೂರ್ವಸೂಚಿತವ (ತೊರವ. ೨-೦-೨೦). ಮಥಿಯಿಸು: ೩. ಪರಸಮಯಸ್ಥರೆಲ್ಲಂ . . . ಮಂಚಣಾಪಂಡಿತರಂ ಬರಿಸಿ ತಮ್ಮತಮ್ಮ ಶಾಸ್ತ್ರೋಕ್ತಿಯುಕ್ತಿಯುಮರೆ ಬೇಜಿಪೇಜ್ ಮಸಗಿ ಮಥಿಯಿಸೆ (ಬೃಕಂ. ೩೭-೩೭ ಪ). ೫. ನೋಯಿಸು ; ಪೀಡಿಸು : ಅಪಹರಿಸಿದಳೀ ಕಾಮಿನಿ ಲಪನಶ್ರೀಯಿಂದಮೆನ್ನ ಚೆಲ್ವಂ ತಾನೆಂಬಪಕಾರ

ರೋಷದಿಂ ಶಶಿಯುಪಾರಕರಪಾತದಿಂದೆ ಮಥಿಯಿಸುತಿರ್ಪಂ (ಚಂದ್ರಶೇ. ೩-೧೩೪). 'ಮಥಿಸು' ಪರಾ.

[ ಮಥನ + — ಇಸು₃ ]

**ಮದ** (ನಾ). ೧. (ಮಾದಕದ್ರವ್ಯಸೇವನೆಯಿಂದುಂಟಾಗುವ) ಅಮಲು : ಮತ್ತು. ೨. ಹುಚ್ಚು : ಬುದ್ಧಿಭ್ರಮಣೆ. ೩. ತೀವ್ರವಾದ ಕಾಮದ ಬಯಕೆ; ವಿಷಯಾಭಿಲಾಷೆ. ೪. ಸಂತೋಷಾತಿಶಯ ; ಉತ್ಸಾಹ ; ಉಲ್ಲಾಸ : ರಮಣೀನಿವಹಕ್ಕೆ ಕಾಮಕಾತರತೆಯುಂ ಸಂಗಜಂಗೆ ಮದಮುಂ ಜನವೃಷ್ಟಿಗಪೂರ್ವತುಷ್ಟಿಯುಂ . . . ಇತ್ತುದು ಚಿತ್ರಿಸಿ ಸಸತ್ಕ್ಯಪಾರ ಸಾಲಕೂಜರ ಕಂತುಸಿಘಂ ಸ್ವಪಾತ್ಮಜಂ (ಪುಷ್ಪ. ೪-೭೦). ೫. ಸೊಕ್ಕು : ದರ್ಪ : "ದರ್ಪಂ ಮದಂ ಬಲಮುಹಂಕಾರಮುಮವಲೇಪ ಮೆನಿ ಗರ್ವಮುಮು" (ಮಂಗರಾ. ೧೩೦-೧೬) : ಮದಮಳಿದು ನಿಜಮುಳಿದ ಬಳಿಕ ಅಮು ಸತ್ಯ ಕಾಣಾ (ಬಸವ. ೯೬೬): ಸರ್ಪಘಾ ಮದ ಮಾಸ ಮತ್ಸರ ಕೇಡು ಮರ್ತ್ಯರಿಗೆ (ಅಮೃತ. ೨-೩೮). ೬. ನವಯೌವನ ; ಏರುಜವ್ವನ. ೭. ಮದ್ಯ ಮೊದಲಾದ ಮಾದಕಪೇಯ. ೮. ಜೇನುತುಪ್ಪ. ೯. ಬೆದೆಯೇರಿದ ಆನೆಯ ಗಂಡಸ್ಥಳದಿಂದ ಸುರಿಯುವ ದ್ರವ : ಮದೋದಕ : "ದಾನಮೆನೆ ಮದ ಮೆನಿಸಿಕ್ಕುಂ" (ಮಂಗರಾ. ೪೬-೦); ಕಾಯ್ಗಳಿಂದವಿಂಬಾಗಿರೆ ಸೋರ್ವ ಸೋನೆ ಮದವಾಗಿರೆ ಮಾವಿನ ಬಂದ ಕೋಡೆ ಕೋಡಾಗಿರೆ ಕೋಡು ಗೊಂಡು ಪರಿದತ್ತು ವಸಂತಗಜಂ ವಿಯೋಗಿಯಂ (ಶಂಕಥಾ. ೨-೧೩) ; ಮದಮುಂ ಗಂಡಸ್ಥಳೋದೀರ್ಣಕಂಪದೊಳಂ ಸೇವಿಸಿ ತುಂಬಿಗಳ್ ತಣಿದುವು (ಪುಷ್ಪ.. ೧೭-೦೧). ೧೦. ತುಂಬಿ: ಭ್ರಮರ. ೧೧. ಹತ್ತಿ; ಕಾರ್ಪಾಸ. ೧೨. ನೀರಿನ ತೆರೆ : ಅಲೆ : "ಅಳಿಗಳೊಳು ಪ್ರಾಯದೊಳು ಕಾರ್ಪಾಸ ದೊಳು ಮತ್ತಗಜದ ದಾನದೊಳ್ ಮದಮೆಂಬ ನಾಮಮಕ್ಕುಂ" (ಮಂಗರಾ. ೦೩೦-೪೯): "ಅಳಿ ಗಜದಾನ ವೀಚಿ ಪಿಷ್ಟಳಂ ನವಯೌವನಮುಂ ಮದಾಖ್ಯಮುಂ" (ಜಾಣಾರ. ೧೦೬). ೧೩. ವೀರ್ಯ : ರೇತಸ್ಸು. ೧೪. ಒಂದು ಬಗೆಯ ಸುಗಂಧ ದ್ರವ್ಯ : ಕಸ್ತೂರಿ : 'ಮದಲೇಖೆ' ನೋ. ೧೫. ಚೆಲುವಾದುದು. ೧೬. ಒಂದು ಬಗೆಯ ಓಷಧೀಸಸ್ಯ : ಕಾಂದಲ್, ಮದ. ಉಪ್ಪಾತಿ (ಪ್ರಶಿಗ. ೦೮-೦೬೩). ೧೭. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು: "ಮದ್ಯಪಾನ ದಿಂದ ಉಂಟಾಗುವ ಉಲ್ಲಾಸಸಹಿತವಾದ ವ್ಯಾಮೋಹವು, ಮದ" (ಛಾರಿ೩. ೩೯೬): ಮತಿಸಿವೇಕಾವಾಪಿತ್ಥಾಮುದಜಡತಾಗ್ಲಾನಿ . . . ವೃತಿಗಳಿವಿಂತಿವು ಸಂಚಾರಿಭಾವಂ (ಕಾವ್ಯಾವ. ೭೯೩). ೧೮. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : ದುರಿತಾಷ್ಟಕಕರ್ಮಂ ವಸು ಕರಿ ದಿಗ್ಗಜಗಂ ಮದವದನುಷ್ಟುಪ್ಪಂದಂ . . . ಅರಯೆಯೆಂಟಕ್ಕೆ ನಾಮಂ (ವ್ಯವಹಾ. ೯-೮).

ಮದಂಕಲಿಗಳ್? = ಒಂದು ಬಿರುದು : ಗುಣರತ್ನಾಕರಂ ಸತ್ಯ ಕಾನೀನಂ ಪರಬಲದಣಾಮಂ ದ್ರೋಹರ ಸೂಲಂ ಮದಂಕಲಿಗಳ್ಳಂ (ಎಕ. XI, ದಾವಣ. ೦೨೪-೦೩; ಸು. 1042?). ಮದದಾನೆ, ಮದ್ದಾನೆ = ಮದವೇರಿದ ಆನೆ; ಸೊಕ್ಕಿದ ಆನೆ : ಮದದಾನೆ ಬನಮಂ ಪಸುಗೂಸು ಮೊಲೆಯಂ ಪೆಣ್ಗೂಸು ತವರ್ಮನೆಯಂ . . . ನೆನೆವಂತು (ಧರ್ಮಾಮೃ. ೩-೦೯೦): ಮದ್ದಾನೆಗೆ ಸಿಂಹ ಮಲೆತಂತೆ ಸುಭಟಾನಿರುದ್ಧ ನಿಂದಿರ್ದ ಭೀತಿಸದೆ (ಚೋರಪತ. ೩೩-೦೮). ಮದದಾನೇಧವಳ = ಒಂದು ಬಿರುದು : ಆರೋಪಕ ತ್ರಿನೇತ್ರಂ ಮದದಾನೇಧವಳಂ ಬ್ಯಾಳಗವಮಲ್ಲಂ (ಎಕ. V, ೦೬-೨೦; 1019).

[ಸಂ.]

**ಮದಕರಿ** (ನಾ). ಮದವೇರಿದ ಆನೆ; ಸೊಕ್ಕಿದ ಆನೆ : ಮದೇರಿಯ ಪರಿವ ಭರದಿಂದಿರ್ದೊಡೆ ನೆಲನೊಡ್ಡಿ ನಿಂದ ಚತುರಂಗಮುಮೊರ್ಮೊದಲೆ ನಡುಗಿದುವು (ಶಂಕಥಾ. ೧೧-೭೦); ಸಿಂಗಕ್ಕೊಳಗಿದ ಮದಕರಿಯಂತೆ ಅನು ಜಂಗಮಕ್ಕೊಳಗಾದೆನಯ್ಯಾ (ಬಸವ. ೩೮೦) ; ಸರ್ಪಾಸ್ತ್ರಘಾತಸ್ಫುರಣಮದಕರಿ ಮಕ್ಷಿಕಾಸಂಘಾತದಂದದಲಿ ಕೆರಳಿ ಕವಿದನು (ಕುಮಾ.ಕ. ೦೩-೨೦).

ಮದಕರಿದನುಜಹರ = ಆನೆಯ ರೂಪದ ರಾಕ್ಷಸನನ್ನು ಕೊಂದ ವನು; ಶಿವ : ಕರಿಯ ಗೋಪ್ಯತಿ ಮದಕರಿದನುಜಹರಗೆ ಭಿಕ್ಷವ ನೀಡಿ ಮುಂಗಾರ ಸಿರಿಯಂತೆ ಕಣ್ಗೆಸೆದಳು (ರಾಜಶೇ. ೩-೨೯). [ಸಂ. ಮದಕರಿನ್]

**ಮದಕಲ** (ಗು). ೧. (ಮತ್ತೇರಿದಂತೆ) ಮೃದುವಾಗಿಯೂ ಮಧುರ ವಾಗಿಯೂ ಧ್ವನಿ ಮಾಡುವ : ಮದಕಲ[ಪಾಠಾಂ. ಳ]ಹಂಸೆಯ ಓಂಡಿದೆ ಪೊಮಟ್ಟು ಚಮರೀಜವಾಗೆ (ಅರ್ಜು. ೦೦-೬೩). (ನಾ). ೨. ಮದವೇರಿದ ಆನೆ. [ಸಂ.]

**ಮದಕಾರಿ** (ನಾ). (ಕರಾ) ಹಿರೇಬೇನೆ : ಕುಷ್ಠರೋಗ.

[← ತುಳು. ಮದಕರಿ]

**ಮದಗ** 'ಮದಗ್ಗು' ನೋ.

**ಮದಗಂಧ** (ನಾ). ೧. ಆನೆಯ ಮದೋದಕದ ವಾಸನೆ: ಮದಗಂಧದಿಂದೆ ಸಪ್ತಚ್ಛದಗಂಧಮನೀ ವನೇಭವಾಘ್ರಾಣಿಸಿ ಪೆರ್ಚಿದ ಮಸಕದಿಂದೆ ಪಾಯಲ್ಕೊಡರ್ಪುಗೆಯ್ದುವುದು ನೋಡ ವನವೇದಿಕೆಯಂ (ಆದಿಪು. ೦೦-೬೨) : ಮದಗಂಧಸಾರಸಪ್ತಚ್ಛದಂಗಳಿಂ ಪುದಿದು ಬೆಳೆದ ತಾಟಂಥವ ಪೆರ್ಮೆವಟ ಕರಿಶಂಕೆಯಿಂ ಪಾಯ್ದುದಜಿಸೊಳ್ ಹರಿವಿತತಿ ಬಂಜೆವಡಿವುದು ಮುಳಿಸಂ (ಚಂದ್ರಪ್ರ. ೩-೩೦); ಮದಗಂಧಕ್ಕನ್ಯದ್ವಿರದತತಿ ಬೆನ್ನಿತ್ತು ಮತ್ತೆಲ್ಲಿಯುಂ ನಿಲ್ಲದೆ ಶಂಕೋದ್ರೇಕದಿಂ ದೆಸೆಯ ಕಡೆವರಂ ಪೋದವು (ಪಾರ್ಶ್ವನ. ೪-೦೩೦). ೨. ಹಿತಕರವಾದ ಸುವಾಸನೆ : ಮದಗಂಧಮನೋಹರಿ ಸಂಮದಕಾರಿಣಿ . . . ಸುಖದಾಯಿನಿಯೆನಿಸಿದ ಮದಿರಾವಧುವಿರ್ದಳಾ ಕದಂಬದ್ರುಮ ದೊಳ್ (ಜಗಣ. ೮-೨೩). [ಸಂ.]

**ಮದಗಂಧಿ** (ನಾ). ಮದೋದಕದ ವಾಸನೆಯುಳ್ಳ ಒಂದು ಬಗೆಯ ಸಸ್ಯ : ಚಂಪಕಸಪ್ತಪರ್ಣಮದಗಂಧಿಯಂ . . . ತರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೂಜಿಪಟ್ಟನೇಜಿ ಜಯಮಂ ಜಯಪರ್ವತಯಾನ ನಾಗಮುಂ (ಶಾಂತಿಪು. ೧೨-೦೪೪ ಅ). [ಸಂ. ಮದಗಂಧಿನ್]

**ಮದಗಜ** (ನಾ). = ಮದಕರಿ : ಮದಗಜಜೃಂಭಿತಧ್ವನಿ ತುರಂಗಮಹೇಷಿತ ಘೋಷದೊಳ್ ಪೊದಟಿಸ್ಟುದವೆ (ಶಂಕಥಾ. ೯-೨೬) : ಮದಗಜದ ರದನಮುಂ . . . ಮುಜೀವಂದದೆ ಮುಜೀಯೆ ಪೊಯ್ದು ನಿಜಖಡ್ಗದೆ ತತ್ಖಡ್ಗಮಂ (ಜಗಾ. ೬-೯೯): ಕುದುರೆ ಹಾಯ್ದುವು ಕಂಡ ಮುಖದಲಿ ಮದಗಜಾವಳಿ ಬೋಡಿದವು (ಕುಮಾರ. ೨೦-೨). [ಸಂ.]

**ಮದಗಜಗಮನೆ** (ನಾ). ಮದದಾನೆಯಂತೆ ನಿಧಾನವಾಗಿ ನಡೆಯುವವಳು: ಗೋವರ್ಧನಕಂದರದೊಳ್ ಶಿಖಿನರ್ತನಂಗಳಂ ನೋಡು ಮದನಮದಗಜ ಗಮನೇ [ಪಾಠಾಂ. ಲಲಿತಕೇಶಾನ್ವಿತಮಂ] (ಶಾಂತೀಶ. ೩-೦೩೦) : ಮದಗಜ ಗಮನೆಯಂ . . . ಹಾವಭಾವಲಾವಣ್ಯದ ನೆಲೆಯಂ . . . ಕಂಡು (ಧರ್ಮಾಮೃ. ೧೧-೪೦). [ಸಂ. ಮದಗಜಗಮನಾ]

**ಮದಗಜಗಾಮಿನಿ** (ನಾ). = ಮದಗಜಗಮನೆ : ಮದಗಜಗಾಮಿನಿ . . . ಜಿನಚೈತ್ಯಾಲಯಮಂ ಮುದದಿಂದಂ ಪಲವನರ್ತಿಯಿಂ ಮಾಡಿಸು ನೀಂ (ಧರ್ಮಾಮೃ. ೩-೨೬೪) ; ಮದಗಜಗಾಮಿನಿ ಕಾಮಿನಿ ಬಂದಳು ಲೀಲೆಯಿಂದಲಸ ಭಾವದೊಳು (ಇಂದ್ರಾಕ. ೯೮-೮೦). [ಸಂ. ಮದಗಜಗಾಮಿನೀ]

**ಮದಗಡ** (ನಾ). ೧. ಸರ್ಕಾರವು ವ್ಯವಸಾಯದ ಸೌಕರ್ಯಗಳಿಗಾಗಿ ರೈತರಿಗೆ ಬಡ್ಡಿಯಿಲ್ಲದೆ ಕೊಡುವ ಸಾಲ : "ಮದಗಡ-ತಗಾಯಿ" (ಜಾಪದಕೋ. ೨೬). ೨. ತೆರ ; ಕನ್ಯಾಶುಲ್ಕ : ಆಗ ಗಂಡಿನವರು ಹೆಣ್ಣಿಗಾಗಿ "ಮದಗಡ"ವನ್ನು ಪಂಚಾಯ್ತರ ಎದುರಿಗೇ ಕೊಡುವರು (ಜಾನ್ಪದ. ೮). [? + ಕಡ₁]

**ಮದಗು₁** (ಕ್ರಿ). ಕೆರೆಯಲ್ಲಿ ನೀರುತುಂಬಿ ಕೋಡಿ ಹರಿದುಹೋಗು : ಮಳೆಯಿಂದಾಗಿ ನಮ್ಮೂರ ಕೆರೆ ಮದಗುತ್ತಿದೆ (ಶಬ್ದ).

**ಮದಗು₂**, ಮದಗ (ನಾ). ೧. ಕೋಡಿ ; ತೂಬು : (ಶ). ೨. ಕೆರೆ ; ಕೊಳ ; ತಟಾಕ : ಚನ್ದ್ರಸೂರ್ಯಕಾಲಮ್ಬರಂ ಸಲ್ವನ್ತೆ ಕೊಟ್ಟರ್ ಮದಗಿನ ಮಣ್ಣ ಮೇಗೆ ಒನ್ದು ಕೊಲಿಮೆಗೆ ಒಕ್ಕಣ್ಣಾಗ ಮಣ್ಣು (ಕ್ರಾಇ. IX–i, ೦೬-೦೭ ; 883). **ಮದಗ** : ೧. ಮದಗ ದೊಳಗೆ ನೀರು ಗಳಗಳನೀಳವಂತೆ ಮದಗಜಹಯರಥಸೇನೆ ಕದುಬಿ ಮೊತ್ತದಿ ಪೊಜಮಡುತಿದ್ದುದಾ ಗುಹೆಯುದರದಿಂದುತ್ತರಧರೆಗೆ (ಶಶಕ. ೩೯-೨೯). ೨. ಗಣ್ಣೆಯ ಮಾದೆಯನಾಯಕ್ಕನು ಮದಗವನು ಮಾಡಿಸಿ ಕೊಡಿಯನು ಕಟ್ಟಿಸಿ ಯಿ ಕೆಜಿಯ ಕಲುಕಟ್ಟಿಯನು ಕಟ್ಟಿಸಿದರು (ಎಕ. XVI. ಗುಬ್ಬಿ. ೦೯-೭; 1366) ; ಆ ಸದಾಶಿವರಾಯನಾಯಕಂ . . . ಮಾದಣವೊಡೆಯರ ಮುಖದಿಂ ಮದಗದ ಕೆಲಸಮಂ ಸಂಪೂರ್ಣಮನಾಗಿಸಿ . . . ಅಧಿಕಸನ್ಮಾನಂಬೆತ್ತಂ (ಕೆಳನೃ. ೨-೫೮) ; ನನ್ನ ಮಾನಸದ ಮದಗವೆ ಮುಳುಗಿ ನೋಡಿದೆ, ದಿಟ್ಟಿಸಿ ನೋಡಿದೆ (ಉದ್ಯಾನಿ. ೦೦೦-೭).

[ದೇ.॥ ತಮಿ. ಮತಕು ; ತುಳು. ಮದಗ ; ತೆಲು. ಮದುಗು, ಮದುವು, ಮದುವು]

**ಮದಗೊಬ್ಬು** (ನಾ). ಅಹಂಕಾರ ; ಸೊಕ್ಕು ; ಗರ್ವ : ಮಕರೇಶ ನೀನಿಂದು ಮುಳಿದು ಮದಗೊಬ್ಬಿನಲಿ ವೈರವ ಬೆಳಸಿ ಕೆಣಕಿದೊಡಾ ನೃಪಾಲಕತಿಲಕ ತೆಕ್ಕುವನೇ ವಿವೇಕಕೆ ಮನವ ಮಾಡು (ತೊರರಾ. ೩-೭-೯೦).
P ಇದು ಒಂದೇ ಅರ್ಥದ ಎರಡು ರೂಪಗಳು ಸೇರಿ ಆದ ಶಬ್ದ.
[ ಮದ + ಕೊಬ್ಬು₂ (< ಕೊರ್ವು₂) ]

**ಮದಚಳೆ** (ನಾ). ಮದದಿಂದ ಚಂಚಲೆಯಾಗಿರುವವಳು : ಮದಚಳೆ ಯಾಗಿ ನೀರ್ವೊಗೆವ ಪೇಚರಕಾಂತೆಯ ಹಸ್ತದಿಂ ಬಚಲ್ಚಿದ ನವರೌಪ್ಯ ಕುಂಭಮ ತರಂಗಿತನಾಕತರಂಗಿಣೀಪ್ರವಾಹದೊಳಿದೆ ಕಣಾಲಾದಪುದೆನಲ್ . . . ಪೊಳೆಯುತಿರ್ದುದು ಚಂಡಮರೀಚಿಮಂಡಲಂ (ಶಗಿಂ. ೯-೭೨).
[ಸಂ. ಮದಚಲಾ]

**ಮದಜಲ**, ಮದಜಳ (ನಾ). ಸೊಕ್ಕೇರಿದ ಆನೆಯ ಗಂಡಸ್ಥಳದಿಂದ ಸುರಿಯುವ ರಸ ; ದಾನರಸ ; ಮದೋದಕ : ಮದಜಲಧಾರೆ ಯಿಲ್ಲದ ದಿಶಾಗಜದಂತೆ . . . ಸೀತೆಯಿಲ್ಲದ ರಘುವಂಶರಾಮನಿರೆ ನೋಡಿದ ನಾಕುಲನಾಗಿ ಲಕ್ಷ್ಮಣಂ (ಕಂರಾಪಾ. ೯-೦೩೨) ; ಶೈಲದೆಡಬಲದೊಜತೆ ಬೆನೆ ಸುಕಪೋಲದಲಿ ದಾರಿಡುವ ಮದಜಲಧಾರೆಗಳ . . . ಶುಂಡಾಲವನು ನೋಡಿದರು (ಕುವ್ಯಾಭಾ. ೦೦-೦೯). **ಮದಜಳ** : ಮದಜಳನಿರ್ಝರ ವಾರಣದಿಂ ಸೊದೆವಳೆವರಮನೆಮಂ ಬಳಸಿದಾನೆಸಾಲುಗಳೆಸೆಗುಂ (ಮಲ್ಲಪು. ೨-೬೩) ; ಮದಜಳನೀಳಕಂಠಕಳಿತಂ ವಿಷಮಾನಳಭೀಮಲೋಚನಂ . . . ಕಣ್ಗೊಗ್ಗವಿದ ಶೋಭೆಯಂ ಕುಡುತಮಿರ್ಪುದು (ಪಾರ್ಶ್ವಪು. ೯-೦೩೨). [ಸಂ.]

**ಮದಜಳ** 'ಮದಜಲ' ನೋ.

**ಮದಡ**, ಮಜಡ (ನಾ). ೧. ದಡ್ಡ ; ಬುದ್ಧಿಹೀನ ; ಮಂದಮತಿ : ಮದಡನಿವನೆಂದೆನ್ನ ಗದಜಿದಿ (ಜೈಭಾರ. ೭-೩) ; ಮದಡರೆನಿಪ್ಪೆನ್ನ ಭಕ್ತ ಗರ್ಜಾಳ್ಗೆಯಂ ಮಾಳ್ಪೆನಮ್ಮಾ (ಸಿದ್ಧರಾಪು. ೭-೬೦) ; ಮದಡನೇತಕೆ ಭಾಷೆ ಕಂದುಕುಂದಿಲ್ಲದ ಬಹುಪ್ರಗಲ್ಭ್ಯಾನ್ವಿತ ಸುಕಂದನಂ . . . ಪಾಲಿಸು (ಶೃಕುಪು. ೩-೦೦೯) ; ಉದಯಕಾಲದಿ ಈ ಪದವ ಪಠಿಸಲು ಮದಡನಾದರೂ ಜ್ಞಾನ ಉದಯವಾಹುದೋ (ಜನಪ. ೦೬೩). **ಮಜಡ**: ೧.ಗ್ರಂಥದರ್ಪಣಗಳಂ ಶಾಸ್ತ್ರಮನ್ನರಿಯೆ ಮಜಡ ನಾನೂ [ಪಾಠಾಂ. ಶಾಸ್ತ್ರಗಳನರಿಯದಾ ಜಡನೂ] ತಿಳಿಯಲಿದರ ಗುಣಾಗುಣಾಂಗಳಂ (ತುರಂಗ. ೦-೦೨). ೨. ಜಡಸ್ವಭಾವದವನು ; ಅಲಸಿ : ಗಜಬಜವಿದೇನೆನುತ ನಿದ್ರೆಯ ಮಜಡರೊಳಗೊಳಗಜಿದರೀತನ ಭುಜಬಲಕೆ ಮಲೆತವರ ಕಾಣೆನು ಸೃಂಜಯಾದಿಗಳ (ಕುವ್ಯಾಗ. ೯-೩೩) ; ಆ ಶಂಘುವಜೀವನು ನಿಜವನೀದ್ರಾಸಲು ಕುಬೇರರು ಮಜಡರೀ ಪವಮಾನವರುಣರದಾವನಜೀತದಲಿ ವಿಜಿತತಿಮಿರ ವೆನಿಪ್ಪ ಸೋಮಾಂಬುಜಸಖರು ತಾವಜೀಯರೇತಕೆ (ಶಶಕ. ೬-೩-೨೪).
[ಮದಡು + — ಅ₇. / ತಮಿ. ಮಚಟನ್ = ದುಷ್ಟ ; ತುಳು. ಮದಡೆ ; ತೆಲು. ಮದಟ]

**ಮದಡತನ** (ನಾ). ದಡ್ಡತನ ; ಅವಿವೇಕ : ಮದಡತನವಿದು ಬೇಡ ನೀವಿಪ್ಪುದು ವಿಚಾರಿಸೆ ನೀತಿಯಲ್ಲ (ತಿಮ್ಮಕಾಂ. ೪-೬೮) ; ಘನತರೌಷಧಿಯ ಕುಲಕೆ ಶಿವನೇ ಪತಿಯೆನಿಪ್ಪುವಂ ತಿಳಿಯದೇ ಮದಡತನದಿಂದೆ ಸವಿದ ಲಲಿತಾನ್ನಸಿಕ್ಥಕಬಳಮದತ್ತಿವಣ್ಣಲ್ತೆ (ಹಾಸೋಕು. ೯-೦೦೭).
[ಮದಡ + —ತನ./ತೆಲು. ಮದಟತನಮು]

**ಮದಡು**, ಮಜಡು (ನಾ). ೧. ದಡ್ಡತನ ; ಅವಿವೇಕ : (ಶ). ೨. ಅವಿವೇಕದಿಂದ ಕೂಡಿದುದು ; ತಿಳಿಗೇಡಿಯಾದುದು : ಗಂಡಸರ ಬುದ್ಧಿ ಬಲು ಮದಡು (ಸ್ತ್ರೀಲಬಿ. ೨೦೪) ; ಅವನ ಬುದ್ಧಿ ಮದಡು (ಭಪರು. ೩೦೦). (ಗು). ೩. ಮೂರ್ಖತನದ ; ತಿಳಿಗೇಡಿ ಯಾದ : ಮದಡು ಮಾನವ ನಿನ್ನ ಉದರಚಿಂತೆಯ ಬಿಡು (ಜಾನಪ್ರ.೦೩೩-೯). **ಮಜಡು** : ೪. ಕೆಲಸಕ್ಕೆ ಬಾರದುದು ; ಅಪ್ರಯೋಜಕವಾದುದು : ಮಜಡು ಮಣಕನೋದಿಯೋದಿ ಸುಜನರೆಲ್ಲರು ರೀತಿಗೆಟ್ಟರು (ಶಿವಗೀ. ೦೦೬-೫೭೬). ೫. ಜಡಸ್ವಭಾವದ ವ್ಯಕ್ತಿ ; ಅಲಸಿ : ಧಾತುಗಾಣಸಿ ಕೊಳದ ಮಜಡುಗಳ್ ಗೊಜಡುಗಳ್ . . . ಸತಿಯರ್ (ಶಶಿಂ. ೨-೫೯).
[ದೇ.॥ ತುಳು. ಮದಡ್, ಮದಡ್ಡ]

**ಮದತು** 'ಮದತ್ತು' ನೋ.

**ಮದತೇಗ** (ನಾ). ಒಂದು ಬಗೆಯ ತೇಗದ ಮರ: ಕೋಲ್ತೇಗ, ಮದತೇಗ, ಕಾಡುಕಣಿಗಲು (ಪ್ರಮಶಿ. ೩೦-೫೬೯). [ಮದ + ತೇಗ₁ (< ತೇಗು₄)]

**ಮದತ್ತು**, ಮದತು, ಮದದ್, ಮದ್ದತು, ಮದ್ದತ್ತು (ನಾ). ೧. ನೆರವು ; ಸಹಾಯ : ತಾವುಯೆಷ್ಟು ಮೆಹರ್ಬಾನಗಿ ಮದತ್ತು ಮಾಡಲಾದೀತೋ ಅಷ್ಟು ಮದತ್ತು ಮಾಡಬೇಕು (ರಾಜೇಂದ್ರ. ೩೦). ೨. ನೆರವು ನೀಡುವವನು ; ಸಹಾಯಕ : ನಾನು ವಿಪ್ಲವಕಾರರಿಗೆ ಮದತ್ತಾಗಿದ್ದೇನೆಂದೂ ತುಫಾನು ಬಂದರೂ ಬರಬಹುದು (ರಾಣಿಕ. ೨೨೩). **ಮದತು** : ೧. ಕಮತಿಗ್ಯಾ ನಿನ್ನ ಮದತಿಗೆ ಇದ್ದೇ ಇರುತ್ತಾನೆ (ಶಿಕಶ. II, ೦೦೩). **ಮದದ್** : ೧. ಇಯಜ್‌ಖಾನರು ಸರ್ಕಾರೀ ಹಣವನ್ನು ಅಪಹರಿಸಿಕೊಂಡು ಹೋಗಲು ಮದದ್ ಮಾಡಿರುತ್ತಾರೆ (ರಾಣಿಕ. ೬೩). **ಮದ್ದತು** : ೧. ಲೋಕಲ್‌ಫಂಡು . . . ಸರಕಾರೀ ಮದ್ದತು, ಮ್ಯುನಿಸಿಪಾಲಿಟಿಯವರಿಂದ ಬರುವ ಮದ್ದತು . . . ಕೆಲವು ಭೂಮಿಯ ತೆರಿಗೆ ಮುಂತಾದ ಕಿರುಕುಳಬಾಬುಗಳಿಂದ ಜಮೆಯಾಗುತ್ತದೆ (ಕಥಾಗ. ೩೯೫). **ಮದ್ದತ್ತು** : ೧. ಅಪರಾಧ ನಡೆಸಲಿಕ್ಕೆ ಚಂಚಲನೇತ್ರರು ಮದ್ದತ್ತು ಮಾಡಿದರೆಂದು ಬರೆದಿತ್ತು (ಪಾಗ್ಯಲ. ೦೨೩) ; ಈ ಅಧಿಕಾರಿ ಗಳಾದರೂ . . . ಅಡ್ಡಿ ಅಡಚಣೆಗಳನ್ನು ಈ ಜಮೀನುದಾರರ ಮದ್ದತ್ತಿ ನಿಂದ ಸರಿಪಡಿಸಿಕೊಳ್ಳುತ್ತಿದ್ದರು (ಪಾಪಕ. ೪೨).
[ ← ಅರ. ಹಿಂ. ಮದದ್ ; ಮರಾ. ಮದತ್, ಮದದ್ ]

**ಮದದ್** 'ಮದತ್ತು' ನೋ.

**ಮದದೂಷಿತ** (ನಾ). ಮತ್ತಿನಿಂದ ಭ್ರಷ್ಟನಾದವನು : ಅಪರಾಜಿತನಿಸೆ ಗಂಧದ್ವಿಪಂ ಮೊಗಂದಿರಿದು ಅನ್ನ ಬಲಮನ ತುಬಿದತ್ತುಪಕಾರಿಗೆ ಮದದೂಷಿತನಪಕಾರಂಗೆಯ್ವನೆಂಬುದೊಂದಚ್ಚರಿಯೇ (ಶಾಂತಿಪು. ೯-೨೦).
[ಸಂ.]

**ಮದದ್ವಿಪ** (ನಾ). = ಮದಕರಿ : ಕಾರ ಮುಗಿಲ್ಗಳಿಂ ಪೊಳೆವ ಮಿಂಚುಗಳಿಂ ಸುರಕಾರ್ಮುಕಂಗಳಿಂ . . . ನೀರದಮಾರ್ಗಮಂಡಲಮದೇನೆಸೆದತ್ತೊ

ಮದದ್ವಿಪಾವೃತಂ ವೀರಭಟಾಸ್ತ್ರರುಕ್ಪರಿವೃತಂ ಮಣಿಭೂಷಣಕಾಂತಿ ಸಂವೃತಂ (ತಂಪ್ರಪು. ೨-೧೧೩). [ಸಂ.]

**ಮದದ್ವಿಲಸಿತ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು : ಎಸೆವ ಮದಸ್ಖಲಿತಂ ಕೀಳ್ ಮಿಸುಗುವ ಮತ್ತಲ್ಲಿ ನಾಡೆ ತಲಸಂಸ್ಫೋಟಪ್ರಸರಮಿವಂ ಪಲಸೂಳಿಂ ಪಸರಿಸಿ[ರೆ] ನಿಕುಟ್ಟನಾಖ್ಯ ಮೂರೂದ್ವೃತ್ತಂ ಕರಿಹಸ್ತ ಕಟೀಭಿನ್ನದ ಕರಣಂಗಳನೇಳನೊಂದುಗೂಡಲ್ ಮತ್ತಂ ತರಳಾಕ್ಷಿ ಮದದ್ವಿಲಸಿತದುರುತರಮೆನಿಪಂಗಹಾರಮಕ್ಕುಂ ತರುಣೀ (ಲಾಸ್ಯರಂ. ೩-೨೭). [ಸಂ.]

**ಮದನ₁** (ನಾ). ೧. ಅಮಲೇರಿಸುವ ಮದ್ಯ ಮುಂತಾದ ಪಾನೀಯ. ೨. ಕಸ್ತೂರಿ : ಗೊಲ್ಲನು ನದಿಯ ಸ್ನಾನವ ಮಾಡಿಕೊಂಡು ಮದನ ತಿಲಕವ ಫಣೆಯೊಳಿಟ್ಟು (ಗೋಪಾಮು. ೩-೨೪). [ಸಂ. ಮದನಾ]

**ಮದನ₂** (ಗು). ೧. ಅಮಲೇರಿಸುವ ; ಮತ್ತು ಬರಿಸುವ. ೨. ಹರ್ಷಗೊಳಿಸುವ ; ಉಲ್ಲಾಸಗೊಳಿಸುವ. (ನಾ). ೩. ಮನ್ಮಥ : ಕಾಮ : "ಅನಿಮಿಷಂ . . . ಮಾರನೆನೆ ಮದನನಕ್ಕು" (ಮಂಗರಾ. ೬-೨೨) ; ಮದನನ ಕೈದುವೆಲ್ಲಿದನಸಂಗನ ಕೈಪೊಡೆಯಲ್ಲಿದಂ (ಆದಿಪು. ೩-೧೫); ಮದನಂ ರೂಪಿಂಗೆ ದಾಸಂ ಮನೆಗೆ ನೃಪನ ಪುಣ್ಯೋದಯಂ ದಾಸನರ್ಕಂ ಮದವತ್ತೇಜಂಗೆ ದಾಸಂ ವಿಧು ವದನಯಶಃಶ್ರೀಗೆ ದಾಸಂ ಕೃತಾಂತಂ ಕದನಕ್ರೋಧಕ್ಕೆ ದಾಸಂ (ಅರ್ಜನೀ. ೧-೬೯) ; ಜನಪ ಶಂತನು ಮರುಳುಗೊಂಡನು ಮದನನೆಸುಗೆಯಲಿ (ಕುಮ್ಯಾಆ. ೨-೨೪). ೪. ಕಾಮ ; ವಿಷಯಾಸಕ್ತಿ. ೫. ವಸಂತಋತು. ೬. ತುಂಬಿ : ಭ್ರಮರ. ೭. ಜೇನುಮೇಣ. ೮. ಉನ್ಮತ್ತ : ಧತ್ತೂರ : "ದರ್ಪಕನೊಳುನ್ಮತ್ತಸುಮ್ಮತ್ತದೊಳವನಿರುಹಮೊಪ್ಪೆ ಮದನಾಖ್ಯವಕ್ಕು" (ಮಂಗರಾ. ೧೩೦-೪೯) : ಬಿದಿರು ಮದನಂ ಕರಿಕಕ್ಕೆ . . . ಗುಗ್ಗುಳಂ ಮತ್ತಮನೇಕವೃಕ್ಷತತಿಯಿಂದೆಸೆದಿರ್ದುದು ತದ್ವನಾಂತರಂ (ನಳಚಂ. ೬೦). ೯. ಖದಿರವೃಕ್ಷ. ೧೦. ಬಕುಳವೃಕ್ಷ : 'ಮದನಾಕ್ರಾಂತ' ಪರಾ. ೧೧. [ಕಾಮಶಾ] ಆಲಿಂಗನದ ಪ್ರಕಾರಗಳಲ್ಲಿ ಒಂದು. ೧೨. [ಛಂದ] ವಿಷ್ಣುಗಣ : ಜಯಕೀರ್ತಿಯು 'ಬ್ರಹ್ಮ' 'ವಿಷ್ಣು' 'ರುದ್ರ'ಗಣಗಳ ಬದಲಾಗಿ 'ರತಿ' 'ಮದನ' 'ಶರ' ಗಣಗಳ ಹೆಸರಿನಲ್ಲಿ ಲಕ್ಷಣ ಹೇಳಿದ್ದಾನೆ (ಛಂದೋಬು. ೦೩೨). ೧೩. [ಜ್ಯೋತಿ] ಜನ್ಮಲಗ್ನದಿಂದ ಏಳನೆಯ ಸ್ಥಾನ.

ಮದನವಿರೋಧಿ=ಶಿವಸ್ವರೂಪನಾದವನು ; ಒಂದು ಬಿರುದು : ಮದನವಿರೋಧಿಯೆಂಬ್ಬನೆ ವಿರೋ[ಧಿ]ಗೆ ಬಸ್ಟುಜನಕ್ಕೆ ವಜ್ರಶೈಳದ ನಡೆಗೋಟೆಯೆನ್ನನೆ . . . ಎಂದಪುದೀ ಧರೆ ರಾಚಮಲ್ಲನಂ (ಶಾಇಇ. XVIII, ೪೪-೫೭ ; 1019). [ಸಂ.]

**ಮದನಕದನ** (ನಾ). ಸುರತ : ಮನ್ಮಥಕ್ರೀಡೆ. [ಸಂ.]

**ಮದನಕಯ್**, **ಮದನಕೈ**, **ಮದನಗೆಯ್**, **ಮದನಿಕೆ** (ನಾ). ೧. ದೇವಸ್ಥಾನ, ಅರಮನೆ ಮುಂತಾದುವುಗಳ ಕಂಬಗಳ ಬೋದಿಗೆಗೆ ಜೋಡಿಸಿರುವ ಅಲಂಕಾರಮಯವಾದ ಸ್ತ್ರೀವಿಗ್ರಹ : ಲಲಿತ ಸ್ತಂಭಕದಂಬಮುಂ ಮದನಕಯ್ಯುಂ ಲೋವೆಯುಂ ದ್ವಾರಚಿತ್ರಲತಾಬಂಧ ಮನುಧ್ವಭಿತ್ತಿಯುಸಧಿಷ್ಠಾನಾದಿಯುಂ ಬೇಜಿಬೇಜಿೞಲವಿಂ ಬಣ್ಣಿಸಿ ಪೇಳಲಾನಜೀಯೆಂ (ಶಾಇಇ. VII, ೦೪೬-೨೮ ; 1630). **ಮದನಕೈ** : ೧. ಚಿತ್ರಮಯದ ಗೋಡೆ ಕಂಭ ಜಪಡಿ ಪೊನ್ನ ಪುತ್ತಳಿ ಮದನಕೈ ರತ್ನ ತೆತ್ತಿಸಿದಮಲಬೋದಿಗೆ ಲೋವೆ ಪಲಗೆಯೊಳ್ಪುತ್ತಿನ ಕುಚ್ಚುಗಳ್ ಮೆಱೆಯೆ (ವೋಹತ. ೦೬-೦೪) ; ಬಜ್ಜರದ ಕಂಭಮುಜಿ ತೊಳಪ ವೈಡೂರಿಯದ ಮದನಕೈ ಮಿಱುಪ ಗೋಮೇದಕದ ಬೋದಿಗೆಗಳ . . . ಪೊನ್ನ ಪೊದಕೆ ರಂಜಿಸಿತು ಚಾವಡಿಯ ಚೌರಸದೆಡೆಯೊಳು (ಶೈಬಶಾ. ೦೬-೨೩) ; ಎನ್ನ ಒಡಲೇ ನಿಮಗೆ ದೇವಾಲಯ ಎನ್ನ ತೋಳುಗಳೆರಡು ಉನ್ನತದ ಮದನಕೈ (ಸುಶಾರ. ೦೬-೦). ೨. (ಕರಾ)ನೆಲದಲ್ಲಿ ಹೂತಿಟ್ಟ ನಿಧಿಯನ್ನು ಸೂಚಿಸುವುದೆಂದು ನಂಬಲಾಗುವ ಮರದ ರೆಂಬೆ : ಅದಕ್ಕೆ ಎಷ್ಟು ಮದನ ಕೈಗಳು ಇವೆ ನೋಡು. ಅಷಿಯಲ್ಲಿ ಕೊಪ್ಪರಿಗೆ ಇದ್ದರೆ ಮಾತ್ರ ಮರಗಳಿಗೆ ಮದನಕೈ. ಬೇರೆ ಮರಗಳಿಗುಂಟೇನು ಹಾಗೆ ? (ದಾಳಿ. ೪೭). **ಮದನಗೆಯ್** : ೧. ಮದನಗೆಯ್ಯ [ಪಾಠಾಂ. ಗೈಯ] ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ (ರಾಮಾಶ್ವ. ೩೪-೨೫). **ಮದನಿಕೆ** : ೧. ಪಚ್ಚೆಯ ಲೋವೆ ಮಾಣಿಕದ ಮದನಿಕೆ (ಶುರಾಸಾಂ. ೩-೬೫) ; ಬೇಲೂರಿನ ಕಂಬಗಳ, ಮೇಲಿರುವ "ಮದನಿಕೆ" ವಿಗ್ರಹಗಳನ್ನು ಕೆತ್ತಿದವರು ನಿಜವಾಗಿಯೂ ಶಿಲ್ಪಶ್ರೇಷ್ಠರು (ಮ್ಯಾಪಾಸು. ೪೮).

ಮದನಕೈಬೊಂಬೆ = ಮದನಕಯ್ : ಈ ಸ್ತಂಭಗಳ ಬೋದಿಗೆಯ ಮೇಲೆ ಸೂರಿಗೆ ಊರೆಯಾಗಿ ಸುಂದರವಾದ ಮೂರ್ತಿಗಳು ಕೆತ್ತಿ ನಿಲ್ಲಿಸಲ್ಪಟ್ಟಿವೆ. ಇವುಗಳಿಗೆ ಸಂಸ್ಕೃತದಲ್ಲಿ ಸಾಲಭಂಜಿಕೆಗಳೆಂದೂ . . . ಕನ್ನಡದಲ್ಲಿ ಮದನಕೈಬೊಂಬೆಗಳೆಂದೂ ಹೆಸರು (ಮ್ಯಾಪಾಸು. ೯೯). [?]

**ಮದನಕಲಹ** (ನಾ). = ಮದನಕದನ : ಮದಗಜಂ . . . ಮದನಕಲಹದೊಳೊಲ್ದು ಕೊಸರಿ ಪೆಣಗುವ ಸತಿಯುವೊಲ್ ಪೆಣಗಿದುವು ಶಿವನೊಳು (ಕರಾತ. ೦-೦೦-೩೮). [ಸಂ.]

**ಮದನಕಲೆ**, **ಮದನಕಳೆ** (ನಾ). ಶೃಂಗಾರ ಕಲೆ ; ರತಿಚಾತುರ್ಯ : ಮಾನಿನಿಗೆ ಮದನಕಲೆಗಳಂ ತೋಱಿಸಿದನವನಂದು ಸಮರತಿಯೊಳು (ಶೈಬಶಾ. ೦೦-೨೨). **ಮದನಕಳೆ** : ಮದನಕಳಾಕುಶಳೆಯರಂ ಮದನ ಮಹೀಪಾಳಭಾಗ್ಯಸೌಭಾಗ್ಯೆಯರಂ ಕನ್ಯಾರತ್ನಮುಂ ಕುಡುವುದಕ್ಕಿದುವೆ ಸಂಚರಂ (ಪಾರ್ಶ್ವಪು. ೬-೩೦); ನಯಮಧುರವಂ ಬೀಱಿ ನೀನನ್ವಯಿಪ ಮದನಕಳೆಗಳನೆನ್ನ ತನಯಳ ಮಂಚದ ತುದಿಯ ಕಾಲಲಿ ಕಟ್ಟಿಸು (ಬಸಪು. ೪೨-೦೯). [ ಸಂ. ಮದನಕಲಾ ]

**ಮದನಕಳೆ** 'ಮದನಕಲೆ' ನೋ.

**ಮದನಕಾಮೇಶ್ವರಿಲೇಹ** (ನಾ). ಒಂದು ಬಗೆಯ ಕಾಮೋದ್ದೀಪಕ ರಾಸಾಯನಿಕ ಚೂರ್ಣ : ಮದನಕಾಮೇಶ್ವರಿಲೇಪ . . . ಸಕಲ ರೋಗಪರ. ಕಾಮೇಶ್ವರನಿಂದ ನಿರ್ಮಿತವಾದದ್ದು (ಕಾಮಶಾ. ೨೬೬).

[ಮದನಕಾಮೇಶ್ವರಿ₀ (ಶ←ಮರಾ. ಮದನಕಾಮೇಶ್ವರ)+ಲೇಪ]

**ಮದನಕಾಮೇಶ್ವರಿಹೂ**, **ಮದನಕಾಮೇಶ್ವರಿಹೂವು** (ನಾ). ಧತ್ತೂರದ ಹೂವು : (ಪ್ಯಾಶಿಗ. ೨೯-೩೩೮). **ಮದನಕಾಮೇಶ್ವರಿಹೂವು** : ಮದನ ಕಾಮೇಶ್ವರಿಹೂವು ಹಾಲಿನಲ್ಲಿ ಮರ್ದಿಸುವುದು (ಕಾಮಶಾ. ೨೬೩).

[ ಮದನಕಾಮೇಶ್ವರಿ₀ + ಹೂ₂ (< ಪೂ₂) ]

**ಮದನಕಾಮೇಶ್ವರಿಹೂವು** 'ಮದನಕಾಮೇಶ್ವರಿಹೂ' ನೋ.

**ಮದನಕಾಯ** (ನಾ). ಮನ್ಮಥನಂತೆ ಸುಂದರವಾದ ದೇಹವುಳ್ಳವನು : ಬದಗಿನಿದಿರಾದನು ಜಯಶ್ರೀಮದನಕಾಯನು ಕಪಟದಾಯನು ವಿದಿತ ಮಾಯನು ರಣದಜೇಯನು ಕೌರವರ ರಾಯ (ಕುಮ್ಯಾಶೀ. ೩-೦೦). [ಸಂ.]

**ಮದನಕೇಳಿ** (ನಾ). ಕಾಮಕ್ರೀಡೆ ; ರತಿಕೇಳಿ : ವಸಂತದೊಳ್ಮದನಕೇಳೀಸೂತ್ರಮಂ ಪಾರದೋದಿದ ಕೀರಂ . . . ಶೀತಾಂಶು ತೀವಿದ ನೆಯ್ದಿಲೊಗ್ಗಳನಲ್ಲದಿಲ್ಲೆನೆ ಬನಂ ಚಿತ್ತೋತ್ಸವಾಲಂಬನಂ (ಮಲ್ಲಪು. ೨-೩೭); ಚಿತ್ರಮಪ್ಪ ಮದನಕೇಳಿಯಿಂದೆ ಪೆಂಪಿನುದಯದಿಂದೆ ಮಧ್ಯಮೆಯನು ಗೆಲುವುದು (ಚನವ. ೩-೦೦). [ ಸಂ. ಮದನಕೇಲಿ ]

**ಮದನಕೈ** 'ಮದನಕಯ್' ನೋ.

**ಮದನಕೈಹಲಗೆ** (ನಾ). (ದೇವಾಲಯಂ ಮುಂತಾದುವುಗಳ ಕಂಬಗಳ ಬೋದಿಗೆಗಳ ಮೇಲೆ ಕೆತ್ತಿರುವ) ಸುಂದರಸ್ತ್ರೀವಿಗ್ರಹದ ಕೆತ್ತನೆಯುಳ್ಳ ಆಧಾರವನ್ನು ಹೊಂದಿರುವ ನಾಗಂದಿಗೆ : ಗಂಗಕ್ಕ . . .

'ಮದನಕೈಹಲಗೆ'ಯಲ್ಲಿರಿಸಿದ್ದ ಹಾಲಿನ ಗಿಂಡಿಗೆ ಕೈಕೊಂಡು ಹೋಗುವಾಗ ಹಾಲೆಲ್ಲ ಚೆಲ್ಲಿಹೋಯಿತು (ಬಡ್ಡಿ. ೯೬.).
[ ಮದನಕೈ (< ಮದನಕಯ್) + ಹಲಗೆ (< ಪಲಗೆ) ]

**ಮದನಗಂಟಿ** (ನಾ). ಒಂದು ಬಗೆಯ ಸಸ್ಯ : ಮದನಬುಡಮೆಗಿಡ, ಮೇದನಾಗಿಡ, ಮದನಗಂಟಿ (ವೃ ಶಿ. ೦೩-೨೩೫).
[ ಮದನ₂ + ಕಂಟಿ₂ ]

**ಮದನಗೃಹ** (ನಾ). ಸ್ತ್ರೀಯ ಜನನೇಂದ್ರಿಯ ; ಯೋನಿ : ಮದನಗೃಹದೊಳಲರ್ವುದು ಜನಿವುದು ಪೊದೆವುದು ಪಿಡಿದೇಳ್ವುದೆನಿಪುವವನ ಪದಮೊದವಿರೆ ಮಾಣದೆ ಹಸ್ತಕ್ಷೋಭದಿನಾಗಿಪುದು (ಜಪವ. ೬-೨೪). [ಸಂ.]

**ಮದನಗೆಯ್** 'ಮದನಕಯ್' ನೋ.

**ಮದನಗೇಹ** (ನಾ). = ಮದನಗೃಹ : ವಿಟರಕ್ಷಿ ಪರಿದಾಡುತಿಹ ವಾರಿಯೋ ಮದನಗೇಹದ ಮೇರೆಯೋ ಎಂಬ ತೆಱದಿ ತ್ರಿವಳಿಗಳೆಸೆದವು (ಶ್ರೀ ಕಶಾ. ೯-೮). [ಸಂ.]

**ಮದನಚೇಷ್ಟೆ** (ನಾ). ವಿಷಯಾಭಿಲಾಷೆಯಿಂ ಮಾಡುವ ಹಾವಭಾವ; ಶೃಂಗಾರ ಚೇಷ್ಟೆ : ಅರ್ಭಕತನದಲಿ ಮದನಚೇಷ್ಟೆಯಲಿ ದುರ್ಬುದ್ಧಿ ಮಾಡುವವಳೆ ಶುದ್ಧ ಹೊಲತಿ (ಪುರಂದ. ೧-೦೦೬-೫).
[ ಸಂ. ಮದನಚೇಷ್ಟಾ ]

**ಮದನಚ್ಛತ್ರ** (ನಾ). [ಕಾಮಶಾ] ಒಂದು ನಾಡಿಯ ಹೆಸರು : ಮದನಾಂದೋಳನ ಮದನಚ್ಛತ್ರ ಪೂರ್ಣಚಂದ್ರಾದಿ ನಾಡೀಮರ್ಮಜ್ಞರಿಂ (ವಿವೇಕ. ೦೬೪). [ಸಂ.]

**ಮದನಜನಕ** (ನಾ). ಮನ್ಮಥನ ತಂದೆ ; ವಿಷ್ಣು : ಮದನಜನಕನಾಗಿ ಮಹಿಮೆ ತೋಱುವ ಪದುಮನಾಭನಾಗಿ ಮೆಱೆವ ನಮ್ಮ ಪುರಂದರವಿಠಲನ ಹರುಷದಿ ಕರೆವ (ಪುರಂದ. ಪಾ. ೩-೬೯-೩). [ಸಂ.]

**ಮದನಜನಕತ್ವ** (ನಾ). ೧. ಕಾಮಭಾವನೆಯನ್ನುಂಟುಮಾಡುವಿಕೆ. ೨. ಮನ್ಮಥನ ತಂದೆಯಾಗಿರುವಿಕೆ. ೧, ೨ : ವಿಧೃತ ಮದನಜನಕತ್ವಮಾಗಿಯುಂ ಕಮಲೋತ್ಸವಕಾರಿಯಲ್ತು (ತಂತ್ರಪು. ೪-೪೨ ವ). [ಸಂ.]

**ಮದನಜಲ** (ನಾ). ೧. ವೀರ್ಯ : ರೇತಸ್ಸು. ೨. ಸಂಭೋಗ ಸಮಯದಲ್ಲಿ (ಸ್ತ್ರೀಯ) ಸ್ರವಿಸುವ ದ್ರವ ; ಮನ್ಮಥದ್ರವ : ನೀರೊಳಗಳ್ಕಿದ ನೆಪದಿಂದಾ ರೂಪನಿದಾನನಂ ಮೃಗಾಕ್ಷಿಯರಪ್ಪರ್ ಸಾರೆ ಬಿಡುತಂದು ಕೂಡಲ್ ನೀರಂತಿರೆ ಬೆರಸೆ ಮದನಜಲಮುಂ ಜಲಮುಂ (ಶಾಂತಿಪು. ೬-೪೨) ; ಅವಳಾಗಲು ಮದನಜಲವಂ ಬಿಡುವಳು (ಕಾಮಶಾ. ೨೩೨). [ಸಂ.]

**ಮದನಜ್ವರ** (ನಾ). ವಿರಹವ್ಯಥೆಯಿಂದ ಉಂಟಾಗುವ ಜ್ವರ : ಕಾಮಜ್ವರ. [ಸಂ.]

**ಮದನತಾಪ** (ನಾ). = ಮದನಜ್ವರ : ಮಱೆದೊಱಗಿದಳು ಮದನತಾಪದಿಂದಾಗ ಮಱುಮಾತುಗುಡದಿರ್ದಳವಳು (ಕುಮಾರಾ. ೨೩-೬೫). [ಸಂ.]

**ಮದನದಹನ** (ನಾ). ಮನ್ಮಥನನ್ನು ಸುಟ್ಟವನು ; ಶಿವ : ಮದನದಹನಂಗಾಮದೆನ್ನ ನಿಮಿತ್ತದಿಂದೀಗ ಇದಱುಪದ್ರವಂ (ಬಸವ. ೦೩-೨೬). [ಸಂ.]

**ಮದನದ್ರವ** (ನಾ). = ಮದನಜಲ ೨ : ತೆಗೆದಪ್ಪಿದೊಡುನ್ನಿದ್ರಾಂಭೋಜಾಸ್ಯೆಗೆ ಮದನದ್ರವಮುಂ ಕಣ್ಣ ನೀರುಮುಣ್ಮಿದುವಾಗಳ್ (ಆದಿಪು. ೦೨-೪೪). [ಸಂ.]

**ಮದನಧರ್ಮ** (ನಾ). ಮನ್ಮಥನ ಬಿಲ್ಲು : ಬೆದರ್ದೆರಳೆಗಂಗಳ ಮದನಧರ್ಮದೊಲು ಪುರ್ಬಿನ . . . ಬಡವಾಸೆಯೆಳೆವೆಣ್ಣಳೆಸೆದಿರ್ದರು (ಶ್ರೀ ಕಶಾ. ೬-೦೦). [ಸಂ.]

**ಮದನಧ್ವಂಸಿ** (ನಾ). ೧. = ಮದನದಹನ. ೨. [ಛಂದ] ರುದ್ರಗಣದ ಹದಿನಾರು ಪ್ರಭೇದಗಳಲ್ಲಿ ಒಂದು : ರುದ್ರಗಣಮೆಂತೆಂದೊಡೆ : ೧. ಗಂಗಾಧೀಶಂ . . . ೧೦. ಮದನಧ್ವಂಸಿ (ಛಂದೋಂಬು. ೫-೨೪೦ ವ).
[ಸಂ. ಮದನಧ್ವಂಸಿನ್]

**ಮದನಪತತ್ರಿ** (ನಾ). ಮನ್ಮಥನ ಬಾಣ : ಮದನಪತತ್ರಿ ನಿನ್ನ ದೆಸೆಗಾಣದು ಮೋಹಮಮಾಪಿ ನಿನ್ನನಣ್ಮದು (ಶಂರಾವಿ. ೫-೯).
[ಸಂ. ಮದನಪತತ್ರಿನ್]

**ಮದನಪತಾಕೆ** (ನಾ). ಮನ್ಮಥನ ಧ್ವಜ : ಮದನಪತಾಕೆ ಚುಂಬಿಸೆ ವಿಯನ್ಮಿಖಿಮಂ ಸ್ಮರಚಾಪಟಂಕೃತಂ ಪುದಿಯೆ ದಿಗಂತಮಂ (ಶಂರಾವಿ. ೫-೪೮) ; ಮೊದಲೊಳಾ ಮೇನಕೆಯುದರದೊಳಾಕೆ ಉದಿಸಿದ ಕನ್ಯಕೆ ಮದನಪತಾಕೆ (ಶಾಕುಂತ. ೨೪ ಅಂಕ). [ಸಂ. ಮದನಪತಾಕಾ]

**ಮದನಪಿತ** (ನಾ). ೧. ಮನ್ಮಥನ ತಂದೆ ; ವಿಷ್ಣು. ೨. ಕೃಷ್ಣ : "ಮದನಪಿತನೊಳು . . . ಕಪ್ಪಿನೊಳು ಕೃಷ್ಣಪಕ್ಷ" (ಮುಂಗಾ. ೦೫೧-೫೫) ; ಇದನೆ ಕೃಪೆಮಾಡೆನಗೆ ಮದನಪಿತ ಪುರಂದರವಿಟ್ಠಲರಾಯ (ಪುರಂದ. ಪಾ. ೬೩-೪-೩).
[ < ಸಂ. ಮದನಪಿತೃ ]

**ಮದನಫಲ**, ಮದನಫಳ (ನಾ). ಒಂದು ಬಗೆಯ ಮುಳ್ಳುಗಿಡದ ಹಣ್ಣು ; ಮಂಗಾರೆ : ಮದನಫಲಂ ಸೊರೆ ಕಪ್ಪುತ್ತಿ ದಂತಿ ಪಿಪ್ಪಲಿ ಗುಡಂ ಯವಕ್ಷಾರಮುಮಂ ಮಿದಿದಿಡುಗೆ ಯೋನಿಯೊಳ್ ಕಾದಿಸಿ ದುಗ್ಧದಿಂ ತಾನವಳ್ ರಜಸ್ವಲೆಯಕ್ಕುಂ (ರೋಕೋಪ. ೯-೦೬೩). ಮದನಫಳ : ಮದನಫಳಂ ಬಜೆ ರುಜೆ ದೇವದಾರಿಯೆಂಬಿವನೆ ಗಂಧದ ಜಲದೆ ಮೇಣಲ್ಲದೊಡೆ ಶರಪುಂಖಿಯುಜಮೂತ್ರದೆ ಕುಡಿದೊಡಿಲಿಯ ವಿಷದುವಿಷಮುಪಶಮಿಕುಂ (ರೋಕೋಪ. ೦೦-೩೪). [ಸಂ.]

**ಮದನಫಳ** 'ಮದನಫಲ' ನೋ.

**ಮದನಬಾಧೆ** (ನಾ). ಕಾಮದಿಂದ ಉಂಟಾಗುವ ತಾಪ : (ಮದನಬಾಧೆಯನ್ನು ಅಭಿನಯಿಸಿ) ಎಲೈ ಪೂಜ್ಯನಾದ ಪುಷ್ಪಾಯುಧನೇ . . . ಕಾಮಿಜನರನ್ನು ನೀವು ಚೆನ್ನಾಗಿ ವಂಚಿಸುವಿರಿ ! (ಶಾಕುಂತ. ೩೨-೦).
[ ಸಂ. ಮದನಬಾಧಾ ]

**ಮದನಬುಡಮೆಗಿಡ** (ನಾ). ಒಂದು ಬಗೆಯ ಔಷಧೀಸಸ್ಯ : ಮದನಬುಡಮೆಗಿಡ, ಮೇದನಾಗಿಡ, ಮದನಗಂಟಿ (ವೃ ಶಿ. ೦೩-೨೩೫).
[ ಮದನ₂ + ಬುಡಮೆ ( < ಬುಡುಮೆ) + ಗಿಡ ( < ಗಿಡು) ]

**ಮದನಮಂಟಪ** (ನಾ). ಮಲಗುವ ಕೋಣೆ ; ಶಯ್ಯಾಗೃಹ : ಸುಪ್ರಕಾಶದಿ ಬೆಳಪ ಧವಳಾರಸೌಧರತ್ನಪ್ರತತಿಯಿಂ ರಚಿತಭಿತ್ತಿಭವನಹರ್ಮ್ಯಸುಪ್ರೇಮದಿಂ ಕೇಳು ಸಜ್ಜೆ ಗೋಪುರನಿಳಯ ಮದನಮಂಟಪ ಭವಂತಿ (ನವಮೋ. ೦೬-೩೨). [ < ಸಂ. ಮದನಮಂಡಪ ]

**ಮದನಮಂದಿರ** (ನಾ). ೧. = ಮದನಮಂಟಪ : ಮಣಿಮಯದಿ ಬೆಳಗುವ ಮದನಮಂದಿರದಿ ರೂಢಿವೆತ್ತ ಮಳಮೃದುತಳ್ಪದೊಳು ಪವಡಿಸಲು (ನವಮೋ. ೦೬-೦೮). ೨. = ಮದನಗೃಹ : ಸ್ತ್ರೀಯರ ಮದನಮಂದಿರ ಬಂಧನಕ್ಕೆ — ಮಾಯಿಫಳ ಜಾಯಿಪತ್ರೆ ಅರದು ಪೊಟ್ಟಣವಂ ಕಟ್ಟಿ ಮರ್ಮಸ್ಥಳಕ್ಕೆ ಮಡುಗೆ ಏಳುದಿನ ಇಟ್ಟರೆ ಬಿಗಿಯಾಗಿ ಬಂಧನವಹುದು (ಕಾಮಶಾ. ೩೬೨). [ಸಂ.]

**ಮದನಮಸ್ತ** (ನಾ). ೧. (ಔಷಧಕ್ಕೆ ಬಳಸಲಾಗುವ) ಅಡವಿಸೂರಣಗೆಡ್ಡೆಯ ಒಣಗಿದ ತುಂಡು : ಮುಂಬಯಿ ಮಣದ ಮೇಲೆ ಧಾರಣೆ ಇರತಕ್ಕ ಜೀನಸಗಳು. ೧, ಅಕ್ರೋಡ . . . ೨೧, ಮದನಮಸ್ತ (ಮುಂಬಯಿ. ೧೦೯). ೨. ಸಂಪಗೆಜಾತಿಯ ಒಂದು ಬಗೆಯ ಪರಿಮಳದ ಹೂವು. [ ← ಹಿಂ. ಮದನಮಸ್ತ್ ]

**ಮದನಮುಷ್ಟಿ** (ನಾ). ಒಂದು ಬಗೆಯ ಪೊದೆಯಾಕಾರದ ಗಿಡ ಮತ್ತು ಅದರ ಹಸುರುಬಣ್ಣದ ಹಾಗೂ ಕಡುಸುವಾಸನೆಯುಳ್ಳ ಹೂವು :

ಮದನಮಸ್ತಿಯು ಪರಿಮಳಕ್ಕೆ ಹಾವುಗಳು ಬರುತ್ತವೆಂದು ಹೇಳುತ್ತಾರೆ (ರತ್ನ). [ < ಮದನಮಸ್ತ ? ]

**ಮದನಯುದ್ಧ** (ನಾ). = ಮದನಕದನ : ಮೋಹನಮೆಂಬುದು ಮದನ ಯುದ್ಧಮೆಂಬುದು ಸುರತಕ್ಕೆ ಪೆಸರು (ಕಾಮಶಾ. ೨೪೦). [ ಸಂ. ]

**ಮದನರಸ** (ನಾ). = ಮದನಜಲ ೨ : ಮದನರಸಂ ಮದನರಸಂ ಪೊದಟ್ಟುದೆನಿಸುವಿನಮಮರಿ ನರ್ತಿಸೆ ಚೆಲ್ವಂ ಪುದಿದುಜಚಲ್ಲಿಯೊಳೆಸೆದುದು ತಮರೋಜಸರೋಜಮುಕುಲಯುಗಸಂಚಲನಂ (ಆದಿಪು. ೬-೧೪) ; ಮದನ ರಸಪ್ಲವಂ ಕವಿಯೆ ತಣ್ಣಸನಾಗದೆ ತೃಷ್ಣೆಗಿಂಬುಕೆಯ್ಯದೆ ಪಗೆಗೊಂಡು ಪೋಪುದು ಸಮುದ್ರದ ಮಧ್ಯದ ಬಾಳೆ ಕೆಯ್ಗೆವರ್ಪುದುಮಂ . . . ಇಚ್ಚೆ ಯುಪನಿಚ್ಚೆಯಿಪೊಂ ಹಯಶೃಂಗಚಾಪಮಂ (ಶಾಂತಿಪು. ೬-೯೭). [ ಸಂ. ]

**ಮದನರಿಪು** (ನಾ). ಮನ್ಮಥನ ಶತ್ರು : ಶಿವ : ಧನುವ ಕೊಂಡನು ಮದನರಿಪು ತಿರುಹಿದನು ಬೆರಳಲಿ ಪಾಶುಪತಶರವ (ಕುಮಾ. ಭಾ. ೬-೩೮). [ಸಂ.]

**ಮದನವತಿ** (ನಾ). [ ಛಂದ ] ಅಂಶಗಣಬದ್ಧವಾದ ದೇಶ್ಯವೃತ್ತಗಳಲ್ಲಿ ಒಂದು : ಮದನವತಿಯ ಲಕ್ಷಣಮಂ ಪೇಳ್ವೆಂ ಮದನನ ತಂದೆಯ ಗಣ ಮವು ವಿಷಯದೋಳಿರೆ ಗುರು ಮುಂದೊದವಿರೆ . . . ಮದನಹರತ್ರಯದಿಂ ಹರಿ ಕಡೆವಡೆ ಮದನವತೀ (ಛಂದೋಂಬು. ೩-೨೩೩). [ ಸಂ. ಮದನವತೀ ]

**ಮದನವತಿಗ** (ನಾ). ಮದನವತಿ ವೃತ್ತದಲ್ಲಿ ಕೃತಿರಚನೆಮಾಡಿ ದವನು : ಮದನವತಿಗಂ – ಮದನವತೀತಿ ವೃತ್ತವಿಶೇಷಃ ತತ್ಕರ್ತಾ (ಶಬ್ದಾನು. ೪೦೨ ವ್ಯಾಖ್ಯಾ). [ ಮದನವತಿ + –ಇಗ ]

**ಮದನವಿಕಾರ** (ನಾ). ಕಾಮದಿಂದ ಮನಸ್ಸಿನಲ್ಲಿ ಉಂಟಾಗುವ ವ್ಯತ್ಯಾಸ : ಮದನವಿಕಾರಮಂ ಮೆಱೆವ ಪಾರಿವಮಿಲ್ಲದ ರಾಜಕೀರಮಿಲ್ಲದ . . . ಸೂಳೆವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್ (ಮಲ್ಲಿಪು. ೨-೫೭). [ಸಂ.]

**ಮದನವೈರಿ** (ನಾ). = ಮದನರಿಪು : ಮದನವೈರಿಯ ಭಕ್ತಿಯಂ ತೋಱಿದವನೋ ಭವಪಾಶಮಂ ಪಱಿಸಿದವನೋ (ಬಸವಪು. ೪೦-೪೪). [ ಸಂ. ಮದನವೈರಿನ್ ]

**ಮದನಶರ** (ನಾ). ಮನ್ಮಥನ ಬಾಣ : P ಇಲ್ಲಿ ಕೊಟ್ಟಿರುವ ಪಟ್ಟಿ ಯಲ್ಲಿರುವ ಶಬ್ದಗಳನ್ನು ಕಾಮನ ಐದು ಬಾಣಗಳೆಂದು ಭಾವಿಸ ಲಾಗಿದೆ. "ಇಷು–ಗಿ : (ಅ) ಅರವಿಂದ, ಅಶೋಕ, ಚೂತ, ನವ ಮಲ್ಲಿಕಾ, ನೀಲೋತ್ಪಲ (ಅಮರ. ೧-೧-೨೮-೨೯). (ಆ) ಸಮ್ಮೋಹನ, ಉನ್ಮಾದನ, ಶೋಷಣ, ತಾಪನ, ಸ್ತಂಭನ (ಭಾರತ-ಶಕದ್ರು. IV–೧೫). ದ್ರವಣ, ಶೋಷಣ, ತಾಪನ, ಮೋಹನ, ಉನ್ಮಾದನ (ಶಕದ್ರು. IV–೧೫). ಉನ್ಮಾದನ, ಮದನ, ಮೋಹನ, ಸಂತಾಪನ, ವಶೀಕರಣ (ವಿಚಿಂ. ೪–೩೮೨)" (ಶ್ರೀವತ್ಸ. ೬೪) : ಮ್ಯದುತರಮಾರ್ಗವೆ ಕೆನ್ನಂ ಮದನಶರಾನೀಕಮೊಯ್ಯ ನೊಲವಂ ಪಡೆಗುಂ (ಕವಿರಾ. ೩-೧೦೭) ; ಭಾಳಾಕ್ಷನಂ ಲಕ್ಷಿಸಿ ನೋಡಿ . . . ಫಲದಿಂದೆಚ್ಚಂ ಪಂಚೇಷು ಮದನಶರದಿಂದಾಗಳ್ (ಗಿರಿಜಾ. ೮-೨೮). [ಸಂ.]

**ಮದನಶಾಸ್ತ್ರ** (ನಾ). ಕಾಮಕಲೆ : ಮದನಶಾಸ್ತ್ರದೊಳಬ್ಬವದನೆ ಕೇಳ್ ನಾಲ್ಬೆಱವ ಸುದತಿಯರ ಜಾತಿಯಿಂತೆಂದೊಱೆವೆನು (ಜವಶ. ೨ ಸೂತ್ರ) ; ಮದುಮನಾಥನು ಪುರದ ಚದುರೆಯರಿಗೆ ತಾನು ಮದನಶಾಸ್ತ್ರವ ಪೇಳುತ ಮುದದೊಳಗಿರಲು (ಪುರಂದ. ದಾ. ೪-೬೩-೧೧). [ಸಂ.]

**ಮದನಸದನ** (ನಾ). ರತಿಕ್ರೀಡೆಯ ಗೃಹ ; ಶಯ್ಯಾಗೃಹ : ಮದನಸದ ನೋದ್ಯೋಗಸ್ಥಾನಂಗಳೊಳ್ ಸುಱಿದಂಗನಾವದನಮದಿರಾಮೋದ ಸ್ವೇದಾಂಬುವಂ ತವೆ ಪೀರ್ದು . . . ನೀಲೋತ್ಪಲಂಗಳ ಕಂಪಿನೊಳ್ ಪುದಿದು ಪುರದೊಳ್ ತೀವಿತ್ತತ್ತಂ ಪ್ರಭಾತಸಮೀರಣಂ (ಅಜಿತಪು. ೩-೬೩). [ಸಂ.]

**ಮದನಸುಖ** (ನಾ). ಕಾಮಸುಖ ; ರತಿಸೌಖ್ಯ : ಮದನಸುಖಕ್ಕೆ ತಾನೆ ನೆರೆ ಪೆಂಡಿರೊಳೆಂಬಿನಮಂತುಟೊಂದು ನೋಟದ ತೆಱಂ . . . ಸತ್ಯಭಾಮೆ

ಗೊಡಗೊಡೆ ಮುರಾರಿಗೆ ಕೂಡಿತುತ್ಸವಂ (ಜಗ. ೧೧-೫೬). [ಸಂ.]

**ಮದನಹರ** (ನಾ). ೧. ಮನ್ಮಥನನ್ನು ಕೊಂದವನು : ಶಿವ : ಮದನ ಹರ ನಿಮ್ಮ ಚಲಭಕ್ತಿ ಸುಪದವಿಯಂ ಕೃಪೆಯಿಂ ಪ್ರಸಾದಿಸಿ ಸಲಹು (ರಾಜಶೇ. ೨-೨೪) : ಮದನಹರನವರಿರಲಿ ಕೈಮುಗಿದು ಮ್ಯೆಚಾಚಿ ಬೇಡಿದಳ್ ಮದನ ಕೃಪೆಯಂ ನಾರಿ (ಶತ್ರುಂಗ. ೨೩-೬೪೬). ೨. ಮನ್ಮಥನನ್ನು ನಾಶ ಗೊಳಿಸಿದವನು : ಜಿನ : ಮದನಹರಂ ತಪೋಗ್ರಹಣದಿಂದೆ ತಗುಳ್ದೆಡೆ ಮಾಡದಂತೆ ನಿಂದುದಱಿಂ (ಶಾಂತಿಪು. ೧೧-೧೦೪). ೩. [ ಛಂದ ] ರುದ್ರಗಣ : ಮದನಹರತ್ರಯದಿಂ ಹರಿ ಕಡೆವಡೆ ಮದನವತೀ (ಛಂದೋಂಬು. ೩-೨೩೩). [ಸಂ.]

**ಮದನಾಂತಕ** (ನಾ). = ಮದನಹರ ೧ : ಅರಸನಾಕ್ಷಣದೊಳಾ ಮದ ನಾಂತಕನ ಸದುಭಕ್ತನಂ ಕರೆತರಿಸಿಯಿಂತೆಂದ (ಬಸವಪು. ೫೩-೪೨) ; ತ್ರಾಹಿ ಮದನಾಂತಕ ಪುರತ್ರಯದಾಹ ಹರಶಂಕರ ಮಹೇಶ (ಕುಮಾ. ಭಾ. ೬-೪೫).[ಸಂ.]

**ಮದನಾಂದೋಳನ** (ನಾ). [ಕಾಮಶಾ] ಒಂದು ನಾಡಿಯ ಹೆಸರು : ಮದನಾಂದೋಳನ ಮದನ ಛತ್ರ ಪೂರ್ಣಚಂದ್ರಾದಿ ನಾಡೀಮರ್ಮಜ್ಞರಿಂ (ವಿವೇಕ. ೧೮೪). [ ಸಂ. ಮದನಾಂದೋಲನ ]

**ಮದನಾಂದೋಳಕ** (ನಾ). = ಮದನಾಂದೋಳನ : ನಾಲಗೆಯ ತುದಿಯಿಂ ಮದನಾಂದೋಳಕನಾಡಿಯಂ ಹಲವು ಬಾರಿ ಅಲ್ಲಾಡಿಸುವುದು (ಕಾಮಶಾ. ೨೬೯). [ಸಂ.ಮದನಾಂದೋಲಿಕ]

**ಮದನಾಂಬು** (ನಾ). = ಮದನಜಲ ೨ : ಮದನಾಂಬುಪ್ಲವದುರ್ಗ ಮಾಗ್ಗದೆ . . . ಸುಸಿಲಿಂದಾ ಪಾಣ್ಬೆಯರ್ಪೋಗಿದರ್ (ಶಾಂತೀಶ್ವ. ೧೧-೨೬). [ಸಂ.]

**ಮದನಾಕ್ರಾಂತ** (ನಾ). ೧. ಕಾಮಬಾಧೆಗೆ ಒಳಪಟ್ಟವನು. ೨. ಬಕುಳ ವೃಕ್ಷಗಳಿಂದ ಆವೃತವಾದುದು. ೧, ೨ : ಅದು . . . ವಿರಹಿಜನ ದಂತೆ ವಿವಿಧಪಲ್ಲವಾನಿಲವೀಜ್ಯಮಾನಮುಂ ಮದನಾಕ್ರಾಂತಮುಂ . . . ಎನಿಪುದು (ಕಾದಂಪೂ. ೧೧೦). [ಸಂ.]

**ಮದನಾಗಮ** (ನಾ). = ಮದನಶಾಸ್ತ್ರ : ಚತುರರೋದಿಸಿದ ಮದ ನಾಗಮಂಗಳಂ ಪದಂಗುಟ್ಟಿ ಪರಮಪಂಡಿತಂಗಳೆನಿಪ ಪಂಜರದ ಪಂಡಿತಪಕ್ಕಿ ಗಳೊಳಂ (ಪುಷ್ಪ. ೩-೬೬ ವ) ; ದಿವ್ಯಾಂಗಿಯೆಂದೆನಿಪ ಸತ್ಯಾಮರಿ ಯವ್ವನದಿ ತಾ ಪಿಂಗದೆ ಮದನಾಗಮಪನುಪಮಾವಾಗವೋದುತ್ತಿರಲು (ಪದ್ಮಿನೀ. ೯-೨೫). [ಸಂ.]

**ಮದನಾತುರ** (ನಾ). ಕಾಮದ ತೀವ್ರ ಅಭಿಲಾಷೆ ; ಕಾಮಾತುರ : ಮದನಾತುರ ಕೈಮಾಱಿದೊಡವೆಯೊಳೆ ಹದುಳಸಬೇಕಲ್ಲದಿಂತು ಇದಿರಿಗೆ ಕಾಣೆಪುದುಚಿತವೆ ರತ್ನಾಜಿ (ಕುಮಾರರಾ. ೨೩-೪೩) : ಮೆಯ್ಯ ಪುಳಕದಿಂದ ಪೊಣ್ಮೆ ಮದನಾತುರಂ ತಲೆದೋಱೆ . . . ಪೆಣ್ಮಾಂಚದಂಚಿದುಪ್ಪುಳ್ಪಾಸಿಗೆಳೆದೊಯ್ದು ಳನಿಯನಂ ಬಲ್ಪಿನಿಂದೆ (ಕ್ಷಬಿಶಾ. ೧೧-೦೯). [ಸಂ.]

**ಮದನಾತುರೆ** (ನಾ). ಕಾಮೋದ್ರೇಕಗೊಂಡವಳು : ಕಾಮಾತುರೆ : ಮದನಾತುರೆಯಪ್ಪೆನ್ನೀ ಹೃದಯದ ರಾಗವನೆ ಪರ್ಚುಗೊಂಡಂತಿರೆ ಕೆಂಪೊದವಿದ ಪಡುವಣದೆಸೆಗೆಯ್ದಿದನರುಣರುಚಿಪ್ರಕಾಶನಪ್ಪ ದಿನೇಶಂ (ಕಾದಂಪೂ. ೬೦೮). [ಸಂ. ಮದನಾತುರಾ]

**ಮದನಾನಲ, ಮದನಾನಳ** (ನಾ). ಕಾಮದಿಂದ ಉಂಟಾದ ತಾಪ : ಕಾಮಾಗ್ನಿ : ಹೃದಯದೊಳಿರ್ದ ವಲ್ಲಭೆಯನೀಕ್ಷಿಸಲೆಂದೊಳಪೊಕ್ಕು ಮೆಯ್ಗೆ ಪರ್ಬಿದ ಮದನಾನಲಂಗಗಿದು ಭೋಂಕನೆ ಮೆಯ್ಗರೆದಿರ್ದವೆಂಬಿ ನಂ . . . ಅಡಂಗಿದುವು ಶರೀರದೊಳ್ ವಿರಹದಿಂದಖಿಳೇಂದ್ರಿಯಮಾ ಮುನೀಂದ್ರನಾ (ಕಾದಂಪೂ. ೬೨೯). **ಮದನಾನಳ** : ಮದನಾನಳನೇಱದೆ ಮಾಣದೆಂದು ಮನವೆಂಬ ಮನೆಯ ಮೇಗಬ್ಬಜನೆತ್ತಿದ ಕೊಡಗಳೆಂತಿರೆಸೆ ದುವು ಸುದತಿಯ ಲಾವಣ್ಯಪರಿಪೂರ್ಣಕುಚಂಗಳ್ (೦೯ಲಾವ. ೬-೬೩). [ಸಂ.]

**ಮದನಾರಾತಿ** (ನಾ). ೧. ಮನ್ಮಥನ ವೈರಿ ; ಶಿವ : ಮದನಾರಾತಿಶಿರಶ್ಶಿವಾವಾಣಿಯುಂ ... ಬುಜ್ಜನೆಯ್ದಿದನುತ್ತುಂಗತರಂಗೆಯುಂ ಶಫರಲೋಲಾಪಾಂಗೆಯುಂ ಗಂಗೆಯುಂ (ಶಂಶಶಂ. ೮. ೦೯೭-೯೭೪). ೨. ಮನ್ಮಥನ ಶತ್ರು ; ಜಿನ : ಮದನಾರಾತಿಯ ಮುನ್ನಿನುತ್ಸವಕೆ ಬರ್ಪಂದಲ್ಲಮಿಾಯೊಪ್ಪವಿಲ್ಲಿದು ಮತ್ತೊಂದು ಮದೇಭಶೋಭೆ . . . ಎಂಬಂತೆಸೆದುರ್ವಿಗೇಂ ಪಡೆದುದೋ ದೇವಾಗಮುಂ ರಾಗಮುಂ (ಕೃಷ್ಣಪು. ೦೯-೪೮). [ಸಂ.]

**ಮದನಾರಿ$_1$** (ನಾ). ಮದವುಳ್ಳ ಹೆಣ್ಣು ; ಸೊಕ್ಕಿದ ಹೆಣ್ಣು : ಮಗ ನಿನ್ನ ಹಿಡಿಲಾಕ ಮೂಗಿಲ ಮುಟ್ಟಿತ ಜೀವ ಮದನಾರಿ ನನ್ನ ಸೊಸಿ ಬಂದು ನಡಿವಾಗ ಮಗ ನಿನ್ನ ಮನವು ಎರಡಾಗಿ (ಜಕ್ಕ್ಗಿ. ೦೦೨).

[ಸಂ. ಮದನಾರೀ]

**ಮದನಾರಿ$_2$** (ನಾ). ೧. =ಮದನಾರಾತಿ ೧ : ಆ ರಜತಗಿರಿಶಿಖರದೊಳ್ ಮದನಾರಿಯುಂ ಗೌರಿಯುಂ ಮುಂಚಿತಲೀಲಾರಚಿತಸುಖಸಂಕಥಾಪ್ರಿಯಕೌತುಕದೊಳಿರಲು (ಜಕಪು. ೦-೩೨) ; ಆರು ಕೊಟ್ಟರು ಶರವನಿವ ಮದನಾರಿಯೋ ನಿಮ್ಮಯ್ಯನಹ ಜಂಭಾರಿಯೋ (ಶುವ್ಯಾತ್ರ್ಯೆ. ೨೯-೦೩); ಎಲ್ಲಿಗೊಪ್ಪುವನೀ ಸುರಥನ ತಲೆಯುಂ ಗರುಡಂ . . . ಕೊಂಡು ಬಾರೆಂದು ಮದನಾರಿ ಬೆಸಸೆ (ಶೈಬಾಖಾ. ೦೯-೦೯). ೨. = ಮದನಾರಾತಿ ೨ : ಮದನಾರಿ ನಾಲ್ವೆರಲ್ ಮುಟ್ಟದೆ ಜಿನಪತಿವರ್ಧಮಾನಂ . . . ಒಪ್ಪುತ್ತಿರ್ದಂ (ವರ್ಧಪು. ೦೩-೦೦೨).

[ಸಂ.]

**ಮದನಾವತಾರ** (ನಾ). ೧. ಮನ್ಮಥನ ರೂಪು,—ಆಕಾರ : ಹಾರಂಗಳೊಳೆಸೆವೀ ಮಣಿಹಾರಂ ಮದನಾವತಾರಮೆನಿಸಿದ ನಿನ್ನಾಕಾರಕೆಣೆಯಕ್ಕುಂ (ಕಾದಂಬ. ೦೦೬). ೨. ಗೌರವಸೂಚಕವಾದ ಒಂದು ಬಗೆಯ ಛತ್ರಿ : ಮದನಾ[ಪಾಠಾಂ. ಮದನನ]ವತಾರವುಂ ಕನಕದಂಡಚಾಮರಮುನನ್ನದೇಭಮನುತ್ತುಂಗದ ಛತ್ರಗಾವೆಯುಂ ಪಡೆದುದಾತ್ತ ಕವಿತಿಲಕನೆನಿಸಿದಂ ಕವಿರತ್ನಂ (ಅಜಪು. ೦೨-೩೦). [ಸಂ.]

**ಮದನಾವಸ್ಥೆ** (ನಾ). ಕಾಮಲಾಲಸೆಯಿಂದ ಉಂಟಾಗುವ ಸ್ಥಿತಿ ; ಕಾಮಾವಸ್ಥೆ ; ಮದನಾವಸ್ಥೆಯನೆಯ್ದಿ ತನ್ನ ನೃಪತಿ ಕೆಡಂ ಬಂದನೆಂದಾರು ಮೆನ್ನದೆ (ಕುಸುಮಾ. ೯-೯೬); ಆ ತಾಮ್ರಚೂಡಂ ಮದನಾವಸ್ಥೆಯಿಂದಂ ಮೂರ್ಛೆವೋಗಿ ವ್ಯಾಮುಚಿದೊಜಂಗಿರ್ಪ ತತ್ಕುಮಾರಿಯುಂ ಕಂಡು ನುಡಿದುದು (ಅದ್ಭ್ಯ. ೬-೬೮ ಬ). [ ಸಂ. ಮದನಾವಸ್ಥಾ ]

**ಮದನಾವಾಸ** (ನಾ). ಮನ್ಮಥನ ನಿವಾಸ : ಇದೆ ಸಾರಂ ಸ್ವರ್ಗಲೋಕಕ್ಕೆ . . . ವಿಭವಕ್ಕಾಲಯಮುಂ ಲೀಲೆಗುದ್ಯಾನ್ಮದನಾವಾಸಂ (ಶಾಂತಿಪು. ೬-೨೪).

[ಸಂ.]

**ಮದನಾವೇಶ** (ನಾ). ಉತ್ಕಟವಾದ ಭೋಗಾಸಕ್ತಿ ; ಕಾಮೋದ್ರೇಕ : ಇದಜೊಳ್ ಖೇಚರಕಿನ್ನರಾಮರಯುಗಂ ನಾನಾವಿನೋದಂಗಳಿಂ ಮದನಾವೇಶಕರಂಗಳಂ ಸಲಿಸುತುಂ . . . ತಳ್ತಿರೆ ಕಾಮರಾಗಮುಮಮಾಯ್ತೀನಿಸಗಂ ರಮ್ಯಮೋ (ಅಜಿತ. ೯-೦೦೬). [ಸಂ.]

**ಮದನಾಸ್ತ್ರ** (ನಾ). ಕಾಮನ ಬಾಣ : ಮದನಾಸ್ತ್ರಂ [ಕ]ರ ಸಾಣೆಗಾಣಿಸಿದಾದೆಂಬಂತಾಗೆ ನಿನ್ನೊಂದು ಕಂದಿದ ಮೆಯ್ಯನ್ನಯ ತೋಳೊಳೊಂದೆ ಸಿರಿಯುಂ ನೀನುಯ್ಯು ತೊಯ್ಯಾ[ಳ್ಪ] ರಾಗದಿನೆನ್ನೊಳ್ ಸುತಮಿರ್ಪುದು (ಶಂಶಪಾ. ೮-೬೬) ; ಮದನಾಸ್ತ್ರಂ ನಿಜಮೂರ್ತಿ ಮೋಹನಶರಂ ಸೌಭಾಗ್ಯಸಂಪತ್ತಿ . . . ಆಗೆ ದಿಟಂ ದರ್ಪಕನಾದದಿಂದೊಲಿಸಿದಂ ವಿದ್ಯಾಧರಸ್ತ್ರೀಯರಂ (ಪಾರ್ಶ್ವಪು. ೬-೨೭). [ಸಂ.]

**ಮದನಿ** (ನಾ). ೧. ಒಂದು ಬಗೆಯ ಮಲ್ಲಿಗೆಯ ಬಳ್ಳಿ ಮತ್ತು ಅದರ ಹೂವು ; ದುಂಡುಮಲ್ಲಿಗೆ : "ದುಂಡುಮಲ್ಲಿಗೆಯು ಮದನಿಯುಕ್ಕುಂ" (ಶುಂಗಣ. ೩೮ ೨೪) ; ಮದನಿಯು ಹೊಸಮಾಲೆಗಳ ಮೇಳಗಳಿಂ . . . ಕಣ್ಣಿತಿಮಂಗಳಮುಂ ಮಾಡುತ್ತಿಂ (ಅದ್ಭ್ಯ. ೩-೨೨). ೨. ಇರವಂತಿಗೆ : ಅತಿಮುಕ್ತ. ೩. ಒಂದು ಬಗೆಯ ಸುಗಂಧದ್ರವ್ಯ ; ಕಸ್ತೂರಿ.

[ ಸಂ. ಮದನೀ ]

**ಮದನಿಕೆ** 'ಮದನಕಯರ್' ನೋ.

**ಮದನ್ಕೆ** (ನಾ). ಒಂದು ಊರಿನ ಹೆಸರು : ಎಣ್ಪನೂಱಯ್ವತ್ತೊಮ್ಬತ್ತನೆಯ ವರಿಷದನ್ದು ಮದನ್ಕೆಯೊಳಿಱಿದು ಪರದೇವನು ಪೆರ್ಮ್ಮಡಿಯು ನೊಟವ್ಪನು ಮೊಟಾಥ' ಧಯೆಗೇದ XXX (ಎಕ. X (ಅ), ಶಂಶಾಪು. ೦೬೩-೩ ; 937). [ ? ]

**ಮದಪಟ್ಟಿಕೆ** (ನಾ). ಆನೆಯ ಗಂಡಸ್ಥಳದಿಂದ ಇಳಿಯುವ ಮದೋದಕದ ರೇಖೆ ; ಮದಲೇಖೆ : ಮಕರಾಂಕದ್ವಿಪಮದಪಟ್ಟಿಕೆಯೆನಿಸಿ ಕಪೋಲಮೂಲಮುಂ ಮುಟ್ಟಿದುವಾ ಚಕಿತಾಕ್ಷಿಯ ಹರಿನೀಳಾಳಕಂಗಳ್ (ಶಂಪಾಪಾ. ೩-೯೪). [ ಸಂ. ಮದಪಟ್ಟಿಕಾ ]

**ಮದಮನೆ** (ನಾ). (?) : ಶ್ರೀವೊರದಾ ಬಡಗಣ ಪಡುವಣ ಕೋಣಾರ್ಬ್ಬನ್ದೇವಂಗೇರಿ ಮದಮನೆ ಒಂದಂ (ಎಕ. VII (R). ಶಾಗರು. ೦೪೯-೬೯; 776). [ ? ]

**ಮದಮುಖಿ** (ನಾ). ಸೊಕ್ಕಿನಿಂದ ಕೂಡಿರುವವನು ; ಗರ್ವಿಷ್ಠ : "ಮದಮುಖರೆನೆ ದರ್ಪಮುಖರು" (ಶಾರದ. ೨೪) ; ಮದಮುಖನೆಡಬಲನ ನೋಡಿದರೆ ರಕ್ಕಸಕೋಟಿ ಜೀಯೆನುತ ಸಿಡಿಲ ಸೆಟೆ[3] ಬಿಟ್ಟಂತೆ ಭುಜವನು ಹೊಡೆದು ಮುಂಚಿತು (ಶುವ್ಯಾತ್ರ್ಯೆ. ೦೩-೯೬); ಕದಿರವಾನನು ಜಲಹುಖಾನರೆಂದೆಂಬ ಮದಮುಖಿಯಾಸರೀಜಾದರು (ಕುರಾಶಾಂ. ೨೦-೦೯). [ಸಂ.]

**ಮದರಂಗ** 'ಮದರಂಗಿ' ನೋ.

**ಮದರಂಗಬಾಳೆ** (ನಾ). ಕೆಂಪುಬಣ್ಣ ಹಾಗೂ ಸುವಾಸನೆಯಿಂದ ಕೂಡಿದ ಒಂದು ಬಗೆಯ ಬಾಳೆ : (ಕ).

[ ಮದರಂಗ (< ಮದರಂಗಿ) + ಬಾಳೆ$_1$ (< ಬಾಟ[3]) ]

**ಮದರಂಗಿ, ಮದರಂಗ, ಮಧುರಂಗಿ** (ನಾ). ೧. ಒಂದು ಬಗೆಯ ಗಿಡ ಮತ್ತು ಅದರ ಎಲೆ : ಗೋರಂಟಿ : ಗೋರಂಟಿ, ಮದರಂಗಿ (ವ್ಯಶಿಗ. ೯೯-೬೬೪) ; ಮದರಂಗಿಬೀಜ ಒಂದುರೂಪಾಯಿ ತೂಕ (ಕಾಮಣ. ೨೬೭); ಸುತ್ತುಮುತ್ತು ಮದರಂಗಿ, ನಡುವೆ ಮಾಧವಿಯ ಬಳ್ಳಿಮಾಡ (ಕವೀಳ. ೨೨-೯). ೨. ಹೆಣ್ಣುಮಕ್ಕಳು ಅಲಂಕಾರಕ್ಕಾಗಿ ಉಗುರು, ಕೈ ಮತ್ತು ಪಾದಗಳಿಗೆ ಹಚ್ಚಿಕೊಳ್ಳುವ ಗೋರಂಟಿಎಲೆಯ ಕೆಂಬಣ್ಣದ ರಸ ; ಮೆಹಂದಿ : ತುಟಿಯ ತಂಬುಲ ಉಗುರ ಮದರಂಗಿಯೋ (ಸಮನ. ೯-೩೮) ; ಮದರಂಗಿ ಮುಂಗುರಿನಲಿ ಸಾರಂಗಿ ಬಾರಿಸುತ ಬೋರಂಗಿ ಚಿತ್ರಾಂಗಿ ಭೋರಿಡುತಿರೆ (ಭಾವಜ. ೦೭-೩೨೩). **ಮದರಂಗ** : ೩. ಕೆಂಪುಬಣ್ಣ : 'ಮದರಂಗ ಬಾಳೆ' ಪರಾ. **ಮಧುರಂಗಿ** : ೧. "ರುಧಿರೆಯನೆ ಮಧುರಂಗಿ" (ಶುಂಗರಾ. ೩೩-೦೩) ; ಓಂಗದೆ ಕಡಲೆಯ ಹುಳಿ (ಮ)ಧುರಂಗಿಯ ಬಿತ್ತಿಕ್ಕಿ ಗರ್ಜಿನೀವುದು ಸಿತದಿಂ ತೆಂಗಿಂಗಾ ಕ್ಷೀರವಿಷಕ್ಕಂ ಗಣಜಲೆ ವಜ್ರಿಯೆಸೆವ ಪಾಲಂ ಸಿತದಿಂ (ಜಮಾತ. ೨-೯೭).

[ ← ತುಳು. ಮದರೆಂಗಿ, ಮದಿರೆಂಗಿ, ಮದ್ರೆಂಗಿ ]

**ಮದರದನಿ** (ನಾ). ಸೊಕ್ಕೇರಿದ ಆನೆ ; ಮದಗಜ : ಸಾರ್ಚಿದ ಮದರದನಿಗೆ ಹರಿ ನಿಲ್ಲದೆ ನಿಚ್ಚಟಗಲಿಗೆ ಪೆಸರ ಕಲಿ ನಿಂದಪನೇ (ಶಾಂತಿಪು. ೨-೦೦೪) ; ಮದರದನಿ ಕಂಭಮುಂ ಕಿಟ್ಟಿದಿರೆ ನೆಲಂ ಭೋರನೆದ್ದುರಲ್ (ಪೆಬಪು. ೩-೦೨೦) ; ಸದಕಿವನು ಬಳಿಕಾತ ರಣಕೊದಗಿದ ಮಹಾರಥಮಂಡಳಿಯ ಮದರದನಿಗಳ ಮಾವುತರ ರಾವ್ತರ ಹಯುವ ಕಾಲಾಳ (ತೊರೆರಾ. ೬-೯೩-೮). [ ಸಂ. ಮದರದನಿನ್ ]

**ಮದರಸ** (ನಾ). ಮದೋದಕ ; ಮದಜಲ : ಮದರಸವೊಕ್ಕುದಿಲ್ಲಿ ಕರಿ ಪೋಪುದು ಸಿಂಗದ ಬಟ್ಟೆ ನೋಳ್ಪೊಡಿಂತಿದು (ಕಂಶಂ. ೩-೯೬). [ಸಂ.]

**ಮದರಾಸ್‌ಮಲ್ಲಿಗೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ಇಬ್ಬನಿ, ಪರಲೆ, ಇಟ್ಟೀವು, ಯಿಸಗ, ಮದರಾಸ್‌ಮಲ್ಲಿಗೆ (ಕೃ.ಶಿ. ೨೩-೯೦೬). [ಮದರಾಸ್$_6$ + ಮಲ್ಲಿಗೆ]

**ಮದರಿಕಲ್** (ನಾ). ಒಂದು ಊರಿನ ಹೆಸರು : ಶ್ರೀಬೇವಿಗೆ ಮುತ್ತರಸರ ಮಗನು ಪೊಲೆಯಮ್ಮನ್ನ ಮದರಿಕಲ್ಲನಾಳುತ್ತುವರ್ ಬಿಸುಮರಸರ ದೇಗುಲಕೆ ಕೊಟ್ಟ ಕಿಯ್ಯು ಪನ್ನಿರ್ಚ್ಛತ್ತು (ಎಕ. XI. ತಳ್ಳ. ೩೩-೨೦; 815). [ ? + ಕಲ್$_3$ ]

**ಮದಲಗಿತ್ತಿ** 'ಮೊದಲಗಿತ್ತಿ' ನೋ.

**ಮದಲಿಂಗ** (ನಾ). ಮದುವೆಯ ಹುಡುಗ; ಮದುಮಗ : ಕೊಟ್ಟಿಪಸು ಪಗ್ಗಮಾನಂದುಜಿ ಕಳ್ಳುಕೊಂಡು ತಾಂ ಓಡಿ ಬಂದಿರ್ದು ಕೊಂದುದಾ ಗಾಡಿಕಾಜಿ ಮದಲಿಂಗನಂ (ಶಾಂತಿ. ೨-೯-೩೩) ; ಮದಲಿಂಗನೇ ಬ್ಯಾಡ ಅಂದ್ರೆ ಮದುವೆ ಯಾರಿಗೆ ಮಾಡಲಿ ? (ತಂಪತೋ. ೦೬೩).

[< ಮದುವಳಿಗ]

**ಮದಲಿಂಗಿ** (ನಾ). ಮದುವೆಯ ಹುಡುಗಿ : ಮದುಮಗಳು : ನನ್ನ ಮುದ್ದುಗೌರೀ . . . ಓ ನನ್ನ ಮುದ್ದು ಮದಲಿಂಗೀ (ತಂಪಗಿ. ೩೬). [ಮದಲಿಂಗ + — ಇ$_2$]

**ಮದಲೂರ್** (ನಾ). ಒಂದು ಊರಿನ ಹೆಸರು : ಕಣ್ಣರ ಮದಲೂರೆಜ್‌ದು ತೊಱುಗೊಳ್ಳೊಡೆ ತಿಪ್ಪಣಮಾರ ಶ್ರೀಪೋಜ್ ತಿಪ್ಪಣಯೂರಳ್ಳಿಗ . . . ಪಲರನೆಜ್‌ದು ಸಗಪೋಜ್‌ದನ್ (ಎಕ. X. ತನ್ನ.ಶ. ೩೨-೩; ಸು. 870 ?) ; ರಾಮಜಸ್ಸ್ಕಾಳರ್ಗ್ಗೆ ಮದಲೂರು ಮಳಗವಾಡಿಯುಮಂ . . . ಕೊಟ್ಟರ್ (ಎಕ. XI. ತಕ್ಕದು. ೬೯-೨೯; 968) ; ಸ್ವಸ್ತಿಶ್ರೀಮನು ಗಗ್ಗರೊಕ್ಕಲಾ ಮದಲೂರ ಕುಪ್ಪನ್ನೊಱುಗೊಳೊಳ್ ಬಿದು ಸತ್ತು ಸಗ್ಗ ಆದನ್ನ ಪಕ್ಕೆ ಮುತೂಮ್ಮು ಕಜನಿ ಪರಿಹಾರ ಕೊಟ್ಟರ್ (ಎಕ. X. ಕೋಲಾರ. ೦೬೨-೩ : ಸು. 1000 ?). [ಮದಲ್ ? + ಊರ್]

**ಮದಲೇಖೆ** (ನಾ). ೧. ಆನೆಯ ಕಪೋಲದ ಮೇಲೆ ಮದೋದಕವು ಹರಿದುದರಿಂದಾದ ಗೆರೆ, — ಪಟ್ಟೆ : ಮದಲೇಖೆಗೆ ಸದೃಶಂ ವ್ಯಾಗ ಮದತಿಳಕಂ ಕರಿಕರಕ್ಕೆ ಸರಿ ಕರಂ (ಪಾರ್ಶ್ವಪು. ೬-೯೦). ೨. ಕಸ್ತೂರಿ ಮುಂತಾದ ಸುಗಂಧದ್ರವ್ಯಗಳಿಂದ ಹೆಂಗಸರು ತಮ್ಮ ದೇಹದ ಮೇಲೆ ಬರೆದುಕೊಳ್ಳುವ ಚಿತ್ರ ; ಪತ್ರಭಂಗ; ಮಕರಿಕೆ : ಅಭಿನವ ಮದಲೇಖಾಲಾಲಿತಂ . . . ಪ್ರಸ್ಫುರದ್ಘರ್ಮವಾರಿಪ್ರಭವಮುಸೆದುದಂತಾ ಕಾಂತೆಗಾ ಕಾಂತಸಂಗಂ (ಶಂಪಾ. ೩-೨೬). [ಸಂ. ಮದಲೇಖಾ]

**ಮದಲೋಲ** (ಗು). ಮತ್ತು ಬರಿಸುವಂತೆ ಚಂಚಲವಾದ : ಮದನ ಮಿದಲ್ಲಂಬುರುಹಂ ಮದಲೋಲವಿಲೋಚನಂಗಳಲ್ಲಮಿವಳಿಗಳ್ (ಶಬಿಪಾ. ೩-೨೯). [ಸಂ.]

**ಮದವ** 'ಮದೆವ' ನೋ.

**ಮದವಟ್ಟಿಗೆ** (ನಾ). ಜಡೆಗಟ್ಟಿದ ತಲೆಗೂದಲು : "ಮದವಟ್ಟಿಗೆಯ ಕಡ್ಡಣಾ ಎನೆ ತಾನೆ ಜಡೆಗಟ್ಟು" (ಶಸ್ತ್ರ. ೩೨). [ ? ]

**ಮದವಟ್ಟೆ** (ನಾ). ೧. = ಮದಲೇಖೆ ೧ : ಕಾರ ತಂದಲ್ಯೊಲಲ್ಲುಗು ಪೆಂಟುಂ ಮದವಟ್ಟೆ[ಪಾಠಾಂ. ವರ್ಕೆ]ಯಿಂ . . . ಏಂ ಜನಕಂಗೆ ಹರ್ಷಜನಕಂ ತಾನಾಯ್ತೊ ಮಸ್ತದ್ವಿಪಂ (ಶಂಪಾಪು. ೯-೦೦೯). ೨. = ಮದಲೇಖೆ ೨ : ಪರಿಚಿಯೊಳ್ಪರಿಚಯಂಬಡೆದ ಮದವಟ್ಟೆಯುಂ ಮದವಟ್ಟೆಯೊಳೊಡಂ ಬಟ್ಟ ವಿಪುಳಕಪೋಳತಳವಿಚಿತ್ರಪತ್ರಲೇಖೆಯುಂ (ಅಂತ. ೯-೯೦ ವ); ಆಕೆಯ ಕಪೋಲದೊಳಾ [ನ]ವಧೂಮಲೇಖೆ . . . ಕತ್ತುರಿಯೊಳ್ ಮದ ವಟ್ಟೆಯಂ ಪಿಳಾಪದೆ ತೆಗೆವಂತೆ ಚಿಕ್ಕೆಸೆವ ತೋಱುದುದಾ ಕದನತ್ರಿನೇತ್ರನಾ (ಶಂಕರ. ೩-೬೩). [ಮದ + ಪಟ್ಟೆ$_3$]

**ಮದವಟ್ಟದೆಗೆ** (ಕ್ರಿ). ಕೆನ್ನೆಯ ಮೇಲೆ ಕಸ್ತೂರಿ ಮುಂತಾದ ಸುಗಂಧ ದ್ರವ್ಯಗಳಿಂದ ಚಿತ್ರವನ್ನು ಬರೆ. — ಮಕರಿಕಾಪತ್ರವನ್ನು ರಚಿಸು : ಪರಿಚೆಯನೊಗ್ಗುಡಿಸುವ ಕತ್ತುರಿಯಿಂ ಮದವಟ್ಟ[ಟ್ಟೆ]ದೆಗೆವ ಬೊಟ್ಟಿಡುವ ಕುಚಾಂತರದೊಳ್ ಹಾರಮನಿಳಸುವ [ಯ]ರವಿಂ ಸ್ವಾಧೀನಪತಿಕರಂ ಬಗೆಗೊಂಡಳ್ (ಪರಶಿಪ. ೬-೬೩); ಮದವಟ್ಟ[ಟ್ಟೆ]ದೆಗೆದಿಟ್ಟ ಕತ್ತುರಿಯ ಚೆಲ್ವ ಕೊರಲೊಳಿಕ್ಕಿದ ಕರಿಯ ದಂಡೆಯೊಳೆರಡೆ ಬರೆ ಮುಡಿದ ಮಲ್ಲಿಗೆಯ ಪರಿಮಳಕ್ಕಮಡಸಿದ ಕಪ್ಪುರದ ಪಪ್ಪಕಕ್ಕಂ ಮಱುದುಂಬಿವಿಂಡು ಮುಂದೆ ಮುಂಡಳಿಸಿ ಕಟ್ಟಿ ಬರೆ (ಅಪಂಪು. ೨-೨೫ ವ). [ಮದವಟ್ಟೆ + ತೆಗೆ$_1$]

**ಮದವಡಿ** (ನಾ). ಒಂದು ಜಲಾಶಯದ ಹೆಸರು : ಮದವಡಿತಟಾಕಸ್ಯ ದಕ್ಷಿಣಭಾಗ ತತ ಕೊಮುರತಟಾಕಸ್ಯ ದಕ್ಷಿಣಭಾಗ (ಮೈ.ಅಂ. ೦೯೪೨.೬೩-೦೦೯ ; 819). [ ? ]

**ಮದವಡೆ** (ಕ್ರಿ). ಸೊಕ್ಕೇರು ; ಮದವೇರು : ಆಬಿಳಮ್ಮಿಗ ಮದವಡೆದ ಪಂಚಿಗಳಂಚರವ ಬೀಜ್‌ದವು ಕೊಳಗಳಲಿ (ತೊರವೆ. ೯-೩-೦೦).

[ಮದ + ಪಡೆ$_1$]

**ಮದವಣಿಗ** 'ಮದುವಳಿಗ' ನೋ.

**ಮದವಣಿಗತನ** 'ಮದುವಣಿಗತನ' ನೋ.

**ಮದವಣಗಿತ್ತಿ** 'ಮದುವಳಗಿತ್ತಿ' ನೋ.

**ಮದವಣಿಗೆ** 'ಮದುವಳಿಗೆ' ನೋ.

**ಮದವಸಲೆ** 'ಮಡಿವಸಲೆ' ನೋ.

**ಮದವಳ್** 'ಮದೆವಳ್' ನೋ.

**ಮದವಳಗಿತ್ತಿ** 'ಮದುವಳಗಿತ್ತಿ' ನೋ.

**ಮದವಳಿಕೆ** 'ಮಡವಳಿಗೆ' ನೋ.

**ಮದವಳಿಗ** 'ಮದುವಳಿಗ' ನೋ.

**ಮದವಳಿಗೆ** 'ಮದುವಳಿಗೆ' ನೋ.

**ಮದವಳಿಗೆಕಲು** (ನಾ). ಮಹಾಸತಿಕಲ್ಲು ; ಮಾಸ್ತಿಕಲ್ಲು : ಗಱುಡ ಮಾಡಿಸಿದ ಮದವಳಿಗೆಕಲು (ಮೈ.ಅಂ.೦೯೨೬. ೮೮-೦೯ ;1399).

[ಮದವಳಿಗೆ ( < ಮದುವಳಿಗೆ ) + ಕಲು$_1$ ( < ಕಲ್$_3$ ) ]

**ಮದವಾದಿ** (ನಾ). ಸೊಕ್ಕಿನಿಂದ ವಾದ ಮಾಡುವವನು ; ವಾಚುಂಡಿ : ಇವ(ದಾ)ನಟಿದೊನ್ ವಾಪ್ಪನಕ್ಕೆ ಮದವಾದಿ ಅಕ್ಕೆ ವಾರಣ(ನಾ)ಸಿವದ ಸಾಸಿರಕವಿಲೆಯಂ ಕೊನ್ನೊನಕ್ಕು (ಎಕ. X. ೦೬೬-೩ ; 17 ಶತು ೫೫).

[ಸಂ. ಮದವಾದಿನ್]

**ಮದವಾರಣ** (ನಾ). ೧. = ಮದರದನಿ : ಗೈರಿಕರಸಾರ್ದ್ರಮಂ ಸಿಂಧೂರದೆ ತಲೆವ[ಜ್]ದುದಂ ಕರಂ ಕಂಡಾಂ ಸಂಧ್ಯಾರಾಗದೊಳಿಜ್‌ದುದೆ ಮದವಾರಣಮಂ ಸೋಂಕೆ ಕೆಲದೊಳೊಯ್ಯನೆ ಪೋದಂ (ಶಬಿಪಾ. ೩-೯೨) ; ಎನಿತು ಮದವಾರಣಂ ಕ್ರೋಧಿನಿ ಪೊಕ್ಕುಂ ಸಿಂಹಪೋತಮಂ ಗೆಲ್ದುದೆ (ಶಾಂತಿ. ೯-೩೦) ; ವೀರರಿಪುಕನಳೀವನಕಿ-ಮದವಾರಣನು ಫಲುಗುಣತನಯನುದಾರಪವ್ಯವ್ಯೂಹದಲಿ ಗೆಲಿದನು ಕುಮಾರಕರ (ಕುಮಾರವ್ಯಾ. ಶ ಪಂತತ). ೨. ಸೊಕ್ಕನ್ನು ಇಳಿಸುವವನು ; ಗರ್ವಭಂಗಮಾಡುವವನು : ಅನ್ಯನರೇಂದ್ರಗಂಧವಾರಣಮದವಾರಣಂ ವಿಜಯಕಾರಣನಮ್ಮನ ಗಂಧವಾರಣಂ (ಗದಾಯು. ೦-೦೬). ೩. ಪ್ರೀತಿಯಿಂದ ಚಿಕ್ಕವರನ್ನೂ ಅಪ್ಪರನ್ನೂ ಕುರಿತು ಸಂಬೋಧಿಸುವ ಒಂದು ಪದ : ಗುಣವಹುದು ನಿನಗಿಂದು ಕುಲದಿನವಣಿಯ ದೀಕ್ಷಿತನಾಗು ಮದವಾರಣನೆ ದೀಕ್ಷಿತನಾಗು (ಕುಮಾ.ಕ. ೬-೨೬) ; ಅಣಿಗನ ತೆಗೆದಪ್ಪಿ ಮದವಾರಣನೆ ಕುಳ್ಳಿರೆನುತ್ತ ನೋಡಿದಳು ಸಹೋದರನ (ಕುಮಾ.ರಿ. ೨-೯೦). [ಸಂ.]

**ಮದವಾರಿ** (ನಾ). = ಮದರಸ : ಕರೀಂದ್ರಸಂಕುಳಮದವಾರಿಧಾರೆಗಳ ಪೆರ್ಮಳೆಯೊಳ್ ರಣಮೆಂಬ ರಾತ್ರಿಯೊಳ್ ಸಲೆ ಬರುತಿರ್ಪಳೆಂದುಮಭಿಸಾರಿಕೆಯಂದದೆ ರಾಜ್ಯಲಕ್ಷ್ಮಿ ತನ್ನೊಲವಿನೊಳ್ (ಕಾದಂಬ. ೦೩). [ಸಂ.]

**ಮದವಿ** (ನಾ). ಒಂದು ಬಗೆಯ ಬೆಲೆಬಾಳುವ ರೇಷ್ಮೆಬಟ್ಟೆ : ಪಸರಿ ಗಬ್ಬುಳ ನೀಲಿಗಂಧ ಸಂಧ್ಯಾರಾಗ ಕುಸುಮಿ ಯಾವಂಚೆ ದೋರಿಯ ನಾಗ ವಟ್ಟೆ ಪುಲ್ಲಿ ಸುವರ್ಣಪಟ್ಟೆ ಮದವಿ ಮಂಜಿಷ್ಠೆ ದೇವಾಂಗವೆಂದು ಪಟಭೇದ ಮಾಕ್ಕುಂ (ಚುಂಗರಾ. ೧೦೦-೨೮). [ ← ಮರಾ. ಮದವೀ ]

**ಮದವಿಕಳ** (ನಾ). ಸೊಕ್ಕಿನಿಂದ ಅರಿವುಗೆಟ್ಟವನು ; ಮದಾಂಧ : 'ಮದವಿಕಳತನ' ನೋಡಾ. [ಸಂ. ಮದವಿಕಲ]

**ಮದವಿಕಳತನ** (ನಾ). ಸೊಕ್ಕಿನಿಂದ ಅರಿವುಗೆಡುವುದು : ಪಮಪುನಾಭನೆ ತಾನಲಾ ಹರಹರ ಮಹಾದೇವ ಉದಿಸಿದನು ನರನಾಗಿ ತಾನೀ ಹದನನಱಿಯದೆ ತಪ್ಪಿದೆನಲಾ ಮದವಿಕಳತನದಿಂದ ಕೆಟ್ಟೆನು (ಬಭಾಗ. ೩-೬-೦೭). [ಮದವಿಕಳ + — ತನ]

**ಮದವಿಕಾರ** (ನಾ). ಮದ್ಯಸೇವನೆಯಿಂದುಂಟಾಗುವ ಅಮಲು. — ಮತ್ತು : ಪಿಷ್ಟೋದಕಗುಡಧಾತಕೀಸಂಯೋಗದಿಂದಮೆಂತು ಮದ ವಿಕಾರಮೆಸೆದಪ್ಪುದಂತೆ ಕಾಯಾಕಾರಪರಿಣತಪೃಥ್ವ್ಯಪ್ತೇಜೋವಾಯುಗಳತ್ತಣಿಂ ಬಂದು ಗರ್ಭಾದಿಮರಣಪರ್ಯಂತಂ ತದಾತ್ಮಕಂ ಚೈತನ್ಯಂ ಪುಟ್ಟುಗುಂ (ಅದಿಪು. ೨-೯ ವ). [ಸಂ.]

**ಮದವಿರಹಿತ** (ನಾ). ೧. ಮದಜಲವಿಲ್ಲದಿರುವ ಆನೆ. ೨. ಗರ್ವವಿಲ್ಲದಿರುವವನು. ೧, ೨ : ಮದವಿರಹಿತನೆನಿಸಿಯುಮುದಿತದಾನಿ (ಶಾಂತಿಪು. ೦-೭೦). [ಸಂ.]

**ಮದವಿಹ್ವಳಿತ** (ನಾ). ಸೊಕ್ಕಿನಿಂದ ಉದ್ವಿಗ್ನವಾದುದು ; ಅಮಲೇರಿ ಉನ್ಮತ್ತವಾದುದು: ಅರಸಂ . . . ಆನೆಯನೇಱಿ ಅಡವಿಗೆ ಪೋದೊಡದು ಮದವಿಹ್ವಳಿತನಾಗಿ ಮೆಯ್ಯಱಿಯದೆ ದಿಶಾಪಟ್ಟಂಗೊಂಡೊಂದೆಸೆಗೆ ಕೊಂಡೋಡಿ . . . ಪರಿಯೆ (ವಡ್ಡಾರಾ. ೧೦೦-೦೩). [ಸಂ. ಮದವಿಹ್ವಲಿತ]

**ಮದವೆ** (ನಾ). (?) : ಇ ಠಾಣಾನ್ತರದ ಸೀಮೆಯ ಮದವೆ ಪತ್ತ ಕೊಟ್ಟಬ ಸುಂಕವ ಬಿಟ್ಟರು (ಕೆಇ. IV. ೩೪-೨೩ : 1109). [ ? ]

**ಮದವೆಳಸು** (ಕ್ರಿ). ಸೊಕ್ಕೇರು ; ಮದೋನ್ಮತ್ತವಾಗು : ಇಪ್ಪತ್ತು ಸಾವಿರ ಪಾದ್ದುಳ ಮದವೆಳಸಿದ ಕರಿಗಳೈವತ್ತು ಸಲೆ ಕುದುರೆಗಳ ಮೇಳದೆ ರುದ್ರಗಣಭೂಪ ತಳುವದೆ ಬಂದನು (ಕಂಪಾ. ೩-೨೪). [ ಮದ + ಬೆಳಸು$_1$ (< ಬೆಳೆಯಿಸು) ]

**ಮದವೆಱು** (ಕ್ರಿ). ಮದವನ್ನು ಹೊಂದು ; ಸೊಕ್ಕು : ಸ್ವೇಚ್ಛಾನುರೋದೋನ್ಮತ್ತ ಮದವೆತ್ತಾನೆಯಂತನಿವಾರಿತೋದ್ವೃತ್ತವೃತ್ತಿಯಲಿ ಕೊರ್ಬಿ (ಬಸಪು. ೪೦-೬). [ಮದ + ಪೆಱು$_1$]

**ಮದವೇತಂಡ** (ನಾ). = ಮದರದನಿ : ಅಕ್ಷೋಹಿಣೀನಾಯಕಂ . . . ಮದಗಳಿತ ಗಂಡಪ್ರಚಂಡಮದವೇತಂಡಮನಣೆದು ಬಿಟ್ಟೆಕ್ಕಿದಾಗಳ್ (ಕಂಕಾ. ೧೨-೩೬ ವ) ; ಕಂಡಣೆದು ಸೂಂಕೆ ಮದವೇತಂಡಮಂ . . . ಗೆಲ್ಲಂಗೊಂಡಂ ಬಗೆಗೊಳ್ವ ತೆಱದೆ ವಿಜಯಾಂಗನೆಯುಂ (ಶಾಂತಿಪು. ೩-೩೩). [ಸಂ.]

**ಮದವೇರು** ' ಮದವೇಱು ' ನೋ.

**ಮದವೇಱಿಸು** (ಕ್ರಿ). ಸೊಕ್ಕೇಗೇಳುವಂತೆ ಮಾಡು : ಪರನ ಮನೋರಥಮಂ ಮದವೇಱಿಪಂತೆ ಪಾರ್ವತಿಗೆ ಸುವಾಸಿನಿಯರ್ ಸಿಂಗರಮಂ ಮಾಡಿ (ಗಿರಿಜಾ. ೦೦-೯೩ ವ). [ಮದವೇಱು + — ಇಸು$_3$]

**ಮದವೇಱು, ಮದವೇರು** (ಕ್ರಿ). ೧. ಬೀಗು ; ಹೆಮ್ಮೆಪಡು : ಎನಗೆ ಜಗತ್ತ್ರಯಿರಾಜಮಕರಾವಳಿಗೀ ವಿಟಟೀತ್ರಯಿಪ್ರಸೂನನಿಕರವಾದುವೆಂದು ಮದನಂ ಮನದೊಳ್ ಮದವೇಱೆ ಪೇಱಿದತ್ತನುಪಮಸೌರಭಂ . . . ಕುರವಕಂ ತಿಲಕಂ ವಕುಲಂ ನಿರಾಕುಲಂ (ಚಂದ್ರಪ್ರ. ೬-೩೩) ; ತನಿಮದವೇಱಿ ನಿಮ್ಮಲ್ಲಿ ಸೆಣಸಿದೆನು ಸೇನಾಧಿಪತ್ಯದಲಿ (ಕುಮಾರವ್ಯಾ. ೦-೨೪). ೨. ಉಕ್ಕು ; ಉಬ್ಬರಹೊಂದು : ಮದವೇಱಿದಂಬುಧಿಯ ಸಲಿಲದುಬ್ಬರಕೆಸಬಿರ್ವಾರ್ನಳರು ಹೇಳಾ ತಾಯೆ (ಕವಿರಾ. ೩-೬-೩೧). **ಮದವೇರು** : ೩. ಮತ್ತಿನಿಂದ ಕೂಡಿರು ; ಅಮಲೇರು : ಹೂವಿನ ಬಂಡುಂಡು ಮದವೇರಿದಳಿವಿಂಡು ಮೊರೆಯುವ ನಾದವಿದೆಲ್ಲ (ಶಂಕಾ. ೦೪೪-೯). [ ಮದ + ಏಱು$_1$ (< ಏಱು$_1$) ]

**ಮದಸಿಂಧುರ** (ನಾ). = ಮದರದನಿ : ಹರಿಬದಲಿ ಹೊಕ್ಕರಡುಸಾವಿರ ತುರಗ ಬಿದ್ದವು ನೂಱುಮದಸಿಂಧುರಕೆ ಗುಧನವಾಯ್ತು (ಕುಮಾರ.ಗ.೨-೩೩) ; ಅದೊಂದು ನೀಲಪರ್ವತಂ . . . ಸಿಂಧೂರವಿಲಿಪ್ತಮದಸಿಂಧುರಗಂಡ ಮಂಡಲದೊಂದು ಪಾಂಗಿನಿಂ ತೋರ್ಪ ತಟ್ಟಲಿಂ . . . ಮನೋಜ್ಞಂ (ರಾಜಶೇ. ೭೨-೨೦). [ಸಂ.]

**ಮದಸ್ಖಲಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : "ಕಾಲುಗಳನ್ನು ಸ್ವಸ್ತಿಕದಂತಿರಿಸಿ, ಸ್ವಸ್ತಿಕವನ್ನು ಬಿಡಿಸಿ ಕ್ರಮವಾಗಿ ಪ್ರಸರಿಸುತ್ತ, ಕೈಗಳಿಂದ ದೋಲಹಸ್ತವನ್ನು ಮಾಡಿ. ತಲೆಯನ್ನು ಪರಿವಾಹಿತದಿಂದ ಸುತ್ತಿಸುವುದು" (ಲಾಸ್ಯರಂ. ೩೦೩ ನಾಟ್ಯಸಂವಾದ) : ಚರಣಂ ಸ್ವಸ್ತಿಕಮಂ ಪಡೆದಿರದೆ ಕ್ರಮದಿಂದೆ ಪಸರಿಸುತ್ತಿರೆ ಸುತ್ತಂ ಕರಂಗಳೆರಡುಂ ಡೋಲದೆ ಪರಿವಾಹಿತ ಶಿರದೆ ಕೇಲ್ ಮದಸ್ಖಲಿತಮಕ್ಕುಂ (ಲಾಸ್ಯರಂ. ೪-೧೬೪). [ಸಂ.]

**ಮದಸ್ಥಾನ** (ನಾ). ಅಮಲುಬರುವ ಸ್ಥಳ : ಹೆಂಡದಂಗಡಿ : ಪಡಖಾನೆ : "ಶುಂಡಾ, ಪಾನಂ, ಮದಸ್ಥಾನಂ...ಇ ಮದ್ಯಪಾನ ಮಾಡುವ ಮನೆಯ ಹೆಸರು, ಗಿತ್ತಂಗಡಿ" (ಸಿದ್ಧಾಂತ. ೩೦೪). [ಸಂ.]

**ಮದಹಸ್ತಿ** (ನಾ). = ಮದರದನಿ : ಮದಹಸ್ತಿಯಿಱಿದ ಘಾಯಂಗಳ . . . ಬೇಡನಾಯಕರು ನೆರೆದರು (ಹಕಾ. ೩-೩) ; ಮದಹಸ್ತಿಬಲಯುತಂ ಹಸ್ತದಿಂ ಮಸ್ತಕದಿಸಂತೆ ಪದಗದೆಯಿಂದೆ ತಳ್ಳಿದನ್ (ಶ್ರೀರಾಮಾ. ೨೮೭-೪೦). [ಸಂ. ಮದಹಸ್ತಿನ್]

**ಮದಾಂಧ** (ಗು). ೧. ಮದದಿಂದ ಕುರುಡಾದ; ಮತ್ತಿನಿಂದ ಮುಂದು ಗಾಣದ : ಕುರುಕುಳನಂದನಂ ಪವನನಂದನನೆಂಬ ಮದಾಂಧಗಂಧಸಿಂಧುರಮೆ ಕಱುತ್ತು ಪಾಯೆ ಪಡಲಿಟ್ಟವೊಲಾದುದು (ಗದಾಯು. ೦೩-೧೨) ; ಅರಸಂ . . . ಮದಾಂಧಸಿಂಧುರಮನೇಱಿ ಚತುರಂಗಬಲಮನೊಂದು ಮಾಡಿಕೊಂಡು ನಿಂದು (ಕಂತಂ. ೨೩೩-೮). (ನಾ). ೨. ಗರ್ವದಿಂದ ವಿವೇಕವನ್ನು ಕಳೆದುಕೊಂಡವನು : ದಶಂಧರಂ ಮದಾಂಧಂ ಧರ್ಮಾನುಗನಲ್ಲಂ (ಕಂರಾಮ. ೦೦-೦೭೦) ; ಈ ಮದಾಂಧನನೊಯ್ದು ಕೆಡಹುವ ಭೂಮಿಪತಿಯಂಘ್ರಿಯಲಿ (ಕುಮಾರ.ಅ.೨೨-೩೪). [ಸಂ.]

**ಮದಾಂಧಕ** (ನಾ). = ಮದಾಂಧ ೨ : ಅಱಿದಱಿದುಂ ಮತಿಭ್ರಮಿತನಾದ ಮದಾಂಧಕನಾನೆ ಕಂಡುಕಂಡೆಱಗದ ಮೂಳನಾನೆ ಕುಱಿವಾನಿಸನಾನೆ (ಕಬಿಕಂ. ೩-೦೯). [ಸಂ.]

**ಮದಾಂಧತೆ** (ನಾ). ಸೊಕ್ಕಿನಿಂದ ಉಂಟಾದ ಅವಿವೇಕ : ಕರಿ ಕೇಸರಿಯುಂ ಕೆಣಕಿದ ಪರಿಯುಂ ಪರುಟವಿಸದಿರ್ ಮದಾಂಧತೆಯಿಂದೆ (ಕಬಿಕಂ. ೪-೨೯). [ಸಂ. ಮದಾಂಧತಾ]

**ಮದಾತ್ಯಯ** (ನಾ). ಮದ್ಯಪಾನದಿಂದುಂಟಾಗುವ ಒಂದು ಬಗೆಯ ರೋಗ : ಮದಾತ್ಯಯವೆಂಬ ರೋಗವು ದೋಷತ್ರಯದಿಂದಲೂ, ರಕ್ತದ ಹೆಚ್ಚುಗೆಯಿಂದಲೂ, ಮದ್ಯಪಾನದಿಂದಲೂ, ವಿಷಪ್ರಯೋಗದಿಂದಲೂ ಉಂಟಾಗಿಕ್ಕುಂ (ಕರ್ನವೈ. ೨೬೦). [ಸಂ.]

**ಮದಾನೇಕಪ** (ನಾ). = ಮದರದನಿ : ಆ ಕಾನನಮಂ ಪುಗುತಂದು ಮದಾನೇಕಪದೊಂದು ಓರಿಯ ಕಡುಪಂ ಕಂಡಂ (ಕಂರಾಮ.೦೦-೦೩೮). [ಸಂ.]

**ಮದಾವ್ಮ** (ನಾ). ಒಬ್ಬಾತನ ಹೆಸರು : ಇದಾ [ಪ]ಡದೊರ್ . . . ಕೊಡಲ್ಸೆಟ್ಟಿಯರಾ ಮದಾವ್ಮನ್ ವಿಜ[ಸೆ]ಟ್ಟಿಗರಾ ಧರ್ಮನಾಯಗನ್ (ಎಇ. IX. ೨೩-೧೨ ; ಕು. ೬೦೦). [ ಮದ$_2$ + ಅವ್ಮ$_1$ ]

**ಮದಾಲಸ** (ಗು). ೧. ಮಾದಕವಸ್ತು ಸೇವನೆಯಿಂದ ಜಡವಾದ. ೨. (ಯೌವನದ) ಸೊಕ್ಕಿನಿಂದ ಜಡವಾದ, -ಮಂದವಾದ : ಅಮಿತಮದಾಲಸಾಂಗಜಮತಂಗಜಮೋ ನಡೆಗೊಂಡನಂಗ ಜಂಗಮಲತೆಯೋ . . . ಕಾಂತೆ ಬಸಂತಕಾಂತೆಯೋ (ಶಾಂತಿಪು. ೩-೧೯) ; ಮಿಾಂಗಳ ನೊರ್ಮೆ ಕೈರವಮನೊರ್ಮೆ ಚಕೋರಮನೊರ್ಮೆ . . . ಬಾಲೆಯ ಮದಾಲಸಮುಗ್ಧವಿಶಾಲಸಸ್ಮಿತಾಪಾಂಗಮುಗುಟ್ಟುವು (ಮಲ್ಲಿಕಾ ೭-೭೦). (ನಾ). ೩. [ನಾಟ್ಯ] ಮೂವತ್ತೈದು ದೇಶೀಯಭೌಮ ಚಾರಿಗಳಲ್ಲಿ ಒಂದು ; "P ಕಾಲುಗಳನ್ನು ಒಂದೇ ಕಡೆ ಸ್ಥಿರವಾಗಿಡದೆ ಮತ್ತನಂತೆ ಚಲಿಸುವುದು" (ಲಾಸ್ಯರಂ. ೩೨೨ ಗದ್ಯಾನುವಾದ) : ಎರಡು ಪದಂಗಳ್ ನಿಲ್ಲದೆ ಕರ ಮದಿಸಿದನಂತಿರಲ್ ಮದಾಲಸನಾಮಂ (ಲಾಸ್ಯರಂ. ೬-೭೭). [ಸಂ.]

**ಮದಾಳಿ** (ನಾ). (ಮಕರಂದ ಪಾನದಿಂದ) ಕೊಬ್ಬಿದ ತುಂಬಿ : ಸೋರ್ವ ಸೊನೆಯುಂ ಸರಿಯೆಂದು ಮದಾಳಿಮಾಳೆಯುಂ ಕಾರ್ಮುಗಿಲೆಂದು . . . ಮಯೂರಕೋಟಿಗಳ್ ಕಾರ್ಮುಕಮೆಂದು ನರ್ತಿಸುವುವು (ಸುಕುಮಾ. ೧೦-೩೮). [ಸಂ. ಮದಾಲಿ]

**ಮದಿಕ** 'ಮದ್ದಿಕ' ನೋ.

**ಮದಿಪು** (ನಾ). ೧. ಗೌರವ ; ಮರ್ಯಾದೆ : ಸ್ಥಾನಸ್ಥಾನದಿ ನಮಗೆ ಮದಿಪು ಮಾನ ಕೊಟ್ಟರು ಚೌಟರು (ಕುಶಿ. ೦೮-೦೩). ೨. ಬೆಲೆ ; ಕಿಮ್ಮತ್ತು : ನಾಡಿಗೊಡೆಯನು ಚಂದ್ರನಾಥನು ಬೀಡುಮದಿಪನು ಇಡು ವನು (ಕುಶಿ. ೨೦-೩೮). [ದೇ.॥ ತಮಿ. ಮಲ. ಮತಿಪ್ಪು ; ತುಳು. ಮದಿಪು ; ತೆಲು. ಮದಿಂಪು, ಮತಿಂಪು]

**ಮದಿಮಾಳು** (ನಾ). ಮದುವೆಹೆಣ್ಣು ; ವಧು : ನಿಮ್ಮೊಡನೆ ಮಾತ ನಾಡುತ್ತ ಕುಳಿತರೆ ಮಂಗು ಮದಿಮಾಳಾದೀತು (ದಾಳಿ. ೯).

[ ← ತುಳು. ಮದ್‌ಮಾಳ್ ]

**ಮದಿರ$_1$** (ನಾ). [ನಾಟ್ಯ] ಸಂಚಾರಿಭಾವಸೂಚಕವಾದ ಇಪ್ಪತ್ತು ಬಗೆಯ ನೋಟಗಳಲ್ಲಿ ಒಂದು ; P ಇದು ತರುಣ, ಮಧ್ಯಮ ಮತ್ತು ತೀವ್ರ ಎಂದು ಮೂರುವಿಧವಾಗಿದೆ : ಪಿರಿದಿರ್ದ ಕಂಗಳತಿ ವಿಸ್ತರವಾಗದ ನೋಟಮುರ್ಬಿದಾಲಿಗಳಿಂದಂ . . . ಕಿಱುಸೊಕ್ಕಿನಿಂದೆ ರಂಜಿಸೆ ಮದಿರಂ (ಲಾಸ್ಯರಂ. ೩-೩೯). [ಸಂ. ಮದಿರಾ]

**ಮದಿರ$_2$** (ಗು). ೧. ಅಮಲೇರಿಸುವ ; ಮದವೇರಿಸುವ : 'ಮದಿರಾಕ್ಷಿ' ಪರಾ. ೨. ಸಂತೋಷಕರವಾದ. (ನಾ). ೩. ಕೆಂಪುಹೂವುಗಳನ್ನು ಬಿಡುವ ಒಂದು ಬಗೆಯ ಖದಿರವೃಕ್ಷ. [ಸಂ.]

**ಮದಿರಾಕ್ಷಿ** (ನಾ). ನೋಡಿದವರಿಗೆ ಮತ್ತೇರಿಸುವಂಥ ಕಣ್ಣುಗಳುಳ್ಳವಳು ; ಸುಂದರವಾದ ಕಣ್ಣುಗಳುಳ್ಳವಳು : ನಿಧಿಯಂ ಕಂಡಂತೊಳಗಿಡೆ ಮದಿರಾಕ್ಷಿಯನಿಂದ್ರನಿಡಿದ ನನೆಗಣೆಯಿಂ ತೀವಿದ ದೊಣೆಗೆಣೆಯಾಗಿರ್ದ ಕೋಟ್ಟುದಿಗೊಳೆ ಸ್ಮರಿಸದುಪೇಂದ್ರನವಳೊಳ್ ನೆರೆದಂ (ಶಾಂತಿಪು. ೬-೭೩) ; ಮದಿರಾಕ್ಷಿ ನಿನ್ನೊಳಲ್ಲದೆ ಹೃದಯ ಪೆರಳಲ್ಲಿ ಸೇರದಿರ್ಪುದು (ಶಾಕುಂತ. ೪೦-೬೦). [ಸಂ. ಮದಿರಾಕ್ಷೀ]

**ಮದಿರಾಪಾಂಗ** (ನಾ). ೧. ಮೋಹಕವಾದ ಕಡೆಗಣ್ಣೋಟ. ೨. = ಮದಿರ$_1$ : ಮದಿರಾಪಾಂಗಂ ತ್ರಿವಿಧಮನೊದವಿಕರ್ಣಂ ತರುಣಮೆಂದು ಮಧ್ಯಮಮೆಂದುಂ ಪುದುಗೊಂಡ ತೀವ್ರಮೆಂದುಂ ಸುದತೀ ಕೇಳ್ ಬೇಱೆ ಬೇಱೆ ಭಾವಮೆನಿಕ್ಕುಂ (ಲಾಸ್ಯರಂ. ೩-೩೮). [ಸಂ.]

**ಮದಿರಾಪಾನ** (ನಾ). ಅಮಲೇರಿಸುವ ಮದ್ಯ ಮುಂತಾದ ಪಾನೀಯ ಗಳ ಸೇವನೆ : ಮದಿರಾಪಾನಕ್ಕೆ ಮೆಯ್ದೊರದೆ . . . ಏಕಾಂತದೊಳ್ ನಿಲ್ಲದಿರಾಂ ಬರ್ಪನ್ನವಾಯಂ ನಿನಗಿದು ವಿಗತಾಪಾಯಮಪ್ಪೊಂದುಪಾಯಂ (ಜಗನ್ನಾ. ೦೩-೦೨೭). [ಸಂ.]

**ಮದಿರಾಮದ** (ನಾ). ಮದ್ಯದ ಅಮಲು : ಆಮಿಾಳನಮಂ ಕಣ್ಗಳೊಳಾ ಮನದೊಳಗೊಸಗೆಯುಂ ಶರೀರದೊಳೆತ್ತಂ ರೋಮಾಂಚಕಂಚುಮಂ ಮದಿರಾ ಮದವಾಗಿಸೆ ತೆಗಟ್ಟನಾಕೆಯ ನುಡಿಯೊಳ್ (ಕವಿರಾ. ೩-೯) ; ಹೃದಯ ಪ್ರಮೋದಮದಿರಾಮದದಿಂ ಮೆಯ್ಮಱೆದು ಮೇಲುದಂ ಮಱೆ ದಿರ್ದಡಿಧುದು ಪಱೆ ಮಾಣ್ದೊಡಂ ಮಾಣದೆ ಮೆಚ್ಚಿದ ತೆಱದಿನಾಪ್ತ ವೃದ್ಧಕದಂಬಂ (ಕುಸುಮಾ. ೪-೩೭). [ಸಂ.]

**ಮದಿರಾರಸ** (ನಾ). ಹೆಂಡ ; ಸುರೆ : ಇಂತು ಶೌಂಡಿಕರೆಲ್ಲರುಂ ಶುಂಡಾ ಸಾಮರ್ಥ್ಯಮಂ ಕೊಂಡಾಡುತ್ತುಮಿರ್ದನವರತಂ ಮದಿರಾರಸದ ಮದವೇಱೆ . . . ಮತಿಗೆಟ್ಟು ಕಳವಳಿಸುತ್ತಿರಲ್ (ಪಾರಶ್ವ. ೧೦-೦೩೯ ವ). [ಸಂ.]

**ಮದಿರೆ$_1$** 'ಮದುರೆ' ನೋ.

**ಮದಿರೆ$_2$** (ನಾ). ೧. ಅಮಲೇರಿಸುವ ಮದ್ಯ ಮುಂತಾದ ಪೇಯ : "ಮೈರೇಯಮಾಸವಂ ಮಧು ಮಾಧವಂ ಸೀಧು ಸೀರೆ ಸುರೆ ಮದಿರೆ . . . ಕಲ್ಯಮೆನೆ ಕಳ್ಳೆನಿಕ್ಕುಂ" (ತುಂಗರಾ. ೬೩-೮) ; ನೀಂ ಕುಡಿವ ಮದಿರೆ ನೀನೊತ್ತು ತಿರುವಧರಂ ಮುಗಿಪೊಲೆಲ್ಲಂ ಮುಗಿಯೆ ನಾಸ್ತಿಯಲಿ. ಬೆದರಂ ಷಾಣ್ಢದಂ ನಯಿ (ಗೀತಂ. ೧೨೦-೩೩). ೨. = ಮದಿರ$_1$ : ಒಂದಿನಿಸು ಬಾಗಿದೆವೆಯುಂ ಸಂಧಿಪ ತಡಬಡಿಸಿ ನೋಳ್ಪ ತಿರುಗುವ ತಾರೆಯನೊಂದುವ ಕಣ್ಮಧ್ಯ ಮುಮದು ಬಂದೆಸೆದೊಡೆ ಮಧ್ಯಮೆಂಬ ಮದಿರೆಯೆನಿಕ್ಕುಂ (ಲಾಸ್ಯರಂ. ೩-೪೦). [ಸಂ. ಮದಿರಾ]

**ಮದಿರೇಕ್ಷಣ** (ನಾ). ಮಾದಕವಾದ ನೋಟ : ಕುಣಿಸಿದತ್ತಲ್ಪ ಲಾಂಗೂಲಮಂ ಶಕ್ರಧನು ರಮಣೀಯಮುಂ, ವಿಸ್ಮಯೋತ್ಫುಲ್ಲಮಾಗಲ್ಕೆ ರುಚಿರಾನನಾ ರಾಮದಯಿತೆಯಾ ಮದಿರೇಕ್ಷಣಂ (ಶ್ರೀರಾಮಾ. ೨೩೨-೦೦೩). [ಸಂ.]

**ಮದಿರೇಕ್ಷಣೆ** (ನಾ). ಮೋಹಗೊಳಿಸುವ ಕಣ್ಣುಗಳುಳ್ಳವಳು ; ಸುಂದರಿ : ಅಪ್ಸರಾಂಗನಾನ್ವಯದೊಳ್ ಪುಟ್ಟಿದಳಲ್ಲಿ ಮದನಮದವತಿ ಮದಿರೇಕ್ಷಣೆ ಮದಿರೆಯೆಂಬ ಕನ್ಯಾರತ್ನಂ (ಕಾದಂಪೂ. ೯೭೨).

[ಸಂ. ಮದಿರೇಕ್ಷಣಾ]

**ಮದಿರೋನ್ಮತ್ತ** (ಗು). ೧. ಮದ್ಯಪಾನದಿಂದ ಮೈಮರೆತ; ಅಮಲೇರಿದ : ಮದಿರೋನ್ಮತ್ತನಿಳಿಂಪ ಕಿಂಪುರುಷ ಕಾಂತಾರಬ್ಧ ಸಂಗೀತಮೊಪ್ಪಿದು ದಲ್ತೇ . . . ಶ್ರೀರಮ್ಯಹೈಮಾಚಳಂ (ಕಂಕಳಾ. ೬-೭೨). (ನಾ). ೨. ಸೊಕ್ಕಿನಿಂದ ಮೈಮರೆತವನು : ತಮ್ಮ ಮುನಿಂತಿದಿರುಮನೇನೆಂದಱಿ ಯರ್ ಮದಿರೋನ್ಮತ್ತರಪೊಲವನಿಪಾಲರುಂ (ಚಂದ್ರಪ್ರ. ೧೦-೦೦೭). [ಸಂ.]

**ಮದಿಲ್**, **ಮದಿಲ**, **ಮದಿಲು** (ನಾ). ೧. (ಮನೆ ಮುಂತಾದುವುಗಳ ಒಳಭಾಗದಲ್ಲಿ ಕೊಠಡಿ, ಹಜಾರ ಇತ್ಯಾದಿಗಳನ್ನು ಪ್ರತ್ಯೇಕಿಸುವಂತೆ ಸೂರಿನವರೆಗೂ ಕಟ್ಟುವ) ಗೋಡೆ ; ಭಿತ್ತಿ : (P). ೨. ಕೋಟೆ ಮುಂತಾದುವುಗಳ ಸುತ್ತಲೂ (ರಕ್ಷಣಾರ್ಥವಾಗಿ) ಕಟ್ಟುವ ಗೋಡೆ; ಪ್ರಾಕಾರ ; ಪೌಳಿ : ಬಳಸಿದ ಕಂಬೊನ್ನ ಮದಿಲ್ಗಳೊಳಗೆ ಮಣಿಮಯ ಭವನಾವಳಿ ತೊಳಗಿ ಬೆಳಗೆ (ಕಂಪಕಾ. ೪-೧೦ ರಗಳೆ) ; ವಸುದೇವನರಮನೆಯ ಮದಿಲಂ ವಿದ್ಯಾಧರಕರಣದಿಂ ಪೊಸಂತಿಲಂ ದಾಂಟುವಂತೆ ದಾಂಟಿ (ಅರ್ಜನೆ. ೩-೦೮ ವ) ; ಅಗುಱ ಮದಿಲ್ ಬಾಗಿಲ್ ಬಿಯ್ಯಗಮೆಂಬಿವಱಿಂದ ಕಾವ ಕಾಪೇವುದೊ (ನೀತಿಮಂ. ೨-೨೭) ; ಪೊಗೆ ಅದೇನ್ ಕಾಣ್, ತ್ರಿಜಟೆ ? ಏಳುತಿದೆ ಮದಿಲಪೊಲ್ ಮುಗಿಲನ್ನೆಗಂ! (ಶ್ರೀರಾಮಾ. ೬೯೮-೦). **ಮದಿಲ** : ೨. ಸುಮ್ಮಾನದಿಂದ ಖೇಚರಿಯರು ಮದಿಲವ ಗಮ್ಮನೆ ಬಂದೇಱಿದರು (ಜ್ಞಾನಕ. ೪-೧೩೯). **ಮದಿಲು** : ೨. ಕರುಪಾಡಗಳನೇಱಿ ಮದಿಲುಗಳನು ಹತ್ತಿ ಮರಗಳ ಕೊನೆಗಳನಡರಿ (ತಂಕ್ರಸಾಂ. ೦೩-೦೦೩) ; ಸುತ್ತ ಬಳಸಿದ ಮದಿಲು ವಾಯುಪಥವನು ಒತ್ತರಿಸುವುದನವರತ (ಅಷಂಕ. ೦-೦೪೦).

[ದೇ. ॥ ತಮಿ. ಮಲ. ಮತಿಲ್ ; ತುಳು. ಮದಿಲು, ಮದುಲು ; ತೆಲು. ಮನುರು, ಮಗುಲು]

ಮದಿಲ್' ನೋ.

ಮದಿಲ್' ನೋ.

(ನಾ). ಕಳ್ಳು ; ಹೆಂಡ ; ಮದ್ಯ : "ಮೈರೇಯಂ . . . ಕಾದಂಬರಿ ಪರಿಸ್ರವಣಿ ಕಲ್ಯವೆಸೆ ಕಳ್ಳಿನಿಕ್ಕುಂ" (ಮಂಗರಾ. ೬೩-೮). [ಸಂ. ಮದಿಷ್ಠಾ]

(ಕ್ರಿ). ೧. ಅಮಲೇರು : ಮತ್ತಿನಿಂದ ಕೂಡಿರು : ಮದಿಸಿ ಕಾಣದೆ ಮಡುಹಿದ ಗಜೇಂದ್ರಂ ಸತ್ತುದಾಗಳೆ (ಜಕಪು. ೨೨-೨೦) ; ಮದಿಸಿ ಹವದ ಗಜ ಹರಿಪದವಿಘಾತಿಗೆ ಕೆಡೆವವೊಲು ಕೆಡೆದೊದೆದು ಕೊಂದ ನುಕಂಪದಲಿ ಕಳನೊಳಗೆ (ಕೂರಗಾ. ೬-೦೮-೨೬). ೨. ಗರ್ವಿಸು ; ರಿಸು : ಹಿಮನಗಸುತೇಶನು ಮದಿಸಿದಾತನ ಬಗೆಯನಱಿದು (ಜಕಪು. . ೩. [ಗಣಿತ] ಕೂಡಿಸು ; ಸಂಕಲಿಸು : ಬೆರಸು, ಮದಿಸು. ಕೂಡು, ಬತಂ ಇಂತಿನಿತುಂ ಕೂಡೂದಕ್ಕೆ ಹೆಸರು (ವ್ಯವಹಾ. ೩). [ಮದ + —ಇಸು$_3$]

(ಗು). ನನ್ನ ; ನನಗೆ ಸಂಬಂಧಿಸಿದ : ವದಸಂ ಮದೀಯ್ ಶಮುದಾವಹಂ (ಕಬಿಗಾ. ೩-೬೬) ; ಮದೀಯ ಸವಿನಾಹಿತ್ರಮುಂ . . . ತಿಲ್ಲ (ಕಾದಂಬ. ೩೯೬) ; ಇದು ವಿನೋದವಲೇ ಮದೀಯಾಭ್ಯುದಯ (ಕುಮಾ. ೨-೦೮). [ಸಂ.]

(ನಾ). (ಕರಾ) ಭೂತಾರಾಧನೆಯಲ್ಲಿ ಭಕ್ತನ ಪರವಾಗಿ ನು ಆಡುವ ಮಾತು : ಭೂತಕ್ಕೆ ಗಗ್ಗರವಿಟ್ಟು ನಿಂತಾಗ ಭಟ್ಟರು 'ಮದು' ಅಥವಾ 'ನುಡಿಗಟ್ಟು' ಹೀಗಿರುತ್ತದೆ (ದಂಬಿನಾ. ೦೯). [← ತುಳು. ಮದು]

(ನಾ). ೧. ಚೈತ್ರಮಾಸ; ವಸಂತಋತು :" ಮದುವೆನೆ ಚೈತ್ರ" . ೨೦). 'ಮದುರಿತು' ಪರಾ. ೨. ಜೇನುತುಪ್ಪ : "ಮದು— = ಜೇನು" (ಕನ್ನಕೋ. ೩೩). [<ಸಂ. ಮಧು]

(ನಾ). ಒಂದು ಬಗೆಯ ತೆರಿಗೆ : ಕರಡಿ ಹಳಿಯ ಚತುಸೀಮೆ ದ ಬಿಡುಗಳಿಗೆ ಸಲುವ ಗ್ರಾಮ ೧ ಱ ಮಗ್ಗದೆಱ ಮದು ಭಡಗಿ ಅಸಗ ನಾವಿಂದ ಕುಂಭಾರ ಮಾದೆಗ ಕಯ್ಯಗಾಣ ಎತ್ತುಗಾಣ x (s). ಸಂಗಳೂ. ೦೩೨-೯; 1408). [ ? ]

ಯ (ನಾ). ಒಬ್ಬಾತನ ಹೆಸರು : ಕಣ್ಣಮ್ಮಯ್ಯನ ಮಗ ಮ್ಮಯ್ಯನುಂ ಮದುಕಮ್ಮಯನುಂ (ಎಕ. X. ಕೋಲಾರ. ೫೭-೯; [ ? ]

(ನಾ). ಒಂದು ಮನೆತನದ ಹೆಸರು (?) : ಬದಿರಿಯರುಮ್ ನುಮ್ ಕೋನಪ್ಪರುಮ್ ಸಾಕ್ಷಿ (ಪ್ರೈಆ. ೦೯೦೬; ೦೩-೦೨; 720). [ ? ]

(ನಾ). ಮದುವೆಯ ಗಂಡು ; ಮದುವಣಿಗ; ವರ : ಈ ದುವಮಗನ ನಿವಾಸಕ್ಕೆಂದು ಚೊಕ್ಕಮಯ್ಯ ಒಂದು ಅರಮನೆ ಕಟ್ಟಿಸಿದನು (ಕವಿ. ೫೮); ಮದುವೆ ಮುಗಿದರೂ ಮದುಮಗನ್ನ ಲ್ಲ (ಗಾದೆ).

ದುಮಕ್ಕಳು, ಮದವಕ್ಕಳ್, ಮದವಕ್ಕಳು, ಮದುವಕ್ಕಳ್ = ವೆಯಾಗುವ ಗಂಡು ಹಾಗೂ ಹೆಣ್ಣು ; ವಧೂವರರು : ವೆಯ ನಂತರ ಮದುಮಕ್ಕಳನ್ನು ನೆಂಟರಿಷ್ಟರು ಬರಮಾಡಿಕೊಂಡು ಸುವುದು ವಾಡಿಕೆ (ಜಾತಕ. ೫೮); ಪ್ರೇಮದ ಮಾತಿಗೆ ಹೊಸಮದು ಹೊಸ ಅರ್ಥವನು ವಾಚಿಸುವರು (ಇಂಚಾಶ. ೩೭-೭೦); ನೆಂಬ ಮಂತ್ರಿಯುರ್ಕವದಿಂದವರ ಪೇಟ್ದು ಮದವಕ್ಕಳಂ ನಿರಾಕರಿಸಿ . ೪೦-೨೫); ಮದವಕ್ಕಳನಿಂದಿದಿರ್ಗೊಳ್ವುದೆಂದು . . . ಪೇಟಿಮ್ ೮-೪೭); ಮೆಱೆದರ್ ಲೇಸೆನೆ ಮದುವಕ್ಕಳ್ ಸಂದಿಲಾಸದಿ ಮೆಟ್ಟಿಕ್ಕ ಗೂಡೆಗಳೊಳುತ್ಸವದಿಂ (ಉದ್ಭಟ. ೮-೫೮); ಹೋಮಾ ನಳನಂ ಮದುವಕ್ಕಳ್ ವಿಸುಪ ಲಾಜೆಯಿಂ ಪೂಜಿಸಿದರ್ (ಜಗನ. ೦೦-೦೩೩).

[< ಮದುವೆ + ಮಗ]

ಮದುಮಗಳ್, ಮದುಮಗಳು (ನಾ). ಮದುವೆಯ ಹೆಣ್ಣು ; ಮದುವಣಗಿತ್ತಿ; ವಧು: ಕಾದಿಪೊಡಲ ಮದುಮಗಳ್ ತೆಣತುತಿಹಳೆಲ್ಲಿ? (ಶಾಂತಿ. ೦೫೩-೩೬೬). ಮದುಮಗಳು : ಮದುಮಗಳ ಕಣ್ಣಿನ ಬಗೀ ಚಂದಿರನ ನಗಿಸುತ್ತ ಹರಿದದ (ನಾದೀ. ೬೯-೦೫); ಮದುಮಗಳ ಕಾಂತಿ ಅವಳ ಮುಖದಲ್ಲಿ ಮಿನುಗುತ್ತಿತ್ತು (ರಂಗಕೋ. ೨೦೯).

[< ಮದುವೆ + ಮಗಳ್]

ಮದುಮಗಳು 'ಮದುಮಗಳ್' ನೋ.

ಮದುಮನೆ (ನಾ). ಮದುವೆಯ ಮನೆ : ತಡೆಯಲ್ಕಾಱನ್ ಕಣ್ಣೀರ್ ಪೊನಲನ್ ನೋಡುತೆ . . . ಮನಣದ ಮದುಮನೆ ಪುಗುವಾ ಮಗಳನ್ (ಅಂತಗೊ. ೩೭-೭೯೩). [< ಮದುವೆ + ಮನೆ]

ಮದುರಿತು (ನಾ). ವಸಂತಋತು : ಮಕ್ಕಳ ಮುದ್ದುವೆರೆದ ನುಡಿ ಮದುರಿತು ಚೊಕ್ಕಳಕೆಯ ನವಚಂದ್ರಿಕೆಯೆನೆ ಹೃದಯಕ್ಕೆ ವಿಲಾಸಮನೀವುದು ಸತ್ಯಭೂರಾಜನ ಸವಿಮಾತು (ಶಮುಕಾ. ೧-೭೯).

[ಮದು$_2$ + ರಿತು (< ಋತು$_1$]

ಮದುರೆ, ಮದಿರೆ$_1$, ಮಧುರೆ$_1$ (ನಾ). ಹಿಂದೆ ಪಾಂಡ್ಯರ ರಾಜಧಾನಿಯಾಗಿದ್ದ ಒಂದು ಊರಿನ ಹೆಸರು ; p ಈಗಿನ ತಮಿಳುನಾಡಿನ ಮಧುರೆ : ದಕ್ಷಿಣಭಾಗದಾ ಮದುರೆ ಉಯ್ಯಸಿತಾವ x ರಾಪದೆ ಪಾವು ಮುಟ್ಟದೊನ್. . . ರಮ್ಯಸುರಲೋಕಸುಕಕ್ಕೆ ಭಾಗಿ (ಎಕ. II (R). ೨೯-೦; ಶು. 700). ಮದಿರೆ$_1$. ಮಧುರೆ$_1$ : ಧುರದೊಳು ಮಧುರೆಯ ತಿರುಮಲ ನಾಯಕನರು ವಾಹಿನಿಯ ಮುಱಿದಿಱಿದು ಹರುಷದೆ ಪಿಡಿದಾನೆಗಳ ಶಾಲೆ ಮೆಱೆದುವು (ಕಂಠೀ. ೬-೨೯).

ಮದಿರೆಗೊಂಡ = ಮದಿರೆಯೆಂಬ ಪಟ್ಟಣವನ್ನು ಗೆದ್ದವನು; ಒಂದು ಬಿರುದು : ಸ್ವಸ್ತಿಶ್ರೀ ಮದಿರೆಗೊಣ್ಡ ಕೊಪ್ಪರಗೇಸರಿಪನ್ಮರ್ಗಂಗೆ ಪರಿಪವಿರ್ಪ್ಪತ್ತೊಮ್ಬತ್ತಱೊಬ್ಬಯ್ದುಕೂರ ರಾವಿನಾಡ ಪಾರ್ಯಮ್ಮ ಮಮ್ಮ x x ಗಣಿಪ ರಾಮ ತುಱುವನಿಕ್ಕಿಸಿ ಅಱ್ಸ ಸತ್ತನ್ (ಎಕ. X. ಮುಳಬಾ. ೨೦೩-೦; 934). [ ← ತಮಿ. ಮತುರೈ ]

ಮದುರೆಗಿಳ್ (ನಾ). ಒಂದು ಊರಿನ ಹೆಸರು: ಮದುರೆಗಿಳಾ ವೆಲ್ಲ ಸಮ್ಮಂಗೆ ಕೊಟ್ಟೋದು ಕಣ್ಣಗದಯ್ಯಳ ಕಟನಿಯುಂ (ಎಕ. X. ಮುಳಬಾ. ೪೦-೬; 767). [ ? ]

ಮದುವಣ (ನಾ). ಮದುವೆಯಂ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ: ಪದಿಕೆ ಸಂಬಳ ಉಳುವರಿ ಆ ಮದುವಣ ಮರ ಮೊಲಕ್ಕಮಬಲ್ಲಾಳ ದೇವನಾಣೆ ಕಾಹು ಚಂದ್ರಾರ್ಕತಾರಂಬರಂ (ಪ್ರೈಆ. ೦೯೩೮, ೪೨-೦೨; 1036). [ < ಮದುವೆ + ಪಣ$_3$ ]

ಮದುವಣಗಿತ್ತಿ 'ಮದುವಳಗಿತ್ತಿ' ನೋ.

ಮದುವಣಿಗ 'ಮದುವಳಿಗ' ನೋ.

ಮದುವಣಿಗತನ, ಮದವಣಿಗತನ (ನಾ). ಮದುಮಗನಾಗಿರುವಿಕೆ : ದೇಪೋತ್ತುಂಗಂ . . . ಮದುವಣಿ[ಪಾಠಾಂ. ಮದವನಿ]ಗತನಮುಸುಱೆ ನಟಯಿಸುತ್ತುಂ (ಗಿರಿ. ೦೦-೪೫). ಮದವಣಿಗತನ : ಮದವಣಿಗತನದ ದೇಸೆಯಿಂ ವಿಲಾಸಂಬಡೆದ ಬಾಲಸಹಕಾರನಂದನಂ ವನಪಾಲಂ ನೃಪಾಲ ಪರಿಜಾತನನಿತ್ತಲವಧಾರಿಸಿಮೆಂದು ತೋಱೆ (ಅಪಂಪು. ೭-೭ ವ).

[ ಮದುವಣಿಗ ( < ಮದುವಳಿಗ ) + — ತನ ]

**ಮದುವಳ್** 'ಮದೆವಳ್' ನೋ.

**ಮದುವಳ** (ನಾ). ಮದುವೆಯ ಹುಡುಗ ; ವರ : 'ಮದುವಳಿಗ' ಪರಾ. [ < ಮದುವೆ + – ವಳ ]

**ಮದುವಳಿಗ**, ಮದವಣಿಗ, ಮದವಳಿಗ, ಮದುವಣಿಗ (ನಾ). = ಮದುಮಗ : ಮದುವೆಗೆ ಕೂಡಿದ ಬಂಧುಗಳೆಲ್ಲರು ಮದುವಳಿಗನ ಮದುವಳಿಗಿತ್ತಿಯ ಕಾಣದೆ ಕದನವಾಯಿತ್ತು ಮದುವೆಯ ಮನೆಯಲ್ಲಿ (ಪೋಶಪು. ೯೦-೩೩೦); ಈ ಮದಹಸ್ತಿಯನೀ ಹಳುವಿನೊಳೇಱಿದಾ ಮಹಿಮನೆ ನಿನ್ನ ಸುತೆಗೆ ಪ್ರೇಮದ ಪೊಸಮದುವಳಿಗನಾಗುವನು (ನೇಬಸಂ. ೯-೨೬); ಚಂದ್ರಹಾಸ. . . ಒಪ್ಪುವ ಬಾಸಿಗದ ಮದುವಳಿಗನಾಗಿದ್ದ (ಐಜೈ. ೦೬೯). **ಮದವಣಿಗ** : ಆ ವಿಭು ಜಿನಚಂದ್ರಂ ಲಕ್ಷ್ಮೀಮತಿಯಂ ಮದುವೆನಿಂದು ಪೊಸಮದವಣಿಗಂ ದೇವೇಂದ್ರನ ಶಚಿಯ ವಿಳಾಸಾವಿಷ್ಕೃತ ವಿವಿಧ ವಿಭವಮಂ ಮಸುಳಿಸಿದಂ (ಶಾಂತಿಪು. ೬-೦೨೦); ಮದವಣಿಗನಿಲ್ಲದೆ ದಿಬ್ಬಣಂ ಪೋಪನೆಂಬಂತೆ (ಧರ್ಮಾಮೃ. ೯-೩೦); ಪೊನ್ನಂದಳವಡರಿದ ಮದವಣಿಗನ ಮುಂದೆಯ್ದುವ ನೃಪತಿಲಕರ ಪಲವು ಕೊಡೆಯಾಗಸಮಂ ಪಂದಲಿಸುತ್ತಂ ನಡೆತರೆ (ಜಗನ್ನಾ. ೮-೨೬). **ಮದವಳಿಗ** : ಮದವಳಿಗನಿಲ್ಲದೆ ಮದುವೆಯಂ ಮಾಡುವೆನೆಂಬ. . . ವೆರ್ಗಾವಿಲನಂ ಪೋಲ್ಕುಂ (ಧರ್ಮಾಮೃ. ೩-೦೦೬ ೧೩೬): ಲಿಂಗವೆ ಮದವಳಿಗನಾದ ನಾನು ಮದವಳಿಗೆ[ಪಾಠಾಂ. ಮದವಣಗಿತ್ತಿ]ಯಾದೆನು (ಮಹಾದೇ. ವ. ೦೦೪-೨೩೮) ; ನಮ್ಮ ನಾದನಿ ಮದವಳಿಗನೀನಾದರೊಡಹುಟ್ಟಿದನು ನೀನಹೆಯೆನಗೆ (ಶಬ್ದಾ.ಶ. ೨೨-೧೬) ; ಎಸೆವ ಬಾಸಿಗದ ಮದವಳಿಗನಾಗಿರ್ದಂ ಕುಳಿಂದಜಂ (ಜೈಮಿಭಾ. ೩೦-೫೯). **ಮದುವಣಿಗ** : ಹಸೆಯ ಮೇಲೆ ಮದುಮಣಿಗನ ತಂದು ನಿಲಿಸಲೊಡನೆ ಶಶಿವದನೆ ಬಂದು ಕೈವಿಡಿದಳು (ಅವತಂ. ೨೦-೮೬) ; ಮದುವಣಿಗನಾದ ಕುವರ ಹರುಷದಿ ಚಿತ್ರಮಂಟಪವ ನೋಡುತ್ತೈತರಲು (ಕಾಶ್ರಿತಾ. ೨೦-೨೦) ; ಇವನು ಯಾರೋ ಮೆಲ್ಲಗೆ ಮದುವಣಿಗನ ಹಾಗೆ ಬರುತ್ತಿದ್ದಾನೆ (ಶಾಕ್ಷಮು. ೯೨). [ ಮದುವಳ್ ( < ಮದೆವಳ್ ) + — ಇಗ ]

**ಮದುವಳಿಗಿತ್ತಿ**, ಮದವಣಿಗಿತ್ತಿ, ಮದವಳಗಿತ್ತಿ, ಮದುವಣಗಿತ್ತಿ, ಮದುವಣಿಗಿತ್ತಿ (ನಾ). ೧. ಮದುವೆಯ ಹೆಣ್ಣು ; ವಧು : ಮದುವಳಿಗನ ಮದುವಳಿಗಿತ್ತಿಯ ಕಾಣದೆ ಕದನವಾಯಿತ್ತು ಮದುವೆಯ ಮನೆಯಲ್ಲಿ (ಪೋಶಪು. ೯೦-೩೩೦). **ಮದವಣಿಗಿತ್ತಿ**: ೧. ಮೊದಲ ದಿನದ ಮದವಣಿಗಿತ್ತಿಯಂತೆ ಕಾವೇರಿ ಮಾಸ್ತರ ಸನಿಯದಲ್ಲಿ ಕುಳಿತಳು (ಕಾವೇರಿ. ೦೦೯). **ಮದವಳಗಿತ್ತಿ** : ೧. ಮದವಳಿಗ ಮದವಳಗಿತ್ತಿಯ ಮುಟ್ಟದೆ . . . ನೋಡುತ್ತ ಬಟ್ಟಬಯಲಾಯಿತ್ತು (ಪೋಶಪು. ೦೯೮-೬೩೬). **ಮದುವಣಗಿತ್ತಿ**: ೧. ಗುಂಡಮಬ್ಬೆ ಮದುವಣಗಿತ್ತಿಯಂತೆ ಸಿಂಗರಿಸಿಕೊಂಡಳು (ದಾಸಶಂ. ೦೩೮); ನರ್ಸ್ . . . ಮದುವಣಗಿತ್ತಿಯಂತೆ ಶೃಂಗರಿಸಿಕೊಂಡಿದ್ದಳು (ದೀಪದ. ೮೯). ೨. ಹೆಂಡತಿ : ಕನಕವರ್ಮನು ಮಾವನ ಮನೆಯಲ್ಲಿ ಏಳುದಿನವಿದ್ದು ತನ್ನ ಹೊಸಮದುವಣಗಿತ್ತಿಯೊಡನೆ ರಾಜಧಾನಿಗೆ ಹಿಂತಿರುಗಿದನು (ಕಸಂ. ೦೩೮). **ಮದುವಣಿಗಿತ್ತಿ** : ೧. ಹೊಸಮದುವಣಿಗಿತ್ತಿಯಾದ ನಿನಗೆ ಮನಪೊಪ್ಪುವಂತೆ ಧರಿಸಲು ಒಳ್ಳೆಯ ಒಡವೆಗಳನ್ನೂ ಸೀರೆಗಳನ್ನೂ ತರುವೆನು (ಕವಿಕ. ೯೯). [ಮದುವಳಿಗ + — ಇತ್ತಿ]

**ಮದುವಳಿಗೆ**, ಮದವಣಿಗೆ, ಮದವಳಿಗೆ (ನಾ). ೧. = ಮದುವಳಿಗಿತ್ತಿ ೧: ಮದುವಣಿಗನಾರೋ ಮದುವಳಿಗೆ ಯಾರೋ ಮದುವೆಯ ನಡುವೆ ಮರಣ ವಡ್ಡಬಿದ್ದಿತ್ತು (ಅವತಂ. ೦೩೬-೬೨೯); ನಾಂದೀಮುಖದೊಸಗೆಗೆ ಕಪ್ಪಿಯ್ದುದೆಂದು ಮದುವಳಿಗೆಯಲ್ಲಿಗಟ್ಟಿದೊಡೆ (ಬಿಂತಂ. ೯-೬ ವ). **ಮದವಣಿಗೆ** : ೧. ಮದವಣಿಗೆಯುಂ ಕಂಡು ಮದುವೆಗೊಡರ್ಚುವಂತೆ (ಧರ್ಮಾಮೃ. ೦೯-೧೩೦). ೨. ಹೆಂಡತಿ ; ಪತ್ನಿ : ಯಾತನ ಮದವಣಿಗೆ ಚಿಂನಮಾಂಬಾ (ಎಕ. XVI. ಶಾಪುಗ. ೦೦೦-೩; 1653). **ಮದವಳಿಗೆ** : ೧. ಪೊಸಮದವಳಿಗೆಯುಪ್ಪದಱಿಂ ತುಡಿಸಲಿವೇಟ್ಕುಮೆಂದು ನೆಱೆಯೆ ಪಸದನಂಗೊಳಿಸೆ (ಕುಕಥಾ. ೩-೯೬ ವ) ; ಐದುಮಾನವ ಕುಟ್ಟಿ ಒಂದುಮಾನವ ಮಾಡು ಕಂಡಾ ಮದವಳಿಗೆ ಇದು ನಮ್ಮ ಬಾಳುವೆ ಮದವಳಿಗೆ ಇದು ನಮ್ಮ ವಿಸ್ತಾರ ಮದವಳಿಗೆ (ಜಾನ. ೮೬೬); ಮದುವೆಯಾಯಿತು ಬಲನ ಜೀಯದಂದದಲಿ ಪೂಡಿದ ರಥವನೇಱಿಸಿ ಮದವಳಿಗೆ ಸಹಿತರ್ಜುನನ ಕಳುಹಿದನು ಮುರವೈರಿ (ಕಾವ್ಯಕ. ೦೯-೩೯). ೨. ಆರಾಧ್ಯರು ಸಂಗಯ್ಯ ಆರಾಧ್ಯರ ಮದವಳಿಗೆ ಬೊಪ್ಪವ್ವೆ (ಎಕ. VII. ಶನ್ನಿಗ. ೩೨-೨೯೯; 1050); ನಾಗಶರ್ಮನ ಮದವಳಿಗೆ ತ್ರಿವೇದಿ ಬನದೊಳಗಣ ನಾಗರಂ ಪೂಜಿಸಲು . . . ಬರಲ್ (ಧರ್ಮಾಶ್ರಿ. ೬-೨೬ ವ) ; ಪೊಸಮದವಳಿಗೆಯ ರತಿಯಲ್ಲಿ ಜಾಡ್ಯ ರಮಾಡಿಸಿಹೋಯ್ತು ಗೆಲುವಾಯ್ತು ಮನಕೆ (ಧರಶ. ೯೦-೦೬೩). [ ಮದುವಳಿಗ + – ಎ$_2$ ]

**ಮದುವಾಸು** (ನಾ). ಮದುವೆಯಾದ ನಂತರ ನಿಷೇಕಕ್ಕೆ ಸಿದ್ಧಗೊಳಿಸಿದ ಹಾಸುಗೆ : ಇಲ್ಲೀಗಳ್ ಬಂದನಿದೋ ಹಯ್‌ಮೋನ್ . . . ತನ್ನಿನ್ ಕವರ್ದ್ದ ಮದುವಾಸಿಂಗೆ (ಅಂತಿಗೊ. ೨೯-೩೯೨). [ < ಮದುವೆ + ಪಾಸು$_2$ ]

**ಮದುವಿ** ' ಮದುವೆ ' ನೋ.

**ಮದುವೆ**, ಮದುವಿ (ನಾ). ಗಂಡು ಹೆಣ್ಣನ್ನು ಗಂಡಹೆಂಡಿರೆಂದು ಘೋಷಿಸುವ ಒಂದು ಧಾರ್ಮಿಕವಿಧಿ ಮತ್ತು ಸಮಾರಂಭ ; ವಿವಾಹ ; ಪರಿಣಯ ; ಲಗ್ನ : "ಉಪಯಾಮಃ . ಪರಿಣಯನಂ, ಪಾಣಿಗ್ರಹಣಂ, ವಿವಾಹಃ. ಉದ್ವಾಹಃ — ಈ ೫ ಮದುವೆ" (ಕರ್ಣಾಪ. ೮೦-೩೯೨) ; ಉತ್ತಮಕುಲದವರ್ಗಳ್ಗೆ ಕುಲಜರಲ್ಲದವರೊಡನೆ ಮದುವೆಯೊಳ್ ತೊಟ್ಟ ನಣ್ಪುಗಳಕ್ಕುಂ (ವಡ್ಡಾರಾ. ೮೬-೦೬) ; ಮದುವೆಯ ಮಾಡಿದರು ನಮ್ಮವರೆನ್ನ ಮದುವೆಯ ಮಾಡಿದರು (ಮಹಾದೇ. ವ.೩೩-೬೬); ಕಮಲಮುಖಿಯರ ಮೂವರನು . . . ಭೀಷ್ಮನು . . . ತಮ್ಮಂಗೆ ಮದುವೆಯ ಮಾಡಲನುವಾದ (ಕುವ್ಯಾ.ಶ. ೨-೩೩) ; ಮನೆ ಕಟ್ಟಿನೋಡು, ಮದುವೆ ಮಾಡಿನೋಡು (ಗಾದೆ). **ಮದುವಿ** : ಭಾವ ಶಿವದೇವಕ್ಕಿಗಳ್ ಯವಮಾಣಿಯಂ ಕೈಕೊಣ್ಡು ಪೋಷಿಸಿ ಮದುವಿಯಂ ಮಾಡಿ (ಕಾಇಇ. XI-i. ೬೯-೦೬ ; 1029) ; ಕೂಳಸಮುದ್ರಂ ಪೊಂನಂ ಮಾಣಿಗೆ ಮದುವಿಗೆ ಮಂನಿಸಿ ಕುಡೆ ನಾಮಮಾಯಿತು ದಾನವಿನೋದಂ (ಎಕ. VIII, ಸಾಗರ. ೦೦೯-೬೦; 1042).

**ಮದುವೆ ಮಾಸರಿ** = ಮದುವೆ ಮುಂತಾದ ಸಮಾರಂಭ : ಮದುವೆ ಮಾಸರಿ ಇದ್ದ ದಿನ ಸ್ವಲ್ಪ ಹೆಚ್ಚು ಕಾಸಾದರೆ ಮೂಗಿನವರೆಗೆ ಕುಡಿದೇ ಗುಡಿಸಲನ್ನು ಕಾಣಬೇಕು (ಕಳಕು. ೯೩). [ ದೇ.೩ ತಮಿ. ಮತಾವೈ; ತುಳು. ಮದುಮೆ; ಕೋತ. ಮದ್ವ್]

**ಮದುವೆಕಂಕಣ** (ನಾ). ವಿವಾಹಕಾಲದಲ್ಲಿ ಮದುಮಕ್ಕಳ ಕೈಗೆ ಕಟ್ಟುವ ಅರಿಸಿನದ ಬೇರನ್ನೊಳಗೊಂಡ ಹಸಿಯ ದಾರ : (೯). [ಮದುವೆ + ಕಂಕಣ ]

**ಮದುವೆಗಂಡು** (ನಾ). ವಿವಾಹವಾಗುವ ಹುಡುಗ ; ಮದುಮಗ ; ವರ : ಮಲ್ಲಣ್ಣನು . . . ರೇಶಿಮೆಯ ನಿಲುವಂಗಿ, ಷರಾಯಿ, ರುಮಾಲುಗಳನ್ನೂ ವಲ್ಲಿಯನ್ನೂ ಧರಿಸಿ ಮದುವೆಗಂಡಿನ ಹಾಗೆ ಓಡಾಡುತ್ತಿದ್ದಾನೆ (ಜುಲ್ಲ. ೯೮). [ ಮದುವೆ + ಗಂಡು ]

**ಮದುವೆಗಟ್ಟಿಪು**, ಮದುವೆಗಟುಪು (ಕ್ರಿ). ವಿವಾಹಕ್ಕೆ ಬಂದ ನಂಟರಿಷ್ಟರನ್ನು ಬೀಳ್ಕೊಡು.— ಕಳಿಸು : ಪರಮಜಿನಸವನಜಳನಿರ್ಝರಮುಂ ಸುರಬಲಪಯೋಧಿಕಳಕಳಮುಂ ಮಾಣ್ದರೆ ನೋಡೆ ಬಿನ್ನನಿರ್ದುದು ಸುರಶೈಳಮದೊಂದು ಮದುವೆಗಟ್ಟಿಬಿದ ಮನೆಪೋಲ್ (ಆದಿಪು. ೬-೧೦೬) ; ತನ್ನಗಲ್ಕೆಯಿಂ ಗಂಧರ್ವರಾಜನಂದನೆಗೆ ಶೀತೋಷ್ಣಭಾವನಮದು ಮದುವೆ

ಗಟುಪಿದ ಮನೆಯಂತೆ ನಿರ್ವ್ಯಾಕ್ರಮಹೋತ್ಸವಮಾಗಿರ್ಪುದು (ಕಾದಂಬ. ೦೯೦). ಮದುವೆಗಟಿಪ್ಪು : ಜನಪಿತೃಗಳ್ ಜನತನಯಂ ಜಿನೇಂದ್ರ ತವರೆಲ್ಲಮೊಡನೆ ತಳರಲೊಡಂ ಬಿನ್ನನೆಯಾಗಿ ಮದುವೆಗಟುಪಿದ ಮನೆಯಂ ದದಿನಿರ್ದದಂದಯೋಧ್ಯಾನಗರಂ (ಆದಿಪು. ೬-೯೦).

[ ಮದುವೆ + ಕಟುಪ್ಪು$_1$ ]

ಮದುವೆಗಟುಪ್ಪು 'ಮದುವೆಗಟಿಪ್ಪು' ನೋ.

ಮದುವೆಗುಡು (ಕ್ರಿ). ವಿವಾಹಮಾಡಿಕೊಡು ; ಲಗ್ನಮಾಡಿಕೊಡು : ಎನ್ನ ಮದುವೆಗುಡುವಂದೇನುವಂ ಬಟುವಟುಯಂ ಕೊಟ್ಟನಿಲ್ಲ (ಕಾವ್ಯಂಕೃ. ೨೩೮). [ ಮದುವೆ + ಕುಡು$_1$ ( < ಕೊಡು$_1$ ) ]

ಮದುವೆಗೆಯ್ (ಕ್ರಿ). ಲಗ್ನಮಾಡು ; ಮದುವೆಮಾಡು : ಭೋರನೆ ಮದುವೆಗೆಯ್ದುಪಿರೊ (ಬಸಪು. ೩೬-೦೫). [ ಮದುವೆ + ಕೆಯ್$_1$ ]

ಮದುವೆಚಪ್ಪರ (ನಾ). ಮದುವೆಯ ಮನೆಯ ಮುಂದೆ ಹಾಕುವ ಹಸಿರುವಾಣಿ ಚಪ್ಪರ : ಮದುವೆಚಪ್ಪರದಲ್ಲಿ ಮದುಮಗನೇ ಜಾಣ (ಗಾದೆ); ಮನೆಯ ಮುಂದೆ ಮದುವೆಚಪ್ಪರವನ್ನು ವಿಶಾಲವಾಗಿ ಹಾಕಿಸಿದ್ದಾರೆ (ಜಾಂ). [ ಮದುವೆ + ಚಪ್ಪರ ]

ಮದುವೆದೆರಿಗೆ (ನಾ). ಮದುವೆಮಾಡುವವರು ತೆರಬೇಕಾದ ಹಣ.— ತೆರಿಗೆ: (೧) ಮನೆದೆರಿಗೆ...(೧೭) ಮದುವೆದೆರಿಗೆ. (೧೮) ಉಪ್ಪಿನ ಮೇಳೆ, (೧೯) ಕೌದಿಯ ತೆರಿಗೆ — ಈ ಮೇರೆಗೆ ಹತ್ತೊಂಬತ್ತು ಬಾಬುಗಳನ್ನು ರೈತರಿಗೆ ನಿಷ್ಕರ್ಷೆಮಾಡಿಸಿ (ಕುಹಾಚಂ. I. ೦೨೯).

[ ಮದುವೆ + ತೆರಿಗೆ ( < ತೆಱಿಗೆ ) ]

ಮದುವೆದೆಱೆ (ನಾ). = ಮದುವೆದೆರಿಗೆ : ಮಗ್ಗದೆಱೆ ಮದುವೆದೆಱೆ ಪೊಳವಾಱು . . . ಅಡಿದೆಱೆ (ಎಕ. XIV, ಕೃಕ್ಷರಾ. ೬೦-೯ ; 1402).

[ಮದುವೆ + ತೆಱೆ$_3$]

ಮದುವೆನಾಳ್ (ನಾ). ಮದುವೆಯ ದಿವಸ ; ವಿವಾಹದ ದಿನ : ಸುಗ್ಗಿಯೊಳ್ ಮದುವೆನಾಳ್ (ಕಾದಂಬ. ೬೩-೦೩೩). [ಮದುವೆ + ನಾಳ್$_1$]

ಮದುವೆನಿಲ್, ಮದುವೆನಿಲ್ಲು (ಕ್ರಿ). ವಿವಾಹಮಾಡಿಕೊಳ್ಳು ; ಲಗ್ನವಾಗು : ಅರಸಂ ತನ್ನ ಪೆರ್ಗಡೆಗಳಿಂದಂ ಕೂಸಂ ಬೇಡಿ ಪೆತ್ತು ಮದುವೆನಿಂದು (ವಡ್ಡಾರಾ. ೧೦೦-೦೯); ಶಾಂತಾತ್ಮ ಮದುವೆನಿಲ್ . . . ಜಗತೀ ಸಂತತಿ ನಿಲೆ ನಿನ್ನ ಧರ್ಮಸಂತತಿ ನಿಲ್ಕುಂ (ಆದಿಪು. ೬-೦೩) ; ಕುಮಾರನಧಿಕೋತ್ಸಾಹಾವಗಾಹಂ ಪ್ರಭಾವತಿಯೆಂಬಗ್ಗದ ಕನ್ನೆಯಂ ಮದುವೆನಿಂದಂ (ಶಾಂತಿಪು. ೯-೦೨). ಮದುವೆನಿಲ್ಲು : ಆತುರಾತುರದೊಳು ಮದುವೆನಿಂದೆನು ಅಂದು ಛಪ್ಪಮಕಸುಖದೊಳು ಸಂದು (ಜೀಶಾಕ. ೨೦೩-೩೨).

[ಮದುವೆ + ನಿಲ್]

ಮದುವೆನಿಲಿಸು (ಕ್ರಿ). ಲಗ್ನಮಾಡು ; ವಿವಾಹ ಮಾಡಿಕೊಡು : ಅರಸನು . . . ನೃಪಪಾತ್ರ ಜೆಯರನು ಸುಮುಹೂರ್ತದೊಳು ಕುವರಗೆ ಮದುವೆನಿಲಿಸಿದನು (ಜೈಮಿರಾ. ೯-೭). [ಮದುವೆನಿಲ್ + —ಇಸು$_3$]

ಮದುವೆನಿಲ್ಲು 'ಮದುವೆನಿಲ್' ನೋ.

ಮದುವೆನಿಱಿಸು (ಕ್ರಿ). = ಮದುವೆನಿಲಿಸು : ಸಕಲವಿಷ್ಟಪಪ್ರಣುತನ ನೀತನಂ . . . ಈ ಮಹೀತಳರಾಜ್ಯದೊಳ್ ನಿಱಿಸುವುದುಂ ಮದುವೆನಿಱಿಸುವುದುಂ ಎನಗಳಕ್ಯಾಸುಪ್ಪಾನು (ಆದಿಪು. ೬-೬ ವ). [ಮದುವೆ + ನಿಱಿಸು$_1$]

ಮದುವೆನೆರೆ (ಕ್ರಿ). ವಿವಾಹಸಂಬಂಧದ ಮೂಲಕ ಕೂಡು ; ಪಾಣಿಗ್ರಹಣದ ಮೂಲಕ ಒಂದಾಗು : ಕಾದಂಬರಿಯೊಳ್ ಮದುವೆನೆರೆದು . . . ಸಂತೋಷದಿಂ ಬಂದುಜ್ಜಯಿನಿಯಂ ಪುಗುವೆಂ (ಕಾದಂಬ. ೯೩೯) : ಷೋಡಶಸಹಸ್ರಸುರಕನ್ಯೆಯರಂ ದನುಜಪುರಸ್ಥೆಯರಂ ಮದುವೆನೆರೆದಪೆಂ (ಜಗಂ. ೦೦-೮೯). [ಮದುವೆ + ನೆರೆ$_1$]

ಮದುವೆಮಂಟಪ (ನಾ). ವಿವಾಹ ನಡೆಯುವ ಮಂಟಪ. — ಸ್ಥಳ : ಅವಲ್ಲಾದರು ಮದುವೆಮಂಟಪಕ್ಕೆ ಬಂದು ವಧೂವರರಿಗೆ ಆಶೀರ್ವದಿಸಿ, ತಾಂಬೂಲ ತೆಗೆದುಕೊಂಡು ಹೋದರೆ . . . ಸರ್ಟಿಫಿಕೇಟು ಕೊಟ್ಟ ಹಾಗೆ (೯೦೫. ೦೯೩). [ಮದುವೆ + ಮಂಟಪ]

ಮದುವೆಮನೆ (ನಾ). ವಿವಾಹ ನಡೆಯುವ ಮನೆ : ದೊಡ್ಡಮನೆ ಅಣ್ಣಯ್ಯ ಜ್ಯೂಟಕ್ಕೆ ಬರೋದಿಲ್ಲವಂತೆ ಅಂತ ಗೊತ್ತಾದರೆ ಸಾಕು. ಮದುವೆ ಮನೆಯ ಯಜಮಾನ ಯಜಮಾನಿಗೆ ತಾಪತ್ರಯ ಶುರುವಾಯಿತು ಅಂತಲೇ (ಪಪ್ಪೂರು. ೭೯) ; ಮದುವೆಮನೆಗಲಾಟೆ ತಡೆಯೋಕಾಗೋದಿಲ್ಲ (ದೂರದ. ೦೭). [ಮದುವೆ + ಮನೆ]

ಮದುವೆಯಾಯ (ನಾ). = ಮದುವೆದೆರಿಗೆ : ಮದುವೆಯಾಯ ವಹ್ನಿನೆ ಣ್ಣೆ(ಣ್ಣೆ) ಪಡಿಯದೆ ತಿಪ್ಪೆಸುಂಕ ಅಷ್ಟಭೋಗ ತೇಜ ಸಾಂಮ್ಯ (ಸಾಮ್ಯ) (ಗೌ)ಡುಗಳಿಗೆ . . .ಕೊಟ್ಟರು (ಎಕ. XXIII, ೦೯೫-೬೦ ; 1365).

[ಮದುವೆ + ಆಯ$_7$]

ಮದುವೆಹೆಣ್ಣು (ನಾ). ವಿವಾಹವಾಗುವ ಹುಡುಗಿ ; ಮದುಮಗಳು : ವಧು: ಮದುವೆಹೆಣ್ಣಿನ ಅಥವಾ ಗಂಡಿನ ಅಪ್ಪಅವ್ವಂದಿರಿಗೆ ಚಪ್ಪರದ ರಾತ್ರಿಯೆಲ್ಲಾ ನಿದ್ದೆಯಿಲ್ಲ (ಪಪ್ಪೂರು. ೭೯). [ಮದುವೆ + ಹೆಣ್ಣು(<ಪೆಣ್)]

ಮದೆ (ನಾ). ಮರೆ ; ತೆರೆ : ಆಳಸುವ ದನಿ ಬಳಸುವ ಮದೆಕೊಳಿಸುವ ಕೋಡೆಚಕ ಪೆಂಡಿಯ ತಂಗೊರ್ಳಂಬುಗಳೊಳ್ ಗಿಳಿ ಮರಳ್ದರಗಿಳಿ ಪೆಣ್ಗಳ ನೆಳಮಾವಿಟಿಸಿದುದು ರತಿಯ ಜಕ್ಕಂದ್ದೊಟವಂ (ಶಾಂತಿಪು. ೬-೫೦) ; ನೆರೆಯ ಕಟ್ಟಾಳೊಬ್ಬನೊಳ್ಕೆಯಿಂ ಬಳಿವಿಡಿಯ ಮರದ ಮೇಲ್ಮದೆಕಟ್ಟ ಬೇಟೆಯುಂ ಳಿಯಾಮ್ಯು (ಕಾದಂಬ. ೬೫-೦೭೨). [ದೇ.॥ ತುಳು. ಮದೆ]

ಮದೆವ, ಮದವ (ನಾ). ೧. ಮದುವೆಯ ಗಂಡು; ಮದುಮಗ; ವರ: ಸೌಸ್ನಾತಿಕರುಂ . . . ಪುರಂಧ್ರೀವರ್ಗಮುಂ ಬಂದು ಕನಕಪೀಠಸ್ಥಿತರಪ್ಪ ಮದೆವಂಗಂ ಮದೆವಳ್ಗಮಾರ್ದ್ರಾಕ್ಷತಾರೋಪಣಂಗೆಯ್ದರ್ (ಶಾಂತಿಪು. ೬-೦೬ ವ). ಮದವ : ೨. ಗಂಡ; ಪತಿ: ಕ್ಷೋಣಿಯೆನಿತುಮಾಕೆಯ ಮದವಂ (ಜಾತಿಕ. ೨೨-೦೭) ; ಮಗಳ ಮದವನಂ ಜಾಮಾತೃವೆಂಬುದು (ಶಬ್ದಮ. ೬೩-೩೫೦). [<ಮದುವೆ + — ಅ$_7$]

ಮದೆವಳ್, ಮದವಳ್, ಮದುವಳ್ (ನಾ). ೧. ಮದುವೆಯ ಹೆಣ್ಣು ; ಮದುಮಗಳು ; ವಧು : ಆ ಮದೆವಳ್ ರಕ್ಕಸನಲ್ಲಿಗೆ ಬಂದೇನೆಸ್ನಂ ನೀ ಮೆಚ್ಚಿದೆಯಂ ಮಾಡೆಂದು ತನ್ನಂ ತೋಱಿದೊಡೆ (ವಡ್ಡಾರಾ. ೦೩-೨೩): ಸೌಸ್ನಾತಿಕರುಂ . . . ಪುರಂಧ್ರೀವರ್ಗಮುಂ ಬಂದು ಕನಕಪೀಠಸ್ಥಿತರಪ್ಪ ಮದೆವಂಗಂ ಮದೆವಳ್ಗಮಾರ್ದ್ರಾಕ್ಷತಾರೋಪಣಂಗೆಯ್ದರ್ (ಶಾಂತಿಪು. ೬-೦೬ ವ). ಮದವಳ್: ೧. ಪೊಸಮದವಳುಮಾಕೊಳ್ವ ಗೊವರನುಂ ನಡೆದೆಂ ಪತ್ತಿದರೊ ಪದೆದಾ ಸುಜನಮ್ಮದುಸ್ಕಿ ತಂತವಗೆ ಸೇಸೆಯನೆ ಸೂಸುವಿನಂ (ಲೀಲಾವ. ೦೩-೨). ಮದುವಳ್ : ೨. ಹೆಂಡತಿ ; ಪತ್ನಿ : ಸೊಸೆ ಮದು[ಹಾಂ. ದ]ವಳ್ಳೆಜ್ಜೆ ಮುತ್ತಜ್ಜೆ . . . ಎಂಬೀ ಪೊಱೆಯ ವನಿತೆಯರ್ ಜನ್ಮಜನ್ಮಂಗಳೊಳ್ ತಾಮೆಗದಂ ಬೇಜಾಗಿ ಪುಟ್ಟಿದರ್ (ಶಾಂತಿಪು. ೬-೯೭). [ಮದೆವ + — ಅಳ್$_1$]

ಮದೇಭ (ನಾ). = ಮದಕರಿ : ಮದನಮದೇಭಂ ಕಡಿಕೆಯ್ವನ್ನೆಗಂ ಸಲ್ಲಗ್ಗಮಾದ ಬೀರಂಗಳಂ (ಆದಿಪು. ೨-೬೭) ; ವಿಘಾತಿಸಿ ತುಳಿವ ಸೀಳುವ ನವಮದೇಭದ ಸಮರ ಸೋಲಿಸಿತಮರರಾಶಿಗಳ (ಕುಮಾರಿ. ೯-೩೭). [ಸಂ.]

ಮದೇಭಗತಿ (ನಾ). ೧. ಸೊಕ್ಕಿದ ಆನೆಯ ನಡಗೆ. ೨. ಸೊಕ್ಕಿದಾನೆಯಂತೆ ನಡಗೆಯುಳ್ಳವನು : ಹಾ ಮಗನೇ . . . ಹಾ ಮದೇಭಗತಿ (ರಾಜಶೇ. ೦೩-೦೦೩). [ಸಂ.]

ಮದೇಭಗಮನೆ (ನಾ). = ಮದಗಜಗಮನೆ : ಮದೇಭಗಮನೆಯುರು ಸರ್ವೇಶ್ವರನ ಸರ್ವಾಂಗಶೋಭನವನೀಕ್ಷಿಸುತ . . . ಬೆಂಬತ್ತಿದರಲಾ (ವೀರಕೃ. ೩-೦-೦೬). [ಸಂ. ಮದೇಭಗಮನಾ]

**ಮದೇಭಗಾಮಿನಿ** (ನಾ). = ಮದಗಜಗಮನೆ : ರಾಜಮಾನೀಶ್ವರಂಗೆ ಮಾದೇವಿ ಮದೇಭಗಾಮಿನಿ ಜಗತ್ತ್ರಿತಯಾಂಬಿಕೆ ನಾಮದಿಂದಮ್ಮೈರಾವಧು (ಶಾಂತಿಪು. ೯-೦೫೫). [ಸಂ. ಮದೇಭಗಾಮಿನೀ]

**ಮದೋತ್ಕ** (ಗು). ಸೊಕ್ಕಿದ ; ಅಮಲೇರಿದ : ಇತ್ತ ವಸಂತನಿತ್ತ ಮಲಯಾನಿಲನಿತ್ತ ಮಧುವ್ರತಾಳಿ ಮತ್ತಿತ್ತ ಮದೋತ್ಕಕೋಕಿಲಕದಂಬಕಮಾಯ್ತೆ ವಿಜೃಂಭಿಸಿತ್ತು (ಕಾದಂಬ. ೬೬೨). [ಸಂ.]

**ಮದೋತ್ಸವ** (ನಾ). ೧. ಪ್ರಣಯದ ಉಲ್ಲಾಸ : ಕಾಮಾಸಕ್ತಿ : ಮದೋತ್ಸವದೆ ಕೋಗಿಲೆವೆಣ್ ಗಜಪಂ ನೆಗಟ್ಟುವಂತನುಪಿಪ ಸೊರ್ಕಿನಿಂ ಪಿಕನಿನಾದೆ ಪೆಣ್ ಗಜಪಂ ನೆಗಟ್ಟುವಳ್ (ಕಾವ್ಯಸಾ. ೯೬೪). ೨. ಮಾವಿನ ಹಣ್ಣು. [ಸಂ.]

**ಮದೋದಕ** (ನಾ). = ಮದರಸ : ಮದದಿಂ ಮನೋಹರಮಪ ಕಪೋಲಸ್ಥಳದಲ್ಲಿಯ ಮದೋದಕಲೋಭದಿಂ ಸೊರ್ಕಿ ತಿರುಗುತಿರ್ದ ತುಂಬಿಗಳ್ ಪಾದತಳದಿಂದೊದೆದೊಡಂ ಆ ಹಸ್ತಿ ಅತಿಬಲನಾದೊಡಂ ಕೋಪಮನೆಯ್ದುದು (ಪಂಚತಂ. ೮. ೪೦-೧೧). [ಸಂ.]

**ಮದೋದಯ** (ನಾ). ೧. (ಆನೆಗೆ) ಮದೋದಕವುಂಟಾಗುವಿಕೆ. ೨. ಅಹಂಕಾರ ಉಂಟಾಗುವಿಕೆ ; ಗರ್ವ ಉಂಟಾಗುವಿಕೆ : ಆದಿಬ್ರಹ್ಮರ ಕೊಟ್ಟೀ ಮೇದಿನಿಗಾನೊಡೆಯನಾತನರಸಿನಿವಿರಿದಿಂದಾದೊಡಮೇನೆನಗೆಂಬ ಮದೋದಯದೊಳ್ ದೇವ ಬಾಹುಬಲಿ ಬಲಿದಿರ್ದಂ (ಆದಿಪು. ೦೪-೦೮). ೧, ೨ : ಮದೋದಯಂ ಮದನನೊಳಂ ಮತ್ತಗಜದೊಳಂ . . . ಪ್ರಸನ್ನಭಾವಂ ಜಲದೊಳಂ ಜನದೊಳಮಾದ ಶರತ್ಸಮಯದೊಳ್ (ಶಗರಿ. ೪-೬೩ ವ). [ಸಂ.]

**ಮದೋದ್ಗಂಧ** (ನಾ). (ಆನೆಯ) ಮದಜಲದ ಅತಿಶಯವಾದ ವಾಸನೆ : ಸ್ಕಂದಾವಾರೇಭ ಮದೋದ್ಗಂಧಾವಿಲೆಯಂ ಕವೇರಕನ್ನಿಕೆಯಂ ತತ್ಸಿಂಧುಪತಿಗಿಂಬಿನಿಂದತಿಸಂಧಿಸಿದಂ ನೃಪತಿ ಬಿಟ್ಟು ತದುಭಯತಟದೊಳ್ (ಶಾಂತಿಪು. ೧೦-೨). [ಸಂ.]

**ಮದೋದ್ಧತ** (ಗು). ೧. ಮದ್ಯಪಾನದಿಂದ ಅಮಲೇರಿದ.–ಮತ್ತೇರಿದ. ೨. ಅಹಂಕಾರದಿಂದ ಉನ್ಮತ್ತವಾದ,—ಉದ್ಧಟವಾದ : ಮದೋದ್ಧತ ಮಕುಟಬದ್ಧ ಚೂಡಾಮಣಿಕಿರಣಚರಣಾಲಕ್ತಕರಾಗಮುಂ . . . ತನಗೆ ಸಹಜಾಭರಣಮಾಗೆ (ಪಂಪಭಾ. ೩-೨೧೮). (ನಾ). ೩. ಮದ್ಯಪಾನದಿಂದ ಅಮಲೇರಿದವನು.–ಮತ್ತೇರಿದವನು : ವಿನೋದದೊಳ್ ಮರಿದ್ದರು ಜನದೊಳಗೆ ಮದಿರಾಮದೋದ್ಧತರು (ಕಬ್ಬಿಗ. ೨೬-೨೯). ೪. ಅಹಂಕಾರದಿಂದ ಉನ್ಮತ್ತನಾದವನು: ಉದ್ಧಟ. [ಸಂ.]

**ಮದೋದ್ರಿಕ್ತ** (ಗು). ೧. ಕಾಮೋದ್ರೇಕವುಳ್ಳ : ಕಾಮೋದ್ವೇಗವುಳ್ಳ. ೨. ಗರ್ವದಿಂದ ಉಬ್ಬಿದ.—ಉದ್ರೇಕಗೊಂಡ ; ಗರ್ವಿತನಾದ. [ಸಂ.]

**ಮದೋದ್ರೇಕ** (ನಾ). ೧. ಮದ್ಯಪಾನದಿಂದ ಉಂಟಾದ ಅತಿಶಯವಾದ ಕಾಮೋದ್ವೇಗ : ಮದಿರಾಪಾನಮಂ ಮಾಡುತುಂ ತನ್ಮದೋದ್ರೇಕದಿಂದಾರ್ಕಿ ಸೊರ್ಕಿಮಿಕ್ಕು ಮಿಾಱಿದಂಗನೆಯರ್ಕಂಗೊಳಿಸಿರ್ದರು (ಅನ್ನಪೂ. ೩-೮೩ವ). ೨. ಅತಿಯಾದ ಗರ್ವ : (ಕ). [ಸಂ.]

**ಮದೋದ್ರೇಕಿ** (ನಾ). ಅತಿಶಯವಾದ ಕಾಮೋದ್ವೇಗವನ್ನುಳ್ಳವನು : ಮದೋದ್ರೇಕಿಯಾದಾ ಮಹೀವಲ್ಲಭಂಗುರ್ಬಿದುತ್ತುಂಗಮೋಹಾಭಮಂ . . . ನೋಡಿದಂ ಮೂಡಿ ಚಂದ್ರಂ (ಉಕಲಿ. ೩-೦೪). [ಸಂ. ಮದೋದ್ರೇಕಿನ್]

**ಮದೋನ್ಮತ್ತ** (ಗು). ೧. ಮದ್ಯಪಾನದಿಂದ ಅಮಲೇರಿದ. ೨. ಗರ್ವದಿಂದ ಅವಿವೇಕಿಯಾದ. ೩. (ಆನೆಯು) ದಾನಜಲ ಹೊಮ್ಮುವುದರಿಂದ ಹುಚ್ಚೆದ್ದ,–ಕ್ರೋಧಗೊಂಡ : ಶಿವಿರಮಂ ಬೆನ್ನಟ್ಟಿ ಮಾವಂಗಳಿಂದೊರಸಿತ್ತೇನತಿಜೋದ್ಯಮೋ ವಿಧು ಮದೋನ್ಮತ್ತೇಭವಿಕ್ರೀಡಿತಂ (ಚಂದ್ರಪ್ರ. ೬-೩೩). (ನಾ). ೪. ಮತ್ತೇರಿದವನು: ಅಮಲೇರಿದವನು : ಮದ್ಯಗುಣಿಕೆಯ ತಿಂದ ಮದೋನ್ಮತ್ತರ ಚಿನ್ನತ್ತ ತೋಱದಿರಯ್ಯ (ಅನಂತ. ೬೪-೨೦). ೫. ಅಹಂಕಾರಿ; ಗರ್ವಿಷ್ಠ : ತಾಂ ಚಿತ್ರಚಿತ್ತ ಮದೋನ್ಮತ್ತನಾಗಿ ಧರ್ಮದೊಳ್ ಬಹಿರ್ಮುಖನಂ. . . ಮೋಕ್ಷದೊಳ್ ನಿರಪೇಕ್ಷಕನುಮಾಗಿ (ಪಂಚತಂ. ೨೮-೬). [ಸಂ.]

**ಮದೋಪರ** (ನಾ). ಒಂದು ಬಗೆಯ ಭಕ್ಷ್ಯ : ಅತಿರಸಕೆ ಗದ ಅಗಲ ೩೫೦ ಉದ ೫೦ ಬೀಜವನ್ನು ೧೧೦ ಬಿದಕೆ ಸ್ಯರುತ್ಯದಲು ಮದೋಪರಕೆ ಗದೆ ಅಗಲ ೩೨ ಉದ ೧೫ ಬೀಜವರಿ ೩೦॥ ೦ (ಎಕ. XI. ಮೊಳ೯. ೬-೨೩: 1528).

[P ಇದು ' ಮನೋಹರ ' ಎಂಬುದರ ಅಪಲಿಖಿತವಿರಬಹುದು ]

**ಮದ್ಗು** (ನಾ). ೧. ಒಂದು ಬಗೆಯ ಕಾಗೆ; ನೀರುಕಾಗೆ : "ಮದ್ಗುಃ, ಜಳವಾಯಸಃ—ಈ ೨ ನೀರ ಕಾಗೆ" (ಹಲಾಯು. ೪೨-೯೬); ಶುಕ ಶಾರಿಕಾ ಮದ್ಗು ಸುಪರ್ಣಾದಿ ಪಕ್ಷಿಸಮೂಹಗಳಂ (ಶಾರಶಾಂ. ೩೬-೨೩೪). ೨. ಒಂದು ಬಗೆಯ ಮಿಾನು ; ಹೆಮ್ಮಿಾನು : "ಶೃಂಗೀ, ಮದ್ಗುಃ, ಅವಾಗುಃ, ನಂದ್ಯಾವರ್ತಕಿ—ಈ ೪ ಮೊದಲಾಗುಳ್ಳವು ಹೆಮ್ಮೀನ್" (ಹಲಾಯು. ೦೦೯-೩೬). [ಸಂ.]

**ಮದ್ಗುರ** (ನಾ). ಒಂದು ಬಗೆಯ ಮಿಾನು : "ಮದ್ಗುರಃ–ಮಾವಾಗಲೂ ಮುಳಗಿಕೊಂಡಿರುವ ಮಿಾನು" (ಅಭ್ಯ. ೦೩.೬೨). [ಸಂ.]

**ಮದ್ದಕ** 'ಮದ್ದಿಕ' ನೋ.

**ಮದ್ದತು** 'ಮದತ್ತು' ನೋ.

**ಮದ್ದತ್ತು** 'ಮದತ್ತು' ನೋ.

**ಮದ್ದಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮತ್ ಎಱೆಯಪಗಾಮುಣ್ಡನು ಮದ್ದಯ್ಯನು ಬನ್ನಿಲ್ಲಿ ಪೃತಕೊಣ್ಡರ್ ( ಎಕ. II. ೪೩೮ ; 950).

[ ? + ಅಯ್ಯ$_1$ ]

**ಮದ್ದರೆ** 'ಮದರ್ಣ' ಪರಾ.

**ಮದ್ದಲಿಸು** (ಕ್ರಿ). ಮದ್ದಲೆಯನ್ನು ಬಾರಿಸಿ ಶಬ್ದವನ್ನುಂಟುಮಾಡು : ಊರೂರ ಮದ್ದಲಿಸಿ ಸಾರಿ ಶಿಪ್ಪರ ಹೆಸರ ವಿರೂತ ಪರವೂತ ೧೧ ಮೇಲೆ ಕಂಬಿಯವರು ನೀರು ನೀಡೂತ ಜನರಿಗೆ (ಶಿಷ್ಯಶಿ. ೩-೩೪).

[ ಮದ್ದಲೆ$_1$ + – ಇಸು$_3$ ]

**ಮದ್ದಲೆ**$_1$, **ಮದ್ದಳಿ**, **ಮದ್ದಳೆ**$_1$(ನಾ). ಒಂದು ಬಗೆಯ ಚರ್ಮವಾದ್ಯ; ಮೃದಂಗ ; ಮುರಜ : " ಮದ್ದಲೆ(ಳೆ). ಮದಲೆ—ಮಾರ್ದಲ=ಒಂದು ಚರ್ಮವಾದ್ಯ" (ಕರ್ನಾಶಬ್ದ. ೩೩); ದಣಧ್ಣಾಧಿಸ್ತೆ ಮದ್ದಲೆಯು ಕಿವಿಯೊಳಗೆ ಘನಸೂರು ಹಿಡಿಯೆ ಗುಂಡನಿಗೆ (ಕನ್ನಡ. ೦೯೬). ಮದ್ದಳಿ :'ಮದ್ದಳಿಕಾಱ' ಪರಾ. ಮದ್ದಳೆ$_1$ : "ಮುರಜಂ ಮೃದಂಗಮೆನೆ ಮದ್ದಳೆಯೆನಿಕ್ಕು" (ಪಂಗರಾ. ೨೪-೬); ಕಾವ್ಯರಚನೆ. . .ಹೀನಂ ಪರುಷತರವಾಕ್ಯವೊತ್ತುಂ ಗರಡೆಯ ಮದ್ದಳೆಯ ಜರ್ಝರಧ್ವನಿಗಳವೊಲ್ (ಕವಿರಾ. ೦-೩೩); ಹುಟ್ಟುವಾತ ಮದ್ದಳೆಯ ಕಟ್ಟಿದ ನಡೆವಾತ ತಾಳವನೊತ್ತಿದ (ಸರ್ವಜ್ಞ. ೪೪-೨೨೯); ಭೇರಿ ಮದ್ದಳೆ ಸಂಕು ನಗಾರಿ ಹೆಗ್ಗಳೆಗಳ್ ಚೀರಿದುವಖಿಲ ದೇಗುಲದಿ (ಮೋಹತ. ೦೮-೬).

ಮದ್ದಳೆಯ ಹಣ=ಮದ್ದಳೆಗರು ತೆರಬೇಕಾದ ತೆರಿಗೆ : ಅಪುತ್ರಿಕ ದ್ರವ್ಯದ ದಶವನ್ಧದೊಳಂ ಪುಟ್ಟಿದ ದ್ರವ್ಯಮುಮಂ ಕಳೆ ಮದ್ದಳೆಯ ಪಣಮುಂ ಬೇಱಿಂಗೆಱೆಗೆ (ಎಇ. XX. ೬೮-೪೦; 1012).

[<ಪ್ರಾ. ಮದ್ದಲ./ ಸಂ. ಮರ್ದಲ]

**ಮದ್ದಲೆ**$_2$ 'ಮದ್ದಾಲೆ' ನೋ.

**ಮದ್ದಳಿ** 'ಮದ್ದಲೆ$_1$' ನೋ.

**ಮದ್ದಳೆಕಾಜಿ** (ನಾ). ಮದ್ದಳೆಯನ್ನು ಬಾರಿಸುವವನು: ಶ್ರೀಕಾಲಭೋಗಂ ಮಾಡುವ ಪಾಳವಿಗೆಲ್ಲರ್ವ್ವರು ಮದ್ದಳೆಕಾಜರು ನಾಲ್ವರ್ಗ್ಗಂ ಮತ್ತರು[ಲ್]ಂ (ಕೆ.ಶಿ. ೯-೩-೩೨೫; 1062). [ಮದ್ದಳೆ (<ಮದ್ದಲೆ$_1$) + -ಕಾಜಿ]

**ಮದ್ದಳೆಗ** (ನಾ). ಮದ್ದಳೆಯನ್ನು ಬಾರಿಸುವವನು : "ಮದ್ದಳೆಗನೇ ಮಾರ್ದಂಗಿಕನಕ್ಕುಂ" (ಶಮಣಿ. ೩೩); ಸಂಗತಿಗಳಂ ಸೂಸುವ ಮದ್ದಳೆಗರಿಂ (ಗಿರಿಕ. ೨-೦೦೫೪); ವೃತ್ತಮದ ಮದ್ದಳೆಗಂಗೆ ಮತ್ತ ೭ (ಕೊಲ್ಲಾಪುರ. ೨೦ ೨-೦೬: 1278); ಮದ್ದಳೆಗಂ ಮದ್ದಳೆಯಂ ಕರ್ಪೂರ ಸಲ್ಲಳಂತೆ ತೊಡಯೊಳಳವಡಿಸಿ (ರಾಜಶೇ. ೨-೨೩ ಪ). [ಮದ್ದಳೆ$_1$ (< ಮದ್ದಲೆ$_1$) + -ಇಗ]

**ಮದ್ದಳಗಿತಿ** (ನಾ). ಮದ್ದಳೆಯನ್ನು ಬಾರಿಸುವವಳು : ಇಕಿಗೆ_ಚಾಮರಿಗಿತಿ, ಮದ್ದಳಗಿತಿ, ಅವುಜಗಿತಿ (ಶಮಚ. ೨೦೮ ಕೃದೋ). [ಮದ್ದಳೆಗ + -ಇತಿ$_1$ (<-ಇತ್ತಿ$_1$)]

**ಮದ್ದಳೆ$_1$** 'ಮದ್ದಲೆ$_1$' ನೋ.

**ಮದ್ದಳೆ$_2$** 'ಮದ್ದಾಲೆ' ನೋ.

**ಮದ್ದಳೆಗ** (ನಾ). = ಮದ್ದಳೆಗ : ಪಲವು ಕತ್ತರದ ಕಳಾಸವನಜಾದು ಮದ್ದಳೆಗ ಕೇಳಿಸಿ ನಿಂದನೊಡನೆ (ಧರ್ಮ. ೧೨-೩೯). [ಮದ್ದಳೆ$_1$ (< ಮದ್ದಲೆ$_1$) + -ಗ$_2$]

**ಮದ್ದಾನೆ** 'ಮದ' ಪರಾ.

**ಮದ್ದಾಲೆ, ಮದ್ದಲೆ$_2$, ಮದ್ದಳೆ$_2$** (ನಾ). ಒಂದು ಬಗೆಯ ಸಸ್ಯ ; ಏಳೆಲೆಬಾಳೆ : ಸಪ್ತಪರ್ಣ, ಜಂತಾಲವಾತ್ರ, ಮದ್ದಾಲೆ, ಏಳೆಲೆಬಾಳೆ, ಕೋಡಾಲೆ, ಬಂತಲೆ (ವೃಕ್ಷಶಿ. ೩-೯೩) ; ಬೆಳ್ಳಾಲೆ, ಮದ್ದಾಲೆ, ನೇರಲು . . . ಗಗನಚುಂಬಿತವೃಕ್ಷಗಳು (ಕಂಚಶಂ. ೨). ಮದ್ದಲೆ$_2$: ಬಿಳಬೂತಾಳ, ಮದ್ದಲೆ (ವೃಕ್ಷಶಿ. ೬೮-೦೪೯೪). ಮದ್ದಳೆ$_2$ : (ವೃಕ್ಷಶಿ. ೯೭-೯೨೯). [ ? ]

**ಮದ್ದಿಕ**, ಮತ್ತಿಕ, ಮದಿಕ, ಮದ್ದಕ (ನಾ). ಊರೊಟ್ಟಿನ ಆಸ್ತಿ ; ಸಾರ್ವಜನಿಕ ಸ್ವತ್ತು : ಜಿನ ಗ್ರಾಮ ಮದ್ದಿಕದಲ್ಲಿ ಪೂರ್ವ ಮುಂದಣ ಹೊಸ್ಸಾಗಿ ಕಟ್ಟಿಸಿದ ಮಂಟಪಕ್ಕೆ (ಎಕ. III. ಶ್ರೀರಂಗ. ೨೩-೫೯ : 1663); ಗ್ರಾಮಸ್ಥರು ದಂಡದೋಷಗಳಿಂದ ಬಂದ ದುಡ್ಡನ್ನು ಮದ್ದಿಕದ ಹಣ ಎಂದು ಗ್ರಾಮದ ಯಜಮಾನನಲ್ಲಿಟ್ಟು ಅದನ್ನು ದೇವಸ್ಥಾನ ಧರ್ಮಛತ್ರ ಮುಂತಾದವುಗಳನ್ನು ಕಟ್ಟುವುದಕ್ಕೆ ಉಪಯೋಗಿಸುತ್ತಿದ್ದರು (ಮೈಸೂ. ೯೬). **ಮತ್ತಿಕ** : ಶ್ರೀರಾಮಾನುಜಮಿಂಉತ್ಸವದ ಕಟ್ಲೆ ನಡೆಯುವನ್ನೆ ಕೂಡ್ಲೂರು ಶಾನಬಾಗ ಕಪನಿಪತಯ್ಯನವರಿಂದ ಕೃಯಲಬ್ಧವಾಗಿ ಬನ್ದ ಮತ್ತಿಕದ ತೆಂಗಿನ ತೋಟವನ್ನು ಪೊಪ್ಪಿಸಿ ಇದೇನೆ (ಎಕ. IX. ಚನ್ನಪ. ೦೦೬-೦೯ ; 1828). **ಮದಿಕ** : ನೀವು ಪೂರ ಮದಿಕಕೆ ಸಲುವ ಹರಯುವ ಹಂದಿಮಾನಿಯ ಸರಹಿನ ಭೂಮಿಯನು (ವೈಶಿಂ. ೦೯೩೦, ೬೯-೦೦ : 1396). **ಮದ್ದಕ**: ಅದನ್ನು ಮದ್ದಕದಲ್ಲಿಟ್ಟು ಎಲ್ಲರೂ ಉಪಯೋಗಿಸಿಕೊಳ್ಳಬೇಕು (ಬಾಳಶ ೬೭).
**ಮದ್ದಕದ ಗೋಡೆ** = "(ಪ್ರತ್ಯೇಕಿಸುವ, ಎರಡು ಮನೆಗಳ ಮಾಲೀಕರಿಗೂ ಸೇರಿದ) ಮದ್ದಕದ ಗೋಡೆ" (Party-Wall. ಇಂಕ೭). [< ಸಂ. ಮಧ್ಯಕ]

**ಮದ್ದಿಕ್ಕು** (ಕ್ರಿ). ೧. ವಶೀಕರಣಕ್ಕಾಗಿ ಔಷಧಿಯನ್ನು ನೀಡು : ಮರುಳುಗೊಳಿಸು : ಮನಸೋತು ಗೋಪಿಯರು ಮೆಚ್ಚಿ ಮದ್ದಿಕ್ಕಿದರೇ (ಭುರಂದ. ೦-೯೯ ಅಮುಶ್ಚಲಿ). ೨. ವಿಷಹಾಕು : ಮದ್ದಿಕ್ಕಿ ಕೊಲ್ಲುವವ ಮಾರಿ ಹೊಲೆಯ (ಪುರಂದ. ೦-೦೬೮-೩). [ಮದ್ದು (<ಮರ್ದು) + ಇಕ್ಕು]

**ಮದ್ದಿಡಿ** (ಕ್ರಿ). ಸಿಡಿಮದ್ದು ತುಂಬು ; ಮದ್ದಿನಿಂದ ತುಂಬಿಸು : ಮದ್ದಿಡಿದ ಮಣ್ಣುಡಿಕೆ ಕಿಡಿಗೊಂಡು ಸಿಡಿಯೆ (ತತ್ತ್ವಾಂಗ. ೬-೦೬೦). [ಮದ್ದು (< ಮರ್ದು) + ಇಡು]

**ಮದ್ದಿನಸೊಪ್ಪು** (ನಾ). ಒಂದು ಬಗೆಯ ಔಷಧೀಸಸ್ಯ: ಮರುಳುಮಾತಂಗಿ, ಮದ್ದಿನಸೊಪ್ಪು (ವೃಕ್ಷಶಿ. ೬೯-೦೬೦೬). [<ಮದ್ದು + ಸೊಪ್ಪು$_1$]

**ಮದ್ದಿಮಬಿಸಿಗೆ** 'ಮಧ್ಯಮಬೀಸಿಗೆ' ನೋ.

**ಮದ್ದಿಮೆ** (ನಾ). ನಡುತರವಾದುದು : ಪಟುತ್ವ ಕಡಿಮೆಯಾದುದು : ಶ್ರೂನಿಯಾನ ತಾಯಿ . . . ಮುದುಕಿಯಾದಳು . . . ಕಣ್ಣೂ ಮದ್ದಿಮೆ ಯಾಗುತ್ತಾ ನಡೆದುವು (ಕಾಸಿನ್ನಾ. ೬೩) ; ಕಣ್ಣು ಸ್ವಲ್ಪ ಮದ್ದಿಮೆ (ಶೀಮು. ೦೯೬). [< ಸಂ. ಮಧ್ಯಮ]

**ಮದ್ದೀಡು** (ನಾ). (ಇತರರಿಗೆ ಕೇಡುಂಟು ಮಾಡಲು) ಆಹಾರದಲ್ಲಿ ಸೇರಿಸಿ ಹಾಕುವ ವಿಷ : ಇಕ್ಕುಮದ್ದು ; ಕೈಮಸಕ : ಗುಣಹೊಂದಿದವರೆಲ್ಲರಿಗೂ ಮದ್ದೀಡಿನ ಚಿಹ್ನೆಗಳು ವಿಕರೀತಿಯಾಗಿರುತ್ತವೆ. ನಾಲಿಗೆ ರುಚಿಯಾಗಿರುತ್ತದೆ. ಆದರೆ ಹಸಿವಿರುವುದಿಲ್ಲ (ಮನೋಶಂ. ೭೮) ; ಬೈರವ್ವನಿಗೆ ಯಾರೋ ಮದ್ದೀಡುಮಾಡಿದ್ದರಂತೆ (ಮನೋಶಂ. ೧೫೩). [ಮದ್ದು (< ಮರ್ದು) + ಈಡು$_1$]

**ಮದ್ದು** 'ಮರ್ದು' ನೋ.

**ಮದ್ದುಕತ್ತಿ** (ನಾ). ವಿಷವನ್ನು ಲೇಪಿಸಿದ ಖಡ್ಗ : ಖಾಸಾ ಮದ್ದುಕತ್ತಿ ಒಂದು, ಕಠಾರಿ ಒಂದು, ಬಾಂಕ ಒಂದು (ರಾಜೇಂದ್ರ. ೫೬). [ಮದ್ದು (< ಮರ್ದು) + ಕತ್ತಿ]

**ಮದ್ದುಗಾರ** (ನಾ). ಔಷಧಿಯನ್ನು ಮಾಡುವವನು : ಮದ್ದುಗಾರನ ಹಾಸ್ಯ (ಹಾಸ್ಯಮಂ. ೧೨). [ಮದ್ದು (<ಮರ್ದು) + -ಕಾರ$_1$ (<-ಕಾಜ)]

**ಮದ್ದುಗಾರಿಕೆ** (ನಾ). ಔಷಧವನ್ನು ಮಾಡುವಿಕೆ : ಆಚಾರ್ಯ, ನಮ್ಮ ಪಾಳೆಯದೊಳಪರಾರ್ಯರರಿಯದ ಮದ್ದುಗಾರಿಕೆಯು ಬಲ್ಲ ಮುತ್ತವರು ಕೇಳುಗುರೊಂದನುಳಿನು ಬೆರಳಿಗೆ ಬೆರಳ ಬೆಳಸಲಾರ್ಪರು (ಪಪ್ಪರ. ೪೫-೨೦೫). [ಮದ್ದುಗಾರ + -ಇಕೆ]

**ಮದ್ದುಗಾರ್ತಿ** (ನಾ). ೧. ಔಷಧಿಯನ್ನು ಮಾಡುವವಳು. ೨. ವಿಷವಿಕ್ಕುವವಳು : ಕೈಮಸಕನ್ನು ಹಾಕುವವಳು : ಬೆಟ್ಟೆಯರು ಮಟಮಾಯೆಗಳು ಬಲು ಮದ್ದುಗಾರ್ತಿ [ಪಾಠಾಂ. ಕಾತಿ]ಯರು (ಬಸಪು. ೪೦-೫೬). [ಮದ್ದುಗಾರ + -ತಿ$_1$ (< -ಇತ್ತಿ$_1$)]

**ಮದ್ದುಗುಣಿಕೆ** 'ಮರ್ದುಗುಣಿಕೆ' ನೋ.

**ಮದ್ದೂರು** 'ಮಟ್ಟೂರ್' ನೋ.

**ಮದ್ದೆಚ್ಚು** (ಕ್ರಿ). ಔಷಧವನ್ನು ಲೇಪಿಸು : ಸರಳಂತ ಪುಲಿಯೊಂದು ಕಣ್ಣೇನೆಯೊಳು ಬಿರ್ದು ಪೊರಳುತಿರಲು ವೈದ್ಯನೊರ್ವ ಭರದಿ ಮದ್ದೆಚ್ಚಿ ಲಂದಾ ಪುಲಿ ಮಾಡಿದೊಂದಿರದ ಕೇಳ್ದ ಜೀಯೆಯ ರಾಯ (ಜಾಗತು. ೦೯_೫೪). [ಮದ್ದು (< ಮರ್ದು) + ಎಚ್ಚು]

**ಮದ್ಯ** (ಗು). ೧. ಅಮಲೇರಿಸುವ. (ನಾ). ೨. ಕಳ್ಳು, ಹೆಂಡ, ಮದಿರೆ ಇತ್ಯಾದಿಯಾದ ಅಮಲೇರಿಸುವ ಪಾನೀಯ : "ಮೈರೇಯ ಮಾಸವಂ ಮಧು ಮಾಧವಂ ಸೀಧು . . . ಮದಿರೆ ಮದ್ಯಂ ಕಾಪಿಶಾಯನಂ ವಾರುಣಿ ಮದಿಷ್ಠೆ ಕಾದಂಬರಿ ಪರಿಸ್ರುತ ಕಲ್ಯಮೆನೆ ಕಳ್ಳೆನಿಕ್ಕುಂ" (ಮಂಗರಾ. ೬೩-೮) ; ಮದ್ಯ ಮಧು ಮಾಂಸವೆಂಬಿವನಾದ್ಯಂತಂ ತೊಱೆವುದು (ಸ.ಕವಿಚ. ೩-೪೦) ; ಅಂಗದಿಚ್ಚೆಗೆ ಮದ್ಯ ಮಾಂಸವ ತಿಂಬರು ಕಂಗಳಿಚ್ಚೆಗೆ ಪರವಧುವ ನೆರೆವರು ಲಿಂಗಲಾಂಛನಧಾರಿಯಾದಲ್ಲಿ ಫಲವೇನು (ಬಸವ. ೦೦೬) ; ಮದ್ಯದ ಉಗ್ರವಾಸನೆ ಹೊರಡುತ್ತಿತ್ತು (ಮೋಹಂ. ೪೩೨). ೩. ಅಮೃತ : ಕಟ್ಟುಪ್ಪ ವಿಷದ ಮದ್ಯದ ಪುಟ್ಟಿದ ನೆಲೆ. ಜಳಧಿಯಂ ಪೊಗಳದೆ ಸಿರಿ ಪುಟ್ಟಿದು[ದು] ರಾಜಮಲ್ಲಂ ಕಟ್ಟಿಸಿದಜಗೆಜೆ ಸಮುದ್ರದಿಂ ಮಿಗಿಲಲ್ತೆ (ಕೌಸಿಗ. XVIII, ೯೯-೫೬ ; 1019). [ಸಂ.]

**ಮದ್ಯಗೋಷ್ಠಿ** (ನಾ). ಮದ್ಯಪಾನ ಮಾಡುವವರ ಕೂಟ ; ಪಾನಕೂಟ. [ಸಂ. ಮದ್ಯಗೋಷ್ಠೀ]

**ಮದ್ಯಪ** (ನಾ). ಹೆಂಡವನ್ನು ಕುಡಿಯುವವನು ; ಮದ್ಯಪಾನ ಮಾಡುವವನು. [ಸಂ.]

**ಮದ್ಯಪಾನ** (ನಾ). ಹೆಂಡ ಕುಡಿಯುವುದು : ಉಟ್ಟುದನು ಮಱೆದು . . . ನಿಲ್ವೀ ನಿಟ್ಟಿಗೆ ನೆಲೆಯಾದುದು ಬಾಯ್ಬಿಟ್ಟೊದಱುವ ಮದ್ಯಪಾನ ಮತ್ತಜನೌಘಂ (ಶಾಂತಿ. ೧೦-೧೪೧). [ಸಂ.]

**ಮದ್ಯಪಾಯಿ** (ನಾ). = ಮದ್ಯಪ : ಷಂಷರ್‌ಖಾನನು . . . ಮದ್ಯಪಾಯಿಯೂ, ವಿಲಾಸಿಯೂ, ವಿಷಯಾಸಕ್ತನೂ ಆಗಿದ್ದ ನಯಾಜುನಿಗೆ ಆಪ್ತಸೇವಕನಾಗಿ ರಾಜ್ಯದ ಆಗುಹೋಗುಗಳಲ್ಲಿ ಮಹತ್ವದ ಪಾತ್ರವಹಿಸಿದ್ದನು (ರಾಜ್ಯೋದ. ೦೪೩). [ಸಂ. ಮದ್ಯಪಾಯಿನ್]

**ಮದ್ಯಪಿ** (ನಾ). = ಮದ್ಯಪ : ಬಳರಿಯು ಸೋಂಕಿಗೆ ಬೀದಿಗೆ ಮುಳಿವರ ಮನೆಗಳ್ಗೆ ಮದ್ಯಪಿಗಳಲ್ಲಿಗೆ ಕೋಮಳೆಯುಂ ಪೋಗಲ್ಕಿತ್ತಡೆ ಬಳರಿಗೆ ಪುಯಿಲಿಡಪೋದ ಕುಱಯುಂತಕ್ಕು (ಮಲ್ಲಿ. ೬-೨೮) ; ಪೊಡವಿಪನ ವಾಕ್ಯದೊಳು ಹುಸಿಯು ನೀಂ ಪಿಡಿದೆಯಾದಡೆ ನಾನು ಮುನಿತನವನುಳಿದು . . . ಮದ್ಯಪಿಯಾಗಿ ತೆಂಕಮುಖವಹೆನು (ಹರಿಶ. ೦೪-೦೪) ; ಜಾಕ್ಕಟಂ ಮಸಗಿ ಕುಣಿದಾಡುತ್ತುಮಿರ್ದ ಮದ್ಯಪಿಗಳ ಮಧುಪಾನಕೇಳೀವಿಜೃಂಭಣ ಬಹಳ ಕೋಲಾಹಳಕುತೂಹಳಮುಂ ಧರ್ಮನಾಥಕುಮಾರಂ ನೋಡಿ ನೋಡಿ ನಗುತ್ತುಂ (ಶಾಂತಿ. ೧೦-೧೪೦ ವ). [ಸಂ. ಮದ್ಯಪಿನ್]

**ಮದ್ಯಮಬಿಸಿಗೆ** 'ಮಧ್ಯಮಬೀಸಿಗೆ' ನೋ.

**ಮದ್ಯವ್ರತ** (ನಾ). ಹೆಂಡ ಮೊದಲಾದುವನ್ನು ಸೇವಿಸಕೂಡದೆಂಬ ವ್ರತ : ಹುಳಿತವಾದ ಮೊಸರು ಮಜ್ಜಿಗೆಯನು ಅಂಬಿಲವನು ಬಿಡುವುದು ಬಿಡದೆಯಿದ್ದರೆ ಮದ್ಯವ್ರತಕ್ಕೆ ಅಪಚಾರವಹುದು (ಕಾಗಾರ. ೩೧). [ಸಂ.]

**ಮದ್ಯಸಾಕ್ಷಿಕ** (ನಾ). ಮದ್ಯವನ್ನು ಸಾಕ್ಷಿಯಾಗಿಟ್ಟುಕೊಂಡಿರುವಿಕೆ : ಮದ್ಯಸಾಕ್ಷಿಕವಾಗಿ ನಾವು ಕೆಳೆತನಕ್ಕೆ ಮೊದಲು ಮಾಡಬೇಕು. ಆದುದರಿಂದ ನಡೆ, ಮದ್ಯದ ಅಂಗಡಿಗೆ ಹೋಗೋಣ (ಕಾಳಂಕ. ೭೮). [ಸಂ.]

**ಮದ್ಯಸಾರ** (ನಾ). ೧. ತೀಕ್ಷ್ಣವಾದ ಮದ್ಯ : "ತೀಕ್ಷ್ಣಮದ್ಯ, ಮದ್ಯಸಾರ, ಸಾರಾಯಿ" (spirit. ೩೦೪೩). ೨. (ತೀಕ್ಷ್ಣವಾದ ಮದ್ಯವನ್ನುಪಯೋಗಿಸಿ ಮಾಡುವ) ಒಂದು ಬಗೆಯ ದ್ರಾವಣ : ಹಚ್ಚಿದ ಕೂಡಲೆ ಇಂಗಿ ಹೋಗುವ ಮದ್ಯಸಾರವನ್ನು ಜೀವಿಶುದ್ಧೀಕರಣ (sterilization)ಕ್ಕೆ ಉಪಯೋಗಿಸಬೇಕು (ಕಲರೋ. ೬೦) ; ಸರಿಯಾದ ನರಕ್ಕೆ ಮದ್ಯಸಾರವನ್ನು ಚುಚ್ಚಿ ಹೊಗಿಸಿ ತಲೆಯ ಮೇಲಿರುವ ನೋವನ್ನು ಕಳೆಯಬಹುದು (ಕವಿಕಾ. I. ೪೯೭). [ಸಂ.]

**ಮದ್ಯಸೇವೆ** (ನಾ). = ಮದ್ಯಪಾನ : ಕೊಲೆಯುಮಸತ್ಯಮುಂ ಕಳವು ಮನ್ಯಸತಿಸ್ಪೃಹೆಯುಂ ವಿಮೋಹಮುಂ ಸಲೆ ಮಧು ಮದ್ಯಸೇವೆಯುಮುಧರ್ವಂ (ಧರ್ಮಪ. ೩-೯). [ಸಂ. ಮದ್ಯಸೇವಾ]

**ಮದ್ಯಾಂಗ** (ನಾ). [ಜೈನ] ಭೋಗಭೂಮಿಯಲ್ಲಿರುವ ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; (ಮದವನ್ನುಂಟುಮಾಡದ) ನಾನಾ ವಿಧವಾದ ಪಾನೀಯಂಗಳನ್ನು ಕೊಡುವ ಕಲ್ಪವೃಕ್ಷ : ಕುಡಿದೊಡೆ ಸೊರ್ಕಿಸದುವು ನಾಣ್ಗಿಡಿಸದವು ಮನಕ್ಕಲಂಪನೀವುವು ರತಮಂ ನಡೆಯಿಪ್ಪುವೆನಿಸುವ ಮಧುಗಳನೆಡೆಯುಡುಗದೆ ಕುಡುಗುಮುಚಿತ ಮದ್ಯಾಂಗಕುಜಂ (ಆದಿಪು. ೩-೩೨) ; ಮದ್ಯಾಂಗಮೆಂಬುದು ಮದವಿಕಾರಮನಾಗಿಸದೆ ನಾನಾ ವಿಧ ಪಾನವಿಶೇಷಂಗಳನಿತ್ತು ದಂಪತಿಗೆ ರಾಗಮಂ ಪುಟ್ಟಿಸುವುದು (ಶಾಪುಂಪು. ೯). [ಸಂ.]

**ಮದ್ಯಾರ್ಕ** (ನಾ). = ಮದ್ಯಸಾರ ೨ : ಅದು ಎಣ್ಣೆಯೊಳಗೂ ಮದ್ಯಾರ್ಕದೊಳಗೂ ಬಲುಬೇಗ ಕರಗುವುದು (ಮುಂಬದು. ೪-೭೨).
[ಮದ್ಯ$_6$ + ಅರ್ಕ$_1$ (< ಅರಕ$_1$)]

**ಮದ್ರ** (ನಾ). ೧. ಸುಖ ; ಸಂತೋಷ. ೨. ಒಂದು ದೇಶದ ಹೆಸರು : ಮ[ಹಾಕಾ. ಮಾ]ದ್ರವಸುಧರೇಂದ್ರರೌದ್ರವಿದ್ರಾವಣ ಪರಾಕು (ಡಾಡರಸ. ೩-೧ ೩). [ಸಂ.]

**ಮದ್ರಸ** (ನಾ). ಒಂದು ಬಗೆಯ ಔಷಧೀ ಸಸ್ಯ : ಮದ್ರಸ. ಕಾಪರಳ (ವೃಕ್ಷನಿ. ೭೭-೭೪೩). 'ಮಧುರಸೆ' ಪರಾ. [ ? ]

**ಮದ್ದೆಮರ** (ನಾ). ಒಂದು ಬಗೆಯ ಮರ : (ವೃಕ್ಷನಿ. ೩೫-೭೭೫).
[ ಮದ್ದ್ಲೆ$_0$ + ಮರ$_1$]

**ಮಧು** (ಗು). ೧. ಸವಿಯಾದ ; ರುಚಿಯಾದ. ೨. ಸುಖಕರವಾದ : ಆಹ್ಲಾದಕರವಾದ. (ನಾ). ೩. ಜೇನುತುಪ್ಪ : "ಸಾರಘಂ. ಮಾಕ್ಷಿಕಂ . . . ಮಧು, ಪುಷ್ಪರಸಃ –ಈ ೫ ಜೇನ ತುಪ್ಪಂ" (ಹಲಾಯು. ೧೦೨-೪೭೭): ರುಚಿಯೊಳು ಮಧುರವು ಮಧುವಹುದದಕಿಂತ ಮಧುರವು ತಾನಹುದಮೃತ (ಇಂತಾಕ. ೨೨೨-೯೮). ೪. ಹೂವಿನ ರಸ : ಮಕರಂದ : "ಮಕರಂದಃ. ಮಧು__ಈ ೨ ಪೂವಿನ ಬಂಡು " (ಹಲಾಯು. ೩೦-೩೪). 'ಮಧುಕರ' ಪರಾ. ೫. ಅಮಲೇರಿಸುವ ಪಾನೀಯ ; ಕಳ್ಳು : ಮದ್ಯ: ಮಧು ಸೀತುಂ ಕಟು ಸೀದು ಪೋ ಪುಳಿತ ಕಳ್ಳಲ್ತು (ಶಂಶಭಾ. ೪-೮೮) ; ಕಂಸವಧುಗಳ್ ಮಧುವಂ ಕುಡಿವೊಂದು ಹಾಳಭೂಜಾಳಿಯು ತೀವ್ರ ಘೋರರವ ವಲ್ಲಿಗೆ ಪೋಗಲೆ ಬಾರದು (ಜಗು. ೪-೩೯). ೬. ನೀರು. ೭. ಸಕ್ಕರೆ. ೮. ಸವಿ ; ಮಾಧುರ್ಯ. ೯. ಹಾಲು ಮತ್ತು ಹಾಲಿನಿಂದ ಉತ್ಪನ್ನವಾಗುವ ಪದಾರ್ಥ. ೧೦. ಜೇನುಹುಟ್ಟು. ೧೧. ಜೇನುಮೇಣ. ೧೨. ಚೈತ್ರಮಾಸ : "ಚೈತ್ರಮಾಸವುಂ ಮಧುವೆಂಬುದು" (ಹಲಾಯು. ೦೯-೦೦೪). ೧೩. ವಸಂತ ಋತು : ನೋಟ್ಟಂ ಬೆಲೆಗೊಟ್ಟು ತಾರ ಮಧುವಂ ಮಲಯಾನಿಲನಂ ಮನೋಜನಂ ಕೌಮುದಿಯುಂ (ಅರ್ಜನೀ. ೨-೪೫) ; ಅರಸುಮಗಂ ನಡೆದಂ ಮದನಂ ಮಧುಗೂಡಿ ನಡೆವ ತೆಱದಿ (ಜಯಾಕ್ಕಾ. ೪-೧). ೧೪. ವಿಷ್ಣುವಿನಿಂದ ಹತನಾದ ಒಬ್ಬ ದೈತ್ಯ ; P ಇವನು ವಿಷ್ಣುವಿನ ಕರ್ಣಮಲದಿಂದ ಹುಟ್ಟಿದವನೆಂದು ಹೇಳುತ್ತಾರೆ : ಮಧುಕೈಟಭಪ್ರಳಯಸಮವರ್ತಿ ಜಯ (ಜಗು. ೫-೦೦೩ ಕಗಳ); ಈತನಾ ಮಧುಕೈಟಭನ ಮುಱಿದಾತ (ಕುಮ್ಯಾರಾ. ೯-೫೪). ೧೫. ಅಶೋಕವೃಕ್ಷ. ೧೬. ಜೀವನಿಯೆಂಬ ಸಸ್ಯ. ೧೭. ತುಂಬಿ : ಭ್ರಮರ. ೧೮. ಹೆಜ್ಜೇನು : ಮಧು ತಾಕಿ ಬದ್ದವರಿಗೆ:– ಕಿಱುನೆಲ್ಲಿಯ ಸಮೂಲವಂ ತಂದು ಎಳನೀರಲ್ಲಿ ಅರೆದು ಎಳನೀರಲ್ಲಿ ಕವಡಿ ಕೊಳ್ಳಲು ಉರಿತ ನಿಲ್ಲುವದು (ಶಿವ್ಯತಿ. ೦೩೪). ೧೯. ತವರ : "ತವರ ಪರಾಗ ಭ್ರಮರಂ ತವೆ ದೈತ್ಯರ್ ಕ್ಷುದ್ರ ಚೈತ್ರಮಾಸಂ ಸುರೆ ಜೇನ್ ಪವಣಿಸಲಮೃತಂ ತೀವಿದ ನವಸಂಖ್ಯೆಯ ಪೆಸರುವೊಪ್ಪೆ ಮಧುಶಬ್ದಂಗಳ್" (ನಾನಾಕಂ. ೪೨) ; "ದನುಜಾಮೃತವಂಶ ಪರಾಗ ಭೃಂಗ ಕ್ಷುದ್ರಾಸವ ಚೈತ್ರಮಾಸ ಮಧುವೆಂಬಿವಕಂ" (ಬಾಶಾರ. ೦೪). [ಸಂ.]

**ಮಧುಕ** (ಗು). ೧. ಸವಿಯಾದ ; ಮಧುರವಾದ. ೨. ಇಂಪಾದ : ಕರ್ಣಮಧುರವಾದ. ೩. ಜೇನುತುಪ್ಪದ ಬಣ್ಣವುಳ್ಳ. (ನಾ). ೪. ಇಪ್ಪೆಮರ: "ಇಪ್ಪೆ ಮಧುಕಂ" (ಮಂಗರಾ. ೪೨-೩೮); ಎಲವಂ ಸಂಪಗೆ . . . ಮತ್ತಿ ಮಧುಕಂ ಮಗ್ಗಾರೆ . . . ಒಪ್ಪುಗುಮಾ ವನಾಂತದೊಳ್ (ರಾಜಶೇ. ೫-೫೬); ಪಲಾಶ ಪಿಪ್ಪಲ ಮಧುಕ ಹೊನ್ನ ಕದಂಬ ಗುಗ್ಗುಳ ನಾಗ ಪುನ್ನಾಗ (ಉತ್ತರ. ೦೦-೪). ೫. ಅಶೋಕವೃಕ್ಷ. ೬. ಒಂದು ಬಗೆಯ ಪಕ್ಷಿ. ೭. ಒಂದು ಬಗೆಯ ಸಸ್ಯ ; ಜ್ಯೇಷ್ಠಮಧು ; ಯಷ್ಟಿಮಧುಕ : ಅತಿಮಧುರ : "ಆ ಮಧುಕಮೆನೆ ಯಷ್ಟಿಮಧುಕಮೆನಿಸಿಕ್ಕು" (ಮಂಗರಾ. ೪೦-೩೬) ; ಮಧುಕಂ ಮಧೂಕಪುಷ್ಪಂ ಮಧುಶರ್ಕರೆ ಕೋಷ್ಠಮೆಂಬಿವಂ ಮೊದಲೊಳ್ ಪುಟ್ಟಿ (ಲೋಕೋಪ. ೬-೪೦). ೮. ತವರ. ೯. ಹೊಗಳುಭಟ್ಟ ; ಸ್ತುತಿಪಾಠಕ. ೧೦. ಅಮೃತಬಳ್ಳಿ. [ಸಂ.]

**ಮಧುಕವ್ಮೋಜ** (ನಾ). ಒಬ್ಬಾತನ ಹೆಸರು : ಮಧುಕವ್ಮೋಜರುಂ ಬೆಣ್ಣೆಗೇಸಿಯುಂ ಎಱೆಯಮ್ಮನುಂ ಇನ್ನಿವರಿಬ್ಬರುಕೊಟ್ಟೋರ್ (ಎಕ. VI, ಶೃಮ. ೩-೦೦; ೫೦೦೪). [ಮಧುಕ + ಅಮ್ಮ$_1$ + ಓಜ$_1$ (<ಒವರ್ಜು)]

**ಮಧುಕರ** (ನಾ). ೧. ದೊಡ್ಡಗಾತ್ರದ ಕಪ್ಪುಬಣ್ಣದ ದುಂಬಿ; ಭ್ರಮರ: "ಷಟ್ಪದಂ ಮಧುಕರಂ ಮಧುಪಮಾ ಭ್ರಮರಮುಕ್ಕುಂ" (ಶಬ್ದಮ. ೩೨-೧೦); ವಲ್ಲಕೀಗೇಯದ ದನಿ ಮಾಣಲ್ಕೆ ಗೀತದವಸಾನದೊಳುನ್ಮದಮಧುಕರಸ್ವನಂ ಮಾಣ್ದುದ ಕುಮುದಿನಿಯಂತೆ ಕಾಂತೆ ಕಣ್ಗೆಸೆದಿರ್ದಳ್ (ಕಾದಂಬ. ೬೬) : ಮಂದೈಸಿ ನೆಗೆದ ಕೆಂಧೂಳಿಯಿಂದೆ ಮುಂದುಗೆಟ್ಟು ಮೊರೆವ ಮಧುಕರಂಗಳುಂ (ಕೃಷ್ಣ. ೨-೩೯ ವ). ೨. ಕಾಮುಕ; ವಿಟ; ಸ್ತ್ರೀಲಂಪಟ. [ಸಂ.]

**ಮಧುಕರವೃತ್ತಿ** (ನಾ). ತುಂಬಿಯು ನಾನಾವಿಧವಾದ ಹೂಗಳಿಂದ ಮಧುವನ್ನು ಸಂಗ್ರಹಿಸಿ ತರುವಂತೆ, ಬೇರೆ ಬೇರೆ ಮನೆಗಳಿಂದ ಭಿಕ್ಷಾನ್ನವನ್ನು ತರುವ ವೃತ್ತಿ,–ಉದ್ಯೋಗ: ಮಧುಕರವೃತ್ತಿ ನನ್ನದು ಅದು ಬಲು ಚೆನ್ನದು (ಪುರಂದ. ೨-೪ ಪಲ್ಲವಿ). [ಸಂ.]

**ಮಧುಕರಿ** (ನಾ). ೧. ಹೆಣ್ಣುದುಂಬಿ; ಭ್ರಮರಿ: ಮಧುಕರಿ ನವಾಮ್ರದೊಳ್ ಪಾಯ್ದುಮಲವದೊಳ್ ಪಾಯ್ದುದೇ (ಶಾಂತಿಪು. ೫-೦೩೬); ಹಂಸರುತಿ ಮಧುರಮಧುಕರೀರ್ಝಂಕಾರಂ . . . ಇತ್ತುವು ಸುಖಪ್ರಬೋಧಮನಾಗಳ್ (ಪುಣ್ಯಶ್ರ. ೪-೩೮). ೨. ನಾನಾಬಗೆಯ ಹೂಗಳಿಂದ ದುಂಬಿ ರಸವನ್ನು ಸಂಗ್ರಹಿಸುವಂತೆ, ಬೇರೆಬೇರೆ ಮನೆಗಳಿಂದ ಭಿಕ್ಷಾನ್ನವನ್ನು ತರುವುದು; ಭಿಕ್ಷೆ: ವಿದ್ಯಾರ್ಥಿಗಳು ಮಧುಕರಿಯಿಂದ ತರುವ ಅನ್ನ ಒಪ್ಪತ್ತಿನ ಊಟಕ್ಕೂ ಸಾಲದು (ಮುಗಮ.೬); ನೀನು ಮಧುಕರಿ ಬೇಡುವಿಯಾ? (ಕವಲು. ೨೦). ೩. ಒಂದು ಬಗೆಯ ಚರ್ಮರೋಗ; ಕುಷ್ಠರೋಗ: ಪಾಳನಿಗೆ ಮುದಿವಯಸ್ಸಿನಲ್ಲಿ ಮಧುಕರಿ ಬೇನೆ ಬಂದಿತು. ನಾನು ಅವನನ್ನು ಕಾಣುವಾಗ ಆತನ ಬೆರಳೊಂದೂ ಉಳಿದಿರಲಿಲ್ಲ (ಹುಹುಲಿ. ೬೨). ೪. [ಸಂಗೀತ] ಒಂದು ರಾಗದ ಹೆಸರು: ಕೌಶಿಕೆ ವೇಳಾವಳಿ . . . ಮಧುಕ[ರಿ . . . ಕ]ರಿ . . . ಪಯೋಧರೆಯೆಂಬ ಮೂವತ್ತುನಾಲ್ಕು ಭಾಷಾಂಗದಿಂದಾದ ರಾಗಂಗಳು (ವಿವೇಕ. ೦೬೮). [ಸಂ. ಮಧುಕರೀ]

**ಮಧುಕೋಶ** (ನಾ). ೧. ಜೇನುಗೂಡು. ೨. ಮದ್ಯಪಾನಮಾಡುವ ಪಾತ್ರೆ; ಮದ್ಯಪಾತ್ರೆ. ೧. ೨: ಪಾನಪ್ರದೇಶದಂತೆ ಪರಿಗತಮಧುಕೋಶಶತಮುಂ (ಕಾದಂಬ. ೧೨೦). [ಸಂ.]

**ಮಧುಕ್ರಮ** (ನಾ). ೧. ಮಿತಿಮೀರಿ ಕುಡಿಯುವುದು: "ಮಧುವಾರಃ, ಮಧುಕ್ರಮಃ– ೨ ಹಲವು ತಡವೆ ಮದ್ಯಪಾನ ಮಾಡುವ ಕ್ರಮದ ಹೆಸರುಗಳು" (ಅಭಿಧಾಂ. ೪೧೮). ೨. ಜೇನುಹುಟ್ಟು. [ಸಂ.]

**ಮಧುಗುಡಿಗ** (ನಾ). ಮದ್ಯಪಾನಮಾಡುವವನು: ಇದನಸುರ ಮಧುಗುಡಿಗ ಯುವ್ವನಿಗ ಮದನಗ್ರಹವ್ಯಾಧಿಗಂ ಮುತ್ತೌಷಧಿಲ್ಲದೆಂಬುದು ಸಹಜವಾಯ್ತು (ಪದಮಂ. ೯-೦೬). [ಮಧು + ಕುಡಿ₁ + –ಗ₂]

**ಮಧುಗುಡುಹಿ** (ನಾ). (ಹೂವಿನ) ಮಕರಂದವನ್ನು ಹೀರುವಂಥದು; ತುಂಬಿ: ಪರಪುಟ್ಟಗಳು ಬಂದುಗಲಸಾತಿಹ ಮಧುಗುಡುಹಿ ಷಟ್ಪದಿಗಳ ಶಿವನಣುಗನೊರಸಿದಾ ಕರಹೀಸವೆರೆಯ ದುಸದಿಕ್ಕಿವಿಂಡುಗಳ ನೆಲೆಗಟ್ಟು (ಗುಂಶಶ. ೨-೬೮). [ಮಧು + ಕುಡುಹಿ (< ಕುಡಿಹಿ)]

**ಮಧುಗೋಷ್ಠಿ** (ನಾ). ಮದ್ಯಪಾನಮಾಡುವವರ ಕೂಟ: ಸಂಗ್ರಾಮಧುಗೋಷ್ಠಿಯು ಪರವಿ ಕಾಯು ಗಜೋತ್ಕರಮುಂ ಘಟಾಂಕಿತಂ (ಪಾಪಾರ. ೦೦೦). [ಸಂ. ಮಧುಗೋಷ್ಠೀ]

**ಮಧುಗ್ರಂಥಿ** (ನಾ). "ಮಕರಂದ ಸ್ರವಿಸುವ ಅಂಗ: ಮಧುಗ್ರಂಥಿ: ಮಕರಂದಗ್ರಂಥಿ" (Nectary. ಸಂಕೋ). [ಸಂ. ಮಧುಗ್ರಂಥಿನ್]

**ಮಧುಘೃತ** (ನಾ). ಜೇನುತುಪ್ಪ: ಮಧುಘೃತವ ಇಕ್ಕಿ ನೆಕ್ಕಲು ಖಡ್ಗಧಾರೆಗೆ ಸಿಕ್ಕಿ ನಾಲಗೆ ಸೀಳುವಂದದಲುಕ್ಕಿ ವಿಷಯಸುಖಕ್ಕೆಳಸಿ ಕಡುದುಃಖಬಡುತಿಹರು (ಅಮೃತ. ೨-೬೨). [ಸಂ.]

**ಮಧುಚಂದ್ರ** (ನಾ). ವಿವಾಹವಾದ ತರುಣದಲ್ಲಿ ನವದಂಪತಿಗಳು ಕೈಗೊಳ್ಳುವ ವಿಹಾರ: ನೂತನದಂಪತಿಗಳು ಹಳ್ಳಿಯಲ್ಲಿ ತಮ್ಮ ಮಧುಚಂದ್ರವನ್ನು ಸಂತೋಷವಾಗಿ ಕಳೆದರು (ಅಶಾ. ೦೯೭).

[☞ ಇದು ಇಂಗ್ಲೀಷಿನ 'Honeymoon' ಎಂಬುದರ ಅನುವಾದರೂಪ]

**ಮಧುತೆಂಗು** (ನಾ). ಒಂದು ಬಗೆಯ ತೆಂಗು: "ಮಧುನಾಳಿಕೇರಃ— ಮಧುತೆಂಗು" (೬ಕಂ. ೦೨೨). 'ಮಧುಫಲ' ನೋಡಿ. [ಮಧು + ತೆಂಗು₃]

**ಮಧುದೂತಿ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು; ಅದಿರ್ಗಂತಿ; ಅದಿಮುರ್ಕ್ತೆ; ಮಾಧವಿ: ಮುದದಿಂದಂ ಮಧುದೂತಿಯುಂ ಮೊಗದುಲರ್ಚುತ್ತಿರ್ಪ್ಪಂ . . . ವಸಂತರಾಜನೊಸೆದೇಳ್ತಂದು (ಗಿರಿ. ೬-೪೦); ಮೊಡವೆಗಳಂತೆ ಮೂಡೆ ಪೊಸಮೊಗ್ಗೆಗಳಾ ಮಧುದೂತಿಯಲ್ಲಿ . . . ಜವ್ವನವಿನಾಂತವೊಲಾ ವನಲಕ್ಷ್ಮಿ ತೋಜದಳ್ (ಲಾವಣ್ಯ. ೯-೪೮). [ಸಂ. ಮಧುದೂತೀ]

**ಮಧುದ್ರವ** (ನಾ). ೧. ಕೆಂಪುಹೂಗಳನ್ನು ಬಿಡುವ ಒಂದು ಬಗೆಯ ಮರ. ೨. ಕಳ್ಳು; ಮದ್ಯ: ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ಸವಿದೀಂಟುವಲ್ಲಿ ತನ್ನಧರದ ರಾಗದೊಳ್ ಪೊರೆದುದಂ ಮಧುವಂ ಬೆಱಗಾಗಿ ನೋಡುತುಂ ಮಧುರಸಮಲ್ತು ಕುಂಕುಮರಸಂ ದಿಟವೆಂದು ಬಱಿಕ್ಕೆ ಶಂಕೆ ತನ್ಮಧುರಸುಗಂಧದಿಂ ತೊಲಗೆ ಸೇವಿಸಿದಳ್ ಮಧುವಂ ನಿಜೇಚ್ಛೆಯಿಂ (ಜಗ. ೦೬-೦೦೬). [ಸಂ.]

**ಮಧುದ್ರುಮ** (ನಾ). ೧. ಹಿಪ್ಪೆಮರ: ಮಧೂಕವೃಕ್ಷ: "ಮಧೂಕಃ, ಗುಡಪುಷ್ಪಃ, ಮಧುದ್ರುಮಃ, ವಾನಪ್ರಸ್ಥಃ. ಮಧುಷ್ಠೀಲಃ — ೫ ಬಿಪ್ಪೇಗಿಡ, ಹಿಪ್ಪೇಮರ" (ಅಭಿಧಾಂ. ೦೦೬). ೨. ಮಾವಿನ ಮರ. [ಸಂ.]

**ಮಧುನಾಶ** (ನಾ). ಒಂದು ಬಗೆಯ ಬಳ್ಳಿ: "ಸಣ್ಣಗರಸೆಹಂಬು, ಮಧುನಾಶ, ಓಲಿಯ ಕಾಗೆದೊಂಡೆ" (ಸಸ್ಯ. ೬೭); ಸಣ್ಣಗೆರಶಹಂಬು, ಮಧುನಾಶ (ವೃಕ್ಷಿ. ೪೧-೬೦೬). [ಸಂ.]

**ಮಧುನಾಳ** (ನಾ). ಒಂದು ಬಗೆಯ ಭಕ್ಷ್ಯ: ಎಷ್ಟು ಮಿಷ ಪೊಂದುಟ್ಟಿಗಳೊಳಿಸಿದಿಷ್ಟರಿಗೆ ಮಧುನಾಳ ಮಂಡಗೆ ಪೇಣಿ ನಲ್ಗೈದ ಲಡ್ಡುಗೆಯ ಬುಚ್ಚೊರಿಗೆಗಳಂ ಬಡ್ಡಣಿಸಿದರಂಗನೆಯರು (ಸುರೇಶ. ೦೬-೨೪). [ ? ]

**ಮಧುಪ** (ನಾ). ೧. ತುಂಬಿ; ಭ್ರಮರ: "ಮಧುಕರಃ, ಮಧುಪಃ, ಮಧುವ್ರತಃ . . . ದ್ವಿರೇಫಃ—ಈ ೧೩ ತುಂಬಿ" (ಅಭಿಧಾ. ೪೩-೦೦೦); ಮೃಗಯಾವ್ಯಾಜದಿನೊರ್ಮೆ ಶಂತನು ಕೊಬಿಲ್ವರ್ಪಂ ಪೆಱಂಚಲ್ಕೆ ತನ್ನ ಗ ಶಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು (ಕುಂಭಾ. ೦-೬೦); ಕಿದಱಿದ ಪೂವಲಿಗೆಱಗಿತು ಸುತ್ತುಂ ಮದ ಮಧುಪಾವಳಿಗಾವರಿಸುತ್ತುಂ (ಜಂತ್ರಕ. ೪-೬೨ ಕಗಳ). ೨. ಮದ್ಯಪಾನಮಾಡುವವನು; ಹೆಂಡ ಕುಡಿಯುವವನು: ಆ ಮಧುಪರೆಲ್ಲರು ಹೀಗೆ ಆ ಪಾನೋತ್ಸವದಲ್ಲಿ ನಿಮಗ್ನರಾಗಿರುವಾಗ ಔರಂಗಜೇಬಸುಲ್ತಾನನು . . . ಮುರಾದನ ತಂಬುವಿನ ಕಡೆಗೆ ಬಂದನು (ಶಿಲಂಗ. ೦೪೩). ೧. ೨: ಎನ್ನ ದಾನಮದಾಗಳುಂ ಮಧುಪಾಶ್ರಯುಂ ಧರೆಗವ್ಯವಚ್ಛಿನ್ನದಾನಮದಾಗಳುಂ ವಿಬುಧಾಶ್ರಯುಂ ಗೆಲೆವಂದನೆನ್ನನ್ನಿಜೋನ್ನತಿಯಿಂದಮಿಾ ಪತಿಯೆಂದು ಮೆಚ್ಚಿ ವಿನಾಯಕಂ ಪಾನ್ನಿಮಿರ್ಚುಗೆ ಕಬ್ಬಮುಂ ನಯದಿಂ (ಜಂಕಚಾ. ೦-೬); ಚಿತ್ರಜನ್ನ ನೋಡ ನಿಜಾಪ್ತವರ್ಗವಳವಂ ಮಲಯಾನಿಲನಸ್ಥಿರಂ ರಣಕ್ರೀಡೆಗೆ ನಿಲ್ವನೇ ಪರಭೃತಂ ನಿನಗಪ್ಪನೆ ಯುದ್ಧದೊಳ್ಬಿಗುರ್ಪೋಪದೆ ಮಾಣ್ಬನೇ ಮೃಗಧರಂ ಮಧುಪಂ ಕದನಕ್ಕೆ ಯೋಗ್ಯನೇ (ಜಂಬಾಪು. ೦-೨೩). [ಸಂ.]

**ಮಧುಪಪ್ರಸಂಗಿ** (ನಾ). ೧. ತುಂಬಿಗಳಲ್ಲಿ ಅನುರಕ್ತವಾದುದು. ೨. ಮದ್ಯಪಾನ ಮಾಡುವವರ ಜೊತೆಗೆ ಸ್ನೇಹವುಳ್ಳುದು. ೧. ೨: ಜಡಾವಸಥು ಚಿಃ ಮಧುಪಪ್ರಸಂಗಿ ಖರದಂಡಂ ಮತ್ತೆನುತ್ತಬ್ಬಮಂ ಬಿಸುಟತ್ಯುತ್ತಮವಿಂಕಾಂಟೆಂದು ಒಲಿದುಂ ಸಂತೋಷದಿಂ ವಾಣಿ ಬಂದು

ಸಮಂತಿರ್ಕೆ . . . ಜಿಷ್ಣ್ವಾಗ್ರದೊಳ್ ರುದ್ರನಾ(ಚಗಜ. ೧-೬).
[ ಸಂ. ಮಧುಪಪ್ರಸಂಗಿನ್ ]

**ಮಧುಪರ್ಕ** (ನಾ). ಮೊಸರು, ತುಪ್ಪ, ನೀರು, ಜೇನುತುಪ್ಪ, ಸಕ್ಕರೆ — ಈ ಐದರ ಮಿಶ್ರಣ; p ದೇವತಾರ್ಚನೆಯಲ್ಲಿ ಹೇಳಿರುವ ಷೋಡಶೋಪಚಾರಗಳಲ್ಲಿ ಮಧುಪರ್ಕದ ಅರ್ಪಣೆಯೂ ಒಂದು. ಪೂಜ್ಯರಾದ ಅತಿಥಿಗಳಿಗೆ ಹಾಗೂ ವಿವಾಹಕಾಲದಲ್ಲಿ ವಧುವಿನ ತಂದೆಯ ಮನೆಗೆ ಬರುವ ವರನಿಗೆ ಸತ್ಕಾರಪೂರ್ವಕವಾಗಿ ಇದನ್ನು ಅರ್ಪಿಸುವುದು ಸಂಪ್ರದಾಯ : ನದೀತನೂಜಂ ಭಾರದ್ವಾಜಂಗೆ . . . ಅರ್ಘ್ಯಮೆತ್ತಿ ಮಧುಪರ್ಕ ವೇತ್ರಾಸನ ತಾಂಬೂಲ ದಾನಾದಿಗಳಿಂ ಸಂತಸಂಬಡಿಸಿ (ಕಂಕಪಾ. ೨-೩೨ ಪ); ಅರ್ಘ್ಯಪಾದ್ಯೋತ್ಕರದ ಮಧುಪರ್ಕಾಸನಾದಿಯುಪಚರಿಸ ಮಾಡಿದನು (ಕುವ್ಯಾ.ಉ. ೦೬-೨೩). [ಸಂ.]

**ಮಧುಪರ್ಣಿ** (ನಾ). ೧. ಅಮೃತಬಳ್ಳಿ : ಅಮೃತಬಳ್ಳಿ, ಮಧುಪರ್ಣಿ (ವೈ.ಶಿ. ೭೩-೦೩೨೬). ೨. ನೀಲಿ ಗಿಡ. ೩. ಶಿವನೆ ಮರ.
[ ಸಂ. ಮಧುಪರ್ಣೀ ]

**ಮಧುಪರ್ಣಿಕೆ** (ನಾ). ೧. ಒಂದು ಬಗೆಯ ಮರ; ಶಿವನೆಮರ : "ಗಂಭಾರೀ, ಸರ್ವತೋಭದ್ರಾ, ಕಾಶ್ಮರೀ, ಮಧುಪರ್ಣಿಕಾ, ಶ್ರೀಪರ್ಣೀ, ಭದ್ರಪರ್ಣೀ, ಕಾಶ್ಮರ್ಯಃ—೭ ಶೀವನೆಯ ಮರದ ಹೆಸರು. ಕೆಲವರಿದಕ್ಕೆ ಕುಂಬಳಿಗಿಡವೆಂದು ಅರ್ಥಹೇಳುವರು" (ನಿಘಂ.ಶಿ. ೦೨೦). ೨. ನೀಲಿಗಿಡ. ೩. ಅಮೃತಬಳ್ಳಿ. [ ಸಂ. ಮಧುಪರ್ಣಿಕಾ ]

**ಮಧುಪಾತ್ರ** (ನಾ). ಮದ್ಯಪಾನ ಮಾಡುವ ಬಟ್ಟಲು; ಮದ್ಯಪಾತ್ರೆ : "ಮಧುಪಾತ್ರಂ ಚಷಕಂ" (ಪನ್ಮಕೋ. ೪೦-೨೬). [ಸಂ.]

**ಮಧುಪಾತ್ರೆ** (ನಾ). = ಮಧುಪಾತ್ರ : ಮಧುಪಾಲಿಕೆಯೊರ್ವಳ್ ನವ ಮಧುಪಾತ್ರೆಯನೊಲ್ದು ಬಾಯ್ಗೆ ತರಲ್ (ಉತ್ಸ.ಶಿ. ೩-೭೬) ; ಮರಕತದ ಮಧುಪಾತ್ರೆ ನೀಲದ ಕರಗ ವೈಡೂರಿಯದ ಪಡಿಗವ ಚರರು ತಂದೊಟ್ಟಿದರು(ಕುವ್ಯಾ.ಗ. ೪-೦೩). [ ಸಂ. ಮಧುಪಾತ್ರ ]

**ಮಧುಪಾನ** (ನಾ). =ಮದ್ಯಪಾನ : ಗಾಳಿಗೆ ಮಾತನಾಡುವರು ಹಾಜಾರ ಹಕ್ಕಿಗೆ ಜೋಹರೆಂಬರ್ . . . ಉಟ್ಟುದಂ ಕಳೆದು ಸೆಣ್ಣಿಗೆ ಸುತ್ತುವರಟ್ಟ ಯಿಂದೆ ಕಾಟಕ್ಕೋಟಿಗಳಾಗಿ ಕೂಗುವರದೇಂ ಮಧುಪಾನದ ಸೊರ್ಕಿನ ಸಾಲದೇ (ಸಂಸ.ಸು. ೦೩-೩೦); ಬಿಡದೆ ಮಧುಪಾನವಂ ಮಾಡಿ . . . ಸೊಗಯಿಸಿದರು (ಕೈವಿಜಾ. ೩೦-೦೭). [ಸಂ.]

**ಮಧುಪಾನಗೋಷ್ಠಿ** (ನಾ). ಮದ್ಯವನ್ನು ಕುಡಿಯುವವರ ಕೂಟ.— ಗುಂಪು : ಇರೆ ಪದ್ಮರಾಗಚಷಕಂ ನಿಜಹಸ್ತತಳಾಗ್ರದೊಳ್ ಮನೋಹರಿ . . . ನವೋದಿತಚಂದ್ರಬಿಂಬಮಂ ಧರಿಯಿಸಿದಿಂದ್ರದಿಗ್ವನಿತೆಯಂತೆಸೆದಳ್ ಮಧುಪಾನಗೋಷ್ಠಿಯೊಳ್ (ಚಗಜ. ೦೩-೦೦೩) ; ಕಾಮಿನಿ ನಯದಿಂ ಕರಂ ನಲಿದು ನರ್ತಿಸಿದಳ್ ಮಧುಪಾನಗೋಷ್ಠಿಯೊಳ್ (ಶೃಂಗಾರ. ೦-೪೩).
[ ಸಂ. ಮಧುಪಾನಗೋಷ್ಠೀ ]

**ಮಧುಪಾಯಿ** (ನಾ). ೧. ತುಂಬಿ. ೨. ಮದ್ಯಪಾನ ಮಾಡುವವನು.
[ಸಂ. ಮಧುಪಾಯಿನ್]

**ಮಧುಪಿಂಗಳ** (ನಾ). ಜೇನುತುಪ್ಪದಂತಹ ಹೊಂಗೆಂಪು ಬಣ್ಣ : ಶಾರದ ನೀರದಾಕೃತಿಯು ಮೆಯ್ ಮಧುಪಿಂಗಳಮಪ್ಪ ದಿಟ್ಟಿ . . . ಒಪ್ಪಿದುದಾ ಗಜೇಂದ್ರದಾ (ತಂಶ್ರಪು. ೦೨-೬೮). [ಸಂ. ಮಧುಪಿಂಗಲ]

**ಮಧುಪಿಚ** (ನಾ). ಬೇವಿನ ಮರ ಮತ್ತು ಅದರ ಹಣ್ಣು : ಮಧುಪಿಚದ ಮಧುರಕ್ಕೆ ಸಮಗಟ್ಟುವರೆಯೆನ್ನ ಹೃದಯದಜ್ಞಾನಾಹಂಕಾರವಂ ತವಿಸುತಂ ಪ್ರುದುವಾಕ್ಯ ಸುಗುಣಿ ನಿರಹಂಕಾರಿಯೆನಿಸು (ಕೃಚಚು. ೭-೨೩೨). [?]

**ಮಧುಪುಷ್ಪ** (ನಾ). ೧. ಒಂದು ಬಗೆಯ ಮರ ಮತ್ತು ಅದರ ಹೂವು ; ಬಿಕುಳ : ಬಿಕುಳದ ಹೂವಿಗೂ ಮಂಬಿಗೂ ಗಾಢವಾದ ನಂಟು. ಇದರಿಂದಲೇ ಈ ಹೂವಿಗೆ ಮಧುಪುಷ್ಪವೆಂಬ ಅನ್ವಯನಾಮ(ಪಕುಸೊ. ೪೦೦). ೨. ಅಶೋಕವೃಕ್ಷ. ೩. ಶಿರೀಷವೃಕ್ಷ; ಬಾಗೆ. ೪. ಹಿಪ್ಪೆಮರ. [ಸಂ.]

**ಮಧುಪೂರ** (ನಾ). ಈಚಲಮರ : "ಮಧುಪೂರದೊಸರೀಚಲು" (ಮಂಗರಾ. ೩೩-೦೩). [ಸಂ.]

**ಮಧುಪ್ರಸಂಗ** (ನಾ). ವಸಂತಋತುವಿನ ಸಮಯ : ಆ ಪ್ರಸ್ತಾವದೊಳ್ ಆ ಮಧುಪ್ರಸಂಗರಾಗರಸತರಂಗಿತೆಯಾದ ವನಲಕ್ಷ್ಮೀವಿಲಾಸಮಂ ವನಪಾಲಕನವನಿಪಾಲಕಂಗಱಿಪಲೆಂದು (ಚುಲ್ಲಪು. ೩-೪೮೭). [ಸಂ.]

**ಮಧುಪ್ರಿಯ** (ಗು). ೧. ಜೇನುತುಪ್ಪವನ್ನು ಮೆಚ್ಚುವ. (ನಾ). ೨. ತುಂಬಿ ; ಭ್ರಮರ. ೩. ಚೈತ್ರಮಾಸ. ೪. ಆಕರ್ಷಕವಾದ ಕಣ್ಣು. ೫. ವಸಂತನ ಮಿತ್ರ ; ಮನ್ಮಥ. ೬. ವಿಟ. ೭. ಈಶ್ವರ. ೮. ಬಲರಾಮ: "ವಿಟರುಂ ಬಲರಾಮರುಂ ಧೂರ್ಜಟಿಯುಹಿ ಚೈತ್ರಮಾಸ ಪುದ್ಮೆಮ್ಮನು ತಾ ಚಟುಲಾಕ್ಷಿಗಿದೇಳಿ ಪೆಸರುಂ ಪಟುತರ ಪಾದುದು ಮಧುಪ್ರಿಯಾಹ್ವಯ ನಾಮಂ" (ನಾನಾರ್ಥ. ೬೮) : "ಕಾಮ ಪಾಲ ಮದನ ನೇತ್ರ ಚೈತ್ರ ಶಿವ ಭೃಂಗಭುಜಂಗ ಮಧುಪ್ರಿಯಾಹ್ವಯಂ" (ನಾನಾರ. ೫೦). [ಸಂ.]

**ಮಧುಪ್ರೇಮಿ** (ನಾ). ಕಾಮ : ಮನ್ಮಥ : "ಪುಷ್ಪಾಯುಧಂ ಅನಿಮಿಷಧ್ವಜ ನನಂಗಂ ಮಧುಪ್ರೇಮಿ ಪ್ರದ್ಯುಮ್ನನಂ ರತಿಪ್ರಭುಂ . . . ಎನೆ ಮದನನಕ್ಕು" (ಮಂಗರಾ. ೬-೨೨). [ಸಂ. ಮಧುಪ್ರೇಮಿನ್]

**ಮಧುಪ್ಲುತ** (ನಾ). ಜೇನುತುಪ್ಪದೊಡನೆ ಬೆರೆತುದು ; ಮಧುಪರ್ಕ : ಈ ವಿಧದಿ ಮಧುಪ್ಲುತದ ನಿನಗೀವೆವೆಲೆ ಪೃಥ್ವೀಶಯೆಂದು ದ್ವಿಜಾವಳಿಗೆ (ಅರಾಪು. ೨-೯-೪೮). [ಸಂ.]

**ಮಧುಫಲ** (ನಾ). ೧. ಒಂದು ಬಗೆಯ ದ್ರಾಕ್ಷೆ. ೨. ಒಂದು ಬಗೆಯ ತೆಂಗು : "ಮಧುಫಲಃ _ ಮಧುತೆಂಗು, ಪಣ್ಣಿನ ವಾಳೆ" (೬ಕಪ. ೦೨೦). [ಸಂ.]

**ಮಧುಭೇದ** (ನಾ). ಮಧುವೆಂಬ ರಾಕ್ಷಸನನ್ನು ಸೀಳಿದವನು : ವಿಷ್ಣು : ಮಧುಭೇದನಮನಿಷ್ಪಂದದ . . . ಸಂಗಮೇಶ್ವರ ರಕ್ಷಿಸನ್ನ ಸತತಂ (ಕ್ರಾಶರ. ೬-೧). [ಸಂ.]

**ಮಧುಮಂಚ** (ನಾ). ನವದಂಪತಿಗಳ ನಿಷೇಕಕ್ಕಾಗಿ ಸಿದ್ಧಪಡಿಸಿದ ಮಂಚ : ಎಳೆಹರೆಯದ ನವವಧುವಿನ ಪಾಣಿಗ್ರಹಣಮಾಡಿ ಆಗಳೆಯ ಮಧುಮಂಚಕ್ಕೆ ಅವಳನ್ನು ಒಯ್ಯುತ್ತಿಪ್ಪರೊ ಎಂಬಂತೆ, ಮಹಾಋಷಿವಾರ ಮನಸ್ಕರಾಗಿದ್ದರು (ಮಲೆಮ. ೪೦೯). [ಸಂ.]

**ಮಧುಮಂಟಪ** (ನಾ). ಚೆಲುವಾದ ಮಂಟಪ : ಬಣ್ಣಕಾಗದದ ಮಧುಮಂಟಪವ ಮಾಡಿ ಮಣ್ಣ ಬೊಂಬೆಯ ಮದವಲೆಂದು ಕೊಂಡಾಡಿ,ಅಣ್ಣನನು ಬದುಕಿಸಿಕೊಡೆಂದು ವರ ಬೇಡಿ,ಕಣ್ಣೀರ್ ಮಿಡಿದ ನೆನಹು ವಿಷಾದದ ನಯನವಾ (ಕಾಪು. ೨೫-೬). [<ಸಂ. ಮಧುಮಂಡಪ]

**ಮಧುಮಕ್ಷಿಕೆ** (ನಾ). ಜೇನುನೊಣ : "ಸರಘಾ. ಮಧುಮಕ್ಷಿಕಾ—ಈ ೨ ಜೇನ ನೊಣ" (ಪರಾಣು. ೪೩-೦೦೨). [ಸಂ. ಮಧುಮಕ್ಷಿಕಾ]

**ಮಧುಮತಿ** (ನಾ). ೧. ಸವಿಯಾದುದು. ೨. ಪ್ರಿಯವಾದವಳು. ೩. ಒಂದು ಬಗೆಯ ಬಳ್ಳಿ. ೪. [ಯೋಗ] ಸಂಪ್ರಜ್ಞಾತಸಮಾಧಿ ಸಿದ್ಧಿಗಳಲ್ಲಿ ಒಂದು : ಒಂದನೆಯ ಮಧುಮತಿಯೀ ಋತಂಭರಾ ಎಂದು ಹೇಳಲ್ಪಡುವುದು. ಇಲ್ಲಿ ಅಭ್ಯಾಸ ವೈರಾಗ್ಯದಿಂದ ರಜಸ್ತಮಸ್ಸುಗಳು ಪ್ರಾಯಃ ಕ್ಷೀಣವಾಗಿ ಸುಖಪ್ರಕಾಶಮಯವಾದ ಚಿತ್ತದ ಭಾವನೆಯಿಂದ ವಿಶದಪ್ರಕಾಶ ಸ್ವರೂಪಚಿತ್ತ ಸಿದ್ಧಿಯಾಗುವುದು (ಹಿಂಪತಾ. ೦೦೮).
[ಸಂ. ಮಧುಮತೀ]

**ಮಧುಮತ್ತ** (ಗು). ೧. ಮದ್ಯಪಾನದಿಂದ ಅಮಲೇರಿದ : ನಿಮಿರ್ದಕ್ಷಿಗಳ್ಗೆ ರಾಗದ್ಯುತಿಸೇವೆಯಿಂ ನೆಗೞಿ ರಂಜಿಸಿದರ್ ಮಧುಮತ್ತಕಾಂತೆಯರ್

(ಜಗ. ೧೬-೧೧೬). (ನಾ). ೨. ಮದ್ಯಪಾನಮಾಡಿ ಮತ್ತೇರಿದವನು : ರಘುನಂದನನು ನರ್ತಿಸಲ್ ತೊಡಗಿದನು ಭಾವದ ಸಮಾಧಿಯಿಂ ಮಧುಮತ್ತನಂತೆ (ಶ್ರೀರಾಮಾ. ೪೬-೨೯೬). [ಸಂ.]

**ಮಧುಮಥನ** (ನಾ). ೧. ಮಧುವೆಂಬ ರಾಕ್ಷಸನನ್ನು ಸಂಹರಿಸಿದವನು; ಕೃಷ್ಣ : ಅಂತಾ ಬಾಲೆ . . . ಮಧುಮಥನನ ಕಣ್ಣಂ ಬಂಚಿಸಿ . . . ವನಮನೆಯ್ದೆವಂದು (ಹಂಪಭಾ. ೩.೧೧ ವ). ೨. ವಿಷ್ಣು : ಕಪ್ಪಾದ ವಿಂಧ್ಯವು ಬಿಳಿದೋಡದಿಂದೆಸೆವುದಿದು ಹಾಲ್ಗಡಲ ಕಡೆಹದೊಳೊಗೆದ ತುಂತುರಿನೊಳು ತೊಯ್ದು ಆ ಮಧುಮಥನನಂತೆ (ಗಾಥಾಸ. ೨-೧೬). [ಸಂ.]

**ಮಧುಮರ್ದನ** (ನಾ). ೧. = ಮಧುಮಥನ ೧ : ಖಳನಿದಿರಾಗಿ ಮಧುಮಾರ್ದನನ ಹಳಚಿದನು (ಕುಮಾ.ಭಾ. ೧೧-೬೬). ೨. [ಜೈನ]ವಾಸುದೇವ; ಕೃಷ್ಣ : ಬಲಭದ್ರಂ ಮಧುಮರ್ದನಂಗೆ ಬಟೆಕಂ ಚಕ್ರೇಶಪಟ್ಟಂ ಜಗತ್ತಿಲಕ ತಾನೆನೆ ಕಟ್ಟಿ (ಆಪಂಪು. ೧೪-೩೦). [ಸಂ.]

**ಮಧುಮಹೋತ್ಸವ** (ನಾ). ವಸಂತಮಾಸದ ಉತ್ಸಾಹ,-ವಿಜೃಂಭಣೆ: ತೆಂಕಣಗಾಳಿ ಸೋಂಕಿದೊಡಂ . . . ಮಧುಮಹೋತ್ಸವಮಾದೊಡಂ . . . ನೆನೆವುದೆನ್ನ ಮನಂ ವನವಾಸಿದೇಶಮಂ (ಹಂಪಭಾ. ೪-೩೦). [ಸಂ.]

**ಮಧುಮಾಧವಿ** (ನಾ). ೧. ವಸಂತಕಾಲದಲ್ಲಿ ಅರಳುವ ಹೂವು : ವಸಂತದೊಳ್ ಮಧುಮಾಧವಿ ಮಕರಂದಿಯಾದುದು (ಹರಿಶ್ಚಂ. ೨-೪೦). ೨. ಒಂದು ಬಗೆಯ ಮಾದಕಪಾನೀಯ. ೩. [ಸಂಗೀತ] ಒಂದು ರಾಗದ ಹೆಸರು : ರಾಗ ಮಧುಮಾಧವಿ (ಸಂಗೀಸ. ೧೪೩-೬) ; ಮಧುಮಾಧವಿ ಶಂಕರಾಭರಣ . . . ವರಾಳಿ ನಾಗವರಾಳಿ ನಾಗದಿವಿ ಕರ್ನಾಟಕಬಂಗಾಳ ಮೊಂಬಿಪ್ಪತ್ತೇ ರಾಗಾಂಗದಿಂದಾದ ರಾಗಂಗಳು (೬ಪೇಶ. ೧೬೮).

[ಸಂ. ಮಧುಮಾಧವೀ]

**ಮಧುಮಾಸ** (ನಾ). ವಸಂತಋತು : ನೀಂ ಬರೆ ಭುವನಂಗಳೊಳ್ ನೆಗಟ್ಟುದೀ ಮಧುಮಾಸಂ (ಆದಿಪು. ೧೧-೧೧೧) ; ಜೀವಂ ಮಧುಮಾಸಕೆ ತೋಷಾವಹಮಿದು ಕೋಕಿಲಕ್ಕೆ (ಕಾಕುಂತ. ೬೯-೧೩೩); ಮತ್ತಮಧುಮಾಸವಿದು ಬನ್ನಿರೆಂದು ಸಾರುತ (ಕೋಳಲು. ೪೪-೯). [ಸಂ.]

**ಮಧುಮಿತ್ರ** (ನಾ). ೧. ವಸಂತನ ಗೆಳೆಯನಾದ ಮನ್ಮಥ; ಕಾಮ : "ಕಾಮಂ [ಶಿರಿಗಾಮರಂ] ರತಿಮನೋಹರಂ ಮಧುಮಿತ್ರಂ" (ವಸ್ತುಕೋ. ೩-೨೮) : ಮಧುಮಿತ್ರ ಜಗಜ್ಜೈತ್ರಾಯುಧಗೃಹಮೆನೆ ವಿಕಚವಿಚಕಿಳಂ ಸೊಗಯಿಸುಗುಂ (ಚಂದ್ರಪ್ರ. ೬-೩೦) ; ಇದು ಮಧುಮಿತ್ರ ಮತ್ತಗಜರಾಜಿಮೊ ನೋಡಿದು ಪುಷ್ಪಚಾಪಸೌಖ್ಯದ ಸುರವಲ್ಲರೀತತಿಯೊ . . . ಪೇಳೆನೆ ಬಂದುದು ಭಾಮಿನೀಜನಂ (ರಾಜಶೇ. ೧೧-೧೨). ೨. ಮಕರಂದಪ್ರಿಯ ; ತುಂಬಿ : ಭ್ರಮರ. ೩. ವಸಂತಋತು : ವಸಂತಮಾಸ. ೪. ಬಲರಾಮ. ೫. ಶಿವ : ಈಶ್ವರ : "ರುದ್ರನೊಳ್ ಸ್ಮರನೊಳೆಯೊಳು ವಸಂತನೊಳ್ ಬಲಭದ್ರನೊಳ್ ಮಧುಮಿತ್ರನಕ್ಕು" (ಮಂಗರಾ. ೧೩೦-೪೮). [ಸಂ.]

**ಮಧುಮಿತ್ರತೆ** (ನಾ). ೧. ಜೇನಿನಂತೆ ಸವಿಯಾಗಿರುವಿಕೆ. ೨. ಕಾಮನ ಅಸ್ತಿತ್ವ. ೧, ೨: ಅತನುತ್ವಂ ಜಘನದೊಳುನ್ನತಕುಚದೊಳನಲ್ಪದರ್ಪಕತ್ವಂ ಮಧುಮಿತ್ರತೆ ವಚನದೊಳಿರೆ ಕಾಂತಾತತಿ ಪಡೆಯದೆ ಕಾಮಿನೀಸಮಾಖ್ಯೆಯನಿಳೆಯೊಳ್ (ರಾಜಶೇ. ೧೨-೩೪). [ಸಂ. ಮಧುಮಿತ್ರತಾ]

**ಮಧುಮೂತ್ರ** (ನಾ). ಸಿಹಿಮೂತ್ರರೋಗ ; ಸಕ್ಕರೆರೋಗ : ವ್ಯಕ್ತಿ . . . ಮೂತ್ರದಲ್ಲಿ ಸಕ್ಕರೆ ಹೋಗುವ ರೋಗ (ಮಧುಮೂತ್ರ) . . . ಲಕ್ವ, ಅರ್ಧಾಂಗವಾತ, ಅದರ ಇತರ ರೂಪಗಳು — ಇವುಗಳಿಗೆ ತುತ್ತಾಗುತ್ತಾನೆ (ಕಂಕೋ. I, ೪೦). [ಸಂ.]

**ಮಧುಮೇಹ** (ನಾ). = ಮಧುಮೂತ್ರ : ಮಧುಮೇಹವುಳ್ಳವರು ಪಥ್ಯಮಾಡಬೇಕು (ಲೂಥಿ). [ಸಂ.]

**ಮಧುಯಷ್ಟಿಕೆ** (ನಾ). ೧. ಜ್ಯೇಷ್ಠಮಧು ; ಅತಿಮಧುರ : "ಮಧುಕಂ, ಕ್ಲೀತಕಂ, ಯಷ್ಟಿಮಧುಕಂ, ಮಧುಯಷ್ಟಿಕಾ — ೪ ಅತಿಮಧುರದ ಹೆಸರುಗಳು" (ನಿಘಂಟು. ೧೩೬). ೨. ಕಬ್ಬು. [ಸಂ. ಮಧುಯಷ್ಟಿಕಾ]

**ಮಧುರ** (ಗು). ೧. ಸವಿಯಾದ ; ಸಿಹಿಯಾದ ; ರುಚಿಯಾದ : ಎಲ್ಲಿ ಷಡುರಸಮಯದ ಭೋಜನವೆಲ್ಲಿ ಮಧುರಫಲೌಘದುಬ್ಬರ . . . ಅಲ್ಲಿ ನಿನ್ನುರವಣೆಗಳೊಪ್ಪುವದು (ಕುಮಾ.ದ್ರೋ. ೧೩-೬೩). ೨. ಸುಖಕರವಾದ ; ಹಿತವಾದ ; ಆಪ್ಯಾಯಮಾನವಾದ : ಶರತ್ಕಾಲ ಮಧ್ಯಾಹ್ನದಂದು ಮಧುರತಾಪದಲ್ಲಿ ದರವಾನನು . . . ನಿದ್ರೆಹೋಗಿಬಿಟ್ಟಿರುವಂತಿದೆ (ಚಿಂದ. II, ೩೬೬). ೩. ಇಂಪಾದ ; ಕರ್ಣಾನಂದಕರವಾದ : ಮಂಗಳಗಾಯಿಕಾಮಧುರಗಾನದಿನೆಬ್ಬಿರನೆಯ್ದು . . . ಅಂಗನೆ ಬಂದಳಂಗಜನ ಮಂಗಳಲಕ್ಷ್ಮಿಯೆನಲ್ (ಪುಷ್ಪಪು. ೩-೧೨೧). (ನಾ). ೪. ಸವಿಯಾದುದು; ಸಿಹಿಯಾದುದು : ಸಣ್ಣಂ ನಡು ತಿಣ್ಣಂ ಮೊಲೆ ಬಣ್ಣಂ ಪಸುರ್ವೆಸಟಿ ಬಣ್ಣಮಧರಂ ಮಧುರಂ . . . ಬಣ್ಣಿಸಲ್ಕರಿದಬ್ಜಜಂಗಮಾಕೆಯ ರೂಪಂ (ಕಾವ್ಯಸಾ. ೨೮೧ ಕೂದ್ರಳ) ; ಬದುಕು ಸಾರ್ಥಕ ಮಧುರಮಾಯ್ತು ಶಿಶುಸನ್ನಿಧಿಯ ಪ್ರೇಮಸೌಂದರ್ಯಮಹಿಮೆಯಲಿ (ಶ್ರೀರಾಮಾ. ೨೬-೩೦). ೫. ತವರ : "ಮಧುರಂ ತ್ರಪುವೆನಲು ವಂಗಮನೆ ತವರಂ" (ಕುಂಗರಾ. ೩೦-೩). ೬. ಕೆಂಪುಬಣ್ಣದ ಕಬ್ಬು : ರಸದಾಳಿಕಬ್ಬು : ಹಿಪ್ಪೆಗೆ ರುಚಿಯುಂಟೇ ಮಧುರಕ್ಕಲ್ಲದೆ (ಸೋಮಪಾ. ೧೨೧-೪೬೨). ೭. ಕಾಕಂಬಿ. ೮. ಒಂದು ಬಗೆಯ ಮಾವು. ೯. ಬಾದಾಮಿಯ ಗಿಡ. ೧೦. ಕಾಡು ಎಲಚಿ; ಅಡವಿ ಬೋರೆ : (೬). ೧೧. ಅಕ್ಕಿ : (೬). ೧೨. ಒಂದು ಬಗೆಯ ಗೋಧಿ ; ಸಣ್ಣಗೋಧಿ : (೬). ೧೩. ಬಡೇಸೋಪು : (೬). ೧೪. ಸಿಂದಿಗಿಡ ; ಈಚಲು : (೬). ೧೫. ಚೆನ್ನಂಗಿ : ಕಡಲೆ : (೬). ೧೬. ಧರ್ಮನಾಥಪುರಾಣವೆಂಬ ಚಂಪೂಕಾವ್ಯವನ್ನು ಬರೆದ ಒಬ್ಬ ಕನ್ನಡದ ಕವಿ : ಕವಿ ಮಧುರನ ಮಾತುಗಳೇಂ ಸವಿಯೋ (ರಮಾಣಾ. ೧-೬೪). ೧೭. [ಕಾವ್ಯಮೀ] ಹತ್ತುಬಗೆಯ ಕಾವ್ಯಗುಣಗಳಲ್ಲಿ ಒಂದು ; P ಇದಕ್ಕೆ 'ಮಾಧುರ್ಯ'ವೆಂತಲೂ ಹೆಸರು : ಅಗ್ರಾಮ್ಯ ವಚನ ವೃತ್ತಿ ಸಮಗ್ರರಸಾಪೂರ್ಣಮಪ್ಪುದದು ಮಧುರಂ (ಕಾವ್ಯಾವ. ೩೧೯). ೧೮. [ಸಂಗೀತ] ರಾಗದ ಲಕ್ಷಣಗಳಲ್ಲಿ ಒಂದು : ಸ್ವರ ಶ್ರುತಿ ಗಮಕಂಗಳಿಂ ಪುಟ್ಟಿದ ಗೀತಮಾದೊಡೆ ಸ್ವರ ಸುಸ್ವರ ಸುರಾಗ ಮಧುರ ಅಕ್ಷರ ಅಲಂಕಾರವೆಂಬಾಱು ಲಕ್ಷಣಮುಳ್ಳುದಾಗಿಹುದು (೬ಪೇಶ. ೧೬೬). ೧೯. ಮೂರು ಸ್ವರಭೇದಗಳಲ್ಲಿ ಒಂದು : "ತಾರಮೆನಲುಚ್ಚದಾ ಧ್ವನಿಯಕ್ಕು ಮಧುರಮೆನೆ ಸಾರದಾ ಧ್ವನಿಯಕ್ಕು ಮಂದ್ರಮೆಂದೆನಲು ಗಂಭೀರದಾ ಧ್ವನಿಯಕ್ಕು" (ಕುಂಗರಾ. ೨೩ ೩) ; ಯಥೋಚಿತ ತಾರ ಮಧುರ ಮಂದ್ರಂಗಳಿಂ ಹಾಡಿ (ಹಕಿಣ ೬-೬); ತಾರ ಮಧುರ ಮಂದ್ರತ್ರಯಂಗಳಂ ನಾಭಿ ಉದರಕಂಠವೆಂಬ ತ್ರಿಸ್ಥಾನವಱಿದು . . . ಪಾಡುವ ಗಾಯಕೋತ್ತಮರಿಂ (ದಶಾವ. ೨-೧೧ ವ). [ಸಂ.]

**ಮಧುರಂಗ** (ನಾ). ಒಂದು ಬಗೆಯ ಬಾಳೆ : ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆಯೆಸೆವಾ ದೇವಾಳೆ ಕಬ್ಬಾಳೆ ಹಸುರುಗುಂದದ ಪಚ್ಚೆನಾಡವು ಮಧುರಂಗ ಪಸರಿಸಿ ಮೆಱೆದುಪರ್ತಿಯಲಿ (ಕಂಪರಿ. ೩-೯೬) ; ಬಾಳೆಯ ಜಾತಿಗಳು — ರಾಜರಸಬಾಳೆ, ಪುಟ್ಟಬಾಳೆ (ಪುಟ್ಟ ಸುಗಂಧಬಾಳೆ). ಮಧುರಂಗ, ಗುಜ್ಜ (ಪಮ್ಮಹು. ೨೩೬). [ ? ]

**ಮಧುರಂಗಿ** 'ಮದರಂಗಿ' ನೋ.

**ಮಧುರಕ** (ಗು). ೧. ಸವಿಯಾದ : ಮಧುರವಾದ. (ನಾ). ೨. ಒಂದು ಬಗೆಯ ಗಿಡ ; ಹಕ್ಕಿಸಿಳ್ಳೆ : "ಕೂರ್ಚಶೀರ್ಷಃ, ಮಧುರಕಃ, ಶೃಂಗಃ, ಹ್ರಸ್ವಾಂಗಃ, ಜೀವಕಃ — ೫ ಜೀವಕವೆಂಬುವ ಔಷಧ, ಹಕ್ಕೀಶಿಳ್ಳೆಗಿಡ" (ನಿಘಂಟು. ೧೪೩). [ಸಂ.]

**ಮಧುರತೆ** (ನಾ). ಸವಿ : ಮಾಧುರ್ಯ : ಮಧುಕಂ ಮಧೂಕಪುಷ್ಪಂ ಮಧು ಶರ್ಕರೆ ಕೋಷ್ಠಮೆಂಬಿವಂ ಮೊದಲೊಳ್ ಪೊಚ್ಚಿಧಿಕಫಲವಾಗಿ ಪಡೆಗುಂ ಮಧುರತೆಯಿ[ಯು]ಂ (ಲೋಕೋಪ. ೬-೯೦). [ಸಂ. ಮಧುರತಾ]

**ಮಧುರತ್ವ** (ನಾ). ಸವಿ ; ಮಾಧುರ್ಯ. [ಸಂ.]

**ಮಧುರಧನ್ವ** (ನಾ). ಮನ್ಮಥ ; ಮದನ : ಮನಸಿಜನ ಮುದ್ರೆ ಮನ್ಮಥನಾಣೆ ಮಧುರಧನ್ವನ ಗಾಮಂ (ಶೀಗ್ಗಿ.ತ. ೨-೭). [ಸಂ. ಮಧುರಧನ್ವನ್]

**ಮಧುರಭಾಷಿಣಿ** (ನಾ). ಸವಿಯಾದ ಮಾತನ್ನಾಡುವವಳು ; ಇಂಪಾಗಿ ನುಡಿಯುವವಳು : ಆ ಭೂರಮಣಂ ಬೆಸಗೊಳೆ ಕರವಾರಿಜಮಂ ಮುಗಿದು ಮಧುರಭಾಷಿಣಿ ನುಡಿದಳ್ (ರಾಜಶೇ. ೩-೬೩) ; ಕೇಳ್ದೆಲತ್ತಸ ಸೂಯೆ ಮಧುರಭಾಷಿಣಿ ಜನಕಜಾತೆಯ ವದನದಿಂ ಸ್ವಯಂವರದ ವೃತ್ತಮಂ (ಶ್ರೀಣಾಪು. ೦೭೯-೭೨). [ಸಂ. ಮಧುರಭಾಷಿಣೀ]

**ಮಧುರರವ** (ನಾ). ಇಂಪಾದ ಧ್ವನಿ : ವಿದಿತ ಸಮಸಂಸ್ಕೃತೋದಿತ ಪದಂಗಳೊಳ್ಪುದಿದು ಬೆರಸಿ ಬರೆ ಕನ್ನಡದೊಳ್ ಮುದಮುನವು ತರ್ಕುವತಿಶಯು ಮೃದಂಗಸಂಗೀತಕಾದಿ ಮಧುರರವಂಬೋಲ್ (ಕಬಿರಾ. ೦-೩೩); ಮುಂದೆ ಬಂದೋದುವ ಮಂಗಳಪಾಠಕರ ಜಯಜಯಾದಿ ಮಧುರರವಂಗಳೊಳತಿಕ್ಷುಭಿತಮಾದಾಸ್ಥಾನಮಂಟಪದಿಂ ಮನುಜೇಂದ್ರಂ ಪೊಱಮಟ್ಟು (ಕಾದಂಪೂ. ೬೭). [ಸಂ.]

**ಮಧುರರಸ** (ನಾ). ೧. ಕಬ್ಬಿನ ಹಾಲು; ಕಬ್ಬಿನ ರಸ : ಸವಿವೊಡೆ ಮಧುರರಸಂಬೊಲ್ ಕಿವಿಗಿನಿದಾಗಿರ್ಪ ವಚನವಿರಚನೆ ಮಧುರಂ (ಕಬಿರಾ. ೨-೬೦). ೨. ಸವಿಯಾದ ದ್ರವಾಹಾರ : ಊಟದಲ್ಲಿ ಮೊದಲು ಮಧುರರಸಗಳನ್ನೂ . . . ಅಂತ್ಯದಲ್ಲಿ ಹುಳಿ ಮೊದಲಾದ ಮಿಶ್ರದ್ರವ್ಯಗಳನ್ನೂ ಭುಂಜಿಸಿದರೆ ಶೀಘ್ರವಾಗಿ ಜೀರ್ಣಿಸಿ ಬಲವನ್ನುಂಟುಮಾಡುವುದು (ಸಕವ್ವ. ೩೦). [ಸಂ.]

**ಮಧುರಸ** (ನಾ). ೧. ಕಬ್ಬು. ೨. ಜೇನುತುಪ್ಪ : ಆಗೊಂದು ಈಗೊಂದು ಹನಿಯನಿತ್ತರೆ ಸಾಕು ಹನಿಸದಿರು ಮಧುರಸವ ನನ್ನ ಮೇಲೆ (ಕರ್ಮೃಂ೦. ೯-೨). ೩. ಕಳ್ಳು ; ಮದ್ಯ : ವಿಧುಮುಖಿ . . . ಮಧುರಸಮಲ್ಪ್ತಂ ಕುಂಕುಮರಸಂ ದಿಟಮೆಂದು ಬಟ್ಟಿಕ್ಕೆ ಶಂಕೆ ತನ್ಮಧುರಸ ಗಂಧದಿಂ ತೊಲಗೆ ಸೇವಿಸಿದಳ್ ಮಧುವಂ ನಿಜೇಚ್ಛೆಯಿಂ (ಜಗವಿ. ೧೬-೧೦೭). [ಸಂ.]

**ಮಧುರಸೆ** (ನಾ). ೧. ಒಂದು ಬಗೆಯ ಸಸ್ಯ; ಕುರಟಗೆಗಿಡ : "ಮೂರ್ವಾ, ದೇವೀ, ಮಧುರಸಾ, ಮೋರಟಾ, ತೇಜನೀ, ಸ್ರವಾ, ಮಧೂಲಿಕಾ, ಮಧುಶ್ರೇಣೀ, ಗೋಕರ್ಣೀ, ಪೀಲುಪರ್ಣೀ— ೧೦ ಹೆಗ್ಗುರುಟಿಕೆಯ ಹೆಸರುಗಳು" (ಸಿದ್ಧಾಂಶಿ. ೦೩೦). ೨. ದ್ರಾಕ್ಷೆ : "ಮೃದ್ವೀಕಾ, ಗೋಸ್ತನೀ, ದ್ರಾಕ್ಷಾ, ಸ್ವಾದ್ವೀ, ಮಧುರಸಾ— ೫ ದ್ರಾಕ್ಷೆ ಹೆಸರುಗಳು" (ಸಿದ್ಧಾಂಶಿ. ೧೩೬). ೩. ಹಾಲುತೊಟ್ಟಿನ ಗಿಡ. [ಸಂ. ಮಧುರಸಾ]

**ಮಧುರಾಲಾಪ**, ಮಧುರಾಳಾಪ (ನಾ). ೧. ಸವಿಯಾದ ಮಾತು,— ಸಂಭಾಷಣೆ : ಗಂಭೀರವಾದ ಈತನ ಆಕೃತಿಯನ್ನೂ ಮಧುರಾಲಾಪಗಳನ್ನೂ ನೋಡಿದರೆ ಪ್ರಭುವಿನಂತೆ ಕಾಣುವನು (ಶಾಕುಂತ. ೦೩-೨). ಮಧುರಾಳಾಪ: ೧. ವಿದಿತಾಸ್ಪದಮುತ್ತರಮಾರ್ಗವರ್ಗ ಮಧುರಾಳಾಪಂ (ಕಬಿರಾ. ೨-೬೨); ಈತನನು ಮಧುರಾಳಾಪದಲಿ ಮಾತಾಡಿಸುವೆನು (ತೊರವೆ. ೩-೪-೦೭). ೨. ಸವಿಯಾಗಿ ಮಾತಾಡುವವನು : ಭೂಪಂ ಬೆಸಗೊಳೆ ಮಧುರಾಳಾಪಂ ಬಿನ್ನವಿಕುಂ (ಶಾಂತಿಪು. ೫-೩೦). [ಸಂ.]

**ಮಧುರಾಳಾಪ** 'ಮಧುರಾಲಾಪ' ನೋ.

**ಮಧುರಿಕೆ** (ನಾ). ಒಂದು ಬಗೆಯ ಸೊಪ್ಪು; ಸಬ್ಬಸಿಗೆ : "ಶಾಲೇಯಃ, ಶೀತಶಿವಾ, ಛತ್ರಾ, ಮಧುರಿಕಾ, ಮಿಸಿಃ, ಮಿಶ್ರೇಯಾ—೬ ಸಬ್ಬಸಿಕೇ ಹೆಸರುಗಳು" (ಸಿದ್ಧಾಂಶಿ. ೦೩೬). [ಸಂ. ಮಧುರಿಕಾ]

**ಮಧುರಿಪು** (ನಾ). ಮಧು ಎಂಬ ರಾಕ್ಷಸನ ಶತ್ರು; ವಿಷ್ಣು : "ವಿಷ್ಣುಃ . . . ಮಧುರಿಪು . . . ವತ್ಸಲಾಂಛನಃ —ಈ ೪೯ ವಿಷ್ಣುದೇವರ ಹೆಸರುಗಳು" (ಸಿದ್ಧಾಂಶಿ. ೦೭). [ಸಂ.]

**ಮಧುರಿಪುಜ** (ನಾ). ವಿಷ್ಣುವಿನ ಮಗ; ಮನ್ಮಥ : ಮಧುಸೇವನೆಯಿಂ ಸೊರ್ಕುತೆ ಮಧುಪಂ ಸುಮನಃಪ್ರಚಯಮನಲೆದೊಡೆ ಶಿಬಿರದೊಳ್ ಮಧುರಿಪುಜನ ಬೆಸವಿಸದಂ ಮಧು ದಂಡಿಪ ತೆಱದೆ ಮುತ್ತದಲರೊಳ ದೆಸೆಗುಂ (ರಾಜಶೇ. ೯-೩೦). [ಸಂ.]

**ಮಧುರೆ**, 'ಮದುರೆ' ನೋ.

**ಮಧುರೆ** (ನಾ). ೧. ಒಂದು ಬಗೆಯ ಸಸ್ಯ; ಕಾಡು ಸಬ್ಬಸಿಗೆ : "ಶತಪುಷ್ಪಾ, ಸಿತಚ್ಛತ್ರಾ, ಅತಿಚ್ಛತ್ರಾ, ಮಧುರಾ, ಮಿಸಿಃ, ಅವಾಕ್ಪುಷ್ಪೀ, ಕಾರವೀ—೭ ಕಾಡು ಸಬ್ಬಸಿಕೇ ಹೆಸರು" (ಸಿದ್ಧಾಂಶಿ. ೦೯೭). ೨. ಅತಿಮಧುರ : ಮಧುಯಷ್ಟಿಕೆ. ೩. ಹುಳಿತ ಗಂಜಿ. ೪. ಉತ್ತರ ಭಾರತದ ಮಧುರಾಪಟ್ಟಣ; ಶ್ರೀಕೃಷ್ಣನ ಜನ್ಮಸ್ಥಳ : ಮಧುರೆಯೊಳಾ ಜೀವಜಸೆ ಕುಧರಧರಂ ತನ್ನ ಕಾಂತನಂ ಕೊಂದೊಡೆ ತನ್ಮಧು ಕೊಂದವನಂ ಕೊಲ್ಲದೊಡಥಮೆಯೆನಾನೆಂದು ಮುಕ್ತಕೇಶದೊಳಿರ್ದಳ್ (ನೇಮಿಪು. ೭-೨) ; ಸೋದರಮಾವನ ಮಧುರೆಲಿ ಮಡುಹಿದ ಯಶೋದೆ ನಂದನ ನೀ ಬಾರೋ (ಪುರಂದ. ೦-೦೩ ಕಲ್ಯಾ). ೫. [ಸಂಗೀತ] ಋಷಭದಿಂದ ಹುಟ್ಟುವ ಶ್ರುತಿಗಳಲ್ಲಿ ಒಂದು : ಮಧುರೆ, ಮಾವಳಿ, ಏಕಾಕ್ಷರಿಯೆಂಬ ಮೂಱು ಶ್ರುತಿಗಳೇ ಋಷಭಸ್ವರದಿಂ ಜನಿಸಿದವು (ಏಕೀಕ. ೦೬೭). ೬. [ಕಾವ್ಯಮೀ] ಅನುಪ್ರಾಸದ ಒಂದು ಪ್ರಕಾರ : ತಂತಮ್ಮ ವರ್ಗದಂತ್ಯದೋಳ್ತಾ ವರ್ಗಂಗಳಮಳ್ಳಳಾಗಿರೆ ಮೇಣತ್ಕ್ರಂತಂ ಸರೇಫ ಸಂಯೋಗಾಂತರಮಮರ್ದೊದವೆ ಮಧುರೆಯೆಂಬುದದಕ್ಕಂ (ಕಾವ್ಯಾವ. ೩೮೨). [ಸಂ. ಮಧುರಾ]

**ಮಧುರೋಕ್ತಿ** (ನಾ). ಸವಿಯಾದ ಮಾತು ; ಇಂಪಾದ ನುಡಿ : ಉತ್ಸವದಿಂದೆ ಹಾಸ್ಯರಸಮಾ ಮಧುರೋಕ್ತಿಗಳಿಂದಮಲ್ತೆ (ಕಬಿರಾ. ೨-೯೮) ; ಅರಸ ವಸುದೇವನನು ಮಧುರೋಕ್ತಿಯಲಿ ಮನ್ನಿಸಿದ (ಕುಮ್ಯಾ೦. ೦೦-೬೦) ; ಮಧುರೋಕ್ತಿಯಿಂದೆ ಮುದವಕ್ಕಳಂ ಮನ್ನಿಸಿ . . . ಜಾಮಾತನಂ ಮಂತ್ರಿ ಕರೆದಿಂತೆಂದನು (ಜೈಮಿಭಾ. ೩೦-೩೬). [ಸಂ.]

**ಮಧುವಲ್ಲಿ** (ನಾ). ೧. ಅತಿಮಧುರ ; ಮಧುಯಷ್ಟಿಕ. ೨. ಒಂದು ಬಗೆಯ ದ್ರಾಕ್ಷೆ. ೩. ಮಾವಲದ ಹಣ್ಣು ; ಸಕ್ಕರೆಗಂಚಿ : " ಮಧುವಲ್ಲಿಯರೆಮಾದಲಂ " (ಮಂಗರಾ. ೯೦-೩೩). [ಸಂ. ಮಧುವಲ್ಲೀ]

**ಮಧುವಿಕಾರಿ** (ನಾ). ವಸಂತಮಾಸದಲ್ಲಿ ಮಾವಿನ ಹೂವಿನ ಮಕರಂದ ಪಾನದಿಂದ ಚಿತ್ತವಿಕಾರವನ್ನು ಹೊಂದಿದುದು : ಮಧುವಿಕಾರಿ ಕೋಗಿಲೆ ಕಿಸುಗಣ್ಣುವೆ ನೀಂ (ಮಲ್ಲಿಕಿ. ೩-೩೨). [ಸಂ. ಮಧುವಿಕಾರಿನ್]

**ಮಧುವಿಡಿ** (ಕ್ರಿ). ಜೇನನ್ನು ಕೂಡಿಡು : ಅರೆವಿರಿದ ಕಮಲಗಳನಾರೈದು ಪ್ರಮರಾಳಿ ಹರುಷದಿಂ ತದ್ರಸವ ಸವಿದು ಮಧುವಿಡುವಂತೆ (ಪದ್ಮನಾ. ೭-೯). [ಮಧು + ಇಡು]

**ಮಧುವಿಹಂಗ** (ನಾ). ಹೂವಿನ ಮಕರಂದದಿಂದ ಬದುಕುವ ಹಕ್ಕಿಯಂತಹ ಕೀಟ : ಅಲರ್ವಕ್ಕಿ ; ತುಂಬಿ : ಮಣಿಕುಟ್ಟಿಮತಳದ ಪೂವಲಿಯುಂ ಬಿಟ್ಟು ಪಾಱುವ ಮಧುವಿಹಂಗಂಗಳ ಹುಂಕಾರದೊಳಂ . . . ಅತಿಕ್ಷುಭಿತಮಾದಾಸ್ಥಾನಮಂಟಪದಿಂ ಮನುಜೇಂದ್ರಂ ಪೊಱಮಟ್ಟು (ಕಾದಂಪೂ. ೬೭). [ಸಂ.]

**ಮಧುವ್ರತ** (ನಾ). ತುಂಬಿ ; ಭ್ರಮರ : "ಮಧುಕರಃ, ಮಧುಪಃ, ಮಧುವ್ರತಃ. . .ದ್ವಿರೇಫಃ —ಈ ೧೩ ತುಂಬಿ" (ಹಲಾಯು. ೪೩-೦೦೦) ; ರತಿಗೆ ಮುಡಿಯಲ್ಕೆ ಮದನಂಗೆ ತುಱುಂಬಲ್ಕಿರ್ದುದೆಂದು ವಧು ಸುಟೀವ ಮಧುವ್ರತಮುಮುನಲೆದಪೆನೆಂಬೀ ಪ್ರತೀತಿಗಿರುವಂತಿಯಂತೆ ನೋಂತಲ

ರೊಳವೇ (ಆದಿಪು. ೧೧-೧೧೭) ; ಆಸವಾಸಕ್ತಿ ಮಧುವ್ರತದೊಳ್ (ಶಂಪ್ರಪು. ೩-೯೫); ಸುಕವಿ ಮಧುವ್ರತನಿಕರಮನೆೞಿಗಿಸುವ ಚೂತಮಂಜರಿ ಕುಕವಿಪ್ರಕರ ಮಧುಪಕ್ಕೆ ಕೃತಿ ಚಂಪಕಮಂಜರಿಯೆನಿಸೆ ಪೇೞ್ದಪಂ ಗುಣವರ್ಮಂ (ಪುಷ್ಪ. ೧-೬೧). [ಸಂ.]

**ಮಧುಶಿಗ್ರು** (ನಾ). ಕೆಂಪುಹೂ ಬಿಡುವ ನುಗ್ಗೆಗಿಡ : "ಮಧುಶಿಗ್ರು, ಅಸೌರಕ್ತಃ—ಕೆಂಪುಹುವ್ವುಗಳುಳ್ಳ ನುಗ್ಗೇಗಿಡದ ಹೆಸರು" (ಸಿದ್ಧಾಂತಿ. ೧೧೮). [ಸಂ.]

**ಮಧುಶ್ರೇಣಿ** (ನಾ). ಕುರಟಿಗೆ ಗಿಡ : "ಮೂರ್ವಾ, ದೇವೀ . . . ಮಧುಶ್ರೇಣೀ, ಗೋಕರ್ಣೀ, ಪೀಲುಪರ್ಣೀ—೧೧ ಹೆಗ್ಗುರುಟಿಕೆಯ ಹೆಸರುಗಳು" (ಸಿದ್ಧಾಂತಿ. ೧೩೦). [ಸಂ. ಮಧುಶ್ರೇಣೀ]

**ಮಧುಷ್ಠೀವ** (ನಾ). ಹಿಪ್ಪೆಮರ ; ಮಧೂಕವೃಕ್ಷ : "ಮಧೂಕಃ, ಗುಡಪುಷ್ಪಃ, ಮಧುದ್ರುಮಃ, ವಾನಪ್ರಸ್ಥಃ, ಮಧುಷ್ಠೀವಃ—೫ ಯಿಪ್ಪೆ ಗಿಡ, ಹಿಪ್ಪೇಮರ" (ಸಿದ್ಧಾಂತಿ. ೧೧೮). [ಸಂ.]

**ಮಧುಸಂಗ** (ನಾ). ೧. ವಸಂತಮಾಸದ ಸಮಾಗಮ. ೨. ಮದ್ಯದ ಸಂಪರ್ಕ. ೧, ೨ : ತನುಲತೆಗಂಕುರಂ ತಳಿರಲರ್ ಮಧು ಸಂಗದೊಳಾಯ್ತು ಚೋದ್ಯಮೆಂದೆನೆ ಮಧುಪಾನಜಾತಪುಳಕೇಕ್ಷಣ ಶೋಣಿಮ ಘರ್ಮಬಿಂದುಗಳ್ ತನಗೆಸೆಯಲ್ . . . ಪಿಕನಿನಾದ ಪೆಱಳ್ ಗಱಪಂ ನೆಗೞ್ಚಿದಳ್ (ಜಗನ್ನಾ. ೧೭-೧೧೭). [ಸಂ.]

**ಮಧುಸಂಗತಿ** (ನಾ). ೧. = ಮಧುಸಂಗ ೧. ೨. = ಮಧುಸಂಗ ೨. ೧, ೨ : ಅಬ್ಜನಿ ತನ್ನ ಪರಾಗಮೆಂಬ ತಂಬುಲಮುಂಗೆ ನಕ್ಕಪಳ್ ವಿಕೃತಿಯಂ ಮಧುಸಂಗತಿ ಮಾಡದಿರ್ಕುಮೇ (ಜಗನ್ನಾ. ೧೪-೨೩). [ಸಂ.]

**ಮಧುಸಖ** (ನಾ). ವಸಂತಋತುವಿನ ಮಿತ್ರ ; ಕಾಮ ; ಮನ್ಮಥ : ವಿರಹಿಗಳಂ ಮಿಗೆ ತೆಗೆದೆಚ್ಚು ಬೞಲ್ದ ಮಧುಸಖನ ಸುಯ್ಯೆಲರ್ವೊಲ್ ಸೊಗಯಿಸಿ ಪೊತ್ತಲರ್ಗಳಂಪಂ ನೆಗೆದುಱಿ ತಣ್ಣೆಲರದಿನಿಸು ತೀಡಿತ್ತಾಗಳ್ (ಕಾದಂಬ. ೧೭೪). [ಸಂ.]

**ಮಧುಸಾರಥಿ** (ನಾ). ವಸಂತನನ್ನು ಸಾರಥಿಯನ್ನಾಗಿ ಮಾಡಿಕೊಂಡವನು ; ಕಾಮ. [ಸಂ.]

**ಮಧುಸೂದನ** (ನಾ). ೧. ತುಂಬಿ. ೨. ಮಧು ಎಂಬ ರಾಕ್ಷಸನನ್ನು ಸಂಹರಿಸಿದವನು; ಕೃಷ್ಣ : ಮನದ ಹರುಷದಿ ನಗುತ ಮಧುಸೂದನನು ನುಡಿದನು (ಕುಮಾ.ಉ. ೮-೬೮); ಯಾದವ ನೀ ಬಾ ಯದುಕುಲನಂದನ ಮಾಧವ ಮಧುಸೂದನ ಬಾರೊ (ಪುರಂದ. ೧-೦೩ ಪಲ್ಲವಿ); ವಾರಣನಗರಿಗೀಗ ನಮ್ಮೊಡನೆ ನಡೆತರಲಿ ದ್ವಾರಕೆಯೊಳಿರ್ದ ಜನರೆಲ್ಲರುಂ. . . ಎಂದು ಮಧುಸೂದನಂ ನೇಮಿಸಿದನು (ಜೈಮಿ. ೭-೧). [ಸಂ.]

**ಮಧುಸೇಕ** (ನಾ). ಮದ್ಯವನ್ನು ಚಿಮುಕಿಸುವುದು ; ಮದ್ಯಸಿಂಚನ ; P ಸುಂದರಸ್ತ್ರೀಯರು ತಮ್ಮ ಬಾಯಿಂದ ಮದ್ಯವನ್ನು ಮುಕ್ಕುಳಿಸಿ ಬಕುಳವೃಕ್ಷದ ಮೇಲೆ ಉಗುಳುವುದರಿಂದ ಅದು ಪುಷ್ಪಭರಿತವಾಗುವುದೆಂಬುದು ಒಂದು ಕವಿಸಮಯ : ಅಣುವ್ರತಮಂ ಮುನಿವರನೊಳ್ ಕೈಕೊಂಡ ತೆಱದೆ ಮಧುಸೇಕಮನಾದರಿಸದೆ ವಕುಳಂ ಮುಕುಳಮನರಲಂ ಧರಿಸಿದುದಾ ಕೊಂಬುಕೊಂಬಿನೊಳೆಲ್ಲಂ (ಶಂಪ್ರಪು. ೨-೯೨). 'ದೋಹದ' ನೋಡಿ. [ಸಂ.]

**ಮಧುಸೇವನೆ** (ನಾ). ೧. ಮದ್ಯಪಾನ ; ಮದಿರಾಸೇವನೆ. ೨. ಮಕರಂದದ ಪಾನ. ೧, ೨ : ಮಧುಸೇವನೆಯಿಂ ಸೊರ್ಕಿತೆ ಮಧುಪಂ ಸುಮನಃಪ್ರಚಯಮನಲೆದೊಡೆ ಶಿಖಿಯೊಳ್ ಮಧುರಿಪುಜನ ಬೆಸದಿನದಂ ಮಧು ದಂಡಿಪ ತೆಱದೆ ಮುತ್ತದಲರೊಳದೆಸೆಗುಂ (ರಾಜಶೇ. ೯-೩೦). [ಸಂ. ಮಧುಸೇವನ]

**ಮಧುಸೇವೆ** (ನಾ). ಮದ್ಯಪಾನ : ಕೆನ್ನೆವರಂ ನಿಮಿರ್ದಕ್ಷಿಗಳ್ಗೆ ರಾಗಂ ಮಧುಸೇವೆಯಿಂ ನೆಗೞ್ತೆ ರಂಜಿಸಿದರ್ ಮಧುಮತ್ತಕಾಂತೆಯರ್ (ಜಗನ್ನಾ. ೧೩-೧೧೮). [ಸಂ. ಮಧುಸೇವಾ]

**ಮಧೂಕ** (ನಾ). ಹಿಪ್ಪೆಮರ : ಮಧುಕಂ ಮಧೂಕಪುಷ್ಪಂ ಮಧುಶರ್ಕರೆ ಕೋಷ್ಠಮೆಂಬಿವಂ ಮೊದಲೊಳ್ ಪುಟ್ಟಿದಧಿಕಫಲಮಾಗಿ ಪಡೆಗುಂ ಮಧುರತೆಯ[ಯ]ಂ (ಲೋಕೋಪ. ೬-೪೦) ; ಮಾವು ಮಧೂಕ ಕುಟ ಕಲ್ಲತ್ತಿ . . . ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೊರಡಾ. ೩-೧-೨೭). [ಸಂ.]

**ಮಧೂಚ್ಛಿಷ್ಟ** (ನಾ). ಜೇನುಮೇಣ : "ಮಧೂಚ್ಛಿಷ್ಟಂ, ಸಿಕ್ಥಕಂ—೨ ಜೇನುಮೇಣದ ಪೆಸರು" (ಸಿದ್ಧಾಂತಿ. ೩೦೭). [ಸಂ.]

**ಮಧೂದ್ಗಮ** (ನಾ). ವಸಂತಕಾಲದ ಆರಂಭ : ಸುಗಂಧಬಂಧುರ ಮಲಯಾನಿಲಾಗತಿ ಮಧೂದ್ಗಮಮಂ ವಿಕಸಲ್ಲತಾಂತಮಂಜರಿ ಫಲದೇೞ್ಗೆಯಂ ನೆರೆಯೆ ಪೇೞ್ವವೊಲೀ ಸಮವಸ್ಥೆ ತಾನೆ ದೇವರ ಬರವಂ ನಿರಾಕುಳಮೆ ಪೇೞ್ದಪುದೆನ್ನ ಮನಕ್ಕೆ ನಿಶ್ಚಯಂ (ಕಾದಂಬ. ೩೮೭). [ಸಂ.]

**ಮಧೂಪಚಯ** (ನಾ). ಜೇನನ್ನು ಕೂಡಿಡುವಿಕೆ ; ಜೇನಿನ ಸಂಗ್ರಹ : ಜೇನುನೊಣದ ಮಧೂಪಚಯದವಕಿಲ್ಲಲೇ ಸರ್ವಾಪಹಾರವು ಪರಂಗಾ ಕೌರವನ ಸಿರಿ (ಕುಮಾ.ಭ. ೪-೧೧). [ಸಂ.]

**ಮಧೂಲಕ** (ನಾ). ೧. ನೀರುಹಿಪ್ಪೆಮರ : "ಮಧೂಲಕಃ, ಜಲಜೇ ಅತ್ರ—ನೀರುಹಿಪ್ಪೆಮರ" (ಸಿದ್ಧಾಂತಿ. ೧೨೮). ೨. ಜೇನುತುಪ್ಪ. ೩. ಸಿಹಿ ಮತ್ತು ಕಹಿ ಮಿಶ್ರವಾದ ಕಷಾಯ. [ಸಂ.]

**ಮಧೂಲಿಕೆ** (ನಾ). ಒಂದು ಬಗೆಯ ಸಸ್ಯ ; ಕುರಟಿಗೆ ಗಿಡ : "ಮೂರ್ವಾ . . . ಮಧೂಲಿಕಾ, ಮಧುಶ್ರೇಣೀ, ಗೋಕರ್ಣೀ, ಪೀಲುಪರ್ಣೀ—೧೧ ಹೆಗ್ಗುರುಟಿಕೆಯ ಹೆಸರುಗಳು" (ಸಿದ್ಧಾಂತಿ. ೧೩೦). [ಸಂ. ಮಧೂಲಿಕಾ]

**ಮಧೂಳಿ** (ನಾ). ೧. ಒಂದು ಬಗೆಯ ಮಲ್ಲಿಗೆ; ಇರವಂತಿಗೆ ಹೂವು : ಮೌಳಿಯೊಳುದ್ಭ್ರಮದ್ಭ್ರಮರಭಾರವಿಭಗ್ನಮಧೂಳಿ ಮಾಲತೀ ಮಾಳೆ ಮನಕ್ಕೆವಂದೆಸೆದುದು (ಶಾಂತಿಪು. ೩-೩೭). ೨. ಮಾವಿನ ಮರ. ೩. ಒಂದು ಬಗೆಯ ಸಸ್ಯ; ಅತಿಮಧುರ. ೪. ಒಂದು ಬಗೆಯ ನಿಂಬೆ. ೫. ಪರಾಗ. [ಸಂ. ಮಧೂಲೀ]

**ಮಧ್ಯ₁** (ಗು). ೧. ನಡುವಿನ ; ನಡುವೆ ಇರುವ. ೨. ನಡುತರದ ; ಮಧ್ಯಮ ತರಗತಿಯ. ೩. ಯಾವ ಪಕ್ಷಕ್ಕೂ ಸೇರದ ; ನಿಷ್ಪಕ್ಷಪಾತಿಯಾದ. ೪. ನ್ಯಾಯವಾದ ; ಸರಿಯಾದ ; ಸಮರ್ಪಕವಾದ. (ನಾ). ೫. ನಡುವಿನ ಭಾಗ : ಮೊದಲು ಕಡೆ ಮಧ್ಯಗಳ ಬಲ್ಲವ ಮದನಜನಕನು ನೀನು (ಹಂಪಾ. ೯೫) ; ಕಥೆಗೆ ಒಂದು ಆದಿ, ಮಧ್ಯ, ಅಂತ್ಯಗಳಿರಬೇಕು (ಅಂಕಾ. ೧೨೮). ೬. ದೇಹದ ಮಧ್ಯಭಾಗ; ಸೊಂಟ ; ಟೊಂಕ ; ನಡು : ನೋಡೆ ಕುಮಾರಿಯ ಬಳ್ಕುವ ಮಧ್ಯಂ ನಾಡೆ ಮನೋಜ್ಞಂ (ಸುಕುಮಾ. ೫-೫೦ ರಗಳೆ) ; ಮೇಲುದನು ಮಧ್ಯಕ್ಕೆ ಸುತ್ತಿ ಕಾಸಿಯ ಬಿಗಿದು (ಪಮ್ಪಭಾ. ೨೪-೫೪) ; ಕ್ಷಾಮವು ಮಧ್ಯವು ಅಕೃಶವು ಜಘನವು . . . ಸುಂದರವೀಕೆಯ ತನುವು (ಇಂದಿರಾಶ. ೧೭೪-೫೭). ೭. ಕೆಳಮಟ್ಟವೂ ಅಲ್ಲದ, ಉತ್ತಮ ಮಟ್ಟವೂ ಅಲ್ಲದ ಸ್ಥಿತಿ. ೮. [ಸಂಗೀತ] ದ್ರುತ, ಮಧ್ಯ, ವಿಳಂಬಗಳೆಂಬ ಮೂರು ಲಯಗಳಲ್ಲಿ ಒಂದು : ಲಯದಲ್ಲಿ ದ್ರುತ (ಹೆಚ್ಚಿನ ವೇಗ), ಮಧ್ಯ (ಹೆಚ್ಚೂ ಅಲ್ಲದ, ನಿಧಾನವೂ ಅಲ್ಲದ) ಮತ್ತು ವಿಳಂಬ (ನಿಧಾನ) ಎಂದು ಮೂರು ವಿಧ (ಸಂಗೀಸಂ. ೫೭). ೯. ತಾರ, ಮಧ್ಯ, ಮಂದ್ರಗಳೆಂಬ ಮೂರುಬಗೆಯ ಸ್ವರಸಪ್ತಕಗಳಲ್ಲಿ ಒಂದು : ಕೋಗಿಲೆ ಗಿಳಿ ತುಂಬಿ ಮಹೇಶನ ಕಿವಿಗಾಗಳ್ ಕ್ರಮದಿತ್ತುವು ತಾರಮಧ್ಯಮಂದ್ರಸ್ವರದಿಂ (ಶಂಪ್ರಪು. ೭-೮೨); ಪರ ಮಂದ್ರ ಮಧ್ಯ ತಾರಸ್ವರದಿಂದಂ . . . ಪಾಡಿದನಾ ಗುರು ವಿಶ್ವೇಶ್ವರನ ಮಹಿಮೆಯಂ ಮುನಿತಿಲಕಂ (ಶೀಲಸಂ. ೬-೯೧).

೧೦. [ಗಣಿತ] ಹದಿನಾರು ಅಂಕೆಗಳಿಂದ ಕೂಡಿದ ಒಂದು ದೊಡ್ಡ ಸಂಖ್ಯೆ: ಅಂಕೆಗಳ ಶ್ರೇಣಿ ಹದಿನೆಂಟರವರೆಗೂ ಹೋಗುತ್ತದೆ. ಈ ಹದಿನೆಂಟು ಶ್ರೇಣಿಗಳು ಯಾವುವೆಂದರೆ, ಏಕಂ, ದಶ, ಶತ, ಸಹಸ್ರ, ಅಯುತ, ಲಕ್ಷ, ಪ್ರಯುತ, ಕೋಟಿ, ಸ್ಕರ್ಬುದ, ಪದ್ಮ, ಖರ್ವ, ನಿಖರ್ವ, ಮಹಾಪದ್ಮ, ಶಂಖ, ಸಮುದ್ರ, ಮಧ್ಯ, ಅಂತ್ಯ, ಪರಾರ್ಧ (ಶ್ರಬಾ. 1. ೨೫೭). [ಸಂ.]

**ಮಧ್ಯ₂** (ಅ). ನಡುವೆ: ನವರಾತ್ರೀ ಮಧ್ಯ ಶಿವರಾತ್ರಿ ಬಂದೀತೇ? (ಗಾದೆ). [< ಮಧ್ಯ₁]

**ಮಧ್ಯಂತರ** (ನಾ). ೧. ನಡುವಿನ ಕಾಲ; ಮಧ್ಯಕಾಲ: ಇವುಗಳ ಮಧ್ಯಂತರದಲ್ಲಿ ಅವನ ಮತ್ತೆರಡು ಗ್ರಂಥಗಳು ಪ್ರಕಟವಾಗಿವೆ (ಶ್ರಬಂಕ. ೧೦೨); ಮಧ್ಯಂತರದಲ್ಲಿ ಟೀಕಕರು ದಿಬಸರಿಯ ಕೆಲಸ ಬಿಟ್ಟು ಕೊಟ್ಟು ರಾಹುರಿಯಲ್ಲಿ ಬಂದು ನೆಲಸಿದ್ದರು (ಸ್ವಕೀ. ೩೯೯). ೨. ನಾಟಕ, ವಾಕ್ಚಿತ್ರ ಅಥವಾ ಸಂಗೀತಕಚೇರಿಗಳಲ್ಲಿ ನಡುವೆ ಅಲ್ಪವಿಶ್ರಾಂತಿಗಾಗಿ ಕೊಡುವ ಬಿಡುವು; ವಿರಾಮ: ಮಧ್ಯಂತರವನ್ನೆಲ್ಲ ಮಾತಿನಲ್ಲಿಯೆ ಕಳೆಯುವಿರೋ, ಸ್ವಲ್ಪ ಕಾಫಿ ಗೀಫಿ ಕುಡಿಯುವಿರೋ? (ಡಾಂ). P ಇದು ವ್ಯಾಕರಣಶುದ್ಧವಲ್ಲದ ರೂಪ. ಬಹುಶಃ ಇದು ಇಂಗ್ಲಿಷಿನ 'Interval' ಎಂಬ ಶಬ್ದಕ್ಕೆ ಮಾಡಿಕೊಂಡಿರುವ ಭಾಷಾಂತರರೂಪ ಇರಬಹುದು. [ಮಧ್ಯ + ಅಂತರ]

**ಮಧ್ಯಂದಿನ** (ನಾ). ೧. ಹಗಲಿನ ಮಧ್ಯಭಾಗ: ಮಧ್ಯಾಹ್ನ: ಯುವರಾಜಂ . . . ಮಧ್ಯಂದಿನಸಮಯ ಸಂತಪ್ತತಪನಮಂಡಲಮಂ ನೋಡಿ (ಶಾಂತಿಪು. ೬-೬ ವ); ಆಗಡೆ ಪೂರ್ಣೆತ್ತಲ್ಲಿ ಮಧ್ಯಂದಿನಸಮಯ ಸಮುದ್ಭೂತಶಂಖಿಪ್ರಣಾದಂ (ಕಾದಂಪು. ೬೬); ಮಧ್ಯಂದಿನದ ಬಿಸಿಲೆ ಬೆಳ್ದಿಂಗಳಂತಾಗೆ (ಹಂಪಾಪಾ. ೨-೦೯). ೨. ನಡುವೆ ಇರುವಂಥದು; ಮಧ್ಯಸ್ಥವಾದುದು: "ಮಧ್ಯಮಂ, ಮಧ್ಯಮಿಾಯಂ, ಮಧ್ಯಂದಿನಂ— ಈ ೩ ನಡುವಣದು" (ಹಲಾಯು. ೦೨೭-೯೦). [ಸಂ.]

**ಮಧ್ಯಕ** (ನಾ). ಸಾಮೂಹಿಕ ಸ್ವತ್ತು; ಉಭಯಸಾಮಾನ್ಯವಾದುದು: ಮೂಡಲು ಮಧ್ಯಕದಂಗಡಿಯ (ಎಂಕಶಾ. ೦೯೩೦. ಬಾಗೆವಾಡಿ. ೧೦೩-೯೯; 1165). 'ಮಂದ್ದಿಕ' ಪರಾ. [ಸಂ.]

**ಮಧ್ಯಗ** (ಗು). ನಡುವೆ ಇರುವ; ಮಧ್ಯಸ್ಥವಾದ. [ಸಂ.]

**ಮಧ್ಯಗತ** (ಗು). ೧. = ಮಧ್ಯಗ: ಸಮಾಸಂ ನೆಗಟ್ಟುಂ ನೆಜೆ ಪೋಕುಂ ಮಧ್ಯಗತವಿಭಕ್ತಿಗಳವಜೆಸೊಳ್ (ಶಮದ. ೦೬೨). (ನಾ). ೨. ತೀರ ಹತ್ತಿರವೂ ಅಲ್ಲದ, ಬಹಳ ದೂರವೂ ಅಲ್ಲದ ಸ್ಥಳದಲ್ಲಿರುವವನು: ಬರಲು ಕಂಡಡೆ ವಂದಿಸುತಲೀತರಿಸಿ ದಿಗೆ ಹತ್ತಿರವೆನಿಸದತಿ ತರವ ದೂರವ ಸಾರದೀ ಪರಿ ಮಧ್ಯಗತನೆನಿಸಿ . . . ಬೆಸಸಿದನರದಾಂಸದಾಜ್ಞೆಗೆ ಮಾಡುವ ನವನೆ ಸೇವಕನು (ಕುಸುಮಾಂ. ೩-೦೦೬). [ಸಂ.]

**ಮಧ್ಯಗತಿ** (ನಾ). ಮಧ್ಯಮವಾದ ವೇಗ: ತೀವ್ರವೂ ಅಲ್ಲದ, ನಿಧಾನವೂ ಅಲ್ಲದ ವೇಗ: ಏತ್ತಕ್ಕೆ ಹಗರಿರುಳು ಮಧ್ಯಗತಿಯಲ್ಲಿಯೂ ತೆಗೆದುಕೊಂಡಾಹಾರವು ಜೀರ್ಣವಾಗುವುದು (ಕಸಪ್ತ. ೦೩). [ಸಂ].

**ಮಧ್ಯತ್ರಾಣ** (ನಾ). ಶರೀರದ ಮಧ್ಯಭಾಗವನ್ನು (ಸೊಂಟವನ್ನು) ರಕ್ಷಿಸುವ ಕವಚ: ಬಿಲ್ಲು ತೀರು . . . ಕರತ್ರಾಣ, ಶಿರಸ್ತ್ರಾಣ, ಪದತ್ರಾಣ . . . ಮೊದಲಾದ ಶತ್ರುಜಯಾತ್ಮರಕ್ಷಾದಿ ಸಾಧನವಿಶೇಷಂಗಳಿಂದಲುಂ (ಬಿವೀಳ. ೨೬೨). [ಸಂ.]

**ಮಧ್ಯದೇಶ** (ನಾ). ೧. ಮಧ್ಯದಲ್ಲಿರುವ ಪ್ರದೇಶ: ನಡುವಿನ ಜಾಗ. ೨. ಸೊಂಟ; ನಡು. ೩. ಹೊಟ್ಟೆ; ಉದರ. ೪. ಆಕಾಶದ ನಟ್ಟನಡುವಿನ ಭಾಗ,—ನಡುನೆತ್ತಿ. ೫. ಭರತಖಂಡದ ನಟ್ಟನಡುವಿನ ಭಾಗ; ಹಿಮಾಲಯ ಮತ್ತು ವಿಂಧ್ಯಪರ್ವತಗಳ ನಡುವಿನ ಪ್ರದೇಶ: ಮಧ್ಯದೇಶನೇತ್ರ ದುರ್ಧರಶೌರ್ಯವರ್ಧನ ಪರಾಕು (ಹಾರಕಂ. ೩-೦ ವ). [ಸಂ.]

**ಮಧ್ಯನಾಡಿ** (ನಾ). ದೇಹದಲ್ಲಿರುವ ಹನ್ನೆರಡು ನಾಡಿಗಳಲ್ಲಿ ಒಂದು: ಮಧ್ಯನಾಡಿಯಲ್ಲಿ ಗೋವಿಂದ (ಕಸಾರ. ೬-೦೯ ತಾತ್ಪರ್ಯ). [ಸಂ. ಮಧ್ಯನಾಡೀ]

**ಮಧ್ಯನಾಡಿಕೆ** (ನಾ). = ಮಧ್ಯನಾಡಿ: ಮಹಾಸುಖಸಂಶ್ರಯ ಮಧ್ಯನಾಡಿಕಾ ವಿವರ ಮೃತಪ್ರವಾಹದಮನೆ ಪೀರ್ವ ವಿಳಾಸಮಂಬಮಾತನೊಳ್ (ಶಬಶಂ. ೨-೯೭). [ಸಂ. ಮಧ್ಯನಾಡಿಕಾ]

**ಮಧ್ಯಪ್ರಾಚ್ಯ** (ನಾ). ಅರಬ್ಬೀಗಣರಾಜ್ಯವೇ ಮೊದಲಾದ ದೇಶಗಳುಳ್ಳ ಪ್ರದೇಶ: ಪಾಶ್ಚಾತ್ಯದೇಶಗಳ ದೃಷ್ಟಿಯಿಂದ ಪೂರ್ವಕ್ಕೆ ಇರುವ ದೇಶಗಳೆಲ್ಲ ಪ್ರಾಚ್ಯ (Middle-east. ಶಕ್ತಿ.೩. ೫೫). [ಸಂ.]

**ಮಧ್ಯಬಿಂದು** (ನಾ). ೧. ಕೇಂದ್ರಭಾಗ: ಮಧ್ಯಬಿಂದು ಬೀಸಿದ ಕರಗೆ ಓಗೊಟ್ಟು ಅವರ ಕಡೆಗೆ ಧಾವಿಸುವ ಬಯಕೆ (ಬಕಶೀ. ೦೫೯). ೨. [ರೇಖಾಗ] ವರ್ತುಳದ ಕೇಂದ್ರಬಿಂದು; ತ್ರಿಜ್ಯಗಳೆಲ್ಲ ಕೂಡಿಕೊಳ್ಳುವ ಬಿಂದು: ವಿಶ್ವದೀ ವರ್ತುಳದ ಮಧ್ಯಬಿಂದುವಿನಲ್ಲಿ . . . ಸೂರುತೇಜದ ಗೋಲ ತಿರುಗುತಿವೆ ಪರಿಧಿದರಿ ಊರುಗೋಲಿಗೆ ಸಾಕ್ಷಿ ನಕ್ಷತ್ರವೀಧಿ (ಶಿಂಮು. ೨೦-೨೦). [ಸಂ.]

**ಮಧ್ಯಮ** (ಗು). ೧. ನಡುವೆ ಇರುವ; ನಡುವಿನ; ಮಧ್ಯಸ್ಥವಾದ: ತದ್ಗಿರಿಂದ್ರ ಮಧ್ಯಮಕೂಟದಿಂದಂ ಸಮುತ್ತ ತೆಂಕಮೊಗದೆ ಬಂದು (ಆದಿಪು. ೦೩-೬೮ ವ). ೨. ಎರಡರ ನಡುವೆ ಬರುವ. ೩. ನಡುತರದ: ಉತ್ತಮವೂ ಅಲ್ಲದ ಅಥವಾ ಕೀಳೂ ಅಲ್ಲದ. ೪. ಮಧ್ಯಗಾತ್ರದ; ತೀರ ದಪ್ಪವೂ ಅಲ್ಲದ ಅಥವಾ ತೀರ ತೆಳುವೂ ಅಲ್ಲದ. ೫. ಯಾವ ಪಕ್ಷಕ್ಕೂ ಸೇರದ. (ನಾ). ೬. ದೇಹದ ಮಧ್ಯಭಾಗ; ನಡು; ಸೊಂಟ: "ಅವಲಗ್ನಂ, (ವಿ)ಲಗ್ನಂ, ಮಧ್ಯಂ, ಮಧ್ಯಮಂ—ಈ ೪ ನಡು" (ಹಲಾಯು. ೮೫-೩೬೩). ೭. ನಡುವೆ ಇರುವುದು; ನಡುವಿನದು: "ಮಧ್ಯಮಂ, ಮಧ್ಯಮಿಾಯಂ, ಮಧ್ಯಂದಿನಂ — ಈ ೩ ನಡುವಣದು" (ಹಲಾಯು. ೦೨೭-೯೦). ೮. ಉತ್ತಮವಲ್ಲದಿದ್ದರೂ ಕಳಪೆಯಲ್ಲವೆನಿಸಿದುದು: ಉತ್ತಮನೆಲಕ್ಕೆ ಪಣ ೨ ಮಧ್ಯಮಕ್ಕೆ ಪಣ ೧ (ಕಶಿಇ. XVIII, ೪೦-೦೭; ೧೧೦); ತಾ ಮಾಡುವುದು ಉತ್ತಮ, ಹೇಗ ಮಾಡುವುದು ಮಧ್ಯಮ, ಆಳು ಮಾಡುವುದು ಹಾಳು (ಜಕೋಶಂ. VIII, ೭); ಉತ್ತಮವಾದುವು ಹರೆಯದ ದಿನಗಳು . . . ಮುಂದಿನ ದಿನಗಳು ಮಧ್ಯಮಾಧಮಗಳು (೨೦ಶಾಕ. ೨೦೨-೪೯). ೯. ಕುಂತೀಪುತ್ರರಲ್ಲಿ ನಡುವಿನವನು; ಭೀಮಸೇನ: ಮಧ್ಯಮನೆಂದರೆ ಪಾಂಡವರಲ್ಲಿ—ಕೌಂತೇಯರಲ್ಲಿ—ಮಧ್ಯಮ. ಭೀಮ (ಸಂಪಾಲಿ. ೯೩). ೧೦. ಮಾಂಡಲಿಕ; ಮಂಡಲಾಧಿಪತಿ: "ಮಧ್ಯಮಂ, ಮಂಡಳೇಶ್ವರಂ— ಈ ೨ ಮಂಡಳಿಕಂ" (ಹಲಾಯು. ೭೦-೨೬೬). ೧೧. [ಸಂಗೀತ] ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದವೆಂಬ ಏಳುಸ್ವರಗಳಲ್ಲಿ ನಾಲ್ಕನೆಯ ಸ್ವರ: ಷಡ್ಜವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಂಗಳೆಂಬ ಸಪ್ತಸ್ವರಮುಮಂ (ಆದಿಪು. ೩-೨೬ ವ). ೧೨. ಮಂದ್ರ, ಮಧ್ಯಮ ಮತ್ತು ತಾರಗಳೆಂಬ ಮೂರು ಬಗೆಯ ಸ್ಥಾಯಿಗಳಲ್ಲಿ ಒಂದು: ಮಂದ್ರ ಮಧ್ಯಮ ತಾರ ಸ್ವರಗರ್ಭ . . . ಪರಾಕು (ಹಾರಕಂ. ೩-೧ ವ). ೧೩. ಷಡ್ಜ, ಮಧ್ಯಮ, ಗಾಂಧಾರಗಳೆಂಬ ಮೂರು ಬಗೆಯ ಗ್ರಾಮಗಳಲ್ಲಿ ಒಂದು: ಷಡ್ಜ ಮಧ್ಯಮ ಗ್ರಾಮಗಳೂ ಅವುಗಳಿಂದ ಉದ್ಭವವಾದ ರಾಗಪದ್ಧತಿಯ ಪೂರ್ವರೂಪವಾದ ಜಾತಿಗಳು . . . ಇವುಗಳನ್ನೆಲ್ಲಾ ವಿವರಿಸಿದ್ದಾನೆ (ಬಾರತ. ೫೩೬). 'ಮಧ್ಯಮಗ್ರಾಮ' ಪರಾ. [ಸಂ.]

**ಮಧ್ಯಮಗಾಂಧಾರಿ** (ನಾ). [ಸಂಗೀತ] ಒಂದು ರಾಗದ ಹೆಸರು : **ಗಾಂಧಾರಿ ರಕ್ತಗಾಂಧಾರಿ** ಮಧ್ಯಮಗಾಂಧಾರಿ . . . **ಕೌಶಿಕಿಯೆಂಬ ಪತ್ತೇ** ಮಧ್ಯಮಗ್ರಾಮದಿಂದಾದ ರಾಗಂಗಳು (ಶಿವೇಕ. ೦೫೭). [ಸಂ. ಮಧ್ಯಮಗಾಂಧಾರೀ]

**ಮಧ್ಯಮಗ್ರಾಮ** (ನಾ). [ಸಂಗೀತ] ಷಡ್ಜ, ಮಧ್ಯಮ, ಗಾಂಧಾರ ಗಳೆಂಬ ಮೂರು ಬಗೆಯ **ಗ್ರಾಮಗಳಲ್ಲಿ ಒಂದು** : **ಆ ರಾಗೋತ್ಪತ್ತಿಗೆ** ಷಡ್ಜಗ್ರಾಮಂ ಮಧ್ಯಮಗ್ರಾಮಂ ಗಾಂಧಾರಗ್ರಾಮಮೆಂಬ ಗ್ರಾಮತ್ರಯಂ ಗಳುಂಟು (ಶಿವೇಕ. ೦೫೭). [ಸಂ.]

**ಮಧ್ಯಮಜ್ವರ** (ನಾ). ಜ್ವರಗಳಲ್ಲಿ ಒಂದು ಪ್ರಕಾರ; ಹತ್ತು ರಾತ್ರಿಗಳ ವರೆಗೆ ಮುಂದುವರಿಯುವ ಜ್ವರ : ಏಳುರಾತ್ರಿಪರ್ಯಂತರ ತರುಣ ಜ್ವರವೆನಿಸಿಕೊಂಬುದು. ಹತ್ತುರಾತ್ರಿಪರ್ಯಂತರ ಮಧ್ಯಮಜ್ವರವೆನಿಸಿ ಕೊಂಬುದು. ಅದರ ಮೇಲೆ ಪುರಾಣಜ್ವರವೆನಿಸಿಕೊಂಬುದು (ವೈದ್ಯಸಾ. ೧, ೫೩). [ಸಂ.]

**ಮಧ್ಯಮಣಿನ್ಯಾಯ** (ನಾ). [ತರ್ಕಶಾ] ಲೌಕಿಕನ್ಯಾಯಗಳಲ್ಲಿ ಒಂದು ; ಹಾರದ ಮಧ್ಯದಲ್ಲಿರುವ ಮಣಿಯು ಹಾರದ ಎರಡು ಭಾಗಗಳಿಗೂ ಶೋಭೆಯನ್ನು ಉಂಟುಮಾಡುವಂತೆ ಮಧ್ಯದಲ್ಲಿರುವ ಒಂದು ಪದವು ಹಿಂದಿನ ಹಾಗೂ ಮುಂದಿನ ವಾಕ್ಯ ಅಥವಾ ವಾಕ್ಯಾಂಶಕ್ಕೆ ಅನ್ವಯಿಸುವುದು : " ಧರ್ಮಾಬ್ರಹ್ಮಜಿಜ್ಞಾಸಯೋಃ " ಎಂಬುದು ಮಧ್ಯಮಣಿನ್ಯಾಯದಿಂದ ಹಿಂದಿನ ವಾಕ್ಯಕ್ಕೂ ಈ ವಾಕ್ಯಕ್ಕೂ ಅನ್ವ ಯಿಸುವ ಹಾಗಿದೆ (ಬ್ರಸ್ಯಭಾ. ೦೦ ೪೩೭). [ಸಂ.]

**ಮಧ್ಯಮತನು** (ನಾ). ೧. ಸ್ಥೂಲವಲ್ಲದ, ಕೃಶವಲ್ಲದ, ಮಧ್ಯಮ ಗಾತ್ರದ ದೇಹ. ೨. ಸ್ಥೂಲತೆ, ಕೃಶತೆಗಳಿಲ್ಲದ ನಡುವಿನ ಗಾತ್ರದ **ದೇಹವುಳ್ಳವನು** : ಮೃದುಮಧ್ಯಮತನು ಹಿತಮಿತಮೃದುವಚನಂ **ಲಲಿತಮಧುರಸುಂದರವೇಷಂ** (ಅಂಪು. ೦-೨೯). [ಸಂ.]

**ಮಧ್ಯಮತ್ವ** (ನಾ). ಉತ್ತಮ ಮತ್ತು ನೀಚಗುಣಗಳ ಮಧ್ಯದ ಗುಣ: ಎಲ್ಲರ ಬೇಗಮಂತದಂ ಕರದಿರದೀವುದುತ್ತಮತೆ ಬೇಡಿದೊಡೀವುದು ಮಧ್ಯಮತ್ವಮೆಯ್ದುರೆ ತದಧೀಶ್ವರಂ ಬಟಾಕಮಂತವನೀವುದು ನೀಚವೃತ್ತಿ (ತಂಪ್ರಕಿ. ೯-೦೦೪). [ಸಂ.]

**ಮಧ್ಯಮಪಾಂಡವ** (ನಾ). ಪಾಂಡುರಾಜನ ಐವರು ಮಕ್ಕಳಲ್ಲಿ ನಡುವಿನವನು ; **ಅರ್ಜುನ** : ಜನರು ಇವನೇ 'ಮಧ್ಯಮಪಾಂಡವ' ಎಂದರು ; ಮಹೇಂದ್ರನ ಮಗ ಎಂದರು (ಪಶಭಾ. ೨೩). [ಸಂ.]

**ಮಧ್ಯಮಪಾತ್ರ** (ನಾ). ೧. [ಕಾವ್ಯಮಿಾ] ರೂಪಕಗಳಲ್ಲಿ ಬರುವ **ಉತ್ತಮ**, ಮಧ್ಯಮ, ನೀಚ ಎಂಬ **ಮೂರುಬಗೆಯ ಪಾತ್ರಗಳಲ್ಲಿ ಒಂದು** ; **ಪುರೋಹಿತ, ಮಂತ್ರಿ ಮೊದಲಾದ ಪಾತ್ರ** : ನಡೆದು **ಹೋದ** ಮತ್ತು ಮುಂದೆ ನಡೆಯುವ **ಕಥಾಂಶಗಳನ್ನು** ಮಧ್ಯಮಪಾತ್ರಗಳ ಮೂಲಕ ಸಂಕ್ಷೇಪವಾಗಿ ಸೂಚಿಸುವುದು, ಇದೇ 'ಶುದ್ಧವಿಷ್ಕಂಭ'. ಮಧ್ಯಮಪಾತ್ರಗಳೂ ನೀಚಪಾತ್ರಗಳೂ ಸೇರಿ ಸೂಚಿಸಿದರೆ ಅದಕ್ಕೆ 'ಸಂಕೀರ್ಣವಿಷ್ಕಂಭ' ಅಥವಾ 'ಮಿಶ್ರವಿಷ್ಕಂಭ' ವೆಂದು ಹೆಸರು (ಕ್ಷಶಾ.೨೦೩). ೨. [ಜೈನ] ದಾನವನ್ನು ಸ್ವೀಕರಿಸಲು ಯೋಗ್ಯವಾದ ಉತ್ತಮ, **ಮಧ್ಯಮ** ಮತ್ತು ಜಘನ್ಯವೆಂಬ ಮೂರುವರ್ಗಗಳಲ್ಲಿ ಒಂದು ಮತ್ತು **ಆ ವರ್ಗಕ್ಕೆ ಸೇರಿದ ವ್ಯಕ್ತಿ** : ಪಾತ್ರಮುತ್ತಮ ಮಧ್ಯಮ ಜಘನ್ಯಭೇದದಿಂ ತ್ರಿವಿಧಮಕ್ಕುಮಲ್ಲಿ ದರ್ಶನವಿರುದ್ಧನುಂ ಶೀಲಸಂಪನ್ನ ನುಮಪ್ಪ ಸಂಯತನುತ್ತಮಪಾತ್ರಂ ಶ್ರೀಸಮ್ಯಗ್ದರ್ಶನವಿಶುದ್ಧನುಮಣು **ವ್ರತಧಾರಿಯುಮಪ್ಪ** ಶ್ರಾವಕಂ ಮಧ್ಯಮಪಾತ್ರಂ (ಅಂಪು. ೦೦-೯ ವ). [ಸಂ.]

**ಮಧ್ಯಮಪುರುಷ** (ನಾ). [ವ್ಯಾಕ] ಪ್ರಥಮ, ಮಧ್ಯಮ ಮತ್ತು **ಉತ್ತಮಗಳೆಂಬ** ಮೂರುಬಗೆಯ ಸರ್ವನಾಮಗಳಲ್ಲಿ ಒಂದು ; ನೀನು, ನೀವು ಎಂಬ ಸರ್ವನಾಮಗಳು ; ಯುಂಗಪದುಕ್ತಿಗುತ್ತಮ ಪುರುಷಂ ಪರಮುದನುಬುದಿರೆ ಮಧ್ಯಮಪುರುಷಂ (ಶಶಮ. ೨೨೩) : ನೀನು, ನೀವು ಎಂಬುವು . . . ಮಧ್ಯಮಪುರುಷಸರ್ವನಾಮಗಳು (ಮಧ್ಯಮ. ೨೯). [ಸಂ.]

**ಮಧ್ಯಮಬೀಸಿಗೆ, ಮದ್ದಿಮಬಿಸಿಗೆ, ಮಂದ್ಯಮಬಿಸಿಗೆ** (ನಾ). **ಸರ್ವಜಿತು** ಸಂವತ್ಸರದಿಂದ ಪರಾಭವಸಂವತ್ಸರದ ವರೆಗೆ ಇರುವ ಇಪ್ಪತ್ತು ವರ್ಷಗಳ ಅವಧಿ ; ಅರುವತ್ತುಸಂವತ್ಸರಗಳಲ್ಲಿ ಮಧ್ಯದ ಇಪ್ಪತ್ತು ಸಂವತ್ಸರಗಳ ಅವಧಿ : ಶಾಲಿವಾಹನ ಶಕವರುಷ ಸಾ ೧೫೭೪ ಕಲಿವರುಷ ಸಾ ೪೭೫೩ ಮಧ್ಯಮಬೀಸಿಗೆ ಸಂವಸ್ಸರ ನಂದನಸಂವಸ್ಸರದ ಮಾಘ ಶುಧ ೫ ಭಾನುವಾರದಲ್ಲು (ಎಕ. XI. ಹಿತ್ತಿದು. ೬೪-೫; 1653). **ಮದ್ದಿಮಬಿಸಿಗೆ:** ಮೆಷೋಜನ ಕಟಿಯ ಹಿಂದೆ ಕಂ ೮೫ ಸಕವರುಸದ ಮದ್ದಿಮಬಿಸಿಗೆಯ ಸುಭ[ಕ್ರಿತು]ಸಂವತ್ಸರ (ಎಕ. XVI. ತಕ್ಷಶಾ. ೬೨-೫೭ ; 1202). **P ಈ** ಶಾಸನದಲ್ಲಿ ಬಂದಿರುವ 'ಬಸಿಗೆ' ಎಂಬುದು **'ಬಿಸಿಗೆ'** ಎಂಬುದರ **ಅಪಲಿಖಿತ. ಮದ್ಯಮಬಿಸಿಗೆ :** ಶಾಲಿವಾಹನಶಕೆಯಲಿ ೧೫೮೨ ವರುಷದ ಮೇಲೆ ನಡವ ಮದ್ಯಮಬಿಸಿಗೆಯಲಿ ಪ್ಲವಸಂವತ್ಸರದ ಭಾದ್ರಪದ ಶುಧ ೨ ಲೂ (ಎಕ. IX (N). ತನ್ನಕ. ೬೮-೩ ; 1660). 'ಅಧಮಬೀಸಿಗೆ' ಪರಾ. [ ಮಧ್ಯಮ + ಬೀಸಿಗೆ₃ (< ಬೀಸಗೆ) ]

**ಮಧ್ಯಮವರ್ತಿ** (ಗು). ೧. ನಡುವೆ ಇರುವ ; ಮಧ್ಯದಲ್ಲಿರುವ. (ನಾ). ೨. ನಡುವೆ ಇರುವುದು : ಶಚೀಮಹಾದೇವಿಯುಂ **ಲೋಕಪಾಲರುಂ** . . . ಅಮ್ಬುಗಂಡತ್ತರಗಳೊಳ್ ಮಧ್ಯಮವರ್ತಿಯಪ್ಪ **ಸರ್ವಾರ್ಥಸಿದ್ಧಿ**ಮಹಮಿಂದ್ರರುಂ (ಶಾಂತಿಪು. ೦೨-೯೩೭). [ಸಂ. ಮಧ್ಯಮವರ್ತಿನ್]

**ಮಧ್ಯಮಾವತಿ** (ನಾ). [ಸಂಗೀತ] ಒಂದು ರಾಗದ ಹೆಸರು : ರಾಮಕ್ರಿ . . . ಮಧ್ಯಮಾವತಿಯೆಂಬ ಮೂವತ್ತಾಱುರಾಗಂಗಳೇ ಮುಖ್ಯ ವಾಗಿ . . . ಪ್ರಸಿದ್ಧಿಗೊಂಡಿರ್ಪವು (ಶಿವೇಕ. ೨೫೯) ; ಮಧ್ಯಮಾವತಿ:- ೨೮ನೇ ಮೇಳಕರ್ತ ಹರಿಕಾಂಭೋಜಿಯ ಜನ್ಯ . . . ಉಪಾಂಗರಾಗ, ಔಡವರಾಗ, ಸಕಲಸನ್ನಂಗಳಪ್ರದರಾಗ (ಸಂಗೀತಂ. ೮೯೩). [ಸಂ. ಮಧ್ಯಮಾವತೀ ]

**ಮಧ್ಯಮಿಾಯ** (ಗು). ೧. ನಡುವಿನ ; ಮಧ್ಯದಲ್ಲಿರುವ. (ನಾ). ೨. ನಡುಭಾಗ ; ಮಧ್ಯಭಾಗ ; ಮಧ್ಯ : " ಮಧ್ಯಮಿಾಯಮೆನೆ ಮಧ್ಯಮೆನೆ ನಡುವಕ್ಕುಂ " (ಶಬ್ದಗಣ. ೦೫೩-೬೮). [ಸಂ.]

**ಮಧ್ಯಮೆ** (ನಾ). ೧. ನಡುಬೆರಳು ; ಮಧ್ಯದ ಬೆರಳು : "ಮಧ್ಯಮಾ-ನಡುಬೆರಳು " (ಸಿದ್ಧಾಂಚಿ. ೦೯೩). ೨. ವಿವಾಹಯೋಗ್ಯಳಾದ ಹೆಣ್ಣು ; ಪ್ರಾಯಸ್ಥೆ ; ಮೈನೆರೆದ ಹೆಣ್ಣು : " ಮಧ್ಯಮಾ, ದೃಷ್ಟರಜಾಃ — ೨ ಹೊಸದಾಗಿ ಮೈನೆರೆದ ಹುಡುಗಿಯ ಹೆಸರುಗಳು " (ಸಿದ್ಧಾಂ೦ಚಿ. ೦೬೯); ಕನ್ನಿಕೆಯುರ್ ಮಧ್ಯಮೆಯುರ್ ಸನ್ನುತಸುಕುಮಾರಿಯುರತಿತರುಣೀನಿವಹಂ ಸನ್ನಿಯೊಳರಸನ ಸಂಗಡಮುನ್ನತಜಲಕೇಳಿಗೆಂದು ನಿಂದರ್ ಕ್ರಮದಿಂ (ಹರಿವಂ. ೯-೨೦). ೩. ತಾವರೆಯ ಬೀಜಕೋಶ. ೪. ಮೂಲಾಧಾರ ದಿಂದ ಹುಟ್ಟುವ ನಾದರೂಪವರ್ಣಕ್ಕೆ ಅರ್ಥಬೋಧಕ ಶಬ್ದನಿಷ್ಪತ್ತಿಯ ವರೆಗೆ ಉಂಟಾಗುವ ನಾಲ್ಕುಸ್ಥಿತಿಗಳಲ್ಲಿ ಮೂರನೆಯದು : ಪರೆ, ಪಶ್ಯಂತಿ, ಮಧ್ಯಮೆ, ವೈಖರಿಗಳು ಶಬ್ದಚತುಷ್ಟಯಗಳು (ಶಿವಾಕೋ. ೦೫೩-೨೯೦). ೫. [ಕಾವ್ಯಮಿಾ] (**ಕೋಪ** ಅಥವಾ ಪ್ರಸನ್ನತೆಗಳ ವಿಷಯದಲ್ಲಿ) ಉತ್ತಮೆ, ಮಧ್ಯಮೆ ಹಾಗೂ ಅಧಮ ಅಥವಾ ಜಘನೆ ಎಂಬ ಮೂರುವಿಧವಾದ ನಾಯಿಕೆಯರಲ್ಲಿ ಎರಡನೆಯವಳು : ಉತ್ತಮೆ ಮಧ್ಯಮೆ ಜಘನೆಯರೆಂಬ ತ್ರಿವಿಧಕೋಪಪ್ರಸಾದಲಕ್ಷಣಲಕ್ಷಿತ

ಲಲನೆಯರಿಂ (ಚಿನೀ. ೩೨೬). ೬. [ಕಾಮಶಾ] ರತಿಭೇದ ದೃಷ್ಟಿಯಿಂದ ವಿಂಗಡಿಸಿದ ಮೂರುಬಗೆಯ ಸ್ತ್ರೀವರ್ಗಗಳಲ್ಲಿ ಒಂದು ವರ್ಗಕ್ಕೆ ಸೇರಿದವಳು : ಸುರತದಲ್ಲಿ ಮಧ್ಯಮವಾದ ವೇಗಾಸಕ್ತಿಯುಳ್ಳವಳು: ಮಧ್ಯವೇಗಿನಿ : ಪೊಂಬಣ್ಣ ಮೊಲೆ ಪಲ್ಲು ಉಗುರು ಕಂಗಳು ದೊಡ್ಡಿತ್ತಾದವಳು . . . ಇವಳು ಪಿತ್ತಪ್ರಕೃತಿಯವಳು ಮಧ್ಯಮೆ (ಶಾಮುಕಾ. ೨೦೩). ೭. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರುಬಗೆಯ ಛಂದಸ್ಸುಗಳಲ್ಲಿ ಮೂರನೆಯದು : ಅಲ್ಲಿ ಉಕ್ತೆ ಅತ್ಯುಕ್ತೆ ಮಧ್ಯಮೆ[ಪಾಠಾಂ. ಮಧ್ಯೆ] . . . ಎಂದಿಪ್ಪತ್ತಾಱುಂ ಛಂದಂಗಳಕ್ಕುಂ (ಛಂದೋಂಬು. ೦-೯೩ ವ). [ಸಂ. ಮಧ್ಯಮಾ]

**ಮಧ್ಯರಾತ್ರಿ** (ನಾ). ನಡುರಾತ್ರಿ : ನಟ್ಟಿರುಳು : "ಅರ್ಧರಾತ್ರ ನಿಶೀಥೆಯೆನೆ ಮಧ್ಯರಾತ್ರಿ [ಪಾಠಾಂ. ತ್ರೆ]ಯುಕ್ಕುಂ" (ಮಂಗರಾ. ೨೦-೬) ; ಮಧ್ಯರಾತ್ರಿಯಾಗುವಾಗ ಎಲ್ಲರ ಮುಖಗಳು ಸಂಜೆಮಲ್ಲಿಗೆಯಂತೆ ಅರಳಿದ್ದವು (ಮರಳು. ೩೦೦). [ಸಂ.]

**ಮಧ್ಯಲೋಕ** (ನಾ). ಊರ್ಧ್ವ, ಮಧ್ಯ ಮತ್ತು ಅಧೋಲೋಕಗಳೆಂಬ ಮೂರುಲೋಕಗಳ ನಡುವಿನ ಲೋಕ : ಮರ್ತ್ಯಲೋಕ; ಭೂಮಿ : ನೆಲಸಿರ್ದಪ್ಪುದಧಸ್ಥಳಂಬಿಡಿದಧೋಲೋಕಂ ಸಮುಂತೆಯ್ದೆ ಸುತ್ತಲುಮಿರ್ದಪ್ಪುದು ಮಧ್ಯಲೋಕಮೆಸೆದಿರ್ದಾ ಚೂಳಿಕಾಭಾಗದಾದಲಿಯೊಳ್ ನಿಂದಪುದೂರ್ಧ್ವಲೋಕಂ (ಅಜಪು. ೦-೫೦). [ಸಂ.]

**ಮಧ್ಯವರ್ತಿ** (ಗು). ೧. ನಡುವೆ ಇರುವ : ಮಧ್ಯದಲ್ಲಿರುವ : ಸುರಪರಿಷನ್ಮಧ್ಯವರ್ತಿ ಸುಧರ್ಮೇಂದ್ರಂ ಧರ್ಮನಿರೂಪಣಪ್ರವಣನಿಂತೆಂದು (ಶಂಕಾಪು. ೦೬-೯೩ ವ); ಶ್ರೀಕಾಂತ – ಕಾಮಿನಿಯರು ನನ್ನ ಗತಜೀವನದ ಮಧ್ಯವರ್ತಿ ಬಿಂದುಗಳು (ಮುಕ್ತಿ. ೬). (ನಾ). ೨. ಮಾಧ್ಯಮ : ಅನಾದೃಶವಾದ ಸಂಗೀತಮೇಳವೊಂದನ್ನೇ ಚಿತ್ರಕಲೆಯು ಮಧ್ಯವರ್ತಿಗೆ ಭಾಷಾಂತರಿಸಿದಂತಿದೆ (ಶಾರದ. ೩೨೩); ಶಬ್ದವು ಕಿವಿಗೆ ಕೇಳಬೇಕಾದರೆ ಎಲ್ಲಾದರೂ ಒಂದು ಕಡೆ ಉಂಟಾಗುವ ಸ್ಪಂದನಗಳನ್ನು ಕಿವಿಯ ಬಳಿಗೆ ತಲುಪಿಸಬಲ್ಲ ಮಧ್ಯವರ್ತಿಯೊಂದು (medium) ಅವಶ್ಯಕ (ಭೌತವಿ. ೦೦೩). ೩. ಇಬ್ಬರು ವ್ಯಕ್ತಿ ಅಥವಾ ಎರಡು ಪಕ್ಷಗಳ ನಡುವೆ ಸಂಬಂಧವನ್ನು ಕಲ್ಪಿಸಿ ವ್ಯವಹಾರ ಮಾಡುವವನು ; ದಲ್ಲಾಳಿ : ಮಧ್ಯವರ್ತಿಗಳನ್ನು ಕಡಮೆಮಾಡಿದರೆ ಅದರಿಂದ ರೈತನಿಗೆ ಬಹಳ ಪ್ರಯೋಜನವುಂಟು (ಪ್ರಪಮ. ೬೬). ೪. ವ್ಯವಹಾರ ತೀರ್ಪಿಗಾಗಿ ವಾದಿಪ್ರತಿವಾದಿಗಳ ಮಧ್ಯೆ ನಿಲ್ಲುವ ಪಂಚಾಯತದಾರ ; ಮಧ್ಯಸ್ಥ. [< ಸಂ. ಮಧ್ಯವರ್ತಿನ್]

**ಮಧ್ಯವೇಗ** (ನಾ). [ಕಾಮಶಾ] ರತಿಭೇದದೃಷ್ಟಿಯಿಂದ ವಿಂಗಡಿಸಿದ ಮೂರು ಪುರುಷವರ್ಗಗಳಲ್ಲಿ ಮಧ್ಯದ ವರ್ಗಕ್ಕೆ ಸೇರಿದವನು : ಸುರತದಲ್ಲಿ ಮಧ್ಯಮವಾದ ವೇಗಾಸಕ್ತಿಯುಳ್ಳವನು : ವೇಗಗತಿಯುಮಾಯ್ತು ಮಂದವೇಗ ಮಧ್ಯವೇಗ ಚಂಡವೇಗಮೆಂಬ ಪೆಸರು ಪುರುಷರಿಂಗೆ ಸುರತದೊಳ್ (ಜನವ. ೪-೯೬); ಕಾಮುಕಭೇದದಿಂ ಮಂದವೇಗ ಮಧ್ಯವೇಗ ಚಂಡವೇಗನೆಂದು ಪುರುಷರು ಮೂರುಪ್ರಕಾರ (ಕಾಮಶಾ. ೨೦೦). [ಸಂ.]

**ಮಧ್ಯವೇಗಿ** (ನಾ). = ಮಧ್ಯವೇಗಿನಿ : ತೂಗಿದಂದದಿಂದೆ ಮಂದವೇಗಿ ಮಧ್ಯವೇಗಿ ಚಂಡವೇಗಿಯೆಂಬುದಾಮದಜಲೆಯರ್ಗೆ ಸಲ್ಗಳ್ (ಜನವ. ೪-೩೬). [< ಸಂ. ಮಧ್ಯವೇಗಿನೀ]

**ಮಧ್ಯವೇಗಿನಿ** (ನಾ). [ಕಾಮಶಾ] ರತಿಭೇದದೃಷ್ಟಿಯಿಂದ ವಿಂಗಡಿಸಿದ ಮೂರು ಸ್ತ್ರೀವರ್ಗಗಳಲ್ಲಿ ಮಧ್ಯದ ವರ್ಗಕ್ಕೆ ಸೇರಿದವಳು ; ಸುರತದಲ್ಲಿ ಮಧ್ಯಮವಾದ ವೇಗಾಸಕ್ತಿಯುಳ್ಳವಳು : ಮಂದವೇಗಿನಿ ಮಧ್ಯವೇಗಿನಿ ಚಂಡವೇಗಿನಿ [ಪಾಠಾಂ. ಮಂದವೇಗಿ, ಮಧ್ಯವೇಗಿ, ಚಂಡವೇಗಿ] ಯುರೆಂಬ ರತಿಭೇದಕಾಂತೆಯರಿಂ (ಚಿನೀ. ೦೬೩). [ಸಂ. ಮಧ್ಯವೇಗಿನೀ]

**ಮಧ್ಯಸಂಚ** 'ಮಧ್ಯಸಂಚು' ನೋ.

**ಮಧ್ಯಸಂಚು**, ಮಧ್ಯಸಂಚ (ನಾ). ೧. [ಸಂಗೀತ] ವಾದ್ಯವಾದನದ ಬೆಡಗುಗಳಲ್ಲಿ ಒಂದು : ತಳಸಂಚು ಮಧ್ಯಸಂಚುಪ್ಪರದ ಸಂಚುಗಳನಳವಡಿಸಿ . . . ತಾಳಾನುಗತವಾಗಿ ಬಾಜಿಸುತೆ (ಶಬ್ದಾ. ೩-೫೪). ೨. [ನಾಟ್ಯ] ನೃತ್ಯವಿನ್ಯಾಸಗಳಲ್ಲಿ ಒಂದು : ತಳಸಂಚು ಮಧ್ಯಸಂಚುಪ್ಪರದ ಸಂಚು ಮಂಜುಳವಾಗೆ ನಿಡುಗಣ್ಣ ಥಳಿವಾಳವನಾಡಲು . . . ದೇಶಿಯನಾಡಿವಳು ಪರಪೆನಾಚಿ (ಶೌಂಡಪು. ೬-೦೦). **ಮಧ್ಯಸಂಚ** : ೩. ಖಡ್ಗಯುದ್ಧದ ಒಂದು ಪರಸೆ: ವಿಪಾಜಿ ತಳಸಂಚದೊಳು ಮೊನೆಯನು ತೋಜಿ . . . ಮಧ್ಯಸಂಚಕೆ ಸಿಲುಕಿ ಕೈಮಾಡಿ ಜಾಜಿ (ಕಂಸಾ.ಐ. ೯-೨೨). [ಮಧ್ಯ + ಸಂಚು₂]

**ಮಧ್ಯಸಂಧಿ** (ನಾ). [ವ್ಯಾಕ] ಪ್ರಕೃತಿ ಮತ್ತು ಪ್ರತ್ಯಯಗಳನ್ನು ಸೇರಿಸಿದಾಗ ಆಗುವ ಸಂಧಿ ; ಪದಮಧ್ಯಸಂಧಿ : ಮರವು, ಮರವನ್ನು ಎಂಬೀ ರೂಪಗಳ ಮಧ್ಯಸಂಧಿಯನ್ನು ಬೇರ್ಪಡಿಸುವಾಗ ಕೆಲವರು . . . "ವಕಾರಾಗಮ" . . . ಎನ್ನುವುದುಂಟು. ಇದು ಸರಿಯಲ್ಲ (ಸಂಕೋಶ. ೯೬). [ಸಂ.]

**ಮಧ್ಯಸಂಧ್ಯೆ** (ನಾ). ಹಗಲು ಹಾಗೂ ಇರುಳು ಎರಡರ ಸಂಧಿಕಾಲ ; ಮುಂಜಾವ ಮತ್ತು ಮುಸ್ಸಂಜೆ : "ಇರುಳ ಪಗಲೆರಡಱಡೆ ಮಧ್ಯಸಂಧ್ಯಾಖ್ಯೆಯಕ್ಕು" (ಮಂಗರಾ. ೨೦-೬). [ಸಂ. ಮಧ್ಯಸಂಧ್ಯಾ]

**ಮಧ್ಯಸ್ತ** (ನಾ). ವಾದಿ, ಪ್ರತಿವಾದಿಗಳ ನಡುವೆ ವ್ಯವಹರಿಸುವವನು : ಮಧ್ಯಸ್ತ ಪರಿಕಲ್ಪಿತ ಗ ೩ (ಪ್ರಕಾ. ೦೯೩೪. ೨೩-೦೫; 1403); ಮಧ್ಯಸ್ತ ಇಲ್ಲದ ಊರಲ್ಲಿ ಮಧ್ಯಾಹ್ನ ಇರಬಾರದು (ಗಾದೆ).

ಮಧ್ಯಸ್ತಮಾಡು = ರಾಜಿಮಾಡು : ಶೇಷಗಿರಿರಾಯನ ಮುಖಾಂತ್ರಾ ಮಧ್ಯಸ್ತಾ ಮಾಡಿ ಶೆರೆಬಿಡಿಸಿಕೊಂಡು (ಕೃಜಿಶ. ೨೩). [< ಸಂ. ಮಧ್ಯಸ್ಥ]

**ಮಧ್ಯಸ್ತಿಕೆ** (ನಾ). ಎರಡುಪಕ್ಷಗಳು ಅಥವಾ ಇಬ್ಬರು ವ್ಯಕ್ತಿಗಳ ನಡುವೆ ಸಂಧಾನಮಾಡುವುದು.– ವ್ಯವಹರಿಸುವುದು : ಮನಸ್ಸಿನ ಸಂಕಲ್ಪಕ್ಕಿಂತ ಬೇರೆಯಾದ ಪ್ರೇರಣಾಶಕ್ತಿಯು ಯಾವುದೋ ಒಂದು ರೀತಿ ಮಧ್ಯಸ್ತಿಕೆಯನ್ನು ವಹಿಸದಿದ್ದರೆ ನಮಗೆ ಕೆಲಸವು ತಿಳಿದಿದ್ದರೂ ಮಾಡಲಾರೆವು (ಶಾರದ. ೫೬೦); ಇದರಲ್ಲಿ ನನ್ನ ಮಧ್ಯಸ್ತಿಕೆ ಯಾಕೆ ಬೇಕೋ ಶಿವನೇ (ರಂಗಿರೋ. ೦೦೩). [ಮಧ್ಯಸ್ತ + – ಇಕೆ]

**ಮಧ್ಯಸ್ಥ** (ಗು). ೧. ಮಧ್ಯದಲ್ಲಿರುವ ; ನಡುವೆ ಇರುವ : ಮಧ್ಯಸ್ಥ ವಸ್ತುವಿನ ಸಹಾಯವಿಲ್ಲದೆ ನೇರವಾಗಿ ಸರ್ವತಂತ್ರಸಿದ್ಧಾಂತದಂತೆ ಪ್ರತ್ಯಕ್ಷ ಜ್ಞಾನ ಮಾಡಿಕೊಳ್ಳಬಹುದಾದರೆ, ವಿಚಾರಧಾರೆಯೆನ್ನುವುದು ಮನೋವಿಜ್ಞಾನದ ವಿಷಯವೇ ಸರಿ (ಕಲಾತ್ಮ. ೪೦). ೨. ಮಂದವಾದ; ಕ್ಷೀಣವಾದ. (ನಾ). ೩. ಯಾವ ಪಕ್ಷಕ್ಕೂ ಸೇರದವನು ; ತಟಸ್ಥ ; ಉದಾಸೀನ. ೪. ಮಧ್ಯದಲ್ಲಿ ನೆಲಸಿದವನು; ನಡುವೆ ನೆಲಸಿರುವವನು: ಮಹೀತಳಮಧ್ಯಸ್ಥನೆನಿಂತುಮಲ್ಲದೆಯುಮಿಂದ್ರಾವಾಸಮಂ ಮುಟ್ಟಿದಂ (ಸುಕುಮಾ. ೦-೬೩). ೫. ವಾದಿ, ಪ್ರತಿವಾದಿಗಳ ನಡುವೆ ವ್ಯವಹರಿಸುವವನು: ನ್ಯಾಯವಿಚಾರಣೆಯಲ್ಲಿ ಮಧ್ಯಸ್ಥನಾಗಿ ನಿಂತು ವಿಷಯಗಳನ್ನು ಮಂಡಿಸುವವನು (ಲಾಯರ್) (ಕುಳುವಾ. ೦೯೬). ೬. [ಜೈನ] "ಶ್ರೋತೃಲಕ್ಷಣ—ವಸ್ತುವಿಚಾರದಲ್ಲಿ ವಕ್ತೃ ಹೇಳಿದ ಮಾತಿನ ಗುಣದೋಷಗಳಲ್ಲಿ ಗುಣವನ್ನು ಮಾತ್ರ ಸ್ವೀಕರಿಸುವವನು" (ಕೃಶಕೋ. ೦೮೮) : ಮಧ್ಯಸ್ಥನೆಂಬೊಂ ವಸ್ತುವಿಚಾರದೊಳಾ ವಕ್ತೃ ಪೇಳ್ದ ಗುಣದೋಷಂಗಳೊಳು ದೋಷಮಂ ಕೊಂಡೆಸಗದೆ ಪತ್ತುವಿಟ್ಟು ಗುಣಮನೆ ಕೈಕೊಳ್ವೊಂ (ಶಾಂತಿಪು. ೬). [ಸಂ.]

**ಮಧ್ಯಸ್ಥಗಾರ** (ನಾ). ೧. ಯಾವಕಡೆಗೂ ಸೇರದೆ ನಿಷ್ಪಕ್ಷಪಾತವಾಗಿರುವವನು : ಭಾರತದ ಮುಖ್ಯನ್ಯಾಯಾಧಿಪತಿಯವರಿಂದ ನಿಯುಕ್ತರಾಗತಕ್ಕ ಮಧ್ಯಸ್ಥಗಾರರು ನಿರ್ಧರಿಸತಕ್ಕಂಥ ಅಂಶವಾಸವನ್ನು . . .

ಪಾವತಿಮಾಡತಕ್ಕುದು (ಶಾಶಾಪ. ೧೬೬). ೨. ಎರಡುಪಕ್ಷ ಅಥವಾ ವ್ಯಕ್ತಿಗಳ ನಡುವೆ ಇದ್ದು ಕೆಲಸಮಾಡುವವನು; ಮಧ್ಯವರ್ತಿ : ನನಗೆ ಈ ಮಧ್ಯಸ್ಥಗಾರನ ಕುತರ್ಕ ಸರಿಬೀಳಲಿಲ್ಲ (ಹಸುಸೂ. ೩೨೩).

[ಮಧ್ಯಸ್ಥ + – ಕಾರ$_1$ (<— ಕಾಱ)]

**ಮಧ್ಯಸ್ಥತೆ** (ನಾ). ಪಕ್ಷಪಾತವಿಲ್ಲದಿರುವಿಕೆ : ಪರಮಾರ್ಥಮಂ ಮಧ್ಯಸ್ಥತೆಯುಮಂ ಸವಧಾರಿಸುವಾಗಳ್ (ಶಾಂತಿಪು. ೪-೧೦೨೮). [ಸಂ. ಮಧ್ಯಸ್ಥತಾ]

**ಮಧ್ಯಸ್ಥಿಕೆ** (ನಾ). = ಮಧ್ಯಸ್ತಿಕೆ : ಎಲ್ಲರೂ ಕೂಡಿ ಆದೊಂದು ಮಧ್ಯಸ್ಥಿಕೆಯನ್ನು ಇಕ್ಕಡೆಯ ಒಪ್ಪಿಗೆಯಂತೆ ಮಾಡಿದರಂತೆ (ಬೀರಬಂ. ೦೯); ಈಗ ರಾಮಣ್ಣ ಅವರ ಮನೆಗೆ ಹೋದರೆ ನಾನೇ ಅವನನ್ನು ಮಧ್ಯಸ್ಥಿಕೆಗೆ ಕಳಿಸಿದನೆಂದು . . . ತಿಳಿದುಕೊಳ್ಳುತ್ತಾರೆ (ವ್ರಹಾಗ. ೩೩೦); ಜೈನದರ್ಶನವಾದರೆ ಇತರ ಯಾವ ಮಧ್ಯಸ್ಥಿಕೆಯೂ ಇಲ್ಲದೆ ಆತ್ಮನಿಗೆ ನೇರಾಗಿ ಲಭಿಸುವ ಜ್ಞಾನವನ್ನು ಮಾತ್ರ ಪ್ರತ್ಯಕ್ಷವೆಂದು ಹೇಳುತ್ತದೆ (ಕನ್ನಪ್ರಾ. ೦೪೮).

[ಮಧ್ಯಸ್ಥ + —ಇಕೆ]

**ಮಧ್ಯಾಜಿರ** (ನಾ). ನಡುವಿನ ಅಂಗಳ : ಭಾಸ್ವದ್ಭಿತ್ತಿಯುಂ ಸುತ್ತಿರೆ ಸುರುಚಿರಚಿತ್ರಂ ಹರಿದ್ರತ್ನಮಧ್ಯಾಜಿರಮುಂ ಮುಕ್ತಾವಲೀರಂಗವಲಿ ಬಳಸೆ . . . ಬೆಡಂಗಾದುದುತ್ತಾಲಹಗೇಹಂ (ಶಂಖಪೂ. ೫-೧೦೩). [ಸಂ.]

**ಮಧ್ಯಾಹ್ನ** (ನಾ). ಹಗಲಿನ ಮೂರುಭಾಗದಲ್ಲಿ ನಡುವಿನ ಕಾಲಾವಧಿ ; ನಡುಹಗಲು: ಮಧ್ಯಾಹ್ನಮಾಲಿಸಿತು ನಿಸ್ತಬ್ಧವಿಸ್ಮಯಭ್ರೂಮುದ್ರೆಯಿಂ (ಶ್ರೀರಾಮಾ. ೨೩೮-೨೬೩) ; ಒಂದುದಿನ ಬೆಳಗ್ಗೆ . . . ಒಂದುದಿನ ಮಧ್ಯಾಹ್ನಕ್ಕೆ ಹೀಗೆ ಅನಿಯಮಿತವಾಗಿ ಊಟ ಮಾಡಬಾರದು (ಮುಂಬಯಿ. ೪-೩೩).

ಮಧ್ಯಾಹ್ನ ಮಲ್ಲಿಗೆ = ಒಂದು ಬಗೆಯ ಮಲ್ಲಿಗೆಹೂವು ; ನಡುಹಗಲಿನಲ್ಲಿ ಹೂಬಿಡುವ ಮಲ್ಲಿಗೆಜಾತಿ : ಭಾಸ್ಕರಂ ನಡುವಣ ಮಣಿಕಳಶಕಳೆಯೊ, ಬಿಸಿಲಿನ ಬೇಗೆ ತವೆಯೆ, ಜುಂಯ್ಯನೆ ಗಾಳಿ ಬೀಸೆ. ಮಧ್ಯಾಹ್ನಮಲ್ಲಿಗೆಯರಳೆ (ಪ್ರೇಶಾಪ. ೬೪-೨೬೩). 'ಸಂಜೆಮಲ್ಲಿಗೆ' ನೋಡಿ. ಮಧ್ಯಾಹ್ನ ಮೀರು = ೧. ನಡುಹಗಲು ಕಳೆದುಹೋಗು ; ಸಂಜೆಯಾಗು : ಊಟವಾಗುವ ಹೊತ್ತಿಗೆ ಮಧ್ಯಾಹ್ನ ಮೀರಿತ್ತು (ಶೂಶಿ). ೨. (ಅಲಂ) ಪ್ರಾಯಕಳೆ ; ವಯಸ್ಸಾಗು : ಆಕೆಗೆ ಇದ್ದ ಒಬ್ಬನೇ ಒಬ್ಬ ಮಗನಿಗೂ ಮಧ್ಯಾಹ್ನ ಮೀರಿತ್ತು (ಶಿಳುವು. ೨೯). ಮಧ್ಯಾಹ್ನ ಸಾಗಿಸು = (ಅಲಂ) ಜೀವನೋಪಾಯಮಾಡು ; ಹೊಟ್ಟೆಹೊರೆ : ಪತ್ರಿಕಾರಿಯ ಉದ್ಯೋಗವನ್ನೇ ಮಾಡಿ ಮಧ್ಯಾಹ್ನ ಸಾಗಿಸಬೇಕೆಂಬ ಕನಿಷ್ಟ ಪ್ರವೃತ್ತಿಯ ಪ್ರಾಣಿಯೂ ಅವನಾಗಿರಲಿಲ್ಲ (ಅಂಬಿ. ೧೮). [ಸಂ.]

**ಮಧ್ಯಾಹ್ನರೇಖೆ** (ನಾ). [ಭೂಗೋಳ] "ಎಗೋಳಧ್ರುವಗಳೆರಡೂ . . . ಬಿ ಮಧ್ಯಬಿಂದುವನ್ನೂ ಹಾದುಹೋಗುವ ವೃತ್ತರೇಖೆ" (Meridian. ಜಂಶೀ) : ಧ್ರುವಗಳ ಮಾರ್ಗವಾಗಿ ಭೂಮಿಯ ಸುತ್ತಲೂ ಬರೆಯಲ್ಪಟ್ಟಿವೆ ಎಂದು ಭಾವಿಸಲ್ಪಟ್ಟಿರುವ ರೇಖೆಗಳಿಗೆ "ಮಧ್ಯಾಹ್ನರೇಖೆಗಳು (Meridians)" ಎಂದು ಹೆಸರು (ಭೂಗೋಳ. ೬) : ಸೂರ್ಯನು ಮಧ್ಯಾಹ್ನಕ್ಕೆ (೧೨ ಗಂಟೆ) ನಡುದಾರಿಯಲ್ಲಿರುತ್ತಾನೆ. ಆ ಕಾಲವನ್ನು ನಾವು ಮಧ್ಯಾಹ್ನರೇಖೆಯನ್ನು ದಾಟುವ ಸಮಯವೆಂದು ಹೇಳುತ್ತೇವೆ (ಭೂಪಾಠ. ೫). [ಸಂ. ಮಧ್ಯಾಹ್ನರೇಖಾ]

**ಮಧ್ಯೆ$_1$** (ನಾ). ೧. [ಕಾವ್ಯಮೀ] ನಾಯಿಕೆಯರ ಭೇದಗಳಲ್ಲಿ ಒಂದು; ನಡುಹರಯದ ಹೆಂಗಸು : ಸ್ತ್ರೀಯರುಗಳಲ್ಲಿ ಯೌವನ ಮತ್ತು ಸಂಸಾರಾನುಭವದ ಮೇಲೆ ಮುಗ್ಧೆ, ಮಧ್ಯೆ, ಪ್ರಗಲ್ಭೆ ಎಂದು ಮೂರುವಿಧ (ಕ್ಕಬಿ. ೨೦೦). ೨. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಮೂರನೆಯದು : ಉಕ್ತೆ ಅತ್ಯುಕ್ತೆ ಮಧ್ಯೆ . . . ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೦-೪೬ ವ): ಉಕ್ತೆ ಅತ್ಯುಕ್ತೆ ಮಧ್ಯೆ (ಕ್ಕಬಿ. ೬೮). ೩. = ಮಧ್ಯಮೆ ೫ : ಶ್ಲಥೆ ಘನೆಯುರೆರಡುಗುಣವೊಂದಿ ತೋಱೆರಲವಳ್ ಮಧ್ಯೆಯೆನಿಸಿರ್ಪಳ್ (ಕಪಪ. ೫-೩): ಶ್ಲಥೆ ಮಧ್ಯೆ ಮಾನೆಯುರೆಂಬ ಆಕಾರಯುಕ್ತ ಸೀಮಂತಿನಿಯರಿಂ (ಶಿವೇಳ. ೦೮೨) ; ಮೊದಲು ಪ್ರವಿಸಿದಡೆ ಶ್ಲಥೆ ನಡುವೆ ಪ್ರವಿಸಿದಡೆ ಮಧ್ಯೆ ಕಡೆಗೆ ಪ್ರವಿಸಿದಡೆ ಘನೆ (ಕಾಮಶಾ. ೨೦೦). [ಸಂ. ಮಧ್ಯಾ]

**ಮಧ್ಯೆ$_2$** (ಅ). ನಡುವೆ ; ಮಧ್ಯದಲ್ಲಿ : ಮೆರೆವುದು ವಿಷಯಮಧ್ಯೆ ರಾಜಧಾನಿ ಅಯೋಧ್ಯೆ (ಶ್ರೀರಾಮಾ. ೬-೦೫೬). [ಸಂ. ಮಧ್ಯೆ, ಮಧ್ಯೇ]

**ಮಧ್ಯೈಕನಾಡಿ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳನ್ನು ವಿಧ್ಯುಕ್ತವಾಗಿ ಮೂರುಸಾಲುಗಳಲ್ಲಿ ಬರೆದಾಗ ಮಧ್ಯದ ಸಾಲಿನಲ್ಲಿ ಬರುವ ನಕ್ಷತ್ರಗಳು ; ಭರಣಿ, ಮೃಗಶಿರ, ಪುಷ್ಯ, ಪುಬ್ಬೆ, ಚಿತ್ತೆ, ಅನೂರಾಧೆ, ಪೂರ್ವಾಷಾಢ, ಧನಿಷ್ಠ, ಉತ್ತರಾಭಾದ್ರ – ಈ ನಕ್ಷತ್ರಗಳು ಮಧ್ಯೈಕನಾಡಿ ನಕ್ಷತ್ರಗಳು. ಒಂದೇ ನಾಡಿಯಲ್ಲಿರುವ ತರುಣತರುಣಿಯರಿಗೆ ವಿವಾಹ ಕೂಡದೆಂಬ ನಂಬಿಕೆಯಿದೆ. [ಸಂ. ಮಧ್ಯೈಕನಾಡೀ]

**ಮಧ್ವಮತ** (ನಾ). ಮಧ್ವಾಚಾರ್ಯರು ಸ್ಥಾಪಿಸಿದ ಮತ ; ದ್ವೈತಮತ : ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡ (ಪುರಂದ. ೦-೨೦೪ ಕೃತಿ). 'ಮಾಧ್ವಮತ' ನೋಡಿ. [ಸಂ.]

**ಮಧ್ವಾಸವ** (ನಾ). ೧. ಮಾದಕಪಾನೀಯ : ಮದ್ಯ. ೨. ಹಿಪ್ಪೆ ಹೂವಿನ ಹೆಂಡ : "ಮಧ್ವಾಸವಃ, ಮಾಧವಕಃ, ಮಧು – ೩ ಹಿಪ್ಪೆ ಹುವ್ವಿನ ಹೆಂಡದ ಹೆಸರು" (ಸಿದ್ಧಾಂತ. ೩೦೮). [ಸಂ.]

**ಮನ್‌ಸಬ್** (ನಾ). ಇರಾದೆ : ವಿಚಾರ : ಯೋಚನೆ : ಈ ಗರೀಬ ಪಾಳಯಗಾರ ಏನ ಕೊಟ್ಟಾನು ? ನವಾಬಸಾಹೇಬರು ಜಹಗೀರ್ ಕೊಡುವ ಮನ್‌ಸಬ್ ಮಾಡಿದಾರೆ (ಪಾಳಗಾ. ೩೩).

[←ಅರ. ಮನ್‌ಸೂಬಹ್ ; ಹಿಂ. ಮರಾ. ಮನ್‌ಸೂಬಾ]

**ಮನ್‌ಸಬ್‌ದಾರ, ಮನಸಬದಾರ** (ನಾ). ಒಬ್ಬ ದೊಡ್ಡ ಅಧಿಕಾರಿ : ಮಂತ್ರಾಲೋಚನಸಭೆ ಎಂಬ ಮನ್‌ಸಬ್‌ದಾರರೂ ಸಹಾ ಇರುತಿದ್ದರು (ಇಕ್ರಾ. ೮ ಉತ್ತರಾರ್ಧ). ಮನಸಬದಾರ : ನಿನ್ನ ಸ್ವಾಮಿಯಾಗುವವನು ಐದುಸಾವಿರ ಸೀಮೆಗೆ ಮನಸಬದಾರನಾಗುವನು (ಕಥಾಕುಂ. ೩೬); ಮಬಾರಕನನ್ನು ಕ್ಷಮಿಸಿ ಅವನನ್ನು ದೊಡ್ಡ ಮನಸಬದಾರನಾಗಿ ಮಾಡಿದನು (ಐತಿಹ. ೨೨೪). [←ಪಾರ. ಹಿಂ. ಮನ್‌ಸಬ್‌ದಾರ್]

**ಮನ್‌ಸಬ್‌ದಾರಿ** (ನಾ). (ಮನ್‌ಸಬ್‌ದಾರನ) ಹುದ್ದೆ ; ಪದವಿ : ಅಧಿಕಾರ : ನನಗೊಂದು ಮನ್‌ಸಬ್‌ದಾರಿಯನ್ನು ಕೊಡುವೆನೆಂದು ದಿವಾನಸಾಹೇಬರು ಹೇಳಿದ್ದರು (ಕ್ರೀಪು. ೯೯).

[←ಅರ. ಹಿಂ. ಮನ್‌ಸಬ್‌ದಾರೀ]

**ಮನ** (ನಾ). ೧. ಅಂತರಂಗ : ಚಿತ್ತ ; ಮನಸ್ಸು : ಮನದೊಳ್ ಜನಿಯಿಸುಗುಮವಂಗೆ ವಿಲವಿಭಂಗಜ್ಞಾನಂ (ಆದಿಪು. ೫-೮೫) ; ಮನವು ಬೇಱಿಲ್ಲ ಶಿವಭಕ್ತ ಮನವಾ ಪುರಕೆ (ತರುರ. ದೀ. ೩-೧೫); ಮೊಗದ ದುಗುಡ ವಿದೇನು ಮನದುಬ್ಬೆಗವಿದೇನು . . . ಎಂದು ಬೆಸಗೊಳಲು (ಕೂರಚಾ. ೦-೪-೭) ; ಮೌನದಿಂದ ಮನವ ಗೆಲ್ಲು (ಅನಕೃ. ೦೭-೬). ೨. ಇಷ್ಟ ; ಅಪೇಕ್ಷೆ : ತೀರ್ಥಯಾತ್ರೆಗೆ . . . ಮನಮುಳ್ಳರ್ವರಲಕ್ಕುಂ (ರಾಮಾಶ್ವ. ೬೮-೧೦). ೩. ಭಾವನೆ ; ಕಲ್ಪನೆ. ೪. ಬುದ್ಧಿ ; ಚಿಚ್ಛಕ್ತಿ. ೫. ಉದ್ದೇಶ ; ಆಶಯ. ೬. ಆಸಕ್ತಿ : ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ (ಬಸವ. ೨೩೩).

ಮನಕ್ಕೆ ತರು = ಮನಸ್ಸಿಗೆ ತಂದುಕೊಳ್ಳುವಂತೆ ಮಾಡು ; ಗಮನಕೊಡುವಂತೆ ಮಾಡು : ನೆಗೆಯುತ್ತುಮಿರ್ಪ ತುಂಬಿಗಳೞಪು ಮನಕ್ಕೆ ತರಲಾರ್ತವು (ಶಂಖಪೂ. ೩-೬೬). ಮನಕ್ಕೆ ಬರ್, ಮನಕೆ ಬರು =

ಮನಸ್ಸಿಗೆ ಬರು ; ಇಷ್ಟವಾಗು : ಬಳೆದ ಮುನಿಸಿನೊಳ್ ಕೆಚ್ಚನಾದ ಕಣ್ ದೆಸೆಗೆ ಕೆಂಪನೊದವಿಸಿದುದು ದಿಗ್ವನಿತೆಯರ್ಗೆ ರಕ್ತಬಲಿಯುಂ ಮನಕ್ಕೆ ವರೆ ಬಳೆದ ಮುನಿಸೆ ಕುಡುಮಂತಾಗಳ್ (ಆದಿಪು. ೧೪-೨೩) ; ಕಳುಹು ನೀನೆನ್ನ ಮನಕೆ ಬಂದಡೆ ತಪ್ಪವದೆ ನೆಲಹಿನ ಗಡಿಗೆಯುಳಿ . . . ತಂದಪೆಂ (ಬಸವ. ೧೪-೧೦) ; ಮನದೊಳನುಮಾನಿಸದೆ ನೀಮುವನೆನಗೆ ಕರುಣಿಸು ತಾಯೆ ತಾತನ ಮನಕೆ ಬಹುದಿದು (ತೊರವೆ. ೨-೩-೨೨). ಮನದನ್ನ = ೧. ಪ್ರೀತಿಪಾತ್ರನಾದವನು : ಆತ್ಮೀಯ : ತನ್ನ ಮನದನ್ನನಪ್ಪ ಸಾರಥಿಯುಂ ಚೋದಿಸಲ್ವೇಟ್ಟು (ಆದಿಪು. ೧೨-೭೪ ವ); ಮನದನ್ನರಪ್ಪ ಸೇವಕ ವನಿತಾವಳಿವೆರಸು ಮಿತ್ರ ಮೇಧಾವಿಳಂ . . . ಪಾರ್ಶ್ವದೊಳ್ ಕುಳ್ಳಿರೆಯುಂ (ಶಾಂತಿಪು. ೧೧-೧೭) ; ತನ್ನ ಮನದನ್ನರಪ್ಪ ಬಸಂತ ಮಲ್ಲಿಲಿಂಗರ್ಕಳುಂ ಕಳಿಯುರೊಡನೆ . . ಬರಲಿಂತೆಂದು ಪೇಳ್ದ (ಕಬ್ಬಿಗ.೧೯೬) : ಕಂಡು ನಾತಿಸಿವರ ಮನದನ್ನನೊಡನಾ ಶರಣರುಂಡು ಮಿಕ್ಕಾ ಶೇಷಮಂ ಲಿಪುಗಿತ್ತು (ಶಾವತಂ. ೪-೩೬). ೨. ಪ್ರಿಯ : ಇನಿಯ : "ಕಾದಲಂ, ನಲ್ಲಂ, ಇನಿಯಂ, ಒಪಂ, ಮನದನ್ನಂ—ಈ ೫ ಪ್ರಿಯಂಗೆ ಪೆಸರ್" (ಕಶನಾ.೬೨-೩೯೯); ಮನದನ್ನ ನೆಡೆಗಂಗಜಂವೆರಸು ನಡೆತಂದು (ನೇಮಿ. ೩೫-೨೦) ; ಆನೀ ಮನದನ್ನನ ಕೈವಿಡಿವುವರ್ಕೆ ಮೊದಲ್ ಎನ್ನಯ ಜನಕನಪ್ಪ ಜನಕನೆಡೆಯೊಳಿರ್ನುದಂ ಬಲ್ಲರೆ (ರಮ್ಯಕ. ೩೯). ೩. ಮನಸ್ಸಿಗೆ ಬಂದುದು; ಇಷ್ಟವಾದುದು : ಅಕ್ಕ ನಿಜ ಪ್ರಿಯಂಗೆ ಮನದನ್ನದೆ ನೀಂ ಬೆಸಕೆಯ್ವುದಾಗಳುಂ (ಚಂದ್ರ ಪ್ರ. ೬-೮೬). ಮನದನ್ನಳ್ = ೧. ಪ್ರೀತಿಪಾತ್ರಳಾದ ಗೆಳತಿ : ಸಖಿ : ತನ್ನ ಮನದನ್ನಳಪ್ಪ ಕೆಳದಿಗೆ ನಿವೇದ್ಯಮೆಯೀಪಂ ಸುಖೀಭವತು ಎಂಬಂತುಸಿರ್ದು(ಧರ್ಮಾಮೃ. ೮-೭೮ ವ) ; ನಾಣ್ಚಿ ನೋಡಿದಳ್ ತಾಮ್ಮನದನ್ನಳಪ್ಪ ಕಳಭಾಷಿಣಿಯುಂ ನಯನತ್ರಿಭಾಗದಿಂ (ಚಂದ್ರಪ್ರ. ೩-೬೨); ಮನದನ್ನಳಪ್ಪ ತನ್ನನುಚರೆ ಹರ್ಷವರ್ಧನೆಯ ವಕ್ತ್ರಮನೀಕ್ಷಿಸಿದಳ್ (ಶಾಂತಿಪು. ೩-೫೦). ೨. ಪ್ರಿಯೆ; ನಲ್ಲೆ : "ಮನದನ್ನಳ್ ಕಾದಲೆಯೆಂದಿನಿಯಳ್" (ಕವಿಕಂ. ೧೭೨). ಮನದನ್ನೆ = ೧. ಪ್ರೀತಿಪಾತ್ರಳಾದವಳು : ಆಡದಿರು ಮನದನ್ನೆ ಎನಗೆ ಇದಿರಾಡದಿರು (ಜಾನಪ. ೬೩-೧). ೨. ಹೆಂಡತಿ : ಪತ್ನಿ : "ಮನದನ್ನೆ ಯೆನಲು ಭಾರ್ಯೆ" (ಕಶರ. ೮೬): ಮನದನ್ನೆಯೆನಿಸುವಂಗನೆ ತನೂಜಂ ವಿಲಾಸಿನಿಯರಾಪ್ತರ್ . . . ಮೊದಲಾದವರ್ಗೆರಸು ಘನವಾದ್ಯನಿನದದೊಳ್ ದಿನಮಾರ್ಗವಂ . . . ನಡೆತರೆ (ಪದ್ಮರಾ. ೮-೬); ತಮ್ಮ ಮನದನ್ನೆಯ ನೆನಪು ಮಾಡಿಕೊಳ್ಳುತಾ ನಿಂತುಬಿಟ್ಟರು (ಶಾಂತಲಾ. ೩೬೪). ಮನದ ಮಂಡಿಗೆ = (ಅಲಂ) ವಾಸ್ತವವಲ್ಲದುದು; ಬರಿಯ ಕಲ್ಪನೆಯದು : ಎರಡು ಭಾಷೆಗಳಿಗೆ ಏಕಲಿಪಿಸಾಧನೆಯೆಂಬುದು ಮನದ ಮಂಡಿಗೆಯಾಗಿ ಉಳಿಯುವುದು (ಸಂಶೋಧ. ೬). ಮನದರಸಿ = ಮನಸ್ಸಿನ ಒಡತಿ: ಹೃದಯೇಶ್ವರಿ : ನಿನ್ನನ್ನು ಬಿಟ್ಟು ಅರೆಗಳಿಗೆಯೂ ಇರದಂತಾಗಿದೆ ಮನದರಸಿ (ಶಾಂಕುಂತ. ೩೫). ಮನದೆಗೊಳ್ = ೧. ಮನಃಪೂರ್ವಕವಾಗಿ ಅಂಗೀಕರಿಸು ; ಮನಸಾರೆ ಒಪ್ಪು : ಈತನಳುರ್ಕೆಯು ಮನುರ್ಕೆಯುಮಂ ಕಿಡಿಸಿ ಗೆಲ್ವೆಮೆಂದು ನುಡಿದ ಮಂತ್ರಿಗಳ ಮಾತಂ ಮನದೆಗೊಂಡು (ಆದಿಪು. ೧೩-೫೮ ವ). ೨. ಬಯಸು; ಇಷ್ಟಪಡು ; ಮೆಚ್ಚು : ಅಂತು ಬಂದ ಮಂದಮಾರುತನ ಕಂಪುಮಂ ಮನದೆಗೊಂ[ಡಾ ಶಾಂ. ಕೊಂ]ಡಾ ಮಾರುತನ ಸೌರಭ್ಯದ ಬಟ್ಟೆವಿಡಿದು ಮಹಾಕಾರಪರಿವೃಢನ ಮಂದಿರಮಂ ಸಸಹೋದರಂ ದಾಮೋದರಂ ಪುಗುವುದುಂ (ಜಗಭ. ೬-೧೨ ವ). ಮನದೆಗೊಳಿಸು = ಮನಸ್ಸಿಗೆ ಹಿಡಿಸು ; ಮನಸ್ಸನ್ನು ಆಕರ್ಷಿಸು : ವಿನಯಂ ಸಹಜಂ ಕೃತ್ರಿಮಮೆನಿಸಿದವಪು ಬೇಜೆವೇಜೆ ವಿನ್ಯಾಸಮಂ ಮನದೆಗೊಳಿಸುವುವು (ಆದಿಪು. ೦೪-೬೩). [ಸಂ. ಮನಸ್]

ಮನಂಕಿಡು 'ಮನಂಗೆಡು' ನೋ.

ಮನಂಗದಡು (ಕ್ರಿ). ಮನಸ್ಸು ಕಲಕು ; ತಳಮಳಗೊಳ್ಳು : ರೋಷ ಮಜಿತು ಮನಂಗದಡಿ ಲಜ್ಜಿಸುತ ತಲೆವಾಗಿ (ಬಸವ. ೨೦-೨೮).
[ ಮನ + ಕದಡು$_1$ ]

ಮನಂಗಲ್ (ಕ್ರಿ). ಇನ್ನೊಬ್ಬರ ಮನಸ್ಸನ್ನು ತಿಳಿದುಕೊಳ್ಳು : ಇತರರ ಅಭಿಪ್ರಾಯವನ್ನು ಅರಿತುಕೊಳ್ಳು : ನೀನೀಕೆಯುಮಂ ನಿನ್ನ ಬಲ್ಲ ಮಾಟಿಕ್ಕೆಯೊಳೆಲ್ಲಮೆಲ್ಲಂದದೊಳಮೊಡಂಬಡಿಸಿ ಮನಂಗಲ್ವುದೆಂದು ನಿಯೋಜಿಸಿ ಪೋದು (ಆದಿಪು. ೩-೨೬ ವ). [ ಮನ + ಕಲ್$_1$ ]

ಮನಂಗಲಿ, ಮನಗಲಿ (ನಾ). ಮಾನಸಿಕವಾಗಿ ಶೂರನಾದವನು : ನೆಗಂ ಬಗೆದೊಡಿದರೊಂದು ಪೋಟ್ಟು[ಮೊಂದರ್ಕೆಮಿಂ]ದಿರ್ದಲಾಜಿದೆ ಮನಂಗಲಿಗಳ್ ಕವನತ್ರಿಣೇತ್ರನಾ (ಪಂಪಭಾ. ೮-೧೦೮). ಮನಗಲಿ : 'ಮನಗಲಿತನ' ಪದಾ. [ ಮನ + ಕಲಿ$_2$ ]

ಮನಂಗಾಣ್, ಮನಗಾಣ್, ಮನಗಾಣು (ಕ್ರಿ). ೧. ಮನಸ್ಸನ್ನು ತಿಳಿ : ಅಭಿಪ್ರಾಯವನ್ನು ಗ್ರಹಿಸು : ಜಲದೇವತೆಗಳಪ್ಪುದಂ ಮನಂಗಾಣ್ಬುದೆಂದು ನಿಧಾನಮಾನೀಡಾಡುವಂತೆ ಕೂಸಂ ಗಂಗೆಯೊಳೀಡಾಡಿ ಬಂದರ್ (ಪಂಪಭಾ. ೧-೯೫ ವ) ; ದೇಹಂ ಶರಂ ಕೊರಗಿ ಕಡುಬಡವಾಗಿ ನೀಗಿರ್ದುಗೊಂಡ ಕಮಲಿನಿಯುಂ ತಿರಿರ್ದ ಕಾಮಿನಿಯುಂ ಕಂಡು ಮನಂಗಾಣಲಾಜದೇಕಾಂತಕೆ ಕರೆದು (ಲೀಲಾವ. ೬-೮೩ ವ); ಮಾತಾಡಿ ಮನಂಗಾಣ್ಬೆನೆಂದು ಮಂತ್ರಿವರಂ ಮಾತಾಡಿಸಿಯುಂ ಮಾತಾಡದೆ ನೋಡದೆ ಕಂದರ್ಪದೇವನಿಂತಿರುತಿರ್ದಂ (ಶಾಂತಿಪು. ೮-೧೦೦). ೨. ಚಿತ್ತಕ್ಕೆ ತೋರು ; ಮನಸ್ಸಿಗೆ ಬರು : ನಿಮ್ಮ ಮನಂಗಂಡಂತೆ ಆಂ ವರ್ತಿಪೆಂ ದಿಟಂ (ರಮ್ಯಕ. ೩೬). ಮನಗಾಣ್ : ೨. ಮನಗಂಡ ಒಂದು ಪೆಂಡೀ ಕಟ್ಟಿಕೊಂಡು ಬರತೀನಿ (ಪಂಜಯ. ೮). ೩. (ಖಚಿತವಾಗಿ) ತಿಳಿದುಕೊಳ್ಳು ; (ಸ್ಪಷ್ಟವಾಗಿ) ಗ್ರಹಿಸು : ನಿಜವಾದ ವಿಷಯವನ್ನು ನಾನು ಮನಗಂಡೆ (ಶತಕ. ೨೨) ; ಹುಡುಗರನ್ನು ಅಂಕೆಯಲ್ಲಿಡದಿದ್ದರೆ . . . ಸಂಚಕಾರ ತರುವರೆಂದು ಕಳಸಾಪುರದ ಹಿರಿಯರು ಮನಗಂಡರು (ಕಳಸ. ೬೯). ಮನಗಾಣು : ೩. ಈಗ ನೀತಿಯನುಸರಿಪರೆ ಮನಗಾಣನೇ ಕೌರವಮಹೀಶ್ವರನು (ಕುಮಾವ್ಯಾ. ೧೧-೨೩) : ಇದು . . . ಜೀವಾತ್ಮ ಮತ್ತು ಪರಮಾತ್ಮ ಇವುಗಳಿಗೆ ಇರುವ ವ್ಯತ್ಯಾಸವನ್ನು ಮನಗಾಣುವಂತೆ ಮಾಡುತ್ತದೆ (ತತ್ವಬ್ರ. ೧೧). [ಮನ + ಕಾಣ್]

ಮನಂಗಾಪು (ನಾ). (ಅಲಂ) ಮನಸ್ಸಿನ ನಿಗ್ರಹ– ಸಂಯಮ : ಪಕೆ ಮನಂಗಾಪಟಿಪು ಬಂದು ಮುಟ್ಟಿದೆಯೋಪನೆ ನೀನೆನ್ನ ಪಾಪಕರ್ಮಿಯ ಮೆಯ್ಯಂ (ಪಂಪಭಾ. ೨-೨೦). [ಮನ + ಕಾಪು]

ಮನಂಗಿಡಿಸು 'ಮನಂಗೆಡಿಸು' ನೋ.

ಮನಂಗಿಡು 'ಮನಂಗೆಡು' ನೋ.

ಮನಂಗುಂದು, ಮನಗುಂದು (ಕ್ರಿ). ಧೈರ್ಯಗುಂದು ; ಎದೆಗುಂದು ; ಉತ್ಸಾಹ ಕುಗ್ಗು : ಈಗಳೇ ತೋರ್ಪುದೇನಾ ಜ್ಯೋತಿರ್ಲೋಕಂ ಮನಂಗುಂದದಿರಿಮಿವು ಮನಸ್ತಾಪಮಂ ಮಾಡವೆ (ಆದಿಪು. ೬-೫೩) ; ನಿಸಿತ ಶೂಲಶ್ಯೂಕನಿಪತಿಗೆ ಕುಸಿಯದೇ ಕಂದದೆ ಮನಂಗುಂದದೆ (ಬಸವ. ೩೯-೭೪) ; ರಾಮಂ ಮನಂಗುಂದಿದನೇ (ರಮ್ಯಕ. ೪೯). ಮನಗುಂದು : ಅನಿಲಜನ ಘಾತಕ್ಕುಪಾಯವ ನೆನೆನೆನೆದು ಮನಗುಂದಿ (ಸಂಕರ್ಷ. ೦೬-೫೨) ; ಸೋಲದಲಿ ಮನಗುಂದಿ ಹಾಯ್ದರು ಬಿಟ್ಟ ಮಂಡೆಯಲಿ (ಪಳತ. ೯-೩೨) ; ಚಿತ್ರರೇಖೆಯ್ಯೆತಂದು ವಿಲಾಸವಳಿದು ಮನಗುಂದಿ ಪೂಸರಲಸಲೆಗೊಳಗಾದ ತನ್ನೊಡತಿಯನಾಸರ ಕಂಡು ನುಡಿದಳು (ಕಂಪಾಪ. ೧೦-೦).
[ಮನ + ಕುಂದು$_1$]

ಮನಂಗುಡು 'ಮನಂಗೊಡು' ನೋ.

ಮನಂಗೂಡು, ಮನಗೂಡು (ಕ್ರಿ). ಮನಸ್ಸು ಒಂದಾಗು, — ಬೆರೆ : ಜಲಕೇಳಿಯೊಳೋತು ಮನಂಗೂಡಿ ನೋಡಿಯಾಡುತ್ತೆ (ಗಂಕ. ೪-೩೩).

**ಮನಗೂಡು :** ಕಾರ್ಯಕ್ಕೆ ಪ್ರತಿಫಲ ಬಂದರೂ ಬಾರದಿದ್ದರೂ ಸರಿಯೆಂಬ ಭಾವನೆ ಮೈಗೂಡಿ ಮನಗೂಡಿ ಹೋಗುವುದು (ರಘುಕಾ. ೧೦೭). [ಮನ + ಕೂಡು₁]

**ಮನಂಗೆಡಿಸು.** ಮನಂಗಿಡಿಸು (ಕ್ರಿ). ಧೈರ್ಯಗುಂದಿಸು ; ಎದೆಗೆಡಿಸು : ಮನಂಗೆಡಿಪ ಪುಲಿಯಿಂ ರೌದ್ರಾಕಾರಂಗಳಿಂ (ರಘುಚ. ೨-೨೨೯). **ಮನಂಗಿಡಿಸು :** ಪಾಂಡವರಂ ರಣದೊಳ್ ಪೊಕ್ಕು ನಡುಂತೆ ಮನಂಗಿಡಿಸಿ (ರಘುಚ. ೬-೯೫). [ಮನ + ಕಿಡಿಸು₁]

**ಮನಂಗೆಡು.** ಮನಂಕಿಡು. ಮನಂಗಿಡು (ಕ್ರಿ). ೧. ಮನಸ್ಸು ಹಾಳಾಗು.- ಕೆಟ್ಟುಹೋಗು : ಕೇಳ್ದು ಮನಂಗೆಟ್ಟು ಮಹಾದುಃಖದಿಂದವಿರಲಾಜದೆ ಬಾಯ್ಬಿಟ್ಟೊಳಱೆ (ರಘುಚ. ೩-೨೩೪). ೨. ಧೈರ್ಯಗೆಡು: ಅಧೀರವಾಗು : ಎರಡು ಕಯ್ಯಿಂ ಮಸಗಿ ಮನಂಗೆಟ್ಟು ಮರುಳವೊಲ್ತು ಱಿಸುತ್ತುಂ (ರಘುಚ. ೧-೧೬೫); ಸಲೆ ಮಾಯಾಮೋಹವಾಚ್ಛಾದಿಸೆ ನೆಱೆ ಧೃತಿಗೆಟ್ಟೆಂ. . . ಮಿಗೆ ಮನಂಗೆಟ್ಟೆನಾನುಬ್ಬೆಗೆಟ್ಟೆಂ ತಲೆಗೆಟ್ಟೆಂ ತಂದೆ (ರಕ್ಷಾಶ. ೫೩). **ಮನಂಕಿಡು :** ೧. ಇಚ್ಛೆಯುಣಮಿಲ್ಲದೊಡಂ ತೆಗೆವಳ್ ಕರಂ ಮನಂಕಿಡೆ ಪೊಸತಪ್ಪುದೊಂದು ಒಡಿಗಂಕುಶವಿಟ್ಟು ಮರಳ್ದು ಮಂದದಿಂ (ಕಾದಂಪೂ. ೬೬೨). **ಮನಂಗಿಡು :** ೧. ಓಡಿ ಬೋಡಾಗಿ ಪೋಗವರಾರಟುಕದ ರಾಮರ್ಕ್ಕನಂಗಿಡದರಾಸ್ಸ್ರವ್ಯಸ್ತವುಂತೆಶ್ತು (ಎಇ. XX. ೧೧೮-೮ ; 1187). ೨. ಒಡೆಗುಮಜಾಂಡಮನ್ನಿನಿಸು ಜೀವ್ಯೊಡೆದಾಗಳೆ ಬೊಮ್ಮನುಂ ಮನಂಗಿಡುಗುಂ (ಶಂಕಪು. ೨-೬೬); ಪಿಡಿದು ತಳಾಜಿರೋವದೆ ಕನಲ್ದು ಮನಂಗಿಡೆ ಕಟ್ಟಿ (ರಘುಚ. ೧೨-೨೩೯); ಮರ್ಬಲಿ ಮಾಯ್ದಡೆ ರಾಮವೆಂದೊಡಾರಳವ[ಡ]ದಾಮರ್ಕ್ಕನಂಗಿಡವರ್ (ಎಕ. XI. ಚತ್ರದು. ೧೩-೯೦; 1124). [ಮನ + ಕೆಡು₁]

**ಮನಂಗೆಯ್** (ಕ್ರಿ). ಮನಸ್ಸುಮಾಡು : ನಿರ್ಧರಿಸು : ಸಂಕಲ್ಪಿಸು : ವಿಭೀಷಣ . . . ಸುಗ್ರೀವಾದಿಗಳುಂ ಮಗುಳ್ದು ಕಾದಲ್ ಮನಂಗೆಯ್ದು ಬರೆ (ಕುಂಚಿಪು. ೧೪-೦೪೯ ವ). [ಮನ + ಕೆಯ್₁]

**ಮನಂಗೊಡು.** ಮನಂಗುಡು, ಮನಗುಡು, ಮನಗೊಡು (ಕ್ರಿ). ಮನಸ್ಸುಕೊಡು ; ಗಮನಿಸು : ಚಿತ್ತವಿಡು : ಯುವರಾಜಾಭಿಮುಖ ಹೃದಯೆಯಾಗಿ ಮನಂಗೊಟ್ಟು ಪ್ರೇಮಪರದಿನಸ್ವತಂತ್ರೀಕೃತೆಯುಂ . . . ಪಿಸಿ (ಕಾದಂಬ. ೯೩); ಸಂಗಮದ ಮಸವಿಚಾರಣಕ್ಕೆ ಮನಂಗೊಡುತ (ಜಕಪು. ೨೬-೯೩). **ಮನಂಗುಡು :** ಬೆಸನೊಳ್ ಮಱುಮಾತುಗುಡದೆಯುಂ ಮನಂಗುಡದೆಯುಮಿರೆ ನಡುಗಿ (ಆದಿಪು. ೩-೨೩ ವ); ಅಮಂದಿರ ಮಾತಂ ಕೇಳಲುಂ ನೀಂ ಮನಂಗುಡಲ್ವೇಡ (ಕುಶಲ. ೯೩-೧). **ಮನಗುಡು:** ಮಂಗಳಾರತಿಗೆ ಮನಗು[ಡಾಗಂ. ಗೊ]ಡಲೇಳ್ವ (ಚತಾ. ೧೨-೩೦ ರಗಳೆ). **ಮನಗೊಡು:** ಚಾರುಲತೆಯೊಡನೆ ಓದುವುದು ಬರೆಯುವುದು. . . ಇವೇ ಮೊದಲಾದ ಸಂಗತಿಗಳಿಗೆ ಅವನು ಇನ್ನು ಮೇಲೆ ಮನಗೊಡತಕ್ಕವ (ಇಚ್ಛಾಶ. ೨೬೯). [ಮನ + ಕೊಡು₁]

**ಮನಂಗೊಳ್.** ಮನಗೊಳ್ (ಕ್ರಿ). ೧. ಮನಸ್ಸನ್ನು ಸೆಳೆ.- ಆಕರ್ಷಿಸು : ಬಾಡದ ಬಾಸಿಗಮುಮದೆಕಿಲ್ವೋಡದ ದಿವ್ಯಾಂಬರಂ ಮನಂಗೊಳೆ (ಆದಿಪು. ೩-೪೦). ೨. ಮನಸ್ಸಿನ ಆಕರ್ಷಣೆಗೆ ಒಳಗಾಗು.- ಸೆಳೆತಕ್ಕೊಳಗಾಗು: ಅಂತು ಕಂಡು ಮನಂಗೊಂಡತ್ತಿಕೊಂಡು ಮನೆಗೆ ತಂದು ರಾಘವೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡೆ (ಶಂಕಪು. ೧-೯೬ ವ) : ಪಳಂಕಿನ ಭಿತ್ತಿಯೊಳ್ ಪೊಳೆವುತಿರ್ದ ನಿಜಪ್ರತಿಬಿಂಬದೊಳ್ ಮನಂಗೊಳೆ ನುಡಿದೇಕೆ ಪೇೞ್ ನಗಿಸುವವರ್ (ಕಾದಂಪೂ. ೧೦೦೮). ೩. ಶೋಭಿಸು : ಒಪ್ಪು : ತನುರೋಮರಾಜಿ ಪಿಲಿಸದ್ದೂರ್ವಾಂಕುರಾಭಂ ಮನಂಗೊಳೆ ಚಂಚನ್ ನಿಜ ಪಂಚವರ್ಣ ಪಡೆಗುಂ ಚಿತ್ರಾಂಗನಾಶಂಕೆಯುಂ (ಅಜಿತ. ೨-೪೪). ೪. ಮನಸ್ಸಿಗೆ ತಂದುಕೊಳ್ಳು ; ಮೆಚ್ಚು : ಬೆಱಗಾಗಿ ಸೋಲ್ತು ಪೊಸರೂಪಂ ಮನಂಗೊಂಡು ಇರ್ದರುಂ ಸೋಲ್ತರೊರ್ವರಿಂ ಪೃಪ್ಪದತ್ತಂಗೆ (ಸಂಬರ. ೧-೪೪); ಕೃತಿಯಂ ಕೇಳ್ದರ್ ಮನಂಗೊಂಡಿದಚ್ಚರಿಯಾಯ್ತೆಂಬರ್ (ರಕಾ. ೧-೯). ೫. ಮನಸ್ಸಿಗೆ ಹಿಡಿಸು.—ಹತ್ತು: "ಮನಂಗೊಳ್-ಚಿತ್ತವಿಮೋಹನೇ (ಮನಸ್ಸಿಗೆ ಹತ್ತು)" (ಶಮದ); ಆ ನಳಿನಾಸ್ಯೆಯು ಗೆಯ್ದುದೊಂದು ಶುಶ್ರೂಷೆ ಮನಂಗೊಳೆ ಕೊಟ್ಟಂ [ದು]ರ್ವಾಸಂ ವಿಳಸಿತಮಂತ್ರಾಕ್ಷರಂಗಳಂ ದಯೆಯಿಂದಂ (ಶಂಕಪು. ೧-೯೯) : ಪತಿಹಿತಮುಮ್ಮನಂಗೊಳೆ ನೃಪಂ ನೃಪ ಕಾರ್ಯವಿಚಾರದೊಳ್ಪ್ರಹಸ್ತಿಯೆನೆ . . . ನೆಗಟ್ದ (ಎಕ. VIII, ಸೊರಬ. ೪೭೪-೨೩ ; 954). ೬. ಇಷ್ಟಪಡು : ಬಯಸು : ಅಪೇಕ್ಷಿಸು : ನಿರ್ವೇಗ ಪರಾಯಣಂ ಮನಂಗೊಂಡು ಪವಿತ್ರಶ್ರಾವಕವ್ರತಂಗಳೊಳೊಣರ್ದಂ (ಶಾಂತಿಪು. ೧-೯೭) ; ವಿನಯದಿಂದೆಱಗಿ ಮನಂಗೊಂಡಾ ಯತಿಪತಿಯೊಳ್ ಕೈಕೊಂಡನವಂ ಕಾಸಮಾಂಸವಿರತಿವ್ರತಮಂ (ಧರ್ಮಾಪು. ೧೬-೩೬) ; ಇಳೆಗೆ ಶಿವಭಕ್ತಿಯುಂ ಕೇವಲ್ ಮನಂಗೊಂಡು . . . ಪುಟ್ಟಿದಂ (ಬಸರ. ೦-೦೨೪). ೭. ಸಂತುಷ್ಟವಾಗು : ಸಂತೋಷಪಡು : ಅದಿಮಧ್ಯಾವಸಾನದೊಳೆಲ್ಲಿಯುಮೆಬಲದ ಕಲಿತನದಳವಿಂಗೆ ಮನಂಗೊಂಡು (ಶಂಕಪು. ೧೩-೬೫ ವ) ; ವಿಳಾಸಂಬೆರಸೊಳ್ಪುವೆತ್ತನವನೀಚಕ್ರಂ ಮನಂಗೊಳ್ವಿನಂ (ಎಕ. VII, ಶಿವಮೊ. ೫೭-೬೩ ; 1115) : ಆ ಪುಂಡರೀಕಷಂಡಮಂ ಪುಂಡರೀಕಲೋಚನಂ ಕಂಡು ಮನಂಗೊಂಡು (ಜಗನ್ನಾ. ೧೦-೬೩ವ) : ಅಂತು ಮನಂಗೊಳೆ ನೋಟ್ಟನಂ (ಪುಷ್ಪದ. ೩-೭೭ ವ). **ಮನಗೊಳ್ :** ೧. ಮನಗೊಂಬ ವಸ್ತ್ರಭೂಷಣಮಾಲ್ಯಾನುಲೇಪನವ ತಂದರು ಕುಮಾರಿತಿಗೆ (ವೀರಪತ್ರ. ೨೩-೧೧). ೩. ಮನಗೊಂಬ ಘಸಿತ ಗಂಧಾಕ್ಷತೆ ಭಾಳಲಾಂಛನವೆತ್ತುದವನೀಸುರರು (ವೀರಪತ್ರ. ೩-೪೫). ೬. ಗೆಡೆವಟ್ಟವರ್ ಮನಗೊಂಡೊಡ ನೊಡನೋರಂತು ತಗುಳ್ದು ರೌಪ್ಯಂಕರಿಸಿದೊಡೆ (ಶಂಕಪು. ೨-೬೩); ದ್ರೋಣ ಮನಗೊಂಡಿಱಿವಡಂಬುಜಪಾಣಿಯಿದಿರೇ (ಕುಮಾರವ್ಯಾ. ೪-೬). [ಮನ + ಕೊಳ್₁]

**ಮನಂಗೊಳಿಸು.** ಮನಗೊಳಿಸು (ಕ್ರಿ). ೧. ಮನಸೆಳೆ: ಆಕರ್ಷಿಸು: ನೆಗಟ್ಟರಸಂ ಮನಂಗೊಳಿಸೆ ಮಾರ್ಗಮೊತಂಬಿಡೆ ದೇಸೆ ಕಟ್ಟುಮಂ ಬಗೆಗೊಳಲಿಂತು ಪೇೞ್ದುದು ಮಹೀಭುಜಸಾರ್ಥಕಂ (ಗದಾಯು. ೧-೩೬) : ಮನಂಗೊಳೆ ಸಿರ್ವರಸಂಗರಾಜ ಧಾರಾಗ್ರಪತಾಕಭಂಜಿಕೆಗಳಂತಱಿಮಟ್ಟಿಗೆಯೊಳ್ ಲತಾಂಗಿಯರ್ (ಪುಷ್ಪದ. ೨-೨೦). ೨. ಆಹ್ಲಾದವನ್ನುಂಟುಮಾಡು ; ಆನಂದಪಡಿಸು ; ಸಂತೋಷಪಡಿಸು : ಭೂವಲ್ಲಭನಂ ಮನಂಗೊಳಿಸಿದಂ ಶೌರ್ಯಾರ್ಜಿತಂ ಮಲ್ಲಪಂ (ಅಜಿತ. ೧-೩೦) ; ಮರಳ್ದವೆಯಿಕ್ಕದಾರ ಮನಂಗೊಳಿಪ ಮುನೀಂದ್ರನಾನನಮನೀಕ್ಷಿಸುತಂ ಪೊಡೆವಟ್ಟೆನಟ್ಟಱಿಂ (ಕಾದಂಪೂ. ೬೫೪) ; ಇಂದ್ರುದಿಶಾವಧೂಟಿ ನಿಜಭಾಳದೊಳೊಲ್ದು ಮನಂಗೊಳಿಪ್ಪ ತಚ್ಚಂದ್ರಮನೆಂಬ ಚಂದನದ ಬೊಟ್ಟುಮಾರ್ಜಿ (ಉತ್ತರರಾ. ೧೦-೩೦). ೩. ಮನವೊಲಿಸು ; ಒಪ್ಪುವಂತೆ ಮಾಡು : ಆ ಮಹೋದಾರೆಯುಂ ದಾರತೆಯೆ ಮನಂಗೊಳಿಸಿದಪ್ಪುದು (ಕಾದಂಬ. ೪೦೪). ೪. ಶೋಭಿಸು ; ಒಪ್ಪು : ಅಳಂಕಾರಮುಮನೊಳಕೊಣ್ಡ ಜನಂಗಳಿಂ ಮನಂಗೊಳಿಸುತ್ತಿರ್ಪುದು (ಎಇ. XIII. ೩೩೭-೪೭ ; 929) : ಮುತ್ತಿನ ಮಂಟಪಂ ಮನಂಗೊಳಿಪ ವಿತಾನಪಂಕ್ತಿ . . . ಎಂಬಿವಱಿಂ ವಿವಾಹಮಂಗಳಮದು ಕುಂತಿ ಮಾಡ್ರಿಗಳೊಳಚ್ಚರಿಯಾಯ್ತು ಪಾಂಡುರಾಜನಾ (ಕುಶಪು. ೧-೧೦೭) : ಉಂಗುಟ ವಿಡಿದು ಮಸ್ತಕಪರಿಯಂತ ಮನಂಗೊಳಿಸುವ ಭೂಷಣಗಳ ಹಿಂಗದಿತ್ತವನ ಮಂಚಿಸಿ (ಶಂಸಾ. ೨-೧೧೦). **ಮನಗೊಳಿಸು :** ೩. ರಾಜಮರಾಳಮತ್ತೇಭಸಂಕುಲಕೆ ಸರೋಜಾಂಘ್ರಿಯುಗದ ಸದ್ಗತಿಯು ಮಾಜದೆ ಮನಗೊಳಿಸುವ ಪೊಲು ನಡೆಗೊಂಡುದಾ ಜಾಣೆಯ ಸುಲಲಿತಮಹ (ವೀರಪತ್ರ. ೪೦-೩೭). ೪. ರಾಮಣೀಯಕವೆತ್ತ ಚೆಂದಳಿರ್ ವಿಡಿಯಿಂದೆ ಮಾಮರ ಮನಗೊಳಿಸಿದುವು (ವೀರಪತ್ರ. ೨೪-೪೪). [ಮನಂಗೊಳ್ + — ಇಸು₃]

**ಮನಂದಣಿ,** ಮನತಣಿ, ಮನದಣಿ (ಕ್ರಿ). ಮನಸ್ಸಿಗೆ ತೃಪ್ತಿಯಾಗು : ಸಿಂಹಾಸನಮೇಱಿ ಮನಂದಣಿವುತ್ಸವದಿಂದೋಲಗಮಿರ್ದಂ (ಆದಿಪು. ೩-೦) ; ಫುಲ್ಲಶರಕೇಳಿಯುಂ ಮನಂದಣಿಯೆ ತನು ಕರಗಲನುಭವಿಸಿ (ರಾಜಶೇ. ೧-೯೩೩ ಪ). **ಮನತಣಿ :** ಕೊಡುವ ಕೊಳ್ಳುವ ಬಗೆಗಳೊಡವೆರೆದು ಮನ ತಣಿಯೆ (ಕಾವೇರಿ. ೭೧-೧೨೬). **ಮನದಣಿ :** ಮನದಣಿದು ಹರುಷದೊಳು ಕೊಂಡಾಡಿದಂ (ದೀಕ್ಷಾಬೋ. ೧೧೨-೮) : ಮನದಣಿದು ಕಣ್ದಣಿದು ಪರುಷಾಶ್ರುಗಳುಗುತ್ತಿರಲು (ಬಸವ. ೨೯-೧೬) ; ಅನುಪಮಿತಧನರತುನ ಭಂಡಾರವನು ತೆಗತೆಗಸಿ ಮನದಣಿಯೆ ಯಾಚಕರಿಗಿತ್ತುದನೆನಗೆ ಬಣ್ಣಿಸಲಳವೆ (ಜೈಮಿನಿ. ೬-೧೮). [ಮನ + ತಣಿ$_1$]

**ಮನಂದರ್,** ಮನತರು, ಮನದರ್ (ಕ್ರಿ). ಮನಸ್ಸುಮಾಡು ; ಆಸೆಪಡು ; ಅಪೇಕ್ಷಿಸು : ಈ ತಪಕ್ಕಮ್ಮ ಮನಂದರಲ್ ನಿಮಗೆ ಸಲ್ಲದು (ಆದಿಪು. ೪-೩೮) ; ಪಾಲಿಂಗೆ ಬೆರ್ಚಿ ತುಪ್ಪಕ್ಕಿನಿಸಪ್ಪೊಡಂ ಮನಂದರಲಾಗದೆ (ಧರ್ಮಾಮೃ. ೦-೧೭೨) ; ನರನಾಥಂ ಮೃಗಯಾವಿನೋದದೊದವಂ ನೋಡಲ್ ಮನಂದಂದಪಂ (ಪಂಪ. ೩೩). **ಮನತರು :** ಬರೆದು ಕೊಡುವೆನು ಸ್ಥಿರ ಚರಾಸ್ತಿಯು ಉಂಬಳಿ ಎಂದುಸುರಿ ಮನತಂದು ಬಿರುದಿನ ಕಂದನಹ ಕಡೆಕಂಜಿಯಾ ಬಂದನುಳುಹಿದ ಹಿಂದೆ ಕಳುಹಿದ ಇಂದುನಾಥಾಧೀಶನು (ಕವಿಪು. ೨೦-೪೨). **ಮನದರ್ :** ಕಡಿಪೆನಿಂದೆ ಮನದಂದಾ ನರಗಂ ಸುತ್ತಿದ ಕೊಟುಂಬಸಹಿತಂ (ಎಕ. VII, ಶಿವಮೊ. ೭೮-೩೬ ; 1291) ; ಉರಿವನೆಯ ಬೀಡಾರದಲಿ ಬಿಡಿಸಲ್ಕೆ ಮನದಂದ (ಕುಮಾರ. ೮-೭೧); ಕಾವ್ಯಸ್ವರೂಪವನ್ನು ಮನದಂದು ಸ್ಥೂಲವಾದ ವಿಭಾಗಗಳನ್ನು ಮೇಲೆ ಸೂಚಿಸಲಾಗಿದೆ (ಕಮ. ೨). [ಮನ + ತರ್]

**ಮನಂದೀವು** (ಕ್ರಿ). ಮನಸ್ಸುತುಂಬು ; ಮನಸ್ಸಿಗೆ ತೃಪ್ತಿಯಾಗು : ಕಣ್ತೀವಿ ನೋಡಿ . . . ಮನಂದೀವಿ ನೆನಪಿನೊಳಗಿಟ್ಟು (೧೦ಕ. ೩-೧೧೯ ಪ). [ಮನ + ತೀವು]

**ಮನಂದೆಗೆ** (ಕ್ರಿ). ಮನಸ್ಸನ್ನು ಹಿಂತೆಗೆದುಕೊಳ್ಳು ; ಹಿಮ್ಮೆಟ್ಟು ; ಹಿಂಜರಿ : ಸಿದ್ಧರ್ ಸಮರಕೇಳಿಗಪ್ರಸಿದ್ಧರೆನಿಸಿ ಮನಂದೆಗೆಯೆಯುಂ ಸಾಧ್ಯರ್ ಪೇಳಲಸಾಧ್ಯರೆನಿಸಿ ಬೆಂಗೊಟ್ಟೋಡೆಯುಂ (ಜಗಧ. ೦೩-೭೭ ಪ). [ಮನ + ತೆಗೆ$_1$]

**ಮನಂದೋಱು** (ಕ್ರಿ). ಮನಸ್ಸನ್ನು ತೋರಿಸು : ಮನಸ್ಸಿನಲ್ಲಿ ಇದ್ದುದನ್ನು ಹೇಳು ; ಮನಸ್ಸಿನ ಆಶಯವನ್ನು ವ್ಯಕ್ತಪಡಿಸು : ಇಂದುವರಂ ದೇವರ ಮನಂ ನೋಂದಪ್ಪುದೆಂದು ಮನಂದೋಱದಿರ್ಪಳ್ (ಕಾದಂಬ. ೩೯೯). [ಮನ + ತೋಱು]

**ಮನಂಬಡು** (ಕ್ರಿ). ೧. ಮನಸ್ಸುಮಾಡು ; ಒಪ್ಪು; ಸಮ್ಮತಿಸು : ರಾಗಮೂರ್ತಿಯೊಳೆ ಸೌಂದರಿಯುಂ ಕಡೆ ಬಂಧುಗಳ್ ಮನಂಬಡೆ ಕಡುರಯ್ಯ ಮಾಯ್ಯಮಿತತೇಜನೊಳೆಂದು ವಿವಾಹಮಂಗಳಂ (ಆದಿಪು. ೪-೩೩); ಮನಕೆ ಮಂದೊಳುವೆಂಡಿರೊಳ್ಸಿರೆವೆಂ ಮನಂಬಿ[ಬ]ಡೆ ನಿಚ್ಚಲುಂ (ಧರ್ಮಾಮೃ. ೬-೯೫). ೨. ಅಂತರಂಗಕ್ಕೆ ತೃಪ್ತಿಯಾಗು : ಮನದಣಿ : ಪುಣ್ಯಾಸ್ರವ ಕಾರಣರಂ ಹಿಂತಾಸ್ರವಮುನಿಪತಿಗಳಂ ಮನಂಬಿ[ಬ]ಡೆ ಕಂಡು (ಆದಿಪು. ೩-೩೬). [ಮನ + ಪಡು$_1$]

**ಮನಂಬಯಸು** (ಕ್ರಿ). ಅಂತರಂಗವು ಬಯಸು,—ಅಪೇಕ್ಷೆಪಡು : ಅನ್ತು ಮಹಾಪೂಜೆಯುಂ ಮಾಡಿ ಮನಂಬಯಸಿ ನೋಡಿ ಕುಳ್ಳಿರ್ದು (ಕೌಂತ. XX. ೪೯-೩೩; 1076 ?); ವಿರಚಿಸುವೆ ಮನಂಬಯಸೆ ಮಲ್ಲಿಜಿನೇಂದ್ರಮಹಾ ಪ್ರಬಂಧಮಂ (ಮಲ್ಲಿಪು. ೦-೩೩): ಎಳಪಿಸಿಲಂ ಮನಂಬಯಸಿ ಕಾಯೆ (ಜಗ. ೦೪-೯). [ಮನ + ಬಯಸು$_1$]

**ಮನಂಬರ್** (ಕ್ರಿ). ಅಂತರಂಗವು ಆಸೆಪಡು ; ಮನಸ್ಸಿಗೆ ಬರು : ಮದ ನಾನುರಾಗಂ ಕೈಗಣ್ಮೆ ಮನಂಬಂದ ಬಂಧದಿಂ ಸವಿ ಸವೆಯದ ಸುಸಿಲ ಸೊಗಮನನುಭವಿಸಿ (ರಾಜಶೇ. ೦-೦೩೩ ಪ). [ಮನ + ಬರ್(< ವರ್)]

**ಮನಂಬಸು** (ಕ್ರಿ). ಅಂತರಂಗವು ಎರಡು ಬಗೆಯಾಗು ; ಸಂಶಯಕ್ಕೆ ಒಳಗಾಗು : ಯುವರಾಜ ಮನಂಬಸದೊರ್ಮೆಗೆ ಸಲಿಪುದೆಮ್ಮ ಮುದು ಗಣ್ಣನಮಂ (ಆದಿಪು. ೧೪-೧೧೪): ಮನಂಬಸದೆ ಬರ್ಪುದು ನೀಮೆನೆ (ಶಂಕರಾ. ೪-೪): ದನುಜನ ಮಾಯೆಯೊಂದಿನಿಸು ಬೇಗದಿನೊರ್ಮೆಯೆ ಮಾಯುಮಾಗೆ . . . ಇದು ಮೂರ್ಛೆಯೊಂದು ಸಂಜನನಮೊ ನಿದ್ರೆಯೋಟ್ಟಿರವೊ ಮುನ್ನಱಿವಂತುಟುಮಲ್ಲದೆಂದು ತಜ್ಞನಮನಿತಂ ಮನಂಬಸುತು ಮಿರ್ದುದು (ಶಂರ್ರಪು. ೩-೬). [ಮನ + ಪಸು$_1$]

**ಮನಂಬಿಡು** (ಕ್ರಿ). ಮನಸ್ಸಿನ ನಿರ್ಧಾರವನ್ನು ಕಳೆದುಕೊಳ್ಳು; ಧೈರ್ಯ ಗೆಡು ; ಎದೆಗುಂದು : ಅಸುವಂ ಬಿಡೆ ತನುಜನಂ ನೋಡಿ ತಾಯ್ತಾಯ್ ಬಿಡದೆ ವೈದ್ಯರನೀಗ ಕರೆಯೆನ್ನದೆ ಮನಂಬಿಡದೆ ಕಡಿಕ ಹುಳು ಕಚ್ಚಿತ್ತು ಮಗನಂ ಸುಡುಸುಡೀ ಸಂಸಾರವೆನ್ನದೆ (ಬಸವ. ೪೮-೯). [ಮನ + ಬಿಡು$_1$]

**ಮನಂಬೀಱು** (ಕ್ರಿ). = ಮನಂಬಿಡು : ಜೀವೊಡೆಯ ವೈರಿಗಜಂಗಳಜಂ ಗಳಂತೆ ಕಾಯ್ದಾಱಿದುವಾ ಖಗೇಶ್ವರನ ಕಟ್ಟು ಕಟಿಲ್ಪುದು ಮೇಚರರ್ ಮನಂಬೀಱಿದರ್ (ಶಾಂತಿಪು. ೪-೪). [ಮನ + ಬೀಱು]

**ಮನಂಬುಗಿಸು** (ಕ್ರಿ). ೧. ಮನಸ್ಸಿಗೆ ತಿಳಿಯುವಂತೆ ಮಾಡು; ಮನದಟ್ಟು ಮಾಡು : ಅಣುವ್ರತಾದಿಗಳನನಾಕುಲಂ ಬೆಸಸಿದಂ ಮುನಿಪುಂಗವನಾನವಂ ಮನಂಬುಗಿಸಿದೆಂ (ಸುಕುಮಾ. ೩-೪೬): ಆಕಾರ ಜೀವ ಸಂಪ್ಕಾರಚನೆಯೊಳು ಮುನ್ನಮಂಕಸಂದೃಷ್ಟಿಯಿಂದಂ ಮನಂಬುಗಿಸಲ್ವೇಡೆ (ಗಣಿತಸಾ. ೩೩-೩). ೨. ಮನಸ್ಸು ಒಪ್ಪು,—ಮೆಚ್ಚು : ನಾಗಕನ್ನೆಯರುಂ ತಾನುಂ ಮನಂ ಬುಗಿಸುವಂತೆ ಮಜ್ಜನಂಬುಗಿಸಿ (ಶಂಕರಾ. ೪-೦೬ ಪ). ೩. ಗಮನಿಸು; ಲಕ್ಷಿಸು : ಪೆರ್ಮೆಯಿನಾರ್ ಮನಂಬುಗಿಸರೀ ಬಂಧನಂದನನಂದಮಂ (ಶಬ್ದ. ೦-೮೦). [ಮನಂಬುಗು + —ಇಸು$_3$]

**ಮನಂಬುಗು,** ಮನಬೊಗು (ಕ್ರಿ). ೧. ಅಂತರಂಗವನ್ನು ಪ್ರವೇಶಿಸು : ಚಿತ್ತಕ್ಕೆ ನಾಟು : ನೆಗಟ್ಟರಿಗನ ಸಾಹಸಮೊರ್ಮೆಗೊರ್ಮೆ ಕೆಲದವರ ಮಾತಿನೊಳ್ ತನ್ನ ಮನಂಬು[ಕಾಕಾಂ. ವಿ]ಗೆ (ಶಂಕರಾ. ೭-೪೩) : ಗುಹಾಂತದೊಳ್ ಕಂಡು ಮನಂಬುಗೆ ತಂದು ತನ್ನ ರಥಮಂ ಸೂಗಯಿಸಿ ಪೂದಲ್ಕೆ (ಶೀಲಂ. ೩-೭೮) : ಲಕ್ಷಣಾಚಾರ್ಯರ್ ಪೇಟಿಂದು ಬೆಸಸೆ ಮನಂಬುಗುವಂತೆ ಪೇಟ್ಟಿಂ (ಶಮದ. ೩ ಪ್ರ.ತಿ.). ೨. ಮನಸ್ಸನ್ನು ಸೆಳೆ,—ಆಕರ್ಷಿಸು : ಅಲರಂಬುಪೊಲೆಳಸ[ಸಿ] ಪಾಟಲಲೋಲವಿಲೋಚನಂ ಮನಂಬುಗೆ ನಳತೋಳ [ಕೋ]ಳಿಸೆಯೆ ಘಟ್ಟಿಮಗುಟ್ಟುವ ಘಟ್ಟವಳ್ತಿಯುಂ . . . ಭೋಂಕನೆ ಕಂಡು (ಶಂಕರಾ. ೮-೩೯); ತೊವಲ್ಪುಡಿಯ ಸೊಗಸು ತಳ ರ್ನಡೆಯು ಗಾಡಿ ಮನಂಬುಗೆ ಕಣ್ಗಿಂಪಾದರಾ ಲಂಬಾಲಕರ್ ಬಾಲಕರ್ (ರಾಮಾಶ್ವ. ೦೩೦-೨೯). ೩. ಮನಸ್ಸಿಗೆ ತೃಪ್ತಿಯಾಗು ; ಮನದಣಿ : ಭೂದೇವಿಯುಂ ಮನಂಬುಗೆ ಪೂಜೆಗೆಯ್ದು ಬಾಳೆಗಳ್ ಮೆಱೆದುವು (ಕರ್ಣಾ. ೮-೩೩) ; ಮಧುಮಾಸದೊಳ್ ಕೈವಂದ ಮಾಮರನೆಳದಳಿರಂ ಮನಂಬುಗೆ ಸವಿದು (ರಾಮಾಶ್ವ. ೨೩-೦೨). **ಮನಬೊಗು :** ೧. ಆ ನಿಮ್ಮ ಮನಬೊಗು ವನ್ನಕ್ಕ ನೀವೆನ್ನ ಮನಬೊಗುವನ್ನಕ್ಕ ಕಾಯಗುಣಂಗಳ ಕಳೆದವರಿಗೆ ಶರಣೆಂಬೆ ಕೂಡಲಸಂಗಮದೇವಾ (ಬಸವ. ೩೦೨).

[ಮನ + ಪುಗು (< ಪೊಗು)]

**ಮನಂಬೊಯ್** (ಕ್ರಿ). ಮನಸ್ಸಿಗೆ ತಿಳಿಯುವಂತೆ ಮಾಡು; ಮನದಟ್ಟು ಮಾಡು : ಮಿಥ್ಯಾಮಾರ್ಗಮಂ ಪೊರ್ದಿ ರೂಢಿಯ ಸದ್ಧರ್ಮದೊಳತ್ತಿ ವಟ್ಟವನುಮಂ ಮತ್ತಂ ಮನಂಬೊಯ್ದು ಜೈನಯತೀಂದ್ರೋತ್ತಮರೆಂದು ನಿಟ್ಟೆಗೊಳಿಸಲ್ಕೆಂತುಂ ಪೆಱರ್ಗಲ್ಲರೇ (ಸಮಯ. ೪-೪೩). [ಮನ + ಪೊಯ್$_2$]

**ಮನಂಬೊರೆ** (ಕ್ರಿ). ಅಂತರಂಗವನ್ನು ಸಂತೋಷಪಡಿಸು; ಹೃದಯಕ್ಕೆ ಸಂತೋಷವನ್ನುಂಟುಮಾಡು : ಮಂದಿರಮಂ ಪೊಕ್ಕು ಸಮುಸ್ಸಮಸ್ತು

ಸುಖಿಸ್ಯನ್ನುಗಳಿಂದಂ ಮನಂಬೊರೆದು ಘೂಪತಿ (ಅನಂಪು. ೧೦-೨೩).

[ ಮನ + ಪೊರೆ ]

**ಮನಂಮಿಗು, ಮನಮಿಗು** (ಕ್ರಿ). ಮನಸ್ಸಿನ ಸತ್ತ್ವ ಕುಸಿ; ಎದೆಗುಂದು; ಸ್ಥಿರತೆ ಮೀರು : ಮಂಗನಂ ನೋಡಿ ತಾರಾಹೀಡವೇದಂ . . . ಕರೆದು ತಟ್ಕೈಸಿ ಘೋಂಕಸನೆ ಮನಂಕಲಂಕೆ ಮನಂಮಿಕ್ಕುನಿರಸುಸಿರದೊಲ್ಲದೆ (ರಾಮಾಂ. ೩೦೭) ; ಕರುಣಾರಸಾರ್ದ್ರಪ್ರದಮನಾಗಿ ಮನಂಮಿಕ್ಕು ಬಿನ್ನ ನಾಗಿರ್ದ ಜಿಂಗಳಕನಲ್ಲಿಗೆ ವವಸಕಂ ಬಂದು (ಕಂತಕಂ. ೧೮೦-೦೦). ಮನ ಮಿಗು : ಅಜ್ಞಾನಿಗಳಂತೆ ವಿಪ್ರಳಾಪಂಗೆಯ್ದುಯಪ್ಪೊಡೀ ಕೂಸುಗಳ್ ಮನಮಿಕ್ಕಿಮುಂಮೆರ್ದಯಿಕ್ಕಿಯುಂ ಕಿಡುಪರ್ (ಕಂಠಾ. ೩-೨೮ ಪ) ; ನಿಡು ಸುಯ್ಯುಸೆ ತನಗೆತ್ತಲ್ ಮನಮಿಕ್ಕೊಯ್ಯನೆ ನುಡಿದಂ ಪತ್ರಲೇಖೆ ಗವನಿಪತನಯಂ (ಕಾದಂಬ. ೪೯೩) ; ಬಹುವರ್ಣಾಪಾಜಿರಾಜಿಗಳೆಮನಸೆರ್ವಿ ನೋಡಿ ಮನಮಿಕ್ಕಿ ಗಟ್ಟಲ್ಲಸೆ ಸತ್ತು (ಎಕ. VII. ಶಿಕಾ. ೦೫೦-೩೯; 1047).

[ ಮನ + ಮಿಗು ]

**ಮನಃಕಂಪ** (ನಾ). ಅಂತರಂಗದಲ್ಲಿ ಉಂಟಾಗುವ ನಡುಕ : ಮನಸ್ಸಿನ ಭೀತಿ : ಎನ್ನ ನುಡಿದ ನುಡಿಯೋ ತನಗೆ ಮನಃಕಂಪಮಂ ಪಡೆಯೆ (ಅಂಪು. ೩-೩೯ ಪ). [ಸಂ.]

**ಮನಃಕ್ಲೇಶ** (ನಾ). ಅಂತರಂಗದಲ್ಲಿ ಉಂಟಾಗುವ ವ್ಯಥೆ; ಮನಸ್ಸಿನ ಸಂಕಟ : ಕೆಲವುಕಾಲ ಮನಃಕ್ಲೇಶವನ್ನು ಸಹಿಸಿಕೊಳ್ಳಬೇಕು (ಕಾವ್ಯ. ೩); ಅದು ಮನಃಕ್ಲೇಶವನ್ನುಂಟು ಮಾಡುತ್ತದೆ (ಬದುಕು. ೯೯). [ಸಂ.]

**ಮನಃಕ್ಷತ** (ನಾ). ೧. ಅಂತರಂಗಕ್ಕೆ ಬಿದ್ದ ಪೆಟ್ಟು; ಮನಸ್ಸಿನ ವೇದನೆ,-ನೋವು : ಗಾಂಧಾರಿಯುಂ ಧೃತರಾಷ್ಟ್ರನುಂ ಶೋಕಾಕುಲೀಕೃತಚಿತ್ತರಾಗಿ ತಮ್ಮ ಮಗನಸಾವುಮ್ಯಲುಂ ಮನಃಕ್ಷತಮನಾಱಸಲುಮೊಂದಿಸುತ್ತಂ ಬಂದು (ಗದಾಯು. ೩-೩೩ಪ ) ; ತಲೆದೋರ್ಪ ಮನಃಕ್ಷತಾಂಕುರಮಂ ಧೃತಿಸಾಹಸ್ರದಿಂ ಚಿವುಂಟಿ (ರಾಜಶೇ. ೦೯-೩೯ ಪ). ೨. ಅಂತರಂಗದಲ್ಲಿ ಗಾಯಗೊಂಡವನು ; ಮನಸ್ಸಿಗೆ ನೋವುಂಟಾದವನು : ಮನಃ ಕ್ಷತನಾಗಿ ಸಿಗ್ಗಾಗಿ ತಲೆಯಂ ಬಾಗಿ ಧರ್ಮಸಂದವನನರೆ (ಗದಾಯು. ೬-೩೯ ಪ). [ಸಂ.]

**ಮನಃಕ್ಷತಂಬಡು** (ಕ್ರಿ). ಅಂತರಂಗದಲ್ಲಿ ಗಾಯಗೊಳ್ಳು; ಮನಸ್ಸಿಗೆ ನೋವುಂಟಾಗು ; ವ್ಯಥೆಪಡು : ಬಲಾಕ್ಕಡಂಗಿದ ಸಿಂಹನಾದಕ್ಕೆ ಮನಃಕ್ಷತಂಬಟ್ಟು (ಕಂಠಾ. ೦೦-೦೯೯ಪ) ; ಪೆಟ್ಟಿ ಮನಃಕ್ಷತಂಬಟ್ಟು . . . ಪಯೋಣಂಬೋದಂ (ಕಂಠಕಂ. ೨೯-೯). [ಮನಃಕ್ಷತ + ಪಡು]

**ಮನಃಕ್ಷೋಭೆ** (ನಾ). ಅಂತರಂಗದ ತಳಮಳ; ಮನಸ್ಸಿನ ಕಳವಳ : ಇದು ವಿರೂಪಾಕ್ಷನ ಮನಃಕ್ಷೋಭದ ವಿಕಾರವಲಾ (ಕುಮಾ.ಗ. ೯-೨೦). [ಸಂ.]

**ಮನಃಖೇದ** (ನಾ). ಅಂತರಂಗದ ವ್ಯಥೆ ; ಮನಸ್ಸಿನ ಕ್ಲೇಶ : ನಾಡೆಯುಂ ಮನಃಖೇದವಿವದಂ ಪ್ರತಿಬೋಧಿಸಿ ನಿಜಾಪಥಿಯಂ ಕಳೆಯಂ ಮಾಣಿಸಿತ್ತರಾ (ಅಂಪು. ೨-೩೩). [ಸಂ.]

**ಮನಃಪರಿಪಾಕ** (ನಾ). ಅಂತರಂಗದ ಪರಿಪೂರ್ಣತೆ ; ಮನಸ್ಸಿನ ಪರಿಪಕ್ವತೆ : ಜ್ಞಾನ- ಕರ್ಮ-ಇವೆರಡೂ ಮನಃಪರಿಪಾಕಕ್ಕೆ ಹೇತುಗಳಾಗಿವೆ (ಭಾರತ. ೨೬೩). [ಸಂ.]

**ಮನಃಪರ್ಯಾಯ** (ನಾ). [ಜೈನ] ಮತಿ, ಶ್ರುತ, ಅವಧಿ, ಮನಃ ಪರ್ಯಾಯ ಮತ್ತು ಕೇವಲವೆಂಬ ಐದು ವಿಧವಾದ ಜ್ಞಾನಗಳಲ್ಲಿ ಒಂದು; ಬೇರೆಯವರ ಅಂತರಂಗದಲ್ಲಿರುವುದನ್ನು ತಿಳಿದುಕೊಳ್ಳುವ ಜ್ಞಾನ : ಮಹಾವಿಕರಕ್ಕಾದರವಧಿ ಮನಃಪರ್ಯಾಯಮೆರಡುಮಣಂ ಪುಟ್ಟಿವೆಂದು ಪಂಬು ಪರೇಂದ್ರಾ (ಅಂಪು. ೦೩-೯೩) ; ಪ್ರತಿಬಂಧಕವು ಶಾಂತವಾದರೆ ಪರಮನೋಗತ ವಿಷಯವನ್ನು ತಿಳಿಯುವ ಜ್ಞಾನವು ಉದಯಿ ಸುವುದು. ಇದೇ ಮನಃಪರ್ಯಾಯ (ಬಂದಶಾ. ೬೭). [ಸಂ.]

**ಮನಃಪೂರ್ವಕಂ** (ಅ). ಅಂತರಂಗ ಪೂರ್ತಿಯಾಗಿ : ಇದಕೋ ಮನಃ ಪೂರ್ವಕಂ ಕೊಟ್ಟೆನೆಂದು ನುಡಿದ ಜನಪತಿಯ ಧೈರ್ಯಕ್ಕೆ ಬೆಱಗಾಗಿ (ಪಶಕಾ. ೬-೯೩).

ಮನಃಪೂರ್ವಕವಾಗಿ = ಅಂತರಂಗಪೂರ್ವಕವಾಗಿ : ಪದ್ಮಬಸ್ತಿನ ಬಾಂದುಕಲ್ಲುಗಳನ್ನು ಮನಃಪೂರ್ವಕವಾಗಿ ಕಿತ್ತಿಸೆಯುವುದೂ ಉಂಟು (ಸಾಹಿತ. ೩೮); ನಿರ್ಮಲಿಯನ್ನು ನಾನು ಮನಃಪೂರ್ವಕವಾಗಿ ಒಪ್ಪಿದ್ದೇನೆ (ಮೂರುನಾ. ೦೩೭). [ಸಂ.]

**ಮನಃಪ್ರವೀಚರಣ** (ನಾ). ಅಂತರಂಗದ ಮೂಲಕ ಇಂದ್ರಿಯ ಸುಖವನ್ನು ಅನುಭವಿಸುವಿಕೆ : ಒಯ್ಯನೆ ಪೊಯ್ಯುದೊಂದು ಪೆರ್ಚಿದಪ್ಪದೆ ಚುಂಬಿಸದಿಂಪ ದೇವಿಯರ್ . . . ಕೂಡಿಸದ ಕೂಟದ ಸಂತಸಮೆಂಬಿವೆಲ್ಲ ಮಾರಯ್ಯ ಮನಃಪ್ರವೀಚರಣದಿಂ ಸಮನಿಸಿಂದು (ತಂತ್ರ. ೯ ೩೬). [ಸಂ.]

**ಮನಃಪ್ರವೀಚಾರ** (ನಾ). ೧. = ಮನಃಪ್ರವೀಚರಣ : ಮಾಡೇವಿ ಯರ್ಪ್ಪರ್ ಮದನೋದಯಮುಮಂ ಕುಡೆ ಮನಃಪ್ರವೀಚಾರದೊಳಂತಿ ದೇವಂ ಸುಚಿತವುಣ್ಯೋದಯಾನಿತು ಮುಖಿಯುಂ ಕೈಕೊಂಡಂ (ಅಂಪು. ೩-೦೯). ೨. ಮನಸ್ಸಿನಲ್ಲಿ ಇಂದ್ರಿಯ ಸುಖವನ್ನು ಅನುಭವಿಸುವವನು : ದೊರೆಯೆನೆ ಮಹಾದೇವಿಯರೆಲ್ಲರಾಗೆ ತಣಿದಂ ಮನಃಪ್ರವೀಚಾರಂ ತತ್ಸುರಪತಿ ಸುರಲೋಕ ಸುಖಾಂಬುರಾಶಿಯೊಳ್ ಕೂಡಿ ಮೂಡುತ್ತುಂ ಮುಳುಗುತ್ತುಂ (ಶಾಂತೀಪು. ೯-೦೦೨). 'ಪ್ರವೀಚಾರ' ನೋಡಿ. [ಸಂ.]

**ಮನಃಪ್ರವೃತ್ತಿ** (ನಾ). ಮನಸ್ಸಿನ ಸ್ವಭಾವ : ಮನೋಧರ್ಮ : ಮಹಾಕ್ಕರದೆಮಗಾಗಳುಂ ವ್ಯಪಥಯುಕ್ತನವಿಪ್ಪ ಮನಃಪ್ರವೃತ್ತಿಯುಂ (ಅಂಪು. ೦-೮); ಕಥಾಕಾವ್ಯಗಳೂ ಆ ಕಾಲದ ಜನರ ಮನಃಪ್ರವೃತ್ತಿಯ ಏಕತನೆಯ ದ್ಯೋತಕಗಳಾಗಿವ್ದಾವೆ (ಕಾ.ಚ.ಕ. ೦೩). [ಸಂ.]

**ಮನಃಪ್ರಿಯ** (ಗು). ೧. ಅಂತರಂಗಕ್ಕೆ ಬೇಕಾದ,-ಪ್ರಿಯವಾದ. (ನಾ). ೨. ಅಂತರಂಗಕ್ಕೆ ಬೇಕಾದವನು ; ಮನದನ್ನ ; ಪ್ರಿಯ ತಮ : ಮುಳಿದು ಮನಃಪ್ರಿಯಂ ಪೆಱಗುಗೆಯ್ದಿರೆ (ಅಂಪು. ೦೨-೦೩) ; ಶ್ರೀವನಿತೆಯೆನಿಪ್ಪ ಧನಶ್ರೀಮಾತೆ ಮನಃಪ್ರಿಯಂ ಕೆಲಕ್ಕೇಟ್ಟಿರೆ (ಶಬ್ದವು.೯-೦). [ಸಂ.]

**ಮನಃಪ್ರಿಯೆ** (ನಾ). ಅಂತರಂಗಕ್ಕೆ ಬೇಕಾದವಳು : ಮನದನ್ನೆ : ಪ್ರಿಯತಮೆ: ಮೇಘರಥನ ಮನಃಪ್ರಿಯೆಯಾಗಿರ್ದಾ ಪ್ರಿಯಮಿತ್ರೆಯು ರೂಪಂ ಸಭೆಗೆ ಪೊಗಟ್ಟನೀಶಾನೇಂದ್ರಂ (ಶಾಂತಿಪು. ೯-೦೦೦).

[ ಸಂ. ಮನಃಪ್ರಿಯಾ ]

**ಮನಃಸ್ಖಲಿತ** (ನಾ). ಮನಸ್ಸಿನ ಧೈರ್ಯ ಕುಗ್ಗಿದವನು : ಎದೆಗುಂದಿ ದವನು : ನಿರ್ಮಲಗುಣರತ್ನ ಮುಕ್ತಿಪದಭಕ್ತ ಕಳಂಕವಿರಕ್ತ ನೀಂ ಮನಃ ಸ್ಖಲಿತನೆಯಾಗದಿರ್ (ಶಬರಂ. ೧೬೩-೨೮). [ ಸಂ. ]

**ಮನಕತ** (ನಾ). ಅಂತರಂಗಕ್ಕೆ ಬಿದ್ದ ಪೆಟ್ಟಿನಿಂದಾಗಿ ಉಂಟಾದ ದುಃಖ; ವ್ಯಥೆ : "ಮನಕತ,ಮನಃಕ್ಷತ=ವ್ಯಥೆ. ಸಿಟ್ಟು "(ತತ್ತ್ವಕೋ. ೩೩); ಮನಕತದಿಂದೋದೊರ್ದಿಸಿಸಸನಗೆ ಬಿರ್ದಿಸಿಸೆ ನಿಜಾಗಂ ತಮಗಂ ಮುನಿಸುಂಟೆ (ಕಂಠಾ. ೯-೩೮). [ < ಸಂ. ಮನಃಕ್ಷತ ]

**ಮನಗಲಿ** ' ಮನಂಗಲಿ ' ನೋ.

**ಮನಗಲಿತನ** (ನಾ). ಅಂತರಂಗದ ಕೆಚ್ಚು ; ಮನಸ್ಸಿನ ಧೈರ್ಯ : ಕೈಯಳವ ಮನಗಲಿತನವಳವ ಎಲೆಗಾಜಿತನವಳವ ಬಲಿಯಿರೇ . . . ಎನುತವೆ ಫಲುಗೆಣನು ಕೃಷ್ಣುಕ್ಕಿದನು ಗಂಗಾತ್ಮಜನವನಲಿ (ಕುಮಾ.ಗ. ೯-೩೦). [ ಮನಗಲಿ ( < ಮನಂಗಲಿ ) + -ತನ ]

**ಮನಗಳ್ಳ** (ನಾ). ಮನಸ್ಸಿನಲ್ಲಿ ವಿಚಾರವಮಾಡಲು ಆಲಸ್ಯಪಡುವವನು : ಮನಗಳ್ಳರಾದ ಮೈಗಳ್ಳರಿಗೆ ಸೃಷ್ಟಿಯೊಳಗಿನ ಎಷ್ಟೋ ಭಾಗವು . . .

ಸೀತೆಯು ಪಸರವಾಗಿ ತೋರುವುದು (ಚಕಾವು. ೭೦). 'ಮೈಗಳ್ಳ' ಪರಾ. [ಮನ + ಕಳ್ಳ₁]

**ಮನಗಳ್ಳತನ** (ನಾ). ಮನಸ್ಸಿನಲ್ಲಿ ವಿಚಾರಮಾಡಲು ಆಲಸ್ಯಪಡುವುದು ; ವಿಚಾರಹೀನತೆ : ನಾವು ಮನಗಳ್ಳತನವನ್ನು ಬಿಟ್ಟು ವಿಚಾರ ಮಾಡಲಿಕ್ಕೆ ಬೇಕು (ಚಕಾವು. ೧೩). 'ಮೈಗಳ್ಳತನ' ಪರಾ. [ಮನಗಳ್ಳ + — ತನ]

**ಮನಗಾಣ್** 'ಮನಂಗಾಣ್' ನೋ.

**ಮನಗಾಣಿಕೆ** (ನಾ). ಮನಸ್ಸಿಗೆ ಸ್ಪಷ್ಟವಾಗುವಿಕೆ : ತಮ್ಮ ತಮ್ಮ ಮತ ನಿಜವೆಂದು ಮತ್ತೊಮ್ಮೆ ಕೊನೆಯ ಮನಗಾಣಿಕೆಯಾಯಿತು (ಅರಾಶ. ೬೪). [ಮನಗಾಣ್ (< ಮನಂಗಾಣ್) + — ಇಕೆ]

**ಮನಗಾಣಿಸು** (ಕ್ರಿ). ಮನವರಿಕೆ ಮಾಡಿಕೊಡು: ಮನದಟ್ಟುಮಾಡಿಸು: ಒಳದೇಶದ ವ್ಯಾಪಾರವು ಸುವ್ಯವಸ್ಥಿತವೂ ಅಭಿವೃದ್ಧಿಕರವೂ ಆದ ರಚನಾ ಕ್ರಮಗಳಿಂದ ಕೂಡಿದ್ದಿರಬೇಕೆಂಬ ಮುಖ್ಯಾಂಶವನ್ನು ಮನಗಾಣಿಸುತ್ತದೆ (ದವಾ. ೩೯): ಸಂಸ್ಕೃತವು . . . ಅಮೃತವಾಣಿಯಾಗಿ ಕಂಗೊಳಿಸುತ್ತಿದೆ ಯೆಂಬುದನ್ನು ಅಷ್ಟೇನೂ ಕಷ್ಟವಿಲ್ಲದೆ ಮನಗಾಣಿಸಬಹುದು (ಸವಾರಿಶ. ೧೨೯). [ಮನಗಾಣ್ (<ಮನಂಗಾಣ್) + — ಇಸು₃]

**ಮನಗಾಣು** 'ಮನಂಗಾಣ್' ನೋ.

**ಮನಗುಂದು** 'ಮನಂಗುಂದು' ನೋ.

**ಮನಗುಡು** 'ಮನಂಗೊಡು' ನೋ.

**ಮನಗುಣ** (ನಾ). ಮನಸ್ಸಿನ ಗುಣ ; ಅಂತರಂಗದ ಸ್ವಭಾವ : ಚಿತ್ತವೃತ್ತಿ : ಅಂತರಂಗದಲ್ಲಿ ಸುಳಿದಾಡುವ ತನುಗುಣಾದಿಗಳ ಮನಗುಣಾದಿಗಳ ಪ್ರಾಣಗುಣಂಗಳ ಕಳೆವಲ್ಲಿ ಶರಣರಪರಿ (ಅವತಂ. ೯೦-೯೦೪). [ಸಂ.]

**ಮನಗುದಿ** (ನಾ). ಅಂತರಂಗದ ಸಂತಾಪ ; ಮನಸ್ಸಿನ ಬೇಗೆ : ತನ್ನ ಒಳಗಿನ ಮನಗುದಿಯನ್ನು ತನ್ನೊಳಗೇ ಇರಿಸಿಕೊಂಡು, ಎಂದಿನಂತೆ ಮನೆಯಲ್ಲಿ ಓಡಿಯಾಡತೊಡಗಿದಳು (ಕಲ್ಲಣ. ೧೧೪). [ಮನ + ಕುದಿ₃]

**ಮನಗೂಡು** 'ಮನಂಗೂಡು' ನೋ.

**ಮನಗೆಲವು** (ನಾ). ಅಂತರಂಗದ ಸಂತೋಷ : ಆತನಂಬೈದಾಜಿ ಮನ್ನಿಸಿ ಸೋತವೊಲು ಮನಗೆಲವ ಮಾಡಿ ನಿಶಾತಶರದಿಂದಿಳುಹಿದನು ಶಲ್ಯಾನುಜನ ಶಿರವ (ಕುಮಾವ್ಯಾ. ೩-೩೪). [ಮನ + ಗೆಲವು (< ಗೆಲ್ವು) ]

**ಮನಗೊಡು** 'ಮನಂಗೊಡು' ನೋ.

**ಮನಗೊಳ್** 'ಮನಂಗೊಳ್' ನೋ.

**ಮನಗೊಳಿಸು** 'ಮನಂಗೊಳಿಸು' ನೋ.

**ಮನತಣಿ** 'ಮನಂದಣಿ' ನೋ.

**ಮನತರು** 'ಮನಂದರ್' ನೋ.

**ಮನದಟ್ಟು₁** (ಕ್ರಿ). ಅಂತರಂಗವನ್ನು ತಾಕು ; ಚೆನ್ನಾಗಿ ತಿಳಿ : ಸ್ಪಷ್ಟವಾಗಿ ಗೊತ್ತಾಗು : ಹುಟ್ಟಿತಾಗಳೆ ನಸುನಗೆ ಮೊಗದೊಳು ಮನದಟ್ಟಿತಾತಗೆ ಚಕ್ರಧರಗೆ (ಶರತ. ೧-೧೨೩); ಕೇಳಿದೊಡನೆಯೇ ರಸಭಾವಗಳು ಮನದಟ್ಟುವ ಶಬ್ದಾರ್ಥಗಳ ಜೋಡಣೆ (ಸಾಹಿದೀ. ೧೨೬). [ಮನ + ತಟ್ಟು₁]

**ಮನದಟ್ಟು₂**, ಮಂದಟ್ಟು (ನಾ). ಮನವರಿಕೆಯಾಗುವುದು : ಚೆನ್ನಾಗಿ ತಿಳಿಯುವುದು : ಯುದ್ಧವೇ ಪ್ರಾಪ್ತವಾಗುತ್ತದೆಂದು ನಗರದ ನವಾಬರಿಗೆ ಮನದಟ್ಟಾಗಿದೆ (ಬೀಲಕ್. ೪೩) ; ನನಗೇನೋ ಧರ್ಮದ ಸಿದ್ಧಾಂತಗಳು ಚೆನ್ನಾಗಿ ಮನದಟ್ಟಾಗಿದ್ದವು (ರಾಯುಕ. ೩೭) . **ಮಂದಟ್ಟು** : ಈ ಬಾಬತ್ತು ಇಲಾಖೆಗಳ ಮುಕುಂಗಳನ್ನು ಮಂದಟ್ಟುಮಾಡಿಕೊಂಡಿರಬೇಕಾದುದು ಅವಶ್ಯಕವಾಗಿದೆ (ನ್ಯಾತಂಕ. ೭೦); ಈಶನಿಗೆ ಜಾತಿಯಿಲ್ಲವೆಂಬ ತತ್ತ್ವವನ್ನು ಜನರಿಗೆ ಮಂದಟ್ಟಾಗುವಂತೆ ತನ್ನ ವಚನಗಳಲ್ಲಿ ಬೋಧಿಸಿದನು (ಕಾರತ. ೪೦೨). [ಮನ + ತಟ್ಟು₂]

**ಮನದಣಿ** 'ಮನಂದಣಿ' ನೋ.

**ಮನದನ್ನ** 'ಮನ' ಪರಾ.

**ಮನದನ್ನೆ** 'ಮನ' ಪರಾ.

**ಮನದರ್** 'ಮನಂದರ್' ನೋ.

**ಮನದಿರುಹು** (ಕ್ರಿ). ವಿಮುಖವಾಗು; ವಿರೋಧವಾಗು : ರಘುನಾಥ ಸೀತೆಯು ವಿದೆಯದಿಂದೊಡಗೊಳ್ಳು. ನೀ ಮನದಿರುಹಿದರೆ ಶಿವನಾಣೆ (ಕೌಶಿರಾ. ೪೩-೩೦). [ಮನ + ತಿರುಹು₁ (< ತಿರಿಪು₁)]

**ಮನದೆಱೆ³** (ಕ್ರಿ). ಮನಸ್ಸಿನಲ್ಲಿರುವುದನ್ನು ಬಿಚ್ಚಿಹೇಳು : ಸಂಗನ ಶರಣರು ಮನದೆಱೆದು ಮಾತನಾಡಿದರೆ ಲಿಂಗವ ಕಾಣಬಹುದು (ಬಸವ. ೯೭೦). [ಮನ + ತೆಱೆ³₁]

**ಮನದೊಡಕು** (ನಾ). ಮನಸ್ಸಿನ ಗೊಂದಲ : ಜಿಡಿಸಿದನು ಬಳಿಕವರವರ ಮನದೊಡಕನನುಪಮ . . . ಅನುನಯೋಕ್ತಿಯಲಿ (ಕೊರಗ. ೨-೩-೨೯). [ಮನ + ತೊಡಕು₃ (< ತೊಡಂಕು₃)]

**ಮನಧರ್ಮ** (ನಾ). ಮನಸ್ಸಿನ ಪ್ರವೃತ್ತಿ; ಮನೋಧರ್ಮ : ನೀನೆನ್ನೊಳಗಿಹನೆಂಬೆನೆ ಮನಧರ್ಮವ ಮಱೆಯಿಸಿ, ಹೀನನೊಳಿಹನಾದಹನೆ (ದಶೀರವಾ. ೯-೧೩). 'ಮನೋಧರ್ಮ' ಪರಾ. [ಸಂ.]

**ಮನನ** (ನಾ). ಅಂತರಂಗದಲ್ಲಿ ಆಲೋಚಿಸುವುದು : ಮನಸ್ಸಿನಲ್ಲಿ ಮಾಡುವ ಚಿಂತನೆ : ಮನನದಿಂ ಶ್ರವಣದಿ ನಿಧಿಧ್ಯಾಸನದಿನಿವುಗಳನೊತ್ತಿ (ಕುವ್ಯಾಶ. ೧೩-೦೭): ಶ್ರವಣ ಮನನ ನಿಧಿಧ್ಯಾಸನವೆಂಬಿವೇ ಕ್ರಮದಿಂದ ಅಜ್ಞಾನಾದಿಗಳಿಗೆ ವಿರೋಧಿತ್ರಯಂಗಳವರಲ್ಲಿ . . . ಶ್ರುತ್ಯರ್ಥವನೇ ಯುಕ್ತಿಯಲಿ ಚಿಂತನಂಗೈವುದೇ ಮನನವೆನಿಸುವುದು (ವಿವೇಕ. ೪೭): ಜ್ಞಾನ . . . ಇದರಲ್ಲಿ ಶ್ರವಣ, ಮನನ ಮತ್ತು ನಿಧಿಧ್ಯಾಸನ ಎಂಬ ನಿರಂತರವಾದ ಆವೃತ್ತಿ ಸಹಿತವಾದ ಮೂರು ಅಂಗಗಳಿರುವುವು (ಪಾತತ್ತ್ವ. ೯೦೨). [ಸಂ.]

**ಮನನಿಸು** (ಕ್ರಿ). ಚಿಂತನೆಮಾಡು ; ಆಲೋಚಿಸು : ನೆನದೊಳಂ ಕನದೊಳಂ ಮನನಿಸುವೆ (ಗೀಬಿಂ. ೬-೧೧೦): ಕೆಲವು ಸಣ್ಣಕಥೆಗಳನ್ನು ಗುಣಿಸಿದ್ದೇನೆ, ಕೆಲವು ನಾಟಕಗಳನ್ನು ಮನನಿಸಿದ್ದೇನೆ (ಕಂಪಾಶಾ. ೧೨). [ಮನನ + — ಇಸು₄]

**ಮನನೀಯ** (ಗು). ೧. ಧ್ಯಾನಿಸಲು ಅರ್ಹವಾದ. — ಯೋಗ್ಯವಾದ. (ನಾ). ೨. ಚಿಂತಿಸಲು ಯೋಗ್ಯವಾದುದು; ಮನನಮಾಡಲು ಅರ್ಹವಾದುದು : "ಮನನಂ, ಮನನೀಯಂ, ಮಂತವ್ಯಂ — ಈ ೩ ನೆನೆಯಲ್ಪಕ್ಕುದು" (ಶಾಕಕ್ಕ. ೨೦೨) ; ಇಲ್ಲಿ ಕವಿಯು ಚಮತ್ಕಾರದ ಹೇಳಿಕೆಯು ಮನನೀಯವಾಗಿದೆ (ಕಸ್ತೂರಾ. ೦೯೭). [ಸಂ.]

**ಮನನೋಯು** (ಕ್ರಿ). ಮನಸ್ಸಿಗಾದ ನೋವಿನಿಂದ ವ್ಯಥೆಪಡು : ಬಱಿದೆ ಮನನೋಯದಿರು ಸಾಕು (ಕುವ್ಯಾದ್ರೋ. ೧-೭); ನಿನಗುಪಟಳಗಳುಂಟೇ ಬಱಿದೆ ಮನನೋಯದಿರು ನೀನು (ಪಳಕ. ೦-೦೩). [ಮನ + ನೋಯು (< ನೋ)]

**ಮನಪೆಚ್ಚು** 'ಮನಪೆರ್ಚು' ನೋ.

**ಮನಪೆರ್ಚು**, ಮನಪೆಚ್ಚು (ಕ್ರಿ). ಅಂತರಂಗವು ಉಬ್ಬು : ಉತ್ಸಾಹಗೊಳ್ಳು : ಕೆಲಬಲದಿ ಪಾಲ್ಗೊಂಡು ನಿಂದಿಹ ಪೂರ್ಣಯಿಂದುವದನೆಯರನೀಕ್ಷಿಸುತ ಮನಪೆರ್ಚಿ ಸಾನಂದದಿಂದೈತಂದು . . . ಸುಖಾಸನದೊಳು ಸಂದು ಸನ್ಮೂರ್ತಿಗೊಂಡಿರಲು (ಸವಮೋ. ೦೬-೪೨). **ಮನಪೆಚ್ಚು** : ಎಚ್ಚರ ಪರಾಕು ಉಘೆ ಎಲು ಕಳಿಯಾಶ ಮನಪೆಚ್ಚಿ . . . ಪರಕರದಿ ಸನ್ನೆಗೈದಂ ಕರೆವುದು (ಸವಮೋ. ೨೦-೨೦). [ಮನ + ಪೆರ್ಚು₁]

**ಮನಬರಡ** 'ಮನಬಜಿಡ' ನೋ.

**ಮನಬಜಿಡ**, ಮನಬರಡ (ನಾ). ಅಂತರಂಗದಲ್ಲಿ ಹುರುಳಿಲ್ಲದವನು : ಮಾನಸಿಕಧೈರ್ಯ ಅಥವಾ ಸ್ಥೈರ್ಯಗಳಿಲ್ಲದವನು : ಅವಿವೇಕಿ

ಸುಕೃತದೇಗೆಯು ಮನವರಿಸುವೊಡಳವಲ್ಲವೆನ್ನಯ ಷಣ್ಮುದನುವಿನ ಬೆಳಸಂತಿಹುದೊ (ಶಂಕರ. ೯-೦೦೬).

[ಮನ + ಬರ್ (< ವರ್) + —ಇಸು$_{3}$]

**ಮನವಾರ್** ' ಮನವರ್ಾರ್ ' ನೋ.

**ಮನವಾರತೆ** ' ಮನೆವಾಟಿಕ್ತೆ ' ನೋ.

**ಮನವಾರ್ತೆ** ' ಮನೆವಾಟಿಕ್ತೆ ' ನೋ.

**ಮನವಾಟಿಕ್ತೆ** ' ಮನೆವಾಟಿಕ್ತೆ ' ನೋ.

**ಮನವಿ**, ಮನವೆ, ಮನುವೆ (ನಾ). ೧. **ಬೇಡಿಕೆ**; ಬಿನ್ನಹ; ವಿಜ್ಞಾಪನೆ: ಇದೆ ಕೊನೆಯ ಮನವಿಯೊಡೆಯಾ (ಗಿರಿಜಾ. ೬೨-೬೩); ಆ ವ್ಯಕ್ತಿಯು ತನ್ನ ಪರವಾಗಿ ಮನವಿಯನ್ನು ಮಾಡಿಕೊಳ್ಳಲು . . . ಅವಕಾಶ ಕೊಡತಕ್ಕುದು (ಕಾರಾಶ. ೧೪); ವಾಚಕರಲ್ಲಿ ಮತ್ತೊಂದು ಮನವಿ (ಕುಟುಂ. ೬). ೨. ಲಿಖಿತದ ಮೂಲಕ ಮಾಡಿಕೊಳ್ಳುವ **ಅರಿಕೆ**: **ಅರ್ಜಿ**: ನಾವು ನಮ್ಮ ಮನವಿಯನ್ನು ಕಳುಹಿಸಿದರೆ ಅವರಿಂದ ಉತ್ತರ ಬರಲು ತಡವಾಗುತ್ತದೆ (ಕೃಷಾಕ. ೬೦); ಅವರಿಗೆ ಬೆಂಬಲ ಕೊಟ್ಟದ್ದರೆ ಅವರ ಮನವಿಗೆ ಹೆಚ್ಚು ಬಲ ಸಿಕ್ಕುತ್ತಿದ್ದಿತು (ಶಾಗ್ಮ. ೪೪). **ಮನವೆ**: ೧. ಅವಳು ನ್ಯಾಯಸ್ಥಾನಕ್ಕೆ ಮನವೆಯನ್ನು ಬರೆದುಕೊಂಡ ಳಂತೆ (ಕೃಗೂ. ೦೩೯). **ಮನುವೆ**: ೧. ನವಮುವತಿಯರ ಮನುವೆಯ ಶ್ರೀಕೃಷ್ಣನ ಕಿವಿಗೆ ಸೂಚಿಸಲ್ಪಡುವಂತೆ (ಕೃಕ್ಷಗೋ. ೪-೩೦). ೨. ಅರ್ಜಿ ಎನ್ನುವುದಕ್ಕೆ ಬದಲಾಗಿ ಮನುವೆ ಎಂತಲೇ ಬರೆಯಬೇಕು (ಕೂಕುಂಠ. ೦೬೨).

[ ?. / ತಮಿ. ಮಣು ; ತೆಲು. ಮನವಿ]

**ಮನವಿಕ್ಕು** (ಕ್ರಿ). ೧. ಮನಸ್ಸನ್ನು ಇಡು: ಇಷ್ಟಪಡು; ಬಯಸು: ಮುನಿಸತಿಗೆ ಮನವಿಕ್ಕಿದನು ಸುರನಾಥ (ಕೊರಣ. ೬-೦೨-೦೬); ಕುಮುದವನ ವಿಕಾಸಿಸುವಂ ಹಿಮಕಿರಣಂ ತಾವರೆಯನೆ ರವಿಮರಲಿಸುವಂ ಯುವಿಯವರ ಪರಕಾಂತಾಸಂಗಮದೊಳ್ ಮನವಿಕ್ಕರಲೆ ಜಿತೇಂದ್ರಿಯರಿಳೆಯೊಳ್ (ಕಾಳಂಕ. ೬೨-೦೨೮). ೨. ಮನಸ್ಸನ್ನು ಜೋಲು ಬಿಡು; ಹತಾಶೆಹೊಂದು; ಆಸೆಯನ್ನು ಕಳೆದುಕೊಳ್ಳು: ನೀಂ ಪಾರ್ಥ ತರ್ಪಯಿಂಬಾಸೆಯಿಂ ಜೀವಮಂ ಪಿಡಿದಿರ್ಪಳ್ ನೀಂ ಬಾರದೆ ಬಂದುವನೆಱದಾಗಳೆ ಮಱುಕಳಸಿ ಮನವಿಕ್ಕಿ ದಳಪ್ಪುದೆ ಬಟಿಕ್ಕಸಾಧ್ಯಮಕ್ಕುಂ (ಪಂತಕೊ. ೨೬೦-೯೯); ಬಂದು ಜವನಿಕೆಯೊಳಗೆ ನಿಂದು ಮನವಿಕ್ಕುತ್ತೆ (ಬಸಕ. ೩-೬೬). [ಮನ + ಇಕ್ಕು]

**ಮನವಿಡು** ' ಮನಮಿಡು ' ನೋ.

**ಮನವಿದಾರ** (ನಾ). ಅರ್ಜಿಯನ್ನು ಸಲ್ಲಿಸುವವನು: ಅರ್ಜಿದಾರ: ಮಿತ್ರರನೇಕರು ಮನವಿದಾರರ ಪರವಾಗಿ ಅಗ್ರಹಪೂರ್ವಕವಾಗಿ ಮಾತನಾಡಿದರು (ಬಾಡಾಶ. ೨೩). [ಮನವಿ + —ದಾರ್$_{4}$]

**ಮನವಿಭೇದ** (ನಾ). ಮನಸ್ಸಿನಲ್ಲಿ ಇರುವ ಭೇದಭಾವ: ಪಕ್ಷಪಾತ: ಎನಗೆ ಭೀಮಾರ್ಜುನರಪೂಲು ನೀನನುಜನಲ್ಲದೆ ಬೇಱೆ ನಿನ್ನೊಳು ಮನವಿಭೇದವ ಬಲ್ಲೆನೇ ಬಾಯೆನುತ ಕೈವಿಡಿದ (ಕುಮಾವ್ಯಾ. ೨-೩೯). [ಸಂ.]

**ಮನವಿಳಿ** (ಕ್ರಿ). ಮನಸ್ಸು ಇಳಿಮುಖವಾಗು; ನಿರುತ್ಸಾಹಗೊಳ್ಳು: ಮಣಗುಂದು: ಘನವೆನಿಪ್ಪಾರೋಗಣೆಯನೊರ್ಬನಿತು ಬಾಲಂಗಿಕ್ಕಲಾಱದೆ ಮನವಿಳಿವಳೆಂದದೆ ದಯಾರಸಂಭರಿತಚಿತ್ತ (ಬಸಪು. ೬-೩೨).

[ಮನ + ಇಳಿ$_{1}$ (< ಇೞ್)]

**ಮನವಿಳುಹು** (ಕ್ರಿ). ಮನಸ್ಸನ್ನು ಇಳಿಬಿಡು; ನಿರುತ್ಸಾಹಗೊಳ್ಳು: ಅಧೀರಗೊಳ್ಳು: ಎಲೆ ಮರುಳೆ ರಾಧೇಯ ಘಡ ಮನವಿಳುಹದಿರು ತಪ್ಪೇನು ಸೋಲುವು ಗೆಲವು ದೈವಾಧೀನ (ಕುಮಾವ್ಯ. ೦೩-೨೦).

[ಮನ + ಇಳುಹು$_{1}$ (<ಇೞಪು)]

**ಮನವೀ** (ಕ್ರಿ). ಮನಸ್ಸು ಕೊಡು; **ಅಪೇಕ್ಷೆಪಡು**: ಜಗುಜಾವದ ಬಲುನಿದ್ರೆಗೆ ಮನವಿತ್ತು (ಕುಂಕ. ೦೩-೬). [ಮನ + ಈ$_{2}$]

**ಮನವುಕ್ಕು** (ಕ್ರಿ). ಮನಸ್ಸು ಉತ್ಸಾಹಗೊಳ್ಳು: ಚಿಕ್ಕಸಂಬಟ್ಟಿಕ್ಕದಂ ವಿಂಗೆ . . . ಮನವುಕ್ಕಿ ಬಿಜ್ಜಳನಿರ್ದನು (ಬಸಪು. ೩೧-೨೯).

[ಮನ + ಉಕ್ಕು$_{1}$ ( <ಉಕ್ಕರ್$_{1}$ )]

**ಮನವುಬ್ಬು** (ಕ್ರಿ). = ಮನವುಕ್ಕು: ಮರ್ಘು ಭಾವೆನುತ ಪ್ರಿಯೊಲಹಿನಲಿ ಮನವುಬ್ಬಿ ನಿಂದಿದಳಧಿಕಪರುಷದಲಿ (ಕೃಷರಾ. ೮-೮೦-೩): ಶ್ರೀಶಾರದಾಂಬೆಯನದೆ ದೊದಲಿಗೆ ನೋಡಿ ಮೈಯುಬ್ಬಿ ಮನವುಬ್ಬಿ ಮಣಿದ (ಜಂಶಾಕ. ೦೬-೬೩). [ ಮನ + ಉಬ್ಬು$_{1}$ ( <ಉರ್ಬ$_{1}$) ]

**ಮನವೂಱು** (ಕ್ರಿ). ಮನಸ್ಸನ್ನು ನೆಲೆಗೊಳಿಸು: ಮಿಱದೆನೆ ಶಿವನಾಜ್ಞೆಯಂ ಮನವೂಱದೆನೆ ಮಱದನ್ಯದೈವಕೆ (ಬಸಪು. ೪೩-೦೬). [ಮನ + ಊಱು$_{1}$ ]

**ಮನವೆ** ' ಮನವಿ ' ನೋ.

**ಮನವೆರಗು** ' ಮನವೆಱಗು ' ನೋ.

**ಮನವೆಳಸು** (ಕ್ರಿ). ಮನಃಪೂರ್ವಕವಾಗಿ ಬಯಸು: ಇಚ್ಛಿಸು: ವಿಂಗೆ ಸುಖಿಸುರಿಗುಸಿರುತ ಸಂತಾನದ ಬಗೆಗಾಗ ಮನವೆಳಸಿದಳು (ಕಂಕಶ. ೪-೪೮).

[ ಮನ + ಎಳಸು$_{1}$ ]

**ಮನವೆಱಗು**, ಮನವೆರಗು (ಕ್ರಿ). ಮನಸ್ಸಿನಲ್ಲಿಯೇ ನಮಿಸು: ಈ ವೃತ್ತಾಂತಮಂ ತಾನಱದು ಬಾಚಯ್ಯಂಗಳಂ ಮನವೆಱಗಿ ಬಿನ್ನಹವಾಗಿ ಬರವೇಳ್ದಟ್ಟಿದೊಡ (ಬಸಪು. ೩೩-೬೪). **ಮನವೆರಗು**: ದೇವಂಗಳೆರಗಿ ಮನವೆರಗಿ ಸುವ್ವಿ (ಲೋಕಗೀ. ೦೬). [ ಮನ + ಎಱಗು$_{1}$ ]

**ಮನವೇಗ** (ನಾ). ಮನಸ್ಸು ಚಲಿಸುವಷ್ಟು ವೇಗ: ಮನೋವೇಗ: ಮಾನ್ಯದಿಂದೊಮ್ಮೆ ಮನವೇಗದಿಂದೊಮ್ಮೊಮ್ಮೆ ಅಕ್ರಮದೊಳೊಮ್ಮೆ ಪರಿವಿಡಿಯಿಂದಲೊಮ್ಮೊಮ್ಮೆ . . . ಬೊಬ್ಬಿಡುತೆ (ತುರು. ಭಾ. ೩-೬); ಅರರೆ ಮನವೇಗವನು ಮಿಱದ ಮರುತನಂದನನು (ಕೌಶಿರಾ. ೯-೪೯). ' ಮನೋವೇಗ ' ಪರಾ. [ಸಂ.]

**ಮನವೊಂದು** (ಕ್ರಿ). ಮನಸ್ಸಿಗೆ ಒಪ್ಪಿಗೆಯಾಗು: ವಿನಯದಿಂ ಜಂಗಮಾವಳಿಗೆ ಬಂದು ಪಾದಾರ್ಚನೆಗಳಂ ಮನವೊಂದಿ ಮಾಡಿ (ಬಸಪು. ೩೦-೨೦).

[ಮನ + ಒಂದು$_{1}$]

**ಮನವೊಪ್ಪು** (ಕ್ರಿ). ಮನಸ್ಸು ಒಪ್ಪು. - ಇಷ್ಟವಾಗು: ಹೊಸ ಮದುವಣಿಗಿತ್ತಿಯಾದ. ನಿನಗೆ ಮನವೊಪ್ಪುವಂತೆ ಧರಿಸಲು-ಒಳ್ಳೆಯ ಒಡವೆಗಳನ್ನೂ ಸೀರೆಗಳನ್ನೂ ತರುವೆನು (ಕವಿಕ. ೪೯). [ಮನ + ಒಪ್ಪು$_{1}$]

**ಮನವೊಲಿ** (ಕ್ರಿ). = ಮನವೊಪ್ಪು: ನಮಿಸುತಂ ಕಂಪಿಸುತೆ ಮನವೊಲಿದು ಹೊಗಳುತಂ (ಬಸಕ. ೩-೦೦೬); ರಾಯ ಮನವೊಲಿದೇಱಸಿದ ರೇಱುವುದು ದೊರೆ ಮನಮುಱಿಯೆ ಕುಂದುವುದು (ಕುಮಾವ್ಯ. ೦-೨೪): ರಾಯನ ಚಲುವನೀಕ್ಷಿಸಿ ನಲಿದು ಕೊಂಡಾಡಿದರು ಮನವೊಲಿದು (ಜೈಕ. ೩-೦೬); ಲಕ್ಷಿಸೇನಂ ಬೇಡ ಮನವೊಲಿದು ನೀಡಿ (ಕುಪು. ೦೩-೩).

[ಮನ + ಒಲಿ$_{1}$ (<ಒಲ್$_{1}$)]

**ಮನವೊಲಿಸು** (ಕ್ರಿ). ಮನಸ್ಸು ಒಪ್ಪುವಂತೆ ಮಾಡು: ಅವಳೇ ಅಲ್ಲವೇ ನಿರ್ಮಲೆಯನ್ನು ಕಾರವಾರಕ್ಕೆ ಕಳಿಸುವಂತೆ ನನ್ನ ಮನವೊಲಿಸಿದ್ದು (ಜಯರುಣ. ೨೪). [ಮನ + ಒಲಿಸು]

**ಮನವೊಸೆ** ' ಮನವೊಸೆ ' ನೋ.

**ಮನವೋ**, ಮನವೋವು (ಕ್ರಿ). = ಮನವೊಪ್ಪು: ರಂಭೆ . . . ಭೂತನಾಥನ ನಿಳಯಮಂ ಮನವೋತು ತೋಱದೊಡೆ (ಬಸಪು. ೪೦-೨೦). **ಮನವೋವು**: ತಮತಮಗೆಲ್ಲರುಂ ಮನವೋವಿ ಲಿಂಗೈಕ್ಯರುಗಳು ಕಂಡು (ಬಸಪು. ೩೮-೦೩). [ಮನ + ಓ$_{2}$]

**ಮನವೋವು** ' ಮನವೋ ' ನೋ.

**ಮನಶ್ಶಾಸ್ತ್ರ** (ನಾ). ಮನಸ್ಸಿನ ವ್ಯಾಪಾರ ಮತ್ತು **ಅವುಗಳ ಸ್ವರೂಪ**ವನ್ನು ತಿಳಿಸುವ ಶಾಸ್ತ್ರ: ಮನೋವಿಜ್ಞಾನ: ತತ್ತ್ವಶಾಸ್ತ್ರವೆಂದರೆ

ಮನಶ್ಶಾಸ್ತ್ರವೆಂಬ (Psychology) ಅಭಿಪ್ರಾಯವು ಕೂಡ ಕೆಲವು ತಾತ್ವಿಕರಲ್ಲಿ ಕಂಡುಬಂದಿತು (ಛೌತವಿ. ೫); ಮನಶ್ಶಾಸ್ತ್ರದಲ್ಲೂ, ಭೌತಶಾಸ್ತ್ರದಲ್ಲೂ ಆದ ಅಪಾರಸಂಶೋಧನೆಗಳು . . . ಅಧಿಕಪ್ರಭಾವಯುತವಾಗಿದ್ದವು (ಜುಶ್ಯಾರ. ೬೩ ೬೭೯೪). [ಸಂ.]

**ಮನಶ್ಶಾಸ್ತ್ರಜ್ಞ** (ನಾ). ಮನಶ್ಶಾಸ್ತ್ರವನ್ನು ಬಲ್ಲವನು : ಧಾರಣಾಶಕ್ತಿಯು ಅಭ್ಯಾಸ ಈ ರೀತಿಯಲ್ಲಿ ಹೊರಗಿನಿಂದ ಒಳಗೆ ಸಂಚಾರಿತವಾಗುವುದು ಸಾಧ್ಯವೇ ಎಂಬುದನ್ನು ಮನಶ್ಶಾಸ್ತ್ರಜ್ಞರು ವಿಚಾರ ಮಾಡತಕ್ಕದ್ದಾಗಿದೆ (ಶಿಶಿಂಚ. II, ೩೯). [ಸಂ.]

**ಮನಶ್ಶಿಲೆ** (ನಾ). ಕೆಂಪುಬಣ್ಣದ ಒಂದು ಬಗೆಯ ಖನಿಜ; ಗೈರಿಕಧಾತು : ಮಣಿಶಿಲೆ : "ಮನಶ್ಶಿಲಾ, ಮನೋಗುಪ್ತಾ, ಮನೋಹ್ವಾ, ನಾಗಜಿಹ್ವಿಕಾ – ೪ ಮಣಿಶಿಲೆಯ ಹೆಸರುಗಳು" (ಓದ್ಯಾ. ೩೦೬); "ಕರವೀರಿಕಾ_ಮನಶ್ಶಿಲೆ" (೬ಕಾ. ೨೭). [ಸಂ. ಮನಃಶಿಲಾ]

**ಮನಸಂಚು** (ನಾ). ಅಂತರಂಗದ ಹಂಚಿಕೆ ; ಮನಸ್ಸಿನ ಉದ್ದೇಶ : ಒಬ್ಬೊರನೊಬ್ಬರಳುಕಿಸುವಪಟುಗಂಗಳ ಹಬ್ಬದಲಿ ಮನಸಂಚು ತಪ್ಪಿತಸಾಧ್ಯ ಚಿಂತೆಯಲಿ (ಕುಮಾ.ಭಾ. ೧೩-೯). [ಮನ + ಸಂಚು]

**ಮನಸಬದಾರ** 'ಮನ್‌ಸಬ್‌ದಾರ' ನೋ.

**ಮನಸರಿ** (ನಾ). ಮನಸ್ಸು ಕಾರ್ಯಪ್ರವೃತ್ತಗೊಳ್ಳದಿರುವಂತೆ ಮಾಡುವ ವಿಧಾನ ; ಆಲಸ್ಯ : ಇನ್ನು ನಾನು ಮಾಡತಕ್ಕ ಕೆಲಸದಲ್ಲಿ ಮನಸರಿ ಮಾಡಲಿಕ್ಕಾಗದು (ಕನ್ನ. ೯೩) ; ಗುಪ್ತಗೃಹದ ಬಾಗಿಲವನ್ನಿಕ್ಕಿಕೊಳ್ಳಲಿಕ್ಕೆ ಮರೆತೆ . . . ಇಕ್ಕಿಕೊಂಡರಾಯಿತೆಂದು ಮನಸರಿಮಾಡಿದೆ (ಅಂಡಿ. ೦೬೦). [?. /ತೆಲು. ಮನಸರಿ = ಮನಸ್ಸು]

**ಮನಸಲ್** (ಕ್ರಿ). ೧. ಮನಸ್ಸು ಪರವಶವಾಗು ; ಮನಸೋಲು : ಮನಸಂದಾ ದಮಿತಾರಿ ಗಾಣತಿಯಾರಂ ಬೇಟ್ಟಂದದಿಂದಟ್ಟಿ ದೂತನನಂ ಶೀತನನೊಯ್ಯ ನೆಮ್ಮೊಳಗನೇನಾರಯ್ವನೋ (ಶಾಂತಿಪು. ೨-೩೦) ; ಯೋಜನಗಿತ್ತಿಯಂಬಿಗಿತ್ತಿಗೆ ಮನಸಂದಂ . . . ಮುನಿನಾಥಂ (ರಕ್ಷೋಶ. ೭-೨೫) ; ಮನಸಂದವಳಾ ಖಳನನುಜೆ ಸೋತಳು ಭೀಮಸೇನಂಗೆ (ಕುಮ್ಮಾಭಾ. ೯-೦೨) : ಮೌನದಲಿ ಪತಿಯಂಘ್ರಿಧ್ಯಾನದಲಿ ಮನಸಂದು ಸತಿ ಘನಕಾನನಕೆ ಗಮಿಸಿದಳು (ಜೈಮಿ. ೪-೪೯). ೨. ಮನಸ್ಸು ಮಾಡು; ನಿರ್ಧರಿಸು: ನೀರೆಜೆಯಿಂಲೆಂದು ಮನಸಂದು ನಡೆತಂದು ಪೂಗೋಲ್ಗ ಪೊಕ್ಕು . . . ಈಸಾಡಿ ಹೊಳೆದಾಡಿ ತಣಿದು ತಡಿಯಂ ಪತ್ತಿದಂ ನಿವೇದಿಸುಬೇಯಾಗಿ ಸಬಿರು ಸಹಿತ (ಸೋಮೇಶ. ೨-೮೩). ೩. ಮೆಚ್ಚು : ಒಲಿ : ತನ್ನ ಕಂತ ಕನಸಂಗಳಂ ಮನಸಂದು ವಿಸುಕುವ ಮನಮಾನನುಭವಿಸಿ (ಅನಂಪು. ೯-೦೨೬ ವ). [ಮನ + ಸಲ್$_1$]

**ಮನಸಾರ್** (ಕ್ರಿ). ಮನಸ್ಸಿಗೆ ತೃಪ್ತಿಯಾಗು.

ಮನಸಾರ, ಮನಸಾರೆ = ೧. ಅಂತರಂಗಪೂರ್ವಕವಾಗಿ: ಶ್ರೀದೇವಿಯು ಅತ್ಯಂತಲಾವಣ್ಯವತಿಯೆಂದು ನಾನು ಮನಸಾರ ಒಪ್ಪುತ್ತೇನೆ (ಶ್ರೀರಾಮು. ೦೬): ಆ ರಾಜ್ಯವನ್ನು ನಾನು ಮನಸಾರ ಬಿಟ್ಟುಸುಲ್ತಾನನಿಗೆ ಬಿಟ್ಟಿರುತ್ತೇನೆ (ರಾಂಜ ೦೯). ೨. ಮನಸ್ಸು ತೃಪ್ತಿಯಾಗುವ ತನಕ; ಮನದಣಿಯುವಂತೆ : ಪ್ರಾಸವ ಕೂಡಿಸಿ ಬರೆದೆ ಮನಸಾರೆ ತ್ರಾಸವಾಗದ ಹಾಗೆ ಹೀಗೆ (ಇಂದಿರಾಶ. ೬೯-೦೦) ; ಅತಿ ತಿಮ್ಮಪ್ಪನನ್ನು ಮನಸಾರೆ ರಕ್ಷಿಸಿದ (ಮುಂಗಾಮು. ೬೦). [ಮನಸು + ಆರ್$_2$]

**ಮನಸಿಜ** (ನಾ). ೧. ಅಂತರಂಗದಲ್ಲಿ ಹುಟ್ಟಿದವನು: ಕಾಮ; ಮನ್ಮಥ : ಅಜಿಚಿತ್ರಪೋದುದೀ ಮನಸಿಜನೆಂಬ ಪಾತಕನನಂತಪರಾಸ್ಯಮನೆಯ್ದುಲಕ್ಯ್ಮವೋ (ಆದಿಪು. ೮೪೬) ; ಮನಸಿಜನ ಮಾಯೆ ವಿಧಿವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ (ಯಶೋಧ. ೨-೬೦); ಮತ್ತಮಲ್ಲಿ ಮನಸಿಜನ ಬಿಲ್ಲ ಬೀಜದಿಂ ಬೆಳೆಯದಿಕ್ಷುದಂಡಮಿಲ್ಲ (ಪುಷ್ಪ. ೯-೨೦ ವ). ೨. ಪ್ರೀತಿ; ಅನುರಾಗ : ಎಂತು ನೋರ್ಪಡಂ ಮನಸಿಜದಿರ್ಕೆದಾಣ ಮೆಸುತಿತ್ತೆಸದೀ ನಿಡುನೇಗಿಲುರ್ವಿಯೊಳು (ಶಾಸ. IV, ೦೩-೫೯; 1165). ೩. ಕನ್ನಡದ ಒಬ್ಬ ಕವಿಯ ಹೆಸರು : ನೆಗಟ್ದಸಗನ ಮನಸಿಜನ ಚಂದ್ರಭಟ್ಟನ ಕೃತಿಗಳ್ (ಶಬ್ದಮಂ. ಅ. ೪-೨೩); ಗುಣನಂದಿಯ ಮನಸಿಜನಸಗನ . . . ಸುಮಾರ್ಗವಿದಬ್ಜಿೞ್ ಲಕ್ಷ್ಯಂ (ಕವಿರಾ. ೫). ೪. ಒಬ್ಬಾತನ ಹೆಸರು : ×ಸೇನಅಡಿಗಳ್ಗೆ ಮನಸಿಜರಾ ×× ಗನಾ ಅರಸಿಬೆರೆ ಎತ್ತಿ (ಎಕ. II, ೩೫-೫; 800). ೫. [ಜೈನ] ಬಾಹುಬಲಿಯ ಹೆಸರುಗಳಲ್ಲಿ ಒಂದು : ಚಿತ್ತಜಂ ಚಿತ್ತಭವಂ ಮನಸಿಜನನಂಗನಂಗಜನೆನೆ ನೆಗಟ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್ (ಆದಿಪು. ೯-೫೩). [ಸಂ.]

**ಮನಸಿಜಕ್ರೀಡೆ** (ನಾ). ಮನ್ಮಥಲೀಲೆ: ಕಾಮಕೇಳಿ : ವಸಂತಕಾಲದಲ್ಲಿ ಕಸ್ತೂರಿಯಿಂದ ಕೂಡಿ ತೇದ ಗಂಧವನ್ನು . . . ಲೇಪನಮಾಡಿದ್ದಲ್ಲಿ . . . ಮನಸಿಜಕ್ರೀಡೆಗೆ ಜನ್ಮಭೂಮಿಯಾಗಿರುವುದು (ಸಸ್ಪ. ೯೦). [ಸಂ. ಮನಸಿಜಕ್ರೀಡಾ]

**ಮನಸಿಜಗಲೆ** (ನಾ). ಮನ್ಮಥಕೇಳಿಗೆ ಉತ್ತೇಜನಕಾರಿಯಾದ ಕಾಮಕಲಾಸ್ಥಾನ : ಹೊಳೆವಕ್ಷಿಗಳಿಂದ ನಿಟ್ಟಿಸು ಮನಸಿಜಗಲೆಯ ತಾಣಕೆ ಕೈನೀಡೊ (ಕಂಶಿಶ. ೦೦-೩೫). [ಮನಸಿಜ + ಕಲೆ$_3$]

**ಮನಸಿಜಾರಿ** (ನಾ). ಮನ್ಮಥನ ಶತ್ರು; ಮದನಾರಿ: ಶಿವ : ಮನಸಿಜಾರಿಯ ಭಕ್ತ ಜಕ್ಕಣಾಚಾರ್ಯನವ ನೋಡಿ (ಜಕ್ಕಣ. ೦-೯೦). [ಸಂ.]

**ಮನಸು** (ನಾ). ಅಂತರಂಗ : ಬಗೆ : ಚಿತ್ತ : ಮುಸುಡ್ ತೊಳೆಯ ಬೇಕು ಈ ಮನಸಿನ ಮುಸುಡ್ ತೊಳೆಯಬೇಕು (ಪುರಂದ. ೪-೫೯ ಪಲ್ಲವಿ) : ರಾಜಮಧುಪರ ಮನಸು ಭ್ರಮಿಸುತ್ತಿತ್ತು (ಕೃಷ್ಣ. ೦-೫) ; ಮನೆ ಕಟ್ಟಬಹುದು ಮನಸು ಕಟ್ಟಕೂಡದು (ಗಾದೆ).

ಮನಸಿನ ಮಂಡಿಗೆ = (ಅಲಂ) ವಾಸ್ತವದ ಅನುಭವಕ್ಕೆ ಸಿಗದಂಥದು ; ಬರಿಯ ಕಲ್ಪನೆಯಲ್ಲಿರುವಂಥದು: ಮನಸಿನ ಮಂಡಿಗೆ ಮೆಲ್ಲುವೆ ನಾನು (ಪದಮಾ. I, ೪೦೦). [ ಸಂ. ಮನಸ್]

**ಮನಸುಬ**. **ಮನಸುಬೆ** (ನಾ). ೧. ವಿಚಾರ : ಯೋಚನೆ : ಇರಾದೆ : ಈ ಮನಸುಬಕ್ಕೆ ನಿನಗೆ ಮಿಷ ಇದ್ದರೆ ಒಂದು ಕೈಕಾಗದ ಆಣೆ ಭಾಷೆ ಹಾಕಿ ಬರೆದು ಕಳುಹಿಸಬೇಕು (ರಾಜೇಂದ್ರ. ೫೫). ೨. ಉಪಾಯ ; ಹಂಚಿಕೆ; ಯುಕ್ತಿ : ಅದನ್ನು ಸಾಧಿಸಿ ಬಂದುಬಸ್ತು ಮಾಡಿಕೊಳ್ಳಬೇಕುಯೆಂಬದಾಗಿ ಮನಸುಬ ಮಾಡಿ (ರಾಜೇಂದ್ರ. ೫). **ಮನಸುಬೆ** : ೧. ನಾವೇ ಬರುತ್ತೇವೆಂದು ಎರಡು ಮೂರು ಕಾಗದ ಬರವಾಗ್ಯೂ ಬರೋಣ ಆಗಲಿಲ್ಲ. ಕೆಲವು ಮನಸುಬೆ ಮಾಡತಕ್ಕದು ಇದೆ (ಮುದತ. ೨೦-೯). [←ಅರ. ಮನ್ಸುಬಹ್ ; ಹಿಂ. ಮನ್ಸುಬಾ; ಮರಾ. ಮನ್ಸುಬಾ, ಮನ್ಸುಭಾ, ಮನ್ಸೋಬಾ]

ಮನಸುಬೆ 'ಮನಸುಬ' ನೋ.

**ಮನಸೂಕತನ** (ನಾ). ಉದಾರಗುಣ; ತ್ಯಾಗ : ಅವನ ಕೆಟ್ಟಕೆಲಸಗಳು ಅವನ ಮನೋವಿಕಾರದಿಂದ ಹುಟ್ಟುತ್ತಿದ್ದವು. ಅವನ ಒಳ್ಳೆಯ ಕೆಲಸಗಳು ಅವನ ಮನಸೂಕತನದಿಂದುಂಟಾಗುತ್ತಿದ್ದವು (ಪೋಲಾದ. ೦೦೦).

[ಮನಸೂಕ್$_0$ (p ← ಅರ. ಹಿಂ. ಮನ್‌ಸೂಖ್) + — ತನ]

**ಮನಸೂರ** (ನಾ). ಒಂದು ಮನೆತನದ ಹೆಸರು (?) : ಶ್ರೀ ಮಹಾಮಲಿ ಬಾಣರಸರ್ ಪೃಥಿವೀರಾಜ್ಯಗೆಯೆ ಮನಸೂರರಳಕಯ್ಪ ಮಗನಪ್ಪಭುಕಯ್ಪ ತಂಬಿಗೆ ಪಸನ್ತನ್ . . . ತನ್ನನಾಳ್ದ ಪ್ರಭುಮೋರು ಬೆಸಸೆ (ಎಕ. X, ಶ್ರೀನಿವಾ. ೫-೪ ; 780). [ ? ]

**ಮನಸೆಳೆ** (ಕ್ರಿ). ಅಂತರಂಗವನ್ನು ಆಕರ್ಷಿಸು ; ಚಿತ್ತವನ್ನು ವಶಪಡಿಸಿಕೊಳ್ಳು : ಕುಡಿನೋಟ ಬೀರುತ ಮೊಳೆನಗೆ ತೋರುತ ಬಳಿನಿಂದು ಮನ ಸೆಳೆದವಳು (ಇಂದಿರಾಶ. ೦೬೮-೨೬); ಭಾರತೀಯಸಂಗೀತ . . . ಜನರ ಮನ ಸೆಳೆದು ಮೆಚ್ಚುಗೆಯನ್ನು ಗಳಿಸುತ್ತಿರುವುದರಿಂದ (ಸಂಗೀತ. V, ಮುನ್ನುಡಿ).

[ಮನ + ಸೆಳೆ$_1$]

**ಮನಹತ್ತುಗೆ** (ನಾ). ವಿಶ್ವಾಸ : ಚಿತ್ರಜಾರಿಯು ಗೆಲಿದನಾಕ್ಷಣವಿತ್ತನಾಗ ತ್ರಿಶೂಲವನು ಮನಹತ್ತುಗೆಯುಲಾ ಚಂದ್ರಹಾಸನನವರ ಮಹಿಮೆಗಳ (ಉತ್ತ.ಕ. ೯-೯೨). [ಮನ + ಹತ್ತುಗೆ (< ಪತ್ತುಗೆ)]

**ಮನಹೀನ** (ನಾ). ಮನಸ್ಸಿನ ಸ್ಥೈರ್ಯವಿಲ್ಲದವನು : ಚಂಚಲಚಿತ್ತ: ಅಳಮನದವಗೆ ಶಿವದೀಕ್ಷೆಯ ಕೊಟ್ಟರೆ . . . ಮನಹೀನನ ವಿಸಾಲ ಕಾಯ್ದುರಿಸಿದಂತೆ (ಬಸವ. ೯೨); ಮನಹೀನನ್ನೆ ನೀನಕಟ ಸಂಜಯ (ಕುಮಾ.ಗ. ೩-೩೦). [ಸಂ.]

**ಮನಹೇಡಿ** (ನಾ).=ಮನಹೀನ : ರಣಹೇಡಿ ಮನಹೇಡಿಗಳ ಕುಲದಲ್ಲಿ ಜನಿಸಿದನು (ಕೃ.ಶಾ.ಕು. ೫-೦೩). [ಮನ + ಹೇಡಿ (< ಪೇಡಿ$_1$)]

**ಮನಾಯಿ** (ನಾ). ಅಡ್ಡಿ ; ಪ್ರತಿಬಂಧ: ಕಟ್ಟಿಗೆಗಳನ್ನು ಕಡಿಯಲಿಕ್ಕೆ ಮನಾಯಿ ಆಗಿದ್ದಲ್ಲಿ ಇವನ್ನು ಕಡಿಯಲಾಗದು (ಕಥಾಗ. ಕಂ. ೦೩); ವೇಣಿವನ್ನು ಕಾಣಬೇಕೆಂದರೆ ಅದಕ್ಕೂ ಮನಾಯಿ (ಹಂಸ್ಕೃ. ೦೫೦).
[← ಹಿಂ. ಮನಾಹೀ ; ಮರಾ. ಮನಾಈ]

**ಮನಾರ್** 'ಮಿನಾರು' ನೋ.

**ಮನಿಯಾರ್ಡರ್** 'ಮನಿಯಾರ್ಡರು' ನೋ.

**ಮನಿಯಾರ್ಡರು, ಮನಿಯಾರ್ಡರ್** (ನಾ). ೧. ಒಬ್ಬರು ಮತ್ತೊಬ್ಬರಿಗೆ ಅಂಚೆಯ ಮೂಲಕ ಹಣ ಕಳುಹಿಸಲು ಅನುಕೂಲವಿರುವ ಅಂಚೆಇಲಾಖೆಯ ಚೆಕ್ಕು : ಅಡಿಕೆ ಬೆಳ್ದ್ರು ಮಣವಿತ್ತೆಂದೂ ಅದರ ಹಣ ೧೪೪ ರೂಪಾಯಿಗಳನ್ನು ಕಳುಹಿಸಿದ್ದೇನೆಂತಲೂ ಮನಿಯಾರ್ಡರು ಕೂಪನ್ನಿನಲ್ಲಿ ಬರೆದು ಹಣವನ್ನು ಅವರಿಗೆ ಕಳಿಸಿಬಿಟ್ಟನು (ಅವಶಂ. ೯೩). **ಮನಿಯಾರ್ಡರ್** : ೨. ಅಂಚೆಇಲಾಖೆಯ ಚೆಕ್ಕಿನ ಮೂಲಕ ಅಂಚೆಯಲ್ಲಿ ಒಬ್ಬರು ಮತ್ತೊಬ್ಬರಿಗೆ ಹಣ ಕಳುಹಿಸುವುದು : ಆವಾಗೇ ನಾವರೂ ಹಣ ಮನಿಯಾರ್ಡರ್ ಕಳಿಸಿದೆಯೋ ಏನೋ (ಮಹಾಗ. ೭೭) ; ಶೀಘ್ರವೇ ಮನಿಯಾರ್ಡರ್‌ನಿಂದ ಹಣ ಕಳಿಸುತ್ತೇನೆ (ಕೃಶಿಂಂ. ೪೮).
[← ಇಂ. Moneyorder]

**ಮನೀಷಿ** (ನಾ). ೧. ತಿಳಿದವನು ; ಪ್ರಾಜ್ಞ ; ಪಂಡಿತ : ತಿಳಿಯದಿಹರು ಮನೀಷಿಗಳ್ಪರ ಕುಲದ ಪಾರಂಪರ್ಯವಹ ನಡವಳಿ (ಐವತ. ೩-೪೯) ; ಈತ ರಾಮಮೋಹನನಂತೆ ಮಹಾಮನೀಷಿಯೂ ಆಗಿರಲಿಲ್ಲ (ಭಾರತ. ೩೨೦); ಕ್ರಿಯಾವೇತ್ತನಾದವನು ಅಗ್ನಿಯಲ್ಲಿ ದೇವರನ್ನು ಕಂಡರೆ ಮನೀಷಿಯಾದವನು ಹೃದಯದಲ್ಲಿ ಕಾಣುತ್ತಾನೆ (ಶಿಂವಸ. ೦೦೯ ಅಂಚಿ). ೨. ಪೂಜ್ಯ. [ಸಂ. ಮನೀಷಿನ್]

**ಮನೀಷೆ** (ನಾ). ೧. ಬುದ್ಧಿ ; ಅರಿವು : ಋಷಿಗಳು ಮನೀಷೆಯಿಂದ ಹೃದಯವನ್ನು ಹೊಕ್ಕು ಅಸತ್ತಿನಲ್ಲಿ ಸತ್ತಿನ ಮೂಲವನ್ನು ಕಂಡುಕೊಂಡರು (ಭಾರತ. ೨೭). ೨. ಆಸೆ : ಅಪೇಕ್ಷೆ : ಅವನನ್ನು ಈ ಕೈಗಳಿಂದ ಗುದ್ದಿ ಕೊಲ್ಲದ ಹೊರತು ನನ್ನ ಮನೀಷೆಯು ತೃಪ್ತಿಯಾಗಲಿಕ್ಕಿಲ್ಲ (ಅಂಬಿಕೆ. ೦೬೯) ; ಶಾವೇ ರಂಟೆ ಕುಂಟೆ ಎತ್ತು ಆಳು ಹೋಳು ಇಟ್ಟು ವಿಧಿಪೂರ್ವಕವಾಗಿ ಒಕ್ಕಲುತನ ಮಾಡಬೇಕೆಂದು ಅವರ ಮನೀಷೆ (ಕ್ರಿವಜಕ್ಕೃ. ೯೯). ೩. ಆಲೋಚನೆ ; ಉದ್ದೇಶ : ಅವಳ ಪರಿಹಾಸವನ್ನು . . . ತೊಡೆದುಹಾಕುವ ಮನೀಷೆಯಿಂದ ನಾನು ಉತ್ತರಿಸಿದೆನು (ಹೇಮಂತ. ೦೦೨). [ಸಂ. ಮನೀಷಾ]

**ಮನು** (ನಾ). ೧. ಮಂತ್ರ : "ಮನುಃ, ಮಂತ್ರವುಂ, ದೇವತಾಭೇದವುಂ" (ಶಾಶ್ವ. ೨೦೨) ; ವಿಮಲಪಂಚಾಕ್ಷರೀಮನುವನೊರವುತೆ (ಶಶ್ವರಾ. ೭-೦೦). ೨. ಮನುಷ್ಯಕುಲದ ಮೂಲಪುರುಷ ; P ಮನುಸ್ಮೃತಿ ಎಂಬ ಪ್ರಸಿದ್ಧವಾದ ಧರ್ಮಶಾಸ್ತ್ರವನ್ನು ಬರೆದ ರಾಜ; ಸೂರ್ಯವಂಶದ ಮೂಲಪುರುಷ : ವೇದಗಳಿಗೆ ಓಂಕಾರವಿದ್ದಂತೆ ರಾಜರಿಗೆ ಮನು ಮೊದಲಿಗನು (ಕೂಂ). ೩. ಬ್ರಹ್ಮನ ಮಾನಸಪುತ್ರರಲ್ಲಿ ಒಬ್ಬ : P ಸ್ವಾಯಂಭುವ, ಸ್ವಾರೋಚಿಷ, ಔತ್ತಮಿ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ರೌಚ್ಯದೇವಸಾವರ್ಣಿ ಮತ್ತು ಇಂದ್ರಸಾವರ್ಣಿ ಎಂಬಿವರು ಹದಿನಾಲ್ಕು ಮನುಗಳು. ಈ ಹೆಸರುಗಳಲ್ಲಿ ಕೆಲವು ಕಡೆ ವೈವಿಧ್ಯವು ಕಂಡುಬರುತ್ತದೆ : ವಿದ್ಯಾಧರರು ಮನುಗಳು ಮಾನುಗಳಾದಿತ್ಯರು ಭುಜಂಗಮರು . . . ಎಸೆದರು ರೋಮಾಂಚ ಕುಳಿಯ ಚೌಕದಲಿ (ಕುಮಾ.ಭಾ. ೯-೩೯). ೪. [ಗಣಿತ] ಹದಿನಾಲ್ಕು ಎಂಬ ಸಂಖ್ಯೆಯ ಸಂಕೇತ : "ಮನು ಭುವನ ಪದಿನಾಲ್ಕು" (ಹಂಗರಾ. ೦೦೪-೯).

ಮನುಜಾಗರನ್ = ಮನುಧರ್ಮವನ್ನು ಎಚ್ಚರದಿಂದ ಪಾಲಿಸುವವನು : ಒಂದು ಬಿರುದು : ಊನಾರ ವೈಶಿಕನ್ ಬಿಡಿಪೆಟ್ಟಿರಾಯಿಳ್ಗಂ ಗಸ್ತಾಳನ್ ಮನುಜಾಗರನ್ ಅಗ್ಗಿಸ ವತಿಗನ್ (ಪ್ರಿಅಂ. ೦೪೩೯, ೨೨-೦೩ : 750).
[ಸಂ.]

**ಮನುಕಮಯ್ಯ** (ನಾ). ಒಬ್ಬಾತನ ಹೆಸರು : ಈ ಧರ್ಮ್ಮಂ ಇರುಗಮ್ಮಯ್ಯಗೊಂಡು ಮನುಕಮಯ್ಯಂಗಂ ಅಪ್ಪಜ್ಜಿಗನ್ನೊನ್ನು ಭಾಗಂ ಸಲ್ವುದು (ಎಕ. X. ಕೋಲಾರ. ೫೭-೦೫; 92?).
[ಮನುಕ + ಅಮ (< ಅಮ್ಮ$_1$) - ಅಯ್ಯ$_1$]

**ಮನುಕುಲ** (ನಾ). ಮನುವಿನ ವಂಶ ; ಮನುಷ್ಯಜಾತಿ : ಮನುಕುಲವಿಂದು ಪುಣ್ಯಮಯಮಾದುದು (ವರ್ಧಪು. ೯-೬) : ದೂರದೂರ ಬೇರು ಜಾತಿ ಜೋಗೆ ಬೆಸಿಲು ಮನುಕುಲ (ಹಂಸು. ೨೫-೦೦). [ಸಂ.]

**ಮನುಚರಿತ** (ನಾ). ೧. ಮನುವಿನ ನಡವಳಿಕೆಯಂತಹ ಶ್ರೇಷ್ಠವಾದ ನಡವಳಿಕೆ: ಮನುಚರಿತಕ್ಕೆ ವೃತ್ತಿ ನೃಪನೀತಿಗೆ ಪಂಚಿಕೆ . . . ಪರಮಾರ್ಥ ವಿವೇಕದ ಭಾಗ್ಯಮೆಂದೊಡಾ ಜನಪತಿರತ್ನಶೇಖರನ ರಾಜಗುಣಂ ಬುಧಸೇವ್ಯಂ (ಅನಂಪು. ೩-೨೦). ೨. ಮನುವಿನಂತೆ ಶ್ರೇಷ್ಠವಾದ ನಡವಳಿಕೆಯುಳ್ಳವನು.- ಶುದ್ಧವಾದ ಚಾರಿತ್ರ್ಯವುಳ್ಳವನು : ಅನಿಮಿತ್ತಬಾಂಧವಂ ಮನುಚರಿತಂ ಧವಳಯಶೋನಿಧಿಯೆನೆ ಪೆಂಪುವಡೆದು (ಶಾಇ. V, ೮೪೫-೨೩; 1066). [ಸಂ.]

**ಮನುಜ** (ನಾ). ಮನುಷ್ಯ ; ಮಾನವ : "ಮನುಷ್ಯಃ . . . ಮನುಜಃ . . . ಎಂಟ್-ಈ ೧೨ ಮಾನಸರ್" (ಶಬ್ದಮ. ೫೫-೦೬೩) ; ಮನುಜಂಗೆ ಕೌತುಕಾವಹಮಿನಿತೊಂದಾಶ್ಚರ್ಯಂ (ಅದಿಂಪು. ೬೯೭) ; ಮನುಜರಾಟವೇಕೋ ಮನುಜ ಕೂಗಾಟವೇಕೋ (ಪುರಂದ. ೦-೩೦ ಕಲ್ಲಿ) ; ಮನುಜರೊಳ್ಮೆಯ ಸವಿಯನೊಂದಿನಿತುಮಂ ಕಾಣದೆ (ಶ್ರೀರಾಮಾ. ೨೨-೫೯೫).

ಮನುಜಮಾಂಧಾತ = ಮಾನವಶ್ರೇಷ್ಠ ; ಒಂದು ಬಿರುದು : ಮಹಾಮಂಡಲೇಶ್ವರನುಪವಾರಮಹೇಶ್ವರಂ . . . ಸಂಗ್ರಾಮಗರುಡಂ ಮನುಜಮಾನ್ಧಾತಂ (ಎಕ. VII. ಶಿಕಾರಿ. ೦೫೩-೦೨; 1068) ; ಸಂಗ್ರಾಮಗರುಡಂ ಮನುಜಮಾನ್ಧಾತಂ ಕೀರ್ತಿವಿಖ್ಯಾತಂ . . . ಪುರಿಗೆಜಾಮಾಸಾಜಿಜಿ . . . ಸುಖದಿನಾಳುತ್ತಮಿರೆ (ಶಾಇ. XX. ೪೩-೬; 1074).
[ಸಂ.]

**ಮನುಜಕಂಠೀರವ** (ನಾ). ಮನುಷ್ಯರಲ್ಲಿ ಸಿಂಹದಂತಿರುವವನು ; ಪರಾಕ್ರಮಿ : ಇವನ ಬಳ್ಳೈ ಭೀಮನೋ ಭೈರವನೊ ಭರ್ಗನೊ ಮನುಜಕಂಠೀರವನೊ ಕಾಲಾಂತಕನೊ ಕೋಲಾಹಳವಿದೇನು (ಕುಮಾ.ಕ. ೦೨-೦೪).
[ಸಂ.]

**ಮನುಜಗತಿ** (ನಾ). [ಜೈನ] ದೇವ, ಮಾನವ, ತಿರ್ಯಕ್ ಮತ್ತು ನಾರಕಗಳೆಂಬ ಚತುರ್ಗತಿಗಳಲ್ಲಿ ಒಂದು : ಧರ್ಮಾರ್ಥಕ್ರಿಯೆಗಳ ನೆರ್ಮಂ ಜೀವಕ್ಕೆ ಮನುಜಗತಿಯೊಳೆ ಮಾಟ್ಕುಂ (ಆದಿಪು. ೩-೭೮) ; ಮನುಜಗತಿ ಗತಿಗಳೊಳ್ ಪಾವನಂ (ಕಂಬವಾ. ೦೩-೯೯). [ಸಂ.]

**ಮನುಜತನ** (ನಾ). ಮನುಷ್ಯತ್ವ : ರೋಮರೋಮದೊಳಿಡಿದಜಾಂಡ ಕೋಟಿಗಳಿಪ ಮಹಾಮಹಿಮೆ ತಾನೆತ್ತ ನರನ ಸಂಗಡ ತಿರುಗುವೀ ಮನುಜತನವೆತ್ತ (ಕೃ.ಬಿ.ಭಾ. ೩೩-೩). [ಮನುಜ + — ತನ]

**ಮನುಜತೆ** (ನಾ). = ಮನುಜತನ : ಅವನ ಮನುಜತೆಯ ತನು ನೋಟ್ಟವರೊಳ್ ಮಾಣಿಸಿದುದಾವದುಮೆಯಿಕ್ಕುವುದಂ (ತಂದ್ರಪು. ೯-೯೩). [ಸಂ. ಮನುಜತಾ]

**ಮನುಜತ್ವ** (ನಾ). = ಮನುಜತನ : ತಗುಳ್ದು ನೆಗಟವೆ ತಪದೊಳ್ ಮನುಜತ್ವಮುಫಲಮಾಯ್ತು (ಕಬಿರಾ. ೩-೦೦೦). [ಸಂ.]

**ಮನುಜಪತಿ** (ನಾ). ಮನುಷ್ಯರ ಒಡೆಯ ; ಅರಸು ; ರಾಜ : ಶಿವಭಕ್ತಿಪ್ರಯುಕ್ತನು ಮನುಜಪತಿ ವಿಡ್ಗಾಯುಧಾನ್ವಿತ ಘನಭುಜಾಯುತ ನಾಗುತ (ಬಸವು. ೩೦-೩೨). [ಸಂ.]

**ಮನುಜಾತ** (ನಾ). = ಮನುಜ : ಉದ್ವೇಗತ್ವಮುಂ ಕೂಡುಗುಂ ಮನುಜಾ ತಂಗವರೋಹಿಯಪ್ಪ ವರೆಯೊಳ್ ಐವ್ಯಪ್ರಿಯಪುತ್ರನಾ (ಜಾತಕ. ೯-೩೦). [ಸಂ.]

**ಮನುಜಾಧೀಶ** (ನಾ). = ಮನುಜಪತಿ : ಮನುಜಾಧೀಶಸಮೂಹಸಂಚ ರಣದಿಂ . . . ಅಲಯಮಾಯ್ತುದೊಂದು ಪಿರಿದಂ ಚೆಲ್ವಿಂಗೆ ರಾಜಾಲಯಂ (ಆದಿಪು. ೬-೩೬). [ಸಂ.]

**ಮನುಜೆ** (ನಾ). ಮಾನವಸ್ತ್ರೀ : ಬೆಸಗೊಳಲು ಮನುಜೆಯಲ್ಲಂ ಮನುಜೆಯಾ ನರ್ಥವಿಷಯದಾಪೇಕ್ಷೆಯಿಂ ಕೊಂಡೊಯ್ದು ಕೊಂದೆನು (ಪತಳಾ. ೦೩-೬). [ಸಂ. ಮನುಜಾ]

**ಮನುಜೇಂದ್ರ** (ನಾ). = ಮನುಜಪತಿ : ಮನುಜೇಂದ್ರಕೋಟಿಕೋಟೀಗಣ ಕೋಟಿಗಾ ಸ್ಪವಿತಸಾಗರನಾಗರವಾಗದಿರ್ಪಮೇ (ಶಾಂತಿಪು. ೦-೬೮). [ಸಂ.]

**ಮನುಪೀಳಿಗೆ** (ನಾ). = ಮನುಕುಲ: ಬಜಿಮದೇ ಮನುಪೀಳಿಗೆಯ ಸುರಗಿರಿ ದೀಪಾಸ್ವದ ಸುರತರು ಪೂಜಾಮದೇ (ಕೊರಾ. ೩-೦೨-೩೩). [ಮನು + ಪೀಳಿಗೆ]

**ಮನುಮಥ**₁, ಮನುಮಥ (ನಾ). ಕಾಮ; ಮದನ; ಮನ್ಮಥ : ಬಿರಯಿ ಗಳಿಂ ಬೆರ್ಚಿಸಲಿದೆ ಪರಮಾಸ್ತ್ರ ಮನುಮಾತಂಗೆನಿಪ್ಪ ವಸಂತಂ ಬರಲೊಡನೆ (ಕಾದಂಬ. ೬೬೦). **ಮನುಮಥ :** ಅಳುಕಿದರು ಮನುಮಥನ ಗರುಡಿಯ ಬಲುಮಗಾಜರು (ಕಾವ್ಯಸಿ. ೦-೨೬) ; ವಿಗತ ನಳಕೂಬರ ಜಯಂತ ವಸಂತ ಮನುಮಥ ಚಾರುಚಂದ್ರಮರ ಪುರುಷಂಮಾಮವ . . . ವನಿತೆಯರೊಪ್ಪಿ ದರು (ಕೊರಾ. ೦-೩-೨೬). [ <ಸಂ. ಮನ್ಮಥ ]

**ಮನುಮತ** (ನಾ). ಮನುವಿನಿಂದ ರಚಿತವಾದ ಧರ್ಮಶಾಸ್ತ್ರ : ಮನು ಮತಮಂ ವೇದಾಂತಾದ್ಯನೇಕಧರ್ಮಾಗಮಂಗಳಂ ಕಲ್ತು (ಮಾದತ. ೯-೨೩). [ಸಂ.]

**ಮನುಮಥ** 'ಮನುಮಥ₁' ನೋ.

**ಮನುಮಥಮಥನ** (ನಾ). ಕಾಮನನ್ನು ನಾಶಮಾಡಿದವನು : ಶಿವ : ಪ್ರಥಿತಪರಾಪ್ರಿತಚಿತ್ತರಪ ಮನುಮಥಮಥನಪದಪದ್ಮವಿತತಿಗೆ ಪ್ರಥೆಳ್ ಭಕ್ತಿಯೊಳಾಗ ವಂದಿಸಿ (ಬಸವು. ೦೮-೦೨೬). [ಮನುಮಥ ( <ಮನುಮಥ₁ ) + ಮಥನ]

**ಮನುಮಾರ್ಗ** (ನಾ). ೧. ಮನುವು ಹಾಕಿ ಕೊಟ್ಟಿರುವ ದಾರಿ : ಮನು ಧರ್ಮಶಾಸ್ತ್ರದಲ್ಲಿ ಹೇಳಿರುವ ಆಚಾರ : ಮನುಮಾರ್ಗದೊಳೇಕಾ ವಶದಿನಮೊಳ್ಪಿನಯಂಗೆ ವಿಪ್ರಜನ ಸಮುಚಿತವಾಡ್ವಿನೆ ಸಚಿವಂ ಪೈಶಂಪಾ ಯನನೆಂಬೀ ಪೆಸರ್ವೆತ್ತಂ (ಕಾದಂಪೂ. ೯೩೨). ೨. ಮನುವಿನ ಹಾದಿಯಲ್ಲಿ ನಡೆಯುವವನು: ಮನುಧರ್ಮಶಾಸ್ತ್ರವನ್ನು ಅನುಸರಿಸುವವನು : ಭೂವಿನುತಯಶಂ ದ್ವಿಜವಂದ್ಯಂ ಮನುಮಾರ್ಗಂ ವೆಲ್ಲಮಯ್ಯನಗ್ರತನೂಜಂ (ಸೂಕ್ತಿಸುಧಾ. ೦-೦೯). [ಸಂ.]

**ಮನುಮಾರ್ಗನಿಪುಣ** (ನಾ). ಮನುಧರ್ಮಶಾಸ್ತ್ರದ ತಿಳಿವಳಿಕೆಯುಳ್ಳ ಕೋವಿದನಾದವನು : ಮನುಮಾರ್ಗನಿಪುಣನೆನಿಸಿದ ನಿನಗಾವಿದಾ ರಾಜ ಮಾರ್ಗಮಂ ತೋಟಿ ಜಗಜ್ಜನಕೆ ನಗೆಯಲ್ತೆ (ಅಜಿಪು. ೬-೦೨). [ಸಂ.]

**ಮನುವಂಶ** (ನಾ). = ಮನುಕುಲ : ನೀನೊರ್ಬನ್ನೆ ಮನುವಂಶಕ್ಕೆ ಲಲಾಮ ಸಪ್ಪನುಜನ್ನೆ (ಅಜಿಪು. ೦೯-೦೩೨). [ಸಂ.]

**ಮನುವಂಶಧ್ವಜ** (ನಾ). ಮನುಷ್ಯಕುಲದಲ್ಲಿ ಶ್ರೇಷ್ಠನಾದವನು : ಮಹೋರ್ವಗುತ್ತುಂಗಸೌಧೋತ್ಸಂಗದೊಳ್ ನಿಂದು ಮನುವಂಶಧ್ವಜನಂ ಮಕರಧ್ವಜನೆಂದು ಬಗೆದು (ಅಜಿಪು. ೦೦-೦೬ ವ). [ಸಂ.]

**ಮನುವೆ** 'ಮನವಿ' ನೋ.

**ಮನುಷ್ಯ** (ನಾ). = ಮನುಜ : "ಮನುಷ್ಯಃ, ಮಾನುಷಃ . . . ನರಾಃ — ಇವು ಮನುಷ್ಯನ ಹೆಸರು" (ಶಾಶರಾ. ೦೦೬); ಮಾತಕ್ಕೆ ಬಂದಭಾಗ್ಯಾಗತರಲ್ಲಿ ನಡವ ಮನುಷ್ಯರಾಹಾರದಾಸಕ್ಕ . . . ಜೋಳ ಕೊಳಗವೊನ್ದು (ಎಕ. XX, ೦೦೭-೩೦ ; 1167); ಮುಕ್ತಿಯೋಗ್ಯರಲ್ಲಿ ದೇವ- ಮನುಷ್ಯ- ಪಿತೃ- ಚಕ್ರವರ್ತಿ- ಮನುಷ್ಯೋತ್ತಮ ಎಂದು ಐದು ವಿಧಗಳು (ಹಂಠಕಾ. ೩೯೬). [ಸಂ.]

**ಮನುಷ್ಯಗತಿ** (ನಾ). = ಮನುಜಗತಿ : ಮನುಷ್ಯಾಯುಷ್ಯ ಮನುಷ್ಯಗತಿ ತತ್ಪ್ರಾಯೋಗ್ಯಾನುಪೂರ್ವಿ . . . ಉಚ್ಚೈರ್ಗೋತ್ರ ತೀರ್ಥಕರನಾಮಂ ಗಳೆಂಬ ಪದಿಮೂಱು ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಆದಿಪು. ೦೬-೯೯ ವ). [ಸಂ.]

**ಮನುಷ್ಯಜಾತಿ** (ನಾ). = ಮನುಕುಲ : ಬೇಟಂಟೆ ಮನುಷ್ಯಜಾತಿ ತಾನೊಂದೆ ವಲಂ (ಆದಿಪು. ೦೩-೦೯). [ಸಂ.]

**ಮನುಷ್ಯತ್ವ** (ನಾ). ಮನುಷ್ಯನ ಧರ್ಮ ; ಮಾನವಸ್ವಭಾವ : ಮನುಷ್ಯ ನಿಗೆ ಮನುಷ್ಯತ್ವ ಬಂದುದು ಬುದ್ಧಿಯ ಬೆಂಬಲದಿಂದ (ಗ್ರಂಥಾಂ. ೦). [ಸಂ.]

**ಮನುಷ್ಯಧರ್ಮ**₁ (ನಾ). ೧. ಮನುಷ್ಯನ ನಡವಳಿಕೆಯುಳ್ಳವನು. ೨. ಕುಬೇರ. ೧, ೨ : ಮನುಷ್ಯಧರ್ಮನಾಗಿಯುಂ ಧನಾಢ್ಯಕನಲ್ಲು ಕಾಮಾಧ್ವಂಸಿಯಾಗಿಯುಂ ತ್ರಿಲೋಚನನಲ್ತು (ಜಗಿವ. ೬-೦೦ ವ). [ ಸಂ. ಮನುಷ್ಯಧರ್ಮನ್ ]

**ಮನುಷ್ಯಧರ್ಮ**₂ (ನಾ). ಮನುಷ್ಯನು ಅನುಸರಿಸಬೇಕಾದ ಧರ್ಮ : ನನ್ನ ಪುತ್ರಧರ್ಮ, ಮನುಷ್ಯಧರ್ಮಗಳೆರಡೂ ಸಾಧನೆಯಾಗುವಂತೆ ಮಾಡುವ ದಾರಿ ಯಾವುದಾದರೂ ಇದೆಯೇ ? (ಚಿತಂಬಿ. ೦೫೬). [ಸಂ.]

**ಮನುಷ್ಯಪ್ರಯತ್ನ** (ನಾ). ಮನುಷ್ಯನ ಶ್ರಮ,- ಯತ್ನ : ಮನುಷ್ಯ ಪ್ರಯತ್ನ ಭಗವಂತನ ಕೃಪೆ ಇವನ್ನು ಮೀರಿ ಗ್ರಹಗಳ ಗತಿ ಜೀವನವನ್ನು ನಡೆಸುವುದಿಲ್ಲ (ಚಿಕರಾ. ೦೯೦) ; ಮನುಷ್ಯ ಪ್ರಯತ್ನದಿಂದ ಯಾವುದೂ ಒದಲಾಗಲ್ಲ (ಶ್ರಕೆ. ೯೮). 'ಪುರುಷಪ್ರಯತ್ನ' ಪರಾ. [ಸಂ.]

**ಮನುಷ್ಯಯಜ್ಞ** (ನಾ). ಪಂಚಯಜ್ಞಗಳಲ್ಲಿ ಒಂದು : ಅತಿಥಿ ಸತ್ಕಾರ: ವೇದಾಧ್ಯಯನರೂಪ ಬ್ರಹ್ಮಯಜ್ಞ ಅಗ್ನಿಹೋತ್ರರೂಪ ದೇವಯಜ್ಞ ಅತಿಥಿ ಪೂಜಾರೂಪ ಮನುಷ್ಯಯಜ್ಞ ಪಿತೃತರ್ಪಣರೂಪ ಪಿತೃಯಜ್ಞ ಭೂತಬಲಿ ರೂಪ ಭೂತಯಜ್ಞ ಎಂಬೀ ಪಂಚಮಹಾಯಜ್ಞಗಳಂ ನಡೆಸುತ್ತ (ವಿವೇಕ. ೦೨೦). [ಸಂ.]

**ಮನುಷ್ಯಲೋಕ** (ನಾ). ಮಾನವರು ವಾಸಿಸುವ ಲೋಕ : ಮರ್ತ್ಯ ಲೋಕ : ಅದು ದಿವಿಜೇಂದ್ರಲೋಕಮದು ನುನ್ಮಥರೂಪ ಮನುಷ್ಯಲೋಕಂ (ಆದಿಪು. ೯-೦೯). [ಸಂ.]

**ಮನುಷ್ಯವಾಹ್ಯ** (ಗು). ೧. ಮನುಷ್ಯರಿಂದ ಹೊರಲ್ಪಡುವ; ಮಾನವರು ಹೊರುವಂಥ. (ನಾ). ೨. ಮನುಷ್ಯರು ಹೊರುವಂಥದು : ಮನುಷ್ಯ ವಾಹ್ಯಮಪ್ಪ ಚತುರಂತಯಾನಮನೇಱಿಸಿ (ಶಾಂತಿಪು. ೯-೯೦ ವ). [ಸಂ.]

**ಮನುಸ್ಮೃತಿ** (ನಾ). ಮಾನವ ವ್ಯವಹಾರವನ್ನು ಕುರಿತ ಧರ್ಮಗ್ರಂಥ : ಕೃತಯುಗದಲ್ಲಿ ಮನುಸ್ಮೃತಿಧರ್ಮವೇ ಮುಖ್ಯವಾಗಿಹುದು (ವಿವೇಕ. ೬);

**ಮನೆಗೆಡು** (ಕ್ರಿ). ಮನೆಯಿಲ್ಲವಾಗು ; ಆಶ್ರಯತಪ್ಪು : ಮನೆಯಿಲ್ಲ ಮಾರಿಲ್ಲ ಮನೆಗೆಟ್ಟು ನೆಲೆಗೆಟ್ಟು ಕಾಡುಬೇಡಾದರೆಂ (ಕ್ರಿಠಾಪಠಾ. ೨೬೦-೧೦). [ಮನೆ + ಕೆಡು$_1$]

**ಮನೆಗೆಡುಕ** (ನಾ). ಮನೆಯನ್ನು ಹಾಳುಮಾಡುವವನು ; ಮನೆ ಮುರುಕ : ನಿಮ್ಮ ಅರಸರು ನನ್ನ ಮನೆಗೆಡುಕ ಅಂತ ಹೇಳಿದರು (ಜಕರಾ. ೨೨೨). [ಮನೆ + ಕೆಡುಕ]

**ಮನೆಗೆಲಸ** (ನಾ). ಮನೆಯಲ್ಲಿ ಮಾಡಬೇಕಾದ ಕೆಲಸ ; ಗೃಹಕೃತ್ಯ : ಮನೆಗೆಲಸಮಂ ಮಾಡಲಾಜಿದೆ ತನು ಬಳಲಿ (ಬಸಪು. ೨೬-೩೯); ಇನ್ನು ಮೇಲೆ ಸ್ಕೂಲು ಬಿಟ್ಟು ಮನೆಗೆಲಸವನ್ನೇ ಇನ್ನೂ ಚೆನ್ನಾಗಿ ಕಲಿತುಕೊ (ಅಕಿಲಾ. ೫೦). [ಮನೆ + ಕೆಲಸ]

**ಮನೆಗೈ** (ಕ್ರಿ). ಮನೆಯನ್ನಾಗಿ ಮಾಡು ; ಆವಾಸವಾಗಿಸು : ಸೌಧಾ ವಾಸಕಳಸುವಾ ಪುರಂಬಲಜರ್ . . . ವೃಕ್ಷಮೂಲಮಂ ಮನೆಗೈವರ್ (ಶಾಕುಂತ. ೧೦೬-೦೬೩). [ಮನೆ + ಗೈ (<ಕೆಯ್$_1$)]

**ಮನೆತನ** (ನಾ). ೧. ಕುಲ ; ವಂಶ ; ಸಂತತಿ : ಇರಬೇಕೈ, ಮಕ್ಕಳ ಚೆಲು ಮನೆತನವು (ಕಜ್ಜ. ೬-೩); ನಮ್ಮ ಮಹಾರಾಜರ ಮನೆತನವನ್ನು ತಣ್ಣಗೆ ಇಟ್ಟಿರಲಿ (ಕಳಹು. ೯೮). ೨. ಸಂಸಾರ; ಗೃಹಕೃತ್ಯ : ಕುರುಡು ಹೆಂಡತಿಯೊಡನೆ ಮನೆತನ ಹೇಗೆ ನಡೆಯಿಸಬೇಕು (ಇತ್ಯ. ೨೦೨).

**ಮನೆತನ ಮಾಡು** = ಸಂಸಾರವನ್ನು ನಿರ್ವಹಿಸು : ಮನೆತನ ಮಾಡುವುದಕ್ಕೆ ತಕ್ಕಷ್ಟು ಹಣವಿಲ್ಲ (ಮುಂಬಯಿ. ೩-೨೯೯). [ಮನೆ + - ತನ]

**ಮನೆತಾಣ** 'ಮನೆದಾಣ' ನೋ.

**ಮನೆತುಂಬಿಸು** 'ಮನೆದುಂಬಿಸು' ನೋ.

**ಮನೆತುಂಬು** 'ಮನೆದುಂಬು' ನೋ.

**ಮನೆದಪ್ಪು** (ಕ್ರಿ). ೧. ಆಶ್ರಯವಿಲ್ಲದಂತಾಗು; ನೆಲೆತಪ್ಪು: ಮನೆದಪ್ಪು ವುದೆ ನನ್ನ ಸುಮನೋರಥಂ (ಅಶಿಕ. ೫೨-೮). ೨. ಹೆಣ್ಣು ಗಂಡನ ಮನೆ ಬಿಟ್ಟು ತೌರುಮನೆ ಸೇರುವಂತಾಗು : ಮನೆದಪ್ಪಿ ಬಂದ ಮಗಳಿಗೆ ನಾವು ಆಶ್ರಯ ನೀಡಬೇಕಾಗಿದೆ (ರೂಢಿ). [ಮನೆ + ತಪ್ಪು$_1$]

**ಮನೆದಳ, ಮಂದಳ** (ನಾ). ಮನೆಕಟ್ಟುವ ಸ್ಥಳ ; ನಿವೇಶನ : ಇದಕ್ಕೆ ಸಲುವ ಮನೆದಳ ಹಿತ್ತಲು ತಿಪ್ಪೆಗುಂಡಿ ಹಕ್ಕಲು ಸಹವಾಗಿ (ವ್ಯಾಅಂ. ೦೯೨೮, ೬೨-೦೬ : 1708) : ಅತನಿಗೆ ಮನೆದಳ ಬಹಳ ಸುಲಭದರದಲ್ಲಿ ಸಿಕ್ಕಿತಂತೆ (ಅಲಿವು. ೦೯೩). **ಮಂದಳ** : ಈಮಣ್ಣನು ಮೊದಲು ತನ್ನ ಮಂದಳ ದಲ್ಲಿ ಒಂದು ಬಾವಿ ತೆಗೆಸಿದ (ಶ್ರೀಕಥ. ೦೬೪). [ಮನೆ + ತಳ (=ತಲ)]

**ಮನೆದಾಣ, ಮನೆತಾಣ** (ನಾ). =ಮನೆದಳ : ಮನೆದಾಣಮುಂ ಪಲಗೆ ಗಣ್ಣಂ ಮೊದಲಾಗೆ ಕಬಿನಿಯುಂ ವಡಗಣಾನ್ಸೀಮೆ (ಎಇ. XXI, ೦೬೮-೦೧ ; ೫೭೮); ಮಾದಣ್ಣನಿಗೆ ಕೋಟೆಹಾಳಿನ ಮನೆದಾಣದಲ್ಲಿ ಗಂಟು ಸಿಕ್ಕಿತಂತೆ ! (ಬೆಳುವು. ೧೫೬). **ಮನೆತಾಣ** : ಮನೆಯು ಮನೆತಾಣಂ ಅಸ್ಯ ದಾನಸಾಕ್ಷಿಣಃ ಅಷ್ಟಾದಶಪ್ರಕೃತಯಃ (ಎಕ. VII (R). ಶಾನವು. ೦೯೯-೬೦ : 776); ಮನೆತಾಣವಿಮ್ಮತ್ತರ್ದುಗ್ಗಾದೇವಿಯ ಮನೆಯಿನ್ತೀಕಮಾ [ಜಬಿ] ಗೆಜೆಯ ತೆಂಕಣ ಕಡೆಗೋಡಲ್ಲಿ ಒಳಗೆ ಒಮ್ಮತ್ತತೊರ್ಬಣ್ಣದಾ ನೆಲಾ (ಕಇ. II, ೫-೩ ; 859). [ಮನೆ + ತಾಣ]

**ಮನೆದೀವು** (ಕ್ರಿ). (ಮಕ್ಕಳಿಂದ) ಮನೆಯು ತುಂಬು : ಮನೆದೀ[ವಾಣಂ. ತೀ]ವಿ ಮಕ್ಕಳಂ ಪಡೆದಬಳವಜನಂ (ಅಂಕ. ೨-೨೪). [ಮನೆ + ತೀವು]

**ಮನೆದುಂಬಿಸು, ಮನೆತುಂಬಿಸು** (ಕ್ರಿ). ವಧುವನ್ನು ಹೊಸದಾಗಿ ಮನೆಗೆ ಬರಮಾಡಿಕೊಳ್ಳು; ಗೃಹಪ್ರವೇಶಮಾಡಿಸು : ಒಸಗೆವಾತಂ ಪಾಡುತ ಕಡುಚದುರೆಯರಾಳಿಯರೊಲವಿಂ ಮನೆದುಂಬಿಸಿದರ್ ವಿಭವದೊಳು (ಜಮುಕಾ. ೯-೪೦); ವಿಘ್ನವಿಲ್ಲದೆ ಮನೆದುಂಬಿಸಬೇಕೆಂದು ಲಗ್ನವ ಹೇಳ್ದನು ಜಗೆ (ಪೊಇಹಕ. ೦೫-೦೩). **ಮನೆತುಂಬಿಸು** : ಮದುವಣಗಿತ್ತಿಯನ್ನು ಮನೆ ತುಂಬಿಸಿಕೊಂಡರು (ಪಃಪುಕಾ. ೨೬). [ಮನೆ + ತುಂಬಿಸು]

**ಮನೆದುಂಬು, ಮನೆತುಂಬು** (ಕ್ರಿ). ೧. ನವವಧುವು ಹೊಸದಾಗಿ ಮನೆಯನ್ನು ಪ್ರವೇಶಿಸು ; ಗೃಹಪ್ರವೇಶಮಾಡು : 'ಮನೆ ದುಂಬಿಸು' ಪರಾ. **ಮನೆತುಂಬು** : ೧. ಸೊಸೆ ಬರಲು ಮಹಾ ದೇವಿಯವರು ಮನೆತುಂಬಿತೆಂದು ಗೊಣಗಿದರು (ಜಮುಂಕ. ೪೦೫). ೨. (ವಸ್ತುವಿಶೇಷಗಳು) ಮನೆಯಲ್ಲಿ ಭರ್ತಿಯಾಗು : ಜೆಡೆಯ ನಾಯನಾರ್ಗಂ ಋಸ್ಕಜನ್ನಿದೇವಿಯರ್ಗಂ ಸಂತಸದೊಳುಡಲ್ ಕೊಟ್ಟು ಮನೆತುಂಬಿದ ಹೊನ್ನುಂ ಪೊಯ್ಯು (ಸಂಬಠ. ೨-೯೮). [ಮನೆ + ತುಂಬು$_1$]

**ಮನೆದೆರಿಗೆ** (ನಾ). ಮನೆಯ ಮೇಲೆ ಹಾಕುವ ತೆರಿಗೆ,—ಕಂದಾಯ : ಅದರೊಳು ಮನೆದೆರಿಗೆಯು ಹೆಚ್ಚಿರಲೂ (ಶಠಾತ. ೧೦-೫); ಹೆಚ್ಚಾಗಿ ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು (ಪಃಶಾಪಂ. I, ೦೨೪); ಗದ್ದೆಕರ ಬೆದ್ದಲುಗಂದಾಯ ಕಾಡಾರಂಬ ಮನೆದೆರಿಗೆ (ಚಿಬ್ಬ. ೦೫೫-೫). [ಮನೆ + ತೆರಿಗೆ (< ತೆಱಿಗೆ)]

**ಮನೆದೆಱೆ** (ನಾ). = ಮನೆದೆರಿಗೆ : ತಿಪ್ಪೆಸುಂಕ ಮನೆದೆಱೆ ಪಾರಿಖಾಯ (ಬೊಂಕರಾ. ೦೯೩೬, ೩ಂದಗಿ. ೪೦-೪೩; 1097); ಆ ಪೊಕಲ ಕಲಂಬೂ ಮನೆದೆಱೆ ಬಿಟಿ ಬೇಗಾರ ಕಾಣಿಕೆ ಕಡಾಯ (ಎಕ. X. ಮುಳಬಾ. ೦೬೨-೦೮; 1496). [ಮನೆ + ತೆಱೆ$_3$]

**ಮನೆದೇವತೆ** (ನಾ). ವಂಶದ ದೇವತೆ ; ಕುಲದೇವತೆ : ಮನೆದೇವತೆಯ ಮಹಿಮೆಯೊ (ಶ್ರೀಗಂಧ. ೦೬೯-೦೨). [ಮನೆ + ದೇವತೆ]

**ಮನೆದೇವರು** (ನಾ). = ಮನೆದೇವತೆ : ಘನವಾದೊಡವೆ ಕೈಸೇರುವ ಪರಿಯಂತ ಮನೆದೇವರೆಂದುಪಚರಿಸು (ಕಂಸವಿ. ೬-೦೫೦). [ಮನೆ + ದೇವರು (< ದೇವರ್)]

**ಮನೆದೈವ** (ನಾ). = ಮನೆದೇವತೆ : ಮನೆದೈವಂಗಳೆನಗೆ ಸನ್ನಿದಮಾದೊಡೆನ್ನ ಮೂಗು ಮುನ್ನಿನಂತಾಗಲಿ (ಕಂತಕಂ. ೬೬-೦೨); ಮನೆದೈವ ಕುಲದೈವ ಎನಗೆ ನಿಮ್ಮ ವರಯ್ಯಾ (ಬಸವ. ೩೬೩); ನೀವೆನ್ನ ಕುಲದೈವ ಮನೆದೈವವಲ್ಲದೆ ಮತ್ತೆ ಕುಲದೈವ ಮನೆದೈವ ಇಲ್ಲವಯ್ಯ ಎನಗೆ (ಅಲಂದೆ. ೫೨-೬೪). [ಮನೆ + ದೈವ]

**ಮನೆದೊಂಡ** (ನಾ). ಮನೆಯ ಸೇವಕ,—ಆಳು : ಅಸವಸದೆ ಮನೆದೊಂಡರೆಲ್ಲರೀ ತೆಱದಿಂದೆ ನಿಸದಮುನಿಶಂ ಬರ್ಪರ್ (ಅರಾತ. ೨-೨-೧೦). [ಮನೆ + ತೊಂಡ$_1$]

**ಮನೆದೊತ್ತು** 'ಮನೆದೊಟ್ಟು' ನೋ.

**ಮನೆದೊಟ್ಟು, ಮನೆದೊತ್ತು** (ನಾ). ಮನೆಗೆಲಸಮಾಡುವ ತೊತ್ತು; ಮನೆಯಾಳು : ಪೋದ ಮಾರಿಯನ್ನಳೆ ಮನೆದೊಟ್ಟು ಸೀರ್ಕರಡಿಯನ್ನಳೆ ನಾದುನಿ (ಕಂಕರಾ. ೪-೯೮). **ಮನೆದೊತ್ತು** : ನಿಮ್ಮ ಮನೆದೊತ್ತಿನ ಮಗಳು ಕೇಳೆಮ್ಮವಂ ಕೀಳ್ಮಾಡಿದಳ್ (ಬಸಪು. ೫೫-೩೩); ಏನೆಲವೊ ಮಾರೀಚ ಮಾರಿಯದೇನು ಮನೆದೊತ್ತಲ್ಲವೇ (ತೊರಾರಾ. ೩-೬-೪೯). [ಮನೆ + ತೊಟ್ಟು]

**ಮನೆಪಟ್ಟಿ** (ನಾ). = ಮನೆದೆರಿಗೆ : ಇವರ ಆದಾಯದ ಸಾಧನಗಳು ಮನೆಪಟ್ಟಿ, ಛಕಡೀಪಟ್ಟಿ, ಹೊರಗಿಂದ ಬರುವ ಮಾಲಿನ ಮೇಲೆ ಜಕಾತಿ ಮುಂತಾದವುಗಳುಂಟು (ಕರ್ನಾಗಿ. ೪೦೦). [ಮನೆ + ಪಟ್ಟಿ$_2$]

**ಮನೆಪಾಠ** (ನಾ). ವಿದ್ಯಾರ್ಥಿಗಳಿಗೆ (ಮನೆಯಲ್ಲಿ) ಖಾಸಗಿಯಾಗಿ ಹೇಳುವ ಪಾಠ : ಮನೆಪಾಠ ಹೇಳಿ ಜೀವನಯಾಪನೆ ಮಾಡಿಕೊಳ್ಳುತ್ತಿದ್ದನು (ಭುವರು. ೫೨೫). [ಮನೆ + ಪಾಠ$_2$]

**ಮನೆಬದುಕು** (ನಾ). ಮನೆಯ ಕೆಲಸ ; ಗೃಹಕೃತ್ಯ : ಗರತೀ ಸೀ ಮನೆಬದುಕ ನೋಡಿ ನೂಲಿನೆಳಿಗಳ ಮಾಟಮಾಡಿ ನೆಯ್ದ (ಜಂಗಿಕ. ೯೪-೦೭).
[ ಮನೆ + ಬದುಕು₂ (< ಬರ್ದುಕು₂) ]

**ಮನೆಬಾಗಿಲು** 'ಮನೆವಾಗಿಲ್' ನೋ.

**ಮನೆಮಗತಿ** 'ಮನೆಮಗತ್ತಿ' ನೋ.

**ಮನೆಮಗತ್ತಿ,** ಮನೆಮಗತಿ , ಮನೆವಗತಿ (ನಾ). ಮನೆಯಲ್ಲಿ ಹುಟ್ಟಿದವನಂತೆಯೇ ಇದ್ದು, ಕೆಲಸ ಮಾಡಿಕೊಂಡಿರುವ ವ್ಯಕ್ತಿ; ವಂಶಪಾರಂಪರ್ಯವಾಗಿ ಬಂದ ಮನೆಯ ಆಳು : ಸಿಯಗೆಲ್ಲರಾ ಮನೆಮಗತ್ತಿಸ್ವಲ್ಲಹನಾ ಬೆಸು (ಎಕ. XVI, ಕುಪಾಕೊ. ೮೮-೩; 750); ಪೆರ್ಮಾನಡಿಗಳ ಮನೆಮಗತ್ತಿನ್ ಅಗರಯ್ಯಂ (ಎಇ. VI, ೪೩-೪; 840). **ಮನೆಮಗತಿ :** ಬಿಸಮಾನೆಂಬೋ ಮನೆಮಗತಿ ಆತ ನಟ್ಟ ಕಲಕೆ ಓಮ್ಮರ್ತ್ತು ಕೆಯ್ಯ ಕೊಟ್ಟೊರ್ (ಎಕ. XI, ಕಳ್ಳೆ. ೩೩-೯; 815): ಸ್ವಸ್ತಿಶ್ರೀ ಗೊಗ್ಗಿಯ ಮನೆಮಗತಿ ಬೋಚಿಗ ಧರ್ಮ್ಮಸೆಟ್ಟಿ . . . ಸತ್ತಂ (ವ್ಯಅಂ. ೧೯೩೩, ೪೦-೦ : 900). **ಮನೆವಗತಿ :** ಶ್ರೀಮಂತ್ ನಾಗತರಸ ಮನೆವಗತಿ ಪೆರ್ಮ್ಮಣಸೆಟ್ಟಿ ಬೆಂಗುಳೂರ ಕಾಳಿಗದೊಳ್ ಪಿಳ್ಳಾಗತರಸ ಮಗಂ ಬುಟ್ಟಣಪತಿ ಸತ್ತಂ (ಎಕ. IX (ಸ), ಬೆಂಗಳೂ. ೦೮೨-೨; ಸು. 850); ಸ್ವಸ್ತಿ ಶ್ರೀ ಪೆರ್ಮಾಡಿಯ ಮನೆವಗತಿ ನೀಲಬ್ಬೆಯ ಮಗಂ ರಾಚಮ್ಮನ ಧರ್ಮ್ಮಂ (ಎಕ. III (R), ಹಂಕನ. ೨೪೨-೦ ; 970). [ಮನೆ + ?]

**ಮನೆಮಗವು** (ನಾ). = ಮನೆಮಗತ್ತಿ : ಮಾರಿದಾಸಶರಿಯತಮ್ಮನ್ ನಾಗತರಾಸರಾ ಮನೆಮಗವು . . . ಪಣಿಸಾಳ್ ಎಚಿದು ವಿಟ್ಟನ್ (ಎಕ. XVI, ಕುಮುಕೊ. ೯೩-೯ ; ? ). [ಮನೆ + ಮಗವು (< ಮಗು)]

**ಮನೆಮಾತು** (ನಾ). ೧. ಮನೆಯಲ್ಲಿ ಆಡುವ ಭಾಷೆ : ಮಾತೃಭಾಷೆ : ತಾಯಿನುಡಿ : ದಾಸರು ಕನ್ನಡದಲ್ಲಿ ಗ್ರಂಥರಚನೆ ಮಾಡುವುದಕ್ಕೆ ಅವರ ಮನೆಮಾತು ಕನ್ನಡವೆಂಬುದೇ (ಹದಾ. ೩೩೭) ; ಮನೆಮಾತಿನಲ್ಲಿ ಹೇಳಿದು ಯಾರಾದರೂ ಬಲತ್ಕರಿಸಿದರೆ ಅವನಿಗೆ ಮಂಕು ಕವಿದುಬಿಡುತ್ತಿತ್ತು (ಕವಾಹೊ. ೦೨೦). ೨. ಎಲ್ಲರಿಗೂ ತಿಳಿದ ವಿಷಯ ; ಪ್ರತಿ ಮನೆಯಲ್ಲಿಯೂ ಮಾತನಾಡಿಕೊಳ್ಳುವ ವಿಚಾರ : ರಾಜನರ್ತಕಿಯರು ನಾಡಿಗೆ ಸಲ್ಲಿಸಿದ ಸೇವೆ, ತ್ಯಾಗ ವಿಜಯನಗರರಾಜ್ಯದಲ್ಲೆಲ್ಲಾ ಮನೆಮಾತಾಯಿತು (ಕಂಕುಮ. ೪೭) ; ಬಿಡಿಮೊಳೆಗಳಿಂದ ಮುದ್ರಿಸುವುದನ್ನು ಕಂಡುಹಿಡಿದವನು ಗೂಟೆನ್ಬರ್ಗ್ ಎಂಬುದು ಮುದ್ರಣಪ್ರಪಂಚದಲ್ಲಿ ಮನೆಮಾತಾಗಿದೆ (ಮುದ್ರಕ. ೯). [ ಮನೆ + ಮಾತು₁]

**ಮನೆಮುಟ್ಟು₁** (ಕ್ರಿ). ಮನೆಯನ್ನು ಸೇರು : ಅಲ್ಲಿಂದ ತನ್ನ ಓಪಾಯು ಯೊಪನೆ ಮನೆಮುಟ್ಟಿದ (ಕಹಳಾ. ೭೦). [ಮನೆ + ಮುಟ್ಟು₁]

**ಮನೆಮುಟ್ಟು₂** (ನಾ). ೧. ಮನೆಯ ಸಾಮಾನು : ಗೃಹೋಪಕರಣ : ಕನಕದ ರಜತದ ಕಾಂಸ್ಯದ ಮನೆಮುಟ್ಟುರಿ[ಜಾಕಂ. ವಗ್ಗ೧] ಮುಟ್ಟಿಕರಗಿ ಕಣ್ಣಟ್ಟುವು (ಜಂಪಾವಿ. ೦೨-೧೫೨). ೨. ಮನೆಯನ್ನು ಕಟ್ಟುವ ಸಾಧನ : ಹೊಸದಾಗಿ ಮನೆ ಕಟ್ಟಿಸಲು ಮನೆಮುಟ್ಟು ಒದಗಿಸಿಕೊಳ್ಳಬೇಕಾಗಿದೆ (ರೂಢಿ). [ ಮನೆ + ಮುಟ್ಟು₂ ]

**ಮನೆಮುಟ್ಟುಗೋಳು** (ನಾ). ಮನೆಯನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು,–ವಶಕ್ಕೆ ತೆಗೆದುಕೊಳ್ಳುವುದು : ಅರಸನಾಗ್ರಹದಿ ಮನೆಮುಟ್ಟುಗೋಳಂ ಕೊಂಡು (ರಾಶಕ. ೧೦-೪೫) ; ಧನಂಗಳಂ ಮನೆಮುಟ್ಟುಗೋಳಾಗಿ ಕೆಳೆಯುತ್ತ (ಸೌಗಂಧಿ. ೧೯೦-೫).
[ ಮನೆ + ಮುಟ್ಟುಗೋಳು ]

**ಮನೆಮುರುಕ** (ನಾ). ಮನೆಮುರಿಯುವವನು ; ಮನೆಹಾಳ : ಮನೆಮುರುಕನಾದಂಥಾ ಪುರುಷನು . . . ಶುಭಗಳನ್ನೆಲ್ಲ ಪಡೆಯಲಾರದೆ (ಕೃವಾಶಿ. ೦೦೭); ಹುಚ್ಚುಹುಚ್ಚಾಗಿ ಮನೆಮುರುಕ, ರಾಕ್ಷಸ . . . ಮುಂತಾದ ಶಬ್ದಗಳಿಂದ ಬೆಳ್ಳೀಗೌಡರನ್ನು ಬಹಳ ಬೈದಳು (ಶಂಕಕಂ. ೫೨).
[ ಮನೆ + ಮುರುಕ₁ ( < ಮುರ್ಚುಕ₂) ]

**ಮನೆಮುರುಕಿ** (ನಾ). ಮನೆಯನ್ನು ಹಾಳುಮಾಡುವವಳು ; ಸಂಸಾರವನ್ನು ಒಡೆಯುವವಳು : ಮನೆಮುರುಕೀ, ಬೆಳ್ಳಿ ಹೋಯಿತು, ಬಂಗಾರಹೋಯಿತು ! ಮಾನಮರ್ಯಾದೆ ಎಂದೋ ಹೋಯಿತು (ಕುಂಬಕೊ. ೨೫). [ ಮನೆಮುರುಕ + –ಇ₂ ]

**ಮನೆಮುರುಕುತನ** (ನಾ). ಮನೆಯನ್ನು ಹಾಳುಮಾಡುವ ಸ್ವಭಾವ : ನೀಗಲಾಡಿಸುತ ಮನೆಮುರುಕುತನವನ್ನು ಬೇಗದಿಂ ಕರುನಾಡ ಹರಕುತನವನ್ನು ಕಳೆದು ಹಿರಿದಾಗೋಣ ಸೀಮೆಯನು ದಾಟಿ (ನಾ. ೪೦-೬).
[ ಮನೆ + ಮುರುಕು₃ (<ಮುರ್ಚು) + –ತನ ]

**ಮನೆಮೂಳ** (ನಾ). ೧. ಹೊರಗೆ ಓಡಾಡಲು ಶಕ್ತಿಯಿಲ್ಲದೆ ಮನೆಯಲ್ಲೇ ಇರಬೇಕಾದ ವ್ಯಕ್ತಿ: ಸೊಸೆ ಗಂಡನ ಸ್ವೈರಾಚಾರಕ್ಕೆ ಬಲಿಯಾಗಿ ಮನೆಮೂಳ ಆಗಿದ್ದಾಳೆ (ಕಥಾಪು. ೩೯). ೨. "ಮನೆಯಲ್ಲೇ ಮೂರು ಹೊತ್ತು ಇರುವ (ಅಭ್ಯಾಸದ ಮನುಷ್ಯ) : ಮನೆಮೂಳ(ಳ)" (Stay-at-home. ಜಂಕಶ). [ ಮನೆ + ಮೂಳ₁ ( <ಮೂಟ ) ]

**ಮನೆಮೂಳಿ** (ನಾ). ಮನೆಯಲ್ಲೇ ಕುಳಿತಿರುವ ವ್ಯಕ್ತಿ : ಸೋಮಾರಿ : ಇವಳಿಂದಲೇ ಅಲ್ಲವೆ ಕೈಗೆ ಬಂದ ಮಗ ಮನೆಮೂಳಿಯಾಗಿ ಕುಳಿತಿರುವುದು (ಮೂಸತ್ತು. ೨೦). [ ಮನೆಮೂಳ + –ಇ₃ ]

**ಮನೆಯಟ್ಟು** (ನಾ). ಒಂದು ಬಗೆಯ ತೆರಿಗೆ (?) : ಎಟ್ಟುಮನೆ ಹತ್ತು ಕೊಂಡು ಮನೆಯಟ್ಟು ಯಾಸೊಯಿಪ್ಪಟ್ಟಣದಲಿ (ಎಕ. IX, ಸಾಶಣ. ೩-೦೭; 1316 ?). [ ಮನೆ + ? ]

**ಮನೆಯಾಳ್,** ಮನೆಯಾಳು (ನಾ). = ಮನೆಮೊತ್ತಿ : ಘನರಾದ ತುರುಕರು ಕಂಠೀರವೇಂದ್ರನ ಮನೆಯಾಳ್ಗಳಿಂದ ಮಡಿದರು (ಕಂಕಶಿ. ೨೩-೩೬) . **ಮನೆಯಾಳು :** ಅವರ ಮನೆಯಲ್ಲಿ ನಾಲ್ವರು ಮನೆಯಾಳುಗಳು ಇದ್ದಾರೆ (ರೂಢಿ). [ ಮನೆ + ಆಳ್₃ ]

**ಮನೆಯಾಳು** ' ಮನೆಯಾಳ್ ' ನೋ.

**ಮನೆವಗತಿ** ' ಮನೆಮಗತ್ತಿ ' ನೋ.

**ಮನೆವಣ,** ಮನೆಹಣ (ನಾ). = ಮನೆದೆರೆ : ಪಿರಿಯ ಕೆರೆಗೆ ಮನೆವಣಮುಮಂ (ಇಇ. ೦೯೪೭, ಪಾಪುರಲ್. ೨೩೩-೦೪; 974) ; ಕಾಷಾರಂಭ ನೀರಾರಂಭ ಸುಂಕ ಸಿದ್ಧಾಯ ಮನೆವಣ ಸಹವಾಗಿ ಶಿವಾರ್ಪಿತ ಮಾಡಿ ಕೊಟ್ಟ ದಾನಶಾಸನ (ಎಕ. XII, ತಕ್ಕನಾ. ೩೮-೩೯ ; 1669 ). **ಮನೆಹಣ :** ಮಗ್ಗ ಮನೆಹಣ ಹೊಗೆಹಣ ಸುಂಕ ಸುವರ್ಣಾದಾಯ (ಎಕ. XII, ಕುತಿಗ. ೪-೦೬; 1671): ಶಾಸನಗಳಲ್ಲಿ ಬರುವ ತೆರುವಣಗಳು :– ತೆರು . . . ದೇವರ ಧರ್ಮ, ಮನೆಹಣ, ಹೊಗೆಹಣ (ಕುಕ್ಷಾಶಾ. ೨೭೦).
[ ಮನೆ + ಪಣ₃ ]

**ಮನೆವಯಸ್** (ನಾ). ಮನೆಯ ಪಸುಂ : ನಯುಪೆತ್ತಿಸಿಸುಡಿಯೆಂ ಜಾಣ್ಮೆಯಿಂ ನಾವಗಮಿಸಿಮನೆರ್ದೆಯನಿರ್ಕೆಳಗೊಳ್ವೀ ಮಯಣನ ಗೆಳೆಯನಿಪಳ ಮನೆವಯಸಿಕುಂ ಮುಪ್ಪಿದಪ್ಪುಗರ ಹಸುವಾಗಲ್ (ಶಿರಂ. ೬-೧೨೩).
[ಮನೆ + ಪಯಸ್]

**ಮನೆವಾಗಿಲ್,** ಮನೆಬಾಗಿಲು (ನಾ). ೧. ಮನೆಯ ದ್ವಾರ : "ದ್ವಾರ ಮೊಸಲು ಮನೆವಾಗಿಲಕ್ಕುಂ" (ಶಂಗಾಶ. ೩೯-೦೨). **ಮನೆಬಾಗಿಲು :** ೧. ಧನಲಕ್ಷ್ಮಿಪೂಜೆಯಾ ದಿನವಾದುದೆಂದು ಮನೆಬಾಗಿಲಿಗೆ ನಾವು ಬಂದಿರುವೆವಿಂದು (ಕವಿಪು. ೦೫-೨). ೨. ಮನೆಯ ಮುಂಭಾಗ : ಯಿಂತೀ ಚತುಸ್ಸೀಮೆಯೊಂದೊಳಗುಳ್ಳ ಮನೆಬಾವಿ ಮನೆಬಾಗಿಲು ಗದ್ದೆ ಮನೆಯ ಹಿಂದಣ ಬೆಟ್ಟು . . . ಸಹಿತವಾಗಿ . . . ಧಾರೆಯನೆರದು ಕೊಟ್ಟರು (ಸೌಇಇ. IX-ii, ೪೭೩-೦೭; 1400). [ಮನೆ + ಬಾಗಿಲ್]

**ಮನೆಸರಕು** (ನಾ). ಸಂಸಾರಕ್ಕೆ ಬೇಕಾದ ವಸ್ತು : ಮನೆಯ ಸಾಮಾನು : ಪೊಸಸಕ್ಕರೆ, ಮನೆಸರಕು (ಶಬ್ದಾಸು. ೬೯ ಕ್ರ ಪೋ). [ಮನೆ + ಸರಕು₃]

**ಮನೆಸುಂಕ** (ನಾ). = ಮನೆದೆರೆಗೆ : ಮನೆಸುಂಕ ನೆಲೆಮುಲವತ್ತಿಯ ಸುಂಕವಿನಿತಂ (ಶ್ರವೆಂ. ೦೯೯೦. ೨೯-೯ ; 1173). [ಮನೆ + ಸುಂಕ₁]

**ಮನೆಹಣ** 'ಮನೆವಣ' ನೋ.

**ಮನೆಹಾಳ** (ನಾ). ೧. ಮನೆಯನ್ನು ಹಾಳುಮಾಡುವವನು ; ಮನೆ ಮುರುಕ : ಮನೆಹಾಳನ ಮನೆಯಲ್ಲಿ . . . ಸೇರಿದ್ದನೆಂಬ ಸಂಗತಿ (ವೃಷರು. ೩೬೦). ೨. ನಾಯಿ : "ಮನೆಹಾಳನೆನಲು ಕುಕ್ಕುರನಕ್ಕು" (ಕಶರ. ೦೨೮). (ಗು). ೩. ಕೆಡುಕುಬುದ್ಧಿಯ ; ದುಷ್ಟತನದ : ಮನೆಹಾಳ ಬುದ್ಧಿಯನ್ನು ಎಷ್ಟುದಿನಗಳಿಂದ ಅಭ್ಯಾಸಮಾಡಿದ್ದಿರಿ (ಪಕ್ಷಪೇ. ೫೯) ; ಮೇಲ್ಮನವಿ ಸಲ್ಲಿಸಿದ್ದ ಮನೆಹಾಳ ಡೈರೆಕ್ಟರ್ ನೀತಿಬಾಹಿರನಾಗಿದ್ದನು (ವೃಷರು. ೩೩೩). [ಮನೆ + ಹಾಳು ( < ಪಾೞ್ ) + — ಅ₇]

**ಮನೆಹಾಳಿ** (ನಾ). ಮನೆಯನ್ನು ನಾಶಮಾಡುವವಳು : ಸಂಸಾರ ಮುರಿಯುವವಳು : ನಿಂಗೋದು ಮೊಗಾನು ಹೆತ್ತುಕೊಡ್ಲಿಲ್ಲ . . . ಮನೆಹಾಳಿ, ಮನೆಹಾಳಿ ಅವ್ವ (ಸರ್ಪಮಂ. ೩೩೨). [ಮನೆಹಾಳ + — ಇ₃]

**ಮನೆಹೆಂಡತಿ** 'ಮನೆವೆಂಡತಿ' ನೋ.

**ಮನೆಹೊಗು** 'ಮನೆವೊಗು' ನೋ.

**ಮನೋಗತ** (ಗು). ೧. ಮನಸ್ಸಿನಲ್ಲಿರುವ; ಹೃದಯದೊಳಗಿರುವ : ಎನ್ನ ಮನೋಗತಧ್ವಾಂತಬಂಧಮುಳಿಚಿತ್ತೆಲ್ಲಂ (ಚಂದ್ರ. ೨-೬೭). (ನಾ). ೨. ಅಂತರಂಗದಲ್ಲಿರುವ ಆಶಯ, -ಅಭಿಪ್ರಾಯ : ಮನೋಗತಮಂ ವಚೋಗತಂ ಮಾಡಿ (ಶಾಂತಿಪು. ೯-೦೦೭ ವ); ನಿಜಮನೋಗತಮನಿಂತೆಂದಂ (ಚಂದ್ರಪ್ರ. ೯-೦೯ ವ). [ಸಂ.]

**ಮನೋಗತಿ** (ನಾ). ಮನಸ್ಸಿನ ಗಮನ ; ಮನಸ್ಸಿನ ವೇಗ : ತತ್ಕಾಲ ವೇಳೆಗಳಂ ಮನೋಗ[ಪಾಠಾಂ.ರ]ತಿ ಭಾವನೆಯನಱಿದು (ಬಸವ. ೯೦-೦೭). [ಸಂ.]

**ಮನೋಗದ** (ನಾ). ಮನಸ್ಸಿನ ಚಿಂತೆ : ಚಿತ್ತದ ವ್ಯಥೆ : ಕಾತುದು ಭೀತಿವಲ್ಲರಿ ಮನೋಗದಮುಂ ತಱಿಸಂದು ನಿಂದುದು. . . ಚಿಂತಾತುರ ನಾಗಿ ಬೆಳ್ವಳಿಸಿ ಬೇವಸಮುಂ ತಳೆದಂ ಧನಂಜಯಂ (ಶಬ್ದಸ. ೯-೦೦೩). [ಸಂ.]

**ಮನೋಗಮನ** (ನಾ). = ಮನೋಗತಿ : ರಣಾಜಿರಂಗದಂತೆ ಮನೋ ಗಮನವಾಜಿರಂಜಿತಮುಂ (ರಾಜಶೇ. ೩-೦೭ ವ). [ಸಂ.]

**ಮನೋಗುಪ್ತಿ** (ನಾ). [ಜೈನ] ಮನೋಗುಪ್ತಿ, ವಚನಗುಪ್ತಿ ಮತ್ತು ಕಾಯಗುಪ್ತಿಗಳೆಂಬ ಗುಪ್ತಿತ್ರಯಗಳಲ್ಲಿ ಒಂದು ; "ಸುಖದುಃಖ ಗಳಿಗೆ ವಶವಾಗದೆ ಸರ್ವರಲ್ಲಿಯೂ ಸಮತಾಭಾವವನ್ನು ತೋರಿ ಆತ್ಮಕಲ್ಯಾಣವನ್ನು ನೆನೆಯುವುದು" (ಕೃಶಕೋ. ೨೦೦) : ವಚನಗುಪ್ತಿ ವಚನಪ್ರವೃತ್ತಿಯನ್ನು ತಡೆಯುವುದು ; ಮನೋಗುಪ್ತಿ (ಮನಃ ಪ್ರವೃತ್ತಿಯನ್ನು ತಡೆಯುವುದು) (ಕೃಪ. ೬೮). [ಸಂ.]

**ಮನೋಗ್ಲಾನಿ** (ನಾ). ಮನಸ್ಸಿಗೆ ಉಂಟಾಗುವ ದುಃಖ ; ಮನೋ ವ್ಯಥೆ : ಅಂತಃಕಾಂತದೊಳ್ ತಮ್ಮ ತಂದೆಯ ಮನೋಗ್ಲಾನಿಯಂ ಪಱಿವಡೆ ನುಡಿದು (ಸುಕುಮಾ. ೭-೯ ವ); ಜನಿತಜನಮನೋಗ್ಲಾನಿನಿದಾಘಂ ನಿವಾಘಂ (ಚಂದ್ರಪ್ರ. ೯-೬೬); ಬಿಡು ಮನೋಗ್ಲಾನಿಯನು ಸತಿ ಕೆಡೆನುಡಿದ ದೆಲ್ಲವನೆನಗೆ ಸೈರಿಸು ಮಡದಿಯರಲೀಸುಬು ಗುಣ (ಭಾರತ. ೬-೫೦). [ಸಂ.]

**ಮನೋಜ** (ಗು). ೧. ಮನಸ್ಸಿನಲ್ಲಿ ಹುಟ್ಟಿದ. (ನಾ). ೨. ಇಚ್ಛೆ: ಬಯಕೆ. ೩. ಕಾಮ ; ಮನ್ಮಥ : ಮನೋಜವಿನಾಶದಿನಟ್ಟ ತನ್ಮನೋ ಹರಿಯ ಪೊದೆಪ್ಪ ಕಣ್ಪನಿಗಳಂತಿರುಲಸ್ಫಟಿಕಾಕ್ಷಮಾಲೆ (ಶಾಂತಿಪು. ೭೩೭); ತ್ರಿಜಗದೀಶ್ವರನೊಳ್ ಮನೋಜ ಕಲಹಂದಾಳ್ದಗ್ನಿಗೀಡಾದ (ಗಿರಿಜಾಕ. ೯೩). [ಸಂ.]

**ಮನೋಜನಿತ** (ಗು). ಮನಸ್ಸಿನಲ್ಲಿ ಹುಟ್ಟಿದ : ಮನೋಜನಿತ ಮುದ ನನಿಲತನಮನನನ್ಯತಮಜಿನಪ್ರಮಂಜನಾಂತರೆ ನುಡಿದಂ (ಚಂದ್ರ. ೨-೯೨). [ಸಂ.]

**ಮನೋಜಯ** (ನಾ). ೧. ಮನಸ್ಸಿನ ಗೆಲವು. ೨. ಮದುವೆಯ ನಿಶ್ಚಿತಾರ್ಥ : ಮನೋಜಯಕ್ಕೆ ಹೋದಾಗ ಶಕುನಗಳು ಸರಿಯಾದರೆ ಹೆಣ್ಣಿನ ಮನೆಯಲ್ಲಿ ಹೆಣ್ಣು ಕೇಳುವ 'ಪರಸ್ತಾಪ'. . . ಆಗುತ್ತದೆ (ಪಪ್ಪರು. ೭೦). [ಸಂ.]

**ಮನೋಜವ** (ನಾ). ಮನಸ್ಸಿನ ವೇಗ : ಜ್ಯೋತಿರ್ವನದುಂ ಮನೋಜವ ದಿನೆಯ್ದಿ (ಶಾಂತಿಪು. ೬-೩೯). [ಸಂ.]

**ಮನೋಜಸೂದನ** (ನಾ). ೧. ಮನ್ಮಥನನ್ನು ನಾಶಮಾಡಿದವನು. ೨. ಶಿವ : ನೊಸಲೊಳ್ ಕಣ್ಣುಳ್ಳ ಮನೋಜಸೂದನಂ ಪೆಱನಲ್ಲನಾತಂ ಮಲ್ (ಜಗನ್ನಾ. ೩-೯೭). [ಸಂ.]

**ಮನೋಜಹರ** (ನಾ). = ಮನೋಜಸೂದನ ೨ : ಮನೋಜಹರ ಮನೋಹರನೆಂಬ . . . ಕಡುಸಲುಗೆಯ ಬಿರುದಿನ ಬಿರುದಿಧರ ಕಹಳಾರವಂ ದೆಸೆದೆಸೆಗೆ ಪರಿಯೆ (ವಂಬಕ. ೬-೨೨). [ಸಂ.]

**ಮನೋಜಾಗಮ** (ನಾ). ಕಾಮಶಾಸ್ತ್ರ ; ಮದನಾಗಮ : ಅಂಬರಚರ ಮಿಥುನರತಾಡಂಬರದೊಡನೊಗೆದ ನಗದ ಮಾರ್ದನಿ ಕಿವಿಗಂ ತಿಂಬಿ ಮನೋಜಾಗಮಗುರುವೆಂಬುದನೊಡನೆಂಬ ಶಿಷ್ಯನಂ ಪೋಲ್ತಿರ್ಕುಂ (ಶಾಂತಿಪು. ೨-೧೦೨). [ಸಂ.]

**ಮನೋಜಾಡ್ಯ** (ನಾ). ಮನಸ್ಸಿನ ದೌರ್ಬಲ್ಯ ; ಮನೋರೋಗ : ನಮ್ಮಲ್ಲಿಯ ಮನೋಜಾಡ್ಯ, ಸ್ವಾರ್ಥ . . . ನಮ್ಮ ದಾಸ್ಯಕ್ಕೆ ಕಾರಣ ವಾಗಿದೆ (ರಮಣ. ೫೨). [ಸಂ.]

**ಮನೋಜಾತ** (ಗು). ೧. ಮನಸ್ಸಿನಿಂದ ಹುಟ್ಟಿದ. (ನಾ). ೨. ಕಾಮ ; ಮನ್ಮಥ : ಭರತಚಕ್ರಮೂಪಂ ಮನೋಜಾತರೂಪಂ (ಎಕ. VI. ಶೃಂ. ೦೭೦-೦೬೯ ; 1137). [ಸಂ.]

**ಮನೋಜ್ಞ** (ಗು). ೧. ಸುಂದರವಾದ : ಚೆಲುವಾದ : ಮುಕ್ತಿ ಕನ್ಯಕೆ ಸುರರಾಜನ ಮುಂದೆ ಮಾಲೆಯೂಡಿದ ಮನೋಜ್ಞಸಿತಸಿಂಧುವಾರ ಮಾಲೆಯನಿಟ್ಟಕುಂ (ಶಾಂತಿಪು. ೦೦-೯೭) ; ಮಮಸಾನದಿ . . . ತೆಗೆಮುಟ್ಟವೊಲೆ ಮನೋಜ್ಞಾಂಬರಮೆನಿಸಿದುದಂಬುನಿಧಾನಂ (ರಾಜಶೇ. ೦_೯೦). (ನಾ). ೨. ಚೆನ್ನಾಗಿರುವಂಥದು : ಮನೋವೇದ್ಯ ವಾದುದು : " ಸುಂದರಂ . . . ಮನೋಜ್ಞಂ, ಮಂಜು, ಮಂಜುಳಂ ೧೨ ಸೊಗಸಾದದ್ದು, ಚೆನ್ನಾಗಿರುವಂಥಾದ್ದು " (ಶಬ್ದಾಂತ. ೩೩೭) : ಈ ಎಲ್ಲ ಅನುಭವವೂ ಮನೋಜ್ಞವಾದುದು ಎಂದರೆ ಮನೋವೇದ್ಯವಾದುದು (ಕಾಂದಕ. ೪೭). [ಸಂ.]

**ಮನೋಜ್ಞತೆ** (ನಾ). ಚೆಲುವು ; ರಮಣೀಯತೆ : ಅಭಿಜ್ಞಾರೇಖೆ ಗಳೆನಿಸಿ ಮನೋಜ್ಞತೆಯ ತ್ರಿವಳಿರೇಖೆ ತಳೆದೆಸೆದಿರ್ಕುಂ (ಚಂದ್ರಪ್ರ. ೦೨-೨೫). [ಸಂ. ಮನೋಜ್ಞತಾ]

**ಮನೋಜ್ಞೆ** (ನಾ). ೧. ಚೆಲುವೆ ; ಸುಂದರಿ : ಆತನ ಮನೋಜ್ಞೆ ಸುಮತಿಯುಮಱಿವಂ ಪೊತ್ತುಮಪೊಲನ್ನಯುಂ ದೊರೆವೆತ್ತಿರೆ ಮರಸೇನನೆಂಬ ಮಗನಂ ಪೆತ್ತಳ್ (ಶಾಂತಿಪು. ೯-೫೮). ೨. ಒಂದು ಬಗೆಯ ಗೈರಿಕ ಧಾತು ; ಮಣಿಶಿಲೆ. ೩. ಮಾದಕಪಾನೀಯ : ಮದ್ಯ. ೪. ಜೀರಿಗೆ. [ಸಂ. ಮನೋಜ್ಞಾ]

**ಮನೋದಯಿತೆ** (ನಾ). ೧. ಪ್ರಿಯೆ; ಮನದನ್ನೆ. ೨. ಹೆಂಡತಿ ; ಪತ್ನಿ : ಶ್ರೀದಯಿತನ ಬಾಯಿಕನ ಮನೋದಯಿತೆಗೆ . . . ತಾವಮಾದರ್ ತನಯರ್ (ಎಕ. II. ೦೩೯-೪; ಸಂ. ೫೬೦). [ಸಂ. ಮನೋದಯಿತಾ]

**ಮನೋದಾರ್ಢ್ಯ** (ನಾ). ಮನಸ್ಸಿನ ದೃಢತೆ: ಚಿತ್ತದ ಸ್ಥಿರತೆ: ಇಂದ್ರ ಮತ್ತು ಅಗ್ನಿಯು ಶಿಬಿಯ ಮನೋದಾರ್ಢ್ಯವನ್ನು ಪರೀಕ್ಷಿಸುವುದಕ್ಕೋಸ್ಕರ ಅವನಿಗೊಂದು ಧರ್ಮಸಂಕಟವನ್ನು ತಂದಿಡುತ್ತಾರೆ (ಶಾರದ. ೧೦೩). [ಸಂ.]

**ಮನೋದುಃಖ** (ನಾ). ಮನಸ್ಸಿನ ಚಿಂತೆ: ಮನೋವ್ಯಥೆ: ಎನಿತಃ ಪರಿಗ್ರಹದ ತೊಡರ್ಪಿನಿತೆ ಮನೋದುಃಖಂ (ಆದಿಪು. ೩-೬೨). [ಸಂ.]

**ಮನೋಧರ್ಮ** (ನಾ). ಮನಸ್ಸಿನ ಗುಣಸ್ವಭಾವ; ಚಿತ್ತವೃತ್ತಿ: ಮನೋಧರ್ಮವೆಂದರೆ ಪ್ರತಿಜೀವಿ ಭಿನ್ನವಾದ ಸ್ವಭಾವ ಸಂಸ್ಕಾರಗಳಿಗೆ ಅನುರೂಪವಾದ ವೃತ್ತಿಪ್ರವೃತ್ತಿಗಳು, ಇಷ್ಟಾನಿಷ್ಟಗಳು (ಅಮರ್ಧ. ೧೨). [ಸಂ.]

**ಮನೋನಂದನ** (ನಾ). ಮನಸ್ಸಿಗೆ ಸಂತೋಷವನ್ನುಂಟುಮಾಡುವಂಥದು; ಚಿತ್ತಕ್ಕೆ ಆನಂದಕರವಾದುದು: ಭದ್ರಶಾಲದಿಂ ಸಂಧಿಸಿ ನಿಂದ ನಂದನದಿನೊಪ್ಪುವ ಸೌಮನಸಾಖ್ಯದಿಂ ಮನೋನಂದನಮಪ್ಪ ಪಾಂಡುಕದಿನಾ ಗಿರಿರಾಜವಿಲಾಸಮುಬ್ಬಿಯುಂ ತಂದುದು (ಶಾಂತಿಪು. ೫-೨). [ಸಂ.]

**ಮನೋನಿಗ್ರಹ** (ನಾ). ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವುದು: ಪುರುಷನೆದುರು ಸ್ತ್ರೀ ಮಾಯೆ ಸ್ತ್ರೀಯೆದುರು ಪುರುಷ ಮಾಯೆ. ಹೀಗಿದ್ದರೂ ಮನೋನಿಗ್ರಹವೇ ಆತ್ಮಬಲ (ಕರ್ಮಿಕ. ೬೬). [ಸಂ.]

**ಮನೋನಿವಾಸ** (ನಾ). ಮನಸ್ಸನ್ನು ನೆಲೆಯಾಗಿ ಉಳ್ಳವನು: ಮನ್ಮಥ: ಮನೆಮನೆದಪ್ಪದೊಪ್ಪಿದುದು . . . ಮನೋನಿವಾಸನಿಂಬಿನ ಕಥೆ ಮನ್ಮಥ ಕ್ಷಿತಿಪನಾರ್ಪು ಮನೋಜನ ಮಂಗಳೋತ್ಸವಂ (ರಾಜಶೇ. ೧೧-೭೯). [ಸಂ.]

**ಮನೋನುರಾಗ** (ನಾ). ಮನಸ್ಸಿನ ಪ್ರೀತಿ; ಅಂತಃಕರಣದ ಅನುರಾಗ: ಅಗೆ . . . ಕಿಂನರಪಂನೆಗಯಕ್ಷರಾಕ್ಷಸ ಪ್ರಭುತತಿವಂದಿತಂ ಪರಹರೇಶ್ವರನೊಲ್ಪು ಮನೋನುರಾಗಮುಂ (ಕಇ. IV, ೧-೩; 1204): ಏನು ಬೆಸಸಿಸ ಗೇನು ಹದ ನಿಮಗೇನು ಮಗನುಪಚಾರವೇಕೆ ಮನೋನುರಾಗದಲಬುಜಿಯೆಂದನು ಪಾರ್ಥನೂರ್ವಶಿಗೆ (ಕುಮ್ಯಾ. ೬-೧೯). [ಸಂ.]

**ಮನೋನೈರ್ಮಲ್ಯ** (ನಾ). ಮಾನಸಿಕ ಸ್ವಚ್ಛತೆ: ಚಿತ್ತಶುದ್ಧಿ: ಶಿವನು ಸತ್ಪುರುಷನಿಗೆ ನೀಡಲು ಸದವಕಾಶವನ್ನು ಕಾಯುತ್ತಿರುವನು. . . ಮನೋನೈರ್ಮಲ್ಯ. ಪಾಪಭೀರುತ್ವಗಳೇ ಈ ಅವಕಾಶಗಳು (ಶಿವ.ಶ. ೬೬). [ಸಂ.]

**ಮನೋನ್ಮನಿ** (ನಾ). ೧. ಪಾರ್ವತಿ: ಪ್ರಮಥನೀ ಮನೋನ್ಮನೀ ನೆರೆ ರಾಜಿಸಂಗುಪ್ತ ಮಾತ್ರು ಭವನೀ (ವಾಕ್ಯಕು. ೬-೪-೧೬): ಮಹೇಶ್ವರಿ ಮನೋನ್ಮನಿ ಜಗನ್ಮಾತೆ (ಕ.ಪ್ರ. ೧-೬-೩). ೨. ಶಕ್ತಿಯರಲ್ಲಿ ಒಬ್ಬಳು: ಅಂಬಿಕೆ ಗಣಾನಿ ಈಶ್ವರಿ ಮನೋನ್ಮನಿ ಎಂಬ ಚತುರ್ಮಳ ಶಕ್ತಿಯರಿರ್ಪರು (ಅಜಿತ. ೨೦೦-೯೮). ೩. [ಯೋಗ] ಅವಸ್ಥಾತ್ರಯಂಗಳಲ್ಲಿ ಒಂದು: ಉನ್ಮನಿ ಮನೋನ್ಮನಿ ಸಹಜಾವಸ್ಥಾತ್ರಯಂಗಳುಂ (ಏಕೋ. ೦೩೪).

[ಸಂ. ಮನೋನ್ಮನೀ]

**ಮನೋಬಲ** (ನಾ). ಮನಸ್ಸಿನ ಶಕ್ತಿ; ಆತ್ಮಬಲ: ತನ್ನ ಚಾತುರ್ವಂತ ಬಲಮುಬ್ಬಿದೊಡಂ ಮನೋಬಲಮುಬ್ಬಿಯದೆ (ಶಾಂತಿಪು. ೪-೩೨ ವ). [ಸಂ.]

**ಮನೋಭಂಗ** (ನಾ). ಮನಸ್ಸಿನ ಆಸೆಯ ನಾಶ: ನಿರಾಶೆ: ಸೇನಾಭಂಗಮುಂ ಮನೋಭಂಗಮುಮಪ್ಪಂತು ಪುಸಿವಾರ್ತೆಯುಂ ಪೇಳ್ದಂ (ಸುಕುಮಾ. ೬-೩ ವ). [ಸಂ.]

**ಮನೋಭವ** (ಗು). ೧. ಅಂತರಂಗದಲ್ಲಿ ಉಂಟಾಗುವ: ಮನಸ್ಸಿನಲ್ಲಿ ಹುಟ್ಟುವ. (ನಾ). ೨. ಕಾಮ: ಮನ್ಮಥ: "ಪ್ರದ್ಯುಮ್ನಃ . . . ಮನೋಭವಃ—ಈ ೨೮ ಕಾಮ(ದೇವ)ನ ಪೆಸರ್" (ಶಬ್ದಮ. ೨-೩೩): ದಿವಿಜನೋ ಫಣಿನಾಯಕನೋ ಮನೋಭವನಿವಂ (ಶಬರ. ೧-೧೯೦): ಮನೋಭವನೊಳೀಗಿಲಸ ಬಲುಹಾದುದು (ಕುಮ್ಯಾ. ೨ ೮೨). [ಸಂ.]

**ಮನೋಭವಿತ್ವ** (ನಾ). [ಶೈವ] ಒಂದು ಬಗೆಯ ಕ್ರಿಯಾಶಕ್ತಿ: ಅತಿಶಯವಾದ ಶೀಘ್ರತೆಯನ್ನುಂಟುಮಾಡುವ ಶಕ್ತಿ: ಮನೋಭವಿತ್ವ, ಕಾಮರೂಪಿತ್ವ ಮತ್ತು ವಿಕರಮಧರ್ಮಿತ್ವ ಎಂಬಿವೇ ಈ ಮೂರುವಿಧ. ಅತಿಶಯವಾದ ಶೀಘ್ರತೆಯನ್ನುಂಟುಮಾಡುವ ಶಕ್ತಿಯು ಮನೋಭವಿತ್ವ (ಪಾಶುಪ. ೬೨೬). [ಸಂ.]

**ಮನೋಭಾವ** (ನಾ). ಅಂತರಂಗದ ಭಾವನೆ: ಆಲೋಚನೆ: ನೊಳಂಬರ ಈ ಸ್ವತಂತ್ರಮನೋಭಾವವು ಅವರು ಪೋಷಿಸಿದ ಸಾಂಸ್ಕೃತಿಕ, ಧಾರ್ಮಿಕಜೀವನಕ್ಷೇತ್ರದಲ್ಲಿ ಎದ್ದುಕಾಣುತ್ತದೆ (ನೊಳಂಬ. ೬೪). [ಸಂ.]

**ಮನೋಭಿಲಷಿತ** (ಗು). ೧. ಬಯಸಿದ: ಇಚ್ಛಿಸಿದ: ಮಹಾಬಲ ಖಚರೇಂದ್ರಂ . . . ಮನೋಭಿಲಷಿತವಿಷಯಸುಖಾನುಭವನಿರತನುಮಾಗಿ (ಆದಿಪು. ೨-೨೩ ವ). (ನಾ). ೨. ಅಪೇಕ್ಷೆ; ಬಯಕೆ: ಆತನ ಪುಟ್ಟಿದಿಂ ಬಳಿಯುಂ ಕಾಮಧೇನು ಮನೋಭಿಲಷಿತಮಪ್ಪುದಂ ಕುಡುವುದು (ಶಾಪುಂಕ. ೩೯). [ಸಂ.]

**ಮನೋಭಿಲಾಷೆ** (ನಾ). ಅಪೇಕ್ಷೆ; ಬಯಕೆ: ನಾನು ಯಾವಾಗಲಾದರೂ ನಿನ್ನ ಮನೋಭಿಲಾಷೆಯನ್ನು ಉಪೇಕ್ಷಿಸಿದ್ದೇನೆಯೆ ? (ಶಾಕುಂತ. ೨೮೬). [ಸಂ. ಮನೋಭಿಲಾಷ]

**ಮನೋಭಿವಾಂಛಿತ** (ನಾ). = ಮನೋಭಿಲಷಿತ ೨: ಹರನಿಲ್ಲಿಗೆ ಬರಲಿ ಕರುಣಿಸಲಿ ನಿನ್ನ ಮನೋಭಿವಾಂಛಿತವ (ಕುಮ್ಯಾ. ೪-೪೬). [ಸಂ.]

**ಮನೋಮುಕ್ತ** (ನಾ). ಮನಸ್ಸಿನ ಕೋಟಲೆಗಳಿಂದ ಬಿಡುಗಡೆ ಹೊಂದಿದವನು: ಅಜೀವು ಅಂತರಂಗದಲ್ಲಿ ಫಲಿತವಾಗಿಪ್ಪುದಾಗಿ ಮನೋಮುಕ್ತನು ನೀನು ನೋಡಯ್ಯ (ಅವತಂ. ೨೩೦-೧೧೯೬). [ಸಂ.]

**ಮನೋಮುಕ್ತಿ** (ನಾ). ಮನಸ್ಸಿನ ಕೋಟಲೆಗಳಿಂದ ದೂರವಾಗುವುದು: ಕಲ್ಪಿತಗುಣ ನಾಸ್ತಿಯಾಯಿತ್ತು ಬಸವಾ ಮನೋಮುಕ್ತಿಯಾಯಿತ್ತು [ಪಾಠಾಂ. ಮುಕ್ತವಾಯಿತ್ತೇ] ಸಂಗಯ್ಯನ ಗುರುಬಸವಾ (ನೀಲಮ. ೨೯-೧೧). [ಸಂ.]

**ಮನೋಮುದ** (ನಾ). ಮನಸ್ಸಿನ ಸಂತೋಷ: ಸಾಹಸಭೀಮಂಗೆ ಮನೋಮುದಂಬೆರಸು ಕೃಷ್ಣಂ ಕಟ್ಟಿದಂ ಪಟ್ಟಮಂ (ಗದಾಯು. ೧೦-೨೨). [ಸಂ.]

**ಮನೋಮೂರ್ತಿ** (ನಾ). ಮನಸ್ಸಿನಲ್ಲಿ ನಿಂತ ಆಕಾರ: ಮನವನಿತ್ತು ನಿಮ್ಮ ಕಂಡಿಹೆನೆಂದಡೆ ಮನೋಮೂರ್ತಿ ನೀನು (ಮೋಳಿಗ. ೨೮೩-೫೩). [ಸಂ.]

**ಮನೋಯೋಗ** (ನಾ). [ಜೈನ] ಯೋಗತ್ರಯಗಳಲ್ಲಿ ಒಂದು: ಭಾವನೆಯ ಉತ್ಪತ್ತಿಗಾಗಿ ಯತ್ನಿಸುವುದು: ಯೋಗತ್ರಯಗಳು ಆತ್ಮನಲ್ಲಿ ಸ್ಪಂದನವನ್ನು ಉಂಟುಮಾಡುವುವು. ಭಾವನೆಯ ಉತ್ಪತ್ತಿಗಾಗಿ ಯಾವ ಪ್ರಯತ್ನ ನಡೆಯುವುದೋ ಅದೇ ಮನೋಯೋಗವು (ಜೈನಧ. ೩೮೮). [ಸಂ.]

**ಮನೋರಂಜನ** (ನಾ). ಮನಸ್ಸನ್ನು ರಂಜಿಸುವುದು.— ವಿನೋದಪಡಿಸುವುದು: ಲೋಕದಲ್ಲಿರುವ ಸಮಸ್ತಪ್ರಜೆಗಳ ಮನೋರಂಜನವಂ ಮಾಡುವುದು (ಕಗೂ. ೧೦೨ ಉತ್ತರರಾಮಚರಿತ್ರಕಥೆ). [ಸಂ.]

**ಮನೋರಂಜನಿಹೂಬಳ್ಳಿ** (ನಾ). ಒಂದು ಬಗೆಯ ಹೂವಿನ ಬಳ್ಳಿ: ಮನೋರಂಜನಿಹೂಬಳ್ಳಿ, ಕಂದಾಳಸಂಪಿಗೆ (ಪ್ರಶಿಗ. ೪-೦೩೪).

[ಮನೋರಂಜನಿ$_{1}$ + ಹೂ$_{2}$ ( < ಪೂ$_{2}$ ) + ಬಳ್ಳಿ]

**ಮನೋರಂಜನೆ** (ನಾ). = ಮನೋರಂಜನ: ಜನರು ಅವನ ಕಥೆಯ ಮನೋರಂಜನೆ ಮಾಡಿಕೊಂಡ ಮೇಲೆ ಮಾದಲಿಸುತ್ತಿದ್ದರು (ಕಂಠಪು. ೩೬). 'ಮನರಂಜನೆ' ಪರಾ. [ಸಂ. ಮನೋರಂಜನ]

**ಮನೋರಥ** (ನಾ). ೧. ಮನಸ್ಸಿನ ಬಯಕೆ, – ಅಪೇಕ್ಷೆ: ದೊರೆವಡೆ ದಿರ್ಮದಿರ್ಮರ ಮನೋರಥಮಂಗಳಿಂ (ಶಾಂತಿಪು. ೧-೬೯): ಇಂತು ರವೇಯ

**ಮನೋವ್ಯಥೆ** (ನಾ). ಮನಸ್ಸಿಗೆ ಉಂಟಾಗುವ ಅತೀವದುಃಖ,–ವ್ಯಸನ : ಅಂತೆ ಸಂತೈಸುವಳು ಮನೋವ್ಯಥೆಯೆಲ್ಲಮಂ ಧೈರ್ಯವಾಕ್ಯಂಗಳಿಂ (ಶ್ರೀರಾಪಂ. ೨೬೩-೩೦೨). [ಸಂ. ಮನೋವ್ಯಥಾ]

**ಮನೋವ್ಯಾಧಿ** (ನಾ). = ಮನೋರುಜೆ : ಅಲ್ಲೋಲಕಲ್ಲೋಲವಾದ ಮನಸ್ಸಿನ ನೆಮ್ಮದಿ ತಂದೀಯುವ ಗುಣದಿಂದ ಸರ್ಪಗಂಧಿ ಮನೋವ್ಯಾಧಿಗಳಿಂದ ನರಳುವವರನ್ನು ಸೂರೆಗೊಂಡಿತು (ಹಸುಹೂ. ೦೬೭). [ಸಂ.]

**ಮನೋವ್ಯಾಪಾರ** (ನಾ). ಮನಸ್ಸಿನಲ್ಲಿ ನಡೆಯುವ ವ್ಯವಹಾರ.–ಚಟುವಟಿಕೆ : ಕಾವಿಂಗಳ ಮನೋವ್ಯಾಪಾರವು ಚೇಷ್ಟೆಗೆ ಪ್ರತಿರೂಪವಾದುದು (ಕಾಕಂತ. ೦೬-೩). [ಸಂ.]

**ಮನೋಹರ** (ಗು). ೧. ಸೊಗಸಾದ ; ರಮಣೀಯವಾದ; ಚೇತೋಹಾರಿಯಾದ : ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ (ಆದಿಪು. ೭-೦೨೭); ಮನ್ನಣೆಕಾಜಿ ಮನೋಹರರೂಪ . . . ಸನ್ನುತ ಮತಿದೋಜಿ (ಶಠತ. ೯೨-೧). (ನಾ). ೨. ಸುಂದರವಾದುದು ; ಸೊಗಸಾದುದು : ಕಡರೆ ಮನೋಹರವಪ್ಪಾ ಕಾಣದಿಪ್ಪರೆ ಅವಸ್ಥೆ ನೋಡಯ್ಯ (ಬಸವ. ೩೭೦). ೩. ಚೆಲುವ : ಸುಂದರ : ಮನೋಜಹರ ಮನೋಹರನೆಂಬ . . . ಕಡುಸಲುಗೆಯ ಬಿರುದಿನ ಬಹುವಿಧದ ಕಹಳಾರವಂ ದೆಸೆದೆಸೆಗೆ ಪರಿಯೆ (ಸಂಬರ. ೬-೨೨) ; ಮಂದರೋದ್ಧರ ಬಂದ ಮಾಮನೋಹರ ಬಂದ ವೃಂದಾವನಪತಿ ಗೋವಿಂದ ಬಂದ (ಪುರಂದ. ೦-೯೬-೨). ೪. ಕಡಲೆಹಿಟ್ಟು, ಬೆಲ್ಲಗಳಿಂದ ತಯಾರಿಸುವ ಒಂದು ಬಗೆಯ ತಿನಿಸು; ಬೂಂದಿ : ಪಾಯಸಕ್ಕೆ ಮನೋಹರದ ಕಾಳು ಹಾಕಿದ್ದರು (ಆಡು). ೫. ಕುಂದವೃಕ್ಷ. ೬. ಸುವರ್ಣ ; ಚಿನ್ನ.

**ಮನೋಹರದುಂಡೆ** = ಬೂಂದಿಯ ಉಂಡೆ ; ಲಾಡು : ಕರಜಿಗೆ ಕಾಯಿತಿರುಸ ಮನೋಹರದುಂಡೆ ತಜಿಗು ಚಕ್ಕುಲಿ (ಪ್ರಾಪತ. ೨-೦೬೭). [ಸಂ.]

**ಮನೋಹರತೆ** (ನಾ). ಚೆಲುವು ; ಸೌಂದರ್ಯ : ಮೊರೆದು ನೊರೆಗರೆದು ಮಿರುಮಿರುಗಿ ಶಿಲೆಯಿಂ ಶಿಲೆಗೆ ಚಿಮ್ಮಿ ನೆಗೆಯುವ ತೊರೆಯ ಲೀಲೆಯ ಮನೋಹರತೆ . . . ನೆಯ್ದಲಿ ಜಗನ್ಮೋಹನಜಾಲಮಂ (ಶಶ್ರಾಂಗ. ೨೯-೬೦೪). [ಸಂ. ಮನೋಹರತಾ]

**ಮನೋಹರಿ** (ನಾ). ೧. ಚೆಲುವೆ ; ಸುಂದರಿ : ನೆಲಸುಗೆ ನಿನ್ನ ವಕ್ಷದೊಳೆ . . . ಮನೋಹರಿ ರಾಜ್ಯಲಕ್ಷ್ಮಿ (ಆದಿಪು. ೦೪-೩೨೦); ಇದೆ ನವಪದ್ಮರಾಗಜಪಕಂ ನಿಜಹಸ್ತತಳಾಗ್ರದೊಳ್ ಮನೋಹರಿ ತಳದೊರ್ಗಂಗಲಂ ತಳೆದ ಕೋಮಳವಲ್ಲರಿಯಂತೆ (ಜಗನ್. ೦೬-೦೦೫). ೨. ಹೆಂಡತಿ : ಪತ್ನಿ : ಸಿಂಧುರೇಂದ್ರಮಂ . . . ನರೇಂದ್ರಚಂದ್ರಂ ನಿಜಮನೋಹರಿಯೊಡನಾರೋಹಿಸಿ ರಾಜವೀಥಿಯೊಳ್ಬರ್ಪಾಗಳ್ (ರಾಜಶೇ. ೦೦-೦೦ ವ).

[ಸಂ. ಮನೋಹರೀ]

**ಮನೋಹಾರಿ** (ನಾ). ಮನಸೆಳೆಯುವಂಥದು ; ಚಿತ್ತಾಕರ್ಷಕವಾದುದು : ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕೆ ಪೆಱವು ನೀರ್ ಜಗನೆಂದಾ ವಾರಾಶಿವರಂ ಸುರಜನದಾರಿ ಮನೋಹಾರಿ ನೀಳ್ದುವೆರಡುಂ ಕಲದೊಳ್ (ಆದಿಪು. ೭-೮೨). [ಸಂ. ಮನೋಹಾರಿನ್]

**ಮನ್ನ** (ನಾ). ಮೂಕ : ಮನ್ನಗೆ ತುಟಿ ಸನ್ನೆ ಕಿವ್ಡಗೆ ಕೈ ಸನ್ನೆ ಹೆದ್ದಗೆ ಬಡಿಗೆಯ ಸನ್ನೆ (ಇಂಶಾಶ. ೯೦-೩೬). [ ? ]

**ಮನ್ನಣೆ** (ನಾ). ೧. ಗೌರವ ; ಮರ್ಯಾದೆ : ಮೆಲ್ಲನೆ ಬಂದಪ್ಪ ಗೌರವದ ಮೈಮೆಯ ಮನ್ನಣೆಯೋಳಿಗಳ್ ಕರಂ ಮನಮನಲರ್ಚೆ (ಸಂಶಜಾ. ೦೪-೯೫); ಇಲ್ಲಿಯೇ ಮನ್ನಣೆಗಾಸೆವಟ್ಟು ಮುಂದಣ ಫಲಮಂ ಕಿಡಿಸದಿರ್ (ಜೀವಸಂ. ೩೬-೨); ಮನ್ನಣೆಗೆ ಮನವಿಕ್ಕಿದೆಡೆ ಸಂಪನ್ನಸಚ್ಯುತನಾಶೆ ಕೇಳೆನೆ (ಸಂಭಶ. ೦೩-೩೯). ೨. ರಿಯಾಯಿತಿ ; ಮಾನ್ಯ : ಆ ತೋಂಟಕೆ ಸುಂಕಾ ಮನ್ನಾಯ ಸಮಸ್ತವುಂ ಮನ್ನಣೆ (ಎಕ್ಲಾ. XI-i, ೬೯-೯೦; 1033).

[?. / ಪ್ರಾ. ಮಾಣಣಾ. / ಸಂ. ಮಾನನ. / ತೆಲು. ಮನ್ನನ]

**ಮನ್ನಣೆಕಾಜಿ** (ನಾ). ಮನ್ನಣೆಗೆ ಪಾತ್ರನಾದವನು ; ಗೌರವಾನ್ವಿತ ವ್ಯಕ್ತಿ : ಮನ್ನಣೆಕಾಜಿ ಮನೋಹರರೂಪ ಲೋಕೋನ್ನತ ಕೋಮಲಚರಿತ ಸನ್ನುತ ಮತಿದೋಜಿ (ಶಠತ. ೯೨-೧). [ಮನ್ನಣೆ + — ಕಾಜಿ]

**ಮನ್ನಣೆಗೆಡು** (ಕ್ರಿ). ಗೌರವವು ಹಾಳಾಗು : ಮರ್ಯಾದೆ ಹೋಗು : ಮನ್ನಣೆಗೆಟ್ಟು ಮಾನಾಪಹರಣವಾಗಿ (ಕೃಶಂತ. ೨-೩೦).

[ಮನ್ನಣೆ + ಕೆಡು$_1$]

**ಮನ್ನಣೆಗೈ** (ಕ್ರಿ). ಗೌರವಿಸು ; ಮಾನ್ಯಮಾಡು : ಬೀರವ ನುಡಿದ ಮೂವರ ವಾಕ್ಯದ ಕೇಳಿ ಮಾರ ಮನ್ನಣೆಗೈವನವರ (ಸೋಹತ. ೬-೨೪); ಪರಿಪರಿ ಮರಿಯಾದೆಯಿಂದ ಮನ್ನಣೆಗೈಯೆ ಸರಿಮಂಡಲಿಕರಿಗೆಲ್ಲ (ಕಂಶಬ. ೩-೩೪); ಶರನಿಧಿಯು ತುಹಿನಾದ್ರಿಜಾತಪ್ರಿಯಬಾಂಧವನೆನುತ್ತ ಮನ್ನಣೆಗೈವನು (ವಂಶಾರಾ. ೫-೦-೯೩). [ಮನ್ನಣೆ + ಗೈ (< ಕೆಯ್$_1$)]

**ಮನ್ನಣೆಗೊಳ್** (ಕ್ರಿ). ಸನ್ಮಾನವನ್ನು ಹೊಂದು : ಗೌರವವನ್ನು ಪಡೆ : ಮನ್ನಣೆಯ ಮಂಡಳಿಕರು . . . ಮನ್ನಣೆಗೊಂಬ ಭಟರು ಮೊದಲಾದರು ತನ್ನ ನೇಮದೊಳೊಡಗಿದರು (ಅಂಶತ. ೭-೦೨೦).

[ ಮನ್ನಣೆ + ಕೊಳ್$_1$ ]

**ಮನ್ನಣೆಯಾಳ್** (ನಾ). ರಾಜನ ಸಭಾಸದರಲ್ಲಿ ಒಂದು ಪದವಿಯುಳ್ಳವನು ; ಮಾನ್ಯವ್ಯಕ್ತಿ : ರಾಯರಾವುತರ ಗಜಾರೋಹಕರ ಮಾವಂತರ ಮನ್ನಣೆಯಾಳ್ಗಳ ದಿಟ್ಟವಾರಿಯ ಧೀರರ ಪಾತಕರ ಗಣಿಕೆಯರ ಇಟ್ಟಣಿಸಿದ ಕಟ್ಟಣಕಾದಾಸ್ಥಾನದೊಳು (ಎಕೆರ.೬-೨೦). [ ಮನ್ನಣೆ + ಆಳ್$_3$ ]

**ಮನ್ನಣೆವಡೆ** (ಕ್ರಿ). ಗೌರವವನ್ನು ಪಡೆ ; ಮರ್ಯಾದೆಯನ್ನು ಹೊಂದು : ಮನ್ನಣೆವಡೆದ ಕೀರ್ತಿಖ್ಯಾತಿಯಂತೆ (ಧರ್ಮಾಮೃ. ೫-೦೨೫); ಪೊನ್ನ ಪುತ್ತಳಿಯಂತೆಸೆವ ಮನ್ನಣೆವಡೆದ ಪಟ್ಟದ ರಾಣಿ (ಹರಿ. ೧-೨೨).

[ ಮನ್ನಣೆ + ಪಡೆ$_1$ ]

**ಮನ್ನಣೆವೆಱು** (ಕ್ರಿ). = ಮನ್ನಣೆವಡೆ : ಮನ್ನಣೆವೆತ್ತ ಪೇಳದ ಕೆಳದಿಯರ್ (ಕಬ್ಬಿಗ. ೩೧೫) ; ಮನ್ನಣೆವೆತ್ತ ಪನ್ನಿಬ್ಬರು ಮಹಾಮಾತ್ಯರೊಳಗಗ್ರೇಶ್ವರನೆನಲು ಬಿರಿಯ ಗದ್ದುಗೆಯಲ್ಲಿ ಬಳ್ಳಿರಿಸಿ (ಬಸಪು. ೫-೬೫); ಮನ್ನಣೆವೆತ್ತ ಸಾಧ್ವಿಯರ ಮಹಿಮೆಗಳ ಸನ್ನುತಿಸುವಡೆ ಎನ್ನವೆ (ಹಂಬ. ೨-೦೦). [ ಮನ್ನಣೆ + ಪೆಱು$_1$]

**ಮನ್ನಳಿ** 'ಮನ್ನಟಿ' ನೋ.

**ಮನ್ನಳಿಪಟ್ಟು** (ನಾ). ಕುಸ್ತಿಯಲ್ಲಿ ಒಂದು ಪಟ್ಟು: ಕುತ್ತಿಗೆಯ ಮೇಲೆ ಕೈಯನ್ನೂರಿ ಅಮುಕುವುದು : (ಪಟ್ಟಿಯುವನತ್ತಿ . . . ತೋಂಡಾಂಗುಟ್ಟಿಯ ಹೆಗ್ಗತ್ತಿಗೆ ದಕ್ಷಿಣಹಸ್ತವನ್ನೆತ್ತಿ ಬಿನ್ನಣದಿಂದವುಂಕಿ, ಹಠಾತ್ತಾಗಿ ಸ್ತಂಭಿತನಾಗಿ ದಿಂಡುಬೀಳುತ್ತಿದ್ದ ಆತನನ್ನು ಕಮ್ಮೈಡುಕಿ ಹಿಡಿದು, ಮೆಲ್ಲಗೆ ಬೆನ್ನೆ ಮಲಗಿಸಿ, ಎದ್ದ) ಮನ್ನಳಿಪಟ್ಟು ಅದು (ಮಂತ್ರಶ. ೦೦೩-೨೨). [ ಮನ್ನಳಿ (< ಮನ್ನಟಿ) + ಪಟ್ಟು$_2$ ]

**ಮನ್ನಟಿ, ಮನ್ನಳಿ** (ನಾ). ಕೊರಲ ಹಿಂದಿನ ನರಗಳ ಗುಂಪು : ಕ್ಷಳಕ್ಕೆ— . . . ಅರ್ಗಳಂ – ಅಗುಳಿ, ಮನ್ಯಾಳಿ — ಮನ್ನಟಿ (ಶಮದ. ೨೦ ಕ್ರಿಯೋ). ಮನ್ನಳಿ : "ಮನ್ನಳಿ —ಮನ್ಯಾಳಿ (ಮನ್ಯಳ)" (ತದ್ಭಕೋ. ೩೪); ಯುತ್ವಕ್ಕೆ ನತ್ವಂ–ಕನ್ಯಕಾ—ಕನ್ನಿಕೆ; ಮನ್ಯಾಳಿ—ಮನ್ನಳಿ (ಶಮದ. ೨೬೬ ಕ್ರಿಯೋ). [ < ಸಂ. ಮನ್ಯಾಲೀ ]

**ಮನ್ನಾ** (ನಾ). ೧. ಅಡ್ಡಿ ; ಪ್ರತಿಬಂಧ. ೨. ವಿನಾಯಿತಿ ; ರದ್ದು : ಕಾಲೇಜಿನಲ್ಲಿ ಅವನಿಗೆ ಫೀ ಮನ್ನಾ ಆಗಿತ್ತು (ಆಡು). 'ಮನಾಯಿ' ಪರಾ.

**ಮನ್ನಾಮಾಡು, ಮನ್ನಮಾಡು** =೧. ರದ್ದುಮಾಡು ; ವಿನಾಯಿತಿ ಕೊಡು : ಆ ಚಿತ್ರಕ್ಕೆ ಮನರಂಜನೆಯ ತೆರಿಗೆಯನ್ನು ಮನ್ನಾ ಮಾಡಿದ್ದಾರೆ

(೬೩೩). ೨. ತಡೆಹಿಡಿ; ಪ್ರತಿಬಂಧಿಸು : ಸ್ಪರ್ಧೆಪರೀಕ್ಷೆಗಳನ್ನು ಮನ್ನಮಾಡುವುದಾಗಿ ತೀರ್ಮಾನಿಸಿದ್ದರಂತೆ (ಕಂಕ. ೨೬೦).

[ ← ಅರ. ಮನ್‌ಅ; ಹಿಂ. ಮರಾ. ಮನಾ ]

**ಮನ್ನಾರು** (ನಾ). ಒಡೆಯ, ಪ್ರಭು ಎಂಬರ್ಥದಲ್ಲಿ (ದೇವರನ್ನು ಕುರಿತು) ಮಾಡುವ ಸಂಬೋಧನೆ : ಮನ್ನಾರು ಕೃಷ್ಣಗೆ ಮಂಗಳ ಜಗವ ಮನ್ನಿಸಿದೊಡೆಯಗೆ ಮಂಗಳ (ಪುರಂದ. ೩-೦೩೯ ಕಲ್ಲಿ); ಚೆಲುವ ವರದರಾಜ ಮನ್ನಾರು ನರಸಿಂಹ ಕೊಳಲ ಗೋಪಾಲರೊಪ್ಪಿದರು (ಕಂಸಾ. ೬-೯೦).

[<ಸಂ. ಮಾನ್ಯ. / ತಮಿ. ಮನ್ನನಾರ್, ಮನ್ನಾರ್; ತೆಲು. ಮನ್ನನಾರು, ಮನ್ನಾರು]

**ಮನ್ನಾರ್ಥ** (ನಾ). (?) : ಉರುವಿಗೆ ಗ್ರಾಮಸ್ಯ ಮನ್ನಾರ್ಥ [ಂ] ತಸ್ಮಿನ್ನೇವ ಗ್ರಾಮೇ ಪಞ್ಚಾಶನ್ನಿವರ್ತ್ತನ ಪರಿಮಾಣಞ್ಚ ಕ್ಷೇತ್ರಞ್ಚ ದತ್ತಂ (ಕಇ. II, ೩-೩೪; 693). [ ? ]

**ಮನ್ನಿಸು** (ಕ್ರಿ). ೧. ಗೌರವಿಸು ; ಮರ್ಯಾದೆಮಾಡು ; ಆದರಿಸು : ಏನುಂ ತೊದಳಿಲ್ಲದಿತ್ತು ಮನ್ನಿಸಿದಂ ಸನ್ಮಾನಪುರಸ್ಸರಂ (ಆದಿಪು. ೦೩-೦೨) ; ಆಳರಸೆಂಬ ಭೇದಮೆಮ್ಮೊರ್ಬರೊಳಂ ಪಲ್ಲಟಿಸಿತೆಂಬಿನಂ ಮನ್ನಿಸಿದಂ (ಶಾಂತಿಪು. ೬೦೩): ಅಸುರನ ಚರನೆಂದಪಮಾನಿಸುಗುಮೊ ಮೇಣ್ ಭಕ್ತನೆಂದು ಮನ್ನಿಸುಗುಮೊ . . . ಕೃಷ್ಣಂ (ಜಗ೦. ೩-೬೩). ೨. (ದುಃಖ, ಕೋಪ ಮೊದಲಾದುವನ್ನು) ಶಮನಗೊಳಿಸು ; ಸಮಾಧಾನಮಾಡು : ರಕ್ತಜಲದಿಂ ಕೋಪಾನಳನಂ ಮನ್ನಿಸದಿನ್ನುಂ ಗಳಗಳಿತ ಸಕೋಪನಿರ್ಪ ತೆಜಿದಿಂದಿರ್ದ್ದ (ಗದಾಯು. ೧-೩೭); ನಯೋಕ್ತಿಯಲಿ ಮುನಿ ಹರಸಿ ಸಂತಾನಾಭಿವೃದ್ಧಿಯ ಸಾರಸೌಖ್ಯತೆಯ ಅರಸನನು ಮನ್ನಿಸಿ . . . ಅಭಯವಿತ್ತನು ಋಷ್ಯಶೃಂಗಮುನಿ (ತೊರರಾ. ೧-೬-೦೭). ೩. ತಪ್ಪನ್ನು ಗಣಿಸದಿರು ; ಕ್ಷಮಿಸು : ಬಾಯ್ಗೆ ಬಂದನಿತುಮನುಸಮಾರಾರಿ ಬಯ್ಯೆ ಸೈರಿಸಿ ನೂಱೊಂಬನಿತುವರಂ ಮನ್ನಿಸಿ (ಕೃಶಭಾ. ೬-೬೩); ಕುಲದಿಂ ಕೆಟ್ಟವರನ್ನಣ್ಣ ನೀಂ ಮನ್ನಿಪುದೇ (ಭರತೇಶವೈ. ೧-೦೦೩); ಆ ನೀಚನಾದ ರಾವಣನೇ ಆದರೂ ನಮಗೆ ಶರಣಾಗತನಾಗಿ ಬಂದಲ್ಲಿ ನಾವು ಮನ್ನಿಸಿ ರಕ್ಷಿಸುವುದೇ ಸಿದ್ಧ (ಸಕಲ. XIV, ೧೮). ೪. ಒಪ್ಪು : ಲೆಕ್ಕಿಸು : ಅಂಗೀಕರಿಸು : ಅರಸಿ ನಾರಾಯಣಪತ್ರಿಯು ಮಿಥ್ಯಾವೇಷಮಂ ಕಂಡು [ಮನ್ನಿಸದು]ದಾಸೀನಂಗೆಯ್ದಿರ್ದುಂ (ಧರ್ಮಾಮೃ. ೪-೦೯೬); ಬಸಂತನ ಮಂತಣದ ಮಾತು ಸೂಕ್ತನೆ ಮಂತಣಿಯ ಮಾನಂತನ ಮಾತಂ ಮನ್ನಿಸುವಂತೆ ಮನ್ನಿಸಿ (ಲೀಲಾ. ೦೬೦); ಕರೆದು ಮನ್ನಿಸಿ ಕೂಡಿಮೊಡಿ ಕಾಮರನ ಸುರತದ ಸುಖವಿನ್ನೆಂತೋ (ಕಂಸಾ. ೯-೦೦೬). ೫. ದಯಾಪಾಲಿಸು ; ಅನುಗ್ರಹಿಸು : ಹಿರಿದುಂ ಮನ್ನಿಸಿ ನಡಪುತ್ತಿರೆ ಪರಮರಹಸ್ಯಭೂಮಿಯೆನಿಸಿದಳಂತೀ ಜಲಚಾರಕೆ (ಶಾಂತಿಪು. ೩೨೨) ; ಮನ್ನಿಸುಗೆ ಕೃತಿಗೆ ಸೌಭಾಗ್ಯೋನ್ನತಿಯಂ (ಮಲ್ಲಿಪು. ೦-೨೩) ; ಅವುದೆಮಗ ಭ್ಯುದಯವದ ನೀನಾವ ಪರಿಯಲಿ ಮನ್ನಿಸಿದಡರೆಜೀವ ಕೌರವವಂಶವೇ ಸಪ್ರಾಣಿಸುವುದು (ಕುಮಾ.ಕ. ೩-೦೯).

[ಮನ್ನಣೆ + —ಇಸು./ತೆಲು. ಮನ್ನಿಂಚು, ಮನ್ನಿಂಪು]

**ಮನ್ಯು** (ನಾ). ಸಿಟ್ಟು ; ಕೋಪ : "ಮನ್ಯು—ಮನ್ಯು=ದೈನ್ಯ, ಕೋಪ" (ತದ್ಭಕೋ. ೩೪); ಅಣ್ಣಂ ಮನಮಿಳ್ದು ಮನ್ಯು ಮಿಗೆಯುಂ ಬಗೆಗೊಳ್ಳದ ನೀಂ ದೀಕ್ಷೆಗೊಂಡೆ (ಎಕ. II, ೨೩೪-೩೦ ; 1180). [<ಸಂ. ಮನ್ಯು]

**ಮನ್ನೆ** 'ಮನ್ನೆಯ' ನೋ.

**ಮನ್ನೆಖೇಟ** 'ಮಾನ್ಯಖೇಟ' ನೋ.

**ಮನ್ನೆಖೇಡ** 'ಮಾನ್ಯಖೇಟ' ನೋ.

**ಮನ್ನೆಗಾಳೆ** 'ಮನ್ನೆಯಗಹಳೆ' ನೋ.

**ಮನ್ನೆಯ, ಮಣ್ಣೆಯ, ಮನ್ನೆ** (ನಾ). ೧. ಗೌರವ; ಮರ್ಯಾದೆ : 'ಮನ್ನೆಯಗಹಳೆ' ಪರಾ. ೨. ಗೌರವಕ್ಕೆ ಪಾತ್ರನಾದವನು; ಮನ್ನಣೆಗೆ ಯೋಗ್ಯನಾದವನು: ಮಾನ್ಯ : ಹಗಸದಂ ಬೇಗದಿಂ ಮಣಿ ವರೂಥಮಂ ಕೆಲಬಲದ ಮನ್ನೆಯರ ಗಡಣದಿಂದೆ (ಕೃತಿರಾ. ೪-೨೭). ೩. ಮಾಂಡಲಿಕ; ಸಭಾಸದ : "ಮನ್ನೆಯ —ಮಾನ್ಯ = ಮರ್ಯಾದಿತ, ಮಾಂಡಲಿಕ" (ತದ್ಭಕೋ. ೩೪); ಮಣ್ಣ ಕೋಟೆಯಂ ಸಂಬಿ ಕಲ್ಲ ಕೋಟೆ ಯನೊಡೆವ ಮನ್ನೆಯನುಮಂ (ಧರ್ಮಾಮೃ. ೩-೩೦); ಕೆಲಬಲದ ಮನ್ನೆಯರ ಕೈವೀಸಿ . . . ಪಾರ್ಥನಿದಿರಾದ (ಕುಮಾವ್ಯಾ. ೬-೦೩); ತೋಟ ತೋಟಗಾಸೆ ಕೋಟೆ ಮನ್ನೆಯಗಾಸೆ (ಸರ್ವಜ್ಞ. ೦೯೦೬). ೪. ನಾಯಕ ; ಮುಖಂಡ : ಮನ್ನೆಯರಾಳಂತೆ ಕಾದಿಯಲಸದೆ (ಕೃಶಭಾ. ೩-೪೬ ಪ). ೫. ದಾನವಾಗಿ ಕೊಡುವ ಭೂಮಿ ; ಉಂಬಳಿ : ಅನ್ತವರ್ಮನ್ನೆಯದೊಳ್ಸರ್ವ್ವ ನಮಸ್ಯಮುಂ . . . ಪಡೆದು (ಸೌಇಇ. XI–i, ೪೩-೪೬; 980); ಮನ್ನೆಯ ಬಿಟ್ಟಂ ಬಿಟ್ಟಂ ಮನ್ನೆಯಮಂ (ಇಆ. XVIII, ೨೬೪-೪೦; 994); ಕುಡಿಗೆರೆಯ ಮನ್ನೆಯವೊಳಗಾಗಿ ಸರ್ಬ್ಬಾಭ್ಯಂತರಸಿದ್ಧಿಯಿಂದ ಕೊಟ್ಟಂ (ಎಕ. VII, ಶಿಕಾ. ೩೩-೨೬; 1027). ೬. ನಾಡಿನ ಒಂದು ಭಾಗ ; ಮಂಡಲ : ಶ್ರೀ ಮುಳುಗುನ್ದ ಪನ್ನೆರಡಱ ಮನ್ನೆಯಂ ಕೊಱಲಗುನ್ದಂ (ಸೌಇಇ. XI–i, ೪೬-೦೦; 994); ಕೋಗಳಿಯಯ್ನೂಱ ಮಂನೆಯಮನೇಕಾಧಿಷ್ಟಿತಂ ಸುಖದಿ ನಾಳುತ್ತಮಿರೆ (ಸೌಇಇ. IX–i, ೨೪೮-೦೩ ; 1147). **ಮಣ್ಣೆಯ** : ೭. ಒಂದು ಬಗೆಯ ತೆರಿಗೆ : ಮಗ್ಗದೆಱೆ ಮಣ್ಣೆಯ ಕಬಲವದೆಱೆ (ಎಕ. IX, ಕಾವಣ. ೬೨-೨೮; 1277). **ಮನ್ನೆ** : ೧. 'ಮನ್ನೆಗಾಳೆ' ಪರಾ. ೫. ಕಱೆಯ ರಾಚಮಲ್ಲ ಮನ್ನೆ ಬೇಡಿದೊಳರೆನೆಲಸುಂ ಭಣ್ಣಾರವುಮಂ ಕೊಟ್ಟಾನೆಂದು ಬನ್ದು ಭುವನಾದಿತ್ಯಂ ಬರೆ (ಎಕ. III (R), ತನ್ನರ. ೨೩-೪; ಸಂ. 10ನೆಯ ಶತ).

**ಮನ್ನೆಯ ಗಂಡ, ಮನ್ನೆಯರ ಗಂಡ**=ಮುಖಂಡರನ್ನು ಮೀರಿಸುವ ಶೂರ; ಒಂದು ಬಿರುದು : ಎಲ್ಲಾ ಕಿರಾತಸಂಕುಲದ ಗುಱಿ ನೆಱೆದು ದಿಂದು ಹದುಳದಿಂದರಸ ಮನ್ನೆಯ ಗಂಡನಾಗು ಬೇಗದೊಳೆಂದಡೆ (ಹಕಶಾ. ೬-೦೯); ಕೊಂಡು ಬರುತಿದೆ ಘಟರು ಮನ್ನೆಯ ಗಂಡನಾಗ್ಯೆ ಜೀಯ ಎನೆ (ಕುಮಾ.ದ್ರೋ. ೬-೨೩); ಗಂಡರ ಗಂಡನಾಹವದ ಗಂಡನುಂ . . . ಕೂಡಿ ತಪ್ಪುವ ಮ(ಂ)ನ್ನೆಯರ ಗಂಡನು (ಸೌಇಇ. IX–i. ೨೬೬-೩೩; 1183). **ಮನ್ನೆಯಗೊಡತಿ** = ಒಂದು ಬಿರುದು : ಮ(ಂ)ನ್ನೆಯಗೊಡತಿ ಜಗದ್ದಳ ಹಲುವಾಗಿಲ ಮ(ಂ)ನ್ನೆಯ ನಾಚಿದೇವಪ್ಪರು (ಸೌಇಇ. IX–i. ೩೬೮-೦೦; 1279). **ಮನ್ನೆಯದ ಹೊನ್ನು**=ಮಾನ್ಯವಾಗಿ ಬಿಟ್ಟ ತೆರಿಗೆಯ ಹಣ : ತನಗೆ ನಡವ ಮನ್ನೆಯದ ಹೊನ್ನೊಳಗೆ ದೇವರ ನಂದಾದೀವಿಗೆಗೆ ಬಿಟ್ಟ ಗದ್ಯಾಣ ಒಂದು (ಸೌಇಇ. IX–i. ೨೦೬-೪೦; 1122). **ಮನ್ನೆಯ ಬಂಗಾರ**= ಒಂದು ಬಿರುದು: ಸಹಜಮನೋಜ ಹಯವತ್ಸರಾಜ [ಕೊಂಗ]ಮನ್ನೆಯ ಬಂಗಾರ ಮಾವನಂಕಕಾಱ (ಸೌಇಇ. XI–i. ೪೬-೨೦; 1062). **ಮನ್ನೆಯ ಬೇಂಟೆಕಾಱ** = ಒಂದು ಬಿರುದು : ಏಕಾಂಗವೀರನಸಹಾಯಸೂರ ಮಂನೆಯ ಬೇಂಟೆಕಾಱ ಅಂಣನ ಗಂಧವಾರಣನು (ಎಕ. XVI, ತಕ್ಕನಾ. ೬೨-೨೮; 1242). **ಮನ್ನೆಯಭೇರುಂಡ** = ಒಂದು ಬಿರುದು : ಮೂವಡಿ ಗಣ್ಡಂ ಮನ್ನೆಯಭೇರುಣ್ಡ ನಾಮಾದಿ ಸಮಸ್ತಪ್ರಸ(ಶ)ಸ್ತಿಸಹಿತಂ (ಎಇ. XII, ೨೬೪-೮; 1040). **ಮನ್ನೆಯ ಸಿಂಗ** = ಮುಖಂಡರಲ್ಲಿ ಸಿಂಹದಂತಿರುವವನು ; ಒಂದು ಬಿರುದು : ಪರಬಳಕೃತಾಸ್ತಂ ಸಾಹಸೋತ್ತುಂಗಂ ಮನ್ನೆಯಸಿಂಗ ನಾಮಾದಿ ಸಮಸ್ತಪ್ರಶಸ್ತಿಸಹಿತಂ . . . ಜಯಕೇಶಿಅರಸರ್ (ಸೌಇಇ. XX. ೪೭-೨೩; 1074).[< ಸಂ. ಮಾನ್ಯ]

**ಮನ್ನೆಯಗಹಳೆ, ಮನ್ನೆಗಾಳೆ** (ನಾ). ಗೌರವಸೂಚಕವಾಗಿ ಊದುವ ಒಂದು ಬಗೆಯ ಕಹಳೆ : ಚಿನ್ನತಿತ್ತಿರಿ. . . ಹೆಗ್ಗಾಳೆ ಮನ್ನೆಯಗಹಳೆ . . . ಮೊಳಗಲು (ರಾಮಂ. ೯-೭೦); ಮನ್ನೆಯಗಹಳೆ ಚಂಬಕಹಱೆ

ಬೊಂಬುಳಿ ಚಿನ್ನತಿತ್ತಿರಿ (ಶಾಂತಿಪು. ೦೦-೨೯). **ಮನ್ನೆಗಾಳೆ** : ಪೊಡೆವ ತಂಬಟ ಭೇರಿ ಘಂಟೆ ಜಯಘಂಟೆಗಳ ಗಿಡಬಿಡ ಬುರುಗು ಮನ್ನೆಗಾಳೆ ಪೆರ್ಗಾಳೆಗಳ (ಕಬಿಂ. ೬-೯). [ಮನ್ನೆಯ + ಕಹಳೆ]

**ಮನ್ನೆಯಗೆಱೆ** (ನಾ). ಮಾನ್ಯವಾಗಿ ಕಟ್ಟಿಸಿದ ಕೆರೆ : ರಾಮೇಶ್ವರ ದೇವರ ಹೂದೋಂಟದಿಂ ಮೂಡಹಾದರಿಯ ಮಣಲು ಮತ್ತರೆರಡು ಮನ್ನೆಯಗೆಱೆಯ ಕೋಡಿಯಿಂ ತೆಂಕ ತೋಂಟಗಟ್ಟು ಮತ್ತರೊಂದು (ಕಾಇಶಾ. IX-i. ೩೨೯-೩೪; 1209). [ಮನ್ನೆಯ + ಕೆಱೆ]

**ಮನ್ನೆಯದೆಱೆ** (ನಾ). ದತ್ತಿಯಾಗಿ ನೀಡಿದ ಭೂಮಿಯ ಮೇಲೆ ಹಾಕುತ್ತಿದ್ದ ತೆರಿಗೆ : ಮಂನೆಯಸಾಮ್ಯದೊಳ್ ಬಿಟ್ಟ ಮನ್ನಣೆಯೆನ್ತೆಂದೊಡೆ ಮನ್ನೆಯದೆಱೆ ಆಳಿವಸಕಾಯ. . . ಮೊದಲಾಗಿ. . . ಸರ್ವಬಾಧಾ ಪರಿಹಾರಂ ಕಾದು ನಡೆಯಿಸುವರ್ (ಕಾಇಶಾ. XI-i. ೬೩-೨೦ ; 1042); × × × ಕರಣಂಗಳ ಕಾಣ್ಕೆಯೆಂದು ಮನ್ನೆಯದೆಱೆಯುಂದರುವಣವೆನ್ದು . . . ಕೊಣ್ಡವರ್ಚಣ್ಣಾಳರ್ (ಕಾಇಶಾ. IX-i. ೨೯೯-೩೬; 1164). 'ಮಾನ್ಯದೆಱೆ' ಪರ್ಯಾ. [ಮನ್ನೆಯ + ತೆಱೆ₃./ತೆಲು. ಮನ್ನಿಯತೀಱು]

**ಮನ್ನೆಯಪನ್ನಸು** (ನಾ). ಶೇಕಡ ಐವತ್ತರಷ್ಟು ತೆರಿಗೆ ವಿನಾಯಿತಿಯುಳ್ಳ ಮಾನ್ಯದ ಜಮೀನು : ಸತ್ರಕ್ಕೆ ಮಲ್ಲರಸ ಬಿಟ್ಟ ಕೆಯಿ ಬೀಳ್ಕೆಂಟಿಯ ದಾರಿಯಿಂ ಬಡಗ ಗವಱೇಶ್ವರ ದೇವಗೆಯಿಂ ಪಡುವ ಮಂನೆಯ ಪಂಸಸು (ಕಾಇಶಾ. IX-i. ೨೩೨-೪೦; 1148).

[ಮನ್ನೆಯ + ಪನ್ನಸು]

**ಮನ್ನೆಯವಣ** (ನಾ). =ಮನ್ನೆಯದೆಱೆ : ಹೆಬ್ಬಾಳು ಹನ್ನೆರಡಱೊಳಗಣ ಮಣಿಯೂರ ಮನ್ನೆಯವಣವಂ . . . ಶ್ರೀ ಚೆಂನಕೇಶವದೇವರ್ಗ್ಗೆ ಧಾರಾಪೂರ್ಬ್ಬಕಂ ಕೊಟ್ಟರು (ಕಾಇಶಾ. XV. ೩೩-೩೦; 1147).

[ಮನ್ನೆಯ + ಪಣ₃]

**ಮನ್ನೆಯವಳಿ** (ನಾ). ಮಾನ್ಯರ ವಂಶ; ಮಾಂಡಲಿಕರ ಕುಲ : ಮನ್ನೆಯವಳಿಯೊಳತಿಸ್ತುತನಂನತಯಶನಾಶ್ರಿತಾಶ್ರಯಂ ಕಲಿಕಾಲೋತ್ಪಂನ ಲಾಕುಳೀಶನೆನಿಪಂ (ಎಇ. XX, ೦೦೬-೩೯ ; 1167).

[ಮನ್ನೆಯ + ಬಳಿ₂ (<ಬಟ್ಟಿ₃) ]

**ಮನ್ನೆಯಪೊಲ** (ನಾ). ಮಾನ್ಯವಾಗಿ ಬಿಟ್ಟ ಹೊಲ : ಅಂತು ಹೇಱಿಗೆ [ನಡೆ]ವೆಲೆ ೨೦೦ ಅಲ್ಲಿಯ ಮನ್ನೆಯಪೊಲದೊಳಗೆ ಅರುವಣದಿಱುವ ಅರ್ಜುನೇಶ್ವರಂ ಬಸದಿಯಂ [ಮೂಡಿಂ] ಬಿಟ್ಟ ಗದ್ಯಾಣ ೨ (ಕಾಇಶಾ. XX. ೯೩-೨೪; 1071). [ಮನ್ನೆಯ + ಪೊಲ]

**ಮನ್ನೆಯಸಾಮ್ಯ** (ನಾ). ಮಾನ್ಯದ ಒಡೆತನ, – ಸ್ವಾಮ್ಯ : ಅಲ್ಲಿಯ ಬಡಗಪೊಲದ ಮನ್ನೆಯಸಾಮ್ಯದ ಮಾನ್ಯಪೊಲದೊಳಗೆ . . . ಧಾರಾಪೂರ್ವ್ವಕಂ ಮಾಡಿ ಬಿಟ್ಟ ನೆಲಂ ಮತ್ತರು ೧೫೦ಕ್ಕೆ ನಿಬನ್ಧವರು ಪಣಂ ಗದ್ಯಾಣ ೧ (ಕಾಇಶಾ. XX. ೨೦-೩೯; 1089) ; ಇನ್ತುಱುಪಗ್ಗಾರ್ವ್ವಣ್ಗಳ್ಕಟ್ಟ ಮಂನೆಯಸಾಮ್ಯದೊಳ್ ಬಿಟ್ಟ ಮನ್ನಣೆಯೆನ್ತೆನ್ದೊಡೆ ಮಂನೆಯದೆಱೆ . . . ತಂಬುಲಂ ಮೊದಲಾಗಿ . . . ಕಾದು ನಡೆಸುವರ್ (ಕಾಇಶಾ. XI-i. ೬೩-೦೯ ; 1042). [ಮನ್ನೆಯ + ಸಾಮ್ಯ₁]

**ಮನ್ಮಥ** (ನಾ). ೧. ಕಾಮ ; ಮದನ : "ಪ್ರದ್ಯುಮ್ನಃ . . . ಮನ್ಮಥಃ . . . ಮನೋಭವಃ — ಈ ೨೮ ಕಾಮ(ದೇವನ) ಪೆಸರ್" (ಹಲಾಯು. ೬-೩೩); "ಬಂದುಣಿವೆದೆಯನು . . . ಕಾವ ಜತಿಗಳವಗೆಯನೆನೆ ಮನ್ಮಥನ ನಾಮವಮುಕ್ಕ್ಯಂ" (ಅಭ್ಯಕ್ತಿ. ೯); ನಯನಂ ನೀಳಸರೋಜಭಾಸಿ . . . ಬಾಹುಯುಗಂ ಮನ್ಮಥಪಾಶಭಾಸಿ (ಸುಕುಮಾ. ೩-೩೩) ; ಸಂಯಮವ ಸಾಧಿಸಿ ಮತ್ತೆ ನುಡಿದೋಱಿದಳ್ ಮನ್ಮಥನ ಶಿಷ್ಯೆ (ಶಬ್ದಾಂಗ. ೩೯-೦೦೩೬). ೨. ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತೊಂಬತ್ತನೆಯದು: ಪ್ರಭವ ವಿಭವ . . . ಮನ್ಮಥ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ಅವೇಳ. ೨೬೬). ೩. ಒಂದು ಮರದ ಹೆಸರು ; ಬೆಳವಲಮರ : ಚಂದನ . . . ಪುನ್ನಾಗ ಇಂದ್ರವಾಣಿಯು ಮನ್ಮಥ ಬಿಲ್ವ ಪಾಲಾಶ ದಿಂದಲಾ ನಂದನವೆಸೆದುದು (ಕಕೊಳ. ೨೬-೩). [ಸಂ.]

**ಮನ್ಮಥಚಕ್ರ** (ನಾ). [ಕಾಮಶಾ] ಯೋನಿಯ ಒಂದು ಭಾಗ : ಯೋನಿಯಂಕುರ : ಭಗದ ಮೇಲೆ ಮೂಗಿನಂತೆ ಯವ್ವನ ಅಂಗಸ್ಥಾನ ಮದಗಳಿಂದಾದ ಅನೇಕ ಮದಗಳಿಹವು. ಅವು ಪ್ರತಿದಿನ ತಮ್ಮ ಶ್ಲಥವನುಗಳು ತ್ರಿರೆ ಶುಕ್ಲದಂತೆ ಬೆಣ್ಣೆಯಂತೆ ಸ್ರವಿಸುವದು. ಅದರ ದೊಡ್ಡ ತೀಟೆಗೆ ಕಾರಣವಪ್ಪುವದರಿಂ ಕಾಮುಕರೆಗಳೊಡನಿರ್ಪವದರಿಂ ಮನ್ಮಥಚಕ್ರವೆಂಬುದು (ಕಾಮಶಾ. ೨೩೦). [ಸಂ.]

**ಮನ್ಮಥಭೂಮಿ** (ನಾ). [ಕಾಮಶಾ] ಕಾಮಕಲಾಸ್ಥಾನ : ಬೆನ್ನು ಬದಿಗಿಗಂ ಮೊಲೆಗಳು ನಡುನೆತ್ತಿ ಐದುಂ ಮನ್ಮಥಭೂಮಿಗಳು (ಕಾಮಶಾ. ೨೪೦).

[ಸಂ.]

**ಮನ್ಮಥಾರಿ** (ನಾ). ಮನ್ಮಥನ ಶತ್ರು ; ಶಿವ : ನಮಿಸಿದನ್ ಮನ್ಮಥಾರಿಗೆ ಮನ್ಮಥನ ಬಂದಿ (ಶ್ರೀಕೃಷ್ಣಚ. ೩೨೬-೩೩೨). [ಸಂ.]

**ಮನ್ಮಥಾವಸ್ಥೆ** (ನಾ). ಪರಸ್ಪರ ಅನುರಕ್ತರಾದ ಸ್ತ್ರೀಪುರುಷರು ಅಗಲಿದಾಗ ಅನುಭವಿಸುವ ವಿರಹವ್ಯಥೆ ; ಇದು ಹತ್ತು ತೆರನಾಗಿರುವುದು : "ತನ್ನ ನಾಯಕನ ವಿರಹದಿಂ ಚಿತ್ರದೊಳು ಅವನ ಪ್ರತಿಮೆಯಂ ನೋಡುವದು ಒಂದು. ಅವನಲ್ಲಿ ಯಾವಾಗಲೂ ಮನಸ್ಸು ಇಟ್ಟು ತಿರುಗುವದು ಎರಡು. ಆವ ಕಾಲದಲ್ಲಿಯೂ ಸಮಾಗಮ ಬಯಸುವದು ಮೂರು. ಸರ್ವಕಾಲದಲ್ಲಿಯೂ ಅವನ ನೆನಹಿನಿಂ ನಿದ್ರೆಗೆಯ್ಯದೆಯಿರುವದು ನಾಲ್ಕು. ಅವನಲ್ಲಿ ವಿರಹದಿಂ ಭೋಜನಾದಿಗಳಿಲ್ಲದೆ ವೇಗದೊಳು ಕಾರ್ಶ್ಯವ ಹೊಂದಿರುವದು ಐದು. ಅವನಲ್ಲಿ ವಿರಹದಿಂ ಗಂಧಮಾಲ್ಯಾದಿಗಳಂ ಬಿಡುವದು ಆರು. ದೇಹಾಭಿಮಾನವಂ ಬಿಟ್ಟು ನಾಚಿಕೆ ಇಲ್ಲದೆ ಇರುವದು ಏಳು. ಪ್ರಜ್ಞೆ ಪರಿತಪ್ಪಿ ಮೂರ್ಛೆ ಪೋಪುದು ಎಂಟು. ಹುಚ್ಚು ಹಿಡಿದಂತೆ ವಿಕಾರ ಹೊಂದಿ ಇರುವದು ಒಂಭತ್ತು. ಅತಿವ್ಯಸನದಿಂ ಮೃತಿಯಂ ಹೊಂದುವದು ಹತ್ತು. ಈ ಪ್ರಕಾರ ಹತ್ತು ಬಗೆಯಾದಂಥಾ ಮನ್ಮಥಾವಸ್ಥೆಗಳೆನಿಸುವವು" (ಕಾಮಶಾ. ೨೯೬) ; ಎಲೆ ಅನಸೂಯೆ ಇವಳ ಮನ್ಮಥಾವಸ್ಥೆ ಮೀರುತ್ತಾ ಬಂದಿತು (ಶಾಕುಂತ. ೩೬-೦೦).

[ಸಂ. ಮನ್ಮಥಾವಸ್ಥಾ]

**ಮನ್ಯ** (ನಾ). ಕೊರಳು : ಹೆಗ್ಗತ್ತು : "ಕೊರಳು ಮನ್ಯಂ ಗಳಂ ಧಮನಿ ಕಂಧರ ಶಿರೋಧರಮುದಾ ಗ್ರೀವಮೆನಿಸಿಕ್ಕು" (ಶಬ್ದಗರಾ. ೯೩-೬).

[ಸಂ. ಮನ್ಯಾ]

**ಮನ್ಯಪಣ** (ನಾ). = ಮನ್ನೆಯದೆಱೆ : ದಂಡವೃಂದಿಗೆ ಪಡರಕಿಱುಕು × × ಬೆದ್ದಾಯ ಮುಂತಗಿ ಮನ್ಯಪಣ (ಎಕ. XIV. ಕೃಷ್ಣರಾ. ೨೮-೩೨; ೪).

[< ಮನ್ನೆಯ + ಪಣ₃]

**ಮನ್ಯಾಸ್ತಂಭ** (ನಾ). ಕುತ್ತಿಗೆಯನ್ನು ಸರಾಗವಾಗಿ ಆಡಿಸಲಾಗದ ಒಂದು ಬಗೆಯ ವಾಯುರೋಗ ; ಕುತ್ತಿಗೆ ಸೆಡೆತ : ಪರಿಪಕ್ವಮಾದ ಗರ್ದುಗಿನ ತಿರುಳುಂ ಶುಂಠಿಯುಮನರೆದು ನಸ್ಯಂಗೆಯ್ದೊಡಿರಲೀಗುಮೆ ಮಾನ[ಮನ್ಯಾ]ಸ್ತಂಭರೋಗಮುಂ ಬಾಹುಮೆಂಬಿಮಂ ಗ್ರಂಥಿಯುಮಂ (ಕೋಕಕೋಶ. ೯-೦೦೦) ; ಅಮರದವಳ್ಳಿ, ಔಡಲದ ಬೇರು . . . ಕಷಾಯ ಹಾಕಿ ಕುಡಿಯೆ ಸಂಧಿಗುಸನ್ನಿವಾತ, ಮಾನ್ಯ[ಮನ್ಯಾ]ಸ್ತಂಭ . . . ಸಂದುವಾತ ಸಹ ಪೋಗ್ಗುಂ (ಸಕವೈ. ೦೩೨). [ಸಂ.]

**ಮನ್ಯು** (ನಾ). ೧. ಕೋಪ ; ಸಿಟ್ಟು : ಎಂದರಸಂ ನುಡಿವುದುಮಾ ಸುಂದರಿಗಂತಂತೆ ಮನ್ಯು ಮಿಕ್ಕು ಮನಸ್ತಾಪಂ ದಳ್ಳಿಸೆ (ಋಜ್ಞಕ್ಕೆ. ೪-೦೨) ; ಬಾಲನೊಳ್ ಮನ್ಯು ತಕ್ಕುದೆ ಪೇಳ್ (ಅಹ್ನ್ಯಕ್ಕ. ೦-೮-೫೬). ೨. ದುಃಖ ; ಅಳಲು ; ವ್ಯಥೆ : ಸಹೋದರಶೋಕದೊಳ್ ಮನ್ಯು ಮಿಕ್ಕು ಸ್ಯರಿಸ

ಲಾಟಿದೆ (ಕುಕಿಣಾ. ೦೪-೯ ಚ) ; ಮನವೊಳದಾಗೆ ಮನ್ಯು ವಿಗೆ ತಳ್ತಿಮೆಯಿಂ ಕರಗಣ್ಕೆ ಸೂಸೆ ಕಣ್ಬನಿ (ಕುರಾಕು. ೬-೦೦೬) ; ಪತ್ತುವಿಡು ಮನ್ಯುವುಂ ದೈನ್ಯಮುಂ (ಶ್ರೀರಾಕು. ೨೯೩-೨೩೩). ೩. ದೈನ್ಯ ; ದೀನತೆ. ೪. ಅಹಂಕಾರ; ಗರ್ವ. ೫. ಕುದುರೆಯ ಒಂದು ಅಂಗದ ಹೆಸರು ; ಕಂಠನಾಳದ ಎರಡೂ ಕಡೆಗಳ ಭಾಗದ ಹೆಸರು : ನಡುಕಂಠ ನಾಳಿಯಿರ್ಕೆಲದೆಡೆಗಂ ಮನ್ಯುವದೆನಿಪ್ಪ ಪೆಸರೆಸೆದಿರ್ಕುಂ (ಅಶ್ವಶಾ. ೯-೨೬). ೬. ಯಜ್ಞದ ಕೊನೆ; ಯಾಗದ ಅಂತ್ಯ: "ದೈವ್ಯದಲಿ ಯಜ್ಞೋತ್ಸಾರದಲಿ ಕೋಪದಲಿ ಮನ್ಯುವೆಂದೆಂಬುದು" (ಚುಂಗನಾ. ೦೪೩-೨೮). ೭. ಒಡೆಯ ; ಯಜಮಾನ. ೮. ದೊಡ್ಡ ಸೈನ್ಯ. ೯. ಇಂದ್ರಿಯ. ೧೦. ಮುಖ. ೧೧. ಕಣ್ಣೀರು: "ದೈನ್ಯದಿ ಯಜ್ಞದಂತ್ಯ ಬಾಷ್ಪಜಲಂಗಳೊಳಾಳ್ದನೊಳ್ಮಹಾ ಸೈನ್ಯದೊಳಾಸ್ಯದೊಳ್ಪುಳದೊಳ್ಕಡುಗೋಪದೊಳಿಂದ್ರಿಯಂಗಳೊಳ್ ಮನ್ಯುವೆನಿಕ್ಕುಂ" (ಶಾಶಾರ. ೩೮). [ಸಂ.]

**ಮನ್ಯೂದ್ಗತ** (ಗು). ದುಃಖಭಾರದಿಂದ ಕೂಡಿದ; ಶೋಕಭರಿತವಾದ : ಮನ್ಯೂದ್ಗತಕ್ಷೋಭದಿಂ ಕಂಪಿಸುತಂ (ಇರಂಣ. ೫೯೨) ; ರಿಪುನೃಪ ಕುಲಾಂಗನಾಜನಮನ್ಯೂದ್ಗತಬಾಷ್ಪಸಲಿಲಧಾರಾಪ್ರತಾನದಿಂ ಕೀರ್ತಿವಲ್ಲಿಯಂ ಬೆಳೆಯಿಸಿವಂ (ಕುರಾಕು. ೦-೦೩೬). [ಸಂ.]

**ಮನ್ವಂತರ** (ನಾ). ೧. (ಪುರಾಣದಲ್ಲಿ ಹೇಳಿರುವ ಹದಿನಾಲ್ಕು ಮನುಗಳಲ್ಲಿ) ಒಬ್ಬ ಮನುವಿನ ಆಳ್ವಿಕೆಯ ಕಾಲ; ☞ ಮನುಷ್ಯರ ನಾಲ್ಕುಯುಗಗಳು ಸೇರಿದರೆ ಒಂದು ದೈವಯುಗ. ಇಂತಹ ಎಪ್ಪತ್ತೊಂದು ದೈವಯುಗಗಳು ಸೇರಿದರೆ ಒಂದು ಮನ್ವಂತರ : ಆತನಿಂ ಬಟೆಯುಮಸಂಖ್ಯೇಯವರ್ಷಪ್ರಮಿತಮನ್ವಂತರಾತಿಕ್ರಮದೊಳ್ ಪದಿನಾಲ್ಕನೆಯಮನು ಪುಟ್ಟಿದಂ (ಆದಿಪು. ೬-೬೩ ಚ) ; ಆದಿಯ ಮನ್ವಂತರದೊಳಶೀತಿಭಾಗಿಪಲ್ಯದೊಳಾ ಮನ್ವಂತರದಶಮಾಂಶಂ ಮನ್ವಂತರಮಕ್ಕುಂ (ಕಂರಾಕು. ೦-೬೬); ಮನ್ವಂತರಗಳ ಭಾಗ್ಯದ ತೆಗೆ . . . ಹಕ್ಕಿ ಹಾರುತಿದೆ ನೋಡಿದಿರಾ (ಗಂ. ೩೭-೨). ೨. (ಅಲಂ) ಪರಿವರ್ತನೆಯ ಕಾಲ; ಹೊಸಯುಗ : ಬಹುಮಟ್ಟಿನ ಸುಧಾರಣೆಯು ಇಂಗ್ಲಿಷ್ ವಿದ್ಯಾಮನ್ವಂತರದಿಂದ ತೊಡಗಿದ್ದು (ಶಾಕುಬಾ. ೨೫) ; ಈ ಸಾಹಿತ್ಯದ ಹೊಸ ಮನುಗಳು ಈ ಯುಗದಲ್ಲಿ ಹೊಸ ಮನ್ವಂತರವನ್ನು ಸ್ಥಾಪಿಸಿದರು (ಶಾಹಿಸ. ೮). [ಸಂ.]

**ಮನ್ವಾದಿ** (ನಾ). ೧. = ಮನ್ವಂತರ ೧ : ಒಂದು ವರ್ಷದಲ್ಲಿ ೯೬ ಶ್ರಾದ್ಧಗಳು ಬರುವುವು. ಅವು ಯಾವುವೆಂದರೆ ಮನ್ವಾದಿಗಳು ೧೪, ಯುಗಾದಿ ೪ (ತತ್ವರ. ೪-೨೨ ತಾತ್ಪರ್ಯ). ೨. = ಮನ್ವಂತರ ೨ : ಸಮರ್ಥರ ಆಗಮನದ ದಿವಸವು ಶಿವರಾಜನ ಪರಿವಾರಕ್ಕೆ ದೊಡ್ಡ ಮನ್ವಾದಿಯಂತೆ ಆಯಿತು (ಛತ್ರಪ. ೬). [ಸಂ.]

**ಮನ್ಸಬ್** (ನಾ). ೧. ಅಧಿಕಾರ ; ಹುದ್ದೆ ; ಪದವಿ. ೨. (ಸೈನ್ಯದ) ಅಧಿಕಾರಿ : ಐದುಸಾವಿರಸೇನೆಗೆ ಮನ್ಸಬ್‌ನನ್ನಾಗಿಟ್ಟು . . . ರಾಜನೆಂಬ ಬಿರುದನ್ನೂ ಕೊಟ್ಟನು (ಛತ್ರ. ೨೪).

[ ← ಅರ. ಹಿಂ. ಮರಾ. ಮನ್‌ಸಬ್ ]

**ಮಫ್ತಿ** (ನಾ). ಅಧಿಕಾರದ ಸಮವಸ್ತ್ರವಿಲ್ಲದೆ ಸಾಧಾರಣ ಉಡುಪಿನಲ್ಲಿರುವುದು : ಮಫ್ತಿಯಲ್ಲಿ ಟಿಕೆಟ್ ಇಲ್ಲದ ಪ್ರಯಾಣಿಕರನ್ನು ಪತ್ತೆ ಹಚ್ಚುವ . . . ಶಂಕೆಯೂ ಆಯಿತು (ಕೃದೃಪ. ೨೪).

[ ← ಅರ. ಪಾರ. ಮಫ್ತೀ ]

**ಮಫ್ಲರ್** (ನಾ). ಬೆಚ್ಚಗಿರಲು ಕೊರಳ ಸುತ್ತಲೂ ಸುತ್ತಿಕೊಳ್ಳುವ ಉಣ್ಣೆಯ ಬಟ್ಟೆ ; ಕಂಠವಸ್ತ್ರ : ತಲೆಗೆ ಮಫ್ಲರ್ ಕಟ್ಟಲಾ ಸರಸೂ (ಕೋಕಿಲ. ೨೨). [ ← ಇಂ. Muffler ]

**ಮಬ್ಬಿಗ** 'ಮಬಿಗ' ನೋ.

**ಮಬ್ಬಿಟ್** (ಕ್ರಿ). ಮಂಕಾಗು ; ಮಬ್ಬು ಆವರಿಸು : ನಿಯೋಗಮಂಗುಂದಲೆಯಾಯ್ತು ತೇಜ ಮಬ್ಬಿಟಿದುದು (ಕಶ. V. ೦೪-೩೬ ; 1099).

[ ಮಬ್ಬು ( < ಮರ್ಬ್$_{3}$ ) + ಇಟ್$_{2}$ ]

**ಮಬ್ಬು** 'ಮರ್ಬ್$_{2}$' ನೋ.

**ಮಬ್ಬುಗಣ್ಣು** (ನಾ). ಮಸುಕಾದ ದೃಷ್ಟಿಯುಳ್ಳ ಕಣ್ಣು ; ಸರಿಯಾಗಿ ಕಾಣಿಸದ ಕಣ್ಣು : ಅರಿವುಗನ್ನಡಿಯ ಶುದ್ಧೀಕರಣದ ಕಾರ್ಯ ಅಥವಾ ಅರಿವಿನ ಮಬ್ಬುಗಣ್ಣಿಗೆ ಕನ್ನಡಕ (ಸಂಕೋಧ. ೦೬೬).

[ಮಬ್ಬು ( < ಮರ್ಬ್$_{2}$) + ಕಣ್ಣು (< ಕಣ್)]

**ಮಬ್ಬುಗತ್ತಲು** 'ಮಬ್ಬುಗತ್ತಲೆ' ನೋ.

**ಮಬ್ಬುಗತ್ತಲೆ**, ಮಬ್ಬುಗತ್ತಲು (ನಾ). ಮಸುಕುಮಸುಕಾದ ಕತ್ತಲೆ ; ನಸುಗತ್ತಲೆ : ಮಬ್ಬುಗತ್ತಲೆಯಾದರೂ ರಂಗನೂ ಬರಲಿಲ್ಲ (ರಂಗಕೋ. ೧೩); ಮಬ್ಬುಗತ್ತಲೆ ಕವಿಯಿತು (ಳಳಹು. ೫). ಮಬ್ಬುಗತ್ತಲು : ದೂರದಲಿ ಯಾರೋ ಮಬ್ಬುಗತ್ತಲಲಿ ಹುಬ್ಬುಗೈಹಚ್ಚಿ ನೋಡುತ್ತಿದ್ದಾರೆ, ಹೊರಳಿ ಹೊರಳಿ (ಕಿರಬು. ೦೭-೦೯); ಹಾಗೆಯೇ ಮಬ್ಬುಗತ್ತಲಾಯಿತು (ಅಕಣಾ. ೨೫೦).

[ ಮಬ್ಬು (< ಮರ್ಬ್$_{2}$) + ಕತ್ತಲೆ$_{1}$ ( < ಕಬ್ತಲೆ )]

**ಮಬ್ಬುಚರ** (ನಾ). ನಿಶಾಚರ ; ರಾಕ್ಷಸ : ಮಬ್ಬುಚರನು ಅಲ್ಪದಾನವನ್ನೇ ಇತ್ತು, ಹೆಬ್ಬಾಗಿಲ ಮುಂದೆ ಇಟ್ಟನದಕೊ (ಕೋಳ್ಪರ. ೨೩-೩).

[ ಮಬ್ಬು ( < ಮರ್ಬ್$_{2}$ ) + ಚರ ]

**ಮಬ್ಬುದಾರಿ** (ನಾ). ಕತ್ತಲೆ ಮುಸುಕಿದ ದಾರಿ : ಮಬ್ಬುದಾರಿಯಲ್ಲಿ . . . ದೊಡ್ಡ ಬಟ್ಟೆಯೊಂದನ್ನು ಹಾಸಿದಂತೆ ಕಂಡುಬಂದಿತು (ಹಸಾಹೊ. ೦೬೦). [ ಮಬ್ಬು ( < ಮರ್ಬ್$_{2}$) + ದಾರಿ]

**ಮಬ್ಬುವಿಡಿ** (ಕ್ರಿ). ಮಂಕಾಗು ; ಮಸುಕಾಗು : ಒಬ್ಬರ ಕಣ್ಣಿಗೊಂದಾಳು ಸಾವಿರವಾಗಿ ಮಬ್ಬುವಿಡಿದು ಕಾಣಿಸಲು (ಕಂಕಿ. ೧೪-೯೧).

[ಮಬ್ಬು ( < ಮರ್ಬ್$_{2}$ ) + ಪಿಡಿ$_{1}$ ]

**ಮಬ್ಬೆದೆ** (ನಾ). ೧. ಮಂಕಾದ ಮನಸ್ಸು. ೨. ಅಜ್ಞಾನ ತುಂಬಿದ ಮನಸ್ಸು: ಏಕನ್ನ ಮಬ್ಬೆದೆಗೆ ಮೂಡೆ 'ಆತ್ಮಾನಂ ವಿದ್ಧಿ' ಎಂಬೀ ಸತ್ಯದರಿವೆಯ ಮ್ಲಾನಂ ? (ಗಳಂಬಂ. ೩೬-೦೦).

[ ಮಬ್ಬು ( < ಮರ್ಬ್$_{2}$) + ಎದೆ (< ಎರ್ದೆ) ]

**ಮಮ** (ಗು). ೧. ನನ್ನ : ನನಗೆ ಸಂಬಂಧಿಸಿದ : ಮಮಕರ್ತ ಕೂಡಲಸಂಗನ ಶರಣರು (ಬಸವ. ೩೬೩) ; ಇರೆ ನಿದ್ರಾಸಕ್ತಿಯಿಂದಂ ಮಮ ಭುಜಯುಗದೊಳ್ ಕಾಮಿನೀಯುಗ್ಮವು (ರಮೀಕ. ೬-೦೬); ಕೃಪಾಕರ ದಕ್ಷ ಶಿಕ್ಷಣದಕ್ಷ ಮಮರಕ್ಷ (ಶಿಸಕೃ. ೨-೦೬). (ನಾ). ೨. 'ನನಗೆ ಒಪ್ಪಿಗೆಯಾಗಿದೆ' ಎಂಬುದನ್ನು ಸೂಚಿಸುವ ಪದ : ಈ ವಾದವನ್ನು ಕೈಮುಟ್ಟಿ 'ಮಮ' ಎನ್ನಬಹುದು (ಶಾಕೋಶ. ೦೦೦). ☞ ಇದು ಸಂಸ್ಕೃತದ 'ಅಸ್ಮದ್' ಶಬ್ದದ ಷಷ್ಠೀವಿಭಕ್ತಿಏಕವಚನದ ರೂಪ. ಇದೀ ವಾಕ್ಯಾರ್ಥದಲ್ಲಿ ಒಮ್ಮೊಮ್ಮೆ ಉಪಯೋಗವಾಗುತ್ತದೆ. [ಸಂ.]

**ಮಮಕರಿಸು** (ಕ್ರಿ). ೧. ಅಹಂಕರಿಸು ; ಬೀಗು ; ಗರ್ವಿಸು : ಐಕ್ಯದ ಮಾಟದಲಿ ಮಮಕರಿಸಿ ಮಕರಿಸಿ ಮೆಚ್ಚಿದನಲ್ಲಮನು (ಪ್ರಭುಲಿಂ. ೦೦-೨೮); ಕಾಯಸಿದ್ಧಿಯ ಪಡೆದೆನೆಂದೆಂದಿಗಂ ಮರಣವಿಲ್ಲೆಂದು ಬಿಚ್ಚಿದೆ ಮಮಕರಿಸದಿರು ಮೋಹದಿಂದೆ (ಸಿದ್ಧೇಶ. ೫-೨೬). ೨. ಮಮಕಾರವನ್ನು ತೋರು ; ಪ್ರೀತಿಸು : ನೃಪರೀ ರಾಜ್ಯಸಂಪದವ ಮಮಕರಿಸಿದರು (ಜೈಭಾಗ. ೬-೦೩-೪) ; ಬಾಹ್ಯಕರ್ಮಕ್ಕೆ ಮಮಕರಿಸದೆ (ಕ್ಷೀಕೃಪು. ೫-೦೩).

[<ಮಮಕಾರ + —ಇಸು$_{3}$]

**ಮಮಕಾರ** (ನಾ). ೧. ನನ್ನದೆಂಬ ಭಾವನೆ; ಸ್ವಾರ್ಥಪರತೆ. ೨. ಅಹಂಕಾರ ; ಗರ್ವ : ಕೊಂದೆ ನಾನೆನಗಾಯ್ತು ಪಾತಕವೆಂದು ಮನದಲಿ ಮರುಗುವಾತನ ಬಂದಿಯಲಿ ಹೊಕ್ಕೆಗೊಂಬಹಾಹಂಕಾರ ಮಮಕಾರ ಕಂದು

ಕಲೆ ತನಗೆತ್ತಣದು (ಕುಮಾ.ಭಾ. ೩-೪೪); ಅಹಂಕಾರವ್ಯಕ್ತಿಯಿಂದ ಮಮಕಾರ ಭಾವದಿಂದ ಜೀವಿಯು ಶಿವನಿಂದ ವಿಭಿನ್ನಸಂಸಾರಿಯಾಗಿದ್ದಾನೆ (ಚಾಕಿಡ. ೧೦೯). ೩. ಮೋಹ ; ಪ್ರೀತಿ : ಭೂರಿ ಮಮಕಾರದಲಿ ನೃಪರು ವಿಚಾರಿಸದೆ ಧರೆಯೆಮ್ಮದೆಂದೇ ನಾರಕದ ಸಾಮ್ರಾಜ್ಯಕೈದುವರು (ಕುಮಾ.ಅ. ೧-೨೯). [ಸಂ.]

**ಮಮಕಾರಗೈ** (ಕ್ರಿ). ಪ್ರೀತಿಯನ್ನು ತೋರಿಸು : ನವಿರಾಜನಬಲೆಯರ್ ಬಸಲ್ಲಿಗವರೊಳು ಮಮಕಾರಗೈದಿರ್ದುದೆಂದು ರಮಣಿಯರ್ಗಾಸರಿ ಭೋಜನ ಶಾಲೆಗೆಯ್ದಿದನು (ಶಶಿ. ೪೨-೮೯).

[ಮಮಕಾರ + ಗೈ (<ಕಯ್$_1$)]

**ಮಮಟಿ**, ಮಮ್ಮಟಿ (ನಾ). ವ್ಯವಸಾಯದ ಒಂದು ಉಪಕರಣ ; ಮಣ್ಣನ್ನು ಅಗೆದು ತೆಗೆದುಹಾಕುವ ಸಾಧನ; ಗುದ್ದಲಿ : (ಎಕಪ್ಪ. XV. ೨೮). **ಮಮ್ಮಟಿ** : ಮಣ್ಣುಗೆಲಸದವರಿಗೆ ಕೋಲುಗುದ್ದಲಿ ಮಮ್ಮಟಿ ಗಳನ್ನು ಕಳಿಸಿಕೊಡಬೇಕು (ದೂಪ). [←ತಮಿ. ಮಮ್ಮಟ್ಟಿ]

**ಮಮತತ್ವ** (ನಾ). =ಮಮಕಾರ ೧ : ಕುಲಛಲ ಕೀಲ ವೈಷ್ಟಿಕೆ ಇದ ದೃಷ್ಟಿಸಿ ಕೊಂಡಿಪ್ಪ ಕಟ್ಟು ಮಾನುಜರಿಗೆ ನಿಜತತ್ವದ ಮಾತೇಕೆ ಅದರೆತ್ತ ಹೋದುವ ಮಮತತ್ವವೈಸೆ ನಿತ್ಯತ್ವವಿಲ್ಲ (ಮೋಕ್ಷಬಾ. ೨೫-೧೦೩). [ಸಂ.]

**ಮಮತೆ** (ನಾ). ೧. ನನ್ನದು ಎಂಬ ಅಭಿಮಾನ ; ಮಮಕಾರ : ದೇಹ ವೆಂಬುದನಿತ್ಯ . . . ಬಿಡು ಸಂದೇಹವನಹಮ್ಮಮತೆಗಳ ಬೀಳ್ಕೊಟ್ಟು ಕೋಡೆಂದ (ಕುಮಾ.ದ್ರೋ. ೭-೨೬); ಮಮತಾಪೇಕ್ಷಿತದ ಪೊರೆಯ ಪರಿದಂದು ಅರಳ್ದುದರಿವಿನ ಕಣ್ಣು (ಕುಂಕುಳ. ೬೯೨). ೨. ಪ್ರೀತಿ ; ವಾತ್ಸಲ್ಯ : ಕರುಣದ ಮಮತೆ ವಿಗೆ ಮಧುರೋಕ್ತಿಯಲಿ ನುಡಿಸಿದನು ನೃಪವರನ (ಕೊಶಿಶಾ. ೧-೪-೩); ಮಂಥರೆಯು ಈ ಮಮತೆಯಾವರ್ತದೊಳ್ ... ಸಿಲ್ಕಿ (ತ್ರೀಅಶು. ೨೬-೬೦೨). ೩. ದರ್ಪ ; ಕೊಬ್ಬು. [ಸಂ. ಮಮತಾ]

**ಮಮತ್ವ** (ನಾ). = ಮಮಕಾರ ೧ : ಮೆಚ್ಚು ಮಮತ್ವಂ ಪಜ್ಜೆವಡೆ ಪಜ್ಜೆಯಟ್ಟು ಪೋದುದು (ಸುಕುಮಾ. ೦೨-೪೨); ಸ್ವಾರ್ಥವನ್ನು ಕಳೆದುಕೊಂಡು ಮಮತ್ವವನ್ನು ಅಹಂಕಾರವನ್ನು ದೂರಮಾಡು (ವಚನಾ. ೦೩೨). [ಸಂ.]

**ಮಮರೇಜು**, ಮಂರೇಜು (ನಾ). ಕುದುರೆಯನ್ನು ಚೋದಿಸಲು ಸವಾರ ತನ್ನ ಹಿಮ್ಮಡಿಗೆ ಅಳವಡಿಸಿಕೊಳ್ಳುವ ಮುಳ್ಳಿರುವ ಸಾಧನ : ಹಿಮ್ಮಡಿಮುಳ್ಳು ; ತಿವಿಮುಳ್ಳು : ಮದನ ಕೈಯಿದ್ದ ಚಾವಟಿಯನ್ನು, ಅವನ ಕಾಲಿನಲ್ಲಿದ್ದ ಮಮರೇಜನ್ನು ಕಂಡು, ಈ ಆಯುಧಗಳ ತಂಟೆಯಿಂದ ಕುದುರೆಯು ಪಕೋಟ ತಪ್ಪಿರಬೇಕೆಂದು ತಿಳಿದುಕೊಂಡನು (ಸುಜುತ. ೨೩೪). **ಮಂರೇಜು** : ಅಶ್ವಗಳಿಗೆ . . . ಎಷ್ಟು ಹೊಡೆದರೂ ಮಂರೇಜಿನಿಂದ ಎಷ್ಟು ತಿವಿದರೂ ಕಾಲ ಎತ್ತಿ ಇರಿಸು ವುದೇ ಕಷ್ಟವಾಗಿತ್ತು (ಸುಸುಗ. ೪೫).

[ ← ಪಾರ. ಮಿಹಮಿಾರ್ಝ್ ; ಮರಾ. ಮಂಬರೇಜ್ ]

**ಮಮ್ಮ** 'ಮರ್ಮ$_1$' ನೋ.

**ಮಮ್ಮಕ್ಕಳು** 'ಮೊಮ್ಮಗು' ಪರ್ಯಾ.

**ಮಮ್ಮಗ** 'ಮೊಮ್ಮಗ' ನೋ.

**ಮಮ್ಮಗಳು** 'ಮೊಮ್ಮಗಳು' ನೋ.

**ಮಮ್ಮಗು** 'ಮೊಮ್ಮಗು' ನೋ.

**ಮಮ್ಮಟಿ** 'ಮಮಟಿ' ನೋ.

**ಮಮ್ಮನೆ** 'ಮಮ್ಮಲನೆ' ನೋ.

**ಮಮ್ಮಲ** 'ಮಮ್ಮಲಂ' ನೋ.

**ಮಮ್ಮಲಂ**, ಮಮ್ಮಲ, ಮಲಮಲ$_1$, ಮಲಮಲಂ, ಮಲುಮಲ (ಅ). ಅತಿಶಯವಾಗಿ; ವಿಶೇಷವಾಗಿ: ಇಂತು ಮಮ್ಮಲಂ ಮರುಗಿದರಲ್ತೆ . . . ನೃಪರ್ಧಾತ್ರಿಯೊಳ್ (ಶಾಬಂಪು. ೩೬೪) ; ಕಳವಳಿಸಿ ಕಂಗೆಟ್ಟು ಮಮ್ಮಲಂ ಮರುಗುತ್ತೆ (ತೊಪು.೧೧-೫೨). **ಮಮ್ಮಲ** : ರಾಜ್ಯಂ ನಷ್ಟರಾಜಮಾದುದರ್ಕೆ ಮಮ್ಮಲ[ಪಾಠಾಂ. ಮಲುಮಲ]ಮರುಗಿ ಯೋಜನಗಂಧಿ ಸಿಂಧುಸುತ್ರ ನನಿಂತೆಂದಳ್ (ಶಂಕಪು. ೦-೮೦ ವ). **ಮಲಮಲ$_1$** : ದುಶ್ಯಳೆ ಕೇಳ್ದು ಮಲ ಮಲ ಮರುಗಿ ತನ್ನಣ್ಣನಲ್ಲಿಗೆ ಬಂದು (ಶಂಕಪು. ೧೦-೦೨೨ ವ) ; ಮಲಮಲ ಮರುಗಿ, ಕರ್ಮಸಂತಾಪದ ಕುಲವ ಕೆಡಿಸಬೇಕೆಂದು (ಶಿಶಿಶ. ೯-೫೫). **ಮಲಮಲಂ** : ನೆನೆಯೆ ಮಲಮಲಂ ಮರುಗುವುದು (ಅಜಿ.೯-೧೦೮) . **ಮಲುಮಲ** : 'ಮಲುಮಲನೆ' ಪರ್ಯಾ. [ ? ]

**ಮಮ್ಮಲನೆ**, ಮಮ್ಮನೆ, ಮಲಮಲನೆ, ಮಲುಮಲನೆ (ಅ). ಅತಿಶಯವಾಗಿ : ವಿಶೇಷವಾಗಿ : ಆ ವಾಕ್ಯಮಂ ಕೇಳಿ ಮಮ್ಮಲನೆ ಮರುಗುತ್ತೆ (ಅರಾತ. ೦-೬-೦೫) : ಅರಿಯದರೆಂದು ಮಮ್ಮಲನೆ ಮರುಗುವೆಯ (ಶಿಕಗ. ೯೭-೨). **ಮಮ್ಮನೆ** : ಎನಲು ಮಮ್ಮನೆ ಮರುಗಿ ಜಿಂತಾವಸಧಿಯೊಳು ಮೈ ಮುಳುಗಿ (ಅಶಂಶಾ. ೦-೦೬-೦೮). **ಮಲಮಲನೆ** :- ಸಪ್ತಸಾಗರ ಸಲಿಲದೊಳ್ ಮಲಮಲನೆ ಮರುಗುವ ಜಲಚರಚಕ್ರದಿಂ (ಗದಾಯು.೬-೨೦ ವ); ಮಲಮಲನೆ ಮರುಗುತ್ತವನಿಯೊಳು ತೊಳಲಲು (ಬಸಪು. ೦೫-೨೮). **ಮಲುಮಲನೆ** : ಕಲಬರ್ತಮ್ಮೆಜಲಸೂಡೆ ದುಃಖದತಿಶಯದಲೆಯೊಳ್ ಮಲುಮಲನೆ ಮರುಗಿ ಸಿಲ್ಕಿರ್ದವಳಂ ಕಂಡು (ಸುಕುಮಾ. ೪-೩೦) : ಸ್ತ್ರೀವೇದದಿಂ ಜೆಗ್ಗಿತ್ತಿಯಾಗಿ ಪುಟ್ಟಿ . . . ಮಲುಮಲನೆ ಮರುಗಿ ನವೆಯುತ್ತಿರ್ಪಂ (ಸುಕುಮಾ. ೫-೦೩). [ಮಮ್ಮಲ (< ಮಮ್ಮಲಂ) + -ಅನೆ$_1$]

**ಮಮ್ಮಟಿ** 'ಮಣ್ಣಟಿ' ನೋ.

**ಮಮ್ಮು**, ಮೊಮ್ಮು (ನಾ). (ಮಕ್ಕಳ ಭಾಷೆಯಲ್ಲಿ) ಊಟ.-ಆಹಾರ : ಸುಮ್ಮನೆ ಇದ್ದೇನು ಅಮ್ಮಿಯ ಬೇಡೆನು ಮಮ್ಮು ಉಣುತೇನೆ ಅಮ್ಮ ಅಳುವುದಿಲ್ಲ (ಕೃರಂದ. ೦-೦೭೦ ಅಮಾಜ್ಞಾ). **ಮೊಮ್ಮು** : ಮೊಮ್ಮು ಮಾಡಿಸು ತ್ತೀನಿ ಬಾ ಪುಟ್ಟಾ (ದೂಪ).

**ಮಮ್ಮುಳಿ** 'ಮಣ್ಣಟಿ' ನೋ.

**ಮಮ್ಮುಳಿಕೆ** (ನಾ). ತಳಮಳ ; ಸಂಕಟ : ವಿಜಯವಿಠಲ ಎನ್ನ ಮಮ್ಮುಳಿಕೆ ಹರಿಸು (ತೀರ್ಥಸು. ೦೦೬-೧).

[ಮಮ್ಮುಳಿ (< ಮಣ್ಣಟಿ) + -ಕೆ]

**ಮಯ$_1$** (ನಾ). ೧. ಒಂಟೆ. ೨. ಕುದುರೆ. ೩. ಹೇಸರಗತ್ತೆ. ೪. ರಾಕ್ಷಸರ ಶಿಲ್ಪಿಯ ಹೆಸರು : ವಿಶ್ವಕರ್ಮನ ಅಣ್ಣ : ಕಲ್ಯಾಣಮಂಟಪಮಂ ಕೌತುಕಾವಹಮಪ್ಪಂತೆ ಮಯ ಮೊದಲ್ಗೊಂಡ ಪಳಿವ ಶಿಲ್ಪವಿದ್ಯಾವಿಶಾರದರಿಂ ರಚಿಸುತಿರ್ದಂ (ರಾಶೇ. ೬-೯೯ ವ). ೫. ಒಂದು ಬಗೆಯ ಪಕ್ಷಿ ; ಗರುಡ (?) : "ನೃಪಖಗಮೆನಲ್ ಮಯಮಕ್ಕು" (ಬೀಗಿಶಾ. ೫೨-೬). [ಸಂ.]

**ಮಯ$_2$** (ನಾ). ತುಂಬಿರುವುದು ; ವ್ಯಾಪಿಸಿರುವುದು : ಮಣ್ಣಿಂ ಹಿಡಿಯೆ ಪೊನ್ನುಗಳ ಮಯವಾಗೆಸೆಯಲಚ್ಚರಿವಡುತ (ಬಸಪು. ೨೯-೬೨) ; ಫಲುಗುಣನ ಮಯವಾಯ್ತುವಿಳತಳತಂತ್ರ (ಕುಮಾ.ದ್ರೋ. ೧೦-೯). [P ಇದು ಸಂಸ್ಕೃತದಲ್ಲಿ ಪ್ರತ್ಯಯರೂಪ. ಈ ಪ್ರಯೋಗಗಳಲ್ಲಿ ನಾಮಪದ ವಾಗಿ ಬಳಕೆಯಾಗಿದೆ]

**-ಮಯ$_3$** (ಪ್ರ). 'ತುಂಬಿದ', 'ವ್ಯಾಪ್ತವಾದ' ಎಂಬ ಅರ್ಥವನ್ನು ಕೊಡುವ ಒಂದು ಸಂಸ್ಕೃತಪ್ರತ್ಯಯ ; P ಕೆಲವೆಡೆ ಕನ್ನಡ ಶಬ್ದಗಳಿಗೂ ಈ ಪ್ರತ್ಯಯವು ಸೇರಿದೆ: 'ಪೆಣಮಯ' ಪರ್ಯಾ. [ಸಂ.]

**ಮಯಕ**, ಮೈಕ (ನಾ). ೧. ಅಸಹಜವಾದ ಮಂಕು, — ಅಲಸಿಕೆ : ಅಸಹಜವಾದ ಅತಿನಿದ್ರೆ, ಅತಿಸುಸ್ತು. ಮಯಕ, ಮಂಕು, ಅಲಸಿಕೆ, ಮಾಂದ್ಯ (೧೦ನಾಪ: ೨೦೪೧) ; ಅಫೀಮನ್ನು ಸೇವಿಸಿದವ . . . ಮಂಪರ ಗೊಳ್ಳುವನು. ತೂಕಡಿಕೆಯಿಂದ ನಿದ್ದೆ, ಮಯಕ (ಕೋಮ), ಕೊನೆಗೆ ಉಸಿರಾಟವೇ ನಿಂತು ಸಾಯುವನು (ಕಶಿಶಿ. I, ೬೭೬). **ಮೈಕ** : ೨. ಮೂರ್ಛೆ ; ಬವಳಿ : ಗುರುಗಳು ಮಹಾಶಾಪದುಪಪಡಕೂ ಪ್ರಾಣವಿಲ್ಲದೆ

ಮೈಕದಿಂದ ಸೊಪ್ಪಾಗಿ ಬಿದ್ದಿದ್ದರು (ಪಗಿ. ೬೩) ; ನೀರಿನೊಳಗೆ ಹಾಕಿದುದರಿಂದ ಗುರುಗಳಿಗೆ ಮೈಕವು ಸ್ವಲ್ಪಮಟ್ಟಿಗೆ ನೀಗಿತು (ಪಗಿ. ೬೬).

[ದೇ.॥ ತಮಿ. ಮಲ. ಮಯಕ್ಕಮ್ : ತೆಲು. ಮಯಕ, ಮೈಕ]

**ಮಯಣ**, ಮೇಣ (ನಾ). ೧. ಜೇನುಹುಟ್ಟಿನಿಂದ ಸಿಗುವ ಒಂದು ಬಗೆಯ ಅಂಟುದ್ರವ್ಯ : "ಸಿಕ್ಥಕಮೆಂಬುದು ಮಯಣಂ" (ಹಲಾಯು. ೯೦-೯೦೦) ; ಸಂಗೀತ ಸಭಿಕರ ಹೃದಯಗಳನ್ನು ಮಯಣದಂತೆ ಕರಗಿಸಿತು (ಜಿಆತ. ೬೯). ೨. ಧಾನ್ಯಗಳ ಹಿಟ್ಟು ಮೊದಲಾದುವುಗಳಿಂದ ತಯಾರಿಸುವ ಒಂದು ಬಗೆಯ ಅಂಟುದ್ರವ್ಯ; ಸರಿ : ಮೃತ್ತಿಕೆಯ ಹಿಟ್ಟಿನಿಂದ ಮಯಣದ ಕರುವಿಟ್ಟು (ಪುದೀಪ. ೨೯೩-೩೩) ; ಅಜೀವ ಮಯಣಕೆ ಭಕ್ತಿ ಮಯರಸವೆಱಿವ ಪುತ್ತಳಿಯೆನಲು (ಕುಮಾವ್ಯಾ. ೬-೦೩). ೩. ಮನ್ಮಥ : "ಕುಡುವಿಲ್ಲ ... ಜೊನ್ನೊಡಲನಳಿಯುಂ ದಪ್ಪಕಂ ಮಯಣನೆಂಬಿವಿಂತೊಡವೆ ಮನ್ಮಥನಾಮವು" (ಶಬ್ದ.ಮಂ. ೯) ; ನಯವೆತ್ತಿನಿನುಡಿಯುಂ ಜಾಣ್ಮೆಯಿನಾವಗಮಿನಿಯುನರ್ದಯನಿಕರ್ಗಳಗೊಳ್ವೀ ಮಯಣನ ಗೆಳೆಯೆನಿಪಳ ಮನೆವಮನೆ ನಿಕಾಂ ಮುಪ್ಪುದಪ್ಪಗರ ಹಸುವಾಗಳ್ (ಲೀಲಾ. ೬-೦೨೩) ; ಮುನಿಗಳು ಹೀನಮಯಣನ ಕಣೆಯು ಕೂರಂಬಿನೇಱಿನೊಳು ಸಾವಂತೆ ಮಾಡು ಮುದದಿಂ (ಕೃಪುಕ. ೯-೩೩). ೪. ಒಂದು ಬಗೆಯ ಹಕ್ಕಿ ; ಮೈನಾ : ದಕ್ಷಿಣದೊಳ್ ಸರಿ ವರ್ತಕಂ ಗೂಗೆ ಮೇಣ್ ಮಯಣಂ ನಯದಿಂದಂ ಸಾರ್ದುಂ ಸರಂಗುಡೆ . . . ಮನಸ್ಸಿದ್ಧಿಯಿನಾಗಳೆ ಉಂಟುಮಾಡುಗುಂ (ಬೋಕೊಆ. ೦೨-೦೬). **ಮೇಣ** : ೧. "ಸಿಕ್ಥಕಂ ಮೇಣಮದು" (ಚುಂಗನಾ. ೦೦೩-೦೯) ; ತಿಳಿದುಪ್ಪದೊಳಗೆ ಯಾಲಕ್ಕಿಯನರೆದು ಕುಡಿಕೆಯೊಳಗೆ ತೊಡೆದಿರಿಸಿವೊಪ್ಪಲ ಜೇನ ಹೊಸ ಮೇಣದೊಳಗದಱ ನಾಲ್ಕಡಿಯ ಬೆರಕೆಯಿಲ್ಲದ ಕುಸುಬೆಯೆಣ್ಣೆಯುಂ ಕಾಸಿಕೊಂಡು (ಸೂಪ. ೨-೨೦) ; ಪುಲಿದೊಗಲ ಪೊಱ ಜೇನುತುಪ್ಪದ ನಳಿಗೆ ಮೇಣದ ಮುದ್ದೆ (ತಾಳ್ತಾ. ೦೬-೬). ೨. ಒರೆಗಲ್ಲ ರಜವ ಮೇಣದೊಳೊತ್ತಿ ತೆಗೆದದ ಕರಗಿ ಸುವರ್ಣಬಿಂದುಗವನೆರೆದ ಯಾಚಕರಿಗೆ ಹಂಚಿ ಕುಡುವ ಚೆನ್ನವರದರೊಪ್ಪಿದರು (ಪೋಪತ. ೩-೨೬) ; ಪೆಣದು ಮೇಣದ ಬೊಂಬೆಯೆರಡು ಮೈಸೋಂಕಿ ಸಾವಣಿಗೈದ ವಚ್ಚರಿಯೆಂಬೆ (ಭಆ. ೦೦-೯೬). ೫. ಕೆಲವು ಜಾತಿಯ ಮರಗಳಿಂದ ದೊರಕುವ ಒಂದು ಬಗೆಯ ಅಂಟು : ರಾಳ ; ಸಾಜ್ಯ ಶಾಲ್ಮಲಿ ಪಿಚ್ಚಿಯಾ - ತುಪ್ಪದೊಡನೆ ಕೂಡಿದ ಬೂರುಗದ ಮೇಣದಿಂದ (ಶಾಶಟೀ. ೨-೨-೨೯ ಪ) ; ಓವ, ಹಿಪ್ಪಲಿಮೂಲ . . . ಇದರ ಎಂಟರೊಳೊಂದು ಭಾಗ ಬೇಲದ ಮರದ ಮೇಣ ಇಷ್ಟನೂ ಮರ್ದಿಸಿ . . . ತೆಗೆದುಕೊಳ್ಳಲು ಸಕಲವಾದ ಗ್ರಹಣಿಯೂ ಮಾಣ್ಗುಂ (ಸಶವೈ. ೩೯೩).

ಮಯಣದ ಬಟ್ಟೆ=ನೀರು ಇಳಿಯದಂತೆ ಮೇಣ ಸವರಿ ಮಾಡಿದ ಒಂದು ಬಗೆಯ ಬಟ್ಟೆ; ತಾಡಪತ್ರಿ; ಮೇಣಗಪ್ಪಡ; ಟಾರ್‌ಪಾಲ್ : ಸಾಮಾನುಗಳನ್ನು ಕಟ್ಟಿ ಅದನ್ನು ಮಯಣದ ಬಟ್ಟೆಯಿಂದ ಮುಚ್ಚಿ ಬಿಗಿದಿದೆ (ಪ್ರುಜಿ. ೩೯). ಮಯಣದ ಬತ್ತಿ, ಮೇಣದ ಬತ್ತಿ = ಮಯಣದಿಂದ ತಯಾರಿಸಿದ ಬತ್ತಿ ; ಮೋಂಬತ್ತಿ : ನಾನು ತಂದ ಮಯಣದ ಬತ್ತಿಯ ಬೆಳಕಿನಲ್ಲಿ ವಿಪುಲವಾದ ಧನರಾಶಿಯ ಚೀಲಗಳು . . . ಕಣ್ಣಿಗೆ ಬಿದ್ದವು' (ಚಂಡ. ೦೩೯) ; ಚರ್ಚ್‌ಗಳಲ್ಲಿ ಹತ್ತಿಸುವ ಮೇಣದ ಬತ್ತಿಗಳ ತಯಾರಿಕೆಯಲ್ಲೂ ಇದರ ಬಳಕೆಯುಂಟು (ಕವಿಕೋ. VIII, ೩೬೬).

[< ಸಂ। ಮದನ. / ಪ್ರಾ. ಮಯಣ./ತುಳು. ಮಯಣ, ಮಾಯಣ. ತೆಲು. ಮೈನಮು ; ಕೋಲಾ. ಪಾಯ್ಮ್. ಮೇನಮ್]

**ಮಯಣಾವು**, ಮಯಿಣಾವು (ನಾ). (?) : ಎಡಬಲದ ಮಯಣಾವು ಹೊಳಹಿನ ಕಡಲ ತೆರೆವೆರೆಯದತಿಬಹಿಯ ಬಿಡೆಯ ಮುತ್ತಾಳಿಗಳ ಸೂಟಿಯ ಸರಳ ಸೋಹಿನಲಿ (ಕುಮಾವ್ಯಾ. ೬-೨). **ಮಯಿಣಾವು** : ತರಣಿಯೌರಸಪುತ್ರನೀತನ ಕರಿಯುರಳು ಮಯಿಣಾವುದೆಱಿದ ಕರುವಿನಂದದಲಸುರನಿದಿರೊಳೆಂದಾರಿಗಪಮಾನ (ಕುಮಾವ್ಯಾ.ದ್ರೋ. ಪಂಶ. ೦೬-೩೯ ಅಡಿಕಪ್ಪ). [ ? ]

**ಮಯಿ** (ನಾ). (?) : ಬಾಳಿಂಗೆ ತೆಱುವ ತೆಱು ಬಾರಕೂರ ಪರಿವರ್ತನಕೆ ಸಲುವ ಮಯಿಕಾಟಿಗೆ ಯಾ ಬಾಳ ಅಕಿಯ ಒಳಗೆ ಗುಂಮಣಾಯಕನ ಧರ್ಮ (ಸೌಇಇ. IX-ii, ೯೩೨-೦೬ : 1450) : ಗೋರಾ ಸೋಜರು ೪,೦೦೦ ಬಾರು ೬,೦೦೦ ಮಯಿ ತೋಪುಖಾನೆ ಸರಂಜಾಮು (ಹ್ರದರ. ೯೯). [ ? ]

**ಮಯಿಂದ**, ಮಾಇಂದ. ಮಯ್ದ. ಮೆಂದ. ಮೈಂದ (ನಾ). ಒಬ್ಬಾತನ ಹೆಸರು : 'ಮಯಿಂದಡಿ' ಪರಾ. **ಮಾಇಂದ** : ಸ್ವಸ್ತಿಶ್ರೀ ಮಾಇನ್ದಂ ನೊಲಮ್ಬನ್ ಗಜ್ಜಱುಸಿರಮು ಅಳೆ (ಎಕ. IX (S). ಹೊಸಕೋ. ೯-೧ : ೫75). **ಮಯ್ದ** : 'ಮಯ್ದಗಾವುಂಡ' ಪರಾ. **ಮೆಂದ** : 'ಮೆಂದಮ್ಮ', 'ಮೆಂದಯ್ಯ' ಪರಾ. **ಮೈಂದ** : 'ಮೈಂದವಾಟಿ' ಪರಾ.

[< ಸಂ. ಮಹೇಂದ್ರ]

**ಮಯಿಂದಡಿ** (ನಾ). ಒಬ್ಬಾತನ ಹೆಸರು : ನೊಳಂಬವಡಿಗಂ ರಾಚಮಲ್ಲ[ಂ] ಮಯಿನ್ದಡಿ ಗುಂಡಿಗೆಗ[ಳ್] ಎನಿಬರು ಸಮಸ್ತಬಲಂ ಬೆಱಸಿ ಬಿಟ್ಟೊಡೆ (ಎಕ. XXIV, ೦೯೦-೭ : ೫೫೫). [ಮಯಿಂದ + ಅಡಿ$_1$]

**ಮಯಿಂದಮಯ್ಯ** (ನಾ). ಒಬ್ಬಾತನ ಹೆಸರು : ಗಾವುಣ್ಡಗಣ್ಡಯ್ಯನುಂ ಬಿಜ್ಜವರು ಮಯಿನ್ದಮಯ್ಯನೆಱೆಯಮ್ಮನುಂ (ಎಕ. XI, ಹೊಳಲ್ಕೆ. ೩೦-೦೨ ; ೫೮೩). [ಮಯಿಂದ + ಅಮ (< ಅಮ್ಮ$_1$) + ಅಯ್ಯ$_1$]

**ಮಯಿಂದಮರಸ**, ಮಯ್ದಮರಸ (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಮಯಿಂದಮರಸ ಪೃಥಿವೀರಾಜ್ಯಂಗೆಯೆ (ಪ್ರುಕಾ. ೦೯೨೩, ೬೩-೦ : ೯ಶತಕ ೫೫). **ಮಯ್ದಮರಸ** : ಮಯ್ದಮರಸರ ಸೂಳೆ ಕಾಡಚ್ಚೆ (ಎಕ. XI, ದಾವಣ. ೦೭-೩ ; ೫೫೬). [ಮಯಿಂದ + ಅಮ (< ಅಮ್ಮ$_1$) + ಅರಸ$_1$]

**ಮಯಿಂದವಾಳೆ**, ಮೈಂದವಾಟಿ[3] (ನಾ). ಒಂದು ಬಗೆಯ ಬಾಳೆ ; ಮಹೇಂದ್ರಬಾಳೆ: ಪಣ್ತು ತಣ್ಕಲೆವ ಮಯಿಂದವಾಳೆ ವನವೊಪ್ಪದಿಮುರ್ಗತ್ತೆ ಬೆಡಂಗನಾವಗಂ ತಳೆದಿರೆ (ಸೌಇಇ. XI-ii, ೦೩೨-೦೨ : 1103). **ಮೈಂದವಾಟಿ**[3] : ಗೊಲೆಯೊಳ್ಪಣ್ತುದು ಮೈಂದವಾಟಿ[3] (ಅಜಿ. ೦೦-೬೬) ; ಕರಿಯ ಕರ್ಬಿನ ಕಾವಿನೆಳಮೈಂದವಾಟಿ[3]ಯೆಲೆಯ ಬಿಜ್ಜಣಿಗೆಗಳಿಂ ಬೀಸಲ್ವೇಱು (ಕಂಪಾ. ೩-೬ ಪ) ; ಸಹಜಕವಿಯ ಮಹಾವ ರಚನೆಯಂತಿನಿದಪ್ಪ ಮೈಂದವಾಟಿ[3]ಗಳುಮಂ (ರಪುರಾ. ೦೩-೨೩). 'ಐಂದವಾಟಿ', 'ಮಹೇಂದ್ರಬಾಳೆ' ಪರಾ. [ಮಯಿಂದ + ಬಾಳೆ$_1$ (< ಬಾಟಿ[3])]

**ಮಯಿಗಲಿ** 'ಮೆಯ್ಗಲಿ' ನೋ.

**ಮಯಿಗಲಿತನ** 'ಮೆಯ್ಗಲಿತನ' ನೋ.

**ಮಯಿಣಾವು** 'ಮಯಣಾವು' ನೋ.

**ಮಯಿದುನ** 'ಮೈದುನ' ನೋ.

**ಮಯಿಭೋಗ** 'ಮೈಭೋಗ' ನೋ.

**ಮಯಿರೆ** (ನಾ). (?) : ಉದ್ದಂಡನಾವನೆಂದು ನೃಪಸಂತತೆಲ್ಲರು ಬಂದೆ ಹೊಯ್ದು ನಗುತಿರಲವರು ಬಿದ್ದನು ನಾನೆಂದು ಮಯಿರನವರುಗಳೊದ್ದಾನು ಕೈಕಾಲು ಮುರಿಯ (ಕಾಪುಆ. ೪-೯೬). [ ? ]

**ಮಯಿಲತುತ್ತ** 'ಮೈಲತುತ್ತ' ನೋ.

**ಮಯಿಸಾಲ** 'ಮೈಸಾಲ' ನೋ.

**ಮಯೂಖ** (ನಾ). ೧. ಕಿರಣ ; ರಶ್ಮಿ : ಸಭಾಮಂಡಪವ ನರೇಂದ್ರತಾಪಸತಪೋಮಯೂಖಾವಳಿಗಳ್ (ಕಂಪಾ. ೬-೦೯) ; ಸೋಮಮಯೂಖಸಂಭವೆಯರಪ್ಪ ಅಚ್ಚರಸಿಯರ್ (ಕಾದಂಪು. ೬೦೯) ; ಮಹೇಂದುಮಯೂಖಮಾನತೋಪಾಸಕಪಾಣಿಪದ್ಮವನಮಂ ಮುಗಿಸುತ್ತಿರೆ (ಪ್ರಭು. ೧೬-೦೦೯) ; ಶ್ರೀಮದಮೃತಮಯೂಖಲೇಖಾವತಂಸಂ . . . ನಂದಿಗಿರೀಶ (ಶಕುನ. ೧-೦). ೨. ಹೊಳಪು ; ಕಾಂತಿ ; ಪ್ರಭೆ : ಮಣಿಕಿರೀಟಕಿರಣದಿಂ ತದೀಯ ಪದನಖಮಯೂಖಮಂ ಕೆಂಪಿಸೆ (ಪುರಾಚ. ೬-೦೭೩ ಪ) ; ಚರಣಸ್ಫುರನ್ನಖ

ಮಯೂಖದ ಬೆಳ್ಪುಮಹಾರಪುಷ್ಪಮಂ ದ್ವಿಗುಣಿಸೆ (ಜಗ. ೨-೭೩). ೩. ಉರಿ ; ಜ್ವಾಲೆ : "ಕಿರಣಮುಂ ಕೀಲಂ ಮಯೂಖಾಂಕಿತಂ" (ಚಾಚಾರ. ೯೬); ಕೋಕಪ್ರಸರಂ ಸೀಯಲ್ ಮಯೂಖಂ (ಶಶಿ. ೬-೨೭). [ಸಂ.]

**ಮಯೂರ** (ನಾ). ೧. ನವಿಲು : ಪರಭೃತಮಯಮುಂ ಮಯೂರಮಯಮುಮಾಗಿ (ಕಾದಂಬ. ೮೨೬); ಮಯೂರನವಬರ್ಹಾಳಂಕೃತಂ . . . ಶೌರಿ ಘನಾಗಮಂಬೊಲೆಸೆದಂ (ಜಗ. ೪-೩೬); ಕೇಗಿ ತನ್ನೊಂದಾಡಂಬರದಿ ಮಯೂರಂ ತಾಂಡವಕ್ಕಾರಂಭಿಸಲೊಡಂ (ಚಾಪಶ. ೯೨-೦೮). ೨. ಓಮ; ಅಜವಾನ. ೩. ಒಂದು ಬಗೆಯ ಸಸ್ಯ: ಉತ್ತರಣೆ ಗಿಡ. ೪. ದೇವತೆಗಳಲ್ಲಿ ಒಂದು ಪಂಗಡ : ಮಯೂರರು . . . ದನುಜರೆಯ್ದೆ ನೆರೆಯುತು ತಮ್ಮ ಪರಿವಾರ ಸಹಿತ (ಹರಿಣ. ೦೪-೧): ಗಂಧರ್ವ ವಿದ್ಯಾಧರ ಮಯೂರಾಸುರ ವಿಯಚ್ಚರ ಯಕ್ಷ ರಾಕ್ಷಸರು (ವಿಕ್ರ. ೯-೩೨). ೫. ಸಂಸ್ಕೃತದ ಒಬ್ಬ ಕವಿಯ ಹೆಸರು : ಬಾಣ ಮಯೂರರನಂತೆ ಬಣ್ಣಿಸಬಲ್ಲನೆ (ಬಸವ. ೪೦೯). ೬. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾಗಿರುವ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಒಂಬತ್ತನೆಯ ಬೃಹತಿ ಎಂಬ ಛಂದಸ್ಸಿನ ಒಂದು ವೃತ್ತ : ಅಮರಗಣಮಾತತೋಯಂ ಸಮನಿಸಿರೆ ನಾಮದಿಂದಂ ಗಮಿಸಿತಿದು ನಾಕಿಯಿಂದಂ ರವಣೆಯಿಜ್ ನೀಂ ಮಯೂರ (ಛಂದೋಂಬು. ೨-೦೦೩). ೧. ೬ : ಹರಿಣೀ ಮತ್ತೇಭವಿಕ್ರೀಡಿತಂ ಲಲಿತ ಮಯೂರಾನ್ವಿತಂ ಛಂದಮುಂ . . . ಪೋಲ್ತು ಚೆಲ್ವಾಯ್ತುರಣ್ಯಂ (ಚಾಪಶ. ೩-೬೩). [ಸಂ.]

**ಮಯೂರಕ** (ನಾ). ೧. ನವಿಲು. ೨. ಒಂದು ಬಗೆಯ ಸಸ್ಯ; ಉತ್ತರಣೆ. ೩. ಮೈಲುತುತ್ತ : "ಮಯೂರಕಃ—ಮಯೂರತುತ್ಥ" (೬ಕರ. ೦೨೪). [ಸಂ.]

**ಮಯೂರಕಂಠ** (ನಾ). ಮೈಲುತುತ್ತ : "ಮಯೂರಕಂಠಂ ಕರ್ಪರಿಯೆನಿಕ್ಕು" (ಸುಂಗಸಾ. ೪೩-೪೨). [ಸಂ.]

**ಮಯೂರಕೊಂಡಿ** (ನಾ). ಒಂದು ಸ್ಥಳದ ಹೆಸರು : ತದ್ದಕ್ಷಿಣತಃ ಓಜ್ಜಗೆಗ್ರಾಮಪಥಾನ್ನಿರ್ಗತ ಜಳಪ್ರವಾಹಂ ತತಃ ಪಾವಕದಿಶಿ ಮಯೂರಕೊಂಡಿ (ಶಾಸನ. XX, ೬-೨೨ : ೭೩೦). [ಮಯೂರ + ಕೊಂಡಿ]

**ಮಯೂರಗಮನ** (ನಾ). ನವಿಲಿನ ಮೇಲೆ ಸಂಚರಿಸುವವನು: ಷಣ್ಮುಖ. ಮಯೂರಗಮನ ಪಿತ = ನವಿಲುವಾಹನನಾದ ಷಣ್ಮುಖನ ತಂದೆ; ಶಿವ : ಘನಮಯೂರಗಮನ ಪಿತಂ ಕರುಣಿಸುವನೆಂದೊ (ಚಾಪಶ. ೪೩-೪೪). [ಸಂ.]

**ಮಯೂರತುತ್ಥ** (ನಾ). ಒಂದು ಬಗೆಯ ಖನಿಜಲವಣ: ಮೈಲುತುತ್ತ: "ಮಯೂರಿಕಾ — ಮಯೂರತುತ್ಥ" (೬ಕರ. ೧೦೯); ಮಯೂರತುತ್ಥ, ಬಲುಗಾರ . . . ಇವಿಷ್ಟನು ಮರ್ದಿಸಿ (ವೈದ್ಯಸಾ: 1. ೦೦೩). [ಸಂ.]

**ಮಯೂರಧ್ವಜ** (ನಾ). ೧. ನವಿಲಿನ ಗುರುತಿರುವ ಬಾವುಟ : ದನುಜೋತ್ತಮನ ಮಯೂರಧ್ವಜವ ಕಡುರಯ್ಯಮಾಗಿ (ಹರಿಣ. ೨-೩೩). ೨. ಷಣ್ಮುಖ. ೩. ವಿಷ್ಣುಭಕ್ತನಾದ ಮಣಿಪುರದ ಒಬ್ಬ ರಾಜನ ಹೆಸರು : ಮಿಜಾಗುತಿ ಮಯೂರಧ್ವಜಂ ಮಂತ್ರಿಗಿಂತೆಂದನು (ಜೈಮಿನಿ. ೨೩-೭೪). [ಸಂ.]

**ಮಯೂರನಾಡಿ** (ನಾ). ಶರೀರದಲ್ಲಿನ ಒಂದು ನಾಡಿಯ ಹೆಸರು : ಮಯೂರನಾಡಿ, ಮುಂಡಕನಾಡಿ, ಭಲ್ಲೂಕನಾಡಿ . . . ಇಂತೀ ನಾಡಿಗಳೊಳಗಾದ ಶರೀರ (ಶರ. ೪೬೦). [ಸಂ.]

**ಮಯೂರಪದ** (ನಾ). [ಕಾಮಶಾ] ಒಂದು ಬಗೆಯ ನಖಕ್ಷತ : ನವಿಲು ಕಾಲಿನ ಆಕಾರವುಳ್ಳ ಉಗುರುಗಾಯ : ಸುರತಸಮಯದಲೆಳೆಯ ಕೊರೆದ ರೇಖೆಗಳ ಚಿತ್ರದಿಂ ಮಯೂರಪದಮೆಸೆದಿರ್ಪುದು (ಚಾಪಶ. ೬-೪೦). [ಸಂ.]

**ಮಯೂರಪಿಂಛ** (ನಾ). ನವಿಲುಗರಿ : ಅಂಗರಾಗಪರಿವೇಳಪ್ಪುಬದ್ಧ ಮಂಡಲಾಗ್ರರಂಜಿತಮಯೂರಪಿಂಛಾತಪತ್ರನುಂ (ಕಾದಂಬ. ೦೬೬). [ಸಂ.]

**ಮಯೂರಲಲಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; "ಕೈಗಳನ್ನು ರೇಚಿತಮಾಡಿ ಸ್ವಾಭಾವಿಕವಾಗಿರಿಸಿ, ಚೇಳಿನ ಬಾಲದಂತೆ ಕಾಲನ್ನು ಹಿಂದಕ್ಕೆತ್ತಿ ಪೃಷ್ಠವನ್ನೂ ಬಗ್ಗಿಸಿ ಸುತ್ತುವುದು" (ಚಾಕ್ಕರೂ. ೪೦೦ ಗದ್ಯಭಾಗ) : ಮಯೂರಲಲಿತ: ಕರ್ದ್ವಯಂ ರೇಚಿತಮಂ ಗೆಯ್ಯುತ್ತುಂ ಬಿಟ್ಟು ಸಯ್ಯುರಲ್ಕಂ ಮತ್ತಂ ರಯ್ಯುಮೆನೆ ಚೇಳ ಬಾಲದ ಮೈಮೊಳ್ ತ್ರಿಕ ಬಾಗಿ ತಿರುಗೆ ಕೇಕೀಲಲಿತಂ (ಚಾಕ್ಕರೂ. ೪-೦೪೦). [ಸಂ.]

**ಮಯೂರಶಿಖಿ**. ಮಯೂರಶಿಖೆ (ನಾ). ಒಂದು ಸಸ್ಯದ ಹೆಸರು : ಅರಿಸಿನ, ಮಯೂರಶಿಖಿ, ಶುಂಠಿ . . . ಚೂರ್ಣವ ಮಾಡಿ (ಸಕಸ. ೨೩೪). **ಮಯೂರಶಿಖೆ** : "ಮಧೂಕಪರ್ಣೀ—ಮಯೂರಶಿಖೆ, ನೆಲಗಡಬ" (೬ಕರ. ೦೨೦). [ < ಸಂ. ಮಯೂರಶಿಖಾ ]

**ಮಯೂರಸಿಖಿ** 'ಮಯೂರಶಿಖಿ' ನೋ.

**ಮಯೂರಸಿಲೆ** (ನಾ). ಒಂದು ಬಗೆಯ ಧಾತು : ಮಯೂರಸಿಲೆಯುಂ ಒಂದೇ ವರ್ಣದ ಹಸುವಿನ ಹಾಲಲ್ಲಿ ಕುಡಿಯೆ ಗರ್ಭವಕ್ಕುಂ (ಶಿಶುಪಾ. ೬). [ಮಯೂರ + ಸಿಲೆ]

**ಮಯೂರಾಂಡರಸನ್ಯಾಯ** (ನಾ). [ತರ್ಕಶಾ] ಒಂದು ಬಗೆಯ ನ್ಯಾಯ; ❡ ನವಿಲಿನ ಮೊಟ್ಟೆಯಲ್ಲಿ ಸೂಕ್ಷ್ಮರೂಪದಿಂದ ಇದ್ದ ಪಾದ, ಪಕ್ಷ, ವರ್ಣ ವೈಚಿತ್ರ್ಯಾದಿಗಳು ಸ್ಥೂಲವಾಗಿ ವ್ಯಕ್ತವಾಗುವುದು : ಶಿವನು ತನ್ನಲ್ಲಿಯೇ ಸೂಕ್ಷ್ಮವಾಗಿ ಅಡಗಿದ್ದ ವಿಶ್ವವನ್ನು ಹೊರಹೊಮ್ಮಿಸಿ ಪ್ರಕಾಶಪಡಿಸುತ್ತಾನೆ. ಈ ವಿಧವಾದ ಸೃಷ್ಟಿಯನ್ನು ಮಯೂರಾಂಡರಸನ್ಯಾಯಕ್ಕೆ ಹೋಲಿಸುವರು (ಚಾರಿತ. ೩೦೨). [ಸಂ.]

**ಮಯೂರಾಸನ** (ನಾ). ೧. ನವಿಲಿನ ಆಕಾರದ ಮೇಲೆ ಪೀಠವಿರುವಂತೆ ಮಾಡಿರುವ ಆಸನ; ❡ ಹಿಂದೂದೇಶದಲ್ಲಿ ಇದು ಮೊಗಲರ ಕಾಲದಲ್ಲಿ ಸುಪ್ರಸಿದ್ಧವಾಗಿತ್ತು. ೨. [ಯೋಗ] ಒಂದು ಆಸನದ ಹೆಸರು : ಗರುಡಾಸನ ಮಯೂರಾಸನ . . . ಅರ್ಧಾಸನಾದಿ ಎಂಭತ್ತನಾಲ್ಕು ಆಸನಭೇದಂಗಳು (ವಿವೇಕ. ೦೪೪); ಮುಖ್ಯವಾದ ಆಸನಗಳು: ೧. ಉತ್ಥಾನಾಸನ . . . ೧೬. ಮಯೂರಾಸನ (ಚಾರಿತ. ೦೬೬). [ಸಂ.]

**ಮಯ್ದ** 'ಮೆಯಿಂದ' ನೋ.

**ಮಯ್ದಗಾವುಂಡ** (ನಾ). ಒಬ್ಬಾತನ ಹೆಸರು : ಶ್ರೀಮದ್ವಿದ್ವಚ್ಛಕ್ತಿಪಣ್ಡಿತ ಭಟಾರರ ಮಯ್ದಗಾವುಣ್ಡನುಂ ಪಾದಮೂಲಮುಂ ಪನ್ನಿರದಗಿ ಪಣ್ಣಕ್ಕಳು ಮಿಟ್ಟು (ಎಪಿ. X (೩), ಶಿಕಾ. ೨೬-೬ : ೯ಶತ. ೬೪). [ ಮಯ್ದ (<ಮಯಿಂದ) + ಗಾವುಂಡ (< ಗಾಮುಂಡ) ]

**ಮಯ್ದಮರಸ** 'ಮಯಿಂದಮರಸ' ನೋ.

**ಮಯ್ದುನ** 'ಮೆಯ್ದುನ' ನೋ.

**ಮಯ್ದುನತನ**, **ಮೈದುನತನ** (ನಾ). ೧. ಗಂಡನ ಅಥವಾ ಹೆಂಡತಿಯ ತಮ್ಮನಾಗಿರುವಿಕೆ. ೨. ಸಹೋದರಿಯ ಮಗನಾಗಿರುವಿಕೆ : (೪). **ಮೈದುನತನ** : ೩. ಸೋದರತ್ತೆಯ ಮಗನಾಗಿರುವಿಕೆ : ಇನತನೂಜನ ಕೂಡೆ ಮೈದುನತನದ ಸರಸವನೆಸಗಿ ರಥದೊಳು ವಸುವಿರಿಪು ಬರಸೆಳೆದು ಕುಳ್ಳಿರಿಸಿದನು ಪೀಠದಲಿ (ಕುಮಾವ್ಯಾ. ೦೦-೨). [ಮಯ್ದುನ (< ಮೆಯ್ದುನ) + — ತನ]

**ಮಯ್ಯು**. ಮಯ್ಯೆ (ನಾ). ಗಾಬರಿ ; **ಗೊಂದಲ** : "ಮಯ್ಯೆನೆ ತಿಂತಿಣಿಸುವ ಭಾವಂ" (ಶಬ್ದಮ. ೪. 1. ೬೨); ನೀರಿಗಿ ಬದುಕುವನೆಂದು

ಮುಯ್ಮೆನಿಂದುಡೆ ಪರಿದುಮಂಬಲಿಸುತ (ಕಾಬಂ. ೯೯-೦೯೬). ಮುಯ್ಮೆ₂ : ಸುಡದೆದೆಯ ಕೆಚ್ಚುಗಳ ಕಿಚ್ಚಲ್ತೆ ಮುಯ್ಮೆ (ಕಾಬಂ. ೦೦೯-೨೨೩). [?]

**ಮಯ್ಮೆ₁**, ಮೆಯ್ಮೆ, ಮೈಮೆ (ನಾ). ೧. ಶ್ರೇಷ್ಠತೆ ; ಹಿರಿಮೆ ; ಘನತೆ: ಮನ್ನಿಸಿ ಮುಯ್ಮೆ [ಶಾಕಾಂ. ಮೆಯ್ಮೆ, ಮೈಮೆ]ಯಂ ಮೆಱೆದು ಪುಂಸವನಂ ಮೊದಲಾಗೆ ತಕ್ಕುವಂ ತನ್ನನಿಮಿಳ್ಗ ಮಾಡಿಸಿದಂ (ಮುಲ್ಲಕು. ೯-೦೦೪). ಮಯ್ಮೆ : ೧. ಸಕಳ ಜಗತ್ತಿಳಿಕನುಱಿದಿರ್ದ ಮಯ್ಮೆಯ ವಿಳಾಸಮೆಮಗಾ ತನಿಲ್ಲದಂತೊಪ್ಪುಗುಮೋ (ಅಜಿತ. ೬-೧೦೭) ; ಪರಿಜನಪಾರಿಜಾತಲತೆ . . . ಪರಮಾರಸಪಾರ್ಥಿ ಸುಧಾಂಶುಲೇಖೆಯೆಂಬರ ನುಡಿಗಳ್ಗೆ ಡರ್ಪ್ಪಣಿಪ ಮೈಳಲದೇವಿಗೆ ಮೆಯ್ಮೆಯೊಪ್ಪದೇ (ಎಕ. XIII. ೩೦೬-೬೩; 1125); ನಿನ್ನ ನಿಜಮುಕ್ತಿಗಂ ಮೆಯ್ಮೆಗಂ ತಚ್ಛಾಪಮಾನುಕೂಲಂ (ಶಬ್ದರಾ. ೩-೩೬). ೨. ಪ್ರಭಾವ ; ಶಕ್ತಿ : ಇವರಜಿಯಿಂತಿವರಾರ್ಪಿಂತಿವರೆಳಸಿಂತಿವರ ಗಯ್ಮೆ ಮೆಯ್ಮೆಗಳಿಂತೆಂದವರಿಂಗಿತವಂ ತಿಳಿವು (ಅಕ್ರೂ. ೦೯೮-೦೩) : ಆ ಸಂಜೆಗೆಯ ನಿನ್ನ ಸೂರಾನೆಮೆಯ್ಮೆಯಂ ತೊಳ್ಕಗೈದಿದೆ ಕಣ್ಣಾ (ಶ್ರೀರಾಮಾ. ೨೨೦-೨೯೦). ಮೈಮೆ : ೧. "ಮೈಮೆಯೆನಲ್ ಮಹಿಮೆ" (ಕವಿಜಿ. ೪೪); ದೋರ್ವಲಕ್ಕಂ ಮೈಮೆಗಂ ಮೋಕ್ಷಕ್ಕಂ ಮಹಾಸಮುದ್ರದೊಳ್ ಮಹಾ ನದಿಗಳ್ ಕೂಡುವಂತೇಬಕ್ಷೋಹಿಣೀಬಲಂ ಕೂಡಿ ನಡೆಯೆ (ಶಂಕರಾ. ೯-೯೩ ವ) ; ಮೈಮೆಯುನೀತಂ ಜಗತ್ತ್ರಯಕ್ಕೆ ಮಾಡಿಪುದು (ಪುಷ್ಪ. ೧-೯೪) ; ದೇವಮಾನವರ ಭಂಗಿ ಬೇರ್ಪಡಿಸಿ ತೋರಿಸಿಹುದೆ ಮೈಮೆ (ಅರಳು. ೪೩೩-೨). ೨. ಚಾಗದ ಯಾಗದ ಭೋಗದ ಮೈ [ಶಾಕಾಂ. ಮಹಿ]ಮೆಗೆ ಸುಯೋಧನಂ ಬೆಱಗಾದಂ (ಶಂಕರಾ. ೬-೬೬) ; ಮೈಮೆ ಮಡಿಯಿತ್ತುತ್ಸಾಹವಿಂಗಿತ್ತು (ಗಂಳ. ೮-೬೨) ; ಮೆರೆಯುತಿಪ್ಪವು ನೂರಾರು ಮೈಮೆಗಳು ಸೃಷ್ಟಿಯುಲಿ (ಶುಂಳಃಳ. ೬೨೦). [ಸಂ. ಮಹಿಮನ್]

**ಮಯ್ಮೆ₂** 'ಮಯಮ್ಮ' ನೋ.

**ಮಯ್ಲಿ** 'ಮೈಲಿ₁' ನೋ.

**ಮಯ್ಲಿತೆಗೆ** 'ಮೈಲಿತೆಗೆ' ನೋ.

**ಮಯ್ಲು**, ಮೈಲು₁, ಮೈಲ್ (ನಾ). ನವಿಲು ; ಮಯೂರ : "ಮಯ್ಲು(ಮ್ಲ) - ಮಯೂರ = ನವಿಲು" (ಕರ್ಣಕೋ. ೩೪). ಮೈಲು₁ : 'ಮೈಲುವಾಹನ' ಪರಾ. ಮೈಲ್ : ಮಚ್ಚರದಾಪುವಂ ಮಱೆದು ಕೈದುಗಳಂ ತೊಱೆದಟ್ಟು ತೊಟ್ಟ ಪೆಟ್ಟಟ್ಟತೊಡಂಬಡಂ ಪಡೆದು ಮೈಲೆಪು ನಚ್ಚನೆಯಂತೆ ಸೂಲದಂ ಬಚ್ಚಿಸಿ . . . ಬಾಗಿಲಕ್ಕೆ ಪುಲ್ಗಚ್ಚಿ ಪುಗುತ್ತುಮಿರ್ದರ್ (ಅಪಂಡ. ೦೩-೯೬).

[ದೇ. ತಮಿ. ಮಲ. ಮಯಿಲ್; ತುಳು. ಮೈರ್; ಕೊಡ. ಮಯ್ಲ್; ಹರ್ಜ. ಮನೀಲ್. / ಸಂ. ಮಯೂರ]

**ಮಯ್ಯೊಜು** 'ಮೆಯ್ಯೊಜು' ನೋ.

**ಮಯೂರ್**, ಮಹಿಶೂರು, ಮಹಿಸೂರು, ಮಹೀಶೂರು, ಮೈಸೂರು (ನಾ). ಒಂದು ನಾಡಿನ ಹೆಸರು ; P ಕರ್ನಾಟಕರಾಜ್ಯದ ಈಗಿನ ಪ್ರಸಿದ್ಧವಾದ ನಗರ : ಅನ್ತೆ ಸನ್ತ ಬಳವಗೆಯ ದೀಕೆಯೋ ಅನ್ತೆ ಸನ್ತ ಮಯೂರ ಬಟ್ಟಿಯ ಕಲ್ತಿಪ್ಪೆಯೋ . . . ಅಂತೆ ಕಗ್ಗಲ್ಲ ಸರದುವಿಡಿದು ಬನ್ದ ಕಗ್ಗಲ್ಲ ಮೊಜಡೆ (ಎಕ. XXXVI. ೦೦೯-೦೬೨; 962). ಮಹಿಶೂರು : ಸಹಜುಬುದೊಡನೆ ಬಂದರ್ ಮಹಿಶೂರಿಂ ರಾಜದೇವರ ಜೀಯರ್ (ಚಿನ. ೨-೯೪) ; ಚಾಮರಾಜನಗರ ಮಹಿಶೂರು ಮುಂತಾದ ಸ್ಥಲಂಗಳಲ್ಲಿ ದೇವರಿಗೆ ಸಮರ್ಪಿಸಿದ ರತ್ನಮಯಂಗಳಾದ ಕೃಷ್ಣರಾಜ ಮುದ್ರೆಗಳೆಂಬ ಭೂಷಾರತ್ನ (ಎಕ. V (R). ಮೈಸೂರು. ೩೬-೦೩ : 1829). ಮಹಿಸೂರು : ಆ ಪುರದಲ್ಲಿಯೂ ಮಹಿಸೂರ ದೇವ × × ರಾಜಮಹಿಶ ತ್ರಿಯಂಬಕದೇವರಲ್ಲಿ ಪರ್ವತ್ತೈಯನವರೂ ನಿರಿಸಿದ ಧಂಮ್ಮಶಿಲಾ ಶಾಸನ (ಎಕ. III (R). ಗುಂಡ್ಲು. ೦೩೩-೨೯ ; 1492). ಮಹೀಶೂರು : ಮಹೀಶೂರ ಶ್ರೀಕೃಷ್ಣರಾಜವಡೆಯರೈಯನವರು ವೆಂಕಟರಾಮಯ್ಯಗೆ ಬರೆಸಿಕೊಟ್ಟ ಕ್ರಯ ಭೂದಾನ ತಾಂಮ್ರದ ಶಾಸನದ ಕ್ರಮವೆಂತೆಂದರೆ (ಎಕ. III (R). ಕೊಳ್ಳೇ. ೩೦೬-೭ ; 1761). ಮೈಸೂರು : ಮೈಸೂರ ಹೊಯ್ಸಳಗೌಂಡ ಕುಂಬಗೌಂಡ ... ಮೈಸೂನಾಡ ಸಮಸ್ತ ಪ್ರಭುಗೌಂಡುಗಳು ಕುಮಾರನ ಬೀಡಿನ ಶ್ರೀಬೆಂಬೇಸ್ವರದೇವರಿಗೆ ಪೂರ್ಬ್ಬಮರಿಯಾದೆಯಿಂ ನಡವ ದೇವದಾನ(ಮೈ.ಅ. ೦೯೩೬. ೪೨-೭: 1176); ಸೃಷ್ಟಿಯೊಳಗೆ ಮೈಸೂರು ಪಟ್ಟಣದ ನೃಪಕುಲದೇವತೆಯೆನಿಸಿದ ಬೆಟ್ಟದ ಚಾಮುಂಡಿಯಿಹಳು (ಳಂಪ. ೨-೩೬). P 'ಮಹಿಷ' ಎಂಬುವರ ತದ್ಭವವಾಗಿ 'ಮಯ್ಸ' ಎಂಬ ರೂಪವು ಹೇಗೆ ಬಂದಿರಬೇಕೆಂದು ಕೆಲವು ವಿದ್ವಾಂಸರ ಅಭಿಪ್ರಾಯವಿದೆ. [ಮಯ್ಸ₁₀ (P < ಸಂ. ಮಹಿಷ) + ಊರ್]

**ಮಯೂರ್ನಾಡು**, ಮೈಸುನಾಡು (ನಾ). ಒಂದು ನಾಡಿನ ಹೆಸರು : ಇದರ್ಕೆ . . . ಮಯೂರ್ನಾಡೆಪ್ಪತ್ತು ಬಳ್ವಿನಾಡು ಸಾಕ್ಷಿ (ಎಕ. VI, ಕಡೂರು. ೯-೨೨ ; 990). ಮೈಸುನಾಡು : ಮೈಸುನಾಡು ಸಪ್ತತಿ ಮಧ್ಯ ಬಜಿಕೋಡು ನಾಮಗ್ರಾಮ (ಇಕ. VIII, ೨೦೩-೬೦ ; 10 ನೆಯ ಶತ?) : ಬೃಹವಾರದನ್ದ ಮೈಸುನಾಡ ಬೆಲೂಕುನ್ದನಾಡ × × ಮೆಯ . . . ಮಗ ಚಾಮುಗಉಣ್ಡನ × × × (ಎಕ. III, ನಂಜನ. ೦೨೩-೬; 1109?). [ಮಯೂರ್ + ನಾಡು]

**ಮರ₁** (ನಾ). ೧. ದೊಡ್ಡದಾಗಿ ಬೆಳೆದ ಸಸ್ಯ ; ವೃಕ್ಷ ; ತರು : "ವೃಕ್ಷಃ . . . ದ್ರುಮಃ, ಪಾದಪಃ- ಈ ೧೯ ಮರಂ" (ಪದಾರ್ಥ. ೨೯-೨೩) ; ಆಮೋದಕುಸುಮಸಮಿತಿಯನಾ ಮರಗಳೊಳಾಯ್ದು ಕೊಯ್ದುವಿಲ್ಲಗೆ ಬರ್ಪಂ (ಕಬಿರಾ. ೩-೦೩೩); ಪೂವಿನ ಪೊಸಗೊಂಚಲಿಂ ಮರನಿದೇನೆಸೆದಿರ್ದಪೊ (ಶಂಕರಾ. ೦-೦೦೬); ಸುರತರು ಕಾಡ ಮರನಾಯ್ತು (ಳುದ್ಮದ್ರೋ. ೦೯-೩೨). ೨. (ಸಾಮಾನುಗಳನ್ನು ಮಾಡಲು ಬಳಸುವ) ವೃಕ್ಷದ ತುಂಡು : ಚೌಬೀನೆ : ನೂಲ ತಲೆಯೊಳ್ ಕೀಲಂ ಬೆಟ್ಟಿರ್ದ ಮರನಂ ಕಂಡದಜ ಮೇಲೆ ಕುಳ್ಳಿರ್ದು (ಶುಕಸಂ. ೩೦-೬); ತಗುಳ್ದ ಮರಂಗಳನೊಟ್ಟಿ ಕೀಟ ನಿಟ್ಟೇಱಿ (ಸುಕುಮಾ. ೩-೦೬). (ಗು). (ಅಲಂ) ೩. ದಟ್ಟವಾದ : 'ಮರಗಟ್ಟಿಲೆ', 'ಮರಗಾಡು' ಪರಾ. ೪. ಒರಟಾದ; ಬಿರುಸಾದ ; 'ಮರಗಬ್ಬು' ಪರಾ. ೫. ದೊಡ್ಡ : 'ಮರಸರ್ಪ' ಪರಾ. ೬. (ಅಲಂ) ನೀರಸವಾದ : 'ಮರವಾಳ್₁' ಪರಾ.

ಮರಗುಜ್ಜು = (ಅಲಂ) ಬಹಳ ಕುಳ್ಳ : ಸುರಪತಿಯು ತಮ್ಮನಾಗುದಿಸಿ ಮರಗುಜ್ಜಾಗಿ ಹರಿ ಬಲಿಯ ಬಂಧಿಸಿ (ಹರಿಂ. ೩-೩೩). ಮರದ ಜಡೆ = ಆಲ ಮುಂತಾದ ಮರಗಳ ಕೊಂಬೆಗಳಿಂದ ಇಳಿಬಿದ್ದ ಬೇರು,-ಜಟೆ; ಬೀಳಲು : "ಮರದ ಜಡೆಯೆನೆ ಮರದ ಬೀಳಕ್ಕುಂ" (ಕಕರ. ೯೬). ಮರದ ಬಿಟ್ಟ, ಮರಕ ಬಿಟ್ಟ=ಒಂದು ಬಗೆಯ ತೆರಿಗೆ ; ಹಿರಿಯರ ಮನೆಯಿಂದ ಬಂದ ಬಿಟ್ಟಿ ಬಿಢಾರ ಮರದ ಬಿಟ್ಟಿ ಕ್ರಯ ಕಡ್ಡಾಯ (ಎಕ. VII. ಶಿವಮೊ. ೬೨-೨೯ ; 1431) ; ಕ್ರಯ ಕಡ್ಡಾಯ ಬಿಟ್ಟಿ ಬಿಡಾರ ಸೇಸೆ ಮರದ ಬಿಟ್ಟಿ ಜೋಡಿ ಗ್ರಾಸ (ಮೈ.ಅ. ೦೯೯೦. ೩೬-೪೪; 1399). ಮರಗಾಗು = ಮರಗಟ್ಟು ; ಜೋಮು ಹಿಡಿ : ವಾಘೆಯಲಿ ಕೈ ಬಿಗಿದುದಂಕಣೆಮೊಡಕಿನಲಿ ಮರನಾದವಂಘ್ರಿಗಳು (ಳುದ್ಮಗ. ೨-೦೩). ಮರಮುಟ್ಟು = ಮರ, ಗಿಡ, ಪೊದೆ ಮೊದಲಾದುವು : ಕಂಗೆಡುತ ಕೆಲರು ಮರಮುಟ್ಟುಗಳನೇಱುತ್ತು (ಳೌಕಾ. ೨೩-೦೩) : ರಾಮೇಶ್ವರಲಿಂಗವನ್ನು ಕಂಡು ಅಲ್ಲಿದ್ದ ಮರಮುಟ್ಟು ಗಿಡಗಳನ್ನು ಕಡಿಸಿ ಮೈದಾನ ಮಾಡಿಸಿ (ಳಳಮ. ೨-೧೪). ಮರಮುಂಡು = ಮರಮುಟ್ಟು : ಉತ್ತರವಾದುವತ್ತಣಿಂ ಕಲ್ಗುಂಡು ಮರಮುಂಡು ಬುಡಬೇರುಕೊಂಬೆಗಳ್ (ಶ್ರೀರಾಮಾ. ೬೯೬-೪೦೦). ಮರಮುಟ್ಟು = ಮರದಿಂದ ಮಾಡಿದ ಸಾಮಾನು ; ಮರದ ಸಾಮಾನು : ಹೊಡಿದೆಲು ಮರಮುಟ್ಟು ಮಾಂಸದ ಗೋಡೆ ಚರ್ಮದ ಹೊದಿಕೆ ನರವಿನ ಕೂಡೆ ಹಿಂಡಿಗೆ

ಬಿಗಿದ ಮನೆಯೊಳಗಾತ್ಮನಿರುತಿರಲು (ಹಂಸಾ. ೯೩) ; ಮನೆಯನ್ನು ಕೆಡಪಿ ಮರಮುಟ್ಟುಗಳನ್ನೆಲ್ಲಾ ಮಾರಿಕೊಂಡಿದ್ದರು (ಅರಿಟು. ೦೬೦). ಮರ ಹೊಡೆ = ಉತ್ತ ಭೂಮಿಯನ್ನು ಮರದ ಸಾಧನದಿಂದ ಸಮಮಾಡು : ಹೊಲಕ್ಕೆ ನಾಳೆ ಮರ ಹೊಡೆಯಬೇಕು (ಜಾ). [ ದೇ.॥ ತಮಿ. ಮಲ. ಮರಮ್ ; ತುಳು. ಕೊಡ. ಮರ ; ತೆಲು. ಮ್ರಾನು, ಮಾನು ; ಪರ್ಜಿ. ಮೆಂ ; ಗೊಂಡಿ. ಮರಾ. ಕುಇ. ಮ್ರಹ್ನು ; ಕುವಿ. ಮ್ರಾನು ]

**ಮರ್ಕ** 'ಮೊಟ' ನೋ.

**ಮರಂಗಡಿ**, ಮರಗಡಿ (ಕ್ರಿ). ಮರವನ್ನು ಕತ್ತರಿಸು ; ವೃಕ್ಷವನ್ನು ಕಡಿ : ತಮ್ಮ ಮೇಲೆ ತಾವೆ ಮರಂಗಡಿದರೆಂಬಂತೆ (ಹಂಸಕಂ. ೨೦೬-೦೦). ಮರಗಡಿ : ವಿರೋಧಿಗೆ ಮಾಣಿಸೂ ತನ್ನ ಮೇಲೆ ತಾಂ ಮರಗಡಿಪೊಂ (ಶಾಂತಿಪು. ೨-೯೦). [ ಮರ$_1$ + ಕಡಿ$_1$ ]

**ಮರಂಗಲ್** (ನಾ). ಒಂದು ಸ್ಥಳದ ಹೆಸರು : ಮರಂಗಲ್ಲೊಡೆಯ ಕಣ್ಣ ಮ್ಮಯ್ಯನಾ ಮಗನ್ ವಿಲಗಣ್ಣಯ್ಯನು . . . ಕೊಟಗೊಳೊಳ್ ಸತ್ತೋ (ಎಕ. X. ಬೌರಿಂಗ್. ೩೯-೩ ; ೯೦೦) ; ಕಳ್ಳಪರಿಯೆ ಮರಂಗಲ್ಲೊಳ್ ಪನ್ನ ಕೊರ್ಳ ಗಟ್ಟಿ (ಎಕ. X (೮), ಬಾಗೇಪ. ೯೩-೭ ; 10ನೆಯ ಶತ). [ ? ]

**ಮರಂದ** (ನಾ). ಹೂವಿನ ಬಂಡು ; ಮಕರಂದ : ಮಧುದಳಿವ್ರಜಕೆ ಮರಂದದಾಣಿಸನೂಡಲ್ಪಿ ಚ್ಚಾಡ್ದು ದೆನೆಯುಲರ್ವಂಬುಜಾಳಿಯುಸೆಗುಂ ಸರದೊಳ್ (ಚಿಕ್ಕುಪ್ರ. ೩-೪-೭) ; ಮರಂದಮಂ ಪೀರ್ವ ಮಧುಕರಂ (ಅಕಿಬಾ. ೦೬೩). [ ಸಂ. ]

**ಮರಂದಲೆ** (ನಾ). ಒಂದು ಸ್ಥಳದ ಹೆಸರು : ಶ್ರೀಮತ್ ಮಾರಸಿಂಘದೇವ ಸತ್ಯವಾಕ್ಯಪೆರ್ಮ್ಮಾನಡಿಗಳ್ಗರನ್ದಲೆಮಯ್ಯ್ಯಾದಿಯುಳುತ್ತಮಿರ (ಎಕ. V. ಅರಸೀ. ೨೩೭-೫ ; 971). [ ? ]

**ಮರಂಬಡು** 'ಮರವಡು' ನೋ.

**ಮರಅಕ್ಕಬುಹುಲ್ಲು** (ನಾ). ಒಂದು ಬಗೆಯ ಸಸ್ಯ : ಮರಅಕ್ಕಬು ಹುಲ್ಲು, ಪರಂಗಿ ಅಕ್ಕಿ ಹುಲ್ಲು (ಬೃತಿಂ. ೬೩-೦೫೪೦). [ ಮರ$_1$ + ಅಕ್ಕಬು$_8$ + ಹುಲ್ಲು ( < ಪುಲ್ ) ]

**ಮರಕಟ** (ನಾ). ಕೋತಿ ; ಮರ್ಕಟ : ಮರಕಟ ಕುಣಿವಂತೆ ಮನಸು ಇಂದ್ರಿಯಗಳುವಶ್ಯವಾಗಿ ಕುಣಿದು ಕಂಗೆಡಿಸುತ್ತಿದೆ (ಕೀರ್ತನು. ೦೩೬). [ < ಸಂ. ಮರ್ಕಟ ]

**ಮರಕಟಧ್ವಜ** (ನಾ). ಕೋತಿಯ ಗುರುತಿರುವ ಬಾವುಟ ; ಕಪಿಧ್ವಜ : ಮರಕಟಧ್ವಜವಿಟ್ಟು ಧರ್ಮದೊಳಿರುವುದು (ಜಿಮಾ. ೩೯-೫೦). [ < ಸಂ. ಮರ್ಕಟಧ್ವಜ ]

**ಮರಕಟ್ಟು₁** 'ಮರಗಟ್ಟು₁' ನೋ.

**ಮರಕಟ್ಟು₂** 'ಮರಗಟ್ಟು₂' ನೋ.

**ಮರಕತ** (ನಾ). ನವರತ್ನಗಳಲ್ಲಿ ಒಂದು ; ಪಚ್ಚೆ : "ಪಸುರ್ವಣಿಯುಂ ಪಾಗವರಲ್ ಪೆಸರಿಂ ಮರಕತಮವಕ್ಕು" (ಅಭಿಂ. ೩೨) ; ಕೋಪಾನಳನ ನೆಯ್ದು ಪೊರ್ದಿಸುವವೂಲಾ ಮರಕತಮಣಿವರ್ಣಂ ಕರಪರಿಘದಿನೊಡನೊಡನೆ ತಾಳ್ಬಿಡಂ ತೀಳನೀರಂ (ಅಪ್ಪು. ೦೯-೦೦೭) ; ಅರಗಿಳಿಯ ಪಸುರ್ಪಿಂದಂ ಮರಕತಮಯವೆನಿಪ ಪೊನ್ನಪಂಜರಮಂ ಪೊತ್ತು (ಶಾರಂಪು. ೩೭) ; ಪವಳದ ಪಡಿಯಿಂ ಮರಕತದೊಂದು ಕಳಸದಿಂ ಕಾರಗೆವಟ್ಟೆ ಮುಟ್ಟಿ (ರಾಜಾಕ್ಯ. ೫೯-೨೩). [ಸಂ.]

**ಮರಕತವಟ್ಟೆ** (ನಾ). ಹಸುರು ಬಟ್ಟೆ,—ವಸ್ತ್ರ : ಚರಣದೊಳೆಸೆವ ಚಿಮ್ಮಿಯ ಕೆಂಪು ಬಿಗಿದಟ್ಟ ಮರಕತವಟ್ಟೆ ಮೂಂದಳಿರು ಸಿರದಲಿ ಮೆಚಿಸಿಯೆ (ಕೋಹಕ. ೦೯-೩೨). [ ಮರಕತ + ಬಟ್ಟೆ₂ ]

**ಮರಕತವರ್ಣ** (ನಾ). ಪಚ್ಚೆಯ ಬಣ್ಣ ; ಹಸುರು : ಮರಕತವರ್ಣಮಂ ತರುಣವೇಣುತನುಚ್ಛವಿಯಿಂದೆ ವಜ್ರಮಂ ಸುರುಚಿರಮುಪ್ಪ ಮುತ್ತನಿಜ ದಂತಚಯಂಗಳದೊಂದು ಕಾಂತಿಯಿಂದುರಗಸದೃಕ್ಷವಪ್ಪ ಕಚದಿಂ ಹರಿನೀಳವ ನೊಪ್ಪೆ ಹೋಲ್ತಳಂತಿರೆ ಸತಿ ರತ್ನದೊಂದೆಣೆಗೆ[ವಂದಳು](ಎಕ. XII, ಶಿಕ್ಸ್ಸಾ. ೯೩-೬೯ ; 1171). [ಸಂ.]

**ಮರಕಬ್ಬು** 'ಮರಗಬ್ಬು' ನೋ.

**ಮರಕಲ**, ಮರಕಾಲ (ನಾ). ೧. ಬೆಸ್ತ; ಮೀನುಗಾರ : ಮೊಗೇರರ ಜಾತಿಯ ಸಾಮಾನ್ಯ ಹೆಸರು ಮರಕಲರು ಎಂಬುದಾಗಿದೆ (ತುಳುಜಾ. ೨೨೯). ಮರಕಾಲ : ೧. ಬಲೆ ನೆಯ್ದು ಮರಕಾಲ ಬಟ್ಟೆ ಸೆಯ್ದಾನೇ ? (ಗಾದೆ). ೨. ನಾವಿಕ; ಅಂಬಿಗ : ಕಾಸರುಕೋಡಿಂಗೆ ತಗದು ಬಂದಲಿ ಆ ಉಂಪುರ ಮರಕಾಲರು. . . ಬಳಿಗೆ ಬಂದು (ಕಇ. I, ೯೮-೭; 1427); ಓದಂತೆ ಮರಕಾಲರು ಹಡಗಿನ ವ್ಯವಹಾರದಿ ಗಳಿಸಿದ ಹಣವ . . . ತೂಗುವರು (ಕೋಹಕ. ೩-೨೯); ಮರಕಾಲರಲ್ಲಿ ಹಲವರು ಪಾಂಡಿಗಳಲ್ಲಿ ಪರದೇಶದ ವ್ಯಾಪಾರ ಮಾಡಿ ಪಾಂಡಿ ಎಂಬ ಹೆಸರನ್ನು ಗಳಿಸಿಕೊಂಡಿದ್ದರು(ತುಳುಜಾ.೩೯). [ದೇ.॥ ತಮಿ. ಮರಕ್ಕಲನ್ ; ತುಳು. ಮರಕಲೆ, ಮರಕಾಲೆ]

**ಮರಕಾಲ** 'ಮರಕಲ' ನೋ.

**ಮರಕಾಲು** 'ಮರಗಾಲ್' ನೋ.

**ಮರಕಾಲ್ತಿ** (ನಾ). ಬೆಸ್ತರ ಹೆಂಗಸು ; ಮೀನುಗಾತಿ : ಹೋಯ್ ಮರಕಾಲ್ತಿ, ಮೀನು ಹ್ಯಾಗೆ ? (ಜಾನಪ. ೯೯). [ಮರಕಾಲ( <ಮರಕಲ) + —ತಿ$_1$ (< — ಇತ್ತಿ)]

**ಮರಕಾಳಗ** (ನಾ). ಮರಗಳನ್ನೇ ಆಯುಧವಾಗಿ ಹಿಡಿದು ಮಾಡುವ ಯುದ್ಧ : ಬಕ ಭೀಮರಿಗೆ ಮರಕಾಳಗ ಬಹಳ ಹೊತ್ತು ನಡೆಯಿತು (ಜನಪ. ೯೮). [ ಮರ$_1$ + ಕಾಳಗ (<ಕಾಳೆಗ) ]

**ಮರಕಿ** (ನಾ). ಒಂದು ಬಗೆಯ ಭೂಮಿ (?): ಹೊಸ ಊರ ನಾಗಣಪೆಗ್ಗಡೆ ಬೀಜ ಹೊನ್ನ ತೆಗೆದುಕೊಂಡು ತಂನ ಮೂಲದ ಮೇಲೆ ಕುಳಕ್ಕೆ ಬರಸಿ ಕೊಟ್ಟ ಭೂಮಿ ಮರಕಿ ಗೋಡಲೂ ಕಾರಗದ್ದೆ (ಕ್ಯಾಅಂ. ೦೯೩೯, ೧೯-೦೭ ; 1516). [ ? ]

**ಮರಕಿಚ್ಚು** 'ಮರಗಿಚ್ಚು' ನೋ.

**ಮರಕು** 'ಮುಜುಗು' ನೋ.

**ಮರಕುಟಿಕ** 'ಮರಕುಟಿಕ' ನೋ.

**ಮರಕುಟುವಕ್ಕಿ**, ಮರಕುಟುವಕ್ಕಿ (ನಾ). = ಮರಕುಟಿಕ : ಇಲಿಗಂ ಮರಕುಟುವಕ್ಕಿಗವುಲಸದೆ ಕರ್ದುಕುತ್ತೆ ಕಡಿಯುತಿರ್ಪುದೆ ಸಹಜಂ (ಧರ್ಮಾಮೃ. ೦-೯೬). ಮರಕುಟುವಕ್ಕಿ : "ಶತಪತ್ರಃ, ದಾರ್ವಾಘಾಟಃ — ಈ ೨ ಮರಕುಟುವಕ್ಕಿ" (ನಾಚಿರಾ. ೦೦೯). [ಮರ$_1$ + ಕುಟು$_1$ + ಪಕ್ಕಿ]

**ಮರಕುಟಿಕ**, ಮರಕುಟಿಕ, ಮರಕುಟಿಗ, ಮರಕುಟುಗ (ನಾ). ಮರವನ್ನು ಕೊರೆಯುವ ಒಂದು ಬಗೆಯ ಪಕ್ಷಿ : ಪಾಜುವೆಂಡಕಿಯಂತೆ ಪೊಜುಸು ಬಡಗಿಯಂತೆ ಮರಕುಟಿಕಂ . . . ಎಂದಿಂತುಮನೇಕಪಕ್ಷಿಜಾತಿಗಳಿಂ ತಕ್ಕನೆ ತೀವಿದ ಮಟುಮಂ (ಬಂಕಂ. ೨-೪೬ ಪ). ಮರಕುಟಿಕ : ಮಿಸ್ಸುಲಿಗ ಮರಕುಟಿಕ ಚಾಣಾಂಕೆ (ಬಕ್ಯಾಂಗ. ೦೦-೫). ಮರಕುಟಿಗ : ಗಿಳಿ ಪರ್ದು ಮರವಂ ಮರಕುಟಿಗಂ ಪುಟಲೆ (ಹಿತೋಸು. ೩-೦೯೬); ಮರಕುಟಿಗ ಕಬ್ಬಕ್ಕಿ ಕೊಟ್ಟುಗ . . . ಮೊದಲಾದಖಿಳಖಗಕುಲ ಬಿದ್ದು ಮರಿಯೊಳಗೆ (ಕುಮಾರ. ೨೦-೫೯); ಮರಕುಟಿಗ ಚಂಬೋತ ಶುಕ (ತೊರವ. ೩-೦-೩೨). ಮರಕುಟುಗ : ಮರಕುಟುಗ ಕಬ್ಬುಜುಕ ಹಂಸೆ (ಸಾಕ್ಯಶಾ. ೫-೫೩). [ ಮರ$_1$ + ಕುಟಿಕ$_1$ ]

**ಮರಕುಟಿಗ** 'ಮರಕುಟಿಕ' ನೋ.

**ಮರಕುಟುಗ** 'ಮರಕುಟಿಕ' ನೋ.

**ಮರಕುಟುವಕ್ಕಿ** 'ಮರಕುಟುವಕ್ಕಿ' ನೋ.

**ಮರಕೂಟವಕ್ಕಿ** (ನಾ). ಒಂದು ಬಗೆಯ ಜಲಚರಪಕ್ಷಿ : "ಉತ್ಕ್ರೋಶಃ,

ಕುರುಃ — ಈ ೨ ಮರಕೊಟವಕ್ಕಿ" (ಶಬ್ದಾಯು. ೯೨-೮೩). 'ಸರಕೊಟವಕ್ಕಿ' ಪರಾ. [ ? + ಪಕ್ಕಿ./p ಇದು ಟೀಕಾಕಾರನು ರೂಪಿಸಿರುವ ಶಬ್ದ ವಿರಬಹುದೆ ? ]

**ಮರಕೆಸ** (ನಾ). ಕೆಸವಿನಲ್ಲಿ ಒಂದು ಬಗೆ : ದಾರಿಯಲ್ಲಿ ಅಷ್ಟು ಮರಕೆಸ ಕಂಡು "ನೋಡಲ್ಲಿ ಪತ್ರೊಡೆಗೆ ಲಾಯಕ್ಕಾಗಿದೆ" ಎಂದರು (ಶ್ರೀಕೃ. ೯೬).
[ ಮರ$_1$ + ಕೆಸ (< ಕೆಸವು) ]

**ಮರಕೊಡಿ** (ನಾ). ದೇವಸ್ಥಾನದ ಮುಂದಿನ ಧ್ವಜಸ್ತಂಭ; ಕೊಡಿಮರ : ದೊಡ್ಡದೊಡ್ಡ ಮರಬಳ್ಳಿಗಳು . . . ಮರಕೊಡಿಗಳ ಹಾಲಿರುವಂತೆ ಕಂಡವು (ಜನುಮ. ೬೯). [ಮರ$_1$ + ಕೊಡಿ$_3$]

**ಮರಕೋತಿ** (ನಾ). ಮರವನ್ನು ಹತ್ತಿ ಇಳಿದು ಆಡುವ ಆಟ ; ಗಿಡ ಮಂಗನಾಟ (ಉಕ) : ಪರಿವರಿಯಾಟಂ ತಿರಿಕಲ್ಗರೆ ಮರೆ ಮರಕೋತಿ ಸೆಂಡು ಹಾರುಂಬಳೆ (ಚಂದ್ರಕು. ೬-೯೦) ; ಅಲ್ಲಿ ಮರಕೋತಿ ಆಡುತ್ತಿದ್ದುದು . . . ಜ್ಞಾಪಕವಿದೆ (ತೊಂಕೃ. ೦೨೩). [ಮರ$_1$ + ಕೋತಿ]

**ಮರಗಟ್ಟು$_1$.** ಮರಕಟ್ಟು$_1$ (ಕ್ರಿ). (ರಕ್ತಚಲನೆ ನಿಂತು) ಕೈಕಾಲು ಮರದಂತಾಗು : ಜೋಮು ಹಿಡಿ ; ಜಡವಾಗು : ಕಾಲು ಕೊತು ಕೊತು ಮರಗಟ್ಟಿತ್ತು (ಸಂಗ್ಯಾಕ. ೬೭) ; ಎದೆನಡುಗುತ್ತಿರುವಂತಿದೆ . . . ತೊಡೆ ಮರಗಟ್ಟಿದಂತಿದೆ (ಚಕೋ. ೨೯೩). **ಮರಕಟ್ಟು$_1$ :** ಬೆದರಿ ಕೈಕಾಲುಗಳೆಲ್ಲ ಒಮ್ಮೆಲೇ ಮರಕಟ್ಟಿದಂತಾದವು (ಹಳ್ಳಿಹಾ. ೩೦) ; ಈ ನೋಟವನ್ನೆಲ್ಲಾ ನೋಡಿ ಮರಕಟ್ಟಿದವನಂತೆ ತಟಸ್ಥನಾಗಿದ್ದ (ಶಿಶ್ಯಾಕು. ೬೩); ನಮ್ಮ ಕಾಲುಗಳು ಮರಕಟ್ಟಿಹೋಗಿವೆ (ಕೃಲಾಕ. ೩೯). [ಮರ$_1$ + ಕಟ್ಟು$_1$]

**ಮರಗಟ್ಟು$_2$,** ಮರಕಟ್ಟು$_2$ (ನಾ). ೧. ಮರದ ಬುಡದ ಸುತ್ತ ನೀರು, ಗೊಬ್ಬರ ಹಾಕಲು ಮಾಡಿದ ಪಾತಿ ; ಆಲವಾಲ : ಮರಗಟ್ಟಿಂಬಂತೆ ಸುತ್ತುಂ ಮೊದಲೊಳಜಗರಂ ಸುತ್ತೆ (ಶಾಂತಿಪು. ೦೨೦). **ಮರಕಟ್ಟು$_2$ :** ೨. ಈಚಲು ಮರಕ್ಕೆ ಮಡಕೆಯನ್ನು ಕಟ್ಟಿ ಹೆಂಡವನ್ನು ಇಳಿಸುವ ಕೆಲಸ : ಪತ್ತಾಕ್ಸಿಂದ ಮರಕಟ್ಟು ಕೆಲ್ಸಮಾಡ್ತೆ. ಈಗ ಕಳ್ಳಂಗಡಿ ಕಂತ್ರಾಟು ಮಾತ್ತೆ (ಸಂತೆಶಿ. ೯೦). ೩. ಮರದ ಕಟ್ಟಡ ವಿರುವಂಥದು : ಸಿರಿಗುಪ್ಪೆಯೊಳಾದರವಿಂ ಮರಕಟ್ಟಿನ ಒಳಿಯ ಬಾವಿ ಯುಂ ಕೆಱೆಯುಮನಷ್ಟರಿಯಿಸೆ ಮಾಡಿ (ಶಾಸ. XI-ii. ೦೩೯-೨೨; 1087). [ಮರ$_1$ + ಕಟ್ಟು$_2$]

**ಮರಗಡವ** (ನಾ). ಒಂದು ಬಗೆಯ ಕಡವದ ಮರ : "ಕಾ[ಕಾ]ಕ್ಷಃ — ನಾಳಲು, ಕಬ್ಬು, ಮರಗಡವ" (ಚಿಂತಾ. ೩೦).
[ ಮರ$_1$ + ಕಡವ$_1$ (< ಕಡಂಬ) ]

**ಮರಗಡಿ** 'ಮರಂಗಡಿ' ನೋ.

**ಮರಗಡೆ** (ನಾ). ಒಂದು ಬಗೆಯ ಸಸ್ಯ : ಅರುಣಮೂರುಗ, ಮರಗಡೆ (ವೈದ್ಯಶಿ. ೨೩-೯೨೩) : ಮರಗಡೆಸೊಪ್ಪನ್ನು ಅಕ್ಕಿಗಚ್ಚಿನಿಂ ತೊಳೆದು ಆ ರಸಮಂ ಹಿಂಡಿ, ಶೋಧಿಸಿಕೊಂಡು ದೇಹಾಸುಗುಣವರಿತು ತೆಗೆದುಕೊಳ್ಳು ವುದು (ಸಕಕ. ೦೯೬). 'ಮರ್ಕಟಿ' ಪರಾ. [ ? ]

**ಮರಗತಟ್ಟುಹುಲ್ಲು** (ನಾ). ಒಂದು ಬಗೆಯ ಹುಲ್ಲು : ಪಕ್ಕಿವಾರ್ಜಿ ಹುಲ್ಲು, ಮರಗತಟ್ಟುಹುಲ್ಲು (ವೈಶಿ. ೦೦-೦೬೩).[? + ಹುಲ್ಲು (<ಪುಲ್)]

**ಮರಗತ್ತಲೆ** 'ಮರಗಟ್ಟಲೆ' ನೋ.

**ಮರಗತ್ತಿ** (ನಾ). ಮರದಿಂದ ಮಾಡಿದ ಕತ್ತಿ : ಮರಗತ್ತಿಯಿಂದ ಮೂಗು ಕೊಯ್ಯಲು ಸಾಧ್ಯವೇ ? (ಜಾಡು). 'ಮರವಾಳ್$_2$' ಪರಾ.
[ ಮರ$_1$ + ಕತ್ತಿ ]

**ಮರಗಬ್ಬು,** ಮರಕಬ್ಬು (ನಾ). ೧. ಒಂದು ಬಗೆಯ ಬಿರುಸಾದ ಕಬ್ಬು : ವಿಸುಪ ಮರಗಬ್ಬು ಕರಿಯ ಮರಗಬ್ಬುನೊಕೊಸರ್ ರಸಮಂ ಹೀರವು (ಸೂಕಶಾ. ೨-೩೦). **ಮರಕಬ್ಬು :** ೨. ಲಾಳಕಡ್ಡಿ : "ವೀರಂ, ವೀರತರಂ — ೨ ಮರಕಬ್ಬಿನ ಹೆಸರುಗಳು. ಕೆಲವರು ಲಾಳಿಕಡ್ಡಿಯೆನ್ನುವರು. ಕೆಲವರು ಹುಲ್ಲಾಳೀಕಡ್ಡಿಯೆನ್ನುವರು" (ಶಬ್ದಾಕಿ. ೦೩೦).
[ ಮರ$_1$ + ಕಬ್ಬು$_2$ (< ಕರ್ಬು$_1$) ]

**ಮರಗಯ್,** ಮರಗೈ (ನಾ). ಮರದಿಂದ ಮಾಡಿದ ಕೈ : ಕಯ್ಯಂ ಕಡಿದು ಮರಗಯ್ಯಂ [ಕಟ್ಟಿ]ಕೊಳ್ವ . . . ಗಾವಿಲನಂತಾಗಿ (ವಡ್ಡಾರಾ. ೦೯-೦೦೬). **ಮರಗೈ :** ಪ[ಶಾಕಾಂ. ವೊ] ರಗಾಲು ಮರಗೈ (ವೈರಕು. I. ೨೦೩): ಕರೆದು ಬುಧಗೀಯುವ ಕೈ ಮರಗೈ ಮರಾಳೆಗೆ (ಜಕಾಶಾ. ೮೯).
[ ಮರ$_1$ + ಕಯ್$_2$ (< ಕೆಯ್$_2$) ]

**ಮರಗಸ** (ನಾ). ದೊಡ್ಡದಾಗಿ ಬೆಳೆದ ಕಳೆ : ಕಯ್ಯ ಮರಗಸಂ ಪುಲ್ಲ ಸಮಂಬೆರದುವಂ ಕಳೆದು ಪದದೊಳ್ ಬಿತ್ತಲೊಡಂ ಮನದೊಳುಳ್ಳ ರಾಗದ್ವೇಷಮುಖಿರಡುಪಂ ಕಳೆದು ಶುದ್ಧಚಾರಿತ್ರದೊಳ್ ಪತ್ತದೊಡ ಮಾತಂಗೆ ಬೆಳಸುಮಿಾತಂಗೆ ಸುಗತಿಪುಮೆಂತಕ್ಕುಂ (ಶಶಸಂ. ೩೭-೦೩ ವ).
[ ಮರ$_1$ + ಕಸ ]

**ಮರಗಳ್ಳಿ** (ನಾ). ಒಂದು ಬಗೆಯ ಕಳ್ಳಿ; ಮರದಂತೆ ಬೆಳೆಯುವ ಕಳ್ಳಿ : ಬೇಲಿಯಲ್ಲಿ ಮರಗಳ್ಳಿ ಬೆಳೆದುಕೊಂಡಿದೆ (ಜಾಡು). 'ಎಲೆಗಳ್ಳಿ' ಪರಾ. [ ಮರ$_1$ + ಕಳ್ಳಿ$_2$ ]

**ಮರಗಱುಕೆ** (ನಾ). ಒಂದು ಬಗೆಯ ಗರಿಕೆ : ಕಱುಕೆ ಮರಗಱುಕೆ ಕವಲುಂಗಱುಕೆ ಕವಲೊಗ್ಗಟ್ಟಿ ಹಂಚಿ (ಸೂಕ್ತಸು. ೩-೨೯); ಮರಗಱುಕೆಯ ಬಳ್ಳಿಯ ಪೆಗ್ಗುರುಟಿಗೆಯುಂ ಬ್ರಹ್ಮದಂಡೆಯುಂ (ಜಮು. ೦೩-೩೮).
[ ಮರ$_1$ + ಕಱುಕೆ$_1$ ( < ಕಱುಂಕೆ) ]

**ಮರಗಟ್ಟಲೆ.** ಮರಗತ್ತಲೆ (ನಾ). ದಟ್ಟವಾದ ಕತ್ತಲೆ ; ಕಗ್ಗತ್ತಲೆ : ತುಱುಗಿದೆಗಣ್ಣ ಕಾಂತಿ ಮರಗಟ್ಟಲೆಯುಂ ಬೆದಱಟ್ಟಿ ತೋಱವಾಯ್ದಱ ಕಿಸುಸಂಜೆವೀಱ (ಜಗ. ೦೩-೨೩). **ಮರಗತ್ತಲೆ :** ಚಲಿಪ ತರಳಾ ಪಾಂಗರೋಚಿಪುಲಿ ಮುಳಿದುದಾ ಮರಗತ್ತಲೆಯ ಪ್ಯಾಸಿ (ತೊರಾ. ೦-೩-೯೩). [ ಮರ$_1$ + ಕಟ್ಟಲೆ ]

**ಮರಗಾಡು** (ನಾ). ದಟ್ಟವಾದ ಕಾಡು : ಅರಿನೃಪನಾವ ಜವನಿಕೆ ಮಱೆಯೊಳಡಂಗಿದನೊ ತೃಣವನದೊಳಱುಬಿನಲಿ ಮೆಳೆಸಂದಣಿಗಳಲಿ ಮರಗಾಡಿನಲಿ ಮೃಗಗಣದ ನೆಲೆಯಲಿ ಕಾಣೆರಲೆ ನೀವೆಂದನಾ ಭೀಮ (ಕುವ್ಯಾಗ. ೯-೩೦) ; ಇಕ್ಕೆಯು ಹಕ್ಕಿಯಾಡುಂಬೊಲನ ಮರಗಾಡುಗಳೊಳಗೆ ಕಟ್ಟುಲಾಹುದೋಱದೆ ಹೊಕ್ಕುದಲಗಕೆ ಶುರಸಂದೋಹ (ತೊರಾ. ೩-೩-೦೦). [ ಮರ$_1$ + ಕಾಡು$_2$ ]

**ಮರಗಾಣ** (ನಾ). ಮರದಿಂದ ಮಾಡಿದ ಎಣ್ಣೆ ತೆಗೆಯುವ ಗಾಣ: (೬). 'ಕಲ್ಗಾಣ' ಪರಾ. [ ಮರ$_1$ + ಗಾಣ$_1$ ]

**ಮರಗಾಪು** (ನಾ). ಮರದ ರಕ್ಷಣೆ,— ಆಶ್ರಯ : ಹೊಳೆಹೊಳೆದಡಗುವ ಮಿಾಂಬುಳುಗಳು ಕಾವಳಗೊಂಡ ಮರಗಾಪಿ[ಶಾಶಾಂ ವಿ]ನೊಳು ಹೊಳೆವವು ಕಾರ ಕಾರ್ಮುಗಿಲೆಡೆಯೊಳು ಥಳಥಳಿಪ ಮಿಂಚಿನ ತೆಜನಾಗಿ (ಶ್ರೀಚಾರಿ. ೬-೩೬). [ ಮರ$_1$ + ಕಾಪು ]

**ಮರಗಾಲ್.** ಮರಕಾಲು, ಮರಗಾಲು (ನಾ). ಎತ್ತರದ ನಿಲುವಿನಲ್ಲಿ ಓಡಾಡಲು ಸಾಧ್ಯವಾಗುವಂತೆ, ಮರದಿಂದ ಮಾಡಿದ, ಕಾಲಿಗೆ ಕಟ್ಟಿಕೊಳ್ಳುವ ಒಂದು ಬಗೆಯ ಸಾಧನ : ಜಾತ್ಯಶ್ವಮಂ ಬಿಟ್ಟು ಮರಗಾಲಂ ಕೊಳ್ವ . . . ಗಾವಿಲನಂತಾಗಿ (ವಡ್ಡಾರಾ. ೦೯-೦೦೬). **ಮರಕಾಲು :** ಸ್ತ್ರೀವೇಷವು ಆ 'ಮರಕಾಲಿ' ನಿಂದಲೆ ರಂಗದೊಳಗೆ ಪ್ರವೇಶಿಸಿ . . . ಕುಣಿವುದು (ಜಾತಿಗು. ೩೩). **ಮರಗಾಲು :** ಮರಗಾಲಲಟ್ಟಿ ನಡೆವ ನೋಡಯ್ಯ ಇಂದೆನ್ನ ಒಕ್ಕತನ ಹೋದರೆ ಹೋಗಲಿ ಮರಗಾಲ ಬಿಟ್ಟನಾದರೆ ಕೂಡಲಸಂಗಾ ನಿಮ್ಮಾಣೆ (ಬಸವ. ೬೨೦).

**ಮರಕಾಲಿನಾಟ** = ಯಕ್ಷಗಾನದಲ್ಲಿ, ಮರಗಾಲನ್ನು ಕಾಲಿಗೆ ಅಳವಡಿಸಿ ಕುಣಿಯುವ ಒಂದು ಬಗೆಯ ಕುಣಿತ : ಚಪ್ಪರಮಂಚದಾಟ ಎಂಬುದು ಈ ಸ್ತ್ರೀಪಾತ್ರದ ನರ್ತನಗಳೊಳಗೊಂದು. ಈ ಕುಣಿತಕ್ಕೆ ಅಟ್ಟಣಿಗೆಯಾಟ, ಅರೆಪಾವಿನಾಟ, ಮರಕಾಲಿನಾಟ ಎಂಬ ನಾಮಾಂತರಗಳೂ ಇವೆ (ಜಾತಿಗಸು. ೩೩). [ಮರ$_1$ + ಕಾಲ್$_1$./ತಮಿ. ಮಲ. ಮರಕ್ಕಾಲ್]

**ಮರಗಾಲು** ' ಮರಗಾಲ್ ' ನೋ.

**ಮರಗಾವು** (ನಾ). ಮರದಿಂದ ಮಾಡಿದ ಹಿಡಿಕೆ : ಕಯ್ಯಾಡಿ ನೆರೆಯು ಸೈನಿಕನೊಬ್ಬನ ಸಬಳವನ್ನೀಸಿಕೊಂಡು, ಅದರ ಅಲಗಿನಡಿಯುಡಿಯಲ್ಲಿ ಕಾಲ್ಗೊಟ್ಟು ತಾನೇ ಮುರಿದು, ಉಳಿದ ಮರಗಾವನ್ನಾ ಕೊಂಡು ಪರೀಕ್ಷಿಸಿ (ಐಕುಗಂ. ೩೪-೦೪). [ಮರ$_1$ + ಕಾವು$_1$]

**ಮರಗಾಳಿ** (ನಾ). ಬಿರುಸಾದ ಗಾಳಿ ; ಚಂಡಮಾರುತ : ಆ ಸಾಮ್ರಾಜ್ಯವು ಪತನ ಹೊಂದಿದ ಮೇಲೆ ಮರಗಾಳಿಯ ಬಿರುಬಿಗೆ ಸಿಕ್ಕ ನೆಲದಲ್ಲಿ ಹಾಳು ಬೀಳುಗಳು ಎಲ್ಲ ಕಡೆಗೆ ಕಾಣುವಂತೆ ಜನಜೀವನ ದಿಕ್ಕೆಟ್ಟಿತು (ಕನಾಕ. ೩೪೩). [ಮರ$_1$ + ಗಾಳಿ$_1$]

**ಮರಗಿ** ' ಮರವಿ ' ನೋ.

**ಮರಗಿಚ್ಚು**, ಮರಕಿಚ್ಚು (ನಾ). ೧. ಮರದೊಳಗೆ ಇರುವುದೆಂದು ನಂಬಲಾದ ಮಂದಾಗ್ನಿ : ಕರವು ನೀರಡಿಕೆ ವಿಗೆ ತಟ್ಟಾಡಿಸುತ್ತ ಬರೆ ಮರಗಿಚ್ಚಿನಂತೆ ಪಸಿವೊಳಗೊಳಗೆ ಸುಡುತ ಬರೆ (ಜಾಕಂತ. ೪-೦೬೨ ರಗಳೆ). ೨. ಸೌದೆಯಿಂದಾದ ಬೆಂಕಿ : ಇದಜಿಕೊಡನೆ ಬಲು ಮರಗಿಚ್ಚನೊಟ್ಟಿದು ಸುಡಿಯೆನುತ ನೇಮಿಸಿದ (ಕೊರಡಾ. ೩-೬-೮). **ಮರಕಿಚ್ಚು** : ೩. ಕಾಡುಕಿಚ್ಚು : ಸಂಚರಿಸುತಿದೆ ವಾಯು, ದಳ್ಳುರಿಯುತಿದೆ ಮರಕಿಚ್ಚು ನಿನ್ನಿಂದಲೇ (ಕಚಿಕ್ಕು. ೫೩-೪). [ಮರ$_1$ + ಕಿಚ್ಚು]

**ಮರಗಿವಿ** (ನಾ). ಮರಗಟ್ಟಿ ಕೇಳಿಸದಂತಿರುವ ಕಿವಿ ; ಕಿವುಡುಕಿವಿ : ಅವನ ಮರಗಿವಿಗೆ ಈ ಕೀರಲುದನಿ ಕೇಳಿಸುವುದಿಲ್ಲ (ರೂಢಿ). [ಮರ$_1$ + ಕಿವಿ$_1$]

**ಮರಗುದುರೆ** (ನಾ). ಮರದಿಂದ ಮಾಡಿದ ಕುದುರೆ : ಮರಗುದುರೆಯಲಿ ಮರವ ಮರೆತು ಮಕ್ಕಳು ಕುದುರೆಯಾಡುವೊಲು (ಹಕೃಕ. ೬-೨) ; ಓಡಿಸುವ ಮರಗುದುರೆಯಲಿ ತೃಪ್ತಿ ದೊರೆತು ಆಡುವಾ ಭರದಲಿ ಅಪಾಯವನು ಮರೆತು (ಕಂಪು. ೩೪-೩). [ಮರ$_1$ + ಕುದುರೆ]

**ಮರಗುಬ್ಬಿ** (ನಾ). ಒಂದು ಬಗೆಯ ಗುಬ್ಬಚ್ಚಿ : (ಳ). [ಮರ$_1$ + ಗುಬ್ಬಿ$_1$]

**ಮರಗುಲಿ** (ನಾ). ಮರವನ್ನು ಕತ್ತರಿಸುವಂಥದು ; ಕೊಡಲಿ : ' ಮರಗುಲಿತನ ' ಪರಾ. [ಮರ$_1$ + – ಕುಲಿ$_1$]

**ಮರಗುಲಿತನ** (ನಾ). ಮರಗಳನ್ನು ಕತ್ತರಿಸುವ ಉದ್ಯೋಗ : ರೂಢಿವೆತ್ತಿಹ ರಾಜಕುವರರಿಗೀಡಪ್ಪ ಕಜ್ಜವನು ನೆನೆಯದೆ ಕಾಡ ಮರಗುಲಿ [ಜಾಕಾಂ. ವಿ]ತನವು ಕ್ಷತ್ರಿಯಜಾತಿಗುತ್ತಮವೆ (ಜಾಗಹ. ೦೦-೬). [ಮರಗುಲಿ + — ತನ]

**ಮರಗುಳಿ** 'ಮರೆಗುಳಿ' ನೋ.

**ಮರಗೂಡು** (ನಾ). ಮರದಿಂದ ಮಾಡಿದ ಬೋನು ; ಮರದ ಪಂಜರ : ಒಳಪೊಕ್ಕು ಮರಗೂಡಿನಲಿ ಸಿಲುಕಿದ ಹುಲಿಯವೋಲ್ (ಕುವ್ಯಾ೩. ೮-೩೩). [ಮರ$_1$ + ಗೂಡು]

**ಮರಗೂಳ** 'ಮರಗೂಟ' ನೋ.

**ಮರಗೂಟ**, ಮರಗೂಳ (ನಾ). ಮರವನ್ನೇ ಆಹಾರವಾಗಿ ಉಳ್ಳವನು; ಅಗ್ನಿ : "ಮರಗೂಟಂ . . . ಎಲರ್ಗೆಳೆಯಂ – ಈ ೧೩ ಅಗ್ನಿ" (ಕಹಾ. ೪೪-೩೩); ಆಂ ಬಣ್ಣಿಪ ರತಿಗೆ ಮಿಂದ ಮರಗೂಟನೊಂದು ಪೆಯ್ಮೊಗರ್ (ರಾಪಚ್ಚ. ೪೪-೦೩). **ಮರಗೂಳ** : "ಮರಗೂಳನೆನಲು ವಹ್ನಿ" (ಕಹ. ೮೪); ಜಾಣ್ಮಾತುಗರು ಪೇಳ್ದ ಸೌಂದರನ ಕಥೆಯನೆಳೆವೊಣ್ಣಿಗೆ ಮರಗೂಳ ಜೊನ್ನೊಡಲ ನೇಸಱ್ಸೊಲ್ ಕಣ್ಣಲರನಂ ಕೂರ್ತು (ಜೀಕಹು. ೦೦-೨) ; ಅರಲಿಚನಾರಿಂದ . . . ಮರಗೂಳ ಮೆಯ್ಗುಣ್ಣುಚ್ಚರರು ಮಚುಮಚುಪುಟ್ಟಾಂತು ಮೆಯ್ವೆತ್ತರು (ಕಕಜಾಂ. ೦೪-೭೪).

**ಮರಗೂಟ** ಮಗ=ಅಗ್ನಿಯ ಪುತ್ರ; ಸ್ಕಂದ ; ಕಾರ್ತಿಕೇಯ : "ನವಿಲ್ದೇರಂ . . . ಮರಗೂಟ ಮಗಂ—ಈ ೪ ಕಾರ್ತಿಕೇಯಂಗೆ ಪೆಸರ್" (ಕಜ಼ಣ. ೦-೩). [ಮರ$_1$ + ಕೂಟ್$_1$+ – ಅ$_7$]

**ಮರಗೆ** 'ಮರವಿ' ನೋ.

**ಮರಗೆಡ್ಡೆಸೊಪ್ಪು** (ನಾ). ಔಷಧವಾಗಿ ಬಳಸುವ ಒಂದು ಬಗೆಯ ಸೊಪ್ಪು : ರಕ್ತವಮನಕ್ಕೆ :—ಮರಗೆಡ್ಡೆಸೊಪ್ಪು, ಮರಹತ್ತಿಸೊಪ್ಪು, ಈ ಎರಡನ್ನೂ ಸಮಾನವಾಗಿ ತೆಗೆದುಕೊಂಡು ಕುಟ್ಟಿದು ಒಂದು ಸೊಲ್ಲಗೆ ರಸವ ತೆಗೆದುಕೊಂಡು ಶೋಧಿಸಿಕೊಂಡು ಆ ರಸವನ್ನು ಕುಡಿಸುವುದು (ಐವೈಶಿ. ೭೦). [ಮರಗೆಡ್ಡೆ ? + ಸೊಪ್ಪು$_1$]

**ಮರಗೇಣಸು** (ನಾ). ಒಂದು ಬಗೆಯ ಗೆಣಸು ; ಮರಟುಗೆಣಸು : ಕೀರಳೀಯರಿಗೆ ಟಾಪಿಯೋಕವೇ ಆಧಾರಾಹಾರವಾಗಿಬಿಟ್ಟಿದೆ . . . ಕನ್ನಡ ಸೀಮೆಯ ಕೆಲವೆಡೆಗಳಲ್ಲಿ ಇದನ್ನು ಮರಗೆಣಸು ಎಂದೂ ಕರೆಯುತ್ತಾರೆ (ಹಸುಹೊ. ೦೫೦). [ಮರ$_1$ + ಗೆಣಸು (< ಗೆಟಸು)]

**ಮರಗೆತ್ತನೆ** (ನಾ). ಮರದಲ್ಲಿ ಕೊರೆಯುವ ಕೆಲಸ : ಗ್ರಂಥವೊಂದು . . . ಕ್ರಿ. ಶ. ೯೫೩ರಲ್ಲಿ ಈ ಮರಗೆತ್ತನೆಯ ಮುದ್ರಣದಿಂದ . . . ಹೊರಬಿದ್ದಿತು (ಮುದ್ರಕ. ೦೦). [ಮರ$_1$ + ಕೆತ್ತನೆ (<ಕೆತ್ತಣ)]

**ಮರಗೆರಸಿ** (ನಾ). ಮರದ ಸುತ್ತ ಒಂದು ಎಲ್ಲೆಯನ್ನು ಕಟ್ಟಿಕೊಂಡು ಮರದ ಮೇಲೆ ಹತ್ತಿ ಇಳಿದು ಆಡುವ ಆಟ (?) : ಅಂತಾ ಕೂಸುಗಳ್ ಕೂಸಾಟವಾಡುತ್ತಿರ್ದೊಂದುದಿವಸಂ ಮರಗೆರಸಿಯಾಡಲೆಂದು . . . ಆಲದ ಮರದ ಮೊದಲ್ಗೆ ವಂದು (ಕುಚಕಾ. ೨-೩೦ ಶ) ; ಮರಗೆರಸಿ ಕುಳಿಲ್ಸೆಂದು ಬಟ್ಟು ತಿಱ್ಕಲ್ಲಟ್ಟುಂಗರೆ ಹೊಣಗುಂಡಂಬಿವಾ ಮುರಹರನಲ್ಲಿಗಾಡುತುಂ ಬರಲ್ (ಜಿಟ. ೪–೪೪). [ಮರ$_1$ + ಕೆರಸಿ]

**ಮರಗೆಲಸ** (ನಾ). ಮರದಿಂದ ಸಾಮಾನುಗಳನ್ನು ತಯಾರಿಸುವಿಕೆ ; ಬಡಗಿಯ ಕೆಲಸ: "ಮರಗೆಲಸ ; ಬಡಗಿಯ ಉದ್ಯೋಗ" (Carpentry. ೩೦೫೪); ಮರಗೆಲಸಕ್ಕೆ ಅಸದೃಶವಾಗಿ ಬಗ್ಗಿ ಹೋಗಿರುವ ಚೌಬೀನೆ ತೇಗ (ಹಸುಹೊ. ೨೪೦). [ಮರ$_1$ + ಕೆಲಸ]

**ಮರಗೇಡಿ** (ನಾ). ಮರೆವು ಸ್ವಭಾವದ ವ್ಯಕ್ತಿ : ಬಹಳ ಮರಗೇಡಿ ನೀನು (ರಕೃ. ೬೬). [< ಮರೆವು + ಕೇಡು + – ಇ$_3$]

**ಮರಗೈ** 'ಮರಗಯ್' ನೋ.

**ಮರಗೊಂಬು** (ನಾ). ೧. ಮರದ ಕೊಂಬೆ,—ರೆಂಬೆ : ಮರಗೊಂಬ ನೊತ್ತಿಸೊಳವುಂಕಿದ ಸಲ್ಲದ ಮುಷ್ಟಿ (ಶಶಕು. ೬-೩೦) ; ಮರಗೊಂಬಿನಿಂ ಬಡಿಯಲಡಗುವರ್ ನಡುಗುವರ್ (ಕೆಹು. ೫೬-೫೩) ; ಮರಗೊಂಬಂ ಮುಱಿದಾಂತು ನೀಳ್ದ ಕರದಿಂ (ಕಲಕಂ. ೩-೩೬). ೨. = ಮರಕೋತಿ : ವಿನೋದರಸದ ಬಸದಿಂ ಮರಗೊಂಬನಾಡುತಿರ್ದ ವೀರಜನಕುಮಾರನಂ . . . ಕಂಡು(ಶರಕು. ೦೪-೬೬ ಶ); ವಿಶಾಲ ಆಲದ ಮರದೊಳು ಮರಗೊಂಬ ನಾಡುತ ಲೀಲೆಯೊಳಿರ್ದನು (ಶರಕ. ೦೦-೧೨). [ಮರ$_1$ + ಕೊಂಬು$_1$]

**ಮರಗೊನೆ** (ನಾ). = ಮರಗೊಂಬು ೧ : ಮುಂದೆ ಬರುಬರಲೊಂದು ತರುವಿನ ಕೆಳಗೆ ರಾಜರ ವೃಂದ ಕುಳ್ಳಿರ್ದ ಛಂದವನು ತಾನಱಿದು ಮರಗೊನೆಯ ನರನು ಕಂಡನು (ಸಂಶಕ. ೦೪-೦೦). [ಮರ$_1$ + ಕೊನೆ$_1$]

**ಮರಗೊರಲೆ** 'ಮರಗೊಳಲೆ' ನೋ.

**ಮರಗೊಳಲೆ**, ಮರಗೊರಲೆ (ನಾ). ಒಂದು ಬಗೆಯ ಪಕ್ಷಿ : ಹರಡೆ ಗೀಜಗ ಮರಗೂಳ [ಜಾಕಾಂ.ದ]ಲೆ ಕಾಬುರಲೆ ಲಾವುಗೆ ಗಾಜು ಪಾರಿವ . . .

ಮೊದಲಾದಖಿಳಖಗಕುಲ ಬಿದ್ದುದುರಿಯೊಳಗೆ (ಕುವ್ಯಾ.ಆ. ೨೦-೫೩) ; ವಲಿಯ ಭಾರದ್ವಾಜ . . . ಶಿಖಿ ಮಡ[ರ]ಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡೆಂದ (ತೊರರಾ. ೬-೦-೩೩). **ಮರಗೊರಲೆ :** ಸಾಳುವಂ ಮರಗೊರಲೆ . . . ಚಲಿವಿಲಿಗ ಕಂಬುಅತ . . . ಕಬ್ಬಕ್ಕಿಗಳು ಮುಂತಾದ ಪ್ರಾಣಿಗಳನುರಿ ದಹಿಸಿತು (ಕುಠಂಗ. ೦೬-೩೭).

[ ಮರ್$_{1}$ + ಕೊಳಲೆ$_{?}$ ]

**ಮರಗೋಡು** (ನಾ). ೧.=ಮರಗೊಂಬು ೧ : ತೊಲಗೆ ಬಿಸಿಲ್ ನೆಟಲ್ಗೆ ತಲೆಯುಂ ಮರಗೋಡಲೆ ಕೊಡೆ ಕುತ್ತಿ ಕಟ್ಟಲೆ ಕವಿದಂದದಿಂ ಕವಿಯ (೧೧ಣಾವ. ೬-೯೯) ; ತನಿಗಂಪನೀಯದಿವೆ ಮರಗೋಡಿನೊಳ್ ಮಲರ್ (ಶ್ರೀಣಾವಿಖಾ.೪೬-೨೦೭). ೨. ಕುದುರೆಯ ಜೀನಿನ ಮುಂಭಾಗದಲ್ಲಿ, ಮರದಿಂದ ಮಾಡಿದ ಕೊಂಬಿನಾಕಾರದ, ಎತ್ತರಿಸಿರುವ ಭಾಗ: ಚಕ್ರವರ್ತಿ ಮಿಥ್ಯಾತ್ವಮೆಂಬ ಕುದುರೆಯನೇಱಿ ರಾಗದ್ವೇಷಮೆಂಬ ಕೀಲಿಂ ಪಿಡಿದು ಬಹುಕಾಂಕ್ಷೆಯೆಂಬ ಕವಣೆಯಂ ಮೆಟ್ಟಿ ಸದ್ಧರ್ಮದ್ವೇಷಮೆಂಬ ಮರಗೋಡಂ ಮಲಗಿ (ಧರ್ಮಾಮೃ. ೦೦-೯೩ ಅಖಿ) ; ಲಾಯದಲಿ ಲಂಬಿಸಿದ ಪೊಲು ವಾನಾಯುಜದ ಸಾಲೆಸೆದುದೊಱಗಿದ ರಾಯರಾವುತರ ಮಣಿಮಕುಟ ಮರಗೋಡನೋಲೈಸೆ (ಕುವ್ಯಾದ್ರೋ. ೦೬-೯) ; ಹೊನ್ನ ಮರಗೋಡುಗಳ ಮೇಲಡಗೆಡದು ನಿದ್ರಾಮುಗುದುರಿದರು ರಾವುತರು ತೂಕಡಿಸಿದವು ತುರಗ (ಕುವ್ಯಾವಿ. ೬-೯೪). [ಮರ್$_{1}$ + ಕೋಡು$_{5}$]

**ಮರಚಟ್ಟೆ** (ನಾ). ಬಿದಿರಿನಿಂದ ಹೆಣೆದ ಪಟ್ಟೆ : ಸಿಬ್ಬಲ ಮರಚಟ್ಟೆಗಳನ್ನು ಚರಿಗೆಯ ಬಾಯಿಗೆ ಅನಿಸಿ ಒತ್ತಿ, ಅನ್ನ ಬಸಿಯಲು (ಮಲೆಮ. ೩೦೦).

[ಮರ್$_{1}$ + ಚಟ್ಟೆ$_{1}$]

**ಮರಚಪ್ಪರಿಕೆ** (ನಾ). ಒಂದು ಬಗೆಯ ಸಸ್ಯ : (ವೈಕಿಗ. ೬೯-೦೨೯೩).

[ಮರ್$_{1}$ + ಚಪ್ಪರಿಕೆ$_{0}$]

**ಮರಚಲು** 'ಮಱುಚಲು' ನೋ.

**ಮರಜ** (ನಾ). ಒಬ್ಬಾತನ ಹೆಸರು : ದುಗ್ಗಬ್ಬೆ ತುಮ್ಮು ಮಾಡಿಸಿದಾಳ್ ಮರಜನ್ ಬೆಸಗೆಯ್ದು (ಎಕ. X (೪), ಮುಳಬಾ. ೩೦೬-೭ ; ೨ನೆಯ ೫೫). [?]

**ಮರಡಿ** 'ಮೊರಡು'$_{2}$ ನೋ.

**ಮರಣ** (ನಾ). ೧. ಜೀವಹೋಗುವಿಕೆ ; ಸಾವು ; ಮೃತ್ಯು: ಮರಣದ ಜನ್ಮದ ನಿಗಳಂ ನಿರಾಕುಳಂ ಪತ್ತುವಿಡುವಿನಂ (ಆದಿಪು. ೦೦-೩೯) ; ಹಾಳು ಗೆಟ್ಟೋಡುವ ಆಳು ನಾನಲ್ಲಯ್ಯಾ ಕೇಳು . . . ಮರಣವೆ ಮಹಾನವಮಿ (ಬಸವ. ೬೯೮) ; ಮರಣವಾಯಿತು ಮಾವ ಮಾರೀಚಂಗೆ (ಕೌಶಿರಾ. ೦೯-೨೨); ಮಾನವನಿಗೆ ಮರಣ ತಪ್ಪಿದ್ದಲ್ಲ (ನಸಂ. ೩೬). ೨. ವತ್ಸನಾಭಿಯೆಂಬ (ಉಗ್ರವಾದ) ಒಂದು ಬಗೆಯ ವಿಷ : "ಮರಣಂ — ವತ್ಸನಾಭ" (೬ಕಂ. ೦೦೩). ೩. [ಕಾಮಶಾ] ವಿರಹದ ಹತ್ತುಅವಸ್ಥೆಗಳಲ್ಲಿ ಕೊನೆಯದು : ಅಭಿಲಾಷೆ ಚಿಂತೆ ಸಂಸ್ಮೃತಿ ವಿಭುಗುಣನುತಿ ಸಂತಾಪನ ಕ್ರಿಯಾದ್ವೇಷ ವಿಕಳ ಮೌನ ಮೂರ್ಛೆ ಮರಣಮೆಂಬ ದಶಾವಸ್ಥಾದಿ ವಿಚಾರಪರರಿಂ (ವಿವೇಕ. ೦೯೯). ೪. [ಕಾವ್ಯಮೀ] ಮೂವತ್ತುಮೂರು ಸಂಚಾರೀಭಾವಗಳಲ್ಲಿ ಒಂದು : ಲಜ್ಜೆ ಆವೇಗ ಶಂಕೆ ಮರಣ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ವಿವೇಕ. ೨೨೭). [ಸಂ.]

**ಮರಣಂಗೆಯ್** (ಕ್ರಿ). ಸಾಯು ; ಅವಸಾನಹೊಂದು : ಜೀಯ ನಿಮಗಂ ನಿನ್ನೆ ನಮಿಸಿದ ತೋಯಜಾನನೆ ಇಂದು ಮರಣಂಗೆಯ್ದುಳು (ಬಸಪು. ೫೨-೯೨). [ ಮರಣ + ಕೆಯ್$_{1}$ ]

**ಮರಣಕಾಲ** (ನಾ). ಸಾಯುವ ಸಮಯ ; ಜೀವ ಹೋಗುವ ಹೊತ್ತು : ಕಂದರ್ಪನಾಶ್ರಯ ವಸಂತಕಾಲಕ್ಕೆ ಗೋವಿಂದನಾಶ್ರಯವು ಮರಣಕಾಲದೊಳು (ತ್ರಿಂದ. ೫೪೩-೦). [ಸಂ.]

**ಮರಣಗಾಲ** (ನಾ).=ಮರಣಕಾಲ : ಕೇಡುಗಾಲಕ್ಕೆ ಬುದ್ಧಿ ಇಲ್ಲ, ಮರಣಗಾಲಕ್ಕೆ ಮದ್ದು ಇಲ್ಲ (ಗಾದೆ). [ ಮರಣ + ಕಾಲ ]

**ಮರಣದಂಡನೆ** (ನಾ). ಪ್ರಾಣ ತೆಗೆಯುವ ಶಿಕ್ಷೆ ; ಗಲ್ಲು : ಭಗತ್‌ಸಿಂಗ್ ಅವರಿಗೆ ಮರಣದಂಡನೆ ನೀಡಲಾಯಿತು (ಆತ್ಮಾಚ. ೦೯೯); ಐಗುಪ್ತೀಯನು ಹಿಂತಿರುಗದಿದ್ದರೆ ಮರಣದಂಡನೆಯಾಗುವುದು (ಮಹಿಷ. ೪೭).

[ಸಂ. ಮರಣದಂಡನ]

**ಮರಣದೀಕ್ಷಿತ** (ನಾ). ಜೀವ ನೀಗಿಕೊಳ್ಳಲು ವ್ರತ ಆಚರಿಸುವವನು ; ಸಾಯಲು ಸಿದ್ಧನಾದವನು : ಅರಸ ನೀ ಪ್ರಾಯೋಪವೇಶದಿ ಮರಣದೀಕ್ಷಿತನಾದೆ ಗಡ (ಕುವ್ಯಾಅ. ೨೦-೬೯). [ಸಂ.]

**ಮರಣದೇವತೆ** (ನಾ). ಸಾವಿನ ಅಧಿದೇವತೆ ; ಮೃತ್ಯುದೇವತೆ : ಮಿತ್ತು ಮಾರಿಯ ಮರಣದೇವತೆಯೆತ್ತಲಡಗಿದೆ (ಕೌಶಿರಾ. ೩೭-೦೦).

[ಸಂ. ಮರಣದೇವತಾ]

**ಮರಣಧರ್ಮ** (ನಾ). ಸಾಯುವುದು ಸ್ವಭಾವವಾಗಿರುವುದು : ಜೀವಾತ್ಮನು . . . ತಾನು ಮಾತ್ರ ಮರಣಧರ್ಮವಿಲ್ಲದೆ . . . ತೃಪ್ತನಾಗಿ ಸಂಚರಿಸುತ್ತಾನೆ (ಮುಕ್ಶಾರ. ೨೭೩). [ಸಂ. ಮರಣಧರ್ಮನ್]

**ಮರಣಮೂಢ** (ನಾ). ಸಾಯುವ ಕಾಲ ಸಮೀಪಿಸಿದುದರಿಂದ ಬುದ್ಧಿಯು ಮಂಕಾದ ವ್ಯಕ್ತಿ : ಮನದಿ ವಚನದಿ ತಪ್ಪು ಮಾಡಿದ್ದರೆನ್ನನ್ನು ವನಿತೆ, ಕುವರಿಯು, ಮಗಳು, ಮರಣಮೂಢಳು ಎಂದು ಮನದಿ ತಿಳಿಯುತ ಮನ್ನಿಸುವುದು (ಕೃಷ್ಣಾಕು. ೬-೦೭). [ಸಂ.]

**ಮರಣವಡು** (ಕ್ರಿ). ಸಾಯು ; ಗತಿಸು : ಮರಣವಟ್ಟರು ಮಾರಿಗಿಷ್ಟರು ಧರ್ಮಭ್ರಷ್ಟರು (ಕೌಶಿರಾ. ೦೨-೦೩). [ಮರಣ + ಪಡು$_{1}$]

**ಮರಣವಡೆ** (ಕ್ರಿ). = ಮರಣವಡು : ಮರಣಪಡದಂಗೆ ಬಲಿಗೊಟ್ಟ ಕೆಂಗೂಳು ಹರಹಿರೆ ಕೆಂಪಿನ ಹೂವು . . . ತರುಣಿ ಕಂಡಳು ಸುಡುಗಾಡ (ಜೀವಂಗಾಂ. ೬-೫). [ ಮರಣ + ಪಡೆ$_{1}$ ]

**ಮರಣವಾರ್ತೆ** (ನಾ). ಸಾವಿನ ಸುದ್ದಿ ; ನಿಧನದ ವರ್ತಮಾನ : ಕೋಲ ಗುರುವಿನ ಮರಣವಾರ್ತಾಕಾಲಸರ್ಪನ ತಂದು ಸಂಜಯ ಹೇಳಿಗೆಯ ನೀಡಾಡಿದನು ಧೃತರಾಷ್ಟ್ರನಿದಿರಿನಲಿ (ಕುವ್ಯಾಶ. ೦-೦).

[ಸಂ. ಮರಣವಾರ್ತಾ]

**ಮರಣಶಾಸನ** (ನಾ). ೧. ಸಾಯಿಸಲು ನೀಡುವ ಅಪ್ಪಣೆ ; ಕೊಲ್ಲಲು ಮಾಡುವ ಆಜ್ಞೆ : ನೀವು ಅವನ ಮರಣಶಾಸನವನ್ನೇ ಬರೆಯತೊಡಗಿದ್ದೀರಿ (ರಂಗರೊಕ. ೨೦೦); ಮನಸ್ಸಿನಲ್ಲೇ ಅವನ ಮರಣಶಾಸನವನ್ನು ಬರೆದೆ (ಏಕರಹೊ. ೫೩). ೨. ಉಯಿಲು ; ಮೃತ್ಯುಪತ್ರ. [ಸಂ.]

**ಮರಣಸಂಕಟ** (ನಾ). ಸಾಯುವ ಕಾಲದಲ್ಲಿ ಉಂಟಾಗುವ ತಳಮಳ,– ವೇದನೆ : ಅಯ್ಯಾ ಧರ್ಮಾತ್ಮನೇ ನನಗೆ ಕ್ಷುತ್ತಿನಿಂದ ಮರಣಸಂಕಟ ಉಂಟಾಗಿದೆ (ಶೀತಿಸಂ. X, ೦೦). [ಸಂ.]

**ಮರಣಹೊಂದು** (ಕ್ರಿ). = ಮರಣವಡು : ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಅನೇಕ ಜನ, ಅದು ಲಭ್ಯವಾಗುವ ಮುಂಚೆಯೇ ಮರಣಹೊಂದಿದರು (ರೂಢಿ). [ಮರಣ + ಹೊಂದು$_{1}$ (< ಪೊರ್ದು) ]

**ಮರಣೋತ್ತರ** (ಗು). ಸಾವಿನ ನಂತರದ ; ಸತ್ತ ಮೇಲಿನ : ಮೃತ್ಯು, ಮರಣೋತ್ತರ ಜೀವನ ಇತ್ಯಾದಿ ವಿಷಯಗಳೂ 'ಗೀತಾಂಜಲಿ'ಯಲ್ಲಿ ಬಂದಿವೆ (ಕೃಶಂಥ. ೦೦೦). [ಸಂ.]

**ಮರಣೋತ್ತರಪರೀಕ್ಷೆ** (ನಾ). ಸತ್ತ ನಂತರ ಮಾಡುವ (ವೈದ್ಯಕೀಯ) ತಪಾಸಣೆ ; ಶವಪರೀಕ್ಷೆ : ಮರಣೋತ್ತರಪರೀಕ್ಷೆಯಲ್ಲಿ ಅದು ಕೊಲೆಯೆಂಬುದು ಸಾಬೀತಾಯಿತು (ರೂಢಿ). [ಸಂ. ಮರಣೋತ್ತರಪರೀಕ್ಷಾ]

**ಮರತಾಬೆ** (ನಾ). ಅಂತಸ್ತು ; ಸ್ಥಾನ ; ಪದವಿ : ಆ ಪುತ್ರರ ಮರತಾಬೆಗೆ ಸರಿಯಾಗಿ ಉತ್ತರದರಬಾಜೆ ಪೇಷ್ ಬತೇರಿಯ ಮೇಲೆ ೨೧

ತೋಪುಗಳನ್ನೂ ರಾಜಾಂಗಕ್ಕೆ ತಕ್ಕ ಮರ್ಯಾದೆಗಳನ್ನೂ ನಡೆಸಿದ ನಂತರ (ಕುಹಾಹ. II, ೦೨೦). [← ಅರ. ಮರಾತಿಬ್; ಮರಾ. ಮರಾತಬ್]

**ಮರತುಗುರುವಣೆ** (ನಾ). ಒಂದು ಬಗೆಯ ಸಸ್ಯ : ಗುರುಮಣೆ. ಮರತುಗುರುವಣೆ (ವೃಶಿಗ. ೩೩-೬೩೨). [ ? + ಗುರುವಣೆ]

**ಮರತುತ್ತಿ** (ನಾ). ಒಂದು ಬಗೆಯ ಸಸ್ಯ : ಸಣ್ಣಸೊಪ್ಪು, ತೊರತಿ, ಮರತುತ್ತಿ (ವೃಶಿಗ. ೯೩-೬೬೦). [ಮರ$_1$ + ತುತ್ತಿ$_1$]

**ಮರತುಳಸಿ** (ನಾ). ಒಂದು ಬಗೆಯ ತುಳಸಿ: ಹೆದ್ದುಂಬೆಗಿಡ, ಮರತುಳಸಿ (ವೃಶಿಗ. ೫೭-೦೦೯೯). [ಮರ$_1$ + ತುಳಸಿ (=ತುಲಸಿ)]

**ಮರದಣಬೆ** (ನಾ). ಒಂದು ಬಗೆಯ ಅಣಬೆ ; ಮರಗಳ ಮೇಲೆ ಬೆಳೆಯುವ ಅಣಬೆ : (೩). [< ಮರ$_1$ + ಅಣಬೆ (< ಅಳಂಬೆ)]

**ಮರದರಸಿನ** 'ಮರದರಿಸಿನ' ನೋ.

**ಮರದರಿಸಿನ**, ಮರದರಸಿನ (ನಾ). ಒಂದು ಬಗೆಯ ಅರಿಸಿನ : " ಪೀತದ್ರುಃ, ಕಾಲೇಯಃ, ಹಂದ್ರಕಃ . . . ಪರ್ಜನೀ – ಈ ೭ ಮರದರಿಸಿನ " (ಜಾತಿಕಾ. ೦೦೦) ; ನೆಲಗುಳ್ಳ, ಮರದರಿಸಿನ, ಕರ್ಪೂರ ಶುಂಠಿ . . . ಮುಳ್ಳುಕೊಗ್ಗೀಬೇರು ಇವಿಷ್ಟನೂ . . . ಕಷಾಯ ಕಾಸಿ . . . ಕುಡಿಸಲು ತ್ರಿದೋಷದಿಂದುಂಟಾದ ಸ್ವರಭಂಗ ಶಮನ (ವೈದ್ಯಸಾ. I. ೦೬೬). ಮರದರಸಿನ : " ಮರದರಸಿನಂ ದ್ರಾರ್ವೀಸಾಹ್ವಂ ಪಚಂಪಚಿ ದಾರುಕಂ " (ಶಬ್ದಮ. ೭೭-೨೩). [<ಮರ$_1$ + ಅರಿಸಿನ]

**ಮರದಾನಿ** (ನಾ). ಗಂಡಸರ ಗುಂಪು.–ಸಮೂಹ : ಒಳಗೆ ಹೋದರೆ ರಾಣಿವಾಸದವರ ಜನಾನಿ, ಹೊರಗೆ ಬಂದರೆ ಶಿವನ್ನಯ್ಯನವರ ಮರದಾನಿ (ಕುಸುಹಾ. ೫೯): [← ಹಿಂ. ಮರ್ದಾನಾ = ಪುರುಷರಿಗೆ ಸಂಬಂಧಿಸಿದ, ವೀರೋಚಿತವಾದ; ಮರಾ. ಮರ್ದಾಣೀ, ಮರ್ದಾನೀ = ಪುರುಷರಿಗೆ ಸಂಬಂಧಿಸಿದ]

**ಮರದಾವರೆ** (ನಾ). ಒಂದು ಬಗೆಯ ತಾವರೆ: ಬೆಟ್ಟದಾವರೆ : " ಮರದಾವರೆಯುಮೊಂದು ಕೊಸಗೆಂದು ಬೆಟ್ಟದಾವರೆ " (ಕಾವ್ಯ. ೦೬). [ ಮರ$_1$ + ತಾವರೆ ( <ತಾಮರೆ) ]

**ಮರದಿಗುಡು** (ನಾ). ಮರದ ತೊಗಟೆ.–ಸಿಪ್ಪೆ : ಇದೆ ವನಮಹಿಷನುದ್ದಿಕೊಂಡ ಮರದಿಗುಡು (ಕೃಬಾಲ. ೨೬-೯೯). [ ಮರ$_1$ + ತಿಗುಡು$_1$ ]

**ಮರದುದಿ** (ನಾ). ಮರದ ತುದಿ.– ಕೊನೆ : ಪೆಳವಂ ಮರದುದಿಯ ಮಹಾಫಳವಂ ಮಿಗೆ ಬಯಸುವಂತೆ (ಕಬಕಂ. ೨-೫೭). [ಮರ$_1$ + ತುದಿ]

**ಮರದುಱುಗಲ್** (ನಾ). ಮರಗಳ ಸಮೂಹ ; ತೋಪು : ಪರ್ವತದ ಮೇಲೆ ಕಱಂಗಿ ಕಬ್ಬಲಿಸಿದ ಮರುದುಱುಗಲ ನಡುವೆ (ಪಂಪಭಾ. ೬-೦೬ ವ) ; ಕೊಸಗಿನ ಮರದುಱುಗಲರಲ್ದೆಸೆವಂತೆಸೆದಿರ್ಪುದಲ್ಲಿ ಬಜ್ಜರಮಸುರಾ (ಜಗದ. ೯-೦೦೭) ; ಒತ್ತರಿಸಿ ಬೆಳೆದ ಮರದುಱುಗಲ್ಗರದೆಱಗಿ ಮುಱಿವ ಕರಿಕರಕಂಜಿ (ಜಕೆಶೀ. ೬-೨೯ ವ). [ಮರ$_1$ + ತುಱುಗಲ್ (<ತುಱುಂಗಲ್)]

**ಮರದೆ** (ನಾ). ಗಂಡಸು ; ಪುರುಷ : ನಾಲ್ಕುಜಾತಿ ಮುಸಲ್ಮಾನರ ಮರದೆ ಆದ್ಮಿ ಶಿಪಾಯಿಗಳ ಬೇರು ಕೊಡಗಿನ ಶೀಮೆವಳಗೆ ನೆಟ್ಟು (ಜಾಕೇಂದ್ರ. ೮೩೦). [ ← ಪಾರ. ಮರ್ದ್; ಹಿಂ. ಮರದ್ ಮರ್ದ್]

**ಮರದೇರಣ** (ನಾ). ಒಂದು ಬಗೆಯ ಸಸ್ಯ : "ಬಧಿರಃ—ಮರದೇರಣ, ಭೂತೃಣಭೇದ" (ಬಿತಧಿ. ೦೦೫) : ಮರದೇರಣಸೊಪ್ಪಿನ ರಸ, ಬೋಳತರದ ಸೊಪ್ಪಿನ ರಸ (ಕಳಪ್ಪ. ೨೦೭). [ಮರ$_1$ + ಏರಣ$_1$]

**ಮರನ** (ನಾ). ಒಬ್ಬಾತನ ಹೆಸರು (?) : ಮರನಾನು ಪೊಕುಂಯಾನು ಕೊಡಂಗಿಯಾನು ಪೊಱಗಾಗಲೆ ಸಲೆವ್ರೆಗೆಯ ಭಾಗ ಕಂಮರ ಮಸನ್ತಕುವರ (ಎಕ. VIII, ಸೊರಬ. ೫೩೦-೨೯; 692). [ ? ]

**ಮರನಾಯಿ** (ನಾ). ತನ್ನನ್ನು ಒರಗಿದವರ ರಕ್ತವನ್ನು ಹೀರುವುದೆಂದು ನಂಬಲಾದ ಒಂದು ಬಗೆಯ ಮರ; ಇದು ಮಾಂಸಾಹಾರಿ ಸಸ್ಯವಿರಬಹುದು : ' ಒರಗಿಕೊಂಡ ಕೂಡಲೇ ಪ್ರಾಣಹೀರುವ ಮರನಾಯಿ ' ಎಂಬ ಮರಗಳು ಇರುತ್ತವೆಯಂತೆ ಕಾಡಿನಲ್ಲಿ (ಬೆಳುಬು. ೨೨೬). [ಮರ$_1$ + ನಾಯಿ$_1$]

**ಮರನೆಲ್** (ನಾ). ಒಂದು ಬಗೆಯ ಬತ್ತ ; ದಪ್ಪನೆಲ್ಲು : ಬಿಳಿದಪ್ಪನೆಲ್ ಬರಲುಮಾಧೀಶಂಗೆ ಅಲ್ಲಿ ಬಂದೋಗರದ ನೆಲ್ಲಿಲ್ಲವೀಶಂಗೆ ಮರನೆಲ್ಲನೀಯಸದ ನೆಲ್ ಬಱಲ್ ನೆಲ್ಲರಲು ತರುಣೆಗಂ ತನಗಂ ಪ್ರಸಾದಸುಖವಾಗಿರಲು (ಅಂಕ. ದೇ. ೦೬೨-೦೫). [ಮರ$_1$ + ನೆಲ್]

**ಮರನೆಲ್ಲಿ** (ನಾ). ಒಂದು ಬಗೆಯ ನೆಲ್ಲಿ : ಅಲ್ಲಿಂ ಪಡುವ ಮರನೆಲ್ಲಿಯ ಗುಂಡು ಅಲ್ಲಿಂ ಪಡುವ ಮೆಟ್ಟಱ್ . . . ಅಲ್ಲಿಂ ಮೂಡಲ್ಕೆಂಬರಯ ಹಳ್ಳಮುಂ ಸೀಮೆ ಕೊಡಿತ್ತು (ಎಕ. II, ೩೨೭-೭೭; 1181). [ಮರ$_1$ + ನೆಲ್ಲಿ]

**ಮರಪಟ್ಟಡಿ** (ನಾ). ಬಡಗಿಯು ಮರಗೆಲಸಮಾಡಲು ಅಡಿಯಲ್ಲಿ ಇಟ್ಟುಕೊಳ್ಳಲು ಬಳಸುವ ಮರದ ಹಲಗೆ : "ಉದ್ಘನಃ . . . ಬಡಗಿಯವನು ಮರಕೆಲಸ ಮಾಡುವದಕ್ಕಾಗಿ ತನ್ನ ಮುಂದೆಯಿಟ್ಟುಕೊಂಡಿರುವ ಮರಪಟ್ಟಡಿಯೆಂಬ ಅಡಿತುಂಡು" (ಸಿದ್ಧಾಂತ. ೩೬೭). 'ಪಟ್ಟಡಿಮರ' ಪರಾ. [ಮರ$_1$ + ಪಟ್ಟಡಿ$_1$]

**ಮರಪ್ಪ** (ನಾ). ಒಬ್ಬಾತನ ಹೆಸರು : ಕೞಿಗಾಲೆ ಮದವ ಮುತ್ತರಸರ ಮರಪ್ಪನ್ ಪರಮಿಳ್ಳೆ ಎಱಿತು ವೀರಸ್ವರ್ಗಂ ಪೊಕ್ಕಂ (ಎಕ. XII, ಕುಣಿಗ. ೯೭-೩; 750). [ಮರ$_1$ + ಅಪ್ಪ$_1$]

**ಮರಫ**, ಮರ್ಫ (ನಾ). ಒಂದು ಬಗೆಯ ಚರ್ಮವಾದ್ಯ ; ಡೋಲು : ಕೊಂಬು, ತಮಟೆ, ತಾಸಾ, ಮರಫ, ಬಾಸಾ ಓಲಗದವರು (ಪಾಮುರಾ.೬೯). ಮರ್ಫ : ಕಹಳೆ, ಭೂರ್ಗ, ತುತೂರಿ, ನೌಬತು, ತಾಸಾ, ಮರ್ಫ, ಬಾಜಾ ಭಜಂತ್ರಿ (ಗುರುರ. ೦೦). [ ← ಪಾರ. ಮರಾ. ಮರ್ಫಾ]

**ಮರಬಾಳೆ** 'ಮರವಾಟಿ$^3$' ನೋ.

**ಮರಬಿಲ್ಲು** 'ಮರವಿಲ್' ನೋ.

**ಮರಮರ** (ನಾ). ಒಂದು ಅನುಕರಣ ಶಬ್ದ: ಅವಸರಅವಸರವಾಗಿ ಮುಂದೆ ನಡೆದನು. ಆದರೆ ಆತನ ಜೀವ ಮರಮರ ಅಂದಿತು (ಕಥೆ. ೩).

**ಮರಮರನೆ** (ಅ). ಒಂದು ಅನುಕರಣಾವ್ಯಯ : ಕಾಯಮುದು ಭರದಿಂದ ಮುರಿಯುತಿರೆ ಮರಮರನೆ ಮರುಗುತ್ತೆ (ಜುರತ್ನ. ೨೯-೦೦); ಇರುವ ಎರಡು ಹೊಲಗಳಲ್ಲಿ ಒಂದನ್ನು ಕೊಟ್ಟು ಮರಮರನೆ ಮರುಗುತ್ತ ಮನೆಗೆ ನಡೆದಳು ಮಹಮತಿ (ಶುಕಬ. ೯). [ಮರಮರ + — ಅನೆ$_1$]

**ಮರಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ : ಮರಮಲ್ಲಿಗೆ ಅಚ್ಚಿ ಸಣ್ಣಮಲ್ಲಿಗೆ ಮೊದಲಾದವು ... ಕೊಂಬೆಗಳಂ ನೆಟ್ಟಾಗೂ ಹುಟ್ಟುವುವು (ಶಾಳಿಂದ. ೯೨೫-೦೨). [ಮರ$_1$ + ಮಲ್ಲಿಗೆ]

**ಮರಮಸಕ** (ನಾ). ಅತ್ಯಧಿಕವಾದ ಆವೇಶ. — ರಭಸ : ಮಮಮಂ ಪೊಕ್ಕಂ ಮರಮಸಕದಿಂ ಮರವಾಯ್ದು ಮರದುಱುಗಲಂ ಕಿಬ್ಬೀಡಾಡುವಲ್ಲಿ (ಅರ್ಜುನ. ೫-೦೦೭ ವ). [ಮರ$_1$ + ಮಸಕ$_1$]

**ಮರಮಳೆ** (ನಾ). ದೊಡ್ಡ ಮಳೆ; ಭಾರಿಮಳೆ : ದಿವಿಜಪತಿ ಮರಮಳೆಯಂ ಕಱೆಯುತ್ತಿರೆ (ತ್ರಿಷಷ್ಟಿ. ೬೦-೨೭); ಒಂದು ಪಕ್ಷದಲ್ಲಿ ಮರಮಳೆಯಾಗಿ ಪುನಃ ಜಡಿಮಳೆಯಾದರೆ ಸ್ವಲ್ಪ ಹಸಿಯಾಗುತ್ತದೆ (ಕೃಶಿತ್ರು. ೩೭). [ಮರ$_1$ + ಮಳೆ (< ಮೞೆ$^3$)]

**ಮರಮಿಟಿಲ** (ನಾ). ಒಂದು ಬಗೆಯ ಸಸ್ಯ: ತುಳಸಿಸೊಪ್ಪು, ಮರಮಿಟಿಲದ ಸೊಪ್ಪು, ಹತ್ತಿಯ ಎಲೆ ಇವಿಷ್ಟನು ಹಸುವಿನ ಹಾಲಿಂದ ಅರೆದು ಕಪ್ಪೆ ಕಚ್ಚಿದ ಗಾಯಕ್ಕೆ ಪೂಸಲು ಕ್ಷಣಾರ್ಧದಲ್ಲಿ ಅದಱ ವಿಷ ಪರಿಹರವಹುದು (ವೈದ್ಯಸಾ. II. ೨೨೦). [ಮರ$_1$ + ಮಿಟಿಲ (< ಮಿಟಿಲಿ)]

**ಮರಮೆಣಸು** (ನಾ). ಒಂದು ಬಗೆಯ ಮೆಣಸು; ದೊಡ್ಡ ಮೆಣಸು : (೩). [ಮರ$_1$ + ಮೆಣಸು (< ಮೆಱಸು)]

**ಮರಮೊಗ** (ನಾ). ಮರದಿಂದ ಮಾಡಿದ ಮುಖದ ಆಕಾರ; ಮರದ ಮುಖವಾಡ : ಎನಿತಾನುಂ ತೆಱದ ರೂಪುಗಳಂ ಕೈಕೊಂಡು ಮರಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ (ಪಶ್ವಾರಾ. ೦೧೯-೦೪).

[ಮರ$_1$ + ಮೊಗ]

**ಮರಮೊದಲ್** (ನಾ). ೧. ಮರದ ಅಡಿ; ಮರದ ಕೆಳಗಿನ ಪ್ರದೇಶ : ಲಲನೆಯ ಕಪೋಲಮಂ ಪೋಲಲೆಂದು ಕುಸಿದಿಂದ್ರಿಯಂಗಳಂ ಮರಮೊದಲೊಳ್ ನೆಲಸಿ ವನವಾಸದೊಳ್ ನವೆದಲ್ಲವಳ್ಳಿಗಳೆಲೆಗಳೆಂತುಮೇಂ ಪೋಲ್ತಪುವೇ ? (ಮಲ್ಲಿಪು. ೩-೭೭); ಮುನೀಂದ್ರಂ ಬೇರೂಱದ ಬೀಬಲಂತೆ ಮರಮೊದಲಿರ್ದಂ (ಚಂದ್ರಪು. ೦೦-೦೪). ೨. ಮರದ ಬೊಡ್ಡೆ,-ಕಾಂಡ: ಮಿನುಗುವ ಪೊಸಮಣಿಗಂಬಮೆ ಮರಮೊದಲೆನೆ ಬಲ್ಲೊದಲೆಯೆಲ್ಲಂ ಬಹುಶಾಖೆಗಳೆನೆ . . . ಕೃತ್ರಿಮವಿಹಗಾವಳಿ ಶುಕಪಿಕಮೆನಲಾ ಮಂಡಪಮಾತಿ ಶೋಭಿಸಿದುದು (ಶಬರಶಾ. ೪-೫೦). [ಮರ$_1$ + ಮೊದಲ್$_1$]

**ಮರಮ್ಮ** (ನಾ). ಒಬ್ಬಾತನ ಹೆಸರು : ಮಲಗಾಱರ ಕುನ್ದವಾಸಿಯ ಮಗಂ ಮರಮ್ಮ ಬರೆದ ಲಿಕಿತಂ (ಎಕ. VIII, ಸೊರಬ. ೨೨-೦೦; 800).

[ಮರ$_?$ + ಅಮ್ಮ$_1$]

Δ **ಮರಚು** 'ಮರಲ್ಚು' ನೋ.

**ಮರಲ್$_1$, ಮರಳ್, ಮರಳು$_1$, ಮಲರ್$_1$** (ಕ್ರಿ). ೧. ಹಿಂದಕ್ಕೆ ಬರು ; ಹಿಂತಿರುಗು : "ಮರಲ್ — ಪರಾಙ್ಮುಖೇ, ಪುಷ್ಪೇ ಚ" (ಶಮದ); ಪೆರ್ದೆರೆಗಳೆಯ್ದು ಕುಲಾದ್ರಿಗಳೊಳ್ ಪಳಂಚಿ ತೂಳ್ದೊಡನೆ ಮರಲ್ದಪೋಲ್ ಕೆಡೆಯೆ (ಶಂಕಶಾ. ೬-೯೦) ; ಭೂತಪಿಶಾಚಕೋಟಿಯುಂ ನೆಱೆ ತಣಿಯುಣ್ಡು ಚೆಣ್ಡು ಮರಲ್ದಿನ್ನುಮದಕ್ಕಿಸಲಾಱವೆನ್ದೊಡೆನ್ನನಱಿಯಿರೆ ವಿಕ್ರಮಃಮಂ (ಎಕ. XVI, ಶಿಕ್ನಾ. ೯೬-೨೭; 1170); ಕಿಱುದುದಿನ ಮಿರ್ದು ಮರಲ್ದು ಬರಲಕ್ಕುಂ (ರಾಮಾಶ್ವ. ೨೦-೨೪). ೨. ಹೊರಳು; ತಿರುಗು : ದೇಸೆ ವಿಳಾಸಮಂ ಪುದುಂಗೊಳಿಸೆ ಮರಲ್ದು ಕನ್ನೆ ನಡೆನೋಡಿ (ಶಂಕಶಾ. ೪-೪೦) ; ಚಂಚುವಿಂ ಚಲ್ಲಿಪೊಯ್ದು ನಖದಿಂ ನಲಿಗೆದಱಿ ಕೋಡಗಱಿಯಿನೀಡಿಱಿದು ಮುಡಿಯಿಂ ಮರಲೆಮಾಯ್ದು ತಿಱಿಗದಿರಂ ಮಱಿವಕ್ಕಿಗೆ ನೂಂಕಿ (ಅಪಂಪು. ೭-೬೦ ವ). ೩. ಮನಸೋಲು : ಜನಪ್ರತತಿ ಮರಲ್ದು ನೋಡಿದುದು ನಿಂದು ವಿವಾಹಗೃಹೈಕದೇಶದೊಳ್ (ಚಂದ್ರಪು. ೭-೭೭) ; ನೆನೆಯುತ್ತುಂ ಪೂಜಿಸುತ್ತುಂ . . . ಮರಲ್ದೀಕ್ಷಿಸುತ್ತುಂ (ರಕ್ಷಾಕ. ೭೫). ೪. ಹಿಮ್ಮೆಟ್ಟು ; ಹಿಂದೆಗೆ : ಮರಲ್ದ ಮೇಲ್ವರಿವ . . . ಬಿನ್ನಣವೊಪ್ಪೆ ಪಗಿಲ್ತು ಕಾದಿದರ್ (ಕಬಿಕಂ. ೪-೭೪) ; ಸುತ್ತಿ ಬರ್ಪ ಮೋಣ್ಮಣಿವ ಮರಲ್ವ ಕೀರ್ತಿಸುವ . . . ಭಕ್ತವೃಂದಮೆಸೆದಿರ್ದುದು (ವೃಷಭ. ೦೭-೪೯). ೫. ಜೋಲು : ಎಱಕೆ ಮರಲ್ದು ಗೋಣ್ಮುರಿದು ಚಂಚುಪುಟಂ ತೆಱೆದಳ್ಳೆವಾಱೆ ಬಂದೆಱಗುವುವಲ್ಲಿ . . . ಲಂಬಣದ ಮುತ್ತುಗಳಂ ಮುಟ್ಟೆಗೆತ್ತು ಚಾತಕಂ (ಅಪಂಪು. ೭-೯೩). **ಮರಳ್** : ೧. ನಮ್ಮರಸಂ ಮರಳ್ದಿಂಬುಕೆಯ್ಗಂ (ಗದಾಯು. ೦-೫೭); ಪ್ರಜಾಪ್ರಶಂಸಾಶೀರ್ವಚನನಿಚಯಂಗಳನಂಗೀಕರಿಸಿ ಮರಳ್ದು ಬರುತಂ (ವರ್ಧಪು. ೩-೪೪ ವ); ವೇದವ್ಯಾಸಮುನಿ ಧರ್ಮಪುತ್ರನಂ ಬೋಧಿಸಿ ಮರಳ್ದನಾ ರಾತ್ರಿಯೊಳ್ (ಜೈಮಿಶಾ. ೨-೪೭). ೪. ಪರಮಜ್ಞಾನಿ ಮರಳ್ವನೇ ಪೆಱರ್ಗೆ (ಪುಷ್ಪಪು.೦೩-೯೦). ೬. (ಗಿರಿಗಿರಿ) ಸುತ್ತು ; ತಿರುಗು : ಎರ್ದೆಗೆಟ್ಟೆನೀಗಳೀ ದಿಟ್ಟಿ ಮರಳ್ದು ನಿಂದಿದಪುದೆನ್ನುಮನಾನಱಿದಪ್ಪೆನಿಲ್ಲ (ಕಾದಂಪೂ. ೦೯೭) ; ಮಸ್ತಕಗಳನೆರಡುಂ ಕೆಯ್ಯೊಳಂ ಮರಳ್ವಿನಮೊತ್ತೆ (ಮುಹಾಪೆ. ೭-೯೬ ವ); ಮಂದರಗತಿಯಿಂ ಮರಳ್ದು ಸುಱಿದಾಡುಗುವಲ್ಲಿ ಮರಾಳಮಂಡಳಂ (ಕಾವ್ಯಸಾ. ೦೦೪). ೭. (ನೀರು ಮೊದಲಾದ ದ್ರವಪದಾರ್ಥಗಳು) ಕುದಿ : ಬಲ್ಬಿಸಿಲಿಂದೆ ಕಡುಗಾದ ಬಾಣಲಿಯೆಣ್ಣೆಯೊಳಬುಧಿ ಹೂಣಿಸಿ ಕುದಿಗೊಂಡು ಮರಳ್ದುದು (ಮೋಹಶ. ೦೯-೪೫). **ಮರಳು$_1$**: ೧. ಅದು ಶುದ್ಧಿಯ ಮಾಡ ಹೋದಾತನಿನ್ನೂ ಮರಳನು (ಅಪಕಂ. ೦೮೦-೬೦೦) ; ತುಂಬಿ ತುಳುಕದ ಬಸವ ತಾಗಿ ಮರಳದ ಬಸವ (ಬಸವ. ೯-೯೯) ; ಜಿಕ್ಕೆಯ ಕೊಡಹಿ ಹಾಱಿತುಪೊಡನೆ ಮರಳಿತು ಧರೆಗೆ (ಪಳಕ. ೨-೨೦); ತಿಂಗಳಾರಕೆ ಮರಳಿ ಬಹೆನೆಂಬ ಭಾಷೆಯಂ ಭಾವಿಸುತೆ, ಭಾಮಿನಿ . . . ನಡೆದಳ್ ಶಿಬಿರದೆಡೆಗೆ (ಶತ್ರುಂಗ. ೫೭-೦೫೩೩). ೬. ತಲೆ ತಿರುಗಿ ತುಟಿಯೊಣಗಿ ಕಂಗಳ ಬಳೆ ಮರಳಿ ಬಸವಳಿಯೆ (ಕುಮಾರರಾಮ. ೫-೩೩); ಆಲದೆಲೆಯೊಳ್ ಮಲಗಿಯೊಮ್ಮೆ ಮುಳುಗುತ್ತೊಡನೆ ತೇಲುತೊರ್ವನೆಯುಗುಳ್ನೀರನುಗುಳುತ್ತೆ ಕಣ್ಣಾಲಿಗಳ್ ಮರಳಲ್ ಮಹಾವಿಷ್ಣು ಮನದೊಳ್ ಭಯಂಗೊಳುತ (ಕಬಿಪು. ೪೭-೩೦). ೭. ಕಾಫಿಗೆ ನೀರು ಮರಳುತ್ತ ಇದೆ (ಮಾರ್ಗದ. ೦೪೯). **ಮಲರ್$_1$** : ೧. "ಮಲರ್ — ಪರಾಙ್ಮುಖೇ (ಹಿಂದಿರುಗು), ಪುಷ್ಪೇ ಚ" (ಶಮದ).

ಮರಳಿಮರಳಿ, ಮರಮರಳಿ (ದ್ವಿರುಕ್ತಿ) : ನೆರೆದ ಪುಣ್ಯಾದಿನಪ್ಪ ಸರಸೀಜಜಪ್ರಮುಖರುರುಳ್ವರಾ ನರಕದೊಳು ಮರಳಿಮರಳಿ (ಸಾಸಂಕ. ೩-೪೯) ; ಮರಳಿಮರಳಿ ಯುಧಿಷ್ಠಿರನ ಮನದಿರವ ಭೀಮನ ಖತಿಯ . . . ಅಡಿಗಡಿಗೆ ಕೇಳಿದು ಮಱುಗಿದನು ನೃಪತಿ (ಕುಮಾರಭಾ. ೦೭-೭); ಹೊರಳಿ ನೋಡು ಮರಮರಳಿ ನೋಡು ಒಳಗರಳಿ ನೋಡು ನೋಟ (ಅರಳು. ೪೦೪-೦೦). **ಮರಳಿ** = ಪುನಃ ; ತಿರುಗಿ : ಆಳ್ದನ ಬೆಸನಂ ಮರಳಿ ಕೇಳದ ಬೆಸಗಲಿಗಳುಮಂ (ಗದಾಯು. ೯-೩೪ ವ) ; ಮರಳಿ ಬಿಜಯಂಗೈವುದು ಶರಣುಶರಣಾರ್ಥಿ (ಮುಹಾದೇ. ಬ. ೫೫-೦೪೮); ಮರಳಿ ತನ್ನರಮನೆಗೆ ಬಂದು ರಾಜಾಂಗಣದೊಳ್ನಿಂದು (ಶಾಂತಪು. ೨-೭೬ ವ) ; ಮರಳಿ ನೀ ಯತ್ನಿಸು ಕಾರ್ಯವು ಫಲಿಸುವುದತಿಸುಲಭದೆ ಜಯವಹುದು (ಇಂಶಾಕ. ೦೫೪-೫೯).

[ದೇ.॥ ತಮಿ. ಮಱಙ್ಙು; ಮಲ. ಮಱಿಯು ; ಕೊಡ. ಮರಿ ; ತೆಲು. ಮರಲು, ಮಳ್ಳು, ಮಱಲು]

**ಮರಲ್$_2$** 'ಮಲರ್$_2$' ನೋ.

**ಮರಲ್$_3$** 'ಮಲರ್$_3$' ನೋ.

**ಮರಲ್ಚು, ಮರಚು, ಮರಳಿಚು, ಮರಳ್ಚು, ಮಲಚು** (ಕ್ರಿ). ೧. ಹಿಂತಿರುಗಿಸು; ಹಿಮ್ಮೆಟ್ಟಿಸು: "ಮರಲ್ಚು—ಪರಾಙ್ಮುಖೀಕರಣೇ"(ಶಮದ); ತೊಲಗದ ಜವ್ವನಂ ತವದ ಮೆಚ್ಚು ಮರಲ್ಚುವ ನೋಟಂ (ಆದಿಪು. ೫-೪೨); ಬಿಚ್ಚತಂ ನಲಿವ ನಿಳಂಪನಿಕರಮಂ ಮರಲ್ಚಿ (ವರ್ಧಪು. ೦೪-೪೭ ವ) ; ನಿನ್ನ ಮಾತುಗಳ್ ಎನ್ನನ್ ಮನೆಗೆ ಮರಲ್ಚುವುದು ಸ್ಪಷ್ಟಮೋ (ಬಿರ್ಕಶ್ರ. ೨೦-೪೪೪). ೨. ತಿರುಗಿಸು ; ಹೊರಳಿಸಂ : ಆತ್ಮಚಂಚುಮಂ ನಿಡುಗೊರಲಿಂ ಮರಲ್ಚಿ ನಿಜಪಕ್ಷದೊಳೊಯ್ಯನೆ ಸಾರ್ಚೆ (ರಾಜಶೇ. ೭-೯). Δ **ಮರಚು** : ೧. ಬಿನ್ನಲಗೆಱೆಯ ದನವ ಕೊಣ್ಡು ಹೋಹಲ್ಲಿ ಆರಿಯರೊಡನೆ ಕಾದಿ ಮರಚಿದನು (ಎಕ. XI, ದಾವಣ. ೦೨೫-೨;?). **ಮರಳಿಚು** : ೧. ಮುರಹರ ರಥವ ಮರಳಿಚು ಮರಳಿಚ್ಚೆ ರಥ ಮುಂಚುವುದೋ ಮನ ಮುಂಚುವುದೊ ಎಂದ (ಕುಮಾರಕ. ೦೪-೦೨). **ಮರಳ್ಚು** : ೧. ಇಚ್ಚೆಯಣ ಮಿಲ್ಲದೊಡಂ ತೆಗೆದಳ್ ಕರಂ ಮನಂ ಕಿಡೆ ಪೊಸತಪ್ಪದೊಂದು ಪಿಡಿಗಂಕುಶ ಮಿಟ್ಟು ಮರಳ್ಚುವಂದದಿ (ಕಾದಂಪೂ. ೭೭೨) ; ಮರಳ್ಚು ಸಿಂಹಮನೆನಿಪ್ಪ ಘನಧ್ವನಿಯಾಯ್ತರಣ್ಯದೊಳ್ (ಗಂಧ. ೦-೮೩). **ಮಲಚು** : ೩. ಮುಖ ಮೇಲಾಗುವಂತೆ ಮಾಡು; ಅಂಗಾತವಾಗಿರಿಸು: ನೆಲದೊಳೋರಂತಾಗೆ ಮಲರ್ಚಿಕ್ಕಿಯುದಿಂ ತಗುಳ್ದು ನಾಭಿವರೆಗಂ ಬಸಿಱಿಂ ಪೋೞ್ದು (ವಡ್ಡಾರಾ. ೫೦-೪) ; "ಮಲರ್ಚಿಕ್ಕಿ—ಹೊಟ್ಟೆಯಡಿಯಾಗಿ ಮಲಗಿಸಿ" (ವಡ್ಡಾರಾ. ೨೨೦ ಟಿಪ್ಪಣಿಗಳು). [ಮರಲ್$_1$ + — ಚು$_1$]

**ಮರಲ್ವಿಲ್ಲ** (ನಾ). ಹೂವಿನ ಬಿಲ್ಲುಳ್ಳವನು ; ಮನ್ಮಥ : ಅಮರ್ದುಗೊರಲೀಸರಂ ಮೆಯ್ಯಮರ್ದ ಮರಲ್ವಿಲ್ಲನಿಱಿತವಿಲಿ ತಣ್ಗದಿರಂ ಸಮಸಂದು ಬಾಟ್ವ ಜಗಮಂ ಸಮೆವಲರಿಚನೇಱ್ಗದಾಱ್ಗ ಚಿಕದೇವೇಂದ್ರಂ (ಅಪ್ರತಿ. ೪೩-೦೯). [ಮರಲ್$_3$ (<ಮಲರ್$_3$) + ಬಿಲ್ಲು$_1$ (<ಬಿಲ್$_2$)+ — ಅ$_7$]

**ಮರಲ್ಸರವಿ** (ನಾ). ಹೂವಿನಿಂದ ಕಟ್ಟಿದ ಹುರಿ ; ಹೂವಿನ ದಂಡೆ : ಆಗಸಕ್ಕೇಣಿಯುಕ್ಕುವೆಂಬರಂಬುಧಿಯು ಬೇಗ ದಾಂಟುವೆಂಬರಾ ಮರಲ್ಸರವಿಯಲಿ ನಾಗಗಳ ಕಟ್ಟಿ ಮೆಟ್ಟುವೆವೆಂಬ ದುಷ್ಟಪಂಚಕರ ಮಾತಂ ಕೇಳಿ (ಅಶ್ವ.ಚಾ. ೫-೨-೬). [ಮರಲ್₃ (< ಮಲರ್₃) + ಸರವಿ₂]

**ಮರವ** (ನಾ). ಒಂದು ಬಗೆಯ ಪಕ್ಷಿ : ದುರಿಸೆ ಗಿಳಿ ಪರ್ದು ಮರವಂ ಮರಕುಟಿಗಂ ಪುಜಿಲೆ . . . ಮುನ್ನೀ ಗಿರಿವರದೊಳ್ಪುಟ್ಟಿ ನೆಗಟ್ದುವು (ಸುಕು.ಸು. ೩-೦೯೬). [ ? ]

**ಮರವಜ್ರ** (ನಾ). (ಮರವುಟ್ಟುಗಳಲ್ಲಿ ಬಿರುಕುಂಟಾದ ಕಡೆಯಲ್ಲಿ, ಅದನ್ನು ಮುಚ್ಚಲು ಉಪಯೋಗಿಸುವ) ಒಂದು ಬಗೆಯ ಅಂಟು : ಅವನ ರೆಪ್ಪೆಗಳು ಮರವಜ್ರದ ಸರಿಯನ್ನು ಬಳಿದಂತೆ ಬಿಗಿದುಕೊಂಡಿವೆ (ಕುರಾಯ. ೫೭). [ಮರ್₁ + ವಜ್ರ]

**ಮರವಡ** (ನಾ). ಅಮೇಧ್ಯವನ್ನು ಹಾಕುವ ಸಾಧನ (?) : ಕಕ್ಷವೆಂಬುದು ಕವುಚಿನ ತವರುಮನೆ ಅಮಲೋಕ್ಕವೆಂಬುದು ಬಾಯ ಬಗದಳ ಮುಖಸಿಜ್ಜೆಯೆಂಬುದು ಪಾಂಡುರೋಗ ಕರಸ್ಥಳವೆಂಬುದು ಮರವಡದ ಕುಳಿ (ಅಶತಂ. ೦೮೭-೪೯೨) ; ಮಲದ ಮರವಡ ಮೂತ್ರದಾಗರವೆಲು ತೊಗಲು ನರಮಾಂಸಮಯ ಕ್ರಿಮಿಕುಲದ ಜನ್ಮಸ್ಥಾನ ಕಾಯವಿದು (ಪಶಾಗ. ೦೦-೦೦-೬). [ ಮರ್₁ + < ಪಡುಕ್ಕ₁ ]

**ಮರವಡು,** ಮರಂಬಡು (ಕ್ರಿ). ೧. ಚಲನೆಯಿಲ್ಲದಿರು ; ನಿಶ್ಚಲವಾಗಿರು ; ಸ್ತಬ್ಧವಾಗಿರು : ಮರವಟ್ಟು ಕುಡದೆ ಕಲ್ಪವಹೀಜಂ ನಿಂದುವು (ಆದಿಪು. ೬-೭೯) ; ಅತ್ತ ಸುಭದ್ರೆಯುಮೊಡಲುರಿಯುತ್ತಿರೆ ಮರವಟ್ಟು ವಿಜಯನಿರ್ದತ್ತಲೆ ನೋಡುತ್ತಿರೆ ಸುಸಾಳಭಂಜಿಕೆಗೆತ್ತುದು ಕೆಳದಿಯರ ತಂಡಮಾಕೆಯ ರೂಪಂ (ಪಂಪಭಾ. ೫-೫೪) ; ಸರಸವಾಡುವುದು ಸರಿಯಲ್ಲೆಂದುಳಿದರೆ ಮರವಡುವಳು ಮರದ ಬೊಂಬೆಯು ಮಾಟದೊಳು (ಹರಿ. ೬-೩೦). ೨. ಜೋಮು ಹಿಡಿ : ಮೆಯ್ ಮರವಟ್ಟಂತಿರೆ ನೋಡೆ ಪೇಟು ನರಡಿಯಾಯ್ತೆಂದು ನಿಶ್ವೈಸಿ (ಕೋಕೋಶ. ೯-೨೦೭). **ಮರಂಬಡು :** ೧. ಕಂಡು ಕಣ್ ನಟ್ಟು ಕಾಲ್ ನಟ್ಟು ನಿಂದನು ಮರಂಬಟ್ಟು (ಶ್ರೀರಾಮಾ. ೯-೦೪೭). 'ಮಱವಡು' ಪರಾ. [ಮರ್₁+ಪಡು₁]

**ಮರವಡೆ** (ನಾ). ವೃಕ್ಷಗಳ ಆದಾಯದ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಮಾವಡೆ ಮರವಡೆ ಕುಳವಡೆ ಸಾರಡೆ . . . ಸಂತೆ ಉಂಟಾದ ಹಲ ಉಪಾಧಿಗಳೂ ಸಹ ಸೇರ್ಸಿ ಕೊಟ್ಟೆವು (ಸೌಇಇ. IX-ii, ೪೬೩-೬ : 1470) ; ತೋಟ ತುಡಿಗೆ ಗದೆ ಬೆದಲು ಮಾವಡೆ ಮರವಡೆ ನಿಧಿ ನಿಕ್ಷೇಪ (ಎಕ. X, ಮುಳಬಾ. ೦-೩೭ ; 1541). 'ಮಾವಡೆ' ಪರಾ. [← ತಮಿ. ಮರವಟ್ಟಿ]

**ಮರವಣೆ** (ನಾ). ಮರದಿಂದ ಮಾಡಿದ ಆಸನ, – ಪೀಠ : ಪೊಸಪೆಸುರ್, ಎಳವಿದಿರ್, ಮರವಣೆ (ಕಾಶಾಕೂ. ೫೦ ಉದಾ) ; ಮರವಣೆ[ಪಾಠಾಂ. ಣೆ]ಗಂ ಬೀಣೆಗಮಂತರಮಾವುದೊ (ಕಾವ್ಯಾ.ಶ. ೬೫). [ಮರ್₁ + ಮಣೆ₁]

**ಮರವಲಗೆ** (ನಾ). ಮರದ ಹಲಗೆ : ಶರಧಿಮಧ್ಯದಿ ಹಡಗೊಡೆದು ಮುಳುಗಲಾ ಮರವಲಗೆಯ ಪಿಡಿದವನು ಭರದಿ ತಡಿಯ ಸಾರ್ದು (ಜಾನಂಕಾಂ. ೯-೯). [ಮರ್₁ + ಪಲಗೆ]

**ಮರವಳಿ** (ನಾ). ಮರಗಳಿಂದ ಬರುವ ಉತ್ಪನ್ನ ; ಮರದಿಂದ ದೊರಕುವ ಹಣ್ಣು, ಕಾಯಿ, ಎಲೆ ಮುಂತಾದುವು : ಸೊಪ್ಪಿನ ತೋಟ ತಿಪ್ಪೇಹಳ್ಳ ಶ್ರೀಗಂಧ ಹೊರತಾದ ಮರವಳಿ (ಹುಬ್ಬ.ಹ. ೩) ; ಆ ಊರುಗಳ ನೆಲಕರ ಮರವಳಿಗಳನ್ನು ಬಿಟ್ಟದ್ದು ಹಾಗಿರಲಿ (ಸವಿ. ೬೩). [ಮರ್₁ + — ವಳಿ₃]

**ಮರವಳಿಕಂದಾಯ** (ನಾ). ಮರಗಳ ಉತ್ಪನ್ನದ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಹೊಲದಲ್ಲಿರುವ ಹುಣಸೆ ಹಲಸಿನ ಮರಗಳಿಗೆ ಮಾತ್ರ ಫಲವಿದ್ದಂತೆ ೧ ಹಣದಿಂದ ೨ ಹಣದ ವರೆಗೆ ಮರವಳಿಕಂದಾಯವನ್ನು ನಿಷ್ಕರ್ಷೆಮಾಡಿದರು (ಮೈಹಾಸಂ. I, ೦೨೩). [ಮರವಳಿ+ಕಂದಾಯ]

**ಮರವಳಿವಟ್ಟ** (ನಾ). = ಮರವಳಿಕಂದಾಯ : ಕಾಡಾರಂಬ ಮನೆದೆರಿಗೆ ಮರವಳಿವಟ್ಟ . . . ಎನ್ನುತ . . . ಕೊಸೆಮೊದಲಿಲ್ಲದೆ ಹಣ ಹೊನ್ನು ತೆರುತಿರಬೇಕು (ಪಟ್ಟುಕ. ೦೫೫-೬). [ಮರವಳಿ + ವಟ್ಟ]

**ಮರವಾನಸ,** ಮರವಾನಿಸ (ನಾ). ಮರದಿಂದ ಮಾಡಿದ ಗಂಡಸಿನ ವಿಗ್ರಹ : ಪೊಯ್ಯ ಸಿಡಿಲ್ ಕಾರಿರುಳೊಳಗುರ್ವಂ ಪಡೆದಿರೆ ಮರವಾನಸನೆನೆ ತಪಸ್ವಿ ಮರವೊದಲಿರ್ದಂ (ಆದಿಪು. ೬-೩೨) ; ದುಃಖಿಂಗೆಯ್ವರ ನಡುವಿರ್ದುಂ ಧರ್ಮಕಥಾಶ್ರವಣದಿಂ ನಿಶ್ಚಳನಾಗಿರ್ದರಸನಂ ಕಂಡಿದೇನೀಯರಸಂ ಮರವಾನ [ಪಾಠಾಂ. ನಿ] ಸನೊ ಮೇಣ್ ಲೆಪ್ಪದರಸನೊ ಪೇಟೆಂ (ಜೀಶಸಂ. ೨೫-೯೬ ಪ). **ಮರವಾನಿಸ :** ನಿನಗಿನಿತುಂ ಕರುಣಮಿಲ್ಲ ಮರವಾನಿಸನೈ (ಶಬರಿ. ೨-೯೩) ; ಅಗಲ್ದು ಪೋದಂ . . . ಎನಸುಂ ಮರವಾನಿಸನಾದ ನೆಂಬಿನಂ (ಕೃಷ್ಣಕೌ. ೦೩-೯೭). [ಮರ್₁ + ಮಾನಸ₁ (< ಮಾನುಸ)]

**ಮರವಾನಸಿ** (ನಾ). ಮರದಿಂದ ಮಾಡಿದ ಹೆಂಗಸಿನ ವಿಗ್ರಹ : ನೋಡ ಮಾನಸೆಯಣಮಲ್ಲಳೀಕೆ ಮರವಾನಸಿ[ಪಾಠಾಂ. ಸೆ]ಯಾಗಿಯುಮಾದುದೊಂದು ಮಾನಸಿಕೆ (ಆದಿಪು. ೦೨-೩೬). [ಮರವಾನಸ+—ಇ₂]

**ಮರವಾನಸೆ,** ಮರವಾನಿಸೆ (ನಾ). = ಮರವಾನಸಿ : ಆ ನುಡಿಯೆಂಬ ಶೂಲ . . . ಮಾನಸವನು ಕೀಲಿಸಲಂದವಳು ಮರವಾನಸೆಯಂತಿರ್ದಳಾಗ (ಶಂಚಾಕಾಂ. ೩೬-೦೦೫). **ಮರವಾನಿಸೆ :** ಅರವಿಂದವಕ್ತ್ರೆ ಕೋಪಾಳಿ ಕಡುಗಾಡಿಕಾರ್ತಿ ಮರವಾನಿಸೆಯೆಂಬುದನುಂಟುಮಾಡಿದಾ (ಧರ್ಮಾಸ್ಮು. ೩-೦೫೦) ; ಮರವಾನಿಸೆಯಂದದಮಾನನುಕರಿಸಿದಳೋ ಎನಲಸಿಯಳ್ ಮೆಯ್ಯುಱಿದುಱಿ ಬೆಱಗಾದಳ್ ನೃಪಸುತನಂ ನೋಡಿ (ಜಿನಿಸಾ. ೯-೩೨). [ ಮರವಾನಸ + —ಎ₂ ]

ಮರವಾನಿಸ 'ಮರವಾನಸ' ನೋ.

ಮರವಾನಿಸೆ 'ಮರವಾನಸೆ' ನೋ.

**ಮರವಾಯ್** (ಕ್ರಿ). ೧. ರಭಸದಿಂದ ನುಗ್ಗು; ಜೋರಾಗಿ ಡಿಕ್ಕಿ ಹೊಡೆ: ದೆಸಗಳ್ಗೆ ಬೆರ್ಚ ಮಾರ್ಕೊಱಿವ ವನಮುಹಿಗಳಿಂ ಮದಹಸ್ತಿಯಂತೆ ಮರವಾಯ್ವ ಪುಲಿಗಳನತಿಭಯಂಕರಾಕಾರವುಪ್ಪ ದ್ವೈತವನಕ್ಕೆ ಬಂದು (ಪಂಪಭಾ. ೭-೨೯ ಪ); ವನಮುಂ ಪೊಕ್ಕು ಮರಮುಸಲದಿಂ ಮರವಾಯ್ದು ಮರದಂಬುಗಲಂ ಕಿಟ್ಟೀಡಾಡುವಲ್ಲಿ (ಅರಸಿ. ೫-೦೦೩ ಪ). ೨. ಮರವನ್ನು ಹತ್ತು: ಕುಳಲೆಂದು ಮರವಾಯ್ದು ಬಿನದಿಪುದು (ಕಶಾ. ೬೯-೫೫೬). [ ಮರ್₁ + ಪಾಯ್₁ ]

**ಮರವಾಲೆ,** ಮರಹಾಲೆ (ನಾ). ಒಂದು ಬಗೆಯ ಮರ: "ಜೀವವೃಕ್ಷ— ಮರವಾಲೆ" (ಓಕಂ. ೬೩). **ಮರಹಾಲೆ:** "ಯಶಸ್ಕರೀ-ಮರಹಾಲೆ" (ಓಕಂ. ೦೩೦). [ ಮರ್₁ + ಪಾಲೆ₂ ]

**ಮರವಾವು** (ನಾ). (ಮರದಲ್ಲಿ ವಾಸಿಸುವ) ಒಂದು ಬಗೆಯ ಹಾವು: ಅರಗಿಳಿಗಳೆರಡು ತಮ್ಮಯ ಶಿಶುವಂ ಮರವಾವು ಪಿಡಿಯ ಸಾಯಲ್ ಪಿರಿದುಂ ದುಃಖದೊಳುಳುತ್ತಮಿರಲ್ (ಶ್ರೀಕುಂ. ೦೦-೪೦) ; ನರಿ ಪೂತಿಪೆಕ್ಕು ನಕುಲಂ ಮರವಾವುಗಳೆಂಬಿವಾಗಳುಂ ಕರಮೆಸೆದಿರ್ಪನಂ ಮೆಱೆದುದಾ ವಿಪಿನಂ ವಿಪಿನದ್ಧಕಂದರಂ (ಕಬಕಂ. ೩-೩೪). 'ಅರವಾವು' ಪರಾ. [ ಮರ್₁ + ಪಾವು₁ ]

**ಮರವಾಳ್₁** (ನಾ). ೧. ಮರದ ಜೀವನ; ವೃಕ್ಷದ ಬಾಳು. ೨. (ಆಲಂ) ನೀರಸವಾದ ಬಾಳು,–ಜೀವನ : ನಲ್ಮೆ ಹೂ ಹಣ್ಣಾಲ್ತೆ ಮರವಾಳ್ಗೆ ಗೆಲ್ಲಂ (ಕಾಬೂರ. ೭೩-೦೩೦). [ಮರ್₁ + ಬಾಳ್₂ (<ಬಾಟ್₃)]

**ಮರವಾಳ್₂** (ನಾ). ಮರದ ಕತ್ತಿ, – ಖಡ್ಗ : ಕರವಾಳಂ ಮಸೆವಂದದೆ ಮರವಾಳಂ ಮಸೆಯೆ ಕೂರಿತಕ್ಕುಮೆ (ಗದಾಯು.೨-೨೩) ; ಸುರಿಗೆ[ಯಿ]

ನಾಡು[ಗುಮಂತಾ] ಮರವಾಳಂ ಕೊಂಡು ಬೀಸುತಿರ್ಕುಂ (ಬಂಕಂ. ೩-೨೬).
[ಮರ₁ + ಬಾಳ್₃]

**ಮರವಾಟಿ**, ಮರಬಾಳೆ (ನಾ). ಒಂದು ಬಗೆಯ ಬಾಳೆ; ಕಾಡುಬಾಳೆ: "ಕಾಷ್ಠಕದಲೀ-ಮರವಾಟಿ" (ಟಿಕಧಿ. ೩೨). **ಮರಬಾಳೆ**: ಆ ರಾಮು ನುಮದಿಂ ಕಂಗೊಳಿಸಿ . . . ಮರಬಾಳೆ ಕಲ್ಯಾಣ ಬಾಧಿಬಾಳೆಗಳೀಂದಲೆಸೆ ದಿರ್ದುದು (ಶಶಪು. ೨೫-೪೪). [ಮರ₁ + ಬಾಟಿ³]

**ಮರವಿ**, ಮರಗಿ, ಮರಗೆ, ಮರಾಯಿ, ಮರಿಗೆ (ನಾ). (ಮರ, ಬಳಪದ ಕಲ್ಲು ಅಥವಾ ಮಣ್ಣಿನಿಂದ ಮಾಡುವ) ಅಗಲವಾದ ಬಾಯಿಯುಳ್ಳ ಪಾತ್ರೆ: ಲಂಕರೊಕ್ಕಲಲ್ಲಿ ಆಱುತಿಂಗಳ್ಗೆ ಮಣಿಕಿವಿಗೆ ಮರವಿಯೆಂಬ ವೊಂದಕ್ಕಂ ವರ್ಷಕ್ಕೆ ಮಂಚವೊಂದಕ್ಕಂ ಅಲ್ಲವರಸಿನಂ ಶುಂಠಿ ಬೆಳ್ಳುಳ್ಳಿ ಬಿಜೆ ಭದ್ರಮುಸ್ತೆಯೆಂಬಿವು ಮೊದಲಾಗಿ ತೂಗಿ ಮಾಱುವ ಭಣ್ಣಂಗಳ್ಗೆ ಹೇಜಿಂಗಯ್ಯುಲಂ (ಎಕ. XIX. ೩೩-೨೯; 1135). **ಮರಗಿ**: "ಅವಗಾಹ ಮೆನೆ ಮರಗಿಯಕ್ಕು" (ಶಬ್ದಸಾ. ೩೩-೨೬). **ಮರಗೆ**: ಯದುವಿನ ತಾಯಿ ಕಲ್ಲಿನ ಮರಗೆಯಲ್ಲಿ ಮಸಾಲೆ ಕುಟ್ಟುತಾ ಇರುತ್ತಾಳೆ (ಸಾಹೇಲ್. ೫೯೩). **ಮರಾಯಿ**: ನೀರು ಅಕ್ಕಚ್ಚು ಕುಡಿಯಲು ಅಲ್ಲಲ್ಲಿ ಮಣ್ಣಿನ ಮರಾಯಿ ಗಳನ್ನು ಕುತ್ತಿಗೆಯ ವರೆಗೆ ಹೂಳಿರುವರು (ಪಾಲಿ. ೪೦). **ಮರಿಗೆ**: ಎತ್ತುಗಳು ಮರಿಗೆ ಕಡೀತಾ ಅದಾವೆ! . . . ಮೇವು ಹಿರಕೊಂಡು ಬಂದು ಹಾಕ್ರಿ (ಕೆಲಬು. ೦೫೩); ಎಲ್ಲರೂ ಹೆಣ್ಣು ಹೆತ್ತರೆ ಮಾರವ್ವ ಮರಿಗೆ ಹೆತ್ತಳು (ಗಾದೆ). [ದೇ.॥ ತಮಿ. ಮರವೈ; ಮಲ. ಮರವಿ; ತುಳು. ಮರಾಯಿ]

**ಮರವಿಲ್**, ಮರಬಿಲ್ಲು (ನಾ). ಒಂದು ಬಗೆಯ ಬಿಲ್ಲು; ಬಿದಿರಿನ ಬಿಲ್ಲು: ತೊಟ್ಟಿಕ್ಕವಡಂ ಮರವಿಲ್ ಕಟ್ಟಿದ ಪಣಿಕಟ್ಟು ಬೇಂಟೆವಜಿ³ (ಶಂಕಥಾ. ೫-೩೬); ಕರಿಂಕುವಡೆದ ಬಿಂಜದಡವಿಯಂತೆ ಕರ್ಗನೆಗನಿತು ಕೊಳು ವೇಱಿಸಿದ ಮರವಿಲ್ಲುಂ ಪಿಡಿದ ದೋಣಿಯುಂ (ಪರ್ವಶಾ. ೪-೪೨ ವ). **ಮರಬಿಲ್ಲು**: ಮರಬಿಲ್ಲು ಬಾಣ ಬಡಿಕೋಲುವಲೆಯು ಜಾಯಿಲಗಳಂ ಪಿಡಿದು . . . ಅಗಣಿತದ ಲುಬ್ಧಕರು ಬಂದು ನಿಂದು (ಶಶಪು. ೦೬-೦೨); ಕಾವಲ ಮಂದಿಗಳು ಇವರನ್ನು ಕಂಡು ಬಾಗಿಲ ಕದಗಳ ಹಾಕಿ ಹುಗೆಗಳನ್ನು ಮರಬಿಲ್ಲಿನಲ್ಲಿ ಇಟ್ಟು ಗುಲ್ಲು ಮಾಡಿದರು (ಕನ್ನಶಾ. ೨೦). [ಮರ₁ + ಬಿಲ್₂]

**ಮರವೀಣೆ** (ನಾ). ಮರದಿಂದ ಮಾಡಿದ ವೀಣೆ: ಕುಣಿದಿಲ್ಲ ಕೊರಳು ಮಣಿದಿಲ್ಲ ಬೆರಳು ಮರವೀಣೆ ಮಿಡಿಸಲಹುದೇ (ಹೃದಶ. ೩೯-೪).
[ಮರ₁ + ವೀಣೆ₁]

**ಮರವು** 'ಮಱವು' ನೋ.

**ಮರವುಟ್ಟು** (ನಾ). ಮರದಿಂದ ಮಾಡಿದ ಹುಟ್ಟು: ತೆಗೆ ಹಿಮುವನೆಂದು ಮರವುಟ್ಟಿನಿಂ ತೆಗೆಯಿಸಲ್ (ಮಲಿರ. ಹ. ೦೬೫-೦೦). [ಮರ₁ + ಪುಟ್ಟು₃]

**ಮರವುಣಿ** (ನಾ). ಮರವನ್ನು ದಹಿಸುವಂತಹುದು; ಬೆಂಕಿ: ತಳಿರಂಬನಂ ಮರವುಣಿಗೆ ಬೀಳ್ದಂ (ಶಂಬಿಪು. ೨೦-೫೪). [ಮರ₁ + —ಉಣಿ]

**ಮರವೂರ್**, ಮಱವೂರ್ (ನಾ). ಒಂದು ಊರಿನ ಹೆಸರು: ನಗರೂರ ಬೆಳ್ಳಿಯರುಂ ಮರವೂರ ವಣ್ಣಾಕರುಂ. . . ನರಸಾಕ್ಷಿ (ಶ್ಯಕಂ. ೦೧೨೬. ೦೦೮-೪೫; 726). **ಮಱವೂರ್**: ನೀತಿಮಾರ್ಗ್ಗ ಪೆರ್ಮ್ಮನಡಿಗಳ್ ಸ್ವರ್ಗ್ಗ ಮೋಱಿದನ್ದು ಮಱವೂರ ಬಬಿಯಮ್ಮಂ ಕಿಚ್ಚುವೊಕ್ಕಂ (ಎಕ. V. ಅರಕ. ೨೬-೦೦; 915). 'ಮರೂರ್' ಪಠಾ. [ಮರ₁ + ಊರ್]

**ಮರವೆ** 'ಮಱವೆ' ನೋ.

**ಮರವೈ** (ನಾ). (ಕೆರೆ, ಕಟ್ಟೆಗಳ) ನೀರು ಹೋಗುವ ಕಂಡಿ; ತೂಬು: ಶ್ಯಾಮಣ್ಣನವರು ಊರಿನ ದೊಡ್ಡಕೆರೆಯನ್ನು ದುರಸ್ತು ಮಾಡಿಸಿ, ಅದಕ್ಕೆ ಒಂದು ಮರವೆಯನ್ನು ಕಟ್ಟಿಸಿದರಷ್ಟೆ (ಊರುಕ. ೬೩).
[ದೇ.॥ ತೆಲು. ಮರವ, ಮರುವ]

**ಮರವೆಗೊಡು** (ಕ್ರಿ). (ರುಚಿ ಕಂಡುಹಿಡಿಯಲು ಅಶಕ್ಯವಾಗಿ) ಮರ ಗಟ್ಟಿದಂತಾಗು; ಜಡ್ಡುಗಟ್ಟು: ಬಾಯಿಯಲ್ಲಿ ಅಂಟುಗೂಡಿ, ಕಹಿಯಾಗಿ, ಮರವೆಗೂಡಿ . . . ಅಡಿಗಡಿಗೆ ಶೀತವೂ ತೋರುತ್ತ ಈ ಲಕ್ಷಣಗಳೊಡಗೂಡಿ ರ್ಪುದೇ ಶ್ಲೇಷ್ಮಪಿತ್ತಜ್ವರವೆನಿಸಿಕೊಳ್ಳುವುದು (ಸಳಿತ್ಸೆ: ೯೦).
[ಮರವೆ₁ (< ಮಱವೆ) + ಕೊಡು₁]

**ಮರವೆಸ**, ಮರವೆಸನ (ನಾ). ಮರದಿಂದ ಯಾವುದಾದರೂ ವಸ್ತುವನ್ನು ತಯಾರಿಸುವುದು ಮತ್ತು ಹಾಗೆ ತಯಾರಿಸಿದ ವಸ್ತು; ಮರಗೆಲಸ ಮತ್ತು ಅದರಿಂದ ತಯಾರಿಸಿದ ವಸ್ತು: ಅಯ್ದಣಂ ಮರವೆಸ ದೊಪ್ಪವಿಟ್ಟಗೆಯ ದನ್ತದ ಚಿತ್ರದ ಶಾಸ್ತ್ರಯುಕ್ತಮಾಗಿರೆ ಬೆಸಗೆಯ್ದ (ಸೌಇಇ. XI-ii. ೦೨೬-೫೫; 1082); ಕರು ಕರುವಿಂಗೆ ಕಣ್ದೆಱವಿ ಕಲ್ವೆಸ ದೋಜೆಗೆ ನಚ್ಚನಚ್ಚು ಕಂಡರಣೆಗೆ ಮಂಡನಂ ಮರವೆಸಕ್ಕೆ (ಬುಲ್ಲಕ. ೨-೭೬). **ಮರವೆಸನ**: ಜೀರ್ಣ್ನವಾದ ಮರವೆಸನನು ಬಲಿಯಿಸೆಂದು ಹೇಳಿದಲ್ಲಿ (ಎಕ. V. ಬೇಲೂರು. ೨೪-೩; 1298). [ಮರ₁ + ಬೆಸ₁]

**ಮರವೆಸನ** 'ಮರವೆಸ' ನೋ.

**ಮರಸಕಾಗೆ** (ನಾ). ಒಂದು ಬಗೆಯ ಸಸ್ಯ: ಮರಸಣೆ, ಮರಸಕಾಗೆ, ಮುಂಡಿಗಿಡ (ವ್ಯಕಿಗಿ. ೫-೭೯). [? + ಕಾಗೆ]

**ಮರಸಣೆ** (ನಾ). ಒಂದು ಬಗೆಯ ಸಸ್ಯ: ಮರಸಣೆ, ಮರಸಕಾಗೆ, ಮುಂಡಿಗಿಡ (ವ್ಯಕಿಗಿ. ೫-೭೮). [?]

**ಮರಸಣಿಗೆ** (ನಾ). ಒಂದು ಬಗೆಯ ಸಸ್ಯ; ಕೆಸುವಿನ ಜಾತಿಯ ದೊಡ್ಡ ಗಿಡ; ಇದರ ಗೆಡ್ಡೆಯನ್ನು ಮೇಲೋಗರಕ್ಕೆ ಬಳಸುತ್ತಾರೆ: ಮರಸಣಿಗೆಯ ಗಡ್ಡೆಯ ತಿಂದೇ ತಿಂದು ಗಂಟಲ ಕಟ್ಟಿಹುದು (ಜಾಪನೀ. ೬೬); ಎರಡುಕೋಲುದ್ದದ ಮರಸಣಿಗೆ ಅವರ ಮನೆಗೆ ಮುಟ್ಟಿಸಿ (ಹಹಸ. ೯೯).
[<ಮರಸಣೆ ?]

**ಮರಸದ** (ನಾ). ಒಂದು ಬಗೆಯ ಸಸ್ಯ: ಮರಸದ, ಬಗುಲಿ, ಹಂಜರಿಕೆ ಕುಚ್ಚು, ಮರಸುತ್ತುಬಳ್ಳಿ (ವ್ಯಕಿಗಿ. ೦೬-೨೯೨). [?]

**ಮರಸರಿಗೆ** (ನಾ). ಮರದ ಪಾತ್ರೆ (?): ಅಂತಾಕೆಗಳ್ ತೂಗಿ ತೊನೆವ ತೊನೆಪಂಗಳುಮಂ ಮರಸರಿಗೆವಿಡಿದು ಬಿಲ್ವಿಡಿದಾಡುವ ಬೂತಾಟಂಗಳುಮಂ ನೋಡಿ (ಶಂಕಥಾ. ೪-೯೦ ವ); "ಮರಸರಿಗೆವಿಡಿದು—ದೊಡ್ಡ ಚೆಂಬನ್ನು ಹಿಡಿದುಕೊಂಡು (!)" (ಶಂಕಟೀ. ೦೬೯). [ಮರ₁ + ಚರಿಗೆ₁]

**ಮರಸರ್ಪ** (ನಾ). (ಆಕಾಶದಲ್ಲಿ ಕಾಣಿಸುವ ಉತ್ಪಾತಸೂಚಿಯಾದ) ದೊಡ್ಡಹಾವು; ರಾಹು: ಮರಸರ್ಪಂ ಮೂಡೆ ಮೂಡಲ್ ನೃಪತಿಗೆ . . . ಅಪಾಯಂ (ಲೋಕೋಪ. ೪-೪೦); ಮರಸರ್ಪನೊಗೆಯೆ ಕಾಳೆಗ ಮಕ್ಕುಂ (ಲೋಕೋಪ. ೪-೪೨). [ಮರ₁ + ಸರ್ಪ]

**ಮರಸಲ್ಲು** (ಕ್ರಿ). ಚಲನೆಯಿಲ್ಲದಾಗು: ಮೈಯೊಳಗೆ ಮರಸಂದು ಮುಸಗಾಡಿದೆನು ಮಿಡುಕಿಗೆ ನಾನು (ಕೃದಶ. ೦೪-೫). [ಮರ₁ + ಸಲ್ಲು(<ಸಲ್₁)]

**ಮರಸು₁** 'ಮಱಿಯಿಸು' ನೋ.

**ಮರಸು₂** 'ಮಱಸು₂' ನೋ.

**ಮರಸುಕಟ್ಟು** (ಕ್ರಿ). ಕಾಡಿನಲ್ಲಿ ಪ್ರಾಣಿಗಳನ್ನು ಬೇಟೆಯಾಡಲು ಮರದ ಮೇಲೆ ಅಡಗಿ ಕುಳಿತುಕೊಳ್ಳಲು ಅಟ್ಟವನ್ನು ಕಟ್ಟು: ಮರವನ್ನು ಹತ್ತಿ ಮರಸುಕಟ್ಟಿ ಕುಳಿತು ಹೊಡೆಯುವುದು (ಎಳಕ. ೩೩).
[ಮರಸು₂ (< ಮಱಸು₂) + ಕಟ್ಟು₁]

**ಮರಸುಕೂರು** (ಕ್ರಿ). ಕಾಡಿನಲ್ಲಿ ಪ್ರಾಣಿಗಳನ್ನು ಬೇಟೆಯಾಡಲು, ಮರದ ಮೇಲೆ ಕಟ್ಟಿರುವ ಮರಸಿನ ಮೇಲೆ ಕುಳಿತುಕೊಳ್ಳು: ಪಣ್ಮರಕೆ ಮರಸುಕೂತವರಂತೆ, ಮೋನದಿಂದೆಲ್ಲರಿಂ ರಾಮಾದಿಗಳ್ ನಿಟ್ಟಿಸಿರೆ (ಶ್ರೀರಾಮಾ. ೭೦೩-೭೨); ಕಾಡಿನಲ್ಲಿದ್ದ ಒಂದು ಹಣ್ಣಿನ ಮರಕ್ಕೆ ಮರಸು ಕೂರಲು ಹೋಗಿದ್ದನು (ಕಾಕೂರು. ೯೯).
[ಮರಸು₂ (< ಮಱಸು₂) + ಕೂರು₂ (< ಕೂರ್₃)]

**ಮರಸುತ್ತು**, ಮಲಸುತ್ತು, ಮಲಸೂತ್ರ (ನಾ). ೧. ತಿರುಪಿನಾಕಾರದ ಒಂದು ಬಗೆಯ ಬಾಣ (?) : ಮರಸುತ್ತನಿಸಲೊಡಂ ಭೋರ್ಗರೆ ದೈತರ್ವಾ ಸರಲ್ಗಳಂ ಖಂಡಿಸುತಂ ಬರುತಿರ್ದುವು . . . ನಿಶಿತವಿಶಿಖಾವಳಿಗಳ್ (ಕಂಕೃತಿ. ೬-೩೩) ; ಮರಸುತ್ತನೆಚ್ಚು ತತ್ಖಚರರ ಶರಸಂಘಾತವೆಲ್ಲಮಂ ಖಂಡಿಸಿ (ಕುಹಾಪೀ. ೧೦-೩೩). ೨. ತಿರುಪು ; ತಿರುಗಣೆ : ಇದಕ್ಕೆ ಮರಸುತ್ತಿನ ನಿಯಮವೆಂದು (cork screw rule) ಹೆಸರು (ಭೌತಶಾ. ೩೩೨). **ಮಲಸುತ್ತು** : ೨. ಮೊಳೆ ಮಾಡಲಿಕ್ಕೆ ತಿಳಿಯದ ಕಮ್ಮಾರ ಮಲಸುತ್ತು ಮಾಡಿಯಾನೇ ? (ಗಾದೆ). **ಮಲಸೂತ್ರ** : ೨. ಈ ಕೊತ್ತಳಗಳ ಬಳಿಯಲ್ಲಿ ಪೊಳವ್ಯೆಯಲ್ಲಿ ಮಲಸೂತ್ರದಂಥ ಜಿನೆಯಲ್ಲಿ ಮೇಲೆ ಯೇರಲಿಕ್ಕೆ ಪಾವಟಿಗೆಗಳಿರುತ್ತವೆ (ಕಠಾಗೆ. ೫೩೦) ; ಮಲಸೂತ್ರದೊಳಗಿಂದ ಕೊಳವೆಯನ್ನು ತಿರುವಿ (ಮುಂಜಾ. ೩-೬೨).
[ದೇ॥. ತೆಲು. ಮರಚುಟ್ಟು, ಮಲುಚುಟ್ಟು. / ಮರಾ. ಮಳಸುತ್ರ, ಮಳಸ ಊತ್ರ, ಮಲಸೂತ್ರ]

**ಮರಸುತ್ತುಬಳ್ಳಿ** (ನಾ). ಒಂದು ಬಗೆಯ ಸಸ್ಯ : ಮರಸದ, ಬಗುಲಿ, ಹುಪರಿಕೆಕುಚ್ಚು, ಮರಸುತ್ತುಬಳ್ಳಿ (ಮೈಶಿಗ. ೦೩-೨೯೨).
[ಮರ$_1$ + ಸುತ್ತು$_1$ + ಬಳ್ಳಿ]

**ಮರಸುಬಾಗಿಲು** (ನಾ). "ಗೋಡೆಯಲ್ಲಿ ಪ್ರತ್ಯೇಕವಾಗಿದ್ದಂತೆ ತೋರದ ಹಾಗೆ . . . ಬಣ್ಣ ಹಾಕಿದ, ಗೋಡೆಯ ಮುಖಕ್ಕೆ ಸಮನಾಗಿಟ್ಟಿರುವ ಬಾಗಿಲು : ಮರಸುಬಾಗಿಲು" (Jibdoor. ೩೦೯೦).
[ಮರಸು$_2$ (< ಮಱಸು$_2$) + ಬಾಗಿಲು (< ಬಾಗಿಲ್)]

**ಮರಸುಬೇಟೆ** (ನಾ). ಮರೆಯಲ್ಲಿ ಅಡಗಿಕೊಂಡು ಮಾಡುವ ಬೇಟೆ : ಮರಸುಬೇಟೆ : ಇದರಲ್ಲಿ ಬೇಟೆಗಾರನು ಕಾಡಿನಲ್ಲಿ ಪ್ರಾಣಿಗಳು ತಿರುಗಾಡುವ ಕಡೆಯಲ್ಲಾಗಲೀ, ಯಾವುದಾದರೊಂದು ಹಣ್ಣಿನ ಮರದಲ್ಲಾಗಲೀ ಮರೆ ಮಾಡಿಕೊಂಡು ಕುಳಿತು ಪ್ರಾಣಿಗಳನ್ನು ಕಾಯುತ್ತಾನೆ (ಮುಬೇ. ೬) ; ಹತ್ತಾರು ಜನರನ್ನು ಬಲಿ ತೆಗೆದುಕೊಂಡಿದ್ದ ಹುಲಿ . . . ಮರಸುಬೇಟೆಯಲ್ಲಿ ನಿಷ್ಣಾತನಾಗಿದ್ದ ಸಂಕಪ್ಪನ ರಕ್ತ ಹೀರಿತ್ತು (ಕಕಥಾ. II, ೬೨೨೯).
[ಮರಸು$_2$ (< ಮಱಸು$_2$) + ಬೇಟೆ (< ಬೇಂಟೆ)]

**ಮರಸೌತೆ** (ನಾ). ಒಂದು ಬಗೆಯ ದೊಡ್ಡಜಾತಿಯ ಸೌತೆ : (ಮೈಶಿಗ. ೯೦-೦೬೨೬). [ಮರ$_1$ + ಸೌತೆ (< ಸವುತೆ)]

**ಮರಹಟ್ಟ** 'ಮರಾಟ' ನೋ.

**ಮರಹಠ** 'ಮರಾಟ' ನೋ.

**ಮರಹತ್ತಿ** (ನಾ). ಮರವಾಗಿ ಬೆಳೆಯುವ ಒಂದು ಬಗೆಯ ಹತ್ತಿ : ದೊಡ್ಡಹತ್ತಿ : ಮರಹತ್ತಿಯ ಬೇರನು ಅಗಿದು ಕಿವಿಯಲ್ಲಿ ಉರುವಲು ವೃಶ್ಚಿಕ ಹರಾ (೬ಹ೫. ೦೬-೨) ; ಇದರಲ್ಲಿ ಮತ್ತೊಂದು ಪ್ರಕಾರದ ಮರಹತ್ತಿ ಎಂದು, ಕರಿ ಹತ್ತಿ ಎಂದು ಎರಡು ವಿಧಗಳುಂಟು (ಕೃಶಾಸ್ತ್ರ. ೩೯).
[ಮರ$_1$ + ಹತ್ತಿ$_1$ (< ಪಟ್ಟಿ)]

**ಮರಹಮ್ಮತ್** 'ಮರಾಮತ್ತು' ನೋ.

**ಮರಹಮ್ಮತ್ತು** 'ಮರಾಮತ್ತು' ನೋ.

**ಮರಹರಳು** (ನಾ). ಒಂದು ಬಗೆಯ ಔಡಲ ಗಿಡ ; ದೊಡ್ಡಹರಳು : ದೊಡ್ಡಹರಳು, ಬೆಟ್ಟಹರಳು, ತುರುಕಹರಳು, ಮರಹರಳು, ಕಾಡುಹರಳು (ಮೈಶಿಗ. ೯೬-೯೯೩) ; ತಂಗಡಿ, ಕಕ್ಕೆ, ಮರಹರಳು, ಕಸ್ತೂರಿ ಜಾಲಿ, ಬನ್ನಿ (ಕಮ್ಯು. ೨೩೬). [ಮರ$_1$ + ಹರಳು (< ಪರಲ್)]

**ಮರಹಱುವೆ** 'ಮರಹಱುಹೆ' ನೋ.

**ಮರಹಱುಹೆ**, ಮರಹಱುವೆ (ನಾ). ಒಂದು ಬಗೆಯ ಹರುವೆಸೊಪ್ಪು : "ಮರಹಱುಹೆ ಆಕುಂಕರ್ಣಿಕೆಯುಕ್ಕು" (ಮಂಗರಾ. ೩೫-೦೯). **ಮರಹಱುವೆ**: (೩). [ಮರ$_1$ + ಹಱುಹೆ]

**ಮರಹಾಟ** 'ಮರಾಟ' ನೋ.

**ಮರಹಾಟಮೊಗ್ಗೆ** 'ಮರಾಟಿಮೊಗ್ಗು' ನೋ.

**ಮರಹಾಲೆ** 'ಮರವಾಲೆ' ನೋ.

**ಮರಹು** 'ಮಱವು$_2$' ನೋ.

**ಮರಹುಣಿಸೆ** (ನಾ). ಒಂದು ಬಗೆಯ ದೊಡ್ಡಜಾತಿಯ ಹುಣಿಸೆ : "ತಿಂತ್ರಿಡೀಕಂ, ಚುಕ್ರಂ, ವೃಕ್ಷಾಮ್ಲಂ — ೩ ಮರಹುಣಿಸೇಹಣ್ಣು, ಹುಳಿಹಣ್ಣು" (ಸಿದ್ಧಾಂತಿ. ೨೬೯). [ಮರ$_1$ + ಹುಣಿಸೆ (< ಪುಳಿಸೆ)]

**ಮರಳ್** 'ಮರಲ್$_1$' ನೋ.

**ಮರಳಚ್ಚು** (ನಾ). ಮರಳಿನಲ್ಲಿ ಬರೆದು ಕೂಡಿದ ಒಂದು ಬಗೆಯ ಅಚ್ಚು : ಕಂಟ ಅಥವಾ ಚೂಪಾದ ಮರಗಡ್ಡಿಯಿಂದ ಕೊರೆದ ಮರಳಚ್ಚಿನಲ್ಲಿ ಎರಕ ಹೊಯ್ದು ಈ ಶಾಸನವನ್ನು ತಯಾರಿಸಲಾಗಿದೆ (ಧಾರಕ. ೦೬).
[ಮರಳು$_2$ (< ಮಣಲ್) + ಅಚ್ಚು$_3$]

**ಮರಳಿ** (ನಾ). ಒಂದು ಬಗೆಯ ಸಸ್ಯ : ಕೊಗ್ಗಲಿ, ಮರಳಿ, ಕೊಳಂಜಿ, ವಜ್ರನೀಲಿ (ಮೈಶಿಗ. ೬೯-೦೫೦೬). 'ಮರಳಿ' ಪರಾ. [?]

**ಮರಳಿಚು** 'ಮರಲ್ಚು' ನೋ.

**ಮರಳಿಸು** (ಕ್ರಿ). ೧. ಹಿಂತಿರುಗಿಸು ; ವಾಪಸ್ಸು ಬರುವಂತೆ ಮಾಡು : ಚಿತ್ರವನಗೊಬ್ಬನಲಿ ಸಿಲುಕಿತು ಮರಳಿಪೊಡೆ ಕಮಲಾಕ್ಷಗಳವಲ್ಲ (ಕಕೆ. ೩-೩೩); ಬಸವಪ್ಪಸುಪ್ಪೋಗಲದನುಸಿರೆ ಮರಳಿಸಿ ಚೆನ್ನಬಸವಣ್ಣನೊಪ್ಪಿರ್ದನು (ಕಂತ್ಥ. ೬ ಸೂತ್ರ). ೨. ಸಂತೈಸು ; ತಿರುಗಿಸು : ಶಂಕಿನಿಯೆಂಬ ದೇವತೆ ಓಡಿ ದೊಡಾ ಕೂಸು . . . ಬೆಚ್ಚುಗುಂ, ಕಣ್ಣ ಮರಳಿಸುಗುಂ, ವಿಕಾರವೆರಸಿ ನೋಡುಗುಂ (ಬಾಲಕ. ೦೩೨-೬). ೩. (ನೀರು ಮೊದಲಾದ) ದ್ರವ ಪದಾರ್ಥಗಳನ್ನು ಕುದಿಸು : ಸ್ನಾ ಹತ್ತಿಸಿದವರು ಒಂದು ಕೊಳಗ ನೀರು ಮರಳಿಸಿ . . . ಎಂದರು (ಕಂಯಾತ್ರೆ. ೮).
[ಮರಳು$_1$ (<ಮರಲ್$_1$) + — ಇಸು$_2$]

**ಮರಳು$_1$** 'ಮರಲ್$_1$' ನೋ.

**ಮರಳು$_2$** 'ಮಣಲ್' ನೋ.

**ಮರಳುಉಮ್ಮತ್ತಿ** 'ಮರುಳುಮ್ಮತ' ನೋ.

**ಮರಳುಗಲ್ಲು** (ನಾ). ಕೆಂಪು ಮರಳಿನಿಂದಾಗುವ ಒಂದು ಬಗೆಯ ಕಲ್ಲು: ಈ ಹಜಾರವು ಸುಮಾರು ೮೨ ಮರಳುಗಲ್ಲುಕಂಬಗಳಿಂದ ಕೂಡಿ ಮರದ ಮೇಲ್ಛಾವಣಿಯನ್ನು ಹೊಂದಿತ್ತು (ಕಾಕರ. ೯೯೯); ಇಂಥ ಪ್ರದೇಶವು ಒಂದು ಕಾಲದಲ್ಲಿ ಮೇಲಕ್ಕೆ ತಳ್ಳಲ್ಪಟ್ಟರೆ, ಅದೇ ಮರಳುಗಲ್ಲಿನ (Sandstone) ಬೆಟ್ಟವೆನಿಸುವವು (ಖಾಂಶ್ರ. I, ೦೬೬).
[ಮರಳು$_2$ (<ಮಣಲ್) + ಕಲ್ಲು (<ಕಲ್$_2$)]

**ಮರಳುಗಾಡು** 'ಮರಳ್ಗಾಡು' ನೋ.

**ಮರಳುಚಿಗಟ** (ನಾ). ಒಂದು ಬಗೆಯ ಸಣ್ಣ ರೆಕ್ಕೆ ಹುಳು,—ಚಿಗಟ : ನೀರಿನ ಅಂಚಿನಲ್ಲಿರಬಹುದಾದ ಸಣ್ಣನಳ್ಳಿ, ಸೊಳ್ಳೆಮರಿಗಳು, ಮರಳುಚಿಗಟ ಮತ್ತಿತರ ಕೀಟಗಳನ್ನು ಆರಿಸಿ ತಿನ್ನುತ್ತವೆ (ಕಕ್ಷಿ. ೩೦).
[ಮರಳು$_2$ (<ಮಣಲ್) + ಚಿಗಟ (<ಚಿಕ್ಕುಟ)]

**ಮರಳುದಲೆ** (ನಾ). ಹಿಂದಿರುಗುವಿಕೆ ; ವಾಪಸ್ಸಾಗುವಿಕೆ : ಕನಾಧಿಯ ವಡಬಾನಳನ ದಳ್ಳುರಿಯ ಮರ್ಮವ ತಿವಿವ ತುಂಬಿಗೆ ಮರಳುದಲೆಯುಂಟಾದಡದು ಭವಭವದ ಪುಣ್ಯಫಲ (ಕುಮಾವ್ಯಾ. ೯-೯೬); ಕಂಗಳ ಮರಳುದಲೆಯನು ಮಾಣಿಸುವ ಬಹುಶಿಲ್ಪಕೌಶಲದ ಪುರವಿಭವಲಕ್ಷ್ಮಿಯನು ಕಂಡು (ಕಪಾಗ. ೩-೦೦.೦೦). [ಮರಳು$_1$ (<ಮರಲ್$_1$) + — ತಲೆ$_2$]

**ಮರಳುದಿಣ್ಣೆ** 'ಮಣಲ್ದಿಣ್ಣೆ' ನೋ.

**ಮರಳುಪಾಡಿ** (ನಾ). (?) : ತಿಳ ೨ ಮರಳುಪಾಡಿ ಬಿದಿಕಾರಾ ಮೂ ೩ (ಶೌಇಸಾ. ೦೯೩೦, ಶುಂಗಳಕಾ. ೩೩೪-೯ ; 1228). [?]

**ಮರಳುಮತ್ತ** 'ಮರುಳುಮ್ಮತ್ತ' ನೋ.

**ಮರಳೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ಆಗಿನ ಕಾಲದ ತೋಟಗಳಲ್ಲಿ ಅವರು ಹೆಚ್ಚು ಪ್ರೀತಿಯಿಂದ ಬೆಳೆಸುತ್ತಿದ್ದ ಹೂಗಳೆಂದರೆ ಪಾದರಿ . . . ಮರಳೆ, ಮಲ್ಲಿಗೆ, ಸಂಪಿಗೆ, ಕೇತಕಿ ಮುಂತಾದವು (ಶಾಚಿಆ. ೩೩). 'ಮರಳಿ' ಪರಾ. [ ? ]

**ಮರಳೊತ್ತು** (ಕ್ರಿ). ಹಿಂದಕ್ಕೆ ಒತ್ತು; ಹಿಮ್ಮೆಟ್ಟಿಸು : ಮೇರುಗಿರಿಯಂ ಮರಳೊತ್ತುವ ವಜ್ರಮ್ಮಯಂ ತಳದೊಳಗಿರ್ದಿರ್ಪಾಗೆ ಪೊಸೆದಿಕ್ಕುವ . . . ಅಳವಂ ಸಮಂತು ತಳೆದಂ (ಶಂಶ್ರುಪು. ೬-೨೬).

[ಮರಳ್ (< ಮರಲ್$_1$) + ಒತ್ತು$_1$]

**ಮರಳ್ಗಾಡು**, ಮರಳುಗಾಡು (ನಾ). ಉಸುಕು ತುಂಬಿದ ಪ್ರದೇಶ ; ಮರುಭೂಮಿ : ನಿನ್ನ ಮೈಯ ಮರಳ್ಗಾಡಿನಲ್ಲಿ . . . ಅರಸಿ ನೋಡು ! (ಕಲ್ಕೊಂ. ೨-೦೩); ಮರಳ್ಗಾಡಿನಲ್ಲಿ ಬಿಸಿಲ್ಗುದುರೇನೇ ನಿಜವಾದ ನೀರೂಂತ ನಂಬಿ . . . ಪ್ರಾಣಬಿಟ್ಟಿದ್ದಾರೆ (ಚಿರದೊ. ೦೯). **ಮರಳುಗಾಡು** : ಮರಳುಗಾಡಿನಲ್ಲಿ ತಣ್ಣೀರಿನ ಕೊಳ ಗೋಚರಿಸುವಂತೆ ಮುಂದೆ ಒಂದಾನೊಂದು ಕಾಲಕ್ಕೆ ಆ ಸಂಪತ್ತೂ ದೊರೆಯಬಹುದು (ಸಂಚಿರು. ೦೯); ನಿರ್ಜನವಾದ ಮರಳುಗಾಡನ್ನು ವಮ್ಮ ಸ್ಮೃತಿಪಥದಲ್ಲಿ ಎಳೆದು ತಂದು ನಿಲ್ಲಿಸಬಲ್ಲಷ್ಟು ಶಕ್ತಿಯುಕ್ತವಾಗಿದ್ದು (ದೂಪಿಸು. ೦೯).

[ಮರಳು$_2$ (<ಮಣಲ್) + ಕಾಡು$_2$]

**ಮರಳ್ಗು** 'ಮರಲ್ಗು' ನೋ.

**ಮರಾಟ**, ಮರಹಟ್ಟ, ಮರಹತ, ಮರಹಾಟ, ಮರಾಠ, ಮಾರಾಟ್ಟ (ನಾ). ಮಹಾರಾಷ್ಟ್ರವೆಂಬ ಒಂದು ದೇಶ ಮತ್ತು ಅಲ್ಲಿಯ ಜನ : ಪೊಣರ್ದು ಪೊಣರ್ದಾ ಮರಾಟರ್ ತಣದಾ ತಳ್ಳಿಯನೆ ಬಿಟ್ಟು ತಟ್ಟನೆ ತಳರ್ದರ್ (ಅಕ್ರತಿ. ೩೩-೩೬). **ಮರಹಟ್ಟ**: ನರ್ಮದಾ ಗೋದಾ ಪರಿಸರದವರೆಗೂ ಅಲ್ಲಲ್ಲಿ ನೆಲಸಿರಬೇಕೆಂಬುದನ್ನು ಸೂಚಿಸುವ ವಿದರ್ಭದ 'ಮರಹಟ್ಟ' ಎಂಬ ದೇಶೀಯ ಪರ್ಯಾಯನಾಮವು ಐತಿಹಾಸಿಕ ಮಹತ್ವದ್ದಾಗಿದೆ (ಕರ್ನಾಟಿ. ೩೨). **ಮರಹತ** : ಮರಹತನಜಿಕೆಯು ಕಡುಗಲಿ (ಜನುಕಾ. ೬-೪). **ಮರಹಾಟ** : 'ಮರಹಾಟಮೊಗ್ಗೆ' ಪರಾ. **ಮರಾಠ** : ಮರಾಠರಲ್ಲಿ ಪೇಷ್ಮೆಯಾತನ ಪ್ರಸಿದ್ಧವಾದುದು (ಕೂಶ). **ಮಾರಾಟ್ಟ**: ಲಾಟ ಪಾಂಚಾಳ . . . ಸ್ತ್ರೀರಾಜ್ಯ ಕೊಂಗು ಮಾರಾಟ ಮೊದಲಾದ ದೇಶದ ಶರಣಸಂಕುಲಂ ಬರುತಿರ್ದುದುತ್ಸವದೊಳು (ಚಂಶ. ೬-೩೦); ಹಿರಿಮರ ಕಲೆಯಿಂ ದೊರೆಕಿತು ಮಾರಾಟರ ರಾಜ್ಯೋದಯವು (ಕುತಿತೆ.೦೭೩). [←ಮರಾ. ಮರಾಠಾ; ಹಿಂ. ಮರಹಟಾ, ಮರಹತಾ, ಮರಾಠಾ./ಪ್ರಾ. ಮರಹಟ್ಟ, ಮರಟ್ಟ./ಸಂ. ಮಹಾರಾಷ್ಟ್ರ]

**ಮರಾಟಿ**, ಮರಾಠಿ (ಗು). ೧. ಮಹಾರಾಷ್ಟ್ರದೇಶಕ್ಕೆ ಸಂಬಂಧಿಸಿದ; ಮಹಾರಾಷ್ಟ್ರದ: (೩). (ನಾ). ೨. ಮಹಾರಾಷ್ಟ್ರದ ಜನ ಮತ್ತು ಅವರ ಭಾಷೆ: ಆ ಕಾಲದಲ್ಲಿ ಮರಾಟಿಯವರು ಓದುಬರೆಹವನ್ನು ಕಲಿವುದರಲ್ಲಿ ಅಷ್ಟು ಅಕ್ಕರೆಯುಳ್ಳವರಾಗಿರಲಿಲ್ಲ (ಚತ್ರ.ಶ. ೨೬). ೩. ಹಳದಿಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಔಷಧೀಸಸ್ಯ : 'ಮರಾಟಿಮೊಗ್ಗು' ಪರಾ. **ಮರಾಠಿ** : ೧. ಲಗ್ನದ ವಿಧಾನಗಳು ಮರಾಠೀಜನರಂತೆ ಆಗುತ್ತವೆ (ಕಥಾಗಿ. ೦೬೩). ೨. ಮರಾಠಿಯಲ್ಲಿ ಪತ್ರವ್ಯವಹಾರ ಮಾಡಿ ಮರಾಠಿ ಪಟ್ಟಿಗಳನ್ನು ಬೇಡಿಸುವವರಿಗೆ ನೂರಕ್ಕೆ ಒಂದು ರೂಪಾಯಿ ಅಡತಿ ಬಿದ್ದೀತು (ಮುಂಬಜ್ಯ. ೩೬); ಅರ್ಥಾತ್ ಮಾತೆಲ್ಲ ಮರಾಠಿಯಲ್ಲಿತ್ತು (ಸಪುಕ್ಷೀ. ೩೦೬).

[← ಮರಾ. ಮರಾಠೀ; ಹಿಂ. ಮರಹಟೀ, ಮರಹಠೀ, ಮರಾಠೀ./ಪ್ರಾ. ಮರಹಟ್ಟೀ]

**ಮರಾಟಿಮೊಗ್ಗು**, ಮರಹಾಟಮೊಗ್ಗೆ (ನಾ). (ಮಸಾಲೆ ಅಥವಾ ಔಷಧಿಗೆ ಬಳಸುವ) ಒಂದು ಬಗೆಯ ಸಸ್ಯದ ಮೊಗ್ಗು ; ಒಂದು ಬಗೆಯ ಸಂಬಾರಪದಾರ್ಥ : ಮರಾಟಿಮೊಗ್ಗು, ಚೀನಾಸೋಂಪು (ವೈಶಿಸ. ೪೩-೬೯೦). **ಮರಹಾಟಮೊಗ್ಗೆ** : ಕರ್ಪೂರಚೂರ್ಣ ಮತ್ತೆ ಮರಹಾಟಮೊಗ್ಗೆಯು . . . ಮರ್ದಿಸಿದ ತಾಂಬೂಲವುಮನಿತ್ತು (ನಪನೊ. ೨೬-೮೩).

[ಮರಾಟ + ಮೊಗ್ಗು$_3$ (< ಮೊಗ್ಗೆ)./ತಮಿ. ಮರಾಟ್ಟಿಮೊಕ್ಕು; ತೆಲು. ಮರಾಟಿಮೊಗ್ಗ]

**ಮರಾಠ** 'ಮರಾಟ' ನೋ.

**ಮರಾಠಿ** 'ಮರಾಟಿ' ನೋ.

**ಮರಾಮತ್ತು**, ಮರಹಮ್ಮತ್, ಮರಹಮ್ಮತ್ತು (ನಾ). ೧. ಸರಿಪಡಿಸುವಿಕೆ; ದುರಸ್ತಿ; ಜೀರ್ಣೋದ್ಧಾರ: ತ್ರಿಕೂಟಾಚಲದ ಮೂರು ಶಿಖರಗಳು . . . ಮರಾಮತ್ತು ತತ್ತ್ವಗಳಿಂದ ನೋಡಿದರೆ ಅಷ್ಟು ಭದ್ರವೇನು ಕಂಡುಬರುವುದಿಲ್ಲ (ಹೊಯ್ಸಳಾ. ೦೬). **ಮರಹಮ್ಮತ್**: ೨. ಕಟ್ಟಡ ನಿರ್ಮಾಣ ; ವಾಸ್ತುರಚನೆ : ರೂರ್ಕಿ ಎಂಬ ಊರಿನಲ್ಲಿ ಇಂಜನೀರಿಂಗ್‌ಕಾಲೇಜ್ ಅಂದರೆ ಮರಹಮ್ಮತ್ ವಿಷಯಗಳನ್ನು ಬೋಧಿಸುವ ಪ್ರಖ್ಯಾತ ಪಾಠಶಾಲೆ ಇದೆ (ಭೂಗೋಳ. ೩೩). **ಮರಹಮ್ಮತ್ತು** : ೧. ನೀ ಬೇಗ ಮರಹಮ್ಮತ್ತು ಮುತ್ಸದ್ದಿಯನು ಕರದುಕೊಂಡ್ಹೋಗಿ (ಕರ್ನಾಶ. ೩೦-೪೦) ; ಮುಜರಾಯಿ, ಮರಹಮ್ಮತ್ತು ಇವು ಆ ಕಾಲದಲ್ಲಿ ಖರ್ಚಿನ ಮುಖ್ಯವಾದ ಬಾಬುಗಳು (ಮಹಾಶಂ. II, ೬೦).

ಮರಾಮತ್ತುಇಲಾಖೆ, ಮರಹಮ್ಮತ್‌ಇಲಾಖೆ=ಲೋಕೋಪಯೋಗಿ ಇಲಾಖೆ : ಮರಾಮತ್ತು ಇಲಾಖೆಗೂ ಕಾರ್ಮಿಕ ಇಲಾಖೆಗೂ ಪತ್ರಗಳನ್ನು ಬರೆದು . . . ವಿಚಾರಿಸಿದರು (ಕಸುಹೊ. ೩); ರಸ್ತೆಯ ಉದ್ದವನ್ನು ಎಷ್ಟು ಜಾಗರೂಕತೆಯಿಂದ ಮರಹಮ್ಮತ್‌ಇಲಾಖೆಯವರು ಅಳೆದಿರುವರೋ . . . ಯಾರೂ ಇಲ್ಲವೆನ್ನುವ ಹಾಗಿಲ್ಲ (ಕ್ಷೇತ್ರಚಿ. ೨೬೪).

[←ಅರ. ಹಿಂ. ಮರಮ್ಮತ್]

**ಮರಾಯಿ** 'ಮರವಿ' ನೋ.

**ಮರಾಲ**, ಮರಾಳ$_1$ (ಗು). ೧. ಮೃದುವಾದ ; ಕೋಮಲವಾದ. (ನಾ). ೨. ಹಂಸಪಕ್ಷಿ. ೩. ಕಾಡಿಗೆ ; ಅಂಜನ. ೪. ಕುದುರೆ. ೫. ಮೋಡ ; ಮೇಘ. ೬. ಖಳ ; ಕಪಟಿ. ೭. ಕಾರಂಡವ ಪಕ್ಷಿ. ೮. ದಾಳಿಂಬೆಗಿಡಗಳಿರುವ ವನ. **ಮರಾಳ$_1$** : ಅಪಾಬ್ಧಿಗೆ ಬರ್ಪ ಜರನ್ಮರಾಳಪೋ ಒಡಿದುಮೆನಲ್ಕೆ ಮೆಲ್ಲನಿಟಿದತ್ತು . . . ಶಶಾಂಕಮಂಡಲಂ (ಕಾದಂಪೂ. ೦೩೬) ; ಮೆಲ್ಲಡಿಯಿಡುವ ಮೃದುಗತಿಗೆ ಮರಾಳಂಗಳ್ ಮನವಿಕ್ಕೆ (ಸಂಶರ. ೦೪-೨೩); ಮಯೂರ ಮರಾಳ . . . ಕುರರೀಪ್ಲವ ಪ್ರಕರದಿಂದ ವಿರಾಜಿಕುಮುನ್ನತಂ ವನಂ (ಹರ್ಷ್ರ.ಕ. ೪-೬೨). ೪. "ಮರಾಳಂ ಹಯ್ಯಂ" (ಕರ್ನಾಶ. ೬). ೯. [ನಾಟ್ಯ] ನೃತ್ಯದ ಒಂದು ಗತಿ ; ದೇಶೀಯ ಭೌಮಚಾರಿಗಳಲ್ಲಿ ಒಂದು ; ಪ "ನಂದ್ಯಾವರ್ತಸ್ಥಾನಕದಲ್ಲಿ ನಿಂತುಕೊಂಡು ಒಂದು ಕಾಲಿನ ಮುಂಗಾಲನ್ನೂ ಇನ್ನೊಂದು ಕಾಲಿನ ಹಿಮ್ಮಡಿಯನ್ನೂ ರೇಚಿತ ಮಾಡಿ ನಡೆಯುತ್ತ ಪಾದಗಳನ್ನು ಮುಂದಕ್ಕೆ ಪ್ರಸರಿಸುವುದು" (ಅಸ್ಕರಂ. ೬೨೦ ಗದ್ಯಸುಚಿಜ) : ಪದಮೆರೆದುಂ ನಂದ್ಯಾವರ್ತದ ಠಾಣದೆ ನಿಂದು ಮಡಮನಗ್ರಮನೊಳ್ಪಿಂದೊಡವಿ ರೇಚಿತದೆ ನಡೆಯಲ್ ಪದಪಿಂ ಮುಂತಣ್ಗೆ ನೀಡಲದುವೆ ಮರಾಳಂ (ಅಸ್ಕರಂ. ೬-೬೩). [ಸಂ.]

**ಮರಾಲಕ** (ನಾ).ಹಂಸ ; ಮರಾಲ : ಚಣಮರಾಲ [ಶಾಶಂ. ೪]ಕಗಮನೆ ಬಂದಳು (ಬಸತ್ರ. ೩೦-೦೦). [ಸಂ.]

**ಮರಾಲಪದಿ**, ಮರಾಳಪದಿ (ನಾ). ಒಂದು ಬಗೆಯ ಸಸ್ಯ; ಹಂಸಪಾದಿ: "ಹಂಸಪಾದಿ . . . ಮರಾಲಪದಿ, ಘೃತಮಂಡಲಿ" (ಶಸ್ತ್ರ.ಶ. ೩೪).

**ಮರಾಳಪದಿ**: "ತ್ರಿಪದಿ ಧೃತಮುಂಡಳೀ ಮರಾಳಪದಿಯೆನೆ ಹಂಸಪಾದಿ" (ಛಂಗಸಾ. ೨೨-೩೯). [ಸಂ. ಮರಾಲಪದೀ]

**ಮರಾಲಯಾನೆ, ಮರಾಳಯಾನೆ** (ನಾ). ಹಂಸದಂತೆ ಮಂದಗತಿಯಲ್ಲಿ ನಡೆಯುವವಳು ; ಮೃದುವಾದ ನಡಗೆಯುಳ್ಳವಳು : (೧). **ಮರಾಳಯಾನೆ** : ಸುಚಿರ ಮರಾಳಯಾನೆಯರಪಾಂಗಮರೀಚಿಚಯಂ ತ್ರಿವರ್ಣಾವಕ ಗಟ್ಟಿಯಿಸೆ (ಕಂಪ್ರತಿ· ೭-೦೦೫). [ಸಂ. ಮರಾಲಯಾನಾ]

**ಮರಾಳ₁** 'ಮರಾಲ' ನೋ.

**ಮರಾಳ₂** 'ಮಲಾರ₂' ನೋ.

**ಮರಾಳಗತಿ** (ನಾ). = ಮರಾಲಯಾನೆ : ಮರಾಳಗತಿಗಳ್ ಚಕ್ರಾಂಕ ವಕ್ಷೋಜಮಂಡಳೆಯರ್ ವರ್ತಿಸಿದರ್. ಕುವರಾರನ ಮನಸ್ಕ್ರೀಸಾರಕಾಸಾರ ದೊಳ್ (ಪುಕ್ಕ.ಕಿ· ೦೨-೦೦೨). [ಸಂ. ಮರಾಲಗತಿ]

**ಮರಾಳಗಾಮಿನಿ** (ನಾ). = ಮರಾಲಯಾನೆ : ವಾರಿಜಾನನೆಗೆ ಮರಾಳ ಗಾಮಿನಿಗೆ . . . ಸೀಮೆಯಾಯ್ತು ಜೀವನದಳಿಲಾಷೆ ಕಂತುಪರಿತಾಪದೊಳ್ (ಪುಕ್ಕ.ಕಿ· ೯-೬೯). [ಸಂ. ಮರಾಲಗಾಮಿನೀ]

**ಮರಾಳತೂಳ** (ನಾ). ಹಂಸದ ತುಪ್ಪುಳ ; ಹಂಸತೂಲ : ಶಯನ ಸ್ಥಾನದೊಳ್ ದುಕೂಲಪ್ರಚ್ಛದಾಚ್ಛಾದಿತ ಮರಾಳತೂಳಶಯ್ಯಾತಳ ಮನಲಂಕರಿಸಿದಲ್ಲಿ (ಶಗಿಪ. ೦೦-೩೯ ಶ). [ಸಂ. ಮರಾಲತೂಲ]

**ಮರಾಳನ್ಯಾಯ** (ನಾ). [ತರ್ಕಶಾ] ಲೌಕಿಕನ್ಯಾಯಗಳಲ್ಲಿ ಒಂದು ; ಹಂಸವು ನೀರು ಬೆರೆತ ಹಾಲಿನಲ್ಲಿ, ಹಾಲನ್ನು ಮಾತ್ರ ಹೀರಿಕೊಂಡು ನೀರನ್ನು ತೊರೆಯುವ ಕ್ರಮ ; ಹಂಸಕ್ಷೀರನ್ಯಾಯ : ಪಾಪ ಪುಣ್ಯಂಗಳಂ ನೆರೆ ಮರಾಳನ್ಯಾಯಮಾಗ್ಯೆದೆ ವಿಂಗಡಿಪ . . . ಸಾಗರದ ಪಯೋಳಿಹ ಗಂಭೀರ ಗುಣ್ಣನಿಂ ತನ್ನನಿಂ ಕೇಳವನಿಪಾಲತಿಲಕ (ಹಂಸಾರಾ· ೨-೦-೬೦). [ಸಂ. ಮರಾಲನ್ಯಾಯ]

**ಮರಾಳಪದಿ** 'ಮರಾಲಪದಿ' ನೋ.

**ಮರಾಳಯಾನೆ** 'ಮರಾಲಯಾನೆ' ನೋ.

**ಮರಾಳಿ** (ನಾ). ಹೆಣ್ಣುಹಂಸ : ಅಗಟಿನ್ ವಾರ್ಧಿಯಂ ಕೀಟ್ಟಡಿಕುಂ ನಾನಾಮರಾಳೀಟಪುಳಕಳಕಳಧ್ವಾನಸಂತಾನದಿಂದಂ (ಶಗಿಪ. ೨-೦೯); ಸರಸಿ ರುಹಂಗಳಿಂದಿಚಿರ ಮಾತ್ರಮರಾಳಿಗಳಂತೆ (ಶಪಂಕಿ· ೬-೩). [ಸಂ. ಮರಾಲೀ]

**ಮರಿ** 'ಮಱಿ' ನೋ.

**ಮರಿಗಂಚಿ** (ನಾ). ಮದುವೆಯಲ್ಲಿ ನಡೆಸುವ ಒಂದು ಸಂಪ್ರದಾಯದ ಆಚರಣೆಯ ವಿಧಿ ; ಕಿರಿಗಂಚಿಯ ಮಾರನೇದಿನ ನಡೆಸುವ ಶಾಸ್ತ್ರ : ಇಲ್ಲಿಗೆ ಕಿರಿಗಂಚಿ ಮುಗಿಯಿತು. ಮಾರನೆಯ ದಿನ ಮರಿಗಂಚಿ. ಹೆಣ್ಣಿನ ಮನೆಯಲ್ಲಿ ಗಂಡಿಗೆ . . . ಆರತಿಎತ್ತುವುದು ಮುಂತಾದ ಶಾಸ್ತ್ರಗಳು ನಡೆಯುತ್ತವೆ (ಪವಕ್ಕಕು· ೦೦೫). 'ಕಿರಿಗಂಚಿ' ಪರಾ. [?]

**ಮರಿಗನಮರ** (ನಾ). ಒಂದು ಬಗೆಯ ಮರ : " ಚರ್ಮರಂಗಾ- ಮರಿಗನಮರ " (೬ಶಿ೦. ೫೫). [? + ಮರ₁]

**ಮರಿಚಿ** 'ಮರವಿ' ನೋ.

**ಮರಿಚ** (ನಾ). ಒಂದು ಬಗೆಯ ಸಂಬಾರಪದಾರ್ಥ ; ಮೆಣಸು : " ವೇಲಜಂ, ಮರಿಚಂ, ಊಷಣಂ– ಈ ೩ ಮೆಣ (ಬ)ಸು " (ಶಶಾಯು. ೦೦೦-೯೩೨) ; ಕುರರಕುಲತುಂಡಖಂಡಿತಮರಿಚಲತಾಪ್ರಚುರುರುಚಿರನವ ಪಲ್ಲವದಿಂ . . . ಸೊಗಯಿಸುಗುಂ (ಕಾರಂಕು· ೮೫); ಮರಿಚಪ್ರಾಕೀರ್ಣ ವರ್ಣಂ ಕುರರತನುವಂ . . . ಕೊರ್ವಿಸೆ ಸೊಗಯಿಪುದೀ ಕಾನನೋದ್ದೇಶಂ (ಶಿಕ್ಕ.ಕಿ· ೫-೬೯). [ಸಂ.]

**ಮರಿದುಂಬಿ** 'ಮಱಿದುಂಬಿ' ನೋ.

ಮರಿಪಿಟ್ಟು (ನಾ). ಒಂದು ಬಗೆಯ ಆಭರಣ (?) : ಮುಡಿಯೊಳಿಡುವ ಮಾಲೆಗಳುಂ ಕಿವಿಯೊಳಿಡುವೋಲೆಗಳುಂ ಮರಿಪಿಟ್ಟು [ಶಾಶಾಂ. ಮರೆವ ಪಿಟ್ಟ· ಅರುಪಿಂಗಳ]ಗಳುಂ ವಿಟ್ಟಕೊಳ್ಳ ಬೊಟ್ಟುಗಳುಂ ಮಿಡಿವ ಕಾಡಿಗೆಗಳುಂ . . . ಮರಿಪಿಟ್ಟುಗಳಂ ತೀವುವ ನನೆಯಕ್ಕಿಗಳುಂ . . . ಎಸೆಯೆ (೦೯೦ಾ೫. ೭-೬೮ ಶ). [?]

**ಮರಿವುಗೊಳ್** (ಕ್ರಿ). ಸುವಾಸನೆಯನ್ನು ಪಡೆ : ಕಂಪಿನ ಕಣಿಯ ನೋಡೆದಂತೆ ಕಂಪಿನ ಕಂಪಿನ ಮಂಜರಿಯಂತೆ ಮಂಜರಿಸಿ ಮಗಮಗಿಸಿ ಮರಿವುಗೊಂಡು ಸೊಬಗು ಕೋಂಬುಗೊಂಡರಿಸಿನದ ಕೊಂಬುಗಳಂ ಸೊಪ್ಪು ಗುಟ್ಟಿ (೦೯೦ಾ೫· ೦೨-೬೭ ಶ). [<ಮರು₂ + ಕೊಳ್₁]

**ಮರಿಮಗ** 'ಮಱಿಮಗ' ನೋ.

**ಮರಿಮಗಳು** (ನಾ). ಮೊಮ್ಮಗನ ಮಗಳು ; ಪ್ರಪೌತ್ರಿ : ಇವಳು ಅವರ ಮರಿಮಗಳು (ದೂಕ). [ಮರಿ (<ಮಱಿ)+ ಮಗಳು(<ಮಗಳ್)]

**ಮರಿಮಿಂಚು** (ನಾ). ಮಿಂಚಿನ ತುಂಡು : ಚಿಮ್ಮಿದುದು ಜಿಂಕಮರಿ ಯೊಂದು . . . ಕರಿಮುಗಿಲ್ಲಿಬ್ಬದೀಬೊಗದ ಮರಿಮಿಂಚಿನಲ್ (ಶಶ್ರಾಂಗ. ೩-೭೩). [ಮರಿ (<ಮಱಿ) + ಮಿಂಚು₂]

**ಮರಿಮೀಸು** 'ಮಱಿಮೀಸ' ನೋ.

**ಮರಿಮೊಮ್ಮ** (ನಾ). ಮೊಮ್ಮಗನ ಮಗ: ನಿನ್ನಜ್ಜ ಮುತ್ತಜ್ಜ ಮೂಲಜ್ಜ ರೆಲ್ಲರುಂ . . . ನಿನ್ನ ಮಗ ಮೊಮ್ಮ ಮರಿಮೊಮ್ಮರೊಳು ಜೀವಿಪ್ಪರ್ (ಶುಂಕುಕ. ೩೩೯). [ಮರಿ (< ಮಱಿ) + ಮೊಮ್ಮ (<ಮೊರ್ಮ₁)]

**ಮರಿಯಸೆ** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀ ಬಿಜಯಿತನು ಮರಿಯಸೆಯೊಳ್ ಭಗವತಿಯಂ ಪರಿಷ್ಠಿಗೆಯ್ದುದೊಡೆ (ಪ್ಯಾಅ. ೦೯೨೯, ೩೬-೨; ೫ಹು ೬೬). [?]

**ಮರಿಯಾದಿ** 'ಮರಿಯಾದೆ' ನೋ.

**ಮರಿಯಾದೆ, ಮರಿಯಾದಿ** (ನಾ). ೧. ಎಲ್ಲೆ; ಗಡಿ; ಸೀಮೆ : ಮರಿಯಾದೆ ಗೆಟ್ಟಿದ ಬೆಟ್ಟವಿದ್ದುದು ಮಾಲ್ಯವಂತಗಿರಿ (ಕುವ್ಯಾಸ. ೩-೫೨). ೨. ಗೌರವ; ಮನ್ನಣೆ : ಭೂತಳಾಧಿಪ ಮುನಿದು ಪೇಳೆನಿರ್ದಾದನೇಬೇಸೀತಗಿದು ಮರಿಯಾದೆಯೆನೆ (ಹರಿಶ. ೦೦-೯); ನಿಮ್ಮೊಳಿಹುದೆಮಗಾವ ಮರಿಯಾದೆಗಳು ದೂರದ ಸೇವೆ ತಾ ನಮಗುಚಿತವೆಂದಮ (ಶ್ರಕುಊ. ೫-೩೨). ೩. ಅರ್ಹತೆ; ಯೋಗ್ಯತೆ; ಔಚಿತ್ಯ : ಅವರವರ ಮರಿಯಾದೆ ಮೀರೆಯೊಳವರವರ ಸತ್ಕರಿಸಿ (ಶಶಕ. ೩-೫೦). ೪. ಮಾನ್ಯ; ಕೊಡುಗೆ : ಹಂನೆರಡು ಹೊಂನ ಮರಿಯಾದೆ ಕೋಲುಕೊಳಗ ದೇವರಿಗೆ. . . ಕೊಟ್ಟರು (ಶಾ. XXIII, ೦೯೫-೬೦; 1256). ೫. ಪದ್ಧತಿ ; ನಿಯಮ ; ಸಂಪ್ರದಾಯ : ಈ ಮರಿಯಾದೆಯನಟ್ಟೆರ್. . . ಓನ್ದಾರ್ (ಎಕ· VI, ಕೊಪ್ಪ· ೩೯-೦೯; 675); ವಿಟ್ಟು [ಬಿ]ದಿರೊಸ್ವರ್ಗಗ್ರಸ್ತೈಜಿಯ ಮರಿಯಾದೆ ಕೊಟ್ಟರ್ (ಎಕ· III (ಆ). ಶಿಂಹಸ. ೦೨೯-೯; 810); ಆ ಮರಿಯಾದೆಯಲ್ಲಿ ಜಿಬದೊಳು ಕುಳದೊಳಂ ಕ್ಷಳದೊಳಂ ಲಕಾರದೊಳಂ ಪ್ರಾಸಕ್ಕೆ ಸಲ್ಲದು (ಕಶಪಾಂ· ೯೦). ೬. ರೀತಿ ; ತರಹ : ಎಲಚಿಯ ತನಿವಣ್ಣಿನ ಮರಿಯಾದೆಯ ಕವದುರಗೆ . . . ಕಣ್ಣಾವಲ್ಲಯೆಂಬರು (ಅಸ್ಕಕ್ಕ· ೨-೨೦ ಟೀಕು); ಗುಲುಗಂಜಿಯ ಮರಿ ಯಾದೆಯಲ್ಲಿ ಒಳಗೆ ವಿಷವ ತುಂಬಿಕೊಂಡು, ಹೊರಗೆ ರಮ್ಯವಾದಂಥಾ ಸ್ತ್ರೀಯರುಗಳಲ್ಲಿ ಮನುಷ್ಯನು ಹೇಗೆ ವಿಶ್ವಾಸವ ಮಾಡಬೇಕು ? (ಚಿಪ್ಪ೦. ೬೬-೦೯). **ಮರಿಯಾದಿ** : ೫. ಬಾಣಾಗಾವುಣ್ಡ ಬಾಳ್ಗಟ್ಟು ಮರಿಯಾದಿಯೊಳೆ ಸಲ್ವುದು (ಎಕ· IV (೩). ಶಾಕುಶ. ೩೩೬-೦೦; ೯). [< ಸಂ. ಮರ್ಯಾದಾ]

**ಮರಿಯಾನೆ** 'ಮಱಿಯಾನೆ' ನೋ.

**ಮರಿಯಿಕ್ಕು** (ಕ್ರಿ). ೧. (ಪ್ರಾಣಿ ಪಕ್ಷಿಗಳು) ಮರಿಯನ್ನು ಹಾಕು,— ಈಯು : ಹಲವು ಹಾಡಿನ ಹಕ್ಕಿ ಹಲವು ಭಾವದ ಹಕ್ಕಿ ಬಂದಿಲ್ಲಿ ಬೀಡನು ಬಿಟ್ಟು ಚಿಲಿಪಿಲಿಯೆನುತಿವೆ ಮರಿಯಿಕ್ಕಿ ಮುದವುಕ್ಕಿ (ಇಂಚಾಶ. ೬೬-೯). ೨. (ಅಲಂ) ಮುಂದುವರಿ; ಸಾಗು : ಮುಂದೆ ಮಾತು ಮರಿಯಿಕ್ಕಿದವು (ಕಂದುಬಿ· ೬೫). [ಮರಿ (< ಮಱಿ) + ಇಕ್ಕು]

**ಮರಿಹಕ್ಕಿ** 'ಮಱಿವಕ್ಕಿ' ನೋ.

**ಮರೀಚ** (ನಾ). = ಮರಿಚ : ಪಲ್ಲವಿಕೆಯಿಂ ಭವನಹರಿಣಂಗಳ್ಗೆ ಮರೀಚ ಪಲ್ಲವದಳಂಗಳಂ ನೀಡಲುಂ. . . ಪೇಟ್ವ ಮನೋಹರಾಲಾಪಂಗಳಂ ಕೇಳುತ್ತುಂ (ಚಾರುವ. ೦೦೦೬). [ಸಂ.]

**ಮರೀಚಿ** (ನಾ). ೧. ಕಿರಣ ; ರಶ್ಮಿ : "ಉಸ್ರಃ . . . ಮರೀಚಿಃ . . . ಗೌಃ—ಈ ೩೨ ರಶ್ಮಿಗಳ ಪೆಸರ್" (ಶಬ್ದಮ. ೯-೩೯) ; ಪ್ರಚಂಡ ಮಾರ್ತಾಂಡನಲರ್ಚುಗೆನ್ನ ಹೃದಯಾಂಬುಜಮಂ ನಿಜವಾಙ್ಮರೀಚಿಯಿಂ (ಶಂಕಪಾ. ೦-೯); ದಿನಕರಮರೀಚಿಯಿಂದಾದಪ್ಪರಸಿಯೊಳುದಿಸಿದ ಗೌರಿಗಂ . . . ಹಂಸಂಗಂ ಮಗಳಾಗಿ ಮಹಾಶ್ವೇತೆಯೆಂಬ ಪೆಸರಿಂ ನೆಗೞ್ತೆವೆತ್ತಳ್ (ಚಾರುವ. ೬೯೯). ೨. ಬೆಳಕು ; ಕಾಂತಿ : ತೋರಮುತ್ತಿನೈಸರದ ಮರೀಚಿಯಿಂ ಸಿರಿಯ ತಾಯ್ಮನೆ ರಾಮನ ಪೇರುರಂ ಮನೋಹರ ಮೆನಿಸಿತ್ತು (ಶಂಪಾಪ. ೩-೦೫೯). ೩. ಬಿಸಿಲುಗುದುರೆ ; ಮೃಗಜಲ : ಬಯಲ ಮಱುಲಮಗಿರ್ದ ಮರೀಚಿಯಂ[ಪಾಠಾಂ. ಮರೀಚನಂ, ಮರೀಚಕನಂ]ತೆ . . . ಗುಹೇಶ್ವರಾ ನಿಮ್ಮ ನಿಲವು (ಅವಚ. ೦-೯); ಬಾಂಬೊಳೆ ಬತ್ತಿತ್ತು ಮರೀಚಿ ಪೊಣ್ಮದುದರಣ್ಯಂ ಬೆಂದುದಾ ಗ್ರೀಷ್ಮದೊಳ್ (ಧಾಪರ. ೩-೩೬). ೪. ಕೃಪಣ; ಜಿಪುಣ. ೫. ಸ್ವಾಯಂಭುವಮನುವಿನಿಂದ ಸೃಷ್ಟಿಯಾದ ದಶಪ್ರಜಾಪತಿಗಳಲ್ಲಿ ಅಥವಾ ಬ್ರಹ್ಮನ ಮಾನಸ ಪುತ್ರರಲ್ಲಿ ಒಬ್ಬ ಮಹರ್ಷಿಯ ಹೆಸರು : "ಕಪಿಲಂ ಮರೀಚಿ . . . ಸುಮಾಂಡವ್ಯರೆಂದು ತಪಗೆಯ್ವ ಮುಖ್ಯಋಷಿಯರೆನಿಕ್ಕು" (ಪಂಪಗದಾ. ೭೬-೦೦); ಅತ್ರಿ . . . ಮರೀಚಿ . . . ಉಪಮನ್ಯು ಮೊದಲಾದಷ್ಟಾಶೀತಿಸಹಸ್ರಋಷೀಶ್ವರರ್ಗನಂತಾಶ್ರಯಂಗಳುಂ (ಶಿವೇಶ. ೨೦೬). [ಸಂ.]

**ಮರೀಚಿಕಾಜಲ** (ನಾ). ಸೂರ್ಯನ ಕಿರಣಗಳಿಂದುಂಟಾಗುವ ನೀರಿನ ಭ್ರಮೆ ; ಬಿಸಿಲುಗುದುರೆ : "ಬಿಸಿಲ್ಗುದುರೆಯುಮಿರದೆ ಬಯಲ್ಗೊಱಿ ಮರೀಚಿಕಾಜಲಮಕ್ಕುಂ" (ಕಶಕಂ. ೯೨); ಮರೀಚಿಕಾಜಲದ ವಳಿಯಂತೆ . . . ಆ ಸಂಗ ನಿಃಸಂಗ ಐಕ್ಯಸ್ಥಲ (ಶೂನ್ಯಸಂ. ೦೦೩-೯೯೬); ಪರಿಪೂರ್ತಿರ್ಪ ಮರೀಚಿಕಾಜಲ . . . ತೋಱುಮೈಸಿರಿ ಪುಲ್ಲಗ್ರದ ತುಂತುಱ್ಗ (ಸೋಮೇಶ. ೯೦). [ಸಂ.]

**ಮರೀಚಿಕೆ** (ನಾ). = ಮರೀಚಿಕಾಜಲ : ನೀರಡಿಕೆಗೆ ಮರೀಚಿಕೆಯಿಂದ ತಣಿವಹುದೆ (ಕೌಶಿಕ. ೩೯-೦೦); ಜಳಜಸಖಂ ಜಳಕಿರಣಾವಳಿಯಿಂ ಪಿಳಿದಂತೆ ಪೊಲ್ ಮರೀಚಿಕೆ[ಪಾಠಾಂ. ಕೆ] ಮೞುಗಿಂ (ಧಾಪರ. ೩-೩೬). [ಸಂ. ಮರೀಚಿಕಾ]

**ಮರೀಚಿಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು : ಸನತ್ಕುಮಾರಪುರಾಣ . . . ಮರೀಚಿ[ಪಾಠಾಂ. ಮರೀಚ, ಮಾರೀಚ, ಮಾರೀಚ್ಯ]ಪುರಾಣ ಭಾರ್ಗವಪುರಾಣಮೆಂಬವೇ ಆಯಾಯ ನಾಮಧೇಯ ಮುಳ್ಳವರಿಂ ನಿರೂಪಿತಂಗಳಾದ ಹದಿನೆಂಟು ಉಪಪುರಾಣಂಗಳು (ಏಳೇಶ. ೯). [ಸಂ.]

**ಮರೀಚಿಮಾಲಿ** (ನಾ). ಕಿರಣಗಳಿಂದ ಆವೃತನಾದವನು ; ಸೂರ್ಯ : ದ್ವಾದಶಗಣಸರಸ್ಸರೋಜವಿದಳನಶೋಭಾಪ್ರಭಾವಪ್ರಸವಪಾರೀಣದಿವ್ಯವಚನ ಮರೀಚಿಮಾಲಿರೋಚಿರ್ನಿಚಯತ್ರಿಜಗಜ್ಜೂಡಾಮಣಿ (ಶಬ್ದಚಿಂ. ೯-೩೯ ವ). [<ಸಂ. ಮರೀಚಿಮಾಲಿನ್]

**ಮರು**₁ 'ಮಱು₁' ನೋ.

**ಮರು**₂ (ನಾ). ಸುವಾಸನೆಯ ಎಲೆಗಳನ್ನುಳ್ಳ ಒಂದು ಬಗೆಯ ಸಸ್ಯ ; ಮರುಗ : "ಮರು ಮರುವಕಂ ಫಣಿರ್ಜಕವಕ್ಕು" (ಪಂಪಗದಾ. ೩೯-೨೬). [< ಸಂ. ಮರುವ./ತಮಿ. ಮರು]

**ಮರು**₃ (ನಾ). ೧. ನೀರಿಲ್ಲದ ಪ್ರದೇಶ ; ಮರಳುಗಾಡು : "ಮರುಃ, ಧನ್ವಾ—ಈ ೨ ನೀರಿಲ್ಲದ ಭೂಮಿ" (ಶಬ್ದಮ. ೨೬-೩) ; ಸಂಕಷ್ಟಗಳ ಮರುವ ದಾಂಟಿಸಿ ಪಾರಗಾಣಿಸುವ ಒಂಟೆ ಇವನು (ಗೋಲ್ಗೊಥಾ. ೨-೯೬) ; ಜೀವನದ ದೃಶ್ಯ ಮರುವಿನ ಬಿಸಿಲ್ಗುದುರೆ (ಮಂಕುತಿ. ೯೧೯). ೨. ಶಿಲೆ; ಬಂಡೆ. ೩. ಕೆಂಪುಗೋರಂಟಿ ಗಿಡ. ೪. ಒಂದು ದೇಶ ಮತ್ತು ಅಲ್ಲಿ ವಾಸಿಸುವ ಜನ : ಹಮ್ಮೀರ ಡೊಕ್ಕಾರ ತುರುಷ್ಕ ಮರುಪ್ರಭೃತಿ ಭೂಪಾಲಕರಿಂ ಭಯಾನಕರಸಮುಂ . . . ನೆಗೞುತ್ತುಮಿರೆ (ಜಗಂ. ೨-೩೯ ವ) ; ವಿದರ್ಭ ಸೌರಾಷ್ಟ್ರ ಕುರು ಮರು ಪಂಚಪಾಂಚಾಳ (ಎಕ. V. ಬೇಲೂರು. ೩-೯೩; 1397 ?). [ಸಂ.]

**ಮರುಂಗುಳಿ** (ನಾ). (?) : ಹುಲಿಗಿಲ ಬೇರ್ . . . ಕಡುಸಿಗೆಯ ಬೇರ್ ಮರುಂಗುಳಿಯೊಳಗ್ಗಲಿಸಿರೆಯುರುಜೆಯಕ್ಕು ಬಲವರ್ಧವಕ್ಕುಮಗ್ನಿದೀಪನ ಮಕ್ಕುಂ (ಕಲ್ಯಾಕಾ. ೯-೨೨). [ ? ]

**ಮರುಕ** 'ಮಱುಕ' ನೋ.

**ಮರುಕಗೊಳ್ಳು** (ಕ್ರಿ). ಕನಿಕರವನ್ನು ತೋರು ; ದಯಮಾಡು : ನಮ್ಮ ಸ್ಥಿತಿಯನ್ನೂ ಅಂತಸ್ತನ್ನೂ ಕಂಡುಕೊಂಡು ಅವರು ನಮ್ಮ ಮೇಲೆ ಮರುಕಗೊಂಡರು (ಶ್ರೀಕಾಶ. ೦೦೬). [ಮರುಕ (< ಮಱುಕ) + ಕೊಳ್ಳು₁ (< ಕೊಳ್₁)]

**ಮರುಕರ** (ನಾ). ಒಂದು ದೇಶದ ಹೆಸರು : ಮರುಕರವಿಷಯೇ ಗ್ರಾಮಂ ಕೂಡಲೂರನ್ನಾಮಸಂಜ್ಞಿತಮ್ (ಮೈಆಂ. ೦೯೩೦, ೯೬-೦೦ ; 475). 'ಮಱುಗರೆ' ಪರಾ. [ ? ]

**ಮರುಕಲುಗಿಡ** (ನಾ). ಒಂದು ಬಗೆಯ ಸಸ್ಯ : (ಮೈಶಿ. ೩೬-೦೦೦೯). [ಮರುಕಲು₁ + ಗಿಡ (< ಗಿಡು)]

**ಮರುಕಳಿ** 'ಮಱುಕಳಿ' ನೋ.

**ಮರುಕಳಿಕೆ**, ಮರುಕೊಳಿಕೆ (ನಾ). ಮತ್ತೆ ಬರುವಿಕೆ ; ಪುನರಾವರ್ತನೆ : ಮೊದಲ ಚರಣದಲ್ಲಿ ಮೂಲದ ಪ್ರಾಸದಿ ಮರುಕಳಿಕೆ ಹೋಯಿತು (ಪಾಶನೀ. ೯೮). **ಮರುಕೊಳಿಕೆ** : ಗತಜೀವನ ಆದಷ್ಟೇ ಸಹಜವಾಗಿರಲಿ . . . ಪ್ರಸಕ್ತ ಪರಿಸ್ಥಿತಿಯಲ್ಲಿ ಅದರ ಮರುಕೊಳಿಕೆಯೇ ಸಾವಿಗೀಡೆಯಾಗು ವಂತಿತ್ತು (ಕುಶರು. ೩೯೩). [ ಮರುಕಳಿಸು (< ಮಱುಕಳಿಸು) +—ಇಕೆ ]

**ಮರುಕಳಿಸು** 'ಮಱುಕಳಿಸು' ನೋ.

**ಮರುಕು**₁ 'ಮಱುಗು' ನೋ.

**ಮರುಕು**₂ 'ಮಱುಕ' ನೋ.

**ಮರುಕುಳಿ** 'ಮಱುಕುಳಿ' ನೋ.

**ಮರುಕೆದೆ** 'ಮರುಗೆರ್ದೆ' ನೋ.

**ಮರುಕೊಳಿಕೆ** 'ಮರುಕಳಿಕೆ' ನೋ.

**ಮರುಕೊಳಿಸು** 'ಮಱುಕಳಿಸು' ನೋ.

**ಮರುಗ**, ಮರುಗು₁ (ನಾ). ಸುವಾಸನೆಯ ಎಲೆಗಳುಳ್ಳ ಒಂದು ಬಗೆಯ ಸಸ್ಯ : "ಸಮೀರಣಃ, ಮರುವಕಃ . . . ಜಂಬೀರಃ — ಈ ೫ ಅಜ್ಜಗೆ. ಕೆಲಕಬರು ಮರುಗವೆಂಬರು" (ಶಬ್ದಮ. ೦೦೯); ಮರುಗ ಮಲ್ಲಿಗೆ ಪಚ್ಚೆ ಮುಡಿವಾಳಕ್ಕೆ ಪರಿಮಳದುದಕವನೆಱಿದವರಾರಯ್ಯ (ಬಸವಣ್ಣ. ೩೯ ೦೦-೩); ಮರುಗ ಮಾಲತಿ . . . ಕರವೀರಾದಿ ಗಿಡುಲತೆಯ ಪರಿಪರಿಯ ಹೂದೋಟಗಳ ಹೊಯ್ದೊಱಿಸಿದನು (ಕೃಷ್ಣರಾ. ೩-೯-೧೩); ಮರುಗವೂ ನಮ್ಮ ದೇಶದ ಗಿಡವಲ್ಲ (ಪಾಕಗ. ೩೮). **ಮರುಗು**₁ : ದವನಂ ಮರುಗಿನ ಮಡಿಯೊಂದೊಂದಱುಲಯ್ದು ಈ ಧರ್ಮವನಯ್ಯತ್ತುವರುಂ ಕಾದು ನಡೆಯಿಸುವರ್ (ಕೌಶ್ವ. XI-i, ೦೦೮-೨೦; 1069). [< ಪ್ರಾ. ಮರುಅಗ, ಮರುಅಅ./ ಸಂ. ಮರುವಕ]

**ಮರುಗಳಿಗೆ** 'ಮಱುಗಳಿಗೆ' ನೋ.

**ಮರುಗಿಸು** 'ಮಱುಗಿಸು' ನೋ.

**ಮರುಗು₁** 'ಮಱುಗು' ನೋ.

**ಮರುಗು₂** 'ಮಱುಕ' ನೋ.

**ಮರುಗು₃** 'ಮರುಗ' ನೋ.

**ಮರುಗೆರ್ದೆ**· **ಮರುಕೆದೆ** (ನಾ). ಕನಿಕರವುಳ್ಳ ಮನಸ್ಸು; ದಯಾರ್ದ್ರ ಹೃದಯ : ಸಂತೈಸಿದನ್ ಮರುಗೆರ್ದೆಯ ರಾಘವೇಂದ್ರಂ (ಶ್ರೀರಾಮ. ೩೦೫-೩೮). **ಮರುಕೆದೆ**: ಆ ಮರುಕೆದೆಯ ಬಿಲ್ಲುಸುಳಿ ತನ್ನ ಕೋಮಲಕರದ ಕಿಸಲಯೋಪಮಮೃದುಲರೋಚಿಯ ಬೆರಲ್ಗಳಿಂ ಸೋಕಿ ಸಂತಯ್ಸುದುದೊ ಸೀತೆಯ ತಪಃಕ್ಲಾಂತಚರಣಾರವಿಂದಗಳಂ (ಶ್ರೀರಾಮ. ೯೬೩-೭). [ಮರುಗು₂ (<ಮಱುಕ) + ಎರ್ದೆ]

**ಮರುಚಣ** (ನಾ). ಮುಂದಿನ ಕ್ಷಣ; ತತ್ಕ್ಷಣ : ಬಂದು ಈ ಚಣದೊಳು ಸಂದು ಮರುಚಣದೊಳು ಪ್ರತಿಭೆಯು ನೀ ಕಾಡಬಹುದೆ (ಶಂಖನಾ. ೨೦೦-೩೬); ಹೇಸಿ ಜನ್ಮಕೆ ರೋಸಿ ಆತ್ಮಹತ್ಯೆಗೆ ಒಲಿವೆ ಮರುಚಣವೆ ಕೇಳುವೆನು ಜೀವನದ ಗಾನ (ಚಿತ್ರಾಂ.೩-೮). [ಮರು₁ (<ಮಱು₁) + ಚಣ₁]

**ಮರುಚಲು** 'ಮಱುಚಲು' ನೋ.

**ಮರುಚುನಾವಣೆ** (ನಾ). ಸಾರ್ವತ್ರಿಕ ಚುನಾವಣೆಯ ನಂತರ ಕೆಲವು ಸಲ ಬೇರೆಬೇರೆ ಕಾರಣಗಳಿಗಾಗಿ ಮತ್ತೆ ನಡೆಯುವ ಚುನಾವಣೆ : ಒಬ್ಬ ಸದಸ್ಯ ತೀರಿಕೊಂಡುದರಿಂದ ಮರುಚುನಾವಣೆ ನಡೆಯಬೇಕಾಗಿದೆ (ಜನ). [ಮರು₁ (<ಮಱು₁) + ಚುನಾವಣೆ]

**ಮರುಚ್ಚಾಪ** (ನಾ). ಗಾಳಿಯಂತೆ ಘನಸ್ವರೂಪವಿಲ್ಲದ ಬಿಲ್ಲು; ಇಂದ್ರ ಚಾಪ : ಮದನವೇಗೆ ತತ್ಪತಿಗೆ ಮರುಚ್ಚಾಪದೊಳಮಧಿಪ ಮಿಥ್ಯಾರೂಪದೊಳಂ ಮಾಡದಿರ್ ಗುಣಾರೋಪಣಮುಮಂ ಎನೆ (ಶಂಖಾಮ. ೯-೩೮); ಮರುಚ್ಚಾಪಮೆಂಬ ವಿಚಿತ್ರಾಂಬರದೊಂದು ಚೆನ್ನಮಿಳಿಯುಂ ಮಿಂಚೆಂಬ ಕೊಂಬುಂ ಕರಾಳವೆನಲ್ ಗರ್ಜಿಸಿದತ್ತಗಲ್ದಿನಿಯರಂ ಕಾರೆಂಬ ಮಾರದ್ವಿಪಂ (ಜಗ. ೯-೨೨). [ಸಂ.]

**ಮರುಚ್ಛಿಲ್ಪಿ** (ನಾ). ದೇವತೆಗಳ ಶಿಲ್ಪಿ : ಕಲ್ಪಜಪತಿ ಬೆಸಸೆ ಮರುಚ್ಛಿಲ್ಪಿಗಳಂದ್ಯಾಹಗೇಹಮಂ ಸಮೆದರತಿಸ್ವಲ್ಪಸಮಯದೊಳೆ (ಸುಪ್ರತಿ. ೦೩-೩೬). [ಸಂ. ಮರುಚ್ಛಿಲ್ಪಿನ್]

**ಮರುಜ** (ನಾ). ೧. ಒಂದು ಬಗೆಯ ಪರಿಮಳದ್ರವ್ಯ; ನಖಿ ಎಂಬ ಗಂಧದ್ರವ್ಯ. ೨. ಒಂದು ಬಗೆಯ ಮರ : (*). [ಸಂ.]

**ಮರುಜನ್ಮ** (ನಾ). ಇನ್ನೊಂದು ಹುಟ್ಟು; ಪುನರ್ಜನ್ಮ : ಹೊಸಜನ್ಮ ನರನು ಕರಣತಪನೆಗಳಳಿಯೆ, ಕಾರಣವದೇನಿರಲಿ ಮರುಜನ್ಮವಾತ್ಮಂಗೆ (ಸುಂಕುಳ. ೬೬೬). [ಮರು₁ (<ಮಱು₁) + ಜನ್ಮ]

**ಮರುಜೇವಣಿ** 'ಮಱುಜೇವಣಿ' ನೋ.

**ಮರುಜೀವಣಿ** 'ಮಱುಜೀವಣಿ' ನೋ.

**ಮರುಜ್ಜವ** (ನಾ). ಗಾಳಿಯ ರಭಸ; ವಾಯುವೇಗ : ಮರುಜ್ಜವದಿನಬ್ಜಾಸುರಂ ಮುಸಗಿ ರಾಸಭಂ ಬಂದುಮಾ ವಾಸವಸೈನ್ಯಮಂ . . . ಪಡಲ್ವಡಿ ಸುತ್ತುಮಿರೆ (ಜಗ. ೯-೩೯ ವ). [ಸಂ.]

**ಮರುಟಪಾಲು** (ನಾ). ಪತ್ರ ಮುಟ್ಟಿದ ತಕ್ಷಣವೇ ಬರೆಯುವ ಕಾಗದ; ಮಾರೋಲೆ : ಮರುಟಪಾಲಿಗೆ ಬರೆದು ತಿಳಿಸಿ (ಜುಜ್ಜುಮು. ೯೦). [ಮರು₁ (<ಮಱು₁) + ಟಪಾಲು]

**ಮರುತ** (ನಾ). ೧. ಗಾಳಿ; ವಾಯು : ಮರುತಸುರುಬಿನು ತಾಳು ತೇಲುತೋಲಾಡುತ್ತ ವಿರಮಿಸಾ ಲೀಲೆಯಲಿ (ಸುಂಕುಳ. ೯೦೪). ೨. ಗಾಳಿಯ ಅಧಿದೇವತೆ; ವಾಯುದೇವ : "ಸುರರಾಜನಗ್ನಿ . . . ಮರುತಂ ಕುಬೇರನೀಶಂ ದಿಶಾಧಿಪರು" (ಶಂಗಣ. ೦೭-೦೮). ೩. ಒಂದು ಬಗೆಯ ವಾಹನ; ೪ ಭರತನ ವಾಹನಕ್ಕೆ ಇದ್ದ ಹೆಸರು ಇರಬಹುದು : ಮರುತವನೇರಿ ಬಪ್ಪವನಿಗೆ ತೋರುವಂತೆ (ಶರತ. ೯೯-೩೦). ೪. [ಛಂದ] ಒಂದು ಗಣದ ಹೆಸರು; ಸಗಣ (⏑⏑–) : "ಗುರು ಕಡೆಯೊಳಿರಲು ಮರುತನಕ್ಕು" (ಶಂಗಣ. ೦೦೭-೨೦). [ಸಂ.]

**ಮರುತಕ** (ನಾ). = ಮರುತ ೧ : ನಭದೊಳ್ ಪೂವಟ್ಟೆ ಭೂಮಿಯೊಳ್ ಮರುತಕಂ . . . ಒಪ್ಪುತ್ತಿರೆ ಬಂದಂ ಲೋಕನಾಥಂ ಸ್ವಯಂಪ್ರಭ ತೀರ್ಥೇಶ್ವರಂ (ಶಾಂತಿತ್ರಿ. ೦-೯೦). [ಸಂ.]

**ಮರುತಜ** (ನಾ). ಗಾಳಿಯ ಅಧಿದೇವತೆಯಾದ ವಾಯುವಿನ ಪುತ್ರ; ಹನುಮಂತ : ಬಾಗುರೇ ಪೂತು ಮರುತಜ (ಕೌಶಿಕ. ೨೩-೩೯). [ಸಂ.]

**ಮರುತದಂಡಾವರ್ತ** (ನಾ). ವರ್ತುಲಾಕಾರವಾಗಿ ಸುತ್ತಿಬರುವ ಗಾಳಿ; ಸುಂಟರಗಾಳಿ : ಅವುದೇನಿರದ ಬಯಲಿನೊಳೊಂದು ಮರುತದಂಡಾವರ್ತ ತೋರುವಂತೆ (ಚುಮೋ. ೨-೦೨). [ಸಂ.]

**ಮರುತಪಂಚಕ** (ನಾ). ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂಬ ಪಂಚವಾಯುಗಳು; ಪಂಚಪ್ರಾಣಗಳು : ಧರಣಿ ಮೊದಲೆನೆ ಭೂತಪಂಚಕ ಮರುತಪಂಚಕ ವಿಷಯಮಿಂದ್ರಿಯ ಕರಣ ವಿಪ್ಪತ್ತೈದು ಶಕ್ತ್ಯಾತ್ಮಕನ ಚಿಂತಿಸಿದ (ಶುಭ್ಯಾ. ೩-೦). [ಸಂ.]

**ಮರುತಾಸ್ತ್ರ** (ನಾ). ವಾಯುಮಂತ್ರವನ್ನು ಅಭಿಮಂತ್ರಿಸಿ ಬಿಡುವ ಬಾಣ : ಖಳ ಮರಳಿ ಮರುತಾಸ್ತ್ರವನು ಬಿಟ್ಟನು (ಕೌಶಿಕ. ೩೬-೩೭). [ಸಂ.]

**ಮರುತ್ಕುಜ** (ನಾ). ದೇವತರು; ಕಲ್ಪವೃಕ್ಷ : ವಿಜಗೀಷುವೆನಿಸಿದಾ ಭೂಭುಜವಲ್ಲಭೆ ಮೇರುಮೇಖಲಾಲಕ್ಷ್ಮಿ ಮರುತ್ಕುಜಮಂ ಪಡೆದುದೊ ಪೇಟ್‌ನೆ ವಿಜಯಾಂಬಿಕೆ ಪಡೆದಳಜಿತಭಟ್ಟಾರಕರಂ (ಶಂಖಾಮ. ೦೦-೩೯). [ಸಂ.]

**ಮರುತ್ತನಯ** (ನಾ). ೧. ಗಾಳಿಯ ಅಧಿದೇವತೆಯಾದ ವಾಯುವಿನ ಮಗ. ೨. ಹನುಮಂತ. ೩. ಭೀಮಸೇನ : ತತ್ತನಯಂ ಘನಶೌರ್ಯಮರುತ್ತನಯಂ ವಿತರಣಾಂಶು ಮತ್ತನಯಂ . . . ಬೊಪ್ಪ ದೇವಭೂಪಂ ನೆಗೞ್ದಂ (ಎಕ. XI. ಜಾತಿ. ೩೩-೩೭ ; 1160). [ಸಂ.]

**ಮರುತ್ತರಂಗಿಣಿ** (ನಾ). ದೇವಲೋಕದ ನದಿ; ದೇವಗಂಗೆ : ಮೃಡಂ ಪಾರ್ವತೀಸ್ಪೃಹೆಯಂ ಬಿಟ್ಟು ಮರುತ್ತರಂಗಿಣಿಯನಂಧ್ರಾಲಿಂಗನಂ ಮಾಡುವಂ (ಶಂಖಾಮ. ೬-೯೩) ; ಮಂದೇಭೋತ್ಕರಮಾಂಟೆ ಮರುತ್ತರಂಗಿಣೀಜಳಮಂ ಪೂತ್ಕರಿಸೆ (ಜಾತಿ. ೯-೦೦೯). [ಸಂ. ಮರುತ್ತರಂಗಿಣೀ]

**ಮರುತ್ತ್ರಿಕ** (ನಾ). [ಜೈನ] ಘನೋದಧಿ, ಘನವಾತ ಮತ್ತು ತನುವಾತ ಎಂಬ ಮೂರು ವಾತಗಳು : ಅಧನಾದ್ಯನಿಧನಗುಣಯುತಮಮಕೃತ್ರಿಮ ಮದು ಮರುತ್ತ್ರಿಕಾವೇಷ್ಟಿತಂ (ಅಜಿ. ೦-೯೯). [ಸಂ.]

**ಮರುತ್ಪಥ** (ನಾ). ವಾಯುಮಾರ್ಗ; ಆಕಾಶ : ಮರುತ್ಪಥದೊಳ್ ಮಿಳ್ಳಿಸೆ ಪಟುಗೆ ರಥಂ ರಥಗಳೊಳಿರ್ಚ ತಾಗಿದುವಾಗಳ್ (ಶಂಖಾಮ. ೦೩-೬೬) ; ಶುದ್ಧಿಯಲ್ಲಿ ವ್ಯಕ್ತತೆಯಲ್ಲಿ ಮರುತ್ಪಥದಲ್ಲಿ ಪಂಕಜಾಕರದೆಡೆಯಲ್ಲಿ ತಳ್ತ ತಿಳಿಜೊನ್ನಮಂ (ಜಾತಿ. ೦೩-೯೩). [ಸಂ.]

**ಮರುತ್ಪಾಲಕ** (ನಾ). ದೇವತೆಗಳನ್ನು ಕಾಪಾಡುವವನು; ದೇವೇಂದ್ರ : ತ್ರೈಲೋಕ್ಯಪಾಲಕಂ ಗೋಪಾಲಕನಾಗಿರ್ದ ಲೀಲೆಯಂ ಕಂಡು ಮರುತ್ಪಾಲಕ ನೆನಗಕ್ಷಿಸಹಸ್ರಾಲಂಬನಮಿಂದು ಸಫಲಮೆಂದೀಕ್ಷಿಸಿದಂ (ಜಗ. ೯-೦೦೦). [ಸಂ.]

**ಮರುತ್ಸಖ** (ನಾ). ೧. ವಾಯುವಿನ ಗೆಳೆಯ; ಅಗ್ನಿ. ೨. ದೇವೇಂದ್ರ : "ಬಿಡೌಜಃ . . . ಪುಲೋಮಾರಿಃ, ಮರುತ್ಸಖಃ– ಈ ೧೬ ಇಂದ್ರನ ಹೆಸರು" (ಶಬ್ದ. ೩೬-೩೦). [ಸಂ.]

**ಮರುದಂಪಟ್ಟೆ** (ನಾ). ಒಂದು ಬಗೆಯ ಔಷಧೀ ಸಸ್ಯ : ಕುಟ್ಟಲ, ಮರುದಂಪಟ್ಟೆ (ಬ್ರಹ್ಮಶಿ. ೩೭-೦೦೦೩). 'ಮರುದು' ಪರಾ. [?]

**ಮರುದಶನ** (ನಾ). ಗಾಳಿಯನ್ನು ಆಹಾರವಾಗಿ ಉಳ್ಳುದು ; ಹಾವು : ಶರಣಾಗಣಹರಣ ಮರುದಶನಧರಣ (ಶ್ರೀತಾ. ೨೦–೯೨). [ಸಂ.]

**ಮರುದಿಂಡಲು** (ನಾ). ಶೋಭನದ ಮರುದಿವಸ ಮಾಡುವ ಸಮಾರಂಭ : ಶಾಳಿಸ ಮರುದಿಂಡಲು ಮುಗಿಸಿಕೊಂಡು ಹೋಗುವಂತೆ (ಚೂತ). [ಮರು$_1$ (< ಮಱು$_1$) + ದಿಂಡಲು$_2$]

**ಮರುದಿನ** 'ಮಱುದಿನ' ನೋ.

**ಮರುದಿಬ್ಬಣ** (ನಾ). ಮದುವೆಯಿಂದ ಹಿಂತಿರುಗುವ ಬಂಧುಮಿತ್ರರ ಗುಂಪು ; ವಿವಾಹಾನಂತರ ಹಿಂತಿರುಗುವ ದಿಬ್ಬಣ : ದುಗ್ಗಮ್ಮನಿಲ್ಲದ ಪ್ರಯಾಣ ಮದುವಣಿಗೆಯಿಲ್ಲದ ಮರುದಿಬ್ಬಣದಂತೆ (ಗಂಗಾಳ. ೩). [ಮರು$_1$ (< ಮಱು$_1$) + ದಿಬ್ಬಣ (< ಬಿರ್ದಿನ)]

**ಮರುದಿವಸ** 'ಮಱುದಿವಸ' ನೋ.

**ಮರುದಿಷ್ಟ** (ನಾ). ೧. ವಾಯುವಿಗೆ ಆಪ್ತನಾದವನು ; ಅಗ್ನಿ. ೨. [ಛಂದ] ಒಂದು ಗಣದ ಹೆಸರು ; ಸಗಣ (∪∪–) : ಆಱು ಮಾತ್ರೆಗಳಕ್ಕುಮೋಜೆಯೊಳ್ ಕರಿ ಸಂಖ್ಯಾತದ ಮಾತ್ರೆ ಯುಗ್ಮದೊಳ್ ಮರುದಿಷ್ಟಲಗಂ ತದಂತದೊಳ್ ಬರೆ ವೈತಾಳಿ (ಛಂದೋಂಬು. ೩–೨೦೯). [ಸಂ.]

**ಮರುದು** (ನಾ). ಒಂದು ಬಗೆಯ ಮರ ; ಅರ್ಜುನವೃಕ್ಷ : ಇವರ ದಕ್ಷಿಣಕ್ಕಿರುವ ಮರುದು (ಅರ್ಜುನ) ಮರ (ಚಾಸಗ. ೬). 'ಮರುದಂಪಟ್ಟಿ' ಪರಾ. [ದೇ.೩ ತಮಿ. ಮರುತು]

**ಮರುದೂರ್** (ನಾ). ಒಂದು ಊರಿನ ಹೆಸರು : ಸಮಣರು ಮರುದೂರ ಮಾರನ್ದಿಯಂ ವೆದಿಜ್ಜ(?)ದರ್ (ಎಇ. XIV. ೨೩೨–೩೭ ; ೨ ಡಿಯ ೫೫). [? + ಊರ್]

**ಮರುದ್ಗಣ** (ನಾ). ಪ್ರಾಣ, ಅಪಾನ, ವ್ಯಾನ, ಉದಾನ ಮೊದಲಾದ ನಲವತ್ತೊಂಬತ್ತು ವಾಯುಗಳ ಸಮೂಹ : ಪ್ರಾಣಾಪಾನವ್ಯಾನೋದಾನ ಮುಖ್ಯೈಕೋನಪಂಚಾಶನ್ಮರುದ್ಗಣ . . . ಘನಪಾಡ್ಯನಿಮಿಷರನು ಸದಾಮರಾಗದಿ ಧೇನಿಪುದು (ಹಪಾ. ೩–೩೦). [ಸಂ.]

**ಮರುದ್ಗಿರಿ** (ನಾ). ದೇವತೆಗಳ ಬೆಟ್ಟ ; ಮೇರು : ಮರುದ್ಗಿರಿಯುಳ್ಳಿ ಘನಘಟಾವಳಿ ಸುರಿದುದು ಪಯಮಂ ಮೃದಂಗನಿನದಸ್ತನಿತಂ (ಶಂಖ್ರ ಪು. ೦೨–೦೩೯). [ಸಂ.]

**ಮರುದ್ದಿಶೆ** (ನಾ). ವಾಯುದೇವತೆಯ ದಿಕ್ಕು ; ವಾಯವ್ಯ : ಎಸೆದಂ ಮರುದ್ದಿಶೆಯ ಬಾಗಿಲೊಳೊಲ್ದು ಕಪಾಲಿಭೈರವಂ (ಕಬಕಂ. ೦–೬೨). [ಸಂ. ಮರುದ್ದಿಶಾ]

**ಮರುದ್ವರ** (ನಾ). ದೇವೇಂದ್ರ : ಅನತಿಶಯಪುಣ್ಯಪುಣ್ಯಾರ್ಜನತತ್ಪರನಾ ಮರುದ್ವರಂ . . . ಇಂತೆಂತಂದಂ (ಶಂಖ್ರ ಪು. ೯–೩೭). [ಸಂ.]

**ಮರುದ್ವಾದ್ಯ** (ನಾ). ಊದುವ ವಾದ್ಯ ; ಸುಷಿರವಾದ್ಯ : ನಾಡೀ, ತುರುವ, ಬಹುರ ಮುಂತಾದ ಮರುದ್ವಾದ್ಯಗಳೂ ಹೆಸರಿಸಲ್ಪಟ್ಟಿವೆ (ಸಂಗೀತ. ೦೦೩). [ಸಂ.]

**ಮರುಧರೆ** (ನಾ). ಮರುಭೂಮಿ ; ಮರಳುಗಾಡು : ಮಳೆ ಹೊಯ್ದು ತೆರನಾಯ್ತು ಮಂಥರೆಯು ಮರುಧರೆಗೆ (ಶ್ರೀರಾಮ. ೨೩–೬೦೭). [ಸಂ. ಮರುಧರಾ]

**ಮರುನುಡಿ$_1$** (ಕ್ರಿ). ಪ್ರತ್ಯುತ್ತರ ಕೊಡು ; ಜವಾಬು ನೀಡು : ತಿರಸ್ಕಾರವನ್ನೆಲ್ಲ ಸೈರಿಸಿಕೊಂಡು ಮರುನುಡಿಯದೆ . . . ಆಲೋಚಿಸುತ್ತಿದ್ದನು (ಆವೆ. ೦) ; ಆಕೆ ಮರುನುಡಿಯದೆ ಒಪ್ಪಿದಳು (ಹಳ್ಳಿಪಾ. ೨೫). [ಮರು$_1$ (< ಮಱು$_1$) + ನುಡಿ$_1$]

**ಮರುನುಡಿ$_2$** (ನಾ). ಪ್ರತ್ಯುತ್ತರ ; ಜವಾಬು : ಒಂದುದಿನ ಅವನು ಮರುನುಡಿಯಿತ್ತ (ಘನಕಥ. ೦೦). [ಮರು$_1$ (< ಮಱು$_1$) + ನುಡಿ$_2$]

**ಮರುನುಡಿಸು** (ಕ್ರಿ). ತರ್ಜುಮೆಮಾಡು ; ಅನುವಾದಮಾಡು : ಮುಸ್ಲಿಂತತ್ವಗಳನ್ನು ಪಾಶ್ಚಾತ್ಯಭಾಷೆಗಳಿಗೆ ಮರುನುಡಿಸಿ ಹರಡಿದರು (ಇಸ್ಲಾಂಸಂ. ೨೬೩). [ಮರು$_1$ (< ಮಱು$_1$) + ನುಡಿಸು (< ನುಡಿಯಿಸು)]

**ಮರುನ್ನದಿ** (ನಾ). ದೇವನದಿ ; ಗಂಗೆ : ಕಣ್ಗೆಂಬಾದ ಚಾಂದ್ರಪ್ರಭಂ ರೂಪಂ ದಿವ್ಯವಚೋಮರುನ್ನದಿಯಿನೆಮ್ಮೊಳ್ ಮಾಟ್ಕೆ ನೈರ್ಮಲ್ಯಮಂ (ಚಂಪ್ರಪು. ೦–೦). [ಸಂ. ಮರುನ್ನದೀ]

**ಮರುನ್ನಿಷೇವಣ** (ನಾ). ಗಾಳಿಯನ್ನು ಮಾತ್ರ ಸೇವಿಸುವುದು : ಶಿವ ಶಿವ ಸತ್ತ್ವಮೆಂತಟೊ ತಪಸ್ವಿಗಿವಂಗೆ ಮರುನ್ನಿಷೇವಣಂ ಸವನಿಸೆ ದಂಡಿಸಿರ್ದೊಡಲೊಳೆದ್ಯುತಂ (ಕಬಕಂ. ೯–೬೩). [ಸಂ.]

**ಮರುನ್ಮಾರ್ಗ** (ನಾ). = ಮರುತ್ಪಥ : ಪುಂಡರೀಕಂ ಕಪಿಂಜಲಕಂ ಕೈಗಂಡಲಿಪ್ಪವಿತ್ರನೆ ಬರುತ್ತಿರ್ದಂ ಮರುನ್ಮಾರ್ಗದಿಂ (ಕಾದಂಬ. ೬೯೨). [ಸಂ.]

**ಮರುಪತ್ರ** (ನಾ). ಪ್ರತಿಯಾಗಿ ಬರೆದ ಕಾಗದ ; ಮಾರೋಲೆ : ಐತಾಳರು ಮರುಪತ್ರ ಬರೆದ ಮಾರನೆಯ ದಿನವೇ ಸೋಮಯಾಜಿಯವರು ಕೋಟೇಶ್ವರಕ್ಕೆ ಬಂದರು (ದೇಶಪು. ೬೯). [ಮರು$_1$ (< ಮಱು$_1$) + ಪತ್ರ]

**ಮರುಪಾಠ** (ನಾ). (ಕರಾ) ಒಂದು ಬಗೆಯ ಗೇಣಿ : ಕಡೆಗೆ ಮುನ್ನೋಟು ಎಂಬಲ್ಲಿ ಮರುಪಾಠಕ್ಕೊಂದು ಜಾಗ ಕೊಡುವದಿದೆಯೆಂದು ತಿಳಿಯಬಂತು (ಜಗುಜ. ೬೭). [ ? ]

**ಮರುಪು** (ನಾ). ಖಡ್ಗಯುದ್ಧದ ಒಂದು ವರಸೆ (?) : ರಥದಿಂ ಧುಮುಕಿ ನಿಮಿಷಾರ್ಧದಲಿ ಕೊಂಡನು ಹರಿಗೆ ಖಂಡಯುವ ಗಮಕದಿಂ ಮರುಪಾಡು ನಿಂದು ಭ್ರಮಿಸಿ ತಿರುಪಿನ ಮರುಪಿನಂದದ ಸಮತೆಯಿಂ ಪುಟನೆಗೆದು ತಿಳಿದನು ಪವನನಂದನನ (ಅಪುರಾ. ೬–೯–೨೨). [ ? ]

**ಮರುಪ್ರಯಾಣ** (ನಾ). ಪ್ರಯಾಣದಲ್ಲಿ ಮಧ್ಯೆ ಸ್ವಲ್ಪಕಾಲ ತಂಗಿ ಮತ್ತೆ ಮುಂದುವರಿಸುವ ಪಯಣ ; ಮಧ್ಯೆ ನಿಂತು ಮತ್ತೆ ಬೆಳೆಸುವ ಪ್ರಯಾಣ : ಈ ಸಹೋದರರು . . . ತಮ್ಮ ಮರುಪ್ರಯಾಣವನ್ನು ಆರಂಭಿಸಿದರು (ಕೃಪಾ. II, ೩) ; ತಂಗಿದೆಡೆಯಲ್ಲೆಲ್ಲ . . . ದಾನಧರ್ಮ ಮಾಡಿ ಮರುಪ್ರಯಾಣ ಮಾಡುತ್ತಿದ್ದಳು (ದಾಕಸಂ. ೦೯೩). [ಮರು$_1$ (< ಮಱು$_1$) + ಪ್ರಯಾಣ]

**ಮರುಬಾಳು** 'ಮಱುವಾಟ್' ನೋ.

**ಮರುಬೆಳೆ** (ನಾ). ಮತ್ತೆ ಬೆಳೆಯುವಿಕೆ ; ಎರಡನೆಯ ಬೆಳೆ : ಪರಮತತ್ತ್ವಜ್ಞಾನಿಯೊಡರಿಸುವ ಕರುಮಂಗಳು ಮರುಬೆಳೆಗೆ ದಿಕ್ಕಲ್ಲ (ಮಂಕುತಿ. ೬೯೩). [ಮರು$_1$ (< ಮಱು$_1$) + ಬೆಳೆ$_2$]

**ಮರುಭೂಮಿ** (ನಾ). ನೀರಿಲ್ಲದ ಪ್ರದೇಶ ; ಮರಳುಗಾಡು : ಹುದಿದ ಮರುಭೂಮಿಯಲಿ ಮಾನ್ಯನು ಖದಿರನು (ಉದ್ಯಾನ. ೦೦–೫೯) ; ರಸವಿಲ್ಲದಿಹ ಬಾಳಿಗರಮನೆಯೆ ಮರುಭೂಮಿ (ಶ್ರೀರಾಮ. ೦೪೯–೬೩). [ಸಂ.]

**ಮರುಮಾತು** 'ಮಱುವಾತು' ನೋ.

**ಮರುಮೈ** 'ಮಱುಮೆಯ್' ನೋ.

**ಮರುವ$_1$** 'ಮುರುವ' ನೋ.

**ಮರುವ$_2$** (ನಾ). = ಮರುಗ : ಮದನರಾಗವರ್ಧನಕರಮಾ ಮರುವಂ ಕರ್ಬಾಳಮುಖಿರೆ ಮರುಳಲ್ಲವೆ ಕುಸುಮನಿಚಯದೊಳ್ ಪಾಯ್ವಳಿಗಳ್ (ಅಜಿತ. ೦೦–೦೩೩). [ಸಂ.]

**ಮರುವಂದನೆ** (ನಾ). ವಂದನೆಗೆ ಪ್ರತಿಯಾಗಿ ಮಾಡುವ ವಂದನೆ ; ಪ್ರತಿನಮಸ್ಕಾರ : ರಾಜಾಗಂಗಾಧರರಾಯನು . . . ಪ್ರಜೆಗಳ ವಂದನೆಗಳನ್ನು ಸ್ವೀಕರಿಸುತ್ತಾ, ಅವರಿಗೆ ಮರುವಂದನೆಗಳನ್ನು ಅರ್ಪಿಸುತ್ತಾ . . . ತೆರಳುತ್ತಿದ್ದನು (ಕೃಷ್ಣಾಕ. ೩೩). [ಮರು$_1$ (< ಮಱು$_1$) + ವಂದನೆ]

**ಮರುವಕ** (ನಾ). = ಮರುಗ : ಮಾಲ್ಯಾಂಗಮೆಂಬುದು ಜಾತಿಕೇತಕಿಮರುವಕಪ್ರಭೃತಿ ಸರ್ವತುರ್ಕಥಾಮವಿಶೇಷಂಗಳನೀವುದು (ಜಾವುಂಕೃ. ೯). [ಸಂ.]

**ಮರುವಗಲ್** 'ಮಱುವಗಲ್' ನೋ.

**ಮರುವರ್ಷ** (ನಾ). ಮಾರನೆಯ ವರ್ಷ ; ತರುವಾಯದ ವರ್ಷ : ಮರುವರ್ಷ ಸಂಸಾರಿಯಾದೆನು ನಾನೆನೆ ಅಂಕುರಿಸಿತು ಹೊಸ ಕುತ್ತ (ಇಂಚಾಕ. ೩೩-೩೩). [ ಮರು$_1$ ( < ಮಱು$_1$ ) + ವರ್ಷ ]

**ಮರುವಸತಿ** (ನಾ). ಪುನಶ್ಚೈತನ್ಯವನ್ನು ಪಡೆಯಲು ಒದಗಿಸುವ ವಸತಿ ; ಪುನರ್ವಸತಿ : "ಪುನರ್ನಿವೇಶನ ; ಮರುವಸತಿ" (Rehabilitation. ಶಸ್ತ್ರಿ. ೩೯). [ ಮರು$_1$ ( < ಮಱು$_1$ ) + ವಸತಿ ]

**ಮರುವಸಲ** 'ಮಱುವಸಲ' ನೋ.

**ಮರುವಳಿ** (ನಾ). ಮದುವೆಯ ನಂತರ ಗಂಡಿನ ಕಡೆಯವರು ತಮ್ಮ ಮನೆಯಲ್ಲಿ ಬೀಗರಿಗೆ ಮಾಡುವ ಔತಣ ; ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೆ ಮತ್ತು ಕುಲಸ್ಥರಿಗೆ ಕೊಡುವ ಭೋಜನ : (ಎಕವ್ಯ. XII, ೬). [?]

**ಮರುವಾಚಲುಮರ** (ನಾ). ಒಂದು ಬಗೆಯ ಮರ : ಚೆಲ್ಲ, ಚೆಳ್ಳ, ಮರುವಾಚಲುಮರ, ಹೊಳೆದಾಸವಾಳ (ವೃಶಿಗ. ೯೯-೯೭೩).
[ ಮರುವಾಚಲು ? + ಮರ$_1$ ]

**ಮರುವಾಳು** 'ಮಱುವಾಳ್' ನೋ.

**ಮರುವುಟ್ಟು** 'ಮಱುವುಟ್ಟು' ನೋ.

**ಮರುಸರಸ್ಸು** (ನಾ). ಬಿಸಿಲುಗುದುರೆ ; ಮರೀಚಿಕೆ : ಕಾಮರೂಪಿಯ ಕಾಣಲೆಳಸಿದ ಕಪಿಧ್ವಜರ ದೃಷ್ಟಿಯ ತೃಷೆಗೆ ನಭದ ನೀಲವೆ ಮರುಸರಸ್ಸಾಯ್ತು ! (ಶ್ರೀರಾಪಟ. ೩೩೨-೦೦೨). [ ಸಂ. ಮರುಸರಸ್ ]

**ಮರುಸವಾಲು** (ನಾ). ೧. ಸವಾಲಿಗೆ ಪ್ರತಿಯಾಗಿ ಹಾಕುವ ಸವಾಲು ; ನಾನು ನಕ್ಕು ಮರುಸವಾಲಿಟ್ಟೆ (ತೆಂಡುಬಿ. ೯೩) ; ತಾಯಿಯು ಮರುಸವಾಲು ಹಾಕಿದರು (ಬುಷೋಸಂ. ೨೦೯). ೨. ಪಾಟೀಸವಾಲು ; ಅಡ್ಡವಿಚಾರಣೆ : ಪಾಟೀಸವಾಲು, ಮರುಸವಾಲು, ಅಡ್ಡವಿಚಾರಣೆ (Cross-eXamination. ಶಸ್ತ್ರಿ. ೨೮). [ ಮರು$_1$ ( < ಮಱು$_1$ ) + ಸವಾಲು ]

**ಮರುಸ್ಥಳ** (ನಾ). = ಮರುಭೂಮಿ : ಮರುಸ್ಥಳದ ಮಾಳದೊಳ್ . . . ಬೇಮರ್ಗೆ ಜೋಂಪವಿಮ್ಮಾವು ನಿರ್ಝರಾಂಬು ದೊರೆಕೊಳ್ವವೊಲ್ (ಅರಿಕೃ. ೦೩-೯೩); ಮರವಟ್ಟಿದೆ ಮೈ, ಮನವು ಮರುಸ್ಥಳ, ಮರುಗುತ್ತಿರುವೆ ಜಾರ್ಬೈ (ಶ್ರೀಂತರ್ಮ. ೯೭-೦೭). [ಸಂ. ಮರುಸ್ಥಲ]

**ಮರುಹುಟ್ಟು** 'ಮಱುವುಟ್ಟು' ನೋ.

**ಮರುಳ್$_1$** (ಕ್ರಿ). ೧ ಭ್ರಾಂತಿಗೊಳ್ಳು ; ಭ್ರಮೆಗೊಳ್ಳು : ಇಂದುಕಳಾಮರೀಚಿರುಚಿರೋಜ್ವಲಬಾಲಮೃಣಾಳಮಂ ಮರುಳ್ದೊಂದನೆ ಕರ್ಚಿ ತದ್ವಿವರದಿಂದೆರಡುಂ ಬರೆ ಪೀರ್ವವೊಲ್ (ಕಾದಂಪೂ. ೮೦೦). ೨. ಮೋಹಕ್ಕೊಳಗಾಗು ; ಮರುಳಾಗು : ಎರೆದಿಂತುಟ್ಟಲೆವೇಟ್ಟ ಕನ್ನೆ ಬಟಿಯಂ ಬಂದಳ್ ಮರುಳ್ದು (ಶಂಕಶಾ. ೩-೨೯); ಅನ್ಯನಾರಿಗೆ ಮರುಳ್ದಡಮಾಹವದೊಳ್ ಮರಲ್ದಡಂ (ಎಕ. VII. ಶಿಕಾ. ೦೩೭-೩೦; 1070); ಕಿನ್ನರದರ್ಪಶರಥಕ್ಷಿತಿನಾಥನ ಬೀರದೇಟ್ಗೆಯಂ ಪಾಡೆ ಮರುಳ್ದು. ಕೇಳ್ವ ಪದದೊಳ್ . . . ಈಡಾಡುವನಾ ನಮೇರುಕುಸುಮಸ್ತಬಕಂಗಳ ಕರ್ಣಪೂರಮಂ (ಶಂಗಾಪು. ೩-೦೩). [ದೇ.॥ ತಮಿ. ಮರುಳ್; ಮಲ. ಮರುಳ್; ತುಳು. ಮರ್ಲ್]

**ಮರುಳ್$_2$**, ಮರುಳು (ನಾ). ೧. ಭ್ರಮೆ ; ಭ್ರಾಂತಿ: 'ಮರುಳ್ಗೊಳ್' ಪರಾ. ೨. ಬುದ್ಧಿಭ್ರಮೆ ; ಹುಚ್ಚು : ಪಗೆಗಳನ್ ಪಗೆವುದು ಮರುಳೆನಲ್, ನಾನ್ ಮರುಳನೆನ್ (ಬಿದ್ಯಶ್ರ. ೩೨-೧೦೨೭). 'ಮರುಳ್ತನ' ಪರಾ. ೩. ಪ್ರೀತಿ ; ಮೋಹ : 'ಮರುಳ್ಗೊಳ್' ಪರಾ. ೪. ದಡ್ಡತನ ; ಅಜ್ಞಾನ; ಮೌಢ್ಯ: ಪುರುಳಿರದುದನ್ ಮಱೆದುಂ ಸೊಲ್ಲರ್ ಮರುಳಿರದ ಮಾಸಱಿತ ಕಾಣ್ಕೆಯವರ್ (ಕುಜಲ್. ೦-೨೦-೯). ೫. ಬುದ್ಧಿಭ್ರಮಣೆಯಾದ ವ್ಯಕ್ತಿ : ಕೊಳದೊಳಗುಱಿದಿರ್ದ ಮರುಳೆ ಬದರ್ಕಲ್ ಬಗೆವಾ (ಗದಾಯು. ೭-೦೦); ಮರುಳಂತೆ ಮರುಳೆ ತಲೆಯಂ ಪರಪಿರದೆ ಮನೋಸಾರಗದಿ ಮುಡಿ ಮುಡಿಯಂ (ರಪಾರ್ಶಮ್ಮ. ೩-೧೨೬). ೬. ದಡ್ಡ ; ತಿಳಿಗೇಡಿ: ಮೂರ್ಖ: ಗಗನತಳಕುಸುಮಮನೆ ಬಯಸಿ ಮರುಳ್ಗೊಂಡು ಮಱುಗುವ ಮರುಳಂತೆ . . . ಸ್ವಯಂಪ್ರಭೆಯಂ ನೆನೆನೆನೆದು (ಆದಿಪು. ೩-೦೦ ವ); ಸೊರ್ಕಿ ಮೂರ್ಖತನದಿಂ ಕಾಣಂ ಪೊರಸೇಱದಂತೆ ನುಡಿವೈ ಮರುಳಂ ಪೆಜಿರೊಳರೆ ಲೋಕದೊಳ್ ನಿನ್ನಂದಂ (ರಪಾರ್ಶಮ್ಮ. ೯-೦೩೩); ಕೇರಿಲ್ಲದೆ ಕಣ್ದೆಱೆವಿನೆಗಂ ಬರೆವೆನೆಂಬ ಮರುಳಂ ಪೋಲ್ತೈ (ಕಬ್ಬಿಕಾ. ೦೮೦). ೭. ಬುದ್ಧಿಯನ್ನು ಮಂಕಾಗಿಸುವ ಮದ್ದು : 'ಮರುಳಿಕ್ಕು', 'ಮರುಳುಣ್' ಪರಾ. ೮. ಭೂತ ; ದೆವ್ವ ; ಪಿಶಾಚಿ : "ಪಿಱೆತಿನಿಯೆನಲ್ ಮರುಳ್" (ಕಬ್ಬಿಕೈ. ೯೦) ; ಮರುಳ್ಗೆ ಧೂಪಮಂ ತೋಱಿದ ಮಾಟ್ಕೆಯಿಂ (ಶಂಪಶಾ. ೭-೦೦); ಬೇವ ಪೆಣಕೆ ಕೋಪದಿಂ ಪೊರ್ವ ಮರುಳ್ಗಳಂ . . . ಈಕ್ಷಿಸಿದಂ ಪ್ರತಿರೂಪಶೂದ್ರಕಂ (ಕಾವ್ಯಸಾ. ೩೩೯); ಮರುಳ್ಗಳ ತಂಡದಲಿ ತಱಿದೊಟ್ಟಿದನು ಮಿಕ್ಕಾದ ನಾಯಕರ (ಕೊರಶಾ. ೬-೦೭-೨೨). ೯. ವಿರುದ್ಧವಾದುದು; ಪ್ರತಿಯಾದುದು : 'ಮರುಳಾಟ' ಪರಾ. ಮರುಳು : ೨. ಲೋಕವೆಂಬ ಮಾಯೆಗೆ ಶರಣಚಾರಿತ್ರ ಮರುಳಾಗಿ ತೋಱುವುದು (ಮಹಾದೇ. ಶ. ೩೯-೦೯೭); ದಿನದಿನಕೆ ಬಾಲಕನ ಮರುಳದು ಘನಕೆ ಘನವಾಯಿತ್ತು (ಶಿಶಾಗ. ೫-೬-೦೦); ಕಂಡುದನೆ ನಾ ಕಂಡು ಕೇಳದ ಕೇಳಿ ಮರುಳಿಗೆ ಕುಣಿದೆ (ಅರಳು. ೦೯-೦). ೩. ಕರುಳು ಒಂದಾದರೇನು ಮರುಳು ಒಂದೋ ? (ಗಾದೆ). ೫. ಮರುಳು ಕಂಡ ಕನಸಿನ ಪರಿಯಂತೆ ಶಿವಾಚಾರ (ಬಸವ. ೬೩೯). ೬. ಲಿಂಗಾಂಗಸಮರಸದ ನಿರ್ಗುಣಪೂಜೆಯ ನೆಸಗಲಱಿಯದ ಭಿನ್ನಜ್ಞಾನ ಭಿನ್ನಪೂಜೆಯನೆಸಗುವ ಮರುಳುಗಳಿಗೆ ಆರು ಮೆಚ್ಚುವರು (ಷುಡಿಮಾ. ೩೮-೫೯); ದೊರೆಕೊಂಡ ನಿಧಿಯನೊದೆದು ಕಳೆವ ಮರುಳಿನಂತೆ ಗರ್ವದಿನವಜ್ಞೆಗೆಯ್ದು (ಪರ್ವಪು. ೦೦-೫೯ ವ). ೮. "ಮರುಳೆನಲ್ ಭ್ರಮೆ ಪಿಶಾಚಿಗಳಕ್ಕುಂ" (ಕಕಕ. ೯೭); ಹರನ ಕೊರಳಲ್ಲಿಪ್ಪ ಕರೋಟಿ ಮಾಲೆಯ ಶಿರದ ಲಿಖಿತವ ಕಂಡು ಮರುಳುತಂಡಗಳು ಓದಿ ನೋಡಲು (ಬಸವ. ೫೩೯); ಕುಣಿವುತಿರ್ದುವು ಮರುಳುಗಳು ಮದಿರಾವಿಕಾರದಲಿ (ಕೊರಶಾ. ೬-೩೭-೯೭); ಸಂತಸದಿ ರಣಭೂಮಿಯೊಳು ಕುಣಿದಾಡುತಿರ್ದುವಾ ಮರುಳ ಪಡೆ (ಹಾಳ್ಯಶಾ. ೨೫-೨೩). (ಗು). ೧೦. ದಡ್ಡತನದಿಂದ ಕೂಡಿದ; ತಿಳಿಗೇಡಿಯಾಗಿರುವ : ಅಂಡಜ ಉದ್ಭಿಜ ಶಾರಾಮಂಡಲದೊಳಗೊಂದು ನಾದವ ಕಂಡೆನು ಅಖಂಡಿತನಿರ್ಣಯವಱಿಯದ ಲೋಕದ ಮರುಳು ಮಾನವರೆತ್ತ ಬಲ್ಲರು (ಶಿವಗೀ. ೭೮-೩೭೭).

**ಮರುಳ ಕಯ್, ಮರುಳ ಕೈ** = ೧. = ಮರುಳ್ಗೆಯ್$_1$ ೧ : ಬಿತ್ತರಿಸಲೇಂ ಮರುಳ ಕಯ್ಯುವಣಿಯಿಡುಗಲ್ಲ ಮೊತ್ತವಾ ಪುರದೊಳಿಲ್ಲ (ಪದ್ಮಣ. ೩-೨೦) ; ತೊಲೆ ತಳಿವರ ಸೂಲ ಹರಿಗೆ ಬದ್ದರಬುಂಡಿ ಬಲೆ ಹಗ್ಗ ಮರುಳ ಕೈ . . . ಸಲೆ ಮೆಱೆದವು ದುರ್ಗದೊಳಗೆ (ಕುರಾಸಾಂ. ೯೨-೩೭). ೨. = ಮರುಳ್ಗೆಯ್$_2$ ೨ : ಕಯ್ಯಂದೊಡೆ ಮಂದಾರದ ಕಯ್ಯುಂ ಮಂತ್ರೀಂದ್ರಲಕ್ಷ್ಮಣಾಂಕನ ಕಯ್ಯುಂ ಕಯ್ಯಲ್ಲದುಳಿದ ಮನುಜರ ಕಯ್ಯೆಂಬುಂಬು ಮರುಳ ಕೈಗಳೀತಱ ಕೈಗಳ್ (ಎಶಿಇ. IV. ೨೭೭-೯೭; 1360).

**ಮರುಳಾಗಿಸು** = ಮೋಹಗೊಳಿಸು ; ಆಕರ್ಷಿಸು : ಲಾಸ್ಯರಸದಿಂ ಮರುಳಾಗಿಸುವಳ್ (ದಕಳು. ೬-೩೩); ಈ ತಲ್ಲೀನತೆಗೆ ಕಲಾಕೃತಿ ನಮ್ಮನ್ನು ಮರುಳಾಗಿಸುವುದೇ ಕಾರಣ (ಶಿಂಡಕ. ೭೩). **ಮರುಳಾಗು** = ೧. ಭ್ರಮೆಗೊಳ್ಳು ; ಭ್ರಾಂತಿಗೊಳ್ಳು : ಮರಳಿದನ್ ಪಾಳೆಯಕೆ ಮರುಳಾಗುತಾ ನರಂ ಸಂದೇಹಮಂ ತಮಿಸಿ, ತನ್ನೆದೆಯ ಸಂತೈಸುತೆ (ಶಿಶ್ರಾಂಗ. ೭೯-೨೦೩೯). ೨. ಮೋಹಗೊಳ್ಳು; ಆಕರ್ಷಣೆಯನ್ನು ಹೊಂದು : ನವಯೌವನೆ

ಮರುಳಾದಂಪೂತಂಗೆ (ಕಾದಂಶೂ. ೯೬೨ ರಗಳೆ) ; ಪರಸತಿಗೆ ಮರುಳಾದೆ ನೀನು (ಕೌತಿಣ. ೧೪-೧೯). ೩. ಬುದ್ಧಿಗೇಡಿಯಾಗು ; ತಿಳಿಗೇಡಿಯಾಗು : ಮರುಳಾಗದೆನ್ನ ನುಡಿಗುತ್ತರಮಂ ಮುನ್ನಿತ್ತು ಕುಡಿಯೆ ಕಜ್ಜಂ ನಿ ನ ಗು ತ್ತ ರಿ ಸು ಗು ಮ ೦ ತ ಲ್ಲ[ದಿವಂದಿ]ರಂತೆ ನೀನುಂತೆ ಮೂರ್ಖ ನಾಗದಿರರಸಾ (ಶಂಶಾ. ೬-೯೭) ; ಮಾಯೆಯು ಮದ್ದಿನಲಿ ಮರುಳಾಗಿ ಮದನನ ಹೊದ್ದಿದನು . . . ಮುನಿಪ (ಕೊರಣ. ೧-೩-೩೭) ; ಅತಿ ಘೋರತಪವೆಮ್ಮದದನು ನೀನಱಿಯದೆ ಮತಿಗೆಟ್ಟು ಮರುಳಾಗದಿರು (ಹರಿ. ೨-೯೦). ೪. ಹುಚ್ಚಾಗು : ಓದಿ ಓದಿ ಮರುಳಾದ ಕೂಚು ಭಟ್ಟ (ಗಾದೆ). ಮರುಳುಜಡೆ = ಹಸುಗೂಸುಗಳ ತಲೆಯಲ್ಲಿ, ಮಾಯಾಶಕ್ತಿಯುಳ್ಳ ಅತಿಮಾನುಷವ್ಯಕ್ತಿಯು ಬಂದು ಹೆಣೆ ಯುತ್ತದೆಂದು ನಂಬಲಾದ ಜಡೆ ; ಸಣ್ಣಸಣ್ಣದಾಗಿ ಹೆಣೆದು ಕೊಂಡಿರುವ ಕೂದಲಿನ ಗಂಟು : ಇಷ್ಟಾಗಿ ಶಾಸ್ತ್ರಕ್ಕೆ ಹತ್ತು ಕೂದಲು ; ಒಂದು ಮರುಳುಜಡೆ. ಅದೂ ಬ್ರಹ್ಮಗಂಟು ! (ದೀಪಾ. ೯೦-೨೯). ಮರುಳ್ಗಳೆಱೆಯು = ಭೂತಗಳ ಒಡೆಯ : ಈಶ್ವರ ನಾದೊಡಮೇಂ ಮರುಳ್ಗಳೆಱೆಯನೆ (ತಿಳಿ. ೦-೩೮). ಮರುಳ್ಮಾಡು, ಮರುಳುಮಾಡು = ೧. ಮೋಹಗೊಳಿಸು ; ಮರುಳುಗೊಳಿಸು : ಕಾಮದೇವನಯ್ದುಲರಂಬಿನ ಶಕ್ತಿಗಳುಮನೊಂದುಮಾಡಿ ಲೋಕಮೆಲ್ಲಮಂ ಮರುಳ್ಮಾಡಲೆಂದು ಪೆಣ್ಮಾಡಿದನಕ್ಕುಂ (ಶಂಶಾ. ೪-೬೩ ವ) ; ರುದ್ರಗಣ ಪ್ರಮಥಗಣರೆಂಬರ ಮಾಯೆ ಮರುಳ್ಮಾಡಿ ಕಾಡುವಂದು . . . ನಾನು ಮಾಯಾಕೋಳಾಹಳನಾಗಿರ್ದೆ ಕಣಾ (ಅಪಶಂ. ೨೬೨-೦೨೩೦) ; ಸರ್ವಬುದ್ಧಿ ಗಳೊಳಾತನ ಮರುಳು ಮಾಡುತ್ತಿರಿ ಹೋಗಿ (ಹಕಣ. ೬-೨) ; ವಿಟವಿದೂ ಷಕರ ಕಣ್ಬೇಟದಿ ಮರುಳುಮಾಡುವರು (ಮೋಹತ. ೦೮-೯೮). ೨. ಮಂಕಾಗಿಸು ; ಮಂಕುಗೊಳಿಸು : ಆ ಅಪರಿಚಿತನು ಬಂದು ನನ್ನನ್ನು ಮರುಳ್ಮಾಡಿ ನನ್ನ ಆಸ್ತಿಯನ್ನೆಲ್ಲಾ ಸೆಳಕೊಂಡನು (ಮನಸ. ೨೮).

[ < ಮರುಳ್$_1$. / ತಮಿ. ಮಲ. ಮರುಳ್ ; ತುಳು. ಮರುಳು ; ತೆಲು. ಮರುಲು, ಮರ್ಲು ]

**ಮರುಳ, ಮಳ್ಳ** (ನಾ). ೧. ತಿಳಿಗೇಡಿ ; ದಡ್ಡ ; ಅಜ್ಞಾನಿ : ಸರೋಜಾತಾದಿ ನಿಸ್ಸಾರವಸ್ತುಗಳೊಳ್ ಪೋಲಿಸುವಂತುಟೇಂ ಮರುಳನೇ ರೂಪಂ ವಿಚಿತ್ರಾಂಗಿಯಾ (ಅದಿಪು. ೬-೮೩) ; ಮಾಯದ ಬಲೆಯಲ್ಲಿ ಸಿಲುಕಿದ ಮರುಳೆ ನಾನೆಂದಱಿದ ಪರಿಯ ನೋಡಾ (ಅಪತಂ. ೯-೦೦) ; ಸುಯೋಧನಾದಿ ಮರುಳರ ಮಾತು ಗ್ರಾಹ್ಯವಲ್ಲ (ರಾಜಸೂ. ೮೩). ೨. ಹುಚ್ಚುಹಿಡಿದವನು ; ಬುದ್ಧಿಭ್ರಮಣೆಯಾದವನು : ಮರುಳನಂತೆ ತನ್ನೊಳ್ತಾನೆ ನುಡಿಯುತ್ತುಂ (ಧರ್ಮಾಮೃ. ೦-೦೬೦) ; ಪಗೆಗಳನ್ ಪಗೆವುಥು ಮರುಳೆನಲ್, ನಾನ್ ಮರುಳನೆನ್ (ಬದ್ಧಕ್ರ. ೪-೦೦೨) ; ವನ್ಯೂಷನು ದ್ರಾಕ್ಷಾರಸವನ್ನು ಒಲೆನಿನ್‌ಗೆ ತಂದು ಕೊಟ್ಟು ಮರುಳನಂತೆ ನಗುತ್ತಾ ಹೊರಗೆ ಹೋದನು (ಮರಿಣಾ. ೬೮). ೩. ಒಬ್ಬಾತನ ಹೆಸರು : ಸಂಪ್ರಾಪ್ತೋ ಮರುಳ ಇತಿ ಪ್ರಸಿದ್ಧನಾಮಾ (ಪ್ರಇಂ. ೦೯೨೦. ೦೦-೯೬ ; 967) ; ಪೆಸರ್ವೆತ್ತ ಮರುಳಂ ತನ್ನೃಪತಿಲಕನ ಪಿರಿಯ ಮಗಂ (ಎಕ. VII. ಶಿವಮೊ. ೩೯-೦೪ ; 1122). **ಮಳ್ಳ** : ೧. ಕೇಳೋ ಕಳ್ಳಾ, ಮುದ್ದಿನ ಮಳ್ಳಾ (ಕಶಪು. ೨-೦೨) ; ನಾ ಏನು ಅಷ್ಟ ಮಳ್ಳ ಇದ್ದೀನ್ಯಂತ ತಿಳದಿರೇನು ? ; (ದೀಶಹ. II. ೦೨೦). (ಗು). ೪. ತಿಳಿಗೇಡಿ ಯಾದ ; ಏನೂ ಅರಿಯದ : ದಾದಲ್ಯಾ ತೀರ ಮಳ್ಳ ಗಿರಾಕಿ ಎಂದು ಭಾವಿಸಿ . . . ಅಂತರವನ್ನು ಕಂಡಿರಬಹುದಾಗಿತ್ತು (ದೀಶಹ. II. ೧೯). [ಮರುಳ್$_2$ + — ಅ$_7$]

**ಮರುಳಡೆ** (ಕ್ರಿ). ಭ್ರಾಂತಿಯನ್ನು ಹೊಂದು : ಮರುಳಡೆದು ನಡೆವಿರಯ್ ನೀಂಗಳ್ (ಬದ್ಧಕ್ರ. ೩೬-೦೨೯೭). [ಮರುಳ್$_2$ + ಅಡೆ$_3$]

ಮರುಳಮುತ್ತ 'ಮರುಳುಮ್ಮುತ' ನೋ.

**ಮರುಳಯ್ಯ** (ನಾ). ೧. ದಡ್ಡ ; ತಿಳಿಗೇಡಿ : ಉಯ್ಯ ಕೈವಿಡಿದು ತಂಡುಲವ ಬಿಸುಟ ಮರುಳಯ್ಯರ ಮಾರ್ಗವೇನಲ್ತೆ (ಭರತ. ೩-೮೦). ೨. ಭೂತಗಳ ಒಡೆಯ ; ಶಿವ : ಮರುಳಯ್ಯ (ಮರುಳುಗಳ ಅಯ್ಯನಾದ ಶಿವನು) (ನಾಡೋಜ. ೯೪). ೩. ಒಬ್ಬಾತನ ಹೆಸರು : ಆತನ ಮರ್ಮಂದಿರ್ ಮರುಳಯ್ಯಂ ಬೂತುಗ ಪೆರ್ಮಾಡಿ (ಎಕ. VII. ಶಿವಮೊ. ೪-೯೬ ; 1122). [ಮರುಳ್$_2$ + ಅಯ್ಯ$_1$]

**ಮರುಳಾಟ** (ನಾ). ೧. ಭ್ರಮೆಯಿಂದ ಮಾಡುವ ಕೆಲಸ ; ಹುಚ್ಚಾಟ : ಮಾಸಿದ ಹೇಮಕುಂಭದಂತೆ ಸಾಧಕನ ಮರುಳಾಟದಂತೆ (ಧರ್ಮಾಮೃ. ೮-೯೪); ಮಂಕುಹೆಣ್ಣಿನ ಮರುಳಾಟವು ನಿಂತಾಗ ಗಂಡಿಗೆ ದೊರೆವುದು ಸಿದ್ಧಿ (ಇಂಚಾಶ. ೨೦೭-೨೩). ೨. ಅವಿವೇಕದ ವರ್ತನೆ ; ಬುದ್ಧಿಗೇಡಿತನ : ನೀಸವರುಮನವರ ದೈವಮುಮಂ ಕೊಂಡಾಡುವ ಮರುಳಾಟಕ್ಕೆನಗೆ ಪಿರಿದುಂ ವಿಸ್ಮಯಮಾದಪುದು (ಧರ್ಮಾಮೃ. ೦-೮೦೪); ನಿನ್ನಯ ಮೈದುನರ ಮರುಳಾಟಕೆನ್ನನು ಕಾಯ್ದುಕೊಳ್ಳೈ ಕೃಷ್ಣ (ಕುವ್ಯಾಸ. ೦೪-೦೦೯) ; ಮರುಳಾಟವೇಕೋ ಮನುಜ ಕೂಗಾಟವೇಕೋ (ಪುರಂದ. ೦-೩೦ ಪಲ್ಲವಿ). ೩. ಪಿಶಾಚಿಗಳ ಆಟ,-ಲೀಲೆ : ಕೊಳ್ಗುಳದೊಳ್ ಮರುಳಾಟವಾಡುವಾಂ ಮರುಳೆನೊ ವಿಕ್ರಮಾರ್ಜುನನೊಳೊಲ್ಲದೆ ಸಂಧಿಯನುರ್ಕಿ ಕೆಟ್ಟ ನೀಂ ಮರುಳಯೊ ಪೇಟ (ಶಂಶಾ. ೧೩-೩೩); ವಿವಿಧನೃತ್ಯವ ನೋಡುವಕ್ಷಿಗೆ ಸವಸಿಸಿತೆ ಮರುಳಾಟ (ಜೀವಂತ. ೩-೩). ೪. ವಿರುದ್ಧವಾಗಿ ನುಡಿ ಯುವಿಕೆ ; ವ್ಯತ್ಯಾಸವಾಗಿ ಹೇಳುವಿಕೆ : "ವಿಪ್ರಲಂಭಃ , ವಿಸಂವಾದಃ- ಈ ೨ ಮರುಳಾಟದ ಹೆಸರು'' (ನಾತರಾ. ೯೮). [ಮರುಳ್$_2$ + ಆಟ]

**ಮರುಳಾಟಿಕೆ** (ನಾ). ಹುಚ್ಚಾಟ ; ಮರುಳುತನ : ಲಕ್ಷ್ಮಿಗೆ ಇವೆಲ್ಲವೂ ಒಮ್ಮೊಮ್ಮೆ ಮರುಳಾಟಿಕೆ ಎಂದೆನಿಸುತ್ತದೆ (ಮುಗಿಯು. ೦೦).

[ಮರುಳ್$_2$ + ಆಟಿಕೆ]

**ಮರುಳಾಡು** (ಕ್ರಿ). ೧. ಮೂರ್ಖತನಕ್ಕಾಗಿ ಹಾಸ್ಯಮಾಡು. —ಗೇಲಿ ಮಾಡು : ಬಿಯಗರ ಮನೆಯೊಳಿದಂ ಕಂಡೊಡೆ ಮರುಳಾಡುವರದಱಿಂ ಕಿಱಿದಾಗಿಯುಣ್ಬುದು (ಧರ್ಮಾಶ. ೪-೨೩೪) ; ಹೊಱಗೆ ಕೃಷ್ಣನ ಕರೆದಿವೆಲ್ಲವ ನಱುಹಿದಡೆ ಮರುಳಾಡಿದನು (ಕುವ್ಯಾಕ. ೦೯-೩೩). ೨. ಹೀಯಾಳಿಸು ; ನಿಂದಿಸು ; ಜರೆ : ಸಖಿಯನು ಮರುಳಾಡುತಿರ್ದಳು ಮೋಹಿನೀದೇವಿ (ಕೃಪುಂ. ೩-೩೦). [ಮರುಳು (<ಮರುಳ್$_2$) + ಆಡು$_1$]

**ಮರುಳಾಣ್ಮ** (ನಾ). ಭೂತಗಳ ಒಡೆಯ ; ಶಿವ : "ಮರುಳಾಣ್ಮಂ ಶೂಲಿಯಲ್ಲುಂಟು'' (ಕರ್ಣಾಪ. ೯೦). [ಮರುಳ್$_2$ + ಆಣ್ಮ (<ಆಳ್ಮ)]

**ಮರುಳಿ, ಮಳ್ಳಿ$_1$** (ನಾ). ೧. ಅವಿವೇಕಿಯಾದವಳು ; ಬುದ್ಧಿಗೇಡಿ : ಮುನೀಶ್ವರನ ಮಂತ್ರಮೇದೊರೆಯೆಂದಾ[ಂ] ಮರುಳಿಯೆನೆಯಱಿದು ಮಱಿಯದೆ ಬರಿಸಿದೆಂ (ಶಂಶಾ. ೧-೯೩). ೨. ಮರುಳಾದವಳು: ಮೋಹ ಗೊಂಡವಳು : ನಾನು ಈಗ ಶ್ರೀಗುರುಕಾರುಣ್ಯವನ್ನು ಪಡೆಯುವುದಕ್ಕೆ ಕಾತರಳಾಗಿರುವ ಮರುಳಿ (ತುಂಗಾ. ೯೩); ಧೈರ್ಯವ ಕಳೆದಾನ, ನನ್ನೊಂದ ತೀರ ಮರುಳಿಯ ಮಾಡ್ಯಾನ (ಮುಕ್ತಿಣ. ೯೬-೩). ೩. (ವಶೀಕರಣಕ್ಕೆ ಬಳಕೆಯಾಗುವ) ಒಂದು ಬಗೆಯ ಸಸ್ಯ : "ಪಿಶಾಚಿಕಾ-ಕಾಸರಿಕೆ, ನಸುಗುನ್ನಿ, ಮರುಳಿ'' (ಚಿಕಿ. ೯೮) ; ಮರು [ಶಾಣಂ. ರ]ಳಿಯ್ಯೆದೆಲೆನಾಗ . . . ಇವಱ ತಿರುಳಿಣ್ಣೆಯಜಮೂತ್ರಮುರಗದಂಷ್ಟ್ರಂ ಕೂಡಿದುದತ್ತೈಲ ಮಿನಿತು ಸೋಂಕಲ್ಕೆ ವಶ್ಯಂ (ಶಪಮ. ೦೩-೯೮). ೪. ಒಂದು ಬಗೆಯ ಪಕ್ಷಿ. ೧, ೪ : ಬಡಗಿಯಂತೆ ಮರಕುಟಿಕಂ ಬುದ್ಧಿಗೆಟ್ಟಳಂತೆ ಮರು [ಶಾಣಂ. ರ]ಳಿ . . . ಎಂದಿಂತುಮನೇಕಪಕ್ಷಿಜಾತಿಗಳಿಂ (ಬಂಹಂ. ೨-೩೮ವ). **ಮಳ್ಳಿ$_1$** : ೫. ಜಾಣತನವಿದ್ದೂ ಇಲ್ಲದಂತೆ ನಟಿಸುವವಳು ; ಅಮಾಯಕತನ ತೋರ್ಪಡಿಸುವವಳು : ನಿಮ್ಮ ಮುಂದೆಲ್ಲ ಆಕೆಯು

ಅರಿಯದ ಮಳ್ಳಿಯಂತೆ ಸುಮ್ಮನೆ ಕೂಡುತ್ತಾಳೆ (ಕೋಹಿಜ. ೨೯) ; ಮತ್ತೆ ಅವನ ಮನೆಗೆ ಯಾಕೆ ಹೋಗುತ್ತೀಯೆ ಮಳ್ಳಿ! (ಕಂಗಕೋ. ೬೪).
[ಮರುಳ + –ಇ₃]

**ಮರುಳಿಕ್ಕು** (ಕ್ರಿ). ಬುದ್ಧಿಯನ್ನು ಮಂಕುಗೊಳಿಸುವ ಮದ್ದನ್ನು ಆಹಾರದಲ್ಲಿ ಸೇರಿಸು.– ಬೆರಸು : ನೀವೆತ್ತಾನುಂ ಮರುಳ್ಗೊಂಡಿರೋ ಮರುಳಿಕ್ಕಿ ಆಟ್ಟುದನುಂಡಿರೋ ಪೇಟಿಂ (ಶಬಶಂ. ೦೧೬-೦೯).
[ಮರುಳ್₂ + ಇಕ್ಕು]

**ಮರುಳಿಸು** (ಕ್ರಿ). ಮೋಹಗೊಳಿಸು; ಮರುಳುಗೊಳಿಸು : ಧೃತಯೌವನಂ ಮರುಳಿಸಲ್ತಾನಾರ್ತುಮತ್ಕಂಠಸೌಂದರಕಾಂತಾಜನಮುಂ ಮರುಳ್ಪುದಣಮಿಲ್ಲ (ಅಂತ. ೬-೩) ; ಮುತ್ತಂ ಮುಕ್ಕುಳಿಸಿದ ಪವಳದಂತೆ ಮರುಳಿಸುವಂಗಂ (ಅರಸೀ. ೪-೩೭). [ಮರುಳ್₂ + –ಇಸು₃]

**ಮರುಳು** 'ಮರುಳ್₂' ನೋ.

**ಮರುಳುಗಟ್ಟು** (ಕ್ರಿ). = ಮರುಳಾಡು ೧ : ಮರುಳೆ ಕಾದದ ಕಟ್ಟಿದಮ್ಮನು ಬಿಡದೆ ಬಯಸಿದೆಯದನು ಕೇಳ್ದೊಡೆ ಮರುಳುಗಟ್ಟಿದ ಮಾಣ್ಬರೇ ನಿಮ್ಮಣ್ಣತಮ್ಮದಿರು (ಕುವ್ಯಾಉ. ೦-೯೦).
[ಮರುಳು (< ಮರುಳ್₂) + ಕಟ್ಟು₁]

**ಮರುಳುಗೈ** 'ಮರುಳ್ಗೆಯ್₂' ನೋ.

**ಮರುಳುಗೊಳ್** 'ಮರುಳ್ಗೊಳ್' ನೋ.

**ಮರುಳುಗೊಳಿಸು** 'ಮರುಳ್ಗೊಳಿಸು' ನೋ.

**ಮರುಳುಣ್** (ಕ್ರಿ). ಬುದ್ಧಿಯನ್ನು ಮಂಕುಗೊಳಿಸುವ ಮದ್ದನ್ನು ಬೆರಸಿದ ಆಹಾರವನ್ನು ಸೇವಿಸು : ಮರುಳುಂಡ ಮನುಷ್ಯನ ಇರವಿನ ಪರಿಯಂತೆ ವಿವರವನರಿಯಬಾರದು ನೋಡಾ ಶಿವಜ್ಞಾನ (ಆಶಂ. ೯೬-೯೪೨). [ಮರುಳ್₂ + ಉಣ್]

**ಮರುಳುತನ** 'ಮರುಳ್ತನ' ನೋ.

**ಮರುಳುನುಡಿ** (ನಾ). ತಿಳಿಗೇಡಿತನದ ಮಾತು : ಮರುಳುನುಡಿಗಳು ಪಮ್ಮವಿಪ್ಪ ನೀವ್ ಪರಮನೀತಿಯ ಧರ್ಮಶಾಸ್ತ್ರದ ನಿರುತರು (ಕೊರಣ. ೨-೦-೫೯). [ಮರುಳು (< ಮರುಳ್₂) + ನುಡಿ₂]

**ಮರುಳುಮಾತು** (ನಾ). ಮರುಳುಗೊಳಿಸುವ ಮಾತು : ಭ್ರಮೆಯನ್ನುಂಟುಮಾಡುವ ಮಾತು : ಬಲುದಿನಕೆ ಬಂದಿಹನು. . . ನಾಲ್ಕು ದಿನ ನಿಲ್ಲಿಸಮ್ಮಾ ಮರುಳುಮಾತುಗಳಾಡಿ ನುಸುಳಿ ಪೋಗುವನಮ್ಮ (ಬಸೀ೧೯. ೨೭-೩). [ಮರುಳು (< ಮರುಳ್₂) + ಮಾತು₁]

**ಮರುಳುಮ್ಮತ್ತ, ಮರಳುಉುಮ್ಮತ್ತಿ, ಮರಳುಮತ್ತ, ಮರುಳಮತ್ತ** (ನಾ). ಒಂದು ಬಗೆಯ ಸಸ್ಯ ; ಮದ್ದುಗುಣಿಕೆ ಗಿಡ ; ದತ್ತೂರ : ಜಡಮತಿಗೆ ಮರುಳುಮ್ಮತವನಿಕ್ಕಿದೊಡೆ ಸುಕಲೆಯಪ್ಪುದೆ (ಕೈಬಿಹಾ. ೨-೩೩). **ಮರಳುಉುಮ್ಮತ್ತಿ** : (ಕ್ಯಾತಿ. ೬೯-೦೬೦೩). **ಮರಳುಮತ್ತ** : ಮರಳುಮತ್ತ ; ಈ ಸೊಪ್ಪಂ ಚೂರ್ಣವಂ ಮಾಡಿ ಸಕ್ಕರೆಯಂ ಬೆರಸಿ ದಿನ ಒಂದಕ್ಕೆ ಮೂಱು ಬೆರಳಂ ಸೇವಿಸಲು ಹೊಟ್ಟೆಯೊಳಗಿನ ಗಡ್ಡೆ ಗುಣ (ಬಿವ್ಯ೩. ೬). **ಮರಳಮತ್ತ** : ಕರಿಉಮ್ಮತ್ತದ ಬೇರು, ಮರುಳಮತ್ತದ ಬೇರು, ಮರುಳಮತ್ತದ ಬೀಜ. . . ಇಷ್ಟನ್ನೂ ಬೇಱೆ ಬೇಱೆ ಚೂರ್ಣವ ಮಾಡಿ . . . ಆಮಲಕಪ್ರಮಾಣ ಜೇನುಕೂಡಿ ಕೊಳ್ಳಲು ಮದ ತಿಳಿವುದು (ಬಿವ್ಯಶಿ. ೯೩). [ಮರುಳು (< ಮರುಳ್₂) + ಉಮ್ಮತ (<ಉಮ್ಮತ್ತ). / ತೆಲು. ಮರುಲುಮ್ಮೆತ]

**ಮರುಳುಮೆಣ್ಣು** (ನಾ). ಅವಿವೇಕಿಯಾದ ಹೆಣ್ಣು ; ದಡ್ಡಿ : ಮನೆವಾಳ್ತೆಯಱಿಯದ ಮರುಳುಮೆಣ್ಣಿನ ಕೃತಿಯನೆ ಮನಪೊಲಿದೋದಿದೊಡೆ . . . ಚಾತುರ್ಯವಡೆವರು (ಹುಹ. ೦-೯೩).
[ಮರುಳು(< ಮರುಳ್₂) + ಪೆಣ್ಣು ( < ಪೆಣ್ )]

**ಮರುಳ್ಗವಿ** (ನಾ). ತಿಳುವಳಿಕೆಯಿಲ್ಲದ ಕವಿ ; ಅವಿವೇಕಿಯಾದ ಕವಿ : ಹಾಮದ್ದಗವಿತೆಯಂ ಮಾಡಿ ಮಹಾವ್ಯವಸಾಯಂಗೆಯ್ವ ಮರುಳ್ಗವಿಗಳ್ಗಾವೇಂ ಗುಣಾರ್ಥರಂ ಮಸುಳಿಸರೇ (ಗಜಾಅಃ. ೪-೪೦). [ಮರುಳ್₂ + ಕವಿ₁]

**ಮರುಳ್ಗಿಡೆ** (ಕ್ರಿ). ಅವಿವೇಕದ ಮಾತನ್ನಾಡು ; ದಡ್ಡತನದ ಮಾತನಾಡು : ಕೇಳೆಲೆ ನಿನ್ನದೊಂದು ಧರ್ಮವೆಂದು ನಿನ್ನದೊಂದು ರೂಪೆಂದು ಮುಂದಱಿಯದೆ ಮರುಳ್ಗಿಡೆವರೆ (ಬಸವ. ೯-೦೩೦). [ಮರುಳ್₂ + ಕಿಡೆ₁]

**ಮರುಳ್ಗೆಯ್₁** (ಕ್ರಿ). ಮೋಹವನ್ನುಂಟುಮಾಡು ; ಆಕರ್ಷಿಸು : ನಾಣ್ಗೊಸರ್ವ ಮರುಳ್ಗೆಯ್ವ ಚಿತ್ರಿನಿಯರುಗಳ್ಗೊಪ್ಪಿದರು (ಪೋಹಶ. ೦೯-೪೦). [ಮರುಳ್₂ + ಕೆಯ್₁]

**ಮರುಳ್ಗೆಯ್₂, ಮರುಳುಗೈ, ಮರುಳ್ಗೈ** (ನಾ). ೧. ಹಿಂದೆ ಕೋಟೆ ಕಾಳಗದಲ್ಲಿ ಬಳಸುತ್ತಿದ್ದ ಕೈಆಕಾರದ ಒಂದು ಬಗೆಯ ಆಯುಧ : ಅಂಕಕ್ಕೆ ಬರ್ಪ ರಾಯರ ಗಂಡನೆಂಬಿಬ ಡೆಂಕಣ ಮರುಳ್ಗೆಯ್ಗ ಕೊಡಿಸ ಭೋಂಕನೆ ಮಿಡಿವ ಲಾಳಿಯ ಬಿಲ್ಲು ಬಿಟ್ಟಲ್ಗಳ ಸಂಕುಲವಿದರ್ಗಳದಲ್ಲಿ (ಕೋಹಶ. ೨೦-೯). **ಮರುಳುಗೈ** : ೧. ಝುಗಝುಗಿಸುವ ಹೇರಿಟ್ಟೆ ಮರುಳುಗೈಗಳುಗುಳುತಿರ್ದುವು ಕೇಗಿಡಿಗಳ (ಕಂಶಂ. ೦೦-೦೩೦). **ಮರುಳ್ಗೈ** : ೧. ಡೆಂಕಣ ಮರುಳ್ಗೈಯಿಂದಿಂ ಕೋಟೆ ಮಿಗಿಲಾಗಿ ಮಸೆಕೆ ರಂಜಿಸಿತು (ಅಭ್ಯೂ. ೩-೩೩). ೨. ಕೃತ್ರಿಮವಾದ ಕೈ : ಬರೆಯದ ಕೈ ಬಂಧುಗಳಂ ಪೊರೆಯದ ಕೈ . . . ಮರಗೈ ಮರುಳ್ಗೈಗಳಂತೆ (ಶಿಲೆಶಾ. ೦೯). [ಮರುಳ್₂ + ಕೆಯ್₂]

**ಮರುಳ್ಗೈ** ' ಮರುಳ್ಗೆಯ್₂ ' ನೋ.

**ಮರುಳ್ಗೊಳ್, ಮರುಳುಗೊಳ್** (ಕ್ರಿ). ೧. ಭ್ರಮೆಗೊಳಗಾಗು ; ಭ್ರಾಂತಿಗೊಳ್ಳು : ಎಲ್ಲಿರ್ದಯೆಂದಱಸುತ್ತಂ ಮರುಳ್ಗೊಂಡು ಪ್ರಳಾಪಂಗೆಯ್ಯುತ್ತಂ (ವಡ್ಡಾರಾ. ೩೯-೦೬) ; ಗಗನತಳಕುಸುಮಮನೆ ಬಯಸಿ ಮರುಳ್ಗೊಂಡು ಮಱುಗುವ ಮರುಳಂತೆ . . . ಸ್ವಯಂಪ್ರಭೆಯಂ ನೆನೆನೆನೆದು (ಆಪು. ೩-೦೦೩) ; ಪಂಚಬಾಣನ ರೂಪ ಬಾರೆಂದು ಮರುಳ್ಗೊಂಡು ಚಂಚಲಾಕ್ಷಿಯ ತುಡುಕಿದಳು (ಪೋಹಶ. ೨೬-೩೦). ೨. ಪರವಶಗೊಳ್ಳು : ಪತ್ರಲೇಖೆ ತತ್ಪ್ರಭಾಮಂಡಲಗಳಿಕಹಿಮ ಸ್ಪರ್ಶದಿಂ ಲಬ್ಧಸಂಜ್ಞೆಯಾಗಿ ಮರುಳ್ಗೊಂಡಂತೆ ಇಂದ್ರಾಯುಧಮಿರ್ಪೆಡೆಗೆ ಪರಿತಂದು (ಕಾದಂಬ. ೬೦೩). ೩. ಒಲಿ ; ಮೋಹಗೊಳ್ಳು : ನಿನ್ನಯ ಚಿತ್ರಪಟವ ಕೊಂಡುಯ್ದು ತೋಱಿದ ಮನ್ನ ಮರುಳ್ಗೊಂಬನವನು (ಮೋಹಶ. ೩೦-೦೦). ೪. ಸಂಭ್ರಮಗೊಳ್ಳು ; ಸಡಗರಿಸು : ಜಾತಕರ್ಮೋತ್ಸವದೊಳ್ ಪಂಜನಮುಂ ಪುರಜನಮುಮೊಸಗೆ ಮರುಳ್ಗೊಂಡು ನಿರ್ಭರಕ್ರೀಡಾರಸಪರವಶರಾದಾಗಳ್ (ಆಪು. ೭-೦೦೨ ಪ) ; ನೃತ್ಯಪ್ರವೃತ್ತಚಾರಣಗಣಮುಮೊಸಗೆ ಮರುಳ್ಗೊಂಡು ಘೋರ್ಗರೆದು ನಲಿದು ನರ್ತಿಸುತ್ತಿರ್ಪೊಡನೆ ಬರಿವರೆ (ಕಾದಂಪೂ. ೯೦೫) ; ಒಸಗೆ ಮರುಳ್ಗೊಂಡಾಡುವ ರಸಭಾವಾತ್ಮೆಯರ ನೂಪುರಂಗಳ ದನಿಯುಂ . . . ಒದವಿಸಿತು ಮದನಚಾಪಧ್ವನಿಯಂ (ಕೃಕೃಕ. ೦೨-೨೨). **ಮರುಳುಗೊಳ್** : ೧. ಮರುಳುಗೊಂಡನು ರಾಮ ನೋಡಾ (ಶಾಂತಿ. ೯೩-೪೦). ೩. ಲೋಕದೊಳು ವಿಖ್ಯಾತಕೀರ್ತಿಯು ನಾಕಿ ಯೋಗ್ಯನು ಸೂರ್ಯಪುತ್ರಿಗೆ ಮರುಳುಗೊಂಡಿರಲು (ಸಂಕಶ. ೦೨-೦೩) ; ಆರರೆ ಮನ್ಮಥನೀ ಸತಿಯಲವ ತರಿಸಿದನೊ ಶಿವ ಎನುತ ಮನದಲಿ ಮರುಳುಗೊಂಡನು . . . ಅಸುರೇಂದ್ರ (ಕೊರಣ. ೩-೯-೨೪) ; ವಿಹಿಕೆ ಮರುಳುಗೊಂಡರ್ಥಿಸಿದೆ ತನ್ನನು ಧರಣಿಪಾಲಕುಮಾರಿ ಕಾಣದೆ ನಿಜಪನು (ಜಾಗ. ೦೦-೩೬-೦೯). ೫. ಹುಚ್ಚು ಹಿಡಿ ; ಬುದ್ಧಿಭ್ರಮಣೆಯಾಗು : ಕುರುಡರು ಕಾಣ್ಬರು ಮೂಕರು ನುಡಿವರು ಮರುಳುಗೋಡವರು ತಿಳಿವರು (ಕಾಂತೀಕ. ೦೦-೪೬); ಮರುಳುಗೊಂಡು ಸತ್ತ ನಾಯ ಬಲದ ಬದಿಯೆಲುಬಿನ ಮೇಲೆ ಸಾಧ್ಯವಾಗುವ ಸ್ತ್ರೀ

ನಾಮಮಂ ಬರೆದು ಬಿಳಿಎಕ್ಕೆಯ ಕಟ್ಟಿಗೆಯ ಕೆಂಡದಿಂ ಕಾಸಲು ವಶಮಪ್ಪಳು (ಕಾಮಾ. ೫೩). [ಮರುಳ್$_2$ + ಕೊಳ್$_1$]

**ಮರುಳ್ಗೊಳಿಸು, ಮರುಳುಗೊಳಿಸು** (ಕ್ರಿ). ೧. ಭ್ರಾಂತಿಗೊಳಗು ಮಾಡು; ಭ್ರಮೆಗೊಳಿಸು: ಮದಹಿಡಿಸಿ, ಮರುಳ್ಗೊಳಿಸಿ, ಇರುಳುಗವಿಸಿ, ಮುಚ್ಚುವಳು, ಕಣ್ಣಳಿಸಿ, ಮಣ್ಣೊಳಿಪಳು (ಜಾತಿ. ೬-೦೯೫); ಅಗಳೆನ್ನ ಮನ ಮನೊಲ್ದ ಇನಿದು ಸೊಲ್ಲ ಸೆಳೆಯುವೇನ್ ಇನಿಸುವೆನ್ನ ಮರುಳ್ಗೊಳಿಸ ಲಾಜದಯ್ (ಐಚ್ಛಕ್ರ. ೦೦-೨೦೩). ೨. ಮೋಹಗೊಳಿಸು ; ಆಕರ್ಷಿಸು: ರೂಪೆ ಗಡಂ ನೋಡಲೊಡಂ ಮರುಳ್ಗೊಳಿಸುಗುಂ ವಿದ್ಯಾಧರಸ್ತ್ರೀಯರಂ (ಅಂಪು. ೦-೬೪) ; ಗಿಳಿಯುಂ ಮೊದಲಾಗಿ ನಡೆಪದರನಱಿದು ಮರುಳ್ಗೊಳಿಸುವುದವಱಿಚ್ಛೆಯ್ಸುವ ಫಳಮಿಂತಂತನಿತುಮಾದುದಿಲ್ಲಾ ಖಳನೊಳ್ (ಕಾದಂಬ. ೪೮೩) ; ಕಟಾಕ್ಷರೋಚಿಯಿಂ ರಾಜಪುತ್ರರಂ ಮರುಳ್ಗೊಳಿಸಿ ಸಾಲ್ಗೊಂಡು ಬಂದ ವಾರಾಂಗನೆಯರಿಂ (ರಾಜಶೇ. ೫-೦೯ ವ). **ಮರುಳು ಗೊಳಿಸು** : ೨. ಚಲುವ ನರ್ತನದ ವೆಣ್ಗಳು ಸಭಾಸ್ಥಳವ ಮರುಳುಗೊಳಿಸಿ ದರೇನೆಂಬೆ (ಕಂಪಾ. ೨೦-೦೦೩). [ಮರುಳ್ಗೊಳ್ + — ಇಸು$_3$]

**ಮರುಳ್ಚು** (ಕ್ರಿ). ಮೋಹಗೊಳಿಸು ; ಆಕರ್ಷಿಸು : ನಾಗಶಯ್ಯೆಯೊಳ್ ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್ (ಕಂಪಾ. ೪-೦೩); ವನಿತೆಯರಂ ಮರುಳ್ಚುವ ಸಮಾಕೃತಿಯಿಂ ಸುಮನೋಭಿವೃದ್ಧಿಯಂ ಜನಿಯಿಪ ಶೀಲದಿಂ . . . ವಿಭು ಲಕ್ಷ್ಮಿದೇವನೆಸೆವಂ (ಎಕ. XIII, ೨೯-೦೦ ; 1204) ; ನೀಂ ಕುಮರಿಯನಿಂತು ಮಚ್ಚಿಸಿ ಮರುಳ್ಚಿ ಧನಂಗೊಡದಿಪ್ಪುದೊಪ್ಪವೇ (ಕೃಶಿ. ೨೯-೦೯). [ಮರುಳ್$_1$ + — ಚು$_1$]

**ಮರುಳ್ತನ, ಮರುಳುತನ, ಮಳ್ಳತನ** (ನಾ). ೧. ಹುಚ್ಚು; ಬುದ್ಧಿಭ್ರಮೆ : ಮರುಳ್‌ತನಂ ನಿನತು ಬಲ್‌ಬೆಳೆದ ಕರತ್ರಮೆನೆ ತೋರ್ಪುದೆನಗೆ (ಐಚ್ಛಕ್ರ. ೫೨-೦೦೨೩). ೨. ದಡ್ಡತನ ; ಮೌಢ್ಯ : ಈತನೊಳ್ ಇದಿರ್ಚಿ ಕಾದುವ ಮರುಳ್ತನಂ ಬೇಡ (ಆದಿಪು. ೦೩-೫೬ ವ); ನಿಮ್ಮೊಳ್ ಕೂಡಿದೆನ್ನ ಮರುಳ್ತನಮಲ್ಲದೆ ನಿಮ್ಮೊಳನಿತುಂ ದೋಷಮಿಲ್ಲ (ಕಂಪಾ. ೯೫-೯). ೩. ಪಿಶಾಚಿಯಾಗಿರುವಿಕೆ : ಬಂಧುಮತ್ಸರದೊಳೆ ವೈರಮಂ ಪಡೆದು ಭೀಮನನಿನ್ನಿತರ್ಕೆ ತಂದ ನೀಂ ಮರುಳನೊ ಭೂತಕೋಟಿವೆರಸಾಹವರಂಗದೊಳಾಡುತಿರ್ಪ ತಾಂ ಮರುಳನೊ ನೋಟ್ಪವಿರ್ವರ ಮರುಳ್ತನಮಂ ಘಟರಾಜಕೇತನಾ (ಗದಾಯು. ೪-೫೫). **ಮರುಳುತನ** : ೨. ಮರುಳುತನದಲಿ ವ್ಯರ್ಥನಾದೆನಲಾ ಮಹಾದೇವ (ಕುಮಾರ. ೬೦೨. ೬-೦೦೩); ಏಕೆ ನಿನಗೀ ಮರುಳುತನದವಿವೇಕ (ಕೃಷ್ಣ. ೫-೩-೫೦); ಆತನ ನುಡಿಗೇಳಿ ಈ ತನಕ ಇಲ್ಲಿ ಕುಳಿತುದೇ ನಮ್ಮ ಮರುಳುತನ (ಕಾಂಯು. ೦೪). **ಮಳ್ಳತನ** : ೨. ಮುದ್ದಾಂ, ಮಳ್ಳತನವನ್ನು ಪ್ರದರ್ಶಿಸುವ ಡಾವಿನಿಂದ, ನಾನೂ. . . ದಾತವಿಾ ಒಪ್ಪಿಸಿದ್ದೆ (ನೀತಕ. II, ೦೪). [ಮರುಳ್$_2$ + — ತನ]

**ಮರುಳ್ನಗೆ** (ನಾ). ದೆವ್ವದ ನಗೆ ; ಪಿಶಾಚಿಯ ನಗು : ಇಂಚರದ ಕೊರಲು ಧರಿದು ಕಠೋರಭೇರಿಯಾಗುತಿದೆ ! ಚೆಲುವೆಯರ ಮುಗುಳ್ನಗೆಯು ಮರುಳ್ನಗೆಯುದಾಗುತಿದೆ ! (ಶಾಂತಿ. ೩೫-೦೦). [ಮರುಳ್$_2$ + ನಗೆ]

**ಮರುಳ್ಪಡೆ** 'ಮರುಳ್ವಡೆ' ನೋ.

**ಮರುಳ್ಬೂದಿ** (ನಾ). ಬುದ್ಧಿಯನ್ನು ಮಂಕುಗೊಳಿಸುವ ಬೂದಿ ; ಮಂಕುಬೂದಿ : ಮನ್ಮಥಾಂಕನೆಂದೆಂಬ ಕೌಳಿಕಂ ಜನವಶ್ಯದಾ ಮರುಳ್ಬೂದಿ ಕವಿಸಿದಂತಿರುತಿರ್ಪ ಚೊನ್ನದೊಳ್ (ಶಠು. ೬-೪೦).

[ಮರುಳ್$_2$ + ಬೂದಿ]

**ಮರುಳ್ಮಸಗು** (ಕ್ರಿ). ಹುಚ್ಚು ಕೆರಳು ; ಹುಚ್ಚೇರು : ಒರ್ವರೊರ್ವರಂ ನಂಬದ ಬಗೆಯಿಂ ಕನಕಾಸ್ವಾದಮಿಲ್ಲದೆಯುಂ ಮರುಳ್ಮಸಗಿ ಮಸುಗೆಟ್ಟು ಮಸಿಯ ಬಡಿಗೆಗಳನೆತ್ತಿಕೊಂಡು (ಅರಣ. ೪-೦೭೪ ವ).

[ಮರುಳ್$_2$ + ಮಸಗು]

**ಮರುಳ್ವಡೆ, ಮರುಳ್ಪಡೆ** (ನಾ). ೧. ದೆವ್ವಗಳ ಗುಂಪು ; ಪಿಶಾಚಿಗಳ ಸಮೂಹ : ವಾಜಿಯುಂ ವಾಹಕರುಂ ಮರುಳ್ವಡೆಯುಮಾಗಡೆ ತವ್ಮೊಡನಾಡೆ ರಾಗದಿಂ (ಕಂಪಾ. ೦೩-೬೫). ೨. ಶಿವನ ಪರಿವಾರ; ಪ್ರಮಥಗಣ : ಕರಮೆಸೆದಂ ಪಲತೆಱದ ಮರುಳ್ವಡೆಯ ನಡುವುಮಾಪತಿರುದ್ರಂ (ಕಾವ್ಯಾ. ೬೦೦). **ಮರುಳ್ಪಡೆ** : ೧. ಗಜಮಾಂಸಮನುರ್ಚ್ಚಿ ತಿಂದು ಕೂಗಿಡುವ ಮರುಳ್ಮರುಳ್ಪಡೆಯನಟ್ಟುವ ಸಿದ್ಧಗಣಂ (ಎಕ. VIII, ಸೊರಬ. ೦೪೪-೦೦; 1033 ?); ಮಂದಲೆಯ ತಿಱಿಕಲ್ಲಾಟದಿಂ ಮರುಳ್ಪಡೆಗೆ ನಲವೆರ್ಚಿಸುತುಂ (ರಾಮಾಶ್ವ. ೪೯-೦೯). [ಮರುಳ್$_2$ + ಪಡೆ$_2$]

**ಮರುಳ್ಬಣಗು** (ನಾ). ತುಚ್ಛವಾದ ಪಿಶಾಚಿ : ಸೊಣಗಂಗಳ ಸೊಣಪುತ ಮರುಳ್ಬಣ [ಪಾಠಾಂ. ಳಗೂ]ಗುಗಳು ಒಣದಲೆವೋತ ಹಿಡಿದು ರಕ್ಕಸರುಂಬ ಹೆಣನ ಭಿಕ್ಷವ ಬೇಡುತಿಹರು (ತ್ರಿಣಾಂ. ೬-೦೩). [ಮರುಳ್$_2$ + ಬಣಗು$_2$]

**ಮರುಳ್ವೋಗು** (ಕ್ರಿ). ಭ್ರಮೆ ಹೊಂದು ; ಭ್ರಾಂತಿಗೊಳ್ಳು ; ಮರುಳಾಗು : ಸವಿನುಡಿಯ ಕಳ್ಳಂಟೆ ಮರುಳ್ವೋಗೆಯಮ್ಮ ನೀನಾತಂಗೆ (ತ್ರಿರಾಮ. ೩೦-೨೦೦). [ಮರುಳ್$_2$ + ಪೋಗು$_1$ (< ಪೋ$_1$)]

**ಮರೂರ್** (ನಾ). ಒಂದು ಊರಿನ ಹೆಸರು : ಮರೂರು ಕಣ್ನಾಡಿಯ ನೆಬಲ ಗುಡಿಸಿದ ತ್ರೈಲೋಕ್ಯವೀರಕೆ ಕೊಟ್ಟ ಮಣ್ಣು ಇರ್ಖಂಡುಗ (ಎಕ. IX, ಬೆಂಗಳೂ. ೪೦-೬; 820). [ ? + ಊರ್ ]

**ಮರೆ$_1$** 'ಮಱೆ$_1$' ನೋ.

**ಮರೆ$_2$** 'ಮಱೆ$_2$' ನೋ.

**ಮರೆ$_3$** (ನಾ). ಒಂದು ಬಗೆಯ ಜಿಂಕೆ : "ನ್ಯಂಕುಃ, ರಂಕುಃ— ಈ ೨ ಮರೆ" (ಶಬ್ದಾಯು. ೩೯-೬೬); ಪರಿವ ಕಡವಿನ ಕಾಡೆಮ್ಮೆಯ ಮರೆಯ ಹಿಂಡುಗಳುಮಂ . . . ಪಾಯ್ವ ಸಿಂಗಂಗಳುಮಂ ಕಂಡು ( ಹಂಪಾ. ೫-೪೮ ವ ) ; ಕರಡಿ ಕಡವೆ ಕಾಡೆಮ್ಮೆ ಸೊಣಗ ಮೊಲ ಮರೆ . . . ಎರಡು ತಲೆಯ ಪಕ್ಕಿಯಿನೊಪ್ಪಿದುದಾ ದಾರುಣಮಪ್ಪಡವಿ (ಜಯಗಾ. ೦೫-೨೯).

[ದೇ.೩ ತಮಿ. ಮರ್ೖ]

**ಮರೆಕನ್ನಡ** 'ಮಱೆಗನ್ನಡ' ನೋ.

**ಮರೆಗರೆ** (ಕ್ರಿ). ೧. ಅಡಗಿರು ; ಬಚ್ಚಿಟ್ಟುಕೊಂಡಿರು : ಪಲಾಯನಕ್ಕಾಗಿ ಮರೆಗರೆದು ಹೊಂಚುತ್ತಿರುವ ವೀರಶತ್ರು ( ಶಬ್ದ. ೦೨೩-೦೯ ). ೨. ಮುಚ್ಚು ; ಮರೆಮಾಡು : ಅರುಣಕಿರಣದ ಜವನಿಕೆಯ ಮರೆಗರೆದು ಬಹ ದಿನಕರನ ಬಿಜಯದ ಭರವನರಿದುಲಿಯುತ್ತಿಹುವು ಕಲರವದ ಖಗನೀರ (ಕವಿ. III, ೦೩೩ ಹರಿಹರಪಾರಿಜಾತ). [ ಮರೆ$_2$ (< ಮಱೆ$_2$) + ಕರೆ$_2$ ]

**ಮರೆಗುಳಿ, ಮರಗುಳಿ** (ಗು). ಮರೆಯುವ ; ಸ್ಮರಣೆಯನ್ನು ಕಳೆದುಕೊಳ್ಳುವ : ಮರೆಗುಳಿ ಸ್ವಭಾವದವನು ನನ್ನ ಕೈಗೆ ಈ ಹಳೆಕೊಡೆಯನ್ನು ಅರ್ಪಿಸಿ ಹೋಗಿರುವುದೂ ಸಾಧ್ಯವಿದೆ (ಲೀಲಾ. ೫೩); ಮರೆಗುಳಿ ಸ್ವಭಾವದವರೂ, ಮರೆವಿನ ರೋಗಿನವರೂ ರೇಲ್ವೆಯ ಪತ್ರಿಕೆಗಳನ್ನು ಶಿರಸ್ತ್ರಾಣದ ಒಡಲಲ್ಲಿಯೊ, ಕೋಟಿನ ಒಳಕಿಸೆಯಲ್ಲಿಯೊ, ತುರುಕಿಬಿಡುವ ಸಂಭವವುಂಟು (ಗಾಳಿ. ೩೪). **ಮರಗುಳಿ** : 'ಮರೆ' ಧಾತುವಿಗೆ–ಆ ಸ್ವಭಾವವುಳ್ಳ—ಎನ್ನುವ ಅರ್ಥದಲ್ಲಿ 'ಗುಳಿ' ತದ್ಧಿತಪ್ರತ್ಯಯ ಸೇರಿದಾಗ–'ಮರಗುಳಿ' —ಎನ್ನುವ ಶಬ್ದ ಸಿದ್ಧವಾಗುತ್ತದೆ (ಶಾಸನ. ೦೩೫).

[ಮರೆ$_1$ (<ಮಱೆ$_1$) + — ಗುಳಿ$_3$]

**ಮರೆಗೆಯ್** (ನಾ). ಕಣ್ಣಿಗೆ ಕಾಣದ ಕೈ : ಇನಿಮೊಳ್ಳುಂ ಸಡಿಲ್ಚಿಟ್ಟು ಬಿನ್ನನಿರ್ದರಿವ ಮರೆಗೆಯ್ಗಳ್ದ ವಾಗೆವೋಲಲುಗುಗೋಡನ್ನನಿಂಗಿತದಿಂದೆ ಮುಂಬಡಿಸೆ (ಸಂಸಕ. ೩೨-೦೬೫). [ಮರೆ$_1$ (< ಮಱೆ$_1$) + ಕೆಯ್$_2$]

**ಮರೆಗೊಡು** (ಕ್ರಿ). ಆಶ್ರಯವನ್ನು ಕೊಡು : ಚಿಟ್ಟಪ್ಪನ ಹಸುಳೆಗಳನ್ನು ಕರೆತರಿಸಿಕೊಂಡು ಮರೆಗೊಟ್ಟು ಅಕ್ಕರಿಂದ ನಡಪಿ (ಕುಂತ್ರಿಕ. ೦೬-೬).

[ಮರೆ$_2$ (< ಮಱೆ$_2$) + ಕೊಡು$_1$]

**ಮರೆಗೊಳ್** 'ಮಱೆಗೊಳ್' ನೋ.

**ಮರೆಗೊಳು** 'ಮಱೆಗೊಳ್' ನೋ.

**ಮರೆಗೋಡು** (ನಾ). ಜಿಂಕೆಯ ಕೊಂಬು : ಪುರುಷಾಕಾರದ ರೂಪಂ ಮರೆಗೋಡಂ ಕಾಣಲೊಡನೆಯಾ ಮರೆವೆಣ್ಣಚ್ಚರಸೆಯ ರೂಪಂ ತಳೆದು (ಶಸ. I. ೨೩-೨೦; 1186). [ಮರೆ₃ + ಕೋಡು₅]

**ಮರೆದೆಗೆ** 'ಮಱೆದೆಗೆ' ನೋ.

**ಮರೆನುಡಿ** 'ಮಱೆನುಡಿ' ನೋ.

**ಮರೆಪಡೆ** (ಕ್ರಿ). ಆಶ್ರಯವನ್ನು ಹೊಂದು; ಶರಣುಹೊಗು : ಮಲ್ಲಿಕಾರ್ಜುನದೇವರ ಶ್ರೀಪಾದದಲ್ಲಿ ಪದ್ಮಸಂನಿಧಿಗಾಗಿ ಮರೆಪಡೆಯ ಬೇಕೆಂದು ಮಾಡಿದಂಥಾ ಧರ್ಮ (ಎಕ. XII. ಗುಬ್ಬಿ. ೨೯-೪೦; 1420). [ಮರೆ₂ (< ಮಱೆ₂) + ಪಡೆ₁]

**ಮರೆಬೀಳು** (ಕ್ರಿ). = ಮರೆಪಡೆ : ವ್ಯಾಧನ ಮರೆಬಿರ್ದಡಂ ಪಿಡಿದೆಳೆದು ತಹೆವು (ಶವಪೋ. ೦೨-೩೬); ನಾ ನಿಮ್ಮ ಮರೆಬಿದ್ದೆ ಗುರುವೆ (ವ್ಯಾಸರ. ೪೩-೪೪); ಮರೆಬಿದ್ದವನನ್ನು ಬೆನ್ನಿಗೆ ಕಟ್ಟಿಕೊಳ್ಳುವುದು ಸ್ವಭಾವ (ಹುಬ್ಬ.ಕ. ೦೧೩). [ಮರೆ₂ (<ಮಱೆ₂) + ಬೀಳು₁ (<ಬೀೞ್₁)]

**ಮರೆಮಾಚು** 'ಮಱೆಮಾಚು' ನೋ.

**ಮರೆಮಾಡು** 'ಮಱೆಮಾಡು' ನೋ.

**ಮರೆಮೈ** 'ಮಱೆಮೆಯ್' ನೋ.

**ಮರೆವಲೆ** (ನಾ). ಜಿಂಕೆಯನ್ನು ಹಿಡಿಯುವ ಒಂದು ಬಗೆಯ ಬಲೆ : ಎರಳೆವಲೆ ಹಂದಿವಲೆ . . . ಮರೆವಲೆಗಳು . . . ನೇಣ್ವಲೆ ಮೊಕರವಲೆ ಬೇಡರ ಸಿರದೊಳೊಪ್ಪಿದುದು (ಶಾಳ್ಯಶಾ. ೫-೦೯). [ಮರೆ₃ + ಬಲೆ₁]

**ಮರೆವಿಡಿ** (ನಾ). ಹೆಣ್ಣುಜಿಂಕೆ ; ಹರಿಣಿ : ಮುನೀಂದ್ರಂ . . . ಪೊಱಪೊಣ್ಮುವ ರೇತಸ್ಕಳನೆಗೆ ನಾಣ್ಚುತತಿದುಃಖಾಂನ್ವಿತನಬ್ಜದಳದೊಳಂತದನಾಂತಂ ಮರೆವಿಡಿಯಾಘ್ರಾಯಿಸೆ . . . ಮರೆವೆಣ್ಣ ಗರ್ಭದಿಂದವತರಿಸಿದನೊರ್ವಂ ಕುಮಾರಕಂ (ಶಸ. I. ೨೩-೨೦; 1186). [ಮರೆ₃ + ಪಿಡಿ₃]

**ಮರೆವು** 'ಮಱವು' ನೋ.

**ಮರೆವುಗೇಡಿ** (ನಾ). = ಮರೆಗುಳಿ : ಅವನೊಬ್ಬ ಮರೆವುಗೇಡಿ. ಈಗ ಹೇಳಿದ್ದನ್ನು ಇನ್ನೊಂದು ಕ್ಷಣದಲ್ಲಿ ಮರೆತುಬಿಡುತ್ತಾನೆ (ರೂಢಿ). [ಮರೆವು (<ಮಱವು) + ಕೇಡಿ₁]

**ಮರೆವುಗೇಡಿತನ** (ನಾ). ಮರೆಯುವಿಕೆ ; ಜ್ಞಾಪಕವಿಲ್ಲದಿರುವುದು : ವಿಚಾರಮಗ್ನತೆಯಲ್ಲಿ ಕೊಂಚಕೊಂಚ ಮರೆವುಗೇಡಿತನವೂ ಕೂಡಿರುತ್ತದೆ (ಮುಂಗಾರು. ೮೨). [ಮರೆವುಗೇಡಿ + — ತನ]

**ಮರೆವೆಣ್** (ನಾ). = ಮರೆವಿಡಿ : ಆ ಮರೆವೆಣ್ಣಚ್ಚರಸೆಯ ರೂಪಂ ತಳೆವಂಬರಕ್ಕೆ ಪಾಱುದುದೆ(ದು) (ಶಸ. I. ೨೩-೨೦; 1186). [ಮರೆ₃ + ಪೆಣ್]

**ಮರೆವೋಗು, ಮರೆಹೋಗು, ಮೊರೆಹೋಗು, ಮೊಱೆಯೋಗು** (ಕ್ರಿ). ಆಶ್ರಯಿಸು : ಗೌರಿ ಕೋಕಿಲೆಯಾಗಿ ಬಂದು ಯಜ್ಞಕುಂಡದ ಸಮೀಪದಲ್ಲಿ ತನುಮನೋಧನಂಗಳಂ ಬೇಡಿದ ಬ್ರಾಹ್ಮಣಿರ್ಗೀವೆನೆಂಬನ ಮರೆವೋಗೆ (ಕಾಕಳ್. ೦೦೩). **ಮರೆಹೋಗು :** ವಿದ್ಯಾರ್ಥಿಗಳು ಗೈಡುಗಳಿಗೆ ಮರೆಹೋಗುವುದನ್ನು ತಪ್ಪಿಸಬೇಕು (ರೂಢಿ). **ಮೊರೆಹೋಗು :** ಅರಿಯದ ವೈರಾಗ್ಯ ಹರಹಿಕೊಂಬುದಕಿಂತ ಅರಿತು ಮೊರೆಹೋಗಿರೊ ಗೋಪಾಲ ವಿಠಲನ್ನ (ಹಗದಾ. ೩೯) ; ಅರ್ಜುನನು . . . ಶ್ರೀ ಕೃಷ್ಣನ ಮೊರೆಹೋಗುತ್ತಾನೆ (ಕರ್ಣಸಾ. ೦೩೪). **ಮೊಱೆಯೋಗು :** ಅಗ್ನಿ ಹರಿಯ ಮೊಱೆಯೋಗೆ ಕರುಣಾದಿಂದಲಿ ಕೇಳಿ ಹರಿ ಬಂದ (ತೀರ್ಥವು. ೨೪೦). [ ಮರೆ₂ (< ಮಱೆ₂) + ಪೋಗು₁ (< ಪೋ₁) ]

**ಮರೆಸಲ್** (ಕ್ರಿ). ಆಶ್ರಯವನ್ನು ಹೊಂದು. — ಪಡೆ : ಇದ್ದೆಸೆಯು ನಿದ್ದೊರೆಗಳೆದ್ದು ಮುಂಬೆರೆಯ ಒಂದನಿನ್ನೊಂದು ಮರೆಸಂದು ಹರಿವಂತೆ (ಗಿರಿಶಿಂ. ೫೬-೩೬). [ಮರೆ₂ (< ಮಱೆ₂) + ಸಲ್₁]

**ಮರೆಸು** ' ಮಱೆಯಿಸು ' ನೋ.

**ಮರೆಹುಯಿಲು** ' ಮಱೆವುಯಿಲ್ ' ನೋ.

**ಮರೆಹೊಗು** ' ಮಱೆವೊಗು ' ನೋ.

**ಮರೆಹೋಗು** 'ಮರವೋಗು' ನೋ.

**ಮರೇ** ' ಮರ್ಯೋ ' ನೋ.

**ಮರೋ** ' ಮರ್ಯೋ ' ನೋ.

**ಮರೋಲಿ** (ನಾ). (?) : ಮರೋಲಿ, ಚೀಳಂಗಟ್ಟದ — ಮರೆ, ಮರಸು, ತಪ್ಪಲುಕಿಬ್ಬೆ (ತತ್ವಶಾ. ಅನುಬಂಧ II. ೩). [ ? ]

**ಮರ್ಕಟ** (ನಾ). ೧. ಒಂದು ಬಗೆಯ ಪ್ರಾಣಿ ; ಕೋತಿ ; ಮಂಗ : ಜರದಂಧತಾಪಸರ ಕಯ್ಯಂ ಪಿಡಿದೆಡಪಲೀಯದೆ ನಡೆಯಿಸುವ ಚಪಳ ಮರ್ಕಟಂಗಳಿಂ . . . ಸೊಗಯಿಸುವುದು (ಕಾದಂಪೂ. ೨೨೨) ; ಮರನನೇಱಿದ ಮರ್ಕಟನಂತೆ ಹಲವು ಕೊಂಬೆಗೆ ಹಾಯುತಲಿದೆ ಬೆಂದ ಮನವ ನಾನೆಂತು ನಂಬುವೆನಯ್ಯಾ (ಬಸವ. ೩೩) ; ಉರಿವ ಕಿಚ್ಚನು ಬಿಚ್ಚಿ ಬೀಸಿದ ತೆಜವಲುಱಿ ಅಟ್ಟಿದನು ಮರ್ಕಟರ (ಕೌಶಿರಾ. ೨೦-೩೯). ೨. ಜೇಡರ ಹುಳು. ೩. ಒಂದು ನರಕದ ಹೆಸರು : ಮರ್ಕಟ . . . ಗಂಡಕವೆಂಬೈದು ಮಂತ್ರಿನರಕಂಗಳ ಸಹಾಯದಿಂ ಮಹಾಪದ್ಮವೆಂಬರಸುನರಕವಿಹುದು (ಏಪೇಕ. ೦೫೦). ೪. (ಆಲಂ) ಮಂಕ ; ತಿಳಿಗೇಡಿ : "ಮರ್ಕಟಗೆ ಮಂಕನೆನಿಕುಂ" (ಕಶರ. ೧೨೦) ; ಇಂತೀ ಗುಣ ಸತ್ಯವಂತರಿಗಲ್ಲದೆ ಮಿಕ್ಕಿನ ಮರ್ಕಟ[ಪಾಠಾಂ. ಮಕ್ಕಟನಾಥ]ರಿಗೆಲ್ಲಿಯದೋ (ಷೋಳಪಮ. ೩೩-೨೨೬). ೫. [ಕಾಮಶಾ] ಒಂದು ಬಗೆಯ ರತಿಬಂಧ : ಕಾಲ ನೀಡಿ ಕುಳ್ಳಿರ್ದ ಬಾಲೆಯೊಪ್ಪುವೆರಡುತೊಡೆಯ ಮೇಲೆ ಪುರುಷನಂತೆ ಕುಳ್ಳಿರ್ದು ತನ್ನಯ ಕಾಲನಿಟ್ಟು ಸಮ್ಮುಖದೊಳು ಲಾಲಿಸುತ್ತೆ ರಮಿಸಲದುವೆ ಲೋಲನೇತ್ರ ಕೇಳು ಮರ್ಕಟಾಖ್ಯವೆನಿಪ್ಪುದು (ಶಶಕ. ೯-೪೪). [ಸಂ.]

**ಮರ್ಕಟಕ** (ನಾ). = ಮರ್ಕಟ ೧ : "ಬಲೀಮುಖಃ, ಮರ್ಕಟಕಃ . . . ವಾನರಃ — ಈ ೧೧ ಕೋಡಗಂ" (ಶಬ್ದಾರ್ಥಮ. ೩೯-೭೬). [ಸಂ.]

**ಮರ್ಕಟಕಿಶೋರನ್ಯಾಯ** (ನಾ). [ತರ್ಕಶಾ] ತಾಯಿಕಪಿಯನ್ನು ಮರಿಕಪಿಯು ಅಪ್ಪಿಕೊಂಡಿರುವಾಗ, ತನ್ನ ತಾಯಿ ತನ್ನನ್ನು ರಕ್ಷಿಸುತ್ತದೆ ಎಂಬ ಭಾವನೆಯುಳ್ಳ ದೃಷ್ಟಾಂತ ; ¶ ಹಾಗೆಯೇ ಪರಮಾತ್ಮನನ್ನು ದೃಢವಾಗಿ ನಂಬಿದ ಭಕ್ತನನ್ನು ಆಶ್ರಯದಾತನಾದ ದೇವರು ಕೈಬಿಡುವುದಿಲ್ಲ ಎಂಬುದಕ್ಕೆ ದೃಷ್ಟಾಂತ : ದೃಷ್ಟಾಂತಗಳ ಮೂಲಕ ಜೀವಾತ್ಮ ಪರಮಾತ್ಮರ ಸಂಬಂಧವನ್ನು ವಿವರಿಸುವಾಗ ಮರ್ಕಟ-ಕಿಶೋರ ನ್ಯಾಯ, ಮಾರ್ಜಾಲ-ಕಿಶೋರ ನ್ಯಾಯ ಎಂದು ಹೇಳುವುದುಂಟು (ಶಾರದ. ೨೬೩). 'ಮಾರ್ಜಾಲಕಿಶೋರನ್ಯಾಯ' ಪರಾ. [ಸಂ.]

**ಮರ್ಕಟಚಿಹ್ನ** (ನಾ). ಕೋತಿಯ ರೂಪ (?) : ಧ್ವಜ ಮಕುಟ ಸಿತಾತಪತ್ರಾದಿಗಳೊಳ್ ಮಣಿಮಯಮಪ್ಪ ಮರ್ಕಟಚಿಹ್ನದೊಳ್ ಮುನಿವರನಂ ಪೂಜಿಸಿ (ಪದ್ಮರಾ. ೦೭೩-೪). [ಸಂ.]

**ಮರ್ಕಟತನ** (ನಾ). ಕಪಿಯ ಸ್ವಭಾವ ; ಚಂಚಲಚಿತ್ತ : ಮನದ ಮರ್ಕಟತನವೆಂತು ಮಾಣ್ಬುದೆನ್ನಾ (ಬಸವ. ೪೦) ; ಬಾಲಬುದ್ಧಿಗೆ ಪ್ರಶ್ನಾಸ್ವಾತಂತ್ರ್ಯ ಕೊಡುವುದು ಮರ್ಕಟತನಕ್ಕೆ ಪಟ್ಟ ಕಟ್ಟಿದಂತೆಯೇ (ಶಿಕಂದಾ. ೪೯). [ ಮರ್ಕಟ + — ತನ ]

**ಮರ್ಕಟಧ್ವಜ** (ನಾ). ೧. ಕೋತಿಯ ಚಿಹ್ನೆಯಿರುವ ಬಾವುಟವನ್ನು ಹೊಂದಿದವನು. ೨. ಅರ್ಜುನ : ಪೊಣರ್ದರುರ್ಬಿ ವೃಷಧ್ವಜ ಮರ್ಕಟಧ್ವಜರ್ (ಶಂಕಂ. ೪-೭೨). [ಸಂ.]

**ಮರ್ಕಟನಾಡಿ** (ನಾ). ಒಂದು ನಾಡಿಯ ಹೆಸರು : ಮಯೂರನಾಡಿ . . . ಮರ್ಕಟನಾಡಿ . . . ಸಂತೋಷನಾಡಿ ಇಂತೀ ಪ್ರಥಮನಾಡಿಯೊಳಗಾದ ಶರೀರದಲ್ಲಿ ತೋಱುವ ನಾಡಿ ಜೀರ್ಣಪರ್ಣದಂತೆ (ಸಕವ. III, ೨೯೯-೩೦೩). [ಸಂ.]

**ಮರ್ಕಟಬಂಧ** (ನಾ). ಸ್ವಲ್ಪವೂ ಅಲ್ಲಾಡದಂತಹ ಬಿಗಿಯಾದ ಬಂಧನ ; ಕೋಡಗಗಟ್ಟು ; ಹೆಡಮುರಿಗೆ : ತದೀಯಶೌರ್ಯ ಮನೆತ್ತುಂಗೋಲ್ಲೊಳ್ಗಂತೆ ಮೇಗಣಿಂ ಮೇಗೆ ಪಿಡಿದೆತ್ತಿಕೊಂಡು ಮರ್ಕಟಬಂಧದಿಂ ಕಟ್ಟಿ ತಂದು (ಶಾಂತಿಪು. ೧೧-೧೬೪ ವ). [ಸಂ.]

**ಮರ್ಕಟವಿಲಾಸ** (ನಾ). ಕಪಿಯಂತೆ ಚೇಷ್ಟೆಮಾಡುವ ವ್ಯಕ್ತಿ : ದುರುಳರುರವಣಿಸಿದರು . . . ಮರ್ಕಟವಿಲಾಸರು ಧುರರಚಿತಪರಿಹಾಸರಭಿಜನಕುರುವಿನಾಶಕರು ತಾವಕರು (ಕುಮಾರವ್ಯಾ. ೧೨-೨೮). [ಸಂ.]

**ಮರ್ಕಟಿ** (ನಾ). ೧. ಒಂದು ಬಗೆಯ ಸಸ್ಯ ; ನಸುಗುನ್ನಿಗಿಡ: "ನಸುಕುನ್ನಿ ಮರ್ಕಟಿಯಾತ್ಮಗುತ್ತೆಯುಕ್ಕು" (ಮಂಗರಾ. ೪೩-೪೩); "ಪಡ್ಗ್ರಂಥಿ — ಬಜೆ, ಮರ್ಕಟಿ" (೬ಸಂ. ೧೬೩). ೨. ಹೆಣ್ಣುಕಪಿ. ೩. ಓಮ; ಅಜವಾನ. [ ಸಂ. ಮರ್ಕಟೀ ]

**ಮರ್ಕೂಂ** (ನಾ). ಬರವಣಿಗೆ ಅಥವಾ ಲಿಖಿತದ ಸಂಖ್ಯೆ : ಅವನ್ನು ದಾಖ್ಲೆ ಮಾಡದೆ ಇಟ್ಟುಬಿಡುತ್ತಿದ್ದರು. ದಾಖ್ಲೆ ಮಾಡಿದರೂ ಯಾವ ಮರ್ಕೂಂನ ಹುಕುಂ ಎಂದು ಬರೆಯುತ್ತಿರಲೇ ಇಲ್ಲ (ಹಮ್ಮರು. ೦೩೩); "ಮರ್ಕೂಂನ ಹುಕುಂ : ಇಂಥ ನಂಬರಿನ (ಮರ್ಕೂಂನ) ಆರ್ಡರು (ಹುಕುಂ)" (ಹಮ್ಮರು. ೩೦೯). [← ಅರ. ಮರಾ. ಮರ್ಕೂಂ=ಲಿಖಿತ]

**ಮರ್ಗಿಸು** 'ಮುಟ್ಗಿಸು' ನೋ.

**ಮರ್ಗು** 'ಮುಟ್ಗು' ನೋ.

**ಮರ್ಚಿಸು** 'ಮೆಚ್ಚಿಸು' ನೋ.

Δ **ಮರ್ಚು**$_1$ 'ಮೆಚ್ಚು$_1$' ನೋ.

Δ **ಮರ್ಚು**$_2$ 'ಮೆಚ್ಚು$_2$' ನೋ.

**ಮರ್ಚುಗೆ** 'ಮೆಚ್ಚುಗೆ' ನೋ.

**ಮರ್ಜಿ** (ನಾ). ೧. ಇಷ್ಟ; ಆಸಕ್ತಿ : ಈ ಯಾವ ಕಾರ್ಯಕ್ಕೂ ದೊಡ್ಡ ಸರಕಾರದ ಮರ್ಜಿಯೂ ತಮ್ಮ ಮರ್ಜಿಯೂ ಯಾವ ಮೇರೆ ಇದೆಯೋ ಆ ಮೇರೆ ಹಾಜರು ಇದ್ದೇವೆ (ರಾಜೇಂದ್ರ. ೦೨೯) ; ಯಕ್ಷಗಾನದ ಮೇಲೆ ಮರ್ಜಿಯಿದ್ದ ಶ್ರೀಪತಿಗೆ ಈ ನಾಟಕದಲ್ಲಿ ಪಾತ್ರವಿರದಿದ್ದರೂ . . . ಅವನಿಗೆ ಖಯ್ಯಾಲಿ (ಸಂಸ್ಕಾರ. ೬೩) ; ಮದುವೆ ಮಾಡಿಕೊಡುವವರ ಮರ್ಜಿ, ಮಾಡಿಕೊಳ್ಳುವವರ ಮರ್ಜಿ (ಗಾಳಿಪ. ೨೩). ೨. ಸ್ವಭಾವ : ಅವರದ್ದು ಮುಟ್ಟಿದರೆ ಮುನಿಯುವ ಮರ್ಜಿ (ಕಬಾ. XVIII, ೬೯೦೪) ; ಕುಮಾರಿಗೂ ಸವಾರನಿಗೂ ಪರಸ್ಪರ ಮರ್ಜಿ ಗೊತ್ತಿರಬೇಕು (ರಾಜ್ಯಶಾ. ೨೩೬) ; ನನಗೆ ಹಳ್ಳಿಯ ಹುಡುಗಿಯ ಮರ್ಜಿಯ ಪರಿಜ್ಞಾನವಿಲ್ಲ (ಕಂಠೀ. ೯೬). ೩. ಅನುಗ್ರಹ ; ಪ್ರಭಾವ : ಫಕೀರನು ಅವರ ಮರ್ಜಿ ಸಂಪಾದಿಸಿ ಅವರಲ್ಲಿಯೆ ನೌಕರಿಗಾಗಿ ನೆಲಸಿದನು (ಶಂಸಂ. ೩೩) ; ಮೇಲಿನವರ ಮರ್ಜಿಪಡೆದು ತುಸುದಿನದಲ್ಲಿಯೇ ಕಾಯಂ ಆದನು (ಗ್ರಂಥಾಯು. ೨೯೬). ೪. ರೀತಿ ; ಗತ್ತು : ಕೊಳಗದಲ್ಲಿ ಅಪ್ಪಯ್ಯ ಭತ್ತವನ್ನು ಅಳೆಯುವಾಗ ಎಣಿಸುವ ಮರ್ಜಿಯಲ್ಲಿ ಅವರ ಲೆಖ್ಖ ನಡೆದಿತ್ತು ! (ಸಂಸ್ಕಾರ. ೩೩).
[←ಅರ. ಮರ್ಝೀ ; ಹಿಂ. ಮರಜೀ, ಮರ್ಜೀ ; ಮರಾ. ಮರ್ಜೀ]

**ಮರ್ತಬೆ** (ನಾ). ೧. ಸಲ ; ಬಾರಿ. ೨. ಸಂದರ್ಭ ; ಅವಕಾಶ ; ಸಮಯ : ಅದರ ವಡಂಬಡಿಕೆ ಸಂತೋಷದ ಮರ್ತಬೆ ದೋಸ್ತಿ ಕಲಮಿನಿಂದಾ ಬಹಳ ಸಲಾ ಬರದು ಇದ್ದೇವೆ (ರಾಜೇಂದ್ರ. ೦೨೦).
[←ಅರ. ಮರ್ತಬಹ್ ; ಹಿಂ. ಮರ್ತಬಾ]

**ಮರ್ತ್ಯ** (ಗು). ೧. ಸಾವಿಗೊಳಗಾಗುವ ; ಮರಣಹೊಂದುವ. (ನಾ). ೨. ಮನುಷ್ಯ ; ಮಾನವ : "ಮನುಷ್ಯಃ, ಮಾನುಷಃ, ಮರ್ತ್ಯಃ . . . ಈ ೧೨ ಮಾನಸರ್" (ಹಲಾಯು. ೩೩-೨೬೬) ; ಜಗಜ್ಜನಕನಂ ಶಿಶುವೆಂಬುದೊ ಮರ್ತ್ಯನೆಂಬುದೊ (ಶಾಂತಿಪು. ೧೧-೯೨) ; ಮರ್ತ್ಯರೊಳ್ ಮಥನಂ ವೆಗ್ಗಳವಲ್ಲವೈ (ಸೋಮೇಶ. ೯೯) ; ಇಳೆಯ ಮರ್ತ್ಯರು . . . ಫಲುಗುಣಗೆ ಸರಿಯೆಂಬವರ ಬಾಯ್ ಹುಳಿವುದೋ (ಕುಮಾರವ್ಯಾವಿ. ೮-೩೬). ೩. ಮಾನವರು ವಾಸಿಸುವ ಲೋಕ ; ಭೂಲೋಕ : ಈಗಳೀ ಮರ್ತ್ಯದೊಳಗೊರ್ವ ಪೊಸಮಗನಂ ಪಡೆದವು (ಪಂಪಭಾ. ೧೨-೦೨೪) ; ಮರ್ತ್ಯವನೋವಿ ಮನುಜರೆಲ್ಲರಂ ನಿಜಭಕ್ತಿಯುಕ್ತಿಯಲಿ ಪಾವನತ್ವವನಿತ್ತು ಪಾಲಿಸಿ ಕಾವುದು (ಬಸವಪು. ೦-೬೦) ; ಶಿವಶರಣೆಯರಾಗಿ ಮರ್ತ್ಯಕ್ಕೆ ಬಂದು ಪವಾಡಗಳನ್ನು ಮೆರೆಯುವಂಥವರು (ಶರಣೆ. ೬೦). [ಸಂ.]

**ಮರ್ತ್ಯಜನ್ಮ** (ನಾ). ಮನುಷ್ಯನಾಗಿ ಹುಟ್ಟುವುದು ; ಮಾನವಜನ್ಮ : ದುರ್ಲಭಂ ಮರ್ತ್ಯಜನ್ಮಂ (ಸುಕುಮಾ. ೩-೩೪). [ಸಂ. ಮರ್ತ್ಯಜನ್ಮನ್]

**ಮರ್ತ್ಯದೇಹ** (ನಾ). ಮನುಷ್ಯಶರೀರ : ಮರ್ತ್ಯದೇಹದೊಳಲ್ಲಿ ಸುಳಿವುದು ಭಾರವೆಂದರು ಚರರು ಫಲುಗುಣಗೆ (ಕುಮಾರವ್ಯಾ. ೩-೬೪). [ಸಂ.]

**ಮರ್ತ್ಯಲೋಕ** (ನಾ). ಮಾನವಲೋಕ ; ಭೂಲೋಕ : ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ (ಬಸವ. ೦೩೩). [ಸಂ.]

**ಮರ್ದಕ** (ನಾ). ಘಾತಿಸುವವನು ; ನಾಶಮಾಡುವವನು : ಕೃತಾಂತಮರ್ದಕನೊಳಲ್ಪಧನುರ್ವಿಶಿಖಂಗಳಿಂ ಜಯೋತ್ಸುಕತೆಯೊಳೆಚ್ಚು ಗೆಲ್ವ ಬಗೆಯಾಂತನು (ಶಬಸಂ. ೪-೦೨೯). [ಸಂ.]

**ಮರ್ದನ** (ನಾ). ೧. ಪುಡಿಮಾಡುವುದು ; ಚೂರ್ಣಮಾಡುವುದು. ೨. ಉಜ್ಜುವುದು; ತಿಕ್ಕುವುದು. ೩. (ಕೈಕಾಲು, ಮೈಯನ್ನು) ಒತ್ತುವುದು ; ಹಿಸುಕುವುದು : ಪಾದಗಳನ್ನು ಮರ್ದನಮಾಡಿಸಿಕೊಳ್ಳುವುದರಿಂದ ಶ್ರಮಪರಿಹಾರವೂ . . . ಶರೀರಪುಷ್ಟಿಯೂ ಇವೆಲ್ಲಾ ಉಂಟಾಗುವುವು (ಸಕವ್ಯ. ೩೯). ೪. ನಾಶಮಾಡುವುದು : ಆ ಮಧುಕೈಟಭಮದಮರ್ದನರುಧಿರಾರುಣಚಕ್ರಿಚರಣಮಂ ನೆನೆಯಿಸುಗುಂ (ಕಾದಂಪೂ. ೨೬). ೫. ಹಿಂಸಿಸುವುದು ; ನೋಯಿಸುವುದು : ಮರ್ದನ . . . ದುರ್ಭೋಗ್ಯನಾನಾವಿಧಾಸಂಖ್ಯಾತತೀವ್ರವೇದನಾರೂಪಂಗಳಾಗಿ (ವಿವೇಕ. ೦೯೦). ೬. ನಾಶಮಾಡುವವನು : 'ಮಲ್ಲಮರ್ದನ' ಪರಾ.

**ಮರ್ದನಮಾಡು** = ಕೊಲ್ಲು ; ಸಾಯಿಸು : ಅವರು ನೂರೊಂದು ಜನವಿದ್ದರೂ ಅವನೊಬ್ಬನೇ ಎಲ್ಲರನ್ನೂ ಮರ್ದನಮಾಡಿಬಿಡುವನು (ವಕಾ. ೦೬). [ಸಂ.]

**ಮರ್ದನಿಗ** (ನಾ). ಮೈ ಒತ್ತುವವನು : "ಸಂವಾಹಕಂ ಮರ್ದನಿಗಂ" (ಮಂಗರಾ. ೧೧೦-೨). [ಮರ್ದನ + – ಇಗ]

**ಮರ್ದಲ, ಮರ್ದಳ** (ನಾ). ಒಂದು ಬಗೆಯ ಚರ್ಮವಾದ್ಯ; ಮದ್ದಳೆ ; ಮೃದಂಗ : ವನಗಜಧ್ವನಿ ಮರ್ದಲಸ್ವನಂ ಪೇಲಾವಿಪಿನಕೀಚಕವೆ ಸುಷಿರವು (ಶಬ್ದಮಾ. ೧೦-೦೬೩). **ಮರ್ದಳ** : ಆ ವಾದ್ಯವಿದ್ಯಾಧಿಕರ್ ಮರ್ದಳಮನುರ್ದಿ ಮಯೂರಮಾರ್ಜನೆಯಿಂದನಿಬರ ಮನಮನಾವರ್ಜಿಸಿ . . . ಪಾಡಿದರ್ (ಶಕಂ. ೬-೦೩೪ ವ). [ಸಂ.]

**ಮರ್ದಳ** 'ಮರ್ದಲ' ನೋ.

**ಮರ್ದಳೆ** (ನಾ). ಒಂದು ಬಗೆಯ ಚರ್ಮವಾದ್ಯ : ಮೃದಂಗ : ಪಟುಪಟಹತುಣವಭಂಭಾಮರ್ದಳೆಝಲ್ಲರಿ . . . ವಂಶವೀಣಾಸ್ವರಂಗಳೆಸೆಯೆ (ಪಮ್ಮಾರಾ. ೯೩-೨೯). [ಸಂ. ಮರ್ದಲ]

**ಮರ್ದಳೆಕಾಱ** (ನಾ). ಮದ್ದಳೆಯನ್ನು ನುಡಿಸುವವನು : ತ್ವಂಕ್ಯ ಆಲಿಂಗ್ಯ ಊರ್ಧ್ವಕವೆಂಬ ತ್ರಿವಿಧಕ್ರಮಮಱಿದು ನುಡಿಸುವ ಕಡುಜಾಣರಪ್ಪ ಮರ್ದಳೆಕಾಱರಿಂ (ವಿವೇಕ. ೨೯೦). [ಮರ್ದಳೆ + – ಕಾಱ]

**ಮರ್ದಿತ** (ಗು). ೧. ಪುಡಿಪುಡಿಮಾಡಿದ. ೨. ತಿಕ್ಕಿದ ; ಉಜ್ಜಿದ. (ನಾ). ೩. [ನಾಟ್ಯ] ಒಂದು ನೃತ್ಯಭೇದ; p "ಅಡಿಯನ್ನು ಅಡ್ಡ ಮಾಡಿ ನೆಲವನ್ನು ಒರಸುವುದು" (ಅಸ್ಕರಂ. ಗದ್ಯಾನುವಾದ. ೨೩೮) ; ಮೇದಿನಿಯನಡ್ಡ ಪಾದದಿನಾದರದಿಂದೊರಸೆ ಮರ್ದಿತಾಖ್ಯಮೆನಿಕ್ಕುಂ(ಅಸ್ಕರಂ. ೨-೦೦೯). [ಸಂ.]

**ಮರ್ದಿಸು** (ಕ್ರಿ). ೧. ಒತ್ತು ; ಅಮುಕು : ತುರುಂದಂ – ಕಾಲೊಳ್ ಮರ್ದಿಸಿದಂ (ಹರಿಚ. ಹಂ. ೨). ೨. ನಾಶಮಾಡು : ಕೊಂಕಣ ಮಲೆಯಾಳ ಕೊಡಗುಭೂಪಾಲರ ಬಿಂಕವ ಮರ್ದಿಪ ಶೂರ (ಕಂಸಹ. ೦-೨೩). ೩. ಕೊಲ್ಲು ; ಸಾಯಿಸು : ಭೂತಳಾಧೀಶ್ವರನಪ್ರಿಯರಂ ಮರ್ದಿಸಿ ಧರೆಯಂ ಜಯಲಕ್ಷ್ಮೀಧಾಮನಾಗಿ ಪರಿರಕ್ಷಿಸುಗುಂ (ಕಂಕಕಂ. ೨೦೨-೦೬) ; ತಲವಜ್ರಾಘಾತದಿಂ ಮರ್ದಿಸಿ ರಜಕನಂ . . . ಪೊಕ್ಕಂ ದನುಜನ ಪೊಟಲಂ ಸಾಗ್ರಜನ್ಮಂ ಮುಕುಂದಂ (ಜಗಿ. ೬-೦೦) ; ಶಂಬರಾಸುರನ ಮರ್ದಿಸಲಾಗಿ . . . ಜಂಭಾರಿಮುಖ್ಯನಿರ್ಜರರ್ಕೆತಂದು ದಿವ್ಯಾಂಬರಗಳನಿತ್ತರೊಲಿದು (ಸೋಹಚ. ೦೩-೯). [ಮರ್ದನ + – ಇಸು]

**ಮರ್ದು**, ಮಂದ್ದು, ಮದ್ದು (ನಾ). ೧. ಔಷಧ : "ಮರ್ದಂದೌಷಧಿ" (ಶಬ್ದಾಶ. ೦೬) ; ಮರ್ದುಂ ಮಂತ್ರಮುಮಿಷ್ಟದೇವತೆಗಳುಂ ದಿವ್ಯಾಸ್ತ್ರಮುಂ . . . ಮಿತ್ರರ್ಕಳುಂ ಮಿಟ್ಟು ಮೇಲೆರ್ದಾಗಳ್ ಶರಣಪ್ಪುದೇಕೆ ಮಾಡಿದರ್ ಪನ್ನಿರ್ವರುಂ ಚಕ್ರಿಗಳ್ (ಧರ್ಮಾಮೃ. ೦೯೩-೦೫) ; ಎಮಗಂ ನಿಮಗಂ ಮೂಡುವ ಮುಟುಗುವ ದಂದುಗಮಾಡಿದ ಹೊಲನುಂಡ ಮರ್ದುಕಂಡ ವಿಚಾರಂ (ಮಹೋತ. ೦-೩೨). ೨. (ಆಹಾರದೊಡನೆ ಬೆರಸಿ ಕೊಡುವ) ಒಂದು ಬಗೆಯ ನಂಜು ; ಕೈಮಸಕು : ಮರುಳೋ ಮರ್ದೋ ಮಾಟವೋ ನಿರವಿಸಿ ನೆಲೆಗೆಯ್ದು ಕೌಪುಗೊಳಿಪುದು ಭರದೊಳ್ (ಜಗಿ. ೬-೬೨). ೩. ನಿವಾರಣೋಪಾಯ ; ಪರಿಹಾರ : ನೀರ ಡಾಳದಂಗೆ ತುಪ್ಪಂ ಮರ್ದೋ (ಕೃಷ್ಣಪು. ೭-೫೬); ಮರ್ದಲ್ತು ಪೊಲೆಗೆ ಪೊಲೆ (ಅಕ್ಕಾ. ೦೫-೭೦೨). **ಮಂದ್ದು** : ೧. ಓಡಬೇಕೆಂದು ಮಂದು ತಿಂದು ತೊಳಡಿಸಿ ಬಿದ್ದೆಯಲ್ಲವೆ (ಕಥಾಮಂ. IV. ೯೬). **ಮದ್ದು** : ೧. ಕುತ್ತಕ್ಕೆ ಮದ್ದನಿಕ್ಕದೆ [ಪಾಠಾಂ. ಮರ್ದುಮಾಡದೆ] ಕುತ್ತಂ ಪೋಗೆಂದೊಡಂತೆ ಪೋಕುಮೆ (ಸಮಚ. ೦೦-೮೬) ; ಒಡಲಿನೊಳು ಮುಚ್ಚಿದ್ದ ಸುಳಿವನುಡಿಯಲೀಯದೆ ಕೀಳ್ವ ಮದ್ದನು ಗಿಡಿವ . . . ಹಸ್ತಿವೈದ್ಯರ ಗಡಣವುಭಯದೊಳೆಸೆವವು (ಕುಮಾರೀ. ೫-೪೦) ; ಮದ್ದ ನಾವ್ ತರಹೇಳದರೆ ಕಿತ್ತದ್ರಿಯನು ತಂದೀ ವಿವೇಕದ ಮುದ್ದುತನವನು ನೋಡಿದೈ (ಕೊರಿಣಾ. ೬-೩೬-೬೨). ೨. ಮಕ್ಕಳಿಗೆ ಬೆಣ್ಣೆಯೊಳ್ ಮದ್ದಿಕ್ಕುವವೊಲ್ (ಸಮುಚ. ೫-೪೮) ; ಈತನ ಸುಳಿವು ತೋಱುವುದಿಲ್ಲ ಮಾಯಾಲಲನೆಯಿಕ್ಕಿದ ಮದ್ದು ಜೀವರಿಗೇದನಾ ಭೀಷ್ಮ (ಕುಮಾಸ. ೯-೫). ೩. ಅನ್ಯಾಯವಾಯಿತು ಇದಕೇನು ಮದ್ದು (ಪ್ರಕಂಠ. ೨-೪೫-೨) ; ಗುಳಿಗೆಯಿದು ಆ ಖಗನ ಕಟ್ಟನು ಕಳೆದ ಮದ್ದಾದಪುದು (ಸಾಳ್ವಭಾ. ೦೬-೦೩); ಇದಕ್ಕೆಲ್ಲ ಒಂದೇ ಮದ್ದಿದೆ (ಮುಂಗಾರು. ೦೦೬). ೪. ವಶೀಕರಣಗೊಳಿಸುವ ಸಾಧನ : ನುಡಿಯ ಮಾತಿನ ಮುದ್ದು ಶಿವನನೊಲಿಸುವ ಮದ್ದು ತಾನೆನಲ್ ಶಿವೆ ಮೆಱೆದಳು (ಚಂಪೂ. ೩೬-೨೨). ೫. ಅಗ್ನಿಸ್ಫೋಟಕ ; ಸಿಡಿಮದ್ದು : ಹಾಯ್ದು ಪರುವರಿವ ಮದ್ದಿನ ತಿತ್ತಿಯಂ (ಚಂಪೂ. ೯೨-೯೩); ಕರಿಯ ಮದ್ದಿನ ಪೊಟ್ಟಣಗಳ ಹೊತ್ತಿಸಿ ಭರದಿಂದ ಮೇಲಿಡುತಿರಲು (ಕಂಪಿಲ. ೦೯-೬೫). ೬. ಪಟಾಕಿ : ಅನೇಕರು ದೀಪಾವಳಿಯಲ್ಲಿ ಮದ್ದು ಸುಡಲು ಬಹಳ ಹಣ ಖರ್ಚುಮಾಡುತ್ತಾರೆ (ರೂಢಿ).

ಮದ್ದರೆ = (ಆಲಂ) ಪ್ರತೀಕಾರೋಪಾಯವನ್ನು ಮಾಡು : ಪರಶುರಾಮನ ಪಟುತನಕೆ ಮದ್ದರೆದೆನೆಂಬೀ ನಿಟಿಲನೇತ್ರನ ಭುಜಬಲಕೆ ಸವಹೊಳಿ ಗಡ ನೀವು (ಕುಮಾರೀ. ೯-೬೨) ; ಮಾಯಾಪುಳಿಂದತತಿ ಮದ್ದರೆದುದಖಿಳವ್ಯಗಸಂತತಿಗೆ (ಚಂಪೂ. ೫೫-೨೬). ಮದ್ದಿನ ತಿಲಕ = ವಶೀಕರಣಗೊಳಿಸುವ ಬೊಟ್ಟು,–ತಿಲಕ : ನಿನ್ನ ಹೊದ್ದಿ ತಳ್ಳೊಂದಿಂ ತವಕಿಸಬೇಕೊಂದು ಮದ್ದಿನ ತಿಲಕದಿಂದವನ (ಕುಂಣಾಂ. ೨೫-೫೮). ಮದ್ದು ಹಾಕು = ಕೈಮಸಕು ಹಾಕು : ಆರೋ ಏನೋ ಮದ್ದು ಹಾಕಿರಬೇಕು. ಮದ್ದುಗುಣಿಕೆಯಿಕ್ಕಿರಬೇಕು (ಪಟ್ಟಿ. ೯೬-೨). ಮರ್ದಿನ ಕೂಟ್ = ಔಷಧಿಯನ್ನು ಸೇರಿಸಿ ಬೇಯಿಸಿದ ಅನ್ನ; ಪಥ್ಯದ ಆಹಾರ: ತನಗುಳ್ಳ ವ್ಯಾಧಿಯುವರ್ಗುಂಟೆಂಬುದನಱಿದು ತನಗೆಂದು ಮಾಡಿದ ಮರ್ದಿನ ಕೂಟನವರ್ಗೆ ಬಡ್ಡಿಸಿದೊಡೆ (ಧರ್ಮಾಮೃ. ೦೬೦-೦೯).

[ದೇ.॥ ತಮಿ. ಮರುನ್ದು ; ಮಲ. ಮರುನ್ನು ; ತುಳು. ಮರ್ದ್ ; ಕೊಡ. ಮದ್ದ್ ; ತೆಲು. ಮಂದು ; ಕೋಲಾ. ಸಾಯ್ಕು, ಮಂದ್ ; ಪರ್ಜಿ. ಮೆರುದೆ ; ಕುಱುಖ್. ಮಂದರ್ ; ಮಲ್ತೊ. ಮಂದ್ರು]

**ಮರ್ದುಂಗೂಟ್**, ಮರ್ದುಗೂಟ್ (ನಾ). ಔಷಧಿಯನ್ನು ಸೇರಿಸಿ ಬೇಯಿಸಿದ ಅನ್ನ ; ಪಥ್ಯದ ಆಹಾರ : ಮರ್ದುಂಗೂಟ್, ಮರ್ದುಗೂಟ್ (ಶಬ್ದಾಸು. ೩೬೮ ಕ್ರಿಯೋ). **ಮರ್ದುಗೂಟ್** : ಮೇಲಿನ ಪ್ರಯೋಗವನ್ನು ನೋಡಿ. [ಮರ್ದು + ಕೂಟ್$_1$]

**ಮರ್ದುಗುಣಿಕೆ**, ಮದ್ದುಗುಣಿಕೆ (ನಾ). ಒಂದು ಬಗೆಯ ಸಸ್ಯ ; ದತ್ತೂರ; ಉನ್ಮತ್ತ : "ಮರ್ದುಗುಣಿಕೆಯೆಂದು ಉನ್ಮತ್ತಂ" (ಕರ್ಣಾ. ೬೬-೫೭೪). **ಮದ್ದುಗುಣಿಕೆ** : "ತಱಿಸಂದುಮ್ಮತ್ತ ಮದ್ದುಗುಣಿಕೆಯುಮಕ್ಕುಂ" (ಕಬಿಗಂ. ೨೦೯) ; ಉರಗನ ವಿಷಮೋಱಿದರುಂ ಸಿರಿಯುಳ್ಳರುಂ ಮದ್ದುಗುಣಿಕೆಯಂ ತಿಂದವರುಂ . . . ಧರೆಯೊಳ್ ಮೆಯ್ಯಱಿಯರು (ಧರ್ಮಾಮೃ. ೪-೦೬೮) ; ಮದ್ದುಗು [ಪಾಠಾಂ. ಮತ್ತಿಕು] ಣಿಕೆಯ ತಿಂದು ಸೊಕ್ಕಿದಂಗೆ ಕಾಷ್ಠ ಲೋಹಾದಿಗಳೆಲ್ಲಂ ಪೊಂಬಣ್ಣಮಾಗಿ ತೋರ್ಪಂತೆ (ಜೀವಸಂ. ೦೨೫-೬ ಪ); ಮದ್ದುಗುಣಿಕೆಯ ತಿಂದ ಮದೋನ್ಮತ್ತರ ಎನ್ನತ್ತ ತೋಱದಿರಯ್ಯ (ಶಿಖಂಡ. ೬೪-೨೦). [ಮರ್ದು+ಕುಣಿಕೆ]

**ಮರ್ದುಗೂಟ್** 'ಮರ್ದುಂಗೂಟ್' ನೋ.

**ಮರ್ದುಣಿಸು** (ನಾ). ಪಥ್ಯದ ಊಟ ; ಮದ್ದಿನ ಊಟ : ಬಿರ್ದುಣಿಸುಂ ಮರ್ದುಣಿಸುಂಬಂತಿರುಂಡು ಸಿಜ್ಜವನೆಗೆ ಪವಡಿಸಲ್ಕೆಂದು ಪೋದಂ (ರಾಜಶೇ. ೬೫-೦೩). [ಮರ್ದು+ಉಣಿಸು$_2$]

**ಮರ್ದುಮಿ** 'ಮರ್ದುಮಿಾ' ನೋ.

**ಮರ್ದುಮಿಾ**, ಮರ್ದುಮಿ (ನಾ). ಗಂಡುತನ ; ಪೌರುಷ : ಕೋಟೆ ಕೆಡವಿ ಹಲ್ಲಾ ಮಾಡಿದಾಗ್ಯೂ ಪಾಳೆಗಾರನು ಮರ್ದುಮಿಯಿಂದ ನಿರ್ವಹಿಸಲಾರದೆ (ಕೃಠಚ. ೫೬). **ಮರ್ದುಮಿ** : ತಮ್ಮ ಮಾರ್ದುಮಿ, ತಮ್ಮ ಲಡಾಯಿ, ತಮ್ಮ ಪರಾಕ್ರಮವನ್ನು ನೋಡಿ ಬಹಳ ಸಂತೋಷಪಟ್ಟೆವು (ಕೃತ್ರಾಠ. ೫೬). [←ಪಾರ. ಹಿಂ. ಮರಾ. ಮರ್ದುಮಿಾ]

**ಮರ್ದುಮೇಟ್** (ಕ್ರಿ). ಔಷಧಿಯನ್ನು ಸೂಚಿಸು: ಅರ್ತನ ತೆಱನಱಿಯದೆ ಮರ್ದುಮೆಟ್ಟ ಬೆಜ್ಜನ ತೆಱದಿಂ (ಕವಿರಾ. ೩-೦೫೦). [ಮರ್ದು+ಮೇಟ್]

**ಮರ್ದೂರ್** 'ಮಟ್ದೂರ್' ನೋ.

**ಮರ್ಫ** 'ಮರಫ' ನೋ.

**ಮರ್ಬಿಗ**, ಮಬ್ಬಿಗ (ನಾ). ಕತ್ತಲೆಯಲ್ಲಿ ಸಂಚರಿಸುವವನು; ನಿಶಾಚರ ; ರಾಕ್ಷಸ : "ರಕ್ಕಸರ್ ಮರ್ಬಿಗರ್, ಚುಕ್ಕಿಗುವರರ್, ಮೊದಲ ಸಗ್ಗಿಗರ್ —ಈ ೪ ರಕ್ಕಸರ ಪೆಸರ್" (ಕರ್ಣಾ. ೯೬-೨೨) ; ಮರ್ಬಿಗರುರ್ಬಿನಿಂ ಜರ್ಬುತೆಬ್ಬಟ್ಟಿ . . . [ಜರ್ಬ ರಣಾಂಗದೊಳ್ಕನ್ನೋವಿ]ದಂಗಮನಾರ್ಬಣ್ಣಿ ಪರು (ಚಕಾಂ. ೦೯-೬೬) ; ನಡೆಮಾಡಮನಡರ್ದು ಹಯಮನುಯ್ದು ಮರ್ಬಿಗನಂ ತಱುಬಿ (ರಾಜಶೇ. ೦೦೦-೦೪). **ಮಬ್ಬಿಗ** : "ಮಬ್ಬಿಗರ್ ಶಿಖಿಯಲ್ಲಿಳೆಗೆ ರಕ್ಕಸರಕ್ಕು" (ಕಬ್ಬಿಕ್ಕಿ. ೦೦) ; ಭರದೆ ಮಬ್ಬಿಗ ಮಬ್ಬಿನುರುಬಾಣಮಂ ಬಿಡಲ್ ಹರಸೂನು ರವಿಯ ಬಾಣದಲಿ ಸಂಹರಿಸಿ

. . . ಶರವೆಂಟಱೊಂದಿಟ್ಟನು (ಕಸುಕ. ೩-೬-೬೭); ಬಿಡುಗಣ್ಣವರ್ ಮಬ್ಬಿಗರ ನೊಂಕಿ ಸೆಣಸುಡಿ (ಶಾಂತಿ. ೦೯೦-೩೦೩).

[ ಮರ್ಬು ( < ಮರ್ವು₂ ) + — ಇಗ ]

**ಮರ್ಬು** 'ಮರ್ವು₂' ನೋ.

**ಮರ್ಬುದಿಂಗಳ್** (ನಾ). ಕಾಂತಿಹೀನವಾದ ಚಂದ್ರಬಿಂಬ : ಪರ್ಬಿದ ತ್ರಂಬುಧಿಯ ಮೇಲೆ ಮರ್ಬುದಿಂಗಳ್ ಮಂಜುಜೊನ್ನಂ (ಶ್ರೀರಾಪು. ೩೦೦-೪೪೪). [ ಮರ್ಬು ( < ಮರ್ವು₂ ) + ತಿಂಗಳ್ ]

**ಮರ್ಬುವೆಳಗು** (ನಾ). ಮಂಕಾದ ಬೆಳಕು ; ಮಸುಕಾದ ಬೆಳಕು : ಜವದಿನುಷಃಕಾಲವೃಷಂ ತವೆ ಕದಡಿದುದೆನಿಸಿ ಮರ್ಬುವೆಳಗಂ ಕಳೆದೊಪ್ಪುವ ಬಾಂಗೆಱೆಯೊಳ್ (ರಾಜಶೇ. ೦೨-೦೨).

[ ಮರ್ಬು (< ಮರ್ವು₂) + ಬೆಳಗು₂ ]

**ಮರ್ಮ₁, ಮಮ್ಮ, ಮೊಮ್ಮ** (ನಾ). ಮಗನ ಅಥವಾ ಮಗಳ ಮಗ ; ಮೊಮ್ಮಗ : ಶ್ರೀವತ್ಸಗೋತ್ರಂ ಗುಣ್ಡಕಬ್ಬಿ ನಿಡುಂಗೊಣ್ಡೆಯಭಿಮಾನ ಚನ್ದ್ರನ ಮರ್ಮ್ಮಂ (ಶಾಶಸಂ. ೯-೦ ; ಸು. 950) ; ಮಾಹುಮಸೆಟ್ಟಿಯ ಮಗನತಿಸಾಹಸಿಕಂ ನೆಗಟ್ದ ಧೋಯಿಪಯ್ಯನ ಮರ್ಮ್ಮಂ (ಎಇ. XIX. ೨೨೦-೨೩ ; 1037). **ಮಮ್ಮ** : ಶ್ರೀಕಿಬ್ಬಲಿಯ ಮಮ್ಮ ಅಣ್ಣಂಗರಸರ ಮಗ ಕಲಿಗಂಗಂ ಆಯಪ್ಪದೇವನೊಳ್ಕಾದಿ ಕಳಿಕಟ್ಟಯೊಳ್ಸತ್ತ (ಎಕ. VI. ಕಡೂರು. ೦೯೦-೦ ; ಸು. 919) ; ಅಮ್ಮ ನೀಂ ಮಮ್ಮನೆಯಪ್ಪೆ (ಆದಿಪು. ೨-೨೦) ; ಕೊಂಗಣಿಗಾವುಣ್ಣನ ಮಮ್ಮ ಮಾರವಡೆಯನ ಮಗಂ (ಎಕ. VI (R). ಗುಂಡ್ಲುಪೇ. ೩೬-೦೩ ; 1049). **ಮೊಮ್ಮ** : ನವನಿಧಿವಲ್ಲಭ ನಾನತದಿವಿಜಗಣಂ ನೆಗಟ್ದ ನಾಭಿರಾಜನ ಮೊಮ್ಮಂ (ಆದಿಪು. ೦೩-೬೩) ; ಬಕಾಸುರನ ಮೊಮ್ಮನಪ್ಪ ಜಟಾಸುರನ ಮಕ್ಕಳಪ್ಪ ಹಲಾಯುಧ ಮುಸಲಾಯುಧ ಕಾಲನೀಲರೂಕ್ಷರಾಕ್ಷಸರುಮಂ . . . ಕಂಡು (ಗದಾಯು. ೪-೬೩ ಪ); ವಜ್ರಾಯುಧನ ಮೊಮ್ಮನ ರಥವ ನಿದರ್ಶಯದಲಿ ಮುತ್ತಿದರು ಕುರುಸೇನಾಮಹಾರಥರು (ಕುಮಾವ್ಯದ್ರೋ. ೫-೨೪).

[ ದೇ.₂ ತಮಿ. ಮರುಮಾನ್, ಮರುಕನ್ = ವಂಶದಲ್ಲಿ ಹುಟ್ಟಿದವನು ; ತುಳು. ಮರ್ಮಾಯಿ = ಒಡಹುಟ್ಟಿದವಳ ಮಗ ; ಕೋಲಾ. ನಾಯ್ಕಿ. ಮರ್ಗ ; ಪರ್ಜಿ. ಮೆರ್ವ, ಮೆರಿಯ ]

**ಮರ್ಮ₂** (ನಾ). ೧. ದೇಹದ ಆಯಕಟ್ಟಿನ ಸ್ಥಳ : ಶರೀರದ ಸೂಕ್ಷ್ಮವಾದ ಭಾಗ : "ಆಯುಃ – ಮರ್ಮಂ" (ಶಾಶಕ. ೦೦೯) ; ಕಯ್ದುವುಳ್ಕುಗುಂ ಮರ್ಮಮಂ (ಶಾಂತಿಪು. ೬-೯೪). ೨. ಅವಯವಗಳ ಕೀಲು ; ಅಸ್ಥಿಸಂಧಿ. ೩. ಅಂತರಂಗ ; ಹೃದಯ ; ಮನಸ್ಸು : ಮೂದಲಿಸಿ ಮರ್ಮವನಿಱಿವ ಸುರಗಿ ಕಣಾ ಸದಾ ಪಾಂಚಾಲೆ ಪವನಜರು (ಕುಮಾಭಾ. ೨೦-೨೪) ; ನನ್ನ ಮಾತಿನ ಸಿಡುಕು ಅವನ ಮರ್ಮ ಮುಟ್ಟಿತು (ಅಂಜೂ. ೦೦೬). ೪. ರಹಸ್ಯ ; ಗುಟ್ಟು : ಲೋಗರ ಮರ್ಮವನ್ನೆದೆ ಭೇದಿಪೊಂದಿರವೆ ಪೊದಳ್ದ ಜಾನಮನೆ (ರಾಜಶೇ. ೦-೪೦) ; ಭಕ್ತಿಯ ಮರ್ಮವನಱಿಯೆ . . . ನಾನು (ಅಂಡಿ. ೬೦-೬೯) ; ಗುಣವಂತನೊಡನೆ ನಿನಗಿರುವ ಕೆಲಸದ ಮರ್ಮವನ್ನು ನಾನು ಬಲ್ಲೆ (ಅರ್ಧಾಂಗ. ೦೦೩). ೫. ಅಂತರಾರ್ಥ ; ಗೂಡಾರ್ಥ : ಕಾವ್ಯದ ಮರ್ಮ ತಿಳಿಯಬೇಕಾದರೆ ಚೆನ್ನಾಗಿ ಮನನ ಮಾಡಬೇಕು (ಕೂಡಿ). ೬. ರಹಸ್ಯವಾಗಿ ಕಾರ್ಯ ನಿರ್ವಹಿಸುವವನು ; ಇತರರಿಗೆ ತಿಳಿಯದಂತೆ ಮರೆಯಲ್ಲಿದ್ದು ಪ್ರಭಾವ ಬೀರುವವನು : ಕೃತಘ್ನನು ಘಾತಕನು ಮರ್ಮನು . . . ದೈವದ್ರೋಹಿಯೆಂಬುದು ಭೂತಳದೊಳೀ ನರಕ ಚಿತ್ರೈಸು(ಕುಮಾಭಾ. ೪-೪೦); ತತ್ಪುರದ ಮರ್ಮರಂ ನಿರ್ಮೂಲನಂಗೆಯ್ದು . . . ಪೊರಮಟ್ಟು ಪುರವನುಂ ನಡೆಗೊಂಡನು (ಕಕಕು. ೩೬-೦೬). [ಸಂ. ಮರ್ಮನ್]

**ಮರ್ಮಕೆಣಕು** (ಕ್ರಿ). ಅಂತರಂಗವನ್ನು ಚುಚ್ಚು : ಮೃದುವಾಗಿ ಆಡಿದ ಮಾತುಗಳಾದರೂ ಅವುಗಳಲ್ಲಿ ಮರ್ಮಕೆಣಕುವ ಅರ್ಥ ಕಂಡ ಜೋಶಿಯವರು . . . ಕಿಡಿಕಿಡಿಯಾಗಿ (ಮುಕುಂದಾ. ೪೦). [ಮರ್ಮ₂ + ಕೆಣಕು₁]

**ಮರ್ಮಘಾತ** (ನಾ). ದೇಹದ ಸೂಕ್ಷ್ಮಭಾಗಕ್ಕೆ ಬೀಳುವ ಹೊಡೆತ : ಶರೀರದ ಆಯಕಟ್ಟಿಗೆ ಬೀಳುವ ಏಟು : ಮದವೆತ್ತಿ ಮೆಟ್ಟಿದರೊಃ ರೊಬ್ಬರ ಮರ್ಮಘಾತದಲಿ (ಕುಮಾಸ. ೨-೦೦೦). [ಸಂ.]

**ಮರ್ಮಘಾತಕ** (ನಾ). ಅಂತರಂಗಕ್ಕೆ ಬೀಳುವ ಪೆಟ್ಟು, —ಆಘಾತ ಧರ್ಮವಾಗಲಿ ಮೇಣು ರಣದಲಧರ್ಮವಾಗಲಿ ಖಾತಿಯಲಿವರ ಮಮ ಘಾತಕವಾಯ್ತು (ಕುಮಾಗ. ೦೦-೩೭). [ಸಂ.]

**ಮರ್ಮಘಾತುಕ** (ನಾ). ಅಂತರಂಗಕ್ಕೆ ಹೊಡೆತ ನೀಡುವವನು ವಿಶ್ವಾಸಘಾತಕ : ಎಲವೊ ಕೃಷ್ಣಾ ! ಮರ್ಮಘಾತುಕಾ ! (ಅಕ್ಕಾ. ೦೫-೩೦೬). [ಸಂ.]

**ಮರ್ಮಜ್ಞ** (ನಾ). (ಬಾಳಿನ) ಗುಟ್ಟನ್ನು ಅರಿತವನು ; (ಜೀವನದ) ರಹಸ್ಯವನ್ನು ತಿಳಿದವನು : ಮರ್ಮಜ್ಞಂ ವ್ಯವಸಾಯಿನಂ . . . ಎಂಬುದರ್ಥಶಾಸ್ತ್ರಸದ್ಭಾವಂ (ಪಂಪಭಾ. ೨-೯೦ ಪ) ; ಲೋಕಸ್ಥಿತಿಯನುಲ್ಲಂಘಿಸುವ ಮರ್ಮಜ್ಞರ ವಿರೋಧಿಸುವ . . . ಕ್ಷಿತಿಪನವ ಮೂಢಾತ್ಮನೈ (ಕುಮಾಉ. ೩-೪೮) ; ಅಂತಹ ವಾತಾವರಣವನ್ನು ಕಲ್ಪಿಸುವುದರಲ್ಲಿ ಸಂಯಮಿಗಳಾದ ತತ್ವಜ್ಞರೂ ಮರ್ಮಜ್ಞರೂ ಬಹುಗಂಭೀರವಾಗಿ ಯೋಚಿಸುತ್ತಿದ್ದಾರೆ (ಜೀನಾಕ. ೩೬೬೪). [ಸಂ.]

**ಮರ್ಮಭೇದ** (ನಾ). ರಹಸ್ಯವನ್ನು ಭೇದಿಸುವಿಕೆ : ಅರಿಗೆ ತಮ್ಮ ವಿಭೀಷಣಾಂಕನು ಒರೆದು ಕೊಡುವನು ಮರ್ಮಭೇದವ (ತೊರಾ. ೨೩-೮). [ಸಂ.]

**ಮರ್ಮಭೇದಕ** (ನಾ). ಮನಸ್ಸಿಗೆ ತಾಗುವಂಥದು ; ಮಾರ್ಮಿಕವಾದುದು : ಮರ್ಮಭೇದಕವಾದ ಈ ಮಾತನ್ನು ಕೇಳಿ ಧೃತರಾಷ್ಟ್ರನು ಶಕುನಿಯ ಸಲಹೆಗೆ ಸಮ್ಮತಿಸಿದನು (ಪಕಥಾ. ೪೦). [ಸಂ.]

**ಮರ್ಮಭೇದಿ** (ಗು). ೧. ಅಂತರಂಗವನ್ನು ಭೇದಿಸುವ ; ಮಾರ್ಮಿಕವಾದ. ೨. ಗುಟ್ಟನ್ನು ಹೊರಗೆಡಹುವ ; ರಹಸ್ಯವನ್ನು ಭೇದಿಸುವ. (ನಾ). ೩. ಅಂತರಂಗವನ್ನು ಚುಚ್ಚುವಂಥದು ; ಮಾರ್ಮಿಕವಾದುದು : ನಾನು ಮನೆಯ ಕಡೆ ಬಂದರೆ ಮರ್ಮಭೇದಿಯಾದ ಆಲೋಚನೆಗಳು ಎದುರಿಗೆ ಬಂದು ನಿಲ್ಲುವುವು (ಶಾಂತ್ರಿ. ೩). ೪. ಗುಟ್ಟನ್ನು ಹೊರಗೆಡಹುವಂಥದು ; ರಹಸ್ಯವನ್ನು ಕಂಡುಹಿಡಿಯುವಂಥದು : ಅವಳ ಕಟಾಕ್ಷವು ಸ್ಥಿರವಾದುದು ಹಾಗೂ ಮರ್ಮಭೇದಿಯಾದುದು (ಕಪಾಕುಂ. ೪೪). ೫. ಬಾಣ. [ಸಂ. ಮರ್ಮಭೇದಿನ್]

**ಮರ್ಮರ** (ನಾ). ವಸ್ತ್ರ, ಎಲೆ ಮುಂತಾದುವು ಅಲುಗಾಡುವುದರಿಂದ ಉಂಟಾಗುವ ಶಬ್ದ : "ತಱಗೆಲೆಗಳ ದನಿಯಂ ಮರ್ಮರಮೆಂಬುದು" (ಹಲಾಯು. ೨೩-೦೫೦) ; ಕೇಳಿಸಿತು ಕಡಲ ಮೊರೆ ಹಕ್ಕಿಯಿಂಚರಮಂತೆ ತರುಮರ್ಮರಂ (ಶ್ರೀರಾಪು. ೩೩೪-೪೮) ; ಇರುಳ ಮೋಡ ಮರ್ಮರದಲಿ ನಿನ್ನ ನಲ್ಮೆಸುಡಿಯನೆಣಿಸಿ (ಕದಿಲ. ೦೨೦-೦೫). [ಸಂ.]

**ಮರ್ಮರಪತ್ರ** (ನಾ). ಮರ್ಮರ ಎಂದು ಸದ್ದುಮಾಡುವ ಎಲೆ : ಮರ್ಮರಪತ್ರಮಂಬುತಳಮಂ ನಡುವಂತಿರೆ ನಟ್ಟೊಡೆ (ಶಾಂತಿಪು. ೬-೯೪). [ಸಂ.]

**ಮರ್ಮರಿಸು** (ಕ್ರಿ). ಮರ್ಮರ ಎಂದು ಸದ್ದುಮಾಡು : ಸ್ವರ್ಗದ ನಂದನವೃಕ್ಷಗಳೆಲ್ಲ ಮಧುರನಾದದಿಂದ ಮರ್ಮರಿಸುತ್ತವಂತೆ (ಇಶಾಂಸಂ. ೨೬೪). [ಮರ್ಮರ + — ಇಸು₁]

**ಮರ್ಮರೋಗ** (ನಾ). ದೇಹದ ಸೂಕ್ಷ್ಮಸ್ಥಳಕ್ಕೆ ತಗುಲುವ ರೋಗ ; ಗುಹ್ಯರೋಗ : ಧರ್ಮಸ್ಥಳಕ್ಕೆ ಯಾತ್ರೆ ಹೋಗಿದ್ದಾಗ . . . ಆಡಿದ ಆಟಗಳ ಪರಿಣಾಮವಾಗಿ ಹೆಗ್ಗಡೆಯವರಿಗೆ ಮರ್ಮರೋಗ ಪ್ರಾಪ್ತವಾಗಿತ್ತು (ಮರಳು. ೩೬೩). [ಸಂ.]

**ಮರ್ಮಸ್ಪರ್ಶಿ** (ನಾ). ಅಂತರಂಗಕ್ಕೆ ತಾಕುವಂಥದು; ಹೃದಯಸ್ಪರ್ಶಿಯಾದುದು : ಗಾಯತ್ರಿ ತನ್ನ ವಿಕಲತೆಯನ್ನು ಮರ್ಮಸ್ಪರ್ಶಿಯಾಗಿ ಬರೆದಿದ್ದಳು (ಕ್ರೀಡಾಕ್ರ. ೨೦೩). [ಸಂ. ಮರ್ಮಸ್ಪರ್ಶಿನ್]

**ಮರ್ಮಳ್** (ನಾ). ಮಗನ ಅಥವಾ ಮಗಳ ಮಗಳು ; ಮೊಮ್ಮಗಳು: ಬೆಳ್ವೊಲವಣ್ಣಿಗೆಜಿಯ ಜೋಯಿಸಸಿಂಘನ ಮರ್ಮಳಬ್ಬಣಬ್ಬೆಯ ಮಗಂ (ಶಾಸಸಂ. ೯-೦ ಸು. 950) ; ಚಕ್ರವರ್ತ್ತಿತಿಲಕಂ ತ್ಯೆಲಂಗೆ ಮರ್ಮ್ಮಳ್ ಪೊಡರ್ಪ್ಪಿನ ಸತ್ಯಾಶ್ರಯಚಕ್ರವರ್ತ್ತಿಯ ಮಗಳ್ (ಎ೩.XVI, ೨೬-೦ ; 1010). [ಮರ್ಮ₁ + — ಅಳ್₅]

**ಮರ್ಮಾಹತ** (ನಾ). ೧. ಅಂತರಂಗಕ್ಕೆ ಉಂಟಾಗುವ ವೇದನೆ,— ಆಘಾತ : ಅದು ಅತ್ಯಂತ ಕ್ರೂರ ಮತ್ತು ಮರ್ಮಾಹತವಾಗಿರಲೂ ಎಡೆ ಇದೆ (ಪ್ರ೩೦. ೦೪೭). ೨. ಅಂತರಂಗಕ್ಕೆ ಪೆಟ್ಟು ಬಿದ್ದ ವ್ಯಕ್ತಿ: ಅಂದಿನ ನೆನಪಿಗೆ ಯಶೋಧರೆ ಮರ್ಮಾಹತಳಾಗುವಳು (ಕ್ರಾಂತಿಕಥ. ೩೭-೦೩): ಮರ್ಮಾಹತನಾದ ಆ ಮಾಣಿ ಅಲ್ಲಿ ನಿಲ್ಲದಾದ (ಹೊಸಕ್ಷ. ೩೨). [ಸಂ.]

**ಮರ್ಮಿ** (ನಾ). ಗುಟ್ಟಿನ ವ್ಯಕ್ತಿ : ಸಾಗರನ ಬಿಗುಹು ಮಹಾತಿಶಯಮೈಯಿವನನಂಜಿಸಲಾತಗಳು ಮರ್ಮಿಗಳು (ಕುವ್ಯಾಉ. ೧-೨೦). [ಸಂ. ಮರ್ಮಿನ್]

**ಮರ್ಮಿಗ** (ನಾ). ರಹಸ್ಯವನ್ನು ಬಲ್ಲವನು : "ಮರ್ಮಿಕ (ಮರ್ಮಿಗ)— ಮಾರ್ಮಿಕ = ರಹಸ್ಯ ಬಲ್ಲವ'' (ತದ್ಭಕೋ. ೩೪) ; ಪ್ರಖ್ಯಾತಪೂತತ್ರಿವಿಧ ಭಕ್ತಿಸ್ಥಲದ ಮರ್ಮಿಗನ . . . ನುಂಗಿಕೊಂಡಿಂತುಗುಳದಿದ್ದಹನಿನ್ನು ಸ್ಯೆರಿಸನು (ಬಸಪು. ೩೭-೪೦). [ಮರ್ಮ₂ + — ಇಗ]

**ಮರ್ಮೋದ್ಘಾಟನ** (ನಾ). ೧. ಅಂತರಂಗದ ಆಳಕ್ಕೆ ಚುಚ್ಚುವುದು; ಮನಸ್ಸನ್ನು ನೋಯಿಸುವುದು : ನಿನ್ನ ಮಹಿಮೆಗಿದು ನಡೆವಳಿಯೋ ಎಂದು ಮರ್ಮೋದ್ಘಾಟನಂಗೆಯ್ದು (ಶಂಕಾಪು. ೯-೦೪೩ ವ). ೨. ರಹಸ್ಯವನ್ನು ಭೇದಿಸುವುದು; ಗುಟ್ಟನ್ನು ರಟ್ಟು ಮಾಡುವುದು. [ಸಂ.]

**ಮರ್ಮೋದ್ಘಾಟನೆ** (ನಾ). = ಮರ್ಮೋದ್ಘಾಟನ ೧ : ಯಾವ ಕೆಲಸ ಮಾಡಿದರೂ ಆಕ್ಷೇಪಣೆಮಾಡಿ ಮರ್ಮೋದ್ಘಾಟನೆ ಮಾಡುವ ಚಾಳಿ ಬರುಬರುತಾ ಹುಟ್ಟುಗುಣವಾಗುತಾ ಬಂತು (ಪೂಪುರಾ. ೦೦೩). [ಸಂ. ಮರ್ಮೋದ್ಘಾಟನ]

**ಮರ್ಯಾದಸ್ತ** (ನಾ). ಗೌರವವುಳ್ಳ ವ್ಯಕ್ತಿ; ಮಾನ್ಯ ವ್ಯಕ್ತಿ : ಮರ್ಯಾದಸ್ತ ಹೆಂಗಸರೊಡನೆ ಹೇಗೆ ವರ್ತಿಸಬೇಕೆಂಬುದೂ ತಿಳಿಯುವುದಿಲ್ಲವೆ ನಿಮಗೆ ? (ಕುಸುಸಂ. ೬೨). [<ಮರ್ಯಾದೆ + — ಸ್ತ]

**ಮರ್ಯಾದಸ್ಥ** (ನಾ). = ಮರ್ಯಾದಸ್ತ: ನಿನ್ನ ತಂದೆ ಮೂಂಬ್ಯಾರಿಗಳು ತುಂಬಾ ಮರ್ಯಾದಸ್ಥರು (ಮುಂಗಾರು. ೪). [<ಮರ್ಯಾದೆ + — ಸ್ಥ]

**ಮರ್ಯಾದಿತ** (ನಾ). ಪರಿಮಿತವಾದುದು : ಸೀಮಿತವಾದುದು : ಒಟ್ಟಾರೆ ಸಾಗುವಳಿಗೆ ಯೋಗ್ಯವಾದ ನೆಲದ ಪ್ರಮಾಣವು ಮರ್ಯಾದಿತವೇಸರಿ (ಪೂವಾದ. ೦೩೬); ಭಾರತೀಯವೆಂದು ಮರ್ಯಾದಿತವಾಗಿ ಕೆಲವರು ತಿಳಿದುಕೊಂಡ ಸಂಸ್ಕೃತಿಗೆ ಬೌದ್ಧರೂ ಜ್ಯೆನರೂ ತಂತಮ್ಮ ರೀತಿಯಲ್ಲಿ ಇದಿರುಬಿದ್ದಂತೆ ವೀರಶ್ಯೆವರೂ ಸ್ವತಂತ್ರವಾಗಿ ಬಂಡು ಹೂಡಿದರು (ಕವಪ. ೦೩). [ಸಂ.]

**ಮರ್ಯಾದೆ** (ನಾ). ೧. ಮೇರೆ; ಎಲ್ಲೆ; ಗಡಿ : ಅಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ (ಶಂಕಾಪು. ೯-೬೭); ಶ್ರೀ ಮನು ಮಹಾಮಂಡಳೇಶ್ವರಂ . . . ರಾಜ್ಯಂಗೆಯ್ಯುತ್ತಂ ಕೋಗಳಿಯಲಿದ್ದು ಮರಂದಲೆ ಮರ್ಯ್ಯಾದೆಯಾಗೆ ನಾಡನಾಳುತ್ತಮಿರೆ (ಕ೯೩. IX-i, ೨೯೦-೯; 11ನೆಯ ಶತ). ೨. (ಕಾಲ, ಅವಧಿ ಇತ್ಯಾದಿಗಳ) ಗಡು; ಪರಿಮಿತಿ : ಈ ಪ್ರಸರಣಕ್ಕೆ ಮರ್ಯಾದೆಯುಂಟು, ಕೆಲವು ಮರ್ಯಾದೆಯವರೆಗೆ ಪ್ರಸರಣವಾಗುತ್ತ ನಡೆದು ಮುಂದೆ ಮೊದಲಿನ ರೂಪ ಬದಲಾಗುತ್ತದೆ (ಮುಂಬಯಿ. ೩-೦೨೦). ೩. ದಡ ; ತೀರ : "ಮರ್ಯಾದಾ, ಕೂಲದೇಶಃ — ಈ ೨ ತಡಿ'' (ಹಲಾಯು. ೦೦೮-೩೨). ೪. ಗೌರವ ; ಮನ್ನಣೆ : ಪ್ರತಿನಿಮಿಷವನ್ನೂ ಉಪಯುಕ್ತವಾದ ಕೆಲಸದಲ್ಲಿ ವೆಚ್ಚ ಮಾಡುವುದರಿಂದ ವಾಸ್ತವಿಕಸುಖವೂ ಮರ್ಯಾದೆಯೂ ದ್ರವ್ಯವೂ ದೊರೆಯುವವು (ಮುಂಬಯಿ. ೪-೦೯೦); ನನ್ನ ಪ್ರಯೋಗದ ವಿಚಾರ ಬೇರೆಯವರಿಗೆ ಗೊತ್ತಾದರೆ ನನ್ನ ಮರ್ಯಾದೆ ಮೂರುಕಾಸಾಗುತ್ತದೆ (ಶಂಜಕಂ. ೦೭೪). ೫. ಪದ್ಧತಿ ; ನಿಯಮ ; ಕ್ರಮ : ಮೂಜಿನೆಯ ಶ್ರಾಹೆಗೆ ತೆಜಿನೆಜಿದ ಮೂಜುಗದ್ಯಾಣಮಂ ಪತ್ತಿಗೆ ತಿಱುವರೆಲ್ಲಾ ಕಾಲಕ್ಕಮಿದುವೆ ಮರ್ಯ್ಯಾದೆ (ಕ೯೩. IX-i, ೭೭-೨೫; 992); ವಾಸುದೇವಯ್ಯನುಂ ಮಲ್ಲಯ್ಯನುಂ ಪೂರ್ವಶಾಸನಮರ್ಯಾದೆ ಕೊಟ್ಟರ್ದುದೆಂದು ಬನ್ನಪಂಗೆಯ್ಯಲು (ಕ೯೩. XX, ೬೦-೨೦; 1088); ಈಗಲೀ ಮರ್ಯಾದೆಯಲಿ ಶರಣಾಗತರ ಸೇವೆಯೊಳು ಹೊಂಪುಳಿಯಾಗಿ ಬಾಳುವರೇಸು ಧನ್ಯರೋ (ಹಂಶಾ. ೧೭).

ಮರ್ಯಾದೆ ಕಳೆ = ಗೌರವವನ್ನು ಹಾಳುಮಾಡು ; ಅವಮಾನವಾಗುವಂತೆ ಮಾಡು : ತಾಯಿ ಹೀಗೇಕೆ ಮರ್ಯಾದೆ ಕಳೆಯುವ ಕೆಲಸ ಮಾಡಿದಳು (ಹೊಸಕ್ಷ. ೬೦). [ಸಂ. ಮರ್ಯಾದಾ]

**ಮರ್ಯೋ, ಮರೇ, ಮರೋ** (ಅ). (ಉಕ) ಖಂಡಿತವಾಗಿ : ಮರ್ಯೋ ಬ್ಯಾಡ ಮಾರಾಯಾ (ಗ್ರಾಮೂಡು. ೨೬೦); ಗಂಗಕ್ಕಾ, ನೀ ಮರ್ಯೋ ಹೋಗಬ್ಯಾಡ (ಶೆಂದಯು. ೨೦). **ಮರೇ** : ಸುದಾಸ ಕಾಫಿಭವನದ ತನಕ ನನ್ನಿಂದ ಬರೋದು ಮರೇ ಆಗುವಂತಿಲ್ಲ (ಶಂದುಟಿ. ೬೪). **ಮರೋ** : ಅದರ ವಾಸನೆ ತಡೆಯಲಾಸಲ್ಲ ! ಮರೋ ಒಲ್ಲೆ (ಬೀರಬ. ೯೧). [ ? ]

**ಮರ್ವು₁** (ಕ್ರಿ). ಕತ್ತಲೆಯನ್ನುಂಟುಮಾಡು ; ಮಸುಕಾಗಿಸು : ಪರ್ವಿತ್ತು ನೇಮಿಸಲ್ಪದರಜಂ ದೆಸೆದೆಸೆಗೆ ಮರ್ವಿತ್ತು ಪರಕಲಿಸೆ ಚತುರಂಗಸೇನೆ (ಶೀರಪು. ೪-೦೩). [ < ಮರ್ವು₂ ]

**ಮರ್ವು₂, ಮಂಪರ, ಮಂಪರು, ಮಬ್ಬು, ಮರ್ಬು, ಮೊಬ್ಬು** (ನಾ). ೧. ನಸುಗತ್ತಲೆ; ಮಸುಕು : "ಮರ್ವೆನೆ ತಮಂ" (ಕಶಾರಪ. ೩೭); ತಮಾಲವನಂಗಳ ಮರ್ವು ಪರ್ವಿ ಕರ್ವುಡುಗಳೊಳೆಯ್ದೆ (ಕಾದಂಪೂ. ೬೩೯); ಮೆಯ್ಯಂ ಜಳೂಕಾವಳಿಗಳ್ ಪೀರ್ವಲ್ಲಿ ಮರ್ವುರ್ವಿಸೆ ಸಿಡಿದು ಸಿಡಿಲ್ ಬಂದು ಪೊಯ್ವಲ್ಲಿ ಹ್ಯೆಮಾಚಳವಿರ್ಪಂತಾಗಳರ್ದ[ಂ]. . . ಯೋಗಿನಾಥಂ (ಸುಕುಮಾ. ೪-೯); ಘೋರತರಂ ಮರ್ವು ನಾಡೆ ಪರ್ವಿದುದಾಗಳ್ (ಪುಣ್ಯಾಸ್ರ. ೦೦-೦೯). **ಮಂಪರ** : ೨. ಅರೆನಿದ್ದೆಯ ಸ್ಥಿತಿ; ಜೊಂಪು : ನಿದ್ರೆ ಬಾರದು . . . ಬರಿಯ ಕಳವಳದ ಮಂಪರ (ಪವರಾ. V, ೬೩); ಮಧ್ಯಾಹ್ನದ ಹೊತ್ತು ನನಗೆ ಸ್ವಲ್ಪ ಮಂಪರ ಬಂದ ಹಾಗಿತ್ತು (ಬೆಸ್ಸುಹಿಂ. ೬೦). **ಮಂಪರು** : ೨. ನನಗೆ ಸ್ವಲ್ಪ ಮಂಪರು ಕವಿದಂತೆ ಆಗುತ್ತಿತ್ತು (ಧರ್ಮಶ್ರೀ. ೦೨೩); ರೋಗಿಯು ಕಣ್ಣುಮುಚ್ಚಿ ಮಲಗಿದ್ದರು. ಅವರಿಗೆ ಮಂಪರು ಹತ್ತಿತ್ತು (ಪಂಕಥ. ೩೨೯). **ಮಬ್ಬು** : ೧. "ಮ[ಶಾಕಾಂ. ಮೊ]ಬ್ಬೆನಲ್ ಕತ್ತಲೆ" (ಶಾರಪ. ೬) ; ಕೋಕಮಿಥುನಂ ಪಾರ್ವ್ಯೆಸಿರಲ್ ಮಬ್ಬು ಪಿಂಗುವುದೇ (ಪಳಸಂ. ೩೯೭): ಫಲುಗುಣನಾದಡದ ಕೊಳ್ಕೆನುತ ಕೊಳ್ಳಿಯೊಳಿಟ್ಟನಗ್ನಿಯ ನೆನೆದು ಮಂತ್ರಿಸಲುರಿಮುಖದ ಕಾರ್ಪೊಗೆಯ ಮ[ಶಾಕಾಂ. ಮೊ]ಬ್ಬಿನಲಿ . . . ಮುತ್ತಿತು ರಥವನು (ಕುವ್ಯಾಅ. ೦೦-೩೩); ಸಾಯಂಕಾಲ ಮಬ್ಬಾದರೆ ಮನೆಯಿಂದಾಚೆಗೆ ಹೋಗುವುದಕ್ಕೆ ಹೆದರುವ ನೀನು ದಳವಾಯಿ ಆಗ್ತಿಯೊ (ಶಂಗಾಳ್. ೩). ೩. ಒಂದು ಬಗೆಯ ಜೂಜಿನ ಆಟ : ರಾತ್ರಿ ಹಗಲು ಅವನಿಗೆ ನಿದ್ರೆಯೇ ಇಲ್ಲ, ಮಬ್ಬು ಆಡುತ್ತಾನೆ, ಲೆಕ್ಕಮುಕ್ಕಿ ಆಡುತ್ತಾನೆ (ಪೋಹಿಶ. ೩೩). ೪. (ಆಲಂ) ಮಂಕ; ತಿಳಿಗೇಡಿ : ನಾ ಯಾರಿಗೆ ಮತ ಕೊಟ್ಟರೂ ತನಗೇ ಕೊಟ್ಟೇನೀ ಅಂತ ತಿಳೀತದ ಈ ಮಬ್ಬು (ಅಕ್ಷಪೋ. ೯೩).

**ಮುರ್ಬು** : ೧. "ಮುರ್ಬು ತಮಂಧದೊಳ್" (ಶಬ್ದಾ. ೨೦); ಪುದಿದೆತ್ತಂ ಮುರ್ಬುಸುರ್ಬು ಪರ್ಬಿತ್ತುಗಳ್ (ಕಾದಂಬ. ೦೪೦); ಪುಳಿಂದ ಬಲಂ. . . ಮುರ್ಬು ಮಸಗಿದಂತೆ ಸಡಗರಿಸಿ (ಗಿರಿ. ೦-೬೮ ವ). ೫. ಜಡತೆ; ಮಂಕು : ಒದವಿದ ಚಿಂತೆ ಪರ್ಚೆ ಪಸಿವಿಲ್ಲದೆ ಮುರ್ಬೆರ್ದೆಯುರ್ಬೆ ನಿದ್ರೆಯಿಲ್ಲದೆ ಬಗೆ ಬೆರ್ಚೆ. . . ಕನಲ್ದು (ಅಜಿತ. ೦೨-೩೩). **ಮೊಬ್ಬು** : ೧. ಹಬ್ಬಿದಾಲತಮಾಲತರುಗಳ ಮೊ [ಪಾಠಾಂ, ನೊ] ಬ್ಬುಗಳ ಹೆಮ್ಮೆಳೆಯ ಹರಹುಗಳ . . .ಕಾಂತಾರದೊಳಗಿವರಬ್ಬರಿಸುತೈದಿದರು (ತೊರವೆರಾ. ೩-೦-೬). ೫. ನಿದ್ರೆಯ ಮೊಬ್ಬಿನಿಂ ಮಲಗಿರಲು (ಸೌಗಂಧಿ. ೨೪೮-೦೦); ನಿದ್ರೆಯ ಮೊಬ್ಬಿನಲ್ಲಿ ಕೈಗೆ ಆಯುಧಗಳು ಸಿಕ್ಕದೆ ಅವುಗಳನ್ನು ಹುಡುಕುವುದರಲ್ಲಿದ್ದರು (ರೇಣುಕಾ. ೬೦). ೬. ಅಜ್ಞಾನ; ಮಾಯೆ : ಜ್ಞಾನದಿಂ ಮೊಬ್ಬೆಲ್ಲ ಕಿಡುಗು (ಸರ್ವಜ್ಞ. ೪೩೮); ಪರರ ಅನ್ನವನುಂಡು ಮೊಬ್ಬಿನಲಿ ದಿನಗಳೆದೆ (ಏಡಾಳ. ೦೦೪-೩).

[ದೇ.॥ ತಮಿ. ಮುಪ್ಪು; ತುಳು. ಮುಪ್ಪು, ಮುಬ್ಬು, ಮುರ್ಬು; ತೆಲು. ಮುಬ್ಬು, ಮ್ರುಬ್ಬು]

**ಮರ್ಷ** (ನಾ). ಸಹಿಸಿಕೊಳ್ಳುವುದು ; ತಾಳ್ಮೆ : "ಮರ್ಷಃ, ಕ್ಷಮಾ . . . ಸಹಿಷ್ಣುತಾ — ಈ ೫ ಸೈರಣೆ" (ಹಲಾಯು. ೦೨೦-೪೦). [ಸಂ.]

**ಮರ್ಷಿ** (ನಾ). ಸಹಿಸುವವನು ; ತಾಳಿಕೊಳ್ಳುವವನು. [ಸಂ. ಮರ್ಷಿನ್]

**ಮಲ್** 'ಮಲ್ಲು' ನೋ.

**ಮಲ$_1$**, ಬಲ$_2$ (ಗು). ಎರಡನೆಯ ಅಥವಾ ಬೇರೆಯ : 'ಮಲದಾಯ್', 'ಮಲಮಗ' ಪರಾ. ಬಲ$_2$ : 'ಬಲತಾಯಿ' ಪರಾ. 'ಮಜ್ಜಿ$_1$' ಹೋ.

**ಬಲಅಕ್ಕ** = ತನಗಿಂತ ದೊಡ್ಡವಳಾದ, ತಂದೆಯ ಬೇರೆ ಹೆಂಡತಿಯ ಮಗಳು : ಅವನಿಗೆ ಒಬ್ಬಳು ಬಲಅಕ್ಕ ಇರುವಳು (ರೂಢಿ). **ಬಲಅಣ್ಣ** = ತನಗಿಂತ ದೊಡ್ಡವನಾದ, ತಂದೆಯ ಬೇರೆ ಹೆಂಡತಿಯ ಮಗ : ವೀರರಾಜರವರ ಬಲಅಣ್ಣನ ಚಿಕ್ಕಕುಮಾರರು ಒಬ್ಬರು ಕೆಲವು ಕುಟುಂಬ ಮಕ್ಕಳು ಸಹ ಉಳಕೊಂಡು ಓರಿಯಾಪಟ್ಟಣದಲ್ಲು ಇರುತ್ತ ಇದ್ದರು (ರಾಜೇಂದ್ರ. ೨೯). **ಬಲತ್ತೆ** = ತನ್ನ ಮಾವನ ಬೇರೆಯ ಹೆಂಡತಿ ; ಗಂಡನ ಬಲತಾಯಿ : ಮೈಸೂರವರ ಮನೆತನದಲ್ಲಿ ಪುಟ್ಟಿದ ತನ್ನ ಬಲತ್ತೆ ದೇವಾಜಮ್ಮಣ್ಣಿಯವರ ಒಬ್ಬ ಪುತ್ರನ ವಂಶವು ನಡೆಯಲಿ (ಮುಹಾಸಂ. I. ೪೭). **ಬಲಸೊಸೆ** = ತನ್ನ ಗಂಡನ ಬೇರೆಯ ಹೆಂಡತಿಯ ಸೊಸೆ ; ಬಲಮಗನ ಹೆಂಡತಿ : ಆಕೆ ಬಲಸೊಸೆಯನ್ನು ತುಂಬ ವಾತ್ಸಲ್ಯದಿಂದ ಕಂಡುಕೊಂಡಿದ್ದಾರೆ (ರೂಢಿ). [ದೇ.॥ ತೆಲು. ಮಲು]

**ಮಲ$_2$** (ನಾ). ಒಂದು ಬಗೆಯ ಸಸ್ಯ : "ದೂರಾನುಗತಃ — ಮಲ. ನೆಲಬೇವು. ಹೆದ್ದುಱಚೆ" (ಓಷಧಿ. ೨೮). [ಸಂ. ಮಲಾ]

**ಮಲ$_3$**, ಮಳ (ನಾ). ೧. ಕೊಳೆ ; ಹೊಲಸು : ಮಲಮಂಗರಾಗಮಂಬರ ವಲಯಂ ದಿವ್ಯಾಂಬರಂ . . . ಎನೆ ಮುಕ್ತಿಲಲನೆಯನೊಲಿಸಲ್ ಕೈಗೈದು ನಿಂದನಜಿತಮುನೀಂದ್ರಂ (ಅಜಿತ. ೬-೪) ; ಮಲಮಂ ಧರಿಯಿಸಿ . . . ಪಲ್ಲಂ ಸುಲಿಯದೆ ಮಿಾಯದೆ ಮಿಳ್ಳದೆ ಕುಲದಿಂ ಕೆಟ್ಟವರನಣ್ಣ ನೀಂ ಮನ್ನಿಪುದೇ (ಧರ್ಮಾಮೃ. ೦-೦೦೩). ೨. ಶರೀರದಿಂದ ಹೊರಬರುವ ಹನ್ನೆರಡು ಅಶುಚಿದ್ರವ್ಯಗಳಲ್ಲಿ ಒಂದು; ಹೇಲು ; ಅಮೇಧ್ಯ; ಕೊಬ್ಬು, ವೀರ್ಯ, ರಕ್ತ, ಮಜ್ಜೆ, ಮೂತ್ರ, ಪುರೀಷ, ಕಿವಿಯ ಗುಗ್ಗೆ, ಸಿಂಬಳ, ಕಫ, ಕಣ್ಣೀರು, ಕಣ್ಣಿನ ಪಿಸುರು, ಬೆವರುಗಳೆಂಬಿವು ಹನ್ನೆರಡು ಅಶುಚಿದ್ರವ್ಯಗಳು : "ವರ್ಚಃ, ಉತ್ಸರ್ಗಃ . . . ಪುರೀಷಂ, ಮಲಂ — ಈ ೧೨ ವಿಷ್ಠೆ" (ಹಲಾಯು. ೦೦೩-೦೫) ; ಮಲವು ಪುರುಷನಿಗೆ ಅನಾದಿಯಾಗಿರುವ ಅಶುದ್ಧಿ (ಹಿಂದೂಶಾ. ೨೯೬). ೩. ತುಕ್ಕು; ಜಂಗು. ೪. ಪಾಪ ; ಪಾತಕ : ಇಲ್ಲಿ ಮನದ ಮಲ ಹರಿವಂತೆ ಅಲ್ಲಿ ಮೆಯ್ ಶುದ್ಧಿಯಾಗದು (ಮುಕೋಶ. ೧೬). ೫. ಕಳಂಕ ; ದೋಷ : ಮಲ ಎಂದರೆ ದೋಷ (ಶಾಕಶ. ೬೨೯). ೬. ಧಾರ್ಮಿಕಕಾರ್ಯಗಳ ಆಚರಣೆಗೆ ಅಶುಭವಾಗಿರುವುದು : 'ಮಲಮಾಸ' ಪರಾ. ೭. ವಜ್ರದ ಒಂದು ದೋಷ : ಮಲವು ಎಂದರೆ ವಜ್ರದಲ್ಲಿ ಹಳ್ಳ ಬೀಳುವುದು (ಸೌಗಂಧಿ. ೩೬೪-೩೩). ೮. ಶರೀರದ ವಾತ, ಪಿತ್ತ ಮತ್ತು ಕಫಗಳೆಂಬ ಮೂರು ರಸಧಾತುಗಳು. ೯. [ವೀಶೈ] ಐದುವಿಧವಾದ ಪಾಶಗಳಲ್ಲಿ ಒಂದು : 'ಮಲಪಾಶ' ಪರಾ. ೧೦. ಜೀವನಿಗೆ ಅಂಟಿಕೊಳ್ಳುವ ಮೂರು ಬಗೆಯ ದೋಷ : 'ಮುಮ್ಮಲ' ಪರಾ. **ಮಳ** : ೧. ಆ ಇರುಳ್ ಓರಿದೊಂದು ಮಟಿ ಕೊಂಡು ಮೆಯ್ಯ ಮಳಮೆಲ್ಲಮಂ ಕರ್ಚಿ ಕಳೆದು ಪಾಷಾಣಮೆಂಬ ಮಡುವಂ ನೀರ್ ಪೊಕ್ಕಾಗಳ್ (ವಡ್ಡಾರಾ. ೦೦೬-೨); ಖಳರ್ಮರಾಜನೊದವಿದ ಬಳಮಂ ಕಿಡಿಸಲ್ಕೆವೇಡಿ ತೊಟ್ಟಿರ್ದಾ ಕತ್ತಳಮಂ ಪೋಲ್ತುದು ನೋಡಲ್ ಪಾಳಮೋರಂತಮರ್ದು ಕೂಡೆ ಸರ್ವಾಂಗಮುಮಂ (ಧರ್ಮಾಮೃ. ೩-೨೬೬). ೨. "ಅಮೇಧ್ಯಮವಸ್ಕರಂ ಶಕೃದ್ಗೂಥಂ ವಿಷ್ಠೆ ಮಳಂ ಪುರೀಷಮುಚ್ಚಾರಮಪದಕ್ಕಂ" (ಪಶ್ತುಕೋ. ೬೨-೩೦). ೪. "ದುರಿತಂ ಪಾಪಂ. . . ಮಳಂ ದುಷ್ಕರ್ಮಂ" (ಪಶ್ತುಕೋ. ೨೦-೦೨). ೫. ಈ ವರ ಧರ್ಮದಿಂದಘಕುಲಂ ಕಿಡುಗುಂ . . . ಮಳಂ ಕಿಡುಗುಂ (ಧರ್ಮಾಮೃ. ೬-೬೦). [ಸಂ.]

**ಮಲಂಗಿಸು**, ಮಲಗಿಸು (ಕ್ರಿ). ೧. ಶಯನಗೊಳ್ಳುವಂತೆ ಮಾಡು; ಶಯನಗೊಳಿಸು : ಪೊಳೆವ ತಣ್ಗದಿರ್ಗಲ್ಲ ಪಸೆಯೊಳೇಳೆಲೆವಾಳೆಯೆಳೆಯೆಲೆಯ ಪಚ್ಚಡಿಸಿ. . . ಕಾಂತೆಯ ಮಲಂಗಿಸಿ (ಶಬ್ದರಾ. ೮-೯೨). ೨. ಹಸ್ತಾವಲಂಬನವನ್ನು ಪಡೆ; ಹಸ್ತಾವಧಾನ ಹೊಂದು : ಕೆಳದಿಯರ ಕೆಯ್ಯೊಳ್ ಮೆಯ್ಯಂ ಮಲಂಗಿಸಿ ಮೆಲ್ಲಮೆಲ್ಲನಡಿಯಿಡುವಾಗಳ್ (ಗಿರಿ. ೩-೬೬ ವ). ೩. ನಾಶವಾಗುವಂತೆ ಮಾಡು; ನಾಶಗೊಳಿಸು : ಚೋಳನ ಮೇಲೆ ನೀಡಿ ಕರಮಂ ಪದಪಲ್ಲವಮಂ ಕಳಿಂಗಭೂಪಾಲನ ಮೇಲೆ ನೀಡಿ ಮಗಧಾವನಿಪಾಲಕನಂ ಮಲಂಗಿಸಲ್ ಲೀಲೆಯೊಳಿರ್ಪನೆಂಬ ಮನಮುಳ್ಳೊಡೆ ಪೂಜಿಸು. . . ಚತುರ್ಮುಖಿಶಾಂತಿನಾಥನಂ (ಧರ್ಮಾಮೃ. ೩-೬೪). **ಮಲಗಿಸು** : ೧. ಕರ್ಪುರದ ಕವಳದ ಯಂತ್ರುರಕ್ಷೆಯಲವನಿಪನ ಸಂತೈಸಿ ಮಲಗಿಸುತ (ಕುಮಾ.ಕ. ೦೦-೩೬); ಮಜ್ಜನಂಗೈಸಿ ಮಡಿಯಂ ಪೊದಿಸಿ ಮೆಲ್ಪಾಸಿನೊಳ್ಮಲಗಿಸುವರಳ್ತಿಯಿಂ (ಕೈವಲ್ಯ. ೨೮-೨೦); ಮಲಗಿಸು ಬಾ ಅಪ್ಪ ಹಾಗಾದರೆ (ಕಂಗಾಳ. ೦೩೩). ೪. ಓರೆಯಾಗಿ ಇಡು; ಒರಗಿಸು : ಬಸಿದ ಬಲುದಸಿಗಳಂ ಮಲಗಿಸಿ ಮರಂಗಳನಿರಿಸಿ ಎಡೆಗೆಡೆಗೆ . . . ಪೊಸದುರ್ಗಮಂ ಪಾಟಿಸಿ ಓರಿಯ ನಡಬಾವಿಗಳನಗುಳಿಸಿದನದಟೊಳಗೆ (ಬಸವ. ೦೬-೦೦). [ಮಲಂಗು$_1$ + — ಇಸು$_3$]

**ಮಲಂಗು$_1$**, ಮಲಗು$_1$ (ಕ್ರಿ). ೧. ಒರಗು; ಆತುಕೊಳ್ಳು : "ಮಲಗು, ಮಲಂಗು — ಉಪಧಾನಾವಲಂಬೇ, ಉಪಧಾನೇ ಚ (ತಲೆದಿಂಬು)" (ಕಮಾಧಾ) ; ಖರಮಣಿಕೆಯೊಳ್ ಕಾಲನಿಕ್ಕಿ ಮಂದುರದ ಮುಂಡಿಗೆಯಂಮಲಂಗಿ ಕೌತುಕಂಬೆರಸು ಕೇಯೂರನನಿಂತೆಂದಂ (ಕಾದಂಬ. ೦೪೬); ಪಳಕಿನ ಚೌಪಳಿಗೆಯ ನೀಲಶಿಲಾಸ್ತಂಭಮಂ ಮಲಂಗಿ . . . ನಿಖಿಲಜನಮನಃಪೀಠದೊಳ್ಮನಸಿಜಂ ಪ್ರತಿಷ್ಠೆಗೆಯ್ದ ರತಿಯಂತೆ ನಿರತಿಶಯಮಾಗಿ ಪುರ್ದುಂ (ಕಂಠಾಮಾ. ೩-೩೬ ವ). ೨. ಶಯನಗೊಳ್ಳು; ಶಯನಿಸು : ಅಲರ್ದಪ್ಪಂ ನಿಮಿರ್ದ ಲತೆಯ ಮೇಲೆ ವಿಳಾಸಂ ಬಿಲೆ ನೀಡಿ ಕಾಲನರೆಬರ್ ಮಲಂಗಿದರ್ ಪೊಳೆವ ತಳಿರ ಬೊಂದರಿಗೆಗಳೊಳ್ (ಅಜಿತ. ೦೨-೬೬). ೩. ನಿದ್ರಿಸು ; ನಿದ್ದೆಮಾಡು : ಅತ್ತ ಮಲಂಗಿದಳೀ ಮನೆಯತ್ತಲ್ ಸುಟಿವವನುಪೊರ್ವನಿಲ್ಲಮೆನುತ್ತಂ . . . ಅರಳಿಗಂಗೆ ಮಿಗೆ ಸೂಚಿಸಿದಳ್ (ಉದ್ಭಟ. ೦೦-೦೦೦) ; ಭೃಂಗಮಿಥುನಮಂಭೋರುಹದೊಳಗೆ ಮಲಂಗಿ ಬಳಿಕ್ಕಾ ನಿದ್ರೆತಿಳಿಯೆ ಪಕ್ಷಂಗೆದಱುವ ಭಂಗಿಯ

ಕಡುಚಲ್ವಂ ನೆನೆಯಿಸುತೊಪ್ಪಿದುವು (ಪಂಪಭಾ. ೨-೪೩). ೪. ಕೂಡು ; ಸಂಭೋಗಿಸು : ಇನಿಯಳ ಮೇಲೆ ಕಾಮಾಸಂಖಿಮಂ ಕೊಳಲೆಂದು ಮಲಂಗಿ (ಧರ್ಮಾಮೃ. ೬-೦೬೧). ೫. ತಬ್ಬು ; ಆಲಿಂಗಿಸು : ಮಾವಂ ಮಲಂಗಿದ ಮಲ್ಲಿಕಾಲತೆಯು ಪೂಗತರು ಕೈಗೊಟ್ಟ ನಾಗಲತೆಯು . . . ಬಾಳ್ದೊಂಪವ ಬಳಸು ವಿಳಸಮಾದ ರತ್ನರಚಿತಕೃತಕಾಚಲಂಗಳೊಳ್ (ಅಪಂಪು. ೦೦-೨೪ ವ). ೬. ಕ್ರಿಯಾಶೂನ್ಯವಾಗು ; ನಿಷ್ಕ್ರಿಯವಾಗು : ಹರಿಣಾಂಬಕಿ ಮತ್ಪ್ರಿಯೆ ಪರಿಪರಿಯಿಂ ಬೋಧಿಸಿದೊಡಂ ಮಲಂಗಿದು ದಾಗಳ್ ಬರೆದಪೆನೇನಂ ಹತಮನಂ (ಶಾಕುಂತ. ೬೨-೦೩೯). ೭. ನಿಲ್ಲು ; ಸ್ಥಗಿತಗೊಳ್ಳು ; ಅಡಗು : ನಿತುಸುಯ್ ಮಲಂಗಿ [ಪಾಠಾಂ. ಮಲಗಿ] ಸರ್ವಾಂಗಂ ಸಡಿಲ್ದು . . . ಮೂರ್ಛಿತರಾಗಿ (ಸಂಬರ. ೦೪-೫೦). ಮಲಗು$_1$ : ೧. "ಮಲಗು, ಮಲಂಗು ... ಉಪಧಾನಾವಲಂಬೇ, ಉಪಧಾನೇ ಚ (ತಲೆದಿಂಬು)" (ಶಮ್ದಾ) ; ಕುಳ್ಳಿರ್ದಸು ಮಹೀಪತಿ ಮಾನಿನಿಯು ಮಲಗಿ (ಕುಮಾ.ೞ. ೦೩-೦೦). ೨. ವಿಷಯವೆಂಬ ರಸವ ಕುಡಿದು ಅಜ್ಞಾನವೆಂಬುದೊಂದ ಹಾಸಿಗೆಯಲ್ಲಿ ಮಲಗಿ ಮೂರ್ಛೆ ತಿಳಿಯದೆ ಇಪ್ಪುದ ಕಂಡು (ಅದಪ. ೦೩-೨೬) ; ಆಲದೆಲೆಯ ಮೇಲೆ ಮಲಗಿದ ಶಿಶುವೇ (ಪುರಂದ. ೦-೨-೨೯) ; ಅಚ್ಚ ಪೂರಾಯಗಾಯದೊಳ್ ಮೈಮಱೆದು ಕಣ್ಮುಚ್ಚುತೆ ಪರೂಥದೊಳ್ಮಲಗಲ್ಕೆ ಕಂಡು (ಕೈಬಿಡಾ.೭-೪೫). ೩. ಕಂದನೇಕೆ ಮಲಗನೆ ಕೇಳೆಲೆ ಸಖಿ (ಪುರಂದ. ೨-೫೪ ಪಲ್ಲ). ೮. ಬಾಗು ; ಓಲು ; ಜೋತುಬೀಳು : ತಳಿತ ಚೂತದ ಸಸಿಗಳವನಿಗೆ ಮಲಗುವಂತಿರೆ ರಾಜಪುತ್ರರು . . . ಎಸೆದರು ಸಾಲ ಶಯನದಲಿ (ಕುಮಾ.ದ್ರೋ. ೫-೭೪). ೯. (ಅನಾರೋಗ್ಯದಿಂದ) ಹಾಸುಗೆ ಹಿಡಿ; ಅಸ್ವಸ್ಥವಾಗು : ಬರಬರುತ್ತಾ ಬಾಯಿಲೆ ಹೆಚ್ಚಾಗಿ ಅವರು ಪೂರ್ತಿ ಮಲಗಿಯೇ ಬಿಟ್ಟರು (ಕೂಡಿ).

[ದೇ.॥ ತುಳು. ಮಲಗು, ಮಲೆಂಗು ; ಕೊಡ. ಮಲಿಂಗ್ ; ಕುಇ. ಮಲ್ಗ, ಮಲ್ಗಿ]

**ಮಲಂಗು$_2$, ಮಲಗು$_2$** (ನಾ). ಒರಗಿಕೊಳ್ಳುವ ಸಾಧನ : ಒರಗು ದಿಂಬು ; ಲೋಡು : ಅವನಿಪಾಳಕನಲರ್ಗಳ ತಲೆಗಿಂಬಿನಿಂದ ಮಲರ ಮಲಂಗಿಂದಲರ ದಳಂಬದಿನಿಂಬಾದಲರ್ವಾಸಿನ ಮೇಲೆ ಲೀಲೆಯಿಂ ಕುಳ್ಳಿರ್ದಂ (ಜಾರ್ಗ.ಕ. ೯-೩೦) ; ಮಂಟಪದ ನಡುವೆ ಚಂದ್ರಿಕೆಯು ಚಂಪೆಯುಮನೆತ್ತಿದಂತೆ ಸೊದೆವಟೆಯದ ಲೋವೆಯು ಮುತ್ತಿನ ಲಂಬಣದ ಮಲಂಗು (ಅಪಂಪು. ೬-೭ ವ) ; (ಕಣ್ಮುಚ್ಚಿ, ಹಿಂದಣ ಮಲಂಗಿಗೆ ಒರಗಿಕೊಳ್ವನು) (ಚಿಬ್ಬೆ. ೦೭-೦೬). ಮಲಗು$_2$ : ಸಂಜಯನರಸನನು ಕುಳ್ಳಿರಿಸಿ ಬೆನ್ನಿಗೆ ಚಾಚಿದನು ಮಲಗ (ಕುಮಾ.ೞ. ೦-೯) ; ಮಿನಾಂಕನಿದ್ದನು ಮಲಗ ತಾನೊಱಗಿ ಸುಮ್ಮಾನದೊಳು (ಭರತ. ೪೬-೭೪) ; (ಶಾಂತನಾಗಿ ಕಟ್ಟಾಸರಿಂದ ಕಣ್ಮುಚ್ಚಿ ಮಲಗನ್ನು ನೆಮ್ಮಿರುವನು) (ಚಿಬ್ಬೆ. ೦೬೩-೦೦). [<ಮಲಂಗು$_1$]

**ಮಲಂಗುಮೂಡೆ, ಮಲಗುಮೂಡೆ** (ನಾ). = ಮಲಂಗು$_2$ : ಕಮಳಕಂಟಕಸೂಚಿಯಿಂ ಕಮಳಸೂತ್ರಮಂ ಕೋದು ಪೊಲಿದಿರಿಸಿದ ಮಲಂಗುಮೂಡೆಯುಂ ಮೋಡಿಯೊಳೊಱಗಿ (ರಾಜಶೇ. ೦-೦೩೫ ವ). ಮಲಗುಮೂಡೆ : ಸೊಗಯಿಸುವ ರಂಗಮಂಟಪದೊಳೆಡೆವಡೆದ ಗದ್ದುಗೆ ಮಲಗುಮೂಡೆಗಳ ನಡುವೆ ಕುಳ್ಳಿರ್ದು (ಸೌಂದರ್. ೬-೫೫) ; ಕಾನೆಸೆವ ಮಂಡಲಾದ್ರಿಯ ಮಲಗುಮೂಡೆ . . . ಗಗನವೇ ಸತ್ತಿಗೆಯಂದಾಯಿತು (ಚೀಕ್ಕಪು. ೨-೦೦ ೦೫) ; ಮುತ್ತಿನ ಗದ್ದುಗೆ ಮಲಗುಮೂಡೆಯೊಳು ಬೆನ್ನೊತ್ತಿ ಮಂಡಿಸಿದಳಾ ಕುವರಿ (ಮೋಹತ. ೨೭-೪). [ಮಲಂಗು$_2$+ಮೂಡೆ]

**ಮಲಕಟ್ಟು** 'ಮಲಗಟ್ಟು' ನೋ.

**ಮಲಕಾಡುಹತ್ತಿ** (ನಾ). ಒಂದು ಬಗೆಯ ಸಸ್ಯ : (ವೃಕ್ಷಗಿ. ೪೩-೬೪೯). [ಮಲ ? + ಕಾಡುಹತ್ತಿ]

**ಮಲಕಿಸು** (ಕ್ರಿ). ಅಲುಗಾಡಿಸು; ಆಡಿಸು : ಕುಲುಕಿಸಿ ಕೈಕೈ ಮಲಕಿಸಿ ಮೈ ಮೈ (ಗಂ. ೦೨೨-೦೦). [ಮಲಕು$_1$+ -ಇಸು$_3$]

**ಮಲಕು$_1$, ಮಲುಕು$_1$** (ಕ್ರಿ). ೧. ಚಲಿಸು; ಅಲ್ಲಾಡು : ದೊಡ್ಡಮ್ನ ಗುಡಿ ಮುಂದೆ ಕಬ್ಬಿಣದುಯ್ಯಾಲೆ ಕಳ್ಳರು ತೂಗಿದರೆ ಮಲಕೊಲ್ದು (ಜಾನೀತ. ೦೩); ಹಾರುವರ ಕೇರಿಯ ತೇಗದ ತೇರು ಯಾರ್ಯ್ಯಾರು ನೂಕಿದ್ರು ಮಲಕೊಲ್ದು ಯಾರ್ಯ್ಯಾರು ನೂಕಿದ್ರೂ ಮಲಕದ ತೇರು ಗೊರವ್ನಾರ ಹೊಲೆಯರು ಮುಟ್ಟಿದ್ರೆ ನಲಿಯುವ ತೇರಿಗ್ವೋಗೋಣ ಬನ್ನೀರೆ (ಗರುಡಾ. ೬೩). ಮಲುಕು$_1$ : ೨. ಚಂಚಲವಾಗು: ಮಲುಕಿ ಸೂಳೆಯ ನೆಚ್ಚಿ ಮನೆಯೊಳು ಸಲುವ ಹೆಂಡಿರ ಬಿಟ್ಟು ಪೋಪುದು ಚೆಲುವೇನೈಯ್ಯ (ಕಂಠ. ೪೬-೬).

[ದೇ.॥ ತೆಲು. ಮಲಯು ; ಪರ್ಜಿ. ಮೆಲ್ ; ಗೊಂಡಿ. ಮಲ್ಲಾನಾ, ಮಲ್ಹಾನಾ]

**ಮಲಕು$_2$, ಮಲುಕು$_2$** (ನಾ). ೧. ಜೋಡಣೆ ; ಹೆಣಿಗೆ : ಮಾತಿಗೆ ಮಲಕಿಲ್ಲ ನೀತಿಗೆ ತೊಡಕಿಲ್ಲ (ಜನಗೀ. ೫೩); ಮುದುಕಿಯು ಮಾತಿನ ಮಲಕಿನಲ್ಲಿಯೇ ಆತ ಸುತ್ತುತ್ತ ಬಂದಿದ್ದ (ಅಕಿ.ಎ.ಕ. ೦೫೯); ವಿಚಾರವು ಮಾತಿನ ಮಲಕೂ ಅಲ್ಲ . . . ವಿಚಾರವು ವಿಚಾರಿಯ ಅನುಭೂತಿಯನ್ನೂ ವಿಷಯದ ಗುಣವನ್ನೂ ಏಕಜೀವ ಮಾಡುವ ಕಲೆಯು (ಬಾಳುಮಂ. ೬೦). ೨. ಗಂಟು ; ಕುಣಿಕೆ : ದಾರವನ್ನು ಕೈಯಲ್ಲಿ ತೆಗೆದುಕೊಂಡು ಎಳೆದರು ಮಲಕು ಬಿಡಲೇ ಒಲ್ಲದು (ಕಕಪು. ೫-೯); ಮಲಕು ಬಿಡಲಿ ನಿನ್ನ ಸೂತ್ರಾ (ಮುಕ್ತಕಂ. ೬೩-೨). 'ಮುರಿಮಲಕು' ಪರಾ. ೩. ಮಣಿ ಮುಂತಾದುವನ್ನು ಪೋಣಿಸಿ ಹೆಣೆದಿರುವ (ತೋರಣದಂಥ) ಒಂದು ಬಗೆಯ ಅಲಂಕಾರ ವಸ್ತು : ಉಟ್ಟ ಪೀತಾಂಬರವಲೆಸುವ ಮಲಕಿನ ಜಾರುಕಟ್ಟನಂ ಬಿಗಿದ ಮಣಿಮೇಖಲೆಯ ಕಿರಣದಿಂ (ತುರಂಗ. ೯೬-೨೮). ೪. ತಲೆಯ ಮೇಲೆ ಧರಿಸುವ ಒಂದು ಬಗೆಯ ಆಭರಣ ; ಶಿರೋಭೂಷಣ : ರಂಗನ ಶಿಖಿಗೆ ಸುತ್ತಿದ ಮುತ್ತುಮಲಕಿನ ಸಿಂಗರಗಳನೇನನೆಂಬೆ (ಕೃಷ್ಣಗಿ. ೨-೪೪) ; ಕಡಗ ಸರಪಣಿ ಸಾರಸನ ಶಿರಕಿಡುವ ಮಲಕುಗಳಿಂದ . . . ಪದ ನಡನಡುಗುತಲಿ ನಡೆತರುವ ಶಿಶುಗಳ ಬೆಡಗ ನೋಡುತಲೆಸೆದಳು (ಜಪಕಾ. ೬-೦೯) ; ತಲೆಯ ಮೇಲೆ ಮಲಕು : ಸೊಗಸಾಗಿ ಕಟ್ಟಿರುವ ತುರುಬಿಗೆ ಒಂದು ಜಡೆಬಿಲ್ಲೆ (ಮಲ್ಲಿ. ೪೦). ೫. ಒಂದು ಬಗೆಯ ಕಂಠಾಭರಣ ; ಸರ ; ಹಾರ : ಕಂದುಗೊರಲಿನ ಬೆಳ್ದೊರಲೊಳ್ ಜಾಗವರಲ ಮಲಕನಮರ್ಚಿ (ರಾಮಾಶ್ವ. ೦೩೦-೦೦). ೬. (ಮಣಿ ಮುಂತಾದುವುಗಳನ್ನು ಪೋಣಿಸಿ ಇಳಿಬಿಟ್ಟ) ತೋರಣ: ಮುತ್ತಿನ ಮಲಕಿನ ಜಾಲಂದರದ ಗವಾಕ್ಷದೊಳ್ ಮೆಲ್ಲಮೆಲ್ಲನೆ ನೋಡುತ್ತ . . . ಊರ್ವರ್ ಪುರುಷರಂ ಕಂಡು (ಶ್ರೀಗಂ೦. ೩೩೯-೭). ೭. [ನಾಟ್ಯ] ಒಂದು ಬಗೆಯ ನೃತ್ಯಭಂಗಿ : ಮಲಕು ಕತ್ತರಂ ತುಳಿಲನಿಪ್ಪವು ಲೇಸುವಡೆಯೆ ತಾಂಡವಮನಾಡುತಿರ್ದಳೀಶ್ವರನ ಸಮ್ಮುಖದೊಳು (ರೇಭಾ. ೩೨-೪೯). ಮಲುಕು$_2$ : ೮. ಹಿಡಿತ ; ಪಟ್ಟು : ಈ ಮಲುಕಿಗೂ ಮಣಿಯಲಿಲ್ಲ ಈ ಪಂಡಿತಪುಂಗವ ! (ಕುಂಗಶ. ೬).

ಮಲಕಿನ ತೆನೆ = ಹೆಣಿಗೆಯ ರೀತಿಯಲ್ಲಿರುವ ಕೋಟೆಯ ಗೋಡೆಯ ಮೇಲುಭಾಗದ ರಚನೆ,– ತೆನೆ : ಮೂಡಣ ನಿಟ್ಟು ೧೬ ನೀಳ ೨೭೭ ಮಾರು ಮಲಕಿನ ತೆನೆ ೩೩೦ . . . ಈ ಮೇರೆಗೆ ಅಳತೆಯಂ ಮಾಡಿ (ಮಹಾಮಂ. I, ೯೦); ಬಿರುಕುಬಿಟ್ಟಿರುವ ಮಲಕಿನ ತೆನೆಗೆ ಸ್ವಲ್ಪ ಪಶ್ಚಿಮವಾಗಿ_ಇದಕ್ಕಿಂತ ದೊಡ್ಡ ಕೊರಕಲಾಗಿ ಹೋಗಿದೆ (ಚಿಬ್ಬೆ. ೬೮-೦೭). ಮಲಕು ಬೀಳು = ಜೋಡಣೆಯಾಗು : ಮಾತಿಗೆ ಮಾತು ಮಲಕು ಬಿದ್ದು ಬಾಪಣ್ಣ ಮನೆಯಲ್ಲಿ ಉಳಿದ (ಅಕಿಎಕ. ೬೮).

[ದೇ.॥ ತಮಿ. ಮಲುಕ್ಕು ; ತುಳು. ಮಲಕ್ ; ತೆಲು. ಮಲುಗು, ಮಲ್ಕು ]

**ಮಲಕುಗೊಳ್** (ಕ್ರಿ). ಗಂಟಾಗು ; ತಿರಿಚಿಕೊಳ್ಳು : ಮಲಕುಗೊಂಡ ಸುರತ್ನಹಾರಂಗಳನು ಸರಿಸಿಕೆ ತಂದು (ಅನಂತಾ. ೬-೦-೬೩). [ಮಲಕ್ಕು$_2$ + ಕೊಳ್$_1$]

**ಮಲಕುಟ** (ನಾ). ಗುದದ್ವಾರ : ನವುವಣದೇಶದ ನಿಟ್ಟೆಲುವಿಂಗಂ ಆಸರಿಸುಗು ಮಲಕುಟಂ ತಿಕಂ ತಾಮೆಂದುಂ (ಅಭ್ಯಸ. ೬-೪೪). [ ? ]

**ಮಲಗಟ್ಟು, ಮಲಕಟ್ಟು** (ನಾ). ಮಲವಿಸರ್ಜನೆಯಾಗದಿರುವುದು : ಮಲಬದ್ಧತೆ : ಅಜೀರ್ಣ, ಮಲಗಟ್ಟು, ನರಗಳ ಹಿಮ್ಮುರಿಗೆಗಳು (ರಿಫ್ಲೆಕ್ಸಸ್) ಅತಿಯಾಗಬಹುದು (ಶರೀಕೋ. I, ೬೯೪). **ಮಲಕಟ್ಟು** : ಅಜೀರ್ಣ, ಮಲಕಟ್ಟು . . . ಈ ಬೇನೆಯನ್ನು ಕೆರಳಿಸುತ್ತವೆ (ಶರೀಕೋ. I, ೬೯೬). [ಮಲ$_3$ + ಕಟ್ಟು$_2$]

**ಮಲಗದೆ** (ನಾ). ಒಂದು ಬಗೆಯ ಭೂಮಿ : ಬಯಲುಗದೆ ಒಂದಕಂ ಬಿತ್ತುವದು ನಾಲ್ವತ್ತರಲಿ ಮು ೯ ಮನೆ ಮಲಗದೆ ಅನುಭವಸಹಿತ ಯಾ ಬಾಳಗೇಣಿ (ಸೌಇಇ. IX-ii, ೪೩೨-೩೦; 1450). 'ಮಲ್ಲಗದ್ದೆ' ಪಠಾ. [ ? ]

**ಮಲಗಿಸು** 'ಮಲಂಗಿಸು' ನೋ.

**ಮಲಗು$_1$** 'ಮಲಂಗು$_1$' ನೋ.

**ಮಲಗು$_2$** 'ಮಲಂಗು$_2$' ನೋ.

**ಮಲಗು$_3$** (ನಾ). ಒಂದು ಬಗೆಯ ವಿಮಾನು : ಬಿಳಿಚ ಚಿಪ್ಪಲು ಮಲಗು ಹೆಮ್ಮಲಗು . . . ಗಜಿಲುಗಳೆಂಬ ಹೊಳೆವಳಿಯ ವಿಮಾನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹತಕಾ. ೩-೪೬). [ ದೇ.॥ ತಮಿ. ಮಲಜ್ಞು ; ತೆಲು. ಮಲಗು ]

**ಮಲಗುದಾಣ** (ನಾ). ಮಲಗುವ ಸ್ಥಳ,—ಜಾಗ : ಮಲಗುದಾಣಂ ತೊಯ್ದೊರೆಯ ಸಜ್ಜೆ ! (ಶ್ರೀರಾಮಾ. ೬೯-೩೦೦). [ಮಲಗು$_1$ (< ಮಲಂಗು$_1$) + ತಾಣ]

**ಮಲಗುಮಾಡ** (ನಾ). ಮಲಗುವ ಮಹಡಿ,—ಉಪ್ಪರಿಗೆ : ಪೂಗಳಂ ಸಮೆದು ತೋರ್ಪ ಚಾವಡಿ ಮಲಗುಮಾಡಂಗಳು . . . ಕಣ್ಗೆಸೆದುದೇನೆಂಬೆನು (ಕಂಠ. ೪೩-೩೬). [ಮಲಗು$_1$ (< ಮಲಂಗು$_1$) + ಮಾಡ$_1$]

**ಮಲಗುಮೂಡೆ** 'ಮಲಂಗುಮೂಡೆ' ನೋ.

**ಮಲತಂಗಿ, ಬಲತಂಗಿ** (ನಾ). ತನಗಿಂತ ಚಿಕ್ಕವಳಾದ, ತಂದೆಯ ಬೇರೆಯ ಹೆಂಡತಿಯ ಮಗಳು : ಗೋಪಾಲ . . . ರಾಧಕ್ಕನ ಮಲತಂಗಿಯಾದ ಯಮುನೆಗೆ ದೂರದ ಮೈದುನನಾಗಬೇಕು (ಅಜೋಲ. ೬೦). **ಬಲತಂಗಿ** : ಅವಳ ಬಲತಂಗಿ ಇನ್ನೂ ಚಿಕ್ಕವಳು (ರೂಢಿ). [ಮಲ$_1$ + ತಂಗಿ$_1$ (< ತಂಗೆ)]

**ಮಲತಂದೆ** 'ಮಲದಂದೆ' ನೋ.

**ಮಲತಮ್ಮ, ಬಲತಮ್ಮ** (ನಾ). ತನಗಿಂತ ಚಿಕ್ಕವನಾದ, ತಂದೆಯ ಬೇರೆಯ ಹೆಂಡತಿಯ ಮಗ : ಕೃಷ್ಣವರ್ಮನು ಅವನ ಮಲತಮ್ಮನಾಗಿರಬಹುದು (ಕರ್ನಾಟ. ೩೨). **ಬಲತಮ್ಮ** : ಅವನ ಬಲತಮ್ಮ ಒಳ್ಳೆಯ ಹುಡುಗ (ರೂಢಿ). [ಮಲ$_1$ + ತಮ್ಮ]

**ಮಲತಾಯ್** 'ಮಲದಾಯ್' ನೋ.

**ಮಲತಾಯಿ** 'ಮಲದಾಯ್' ನೋ.

**ಮಲತ್ರಯ** (ನಾ). ೧. ಶರೀರದಿಂದ ಹೊರಬೀಳುವ ಸ್ವೇದ, ಮೂತ್ರ ಮತ್ತು ಪುರೀಷಗಳೆಂಬ ಮೂರುಬಗೆಯ ಅಶುಚಿದ್ರವ್ಯಗಳು ; P "ಮಲ-ಸ್ವೇದ, ಮೂತ್ರ, ಪುರೀಷ (ಚರಕ. III, ಮುನ್ನುಡಿ)" (ಶ್ರೀವತ್ಸ. ೩೩೪). ೨. [ವೀಶೈ] ಆಣವ, ಮಾಯಾ ಮತ್ತು ಕಾರ್ಮಿಕವೆಂಬ ಮೂರು ಬಗೆಯ ಮಲಗಳು : ಆಣವ ಮಾಯಾ ಕಾರ್ಮಿಕವೆಂಬ ಮಲತ್ರಯವನುಳಿದು (ಅವಪ.ಶು. ೦೬೯-೨೪೬) ; ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳನೆ ಘಂಜಿಸಿ (ಅಬಂಥೇ. ೬೩-೪೪). [ಸಂ.]

**ಮಲದಂದೆ, ಮಲತಂದೆ** (ನಾ). ಯಾರನ್ನಾದರೂ ದತ್ತುಸ್ವೀಕಾರ ಮಾಡಿಕೊಂಡಿರುವ ವ್ಯಕ್ತಿ ; ಪಾಲಕಪಿತೃ : "ಮ[ಹಾಕಾಂ. ಬ]ಲದಂದೆ ದ್ವಿವಪ್ಪ [ಪ್ರಸ್ಕೃತಿ]ವಕ್ಕುಂ" (ಮಂಗರಾ. ೬೨-೦೨). **ಮಲತಂದೆ:** (ಕ). [ಮಲ$_1$ + ತಂದೆ]

**ಮಲದಾಯ್, ಬಲತಾಯಿ, ಬಲದಾಯಿ, ಮಲತಾಯ್, ಮಲತಾಯಿ, ಮಲದಾಯಿ** (ನಾ). (ತಂದೆಯ) ಎರಡನೆಯ ಅಥವಾ ಬೇರೆಯ ಹೆಂಡತಿ ; ತಾಯಿಯ ಸವತಿ : "ಉಪಮಾತೆಯೆನೆ ಮ[ಹಾಕಾಂ. ಬ]ಲದಾಯೆನಿಕ್ಕುಂ" (ಮಂಗರಾ. ೬೨-೦೨) ; ಹಳೆಯ ವರವನು ಬೇಡಿ ಪಟ್ಟವನುಳುಹಿ ಮಲದಾಯ್ಮಗನನಡವಿಗೆ ಕಳುಹೆ (ತೊರವೆರಾ. ೯-೦೦). **ಬಲತಾಯಿ** : ಅವನ ಬಲತಾಯಿ ತಗಡೂರು ಚೆನ್ನಾಜಮ್ಮಯ್ಯನ ಪುತ್ರರು . . . ಆ ಲಕ್ಷ್ಮೀಕಾಂತಯ್ಯನಂ ಹೊಡೆದು ಹಾಕಿ (ಮಹಾವಂ. I, ೯೬). **ಬಲದಾಯಿ** : ಬಂಜೆ ಬೇನೆಯನಜಿಸಿವಳೀ ಬಲದಾ[ಹಾಕಾಂ. ತಾ]ಯಿ ಮುದ್ದ ಬಲ್ಲಳೆ (ಮಹಾದೇ. ೨. ೦೯೦-೩೦೯). **ಮಲತಾಯ್** : ಮಲತಾಯ್ಗುಳಾತ್ಮಜರೆಂಬುದಿಲ್ಲದೆ ಸರ್ವರೆಳಸಿ ನಿನ್ನೊಡನಿರುತಿಹರ್ಮೆ (ಭರತ. ೯೩-೦೨೨). **ಮಲತಾಯಿ** : ಬೈದು ಮಲತಾಯಿಯಿಡುವಿಗೆ ನೂಕಲು (ಭೀಂಡ. ೨-೬೦-೦); ಮಂಗಲೇಶನು ದುರ್ಲಭದೇವಿಯನ್ನು ಸ್ವಗುರುಪತ್ನೀ ಎಂದು ಕರೆದುದರಿಂದ ಆಕೆಯು ಅವನ ಮಲತಾಯಿಯಾಗಿರಬಹುದು (ಕರ್ನಾಟ. ೩೨) ; ತಂದರಲ್ಲ ನನಗೆ ಸವತಿಯನ್ನೂ ಮಕ್ಕಳಿಗೆ ಮಲತಾಯಿಯನ್ನೂ (ಶಂಕರಾಮ. ೬೦). **ಮಲದಾಯಿ** : ಮಲದಾಯಿ ಮನೆ ಹೊಲಿವಡಿಸಲೆಂದಾ ನಿನ್ನ ಹೆತ್ತನೆ (ಕೌಶಿರಾ. ೩-೩೬).

**ಮಲತಾಯಿಧೋರಣೆ** = (ಅಲಂ) ಪಕ್ಷಪಾತ ; ವಂಚನೆ : ಈ ಕಚೇರಿಯ ವಿಭಾಗಕ್ಕೆ ಸಂಬಂಧಿಸಿದ ಮುಖ್ಯಸಂಸ್ಥೆ ಮೊದಲಿನಿಂದಲೂ ಈ ವಿಭಾಗವನ್ನು ಮಲತಾಯಿಧೋರಣೆಯಿಂದಲೇ ನಡೆಸಿಕೊಂಡಿದೆ (ರೂಢಿ). [ ಮಲ$_1$ + ತಾಯ್ ]

**ಮಲದಾಯಿ** 'ಮಲದಾಯ್' ನೋ.

**ಮಲದೇಹಿ** (ನಾ). ಕೊಳೆಯಾದ ದೇಹವುಳ್ಳವನು : ನಿನಗೆ ಮಜ್ಜನವ ಮಾಡುವಲ್ಲಿ ನಾನು ಮಲದೇಹಿ ನೀನು ನಿರ್ಮಲದೇಹಿ (ಪೋಲವಾ.೩೬-೦೫೦). [ ಸಂ. ಮಲದೇಹಿನ್ ]

**ಮಲಧರ** (ನಾ). [ಜೈನ] ಸ್ನಾನ ಮಾಡದೆ ದೇಹದಲ್ಲಿ ಕೊಳೆಯನ್ನು ಹೊಂದಿರುವ ಸಂನ್ಯಾಸಿ : "ಜೈನರ್ ದಿಗಂಬರರ್ ಜೀವಕರ್ ಮಲಧರರ್ ತಾಪಸಜೀವರ್ ಕ್ಷಪಣರೆನೆ ಗುರುಗಳಕ್ಕು" (ಮಂಗರಾ.೬೬-೦). [ಸಂ.]

**ಮಲಧಾರಿ** (ನಾ).=ಮಲಧರ : " ನಗ್ನಾಟಃ . . . ಮಲಧಾರೀ. . . ಸಾಧುಃ— ಈ ೧೦ ಸವಣನ ಪೆಸರ್ " (ಶಲಾಮು. ೩೬-೦೯೯) ; ಎಮಗೆ ಮಲಧಾರಿಸಿದ್ಧಾಂತಮುನೀಶ್ವರಚರಣಸರಸೀಜಾತಂ . . . ಜಯನಂದಿಮುನಿ ಕೃಮಕಮಳಮಿಮಗೆ ಬೋಧೋದಯಮಂ (ಅದಿಪು. ೦-೦೩) ; ತಜಿಟು ದಲೆಗಳ . . . ತಟ್ಟುಗಳ ಹಗರಣಿಗರೊ ಎನಲು ಮಲಧಾರಿಗಳು ಗಜಬಜಿಸಿ ನೆರೆವುತ್ತ (ಬಸಪು. ೩೦-೩೩). [ ಸಂ. ಮಲಧಾರಿನ್ ]

**ಮಲನಾಗರು** 'ಮಲರೋಗ' ನೋ.

**ಮಲನೀರು** 'ಮೊಲೆನೀರು' ನೋ.

**ಮಲನೂರ್** (ನಾ). ಒಂದು ಊರಿನ ಹೆಸರು : ಶ್ರೀ ಮಲನೂರ ಪಟ್ಟನಿಗುರವಡಿಗಳ ಶಿಷ್ಯರ್ ಉಗ್ರಸೇನಗುರವಡಿಗಳ್ ಒನ್ದು ತಿಙ್ಗಳ್ ಸಂನ್ಯಾಸನಂ ನೋನ್ತು ಮುಡಿಪ್ಪಿದಾರ್ (ಎಕ. II, ೨೩-೦ ; ಕ. 700). [ ? + ಊರ್ ]

**ಮಲಪ** (ನಾ). ಒಂದು ಬಗೆಯ ವಾದ್ಯಪ್ರಬಂಧ ; ವಾದ್ಯಗಳ ವಾದನದಲ್ಲಿ ಬರುವ ಒಂದು ಬಗೆಯ ಸಂಯೋಜನೆ : ಕಪುತಂದೆಂಕಾರಂ

ಮಲಪವದೆ[ಶಾಶಾಂ·ಫೆ] ತುಡುಂಕೊತ್ತು ಜೋತೆಯಂತರಿ ಜತಿ ರಿಗ್ಗವಣೆ ಪಹರಣೆಯೆನಿಪ್ಪೀ ಪ್ರಬಂಧಮಂ (?) ಶ್ರೋತ್ರಬಂಧುರೆನೆ ಬಾಜಿಸಿದರ್ (ಶಾರ್ಙ್ಗಪು· ೧೨-೨೦). [ಸಂ.]

**ಮಲಪಾಶ** (ನಾ). ಪಂಚಪಾಶಗಳಲ್ಲಿ ಒಂದು : ಪಾಶಪದಾರ್ಥವು . . . ಮಲಪಾಶ ಮಾಯಾಪಾಶ ಕರ್ಮಪಾಶ ಬಿಂದುಪಾಶ ತಿರೋಧಾನ ಪಾಶಮೆಂದು ಪಂಚಪ್ರಕಾರಮಾಗಿರ್ಪುದು (ಶಿವೇಶ· ೦೬೩). [ಸಂ.]

**ಮಲಪು$_1$** (ನಾ). ಕೆಸರು : ಬಾವಿಗೋ ಕೆರೆಗೋ ಒಂದು ಪಾತ್ರವಾಗಲಿ ವಿಶಿಷ್ಟವಾದೊಂದು ವಸ್ತುವಾಗಲಿ ಬಿದ್ದಿರುವಾಗ ಅನ್ವೇಷಣಕಾರನು ಅದಕ್ಕಿಳಿಯುತ್ತಾನೆ. ಮೊದಲು 'ಮಲಪಿ' (ಕೆಸರು)ನೆಡೆಯಲ್ಲಿ ಕಾಲ ಬೆರಳಿನಿಂದ 'ಪರಡಿ' ಅದರ ಗುರಿಯನ್ನು ಪ್ರತೀಕ್ಷಿಸುತ್ತಾನೆ (ನಾಡೋಜ. ೨೩೩). [←ತುಳು. ಮಲಂಪು, ಮೊಲಂಪು]

**ಮಲಪು$_2$**, ಮಲೆಪು$_2$ (ನಾ). = ಮಲಪ : ಪಾಡು ಪದಂ ಪರಿವಡಿ ಪೊತ್ತು ಕೌತಂ ಮಲಪೆಂಬೀ ಮಾರ್ಗಶಬ್ದಂಗಳುಂ . . . ಜತಿಜೋಕೆಯೆಂಬ ದೇಸೆಯ ಶಬ್ದಂಗಳಸೆಯೆ ಬಾಜಿಸುತ್ತಿರೆಯುಂ (ಶಾಂತೀಶ್ವ. ೦೬-೬೬ ವ) ; ಪಾಡುಗಳ ನಡಪು ಬೀಳದಂತೆ ಸುಡಿಸಿ ಮಲಪು ರಿಗ್ಗವಣೆ ಒಡ್ಡಾಸರ ಪಡಿಸಣ ಚಮತ್ಕಾರ ಶಬ್ದ ಶೃಂಗಾರ ಝೇಂಕಾರಂ ಮೊದಲಾದ ವಾದ್ಯಪ್ರಬಂಧಗಳಲ್ಲಿ (ವಿರೂಪಾ· ೬೦ ವ). **ಮಲೆಪು$_2$** : ಮಲೆಪು ಪಬ್ಬಿರಣೆ ಕೌತುಕಳಿಕೋತ್ರರಂಗಳಿಂ ಕೌತುಕದ ಬಾಜನೆಯೊಳೆಸಗಿದುವೆನಿಸಿ ಬಾಜಿಸುತ್ತಿರೆಯುಂ (ಶಾಂತೀಶ್ವ· ೬-೯೩ ವ). [<ಸಂ. ಮಲಪ. /ತಮಿ. ಮಲ್ಲೆಪ್ಪು = ಒಂದು ಬಗೆಯ ನೃತ್ಯ; ತೆಲು. ಮಲಪು = ನರ್ತನ]

**ಮಲಬತ್ರ** (ನಾ). (?) : ಈ ಸಂತೆಯ ಸ್ಥಳಗಳಿಂದ ಹೇರಳವಾಗಿ ಮೆಣಸನ್ನೂ ಮಲಬತ್ರವನ್ನೂ (ವೀಳೆಯದೆಲೆ ?) ತೆಗೆದುಕೊಂಡು ಹೋಗಲು ದೊಡ್ಡ ದೊಡ್ಡ ಹಡಗುಗಳು ಬರುತ್ತವೆ (ಶ್ರವಾಇ. I, ೯೯). P 'ತವಮಾಲ' ಮತ್ತು 'ತಾಂಬೂಲ' ಎಂಬ ಶಬ್ದಗಳ ಉಚ್ಚಾರಣೆಯಲ್ಲಿ ಪಾಶ್ಚಾತ್ಯರಿಗೆ ಉಂಟಾದ ಗೊಂದಲದಿಂದ ಈ ಶಬ್ದವು ಬಂದಿದೆ. [←ಇಂ. Malabathrum]

**ಮಲಬದ್ಧತೆ** (ನಾ). ಸರಿಯಾಗಿ ಮಲವಿಸರ್ಜನೆಯಾಗದಿರುವ ರೋಗ : ನಾರು ಹೆಚ್ಚಾಗಿರುವ ಹಣ್ಣುಹಂಪಲು . . . ಸೇವಿಸುವುದರಿಂದ ಗರ್ಭಿಣಿಗೆ ಮಲಬದ್ಧತೆ ತಪ್ಪುತ್ತದೆ (ಗೃಹಂ· ೯೯) : ವೀರ್ಯ(ಧಾತು)ನಾಶದಿಂದ ರಕ್ತವು ಕ್ಷಯಿಸುವುದು . . . ಈ ಮೇರೆಗೆ ಮಲಬದ್ಧತೆಯೆಂಬ ದುರ್ಧರ ರೋಗವು ಬಂದು ಸೇರುವುದು (ಶ್ರಿಹೃಜೀ· ೦೯೩). [ಸಂ. ಮಲಬದ್ಧತಾ]

**ಮಲಬದ್ಧರೋಗ** (ನಾ). ಸರಿಯಾಗಿ ಮಲವಿಸರ್ಜನೆಯಾಗದಿರುವ ಒಂದು ಬಗೆಯ ರೋಗ : ಕೊಡಸಿನೆಲೆಯ ಗುಣ . . . ವಿಶೇಷವಾದ ಮಲಬದ್ಧರೋಗ, ಕುಷ್ಠರೋಗ ಮೊದಲಾದವುಗಳನ್ನು . . . ನಾಶ ಮಾಡುವುದು (ಸಕಪ್ರ. ೯೬). [ಸಂ.]

**ಮಲಬಾಧೆ** (ನಾ). ೧. ಮಲವಿಸರ್ಜನೆ ಮಾಡಬೇಕೆಂಬ ದೈಹಿಕ ಸೂಚನೆ. ೨. ಮಲವಿಸರ್ಜನೆ : ಈ ಮಧ್ಯೆ ಗುರುವಿಗೆ ಮಲಬಾಧೆಗೆ ಅವಸರವಾಯಿತು (ಶೀತಿಜಂ· IV, ೨೯). [ಸಂ. ಮಲಬಾಧಾ]

**ಮಲಮಗ** (ನಾ). ಪುರುಷನ ಬೇರೆಬೇರೆ ಪತ್ನಿಯರ ಮಕ್ಕಳಲ್ಲಿ ಯಾರಾದರೂ ಒಬ್ಬ.

**ಮಲಮಕ್ಕಳು** (ಬಹುವ) : ಸಾವಿರದ ಮೇಲೆ ಐನೂರ ಕೊಟ್ಟರು ಮಲಮಕ್ಕಳಿರುವ ಮನೆ ಬೇಡ (ಹಳ್ಳಯು. ೮೯) ; ಕುಟುಂಬದೊಳಗೆ ಒಬ್ಬರಿಗೊಬ್ಬರು ಅಸೂಯೆಪಡುವವರು ಮಲತಾಯಿ ಮಲಮಕ್ಕಳು (ಕಶ್ವಜಾ· ೦೦೯). [ಮಲ$_1$ + ಮಗ]

**ಮಲಮಗಳು** (ನಾ). ಪುರುಷನ ಬೇರೆಬೇರೆ ಪತ್ನಿಯರ ಮಕ್ಕಳಲ್ಲಿ ಯಾರಾದರೂ ಒಬ್ಬ ಮಗಳು ; ಬಿಲಮಗಳು : ಉಪವಾಸ ಕೆಡವಿ ಮಲಮಗಳ್ನ ಮನ್ಯಾಗ ಕೊಲ್ಲತಿದೀ ಅಂತ ಆ ಹುಡಿಗೀ ಅಪ್ಪ ಅಕಿನ್ನ ತಂದು ನಮ್ಮ ಮನೀಗೆ ಅಟ್ಟಿದ (ಕವಜೀ· ೨೦೯). [ಮಲ$_1$ + ಮಗಳು (<ಮಗಳ್)]

**ಮಲಮಲ$_1$** 'ಮಮ್ಮಲಂ' ನೋ.

**ಮಲಮಲ$_2$** 'ಮಲಮಲಿ' ನೋ.

**ಮಲಮಲಂ** 'ಮಮ್ಮಲಂ' ನೋ.

**ಮಲಮಲನೆ** 'ಮಮ್ಮಲನೆ' ನೋ.

**ಮಲಮಲಿ**, ಮಲಮಲ$_2$, ಮಲಮಲ್ಲು (ನಾ). ಒಂದು ಬಗೆಯ ನವಿರಾದ ಬಿಳಿಯ ಬಟ್ಟೆ : ಮಲ್ಲು ; ಮಸ್ಲಿನ್‌ಬಟ್ಟೆ : ಬಂಗಾಳ ದೇಶದೊಳಗಿನ ಡಾಕ ಎಂಬ ಪಟ್ಟಣದಲ್ಲಿ ಹುಟ್ಟುವ ಜಿನುಗಾದ ಮಲಮಲಿಯು ದಿಗ್ದೇಶಕ್ಕೆ ಹೆಸರಾಗಿದೆ (ಮುಂಬಯಿ· ೪-೨೬); ಗೌಡರು . . . ಬಿಳಿಯ ಮಲಮಲಿಯ ಅಂಗಿಯೊಂದನ್ನು ಹಾಕಿಕೊಂಡಿದ್ದಾರೆ (ವಿಪಿಜಾ· I, ೨೩೯). **ಮಲಮಲ$_2$** : ಬಂಗಾಲದ ಮಲಮಲಬಟ್ಟೆಗಳು ದೇಶದಲ್ಲಿ ಸರ್ವೋತ್ಕೃಷ್ಟವಾಗಿ ಮೆರೆಯುತ್ತಿದ್ದವು (ಬಾದಿಶಾ. ೨೦). **ಮಲಮಲ್ಲು** : ಉಣ್ಣೆಯ, ರೇಶಿಮೆಯ, ಮಲಮಲ್ಲಿನ ಸುತ್ತೂ ಹರವಿಕೊಳ್ಳುವ ಅಂಗಿಗಳು . . . ಕಣ್ಮುಂದೆ ಬಂದುಬಂದು ಹೋದವು (ಇಶ್ಯ. ೦೬೩). [← ಹಿಂ. ಮರಾ. ಮಲ್‌ಮಲ್]

**ಮಲಮಲ್ಲು** 'ಮಲಮಲಿ' ನೋ.

**ಮಲಮಜುಗು** (ಕ್ರಿ). ಬಹಳವಾಗಿ ಕನಿಕರಿಸು.— ಮರುಗು : ಬುಡಿಯೆರಂ ಪೊರ್ದಿದನಪ್ಪೊಡೆ ನಮಗಲ್ಲನೆಂದು ಮನದೊಳ್ ಮಲಮಜುಗಿ (ಧರ್ಮಾಮೃ. ೮-೩೩); ಸಭಾಜನವ್ರಾದೆ ಮಲಮಜುಗಲಾಯೆಂದಳು (ಶಾಪಶಂ. ೮-೩೩). [< ಮಮ್ಮಲ + ಮಜುಗು]

**ಮಲಮಾತಂಗಿ** (ನಾ). ಕೆಂಪುಹಣ್ಣುಗಳನ್ನು ಬಿಡುವ ಒಂದು ಬಗೆಯ ಪೊದೆ : (+). [?. / ತೆಲು. ಮರುಲುಮಾತಂಗಿ, ಮಲ್ಯ ಮಾತಂಗಿ = ಉಮ್ಮತ್ತ]

**ಮಲಮಾಸ** (ನಾ). ರವಿಸಂಕ್ರಮಣ ಬರದಿರುವ ತಿಂಗಳು : ಅಧಿಕ ಮಾಸ ; P ಧಾರ್ಮಿಕಕ್ರಿಯೆಗಳನ್ನು ಆಚರಿಸದಿರುವ ಅಶುಭವಾದ ತಿಂಗಳು : ಅಶುಭಮಾಸ. [ಸಂ.]

**ಮಲಯ**, ಮಳಯ (ನಾ). ೧. ಬೆಟ್ಟ; ಪರ್ವತ : "ಮಲಯಃ, ಮಲಯಃ — ಈ ೨ ಬೆಟ್ಟ" (ಕಾಶಕ್ಕ. ೦೦೩). ೨. ಭಾರತದೇಶದ ದಕ್ಷಿಣದಿಕ್ಕಿನಲ್ಲಿರುವ, ಶ್ರೀಗಂಧದ ಮರಗಳಿಂದ ಆವೃತವಾಗಿರುವ ಬೆಟ್ಟದ ಸಾಲು ; P ಇದು ಜಂಬೂದ್ವೀಪದ ಸಪ್ತಕುಲಪರ್ವತಗಳಲ್ಲಿ ಒಂದು : ಮಲಯಮೇಖಲೆಯಂತೆ ಚಂದನಪಲ್ಲವಾವತಂಸೆಯುಂ . . . ಎನಿಸಿದೆಟ್ಜಂಜಪ್ಪನೆಯ ರೂಪಾತಿಶಯಮನೆಮೆಯಿಕ್ಕದೆ ನೋಡುತ್ತಂ (ಕಾದಂಪೂ· ೯೯) ; ಮಲಯಕ್ಷ್ಮಾಧರಮೇಖಲಾಪರಿಗತಶ್ರೀಖಂಡಷಂಡಂಗಳೊಳ್ ನಲವಿಂದೊಂದಿ ಬಟಿಲ್ದ ಭೋಗಿಮಿಥುನಂಗಳ್ (ಚಂದ್ರಕ. ೬-೪೦); ಚಂದನವಲ್ಲದೆ ಮಿಕ್ಕಿನ ತರುಗಳಿಲ್ಲದ ಮಲಯಭೂಧರದ ಪೆಂಪೆನಿತು (ಬಸಪು. ೧೯-೨೮). ೩. ಮಲಯಪರ್ವತದ ಸಮೀಪದ ಒಂದು ದೇಶದ ಹೆಸರು ; ಮಲಬಾರುಪ್ರಾಂತ ; ಮಲಯಾಳಸೀಮೆ : ಪಾಂಡ್ಯ ತುಳುವ ಮಲಯ ಮಲಯಾಳ . . . ಕೇರಳ ಮುಖಪಾರ ದೇಶಂಗಳೊಳೆಸೆವ ಜಂಗಮವು (ಬಸಪು· ೬-೦೮). **ಮಳಯ** : ೨. ಮಳಯೋತ್ತುಂಗಾಗ್ರದಿಂ ತೆಂಬೆಲರ್ವೆಲರಿಂ . . . ವಸಂತೋಚ್ಚಳಿತಂ ಕಂದರ್ಪನೊಪ್ಪಂಬಡೆವ ತೆಜದಿನಾ ಮಂತ್ರಿಮಾಣಿಕ್ಯನಿಂ ಭೂತಳದೊಳ್ ಸಂಸೇವ್ಯನಾದಂ ಸರಸಕೃತಿಕಲಾನರ್ತಕೀನೃತ್ಯರಂಗಂ (ಅಜಾವ.೦-೦೦೮); ಮಳಯಾಯಾತಸಮೀರಸಂಚಳಲತಾಸಂತಾನಕಂ ತಮ್ಮರಲ್ಗಳನೊಂದೊಂದಟ ಮೇಲೆ ಕೆಂದಳಿರ್ಗಳಿಂ ಸೂಸಿತ್ತೆನಲ್ ಕೇಳಿಸಂಚಳೆಯರ್ ತುಳ್ಕಿದರೊರ್ವ

ರೊರ್ವರೊಳಶಿಸ್ವಚ್ಛಾಂಬುವಂ (ಶಗಪ. ೧೪-೯೭). ೩. ಮಳಯಾಂಧ್ರಾರ್ಬುದ ಮಾಗಧ . . . ಸಿಂಹಳದೇಶಾಧಿಪರಂ ಭಯಂಗೊಳಿಸಿದಂ ವಿಕ್ರಾಂತದಿಂ ರೇಚಿಗಂ (ಶುದಶ. ೦-೦೦) ; ಮಳಯ ಮಹೇಂದ್ರ ವಿಂಧ್ಯ . . . ನಿರ್ಮಳ ನಿಷಧಪ್ರದೇಶದ ಮಹೀಭುಜರಂ ಬರವೇಟ್ಟು (ಪಳತಂ. ೨೨೩). P ಇದು ದ್ರಾವಿಡಶಬ್ದವಾಗಿದ್ದು ಪ್ರಾಕೃತದ ಮೂಲಕ ಸಂಸ್ಕೃತಕ್ಕೆ ಹೋಗಿರಬೇಕೆಂದು ಭಾಷಾವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ.

[ಸಂ.]

**ಮಲಯಜ,** ಮಳಯಜ (ನಾ). ೧. ಮಲಯಪರ್ವತಪ್ರದೇಶದಲ್ಲಿ ಹುಟ್ಟುವ ಮರ ; ಶ್ರೀಗಂಧದ ಮರ ; ಚಂದನವೃಕ್ಷ. ೨. ಶ್ರೀಗಂಧ; ಚಂದನ : "ಮಲಯಜಮಿರದದು ಬಾವನ್ನಮೆಂದು ಸಿರಿಕಂಡಮೆನಲ್" (ಕಬಕಂ. ೩೩) ; ಕಾಡ ತರುವಿಗೆ ಪರಮಗಂಧವನೂಡದೇ ಮಲಯಜವು (ಕೌಶಿರಾ. ೩೬-೯೬); ಮಲಯಜದ ಮರದೊಳಗೆ ಸಲೆ ಗಂಧವಿಪ್ಪಂತೆ (ಹರಿಶ್ಚ. ೦೩೯). ೩. ಶ್ರೀಗಂಧದ ಕೊರಡು ; ಚಂದನದ ಕೊರಡು : ಕರಿದಾದೊಡೆ ಕತ್ತುರಿಯಂ ಮುರುಡಾದೊಡೆ ಮಲಯಜಂಗಳಂ . . . ಇಟ್ಟಿಕೆಯ್ವರೆ ಮರುಳೇ (ಮುಕೋಶ. ೨-೯೨). **ಮಳಯಜ :** ೧. "ಚಂದನಂ, ಮಳಯಜಂ, ಶ್ರೀಖಂಡ(ಃ)ಂ, ರೋಹಿಣೇದ್ರುಮಃ — ಈ ೪ ಸಿರಿಗಂಧಂ" (ಶಬ್ದಮು. ೯೯-೯೯೦). ೪. ಶ್ರೀಗಂಧದ ಕೊರಡನ್ನು ತೇದು ತೆಗೆದ ಗಂಧ : ವಾರಿಜ ಮಳಯಜ ಮಳಯಸಮೀರಣಂ . . . ಬಾರಿಸಲುಜಿವೆ ದಲವನ ದಾಹಜ್ವರಮಂ (ಆದಿಪು. ೨-೦೩) ; ಮಳಯಜಮಿಶ್ರ ತೀರ್ಥಜಲಧಾರೆಗಳಿಂ ಶಶಿಕಾಂತಕಾಂತಮಂಗಳಕಲಶಾಂಶುಧಾರೆಗಳನಿರ್ವಾಡಿಸಿತ್ತು ವಿವಾಹಮುಖ್ಯಮಂಗಳಸವನಂ ವಿಳಾಸವತಿ ಸೀತೆಗೆ (ಕಂರಾಪು. ೩-೩೯) ; ಮಳಯಜದ ಮೊಲೆಯ ಕುಂಕುಮದಳಕದ ಕತ್ತುರಿಯ ಬಣ್ಣವಣ್ಣಿಗೆ ಕೊಳದೊಳ್ ತಳರ್ದಿರೆ ಜಳರುಹಮುಖಿಯರ್ ಜಳಕೇಳಿಯ ನೆವದಿಂ ದೂಳಿಚಿತ್ರಂ ಬರೆದರ್ (ಮುಕೋಶ. ೪-೬). [ಸಂ.]

**ಮಲಯರುಹ,** ಮಳಯರುಹ (ನಾ). ೧. ಶ್ರೀಗಂಧದ ಮರ ; ಚಂದನವೃಕ್ಷ : ಹರಿಣಧರನೊಳ್ವಿಷಂ ಮಲಯರುಹದೊಳನಲಾರ್ಚಿ ನಿನ್ನ ವದನೋದರದೊಳ್ ಪರುಷತರವಚನಮಪ್ಪುದು ದುರವಾಪಂ (ಕಬರಾ. ೩-೬೯) ; ತುರಗಗಳಂ ಕಾನನಮಲಯರುಹಗತಂ . . . ಸೂಕರವದನಂ ಕರ್ಕಟಾದಿಮದ್ರೇಕ್ಕಾಣಂ (ಜಾತಶ. ೦೯-೦೦). **ಮಳಯರುಹ :** ೨. ಚಂದನದ ಕೊರಡು : ಮಳಯರುಹಂ ಬೇಳ್ಪನಿತುಂ ತಿಳಿಯಲ್ಕೊಲ ಘಾಂಡಮೂರ್ತಿ ನಿನ್ನಯ ಮೊಳಕೈಯೊಳಗಿದೆ ತೇದರ್ಪಿಸು (ಕೃಷ್ಣಂ. ೩೪-೦೦). ೩. ತೇದ ಚಂದನ ; ಚಂದನಗಂಧ : ಮಳಯರುಹದ ಕರ್ಪೂರದ ಪಳಕಿನ ಪನಿನೀರ ಕದಲಿದೆಳದಿಜಿಸಿಲ ತಣ್ಗಳಸದ ಶಿಳಿನೀರ್ಗಳ ಶೀತಳತೆಯಿನವನಿಪನನಾಪ್ತರುಜ್ಜೀವಿಸಿದರ್ (ಅನಂತಪು. ೦೦-೩೬). [ಸಂ.]

**ಮಲಯಾಚಲ** (ನಾ). = ಮಲಯ ೨ : "ಮಲಯಾಚಲಮಿನ್ನುಂ . . . ಬಾವನ್ನಮೆಟ್ಟುಮೆನಲದು ಸಲ್ಗುಂ" (ಕಬಕಂ. ೫೦) ; ಹೇಗೆ ಮಲಯಾಚಲ ಗಂಧಸಂಸರ್ಗದೆ ಚಂದನವಪ್ಪುದಿಂಧನವು (ಇಂಜಾಶ. ೭೬-೬೯). [ಸಂ.]

**ಮಲಯಾನಿಲ,** ಮಳಯಾನಿಲ, ಮಳಯಾನಿಳ (ನಾ). ಮಲಯಪರ್ವತದಿಂದ ಬೀಸುವ ಸುಗಂಧಪೂರಿತವಾದ ತಂಗಾಳಿ : ಮಲಯಾನಿಲನುಂ ಮಲಯಜಜಲಮುಂ ಶಶಿಕಿರಣಮುಂ ವಿಯೋಗಿಗಳೆರ್ದೆಯೊಳ್ಕಿಲಸಿದರ್ಪವು (ಕಬರಾ. ೩-೩೨) ; ನೋಟ್ಟಂ ಬೆಲೆಗೊಟ್ಟು ತಾರ ಮಧುವಂ ಮಲಯಾನಿಲನಂ ಮನೋಜನಂ ಕೌಮುದಿಯಂ (ಅರ್ಜಪು. ೦-೪೩) ; ಮಾರಿ ಮಲಯಾನಿಲಂ ನವನೀರಜವನಮೆಂಬ ಕೆಂಡದೊಳ್ ದಂಡನಮಸ್ಕಾರಂ ಬಂದಪಂ (ಮುಕೋಶ. ೦-೩೬). **ಮಳಯಾನಿಲ:** ಮಳಯಾನಿಲನಿಂದಲುಗುವ ಸೆಳೆಗೊಂಬಿನ ಪಣ್ಣನಂತುಮಿಂತುಂ ಕರ್ದುಕಲ್ಕಳವಳಿಪರಗಿಳಿ ಪೋಲ್ಕುದು ಮುಳಿದೋಪಳ ವದನಚುಂಬನೋತ್ಸುಕವಿಟನಂ (ಸೂಕ್ತಿಸು. ೦೦-೩೯). **ಮಳಯಾನಿಳ :** ತೊಳಪೆಳವೆಜಿಯುಂ ಮೊರೆವಳಿಕುಳಂಗಳುಂ ಮೆಲ್ಲನೆಸಪ ಮಳಯಾನಿಳನುಂ ಮುಳಿಸಂ ಕಟಲ್ಚಿ ಕಳೆದುವು . . . ಕಾಮಿಗಳಾ (ಕಬರಾ. ೨-೭೦) ; ಏನಾಡಿಸಿದನೋ ಮಳಯಾನಿಳನರ್ತಕಂ ಲತಾನರ್ತಕಿಯಂ (ಆದಿಪು. ೦೦-೯೦). [ಸಂ.]

**ಮಲಯಾಳ** 'ಮಲೆಯಾಳ' ನೋ.

**ಮಲಯೋದ್ಭವ,** ಮಳಯೋದ್ಭವ (ನಾ). = ಮಲಯರುಹ ೩ : ಅಂತು ತನ್ನೋರೆಗಳ್ವೆರಸು ದಾಘುಮ್ಮಜಿದೋಲಾಡುವಲ್ಲಿ . . . ಬೆಳರ್ವಟ್ಟು ನಿಂದುದೊಂದೆಡೆ ಮಲಯೋದ್ಭವಪ್ರಸರದಿಂ . . . ಸರಸೀವಿಭಾಗದೊಳ್ (ಶಾಂತಿಪು. ೬-೨೯). **ಮಳಯೋದ್ಭವ :** ಮಳಯೋದ್ಭವ ಶೈಲೋದ್ಭವ ಸಲಿಲಂ ಸಿತಮಗರು ಕುಷ್ಠಚೂರ್ಣದಿನಿಂಬಾಗಿರೆ ಮಾಡಿ ಬತ್ತಿಯಂ ಸೊಡರ್ವೆಳಗುಗೆ ಮನೆಯೊಳಗೆ ಕಂಪು ಪೊಂಪುಟಿಯಕ್ಕುಂ (ಲೋಕೋಪ. ೭-೩೪); ವಿದಳಿತಪುಷ್ಪಮಾಲಿಕೆಗಳಿಂ ಮಳಯೋದ್ಭವದಿಂ ತೊಳಪ್ಪ ರನ್ನದ ತೊಡವಿಂದಳಂಕರಿಸಿ . . . ಬಾಯಿನಂಗಳಂ ಮುದದೊದವಿಂದಮಿತ್ತು ಮೆಚ್ಚಿದರ್ (ಚಂದ್ರಪು. ೭-೮೦). [ಸಂ.]

**ಮಲಯ್ಯ** (ನಾ). ಒಬ್ಬಾತನ ಹೆಸರು : ಶ್ರೀನಾಗತಿಯಮ್ಮನ ಮಗಂ ಮಲಯ್ಯಂ (ಎಕ. IV (R). ಎಳಂದೂ, ೦೮೭-೨; 1000). [ಮಲೆ$_{?}$ + ಅಯ್ಯ$_{1}$]

**ಮಲರ್$_{1}$** 'ಮರಲ್$_{1}$' ನೋ.

**ಮಲರ್$_{2}$,** ಮರಲ್$_{2}$, ಮಲರ್ು$_{1}$ (ಕ್ರಿ). ೧. ಹೂವು ಅರಳು, — ವಿಕಾಸವಾಗು : ಫುಲ್ಲಶರಂಗಿಸುವೆಡೆಗಿವೆ ನಲ್ಲಂಬುಗಳೆನಿಸಿ ತುಜಿಗಿ ಮಲರ್ದಲರ್ದೆಸೆವೀ ಮೊಲ್ಲೆಯುಮೊಲಿಸಿದ ನಲ್ಲರ ಲಲ್ಲೆಯುಮೊಂದಿರ ಮನಮುಮಂ ಸೋಲಿಸದೇ (ಆದಿಪು. ೦೨-೦೦೦); ತನ್ನಂ ತಾನಾಜಿದೊಯ್ಯನೆ ಕಣ್ಮಲರ್ಮಲರೆ ನೃಪನಂ ಭೋಂಕಲ್ ಮೇಲ್ವಾಯ್ದು ತಳ್ತಿರದಪ್ಪಿದಳ್ (ಕಾದಂಬ. ೭೮೭) ; ವದನವು ಮಲರ್ದ ಹೊಂದಾವರೆಯು (ಜಾಗಪ. ೦೨-೩೬). **ಮರಲ್$_{2}$ :** ೧. ಅದಿರ್ವುರ್ತ್ತೆ ಮರಲ್ದರಲ್ದ ಮಲ್ಲಿಗೆ ನನೆಗಚ್ಚ ಕಾಕಳಿಯೊಳಾಣತಿಗೆಯ್ಯ ಮದಾಳಿ ಪೋ ಪು[ಗ]ಲ್ವು[ಗ]ಲೆನುತಿರ್ಪ ಪಕ್ಕಿ ಮಾನಮಂ ಕವರುತ್ತಿರೆ (ಕಂಪಥಾ. ೩-೩೫) ; ಎಳೆಯೊಳ್ಪಳೆದಡರ್ದು ದಿಶಾವಳಿಯಂ ದಾಂಗುಡಿ ಮರಲ್ದು ಪಲ್ಲವಿಸಿ (ಎಕ. VII, ಶಿಕಾಂ. ೦೫೦-೪೭ : 1047). ೨. ಉಬ್ಬು ; ಉತ್ಸಾಹಗೊಳ್ಳು : ದಿವ್ಯಮುನಿಯುಂ ಮೃಗಮಾಗಿ ಮರಲ್ದು ಕೂಡೆ (ಕಂಪಥಾ. ೦-೨೦೦) ; ಮುಂಡಾಡುಗೆ ಮುದ್ದಿಸುಗೆ ಮರಲ್ದಪ್ಪುಗೆ ಕೆಯ್‌ಕೊಂಡೀ ಕಾವ್ಯಮಂ (ಗಿಂಕ.೦-೦೦). **ಮಲರ್ು$_{1}$ :** ೧. ಅಃ ಇಂತೆ ನಾನರಳದರೆ ಧನ್ಯನಲ್ತೆ ? ಬೆಳಕು ಮೂಡೆ ಮಲರಿ, ಮುಳುಗೆ ಮುಗುಳಿ (ಅಪಿಕೇ. ೨೩-೦೩) ; ಇದ್ದಂತೆ ಇರುವಿಪ್ಪುದಪ್ಪುದಾಯಿತು ಮಲರಿ (ಕರುಶ್ರಾ. ೭-೦೨). [ದೇ.॥ ತಮಿ. ಮಲರ್ ; ಮಲ. ಮಲರು ; ಬ್ರಾಹೂಈ. ಮಲಿಂಗ್]

**ಮಲರ್$_{3}$,** ಮರಲ್$_{3}$, ಮಲರ್ು$_{2}$ (ನಾ). ಹೂವು ; ಪುಷ್ಪ : "ಮಲರೆಂದು ಮೇಣರಲೆಂದು ಪುಷ್ಪಕ್ಕೆ ನಾಮಮಕ್ಕುಂ" (ಕಬ್ಬಿಕೈ. ೨೦) ; ಗಲುಪುವ ಗಿಳಿ ಬಗ್ಗಿಪ ಪಿಕ ಮಲರೊಳ್ ಮೊರೆವಳಿ . . . ಸುಟುವ ಹಂಸೆಯುಮಳುಂಬಮೆನೆ ರಯ್ಯಮೆಂತುಮಾರಯ್ಯೆ ಬನಂ (ಶೇಬಿಪು. ೭-೩೨) ; ಪಿಕನಿನಾದೆಯರೊಲ್ದು ಸುರಗಿಯ ಮಲರ್ಗಳಂ . . . ತಿಱಿವರೇ (ಉದ್ಭಟ. ೯-೫೩). **ಮರಲ್$_{3}$ :** "ಅಲರ್, ಅರಲ್, ಮರಲ್, ಮಲರ್ — ಈ ೪ ಪುಷ್ಪಂ" (ಕಶಾ. ೫೪-೦೭೬) ; ಪೊಂಬಟ್ಟೆಯಂ ತವಿಮುಡರೇ ಮೆಲ್ಪೊಂಗಲ್ಮರಲ ತುಱುಂಬಿರ್ . . . ದೇವಿಯರ್ (ಶಕಪ. ೩-೩೯) ; ಕಣ್ಮರಲ್ ಕೆಂಪಾದುವೇಕೆ (ರಾಜಶೇ. ೨-೨) ; ಮರಲಂ ನೋಯಿಸದಿನಿಸುಂ ಮರಂದಮಂ ಪೀರ್ವ ಮಧುಕರಂಬೋಲ್ (ಸುಕಮು. I, ೦೭೩). **ಮಲರ್ು$_{2}$ :** ಹೂ ಹೋಗಿ ಮಿಡಿಯಾಗಿ ಹಣ್ಣು ದೊರೆತಾಗ ಮರಕ್ಕೆ ಮಲರು ಬಂದುದು ಸಾರ್ಥಕ (ದಕ್ಷಿಪ. ೨೯) ; ಮಲರು ಅರಳದ ಒಂದೆರಡು

ಗಂಟೆಗಳಲ್ಲಿ ದಳವಲಯ ಉದುರಿ ಹೋಗುತ್ತದೆ (ಹಸುಹೂ. ೧೬೦).
[<ಮಲರ್₂. / ತವಿ:. ಮಲ. ಮಲರ್]

**ಮಲರ್₄** 'ಮಣಲ್' ನೋ.

**ಮಲರಂಬು** (ನಾ). ಹೂವಿನ ಬಾಣ ; ಪುಷ್ಪಶರ : ಈ ಮಾಟ್ಕೆಯಿನಾರ್ದೆಚ್ಚ ಮಲರಂಬುಗಳ್ ಗೋಜಿುಗಲ್ಗೆ ತೆತ್ತಿಸಿದ ಕಲ್ಲಂಬುಗಳಪ್ಪುದುಂ (ರಾಜಶೇ. ೩೯-೩). [ಮಲರ್₃ + ಅಂಬು₂]

**ಮಲರಗ** (ನಾ). ಒಂದು ಬಗೆಯ ಸಸ್ಯ : ಮಲರಗ, ನಗತ್ತೆ (ವೈ.ಶಿ. ೪೦-೭೬೮). [ ? ]

**ಮಲರಹಿತ**, ಮಳರಹಿತ (ಗು). ೧. ಕೊಳೆಯಿಲ್ಲದ ; ನಿರ್ಮಲವಾದ. ೨. ದೋಷವಿಲ್ಲದ ; ನಿಷ್ಕಳಂಕವಾದ. (ನಾ). ೩. ಪಾಪರಹಿತನಾದವನು ; ನಿಷ್ಕಳಂಕ ವ್ಯಕ್ತಿ : ಪೆಱತೊಂದೆಡೆಯೊಳ್ ಮಲರಹಿತರ್ ಬಂದು ಧರಾಲಲನಾಧೀಶಂಗೆ ವಿನತಮಸ್ತಕರಾದರ್ (ಆದಿಪು. ೦೩-೦೦); ಮಲರಹಿತನನೂನದಯಾನಿಲಯಂ . . . ಶಿವಭೂತಿಯೆಂಬ ಪಾರ್ವಂ ಬರುತಂ (ಶಂತಶಂ. ೦೦೬-೨೦). **ಮಳರಹಿತ** : ೨. ಮಳರಹಿತ ಪಂಚಗುರುಗಳ ವಿಳಸಿತಮೆನಿಸಿರ್ಪ ಪಂಚಪದಸಂಚಯನಿರ್ಮಳಿನಮಣಿದೀಪಕಳಿಕಾವಳಿ ಬೆಳಗುತಿರ್ಕೆ ಮನ್ಮನೋಮಂದಿರಮಂ (ಶಾಂತೀಶ್ವ. ೦-೩). ೩. ಮಳರಹಿತನೊರ್ವ್ವ ವಿಳಸನ್ಮಳನೊರ್ವ್ವ ಪೆಱಂ ಸದಾಚ್ಛನ್ನೈ ನೀಂ ಬೇಗಂ ತಿಳಿವುದುಮಾ ಕದಡುವುದುಂ ಕುಳುಂಪೆಯೊಳ್ ನೆಗಟ್ಗುಮುದಧಿಯೊಳ್ ನೆಗಟ್ಟಪುದೇ (ಶಾಂತಿಪು ೦೦-೯೩). ೪. ದೋಷರಹಿತವಾದುದು; ನಿರ್ಮಲವಾದುದು : ಮಳರಹಿತಮಪ್ಪ ತಪಮುಂ ತಳೆದಪವರ್ಗಕ್ಕೆ ಸಲ್ವ ಮಾನವಗತಿಯುಂ ತಳೆವೊಡೆ ದಿವಿಜಾಯುಷ್ಯಂ ಗಟಿಯಿಪ ತೆಱನಾವುದು (ಶಂಂಣಪು. ೦೩-೪೩). [ಸಂ.]

**ಮಲರಿಸು** (ಕ್ರಿ). (ಹೂವು) ಅರಳುವಂತೆ ಮಾಡು ; ವಿಕಸಿಸುವಂತೆ ಮಾಡು : ಭಕ್ತಜೀವನಲತೆಯುಂ ಒಲವಿಂ ಮಧುವೊಲ್ ಕೊನರಿಸಿ ಮಲರಿಪುದೀ ನಖವಿರಾಜಿತಾರುಣಹಸ್ತಂ (ವಸ್ತವಂ. ೨೨-೯೦).
[ ಮಲರ್₃ + – ಇಸು₃ ]

**ಮಲರು₁** 'ಮಲರ್₂' ನೋ.

**ಮಲರು₂** 'ಮಲರ್₃' ನೋ.

**ಮಲರೋಗ**, ಮಲನಾಗರು, ಮಲ್ಲಾಗರು, ಮಲ್ಲೋಗರ, ಮೊಲನಾಗರ, ಮೊಲನಾಗರು, ಮೊಲೆನಾಗ, ಮೊಲೆನಾಗರ, ಮೊಲೆನಾಗರು, ಮೊಲ್ಲಾಗರ (ನಾ). ೧. ಸೆಳವು ಬಂದು, ಬಾಯಲ್ಲಿ ನೊರೆಯುಂಟಾಗಿ, ಪ್ರಜ್ಞೆತಪ್ಪಿ ಬೀಳುವ, ನರಗಳಿಗೆ ಸಂಬಂಧಿಸಿದ ಒಂದು ಬಗೆಯ ಕಾಯಿಲೆ ; ಅಪಸ್ಮಾರ : ಶೀತೋಷ್ಣ ಮಲರೋಗ ಭೀತಿ (ಶಿಷ್ಟಾಕ್ಕ. ೩೪-೪) ; ಲಾಂಗಮನ್ನನಿನ್ನೂ ಸತ್ತಿರುವದಿಲ್ಲವೆಂದೂ ಇವನಿಗೆ ಮಲರೋಗ ಬರುತ್ತಿರುವದೆಂದೂ ತರ್ಕಿಸಿದನು (ಅಂಬಿಕೆ. ೬೦) ; ಅವರಿಗೆ ಆಗಾಗ್ಗೆ ಹೀಗೆ ಆಗ್ತದೆ ! ಮಲರೋಗ ! (ಮಲಿಮ. ೨೪). **ಮಲನಾಗರು** : ೧. ಲಲನೆಯರೊಲುಮೆ ತನಗೆಂಬ ಮನುಜಂಗೆ ಮಲನಾಗರೆಂದ (ಸರ್ವಜ್ಞ. ೦೬೬೦). **ಮಲ್ಲಾಗರು** : ೧. ಇವನಿಗೆ ಮಲ್ಲಾಗರು ಬರ (ಪಪ್ನೂರು. ೨೩೬). **ಮಲ್ಲೋಗರ** : ೧. ಕರೆದು ಹೆಣ್ಣ ಕೊಟ್ಟರೆ ಮಲ್ಲೋಗರ ಬಂತು ಎಂಬ ಗಾದೆಗೆ ಸರಿಯಾಯಿತು (ಅರೂಟಿ. ೪೦) ; ಕರೆದು ಹೆಣ್ಣು ಕೊಟ್ಟರೆ ಮಲ್ಲೋಗರ ಬಂತಂತೆ (ಗಾದೆ). **ಮೊಲನಾಗರ** : ೧. ಹರಿಣಾಂಕಾರ್ಕಜರಿರ್ದೊಡೊಂದೆ ಗೃಹದೊಳ್ ನೋಟ್ಪಂದು ಧಾತ್ರೀಸುತಂ ದೊರೆಕೊಳ್ಗುಂ ಮೊಲನಾಗರ (ಜಾತಿ. ೨೦-೨೩) . **ಮೊಲನಾಗರು**: ೧. ಮಾಯಾಮೋಹವೆಂಬ ಮೊಲ(ಮೊಲೆ)ನಾಗರು ಹಿಡಿದು ಬಿಡದು ನೋಡಾ (ಸಿದ್ಧೇಪ. ೦೬೬-೬೩) ; ಚೋಳಭೂವರನಣುಗಿಯುಂ ಪಿಡಿದ ಮೊಲನಾಗರಂ ಬಿಡಿಸಿ (ಬಾಸೋಪು. ೯-೦೦೬). **ಮೊಲೆನಾಗ** : ೧. ಇಪ್ಪೆಯ ಕೆಚ್ಚಂ ನಸ್ಯಂಗೆಯ್ಕೆ ವದನರೋಗಂ ಮೊಲೆನಾಗಂ ನಾಗವಿಷಂ ಕಿಡುಗುಂ (ಲೋಕೋಪ. ೯-೭೬). ೨. ಒಂದು ಬಗೆಯ ಗ್ರಹ; ಅಪಸ್ಮಾರಗ್ರಹ : ಲೋ ೀ ಗ ರ ಬಗೆಗೋದಿನೊಳನುರಾಗಮನಾಗಿಸದೊಡೋದಿದಂಗೋದಿದೊಡೋದಾಗದು ಪೇಟಿಕ್ಕುಮೆ ಮೊಲೆನಾಗಂ ಕಿವಿಗಿವುಡುಮೀಟ್ಟಿನಂ ಗಟಿಪದುದೇ (ಲೀಲಾವ. ೦-೨೦) ; ಮೆಟ್ಟಿದ ಮೊಲೆನಾಗಂ [ಪಾಠಾಂ. ನಾಗಾಸುರಂ, ಮೊಲನಾಗಂ] ಪಾದರಕ್ಷೆಗಳಾಗೆ (ಸಂಬರ. ೬-೨೦); ಕಲೆಮಂತ್ರನಲ್ಲದ ವಿಟನಿಂದ ಕಾಡುವ ಮೊಲೆನಾಗ ಲೇಸು (ಶರಪ. ೪೭-೩೩). **ಮೊಲೆನಾಗರ**: ೧. ಬೇವಿನ ಹರಳು, ಇಂಗು . . . ಅರೆದು ಗುಳಿಗೆಯುಂ ಮಾಡಿ ಭೂನಾಗರ ಹಣ್ಣಿನ ರಸದಲ್ಲಿ ನಸ್ಯವಂ ಮಾಡೆ ಹದಿನಾಲ್ಕುತೆಱದ ಮೊಲೆನಾಗರ ಮಾಣ್ಗುಂ (ಅಶ್ವಶಾ. ೦೬೬). **ಮೊಲೆನಾಗರು** : ೧. ಆ ನಾಡ ಚೋಳನಣುಗಿಯ ಪಿಡಿದ ಹಿರಿಯ ಮೊಲೆನಾಗರಂ ಬಿಡಿಸಿ (ಏಕಾಂತ. ೪-೯-೦೦). **ಮೊಲ್ಲಾಗರ** : ೧. ಅರೆತಲೆಬೇನೆ . . . ಮೊಲ್ಲಾಗರದ (ಎಪಿಲೆಪ್ಸಿ) ರೋಗಿಗಳಲ್ಲೂ ಕಾಣಿಸಿಕೊಳ್ಳಬಹುದು (ಕವಿಕೋ. I.೪೯೬). P ೧೦ನೆಯ ಶತಮಾನದ 'ಜಾತಕತಿಲಕಂ' ಎಂಬ ಗ್ರಂಥದಲ್ಲಿ 'ಅಪಸ್ಮಾರ' ಎಂಬ ಅರ್ಥದಲ್ಲಿ 'ಮೊಲನಾಗರ' ಎಂಬ ಶಬ್ದರೂಪ ಪ್ರಯೋಗವಾಗಿದ್ದರೂ ರೋಗದ ಸಂಬಂಧವನ್ನು ಎತ್ತಿತೋರಿಸುವ ಉದ್ದೇಶದಿಂದ ಇಲ್ಲಿ 'ಮಲರೋಗ' ಎಂಬ ಶಬ್ದರೂಪವನ್ನು ಮುಖ್ಯೋಲ್ಲೇಖವನ್ನಾಗಿ ಪರಿಗಣಿಸಿದೆ.
[ಮಲ₉ + ರೋಗ]

**ಮಲರೋಗಿ** (ನಾ). ಮೂರ್ಛೆರೋಗ ಬರುವವನು ; ಅಪಸ್ಮಾರರೋಗಿ : ಮಾತುಮಾತಿಗೆ ಮೂರ್ಛೆಹೋಗುವ ಈ ಮಲರೋಗಿಯನ್ನೇಕೆ ನನ್ನ ಕೊರಳಿಗೆ ಕಟ್ಟುವಿರಿ (ಹುಚ್ಚಾಟಿ. ೬೨). [ಮಲರೋಗ + –ಇ₃]

**ಮಲರ್ಚು** 'ಮರಲ್ಚು' ನೋ.

**ಮಲರ್ವಿಲ್ಲು** (ನಾ). ಹೂವಿನ ಬಿಲ್ಲು ; ಪುಷ್ಪಚಾಪ : ಎಲೆ ಚೂತಾಂಕುರ ನಿನ್ನಂ ಮಲರ್ವಿಲ್ಲಂ ತಳೆದ ಕಾಮದೇವಂಗಿತ್ತಂ (ಶಾಕುಂತ. ೮೦-೦೩೪).
[ಮಲರ್₃ + ಬಿಲ್ಲು₁ (<ಬಿಲ್₂)]

**ಮಲವ** 'ಮಲೆಪ' ನೋ.

**ಮಲವದಿಕೆ** (ನಾ). ಹೇರಿನ ಮೇಲೆ ಹಾಕುವ ಒಂದು ಬಗೆಯ ತೆರಿಗೆ(?): ಬಿಟ್ಟೆ ಕೊಟ್ಟಣವನುಪಸುಂಕ ಮಲವದಿಕೆ ಸೊಲ್ಲಗೆ ಕವಣ ಕಡ್ಡಾಯದಂಕ ತಳವರಿಕೆ (ಸಿಂಗಿರಾ. ೨೨-೨೬). [<ಮಳವ₁ ? + ಪದಿಕೆ (<ಪೊದಕೆ₂)]

**ಮಲವಿಸರ್ಜನೆ** (ನಾ). ಶರೀರದ ಒಳಗಿರುವ ಹೇಸಿಗೆಯನ್ನು ದೇಹಾಂಗವೊಂದರ ಮೂಲಕ ಹೊರಹಾಕುವ ಕ್ರಿಯೆ : ಎಷ್ಟೋ ರಾತ್ರಿ ಮಲವಿಸರ್ಜನೆಗೆ ಅದೇ ಮರದಡಿ ಕುಳಿತಿದ್ದೇನೆ (ದೇವಹಂ. ೩೩).
[ಸಂ. ಮಲವಿಸರ್ಜನ]

**ಮಲವೇಗ** (ನಾ). ಅನೇಕಸಲ ಮಲವಿಸರ್ಜನೆ ಆಗುವ ರೋಗ ; ಭೇದಿ ; ಅತಿಸಾರ : ಕರಿಎಮ್ಮೆಹಾಲನ್ನು . . . ಸ್ವಲ್ಪ ಸೈಂಧವ ಲವಣವನ್ನು ಸೇರಿಸಿ ಮೂರುವೇಳೆ ಕೊಟ್ಟರೆ ಗ್ರಹಣೀ, ಮಲವೇಗಗಳು ಬಹಳವಾಗಿ ಹೋಗುವುದು (ಸಕವೈ. ಶಂ. ೪೭೬). [ಸಂ.]

**ಮಲವೇಱು** (ಕ್ರಿ). ಕೊಳೆಯಾಗು : ಮೈ ಮಲವೇಱಿತ್ತೆಂದು ಮಾಯುಲಾಗದು (ರತ್ನಾಕರವ್ಯ. ೦-೦೩೪). [ಮಲ₃ + ಏಱು₁ (< ಏಱ್₁)]

**ಮಲವೊರಲ್** (ನಾ). (?) : ನೆಲವಿನೊಳ್ ಮೊಸರ್ಗಂದಲಂಕಂಡು . . . ಮಣೆಯುಂ ಮಲವೊರಲಂ ಮಕ್ಕಳಂ ಕುಳ್ಳಿರಿಸಿ ಪೆಗಲೇಱಿ ನಿಂದು ಕಂದಲಂ ಕುಟುಕೆ (ಶಕಪ. ೬೯-೦೦). [P ಇದು 'ಮರವೊರಲ್' ಎಂದಿರಬಹುದು]

**ಮಲಶುದ್ಧಿ** (ನಾ). = ಮಲವಿಸರ್ಜನೆ : ಬಸ್ತಿಯ ನಿತ್ಯಪ್ರಯೋಗದಿಂದ ವಿಲಕ್ಷಣ ಮಲಶುದ್ಧಿಯಾಗಿ ಅವಳ ಹುಚ್ಚು ಕಡಿಮೆಯಾಗಹತ್ತಿತು (ಬ್ರಿಹ್ಮಶಿ. ೦೪೬). [ಸಂ.]

**ಮಲಶೂಲೆ** (ನಾ). ಮಲಬದ್ಧತೆಯಿಂದ ಮಲವಿಸರ್ಜನೆಯಾಗುವಾಗ ಗುದದಲ್ಲಿ ಉಂಟಾಗುವ ನೋವು : ಹಿಂಗ್ವಾದಿಚೂರ್ಣ . . . ಕೊಳ್ಳೆ ಮಲಶೂಲೆ, ಗುಲ್ಮಶೂಲೆ, ಮಹೋದರ, ಮಲಬಂಧ . . . ಎಲ್ಲಾ ಮಾಣ್ಗುಂ (ವಿಶ್ವ.ಶಿ. ೫೮). [ಸಂ. ಮಲಶೂಲ]

**ಮಲಶೋಧನೆ** (ನಾ). ೧. = ಮಲವಿಸರ್ಜನೆ. ೨. ಭೇದಿಗೆ ತೆಗೆದು ಕೊಳ್ಳುವ ಔಷಧ ; ವಿರೇಚನ : ತಲೆಸಿಡಿತಕ್ಕೆ ಮಲಶೋಧನೆ ಕೊಂಡ ಹಾಗೆ (ಗಾದೆ). [ಸಂ. ಮಲಶೋಧನ]

**ಮಲಸಂಬಂಧ** (ನಾ). ಎರಡನೆಯ ಸಂಬಂಧ : ಮಲಸಂಬಂಧದ ಹುಡುಗಿಯನ್ನೂ ಕೊಟ್ಟಿರಬೇಕು. ಅವಳಿಗೆ ತಂದೆ ತಾಯಿ ಯಾರೂ ಇಲ್ಲವೇ ? (ಕೀಶ್ರೀ. ೨೪). [ಮಲ$_1$ + ಸಂಬಂಧ]

**ಮಲಸೀಮೆ** (ನಾ). ಬೆಟ್ಟಗುಡ್ಡಗಳ ಪ್ರದೇಶ ; ಮಲೆನಾಡು : ಮಲಸೀಮೆ ಹೆಣ್ಣಿಗೆ ಮಂಡೇ ಸೀಗೇಕಾಯಿ (ನಾಕದ. ೦೫); ಮಲಸೀಮೆಯಿಂದ ಒಂದು ಕಂತೆ ಬೆತ್ತವನ್ನೂ ತರುತ್ತಿದ್ದರು(ಕಳಹು. ೫೪). 'ಬಯಲುಸೀಮೆ' ಪರಾ. [<ಮಲೆ$_3$ + ಸೀಮೆ]

**ಮಲಸುತ್ತು** 'ಮರಸುತ್ತು' ನೋ.

**ಮಲಸೂತ್ರ** 'ಮರಸುತ್ತು' ನೋ.

**ಮಲಹ** 'ಮಲೆಪ' ನೋ.

**ಮಲಹರ** (ನಾ). ಪಾಪವನ್ನು ಪರಿಹರಿಸುವವನು ; ಶಿವ : ಮಲಹರಾತ್ಮಕಮಂತ್ರಮಂ ನೆಱೆ ಕಲಿತು ಬಹುಮಂತ್ರಂಗಳಂ ತಾಂ ಕಲಿವುದುತ್ಕಟ ಪಾಪವಲ್ಲಾ ಸಹಜಭಕ್ತರ್ಗೆ (ಬಸವು. ೩-೪೭) ; ತಿಳಿವು ನೀನೆನಗೆ . . . ಮಲಹರನಾ ಶರಣರಾ ಕಥೆಯುಂ (ಪ್ರಭುರಾ. ೦-೫೦). [ಸಂ.]

**ಮಲಹರಾದ್ರಿ** (ನಾ). ಶಿವನ ವಾಸಸ್ಥಾನ ; ಕೈಲಾಸಪರ್ವತ : ದಶಮುಖನಲುಗಿಸಿದ ಮಲಹರಾದ್ರಿಯು ಗುಂಪೆನಿತು ಘನ (ಬಸವು. ೦೯-೨೬). [ಸಂ.]

**ಮಲಹರಿ$_1$** (ನಾ). [ಸಂಗೀತ] ಒಂದು ರಾಗದ ಹೆಸರು : ನಿರ್ಮಲನಿತ್ಯನನಾದಿಜಿನನ ಮಲಹರಿಯಿಂದ ಪಾಡಿದರು ಕೇಳ್ವರ ಕರ್ಮಮಲ ಹಱೆವಂತೆ ಗಾಯಕರು (ಭರತ. ೦-೭೮); ಮಲಹರಿ–೧೫ನೇ ಮೇಳಕರ್ತ ಮಾಯಾಮಾಳವಗೌಳದಲ್ಲಿ ಜನ್ಯ. ಉಪಾಂಗರಾಗ. ಹೆಸರಿನಲ್ಲೇ ಸೂಚಿತವಾಗುವಂತೆ ಸಕಲಪಾಪಪರಿಹಾರಕರಾಗ (ಸಂಗೀತಂ. ೦೩೯). [ಸಂ. ಮಲಹರೀ]

**ಮಲಹರಿ$_2$** 'ಮಲಾರ$_3$' ನೋ.

**ಮಲಹಾರಿ** (ನಾ). =ಮಲಹರಿ$_1$ : ಶಂಕರಾಭರಣದೊಳ್ ಸೌರಾಷ್ಟ್ರ ಭೈರವಿಯಾಗಿರ್ಪ . . . ಕಾಳಿಂದಿಯೊಳ್ ಮಲಹಾರಿ ಕಲ್ಯಾಣಿಯಾದಪ್ಪುದು (ಹಮ್ಮಿರ. ೨-೯೦ ವ). [< ಸಂ. ಮಲಹರೀ]

**ಮಲಾ** (ನಾ). ಒಂದು ಅಳತೆ (?) : ಗಾಣ ೧ ಪಡಿಯದೆ ೧ ಹಟ್ಟಾ ೧ ಮಲಾ ೧ ಗೃಹ ಹಸ್ತ ೨೪ ಜಿನಾಲೇ ಭೂಮಿ ೪೦೦ (ಇಅ. XIV, ೦೪೦–೨೮; 12ನೆಯ ಶತ). [ ? ]

**ಮಲಾಪಹ** (ನಾ). ದೋಷನಿವಾರಣೆ ಮಾಡುವವನು : ಪ್ರೋದ್ಯತ್ ತಮೋಹರ ಚಿತ್‌ಪ್ರಭಾಂಗನು ಕಲಿಮಲಾಪಹನು (ಬಸವು. ೩-೬). [ಸಂ.]

**ಮಲಾಮತ್** 'ಮಲಾಮತ್ತು' ನೋ.

**ಮಲಾಮತಿ** 'ಮಲಾಮತ್ತು' ನೋ.

**ಮಲಾಮತು** 'ಮಲಾಮತ್ತು' ನೋ.

**ಮಲಾಮತ್ತು,** ಮಲಾಮತ್, ಮಲಾಮತಿ, ಮಲಾಮತು (ನಾ). ೧. ತೊಂದರೆ ; ವಿಪತ್ತು : ಈ ಮಲಾಮತ್ತು ಬಂದು ಇದ್ದಂಥಾದ್ದು ಮಹಾದೇವನ ಕಟಾಕ್ಷದಿಂದ ಪರಿಹಾರವಾಯಿತು (ರಾಜೇಂದ್ರ. ೫೯) ; ಒಳ್ಳೆ ಮಲಾಮತ್ತಾಯ್ತಲ್ಲಪ್ಪಾ ! ಇದೇನು ಬಂತು ಗಿರಾಚಾರ ನನಗೆ (ಮಲಹು. ೦೨೭). ೨. ಸೊಕ್ಕು ; ಗರ್ವ : ಅವನ ಮಲಾಮತ್ತು ಸೀಮೆಗಾಗಿ ಮೀರುತ್ತೆ (ರೂಢಿ). **ಮಲಾಮತ್** : ೧. ಮಾಡುವುದು ಕುಶಾಮತ್, ಆಗುವುದು ಹಜಾಮತ್, ಇದೆಲ್ಲಿಯ ಮಲಾಮತ್ ? (ಗಾದೆ). **ಮಲಾಮತಿ** : ೧. ಇದೆಂತಹ ಮಲಾಮತಿ ಬಂತಪ್ಪ, ಇವತ್ತು ಯಾರ ಮೋರೆ ನೋಡಿ ಎದ್ದಿದ್ದೆನೋ (ಮುಖರುದಾ. ೦೭೭) ; ಈಗಲೇ ಮೈತುಂಬ ಸಾಲ ಮಾಡಿಕೊಂಡು ಮಲಾಮತಿ ಮಾಡಿಕೊಂಡಿದ್ದಾನಂತ (ಮುಗಿಯು. ೨೮೯). ೩. ಸೋಜಿಗ ; ಆಶ್ಚರ್ಯ : ದೀವಿಗೆಯ ಕೆಳಗೆ ಕತ್ತಲೆಯೆಂಬ ಗಾದೆಯಂತೆ ಏನೋ ಮಲಾಮತಿ (ಸೋಜಿಗ) ಆಗಿರುತ್ತದೆ (ಬೀರಬ. ೪೨). **ಮಲಾಮತು** : ೧. ಹೋಯಿತು ಒಂದು ಮಲಾಮತು, ಇದ್ದವರು ಸಲಾಮತು (ಏಧವ್ಯ. ೦೫೮).

[← ಅರ. ಹಿಂ. ಮಲಾಮತ್, ಮಲಾಮತೀ]

**ಮಲಾಮೆ** (ನಾ). ೧. ಬೆಲೆ ಇಳಿದು ಹೋಗುವುದು ; ಅಗ್ಗ : ಅದು ಕೊಳ್ಳುವವರಿಲ್ಲದೆ ಮಲಾಮೆಯಾಗಿತ್ತು (ಮೂಮರಾ. ೦೨೫). ೨. ಜಂಭ : ಅಹಂಕಾರ : ಈಗೀಗ ಅವನಿಗೆ ತುಂಬಾ ಮಲಾಮೆ (ರೂಢಿ).

[← ಪಾರ. ಮಲಾಮ್]

**ಮಲಾರ$_1$**, ಮಲ್ಲಾರ (ನಾ). ಬಳೆಗಳನ್ನು ಒಟ್ಟಾಗಿ ಕಟ್ಟಿದ ಗೊಂಚಲು; ಬಳೆಸರ : ಬಳೆಯ ಮಲಾರಕ್ಕೆ ಶರಣುಮಾಡಿ, ಹೆಣ್ಣು . . . ಬಳೆ ತೊಡಿಸಿಕೊಳ್ಳುತ್ತಾಳೆ (ಪನ್ನೂರು. ೭೭). **ಮಲ್ಲಾರ** : ಮದುವೆಯ ಹೆಣ್ಣು ಮೊದಲು ಬಳೆಯ ಮಲ್ಲಾರವನ್ನು ಪೂಜಿಸಿದ ನಂತರ ಐದುಜನ ಮುತ್ತೈದೆಯರಿಗೆ ಬಳೆ ತೊಡಿಸುತ್ತಾರೆ (ರೂಢಿ).

ಮಲ್ಲಾರಪೂಜೆ = ಮದುವೆ, ಗೌರಿಪೂಜೆ ಮೊದಲಾದ ಮಂಗಳ ಪ್ರಸಂಗಗಳಲ್ಲಿ ಬಳೆಗಾರನ ಬಳೆಯ ಗೊಂಚಲನ್ನು ಮುತ್ತೈದೆಯರು ಪೂಜಿಸಿ ಹೊಸಬಳೆಗಳನ್ನು ತೊಟ್ಟುಕೊಳ್ಳುವ ಒಂದು ಸಾಂಪ್ರದಾಯಿಕ ವಿಧಿ : ಬೇಗ ಬೇಗ ಮಲ್ಲಾರಪೂಜೆಯನ್ನು ಮಾಡಿಸಿ (ರೂಢಿ).

[ದೇ. || ತಮಿ. ಮಲಾರ; ತೆಲು. ಮಲಾರ, ಮಲ್ಲಾರ. /ಸಂ. ಮಾಲಾಹಾರ ?]

**ಮಲಾರ$_2$**, ಮರಾಳ$_2$, ಮಳಾರ (ನಾ). ೧. ಕುದುರೆ ಮೊದಲಾದ ಪ್ರಾಣಿಗಳ ಜೀನನ್ನು ಬಿಗಿಗೊಳಿಸಲು ಅವುಗಳ ಒಡಲಿಗೆ ಬಿಗಿಯುವ ತೊಗಲಿನ ಅಥವಾ ಬಟ್ಟೆಯ ಪಟ್ಟಿ ; ತಂಗುಪಟ್ಟಿ : (?). **ಮರಾಳ$_2$** : ೧. "ಮರಾಳಂ (ಮಳಾರಂ) = ಕುದುರೆಯ ಪಟ್ಟಿ" (ಕಮದ. ಶಂ. ೨). **ಮಳಾರ**: ೧. "ಮಳಾರಮೆನೆ ಕುದುರೆಗಳ ವ[ಪ]ಟ್ಟೆಯಕ್ಕುಂ" (ಕಬ್ಬಿಕೈ. ೭೭). ೨. ಕುದುರೆಯ ಕಡಿವಾಣ : "ಮಳಾರಮೆನಲ್ಕೆ ಕುದುರೆಕಡಿವಾಣ" (ಕಶಕ. ೮೫). [ ? ]

**ಮಲಾರ$_3$**, ಮಲಹರಿ$_2$ (ನಾ). ಒಂದು ಬಗೆಯ ವಾದ್ಯ : ಮಲಾರ ಸಾರಿ ಹೊಡೆವ ಜಯಭೇರಿ . . . ಭೋರಿಭೋರಿಡುತ ಮೊರೆದವು (ಗೌಂದಳಾ. ೬-೮). **ಮಲಹರಿ$_2$** :ವೀರರ ಮೂಗಿಗೆ ಕವಡೆಯ ನೀರ್ತರಿಸಿ ಡವುಡೆ ಜೀಗಟೆ ಮಲಹರಿಯ ಜಾಡಿಸಿಕೊಂಬ ಪ್ರವುಡೆಯರಿರ್ದರಿಕ್ಕೆಲದಿ (ಮೋಹತ. ೨೦-೩೯). [ ? ]

**ಮಲಿನ**, ಮಳಿನ (ಗು). ೧. ಕೊಳೆಯಾದ ; ಮಲಿನವಾದ ; ಕೊಳಕಾದ : 'ಮಲಿನಾಂಬರ' ಪರಾ. ೨. ದೋಷದಿಂದ ಕೂಡಿದ ; ಕಳಂಕಿತವಾದ. ೩. ಕಪ್ಪಗಿರುವ ; ಮಸುಕಾದ. ೪. ಮಂಕಾದ ; ಮ್ಲಾನವಾದ : ಅಶ್ರುಮಲಿನಾಸ್ಯನಾತನುಂ ನೆಲದಿಟ್ಟಿಯಾಗಿ . . . ಎನಲ್ (ಶ್ರೀರಾಮಾ. ೩೦೪-೩೪೫). (ನಾ). ೫. ಕೊಳೆ ; ಕಲ್ಮಶ ; ಹೊಲಸು : ಮಲವೇನೊ, ಹೊಲೆಯೇನೊ ! ಮಲಿನದಲಿ ನೆನೆಶುಚಿಯು (ಮಂಕುತ. ೬೩೦). ೬. ದೋಷ ; ಪಾಪ : ಸೃಷ್ಟಿಯೊಳಾವ ಬೆಟ್ಟಗಳೆನ್ನ ತೆಱನೊಳು ಬಿಟ್ಟು ಮನದ ಮಲಿನವನು[ಪಾಕಾಂತೆಯ] ಇಷ್ಟದೇವಗೆ ಮನೆಯಾಯ್ತೆಂದು ನಿರ್ಮಲವಟ್ಟಿಹುದಾ ರಜತಾದ್ರಿ (ಶ್ರೀಕೃಸಾ. ೭-೭೨) ; ಮಲಿನವಿಲ್ಲದ ಮನದಿಂದಾ ನಿಷ್ಕಲನ

ನಿರ್ಮಲನಿತ್ಯನನಾದಿಜಿನನ ಮಲಹರಿಯಿಂದ ಪಾಡಿದರು (ಶಠಕ. ೦-೬೮). ೭. ಕೊಳಕುಬಟ್ಟೆ : ವರನ ಬಳಿಗೈತರುತ ಮಲಿನವ ಧರಿಸಲಾಗದು (ಕೌಶಿರಾ. ೯೩-೦೩). ೮. ದೋಷಿ ; ಪಾಪಿ : ಮಲಿನರನೆ ಪೊರ್ದುವ್ವೈ ನಿರ್ಮಲರತ್ತಲ್ಪೊರ್ದಲೊಲ್ಲೆ (ಗದಾಯು. ೯-೧೦). ಮಳಿನ : ೨. ಅಗಳೆ ಮಳಿನಾತ್ಮಪದಾಭಾಗಮನಿರದಲಸದಲೆದು ಶಿಲೆಯೊಳ್ ಪೊಯ್ಯುದ್ಯೋಗದಿ ನರ್ಹದ್ದೀಕ್ಷೆಗೆ ಪೋಗದೆ ಮೆಯ್ದುಂದಂ (ಶಾಂತಿಪು. ೭-೯೭). ೯. ಕಪ್ಪುಬಣ್ಣ ; ಕರಿದು : ಅಳಿಮಳಿನಂ ಶಶಿಕಳಂಕಮೇಂ ರಂಜಿಸಿತೋ (ರಾಜಶೇ. ೧೦-೫೭). [ಸಂ.]

**ಮಲಿನತೆ**, ಮಳಿನತೆ (ನಾ). ೧. ಕೊಳೆಯಾಗಿರುವಿಕೆ ; ಹೊಲಸಾಗಿರುವಿಕೆ : "ಮಲಿನತೆ ಜರಾಯುಗಳು ಮಾಸು" (ಶಬ್ದಮಂ. ೦೦೦). ೨. ಕಪ್ಪುಛಾಯೆ ; ಕತ್ತಲು : ಬೆಳ್ಪಂ ಬೆಳಗುಮನಾಗಸಕ್ಕೆ ನಿಜಮಲಿನತೆಯುಮುಂ ಬಿಡಿಸಿ ಮತ್ತಸಂಗನುಮಂ ಬೇಱೆ ಜನಕ್ಕೆ ತೋಱಿದುದು ಬೆಳ್ದಿಂಗಳ್ (ಚಂದ್ರಪ್ರ. ೬-೯೨). **ಮಳಿನತೆ** : ೩. ಕಳಂಕ ; ದೋಷ : ನಿರ್ಮಲನಲ್ಲದೊರ್ವನಿಂದಂ ಮಳಿನತೆ ಪೊರ್ದುವುದೆ ವಿಮಳಸದ್ಧರ್ಮಕ್ಕಂ (ರಹ್ಮಣಪು. ೬-೨೪೦) ; ಮಳಿನತೆಯುಂ ತಳೆಯಲ್ ನಿರ್ಮಳಮುನಿಯುಂ ಪೊರ್ದಿ ಸೇವೆಗೆಯ್ದುದು ಶಶಿಮಂಡಲಮೆನೆ ತಪಸಿಯ ಕೆಲದೊಳ್ ತೊಳಗುವ ಪಳುಕಿನ ಕಮಂಡಲುಂ ಕರಮೆಸೆಗುಂ (ತ್ರಿಷ್ಠಿ. ೦-೬೩). [ಸಂ. ಮಲಿನತಾ]

**ಮಲಿನತ್ವ**, ಮಳಿನತ್ವ (ನಾ). ೧. ದೋಷ ; ಕುಂದು ; ಕಳಂಕ : ಕ್ಷಯಿತ್ವ, ವಿಲಾಸಶೂನ್ಯತ್ವ, ಮಲಿನತ್ವ ಮುಂತಾದ ಅವಗುಣಗಳಿಂದ ನಿಕೃಷ್ಟನೇ ಸರಿಯೆಂಬ . . . ಅರ್ಥ ಹೊರಡುತ್ತದೆ (ಧ್ವನ್ಯಾಲೋ. ೧೦೯). **ಮಳಿನತ್ವ** : ೨. ಕಪ್ಪುಬಣ್ಣ. ೧, ೨ : ಪಟು ವಸ್ತ್ರಾವಳಿಯೊಳ್ ಪರಾಭವಮುಮಾ ಸಂವತ್ಸರವ್ರಾತದೊಳ್ ಮಳಿನತ್ವಂ ಪರಪುಷ್ಟಸಂತತಿಗಳೊಳ್ . . , ವರ್ತಿಪುವಂತವಿಲ್ಲ ನರರೊಳ್ ತದ್ದೇಶದೊಳ್ (ಶೀಬಪು. ೦-೫೬). [ಸಂ.]

**ಮಲಿನದೃಷ್ಟಿ** (ನಾ). [ನಾಟ್ಯ] ನೃತ್ಯಮಾಡುವಾಗ ತೋರುವ ಒಂದು ಬಗೆಯ ನೋಟ ; **P** "ದೃಷ್ಟಿಸಿ ನೋಡಿ ರೆಪ್ಪೆಗಳನ್ನು ಅರ್ಧ ಮುಚ್ಚಿ ಪುನಃ ರೆಪ್ಪೆಯ ರೋಮಗಳನ್ನು ಅದಿರಿಸುತ್ತ ಕಡೆಗಣ್ಣನ್ನು ಕೆಂಪಗೆ (ಮಬ್ಬು) ಮಾಡಿ ನೋಡುವುದು" (ಲಾಸ್ಯರಂ. ೨೬೯ ಗದ್ಯಾನುವಾದ) : ಮಿಗೆ ನೋಡಿ ಮರಳ್ದು . . . ಕಟಾಕ್ಷರಾಗದಿನೊಗುಮಿಗೆ ನೋಡಲ್ಕೆ ಮಲಿನದೃಷ್ಟಿಯೆನಿಕ್ಕುಂ (ಲಾಸ್ಯರಂ. ೩-೨೭). [ಸಂ.]

**ಮಲಿನಾಂಬರ** (ನಾ). ಮಾಸಿದ ವಸ್ತ್ರ : ಕೊಳಕುಬಟ್ಟೆ : ಮಲಿನಾಂಬರವೇಷ್ಟಿತೆ . . . ತಳೆವಳ್ ಘಟಮುಂ (ಜಾತಕ. ೦೯-೩೨) ; ಮಲಿನಾಂಬರವನೊಗೆವರಾರ್ (ಹರಿಶ್ಚ. ೦-೨೨) ; ಧರಿಸಿದ ಮಲಿನಾಂಬರದಿಂ ಕೊರಗಿದ ಮೊಗದಿಂದೆ . . . ಎನ್ನಯ ಚಿರವಿರಹವ್ರತಮಂ ಸುಶೀಲೆ ತಾಂ ತಳೆದಿರ್ಪಳ್ (ಶಾಕುಂತ. ೦೦೬-೧೮೪). [ಸಂ.]

**ಮಲಿನಿ** (ನಾ). ಮುಟ್ಟಾದ ಹೆಂಗಸು ; ರಜಸ್ವಲೆ : "ಮಲಿನೀ, ಪುಷ್ಪವತೀ, ಋತುಮತೀ . . . ಹೊಲೆಯಾದವಳ ಹೆಸರುಗಳು. ಮುಟ್ಟಾದವಳು" (ಸಿದ್ಧಾಂತಿ. ೦೭೨). [ಸಂ. ಮಲಿನೀ]

**ಮಲಿಮ್ಲುಚ**, ಮಳಿಮ್ಲುಚ$_1$ (ನಾ). ೧. ಕಳ್ಳ ; ತಸ್ಕರ : "ಚೋರಃ . . . ಮಲಿಮ್ಲುಚಃ — ೧೦ ಕಳ್ಳನ ಪೆಸರುಗಳು" (ಸಿದ್ಧಾಂತಿ. ೩೦೪). ೨. ಪಂಚಮಹಾಯಜ್ಞಗಳನ್ನು ಮಾಡದ ಬ್ರಾಹ್ಮಣ. ೩. ರಾಕ್ಷಸ. ೪. ಸೊಳ್ಳೆ. ೫. ಗಾಳಿ. ೬. ಅಧಿಕಮಾಸ ; ಮಲಮಾಸ. **ಮಳಿಮ್ಲುಚ$_1$** : ೧. "ಏಕಾಗಾರಿಕಃ . . . ಚೋರಃ, ಮಳಿಮ್ಲುಚಃ . . . ಸ್ತೇನಃ — ಈ ೧೦ ಕಳ್ಳಂ" (ಹಲಾಯು. ೫೭-೦೮೩). [ಸಂ.]

**ಮಲೀಮಸ**, ಮಳೀಮಸ (ಗು). ೧. ಕೊಳಕಾದ ; ಹೊಲಸಾದ. ೨. ಕಪ್ಪಾದ. ೩. ಕಳಂಕದಿಂದ ಕೂಡಿದ ; ದೋಷಪೂರ್ಣವಾದ. ೪. ಕ್ಷುದ್ರವಾದ ; ನೀಚತನದ : ವದನಸುಧಾಂಶುಬಿಂಬದ ಕಳಂಕದ ಬಿತ್ತುಗಳಂತೆ . . . ನೀಳ್ದುವಾ ಸುದತಿಸಮಗ್ರನಗ್ರಜನಿರಲ್ ಪಟ್ಟಂಗಟ್ಟಿದೆ ಪಾಪಭೀರುವಾಗದೆ ಭರತಂಗೆ ರಾಜ್ಯಭರಮುಂ ಕುಡವೇಡ್ದಿ ಮಲೀ[ಮಸಾಂ. ೪೯] ಮಸೋಕ್ತಿಗಳ್ (ಪಂಪಾರಾಮಾ. ೬-೯೬). (ನಾ). ೫. ಕೊಳೆ ; ಹೊಲಸು : "ಮಲೀಮಸಂ ಕಿಲ್ಬಿಷಂ" (ಮಂಗರಾ. ೧೩೦-೨೩). **ಮಳೀಮಸ** : ೩. ನಿಜದಿಂ ಜಟಮಟಿಕಂ ಜ್ವಳನಜಟಿ ಕರಂ ಕುಟಿಳವೃತ್ತನಾತನಸದಳಂ ಸುಜನರೆನೆ ನೆಗ[ಲ್ದಾ] ವಿನು[ತ]ಜನರೊಳಂ ಮಾಡುಗುಂ ಮಳೀಮಸಮತಿಯುಂ (ಶಾಂತಿಪು. ೪-೦೦). ೬. ಕಳಂಕ ಹತ್ತಿದವನು ; ದೋಷಿ : ವಿಷಯಾಮಿಷಕಾಂಕ್ಷಿಯೆ ತಿಣ್ಣಮಾಗೆ ಮತಿಗೆಟ್ಟು ಮಳೀಮಸನಾದಂ (ಸುಕುಮಾ. ೮-೩೭). [ಸಂ.]

**ಮಲುಕು$_1$** 'ಮಲಕು$_1$' ನೋ.

**ಮಲುಕು$_2$** 'ಮಲಕು$_2$' ನೋ.

**ಮಲುಮಲ** 'ಮುಮ್ಮಲಂ' ನೋ.

**ಮಲುಮಲನೆ** 'ಮುಮ್ಮಲನೆ' ನೋ.

**ಮಲುವು** (ನಾ). ಪ್ರವಾಹದ ಎಳೆತ : ಸೆಳವು : ಪ್ರವಾಹದ ಮಲುವನ್ನು ನೋಡಿಕೊಂಡು ಅದರ ಗುಂಟ ತಾಳ್ಮೆಯಿಂದ ಈಸುತ್ತ . . . ದಡಕ್ಕೆ ಹತ್ತಿದ (ಗ್ರಾಮಾಯ. ೫೯೪). [ ? ]

**ಮಲೂಲು** (ನಾ). ಉದಾಸೀನ ; ನಿರುತ್ಸಾಹ.

**ಮಲೂಲತನ** = ಉತ್ಸಾಹವಿಲ್ಲದಿರುವಿಕೆ ; ನಿರುತ್ಸಾಹ : ನಿನ್ನ ಮಲೂಲತನಕ್ಕೇನೆನ್ನಲಿ ನನ್ನನೆ ರಾಧಾನರ್ತಕಿಯೆನ್ನುವೆ ನೀನಲ್ಲವೆ ರಾಧೆ ? (ನವಿಲ. ೪೪-೦೦). [ ← ಅರ. ಮರಾ. ಮಲೂಲ್]

**ಮಲೆ$_1$** (ಕ್ರಿ). ೧. ಉದ್ಧಟತನದಿಂದ ಕೂಡಿರು ; ಬೀಗು ; ಗರ್ವಿಸು : "ಮಲೆ-ಔದ್ಧತ್ಯೇ(ಅತಿಗರ್ವಪಡು), ದನೇ ಚ" (ಕಮಧಾ) ; ಅದಿರದದಿರ್ಚ ತಳ್ತಜೀಯಲೀ ಮಲೆದೊಡ್ಡಿದ ಚಾತುರಂಗಮೆಂಬುದು ನಿಸಗೊಡ್ಡಿನಿಂದುದು (ಕಂಪಣಾ. ೦೦-೬೪) ; ಮಲೆವ ದೈತ್ಯರ ಗಂಡ . . . ಕೊಲಲೊಡರ್ಚುವ ಮಿತ್ತುವಿನ ಗಂಡನ ಪಾವಜಲರುಹಯುಗವ ನೋಡಿದರು (ಮೋಹತ. ೯೨-೪೦). ೨. ಕೊಬ್ಬು ; ಮದಿಸು : ಮಲೆಯುತ್ತೊಲೆಯುತ್ತೆ ಸುತ್ತಿ . . . ಬರುತಿರ್ದುದು ಘೀಕರನೊಂದು ಸೂಕರಂ (ಕಾವ್ಯಸಾ. ೦೦೦೨). ೩. ಎದುರಿಸು ; ಪ್ರತಿಭಟಿಸು ; ಇದಿರುಬೀಳು : ಹುಲಿಗೆ ಮಲೆ ದಳ್ಳುರಿಯೊಳಡಗು ಹೋಗೆಂದೊಡೆಯುನು ಬೆಸಸಿದಡೆ ನಾನಾಱೆನೆನಬಾರದು (ಹರಿಶ್ಚ. ೦೦-೩೪) ; ಅಕಟ ಸಿಂಹಕೆ ಮಲೆತುದೋ ಜಂಬುಕನು (ಕುಮಾರದ್ರೋ. ೨-೪೦) ; ಭ್ರಮೆಯಿಂ ಮಲೆತೆಯಾದರೆ ನಿನ್ನ ಗಂಟಲ ಬಳೆಯ ಕಳಚುವೆನು (ಅಂಬರಾ. ೦೪-೩೨).

**ಮಲಪರ್**, **ಮಲೆದರ್**, **ಮಲೆವರ್** (ಬಹುವ) = ಎದುರು ಬಿದ್ದವರು ; ಪ್ರತಿಭಟಿಸಿದವರು : ಮಲಪರ ತಲೆಯೊಳ್ ಬಾಳಿಡುವಂ (ಎಕ. II, ೦೩೨-೦೨ ; 1123) ; ಮಲೆವರಂ ಕೊಂದುಗ್ರಮತ್ತೇಭಸಂಘಮನಾದಂ ಪಿಡಿದಂ (ಎಇ. XX. ೦೧೩-೨೨ ; 1167) ; "ಮಾರ್ಪರ್=ಮಲೆವರ್" (ಕಮದ. ಶಂ. ೨). **ಮಲಪರೊಳುಗಂಡ**, **ಮಲಪರೊಳ್ಗಂಡ**, **ಮಲೆಪರೊಳು ಗಂಡ** = ಪ್ರತಿಭಟಿಸುವವರಿಗೆ ಮಹಾಶೂರನಂತಿರುವವನು ; ಒಂದು ಬಿರುದು : ಸಮರಪ್ರಚಂಡ ಮಲಪರೊಳುಗಂಡ (ಎಕ. VI, ಕಡೂರು, ೨-೪ ; 1110) ; ಮಲರಾಜರಾಜಂ ಮಲಪರೊಳ್ಗಂಡಂ ಕದನಪ್ರಚಂಡಂ (ಮೈಆರ. ೦೯೩೫, ೪೯-೫೪ ; 10ನೆಯ ಶತ ?) ; ಮಲೆಪರೊಳುಗಂಡಂ . . . ಶ್ರೀವೀರಬಲ್ಲಾಳದೇವರು (ಎಕ. VII, ಶಿಮೊ. ೫-೦೯ ; 1217). **ಮಲವರ ಮಾರಿ ನಿಷ್ಕ** = ಒಂದು ಬಗೆಯ ನಾಣ್ಯ : ಪ್ರತಿವತ್ಸರಂ ಷಣ್ಣಂಶತಿ ಮಲವರ ಮಾರಿ ನಿಷ್ಕಂ ? (ಮುಂಎಂಡ. IX, ೨೯೩-೬ ; 1186). **ಮಲೆತಿರ್**, **ಮಲೆದಿರ್** = ಉದ್ಧಟತನದಿಂದಿರು ; ಸೊಕ್ಕಿನಿಂದ ಕೂಡಿರು : ಜಂಗಮವಸತಿ

ಮನ್ನಿಸದೆ ಮಲೆತಿರ್ದೆನಾದೊಡೆ ನಿನ್ನ ಪಾದಕೆ ದೂರನಾದಹೆ (ಕೃಭೂಃ. ೦೬-೪೬) ; ಇಡು ಕಲ್ಲಿಂ ಮಲೆದಿರ್ಪ ಪೆರ್ಗರಡಿಯುಂ . . . ಪಿಡಿ ಸಾರಂಗಮುಂ (ತ್ರಿಶೂಪ. ೨೭-೩೨). ಮಲೆಪರ ಮಾರಿಯ ಕೋಲ್ = ಒಂದು ಅಳತೆಯ ಕೋಲು : ಅದರ್ಕೆ ಬಿಟ್ಟ ಮಲೆಪರ ಮಾರಿಯ ಕೋಲೊಳ್ಪಾಲ್ಕು ಮತ್ತರು (ಕಶಾ. XI-I, ೬೩-೪೯ ; 1028). ಮಲೆವರ ಮಾರಿ = ಪ್ರತಿಭಟಿ ಸುವವರಿಗೆ ಮಾರಿಯಂತೆ ಉಗ್ರನಾಗಿರುವವನು: ಮುನಿದೆನಾದರೆ ಕೋಟಿಕೃಷ್ಣಾರ್ಜುನರ ಕೊಂಬೆನೆ ರಣಕೆ ದುರ್ಯೋಧನಗೆ ಮಲೆವರ ಮಾರಿ ಪಾಂಡವಮೇಘಪವಮಾನ ತನಗೆ ಸರಿ ಯಾರಿಲ್ಲ (ಕುವ್ಯಾ. ೯-೦೬). ಮಲ್ಲಹರ ಮಾರಿಯ ಕೋಲ್ = ಮಲೆಪರ ಮಾರಿಯ ಕೋಲ್ : ಮಳುಗುಂದದ ಮಲ್ಲಹರ ಮಾರಿಯ ಕೋಲೊಳ್ಸರ್ವ್ವನಮಶ್ಯಂ ಬಿಟ್ಟ ಕೆಯ್ಯ ಮತ್ತರ್ ೨ (ಕಶಾ. XI-ii, ೦೫೨-೬೮ ; 1103). P ಇದು "ಮಲೆಪರ ಮಾರಿಯ ಕೋಲ್" ಎಂಬುದರ ಅಪಲಿಖಿತ.

[ದೇ.॥ ತಮಿ. ಮಲೈ ; ತೆಲು. ಮಲಯು]

**ಮಲೆ₂** (ಕ್ರಿ). ಬಗ್ಗಡವಾಗು ; ರಾಡಿಯಾಗು : ಬಾವಿಯೊಳಗಿನ ನೀರು ಮೇಲೆಮೇಲೆ ಚೆಚ್ಚಾಗುತ್ತಿದ್ದರೆ ಅದು ಮಲೆಯುವುದಿಲ್ಲ, ಸ್ವಚ್ಛವಿರುತ್ತದೆ (ಮುಂಕಥಾ. ೩-೦೩೮) ; ಕಳೆದ ಬಟ್ಟೆ ತೊಳೆದಂತೆ ಹರಿದುಹೋಗುವುದು ಮಲೆತ ಕೊಳಕು (ಸೂರ್ಯಶಾ. ೦೩-೬). [ದೇ.॥ ಮಲ. ಮಲಿಕ್ಕ]

**ಮಲೆ₃** (ನಾ). ೧. ಬೆಟ್ಟ ; ಪರ್ವತ : ಮಲೆಗಳ ಮೇಲಿರ್ದುಂ ಪೆರ್ವೊಲೆಗಳ ಮೇಲಿರ್ದರಧಿಕದುಶ್ಚಾರಿತ್ರರ್ (ಧರ್ಮಾಮೃ. ೬-೬೨) ; ಪೆರ್ವರನೊಳ್ ಸೆಲೆಯೊಳ್ ಮಲೆಯೊಳ್ ಮಲೆದು ಕಾದಿದಂ (ರಾಪಾಶ್ಚ. ೦೪೦-೨೩). ೨. ಬೆಟ್ಟವನ್ನು ಆವರಿಸಿರುವ ಕಾಡು : ಅವನಿಯೊಳ್ ಕಾಳಹಸ್ತಿಯ ಮಲೆಯೊಳೆಯ್ದೆ ನೀವವತರಿಸಿ ಮೃಗಗಳಾಗಿರೆ ನಿಮ್ಮ ದೇಹಮಂ ತಂದರ್ಪಿಪಂ ಸಾದರಂ ತಪಧಿಂದೆಮ್ಮ ಕಿಂಕರಂ (ಮುಶಾಪ. ೬-೯೨). ೩. ಬೆಟ್ಟಸೀಮೆಯ ಪ್ರದೇಶ ; ಮಲೆನಾಡಿನ ರಾಜ್ಯ : ಮಲೆಯುಂ ಮಂಡಲಮುಂ ಬೆಳರ್ಚುವಂತು ಕೊಂಡಾಡುವ ನಾಲ್ವರು ಮನುಜರೊಳಗೆ ನೆಗಟ್ದರಿಗನ ತೇಜಮೆ ತೊಳಗಿ ಬೆಳಗೆ (ಶಂಕಪಾ. ೪-೦೦ ೪೧೪) ; ಪರಚಕ್ರಭೈರವಂ ರಾಯದಣ್ಣಾಗೋಪಾಳಂ ಮಲೆಯ ಮಣ್ಡಳಿಕ ಮೃಗಶಾರ್ದೂಳಂ (ಕಶಾ. XI-i, ೦೦೬-೯ ; 1074) ; ಒಡನೆ ನಿಟ್ಟಿಸಿ ನೋಡುವರಿಗಗೋಚರವಿಡಿದಾಗ ಬಲುಮಲೆಯೊಳಗೆ ಅಡಗಿಕೊಂಡಿಹ ಪಾಲು ಪರೆಯ ಸಾಧಿಸುವೊಡೆ ಮೃಡನಿಗಸಾಧ್ಯವೇವೇಳ್ದೆ (ಶಂಪಬಿ. ೦೮-೪೪). ೪. ಬೆಟ್ಟದಲ್ಲಿ ವಾಸಿಸುವ ಜನ : ಮಲೆ ತಲೆದೋಱಿದೆಂದುದನೆ ಕೊಟ್ಟು ದೆಡಂಗಪಡಂಗ ಬಂದೊಡೆ (ಶಂಕಪಾ. ೨-೯೦). ೫. ಒಂದು ಊರಿನ ಹೆಸರು : ಮಲೆಸಾಸಿರ್ವ್ವರುಮುಂ ಪ್ರರ್ವ್ವಗೂ ಮಯ್ಯಾ ಮರಿಗರುಂ ಇದಕ್ಕೆ ಕಾಪು ಇದನಟಿದೊಂ . . . ಪಞ್ಚಮಹಾಪಾತಕನಕ್ಕುಂ (ಎಕ. I (R), ೯೬-೦೦ ; 888).

ಮಲರಾಜರಾಜ = ಬೆಟ್ಟಪ್ರದೇಶದ ರಾಜರಿಗೆ ರಾಜನಾದವನು ; ಒಂದು ಬಿರುದು : ಸಮ್ಯಕ್ತ್ವಚೂಡಾಮಣಿ ಮಲರಾಜರಾಜಂ ಮಲಪರೊಳ್ಗಂಡಂ ಕದನಪ್ರಚಂಡಂ (ಪ್ರಿಅಂ. ೦೯೬೩. ೯೯-೩೩ ; 10ನೆಯ ಶತ ?).

[ದೇ.॥ ತಮಿ. ಮಲೈ; ಮಲ. ತೆಲು. ಮಲ ; ಕೊಡ. ತುಳು. ಮಲೆ ; ಕೋಲಾ. ಮಾಲೆ, ಮಾಲೇ ; ಪರ್ಜಿ. ಮಲಂಗ್ ; ಗಡಬ. ಮಲೆ]

**ಮಲೆಕೋಡು** (ನಾ). ಬೆಟ್ಟದ ತುದಿ ; ಶಿಖರ : ಬಾನಾಡಿಯುಲಿವ ಮಲೆಕೋಡಿನಿಂದ ಕೆಳಗುರುಳಿ ನೂಲು — ನೀರು (ಶಿಲಾಂ. ೪೦-೦೩).

[ಮಲೆ₃ + ಕೋಡು₅]

**ಮಲೆಗ** (ನಾ). ಬೆಟ್ಟಸೀಮೆಗೆ ಸೇರಿದವನು ; ಮಲೆನಾಡಿನವನು : ಒಂದುಕೆಲದೊಳ್ಮಲೆಗರೊನ್ದುವೆರದೆಲ್ಲರ್ ಸನ್ದಣಿಸಿ ಕಾಳಗಕೆ ಮುನ್ದು ಪರಿವನ್ನಂ (ಎಕ. VI, ಶ್ರೀರಂಗ-೬೪-೭೮ ; 722). [ಮಲೆ₃ + —ಗ₂]

**ಮಲೆಗಾಳಿ** (ನಾ). ಬೆಟ್ಟದ ಮೇಲಿಂದ ಬೀಸುವ ಗಾಳಿ ; ತಂಗಾಳಿ : ಪ್ರಾಣದ ಒಗರಷ್ಟು ಹಿಂಡಿತು ಹಿಂದಲಿಗೆ ಮುಗದವ ಮಲೆಗಾಳಿ ಮುಂದೆಳೆದಿತು (ಸಬೀಗೀ. ೩೦-೩೭೦). [ಮಲೆ₃ + ಗಾಳಿ₁]

**ಮಲೆಗೊಡಗೆ** (ನಾ). ಬೆಟ್ಟದ ಪ್ರದೇಶದ ಜಮೀನಿನ ಮೇಲೆ ಹಾಕುವ ತೆರಿಗೆ (?) : ಮಲೆಗೊಡಗೆಗಳಿಂದ ತೆಱುವ ವರಹ ಗದ್ಯಾಣ ೨೦ ಹೊನ್ನೂ ಹ ೬ (ಪ್ಪೈಅಂ. ೦೯೩೩. ೨೯-೪೭ ; 1387).

[ಮಲೆ₃ + ಕೊಡಗೆ (< ಕೊಡಂಗೆಯ್₂)]

**ಮಲೆಜೇನ್** (ನಾ). ಒಂದು ಬಗೆಯ ಜೇನು ; ಬೆಟ್ಟದ ಜೇನು : ಪುಲಿಗಾಗಿ ಕೆಲರೇಳೆ ಕೆಲರಡಗಿಗೆನೆ ನಷೆಯೆ ಕೆಲರು . . . ಮಲೆಜೇನ್ಗೆ ಪೊರಟ ಹರ್ ಬಗೆಯುತೊಂದೊಂದಂ (ಕಾಂಜಕ. ೯೦-೦೭೭). [ಮಲೆ₃ + ಜೇನ್₁]

**ಮಲೆತರ್** (ಕ್ರಿ). ಮದಿಸಿ ಬರು : ಪುಲ್ಲೆಗಾಟಿಸಿ ಮಲೆತರ್ಪರಲೆಯ ಸೋಲಮನಟ್ಟಿಯೊಳರಿಕೇಸರಿ ನಿಂದು ನೋಟ್ಟುದೊಂದರಸಲ್ತೇ (ಶಂಕಪಾ. ೩-೪೪). [ಮಲೆ₁ + ತರ್]

**ಮಲೆದುರ್ಗ** (ನಾ). ಬೆಟ್ಟದ ಮೇಲಿರುವ ಕೋಟೆ : ಮುಡಿಯೆಂಬ ಮಲೆದುರ್ಗ ಜಲದುರ್ಗ ತನುರುಚಿಯುವಲಿ ನೆಲೆಯಾದ ಯುವತಿಯರಂಗ ದೇಶದ ದಿವ್ಯಬಲವಿರ್ದ ನಿನಗಳವಾಯ್ತೆ (ಶರ್ಪಶ. ೦೨-೦೯).

[ಮಲೆ₃ + ದುರ್ಗ]

**ಮಲೆನಾಡಿಗ** (ನಾ). ೧. ಬೆಟ್ಟಗಾಡಿನಲ್ಲಿ ವಾಸಿಸುವವನು ; ಮಲೆನಾಡಿನವನು. ೨. (ಅಲಂ) ಕೋತಿ ; ಮರ್ಕಟ : ಮಲೆನಾಡಿಗನೆಂದೊಡಾವಂ ? . . . ಮಲೆಯೊಳೆ ನೆಲೆಗೊಂಡಿರ್ಪ ನಾಲ್ಗೆಯ ದೇವರ್ (ರಾಪಾಶ್ಚ. ೮೯-೨೦). [ಮಲೆನಾಡು + — ಇಗ]

**ಮಲೆನಾಡು** (ನಾ). ಬೆಟ್ಟಗುಡ್ಡಗಳಿಂದ ಕೂಡಿದ ಪ್ರದೇಶ; ಬೆಟ್ಟದ ಸೀಮೆ : ಮಲೆನಾಡಂ ಪೋಲ್ವ ನಾಡುಗಳ್ (ಶಬ್ದಾಮ. ೩೨೭ ವ್ಯಾಖ್ಯಾ) ; ಅಲ್ಲವರಿಷಣವುಂಟು ಬೆಲ್ಲ ಬಿಳಿಯೆಲೆಯುಂಟು ಒಳ್ಳೆ ಹಲಸುಂಟು ಮೆಲ್ಲಲ್ಕೆ ಮಲೆ[ಶಾಕಾಂ. ಲ]ನಾಡನಲ್ಲೆನ್ನಬಹುದೆ (ಸರ್ವಜ್ಞ. ೦೬೨೩) ; ಹದಿನಾಡ ಮೊದೆನಾಡ ಮಲೆನಾಡ ಮನ್ನೆರ ಬೆದರಿಸಿ . . . ಮೈಸೂರಿನೊಳಗಿನಲ್ಲಿಯ ಮೆಟ್ಟಿ ಒದಗಿ ಬಂದನು ಕಡೆಗಡಿಗೆ (ಕಾಂಠಕಾ. ೩-೦೯). [ಮಲೆ₃ + ನಾಡು]

**ಮಲೆನಾಡುಗ** (ನಾ). = ಮಲೆನಾಡಿಗ ೧ : ಪೊಯ್ದಿಱಿದರ್ ಮಹಿಶೂರ ರೆನಿಸಿ ಮಲೆನಾಡುಗರಂ (ಅಶ್ರಿತಿ. ೩೨-೩). [ಮಲೆನಾಡು + — ಗ₂]

**ಮಲೆಪ, ಮಲಪ, ಮಲಹ** (ನಾ). ೧. ಬೆಟ್ಟಗಾಡಿನ ಅರಸು ; ಬೆಟ್ಟಸೀಮೆಯ ರಾಜ : ಕಾವನ್ನಾರ್ಲ್ಪರ್ವ್ವತಲೆಪರುಂ (ಇಅ. VI. ೦೦೨-೦೯ ; 777?) ; ನೆಕುಳನುಂ ತೆಂಕಣದೆಸೆಯ ಮಲೆಪರಂ ಮಂಡಳಿಕರುಮನಸಿಯ ರಾಗೆ ಕವರ್ದುಕೊಂಡು (ಶಂಕಪಾ. ೬-೩೨ ವ) ; ಮಲೆವ ಮಲೆಪರ್ಕಳಕ್ಕೆಮ ಬಲ್ಲಿದ ಬಳಾನ್ವಿತರ್ ಮಹೀಪರಕ್ಕೆಮ (ಸುಕುಮಾ. ೯-೭೨) ; ಈ ಸಮಯ ದನ್ನೇ ಕಾಯುತ್ತಿದ್ದ ಕೆಲವು ಮಲೆಪರು. . . ದ್ವಾರವತಿಯನ್ನು ಸೂರೆ ಮಾಡಲು ಬಂದರು (ಶಾಂತಲಾ. ೦೩೬). ಮಲಪ: ೨. ಮಲೆಯಾಳದೇಶಕ್ಕೆ ಸೇರಿದವನು : "ತೆಲುಂಗನಾಂಧ್ರನೆನಿಕ್ಕು ತಿಗುಳ ದ್ರಾವಿಡನಕ್ಕು ಮಲಹ ಮಲವನೆನಿಕ್ಕು" (ಮುಂಗಾ. ೦೦೨-೭). ೩. ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದ ಅರಸು : ಕೆಳದಿಯ ಅರಸರು ಮಲವರೆಂದು ಹೇಳುವುದುಂಟು. ಮಲವರು ಹಟ್ಟಕಾರರಲ್ಲಿ ಅಗ್ರೇಸರರು (ಕರ್ನಾಪ್ರ. ೦೩೩). ಮಲಹ : ೨. "ಮಲಹ ಮಲವನೆನಿಕ್ಕು" (ಮುಂಗಾ. ೦೦೨-೭) ; ಮಲಹರ ತಲೆಯುಂ ಧಾಳಿಯಿಟ್ಟೆಬ್ಬಿ. . . ಪಾಣ್ಡ್ಯನಂ ಖಣ್ಡಿಸಲ್. . . ಬಂದನೇ ಶಾನೆಂಬಂತೆ ಬಂದಂ (ಕಶಾ. XX, ೯೯-೦೯; 1076?) ; ಚೋಳ ಬಾ ಮಲಹ ಬಾ ಹಪ್ಪ ಬಾ ಕುಂತಳಪಾಲಕ ಬಾ ಕಳುಹಿಸಿಕೊ . . . ನಿರ್ಜರ ಬರ್ಬರಪತಿ ನಡೆಯೆಂದು ವಿಸರ್ಜಿಸಿದರು ಸರ್ವನೃಪರ (ಶರಚ. ೩೩-೦೦೦). [ಮಲೆ₃ + — ಪ₂]

**ಮಲೆಪ್ಪು₁** (ನಾ). ೧. ಸೊಕ್ಕು ; ಅಹಂಕಾರ : ಅಲರ್ದರೆಗಟ್ಟಿಗೆಯಿ ಜಾದಿಯು ಮಲೆಪ್ಪುಂ ಮಲ್ಲಿಗೆಯ ಪೊಂಕಮುಂ ಬಟ್ಟಿಕವನಾರ್ತಲೆಯೊಳ್ ತಾಳ್ದುವರ್ (ಅನಿಪು. ೧೧-೧೦೯) ; ಮುಖವೆತ್ತಿ ಮುಡುಹು ಎದೆಗಳನ್ನಗಲಿಸಿ ಮೆಯ್ಯೆಬ್ಬಿಸಿ ಮೋಡಿಯ ಮಲೆಪ್ಪಿನಿಂದ ನೆಟ್ಟಗೆ ನಿಲ್ಲು (ವಿಬ್ಬಿಶಾ. ೧೦೬-೨೦). ೨. ಪ್ರತಿಭಟನೆ ; ವಿರೋಧ : ತಂಗಿಗೊದಗಿದಪಮಾನವೆಮ್ಮಯ ಕುಲಕೆ ನಾಣ್ಗೇಡು; ಬಡಗಲೆಸೆದಿಹ ಮಲೆಪ್ಪು ತೆಂಕಣದ ಗೌರವಕೆ (ಶ್ರೀರಾಮಪಾ. ೨೨೦-೨೯೩). [ಮಲೆ₁ + – ಪ್ಪು₂]

**ಮಲೆಪ್ಪು₂** 'ಮಲಪ್ಪು₂' ನೋ.

**ಮಲೆಪೊಡವಿ** (ನಾ). = ಮಲೆನಾಡು : ಹಬ್ಬಿ ಹಸರಿಸಿತುಬ್ಬಿತವಿ ವಟ್ಟ ಯ್ಸಿದಾ ದಿಟ್ಟ ಮಲೆಪೊಡವಿ (ಶ್ರೀರಾಮಪಾ. ೮೪೦-೯೩೨).

[ಮಲೆ₃ + ಪೊಡವಿ (< ಪೃಥುವಿ)]

**ಮಲೆಯ** (ನಾ). ೧. ಬೆಟ್ಟಗಾಡಿನಲ್ಲಿ ನೆಲಸಿದವನು; ಮಲೆನಾಡಿನವನು : ಕಿವಿಗೊಟ್ಟನಾ ಕಲಿ ಮಲೆಯನುಲಿಗೆ (ಶ್ರೀರಾಮಪಾ. ೨೮೯-೧೦೯). ೨. ಮಲಯ ದೇಶಕ್ಕೆ ಸೇರಿದವನು : ಮಲೆಯಾಳದವನು : ಒಂದಿರವಿನೊಳ್ಕೊಡಗ ರೊಂದುಕೆಲದೊಳ್ಮಲೆಯರೊಂದುವೆರೆದು (ಅಕ್ರೂಪ. ೬-೭). ೩. ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದ ವ್ಯಕ್ತಿ: ನೆಲ್ಲೂರ ವಂಲೆ ಯರ ಕೆಜೆಯಮನ ಮಗ . . . ದೇಗುಲಮುಂ ಮಾಡಿಸಿ ಸಾಸನಮುಂ ನಿಱಿ ಸಿದಂ (ಎಕ. VIII, ಸೊರಬ. ೯೭೦-೯; 1012). [ಮಲೆ₃ + – ಅ₇]

**ಮಲೆಯರಸ** (ನಾ). ಪರ್ವತರಾಜ; ಹಿಮವಂತ : ಒಂದು ಸಂಗಡ ಮಲೆಯರಸನ ಮಗಳೊಳಗೆನ್ನ ಸರಕುಮಾಡನೆನುತ್ತ ಗಂಗಾಭವಾನಿ ಮುಸಿ ದಿರಲು (ಅಭಾಕ. ೨-೧). [ಮಲೆ₃ + ಅರಸ₁]

**ಮಲೆಯರಾಜಕ್ಕ** (ನಾ). ಒಬ್ಬಾತನ ಹೆಸರು : ಮಲೆಯರಾಜಕ್ಕಂ ಮಾವಸಂ ಕೊನ್ದನಮ್ ಕಣ್ಣು ಕಾದಿ ಇಬ್ಬರಮ್ ಕೊನ್ದು (ಎಕ. VIII, ಸೊರಬ. ೩೭೯-೩; 985). [ ? ]

**ಮಲೆಯಾವರಿಕೆ** (ನಾ). ಒಂದು ಬಗೆಯ ಸಸ್ಯ : ಮಲೆಯಾವರಿಕೆ, ಸೊಗಡುತಗಚೆ (ವೃಶಿಾ. ೬೦-೧೯೩೪). [ಮಲೆ₃ + ಆವರಿಕೆ]

**ಮಲೆಯಾಳ**, ಮಲಯಾಳ, ಮಲೆಯಾಲ, ಮಳೆಯಾಳ (ನಾ). ೧. ಒಂದು ದೇಶದ ಹೆಸರು; ಇಂದಿನ ಕೇರಳರಾಜ್ಯ : ಚೋಳಿಕ ಲಾಳ ಗೌಳ ಮಲೆಯಾಳ ತೆಲುಂಗ ಕಳಿಂಗ . . . ಅದಿ ಭೂಪಾಳಕರ್ ಅಂಜಿ ಬೆಚ್ಚಿ ಬೆಸಕೆಯ್ಯೆ (ಸೌ‌ಇಇ. XX, ೦೯೨-೯; 1165); ತುಳುವ ಮಲಯ ಹುಲೆಯಾಳ ಕರ್ನಾಟ . . . ದೇಶಂಗಳೊಳೆಸವ ಜಂಗಮವು (ಬಸಪು. ೬-೦೮) ; ಕೊಂಕಣ ಮಲೆಯಾಳ ಕೊಡಗು ಭೂಪಾಲರ ಬಿಂಕವ ಮರ್ದಿಪ ಶೂರ (ಕಂಸಾ. ೦-೨೩). ೨. ದ್ರಾವಿಡಭಾಷೆಗಳಲ್ಲಿ ಒಂದಾದ, ಆ ದೇಶದ ಭಾಷೆ : ದ್ರಾವಿಡ ಭಾಷೆಗಳಲ್ಲಿ ಸಂಸ್ಕೃತದ ಪ್ರಭಾವ ಮಲೆಯಾಳದಲ್ಲೇ ಹೆಚ್ಚು (ದ್ರಾವಿವಿ. ೦೦೮). **ಮಲಯಾಳ** : ೧. ಮಲಯಾಳಧರಾಧಿಪ ಶಿರೋಚ್ಚಯಕುಲಿಶದಂಡ ಪರಾಕು (ಜಾದಕಾ. ೩-೦ ವ). ೩. ಕೇರಳದೇಶಕ್ಕೆ ಸೇರಿದವನು : "ನಾಯಃ–ಕಾಕ್ಕುರನು; ಮಲಯಾಳನು" (ಶಾಕಕ. ೦೫೮). **ಮಳೆಯಾಲ** : ೩. ಮಳೆಯಾಲರು ತೆರುವ ಗ ೩.೨ (ಎಕ. XV, ಬೇಲೂರು. ೨೯೬-೭೨; 1279). **ಮಳೆಯಾಳ** : ೩. ಬೇಡರ ರೂಢಿ ತಗ್ಗಿತು ಮಳೆಯಾಳರು ಪಾಪಳದಿರ ದೋಡಿದರು (ಕಂಸಾ. ೦೬-೨೩).

[ದೇ.॥ ತಮಿ. ಮಲೈಯಾಳಮ್ ; ಮಲ. ಮಲಯಾಳ; ತುಳು. ಮಲಯಾಳ, ಮಲೆಯಾಳ; ತೆಲು. ಮಳಯಾಳಮು]

**ಮಲೆಯಾಳಿ** (ನಾ). ೧. = ಮಲೆಯಾಳ ೨ : ಇವರು . . . ಮಲೆಯಾಳೀ ಭಾಷೆಯನ್ನಾಡುವರು (ಕರಾಗ. ೨೯೪). ೨. = ಮಲೆಯಾಳ ೩ : ಈ ಊರಿನಲ್ಲಿ ಮಲೆಯಾಳಿಗಳೂ ನೆಲೆಸಿದ್ದಾರೆ (ಅದೇ).

[ದೇ.॥ ತಮಿ. ಮಲೈಯಾಳಿ; ತುಳು. ಮಲಯಾಳಿ]

**ಮಲೆಯಾಳು** (ನಾ). ಗುಡ್ಡಗಾಡಿಗೆ ಸೇರಿದವನು ; ಪರ್ವತವಾಸಿ : ಆ ವೀರಮಾರ್ತಾಂಡನು ಗುತ್ತಗಾಡುಪ್ರದೇಶದಲ್ಲಿರುವ ಮಲೆಯಾಳು ಗಳನ್ನು ಕಲೆಹಾಕಿ ತನ್ನ ಸುತ್ತಲು ಬಿಲ್ಲಾಳುಗಳ ಸಮೂಹವನ್ನು ಬಳಸಿ ಕೊಂಡನು (ಕವೀಶ. ೯). [ಮಲೆ₃ + ಆಳು₃ (< ಆಳ್₃)]

**ಮಲೆಯಿಸು** (ಕ್ರಿ). ಪ್ರತಿಭಟಿಸುವಂತೆ ಮಾಡು ; ಎತ್ತಿಕಟ್ಟು : ಮಲೆಯದುದಂ ಮಲೆಯಿಸಲುಂ ಮಲೆದುದಂ ತೊಲಗಿಸಲುಂ . . . ಆನೆ ಬಲ್ಲೆಂ (ಕಂಸಲಾ. ೩-೯೩ ವ). [ಮಲೆ₁ + – ಇಸು₃]

**ಮಲೆಯೆರಲ್** 'ಮಲೆಯೆಲರ್' ನೋ.

**ಮಲೆಯೆಲರ್**, ಮಲೆಯೆರಲ್ (ನಾ). ಬೆಟ್ಟದ ಕಡೆಯಿಂದ ಬೀಸುವ ಗಾಳಿ; ಮಲಯಮಾರುತ : ಮಲೆಯೆಲರಲೆಪು. . . ಕೋಗಿಲೆಯ ಜಡಿಪು ಪೊಡನೆಗಟ್ಟಿನಂ (ಅಶಪು. ೨-೦೯). **ಮಲೆಯೆರಲ್** : ತಣ್ಪಿನಿಯಂ ಚಂದನ ಗಂಧಮುಂ ಮಲೆಯೆರಲ್ಪಿಂದೆಯಿ (ಅರ್ಜನೀ. ೨-೩೬). [ಮಲೆ₃ + ಎಲರ್]

**ಮಲೆವಕ್ಕಿ** (ನಾ). ಬೆಟ್ಟದಲ್ಲಿ ವಾಸಿಸುವ ಹಕ್ಕಿ; ಮಲೆನಾಡಿನ ಹಕ್ಕಿ : ಇತರ ವನಗಳಲ್ಲಿ ಜೇನೆ, ಕಾಜಾಣ, ಗಿಳಿ, ಕಾಮಳ್ಳಿ, ಪಿಕಳಾರಿ, ಕೋಗಿಲೆ, ಮಲೆವಕ್ಕಿಗಳ ಉಲ್ಲೇಖ ಬರುತ್ತಿದೆ (ಸಾಸಪಾ. ೯೯). [ಮಲೆ₃ + ಪಕ್ಕಿ]

**ಮಲೆಸೇನ** (ನಾ). ಬೆಟ್ಟಗಾಡಿನಲ್ಲಿರುವ ಗಿಡುಗ, — ಡೇಗೆ : ಅರಣ್ಯ ದಲ್ಲಿರುವ . . . ಕಡವೆ ಸಾರಂಗ ಕಪಿ ಗಿಣಿ ಮಲೆಸೇನ . . . ಮುಂತಾದ ಅನೇಕ ಮೃಗಪಕ್ಷಿಗಳನ್ನು ಚೆನ್ನಾಗಿ ಕಾಪಾಡುತ್ತಿದ್ದರು (ಮಹಾಮಂ. I. ೦೩೨).

[ಮಲೆ₃ + ಸೇನ₂]

**ಮಲೆಸೌತೆ** (ನಾ). ಒಂದು ಬಗೆಯ ಸೌತೆ : "ಕಂದಾರುಃ— ಮಲೆಸೌತ್ತೆ, ಪರಿಕಂದ, ರಕ್ತಪಿಂಡಾಲು" (ಓಶಂ. ೨೦). [ಮಲೆ₃ + ಸೌತೆ (< ಸವುತೆ)]

**ಮಲೆಹ** (ನಾ). ಪ್ರತಿಭಟನೆ ; ವಿರೋಧ : ಮಾರಿಪೊಡನೆಯೆ ಮಲೆ [ಹಾ]ಹ ಸುಖಿವೈ (ಅಭಾಗ. ೩-೦-೦೨).

[ಮಲೆ₁ + – ಹ₃ (< – ಪ್ಪು₂)]

**ಮಲೆಹೆಗ್ಗ** (ನಾ). ಒಂದು ಬಗೆಯ ಸಸ್ಯ : ಹೆಗ್ಗ, ಮಲೆಹೆಗ್ಗ (ವೃಶಿಾ. ೯೯-೬೭೩). [ಮಲೆ₃ + ಹೆಗ್ಗ]

**ಮಲೇರಿಯ** (ನಾ). ಒಂದು ಬಗೆಯ ಸೊಳ್ಳೆಯ ಕಡಿತದಿಂದ ರೋಗಾಣುಗಳು ರಕ್ತದಲ್ಲಿ ಸೇರಿ ಉಂಟಾಗುವ ಜ್ವರ : ಚಳಿಜ್ವರ : ಮಲೇರಿಯಪರತಂತ್ರಜೀವಿಯು ಕೆಂಪುರಕ್ತಕಣಗಳ ಒಳಗೆ ಜೀವಿಸುತ್ತವೆ (ಕರಜೀ. ೦೩). [← ಇಂ. Malaria]

**ಮಲ್ತೊ** (ನಾ). ದ್ರಾವಿಡಭಾಷೆಗಳ ಗುಂಪಿಗೆ ಸೇರಿದ ಒಂದು ಭಾಷೆ : ದ್ರಾವಿಡಭಾಷೆಗಳ ಗುಂಪಿಗೆ ಸೇರಿದ ಮತ್ತೊಂದು ಮುಖ್ಯವಾದ ಭಾಷೆ ಯೆಂದರೆ ಮಲ್ತೊಭಾಷೆ (ದ್ರಾವಿವಿ. ೦೯೩).

**ಮಲ್ನೀರು** 'ಪೊಲೆನೀರು' ನೋ.

**ಮಲ್ಲೂಫ**, ಮಲ್ಲೂಫಿ (ನಾ). ಲಕೋಟೆಯ ಒಳಗಿಡುವ ಪತ್ರ ಮತ್ತು ಅದರೊಡನೆ ಲಗತ್ತಿಸಿದ ಇತರ ಪತ್ರ : ನನ್ನ ಲಕೋಟೆಯೊಳಗಿನ 'ಮಲ್ಲೂಫ ನಮ್ಮ ಧನಿಯ ವಿಳಾಸಕ್ಕೆ ಇತ್ತು. ಅದನ್ನು ಅವರ ಬಳಗೆ ಕಳುಹಿಸಿದ್ದೇನೆ (ಒಹಾವು. ೦೬೯). **ಮಲ್ಲೂಫಿ** : ಮಲ್ಲೂಫಿ ಹಾಕಿದರ ಹಾಕಿದರು, ಬಿಟ್ಟರೆ ಬಿಟ್ಟರು (ಪಮೂರು. ೦೫೩).

[← ಅರ. ಹಿಂ. ಮರಾ. ಮಲ್ಲೂಫ್]

**ಮಲ್ಲೂಫಿ** 'ಮಲ್ಲೂಫ' ನೋ.

**ಮಲ್ಲ** (ಗು). ೧. ದಕ್ಷವಾದ; ಸಮರ್ಥವಾದ : 'ಮಲ್ಲಗಿಳಿ' ಪರಾ. (ನಾ). ೨. ಬಾಹುಬಲದಿಂದ ಕಾದುವವನು; ಕುಸ್ತಿಪಟು; ಜಟ್ಟಿ : "ಕೆಸಜಂಕರೆನಲ್ಕೆ ಮಲ್ಲರೊಳ್" (ಕಶಾಅ. ೨೭) ; ಸುಯೋಧನನ ಮಲ್ಲಂ ವಿಷಮೋರ್ವರನೆಂಬಂ ತನ್ನ ಮಲ್ಲರೆಲ್ಲರುಮಂ ಕೊಂದೊಡೆ (ಕಂಸಲಾ. ೬-೩೬ವ); ಅಬ್ಬಿತದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುದೋಜಿಸಿದ ಮಲ್ಲನ

ನುಬುರ್ಜತ್ತೊಡ್ಡುಮ್ಮನೊಳಪೊಕ್ಕು ಮಿಕ್ಕು ಪರಿದಿಕ್ಕಿ (ಗಂ೪. ೨-೦೦೫ ವ); ತಗರ ಕಾದಿಸುವ ಮಲ್ಲರ ಹೋರಿಸುತ್ತಿಪ . . . ರಾಜಪುತ್ರರು ಸೊಗಸಿದರು (೪೦ವಿ. ೨-೬೬). ೩. ಬಲಶಾಲಿ; ಬಲಾಢ್ಯ: ಮುಂದಾಂಪರಾರುಮಿಲ್ಲ ದಿಕ್ಕಿ ಗೆಲ್ದ ಮಲ್ಲನಿರ್ದಂತಿರ್ದಾಗಳ್ (ಶಂಕಭಾ. ೦೨-೨೪ ವ): ಮಲ್ಲ ಭೀಷ್ಮನು ಪುರಕೆ ತಂದವರೆಲ್ಲರನು ತಮ್ಮಂಗೆ ಮದುವೆಯ ಮಾಡಲನುಗೈದ (ಸಂಭಶ. ೦೩-೩೫). ೪. ಗಟ್ಟಿಗ ; ದಕ್ಷ : 'ಪರಟಿಮಲ್ಲ' ಪರಾ. ೫. ಒಬ್ಬಾತನ ಹೆಸರು : ಮಲ್ಲ ಪರಿಯೊಡನೆ ತಾಗಿ ಕಾದಿ ಸಗ್ಗಿಯಾದವರ್ (ಎಕ. IX, ಶ್ರೀವಿಪಾ. ೦೯-೩; ಸು. 800). ೬. ಮಲ್ಲಿಕಾರ್ಜುನನೆಂಬ ಒಬ್ಬ ಕನ್ನಡ ಕವಿಯ ಹೆಸರು : ಮಲ್ಲಬುಧನಿಂದಂ ಕಾವ್ಯಸಾರಂ ಜಗನ್ನುತಮಾಯ್ತು (ಸೂಕ್ತಿಸು. ೦-೨೪). [ಸಂ.]

**ಮಲ್ಲಂತಿಗೆ** (ನಾ). ದ್ವಂದ್ವಯುದ್ಧಮಾಡುವವನು ಸೊಂಟಕ್ಕೆ ಕಟ್ಟಿಕೊಳ್ಳುವ ವಸ್ತ್ರದ ಪಟ್ಟಿ; ಕಾಸೆ : ಸಾಹಸಭೀಮಂ ಮಲ್ಲಂತಿಗೆಯ ನವ್ವೊಡಂ ಸಡಲಿಸದವನನವಯವದೊಳಿಂತೆಂದಂ (ಶಂಕಭಾ. ೩-೦೬ ವ) ; ಪಾಸಿದ ಪಸೆಯ ಮೇಲೆ ಮಲ್ಲಂತಿಗಿಱಿದಱಿದು ಕುಳ್ಳಿರ್ದು ಕಯ್ಯಿಕ್ಕಿಕೊಂಡಿರ್ಪುದುಂ (ಅರ್ಜನೀ. ೫-೨೮ ವ); ನಿನ್ನನೀ ಮನೆಯೊಳಗೆ ದಿಟದ ದೇವತೆಯಂತೆ ಮಲಗಿ ಮಲ್ಲಂತಿಗಿಱಿದು ಕುಳ್ಳಿರಲೀಯೆಂ (ಅರ್ಜನೀ. ೭-೫೦ ವ).

[< ಸಂ. ಮಲ್ಲವಸ್ತ್ರಿಕಾ]

**ಮಲ್ಲಕಂಭ** 'ಮಲ್ಲಗಂಭ' ನೋ.

**ಮಲ್ಲಕಳ** 'ಮಲ್ಲಗಳ' ನೋ.

**ಮಲ್ಲಕಾಳಗ** 'ಮಲ್ಲಗಾಳೆಗ' ನೋ.

**ಮಲ್ಲಖಂಡ** (ನಾ). ಒಂದು ಬಗೆಯ ಔಷಧಿ : ಕರ್ಪೂರಶಿಲಾಜಿತುಭಸ್ಮ, ಅತಿಮಧುರ . . . ಮಲ್ಲಖಂಡ ಇವನ್ನು ಸಮವಾಗಿ ಮರ್ದಿಸಿ ಜೇನು ತುಪ್ಪದೊಡನೆ ಕೊಡಲು ಬಹುಮೂತ್ರ ನಿಲ್ಲುವುದು (ಸಕವ್ಯ. ಶಂ. ೪೯೮).

[ ? ]

**ಮಲ್ಲಗ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಎಲ್ಲಾಯಿಯಕನಾತಿ ಬನದ ಶಂಕರಿ ಮಲ್ಲಗ ಜಟ್ಟಿಂಗ (ವಿಶಾಸು. ೫೮-೨). [ ? ]

**ಮಲ್ಲಗಂಟು** (ನಾ). ದ್ವಂದ್ವಯುದ್ಧ ಮಾಡುವವನು ತನ್ನ ಸೊಂಟಕ್ಕೆ ಕಟ್ಟಿಕೊಳ್ಳುವ ನಡುಕಟ್ಟು : ಉಟ್ಟ ಮಲ್ಲಗಂಟಿನ ತೊಡರ್ಚಿದುಡೆಗಂಟೆಯ . . . ಕಟ್ಟಣಕದ ಸಿಂಗರಂಬೆರಸಿ ಬೀರಸಿರಿಯಂ ಬೀಱ³ (ಗಂ೪. ೬-೫೫ ವ); ನಿಱಿದುಂಡಿಗೆಯುಲಿ ಮಲ್ಲಗಂಟಿನ ಸೆಱಗ ಮೋಹಿಸಿ ಬೆರಳ ದರ್ಭೆಯ ಹಱಿದು ಬಿಸುಟನು (ಕುಮಾವ್ಯದ್ರೋ. ೯-೦೫); ಮಗಧ ರಾಜನನ್ನು ಮಲ್ಲಗಂಟನಲ್ಲಿ ತುಡುಕಿ ಹಿಡಿದು ರಭಸದಿಂದ ತಿರುವಿ ಎಸೆದನು (ರಾಜಸೂ. ೨೫). 'ಮಲ್ಲಂತಿಗೆ' ನೋ. [ಮಲ್ಲ + ಗಂಟು]

**ಮಲ್ಲಗಂಡಿಕೆ** (ನಾ). ಜಟ್ಟಿಯ ಪರಾಕ್ರಮ, –ಶೌರ್ಯ : ಕಲಿಯುಗದ ಈ ಭೀಮನ ಮಲ್ಲಗಂಡಿಕೆಯ ಮೆಯ್ಸಿರಿಯಲ್ಲಿ ಅಳೆವರಿಕೆಗೊಳ್ಳಬಹುದಹುದು (ಮಂತ್ರಕ., ೮೮-೦೫). [ಮಲ್ಲ + ಗಂಡಿಕೆ₁]

**ಮಲ್ಲಗಂಬ** 'ಮಲ್ಲಗಂಭ' ನೋ.

**ಮಲ್ಲಗಂಭ**, ಮಲ್ಲಕಂಭ, ಮಲ್ಲಗಂಬ (ನಾ). ೧. ಜಟ್ಟಿಗಳು ಕಸರತ್ತು ಮಾಡಲು ಗರಡಿಮನೆಯಲ್ಲಿ ನೆಟ್ಟಿರುವ ಕಂಬ. ೨. ಆನೆಗಳನ್ನು ಕಟ್ಟುವ ಕಂಬ : ಮದಕರಿಗಳು ಕಟ್ಟಿದ ಮಲ್ಲಗಂಭವನೊಡೆದು ಕೆಡಪಿಕೊಂಡಾಗ . . . ದೆಸೆದೆಸೆಗೈದಿ ಹದಗೆಟ್ಟೋಡಿಯಾಡಿದುವು (ಕಂವಿ. ೧೫-೯೨). **ಮಲ್ಲಕಂಭ** : ೨. ಒಂದು ಮೂಲೆಗೆ ಮಲ್ಲಕಂಭವಿದ್ದು ಅದರ ಬುಡಕ್ಕೊಂದು ಬೆಳ್ಳಿಯ ಸರಪಳಿಯನ್ನು ಭದ್ರವಾಗಿ ಬಂಧಿಸಿದ್ದರು (ರಕ್ತರ. ೩೩೦). ೩. ಮಲ್ಲಗಂಬದ ಮೇಲೆ ಮಾಡುವ ಕಸರತ್ತು : ಎಲ್ಲಿಯ ಬಾಲಕ ? ನನಗಿಂತ ಹಿರಿಯನು. ಮಲ್ಲಕಂಭ, ಕುಸ್ತಿ ಇತ್ಯಾದಿಗಳನ್ನು ಮಾಡುತ್ತಾನೆ (ಷೋಡಶಿ. ೦೬). **ಮಲ್ಲಗಂಬ** : ೧. ಶಂಬರವೈರಿಯೆಂದೆಂಬ ಮಲ್ಲನ ಮಲ್ಲಗಂಬವನಿರದಿಳಿಕೆಯ್ವ ಇಂಬುವಡೆದ ತೊಡೆಗಳ ನೀಱಿವನಾರು (ಕುರಾಕಾಂ. ೨೨-೫೨). ೩. ಮುಂಜಾನೆ ಮಾಡುವ ವ್ಯಾಯಾಮದಲ್ಲಿ 'ದಂಡ', ಉಟಾಬಸಿ, ಓಡುವದು, ಮಲ್ಲಗಂಬ, ಲೋಡು ತಿರುವುವದು ಮುಂತಾದವುಗಳೂ . . . ಬರುತ್ತವೆ (ಧ್ರಿಹ್ಯಜೀ. ೨೦೦).

[ಮಲ್ಲ + ಕಂಭ]

**ಮಲ್ಲಗಚ್ಚೆ** (ನಾ). (ದ್ವಂದ್ವಯುದ್ಧ ಮಾಡುವವನಂತೆ) ನಿರಿಯನ್ನು ಹಿಂದಕ್ಕೆ ಪೊರಳಿಸಿ ಬಿಗಿದು ಕಟ್ಟುವ ಕಚ್ಚೆ; ವೀರಗಚ್ಚೆ : ಕರದಿ ಬಿಲ್ಲಂ ಪಿಡಿದು ಮೇಣುಟ್ಟು ಮಲ್ಲಗಚ್ಚೆಯ ಪೀತವಸನಮಂ, ತಿರುಗುತಿರೆ ಚಿತ್ರಾಂಗಿ, ಕಾನನದ ರಾಣಿ ತಾನೆಂಬವೊಲ್ (ಚಿತ್ರಾಂಗ. ೩-೬೯).

[ಮಲ್ಲ + ಕಚ್ಚೆ]

**ಮಲ್ಲಗದ್ದೆ** (ನಾ). ಒಂದು ಬಗೆಯ ಭೂಮಿ : ಯಿ ನಾಲ್ಕುಗಡಿಯಿಂದೊಳಗೆ ಮನೆ ಠಾಉ ಮಲ್ಲಗದ್ದೆ ಮತ್ತಗದ್ದೆ ಮಕ್ಕಿ ಸಹಾ ನಾಗಂಡು ಗದ್ದೆ ಮು ೧೦ (ಸೌಇಇ. IX-ii, ೪೬೫-೦೦; 1472).

[ಮಲ್ಲ ? + ಗದ್ದೆ (< ಗಬ್³ದ್)]

**ಮಲ್ಲಗಳ**, ಮಲ್ಲಕಳ (ನಾ). ದ್ವಂದ್ವಯುದ್ಧ ನಡೆಯುವ ಸ್ಥಳ ; ಅಖಾಡ; ಕುಸ್ತಿಕಣ : ಇಂದ್ರಧನುವೆ ಪೋಗವೆ ನಿಂದತ್ತನೆ ಪಂಚರತ್ನಮಯುವಂದನಮಾಲಿಕೆ ಮಲ್ಲಗಳದ ಬಾಗಿಲೊಳೆಸೆಗುಂ (ಜಗಿವಿ. ೬-೪೦). **ಮಲ್ಲಕಳ** : ಆ ಊರ ಮಲ್ಲಕಳದಲ್ಲಿ ಹೋರಿ ಹೊಯ್ದಾಡಿ (ಖಗಕ. ೪೫-೦೩).

[ಮಲ್ಲ + ಕಳ್₃]

**ಮಲ್ಲಗಾಸೆ** (ನಾ). = ಮಲ್ಲಗಚ್ಚೆ : ಮಲ್ಲಗಾಸೆಯ ತೆಗೆದುಟ್ಟು ನಲಿದು ಭರದಲ್ಲಿ ವಜ್ರಾಂಗಿಯ ತೊಟ್ಟು . . . ನಡೆತಂದರು ನಿಲ್ಲದೆ ಕಲಿವೀರಭಟರು (ಜೀವಂಧಾಂ. ೫-೩೫); ಕಪ್ಪಿನ ಭುಜಂಗಚರ್ಮದ ಮಲ್ಲಗಾಸೆಯೊಂದೆಸೆದ ವನಚರರೆಱ³ಯುತಂ ಕಂಡಳು (ಮದೀಪು. ೩೦-೨೩); ಜಗಜಟ್ಟಿಗಳ ತೆರದಿಂದೆ ಮಲ್ಲಗಾಸೆಯ ಬಿಗಿದು (ನವಮೋ. ೨೪-೫೫). [ಮಲ್ಲ + ಕಾಸೆ₁]

**ಮಲ್ಲಗಾಳಗ** 'ಮಲ್ಲಗಾಳೆಗ' ನೋ.

**ಮಲ್ಲಗಾಳೆಗ**, ಮಲ್ಲಕಾಳಗ, ಮಲ್ಲಗಾಳಗ (ನಾ). ಜಟ್ಟಿಗಳು ಮಾಡುವ ಯುದ್ಧ; ಬಾಹುಯುದ್ಧ; ದ್ವಂದ್ವಯುದ್ಧ : ಮಲ್ಲಗಾಳೆಗ ಮಲ್ಲವಾತು . . . ಎಂದು ಸೊಬಗಿಡದ ತತ್ಸಮಕೆ ಕನ್ನಡ ಸಕ್ಕದಂಗಳಲಿ ಕ್ರಮದಿಂದ ತೋರ್ಪುದಾಹರಣೆಯಕ್ಕುಂ (ಶಬ್ದಕ. ೯೯); ಇಂತಿರ್ವರುಂ ಸೋಲುಗೆಲವುಗಾಣದೆ ಗದೆಗಳಂ ತೊಱೆದು ಮಲ್ಲಗಾಳೆಗಕೆಳಸುತಿರಲು (ತಿಂಶ್ರು. ೦೬-೩೫). **ಮಲ್ಲಕಾಳಗ** : ಆ ಕಾಲದಲ್ಲಿ ಮಲ್ಲಕಾಳಗ ಮೊದಲಾದ ಪ್ರದರ್ಶನಪಂದ್ಯಗಳು ನಡೆಯುತ್ತಿದ್ದುದು ಆ ಬಯಲುರಂಗಭೂಮಿಯಲ್ಲಿಯೇ (ಕಶಶ್ರು. ೫-೦೪೪). **ಮಲ್ಲಗಾಳಗ** : ಮಲ್ಲ – ಮಲ್ಲಗಾಳೆಗ (ಮಲ್ಲಗಾಳಗ), ಮಲ್ಲಮುರಾಂತಕ, ಮಲ್ಲವಾತು (ಶಮದ. ೨೪೮ ವ್ರಯೋ).

[ಮಲ್ಲ + ಕಾಳೆಗ]

**ಮಲ್ಲಗಿಳಿ** (ನಾ). (ಮಾತನಾಡುವುದರಲ್ಲಿ) ಸಮರ್ಥವಾದ ಗಿಳಿ : ಕಲ್ಲದಾಡುವ ತೆಲ್ಲಯಿಸಿದ ಮಲ್ಲಗಿಳಿಯ ಸವಿನುಡಿಗೆ . . . ಬೆಲ್ಲಂಗೋಲ್ವಿಲ್ಲನ ಮಲ್ಲಿಗೆಸರಲ ಜಲ್ಲಣಿಗೆ ತಲ್ಲಣಂಗೊಂಡು (ರಾಮಾಶ್ವ. ೬೩-೪). [ಮಲ್ಲ + ಗಿಳಿ]

**ಮಲ್ಲಡಿ** (ನಾ). ಒಬ್ಬಾತನ ಹೆಸರು : ಲೋಕಾದಿತ್ಯ ಎಳಅರಸಮ್ಮಗಂದಿ ಮಲ್ಲಡಿಯುಂ ಕದಂಬೂರಾ ನಾಲ್ವದಿಂಬರು (ಎಕ. X, ಕೋಲಾರ. ೬-೫; 760). [ಮಲ್ಲ + ಅಡಿ₁]

**ಮಲ್ಲಣಿ** 'ಮಲ್ಲಟಿ³' ನೋ.

**ಮಲ್ಲಣಿಗೊಳ್** 'ಮಲ್ಲಟಿ³ಗೊಳ್' ನೋ.

**ಮಲ್ಲಣಿಸು** 'ಮಲ್ಲಳಿಸು' ನೋ.

**ಮಲ್ಲತುಂಬಿ** (ನಾ). ಗೋಡೆಗಳಿಗೆ ಮಣ್ಣು, ಸಿಮೆಂಟು ಮುಂತಾದುವುಗಳನ್ನು ಮೆತ್ತಿ ನಯಮಾಡುವುದು ; ಗಿಲಾವು : ಹರಕುಮುರುಕಾಗಿ,

ಬೀಳಲಿದ್ದ ಮನೆಗೆ ನಲವತ್ತುರೂಪಾಯಿ ವೆಚ್ಚಮಾಡಿ, ಹೋದ ತಿಂಗಳವೇ ಮಲ್ಲತುಂಬಿ ಮಾಡಿಸಿದ್ದಳು (ಕಳರು. ೬೩). [ ? ]

**ಮಲ್ಲದಾಳ** (ನಾ). ಮಲ್ಲಯುದ್ಧದಲ್ಲಿ ಜಟ್ಟಿಗಳು ತೊಡೆ ಮತ್ತು ತೋಳುಗಳನ್ನು ತಟ್ಟಿ ಸದ್ದು ಮಾಡುವುದು : ಪಳುಕಿನ ಕೋಡುಗಲ್ಗಳೊಳ್ ಪೊಳೆವ ತಮ್ಮ ನೆಟಲೆ ನೆರೆದ ಮಲ್ಲರ ನೆರವಿಯಾಗಿಯುಂ ನಿಕುಂಜೋಪಾಂತಜರ್ಝರನಿರ್ಝರಧ್ವನಿಯಿ ಮಲ್ಲದಾಳವಮಾಗಿಯುಂ (ಶಂತ್ರಪು. ೩-೭೭ ವ).
[< ಸಂ. ಮಲ್ಲಶಾಲ =ಸಂಗೀತದಲ್ಲಿಯ ಒಂದು ಬಗೆಯ ತಾಳ]

**ಮಲ್ಲಪ** (ನಾ). ಒಬ್ಬಾತನ ಹೆಸರು : ಕಾವಳಿಯರಣುಗುಮ್ಮ ತನ್ನ ತಮ್ಮ ನೊಟಪ್ಪುರಸನ ಮಲ್ಲಪ [ಮ]ನ್ನಟಿ ಕಾದು ಮನ್ನಟಿ ಕೊನ್ದು ಪಾ × × × (ಎಕ್. IX. ಹೊಸಕೋ. ೧೫-೩; ಸು. 980 ?).
[ಮಲ್ಲ + ಅಪ (<ಅಪ್ಪ$_1$)]

**ಮಲ್ಲಪಡಿ** (ನಾ). (?) : ಬಿರಕವೆಳಗಿಂ ಸುರಧನುವಿನ ಹೊರಜೆ ಹತ್ತಿ ದೈರಾವತಕ್ಕೆ ವೈರಮನೊಡರ್ಚೆ ಮಲ್ಲಪಡಿಯ ಪಡಿಯ ದತ್ತಿಗುಲ್ಲಾಳದಿಂ ನಡೆದು ತೋಟಿ ಹಿಂಗಾಲ್ಗಿಂದ ಸೂಟಾನೆಗಳ ತಾಳವಟ್ಟಮಂ ಪಿಡಿದು ಪಿಂದಣ್ಗೆ ಚಿಗಿದು (ಅಪಂಪು. ೨-೨೬ ವ). [ ? ]

**ಮಲ್ಲಪಳಿ** (ನಾ). ಜಟ್ಟಿಯು ಧರಿಸುವ ಉತ್ತಮವಾದ ವಸ್ತ್ರ : ಕಟ್ಟಿದ ದಟ್ಟಿ ಚಲ್ಲಣದ ಉಟ್ಟ ಮಲ್ಲಪಳಿಯ ಈ ವೇಷದಿಂದ ಕೆಮ್ಮಣ್ಣುಮಟ್ಟಿಯಲ್ಲಿ ವೀರಾಸನದಲ್ಲಿ ಕುಳ್ಳಿರುತ್ತ (ವಿಗಿ. ೩೦-೨೨). [ಮಲ್ಲ + ಪಳಿ$_4$ (<ಪಟು$_5$)]

**ಮಲ್ಲಮರ್ದನ** (ನಾ). (ಚಾಣೂರನೆಂಬ) ಜಟ್ಟಿಯನ್ನು ನಾಶಪಡಿಸಿದವನು ; ಕೃಷ್ಣ : ನಿಲ್ಲಬೇಕಯ್ಯ ನೀ ಮಲ್ಲಮರ್ದನ ಸಿರಿವಲ್ಲಭ ಎನ್ನ ಹೃದಯದಲ್ಲಿ ಸತತ (ಪುರಂದ. ದಾ. ೧-೦೦೭ ಪಲ್ಲವಿ). [ಸಂ.]

**ಮಲ್ಲಯುದ್ಧ** (ನಾ). = ಮಲ್ಲಗಾಳೆಗ : ಒಂದುದಿವಸಂ ವಿರಾಟಂ ನೆಲದೊಳುಳ್ಳ ಮಲ್ಲರೆಲ್ಲರುಮಂ ಬರಿಸಿ ಮಲ್ಲಯುದ್ಧಮಂ ನೋಡೆ (ಕಂಕಣಾ. ೮-೩೭ ವ); ಕಾಪುರದ ಕಲಿಗಳೊಡವೆರಸಿ ಪೊಯ್ದಾಡಿದರ್ಬಾಹುನಖಮುಷ್ಟಿಕೇಶಾಕೇಶಿಮಲ್ಲಯುದ್ಧದ ಹತ್ತಾಹತಿಗಳಿಂದೆ (ಕೈ ಬಿಜಾ. ೨೬-೬); ಕಾಳಗಕ್ಕೆ ಸಿದ್ಧನಾಗು ಎಂದು ನುಡಿದು ಮಲ್ಲಯುದ್ಧಕ್ಕೆ ಮಾತು ಕೊಟ್ಟನು (ರಾಜಸೂ. ೨೩). [ಸಂ.]

**ಮಲ್ಲರಂಗ** (ನಾ). ಮಲ್ಲಯುದ್ಧ ಮಾಡುವ ಸ್ಥಳ ; ಕುಸ್ತಿಕಣ ; ಅಖಾಡ : ಅನ್ನೆಗಂ ಮಲ್ಲರಂಗಕ್ಕವತರಿಸಿ ನಿಂದು (ಜಗಂ. ೬-೩೮ ವ). [ಸಂ.]

**ಮಲ್ಲಲ್** (ನಾ). ಮಧ್ಯಭಾಗವು ಹಳ್ಳವಾಗಿರುವ (ಮಣ್ಣಿನ) ಪಾತ್ರೆ : ಅನಿಬರುಮಂ ನೆಲಮನೆಯೊಳಿಕ್ಕಿ ಮಲ್ಲಲ್ ಪುಗುವನಿತು ಬಾಗಿಲಂ ಮಾಡಿ ಪ್ರತಿದಿನಕ್ಕೊಂದು ಮಲ್ಲಲ ಕೂಟುಮನೊಂದು ಮೊಗವೆ ನೀರುಮಂ . . . ನೀಡಿದೊಡೆ (ವಡ್ಡಾರಾ. ೦೬೨-೧೧).
[ದೇ.॥ ತಮಿ. ಮಲ್ಲವ್, ಮಲ್ಲೈ; ಮಲ. ಮಲ್ಲ, ಮಲ್ಲಿಕ; ತೆಲು. ಮಲ್ಲು; ಗೊಂಡಿ. ಮಾಲ್ಕೀ ; ಪರ್ಜಿ. ಮಲ್ಲಕ]

**ಮಲ್ಲವಜಿ** (ನಾ). ಒಂದು ಬಗೆಯ ರಣವಾದ್ಯ; ಜಟ್ಟಿಕಾಳಗ ನಡೆಯುವಾಗ ಬಾರಿಸುವ ಹರೆ : ಮಲ್ಲವಜಿಗಳು ಮೊಳಗಲಪ್ರತಿಮಲ್ಲರೋಲಗದಿದ್ದೆಸೆಗೆ ಜನವೆಲ್ಲ ಕುಳ್ಳಿರಲೆಸೆವ ಮಂಚಗಳಲಿ (ಜಭಾಗ. ೦೦-೩೮-೩೩). [ಮಲ್ಲ + ವಜಿ$_1$]

**ಮಲ್ಲವಾತು** (ನಾ). ಜಟ್ಟಿಕಾಳಗದಲ್ಲಿ ಮಲ್ಲರರು ಮಾಡುವ ವೀರೋದ್ಗಾರ, ಮೂದಲಿಕೆ ಮುಂತಾದುವು : ಮಲ್ಲ—ಮಲ್ಲಗಾಳೆಗ (ಮಲ್ಲಗಾಳಗ), ಮಲ್ಲಮುರಾಂತಕ, ಮಲ್ಲವಾತು (ಕಮಿಪ. ೨೯೮ ಕ್ರ ಪೋ).
[ಮಲ್ಲ + ಮಾತು$_1$]

**ಮಲ್ಲವಿದ್ಯೆ** (ನಾ). ಜಟ್ಟಿಕಾಳಗವನ್ನು ಮಾಡುವ ಕಲೆ ; ಕುಸ್ತಿವಿದ್ಯೆ : ಕೇಸರಿಗೆ ಶೌರ್ಯ್ಯದೊಳ್ ದೊರೆ ಕೇಸರಿ ಬಿಸುಬಂಧ ಮಲ್ಲವಿದ್ಯಾಬಲದೊಳ್ ಶಾಸಿತಮುಷ್ಟಿಕ ಚಾಣೂರಾಸುರನೊರ್ಬ್ಬನೆ ಸಮಾನಂ (ಎಕ್. V. ಅರಸೀ. ೦೮-೨೫; 1140); ಭುಜಬಲವಜಿವೆನಗ್ಗದ ಮಲ್ಲವಿದ್ಯೆಯಲಿ (ಕುವ್ಯಾ. ೬. ೦-೨೨). [ಸಂ. ಮಲ್ಲವಿದ್ಯಾ]

**ಮಲ್ಲವೋರ್** (ಕ್ರಿ). ಜಟ್ಟಿಕಾಳಗ ಮಾಡು ; ಕುಸ್ತಿ ಮಾಡು : ಮಲ್ಲವೋರ್ವೊಡೆ ಬಲ್ಲಿದರೆನಗಿಲ್ಲ ಮಲ್ಲರವನಿಪ ಪೆಸರಿಂ ವಲ್ಲಲನೆಂ (ಪಂಪಭಾ. ೦೦-೦೨೯); ಗಜಮಲ್ಲನೊಳ್ ಪ್ರತಿಮಲ್ಲಂ ಮಲ್ಲವೋರ್ದು ಸಿಂಹನಾದದಿನಾರ್ದ್ದು (ಆದಿಪು. ೬-೯೪ ವ). [ಮಲ್ಲ + ಪೋರ್$_1$]

**ಮಲ್ಲವೋರ್ಕೆ** (ನಾ). ಕುಸ್ತಿ ; ಮಲ್ಲಯುದ್ಧ : (ಮಲ್ಲಪೊ[ ಪೋ ]ರ್ಕೆ) ಮೊದಲಾದ ರಾಗದ್ವೇಷಹೇತುಗಳಂ ನೆಗಟ್ದುದುಂ ಕಾಯಗತನಾಮುಕ್ಕುಂ (ಕಪಾಕ. ೩೦೯). [ಮಲ್ಲ + ಪೋರ್ಕೆ]

**ಮಲ್ಲಶಾಲೆ** (ನಾ). ಕುಸ್ತಿಯನ್ನು ಕಲಿಸುವ ಮನೆ ; ಗರಡಿ : ಮನವಿದೊಂದು ಮಲ್ಲಶಾಲೆ (ಜಿಜ. ೧೯-೧). [ಸಂ. ಮಲ್ಲಶಾಲಾ]

**ಮಲ್ಲಶ್ರಮ** (ನಾ). ಜಟ್ಟಿಕಾಳಗ : ಸಾಕೀದೇತಕೆ ಮಲ್ಲಶ್ರಮದಲಿ ನೂಕಿ ನೋಡುವೆವಿನ್ನು ಕೈದುಗಳೇಕೆ ದೃಢಮುಷ್ಟಿಪ್ರಹಾರಪ್ರಕಟಸತ್ವರಿಗೆ (ಕುವ್ಯಾ. ೪. ೦೯-೩೯). [ಸಂ.]

**ಮಲ್ಲಸಾಲೆ** (ನಾ). = ಮಲ್ಲಶಾಲೆ : ಬಣ್ಣಬಣ್ಣದ ಜೀವ ಕತಕತನೆ ಕುದಿಯುವವು ಮನೆಯಾಯ್ತು ಮಲ್ಲಸಾಲೆ (ಗಂ. ೩೦-೦೬).
[< ಸಂ. ಮಲ್ಲಶಾಲಾ]

**ಮಲ್ಲಳಿ** ' ಮಲ್ಲಟಿ ' ನೋ.

**ಮಲ್ಲಳಿಕಾಟ** ' ಮಲ್ಲಟಿಗಾಟ ' ನೋ.

**ಮಲ್ಲಳಿಗಡಲ್** (ನಾ). ಕ್ಷೋಭೆಗೊಂಡ ಸಮುದ್ರ : ಅಡಕಿಲುಂದೆರೆಗಳುಲಿದು ಹಳಿಚಲು ಮೊಱಹು ಮೊಱೆದು ಕಡೆದು ಮಲ್ಲಳಿ [ಕಾಂ. ಟಿ]ಗಡಲನೊಡೆಗಲಸಿ ಕುಡಿದು ಮೊಱೆದಡಸಿ . . . ಮೊಱೆದುದರರೆ ಪಶ್ಚಿಮಾಪನಿಧಿ (ಸೋಮಸ. ೦-೬೦). [ಮಲ್ಲಳಿ (< ಮಲ್ಲಟಿ) + ಕಡಲ್$_2$]

**ಮಲ್ಲಳಿಗಾರ್ತಿ** ' ಮಲ್ಲಟಿಗಾರ್ತಿ ' ನೋ.

**ಮಲ್ಲಳಿಗಾಟ** ' ಮಲ್ಲಟಿಗಾಟ ' ನೋ.

**ಮಲ್ಲಳಿಗೊಳ್** ' ಮಲ್ಲಟಿಗೊಳ್ ' ನೋ.

**ಮಲ್ಲಳಿಸು**, ಮಲ್ಲಣಿಸು (ಕ್ರಿ). ೧. ವೃತ್ತಾಕಾರವಾಗಿ ಚಲಿಸು; ಸುತ್ತು; ತಿರುಗು : ನಡೆಗುಂ ಕುಲಾಲಚಕ್ರದ ಕಡೆಯೊಳ್ ಮಲ್ಲಳಿಪ ಕೀಲದಂತೆ (ಜಿಪ್ಪು. ೨-೨-೭೦). ಮಲ್ಲಣಿಸು : ೨. (ಮೃಗವು ಬೇಟೆಗಾರನಿಂದ ತಪ್ಪಿಸಿಕೊಳ್ಳಲು) ಸುತ್ತಾಡು ; ಅಲೆದಾಡು : ಮಲ್ಲೆಯ ಹಿಂಡು ಮಲ್ಲಣಿಸಿ ತಲ್ಲಣಗೊಂಡವು (ಸೂಕ್ತಿಸು. ೩-೦೦೭). ೩. ಹಿಂಸಿಸು ; ಪೀಡಿಸು : ಮಲ್ಲಣಿಪ ಜಾಡ್ಯಮುಂ ಜಕ್ಕುಲಿಪ ತೊದಲುಮಂ ನಿಲ್ಲಲೀಯದು (ಅಂಗಪು. ೮-೪೭). [ಮಲ್ಲಳಿ (< ಮಲ್ಲಟಿ) + — ಇಸು$_3$]

**ಮಲ್ಲಟಿ**, ಮಲ್ಲಣಿ, ಮಲ್ಲಳಿ (ನಾ). ೧. ತಿರುಗಾಟ ; ಸುತ್ತಾಟ : " ಮಲ್ಲಟು = ಶರೀರವ್ಯಾಕುಲತೆ ; ಸುತ್ತಿ ಬರ್ಪುದು " (ಕಪಿಪ. ಕಾಂ ೦). ' ಮಲ್ಲಟಿಗಾರ್ತಿ ' ಪರಾ. ೨. ದೇಹಕ್ಕೆ ಉಂಟಾಗುವ ರೋಗ ಮುಂತಾದ ತೊಂದರೆ : " ಮಲ್ಲಟಿ—ಶರೀರವ್ಯಾಕುಲತೆ ; ಸುತ್ತಿ ಬರ್ಪುದು " (ಕಮಿಪ. ಕಾಂ. ೦). ೩. ಭಯ ; ಹೆದರಿಕೆ ; ಅಂಜಿಕೆ : " ಅಗುರ್ಪು . . . ಮಲ್ಲಟಿ, ತಲ್ಲಟಂ, ಅದಿರ್ಪು— ಈ ೧೦ ಭಯಂ " (ಕರಣ. ೩೬-೨೨೩); " ಮಲ್ಲಟಿ ಬೆಜ್ಜರ ಬೆಬ್ಬಳ ತಲ್ಲಟ . . . ನಿಲ್ಲದೆ ಭಯನಾಮ " (ಕಬಿಸಂ. ೦೦೬). ೪. ಗುಂಪು ; ಸಂದಣಿ : ಲಸತ್ಪ್ರಭಾತ ಸಮಿರಾಂ . . . ಪೊವಟ್ದ ಪೊಂಪುಟಿಯೊಳುಂ ಪೊಂಗಿ ಝೇಂಕರಿಪ ಮಱಿಯ ಮಲ್ಲಟಿಗಳುಂಕಿಗಳಲ್ಲಿ . . . ಪೊಕ್ಕು (ಅದ್ಯ್ಬಟ. ೦೦-೦೨೯). ' ಮಲ್ಲಟಿಗೊಳ್ ', ' ಮಲ್ಲಟಿದಿರಿ ' ಪರಾ. ೫. ತುಂಬಿ ; ಭ್ರಮರ : " ಅಲರ್ವಕ್ಕಿ, ಬಂಡುಣಿ, ಪಱಮೆ, ಮಲ್ಲಟಿ . . .

ಮುಯ್ಯೊರಪಡಿ – ಈ ೭ ಘ್ರಮರಂ" (ಕಸಾ. ೩೩–೧೯೬). **ಮಲ್ಲಣಿ.** ೨. 'ಮಲ್ಲಣಿಸು' ನೋ. ೬. ಮಂಡಲಾಕಾರವಾಗಿ ಸುತ್ತಿ ಮಾಡುವ ನೃತ್ಯ : ರಾಸಕ್ರೀಡೆ : ಗೊಲ್ಲಗೊಲ್ಲತಿಯರಲ್ಲಿಯುಂ ಸಾಕಿನೆ ಸಲ್ಲಿಸಿದೆಯೊ ಮಲ್ಲಣಿಯೆಲ್ಲ ? (ಗಿರಿಜಾ. ೪೪-೭). ೭. ಗೊಂದಲ : ಗಜಿಬಿಜಿ : ತತ್ಪುರೀಜನದ ಪೊದಟ್ಟ ತಲ್ಲಣದ ಮಲ್ಲಣಿ ಬೀದಿಯೊಳಾದುದದ್ಭುತಂ (ಶರಕ್ಷ. ೩–೩). ೮. ಅಲ್ಲೋಲಕಲ್ಲೋಲ ; ಕ್ಷೋಭೆ : ಘುಲ್ಲವಿಸಿ ನೀಪೀಗ ಕರ್ಮದ ಮಲ್ಲಣೆ[ಣಿ]ಯ ಕಡುಗಡಲ ಬಿಜುಪೊಯ್ಲ್ಲಿಗೆನ್ನನು ಸಲಿಸುವರೆ (ಸದ್ಭರು. ೦-೨೦). **ಮಲ್ಲಳಿ :** ೧. ಇಂತಿಲ್ಲಿಯಾ ಮಲ್ಲಳಿಯು ದಂದುಗಕೆ ಸಿಲ್ಕಿ ದುಃಖಿಸಿದಪರ್ (ಸಂಸಹ. ೩೪_೨೦೨). ೮. 'ಮಲ್ಲಳಿ ಗಡಲ್' ನೋ. ೯. ಆಶ್ಚರ್ಯ ; ಬೆರಗು : "ಸಮೂಹ ಬೆರಗುಗಳು ಮಲ್ಲಳಿಯೆನಿಪ್ಪವು" (ಶಕರ. ೯೭). [ದೇ.॥ ತೆಲು. ಮಲ್ಲಡಿ]

**ಮಲ್ಲಟಿಗಾರ್ತಿ, ಮಲ್ಲಳಿಗಾರ್ತಿ** (ನಾ). (ಕೆಲಸವಿಲ್ಲದೆ) ಅಲೆದಾಡುವವಳು; ತಿರುಗಾಡುವ ಸ್ವಭಾವದ ಹೆಂಗಸು: "ಮಲ್ಲಟಿಗಾರ್ತಿಯೆನೆ ಸುತ್ತಿಬರ್ಪಾಕೆಯೆಂದು ಪೇಟ್ವರ್ ಸುಗುಣರು" (ಕಬ್ಬಿಕ. ೨೭). **ಮಲ್ಲಳಿಗಾರ್ತಿ :** "ಮಲ್ಲಳಿಗಾರ್ತಿಯೆನಲು ತಿರುಗಾಡುವ ಸ್ತ್ರೀಯುಕ್ಕಂ" (ಕಶರ. ೯೭).

[ ಮಲ್ಲಟಿಗಾಜ + – ತಿ$_1$ (< – ಇತ್ತಿ) ]

**ಮಲ್ಲಟಿಗಾಜ, ಮಲ್ಲಳಿಕಾಜ, ಮಲ್ಲಳಿಗಾಜ** (ನಾ). ೧. ಸುತ್ತಾಡುವವನು; ಅಲೆದಾಡುವವನು : 'ಮಲ್ಲಟಿಗಾರ್ತಿ' ನೋ. **ಮಲ್ಲಳಿಕಾಜ:** ೨. ಕ್ಷೋಭೆಯನ್ನುಂಟುಮಾಡುವವನು ; ತಳಮಳವನ್ನುಂಟುಮಾಡುವವನು : ಜವ್ವನದ ಸೂಜಿಕಾಜಂ ಮನದ ಮಲ್ಲಳಿ[ಪಾಠಾಂ. ಣಿ]ಕಾಜಂ ಚಿತ್ತದ ದಳವುಳಿಕಾಜಂ ಬಾದಂ (ಸಂಶರ. ೦೨-೩೯). **ಮಲ್ಲಳಿಗಾಜ:** ೩. (ದಟ್ಟಹೆಜ್ಜೆಯಿಟ್ಟು) ನಡೆದಾಡುವವನು : ನಳನಳಿಸಿ ಬೆಳೆವುತಿಪ್ಪ ಅರಳೆಲೆಯರಸಂ ಮಾಗಾಯ್ಗಳ ಮಲ್ಲಳಿಗಾಜಂ ಪೊಂಗಡಗದ ಲಿಂಗವಂತಂ (ಬಸರ. ೧೦-೦೦೩). [ ಮಲ್ಲಟಿ + – ಕಾಜ ]

**ಮಲ್ಲಟಿಗೊಳ್, ಮಲ್ಲಣಿಗೊಳ್, ಮಲ್ಲಳಿಗೊಳ್** (ಕ್ರಿ). ೧. ಭಯಗೊಳ್ಳು; ತಲ್ಲಣಗೊಳ್ಳು : ಮುಳಿದಪ್ಪ ಪಾಯ್ದು ಗಿಳಿ ಮಲ್ಲಟಿಗೊಂಡೊಳಸಾರ (ಕಬ್ಬಿಗಾ. ೩೦೧). ೨. ಗುಂಪುಗೂಡು ; ಒಟ್ಟಾಗು : ಕಲ್ಲ ಗವಿಯೊಳಗೆ ಕಟ್ಟಲೆ ಮಲ್ಲಟಿಗೊಂಡಿರ್ದ ತಿಜದಿನಿರ್ಪುವು (ಸೂಕ್ತಿಸು. ೩-೦೩೨). ೩. ಪಕ್ಕಕ್ಕೆ ಸರಿ,—ಚಲಿಸು : "ಮಲ್ಲಟಿಗೊಂಡುದು ಸರಿದು ದೋಸರಿಸಿದುದು" (ಕರಿಕಾ. ೨೩೨). **ಮಲ್ಲಣಿಗೊಳ್ :** ೧. ದೇವದೇವ ಜನನಮರಣಕ್ಕಂಜಿದೆಂ ಮಾಯೆಗೆ ಮಲ್ಲಣಿ [ಪಾಠಾಂ. ಳಿ]ಗೊಂಡೆಂ ತಾಪತ್ರಯಕ್ಕೆ ತಲ್ಲಣಿಸಿದೆಂ (೬೩೮. ಶ. ೨೦೬-೭). ೪. ಕ್ಷೋಭೆಗೊಳ್ಳು: ತಳಮಳಗೊಳ್ಳು : ಬಸವರಾಜಂ ಪೊಗಳ್ತೆಗೆ ತಲ್ಲಣಿಸಿ ತಗ್ಗಿ ಮಲ್ಲಣಿಗೊಂಡಾಗಳಾಗಳಸ ಸಂಗತಿಗೆ ಪೊಸಹೊಸಗೀತಮಂ ಕೇಳಿಸುತ್ತಿರ್ದ ಸಮಯದೊಳು (ಬಸರ. ೬-೬೦); ಮನದೊಳ್ ಮಲ್ಲಣಿಗೊಂಡು ದುರ್ಯಾಸನಾದಿ ದುರ್ಯೋಧನಸಹೋದರರ್ . . . ಪಾಂಚಾಲರಾಜಬಾಲಕನನೊತ್ತರಿಸುತ್ತುಂ ಮುತ್ತುವುದಂ ಕಂಡು (ಮಜಾಸೇ. ೦೨-೨೦೩ ವ). **ಮಲ್ಲಳಿಗೊಳ್ :** ೧. ತಲ್ಲಣಿಸಿ ಮಲ್ಲಳಿಗೊಂಡು ಪೋಳಲೊಳಗಣ ಬಾಲವಿಹಂಗಂಗಳನೆಚುಕೆಯೊಳಿಜುರ್ಕಿಕೊಂಡು ಪಾಟಲನುವಾಗಿ ತೂಜಲ್ಗೊಂಬಿನೊಳಿರ್ಪ ವಿಹಂಗಸಂಕುಳದಿಂದ (ಗಿರಿ. ೦-೦೨೬ ವ); ಶಿವಕಂಪನಮೆರ್ದೆಗಾಗೆ ತಲ್ಲಳಿಸಿ ಮಲ್ಲಳಿಗೊಳ್ವರರಾತಿಭೂಪರರ್ (ರಾಜಶೇ. ೩-೦೩). ೨. ಸಂಪಗೆಯು ಕಂಪಿಂಗೆ ಕಂಪಿಸಿ ಮಲ್ಲಳಿಗೊಂಡೊಲ್ಲದೆ ಮೊಗಂದಿರುವಿ ಪರಿತಂದು ಸಾಗರದಿಂ ಪೂದೋಂಟದ ಪ್ರಸೂನಮಲ ಮಸಂಡಲೆದು ಬಂಡುಣ್ಬಲ್ಲಿ (ಗಿರಿ. ೨-೬೦ ವ); ಕಣ್ಣೊಳು ಮಯ್ಯೊಳಂ ತಪ್ಪುಂ ಚೆಲ್ಲಿ ಎಲ್ಲರೆದುರ್ ಮಲ್ಲಳಿ[ಪಾಠಾಂ. ಣಿ]ಗೊಂಡು ಘೊಳ್ಳೆಂದು ಬಿಳ್ದ ವೃದ್ಧಪಶುಪತೀಶ್ವರನಂ ಮುತ್ತಿಕೊಂಡೆತ್ತಲ್ (ಸಂರ್ವ. ೬-೪೩).

[ ಮಲ್ಲಟಿ + ಕೊಳ್$_1$ ]

**ಮಲ್ಲಟಿದಿರಿ** (ಕ್ರಿ). ಗುಂಪಾಗಿ ಸುತ್ತಾಡು : ಅಲ್ಲಿಗಲ್ಲಿಗೆ ಮಲ್ಲಟಿದಿರುವ ಪಲ್ಲ ಬಲ್ಲಂದಿಗೆ ಕಲ್ಲದಾಡುವ ತೆಲ್ಲಮಿಸಿದ ಮಲ್ಲಿಗೆಯ ಸವಿಸಾಧಿಗೆ . . . ಬೆಲ್ಲಂಗೊಲ್ವಿಲ್ಲನ ಮಲ್ಲಿಗೆಸರಲ ಜಲ್ಲಣೆಗೆ ತಲ್ಲಣಂಗೊಂಡು (ರಾಮನಾಥ. ೭೩-೩). [ ಮಲ್ಲಟಿ + ತಿರಿ$_1$ ]

**ಮಲ್ಲಾಗರು** 'ಮಲರೋಗ' ನೋ.

**ಮಲ್ಲಾಚಾರಿ** (ನಾ). ಒಬ್ಬಾತನ ಹೆಸರು : ಬರೆದಂ ಇಳ್ವಿಡೆ ಮಲ್ಲಾಚಾರಿ (ಎಕ. XIV, ಎಡತೊ. ೯೪-೪೩ : ಸಂ. ೨೧೦). [ಮಲ್ಲ + ಆಚಾರಿ]

**ಮಲ್ಲಾಮಲ್ಲಿ** (ನಾ). ೧. ಜಟ್ಟಿಗಳು ಮಾಡುವ ಯುದ್ಧ : ಭೀಮಸೇನ ಸಹದೇವ ನಕುಲ ಯುಧಿಷ್ಠಿರ ಘಟೋತ್ಕಚಾದಿಗಳೊಡನೆ ಮಲ್ಲಾಮಲ್ಲಿಯಾಗಿ ಕಾದುವ ದುಂಘಸಂಘಮನಲ್ಲಿಗೆ ದುರ್ಯೋಧನಂ ಬಂದು (ಕಂಪರಾ. ೧೦-೯೭ ವ): ಮಲ್ಲಾಮಲ್ಲಿಯೊಳಾಸ್ಪರಿಮಲ್ಲರನಾಹವದೊಳೊತ್ತಿ ಗೋಳ್ಪುರಿಗೊಳ್ವ ಬಲ್ಲಾಳ್ತನದಿನ್ನಾಹವಮಲ್ಲನ ಭುಜಾವಣ್ಣಮೆನಿಸಿ ಧ(ಂ)ಲ್ಲಂ ನೆಗಟ್ಟಂ (ಕರ್ನಾ. XI-i, ೩೨–೭ : 1007) ; ಮಲ್ಲಾಮಲ್ಲಿ ಸಹಾಸಭಿಗಳ ಮಾಡಿ ನಲ್ಲದಿವಳು ಬಿಡಳೆನ್ನ (ಕುಮಾರಾ. ೩೨-೧೨೦). ೨. ಹೋರಾಟ ; ಸ್ಪರ್ಧೆ : ಪೈಪೋಟಿ : ಅಂತುಭಯಮಹಾರಥಿನಿಯ ಮರೂಥಂಗಳ್ ಮಲ್ಲಾಮಲ್ಲಿಯಾಗೆ ಕಾದುವಾಗಳ್ (ಕಂಪರಾ. ೧೦-೯೦ ವ) ; ಸಿಂಗಣನೃಪನ ಹಯಶ್ರೇಣಿ ಕಲ್ಪಾಂತಧಾರಾಧರ ಮಲ್ಲಾಮಲ್ಲಿಯೊಳು ಯಾದವಗಜಘಟೆಯೊಳು ತಳ್ತುದು (ಕರ್ನಾ. IX-i, ೩೪೩-೨೩ ; 1226) ; ಈ ದೇಶದಲ್ಲಿ ಅಧಿಕಾರಲಾಲಸೆಯ ಮಲ್ಲಾಮಲ್ಲಿಯಲ್ಲಿ ಶಿಷ್ಟರಾರು ? ದುಷ್ಟರಾರು ? (ಕಂಜಕಂ. ೬ ಮುನ್ನು೩). ೩. ದುಃಖದ ತೀವ್ರತೆಯಿಂದ ಮಾಡುವ ಗೋಳಾಟ : ಕರ್ಣಂಗಳಿಗ ಮಂಗಲಧ್ವನಿಗಳಂ ನೆರಪುವಬಲೆಯರ ಮಲ್ಲಾಮಲ್ಲಿಯಂ ಪಿಂಗದೊತ್ತೊತ್ತೆಯಿಂ ಮೆಯ್ಯನೊತ್ತುವ ಜನದ ಜಂಗುಳಿಯ ಕಾಲೂಜಲರಿದೆನಿಸಿ ನೆರೆದ ಹುಲಿವಂಗದಸ್ಥಿಗಳನಾರಯ್ಯುತ್ತ ಪೊಕ್ಕನಾ ಸುತಾಂಗಾಡನವನೀಶನು (ಹರಿಶ್ಚ. ೦೦-೪೧). [ಸಂ.]

**ಮಲ್ಲಾರ** 'ಮಲಾರ$_1$' ನೋ.

**ಮಲ್ಲಾರತೋರಣ** (ನಾ). ಬಳೆಮಲ್ಲಾರದ ಆಕಾರದ ಕುಚ್ಚುಗಳಿರುವ ತೋರಣ : ಪೇಲೆ ಪುಷ್ಪತೋರಣ, 'ಮಲ್ಲಾರ' ತೋರಣಗಳವೆ (ಸೂಪಶಾ. ೪೭). [ಮಲ್ಲಾರ (< ಮಲಾರ$_1$) + ತೋರಣ]

**ಮಲ್ಲಾಳಿ** (ನಾ). ಒಂದು ಬಗೆಯ ಮರ : ಮಲ್ಲಾಳಿ, ಅಬನಾಸಿ, ತುಂಬುರುಸು (ವೃಕ್ಷಶಿ. ೩೦-೬೦೦) : ಮರಗಳು :—ಹೆಬ್ಬಲಸು, ಕರೇ, ಮಲ್ಲಾಳಿ, ಕೂವೆ (ನಮ್ಮಸು. ೨೩೭). [ ? ]

**ಮಲ್ಲಿ** (ನಾ). ೧. ಮಲ್ಲಿಗೆಜಾತಿಯ ಒಂದು ಬಗೆಯ ಬಳ್ಳಿ ಮತ್ತು ಸುಗಂಧಯುಕ್ತವಾದ ಅದರ ಹೂವು : ಜಾದಿ ಪೊಸಪಾದರಿ ಕೇದಗೆ ವೊಲ್ಲೆ ಮಲ್ಲಿ ಮಂದಾರಮಪಾರಚೂತಲತೆಯುೂಥಿಕೆ ಸಂದ ವಸಂತದೂತಿ (ಶಠಕ್ಷ. ೦೩-೯೭) ; ಮಲ್ಲೀಕುಸುಮಾಮಿಳಿತಧಮ್ಮಿಲ್ಲೆ (ರಾಜಶೇ. ೪-೦೨) ; ಮಲ್ಲೀಮಲ್ಲೀಕುಂಜಪುಂಜರಂಜಿತಮಾದೊಂದು ಮುನಿಗಳಾಶ್ರಮದ ಪೊಜಿವಳಿಯುದ ತೋಂಟದೊಳಾಟದ ಕಿಜುಪರೆಯುದ ಕುಮರರಿರ್ವರವಟಿಂ ತಡೆದು ಹುಮುದಂ ಕಟ್ಟಿದರ್ ಗಡ ! (ರಾಮನಾಥ. ೧೪೬-೩). ೨. ಒಂದು ಬಗೆಯ ಸಸ್ಯ : "ಅವಾಕ್ಪುಷ್ಪಿ – ಮಲ್ಲಿ. ಹುಬ್ಬುಕಜಂಕೆ" (೬೩ಧ. ೯). ೩. ಒಂದು ಬಗೆಯ ಮಣ್ಣಿನ ಪಾತ್ರೆ : "ಕಳಸಿಗೆ ಕಾಪಿಕೆ ಮಲ್ಲಿಯೆನಿಸಿಕ್ಕು [ಪಾಠಾಂ. ಮಲ್ಲಿಗೆಯೆನಿಸಿಕ್ಕು]" (ಶಂಗರಾ. ೬೨-೨೩). ೪. ಒಬ್ಬಾಕೆಯ ಹೆಸರು : ವಿದ್ಯಾಧರಯ್ಯ ಮಲ್ಲಿ ಪೊಸವೆಗ್ಗೆ ಕೊಟ್ಟ ಸ್ಥಿತಿಕ್ರಮಂ (ಎಕ. VI, ಕಡೂರು. ೯-೩ ; ಸಂ. ೪೦೦ ?) ; ಅಲ್ಲೀ ನ್ಯಾಯ ಇಲ್ಲೀ ಕಂಡಿತು. ಕೊಳ್ಳೀ ಮಲ್ಲಿ ಕೊಂಕುಳ ಕೂಸ (ಗಾದೆ).

೫. ದೀಪವನ್ನು ಹಿಡಿದಿರುವ ಹೆಂಗುಸಿನ ವಿಗ್ರಹ : ಎಲೆಲೆ! ದೀಪದ ಮಲ್ಲಿ . . . ನೀನೆ ಕಂಚಿನ ಬೊಂಬೆ ? ಅಲ್ಲ, ಮಿಂಚಿನ ಹಂಬೆ ! (ದೀಶವು. ೧೯-೧). 'ದೀಪ್ತ' ಪರಾ. ᴘ ಈ ಅರ್ಥದ ಪ್ರಯೋಗದ ವ್ಯುತ್ಪತ್ತಿ ದೇಶ್ಯವೇ ಎಂಬುದು ವಿಚಾರಣಾರ್ಹ. ೬. [ಜೈನ] ಒಬ್ಬ ತೀರ್ಥಂಕರನ ಹೆಸರು : ಮಲ್ಲಿನಾಥ : ವೃಷಭ ಅಜಿತ . . . ಮಲ್ಲಿ ಮುನಿ ಸುವ್ರತ ನಮಿ ನೇಮಿ ಪಾರ್ಶ್ವ ವರ್ಧಮಾನರೆಂಬಿಪ್ಪತ್ತುನಾಲ್ವರ್ ತೀರ್ಥಂಕರರ್ (ತಾಘಂತು. ೯೦೨) ; ಗಂಧಕುಟಿಯೊಳ್ ಕರಮೆಸೆದಂ ಭುವನವಲ್ಲಭಂ ಮಲ್ಲಿಜಿನಂ (ಮಲ್ಲಿಪು. ೧೪-೨೦೩). [ಸಂ. ಮಲ್ಲಿ, ಮಲ್ಲೀ]

**ಮಲ್ಲಿಕ** (ನಾ). ಕೆಂಪುಬಣ್ಣದ ಕೊಕ್ಕು ಮತ್ತು ಕಾಲುಗಳಿರುವ ಒಂದು ಬಗೆಯ ಹಂಸ : "ಕಾಲ್ಗೊಗಂ ಮಾಸೆ ಮಲ್ಲಿಕಾಖ್ಯಂ" (ಮಂಗರಾ. ೫೧-೭). [ಸಂ.]

**ಮಲ್ಲಿಕಾಕ್ಷ** (ನಾ). ೧. ಒಂದು ಬಗೆಯ ಕುದುರೆ ; ಬಿಳಿಯ ಕಣ್ಣಿರುವ ಕುದುರೆ : "ಬಿಳಿಯ ಕಣ್ಣಿರೆ ಮಲ್ಲಿಕಾಕ್ಷನಕ್ಕುಂ" (ಮಂಗರಾ. ೬೨-೧೫) ; ನಯನಂಗಳ್ ತೊಳಗುವ ಬೆಳ್ಪಿಯ ಕಣ್ಣಂ ಪೋಲೆ ಮಲ್ಲಿಕಾಕ್ಷಂ (ಅಶ್ವಶಾ. ೨-೩೭). ೨. = ಮಲ್ಲಿಕ : "ಮಾಸಿದ ಕಾಲ್ಗೊಗಂಗಳಿಂ ಮಲ್ಲಿಕಾಕ್ಷಂಗಳೆಂಬುದು" (ಹರಾಯು. ೯೨-೯೯). [ಸಂ.]

**ಮಲ್ಲಿಕಾಮಾಲೆ** (ನಾ). ೧. ಮಲ್ಲಿಗೆ ಹೂವಿನ ಹಾರ. ೨. [ಛಂದ]ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರುಛಂದಸ್ಸುಗಳಲ್ಲಿ ಹದಿನೆಂಟನೆಯ ಧೃತಿ ಎಂಬ ಛಂದಸ್ಸಿನ ಒಂದು ವೃತ್ತ : ಸಂಪದಿಂತಿದು ಮಲ್ಲಿಕಾಮಾಲೆಯೆಂಬುದು (ಛಂದೋಂಬು. ೨-೧೭೮) : ಸಂಸ್ಕೃತವೃತ್ತಗಳಲ್ಲಿ ಕುಸುಮ . . . ಮಲ್ಲಿಕಾಮಾಲೆ ತರಳ ಮೊದಲಾದವುಗಳನ್ನು ಹೆಸರಿಸಬಹುದು (ಛಂದೋವಿ. ೫೦). [ಸಂ. ಮಲ್ಲಿಕಾಮಾಲಾ]

**ಮಲ್ಲಿಕಾಮೋದ** (ನಾ). ಮಲ್ಲಿಗೆಯ ಸುವಾಸನೆಯು ಹರಡುವಂತೆ ಹರಡುವ ಕೀರ್ತಿಯುಳ್ಳವನು: ᴘ ಚಾಳುಕ್ಯರಾಜನಾದ ಎರಡನೆಯ ಜಯಸಿಂಹನ ಒಂದು ಬಿರುದು : ಮಾರ್ತ್ತಂಡಭೀಮಂ ಮಲ್ಲಿಕಾಮೋದಂ ಕೀರ್ತ್ತಿವಿದ್ಯಾಧರಂ (ಸೌಇಶಾ. XX, ೨೦-೮ ; 1019) ; ಚಾಳುಕ್ಯಾಭರಣಂ ಮಲ್ಲಿಕಾಮೋದಂ ಮಾರ್ತ್ತಂಡಭೀಮಂ ರಾಯಗಜಕೇಸರಿ (ಎಕ. VII, ಶಿಕಾ. ೧೨೬-೭ ; 1030). [ಸಂ.]

**ಮಲ್ಲಿಕಾರ್ಜುನ** (ನಾ). ೧. ಶಿವನ ಒಂದು ಹೆಸರು : ರಾಜವಟ್ಟಿ ವೀರಭದ್ರ ಬರಟಹಳಿ ಮಲ್ಲಿಗವಡ ಯಿವರ ಕುಲದೇವರು ಮಲ್ಲಿಕಾರ್ಜುನ (ಎಕ. III (R), ಗುಂಡ್ಲುಪೇ. ೬೦-೭೩ ; 1126) : ಕಲ್ಲರಳಿ ಹೂವಾಗಿ ಎಲ್ಲರಿಗೆ ಬೇಕಾಗಿ ಮಲ್ಲಿಕಾರ್ಜುನನ ಶಿರಕ್ಕೆ ಬೇಕಾಗಿ ಬಲ್ಲವರು ಹೇಳಿ (ಸರ್ವಜ್ಞ. ೨೦೨೬). ೨. ಈಗಿನ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಶ್ರೀಶೈಲದಲ್ಲಿ ಸ್ಥಾಪಿತವಾಗಿರುವ ಶಿವಲಿಂಗದ ಹೆಸರು : ಶ್ರೀಶೈಲಕ್ಕೆ ಹೋಗಿ ಮಲ್ಲಿಕಾರ್ಜುನನ ದರ್ಶನಮಾಡಿಕೊಂಡು ಬರಬೇಕೆಂದಿದ್ದೇನೆ (ಆಡು). ೩. ಒಬ್ಬಾತನ ಹೆಸರು : ಮಲ್ಲಿಕಾರ್ಜ್ಜುನಜಗ್ಗಸುಂದ್ಧಪ್ರಬದ್ಧವೈರಿ × × × ನಕ್ಷಂ ನಪಿತವಿಧ್ವಂಸಕಂ (ಎಕ. IV (R), ಎಳಂದೂ. ೧೬೩-೯ ; 919). [ಸಂ.]

**ಮಲ್ಲಿಕಾವಸಂತ** (ನಾ). [ಸಂಗೀತ] ಒಂದು ರಾಗದ ಹೆಸರು : ಮಲ್ಲಿಕಾವಸಂತರಾಗದಲ್ಲಿ ಕೃತಿರಚನೆಮಾಡಿದವರಲ್ಲಿ ಮೊತ್ತಮೊದಲಿಗರು ಪಲ್ಲವಿ ಶೇಷಯ್ಯರ್‌ಅವರು (ಸಂಗೀತ. ೯೮). [ಸಂ.]

**ಮಲ್ಲಿಕೆ** (ನಾ). ೧. ಒಂದು ಬಗೆಯ ಬಳ್ಳಿ ಮತ್ತು ಅದರ ಸುಗಂಧಯುಕ್ತವಾದ ಬಿಳಿಯ ಹೂವು : "ತೃಣಶೂಲ್ಯಂ, ಮಲ್ಲಿಕಾ, ಭೂಪದೀ, ಶೀತಭೀರುಃ—ಈ ೪ ಮಲ್ಲಿಗೆ" (ನಾಚರಾ. ೧೦೮). ೨. ಮಣ್ಣಿನಿಂದ ಮಾಡಿದ ಒಂದು ಬಗೆಯ ಪಾತ್ರೆ : "ಕಳಸಿಗೆ ಕಾಶಿಕೆ ಮಲ್ಲಿಕೆ ಮಲ್ಲಿ ಮಲ್ಲಿಗೆಯೆನಿಕ್ಕುಂ" (ಮಂಗರಾ. ೬೨-೨೩). ೩. ದೀಪಸ್ತಂಭ. [ಸಂ.ಮಲ್ಲಿಕಾ]

**ಮಲ್ಲಿಕ್ಕು** (ಕ್ರಿ). ಮಲ್ಲನಂತೆ ದ್ವಂದ್ವಯುದ್ಧಕ್ಕೆ ಆಹ್ವಾನಿಸು : ಚಾಣೂರಮಲ್ಲನೊಳ್ ಮಲ್ಲಿಕ್ಕುವುದಕ್ಕೆ ಶ್ರಮಮಂ ಮಾಡುವಂತೆ ಗಜಮಲ್ಲನೊಳ್ ಪ್ರತಿಮಲ್ಲಂ ಮಲ್ಲಪೋರ್ದು (ಅರ್ಜನೀ. ೮-೬೯ ವ). [ಮಲ್ಲ + ಇಕ್ಕು]

**ಮಲ್ಲಿಗೆ** (ನಾ). ೧. = ಮಲ್ಲಿಕೆ ೧ : "ಮಲ್ಲಿಗೆ ವಿಚಕಿಳಂ" (ಮಂಗರಾ. ೩೮-೨೪); ಬಿರಿದ ಮಲ್ಲಿಗೆಗಂಡೊಡಂ . . . ಮಧುಮಹೋತ್ಸವಮಾದೊಡಮೇನಸಂಬೆನಾರಂಕುಸವಿಟ್ಟೊಡಂ ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಪಭಾ. ೯-೩೦) ; ಮರುಗ ಮಲ್ಲಿಗೆ ಪಚ್ಚೆ ಮುಡಿವಾಳಕ್ಕೆ ಪರಿಮಳದುದಕವ ನೆಱೆದವರಾರಯ್ಯ (ಮಹಾದೇ. ಪ. ೧೧-೩); ಮರುಗ ಮಲ್ಲಿಗೆ ಕೆಂಜಾಜಿ ಸಂಪಿಗೆಗಳ ಪರಿಮಳಪುಷ್ಪದ ಮಾಲೆ ಮೆಱೆದುವು (ಕಂಸವ. ೨೦-೩೩). ೨. = ಮಲ್ಲಿಕೆ ೨ : "ಕಳಸಿಗೆ ಕಾಶಿಕೆ ಮಲ್ಲಿಗೆಯೆನಿಸಿಕ್ಕು [ಪಾಠಾಂ. ಮಲ್ಲಿಯೆನಿಸಿಕ್ಕು]" (ಮಂಗರಾ. ೬೨-೩೨).

[< ಪ್ರಾ. ಮಲ್ಲಿಆ./ಸಂ. ಮಲ್ಲಿಕಾ]

**ಮಲ್ಲಿಗೆಗೋಲ** (ನಾ). ೧. ಮಲ್ಲಿಗೆಯ ಹೂವನ್ನು ತನ್ನ ಬಾಣವನ್ನಾಗಿ ಮಾಡಿಕೊಂಡವನು ; ಮನ್ಮಥ : ಮೃಗಪಕ್ಷಿಗಳರಾ ಮಲ್ಲಿಗೆಗೋಲನ ಬಂಡರೆ ತೋಱೆಂದು ನೊಲ್ಲಿಸಿದಳು (ಮೋಹತ. ೯-೩೫). ೨. [ಜೈನ] ಬಾಹುಬಲಿ : ನಲ್ಲದು ನನಗೀಗ ಬಹುವಕೆ ಹೋಗೆಂದು ಮಲ್ಲಿಗೆಗೋಲನಾಡಿದನು (ಭರತ. ೯೮-೨೨). [ಮಲ್ಲಿಗೆ + ಕೋಲ್₁ + - ಅ₇]

**ಮಲ್ಲಿಗೆಬಾಣ** (ನಾ). = ಮಲ್ಲಿಗೆಗೋಲ ೧ : ಸೊಗಯಿಸುವ ಶಕುನಿ ಮಂಚವಂ ನೋಡಿರಯೊಲಿದು ಮಲ್ಲಿಗೆಬಾಣನದನು ಸೊಲ್ಲಿಸೆಯೇರಿ (ಪಪಮೋ. ೧೯ ೧೮). [ಮಲ್ಲಿಗೆ + ಬಾಣ₁]

**ಮಲ್ಲಿಗೆವಾವಿ** (ನಾ). ಒಂದು ಊರಿನ ಹೆಸರು : ಮಲ್ಲಿಗೆವಾವಿ ಅಂತೆ ಬರೆ ಪಾಲ್‌ಗೊಮ್ಮ ಎಂಬ ಪೊಣಸೆ ಅಂತೆ ಬರೆ (ಪ್ರಶಂ. ೧೯೨೦, ೧೧-೧೮೬; 967). [ಮಲ್ಲಿಗೆ + ಬಾವಿ]

**ಮಲ್ಲಿನಾಥ** (ನಾ). [ಜೈನ] ಇಪ್ಪತ್ತುನಾಲ್ಕುಜನ ತೀರ್ಥಂಕರರಲ್ಲಿ ಒಬ್ಬ : ರಾಗದ ಪೆರ್ಚಿಂದಭಿಷೇಕಮಂ ದಿವಿಜನಾಥಂ ಮಲ್ಲಿನಾಥಂಗೆ ಮಾಡಿದನೆಂಟುಂದೆಸೆಯುಂ ಪಳಂಚಲೆವಿನಂ ಗಂಭೀರಭೇರೀರವಂ (ಮಲ್ಲಿಪು. ೧೩-೧೬೬). [ಸಂ.]

**ಮಲ್ಲಿನಾಥಿ** (ನಾ). ೧. ಮಲ್ಲಿನಾಥನೆಂಬ ಪ್ರಸಿದ್ಧವಿದ್ವಾಂಸನು ಸಂಸ್ಕೃತಕಾವ್ಯಗಳಿಗೆ ಬರೆದ ವ್ಯಾಖ್ಯಾನ.— ಟೀಕೆ. ೨. (ಅಲಂ) ವಿವರಣೆ ; ವ್ಯಾಖ್ಯಾನ : ಕೆಂಡ ಏತಕ್ಕೆಂಬ ಟಿಗ್ಗೆ ಹೆಚ್ಚಿನ ಮಲ್ಲಿನಾಥಿ ಬೇಕಾಗಲಿಲ್ಲ (ಅಕಿಗ. ೨೩೯); ನಗೆಯ ಮಾತಿಗೆ ಮಲ್ಲಿನಾಥಿ ಏಕೆ ? (ತಿಂಪುತ. ೧ ಮುನ್ನು೩). [< ಸಂ. ಮಲ್ಲಿನಾಥೀಯ]

**ಮಲ್ಲಿಯೂರ್** (ನಾ). ಒಂದು ಊರಿನ ಹೆಸರು : ಪಶ್ಚಿಮಭಾಗಾವಸ್ಥಿತ ಮಲ್ಲಿಯೂರ್ಗ್ರಾಮಮಧಿವಸತಿ (ಪ್ರಶಂ. ೧೯೩೯, ೩೦-೨೦; 670). [ಮಲ್ಲಿ + ಊರ್]

**ಮಲ್ಲಿಸೇನ** (ನಾ). ಒಬ್ಬಾತನ ಹೆಸರು : ಮಲ್ಲಿಸೇನಭಟಾರರ ಗುಡ್ಡಂ ಚಱೆಙ್ಗಯ್ಯಂ ತೀರ್ತ್ಥಮಂ ಬನ್ದಿಸಿದಂ (ಎಕ. II, ೯-೧ ; ಸು. 900). [ಸಂ.]

**ಮಲ್ಲು**. ಮಲ್ (ನಾ). ಒಂದು ಬಗೆಯ ತೆಳುವಾದ. ಬಿಳಿಯ ಹತ್ತಿಬಟ್ಟೆ : ಮೈಯಲ್ಲಿ ಬಿಳಿಯ ಮಲ್ಲಿನ ಷರ್ಟು. ಉಟ್ಟಿದ್ದು ಮರ್ಸ್‌ರೈಜ್ ಧೋತರ (ಜನಪ. ೩೯). ಮಲ್ : ಲಾಂಗ್‌ಕ್ಲಾತ್, ಚೀಟಿ, ವಾಯಿಲ್, ಮಸ್ಲಿನ್, ಮಲ್ — ಇವನ್ನು ಸಾದಾನೆಯ್ಗೆ ಉಪಯೋಗಿಸಿ ನೇಯುವರು (ಗೃಹಕಿ. ೬೩). 'ಮಸ್ಲಿನ್' ಪರಾ.

[← ಇಂ. Mull. / ᴘ ಇದು ಹಿಂದಿಯ 'ಮಲ್‌ಮಲ್' ಎಂಬುದರ ಸಂಕ್ಷಿಪ್ತರೂಪ]

**ಮಲ್ಲುಕ₁** 'ಮಲ್ಲುಗ' ನೋ.

**ಮಲ್ಲುಕ$_2$** (ನಾ). ಅಧಿಪತಿ : ಆ ನವಲೋಕಪಾಲಕನ ಖಾನ ವಜೀರ ಮಲ್ಲುಕರ ಲೆಕ್ಕಿಸಬಾರದೇನೆಂಬೆನವನ ಸಂಪದವ (ಕುಣಾಸಾಂ. ೦೭-೨೩) ; ತೆಱುಟ್ಟೆ ಜೋಡಿಟ್ಟೊಡವೆ ಪಿಡಿದ ಬಾಳೆಲ್ಲಮಂ ಮಲ್ಲುಕರ್ ಬಿಬ್ಬಾಟ್ಟಿತರ್ಪ್ಪಂ ತಾಮೆ ಪಂತಂದಳೆದು (ಕಳಿ. ೨-೦೦೬).

[ ← ಅರ. ಹಿಂ. ಮಲಿಕ್ ; ಮರಾ. ಮಲೀಕ]

**ಮಲ್ಲುಕಪದವಿ** (ನಾ). ಅಧಿಪತಿಯ ಸ್ಥಾನ : ಸುರುತಾಳನು ಬಾದುರನನ್ನು ಸನ್ಮಾನಿಸಿ, ಅವನಿಗೆ ಮಲ್ಲುಕಪದವಿಯನ್ನು ಕಟ್ಟಿದನು (ಕುವಾಸಾಂ. ೯೭).

[ಮಲ್ಲುಕ$_2$ + ಪದವಿ]

**ಮಲ್ಲುಗ, ಮಲ್ಲುಕ$_1$** (ನಾ). ೧. ಒಬ್ಬಾತನ ಹೆಸರು : ದೋರಬ್ಬೆಯ ಮಗಂ ಮಲ್ಲುಗ ಕೊಟ್ಟುಯಲ್ಪರಿದು ತುಱುವಂ ಸೆಱೆಯುಮನಿಕ್ಕಿಸಿ ಕಾದಿ ಸತ್ತಂ (ಎಕ. XII, ತಿಪಟೂ. ೫೫-೩; 880). **ಮಲ್ಲುಕ$_1$** : ೨. ಶ್ರೇಷ್ಠನಾದ ಮಲ್ಲ,– ಜಟ್ಟಿ : ಆ ಪಟ್ಟಣದೊಳಗೆ ಅತಿರಥರು ಮಹಾರಥರಿಹರು ಸಾಮಂತ ಮಲ್ಲುಕರಿಹರು (ಸರಾವ. ೨೦೫-೯೨೬). [ಮಲ್ಲ + –ಉಗ]

**ಮಲ್ಲೆ** 'ಮೊಲ್ಲೆ' ನೋ.

**ಮಲ್ಲೋಗರ** 'ಮಲರೋಗ' ನೋ.

**ಮವಕುಫ್** 'ಮೋಕೂಫ್' ನೋ.

**ಮವಲಂಗಮರ** (ನಾ). ಒಂದು ಬಗೆಯ ಮರ : ಆದಿರಾಜ . . . ಮವಲಂಗಮರ, ಪೊಳೆನೆಕ್ಕಿ, ನೆರವಂಬಳೆ, ತುಡೆಮದಿರಂಗಿ, ಹೊಡ್ಡೆಲೆನಗೆ (ಪ್ರಶಿಗ. ೨೫-೯೭೭). [ಮವಲಂಗ ? + ಮಳ್$_1$]

**ಮವಾಳ** (ನಾ). ಸರಕಾರದ ಧೋರಣೆಗಳನ್ನು ವಿರೋಧಿಸದೆ ಹೊಂದಾಣಿಕೆಯಿಂದಿರುವ ರಾಜಕೀಯಪಕ್ಷ ; ಮಂದಗಾಮಿಪಕ್ಷ : ಒಂದು ದೃಷ್ಟಿಯಿಂದ ಮನುಕುಲವೆಂಬ ಶಾಸನಸಭೆಯಲ್ಲಿ ಅವಳು 'ಮವಾಳ' ಇಲ್ಲವೆ ಲಿಬರಲ್‌ಪಕ್ಷದವಳು (ಸವಾಚಿ. ೦೩೩೦). [ ← ಮರಾ. ಮವಾಳ]

**ಮವಾಳಿತನ** (ನಾ). ನಯ ; ನಾಜೂಕು : ಒಕ್ಕಲುತನದಿಂದ ಔದ್ಯೋಗಿಕ ಕೆಲಸಗಾರಿಕೆಗೆ ಹಳ್ಳಿಯ ಮಂಕುತನದಿಂದ ಪಟ್ಟಣದ ಮವಾಳಿತನಕ್ಕೆ ಹೊರಡುವ ಹೊಲಗೇಡಿ ಒಕ್ಕಲ ವರ್ಗ (ವಾಶಾದ. ೦೯೫).

[ಮವಾಳಿ$_0$ ( P ← ಮರಾ. ಮವಾಳೀ) + – ತನ ]

**ಮವಿಂದಿ** (ನಾ). ಒಂದು ಸ್ಥಳದ ಹೆಸರು : ತನ್ನನಾಳ್ದ ಪ್ರಭುವೋರು ಬೆಸಸೆ ಮವಿಂದಿಊರುಳಾಕ್ಕಡುವಟ್ಟಿಯ ಸಮಸ್ತಬಲಮು ಮೋಗೆಟ್ಟಿರೆ . . . ಇಱಿದೋಡಿಸಿ ಬಿಟ್ಟನ್ (ಎಕ. X. ಶ್ರೀನಿವಾ. ೬-೬; ಸು. 780). [ ? ]

**ಮವುಜೆ** 'ಮೌಜೆ' ನೋ.

**ಮವುರಿ** 'ಮೌರಿ$_1$' ನೋ.

**ಮಶಕ** (ನಾ). ಸೊಳ್ಳೆ : ಬಿಂಡವವನದೊಲ್ಲಮಂ ತಟ್ಟಿ ದೊಪ್ಪಱೆ ಮಶಕ ಮಾತ್ರಮಪ್ಪೊಡಂ ಮಿಸುಕಲ್ ಛಿದ್ರಮಿಲ್ಲದಂತಾಗೆ ಶರಪಂಜರದೊಳ್ ಮುಚ್ಚಿ ಮುಸುಕಿದಾಗಳ್ (ಕಂಶಭಾ. ೩-೯೬ ಪ) ; ಪತ್ರಿದ ನೆತ್ತರ ಪೊಲಸಿಂದೆತ್ತಂ ಮೊಱೆದಱಪ ಮಶಕ ಮಕ್ಷಿಕಮಂ ನೋವುತ್ತುಂ (ಜಗಿ. ೯-೩೯) ; ಅಖಿಲಸಾಮ್ರಾಜ್ಯಮಂ ಮಶಕಕೆಣೆಗಂಡು ಬಿಟ್ಟಮಲಪ್ರವೃತ್ತಿಯಿಂ ಶಿವನೊಳೊಡವೆರೆದರ್ (ಶವ್ರಾ. ೨-೩೭). [ಸಂ.]

**ಮಶಕಾರಿ** (ನಾ). ಸೊಳ್ಳೆಯ ಶತ್ರು : ಜೇಡ : "ಮಶಕಾರಿ ಗುಣ ಪೃಷ್ಠವೆನೆ ಜೇಡನೆನಿಸಿಕ್ಕು" (ಮಂಗರಾ. ೯೯-೦೯). [ಸಂ.]

**ಮಶವಾಳ** 'ಮಸಿವಾಳ' ನೋ.

**ಮಶಾಣ** 'ಮಸಣ' ನೋ.

**ಮಶಾಲು, ಮಷಾಲ್, ಮಷಾಲು** (ನಾ). ದೀವಟಿಗೆ ; ಕಕ್ಕಡ : ಪಂಜು : ಜ್ವಲಿಸುವ ಮಶಾಲು ಯಾವ ಮದುವೆಗೆ ಹಾದಿ ತೋರುವುದೊ (ಹಿಂದಿ. I, ೩೭೯) ; ಆ ಮಶಾಲುಬೆಳಕಿನಲ್ಲಿ ಖಾನನು ಆ ಇಬ್ಬರು ರಾಣಿಯರನ್ನೂ ನೋಡಿದನು (ವಾಲಿಕ್. ೩೯೨). **ಮಷಾಲ್** : ಮಷಾಲು ಕಿಡಿಯಿಟ್ಟು ಆರಿತು (ಸಳಕ. ೯೨) ; ದೇವಸ್ಥಾನದಿಂದ ಮಷಾಲುಗಳನ್ನೂ ತರಿಸಿ, ಹೊಳೆಯ ಕರೆಯನ್ನು ಬೆಳಕಾಗಿ ಮಾಡಿಸಿ, ತೆಪ್ಪಗಳನ್ನು ತಿರಮುಕಡ್ಡಿಗೆ ಬಡಿಸಿದೆ (ಕಂಸ. ೩೩೦)."

**ಮಷಾಲ್‌ಚೋರಿ** = ಪಂಜುಗಳ್ಳರು ಮಾಡುವ ಪರೋಡೆ ; ಪಂಜುಗಳ್ಳತನ : (ಕೃಸಗ. II. ೫೫೫).

[ ← ಅರ. ಮಶ್‌ಅಲ್ ; ಹಿಂ. ಮರಾ. ಮಶಾಲ್ ]

**ಮಶಿ** 'ಮಸಿ' ನೋ.

**ಮಶಿಕಾಣಿಕೆ** 'ಮಸಿಕಾಣಿಕೆ' ನೋ.

**ಮಶೀತಿ** 'ಮಸೀದಿ' ನೋ.

**ಮಶೀದಿ** 'ಮಸೀದಿ' ನೋ.

**ಮಶೀಷ** (ನಾ). (?) : ಪಕ್ಷವೆಂಬರೆ ಮಶೀಷ ಅವಕ್ಕಾಧಾರವು ಉತ್ತರ ಗರ್ಭವು (ಶಾಹಟೀ. ೨-೬-೦೩ ವ). [ ? ]

**ಮಶ್ರು** (ನಾ). ಒಂದು ಬಗೆಯ ರೇಷ್ಮೆಬಟ್ಟೆ : ರೇಶಿಮೆ, ಊರ್ಣ, ಮಶ್ರು, ಕಿನಕಾಫ ಮೊದಲಾದ ಅಂಗಡಿಗಳು ಅಂದವಾಗಿ ಕಾಣುತ್ತಿವೆ (ಮಂಜುಳ. ೮). [ ← ಅರ. ಮಶರೂಅ; ಹಿಂ. ಮಶರೂ, ಮಸರೂ ; ಮರಾ. ಮಶರೂ, ಮಶ್ರೂ, ಮಸರೂ ]

**ಮಷಾಲ್** 'ಮಶಾಲು' ನೋ.

**ಮಷಾಲಚಿ** 'ಮಷಾಲ್ಜಿ' ನೋ.

**ಮಷಾಲು** 'ಮಶಾಲು' ನೋ.

**ಮಷಾಲ್ಜಿ, ಮಷಾಲಚಿ** (ನಾ). ದೀವಟಿಗೆಯನ್ನು ಹಿಡಿಯುವವನು ; ಪಂಜಿನವನು : ಬೋಯಿ, ಮಷಾಲ್ಜಿ . . . ಸಂಗೀತಗಾರ ಮೊದಲಾದವರು ಅಲಾಹಿದವಾಗಿದರ್ಪೇಷಾಕಚೇರಿ ದಾಖಿಲ್ (ಮಹಾವಂ. I. ೨೨೮). **ಮಷಾಲಚಿ** : ನೀನೊಂದು ಮೇಣದ ಬತ್ತಿಯನ್ನು ಹಿಡಿದು ಮಷಾಲಚಿಯಾಗಿ ಬೆಳಕನ್ನು ತೋರುತ್ತ ನನ್ನ ಹಿಂದೆ ಬಾ (ರೇವೀಶ್. ೦೫೦).

[← ಫಾರ. ಹಿಂ. ಮಶಾಲ್‌ಚೀ ; ಮರಾ. ಮಶಾಲಚೀ, ಮಶಾಲಜೀ]

**ಮಷಿ** (ನಾ). ೧. ಶಾಯಿ; ಮಸಿ. ೨. = ಮಷಿವಿದ್ಯೆ : ಮಷಿಯೆಂಬ ಲಿಖಿಕರ್ಮದಿಂ ಜೀವಿಸುವರೇ ಕರಣಿಕರು (ಧರುಕ. ೭೯). ೩. ಇದ್ದಿಲು : ಅಸಿ ಮಷಿ ಕುರಿ(ಷ) ಪಿಡಿ ಪಿಡಿಕಲ್ ಕುಸಿಯುಂ ಪುರಿಯೋಡು ಕೋಡು ಕಾವಲಿ ಸುಲಿಯುಂ ಬೆಸಗೊಂಬರ್ ಪಿಡಿದಿರೆಯುಂ ಪುಸಿವರ ಶೂಲಂ ಜಗಕ್ಕೆ ಮಱೆಯುಳ್ಳೊಂದು (ಅಕ್ಷಸು. ೦-೯೯). 'ಮಷೀಚಿತ್ರ' ಪರಾ. ೪. ದೀಪದ ಕಪ್ಪು ; ಕಾಡಿಗೆ. 'ಮಸಿ' ಪರಾ. [ಸಂ.]

**ಮಷಿವಿದ್ಯೆ** (ನಾ). ಶಾಯಿಯಿಂದ ಬರೆಯುವ ವಿದ್ಯೆ : ಕರಣಿಕ ವೃತ್ತಿ : ಅಸಿಮಷಿಕೃಷಿವಣಿಗ್ವಿದ್ಯಾಶಿಲ್ಪಕರ್ಮಂಗಳಿಂ . ಶುದ್ಧವೃತ್ತಿಯಿಂದರ್ಥೋಪಾರ್ಜನಂಗೆಯ್ವ ವಾರ್ತೆಯುಂ (ಆದಿಪು. ೦೫-೦೩ ವ). [ಸಂ. ಮಷಿವಿದ್ಯಾ]

**ಮಷೀಚಿತ್ರ** (ನಾ). ಇದ್ದಿಲಿನಿಂದ ಬರೆದ ಚಿತ್ರ ; ಮಸಿಯಿಂದ ಬರೆದ ಚಿತ್ರ : ಹುಲಿಯು ಅಲ್ಲಿಯೆ ಕುಳಿತು ತನ್ನ ಹಿಂಗಾಲಿನಿಂದ ಕಾತ್ರಿಗೆ ತುರಿಸಿಕೊಳ್ಳುತ್ತಿರುವುದು ಬೆಂಕಿಗೆ ಎದುರಾಗಿ ಮಷೀಚಿತ್ರದಂತೆ ಕಾಣುತ್ತಿದೆ (ಮಲೆಮ. ೨೩೭). [ಸಂ.]

**ಮಷ್ಕರಿ** 'ಮಸ್ಕರಿ$_2$' ನೋ.

**ಮಷ್ಪು** (ನಾ). ಗಸಿ ; ಗಷ್ಟು : ಮಡ್ಡಿ : ದೃಷ್ಟಿಚುಕ್ಕೆಯುದೊಂದನೆಲ್ಲ ಚೆಂದಂಗಳ್ಗಮಿಟ್ಟಿಹನು ಪರಮೇಷ್ಠಿ . . . ಮಷ್ಪು ಸೃಷ್ಟಿಗೆ ಬೊಟ್ಟು (ಮಂಕುತಿ. ೯೯೭); ಮಳೆ, ನದಿಗಳಿಂದ ಕೊಚ್ಚಲ್ಪಟ್ಟಾಗ ಇವು (ಅದುರುಗಳು) ಈಗಿನ ನದಿಗಳ . . . ಪಾತ್ರಗಳಲ್ಲಿ ಒಟ್ಟುಗೂಡುತ್ತವೆ. ಇಂತಹ ಬಂಡು (ಮಷ್ಪು)ಗಳಿಗೆ ಮೆಕ್ಕಲು ಮಣ್ಣಿನ ಬಂಡುಗಳು ಎಂದು ಹೆಸರು (ಶೂವಿಶ. ೦೩೭). 'ಮಡ್ಡಿ$_1$' ಪರಾ.

[←ತೆಲು. ಮಷ್ಟು, ಮಸಟು, ಮಸಡು, ಮಸ್ಟು]

**ಮಸ** (ನಾ). ಕೋಪ ; ರೋಷ : ನಾಲ್ಕುದೆಸೆಗಳಗೆ ಮಸದಿಂದ ನೋಡಿ ಹಲು ಮಣಿಸಲು (ಅಕ್ಕಚರಿ. ೬-೧೨ ಟೀಕೆ) ; ಅಸಮಾಸಮರಂಗಳೊಳ್ ಮಿಗೆ ಮಸಂ ಬೆಸಂಗಿಡಿಸಿ ಕುತುಪಶಾಹನ ಪೌಜಂ ಪೆಸರ್ವಡೆದಿರ್ಪಂ ರಾಯಂ (ಅಜಿತ. ೫-೬೭). [< ಸಂ. ಮಶ]

**ಮಸಂಗು** 'ಮಸಗು' ನೋ.

**ಮಸಕ**₁. ಮಸಕು₁ (ನಾ). ೧. ಆಧಿಕ್ಯ ; ಹೆಚ್ಚಳ ; ಅತಿಶಯ : ಎಸಗೀವುದು ನಿನ್ನಸಕದ ಮಸಕವುನೆ ಪೋಲ್ಪ ಮಗನಂ ಮಘವಾ (ಶಂಶಾ. ೧-೦೩೯) ; ಪುಸಿನುಡಿಯ ವಿಷವಿಪಾಕದ ಮಸಕದೆ ಮುಖರೋಗಮಾದಪ್ಪೋ ಲಿನಿತಾನುಂ ಬಸವಲ್ಲದುಸಿರ್ವರೆಂದುಂ ಪೊಸಸಿರಿಯಂ ಮೈವೆತ್ತ ಮಾಯ್ದ ಮನುಷ್ಯರ್ (ಕಾರಂಕೃ. ೩೬೨); ಬಿಸಿವ ರಕುತವ ಬಳದು ಖಾತಿಯು ಮಸಕ ದಲಿ ಕೈಮಱೆದು ಮಿಗೆ ದಳ್ಳಿಸುತ ಹೊಗರಿಡುತ . . . ಪುನರಪಿ ಕಟಿದ ನಂಬುಗಳ (ಕುಮಾ.ಭಾ. ೯-೩೯). ೨. ರಭಸ ; ವೇಗ : ಭೀಮನ ಧಾಳಿ ಹೆಚ್ಚಿತು ಹೊಸತು ವಶಕದ ಮಸಕ ಮಿಗಿಲಾಯ್ತು (ಕುಮಾ.ಭಾ. ೦೯-೧); ಕುಸುಮಸಾಯಕನ ಕೋದಂಡಟಂಕಾರದ ಮಸಕವುನಿಂಚರಬಂದ ಮಸುಳಿಪ ಮಱಿದುಂಬಿಗಳಾ ಬನದೊಳಗೆಸೆದಿಹವು (ಕುಂಸಾಂ. ೩-೨೬). ೩. ಅಬ್ಬರ ; ಆರ್ಭಟ : ಗುರುಲಿಂಗಜಂಗಮವುವಶದಲಿಂತಿರುತಿರಲಿಕೆ . . . ಮಾಯೆಯು ಮಸಕವೆಲ್ಲವು ಮಾದು ಹೋಹುದು (ಕ್ರಶುಂ. ೦೮-೩) ; ಮೆಱೆದುದಿದಿರಲಿ ನಿಬಿಳನದಿಗಳ ಮಱುಕವನು ಮಸುಳಿಸುವ ಮಸಕದ ನಿಱಿಸಿನಲಿ ನೀರುಬ್ಬುಗಳ ನಿರ್ಘೋಷದಬ್ಬರದ . . . ಗೋದಾವರಿ (ಕೊರಾ. ೩-೦-೪೭). ೪. ಉಗ್ರತೆ ; ತೀಕ್ಷ್ಣತೆ : ಮಸಕದ ಹಾಲಾಹಲದೊಡನೆಸವಿಂಮುವಲೇಬೆ ಪುಟ್ಟಿವಂದದಿನಾ ರಾಕ್ಷಸನೊಡನೆ ಪುಟ್ಟಿ ದೇವಕಿ ವಸುದೇವಂಗರಸಿಯಾಗಿ ಸುಖದಿಂದಿರ್ದಳ್ (ಜಗ. ೨-೩೯). ೫. ಉತ್ಸಾಹ ; ಹುರುಪು : ''ಮಸಕಂ ವಿಜೃಂಭಣಂ'' (ಶಬ್ದಾಭಿ. ೬೭) ; ಉಱಿದವರಾರಾತನ ಮಸಪ ಮಸಕದೆಸಕಮನಿಱಿವರ್ (ಕಾವ್ಯಸಾ. ೨೩೯ ಕೂರ್ಗಿ) ; ಒಂದುದಿವಸವೊಂದು ಮಾಯಾಮಾತ್ರಹಸ್ತಿ ಮಸಕಂ ಕಾಯ್ದು ಜವಂ ಜವಂಗಮಿದಿರೊಳ್ ನೋಡಲ್ಕಗುರ್ವಾಗೆ ಮಾಂದಿಸಿಮಾಪಂದುದು ಕೊಂದುದೆಂದು ಭಯದಿಂ ವಿಪ್ರರ್ ತೆರಳ್ದೋಡೆ (ಶಂಶಾ. ೯-೩೭) : ಮಸಕದಿನೆಯ್ದಿ ಕೇಸರಿಯನಿಕ್ಕಿದ ತಕ್ಕನೆವಾರ್ಗೆ ಮೆಚ್ಚಿ ಬಣ್ಣಿಸಿದಪಿರ್ (ವರ್ಧ.ಪು. ೯-೬೯). ೬. ತಳಮಳ ; ಕ್ಷೋಭೆ : ಸಾಗರದ ಮಸಕದಿಂದುದಯಿಸಿದ ಬೊಬ್ಬುಳಿಗಳು (ತಂಪು. ೦೨-೨೦). ೭. ಸಿಟ್ಟು ; ರೋಷ : ಉಡಿಯೆ ರಥಂ ಕೀಲಿಸೆ ಕುದುರೆ ಮುಱಿಯೆ ಪಟವಿಗೆ ಮಸೆದಿನೆಚ್ಚಿಚ್ಚನೊಂದೆ ಸರಲೊಳ್ ನೊಸಲಂ (ಶಂಶಾ. ೦೦-೯೯): ಹಲಧರನ ಮಸಕವನು . . . ಬಲಿಮಘನೀಕ್ಷಿಸುತ . . . ಇದಿರಲಿ ನಿಂದು ಹಿಡಿದನು ಬಲನ ಬಲಗಯ್ಯ (ಕುಮಾ.ಗ. ೮-೨೮) ; ನಿಷ್ಠುರದ ಸಿಂಹದ ಮಸಕವನು ಸೈರಿಸುವುದೆ ಎಳಹುಲ್ಲೆ (ಅಂಬಿಕಾ. ೩-೨೦). ೮. ಕಾಂತಿ ; ತೇಜಸ್ಸು : ಮುಸುಕುವುದು ಮುಗಿಲೊಮ್ಮೆ ಸೂರ್ಯನ ಮಸಕ ಮಿಗಿಲಹುದೊಮ್ಮೆ (ಕುಮಾ.ಶ. ೦೦-೩೭). 'ಮಸ ಕಂಗುಂದಿಸು' ಪರಾ. ೯. ಆಹಾರದೊಡನೆ ಬೆರಸಿ ಕೊಡಬಹುದಾದ ಒಂದು ಬಗೆಯ ಮಂದವಿಷ ; ಇಕ್ಕುಮದ್ದು : 'ಕೆಯ್ಮಸಕ' ಪರಾ. ಮಸಕು₁ : ೯. ಮಸಕಿಗೆ : — ತುಱುಮೆಯ ಸೊಪ್ಪನ್ನು ಹಿಸುಕಿ ಮಱುಸಿದರೆ . . . ಏಂತಹ ಕೈಮಸಕು ಸಹ ಮಾಣ್ಗು (ವಿಷ್ಣು. ೩೮). [< ಮಸಗು]

**ಮಸಕ**₂. ಮಸಗೆ (ನಾ). ೧. ಸೊಳ್ಳೆ : ಮಸಕಮನಾಂತಿಭಕುಳಮುಂ ಮಸಕ ಮನೊರಸುವವೊಲೊರಸುವುದು ನಿಜಕರದಿಂ (ಶಾಕ್ಷಕೃ. ೪-೧೩೪). ಮಸಗೆ : ೨. ಸಸ್ಯವನ್ನು ಹಾಳುಮಾಡುವ ಒಂದು ಬಗೆಯ ಶಿಲೀಂಧ್ರ ; ಬೂಷ್ಟು ; ಕಾಡಿಗೆರೋಗ : ಮಸಗೆ ಮೂಡಿದ ಹೊಲನು ಮುಷ್ಟಪ್ರಸರ ದೇಳಿಗೆ ಪಾಟಿಯೋಲಗ ಹುಸಿದು ಬಾಳುವೆ . . . ಹಸನ ಕೊಡುವುದೆ (ಕುಮಾ.ಶ. ೯-೪೮) ; ಮುರ್ಯಾಷ್ಟಸೃಪನ ಸಿರಿ ಮಸಗೆಯು ಬೆಳೆಯುಂತಾಗ ದೇನಿಹುದೆ (ಭಪುರು. ೦೯-೦೪೬). [< ಸಂ. ಮಶಕ]

**ಮಸಕಂಗುಂದಿಸು** (ಕ್ರಿ). ಕಾಂತಿಗುಂದಿಸು ; ಕಳಾಹೀನವಾಗಿಸು : ಜೋಳೆಯ ನಾಡಂ ಸೂಱೆಗೊಂಡಾತನಂ ಮಸಕಗೆಗುಂದಿಸಿ ವಾರ್ಧಿಯಂ ಪುಗಿಸಿದಂ ಶ್ರೀಬಿಬ್ಬದಂಡಾಧಿಪಂ ( ಶಾಶಾ. IX-i. ೨೬೭-೦೬ : 1134 ). [ಮಸಕ₁ + ಕುಂದಿಸು]

**ಮಸಕಂಗುಂದು** (ಕ್ರಿ). ೧. ರಭಸವು ಕುಗ್ಗು ; ಆವೇಶವು ಕಡಿಮೆಯಾಗು : ಮಸಕಂಗುಂದದೆ ಪಾಱುವರಾತಿಶರಸಂಘಾತಂಗಳಂ ಕೂಡೆ ಖಂಡಿಸಿ (ಶಂಶಾ. ೦೨-೦೪೩) ; ಮಸಕಂಗುಂದದರಾತಿಪಾರ್ಥಿವರ ಕಾಂತಾನೇತ್ರನೀರೇಜದೊಳ್ ಬಿಸುನೀರಂ . . . ನೋಡಿ (ಲೀಲಾವ. ೧-೯೪). ೨. ತೀವ್ರತೆಯು ಕಡಮೆಯಾಗು; ಉಗ್ರತೆಯನ್ನು ಕಳೆದುಕೊಳ್ಳು : ವಸುಧೆಯೊಳೆ ಶಿವದ್ರೋಹಮನೆಸಗಿದನಂ ಕಂಡು ಸೈರಿಸುವನಾವನವಂ ಮಸಕಂಗುಂದದ ಪಾಪಪ್ರಸರಕೆ ಪಕ್ಕಾಗಿ ಭವಸರೋಧಿಯೊಳಾಳ್ಗುಂ (ವೃಶಂ. ೪೨-೦೨). [ಮಸಕ₁ + ಕುಂದು₁]

**ಮಸಕಂಗೊಳ್** (ಕ್ರಿ). ೧. ಅಧಿಕಗೊಳ್ಳು ; ಅತಿಶಯವಾಗು : ತಣ್ಣಸುಣ್ಣೆಂಪುಗಳ್ ಮಸಕಂಗೊಂಡಿರೆ (ಅಜಿ. ೦-೦೦). ೨. ಉತ್ಸಾಹಗೊಳ್ಳು : ಸುರತಾಲಯದೊಳ್ ಮಸಕಂಗೊಂಡಮರ್ವೆಟ್ಟಿ ಚಪ್ಪಲರ್ದ ವಕ್ಷೋಜದ್ವಯಂ (ಹನ್ನೆರ. ೦೭-೫೭). ೩. ಕೋಪಗೊಳ್ಳು : ದಾನವರಿಪು ಮಸಕಂಗೊಂಡಂ (ಜಗ. ೩-೭೩). [ಮಸಕ₁ + ಕೊಳ್₁]

**ಮಸಕಂಬೆಱು** (ಕ್ರಿ). ಆವೇಶಗೊಳ್ಳು : ಅವುಗಳ್ ಕರಂ ಮಸಕಂ ಬೆತ್ತಡೆಪೊಕ್ಕು ಮಿಕ್ಕದಟರಾರ್ದಾರ್ದೆಚ್ಚರಾ ಕರ್ಣನಂ (ಶೀರಾಫ. ೦೨-೦೦೩); ಪಶುಮಂದುಂ . . . ಮಸಕಂಬೆತ್ತವನೀಶರ್ಪೆರ್ಬುಲ ಬರಲ್ಕಂಡೋಡಲ್ (ಶ್ರೆರಫು. ೯-೬೮). [ಮಸಕ₁ + ಪೆಱು₁]

**ಮಸಕು**₁ 'ಮಸಕ₁' ನೋ.

**ಮಸಕು**₂ 'ಮಸುಕು' ನೋ.

**ಮಸಗ** (ನಾ). ಆಯುಧಗಳನ್ನು ಹರಿತಮಾಡುವವನು : ಮಸಗಿ ಮುಂದಣ ಬಡಗಿ ಕಮ್ಮಟ . . . ಮಸಗ ಮುಚ್ಚಿಗ . . . ಪರದರ ಕೇರಿಗಳಲುಬ್ಬಿಸಿದನುಬ್ಬಿಱಿದುಬ್ಬರಿಸಿ ಕಪಿ ಹವ್ಯವಾಹನನ (ಕೊರಾ. ೫-೮-೫೨). [< ಮಸೆ₁ + - ಗ₂]

**ಮಸಗಿಸು** (ಕ್ರಿ). ರೇಗಿಸು ; ಕೆರಳಿಸು : ದುರ್ಜನರಂ ಮಸಗಿಸಲಾಗದು (ಪೀತಾ. ೨೮-೮೨). [ಮಸಗು + — ಇಸು₃]

**ಮಸಗು**. ಮಸಂಗು (ಕ್ರಿ). ೧. ಹೆಚ್ಚಾಗು ; ಅತಿಯಾಗು ; ಅಧಿಕಗೊಳ್ಳು : ದಿವಿಜಗಣಂ ಕಾರೊಕ್ಕಲೆಂದೊಡುಱಿದವರಾರಾತನ ಮಸಪ ಮಸಕದೆಸಕಮನಿಱಿವರ್ (ಕಾವ್ಯಸಾ. ೨೩೯ ಕೂರ್ಗಿ) ; ಮಸಗಿದುದು ಬೇನೆಯಂ ಮಾಣಿಸು ದೇವತೆಯೆಂದು ಪರಕೆಯಂ ನುಡಿದೊಡೆ ಮಾಣಿಸುವಳೆ ದೇವತೆ ವೇದನೆಯ (ಸಮಕ. ೯-೦೦೪) ; ವಿಸ್ತರದ ಗುಜುಗುಜು ಮಸಗಿದುದು ಕಾಂತಾ ಕದಂಬದಲಿ (ಕುಮಾ.ಉ. ೦೯-೩೩) ; ಇಂತು ನನ್ನನು ಕವಿದ ದುಃಖ ನಿನ್ನೆಯ ಇರುಳು ಮರಳಿ ಮಸಗಿತು, ನನ್ನ ಆತ್ಮವನು ಮುಳುಗಿಸಿತು (ಮಮೊಃ. ೪). ೨. ಹರಡು ; ಆವರಿಸು : ಆದಂ ಕೇಳಲೊಡನೆನ್ನ ನೆತ್ತಿಯೊಳುರಿ ಮಸಗಿದಂತಾಗೆ (ಕಾವ್ಯಂ. ೫೬೦) ; ಹೊತ್ತಿ ಹೊಗೆದು ದಳ್ಳುರಿ ಮಸಗೆ (ಏಕೋರಾ. ೬-೨೨) ; ತಪಃಪ್ರಭಾವಮೊಂದೆಣ್ಟಿಗೆವೆತ್ತು ದೆಸೆ ದೆಸೆಯೊಳಂ ಮಸಗೆ ಕಂಡು (ಧರ್ಮಾಮೃ. ೫೭-೦೯). ೩. ಪ್ರಕಟವಾಗು ; ಹೊರಹೊಮ್ಮು : ದೈತ್ಯಬಲವುಲಿದಡಿಯಿಡಲು ಮೇಲುಸುರು ಮಸಗಿತು ಫಣಿಪ ಕಮಠರಿಗೆ (ಕುಮಾ.ದ್ರೋ. ೦೫-೪೩) ; ಬಿಳ ಕಪಿ ಮಸಗೆ ಕಿತ್ತಿತ್ತಿದನು ಮೃತ್ಯುಂಜಯನ ಗಿರಿಯ (ಕೊರಾ. ೦ ೬-೩೨) ; ಉರಿ ಮಸಗಿತು ನಾಸಿಕದಲ್ಲಿ ಕೆಂಗಿಡಿ ಸುರಿವಕ್ಷಿಯಿಂದೆ ನಂದೀಶ . . . ಗರುಡನ ನೆತ್ತಿ ಬಿರಿವಂತೆ ತಿವಿದು ಬೊಬ್ಬಿಱಿದ (ವೀರಶೈ. ೪೮-೩೫). ೪. ರಭಸವನ್ನು ಹೊಂದು ;

ತೀವ್ರಗೊಳ್ಳು : ಮಸಗಿದುದುತ್ಸವಾಮೃತತರಂಗಿಣಿ ಪೌರಜನಾಂತರಂಗದೊಳ್ (ಮಲ್ಲಿ. ೯-೦೨೯); ನೆಲನಸುಂಗ್ಗುಡಿವ ಕಂಚುಕಿಗಳಬ್ಬರ ಮಸಗಿತಾ ಸಭೆಯೊಳು (ತಬಶ. ೬-೦೮). ೫. ಆತುರಪಡು ; ಉದ್ವೇಗಗೊಳ್ಳು: ಪಸಿದಿರಲಾಜದೆ ಪಣ್ಣಂ ಮಸಗಿ ಜವರ್ಕಿಂದು ಸಾಯೆ ಕಂಡು (ಧರ್ಮಾಮೃ. ೨-೦೯೯) ; ಅಪ್ರತಿಮಲ್ಲದೈವದ ಸೆರೆಯುನಜಿಯದ ಬಿಲ್ಲಭೂಪರು ಮಸಗಿದರು ಗುಜುಗುಜಿಸ ಗಾಢವಲಿ (ಕುಮಾ.ಸ. ೯-೬೩). ೬. ಉತ್ಸಾಹಗೊಳ್ಳು ; ಹುರುಪೇರು : "ಮಸಗು – ವಿಜೃಂಭಣೇ" (ಶಬ್ದ) ; ಆರ್ ಬಿಕ್ಕು ಬರ್ದುಂಕುವನ್ನರಿವರ್ಗೆಂಬಿನೆಗಂ ಮಸಗಿತ್ತು ರಾಜಕಂ (ಶಂಶಶಾ. ೩-೬೬) ; ಎಸಗುವ ವಾವಮುಖಂಗಳ ದೆಸೆಗೆಸಗದೆ ಮಸಗದೆ ಸಗದಿರ್ದೆಡೆಯಿಂವಿರ್ದಸಡ್ಡರದಿವಿಜಸುಖಾಮೃತರಸದಿಂ ತನ್ನಿಂದೆ ತಾನೆತಣ್ಣನೆ ತಣಿದಂ (ಸುಕುಮಾರ. ೦೨-೯೮) ; ತ್ರೈಲೋಕ್ಯಮಲ್ಲಂ ಮಸಗಿ ಮುಳಿದು ಮೇಲೆತ್ತಿದಂ (ಎಕ. VII, ಶಿಕಾ. ೦೦೦-೦೨; 1070). ೭. ಕ್ಷೋಭೆಗೊಳ್ಳು; ಉಕ್ಕೇರು : ಅನಿಬರುಮುತ್ಪಾತಮರುದಾಭಿಘಾತೋದ್ಧೃತ ಪಯೋನಿಧಿಗಳಂತೆ ಮಸಗಿದರಾಗಳ್ (ಆದಿ. ೦೯-೬) ; ಮರ್ಬು ಪೂತು ಭಾಪೆನುತ . . . ಭಟರುಲಿಯೆ ಲಹರಿಯ ಸಾಗರದ ಸೌರಂಭದಂತಿರೆ ಮಸಗಿತಾಸ್ಥಾನ (ಕುಮಾರವ್ಯಾ. ೦-೩೬) ; ಗೊಳ್ಳೆಂದು ನಗೆಯ ತೆರೆ ನೊರೆಯುಕ್ಕೆ ಮಸಗಿ ತುತ್ಸಾಹದಿಂ ಪಾಂಡವದಳದ ಜಳಧಿ (ಜೈಮಿನಿ. ೬೬-೨೦೨೦). ೮. ಕೆರಳು ; ರೇಗು; ಉದ್ರೇಕಗೊಳ್ಳು : ಪ್ರತ್ಯಂತವಾಸಿಗಳಪ್ಪರಸುಗಳ್ ಮಸಗಿದೊಡೆ ಮಂತ್ರಿಯ ಗುಣವಂ ನೆನೆದು ಬೆಸಗೊಂಡಂ (ವಡ್ಡಾರಾ. ೦೬೨-೨೦); ಮಸಗಿದ ಮದಾಂಧಗಂಧಸಿಂಧುರದಂತೆ ದೆಸೆಗೆ ಮಸಗಿದ ವಾಯುಪುತ್ರನಂ ಧರ್ಮಪುತ್ರಂ ಸಂತೈಸಿ (ಪಂಪಭಾ. ೯-೨೯ ವ) ; ವಿಗಡಬಸವಂ ಮಸಗಿ ಲಳಿಯೆದ್ದು ತತ್‌ಕ್ಷಣಂ ಚಿಗಿಯಲ್ ತೊಡರ್ದ ದಾವಂಗಳೆಲ್ಲಂ ಪರಿದುವು (ಶಬಪು. ೯೯-೦೬). ೯. ಎದುರುಬೀಳು ; ಮೇಲೆಬೀಳು : ಮಸಗಿ ಬಳಾಹಕಾವರ್ತರ ಬೆಸದಿಂದಂ ಬಂದ ಮೇಘಮುಖರಂ ತೂಳ್ದೋಡಿಸೆ (ಆದಿ. ೦೯-೩೮) ; ಹಸಿದ ಹೆಬ್ಬುಲಿ ಮಸಗಿದರೆ ಮೃಗನಿಕರವೇನಹುದರಸ (ಕುಮಾರವ್ಯಾ. ೦೬-೨೬). ೧೦. ಕಾಂತಿಯುಕ್ತವಾಗು ; ಶೋಭಿಸು : ಚಂದ್ರೋದಯಮಿನ್ನೆಸೆದಪುದೆನೆ ನಸುವೆಳಗಿಂ ಮಸಗಿದುದಿನಿಸಿಂದ್ರದಿಗ್ವಧೂಮುಖಬಿಂಬಂ (ಕಾದಂಬ. ೮೬೮). ಮಸಂಗು : ೭. ಪೊಸಲ್ ಮಸಂಗಿ ಸುರಿತರ್ಪರುಣಾಂಬುಸುವೃಷ್ಟಿ(ಯ ?) ಬಲ್ಪು ಪೆರ್ಚಿಳಸನೆ . . . ಪಳಂಚಿದರಿ ರ್ವಲದುರ್ವರಾಧಿಪರ್ (ರಣ. ೨-೨೨). ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ.

ಮಸಮಸಗು (ದ್ವಿರುಕ್ತಿ) : ಈ ಇಂದಿನ ಮಹಾರಾಜನು . . . ಶ್ರೀಮನ್ಮಹೀಶೂರಯಾದವಪ್ರಭುವಂಶಕ್ಕೆ ಕೊಡಲಿಯು ಕಾವೆ ಆಗಿ, ಮಸಮಸಗುತ್ತಿದ್ದಾನೆ (ಮುಂಕ್ರಶ. ೬೬-೦). [ದೇ.॥ ತೆಲು. ಮಸಗು]

ಮಸಗೆ 'ಮಸಕ₂' ನೋ.

ಮಸಜೀದ 'ಮಸೀದಿ' ನೋ.

ಮಸಜೇದಿ 'ಮಸೀದಿ' ನೋ.

ಮಸಣ, ಮಶಾಣ, ಮಸಾಣ, ಸ್ಮಶಾನ (ನಾ). ಶವಗಳ ಅಂತ್ಯಸಂಸ್ಕಾರವನ್ನು ನಡೆಸುವ ಸ್ಥಳ ; ಸುಡುಗಾಡು ; ರುದ್ರಭೂಮಿ : "ಮಸಣ ಬೆಸಲು ಸ್ಮಶಾನಂ'' (ಕಶಶ. ೦೨೮); ಆಕೆಯಂ ಬೆಳ್ಪಾಡೊಳ್ ಮಸಣದೊಳ್ ಕೊಂಡುಪೋಗಿಕ್ಕಿ (ವಡ್ಡಾರಾ. ೦೦೨-೯); ನರಕದ ನೆಲೆ . . . ಮಸಣದ ಪುಟ್ಟು ಪಾಪದೆಡೆ ಘಾತಕದಾಗರಮುದು ನೆನೆವರ್ಗೆ ಭಯಂಕರಂ (ಕಾದಂಕಾ. ೭೯೬) ; ಮಸಣದ ದಾರಿಯಳಲು ಪುಟ್ಟಿಸಿದುದು (ಶ್ರೀಶಾಂ. ೬-೪). ಮಶಾಣ : ಮಕ್ಕಳಿಲ್ಲದ ಮನೆ ಮಶಾಣ ಎಂಬ ಹಾಗೆ ಬರೀ ಮನೆ ಆಯಿತು (ಕಥಾಮಂ. IV, ೭೫). ಮಸಾಣ : ಕಟ್ಟೀ ಕೆಳಗೆ ಹೋದ ನೀರೂ ಮಸಾಣಕ್ಕೆ ಹೋದ ಹೆಣ್ಣೂ ಹಿಂತಿರುಗಿ ಬರುತ್ತವ್ಯೋ ? (ಹುಬ್ಬಹ. ೧೬೩). ಸ್ಮಶಾನ : "ಮಸಣ (ಮಸಾಣ)—ಸ್ಮಶಾನ = ಸುಡುಗಾಡು" (ಕನ್ನಕೊ. ೩೯) : ಬಂಧುಜನಗಳು ಸ್ಮಶಾನದವರೆಗೆ ಬರುವರು (ತತ್ವಶಾ. ೦೯-೬) ; ಮನೋಭಾವವಿಲ್ಲದ ವ್ಯಕ್ತಿಗೆ ಅವೆಲ್ಲ ಸ್ಮಶಾನಸದೃಶ (ಕಸ್ತೂರ. ೩೮೮).

ಮಸಣದೊಡೆಯ = ಸುಡುಗಾಡಿನ ಅಧಿಪತಿ; ಶಿವ: ಮಸಣದೊಡೆಯನ ಸೇರ್ದನಾ ಬಸವಪ್ಪಶಾಸ್ತ್ರಿ (ಕಾಕುಂತ. ೬ ಅಂಕ್ಯಾದು). ಮಸಣಮೌನ, ಸ್ಮಶಾನಮೌನ = ೧. ಸ್ಮಶಾನದಲ್ಲಿ ಆವರಿಸಿರುವ ನಿಶ್ಶಬ್ದತೆ. ೨. (ಆಲಂ) ಜೀವಂತಿಕೆಯಿಲ್ಲದೆ ನಿಶ್ಶಬ್ದವಾಗಿರುವ ವಾತಾವರಣ : ತಾವು ಅನ್ಯೋನ್ಯವಾಗಿರದೆ, ಮಾತುಕಥೆ ಕೂಡ ಇಲ್ಲದೆ, ಮಸಣಮೌನದಿಂದ ದಾರುಣಜೀವನವನ್ನು ಜೀವಿಸುವುದು ಸಾವಿಗಿಂತ ಕಡೆ ! (ಬಂಕಮು. ೨೦೨) ; ಮಸಣಮೌನ ಎಲ್ಲವನ್ನೂ ನುಂಗಿ ನೊಣೆದಿದೆ (ಹಂಗೀತ. ೨೩); ಸಾಮರಸ್ಯವಿಲ್ಲದ ಅವರ ಸಂಸಾರವನ್ನು ಸ್ಮಶಾನಮೌನ ಆವರಿಸಿಕೊಂಡಿದೆ (ಅದೇ).

[<ಪ್ರಾ. ಮಸಾಣ. / ಸಂ. ಶ್ಮಶಾನ]

ಮಸಣಕಬ್ಬೆ 'ಮಸಣಿಕಬ್ಬೆ' ನೋ.

ಮಸಣಗಾಡು (ನಾ). ಸುಡುಗಾಡು ; ರುದ್ರಭೂಮಿ : "ಶ್ಮಶಾನಂ, ಪಿತೃವನಂ — ಈ ೨ ಮಸಣಗಾಡು" (ಹಲಾಯು. ೦೦೫-೦೬) ; ಸಾಯಿಯಿದ್ದಡೆ ಮಸಣಗಾಡಿಗೆ ಕಳುಹುವಳೆ ಮಗನ (ಬಸಪು. ೦೫-೯).

[ಮಸಣ + ಕಾಡು₂]

ಮಸಣಗಾಹಿ (ನಾ). ಶ್ಮಶಾನವನ್ನು ಕಾಯುವವನು ; ಶಿವ : ತಿರುಕಂ ಮಸಣಗಾಹಿ ಹಾವಾಡಿಗನೆಲುಮಾಲೆಗೊರಲ ಗೊರವಂ ನೋಡಲೆನಗೆ ಪಾಸಟಿಯೆ (ಶಬಪು. ೩೦-೩೩) . [ಮಸಣ + ಕಾಹಿ]

ಮಸಣಬಟ್ಟೆ 'ಮಸಣವಟ್ಟಿಗೆ' ನೋ.

ಮಸಣಬ್ಬೆ (ನಾ). ಒಂದು ಕ್ಷುದ್ರದೇವತೆಯ ಹೆಸರು : ಕರೆಯದೆ ಕಾಡಿ ಕಂಟಿಸುವ ಕೂಂಟಣಿಯಂ ಮಸಣಬ್ಬೆ[ಪಾಠಾಂ. ನೊಣೆಗಬ್ಬೆ, ನೊಣಗಜ್ಜಿ]ತಿಂಗೆ (ಕಾವ್ಯಸಾ. ೯೯೦ ; ಅಲಂತ. ೨-೦೦೬ ನೋ). 'ಮಸಣಿಕಬ್ಬೆ' ಪರಾ.

[<ಮಸಣಿ + ಅಬ್ಬೆ₁]

ಮಸಣಯಾತ್ರೆ (ನಾ). ಹೆಣವನ್ನು ಶ್ಮಶಾನಕ್ಕೆ ಕೊಂಡೊಯ್ಯುವುದು ; ಅಂತಿಮಯಾತ್ರೆ : ಮಣಿಪುರದರಮನೆಯ ಕನಕವಪ್ರದಿಂ ಪೊರಮಟ್ಟು ನಡೆದುದು ಮಸಣಯಾತ್ರೆ (ಜೈಮಿನಿ. ೮೮-೨೯೩೬). [<ಸಂ. ಶ್ಮಶಾನಯಾತ್ರಾ]

ಮಸಣವಟ್ಟಿ 'ಮಸಣವಟ್ಟಿಗೆ' ನೋ.

ಮಸಣವಟ್ಟಿಗೆ, ಮಸಣಬಟ್ಟೆ, ಮಸಣವಟ್ಟಿ, ಮಸಣವಟ್ಟೆ, ಮಸವಟಿಗೆ (ನಾ). ಶವಗಳ ಅಂತ್ಯಸಂಸ್ಕಾರವನ್ನು ಮಾಡುವ ಸ್ಥಳ; ಸುಡುಗಾಡು; ಶ್ಮಶಾನ : "ಸೊಡಬಲಿಯೆಂದೆನಲ್ ಮಸಣವಟ್ಟಿಗೆಯೊಳ್" (ಕರ್ನಾಕ. ೬೬); ಊರ ಹೊಱಗಣ ಮಸಣವಟ್ಟಿಗೆಯೊಳಿರಲು (ಶಂಬರ. ೬-೫೫); ಪಾಣ್ಬನಂ ಕೊಂಡುಪೋಗಿ ಪುರದ ಪೊಱಪೊಱಲ ಮಸಣವಟ್ಟಿಗೆಯ ಮಧ್ಯದೊಳು ವಧಿಯಿಸುವುದು (ಕುಮಾರ್ಕಸ್ರ. ೫-೨೯ ವ); ಮಸಣವಟ್ಟಿಗೆಯೊಳಗೆ ಮಾರಿಕಾವಲು ಕಾಯ್ದು ಚೆನ್ನಿಗನಸಹನು (ಕುಶಂಗ. ೩೨-೩೨). ಮಸಣಬಟ್ಟೆ, ವೇಶ್ಯಾಳ ತನ್ನ ಮಸಣಬಟ್ಟೆಗೆ ಪೊರಟಂತೆ ಕೇಶವಭಟ್ಟರು . . . ಹೊರಟು ಹೋದರು (ಶಿರಾಕ. ೩೯). ಮಸಣವಟ್ಟಿ : ಮಾದಿಗವೇಷದೊಳಂ ದಿನದಿನಂ ಮೊದಲಾಗಿಯಾ ಮಸಣವಟ್ಟಿ[ಪಾಠಾಂ. ವಟ್ಟಿಗೆ]ಯಂ ಕಾದಿರ್ದಂ (ಕುಮಾರ್ಕಸ್ರ. ೨-೪೪ ವ). ಮಸಣವಟ್ಟೆ : ಶಿಶುವನಿರಿಸಿ ಮಱೆಯಾಗಲವರು ಸಟ್ಟಿ ಮಸಣವಟ್ಟೆಯಲಿ ಶಬವನು ಬಿಸುಟಲ್ಲಿ ನೋಡಲು ತಳಿರ ಹಾಸಿನ ಮೇಲೆಸೆವ ಬಾಲಕನನು ಕಂಡ (ಜೀವಂಧರ. ೬-೨೮); ಮಿಸುವ ನಾಟಕಶಾಲೆಗಳನು ಮಸಣವಟ್ಟೆಗೆ ಸೆಱೆಮನೆಗೆಣೆಗುಂಡು ಯೋಚಿಸಿದೆನು (ಕಶಕ. ೬೦-೦೯); ಜನಾನಖಾನೆ ಮಸಣವಟ್ಟೆಯಾಯಿತು (ಘೂಮಿಶಾ. ೦೦೦). ಮಸವಟಿಗೆ : ಕಳ್ಳರಿಂ ಕಡಿವಡೆದು ಭೂಸುರಂ ಮಸವಟಿಗೆಯಲ್ಲಿ ಬಿದ್ದಸುಗಳೆವ ಕಾಲದೊಳು ಶುನಿ ಬೂದಿಯಲ್ಲಿ ಪಟ್ಟಿರ್ದು ಬಂದವನ ಪಣೆಯಂ

ಮೆಟ್ಟಿಲು (ರಾಶಿತ. ೯-೫೩). P ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ. 'ಮಸಣವಾಟಿ' ಪರಾ. [<ಸಂ. ಶ್ಮಶಾನವಾಟಿಕಾ]

**ಮಸಣವಟ್ಟೆ** 'ಮಸಣವಟ್ಟಿಗೆ' ನೋ.

**ಮಸಣವಾಟಿ** (ನಾ). = ಮಸಣವಟ್ಟಿಗೆ : ಅದಸ ದಾಟಿ ಆ ಮಸಣವಾಟಿ, ಎಡಕಾಗಿ ಅದರ ಆಚೆ ಕಾಮ ತನ್ನ ಹಚ್ಚಂಗಿ ಹಾಸಿಧಾಂಗೆಲ್ಲಿ ನೀರ ಪಾಚಿ (ಗಂಗಾಕ. ೯೭-೫). 'ಮಸಣವಟ್ಟಿಗೆ' ಪರಾ. [<ಸಂ. ಶ್ಮಶಾನವಾಟೀ]

**ಮಸಣವಾಡಗೆ** (ನಾ). ಶ್ಮಶಾನದಲ್ಲಿ ಹೆಣವನ್ನು ಸಂಸ್ಕಾರಮಾಡಲು ಕೊಡಬೇಕಾದ ಬಾಡಿಗೆ, -ಶುಲ್ಕ : ಹೆಣಸುಟ್ಟುದಂ ಮಸಣವಾಡಗೆಯ ಹಾಗವನು ಕೊಟ್ಟಿಲ್ಲದೇನೆಂದಡಂ ಬಿಡೆನು (ಹರಿಶ. ೦೨-೩೭). [ಮಸಣ + ಬಾಡಗೆ]

**ಮಸಣಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಗಂಡ ಶಿವಲಿಂಗ ದೇವರ ಭಕ್ತ, ಹೆಂಡತಿ ಮಾರಿ ಮಸಣಿಯ ಭಕ್ತೆ (ಬಸವ. ೦೦೯); ಮಸಣದಾ ಮಾತಮ್ಮನೆಂಬವಂ ಮಸಣಿಯಂ ಕುಣಿಸಿ (ತಂಪು. ೫೭-೨೦); ರೋಗಾದಿಗಳ ಪೀಡೆಯಾದರೆ ಮಾರಿ, ಮಸಣಿ ಮೊದಲಾದ ದೇವತೆಗಳೂ ಬೇಕು (ಕನ್ನಡ. ೦). [ಮಸಣ + — ಇ$_2$]

**ಮಸಣಿಕಬ್ಬೆ**. ಮಸಣಕಬ್ಬೆ (ನಾ). = ಮಸಣಿ : ಮಸಣಿಕಬ್ಬೆಯ ಗೋಪುರದಿಂ ತೆಂಕ (ಮುಂಬರಾ. XII. ೦೬-೫೯; 1023). **ಮಸಣಕಬ್ಬೆ** : ಬಡಗಲು ಮಸಣಕಬ್ಬೆಯ ಕೊಂಡದ ತೆಂಕಣಗಡ (ಕರ. IV. ೯೨-೮೯; 1239); ಮಾರಿಕಬ್ಬೆ ಮಸಣಕಬ್ಬೆ . . . ಮೊದಲಾದ ವ್ಯಂತರಂಗಳಂ (ಪ್ರಭಶಾ. ೦೦೯-೨೨). 'ಮಸಣಬ್ಬೆ' ಪರಾ. [< ಮಸಣಿ + ಅಬ್ಬೆ$_1$]

**ಮಸಣಿಗೆ** (ನಾ). = ಮಸಣಿ : ಪರಮೀಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮಸಣಿಗೆಯೆನಿಪ್ಪ ಕೊಟಿದೆಯ್ವಂಗಳ್ (ಸಮಶ. ೯-೦೨೮). [< ಮಸಣಿ]

**ಮಸಣಿಸು** 'ಮಸುಳಿಸು' ನೋ.

**ಮಸಬು** (ನಾ). ಕೆಂಪುಮಣ್ಣಿನ ಭೂಮಿ : ಕೆಬ್ಬೆ : ಮಸಬು ಸೌಳು ಮಡಿಯೊ (ಶಂಬರಿ. ೦-೫೭); ಕೆಂಪು, ಮಸಬು, ಸವಳು, ಕರಲು, ಕರಕಿಯ ನಮ್ಮ ಮುಂತಾದವಾದರೂ. . . ಬಾವಿಗಳು ಇದ್ದಲ್ಲಿಯಾಗಲಿ ನೆಲ್ಲುಗದ್ದೆ ಗಳನ್ನು ಮಾಡಿಕೊಳ್ಳಬೇಕು (ಕೃಷಿಶ. ೫೫). [ ? ]

**ಮಸಮಸ** (ನಾ). ಮಬ್ಬು; ಮಸುಕು : "ಮಸಮಸವಾದುದೆಂದು ಬೆಳಗಬೇಡುದು" (ಕಣಾ. ೫೭-೨೦೭). 'ಮಸಮಸನೆ' ಪರಾ. [ < ಮಸುಕು$_2$ ? ]

**ಮಸಮಸನೆ** (ಅ). ಒಂದು ಅನುಕರಣಾವ್ಯಯ: ಮಬ್ಬಾಗಿ: ಮಸುಕಾಗಿ: ಪಾಂಸುಪಟಲಂ ಮಸುಳಿಸೆ ಮಸಮಸನೆ ತೋಱುವವಸರದೊಳ್ ಪೋಲ್ತೆಸೆದುದು ಧುತ್ರಿ ಪೊಗೆ ಪೊಗೆ ನಸುಮಾಸಿದ ಪೊಗೆಯ ಚಿತ್ರಭಿತ್ತಿಯ ತೆಱದಿಂ (ಕುಶ್ರಕು. ೫-೪೦).

ಮಸಮಸನಾಗು = ೧. ಮಬ್ಬಾಗು ; ಮಂಕಾಗು : ಮುಂಬಗ ಲೊಳಗೆ ಮಸಮಸನಾದ ತಾರೆಯ ಬಳಗದಂದದಿ (ಅಂಜ. ೨-೨). ೨. ಕಡಮೆಯಾಗು: ಕುಗ್ಗು : ತನ್ನೊಳಾದೊಲವಿನೆಸಕಂ ಮಸಮಸನಾಗೆ ಮತ್ತೊರ್ವನೊಳ್ ಮನಕ್ಕೆಡಮಾಡುವಳ್ . . . ಒಲ್ದೆನೆಂದು ರೋಸದಿಂ ಪುಸಿಮಾಟ್ಟುದುಂ (ಶಂಪ್ರಶು. ೮-೫೯ ಬ). [ ಮಸಮಸ + — ಅನೆ$_1$ ]

**ಮಸರಾವ್ಯಾಪಾರ** (ನಾ). ವಜ್ರ ಮುಂತಾದ ರತ್ನಗಳ ವ್ಯಾಪಾರ ; ರತ್ನಪಡಿವ್ಯಾಪಾರ : ಮಸರಾವ್ಯಾಪಾರದಿಂದ ಅವರು ಶ್ರೀಮಂತರಾದರು (ಬಾಶಿ). [ಮಸರಾ$_0$ (P < ಸಂ. ಮಸಾರ = ಮರಕತ) + ವ್ಯಾಪಾರ]

**ಮಸಲ** 'ಮಸಲಾ' ನೋ.

**ಮಸಲತ್** 'ಮಸಲತ್ತು' ನೋ.

**ಮಸಲತಿ** 'ಮಸಲತ್ತು' ನೋ.

**ಮಸಲತ್ತು**. ಮಸಲತ್, ಮಸಲತಿ, ಮಸಲಿಯತು (ನಾ). ಒಳಸಂಚು ; ಪಿತೂರಿ ; ಹಂಚಿಕೆ : ಜನರಲ್ ಸಾಹೇಬರ ಸಂಗಡ ಮಸಲತ್ತು ಮಾಡಿ ಟೀಪುಸುಲ್ತಾನರಿಗೆ ಜವಾಬು ಬರೆದ ವಿವರ (ರಾಕೇಂದ್ರ. ೯೦); ಎಲ್ಲಾ ಏಸೋ ಒಂದು ಮಸಲತ್ತಿಗೆ ಸೇರಿಕೊಂಡ ಹಾಂಗೆ ಕಾಣ್ತದೆ (ಮಲೆಮ. ೭೯೭). **ಮಸಲತ್** : ಕಂಪೀನ ಓಡಿಸ್ಬಿಡಬೇಕೂಂತ ಮಸಲತ್ ಮಾಡಿದ್ರು (ಅನಾಬಿ. ೭೯). **ಮಸಲತಿ** : ಗ್ರಾಮದ ಮಸಲತಿಯೊಳ್ನಿಸ್ಸೀಮ ಪ್ರತಿಭಟರನಲೆದು ತತ್ರೋಂಟೆಯುಮಂ ಭೂಮಿಪತಿಲಕಂ ರಿಪುಕುಲಭೀಮಂ ಶಿವಭೂಪನಾಜಿಯೊಳ್ಸಾಧಿಸಿದಂ (ಕೆಳನೃ. ೭-೪೩). **ಮಸಲಿಯತು**: ಇಬ್ಬರು ಜನರಾಲ್‌ಸಾಹೇಬರು ಮಸಲಿಯತು ಮಾಡಿದರು (ರಾಕೇಂದ್ರ. ೯೨). [← ಅರ. ಹಿಂ. ಮಸಲಹತ್; ಮರಾ. ಮಸಲತ್, ಮಸ್ಲತ್]

**ಮಸಲಾ**. ಮಸಲ (ಅ). ಒಂದು ವೇಳೆ, ಅಕಸ್ಮಾತ್, ಎಂಬರ್ಥಗಳಲ್ಲಿ ಬಳಸುವ ಒಂದು ಅವ್ಯಯ : ಮಸಲಾ ಒಬ್ಬ ರೈತನು ಪ್ರಾರಂಭ್ಯ ನಾಲ್ಕುವರಹ ಕಂದಾಯ ಕೊಡುವಂಥಾವನು . . . ಒಂದು ವರಹಾ ಎರಡು ವರಹ ಕಮ್ಮಿಮಾಡಿಸಿಕೊಂಡು ಇದ್ದಲ್ಲಿಯೂ (ಮಹಾಶಂ. II. ೬೦); ಒಂದ್ವೇಳೆ ಹೂವಳ್ಳೀಲಿ ಮಸಲಾ ನಾನೆ ನಿಂತು ಗದ್ದೆತೋಟದ ಕೆಲಸ ಎಲ್ಲಾ ಮುಗಿಸಬೇಕಾಗಿ ಬಂದರೆ ಅಲ್ಲೀಗೆ ಬರ್ತಿರೇನೊ (ಮಲೆಮ. ೬೦೭). **ಮಸಲ** : ಮಸಲ ದೊಡ್ಡ ಆನೆ . . . ಬಂದಿತು ಎಂದುಕೊ: ಆಗ್ಗ (ಮರುಶ. ೦೦೯); ಮಸಲ ಇವು ಯಾವುದಕ್ಕೂ ಸೇರದೆ ಉದಾಸೀನರಾಗಿರತಕ್ಕವರು ಇದಕ್ಕೆ ಸೇರಲೇ ಇಲ್ಲ (ಶಾಂಭುತ. ೩೯). [← ಅರ. ಹಿಂ. ಮಸಲ್, ಮಸಲನ್, ಮಸಲಾ]

**ಮಸಲಿಯತು** 'ಮಸಲತ್ತು' ನೋ.

**ಮಸವಟಿಗೆ** 'ಮಸಣವಟ್ಟಿಗೆ' ನೋ.

**ಮಸವರಿ** (ನಾ). ಒಂದು ಬಗೆಯ ತೆರಿಗೆ : ನೆರೆವರಿ ಮರಾಡ ಕಡ ಮಸವರಿ . . . ಸಂಜಾಯಿತನಿಲಗಳ ಪರಿವಿಡಿಯಂ ನಿಲಿಸಿ ಸೀಮೆಯುಮಂ ರಕ್ಷಿಸಿದಂ (ಕೆಳನೃ. ೭-೨೯). 'ನೆರೆವರಿ' ಪರಾ. [ಮಸ ? + ವರಿ$_1$]

**ಮಸಾಣ** 'ಮಸಣ' ನೋ.

**ಮಸಾರಿ**. ಮಸಾರೆ (ನಾ). ಕೆಂಪುಮಣ್ಣಿನ ಭೂಮಿ : ಕೆಬ್ಬೆ : ಮಸಾರಿ ಕೇಸರಿ ಮೊರಡಿಯ ಜಮೀನುಗಳಾದರೂ ಅಂಥ ಹೊಲಗಳಿಗೆ ನಟ್ಟು ಕಡಿಸಿದ ವರ್ಷ ಬಿಳಿಯ ಎಳ್ಳು ಬಿತ್ತಬೇಕು (ಕೃಷಿಶ. ೨೭); ಸೀಗೆಹುಣ್ಣಿಮೆಗಾ ಮಸಾರಿಯು ಹಸುರು ಪುಷ್ಪದ ತೆರೆಯಿತು (ಶಲಮು. ೦೨-೧೦). **ಮಸಾರೆ** : (೯). [← ಮರಾ. ಮಸಾರ್ = ಉತ್ತಮ ಬೆಳೆಯನ್ನು ನೀಡುವ, ಮರಳುಮಿಶ್ರಿತಭೂಮಿ]

**ಮಸಾರಿಭೂಮಿ** (ನಾ). = ಮಸಾರಿ : ಗುಡ್ಡಗಳ ನೆರೆಪ್ರದೇಶವು ಕೆಂಪು ಮಣ್ಣಿನದಿರುತ್ತದೆ. ಇದಕ್ಕೆ ಮಸಾರಿಭೂಮಿ ಎಂದೆನ್ನುತ್ತಾರೆ (ಮುಂಬಳ. ೨೯); ಇಲ್ಲಿ ಎಲ್ಲ ಕಡೆಗೂ ನಾವು ಕಾಣುವುದು ಕರೆಯ ನೆಲವನ್ನಲ್ಲ; ಕೆಂಪುನೆಲ ಇಲ್ಲವೆ 'ಮಸಾರಿ' ಭೂಮಿ (ಶಾಶಾಶ. ೯೦). [ಮಸಾರಿ + ಭೂಮಿ]

**ಮಸಾರಿಸು** (ಕ್ರಿ). ಹರಡು ; ವ್ಯಾಪಿಸುವಂತೆ ಮಾಡು (?) : ಕಡೆಗಣ್ ಸುಣ್ಣೆಳಗಂ ಮಸಾರಿಸುವಿನಂ ಬೆಳ್ದಿಂಗಳಂ ಜೋಲ್ದ ಪೂಮುಡಿ ಮಂದಾನಿಳನಂ ದಳಂಗೊಳಿಪಿನಂ . . . ಕಂಗ್ಳಿರ್ದ ತನ್ನಂಗಿಯಂ ಕಂಡು (ಅಸಂಶು. ೯-೮). [P ಇದು 'ಪ್ರಸಾರಿಸು' ಎಂಬುದರ ಅಪಲಿಖಿತ ವಿರಬಹುದು]

**ಮಸಾರೆ** 'ಮಸಾರಿ' ನೋ.

**ಮಸಾಲೆ** (ನಾ). ಆಹಾರಪದಾರ್ಥಗಳನ್ನು ರುಚಿಗೊಳಿಸಲು ಉಪ ಯೋಗಿಸುವ ಮೆಣಸು, ಜೀರಿಗೆ, ಧನಿಯ, ಚಕ್ಕೆ ಮುಂತಾದ ಸಂಬಾರವಸ್ತು ಮತ್ತು ಇವುಗಳನ್ನು ಹುರಿದು ಕುಟ್ಟಿದ ಪುಡಿ : ಕೇರಿಕೇರಿಯೊಳು ಗಂದಿಗೆ ಮಸಾಲೆದ್ರವ್ಯಂಗಳಂ ಮಾರುತಿರ್ಪವನು (ಶಠರಿ.

೧೯೦-೩ ಪ) ; ಅಡುಗೆಮನೆಗಳಲ್ಲಿ . . . ಮಸಾಲೆ ಅರೆಯುವ ಕಲ್ಲು, ಪೊರಕೆ, ಬ್ರಶ್ಯುಗಳನ್ನಿಡಲು ನಾಗೊಂದಿಗೆ ಇತ್ಯಾದಿ ಸೌಲಭ್ಯಗಳಿರುತ್ತವೆ (ಅಡುಗೆ. ೨೬) ; ಜೀವನದ ಪಾಕದಲ್ಲಿ ವಿನೋದವು ಮಸಾಲೆಯಂತಿದೆ (ಕಥೆ. ೨೪) ; ಕೋಳಿ ಕೇಳಿ ಮಸಾಲೆ ಅರೆಯುತ್ತಾರೆಯೆ? (ಗಾದೆ).

ಮಸಾಲೆದೋಸೆ = ಚಟ್ನಿ, ಈರುಳ್ಳಿ, ಆಲೂಗಡ್ಡೆ ಪಲ್ಯವನ್ನು ಒಳಗಡೆ ಇಟ್ಟು ಬೇಯಿಸಿ ಮಡಿಚಿದ ಒಂದು ಬಗೆಯ ದೋಸೆ: ಅಮ್ಮ, ನನಗೆ ಮಸಾಲೆದೋಸೆ ಬೇಕು (ಕಶಕ್ತಿ. ೩-೫); ಉಪಾಧ್ಯಾಯರೊಬ್ಬರು ಮಸಾಲೆದೋಸೆಯನ್ನು ಕಟ್ಟಿ ತಂದಿದ್ದರಂತೆ (ಶಿಕ್ಷರ. ೨೮೪). ಮಸಾಲೆಪುಗ್ಗೆ = ಮಸಾಲೆ ದ್ರವ್ಯಗಳನ್ನು ಹಾಕಿಮಾಡಿದ ಪಕೋಡ : ಆತ ಹೆಂಡದಂಗಡಿಯಲ್ಲಿ ಮಸಾಲೆಪುಗ್ಗೆಗಳನ್ನು ತಿಂದ ಸಂಗತಿ . . . ಹೇಗೆ ಗೊತ್ತಾಗಬೇಕು (ಹೊಂಬಲು. ೦೩೯). ಮಸಾಲೆವಡೆ = ಈರುಳ್ಳಿ ಮುಂತಾದುವನ್ನು ಸೇರಿಸಿ ತಯಾರಿಸಿದ ಒಂದು ಬಗೆಯ ವಡೆ: ಇಂದು ಮಾಡಿದ್ದ ಮಸಾಲೆವಡೆ ತುಂಬ ರುಚಿಯಾಗಿತ್ತು (ರೂಢಿ).

[← ಅರ. ಮಸಾಲಿಹ್; ಪಾರ. ಮಸಾಲಹ್; ಹಿಂ. ಮರಾ. ಮಸಾಲಾ]

ಮಸಿ, ಮಶಿ (ನಾ). ೧. ಕರಿಯ ಬಣ್ಣ : ಕಪ್ಪು : ಮೆಯ್ಯೆಲ್ಲಂ ಮಸಿಯುಂ ಪೂಸಿ ಬೋಟಿದರೆವೆರಸು . . . ಬರ್ಪೊನನರಸಂ ಕಂಡು (ವಡ್ಡಾರಾ. ೦೦೯-೦೩) ; ಮಸಿಯುಂ ಪೊಂಜಿಸಿದಂತಾಟಪ್ಪ ತನು . . . ಉಗ್ರವಿಲೋಚನಂ (ಕಂಪಣಾ. ೬-೨೬) ; ನರೆ ಮುಸುಂಕಿದ ತಲೆಗಿರದೆ ಮಸಿಯ ಪೂಸಿ (ಅಂಜನ. ೩-೧೫೨). ೨. ಇದ್ದಿಲು ; ಕರಿ : ಪೊನ್ನಂ ಬಿಟ್ಟು ಮಸಿಯಂ ಕಟ್ಟುವೆಗ್ಗನಂ ಪೋಲ್ವೆಂ (ಧರ್ಮಾಮೃ. ೩-೨೧) ; ಮಸಿಯನೇಸುಕಾಲ ಬೆಳಗಿದರೇನು ಬಿಳಿದಾಗಬಲ್ಲುದೆ (ಬಸವ. ೩೮೨) ; ಪಿಡಿವಡೆ ಕೈಗೆ ಪೊನ್ನು ಮಸಿಯಪ್ಪುದೆನಿಪ್ಪ ದರಿದ್ರನೊಮ್ಮೆ ಪೆಂಪುಡುಗದ ದಾನದೊಂದು ಫಲದಿಂ . . . ಧನ್ಯವೆಸರಂ ತಳೆದಿರ್ದಂ (ಪುಣ್ಯಾಸ್ರ. ೦೨-೦೨). ೩. ಒಲೆಯ ಮೇಲಿಟ್ಟ ಪಾತ್ರೆಯ ತಳಕ್ಕೆ ಅಂಟಿರುವ ಅಥವಾ ಒಲೆ, ದೀಪದ ಹೊಗೆ ಮುಂತಾದುವುಗಳಿಂದ ಕಟ್ಟುವ ಕಪ್ಪು ಕಲೆ; ಕರಿಕು : ಕಡುಲೇಸೆಂದೋದುಂ ಪಿಡಿದೊಡೆ ಕೈ ಮಸಿಯಪ್ಪ ಮಾರ್ಗದಿಂ ದುರ್ಜನರಂ ಕಡುಮೋಪದಿನೊಳಕೊಂಡಿರ್ದೊಡೆ ಕೆಡುಗುಂ ತನ್ನೊಳಾದ ಗುಣಮೆನಿತನಿತುಂ (ಧರ್ಮಾಮೃ. ೨-೪೬) ; ಮಸಿಯೆಂಬುದು ಹರಿಯೋಡಿಂಗೆ (ಅಪಂಚ. ೨-೨೮ ಪ) ; ವದನಕ್ಕೆ ಮಸಿ ಸುಣ್ಣವ ಬರೆಯಿಸಿಕೊಂಡ ಚದುರೆವೆಣ್ಣಲ್ಲವೆ ನೀನು (ಶಂನವ. ೬-೦೮೬). ೪. ಅಂಜನ ; ಕಾಡಿಗೆ : ಮಸಿಯಿಂದಂ ಜಗಮೆಲ್ಲಮಂ ದಿತಿಸುತಂ ಮುಂ ಪೊಟ್ಟಿಸೋ . . . ಎಂಬ ಬಗೆಯಿಂ . . . ಕವಿದತ್ತುದ್ದಾಮಧೀಮಂ ತಮಂ (ಕಂಬಣಾ. ೪-೪೯). ೫. ಇದ್ದಿಲು ಅಥವಾ ಕಾಡಿಗೆಯಿಂದ ಬರೆದ ಚುಕ್ಕೆ ಅಥವಾ ಗೆರೆ : ಸಾವಿರ ಚಿತ್ತಾರ ಒಂದು ಮಸಿ ನುಂಗಿತು (ಗಾದೆ). ೬. ಬರೆಯಲು ಬಳಸುವ ಕಪ್ಪು, ನೀಲಿ ಮೊದಲಾದ ಬಣ್ಣದ ದ್ರವ; ಶಾಯಿ: ಉಪಾಧ್ಯಾಯಂಗೆ ಕಟಪೆಯ ಕೂಟಂ ಮಸಿಯುಂ ತುಪ್ಪಮುಮನುಣಲ್ಕೊಟ್ಟು (ವಡ್ಡಾರಾ. ೬೫-೨೦) ; ಮದನಂ ಮಸಿಯೊಳ್ ಬರೆದಿಟ್ಟ ತನ್ನ ತಕ್ಕಿನ ಪೆಸರಕ್ಕರಂಗಳೆನಿಸಿರ್ದುವು ಮತ್ತಮಧುವ್ರತಾಳಿಗಳ್ (ಶಾಂತಿಪು. ೬-೦೨೫) ; ಮಸಿ ಯೆಂಬುದು ಬರೆವುದು (ಹಾರ. ೬೯೮). ೭. ಬಂದೂಕಿಗೆ ಹಾಕುವ ಮದ್ದು. – ಇದ್ದಿಲುಪುಡಿ : ಸೆಟ್ಟರು ಕೋವಿಗೆ . . . ಮಸಿಯನ್ನು ಹಾಕಿ, ಅದರ ಮೇಲೆ ಕತ್ತವನ್ನು ಗಜದಲ್ಲಿ ಇಡಿಯುತ್ತಿದ್ದಾಗ . . . ಹುಂಜವು ಲಿಬಿಲಿಬಿ ಒದ್ದಾಡಿಕೊಂಡಿತು (ಕಾನೂರು. ೪೬). ೮. ಮಾಸಿದುದು ; ಕೊಳೆಯಾದುದು : ಮಸಿಯಬುವೆಯಾಪರಿಸಿ ಬೆಳಗುವ ನೂತ್ನರತ್ನದ ಪರಿಯೊಳು . . . ಕಬುರಚರ್ಮಾವೃತವೆನಿಸಿ ಮೆಱೆದು (ಬಸವ. ೪೯-೦) ; ಮಸಿಯ ಕಪ್ಪಟದಿಂದ ಮಾಸಿದ ಕುಸುಮಕೇಶಗಳೊಡನೆ ದೇವೋತ್ತಮರೊಳಪಡೆಯ ಪಸಿಸಿಯಿರೆ (ಸಂಭಕ. ೫-೬೯). 'ಮಸಿಗಪ್ಪಡ' ಪರಾ. ಮಶಿ : ೧. ದೃಷ್ಟಿಚುಕ್ಕೆಯದೊಂದನೆಲ್ಲ ಚೆಂದಂಗಳ್ಗಮಿಟ್ಟಹಾಸು ಪರಮೇಷ್ಠಿ, ಶಶಿಗೆ ಮಶಿಯವೊಲು (ಮಂಕುತ. ೪೪೬). ೬. 'ಮಶಿಕಾಣಿಕೆ' ಪರಾ. ೯. (ಆಲಂ) ಕಳಂಕ : 'ಮಸಿಹೆಣ್ಣು' ಪರಾ.

ಮಸಿ ನುಂಗಿಹೋಗು = (ಆಲಂ) ಹಾಳಾಗು : ಈ ಶಾಲೆಯೊಂದರೆ ಮೊದಲು ಗುಡಿಯೂರಿನಲ್ಲಿ ಎಷ್ಟು ಹೆಸರುವಾಸಿಯಾಗಿತ್ತು . . . ಎಲ್ಲಾ ಮಸಿನುಂಗಿಹೋಯ್ತು (ಕಾವೇರಿ. ೮೮). ಮಸಿ ಬಳಿ = (ಆಲಂ) ಅಪಮಾನ ಮಾಡು : ಕಳಂಕವುಂಟುಮಾಡು : ಶಿಕ್ಷಕರು ತಮ್ಮ ವಕ್ಷತೆಗಳ್ಲಿ ಮಸಿಬಳಿಯುವರೋ ಎಂಬ ಭೀತಿ (ಶಿಕ್ಷರ. ೬೬೬) ; ನೀನು ಈ ಸ್ಥಿತಿಗೆ ಬಂದು ನಕ್ಕವರ ಮುಖಕ್ಕೆ ಮಸಿ ಬಳಿದೆಯಲ್ಲಾ ಅಷ್ಟೇ ಸಾಕು (ಅಶಮಾ. ೦೮೨). ಮಸಿಯ ಗುಳ್ಳೆ = ಮಸಿಯ ಕುಡಿಕೆ : ಬಟ್ಟತರ ಮಸಿಯ ಗುಳ್ಳೆಯ ಲಕ್ಕಣಿಕೆ ಬಿಳಿಯ ಪತ್ರಗಳನ್ನು ಪಿಡಿದು (ಪವಮೋ. ೨೬-೦೪). ಮಸಿಯಾಗು = ೧. ಒಲೆಯ ಮೇಲಿಟ್ಟ ಪಾತ್ರೆಯ ತಳ ಮುಂತಾದುವುಗಳ ಕರಿಕು ಹತ್ತಿಕೊಳ್ಳು : ಅಭ್ಯಾಸವಿಲ್ಲದೆ ಅಡಿಗೆಯ ಕೆಲಸಕ್ಕೆ ತೊಡಗಿ ಅವಳ ಸೀರೆಯೆಲ್ಲ ಮಸಿಯಾಗಿದೆ (ರೂಢಿ). ೨. ಇದ್ದಿಲಾಗು : ಪಿಡಿಪಿಡಿಯೆ ಕರಗುವುದು ಬಱೊತೆ ಮಸಿಯಾಗಿರ್ಪುದಲ್ಲದಿರ್ದೊಡೆ ಪೆಱಗಾಱಗಡೆ ಬಂದಪೆನೆಂಬುದು ಗಡ ಸುಱು ಧನಮೆ ಜಗಕ್ಕೆ ದುಃಖಿಸಾಧನಮಲ್ತೆ (ತಂತ್ರಪು. ೯-೦೨). ಮಸಿಯಿಡು : ೧. ಕಪ್ಪು ಬೊಟ್ಟನ್ನು ಹಚ್ಚು : ಮನಸಿಜಮಂತ್ರಾಕ್ಷರಮಂ . . . ಬರೆಯಲ್ಕೊಂಬಲಗೆಗೆ ಮಿಸುಗುವ ಮಸಿಯಿಡುವಂದದೆ ನೊಸಲೊಳ್ ಮೃಗಮದ ಮಿಕ್ಕುದಳು (ಜಯಿತಾ. ೨-೩೯). ೨. (ಆಲಂ) ಕಳಂಕಗೊಳಿಸು : ತಾನೇ ತನ್ನನ್ನು ಮಸಿಯಿಡಲೀ ಸುಪವನು ಗೈದನು (ಶಕುಶಾ. ೦೫-೩೫). ಮಸಿಯುರುಳಿ = ಮುದ್ರಣಯಂತ್ರದಲ್ಲಿ ಅಚ್ಚುಮೊಳೆಗಳ ಮೇಲೆ ಉರುಳಿ ಮಸಿಯನ್ನು ಸವರುವ ಸಾಧನ : ಆ ಭಾಗಗಳು ಮಾತ್ರ ಮುದ್ರಣಯಂತ್ರದ ಮಸಿಯುರುಳಿಗಳಿಗೆ (Rollers) ತಾಗಿ . . . ಯಂತ್ರದಒತ್ತಡದಿಂದ ಕಾಗದದ ಮೇಲೆ ಮುದ್ರಿಸಲ್ಪಡುತ್ತವೆ (ಮುದ್ರಣ. ೨). ಮಸಿಯೂಟ = ಮದುವೆಯಲ್ಲಿ ಬೀಗರಿಗಾಗಿ ಏರ್ಪಡಿಸುವ ಭೋಜನ; ಬೀಗರೂಟ(?): ಮದುಮಗಳ ಅಣ್ಣ ತರತಾನ ಮಸಿಯೂಟ (ಜೋಗಿಗೀ. ೪೩). ಮಸಿಹಚ್ಚು = ಮಸಿಬಳಿ : ಆ ಹೆಸರಿಗೆ ಗುಮಾಸ್ತರು ಮಸಿ ಹಚ್ಚುತ್ತಿದ್ದಾರೆ (ಜನಿವಾರ. ೬೨). P ಸಂಸ್ಕೃತಕೋಶಗಳಲ್ಲಿ 'ಮಶಿ', 'ಮಷಿ' ಮತ್ತು 'ಮಸಿ' ಎಂಬ ಮೂರು ರೂಪಗಳು ಇದ್ದರೂ ಜ್ಞಾತಿಪದಗಳು, ಪ್ರಯೋಗಗಳು ಮತ್ತಿತರ ಆಧಾರಗಳಿಂದ 'ಮಸಿ', 'ಮಶಿ' ರೂಪಗಳನ್ನು ದೇಶ್ಯ ಮತ್ತು ಅವರ ಪರ್ಯಾಯರೂಪಗಳೆಂದೂ 'ಮಷಿ' ರೂಪವನ್ನು ದ್ರಾವಿಡದಿಂದ ಸಂಸ್ಕೃತಕ್ಕೆ ಹೋಗಿರುವ ಸಾಧ್ಯತೆಗಳಿದ್ದರೂ ಸಂಸ್ಕೃತದಲ್ಲಿ ಪ್ರಾಚೀನ ಪ್ರಯೋಗಗಳಿರುವುದರಿಂದ ಸಂಸ್ಕೃತವೆಂದೂ ತೀರ್ಮಾನಿಸಿ ಪ್ರತ್ಯೇಕ ಉಲ್ಲೇಖಗಳಾಗಿ ಕೊಟ್ಟಿದೆ.

[ದೇ.॥ ತಮಿ. ಮಲ. ಮೈ; ತುಳು. ಮಜಿ, ಮೈಯಿ; ಕೊಡ. ಮಸಿ; ತೆಲು. ಮಸಿ / ಸಂ. ಮಷಿ]

ಮಸಿಕಟ್ಟು 'ಮಸಿಗಟ್ಟು' ನೋ.

ಮಸಿಕಡ್ಡಿ (ನಾ). ಶಾಯಿಯಲ್ಲಿ ಅದ್ದಿಕೊಂಡು ಬರೆಯುವ ಒಂದು ಬಗೆಯ ಸಾಧನ ; ಲೆಕ್ಕಣಿಕೆ ; ಲೇಖನಿ : ಶಾನುಭೋಗರು ಮಸಿಕಡ್ಡಿಯಿಂದ ಬರೆಯುತ್ತಿದ್ದರು (ರೂಢಿ). [ ಮಸಿ + ಕಡ್ಡಿ ]

ಮಸಿಕಪ್ಪಡ 'ಮಸಿಗಪ್ಪಡ' ನೋ.

ಮಸಿಕಾಣಿಕೆ, ಮಶಿಕಾಣಿಕೆ (ನಾ). ಶಾನುಭೋಗರು ಹೊಲದ ಲೆಕ್ಕಪತ್ರಗಳನ್ನು ಬರೆದುಕೊಟ್ಟುದಕ್ಕಾಗಿ ರೈತರಿಂದ ವಸೂಲು ಮಾಡುವ ಕಾಣಿಕೆ, – ಸಂಭಾವನೆ : ಅವಿದ್ಯಾವಂತರಾದ ರೈತರು

ಶಾನುಭೋಗರಿಗೆ ಮಸಿಕಾಣಿಕೆಯನ್ನು ಕೊಟ್ಟು ಲೆಕ್ಕಪತ್ರಗಳನ್ನು ಬರೆಸಿಕೊಳ್ಳುತ್ತಿದ್ದರು (ಬೂಳ). **ಮಶಿಕಾಣಿಕೆ:** ಎಲ್ಲಾ ಶಾನುಭೋಗರೂ ರೈತರಿಂದ "ಮಶಿಕಾಣಿಕೆ" ಎಂಬುದಾಗಿ ವಸೂಲ್ಮಾಡುತ್ತಾರೆ (ಗರುಡಾ. ೦೦೩).
[ ಮಸಿ + ಕಾಣಿಕೆ (< ಕಾಣ್ಕೆ) ]

**ಮಸಿಕಂಡಿಕೆ** (ನಾ). ಶಾಯಿಯನ್ನು ತುಂಬಲು ಉಪಯೋಗಿಸುವ ಗಾಜು ಅಥವಾ ಪಿಂಗಾಣಿಯ ಭರಣಿ : ದವುತಿ : ತಳದ ಕೆರೆ ತರೆದ ಮಸಿಕುಡಿಕೆಯಂತೆ (ಪಡಂ. ೨೭-೬). [ ಮಸಿ + ಕುಡಿಕೆ₁ ]

**ಮಸಿಗಟ್ಟು**, ಮಸಿಕಟ್ಟು (ಕ್ರಿ). ಕೊಳೆಯಾಗು ; ಮಾಸು : ಮೋತೀಬಾಯಿಯು ತನ್ನ ಮಸಿಗಟ್ಟಿದ ಹಸ್ತಗಳಿಂದ ಕಣ್ಣೀರನ್ನು ಒರೆಸಿಕೊಳ್ಳುತ್ತಾ . . . ಉತ್ತರವಿತ್ತಳು (ಮೂಂಡಾ. ೩೯೦). **ಮಸಿಕಟ್ಟು :** ತನ್ನ ಪತ್ನಿಯ ಮುಖ ದಿನದಿನಕ್ಕೆ ಮಸಿಕಟ್ಟಿದ ಕನ್ನಡಿಯಂತಾಗುತ್ತಿದ್ದುದು ಆತನ ಕಣ್ಣಿಗೂ ಕಂಡಿತ್ತು (ಚಿಕಂಬಾ. ೧೮). [ ಮಸಿ + ಕಟ್ಟು₁ ]

**ಮಸಿಗತ್ತಲೆ** (ನಾ). ಕಪ್ಪನೆಯ ಕತ್ತಲು ; ಕಗ್ಗತ್ತಲೆ : ಚಿಸ್ನೆ . . . ಮಸಿಗತ್ತಲೆಯು ಕೊಳೆದ ಕಟ್ಟನೊಡೆಯುತ್ತ ಕಬ್ರೊನಲ ಪರಿಯಿಸುವಂತೆ ತುರುಬು ಸಡಿಲಿಸಿ ಬೀಸಿದಳ್ ಕೇಶಪಾಶಮಂ (ಶತ್ರುಂಗ. ೩೩-೮೯೭).
[ಮಸಿ + ಕತ್ತಲೆ₁ ( < ಕಚ್ಚಲೆ) ]

**ಮಸಿಗಪ್ಪಡ**, ಮಸಿಕಪ್ಪಡ (ನಾ). ಮಾಸಿದ ಬಟ್ಟೆ ; ಕೊಳೆಯಾದ ವಸ್ತ್ರ : ಮಸಿಗಪ್ಪಡವ ಪೊದೆದು ತುಱುಬಿಕ್ಕಿ ನರೆವಲೆಗೆ ಮುಸುಕಿಟ್ಟು . . . ಮುದುಪಾರ್ವರ್ಗಳೊಂದೆಸೆಯೊಳು (ಹರಿಶ್ಚ. ೪-೨೭) ; ಮಸುಳ್ದಿರೆ ಕಾಂತಿ ನೀಳಪಟದಿಂ ಮಸಿಗಪ್ಪಡದಿಂದೆ ರತ್ನಮಂ ಮುಸುಕುವ ಭಂಗಿಯಿಂ ಮುಸುಕಿನಿಕ್ಕಿ (ಶಾರ್ಙ್ಗ. ೦೦-೦೯). **ಮಸಿಕಪ್ಪಡ :** ಒಡಲ ಹತ್ತಿದ ಮಣ್ಣು ಮಸಿಕಪ್ಪಡದ ಕಂದಿದ ಜನ್ನಿವಾರದ . . . ಅವಧೂತ (ನಿಜಾಗ. ೩-೬-೦೩). [ ಮಸಿ + ಕಪ್ಪಡ ]

**ಮಸಿದೊಡೆ** (ಕ್ರಿ). ಕಪ್ಪನ್ನು ಬಳಿ ; ಕಪ್ಪುಬಣ್ಣವನ್ನು ಹಚ್ಚು : ನೆರೆವಲೆಗೆ ಮಸಿದೊಡೆದು ತೆರೆಗೋಡೊಡಲನು ಕತ್ತಲೆಯ ಮಱೆಗಿಯ್ದು ಬಾ. . . ಜಾಣೆಯೆಂಬಾ ಹಣ್ಣುಮುದುಕಿಸೂಳೆಯರೆಸೆವರು (ತಂಚಿ. ೦೦-೬೬).
[ ಮಸಿ + ತೊಡೆ₁ ]

**ಮಸಿದೌತಿ** (ನಾ). = ಮಸಿಕುಡಿಕೆ : ನೆರೆಹೊರೆಯ ಮಕ್ಕಳು ಕೂಡಿ ಅವರ ಮಸಿದೌತಿಯನ್ನು ಉರುಳಿಸಿದರು (ಸ್ವ. ಕಿ. ೩೯).
[ ಮಸಿ + ದೌತಿ (< ದವುತಿ) ]

**ಮಸಿಪಾತ್ರೆ** (ನಾ). ೧. ಸೀದು ಕರಿಕಾದ ಪಾತ್ರೆ ; ಕಪ್ಪು ಹಿಡಿದ ಪಾತ್ರೆ : ಕೆಲಸದವಳು ಮಸಿಪಾತ್ರೆಗಳನ್ನು ಚೆನ್ನಾಗಿ ತೊಳೆದಿಲ್ಲ (ಬೂಳ). ೨. = ಮಸಿಕುಡಿಕೆ : "ದೌತಿ ಮಸಿಪಾತ್ರೆಯುಕ್ಕು" (ಪಂಗಡಾ. ೦೦೩-೦೩).
[ಮಸಿ + ಪಾತ್ರೆ]

**ಮಸಿಬುದ್ದಿ** 'ಮಸಿಬುರುಡೆ' ನೋ.

**ಮಸಿಬುರುಡೆ**, ಮಸಿಬುಡ್ಡಿ (ನಾ). = ಮಸಿಕುಡಿಕೆ: (*). **ಮಸಿಬುಡ್ಡಿ :** ಕೈಲಿದ್ದ ಸಾಮಾನುಗಳನ್ನು—ಕಂಚಿನ ತಂಬಿಗೆ, ಮಸಿಬುಡ್ಡಿ . . . ಇತ್ಯಾದಿ ಹೆಂಡತಿಯ ವ್ಯಾಮುಖಕ್ಕೆ ಗುರಿಯಿಟ್ಟು ಜೀಸಿ ಎಸೆಯುವ ಬಹದ್ದೂರರೂ ಇದ್ದಾರೆ (ಹುಚ್ಚುಹು. ೦೨). [ಮಸಿ + ಬುರುಡೆ]

**ಮಸಿಮುಸುಡ** (ನಾ). ಕಪ್ಪುಮುಖವುಳ್ಳವನು ; ಕರಿಯ : ಅಕಲಿತ ರಣಧೌತಮದೀ ಮಸಿಮುಸುಡನ ಜೀವ ಕಪ್ಪಿಸಿಂ ಕಂದಿದೊಡೆಚ್ಚೆಸೆಯ ನಡರ್ದೆನ್ನ ಕೀರ್ತಿಪ್ರಸರದ ಕುಡಿ ಕೈಪೆಸೊರೆಯ ಕುಡಿಯವೊಲಕ್ಕುಂ (ಜಗನ್ನಾ. ೨-೩೩). [ಮಸಿಮುಸುಡು + —ಅ₇]

**ಮಸಿಮುಸುಡು** (ನಾ). ಕಪ್ಪನೆಯ ಮುಖ : ಮಸಿಮುಸುಡಿನ ಮಾಳಿ ಮನೆಯ ಗಂಡನು ಬಿಡೆ (ಕಂಕ. ೯೬-೦).
[ಮಸಿ + ಮುಸುಡು (<ಮುಸುಂಡು)]

**ಮಸಿವಣ್ಣ** (ನಾ). ೧. ಕರಿಯ ಬಣ್ಣ : ಕಪ್ಪು : ಪೆತ್ತವರನಗಲಿ ಕಾಕಾಲಿಯಮದೊಳಗೊಡಲಂ ಪೊರೆದುಂ ಮೆಯ್ಯ ಸಿವಣ್ಣಮನಾಂತನವರತಂ ನುಡಿವಡೆಯದೆ ಪಿಕಮಿರ್ದುವು (ಶಬ್ದಮ. ೩-೩೯) ; ನಿನ್ನ ಮಸಿವಣ್ಣದೀ ಚೆಲುವಿನೆಡೆಗೆ ಸೋಲ್ವರು ಗೊಲ್ಲತಿಯರು (ಶಾಕ್ಷಾ. ೨೩-೨೭) ; ತತ್‌ಕ್ಷಣದೊಳಗೆ ಮಸಿವಣ್ಣಮಾಯ್ತು ಬ್ರಹ್ಮಾಂಡಂ (ತಂಚಿ. ೯೦-೨೯). ೨. (ಅಲು) ವ್ಯರ್ಥವಾದುದು : ನಿರರ್ಥಕವಾದುದು : ಹುಸಿವವನ ಬೇಹಾರ ಕಸ ಹತ್ತಿದಾರಂಬ ವಿಷಯವುಳ್ಳವನ ಗುರುತನವು ಇವು ಮೂಱು ಮಸಿವಣ್ಣ (ಸರ್ವಜ್ಞ. ೯೩). [ಮಸಿ + ಬಣ್ಣ]

**ಮಸಿವಾವಾಳ** 'ಮಸಿವಾಳ' ನೋ.

**ಮಸಿವಾಳ**, ಮಶವಾಳ, ಮಸಿವಾವಾಳ, ಮಸ್ಸಿವಾಳ, ಮಸ್ಸೀವಾರ, ಮಸ್ಸೀವಾಲ (ನಾ). ಒಂದು ಬಗೆಯ ಮರ : ಬೈಲುಸೀಮೆಯ ಅಡವಿಯಲ್ಲಿ ಸಾಧಾರಣವಾಗಿ ಎಲ್ಲ ಕಡೆಯಲ್ಲಿಯೂ ಜಾಲಿ . . . ಮಸಿವಾಳ, ಮಾಲಗಲಿ, ದಿಂಡಲ, ಅತ್ತಿ ಮುಂತಾದವುಗಳು ದೃಷ್ಟಿಗೆ ಬೀಳುತ್ತವೆ (ಕೀವ. ೩೦). **ಮಶವಾಳ** : ಮಶವಾಳ (ಪಾಂಥರಿ) . . . ಬೆಳಗಾವಿ, ವಿಜಾಪುರ ಜಿಲ್ಲೆಗಳಲ್ಲಿ ಬೆಳೆಯುತ್ತದೆ (ಕರಾಗ. ೯೬). **ಮಸಿವಾವಾಳ :** (*). **ಮಸ್ಸಿವಾಳ** : ಮರಗಳು . . . ಬೇವು, ಹುಚ್ಚುಬೇವು, ಹೆಬ್ಬೇವು, ಮಸ್ಸಿವಾಳ, ಸುಗ್ಗೆ (ಶಬ್ದಮ. ೨೩೬). **ಮಸ್ಸೀವಾರ :** ಮಸ್ಸೀವಾಲ, ಮಸ್ಸೀವಾರ, ಕಂಚಿದೊಗ್ಗೆ (ಪ್ರ ಕಿರಿ. ೩೩-೦೦೬೦). **ಮಸ್ಸೀವಾಲ :** 'ಮಸ್ಸೀವಾರ' ಉಲ್ಲೇಖದ 'ಪ್ರ ಕಿರಿ' ಪ್ರಯೋಗವನ್ನು ನೋಡಿ. 'ಅಂಟುವಾಳ', 'ಕಂಚುವಾಳ' ಪರಾ. [ ? ]

**ಮಸಿಹೆಣ್ಣು** (ನಾ). (ಅಲು) ನೀತಿಗೆಟ್ಟವಳು : ಕಳಂಕಿನಿ : ವ್ಯಸನದ ದೆಸೆಯಿಂದ ಮಸಿಹೆಣ್ಣನೊಸವಾಗಿ ಹುಸಿದು ಹೋಗುವಳ ಒಡನಾಡಿ ತಾನುಗ್ಗು ನುಸಿಯಾದ ಕಾಣೊ (ಸರ್ವಜ್ಞ. ೦೭೯೦).
[ಮಸಿ + ಹೆಣ್ಣು (<ಪೆಣ್)]

**ಮಸೀತಿ** 'ಮಸೀದಿ' ನೋ.

**ಮಸೀದಿ**, ಮಶೀತಿ, ಮಶೀದಿ, ಮಸಜೀದ, ಮಸಜೀದಿ, ಮಸೀತಿ, ಮಸೀದೆ, ಮಸುದಿ, ಮಸೂತಿ, ಮಹಜಿದಿ (ನಾ). ಮುಸಲ್ಮಾನರ ಪ್ರಾರ್ಥನಾಮಂದಿರ : ಭುವನಗಿರಿ ದುರ್ಗದಲ್ಲು ಕಟಿಸ್ಸ ಮಸೀದಿಗೆ ಕೊಟ ಧರ್ಮಶಾಸನ (ಎಕ. VII. ಶಿಕಾರಿ. ೩೮-೯; 1627); ಅವಳನ್ನು ನಗರ ಪ್ರಾಂತದಲ್ಲಿದ್ದ ಒಂದು ಸಣ್ಣ ಮಸೀದಿಗೆ ಕರೆದುಕೊಂಡು ಹೋಗಿ ಮೌಲ್ವಿ ಸಾಕ್ಷಿಗಳ ಮುಂದೆ ಕುರಾನಿಗೆ ಅನುಸಾರವಾಗಿ ಮದುವೆಯಾಗಿ ಅವಳ ಶಯ್ಯಾಗೃಹಕ್ಕೆ ತಂದು ಬಿಟ್ಟುಹೋದನು (ಬಂಕಿಮ. ೨೨೯). **ಮಶೀತಿ :** ಬನಾರೀಸ್ . . . ಗಂಗಾನದಿಯ ಮೇಲಿದೆ. ಅನೇಕ ದೇವಾಲಯಗಳೂ ಮಶೀತಿಗಳೂ ಇವೆ (ಭೂಗೋಳ. ೩೯). **ಮಶೀದಿ :** ಕೂಡಿದವರೆಲ್ಲರೂ ಮಶೀದಿಯಲ್ಲಿ ಭೋಜನ ಮಾಡಿಕೊಂಡು ಮನೆಗೆ ಹೋಗುತ್ತಾರೆ (ಮುಂಬಯಿ. ೬-೨೭). **ಮಸಜೀದ :** ಮುಸಲಮಾನರ ಮಸಜೀದಗಳಿಗೆ ಸೋಪಾನಗಳು ಕಟ್ಟಲ್ಪಡುತ್ತಿದ್ದವು (ಕೋಹಿನೂ. ೬). **ಮಸಜೀದಿ :** ಗುಡಿ ಚರ್ಚು ಮಸಜೀದಿಗಳ ಬಿಟ್ಟು ಹೊರಬನ್ನಿ (ಕೋಗಿಲೆ. ೨೬-೦). **ಮಸೀತಿ :** ನಮಾಜಿಗೆ ಹೋಗಿ ಮಸೀತಿ ಮೇಲೆ ಬಿದ್ದ ಹಾಗಾಯಿತು (ಹುಚ್ಚುಹ. ೦೯೦). **ಮಸೀದೆ :** ಆ ಹೊತ್ತು ಮಸೀದೆಗಳೆಲ್ಲ ಗಮಗಮಿಸಿದವು (ಪ್ರಾಂಶು. ೦೪) ; ಮಸೀದೆಯಿಂದ ಮುಕ್ರಿಗಳು ನಿನಗೆ ಆದೇಶ ಕಳಿಸಿದರೂ ನೀನು ಕೇಳಲಿಲ್ಲ (ಮುಂಗಾರು. ೦೦). **ಮಸುದಿ :** ಆ ತುರುಕರು . . . ಗರುಡನ ಕಂಬವಂ ಮುಱಿದು ಮಸುದಿಯಂ ಕಟ್ಟಿಸುವರು (ಕಂಕ. ೬೨-೯೯). **ಮಸೂತಿ :** ತಾವರೆಗೆರೆ ಹೊಂದಿ ಕಟಿಸಿದ ಮಸೂತಿಯ ಧರ್ಮಕೆ ಕೊಟ (ಎಕ. VIII. ಸಾಗರ. ೦೦೩-೦೦; 1631); ಆಗ ಆ ಬಾದಶಹನು ಮಸೂತಿಯೊಳಗೆ ನಮಾಜ ಮಾಡುತ್ತಿದ್ದನು (ರಾಕಹಂ. ೯೯). **ಮಹಜಿದಿ :** ಕಾಜಿಮಹಮ್ಮದಿನ್

ಯುಂಬವಗೆ ಪೂರ್ವಾರಭ್ಯವಾಗೆ ಮಹಜಿದಿಗೆ ಯಿನಾಮವಾಗಿ . . . ಕಲು ನೆಟ್ಟ ಹೊಲ ೨ (ಎಕ. VII (8), ಶಿಕ್ಕಾ. ೯೩-೯; 1821).

[← ಪಾರ. ಮಸ್ಜಿದ್ ; ಹಿಂ. ಮಸಜಿದ್, ಮಸೀತ್, ಮಸೀದ್ ; ಮರಾ. ಮಶೀದ್, ಮಸೀದ್]

**ಮಸೀದೆ** 'ಮಸೀದಿ' ನೋ.

**ಮಸುಕು**. ಮಸಕ್ಕು₂ (ನಾ). ಮಬ್ಬು : ನಮ್ಮೂರಿನ ಹಣೆಯಲ್ಲಿ ವಿದ್ಯಾಭ್ಯಾಸದ ಬರಹವು ಮಸುಕಾಗಿ ಕಾಣುತ್ತಿತ್ತು (ಹುಟ್ಟಹ. ೭); ಕಿಲುಬು ಪ್ರಾಯವಾಗಿ ಬರಹ ಮಸುಕಾಗಿ ಕಾಣತೊಡಗಿತು (ಹಾಥುಕ್ರ. ೦೦೪). ಮಸಕ್ಕು₂ : ಮಸಕು ಮುಂಜಾವದಲಿ ನಿದ್ರೆತಿಳಿದೆದ್ದು (ವಿಸೀಗೀ. ೨೯-೧೦); ಮೊದಲಿನ ನಿಜವಾದ ಆಧ್ಯಾತ್ಮ ಮಸಕಾಯಿತು (ಕನ್ನಕ್ರಾ. ೪೩೯).

ಮಸುಕುಮಸಕು, ಮಸಕುಮಸಕು (ದ್ವಿರುಕ್ತಿ) : ಶಿಶಿರಋತು, ಸಂಜೆ . . . ಹಜಾರದಲ್ಲಿ ಮಸುಕುಮಸಕಾದ ಕತ್ತಲೆ (ದಾವಾಪ. ೦೦೦) ; ಹಿಂದೆ ನಮಗೆ ಮಸಕುಮಸಕಾಗಿ ಕಾಣುತ್ತಿದ್ದ ನಕ್ಷತ್ರ, ಈಗ . . . ಸ್ಥಿರವಾಗಿ ನಿಲ್ಲುವುದು ಸಾಧ್ಯವಾಗುತ್ತದೆ (ಆಕಾಶ. ೭). [ದೇ.॥ ತಮಿ. ಮಚುಙ್ಕಲ್ ; ಮಲ. ಮಯಙ್ಕ್ಕು, ಮಯಲ್, ಮಯಿಮ್ಪು, ಮಯ್ಕಲ್ ; ತುಳು. ಮಸಕು, ಮಸುಕು, ಮಸ್ಕ್ ; ತೆಲು. ಮಸಕ]

**ಮಸುಂದಿ** 'ಮಸೀದಿ' ನೋ.

**ಮಸುರ** (ನಾ). ಒಂದು ಬಗೆಯ ದ್ವಿದಳಧಾನ್ಯ : ಕಡಲೆ : ಯಜುರ್ವೇದದ ಕಾಲಕ್ಕೆ ಬತ್ತ, ಮಸುರ (Pulses) ಇವು ಹೇರಳವಾಗಿದ್ದುವು (ಹಿಲ್ಪಾ. ೯೯). [ಸಂ.]

**ಮಸುರಿಗೆ** 'ಮಸೂರಿಗೆ' ನೋ.

**ಮಸುಳ್**, ಮಸುಳು (ಕ್ರಿ). ಕಾಂತಿಹೀನವಾಗು ; ಮಂಕಾಗು : "ಮಸುಳ್-ವಿಗತಪ್ರಭಾಯಾಂ (ಕಳೆಗುಂದು)" (ಶಮದ) : ವಿಭೂಷಣಂಗಳೊಳ್ ತೀಡುವ ರಶ್ಮಿಗಳ್ ಮಸುಳ್ದುವು (ಆದಿಪು. ೪-೪) : ಕೆಂಪೇರಿದ ರಳ್ಗಣ್ಣ ಕಡೆಪರಿದ ಕುರುಳಾಂತ ಸುಂಪುವಣೆ ಮಸುಳ್ದ ತಿಲಕಂ (ಶಾಂಪು. ೦೯-೨೭) : ತೊಡೆಯುಡಗಿನಿಂದೆ ನೆಗಾದೊಸರುತ್ತೆ. ಕಿಬಸುರಿದು. ಕಿಂಡದಿನ್ ಪೊಗೆಯುಟ್ಟು ಚಟಚಟಿಸಿ ಮಸುಳ್ದತ್ತು (ಅಜಿತಪು. ೯೩-೯೪೦). **ಮಸುಳು** : ಮಸುಳಿದವು ತಾರೆಗಳು (ಕನ್ನಡದ್ರೀ. ೨-೦೪) ; ತಮಿಸ್ರೆಯ ತಾರಕೆಯು ಮೈವೆಳಗು ಮಸುಳಿದವು (ಕೊರಾ. ೦-೦೯೦). [ದೇ.॥ ತಮಿ. ಮಚುಙ್ಕು ; ಮಲ. ಮಯಙ್ಙು ; ತುಳು. ಮಜಕು, ಮಯುಕು, ಮಸ್ಕು]

**ಮಸುಳ** (ನಾ). ಕಪ್ಪುಬಣ್ಣದವನು : ಕವಿದ ಮದಾಳಿಯಿಂ ಮಸುಳನಾಗಿ ಪಯೋಜರಜಂಗಳೊಳ್ ಕವಿಲ್ವಿಲನುಮಾಗಿ ಬಂದ ಮಲಯಾನಿಲಂ (ಶಂಪಾ. ೨-೦೯). [ಮಸುಳ್ + — ಅ₇]

**ಮಸುಳಿಸು**, ಮಸಣಿಸು (ಕ್ರಿ). ೧. ಮಂಕಾಗು ; ನಿಸ್ತೇಜಗೊಳ್ಳು : ಮಸುಳಿಸದ ತೇಜ ಮಾಸದ ಕೀರ್ತಿ . . . ಸಹಜವೆನಿಸಿ ರಾಜಸುತರು ಹರಿಶ್ಚಂದ್ರಭೂಭುಜನು ಸುಖದೊಳಿರಲು (ಹರಿಶ್ಚ. ೦-೯೯) ; ಹಗಲ ಸುಧಾಸೂತಿ ಮಸುಳಿಸಿರ್ಪಂತವರೊಳ್ ಸೊಗಸುವ ಶರೀರಕಾಂತಿಯೊಳೊಗೆದಿರ್ದಂ ನವಕುಮಾರಕಂ ನೃಪನಿದಿರೊಳ್ (ವಕು. ೨-೦೨೪) ; ಮೆಯ್ಯ ದೀಧಿತಿ ಮಸುಳಿಸದು (ಕುಮಾರರಾಮ. ೬೦೫. ೭-೬೧ ಅರಿಕ್ರ). ೨. ಮಂಕಾಗುವಂತೆ ಮಾಡು ; ನಿಸ್ತೇಜಗೊಳಿಸು : ತೊಟ್ಟ ತುಡುಗೆಗಳ್ ಕೌಸ್ತುಭ ರತ್ನಮಸೋರೆರೊಂದೆ ಮಸುಳಿಸೆ (ಶಂಪಾ. ೩-೨೭) ; ಬಿಸುಗದಿರನ ಕಡುಗಾಯ್ಪುಂ ಮಸುಳಿಸಿದವು . . . ಕಾವಸೆಟ್ಟಲಿರ್ಗಣೆಗಳ್ (ಕನ್ನಕಾ. ೪೦೦) : ಇನಕಿರಣಂಗಳ ಮಸುಳಿಪ ರತ್ನಕಾಂಚನಮಂಚಮ್ಮದುತಲ್ಪದಲಿ ವನಜದಳಾಯತೇಕ್ಷಣೆ ಮಂಡಿಸಿದಳು (ಕೋಣತ. ೨೭-೪೨). ೩. ಅಡಗು ; ಕಾಣದಾಗು : "ಮಸುಳಿಸಿತೆಂದಡಂಗಿತರ್ಕ್ಕುಂ" (ಶಬ್ದಮ. ೭೦) ; ತೆಳುವಸುಳು ಪೊರೆಯೇಱವು . . . ತ್ರಿವಳಿಯ ರೇಖೆ ಮಸುಳಿಸವು (ಕಾವ್ಯಸಾ. ೪೨-೩೯); ಮುನಿಗಳ ಪ್ರಾಣಮಂತ್ರಾದಿಗಳ್ ಮಸುಳಿಸಿದವು (ತುರಂಗ. ೭-೧೦). ೪. ಕುಗ್ಗು ; ಕಡಮೆಯಾಗು : ಇನ್ನಾಂ ಮುಳಿದೊಡೆನ್ನ ಜಸಂ ಮಸುಳಿಸುಗುಂ (ಶಂತಕಂ. ೦೬೦-೦೩) ; ಕುಂಡದ ನಿಟ್ಟೆಸಿ ಬಿಸಿ ಮಸುಳಿಸಿ ಬಿಖಿ ನಡುಗಲು (ವೀರೇಶ. ೦-೭೮) ; ಲೋಕಂಗಳೊಳ್ಪರಮಶಿವಭಕ್ತಿ ಮಸುಳಿಸಿದುದಲ್ಲಿಗೆ ಪೋಗಿ ನಿರುತದಿಂದುದ್ಧರಿಸು (ಬಸವೋಪು. ೯-೯). ೫. ಕುಗ್ಗಿಸು ; ಕಡಮೆಮಾಡು : ಅವರ ವಾಗ್ಗರ್ವಮು ಮುಱಿದು ಜಿಹ್ವಾಸ್ತಂಭನಂಗೆಯ್ದು ಖರ್ವಮತಿಶಕ್ತಿಯಂ ಮಸುಳಿಸಿ (ಶಿಕ್ಷಾ. ೯-೨೪). ೬. (ಅಲಂ) ನಾಶಮಾಡು : ಬಲಿಮುಖರ ಬಲದಿ ಸೀತಾಲಲನೆಯು ನೊಯ್ದಸುರನಸುವ ಮಸುಳಿಸಿ . . . ಸಲಹಿದನವರಂ (ಪಕ್ಷಾ. ೬-೨೦೮).

**ಮಸುಣಿಸು** : ೧. ನಾನು ಈ ತೊಡಕಿನೊಳಗೆ ಬಿದ್ದಿದ್ದೇನೆ, ಬುದ್ಧಿ ಮಸಣಿಸಿದೆ (ಜನಾಶ್ರ. ೭೮). ೨. ಅವನ ಹವಣಿಕೆಯು ಅವನ ಅರಿವನ್ನು ಮಸಣಿಸಿದ್ದಲ್ಲದೆ ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕೆಂಬ ನಾಣ್ನುಡಿಯನ್ನು ಅವನ ಕಣ್ಣಿನಿಂದ ಮರೆಮಾಡಿತು (ಬೀರಬ. ೪೯). [ಮಸುಳ್ + — ಇಸು₃]

**ಮಸುಳು** 'ಮಸುಳ್' ನೋ.

**ಮಸುಳ್ಕೆ** (ನಾ). ಕಾಂತಿಹೀನತೆ ; ಮಬ್ಬು : 'ಮಸುಳ್ಕೆವೆಱು' ಪರಾ. [ಮಸುಳ್ + — ಕೆ]

**ಮಸುಳ್ಕೆವೆಱು** (ಕ್ರಿ). ಮಬ್ಬಾಗಿರು ; ಪ್ರಕಾಶವಿಲ್ಲದಿರು : ಪಸರಿಪ ತಮದಿಂ ರಜದಿಂ ಮಸುಳ್ಕೆವೆತ್ತಿರದೆ ದೆಸೆಗಳುಂ ದಿಗ್ದೇವೀವಿಸರದ ಮೊಗದೊಡಸೆನಸುಂ ಪ್ರಸನ್ನಭಾವಮನದೇಂ ಪುದುಂಗೊಳಿಸಿದುದೋ (ಶಂಪ್ರಕ. ೦೭-೯೭). [ಮಸುಳ್ಕೆ + ಪೆಱು₁]

**ಮಸುಳ್ಚು** (ಕ್ರಿ). = ಮಸುಳಿಸು ೨ : ಮಾಜಾಂತ ವಿಶ್ರಾಂತರಾಜಪುತ್ರನಂ ಸರಲ ಸೋನೆಯಿಂ ಕಿವುಳ್ಚಿ ಮಸುಳ್ಚಿ . . . ತಡೆದಂ (ರಾಜಾಶ್ಯ. ೯೦-೧೨). [ಮಸುಳ್ + — ಚು₁]

**ಮಸೂತಿ** 'ಮಸೀದಿ' ನೋ.

**ಮಸೂದೆ** (ನಾ). (ಶಾಸನಸಭೆ ಮೊದಲಾದುವುಗಳಲ್ಲಿ) ಸಭೆಯ ಅಂಗೀಕಾರಕ್ಕಾಗಿ ಇಡುವ ಠರಾವು : ಗೊತ್ತುವಳಿ : ಕೇಂದ್ರಶಾಸನಸಭೆಯಲ್ಲಿ . . . ಒಂದು ಮಸೂದೆಯನ್ನು ತಂದರು (ಶಿಕ್ಷಣ. ೭೪೪); ಬಹುಪತ್ನೀತ್ವವನ್ನು ಜಾರಿಗೆ ತರುವ ಮಸೂದೆ ಬಿದ್ದುಹೋಯಿತೂನ್ನು (ಸಂಸ್ಥಾ. ೦೦೨)). [← ಅರ. ಮುಸ್ವದ್, ಮಸವ್ವಿದಾ ; ಹಿಂ. ಮಸವಿದಾ, ಮಸೌದಾ ; ಮರಾ. ಮಸುದಾ, ಮಸೋದಾ, ಮಸ್ವಿದಾ]

**ಮಸೂರ** (ನಾ). ೧. ಒಂದು ಬಗೆಯ ದ್ವಿದಳಧಾನ್ಯ ; ಕಡಲೆ : "ಮಾಂಗಲ್ಯಕಃ, ಮಸೂರಃ — ಈ ೨ ಚಣಗೆ" (ಹಲಾಯು. ೯೩-೯೨೭) ; ಶ್ರಾದ್ಧಕ್ಕೆ . . . ರಾಜಮಾಷ ಮಸೂರಮುಲಸಂದೆ ಕಡಲೆಯಿವನರ್ಪಂಗಳ್ (ವಿಶ್ವಪು. ೪-೪-೦೭೩) ; ಮಸೂರಾದಿ ಶಿಂಬಿಧಾನ್ಯಂ (ಅಶ್ವಶಾ. ೦೦೩-೦೩). ೨. ಬೇಳೆಯ ಆಕಾರದಂತೆ ಹೊರಉಬ್ಬುಳ್ಳ ಗಾಜು ; ಲೆನ್ಸ್ : ಮೇರೆಗಳು ಗೋಳದ ಭಾಗಗಳಾಗಿದ್ದರೆ ಅಂತಹ ಮಧ್ಯವರ್ತಿಭಾಗಗಳನ್ನು ಮಸೂರಗಳೆಂದು (Lenses) ಕರೆಯುತ್ತಾರೆ (ಭೌತ. ೦೬೪); ವಿವಿಧ ಕನ್ನಡಿಗಳು ಮತ್ತು ಮಸೂರಗಳು ಉಪಯೋಗದಲ್ಲಿದ್ದುವು (ಕನ್ನಕ್ರಾ. ೩೦೦). [ಸಂ.]

**ಮಸೂರಿಕ** (ನಾ). = ಮಸೂರ ೧ : "ಮಸೂರಿಕಂ ಪೇೞಲ್ ಚಣಂಗಿ ಬಿಂಡಿಕಮೆನಲು ಕಡಲೆ" (ಹುಂಗದಾ. ೦೦೦-೯). [ಸಂ. ಮಸೂರಿಕಾ]

**ಮಸೂರಿಕೆ** (ನಾ). ೧. ಒಂದು ಬಗೆಯ ದ್ವಿದಳಧಾನ್ಯ : ಕಡಲೆ : ನೀವಾರಶಿಲಾತಸೀಮಸೂರಿಕಾಕುಲತ್ಥ . . . ವಿವಿಧಧಾನ್ಯಭೇದಂಗಳುಂ (ಆದಿಪು. ೬-೬೨ ವ). ೨. ಶರೀರದ ಮೇಲಿನ ಕಪ್ಪುಮಚ್ಚೆ ; ಸಂಗಾತಿ : ತಿಳುವಸೂರಿಕಾದಿ ಶುಭವ್ಯಂಜನರಂಜಿತಪ್ರಶಸ್ತಾವಯವಂಗಳುಮಂ . . . ನೋಡಿ (ಶಂತಮಾ. ೪-೧೯೩ ವ) : ಪರಮನ ಪರಮಾದ್ಭುತಶರೀರಮೊಪ್ಪ

ದಂದು . . . ತಿಲಮಸೂರಿಕಾಪ್ರಮುಖಸವಶತವ್ಯಂಜನಂಗಳೊಳ್ ಕೂಡಿ (ಕಸ್ತೂ. ೦೨-೭೮ ವ). ೩. ಸಿಡುಬು ; ಮೈಲಿ : ಮಸೂರಿಕೆಯ ಪೂರ್ವಚಿಹ್ನಂಗಳ ಕಂಡಾಗಲೇ ಲಂಘನವನೂ ವಮನವನೂ ಮಾಡಿಸುವುದು (ವೃಶ್ಯಾ. I. ೭೭೭). ೪. ಪರದೆ ; ತೆರೆ : ಸೊದೆವಟ್ಟಿಯದ ಲೋವೆಯ ಮುತ್ತಿನ ಲಂಬಣದ ಮಲಂಗು ಛಂಗಿವಡೆದ ಕುಸುಮದೆಸಟ ಮಸೂರಿಕೆಯ ಮೇಲೆ (ಅನಂತ. ೬-೭ ವ). ೫. ಸೊಳ್ಳೆಯ ಪರದೆ. ೬. ತಲೆಹಿಡುಕಿ ; ಕುಂಟಣಿ. [ಸಂ. ಮಸೂರಿಕಾ]

**ಮಸೂರಿಗೆ,** ಮಸುರಿಗೆ (ನಾ). ೧. = ಮಸೂರಿಕೆ ೧: ತೊವರಿ ಗೋದುವೆ ಜೋಳಮುದ್ಗ ಪೆಸರ್ ಮಸೂರಿಗೆ ಗುಂಜಿಯೆಂಬಿವಱೊಳೊಂದಱೊಳಾದ ತೈಲಮಂ . . . ತಂದು ಪೂಸುವುದು (ಲೋಕೋಪ. ೯-೦೦೭). **ಮಸುರಿಗೆ :** ೨. = ಮಸೂರಿಕೆ ೪ : ಅಲರ ಮಸುರಿಗೆಯೊಳಗಿರ್ದುಳ್ಳಲರ್ದಪ್ಪಂ ನಿಮಿರ್ದ ಲತೆಯ ಮೇಲೆ ವಿಳಾಸಂ ನಿಲೆ ನೀಡಿ ಕಾಲಂ (ಅರ್ಕ. ೦೦-೭೭) : ಎಸೆವ ಪಸರಂಗಳೆ ಮಸುರಿಗೆಗಳಾಗೆಯುಂ ಕಂದಳಿರ ಗೊಂದಳಂಗಳೆ ಜೊಂದರಿಗೆಗಳಾಗೆಯುಂ (ಚಂದ್ರ ಪು. ೭-೯೭ ವ). [<ಸಂ. ಮಸೂರಿಕಾ]

**ಮಸೃಣ** (ಗು). ೧. ಮೆತ್ತನೆಯ ; ಮೃದುವಾದ : ಅವಱೊಳತಿಮಸೃಣಕುಸುಮಪ್ರವಾಳದ ಪೊಳೆವ ಗೊಂಚಲಂ ಸಂಚಳಿಸಿ ಪೊಳೆವ ಮಿಂಚಿನ ಗೊಂಚಲೆಂದುಂ . . . ಅಭಿಶಂಕೆಯನುಂಟುಮಾಡುಗುಂ (ಸುಕುಮಾ. ೦೦-೫೭ ವ) ; ಮುನಿಪದರಾಜೀವದ ಕೆಲದೊಳ್ ವೇತ್ರಲತಾವೃತವೆಸೆದತ್ತು ಮಸೃಣಪೀಠಭಗಂಗಳುಳ್ಳುಂ (ಚಂದ್ರ ಪು. ೯-೨೭). ೨. ನಯವಾದ ; ನುಣುಪಾದ : ಏಕೇಂದ್ರನೀಲಶಿಲಾತಲಘಟಿತಮಸೃಣತಳಮುಂ (ಅರ್ಕ. ೦೦-೨೨ ವ); ವಿಂಶತಿಸಹಸ್ರಸೋಪಾನಪಂಕ್ತಿವಿಭ್ರಾಜಿತಮುಮಪ್ಪ ಮಸೃಣರುಚಿರಭೂತಳ ಮೂದುದಲ್ಲಿ ಜಾತರೂಪಗೋಪುರಂಗಳ ನಾಲ್ಕಱಿಂ ಪರಿನಿಷ್ಕೃತವಾಗಿ (ವರ್ಧಮಾ. ೦೩-೫೭ ವ). ೩. ಸ್ನಿಗ್ಧವಾದ ; ಮನೋಹರವಾದ : ಅದಱ ಬಾಹ್ಯದಬ್ಬಿದಿಯಾಸುಕಾರಿಯಪ್ಪ ಮಸೃಣವರ್ಣಪ್ರಸರವೋಳಾಪವೈಚಿತ್ರ್ಯಮಂ ಚಿತ್ರಕಳಾವಿಶಾರದಂ ಪರಿಭಾವಿಸುತ್ತುಮಿರ್ಪನ್ನೆಗಂ (ಚಂದ್ರ ಪು. ೪-೫೦ ವ). ೪. ಪ್ರೇಮಪೂರ್ಣವಾದ ; ಅನುರಾಗದಿಂದ ಕೂಡಿದ : ಮಸೃಣಕಟಾಕ್ಷದಿಂ ಕುಮುದದೊಳ್ ಸಟಿಂ ಕಱಿವಂತಿರಂಘ್ರಿವಿನ್ಯಸನದಿನಬ್ಜಮಂ ಕೆವಱುವಂತಿರೆ . . . ಏರ್ವಳಾಡಿದಳ್ (ಜಗ. ೫-೦೭). [ಸಂ.]

**ಮಸೃಣಿತ** (ಗು). ಮೃದುವಾದ ; ಮೆತ್ತನೆಯ : ಅನೇಕಮಕುಟಬದ್ಧಮಣಿಮಕುಟಮಣಿಕರ್ಷಣಮಸೃಣಿತಚರಣಂ (ಅಜಿ ಪು. ೬-೭೨ ವ) ; ಸಕಲಸಾಮಂತಮಣಿಮಕುಟಮರೀಚಿಮಸೃಣಿತಚರಣಾರವಿಂದನಪ್ಪ ಧರ್ಮನಂದನನಂ ಕಂಡು (ಪಂಪಭಾ. ೪-೮೮ ವ). [ಸಂ.]

**ಮಸೆ₁** (ಕ್ರಿ). ೧. (ಹೊಳಪು ಬರುವಂತೆ) ಉಜ್ಜು : ತಿಕ್ಕು : "ಮಸೆ—ಘರ್ಷಣೇ, ಸ್ವಲ್ಪಕ್ಷತೇ ಚ (ಸಣ್ಣಗಾಯ) " (ಶಮಂ) ; ಪಗೆ ಸುಗಿವನ್ನೆಗಂ ಮಸೆವ ವೀರಭಟರ್ಕಳ ರೌದ್ರಮಪ್ಪ ಕಯ್ದುಗಳಂ . . . ಕೆಂಗಿಡಿಗಳ್ ಪಳಂಚಿ (ಪಂಪಭಾ. ೦೦-೩೫) ; ರೇಣುಹತ್ತಿದ ರವಿಯ ಮಸೆಯಲು ಸಾಣೆಗಿಕ್ಕಿತೊ . . . ಬಿಲುಜಾಣರುರವಣೆ ಲಜ್ಜಿಸಿತು ಲೋಕದ ಧನುರ್ಧರರ (ಕುಮಾ ರಾ. ೪-೦೭). ೨. ಹರಿತಗೊಳಿಸು ; ಚೂಪುಮಾಡು : ಬೆಳ್ಪಸೆಯೆ ಮಸೆದ ಮದನನ ಬಾಳಂತಾದುವು ಪೊಳೆವೊಳ್ಗೊಡೆ (ಪಂಪಭಾ. ೨-೪೨) ; ತಮೋವೈರಿವಿಜಯಕ್ಕೆ ಮಸೆದಸಿಧಾರೆವೊಲಪರಾಜಿತಂ ವಿರಾಜಿತನಾದಂ (ಶಾಂತಿಪು. ೪-೦೦೯) ; ತೊಂಡ ಗಿಳಿಗಳು ಚುಂಚುಮಂ ಮಸೆಯೆ (ಪತಕಾ. ೩-೦೪) : ಜಮದಗ್ನಿರಾಮನು ಮತ್ತೆ ಕೊಡಲಿಯ ಮಸೆದು ಹೊಕ್ಕನು (ಸಂಭಕ. ೨೭-೫೦). ೩. ಸ್ಪರ್ಧೆಹೂಡು : ಹುರುಡಿಸು : ಕ್ಷೋಣೀಶ್ವರರಿರ್ವರುಮಂ ಪೊಣಿಸಿ ಮಸೆಯಲ್ಕೆ ಬಗೆದು . . . ಪೋದ ಕೆಯ್ಯೊಳ್ ಮಗುಳ್ಚಿ (ಅಜಿಪು. ೦೩-೨೩) ; ಫಲ್ಗುಣನೊಡನೆ ಕದನವ ಮಸೆವರೇ (ಕುಮಾ. ಸ. ೬೦೫. ೦೫-೪೦) ; ಪೊಸಮಾವಿನ ತಳಿರೊಳ್ ಮಱಿದುಂಬಿ ಕೋಗಿಲೆಯೊಳೆಸೆವ ಸಂಪಗೆ ಪೊಚ್ಚಪೊಂದಾವರೆಯೊಳ್ . . . ಗಿಳಿವಿಂಡು ಬನಸಿರಿಯೊಳು ಮಸೆದುವು (ಶ್ರೀ ವಿಜಾ. ೬-೪). ೪. ತೀವ್ರಗೊಳ್ಳು ; ರಭಸಗೊಳ್ಳು : ಯದುಮಗಧಸೈನ್ಯಯುಗದೊಳ್ ಕದನಂ ಮಸೆದೊತ್ತೆ (ಜಗ. ೭-೪೯) ; ಪುಸಪಳಿಪಿಂ ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ (ಚಂದ್ರ ಪು. ೬-೭೭) ; ಪರಿಕರರು ಪರಿಕರರೊಡನೆಯಿರಲೊರಸೊರಸು ಮಿಗೆ ಮಸೆವುದು ಕಣಾ (ಕುಮಾ ರಾ. ೮-೫೦). ೫. ದ್ವೇಷಿಸು : ಬಸವ ಬಸವಾಯೆಂದಡೆ . . . ಮಸೆವ ಹಗೆಗಳು ನಂಟರಪ್ಪರು (ಬಸವ. ೮-೨೫). ೬. ನಾಶವಾಗು : ನಾಸೀ ಸೈನ್ಯ ತೆಗೆದುಕೊಂಡುಹೋಗಿ ಮೂರೇದಿನಗಳಲ್ಲಿ ಮಸೆದು ಬರುತ್ತೇನೆ (ಬಾಂಕರ. ೦೯೨).

ಮಸೆದಾಟ, ಮಸದಾಟ = ೧. ಘರ್ಷಣೆ ; ತಿಕ್ಕಾಟ : ನಮ್ಮ ಸಂಸ್ಕೃತ ನಾಟಕಗಳ ಕಡೆ ತಿರುಗಿದರೆ . . . ವ್ಯಕ್ತಿ ಶಕ್ತಿಗಳ ಮಸೆದಾಟವಿಲ್ಲದೆ ಇಲ್ಲ (ಕಾವ್ಯಸ. ೨). ೨. ಕಲಹ ; ಹೋರಾಟ : ಯೋಹಾಪ್ಪರೊಡನೆ ತನಗೀ ಮುನ್ನವಾದ ಮಸದಾಟವಂ ನೆನೆದು (ಗೊರೂ ಭಾ. ೭-೦೯೦).

[ದೇ.ಶ ತಮಿ. ಮಾಯ್ ; ತುಳು. ಮಸೆ, ಮಸಿ ; ಕೋಲಾ. ನಾಯ್ಯ. ಮಾಯ್ : ಪರ್ಜಿ. ಮಯ್ಪ್ : ಗೊಂಡಿ. ಮಾಸೀತಾನಾ, ಮೆಸಿಯನ]

**ಮಸೆ₂** (ನಾ). ೧. ಹರಿತ : ಚೂಪು : ಪೊಸಮಸೆಯ ಬಾಳ ಪೊಳೆಪುಂ ಪಸುಪೊನ್ನಾ[ರ]ತಿಯ ತೊಳಗಿ ಬೆಳಗುವ ಮಿಂಚುಂ ದೆಸೆದೆಸೆಗ[ಳೊ]ಳೆಸೆದಿರೆ (ವರ್ಧಮಾ. ೪-೪೩) ; ಪೊಸಮಸೆಯ ಕೂರಲಗಾತನ ಕಂಠದಲಿ ಹಾರಮಾಗಿ ಪೇಟಿ (ಕೃಷ್ಣಾ ಸ್ಕ್ರ. ೭-೦೦ ವ) ; ಎಪ್ಪತ್ತೇಳುಕೋಟಿಯ ಭಟರ ದೇಹವ ಕೀಲಿಸಿದ ಹೊಸಮಸೆಯ ಸರಳಿಂದಸುರ ಕಡುಮುಳಿದು (ಶೌರಿರಾ. ೦೯-೦೭). ೨. ಹೊಳಪು ; ಕಾಂತಿ : "ತೊಳಗು, ಬೆಳಗು . . . ಮಸೆ — ಈ ೧೪ ಕಾಂತಿ" (ಕಶಾ. ೫೫-೨೦೨) ; ಗಗನಚರಗಜಾರೋಹಕರಂಕುಶದ ಮಸೆಗಳ್ ಗಗನತಲಮನಾವರಿಸೆ ರಣಕ್ಷೋಣಿಗೆ ನಡೆದರ್ (ಪಂಪಭಾ. ೦೩-೨೯ ವ) ; ಪೊದಟ್ಟ ಬೆಳ್ಮಸೆಮಿಸಿಲ್ ರಣದೇವತೆಯಟ್ಟಹಾಸದಂತೊಗೆಯೆ (ಜಗ. ೭-೭೯). ೩. ಉದ್ರೇಕ ; ಆವೇಶ : ಬಲಿದ ದಂಡೆಯ ಮಸೆಯ ಬಿಯಸಿಕೆಲಾಳಿಯ ಮೈಗಳ ಲವಣಿಸಾರರು . . . ಕಾದಿದರು (ಕುಮಾ ದ್ರೋ. ೦೪-೦೭); ಕರ್ಣಾರ್ಜುನರೊಳಗಿನ ಮನಕತದ ಮಸೆ ಏರಿತಷ್ಟೆ (ನಾಡೋಜ. ೦೭೦). ೪. ದ್ವೇಷ : ಹಗೆ : ಹುಸಿನುಸುಳಟಮಟಕಾಂಕ್ಷೆ ಹದಿರು ಗನ್ನಮಸೆಮಾಟ ಮಱೆಮೆಡಗ್ಗಳಿಕೆ ಮುಸುಕುವ ಕಸಕಳೆಗಳ ಕಿತ್ತು ಗುರುರಾಯ ಸಸಿಗಳ ಸಲಹುವ ಕಾಂತೆ (ಅಮುಕಾಂ. ೪-೦೩೯). ೫. (ಸಣ್ಣ) ಗಾಯ : ಇಸು ವಿಡುವ ಪೊಯ್ಯ ಕುತ್ತುವ ಮಸೆಯುಂ ಪತ್ತಿಸುವ ಕೈದುವಿನ್ನಣಮಂ ಬಿನ್ನಾಕ್ಷಿಸಲಾಗ ನುತರನಾ ದುವ್ಯಸನಂ ದೋಷಕರನೆಂಬನುತ್ತಮಚ್ಚೈನಂ (ಕಮುಕ. ೫-೦೨೫) ; ಸುಳಿದ ಮಸೆಗಳು ಪಿಂಗದೆ ಪೋಲ್ತೆಸೆದಿರ್ದುವು . . . ಸಾಸನಲಿಪಿಯಂ (ಎಕ. XVI, ತಕ್ಕಾ. ೯೬-೭೫ ; 1170) : ಮಸೆಯ ಮೈಗಳೊಳೊಱೆವುತಿರ್ದುವು ಬಿಸಿರಕುತ (ಕುಮಾ ದ್ರೋ. ೦೪-೯). [<ಮಸೆ₁]

**ಮಸೆಕಲ್**, ಮಸೆಕಲ್ಲು (ನಾ). ಆಯುಧಗಳನ್ನು ಹರಿತಗೊಳಿಸಲು ಬಳಸುವ ಉಜ್ಜುವ ಕಲ್ಲು : ಮಸೆಕಲ್ಲ ಕುಮಾರೆ ಬಾಚಿಯ ಪೊಸತನಿಸುವ ಕೊಡಲಿಯುಳಿಯನೊರ್ಕಂದದೊಳಂ ಉಸಿರೆಂದಾ ಗುಣಕಂತಿಕಗಸಮಸಮಸ್ತಮನೆ ಕೊಟ್ಟನಭಿನವಪಂಪಂ (ಕವಿಶ. I. ೦೨೪). **ಮಸೆಕಲ್ಲು :** ಕುಡು ಗೋಲು, ಮಚ್ಚು ಮುಂತಾದ ಆಯುಧಗಳನ್ನು ಘಳಿಸಿ, ಮಸೆಕಲ್ಲಿನ ಮೇಲೆ ಮಸೆದು ಇಟ್ಟುಕೊಳ್ಳುತ್ತಾರೆ (ಜಮೂಕು. ೪೯). [ಮಸೆ₁ + ಕಲ್₃]

**ಮಸೆಕಲ್ಲು** 'ಮಸೆಕಲ್' ನೋ.

**ಮಸೆಗಣೆ** (ನಾ). ಹರಿತವಾದ ಬಾಣ : ತುದಿವೆರಳಂಬುಗೊಳೆಗೇಱಿಸಿದ ಬಿಲು . . . ಮಸೆಗಣೆಯ ಬತ್ತಳಿಕೆ (ಕುಮಾ ಭೀ. ೭-೮) ; ಪೆಣ್ಮಲಗೆಯೆ ನೋಡೆ ಮಸೆಗಣೆಯ ದೊಣೆಯಲ್ಲೆ (ಶಾಲಿನ. ೦೨೯-೨೭೫). [ಮಸೆ₂ + ಕಣೆ₁]

**ಮಸೆಗಾಣ್** (ಕ್ರಿ). (ಸಣ್ಣ) ಗಾಯವನ್ನು ಹೊಂದು : ರವಿಯ ಮಗ ಮಸೆಗಂಡನಶ್ವತ್ಥಾಮ ಮೈಮಱೆದ (ಕುಮ್ಯಾಭಿ. ೬-೧೧) : ಮಸೆಗಂಡ ಕ್ರೋಡನಂತಸುರನುರೆ ಘರ್ಜಿಸುತೆ (ಶೋಣಾಸು. ೧೮).

[ ಮಸೆ$_2$ + ಕಾಣ್ ]

**ಮಸೆಗಾಣಿಸು** (ಕ್ರಿ). ಗಾಯಗೊಳಿಸು ; ಕ್ಷತಗೊಳಿಸು : ಮೂಱಕ್ಷೋಣಿ ಸೈನ್ಯವನೊರಸಿದನು ಮಸೆಗಾಣಿಸಿದನಗ್ಗದ ಮಹಾರಥರ (ಕುಮ್ಯಾದ್ರೋ. ೬-೨೮) ; ಸಾವಿರ ಬಲುಸರಳ್ಗಳನೆಚ್ಚು ಮಸೆಗಾಣಿಸಿದನನಿಬರನು (ಕೃಷ್ಣಗಳು. ೨೨-೨೫). [ ಮಸೆಗಾಣ್ + – ಇಸು$_3$ ]

**ಮಸೆಗೆಡು** (ಕ್ರಿ). ಶೀಕ್ಷ್ಣತೆಯನ್ನು ಕಳೆದುಕೊಳ್ಳು ; ಹರಿತವಿಲ್ಲದಾಗು ; ಮೊಂಡಾಗು : ಮಸೆಗೆಟ್ಟ ಕೊಡಲಿಯ ಹೊಯಿಲಂತೆ ಕರ್ಮವ ನಸುದಱಿ ಮಾಳ್ಪುದು ಧರ್ಮ ಮಸೆಯುಳ್ಳ ಕೊಡಲಿಯ ಹೊಯಿಲಂತೆ ಕರ್ಮವ ಕುಸುರಿದಱಿವುದೀಗ ಶುಕ್ಲ (ಧರ್ಮ. ೬೯-೪೪). [ಮಸೆ$_2$ + ಕೆಡು$_1$]

**ಮಸೆಗೊಳ್** (ಕ್ರಿ). ಹರಿತವಾಗು ; ಚುರುಕಾಗು : ನ್ಯಾಯಶಾಸ್ತ್ರದ ಅಧ್ಯಯನ ಹಾಗೂ ಅದರ ಪ್ರಯೋಗದಿಂದ ಆ ಬುದ್ಧಿಶಕ್ತಿಯು ಮಸೆಗೊಂಡು ಅತ್ಯಂತ ತೀಕ್ಷ್ಣವಾಯಿತು (ಲಾಜ. ೭೯). [ಮಸೆ$_2$ + ಕೊಳ್$_1$]

**ಮಸೆಗೋಲು** (ನಾ). = ಮಸೆಗಣೆ : ರಕ್ಕಸನು . . . ಪರಿಘದಲಿಟ್ಟನಿನಕುಲನ . . . ಮಸೆ [ಪಾಠಾಂ. ಸಮ]ಗೋಲ್ಗೈದಱಿಲಿ ಶತಚೂರ್ಣವಾಗಲು ಕಡಿದನಾ ರಾಮ (ತೊರರಾ. ೬-೨೮-೪೦) ; ಹುಸಗೆಟ್ಟಸು ಧೃತಿ ಕುಂದಿತು ಕಾವನ ಮಸೆಗೋಲು ನಾಂಟಿದುವೆದೆಯ (ಕಂಪಹ. ೯-೧೬೦).

[ಮಸೆ$_2$ + ಕೋಲು$_1$ (< ಕೋಲ್$_1$)]

**ಮಸೆತ** (ನಾ). ೧. ತೀಕ್ಷ್ಣತೆ; ಚುರುಕು : ತಾನು . . . ನೂರು, ಸಾವಿರ ಆಡುವ ನಾಲಿಗೆಯ ಮಸೆತವನ್ನು ಎದುರಿಸಿ ಬದುಕಬೇಕಾಗಿದೆ (ದೀಕಹ. II. ೦೬೦). ೨. ಉದ್ರೇಕ; ಆವೇಶ : ವನಚರನ ಸುಡುವಂತೆ ನೋಡಿದ ಮನದ ಮಸೆತದಲಿ (ಕಿರಾತ. ೪೪-೯೨). [ಮಸೆ$_1$ + – ತ$_2$]

**ಮಸೆದೋಱು** (ಕ್ರಿ). ಗಾಯಗೊಳಿಸು : ಮದನ ಮಸೆದೋಱಿದನು ಹೂಗಣೆ ಹೃದಯವನು ತಾಗಿದುದು (ಕುಮ್ಯಾಭಿ. ೨-೬). [ಮಸೆ$_2$+ತೋಱು]

**ಮಸೆಪ** (ನಾ). = ಮಸೆತ ೧ : ಬಾದುರವಾಸನವರೆಚ್ಚ ಹೊಸಮಸೆಪದ ಬಾಣಗಳನು ಕುಸುರಿದಱಿದು (ಕುರಾಶಾಂ. ೦೮-೦೯೩). [ಮಸೆ$_1$ + – ಪ$_2$]

**ಮಸೆಪು** (ನಾ). ಉಜ್ಜುವಿಕೆ; ತಿಕ್ಕಾಟ : ಗಳನಿಸದಕ್ಕೆ ಕಾತರಿಪ ಕಂಠ ಮನೊಯ್ಯನೆ ಸಂತವಿಟ್ಟು ಪೈಗಳ ಮಸು[ಸೆ]ಪಿಂಗೆ ಮೈಮಱೆವ . . . ಪಾಣ್ಬೆಯ ಜಾಣ್ಮೆ ಸಾಲದೇ (ಲಾಜಕೀ. ೧೦-೩೫). [ಮಸೆ$_1$ + – ಪು$_2$]

**ಮಸೆಯ** (ನಾ). (?) : ಕೊಣ್ಡುಪೋಗೆ ಮಸೆಯರ ಗಡಿ ತುಱುವನುಳಿಸಿದೋ ರಣದೊಳ್ಪಟ್ಟು ಸಂಗಹಿಗೆ ತನ್ನೊನ್ (ಎಕ. VIII. ಸೊರಬ. ೨೦೨–೩; 955).

[ ? ]

**ಮಸೆಯಂಬು** (ನಾ). = ಮಸೆಗಣೆ : ಪೊಸಮಸೆಯಂಬುಗಳ್ ದೆಸೆಗಳಂ ಮಸುಳ್ವನ್ನಗಮೆಯ್ದೆ ಪಾಯೆ (ಕಂಶಭಾ. ೦೦-೬೩) ; ಮಸೆಯಂಬು ಪೆಟಲಗುಂಡುಗಳ ಎಸೆವ ಪೆರ್ಮಳೆಗಱೆಯುತ ಬೊಬ್ಬಿಱಿದು (ಕಂಪಹ. ೦೪-೪೮).

[ಮಸೆ$_2$ + ಅಂಬು$_2$]

**ಮಸೆಯಿಸು**, ಮಸೆಸು (ಕ್ರಿ). ಹರಿತಗೊಳಿಸು; ಚೂಪುಮಾಡು : ಮಸೆಯಿಸುಗುಳ್ಳ ಕೆಯ್ದುಗಳಂ (ಕಂಶಭಾ. ೧೦-೩೨); ಉಗುರಂ ಮಸೆಯಿಸಿ (ರಹಸ್ಯ. ೩-೯೪); ಕೈದುಗಳ ಘಾಸಿಯಾಗದೆ ಮಸೆಯಿಪ ಭಟರಿಂದ ವಿಲಾಸವಡೆದುದುಭಯಬಲ (ಕುರಾಶಾಂ. ೦೯-೧೦೭). **ಮಸೆಸು** : ಅಸಿಯ ಮಸೆಸುವ ಮಾಱಿದ ಲೌಡಿಯ ಬೆಸುವ . . . ವೀರಭಟರೊಪ್ಪದರು ಕಟಕದಲಿ (ಕುಮ್ಯಾಭೀ. ೩-೩೮); ಅಸಮಾಕ್ಷನೊಳು ವೈರವ ತೊಟ್ಟುರ್ವುಪಕೇತು ಮಸೆಸಿದ ಮಾರ್ಗಣೆಯಂತೆ . . . ನನೆಗಳೊಪ್ಪಿಹವು (ಅಂಕಕ. ೨-೯೦). [ ಮಸೆ$_1$ + – ಇಸು$_3$ ]

**ಮಸೆವಡು** (ಕ್ರಿ). ಹೊಳಪನ್ನು ಹೊಂದು; ಕಾಂತಿಯನ್ನು ಪಡೆ : ಮಸೆವಟ್ಟುಜ್ವಲದರ್ಪಣಂ ಪೊಸದಳಿರ್ ಪೂಮಾಲೆ ಶೇಷಾಕ್ಷತಂ ಬಿಸಸೂತ್ರಂ . . . ತನ್ನೊಳೊಪ್ಪೆ (ಜಗಾ. ೯೦-೯೬). [ಮಸೆ$_2$ + ಪಡು$_1$]

**ಮಸೆವು** (ನಾ). ಸಾಣೆಹಿಡಿಯುವಿಕೆ : ಸಹಿಸಿದ ಹಸಿವು ಆಯಿತು ಆತ್ಮದ ಖಡ್ಗಕೆ ಮಸವು (ಸುಜಾತ. ೩-೬). [ಮಸೆ$_1$ + – ವು]

**ಮಸೆವೆಳಗು** (ನಾ). ಆಯುಧಗಳನ್ನು ತಿಕ್ಕುವುದರಿಂದುಂಟಾಗುವ ಕಾಂತಿ, – ಹೊಳಪು: ವಸುಧೇಶರತ್ನಾತ್ಮಭೂರಿಭಾಂಕೃತರವದಿಂ ಮಸೆವೆಳಗಿಂ ನಗುತಿರ್ಪಂತೆಸೆದುವು ಪೆನ್ನಟ್ಟುತಿರ್ಪ ಕೃಷ್ಣಶರಂಗಳ್ (ಜಗಾ. ೬-೧೦೪). [ ಮಸೆ$_1$ + ಬೆಳಗು$_2$ (< ಬೆಳಕು$_2$) ]

**ಮಸೆವೆಱು** (ಕ್ರಿ). ಹರಿತವಾಗು; ಚೂಪಾಗು : ಹೊಸಮಸೆವೆತ್ತ ಖಡ್ಗದಲಿ ಕುಸಿವೆತ್ತು ಖಳನ ಮಸ್ತಕವ ಕೀಳ್ಪಡಿಸಿ ರಂಜಿಸೆ (ಮೋಹತ. ೦೧-೬೬); ಪೊತ್ತ ಮಸೆವೆತ್ತ ಬಲ್ಗತ್ತಿಗಳ ಕಿತ್ತು ಭಟರೆತ್ತಿ ಜಡಿಯುತ್ತಿರಲ್ಕೆ (ಕೃಬಿಲಾ. ೪-೦೯).

[ ಮಸೆ$_2$ + ಪೆಱು$_1$ ]

**ಮಸೆವೊಗರ್** (ನಾ). = ಮಸೆವೆಳಗು : ಕರ್ಣಾಜನ ಕಣೆಗಳಂ ಕತ್ತರಿಸಿ ಪೊಸಮಸೆವೊಗರ್ನಭೋಮಂಡಲವನಂಡಲೆಯಲು (ಕೃಬಿಲಾ. ೬-೬೦).

[ ಮಸೆ$_1$ + ಪೊಗರ್ ]

**ಮಸೆಸು** 'ಮಸೆಯಿಸು' ನೋ.

**ಮಸ್ಕರ** (ನಾ). ಬಿದಿರು ; ಬೊಂಬು : "ತ್ವಚಿಸಾರಃ, ಚಪಃ ... ಮಸ್ಕರಃ — ಈ ೬ ಬಿದಿರ್" (ಹಲಾಯು. ೩೪-೩೦). [ಸಂ.]

**ಮಸ್ಕರಿ$_1$** (ನಾ). ಬಿದಿರಿನ ದಂಡವನ್ನು ಹಿಡಿದ ಸಂನ್ಯಾಸಿ,– ಯತಿ : "ತಾಪಸಂ ಕರ್ಮಂದಿ ಮಸ್ಕರಿ ವ್ರತಿ ಭಿಕ್ಷುವಾ ಪರಾಶರಿ ತಪಸ್ವಿಯೆನಿಕ್ಕು" (ಮಂಗರಾ. ೬೩-೯). [ ಸಂ. ಮಸ್ಕರಿನ್ ]

**ಮಸ್ಕರಿ$_2$**, ಮಷ್ಕಿರಿ (ನಾ). ತಮಾಷೆ ; ಗೇಲಿ : ಎಲ್ಲಿ ಕೂತ ಮರಯೇರಿ ಮಾಡಲಿಕ್ಕೆ ಮಸ್ಕರಿ . . . ಗೋವಿಂದ ಅನಿಸಿದ ಗೋವರ್ಧನಾ (ಜಾನಗೀ. ೧೦೦); ಎಂಥ ಮಸ್ಕರೀ ಮಾತ ಇದು (ಕಂಠಿ. ೨೦೦). **ಮಷ್ಕಿರಿ**: ಇದೇನು ಕ್ಲೀಷೆಯೋ ಮಷ್ಕಿರಿಯೋ ! (ಅರಿಬು. ೫೬) ; ನನ್ನ ಜೊತೆ ಮಷ್ಕಿರಿ ಮಾಡಬೇಡ (ರೂಢಿ).

[←ಅರ. ಮಸ್ಖರಾ; ಹಿಂ. ಮಸ್ಕರೀ, ಮಸಖರೀ; ಮರಾ. ಮಸ್ಕರೀ]

**ಮಸ್ಕರಿಮಾರ್ಗ** (ನಾ). ಸಂನ್ಯಾಸಿಯ ಸಂಪ್ರದಾಯ : ಆ ದ್ವಿಜಾನ್ವಯ ನಜೀವುಂ ವಿನಯಮುಂ ತನ್ನೊಡವುಟ್ಟಿ ಪುಟ್ಟಿ ಬಳೆದು ಪೂರ್ವಸ್ಥಿತಿಯೊಳೆ ಮಸ್ಕರಿಮಾರ್ಗದೊಳೆಸಗಿ (ಪಾರ್ವಪು. ೬-೦೮ ವ). [ಸಂ.]

**ಮಸ್ಕರಿಸಮಯ** (ನಾ). = ಮಸ್ಕರಿಮಾರ್ಗ : ಅತನ ಪೆಂಡತಿ ದುರ್ಮನಸ್ಕೆ ಮಸ್ಕರಿಸಮಯಮಂ ಪಿಡಿದಿರ್ಪಳ್ (ಶಾಂತಪು. ೯-೩ ವ). [ಸಂ.]

**ಮಸ್ಕಾ** (ನಾ). ಬೆಣ್ಣೆ ; ನವನೀತ.

**ಮಸ್ಕಾಹೊಡೆ** = (ಆಲಂ) ಬೆಣ್ಣೆಹಚ್ಚು : ಓಲೈಸು : ಯಾವ ಕೆಲಸವಾಗಬೇಕಾದರೂ ಅವನಿಗೇ ಮಸ್ಕಾಹೊಡೆಯಬೇಕು (ರೂಢಿ).

[←ಪಾರ. ಮಸ್ಕ್, ಮಸ್ಕಹ್; ಹಿಂ. ಮಸ್ಕಾ, ಮಸಕಾ; ಮರಾ. ಮಸಕಾ]

**ಮಸ್ತ** (ನಾ). ತಲೆ ; ಶಿರಸ್ಸು : ನಾಭಿಯಿಂದುರಂಬರೆಗಂ ಪಿತ್ತದ ತಾಣಮುರದಿನಾ ಮಸ್ತದ ವರೆಗಂ ಕಫದ ತಾಣಮಕ್ಕುಂ ನಿರುತಂ (ಲೋಕೋಪ. ೯-೨) ; ಪ್ರಥಿತಗುಣಗಣಾವಾಸನುರ್ವೀಶಮಸ್ತನ್ಯಸ್ತಾಂಘ್ರಿದ್ವಂದ್ವನೇಂ ರಾಜಿಸಿದನೋ (ಕಶಿಲ. ೭೪-೦೨-೪ ; 1170) ; ತತ್ಪುಣ್ಯಾಂಬುವಂ ಪೊತ್ತು ಮಸ್ತದೊಳ್ (ಅಪಂಪು. ೯-೯೬). [ಸಂ.]

**ಮಸ್ತಕ** (ನಾ). ೧. ತಲೆ ; ಶಿರಸ್ಸು : "ಮುಂಡಃ, ಉತ್ತಮಾಂಗಃ, ಮಸ್ತಕಃ . . . ಮೂರ್ಧಾ, ಕಂ— ಈ ೮ ಮಂಡೆ" (ಹಲಾಯು. ೯೩-೬೬೪); ಕೀರ್ಘೋದಕಂಗಳಿಂದಯ್ವರುಂ ಪವಿತ್ರೀಕೃತಮಸ್ತಕರಾಗಿರ್ದ (ಕಂಶಭಾ. ೬-೧೦ ವ); ರವಿಕುಲದ ರಾಯಂ . . . ನಿಜಸತಿಯ ತೋರ

ದೊಡೆಗಳ ಮೇಲೆ ಲಲಿತಮಣಿಮಕುಟಮಂಡಿತಮಸ್ತಕವನೆಳಸಿ ಮಗ್ಗು ಲಿಕ್ಕಿದನಾಗಳು (ಹಕಾ. ೬-೫೦); ಅವನ ಮಸ್ತಕ ಬಿರಿದು ಬೀಳಲಿ (ಕುವ್ಯಾಸ್ತ್ರೀ. ೧೪-೪೨); ಪುಸ್ತಕದಿ ದೊರೆತರವು ಮಸ್ತಕದಿ ತಳೆದ ಮಣಿ (ಮಂಕುಗೀ. ೬೩). ೨. ತುದಿ; ಶಿಖರ: ಸಂಜೆಯೊಳೆನನಸ್ತಾದ್ರಿಯ ಮಂಜುಳಮಸ್ತಕದೊಳೊಪ್ಪುವಂತಶಿಶಯುದಿಂ ಕಂಜಾಕ್ಷಿಯ ಮಂಡೆಯೊಳ್. . . ಮಾಡಮಣಿ ನೆಲೆಸಿರ್ಕುಂ (ಹರಿಶ್ಚ. ೨-೩೫); ನೋಡುತ ನಡದ ವಿಪುಲಾಚಲದ ಮಸ್ತಕದಿ (ಮುಲ್ಲಾ.ಪ. ೨-೪). [ಸಂ.]

**ಮಸ್ತಕಸ್ನೇಹ** (ನಾ). ೧. ಮೆದುಳು: "ತಲೆಯ ಮೆದುಳಿಂಗೆ ಮಸ್ತಿಷ್ಕಮಾ ಮಸ್ತಕಸ್ನೇಹಮೆಂಬಾಖ್ಯೆಮಕ್ಕುಂ" (ಮಂಗರಾ. ೦೬೬-೬). ೨. ಮೆದುಳಿನಲ್ಲಿರುವ ನೆಣ. [ಸಂ.]

**ಮಸ್ತಕಾಭಿಷೇಕ** (ನಾ). [ಜೈನ] ಜಿನವಿಗ್ರಹದ ತಲೆಯ ಮೇಲೆ ನೀರು, ಹಾಲು ಮುಂತಾದ ದ್ರವಪದಾರ್ಥಗಳನ್ನು ಎರೆದು ವಿಧಿಪೂರ್ವಕವಾಗಿ ಮಾಡಿಸುವ ಸ್ನಾನ: ಶ್ರವಣಬೆಳ್ಗೊಳದಲ್ಲಿ ಗೋಮಟೇಶ್ವರನ ಮಸ್ತಕಾಭಿಷೇಕವು ಹನ್ನೆರಡುವರ್ಷಗಳಿಗೆ ಒಂದು ಬಾರಿ ನಡೆಯುವುದು (ಮಾರ್ಗ.ಮು.೯೪). [ಸಂ.]

**ಮಸ್ತಿ** (ನಾ). ೧. ಸೊಕ್ಕು: ಗರ್ವ: ಮದ: ಇಷ್ಟು ಮಸ್ತಿ ತುಂಬಿದ ಹೆಣ್ಣಿಗೆ ಅಂತಿಂತಹ ಹುಡುಗ ಉಳಿದೋಗದವನೆ? (ಮೂರುದಾ. ೨೫೦); ಅವನ ಮಸ್ತಿ ಎಷ್ಟಿದೆಯೆಂಬುದನ್ನು ನಾಳೆಯೇ ನೋಡುತ್ತೇನೆ (ಕರಾಜ. ೬೬). ೨. ಆನೆ, ಒಂಟೆ ಮೊದಲಾದ ಪ್ರಾಣಿಗಳ ಮದಾವಸ್ಥೆ: ಮಗನೇ ಮಸ್ತಿಯ ಹಸ್ತಿ ಮಮತೆಯ ಮಗನೆ ಶಿವನಿಂದೊಗೆದ ಸಿಂಹದ ಮರಿಯೆ ಕೇಳು (ಮುರೀಕ್ಷ. ೩-೪೦); ಮಸ್ತಿಳಿದ ಹಸ್ತಿಯೊಲು ಕಣ್ಣಿರೆದು (ಶರಟ. ೨೫-೦). [←ಪಾರ. ಹಿಂ. ಮರಾ. ಮಸ್ತೀ]

**ಮಸ್ತಿಷ್ಕ** (ನಾ). ಮೆದುಳು: "ತಲೆಯ ಮೆದುಳಿಂಗೆ ಮಸ್ತಿಷ್ಕಮಾ ಮಸ್ತಕಸ್ನೇಹಮೆಂಬಾಖ್ಯೆಮಕ್ಕುಂ" (ಮಂಗರಾ. ೦೬೬-೬); ಗಜಮಸ್ತಕಮಸ್ತಿಷ್ಕದಿನಜೀರ್ಣಮಾಯ್ತೆಂದು ಲಂಘನಂಗೆಯ್ದುವೋಲೇಂ ಗಜರಿಪು ಲಂಘಿಸಿದುದೊ (ಅಜಿತ. ೯-೨೭); ಲಕ್ಷ್ಮಣಂ ರಾಷ್ಟ್ರಕಂಟಕನಂ ಬಾಟ್ದಲೆಗೊಂಡನುಮ್ಮನಿಭಮಂ ಪಂಚಾನನಂ ಹಸ್ತಿಮಸ್ತಕಮಸ್ತಿಷ್ಕರಸಾನುರಕ್ತರಸನಂ ಮಾರ್ಕೊಂಡು ಕೊಂಡುಯ್ವವೋಲ್ (ಪಂಪರಾ. ೭-೩೨). [ಸಂ.]

**ಮಸ್ತು**$_1$ (ನಾ). ಮಜ್ಜಿಗೆ: "ದಧಿಮಂ(ತ)ಥಃ, ಮಸ್ತು—ಈ ೨ ಮಜ್ಜಿಗೆ" (ಹಲಾಯು. ೫೩-೦೬೬). [ಸಂ.]

**ಮಸ್ತು**$_2$ (ನಾ). ವಿಪುಲ; ಅಧಿಕ; ಹೇರಳ: ಕೈದುಗಳ ಮಸ್ತಾಗಿ ತೊಸದಾದುದಂ ತರಿಸಿ ಸುಗ್ಗಾದುದಂ ಕಳುಪಿ ಹಸಮಾಡಲು (ಕುರಂಗ. ೫೬-೪೨); ಮಸ್ತಾಗಿ ಹಣ ಉಂಟಾ? (ಅಂಜಮಾ. ೬); ಮಳೆಯ ಜೋರಿಗೆ ಕೊಣೆಗೆ ಮಸ್ತಾಗಿ ಬಿದ್ದಿದ್ದುವು ಹತ್ತು ಮಿಾನು! (ಮಾಲಿಮ. ೬೩೬). [←ಪಾರ. ಮರಾ. ಮಸ್]

**ಮಸ್ಲಿನ್** (ನಾ). ಒಂದು ಬಗೆಯ ತೆಳುವಾದ ಬಟ್ಟೆ: ಬಹು ಸೂಕ್ಷ್ಮ ನೆಯ್ಗೆಯ ಹತ್ತಿಯ ಬಟ್ಟೆ; P ಹಿಂದೆ ಮೆಸೊಪೊಟೋಮಿಯಾ ದೇಶದ ಮೊಸಲ್ ಎಂಬಲ್ಲಿ ಈ ಬಟ್ಟೆ ನೇಯುತ್ತಿದ್ದುದರಿಂದ ಈ ಹೆಸರು ಬಂದಿದೆ: ಏನು ಬೆಳ್ಳಗೆ ಎಷ್ಟು ತೆಳ್ಳಗೆ ಮಳೆಯ ಮಸ್ಲಿನ್ ಪರದೆಯು (ಕಲಡು. ೦೦-೬); ಚೀಟಿ, ವಾಯಿಲ್, ಮಸ್ಲಿನ್, ಮಲ್ ಇವನ್ನು ಸಾದಾನೇಯ್ಗೆ ಉಪಯೋಗಿಸಿ ನೇಯುವರು (ಗೃಹವಿ. ೬೩). 'ಮಲ್ಲು' ಪರಾ. [←ಇಂ. Muslin]

**ಮುಸ್ಸಿ** (ನಾ). ಒಂದು ಬಗೆಯ ಮರ: ಮುಸ್ಸಿ, ಕುರುವಾಡಿ, ನೇರಲುತಾರೆ (ಮ್ಯಾಶಿಗ. ೫-೮೨). [?]

**ಮುಸ್ಸಿವಾಳ** 'ಮಸಿವಾಳ' ನೋ.

**ಮುಸ್ಸೀವಾರ** 'ಮಸಿವಾಳ' ನೋ.

**ಮಸ್ಸೀವಾಲ** 'ಮಸಿವಾಳ' ನೋ.

**ಮಹ**$_1$ (ನಾ). ಏಳು ಲೋಕಗಳಲ್ಲಿ ನಾಲ್ಕನೆಯದು: "ಬತ್ತರದ ಭೂರ್ಭುವಂ ಸ್ವರ್ಮಹಂ ಜನ ತಪಂ ಸತ್ಯಮೆಂದೇಟು ಮೇಲಣ ಲೋಕಮಕ್ಕು" (ಮಂಗರಾ. ೦೦-೩೨). [ಸಂ. ಮಹಸ್]

**ಮಹ**$_2$ (ನಾ). ೧. ಒಸಗೆ; ಉತ್ಸವ; ಹಬ್ಬ: "ಉತ್ಸವಃ. ಮಹಃ. ಕ್ಷಣಃ—ಈ ೩ ಒಸಗೆ" (ಹಲಾಯು. ೦೨೬-೬೮); ಸಕಲವಿನೇಯಜನಂಗಳ್ ಮಾಟ್ಟ ಮಹಮೆಂಬ ಪೂಜೆಯುಮಂ (ಸುಕುಮಾ. ೬-೨೫ ಪ); ಗೋಪವೃದ್ಧರ್ ಮಹೇಂದ್ರಮಹಮಂ ಮಾಣ್ದು ಗಿರೀಂದ್ರಮಹಮನೊಡಂಬಟ್ಟರ್ (ಜಗದ. ೪-೭೪ ಪ). ೨. ಯಾಗ; ಯಜ್ಞ. ೩. ತೇಜಸ್ಸು; ಕಾಂತಿ. ೪. ಎಮ್ಮೆ; ಮಹಿಷ. ೫. ಶ್ರೇಷ್ಠವಾದ ತತ್ತ್ವ; ಪರತತ್ತ್ವ: ಅಜೀವ ಮಹದಲ್ಲಿ ಬೆರಸುವಾಗ ವಾರಿಶಿಲೆ ನೋಡನೋಡಲಿಕ್ಕೆ ನೀರಾದಂತೆ (ವಚನ. ೨೬೦-೫); ಮನವು ಮಹದಲ್ಲಿ ನಿಂದುದೆ ಲಿಂಗ (ಲಿಂಗವ. ೦೩-೫೦). [ಸಂ.]

**ಮಹಂತ** (ನಾ). ೧. ಆದರಕ್ಕೆ ಪಾತ್ರನಾದ ವ್ಯಕ್ತಿ: "ಮಹಂತಃ = ಪೂಜ್ಯಂ" (ಕರ್ನಾಕ. ೨೮೩); ಭಾಸುರತೇಜ[ರು] ಮಹಂತರೆನಿಸಿದ ಸೂರ್ವರು ಕೇಶವಮಹೇಶದೇವರ ಲೇಸೆನಿಸಿದ ಪೂಜೆಗಿತ್ತರುಪೂರ್ಜಿತ ಧರೆಯಂ (ಎಕ. XVIII. ೦೮೫-೪೦; 1097); ನಿಜಮನಜೀದ ನಿಶ್ಚಿಂತನೆ ಮರಣವ ಗೆಲಿದ ಮಹಂತನೆ (ಅಕವಂ. ೦೩೪-೬೩೬); ಅಖಿಳರಿಗಜೀವನೀವ ಮಹಂತನೆನಿಸಿದ ಸಿದ್ಧರಾಮಯ್ಯಂಗೆ ಶರಣಾರ್ಥಿ (ಪ್ರಭುಲೀ. ೦-೪). ೨. ದೇವಸ್ಥಾನ, ಮಠ ಮೊದಲಾದುವುಗಳ ಮೇಲ್ವಿಚಾರಕ; ಧರ್ಮಾಧಿಕಾರಿ: ಈ ವೃದ್ಧಮಹಾಪುರುಷನಾರು ಎಂಬುದಾಗಿ ದೇವಾಲಯದ ಮಹಂತರನ್ನು ಕೇಳಿದನು (ಶ್ರೀರಾಮ. ೬). 'ಮಹಾಂತ' ಪರಾ. P ಸಂಸ್ಕೃತದ 'ಮಹತ್' ಶಬ್ದವು ವ್ಯಾಕರಣಸೂತ್ರಗಳ ಪ್ರಭಾವದಿಂದ ಅನೇಕ ಬೇರೆ ಬೇರೆ ರೂಪಗಳನ್ನು ಪಡೆಯುವುದರಿಂದ ಇಲ್ಲಿ ಅನುಕೂಲಕ್ಕಾಗಿ ಅವೆಲ್ಲವನ್ನೂ ಬೇರೆ ಬೇರೆ ಮುಖ್ಯ ಉಲ್ಲೇಖಗಳಾಗಿ ಕೊಡಲಾಗಿದೆ. ಉದಾ: 'ಮಹಂತ', 'ಮಹತಿ$_1$', 'ಮಹತ್ತು', 'ಮಹಾ', 'ಮಹಾಂತ' ಇತ್ಯಾದಿ. [< ಸಂ. ಮಹತ್]

**ಮಹಂತು**, **ಮಾಹತ್ತು** (ನಾ). = ಮಹಂತ ೧: 'ಮಹಂತುಬೋಗು' ಪರಾ. **ಮಾಹತ್ತು**.

**ಮಾಹತ್ತಿನ ಮಠ** = ವೀರಶೈವಮಹಾನುಭಾವಿಗಳಿರುವ ಮಠ: ಶಿವನಸಮುದ್ರದ ವೀರೇಶ್ವರನ ಗುಡಿ ಯತಿಮಠವನು ಮಾಹತ್ತಿನ ಮಠವ ಮಾಡಿ (ಎಕ. XIV, ಮಳವ. ೦೦೧-೮; 1604). [< ಮಹಂತ]

**ಮಹಂತುಬೋಗು** (ಕ್ರಿ). ಮಹಂತನಾಗು; ಪೂಜ್ಯನಾಗು: ಮಾಸಿ ಉಂಡವರೆಲ್ಲಾ ಮಹಂತುಬೋದರು ದೇಹ ಉಂಡವರೆಲ್ಲಾ ದೇವರ ಪೂಜಿಸಿದರು (ಜನಪದ. ೨೪-೦೪೩). [ಮಹಂತು + ಪೋಗು$_1$ (< ಪೋ$_1$)]

**ಮಹಂತೆ** (ನಾ). ಶ್ರೇಷ್ಠಳಾದವಳು; ಪೂಜ್ಯಳಾದವಳು: ಅತ್ಯಾಯತ ಪತಿಭಕ್ತೆ ನಾಗಿಕವ್ವೆ ವಿಶೇಶಶ್ರೀಯುತೆ ಮಹಂತೆ ನಿ[ಚ್ಚಂ] ಶ್ರೀಯ[ಸ್ಕರ] ಮೂರ್ತಿ (ಎಕ. V. ೬೪೬-೦೬; 1097). [ಮಹಂತ + — ಎ$_2$]

**ಮಹಚ್ಚರಿ** (ನಾ). ಅತಿಯಾದ ಸೋಜಿಗ; ಅತ್ಯಾಶ್ಚರ್ಯ: 'ಮಹಚ್ಚರಿಪಡು' ಪರಾ. [< ಮಹಾ + ಅಚ್ಚರಿ$_3$]

**ಮಹಚ್ಚರಿಪಡು** (ಕ್ರಿ). ಅತಿಯಾಗಿ ಸೋಜಿಗಪಡು; ಅತ್ಯಾಶ್ಚರ್ಯಪಡು: ಸುದತಿ ಬಳಿಕಾ ವೃದ್ಧನನು ಕಾಣದೆ ಮಹಚ್ಚರಿಪಡಲು (ಜೈಮಿಣಿ. ೦೪-೩೦). [ಮಹಚ್ಚರಿ + ಪಡು$_1$]

**ಮಹಜರ್** 'ಮಹಜರು' ನೋ.

**ಮಹಜರು**, ಮಹಜರ್, ಮಾಜರು (ನಾ). (ಕೊಲೆ, ಕಳವು ಮುಂತಾದ ಅಪರಾಧಗಳ ವಿಚಾರದಲ್ಲಿ) ತಪಾಸಣೆ ಮಾಡಿದವರೆಲ್ಲರೂ ಸಹಿ ಮಾಡಿದ ವಿವರವಾದ ವರದಿ; ಪಂಚನಾಮೆ: ಆ ಮಹಜರಿಗೆ

ಪಟೇಲನು ದಸ್ತಖಿತ್ತನ್ನು ಹಾಕಿ ಅಲ್ಲಿ ಹಾಜರಿದ್ದವರ ದಸ್ತಖಿತ್ತುಗಳನ್ನು ಹಾಕಿಸಿ . . . ರವಾನಿಸಬೇಕು (ಗ್ರಾಕೂತ. ೩೯) ; ಶವದ ಮಹಜರುಕ್ರಮ ನಡೆಯಬೇಕಾಗಿತ್ತು (ಕಾಪೋಲಿ. ೨೦೨). **ಮಹಜರ್** : ಈ ದಿನ ಮಹಜರ್ ನಡೆಸುತ್ತಾರೆ (ತತ್ರಕೂ. ೦೩೦). **ಮಾಜರು** : ಮಾಜರು ಮಾಡಲು ಪೋಲೀಸಿನವರು ಬರುತ್ತಾರೆಂಬ ಸುದ್ದಿ ಕಾಗೆಬೊಡಿಗೆಸೆದ ಕಲ್ಲಾಗಿತ್ತು (ಕಾಮೂರು. ೯೬).

[←ಅರ. ಮಹ್ಜರ್, ಮಹರ್ಜುರ್; ಹಿಂ. ಮರಾ. ಮಹಜರ್]

**ಮಹಜಿದಿ** 'ಮಸೀದಿ' ನೋ.

**ಮಹಡಿ** 'ಮಾಡ₁' ನೋ.

**ಮಹಡಿಮನೆ** 'ಮಾಡಿಮನೆ' ನೋ.

**ಮಹತಾಪು**, ಮತಾಪು (ನಾ). ೧. ಪ್ರಕಾಶಮಾನವಾಗಿ ಕಿಡಿಗೆದರಿ ಉರಿಯುವ ಒಂದು ಬಗೆಯ ಸುಡುಮದ್ದು: ಬೆಳಗಿದವು ಶತಕೋಟಿ ಪಂಜಿನ ಹೊಳಪಿನೊಳು ಮಹತಾಪುಗಳ ಸದ್ದೆಳಗಿನೊಳು (ಶರಕು. ೦೩-೨೯); ಹಗಲುಬತ್ತಿಯು ಬಾಣ ಬಿರಿಸು ಮಹತಾಪುಗಳು ಬಗೆಬಗೆಯೀಲಾಲುಗಳು ಸಾಲುದೀವಟಿಗೆ (ಕೃಶ.ಶಿ. ೩-೦೦). **ಮತಾಪು** : ೧. ಹೊರಗೆ ಮತಾಪಿನ ಬೆಳಕಿನ ಜತೆಯೊಳು ಹೊಳೆದುವು ತಾರೆಗಳೊಳಗೆ (ಶಂತ್ರ.ಲೀ. ೬-೪೦). ೨. ಒಂದು ಬಗೆಯ ಯುದ್ಧದ ಸಾಧನ : ಸಣ್ಣ ತೋಪುಗಳು, ರಾಮಚಂಗಿಗಳು, ರಾಮಬಾಣಗಳು, ಮತಾಪುಗಳು, ತಾರಾಮಂಡಲ, ಭೂಚಕ್ರ, ರಣಗಾಡಿಗಳು ಮೊದಲಾದ ಯುದ್ಧೋಪಕರಣಗಳನ್ನೆಲ್ಲ ಎಣಿಸಿದುದಾಯಿತು (ಐಕ್ಯರು. ೦೨).

[←ಪಾರ. ಹಿಂ. ಮಾಹತಾಬ್; ಮರಾ. ಮಹತಾಪ್, ಮಾಹತಾಬ್]

**ಮಹತಿ₁** (ನಾ). ೧. ಹಿರಿಮೆ ; ಘನತೆ ; ಮಹತ್ವ: ಕಡುತಪವನ್ನು ಮಾಡಿದ ಪುಣ್ಯಫಲದಿಂದ . . . ಮೂಜಗದೊಡೆಯನೇ ನಿನ್ನಡಿಯ ದರುಶನ ಪಡೆದ ಮೂಲಕ ನಮಗೆ ದೊರೆಯಿತು ಮಹತಿ ಪೆರ್ಚಿದುದು (ಹಾರ್ದಿಕ. ೩-೦೬) ; ಕಾವ್ಯದ ಮಹತಿಯೂ ಇದೇ ಮಾತನ್ನು ಹೇಳಿದೆ (ಕಪೀಠ. ೪೨೨). ೨. ಒಂದು ಬಗೆಯ ಬಿಕ್ಕುಳುರೋಗ : ಬಿಕ್ಕುಳು ರೋಗವು ಅನ್ನಜೆ, ಕ್ಷುದ್ರಜೆ, ಮಹತಿ, ಯಮಳೆ, ಗಂಭೀರೆ ಎಂದು ಐದು ತೆರನು . . . ಮಹತಿ ಎಂಬ ಬಿಕ್ಕುಳು ಬರುತ್ತಲೆ ಎಚ್ಚರಮಂ ತಪ್ಪಿಸಿ ವಾಕ್ಯನು ಸ್ತಂಭಿಸುವುದು (ಸಕಪ್ಪ. ೨೯೦). [<ಸಂ. ಮಹತ್]

**ಮಹತಿ₂** (ನಾ). ೧. ಒಂದು ಬಗೆಯ ವೀಣೆ. ೨. ಏಳುತಂತಿಗಳುಳ್ಳ ನಾರದನ ವೀಣೆ : ಮಹತೀ-೧ ನಾರದನ ವೀಣೆ. ಅಧಿಕವಾದ್ದು ೨ (ಸಿದ್ಧಾಂತಿ. ೩೯೦) : ಸರಸ್ವತಿ 'ಕಚ್ಛಪಿ' ಎಂಬ ವೀಣೆಯನ್ನೂ ನಾರದರು 'ಮಹತೀ' ಎಂಬ ವೀಣೆಯನ್ನೂ ನುಡಿಸುತ್ತಿದ್ದರೆಂದು ಇತಿಹಾಸ ಪುರಾಣಗಳು ತಿಳಿಸುತ್ತವೆ (ಸಂಗೀತಸಂ. ೪೦೦). ೩. ಒಂದು ಬಗೆಯ ಸಸ್ಯ ; ಹೆಗ್ಗುಳ್ಳದ ಗಿಡ.

[ಸಂ. ಮಹತೀ]

**ಮಹತೋಮಹೀಯ** (ನಾ). ಪೂಜ್ಯರಲ್ಲಿ ಪೂಜ್ಯನಾದವನು ; ಸರ್ವ ಶ್ರೇಷ್ಠ : ಅವನೊಬ್ಬನೆಣೋರಣೀಯನದಾವನುರುಮಹತೋಮಹೀಯನು (ಶುಪ್ರಾ.ಅ. ೬-೬೬) ; ಅಣೋರಣೀಯನ ಮಹತೋಮಹೀಯನ ಅಪ್ರಮೇಯನ ಅಡಿಸಿವಳಿಸೋದೆ (ತುರಂದ. ೯-೦೬೬-೨).

[ಸಂ. ಮಹತೋಮಹೀಯಸ್]

**ಮಹತ್ಕಾರ್ಯ** (ನಾ). ದೊಡ್ಡ ಕೆಲಸ ; ಭಾರಿಕಾರ್ಯ : ಅವನ ಮಹತ್ಕಾರ್ಯಗಳೆಲ್ಲವನ್ನೂ ಪಟ್ಟಿಮಾಡಿ ಹೇಳುವುದು ಸಾಧ್ಯವಿಲ್ಲ (ವೀಕನ್ನ. ೨೯). [ಸಂ.]

**ಮಹತ್ತತ್ತ್ವ** (ನಾ). ೧. [ತತ್ತ್ವಶಾ] ಸಾಂಖ್ಯರು ಹೇಳಿರುವ ಇಪ್ಪತ್ತೈದು ಪದಾರ್ಥಗಳಲ್ಲಿ ಎರಡನೆಯದು ; ಮೂಲಪ್ರಕೃತಿಯಿಂದ ಹುಟ್ಟುವ ತತ್ತ್ವ : ತತ್ತ್ವನಿಪ ವಾಚ್ಯದಲಿ ಶಬಲತೆವೆತ್ತ ಬ್ರಹ್ಮದಲಾಯ್ತು ಸದಸದ್ವ್ಯಕ್ತಿಯಾದವ್ಯಕ್ತವದಱಿಂದೀ ಮಹತ್ತತ್ತ್ವ (ಅಧ್ಯಾ.ಕ. ೪-೦೦) ; ಅಹಂಕಾರತತ್ತ್ವವುಂ ಮಹತ್ತತ್ತ್ವವುಂ ಕೂಡಿ ಇರ್ಪತ್ತುಮೂಱುಂ ತತ್ತ್ವಂಗಳುಂ ಪ್ರಕೃತಿಯೊಳಡಂಗಿ (ಶಿಕಬ. ೦೦). ೨. [ವಿಶಿಷ್ಟಾ] ಇಪ್ಪತ್ತುದ್ರವ್ಯಗಳಲ್ಲಿ ಒಂದು : ಗುಣತ್ರಯ, ಮಹತ್ತತ್ತ್ವ, ಅಹಂಕಾರ . . . ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಶಾ. ೨೮೩). [ಸಂ.]

**ಮಹತ್ತಮ** (ನಾ). ೧. ಅತ್ಯಧಿಕವಾದುದು : ಇದು ಚಕ್ರಯುಗ ಕ್ಕಗಲ್ಲುಲಿಕ್ಕಿದ ಕಿಸುರ್ವಕ್ಕಿ ಕರ್ವೊಗೆಯೆನಿಪ್ಪನಮಾಯ್ತು ಮಹತ್ತಮಂ ತಮಂ (ಕಂಪ್ರಪು. ೬-೦೯). ೨. ಹಿರಿಯ : ಶ್ರೇಷ್ಠ : ಪ್ರತ್ಯಯವನಿನ್ನಬಸಲೇಕೆ ಮಹತ್ತಮನೆಸರ ಪುಣ್ಯನಾಮದ ಕೀರ್ತನದ ಮಹಾತ್ಮ್ಯವನು ದಿಟ ನೀವೆ ಕಂಡಿರಲ್ತೆ (ಭಾಗ. ೩-೩-೩೦).

**ಮಹತ್ತಮಸಾಮಾನ್ಯಅಪವರ್ತನ** = [ಗಣಿತ] ಎರಡು ಅಥವಾ ಅಧಿಕ ದತ್ತಸಂಖ್ಯೆಗಳೆಲ್ಲವನ್ನೂ ಭಾಜಿಸತಕ್ಕ ಅತ್ಯಧಿಕ ಅಪವರ್ತನ : ಎರಡು ಅಥವಾ ಅಧಿಕ ದತ್ತಸಂಖ್ಯೆಗಳೆಲ್ಲವನ್ನೂ ಭಾಜಿಸತಕ್ಕ ಅತ್ಯಧಿಕ ಅಪವರ್ತನಕ್ಕೆ ಅವುಗಳ ಮಹತ್ತಮ ಸಾಮಾನ್ಯ ಅಪವರ್ತನ (ಮ.ಸಾ.ಅ.) ಎಂದು ಹೆಸರು (ಕಶಿಶಾ. I, ೩). [ಸಂ.]

**ಮಹತ್ತರ** (ಗು). ೧. ಅತಿಶಯವಾದ ; ಮಿಗಿಲಾದ : ಪಾರ್ಕಿಸೀಮೆಯಂ ದಾಂಟುತಾ ಮಹಾಕಾಂಕ್ಷೆಯ ಮಹತ್ತರಪ್ರಾರ್ಥನಾಪ್ರದಂ ದೀರ್ಘಭಾವ ಪ್ರವಾಹದ ಮೌನಮಾತ್ರದಲಿ ಪರಿಣಮಿಸಿದತ್ತು ! (ಕಶ್ರಾಂ. ೨೬-೨೦೬); ಪತಿಯ ಮಹತ್ತರ ಬದಲಾವಣೆ ಅವಳಿಗೊಂದು ದೊಡ್ಡ ಸಮಸ್ಯೆ (ಕಬ್ಬಕಿ.೬೬). (ನಾ). ೨. ಹಿರಿದಾದುದು ; ಶ್ರೇಷ್ಠವಾದುದು : ದೇಶವ್ಯಾಪ್ತಿಯಿಂದ ಅಣು, ಮಹತ್, ಮಹತ್ತರ ಮೊದಲಾದ ವ್ಯವಹಾರಗಳು ಕೂಡುವುವು (ಹಿಂದಶಾ. ೬೦); ಅವರು ಸಾಧಿಸಿದ ಕಾರ್ಯ ಅತಿ ಮಹತ್ತರವಾದುದು (ದರ್ಶನಾ. ೦೩೯). ೩. ಗೌರವಕ್ಕೆ ಪಾತ್ರನಾದವನು ; ಶ್ರೇಷ್ಠ ; ಹಿರಿಯ : ಸುಮತಿಯೆಂಬ ಮಂತ್ರಿಮಹತ್ತರನಿಂತೆಂದಂ (ಶಾಂತಿಪು. ೩-೬೨ ವ) ; ಕೂಡೆ ಶಾಶಾಂಕಿಮಂದಿರದೊಳ್ ಪೂರ್ಣಸಂಪ್ರತ್ನಸೂನ ಪರಿವಾರಂ ಸೌಖ್ಯಯುಕ್ತಂ ಮಹತ್ತರಂ . . . ಅಕ್ಕಂ ನರಂ (ಜಾತಕ. ೦೬-೨೭). ೪. ಮುಖ್ಯಾಧಿಕಾರಿ ; ಹೆಗ್ಗಡೆ : 'ಮಹತ್ತರಿಕೆ₁' ಪರಾ. [ಸಂ.]

**ಮಹತ್ತರದೇವಿ** (ನಾ). [ಜೈನ] ಹದಿನಾರು ಕಲ್ಪಗಳಲ್ಲಿದ್ದು, ಆಯಾ ವಿಮಾನಗಳಲ್ಲಿ ಹುಟ್ಟುವ ಭವ್ಯಜೀವಿಗಳಿಗೆ ತಿಳಿವಳಿಕೆಯನ್ನು ಕೊಡುವ ಹದಿನಾರು ಜನಸಾಮಾನಿಕದೇವತೆಯರಲ್ಲಿ ಪ್ರತಿಯೊಬ್ಬಳು : ಬಿಡುಮುತ್ತಿನ ಸೇಸೆಗಳುಂಬೆರಸು ಮಹತ್ತರದೇವಿಯರ್ ಬಂದು ಪೊಡೆವಟ್ಟು (ಆದಿಪು. ೩-೬೬ ವ). [ಸಂ. ಮಹತ್ತರದೇವೀ]

**ಮಹತ್ತರಿ** (ನಾ). ಆಶೀರ್ವಾದ, ಸ್ವಸ್ತಿವಾಚನಗಳನ್ನು ತಿಳಿದಿರುವ ವೃದ್ಧಸ್ತ್ರೀ : ಕೆಲರಂ ದೌವಾರಿಕಸ್ಥಾನದೊಳ್ ಕೆಲರಂ ಜಾಣ್ನುಡಿಯೊಳ್ ಮಹತ್ತರಿಯರಂ ಮಾದೇವಿಯಪ್ಪೈಸಿದಳ್ (ಚಾರಪು. ೬-೬೩).

[ಸಂ. ಮಹತ್ತರೀ]

**ಮಹತ್ತರಿಕೆ₁** (ನಾ). ಮುಖ್ಯಾಧಿಕಾರಿಯ ಪದವಿ ; ಹೆಗ್ಗಡೆತನ : ದಂಡನಾಯಕಂಭೂಪಾಲತನನ್ನವುರ ಮಹತ್ತರಿಕೆಯು ಸಮ್ಮರಸರ (ಶಾಸಕ. ೯೯-೦೩; 1164). [ಮಹತ್ತರ + -ಇಕೆ]

**ಮಹತ್ತರಿಕೆ₂** (ನಾ). = ಮಹತ್ತರದೇವಿ : ವಿಕಟಕೂಟಾಧೀಶೆಯರಪ್ಪ ರುಚಕರುಚಕಾಸ್ತೆ ರುಚಕಾಂತೆರುಚಕಪ್ರಭೆಯೆಂಬೀ ನಾಲ್ವರುಂ ದಿಕ್ಕುಮಾರಿಕಾ ಮಹತ್ತರಿಕೆಯರುಮಂ ಧರ್ಮಾನುರಾಗದಿಂ ಸೌಧರ್ಮೇಂದ್ರಂ . . . ಮಹತ್ತರಿಯರಾಗಲು ಬೆಸಸುವುದುಂ (ಆದಿಪು. ೭-೩ ವ).

[ಸಂ. ಮಹತ್ತರಿಕಾ]

**ಮಹತ್ತು** (ಗು). ೧. ಹಿರಿಯದಾದ ; ಶ್ರೇಷ್ಠವಾದ. (ನಾ). ೨. ಹಿರಿದು ; ಶ್ರೇಷ್ಠವಾದುದು : ಅಣುವಿಂಗೆ ಅಣು ಮಹತ್ತಿಂಗೆ ಮಹತ್ತಾದ ಮಹಾಲಿಂಗದೊಳಗೆ ಶರಣನಿರ್ಪನು (ಅಪಂದೇ. ೩೩೭–೪೭) ; ಮಹತ್ತು ಮಹತ್ತನ್ನು ಗುರುತಿಸುತ್ತದೆ (ಕೊನ್ನಳು. ೦೦೮). ೩. ಶಾಕ್ತ ಮತದ ಇಪ್ಪತ್ತುನಾಲ್ಕು ತತ್ತ್ವಗಳಲ್ಲಿ ಒಂದು : ಐದು ಭೂತಗಳು . . . ಅಹಂಕಾರ, ಮಹತ್ತು, ಮೂಲಪ್ರಕೃತಿ – ಇವೇ ಇಪ್ಪತ್ತನಾಲ್ಕು ತತ್ತ್ವಗಳು (ಶಾರದ. ೨೨೨). [ಸಂ. ಮಹತ್]

**ಮಹತ್ತ್ವ** (ನಾ). ೧. ಹಿರಿಮೆ ; ಘನತೆ ; ಶ್ರೇಷ್ಠತೆ : ಅಜಂಗಂ ಜನಕಂ ರಕ್ಷಕನಂತಕನೆನಿಸಿದೆ ಕೇಳ್ ಪೊಗಟ್ವರಳವೆ ನಿನ್ನ ಮಹತ್ತ್ವಂ (ಜಗಾ. ೩-೯೭). ೨. ಸಾಮರ್ಥ್ಯ. ೩. ಪ್ರಾಮುಖ್ಯತೆ : ಆ ಸಣ್ಣ ವಿಷಯಕ್ಕೆ ಯಾಕೆ ಮಹತ್ತ್ವ ಕೊಡಬೇಕು ? (ರೂಢಿ). [ಸಂ.]

**ಮಹತ್ಪಂಚಮೂಲ** (ನಾ). [ವೈದ್ಯಶಾ] ಬೆಲ್ಲವತ್ತ, ನರುವಲ, ಶಿವನಿ, ಪಾದರಿ ಮತ್ತು ಹೆಮ್ಮರ ಈ ಐದು ಬಗೆಯ ಮರಗಳ ಔಷಧೀಯ ಗುಣವುಳ್ಳ ಬೇರುಗಳು : ಬೆಲ್ಲವತ್ತದ ಬೇರು, ನರುವಲದ ಬೇರು, ಶಿವನಿಬೇರು, ಪಾದರಿಬೇರು ,ಹೆಮ್ಮರದ ಬೇರು ಇವು ಮಹತ್ಪಂಚಮೂಲ ವೆನಿಸಿಕೊಂಬುವು (ವೈದ್ಯಶಾ. I, ೩೩). 'ಮಹಾಪಂಚಮೂಲ' ಪರ್ಯಾ. [ಸಂ.]

**ಮಹತ್ವ** (ನಾ). ೧. = ಮಹತ್ತ್ವ ೧ : ವೇದೋಪನಿಷತ್‌ಕಾಲದ ಸಂಸ್ಕೃತಕ್ಕೂ ಅನಂತರದ ಸಂಸ್ಕೃತಕ್ಕೂ ಹೋಲಿಸಿದಾಗ, ಈ ಮಾತಿನ ಮಹತ್ವ ಮನವರಿಕೆಯಾಗುತ್ತದೆ (ದ್ರಾಹಿ. ೪೩೩). ೨. ದೊಡ್ಡದು : ಹಿರಿದು : ನಾವೊಂದು ಮಹತ್ವದ ಕೆಲಸದಲ್ಲಿ ತೊಡಗಿದ್ದೇವೆ (ರೂಢಿ). ೩. = ಮಹತ್ತ್ವ ೨ : ದೇವತಾತ್ಮನಾದ ಸವಿತೃವಿನ ಸಂಚಾರಮಾರ್ಗ ವನ್ನೇ ಅನುಸರಿಸಿ ಇತರ ದೇವತೆಗಳೆಲ್ಲರೂ ಶಕ್ತಿಯೊಡಗೂಡಿದ ಮಹತ್ವ ವನ್ನು ಪಡೆಯುತ್ತಾರೆ (ಋಗ್ಭಾರ. ೦೭೦). ೪. ಪ್ರಾಮುಖ್ಯತೆ : ಅವರು ಅವಳ ಮಾತಿಗೆ ಹೆಚ್ಚಿನ ಮಹತ್ವ ಕೊಡಲಿಲ್ಲ (ಕಳ್ಳಹಾ. ೦೦೮). [<ಸಂ. ಮಹತ್ತ್ವ]

**ಮಹತ್ವತೆ** (ನಾ). ಹಿರಿಮೆ ; ಘನತೆ : ದೇವ ನಿಮ್ಮ ಮಹತ್ವತೆಯನಾ ದೇವದೇವನೆ ಬಲ್ಲನು (ಬಸವು. ೩೯–೭೨). [<ಸಂ. ಮಹತ್ತ್ವ ತಾ]

**ಮಹತ್ವಾಕಾಂಕ್ಷಿ** (ನಾ). ಹಿರಿದಾದ ಆಸೆಯುಳ್ಳವನು ; ಮಹತ್ತರ ವಾದ ಆಕಾಂಕ್ಷೆಯುಳ್ಳವನು : ಅವರನ್ನೆಲ್ಲಾ ನಾನು ಅರಿಯಬೇಕು ಎನ್ನುವಷ್ಟು ಮಹತ್ವಾಕಾಂಕ್ಷಿ ನಾನಲ್ಲ (ಮೂಕಜ್ಜಿ. ೨೭೧). [<ಸಂ. ಮಹತ್ತ್ವಾಕಾಂಕ್ಷಿನ್]

**ಮಹತ್ವಾಕಾಂಕ್ಷೆ** (ನಾ). ಮಹತ್ವಪೂರ್ಣವಾದ ಆಸೆ ; ದೊಡ್ಡ ಅಪೇಕ್ಷೆ : ನನ್ನ ಮಹತ್ವಾಕಾಂಕ್ಷೆಯು ಇಷ್ಟು ದೂರ ಎಂದೆಂದಿಗೂ ಓಡಲಾರದು (ನೃಶಹ. ೦೨). [< ಸಂ. ಮಹತ್ತ್ವಾಕಾಂಕ್ಷಾ]

**ಮಹದುದ್ಯಮ** (ನಾ). ೧. ದೊಡ್ಡಪ್ರಯತ್ನ ; ಮಹಾಯತ್ನ. ೨. ಮಹಾಸಾಹಸಿ ; ಮಹಾಪ್ರಯತ್ನಶೀಲ : ಆಕೆಯ ಸುತರು ಮಹದುದ್ಯಮರು (ಕುಮಾ. ಉ. ೬–೨೦). [ಸಂ.]

**ಮಹದ್ಬ್ರಹ್ಮಚರ್ಯ** (ನಾ). ೧. ಶ್ರೇಷ್ಠವಾದ ಬ್ರಹ್ಮಚರ್ಯ. ೨. [ಜೈನ] ಉಪಾಸಕಗುಣಸ್ಥಾನಗಳೆಂದು ಪ್ರಸಿದ್ಧವಾಗಿರುವ ಹನ್ನೊಂದನೆ ಬಗೆಯ ಸಾಧನೆಗಳಲ್ಲಿ ಒಂದು : ಸಮ್ಯಕ್ತ್ವಂ ಸದ್ವ್ರತೌಘಂ . . . ಮಹದ್ಬ್ರಹ್ಮಚರ್ಯಂ . . . ಭೂಮ್ಯುದ್ದಿಷ್ಟಪ್ರದೇಶ ತ್ಯಜನಮುಮಿವುದೇಕಾದಶಂ ಖೇಚರೇಂದ್ರಾ (ಶಾಂತಿಪು. ೭–೩೦). [ಸಂ.]

**ಮಹನವಮಿ** 'ಮಹಾನವಮಿ' ನೋ.

**ಮಹನೀಯ** (ಗು). ೧. ಗೌರವಕ್ಕೆ ಪಾತ್ರವಾದ : ಸುಪ್ರಸಿದ್ಧ ವಾದ : ಅಂತಮೇಯಮಹನೀಯಮಹಿಮನುಂ ಕುಂತಳರಾಜ್ಯಲಕ್ಷ್ಮೀ ಲತಾವಸಂತನುಂ . . . ಎನಿಸಿದ . . . ಮಧುವಪರಸಂ ನಿಜಜನಕನೆನಿಸಿದ (ಕಇಅ. ೩–೨–೦೯೨ ; 1058) ; ನಿನ್ನ ಮಹನೀಯಪ್ರಬಲಿತೋತ್ಸನ್ನನಿಜ ಗುರುಭಕ್ತಿಯುತಮಹಿಮೋನ್ನತಿಕೆಯನದಾರು ಬಲ್ಲರು (ಬಸವು. ೩೯–೭೭). (ನಾ). ೨. ಮನ್ನಣೆಗೆ ಪಾತ್ರನಾದವನು ; ಕೀರ್ತಿವಂತ. [ಸಂ.]

**ಮಹನೃಪತಿ** (ನಾ). ಮಹಾರಾಜ ; ದೊಡ್ಡಅರಸ : ಆ ನಾಚಿದಣ್ಣ ನಾಥನನೂನಗುಣಂ ಚಕ್ರವರ್ತ್ತಿದಯೆಯಿಂ ಬೆಸಸಲು ತಾನೇಯು[ಮಾ] [ಮಹ]ನೃಪತಿಗೆ ಮಾನಸನೆನೆ ನಿಖಿಳಮಂತ್ರಿಪದಮಂ ತಳೆದ (ಎಇ. XXVIII. ೩೪–೨೯; 1082). [< ಸಂ. ಮಹಾನೃಪತಿ]

**ಮಹಬೂಬಿ** (ನಾ). ಒಂದು ಚಿನ್ನದ ನಾಣ್ಯ : "ಐದುಸಾವಿರ ಮಹ ಬೂಬಿ. ಕೊಡುವೆಯಾ ?" ಎಂದನು. (ಮಹಬೂಬಿ ಎಂದರೆ ಚಿನ್ನದ ನಾಣ್ಯ. ಸುಮಾರು ಹತ್ತು ರೂ. ಬಾಳುವುದು) (ದೇಶಾಂಶ. ೪೯). [← ಅರ. ಹಿಂ. ಮಹಬೂಬಾ = ಪ್ರೇಯಸಿ]

**ಮಹಮನೆ** 'ಮಹಾಮನೆ' ನೋ.

**ಮಹಮೇರು** (ನಾ). ದೊಡ್ಡದಾದ ಮೇರುಪರ್ವತ ; ಮಹಾಮೇರು : ಅಂದು ಮಹಮೇರುಶೃಂಗದ ಕೆಳಗಣಂತರದೊಳೊಂದುಗುಹೆಯೊಳಗಿರ್ದು ಮಾತಾಡುತಿರೆ ಪಂಚಸುರವರರು ತಂತಮ್ಮೊಳು (ತುರಂಗ. ೯೩-೦೩). [< ಸಂ. ಮಹಾಮೇರು]

**ಮಹಮ್ಮದೀಯ** 'ಮುಹಮ್ಮದೀಯ' ನೋ.

**ಮಹರಾಜ** (ನಾ). ೧. ದೊಡ್ಡರಾಜ : (೩). ೨. ಅಡುಗೆಮಾಡುವವನು ; ಅಡುಗೆಭಟ್ಟ : ದೇಸಾಯರಿಗಾಗಿ ವಿಮಲೆಯು ಮಹರಾಜನನ್ನು ಕರೆದು ಅಡಿಗೆ ಮಾಡಿಸಿದಳು (ಸಮಚಿ. ೩೨೯). [←ಹಿಂ. ಮಹರಾಜ್, ಮಹಾರಾಜ್. / ಸಂ. ಮಹಾರಾಜನ್]

**ಮಹರಾಯ** 'ಮಹಾರಾಯ' ನೋ.

**ಮಹರಾಯತಿ** 'ಮಹಾರಾಯಿತಿ' ನೋ.

**ಮಹರ್ಧಿಕ** (ನಾ). ತುಂಬ ಪ್ರಭಾವವುಳ್ಳವನು : ಭಾಸುರದೇವಕೋಟಿ ವಿಭುವಪ್ಪ ಮಹರ್ಧಿಕನಪ್ಪ ವಾಸವಂಗಾಸನಕಂಪಮಂ ಪಡೆದು (ಆದಿಪು. ೦೭-೬೦) ; ನಿಡಿಗನುಂ ರಾಜಕಪೋತಮುಂ . . . ಮುಡುಪಿ ಭವನಾಮರ ಲೋಕದೊಳ್ ಮಹರ್ಧಿಕರವರಾದರ್ (ಶಾಂತಿಪು. ೯–೯೪ ವ). [ಸಂ.]

**ಮಹರ್ಲೋಕ** (ನಾ). ಏಳು ಊರ್ಧ್ವಲೋಕಗಳಲ್ಲಿ ನಾಲ್ಕನೆಯದು : ಪರಮಜಂಗಮದಲ್ಲಿ ಹದಿನಾಲ್ಕುಲೋಕಂಗಳಡಂಗಿದವು. . . ವಕ್ಷದಲ್ಲಿ ಮಹರ್ಲೋಕ (ಅಪಂದೇ. ೦೪೨–೦೨೪). [ಸಂ.]

**ಮಹರ್ಷಿ** (ನಾ). ಶ್ರೇಷ್ಠನಾದ ಋಷಿ : ಮಹಾತಪಸ್ವಿ : ಶ್ರೀರಾಮ ಕಥೆಯಂ ಮಹರ್ಷಿ ನಾರದವೀಣೆಯಿಂ ಕೇಳ್ದು (ಶ್ರೀರಾಮಾ. ೦-೦); ಮಹರ್ಷಿ ಗಳ ಸಂದೇಶವನ್ನು ಲೋಕಕ್ಕೆ ಪ್ರಕಾಶಪಡಿಸುವವರಾದ್ದರಿಂದ ವ್ಯಾಖ್ಯಾ ಕಾರರ ಪ್ರಭಾವವೂ ಅತಿಶಯವಾದದ್ದು (ಋಗ್ಭಾರ. ೯೯ ಪೀಠಿ). [ಸಂ.]

**ಮಹಲ್** 'ಮಹಾಲು' ನೋ.

**ಮಹಲಕರಿ** 'ಮಹಾಲಕರಿ' ನೋ.

**ಮಹಲದಾರ** (ನಾ). ಮಹಲಿನ ಮೇಲ್ವಿಚಾರಣೆಯನ್ನು ನೋಡಿ ಕೊಳ್ಳುವ ಅಧಿಕಾರಿ : ಚೋಪದಾರ, ಮಹಲದಾರ, ನಖೀಬ . . . ಸಂಗೀತಗಾರ ಮುಂತಾದವರು (ಮಹಾಮಂ. I. ೨೨೮) : ಒಂದು ದಿನ ಅಲಿಆದಿಲ್‌ಷಾಹನ ಮಹಲದಾರನು . . . ತಾನು ಬಂದಿರುವ ವಿಷಯ ವನ್ನು ಅರಸರಿಗೆ ಹೇಳಿ ಕಳುಹಿಸಿದನು (ಬಿಜ್ಜರು. ೦). [ಮಹಲ್ (< ಮಹಾಲು) + – ದಾರ್]

**ಮಹಲು** 'ಮಹಾಲು' ನೋ.

**ಮಹವುರುಮೆ** (ನಾ). ಒಂದು ಬಗೆಯ ದೊಡ್ಡವಾದ್ಯ : ಸುಸ್ವರಪೂರಿತ ಮಹವುರುಮೆಗಳಚಿಚ್ಚಿದುವಾಗ (ಬೋಧಕ. ೩–೦೭). [< ಮಹಾ + ಉರುಮೆ]

**ಮಹಸೂಲು** (ನಾ). ೧. ಕಂದಾಯ ; ತೆರಿಗೆ ; ಸುಂಕ : ಈ ಮಹಸೂಲಿನಲ್ಲಿ ಸ್ಥಳ ಖರ್ಚು ಹೋಗಲಾಗಿ ಬಾಕಿ . . . ವಸೂಲು ಮಾಡಿಕ್ಕೊಂಡು (ಮಹಾಪಂ. II. ೬೬); ಸರಕುಗಳ ಮೇಲೆ ಸುಂಕ ತೆಗೆದುಕೊಳ್ಳಬೇಕೆಂಬ ಅರ್ಥವುಳ್ಳ ರೆವಿನ್ಯೂ—ಆಕ್ಟು (ಮಹಸೂಲು ಖಾತೆಯ ಸಂಬಂಧದ ಆಕ್ಟು) (ಇಂಗ್ಲಂಡ. ೨೦೬). ೨. ಜಮೀನಿನಿಂದ ಬರುವ ಆದಾಯ.–ಹುಟ್ಟುವಳಿ: ಕೋರುಪಾಲನ್ನು ಗೌಡರಿಗೆ ಮುಟ್ಟಿಸಿ ತನ್ನ ಪಾಲಿನ ಮಹಸೂಲಿನಲ್ಲಿ ಮಿತವ್ಯಯದಿಂದ ಜೀವನ ಸಾಗಿಸಿ ಮಾಯಪ್ಪ . . . ಖಾತೇದಾರನಾಗಿದ್ದ (ಮಬಿಪ. ೦೦೯). [←ಅರ. ಹಿಂ. ಮರಾ. ಮಹಸೂಲ್]

**ಮಹಸೂಲುದಾರ** (ನಾ). ಕಂದಾಯವನ್ನು ವಸೂಲು ಮಾಡುವವನು : (೬). [ಮಹಸೂಲು + –ದಾರ್ೖ./ ಹಿಂ. ಮಹಸೂಲದಾರ್=ಕಂದಾಯವನ್ನು ತೆರುವವನು]

**ಮಹಳ, ಮಾಹಳ, ಮಾಳ್ಯ, ಮಾಳಯ** (ನಾ). ೧. ಭಾದ್ರಪದ ಕೃಷ್ಣಅಮಾವಾಸ್ಯೆ ಮತ್ತು ಅಂದು ಸರ್ವಪಿತೃಗಳಿಗೆ ಮಾಡುವ ಶ್ರಾದ್ಧ : "ಮಹಳ—ಮಹಾಲಯ = ಒಂದು ಪಿತೃಹಬ್ಬ" (ಶಬ್ದಕೋ. ೩೯) ; ಮಹಳದ ಪಕ್ಷದೊಳೊಂದುದಿವಸಂ . . . ಆತಂಕೋಪ್ಷಂಬರ ಮುಂಡೊಯ್ಯನೆ ಪಾರ್ವಂ ಬಂದಾ ಕೊಡನ ಕೆಟಗೆ ಪಟ್ಟದಿರ್ಗಳ್ (ಕಂಕಕಂ. ೦೮೫–೨೩) ; ಎರ್ಮೆಯ ಪೋರಿಯನಿಕ್ಕಿದನೂಮಾರ್ಗೆ ಮತ್ತ ಮದನೆ ಮಹಳಕ್ಕೆತ್ತಂ (ಯಶೋಚ. ೩-೫೬). **ಮಾಹಳ** : ೧. ಮಾಹಳ ಪಿತೃಕಾರ್ಯಂ ಮೊದಲಾದ ನಿಮಿತ್ತಂಗಳಂ ಮಾಟ್ಪಲ್ಲಿ (ಶಬಾರ. ೯). ೨. ಅಮಾವಾಸ್ಯೆಯ ಸಮಯ (?) : ನೆಟಲೊಳ್ ತಲೆಗಾಣದೊಡಂ ನೆಟಲೊಳ್ ರೌ(ಭ)ದ್ರಂಗಳಾಗಿ ತೋಱುವೊಡಂ ಮಾಹಳವಲ್ಲದೆ ಕಂಡುವೊಡಂ ಕಟಿಯೆ ಕರಂ ರೂಪುಗೆಟ್ಟಿರಲ್ ಮರಣಭಯಂ (ಅಕ್ಕಶಾ. ೬–೩೫). **ಮಾಳ್ಯ** : ೧. "ಮಾಳ-ಮಹಾಲಯ" (ಶಬ್ದಕೋ. ೩೫) ; ಸೂಳೆಯ ಮಗ ಮಾ[ಪಾಠಾಂ. ಮಹ]ಳವ ಮಾಡಿದರೆ ತಾಯ ಹೆಸರಾಯಿತಲ್ಲದೆ ತಂದೆಯ ಹೆಸರಿಲ್ಲ (ಬಸವ. ೨೨೬) ; ಹಾರುವ ಮಾಳವ ಕಂಡಂತೆ . . . ತಾನು ಚನ್ನಬಸವಣ್ಣನ ಪಾದಕಮಲವ ನೋಡಿ ಹರುಷಿತನಾದೆ (ಸಿದ್ಧಶ. ೨೦-೦೦೯) ; ಮರುಳುಹಾರುವರು . . . ಮಾಳದ ಮನೆಯ ಓರಿದು ಚೌಕದ ಮಣಿಯು ಕುಳಿತುಂಬ ವಿದ್ಯೆಯನ್ನರಿವಿರಲ್ಲದೆ ನಿಮಗೆ ತಿಳಿಯದೀ ಸಂಗರದ ಮಾತು (ತುರಂಗ. ೩೬–೦೩). **ಮಾಳಯ** : ೧. ಭಟನಲ್ತು ಭಟ್ಟಂ ; ಕೊಂದುದು ಬಿಲ್ಲಲ್ತು ಪುಲ್ ; ಬಂದುದು ಕಾಳಿಗದ ಮೊನೆಗಲ್ತು ಮಾಳಯದ ಮನೆಗೆಂದಂ (ಗದಾಯ. ೯೨-೦೬). [< ಸಂ. ಮಹಾಲಯ]

**ಮಹಳಪಕ್ಷ, ಮಾಳಪಕ್ಷ** (ನಾ). ಭಾದ್ರಪದ ಬಹುಳಪಕ್ಷ.– ಕೃಷ್ಣಪಕ್ಷ: ಮುನ್ನಮೆ ಸತ್ತರಂ ಪಿತರ ಪಿತಾಮಹರ್ಕಳೆಂದವರ್ಗೆ ಮಹಳ [ಪಾಠಾಂ.ಮಹಾ] ಪಕ್ಷದೊಳ್ಪಂಚಭಕ್ಷ್ಯ ಪಾಯಸತುಪ್ಪಮಂ ಪೆಱಗಿಕ್ಕೆ ಸ್ವರ್ಗಮಾದನೇಕ ಗತಿಗಳೊಳಿರ್ದ ಪಿತಾಮಹಾಪಿತರ್ಕಳ ಬಸಿರ್ತೀವಲಕ್ಕು ಗಡಂ (ಧರ್ಮಪ. ೯-೬೨ ಪ) ; ಬೌದ್ಧಂ . . . ಯಜ್ಞವಿಧಿಯೊಳಂ ಮಹಳಪಕ್ಷದೊಳಂ ಪಿತೃಕಾರ್ಯದೊಳಂ ವಿವಾಹೋತ್ಸವದೊಳಂ ಪಶು ಮೊದಲಾಗೊಡೆಯ ಪ್ರಾಣಿಗಳಂ ಕೊಂದವಶ್ಯಂ ತಿನಲಕ್ಕುಂ (ರಕ್ಷಿಪ. ೦–೦೦ ಪ). **ಮಾಳಪಕ್ಷ** : ಭಾದ್ರಪದಕೃಷ್ಣಪಕ್ಷವನ್ನು 'ಮಾಳಪಕ್ಷ' ಎಂದು ಕರೆಯುವರು (ಹುಬ್ಬಹ. ೬೨). [ಮಹಳ + ಪಕ್ಷ]

**ಮಹಾ** (ಗು). ೧. ದೊಡ್ಡ ; ಹಿರಿಯ : 'ಮಹಾಪರಿಷೆ', 'ಮಹಾಮಂಗಳಾರತಿ' ಪರಾ. ೨. ಶ್ರೇಷ್ಠ ; ಉತ್ಕೃಷ್ಟ : 'ಮಹಾಪಾರುವ' ಪರಾ. ೩. ಸಮೃದ್ಧವಾದ ; ಹೆಚ್ಚಾದ : 'ಮಹಾಬೆಳಗು' ಪರಾ. (ನಾ). ೪. ದೊಡ್ಡದು ; ಮಹತ್ತ್ವವಾದುದು : ಇದೇನು ಮಹಾ ! ಅಪ್ಪ ಹೋಗುವುದಕ್ಕೆ ಆಗದಿದ್ದರೆ ನಾನೇ ಹೋಗುತ್ತೇನೆ (ಕಂಠಪು. ೦); ಅದೇನು ಮಹಾ ! ಯಾರು ಬೇಕಾದರೂ ಆ ಕೆಲಸವನ್ನು ಮಾಡಬಹುದು (ರಜಾ). ೫. ಬಹಳ ; ತುಂಬ ; ಹೆಚ್ಚು : P ಈ ರೂಪವು ಕೆಲವು ಸಲ ಕನ್ನಡಶಬ್ದಗಳೊಡನೆ ಕೂಡಿದಾಗ ಅವ್ಯಯದಂತೆ ಪ್ರಯೋಗವಾಗುತ್ತದೆ : ತಾನು ಮಹಾ ತಿಳಿದವಳು ಅಂತ ಅವಳು ಅಂದುಕೊಂಡಿದ್ದಾಳೆ (ರಜಾ). ೬. ದೊಡ್ಡ ಮನುಷ್ಯ : ಶ್ರೇಷ್ಠ ವ್ಯಕ್ತಿ : ಅವನು . . . ಮೇಷ್ಟರುಗಳಿಗೆ ಕಾಕಹೊಡೆದು ಪ್ರಶ್ನೆಗಳನ್ನೆಲ್ಲ ಮೊದಲೇ ತಿಳಿದುಕೊಂಡು ಬಿಟ್ಟು ಮಹಾ ಅಂತ ನಮ್ಮೆದುರಿಗೆಲ್ಲ ಜಂಬ ಮಾಡ್ತಾನೆ (ಶ್ಯಾಬಸ್ಕೀ. ೯). P ಸಂಸ್ಕೃತದ 'ಮಹತ್' ಎಂಬ ಶಬ್ದವು ಸಮಾಸಗಳ ಮೊದಲಲ್ಲಿ ಕೆಲವು ಸಲ 'ಮಹಾ' ಎಂಬ ರೂಪವನ್ನು ಹೊಂದುತ್ತದೆ. [< ಸಂ. ಮಹತ್]

**ಮಹಾಂಗ** (ನಾ). ೧. ಒಂಟೆ : "ಉಷ್ಟ್ರಃ . . . ಮಹಾಂಗಃ ಒಂಟೆಯ ಹೆಸರುಗಳು" (ಸಿದ್ಧಾಂತ. ೨೯೬). ೨. ಒಂದು ಬಗೆಯ ಇಲಿ. ೩. ಶಿವನ ಒಂದು ಹೆಸರು. [ಸಂ.]

**ಮಹಾಂತ** (ಗು). ೧. ಅಧಿಕವಾದ ; ಹೆಚ್ಚಿನ ; ಅತಿಶಯವಾದ : ಅಭಿಮನ್ಯು ಮಹಾಂತಪರಾಕ್ರಮದಿ . . . ಸೂರೆಗೊಂಡೆನು ನಿಮ್ಮ ಪಾರ್ಥದಿ ದುರ್ಗವ ಪೌರುಷವ ನೋಡೆಂದಾ (ಅಭಿಗ. ೯). ೨. ವಿಶಾಲವಾದ ; ವಿಸ್ತಾರವಾದ : ಅಂತಹೀನಮಹಾಂತಸಂತತಮವಿಶ್ರಾಂತ ಜಲಧಿಯ ಬೃಹನ್ನೀಲಿಮಾವಿರಾಡ್‌ರಂಗದೊಳ್ . . . ಗಿರಿಯ ಪಂಕ್ತಿಗಳ್ ಪರ್ವಿದುವು (ಶ್ರೀರಾಮಾ. ೦೪೦–೯೨೯). (ನಾ). ೩. ವಿಶಾಲವಾದುದು : ವಿಸ್ತಾರವಾದುದು : ನಿಶ್ಚಲಮುಂ ಮಹಾಂತಮುಮಪಗಾಹಿತ ಸಮಸ್ತಪದಾರ್ಥಮುಮಾದ ಗಗನಮಂಡಲಮಾ . . . ನೋಡುತ್ತಿರ್ಪನ್ನೆಗಂ (ಕಂಪ್ರಕೌ. ೯-೪ ವ). ೪. ಹೇರಳ ; ಯಥೇಚ್ಛ ; ಸಮೃದ್ಧಿ : ಧೃತರಾಷ್ಟ್ರನ ಮಹಾಂತವಾದ ಭೋಗವನ್ನು ನೋಡು. ನಮ್ಮ ಬದುಕನ್ನೂ ನೋಡು (ಶೀಕ್ಷಕ. ೦೯೫). ೫. ಮಹಾತ್ಮ ; ಶ್ರೇಷ್ಠ ; ಪೂಜ್ಯವ್ಯಕ್ತಿ : ಇದು ಕಾರಣ ಗುಹೇಶ್ವರಲಿಂಗವ ತನ್ನೊಳಱಿದೆನೆಂಬ ಮಹಾಂ[ಪಾಠಾಂ. ಹಂ]ತಂಗೆ ಸತ್ಕ್ರಿಯಾಚರಣೆಯೇ ಸಾಧನೆ ಕಾಣ ಭೋ (ಅವತಂ. ೧೬೯-೬೬೧) ; ಕೇಶಿರಾಜಯ್ಯಂ ಮಹಾಂತನು ಮಾದಿರಾಜಯ್ಯಂ ಮೊದಲೆನಿಪ್ಪಾ ಕಟಕದೊಳಗಿರುತಮಿಹ ಸರ್ವಲಿಂಗವಂತರು . . . ಬರೆ (ಬಸಪು. ೬೦–೯) ; ಎನ್ನಯ ಭಾಗ್ಯವೇ ತನುವ ಪಡೆಂತೆ ಕೈಕೊಂಡವೊಲು ಬಂದೆ ಮಹಾಂತ (ಶಿವಾಗ. ೪-೬-೩೬). [<ಸಂ. ಮಹತ್]

**ಮಹಾಂತು** (ನಾ). ಅತ್ಯಂತ ಶ್ರೇಷ್ಠವಾದುದು : ನಾದಬಿಂದುಕಳಾತೀತವಾದ ಪರವಸ್ತುವೆ ಮಹಾಂತು ನೋಡಾ ಶ್ರುತಿತತಿಗಸಾಧ್ಯವಾದ ಪರವಸ್ತುವೆ ಮಹಾಂತು ನೋಡಾ (ಅಜಂಪೇ. ೩೦೦-೬೬). [<ಮಹಾಂತ]

**ಮಹಾಂಧಕಾರ** (ನಾ). ಕಗ್ಗತ್ತಲೆ ; ಗಾಢಾಂಧಕಾರ : ಕಲ್ಪಾಂತದಲಿ ಬಿಡೆಬಿರಿದುದೀ ಬ್ರಹ್ಮಾಂಡ . . . ಇನಶಶಿಕಿರಣವಿಲ್ಲ ಮಹಾಂಧಕಾರ ಸಭಾರವಾಯ್ತು (ಕುಮಾರ. ೦೯-೨೨) ; ದಿಕ್ಚಕ್ರದೊಳ್ ಕಾಳಾಭೀಳಮಹಾಂಧಕಾರವೆಸೆಗುಂ ಕಣ್ಣಾಲ್ಗೆ ತಾವೀಯದೇ (ಹರಿಶ್ಚರ. ೩-೦೬). [ಸಂ.]

**ಮಹಾಂಬುಜ** (ನಾ). ೧. ಒಂದು ನರಕದ ಹೆಸರು : ರೌರವ ಧ್ವಾಂತ . . . ಮಹಾಂಬುಜ ಕಾಲಸೂತ್ರಗಳೆಂಬವೇ ಎಂಟು ನರಕಂಗಳು (ಶಿವೇಳ. ೧೬೯). ೨. [ಗಣಿತ] ಒಂದು ದೊಡ್ಡ ಸಂಖ್ಯೆ : ಒಂದು ಲಕ್ಷ ಕೋಟಿ. [ಸಂ.]

**ಮಹಾಕಂದ** (ನಾ). ಬೆಳ್ಳುಳ್ಳಿ, ಹಸಿಶುಂಠಿ ಮುಂತಾದ ಗಡ್ಡೆ ಮತ್ತು ಅದರ ಸಸ್ಯ : "ಮಹಿಷೀಕಂದಃ—ಮಹಾಕಂದ" (೬ಕಂ. ೦೨೨). [ಸಂ.]

**ಮಹಾಕಲ್ಪ** (ನಾ). ೧. ಅತಿದೀರ್ಘವಾದ ಒಂದು ಕಾಲಚಕ್ರ ; ಬ್ರಹ್ಮನ ಆಯುಸ್ಸಿನ ನೂರು ವರ್ಷಗಳಷ್ಟು ಕಾಲ. ೨. ಶಿವನ ಹೆಸರುಗಳಲ್ಲಿ ಒಂದು. ೩. [ದ್ವೈತ] ಸೃಷ್ಟಿಕಾಲದ ಒಂದು ಭಾಗ ; ಅಣುವಿನಿಂದ ಹಿಡಿದು ಮಹತ್ತಿನ ವರೆಗೆ ಸೃಷ್ಟಿಸುವ ಕಾಲ : ಸೃಷ್ಟಿ

ಕಾಲದಲ್ಲಿ ಮಹಾಕಲ್ಪ ಮತ್ತು ಬ್ರಹ್ಮಕಲ್ಪವೆಂದು ಎರಡುವಿಧ. ಮಹದಾದಿ ಅಂಡಪರ್ಯಂತ ಸೃಷ್ಟಿಕಾಲವು ಮಹಾಕಲ್ಪ (ಹಿಂರಸಾ. ೨೬೪). 'ಬ್ರಹ್ಮ ಕಲ್ಪ' ಪರಾ. [ಸಂ.]

**ಮಹಾಕಲ್ಯಾಣ** (ನಾ). ೧. ಅತ್ಯಂತ ಮಂಗಳಕರವಾದುದು.- ಶುಭಕರವಾದುದು. ೨. [ಜೈನ] ಜಿನಶಿಶುವು ಭೂಮಿಯಲ್ಲಿ ಹುಟ್ಟಿದಾಗಿನಿಂದ ನಿರ್ವಾಣ ಹೊಂದುವವರೆಗೆ ಆತನ ಜೀವನದಲ್ಲಿ ನಡೆಸುವ ಐದು ಬಗೆಯ ಮಂಗಳಕರವಾದ ಉತ್ಸವಗಳಲ್ಲಿ ಪ್ರತಿಯೊಂದು : ಚತುರ್ವಿಧದೇವನಿಕಾಯಂ. ಪುರುದೇವಪರಿನಿರ್ವಾಣಮಹಾಕಲ್ಯಾಣಪೂಜಾನಿರ್ವರ್ತನಾಭಿಲಾಷಿಯಾಗಿ . . . ಅರ್ಚಿಸಿ (ಆದಿಪು. ೧೬-೫೦ ವ). 'ಪಂಚಕಲ್ಯಾಣ' ಪರಾ. [ಸಂ.]

**ಮಹಾಕವಿ** (ನಾ). ಮಹಾಕಾವ್ಯವನ್ನು ರಚಿಸಿದವನು : ಸಜ್ಜನವ್ರಾತ್ಯಂ ಸುಭಗಂ ಮಹಾಕವಿ . . . ಮೃಗಪ್ರೋದ್ಭವಂ (ಶಾಶತ. ೧೬-೮೦) : ಬಹುಶಾಸ್ತ್ರಪ್ರಜ್ಞನಪ್ಪ ಮಹಾಕವಿಯುಂ ಕಂಡೊಡೆ ದಗ್ಧವಾಣಿಯುವನೆಂದಿಂತಾರ್ದು ಹಾಸ್ಯೋಕ್ತಿಯಿಂ ಕವಿಗಳ್ ವರ್ತಿಪರಲ್ಲದಾವ ಪೊಜೆ ಮುಟ್ಟೆಂದಂತವರ್ ವರ್ತಿಪರ್ (ಸೂಕ್ತಿಸು. ೨-೩೬); ಅವನು ಉಳಿದೆಲ್ಲ ವಿಷಯಗಳಲ್ಲಿ ಮಹಾಮನಸೂ ಮಹಾಕವಿಯೂ ಆಗಿ ಈ ವಿಷಯದಲ್ಲಿ ಅಸಹನೆ, ಅಸೂಯೆ, ಆಕ್ರೋಶಗಳನ್ನು ತೋರಿದ್ದರೆ ಅದು ಅವನ ಅಧಃಪಾತವಾಗದೇ ? (ತಮೂ. ೨೨). [ಸಂ.]

**ಮಹಾಕಾಯ** (ಗು). ೧. ಭಾರಿದೇಹವುಳ್ಳ; ದೊಡ್ಡ ಶರೀರದ : ಅನುಕೂಪ್ಯರೂಪ್ಯ ಕನಕಾಂಬರರತ್ನಾಭರಣಭಾರಧಾರಣಧೌರೇಯಮಹಾಕಾಯವೈಪಧಿಕನಿಕರಮುಮಂ . . . ಬರಿಸಿ ಕಳ್ಳರಿಸಿ (ಚಂದ್ರಪು. ೬-೫೫ ವ). (ನಾ). ೨. ದೊಡ್ಡ ಶರೀರವುಳ್ಳುದು : ಹಿತಾಹಿತವಿವೇಕವಿಕಳತೆಯಿಂ ತಮ್ಮಂ ತಾಮೆ ಕಟ್ಟಿಸಿಕೊಳ್ವ ಮಹಾಕಾಯಂಗಳಪ್ಪ ಕರಿಪತಿಗಳಿಂದಂ (ಆದಿಪು. ೨-೧೧ ವ); ಅನುಪಮಬಲಂ ಮಹಾಕಾಯನೆನಗೆ ಪಿರಿದುಂ ಸಹಾಯನೆಂದೇನಾನುಂ ಮನದೊಳ್ ನೆನೆವೈ (ಶಬತಂ. ೧೧೧-೯). ೩. ದೊಡ್ಡ ಶರೀರವುಳ್ಳವನು. ೪. ಆನೆ : ಗಜ. ೫. ಈಶ್ವರನ ಅನುಚರರಲ್ಲಿ ಒಬ್ಬ : ನಂದಿ. [ಸಂ.]

**ಮಹಾಕಾರ್ಪಾಸಚೂರ್ಣ** (ನಾ). ಹುರಿದ ಹತ್ತಿಯ ಕಾಳು ಮೊದಲಾದುವುಗಳಿಂದ ಮಾಡುವ ಒಂದು ಬಗೆಯ ಚೂರ್ಣ : ಹುರಿದ ಹತ್ತಿಹರಳೆ ಬೀಜ ಗ ೩ ತೂಕ . . . ಮಾದಳದ ಹಣ್ಣಿನ ಕೇಸರ ಗ ೧ ತೂಕ, ಸಹ ಚೂರ್ಣಂ ಮಾಡಿ . . . ಸೇವಿಸಲು ಪೈತ್ಯರೋಗ . . . ಅತಿಸಾರ ಮುಂತಾದ ಸಕಲರೋಗವೂ ಗುಣಮಕ್ಕುಂ (ಸಳವೈ. ೧೪೫). [ಸಂ.]

**ಮಹಾಕಾಲ**. ಮಹಾಕಾಳ (ನಾ). ೧. ಶಿವನ ರೂಪಗಳಲ್ಲಿ ಒಂದು: ಲಯಕಾರಕನಾದ ಶಿವ : "ಅಷ್ಟಮೂರ್ತಿಃ, ಅಹಿರ್ಬುಧ್ನಃ, ಮಹಾಕಾಲಃ . . . ಅಗ್ನಿಲೋಚನಃ-೧೨ ಶಿವನ ಹೆಸರುಗಳು" (ವ್ಯಾಂಖ. ೧೯). ೨. ಶಿವನ ಪ್ರಮಥಗಣದಲ್ಲಿ ಒಂದು ವರ್ಗ ಮತ್ತು ಆ ವರ್ಗಕ್ಕೆ ಸೇರಿದವನು. ೩. ಅತ್ಯಧಿಕವಾದ ಕಪ್ಪುಬಣ್ಣ. ೪. ಸೂರ್ಯನು ಕಾಣದಂತೆ ಮೋಡ ಮುಚ್ಚಿಕೊಂಡಿರುವ ದಿನ; ದುರ್ದಿನ. ೫. ಕಟು ಹೃದಯವುಳ್ಳವನು; ಕ್ರೂರಿ. ೬. ಒಂದು ಬಗೆಯ ಮರ: ಗೇರು. ಭಲ್ಲಾತಕ. ೭. ವಿಷದ ಹಣ್ಣುಗಳನ್ನು ಬಿಡುವ ಒಂದು ಬಗೆಯ ಮರ ; ಕಿಂಪಾಕ ; ಕಾಂಜೀರ : "ಭಲ್ಲಾತಕಂ ದುರ್ದಿನಂ ಶಿವನುಂ ತತ್ಪ್ರಮಥಾದಿಭೇದಮುಸಿತು ಕ್ರೂರಂ ಮಹಾಕಾಲ[ಶಾಶಾಂ. ೪]ಮಕ್ಕುಂ" (ಶಾಶಾರ. ೯೮). ೮. ಉಜ್ಜಯಿನೀಕ್ಷೇತ್ರದಲ್ಲಿರುವ ಪ್ರಸಿದ್ಧವಾದ ದ್ವಾದಶಜ್ಯೋತಿರ್ಲಿಂಗಗಳಲ್ಲಿ ಒಂದು : ಉಜ್ಜಯಿನಿಯ ಮಹಾಕಾಲ ದೇವಸ್ಥಾನದಲ್ಲಿ. ನರ್ತಕಿಯಾಗಿದ್ದ ವಿಷಯವನ್ನು ಕಾಳಿದಾಸನು ನಿರೂಪಿಸುತ್ತಾನೆ (ಕಾಲಾ. ೧೮೦). ೯. ವಿಷ್ಣುವಿನ ಹೆಸರುಗಳಲ್ಲಿ ಒಂದು. ೧೦. ಈಶ್ವರನ ಅನುಚರರಲ್ಲಿ ಒಬ್ಬ : ನಂದಿ. ೧೧. "ಭೂತ, ವರ್ತಮಾನ, ಭವಿಷ್ಯತ್ ಎಂಬ ವಿಭಾಗವಿಲ್ಲದ ಅವಿಚ್ಛಿನ್ನಕಾಲ" (ತನ್ಮಪ. ೪. ೬೧೬) : ಮಹಾಕಾಲದಲ್ಲಿ ನಿಮ್ಮಿಂದ ನೀವೆ ಸ್ವಯಂಭುವಾಗಿರ್ದರಯ್ಯಾ ಒಂದನಂತಕಾಲ (ತನ್ಮಪ. ೪. ೬-೧೨). **ಮಹಾಕಾಳ** : ೧. "ಪಶುಪತಿ ಪ್ರಮಥರ್ ಕಪ್ಪುಂ ನಸಿನದಿ ಗೇರ್ ಕ್ರೂರರೈದು ಮಹಾಕಾಳಂ" (ನಾನಾಕಂ. ೧೨೩). ೨. ಪಾತಾಳಗಮನನೆ ಮೊದಲು ಶಿವರುದ್ರನು ಮತ್ತವನಿಂ ಮಹಾಕಾಳನೆಂದಿದಂ (ಪವೀಕ. ೬೪) ; ಪೊಡೆಯುತ್ತುಂ ಪೇತ್ರದಿಂದಿಟ್ಟೆಣಿಪ ದನುಜರಂ . . . ಗೀತನೃತ್ಯಕ್ಕೆಡೆಯಿಸ್ತುತಲ್ಲಿ ಕೋಲಾಹಲಮನುಮಾಗಿಸುತ್ತುಂ ಮಹಾಕಾಳನಿರ್ದಂ (ರಾಜಶೇ. ೧೪-೧೬೩). ೩. ಎರಡುಂ ಭಾಗದೊಳಿರ್ದ ಮಹಾಕಾಳರೂಪಮಂ ನಿಂದು ನೋಡುತ್ತುಂ (ಶಾಂತಿಪು. ೩-೧೯ ವ). ೮. "ಕಿಂಪಾಕಃ, ಮಹಾಕಾಳಃ- ಈ ೨ ಕಾಂಜೀರಂ" (ಹಲಾಯು. ೩೪-೫೦). ೧೨. ಕಗ್ಗತ್ತಲೆ; ಗಾಢಾಂಧಕಾರ : ಭೂತಗಣದ ಮೇಳದಲ್ಲಿ ಮಹಾಕಾಳದಾಳದಲ್ಲಿ ಸತಿಪತಿಯರ ಜೋಡಿಯೊಂದು ಕುಣಿಯುವುದನು ಕಂಡಿತು (ಗಂ. ೧೧೫-೬). ೧೩. ಆಗಮಗಳಲ್ಲಿ ಒಂದು : ಕಾಲವಹನರೌರವೋತ್ತರಕೌಮಾರ ಕಾಳ ಮಹಾಕಾಳ ಇಂದ್ರಾಗಮವೆಂದು ರೌರವಾಗಮಮಹಾಭೇದಂಗಳು (ಪವೀಕ. ೬೬). ೧೪. [ಜೈನ] ಚಕ್ರವರ್ತಿಯ ಬಳಿಯಿರುವ ನವನಿಧಿಗಳಲ್ಲಿ ಒಂದು : ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆದಿಪು. ೧೫-೩ ವ) : ಕಾಳ ಮಹಾಕಾಳ . . . ಶಂಖ ಸರ್ವರತ್ನಂಗಳೆಂಬೊಂಬತ್ತು ನಿಧಿಗಳುಮಾನನುಕ್ರಮದೊಳರ್ಚಿಸಿ (ಚಂದ್ರಪು. ೬-೧೧೧ ವ). [ಸಂ.]

**ಮಹಾಕಾಲಿ**. ಮಹಾಕಾಳಿ (ನಾ). ೧. ಆದಿಶಕ್ತಿಯ ರೂಪಗಳಲ್ಲಿ ಒಂದು; ದುರ್ಗೆ. ೨. [ಜೈನ] ಹದಿನಾರು ಜನ ವಿದ್ಯಾದೇವತೆಗಳಲ್ಲಿ ಒಬ್ಬಳು. **ಮಹಾಕಾಳಿ** : ೧. ಮಹಾಕಾಳಿಯೆಂಬ ಶಕ್ತಿಸಮ್ಮೇಳನದಿಂ . . . ಈಶಾನ್ಯದ ಬಾಗಿಲಲ್ಲಿ ಸಂಹಾರಭೈರವನಿರ್ಪಂ (ಪವೀಕ. ೨೩೪) ; ಲಲಿನೆಯರ ಮೃದುವಾದ ಕೈಬೆರಳುಗಳನ್ನು ಕತ್ತರಿಸಿ . . . ಹೊತ್ತು ಬರುತ್ತಿರುವ ಮಹಾಕಾಳಿಯೆಂದು ವರ್ಣಿಸುತ್ತಿದ್ದರೋ ಏನೋ (ಹಸುಹೂ. ೩೯೫). [ಸಂ. ಮಹಾಕಾಲೀ]

**ಮಹಾಕಾವ್ಯ** (ನಾ). ೧. ಶ್ರೇಷ್ಠವಾದ ಕಾವ್ಯ : ವ್ಯಾಸ ವಾಲ್ಮೀಕಿ ಕಶ್ಯಪಪ್ರಭೃತಿವಿರಚಿತಂಗಳಪ್ಪ ಮಹಾಕಾವ್ಯಂಗಳೊಳಂ . . . ವಿವಿಧಾಯುಧಂಗಳೊಳಮತಿಪ್ರವೀಣ[ನು]ಂ . . . ಆಗಿ (ಶಂಶಬ. ೨-೩೪ ವ) : ಮಹಾಕಾವ್ಯಕ್ಕೆ ಒಪ್ಪುವ ಘನವಾದ ಘಟನೆಗಳೇ ರಾಮಾಯಣದ ಕಥಾವಸ್ತುವಾಗಿದೆ (ಭಾರಿದ. ೬೬) ; ಮಹಾಕಾವ್ಯ - ೫ : ಕಾಳಿದಾಸನ ರಘುವಂಶ ಮತ್ತು ಕುಮಾರಸಂಭವ, ಭಾರವಿಯ ಕಿರಾತಾರ್ಜುನೀಯ, ಮಾಘನ ಶಿಶುಪಾಲವಧ, ಶ್ರೀಹರ್ಷನ ನೈಷಧಚರಿತ (ಶ್ರೀವತ. ೩೨೫). ೨. ಅಷ್ಟಾದಶ ವರ್ಣನೆಗಳಿಂದ ಕೂಡಿರುವ ಕಾವ್ಯ: P ಆಧುನಿಕವಿಮರ್ಶಕರು ವಿಶ್ವದ ಮಹಾಕಾವ್ಯಗಳನ್ನು ಅಭ್ಯಾಸಮಾಡಿ ಅಂತಹ ಕಾವ್ಯರೀತಿಯನ್ನು ಬೇರೆಯ ರೀತಿಯಲ್ಲಿ ವಿವರಿಸುತ್ತಾರೆ. EPIC ಎಂಬ ಹೆಸರುಳ್ಳ ಅಂತಹ ಕಾವ್ಯದಲ್ಲಿ ಸಾಹಸಮಯವಾದ ಕ್ರಿಯೆಯೂ ವ್ಯಕ್ತಿಗಳೂ ತದ್ಯುಕ್ತವಾದ ಭಾಷಾಪ್ರಯೋಗವೂ ದೀರ್ಘ ಕಥೆಯೂ ಇದ್ದು, ಅವರ ಆವರಣ ಪ್ರಾಚೀನವಾದುದಾಗಿರಬೇಕು. ಉದ್ದೇಶ ಉದಾತ್ತವಾಗಿಯೂ ವಸ್ತುಸಂವಿಧಾನವು ಸರಳವಾಗಿಯೂ ಇದ್ದು, ಪೌರಾಣಿಕ ಸಾಂಪ್ರದಾಯಿಕ ವಿವರಣೆಗಳು ತುಂಬಿರಬೇಕು. ಧೀರೋದಾತ್ತನಾಯಕನಿದ್ದು, ಅವನಿಗೆ ಅತಿಮಾನವ ದೈಹಿಕಶಕ್ತಿಯೋ, ಶೀಲಸ್ವಭಾವವೋ ಮಾನಸಿಕ

ಉದಾತ್ತತೆಯೋ ಪ್ರಕೃತಿಸಿದ್ಧವಾಗಿರಬೇಕು. ಕಥೆಯಲ್ಲಿ ಅತಿಭೌತಿಕಪ್ರಭಾವಗಳು ಕ್ರಿಯಾಮುಖವಾಗಿರಬೇಕು. ಇಲಿಯಡ್, ಒಡಿಸ್ಸಿ, ಆಯಾವತ, ಪ್ಯಾರಡೈಸ್ ಲಾಸ್ಟ್ ಮುಂತಾದ ಕಾವ್ಯಗಳು ಈ ರೀತಿಯಲ್ಲಿ ಪ್ರಸಿದ್ಧವಾಗಿವೆ. ಕನ್ನಡದಲ್ಲಿ ಶ್ರೀರಾಮಾಯಣದರ್ಶನಂ, ಭಾರತಸಿಂಧುರಶ್ಮಿ ಮೊದಲಾದುವುಗಳನ್ನು ಈ ದೃಷ್ಟಿಯಲ್ಲಿ ಪರಿಶೀಲಿಸಬಹುದು : ಕೀರ್ತಿ ನೆಗಟ್ವಂತೀ ಲೋಕದೊಳ್ ಬಲ್ಮೆ ರಂಜಿಸೆ ಬಲ್ಲರ್ಗೆಡೆಗೊಂಡು ಬಣ್ಣಿಸೆ ಮಹಾಕಾವ್ಯಂಗಳೊಳ್ ಮೆಟ್ಟಿ ಬಣ್ಣಿಸುವೆಂ ಪುಣ್ಯಪುರಾಣಮಂ ಜಿತಮನೋಜಾತಾಜಿತಸ್ವಾಮಿಯಾ (ಅಜಿಪು. ೧–೯೬). 'ಅಷ್ಟಾದಶವರ್ಣನೆ' ಪರಾ. [ಸಂ.]

**ಮಹಾಕಾಳ** 'ಮಹಾಕಾಲ' ನೋ.

**ಮಹಾಕಾಳಿ** 'ಮಹಾಕಾಲಿ' ನೋ.

**ಮಹಾಕುಲ** (ನಾ). ೧. ಶ್ರೇಷ್ಠವಾದ ಮನೆತನ ; ದೊಡ್ಡ ಪೀಳಿಗೆ : ಅವರು ಮಹಾಕುಲದವರು. ಅವರನ್ನು ಕದಲಿಸಲು ನನ್ನ ಕೈಲಾಗದು (ಹಕ್ಕುಪು. ೧೯). ೨. ಶ್ರೇಷ್ಠವಂಶದಲ್ಲಿ ಹುಟ್ಟಿದ ವ್ಯಕ್ತಿ. [ಸಂ.]

**ಮಹಾಕ್ರತು** (ನಾ). ೧. ದೊಡ್ಡಯಾಗ ; ಯಜ್ಞ : ನಿತ್ಯ ಮಾಡುವರಗ್ನಿಹೋತ್ರಂಗಳ ಮಹಾಕ್ರತುವ . . . ನಿಟ್ಟೆಯುಲಿ ರಾಕ್ಷಸವಿಪ್ರಗೃಹಗಳಲಿ (ಕೌಶಿರಾ. ೩೯–೭). ೨. [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಮೂವತ್ತಾರನೆಯ ಸ್ಥಾನ ಮತ್ತು ಮೂವತ್ತಾರು ಅಂಕೆಗಳುಳ್ಳ ಒಂದು ದೊಡ್ಡಸಂಖ್ಯೆ : ಏಕ್ಕಂ, ದಾಹಂ . . . ಕ್ರತು, ಮಹಾಕ್ರತು . . . ಮಹಾಪರಿಮಿತ – ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬–೨೭); ಕ್ರತು ಮಹಾಕ್ರತುವೆಂಬಿವೇ ಉಗ್ಗಡಣೆಗಳು (ಶಿವೇಶ. ೭). [ಸಂ.]

**ಮಹಾಕ್ಷಪಟಲಿಕ** (ನಾ). (ತನ್ನ ಕೈಕೆಳಗೆ ಅನೇಕ ಕರಣಿಕರನ್ನು ಹೊಂದಿರುವ) ನ್ಯಾಯ ಮತ್ತು ಆಯವ್ಯಯಗಳಿಗೆ ಸಂಬಂಧಿಸಿದ ದಾಖಲೆಗಳಿರುವ ಇಲಾಖೆಯ ಮುಖ್ಯಸ್ಥ : (ಲೋಳಶ. ೦೭). [ಸಂ.]

**ಮಹಾಕ್ಷಿತಿ** (ನಾ). [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಇಪ್ಪತ್ತೆರಡನೆಯ ಸ್ಥಾನ ಮತ್ತು ಇಪ್ಪತ್ತೆರಡು ಅಂಕೆಗಳುಳ್ಳ ಒಂದು ದೊಡ್ಡ ಸಂಖ್ಯೆ: ಏಕ್ಕಂ, ದಾಹಂ . . . ಕ್ಷಿತಿ, ಮಹಾಕ್ಷಿತಿ . . . ಮಹಾಪರಿಮಿತ – ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬–೨೩). [ಸಂ.]

**ಮಹಾಕ್ಷೋಣಿ** (ನಾ). [ಗಣಿತ]ಸಂಖ್ಯೆಯ ಸ್ಥಾನಗಳಲ್ಲಿ ಹದಿನೆಂಟನೆಯ ಸ್ಥಾನ ಮತ್ತು ಹದಿನೆಂಟು ಅಂಕೆಗಳುಳ್ಳ ಒಂದು ದೊಡ್ಡ ಸಂಖ್ಯೆ : ಏಕ್ಕಂ, ದಾಹಂ . . . ಕ್ಷೋಣಿ, ಮಹಾಕ್ಷೋಣಿ . . . ಮಹಾಪರಿಮಿತ ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬–೨೩). [ಸಂ.]

**ಮಹಾಕ್ಷೋಭ** (ನಾ). [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಇಪ್ಪತ್ತನಾಲ್ಕನೆಯ ಸ್ಥಾನ ಮತ್ತು ಇಪ್ಪತ್ತುನಾಲ್ಕು ಅಂಕೆಗಳಿರುವ ಒಂದು ದೊಡ್ಡಸಂಖ್ಯೆ : ಏಕ್ಕಂ, ದಾಹಂ . . . ಕ್ಷೋಭ, ಮಹಾಕ್ಷೋಭ . . . ಮಹಾಪರಿಮಿತ–ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬–೨೬). [ಸಂ.]

**ಮಹಾಖರ್ವ** (ನಾ). [ಗಣಿತ] ಸಂಖ್ಯೆಯ ಸ್ಥಾನಗಳಲ್ಲಿ ಹದಿನಾಲ್ಕನೆಯ ಸ್ಥಾನ ಮತ್ತು ಹದಿನಾಲ್ಕು ಅಂಕೆಗಳುಳ್ಳ ಒಂದು ದೊಡ್ಡ ಸಂಖ್ಯೆ : ಏಕ್ಕಂ, ದಾಹಂ . . . ಖರ್ವ, ಮಹಾಖರ್ವ . . . ಮಹಾಪರಿಮಿತ—ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬–೨೪). [ಸಂ.]

**ಮಹಾಗಣ** (ನಾ). ೧. ದೊಡ್ಡಗುಂಪು.—ಸಮೂಹ. ೨. [ಗಣಿತ] ಒಂದು ದೊಡ್ಡಸಂಖ್ಯೆ. ೩. [ವೀಶೈ] ಶ್ರೇಷ್ಠನಾದ ಜಂಗಮ.—ಶರಣ : ಎನಗೆ ಮರ್ತ್ಯಲೋಕದ ಮಹಾಗಣಗಳುಂಟು ಇದುಕಾರಣ ಕೂಡಲಸಂಗಮದೇವರ ಲೋಕವ ಹಂಚಿಕೊಳ್ಳಿ ನಿಮನಿಮಗೆ (ಬಸವ. ೭೬೦) ; ಇದಂ ಚೋಳದೇಶದ ಮಹಾಗಣಂಗಳಱಿವುದು (ಶಂಬಕ. ೬–೦೦೪). [ಸಂ.]

**ಮಹಾಗನಿ** (ನಾ). ಒಂದು ಬಗೆಯ ಮರ; ₱ ಕಂದುಬಣ್ಣದ ಛಾಯೆಯುಳ್ಳ ಈ ಮರವನ್ನು ಪೀಠೋಪಕರಣಗಳನ್ನು ಮಾಡಲು ಹೆಚ್ಚಾಗಿ ಬಳಸುತ್ತಾರೆ : ಹೆಬ್ಬೇವು, ಮಹಾಗನಿ (ವ್ಯಶಿಗ. ೭೩–೦೪೯೮) ; ಅವುಗಳ ಪೈಕಿ . . . ಉಡುಪಿನ ಬೀರುವೊಂದಿತ್ತು. ಅದನ್ನು ಮಹಾಗನಿ ಮರದಿಂದ ಮಾಡಿತ್ತು (ಕೃಪರು. ೩೦೬). [← ಇಂ. Mahogony]

**ಮಹಾಗಾರೆ** (ನಾ). ಒಂದು ಬಗೆಯ ಮರ : ಮಹಾಗಾರೆ, ಬೆಟ್ಟಮಂಗರೆ (ವ್ಯಶಿಗ. ೬೩–೦೩೩೩). [ಮಹಾ + ಕಾರೆ$_1$]

**ಮಹಾಗ್ರಹ** (ನಾ). ೧. ಪ್ರಬಲವಾದ ಭೂತ, ಪಿಶಾಚಿ ಮುಂತಾದ ದುಷ್ಟಶಕ್ತಿ : ಇದು ಜತುಮುದ್ರಾಮುದ್ರಿತಮಿದು ನಿಬಿಡಸ್ಯೂತಮಿದು ಮಹಾಗ್ರಹಧೃತಮಿಂತಿದು ಲೋಹಪಿನದ್ಧಮೆನಿಪ್ಪುದು ಪರಕೃತಿನುತಿಯೊಳಖಿಳಖಿಳಜನವಕ್ತ್ರಂ (ಚಂದ್ರಶು. ೦–೪೦) ; ಈ ಮಹಾಗ್ರಹಗಳು ತಮಗೆ ಇಷ್ಟ ಬಂದ ಹಾಗೆ ಲೋಕಗಳಲ್ಲಿ ಕೋಟಿ ತೆಱಂಗಳು ಉಳ್ಳವುಗಳಾಗಿ ಕ್ರೀಡಿಸುತ್ತಲಿರುವವು (ವೈದ್ಯಶಾ. II, ೬೨). ೨. ಸೂರ್ಯ. ೩. ಶನಿಗ್ರಹ. ೪. ರಾಹು. [ಸಂ.]

**ಮಹಾಗ್ರೀವ** (ನಾ). ಉದ್ದವಾದ ಕುತ್ತಿಗೆಯುಳ್ಳುದು ; ಒಂಟೆ. [ಸಂ.]

**ಮಹಾಘಟಿಕಾಸ್ಥಾನ** (ನಾ). ಉನ್ನತವ್ಯಾಸಂಗಕ್ಕಾಗಿ ಸ್ಥಾಪಿಸಿದ ದೊಡ್ಡ ವಿದ್ಯಾಪೀಠ.—ವಿದ್ಯಾಸಂಸ್ಥೆ : ಶ್ರೀಮತು ಹೆಂಜೆಱ ಪಟ್ಟಣದ ಮಹಾಘಟಿಕಾಸ್ಥಾನ ಶ್ರೀನೊಣಂಬೇಶ್ವರದೇವರ ಸಂನಿಧಾನದಲಿ (ಎಕ. XII, ಶಿರಾ. ೨೩–೦೦೦; 1167). [ಸಂ.]

**ಮಹಾಘನ** (ನಾ). ಪರವಸ್ತು ; ದೇವರು : ನೀನಿರಿಸಿದ ಮನದಲ್ಲಿ ನಾನಂಜಿನಯ್ಯಾ ಮನವು ಮಹಾಘನಕ್ಕೆ ಶರಣಗತಿವೊಕ್ಕುದಾಗಿ (ಬಸವ. ೭೨೯); ಮಹಾಘನವನಱಿದಲ್ಲಿಯೇ ತ್ರಿವಿಧವೂ ಸಮರ್ಪಣ (ಶೂನ್ಯಸಂ. ೩೭–೦೩೩). [ಸಂ.]

**ಮಹಾಚಂಡ** (ನಾ). ೧. ಅತಿಯಾದ ಉದ್ವೇಗವುಳ್ಳವನು. ೨. ಯಮನ ಇಬ್ಬರು ಅನುಚರರಲ್ಲಿ ಒಬ್ಬ. ೩. ಶಿವನ ಒಬ್ಬ ಅನುಚರನ ಹೆಸರು. ೪. ಒಂದು ನರಕದ ಹೆಸರು : ಸಕಲಶಲ್ಯಸಿಂಹಗಜಾನನವ್ಯಾಘ್ರವೆಂಬೈಮ ಮಂತ್ರಿನರಕಂಗಳ ಮೇಳದಲ್ಲಿ ಮಹಾಚಂಡವೆಂಬರಸುನರಕವಿಹುದು (ಶಿವೇಶ. ೦೩೨). [ಸಂ.]

**ಮಹಾಚೀನ** (ನಾ). ಚೀನಾದೇಶದಲ್ಲಿ ತಯಾರಾದ ಒಂದು ಬಗೆಯ ಉತ್ತಮವಾದ ರೇಷ್ಮೆಬಟ್ಟೆ ; ಚೀನಾಂಬರ : ಪವನಪರಿಸಂಚಳ ಸಮಿಾಚೀನ ಚೀನಮಹಾಚೀನಾದಿ ಪೀವರಚೀವರಂಗಳೆಂಬ ಕರತಳಂಗಳಿಂ ಕೆಯ್ವಾಸಿ . . . ಕರೆವಂತಿರ್ಪುದುಂ (ಜಾರಕ. ೦೨–೨೦೪). [ಸಂ.]

**ಮಹಾಚೀನಿ** (ನಾ). = ಮಹಾಚೀನ : ಲಿಂಗಕ್ಕೆ ಪರಿಪರಿಯ ಪೂಜೆಗೆಂದನು ಮಾಡಿ ತರಿಸಿದ ಮಹಾಚೀನಿಯೆನಿಪ ವಸ್ತ್ರಾಳಿಯಂ. . . ತರಿಸುತಂ (ಅಜೀಶ. ದೀ. ೮೨–೨೦). [< ಸಂ. ಮಹಾಚೀನ]

**ಮಹಾಚೂರ್ಣ** (ನಾ). ಒಂದು ನರಕದ ಹೆಸರು : ಮಹಾಚೂರ್ಣ. . . ತಪ್ತತೈಲಮಯವೆಂಬೈದು ಮಂತ್ರಿನರಕಂಗಳ ಸಹಚರ್ಯದಿಂ ಪಂಚಕೋಣವೆಂಬರಸುನರಕವಿಹುದು (ಶಿವೇಶ. ೦೩೩). [ಸಂ.]

**ಮಹಾಛಂದಸು** (ನಾ). [ಛಂದ] ದೀರ್ಘಕಥನಕಾವ್ಯಕ್ಕೆ ಹೊಂದುವಂತೆ ರೂಪುಗೊಂಡಿದ್ದು, ಐದುಮಾತ್ರೆಯ ಗಣಗಳ ಪ್ರಯೋಗದಲ್ಲಿ ವೈವಿಧ್ಯವನ್ನು ಪಡೆದಿರುವ ಸರಳರಗಳೆಯ ಅನ್ಯರೂಪ ; ₱ ಶ್ರೀ ಕೆ. ವಿ. ಪುಟ್ಟಪ್ಪನವರು ತಮ್ಮ 'ಶ್ರೀರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಉಪಯೋಗಿಸಿರುವ ಈ ಛಂದಸ್ಸನ್ನು 'ಮಹಾಛಂದಸ್ಸು' ಎಂದು ಕರೆದು ಅದರ ವೈವಿಧ್ಯವನ್ನು ವಿವರಿಸಿದ್ದಾರೆ : ಶ್ರೀ ಕುವೆಂಪುವ ಸೃಜಿಸಿದೀ ಮಹಾಛಂದಸಿನ ಮೇರುಕೃತಿ, ಮೇಣ್ ಜಗದ್ವ್ಯ ರಾಮಾಯಣಂ ! (ಶ್ರೀರಾಮ. IV, ೨೭). [ಸಂ. ಮಹಾಛಂದಸ್]

**ಮಹಾಛಂದಸ್ಸು** (ನಾ). = ಮಹಾಛಂದಸು : ಕುವೆಂಪು ಅವರು ಮಹಾಛಂದಸ್ಸಿನಲ್ಲಿ ತಮ್ಮ 'ಶ್ರೀರಾಮಾಯಣದರ್ಶನಂ' ಮಹಾಕಾವ್ಯವನ್ನು ಬರೆದಿದ್ದಾರೆ (ಕೂಪ). [ಸಂ. ಮಹಾಛಂದಸ್]

ı-7-17

ಕಣ್ಗೊಳಿಸಿ ನಂಬಿಪಾ ಬಿಸಿಲಿಚ ಮಳಲ್ಗೊಳಂ (ಶ್ರೀರಾಮ. ೩೭೮-೪೩೦).
[ಮಳಲ್ (< ಮಣಲ್) + ಕೊಳ್$_2$]

**ಮಳಲ್ದಿಂಟೆ** 'ಮಣಲ್ದಿಂಟೆ' ನೋ.

**ಮಳವ$_1$** 'ಮಳವೆ' ನೋ.

**ಮಳವ$_2$, ಮಳಿವೆ$_2$** (ನಾ). ಒಂದು ಪ್ರದೇಶದ ಹೆಸರು : ಬಾದುಂಬೆಯು ಪಳ್ಳಿದಿಂ ಮೂಡಲು ಮಳವದ ಮಕ್ಕಿ ಗುಣಿಗನ ಮತ್ತರ್ ೧ (ಕಇಇ. IX-i, ೦೭೫-೫೮; 1099); [ಮಗರ] ಸೋಮನಾಥದೇವರ ಮಳವದಿಂ ತೆಂಕಲು ಮತ್ತರು ೧ (ಕಇಇ. XX, ೨೦೮-೪; ೯). **ಮಳಿವೆ$_2$** : ಕಲಿದೇವರಿಗೆ ಪಾಲುಮಂಡಗೆಗೆ ಕೊಟ್ಟ ಮತ್ತರು ೬ ತೋಟ ಮತ್ತರು ಕೆಳಗಣ ಮಳಿವೆ ಸಹಿತ . . . ಕೊಟರು (ಕಇಇ. XX, ೨೦೮-೦೯; ೯). [ ? ]

**ಮಳವರಿ** (ನಾ). ಒಂದು ಬಗೆಯ ತೆರಿಗೆ : ಕೋಣೆಗೋಡ ಗ್ರಾಮ ೧ಕೆ ಪ್ರಾಕುರೇಬೆ ಸಿದ್ದಾಯದಿಂದ ಗ . . . . ಮಳವರಿಯಿಂದ ಗ (ವ್ಯಅ. ೦೯೩೭, ೨೭-೨೦ ; 1708). ' ಮಳಬಿಯ ' ಹೋ. [ಮಳ್$_?$ + ವರಿ$_1$]

**ಮಳವಿ** ' ಮಳವೆ ' ನೋ.

**ಮಳವೆ, ಮಳವ$_1$, ಮಳವಿ, ಮಳಿವೆ$_1$** (ನಾ). ೧. (ಸರಕಿನ) ಮೂಟೆ : ಗಂಟು ; ಪೆಂಡಿ : ಮಳವೆಗೆ ಪಟ್ಟು ಪದಿನಾಱು ಪಲಂ (ಎಇ. IX, ೨೨-೭; ಸು. 800) ; ನೂಲ ಮಳವೆಗೆ ವಿ ೨ ॥ (ಕಇಅ. ೦೦೪-೮_೩೭ ; 1076); ಹತ್ತಿಯ ಮಳವೆಯಲು ವೀಸ ಸೀರೆಯ ಮಳವೆಯಲು ಬೇಳೆ (ಎಕ. XI, ಶಕ್ಕೆ. ೨೦-೩೮ ; 1087). ೨. ರಾಶಿ ; ಒಟ್ಟಿಲು : ಬಿಡು ಮುತ್ತಿನ ಪೇಜುಗಳಂ ತಡೆಯದೆ ಕರ್ಪೂರದ ಪಿರಿಯ ಮಳವೆಗಳಂ ತಂದಿಡು (ಸಂಕುಪು. ೦೦-೯೦) ; ಶಿಲೆಯ ಮಳವೆ ಹಡವಿನ ಮಳವೆ ಅರಿಷಣ ಮಳವೆ ಅಲ್ಲದ ಮಳವೆ (ಶಾಸಪ. ೩೭-೪ ; ಸು. 1200) ; ಬಿಗಿದ ಮಳವೆಯನೆಣ್ಣ ಗೊಪ್ಪರಿಗೆಗಳೊಳದ್ದಲಿ ಗಳಿಗಳಲಿ ಸೀರೆಗಳ ಸುತ್ತಲಿಯೊಂದು ಕೈವೀಸಿದನು ಕಲಿದ್ರೋಣ (ಕುವ್ಯಾದ್ರೋ. ೦೫-೩೨). **ಮಳವ$_1$**: ೧. × × × ತ್ತಿಯ ಮಳವಕೆ ಅ × × × ಹತ್ತಿ (ಕೋಕಶಾ. ೦೯೩೦. ಶಾಗವಾಡ ೩೭-೭ : 1148). **ಮಳವಿ** : ೧. ಬಿಳಿಜವಳಿ ಎಂಭತ್ತಱ ಮಳವಿ ಒಂದಕ್ಕೆ ಅಡ್ಡಪಟ ನೂಲ ತೊಲೆ (ಎಕ. V, ಬೇಲೂರು. ೬೫-೯೬ ; 1382). **ಮಳಿವೆ$_1$** : ೧. ಅರಿಸಿನ ಹೇರಿಂಗೆ ಪಲ ೨ ಸೀರೆಯ ಮಳಿವೆಗೆ ವೀಸ × (ಎಕ. XII, ಪಾವುಗ. ೪೩-೪೩; ಸು. 1150). [ ? ]

**ಮಳವೆಯ** ' ಮಳಬಿಯ ' ನೋ.

**ಮಳಹಿಗ** (ನಾ). ಸೇವಕ (?) : ನಿಮ್ಮ ಪಶು ನಿಮ್ಮ ಮಳಹಿಗ ನಿಮ್ಮ ಕೆರ್ಪ ತಹ ನಿಮ್ಮಂಗಳವನುಡುಗುವಂ (ಲಂಗಪು. ೨೩-೮). [ ? ]

**ಮಳಾರ** ' ಮಲಾರ$_2$ ' ನೋ.

**ಮಳಿ, ಮಳ್ಳಿ$_2$** (ನಾ). ಚಿಪ್ಪುಳ್ಳ ಒಂದು ಬಗೆಯ ಜಲಚರಪ್ರಾಣಿ : ಮಳಿಯು ಒಮ್ಮೆ ತತ್ತಿಯಿಟ್ಟರೆ ಸಾವಿರಾರು ಇಡುವುದು (ಬಾಲಕೃ. II-೯೩೬); ನಾನು ಆ ದಿನ ರಾತ್ರಿ ಮಳಿಯ ಓಡು ಬೀಸಾಡುವುದಕ್ಕೆ ತೆಂಗಿನ ಕಟ್ಟೆಯ ಹತ್ತಿರ ಬಂದಿದ್ದೆ (ಕಲ್ಯಕ. ೦೫). **ಮಳ್ಳಿ$_2$** : ಇದೇ ಜಾತಿಯ ಇನ್ನೊಂದು ತರದ ಹುಳಕ್ಕೆ ನಮ್ಮ ದೇಶದಲ್ಲಿ ನಾವು ಮಳ್ಳಿ ಎಂದೆನ್ನುತ್ತೇವೆ (ಮುಂಬಯ. ೫-೦೦). [ ? ]

**ಮಳಿಗೆ** ' ಮಳಿಗೆ' ನೋ.

**ಮಳಿನ** ' ಮಲಿನ ' ನೋ.

**ಮಳಿನತೆ** ' ಮಲಿನತೆ$^1$ ' ನೋ.

**ಮಳಿನತ್ವ** ' ಮಲಿನತ್ವ ' ನೋ.

**ಮಳಿಮ್ಲುಚ$_1$** ' ಮಲಿಮ್ಲುಚ ' ನೋ.

**ಮಳಿಮ್ಲುಚ$_2$** (ನಾ). ಕಪ್ಪಾದುದು : ಮೇಚಕ ಸರಸಿಜವಿಜಯವಿಲೋಚನ ಮತಿವಿಭ್ರಮಂ [ತಳೆದ] ಪೂರ್ವ[ಮ]ದಾಲೋಚಿರ್ದಾಳರುಚಿನಿಟಿಳಂ ಕಾಚ ಮಣಿದ್ಯು[ತಿ] ಮಳಿಮ್ಲುಚಂ ಕಚಮವಳಾ (ಪರ್ವಪು. ೦೧-೨೪).
[P ಇದು ' ಮಳೀಮಸ ' ಎಂಬುದರ ಅಪಲಿಖಿತವಿರಬಹುದು]

**ಮಳಿಷ್ಠ** (ನಾ). ಬಹುಹೊಲಸಾಗಿರುವವನು,– ಕೊಳಕ : ರವಿಜಂ ವೃಶ್ಚಿಕಸಂಸ್ಥನಾಗೆ ಚಪಲಾಂಗಂ . . . ಶನಿಗೇಹದೊಳ್ ನಿಲೆ ಮಳಿಷ್ಠಂ (ಜಾತಕ. ೦೭-೩೩). [ಸಂ. ಮಲಿಷ್ಠ]

**ಮಳೀಮಸ** 'ಮಲೀಮಸ' ನೋ.

**ಮಳೆ** 'ಮಱೆ$^3$' ನೋ.

**ಮಳೆಗರೆ** ' ಮಳೆಗಱೆ$^3$ ' ನೋ.

**ಮಳೆಗಱೆ$^3$, ಮಳೆಗರೆ** (ಕ್ರಿ). ೧. ಮೋಡವು ಕರಗಿ ಆಕಾಶದಿಂದ ನೀರು ಸುರಿ : ಮಳೆ ಬರು : ಮಳೆಗಱೆವುದು ಬೆಳೆ ಪೆರ್ಚುವುದು . . . ಪಳವಿಲ್ಲದ ಪತಿವ್ರತೆಯರ ನಡತೆಯ ಬಳದೊಳೆಂಬರು ಬಲ್ಲವರು (ಪದಿ. ೨-೪); ವರ್ಷರ್ತು ಹರ್ಷಮನೆರಚುವಂತೆ ಕಾರ್ಮುಗಿಲ್ ಮುತ್ತಿ ಗಗನವನ್ನೆಡೆ ಮಳೆಗರೆಯೆ (ಚತ್ರಾಂಗ. ೭೦-೦೯೫೮). ೨. ಧಾರಾಕಾರವಾಗಿ ಸುರಿ : ಅಧಿಕವಾಗಿ ವರ್ಷಿಸು : ನಟ್ಟಡವಿಯಲ್ಲಿ ಕೆಂಡದ ಮಳೆಗಱೆದು ಊರಡವಿಯನೊಂದಾಗಿ ಸುಟ್ಟಿತ್ತು ನೋಡಾ (ಅದವ. ೪೧-೦೦೬); ದೇವಾವಳಿ ಗಳಾಕಾಶದಿಂದವೆ ಹೂವಿನಲಿ ಮಳೆಗಱೆದರಾ ಕುಂತೀಕುಮಾರರಿಗೆ (ಸಂಕಪ. ೨೦-೦೪೦). **ಮಳೆಗರೆ** : ೧. ಎಮ್ಮೆ ಮೇಲೆ ಮಳೆಗರೆದ ಹಾಗೆ (ಗಾದೆ). ೨. ಅವನ ಮೇಲೆ ಪ್ರಶಂಸೆಯ ಮಾತುಗಳೊ ಮಳೆಗರೆದುವು (ಕಾದ್ರಿ. ೪೦). [ ಮಳೆ (< ಮಱೆ$^3$) + ಕಱೆ$^3_1$ ]

**ಮಳೆಗಾಡು** (ನಾ). ಒಂದೇಸಮನೆ ಸುರಿಯುವ ಮಳೆಯಿಂದ ಬೆಳೆಯುವ ದಟ್ಟವಾದ ಕಾಡು : ಆಗುಂಬೆಯ ಸುತ್ತುಮುತ್ತಲಿನಂಥ ಅರಣ್ಯಕ್ಕೆ rain forest –ಮಳೆಗಾಡು–ಎಂಬ ಪರಿಭಾಷೆಯನ್ನು ಉಪಯೋಗಿಸುತ್ತೇವೆ (ಹಸುಹೊ. ೨೬೩). [ ಮಳೆ (< ಮಱೆ$^3$) + ಕಾಡು$_2$ ]

**ಮಳೆಗಾಲ** 'ಮಱೆಗಾಲ' ನೋ.

**ಮಳೆಗುಟಕ** (ನಾ). ಮಳೆನೀರನ್ನು ಕುಡಿದು ಬದುಕುವುದೆಂದು ನಂಬಲಾದ ಒಂದು ಬಗೆಯ ಹಕ್ಕಿ ; ಚಾತಕ : "ಸಾರಂಗಃ, ಸ್ತೋಕಕಃ, ಚಾತಕಃ–ಇ ಮಳೇಗುಟಕನ ಹಕ್ಕಿ, ಚಾತಕಪಕ್ಷಿ" (ಸಿದ್ಧಾಂತಿ. ೦೫೮).
[ ಮಳೆ (< ಮಱೆ$^3$) + ಕುಟುಕ$_3$ ]

**ಮಳೆನಕ್ಷತ್ರ** (ನಾ). [ಜ್ಯೋತಿ] ಮಳೆ ಬರಲು ಸಹಾಯಕವಾಗುವಂತೆ ಸೂರ್ಯನು ತನ್ನ ಸಂಚಾರದಲ್ಲಿ ಬಂದು ಸೇರುವ ನಕ್ಷತ್ರಪ್ರದೇಶ, P " ಮಳೆನಕ್ಷತ್ರಗಳು–೧೬ : ಅಶ್ವಿನಿ, ಭರಣಿ, ಕೃತ್ತಿಕೆ, ರೋಹಿಣಿ, ಮೃಗಶಿರ, ಆದ್ರ್ರಾ, ಪುನರ್ವಸು, ಪುಷ್ಯ, ಆಶ್ಲೇಷ, ಮಖೆ, ಪುಬ್ಬೆ, ಉತ್ತರೆ, ಹಸ್ತ, ಚಿತ್ತೆ, ಸ್ವಾತಿ, ವಿಶಾಖ (ಪಂ)" (ಶ್ರೀವತ್ಸ. ೩೩೭) : ಮಹಾನಕ್ಷತ್ರವನ್ನು ಮಳೆನಕ್ಷತ್ರವೆಂದು ಕರೆಯುವುದೂ ವಾಡಿಕೆಯಾಗಿದೆ (ನಕ್ಷತ್ರ. ೪೯). [ ಮಳೆ (< ಮಱೆ$^3$) + ನಕ್ಷತ್ರ$_1$ ]

**ಮಳೆನೀರು** 'ಮಱೆನೀರ್' ನೋ.

**ಮಳೆಬಿಲ್ಲು** 'ಮಳೆವಿಲ್ಲು' ನೋ.

**ಮಳೆಮರ** (ನಾ). ಒಂದು ಬಗೆಯ ಮರ : (ವ್ಯಕಿ. ೩೪-೬೫೩).
[ ಮಳೆ (< ಮಱೆ$^3$) + ಮರ$_1$ ]

**ಮಳೆಮಾಡು** (ನಾ). ಮಳೆಗೆ ಮರೆಯಾಗಿ ಕಟ್ಟಿರುವ ಮೇಲ್ಛಾವಣಿಯ ಚಪ್ಪರ : ಒಂದು ಮಳೆಮಾಡನ್ನು ಹಾಕಿಸಿ, ಒಂದು ಕಾಫಿ ಹೋಟೆಲುತೆರೆದು ಕೊಡಬೇಕು (ಸ್ವಪ್ನಹೊ. ೩೭) ; ಮಳೆಗಾಲ ಬಿಟ್ಟಿಲ್ಲ . . . ಅಷ್ಟು ತೊಂದರೆಯಾದರೆ ಹೆಣ್ಣಿನ ಕಡೆಯವರು ಒಂದು ಮಳೆಮಾಡನ್ನು ಕಟ್ಟಿಸಲಾರರೇ ? (ಜಗುಕ. ೫೯). [ ಮಳೆ (< ಮಱೆ$^3$) + ಮಾಡು$_2$ (< ಮಾಡ$_1$ ) ]

**ಮಳೆಮುಗಿಲು** (ನಾ). ಮಳೆಯನ್ನು ಸುರಿಸುವ ಮೋಡ ; ಕಾರ್ಮುಗಿಲು : ಮಳೆಮುಗಿಲ ಮುಟ್ಟುವುವು ಬೆಟ್ಟಗಳು ನೆಗೆದು (ಇಂಗೀತ. ೪೮-೦೦);

ಮಳೆಮುಗಿಲ ವೇಣಿಯುಲಿ ಮಳೆಬಿಲ್ಲ ಹಾರಂ (ಶಬ್ದ. ೩೦-೩).
[ಮಳೆ (< ಮೞೆ³) + ಮುಗಿಲು (< ಮುಗಿಲ್)]

**ಮಳೆಬೋಡ** (ನಾ). = ಮಳೆಮುಗಿಲು : ವಿರಹಿಗಳೆಡೆಯನು ಬಿರಿಸುವ ಮಳೆಬೋಡ ಗಗನದೊಳಿದ್ದಿದೆ ನೋಡ (ಇಂಚಾಕ. ೯೦-೯೦).
[ಮಳೆ (< ಮೞೆ³) + ಬೋಡ$_1$]

**ಮಳೆಯಂಗಿ** (ನಾ). "ಮಳೆಯ ನೀರಿಳಿದು ಒದ್ದೆಯಾಗದ ಬಟ್ಟೆಯಲ್ಲಿ ಹೊಲಿದಿರುವ ಉದ್ದನೆಯ ಅಂಗಿ ; ನೀರಿಳಿಯದ ಬಟ್ಟೆಯ ಅಂಗಿ ; ಮಳೆಯಂಗಿ" (Rain-Coat. ಇಂಕ) : ಒಳಗೆ ಮಳೆಯಂಗಿಯಲಿ ಹುಟ್ಟುಬತ್ತಲೆ ಹೆಣ್ಣು (ಕಲಾಂ. ೭೯-೦೩). [ಮಳೆ (< ಮೞೆ³) + ಅಂಗಿ$_2$]

**ಮಳೆಯಾಲ** 'ಮಲೆಯಾಳ' ನೋ.

**ಮಳೆಯಾಳ** 'ಮಲೆಯಾಳ' ನೋ.

**ಮಳೆರಾಯ** (ನಾ). ಮಳೆಯ ಅಧಿದೇವತೆ ; ಇಂದ್ರ : ಬೋರೆನ್ನು ಮಳೆರಾಯ (ತರಂಪ. ೦೫೯-೪) ; ಬರಗಾಲ ಬಂದಾಗ ನಮ್ಮ ಜನಪದ ಭಕ್ತಿಯಿಂದ ಮಳೆಯ ಅಧಿಪತಿಯಾದ ಮಳೆರಾಯನನ್ನು ಆರಾಧಿಸುತ್ತದೆ (ಕಜಕ. ೦೯೩) ; ಹುಯ್ಯೋ ಹುಯ್ಯೋ ಮಳೆರಾಯ ಹೂವಿನ ತೋಟಕ್ಕೆ ನೀರಿಲ್ಲ (ಜಾಪ.).

**ಮಳೆರಾಯನ ಪೂಜೆ** = ಮಳೆಯನ್ನು ಬಯಸಿ ಇಂದ್ರನನ್ನು ಕುರಿತು ಮಾಡುವ ಪೂಜೆ. — ಉತ್ಸವ : ನಮ್ಮ ಜನರಲ್ಲಿ ಮಳೆರಾಯನ ಪೂಜೆಯಲ್ಲಿ ನಂಬಿಕೆ ಉಳಿದುಕೊಂಡಿದೆ (ಕಜಕ. ೦೯೩).
[ಮಳೆ (< ಮೞೆ³) + ರಾಯ]

**ಮಳೆವನಿ** 'ಮೞೆವನಿ' ನೋ.

**ಮಳೆವಿಲ್ಲು, ಮಳೆಬಿಲ್ಲು** (ನಾ). ಕಾಮನ ಬಿಲ್ಲು ; ಇಂದ್ರಧನುಸ್ಸು : ಪರಮಾತ್ಮನಾರೆಂದು ತಿಳಿಯಲೆಳಸುವೆಯಾ . . . ಮಳೆವಿಲ್ಲಿನುಯ್ಯಾಲೆಯಲಿ ತೂಗುತಿಹನು (ಗೀವಂ. ೩-೦೦) ; ಮಳೆವಿಲ್ಲ ಹಿಡಿದುದುಗಿ ಸೆಳೆಮಿಂಚ ಮಸೆಮಸೆದು (ಕಾರಿಪ. ೪೫-೬೦). **ಮಳೆಬಿಲ್ಲು** : ಅರ್ಜುನನು . . . ಮಿಂಚು ಮಳೆಬಿಲ್ಲುಗಳಿಂದೊಡಗೂಡಿದ ಮೇಘದಂತೆ ಕಾಣಿಸಿಕೊಂಡನು (ವಕಥಾ. ೨೩) ; ಮಧುರಮೋಹನಮಾಯೆ ಮುಂಗಡೆ ಮಳೆಬಿಲ್ಲಿನ ಬಣ್ಣದ ಹಾಸನಲಿ ಕಟ್ಟಿ ಚುಂಬಿಸಿ ಸೆಳೆದಿತ್ತು (ಕಾಂಚಜ. ೩೩-೬). P ಇದು ಇಂಗ್ಲೀಷಿನ 'Rain-bow' ಎಂಬುದರ ಅನುವಾದ.
[ಮಳೆ (< ಮೞೆ³) + ಬಿಲ್ಲು$_1$ (< ಬಿಲ್$_2$)]

**ಮಳೆಸಗಡೆ** (ನಾ). ಒಂದು ಬಗೆಯ ಸಸ್ಯ : "ವಾಲುರ್ಸಿ, ಮಳೆಸಗಡೆ . . . ಲೈಸಾಬ್ರು" (ಸಸ್ಯಪ. ೦೩೭) ; ವಾಲುರ್ಸಿ, ಮಳೆಸಗಡೆ (ಪ್ರುಶಿಗ. ೭೬-೧೬೦೪).
[ ? ]

**ಮಳೆಹನಿ** 'ಮೞೆವನಿ' ನೋ.

**ಮಳೆಹುಳು** (ನಾ). ಮಣ್ಣುಹುಳು ; ಎರೆಹುಳು : ಮಳೆಹುಳುಗಳಂತೆ ಎರಡೆರಡು ಮುಖಿಗಳೆಳ್ಳ ರಾಜ ರಾಣಿಯರನ್ನು ಕಂಡು ನನಗೇನು ಪ್ರೀತಿ ಹುಟ್ಟಿದಿದ್ದರೂ . . . ಪೆಚ್ಚಿಕೆಯಾಯಿತು (ಗಾಳಕ. ೨೦).
[ಮಳೆ (< ಮೞೆ³) + ಹುಳು (< ಪುೞು)]

**ಮಳೆಬುತ್ತಯ್ಯ** (ನಾ). ಒಬ್ಬಾತನ ಹೆಸರು : ತೊಣ್ಣ ವಾಡಿಯುಪಳ್ಳಿಯ ಮಳೆಬುತ್ತಯ್ಯನ ಮಗ ಅಯ್ಯಪಯ್ಯ ×ಣರ ಸತ್ತ ಹಾಲೆಯರಿಕಣ ವೊಂಗೆ ಕೊಟ್ಟ ಮಣ್ಣು ಖ ೧ (ಎಕ. III (R). ಗುಂತ್ಲುಪೇ. ೫೯-೩; 975).
[? + ಅಯ್ಯ$_1$]

**ಮಳ್ಗಿಸು** 'ಮೞ್ಗಿಸು' ನೋ.

**ಮಳ್ಗು** 'ಮೞ್ಗು' ನೋ.

**ಮಳ್ಳು** 'ಮೞ್ಪು$_1$' ನೋ.

**ಮಳ್ಪಗಿರಿ** (ನಾ). ಒಂದು ಬೆಟ್ಟದ ಹೆಸರು : ವಾಯವ್ಯಾಂ ಮಳ್ಪಗಿರಿ . . . ತತಃ ಪೂರ್ವತಃ ವಟವೃಕ್ಷಂ ಪ್ರಾಪ್ತಃ (ಪ್ರುಅಂ. ೦೯೩೫. ೪೦-೬೪ : 951).
[? + ಗಿರಿ$_1$]

**ಮಳ್ಳ** 'ಮರುಳ' ನೋ.

**ಮಳ್ಳತನ** 'ಮರುಳ್ತನ' ನೋ.

**ಮಳ್ಳಪೂರ** (ನಾ). ಒಂದು ಸ್ಥಳದ ಹೆಸರು : ಬೆಣ್ಣೆಯೂರ ದೇವ ಗಣನುಂ ಮಳ್ಳಪೂರದ ಪೆರ್ಮಾಡಿಗಾವುಣ್ಣನುಂ (ಎಕ. VI. ಕಕ್ಕಪು. ೩-೦೫; 8997).
[ ? ]

**ಮಳ್ಳಿ$_1$** 'ಮರುಳಿ' ನೋ.

**ಮಳ್ಳಿ$_2$** 'ಮಳಿ' ನೋ.

**ಮಳ್ಳಿಯ** (ನಾ). ಒಬ್ಬಾತನ ಹೆಸರು : ದೋಣಗಾವುಣ್ಣರುಂ ಎಳಗಾವುಣ್ಣರುಂ ಮಳ್ಳಿಯರುಂ ಉಜ್ಜಾರಾಥಾ(?ವಾ)ಸವೆಱೆಯರುಂ ಹ ××× ಕರಣಸಹಿತವಾಗಿ (ಇಕ. XI, ೬೦-೦೭: 567).
[ ? ]

**ಮಱ** 'ಮೊಱ' ನೋ.

**ಮಱಕೆಂದು** (ಕ್ರಿ). ಮೈಮರೆತು ಮಲಗು ; ಗಾಢವಾಗಿ ನಿದ್ರಿಸು : ಪುರೋಹಿತನುಮಾ ಮನೆಯೊಳೊಂದೋವರಿಯೊಳ್ ಮಱಕೆಂದಿದಂ (ಶಂಕಥಾ. ೩-೪ ವ); ಮಹಾಟವಿಯೊಳ್ ಮಱಕೆಂದಿ ನೀಮುಮಿಾ ಮರದಡಿ ಯೊಳ್ ಶಿವಾಶಿವರವಂಗಳನೆಚ್ಚಱುವಂತುಟಾದುದೇ (ಶಂಕಥಾ. ೩-೦೦); ಮಱಕೆಂದಿದರನೆತ್ತುವಂತೆ ನಾಲ್ವರುಮನೆತ್ತಿ ತಾಂ ಮುನ್ನಂ ತಂದರಣಿಯಂ ಕೊಟ್ಟು ಕೃತಾಂತನಂತರ್ಧಾನಕ್ಕೆ ಸಂದು (ಶಂಕಥಾ. ೬-೯೯ ವ). 'ಮಱ ಬಂದು', 'ಮಱಸುಂದು$_1$' ಪರಾ. [< ಮಱ³$_1$ + ಕೆಂದು$_1$]

**ಮಱಪಿಕ್ಕು, ಮಱಪಿಕ್ಕು** (ಕ್ರಿ). ೧. ಮರೆಮಾಡು ; ಮುಚ್ಚಿಡು ; ಅಡಗಿಸು : ದೈನ್ಯಮಂ ಗಳಪಲೊಡರ್ಚೆ ಗದ್ಗದಿಪ ಮಾತುಗಳಂ ಮಱಪಿಕ್ಕಿ . . . ಕೂಡುವ ಪಾಣ್ಬೆಯ ಜಾಣ್ಮೆ ಸಾಲದೇ (ರಾಜಶೇ. ೦೦-೩೫). ೨. ವಂಚಿಸು ; ಮೋಸಗೊಳಿಸು : ಮಱಪಿಕ್ಕಿ ನಿಮ್ಮರಸನಂ ಜವ ನೊಯ್ದುದನಿತ್ತ ಕೇಳಿರೇ (ವರ್ಧಪು. ೯-೬೦); ವಿಶ್ವಾಸಘಾತಕರೊಯ್ದರ್ ಮಱಪಿಕ್ಕಿ ನಮ್ಮರಸನಂ ನಮ್ಮಲ್ಲಿಗಿನ್ನೇವೆವೋ (ಪುಷ್ಪಪು. ೦೩-೯೯). ೩. ಪರವಶಗೊಳಿಸು ; ಮೈಮರೆಯುವಂತೆ ಮಾಡು : ತುಂಬಿಯುಂದದಿಂ ಚುಂಬಿಸಿ ಸೊಕ್ಕಿಸಿಕ್ಕಿ ಮಱಪಿಕ್ಕಿ ಪದಂ ಬಿಡೆ . . . ಬಾಲೆಯುಭಯಂಗಳೆದಂ ನವಸಂಪ್ರಯೋಗದೊಳ್ (೦೬ಚಾವ. ೦೩-೦೭) ; ಮಱಪಿಕ್ಕಿ ನೋಡುವ ಮಱಿಯ ತುಱುಗೆವೆಗಣ್ಬೆಳಗು ಬಳೆಯೆ ಚಾಮರದೆಲರಿಂ ನೆಱೆ ಮಿಳಿರ್ದು ಮಿಱುಪ ದುಗುಲದ ಸೆಱಗೆಂದೆಂದು ತೆಗೆಯುಲಾತಂ ಬಗೆದಂ (ಚಂದ್ರಪು. ೪-೭೩). **ಮಱಪಿಕ್ಕು** : ೨. ಎನ್ನ ಮಱಪಿಕ್ಕಿ ರಾತ್ರಿಯೊಳು ಸುಟ್ಟಿರಾದಡೆ ತೆಱೆಯುವನು ಕೊಡದಿರ್ದಡೆನ್ನಾಣೆ (ಪಕಾಕ. ೦೦-೩೯). ೪. ಅಡಗಿರು ; ಅದೃಶ್ಯವಾಗು : ಮಱಪಿಕ್ಕಿ ಪಿಡಿದು ಕಟ್ಟಿದ ಮಱುಕಮನೀನಿಂತು ತೋರ್ಪಯಲ್ಲೆ ನೀನೀ ನೆಱೆದ ಚತುರ್ವಲಸಹಿತಂ ತಱಿಸಂದೆನ್ನಿದಿರೊ ಳಾಂತು ತೋರ್ಪುದು ಛಲಮಂ (ಬಂಪಾ. ೦೦-೬೦). [ಮಱಪು$_2$ + ಇಕ್ಕು]

**ಮಱಪಿಡು, ಮಱಹಿಡು** (ಕ್ರಿ). ೧. ಮೋಸಮಾಡು ; ವಂಚಿಸು : ಮನೆಯವರ ಮಱಪಿ [ಪಾಠಾಂ. ಹಿ]ಟ್ಟು ಮುಸುಕಿಟ್ಟು ಪೊಱಮಟ್ಟು ಸುಳಿವ ಜನಕೆ ಶಂಕಿಸುತ (ಕಕಾಕ. ೪-೨೯). **ಮಱಹಿಡು** : ೨. ಮರೆಮಾಡು; ಅಡಗಿಸು; ಗುಟ್ಟಾಗಿಡು: ಬಿಸಜಾಕ್ಷಿಯಾ ಮಾತ ಮಱಹಿಟ್ಟು ಮನದೊಳಾ ರೈವುತರಲು (ಬ್ರಾಥಾ. ೨-೨೯). [ಮಱಪು$_2$ + ಇಡು$_1$]

**ಮಱಪು$_1$** (ಕ್ರಿ). ಮರೆಯುವಂತೆ ಮಾಡು ; ಮರೆಸು : ಇನಿಯನ ಚಿಲ್ಲನಿಕ್ಷಿಪ್ತ ಸೊಕಂ ನುಡಿಗೇಳ್ವಳಪಂ ನಿಮಿರ್ಚದು . . . ಅಪ್ಪಿನದೊಂದು ನೇರ್ಪು ಚುಂಬನಮನವಜ್ಞೆ ಮಾಡುವುದು ಚುಂಬನದಿಂಪು ರತಕ್ಕನಿತ್ತು ಸಮ್ಮನಿಸದು ತದ್ರತಂ ಮಱಪುದೇನುಮನೊರ್ಮೊದಲಾಗಳೇಗುಮೆಂ (ಚಂದ್ರಪು. ೮-೬೨).
[ಮಱ³$_1$ + -ಪು$_1$]

**ಮಱಪ್ಪು₂**, ಮರಹು, ಮಱಹು (ನಾ). ೧. ಮರೆಯಾಗುವಿಕೆ; ಅದೃಶ್ಯವಾಗುವಿಕೆ ; ಅಡಗುವಿಕೆ : ಕ್ರಮದಿಂದ ಪಗಲರಸಿಗೆಸೆವ ಜವ್ವನದ ಸಿರಿಯುಮುವು ಜಾಱಿದೊಡೆ ಮಱಪಾಗಿ ಕೆಂದಳಿರ್ಗ್ಗೆಯೊಳಮರ್ದಿರ್ದು ಜಗುಳ್ದ ಮುತ್ತಿನ ಮಣಿಯುದಬ್ಧಿಯೊಳು ಬಿಳ್ದುದೊಯೆನಲ್ . . . ವಿಮಲಸಾಗರದೊಳ್ ಮುಳುಂಗಿದನಹೊ ಸೂರ್ಯಂ (ತೀಠಮ. ೩-೦). ೨. ಮರೆಮಾಚುವಿಕೆ ; ಅಡಗಿಸಿಡುವಿಕೆ : 'ಮಱಪಿಕ್ಕು' ಪರಾ. ೩. ಮೋಸ ; ವಂಚನೆ : 'ಮಱಪಿಕ್ಕು' ಪರಾ. ೪. ತನ್ಮಯತೆ; ಪರವಶತೆ ; ಮೈಮರೆಯುವಿಕೆ : ಮುಸುಂಕನೋವನೋಸರಿಸೆ ಮುಸುಂಕಿದಳ್ ಮಗುೞ್ ಮೆಯ್ಯತೆಯುಂ ಪುಳಕಾಂಕುರಂಗಳಿಂ ದರಹಸಿತಂಗಳಿಂ ವದನಪಂಕಜಮುಂ ಮಱಪೆಂಬ ಮುಚ್ಚುಳಿಂದರೆಮುಗುಳ್ವೆಚ್ಚಿಯುಂ ಸವಿಯ ಮುಚ್ಚಿದ ಮುಚ್ಚಿಯಿನಾಕೆ ಚಿತ್ರಮುಂ (ಲೀಲಾವ. ೦೩-೦೨) ; ಸಾಂಧ್ಯ ಮಯೂಖಂ ಪೆರ್ಚೆ ಮರ್ಬುಂ ಸುಸಿಲು ಮಱಪ್ಪು ಪಕ್ಷಿಸ್ವನಂ ಭೈರವೀರಾಗ ಮಗುರ್ವಂ ಬೀಱಿ (ಸೂತ್ರಸು.೯-೦). **ಮರಹು :** ೫. ಮರವೆ ; ಮರೆವು ; ವಿಸ್ಮೃತಿ : ನೋಡುತಲಿದ್ದರು ಕಾಣದು ಆಲಿಸುತಿದ್ದರು ಕೇಳದು ಸರ್ವೇಂದ್ರಿಯವಿದಕಾಗಿರೆ ಪ್ರತ್ಯಕ್ಷವೆ ಮರಹು (ಗತೀಶ. ೨೪-೨೪). **ಮಱಹು:** ೪. ಸ್ಮರಣಿಗಿನ ಮಱಹಿನ ಕುಱುಹಿನ ಕಱಿಗೊರಲಂ ನಿಜಸಮಾಧಿಯೊಳ್ ಸೇದಿರ್ದಂ (ನಂಜ. ೩-೩೬) ; ಸಂತತಂ ಲಿಂಗಪ್ರಸಾದದ ಸಂತಸದ ಮಱಹಿಂದಲಿಪ್ಪಪೊಲಂತು ಜನನಿಯ ಮೊಲೆಯನುಣ್ಣದೆ ಗುಮ್ಮನಿರುತಿಹನು (ಏಕಪ್ರ. ೩-೩೪). ೫. ಎನಗೆ ನಿಮ್ಮ ನೆನಹಾದಾಗಲೆ ಉದಯ ಎನಗೆ ನಿಮ್ಮ ಮಱಹಾದಾಗಲೆ ಅಸ್ತಮಾನ (ಏಕಪ. ೪೯೯) ; ಕಾವ್ಯಮುಂ ನಡೆಸುವಾತಂ ರಸಾವೇಶಮಱಹಾಲಸ್ಯವೆಡೆಗೊಳಲು ತಪ್ಪುಗಲ್ಲದೆ ಕಾವ್ಯಕರ್ತೃ ತಪ್ಪುವನೆ (ಪಶಾಶ. ೦-೨೩). ೬. ಪ್ರಜ್ಞೆತಪ್ಪುವಿಕೆ ; ಮೂರ್ಛೆ : ಮಱಹ ಪಡೆಯರು ಘಾಯ ಖಂಡಿಗೆ ತೆಱಹುಗಾಣರು . . . ಹೊಗಳುವಡಱಿಯೆನಗ್ಗದ ಭೀಮ ದುರಿಯೋಧನರ ರಣರಸವ (ಕುವ್ಯಾಗ. ೩-೨೩). ೭. ತಿಳಿವಳಿಕೆಯಿಲ್ಲದಿರುವುದು ; ಅಜ್ಞಾನ : ಮಱಹುಳ್ಳವಂಗೆ ನೂಱುಬುದ್ಧಿಯುಂ ಪೇೞ್ದೊಡಂ ಕಿಡುವುದು (ಶಂಕಕಂ. ೦೩೭-೩) ; ಶುಭಕರ ಸತ್ಕ್ರಿಯೆಗಳೆಂಬ ಬೀಜಮುಂ ಬಿತ್ತಿ ಮಱಹೆಂಬ ಕಳೆದೆಗೆದು (ಕಧ್ಯಾ. ೦೩-೦೪) ; ಮಱಹುಳ್ಳ ಮನುಜರಿಗೆ ತೆಱನಾವುದಱಿವುದಕೆ (ಸರ್ವಜ್ಞ. ೬೬). ೮. ಅಲಕ್ಷ್ಯ ; ಉಪೇಕ್ಷೆ : '' ಪ್ರಮಾದಃ, ಅನವಧಾನಂ – ಈ ೨ ಮಱಹು '' (ಪಂಚತಂ. ೦೨೪-೬೪).

[ಮಱ್³₁ + – ಪ್ಪು]

**ಮಱಲ್** (ನಾ). ಸಾವು ; ಮರಣ : 'ಮಱಲಿಱಿ' ಪರಾ.

[ದೇ.॥ ತಮಿ. ಮಲ. ಮಱಲ್]

**ಮಱಲಿಱಿ** (ಕ್ರಿ). ಸಾಯುವಂತೆ ಹೊಡೆ,–ಚುಚ್ಚು : ಗೊಜ್ಜಿಗನೆಂಬ ಸಕಲಚಕ್ರವರ್ತಿ ಬೆಸಸೆ ದಂಡುಮಂದ ಮಹಾಸಾಮಂತರಂ ಮಱಲಿಱಿದು ಗೆಲ್ದ ಸಾಮಂತಚೂಡಾಮಣಿಯ ಬೀರಮುಮಂ (ಶಂಶಾ.೯-೩೨ ಪ)

[ಮಱಲ್ + ಇಱಿ₁]

**ಮಱಲುಂದು** (ಕ್ರಿ). ಮೈಮರೆತು ಮಲಗು : ಪ್ರಿಯದರ್ಶನನೊಂದು ದಿವಸಂ ತನ್ನ ಭಾರ್ಯೆವೆರಸು ಕದಳೀವನದೊಳ್ ಮಱಲುಂದಿದಲ್ಲಿಗೆ ಕಾಳಿಂಗನಾಗಂ ಬಂದೊಡದಱ ಮೇಗೆ ಕಾಲಂ ನೀಡಿದೊಡೆ ಕರ್ಚಿತ್ತು (ವಡ್ಡಾರಾ. ೩೬-೨೫); ದಿವ್ಯಮೂರ್ತಿ ಸಹಿತಾಂಬರಭೂಷಣ ದಿವ್ಯಮಾಲೆಗಳ್ ನೆಱೆದೊಡವುಟ್ಟೆ ಮುನ್ನೆ ಮಱಲುಂದಿದನೆೞ್ಚ್ತುವಂತೆ ಪುಟ್ಟಿದಂ (ಆದಿಪು. ೨-೬೨) ; ಈ ಮಱಲುಂದಿದರನೆತ್ತಿ ನಿಬಿರುಪೂರ್ವೆಯಿ ಪೊಸೆದು ಮುಕ್ಕುವೆಂ (ಕಂಕಹಾ. ೩-೦೬ ಪ) ; (ಪೆರೆಯುರ್ಚಿ) ದಾಂಟಿ ಕೋಳ್ದ(ಲ್ದ)ಪ್ಪಿರೆ ಪಗೆಗೊಳೆ ಸೊರ್ಕೆ ಶಂಕೆ ದೊರೆಕೊಳೆ ವಿಷಮುಬ್ಬರಿಸೆ(ಸಿ) ಮಱಲುಂದೆ ತಮ್ಮೊಳ್ ನೆರೆದೆಡೆಯೊಳ್ ಕಾ(ನಾ)ಡೆ ಪಾವು ಕೊಳ್ಗುಂ ನರನಂ (ರೋಣಸೂತ. ೦೦-೨). 'ಮಱಕೆಂದು', 'ಮಱಸುಂದು₁' ಪರಾ.

ಮಱಲುಂದುವೋವರಿ = ಮಲಗುವ ಮನೆ ; ಶಯ್ಯಾಗೃಹ : ವಿದ್ಯುಚ್ಚೋರಂ . . . ಅರಮನೆಯಂ ಪೊಕ್ಕರಸನ ಮಱಲುಂದುವೋ[ವಾ. ಪವಡಿಪೋ]ವರಿಯಂ ಪೊಕ್ಕು (ವಡ್ಡಾರಾ. ೦೨೩-೦೦).

[< ಮಱ್³₁ + ಉಂದು₁]

**ಮಱವ** (ನಾ). ಒಂದು ಬಗೆಯ ತೆರಿಗೆ (?) : ತಿಪ್ಪೆಸುಂಕ ಮನೆದೆಱೆ ಪಾರಿಪಾಯ ಹೊಲೆಗೊಱೆ ಮಱವ ಈಂತಿನಿತುಮಂ . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಶಾಸನ. XX. ೦೫೯-೯೩; 1176). [ ? ]

**ಮಱವಡು** (ಕ್ರಿ). ಮೈಮರೆ ; ಪರವಶವಾಗು : ಅತ್ಯಾಸಕ್ತಿಯಿಂ ಮಱವಟ್ಟರಂತೆಯುಂ ಚಿತ್ರಿಸಿದರಂತೆಯುಂ ಮೂರ್ಛೆವೋದರಂತೆಯುಂ . . . ನಿಂತುಕಡೆ ನೋಡುತಿರ್ದಂ (ಕಾದಂಪೂ. ೬೪೬) ; ಸಭೆ . . . ತನತನಗೆ ಬೆಱಗಾಗಿ ಮಱವಟ್ಟು ಕೇಳುತಿರೆ (ತಿರುಶ. ಕೀ. ೦೩-೦೪). 'ಮರವಡು' ಪರಾ.

[ಮಱವು + ಪಡು₁]

**ಮಱವಣೆ** (ನಾ). ಮರೆಯುವಿಕೆ ; ವಿಸ್ಮೃತಿ : ಗತಿಮತಿ ಚೈತನ್ಯ ಶಬ್ದವುಳ್ಳನ್ನಕ್ಕ ಕ್ರಿಯೆಂತಂತೆ ನಡೆವುದು ಮಱವಣೆ ಬೇಡ ಕಂಡಾ ಮನವೆ (ಶಧಗೋ. ೨೪-೦೦೪); ಹಸಿವು ತೃಷೆಯು ಶೋಕ ಮೋಹ . . . ವಿಷಸಮಾನವಾದ ಬಹಳವ್ಯಸನ ಮಱವಣೆ ಮುಸುಕಿ ಕವಿದ ವ್ಯಾಧಿನಂತೆ ಅಡಗಿ ಮುಪ್ಪುಗೊಂಬ ರೋಗ (ಕಪಶ. ೦೬೯-೦).   [< ಮಱವು]

**ಮಱವಿ** (ನಾ). ೧. ಅಜ್ಞಾನ ; ತಿಳಿಗೇಡಿತನ : ನಿಮ್ಮ ಮನ ಮಱವಿಯನು ನೀಗಾಡಲೊಲ್ಲದೆ ಬಱಿದೆ ನಾನೆನ್ನಜ್ಞಭಾವದೊಳಱಿದೆನೆಂದರೆ ಸಾಧ್ಯವೇ (ಹರಿಭರು. ೩-೦೦). ೨. ಅಲಕ್ಷ್ಯ ; ಉಪೇಕ್ಷೆ : " ನಪ್ರಮಾದ್ಯೇತ–ಮಱವಿಯಂ ಮಾಡದಿರ್ಕೆ " (ಶಿಕಿಪಾ. ೨೪-೭೨).

[ಮಱ್³₁ + – ವಿ₁./ತಮಿ. ಮಱವಿ]

**ಮಱವು**, ಮರವು, ಮರೆವು (ನಾ). ೧. ಎಚ್ಚರವಿಲ್ಲದಿರುವ ಸ್ಥಿತಿ ; ಜಾಗೃತವಾಗಿರದ ಸ್ಥಿತಿ : ಅಱಿವಿಗೂ ಮಱ[ಱ]ವಿಗೂ ಒಡಲಾಯಿತ್ತೆ ಲಿಂಗ (ಪ್ರೋಲಿಪಾ. ೩-೭). ೨. ಮೂರ್ಛೆ ; ಬವಳಿ : ಮಱವು ಮಗುವಿಗೆ ಹೊಲ್ಲ ಕುರುವು ಕುಂಡೆಗೆ ಹೊಲ್ಲ (ಸರ್ವಜ್ಞ. ೭೨೪). **ಮರವು :** ೧. ಮರವು ತರುವಿರಿ ಮುಪ್ಪಸ್ವಪ್ನವೇ ತೋರಿದುದೊ (ಶಂಗಾಶಾ. ೫-೦೦-೦೪). ೩. ನೆನಪನ್ನು ಕಳೆದುಕೊಂಡ ಸ್ಥಿತಿ ; ಜ್ಞಾಪಕವಿಲ್ಲದಿರುವುದು : ಅಕಸ್ಮಾತ್ತಾಗಿ ಸಿಕ್ಕು ಬಿದ್ದರೆ ಮರವಿನ ನೆಪದಲ್ಲಿ ಅವನು ತನ್ನ ಸಜ್ಜನಿಕೆಯನ್ನು ಕಾಪಾಡಿಕೊಳ್ಳಬಲ್ಲನು (ದೀಕಪ್ಪ. ೬೨). **ಮರೆವು :** ೩. ನಮ್ಮ ಅನುಭವಕ್ಕೆ ಬಂದ . . . ಕೆಲವನ್ನು ಸ್ಮರಿಸಿಕೊಳ್ಳಲಾರೆವು. ಮನಸ್ಸಿನ ಈ ಸ್ಥಿತಿಯೇ ಮರೆವು (ಬಿಸ್ಥ. ೫೩೦).

ಮಱವುಮಾರದೆ = ವಿವೇಕಶೂನ್ಯತೆ ; ಅಜ್ಞಾನ : ಅಱಿವಿನೊಳಗೆ ಅಱುಹಿನ ತಿರುಳಾಗಿ ಮಱವುಮಾರದೆಯಿಲ್ಲದೆ ನಿಜಪದವು ಸಾಧ್ಯವಾದ ಬಳಿಕ ಆವುದು ವರ್ಮ ಆವುದು ಕರ್ಮ (ಅರಶಿಲಿ. ೨೫೨-೦೦೫೦).

[ಮಱ್³₁ + – ವು]

**ಮಱವುಡಿ** (ನಾ). ವಿಸ್ಮರಣೆಯನ್ನುಂಟು ಮಾಡುವ ಒಂದು ಬಗೆಯ ಔಷಧಿಚೂರ್ಣ (?) : ಮಱು[ಱ]ವುಡಿ ಮದ್ದು ಮೈಯ್ಯುಱದಂತೆ. . . ಮನವೆಣ್ಣಗಳು ಮಱೆವರು ಮನೆಗೆಲಸವನು (ಶೀಬಸಂ. ೬-೯೨) ; ಅನ್ಯಯದ ಮದ್ದು ಮಱುವ[ಱವ]ಡಿಯಿಂದ ಮಡಿಯಿಪರೊ (ಶೀಕ್ಕೃಶಿ. ೫-೨೫-೯೫).

[< ಮಱವು + ಪುಡಿ]

**ಮಱವೂರ್** 'ಮರವೂರ್' ನೋ.

**ಮಱವೆ**, ಮರವೆ₁ (ನಾ). ೧. ಮರವು ; ಜ್ಞಾಪಕವಿಲ್ಲದಿರುವುದು : ಮಱವೆಯಿಂ ಜಾಡ್ಯಭಾವದಿಂದೀ ನವ್ಯದಿವ್ಯಕೃತಿಯೊಳ್ ದೋಷಮಿರ್ದೊಡಂ . . . ತಿರ್ದುಗೆ (ಕಧ್ಯಾ. ೦-೯೩). ೨. ಎಚ್ಚರವಿಲ್ಲದಿರುವ ಸ್ಥಿತಿ ;

ನಿದ್ರಾವಸ್ಥೆ : "ರ್ಘೋಂಘಿತೆನ್ನಲ್ ಮಱವೆಯುದುಂ" (ಕವಿಕಂ. ೧೬೦) ; ಅಱಿವು ಮಱವೆಗಳೆನಿಪ್ಪೆರಡಱ ಮಧ್ಯಾವಸ್ಥೆಯೊಳ್ ಮನಂ ಛಿರಿದಾನುಂ ತಱಿಸಂದು ನೃಪಮನೋಜಂ ಬೆಱಗಿಂ ಕರುವಿಟ್ಟ ಪುರುಷನಂತಿರುತಿರ್ದಂ (ಕುಸುಮಾ. ೯-೧೦೯) ; ತಳಿತ ಮಱವೆಯು ಪಾಳಿಯುವ ಕಗ್ಗೊಲೆಗೆ ಕವಿವ ಗುರೂಪದೇಶಾವಳಿಯಪೊಲು ಮೈದೋಱಿದವು ಬಿಮರುಚಿಯ ರಶ್ಮಿಗಳು (ಕುವ್ಯಾದ್ರೌ. ೧೭-೧೨). ೩. ವಿವೇಕಶೂನ್ಯತೆ ; ತಿಳಿವಳಿಕೆಯಿಲ್ಲದಿರುವುದು ; ಅಜ್ಞಾನ : ತೆಱನನಱಿವು ಮಱವೆಯು ಕಳೆದು ಮಾತಿನಂತೆ ನೀತಿಯುಳ್ಳೊಡೆ ಅವರನಜಾತರೆಂಬೆ (ದೇವಾಪ. ೨೨-೩೯) ; ಸುಜ್ಞಾನಪ್ರಭೆಯುಱಿದುಪಮಿಸಲಳವಡದ ಮಱವೆಯುಜ್ಜುದುದಾಗಳ್ (ಉದ್ಭಟ. ೬-೩). ೪. ಭ್ರಾಂತಿ ; ಭ್ರಮೆ : ಕಂಡೆನೆಂಬುದು ಕಂಗೆ ಮಱವೆ ಕಾಣೆನೆಂಬುದು ಮನದ ಮಱವೆ ಕೂಡಿದೆನೆಂಬುದು ಅಱುವಿನ ಮಱವೆ (ಅವಕಂ. ೨೦೦-೯೪೫) ; ನೀವು ನಿಮ್ಮ ಕರುಣದಿಂದೆ ಎನ್ನ ಒಡಲ ಮಱವೆಯ ಒಡೆದು . . . ಸತ್ತ್ವ ರಜ ತಮದ ಪರದೆಯ ಹಱಿಯಲೊಡನೆ ನಿಮ್ಮ ನಿತ್ಯದ ನಿಲವ ಕಂಡೆನಯ್ಯ (ಅಬಂದೇ. ೪-೫). ೫. ಜಡತೆ ; ಆಲಸ್ಯ : ಮನದ ಮಱವೆಯ ರ್ಘೂಮ್ಮಿನಲಿ ಕಪಿ ತನುವ ಸಂತೈಸುವ ರಱಿಶ್ರಮದನಿತಱೊಳ್ ನೂಕಿದನು ತುರಗವ ತರಣಿವಂಶಜನ (ಕೂರಾ. ೬-೩೦-೩೦). ೬. ಪ್ರಜ್ಞಾಹೀನ ಸ್ಥಿತಿ ; ಮೂರ್ಛೆ : ಹಸಿಅರಿಸಿನದ ರಸದಲ್ಲಿ ಬಿಳಿಯ ಗಣಜಿಲೆಯ ತೇದು ಜೇನುತುಪ್ಪದಲ್ಲಿ ನಸ್ಯಂಗೈಯಲು ಮಱವೆ ಮಾಣ್ಗುಂ (ಚಿಪ್ರಾ. ೬೦) ; ಸನ್ನಿಪಾತವಾಗಿ ನೆಱಿಯಿಲ್ಲದೆ ಮಱವೆಯಾಗಿದ್ದವರಿಗೆ ಕಾಲ ಹಿಮ್ಮಡಿಯಲ್ಲಿಯೂ ಲಲಾಟದಲ್ಲಿಯೂ ರಕ್ಷೆಯ ಹಾಕಲು ಮಱವೆ ತಿಳಿವದು (ವೈದ್ಯಸಾ. I. ೬೩). ೭. (ಕಣ್ಣು ಕಾಣಿಸದಂತೆ ತೆರೆಯು ಬರುವ) ಒಂದು ಬಗೆಯ ಕಣ್ಣಿನ ರೋಗ : ದುವರ್ಗಂಸದೋಷವೊ ನೀಲಿಗಣ್ಣೋ ಮಱವೆಯೋ [ಪಾಠಾಂ. ಮಾಱವೆಯೊ] ಕಣ್ಮುಟಿಲವೋ ಅರಿಯೋ (ಬಸವ. ೧೮-೭೩). ೮. [ಕಾಮಶಾ] ದಶಾವಸ್ಥೆಗಳಲ್ಲಿ ಒಂಬತ್ತನೆಯದು ; ಮೂರ್ಛೆ : ತಱಿಸಂದು ಮಱವೆಯಿಂದಂ ಕಿಱಿದಾನುಂ ಪೊಟ್ತುವಲ್ಲಿ ದೇವಿಯರಿಂತೆಚ್ಚಱಿಸಿಯ್ದುದಿರೆಯುಂ (ಕುಸುಮಾ. ೧೩-೫೭) ; ನೆಱೆ ನೋಟ ಚಿಂತೆ ಸಂಕಲ್ಪ ಜಾಗರ ಕೃಶ ಅರತಿ ಲಜ್ಜಾ ಹೀನೋನ್ಮಾದ ಮಱವೆಯನಿತು ಒಂಬತ್ತವಸ್ಥೆಗಳಿಪ್ಪಲು (ಹೇವಂಶಾಂ. ೦೨-೪೯). ಮಱವೆ$_1$ : ೧. ಈ ವಯಸ್ಸಿಗೇ ಈ ಮಱವೆಯಾದರೆ ಎಂಭತ್ತು ವರ್ಷ ಆದ್ಮೇಲೆ ಹೇಗೆ ಇರ್ತೀಯೊ ? (ಕೂಪಟ್ಟ. ೯) ; ನೋಡು ಕಂಡಕ್ಟರು ಕೊಡುವನು ಚಿಲ್ಲರೆ ತೆಗೆದುಕೊ ಮುಸುಕಿತೆ ಮಱವೆ (ಇಂಪಾಶ. ೦೦೯-೬೩). ೨. ಮಾತಿನಲಿ ಮಱವೆಯಲಿ . . . ಅತಿಶಯ ಮೂರ್ತಿಯನು ನೆನದು (ಜ್ಞಾಪಸಿಂ. ೦೭-೩೦). ೩. ಗುರುಕಟಾಕ್ಷೇಕ್ಷಣದಿ ಮುನ್ನಿನ ಮಱವೆಯೆಲ್ಲವು ಸರಿಯಲು (ಗಗಶಾ. ೨-೨೩). ೪. ಉಗ್ರಮಱವೆಯ ತೊಲಗಿಸಲು ನೃಪವಿಗ್ರಹದ ನಲುಗೆದ್ದು ಸಚಿವರೊಳಗ್ರಸುಮತಿಯು ಕರಸೆ (ಬಜ್ಞ. ೩-೦೪).

ಮಱವೆಯತಿಲಕ = ಮತ್ತೊಬ್ಬರ ಕಣ್ಣಿಗೆ ಬೀಳದಂತೆ, ಅದೃಶ್ಯವಾಗಿರುವಂತೆ ಮಾಡುವ ಅಂಜನದ ತಿಲಕ : ಮೂಲೋಕದವರುಗಳ ಮಱವೆಯ ತಿಲಕವಿಟ್ಟು ಘಣೆಯೊಳು ಗಗನಪಥಮುಡರ್ದು ನೆಗದು ಮನೋಗಮನದಿಂ (ನವಮೋ. ೨೭-೦೪). **ಮಱವೆಯೌಷಧಿ** = ಮೈಮಱೆವನ್ನುಂಟುಮಾಡುವ ಮದ್ದು; ಅರಿವಳಿಕೆಯ ಔಷಧಿ : ಶಾವುಬಹ ಪರಿಯಂತರ ಪುರುಷ ಮಾತಾಡದೇಳದ ಪರಿಯ ಮದ್ದುಗಳ ಮಱವೆಯೌಷಧಿಗಳನು ನಿದ್ರಾಚರವಲಿಹ ಕಾಮುಗಳ ಬಲಿದಚ್ಚರಿಯ ಜಾರೆಯರೈದಿದರು ಸಂಕೇತದೆಡೆಗಳಿಗೆ (ಕೋಗಯು. ೪-೯). **ಮಱವೆಯೌಷಧ** = ಮಱವೆಯೌಷಧಿ : "ಕಿಸುರ್ವೇರಿನೆ ಮಱವೆಯೌಷಧಂ" (ತತೂ. ೦೦೬).

[<ಮಱ್$^{3}_{1}$ + – ವೆ]

**ಮಱವೆಗೊಳಿಸು** (ಕ್ರಿ). ಎಚ್ಚರ ತಪ್ಪುವಂತೆ ಮಾಡು; ಮೂರ್ಛೆಗೊಳಿಸು: ಇರ್ವರಂ ಘಾತಿಸದೆ ಸಮ್ಮೋಹನಾಸ್ತ್ರದೊಳ್ ಮಱವೆಗೊಳಿಸಿ ತನಗೆ ತಂದೊಪ್ಪಿಸುವ ತೆಱದೊಳತಿ ಜಲಚರರನನುಜನೆಡೆಗಟ್ಟೆ (ಕೃಪಂಭಾ. ೨೦-೨).

[ಮಱವೆ + ಕೊಳ್$_1$ + – ಇಸು$_3$]

**ಮಱಸನ** ? (ನಾ). (?) : ಮಱಸನಮುಂ ಬಿಟ್ಟೊಳಗಣ ಪೊಱಗಣ ಕೆಲಸಂಗಳೆಲ್ಲಮಂ ದೇವಿಯು ಕಣ್ಣಾಱಿದುಂ ಮನಮಱಿದುಂ ಬಿಡದಱು ದಿಂಗಳ್ ದೇವಕಾಂತೆಯರ್ ನಡೆಯಿಸಿದರ್ (ಶಂತ್ರಕು. ೦೦-೧೪೭).[ ? ]

**ಮಱಸು$_1$** 'ಮಱ್$^3$ಯಿಸು' ನೋ.

**ಮಱಸು$_2$**, ಮಱಸು$_2$ (ನಾ). ೧. ವಂಚನೆ; ಮೋಸ : ನಿದ್ರೆಯನುಳಿದು ಬೆದಱಿ ಬೇಗದೊಳು ತನ್ನರ್ಥಶಯ್ಯೆಯೊಳೊಱಗಿರ್ದ ಮುಂಗ್ಧೆಯುಂ ಜಂವ ಳೆಂದು ಮಱಸಿನಿಂದವಳೆಲೊ ಪೊರ್ದದಿರಾರು ನೀನೆನಲು (ಅಂಜನ. ೯-೬). **ಮಱಸು$_2$** : ೨. ಪ್ರಾಣಿಗಳನ್ನು ಹಿಡಿಯಲು ಮಱೆಯಲ್ಲಿ ಅಡಗಿಕೊಂಡು ಮಾಡುವ ಬೇಟೆ ; ಮಱಸುಬೇಟೆ : ಅವತ್ತು ಮಱಸಿಗೆ ಕೂತಿದ್ದೆ (ಮರಳು. ೫೩). ೩. ಬೇಟೆಯಲ್ಲಿ ಪ್ರಾಣಿಗಳನ್ನು ಹಿಡಿಯಲು ಹೊಂಚುಹಾಕಿ ಕುಳಿತುಕೊಳ್ಳುವುದಕ್ಕಾಗಿ ಕಟ್ಟಿರುವ ಮಱೆ,—ರಕ್ಷಣೆಯ ಸ್ಥಳ : 'ಮಱಸುಕಟ್ಟು' ಪರಾ. [ಮಱ್$^{3}_{1}$ + – ಸು$_3$]

**ಮಱಸುಂದು$_1$**, ಮಱಸೊಂದು (ಕ್ರಿ). ಮೈಮಱೆತು ಮಲಗು : ಮುಗುಳೊಳ್ ಮಱಸುಂದಿದ ತುಂಬಿ ಪಾಱ್$^3$ ಕೋಕನವಕುಲಂಗಳುಳ್ಳಲರ್ದುವೆಂಬಿನಮುಂದೊಗೆದಂ ದಿವಾಕರಂ (ಶಂಪಭಾ. ೩-೬೪); ಮಱುಪಾತುಗುಡದೆ ರವಿಸುತ ಮಱಸುಂ[ಪಾಠಾಂ. ಮಿಂ]ದಿರ್ದಪೆಯೊ ಪೋಣ್ಬಟಲ್ದಿರ್ದಪೆಯೊ (ಗದಾಯು. ೫-೦೫); ನೆಱ್$^3$ಗೊಂಡು ಕೊನೆವ ಸರಲಿಂ ನೆಱುಲ್ದು ರಥದೊಳಗೆ ಬಿಟ್ಟು ಚಕ್ರಧರಂ ಮೆಯ್ಮಱ್$^3$ದು ಗುಹಾಂತರದೊಳ್ ಮಿಗೆ ಮಱಸುಂ[ಪಾಠಾಂ. ಸೊಂ]ದಿದ ಪುಲಿಯನಾಗಳಿನಿಸಂ ಪೋಲ್ತಂ (ಕಾವ್ಯಾವ. ೪೪೮). **ಮಱಸೊಂದು** : ಮಲ್ಲಗೆ ಮಱಸೊಂದಿದಂದದೊಳೆ ಜೋಲ್ದ ನಿಜೇಶನನಾಲತಾಂಗಿ ತೊಟ್ಟಗೆ ಕೊಳೆ ನೋಡಿ ಕಟ್ಟನಿನಿಯಂ ಮಱಸೊಂದಿದನೋ ಬಱಲ್ದನೋ ಎಂದು. . . ಪಳಯಿಸುವ ಮಾದ್ರಿಯ ಸರಮಂ ಕುಂತಿ ಕೇಳ್ದು (ಶಂಪಭಾ. ೨-೦೯); ಪೊಱಪೊೞಲ ಮರದ ಕೞಗೆ ಮಱಸೊಂದಿದ ಭೀಮನನಡಸಿ ಪಿಡಿದು . . . ಮಹಾಗ್ರಾವಮನುಱದಡಸಿ ಕಟ್ಟಿ ಕೊರಲೊಳ್ ಗಂಗಾದೇವಿಯ ಮಡುವಿನೊಳಿಟ್ಟಿದರ್ (ಶಂಪಭಾ. ೨-೩೦ ವ).

[< ಮಱ್$^{3}_{1}$ + ಸುಂದು$_1$]

**ಮಱಸುಂದು$_2$** (ನಾ). (ವಂಚನೆಯ) ಕೂಟ,–ಸಂಭೋಗ : ಮಱಸುಂದು ಸೂಟಸುಂದೆನೆ ಪಱ್$^3$ತಿನಿಯೆನೆ ಪೂಱ್$^3$ಯೆನೆ ಪದಾಂತರದಿಂದಂ ನೆಱ್$^3$ದು ನಿಲೆ ದುಷ್ಪ್ರತೀತಿಯನಱಿಪುವ ಪೆಱಪೆಱವುಮಿನ್ನವೇ ಗ್ರಾಮ್ಯಂಗಳ್ (ಕಾವ್ಯಾವ. ೪೯೭). [<ಮಱ್$^{3}_{2}$ + ಸುಂದು$_2$]

**ಮಱಸುಹ** (ನಾ). ಮಱೆಮಾಡುವುದು; ಮುಚ್ಚಿಡುವುದು: "ಅಪಹ್ನವಃ, ಅಪಲಾಪಃ, ಅಪಜ್ಞಾನಂ, ಅಪವ್ಯಯಃ—ಈ ೪ ಮಱಸುಹ" (ಶಬ್ದಾಯು. ೦೨೦-೪೫).[ಮಱಸು$_1$ (<ಮಱ್$^5$ಯಿಸು) + –ಹ$_2$ (< –ಪ$_2$)]

**ಮಱಸೊಂದು** 'ಮಱಸುಂದು$_1$' ನೋ.

**ಮಱಹಿಕ್ಕು** 'ಮಱಪಿಕ್ಕು' ನೋ.

**ಮಱಹಿಡು** 'ಮಱಪಿಡು' ನೋ.

**ಮಱಹಿಸು** (ಕ್ರಿ). ಮಱೆಮಾಚು; ಅಡಗಿಸು : ಭಾವವನು ಮಱಹಿಸಲು ಬಹುಸಂಭಾವನೆಯಲನ್ನವ ಕೊಡಲು ಬಳಕಾವ ಸುಖಿಗಳನಿತ್ತವು (ಐಶಾಗ. ೦೦-೦೭-೩೨). [ಮಱಹು (< ಮಱಪು$_2$) + –ಇಸು$_3$]

**ಮಱಹು** 'ಮಱಪು$_2$' ನೋ.

**ಮಱಹುಗೊಳ್** (ಕ್ರಿ). ಅಜ್ಞಾನದಿಂದ ಕೂಡಿರು ; ಭ್ರಾಂತಿಯನ್ನು ಹೊಂದಿರು : ತೆಱಹುಗಾಣದಱುಹುಗುಂದಿ ಮಱಹುಗೊಂಡೆನೆನ್ನ ಗುರುವೆ (ಶಂಪರ. ಪ. ೫೦೦-೦೨). [ಮಱಹು (< ಮಱಪು$_2$) + ಕೊಳ್$_1$]

**ಮಱಿಹೊಂದು** (ಕ್ರಿ). ಮೂರ್ಛೆಹೊಂದು ; ಪ್ರಜ್ಞೆತಪ್ಪು : ಅಂದು ಕಾಮೋದ್ರೇಕದಿಂ ಮಱಿಹೊಂದಿ ತನ್ನುವನಱಿಯದಿಪ್ಪರವಿಂದಗರ್ಭನ ಮಸ್ತಕವನುದ್ದಂಡಚಾಪದಲಿ ಸಂಧಿಸಿದ ಸರಳಿಂ ಪಱಿಯಲೆಸ ಬಂದ ಶಬರೇಶ್ವರನೊ (ಬಸವ. ೪೪-೩). [ಮಱಿಹು (< ಮಱಿಪ್ಪು$_2$) + ಒಂದು$_1$]

**ಮಱಿ**, ಮರಿ (ನಾ). ೧. (ಪ್ರಾಣಿ, ಪಕ್ಷಿ ಮುಂತಾದುವುಗಳಲ್ಲಿ) ಎಳೆಯದು ; ಪಿಳ್ಳೆ ; ಶಾಬ : "ಶಿಶು ಶಾಬಂ ಪೋತಂ ಮಱಿ ಕಿಶೋರಕಂ" (ಪಶು ಕೋ. ೯೬-೨೫) ; ಸೋಮದತ್ತೆಯೆಂಬೊಳ್ . . . ಪೆಣ್ಣರಿಯಾಗಿ ಪುಟ್ಟಿ ತನ್ನ ನಾಲ್ಕುಮಱಿಗಳ್ವೆರಸಾಹಾರಮನಱಿಸಿ ತೊಟಲುತ್ತಂ ಬರ್ಪುದನ್ನೆಗಂ (ವಡ್ಡಾರಾ. ೨೯-೫) ; ಸುರಭಿಗಳ ತೊರೆದ ಮೊಲೆಗಳನುಣ್ಬವಱ ಮಱಿಗಳಂ ಪೋಗೆ ನೂಂಕಿ ಕೂಂಕಿ ಮೊಲೆಗಳನುಣ್ಬ ಕಿಶೋರಕೇಸರಿಗಳುಮಂ... ನೋಡಿ (ಶಂಖಧಾ. ೦-೦೧೫ ವ) ; ಕಾಗೆಯ ಮಱಿಯೆಂದಱಿಯದೆ ಕೋಗಿಲೆ ಕೈಗೊಂಡು ಕೂರ್ಮೆಯಿಂ ನಡಪಿದೊಡಂ ಕಾಗಾಯೆಂದುದು (ಧರ್ಮಾಮೃ. ೨-೦೦೪). ೨. ಎಳೆಯ ಮಗು ; ಕೂಸು ; ಶಿಶು : ಮಕ್ಕಳ ಮಱಿಗಳ ಸುಖದುಃಖಕ್ಕಾದಂ ಮಱುಗಲಾಗದಂತ ವರ್ಗಱದಿಂದಕ್ಕುಂ ಸೌಖ್ಯಂ ಪಾಪದಿನಕ್ಕುಂ ದುಃಖಂ (ಸಮ:ಪ. ೩-೦೩೩) ; ಮಱುಗದಿರಿ ಪಾಂಚಾಲರಾಯನ ಮಱಿಗಳಿರ ಭೀಮಂಗೆ ತಪ್ಪೇನುಱುವ ದೊರೆ ಸೊಪ್ಪಾಗದಂತಿರೆ ನೀವು / ಕಾದುವಿರೆ (ಕುಮಾ.ಭಾ. ೦೦-೨೦). ೩. ಹಾವು ; ಸರ್ಪ : ಕೂಟಂ ಪತ್ತೆಸಾರ್ದು ಕೊಡನ ಮಱಿಯ ಪೆಡೆಯಂ ತುಡುಕುವೆಗ್ಗನಂತಿರೆ ಸತಿಯ ನಿಡುಱಡೆಯಂ ಪಿಡಿದೀಡ್ದುಯ್ಯುತು ಮಿರ್ದಂ (ರಾಜಶೇ. ೬೪-೨೬). 'ಪೆರ್ಮಱಿ' ಪರಾ. ೪. (ಬಲಿ ಕೊಡುವ) ಟಗರು, ಆಡು, ಕುರಿ ಇತ್ಯಾದಿ : ಕುಱಿ ಬೇಡ ಮಱಿ ಬೇಡ ಬಱಿಯ ಪತ್ರೆಯ ತಂದು ಮಱೆಯದೆ ಪೂಜಿಸು ನಮ್ಮ ಕೂಡಲ ಸಂಗಮದೇವನ (ಬಸವ. ೩೬೦). ೫. ಚಿಕ್ಕದು ; ಸಣ್ಣದು : 'ಮಱಿ ಮುಗಿಲ್' ಪರಾ. **ಮರಿ** : ೧. ಹೆಣ್ಣುಸಿಂಹವು ಗಬ್ಬಾಗಿ ಐದು ತಿಂಗಳಿಗೆ ಈಯುವುದು. ಸರ್ತಿಗೆ ಮೂರು ನಾಲ್ಕು ಮರಿಗಳು ಆಗುವವು (ಪ್ರಾಂಣಿಜ. ೪-೨೦೪) ; ಬೆಕ್ಕಿನ ಮರಿ ಚೆಂಗನೆ ನೆಗೆಯುತ್ತಿತ್ತು (ಬಾಣಕ. ೨). ೨. ಇದಾವುದೂ ನಿನಗೆ ಕೊಡಾಕಿಲ್ಲ ಮರೀ (ಪಂಗಾ. ೦೬೩). ೩. ವಿಗಾಲಮಿಂತು ಮೆಟಣಾಸಿ ನೀ ಮುದಿಯ ಮರಿಯಂತೆ ಕಾಪ್ಪೆಪಳನನಸಿನೀ ನಿಧಿಯ ? (ಗೀತಾ. ೨೬-೦೦). ೪. ಒಮ್ಮೊಮ್ಮೆ ಗೌಡರು ತಂಗಳು ಹಬ್ಬದ ದಿನವೂ ಮರಿ ಹೊಡೆಸುವುದುಂಟು (ಪಸ್ಪೂರು. ೬೬). ೬. ಎಳೆಯ ವಯಸ್ಸು ; ಚಿಕ್ಕಂದು ; ಎಳವೆ : ಇವನ ಚೆಲುವಿನ ಪುಂಜ ಹೋಯ್ತೆ ಮರಿಯಲ್ಲೆ ! (ಕುಪ್ಪ. ೪೫-೮). ೭. [ವೀಶೈ] ಮಠದ ಉತ್ತರಾಧಿಕಾರಿಯಾಗುವ ಶಿಷ್ಯ : ತಮ್ಮ ಕಡೆ ಕಂಟ್ಲೆಬಸವಲಿಂಗ್ಯೆಯ ಸಹಾ ಎರಡು ಜನ ಮರಿಗಳ ಕಳುಹಿಸಿ ಇದ್ದರು (ರಾಜೇಂದ್ರ. ೨೦೪); ಮಠದ ಮರಿ ಹರಿಣಶಿಶುವಿಗೆ ಧಾನ್ಯ ತಿನಿಸುತ್ತಿರುವುದನ್ನು ನೋಡುತ್ತ ಕುಳಿತಿದ್ದರು (ದೀಪಕ. II. ೪೪).

**ಮರಿಹಬ್ಬ** = ಸಾಮಾನ್ಯವಾಗಿ ಹಳ್ಳಿಗಳಲ್ಲಿ ಗ್ರಾಮದೇವತೆಯ ಜಾತ್ರೆಮಾಡಿ ಕುರಿ, ಮೇಕೆ ಮುಂತಾದ ಪ್ರಾಣಿಗಳನ್ನು ಬಲಿಕೊಟ್ಟು ಮಾಡುವ ಹಬ್ಬ : ಗೌಡರುಗಳೆಲ್ಲಾ ಮರೀಹಬ್ಬಕ್ಕೆ ಬೇಕಾಗುವ ಮರಿಗಳನ್ನು ಅಂದರೆ ಟಗರು ಮತ್ತು ಹೋತಗಳನ್ನು ತರುತ್ತಾರೆ (ಪಸ್ಪೂರು. ೪೪).

**ಮರಿಹಾಕು** = ೧. (ಪ್ರಾಣಿಗಳು) ಮರಿಯನ್ನು ಪ್ರಸವಿಸು ; ಈಯು : ಬರಹದಲ್ಲಿದ್ದ ಕರಿ ಮರಿಹಾಕೀತೇ ? (ಗಾದೆ) ; ನಮ್ಮ ಮನೆಯಲ್ಲಿ ಬೆಕ್ಕು ಮರಿಹಾಕಿದೆ (ರೂಢಿ). ೨. (ಆಲಂ) ಮರುಕಳಿಸು ; ಮತ್ತೆಬರು : ಅನಂತರ ತಿರುಗಿ ಹುಳಿತೇಗು ಮರಿಹಾಕುತ್ತದೆ (ಪ:ಶೋಷಂ. ೦೦೯). [ದೇ.॥ ತಮಿ. ಮಲ. ಮಱಿ; ತುಳು. ತೊದ. ಮರಿ ; ತೆಲು. ಮಱಿಕ ; ಕೋತ. ಮಯ್ರು]

**ಮಱಿದಿಂಗಳ್** (ನಾ). ಎಳೆವೆರೆ ; ಬಾಲಚಂದ್ರ : ಮಱಿದಿಂಗಳನು ಮುಡಿದನೆಲ್ಲಿರ್ದಪನೊ . . . ಕಂಡಿರೇನಮ್ಮ (ಸಿದ್ಧರಾ. ೨-೬೨).

**ಮಱಿದಿಂಗಳ ಹಚ್ಚಂ** = ಎಳೆಯ ಚಂದ್ರನನ್ನು ಆಭರಣವಾಗಿ ಧರಿಸಿದವನು ; ಚಂದ್ರಶೇಖರ; ಶಿವ : ಕುಳಿರ್ವೆಟ್ಟುಮಗಳುವೆರಸಿಳಸುವ ಮಱಿದಿಂಗಳ ಹಚ್ಚಂ ಹೆಮ್ಮೆಯ ಸಮ್ಮಂಗುಡುಗೆಮಗೆ (ಉದ್ಭಟ. ೬-೩). [ಮಱಿ + ತಿಂಗಳ್]

**ಮಱಿದುಂಬಿ**, ಮರಿದುಂಬಿ (ನಾ). ಎಳೆಯ ತುಂಬಿ ; ದುಂಬಿಮರಿ : ಬಿರಯಿಗೆ ಮೊರೆವಂತೆ ಮೊರೆವ ಮಱಿದುಂಬಿ . . . ಸೊಗಯಿಸುಗುಂ (ಅಂಕು. ೬-೦೦೦) ; ಮಱಿದುಂಬಿಯಾಗಿ ವೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್ (ಶಂಖಾ. ೪-೨೪) ; ಇಬ್ಬರತಿಗಳಗಳನೆ ನವವನಾಂತರದ ಕೊಳನೊಳಗೆ ಮಱಿದುಂಬಿಯುಂ ಸಣ್ಣನಚಿಯುಂ ಬೆಳೆವವೋಲ್ ಬೆಳೆದರು (ಸಿದ್ಧರಾ. ೦-೬೨). **ಮರಿದುಂಬಿ** : ಉಳ್ಳಲರ ಜೇನ್ಗುಡಿದು ಮರಿದುಂಬಿ ಕೂಗಿ (ಕುಪ್ಪ. ೪೪-೬). [ಮಱಿ + ತುಂಬಿ$_1$]

**ಮಱಿಪನ್ನಾಯ** (ನಾ). ಚಿಗುರುವೀಳೆಯದೆಲೆಯ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಮೆಳಸು ಹೇಱಂಗೆ ಬಳ್ಳ ೧ ಹಸುಬೆಗೆ ಮಾನ ೧ ಮಱಿಪನ್ನಾಯದಲ್ಲಿ ಎಲೆಯ × × × (ಎಕ. II, ೩೪೪-೬೬ ; 1159). [ಮಱಿ + ಪನ್ನಾಯ]

**ಮಱಿಮಗ**, ಮರಿಮಗ (ನಾ). ಮೊಮ್ಮಗನ ಅಥವಾ ಮೊಮ್ಮಗಳ ಮಗ : ಏನೆಲವೊ ನಿನಗಿನಿತು ಹೊಗಳುವಡೇನಹನೊ ನೀನಾ ನರೇಂದ್ರನ ಸೂನುವೋ ಮೊಮ್ಮಗನೊ ಮಱಿಮಗನೋ (ಕೊರಟಾ. ೬-೨-೩೪). **ಮರಿಮಗ** : ಸಿಂಹಪೋತನು ತನ್ನ ಮರಿಮಗನೊಡನೆ ಕಾದಿರುವುದು ಅಸಂಭವ (ಕರ್ಣಾಕ. ೦೨೨).

**ಮರಿಮಕ್ಕಳು** = ಮೊಮ್ಮಗನ ಅಥವಾ ಮೊಮ್ಮಗಳ ಮಕ್ಕಳು : ತನ್ನ ಮರಿಮಕ್ಕಳು ದಾರಿಪಾಲಾಗಬಾರದೆಂಬ ವಿಚಾರ ಮನೆತನದ ಆಸ್ತಿವಾರವನ್ನು ಬಲಪಡಿಸಿತು (ಶಾಂತೇ. ೩). [ಮಱಿ + ಮಗ]

**ಮಱಿಮೀನ್**, ಮರಿಮೀನು, ಮಱಿಮೀನು (ನಾ). ಎಳೆಯ ಮೀನು ; ಮೀನಿನ ಮರಿ : "ಕ್ಷುದ್ರಾಂಡಮೆನೆ ಮಱಿಮೀನ ಮೊತ್ತಕ್ಕೆ ನಾಮಂ" (ಮಂಗರಾ. ೦೨೦-೬) ; ಕಂಗಳು ಹೊಳೆಯೆ ಮಱಿಮೀನೆಂದು ಹಕ್ಕಿಳಿಸಿದರು ಹಿಡುಹಿನಲಿ . . . ತುಂಬಿಗಳೆಂದು ಕುರುಳ್ಗಂಗಳುಕಿ ಕೈಗಳ ತೆಱದರತಿ ಮುಗುದೆಯರು ಖೇಚರಿಯರು (ಕುಮಾ.ಭಾ. ೦೦-೨೮) ; ಪೆಚ್ಚಿದಿಂಗುಡಲೂರ್ಮಿ ಮಾಲೆ ಮಾಲೆಗಳೆಡೆಯೊಳುಚ್ಚಳಿಸಿ ಹೊಳೆಹೊಳೆವ ಮಱಿಮೀನ್ಗಳೆನೆ . . . ಎಳವೆಂಗಳ ಕಟಾಕ್ಷದ ಮರೀಚಿಗಳ್ ಸೊಗಯಿಸಿದುವು (ಕೃಷ್ಣಾ. ೬-೦೦). **ಮರಿಮೀನು** : ಹೊಳೆಯಲ್ಲಿರುವ ಮರಿಮೀನುಗಳು ಬಿಸಿಲಿನಲ್ಲಿ ಹೊಳೆಯುತ್ತಿವೆ (ರೂಢಿ). **ಮಱಿಮೀನು** : ಅಗಿದು ಹೊಳೆವಕ್ಷಿಗಳ ಮಱಿಮೀನುಗಳ ವಿಕಸಿತವದನಕಂಜಾಳಿಗಳ . . . ಕಾಂತಾಸರಸಿ ರಂಜಿಸಿತು (ಕೊರಟಾ. ೦-೦೫-೩) ; ಎಳೆವೆಣ್ಣುಗಳ ಸೋಗೆಗಣ್ಣ ಱಿಮೀನು ಸುಳಿದಾಡುವ ಜನಸಾಗರದೊಳಗೊಪ್ಪುತಿಹುವು (ಕಂಪಾ. ೬-೯). [ಮಱಿ + ಮೀನ್$_1$]

**ಮಱಿಮೀನು** 'ಮಱಿಮೀನ್' ನೋ.

**ಮಱಿಮುಗಿಲ್** (ನಾ). ಮೋಡದ ತುಣುಕು : ಸಣ್ಣಮೋಡ ; ಬಂದ ಊರ್ವಶಿ ಬಳ್ಳಿಮಿಂಚಿನ ಮುಂದಿಯಲಿ ಮುರಿದಿಳಿವ ಮಱಿಮುಗಿಲಂದದಲಿ (ಕುಮಾ.ಭಾ. ೯-೦೩) ; ಮಂಡಳಿಸಿ ಮಱಿಮುಗಿಲಂತೆ ಪಾರ್ವ ಮದಮಧುಕರ ಪ್ರಕರದಿಂದಂ . . . ಸರ್ವಪರ್ವತಸಾರ್ವಭೌಮನಖರ್ವ ಸಂಪದಂ ಮಿಗೆ ಮೆಱೆವುತಿರ್ದುದು (ರಾಜಶೇ. ೧-೦೩೫ ವ). [ಮಱಿ + ಮುಗಿಲ್]

**ಮಱಿಯಾಚಿಗೂಡಲೂರ್** (ನಾ). ಒಂದು ಸ್ಥಳದ ಹೆಸರು : ಎಳಜ್ಞಾಡಲೂರ್ಮ್ಮಱಿಯಾಚಿಗೂಡಲೂರ್ಪ್ಪಱುವ ಶ್ರೀಪುರಮಿತಿ ಚತುರ್ಷು ಗ್ರಾಮೇಷು (ಎಕ. X, ಗೌರಿಬಿ. ೪೬-೪೬ ; 762). [ ? + ಊರ್ ]

**ಮಱಿಯಾನೆ₁**, ಮರಿಯಾನೆ (ನಾ). ೧. ಆನೆಯ ಮರಿ : "ಕಳಭಃ. ಕರಿಶಾಬಃ — ಈ ೨ ಮಱಿಯಾನೆ" (ನಾಶಂ. ೬) ; ಮಱಿಯಾನೆಗಳಂ ಪರಿಭವಮನದರ್ಕೆ ಕಂಡು (ಪಶ್ವಾರಾ. ೩೭-೦೮) ; ಮೆಱೆವ ಗಜಹಯಶಾಲೆ ಯಲಿ . . . ಮಱಿಗುದುರೆ ಮಱಿಯಾನೆ ತೆಗೆದವು ಲಕ್ಕಸಂಖ್ಯೆಯಲಿ (ಕುವ್ಯಾಗ. ೯-೦೩). ೨. ಮಕ್ಕಳನ್ನು ಮುದ್ದಿನಿಂದ ಕರೆಯುವಾಗ ಬಳಸುವ ಮಾತು : ಕಂದ ನೀನಚ್ಯುತಪರಾಯಣಂ . . . ಮೋಸದಿಂದ ಳವುದುಚಿತವೆ ಮದನ ತನ್ನ ಮಱಿಯಾನೆ ಹಾಯೆಂದೊಱಲ್ದನು (ಕೃಐಭಾ. ೩೦-೩೦). 'ಅರಗಿಳಿ' ಹೋ. **ಮರಿಯಾನೆ** : ೧. ಈ ಸಾರಿಯ ದಸರಾಮೆರವಣಿಗೆಯಲ್ಲಿ ನಾಲ್ಕುಮರಿಯಾನೆಗಳೂ ಇದ್ದುವು (ಲೋ). [ಮಱಿ + ಆನೆ₁]

**ಮಱಿಯಾನೆ₂** (ನಾ). ಒಂದು ಬಗೆಯ ಸಸ್ಯ : "ವ್ಯಾಘ್ರನಖಿಃ – ಮಱಿಯಾನೆ" (ಓಷಧಿ. ೦೫೨). [ ? ]

**ಮಱಿವಕ್ಕಿ**, ಮರಿಹಕ್ಕಿ, ಮಱಿಸಕ್ಕಿ (ನಾ). ಹಕ್ಕಿಯ ಮರಿ ; ಎಳೆಯ ಪಕ್ಷಿ : ಕಡುವಿಸಿಲ ಮಱಿವಕ್ಕಿಯಂತೆ ಗಂಟಲ್ ಮಿಡುಕಿ (ಕಬಿಷ. ೦೯-೯೩). **ಮರಿಹಕ್ಕಿ** : ಮರಿಹಕ್ಕಿ ಹಾರಲು ಪ್ರಯತ್ನಿಸುತ್ತಿದೆ (ಲೋ). **ಮಱಿಹಕ್ಕಿ** : "ಕಿಶೋರಕಃ – ಮಱಿಹಕ್ಕಿ" (ಓಷಧಿ. ೩೩). [ಮಱಿ + ಪಕ್ಕಿ]

**ಮಱಿವಾಲು** (ನಾ). ಎಮ್ಮೆ, ಹಸು ಮುಂತಾದ ಪ್ರಾಣಿಗಳು ಕರು ಹಾಕಿದ ಸುಮಾರು ಮೂರುದಿವಸಗಳವರೆಗೆ ಕೊಡುವ ಹಾಲು ; ಗಿಣ್ಣುಹಾಲು : ಮದಗಜದ ಹೃದಯದಲ್ಲಿ ಮಱಿವಾಲಿಪ್ಪುದ ಕಂಡೆ ನಮ್ಮ ಹುಲ್ಲೆ ಅಱಿಯದೆ ಹುಲಿಯ ಬಾಯ ತುತ್ತಾಯಿತ್ತಲ್ಲಾ ಬಲ್ಲವರ ಕಡೆಯಿಂದ ಭಾಸ್ಕರನು ಉದಯಿಸಲು ಹುಲಿ ಬಿಟ್ಟು ಹುಲ್ಲೆ ಮಱಿವಾಲ ನುಂಡು ಮರಣವನು ಅಱಿಯಿತ್ತಲ್ಲಾ (ಶಿಸ್ವೀವ. ೦೫೦-೪೯೮).

[ ಮಱಿ + ಪಾಲು₁ ( < ಪಾಲ್₁ ). / ತೆಲು. ಮುರ್ರುಪಾಲು ]

**ಮಱಿವಾವು** (ನಾ). ಹಾವಿನ ಮರಿ ; ಎಳೆನಾಗರ ; ಮಿಡಿನಾಗರ : ಖಡೆಯ ಸರಪಣಿ ತೋಳಬಂದಿಗೆ ಪೆಡೆವಣಿಯ ಮಱಿವಾವುಗಳನಳವಡಿಸಿ ದನು (ಕುವ್ಯಾಕ. ೬-೦೨) ; ಪೊಳೆವ ಮಱಿವಾವಿನಿಂ ಕೆಂಜಡೆಗಳಂ ಬಿಗಿದು (ಕಬಿಷ. ೩೦-೯೩). [ ಮಱಿ + ಪಾವು₁ ]

**ಮಱಿವುಲ್ಲೆ**, ಮಱಿಹುಲ್ಲೆ (ನಾ). ಜಿಂಕೆಯ ಮರಿ : ತರಳಕೆಯೆಂಬ ನಮ್ಮ ಮಱಿವುಲ್ಲೆಯನೊಂದು ತಪೋವನಕ್ಕೆ ನೀಂ ನಿರವಿಸು (ಶಾರಂಗ. ೩೯೯) ; ಮಱಿವುಲ್ಲೆಗಳಾರ್ದೆಸಗುವ ಬಿಱುಗಾಳಿಗೆ ಬೆದಱುವಂತೆ ಕಾಂತೆಯ ರೆನ್ನಂ ನೆಱೆ ಕಂಡು . . . ತಳವೆಳಗಾದರ್ (ದಕಾಶ. ೯-೧೨೦). **ಮಱಿಹುಲ್ಲೆ** : ಅಂಗವಿಸಿ ಮಱಿಹುಲ್ಲೆ ಖುರದಲಿ ಸಿಂಗವನು ಹೊಯ್ವಂತೆ ನೃಪರುತ್ತುಂಗಸಹಸಿಯ ಮೇಲೆ ಕೈಮಾಡಿದರು ಖಡ್ಗದಲಿ (ಕುವ್ಯಾಅ. ೯-೨೦). [ ಮಱಿ + ಪುಲ್ಲೆ₁ ]

**ಮಱಿಸಸಿ** (ನಾ). = ಮಱಿದಿಂಗಳ್ : 'ಮಱಿಸಸಿದಲೆಯ' ಪರಾ. [ ಮಱಿ + ಸಸಿ₂ ]

**ಮಱಿಸಸಿದಲೆಯ** (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು; ಶಿವ : ಮಱಿಸಸಿದಲೆಯ ಕುಡುಗೆ ಮತಿಯಿಸುಪುಸಿರನಸವಸದೊಳು (ಉದ್ಭಟಕಾ. ೬-೨). [ ಮಱಿಸಸಿ + ತಲೆ₁ + – ಅ₇ ]

**ಮಱಿಸೂಳೆ** (ನಾ). ಎಳೆಹರೆಯದ ವೇಶ್ಯೆ ; ಚಿಕ್ಕಪ್ರಾಯದ ಸೂಳೆ : ಮತ್ತೂರ್ವಳ್ ನೆರೆಮನೆಯ ಮಱಿಸೂಳೆಯ ಸೊಬಗಿಂಗಱಲ್ದು ತನ್ನಂತೆ ಪಡಪುಡುಗಿ ಗಡಣಕ್ಕೆ ಬಂದ ಹಡಣಗಿತ್ತಿ ಸೂಳೆಗಿಂತೆಂದಳ್ (ಅಪಂಪು. ೯-೦೮ ಪ). [ಮಱಿ + ಸೂಳೆ₁]

**ಮಱಿಹಕ್ಕಿ** 'ಮಱಿವಕ್ಕಿ' ನೋ.

**ಮಱಿಹುಲ್ಲೆ** 'ಮಱಿವುಲ್ಲೆ' ನೋ.

**ಮಱು₁**, ಮರು₁ (ಗು). ೧. ಎರಡನೆಯ ; ದ್ವಿತೀಯ : ಪೂರವಱ ಗೊಸಾಸಿಗರಾ ಮಱುಧರ್ಮ್ಮ ತುಸವನಿನ್ ಪಡೆದು (ಇಕ. VIII, ೨೬೩-೩ : ೭೦೮). ೨. ಬೇರೆಯ : (೬). ೩. ಮುಂದಿನ ; ಭವಿಷ್ಯದ : 'ಮಱುಭವ' ಪರಾ. ೪. ಪ್ರತಿಯಾದ ; ವಿರುದ್ಧವಾದ ; ಎದುರಾದ : 'ಮಱುಗಣೆ' ಪರಾ. **ಮರು₁** : ೧. ನಾನು ಬಂದ ಮರುದಿನವೇ ಅವರು ಊರಿಗೆ ಹೊರಟರು (ಲೋ). 'ಮರುಚಲು' ಪರಾ. ೩. 'ಮರುಜನ್ಮ' ಪರಾ ೪. 'ಮರುಮಾತು' ಪರಾ. 'ಮಲು₁' ಹೋ.

**ಮಾರನೆಯ, ಮಾರನೇ** = (ಕಾಲಕ್ಕೆ ಸಂಬಂಧಿಸಿದಂತೆ) ಮುಂದಿನ ; ಆಮೇಲಿನ ; ಅನಂತರದ : ಮಾರನೆಯ ದಿವಸದಿಂದ ರಾಯರ ಕಾರ್ಯ ಕಲಾಪಗಳಿಗೆ ಪ್ರಾರಂಭವಾಯಿತು (ರಾಜಕ. ೯೦) ; ಮಾರನೆಯ ದಿನದ ಧಾರೆಯ ಊಟಕ್ಕೆ ಬಹಳ ತರಮೂದು ಬೇಕು (ಪಪೂರು. ೨೨೬) ; ನಾನು ಹೋದ ಮಾರನೇ ದಿನವೇ ನನ್ನ ತಂಗಿಯೂ ಊರಿಗೆ ಬಂದಳು (ಲೋ).

[ದೇ.॥ ತಮಿ. ಮಱು. ಮಱು ; ತುಳು. ಮಾರು ; ತೆಲು. ಮಱು, ಮಱಿ ; ಕೋತ. ಮರ್ ; ತೊದ. ಮಱು ; ಕೋಲಾ. ನಾಯ್ಕಿ. ಪರ್ಜಿ. ಮಱು]

**ಮಱು₂** (ಅ). ಪ್ರತಿಯಾಗಿ : ಈಗಳೆದೊ ಕೀರ್ತಿಪೆಣ್ ಜಯಲಕ್ಷ್ಮಿ ಬಂದಳ್, ಪಲತೆರ ಘೇಬಾಯ್ಗೆ ಮಱುನಲಿದು ಬಂದಳ್ (ಕಂಠಗೊ. ೬-೦೩೭). [< ಮಱು₁]

**ಮಱುಂಕ** 'ಮಱುಕ' ನೋ.

**ಮಱುಕ**, ಮರುಕ, ಮರುಕು₂, ಮರುಗು₂, ಮಱುಂಕ(ನಾ). ೧. ತಾಪ; ಉರಿ : ಆ ತೇಟ್ಟ(ರುಗ)ಳುಚ್ಚರದಿಂದಂ ಮಿಡಿದಂದು ಲೋಳೆ ಮಱುಕಂ ಶೋಕಂ ಬೆಮರ್ ತೋಱುಗುಂ (ಲೋಕೋಕ. ೧೦-೨೩). ೨. ಅಳಲು ; ಬೇಗುದಿ ; ಸಂತಾಪ : ಮಱುಕಮಾವಯಮಪ್ಪಮೃತ್ಯುವೆಂಬಿವಲ್ಲಿಗೆ ಪೊಱಗೆಂದೊಡಂ ಸುಖಮದೇವೊಗಟ್ಟವುದೊ ಭೋಗಭೂಮಿಯಾ (ಅಂಪು. ೩-೫೦) ; ಮನದ ಮಿಡುಕಿನ ಮಱುಕ ಮುಂದಲೆಗೊಟ್ಟುದಱಿವಿನ ಸೆಱಗು ಹಾಱಿತು (ಕುವ್ಯಾಸ. ೦೯-೨೮). ೩. ಚಿಂತೆ ; ದುಗುಡ : ಎನಗೆ ಮನದ ಮಱುಕಂ ಕಿಱಿದುಮಾಹಾರಕ್ಕಂತು ಚಿಂತೆಗೆಯ್ವಂ (ಶಂಕಶಂ. ೦೩೩-೦೯) ; ಅಱಿತು ನಿನ್ನನು ಹೊಗಳಲಱಿಯೆವು . . . ಬಱಿಯ ಬಾಯಿಯಲಿ ನಿನ್ನ ಹೊಗಳುವ ಭಟ್ಟರಾರೆಂದು ಮಱುಕವಿಲ್ಲೆಲೆ ನಿಮ್ಮ ಕೂಡೆಮಗಱಿತ ಮುನ್ನವೆ ಶೂನ್ಯ (ಸಂಕಶ. ೯-೨೦) ; ಮುನಿನಾಥ ನುಡಿದುತ್ತರಕೆ ಮಾಱುತ್ತರವ ಕಾಣದೆ ಮನದ ಮಱುಕದಲಿ ಗುರು ಮುಖಾಂಬುಜವನು ನಿರೀಕ್ಷಿಸಿ (ತೊರರಾ. ೦-೯-೯೦). ೪. ತಳಮಳ ; ಸಂಕಟ : ಮನದ ಕಾಂಕ್ಷೆಯಿಂ ಮುನ್ನಿನಂತುಂಡು ಮುನ್ನಿನ ಮಱುಕ ದಿಂದಿಮ್ಮಡಿ ಮಱುಕವಾಗೆ ಮಱುದಿವಸಂ ಭಕ್ಷ್ಯದ ದೆಸೆಗೆ ಪೆಕ್ಷಂಗೆಟ್ಟು . . . ಒಲ್ಲೆನೆಂಬುದುಂ (ರಪಾರಾಮ್ಯ. ೦-೦೬೨) ; ವಿಷಸಮ್ಮಿಶ್ರಿತಮೋದಕ ಪ್ರಕರಮಂ ತತ್ಪಾಪಿ ತಂದಿಕ್ಕೆ ತದ್ವ್ಯಪಮಾರ್ಗಿಪ್ರಭು ಮೆಲ್ಲು ಪೋಗಿ ಮಱುಕಂ ಕೆಯ್ಗಣ್ಮೆ ಪೊಣ್ಮಲ್ (ಪೇಬಿಪು. ೦೯-೦೨೨). ೫. ಅಕ್ಕರೆ; ಪ್ರೀತಿ: ಎನ್ನವರನ್ನಗರೆನುತುಂ ಮಱುಕಂ ಮಚ್ಚರಗೊಳ್ಳದ ಸತ್ಕಕ್ಕೆಱೆವೆಟ್ಟೆನಿಸುವ ಸಾಧುಸಮಿತಿಗತಿಸಮಿತಿಯೊಳೆಱಗುವೆನು (ಜಯುಶಾ. ೧-೩) ; ವಾಯಸಪ್ರತತಿ . . . ಕೋಗಿಲೆ ಮಱಿಗಳಂ ಮೈಯೊಳ್ಪುದುಗಿಕೊಂಡು ಮಱುಕದಿಂದ್ಕೆದೆ ಪಾಲಿಸುತಿರ್ದುವು (ಕೃಐಭಾ. ೨೦-೯); ತನ್ನ ಪೆತ್ತವರಿಗೆ ಮಿಗಿಲು ತನ್ನಿನಿಯನ ಪೆತ್ತವರೆಂದವರನು ಮನ್ನಿಸುವುದು ಮಱುಕದೊಳು (ಪದಿತಿ. ೯-೪). ೬. ದಯೆ; ಕರುಣೆ : ವಾಸರಪತಿ ಬಿಸುಗದಿರಿಂ ಪೇಸದೆ ತವೆ ಪೀರ್ಗುವೆಂಬ ಮಱುಕದೊಳಂಭೋಜಾಸನನಂಬುಜವನಮಂ ಬಾಸಣಿಸಿದನೆನಿಪುವಿಡಿದ ತಾವರೆಯೆಲೆಗಳ್ (ಕಾವ್ಯಾಕ. ೨೩೭); ತನಯಂ ನಿನಗಾಗಲೆಂದು ತಪಮಂ ಮಾಡಿಪ್ಪಾತನ ಮಱುಕಮೆ ಸಾಲದೆ (ಅರ್ಜಸೀ. ೦-೦೦೯); ಆದಿದೊಡೆ ಹಾವಿಗೆ

ಹದ್ದಿನ ಕೂಡೆ ಮಱುಕಪೆ (ಕುಮಾ.ರ. ೧೯-೩೦). ೭. ಅತಿಶಯವಾದ ಮೋಹ; ವ್ಯಾಮೋಹ : ಅಱಿವುಗೆಡಿಸುತ್ತಮೆಲ್ಲಾ ತೆಱದಿಂ ದೆಸೆಗೆಡಿಸದಿರದು ವಿಷಯಸಮೂಹಕ್ಕೆಱಗಿ ಬಿಡದಂತೆ ಪತ್ತುವ ಮಱುಕಂ ದಿಱ್ಮೋಹದಂದದಿಂ ಮಾನಿಸರಂ (ಕಾದಂಪೂ. ೩೩೮); ಅರ್ಥದ ಮಱುಕಕ್ಕೆಣೆ ಮಱುಕಮೊಳವೆ ಬಗೆವೊಡೆ ಜಗದೊಳ್ (ಧರ್ಮಾಮೃ. ೦೨-೨೩೩); ಎನ್ನೊಡಲ ಮಱುಕಮಂ ಬಿಟ್ಟೆಸು (ಕೈವಲ್ಯ. ೦೮-೪). ೮. ಕಷ್ಟ ; ಬವಣೆ ; ತೊಂದರೆ (?): ಇಱಿಯದೆ ಕೆಮ್ಮನಂತೆ ಭುವನಂಗಳಸಂಗೊಳಿತಕ್ಕುದೆಂದೊಡೇಮಱುಕಮನೆಂಬುದೇವಿರಿದೆನ್ನ ಭುಜಾಸಿಗೆ (ಕಾವ್ಯಸಾ. ೪೦೦ ಕೂದ್ರ್ಕ). ಮರುಕ : ೨. ಬಾಯ್ನುಡುಗೆ ಮರುಕದಿಂ ಮಾತನಾಡಿದಳು (ಕಾಲೂರ. ೦೭೪-೩೮೯). ೫. ಧ್ವನಿಯಲ್ಲಿ ನಡುಕ, ಅದಕ್ಕಿಂತ ಅಧಿಕವಾಗಿ ಮರುಕ ತುಂಬಿತ್ತು (ಕೃಷ್ಣ. ೨). ೬. ಬೀದಿಯಲ್ಲಿ ಸಾಯಲು ಬಿದ್ದಿದ್ದ ಈ ಹುಡುಗನನ್ನು ಕಂಡು ಮರುಕವೆನಿಸಿತು (ಶೀಮೋದ. ೭೦); ನನಗೆ ಅವಳ ಮೇಲೆ ಅತಿಶಯವಾದ ಮರುಕ ಉಂಟಾಗಿತ್ತು (ಪಾಡಿ. ೩೩೭). ಮರುಕು$_2$: ೨. ತನ್ನ ಮರುಕಿಗೆ ಮರುಗಿ ಆಣೆಕಲ್ಲೊಲು ಕರಗಿ ಬಿಟ್ಟ ನಿಟ್ಟುಸಿರೆ ಚಂದನದ ತಂಪು (ಗಂ. ೬೪-೦೯). ೫. ಗಿರಿಜೆ ತಪದಾರಂಭಕಾಲಕೆ ಮರುಕಿನಿಂದೂರಿರ್ದ ತರುಗಳು ಭರದಿ ಪರ್ವರಗಳಿಗೆ ಸರಿಯಾಗೀಗ ಫಲಗಳನು ಧರಿಸಿ ಮೆರೆಯುತ್ತಿರಲು (ಪಾರ್ವತಿ. ೨-೩೦); ತನ್ನಯ ತರಳನಿಗೆ . . . ರಾಜ್ಯವನು ಮರುಕಿನಿಂದರ್ಪಿಸಿದ ಮೂಲಕ ಸರಪತನಯನಿಗೆ . . . ಭೋಗಿಪ್ರದೊಂದೆಯುಳಿದಿಹುದು (ರಘುವಂ. ೦೯-೩). ಮರುಗು$_2$ : ೪. ಮರುಗು ಮರುಕವು ಕೂಡಿ ಎರಡಲ್ಲ ಒಂದಹುದು ಎರಕ ಹೊಯ್ದಂತಹುದು ರಾಮರಾಮಾ (ಕೂರ್ಯಣಾ. ೬೨-೫). ಮಱುಂಕ : ೨. ನನೆಗಣೆಯೇಕೆ ಕಾಮ ಪೆಱಸಾರ್ ಮುಳಿಸೇಕೆ ಜಯಂತ . . . ಮನದ ಮಱುಂಕಮೇಕೆಲೆಲೆ ಭಪ್ರುಕ ಮೆಲ್ಲನೆ ಜಾಱು (ಕಂಠ. III, ೩೩ ಐತ್ತೀಸಪೂರ್ವ ಕಥ). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ.

[<ಮಱುಗು./ತಮಿ. ಮಱುಕ್ಕಮ್]

**ಮಱುಕಂದೋಱು** (ಕ್ರಿ). ಕನಿಕರಿಸು ; ದಯೆತೋರು : ಬಱಿದೆ ಮಱುಕಂದೋರ್ದು ತಳ್ವುದೇತರ್ಕೆ? (ಐದ್ಯಕೃ. ೨-೪೨).

[ ಮಱುಕ + ತೋಱು (< ತೋಱು) ]

**ಮಱುಕಂಬಡೆ, ಮಱುಕವಡೆ** (ಕ್ರಿ). ೧. ಪ್ರೀತಿಯಿಂದ ಕೂಡಿರು; ಅಕ್ಕರೆಯಿಂದಿರು: ಪೆಡೆಯಂ ಕೊಡೆಯಂತಿರೆ ಪಿಡಿದಡಿಯೊಳ್ ನೆಱೆ ನಿಂದ ಮಱೆಯನಾನನದೆಲರಿಂ ಬಿಡದಾಶ್ವಾಸಿಸಿ ಮಱುಕಂಬಡೆದೋವುತ್ತಿರ್ದು ದುರಗಿ ಪರ್ಬಿದ ಬಿಸಿಲೊಳ್ (ರಾಜಶೇ. ೫-೪೪). ೨. =ಮಱುಕಂದೋಱು: ಈ ಬುದ್ಧಸಮಯಮಂ ಪರಿಪಡಿಸಿ ಮನಗೊಂಡು ನಿನ್ನ ಬೆಂಬಳಿಯಲ್ಲಿ ಬಂದು ದೇಸಿಗನಾದನೀಗಲೆನ್ನಾ ಮನದಾಣ್ಮನೆಂದು ಮಱುಕಂಬಡೆಯದೇ ನನ್ನ ತನುಜನಂ ಕೊಂಡೆಯಲ್ಲಾ (ಸಮ್ಯಕ್ತ್ವ. ೯-೮೭). ಮಱುಕವಡೆ : ೨. ಪಡೆದ ಮಗನಂ ಪೆತ್ತ ತಂದೆತಾಯ್ಗಳು ಮಱುಕವಡೆಯದರ್ಥವ ಬಯಸಿ ಕಯ್ಯಾರೆ ತಲೆಯ ಹರಿಗಡಿದು (ಸಮ್ಯಕ್ತ್ವ. ೨-೭೫). [ಮಱುಕ + ಪಡೆ$_1$]

**ಮಱುಕಣಿಸು** 'ಮಱುಕಳಿಸು' ನೋ.

**ಮಱುಕವಡೆ** 'ಮಱುಕಂಬಡೆ' ನೋ.

**ಮಱುಕಳಿ, ಮರುಕಳಿ** (ನಾ). ಹಿಂತಿರುಗಿದುದು : ಮತ್ತೆ ಕಾಣಿಸಿಕೊಂಡುದಂ: "ಮಱುಕು[ಕ]ಳಿಯೊಂದು ಮರಳ್ವುದು" (ಶಶಾ. ೭೦-೬೨೫); "ಮಱುಕು[ಕ]ಳಿ ಮರಳ್ವುದಕಕ್ಕಂ" (ಕಬ್ಬಿಗ. ೨೪೦). ಮರುಕಳಿ : ನನ್ನ ಕಣ್ಮನಗಳಿವು ಸ್ವಲ್ಪಮಟ್ಟಿಗೆ ಮಂದವೇಗಕ್ಕಾಗಿ ಮೋಡದ ಮರುಕು[ಕ]ಳಿಯಲ್ಲಿ ಹುಮ್ಮಯ್ಸಿರಬೇಕು (ಮಂತ್ರಶ. ೮೦೯-೫).

[ ದೇ.॥ ತಮಿ. ಮಱುಕಲ್ ]

**ಮಱುಕಳಿಸು, ಮರುಕಳಿಸು, ಮರುಕೊಳಿಸು, ಮಱುಕಣಿಸು, ಮಱುಕೊಳಿಸು** (ಕ್ರಿ). ೧. (ದುಃಖ, ರೋಗ, ನೆನಪು ಮುಂತಾದವುಗಳು) ಪುನಃ ಕಾಣಿಸಿಕೊಳ್ಳು; ಮತ್ತೆ ಬರು : ನೀಂ ಬಱಿದೆ ಬಂದುದನಱಿದಾಗಳೆ ಮಱುಕಳಿಸಿ ಮನವಿಕ್ಕಿದಳಪ್ಪೊಡೆ ಬಱಿಕ್ಕಸಾಧ್ಯಮಕ್ಕುಂ (ಪಂಚತಂ. ೨೬೦-೦೮); ಮಱುಕಳಿಸಿ ಬಂದ ಜ್ವರವುಳ್ಳವರು ಬೇವಿನ ಸೊಪ್ಪಿನ ಕಡ್ಡಿ . . . ಪರ್ಪಾಟಕ ಇವಱ ಕಷಾಯವ ಪಾನವ ಮಾಡುವುದು (ವೈದ್ಯಸಾ. I, ೦೨೮). ಮರುಕಳಿಸು : ೧. ಭೀತಿಯಿಂದ ನಿರ್ವಿಣ್ಣವಾದ ಮೋರೆಯ ಬಣ್ಣ ಇನ್ನೂ ಮರುಕಳಿಸಿರಲಿಲ್ಲ (ಮೂರುದಾ. ೨೫೩); ಅವನ ಬೇನೆ ದಾರುಣವಾಗಿ ಮರುಕಳಿಸಿದ್ದನ್ನು ನೋಡಿ ಡಾಕ್ಟರರು ತೀರ ಚಿಂತಿತರಾದರು (ಇಕ್ಷ್ವಕ. ೩೯೪); ಗುರುತಿನ 'ಆಭರಣ'ವನ್ನು ಅರಸನು ಕಂಡಾಗ ನೆನಪು ಮರುಕಳಿಸುವದು (ಧರ್ಮಸಾ. ೬೯). ೨. ಪುನರಾವೃತ್ತಿಮಾಡು : ಅವಳು ಕೂಡ ವಿದೇಶಗಳಲ್ಲಿ ಏನೇನು ಮಾತನಾಡಿದ್ದಾಳೆಂಬುದು ಆ ಪ್ರಚಾರ ಪತ್ರಗಳಲ್ಲೇ ಇದೆಯಲ್ಲ; ಅವಳ ಮಾತುಗಳನ್ನೇ ಅವರು ಮರುಕಳಿಸಿದಂತಿದೆ (೭೦ಬದ. ೦೨). ಮರುಕೊಳಿಸು : ೧. ಕಾಗದಗಳು ಸೇರಿ ಮೈಸೂರಿನಲ್ಲಿ ಹಿಂದಿನ ಕಥೆಯೆಲ್ಲ ಮರುಕೊಳಿಸಿತ್ತು (ಮುಹಾಗ. ೫೦೯); ಅಪನ ವೇದನೆ ಮರುಕೊಳಿಸಿತು (ರಂಗಯೋ. ೦೮). ೩. ಪುನಃ ಉಂಟುಮಾಡು ; ಮತ್ತೆ ಒದಗಿಸು,–ತರು : ಇಲ್ಲಿಗೈತಹ ಯಾತ್ರಿಕರ ಎದೆಯ ಮೂಷೆಯಲಿ ಹಾಳಾದ ಐಸಿರಿಯ ಕಿಚ್ಚ ಮರುಕೊಳಿಸು ! (ಕೋಗಿಲೆ. ೪೦-೪). ೪. ಮತ್ತೊಮ್ಮೆ ಹುಟ್ಟು; ಪುನಃ ಮೂಡು : ಎಳೆವಗೆಯಲಿ ಇಳೆ ಜಗಿಯಲಿ ಮರುಕೊಳಿಸಲಿ ಹೂವು (ಅರಳು. ೩೮೪–೦೩); ಎಲ್ಲೆಲ್ಲಿ ಹುಲ್ಲನ್ನು ಕಿತ್ತಿರಲಿಲ್ಲವೊ ಅಲ್ಲೆಲ್ಲ ಅದು ಮರುಕೊಳಿಸಿ ನಳನಳಿಸುತ್ತಿತ್ತು (ಪ್ರವರು. ೩). ಮಱುಕಣಿಸು : ೧ ಬಂಧುಜನನಿರೀಕ್ಷಣದಿಂ ಶೋಕಂ ಮಱುಕಣಿ[ಪಾಠಾಂ. ಕೊಳಿ]ಸೆ ಬಾಯ್ವಿಟ್ಟು ಪಳಯಿಸುವ ಕುಂತಿಯುಮಂ. . . ಸಂತೈಸಿ (ಪಂಪಭಾ. ೨-೨೯ ವ); ನಿಜಪ್ರಿಯತನುಜಾನುಜರ ಶೋಕದಿಂ ವಿಹ್ವಳೀಕೃತನಪ್ಪ ಭೂತಳೇಶ್ವರಂಗೆ ನಿಜಪ್ರಿಯಸಖನಪ್ಪ ಕರ್ಣನ ದರ್ಶನದಿಂ ದುಃಖಂ ಮಱುಕಣಿ[ಪಾಠಾಂ. ಕೊಳಿ]ಸುಗುಂ (ಗದಾಯು. ೫-೯ ವ); ಬಱಿದಱಿವ ಕಿಚ್ಚಿನೊಳು ತುಪ್ಪವನೆಱೆವ ತೆಱನಾಯ್ತುವರ್ಗೆ ದುಃಖಂ ಮಱುಕಣಿಸಿ ನೋಯಿಸಿತು ವಿನಯಾರ್ಣವನಮಳವಚನಂ (ಶಾಸಂಕ. ೭-೪೭). ಮಱುಕೊಳಿಸು : ೧. ಪಾಂಚಾಲಸುತೆಯ ವಿವಾಹವಾರ್ತೆಯ ಕೇಳಿವರಲ್ಲಿ ಕೌರವರು ಮಱುಗಿದರು ಮಱುಕೊಳಿಸಿ (ಕುಮಾ.ಭ. ೦೭-೦); ಸಾವುವನು ಬೆಳಸದೆ ವೃಥಾ ಸುತ್ರಾಮತನದಲಿ ಬೆಱತೆನಿದಕೆ ವಿರಾಮವಾಗದೆ ಮಾಣದೆಂದಳಲಿದನು ಮಱುಕೊಳಿಸಿ (ಶಿದಾಗ. ೭-೭-೯). ೫. ಪುನಃ ಪುನಃ ಪ್ರಯತ್ನಿಸು : ಅಳಲಿಸಿದನೇ ಧರ್ಮಪುತ್ರನ ಬಳಿಚಬಿಟ್ಟನು ನಾಯಕೊಲ್ಲದೆ ಕಳುಹಿದರೆ ಬೆಂಬಿಡನಲಾ ಮಱುಕೊಳಿಸಿ ಮಱುಕೊಳಿಸಿ (ಕುಮಾ.ಭ. ೧೩-೩೦); ಅಱಿಸಿದರು ತಾವಿದ್ದ ತಾಣದ ತೆಱಪುಗಳ . . . ಮಱುಕೊಳಿಸಿ ಮತ್ತೊಮ್ಮೆ ಮನೆಯೊಳಗಱಸಿ ಕಾಣದೆ ಕಂಬನಿಯ ಕಟ್ಟೊಱತೆಯಲಿ ಕರೆಕರೆ ಪುತ್ತೈತಂದರು ವನಾಂತದಲಿ (ಕೊರಂ. ೩-೧೧-೩೦). [ಮಱುಕಳಿ + –ಇಸು$_3$]

**ಮಱುಕುಳಿ** (ನಾ). ಮರುಗುವ ಸ್ವಭಾವದವನು : ಇಳದಳಿಯನೇಳದಂ ಸೂಕುಳಿಯೋಕುಳಿ ಕಳಱು ಪೆಳಱು ಮಱುಕುಳಿಯುಳಿಯಂ . . . ಇಱಿ ಕುಳಿಯುಪಾದಿಯಾಗಱಿ ಕುಳನಂ (ಶಮದ. ೨೭); ಕುಳಿ ಪ್ರತ್ಯಯಕ್ಕೆ– ಪೋರ್ಕುಳಿ . . . ಮಱುಕುಳಿ (ಶಮದ. ೨೦೩ ಕ್ರಯೋ). "ಪ್ರೀತಿ" (ಶಮದ. ವ. ೨೦೩ ಅರ್ಥ). [<ಮಱುಗು + – ಕುಳಿ$_3$]

**ಮಱುಕೂಳೆ, ಮರುಕೂಳೆ** (ನಾ). ಪೈರನ್ನು ಕೊಯ್ದ ಬಳಿಕ ತಳದಲ್ಲಿ ಪುನಃ ಚಿಗುರುವ ಮೊಳಕೆ : ಒಗೆದ ಮಱುಕೂಳೆಯೊಳ್ ತೆನೆಗಳಂ ಕೊಯ್ವನುಱೆ ಸುಗುಣನಿಳೆಪಾಳಬೊಮ್ಮಯ್ಯನುಂ (ಬಸವ. ೩೭-೨೭). ಮರುಕೂಳೆ : ಈ ಸಲ ಮರುಕೂಳೆ ಫಸಲು ಬಂದಿದೆ (ರಅ).

[ಮಱು$_1$ + ಕೂಳೆ$_2$]

**ಮಱುಕೊಳಿಸು** 'ಮಱುಕಳಿಸು' ನೋ.

**ಮಱುಗಣೆ** (ನಾ). ಬಾಣಕ್ಕೆ ಪ್ರತಿಯಾದ ಬಾಣ ; ಎದುರುಬಾಣ : ಅಸಮಸಾಹಸಿಯೆಚ್ಚಡೆಚ್ಚನು ಭೀಮ ಮಱುಗಣೆಯ (ಕುಮಾ.ದ್ರೋ. ೧೩-೨೪); ಆ ದಾನವಂ ವೇಗದಿನದಂ ಪಿಡಿದು ಮುಱಿದು ಮಱುಗಣೆಯಂ ತಲೆದೂಗಿ ಸೆಳೆದಿಡುವುದುಂ (ಅದ್ಭು.ತ. ೫೦-೦೭). [ಮಱು$_1$ + ಕಣೆ$_1$]

**ಮಱುಗರೆ** (ನಾ). ಒಂದು ಸ್ಥಳದ ಹೆಸರು : ಸೂರ್ಯಗ್ರಹಣೇ ಮಱುಗರೆವಿಷಯೇ ಎಡೆದಿಣ್ಣೇ ಸಪ್ತತಿ ಪ್ರತಿಬದ್ಧಃ (ಪ್ರ.ಕ. ೧೯೪೨, ೭೫-೧೧೧ ; 819) ; ಮಱುಗರೆಯರ್ ಚಿತ್ತಪ್ಪಜಿಕ್ಕಿಱಿಯಂ ಕಟ್ಟಿಸಿ ನಾಲ್ಕಳವೆಯ ಭಾಗಂ ಬಿತ್ತುವಟ್ಟಂ ಕೆಱೆಗೆ ಕುಡುವುದು (ಎಪಿ. XI. ಹಿರಿಯೂ. ೭೭-೭; ಸು. ೫೫೦). 'ಮರುಕೆರ' ಹೋ. [ ? ]

**ಮಱುಗರೆನಾಡು** (ನಾ). = ಮಱುಗರೆ : ಸ್ವಸ್ತಿಶ್ರೀಪೃಥುವಮಹಾರಾಜ ಪೃಥುವೀರಾಜ್ಯಂಗೆಯೆ ಸಿಯಗೆಲ್ಲರ್ ಮಱುಗರೆನಾಡು ಮೂನೂಱುಮಾಳೆ (ಎಪಿ. XVI. ಕುರುಕೆ. ೮೭-೭; ಸು. 750). [ಮಱುಗರೆ + ನಾಡು]

**ಮಱುಗಳಿಗೆ, ಮರುಗಳಿಗೆ** (ನಾ). ಮುಂದಿನ ಗಳಿಗೆ; ಮರುಕ್ಷಣ: ನೀನ್ ಪೋದ ಮಱುಗಳಿಗೆ ಅಡಗಿದ್ದ ಶೂರರೆಲ್ಲರ್ ಬಂದು . . . ಉಯ್ಯರೇ ನಿನ್ನ ಮಗನೊಡನೆ! (ಅಭಿಶಾ. ೨೦-೧); ಜಳಧಿಗಳೊಂದೆನೆ ಸೇರಿಯುಮಱಿಯಿಸದೊಂದೊಡಲ ಬೇಗೆಯಿಱ ಘನಮಹಿಮಂ ಕಳೆಗೊಂಡು ವರ್ತಿಸಲ್ ಮಱುಗಳಿಗೆಯೊಳಱಿಗುಂ ಕುಳಿರ್ವ ಸಾಧಾರಣಮೇ (ಪಕ್ಷಿ. ೭-೫೦). **ಮರುಗಳಿಗೆ :** ಈ ಗಳಿಗೆಗೆ ಒಂದು, ಮರುಗಳಿಗೆಗೆ ಮತ್ತೊಂದು ಮಾತನಾಡುವುದೇ ಅವನ ಸ್ವಭಾವ (ರೂಢಿ).
[ಮಱು$_1$ + ಗಳಿಗೆ]

**ಮಱುಗಿಸು, ಮರುಗಿಸು** (ಕ್ರಿ). ೧. (ಹಾಲು, ನೀರು ಮುಂತಾದುವನ್ನು) ಚೆನ್ನಾಗಿ ಕುದಿಸು,– ಅಟ್ಟುವಂತೆ ಮರಳಿಸು : ತುಱುವೆಯ ಬೇರನಿಕ್ಕಿ ತಱಿಪೆರ್ಮೆಯ ಪಾಲುಮಮರ್ಧಮಪ್ಪಿನಂ ಮಱುಗಿಸಿ (ಲೋಕೋ. ೬-೧೧); ಅಂಬುವಿನಿಂದಷ್ಟಗುಣಮದರ್ಕೆಂಬುದಱಿಂ ಮಱುಗಿಸಿ ಪದಾವಶೇಷದೊಳ್ ಎಱೆವುದು ಗೋಘೃತಮಂ (ಸೂಪ.ಶಾ. ೨೭). ೨. ಸುಡು ; ದಹಿಸು : ಮಹಾವಿಷದ ಸೆಕೆಳೊಳಿಕ್ಕೆ ಕಾಯ್ದು ತನುವಂ ಮಱುಗಿಸುವುದುಂ (ಕಾಂತೀಶ. ೯-೧೧೧ ವ). ೩. ಬೇಯಿಸು : ನೀರೊಳ್ ಮಱುಗಿಸಿ ಕುಡು ಕಾಳ್ವೇಲೆಯ ಬೇರಂ ಸಮಾಕ್ಷಿಕಂ ಘೃತದಿಂ ಸಂಹಾರಿಸುಗುಂ ವಮನಂ ವಿಷದಾರುಣಮಂ ತತ್‌ಕ್ಷಣಂ (ಖಗೇಂ. ೨-೧೫). ೪. ಕ್ಲೇಶಕ್ಕೆ ಒಳಪಡಿಸು ; ಹಿಂಸೆಪಡಿಸು : ಪಾಯ್ದುಱಿಕೆಯ ಪಾರೆಯಂಬುಗಳ ತಂದಲಗುರ್ವಿಸಿ ಸಿಂಧುರಾಜನಂ ಮಱುಗಿಸೆ . . . ಪೊಕ್ಕನಭಿಮನ್ಯು ವಿರೋಧಿಬಳಾಂಬುರಾಶಿಯಂ (ಶಂಖಿ. ೧೧-೯೩); ಮನವ ಗೆದ್ದೆಹೆನೆಂದು ತನುವ ಕರಗಿಸಿ ಕಾಯುವ ಮಱುಗಿಸಿ ನಿದ್ರೆಯ ಕೆಡಿಸಿ ವಿದ್ಯೆಯ ಕಲಿತಹೆನೆಂಬ ಬುದ್ಧಿಹೀನರಿರಾ ನೀವು ಕೇಳಿರೋ (ಲಿಂಗಪ. ೪. ೪೭-೧೧). ೫. ಸಂಕಟಪಡಿಸು ; ಬವಣೆಗೊಳಿಸು ; ಗೋಳಾಡಿಸು : ಮಱುಗಿಸಿ ನಿನ್ನನೀ ಪದಕೆ ತಂದುದು ಮುನ್ನಿನ ಗೆಯ್ದ ದೋಷಂ (ಅದಿಪು. ೩-೪೦); ಅಣಂ ದೆಸೆಗಾಣದ ನೋಟಮಾತುಮಂ ಮಱುಗಿಸೆ ಬಂದುದಂದು ಕರುಣಂ ಬರೆ ವೈರಿನೃಪಾಂಗನಾಜನಂ (ಶಂಖಿ. ೦೪-೫); ಮನಮಂ ಮಱುಗಿಸಿ ಚಿತ್ತಮಂ ಚಿವುಂಟಿ ಕರಣಂಗಳಂ ಖಂಡಿಸಿ . . . ಹೋದಂ (ಶಂಬರ. ೦೭-೨೯). ೬. ಹಾತೊರೆಯುವಂತೆ ಮಾಡು ; ಅಪೇಕ್ಷೆಪಡುವಂತೆ ಮಾಡು : ಸರ್ವಸಂಗಪರಿತ್ಯಾಗಿ ಎಂದೊಡೆ ಭೋಗಕ್ಕೆ ಮಱುಗಿಸುವೆ (ಶಮಾವ. ೦೨-೦೪); ಒಲಿದು ಬಂದವರಾವು ಸೊಬಗಿನೊಳೊಲಿಸಿ ಮಱುಗಿಪ ಮಿಂಡ ನೀನು (ಕುಮಾ.ಆ. ೬-೪೦). **ಮರುಗಿಸು :** ೧. ಪೊತ್ತರೆ ಹಾಲಂ ಮರುಗಿಸಿ ಉತ್ತರಣೆಯ ಬೆಣ್ಣೆಗರಗವೆರಡರ ಬೇರಂ ಬಿತ್ತರದೊಳಿಕ್ಕೆ ಹೆಪ್ಪಿಟ್ಟಳ್ತಿಯೊಳಂ ಕಡೆಯೆ ಬೆಣ್ಣೆ ಮೂವಡಿಯಕ್ಕುಂ (ಗೋವೈದ್ಯ. ೧೯೯).
[ಮಱುಗು + –ಇಸು$_3$]

**ಮಱುಗು, ಮಱಕು, ಮರುಕು$_1$, ಮರುಗು$_1$** (ಕ್ರಿ). ೧. (ನೀರು, ಹಾಲು ಮುಂತಾದುವು) ಚೆನ್ನಾಗಿ ಕುದಿ,–ಮರಳು : ಮಱುಗುವ ಪಾಲ್ಗಳೆಯು ಪನಿಗಳಂ ಬೆರಸಿದವೋಲ್ (ಕವಿರಾ. ೧-೫೬); ಕಾಮಶರಂಗಳ ವರ್ಗಳೆರ್ದೆಯನುರ್ಚಿ ಪೋಗಿ ಪರವಸೆಯರಾಗಿ ಮಱುಗಿದಱುನೀರ ಮಿಾಂಗಳ್ವೊಲಾದರ್ (ಪತ್ರಾರಾ. ೫೭-೦೩); ಗುರುಪುತ್ರನಿದಿರ್ಚೆ ಘೀತಿಯಿಂ ಮಱುಗಿ ತೆರಳ್ದು ತೂಳ್ದು ಸುಱಿಗೊಂಡುದು ಪಾಂಡವಸೈನ್ಯಸಾಗರಂ (ಶಂಖಿ. ೧೨-೩೧); ಮಱುಗಿದುದಾ ಕೊಳದ ಜಲಮೆಯ್ದು ಕಾಯ್ದಸರೊಳೆ ಕೊಬ್ಬಿದಿವಂತೆ ಕುದಿದುವನಿಮಿಷತತಿಗಳ್ (ಗದಾಯು. ೭-೨೦). ೨. (ಮೋಹ, ಉದ್ವೇಗ ಮುಂತಾದುವುಗಳಿಂದ) ತಪಿಸು; ತಾಪಗೊಳ್ಳು: ಸೆನೆದಿರುಳಂ ಪಗಲುಂ ನಿನ್ನನೆ ಪೀನಮೊಱಲ್ದು ಮಱುಗಿ ಕಾತರಿಸುತ್ತುಂ ಮನದೊಳ್ ಸೈರಿಸಲಾಱೆಂ (ಕವಿರಾ. ೨-೮೩); ವಿಯೋಗಾಕುಳತೀವ್ರಾವಸ್ಥೆಯಿಂದಂ ನೆಱೆ ಮಱುಗುವುದಂ ನೋಡಲೇವೈಸಿದಂತಾಗಳೆ . . . ಅಪರಾಂಭೋಧಿಯಂ ಪೊಕ್ಕನರ್ಕಂ (ಕುಸುಮಾ. ೪-೨೩); ಸಂಗಸುಖಮಂ ಪಿಂಗಲಾಱದೆ ಕಾಮನ ಬಾಣಕ್ಕೆ ಗುಱಿಯಾಗಿ ಮಱುಗಿ (ಗಿರಿಜಾ. ೨-೧೧೫ ವ). ೩. ತವಕಗೊಳ್ಳು ; ಹಾತೊರೆ ; ಕಾತರಪಡು : ಪೞಱಲ್ ಮತ್ತಂ ಮಱುಗುತ್ತಿರ್ದಪೆಯಿನಿಸಂ ಗಱಿಮಾಡಿದ ಬಱಿಕ ನೀನೆ ದಲ್ ಪೋದಪ್ಪೈ (ಕಾದಂಬ. ೭೪೭) ; ಇನ್ನಪ್ಪ ಕಜ್ಜಕ್ಕೆ ಮುನ್ನವೆ ಮಱುಗುವುದಿದಾವ ಕಾರಣಂ (ಶಂತೀಶಂ. ೦೫೬-೦೨). ೪. ಕೊರಗು ; ಪರಿತಪಿಸು; ತಳಮಳಿಸು : "ಮಱುಗು—ಸಂತಾಪೇ" (ಶಮಾ); ಒಡಲುರಿಗುಂ ಮನಂ ಮಱುಗುಗುಂ ಕಿವಿ ಗಿಜ್ಜನೆವೋಕ್ಕುಂ (ಆದಿಪು. ೦೨-೪೦); ಅಱನ ಮಗಂ ಪ್ರಾರ್ಥಿಸೆ ಬಾಂದೊಱೆಯ ಮಗಂ ಮಾಡೆ ಸಂಧಿಯಾದಪುದೆನುತುಂ ಮಱುಗದಿರ್ (ಗದಾಯು. ೧-೭೨); ಕುರುರಾಯರಾಜ್ಯಶ್ರೀಯು ಮುಂದಲೆ ಹೋಯಿತೋ ಹಾ ಎನುತ ಮಱುಗಿತು ಕೂಡೆ ಕುರುಸೇನೆ (ಕುಮಾ.ಶ. ೦೨-೨೬). ೫. ಹೆಣಗು; ತಿಣುಕು ; ಕಷ್ಟಪಡು : ಮಱುಗಿ ಕುದಿದು ಶಾಸ್ತ್ರದ ಬಲದಿಂದಳಿಪಿಂ ಪೇಱಿರ್ದುಡವುದು ಕೋಪಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ (ರಸರ್ತ್ನಾಕ. ೧-೪೯). ೬. ಕನಿಕರಿಸು ; ಅನುಕಂಪವನ್ನು ತೋರಿಸು ; ಕರುಣೆ ತೋರು : ಕಂಡು ಮಱುಗದೆ ಸೂನೆಗಾಱನ ದೇಡಿಯಲಿ ಮಗನಂ ವಧಿಸಿ (ಬಸವಪು. ೨೪-೨೦); ಸುಧನ್ವಂಗೆ ಮಱುಗುತೆ ಸಚಿವನಿಂತೆಂದಂ (ಜೈಮಿನಿ. ೦೦-೩೦); ನೆಱೆ ಗಾಯವಡೆದಿಹರ್ಕಲರು ನೋಡದವರಿಗೆ ಮಱುಗಿ ಮುಂಗೆಟ್ಟಿಹರ್ಕಲರು (ಶಂಶಂ. ೦೫-೭). ೭. ಪ್ರೀತಿಸು : ಮಱುಗಿದಂ–ಕೂರ್ತಂ (ಶಮದ. ಶಂ. ೨). **ಮರಕು :** ೪. 'ಇಷ್ಟೆಲ್ಲ ಮಾಡಿದೆ . . . ಯಾರು ಹೆಣ್ಣು ಕೊಡುವವರು ಹೇಳಿ ಜಾತಿಗೆಟ್ಟವಳ ಮಕ್ಕಳಿಗೆ ?' ಎಂದು ಮರಕಿದಳು (ಮೂಕಜ. ೨೩೭). **ಮರುಕು$_1$ :** ೪. ಒಡತಿ. ಏನು ಮರುಕುತ್ತಿದ್ದೀರಿ ? ಈ ಗಳಿಗೆಯಲ್ಲಿ ಕಣ್ಣೀರು ಬಿಡಲಿಕ್ಕೆ ನಿಮಗೇನಾಯಿತು ? (ಮರವ. ೭೭). **ಮರುಗು$_1$ :** ೫. ಮಾರುತಿಯ ಬೆರಳ ಲೀಲಾಪಾತ್ರದಿಂದೆ ಭೂತಳಕುರುಳಿ ಮರುಗುತಿರೆ (ವೆಂಕಟಾ. ೫-೩-೦೭). ೬. ಆ ಬಡವನ ಕಷ್ಟವನ್ನು ಕೇಳಿ ಅವರು ಮರುಗಿದರು (ರೂಢಿ).
[ದೇ.॥ ತಮಿ. ಮಱುಕು; ತುಳು. ಮರ್ಕುನಿ; ತೆಲು. ಮಱುಗು, ಮರಗು, ಮರುಗು]

**ಮಱುಗುತ್ತ** (ನಾ). ವಾಸಿಯಾದ ಮೇಲೆ ಪುನಃ ಬಂದ ಕಾಯಿಲೆ ; ಮರುಕಳಿಸಿದ ರೋಗ : 'ಮಱುಗುತ್ತಂಬಡು' ಪರಾ.
[ಮಱು$_1$ + ಕುತ್ತ]

**ಮಱುಗುತ್ತಂಬಡು** (ಕ್ರಿ). ವಾಸಿಯಾದ ಕಾಯಿಲೆಯು ಪುನಃ ಬರು ; ರೋಗವು ಮರುಕಳಿಸು : ಆ ಸಿಂಹಂ ಮಱುಗುತ್ತಂಬಟ್ಟು ಗೊಂಕಱ ಕಟ್ಟಿಯಂ ಬಿಸುಸಿ ಬಾಯೊಱೆತು ತನಗನುಚರನಪ್ಪುದೊಂದು ನರಿಗೆ ಪೇೞ್ದುದುಂ (ವಡ್ಡಾರಾ. ೨೮೨-೦೪). [ಮಱುಗುತ್ತ + ಪಡು$_1$]

**ಮಱುಗುಹ** (ನಾ)· (ಮಾಡಿದ ಪಾಪಕಾರ್ಯಕ್ಕೆ ಪಶ್ಚಾತ್ತಾಪ ಪಟ್ಟು) ದುಃಖಪಡುವಿಕೆ ; ಪರಿತಪಿಸುವಿಕೆ : ದೋಷವನಾರೋಪಿಸುವುದು ಮಾಡಿ ಮಾಡಿ ಮಱುಗುಹ (ಪಶ್ಚಾತ್ತಾಪ, ಅನುತಾಪ) (ಜಾತಗಾ. ೬).

[ ಮಱುಗು + — ಹ$_2$ (< — ಪ$_2$) ]

**ಮಱುಚಲು**, ಮರಚಲು, ಮರುಚಲು (ನಾ)· ೧. ಮೊದಲ ಮಗುವಿನ ನಂತರ ಹುಟ್ಟಿದ ಮಗು ; ಎರಡನೆಯ ಮಗು : ಮಱುಚಲಾತನನವನ ನೀವೆನು ನೆರಹಲಾಱೆನು ಕೂಳನೆಂದಳು ಕುಂತಿ ನಸುನಗುತ (ಸಂಭಶ. ೨೩-೩೯)· **ಮರಚಲು** : ೧. ನಾನು ಚೊಚ್ಚಲು, ನಮ್ಮ ನೀಲಕಂಠನೇ ಮರಚಲು (ಮಾಪುರಾ. ೦೦೮). **ಮರುಚಲು** : (ಗು)· ೨. ಎರಡನೆಯ; ದ್ವಿತೀಯ: ಬಿಸಿಗೆ ಬೆಚ್ಚಿದ ಎದೆಯು ಮರುಚಲ ಬಸಿರಿಯು ಬಯಕೆಗೆ ತಗುಬಗೆ ಯಾಗುತಿರೆ ಕನಸಿಗು ಹೊಳೆಯದ ಬರಸಿಡಿಲೆರಗಿತು (ಸಣ್ಣಗ. ೦೦-೯೦) ; ವಸುಮತಿ ಈಗ ಮರುಚಲ ಬಸಿರನ್ನು ಹೊತ್ತು ಗಾಸಿಯಾದಳು (ಮಚ್ಛಪು. ೩೦) ; ಈ ಮಗುವನ್ನು ಹೆತ್ತ ಎರಡನೇ ವರ್ಷದಲ್ಲಿ ಮರುಚಲು ಹೆರಿಗೆಯಲ್ಲಿ ಆಕೆ ತೀರಿಕೊಂಡಿದ್ದಳು (ಮನೋಪಂ. ೩೯).

**ಮಱುಚಲು ಮಗ, ಮರುಚಲ ಮಗ** = ಎರಡನೆಯ ಮಗ : ಹಿರಿಯನಲಿ ಜನಕಂಗೆ ಮೋಹವು ಕಿಱಿಯನಲಿ ಕಡುಮೋಹ ಜನನಿಗೆ ನಿರುತ ಮಱುಚಲು ಮಗನು ದೇಶಿಗನಾಗಿ ಚರಿಸುವನು (ಸಂಭಶ· ಶಂ· ೩೦೦-೩೯); ಇವುಗಳಲ್ಲಿ ಎರಡರಲ್ಲೊಂದು ಪಾಲು ಚೊಚ್ಚಲು ಮಗನು, ಮೂರ ರಲ್ಲೊಂದು ಪಾಲು ಮರುಚಲ ಮಗನು . . . ತಕ್ಕೊಂಡು (ಮುಂಬಯಿ. ೩-೦೬); ನನ್ನ ಮರುಚಲ ಮಗ ಇದೇ ವರುಷ ಮುಲ್ಕೀ ಆದ (ರಕ್ತಧ್ವ. ೪).

[ಮಱು$_1$ + < ಸೂಲ್]

**ಮಱುಜವಣಿ** 'ಮಱುಜೀವಣಿ' ನೋ.

**ಮಱುಜೀವಣಿ**, ಮರುಜೀವಣಿ, ಮರುಜೇವಣಿ, ಮಱುಜವಣಿ, ಮಱು ಜೆವಣಿ, ಮಱುಜೇವಣಿ, ಮಱುಜೀವಣೆ (ನಾ)· ಸತ್ತವರನ್ನು ಪುನಃ ಬದುಕಿಸುವುದೆಂದು ನಂಬಲಾದ ಒಂದು ಬಗೆಯ ಔಷಧೀ ಸಸ್ಯ ; ಸಂಜೀವಿನಿ : ಹೋದ ಜೀವಕ್ಕೆ ತನ್ನ ಕರುಣವೆಂಬ ಮಱುಜೀ [ಪಾಠಾ.ಜ] ವಣಿಯ ಹಿಂಡಿ ಎತ್ತಿದನು (ಬಸವ. ಶ. ೪೭೭-೦೦೩೭) ; ಪಂಚಾಕ್ಷರಿ ಮಱು ಜೀವಣಿಯ ಚಿತ್ತ ಶ್ರೋತ್ರದೊಳು ಧಾರೆಯನೆಱೆಯಲು ಆತ ನಿನ್ನಂತೆ ಕಾಣಾ (ದೇವಾತ. ೯೦-೦೩) ; ಈ ಸುಷೇಣನು ಹಿಂದೆ ಪನ್ನಗಪಾಶದಲಿ ರಾಘವನ ರಣದಲ್ಲಿ ವಾಸವಾಂತಕ ಬಿಗಿದ ದಿನ ಮಱುಜೀ[ಪಾಠಾಂ· ಜೀ] ವಣಿಗಳೆಂಬ ಔಷಧವ ಹೇಳಿದನು (ತೊರರಾ· ೬-೩೬-೩೩)· **ಮರುಜೀವಣಿ** : ಹೊರಗಿಗೆ ಬರಿಮಳೆ ಸಂಜೀವಿನಿಯು ಒಳಗಾ ಕರುಣೆಯೆ ಮರುಜೀವಣಿಯು (ಕರುಣಾ· ೯೪-೦೦) ; ಅಕ್ಕನಿಗೆ ಶ್ರೀಶೈಲದ ಕಲ್ಲು, ಮರ, ಗಿಡಗಳೆಲ್ಲ ಪರುಷ, ಕಲ್ಪತರು, ಮರುಜೀವಣಿಗಳಾಗಿ ತೋರಿದವು (ಕರ್ನಾಕ· ೭೯) ; ಮರು ಜೀವಣಿಯ ಮರಗಳ ಸಾಲುಗಳು ಮರಣಬಾಧೆಯು ದೂರ (ಸಿದ್ಧಪು· ೬-೬೨). **ಮರುಜೇವಣಿ** : ವರ ಜಗನ್ಮೋಹನೆಮ [ ಯ ] ನಂಗಸ್ಮರಣ ಬೀಜಾಕ್ಷರಿ ವಸಂತನ ಹರಣ ಮರುಜೇವಣಿ ಜಯಂತನ ವಿಜಯ ನಿಜಲಕ್ಷ್ಮಿ ವೆರೆ ನಿರೀಕ್ಷಿಸಿ ನಲಿದು ಕುಳಿತಳು (ಅಂಬಿಕಾ· ೧೦-೩೬). **ಮಱುಜವಣಿ** : ಮರಣವುಳ್ಳವರಿಗೆ ಮಱುಜವಣಿ ಸಿಕ್ಕುವುದೇ (ಅವತಂ. ೨೨೮-೦೦೩೨) ; ಇಂದ್ರಜಿತುವಿಂ ರಾಮನೊಳಗಾಗಿ ಮಡಿದೊಡಾ ಜಾಂಬುವಂ ಹನುಮರಗ್ಗಳದ ಮಱುಜವಣಿಯಂ ತಂದೆಬ್ಬಿಸಿದ ಬಳಿಕ ಮರಳಿ ಯುದ್ಧಂಗೆಯ್ದರು (ಜೈಕೃಕ. ೩-೦೦-೩೦) ; ಮರಣವುಳ್ಳರ್ಗೆ ಮಱುಜ ವಣಿ ಕಾಣಿಸದವೊಲು . . . ಬೊಂತಲಾದೇವಿಯರು ನನ್ನ ಕಣ್ಗೆ ಕಾಣಿಸದೆ ಗುಪ್ತದಿಂದಿರ್ದು (ಶ್ರಶುಪು· ೮-೯೮) ; ಮಱುಜವಣಿ ಮಾಣಿಕವ ಪಾಸಱೆ . . . ಸಸಿಗಲ್ಗೋಡು ಮೆಱೆಗುಮಾ ಗಿರಿತಟದೊಳ್ (ಕಬಿಕಂ· ೩-೩೦). **ಮಱುಜೆವಣಿ** : ಸುರಭೂಜಾರಾಮದಿಂದಂ ಮಱುಜೆವಣಿಯ ಪುಂಜಂಗಳಿಂ . . . ರಾಜಿಸಿತ್ತು ನಿರುಪಮವರಶೈಲಂ (ಉದ್ಭಟ· ೦೫-೧೨೦). **ಮಱು ಜೇವಣಿ** : ನಾನೇನು ಅಮೃತವ ಸೇವಿಸಿದನೆ ಆನು ಮಱುಜೀವಣಿಯ ಕೊಂಡೆನೆ (ಬಸವ. ೯೯೭) ; ಮಱುಜೇವಣಿಯುನೆರೆ ಸವಿದಮೃತಮಂ ಕುಡಿದಂತೆ . . . ಭಾಸುರ ವಾರಣಾಸಿಯಂ ಹೊಕ್ಕನುತ್ತಮನೃಪಂ (ಹರಿಶ· ೦೦-೩೩); ಸುರಭಿಗಳ ನೆರವಿಯುಂ ಪರುಷದ ಸಱಿಯು ಮಱು ಜೇವಣಿಯ ಮಡಲ . . . ತೋಱಿದಂ ವೃಶ್ಚಿಕಾರೂಢನು (ಸಿದ್ಧರಾ· ೩-೪); ಆರೂಢದಕ್ಷರದ ಮಱುಜೀವಣಿಯು ಹಿಂದೆ ನೀರು ವಜ್ರವೆಯಕ್ಕು (೦ಂಗರೀ. ೩೦೮-೭೦). **ಮಱುಜೀವಣೆ** : ೧. ರಣದೊಳಳಿದ ಸಮಸ್ತ ವಾನರಗಣವನಪರಬ್ರಹ್ಮ ಮಱುಜೀವಣೆಯ ತಂದೆಬ್ಬಿಸಿದನು (ತೊರರಾ. ೬-೩೬ ತೊಪವ); ಮರಣವುಳ್ಳವರಿಗೆಯು ಮಱುಜೀವಣೆ ಸಿಕ್ಕದಂತೆ . . . ಶರಣರ ನಿಲುಗಡೆ ಅರಿಗೂ ಸಿಕ್ಕದಲಾ (ಶೈರಸೂ· I, ೨೩೭)· 'ಜೇವಣ್ಣೆ$_2$' ಪರಾ.

**ಮಱುಜೀವಣಿಯ ಹಣ್ಣು, ಮಱುಜೆವಣಿಯ ಹಣ್ಣು** = ಸತ್ತವರನ್ನು ಬದುಕಿಸುವುದೆಂದು ನಂಬಲಾದ ಒಂದು ಔಷಧೀಸಸ್ಯದ ಫಲ : ಮಱುಜೀ [ಪಾಠಾಂ· ಜ]ವಣಿಯ ಹಣ್ಣ ಮೆದ್ದು ಮರಣವಾಯಿತ್ತ ಕಂಡೆ (ಅವತಂ. ೦೦೦-೪೩೭); ಕರಿ (ಕರಿಯ) ದಾನವನ ಶಿರದಲ್ಲಿ ಮಱುಜೆವಣಿಯ ಹಣ್ಣಿಪ್ಪುದ ಕಂಡೆನಯ್ಯ (ಸಿದ್ಧೇಪ· ೦೯೪-೩೯೦). P ಈ ಉಲ್ಲೇಖ ಅನುಮಾನಾಸ್ಪದವಾಗಿದೆ. ಮೇಲೆ ಕೊಟ್ಟಿರುವ ಬಹುಪಾಲು ಪ್ರಯೋಗಗಳಲ್ಲಿ ಸಾಮಾನ್ಯರೇಫವೇ ಇದ್ದು ಕಾಲದೃಷ್ಟಿಯಿಂದ ಶಕಟರೇಫವನ್ನಾಗಿ ತಿದ್ದಿದೆ. ಈ ಶಬ್ದದ ಸ್ವರೂಪದಲ್ಲಿ ಜೀವನಿ, ಜೀವಿನಿ ಎಂಬ ಸಸ್ಯದ ಹೆಸರಿನ ಶಬ್ದಗಳು, ಮಣಿ (ಗರುಡಮಣಿ ಎಂಬಲ್ಲಿರುವಂತೆ) ಎಂಬ ಔಷಧದ್ರವ್ಯದ ಒಂದು ರತ್ನವೂ ಕವಿಗಳ ಮನಸ್ಸಿನಲ್ಲಿದ್ದು ಭ್ರಮೆಯಿಂದ ಈ ಶಬ್ದಗಳಲ್ಲಿ ಕೆಲವು ಸೃಷ್ಟಿಯಾ ಗಿರಬಹುದು. ಆದುದರಿಂದ ಅವುಗಳನ್ನು ನೆನಪಿನಲ್ಲಿಟ್ಟು ಈ ಕೆಳಗೆ ಕೊಟ್ಟಿರುವ ವ್ಯುತ್ಪತ್ತಿಯನ್ನು ಸೂಚಿಸಲಾಗಿದೆ.

[ ಮಱು$_1$ + < ಸಂ. ಜೀವನೀ ]

**ಮಱುಜೀವಣಿಗೆ**, ಮಱುಜೇವಣಿಗೆ (ನಾ)· = ಮಱುಜೀವಣಿ : ಮಡಿವವಗೆ ಮಱುಜೀವಣಿಗೆ ದೊರೆಯಲೊಲ್ಲದೇ ಬಿಡುವನೇ (ಶ್ರೀಶರಾ· ೦೯-೮). **ಮಱುಜೇವಣಿಗೆ** : ಜೀವವಿಯೋಗ ತನುವಿಗೆ ಮುಟ್ಟ ಮಱುಜೇವಣಿಗೆ ಬಂದಂತೆ . . . ಗೋರಕ್ಷನಲ್ಲಿಗೆ ಬಂದ ಪ್ರಭುರಾಯ (ಶ್ರಶುರೀ· ೦೯-೦೪); ಆ ಪುರದ ಗುಲ್ಮಗಳೆಲ್ಲ ಮಱುಜೀವಣಿಗೆ (ಗುರುಜಾ. ೦-೨೭); ಅಂಧಕಂಗೆ ಕಣ್ಣು ಬಂದಂತೆ . . . ಮರಣುಳ್ಳವಂಗೆ ಮಱು ಜೇವಣಿಗೆ ದೊರೆಕೊಂಡಂತೆ . . . ನೀವೆನ್ನ ಕರಸ್ಥಲಕ್ಕೆ ಬಂದ ಫಲವು ಇಂತುಂಟಯ್ಯಾ (ಅಜಂಡೇ. ೨೯-೭)· 'ಜೇವಣಿಗೆ$_2$' ಪರಾ.

[ ಮಱುಜೀವಣಿ + — ಗೆ ]

**ಮಱುಜೆವಣಿ** 'ಮಱುಜೀವಣಿ' ನೋ.

**ಮಱುಜೇವಣಿ** 'ಮಱುಜೀವಣಿ' ನೋ.

**ಮಱುಜೇವಣಿಗೆ** 'ಮಱುಜೀವಣಿಗೆ' ನೋ.

**ಮಱುಜೀವಣೆ** 'ಮಱುಜೀವಣಿ' ನೋ.

**ಮಱುತ್ತರ** (ನಾ). ಎದುರುಮಾತು ; ಪ್ರತ್ಯುತ್ತರ ; ಎದುರು ಜವಾಬು: ಎಲವೊ ನೀನೆಮ್ಮೊಳ್ಮಱುತ್ತರವನಾಡಿದ್ಯೆ (ಜೈಕೃಕ· ೪-೨೨-೦೦). 'ಮಾಱುತ್ತರ' ನೋ.

[ P ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ ]

**ಮಱುದಲೆ** (ನಾ)· ಮತ್ತೊಂದು ರೂಪ ; ಬೇರೊಂದು ರೂಪ : ಮೃಗಾಂಕನ ಮಱುದಲೆಯೊ ಮೇಣೆನಲು ರಥ ಹೊಳೆದಿಳಿದುದಂಬರದಿ (ಕುಮಾರ. ೭-೦೨). [ಮಱು$_1$ + ತಲೆ$_1$]

**ಮಱುದಿನ,** ಮರುದಿನ (ನಾ). ಮಾರನೆಯ ದಿವಸ; ಮುಂದಿನ ದಿವಸ: ಮಱುದಿನಮಾ ಪೊತ್ತಪ್ಪಿನಮಱಿಯ ನೀರೂಟ ತಂಬುಲಂಗಳ ಮಾತಂ ತೊಱೆದು . . . ಓದುತ್ತಮಿರ್ಪುದು (ಧರ್ಮಾಮೃ. ೧-೦೭೩); ಮಱುದಿನವು ಆದಿನಂದಿಗೆ . . . ಕುಸುಮನವಮಾಲೆಗಳನಿತ್ತು (ಬಸವ. ೨-೫೦); ನಿಗಮಪವಿತ್ರಜಲಪಾವನನು ಮಱುದಿನ ಯಜ್ಞದೀಕ್ಷಿತನಾದನು (ಕುಮಾ.ಸ. ೨-೨೭). **ಮರುದಿನ:** ಹಿಂದಿನ ರಾತ್ರಿ ಬಂದು ಇಳಿದು ಕೊಂಡಿದ್ದ ಅತಿಥಿಯನ್ನು ಮರುದಿನ ಬೆಳಗ್ಗೆ ಹೀಗೆ ಕುಶಲಪ್ರಶ್ನೆ ಕೇಳಿ ಮಾತಾಡಿಸುವುದು ಅನೂಚಾನವಾದ ಪದ್ಧತಿ (ಹಂಬರು. ೪೦); ಮರುದಿನಂ ಬೆಳಗಿನಲಿ ಚಿತ್ರಯಾಣತಿಯಂತೆ ಬೀಡುತೆಗೆದುದು ಕಟಕಮೆಳ್ದು ನಡೆದುದು (ತತ್ತ್ವ.ಗ. ೩೬-೦೫೪೦). [ಮಱು₁ + ದಿನ]

**ಮಱುದಿವಸ,** ಮರುದಿವಸ (ನಾ). = ಮಱುದಿನ: ಮಱುದಿವಸ ಮಿರ್ದರ್ಽಂ ಪುಳ್ಳಿಗೆ ಪೋದಲ್ಲಿ (ವಡ್ಡಾ.ಆ. ೭೭-೦೦); ಮಱುದಿವಸಂ ನೇಸಱುಂ ಮೂಡೆ (ಆದಿಪು. ೦೨-೬೪ವ); ಮಕ್ಕಳಂ ಪಡೆವೆನೆಂದು ಮರ್ದಂ ಕುಡಿದ ಮಱುದಿವಸಕ್ಕೆ ಗಂಡಂ ಸತ್ತಂ (ಧರ್ಮಾಮೃ. ೨-೯೬). **ಮರು ದಿವಸ:** ಮರದಿವಸ ಎಂದಿಗಿಂತ ಮುಂಚೆ ಎದ್ದು . . . ಹೋದವನು ಹಿಂದಿರುಗಿದ್ದು ಸಂಜೆಯೇ (ಸತಿ. ೪೭). [ಮಱು₁ + ದಿವಸ]

**ಮಱುದೆವಸ** (ನಾ). = ಮಱುದಿನ: ಇರುಳ್ ಕಂಡ ಕನಸಂ ಮಱು ದೆವಸಂ ನೆನೆವಂತೆ (ಆದಿಪು. ೪-೩ ವ); ಮಱುದೆವಸಂ ಯಾಮಿನೀವಿರಾಮ ಮಪ್ಪುದುಂ ಪ್ರಯಾಣಭೇರಿಯಂ ಪೊಯ್ಸಿದಾಗಳ್ (ಶಂಕರಂ. ೦೨೭-೧೯); ಆ ಮಱುದೆವಸದಲಿ ಮಕ್ಕಳುಂಗಳೆಲ್ಲರ ಕರೆಸಿ . . . ನುಡಿದನು ಕುಮಾರರಿಗೆ (ಸಂಶಕ. ೦೮-೮೪). [ಮಱು₁ + ದೆವಸ]

**ಮಱುದೊತ್ತು** (ನಾ). ಎಲ್ಲರಿಗಿಂತ ಕೀಳಾದ ತೊತ್ತು; ದಾಸಾನು ದಾಸ: ದಾಸಿಯ ವರ್ಗದಲ್ಲಿಪ್ಪೆನು ಶಿವಶರಣರ ಮನೆಯಲ್ಲಿ . . . ಅವರ ತೊತ್ತಿನ ತೊತ್ತಿನ ಮಱುದೊತ್ತಿನ ಮಗನೆಂದು ಕೂಡಲಸಂಗಮದೇವ ಇತ್ತ ಬಾಯಿಂದೆತ್ತಿಕೊಂಡನು (ಬಸವ. ೪೭೩); ಪ್ರಭುದೇವರ ತೊತ್ತಿನ ತೊತ್ತಿನ ಮಱುದೊತ್ತಿನ ಮಗಳಾದ ಕಾರಣ ಜ್ಞಾನಪ್ರಸಾದವ ಕೊಟ್ಟನು (ಮಹಾದೇ. ಬಿ. ೬೮-೦೪೬). [ಮಱು₁ + ತೊತ್ತು (<ತೊಟ್ಟು)]

**ಮಱುಭವ** (ನಾ). ಮುಂದಿನ ಜನ್ಮ; ಪುನರ್ಜನ್ಮ: ಬಸಂತದೊಳ್ ಕಳಕಿಗರ್ಚಿದ ಕೋಗಿಲೆಯಂತೆ ಬಿಚ್ಚತಂ ನಲಿವುದು ಕಂಡರಾರ್ ಮಱುಭವಂ ಗಳನಿಲ್ಲಿ ವಿಯಚ್ಚರೇಶ್ವರಾ (ಆದಿಪು. ೨-೯); ಬೆಕ್ಕು ಪಾಲಸಲ್ಲದೆ ಮೇಲಣ ಬಡಿಯಂ ಕಾಣದೆಂಬಂತಿಲ್ಲಿಯ ಸುಖಮನೆ ಬಗೆದೆಯಲ್ಲದೆ ಮಱುಭವ ದೊಳಾದ ಮಹಾದುಃಖಮಂ ಬಗೆದೆಯಿಲ್ಲಂ (ಧರ್ಮಾಮೃ. ೬-೦೨೬).

[ಮಱು₁ + ಭವ]

**ಮಱುಮಾತು** 'ಮಱುವಾತು' ನೋ.

**ಮಱುಮಾತುಗುಡು** 'ಮಱುವಾತುಗುಡು' ನೋ.

**ಮಱುಮಾತುಗೊಡು** 'ಮಱುವಾತುಗುಡು' ನೋ.

**ಮಱುಮೆಟ್ಟು** (ನಾ). ಮತ್ತೊಂದು ಹೆಜ್ಜೆ; ಮುಂದಿನ ಹೆಜ್ಜೆ: ಕಂಡವಂ ಮಱುಮೆಟ್ಟು ಮೆಟ್ಟಲೀಯದೆಯೆಸುವ ಕಂಡವಂ ಹುಟ್ಟಿ ಹೊಂದಲ್ಕೀಯದಂತೆಸುವ ಕಂಡ ಮೃಗಮೊಂದುಮಂ ತಪ್ಪ ಪಾತನ ಮುಂದೆ (ಕನ್ನ.ರ. ರೇ. ೦೨೬-೦೦). [ಮಱು₁ + ಮೆಟ್ಟು₂]

**ಮಱುಮೆಯ್,** ಮರುಮೈ (ನಾ). = ಮಱುಭವ: ಈ ಭವದಿಂದಮಾದ ವಾಸನೆ ಮಱುಮೆಯ್ಗಮಕ್ಕುಂ (ಆದಿಪು. ೪-೫೨); ಮಱುಮೆಯ್ಯೊಳಾದೊಡಂ ಪತಿಯೆನಗಕ್ಕೆ ಲಕ್ಷ್ಮಣಾ (ಶಂರಾಪಾ. ೬-೮); ಮಱುಮೆಯ್ಯೊಳೀ ಬನ್ನಮಂ ಕಾಣಲ್ಬಾರದಂತು ಕರುಣಿಸಯ್! (ಜಿಪುಾಕ್ಕ. ೭೭-೩). **ಮರುಮೈ:** ಪ್ರೇಮವು ಹತವಾಗಿರೆ ವಿಕಲ ಮರುಮೈ ಮಾಡುವುದೇ ಸಫಲ? (ಅರಳು. ೦೪೭-೦೦). [ಮಱು₁ + ಮೆಯ್₁]

**ಮಱುಮೊನೆ** (ನಾ). ದೇಹಕ್ಕೆ ಒಂದು ಕಡೆಯಲ್ಲಿ ನಾಟಿ, ಮತ್ತೊಂದು ಕಡೆಯಿಂದ ಹೊರಗೆ ಕಾಣಿಸಿಕೊಳ್ಳುವ ಬಾಣ ಮುಂತಾದ ಆಯುಧಗಳ ತುದಿ: ಮದನನ ಸರಳ ಮಱುಮೊನೆಗಾವನಂತಃಕರಣ ನೆಱೆ ಕಳವಳಿಸದು (ಕುಮಾ.ಆ. ೦೩-೦೭); ಮುಳುಗಿದಂಬಿನ ಮಱುಮೊನೆಯ ಮೈಗಳ ಮಹಾರಥರಾಜಿ (ಕುಮಾ.ದ್ರೋ. ೫-೧೨೭). [ಮಱು₁ + ಮೊನೆ₁]

**ಮಱುಮೊನೆಗಾಣ್** (ಕ್ರಿ). ದೇಹಕ್ಕೆ ಬಾಣ ಮುಂತಾದ ಆಯುಧಗಳ ತುದಿಯು ಒಂದು ಪಾರ್ಶ್ವದಲ್ಲಿ ನಾಟಿ, ಮತ್ತೊಂದು ಪಾರ್ಶ್ವದಿಂದ ಹೊರಗೆ ಕಾಣಿಸಿಕೊಳ್ಳು: ಅಂಬನೆ ತೆಗೆದು ಪೊಸಗಾಯದಿ ಬಸವಳಿದು ಮತ್ತಪನಂಗವನಿಱಿದಳು ಮಱುಮೊನೆಗಾಣುತಲ್ಲಿ (ಶಿವಗೀ. ೦೬೯-೩೦೪); ಮಱುಮೊನೆಗಂಡ ಬಾಣಂಗಳೆದೆಯಿಂದ ಸುರಿವ ಬಿಸಿನೆತ್ತರೇಱುಗಳ . . . ಹಂದಿಯನು ಕೌಶಿಕ ಕಂಡನು (ಹರಿಶ. ೬-೬೦); ಮಱುಮೊನೆಗಂಡ ಪುಷ್ಪ ಶರದೊಂದು ಸುಘಾಯದ ನೋವಿನಿಂದಮಂ ಮೊಱೆಯನು (ಸನ್ಮತಿ. ೯-೬೦).

[ಮಱುಮೊನೆ + ಕಾಣ್]

**ಮಱುಮೊನೆಗೊಳ್** (ಕ್ರಿ). = ಮಱುಮೊನೆಗಾಣ್: ಭೂಪತಿ ಕೋಲು ಮಱುಮೊನೆಗೊಂಡವೋಲ್ ಮಱುಗಿದನು ಚಿತ್ತದಲಿ (ಕುಮಾ.ಆ. ೨೩-೪೦); ಕಾಮನ ಕೋಲು ಮಱುಮೊನೆಗೊಂಡುದೆಂಬೊಂದೂಳಿಗದ ಮಾತುಗಳ ಶಿವಶಿವ ಮನದ ಬಯಕೆಯನು ಪಾಲಿಸುವೆ (ಶಿಭಾಗ. ೩-೯-೬).

[ಮಱುಮೊನೆ + ಕೊಳ್₁]

**ಮಱುಮೊನೆದೋಱು** (ಕ್ರಿ). = ಮಱುಮೊನೆಗಾಣ್: ತನ್ನ ಸೂಜಂಬ ನೊಂದುಬಾಣದಲಿ ಹಾಜಿಲಿಕ್ಕಿದನು ಪೇರುರದಲ್ಲಿ ಮಱುಮೊನೆದೋಱ ಲೆಚ್ಚಾಡುವನಹುದೋ (ಪ್ರೋಹಿತ. ೩೫-೩೪). [ಮಱುಮೊನೆ + ತೋಱು]

**ಮಱುವಂಕ** 'ಮಱುವಕ್ಕ' ನೋ.

**ಮಱುವಕ್ಕ,** ಮಱುವಂಕ (ನಾ). ೧. ಎದುರುಪಕ್ಷ; ಪ್ರತಿಪಕ್ಷ; ಶತ್ರು ಪಕ್ಷ: "ಮಱುವಕ್ಕಂ ಶತ್ರುಸೈನ್ಯಾಖ್ಯಯುದೊಳ್" (ಕರ್ನಾಟ. ೪೦); ಮಱುವಕ್ಕದವರ ಮೆಯ್ಮೆಯ್ಯುಮ್ಮಾಗೆ ಎಚ್ಚೋಡಿಸಿ ಆ ಕಯ್ಯಂ ಗೆಲ್ದು (ಎಕ. VIII ಸೊರಬ. ೦೦-೬; ಸು. 800); ಗುರು ಗುರುಪುತ್ರ . . . ನದೀ ಸುತರೆಂಬ ಸಂದ ಬೀರರೆ ಮಱುವಕ್ಕಮಣ್ಣನೊಡನಿರ್ದರೆ ಕೂಸು ಗಳೆಂಬ ಶಂಕೆಯುಂ ಓರಿದೆನಗೀಗಳಾದಪುದು (ಸಂಶಕಾ. ೦೦-೦೨); ಬಱುಗಯ್ಯೊಳೊಂದೆ ಮೆಯ್ಯೊಳ್ ಮಱುವಕ್ಕಮನಿಕ್ಕಿ ಗೆಲ್ದು ಸಿಂಹೋದರನಂ ಸೆಱೆಗೊಂಡುಯ್ದಂ ಕೃಷ್ಣಂ (ಶಂರಾಪಾ. ೬-೬೯). ೨. ಶತ್ರು; ಹಗೆ; ಪ್ರತಿಸ್ಪರ್ಧಿ: ತಿಂಗಳ ಪಡಿಚಂದ್ರಂ ಕಮಲಂಗಳ ಮಱು [ವಕ್ಕಮುಮರ್ದ] ತಿಳಿಗೊಳನಾ ಚೆಲ್ವಿಂಗಿದೆ ದಾಯಿಗಮೆನೆ ಲಲಿತಾಂಗಿಯ ನಗೆಮೊಗದ ಪೋಲ್ವೆಗೆಣೆ ಪೆಱವೋಳವೇ (ಗಿರಿಜಾ. ೮-೩೩); ಕೊಗ್ಗಿಯೊಳಿಡದ ಕತ್ತುರಿಯ ಪರಿಮಳಕ್ಕಳಸಿ ಕರ್ಣಪೂರದೊಳ್ ಬಳಸುವಳಿಗಳೊಳ್ ತಡಂಗಲಸಿ ಮಂಡಳಿಸುವ ಕಟಾಕ್ಷಕಿರಣಮಂಜರಿಗೆ ಮಱುವಕ್ಕಮಾಗೆ ನೀಲ ಮುತ್ತಿನೋಲೆಯುಂ ತುಡಿಯುಂ (ಪರ್ಶಿ. ೬-೯ ವ). **ಮಱುವಂಕ.**

ಮಱುವಂಕಭೈರವ = ಶತ್ರುಪಕ್ಷಕ್ಕೆ ಭೈರವನಂತಿರುವವನು: ಒಂದು ಬಿರುದು: ಮಾರ್ಬಲಮಲ್ಲ ಮಱುವಂಕಭೈರವ ಅಯ್ಯಣಪುತ್ರ (ಎಕ. VIII, ಸೊರಬ. ೪೦೩-೦೨; ೯೮೬). ಮಱುವಕ್ಕದಲ್ಲಟಂ = ಶತ್ರುಸೈನ್ಯಕ್ಕೆ ಭಯವನುಂಟುಮಾಡುವವನು: ಚಾಲುಕ್ಯ ಅರಿಕೇಸರಿಯ ಒಂದು ಬಿರುದು: ಚಾಳುಕ್ಯವಂಶೋದ್ಭವಂ ಶ್ರೀಮದರಿಕೇಸರಿ . . . ಸಂಸಾರ ಸಾರೋದಯಂ ಮಱುವಕ್ಕದಲ್ಲಟಂ ನೋಡುತ್ತೆ ಗೆಲ್ವಂ (ಶಂಶಭಾ.೦-೦೪೬ ಕ). ಮಱುವಕ್ಕಮಾರಿ = ಶತ್ರುಗಳಿಗೆ ಮಾರಿಯಂತಿರುವವನು; ಒಂದು ಬಿರುದು: ಮಱುವಕ್ಕಮಾರಿಗಳುಂ ಪರಸ್ತ್ರೀಪರಧನವರ್ಜಿತರುಂ (ಎಕ. XIX, ೩೩-೦೩; 1135). ಮಱುವಕ್ಕರಾಮ = ಎದುರುಪಕ್ಷಕ್ಕೆ ಪರಶುರಾಮನಂತಿರುವವನು; ಒಂದು ಬಿರುದು: ಮಱುವಕ್ಕರಾಮ

ಕಾಯ್ದರ ಭೀಮಂ ದುರದೆಡೆ ರಾಮಂ (ವ್ಯ.ಕಾ. ೧೯೩೬, ೩೦-೧೪ ; 1056). [ಮಱು$_1$ + ಪಕ್ಕ]

**ಮಱುವಗಲ್.** ಮರುವಗಲ್(ನಾ). = ಮಱುದಿನ: ಆ ಪಗಲಂ ಕಳೆದಂದಿನ ಮಱುವಗಲಂ ನಡೆದೆತ್ತಿ ಬರುತ್ತುಮಿರ್ದಂ ಕಾಮಂ (ಕಬ್ಬಿಗ. ೧೯೯); ಮಱುವಗಲುದಯದೊಳರಸಂ ತುಱುಗಿರೆ ಕಡುಹರಿಸಮಿರುಳ ಕನಸಂ ನೆನಸೆಂದಱಿಪಲ್ (ಶಬ್ದ. ೩-೦೦೦). **ಮರುವಗಲ್** : ಹುಲಿ ಮರುವಗಲ್ ಹೂವೀಡ ತೊಡವಿನಿಂ ಗಾಡಿಯಿಂ ನಡೆಯುತಿಪ್ಪುದಾಳನೊಡವೆರೆದು (ಕಾರ್ಣಾಟ. ೮೯-೦೬೩). [ಮಱು$_1$ + ಪಗಲ್]

**ಮಱುವರಸ** (ನಾ). ಪ್ರತಿಪಕ್ಷದ ಅರಸ ; ಶತ್ರುರಾಜ : ಚಲದಿಂ ಮಲೆವ ಮಱುವರಸರ ಪೊಸನೆತ್ತರೊಳ್ ಪೊರೆದ ನಿನ್ನ ಬಾಳಂತೆ ಒಳ್ಪುವಡೆದ ಕೆಂದಳಿರ್ಗಳಿಂ ಮಿಸುಗುವ ಅಸುಗೆಗಳೊಳಂ . . . ಬಿನದಕ್ಕೆ ಪಕ್ಕಾದ ಬನಮಂ ನೋಡಲ್ವೇೞ್ಪುದು (ಕಬ್ಬಿಗ. ೬೯). [ಮಱು$_1$ + ಅರಸ$_1$]

**ಮಱುವಲಗೆ** (ನಾ). ೧. (ಪಗಡೆಯ ಹಾಸಿನಲ್ಲಿ) ಮತ್ತೊಂದು ಬಾರಿ ಆಡುವ ದ್ಯೂತ,-ಜೂಜು. ೨. (ಆಲಂ) (ಯುದ್ಧದಲ್ಲಿ ಮಾಡುವ) ಮತ್ತೊಂದು ಅದೃಷ್ಟ ಪ್ರಯತ್ನ : ಫಲುಗುಣನ ಕೂಡಾಡು ನಡೆ ಮಱುವಲಗೆಯನು ಭೀಮನಲಿ ಬೇಡಿನ್ನೆಂದನಾ ಶಲ್ಯ (ಕುಮಾ.ಭಾ. ೦೩-೯೯). [ಮಱು$_1$ + ಪಲಗೆ]

**ಮಱುವಸಲ,** ಮರುವಸಲ (ನಾ). (ಜಿದ್ದುಳ್ಳ) ಶತ್ರು ; ಹಗೆ ; ವೈರಿ : "ಮಱುವಸಲಂ, ಬೇರಂ, ಪಗೆ– ಈ ೩ ಶತ್ರು" (ಕರ್ಣಾ. ೩೬-೨೩೮) ; "ಮಱುವಸಲನೆಂದು ಮೂರಡಿಯೆಂದು ಪಗೆಯಕ್ಕು" (ಕಬ್ಬಿಗ. ೩೯). **ಮರುವಸಲ** : "ಮರುವಸಲನೆನೆ ವೈರಿ" (ಕರ್ಣ. ೮೩). [ದೇ.೩ ತೆಲು. ಮಾಱುಮಸಲು, ಮಾರ್ಮಸಲು = ಎದುರಿಸು, ದ್ವೇಷಿಸು]

**ಮಱುಮಾತು,** ಮರುಮಾತು, ಮಱುಮೂತು (ನಾ). ೧. ಜವಾಬು ; ಮಾರುತ್ತರ ; ಪ್ರತ್ಯುತ್ತರ : 'ಮಱುಮಾತುಗುಡು' ಪರಾ. **ಮರುಮಾತು** : ೧ : ಆ ಗೆಳೆಯರೆನ್ನ ಕೇಳೆ, ಮರುಮಾತು ನಾನೇನು ಕೊಡಲಮ್ಮ ನಾಳೆ ?(ಕಂಪು. ೯೩-೦೦); ಓಡ ಓಡೆಂದರಚಿ ಕರೆದೆ . . . ಇಲ್ಲ ಮರುಮಾತಿಲ್ಲ ಬರಿದೆ, ನನ್ನ ಕರೆ ಮೇಣಾಂ ವಿನಾ (ಗೀತಾಂ. ೩೩-೩೨). ೨. ಪ್ರತಿಯಾಗಿ ಹೇಳುವ ಮಾತು ; ಎರಡನೆಯ ಮಾತು ; ಬೇರೆಯ ನುಡಿ : ಅವರಲ್ಲಿರುವುದನ್ನೆಲ್ಲ ಮರುಮಾತಿಲ್ಲದೆ ಒಪ್ಪಬೇಕೆಂದಿಲ್ಲ (ತಿಕ್ಕರ. ೨೩೩) ; ಬೇಕಾದಷ್ಟುದ್ದದ ಹೇಳಿಕೆಗಳನ್ನು ಹೊರಡಿಸಿ . . . ಮರುಮಾತಿಲ್ಲದೆ ಮಂಕುಜನತೆ ಒಪ್ಪಿಕೊಳ್ಳುತ್ತದೆ (ರೂಪಸಂ. ೨೩). **ಮಱುಮಾತು** : ೧. ಎನ್ನ ಮಾತಿಂಗೆಲೆ ಕೌಂತೇಯ ಮಱುಮಾತನಿತ್ತು ಮದೀಯ ಸರೋವರದ ತೋಯಮಂ ಕುಡಿ ಕೊಂಡುಯ್ (ಪಂಪಭಾ. ೮-೩೯); ಈತನ ಮಾತಿಂಗೆ ತಕ್ಕ ಮಱುಮಾತಂ ನುಡಿದೊಡಂಬಡಿಸಿ ಕಟ್ಟಿಪ್ಪುವೆಂ (ಪಂಪಶಂ. ೩೦-೨೦); ಏನನಂಗನೆ ನುಡಿದಳೇನನಾಲಿಸಿದೆನಿದಕೇನು ಮಱುಮಾತು (ಷಟ್ಪ. ೬-೩೮). ೨. ಮಱುಮಾತಿಂಗೆಡೆಯಿಲ್ಲದಂತಿರೆ ನುಡಿದ ಪಡೆ ಮೆಚ್ಚೆ ಗಂಡನ ಗಂಡಮಾತುಮಂ ನನ್ನಿಮಾತುಮಂ ಮುರಾಂತಕ ಮೆಚ್ಚೆ (ಪಂಪಭಾ. ೩-೬೩ ವ); ಒಂದೆ ನುಡಿ ಸಾಕು ಹುಸಿಯಿಲ್ಲ ವೃದ್ಧರೊಳದೇತೆಂದಡಱುವತ್ತು ತುಂಬಿದೊಡೆ ಮಱುಮಾತು ಬೇಡೆಂದು ನಾಣ್ಣುಡಿಗಳುಂಟು (ಸಿದ್ಧರಾ. ೦-೯೩).

**ಮಱುಮಾತಾಡು** = ಪ್ರತಿಯಾಗಿ ಹೇಳು,– ಮಾತನಾಡು : ಶಾಸ್ತ್ರಿಗಳು ತಲೆ ತಗ್ಗಿಸಿದರು, ಮರುಮಾತಾಡಲಿಲ್ಲ (ಶ್ರೀರಾಮ. ೮೦): ಆ ಮಾತಿನಿಂದ ಕಕ್ಕಾಬಿಕ್ಕಿಯಾಗಿಯೊ ಅಥವಾ ನಂಬಲಾರದೆಯೊ ರೈತರು ಮರುಮಾತಾಡಲಿಲ್ಲ (ಭೂಪತಿ. ೨೬೯). [ಮಱು$_1$ + ಮಾತು$_1$]

**ಮಱುಮಾತುಗುಡು,** ಮಱುಮಾತುಗುಡು, ಮಱುಮಾತುಗೊಡು (ಕ್ರಿ). ೧. ಪ್ರತ್ಯುತ್ತರವನ್ನು ಕೊಡು ; ಜವಾಬುಹೇಳು : ಆ ಮಾತಿಂಗೆ ಮಱುಮಾತುಗುಡಲಱಿಯದೆ ಪಂದೆಯಂ ಪಾವಡರ್ದಂತುಮ್ಮನೆ ಬೆಮರುತ್ತುಮಿರ್ದ ಕರ್ಣನಂ ದುರ್ಯೋಧನಂ ಕಂಡು (ಪಂಪಭಾ. ೨-೮೩ ವ) : ಅಱಿಯೆನಿದಂ ನಿನ್ನಿಂದಿನ ತೆಱನಂ ನೀನೆನಗೆಯೇಕೆ ಮುಳಿದಿರ್ದಪೆಯೊ ಮೇಣ್ಮಱುಮಾತುಗುಡದೆ ರವಿಸುತ ಮಱುವಿಂದಿರ್ದಪೆಯೊ (ಗದಾಯು. ೩-೦೩). **ಮಱುಮಾತುಗುಡು:** ೧. ಕೆಳದಿಯರುಂ . . . ಮೂರ್ಛೆಯಿಂದೆಚ್ಚಱಿಸಿ ಬೆಸಗೊಳೆ ಮಱುಮಾತುಗುಡದೆಯುಂ ಮನಂಗುಡದೆಯುಮಿರೆ (ಆದಿಪು. ೩-೨೩ ವ) ; ಕಂದ ನಿಜಾನುಜರೆಲ್ಲಿದರೆಂದೆನ್ನಂ ಜನನಿ ಬಂದು ಬೆಸಗೊಂಡೊಡದೇನೆಂದು ಮಱುಮಾತುಗುಡುವೆಂ (ಗದಾಯು. ೩-೬೬). **ಮಱುಮಾತುಗೊಡು** : ೧. ಆ ಭಟ್ಟನೀ ದುಷ್ಟಂಗೆ ಮಱುಮಾತುಗೊಟ್ಟೊಡೇನಪ್ಪುದೆಂದುಸಿರದೆ ನಡೆವುದುಂ (ಪಂಪಶಂ. ೦೯೬-೦೬). ೨. ಹೇಳಿದುದಕ್ಕೆ ಪ್ರತಿಯಾಗಿ ಹೇಳು ; ಮರುಮಾತಾಡು : ಅಂತೆಗೆಯ್ವೆಮೆಂದು ಮಱುಮಾತುಗೊಟ್ಟುವರ್ಗಳುಂ ಪುಳ್ಳಿಯ ಪೊಱೆಯುಂ ಮನೆಗೆ ತಂದ ಬೞಿಕ್ಕೆ ಕಾಷ್ಠಕೂಟಂ ಪೆಂಡತಿಯನೆಂದಂ (ವಡ್ಡಾರಾ. ೬೬-೦೨); ಮಱುಮಾತುಗೊಡದೀತನಂ ಕಾಡಬೇಕು (ಸೌಂದರ. ೦೩-೦೦). [ಮಱುಮಾತು + ಕುಡು$_1$ (< ಕೊಡು$_1$)]

**ಮಱುಮಾನಿಸ** (ನಾ). ಎದುರುಪಕ್ಷಕ್ಕೆ ಸೇರಿದವನು ; ಹಗೆ ; ವೈರಿ : ಮಱುಮಾನಿಸಂ ಮೆಯ್ಯೇಱಿಂ ಕಂಡಗಿದು ಜೋಲೆ ಕೊಂದನದೊರ್ವಂ (ಕಬ್ಬಿಗ. ೨೮೩). [ಮಱು$_1$ + ಮಾನಿಸ$_1$ (< ಮಾನುಸ)]

**ಮಱುವಾರ್ತೆ** (ನಾ). ತಿರುಗಿ ಬಂದು ಹೇಳುವ ಸಮಾಚಾರ : ಈ ಮಾರುಮಂಗಳಾರವೆಂದಾರಯಲೊರ್ವನಂ ಕಟ್ಟಿ ಮಱುವಾರ್ತೆಗೇಳಲೆಂದು . . . ಅತಿಕುತೂಹಲನಾಗಿ ನಿಂದು (ಕಾದಂಬ. ೩೩೭). [ಮಱು$_1$ + ವಾರ್ತೆ]

**ಮಱುವಾರ್ತೆಗೊಳ್** (ಕ್ರಿ). ಬೇರೆ ಬಗೆಯ ಬದುಕನ್ನು ಅಂಗೀಕರಿಸು : ತನ್ದೆಯ ತಾಯ್ವಿರಾ ಸನ್ಮಾನಮು(ಂ)ನುಳಿದು ಬಿಸುಟೋಂ ಮಱುವಾರ್ತೆಗೊಳ್ [ನ್] (ಶಾಸ. XI-i, ೦೦-೩ ; 865). [ಮಱು$_1$ + ವಾರ್ತೆ + ಕೊಳ್$_1$]

**ಮಱುವಾಳು** 'ಮಱುವಾೞ್' ನೋ.

**ಮಱುವಾೞ್.** ಮರುಬಾಳು. ಮರುವಾಳು. ಮಱುವಾಳು (ನಾ). ೧. (ವಿಧವೆಯಾದವಳು ಮಾಡಿಕೊಳ್ಳುವ) ಎರಡನೆಯ ಮದುವೆ ; ಪುನರ್ವಿವಾಹ : ರಜನೀನಾಥನೊಳೊಂದಿ ನಿಂದ . . . ಭಾಸ್ಕರಾತ್ಮಜನಿಂದಂ ಮಱುವಾೞ ತಾಯ ಬಸಿಱೊಳ್ ಬಂದಂ ವಿನೀತಂ (ಜಾತಕ. ೦೩-೨); ಕುಲವೇಶ್ಯೆಗಂ ಮಱುವಾೞ್ (ಕಾವ್ಯಸಾ. ೯೩೯). ೨. (ವಿಧವೆಯಾಗಿದ್ದು) ಎರಡನೆಯ ಮದುವೆಯನ್ನು ಮಾಡಿಕೊಳ್ಳುವವಳು,–ಪುನರ್ವಿವಾಹವಾಗುವವಳು : ಅದಿದುವೆನ್ನದೆ ಸೂಳೆಮದುವೆಗಂ ಮಱುವಾೞ ಮದುವೆಗಂ ಕುಜನ ಕುಳಿಕನ ರಾಹುವಿನುದಯಮಭ್ಯುದಯಂ (ಲೋಕೋಪ. ೨-೨೦). **ಮರುಬಾಳು** : ೧. "ಮರುಬಾಳು — ಎರಡನೆಯ ಲಗ್ನ" (ಶಾಸಕೋ. ೩೮). **ಮರುವಾಳು. ಮಱುವಾಳು** : ೩. ಪುನರ್ಜನ್ಮ : ಮಧ್ಯಸ್ಥಾನದ ಲೋಕಕೆ ಹೋಗಿ ಮಱುವಾಳನಱಿಯದ ಪರಿಯ ನೋಡಿರೇ (ಅಪಶಂ. ೨೮೯-೦೩೦೮).

**ಮರುವಾಳನಿಲ್** = ಮರುಮದುವೆಯಾಗು ; ಪುನರ್ವಿವಾಹವನ್ನು ಮಾಡಿಕೊಳ್ಳು : ಮುದಿಯ ಗೊಡ್ಡಿಯ ಮತಿಯ ಬಾಗಿಲಿಂದಟ್ಟಿ ದ್ರಾಕ್ಷಿಯಣುಗಿಗೆ ಮೆಚ್ಚಿ ಮರುವಾಳ ನಿಂದೆ (ಗೀತಾಂ. ೦೨೦-೩೦). **ಮಱುವಾೞಕಾಂತೆ** = ಪುನರ್ವಿವಾಹವಾದವಳು ; ಮರುಮದುವೆಯಾದವಳು : "ದಿಧಿಷೂ ಪುನರ್ಭೂವೆನಲು ಮಱುವಾೞ ಕಾಂತೆಯುಕ್ಕುಂ" (ಚಂಗರಾ. ೮೯-೩). [ಮಱು$_1$ + ಬಾೞ್$_3$]

**ಮಱುವಾೞ್ತಿ** (ನಾ). ೧. ಇನ್ನೊಂದು ಬಾಳು; ಬೇರೊಂದು ಬದುಕು. ೨. (ವಿಧವೆಯಾಗಿದ್ದು) ಮರುಮದುವೆ ಮಾಡಿಕೊಂಡವಳು ; ಪುನರ್ವಿವಾಹ ಮಾಡಿಕೊಂಡವಳು : ಮಱುವಾೞ್ತಿ ತಾನೆನಿಸುಗಂ

ಘರ್ಮಾಂಶುಪುತ್ರಾಂಶದೊಳ್ (ಶಾಶಪ. ೨೨-೪); ಕನಿಷ್ಠಿಕೆ ಸವುಂತು ಮುಟ್ಟದಿರೆ ಪೃಥ್ವಿಯುಂ ರಂಡೆ ಮತ್ತನಾವಿಕೆಯುದುದ್ದವಾಗೆ ಮಱುವಾಟಿತ್ತು (ಲೋಕೋಕ. ೧೦-೫೦). [ಮಱು$_1$ + ಬಾಟಿತ್ತು]

**ಮಱುವಿಡಿ** (ನಾ). ಪ್ರತಿಬಂಧ ; ತಡೆ : ತೊಡರ ಬಗಿ ಮದನಂಗೆ ಮದವನು ತೊಡೆ ವಸಂತನ ಮಾರುತಗೆ ಮಱುವಿಡಿಯನಿಕ್ಕು (ಕೊರಣ. ೩-೪-೦೬). [ಮಱು$_2$ + ಪಿಡಿ$_2$]

**ಮಱುವುಟ್ಟಿಗ** (ನಾ). ಬೇರೆ ಜನ್ಮವನ್ನು ಹೊಂದಿರುವವನು : ಮಱುವುಟ್ಟಿಗನಾದನನೇನಱಿವೋ ನೀನೆನ್ನಂ (ಕಾದಂಬ. ೬೦೭).

[ಮಱುವುಟ್ಟು + -ಇಗ]

**ಮಱುವುಟ್ಟು, ಮರುವುಟ್ಟು, ಮರುಹುಟ್ಟು, ಮಱುಹುಟ್ಟು** (ನಾ). ಮತ್ತೊಂದು ಹುಟ್ಟು ; ಪುನರ್ಜನ್ಮ : ಮಱುವುಟ್ಟಿನೊಳಂ ನಿನ್ನೊಡನೆ ಕೂಟವೆನಗಕ್ಕೆ (ಕಾದಂಬ. ೩೦೨) ; ಈಶ್ವರನಿಂ ಮುನ್ನವೆ ಮಣ್ಮಳಿಗೊಂಡ ಮದನಂಗಾ ಮಱುವುಟ್ಟಂ ಪಡೆಯಿಸಲೊದವಿದ ಜೀವನವಾಯುವಿದು (ಶಮುಕಾ. ೧-೫೦); ಶುಭಗುಣಕಾಂತ ನೀ ಮಱುವುಟ್ಟೊಳು ಪ್ರಾಣವಿಭುವಾಗಿ ಬಂದೆ (ಪೋಹಕ. ೦೭-೫೮). **ಮರುವುಟ್ಟು** : ಮರುವುಟ್ಟುವಡೆದಂತೆ ಮೂಡಿದೀ ಕಾವ್ಯಮಂ ವಿಶ್ವವಾಣಿಗೆ ಮುಡಿಯ ಮಣಿ ಮಾಡಿಹೆನ್ (ಶ್ರೀರಾಮಾ. iii,೦೬); ಪುಲಿಯ ಕೈಯಿಂ ಮಡಿಯೆ ಪೆರ್ಮೆ ಸಾವದು ಕಣಾ ! ಮರುವುಟ್ಟಿನಲ್ಲವಗೆ ದೊರಕುವುದು ದೊರೆತನಂ! (ಚಂದ್ರಸ. ೩೦-೦೭). **ಮರುಹುಟ್ಟು** : ಒಬ್ಬ ದಿವ್ಯಪುರುಷನ ಮರುಹುಟ್ಟು ಈ ಕುದುರೆಯ ರೂಪವನ್ನು ತಾಳಿರಬೇಕು (ಶಾಗಕಾ. ೧೬) ; ಜ್ಞಾಪಿಸಿಕೊಟ್ಟದ್ದು ಮರೆತುಹೋಗಿದ್ದದರ ಜೊತೆಗೆ ಒಂದಾಗಿ ಮರುಹುಟ್ಟನ್ನು ಪಡೆಯಿತು (ಶಾರದ. ೨೦೬). **ಮಱುಹುಟ್ಟು** : ಕೋರಂಟನಂದೊಡೆದ ಕೆಱೆಯಲ್ಲಿ ಹೂಳಿಸಿಕೊಳನೆಯಗ್ನಿಯಿಂದಳವ ಮಱುಹುಟ್ಟ ಕಾಣದಿರ್ಪನಲಾ (ಶೀಕೃಪು. ೪-೦೦-೨೭). [ಮಱು$_1$ + ಪುಟ್ಟು$_2$]

**ಮಱುವೆಸರು** (ನಾ). ಬೇರೊಂದು ಹೆಸರು ; ಅದೇ ಅರ್ಥದ ಮತ್ತೊಂದು ಶಬ್ದ : ನೆಱೆ ಪತತ್ರಿಗಳಿವೆ ಪತತ್ರಿಯ ಮಱುವೆಸರು ನಿನಗಿವರ ಕೇಣಿಗೆ ತಱಪುಗೊಡು ನೀನು (ಕುಮಾ.ಗ. ೨-೨೮).

[ಮಱು$_1$ + ಪೆಸರು$_1$ ( < ಪೆಸರ್) ]

**ಮಱುವೆಳಸು** (ನಾ). ಎರಡನೆಯ ಬೆಳೆ ; ಮತ್ತೊಂದು ಫಸಲು : ಆ ಫಲಂ ಕಳಿತುದುರೆ ತತ್ತರುವಿಗೆ ಮಱುವೆಳಸು ಮೊದಲಂತೆ ವರುಷ ವರುಷಕೆ ಬಪ್ಪ ತೆಱದೆ ಬ್ರಹ್ಮಾಂಡಂಗಳಳಿದುದಿಸುತಿರ್ಪುವು (ತೊಶು. ೪೬-೩೬).

[ ಮಱು$_1$ + ಬೆಳಸು$_2$ ]

**ಮಱುಹುಟ್ಟು** 'ಮಱುವುಟ್ಟು' ನೋ.

**ಮಱೆ$_1$, ಮರೆ$_1$** (ಕ್ರಿ). ೧. ನೆನಪಿನಿಂದ ದೂರವಾಡು ; ಜ್ಞಾಪಕದಲ್ಲಿಟ್ಟುಕೊಳ್ಳದಿರು : "ಮಱೆ–ವಿಸ್ಮರಣೇ" (ಶಮುಥಾ) ; ನೀಂ ಮಮ್ಮನೆಯುಪ್ಪೆಲ್ಲ ನೋಡು ನಣ್ಪಂ ನಿಮಗಮೆಮಗಮಾಮ್ನಾಯದಿಂ ಬಂದುದಿಂತೀ ಜನಧರ್ಮಂ ಪ್ರಾಣಿಗಾರ್ಮಂ ಮಱೆಯದಿರಿದಂ (ಆದಿಪು. ೨-೨೦) ; ಮಱೆಯಂ ಕಾಲಸಿದೇಕೆ ವ್ಯೈಮಱೆವಿರೆಂದೂರ್ಧ್ವಂಗುರಂ ಪೊಯ್ವುಪೊಲ್ಪಱೆ ಪೊಯ್ದು (ಅಪಂಪು. ೯-೩೦); ಎಲೆಗೆ ಭಜಿಸಾ ಕೌರವಾನ್ವಯ ತಿಲಕನನು ನಿನ್ನವರ ಮಱೆ (ಕುಮಾ.ಸ. ೦೫-೦೩). ೨. ಪರಿವೆಯಿಲ್ಲದಿರು ; ಬಾಹ್ಯಜ್ಞಾನವಿಲ್ಲದಿರು : ಅಪ್ರತಿರಥಂ . . . ದುಗ್ಧಾಬ್ಧಿಧವಳ ಶಯ್ಯಾತಳದೊಳ್ ಮಱೆದೊಱಗಿದ ಮಧುಮಥನನನೆತ್ತಲಣ್ಮದೆ ಕಾಲ ದೆಸೆಯೊಳುಸಿರದೆ ಕುಳ್ಳಿರೆ (ಶಂಶಾ. ೯-೦೦ ವ) ; ತರಳಿಕೆ ಮಱೆದು ನಿದ್ರೆಗೆಯ್ದಳ್ (ಕಾದಂಬ. ೫೩೯) ; ಶೋಕಾಕ್ರಾಂತದಿಂದಂ ತನ್ನ ತಾ ಮಱೆದಿಂತು ಧೊಪ್ಪನೆ ಕೆಡೆದು ನೆಲದಲ್ಲಿ ಪೊರಳುತ (ಬಸಪು. ೪೫-೭) ; ಮಱೆದು ನಿದ್ರಾಲೋಲನಾಗಿ ಮಲಗಿಹ ಚಂದ್ರಹಾಸನಂ ಕಂಡು ಸೈವೆಱಗಾದಳು (ಜೈಮಿಭಾ. ೩೦-೦೯). ೩. ಎಚ್ಚರತಪ್ಪು ; ಅರಿವನ್ನು ಕಳೆದುಕೊಳ್ಳು : ಇತರಪ್ರತೀಶವರನಂ ಮಱೆದುಂ ಪೆಸರ್ಗೊಳ್ವುದೇ ಜನಂ (ಶಮುಶ. ೪-೪೮); ಕೂಡಲಸಂಗನ ಶರಣರೊಡನೆ ಮಱೆದು ಸರಸವಾಡಿದರೆ ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ (ಬಸಪ. ೬೬೦ ಅ): ಮಱೆದಪ್ಪೊಡಂ ತೊದಳ ನುಡಿದಱಿಯಂ (ಪುಶ್ಪಪು. ೦-೮೨ ವ). ೪. ಪರವಶಗೊಳ್ಳು ; ತಲ್ಲೀನತೆಯನ್ನು ಹೊಂದು : 'ಮಱೆಗಣ್', 'ಮಱೆಯಿಸು' ಪರಾ. ೫. ಪ್ರಜ್ಞೆಯನ್ನು ಕಳೆದುಕೊಳ್ಳು ; ಮೂರ್ಛೆ ಹೊಂದು : ಮಱೆವುತೆಚ್ಚಱುತವನಿಪತಿ ಕರೆ ತರುಣನಾವೆಡೆ ರಾಯಗಜಕೇಸರಿಯದಾವೆಡೆ ಕಂಡ ಬಾಯೆನುತಪ್ಪಿದನು ಬಯಲ (ಕುಮಾ.ದ್ರೋ. ೬-೯). ೬. ಬಿಡು ; ತೊರೆ ; ತ್ಯಜಿಸು : ಇದೊಂದವಸ್ಥೆ ನಿಮಗೆನ್ನಯ ಕರ್ಮದಿನಾದುದೆಂದೊಡಿಂ ಮಱೆವುದು ಕಂದ ಪಾಂಡವರ ವೈರಮಂ (ಪಂಪಭಾ. ೦೧-೪೯) ; ಆ ಪವನಾತ್ಮಜನೊಳ್ಮಱೆ ಬದ್ಧವೈರಮಂ (ಗದಾಯು. ೩-೫೪). ೭. ಲಕ್ಷ್ಯ ಕೊಡದಿರು ; ಕಡೆಗಣಿಸು ; ತಿರಸ್ಕರಿಸು : ತಾನಿತರಕನ್ಯಕೆಯಂತೆ ನಾಣ್ಗೆಟ್ಟು . . . ನಿಜಾಚಾರಮಂ ಮಱೆದು ಶೀಲಮಂ ತೊಱೆದು (ಕಾದಂಪೂ. ೮೬೪) ; ನೃಪಾಚಾರಮೆಲ್ಲಮಂ ಮಱೆದೊಡನುಂಡೋಡಾಡಿ ಕೆಟ್ಟು ದೂರ್ತಿಂ ನಾಡೆಯುಮವರೆಡೆಗೆ ತಾನೆ ಮಿಕ್ಕಂ ಧರೆಯೊಳ್ (ರಾಮಾಪ. ೨-೦೦೭) ; ಪ್ರಸಾದಮಂ . . . ವರ ಮುನಿಜನಕ್ಕೆ ಮನುನಿವಹಕ್ಕೆ ನಲಿದಿತ್ತು ಶಿವಪುತ್ರನಂ ಸ್ಕಂದದೇವನಂ ಮಱೆವುತಂ (ಬಸರ. ೧-೪೩). ; ಹೆಕ್ಕಳಿಸಿ ರಾಜ್ಯಮಂ ಕೊಟ್ಟೊಡೆನ್ನಂ ಮಱೆದು ಸೊಕ್ಕಿ (ಜೈಮಿಭಾ. ೩೦-೨೭). ೮. ಮನ್ನಿಸು ; ಕ್ಷಮೆಯನ್ನು ತೋರು : ಮಱೆವುದೆನ್ನ ದುರ್ವಿಳಸನಮಂ (ಆದಿಪು. ೦೪-೦೩೧) ; ಅವಗುಣ ಕೋಟಿಯಂ ಮಱೆದು (ದಶಕು. ೧-೦೧); ಕರ್ಣನ ದುರುಳತನವನು ಮಱೆದು ಮೆಱೆವುದು ನಿಮ್ಮ ಸದ್ಗುಣವ (ಕುಮಾ.ದ್ರೋ. ೦-೨೦). ೯. ಕಾಣದಾಗು : ಮಾಯವಾಗು ; ಇಲ್ಲವಾಗು : ಚಿಂತೆ ಮಱೆದುದು ತಂಗಿಮಕ್ಕಳ ಸಂತತಿಯ ಸಂತೋಷವಾರ್ತೆಗೆ (ಸಂಭಕ. ೦೫-೯೫) : ಅಱಿವು ಮಱೆದಪ ಕೀರ್ತಿನಾರಿಯ ಸೆಱಗ ಹಿಡಿದರು (ಕುಮಾ.ದ್ರೋ. ೬-೨೭). ೧೦. ಮುಚ್ಚು ; ಅಡಗಿಸು : ಕಾಯಗುಣವ ಕರ್ಮದಿಂದ ಕಳೆದು ಜೀವಗುಣವ ಅಱಿವಿನಿಂದ ಮಱೆದು ಭಾವ ನಿರ್ಭಾವವಾದಲ್ಲಿ ನಿಃಕಳಂಕಮಲ್ಲಿಕಾರ್ಜುನ ತಾನು ತಾನೆ (ಪೋಕವಾ. ೨-೨). **ಮರೆ$_1$** : ೧. ಮರೆಯಲೊ ನೀ ಮಾಡಿದ ಅನಿಮಿತ್ತೋಪಕಾರ (ಜಗದಾ. ೩೯); ಮುಂದಾವಗಂ ಮಣಿಪುರದ ದೊರೆಗಳಂ ಮರೆಯದಂದದಿ ಮಾಳ್ಪೆನೆಂದುರಿದು ನುಡಿಯೆ (ಜಶ್ರಾಂಗ. ೬೦-೦೪೦) ; ತರತರವಾಗಿ ಹೇಳಿದ್ದು ಮರೆತರೆ ಮರಕ್ಕಿಂತ ಕಡೆ (ಗಾದೆ). ೫. ಬೋಳಂ ತಾನೆ ಬಿದ್ದು ಮರೆದೊಡಲ ಮಲಗಿರಲ್ ಕಯ್ಪಿಡಿಯುಪಚಾರಯ್ದು ಮರುಕದಿಂ ಬದುಕಿಸಿದೆ (ಕಾಂಊರ. ೦೬೪-೩೬೪). ೭. ನಿನಗೆ ಈ ಸ್ಥಳದಲ್ಲಿ ಮಹಾಪದವಿ ಬರುವುದು. ಅರಿತು ನಡೆದರೆ ಆರುಪಟ್ಟು, ಮರೆತು ನಡೆದರೆ ಮೂರು ಪಟ್ಟು (ಜತ್ರಜಾ. ೬) ; ನಿಂದುದು ಸೃಷ್ಟಿ ದೃಷ್ಟಿಸುತ್ತಾ ಮಧುರ ಮನ್ಮಥಮುಹೂರ್ತಮಂ, ಕರ್ತವ್ಯಮಂ ಮರೆತು ತನ್ಮಯತೆಯಿಂದೆ (ಜಶ್ರಾಂಗ. ೪೦-೦೦೦೬). [ದೇ.॥ ತಮಿ. ಮಱೈ ; ಮಲ. ಮಱೆ ; ತುಳು. ಮರೆ, ಮರ ; ಕೊಡ. ಮರೆ ]

**ಮಱೆ$_2$, ಮರೆ$_2$, ಮೊರೆ$_5$, ಮೊಱೆ$_3$** (ನಾ). ೧. ಪರಿವೆಯಿಲ್ಲದಿರುವಿಕೆ; ಬಾಹ್ಯಜ್ಞಾನವನ್ನು ಕಳೆದುಕೊಂಡಿರುವಿಕೆ : 'ಮಱೆವಡು' ಪರಾ. ೨. ಕಾಣದಾಗುವಿಕೆ ; ಅದೃಶ್ಯ ; ಮಾಯ : 'ಮಱೆಗೊಳ್' ಪರಾ. ೩. ಗುಟ್ಟು ; ಗೌಪ್ಯ ; ರಹಸ್ಯ : ಈ ನುಡಿ ಬೆಂಗೊಂಡುದು ಸಜ್ಜನರನೊಂದು ಮಾತಿನ ಮಱೆಯಿಂ (ಧರ್ಮಪು. ೦-೫೮) ; ಚಿತ್ರಭೆಯ ಮಾಯೆಯ ಮಱೆಯ ಜವನಿಕೆಯೇಕೆ (ಕೊರಣ. ೨-೫-೦೬). 'ಮಱೆಕಾಱ' ಪರಾ. ೪. ಯಾರಿಗೂ ಕಾಣದಿರುವ ಎಡೆ ; ರಹಸ್ಯಸ್ಥಾನ : ಇರುಳ್ ಮಱೆಯೊಳು ವಿವೇಕವಿಲ್ಲದೆ ತನ್ನ ತಂಗಿಗಭಿಲಾಷೆಯಾದ

ರಕ್ಷಕ (ಧಾರದ)ನೆಂಬವಂಗೆ ಅಂಗಚ್ಛೇದಂಗೆಯ್ವುದುಮಂ (ಶಾಪುಂಕ. ೬೮) ; ಈ ಪಾಂಚಾಲಭೂಪತಿಯು ತನುಜನಿವರ ಪರೀಕ್ಷೆಗೋಸುಗ ಮುನಿಕಶ್ಯಪ ಗೂಡಿ ಕೇಳಿದನನಿತು ಮಾತೆಲ್ಲವನು ಮಱೆಯಲಿ ನಿಂದು ರಜನಿಯಲಿ (ಕುವ್ಯಾಆ. ೦೬-೨೦). ೫. ಹಿಂಭಾಗ ; ಹಿಂಬದಿ ; ಹಿನ್ನೆಲೆ : ತಳ ತಳಿಸಿ ತೊಳಗಿ ಬೆಳಗುವ ಪಳಿಕಿನ ಸಜ್ಜೆಯೊಂದು ಮಱೆಯೊಳಿರ್ದ್ದರಲೆ ಮಹೋಜ್ಜ್ವಳತುಹಿನಕಿರಣಮಂಡಲದೊಳಗಣ ಹರ್ಣಿಂಬೊಲೊಪ್ಪಿ ತೋಱಿತ್ತು (ಅಕ್ಯಸಾ. ೦೦೫೦ ಸೂಪ್ರಿ) ; ಈ ಮರಗಳ ಗಿಡುಗಳ ಪೊದಱು ಗಳ ಮಱೆಗಳೊಳೀ ಪೊಟಲಂ ಕಂಡೆಂ (ವಿಶ್ವಾಅ. ೯೯-೨೨) ; ನಿಲ್ವುವು ರಸಂಗಳಲ್ಲಿ ಮಡಲ್ತೆನೆ ಭಂಗಿಯೊಳನಂಗಜಂಗಮಲತೆವೊಲ್ ನಿಲ್ತು ಜವನಿ ಕೆಯ ಮಱೆಯೊಳ್ ಪೋಲ್ತಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ (ಆದಿಪು. ೯-೨೦) ; ಬೆಳ್ಳಿತ್ತಿನ ಮಱೆಯಲಿರ್ದ್ದ ಹುಲ್ಲೆಗಂಬ ತೊಡುವಂತೆ (ಬಸವ. ೬೯೬). ೬. ಒಳಗು ; ಒಳಭಾಗ : ಮಣ್ಣ ಮಱೆಯ ದೇಗುಲದೊಳಗೊಂದು ಮಾಣಿಕ್ಯವ ಕಂಡ ಬಳಿಕ ಇನ್ನು ಮುನ್ನಿನಂತಪ್ಪುದೇ ಗುಹೇಶ್ವರ (ಅವಚ. ೨೦೬-೯೩೨) ; ನೆಲದ ಮಱೆಯ ನಿಧಾನದಂತೆ . . . ಭಾವದ ಮಱೆಯ ಬ್ರಹ್ಮವಾಗಿಪ್ಪ ಚೆನ್ನಮಲ್ಲಿಕಾರ್ಜುನನ ನಿಲವನಾರೂ ಅಱಿಯಬಾರದು (ಶುಹಾರೇ. ಬ. ೯-೨) ; ಮೇದಿನಿಯ ಮಱೆಯೊಳಿಹ ನವನಿಧಿಗಳಂತೆ (ಶಬಪು. ೩-೦೩). ೭. ಹೊದಿಕೆ ; ಮುಸುಕು ; ಆಚ್ಛಾದನೆ : ಮುನಿದೊಡೆ ಭಸ್ಮವಾಪುದು ಲೋಕಮೆನಲ್ ನೊಸ ಲೊಳ್ ತೃತೀಯಲೋಚನಮೊಮುಗುಂಟು ತೋಲ ಮಱೆಯಿಂದದು ತೋಱಿಪುದಿಲ್ಲ (ಕಾಮಂಪು. ೫೬೮) ; ಮಱೆಯ ನೂಲು ಸರಿಯೆ ನಾಚು ವುದು ನೋಡಾ ಗಂಡು ಹೆಣ್ಣೆಂಬ ಜಾತಿ (ಶುಹಾರೇ. ೩. ೩೨-೦೨೯) ; ಹೇಳು ಹೇಳೆನ್ನಾಣೆ ಮಾತಿನ ಜಾಳಿಗೆಯ ಮಱೆ ಬೇಡ (ಕುವ್ಯಾಕ. ೦-೦೦). ೮. ಮೈಜೋಡು ; ಕವಚ ; ತನುತ್ರಾಣ : ತಿದಿಯುಗಿದು ಕೊಟ್ಟೆ ನೊಡವುಟ್ಟಿದ ಕವಚಮನಮರಪತಿಗೆ ಮುನ್ನಿನ್ನೆನಗೊಪ್ಪದು ಮಱೆಯನಾಸೆ ವಡಲೆಂದದಟನಣಂ ತುಡನೆ ಕವಚಮಂ ರಾಧೇಯಂ (ಪಂಪಭಾ. ೦೨-೦೦೯) ; ಇಹಲೋಕದ ಪರಲೋಕದ ಮರಣದ ಕುತ್ತದ ಪೆಱರೆನಗಿಲ್ಲೆಂಬ ಮಯ್ಗ ಮಱೆಯಿಲ್ಲೆಂಬ ತೊಟ್ಟನಡಸುವ ಸಪ್ತಭಯಂಗಳ್ಗೆ ನಡುಗದುದುಂ (ರಮೂಕ್ತ್ಯ. ೫-೦೨೫). ೯. ರಕ್ಷಣೆಯ ಸಾಧನ ; ಕಾಪು : 'ಧೂಳಮಱೆ' ಪರಾ. ೧೦. ಮಾರುವೇಷ; ಪ್ರಚ್ಛನ್ನ ರೂಪ : ತಪನಸುತಂ ಬೇಱಾಂ ಬೇಱೆ ಪೊಲ್ಲದಂ ನುಡಿದನಾತಂ ಬಿಸುಟಂ ಶಕ್ಯಪ ನುಡಿಯ ನುಡಿವನೇ ಮಱೆಯ ಪಾಂಡವಂ ಬಗೆದು ನೋಟಿಪ್ಪೊಡಶ್ವ ತ್ಥಾಮಂ (ಗದಾಯು. ೨-೨೦). ೧೧. ಆಸರೆ ; ಆಶ್ರಯ : ಎಲವೊ ದೇವೇಶನನೇಂ ಸೆಱೆವಿಡಿದೆ ತೊಲಗು ದೇವನ ಮಱೆಯಂ ಬಱಿಕಱು ಯಲಕ್ಕುಮೆನಗಂ ನಿನಗಂ (ಪಂಪಭಾ. ೦೦-೦೨೦); ಬಡಬಾನಲಂಗೆ ಸಾಸಿರ್ಮಡಿ ಯೆನಿಸಿದ ರೌದ್ರಕೋಪಮಂ ತಳೆದೆನ್ನೊಳ್ ತೊಡರ್ದುಮಕಾರಣವೈರವು ನೊಡರ್ಚಿಯುಂ ಕಡಲದಾರ ಮಱೆಯಂ ಪುಗುವಂ (ಶಂತಿಪು. ೦೫೦-೨) ; ಬಱಿಯ ಕಾರ್ವಣ್ಯದಲಿ ಮೇಘದ ಮಱೆಯ ಹೊಕ್ಕರೆ ರಾಹು ಬಿಡುವನೆ ಉರಿವ ರವಿಮಂಡಲವನು (ಕುವ್ಯಾದ್ರೋ. ೨-೪೪). ೧೨. ಅಡ್ಡಿ ; ತಡೆ : ತದ್ವಕ್ತ್ರೇಂದುಬಿಂಬಂ ಮಱೆಯೆನಿಸಿದುದೆಂಬೀವದಿಂದೇನುಮಂ ಕಾಣದೆ . . . ಮೂಢನಾದಂತಿರಿರ್ದಂ (ಶಾರಂಅ. ೩೫೦); ನಿನ್ನವಯವಂಗಳ ಚೆಲ್ವಿಂ ಗಾಭರಣಂ ಮಱೆ ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱೆ (ಪಂಬಿರ. ೦೪-೦೨) ; ಬಾಣನಂದನೆಯೆಂಬ ತಡಿಕೆಯ ಮಱೆಯ ಸುಜಾಣಮನ್ಮಥನು ರಳ್ಗಣೆಯ ಕೇಣವಿಲ್ಲದೆ ನೀಡಿ ಸುರರೆರ್ದೆಯೊಳಗಿರ್ದ ಪ್ರಾಣಹಂಸಗಳ ಬಂಧಿಸಿದ (ಸೋಹತ. ೨೫-೦೬). 'ಮಱೆಗಾಣ್' ಪರಾ. ೧೩. ಕಪಟ ; ಮೋಸ ; ವಂಚನೆ : ಪೆಱರೇಗೆಯ್ವೊಡಮೇಂ ತಾಂ ಕಱೆ ಮಱೆಯಣ ವಿಲ್ಲದಂತು ನೆಗಟ್ವುದು ಮುನಿಪಂ (ರಮೂಕ್ತ್ಯ. ೫-೦೦೨) ; ಮಱೆಬೇಡಾ ತ್ಮಜಸತ್ಕಳತ್ರಸಖರೊಳ್ ನ್ಯಾಯಂಗಳೊಳ್ ಸತ್ಯದೊಳ್ (ಸೋಮೇಶ. ೯೨). 'ಮಱೆಗಾಳಗ' ಪರಾ. ೧೪. [ಆಲಂ] ಮಾಯೆ : ಮಱೆಯ ಮನೆಯ ಮಧ್ಯದಲ್ಲಿ ಮನೋವಿಕಾರದ ಮಾನಿನಿ ಹುಟ್ಟಿದಳು (ಕೂಟಶಾಂ. ೦೪-೨೨). ಮರೆ₂ : ೩. ತಿಳಿಯದಿದೇನು ಮರೆಯೆನಗೆ (ಗಗಶಾ. ೨-೨೩); ಮರೆಯ ಬಗೆಯಿಂ ತನ್ನ ಎಣಿಕೆಗದ ಬರೆಯುವಳ್ (ಕಾದೂತ. ೬೦-೦೦೨). ೪. ಈ ಸಂಗತಿಯನ್ನು ಜನಾರ್ದನನು ತನ್ನ ಹೆಂಡತಿಯೊಡನೆ ಗುಟ್ಟಾಗಿ ಹೇಳುತ್ತಿರುವಾಗ ಮನೋರಮೆಯು ಮರೆಯಲ್ಲಿ ನಿಂತು ಕೇಳಿದಳು (ಇಂಕಿಮ. ೦೮೨). ೫. ಸೊಪ್ಪಿಯ ಮರೆಗೆ ಸಾರಂಗವಿದ್ದಂತೆ ತೋರುತ್ತದೆ (ಮುಂಇಯ. ೪-೪೩) ; ಅಂದುಗೆಯ ಧ್ವನಿಸುತ್ತ ನೀ ಮರೆಗೆ ಸೇರು (ವಚನಾ. I, ೪೨೬). ೭. ಶ್ರೀಗುರುವರನು ಶಿಷ್ಯನ ಮನದ ಸಂಶಯ ಮರೆಯ ಪರಿಯುವೆನೆಂಬ ವಾತ್ಸಲ್ಯದಲಿ ಪೈದೋರೆ (ಗಗಶಾ. ೨-೮). ೧೧. ನಾಯಿಯು ತನ್ನ ಯಜಮಾನನ ಕಾಲುಗಳ ಮರೆಯನ್ನು ಹೊಗುತ್ತದೆ (ಕ್ಯೋಕೋರ್. ೨೪೬) ; ಎಲೆಗೆ ಕಾಯಿ ಮರೆ, ಕಾಯಿಗೆ ಎಲೆ ಮರೆ (ಗಾದೆ). ೧೨. "ಅಡ್ಡ — ಅಭಿಯೋಗೇ, ಮರೆಯೊಳ್ . . . ಅಡ್ಡಂ = ಮರೆ" (ಶಾಶಕ್ಯ. ೨೩) ; ಮುಂದೆ ಇರುವ ಮರ ನನಗೆ ಮರೆ, ಏನೂ ಕಾಣುತ್ತಿಲ್ಲ (ರೂಢಿ). ಮೊರೆ₆ : ೧೧. 'ಮೊರೆಹೊಗು' ಪರಾ. ಮೊಱೆ₃ : ೧೧. 'ಮೊಱೆ ಯೊಗು' ಪರಾ. ೧೫. ಶರಣಾಗತಿಯನ್ನು ಸೂಚಿಸುವ ಒಂದು ಅನುಕರಣಶಬ್ದ : ಉಡುಪಶೇಖರ ಮೊಱೆಯೊ ಪಾರ್ವತಿಯೊಡೆಯ ಮೊಱೆಯೋ (ಶಾಪಂತ. ೭-೫೯) ; ಒಬ್ಬಾನೊಬ್ಬ ಮೊಱೆಯೋ ಎಂದು ರಾಯಗೆ ದೂಱಿಡಲು (ಕಂಕದಾ. ೦೦-೩೦).

ಮರೆಮುಸುಕು = ಮುಚ್ಚುಮರೆ ; ವಂಚನೆ ; ಕಪಟ : ಮರೆ ಮುಸುಕು ಕುಹಕ ಯಾತಕೆ ಜನ್ಮಿಸಿದೆನೋ (ಐಶ್ವಕೃ. ೯-೯೯) ; ಮರೆ ಮುಸುಕಿಲ್ಲದ ಮಾತು, ನಕ್ಕುನಗಿಸುವ ಹಾಸ್ಯ — ಇವು ಸರ್ವಜ್ಞನ ಕವಿತ್ವದ ಮುಖ್ಯ ತತ್ವಗಳು (ಸಾಹಿಶ. ೦೦೦). ಮಱೆಗೆ ವರ್, ಮಱೆಗೆ ಬರು = ಶರಣಾಗತಿಯನ್ನು ಪಡೆ ; ಆಶ್ರಯಿಸು : ಅದಟಂ ಕೊಂಡಾಡದೆ ಬೇಡಿದರ್ಗೀಯದೆ ಮಱೆಗೆ ವಂದರಂ ಕಾಯದೆ . . . ಅಧಮನದೇತರ್ಕೆ ಬಾರ್ತೆ ಜೀವನ್ಮೃತಕಂ (ಆದಿಪು. ೦೨-೯೦); ಮಱೆಗೆ ವಂದರಂ ಕಾಯದೆ ಬಾಟ್ಟರಮಗನ ಬಾಹುದಂಡಂ ನಿರರ್ಥಕಂ (ಕೊಣಾವತಾ. ೦೨-೭೯); ಎರೆದರ್ಗಿಲ್ಲೆನ್ನದೀವಗ್ಗಳಿಕೆ ಮಱೆಗೆ ಬಂದಾತನಂ ಕಾವ ಪೆಂಪು (ರಾಜಶೇ. ೬-೦೩೬). ಮಱೆಮಾಡು, ಮರೆಮಾಡು = ಕಣ್ಣಿಗೆ ಬೀಳದಂತೆ ಮಾಡು ; ಮುಚ್ಚಿಡು : ಮರಗೆರಸಿಯಾಡಲೆಂದು ಮುಂದೆ ತಮ್ಮ ಪೆಗೆ ಪರ್ವುವಂತೆ ಪನ್ನಿಮರ್ದತ್ತರ್ ಪರ್ವಿದಾಲದ ಮರದ ಮೊದಲ್ಗೆ ವಂದು ಭೀಮನಂ ಮಱೆಮಾಡಿ (ಪಂಪಭಾ. ೨-೩೦ ವ); ಹಣೆಯ ಕಣ್ಣಂ ನೊಸಲ ಭಸಿತದಿಂ ಮಱೆಮಾಡಿ (ಇಹರ. ದೇ. ೩೦-೨೦); ಮದುಮಗಳ್ ತನ್ನೆಲ್ಲ ಚೆಲ್ವಿಕೆಯ ಮರೆವಡೆ ಮದುಮಗಂ ಕಾಣಿಸಂ (ಕಾಲೂಅ. ೦೬೯-೪೦೪). ಮಱೆಮೋಸ, ಮರೆಮೋಸ = ಒಳ ಗೊಳಗೇ ಮಾಡುವ ಮೋಸ ; ನಂಬಿಕೆದ್ರೋಹ : ನೃಪವರ ಯುಧಿಷ್ಠಿರನಾಳ್ವ ದೇಶದೊಳ್ಳಳವು . . . ಅನ್ಯಾಯ ಮಱೆಮೋಸ . . . ಮೊಳೆದೋಱವು (ಕೈಶಿಶಾ. ೨-೫); ವಂಚನೆ ಮರೆಮೋಸಗಳನು ಮರೆಯು (ಕಬಪು. ೬-೨). ಮಱೆಯ ಮಾತು, ಮರೆಯ ಮಾತು = ಅಭಿಪ್ರಾಯ ವನ್ನು ಮುಚ್ಚಿಟ್ಟು ಆಡುವ ಮಾತು ; ಸುತ್ತುಬಳಸಿನ ನುಡಿ : ಮಱೆಯ ಮಾತುಗಳೇಕೆ ಪಾಂಡವರೆಱಕ ನಿಮ್ಮಲಿ ಹಿರಿದು ಪಾರ್ಥಗೆ ಮಱುಗುವರಿ ಹಿರಿದಾಗಿ (ಕುವ್ಯಾಉ. ೦-೩೬) ; ಮಱೆಯ ಮಾತೇಕೀ ಕುವರನ ಸವಿಕೂಟಕೆಱಗಿದ ಮನದ ದೀಪನವ ನೆಱೆಯಿಾತನ ಸುರತದೆ ತೃಪ್ತಿ ಪಡಿಸು (ಕಂಪಾಪ. ೯-೦೨೬); ಮರೆಯ ಮಾತಲ್ಲ (ಕೋಣಾತು. ೬-೯೬). [<ಮಱೆ₁./ತಮಿ. ಮಱೈ; ಮಲ. ತೆಲು. ಮಱ; ತುಳು. ಕೊಡ. ಮರೆ]

**ಮಱೆಕಾಱ** (ನಾ). ಗುಟ್ಟನ್ನು ಬಿಟ್ಟುಕೊಡದಿರುವವನು ; ರಹಸ್ಯವನ್ನು ಕಾಪಾಡುವವನು : ಅಱಿಯೆಯಾ ನೀನಿದ ನಗೆಕಾಱ ಬಗೆಕಾಱ ಮಱೆಕಾಱ ಬಲುಟಾಳಿಕಾಱ ಅಱಿಯದಂದದೊಳೆನ್ನ ಕೇಳ್ವೆ (ಛಕ. ೬-೨೩). [ಮಱೆ$_2$ + — ಕಾಱ]

**ಮಱೆಗಡೆ** (ನಾ). ಯಾರ ಕಣ್ಣಿಗೂ ಬೀಳದಿರುವ ಜಾಗ; ರಹಸ್ಯಸ್ಥಾನ : ಮುಸುಕಿಟ್ಟೊಂದುಮರದ ಮಱೆಗಡೆ ನಿಂದು (ಶ್ರಶಂಜ. ೨-೧೪೦); ಪೆಡಮೆಟ್ಟಿದನಾಂಧ್ರಂ ಮಗಧಂ ಮಱೆಗಡೆಗೆ ಜಗುಳ್ದಂ (ಜಯಣಾ. ೭-೪). [ಮಱೆ$_2$ + ಕಡೆ$_3$]

**ಮಱೆಗಣ್** (ನಾ). ಪರವಶತೆಯನ್ನು ಸೂಚಿಸುವ ಕಣ್ಣು : ತುಱುಗಿತು ತುಂಬಿ ಕತ್ತಲೆ ಭಾಸ್ಕರಗಂಜಿ ಮುಱಿದೋಡಿ ಬನವ ಹೊಕ್ಕಂತೆ ಮುಱುಗಿದುವೆಳಜೊನ್ನವಕ್ಕಿ ಕಾಸಾರದೆ ಮಱೆ[ಱೆ]ಗಣ್ಣ ವಿಹಗ ಕೂಡಿದುವು (ಶೋಕಕ. ೨೨-೩೩). [ಮಱೆ$_1$ + ಕಣ್]

**ಮಱೆಗನ್ನಡ**, ಮಱೆಕನ್ನಡ (ನಾ). ಕೆಲವರನ್ನು ಬಿಟ್ಟು ಬೇರೆಯವರಿಗೆ ಅರ್ಥವಾಗದಿರುವಂತೆ ರೂಪಿಸಿಕೊಂಡ ಸಾಂಕೇತಿಕವಾದ ಕನ್ನಡ ಭಾಷೆ : ನುಡಿದು ತಲೆದೂಗಿಸುವ ಮಱೆಗನ್ನಡಕೆ ಪಾಹಾಯೆನಿಸಿ ಮೆಚ್ಚನು ಪಡೆವ ವ್ಯಾಘ್ರಗಳೋದಿ ಹೊಗಳಿಸಿಕೊಂಬ ಗಮಕಿಗಳು . . . ಒಪ್ಪಿದರು (ಕುಮಾ. ಕಾ. ೮-೩೬); ತಿಳಿಯತಿಗೂಢಗನ್ನಡವನಾ ಮಱೆಗನ್ನಡ ಸಾರಗನ್ನಡಂಗಳು ಮೊದಲಾದ ಸಾಸಿರದ ಮೇಲೆರಳ್ನೂಱುವಿವಾದಿಯಾದವಂ (ಕೇಜ. ೪-೪). **ಮಱೆಕನ್ನಡ** : ಮಱೆಕನ್ನಡವಾಗಿ ದೊರೆಗಳ ಸನ್ನಿಧಾನಕ್ಕೆ ಅಪ್ಪಾಜಿಯ್ಯನು ಬಿನ್ನವತ್ತಳೆಯನ್ನು ಬರೆದು ಕಳುಹಿದನು (ರಾಕೇಂಶ್ರ. ೨೬೦). [ಮಱೆ$_2$ + ಕನ್ನಡ$_1$]

**ಮಱೆಗಳೆ** (ಕ್ರಿ). ೧. ಆವರಣವನ್ನು ತೆಗೆದುಹಾಕು ; ಮುಸುಕನ್ನು ಸರಿಸು : ವೇದವ್ಯಾಸನಂತರ್ಜಾತಜಾಡ್ಯದ ಜವನಿಕೆಯು ಮಱೆಗಳೆದು (ಕಭಾಗ. ೦-೪-೦). ೨. ಮಾಯೆಯನ್ನು ಹೋಗಲಾಡಿಸು : ಎಚ್ಚಱಿಯದಾನಂದಾನುಭವದಲಿ ಮಱೆಗಳೆದ ಪರಿಪೂರ್ಣಮಯನಾಗಿರ್ದನವಧೂತ (ಕಭಾಗ. ೩-೬-೨೬). [ಮಱೆ$_2$ + ಕಳೆ$_1$]

**ಮಱೆಗಳ್ಳ** (ನಾ). ಅಡಗಿಕೊಂಡಿರುವ ಕಳ್ಳ : ತಳವಱರದಿರ್ಗೋಲುಲಿಗೇಳ್ದ ಮಱೆಗಳ್ಳರಂತೆಯುಂ . . . ಬೆದಱಿ ಬೀದಿವರಿದು ಸರಿಯುತ್ತೆ (ಶಕಪು. ೪೦-೬). [ಮಱೆ$_1$ + ಕಳ್ಳ$_1$]

**ಮಱೆಗಾಣ್** (ಕ್ರಿ). ಅಡ್ಡಿಯನ್ನು ಪಡೆ ; ತಡೆಯನ್ನು ಹೊಂದು : ನೀನೆನ್ನ ಕೆರಳಿಸಲ್ ನಾಂಟಿದೆನ್ ನಿನ್ನೆರ್ದೆಗೆ, ಬಿಲ್ಲಾಗಿ ಜನಂತೆವೋಲ್ ಗುಱಿಕೆಡದ ಕಣೆಗಳನ್, ಕೂರಿಱಿತದಿಂದೆ ಮಱೆಗಾಣದಾ ಕಣೆಗಳನ್ (ಅಂತಿಗೂ. ೪೬-೦೦೦೬). [ಮಱೆ$_2$ + ಕಾಣ್]

**ಮಱೆಗಾಳಗ** (ನಾ). ಮೋಸದ ಯುದ್ಧ : "ಕೂಟಯುದ್ಧಂ=ಮಱೆಗಾಳಗಮೆಂಬುದು. ಒಂದೆಸೆಗೆ ನಡೆವಂತೊಂದೆಸೆಗೆ ಪಡೆದು ಕಿಡಿಸುವುದು ವಂಚನೆಯ ಕಾಳಗಮೆಂಬುದು ತಾತ್ಪರ್ಯ" (ಚಿತಿವಾ. ೨೯-೯೦). [ಮಱೆ$_2$ + ಕಾಳಗ ( < ಕಾಳೆಗ )]

**ಮಱೆಗುಳಿ** (ನಾ). ಕಣ್ಣಿಗೆ ಕಾಣದಂತಿರುವ ತಗ್ಗು, – ಹಳ್ಳ : ನಡ ವುತ ನಡವುತಿಳಿಯೆ ತಾಂ ಮುಣುಗಿ ಪೋಪಾ ನೆಲದ ಮಱೆಗುಳಿಗಳಂ . . . ಎಸೆವ ದಾರಿಯೊಳು ಪಾಪಿಗಳು ನಡೆಯಬೇಕು (ದೀಕ್ಷಿಶ. ೪-೦೬-೦೫). [ಮಱೆ$_2$ + ಕುಳಿ$_2$ ( < ಕುಱಿ$_2$ )]

**ಮಱೆಗೆಯ್** (ಕ್ರಿ). ೧. ಮಱೆಮಾಡು ; ಅಡ್ಡವಾಗಿರಿಸು : ಪರಭೃತಪಕ್ಷದಿಂ ರತಿಯು ಕಣ್ಮಲರಂ ಮಱೆಗೆಯ್ವನಂಗನೊಲ್ದೆರೆಯ (ಅಸಂಪು. ೬-೦೦) ; ಹಿಮಗಿರಿಸುತೆಯ ನಿದ್ರೆಯೆಚ್ಚಱದಂತೆ ಮೆಲ್ಲನಾರೈದೆದ್ದು . . . ಘಣಿಯ ಮಱೆಗೆಯ್ದು ಬಾಂದೊಱೆಯ ಸವತಿಯನಪ್ಪಿ (ಗೌಂದಪು. ೭-೦). ೨. ಮುಚ್ಚಿಡು ; ಅಡಗಿಸು : ತಪ್ಪಟಮುಂ . . . ಉರ್ವಿಯೊಳ್ಳಿಲ್ಲದಂದೊಡೆಯಿಕ್ಕುತೋಡುಗಳಂ ಶುಚಿಸ್ಥಲದಿಂಬಿನೊಳ್ ಮಱೆಗೆಯ್ದು (ಕೃಕಪ. ೩೬-೬೦). ೩. ಮಱವಾಡಿಕೊಳ್ಳು ; ಮಱೆಸು : ನೆರೆದಲೆಗೆ ಮುಸಿ ದೊಡೆದು ತೆರೆಗೊಂಡೊಡಲನು ಕತ್ತಲೆಯ ಮಱೆಗೆಯ್ದು . . . ಹಣ್ಣಾ ಮುದುಕಿಸೂಳೆಯರೆಸೆದರು (ತಂಪು. ೦೦-೭೬). [ಮಱೆ$_2$ + ಕೆಯ್$_1$]

**ಮಱೆಗೇಳ್** (ಕ್ರಿ). ಇತರರಿಗೆ ಕಾಣದಂತೆ ಅಡಗಿಕೊಂಡು ಬೇರೆಯವರ ಮಾತನ್ನು ಕೇಳು; ಕದ್ದು ಕೇಳು: ಬಜ್ಜೆಗುಂಟಣಿ ಸಜ್ಜವನೆಯ ಬಾಗಿಲಂ ಪತ್ತಿ ಮಱೆಗೇಳುತ್ತಿರ್ದುರ್ (ಕಂದ್ರಪು. ೬-೩೯ ವ). [ಮಱೆ$_2$ + ಕೇಳ್]

**ಮಱೆಗೊಳ್**, ಮಱೆಗೊಳ್, ಮಱೆಗೊಳು (ಕ್ರಿ). ೧. ಕಾಣದಾಗು ; ಅದೃಶ್ಯವಾಗು : ಅಸಿಯಳೆನಗಸವಸದೊಳೆ ಬೆಸಿದು ಪೋಗಿ ಮಱೆಗೊಳೆ ಪೂತ ಕಲ್ಪಲತೆಯಂ ಲಲಿತಾಂಗಿಯೆ ಗೆತ್ತು (ಅಂಪು. ೪-೦೩). ೨. ಅಡಗಿರು ; ಮಱೆಯಾಗಿರು : ಸಂಭ್ರಮದಿಂ ಮಱೆಗೊಂಡು ನೋಡಿದಳ್ (ಕಾದಂಸಂ. ೦೩೫) ; ಪೊಡವಿಯೊಳು ಮಱೆಗೊಂಡ ಭಕ್ತಿಯನೊಡನೆ ತಲೆವಿಡಿದೆತ್ತುವಂದದಿ ತಲೆಯನೆತ್ತುವನು (ಬಸಪು. ೩-೩೬). ೩. ಬಚ್ಚಿಡು ; ಮುಚ್ಚಿಡು : ಅಲರಲರ್ಗಣ್ ಮುಗುಳ್ ನಗೆ . . . ಮದವಣ್ ಬೆಳರ್ವಾಯ್ ಪೆಱತಲ್ಲಿದೆಂತೊ ಕೋಮಲಲತೆ ಪೇಱಮ್ಮಿನ್ನಿನಿಯಳಂ ಮಱೆಗೊಂಡುದೊ ಸೂಱೆಗೊಂಡುದೋ (ಕಂಪಾ. ೩-೦೨). ೪. ಆಸರೆಯನ್ನು ಪಡೆ ; ಶರಣಾಗು : ಬಂದ ಮಾವನೆ ಮಱೆಗೊಂಡು ಬಗ್ಗಿಸುವ ಕೋಗಿಲೆ (ಅಂಪು. ೦-೬೩) ; ಏನವರ ದಂಡಿಸದೆ ಬಿಡುವೆನೆ ಜವನ ಮಱೆಗೊಂಡಡಂ (ಬಸಪು. ೦೦-೯) ; ಪೊಡವಿಯೊಳಾನಿರೆ ಪರಿವುಳವನು ವಾಯು ಬಿಡದೆ ಕೊಂಡೊಯ್ವನೆಂದೊಡನೆ ಪಾತಾಳವ ಮಱೆಗೊಂಡು ಲಾವುಂಚ ಮುಡಿವಾಳಬೇರ್ಗಳೊಪ್ಪಿದುವು (ಕಂಸಪ. ೩-೯೭). ೫. ತೆರೆಯನ್ನಾಗಿ ಮಾಡಿಕೊಳ್ಳು ; ಜವನಿಕೆಯಂತೆ ಬಳಸು : ಮಿಱುಗುವ ಬೆಳ್ಮುಗಿಲಂ ಮಱೆಗೊಂಡು ನಿಂದ ಬಿಜ್ಜೋದರಿವೋಲ್ (ಕಬ್ಬಿಗಾ. ೩೩೪) ; ಮುರಾಂತಕ ಮುರಳಿ ಚಕ್ರವ ತುಡುಕಿದರನೆಂದಸ್ತಗಿರಿಯನು ಸೂರ್ಯ ಮಱೆಗೊಂಡ (ಕುಮಾ. ಭೀ. ೬-೯೬). ೬. ಹಿಂಭಾಗಕ್ಕೆ ಸರಿ, – ಜರುಗು; ಹಿಂದುಗಡೆಗೆ ಹೋಗು : ನಾರಿಯರ ಮಱೆಗೊಂಡು ಸಭೆಯಲಿ ಸಾರಥಿಯ ಕುಬ್ಜಾವತಾರನೋರೆಗಣ್ಣನೊಳೀಕ್ಷಿಸುತ (ವಿಕಕ. ೬-೯೩); ವಿಟರ್. . . ನುಡಿಸೆ ನುಡಿಯದೆ ಕೂಡೆ ಬೆಣ್ಣವೊಲ್ ಬೆಮರಿ ಸಾರ್ ಸಾರೆಂದು ಸಖಿಯ ಮಱೆಗೊಂಬ ಬಾಲೆಯರೆಸೆದರು (ತಂಪು. ೦೦-೦೯). ೭. ರಕ್ಷಣೆಯನ್ನಾಗಿಡು ; ಅಡ್ಡವಾಗಿ ಹಿಡಿ : ನೇಜೆಯಬಿಱುತಕ ಪರಿಗೆಯ ಮಱೆಗೊಂಡು ಮಾಱದೇಱುವ ರಿಪುಭಟರ ಸೋಜಿಗಬಡೆಯೆ ಸೋಲ್ಪರು (ಕಂಸಪ. ೦೯-೬೫). ೮. ವೇಷವನ್ನು ಮಱೆಸಿಕೊಳ್ಳು ; ಮಾರುವೇಷ ಹಾಕಿಕೊಳ್ಳು : ಮತ್ಸ್ಯಮಱೆಗೊಂಡೈದಿ ಹೊಕ್ಕನು ವೃತ್ರರಿಪು (ಕಭಾಗ. ೪-೦೩-೬). **ಮಱೆಗೊಳ್**: ೪. ಖಚರನು ಶತ್ರುವಿನ ಭಯದಿಂದ ಮಱೆಗೊಳೆ ಕ್ಷಾತ್ರಧರ್ಮದಿ ಕೈವಿಡಿದೆನು (ಕೋಗಯ. ೦೬-೯೯) ; ಅಂಬರಮಣಿಯು ಬೆಚ್ಚಿ ಘನವ ಮಱೆಗೊಂಡನು (ಪಂಕಾಂಚಾ. ೩-೦-೨೩) ; ಹುದಗಿ ಅಲ್ಲಲ್ಲಿ ಛಾಯಾವಿರೂಪಗಳ್ ಹದುಗಿದುವು, ದಿನಮಣಿಯು ಬೆದರಿಕೆಗೆ ಕಾನನವ ಮಱೆಗೊಂಡ ಕತ್ತಲೆಯ ಕುಲದಂತೆವೋಲ್ (ಶಶ್ಯಾಂಗ. ೩-೩೭). **ಮಱೆಗೊಳು** : ೧. ತೋತೋರಿ ಮಱೆಗೊಳುವ ಭೂತಭಾವಂಗಳೀ ಅನಿಕೇತಕೇತನದಿ ಪಡೆಯುವವು ಸ್ಥಿರತೆ (ಮಲೆದೇ. ೩೭-೭). [ಮಱೆ$_2$ + ಕೊಳ್$_1$]

**ಮಱೆಗೋಟೆ** (ನಾ). ರಕ್ಷಣಾಸ್ಥಾನ : ಅಱಿಯೊಡಲೆಂಬ ಮಣ್ಣ ಮಱೆಗೋಟೆಯೊಳಿಂದ್ರಿಯದುಃಪರಿಗ್ರಹಂಗಳನೊಳಕೊಂಡು ಜೀವ ನಿಲಲಾರ್ತವ ನಾಳೆಯ ಲಗ್ಗೆಗೆಯ್ದು ತೊತ್ತಳದುಱಿದಿಪ್ಪನುದ್ಧ ಮಱಿಯಂ ಜವಂ (ಸಮುಕ. ೦೫-೯೫). [ಮಱೆ$_2$ + ಕೋಟೆ$_1$ (<ಕೋಂಟೆ)]

**ಮಱೆಜಾಣ** (ನಾ). ಇತರರಿಗೆ ಕಾಣದಂತಿರುವ ಬುದ್ಧಿವಂತಿಕೆಯುಳ್ಳವನು : ನುಡಿಜಾಣ ನಡೆಜಾಣ ನೆಱಿಜಾಣ ಮಱೆಜಾಣ

ಕಡುಜಾಣ ಜಗಕೆ ಸುಜಾಣ ಎಡೆಬಿಡವೆನ್ನಂತರಂಗದೊಳಿರು ಜಾಣರೊಡೆಯ ಚಿದಂಬರಪುರುಷಾ (ಚಿರಕ. ೭-೬೬). [ಮಱೆ$_2$ + ಜಾಣ]

**ಮಱೆದೆಗೆ**, ಮರೆದೆಗೆ (ಕ್ರಿ). ಆವರಣವನ್ನು ತೆಗೆ ; ಮುಸುಕನ್ನು ಸರಿಸು : ವೀರನಾಹವಕೆ ಹೊಗುವರಾರುಗಿಗೊಂಡವೋಲ್ಮಱೆದ [ಶಾಕಾಂ. ತೆ]ಗೆದ ಕಾಲನ ಕುಂಡವೋ ನೆಱೆ ಬಿಗಿದ ನೃಪಕೋದಂಡವೋ (ಜೈಭಾಗ. ೪-೯-೦೬). **ಮರೆದೆಗೆ** : ತೊಡೆಯೊಳು ಕುಳಿತು ಮೊಲೆಯ ನೀಯೆಂದು ಕಂಚುಕಮಂ ಮರೆದೆಗದುಂಡು ತಾಯ ಮೊಗಮಂ ನೋಡಿ ಗಹಗಹಿಸುತೆ (ಪಪಮೋ. ೦೩-೩೬). [ಮಱೆ$_2$ + ತೆಗೆ$_1$]

**ಮಱೆನುಡಿ**, ಮರೆನುಡಿ (ನಾ). ೧. ಗುಟ್ಟಿನ ಮಾತು ; ರಹಸ್ಯವಾದ ನುಡಿ : ಮಱೆನುಡಿ ಯಾವಾಗ ಸೂಳ್ನುಡಿ ಯಾವಾಗ ಮೊಱೆಗೆಟ್ಟ ನುಡಿಗಳಾವಾಗ (ಚಿತಕ. ೦೦-೬೨). ೨. ಮರೆಯಲ್ಲಿ ನಿಂತು ಹೇಳುವ ಮಾತು ; ಅಶರೀರವಾಣಿ : ನಿನಗೆ ಸೀತೆಯೊಳ್ ಪುಟ್ಟಿದರಿವರನೊಪ್ಪುಗೊಳ್ಳೆಂದು ಮಱೆನುಡಿ ಪುಟ್ಟಲೊಡು ಸುರರ್ ಪೂಮಱೆಗಱೆದರ್ (ರಾಮಾಶ್ವ. ೦೬೨-೦೬). ೩. ನೇರವಾಗಿ ಅರ್ಥವಾಗದ ಮಾತು : ಕೇಳ್ದ ನಾನ್ ಪಕ್ಕಿಗಳ್ ಕಿರಳ್ದುಱುಬಿ ಪುರ್ಚಿಂದೆ ಚೀಱಿಡುವ ಬರ್ಬರದ ಮಱೆನುಡಿಯನ್ (ಅಂತಿಗೂ. ೪೩-೯೨೩). **ಮರೆನುಡಿ** : ೨. ಸಂಹರಿಪ ಸಾಧನಮದಾವುದೆತ್ತಣದು ತಳ್ವಗುವೆಂದು ಮುಳಿದಾರ್ದು ತುಡುಕುವೊಡೆ ಕೆಲಬಲನನೀಕ್ಷಿಸಿದನಾ ಚಣದೊಳೊಂದು ಮರೆನುಡಿಯೆನಗೆ ಕಿವಿಗೊಂಡುದು (ಸಂಶಕ. ೨೩-೬೩). ೪. ಮುಚ್ಚುಮರೆಯ ಮಾತು ; ವಂಚನೆಯ ಮಾತು : ನಿಡುಸುಯ್ದನಾ ಮರೆನುಡಿಗಳೀಟ್ರಿಯಿಂತಮಂ ತಾಳಲಾರದೆ ತಾಳ್ದ (ಶ್ರೀರಾಪಟಾ. ೩೦೯-೨೩೩). ೫. ಸುಳ್ಳು ; ಹುಸಿ : ಮರೆನುಡಿಯಿದಲ್ಲ ಬೋಳಂ ತಾನೆ ಬಿದ್ದು ಮರೆದೊಡಲ ಮಲಗಿರಲ್ . . . ಬದುಕಿಸಿದೆ (ಕಾಬೂರ. ೦೬೪-೬೬೪). [ಮಱೆ$_2$ + ನುಡಿ$_2$]

**ಮಱೆಮಾಂಜು** 'ಮಱೆಮಾಜು' ನೋ.

**ಮಱೆಮಾಜು**, ಮರೆಮಾಚು, ಮರೆಮಾಜು, ಮಱೆಮಾಂಜು (ಕ್ರಿ). ಅಡಗಿಸು ; ಬಚ್ಚಿಡು ; ಮುಚ್ಚಿಡು : ಇನಿಯನೇಕಾಂತದೊಳೆಸಗಿದುದನು ತನ್ನ ಮನದೊಳೆ ಮಱೆಮಾಜುವುದು (ಹರಿಶ. ೩-೩೮). **ಮರೆಮಾಚು** : ಪ್ರಯತ್ನಪೂರ್ವಕವಾಗಿ ಜನಗಳಿಂದ ಇದುವರೆಗೂ ಈ ಕಥೆಯನ್ನು ನಾನು ಮರೆಮಾಚಿದ್ದೇನೆ. ಆದರೆ ಹಲವಾರು ಕಾರಣಗಳಿಂದ ಇನ್ನು ಮುಂದೆ ಮರೆಮಾಚಲಾರೆ (ಶಾಕೆ. ೯) ; ಅವಿದ್ಯೆ ಎಂಬುದು ಬ್ರಹ್ಮನನ್ನು ಮರೆಮಾಚುವ ಮುಸುಕಲ್ಲ (ತತ್ವಶಾ. ೩೨೮). **ಮರೆಮಾಜು** : ಆ ಅಂಶವನ್ನು ಮರೆಮಾಜುವುದು ಅಪರಾಧವಾಗುತ್ತದೆ (ರಾಷ್ಟ್ರಪು. ೨೩) ; ಅವನ ಮೋಹಜ್ವರವು ದಿನದಿನಕ್ಕೆ ಬೆಳೆದು . . . ಕಡೆಗೆ ಮರೆಮಾಜಲು ಕೂಡ ಕಷ್ಟವಾಗುವುದು (ಕಾವ್ಯಸ. ೬೬). **ಮಱೆಮಾಂಜು** : ಮಱೆಮಾಂಜದೊಡಂ ಮೆ ಮೆಯಿಂನಱೆತರುಪೇಂದ್ರಾವತಾರ[ನೆಂದು ಪೊಗಟ್ದರ್] (ಚಿಕಪ. ೪-೮೬). [ಮಱೆ$_2$ + ಮಾಜು$_1$]

**ಮಱೆಮಾತು** 'ಮಱೆವಾತು' ನೋ.

**ಮಱೆಮೆಯ್**, ಮರೆಮೈ (ನಾ). ಮರೆತು ಹೋದ ಹಿಂದಿನ ಜನ್ಮ ; ವಿಸ್ಮರಣೆಗೊಳಗಾದ ಜನ್ಮ : ಮಱೆಮೆಯ್ಯಂ ಪಲವಾದ ಪೋದ ಭವಮಂ ಜಾತಿಸ್ಮರರ್ಕಂಡೊಡಂ ಮಱೆದಿರ್ಪರ್ಗಡ (ಅನಂಪು. ೯-೨೦). **ಮರೆಮೈ** : ಪೆಣ್ಣ ಮರೆಮೈಯಿಂದ ಬಂದಿರ್ಪ ಸಾಲಮಲೆ ತಿಣ್ಣಂ (ಕಾಬೂರ. ೩೩-೩೩). [ಮಱೆ$_2$ + ಮೆಯ್$_2$]

**ಮಱೆಯಿಸು**, ಮರಸು$_1$, ಮರೆಸು, ಮಱಸು$_1$, ಮಱೆಸು (ಕ್ರಿ). ೧. ನೆನಪಿನಿಂದ ಹೋಗಲಾಡಿಸು ; ವಿಸ್ಮೃತಿಯುಂಟಾಗುವಂತೆ ಮಾಡು ; ಮರೆಯುವಂತೆ ಮಾಡು : ನಾಣ್ಗೆಡೆಗುಡದಿರ್ಪುದೊಂದು ನುಡಿಗಳ್ ಮೊಱೆಯಂ ಮಱೆಯಿಪ್ಪುದೊಂದು ಕಳ್ಗುಡಿದವರಂದಮಿಂತು (ಪಂಪಭಾ. ೨-೪೯) ; ಅತಿಕಷ್ಟಮಪ್ಪವಸ್ಥಾತತಿಯುಂ ಮಱೆಯಿಸಿ ಜಳಾಭಿಲಾಷೆಯನೀ ಜೀವಿತತೃಷ್ಣೆ ಮಾಡಿತು (ಕಾದಂಪೂ. ೦೯೩) ; ಆತನ ಕೆಯ್ಗಳ್ ಕುಱುಗಣ್ಣಕೊನ ಬೆನ್ ಕಾಲ್ ಮಱೆಯಿಸುವುದು ಟೊಂಕಮೊಱೆದ ಕತ್ತಿಯ ಕಾಲಂ (ಯಶೋಚ. ೨-೩೯). ೨. ಇತರರ ಕಣ್ಣಿಗೆ ಬೀಳದಂತೆ ಮಾಡು ; ಮುಚ್ಚಿಡು ; ಅಡಗಿಸು : ಜನದೇವನ ಬಯಕೆಯಂ ಮಱೆಯಿಸಿ ಪುಸಿನುಡಿದ ಧನದೇವನ ಜಿಂಹ್ವೋತ್ಪಾಟನಂಗೆಯ್ದುದುಮಂ (ಶಾಪುಂಶ. ೩೮) ; ಸೌಂದರ್ಯಸಂಪತ್ತಿಯುಮಂ ಮಱೆಯಿಸಲಲ್ಲದೆ ಮೆಱೆಯಿಸಲ್ ನಿಮಿತ್ತಮಲ್ತು (ಕುಸ್ತು. ೦೧-೬೨ ಪ). ೩. ಮೈಮರೆಯುವಂತೆ ಮಾಡು ; ಪರವಶಗೊಳಿಸು ; ಎಚ್ಚರ ತಪ್ಪಿಸು : ಅಖಿಲಭುವನಜನನಿಯನಾಗಳ್ ಮಱೆಯಿಸಿ ಮಾಯಾನಿದ್ರೆಯಿಂ ನುಱೆ ಮಾಯಾಶಿಶುವನಿರಿಸಿ (ಆದಿಪು. ೭-೪೩) ; ಮನದೊಳಲಂಪು ಪೊಣ್ಮೆ ನುಡಿದುಂ ನಡೆನೋಡಿಯುಮಾಟಪಾಟಮುಂ ಬಿನದಮುಮಾರುಮಂ ಮಱೆಯಿಸುತ್ತಿರೆ (ಪಂಪಭಾ. ೨-೯೪). ೪. ರೂಪಾಂತರಗೊಳಿಸು ; ಸ್ವರೂಪವನ್ನು ಬೇರೆಮಾಡು ; ವೇಷವನ್ನು ಬದಲಾಯಿಸು : ಕಳಶಜನನಿಂತು ಕೊಲಿಸಿದ ಖಳನೆ ಗಡಂ ಧರ್ಮನಂದನಂ ಕ್ರೂರದಿನಂಗಳ ಪೆಸರಂ ಮಱೆಯಿಸಿ ಮಂಗಳವಾರಂ ಕಡ್ಡವಾರಮೆಂಬಂತೆ ವಲಂ (ಗದಾಯು. ೩-೨೬). **ಮರಸು$_1$** : ೧. ತಾಯಿಯ ಮಾತು ಮಗುವಿನ ದುಃಖವನ್ನು ಮರಸಿತು (ದೂಶ). ೨. ಕಂಗಳಿಂ ಕರೆವುದೆನ್ನದೆಯುಕ್ಕುವಳಲು ! ಕಣ್ದೆರೆಯಾ, ನಿನ್ನ ಕಣ್ಣಿಂದುಮಿನಿದೆ ರಸಂ ಮರಸದೆನ್ನಳಿ ಎನ್ನು ! (ಗೀಪಂ. ೫೦-೦೪) ; ತನ್ನ ತಪ್ಪನ್ನು ಮರಸುವುದಕ್ಕಾಗಿ ಒಂದು ಪೆಟ್ಟಿಗೆಯಲ್ಲಿ ಶಿಶುವನ್ನಿಟ್ಟು ಭದ್ರವಾಗಿ ಮುಚ್ಚಿ ನೀರಿನಲ್ಲಿ ಬಿಟ್ಟುಬಿಟ್ಟಳು (ವ್ಯಾಸಶಿ. ೪೨). **ಮರೆಸು** : ೧. ನವಗ್ರಹದಾನದ ಸಂಭ್ರಮ . . . ಕುಪ್ಪೀಮಾತ್ರೆಯನ್ನೇ ಮರೆಸಿದ್ದವು (ಶಿಂಗಾಳ್ವ. ೦೬೬). ೫. ಕಣ್ಣುತಪ್ಪಿಸು : ಇದ್ದ ಕಾವಲ ಮರೆಸಿ ಮುದ್ದು ಕಣ್ಮರಿಯೊಳ್ಪ ಹದ್ದಿನಲ್ ದೊಡ್ಡನುಂ ಪದುಱಿನಿಂ ನೋಳ್ಪಂ (ಕಾಬೂರ. ೬೩-೦೦೭). **ಮಱಸು$_1$** : ೧. ಭರತನ ಕಣ್ಗೆಱಕಮನೆ ಪಡೆದು ಚೆಲ್ವಿಂ ಮಱ [ಶಾಕಾಂ. ಱೆ]ಸಿದುವುದ್ಯಾನಲತೆಗಳಂ ವನಲತೆಗಳ್ (ಆದಿಪು. ೦೦-೯೩) ; ನೆನಸುವೆ ಮಱಸುವೆ ನೀನೆನ್ನ ತಂದೆ ಎನ್ನ ಗುಣದೋಷ ನಿನ್ನದು (ಸಿದ್ಧಪ. ೪. ೦೨೬-೪೨೩) ; ಯುಧಿಷ್ಠಿರನರಸುತನ. . . ಭರತಾದಿ ಭೂಮಿಪರ ಮಱಸಿತು (ಕುವ್ಯಾಸ. ೨-೩). ೨. ಇರ್ದುದೋಂದು ವಸ್ತುಸ್ಥಿತಿಯುಂ ಮಱಸಿ ಪೆಱತೊಂದು ಮಾಟಕ್ಕೆಯಿನಱಿಪುವುದುತ್ಪ್ರೇಕ್ಷೆಯೆಂಬುದು (ಕವಿರಾ. ೩-೦೦೪) ; ಅಂತು ಬೃಹಂದಳೆಯಾಗಿ ಗಾಂಡೀವಜ್ಯಾಘಾತದೊಳಿಂದ್ರನೀಲಂಗಳನಡಸಿದಂತಿರ್ದರಡುಂ ಮುಂಗೆಯ್ಗಳ ಕರ್ಪಂ ತೀವೆ ತೊಟ್ಟ ಬಳೆಗಳ್ ಮಱಸೆ (ಪಂಪಭಾ. ೯-೩೩ ವ) ; ಹುಣ್ಣಾಗಲೆಯ ಸೀರೆಯುಳಿ ಮಱಸಿದ ಮುದಿಪಣ್ಯಾಂಗನೆಯರೊಪ್ಪಿದರು (ಕಂಪಾ. ೬-೦೯೨). ೫. ತರತರವಿಡಿದು ಢಾಳಿಸುತಿಹ ದೀರ್ಘಚಾಮರಗಳ ಸಾಲೊಳೆಸೆದನು ಹರಿವ ಬೆಳ್ಮುಗಿಲೊಳು ತೋಱಿ ಮಱಸುವ ಚಂದಿರನೋ ಭಾಸ್ಕರನೋಯೆಂಬಂತೆ (ಚಿರಕ. ೦-೩೬) ; ಪುರದ ಸಂವರಣೆಯ ನೋಡಲಮ್ಮದೆ . . . ಉರಗೇಂದ್ರ ಪಾತಾಳದೆ ಘುಱಸಿದ ಮಿಕ್ಕ ಕಿಱುವಾನಿಸರ ಪಾಡೇನು (ಕುಪಾ. ೬-೨೩). ೬. ಮೋಸಮಾಡು ; ವಂಚಿಸು : ನೆರೆ ಸೂರೆಯಱಿಯದಂತೆ ಪತಿಯಂ ಮಱಸಿ ಮನೆಯವರನೆಲ್ಲರಂ ಟೊಣೆದು . . . ಇರಬಲ್ಲರವರೆ ಜಾರೆಯರವರನೋವಬಹುದೆ (ಕೃವಿಚಾ. ೩-೩೯). ೭. ಹೊದೆಸು ; ಆಚ್ಛಾದಿಸು : "ಮಱಸು–ಆಚ್ಛಾದನೇ" (ಶಬ್ದಾ). ೮. ಹೊದೆದುಕೊಳ್ಳು ; ಧರಿಸು : ಮಱಸಿರ್ದಂ ಬರಮೆಯ್ದೆ ನಾಂದ ತನುವಂ ಪತ್ತಿರ್ದ ಕಣ್ಗಲ್ಲಿಯುಂ ತೆಱಪಂ ಮಾಡೆ. . . ಮೆಱೆದರ್ ಚಕ್ರಿಯ ಮುಂದೆ (ಆದಿಪು. ೦೦-೦೩೩). **ಮಱೆಸು** : ೧. ಆ ಸಕಲಸಾಮ್ರಾಜ್ಯಲಕ್ಷ್ಮೀವಿಳಾಸದರಮನೆಗಳನು ಮಱೆಸಿದುದೀ ಶರಭಶಾರ್ದೂಲಸೇವಿತ ಘೋರಕಾಂತಾರ (ಕುವ್ಯಾಅ. ೦-೩೬). ೨. ಅಱಿದಂ

ಕಂಡುಂ ನಂಟರ್ ಮಱೆಸುವರೆಂತಪ್ಪ ತಪ್ಪುಮಂ ಸಾಮಾನ್ಯರ್ ಮಱೆಸದಿರೆ ಬೆರ್ಚಿ ನಡೆವಯ್ (ಕೀವಸಂ. ೭೦-೭೬); ನಮ್ಮ ಯಥಾರ್ಥಮಂ ಮಱೆಸಿ ಮತ್ತಿನ ಸುತ್ತಿನ ಮಾತನಾಡುವೈ (ಕೃಷ್ಣಕೃ. ೩-೪). [ಮಱೆ$_1$ + — ಇಸು$_3$]

**ಮಱೆಯಿಱಿಗಾಱ** (ನಾ). ೧. ಮರೆಯಲ್ಲಿ ನಿಂತು ಕಾದುವವನು; ಮೋಸದಿಂದ ಯುದ್ಧ ಮಾಡುವವನು: ಅದು ಪಾಂಡವರ ಕೃತ್ರಿಮ ತಂತ್ರ ಮಱೆಯಿಱಿಗಾಱರವರು (ಕುಮಾವ್ಯಾ. ೪-೭). ೨. (ಅಲಂ) ಕಣ್ಣಿಗೆ ಕಾಣಿಸಿಕೊಳ್ಳದೆ ತಾಪವನ್ನುಂಟುಮಾಡುವವನು; ಮರೆಯಲ್ಲೇ ಇದ್ದು ಹಿಂಸಿಸುವವನು: ರಾಯನ ಚಿತ್ತಚೋರನ ಮಱೆಯಿಱಿಗಾಱನಾಯಕನನು ಕಾಣ್ಬೆನಿನ್ನೆಂತೊ (ಕೊಬಸೋ. ೨೩-೩೨).

[ಮಱೆ$_2$ + ಇಱಿಗಾಱ]

**ಮಱೆಯುಗು** 'ಮಱೆವೊಗು' ನೋ.

**ಮಱೆಯೇಱು** (ನಾ). = ಮಱೆಗಾಳಗ: ಕಳ್ಳರ ಭಯಮುಮಿಲ್ಲ ಬೆರ್ಚಿಲ್ಲ ದಲ್ ಮಱೆಯೇಱಿಲ್ಲ ವಿಪತ್ತಿಯಿಲ್ಲ ರುಜೆಯಿಲ್ಲುತ್ಪಾತಮಿಲ್ಲಾವಗಂ . . . ಆ ಪೂರ್ವವಿದೇಹದೊಳ್ (ಚಾರಪು. ೪-೭).

[ಮಱೆ$_2$ + ಏಱು$_5$ (< ಏಱ್$_5$)]

**ಮಱೆಯೊಗು** 'ಮಱೆವೊಗು' ನೋ.

**ಮಱೆಯೊಡ್ಡು** (ಕ್ರಿ). ಮರೆಮಾಡು; ಅಡ್ಡವಾಗಿ ಹಿಡಿ: ಮಿಂಚುಗುರ ಮಿಸುಪನುಣ್ಬೆಳಗಿನಸುಂ ಪಸರಿಸೆ ಮುರಲ್ದ ಕರವೊಂದೆಸೆವುದು ಚಂದ್ರಾತಪಕ್ಕೆ ಮಱೆಯೊಡ್ಡಿದವೋಲ್ (ಕಾದಂಪೂ. ೬೦೩); ರವಿಮಂಡಲಕೆ ಮಱೆಯೊಡ್ಡಿದನು ಮುರರಿಪು ವರಸುದರ್ಶನವ (ಕುಮಾವ್ಯಾದ್ರೋ. ೦೯-೩೩).

[ಮಱೆ$_2$ + ಒಡ್ಡು$_1$]

**ಮಱೆರೂಪು** (ನಾ). ಬದಲಾಯಿಸಿದ ರೂಪು; ಮಾರುವೇಷ: ನಾಡಿಗರಿರುವನಾರಯ್ವೊಡೆಂದು ರಾಯನಟ್ಟಿದ ಬೇಹಿನವರ್ ಮಱೆರೂಪಿ ಬೀದಿಗಳೊಳ್ ಬರೆವರೆ (ರಾಮಾಶ್ವ. ೨೩-೪).

[ಮಱೆ$_1$ + ರೂವು (< ರೂಪು)]

**ಮಱೆವಟ್ಟೆ** (ನಾ). ಗುಪ್ತಮಾರ್ಗ; ಕಳ್ಳದಾರಿ: ಕುಱುಂಬರೊಡವೆರಸಿ ಸಚಿವಂ ಸಹಿತ ಮಱೆವಟ್ಟೆಯೊಳ್ಬಂದು ಹರಭವನಮಂ ಕಂಡು ಪಟ್ಟದಾನೆಯನಿಳಿದು ರಂಗಮಂಟಪವ ಪೊಕ್ಕು (ಸೌಂದಪು. ೦೩-೬). [ಮಱೆ$_2$ + ಬಟ್ಟೆ$_1$]

**ಮಱೆವಡು** (ಕ್ರಿ). ಪರಿವೆಯಿಲ್ಲದೆ ನಿದ್ರಿಸು; ಮೈಮರೆತು ಮಲಗು: ಎರೆಯನೆರೆಗೊಂಡು ಮಱೆವಟ್ಟಿರೆಯಿರೆ ಕಾಯ್ಸುರಿವ ಸೂರ್ಯಕಾಂತದಿ ನೆಟ್ಟಿತ್ತಿರದೋಡಿದುದಜಗರ (ಜಗಪ. ೦೭-೩೦); ಆತ್ಮವಲ್ಲಭೆಯುಮಾನುಂ ವಿಶ್ರಮಿಸಲೆಂದಲ್ಲಿಗೆ ವಿಮಾನಮನಿಟ್ಟಿಳಿದಿವನ್ನೆಗಮುವಂದಿರೆನ್ನ ಬೆನ್ನನೆ ಬಂದು ಮಱೆ[ಶಾಕಾಂ· ಜ್ಞಾನಟ್ಟಲ್ಲಿಯೆನ್ನಂ ಛಿದ್ರಿಸೆ (ಬಿಂಹಂ. ೩-೦೯ ವ).

[ಮಱೆ$_2$ + ಪಡು$_1$]

**ಮಱೆವಾತು,** ಮಱೆಮಾತು (ನಾ). ಅಭಿಪ್ರಾಯವನ್ನು ಮುಚ್ಚಿಟ್ಟು ಆಡುವ ಮಾತು: ಸುತ್ತು ಬಳಸಿನ ನುಡಿ: ಒಡೆದು ಕಳೆ ಭವವ ಸದ್ಗುರುಚರಣಕೃಪೆಯಿಂದ ಏಕೆ ಮಱೆಮಾತುಗಳು ಸಾಕಿನ್ನು ಸದ್ಗುರುವೆ ಸೂಕಬೇಡಿನ್ನೆನ್ನ ಸ್ವೀಕರಿಸು ಮುದ್ದುಗುರುವೆ (ದೀಕ್ಷಾಬೋ. ೦೯-೦೧). **ಮಱೆಮಾತು**: ಮಱೆಮಾತೇಂ ಸಿಡಿಲಂತೆ ಕೂರಸಿ ಕಱುತ್ತುಗ್ರಾಜಿಯೊಳ್ ವ್ಯಗ್ರದಿಂದೆಱೆವಲ್ಲಿಂದೊಳಗಟ್ಟಿ ಬಂದೆಱೆಪ ಭೂಭೃತ್ಕೋಟಿ ಕೋಟಿರದೊಳ್ ಮಿಱುಗುತ್ತಿರ್ಪುದು . . . ಪದಪದ್ಮಚ್ಛಾಯೆ ಭೂಪಾಲನಾ (ಧರ್ಮನಾ. ೩-೦೭); ಸುರರು ಮುನಿದರೊ ಧರ್ಮದೇವತೆ ಪರಿಭವಿಸಿದಳೊ ಭಾಗ್ಯವಧು ಮೊಗದಿರುಹಿದಳೊ ಮಱೆವಾತದೇಕೆಂದರಸ ಬಿಸುಸುಯ್ದು (ತೊರವೆ. ೦-೩-೦೬). [ಮಱೆ$_2$ + ಮಾತು$_1$]

**ಮಱೆವಾರ** (ನಾ). ಸಮುದ್ರದ ದಡದಲ್ಲಿ ನಿರ್ಮಿಸಿರುವ ಹಡಗುಗಳ ರಕ್ಷಣೆಯ ಸ್ಥಾನ; ಬಂದರಿನಂಥ ಸ್ಥಳ: ಮಱೆವಾರದೊಳ್ ವಹಿತ್ರಮನಿರಿಸಿ ವಣಿಕ್ಪತಿಗಳ್ ಪೊಟಲಂ ಪೊಕ್ಕು ತಮ್ಮ ತಂದ ಸಾರವಸ್ತುಗಳಂ ನಾರಾಯಣಂಗೊಪ್ಪಿಸಿದೊಡೆ (ಬಿಂಹಂ. ೦೦-೯೯ ವ); "ಮರೆಯಾದ ಸ್ಥಳ" (ಬಿಂಹಂ. ಕೋಶ). [ಮಱೆ$_2$ + ವಾರ$_2$]

**ಮಱೆವಾಳ್** 'ಮಱೆವಾಟ್$_2$' ನೋ.

**ಮಱೆವಾಳಿ** (ನಾ). ಶರಣಾಗತರಾದವರನ್ನು ರಕ್ಷಿಸುವ ಕರ್ತವ್ಯ: ಮಱೆವಾಳಿಯುಂ ನೆಱಪುವೆನೆನ್ದು ತೆಂಕಣಸಮುಸ್ತನಾಯಿಕರುಂ ತಾವರೆಹಳ್ಳಿಯ ಸೋವಿಸೆಟ್ಟಿಯುಂ ತುಱುವಂ ಕೊಂಡು ಪೋಪಲ್ಲಿ (ಎಕ. VIII, ಸೊರಬ. ೪೭-೦೦; 1187). 'ಜೋಳವಾಳಿ' ಪರಾ.

[ಮಱೆ$_2$ + ಪಾಳಿ$_3$ (< ಪಾೞಿ$_2$)]

**ಮಱೆವಾಳ್ತನ** (ನಾ). ವ್ಯಭಿಚಾರ; ಹಾದರ: ನೆರೆದಡೆ [ಕೀಱ]ಗೇಳ್ದಲ್ಲರು ಪೊಱಗಿಕ್ಕೆ ಪುರಜನ ವೀಧಿಯೊಳ್ ನೆರೆಯೆ ಹರುಷದಿ ಕುಕಿಲ್ದು ಕೂಕಿಱಿದೊಡಸಾವೊಲು ನೆರೆಯದೆ ಮಱೆವಾಳ್ತನ) (ಅನಂತ. ೦೦-೦೩೩).

[ಮಱೆವಾಳ್ (< ಮಱೆವಾಟ್$_2$) + — ತನ]

**ಮಱೆವಾಟ್$_1$** (ಕ್ರಿ). ೧. ಮರೆಹೊಕ್ಕು ಬದುಕು; ಶರಣಾಗು: ಎಮ್ಮೊಳ್ ಪಗೆಗೊಂಡು ನಿರ್ನಿಮಿತ್ತದಿನಬರುಂಬಿಂಗೆ ತಲೆಯಂ ಮಾಱುಗುಡದೆ ಮಱೆವಾಟ್ವುದೊಳ್ಳಿತು (ಆಭಿಶಾಕ್ಯ. ೩೭-೨೩). ೨. ವ್ಯಭಿಚಾರ ನಡೆಸು; ಹಾದರ ಮಾಡು: ನಾಗಸೂರನೆಂಬೊನಾತಂಗೆಣ್ಬರ್ ಪೆಂಡಿರ್ ತನ್ನ ಪೆಂಡಿರೊಳ್ ಸಂತೋಸಂಬಡೆಯದೆ ಪೋದಾಳಿಯೊಳ್ ಮಱೆವಾಟುತ್ತಿರ್ಕುಂ (ವಡ್ಡಾರಾ. ೨೦-೦೬); ಆಕೆಯೊಡನಾ ಪುರದ ವಸುಭೂತಿಮೆಸರ ವಸುಧಾಮುರಂ ಮಱೆವಾಟುತ್ತುಮಿರಲ್ (ಕಂಠಾಮ. ೬-೩೦ ವ); ತನ್ನ ನಾದುನಿಯೊಳೀ ಖಳಂ ಮಱೆವಾಟ್ದನ್ಯಾಯವರ್ತಿಯೆಂದು ಡಂಗುರಂಬೊಯ್ಸುತ್ತಂ ನಾಡಿಂದಮೆತ್ತಿ ಕಳೆವುದುಂ (ಪಾರ್ಶ್ವಪು. ೪-೨೯ ವ).

[ಮಱೆ$_2$ + ಬಾಟ್$_1$]

**ಮಱೆವಾಟ್$_2$**, ಮಱೆವಾಳ್ (ನಾ). ವ್ಯಭಿಚಾರ: ಹಾದರ: ಮಱೆವಾಟೆಱಿವ ಕುಲವಧುಗೆ ಬಯಸಿದೊಡಲಂಪುರುಷವ್ರತಕ್ಕೆ ಬನ್ನಂ ಬರ್ಕುಂ (ಕೀವಸಂ. ೩೭-೪೩); ದುಷ್ಟಚೇಷ್ಟೆಯುಂ ಮೆಱೆಯಿಪ ತಮ್ಮ ಭಂಗಿ ಮಱೆವಾಟ ಮನುಜಸುಖಕ್ಕೆ ಸಂತತಂ ಮುಱುಗುವ ಚಿತ್ತದಿಂ ರಜನಿರಂಜನಮಾದುದು ಬಂಧಕೀಜನಂ (ಸೂಕ್ತಿಸು. ೬-೬೩). **ಮಱೆವಾಳ್**: 'ಮಱೆವಾಳ್ತನ' ಪರಾ.

[ಮಱೆ$_2$ + ಬಾಟ್$_3$]

**ಮಱೆವಿಡಿ** (ಕ್ರಿ). ೧. ತೆರೆಯನ್ನು ಹಿಡಿ; ಆವರಣವನ್ನು ಹಿಡಿ: ಮುಸುಕಿ ಪರಿಕಾಂತಿ ನೀಲೀವಸನ ಸ್ಪರ್ಶಾನುಮೇಯಮಾದುದು ರಾಮಂಗಸಿತಾಂಬರಮಂ ಮಱೆವಿಡಿದ ಸುವರ್ಣದ ವಿದ್ದದಂತಿರುದ್ದವನೆಸೆದಂ (ಜಗಪ. ೦೫-೪೬); ಮೊಗಕೆ ಮುತ್ತುಗದೆಲೆಯ ಮಱೆವಿಡಿದಗಲಿದುಮ್ಮಹದಿಂದ ಜನಕನ ಮಗಳ ನಡೆಸುತ ತಂದರು (ತೊರವೆ. ೨-೪-೦೯). ೨. ಅಡ್ಡಿಯನ್ನುಂಟುಮಾಡು: ಅಪಕೀರ್ತಿ ಹೊಱುವುದು ಬಲ್ಲೆನೆನುತುರವಣಿಸಿದನು ಮುಂಗೈಯ ಮಱೆವಿಡಿದು (ಕುಮಾವ್ಯಾದ್ರೋ. ೦೩-೦೦). ೩. ಆಶ್ರಯಿಸು; ಅವಲಂಬಿಸು: ಆವನ ಪಾದಪಂಕಜವ ಮಱೆವಿಡಿದು ಮರ್ತ್ಯಾವತಾರದಲುಱುವ ದೈವವದೆಂತು ಜನಿಸಿದ ತೆಜನನೆಲೆ ಮುನಿನಾಥ ಕೃಪೆ ಮಾಡುವುದು ತನಗೆ (ಶಿಭಾಗ. ೦೦-೦-೨). [ಮಱೆ$_2$ + ಪಿಡಿ$_1$]

**ಮಱೆವುಗು** 'ಮಱೆವೊಗು' ನೋ.

**ಮಱೆವುಯಿಲ್**, ಮರೆಹುಯಿಲು (ನಾ). = ಮಱೆಗಾಳಗ: ಆ ಮೈಸೂರ ಚಾಮರಾಜನೆಸಗುವ ಮಱೆವುಯಿಲಾಟಗಳದಿಂ . . . ಬಂದೆಗೆದು ಪೋಪುದರ್ಕಂ ದಾರಿಯಿಲ್ಲದೆ (ಕಕವಂ. ೩೬-೦೨). **ಮರೆಹುಯಿಲು**: ಮರೆಹುಯಿಲಿನ ಪ್ರಯತ್ನವು ಕೈಗೂಡಲಿಲ್ಲ (ಧಾರವಾ. ೧೯೩). [ಮಱೆ$_2$ + ಪುಯಿಲ್ (< ಪೊಯಿಲ್)]

**ಮಱಿವೆಱು** (ಕ್ರಿ). ಆಸರೆಯನ್ನು ಹೊಂದು : ಆಶ್ರಯವನ್ನು ಪಡೆ ; **ಅವಲಂಬಿಸು** : ವಿಳೋಚನಮರೀಚಿಗಳಂ ಮಱಿವೆತ್ತು ಚಂದ್ರಿಕಾಚಯ ಮೆಳಸಿತ್ತು ವಾಸರಮುಮಂ (ಶಂಪ್ರಪು. ೨-೦೫). [ಮಱಿ$_2$ + ಪೆಱು$_1$]

**ಮಱಿವೊಗಿಸು** (ಕ್ರಿ). ಆಸರೆ ದೊರಕುವಂತೆ ಮಾಡು ; ಆಶ್ರಯವನ್ನು ಹೊಗುವಂತೆ ಮಾಡು : ಕಂತುಪಿತನಾತನಂ ಮಱಿವೊಗಿಸಿ ಕೊಂಡು ಮುನಿಯೊಡನೆ ಯುದ್ಧಂಗೈದನು (ಶಂಪು. ೨೭-೫). [ಮಱಿವೊಗು + — ಇಸು$_3$]

**ಮಱಿವೊಗು**, ಮಱೆಹೊಗು, ಮಱಿಯುಗು, ಮಱಿಯೊಗು, ಮಱಿವುಗು, ಮಱಿಹುಗು, ಮಱಿಹೊಗು, ಮೊರೆಹೊಗು, ಮೊಱಿಯೊಗು, ಮೊಱಿವುಗು, ಮೊಱಿಹೊಗು (ಕ್ರಿ). ಆಶ್ರಯಿಸು; ಆಸರೆಯನ್ನು ಪಡೆ ; ಶರಣಾಗು : ಮಱಿವೊಕ್ಕರ ಕೊಲಲಾಗದು (ವ್ಯಾಅಂ. ೧೯೨೮, ೩೩-೭ ; 900) ; ತನ್ನ ಮಱಿವೊಕ್ಕೊಡೆ ಕಾಯದೆ . . . ಮಾಣ್ದು ಬಾಳ್ವ ಪುಟುವಾನಸನೆಂಬವನಜಾಂಡಮೆಂಬುದೊಂದತ್ತಿಯ ಪಣ್ಗೊಳ್ವರ್ಪ ಪುಟುವಲ್ಲದೆ ಮಾನಸನೇ (ಶಂಶಖಾ. ೫-೭೫); ಇಂದು ನಿಮ್ಮಂಘ್ರಿಗಳ ಮಱಿವೊಗಬಂದೆನೆನ್ನನು ಪತಿಕರಿಸಬೇಕು (ಕುವ್ಯಾ೨೧. ೨-೩೮). **ಮಱೆಹೊಗು**: ಮಱೆವೊಕ್ಕರೆ ಕಾವ ಮಾರಾಂತರ ವೈರಿ (ಇಅ. V. ೪೦-೭; 1587). ಭಾಷೆಗೆ ತಪುವ ನಾಯಕರ ಗಂಡ ಮಱೆಹೊಕ್ಕರೆ ಕಾಯುವ . . . ಬಸವಪ್ಪ ನಾಯಕರವರು (ವ್ಯಾಅಂ. ೧೯೩೩, ೩೫-೦೫; 1785) ; ಸಂಸಾರದಲ್ಲಿ ಸೋತು ಕಂಗಾಲಾಗುವಾಗ, ಯಾರಿಗಾದರೂ ಕಣ್ಣೀರಿಟ್ಟು ಮಱೆಹೊಗಬೇಕಲ್ಲ (ಮುಕ್ತ. ೨೨೦). **ಮಱಿಯುಗು. ಮಱಿಯೊಗು**: ನಿಮ್ಮ ಚರಣಸಾರಸದ ಮಱಿಯೊಕ್ಕನಗೆ ಶಿವದೀಕ್ಷೆಯಿತ್ತು ರಕ್ಷಿಸು (ಶಬ್ದಚಾ. ೦೨-೬) ; ನಾನಜ್ಞನಾಗೆ ಪಿನಾಕಿ ಮಾಡುವುದೇನು ಮಱಿಯೊಗುವೆನು ಮಹೇಶ್ವರನ (ಕುವ್ಯಾ೨. ೭-೪೨); ಸೀತಾದೇವಿಯಾರನೊಯ್ದಿತ್ತು ಮಱಿಯೊಗು ರಾಘವೇಶ್ವರನ (ಕೊರಿರಾ. ೬-೬-೪೮). **ಮಱಿವುಗು** : ಕೆಟ್ಟ ಜಪಮುಂ ತಪಮುಂ ನಿನಗೇಕೆ ಬೆಟ್ಟರಂ ಮಱಿವುಗೆ ಸಾಲ್ದು ಮಿಗೆ ಮರುಳಾಗದೆ ಪೋಗಿ ಜಿನೇಂದ್ರಧರ್ಮಮಂ (ಸಮಶ. ೦೫-೪೪) ; ಹರಿವಜ್ರಹತಿಗೆ ಸುರ್ಕಿದ ಗಿರಿ ಮಱಿವುಗೆ ಕಾದು ವಾರ್ಧಿ ಮರ್ಯಾದೆಯನೀ ಧರಣಿಗೆ ಮಾಡಿದುದೆಂತೆನೆ ಧುರದೊಳ್ ನೀರ್ವೊಕ್ಕವಂಗೆ ಮುನಿಯರ್ ಪಗೆವರ್ (ಸೂಕ್ತಿಸು. ೨-೦೭) ; ವಜ್ರಪಂಜರವಾಗಿ ಮಱಿವುಗಲು ಓವುದು . . . ನಿಮ್ಮಂ ನೆನೆವ ಮಾನವರ (ಬಸಪು. ೬೦-೯೦). **ಮಱಿಹುಗು** : ಪೊರೆಯನೇ ದಂಡಿಯನುಮೇಶನು ತನ್ನ ಮಱಿಹು [ಪಾಠಾಂ. ಮೊಱಿಯೊ]ಗಲು (ಬಸಪು. ೫೯-೭೦). **ಮಱಿಹೊಗು** : ಮ[ಪಾಠಾಂ. ಮೊ]ಱಿಹೊಕ್ಕಡಂ ಕಾರುಣ್ಯದಲಿ ನೋಡಿ ಕಾಯಲುಂ ಸಭಯಾತ್ಮರಾದೆಮಗೀ ಯುಗಕೆ ನೀವಲ್ಲದೇ ದೀರ್ಘಾಯುವಂ ಕೊಡುವವನದಾವಂ (ಬಸಪು. ೪೬-೪೦) ; ರವಿಯು ಮಱಿಹೊಗಲಿ . . . ನಾಳೆ ಪಡುವಣ ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ (ಕುವ್ಯಾದ್ರೋ. ೯-೩೫) ; ಎದೆಗೆಟ್ಟು ಮಱಿಹೊಕ್ಕರಿಗೆ ಮುದದೊಳಭಯದಾನವನಿತ್ತು ನಂಜೇಂದ್ರ ಪದುಳದೆ ಕೊಂಡನಾ ಪುರವ (ಕಂಸವಿ. ೦೯-೪೦). **ಮೊರೆಹೊಗು**: ಇಂದು ಮೊರೆಹೊಗಲು ಯಾರನ್ನೂ ಕಾಣೆ (ಬದುಕಿ. ೫೫); ಸೋತು ಸೊರಗಿದ ಜನತೆ . . . ಕಾಣದ ಶಕ್ತಿಯೊಂದಕ್ಕೆ ಮೊರೆಹೊಗುವ ಗತಿಗೆ ಇಳಿದರು (ಶಾರದ. ೪೫೮) **ಮೊಱಿಯೊಗು** : ನೀ ಕೈ ನೀಡಿ ನಿನ್ನವನೆಂದು ತೆಗೆ ಮೊಱಿಯೊಕ್ಕೆ ತಾನು (ಸಿಶಾಗ. ೭-೯-೨೪). **ಮೊಱಿವುಗು** : ಇಂದು ಮೊಱಿವುಗುವೊಡಾರಂ ಕಾಣೆನಕಟ ಗೋವಿಂದ ನೀನಲ್ಲದೆ (ಕೃಖಭಾ. ೦೦-೩೫). **ಮೊಱಿಹೊಗು** : ದಂಡಧರನುಪಟಲದಿ ಮಿಗೆ ಮುಂಕೊಂಡು ಮೊಱಿಹೊಗುವವರ ಕಾಣೆನು (ಶಂಶಾ. ೬೨) ; ಬಲ್ಲಿದರ ಮೊಱಿಹೊಗಲು . . . ವಿಧಿ ಬಂದು ಕೊಲ್ಲದೆ ಬಿಡದು (ಸರ್ವಜ್ಞ. ೯೭೭).

**ಮಱಿವೊಕ್ಕರ ವಜ್ರಪಂಜರ**=ತನ್ನನ್ನು ಆಶ್ರಯಿಸಿದವರನ್ನು ವಜ್ರಪಂಜರದಂತೆ ಭದ್ರವಾಗಿ ಕಾಪಾಡುವವನು ; ಒಂದು ಬಿರುದು : ಮಱಿವೊಕ್ಕರ ವಜ್ರಪಂಜರಂ ಗೋತ್ರಪವಿತ್ರ ಸುಜನಪ್ರಸಂನ ಕಲಿಗಳಾದಿತ್ಯ (ಕಶಿ. IV, ೪೮-೩೦; 1247). **ಮಱಿವೊಕ್ಕರಾಶ್ರಯ**=ಶರಣು ಬಂದವರಿಗೆ ನೆಲೆಯಾಗಿರುವವನು ; ಒಂದು ಬಿರುದು : ಕಲಿಯುಗನೀಜನ್ ಮಱಿವೊಕ್ಕರಾಶ್ರಯಂ (ವ್ಯಾಅಂ. ೦೯೧೬, ೦೩-೦೦; 900). **ಮಱಿವೊಗೆ ಕಾವ, ಮಱಿಯುಗೆ ಕಾವ, ಮಱಿವುಗೆ ಕಾವ** = ತನ್ನನ್ನು ಆಶ್ರಯಿಸಿದವರನ್ನು ರಕ್ಷಿಸುವವನು ; ಒಂದು ಬಿರುದು : ಭುಜಬಳಭೀಮ ಮಱಿವೊಗೆ ಕಾವ ಶರಣಾಗತವಜ್ರಪಂಜರಂ (ಎಕ. XVI, ತಕ್ಕಾ. ೫೬-೦೩ ; 1161) ; ಬಂಟರ ಭಾವನುಂ ಮಱಿಯುಗೆ ಕಾವನುಂ . . . ಶ್ರೀಮಂನುಮಹಾಮಂಡಳಿಕ ಬಂಮರಸದೇವ (ಎಕ. VI, ಕಂಲೆಕ. ೬೦-೩೬; 1154); ಮಱಿವುಗೆ ಕಾವಂ ಯುದ್ಧಧುರನ್ಧರಂ ಧೈರ್ಯಧರಾಧರಂ (ಸಇಇ. XI-i, ಕಾ-೮ ; 1054). [ಮಱಿ$_2$ + ಪೊಗು]

**ಮಱಿಸನ್ನೆಗೆಯ್**, ಮಱಿಸನ್ನೆಗೈ (ಕ್ರಿ). ಗುಟ್ಟಾಗಿ ಸೂಚಿಸು ; ರಹಸ್ಯಸಂಕೇತವನ್ನು ನೀಡು.—ಕೊಡು : ವಸಂತದೂತಿ ಮಱಿದುಂಬಿಗಳಂ ಮಱಿಸನ್ನೆಗೆಯ್ವ (ಅಪಂಪು. ೭-೦೦). **ಮಱಿಸನ್ನೆಗೈ** : ಒಱಗುವಮೊಡೆಯ ನೆಮ್ಮಿ ಕುಳಿತನು ಚಕ್ರೇಶ ನಱುಗೋಲ ನಿಲೆ ಬಿಸಿಲಲ್ಲಿ ಮಱಿಸನ್ನೆಗೈದು ಸತ್ತಿಗೆವಿಡಿಸಿದನೇನು ಮಱುಕವೊ ತಮ್ಮನ ಮೇಲೆ (ಭರತ. ೫೦-೦೨೯). [ಮಱಿ$_2$ + ಸನ್ನೆಗೆಯ್]

**ಮಱಿಸನ್ನೆಗೈ** 'ಮಱಿಸನ್ನೆಗೆಯ್' ನೋ.

**ಮಱಿಸು** 'ಮಱಿಯಿಸು' ನೋ.

**ಮಱಿಹಿಡಿಕೆ** (ನಾ). ಎಚ್ಚರವಿಲ್ಲದಿರುವುದು ; ಮೂರ್ಛೆ; ವಿಸ್ಮೃತಿ : ಇಂತಿವಱಿಂ ಮಱಿಹಿಡಿ[ಕೆ]ಯ ಭ್ರಾಂತಿನೊಳದಟಱಿದು ಕಾಲ್ಗಳುಂ ಕೆಟ್ಟೊಡವಂಗಂ ತಳುವಿಲ್ಲದೆ ತತ್ಕ್ರಿಯೆಯುಂ ತಾಂ ಮಾಡಲಿಱಿಗುಮದು ಮುನ್ನಿನವೋಲ್ (ಜಮವ. ೨೬-೦೩೫). [ಮಱಿ$_2$ + ಹಿಡಿಕೆ (< ಪಿಡಿಕೆ)]

**ಮಱಿಹುಗು** 'ಮಱಿವೊಗು' ನೋ.

**ಮಱಿಹೊಗು** 'ಮಱಿವೊಗು' ನೋ.

**ಮಟಮಟ**, ಮಳಮಳ$_1$ (ನಾ). ಮಬ್ಬು; ಅಸ್ಪಷ್ಟತೆ; ಮಸುಕು : 'ಮಟಮಟಿಸು' ಪರಾ. **ಮಳಮಳ$_1$** : 'ಮಳಮಳಿಸು' ಪರಾ. 'ಮಟಿಲ್' ಹೋ.

[ದೇ.॥ ತಮಿ. ಮಟಮಟಪ್ಪು = ಮಾತು ಅಥವಾ ಕೃತಿಯಲ್ಲಿ ಕಂಡು ಬರುವ ಅಸ್ಥಿರತೆ,— ಅಸ್ಪಷ್ಟತೆ; ಮಟ=ಮಾನಸಿಕ ಗೊಂದಲ ]

**ಮಟಮಟಿಸು**, ಮಳಮಳಿಸು$_1$ (ಕ್ರಿ). ೧. (ಪರವಶತೆ, ಕಣ್ಣೀರು, ಮುಂತಾದುವುಗಳಿಂದ) ಕಣ್ಣು ಮಂಜಾಗು; ದೃಷ್ಟಿ ಮಸುಕಾಗು.— ಅಸ್ಪಷ್ಟವಾಗು : "ಮಟಮಟಿಸಿತ್ತು = ಕಣ್ಣದಡಿದ ಭಾವಂ" (ಶಮಠ. ಶಂ. ೦); ಅಂತು ಕುಡಿಯೆ ಕಕ್ಕರಗೆಯ್ವುದಿಂ ತುದಿನಾಲಗೆಯೊಳ್ ತೊದಳ್ವೆರಸು ನುಡಿವ ನುಡಿಗ[ಳುಂ] . . . ಮಟಮಟಿಪ ರೂಪು ಕಣ್ಗಳೊಳ್ ಬೆಳ್ಪನಟಿಯೆ ಸೋಂಕುವ ಕೆಂಪುಗಳುಂ (ಶಂಶಖಾ. ೪-೮೮ ವ); ಕಳ್ಳ ಸೊರ್ಕಿನೊಳಂ . . . ಉಂತೆ ಪೊಳೆವ ನಿಡಿಯಲರ್ಗಣ್ಗಳ್ಗೆ ಮಟಮಟಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯಿಂ ತಳೆಯೆ (ಶಂಶಖಾ. ೭-೮೦ ವ) ; ಬೆಳರ್ತ ದೋರೆವಾಯ್ ಮಟಮಟಿಸುತ್ತುಮಿರ್ಪ ನಗೆಗಣ್ ನಸುಜೋಲ್ದುಡೆ (ಸೂಕ್ತಿಸು. ೯-೬೦). ೨. (ಆಯಾಸದಿಂದ) ಕಣ್ಣನ್ನು ಮುಚ್ಚಿಕೊಳ್ಳು : ಅಡಿಗಡಿಗಾಗುಳಿಸುವೊಡಂ ನುಡಿಗಳನಿಸಲಿಸಿ ಕೇಳ್ವೊಡಂ ನಿಜತನುವಂ ಸಡಲಿಸಿ ಕಣ್ಣಂ ಮಟಮಟಿಪೊಡಮಱಿ ನಿದ್ರಾಂಗಿತಂ ಮನೋಜಲತಾಂಗಿ (ಶಂಪಡಿ. ೦೦-೩೬). **ಮಳಮಳಿಸು$_1$**: ೧. ದಿಟ್ಟಿಗಳ್ಮಳಮಳಿಸಲಿಂತೆಂದನು (ಶೋಣಾಸು. ೭-೪೪). [ ಮಟಮಟ + — ಇಸು$_3$ ]

**ಮೞಲ್.** ಮಳಲು$_1$ (ಕ್ರಿ). = ಮಱಿಮಱಿಸು ೧ : "ಮೞಲ್ವ[ಲ್ವ] ದೆಸೆ ದೃಷ್ಟಿಕ್ಷೋಭದಲ್ಲಾಯ್ತು" (ಶಬ್ದಸಾ. ೮೪); "ಮೞಲ್ದುದು (ಕೞಲ್ದುದು), ಮಱಿಮಱಿಸಿತ್ತು = ಕಣ್ಕದಡಿದ ಭಾವಂ" (ಕವಿರ. ೩೦. ೧). **ಮಳಲು$_1$** : ಮಳಲುತಿಹ ಕಣ್ಗಳಿಂದೊರಲ್ವ ಮಗಳಂ ನೋಡಿ ಗಳಗಳನೆ ಬಾಷ್ಪೆರೆದು ತಾಯಿಮಳಲುತಿರ್ಪಳು (ಶಾಂತಿಸ ೧೭೩-೩೮೮).

[ದೇ.॥ ಮಲ. ಮೞಲ್ – ಉನ್ಮತ್ತತೆ ]

**ಮೞವೆ$_1$** 'ಮಳವೆ' ನೋ.

**ಮೞವೆ$_2$** 'ಮಳವ$_2$' ನೋ.

**ಮೞವೆಳ್ಳೂರ್** (ನಾ). ಒಂದು ಸ್ಥಳದ ಹೆಸರು : ಮರಾಮೀಜಿಸ್ತಪ್ಪುರಂ ವಿಸ × ತ್ತಿ ನಿಮ್ಮಡಿ ಮೞವೆಳ್ಳೂರಾಳೆ (ಎಕ. IV (R), ಎಳಂದೂ. ೧೩೮-೩; 8ನೆಯ ಶತ).

[ ? + ಊರ್ ]

**ಮೞಿಗೆ,** ಮಳಿಗೆ (ನಾ). ೧. ಅಂಗಡಿ : ಮಿಗೆ ಬೆಲೆಯೇಱಿದ. . . ಬಟ್ಟೆಯ ಮೞಿಗೆಗಳಿಂ ಸೋಲಿಪುವು ಸಿರಿವರದರ ಪಸರಂ (ಕಬ್ಬಿಗ. ೩೮); ಠಕಾರಕ್ಕೆ ಟಕಾರಂ. . . ಮಠಿಕಾ-ಮೞಿಗೆ (ಶಬ್ದಮ. ೨೩೭ ವೃತ್ತಿ). ೨. ಸರಕುಗಳನ್ನು ಶೇಖರಿಸಿಡುವ ಸ್ಥಳ ; ಕೋಠಿ ; ಗುದಾಮು ; ಮೞಿಗೆಯ ಮಾಳಿಗೆಯ ಮನಂಗೊಳಿಸುವ ನಾನಾ ಪ್ರಕಾರದಂಗಡಿಯುಂ . . . ನೋಟ್ಪೊಡಂ ರಮಣೀಯಂ (ಸುಕುಮಾ. ೬-೭೪). **ಮಳಿಗೆ** : ೧. × × × ಸದಿಂ ಮಳಿಗೆಗಳಂ ತರದಿಂ (ಮೊಂಕಶಾ. ೧೯೩೩, ಹಾವೇರಿ. ೧೮೯-೪೪; 986); ಕೊಟ್ಟ ಗಟ್ಟಿ ಮತ್ತರೆರಡು ದೇವರ ಪುರದೆರಡುಮಳಿಗೆ ವಜ್ಜದ ಕೇರಿಗೆ ಮೂಡಲು (ವ್ಯಆ. ೧೯೨೯,೬೫-೯; 1024 ?); ಅಲ್ಲಿ ದೊಡ್ಡ ದೊಡ್ಡ ಮನೆಗಳೂ ಮಹಲುಗಳೂ ಮಳಿಗೆಗಳೂ ತುಂಬಿದ್ದುವು (ಕೃಗಂಧ. ೧೧). ೨. ಯೆಣ್ಣೆ ಅರಮನೇ ಮಳಿಗೆಯಿಂದ ಕೊಡಬೇಕು (ಎಕ. IX, ದೇವನ. ೦೩-೦೪; 1698); ಇಂಗ್ಲಿಷು, ಫ್ರೆಂಚು, ಡಚ್ಚು ವರ್ತಕರು ತಮ್ಮ ಮಳಿಗೆಗಳನ್ನು ಕಾಪಾಡಿಕೊಳ್ಳಲು ಸಿದ್ಧರಾದರು (ಛತ್ರಿ. ೧೧೯); ಹಡಗಿನ ನೌಕರರು ನೀರು ನುಗ್ಗಿದ ಮಳಿಗೆಯಿಂದ ಸಾಮಾನುಗಳನ್ನೆಲ್ಲಾ ಹೊರಕ್ಕೆ ತೆಗೆದು ಹಾಕುತ್ತಾರೆ (ಕ್ರವಾಕ. 11. ೦೪). ೩. (?) : ಶ್ರೀ ಸ್ವಾಮಿದೇವರ ಪಟ್ಟಣಾ ಕೊಟ್ಟ ತ್ರೊಣೆಯ ಮಳಿಗೆಯ ಭಗವತೀದೇವಿಯರ್ಗ್ಗೆ ಮುನ್ನ ಪರಮೇಶ್ವರ ದತ್ತಿಯಾಗಿ ಪಡದ ವೃತ್ತಿ (ಸೌಇಇ. XI-i, ೦೭೭-೦೭ ; 1099); ದೀಪಾವಳಿಯ ಪರ್ವ್ವದಲ್ಲಿಯೊಕ್ಕಲೊಳಿಂಣೆ ಮಾನವೊಂದು ಮಳಿಗೆಯೊಳಗೈ ನೂರ್ವ್ವಸ್ವಾಮಿಗಳ್ ಬಿಟ್ಟಾಯಂ (ಎಇ. XX, ೦೦೭-೩೨ ; 1167); ಈ ಮಳಿಗೆಯ ಕೋಲು ಕೊಳಗ ಸಕಲಸಾಂಮ್ಯವೆಲ್ಲವೂ [ಶ್ರೀ] × × ಚಲಿಂಗ ದೇವರವು (ಕಇ. I, ೩೦-೬೩; 1222).

[< ಸಂ. ಮಠಿಕಾ./ತಮಿ. ಮಳಿಕೈ; ತುಳು. ಮಳಿಗೆ; ತೆಲು. ಮಳಿಗ./ ಮರಾ. ಮಳಗೀ, ಮಳಘೀ]

**ಮೞೂರ್** (ನಾ). ಒಂದು ಊರಿನ ಹೆಸರು; P ಈಗಿನ ಚಾಮರಾಜ ನಗರ ತಾಲ್ಲೂಕಿನ ಮಳೂರು : ಮೞೂರ ಸಾಯಿರ ಒಟ್ಟಾಬ್ಬ್ಬರುಂ ಮಲ್ಲಯ್ಯನುಂ ಮಾಡಿಸಿದ ದೇಗುಲಕ್ಕೆ ಕೊಟ್ಟ ಮಣ್ಣೂರಗಾಲಲ್ ದಿರ್ಕ್ಕಣ್ಣಗಂ (ಎಕ. IV(R), ಚಾಮರಾ. ೨೪೦-೨; 982). [? + ಊರ್]

**ಮೞೆ$^3$,** ಮಳೆ (ನಾ). ಮೋಡವು ಕರಗಿ ಆಕಾಶದಿಂದ ಸುರಿಯುವ ಹನಿಹನಿಯಾದ ನೀರು; ಸರಿ; ವೃಷ್ಟಿ: "ಧಾರಾಸಂಪಾತಃ, ಆಸಾರಃ— ಈ ೨ ಮೞೆ$^3$" (ಹಲಾಯು. ೧೧-೩೮); ದೆಸೆಗಳ್ಗೆ ಕೆಪ್ಪುನೆ ಮೊೞಗುವಿರೇ ಮೊೞಗಿದಂತೆ ಕೊಳ್ವುವೆ ಮೞೆ$^3$ಗಳ್ (ಕಾವ್ಯಸಾ. ೪೩೭ ಬೂದ್ರಕ); ಪದಸಂ ಕಾಣಿಸಿಕೊಳ್ವವಲ್ಲಿ ಮೞೆ$^3$ಗಳ್ (ಅರಿಷ್ಟ. ೦-೩೦); ಮೞೆ$^3$ಯಿಲ್ಲದೆ ಪೊಯ್ಯಾರಿಂ ಬೆಳೆಗುಮೆ ಧರೆ (ರಮಣಮ್ಮ. ೦-೪೯) ; ಮೞೆ$^3$ಯೇ ಸರ್ವಜನಾಶ್ರಯಂ (ಸೋಮೇಶ. ೦೪). **ಮಳೆ** : "ಮೞೆಯೆನಲ್ ವೃಷ್ಟಿ" (ಕಕರ. ೮೭); ಕಾಳ್ಕಿಚ್ಚಿನಿಂ ಬೇಪಂಗೆ ತಂಪಿನ ಸೋನೆಯ ಮಳೆಯಾಗುತ್ತೆ ಮಾಣ್ಬರೆ (ಬಸರ. ೪-೩೦) : ನೀಲಗಿರಿಗಳ್ ನೆವ್ಮಿ ಘನಮೇಘಾಳಿ ಸುರಿದವು ಮಳೆಯನೆನೆ ಶರಜಾಳ ಕವಿದುದು ಗಜದ ಜೋಧರ ರ್ಝಾಡಿಯೆಸುಗೆಯಲಿ (ಕುಮಾವ್ಯಕ. ೧೧-೮೩) : ಮಳೆಗೆ ಹೆದರಿ ಹೊಳೇಲಿ ಹಾರಿದ ಹಾಗೆ (ಗಾದೆ).

**ಮಳೆ ಕುಡಿವ ಹಕ್ಕಿ**=ಕೇವಲ ಮಳೆಯ ನೀರನ್ನೇ ಕುಡಿದು ಬದುಕುವುದೆಂದು ನಂಬಲಾದ ಒಂದು ಬಗೆಯ ಪಕ್ಷಿ; ಚಾತಕ : ಮಳೆಕುಡಿವ ಹಕ್ಕಿವೊಲು ಕುಡಿಯುತಿರೆ ಕನ್ನಡದ ಕಲಿಗಳಾ ಸಿರಿಯ (ಹೊಂಗನು. ೦೩-೧). **ಮಳೆಯ ನಕ್ಷತ್ರ**=ಮಳೆ ಬರಲು ಸಹಾಯಕವಾಗುವಂತೆ ಸೂರ್ಯನು ತನ್ನ ಸಂಚಾರದಲ್ಲಿ ಬಂದು ಸೇರುವ ನಕ್ಷತ್ರ ಪ್ರದೇಶ : ಮಹಾನಕ್ಷತ್ರವನ್ನೇ ಮಳೆಯ ನಕ್ಷತ್ರವೆಂದೂ ಹೇಳುತ್ತಾರೆ (ರೂಢಿ). **ಮಳೆಯ ಹುಳ** = ಮಳೆಗಾಲದ ಆರಂಭದಲ್ಲಿ ಕಂಡು ಬರುವ, ಇರುವೆಯ ಜಾತಿಗೆ ಸೇರಿದ, ರೆಕ್ಕೆಗಳುಳ್ಳ ಒಂದು ಬಗೆಯ ಹುಳು ; ಈಚಲುಹುಳು : ನೆಲದೊಳಗಿಂದಲೇಳುವ ಮಳೆಯ ಹುಳ ಕವಿವಂದದಲಿ (ದೇವೀಶ್ರ. ೩೯). **ಮಳೆಯ ಬಿಲ್ಲು**=ಮಳೆಯ ನೀರಿಗೆ ಸೂರ್ಯನ ಬಿಸಿಲು ಎದುರಾಗಿ ಬಿದ್ದಾಗ ಏಳುವ ಏಳು ಬಣ್ಣಗಳ ಬಿಲ್ಲಿನಂಥ ಆಕೃತಿ ; ಕಾಮನ ಬಿಲ್ಲು; ಇಂದ್ರಚಾಪ : ಬೆನ್ನನು ಕೋದು, ಕೈಕಾಲ್ಗಳನು ತೇಲಿಸಿ, ಹೊಳೆದಳು—ಮಳೆಯ ಬಿಲ್ಲಿನ ಹಾಗೆ (ಕಂಪ.೩೮-೦೩). **ಮೞೆ$^3$ಕೊಳ್** = ಮಳೆಬೀಳು ; ಮಳೆಯಾಗು : ಪ್ರಜೆಗಳು ಮೆಚ್ಚುವಂತೆ ಮೞೆ$^3$ಕೊಳ್ವವು (ವಡ್ಡಾರಾ. ೮೭-೦೩).

[ದೇ.॥ ತಮಿ. ಮೞೈ ; ಮಲ. ಮೞ ; ತುಳು. ಕೊಡ. ಮಳೆ]

**ಮೞೆ$^3$ಗಟ್ಟಲೆ** (ನಾ). ಆಕಾಶದಲ್ಲಿ ಮೋಡ ಮುಚ್ಚಿಕೊಂಡು ಸೂರ್ಯನು ಕಾಣದ ದಿವಸ ; ದುರ್ದಿನ : "ಮೞೆ$^3$ಗಟ್ಟಲೆಯುಂ ದುರ್ದಿನಮೆಂಬುದು" (ಹಲಾಯು. ೧೧-೩೯). P 'ಮೇಘತಿಮಿರ' ಎಂಬ ಶಬ್ದಕ್ಕೆ ಹಲಾಯುಧದ ಟೀಕಾಕಾರನು 'ಮೞೆ$^3$ಗಟ್ಟಲೆ' ಎಂದು ಕೊಟ್ಟಿರುವ ವಿವರಣೆ ವಿಚಾರಣೀಯವಾಗಿದೆ. [ಮೞೆ$^3$ + ಕಟ್ಟಲೆ]

**ಮೞೆ$^3$ಗಾಲ,** ಮಳೆಗಾಲ (ನಾ). ಮಳೆ ಬರುವ ಋತು ; ಕಾರ್ಗಾಲ : "ವರ್ಷಾಃ, ಪ್ರಾವೃಟ್, ತಪೋತ್ಯಯಃ—ಈ (ಮೂಱು) ೩ ಮೞೆ$^3$ಗಾಲಂ" (ಹಲಾಯು. ೨೧-೦೧೭); ಕಾಲಮಲ್ಲದ ಕಾಲದೊಳ್ ಮೞೆ$^3$ಗಾಲಮನೆಂತು ಪಡೆಯಲಕ್ಕುಂ (ವಡ್ಡಾರಾ. ೦೩೭-೧೭); ಅಂಬಿನ ಮೞೆ$^3$ಗಾಲಮಾಯ್ತು ಕುರು ಭೂಮಿಗೆ ಭೀಮನದೇಂ ಪ್ರತಾಪಿಯೋ (ಗಂಪಭಾ. ೦೨-೬೭); ಮೞೆ$^3$ಗಾಲಂ ಬರೆಯುಂ ಪೆರ್ವಱುವಿನೊಳಂ ಯಕ್ಷವಿಕ್ರಿಯಾಜನಿತಮದೇಂ ಪೊಱಲಾದುದೊ ರಘುರಾಮನ . . . ಪುಣ್ಯೋದಯದಿಂ (ಕಂರಾಮ. ೭-೦೩೦). **ಮಳೆಗಾಲ** : ಬೆಳೆವುದು ಬೆಳ್ದಿಂದಡೆ ಬಳಿಕುಳಿದೆಡೆಯುಂ ಪೊಗಳಮೇಡ ಮಳೆಗಾಲದೊಳಾಗಳು ಮುಳಿಯದು ಬೆಟ್ಟದ ಸರಿವಳೆಯದ × × × ದುಮಿಲ್ಲ ಪಸವಿನಾಡೊಳ್ (ಎಕ. VIII, ಸಾಗರ. ೧೦೯-೪೯ 1042); ಕಳೆದು ಮಳೆಗಾಲ ಮನು ಬಲಿಮುಖಬಲಸಹಿತ ಬಂದಿನಜನಾ ದಶಗಳವಿರೋಧಿಯು ಕಂಡು ಕದನೋದ್ಯೋಗಮನಾದ (ತೊರರಾ. ೪-೭ ಸೂಚನೆ) ; ಭರಿತಕಬರೀಬರ್ಹಲೀಲೆಯಿಂ ಮಳೆಗಾಲದಿರವನೆಚ್ಚರಿಪರಸಿಯಂ ಕಂಡು ರಾಮನ ಮನಶ್ಶಾತಕಂ ನಲಿದುದು (ಕೃಶಾಂಶಾ. ೦೬-೨೭). [ಮೞೆ$^3$ + ಕಾಲ]

**ಮೞೆ$^3$ನೀರ್,** ಮಳೆನೀರು (ನಾ). ಆಕಾಶದಿಂದ ಸುರಿಯುವ ಹನಿ ಹನಿಯಾದ ನೀರು ; ಮಳೆ : ನೆಲನಱಿದೂಡುವ ಪೊೞೆ$^3$ನೀರಲಂಪಿನಿಂ ಪದಕೆ ಪೊಯ್ವ ಮೞೆ$^3$ನೀರೊಲವಿಂ ಪಲಗೆಪ್ಪ್ಗಳ್ ಪೊಲಗಳಿನಲ್ ಮಲೆನಾಡಂ ಪೋಲ್ವ ನಾಡುಗಳ್ ಪೆಱಪೊಳವೇ (ಕಬ್ಬಿಸು. ೩೨೭ ಪ್ರಾಜ್ಞ). **ಮಳೆನೀರು** : ಮಳೆ ನೀರು ಬಿಟ್ಟು, ಮಂಜಿನ ನೀರಿಗೆ ಕೈಯೊಡ್ಡಿದ ಹಾಗೆ (ಗಾದೆ). [ಮೞೆ$^3$ + ನೀರ್]

**ಮೞೆ$^3$ವನಿ,** ಮಳೆವನಿ, ಮಳೆಹನಿ (ನಾ). ಮಳೆಯ ನೀರಿನ ತೊಟ್ಟು,-ಬಿಂದು : ನೀಲಾದ್ರಿಯ ಮೇಲತಿಭರದಿಂ ಪಡಲಿಟ್ಟು ಸಿಡಿವ ಮೞೆ$^3$ವನಿಗಳ್

ಪೋಲ್ (ಉದ್ಭಟ. ೪-೭೯); ಪುೞಿವನಿಯುಂ ಧರಾತಳದೊಳೊಂದೆರಡೆಂದೆಣಿಸಲ್ಕೆ ಶಕ್ಯಮಂ ತಳೆದೊಡೆ ತಾಳಲಕ್ಕುಂ . . . ಜಿನೇಶಸದ್ಗುಣಾವಳಿಗಳ ನೆಯ್ದೆ ಪೇೞಲರಿದು (ಶಾಂತಿಪು. ೧-೫೩). **ಮುಳಿವನಿ :** ಕಱಿಕಱಿದ ತಮ್ಮ ಮುಳಿವನಿಗಳಿಂ ಶಶಿಕಾಂತದೊಱತೆಪೊನಲುೞಿ ಪೆಗ್ಗಳಿಸೆ ನಾಚಿ ಬೆಳ್ಪಾದ ತೆಱದಿಂ ಮುಗಿಲ್ಗಳಿರ್ಬೆಳ್ದಿಂಗಳೊಪ್ಪಿದುವು (ಜೈಖಾ. ೨೫-೩) : ಮುಳಿವನಿಗಳ ಖುರಪುಟದಲಿ ಮುಗಿಲಂಚನು ಸೀಳಿ ಅಗೊ ಮಿಂಚಿನ ದಾಳಿ (ನಲಮು. ೭-೧೧). **ಮುಳಿಹನಿ :** ಮುಳಿಹನಿ ಬಿಟ್ಟರೂ ಮರದ ಹನಿ ಬಿಡಲಿಲ್ಲ (ಗಾದೆ).

[ಮುೞಿ³ + ಪನಿ]

**ಮುೞ್ಗಿಸು, ಮುಗ್ಗಿಸು, ಮುರ್ಗಿಸು, ಮುಳ್ಗಿಸು** (ಕ್ರಿ). ೧. ಕಳೆ; ನಿವಾರಿಸು ; **ಹೋಗಲಾಡಿಸು :** ನೀನೆನ್ನೀ ನಿಡುದೋಳ್ಗಳ ತೀನು ಮುೞ್ಗಿಸು ವೆಯುಪ್ಪೊಡಾನೊಲ್ಲದನೇ (ಪಂಪಭಾ. ೨-೮೦); ಪಣ್ಪಲದಿಂದಂ ನೆಗೆದ ನಿಜೋದರಕೃಶಾನುವಂ ಮುೞ್ಗಿಸಿದರ್ (ನೇಮಿಪು. ೨-೬೫); ದೋರ್ದಂಡಕಂಡೂಯನಮಂ ಚಂಡಾಸಿಸಂಘಟ್ಟದಿನೊಗೆವುರಿಯಿಂ ಮುೞ್ಗಿಪೆಂ (ರಸರ. ೩-೧೩೨). ೨. (ತಾಪ, ದುಃಖ ಮೊದಲಾದುವುಗಳನ್ನು) ಆರಿಸು ; **ಶಾಂತಗೊಳಿಸು ; ಶಮನಗೊಳಿಸು :** ಆರೊರ್ವರರಸಿಯುೞ್ಕೆಯುಂ ಮುೞ್ಗಿಸಿ ದುಃಖಮಂ ಮಱಿಯಿಸುವೊರವರ್ಗೆಸಗೆಯುಂ ಮಾಡುವೆಂ (ಪಞ್ಚತಂ. ೧೧೯-೧೨) ; ತನ್ನೊಳ್ ಮದನಪರಿತಾಪಮಂ ಕೋಪದೆ ಮುೞ್ಗಿಸೆ ಕಱಿದು ಸುಖದೆ ಮಱಿದೊಱಗಿದನೋ (ಆದಿಪು. ೯೦೭); ಖಳದುಶ್ಯಾಸನವಕ್ಷಸ್ಥಳೋಚ್ಛಲಿತಕೃಷ್ಣರಕ್ತಜಲದಿಂ ಕೋಪಾನಳನಂ ಮುೞ್ಗಿ[ಪಾಠಾಂ. ನ್ನಿ]ಸದಿನ್ನುಂ ಗಳಗಳಿತಸಕೋಪನಿರ್ಜ ತೆಱದಿಂದಿರ್ದೈ (ಗದಾಯು. ೧-೩೭); ಅಳುರ್ವಂಗತಾಪಮಂ ಮುೞ್ಗಿಸಲಾಱದಿತಳೆವ ಮಳಯಜಂ ಸೂಸುವಾಲಿನೀರ್ (ವರ್ಧಪು. ೪-೪೭). ೩. ವಾಸಿಯಾಗುವಂತೆ ಮಾಡು ; **ಗುಣಪಡಿಸು :** ಲಾಂಗಲಿ ದೇವದುಂಬೆ ಸುರದಾಳಿಯೆಂಬಿವಂ ಕಱಿಯಿಂದಂ ಪೂಸಿದೊಡಂತದಾವೆಗಂ ಪೆರ್ಚಿದ ಕಿರ್ಚ ಪೊಲುರಿವ ಊತಿಯುಂ ಮುೞ್ಗಿಸುಗುಂ (ಲೋಕೋಪ. ೯-೧೩೦). ೪. **ಧ್ವಂಸಮಾಡು ; ನಾಶಗೊಳಿಸು :** ಶ್ರೀಮದಾಹವಮಲ್ಲದೇವರ್ ಚೋರಾರಿಮಾರಿ ಡಾಮರೋಪಸರ್ಗಂಗಳ ಮುೞ್ಗಿಸಿ (ಸೌಇಇ. IX-i, ೭೭-೨ ; 992) ; ಆಭೀಳಕಾಕಾಳಿಯುಂ ತವೆ ಕೊಂದೀ ಧರೆ ಮೆಚ್ಚೆ ಮುೞ್ಗಿಸುವೆನುಗ್ರಾಟೋಪಮಂ (ಪಂಚತಂ. ೨೩೪-೨೨); ಸ್ವಕೀಯನಿಷ್ಠುರಭುಜಾಸ್ಫಾಲನದಿನೀ ಗೋಪಾಲಬಾಲಕರಂ ಮುೞ್ಗಿಸುವೆಂ (ಜಗಂ. ೭-೯ ಪ). ೫. **ಕೊಲ್ಲು : ಸಾಯಿಸು ; ಸಂಹಾರಮಾಡು :** ಅರಸುತನಂಗೆಯ್ವಳಿಪಿಂ ಧುರದೊಳ್ ಮಾಱಾಂತರೆಲ್ಲರುಂ ಮುೞ್ಗುವುದುಂ ದೊರೆಕೊಳ್ಗುಂ ಪಾತಕಂ (ಪಂಪಾಪು. ೧೧-೧೭೩). ೬. **ಕೆಡವು ; ಬೀಳಿಸು :** ಮಱಿಸಿಂಗಮಂಗವಿಸಿಯುಂಡಲಿದಾನೆಯುಮನಟ್ಟಿಪಂತೆಪೋಲ್ ತನು ತನು ಸೋಂಕೆ ಮುೞ್ಗಿಸುಗುಮಿರ್ವಡಿ ಮಾವಡಿ ಬಲ್ಗಾಱರಂ . . . ಈ ಚಿಕದೇವಭೂವರಂ (ಚಿಕಿಪ. ೪-೧೩೯). **ಮುಗ್ಗಿಸು :** ೧. ಜನಪಂ ಪೊಸ ಕದಳೀ ದ್ರಾಕ್ಷಾದಿಗಳಿಂದಾ ಕ್ಷುಧೆಯನು ಮುಗ್ಗಿಸಿ (ಜ್ಞಾಪಚಂ. ೫-೪೭). ೨. ಮುಗ್ಗಿಸಲಿನ್ನಾರಾರ್ಪರೀ ಶೋಕಮಂ (ಕಾದಂಪೂ. ೭೦೦) ; ಅಸುಹೃದುದಗ್ರಭೂಭುಜರ ತೇಜದ ದಳ್ಳುರಿಯಂ ಸಮಂತದೆ ಮುಗ್ಗಿಸೆ (ಎಕ. VII, ಶಿಕಾ. ೧೦೨-೯; 1162) ; ನನೆಯಿಂ ನೆಯ್ದಿಲಿನಾಲಿನೀರ್ದಳಿಪದಿಂ ಕಾಮಾಗ್ನಿಯಂ ಮುಗ್ಗಿಸಲ್ (ರಾಜಶೇ. ೨-೪); ಧರಣೀಗಣಿಕೆ ಯಶೌಘನ ವಿರಹದ ಪರಿತಾಪಮಂ ಯಶೋಧರನ ಯಶೋಹರಿಚಂದನಚರ್ಚೆಯಿಸುದ್ದೂರದಾನಾಸಾರಾರಸೇಕದಿಂ ಮುಗ್ಗಿಸಿದಳ್ (ಯಶೋಚ. ೨-೦೪). ೪. ಧರ್ಮಮೆ ಸಲೆ [ತಲೆ]ಗಾಗುಂ ಧರ್ಮಮೆ ಸಂಸಾರದುಃಖಮಂ ಮುಗ್ಗಿಸುಗುಂ (ವರ್ಧಮಾ. ೫-೨೩) ; ನಿನ್ನ ಹೆಮ್ಮೆಯನ್ನು ಮುಗ್ಗಿಸುವ ನಿಮಿತ್ತದಿಂದ ನಾನು ಕಠಿಣವಾದ ಮಾತನಾಡಿದೆ (ವಚಭಾ. ೨೭೭). ೬. ಎಕ್ಕೆಯಿನಿರ್ಪ ಪುಲ್ಲೆಗಳನಿಲ್ಲಿಯೆ ಮುಗ್ಗಿಸು (ಪಳಮಂ. ೭೪); ಅಸುರರು ತುಡುಕಲು. . . ದೇಡೆ ಕೈಕಾಲಿಂದೆ ಹೊಡೆದುರ್ಮಿಯುಲಿ ಮುಗ್ಗಿಸಿದ (ಪೋಚಚ. ೧೨-೩೭) : ಈ ಚಾಣೂರನತ್ಯಲ್ಪಬಲನು . . . ಶೀಘ್ರದಿಂದವನಂ ಮುಗ್ಗಿಸಿ ಮಿಮುಗಂ ನಿಮ್ಮ ಬಂಧುಜನಕಂ ಹರ್ಷವನ್ನುಂಟುಮಾಡು (ಕಗವ. ೭೯ ಮಿಶ್ರಪುರಾಣ). ೭. **ಸೋಲಿಸು :** ಆ ವರುಣನು ಹಗ್ಗದಿಂದಸುರನಾಯಕರಂ ಮುಗ್ಗಿಸಿ ದಶಶಿರನನು ಪಿಡಿತಹೆನೆಂದುಗ್ರದೆ ನಡೆತಂದನು (ಲಂಜಿಚ. ೬-೧೬೬); ಕಗ್ಗನಿಯು ಕತ್ತಲೆಯೊಳೆಮ್ಮನು ಮುಗ್ಗಿಸಿದ ಫಲಕಿದೆ ಕೊ ಸಾವಿನ ಸುಗ್ಗಿ ನಿನಗೆ (ತೊರವೆರಾ. ೭-೪೯-೦೩); ಬರ್ಮನ . . . ಮದನಾಗಮದೊಳು ಮುಗ್ಗಿಸಿ ಹಣಗಳನುದಿರದೆಗೆ ದಳವನಿಂದ (ಕಂವಿವಿ. ೨-೪೭). ೮. **ಕಳೆದುಕೊಳ್ಳು ; ಹೋಗಲಾಡಿಸಿಕೊಳ್ಳು :** ತಮ್ಮ ಸ್ವಾರ್ಥವನ್ನೂ ಅಹಂಕಾರವನ್ನೂ ಮುಗ್ಗಿಸಿ ಅವನಿಗೆ ಸುಖ ತಂದರು (ಬಂಕಿವು. ೨೯೫). **ಮುರ್ಗಿಸು :** ೪. ಮಾರಿಡುವನೌರ್ವಜ್ವಾಳೆಯುಂ ಮುರ್ಗಿರ್ಪಂ ತವಿಪಂ (ಎಕ. VIII, ಸೊರಬ. ೦೪೦-೨೬ ; 1198); ಸ್ವರ್ಗನಿಳಯುರ್ಗಿಸುತ ಮುರ್ಗಿಸುವ ನರ್ಗಿನಿಂ ಸಾಗ್ರದೆಡೆ ನಿರ್ಗಮಿಸಿ (ಜಿನಮು. ೩೨-೬). **ಮುಳ್ಗಿಸು :** ೧. ಮದಜಳದಿಂದೆ ಮುಳ್ಗಿಪುದು ಭೂರಜಮಂ ಗಜರಾಜಿ (ರಾಜಶೇ. ೬-೦೭). ೨. ಮೂಱುಜಗಕ್ಕಂ ಮಲಂ ತಾನೇ ಮಾತ್ರಖ್ಯಾತೆಯಾಗಿರ್ಪಳ ಮನದಳಲಂ ಮುಳ್ಗಿಸಿರ್ದೊಳ್ಪುವೆತ್ತಿರ್ದಾ ಮೈಮಾರಕ್ಷಿಸಮ್ಮಂ (ಬೀರಕ. ೦). ೯. (ವ್ರತ, ಉಪವಾಸ ಮುಂತಾದುವುಗಳಿಂದ) **ಸೊರಗಿಸು ; ನವೆಯುವಂತೆ ಮಾಡು : ಬಡವಾಗಿಸು :** ಕಾಯಮನಂತು ಮುಳ್ಗಿಸಲೊಡರ್ಚುಗುಮಾ ಮುನಿಸಂಘಂ (ಕಮಮಾ. ೩-೧೧೧).

[ಮುೞ್ಗು + – ಇಸು₃]

**ಮುೞ್ಗು, ಮುಗ್ಗು₁, ಮುರ್ಗು, ಮುಳ್ಗು** (ಕ್ರಿ). ೧. **ಕುಂದು ; ತಗ್ಗು : ಕಡಮೆಯಾಗು :** ತ್ರಿದಶಸ್ತ್ರೀಜನದೊಳಮೃತದೊಳಮಣಂ ಮುೞ್ಗದುರಿವ ಮದನಾಗ್ನಿಯ ಕೊಬ್ಬಿದರಾಗ್ನಿಯ ಪೆರ್ಚಿಕೆ ಮುೞ್ಗಿದಪುದೇ ಲಲನೆಯರೊಳಕಸದೊಳ್ ಮಾನವರಾ (ಆದಿಪು. ೯-೩೭); ಉಲಿವ ವಿಮಾನಕಿಂಕಿಣಿಯ ಮೆಲ್ಲುಲಿಗಳ್ ಕಿವಿಗೆಯ್ದೆ ಮುೞ್ಗದಗ್ಗಲಿಸೆ ಗೇಯುರಸಮಚ್ಚಱಿದಂತಿರೆ (ಶಾಂತಿಪು. ೪-೭೬); ಗರಟಿಗೆಯ ಜಾವದುಕ್ಕಡದುಲಿ ಮುೞ್ಗಿ[ಪಾಠಾಂ. ಗ್ಗಿ]ದ ಪೊತ್ತು ಸೂಱಿ³ಗ ಕರುಮಾಡದ ಪಕ್ಕದೊಳಿರ್ದ ಪಟ್ಟದಾನೆಯು ಬದಗಂ ಬಿನದಕೆ ಪಾಡುತ್ತಿರೆ (ಯಶೋಚ. ೨-೨೭). ೨. **ಕಾಣದಾಗು ; ಮರೆಯಾಗು :** ನಿತಾಂತಂ ಬಿಡುವಾಲಿನೀರ್ವನಿಯ ತಂದಲ್ ಗಾತ್ರಮಂ ತಾಗಿ ತೊಟ್ಟನೆ ಮುೞ್ಗಿತ್ತು ಮಹೀಶ ಕಂತುವಿನ ದೇಹೋದ್ದಾಹ ಮಿನ್ನೆಂತುಟೋ (ಕುಸುಮಾ. ೧೧೦-೨೭). ೩. **ಶಮನವಾಗು ; ಶಾಂತವಾಗು :** ಸ್ಫುರದಾಶಾಜ್ವಳನಂ ದುರ್ಧರಸುತಪಸ್ತೀರ್ಥವಾರಿ ಪರಿಷೇಕದಿನೆಂತಿರೆ ಕಿಡುಗುಂ ಭೋಗಾಱಿತ್ಕರಪಾತದಿನೆಂತುಮಂತದೇಂ ಮುೞ್ಗುಗುಮೇ (ಚಂದ್ರಪ್ರ. ೨-೪೩). ೪. **ವಾಸಿಯಾಗು ; ಗುಣಹೊಂದು :** ಶೂಲೆ ತೋಱಿತೆಂದಿರದೊಡಗೂಡಿ ಶುಂಠಿ ಲಶುನಂ ಗಜಪಿಪ್ಪಲಿ ಚವ್ಯ ಹಿಂಗು ಮುಂಗುರ . . . ಇಕ್ಕೆ ಮುೞ್ಗು[ಪಾಠಾಂ. ತಗ್ಗು]ಗುಂ (ಲೋಕೋಪ. ೯-೨೦೪). ೫. **ನಾಶಹೊಂದು ; ಧ್ವಂಸವಾಗು ; ನಿರ್ನಾಮಗೊಳ್ಳು :** ಅರಿಭೂಪಾಳದವಾನಳಂ ಹರಿಗ ನಿನ್ನುಗ್ರಾಸಿಧಾರಾಂಬುಶೀಕರದಿಂ ಮುೞ್ಗುಗೆ (ಪಂಪಭಾ. ೦೪-೩೭). ೬. **ಸಾಯು ; ಮರಣಹೊಂದು : ಗತಿಸು :** ಆ ರಣದಲ್ಲಿ ಮುೞ್ಗಿ[ಪಾಠಾಂ. ಗ್ಗಿ]ದೊಡೆ ಸಗ್ಗಮದಾಗದೆ ಪೇೞ್ (ಕುಸುಮಾ. ೧೧-೨೨); ಜಿನದಾಸಾಹ್ವಯನೊಳ್ ವಿವಾದಿಸಿ ಕರಂ ಸೋಲ್ತಲ್ಲಿ ತದ್ಭಂಗಚಿತ್ತನವಂ ಮುೞ್ಗಿ ಲುಲಾಯಮಾಗಿ ಜನಿಸಿರ್ದ (ಶಾಂತೀಶ್ವ. ೫-೭೫). ೭. **ಸುಟ್ಟುಹೋಗು; ದಹನವಾಗು:** ವನದೊಳ್ ಕೂರದ ಪಾಂಡುರಾಜಸುತರುಂ ಲಾಕ್ಷಾಗೃಹೋಗ್ರಾಗ್ನಿ[ಯಾ]ನನದೊಳ್ ಮುೞ್ಗಿದರ್ (ಪಂಪಭಾ. ೩-೩೨). ೮. **ನಮಸ್ಕರಿಸು ; ಅಡ್ಡಬೀಳು.** ೯. **ಬೀಳು ; ಕೆಡೆ :** "ಪೊಡವಡಿಕೆಯೊಳ್ ಪತನವಲ್ಲಿ ಮುೞ್ಗಿ³ನಿಸುಗುಂ" (ಶಂಖೇಷ. ೦೫). ೧೦. **ಮಂಕಾಗು ; ಬಣ್ಣಗೆಡು ; ನಿಸ್ತೇಜವಾಗು:** ಪುದಿದೆನಾದಿಮಿಥ್ಯಾತ್ವದೆ ಮುೞ್ಗದ ಮತಿಯುದು ನಿನ್ನಿಂದಲ್ಲದೆ ಪಜ್ಜಳಿ

ಸುಗುಮೇ (ಚಂದ್ರಪ್ರ. ೭-೯) ; ಆ ಮೃಗಂಗಳಂಬು ದಿವ್ಯಮಾನಸೆ ಪೊಕ್ಕಂ ತುದ್ಯಕೌಕ್ಷೇಯಕೋಜ್ಜ್ವಳಧಾರಾಜಳದಲ್ಲಿ ಮು[ಪಾಠಾಂ. ಮು]ಳುಗುವುದು ನಿಚ್ಚಂ ತದ್ಧರಾಧೀಶನಾ (ಶಾಂತೀಶ್ವ. ೨-೬). ಮುಗ್ಗು₁ : ೧. ಅಟ್ಟ ಪೆಂಡಿರುಲಿ ಮುಗ್ಗುಮ ಬೆಚ್ಚನೆ ಸುಯ್ಯು ನೋವುಗಳ್ ತೊಲಗಿದುದಿಲ್ಲ (ಬಂಹಂ. ೯-೩೩); ಕ್ಷೌರಕ್ಷೌರಕು ಇದರ ಮಾಳಿಯುಪಟ್ಟಿನಲ್ಲಿಯು ಮುಗ್ಗಿತು (ಗಣೇಶ. ೬೪-೯). ೨. ನೀಸದೆತ್ತು ಮುಗ್ಗಿ[ಪಾಠಾಂ. ಳ್ಗಿ]ದೆ ಮಧುಮಿತ್ರ (ಗಂಧ. ೯-೭೪) : ಎಲ್ಲಿ ಮುಗ್ಗಿದೆ ನೃಪಶಿರೋಮಣಿಯಲ್ಲಿ ಪೋದುದು ನಿನ್ನ ಸಿರಿ (ವೀರಾಂತ. ೩-೦೨). ೪. ಕುಸುಂಬೆಯುತ್ಫುಲ್ಲಶಿಖಿ ಪ್ರಶಸ್ತತರುಮಾಲಮನಿಂತು . . . ಮಟಕಂಗಳನಾಗಿಸಿ ಗುಂಜಿಯುಂತಿರೊಂದಲ್ಲದೊಡೆರಬ್ಬಿಲಮನೀಕ್ಷಿಸಿ ಕೊಳ್ಳಲಿನಂಜು ಮುಗ್ಗುಗುಂ (ಬಮುಪ. ೦೨-೨೬). ೫. ಅರಿಭೂಪರ ತೇಜದ ದಳ್ಳುರಿ ಮುಗ್ಗುವುದೊಮ್ಮೆ ತನ್ನ ಪೆಸರ್ಗೊಳಲ್ (ಎಕ. VII. ಶಿಕಾ. ೦೦೦-೨೯ ; 1129); ಮಡಿಯೆ ಸಾರಥಿ ಮುಗ್ಗಿದವು ರಥ ನಡೆದು ಕಾದಿ ಮುಹಾರಥರು ಮೆದೆಗೆಡೆದುದು (ಕುಮಾ.ಗ. ೦-೩೯); ತಳತಂತ್ರಮೊಡನೊಡನೆ ಮುಗ್ಗಿದುದು ಮುಗ್ಗಿದುದು ಬಹಳಕೋಲಾಹಲದೊಳು (ಕೃಷ್ಣಾ. ೨೭-೭) ; ಹದುಳಕೆ ತೊಣೆ ಅವನಿರದಿರೆ ಶಿರೆ ಪೋಪುದು ಮುಗ್ಗಿ (ಆಹಲ್ಯ. ೨೦-೦೬). ೬. ಪದದೊಳಗೆ ಮುಗ್ಗಿದಾ ಪ್ರಾಣಿಸಂತತಿ ಕೂಡೆ ಪದವಿಯುಂ ಪಡೆದು ಸಗ್ಗಕ್ಕೆ ನಡೆಮುವು ಕೂಡೆ (೬೩ರ. ಹ. ೨೦೪-೦೩); ಬಾಳ್ಗಿತ್ತು ಬಸಿಜಾ ತೊಡೆ ನಡು ತೋಳ್ಗಂಟಲುರಂ ಕರಂಗಳುಂ ಪಜ್ಜೆವಿನೆಗಂ ತೋಳ್ಗಡಿಯುದಿಜ್ಜೆಯು ಬಿಡೆ ಬಿಲ್ಲಾಳ್ಗಳ್ ಸರಿಗೆಪಜ್ಜೆ ಮುಗ್ಗಿದರ್ ಕಡುಪಿಂದಂ (ಶಾಂತೀಶ್ವ. ೩-೧೪೬) ; ಕಡುಗಲಿಗಳುಜ್ಜೆ ಮುಗ್ಗಿದರು ತಗ್ಗಿದುದು ಯುಮುಲೋಕ (ಕುಮಾ.ಭೀ. ೪-೩೯). ೭. ಮದನಾಗ್ನಿಜ್ವಾಲೆಯಿಂ ಮುಗ್ಗಿದುದೊ ಬಹುಳಬಾಷ್ಪಾಂಬು ಪೂರಂಗಳಿಂದಟ್ಟುದೊ . . . ಪೇಟೆಮೆಂಬಂದದೆ ಲಜ್ಜಾ ಮುಗ್ನೆಗೇನುಂ ನುಡಿ ಪೊಜಮುಡದಾಯ್ತು (ಕಾದಂಬ. ೨೯೧). ೮. ರಾಗದಿಂದಿದಿರ್ವಾಯು ಕೋಕನದನಾಭನೆ ಗೆತ್ತು ಪಾದಯುಗಕ್ಕೆ ಮುಗ್ಗಿದನಾ ಖಳಂ (ಧರ್ಮಾಮೃ. ೯-೨೦೯). ೯. ಇಕ್ಕೆಯಿಂ ದಿಂಕಿಕ್ಕಲಾಜಿವಲ್ಲಿಯೆ ಮುಗ್ಗುವ ಹುಲ್ಲೆವಿಂಡುಗಳಂ . . . ಅಗುರ್ಬುವೆತ್ತುವು (ವಳಕಂ. ೩೯೯ ಪ); ಮುಗ್ಗಿದುದು ಕುದುರೆ ಸಾರಥಿ ಮಡಿದನಾ ರಥಂ ನೆಗ್ಗಿದುದು (ಕೃಷ್ಣಾ. ೭-೪೬). ೧೦. ನಂದುವ ಚಿತಾಗ್ನಿ ... ಮುಗ್ಗುವ ಚಿತಾಗ್ನಿ ಕಟಿಲ್ಲ ಚಿತಾಗ್ನಿಯಲ್ಲಿಗಲ್ಲಿಗೆ ಪುದಿದಿರ್ದುವಾ ಮುಸಣದೊಳ್ (ಅರ್ಧನೇ. ೩-೨೩). ೧೧. ಹಿಮ್ಮೆಟ್ಟು ; ಹಿಂದೆಗೆ : ಅಗಿದು ಮುಗ್ಗಿತು ಜೂಣ ಬಲುಕಾಳೆಗವನೊಯ್ಯಾರಿಸುತ (ಕುಮಾ.ಭೀ. ೪-೦೦); ಒಗ್ಗೊಡೆದೋಡಿತು ಖಾನರ ಮೋಹರ ಮ [ಪಾಠಾಂ. ನು, ಮು]ಗ್ಗಿತು ಮುಲೆತ ರಾವುತರ ಮೊಗ್ಗರ (ಕುರಾಶಾಂ. ೦೯-೦೩೦); ಇಂತಪ್ಪ ಟಕ್ಕು ಕಲಿತವ ಕೃಷಿಗೆ ಮುಗ್ಗುವೆಯು ಶೋಣಿತವ ಯಿಕ್ಕಬೇಕೀ ಭೂಮಿಗಂ ಎನ್ನ ನಿನ್ನ ದೇಹದ ಪಿಣಿಲ ನೋಡು (ಶ್ರೀಕೃ. ೭-೧೧೯). ೧೨. ಉತ್ಸಾಹವಿಲ್ಲದಾಗು : ಏಂ ನಿಮ್ಮಯು ಚಿತ್ತವೃತ್ತಿಯಿತರವ್ಯಾಪಾರದೊಳ್ ಮುಗ್ಗಿತೋ (ಧವ್ಯಕ. ೬-೪). ೧೩. ಬಳಲು ; ದಣಿ : ಕಾಮದೊಳ್ಕಂದಿದೆಂ ತಾಮಸದೊಳೊಂದಿದೆಂ ಮೋಹದಿಂ ಮುಗ್ಗಿದೆಂ ದೇಹದಿಂ ತಗ್ಗಿದೆಂ (ಕೃಷ್ಣರ. ಹ. ೩೨೯-೦೨); ಸಾರಸಾಳಿ ಮುಗ್ಗಿದುದೆಸಲುಂ (ಕಮುವಿ. ೩-೩೩): ಆ ಪುರುಷ ಬೈದಗ್ಗಳದ ಕೋಪದಿಂದಾತ್ಮವೇದನೆಯೊಳಂ ಮು[ಪಾಠಾಂ. ಮು]ಗ್ಗುತ್ತಲಿ (ವಂಕಾರಾ. ೨-೩೭-೪೭). ೧೪. ಮುದುಡಿದೆಯಾಗಿರು ; ಮುದುರಿಕೊಳ್ಳು : ತಾಯು ಗರ್ಭದೊಳಗೆ ತಗ್ಗಿ ಕುಗ್ಗಿ ಮುಗ್ಗುಲೊಳಗೆ ಮುಗ್ಗಿ ಹೇಯುವೆನ್ನದುದರರಸಮುನುಂಡು (ಹಂಪರ. ಹ. ೩೦೦-೨೦). ೧೫. ವೀರಮಂಡಿಯಲ್ಲಿ ಕುಳಿತುಕೊಳ್ಳು : ಕಾರಣಿಕಮೃಗಮುಮುನೆಲ್ಲ ಕಂಡು ನೀಡಡಿಯಟ್ಟು ಕುಸಿದು ಕುಬುಜಿಸಿ ಉಗ್ಗಿ ದಂಡೆನೋಟಂ ಶರಂ ಸಂಧಾನದೊಳು ಮುಗ್ಗಿ ಕಿವಿಗೆ ಬಲಗಯ್ಯ ಕೆಳನಾರಿಯುಂ ತರುತ್ತಮಿರೆ (ಕಣ್ವರ. ದೇ. ೧೨೭-೨೪). P ಪ್ರಾಚೀನಕಾವ್ಯಗಳಲ್ಲಿ ಒಬ್ಬನೇ ಕವಿಯು 'ಮುಳುಗು' ಮತ್ತು 'ಮುಗ್ಗು' ಎಂಬ ಎರಡು ರೂಪಗಳನ್ನೂ ಉಪಯೋಗಿಸಿರುವುದನ್ನು ಮೇಲೆ ಕೊಟ್ಟಿರುವ ಪ್ರಯೋಗಗಳಲ್ಲಿ ಕಾಣಬಹುದು. ಒಬ್ಬನೇ ಕವಿ ಎರಡು ರೂಪಗಳನ್ನೂ ಉಪಯೋಗಿಸಿರುವನೇ ಎಂಬುದು ಪರಿಶೀಲನಾರ್ಹ. ಮುರ್ಗು : ೫. ತೀವಿದ ಭಂಡದಿನೊಪ್ಪುವ ನಾವೆ ಮರುದ್ಘಾತದಿಂದ ಮುರ್ಗಿದುದಾಗಳ್ (ಬಂಹಂ. ೪-೦೩). ೧೦. ತೆರಳ್ದೋಡಿ ಪೋದಂ ಮುರುಭೂಪಂ ಮಾಳವಂ ಮುಗ್ಗಿರ್ದನತಿಭಯದಿಂ (ಸೌಇಇ. IX–i ೦೦೯-೧೯; 1057). ೧೩. ಪೊಯ್ಯೆ ಪೊರಳ್ಚಿ ತುತ್ತಿ . . . ಕೊಳ್ಗುದಿ ಮುಳ್ಗುದಿಗೊಂಡು ಮುರ್ಗು [ಪಾಠಾಂ. ಗ್ಗು]ವರ್ (ಅನಂಪು. ೯-೪೦). ಮುಳ್ಗು : ೫. ಅಯ್ಯೋ ಸಂಸಾರ ಸಂಗಕ್ಕಜೆಯುದೆಜಗಿದೆಂ ಮುಳ್ಗಿದೆಂ (ರಕ್ಷಾಶ. ೨೩). ೮. ರಾಜಶೇಖರಂ . . . ಆ ಸತ್ಯೇಂದ್ರಚೋಳೇಂದ್ರಸತ್ಪದಪದ್ಮಕ್ಕೆ ಮುರಂದಮಂ ಪಡೆದು ಮೌಲಿದ್ಯೋತಿಯಿಂ ಮು[ಪಾಠಾಂ. ಮೊ]ಳ್ಗಿದಂ (ರಾಜಶೇ. ೪-೧೧೩).

ಮುಳುಗಿ ಪೋಗು, ಮುಗ್ಗಿ ಹೋಗು, ಮುರ್ಗಿ ಪೋಗು = ೧. ಸಾಯು ; ಅಳಿ ; ಗತಿಸು : ಜನಿತ ನಿದಾಘದುಗ್ರತರತಾಪದಳುರ್ಕೆಯೊಳೆಯ್ದೆ . . . ತವೆ ಮುಳುಗಿ ಪೋದ ಶಫರಾದಿ ಪರಸ್ಪರ ಜಂತುಜಾಲ ಜೀವಸದೊಡನಾಗಳಂತೆ ಗತಜೀವನಮಾಯ್ತು ಸರೋವರೋತ್ಕರಂ (ಕುಸುಮಾ. ೯-೨೩೦); ಇದು . . . ಬ್ಯಾಳಕಕೇಸಿಮುಯ್ಯ ವಿಜಯಪ್ರಾರಂಭದೊಳ್ಮುರ್ಗಿಪೋದದಟಕ್ಷ್ಮಾಪನಿಕಾಯುಪುಜ್ಜಿಕಚಯುಂ (ಎಕ. VII. ಶಿಕಾ. ೯೨-೨೪; 1168). ೨. ಅಡಗು : ಅಳಿಹೋಗು : ದೇವ ಮನದ ವಿಕಾರವೆಂಬ ಚಂಡಮಾರುತ ಪೊಕ್ಕು ಸತ್ಯ . . . ಸತ್ಕೃತ್ಯವೆಂಬ ದೀಪಗಳು ಮುಗ್ಗಿ ಹೋದವು (ಶ್ರೀಕಿಶಾಂ. ೦೩).

[ದೇ.॥ ತಮಿ. ಮುಟಿಕು, ಮುಟಿಕ್ಕು, ಮುಳುಜ್ಜು, ಮುಕ್ಕು; ಮಲ. ಮುಜ್ಞುಕ; ತುಳು. ಮುಗ್ರ್; ತೆಲು. ಮುಗ್ಗು, ಮುಕ್ಕು, ಮ್ರುಕ್ಕು, ಮ್ರುಗ್ಗು; ಮಲ್ತೊ. ಮುರ್ಗೆ]

ಮುಟ್ಟಿಪುರ, ಮುಟ್ಟಿಪೂರ (ನಾ). ಒಂದು ಸ್ಥಳದ ಹೆಸರು : ಮುಟ್ಟಿಪುರಾ ಊರಟಿವಿನೊಳ್ ಇಜಿದು ಸತ್ತು ಸ್ವರ್ಗಾಲಯಕೇಜಿದೊರ್ (ಎಇ. VI, ೦೬೦-೩; 765). ಮುಟ್ಟಿಪೂರ : ಮುಟ್ಟಿಪೂರದಪೆಮ್ಮಾಡಿಗಾವುಣ್ಡನುಂ (ಎಇ. VIII. ೩೯.೦೩; 1000). [? + ಪುರ₂]

ಮುಟ್ಟಿಪೂರ 'ಮುಟ್ಟಿಪುರ' ನೋ.

ಮುಟ್ಟಿ₁, ಮತ್ತಿ₁, ಮಳ್ತಿ (ನಾ). ಒಂದು ಬಗೆಯ ಮರ: ಅರ್ಜುನ ವೃಕ್ಷ : "ಮುಜ್ಜಿಯೆಂದರ್ಜುನಂ" (ಕಕಾ. ೩೦-೭೩) ; ಶ್ರೀ ಪುರುಷ ನಾಯಿಗಗೆ ಪಟ್ಟಂಗಟ್ಟಿ ಕೊಟ್ಟ ಕಟನಿಅ ಮುಟ್ಟಿಯೆನ್ತೆಂಕ ಬಿಟ್ಟಂ ಮೂವತ್ತುಗುಳ ಅಯ್ಗುಳ ಪಾಟುಂ (ಎಕ. IX. ಹೊಸಕೋ. ೧೬.೯ ; ಸು. 720) ; ಬೇಕಿರ್ಪಟಿದ ಮುಟ್ಟಿಯುಂ ನೀಂ ಕಟ್ಟಿ . . . ಮುದುಗಟ್ಟಿಯುನಿಟ್ಟು ಕೆಡಪಿದ್ಯೆ ಬಳ್ಳಿದನ್ಯೆ (ಶಗಿಬಿ. ೦೭-೪೩); ಮುಟ್ಟಿಯು ಮುಟ್ಟಿಗದರಳಿಯು ಸವುದೆಗಳನಳತೆಯೊಳ್ ಕೊಯ್ದುರ್ಪನಾರಿಂ ತಲೆಪೊಜೆಗಟ್ಟಿ ತರ್ಪವಟುಗಳಿಂದೆಯುಂ . . . ಪುಣ್ಯಾಶ್ರಮಂ ಮನೋಹರಮಾಯ್ತು (ರಾಮಾಶ್ವ. ೪೩-೦೩). ಮತ್ತಿ₁ : "ಅರ್ಜುನಃ, ಕಕುಭಃ — ಈ ೨ ಮತ್ತಿ" (ಹಲಾಯು. ೩೨-೪೨); ಕರ್ಪೂರತರುವ್ರಾತಂಗಳೊಳ್ಮತ್ತಿ . . . ಚಂಬೊಂಗಳೊಳ್ಗೆರೆದಿರ್ಪಂತಿರೆ ಕರ್ಬುನಂ ಸಕಲಭೂಪಾಲೀಶರೊಳ್ಕೇಲಿಗಳ್ ಇರ್ಪಂತಿರ್ದು (ಧರ್ಮಾಮೃ. ೭-೨೨೦) ; ಮತ್ತಿಯೋ ಹೇಳೆನ್ನ ದುಃಖಕೆ ಮತ್ತೆ ಪರಿಹರವಾವುದೋ (ಬಸವ. ೪೩-೩೯) ; ಮತ್ತಿಯು ಮರನಲೂ ನಟ್ಟ ವಾಮನ ಮುದ್ರೆಯು ಕಲ್ಲು ೧ (ಎಕ. VIII, ತೀರ್ಥಹ. ೦೯೦-೪೨ ; 1407); ಮತ್ತಿ ಮೊಳಗರನೆಲ್ಲಿ . . . ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೂರಾ. ೩-೦-೨೭). ಮಳ್ತಿ : ಮುಳ್ತುಗ ಮಳ್ತಿ ಕಜ್ಜೂರ ಕಕ್ಕೆ . . . ಬೆಳೆದಿರಲಾ

ಬಿಂಜಂ ಭೀಕರತರವಮಾಯ್ತು (ಶಯಣ. ೧೩-೨೪); ಮಟ್ಟಿ ವನಸಂಪಗೆ ಸಂಪಗೆ ಬಿಕ್ಕೆ ಕಕ್ಕೆ (ಶ್ರೀಪುಷ್. ೦-೪೭).

[ದೇ.॥ ತಮಿ. ಮಲ. ಮರುತು ; ತುಳು. ಮತ್ತಿ ; ತೆಲು. ಮದ್ದಿ : ಕೋಲಾ. ನಾಯ್ಕಿ. ಮದ್ದಿಗ; ಗೊಂಡಿ. ಕುಇ. ಮರ್ದಿ]

**ಮಟ್ಟಿ₂**, ಮತ್ತಿ₂ (ನಾ). ಹುಟ್ಟಿನಿಂದಲೇ ಮೈಮೇಲಿರುವ ಕಪ್ಪು. ಬಿಳಿ. ಕೆಂಪು ಮುಂತಾದ ಗುರುತು, – ಮಚ್ಚೆ : ನರಪುಲಿ ಕಾರೆಳ್ಮಟ್ಟಿ . . . ಬಲದೊಳ್ ಪುರುಷಂಗೆಡದೊಳ್ ಲಲನೆಗೆ ಸಮನಿಸಿದೊಡಿಷ್ಟ ಫಲಮಂ ಕುಡುಗುಂ (ರೀಕೋಶ. ೦೦-೬೪). **ಮತ್ತಿ₂** : ನಿನ್ನ ಮೊಲೆ ಗೆಲದೊಳ್ ಚಿನ್ನವಗಲದ ಪೊನ್ನ ಬಣ್ಣದ ಮತ್ತಿ ಮತ್ತೆನಿಸದೆ ಮಾಡಿದುದು (ಅರ್ಧನೇ. ೨-೩ ತ); ಹಿಮ್ಮಡಿ ಬಳಿಯ ಮತ್ತಿಯಿದ್ದರೆ ಸೌಭಾಗ್ಯವಂತನಾಗು ವನು (ಸೌಗಂಧಿ. ೬೪೯-೦೪); ಹೆಗಲಿನ ಬಳಿಯಲ್ಲಿ ಗುಂಡಗಿರುವ ಕರಿಯ ಮತ್ತಿಯೊಂದಿತ್ತು (ಶೃಗಂಬ. ೦೦೦). 'ಮಚ್ಚೆ₁' ಪರಾ.

[ದೇ.॥ ಕೋತ. ಮಾಶ್; ತೊದ. ಮಶ್ತ]

**ಮಟ್ಟಿಕಾಲ್?** (ನಾ). ಒಂದು ಕಾಲುವೆಯ ಹೆಸರು ; ಮತ್ತಿ ಮರಗಳ ಬಳಿಯ ಕಾಲುವೆ (?) : ಅವರ್ಕ್ಕೆಯಾತುಕೂರೊಳ್ ಚಲ್ಲೇಶ್ವರದ ಮುನ್ದೆ ಕಲ್ಲನ್ನಡಿಸಿ ಪಿರಿಯ ಕೆಱೆಯ ಕೆಟಗೆ ಮಟ್ಟಿಕಾಲಜ್ಗ ಳೊಳಕ್ಕರ್ಣ್ಣುಗ ಮಣ್ಣ ಕೊಟ್ಟರ್ (ಎಕ. VII (R), ಮದ್ದೂರು. ೪೨-೦೨; 950). [ ಮಟ್ಟಿ₁ ? + ಕಾಲ್₂ ]

**ಮಟ್ಟೂರ್** 'ಮಟ್ಟೂರ್' ನೋ.

**ಮಟ್ಟಿ** (ನಾ). ಒಬ್ಬಾತನ ಹೆಸರು : ಮಟ್ಟಿಂ ತನ್ನ ಭಾಗಮುಂ ಕುಡೆ (ಎಕ. VII, ೨೦೩-೦೪; 874). 'ಮಟ್ಟಯ್ಯ' ಪರಾ. [ ? ]

**ಮಟ್ಟಿಯ್ಯ** (ನಾ). ಒಬ್ಬಾತನ ಹೆಸರು : × × × ಲ್ಲಹ ಜೋಟಿನ ಮೇಲಟ್ಟಿಯ್ಯನ ಮಕ್ಕಳ್ ಮಟ್ಟಯ್ಯನು ಬೆಸಗೆಯ್ದೊ (ಎಕ. IX, ಹೊಸಕೋ. ೮೩-೩; ಸು. 750). [ ಮಟ್ಟಿ + ಅಯ್ಯ₄₁ ]

**ಮಟ್ಟೂರ್**, ಮದ್ದೂರು, ಮದರ್ದೂರ್, ಮಟ್ಟೂರ್ (ನಾ). ಒಂದು ಊರಿನ ಹೆಸರು ; ಕರ್ನಾಟಕದಲ್ಲಿ ಈ ಹೆಸರಿನ ಅನೇಕ ಊರುಗಳಿವೆ : ಶ್ರಾವಣಮಾಸದ ಸುದ್ಧದಶಮಿಸೋಮವಾರದನ್ದು ಮಟ್ಟೂರ ಸಾಯಿರಬಟ್ಟೂಪ್ಪರುಂ ಪೊಲ್ಲಯ್ಯನ ಮಾಡಿಸಿದ ದೇಗುಲಕ್ಕೆ ಕೊಟ್ಟ ಮಣ್ (ಎಕ. IV (R), ಎಳಂದೂ. ೯೦-೨; 982). **ಮದ್ದೂರು** : ಮದ್ದೂರ ಸುಭಟರು ಮಾರ್ಗವ ಕಟ್ಟಿಕೊಂಡುದ್ದತವಿಳರ ಮಾರ್ಬಲವ ಹೊದ್ದಿಯಿಱಿದು (ಕಂತಿರ. ೦೩-೩೭). **ಮದರ್ದೂರ್** : ಕಸುಗೊಳ ಮೊಡೆಯ ಮಹಾಜನಕ್ಕೆ ಪೆರ್ವ್ವಟ್ಟಿಯೂರುಂ ಮದರ್ದ್ದೂರುಮಂ ಬ್ರಹ್ಮಾ ದೇಯಂ ಪೊಯ್ದುದು (ಎಕ. III (R), ಟಿನ್ನಕ. ೯೦-೨೦; ಸು. 750). **ಮಟ್ಟೂರ್** : ಪಾರ್ವರ್ಕ್ಕಣ್ಣರಾರಿದರ್ಮಟ್ಟೂರರೊ ದಾಳ್ವಾಯಿಗ ಪೆರ್ವಾಣರ್ಪ × × × ದರ್ಕುವಿಲವಾಣಿಗರ್ಮಾರಿದರೀ ಸಿಲರ್ತೋಂಟೆಯ ತಿನವಕಟ್ಟಿ × × × (ಎಕ. III (R), ಟಿನ್ನಕ. ೦೦೨-೩; ಸು. ೯ನೆಯ ಶತ). [ ? + ಊರ್ ]

**ಮಾ₁** (ನಾ). ಆನೆ : ಹಸ್ತಿ : 'ಮಾವಟಿಗ' ಪರಾ. [ದೇ.॥ ತಮಿ. ಮಾ]

**ಮಾ₂** (ನಾ). ಕೊಂಡಾಟದ ಅಥವಾ ಆಶ್ಚರ್ಯಸೂಚಕವಾದ ಒಂದು ಮಾತು : "ಅರರೇ . . . ಭಲರೇ ಲೇಸು ಜಾಗು ಮಾ ಧಣು ಧಿರುರೇ ಪುರಿಯೆನೆ ಕೊಂಡಾಟ" (ತತುಪಿ. ೩೩).

**ಮಾಮಾ₁** (ದ್ವಿರುಕ್ತಿ): ತನ್ನಂವನಿತ್ತ ಮಹಾತ್ಮ ಜನವಂಗನಿತಜಿಕೊಳು ಪ್ರಭು ಮೆಚ್ಚಿ ಮಾಮಾಯೆನುತ . . . ಕೀರ್ತಿಸಲು (ಬಸವು. ೯-೦೭); ಮಾಮಾ ರಾಮ ರಣಗಲಿ ಭೀಮ ಭಾಪು (ತೊರವ. ೬-೨೬-೦೩).

[< ಅಮಮ. / ತಮಿ. ಮಲ. ತೆಲು. ಮಾ]

**ಮಾ₃** 'ಮಾಂ' ನೋ.

**ಮಾ₄** (ಗು). ೧. ದೊಡ್ಡ ; ಹಿರಿಯ : 'ಮಾಗಡಲು' ಪರಾ. ೨. ಶ್ರೇಷ್ಠ ವಾದ ; ಮಹತ್ತಾದ : ಸುಮನಿಸುವುದೆಲ್ಲ ಶಬ್ದಕ್ಕೆ ವಿಕಲ್ಪದೆ ದೀರ್ಘವಿಧಿ ಮಹಚ್ಛಬ್ದಕ್ಕುದ್ಭವಿಕುಂ ಮಾದೇಶಂ ದೋಷವಿಲ್ಲ ಸಂಸ್ಕೃತಪದಂ ಪರಕ್ಕೊದವಲೊಡಂ (ಶಮದ. ೧೭೩). 'ಮಾತಾಯಿ' ಪರಾ.

**ಮಾಮಾ₂** (ದ್ವಿರುಕ್ತಿ) : ಮಾಮಾ ಕರ್ಮವ ಮಾಡಿದ ಮನುಜಗೆ ಕಾಣಿಸೆನುವಿಯೇನು ನೀ ಮಾಡಿಸಿದರೆ ಮಾಡಿದೆನಲ್ಲದೆ ನನಗಿಲ್ಲಿತ್ತೇನು ? (ನಪಲ್ಲ. ೩೦-೦೦). [ < ಮಹಾ ]

**ಮಾ₅** (ನಾ). ೧. ತಾಯಿ ; ಜನನಿ. ೨. ಸಂಪತ್ತಿನ ಅಧಿದೇವತೆ ; ಲಕ್ಷ್ಮಿ : "ಲಕ್ಷ್ಮೀಃ, ಶ್ರೀಃ . . . ಮಾ, ಇಂದಿರಾ . . . ಈ ೯ ಲಕ್ಷ್ಮಿಯ ಪೆಸರು" (ಹಲಾಯು. ೬-೩೨). 'ಮಾಕುವರ' ಪರಾ. [ಸಂ.]

**ಮಾ₆** (ಅ). ಬೇಡವೆಂಬುದನ್ನು ಸೂಚಿಸುವ ಒಂದು ಅವ್ಯಯ : "ಮಾ — ಬೇಡೆಂಬವ್ಯಯಂ" (ಶಾಶಕ್ಕ. ೦೨೬) ; ಮುನಿಮಯ್ಯ ಜವಂಗಂ ಮಾಯೆನಲಮ್ಮುವರಿಲ್ಲ (ಅಜಪು. ೨-೩೭) ; ನಿರ್ದೋಷನವನೆಂಬ ಮೂಕ ಸಾಕ್ಷಿಯೊ ಎನಲು ನೆತ್ತರೊಡಮೂಡಿದೊಡವುವನೊಂದು ಮಾತನೆತ್ತಿಲ್ಲ ! ಮಾ ಎಂದಿಲ್ಲ ! (ಗೂಲ್ಕೊ.ಬ. ೯-೨೩೦). [ಸಂ.]

**ಮಾಂ**, ಮಾ₃ (ಸಪೂರೂ). 'ಮಾವು' ಎಂಬ ನಾಮಪದಕ್ಕೆ ಸಮಾಸ ಗಳಲ್ಲಿ ಬರುವ ಆದೇಶರೂಪ : 'ಮಾಂಗಾಯ್', 'ಮಾಂದಳಿರ್' ಪರಾ. ಮಾ₃ : 'ಮಾಮರ' ಪರಾ.

**ಮಾಂಕರಣೆ** (ನಾ). ತಿರಸ್ಕಾರ ಮಾಡುವಿಕೆ ; ಉಪೇಕ್ಷೆ ; ಅವಜ್ಞೆ : ಅಂಕಂಗಾಱನ ಗಂಡುತನಂ ಕೂರಿತೆ ತುಮುಲಯುದ್ಧದೊಳ್ ಪಟುಭಟರಂ ನೂಂಕುವ ಸಮರಂಗಾಱನ ಮಾಂಕರಣೆಯೆ ಗಂಡುತನದ ತಿರುಳೆನೆಮೆಟ್ಟುಂ (ಕಬ್ಬಿಸು. ೩೬೪ ವ್ಯಾಖ್ಯಾ). [< ಮಾ₆ + < ಕರಣ]

**ಮಾಂಕರಿಸು**, ಮಾಕರಿಸು (ಕ್ರಿ). ೧. ತಿರಸ್ಕರಿಸು ; ಅವಹೇಳನ ಮಾಡು ; ಕಡೆಗಣಿಸು : "ಮಾಂಕರಿಸು (ಮಾಕರಿಸು) – ಅವಜ್ಞಾಯಾಂ (ಅಲ್ಲಗಳೆ)" (ಕಮಂಜ) ; ಸಿರಿಸದ ಬಾಸಿಗವಂ ಮಾಂಕರಿಸುವ ನಳಿತೋಳ ಪಿಂಡುಗಂಕಣದ ಸರಂ ಮೊರೆವಳಿಗಳ ಸರಮಂ ಚಪ್ಪರಿಸುವಿನಂ ಚೆನ್ನೆ ಪೊನ್ನೆ ಯರಲಂ ಕೊಯ್ದಳ್ (ಆದಿಪು. ೦೦-೦೦೨ ಅವತಲ) ; ಸಿದ್ಧವಿದ್ಯಾಧರ ದಿವಿಜಕುಮಾರರ್ಕಳಂ ಚೆಲ್ವಿನಿಂ ಮಾಂಕರಿಸುತ್ತುಂ ಬಂದನಾಸಾದಿತನಿರುಪಮ ಶೃಂಗಾರಸಾರಂ ಕುಮಾರಂ (ಚಂದ್ರಪ್ರ. ೬-೭೦) ; ಬಾಳೆಗಂಬಮಂ ಮಾಂಕರಿಸುತ್ತೆ ತೋರ್ಪ ತೊಡೆ ಮೆಲ್ಲಡಿ ರಂಜಿಕುಮಾ ಕುಮಾರನಾ (ರಾಜಶೇ. ೯-೪೭). **ಮಾಕರಿಸು** : ೧. ಸೊರ್ಕ್ಕಿ ಮಾಕರಿಸುತ್ತಿರ್ಪ್ಪ ಮದಾಂಧ ನಪ್ಪ ಖಳನಾಯುದ್ಧಿರ್ಪಿಪಮಂ ತಂನ ಚಾಮರದಿಂ ತೊಟ್ಟಗೆ ನಂದೆ ಬೀಸಿ ಕಳೆವಳು (ಶಾಸಕ. ೩೩-೩೦ ; 1178) ; ಹೀಗೆ ಗಂಡ ಹೆಂಡಿರಿಬ್ಬರೂ ಒಬ್ಬ ರನ್ನು ಒಬ್ಬರು ಮಾಕರಿಸಿ ಮಾತನಾಡುತಾ ಇರುವಾಗ (ಮುಸುಗ. ೦೩೦) ; ಲೋಕವ ನಚ್ಚದ ಮುನಿಯಿವನೆಂದು ಮಾಕರಿಸದಿರಲೆ ದಾರಿಗ ನೊಂದು (ನಿಕ್ಕಿ. ೭೩-೦೦). ೨. ಅಲ್ಲವೆಂದು ಹೇಳು : ಆಕಾರ ನಿರಾಕಾರ ಸ್ವಸುಮತ ತಾನಾಗಿ ಮಾಕರಿಸುವನಲ್ಲ ಮನದಿಚ್ಛೆಗೆ (ಶೂನ್ಯಸಂ. ೦೦೩-೩). ೩. ಉದ್ಧಟ ತನದಿಂದ ವರ್ತಿಸು ; ಗರ್ವಿಸು ; ಬೀಗು : ಕೂರಸಿಯಿಂದೆ ಕೂಂಕಿ ಝುಂಕಿಸುವ ಕುಮಾರಿ ಮಾಂಕರಿಪ ಪುತಸಿ ಪೂಂಕೃತಿಗೆಯ್ವ ಭೈರವಂ (ಶಾರ್ಕ್ಕೆಪು. ೦೩-೦೦೭). [ಮಾಂಕರಣೆ + – ಇಸು₃]

**ಮಾಂಕೊಳ್** (ಕ್ರಿ). ೧. ಬೇಡವೆನ್ನು : ತಡೆ : ಸುರತಸಂಭ್ರಮದ ಲೀಲಾವಿನೋದದ ಬಗೆಯ ಹೇಳಲಂಜುವೆನಯ್ಯ ಹೇಳ್ವೆ ನೀನು ಮಾಂಕೊಳದಿರಯ್ಯ (ಭಸವ. ೩೭-೬೨). ೨. ಎದುರಿಸು : ಅಂಕಿಸಿ ನೋಡದಿನ್ನೋರೆಮೋಜಿಯೊಳಿಪ್ಪೆ ಮಾಂಕೊಂಡು ಜಯಿಸೆಂದಳವಳು ಕೊಂಕುಮೋಜಿಯ ಪೆಣ್ಣೊಳಾನು ನುಡಿವನಲ್ಲ ಕುಂಕುಮವರ್ಣೆ ಕೇಳೆಂದ (ಭರತ. ೦೪-೦೦೭). [< ಮಾ₆ + ಕೊಳ್₁]

**ಮಾಂಗದಿರ್** (ನಾ). ಮಾವಿನ ಚಿಗುರು : ಮಾಂಗದಿರ್, ಮಾಂಗೊನರ್, ಮಾಂಜಿಳೆ, ಮಾಂಜೊಂಪಂ (ಶಬ್ದಾ.ಸು. ೩೪೯ ವ್ಯಾಖ್ಯಾ).
[ಮಾಂ (< ಮಾವು) + ಕದಿರ್$_1$]

**ಮಾಂಗಲಿಕ**, ಮಾಂಗಳಿಕ (ಗು). ೧. ಮಂಗಳವನ್ನು ಸೂಚಿಸುವ ; ಶುಭಕರವಾದ : ಮಾಂಗಲಿಕಕರ್ಮಾಭಿಯೋಗಕ್ಕುಲಾಂಗನಾರತಿಯಾತ್ಮ ಚಿಂತೆ ಪರಾಂಗನಾಪ್ತೈಮುಖ್ಯವಿವು ಸದ್ಧರ್ಮಗತಿ (ಶುಪ್ರಾಕೌ. ೦೩-೦೩). **ಮಾಂಗಳಿಕ** : (ನಾ). ೨. ಮಂಗಳಕರವಾದ ಶ್ಲೋಕ, -ಗೀತೆ : ಪುಣ್ಯಪಾಠಕರ ಮಾಂಗಳಿಕಪಠನಪಟುರವಂಬೆರಸು . . . ವಧೂವರರ್ ನಡೆ ತಂದರ್ (ಅಪಂಪು. ೬-೩೩ ವ) ; ಪಾಡುವ ಮಾಂಗಳಿಕದ ಆಡುವ ನರ್ತನದ . . . ಸೂಟ್ಟಿಡೆವ ಕಹಳೆಗಳ ಕೋಳಾಹಳಮೆಸೆದು (ಅನಂಪು. ೯-೩೯ ವ). [ಸಂ.]

**ಮಾಂಗಲ್ಯ**, ಮಾಂಗಳ್ಯ (ಗು). ೧. ಮಂಗಳಕರವಾದ ; ಶ್ರೇಯಸ್ಕರವಾದ. (ನಾ). ೨. ಮಂಗಳಕರವಾದುದು; ಶುಭ; ಒಳಿತು: ಸಾಧು ಪದಂಗಳ್ ನಮಗೀಗೆ ಸಾಧುಪದಮಂ ಕೈವಲ್ಯಮಾಂಗಲ್ಯಮಂ (ಶಂಕಪ್ರಪ. ೧-೩) : ರಾಮನಿನ್ನಲ್ಲು, ಕೇಳ್ ಕೈಕೆ, ನೀನಿಡವಿಗಟ್ಟುತಿಹೆ ನಿನ್ನ ಮಾಂಗಲ್ಯಮಂ (ತೊರವೆರಾ. ೬೦-೯೩೮). ೩. ಮಂಗಳಕರವಾದ ಕೆಲಸ ; ಶುಭಕಾರ್ಯ : ಅರಸಿಯರು ದೂರ್ವಾಕ್ಷತೆಯ ದಧಿವಿರಚಿತದ ಮಾಂಗಲ್ಯವನು ವಿಸ್ತರಿಸೆ ಬಹುವಿಧವಾದ್ಯದಲಿ ಹೊಱವಂಟರರಮನೆಯ (ಕುಪ್ರಾಕ.೩-೦೩). ೪. ವಿವಾಹಸಮಯದಲ್ಲಿ ವರನು ವಧುವಿನ ಕೊರಳಿಗೆ ಕಟ್ಟುವ ಮಂಗಳಕರವಾದ ಚಿನ್ನದ ಬೊಟ್ಟು ; ತಾಳಿ : ಅವರು ಮಾಂಗಲ್ಯವನ್ನು ಮಾತ್ರ ಕಟ್ಟಿರಲಿಲ್ಲ (ಚಂದನ. ೨೬೩) : ರಾಧಾಬಾಯಿ ಹಾರವನ್ನು ಹರಿದು ಅವನ ಮುಖದ ಮೇಲೆ ಎಸೆದಳು, ಕರಿಮಣಿ ಹರಿದು ಮಾಂಗಲ್ಯ ಕೆಳಗೆ ಬಿತ್ತು ! (ಪೇಮಸೂ. ೩೩). **ಮಾಂಗಳ್ಯ** : ೧. ದಿಗ್ಭಾಗಂ ಮಾಂಗಳ್ಯತೂರ್ಯಸ್ವನದೊಳೆ ಬಧಿರೀಭೂತಮಪ್ಪನ್ನೆಗಂ ಪೌತ್ರೀಗಳ್ ಬರ್ಕೆಂಬುದುಂ . . . ಜ್ಯೋತೀಃಪ್ರಭಾಕನ್ನಿಕೆ ಮಸಕದೆ ಕೊರ್ಲ್ವಾನೆ ಬರ್ಪಂತೆ ಬಂದಳ್ (ಶಾಂತಿಪು. ೩-೯೭). [ಸಂ.]

**ಮಾಂಗಲ್ಯಕ** (ನಾ). ಒಂದು ಬಗೆಯ ದ್ವಿದಳಧಾನ್ಯ ; ಕಡಲೆ : "ಮಾಂಗಲ್ಯಕಃ, ಮಸೂರಃ– ಈ ೨ ಚಣಗ" (ಹಲಾಯು. ೯೩-೪೨೭). [ಸಂ.]

**ಮಾಂಗಲ್ಯಕೈಶಿಕಿ** (ನಾ). [ಸಂಗೀತ] ಒಂದು ರಾಗದ ಹೆಸರು : ಛಾಯಾ ಗೌಳ, ನಂತರ ಮಾಂಗಲ್ಯಕೈಶಿಕೀ, ಮೇಘರಂಜನೀ, ಗುಮ್ಮಕಾಂಭೋಜಿ (ತತುಶ್ರ. ೦೨೯). [ಸಂ. ಮಾಂಗಲ್ಯಕೈಶಿಕೀ]

**ಮಾಂಗಲ್ಯಗೇಯ** (ನಾ). ಮಂಗಳಗೀತೆ : ಮಾಂಗಲ್ಯಗೇಯಧ್ವನಿಯಿಂ ದಾಶಾಂತರಂ ಘೂರ್ಣಿಸಿ ಸೊಗಯಿಸೆ. . . ಅಂಗಣಗಾಯ್ತು ರಾಜ್ಯಾಭಿಷೇಕಂ (ಪ್ರಶಶಾ. ೦೧-೦೩). [ಸಂ.]

**ಮಾಂಗಲ್ಯಮಜ್ಜನ** (ನಾ). ಶುಭಕಾರ್ಯಕ್ಕಾಗಿ ವಿಧಿಪೂರ್ವಕವಾಗಿ ಮಾಡುವ ಸ್ನಾನ : ಮಂಗಳಸ್ನಾನ : ಅರಿವಿದಾರರು ಮಾಡಿದರು ಮಾಂಗಲ್ಯಮಜ್ಜನವ (ಕುಪ್ರಾಶಿ. ೧೦-೯). [ಸಂ.]

**ಮಾಂಗಲ್ಯಸೂಕ್ತ** (ನಾ). ಮಂಗಳಕರವಾದ ಸ್ತೋತ್ರ ; ಶುಭಪ್ರದವಾದ ಮಂತ್ರ : ಒಡನೆ ಪೆಂಟಣಿಸಿದರು ವಿಪ್ರರು ತೊಡಗಿದರು ಮಾಂಗಲ್ಯಸೂಕ್ತವ ಆಡಕಿದರು ಪಡಿಚರರು ಕುಶಸಮಿಧೆಗಳ ಹೊಱಿಗಳನು (ಕೌಶಿರಾ. ೦-೬೦) ; ಮಾಂಗಲ್ಯಸೂಕ್ತಗಳನ್ನು ಹೇಳುವ ಬ್ರಾಹ್ಮಣರಿಂದಲೂ ಮನೋಹರವಾಗಿದ್ದ ಅಯೋಧ್ಯಾಪಟ್ಟಣವನ್ನು ಕಂಡು ಮಂಥರೆಯು ಆಶ್ಚರ್ಯಪಟ್ಟು . . . ಕೇಳಿದಳು (ಕಗಂ. ೬೨ ಶಾಮರಾಜೋಕ್ತಿ ವಿಲಾಸ). [ಸಂ.]

**ಮಾಂಗಲ್ಯಸೂತ್ರ** (ನಾ). ತಾಳಿ ಮತ್ತು ಕರಿಮಣಿಗಳನ್ನು ಪೋಣಿಸಿದ ನೂಲು, – ಎಳೆ ; ಮಂಗಳಸೂತ್ರ : ಮುಹೂರ್ತದ ದಿವಸ ಬೆಳಗ್ಗೆ ಸುಂದರಿಯ ಕೊರಳಲ್ಲಿ ಮಾಂಗಲ್ಯಸೂತ್ರವು ಅಲಂಕೃತವಾಯಿತು (ಸುಂದರಂ. ೩). [ಸಂ.]

**ಮಾಂಗಳಿಕ** 'ಮಾಂಗಲಿಕ' ನೋ.

**ಮಾಂಗಳ್ಯ** 'ಮಾಂಗಲ್ಯ' ನೋ.

**ಮಾಂಗಾಯ್**, ಮಾಂಗಾಯಿ, ಮಾಗಾಯ್, ಮಾಗಾಯಿ (ನಾ). ೧. ಮಾವಿನಕಾಯಿ : ಶೃಂಗಾರನದಿಯನೆಳವೆಱೆ ಮಾಂಗಾಯನೆ ಮಱಸಿ ಪೇಟವೇಟ್ಟುದೆ ರಸಭಾವಂಗಳನಾಗಮುಮಂ (ಅಜಿತ. ೦-೯೨) ; ಕಂಪುದೀವಿರ್ದ ಪೂವಂ ಮಾಂಗಾಯಂ . . . ಪಣ್ತ ದಾಳಿಂಬಗಳನೊಲವಿನಿಂ ತೋಂಟಿಗಂ ಕೊಟ್ಟನೊರ್ವಂ (ಕಬ್ಬಿಗ. ೬೮). ೨. ಮಾವಿನಕಾಯಿಯ ಆಕಾರದ ಚಿನ್ನದ ಆಭರಣ ಅಥವಾ ಅಲಂಕಾರಸಾಧನ : ಬಳಸಿದ ಚೆಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಂಗಲ್ಗಳ ಸುತ್ತುಂಗೊಂಡ ಸುರಿಗೆಯ ಮುತ್ತಿನ ಬುಂಭುಕಂಗಳ ನಡುವೆ (ಅಂಪು.೯-೦೩ ವ): ಮಾಂಗಾಯ್ ಕದಪಂ ಚುಂಬಿಸೆ ಪೊಂಗವಡಿಕೆ ನೊಸಲೊಳಲೆಯೆ ಗೆಜ್ಜೆಗಳುಲಿಯೆ ಸಂಗಳಿಸೆ ಚಲನದೊಳ್ ಭವನಾಂಗಣದೊಳ್ ಕಂದನೆಂದು ದಟ್ಟಡಿಯಿಡುವಂ (ಚಂದ್ರಪು. ೩-೪೮) ; ಅಳರೆಲೆಗಳಲುಗೆ ಮಾಂಗಾಯ್ ಚಳಿಯಿಸೆ ಕಿಂಕಿಣಿಗಳುಲಿಯೆ ಶಿಶು ನಡೆಗಲ್ತಂದು (ಪುಷ್ಪಪು. ೦೨-೬೬). **ಮಾಂಗಾಯಿ** : ೧. ಮಂತ್ರಿಗಳ ಮಂತ್ರಕ್ಕೆ ಉದುರುವುದೆ ಮಾಂಗಾಯಿ ? ಮಂತ್ರಶಕ್ತಿಯು ದೈವಪಂಚಾಯತ (ನೇಮಿ. ೦೯-೦೩). ೨. ತಳೆದ ಸಹಜಚ್ಛಿದ್ರಕರ್ಣಂಗಳಿಗೆ ಮಣಿ ಮಾಂಗಾಯನಿಟ್ಟಳು ಅಲರೆಲೆಯ ಶಿಖಿಯುಳಿ ತೊಡರ್ಚಿ ವಿಮುಕ್ತದೋಷಂಗೆ (ಶಾಲ್ಮಲಿ. ೩೩-೬೩); ಪೊಳೆವ ಪೊಂಗವಡಿಗೆ ಮಾಂಗಾಯಿಯುಡಿಮಣಿ ಪುಲಿಸಿಂಗದುಗುರ್ಪೊನ್ನ ಬೀದಿ (ಶ್ರಾವಕ. ೩-೦೬೩). **ಮಾಗಾಯ್** : ೧. ಉಪ್ಪುಸಾಸವೆಯ ಮಾಗಾಯ ಸೆಳ್ಳಂಬಟೆಯ . . . ಹುರಿಸಂಡಗೆಯ ಬಾಳಕವನು ತಪ್ಪದೆಲ್ಲಾ ಸಾಧನವನು ಸಂಪರಿಸಿ (ಸಿದ್ಧರಾ. ೬-೩೨). ೨. ಅಭವವಲ್ಲಭೆಯ ಕಿವಿಗೂಡಿದೆಪತಿಸಫಲವಾದದೆಸೆಂತಂ ಕಣಿವಂತಾಡುವ ಗಿರಿಜೆಯ ಪೊಗದೊಡನಾಡುವ ಪೊನ್ನೋಲೆವಿಡಿದು ಹೊಸ ಮಾಗಾಯ್ಗಳ್ (ಗಿರಿಜಾ. ೩-೬೨) : ರೆಕ್ಕೆಮಣಿ ಪುಲಿಯುಗುರ್ ಗೆಜ್ಜೆ ಮಾಗಾಯ್. . . ಪಣೆಯೊಳಿಕ್ಕಿದ ಸುಭಸಿತಮುರಳೆಲೆಯೆನಿಪ ಪರಿಪರಿಯ ಬಾಲದೊಡಿಗೆಗಳ ನಾಂತು (ಚೆಂಪು. ೩-೩೬). **ಮಾಗಾಯಿ** : ೧. ಒಂದು ಮಡಕೆಯೊಳರ್ಧ ಮಡಕೆ ನೀರಂ ಪೊಯ್ದು . . . ನೀರುಳ್ಳಿ ಮಾ[ಪಾಠಾಂ. ಮಾಂ]ಗಾಯಿ ಹಸಿಯುಲ್ಲಮಂ ಬೆರಸಿಕೊಂಡು (ಸೂಪಶಾ. ೩-೩೪). ೨. ಅರಳೆಲೆ ಮಾಗಾಯಿ ಕೊರಳ ಮುತ್ತಿನ ಹಾರ (ಭುಸಂದ. ೨-೬೬-೩); ಕಳೆವೆತ್ತ ಮುತ್ತಿನ ಕಡಕು ಮಾಗಾಯ ಪಜ್ಜಳಿಪ ಬಜ್ಜರದ ಬಾವುಲಿಯನಿಟ್ಟು (ಗಿಶಗೋ. ೬-೨).
[ಮಾಂ (<ಮಾವು) + ಕಾಯ್$_4$]

**ಮಾಂಗಾಯಿ** ' ಮಾಂಗಾಯ್ ' ನೋ.

**ಮಾಂಗುಳೂರ್** (ನಾ). ಒಂದು ಊರಿನ ಹೆಸರು : ಮಾಙ್ಗುಳೂರ್ವಾರ ದಿವಾರದ ಪಾಪ್ಪರ್ (ಇಆ. XIV, ೨೩೨-೩೩ ; ಸು. ೯ನೆಯ ಶತ).
[P ಇದು 'ಮಂಗಳೂರು' ಎಂಬುದರ ಅಪಲಿಖಿತವಿರಬಹುದು]

**ಮಾಂಗೊನರ್** (ನಾ). ಮಾವಿನ ಚಿಗುರು, -ತಳಿರು : ಮಾಂಗೊನರಂ ನಸುಗರ್ಚಿ ಸೊರ್ಕಿನಿಂ ತನು ದಳವೇಱೆ . . . ಪುಗಲ್ ಪುಗಲೆಂದುದು ಕೋಕಿಲವ್ರಜಂ (ಜಗಂ. ೦೯-೩೮); ವನಪಾಲಂ ಕಾಣ್ಕೆಗೈದಂ ವಿಚಕಿಲದರಲಂ . . . ಮಾಂಗೊನರಂ ಮಾಧೂಫಳಶ್ರೇಣಿಯಂ (ರಾಜಶೇ. ೦೦-೨).
[ಮಾಂ (<ಮಾವು) + ಕೊನರ್$_2$]

**ಮಾಂಜರಪಾಟ** ' ಮಾಂಜರಪಾಟು ' ನೋ.

**ಮಾಂಜರಪಾಟು**, ಮಾಂಜರಪಾಟ (ನಾ). ಒಂದು ಬಗೆಯ ಬಟ್ಟೆ : ಅವನ ಮೈಮೇಲೆ ಮಾಂಜರಪಾಟಿನ ಹೊದಿಕೆ (ಮುಂಗಾಪು. ೮೭). **ಮಾಂಜರಪಾಟ** : ನಾನು ಉಟ್ಟ ಈ ದೋತರ ನೋಡಿರಿ, ಇದು ಮಾಂಜರಪಾಟವಲ್ಲ (ಸವುಂ. ೭೮೦). [← ಮರಾ. ಮಾಂಜರಪಾಟ್, ಮಾಜರ್‌ಪಾಟ್, ಮಾಂದರಪಾಟ್, ಮಾದರಪಾಟ್]

**ಮಾಂಜರಿ** (ನಾ). ಒಂದು ಬಗೆಯ ಮಣ್ಣು : ಪಾಳುಭೂಮಿ, ಮಾಂಜರಿ, ಕೇಸರಿ ಮೊದಲಾದ ಸ್ಥಳಗಳಲ್ಲಿ ಗಿಡಗಳನ್ನು ಹಚ್ಚಬೇಕಾದರೆ ಕೆಂಪುಮಣ್ಣನ್ನು ಹಾಕಿ ಗಿಡಗಳನ್ನು ಹಚ್ಚಬೇಕು (ಕೃಷಿಶ್ರ. ೯೯).
[?./ತುಳು. ಮಂಜೆರ್ = ಬರಡಾದ]

**ಮಾಂಜಿ** (ನಾ). [ಸಂಗೀತ] ಒಂದು ರಾಗದ ಹೆಸರು : ಚಿಂತಾಮಣಿ, ಕಲ್ಗಡ, ಮಾಂಜಿ, ಫರಜು ಮುಂತಾದ ಕಷ್ಟರಾಗಗಳಲ್ಲಿ ಕೃತಿರಚನೆ ಮಾಡಿ ಶಾಸ್ತ್ರಿಗಳು ಆ ರಾಗಗಳ ಸ್ಪಷ್ಟಪರಿಚಯ ಮಾಡಿ ಮಾರ್ಗದರ್ಶಕರಾಗಿದ್ದಾರೆ (ಸಂಗೀತಸಂ. ೨೯೯) ; ಹಂಬೀರು . . . ಮಾಂಜಿ, ಪೂರ್ವೀ ಎಂಬಿವುಗಳು ದೇಶೀಯರಾಗಗಳು (ತಟುಶ್ರ. ೦೩೦). [ಸಂ. ಮಾಂಜೀ]

**ಮಾಂಜಿಷ್ಠ** (ನಾ). ಕೆಂಪು ; ಕೆಂಬಣ್ಣ : "ಅರುಣಃ, ಶೋಣಃ, ರಕ್ತಃ, ಮಾಂಜಿಷ್ಠಃ, ಪಾಟಲಃ, (ಅ)ತಾಮ್ರಃ, ಲೋಹಿತಃ—ಈ ೭ ಕೆಂಪು" (ಹಲಾಯು. ೦೨೦-೯೮); ಶ್ವೇತಪೀತಕಪೋತಹರಿತಕೃಷ್ಣಮಾಂಜಿಷ್ಠವೆಂಬ ಷಡು ವರ್ಣವೆಂದೆನ್ನ (ಅವತಂ. ೦೨೨-೩೩೯) ; ಶ್ವೇತಪೀತಂ ಕಪೋತಂ ಹರಿತಂ ವಿಮಲ ನೂತನದ ಮಾಂಜಿಷ್ಠ ಮೊದಲಾದ ವರ್ಣಗಳೊಳೋತು ಮಾಡಿದ ವಿಲಸದಕ್ಷತೆಯು ಶಂಕರಂಗರ್ಪಿಸಲು ಕೋಟಿಫಲವು (ಗುರುಚರಿ. ೬-೯). [ಸಂ.]

**ಮಾಂಜಿಸು** 'ಮಾಜಿಸು' ನೋ.

**ಮಾಂಜು**$_1$ 'ಮಾಜು$_1$' ನೋ.

**ಮಾಂಜು**$_2$ 'ಮಾಜು$_2$' ನೋ.

**ಮಾಂಜೆಳೆ** (ನಾ). ಮಾವಿನ ಎಳೆಯ ಕೊಂಬೆ : ಮಾಂಜೆಳೆ, ಮಾಂಜೊಂಪಂ (ಶಬ್ದಮ. ೩೯೮ ವ್ಯಾಖ್ಯಾ.). [ಮಾಂ (< ಮಾವು) + ಸೆಳೆ$_4$]

**ಮಾಂಜೇಮೂಟ** (ನಾ). ಒಬ್ಬಾತನ ಹೆಸರು : ಮಾಲಗಾಜ ಶ್ರೀಮಾಂಜೇ ಮೂಟ ಇನಿಥೂ ಇರ್ಪ್ಪತ್ತೆಯ್ದು ಮುಮ್ಮೊದಲಾಗೆ [ಯ್ಯಾ] ಡಿ ವೀಸಾಭಾಗಂ ಪುಲ್ಲರು × × (ಕಇ. I. ೨-೦೯; 699). [ ? ]

**ಮಾಂಜೊಂಪ** (ನಾ). ಮಾವಿನ ಗೊಂಚಲು,–ಗುಚ್ಛ : ಮಾಂಜೆಳೆ, ಮಾಂಜೊಂಪಂ (ಶಬ್ದಮ. ೩೯೮ ವ್ಯಾಖ್ಯಾ.).
[ಮಾಂ (< ಮಾವು) + ಜೊಂಪ$_1$]

**ಮಾಂಟಬೆಕ್ಕು** 'ಮಂಟಬೆಕ್ಕು' ನೋ.

**ಮಾಂಟೆ** 'ಮಾಡ$_2$' ನೋ.

**ಮಾಂಡಲಿಕ, ಮಾಂಡಳಿಕ** (ಗು). ೧. ಒಂದು ಪ್ರಾಂತಕ್ಕೆ ಸಂಬಂಧಿಸಿದ. ೨. ಒಂದು ಪ್ರಾಂತವನ್ನು ಆಳುವ. (ನಾ). ೩. ಒಂದು ಪ್ರಾಂತವನ್ನು ಆಳುವವನು ; ಮಂಡಲಿಕ : ವಿಜಯವರ್ಮರಾಜನ ತರುವಾಯದಲ್ಲಿ ಸೇಂದ್ರಕರು ಸುರತಪ್ರಾಂತದಲ್ಲಿ ಚಾಲುಕ್ಯರ ಮಾಂಡಲಿಕರಾಗಿದ್ದರು (ಕರ್ನಾಟ. ೫೦) ; ಚಂದ್ರನೆಂಬ ಒಬ್ಬ ಅರಸನು . . . ಧಾರಾಪುರದ ಪರಮಾರ ಭೋಜರಾಜನ (ಕ್ರಿ.ಶ. ೧೦೦೦-೧೦೫೪) ಮಾಂಡಲಿಕನಾಗಿದ್ದನು (ಸಾಹಿಸ. ೩೦). **ಮಾಂಡಳಿಕ :** ೩. ನೊಳಂಬರು ಕಾಲಕ್ರಮೇಣ ರಾಷ್ಟ್ರಕೂಟರು, ಕಲ್ಯಾಣಿ ಚಾಳುಕ್ಯರು ಇವರ ಮಾಂಡಳಿಕರಾಗಿಯೂ ಸಹ ಆಳ್ವಿಕೆ ನಡೆಸಿದರು (ನೊಳಂಬ. ೨೦). [ಸಂ.]

**ಮಾಂಡಲೀಕ, ಮಾಂಡಳೀಕ** (ನಾ). ಮಾಂಡಲಿಕ ೩ : ಕರೆಸಿ ದಾನವ ಮಾಂಡಲೀಕರ ಹರುಷದಿಂದುಡುಗೊಜೆಯ್ಯನಿತ್ತನು (ಕೌತಿರಾ. ೯೦-೩). **ಮಾಂಡಳೀಕ :** ಕ್ರಿ. ಶ. ೧೦೦೦ ದ ಅನಂತರ ನೊಳಂಬರು ಸಂಪೂರ್ಣವಾಗಿ ತಮ್ಮ ಸ್ವತಂತ್ರ್ಯವನ್ನು ಕಳೆದುಕೊಂಡು ಕಲ್ಯಾಣಿಚಾಳುಕ್ಯರ ಮಾಂಡಳೀಕರಾಗಿ ಆಳುವುದನ್ನು ನಾವು ಕಾಣಬಹುದು (ನೊಳಂಬ. ೩೯).
[< ಸಂ. ಮಾಂಡಲಿಕ]

**ಮಾಂಡಳಿಕ** 'ಮಾಂಡಲಿಕ' ನೋ.

**ಮಾಂಡಳೀಕ** 'ಮಾಂಡಲೀಕ' ನೋ.

**ಮಾಂಡುಕೆ** (ನಾ). ಒಂದು ಬಗೆಯ ಗಿಡ ; ಮಂಜಿಷ್ಠೆ : "ಆದಿತ್ಯಭಕ್ತನುಮುದು ಮಾಂಡುಕೆ" (ಮಂಗರಾ. ೩೯-೨೬). [< ಸಂ. ಮಂಡೂಕ]

**ಮಾಂತ**$_1$ (ನಾ). ಮಕಾರದಲ್ಲಿ ಕೊನೆಗೊಳ್ಳುವ ಶಬ್ದ : ಮಾಂತಕ್ಕೆ—ಅಣ್ಮು (ಶಮದ). [ಸಂ.]

**ಮಾಂತ**$_2$ (ನಾ). ೧. ಹಿರಿಯ ; ಪೂಜ್ಯ ; ಮಹಂತ : ರಾಜರು ರಕ್ಕಸಮಾಂತರು ಲಾಳಿ ಬಿಲ್ಲೋಜರು ಮೆಟಲಂಬಿನವರು ತೇಜೋಮಯ ಬಾಣಗಾಜಿರೇಜಾತು ಖಗರಾಜನೆಜಂಕೆಯಿಕ್ಕಲದಿ (ನೇಮಿಹಸ. ೩೬-೯೨). ೨. ಮಠ, ದೇವಸ್ಥಾನ ಮುಂತಾದುವುಗಳ ಮುಖ್ಯಸ್ಥ; ಮಠಾಧಿಕಾರಿ : "ಮಾಂತ (ಮಾತ) — ಮಹಂತ = ಮಠಾಧಿಕಾರಿ, ದೊಡ್ಡಮನುಷ್ಯ" (ತದ್ಭಕೋ. ೩೫). [< ಮಹಂತ]

**ಮಾಂತನ** (ನಾ). ದೊಡ್ಡಸ್ತಿಕೆ ; ಘನತೆ ; ಹಿರಿಮೆ : ಜನಿತಪ್ರಗಲ್ಭದೊಳ್ ಮಾಂತನದೊಳ್ . . . ಅನುಪಮಗುಣದೊಳ್ ಶ್ರೀಶಂ ಘನಂ (ಕವಿರಾ. ೩-೮೨) ; ಅವರಿರ್ವರ ಮಾಂತನದಳವನಳೆಯಲಜನಾಜಿಂ (ಅಜಿತ. ೧-೩೫) ; ಮಾನ್ಯನಕ್ಕಾಗರಮೆನೆ ನೆಗಲ್ದಂ (ಎಇ. XVI, ೫೫-೦೧ ; 1053).
[< ಮಾಂತ$_2$ + – ತನ]

**ಮಾಂತರು** (ನಾ). ಮಾವಿನ ಮರ : ಚೂತವೃಕ್ಷ : ಕಾಂತಾರದೊಳು ಲಕ್ಷ್ಮೀಕಾಂತನಾಡುತ ತನ್ನೇಕಾಂತಭಕ್ತರನೊಡಗೂಡಿ ಮಾಂತರುವಿನ ನೆಳಲೊಳು ಕೊಳಲೂದುತ (ಕೃಷ್ಣಗೋ. ೨-೯೦).
[ಮಾಂ (<ಮಾವು) + ತರು$_2$]

**ಮಾಂತ್ರಿಕ** (ನಾ). ಮಂತ್ರಗಾರ ; ಗಾರುಡಿಗ; ಯಕ್ಷಿಣಿಗಾರ : ಆತನೇ ಶೂರತ್ವವುಳ್ಳವನಾತನೇ ಮಾಂತ್ರಿಕನು ತಪಸಿಯುಮಾತನೇ ವಿದ್ವಾಂಸನಾತನೆ (ಬಸವು. ೩೮-೬೯); ಕೆಲವರು ಬೈರಾಗಿಗಳೂ ಮಾಂತ್ರಿಕರೂ ನಾವು ಚಿನ್ನ ಮಾಡಬಲ್ಲೆವೆಂದು ಹೇಳುತ್ತಾರೆ (ಶುಂಬದು. ೯-೦೦೩). [ಸಂ.]

**ಮಾಂದಳ** (ನಾ). ಒಂದು ಊರಿನ ಹೆಸರು : ಶ್ರೀಚಾಸರಾಳ್ ಪೊನ್ನಾಕವಳಿಗೆ ಕಾಳಮ್ಮನ್ ಮಾನ್ದಳಿಯ ಬೀರಿಯದುಳ್ಳೆ ಬಲಮೆಮ್ಬರಸರ ಕಾಳಿಗದುಳ್ಳೆ ಎಱಿದು ಸತ್ತನ್ (ಎಕ. XVI, ಕುಮುಕೂ. ೦೦೦-೨; ಸು. 812). [ ? ]

**ಮಾಂದಳಿರ್, ಮಾಂದಳಿರು, ಮಾದಳಿರ್** (ನಾ). ಮಾವಿನ ಚಿಗುರು,–ಕುಡಿ : ಕಾಮದೇವನುಕ್ಕವದಲ್ಲಿ ಮುನ್ನವೆ ಕಟ್ಟಿದ ಮಾಂದಳಿರ ತೋರಣಂಗಳೊಳವೆತ್ತಿದಶೋಕಪಲ್ಲವಪತಾಕೆಯೊಳಂ (ಕಾದಂಬ. ೭೮೦) ; ಮಾಂದಳಿರ್ಗಳ ತೋರಣಂ ವಿರಾಜಿಸಿತೆನಸುಂ (ಕುಸುಮಾ. ೬-೭೯). **ಮಾಂದಳಿರು :** ಚಂದ್ರಿಕೆಯ ಮಾಂದಳಿರೆ . . . ಕಲುಷರಹಿತೆಯು ವಿಳ ಕುಲಾಧಮು ಬಲುಕರಿಸಿ ಕೋಡೆಯುದ್ದನೆಂದುಸುರುವುದು ರಾಮಂಗೆ (ತೊರರಾ. ೩-೦೦-೬) ; ಪರಪುಟ್ಟಗಳಿರಾ . . . ಓರಿದು ಮಾಂದಳಿರ ಗುಟುಕನಿತ್ತು ಮನಕತಿಹರುಷವ ಮಾಡುವೆ ನಿಮಗೆ (ಕಂಪಿರಿ. ೯-೨೦೦) ; ಮಾಂದಳಿರು ಆಗ ತಾನೆ ಅಲ್ಲಲ್ಲಿ ಎದ್ದು ಕಾಣುತಿತ್ತು (ಶಾಂತಲಾ. ೨೯೯). **ಮಾದಳಿರ್ :** ಮಾದಳಿರ ಪಳಿವ ಚೆಂದುಟಿಯ ಸವಿಗೆ . . . ಎಸೆವ ಮೈಗಂಪಿಂಗೆ ಬಯಸಿ ಬಯಸಿ (ಕೃಪಿಬಾ. ೩-೦೦). [ಮಾಂ (< ಮಾವು) + ತಳಿರ್$_2$]

**ಮಾಂದಳಿರು** 'ಮಾಂದಳಿರ್' ನೋ.

**ಮಾಂದಾವು ?** (ನಾ). ಒಂದು ಊರಿನ ಹೆಸರು (?) : ಮಾನ್ದಾವುದ ಕಾಳೆಗದುಳ್ ಪಗೆ ಕಲಿಯೂರು ಮಗನ್ ಬೆಜ[ಯಿ]ತ್ರನ್ ಗಣ್ಡಪ್ರಕರನ್ . . . ಪಲರನಿಱಿದು ಸತ್ತೊಡೆ (ಎಕ. X, ಮುಳಬಾ. ೨೨೮-೬; ಸು. ೮೯೦ ?).
[ ? ]

**ಮಾಂದಿಸು** (ಕ್ರಿ). ೧. ತಡೆ ; ನಿಲ್ಲಿಸು ; ಅಡ್ಡಗಟ್ಟು : ಮಸಕಂ ಕಾಯ್ದು ಜವಂ ಜವಂಗಮಿದಿರೊಳ್ ನೋಡಲ್ಕಗುರ್ವಾಗೆ ಮಾಂದಿಸಿಮಾ ವಂದುದು ಕೊಂದುದೆಂದು ಭಯದಿಂ ವಿಪ್ರರ್ ತೆರಳ್ದೋಡೆ (ಶಂಕರಾ. ೮-೩೭) ; ದಾನವವರಂ ನಿರ್ದಯ್ಯವಕ್ಕೆಂದು ಯಾಚಿಪುದಂ ಮಾನ್ದಿಸಿ ನಿಂದು ನಾಲಗೆಯೊಳೆಂದುಂ ನಿದ್ರೆಯಕ್ಕೆಂದು ಯಾಚಿಪುದಂ ಮಾಡಿಸಿಯನ್ನನಂ ಕಿಡಿಸಿದಳ್

ಬಲ್ಪಿಂತುಟೋ ಜ್ಯೇಷ್ಠೆಯು (ಶಾಸಕ. ೩೩-೯೦ ; 1178). ೨. ಕಳೆ : ನಿವಾರಿಸು : ಅವರ್ಗಳ ಭಯಮಂ ಮಾಂದಿಸುವೊಡೆ ಸುಜನಸಂಸ್ತವಂ ಕರಣೀಯಂ (ಪುಶ್ಕತ. ೦-೫೩); ಒಂದೊಂದೆಸೆಯೊಳ್ ಮೊಳೆದಿಹವೆಂದುಂ ವಿಂಶತಿಸಹಸ್ರಸೋಪಾನಂಗಳ್ ಇಂದೂಪಳರಚಿತಂಗಳ್ ಮಾಂದಿಸುವುದು ಜನದ ಮನದ ಸಂತಾಪತೆಯುಂ (ಕೃಷ್ಣಸ್ತ. ೦೦-೨೪). ೩. ಆರಿಸು ; ನಂದಿಸು : ಕುಂದದಲಧವಲನೃಪವಶನೇಂದುಜ್ಯೋತ್ಸ್ನಾಮೃತಾಚ್ಛಜಲ ಪರಿಷೇಕಂ ಮಾಂದಿಸುವಂತಾದುದು ನೃಪನಂದನೆಯೆರ್ದೆಯೊಳಗೆ ಬಳೆದ ಶೋಕಾನಳನಂ (ಅಂಕ. ೩-೯೯). [ಮಾಂದು₁ + — ಇಸು₃]

**ಮಾಂದು₁** (ಕ್ರಿ). ೧. ನಿಲ್ಲಿಸು ; ಪ್ರತಿಬಂಧಿಸು : "ಮಾಂದು–ಪ್ರತಿಷೇಧೇ (ತಡೆ). (ಪ್ರಸಿದ್ಧೇ)" (ಶಮಣ). ೨. ಕುಗ್ಗು ; ಕಡಮೆಯಾಗು : ಪೊಸಮಕರಂದದ ಮಾಂದದ ರಸಕ್ಕೆ ಮಂದಲರೊಳೆಱಗಿದರಗಿಳರಚನೆಯು ಕರ್ಪೆಸೆವಂತೆಸೆವಿನಮೇಂ ಸೊಗಯಿಸಿದುದೊ ವನಯುವತಿವದನತಿಲಕಂ ತಿಲಕಂ (ಶಾಂತಿಪು. ೭-೦೩೩). ೩. ಹಿಂದೆಗೆ ; ಹಿಮ್ಮೆಟ್ಟು : ಮಾಂದದೆ ಕುಂದದೆ ಬಣ್ಣಂಬಂದಂ ತದ್ರಿಪುವೆನುತ್ತೆ ಬೀಭತ್ಸಲತಾಕಂದಮನೆ ತರ್ಪ ತೆಱದಿಂ ತಂದಿಟ್ಟಿಪನಿದಿರೊಳೊರ್ವನಾ ಪಂದಲೆಯಂ (ಚಂದ್ರಪ್ರ. ೦೦-೦೦೭). [ದೇ. ತಮಿ. ಮಾಸ್ಸು ; ತುಳು. ಮಾದು]

**ಮಾಂದು₂** 'ಮಾಣ್' ಪರಾ.

**ಮಾಂದುರಿಗ** (ನಾ). ಕುದುರೆಯ ಲಾಯವನ್ನು ನೋಡಿಕೊಳ್ಳುವವನು; ಕಾಸ್ತಾರ : (೬). [ < ಸಂ. ಮಾಂದುರಿಕ]

**ಮಾಂದೋಪು** (ನಾ). ಮಾವಿನ ಮರಗಳ ಗುಂಪು,–ತೋಪು : ಮಾಂದೋಪಿನೊಳ್ ಸುರಿವ ಪೂಜೇನ ಸರಿಯೊಳ್ ನನೆದೊಯ್ಯನೆ ತೀಡುವ ತೆಂಗಾಳಿಯ ಸೋಂಕಿನಂತೆಯುಂ (ಕಳಮ. ೦೩೦-೩) ; ಈಯೆಳಮಾಂದೋಪಿನೊಳ್ ಬಸಂತಸಿರಿಯಂ ನೋಡಾ (ಚಿತ್ರಗೋ. ೦೩-೦೭) ; ಮಾಂದೋಪಿನಲ್ಲಿ ಸೇರಿ ನೀವೆಲ್ಲರೂ ನಿಶ್ಚಬ್ದರಾಗಿರಬೇಕು (ಖಗತ. ೩೩-೦೭). [ಮಾಂ (< ಮಾವು) + ತೋಪು₁]

**ಮಾಂದ್ಯ** (ನಾ). ೧. ಚಟುವಟಿಕೆಯಿಲ್ಲದಿರುವುದು ; ಜಡತೆ ; ಆಲಸ್ಯ : ಎಂದಿಲ್ಲದಾವುದೊ ಮಾಂದ್ಯವು ಬಂದಿದೆ (ಶಂಕಾಶ. ೦೩೭-೨೩). ೨. ವೇಗವಿಲ್ಲದಿರುವಿಕೆ ; ನಿಧಾನ ಗತಿ : "ಮೆಲ್ಲನೆನೆ ಮಾಂದ್ಯನಾಮಂ" (ಕಬಕಂ. ೨೩೬) ; ಸಾರಸದ್ಗುಣೋಪಚಯದೊಳಲ್ಲ ಮಾಂದ್ಯಮದು ಯಾನದೊಳಲ್ಲದೆ ತಲ್ಲತಾಂಗಿಯಾ (ಚಂದ್ರಪ್ರ. ೦೦-೦೦೬) ; ಕುಟಿಲಚಂಚಲಕಠಿನಕೃಶಮಾಂದ್ಯಮೆಂಬಿವುತ್ಕಟಯೌವನಶ್ರೀವಿಲಾಸಿನಿಯರಳಕಾಳಿ ಚಟುಲ ಕಟಾಕ್ಷ ವಕ್ಷೋಜಾತ ಮಧ್ಯಗತಿಗಳ ವಿಲಾಸದೊಳಲ್ಲದೆ ಘಟಿಸದು (ಕೃಪುಚ. ೨-೭). ೩. ಮಬ್ಬು ; ಗಡ್ಡತನ. ೪. ಬಲಹೀನತೆ ; ನಿಶ್ಶಕ್ತಿ ; ದೌರ್ಬಲ್ಯ. ೫. ಆಸಕ್ತಿ ಇಲ್ಲದಿರುವಿಕೆ ; ನಿರುತ್ಸಾಹ. ೬. ಅನಾರೋಗ್ಯ ; ಜಾಡ್ಯ : "ರೋಗಃ . . . ಮಾಂದ್ಯಂ, ಅಪಾಟವಂ . . . ರುಜಾ–ಈ ೧೨ ವ್ಯಾಧಿ" (ಶಬ್ದಮ. ೯೬-೯೩೭) ; ಮದಮಾಂದ್ಯೋತ್ಪಾದನಾಪಹರಣಮಾರಣವಶೀಕರಣದ್ವೇಷಣಾದಿಗಳ್ಗೆ . . . ಪಿರಿದುಮಾಗಮಂಗಳೆ ಪ್ರಮಾಣಂಗಳ್ (ಕಾದಂಕಾ. ೩೬೭) ; ಶ್ಲೇಷ್ಮಕ್ಕೆ ಅಧಿಕ್ಯ ವಾತ ಪಿತ್ತಂಗಳಿಗೆ ಮಧ್ಯಮ ಮಾಂದ್ಯಗಳ ವ್ಯತ್ಯಾಸದಿಂದೆರಡು ಸನ್ನಿದೋಷ (ಕಳಕ್ಕ. ೦೩೦). [ಸಂ.]

**ಮಾಂಬನ** (ನಾ). = ಮಾಂದೋಪು : × × × ವಳ್ಳಿಯ ಕತ್ತಲೆ ಮಾಂಬನ ವಳವಳತ ಸಂಪಿಮಲ್ಲಿಗಳ ಪೂವೆಂಬಿನ ಬೆಳದಿಂಗಳಿಂದೆನೆ ಕಣ್ಬಯಲ ಚಲುವನೀವುದರಸಿಯ ಕೆಱೆಯೊಳು (ಪ್ರಕಾಂ. ೦೯೨೯. ೯-೩೦ ; 1183). [ಮಾಂ (< ಮಾವು) + ಬನ₁]

**ಮಾಂಬಳ** (ನಾ). ೧. ಮಾವಿನಹಣ್ಣು : ತನ್ನ ಮಾಗಿದ ಪೋದುದುಂ ಕೋಗಿಲೆ ಬರ್ಪುದುಂ ಮಾಂಬಳಂ ಬೀಟ್ಟಂತಾಕಸ್ಮಿಕಮಾದುದು (ಅಪ್ರತಿ. ೩೯-೯) ; ಸೋರ್ವ ಜೇಂಜರಿ ಸವಿಮಾಂಬಳಂ ಪದೆದು ಕಾಸಿ ಪದಂಬಡೆದಿಟ್ಟ ಬಟ್ಟವಾಲ್ (ಶಕಧ. ೯-೦೦೭). ೨. (ಕರಾ) ಮಾವಿನ ಚಟ್ಟು : ಸೀತಮ್ಮನವರು . . . ನಾಲ್ಕು ಕಟ್ಟು ಥಪ್ಪಳ ಮಾಂಬಳಗಳನ್ನು ತಂದಿಟ್ಟರು (ಶಾಳಿಗ. ೨೩). [ಮಾಂ (< ಮಾವು) + ಪಳ₂(<ಪಲ್₂). / ತುಳು. ಮಾಂಬಲ, ಮಾಂಬಳ]

**ಮಾಂಬೂ** (ನಾ). ಮಾವಿನ ಹೂವು : ಮಾಂಗದಿರ್ ಮಾಂಗೊನರ್ . . . ಮಾಂಬೂಗಳ್ (ಕಬ್ಬಾಸು. ೩೯೬ ವ್ಯಾಖ್ಯಾ). [ಮಾಂ (< ಮಾವು) + ಪೂ₂]

**ಮಾಂಬೊಣರ್** (ನಾ). ಮಾವಿನಹಣ್ಣುಗಳ ಜೋಡಿ : ಮಾಂಗದಿರ್ ಮಾಂಗೊನರ್ . . . ಮಾಂಬೂಗಳ್, ಮಾಂಬೊಣರ್ (ಕಬ್ಬಾಸು. ೩೯೬ ವ್ಯಾಖ್ಯಾ). [ಮಾಂ (< ಮಾವು) + ಪೊಣರ್₂]

**ಮಾಂಸ** (ನಾ). (ಮನುಷ್ಯ ಅಥವಾ ಪ್ರಾಣಿಪಕ್ಷಿಗಳ ಶರೀರದ) ಬಾಡು ; ಅಡಗು ; ಖಂಡ : "ಪಲಲಂ, ಜಾಂಗಲಂ, ಮಾಂಸಂ . . . ತರಸಂ – ಈ ೮ ಮಾಂಸಂ" (ಶಬ್ದಮ. ೦೦೪-೯) : ಮಾಂಸಮಧುಮದ್ಯ ಸೇವನೆ . . . ಕುಲಟಾಸಂಸರ್ಗಮೆಂಬಿವಲ್ಲದೆ ಸಂಸಾರಭ್ರಮಣಕಾರಣಂ ಪೆಱವೊಳವೇ (ಆದಿಪು. ೩-೬೦) ; ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು . . . ಶುಕ್ಲಧಾತು ಎಂದು ಏಳು ತೆರನಾಗಿವೆ (ಕಳಕ್ಕ. ೯೬) ; ಜನ್ನಮಂ . . . ಮಾಂಸರುಧಿರೌಘದಿಂ ಕಿಡಿಸಿ ಕಾಡುಮರ್ ತಾಟಕಿಯ ಮಕ್ಕಳ್ (ಶ್ರೀರಾಮಚ. ೨೮-೦೩). [ಸಂ.]

**ಮಾಂಸಕಲ್ಯಾಣ** (ನಾ). [ಬೌದ್ಧ] ಸ್ತ್ರೀಯ ಸೌಂದರ್ಯಕ್ಕೆ ಸಂಬಂಧಿಸಿದ ಐದು ಬಗೆಯ ಕಲ್ಯಾಣಗಳಲ್ಲಿ ಒಂದು : ಬಾಯಿಗೆ ತೆರೆಯಾದ ತುಟಿ ಬಿಂಬಫಲಕ್ಕೆ ಸದೃಶವಾಗಿ, ಚೆನ್ನಾ ಬಣ್ಣವಾಗಿ, ಸಮವಾಗಿ ಸ್ಪರ್ಶಕ್ಕೆ ಮೃದುವಾಗಿ ಇರುತ್ತದೆ. ಇದು ಮಾಂಸಕಲ್ಯಾಣ (ಶಕ್ತ್ರ ಮ. ೨೦). 'ಕೇಶಕಲ್ಯಾಣ', 'ಛವಿಕಲ್ಯಾಣ' ಪರಾ. [ಸಂ.]

**ಮಾಂಸಕವಳ** (ನಾ). ಬಾಡಿನ ಊಟ, – ಆಹಾರ : ಕುಬೇರಪ್ರಿಯಂ . . . ಪೂರ್ವಭವಮಂ ನೆನೆದು ಮಾಂಸಕವಳ(ಪಿಂಡ)ಮನೊಲ್ಲದಿರೆ (ಶಾಪುಂಕ. ೭೦). [ಸಂ. ಮಾಂಸಕವಲ]

**ಮಾಂಸಗಣ್ಣು** (ನಾ). ದುರ್ಮಾಂಸ ಬೆಳೆದಿರುವ ಕಣ್ಣು : ನೀರುಗಣ್ಣು ಜಾರುಗಣ್ಣು ಪಲಗಣ್ಣು ಕಾತಗಣ್ಣು ರಕ್ತಗಣ್ಣು ಮಾಂಸಗಣ್ಣು (ಕಾಳಿಕ. ೩೨೬). [ಮಾಂಸ + ಕಣ್ಣು (< ಕಣ್)]

**ಮಾಂಸಗ್ರಂಥಿ** (ನಾ). ಮಾಂಸದ ಗಡ್ಡೆ ; ದುರ್ಮಾಂಸ : ಶ್ಲೇಷ್ಮದಿಂದ ಕಟವಾಯ ಪ್ರದೇಶದಲ್ಲಿ ಮಾಂಸಗ್ರಂಥಿಗಳುಂಟಾಗಿಹವು (ವೈದ್ಯಶಾ. II. ೦೦೩). [ಸಂ.]

**ಮಾಂಸಚ್ಛದೆ** (ನಾ). ಒಂದು ಬಗೆಯ ಸಸ್ಯ : "ಮಾಂಸರೋಹೀ, ಮಾಂಸರೋಹಾ. ಮಾಂಸಚ್ಛದಾ – ಈ ಮೂಱುಂ ಮಾಂಸರೋಹಿಣಿ" (೬ಶಂ. ೦೨೪). [ಸಂ. ಮಾಂಸಚ್ಛದಾ]

**ಮಾಂಸಜ** (ನಾ). ೧. = ಮಾಂಸಗ್ರಂಥಿ. ೨. ಮೇದಸ್ಸು : "ಅಸ್ರಜಂ – ಮಾಂಸಜಂ" (೬ಶಂ. ೩). [ಸಂ.]

**ಮಾಂಸಜೀವಿ** (ನಾ). ೧. ಮಾಂಸಾಹಾರದಿಂದ ಜೀವಿಸುವವನು ; ಮಾಂಸಾಹಾರಿ. ೨. ರಕ್ಕಸ ; ರಾಕ್ಷಸ : "ಯಮಂ ಸರುಜಂ ಕಿಂಕರ ಮಾಂಸಜೀವಿ ಕೃಪಣಂ ಕೀನಾಶಶಬ್ದಂ" (ಶಾಶಾರ. ೯೩). [ಸಂ. ಮಾಂಸಜೀವಿನ್]

**ಮಾಂಸತಾನ** (ನಾ). ಗಂಟಲಿನಲ್ಲಿ ಉಂಟಾಗುವ ಮಾಂಸದ ಗಡ್ಡೆ : ಬಹಳ ತಾಪ ಉಂಟಾಗಿ ಕೊರಳಬಿಗಿದು ಹಿಡಿವದು. ಆ ಗ್ರಂಥಿ . . . ಮಾಂಸತಾನವೆನಿಸಿಕೊಂಬುದು (ವೈದ್ಯಶಾ. II. ೦೦೯). [ಸಂ.]

**ಮಾಂಸದ್ರಾವಿ** (ನಾ). ಒಂದು ಬಗೆಯ ಸಸ್ಯ: "ಮಾಂಸೀ, ಮಾಂಸರೋಹಿಣೀ – ಜಟಾಮಾಂಸಿ, ಮಾಂಸದ್ರಾವಿ" (೬ಶಂ. ೦೨೩). [ಸಂ. ಮಾಂಸದ್ರಾವಿನ್]

**ಮಾಂಸನಿವೃತ್ತಿ** (ನಾ). ಮಾಂಸಾಹಾರಸೇವನೆಯನ್ನು ನಿಲ್ಲಿಸುವಿಕೆ : ಮಾಂಸನಿವೃತ್ತಿಯೇಕೆಂದೊಡೆ . . . ಪಾಪಬಂಧಕರಮಪ್ಪ ಮಾಂಸಮಂ ತಿಂಬಂಗೆ ದಯೆಯುಂ ಪುಟ್ಟದು ದರ್ಪಮಧಿಕಮಕ್ಕುಂ (ಕಸಾರ. ೨೯೩). [ಸಂ.]

**ಮಾಂಸಪಿಂಡ** (ನಾ). ೧. ಮಾಂಸದ ಮುದ್ದೆ,– ಉಂಡೆ : ಮಾಂಸಪಿಂಡವೆನಲೊಲ್ಲದೆ ಮಂತ್ರಪಿಂಡವೆಂದನು ಬಸವಣ್ಣನು (ಬಸ್ವಪು. ೫. ೨೩–೫೩); ಲಿಂಗಧಾರಣವಿಲ್ಲದ ಮಾನವನ ಶರೀರವು ಮಾಂಸಪಿಂಡವೆನಿಸಿತು (ಭಾರದ. ೨೩೩). ೨. ದಷ್ಟಪುಷ್ಟವಾದ ದೇಹ : ಭೈರವಿಯು 'ಪೂಜೆಗೆ ಸಲುವಾಗಿ ನಿನ್ನ ಮಾಂಸಪಿಂಡವು ಅರ್ಪಿತವಾಗುವುದು (ಕಣಾಕುಂ. ೨೩). [ಸಂ.]

**ಮಾಂಸಭಕ್ಷಕ** (ನಾ). = ಮಾಂಸಜೀವಿ ೧ : ಮಾಂಸಭಕ್ಷಕರೂ ಸೆರೆಬಡಕರೂ ಸಿದ್ಧಗೊಳಿಸಿದ್ದೂ ಆದ ಇಂಥ ಯಾವ ಆಹಾರಪದಾರ್ಥವನ್ನೂ ಸೇವಿಸಬಾರದು (ಶ್ರಾವಣ. ೨೦೭). [ಸಂ.]

**ಮಾಂಸಭಕ್ಷಣ** (ನಾ). ಬಾಡನ್ನು ತಿನ್ನುವಿಕೆ : ಮಾಂಸಾಹಾರದ ಸೇವನೆ : ತೊಗಲಿನ ಚೀಲವನ್ನು ದನಗಳ ಚರ್ಮದಿಂದ ಮಾಡಿರುತ್ತಾರೆ . . . ಇಂಥ ಚೀಲದೊಳಗಿನ ಎಣ್ಣೆ ತುಪ್ಪಗಳನ್ನು ತಿನ್ನುವುದು ಮಾಂಸಭಕ್ಷಣ ಮಾಡಿದಂತೆಯೇ ಇರುತ್ತದೆ (ಶ್ರಾವಣ. ೨೦೯). [ಸಂ.]

**ಮಾಂಸಭೇದಿ** (ನಾ). ಒಂದು ಬಗೆಯ ಔಷಧೀಸಸ್ಯ : ಮಾಂಸಭೇದಿ ಅಜಮೂತ್ರದಲ್ಲಿ ಶುದ್ಧಿಮಾಡಿ . . . ಗುಳಿಗೆ ಮಾಡಿ ತ್ರಿಫಲೆಪುಡಿ ಅನುಪಾನದಲ್ಲಿ ಕೊಡುವುದು (ಪಿಶ್ವಾಶಿ. ೨೩).
[ಸಂ. ಮಾಂಸಭೇದಿನ್ = ಮಾಂಸವನ್ನು ಕತ್ತರಿಸುವ]

**ಮಾಂಸಭೋಜನ** (ನಾ). ಬಾಡಿನಿಂದ ತಯಾರಿಸಿದ ಆಹಾರ,—ಊಟ : ದಾನವರ ದಂಪತಿಸಹಸ್ರಮಂ ಪ್ರತಿದಿನಂ ಮಾನವರ ಮಾಂಸಭೋಜನದಿಂದೆ ತಣಿಸಬೇಕು (ಕೈಬಚಾ. ೦೬–೩೦) ; ನಾಯಕನು ಬರುವ ವೇಳೆಗೆ . . . ಅಲ್ಪಾಹಾರವಾಗಿ ಮಾಂಸಭೋಜನವು ಬೇಡಿತ್ತು (ಮಲ್ಲಿ. ೬೨). [ಸಂ.]

**ಮಾಂಸಮೇಹ** (ನಾ). ಮಾಂಸಗತವಾಗಿರುವ ಮೇಹರೋಗಗಳಲ್ಲಿ ಒಂದು ವಿಧ : ಅಡಿಕೆ ಹಗಿನು, ಮುತ್ತುಗ ಹಗಿನು, ಬೇಲದ ಹಗಿನು . . . ಚೂರ್ಣವ ಮಾಡಿ ಶ್ರೀಎಲೆ ಕಷಾಯದಲ್ಲಿ ಸಣ್ಣವಾಗಿ ಅರೆದು ಕಡಲೆಯ ಪ್ರಮಾಣ ಗುಳಿಗೆಯಂ ಮಾಡಿ ಒಂದು ಗುಳಿಗೆ ಜೇನುತುಪ್ಪದಲ್ಲಿ ಕಲಸಿ ಕೊಡಲು . . . ಮಾಂಸಮೇಹ, ಅಸಾಧ್ಯಮೇಹ ಮೊದಲಾದವು ಗುಣ (ಪಿಶ್ವಾಶಿ. ೦೨೨). [ಸಂ.]

**ಮಾಂಸರೋಹಿ** (ನಾ). ಒಂದು ಬಗೆಯ ಸುಗಂಧಸಸ್ಯ : "ಮಾಂಸರೋಹೀ, ಮಾಂಸರೋಹಾ, ಮಾಂಸಚ್ಛದಾ— ಈ ಮೂಱುಂ ಮಾಂಸರೋಹಿಣಿ" (ಓಷಧಿ. ೦೨೯). [ಸಂ. ಮಾಂಸರೋಹೀ]

**ಮಾಂಸರೋಹಿಣಿ** (ನಾ). = ಮಾಂಸರೋಹಿ : "ಮಾಂಸರೋಹೀ, ಮಾಂಸರೋಹಾ, ಮಾಂಸಚ್ಛದಾ — ಈ ಮೂಱುಂ ಮಾಂಸರೋಹಿಣಿ" (ಓಷಧಿ. ೦೨೯). [ಸಂ. ಮಾಂಸರೋಹಿಣೀ]

**ಮಾಂಸರೋಹೆ** (ನಾ). = ಮಾಂಸರೋಹಿ : "ಮಾಂಸರೋಹೀ, ಮಾಂಸರೋಹಾ, ಮಾಂಸಚ್ಛದಾ_ಈ ಮೂಱುಂ ಮಾಂಸರೋಹಿಣಿ" (ಓಷಧಿ. ೦೨೯).
[ಸಂ. ಮಾಂಸರೋಹಾ]

**ಮಾಂಸಲ**, ಮಾಂಸಳ (ಗು). ೧. ಮಾಂಸದಿಂದ ಕೂಡಿದ ; ಪುಷ್ಟವಾದ. ೨. ಶಕ್ತಿಯುತವಾದ ; ದೃಢವಾದ : ಕಂಬಳಿಹುಳು – ಎದೆಯ ಕೆಳಗೆ ಮೂರು ಜೊತೆ ಕೀಲು ಕಾಲುಗಳಲ್ಲದೆ ಹೊಟ್ಟೆಯ ಕೆಳಗೆ ೨ – ೮ ಜೊತೆ ಹೊಟ್ಟೆಯ ಪುಲಂಬ ಮಾಂಸಲ ಕೀಲುಗಳಿಲ್ಲದ ಬದಲು ಕಾಲುಗಳಿವೆ (ಕೀಟಬಿ. ೦೩) ; ರೋಣೆಯಿಂದ ಆಚ್ಛಾದಿತವಾದರೂ ಕೆಳಗಿನ ಚರ್ಮದ ಆರೋಗ್ಯವಂತ ಕಾಂತಿ ಆಡಗಿರದ ಮಾಂಸಲ ಕೈ —ತೋಳುಗಳು (ಮೂರುದಾ. ೨೯೩). (ನಾ). ೩. ಮಾಂಸಭರಿತವಾದುದು ; ಪುಷ್ಟವಾದುದು : ಮಾಂಸಲಂ ರಕ್ತಾದ್ರ್ಯವಾಗಿರ್ದುದಾ ಶವಂ ವಾಲಿ ಬಿಸುಟಂದು ! (ಶ್ರೀರಾಪಮ. ೨೯೦–೩೭೩). ೪. ಬಲವುಳ್ಳವನು ; ಶಕ್ತಿವಂತ : "ಬಲವಾನ್, ಮಾಂಸಲಃ, ಅಂಸಲಃ _ ೩ ಬಲಿಷ್ಠ ಶಕ್ತಿಯುಳ್ಳವನು" (ಸಿದ್ಧಾಂತಿ. ೦೫೦). **ಮಾಂಸಳ** : ೧. ಅಗ್ರುವಿಶೀರ್ಣವಿಷಾಣನಾತ್ತ ಮಾಂಸಳತನು ಬಂದುದಂದು . . . ಪುಂಗವಂ (ಶಂಕ್ಚಕೃ. ೨–೨೯). ೩. ಅತಿದೀರ್ಘಮಾಂಸಳಂ ಹೃತ್ತಶರಂ ಧೃತವಿಜಯಲಕ್ಷ್ಮಿ ಮಾಡಿದುದ್ಯೆರಾವತ ಪುಂಡರೀಕಕರಯುಗವಿರ್ತ್ರಮಂ ಭುಜಯುಗಂ ನಭಶ್ಚರಪತಿಯಾ (ಶಾಂತಿಪು. ೩–೯೪). [ಸಂ.]

**ಮಾಂಸವಿಕ್ರಯಿ** (ನಾ). ಬಾಡನ್ನು ಮಾರುವವನು ; ಮಾಂಸದ ವ್ಯಾಪಾರಿ : "ವೈತಂಸಿಕಂ, ಸೌನಿಕಂ, ಕೌಟಿಕಕ, ಮಾಂಸವಿಕ್ರಯಿಯಾ – ಈ ೪ ಸೂನೆಗಾಱಂ" (ಹಲಾಯು. ೯೭–೪೪೦). [ಸಂ. ಮಾಂಸವಿಕ್ರಯಿನ್]

**ಮಾಂಸವಿದಾರಿ** (ನಾ). ಗಂಟಲಿನಲ್ಲಿ ಉಂಟಾಗುವ ಮಾಂಸದ ಗಡ್ಡೆ : ಕೊರಳೊಳಗೆ ಪಿತ್ತದಿಂದ ಉಂಟಾಗಿ ಅಡ್ಡಲಾಗಿ ದೇಹದಲ್ಲಿ ಸೆಪ್ಪೆ, ಬಾಯಾಱಿಕೆ, ಬಹಳ ವೇದನೆ, ಇವುಗಳ ಉಂಟುಮಾಡುವುದು. ಹೀಗಿದ್ದುದು ಮಾಂಸವಿದಾರಿ ಎನಿಸಿಕೊಂಬುದು (ವೈದ್ಯಶಾ. II. ೦೨೦).
[ಸಂ. ಮಾಂಸವಿದಾರಿನ್ ?]

**ಮಾಂಸಸಂಘಾತ** (ನಾ). ಗಂಟಲಿನ ಮೇಲುಭಾಗದಲ್ಲಿ ಮಾಂಸದ ಗಡ್ಡೆಗಳುಂಟಾಗುವ ಒಂದು ಬಗೆಯ ರೋಗ : ಶ್ಲೇಷ್ಮದಿಂದ ಕಟವಾಯ ಪ್ರದೇಶದಲ್ಲಿ ಮಾಂಸಗ್ರಂಥಿಗಳುಂಟಾಗಿಹವು. ಈ ರೀತಿಯಲ್ಲಿ ಇದ್ದುದು ಮಾಂಸಸಂಘಾತವೆಂಬ ತಾಲುರೋಗವೆಂದಱಿವುದು (ವೈದ್ಯಶಾ. II. ೦೦೩). [ಸಂ.]

**ಮಾಂಸಸೇವನ** (ನಾ). ಬಾಡನ್ನು ತಿನ್ನುವುದು ; ಮಾಂಸಾಹಾರ ಸೇವನೆ: ಬಲ್ಲಡಗಿಲ್ಲದೊಡತುಣಿಸಣಮಿಲ್ಲೀ ಪ್ರಭುಗೆನುತುಮುವನ ತೊಡೆಯಡಗನೆತಳ್ವಿಲ್ಲದವಂಗಿಕ್ಕುವರೇಂ ಪೊಲ್ಲದುದೋ ಮಾಂಸಸೇವನಪ್ರತಿಪಾಪಂ (ಶಾಂತಿಪು. ೭–೯೭). [ಸಂ.]

**ಮಾಂಸಳ** 'ಮಾಂಸಲ' ನೋ.

**ಮಾಂಸಳಿತ** (ಗು). = ಮಾಂಸಲ ೧ : ಕುಳಶೈಲೋನ್ನತನುಗ್ರಶಾತ್ರವಶಿರೋಮಾಣಿಕ್ಯಮಾಲಾಂಶುಮಾಂಸಳಿತಶ್ರೀಪದಪೀಠರತ್ನಕಿರಣಂ ಚಕ್ರೇಶ್ವರಂ (ಆದಿಪು. ೦೨–೦೨೦). [ಸಂ. ಮಾಂಸಲಿತ]

**ಮಾಂಸಾದ** (ಗು). ೧. ಮಾಂಸವನ್ನು ತಿನ್ನುವ. (ನಾ). ೨. ಒಂದು ನರಕದ ಹೆಸರು : ಲಾಕ್ಷಾಪುಲೇಪ ಮಾಂಸಾದ . . . ಕ್ರಿಮಿಕುಲಂಗಳೆಂಬವೇ ರಾಜನರಕಂಗಳು (ಏವೇಳ. ೧೪೦). [ಸಂ.]

**ಮಾಂಸಾಶನೆ** (ನಾ). ಮಾಂಸಾಹಾರವನ್ನು ತೆಗೆದುಕೊಳ್ಳುವವಳು ; ಅಡಗು ತಿನ್ನುವವಳು : ಸುರತಪ್ರಿಯೆ ಮಾಂಸಾಶನೆ ಸರೋಷೆ . . . ಮ್ಲೇಚ್ಛವಿಷಯದಾಕೆ ವಿನೂತೆ (ಶುಠಕ. ೪–೩). [ಸಂ. ಮಾಂಸಾಶನಾ]

**ಮಾಂಸಾಶಿ** (ನಾ). ೧. ಅಡಗು ತಿನ್ನುವವನು ; ಮಾಂಸಾಹಾರಿ. ೨. ದಾನವ ; ರಾಕ್ಷಸ : ದೇವಿ ! ಈ ನಿನ್ನ ಕಣ್ಣುರಿಯಿನೆ ಮಾಂಸಾಶಿಗಳೆಲ್ಲರಟಿಂದರ್ (ಅದ್ಭುತ. ೩೨-೦೬). [ಸಂ. ಮಾಂಸಾಶಿನ್]

**ಮಾಂಸಾಹಾರ** (ನಾ). ಬಾಡಿನಿಂದ ತಯಾರಿಸಿದ ಆಹಾರ,—ಪದಾರ್ಥ: ಜೊಮ್ಮಣ್ಣ ಕೇಶಿರಾಜ ಶಂಕಿಸಿದ್ದಂತೆ ಮಾಂಸಾಹಾರವನ್ನೇನೂ ನೀಡಲಿಲ್ಲ (ಕಡಕ. ೦೦೦). [ಸಂ.]

**ಮಾಂಸಾಹಾರಿ** (ನಾ). = ಮಾಂಸಾಶಿ ೧ : ಮದ್ಯಮಾಂಸಾಹಾರಿಗಳಂ ದೇವರೆಂಬುದು ಮೊದಲಾದುದಱಿಂ. . .ದರ್ಶನಮೋಹನೀಯಕರ್ಮದಾಸ್ರವಮಕ್ಕುಂ (ಕಸಾರ. ೯೭) ; ಮಾಂಸಾಹಾರಿಗಳು ನಿತ್ಯವೂ ಒಂದು ಮೊಟ್ಟೆ ೩ ಔನ್ಸ್ ಮಾಂಸವನ್ನು ಆಹಾರದಲ್ಲಿ ತೆಗೆದುಕೊಳ್ಳಶಕ್ಕದ್ದು (ಗೃಹಶಾ. ೯೭).
[ಸಂ. ಮಾಂಸಾಹಾರಿನ್]

**ಮಾಂಸಿ** (ನಾ). ಒಂದು ಬಗೆಯ ಔಷಧೀಸಸ್ಯ; ಜಟಾಮಾಂಸಿ: ಸಲೆ ಮಾಂಸಿ ನೆಲ್ಲಿ ನೀಲೋತ್ಪಲ ಕಂಜಂ ಕೋಷ್ಠಮೆಂಬಿವಂ ಕಟಿಯಿಂದಂ ತಲೆಯಂ ಪೂಸಲೊಡಂ ಪಱಿದಲೆ ನಿಱಿದಲೆಯಕ್ಕುಂ (ರೋಕೋಶ. ೯-೩೨); ಮಾಂಸಿ = ಜಟಾಮಾಂಸಿಯಂ . . . ಉಪಯೋಗಿಸಲು (ಎಶ್ವಿ. ೦೭೭). [ಸಂ. ಮಾಂಸೀ]

**ಮಾಂಸಿಕ** (ನಾ). = ಮಾಂಸವಿಕ್ರಯಿ: "ಮಾಂಸಿಕ – ಮಾಂಸವನ್ನು ಮಾರಿಕೊಂಡು ಹೊಟ್ಟೆ ತುಂಬಿಕೊಳ್ಳುವವ" (ಗಂಗಾಟು. ೨೫೩). [ಸಂ.]

**ಮಾಕಂದ** (ನಾ). ಮಾವಿನ ಮರ: "ಮಾಕಂದಮೆನೆ ರಸಾಲದ್ರುಮಂ" (ಕಕಕ. ೬೬); ನೀನುಮಾಮುಮೊಡನಿರ್ದಿರವಂ ನೆನೆ ಬಾಳಚೂತಮೇ ಎಂದು ಮಾಕಂದಮಹೀರುಹಮನಪ್ಪಿಕೆಯ್ದು (ಆದಿಪು. ೦೦-೦೨೮ ವ); ಎಳವಳ್ಳಿಗಳೆಡೆಯೊಳ್ಕಂಗೊಳಿಸುವ ಮಾಕಂದದಂತೆ . . . ಎಸೆದಂ . . . ಚಿದಂಗಮುನೀಂದ್ರಂ (ಅದ್ಯಲಿ. ೩-೯೨); ಕುಲತಿಲಕ ಬಾ ಕಂದ ಭರತಾವಳವನದ ಮಾಕಂದ . . . ಬಾ (ಕುವ್ಯಾಸ. ೦೩-೬). [ಸಂ.]

**ಮಾಕರಪ್ಪಿ** (ನಾ). ಒಂದು ಊರಿನ ಹೆಸರು: ಕದಪ್ಪಗ್ರಾಮ ದಕ್ಷಿಣತಃ ಮಾಕರಪ್ಪಿನ್ನಾರ್ಮಗ್ರಾಮಃ (ಇಕ. VI, ೭೩-೦೭; ಕು. 613). [?]

**ಮಾಕರಿಸು** 'ಮಾಂಕರಿಸು' ನೋ.

**ಮಾಕಾಳ** (ನಾ). ೧. ಶಿವನ ಹೆಸರುಗಳಲ್ಲಿ ಒಂದು: "ಮಾಕಾಳ– ಮಹಾಕಾಲ" (ಕರ್ಣಕೋ. ೩೪). ೨. ಶಿವನ ಪ್ರಮಥಗಣದಲ್ಲಿ ಒಬ್ಬ: ಗಟಪದಿರ್ ನೀನೆಂದು ಮುಕ್ಕಣ್ಣನೋಲಗದೊಳ್ ತೆನ್ನೊಡನಾಡಿಗೂಡಿ ಜಡಿದಂ ಮಾಕಾಳನೋರೊರ್ವರಂ (ಕರ್ಣಾ ೨೭೭); ಎಲೆ ನಂದಿ ಮಾಕಾಳ ರುದ್ರರಿರ ನಾನಾವ ಕಾಲದೊಳದ್ರಿಜೇಶನ ಪದಯುಗವನುದ್ಯದ್ಭಕ್ತಿಯೊಳ ರ್ಚಿಸಿ ಬದುಂಕುವ ಪುಣ್ಯವಾದಪುದೊ (ಏಸಕು. ೪೩-೯೭).

[< ಸಂ. ಮಹಾಕಾಲ]

**ಮಾಕಾಳಿ** (ನಾ). ಪಾರ್ವತಿಯ ಹೆಸರುಗಳಲ್ಲಿ ಒಂದು: "ಮಾಕಾಳಿ, ಮಾದೇವಿ, ಸಪ್ಪಾಣಿ, ಐಕಿಲ್ವೆಟ್ಟಣಾಗಿ, ಸಿಂಗದೇರಳ್ — ಈ ೫ ಪಾರ್ವತಿಯ ಪೆಸರ್" (ಕಕಶಾ. ೧-೨); ಕಾಳಧ್ವಜನಿಱಿವೆಡೆಯೊಳ್ ಲೀಳೆಯಿನಂ ದಾಯ್ದು ಕೋದು ತೊಟ್ಟಿರ್ದ ಶಿರೋಮಾಳೆಯ ದಲ್ ಮಾರಿಯ ಮಾಕಾಳಿಯ ಚಂಡಿಕೆಯ ಕೊರಲ ಮಾಲೆಗಳೆಲ್ಲಂ (ಜಗು. ೬-೪೩); ಚೋಳನನಟ್ಟಿ ತಿಂಬ ಮಾಕಾಳಿ (ಎಕ. VI. ಶಕ್ಯಪು. ೦೦೪-೦೩: 1202); ಹೆಸರುಳ್ಳ ಮಾಕಾಳಿಯುಂಟು ಚಾಮುಂಡಿಯುಂಟೊಸೆದೇನ ಬೇಡಿದೊಡೀವ ಬೆಸನುಳ್ಳ ಕುಟಿಲದೇವತೆಗಳುಂಟು (ಕುರಾಕಾಂ. ೨೪-೩೪). [< ಸಂ. ಮಹಾಕಾಲೀ]

**ಮಾಕಿ** (ನಾ). ಒಬ್ಬಾತನ ಹೆಸರು: ತುಱುವ ಮೊಱುಕರ್ಕೊಳೆ ಬೆಣ್ಣರ ಮಾಕಿ ಕಾದಿ ಇಕ್ಕಿಸಿ ಸತ್ತು ಸಗ್ಗಸ್ಥನಾದಂ (ಎಕ. X (S), ಮುಳಬಾ. ೩೦೭-೩; ಕು. 950). [?]

**ಮಾಕಿಮಯ್ಯ** (ನಾ). ಒಬ್ಬಾತನ ಹೆಸರು: × × × ಮಾಕಿಮಯ್ಯ ನಾಯಕಂ [ಬ]ರದಂ (ಕೌಇ. XI-i, ೨೨-೩೦: 897). [< ಮಾಕಿ + ಅಯ್ಯ$_1$]

**ಮಾಕುವರ** (ನಾ). ಲಕ್ಷ್ಮಿಯ ಪುತ್ರ; ಮನ್ಮಥ: ಶೋಕವನು ನಿಲಿಸಿ ಶಿವಶರಣಶವಮಂ ತರಿಸಿ ಮಾಕುವರ ಹರರೂಪಜಂಗಮನಾಕ್ಷಣದಿ ತಾ ಕರೆಸಿ ಉನ್ನತಾಸನದಿ ಕುಳ್ಳಿರಿಸಿ ಜಲ ತಂದು ಚರಣವನು ತೊಳೆದು (ಪ್ರಶರಾ. ೦೬-೦೩). [ಮಾ$_5$ + ಕುವರ$_2$]

**ಮಾಕ್ಷಿಕ** (ಗು). ೧. ಜೇನುಹುಳುವಿನ: ವಾತಪಿತ್ತಶ್ಲೇಷ್ಮದೋಷ ದೂಷಿತಮುಂ ಅಪ್ಪ ಶರೀರಮುಂ ಮಾಕ್ಷಿಕಪತ್ರಸನ್ನಿಭಚರ್ಮಾವರಣಮಿಲ್ಲದೊಡೆ ನೋಡಲುಂ ತೀಡಲುಂ ಕಾಕೋಲೂಕಮಕ್ಷಿಕಾದಿಕೃತಪೀಡೆಯುಂ ಕಾಯಲುಂ ಬಾರದು (ಕಶ್ಯಕ್ರ. ೩೭೯). (ನಾ). ೨. ಜೇನುತುಪ್ಪ; ಮಧು: "ಸಾರಘಂ, ಮಾಕ್ಷಿಕಂ, ಕ್ಷೌದ್ರಂ, ಮಧು, ಪುಷ್ಪರಸಃ — ಈ ೫ ಜೇನುತುಪ್ಪಂ" (ಶಬಾಯು. ೦೦೨-೪೭೭); ಮಾಗಧ ಲೋಧ್ರಂ ಮಾಕ್ಷಿಕ ನಾಗರಮುಸ್ತಾ ಪ್ರಿಯಂಗುವಂ ಕಣ್ಗೊಳ್ ಸಂಯೋಗಂಗೆಯ್ದುದು ಹೇಮಂತಾಗಮದೊಳ್ ಕುಡೆ ಮನೋಹರಂ ಪ್ರತಿಪಾನಂ (ಅಕ್ಕಾ. ೭-೬೩); ಆ ಕಪಿಪ್ರವರ ಮನದೊಲವಿಂದ ಮಧುಪಾನಹರ್ಷದಿಂದೀ ಪರಿಯ ನಲಿವೃತ್ಯತಂದು ಮನಬಂದಂತೆ ಮಾಕ್ಷಿಕವನುಣಲು (ಮಂಶಾರಾ. ೩-೨೦-೩). ೩. ಜೇನುಹುಟ್ಟಿನಿಂದ ಸಿಗುವ ಮೇಣ; ಜೇನುಮೇಣ: "ಮಾಕ್ಷಿಕಂ, ಮಾಕ್ಷಿಕಾ – ಈ ಯೆರಡುಂ ಜೇನ ಮೇಣ" (೭ಶಧಿ. ೦೨೪). ೪. ಕಬ್ಬಿಣ ಮತ್ತು ಗಂಧಕದ ಸಂಯುಕ್ತಧಾತು; ಸೋನಾಮುಖಿ: ತ್ರಿಕಟುಕ. ತ್ರಿಫಲ, ಕೊನ್ನಾರಿಗೆಡ್ಡೆ, ವಾಯುವಿಳಂಗ, ಚವ್ಯ, ಚಿತ್ರಮೂಲ ಲವಂಗ ಚಕ್ಕೆ, ಏಲಕ್ಕಿ, ಮೋಡಿ, ಮಾಕ್ಷಿಕಭಸ್ಮ . . . ತೆಗೆದುಕೊಳ್ಳಲು ಕಾಸ, ಶ್ವಾಸ . . . ವಾತಗಳೂ ಸಹ ಮಾಣುವುವು (ಕಶವ್ಯ. ಶಂ. ೯೩೭). ೫. (ಆಲಂ) (ನೊಣದಂತೆ) ಹೆಚ್ಚು ಪ್ರಯೋಜನವನ್ನು ಪಡೆಯದ ವ್ಯಕ್ತಿ: ದ್ರಾಕ್ಷಿರಸವೇನಲ್ಲ ಜೀವನದ ತಿರುಳಾರ್ಗಂ ಇಕ್ಷುದಂಡದವೊಲದು ಕಷ್ಟಭೋಜನವೆ ದಕ್ಷತೆಯಿನಿಡಿಯುವಂಗೊಂದೆರಡುಗುಟುಕುರಸ ಮಾಕ್ಷಿಕರು ಮಿಕ್ಕಲ್ಲ (ಮಂಕುತಿ. ೨೭೦). [ಸಂ.]

**ಮಾಖಂಡಭಟಾರ** (ನಾ). ಒಬ್ಬಾತನ ಹೆಸರು: ಶ್ರೀಮತ್ತದ್ವಯ್ಯ ಮಾಖಣ್ಣಭಟಾರರ್ಗ್ಗೆ ವಿದ್ಯಾದಾನಗೊಟ್ಟ ಮಣ್ಣು ಬಟ್ಟಮಾಳಯ್ಗಣ್ಡಗಂ (ಎಕ. V, ಅರಕ. ೨೪-೭; ಕು. 900). [ಮಾಖಂಡ ? + ಭಟಾರ]

**ಮಾಗ, ಮಾಗಿ, ಮಾಗೆ** (ನಾ). ಚಳಿಗಾಲ; ಶಿಶಿರಋತು; **ಮಾಘ** ಮಾಸ: "ಮಾಗ (ಗೆ, ಮಾಗಿ) — ಮಾಘ = ಒಂದು ಮಾಸ" (ಕರ್ಣಕೋ. ೩೪); ಒಗೆದಾಗಳ್ ಮಾಗದುರ್ಕಂ ಪೊದಲೊಳೆ ತವೆ ತೂಳ್ದಿಕ್ಕಿ . . . ಬಂದತ್ತದೊಂದದ್ಭುತಮೊದವಿದಮೋಘಂ ಮಿಮೋಘಂ ನಿದಾಘಂ (ಕುಸುವಶಾ. ೬-೦೦೩); ಮಾಗದಲಿ ಮಿಂದಿಹನು ಚೂಗ ತಾ ಪಿಡಿದಿಹನು ಯೋಗ ಧ್ಯಾನಗಳ ತೊಱೆದಿಹನು ಹಾರುವನು ಭೋಗಿಯಾಗಿಹನು (ಸರ್ವಜ್ಞ. ೯೦೩); ಮಾಘ, ಮಾಗ (ಕಶಾ ಪು. ೦೪೩ ಶ್ರದೋ). **ಮಾಗಿ**: "ಹೇಮಂತಮೆನೆ ಮಾಗಿಯಕ್ಕು" (ಮಂಗರಾ. ೨೩-೦೩); ಇಂದುಕಿರಣಂಗಳಿಂದಂ ಚಂದನರಸದಿಂದೆ ಮಾಗಿಯಾ ನೀರಿಂದು ನಂದದು ಪರಿತಾಪಾನಳಂ (ಕಶಾ. ೩-೦೭೩); ಉದಯದ ಮಾಗಿಯ ಬಿಸಿಲು ಅಂಗಕ್ಕೆ ಹಿತವಾಯಿತ್ತು (ಬಸವ. ೨೦೪); ಅಂಚೆಗಳುಡುಗವು ಮಳೆಗಾಲದೊಳ್ಕೋಗಿಲೆಗಳಿಂಚರವನುಳಿದಿರವು ಮಾಗಿಯೊಳ್ (ಕ್ಷಮಾ. ೦೩-೦೬). **ಮಾಗೆ**: ಕಿಚ್ಚು ಸುಂದರ್ಗಂಗೆ ಮಾಗೆಯೊಳ್ ಕೆಯ್ಗಂತೆ ಬೇಸಗೆಯೊಳ್ಳಕೆಯ್ಗುಮೆ (ಜೀವಸಂ. ೦೩-೨೩ ವ); ಸೋರದ ನಿವಾತಮಪ್ಪಾಗಾರಂ ಮಱಿಗಾಲದಂತು(ದು) ಮಾಗೆಯ ದಿವಸಕ್ಕೋರಂತಿ ರಾತಪಚ್ಛಾಯಾಗಾರಂ ತಾಂ ಗ್ರೀಷ್ಮಕಾಲದೊಳ್ ಸುಸ್ಥಾನಂ (ಅಕ್ಕಾ. ೭-೩); ಮಾಗೆಯ ಬೆಳ್ಮುಗಿಲಾಗಸದಂತಿರೆ ಭಸಿತೋದ್ಧೂಳಿತಲಸಿತಲಲಾಟಂ ಕಣ್ಗೊಳಿಸೆ (ರಾಮಾಶ್ವ. ೪೦-೦೭). [< ಸಂ. ಮಾಘ]

**ಮಾಗಡಲು** (ನಾ). ದೊಡ್ಡಕಡಲು; ಮಹಾಸಮುದ್ರ: ಮರೆವಿನ ಮಾಗಡಲಿನಲ್ಲಿ ತೇಲುತಿಹುದು ವೇದವು ಆ ಅನಂತಭೇದವು (ಸೂರ್ಯಶಾ. ೪೧-೦೦). [ಮಾ$_4$ + ಕಡಲು (< ಕಡಲ್$_2$)]

**ಮಾಗಣಕಾಜಿ** (ನಾ). ಒಂದು ಹೋಬಳಿಯ ಅಧಿಕಾರಿ: ಶ್ರೀಮತು ಮಲ್ಲಿಕಾರ್ಜುನದೇವರಿಗೆ ವಿರುಪಣ್ಣವೊಡೆಯ × ದಮ್ರ್ಮವಾಗಿ ತಳಕಾಡ ಮಾಗಣಕಾಜಿ ಲಿಂಗತರು ಸೋಮನ ಹಳಿಯ ಮಾಳಿಗೆಯ ಮಾರನ ಮಗನು ಆಚಂದ್ರಾರ್ಕಸ್ಥಾಯಿಯಾಗಿ ದೀಪಾರಾಧನೆಯ ನಡಸುವರು (ಎಕ. XIV, ತಿರುಮ. ೨೪೩-೩; ಕು. 1384). [P ಇದು 'ಮಾಗಣಿಕಾಜಿ' ಎಂಬುದರ ಅಪಲಿಖಿತವಿರಬಹುದು]

**ಮಾಗಣೆ$_1$, ಮಾಗಣಿ** (ನಾ). ೧. ತಾಲ್ಲೂಕಿನ ಒಂದು ಭಾಗ; ಹೋಬಳಿ: ಶ್ರೀವೀರಕೃಷ್ಣರಾಯರು ನಮಗೆ ಮಾಗಣೆಆಗಿ ಕೊಟ್ಟ ಆದವಾನಿಯ ದುರ್ಗಕ್ಕೆ ಸಲುವ ಕರಿಯ ಬೆಳುಗಲ್ಲ ಗ್ರಾಮದಲ್ಲು ಕೃಷ್ಣ

ಭೂಮಿ ಖ ೧೦ (ಎ೦ಇ. IX – ii, ೪೪೮-೦೨; 1514) ; ಕೆಳದಿಯಿಕ್ಕೇರಿ . . . ಲಾತವಡಿಯೆಂಬೀ ವಿಲಸನ್ಮಾಗಣೆಗಳೆಟುವಂ ನಿಮಗೀವೆಂ (ಕಳಕ್ಷ. ೦-೯೬) ; ಮುಮ್ಮಡಿಯ ಬೆಟ್ಟದ ಚಾಮರಾಜಂ . . . ನಿಜಕುಟುಂಬಂ ಬೆರಸು ತೆರಕಣಾಂಬಿಯೆಂಬ ಮಾಗಣೆಯನಯ್ದಿ ವಂದು (ಮಾಶಾ. ೦-೬೨ ಪ). **ಮಾಗಣೆ** : ೧. ಕಳಸಾಪುರದ ಮಾಗಣೆಗೆ ಸಲುವ ದೇವಶಾಪುರದ ಗ್ರಾಮದಲ್ಲೂ (ಎ೦ಇ. IV, ೨೪೩-೦೮ ; 1541) ; ಕೆಲವು ಮಾಗಣೆಗಳು ಯುದ್ಧದಲ್ಲಿ ಸಹಾಯಮಾಡಿದ ಕೊಡಗುರಾಜನಿಗೆ ಕೊಡಲ್ಪಟ್ಟವು (ರಕಕ. ೨೦) ; ನನ್ನ ಹೆಣ್ಣಿನ ಮೇಲೆ ದಿಟ್ಟನಡುವ ಧಿಮಾಕು ಈ ಮಾಗಣೆಯಲ್ಲಿ ಯಾವ ಗಂಡೆದೆಗೆ ಇದೆ ಎಂತೇನೆ (ಹೂಕ್ಕ. ೫೦). ೨. ಹರಹು ; ವಿಸ್ತಾರ : ಕಡಲ ಮಾಗಣೆಯಾಯ್ತು ವಾರಿಯು ಕಡಿತ ಮನ್ನ ಥಸಲಗುಗೊಂಡನು ನುಡಿಸಿದನು ವಿಕಹಿಣಿಯರಂಗದಲಂತರವ್ಯಥೆಯು (ಓಗ ೦೦-೨೮-೨೬).

**ಮಾಗಣೇಮಣೆಗಾರ** = ಹೋಬಳಿಯ ಅಧಿಕಾರಿ : ಇನ್ನೊಮ್ಮೆ ಅಲ್ಲಿಗೆ ಹೋಗಿ ಮಾಗಣೇಮಣೆಗಾರರ ಹಾಗೆ ಸ್ಥಳತನಿಖೆ ಮಾಡಿಕೊಂಡು ಬರಬೇಕು (ಮೂಕಕ್ಕ. ೦೭೬).

[ದೇ.₁ ತಮಿ. ಮಾಕಾಣ ; ಮಲ. ಮಾಕಣ ; ತುಳು. ಮಾಗಣೆ ; ತೆಲು. ಮಾಗಾಣಿ]

**ಮಾಗಣಿ₂** 'ಮಾಗಣೇ' ನೋ.

**ಮಾಗಣಿಕಾಬ** (ನಾ). ಹೋಬಳಿಯ ಅಧಿಕಾರಿ : ಮಾಗಣಿಕಾಬಿರ ಬಡಹನಿಗೆ ಕಾಣಿಚಿ × × × ಲ್ಲಿಯ ಮಹಾರಾಯರು ಕೇಳಿ . . . ಯಿ ಧರ್ಮ್ಮವ ಆಚಂದ್ರಾರ್ಕವಾಗಿ ನಡೆವ ಹಾಗೆ ಬಿಡಿಸಿ ಕೊಟ ಗ್ರಾಮಂಗಳ ಶಿಲಾಶಾಸನ (ಎಕ. III(R), ಕಂ೫ಪ. ೯೩-೦೨; 1529) ; ಕನಕರತ್ನಾಂಚಿತದುವ ಕರಣಗಳ ಸದ್ವಿನಿಯೋಗದವರ ಚಿತ್ತೈಸು ಧನದತ್ತ ಮಾಗಣಿಕಾಬ ನಿಯೋಗಸಜ್ಜನರ ಚಿತ್ತೈಸು (ಪೋಕಚ. ೨೦-೩೬).

[ಮಾಗಣಿ₂ + –ಕಾಬ]

**ಮಾಗಣೇ**, ಮಾಗಣಿ₂ (ನಾ). ೧. ಕೋರಿಕೆ ; ಬೇಡಿಕೆ : ಎರಡರ ಪೈಕೀ ಬೇಕಾದ್ದು ಒಂದ ಮಾಗಣೇಗೆ ಶ್ಯಾಮರಾಯ ಕಬೂಲ ಆದರ ಬಂದ ತಿಳಿಸರಿ (ದೀಕಚ. II. ೬೦೬). ೨. ಲಗ್ನದ ನಿಶ್ಚಯಕ್ಕಾಗಿ ವಧುವನ್ನು ವರಪಕ್ಷದವರು ಕೇಳುವುದು. **ಮಾಗಣಿ₂** : ೧. ಹುಡುಗನು ಮುಂದೆ ಕೆಲನಿಮಿಷಗಳಲ್ಲಿಯೇ ತಂದೆಗೆ ದುಂಬಾಲುಬಿದ್ದು ೬-೮ ನಯೆಪೈಸೆಗಳ ಪೆಪ್ಪರಮೆಂಟ ಇಲ್ಲ ಚಾಕಲೇಟ್‌ಗಳ ಮಾಗಣಿ ಮುಂದರಿಸುವನು (ಹುತ್ತುಹು. ೫೭).

**ಮಾಗಣಿಹಾಕು** = ಮದುವೆಗಾಗಿ ಹೆಣ್ಣನ್ನು ಕೇಳು: ಅವನ ಮಾಲ್ಕೀ_ ಜಹಾಗೀರೀದಾರಿಯಾದ ಬಸವಂತಿಗೇ ಮಾಗಣಿಹಾಕಿದ (ದೀಕಚ. II. ೬೨೦).

[ ←ಹಿಂ. ಮಾಂಗನ್ ; ಮರಾ. ಮಾಗಣೀ, ಮಾಗಣೇ. / ಪ್ರಾ. ಮಗ್ಗಣ. / ಸಂ. ಮಾರ್ಗಣ]

**ಮಾಗಣೆ** ' ಮಾಗಣಿ₁ ' ನೋ.

**ಮಾಗತೆ** ' ಮಾಗದಿ ' ನೋ.

**ಮಾಗದಿ**, ಮಾಗತೆ, ಮಾಗದೆ (ನಾ). ಹೊಗಳುವವಳು ; ಸ್ತುತಿ ಮಾಡುವವಳು : ಕೇರಿಕೇರಿಯೊಳು ಮಾಗದಿಯರುಂ [ಶಾಕಾಂ. ತಿಯರು, ಧಿಯರುಂ, ಧರುಗಳ್] ಭಲರೆ ಭಲರೇ . . . ಪುರುಷರ ಭಾಗಧೇಯ ಎನುತ್ತ ಕೈವಾರಿಸುತ ಬರೆ ಮುಂದೆ (ಐಕಪ್ರ. ೨೬-೬). **ಮಾಗತೆ** : ಶ್ರುತಿಗಳೇ ಕೈವಾರಿಸುವ ಮಾಗತೆಯರಖಿಳಾಗಮಪುರಾಣಪ್ರತತಿಯೇ ಪಾಠಕರು . . . ಆ ತ್ರಿಯಂಬಕನ (ಕೊರಿಚಾ. ೦-೨-೫). **ಮಾಗದೆ** : ಸುರವಾಗದೆಯರುಬ್ಬಿ ಕೊಂಡಾಡಿವರು (ಕೂರಿಚಾ. ೬-೫೦-೭೨).

[< ಸಂ. ಮಾಗಧೀ]

**ಮಾಗದೆ** ' ಮಾಗದಿ ' ನೋ.

**ಮಾಗಧ₁** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು : ಹಿಪ್ಪಲಿ : " ಮಾಗಧಂ ಕೃಷ್ಣಮೆನಲು ಹಿಪ್ಪಲಿಯೆನಿಕ್ಕು " (ಮಂಗಣಿ. ೯೦-೩೬) ; ಸುರಕುಜದ ಬೀಜಂ ಮದ್ಯಂ ರಜನಿ ಮಾಗಧ . . . ಗುಂಜಾಫಳವಿಂವಂ ಪರಿಕ್ಲಿನ್ನಂ ಮಾಡಿಟ್ಟೊರಸಿ ಮೊದಲೊಳ್ ಪಾಲನೆಟಿ ಗೊಯ್ದಿರ್ದುಳೆ ಪೂಗೊಂಚಲಿಂದೆಜಿಗುಗುಂ ಚಂಪಕಕುಜಂ (ಲೋಕೋಕ. ೬-೯೩). [ಸಂ. ಮಾಗಧಾ]

**ಮಾಗಧ₂** (ಗು). ೧. ಮಗಧದೇಶಕ್ಕೆ ಸಂಬಂಧಿಸಿದ ಅಥವಾ ಮಗಧ ದೇಶದಲ್ಲಿ ಜೀವಿಸುವ. (ನಾ). ೨. ಮಗಧದೇಶದ ದೊರೆ : ನಿಜ ವಾಕ್ಸೌಂದರ್ಯದೆ ಪೋಲ್ತಂ ಪುರುನಂದನನಂ ಪೊಗಟ್ಟ ಮಾಗಧಂ ಮಾಗಧನಂ (ಆದಿಪು. ೦೨-೦೦೫) ; ಕೌಸಲ ಚೈದ್ಯ ಮಾಗಧರು ಅರಸುಗಳು ನಾನಾದಿಗಂತದ ಧರಣಿಪರು ಸಚಿವರು ಪಸಾಯ್ತರು ನೆರೆದುದು (ಕುವ್ಯಾಕ. ೦೪-೩೦). ೩. ಜರಾಸಂಧ : ಮಾಗಧನಾಯುಸ್ಸಮುಮಂ ಬೇಗಂ ಬೆದಱುವ ಹಿಮಾಂಶುರುಚಿಗಳವೆನಲಂತಾಗಳೆ ದಶನೇಂದುದ್ಯುತಿಯಾಗಲೆ ಸಭೆಯೊಳಗೆ ಕೃಷ್ಣನವರ್ಗಿಂತೆಂದಂ (ಜೀಪುಕ್ರ. ೦೦-೦೦೬) ; ಮಾಗಧನ ಮಂದಿರದ ರಾಜಾಂಗಣದೊಳವನೀಸುರರು ನೋಟಕರಾದರಲ್ಲಿ ಮುರಾರಿ ಫಲುಗುಣರು (ಕುವ್ಯಾಸ. ೨-೯೯). ೪. (ಸಾಮಾನ್ಯವಾಗಿ ಸ್ತುತಿಪಾಠಕನ ವೃತ್ತಿಯನ್ನು ಅವಲಂಬಿಸುವ) ವೈಶ್ಯಪುರುಷನಿಗೆ ಕ್ಷತ್ರಿಯಸ್ತ್ರೀಯಲ್ಲಿ ಜನಿಸಿದವನು. ೫. ಹೊಗಳುಭಟ್ಟ ; ಸ್ತುತಿಪಾಠಕ : "ಪ್ರಬೋಧಕಾಃ, ಮಾಗಧಾಃ . . . ಮಂಗಳಪಾಠಕಾಃ-ಈ ೬ ಮಂಗಳಪಾಠಕರ್" (ಹಲಾಯು. ೬೦-೨೯೦) ; ದೆಸೆಗೆ ಪೊಣ್ಮುವ ನಿಜವಾಕ್ಸೌಂದರ್ಯದೆ ಪೋಲ್ತಂ ಪುರುನಂದನನಂ ಪೊಗಟ್ಟ ಮಾಗಧಂ ಮಾಗಧನಂ (ಆದಿಪು. ೦೨-೦೦೫) ; ಕಂಸಂ . . . ವಂದಿಗಳ್ ನಿಂದ್ಯಮೆನೆ ಮಾಗಧರಾಗದೆನೆ . . . ಪಾಸಱಿಯೊಳ್ ಕೂಸನ ಪ್ಪಳಿಸಿ (ಜಗ. ೨-೫೩ ಪ) ; ಮಾರವೀರನ ಕಟ್ಟೋಲಗದ ವಂದಿಗಳ ಮಾಗಧರ ಗಾಯಕರ ಪಸುರ್ವಟ್ಟೆಯ ಗೂಡಾರದ ಬೀಡಾರಂ (ದಾಕೂಕ್ರ. ೫೩-೦೦). [ಸಂ.]

**ಮಾಗಧಿ** (ನಾ). ೧. ಮಗಧದೇಶದ ರಾಜಕುಮಾರಿ : ಘುಡುಘುಡಿಸಿ ಮಾಗಧಿಯ ಮಗನಲಿ ಜಡಿದವಿಳಿಗಶ್ರುಗಳು (ಕೊರಿಚಾ. ೫-೯-೨೫). ೨. ವೈಶ್ಯಪುರುಷನಿಗೆ ಕ್ಷತ್ರಿಯಸ್ತ್ರೀಯಲ್ಲಿ ಜನಿಸಿದವಳು. ೩. ಹೊಗಳುವವಳು ; ಸ್ತುತಿಸುವವಳು : ಮಹಾಶ್ವೇತೆಯ ಕಣ್ಣಱಿದು ವೇಣುರವಂಗಳುಮಂ . . . ಮಾಗಧಿಯರ ಜಯಶಬ್ದಂಗಳುಮಂ ಪ್ರತೀಹಾರಿಯರ್ ನಿವಾರಿಸುತ್ತಮಿರ್ದರ್ (ಕಾದಂಉ. ೯೬). ೪. ಒಂದು ಬಗೆಯ ಸಸ್ಯ ಮತ್ತು ಅದರ ಬೇರು ; ಹಿಪ್ಪಲಿ : "ಕೃಷ್ಣಾ, ಉಪಕುಲ್ಯಾ, ವೈದೇಹೀ, ಮಾಗಧೀ, ಪಿಪ್ಪಲೀ ಕಣಾ–ಈ ೬ ಹಿಪ್ಪಲಿ" (ಹಲಾಯು. ೦೦೦-೯೬೦). ೫. ಪ್ರಾಕೃತಭಾಷಾವರ್ಗಕ್ಕೆ ಸೇರಿದ ಒಂದು ಭಾಷೆ : ಈ ದೃಶ್ಯಕಾವ್ಯದಲ್ಲಿ . . . ಬೇಡರ ಜಾತಿ ಸ್ತ್ರೀಯರು ಮುಂತಾದವರಿಗೆ ಮಾಗಧೀಭಾಷೆಯೂ . . . ವ್ಯವಹಾರಾರ್ಹವಾಗಿ ವಿಹಿತವಾಗಿರುವುದು (ಶಾಕದ. ೯೩೫). ೬. ಒಂದು ಬಗೆಯ ಕಾಡುಮಲ್ಲಿಗೆ ; P ಇದನ್ನು ಸೇವಂತಿಗೆಯೆಂದೂ ಕೆಲವರು ಹೇಳುತ್ತಾರೆ : "ಮಾಗಧೀ, ಯೂಥಿಕಾ_ಈ ೨ ಸೇವಂತಿಗೆ" (ಹಲಾಯು. ೩೯-೩೩). ೭. [ಕಾವ್ಯಮೀ] ಕಾವ್ಯದ ರೀತಿಗಳಲ್ಲಿ ಒಂದು : ಕೆಲವರು 'ಲಾಟ', 'ಆವಂತಿ', 'ಮಾಗಧಿ' ಈ ಮೂರನ್ನೂ ಸೇರಿಸಿ ರೀತಿಗಳು ಆರೆಂದೂ ಹೇಳುತ್ತಾರೆ (ಕೈಶಿ. ೨೨೦). [ಸಂ. ಮಾಗಧೀ]

**ಮಾಗಧೀಲತೆ** (ನಾ). ಒಂದು ಬಗೆಯ ಕಾಡುಮಲ್ಲಿಗೆಯ ಬಳ್ಳಿ : ವರ್ಣಮೊಱಬ ಯೋಗವೆಂದೆನೆ ತೋಱುತಿರ್ದುದು ಮಾಗಧೀಲತೆ ಕುಸುಮಕೇಸರದಿಂದ ಜನಮನವ (ಕಾಶಿರಾ. ೦-೯೬). [ಸಂ. ಮಾಗಧೀಲತಾ]

**ಮಾಗರಯ್ಯ** (ನಾ). ಒಬ್ಬಾತನ ಹೆಸರು : ಮಾಗರಯ್ಯ ಪಣ್ಣಪೆಣ್ಡಿರನುಡೆಯುಟ್ಟಿಲುಮೆಟ್ಟಿನ ತುಱುಗಳೊಳುಮಟ್ಟಿ ಸತ್ತನ್ (ಎಕ. X, ಮುಳಬಾ. ೦೬೦-೦ ; ಕು. 950). [ಮಾಗರ೦ + ಅಯ್ಯ₁]

**ಮಾಗಳಿ**, ಮಾಗುಳಿ (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು; P ಈ ಬೇರನ್ನು ಕೆಲವು ಔಷಧದ್ರವ್ಯಗಳಿಗೂ ಉಪ್ಪಿನ ಕಾಯಿ ಮಾಡಲೂ ಬಳಸುತ್ತಾರೆ: ದೇವದಾರು, ಮಾಗಳಿ, ಕಾಡುಮಾಗಳಿ . . . ಮುಡಿವಾಳ ಇವಿಷ್ಟನು ಪ್ರತ್ಯೇಕ ಎರಡುವರಹ ತೂಕ ಮಜ್ಜಿಗೆ ಯಲ್ಲರೆದು (ವೈದ್ಯಸಾ. I, ೧೨೬) ; ಅಗರಡಕೆ ಎಲೆ ಕಡ್ಲೆ ಕಬ್ಬಿಪ ರಾಜ್ಯ ಮಾಗಳಿಭೂಮಿ ಎಂಬುವರು (ಶಠಂ. ೫೬೬). **ಮಾಗುಳಿ** : ಎಳಮಾವಿನ ಮಿಡಿ ಮಾಗುಳಿ ಮೆಣಸಿನ ಕರೆ ಬೆತ್ತಲಟ್ಟೆಯಿಾಳೆಯ ಗೊಲೆಯಿಂದಳವಟ್ಟಿರೆ ಲಾವಣಕಂಗಳನಿಕ್ಕಿದರಾಗಳುಚ್ಚಿಯಿಂದಂಗನೆಯರ್ (ಸುಕುಮಾ. ೧೧-೫೦) : ಬೆಳರ್ಗಂಪಂ ತಳೆದಲ್ಲ ಮಾಗುಳಿಗಳಂ ಕೂಷ್ಮಾಂಡ ವೃಂತಾಕಕೋಮಳನಾನಾ ಫಳಶಾಕಪಾಕದುಪದಂಶಾನೇಕಮಂ ತಂದು. . . ಬಡ್ಡಿಸಿದರ್ (ಶಾಂತೀಶ್ವ. ೧೫-೬೦) ; ಅದಕುತ್ತಮದ ಕಂಪ ಮಾಗುಳಿ [ಪಾಠಾಂ. ಳ್ಳಿ]ಯ ಬೇರಿನೊಳು ಪೊಡೆಮೆರಸಿಡುವುದು (ಸೂಶಾ. ೩-೨೬).

**ಮಾಗಳಿಬೇರು**, ಮಾಗುಳಿಬೇರ್, ಮಾಗುಳಿವೇರ್ = ಮಾಗಳಿಸಸ್ಯದ ಬೇರು : ಮಾಗಳಿಬೇರು, ಕಾಡುಮಾಗಳಿಬೇರು . . . ಮುಡಿವಾಳ ಇವುಗಳನ್ನು ಪ್ರತ್ಯೇಕ ಎರಡು ವರಹ ತೂಕವನ್ನು ಚೂರ್ಣಿಸಿ ಮಜ್ಜಿಗೆ ಯಲ್ಲರೆದು (ಸಳವೈ. ೧೦೫); ಸೈದಲೆಎಸಳು ಸಹದೇವಿಯುಂ ಬಿಳಿಜಾಲ ಮಾಗಳಿಬೇರಂ ಇವೆಲ್ಲವಂ ಚೂರ್ಣವಂ ಮಾಡಿ ಎಣ್ಣೆಯೊಳಟ್ಟು ಆಯೆಣ್ಣೆ ಕಣ್ಣೊಳ್ ಪೂಸಲು ವಶೀಕರಣಂ (ಕಾಮಸಾ. ೨೬೩); ಮಾವಿನ ಕಾಯ್ಗಳೊಪ್ಪ ವೆಳಗಪ್ಪುರ ಮಾಗುಳಿಬೇರ್ ಸುಧಾರಸು ತೀವಿರೆ ಕಂಪು ಪೊಂಪುಳಿಸುವುಪ್ಪಿನ ಕಾಯ್ಗಳನೇಕಮಂ ಕಳಾಕೋವಿದೆಯರ್ ಕಿಲಂಬಿಡಿಯಲಿಕ್ಕಿದರ್ (ಪಳಶಾ. ೯೬೨); ಪಿಪ್ಪಲಿ ಚಲ್ಲಗಾಯ್ ಮೆಣಸು ಮಾಗುಳಿವೇರ್ಮೊಳೆಯಲ್ಲವೇಲೆ . . . ಅರೆಮಾದುಫಲಂಗಳಾದಿಯಾದುಪ್ಪಿನ ಕಾಯ್ಗಳು ಮಗಮಗಿಪ್ಪವನಿಕ್ಕಿದನಚ್ಚ ಪತ್ರದೊಳ್ (ರೀಶಾವ. ೫-೬೩). [ದೇ.॥ ತಮಿ. ಮಾಕಾಳಿ, ಮಾವಲಿ]

**ಮಾಗಳಿಗೆಣಸು** (ನಾ). ಮಾಗಳಿಸಸ್ಯದ ಬೇರು : ಮಾಗಳಿಗೆಣಸು. ನೆಲಮಾಗಳಿಬೇರು , . . ತಿಗಡೆ, ಪದ್ಮಕ, ಶ್ರೀಗಂಧ, ಇವಿಷ್ಟನೂ. . . ಪ್ರತ್ಯೇಕ ನಾಲ್ಕುವರಹ ತೂಕವ ಸೇವಿಸಲು ಬಿಕ್ಕಳುನುಡಿ, ನೆನಹು ಇವೆಲ್ಲವೂ ಪರಿಹರವಹವು (ವೈದ್ಯಸಾ. II, ೫೩). [ಮಾಗಳಿ + ಗೆಣಸು (< ಗೆಣಸು) ]

**ಮಾಗಟಿನಾಡು** (ನಾ). ಒಂದು ಊರಿನ ಹೆಸರು : ಶ್ರೀಮನ್ನೊಟಮ್ಬ ಕುಳಾನ್ತಕ ಪೆರ್ಮ್ಮಾನಡಿಗಳ್. . . ಮಾಗಟಿನಾಡ ರಾಜಧಾನಿಯೊಳಲ ಬೀಡಿನೊಳ್ ಸುಖಸಂಕಥಾವಿನೋದದೊಳ್ ಪ್ರಿಥುವೀರಾಜ್ಯಂಗೆಯುತ್ತುಮಿರೆ (ಎಕ. VII (R), ನಾಗಮಂ. ೯೯-೬ ; 972). [ಮಾಗಟಿ, + ನಾಡು ]

**ಮಾಗಾನ** (ನಾ). ದೊಡ್ಡ ಕಾಡು; ಮಹಾರಣ್ಯ : ಹೈಮೆಪಿತೀಸಮ್ಮೇಳದಿನಾ ಮಾಗಾನಂ ಮಹೇಶನಂತೆಸೆದಿರ್ಕುಂ (ವೀರಶಿ. ೪-೩೪).

[ ಮಾ$_4$ + ಕಾನ$_1$ (< ಕಾನ್) ]

**ಮಾಗಾಯ್** 'ಮಾಂಗಾಯ್' ನೋ.

**ಮಾಗಾಯಿ** 'ಮಾಂಗಾಯ್' ನೋ.

**ಮಾಗಿ** 'ಮಾಗ' ನೋ.

**ಮಾಗಿಣಿ** (ನಾ). ಒಂದು ಬಗೆಯ ಬಳ್ಳಿ; ಗೋಪವಲ್ಲಿ : "ಮಾಗಿಣಿ ಗೋಪವಲ್ಲಿ ಮಾಗಧಿಯೆನಿಕ್ಕು" (ಮಂಗರಾ. ೩೯-೨೯). [ ? ]

**ಮಾಗಿಸು** (ಕ್ರಿ). ೧. ಹಣ್ಣು ಪಕ್ವವಾಗುವಂತೆ ಮಾಡು : ಮಾವಿನ ಹಣ್ಣನ್ನು ಚೆನ್ನಾಗಿ ಮಾಗಿಸಬೇಕು (ರೂಢಿ). ೨. (ಅಲಂ) ಪಕ್ವಗೊಳಿಸು ; ಹದಗೊಳಿಸು : ಇತ್ತೀಚೆಗೆ ನಡೆದ ಘಟನೆಗಳು ಮನಸ್ಸನ್ನು ಚೆನ್ನಾಗಿ ಮಾಗಿಸಿದವು (ರೂಢಿ). [ ಮಾಗು + —ಇಸು$_3$ ]

**ಮಾಗು** (ಕ್ರಿ). ೧. ಕಾಯಿ ಮೊದಲಾದುವು ಪಕ್ವವಾಗು ; ಹಣ್ಣಾಗು ; ಕಳಿ : ಕಾಯಿ ಮಾಗಿದ ಮೇಲೆ ತಾನಾಗಿಯೇ ಉದುರುತ್ತದೆ (ಹಸುಹೂ. ೫೬೦); ಹಣ್ಣುಗಳು ಗಿಡದಲ್ಲೇ ಮಾಗಿದಾಗ ಅವುಗಳಲ್ಲಿ ಜೀವಾತುಗಳ ಅಂಶ ಹೆಚ್ಚು (ಅತುಸ. ೬೬). ೨. ಗಾಯ, ಹುಣ್ಣು ಮುಂತಾದುವು ಒಣಗು : ಮಾಗಿದ ಗಾಯದ ಗುರುತನು ಕಂಡರೆ ನಗುವುದಿದೇತಕೆ ನೀನು ಗಾಯ ಗಳಿಲ್ಲದೆ ರಣವನು ಗೆಲುವರೆ ವಜ್ರಕಾಯನೆ ಹೇಗೆ ನೀನು (ಇಂಬಾಶ. ೮೨-೧೦೦). ೩. ಪ್ರಭಾವವು ಕಡಮೆಯಾಗು : ಶಕ್ತಿಯು ಕುಗ್ಗು : ಮುಸುಜೊದ ಕುಳಿರೊಳ್ ದೆಸೆಯಾಗಸಮಿಳೆ ಬೆಟ್ಟಡವಿಯೆಂಬಿವೆಂತಾನುಂ ಕಾಣಿಸಲಾರ್ತು ವಿಲ್ಲಮೆನೆ ಮಾಮುಸಗಿರ್ದುದು ಮಾಗೆ ಮಾಗೆಸಕೆಮೆಸರಿಳೆಯೊಳ್ (ಕಬ್ಬಸು. ೬೩ ಪ್ರಯೋ). ೪. (ಅಲಂ) ಪಕ್ವಗೊಳ್ಳು ; ಹದವಾಗು : ಸುಖದುಃಖದ ಏರಿಳಿತದ ಜೀವನದೀ ಚಂಚಲತೆಯ ಕಂಡು ಮನವು ಮಾಗಿದೆ (ಸ್ವರಶೀ. ೫೪).

[ದೇ.॥ ತುಳು. ಮಾಗು; ತೆಲು. ಮಾಗು, ಮಗ್ಗು]

**ಮಾಗುಂಡ** (ನಾ). ೧. ದೊಡ್ಡ ಕೊಳ, — ತೀರ್ಥ : ಆಗತವ ಮಾಡಿ ಮಾಗುಂಡ[ಪಾಠಾಂ. ಗುಡ]ವ ಮಿಂದರೆ ತಾ ಕೊಡಬಲ್ಲನೆ ಕೂಡಲಸಂಗಮ ದೇವ (ಬಸವ. ೬೯೫). ೨. ಒಂದು ಊರಿನ ಹೆಸರು : ಕಿರಿಯಮುಗುಳಿ ಮುಟಿವಳ್ಳಿ ನಲ್ಲೂರು ಮಾಗುಂಡ ತೇಗುರು ಆರ ಮಣ್ಣಂ ಬಿಟ್ಟ ಮಂಗಳಂ (ಎಕ. VI, ತಕ್ಕಮ. ೯೨-೨೨ ; 959). [ಮಾ$_4$ + ಗುಂಡ$_2$]

**ಮಾಗುಂಡಿ** (ನಾ). ಒಂದು ಊರಿನ ಹೆಸರು : ಭುವನಾಯ್ಯನ ಮಾಗುಣ್ಡಿಯೊಳ್ಕಾದಿದನ್ದು (ಎಕ. III (R), ಹಗ್ಗಡ. ೨೩-೬; ಸು. 930) ; ಉಪ್ಪವಳ್ಳಿಯ ಪೋಚಿಗಾಮುಣ್ಡ ವಳಿಯೆಜಿ ಮುದ್ದ ಮಾಗುಣ್ಡಿಯೆಚಿಗ (ಎಕ. V, ದೇಲೂರು. ೩೦೬-೦೩; 971). [ ? ]

**ಮಾಗುಟ್ಟು** (ನಾ). ಪರಬ್ರಹ್ಮನ ವಿಚಾರವಾದ ರಹಸ್ಯ ; ಪರತತ್ತ್ವ : ಅರಿವರಿವುಗಳ ಹರಳನೊಡವೆಗಳ ಹೊಳೆಸುತ್ತ ಆಗಸದ ಬಾಗಿನಡಿ ಮಾಗುಟ್ಟು ಮೆರೆಯೆ (ಮುಕರೀ. ೨೬-೬). [ಮಾ$_4$ + ಗುಟ್ಟು$_1$]

**ಮಾಗುಳಿ** 'ಮಾಗಳಿ' ನೋ.

**ಮಾಗೆ** 'ಮಾಗ' ನೋ.

**ಮಾಘ** (ನಾ). ೧. ಚಾಂದ್ರಮಾಸದ ಹನ್ನೊಂದನೆಯ ತಿಂಗಳು : ಆ ಮಾಸವೇ ಚೈತ್ರ . . . ಮಾಘ ಫಾಲ್ಗುಣವೆಂದು ಹನ್ನೆರಡು ತೆಜನಾಗಿಹುದು (ವಿವೇಕ. ೨೬೩) : ಪಂಚಾಕ್ಷರಾದಿಯಲಿರುವಖಿಳಮಂತ್ರಗಳ ಜಪ . . . ಮಾಘದಲ್ಲಿ ತದಂಗ ಪ್ರಾಜ್ಞಾವೃದ್ಧಿ (ಗಗಶಾ. ೪-೬೪). ೨. ಸಂಸ್ಕೃತದಲ್ಲಿ 'ಶಿಶುಪಾಲವಧ' ಎಂಬ ಕಾವ್ಯವನ್ನು ರಚಿಸಿದ ಮಹಾಕವಿಯ ಹೆಸರು : 'ಸ್ತುತಿಗೆಯ್ವಂ . . . ಶತಪತ್ರಾಕ್ಷಕಥಾಮೃತ ಚ್ಯುತಬುಧಸ್ತೋಮಾಘನಂ ಮಾಘನಂ (ಜಗವ. ೧-೮) ; ಮಾಘ ಓದಿ ಮಗಾ ಕೆಟ್ಟ (ಗಾದೆ). [ಸಂ.]

**ಮಾಘಮಾಸ** (ನಾ). =ಮಾಘ ೧ : ದೊರೆಕೊಂಡ ಮಾಘಮಾಸಂ ಬರೆ ಕೃಷ್ಣಚತುರ್ದಶೀದಿನಂ ಸಮನಿಸೆ (ಅದಿಪು. ೦೬-೫೦) ; ಮಾಘಮಾಸದ ನವಿಲಿನಂತೆ ಆದೆ ನೋಡಾ ಅವ್ವಾ (ಸಳವ. II, ೦೯೬-೫೨೬) ; ಆ ದುಃಖ ಸುಖವಾಯ್ತು ; ಮಾಘಮಾಸವು ಹೋಗಿ ಚೈತ್ರವಾಯ್ತು ! (ಶಾಂತಶ. ೬೪ ೨೩). [ಸಂ.]

**ಮಾಘಸ್ನಾನ** (ನಾ). ಮಾಗಿಕಾಲದಲ್ಲಿ ಪವಿತ್ರತೀರ್ಥಗಳಲ್ಲಿ ಮುಳುಗು ಹಾಕಿ ಮಾಡುವ ಸ್ನಾನ : ಮಾಘಸ್ನಾನಕ್ಕೆ ಹೋಗಿ, ನಿತ್ಯಸ್ನಾನ ಪೂಜ್ಯ (ಗಾದೆ). [ಸಂ.]

**ಮಾಘ್ಯ** (ನಾ). ಒಂದು ಬಗೆಯ ಮಲ್ಲಿಗೆ ; ಕೋಲುಮಲ್ಲಿಗೆ : "ಮಾಘ್ಯಂ, ಕುಂದಂ _ ೨ ಮೊಲ್ಲೇಗಿಡದ ಹೆಸರು. ಇದು ಮಲ್ಲಿಗೇ ಭೇದ, ಕೋಲುಮಲ್ಲಿಗೆ" (ಸಿದ್ಧಾಂತ. ೦೨೮). [ಸಂ.]

**ಮಾಚಪತ್ರೆ** 'ಮಾಚಿಪತ್ರೆ' ನೋ.

**ಮಾಚಯ್ಯ** (ನಾ). ಒಬ್ಬಾತನ ಹೆಸರು : ಪೆರ್ಗ್ಗಡೆ ಮಾಚಯ್ಯ ಮಜ್ಜಗಲದ ಗಾವುಣ್ಡ ಗಜಿಯ ಮೆಟ್ಟಿಟ್ಟಡೆ ಬಾಟಿಸಿದ ಸ್ಥಿತಿಕ್ರಮಮಾವುದೆ ನೊಡೆ (ಎಕ. IV (R), ತಾವರ. ೦೫೯-೬; 965). [ಮಾಚ$_6$ + ಅಯ್ಯ$_{11}$]

**ಮಾಚಿ** (ನಾ). ಸುವಾಸನೆಯ ಎಲೆಗಳಿಂದ ಕೂಡಿದ ಒಂದು ಬಗೆಯ ಔಷಧೀಸಸ್ಯ ; ಮಂಚಿಪತ್ರೆ : " ವಿಾಟಲೆ ಮಾಚಿಯೆನಿಕ್ಕು " (ವಾಂಗರಾ. ೪೦-೩೦). 'ಮಾಚಿಪತ್ರೆ' ಪರಾ. [ಸಂ. ಮಾಚೀ]

**ಮಾಚಿಗ** (ನಾ). ಒಬ್ಬಾತನ ಹೆಸರು : ಏಚಿಯಂಗಪ್ಪನ ಮಗಂ ಮಾಚಿಗಂ (ಎಕ. III (R). ಹಗ್ಗದ. ೫೬-೦೦; ೯೦೦ ?). [ಮಾಚಿ₀ + – ಇಗ]

**ಮಾಚಿಪತ್ರೆ**. ಮಾಚಪತ್ರೆ (ನಾ). = ಮಾಚಿ : ಪಶ್ಚಿಮಘಟ್ಟಪ್ರದೇಶ ಮಾಚಿಪತ್ರೆಯು ತೌರು . . . ಸುಮಾರು ಅಗಲವಾದ ಎಲೆಗಳಲ್ಲಿ ಸುವಾಸನೆಯ ಎಣ್ಣೆಯನ್ನು ಸ್ರವಿಸುವ ಕಣಗಳಿರುತ್ತವೆ (ಕಾಸಗಿ. ೩೯). **ಮಾಚಿಪತ್ರೆ** : ಮಾಚಿಪತ್ರೆ, ಪೀರೆತೊಕ್ಕು ಇವುಗಳೆರಡನ್ನೂ ಉಂಡೆಮಾಡಿ, ಕೆಂಡದ ಮೇಲೆ ಇರಿಸಿ ರಸ ತೆಗೆದುಕೊಂಡು ಸಕ್ಕರೆವೆರೆಸಿ ಕೊಡಲು ಜ್ವರತಾಪ ಮತ್ತು ದಾಹ ಇವೆರಡೂ ನಿಲ್ಲುವುವು (ಸಕವ್ಯ. ೧೦೪). 'ಮಂಚಿಪತ್ರೆ' ಪರಾ. [<ಸಂ. ಮಾಚೀಪತ್ರ]

**ಮಾಚು** 'ಮಾಜು₁' ನೋ.

**ಮಾಜನ** (ನಾ). ಮಹಾಜನ : ಸ್ವಸ್ತಿಶ್ರೀ ಸಬೆಣ್ಣಾತ ಮಾಜನ ಮುವತ್ತೀರ್ಚ್ಛರ ಅಳ್ತುಡುಗೆಯುನ್ ಕೇಸರಿ ತೊಳುವಾಳ್ವನಾ ಮಗನ್ ಆಲನ ತೊಱು ಇಕ್ಕಿಸಿ ಬಿಟ್ಟಾನ್ (ಎಕ. X (S). ಮುಳಬಾ. ೦೫೬-೨ : ೮ನೆಯ ಶತ); ಮಹಾಜನ – ಮಾಜನ, ಮಹಾದಾನಿ – ಮಾದಾನಿ (ಕಮರ. ೨೯೦ ಕ್ರಮೋ); ಈ ಪುಣ್ಯಕಥೆಯ ಕೇಳಿದ ಮಾಜನ[ಪಾಠಾಂ. ಮನುಜ]ರಿಗೆಲ್ಲ ಪಾಪ ವಿಮೋಚನಾಗುವುದು (ಅಬ್ಬರೂ. ೦-೨೫). [<ಸಂ. ಮಹಾಜನ]

**ಮಾಜರು** 'ಮಹಜರು' ನೋ.

**ಮಾಜಾತ** (ನಾ). ಲಕ್ಷ್ಮಿಯ ಪುತ್ರ ; ಮನ್ಮಥ : ಜೆಜಗಾಗಿ ನಿಶಾ ತಪೋಗಾತ್ರಧರನನೆಸಲೆಚಿಜದ ಮಾಜಾತನನೀಕ್ಷಿಸಿ ಗಗನದೊಳಾತುರಿಸುವ ಹುಯಜರ್ಗೆ ನಾರದನೆಂದಂ (ಗಿಂಕ. ೬-೩೯). [ಸಂ].

**ಮಾಜಾರಿ** (ನಾ). ಲಕ್ಷ್ಮೀಪುತ್ರನಾದ ಮನ್ಮಥನ ವೈರಿ : ಶಿವ : ರಾಜನ ಮೋಹದ ಪೂಜಾಗಜವನೋರ್ವ ಮಾಜಾರಿಬಕುತ ಬೇಡಿವಡೆ (ಶೈರವೇ. ೪-೦೭೦). [ಸಂ.]

**ಮಾಜಿ** 'ಮಾಜೀ' ನೋ.

**ಮಾಜಿಕಾಲ** (ನಾ). ಹಿಂದಿನ ಕಾಲ : ಪೂರ್ವಕಾಲ : ಬೀಜಗಳ ಕೊಡು ನಮಗೆ ಮೋಜಲ್ಲ ಬೊಮ್ಮಯ್ಯ ಮಾಜಿಕಾಲಲ್ಲ ಬರಗಾಲ (ಕಪ್ಸಬಾ. ೨೨೭). [ಮಾಜಿ (<ಮಾಜೀ) + ಕಾಲ]

**ಮಾಜಿಸು**. ಮಾಂಜಿಸು (ಕ್ರಿ). ೧. ನಿವಾರಿಸು : ಇಲ್ಲದಂತೆ ಮಾಡು : ಸಾವಂ ಮಾ[ಪಾಠಾಂ. ಮಾಂ]ಜಿಸು ಜೀವರ ನೋವಂ ಪರಿಹರಿಸು (ಪ್ರಹಿ. ೩೪-೦೦೭). ೨. ತೋರಗೊಡದಿರು : ಮರೆಮಾಡು : ಕ್ಷತ್ರಿಯ ಬೀಜಪ್ರತಾಪನಾದಡೆ ಬಲಿವನವನವನಿಯನರಿದು ಆಗಮನಾ ರೂಪ ಮಾಜಿಸ ಬಹುದುಖಿಾ ಸಂತಾಪವ್ಯಾಕೆ (ಶಕುಣಾ. ೨೦-೦೪); ನೀತಿವಿನಯಂಗಳ ಮಾಜಿಸಿ (ಅಶುಶಿ. ೨೦-೦೪). **ಮಾಂಜಿಸು** : ೨. ಅಂತು ನರರ್ಗೆ ಮೊದಲೊಳಂತು ಚಿಂತೆಯೊದವಿದೊಡಂ ಮಾಂಜಿಸಲ್ಕೆಂದು ಪೊಸನುಡಿಯ ಬನ್ನಣವಂ ಪುಸಿನಗೆಯ ಸನ್ನಣವಂ ತೋರ್ಪಡಿಸುತಮದಂ ಮಱೆಗೈವುದುಂಟು (ರಾಮಾಶ್ವ. ೦೦-೦೬). [ಮಾಜು₁ + – ಇಸು₃]

**ಮಾಜೀ**, ಮಾಜಿ (ಗು). ೧. ಹಳೆಯ; ಹಿಂದಿನ : ಮತ್ತೂ ಅವೇ ಮಾಜೀ ಹಾಡು ಹಾಡತಾರೆ. ಮತ್ತೆಲ್ಲಿಯಾದರೂ ದೂರದೇಶದಿಂದ ನಾಯಕಿಣಿಯರನ್ನು ತರಿಸಿದ್ದರೆ ನೆಟ್ಟಗಾಗುತ್ತಿತ್ತು (ವೇಯಾಶಿ. ೦೫೪). **ಮಾಜಿ** : ೨. ಅಧಿಕಾರ, ಪದವಿ ಮುಂತಾದುವುಗಳಿಂದ ನಿವೃತ್ತಿಹೊಂದಿದ ; ವಿಶ್ರಾಂತ : ಮಾಜಿ ಅಮಿಾಲ ಲಕ್ಷ್ಮೀನರಸೈಗೆ ಹೇಳಿದ್ದರಿಂದಾ (ಮೈಅ. ೦೬೨೯. ೯೪-೦೦. 1813); ಮಾಜಿ ಅಮಿಾಲರ ಕಾಲದಲ್ಲಿ ಶೆಟ್ಟಿ ವರ್ತಕರು ಮೊದಲಾದವರು ಸರ್ಕಾರಕ್ಕೆ ಬಾವತಿ ಮಾಡಿದ್ದು (ಮಹಾವಂ. II. ೫೭); ಮುಖಭಂಗಿತರಾದ ಕೆಲವು ಮಾಜಿ ಸಭಾಸದರು ತೊಂದರೆ ಕೊಟ್ಟರೆ ಹೇಗೆ ? (ಅಪಾ. ೨೩೦). [←ಅರ. ಮಾಝಿ; ಹಿಂ. ಮರಾ. ಮಾಜೀ]

**ಮಾಜು₁**, ಮಾಂಜು₁, ಮಾಚು (ಕ್ರಿ). ೧. ಕಾಣದಂತಾಗು : ಮರೆಯಾಗು ; ಅಡಗು : ಜೂಜಾಟಿಕೆ ಸೂಳೆಬಂಟಿಕೆ ರಣದ ಸಂಪಾಜ ಪೆರ್ಗಡಿಗಳ ಚರ್ಚೆ ರಾಜವೀಧಿಯೊಳಿಱಿದಾಡುವ ಸಂದಣಿ ಮಾಜದು ನಿತ್ಯಕೃತ್ಯದಲಿ (ಶೋಹಶ. ೨೦-೨೬); ವಳಿಗಳುಂ ಮಾಜಿದುವು ಒಪ್ಪದಿಂಧಾಸ್ಯ ಶಶಿಕಳೆಯನಂಗೀಕರಿಸೆ . . ಮನಂ ಮಾಂದ್ಯತೆಯನಾಂತುದಾ ತನ್ವಿಯಂ ಗತುಳಗರ್ಭೋದಯದೊಳು (ಪಂಕಾರಾ. ೦-೯-೫). ೨. ನೆನಪಿನಲ್ಲಿ ಉಳಿಯದಿರು ; ಮರೆತುಹೋಗು : ಈ ಜಗದೊಳಹೊರಗೆಲ್ಲೆಲ್ಲಿ ತುಂಬಿಹ ತೇಜವಾನೆಂದರಿದರಿವನು ಮಾಜ ಮೈಮರೆದಿರೆ ನಿಃಶ್ರೇಯುವಹುದೆಂದು ರಾಜಯೋಗವ ತಿಳಿಸಿದರಿಂದೆ (ಕೃಕವ. ೪-೦-೪) ; ಮಾಜದೇ ಸ್ಮೇಪನ್ನಿನಲ್ಲಿ ರಸಗುಲ್ಲಾ ತಗೊಂಡಿದ್ದೆ (ಸಾಹೇಬ್. ೩೫). ೩. ವಾಸಿಯಾಗು ; ಮಾಯು : ಹಿರಿಯರಸಿಯ ಮನಸ್ಸಿನ ಗಾಯ ಮಾಜುವಂತಹ ಮಾತು ಬಮ್ಮಲದೇವಿಯಿಂದ ಅಪರೂಪವಾಯಿತು (ಸಹಶಿ. ೨೦೭). ೪. ಅಡಗಿಸು ; ಮುಚ್ಚು ; ಮರೆಮಾಡು : ರವಿ ಮುಗಿಲ ಮಱೆಗೊಂಡೊಡಂ ಬೆಳಗು ಲೋಕಮಂ ಧವಳಿಸುವ ತೆಱದಿ ನಿಜಮಂ ಮಾಜಿ ಕೃತಕದೊಳಗವಿದೊಡಂ ಹಳಹಳನೆ ಹೊಳೆಹೊಳೆದು ದೇವಕಳೆ ಮಸಕಿ ಮಂಗಳವಿತ್ತುದು (ಸಿದ್ಧರಾ. ೨-೨೪) : ಬಿಸರುಹದಳಲೋಚನೆ ಕೇಳು ನಿನ್ನಯ ಪೆಸರಾವುದೆಲ್ಲಿಂದ ಬಂದೆ ಅಸಮಾಕ್ಷನಾಣೆ ಮಾಜದೆ ಪೇಳು (ಪೋಹಶ. ೦೦-೦೩) ; ಏಳಂಜಬೇಡಿನ್ನು ಮಾಜದಿರ್ತನ್ನಾಣೆ ಹೇಳು (ಕೈಬಿಶಾ. ೦೬-೪೫). ೫. ಅಳಿಸು ; ತೊಡೆದು ಹಾಕು : ಧರ್ಮಮಾರ್ಗವ ಪೊಳ್ಡು ಸಾರಿ ನಿರ್ಲಜ್ಜೆಯುಂ ಸಾಧ್ವಿಯರ ಪಜ್ಜೆಯುಂ ಮಾಜಲಸುಗೈದೆ ಬರಿದೆ (ಪಂಕಾರಾ. ೨-೦೨-೩೦). ೬. ತಪ್ಪಿಸಿಕೊಳ್ಳು ; ನುಣುಚಿಕೊಳ್ಳು : ನೇಜೆಯುದಿಱಿತಕೆ ಚಿಗಿದು ಕುದುರೆಯಿಂದ ಮಾಜದೆ ಬೀಳ್ವ ರಾವುತರ ವಾಜಿಯ ಹಿಡಿದು ಮೂಗರಿದವರನು ಯಮರಾಜನಾಲಯಕಟ್ಟಿದರು (ಕೆಂಪವಿ. ೩-೭೯). ೭. ಹಿಂದೆಗೆ ; ಹಿಂಜರಿ : ತೇಜಿಗಳನು ಕುಣಿಸುವರು ಕಲಭವನು ಮಾಜದೆ ಬೀದಿವರಿಸುವ ರಾಜಕುಮಾರರ ಸೌಭಾಗ್ಯ ನೆಱೆ ವಿಭ್ರಾಜಿಸಿತ್ತಾ ಕೇರಿಯೊಳಗೆ (ಕೆಂಪವಿ. ೭-೦೦). **ಮಾಂಜು₁** : ೧. ಸುಕೃತಂ ಸ್ವರ್ಗ ಸುಖಕ್ಕೆ ಕಾರಣಮೆನಲ್ತಾಸ್ವಖ್ಯಮೇಂ ನಿತ್ಯಮೋ ವಿಕೃತಂಗೊಂಡಬಿಸ್ವಂದ ಬಲ್ತನಿಸದೋ ಸ್ವಪ್ನಂಬೊಲೇಂ ಮಾಂಜದೋ ಪ್ರಕೃತಿ ಪ್ರಾಪ್ತಿಗೆ ನೊಂಕದೊ ಬಿರಿವದೇಂ (ರತ್ನಾಕ. ೫೭) ; ತೋಡುಂಬೆಟ್ಟಿನ ಕಾರ್ಶ್ವನಲ್ ಗೊಹೆಯೊಳೇ ಮಾಂಜಿರ್ಪ್ಪ ಮಾರಾಂತಿರಲ್ (ಮ್ಯಸೂಮ. ೦-೪೯). ೪. "ಮಾಂಜು— ಅಪಲಾಪೇ(ಮರೆಮಾಚು)"(ಶಮಾ); ಅದನೆಲ್ಲಂ ಮಾಂಜದಿರ್ ಚಿತ್ರದೊಳ್ (ರಿಮ್ಮ. ೫-೫-೨೩೦) ; ಮಂಜುಳೆ ನಿನ್ನ ಪೊಂಜೆಳೆಯೊಡಲ್ ಕಡುಬಾಡಿದೆ ಮಂಜಿ ಮಾಂಜದಿರ್ (ಸಕಶಿ. ೭-೩೦) ; ಮುನಿಯ ಬೆಸುವುದೆನಗೆ ತಮ್ಮಾ ಘನಪದಾಂಬುಜವಿಲ್ಲಿಗೈತಂದನುವನಿನಿಸುಂ ಮರೆಯ ಮಾಂಜದೆ (ರಾಕೂಸಂ. ೦-೫-೬). ೫. ತರಳೆಯ ತ್ರಿವಳಿಯ ಪೋಲ್ವೆಯ ತರಂಗಮಂ ಪಡೆವೆನೆಂದು ಸುರನದಿ ಪಲವುಂ ತೆರೆಗಳನೆ ಪಡೆದು ಪಡೆಯದೆ ಸರಿದೆರೆಯುಂ ಮಾಂಜಿ ಪೆಗುಳ್ದು ಪಡೆದಪುದಿನ್ನುಂ (ರಾಶಕ್ಕ. ೭-೩೭) ; ಈ ಶಾಸನವು ನಮ್ಮ ಭಯದಂತೆ ಅದೇ ಆಗಿದ್ದರೆ, ಇವನ್ನು ಮಾಂಜಿ ಲಯಮಾಡಿ ಇಲ್ಲವೆನಿಸಿ ಬಿಟ್ಟರೆ ಸಾಕು (ಕುಂಕ್ರಸ. ೦೬-೪). ೬. ಪಂಜರದೊಳಗಿದ್ದು ನಿನಗಿಷ್ಟ ಯೆನದಿರು ಮಾಂಜಿ ನೀನಗಲ್ದಾಗ ನಿನ್ನ ಹೊಂಬಾಳೆಮೈಯಳ ದಂತಕಾಂತಿಯ ಹೊನ್ನ ಪಂಜರದೊಳು ಕೂಡಿಸುವೆನು (ಶಕಸ. ೯-೪೨). **ಮಾಚು** : ೪. ಎಲೆ ವಿಾನಲೋಚನೆ ಏತರ ಯೋಚನೆ ಏನೆಂಥ ಯಾಚನೆ ದೀನೆ ಮಾಚದೆ ಮನವನು ಹೇಳು ನಿನ್ನನಿಯನು ಬಹನೆಂದು ಬರಲಿಲ್ಲವೇನು (ಅಂಜಾಶ. ೦೩೦-೪೪). ೮. ಅಡಗಿಸಿಕೊಳ್ಳು ; ಕಾಣದಂತೆ ಮಾಡು : ಮಂಡಿಗೆ

ಬೆತ್ತ ಹಿಡಿಯುವುದಕ್ಕೆ ಮುಂಡೆ ಮಾಚಿ ನಾಚುತಿದ್ದೆ ಹೆಂಡತಿಸಂತತಿ ಸಾವಿರವಾಗಲು ದಂಡಿಗೆ ಬೆತ್ತ ಹಿಡಿಸಿದಳಯ್ಯ (ಶಿರಂಶ. ೧-೯೩-೧) ; ಹಿಗ್ಗನ್ನು ಮಾಜುವುದು ಹೆಣ್ಣಿನ ಸ್ವಭಾವ (ಅಂತೂ. ೧೧೯).

[ದೇ. ತಮಿ. ಮಾಯ್; ತುಳು. ಮಾಜಾವು, ಮಾಜು; ತೆಲು. ಮಾಯು =ಹಾಳಾಗು, ನಾಶವಾಗು ; ಕೋತ. ಮಾಂಜ್ ; ತೊದ. ಮೋಜ್, ಮೋರ್ಝ್]

**ಮಾಜು$_3$**, ಮಾಂಜು$_2$ (ನಾ). ಮರೆಮಾಚುವಿಕೆ ; ಮೋಸ ; ಠಕ್ಕು : "ವಂಚನೆಗೆ ಮಾಜೆಂದು ಪೆಸರಕ್ಕು" (ಶಬ್ದಕೈ. ೫೭). **ಮಾಂಜು$_2$** : "ಮಾಂಜೆಂದು ವಂಚಿಸುದುದು" (ಕಕಶಾ. ೭೭-೫೦೩). [ < ಮಾಜು$_1$ ]

**ಮಾಟ$_1$** (ನಾ). ೧. ಮಾಡಿದ ಕೆಲಸ ; ಕೈಗೊಂಡ ಕಾರ್ಯ : ಕೆರಕಂ ತುಱಿಯುಂ ತೊನ್ನುಂ ಶರೀರದೊಳ್ತೋಱೆ ತಂತ್ರದಿಂ ಕಿಡಿಸದೆ ನಾಗರ ಮಾಟಮೆಂದು ಕಿವಿಯೊಳು ಮುಱಿದಿಟ್ಟುಂ ಪಲರುಮಾರ್ಚಿಪರ್ಪುತ್ತುಗಳಂ (ಸಮಯ. ೯-೭೭): ಒಡಿಪುದು ಕರ್ಪವಿಲ್ ತುಡುವುವೈದಲರಂಬವನೇಕ ಸಚ್ಚಿ ನೀಂ ತೊಡರ್ವ ರತಿಪ್ರಿಯೋಪಕರಣಂಗಳವೇವುವೊ ಕಾಳಗಕ್ಕೆ ನೀಂ ಪ್ಪಡನೊಳದಿರ್ಚಿ ರೂಪುಗಿಡುಮಂದಿವು ಮಾಡಿದ ಮಾಟಮಾವುದು (ಜಗ. ೦೬-೩೭) : ಮಾತು ಕಿರಿದಾದೊಡಂ ಮಾಟವಪ್ಪುದು ಪಿರಿದು (ಪಪ್ರ. ೦೫-೮). ೨. ರಚನೆ ; ನಿರ್ಮಾಣ : ಲಲಿತೋನ್ನತಮಣಿಮಯಕೂಟದಂದಮುದು ಪಲವುಂ ದೇಸೆಯ ಮಾಟದಂದಂ (ಅಂಶು. ೯-೩೦ ಕಗಳ). ೩. ಬಟ್ಟೆಯ ಎಳೆಗಳ ರಚನೆ ; ನೆಯ್ಗೆ : ಸೀರೆ, ಬಟ್ಟೆಗಳ ಬಣ್ಣ ಮತ್ತು ಮಾಟ ನಮಗೆ ಒಪ್ಪುತ್ತದೆಯೋ ಇಲ್ಲವೋ ಎಂದು ವಿಮರ್ಶೆ ಮಾಡಬೇಕು (ಗೃಶಾ. ೭೬). ೪. ಆಕಾರ ; ಸ್ವರೂಪ ; ಆಕೃತಿ : ಆ ಮೊಗದ ಮಾಟ, ಕಣ್ಣುಗಳ ಹೊಳಪು . . . ಇವೆಲ್ಲಾ ರೇವಕ್ಕನವು (ತಾಕುತ್ತ. ೦೦೨); ಅಸ್ತವ್ಯಸ್ತವಾದ ತಳುಸೀರೆಯಲ್ಲಿ ಅವಳ ಮೈಯ ಮಾಟ ಎದ್ದು ಕಾಣುತ್ತಿತ್ತು (ಕೂಶಿಕ. ೩). ೫. ಚೆಲುವು ; ಅಂದ ; ಶೋಭೆ : ವರದಿಗ್ವನಿತೆಗೆ ಮಾಟದ ಕುರುಳಾ ತ್ರ್ಯಕ್ಷಭುವನಕಾಂ[ತೆಗಂ] ದಲ್ ಕಂಠಾಭರಣಮೆನೆ ಪರೆದ ತನ್ನಧ್ವರಧೂಮದೆ ಕರಿದು ಮಾಡಿದ್ದು ನಿಜಯಶಮಂ (ಶಂಶಭಾ. ೦೯-೯೪) ; "ಮಾಟದ _ ಕೃತಕ" (ಕಂಶದೀ. ೩೭೯). ೬. ಅಲಂಕಾರ: ಈ ದೇವರ್ಗೆ ನಿವೇದ್ಯಕ್ಕಂ ದೇಗುಲದ ಮಾಟಕ್ಕಂಮಾರಾನುಮನುಸುಕೊಳಲಪ್ಪವರ್ ಮುಂಜೇಶ್ವರದೇವರ ಪುನಃಪ್ರತಿಷ್ಠೆಗೆಯ್ದುನಿತು ಪಲಮಾನೆಯಿಕ್ಕಿದರ್ (ಎಕ. VII (s). ೩೪೦. ೩೩೫-೯; 1068). ೭. ಒಯ್ಯಾರ : ಒನಪು ; ವಿಲಾಸ : ತವೆ ಸಾವಿತ್ರಿಯರಾಟ ನಾಲ ಮಧುಪಾನಂ ಬೇಟದಾ ಜಾಣಿರ್ಪೇನಿವಹಂ ಮಾಡುವ ಮಾಟ . : . ಇಂತೆಲ್ಲ ಮುಂ ಸವಿಯಾಗಂತ್ಕದಿ ಕಪ್ಪವೈ (ಸೋಮೇಶ. ೨೯) ; ನಾಟಿ ನಲಿದುದು ಚಿತ್ರವೀ ನಟನಾಟಕನ ಸಿಕ್ಕಿಸುವ ಬಗೆಯಲಿ ಮಾಟಮಕರಿಸಿ ಕಾಣಲಾದುದು ಮತ್ತೆ ಮಾಯೆಯಲಿ (ಕೃಕುಂ. ೭-೩೭). ೮. ಪ್ರಮಾಣಬದ್ಧವಾದುದು ; ಔಚಿತ್ಯಪೂರ್ಣವಾದುದು : ವ್ಯಾಯಾಮಕ್ಕೆ ತಕ್ಕಂತೆ ಮಾಟವಾದ ಎದೆ ಮತ್ತು ನಡು (ಶರಕು. ೩); ಅವರ ಪ್ರತಿಯೊಂದು ಅಂಗವು ಮಾಟವಾಗಿ ಸುಂದರವಾಗಿ ಸದೃಢವಾಗಿತ್ತು (ಶಂಚೇ. ೧೧). ೯. ರೀತಿ ; ಬಗೆ ; ವಿಧಾನ : "ವಿಧಿಃ. ವಿಧನಂ. ವಿದಧಾನೀಯಂ. ವಿಧಾನಂ. ಈ ೪ ಮಾಟಂ" (ಕಾಕ್ಷ. ೨೨೦); ಎನ್ನ ಮಾಟ ಕುರುಡ ಸಭೆಯಲ್ಲಿರ್ದ ನಗೆಯ ನಕ್ಕಂತಾಯಿತ್ತು (ಪೋಳವಾ. ೧೧-೩೩); ಪಲವು ಬಗೆಯಂ ಮಾಡಿ ಬೆಂದ ಕುಂಬಳಕಾಯ ಕೆಲವ ನಾಲ್ಕೆಂಟು ಮಾಟದ ಕೊಣಬ ಮಾಡುವುದು (ಸೂಶಾ. ೫-೩೯); ಎತ್ತ ಬಲ್ಲಸುಜನರೆಲೆ ಪಾರ್ಥ ಕಪಟಿಗಳ ಚಿತ್ತದೊಳ್ಪುದುಗಿರ್ದ ಮಾಟಮಂ (ಕೃಚಿಶಾ. ೨೯-೩೭). ೧೦. ನಡವಳಿಕೆ ; ಆಚರಣೆ ; ವರ್ತನೆ : ನುಡಿಯೊಂದು ಮಾಟವೊಂದೆನಿಸಿದ ಮಾನವಂಗೆನಗೆ ದೇವಿ ಹಸಾದವಃನೇಕೆ ಮಾಡಿದಳ್ (ಕಾವಂಬಾ. ೨೭೦); ಒಲವಿಲ್ಲದ ಪೂಜೆ ನೇಹವಿಲ್ಲದ ಮಾಟ ಆ ಪೂಜೆಯೂ ಆ ಮಾಟವೂ ಚಿತ್ರದ ರೂಪು ಕಾಣಿರಣ್ಣಾ (ಬಸವ. ೦೨೭): ಭೂತದಯೆಯಿಲ್ಲದನ ಮಾಟಂ . . . ಪ್ರವರ್ಧನೆಮಹುದೆ ಲೋಕದೊಳು (ಬಸವು. ೩೭-೩೯). ೧೧. ಕಣ್ಕಟ್ಟು; ಇಂದ್ರಜಾಲ : ತಲೆ ನೆಲದೊಳು ರುಳ್ದೊಡಂ ಮೆಯ್ಗಲಿಯೊರ್ವಂ ಒಡಿದು ತಲೆಯನಿಟ್ಟಬ್ಬೆಯೊಳಗ್ಗಲಿಸಿದ ಮುಳಿಸಿಂ ಮಾಟದ ತಲೆಯಿಟ್ಟಾಡುವನನಿನಿಸು ಪೊಲ್ಲನುಗೆಯ್ದಂ (ಕಂಶಭಾ. ೧೧-೬೫) ; ಭವದೀಯ ಪ್ರಸಾದದಿನೆನಗೆ ಬಲ್ಲಿದನಪ್ಪ ಬವರವಿಲ್ಲದಾವನಾನುಮೊರ್ವಂ ಮಾಯಾವಿಯ ಮಾಟಮಕ್ಕುಮದು ಕಾರಣಂ ಬೇಗಂ ಬಿಜಯಂಗೆಯ್ವುದು (ಕಂರಾಮಾ. ೯-೧೧೪ ವ). ೧೨. ಕೃತಕವಾದುದು : ಕೃತ್ರಿಮವಾದುದು : ಮಾಟದ ಮುಡಿಯಂತೆ ಕಟ್ಟಿದ ಪಲ್ಲಂತೆ ಪೀಲಿಯ ಕಣ್ಣಂತೆ . . . ಮರುಳ ಕೋಡಿನಂತೆ (ರಮಾನಸ್ಪ. ೮-೯೪). ೧೩. ಮಂತ್ರತಂತ್ರಗಳಿಂದ ಇತರರಿಗೆ ಕೇಡನ್ನು ಬಯಸಿ ಮಾಡುವ ಹಿಂಸಾಕರ್ಮ ; ಅಭಿಚಾರ : ದಾಯಾದಿಗಳು ಮಾಡಿಸಿರುವ ಮಾಟದ ದೆಸೆಯಿಂದ ಮೂವರು ಮಕ್ಕಳಿಗೂ ಒಂದೇ ಸಾರಿ ಖಾಯಿಲೆಯಾಗಿದೆ (ಕಂಶಕಂ. ೩೯) ; ಈ ಅಯೋಗ್ಯದೊರೆಗೆ ಮಾಟವನ್ನು ಮಾಡಿಸಿಯೋ ವಿಷವನ್ನಿಡಿಸಿಯೋ ಕೊಲ್ಲಿಸಿದರೆ ಮುಂದೆ ಇಮ್ಮಡಿರಾಜಪಡೆಯರಿಗೆ ಪಟ್ಟವಾಗುವುದು (ಬವಳ. ೩೩).

**ಮಾಟಕುಟಿಲ**, **ಮಾಟಕುಟ್ಲೆ** = ಅಭಿಚಾರಕ್ರಿಯೆ : ನೀನು ಮಾಟಕುಟಿಲಗಳನ್ನು ಬಲ್ಲೆಯಾ ? (ಅರ್ಧಕ. ೯೭): ನಿಮ್ಮ ತಂದೆ . . . ಕಾಡಿನ ಯಕ್ಷಿಣಿಯ ಜೊತೆಯಲ್ಲಿ... ತನಗೆ ಜಯವಾಗಲೆಂದು, ಮಾಟಕುಟ್ಲೆ ನಡೆಯಿಸಿದನಂತೆ (ಅರ್ಧಕ. ೫೯). **ಮಾಟಪೋಟ** = ಇತರರ ಕೇಡನ್ನು ಬಯಸಿ ಅಭಿಚಾರಕ್ರಿಯೆಯನ್ನು ಮಾಡುವ ದುಷ್ಟ: ತಾಟಕನುಱುವನಲ್ಲ ಜಗದೊಳು ಕೂಟಸಾಕ್ಷಿಯ ಪೇಳ್ವನಲ್ಲವು ಮಾಟಪೋಟನು ಅಲ್ಲ ಇವನಿಗೆ ಸಾಟಿ ಯಾರಿಲ್ಲ (ಹಮತ. ೧೧೯). **ಮಾಟ ಮಾಡಿಸು** = ಮಾಯಾಮಂತ್ರಗಳಿಂದ ಇತರರಿಗೆ ಕೆಟ್ಟದಾಗುವಂತೆ ಮಾಡು; ಅಭಿಚಾರ ಮಾಡಿಸು : ಅವನಿಗೆ ಆಗದವರು ಬೇಕಾದಷ್ಟು 'ಮಾಟ' ಮಾಡಿಸಿದರಂತೆ (ಶಮ್ಮರು. ೦೯೭); ಮೋಹನನ ಮೇಲೆ . . . ಮಾಟ ಮಾಡಿಸಿ ಆಗಲೇ ಕೆಲವು ತಿಂಗಳಾದವು (ಕಂಶಕಂ. ೦೭೬). **ಮಾಟಮಾಡು** = ೧. ಕಣ್ಕಟ್ಟುಮಾಡು ; ಇಂದ್ರಜಾಲವನ್ನು ಹೂಡು : ಆ ದಂಡೆಯು ಮಾಟ ಮಾಡಿದಂತೆ ಕ್ಷಣಕ್ಷಣಕ್ಕೆ ಬದಲಾಗುವ ಹಾಗೆ ಅಷ್ಟಾಗಿ ಕಾಣಿಸಿತು (ಮುಂಬಯ. ೭-೦೫೩); ಮಂತ್ರಿಗಳೇನು ಮಾಟಮಾಡಿ ಆಹಾರ ಒದಗಿಸೋಕೆ ಸಾಧ್ಯವೇ ? (ಕಂದಕೋ. ೦೩). ೨. ಮಂತ್ರತಂತ್ರಗಳಿಂದ ಇತರರಿಗೆ ಕೇಡುಂಟುಮಾಡು; ಶೂನ್ಯ ಮಾಡು : ಕೇರಳದ ಮಾಂತ್ರಿಕರು ಮಾಟ ಮಾಡುವುದರಲ್ಲಿ ಹೆಸರುವಾಸಿ ಎಂಬ ಭಾವನೆ ಇದೆ (ಕಾವ).

[< ಮಾಡು$_1$./ ಮಲ. ಮಾಟ್ಟು, ಮಾಟ್ಟು : ತುಳು. ಮಾಟ]

**ಮಾಟ$_2$** 'ಮಾಡ$_1$' ನೋ.

**ಮಾಟಕ** (ನಾ). ಕಣ್ಕಟ್ಟು ಮಾಡುವವನು; ಐಂದ್ರಜಾಲಿಕ : ನೋಟಕ, ಬೂಟಕ, ಮಾಟಕ ಏನೇನೋ ಮಾಡಿ ಸೂತ್ರವ ಹಿಡಿದು ರಂಗವ ತುಂಬಿದೆ ಹೇ ಧೀರಾ ! (ಸೂರ್ಯಕಾ. ೮-೭). [ಮಾಟ$_1$ + -ಕ$_3$]

**ಮಾಟಕೂಟ$_1$** (ನಾ). [ವೀಶೈ] ಸೇವಾಕಾರ್ಯದಿಂದ ಹೊಂದುವ ಸಂಯೋಗ: ಮಾಟಕೂಟವೆಂಬ ಕೀರ್ತಿಗೆ ಸಿಲುಕಿ ಜಂಗಮವೆ ಲಿಂಗವೆಂಬುವ ಮಱೆದೆಯಲ್ಲಾ (ಅಪಶಂ. ೨೨೯-೧೧೧೯): ಮಾಟಕೂಟ ಬಸವಣ್ಣಂಗಾಯಿತ್ತು ನೋಟಕೂಟ ಪ್ರಭುದೇವರಿಗಾಯಿತ್ತು ಭಾವಕೂಟ ಅಜಗಣ್ಣಂಗಾಯಿತ್ತು (ಮಹಾದೇ. ೨. ೭೭-೦೯೩) ; ನಿನ್ನ ಮನದಲಿ ಮಾಟಕೂಟದ ಬುದ್ಧಿ ಮಮಕರಿಸೆ ನನ್ನ ಹುಸು ಹರಿದುಂಡಿತು (ಕೃಕುಂ. ೨೩-೫೦). 'ನೋಟಕೂಟ' ಪರಾ. [ಮಾಟ$_1$ + ಕೂಟ$_2$]

**ಮಾಟಕೂಟ$_2$** (ನಾ). ಅಂದವಾದ ಗೋಪುರ,–ಶಿಖರ ಆ ಪಣ್ಣಿಂದಂ ಬಳಸಿಯುಂ ಕೋಂಟೆಯುಂ ಮಾಡಿ ಮಾಟಕೂಟಪ್ರಾಸಾದಸಹಿತಂ ಪೊೞಲಂ ಮಾಡಿ (ಪಂಪ.ರಾ. ೦೬೬-೭); ಮದಿಲ ಮಾಳಿಗೆಗಳ ಮಾಟಕೂಟದ ಶಾಲೆಗಳೊಳ್ ಕೂಡೆ ನಿಂದು ನೋಡಲ್ ನೆರೆದ ಪುರಜನದ ಸಂಭ್ರಮಂಗಳಿಂ (ಅಹಂಕೃ. ೯-೩೯೪) ; ತೋರಣಧ್ವಜ ಮಾಟಕೂಟಗಳ ಚಾರುಹರ್ಮ್ಯದ ಶೋಭೆ (ಸಾಳ್ವಭಾ. ೩೦-೨) ; ವಿಸ್ತರದರಾಜಭವನದ ಮಾಟಕೂಟದಯುತ ಸ್ತಂಭದಿಂದೆಸೆವ ಸಭೆಯ ನವರತ್ನದ ಗಭಸ್ತಿಗಳ ಕೋಟಿಾವಲಯದ ಮಣಿಪುರವಂ . . . ತೋಱೆ (ಕೃಎಂಭಾ. ೨೪-೯೬).

[ಮಾಟ$_1$ + ಕೂಟ$_3$./ತಮಿ. ಮಾಟಕೂಟಮ್ = ಮಹಡಿಮನೆ]

**ಮಾಟಗಾತಿ** (ನಾ). ಮಂತ್ರತಂತ್ರಗಳನ್ನು ಬಲ್ಲವಳು ; ಮಾಯಾವಿ : ನನ್ನನ್ನು ಮಾಟಗಾತಿಯೆಂದು ಕರೆದಿರುವಿರಿ (ಶಂಬುಲಿ. ೩೩) ; ನೀವು ಬಂದಾಗಲೇ ಗೊತ್ತಾಯಿತು. ಇದೆಲ್ಲಾ ಆ ಮಾಟಗಾತಿಯ ಮಾಯ ಅಂತ (ಶೇಲಮು. ೭೨). [ ಮಾಟ$_1$ + –ಕಾತಿ$_5$ ]

**ಮಾಟಗಾರ** (ನಾ). ೧. ಇಂದ್ರಜಾಲವಿದ್ಯೆಯನ್ನು ಬಲ್ಲವನು ; ಐಂದ್ರಜಾಲಿಕ : ಸಹನಿಯೂ ಅಂಕಿಸಂಖ್ಯೆಗಳ 'ಮಾಟಗಾರ' ನೆಂದು ಖ್ಯಾತಿವೆತ್ತ ಗಣಿತಶಾಸ್ತ್ರಜ್ಞ ಶ್ರೀನಿವಾಸರಾಮಾನುಜನ್ ಎಂಬಾತನೂ ಇಬ್ಬರೂ ಕೂಡಿ ಕಲಿಯುತ್ತಿದ್ದರು (ಸಕ್ಕೃ. ೧೩೧) : ಬಿಳಿಯ ಮರಳು ಮಾಟಗಾರನ ಅಪ್ಪಣೆಯಂತೆ ಅಪ್ಸರೆಯರು ನೆಯಿದ ಅಮೃತದ ಜಮಖಾನದಂತೆ ತೋರುವುದು (ಶಿವರಾ. ೧೦೯). ೨. ಮಾಟ ಮಾಡುವವನು : 'ಮಾಟಗಾರಿಕೆ' ಪರಾ. [ ಮಾಟ$_1$ + – ಗಾರ ( < – ಕಾಱ ) ]

**ಮಾಟಗಾರಿಕೆ** (ನಾ). ೧. ಇಂದ್ರಜಾಲ ; ಗಾರುಡಿ : (ಕ). ೨. ಮಾಟ ಮಾಡುವುದು ; ಅಭಿಚಾರಕ್ರಿಯೆ : ನನ್ನ ಶಕ್ತಿಯ ವೈಭವ ತಡೆಯದೆ ನೀನು ಮಾಟಗಾರಿಕೆ ಮಾಡಿರುವೆ ! (ಅಕ್ಕಮೋ. ೩೩).

[ ಮಾಟಗಾರ + –|ಇಕೆ ]

**ಮಾಟಗಾರ್ತಿ** (ನಾ). = ಮಾಟಗಾತಿ : (ಕ).

[ ಮಾಟಗಾರ + – ತಿ$_1$ ( < – ಇತ್ತಿ ) ]

**ಮಾಟಗೂಲಿ** (ನಾ). ಮಾಡಿದ ಕೆಲಸಕ್ಕೆ ಕೊಡುವ ಕೂಲಿ,–ಮಜೂರಿ : ಗೌಡರು . . . ನಾನೆ ಮಾಟಗೂಲಿ ಕೊಡುತ್ತೇನೆ ಎಂದು ಅಲ್ಲಿಂದ ಮನೆಯ ಹಾದಿ ತುಳಿದರು (ಗಿಂಡಾ. ೦೬). [ ಮಾಟ$_1$ + ಕೂಲಿ$_1$ ]

**ಮಾಟಮಾಯ** 'ಮಾಯ' ಪರಾ.

**ಮಾಟೆ** 'ಮಾಡ$_2$' ನೋ.

**ಮಾಠರ** (ನಾ). ೧. ವ್ಯಾಸನ ಹೆಸರುಗಳಲ್ಲಿ ಒಂದು. ೨. ಬ್ರಾಹ್ಮಣ ; ದ್ವಿಜ. ೩. ಸೂರ್ಯನ ಸೇವಕವರ್ಗದಲ್ಲಿ ಒಬ್ಬ: "ಮಾಠರಃ. . . ಪಾರಿಪಾರ್ಶ್ವಕಾಃ–ಪಾರ್ಶ್ವದೊಳಗಿರುವ ಅಂಗದೇವತೆಗಳ ಹೆಸರುಗಳು" (ಶಿಬ್ಬಾಂಡಿ. ೩೨). ೪. ಒಂದು ಗೋತ್ರದ ಹೆಸರು : ನಾನು . . . ಮಾಠರಸಗೋತ್ರದ ಕಲ್ಪಶಾಖೆಯ . . . ಬ್ರಾಹ್ಮಣನು (ಶಾಸನಾ. ೦೬).

[ಸಂ.]

**ಮಾಠಾಪತ್ಯ** (ನಾ). ಮಠದ ಉಸ್ತುವಾರಿ: (ಕ). 'ಪಾರುಪತ್ಯ' ಹೋ.

[ < ಸಂ. ಮಾಠಪತ್ಯ ]

**ಮಾಡ$_1$**, ಮಹಡಿ, ಮಾಟ$_2$, ಮಾಡಿ$_1$, ಮಾಡು$_2$ (ನಾ). ೧. ಉಪ್ಪರಿಗೆ ಮನೆ : ಭವನ ; "ಹರ್ಮ್ಯ" (ಶಶುಸಿ. ೬. II, ೩೭) ; ಚರಿಗೆವೊಕ್ಕಾಗಳೊರ್ವಳ್ ದಿವ್ಯಸ್ತ್ರೀ . . . ತನ್ನ ಮಾಡಕ್ಕೊಡಗೊಂಡು ಪೋಗಿ ಕಾಲಂ ಕರ್ಚಿಯರ್ಚಿಸಿ ಗುರುಭಕ್ತಿಗೆಯ್ದು ವಂದಿಸಿ (ವಡ್ಡಾರಾ. ೬೯-೨೯) ; ಪಿರಿಯ ಮರಂಗಳೆ ಮಾಡಮಾಗೆ ಪೊಳೆವೆಳದಳಿರ್ಗಳೆ ಸಜ್ಜೆಯಾಗೆ . . . ಪಣ್ಬಲ ಮೆತ್ತಿದ ಬೋನಮಾಗೆ ಸಿರಿಯ ಮಹಿಮೆಯುಂ ಮೆಱೆಯಲೇನಾರ್ತರ್ದೊ ಬನದೊಳಿರ್ದರವಾ ಪಾಂಡವರಾ (ಹಂಪಭಾ. ೭-೨೮). ೨. ಮನೆ ; ನಿವಾಸ : ರತ್ನಗ್ರೀವನೆಂಬೊರ್ವಂ . . . ತನ್ನೊಂದೇಱುಂಜಸದೆಸಕದಿಂ ದೆಸೆವಳರ್ಗೆ ಪೊಸಮಾಡಮಂ ನೇರ್ಪಡಿಸುತುಂ (ರಾಜಶೇಕ್ಷ. ೭೪-೨೪). 'ಮಾಡಗೆಲ' ಪರಾ. ೩. ಮನೆಯ ಮೇಲಿನ ಉಪ್ಪರಿಗೆ,–ಅಂತಸ್ತು : ಬೆಳವ ಕೌಂಗಿನ ಗೊನೆ ತಳ್ತೆಱಗಿರೆ ಮಾಡದೊಳಲ್ಲಿಯೆ ತಿಱಿದುಕೊಳಲ್ಕಂಬಿನೆಸೞಮೆಸೆದು ದುಪವನಂ (ಶಂಕಭಾ. ೩-೪೦) ; ಮುಗಿಲೇಱೆಯೆ ನೆಱೆ ನೋಡುತ್ತಿರ್ಪರು ಮುಗಿಲಂ ಮುಟ್ಟುವ ಮಾಡದೊಳಿರ್ಪರು (ತಿರುವಾ. ದೇ. ೨೨೩-೦೬) ; ನೆಲೆಮನೆಯ ಮಾಡದಲಿ ರತ್ನಾವಳಿಯ ಸುಣ್ಣಿಳಗಿನಲಿ ಹಂಸೆಯ ತುಳಿಯ ಮೇಲ್ಹಾಸಿನಲಿ ಪವಡಿಸುವೀಕೆ . . . ಈ ಕಲುನೆಲದೊಳೊಱಗಿದಳೆನುತ ಮಱುಗಿದನು ಧರಣೀಶ (ಕುವ್ಯಾಕ. ೯-೩೦). ೪. ಮನೆಯ ಇಳಿಜಾರಾದ ಛಾವಣಿಯ ತುದಿ,–ಸೂರಿನ ಕೊನೆ : 'ಮಾಡಸಂದಿ' ಪರಾ. ೫. (ಬಾಗಿಲಿನ) ಚೌಕಟ್ಟು : 'ಬಾಗಿಲುವಾಡ' ಪರಾ. ೬. ಗುಡಿಸಲು ; ಜೋಪಡಿ. ೭. ಹೆಣವನ್ನು ಕುಳಿತಿರುವ ಸ್ಥಿತಿಯಲ್ಲಿ ಹೊತ್ತೊಯ್ಯುವುದಕ್ಕೆ ಅನುಕೂಲವಾಗಿರುವಂತೆ ಮಾಡಿದ ಚಟ್ಟ ; ಸಿದಿಗೆ ; ವಿಮಾನ : ಊರ ಮಧ್ಯದ ಕಣ್ಣ ಕಾಡಿನೊಳಗೆ ಬಿದ್ದೈದಾವೆ ಐದು ಹೆಣನು . . . ಹೆಣನೂ ಬೇಯದು ಕಾಡೂ ನಂದದು ಮಾಡ ಉರಿಯಿತ್ತು (ಅವತಂ. ೭-೨೬) ; ಹೊತ್ತು ಬಹ ಮಾಡದೊಳಗಿಹ ಪೆಣನತ್ತಲತಿದೂರದೊಳು ಕಾಣುತ ಚಿತ್ರದೊಳಗದು ಸ್ಯತಕಶಬವೇದಱಿದು ಗಹಗಹಿಸಿ (ಐಕಥ. ೩೨-೩೬). ೮. ದೇಗುಲ (?) : ಸೀಮೆ ಮೂಡಾಯ್ತೊಱೆವ ತೆಂಕಾಯ್ಬಟ್ಟಾರನ ಮಾಡವೆ ಪೇರೋಣಿವ ಸನ್ದು (ಎಕ. IV, ಎಡತೊ. ೩೦-೭೩ ; ಸು. 890). ಮಹಡಿ: ೩. ಹೋಗಿ ನೋಡಲಾಗಿ. . .ಬಿದ್ದುಹೋದ ದೊಡ್ಡ ಮಹಡಿಯು ಕಂಡು ಬಂದಿತು (ದೇಶೀಕಾ. ೩೯) ; ಮಹಡಿಯ ಮೆಟ್ಟಲುಗಳನು ಶುಚಿಗೈವಂದು ಮೇಲಿನಿಂದುಡುಗುವರು (ಇಂಕಾಶ. ೨೦೯-೮). ಮಾಟ$_2$: ೯. (?) ಟಕಾರಕ್ಕೆ ಡಕಾರಂ . . . ಮಾಟ–ಮಾಡ ; ಲಕುಟ–ಲಗುಡ (ಶಮತ. ೨೩೩ ಪ್ರಯೋ) : ಮಾಟ, ಮಾಡ (ಶಬ್ದಾಸು. ೦೯೩ ಪ್ರಯೋ). ಮಾಡಿ$_1$ : ೩. ಮಾಡಿಮೇ[ಯೇ]ಱಿ ಗವಾಕ್ಷದೆಡೆಗೈದಿವಳು ವಹಿಲದಲಿ (ಅ ಜತ. ೨-೬) ; ಮಾಡಿಯ ಮೇಲೆ ಮಲಗಿರುವ ಮಲ್ಲೈಯ್ಯ ಓಲೆ ಬಂದಾವೇ ಓದೇಳೋ (ಹುಬ್ಬಹ. ೩೬). ಮಾಡು$_2$ : ೨. ಅವರು . . . ಮಾಡಿನ ಹೊರಗೆ ಹೋಗಿ ಕುಳಿತರು (ಮೂರುದಾ. ೯). ೧೦. ಮನೆಯ ಮೇಲುಛಾವಣಿ ; ಸೂರು : ಮಾಡು ಸಿಕ್ಕವಲ್ಲಾ ಮಾಡಿನ ಗೂಡು ಸಿಕ್ಕದಲ್ಲಾ (ಕುರಂದ. ೦-೩೪ ಪಲ್ಲವಿ) : ಮಾಡುಗಳ ಮೇಲೆ ಪಾರಿವಾಳಗಳು ಗುಬ್ಬಳಿಸುತ್ತಲೂ ಇವೆ (ಹಬ್ಬರ. ೦-೩); ಮಾಡಿನ ಹೆಂಚುಗಳ ಮೇಲೆ ನೆಟ್ಟ ದೃಷ್ಟಿಯಿಟ್ಟು ಯೋಚಿಸತೊಡಗಿದೆ (ಸೀತಾರ. ೭೩). ೧೧. ಚಾಚಿದ ಭಾಗ ; ಹರಹು : ಸಾಕಷ್ಟು ಒಳಗಿನ ತನಕವೂ ಮೇಲಣ ಬಂಡೆಯ ಮಾಡು ಚಾಚಿದ್ದುದರಿಂದ ಆ ತಾವಿನಲ್ಲಿ ನೂರಾರು ಮಂದಿ ಕುಳಿತಿರುವಷ್ಟು ಜಾಗ ಕಾಣಿಸಿತು (ಮೂಳಕ್ಕೆ. ೩೬).

[ದೇ.॥ ತಮಿ. ಮಾಟ, ಮಾಟಿ ; ಮಲ. ಮಾಡ ; ತುಳು. ಮಾಡ್, ಮಾಡು ; ಕೊಡ. ಕೋಲಾ. ಮಾಡಿ ; ತೆಲು. ಮಾಡುಗು, ಮಾಡುವು./ ಮರಾ. ಮಾಡಾ./ ಸಂ. ಮಾಡಿ]

**ಮಾಡ$_2$**, ಮಾಂಟೆ, ಮಾಟೆ, ಮಾಡು$_3$ (ನಾ). ೧. (ವಸ್ತುಗಳನ್ನು ಇಡಲು ಅನುಕೂಲವಾಗುವಂತೆ) ಗೋಡೆಯಲ್ಲಿ ಮಾಡಿದ ಗೂಡು : ಬನಮೆಂಬ ಮದನನೃಪಸರಮನೆಯೊಳ್ ಪೊತ್ತಿಸಿದ ದೀಪಮಾಲೆಯ ಮಾಡಕ್ಕನುರೂಪಮಾಗಿ ಪಣೆಯಿಂ ಕೊನೆವರೆಗಂ ಪೂತುವರರೆ ಚಂಪಕನಿಕರಂ (ಶಂಪ್ರಕ. ೭-೩೪); ಮಹಾಯಾನದಲ್ಲಿ ಚಿತ್ರ ಮತ್ತು ಮೂರ್ತಿಗಳಿಗೆ ಅವಕಾಶ ದೊರೆತದ್ದರಿಂದ ಬದಿಯ ಅಂಕಣಗಳಲ್ಲಿ ಮಾಡಗಳನ್ನು ಕೊರೆಯುವ ಮತ್ತು ಹೆಚ್ಚು ಹರವಾದ ಒಳಗೋಡೆಗಳನ್ನು ನಿರ್ಮಿಸುವ ಅವಶ್ಯಕತೆ ಉಂಟಾಯಿತು (ಕಶಕೋ. I, ೦೯೬) ; ದೇವರ ಮಾಡದಲ್ಲಿ ಗಂಗಾಜಲವಿದೆ ನೋಡು (ಮುತ್ತೈದೆ. ೯೯). ೨. ರಂಧ್ರ ; ತೂತು : 'ಮಾಡಬಲೆ' ಪರಾ.

**ಮಾಂಟೆ:** ೩. ಗವಿ; ಗುಹೆ: ಮಾಂಟೆಯಲ್ಲಿದ್ದ ಹುಲಿಯೂ ಇದರ ಗರ್ಜನೆಗೆ ಮಾರುತ್ತರವಿತ್ತಿತು (ಕಂಪಕ. ೫೬) ; ಸುತ್ತಲೂ ಹತ್ತಾರು ಕಡೆಗಳಲ್ಲಿ ಹುಲಿಗಳ ಮಾಂಟೆಗಳು ಇದ್ದವು (ಕೃಷಾಂಕ. ೭೫). **ಮಾಟೆ :** ೩. ಬೆಟ್ಟದ ಮೈಯಲ್ಲಿ ಮಳೆ ಬಿದ್ದು, ಬಿದ್ದು, ನೆಲ ಮಾಟೆಯ ಹಾಗೆ ಕಾಣಿಸಿದರೆ ಅದೊಂದು ಆಶ್ಚರ್ಯದ ಸಂಗತಿಯಲ್ಲ (ಶುಊಕೆ. ೫೩). **ಮಾಡು₃ :** ೧. ಅಚ್ಚು ಕಾಣದ ಆ ಗ್ರಂಥವು ಗಚ್ಚುಹಾಕಿದಂತೆ ಗಣೇಶನ ಮಾಡಿನಲ್ಲಿಯೇ ಕುಳಿತಿತ್ತು (ಮುಂಗಾಪು. ೦೪); ಇದನ್ನು ಮನೆಗಳ ಮಾಡುಗಳಲ್ಲೂ ಸೇತುವೆಗಳಲ್ಲೂ ಉಪಯೋಗಿಸುವುದೇ ಹೆಚ್ಚು (ಕಂಕೆಶ. II, ೯೯).

[ದೇ.II ಮಲ. ಮಾಳ ; ತುಳು. ಮಾಟೆ ; ಕೊಡ. ಮಾಳಿ ; ಗೊಂಡಿ. ಮಾಂಡೊ ; ಕುರುಖ್. ಮಾಣ್ಡಾ]

**ಮಾಡಗುಳ್ಳು** (ನಾ). (?) : ಪಿತ್ತಾಶಯವು ಆಕಾರದಲ್ಲಿ ಮಾಡಗುಳ್ಳಿನ ಹಾಗೆ, ಬಣ್ಣ ಕಪ್ಪು (ಶುಬಂಜಬು. ೬-೩೦೦). [ ? ]

**ಮಾಡಗೆಲ** (ನಾ). ಮನೆಯ ಪಕ್ಕ : ಬಲುವೃದ್ಧ ರಾತ್ರಿಯೊಳೆತ್ತ ಬೀಳು ತೇಳುತ ಪೋದವೆ ಮಾಡಗೆಲದಲಿ ಮಲಗು (ಜೀವಂಕಾಂ. ೦೬-೯೯).

[ಮಾಡ₁ + ಕೆಲ₁]

**ಮಾಡಬಲೆ** (ನಾ). (ಕರಾ) ಸಣ್ಣ ಸಣ್ಣ ರಂಧ್ರಗಳುಳ್ಳ ಬಲೆ.

[ಮಾಡ₂ + ಬಲೆ₁]

**ಮಾಡವೃಕ್ಷ** (ನಾ). ಒಂದು ಬಗೆಯ ಮರ : ಬಗನಿ : "ಮಾಡ ದ್ರುಮಃ – ಮಾಡವೃಕ್ಷ" (೬ಶಂ. ೦೨೩). [ಸಂ.]

**ಮಾಡವೆಟ್ಟು** 'ಮಾಡುವೆಟ್ಟ' ನೋ.

**ಮಾಡಶಾಲೆ** (ನಾ). ಭವನದ ಪಜಾರ, – ಮೊಗಸಾಲೆ : ಅಶಾಕರೀಂದ್ರಂಗಳ್ಗೊಂದು ಸುಪ್ರತೀಕಪತಿ ಸಮೆಯಿಸಿದ ವಿಶಾಲಕ್ರೀಡಶಾಲೆಗಳಿನಿಸಿದ ಚಿಂಬೊನ್ನ ಕಲಶದ ಮಾಡಶಾಲೆಗಳುಮಂ ನೋಡಿ (ಶಾಂತಿಪು. ೩-೦೯ ವ).

[ಮಾಡ₁ + ಶಾಲೆ]

**ಮಾಡಸಂದಿ** (ನಾ). ಅಕ್ಕಪಕ್ಕದಲ್ಲಿರುವ ಎರಡುಮನೆಗಳ ಸೂರುಗಳ ಅಂಚುಗಳ ನಡುವಿರುವ ಕಿರಿಯ ಓಣಿ : ಹಿತ್ತಲುಕಡೆಯ ಹಿಂಬಾಗಿಲು ತೆಗೆದು, ಮಾಡಸಂದಿಯ ಕಡೆಗೆ ಕೈದೋರಿದಂತೆ ಮಾಡಿದಳು (ಮಲೆಮ. ೬೩೬).

[ಮಾಡ₁ + ಸಂದಿ (< ಸಂದು₁)]

**ಮಾಡಾಟ** (ನಾ). ಕೆಲಸವನ್ನು ನಿರ್ವಹಿಸುವಿಕೆ: ದಣೀ ಹೇಳಾಟ, ಬಡಗೀ ಮಾಡಾಟ (ಗಾದೆ). [ಮಾಡು₁ + ಆಟ]

**ಮಾಡಿ₁** 'ಮಾಡ₁' ನೋ.

**ಮಾಡಿ₂** (ನಾ). ಬಂಡಿ ; ಗಾಡಿ ; ವಾಹನ : "ಮಾಡಿಮಿನಲ್ ಬಂಡಿಯೆಂದು ತಿಳಿಗೆ" (ಶಾರು. ೩೯). [←ತೆಲು. ಮಾಡಿ]

**ಮಾಡಿ₃** (ನಾ). ತೆಂಗಿನ ಮರದಿಂದ ಒಸರುವ ಒಂದು ಬಗೆಯ ಮಾದಕರಸ, – ಸಾರಾಯಿ : ಭಂಡಾರೀ, ಹಳೆಪೈಕರು ಮುಂತಾದವರು ತೆಂಗಿನಮರಕ್ಕೆ ಕಚ್ಚುಹಾಕಿ ಮಾಡೀರಸವನ್ನು ತೆಗಿಯುವರು (ಕಬಾಗ. ೩೯).

[←ಮರಾ. ಮಾಡೀ]

**ಮಾಡಿಕೆ** (ನಾ). ನಿರ್ವಹಿಸಿದುದು ; ಮಾಡಿದುದು ; ಕಾರ್ಯ : ಮಾತಿನಲ್ಲಿ ಮಾಡಿಕೆಯಲ್ಲಿ ಅವನ ಕೀರ್ತಿ ಗುಡಿಗಟ್ಟುತ್ತಿತ್ತು (ನಾಡೋಜ. ೦೩); ಮನಸ್ಸು ಮಾತು ಮಾಡಿಕೆ ಎಂಬವು ತ್ರಿಕರಣಗಳಷ್ಟೆ (ನಾಡೋಜ. ೨೩೬).

[ಮಾಡು₁ + – ಇಕೆ]

**ಮಾಡಿತು.** ಮಾಡಿತ್ತು (ನಾ). ಕಾರ್ಯಗತಗೊಳಿಸಿದುದು : ಯಿಂತೀ ಧರ್ಮ್ಮಮನಜುವಗ್ಗಾ ಪುಂಡುಗಳಜುವಣಮನಪರೆಯ ಮತ್ತರಿಂಗೆ ಹಣವೊಂದು × × × ಳಿ ಮತ್ತರಿಂಗೆಯಡ್ಡವಂ ಮಾಡಿತಕ್ಕೆ ನೋಡಿಕೊಂಡು ಸ್ವಧರ್ಮ್ಮದಿಂ ಪ್ರತಿಪಾಳಿಪರು (ಕೊಣ್ಣಾ. ೦೫-೯೦; 1186) ; **ನೋಡಿತೆ** ಮಂಗಳಂ ನೆನೆವೆ ಮಂಗಳವಿರ್ದೆಡೆ ಮಂಗಳಂ . . . ಮಾಡಿತೆ ಮಂಗಳಂ (ಶಂಪಕ. ೩೩). **ಮಾಡಿತ್ತು:** ಮಾಡಿತು, ಮಾಡಿತ್ತು (ಕಪ್ಪಾ. ಸು. ೯೩ ಕ್ರಿಯೋ).

[<ಮಾಡು₁]

**ಮಾಡಿತ್ತು** 'ಮಾಡಿತು' ನೋ.

**ಮಾಡಿಮನೆ,** ಮಾಹಡಿಮನೆ (ನಾ). ಅಂತಸ್ತುಳ್ಳ ಮನೆ : **ಉಪ್ಪರಿಗೆ** ಮನೆ : ರಸ್ತೆಯ ಕೊನೆಯಲ್ಲಿ ಕಾಣುವ ಮಾಡಿಮನೆಯೇ ನಮ್ಮದು (ಜೂತಿ). **ಮಹಡಿಮನೆ :** ಅವರೋ . . . ಮಹಡಿಮನೆಯಲ್ಲಿ ಅಟ್ಟಹಾಸದಿಂದ ನಲಿಯುತ್ತಿದ್ದಾರೆ (ಮುಂಗಾಮು. ೦೦೬). [ಮಾಡಿ₁ (<ಮಾಡ₁) + ಮನೆ]

**ಮಾಡಿಸು,** ಮಾಡ್ಸು(ಕ್ರಿ). ೧. ಏನನ್ನಾದರೂ ಕಾರ್ಯರೂಪಕ್ಕೆ ತರಿಸುವ, ತೊಡಗುವಂತೆ ಮಾಡು : ಬೀಡುಬಿಡುವಿಂಬು ಕದಳಿ ತೆಂಗಿನ ತಾಣಂ ಜಾಣಂ ನೀರ್ದಾಣಮೆಂದೆಡೆಯರಿದುಂ ಮಾಡಲ್ ಮಾಡಿಸಲ್ ಪಡೆ ಮೆಚ್ಚೆ ನೀಂ ಬಲ್ಲೆ ನೀಂ ಮೆಚ್ಚೆ ಹರಿಗ ಕೇಳಾನೆ ಬಲ್ಲೆಂ (ಪಂಪಭಾ. ೩-೪೨); ಮಾಡಿದೊಡಂ ಮೆಚ್ಚಿದೊಡಂ ಮಾಡಿಸಿದೊಡಮಮಿತಸೌಖ್ಯಮೆನೆ ಕಮ್ಮನೆ ಕೆಟ್ಟೋಡದೆ ಜಿನಪೂಜೆಗಳಂ ಮಾಡದೊಡಂ ನೋಡಿ ಪಡೆಯಮುತ್ತಮ ಸುಖಮಂ (ಸಮುಪ. ೧-೯೯). ೨. ಜರುಗಿಸು ; ನಡೆಯುವಂತೆ ಮಾಡು ; ನೆರವೇರಿಸು : ಅವರ್ಗೆಲ್ಲಂ ಸಂಸ್ಕಾರವಿಧಿಯಂ ನಾನೆ ಪಕ್ಕದೋರ್ದು ಮಾಡಿಸುವೆಂ (ಪಂಪಭಾ. ೦೪-೮ ವ) ; ಅಭಿಷೇಕವನು ಕೌರವರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನ (ಕುಮಾರವ್ಯಾ. ೦ ಸೂಕಪ) ; ಭೂಲೋಲ ಚಾಮರಸೇಂದ್ರ ವಿವಾಹವ ಲೀಲೆಯೊಳಗೆ ಮಾಡಿಸಿ (ಕಂಪಕಾ. ೩-೦೦). ೩. ಕಟ್ಟಿಸು ; ನಿರ್ಮಾಣಗೊಳಿಸು ; ನಿರ್ಮಿಸು : ಪೊಲೆಕೇಸಿಅರಸರ × × × ಮಾಡಿಸಿದ ದೇಗುಲ (ಎಕ. VII, ಶಿಕಾ. ೦೦-೩; ಸು. ೬೪೦?) ; ಅರಸನುಮಾತನ ಮಾತನೊಡಂಬಟ್ಟು ಸ್ವಯಂಬರಸಾಲೆಯಂ ಮಾಡಿಸಿ ಅರಸುಗಳ್ಗೆಲ್ಲಂ ಬಟ್ಟೆಯನಟ್ಟಿ ಬರಿಸೆ (ವಡ್ಡಾರಾ. ೯೦-೨೯); ಜಿನೇಂದ್ರರುಂದ್ರ ಮಂದಿರಮನದೊಂದನೀ ದೊರೆತು ಮಾಡಿಪೆಂ (ಅಜಿತ.೯-೬೩); ಪ್ರಜಾಪಾಲಂ . . . ಜಲಕೇಳಿನಿಮಿತ್ತಂ ಕ್ರೀಡಾಸರೋವರಮಂ ಮಾಡಿಸಿ ನೀರಂ ತೀವಿ (ಕಂಪಕಂ. ೦೨೩-೦೬). ೪. ಒದಗಿಸು ; ಊಟುಮಾಡು : ಕೊಡೆ ದಡದಡಿಸೆ ನಡೆಗೆಟ್ಟು ಕಟಿಲಲಿಗೆ ಬಟಿಸಲ್ವ ಕಳಹಂಸಮ್ಮಂಡಲಕ್ಕಯಶಮಂ ಮಾಡಿಸಿಯುಂ (ಕಾದಂಕಾ. ೩೬) ; ಬಿರುದರ್ಗರಿದೆನಿಸುವ ಬಾಧೆಯಂ ಮಾಡಿಸುವಂ (ಧರ್ಮಾಮೃ. ೨-೬೭): ಮಂಗರಸರ ಕಾವ್ಯಗಳ ಪರಿಚಯ ಮಾಡಿಸದೆ ಪ್ರೌಢವಿದ್ಯಾರ್ಥಿಗಳನ್ನು ಆಶ್ರಮದಿಂದ ಕಳುಹಿಸಿಕೊಡುತ್ತಿರಲಿಲ್ಲ (ಕಂಗಾಳ. ೯೯). ೫. ಸಿದ್ಧಪಡಿಸು ; ಸಜ್ಜುಗೊಳಿಸು : ಕೊಂಡವ ತೋಡಿಸಬೇಡ ಶುಷ್ಕವ ಸುಟ್ಟು ಕೆಂಡವ ಮಾಡಿಸಬೇಡ ಖಂಡೇಂದುಶೇಖರ ಕಣ್ಣೆಚ್ಚನಿಂದೆನ್ನ ಗಂಡನನುರುಹಿದಂತುರುಹು (ಜೋಕಪ. ೬-೪೭). ೬. (ಧಾನ್ಯವನ್ನು) ಶುದ್ಧಗೊಳಿಸುವಂತೆ ಮಾಡು ; ಹಸನುಗೊಳಿಸು : ಕೆಲಸದವಳ ಕೈಯಲ್ಲಿ ರಾಗಿಯನ್ನು ಮಾಡಿಸಬೇಕು (ಜೂತಿ). **ಮಾಡ್ಸು :** ೨. ರಿಶ್ಯಶ್ರಿಂಗಮಹಾರಿಶಿಯಂ ತಂನಲ್ಲಿಗೆ ಬರಿಸಿ ಪುತ್ರಕಾಮೇಷ್ಟಿಯಂ ಮಾಡ್ಸಿ (ಕಾ. I. ೨೫-೩೩; 1186). **P** ಈ ಧಾತುವು ಅನೇಕ ನಾಮಪದಗಳ ಮುಂದೆ ಸೇರಿದಾಗ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ : ಊಟಮಾಡಿಸು, ಒಡವೆಮಾಡಿಸು ಇತ್ಯಾದಿ. [ಮಾಡು₁ + – ಇಸು₃]

**ಮಾಡು₁** (ಕ್ರಿ). ಮಾರ್ಪ, ಮಾಳ್ಪ, ಮಾಟ್ಪ (ಭೂತಕೃ). ೧. ಏನನ್ನಾದರೂ ಎಸಗು ; ಕಾರ್ಯರೂಪಕ್ಕೆ ತರು : "ಮಾಡು– ಕರಣೇ, ಕುಡ್ಯವಿಶೇಷೇ ಚ (ಗೂಢ–)" (ಶಮಾ) ; ಕೇಡಡಸಿದೊಡಂ ಬಗೆಯುಂ ಕೊಡದು ಕೊಡಿದುದುಮಟಿದು ವಿಪರೀತಮುಮಂ ಮಾಡುಗುಂ (ಕಪಾ. ೦-೬೪) ; ಶ್ರೀಮತು ಕಲಿದೇವಗ್ಗೆ . . . ಪುಟ್ಟವಣಸುವ ಗಡುಗೆಯಂ ಕುಡುವ ಜಪಂ ಮಾರ್ಪ್ಪವರ್ಮಾವರು (ಕೌಶಾ. IX-೧, ೨೫೫-೦೭; 1148) ; ಸುಕೃತದುಷ್ಕೃತಭೋಗವದು ಮಾಡಿದುಗಪ್ಪುದು

ತೇದ ನವುಗೇಕೆ (ಕಾವ್ಯಸ್ತ್ರೀ. ೧-೧೧) : ಮಾಡಿದ್ದುಣ್ಣೋ ಮಹರಾಯ (ಗಾದೆ). ೨. ನಡೆಸು ; ಜರುಗಿಸು ; ನೆರವೇರಿಸು : ಪ್ರಶಸ್ತದಿವಸವಾರ ನಕ್ಷತ್ರಮುಹೂರ್ತದೊಳ್ ಮುಂಜಿಬಂಧನಕ್ರಿಯೆಯುಂ ಮಾಡಿದ ಬಳಿಕ್ಕ (ಶಬ್ದಾ.ಶಾ. ೬೪-೨೦); ಮಾಳ್ಪಂ ಮನೋಹರಮಪ್ಪಂತು ವಿವಾಹಮಂಗಳಮಂ (ಹಂಪಶಾ. ೫-೩೯) ; ವೇದೋಕ್ತವಿಧಿಮಾರ್ಗದಲಿ ಮಾಡಿದರಮಲಮುಖಪುರುಷ ಪ್ರತಿಷ್ಠಕವ (ತೊರವೆರಾ. ೧-೬-೯೨). ೩. (ದೇವಾಲಯ ಮುಂತಾದುವುಗಳನ್ನು) ಕಟ್ಟಿಸು ; ನಿರ್ಮಿಸು : ಮೆಟ್ಟುವಿಡುವಿನೊಳಿನ್ದ್ರವಿಮಾನ ಸಮಾನಮಪ್ಪ [ದೇಗು]ಲಮಂ ಮಾಡಿ (ಶಾಶಾ. XI-೧, ೨೨-೮ ; 897) ; ಕೌಶಲಾದಿ ದೇಶಂಗಳುಮಂ ರಾಜಧಾನಿಗಳುಮಂ ಸಮಕಟ್ಟಿ ಪುರಂಗಳನಾದಿ ಬ್ರಹ್ಮನ ಬೆಸದೊಳು ಮಾಡಿ ಪುರಂದರವೆಸರಂ ಪಡೆದಿಂದ್ರಂ ಪೋದಂ (ಶಾಪುಂಪು. ೩೬) ; ಮಾಡಿದ ತೋರಮೆಟ್ಟುಗಳ್ ಪೊಸಮನೆ . . . ಎಂಬೆಸಕ ಮಸಾಳ್ದು ಪೂಗಣೆಯನಿರ್ಪ ಪೊಟಲ್ಗೆಣೆಯಾದುದೀ ಜನಂ (ಕಬ್ಬಿಗ. ೧೧೧). ೪. ಸೃಷ್ಟಿಸು ; ರಚಿಸು : ಜಗತ್ಪ್ರಪಂಚವ ಮಾಡಿ ಆ ಜಗದಲ್ಲಿ ಜೀವರೂಪಿಂದ ಬಳಿಸಂದನೆಂದು ಹೇಳುವ ಶ್ರುತಿಯಂತಿರಲಿ (ಅಪಶ. ೩-೧೧) ; ಒಮ್ಮೆ ಸಂಹರಿಸುವನು ಸೃಜಿಸುವನೊಮ್ಮೆ ಮಾಡುವನೊಮ್ಮೆ ಕೆಡಹುವ ಬೊಮ್ಮಮುಖ್ಯರಿಗಜೀಯಲಾಜಿದು ಕಪಟನಾಟಕವು (ಶಶಿರಾ. ೨೩-೧೬) ; ನಾ ಪದವಿಟ್ಟು ಕಡಿತದೊಳ್ ಬರೆದು ಮಾಡಿದ ಕೃತಿಯಲ್ಲ (ಮೋಹತ. ೧-೨೦). ೫. ಉಂಟಾಗಿಸು ; ಒದಗಿಸು : ಮನಕ್ಕಾಹ್ಲಾದಮಂ ಮಾಳ್ಪ ತತ್ಸತಿಯಿಂ ನೆಟ್ಟನೆ ಸಾರಮಾದುದು ಗಡಂ (ಆಪು. ೨-೬೬) ; ಸಮ್ಯಕ್ತ್ವಮಾರ್ಗಮಂ ಕೇಳ್ದು ಮನೋಮುದದಿಂ ಕೈಕೊಳು ನಿನಗದು ತುದಿಯೊಳು ಮಾಡುಗುಮನಂತಮುಕ್ತಿಶ್ರೀಯಂ (ಸುಕುಮಾ. ೫-೩೮); ಪಂಚೇಂದ್ರಿಯಂಗಳ ವಿಷಯಮಪ್ಪ ಶಬ್ದ ಸ್ಪರ್ಶ ರೂಪ ರಸ ಗಂಧಂಗಳೊಳ್ಪಂ ಶ್ರೋತ್ರೇಂದ್ರಿಯ ಮೊಂದಲ್ಲಿಯೆ ಶಬ್ದಮುಖದಿನಭಿವ್ಯಕ್ತಿಯಂ ಮಾಳ್ಪ ವಿಮಲಸ್ವರೂಪೆಗೆ . . : ನಮಸ್ಕರಿಸುವೆಂ (ಶಬ್ದಮ. ಪೀಠಿ. ೧ ವೃತ್ತಿ). ೬. ಆಚರಿಸು ; ನಡೆಸಿಕೊಳ್ಳು ; ವರ್ತಿಸು : ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಂ ಕೇಳುತಂ ಕೆಲವಂ ಮಾಳ್ಪವರಿಂದ ಕಂಡು . . . ಸರ್ವಜ್ಞನಪ್ಪಂ ನರಂ (ಸೋಮೇಶ. ೧) ; ವಚನಿಸಿ ಮಾಡದಿಹ ಬಾಹಿರರು ನಾವಲ್ಲ (ಕಾವ್ಯಸ್ತ್ರೀ. ೧-೯೦) ; ಮಾಡಿದವರ ಪಾಪ ಆಡಿದವರ ಬಾಯಲ್ಲಿ (ಗಾದೆ). ೭. ಸಾಧಿಸು ; ಸಿದ್ಧಿಯನ್ನು ಹೊಂದು : ಕೊಳಚೆನೀರೊಳಗಾಳುತೇಳುತ ಜಲಧಿ ಕಾಲ್ಗೊಳೆಯೆಂಬ ಘಂಡರ ಮುಳಿದು ಮಾಡುವುದೇನು (ಕಾವ್ಯಸ್ತ್ರೀ. ೫-೯೯) ; ಮಾಡದ ಮಾಟವ ಮಾಡಿ ನೀ ಮುನ್ನೊಂದು ಕೋಡಗಮನು ಬೀಳಲೆಚ್ಚ ಪಾಡನೆನ್ನೊಳು ತೋಜಿಸು (ಮೋಹತ. ೩೯-೩೦) ; ಒಳಗಿರ್ಪನ್ ಇಲ್ಲಮೆಂದಾರಿಪ್ಪುದೇನ್ ಮಾಟ್ಟಿ ? (ಅಶ್ವಶಾ. ೧-೫). ೮. (ಧಾನ್ಯವನ್ನು) ಶುದ್ಧಪಡಿಸು : ಹಸನುಮಾಡು : ಪಾಡುವರ್ ಕೆಲರು ಪೆರ್ಮೊಜಿದೊಳಕ್ಕಿಯನಿಕ್ಕಿ ಮಾಡುವರ್ ಕೆಲರು (ಮೋಹತ. ೧೯-೭೦). ೯. ಸಲ್ಲಿಸು ; ಅರ್ಪಿಸು : ನಿರ್ಮಲಪಂಚಪದಾಸಚಾರ್ಯಪದಕ್ಕಾಂ ಪಂಚವಿಧವಿರಾಜಿತ ಮುಕ್ತಿಯೊಳಿಭಿವಂದನೆಯುಂ ಮಾಳ್ಪಂ (ಪಯುಗ. ೧-೫).

☞ ಈ ಧಾತುವು ಅನೇಕ ಶಬ್ದಗಳ ಮುಂದೆ ಸೇರಿದಾಗ ಸಂಯುಕ್ತ ಧಾತುಗಳ ರೂಪವನ್ನು ಪಡೆದು ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ : ಅಭ್ಯಾಸಮಾಡು, ನಿಮ್ಮಂತೆ ಮಾಡು, ಪ್ರಭುಮಾಡು, ಹಣಮಾಡು ಇತ್ಯಾದಿ.

[ದೇ.೫ ಮಲ. ಮಾಡು ; ತುಳು. ಮಾಡಾವು ; ಕೊಡ. ಮಾಡ್]

**ಮಾಡು$_2$** ' ಮಾಡ$_1$ ' ನೋ.

**ಮಾಡು$_3$** ' ಮಾಡ$_2$ ' ನೋ.

**ಮಾಡುಗೇಡಿ** (ನಾ). ಕೆಲಸವನ್ನು ನಿರ್ವಹಿಸದೆ ಇರುವವನು ; ಕೆಲಸಗೇಡಿ : ಮಾಡಬೇಕಾದದ್ದನ್ನು ಮಾಡದೆ ಬಿಡುವ ಮಾಡುಗೇಡಿಯಾಗಿದ್ದಾನೆ ಅರ್ಜುನ (ಬಾರದ. ೧೧೧). [ಮಾಡು$_1$ + ಕೇಡಿ$_1$]

**ಮಾಡುವೆಟ್ಟು**, ಮಾಡವೆಟ್ಟು, ಮಾಡುವೆಟ್ಟು (ನಾ). ಕ್ರೀಡೆಗಾಗಿ ರಚಿತವಾದ ಬೆಟ್ಟ : ಕೃತಕಾದ್ರಿ : ರತಿದೇವಿ ನಲಿದಾಡುವ ಮಾಡುವೆಟ್ಟದುನ್ನತಜಘನದ ನೀಜಿನಾರೆ (ಕಂನಪ. ೨೫-೩೩). **ಮಾಡವೆಟ್ಟು** : ನುಣ್ಮಳಲ ಮಾಡವೆಟ್ಟಿನ ಪೆಂಪಿನ ವಿಚಿತ್ರದ ರಚನೆಯಿಂದಿರ್ಪ ವಸಂತ ಮಂಟಪದ ಸೊಂಪಂ ಕಂಡು (ಹರಿಶ್ಚ. ೪-೦೯ ವ). **ಮಾಡುವೆಟ್ಟು** : ಬೆಳ್ವಳಗನುಗುಳ್ವೆಳೆಮುತ್ತಿನ ಮಾಡುವೆಟ್ಟುಗಳಿಂ ವಿರಾಜಿಪುದ್ಯಾನಮಂ . . . ಅವಲೋಕಿಸುತ್ತುಂ ಮೆಲ್ಲಮೆಲ್ಲನೆ ಬರೆವರೆ (ಉದ್ಭಟ. ೯-೩೦ ವ) ; ನೋಡಿದಂಗನೆಯರ ಕಣ್ಮಜೀಯಾನೆಗಳಾಡುವ ಮಾಡುವೆಟ್ಟುಗಳ ಕೋಡುಗಳೋ ಭುಜಗಳೋ (ಕುಮಾರಾಂ. ೨೨-೯೮). [ಮಾಡು$_1$ + ಬೆಟ್ಟ]

**ಮಾಡುವೆಟ್ಟು** ' ಮಾಡುವೆಟ್ಟು ' ನೋ.

**ಮಾಡುವೊಚ್ಚ** (ನಾ). ಕೃತಕವಾಗಿ ಹರಿಯುವಂತೆ ಮಾಡಿದ ನದಿ.– ಹೊಳೆ : ತುಂಬಿ ತುಳ್ಕಾಡುವ ಮಾಡುವೊಚ್ಚಗಳ ಕೋಡುವ ನೀರ್ಗಳ ನೀಂಟೆ ಮಿಂದು ಮುಬ್ಬಾಡಿ ಬಚಲ್ಕೆಯುಂ ಕಳೆವರಾವಗಮಿಟ್ಟಳಮಲ್ಲಿ ಬಟ್ಟೆಗರ್ (ಶಬ್ದಾ.ಮ. ೬೫ ಪ್ರಯೋ). [ಮಾಡು$_1$ + ಪೊಚ್ಚ$_3$]

**ಮಾಡುಹ** (ನಾ). ಮಾಡುವ ಕ್ರಿಯೆ : ಮಾಡುವಿಕೆ : ವಿವಾದಮಂ ಮಾಡುಹವುಂ ನುಡಿಯದಿರುಹವುಂ ವಿಸ್ಮಯವಿಲ್ಲದಿರುಹವುಂ ಇಂತಿಹವು ಸ್ನೇಹವಿಲ್ಲದ ಜನರ ಲಕ್ಷಣವೆಂದಜೀವುದು (ಹಂಶತಂ. ೩೦೩-೦೯); ಹೆಸರಿನಲ್ಲಿ ಮಾಂಸವ ಮಾಡುಹ (ಧೀಮಸೂ. ೨). [ಮಾಡು$_1$ + –ಹ$_2$ (<–ಪ$_3$)]

**ಮಾಡ್ಸು** ' ಮಾಡಿಸು ' ನೋ.

**ಮಾಣ್**, ಮಾಣು (ಕ್ರಿ). ಮಾಣ್ದ (ಭೂತಕೃ), ಮಾಣ್ಬ, ಮಾಬ (ಭವಿಕೃ). ಮಾಂದು$_3$, ಮಾದು$_2$ (ಭೂತನ್ಯೂ). ೧. ನಿಲ್ಲಿಸು; ಬಿಟ್ಟುಬಿಡು : ತ್ಯಜಿಸು : ಮಾಣಿಸಿದೊಡೆ ಮಾಣದೆ ರಪಣಮಂ ತೋಜೀಯುಮೊತ್ತೆಯನುಗ್ಗಡಿಸಿಯುಮಾಡುವೆನೆ (ಕಂಪಶಾ. ೬-೩ ವ) ; ಲಿಂಗಾರ್ಚನೆಯ ವಸರಕ್ಕೆ ಜಂಗಮ ಮನೆಗೆ ಬಂದರೆ ಲಿಂಗಾರ್ಚನೆ ಮಾದು ಜಂಗಮಕ್ಕೆ ಇದಿರೆದ್ದು ವಂದಿಸಿ ಭಕ್ತಿಯ ಮಾಡಬಲ್ಲಾತನೆ ಭಕ್ತ (ಅಶಶಂ. ೨೨೯-೧೧೭); ಕಾಳ್ಕಿಚ್ಚಿನಿಂ ಜೇಪಂಗೆ ತಂಪಿನ ಸೋನೆಯು ಮಳೆಯಾಗುತ್ತೆ ಮಾಣ್ಬರೆ (ಬಸರ. ೯-೩೦). ೨. ನಿಲ್ಲು ; ನಿಂತುಹೋಗು ; ಸ್ಥಗಿತಗೊಳ್ಳು : ಈ ತಪದ ಧರ್ಮದ ಫಲವಿಲ್ಲಿಯೆ ಪ್ರತ್ಯಕ್ಷಮಾಯ್ತಿನ್ನುಂ ಮುಂದೆ ಪಿರಿದಾಗದೆ ಮಾಣದು (ಪಶ್ವಾ.ರಾ. ೬೯-೨೩); ಮುನಿವೃಂದಾರಕವಂದ್ಯ ನಿಮ್ಮ ಚರಣಾಂಭೋಜಂಗಳಂ ಕಂಡು ಕಣ್ಬನಿಗಳ್ ಮಾಣ್ದಪುವಿಲ್ಲ ಕಾರಣಮಿದೇಂ (ಆದಿಪು. ೫-೯೬): ರಥಮಾಣೆಯಿಟ್ಟಂತೆ ಮಾಣೆ ಕಂಡು (ಅಜಿಪು. ೯-೦೬ ವ) ; ಗೊಹೇಶ್ವರನ ಲೀಲೆ ಮಾಬನ್ನಕ್ಕರ ಉರಿಯೊಳಗಣ ಕರ್ಪೂರದಂತಿರಬೇಕು ಕಾಣಾ (ಅಶಶಂ. ೨೨೦-೧೧೦೩). ೩. ಸುಮ್ಮನಿರು ; ನಿಷ್ಕ್ರಿಯವಾಗು : ಸುಮ್ಮನೆ ಉಳಿ : ಮಾಣಲಿನ್ನೆನಸುಂ ಬಾರದು ನಿನ್ನೊಳಾತ್ಮಹಿತಮಂ ನಿಶ್ಚೈಸು (ಆದಿಪು. ೨-೯೮) ; ಮರನುಳ್ಳನ್ನಕ್ಕರ ಎಲೆ ಉಲಿವುದ ಮಾಬುದೆ ಶರೀರ ಉಳ್ಳನ್ನಕ್ಕರ ವಿಕಾರ ಮಾಬುದೆ (ಅಪಶಂ. ೧೦೬-೯೮೬) ; ಮಾಜಿಜಾಂತವರ ನುಂಗದೆ ಮಾಣ್ಬನಾದರೆ ದಿವಿಜಪತಿತನಯಂಗೆ ತಾ ಜನಿಸಿದವನಲ್ಲ (ಕಾವ್ಯಸ್ತ್ರೀ. ೯-೩೯) ; ಗಾವಿಲಂ ಕಜಿಬಿಂ ಪೇಟ್ಟೊಂದು ನಿಷ್ಠುರೋಕ್ತಿಯಂ ದೇವರ್ಗೆ ನಿವೇದಿಸುವುದನನುಚಿತವೆಂದು ಮಾಣ್ದಮೈಸೆ (ರಾಮಾಶ್ವ. ೨೯-೦೩). ೪. ತಡಮಾಡು ; ಸಾವಕಾಶಮಾಡು : ತಂಗೆ[ಯ] ಮಾಣ್ದುದರ್ಪವಂ ಮೊಟಗಿ ಸಿಡಿಲ್ದುದೊಂದು ಸಿಡಿಲೇಟಿಗೆಯಿನೆಯ್ತರೆ ವಂದು (ಕಂಪಶಾ. ೩-೦೬). ೫. ಇಲ್ಲವಾಗು ; ನಿವಾರಣೆಯಾಗು ; ಪರಿಹಾರವಾಗು : "ಮಾಣ್–ನಿವಾರಣೇ" (ಶಮದ) ; ಮದನನ ಕಾಯ್ಪು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ (ಕಂಪಶಾ. ೫-೦೮) ; ಹಲವು ಗುಜುಗುಜು ಮಾದು ಕಂಡೆವು ಬಳಕ ಕಾಣೆವು ಕೇಳದೆವು ಪೆಱರ್ ಕೆಲರು ಕೇಳ್ದವು

ಇದ್ದೆವಿರೆವೆಂದೆಂಬ ನುಡಿ ಬೇಡ (ಬಸವ. ೫೬-೬೪) ; ಏತೆಐದಲಿ ಮಾಣ್ಬವುದು ನಿನ್ನಾಯಾಸ ನಾ ತಂದುಕೊಡುವೆ ನಿನ್ನವನ (ಶೋಚಕ. ೨೫-೨೨). ೬. (ರೋಗ ಮುಂತಾದುವು) ಗುಣವಾಗು ; ವಾಸಿಯಾಗು : ಕೇಳ ಜೀವಸಂಬೋಧನೆಯುಂ ಬೇಗಂ ಮಾಣ್ಗುಂ ದುಸ್ಸಹರೋಗಂ (ಸಬುಶ. ೦-೩೦) ; ಜೇರಿಗೆಯುನ್ನೂ ಬೆಲ್ಲವನ್ನೂ ಬೀಸಿನೀರಿನಿಂದರೆದು ಕೊಡಲು ಶೀತಜ್ವರಂ ಮಾಣ್ಗುಂ (ಸಕಪ್ಪ. ೬೬). ೭. (ತೆರಿಗೆ ಮುಂತಾದುವುಗಳಲ್ಲಿ) ರಿಯಾಯಿತಿ ತೋರು : ವಿಕ್ರಮಪುರದ ಬ್ರಹ್ಮಪುರಿಯ ನಾ[ಲ್ವ]ತ್ತಿ ರ್ವ್ವರ್ಗ್ಗೆ ಸುಂಕವುಂ ಮಾಣ್ದು ಮಾಡಿದ ಮಾರ್ಗ್ಗಮೆನ್ತೆನೆ (ಎಕ. XI-i ೯೬-೬ ; 1061). ೮. ತಪ್ಪಿಹೋಗು ; ಕಳೆದುಕೊಳ್ಳು : ಹೀನಬಲನನಧಿಕಬಲಂ ತೊತ್ತುಬದುಟಿದನೆಂಬ ಲೋಕದ ಪಟಿ ಪೊರ್ದದೆ ಮಾಣೆಂ ಧರ್ಮಯುದ್ಧದೊಳಸಗಿಂ (ಆದಿಪು. ೦೪-೦೦೨) ; ನೀ ನಾನೆಂಬುದು ಮಾದು ತಾನೆಯಾಗಿ ಸಾಧ್ಯವಾಯಿತ್ತು (ಬಸವ. ೨೦೯-೯೩೮) ; ಪೊಂದುವ ಷಟ್ಪ್ರವಾರ್ತೆ ಪರಿಣಾಮದೆ ವರ್ತಿಸುತಿರ್ಪ ದೆಂದುಗಂ ಮಾಂದುದು (ಶಂಪ್ರಪು. ೦೩-೯೦). ೯. ತಪ್ಪಿಸಿಕೊಳ್ಳು ; ಜಾರಿಕೊಳ್ಳು ; ನುಣುಚಿಕೊಳ್ಳು : ಭದ್ರಂಗೆ ಕುಡಲ್ಕೆಡಿರ್ದ ಕೂಸನೆನಗೆ ಮದುವೆಯಾಗೆಂಬುದುಂ ಭದ್ರನುಂ ನಂದೆಂಗೆಂದು ಬಳೆದ ಕೂಸನಗೆ ಮೊಜಿಯುಲ್ಲೆಂದಿರ್ವರುಮೋರೋರ್ವರ ಮೇಲೆ ನೆವವಿಟ್ಟು ಮಾಣ್ಬುದುಂ (ಸುಕುಮಾ. ೬-೩೨ ವ). ೧೦. (ಮಾತು, ಶಪಥ ಮುಂತಾದುವುಗಳನ್ನು) ಮೀರು ; ನಡೆಸದಿರು ; ಈಡೇರಿಸದಿರು : ವನಮುಂ ಕೇಳ್ದುವು ಭೂತಮುಮ್ಬುವುಜಿಗುಂ ಕೊಟ್ಟುರ್ದಾನಂತಜಿಂದೆನಗಿಂ ಮಾಣ್ಬುದು ಸೂಟ³ (ಶಂಪ್ರಾ. ೫-೬೪) ; ನುಡಿವುದಜಿೊಳ್ ತೊದಳ್ನುಡಿದರೆಂದೊಡಮಿಾಯದೆ ಪೂಣ್ದು ಪೂಣ್ಕೆ ಮಾಣೊಡಮೀಜಿವಲ್ಲಿ ಮೆಯ್ದುಗಿದರೇದೊಡಮುಮ್ಮನೆ ನಾಣ್ಬುವರ (ಗದಾಯು. ೦೦-೬). ೧೧. ಹೊಳವು ಕಡಮೆಯಾಗು ; ಮಸುಕಾಗು ; ಮಂಕಾಗು : ಮಾಣ್ಗಟಂದರ ಮೆಯ್ವೆಳಗೆನೆ ಕಣ್ಗಳ್ ಕೋರ್ವೈಸೆ ತೊಳಗಿ ಬೆಳಗುತ್ತಂ ಮುಂದಣ್ಗಾಗಿ ನಡೆದು ನೃಪನಂ ಜಾಣ್ಗೊಂಡ ನಿಜಪ್ರಗಲ್ಭವಚನದೆ ನುಡಿದಳ್ (ಶಾದಂಶಾ. ೬೬೦). ೧೨. ಮೆರೆ ; ವಿಜೃಂಭಿಸು : ಅಮಿತತೇಜನುಪವನದೊಂದೆಡೆಯೊಳ್ ಬೀಡುವಿಡುವುದುಂ ಶ್ರೀವಿಜಯುಂ ಬಂದನಿದಿರಂ ಹಿಮಾಂಶುಗೆ ಮಾಂದಿರ ದಿದಿರಪ್ಪ ತೆಜದಿನಂಬುಧಿಸಲಿಲಂ (ಶಾಂತಿಪು. ೫-೬೬) ; ವರಸೌಧಾಗ್ರ ಮನೋಜಕೇಳಿವಿಲಸತ್ಕಾಂತಾಂಗಸೌರಭ್ಯಮಾಂತುರುಹಸ್ತಿಮದಜದಾನಗಂಧ ರುಚಿಯುಂಡುತ್ಸಾಹದಿಂ ಮಾಂದು ಪುಷ್ಪರಸಂಗೊಂಡುರೆ ಸೊರ್ಕಿ ಝಂಕರಿಪ ರೋಲಂಬಾಳಿಯಿಂ ರಾಜಿಕುಂ ತರಣೀಂದುಸ್ಫುಟವೀಧಿಯುಂ ಯುವಜನಾಪಾಂಗಪ್ರಭಾಭಾಸುರಂ (ಶಬ್ದಶೇ. ೦೦-೫೦). ಮಾಣು : ೧. ಮಾಳಿವ ಮಾತಂ ಮಾಣು ಗೌಳ ತೆಜಹುಗುಡು (ಬಸವ. ೬-೨೬) ; ಶಾನಾಗಿ ಗಾಳಿಪೊಲ್ ಬಂದ ಸುಖವೆ ಸುಖ ನೀನೆ ಕೈಬೀಸಿಕೊಳೆ ನೋವು ಬೆವರುಗಳೆ ಫಲ ಮಾಣು ಮನದುಬ್ಬಸವ (ಮುಂಕುತಿ. ೯೨೦). ೨. ಅರಸನನುಜನ ಕಡಿದ ನೆತ್ತರ ಬರಿಸುವೆನು ಮೂಗಿನಲಿ ಮಾಣೆ ನುತರಿಯ ರಥದುರವಣೆಗೆ ಕರ್ಣನ ಸೂನುವಿದಿರಾದ (ಕುಮಾವ್ಯಾ. ೨೦-೩). ೩. ಚಕ್ರಚೀತ್ಕೃತಿ ಮದನಮಂತ್ರವೆನೆ ಮುಳಿದು ವನದೇವಿಯುರು ಜಪವನೆಣಿಸದೆ ಮಾಣರೆನಿಸಿ ಜಿಾಟಳ ಮೆಜಿದುವು (ಹತಶಾ. ೩-೨೯); ಪುತ್ರಲಾಭಫಲಾಳಿ ದೊರಕದೆ ಮಾಣದಿದು ತಾ ಸುಪ್ರಸಿದ್ಧವಲೆ (ಕೊರಶಾ. ೦-೫-೬) ; ಎಲೆ ತರುಣಿ ನೀನೆನ್ನನೀ ಪರಿಯೊಲಿದು ಪಿಡಿದಪೆನೆಂಬ ಮನದಾ ಛಲವಿಂದೇತಕೆ ಮಾಣು ನಾವಂಬರದ ಪಕ್ಷಿಗಳು (ವಳಕ. ೨-೩೫). ೪. ಮನಸಿಜನ ಬಾಣದಲಿ ಬಸವಳಿಯೆ ಬಿದ್ದುದು ಕ್ಷೋಣಿಯುಲಿ ರೇತಸ್ಸು ಬಳಿಕದು ಕಾಣುತಲಿ ತನ್ನಾತ್ಮಪತ್ನಿಗದಯ್ದುಬೇಕೆನುತ ಮಾಣದಾ ಪಾಂಚಾಲ ನೊಂದಜಿ.ಗೋಣನಲಿ ತಾ ಕವಲದೆಲೆಯೊಳು ಕ್ಷೋಣಿಪತಿಯುದ ಕೊಟ್ಟು ಕಳುಹಿದೊಡೆ (ಸಂಶಶ. ೦೩-೪) ; ಮಾಣದೆ ಮಣಿದೀಪ್ತಿಯು ಪಿಡಿದಾವಾವ ತಾಣದೊಳಜಿಸಿ ನಂದನನ ಕಾಣದೆ ಕಂಗೆಟ್ಟು ಕೊರಳ್ದಳು (ಪೋಚಕ. ೪-೬೯). ೫. ನೆಜಿ ನಿರ್ಭರವದಂಗವನಜಿಯದನ್ನಕ ಸಾವುದಾದರೆ ಮಾಣದ್ಕೆ (ಪ್ರಭುಲಿ. ೦೦-೦೫). ೧೩. ನಿರೋಧಿಸು ; ನಿಗ್ರಹಿಸು : ಪ್ರಾಣಾನಿಲಂಗಳಂ ಮಾಣಾತ್ಮನೆಂಬುದಂ ಜಾಣನಿಂದೊದುತಿಹ ವಾಸದುಸುರಂತೆ ಕಾಣ ಸುತ್ತೊಡಲೊಳಹವಾಗಿ (ಅನುಭ. ೪-೩-೦೨). ೧೪. ತಪ್ಪು ; ಹೊರತಾಗು : ತೋಳನಾಗಿ ಪರ್ದಾಗಿ ಮಾಣದೆ ಕಾಗೆಯಾಗಿ ಮೋಣ್ಗ ಸವಿಲಾ ಗಿರಲ್ಕೆ (ಶಬ್ದಶಾ. ೦೦-೧೬೩). ೧೫. ಸಾಧ್ಯವಾಗು ; ಶಕ್ಯವಾಗು (?) : ಪಟ್ಟಣದೊಳಾರುಮಿಲ್ಲೆನಿಸಿ ತನ್ನೊಡನೆ ಪೊಜಮಟ್ಟುವಖಿಳಪ್ರಜೆಗಳವರ ನಡೆಸಲ್ ದಿನಂ ತಟ್ಟತಲ್ಲದೆ ಮಾಣದು (ಕೈಬಾಶಾ. ೪-೬೯).

[ದೇ.? ತಮಿ. ಮಾಣ್. ಮಾಣು. ಮಾಳ್ : ತುಳು. ಮಾಣಾವು. ಮಾನಾವು; ತೆಲು. ಮಾನು, ಮಾನುಗು, ಮಾನುವು]

**ಮಾಣವ** (ನಾ). ೧. ಹುಡುಗ; ಬಾಲಕ. ೨. ವಿದ್ಯಾರ್ಥಿ. [ಸಂ.]

**ಮಾಣವಕ** (ನಾ). ೧. ಹುಡುಗ ; ಬಾಲಕ : "ವಟು ಮಾಣವಕಾರ್ಭಕ ಬಾಳಂ" (ಶಬ್ದಕೋ. ೫೪-೦೫); ಮಾಣವಕನತ್ತಣಿಂ ಕಾರ್ಯವುಂ ಬೆಸಗೊಂಡನೆಂಬಲ್ಲಿ ಮಾಣವಕನಂ ಕಾರ್ಯವುಂ ಬೆಸಗೊಂಡನೆಂದಾಯ್ತು (ಶಮದ. ೦೩೫ ಪ್ರಯೋ) ; ಕಡುಹರಿಸವಡೆದು ಹೃದಯದೊಳನಿಸು ದಬ್ಬುದಲೆಯಿಲ್ಲದೆ ನುಡಿಯುತೊಳ್ನುಡಿಯ ನಸುನಗೆಯಿಡುವ ಮಾಣವಕನಂ ಕಂಡು (ಸಪ್ತಾಕಾ. ೨-೬೫). ೨. ಶಿಷ್ಯ ; ವಿದ್ಯಾರ್ಥಿ : ಉಪಾಧ್ಯಾಯುಂ ಮಾಣವಕನಂ ವೇದಮಂ ಪಠಿಸಿದಂ (ಶಬ್ದಾನು. ೨೦೬ ಪ್ರಯೋ). ೩. ಹದಿನಾರು, ಇಪ್ಪತ್ತು ಅಥವಾ ನಲವತ್ತೆಂಟು ಎಳೆಗಳ ಮುತ್ತಿನ ಹಾರ: "ದೇವಚ್ಛಂದಂ ಯಷ್ಟಿ ಶತಾವಚ್ಛನ್ನಂ ತದರ್ಧವದು ಮಾಣವಕಂ" (ಶಬ್ದಕೋ. ೬೫-೩) ; ಮಾಣವಕಾರ್ಧಮಾಣವಕಂಗಳೆಂಬ ಪನ್ನೊಂದು ನಾನಾರತ್ನಸುವರ್ಣಪದಕವಿರಚನಾದಿ ಭೇದದಿಂ . . . ಪಂಚಪಂಚಾಶತ್ಪ್ರಮಾಣಂಗಳೊಳಾದಹಾರಂಗಳುಮಂ . . . ಪಡೆದು (ಆದಿಪು. ೯-೫೪ ವ) ; ಮಾಣವಕಮನೊಯ್ಯನೆ ಕಣ್ಣಾಣ್ಮಂ ಪಜನೂಂಕಿ ಗುರುಕುಚಾಗ್ರದೊಳಾಮಂ ಮೇಣೊಂದಿಸಿ ಸೋರೆಯನದೊರ್ವೇಣಾಕ್ಷಿ ಪಳಂಚಿದಳ್ಕಿಸುವ ಕಿನ್ನರಿಯಂ (ಅರ್ಜ್ಯಾ. ೦೦-೪೯). ೪. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಎಂಟನೆಯದಾದ ಅನುಷ್ಟುಪ್ ಎಂಬ ಛಂದಸ್ಸಿನ ಒಂದು ವೃತ್ತ : ಕಾಂತಶಶಿ ವ್ಯೋಮಲಗಂ ಮುಂತಿರಲಂತುಂ . . . ಮಾಣವಕಂ (ಛಂದೋಂಬು. ೨-೯೩). ೫. [ಜೈನ] ನವನಿಧಿಗಳಲ್ಲಿ ಒಂದು : ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆದಿಪು. ೦೫-೩ ವ) ; ಕಾಳ ಮಹಾಕಾಳ ಪದ್ಮ ಪಾಂಡುಕ ನೈಸರ್ಪ ಮಾಣವಕ ಪಿಂಗಳ ಶಂಖ ಸರ್ವರತ್ನಂಗಳೆಂಬೊಂಬತ್ತುನಿಧಿಗಳುಮನನುಕ್ರಮದೊಳ್ಪಡೆಸಿ (ಶಂಪ್ರಪು. ೬-೦೦೦ ವ). 'ನವನಿಧಿ' ಪರಾ. [ಸಂ.]

**ಮಾಣವ್ಯ** (ನಾ). ಹುಡುಗರ ಗುಂಪು ; ಬಾಲಕರ ಸಮೂಹ : "ಮಾಣವ್ಯಂ . . . ಹುಡುಗರ ಗುಂಪು" (ಕಿಶಾಕೋ. ೩೬೪). [ಸಂ.]

**ಮಾಣಾಕ್ಯ** (ನಾ). ಶಿಷ್ಯ ; ಗುಡ್ಡ : ಶ್ರೀ ವೆಟ್ಟಿಡೆಗುರುವಡಿಗಳ್ಮಾಣಾಕ್ಯಸ್ಸಿರ್ಜ್ಜಗಣ್ಣಿಗುರವಡಿಗಳ್ನೋನ್ತು ಕಾಲು ಕೆಯ್ದಾರ್ (ಎಕ. II, ೩೨; ಸಂ. 700). [< ಸಂ. ಮಾಣವಕ]

**ಮಾಣಿ** (ನಾ). ೧. ಹುಡುಗ ; ಬಾಲಕ : "ವಟುः, ಮಾಣವಕः — ಈ ೨ ಮಾಣಿ" (ಹಲಾಯು. ೬೩-೩೪೬) ; ತನ್ನೋರಗೆಗಳಪ್ಪ ಪಲಂಬರ್ ಮಾಣಿಗ [ಶಾಸಂ. ಮಕ್ಕ]ಳ್ವೆರಸು ಪೊಜಪೊಟಲೊಳ್ ಬಟ್ಟಾಡುತ್ತಿರೆ (ವಡ್ಡಾರಾ. ೬೩-೨೨) ; ವಿದ್ಯಾಭ್ಯಾಸಂಗೆಯ್ದು ಬಂದಲ್ಲದೆ ನಿಮ್ಮ ಮೊಗಮುಂ ನೋಡೆವೆಂದು ಪೊಱಮಟ್ಟು ಪೋಪ ಮಾಣಿಗಳನಿನಿಸಾನುಂ ಮಾಣಿಮೊಂದು

ಕಾಶ್ಯಪಿಯಿಂತೆಂದಳ್ (ಸುಕುಮಾ. ೨-೩೭ ವ) ; ಅವನು ಮಾಣಿ, ನೀನು ಹೆಣ್ಣಲ್ಲವೇ ? ದೊಡ್ಡದಾದರೆ ಅವನನ್ಯಾರೂ ಕೇಳುವವರಿಲ್ಲ (ಸ್ವಪ್ನಕೊ. ೦೪). ೨. ವಟು ; ಬ್ರಹ್ಮಚಾರಿ : ಸಹದೇವ ಮಾಣಿ (ಎಕ. II, ೭೮; ಸು. 800) ; ವಿದ್ಯಾರ್ತ್ಥಿ ಮಾಣಿಯುಗ್ಗಳಂ ಬಿಟ್ಟ ಗಟ್ಟಿ (ಎಕ. XI. ಚಿತ್ರದು. ೩೭-೦೩ ; 940) ; ಮೂಱಿಡಿ ನೆಲವನು ಕೊಟ್ಟನೆಲೆ ಮಾಣಿಯುಳಿಯೆಂದು ಧಾರೆಯನೆಱೆಯೆ (ವೀರಭಸಂ. ೦೦-೩೯). ೩. ಶಿಷ್ಯ ; ವಿದ್ಯಾರ್ಥಿ : ಓದಲಿಕ್ಕಿದೊಡೋದುವನು ಮಾಣಿಯುರಿಂಗೆ ಬೋಧಾರ್ಜನ ಸುಶಿಕ್ಷೆಯುಲಿ ಸಾಧನೆಗೈವ ಸದ್ಗುರುಡಿಯೊಳ್ ಭೇತಾಳನಾದಂತೆ ನೃಪಪುಮಾರರಿಗೆ (ಮೋಹತ. ೦೭-೭೮) ; ಓದಿಸುವ ಮಾಣಿಗಳ ಕೂಡೆಯೋದುತ್ತ ಬಸವಯ್ಯನಿರೆ (ಗುರುಚಾ. ೬-೫). ೪. ಉಪಾಹಾರಗೃಹದಲ್ಲಿ ತಿಂಡಿ, ತೀರ್ಥಗಳನ್ನು ಒದಗಿಸುವ ಹುಡುಗ : ನಮ್ಮ ಆಶ್ರಯ ಹೋಟಲುಗಳಿಗೆ ದೊರಕುವುದಕ್ಕೆ . . . ಅಲ್ಲಿಯ ಮಾಣಿಯ ಯೋಗ್ಯತೆಯೂ ಒಂದು ಮುಖ್ಯ ಕಾರಣ (ಕೆಲಮ. ೦೦) ; ಜನಾರ್ದನಯ್ಯ . . . ಕಾಮತರ ಹೋಟಲಿನಲ್ಲಿ ಮಾಣಿಯಾಗಿ ಸೇರಿಕೊಂಡ (ಶುಹಾಂ. ೩೯). ೫. ಉಪನಯನ ; ಮುಂಜಿ : "ಮುಂಜೀ—ಮಾಣಿ" (ಶಾಕಕ. ೦೫) ; ವಿಪ್ರರ ವಿವಾಹಮು ಮಾಗಪ್ಪನಿತಱೊಳೆಲ್ಲಮೊಸಗೆ ದ್ರಮ್ಮಮೊಟಿಂ ತಪ್ಪ[ದೆ] ಮಾಣಿಯೊಳೆರಡಂ ಕೆಪ್ಪದರ್ (ಕಾ. II, ೪-೬ : 918) ; ಯಜ್ಞದಲೊಸ್ದುಗದ್ಯಾಣಂ × × × ಅಯ್ದುಪಣಂ ಮದುವೆಯುಲೆರಡುಪಣಂ ಮಾಣಿಯುಲೊಸ್ದುಪಣಂ ಬಾ[ದು]ಬೇಕಾರ ಪುಣ್ಣಮಿ ದೀಪಾಳಿಗೆ ಮೂಱುಪರ್ವ್ವದೊಳಂ ಪ್ರತ್ಯೇಕವೊಸ್ದುಗದ್ಯಾಣ ಇನ್ನಿನ್ನಿವು ಊರೊಡೆಯುಗ್ಗೆ (ಎಚ. XX. ೩೬-೩೫ ; 1017). ೬. ಎಳೆಯ ಪ್ರಾಯದ ಹೆಣ್ಣು ; ಕನ್ಯೆ : ಅಲರುವಟ್ಟೆಯ ಬಳಿವಿಡಿದೈತಂದು ಕಮ್ಮಲರಿಡಿದರ್ ನಂದನದಿ ಕೆಲರು ಮಾಣಿಯರು ಪೂಗೊಯ್ಯುದ ಗುರು ಕಂಡ ಜಲರುಹದಳನೇತ್ರೆ ಕೇಳು (ಮೋಹತ. ೫-೩೦). 'ತರುವಲಿ' ನೋ. ೭. ಗಂಡಸಿನ ಜನನಾಂಗ : ಶಿಶ್ನ : "ಮೇಢ್ರಃ, ಮೇಹ್ರ, ಮೇಹನಂ, ಈ ೩ ಮಾಣಿ" (ಶಾಕಕ. ೩೪). 'ಮಾಣಿದ್ವಾರ' ಪರಾ. ೮. (?) : × × × ಪೊಸವಿಯೊಳಕ್ಕೆ ಪ್ರಜ್ವಲಿಸಿ ತೋರ್ಪ ಶಾಣದಿಂ ? ಪಜ್ವಲಿಸುವ ಪುತ್ರಿನಿಂ ಪಡುವ ಮಾಣಿಗಳೊಂದಿರೆ ಮೂಱುಕೆಯ್ಗಳಿಂ ಜಲಮುದಯಿಕ್ಕುಂ (ಅಭಿಮು. ೦೦-೨೮).
[ದೇ.॥ ತಮಿ. ಮಲ. ಮಾಣಿ ; ತುಳು. ಮಾಣಿ. ಮಾನಿ. / ಸಂ. ಮಾಣವಕ]

**ಮಾಣಿಕ** (ನಾ). ೧. ನವರತ್ನಗಳಲ್ಲಿ ಒಂದು ; ಕೆಂಪು ; ಮಾಣಿಕ್ಯ : "ಅರುಣಾಶ್ಮವೆನೆ ಪದ್ಮರಾಗಮೆನೆ ಮಾಣಿಕಂ" (ಶಂಗರಾ. ೩೦-೭) ; ಮಾಣಿಕದ ಮುತ್ತಿನ ಪಿಂಡುಗುಂಕಣಮಂ ತೊಟ್ಟ ಕೈಯಿಂದಂ ಪೊನ್ನಸುಟ್ಟುಗಮಂ ತೀವಿ (ಶಬ್ದಾರಾ. ೯೯-೭) ; ಮುತ್ತಿನ ಮಾಣಿಕದ ಪಡಲಿಗೆಗಳೊಳ್ ಪಸರಿಸಿದ ವಿಚಿತ್ರವಸ್ತ್ರಾಭರಣಂಗಳುಂ . . . ಬೆರಸು ಮಹತ್ತರದೇವಿಯರ್ ಬಂದು (ಆಂಪು. ೨-೩೭ ವ) ; ವಿಜೃಂಪ ಮಾಣಿಕನೀಲಮೌಕ್ತಿಕಗಳ ಕಾಂತಿ ಪೊಱೆಯಲು (ಕಂಪಿ. ೭-೭೭). ೨. ಮುಟ್ಟು ; ರಜಸ್ಸು : "ಮುಟ್ಟುವೆ, ಮಾಣಿಕಂ, ಮುಟ್ಟಲ್ —ಈ ೩ ಸೂತಕಂ" (ಕಕಸಾ. ೭೦-೭೦೪). 'ಮಾಣಿಕಂಗಾಣ್' ಪರಾ.
[<ಸಂ. ಮಾಣಿಕ್ಯ. / ತಮಿ. ಮಾಣಿಕ್ಕ ; ತುಳು. ಮಾಣಿಕ]

**ಮಾಣಿಕಂಗಾಣ್**, ಮಾಣಿಕಗಾಣ್ (ಕ್ರಿ). ಮುಟ್ಟಾಗು ; ರಜಸ್ವಲೆಯಾಗು : ಮುಂದಾ ಸ್ತ್ರೀರತ್ನಮನೊಲವಿಂದಂ ಪಡೆದಪ್ಪೆನೆಂಬುದಂ ಸೂಚಿಸುವಂತೊಂದೆರಡುದಿನದೊಳಕ್ಕನಂದದೆ ಕಡುಜಾಣೆ ಮಾಣಿಕಂಗಂಡಿರ್ದಳ್ (ಗಂಕ. ೩-೨೦) ; ಮಾಣಿಕಂಗಂಡಳಂತಾ ನೃಪನ ರಾಣಿ ಗುರುಮಂತ್ರವಾಣಿ (ಶಾಕಸಂ. ೩-೩೩). **ಮಾಣಿಕಗಾಣ್** : ಅನುರಾಗರಸವೆ ಪೊಱಪೊಣ್ಮಿದುದೆನೆ ಮಾಣಿಕಗಂಡ ಬಡಸಡುವಿನ ಭಾಮಿನಿ ತಳಿರ್ಗ್ಯಯೊಳ್ ಪಿಡಿವಪರಂಜಿಯ ಸೆಳೆ . . . ವಿರಾಜಿಸಿತು (ಶಮುಕಾ. ೨-೯೭) ; ಮೂರೋಕವನೆಯ್ದೆ ಪರಮಪ್ರಕಾಶದಿಂ ಬೆಳಗುವ ಮನಸಃತರತ್ನವ ಪಡೆದ ಸೂಚನೆಗಾಂಬ ಪರಿಯಿಂದೆ ಮಾಣಿಕಗಂಡಳು (ತ್ರಿಪುಶಿ. ೭-೩೩).
[ ಮಾಣಿಕ + ಕಾಣ್ ]

**ಮಾಣಿಕಗಾಣ್** 'ಮಾಣಿಕಂಗಾಣ್' ನೋ.

**ಮಾಣಿಕಗೆಂಟು** (ನಾ). ರಜಸ್ವಲೆಯಾದುದರಿಂದುಂಟಾದ ದೂರದಲ್ಲಿರಬೇಕಾದ ಸ್ಥಿತಿ ; ಮೈಲಿಗೆಯಾಗಿರುವುದು : ಆ ಪೆಣ್ಮಾಣಿಕಂ ಮಾಣ ಮಾಣಿಕಗೆಂಟೆಂ [ಪಾಠಾಂ. ಗಟ್ಟೆಂ]ದೊಡೆ ಮಾಣ್ದನಂದರಸಂ (ಅರ್ಜವೇ. ೨-೦೨).
[ ಮಾಣಿಕ + ಗೆಂಟು ]

**ಮಾಣಿಕಚಟ್ಟ** (ನಾ). ರತ್ನಗಳ ಗುಣದೋಷಗಳನ್ನು ತಿಳಿಯುವ ನೈಪುಣ್ಯವುಳ್ಳವನು ; ರತ್ನಪರೀಕ್ಷಕ : "ಮಾಣಿಕಚಟ್ಟನೆಂದು ರತ್ನಪರೀಕ್ಷಕಂ" (ಕಶಸಾ. ೯೦-೩೩೦) ; ಹಾರಾದ್ಯಾಭರಣಂಗಳನಾ ರೂಪಾಶ್ಚರ್ಯಮಾಗೆ ಮಾಣಿಕಚಟ್ಟಂ ನೀರಂಜಿಸಿ ವಳವಿಡಿದ ಮಹಾರತ್ನದ ದೊರೆಗೆ ವಂದುದಾ ಸ್ತ್ರೀರತ್ನಂ (ಆದಿಪು. ೪-೪೨) ; ನೆಗಟ್ದ ಸಗ್ಗದ ಮಾಣಿಕಚಟ್ಟರೊಳ ಮುಮರಮಂಡಳಿಯೊಳಮಿಾ ಮಾಣಿಕ್ಯದ ಬೆಲೆಯಿಡಲಾರ್ ಜಾಣರ್ (ಶಾಂತಿಪು. ೨೦-೩೭).
[ ಮಾಣಿಕ + ಚಟ್ಟ$_3$ ]

**ಮಾಣಿಕಬಂಡಾರ** 'ಮಾಣಿಕಭಂಡಾರ' ನೋ.

**ಮಾಣಿಕಭಂಡಾರ**, ಮಾಣಿಕಬಂಡಾರ (ನಾ). ಕೆಂಪುರತ್ನಗಳನ್ನು ಶೇಖರಿಸಿರುವ ಸ್ಥಳ : ತಂದಿಡು ಮಾಣಿಕಭಂಡಾರದ ಪುಡಿಕಗಳಂ (ಸುಕುಮಾ. ೦೦-೯೦) ; ತರವೇಟ್ಮಾಣಿಕ್ಯಭಂಡಾರದ ಪುಟಿಕೆಗಳಂ. ಇಲ್ಲಿ ಮಾಣಿಕ್ಯಶಬ್ದ ಮನುಟಿದು ಮಾಣಿಕಭಂಡಾರಮೆನೆ ಶುದ್ಧಂ (ಶಮದ. ೨೯೯ ಪ್ರಯೋ). **ಮಾಣಿಕಬಂಡಾರ** : "ಮಾಣಿಕಬಂಡಾರ = ಮಾಣಿಕ್ಯಭಾಂಡಾಗಾರ" (ಶಬ್ದಕೋ. ೩೫). [ ಮಾಣಿಕ + ಭಂಡಾರ ]

**ಮಾಣಿಕವಟ್ಟೆ** (ನಾ). ಕೆಂಪುರತ್ನಗಳನ್ನು ಅಳವಡಿಸಿದ ರೇಷ್ಮೆಬಟ್ಟೆಯ ಪಟ್ಟೆ : ಅಳ್ಕೆವಾಱೆ ಬಂದೆಱಗುವುವಲ್ಲಿ ಚಂಚುಗಳ ಲೋವೆಗಳೊಳ್ ಕಡೆಯಿಕ್ಕೆ ಸಾ[ದಾ]ರಮುಂ ಕೆಱುಮಿಡಿಗೆತ್ತು ಸಾರಿಕೆ ಟಕಾರಿಯ ಮಾಣಿಕವಟ್ಟೆ [ಪಾಠಾಂ. ಟ್ಟ]ಯುಂ ಪಿಕಂ ನಿಱಿದಳಿರ್ಗೆತ್ತು ಲಂಬಣದ ಮುತ್ತುಗಳಂ ಮಟ್ಟೆಗೆತ್ತು ಚಾತಕಂ (ಅನಂಪು. ೬-೯೩) ; ಭಿತ್ತಿಯೊಳ್ ಪೊಱಮಟ್ಟ ಚಾವಡಿ ಮದನಕೈಯೆತ್ತಿದ ಪದೆಪುದಂಡೆಗಳು ಕೆತ್ತಿದ ನಿಖಿಳಮಾಣಿಕವಟ್ಟೆ ಮೇಲ್ಕಟ್ಟು ಮುತ್ತಿನ ಕುಚ್ಚು ರಂಜಿಸಿತು (ಮೋಹತ. ೨೨-೭).
[ ಮಾಣಿಕ + ಪಟ್ಟೆ$_3$ ]

**ಮಾಣಿಕವತ್ತಿಗೆ** (ನಾ). ಕೆಂಪುರತ್ನವನ್ನು ಕೂರಿಸಿದುದು : ಅರಲ ಸರಲ ಸೊನ್ನಾರಂ ಪಲ ಪೂ ಪರಕಲಿಸಿದ ಪಾಸೆಂಬಗ್ಗಟದೊಳಗಿರಿಸಿ ವಿಸುನಿಗರುಗಳನುಗುರಿಱೆತದ ಮಾಣಿಕವತ್ತಿಗೆಯ ಬೆರಸಿಯುಲಂಪಿನ ಬೆಳುಗಾರಮನಿಟ್ಟುರುಪಿ ರತೋದ್ದೀಪನದಾರಿಯಿಂ ಕಡುವಿರಿದುಂ ಬೆಚ್ಚಂದದಿನಮರ್ದಪ್ಪಿದರೊಸ್ತೆಯೊಳಾ ಪ್ರಿಯರು (ಶಮುಕಾ. ೬-೯೭).
[ ಮಾಣಿಕ + ಪತ್ತಿಗೆ$_1$ ( < ಪತ್ತುಗೆ ) ]

**ಮಾಣಿಕವರಿಗೆ** (ನಾ). ಕೆಂಪುಮಣಿಯನ್ನು ಹುದುಗಿಸಿದ ಗುರಾಣಿ.— ಧಾಲು : ಕುಱುಪಿನ ಮಾಣಿಕವರಿಗೆಯ ತೆಱಪುಗಳೊಳ್ ಪೊಳೆವ ಬಾಳಬೆಳ್ಪೆಳಗಂದೇಂ ಮೆಱೆದುವೊ ಕಮ್ಮುಗಿಲೆಡೆಯೊಳ್ ವಿಱುಗುವ ಮಿಂಚಿಂಬ ತೆಱದಿನೆರಡುಂ ಪಡೆಯೊಳ್ (ಕಬ್ಬಿಗ. ೨೩೪). [ ಮಾಣಿಕ + ಪರಿಗೆ ]

**ಮಾಣಿಕವೆಸ** (ನಾ). ಕೆಂಪುರತ್ನಗಳನ್ನು ಅಳವಡಿಸಿರುವಂಥದು ; ಮಾಣಿಕ್ಯಗಳನ್ನು ಹುದುಗಿಸಿರುವಂಥದು : ಮಾಣಿಕವೆಸದ ಹೊನ್ನಂದಣದೊಳು ಕಂತುರಾಣಿಯ ಮುಚ್ಚಿ ಬೈತಿಟ್ಟು ಓಣಿಯೊಳ್ ಮೆಱೆಸುತ ಕರಕೊಂಡು ಬಂದಾಗ ಕಾಣಿಸಿದರು ಶಂಬರಗೆ (ಮೋಹತ. ೦೦-೦೦).
[ ಮಾಣಿಕ + ಬೆಸ$_1$ ]

**ಮಾಣಿಕಾಚಾರಿ** (ನಾ). ಒಬ್ಬಾತನ ಹೆಸರು: ಆಕ್ಕರಂಬೊಯ್ದ ಕೊವರಾಚಾರಿಯ ಮಗಂ ಮಾಣಿಕಾಚಾರಿಗೆ ಕಣ್ಣುಗಸಟ್ಟಿ ಕೊಡಂಗೆಗೊಟ್ಟರ್ (ಎಕ. IX. ಹೊಸಕೋ. ೦೦೦-೯; 997); ಐದುದೇಗುಲಂಗಳ ಬಡಗಿವೆಸದೊಳ್ ಹಡಿಸಲಿಸುವ ಮಂಡಳಿಕ ಮಾಣಿಕಾಚಾರಿ ಹೊಂನೋಜ × × × (ಎಕ. VIII. ಸಾಗರ. ೦೦೯-೬೪; 1042). [ಮಾಣಿಕ + ಆಚಾರಿ]

**ಮಾಣಿಕ್ಕಬ್ಬೆ** (ನಾ). ಒಬ್ಬಾಕೆಯ ಹೆಸರು : ಮಾಣಿಕ್ಕಬ್ಬೆಯಾ ದೇಗುಲಕ್ಕೆ ಕೊಟ್ಟೊದೂರ ಪೊಲ ಮೇರೆ (ಎಕ. X (8). ಹಕ್ಕ. ೦೦೬-೬೨; 850). [< ಮಾಣಿಕ + ಅಬ್ಬೆ$_1$]

**ಮಾಣಿಕ್ಯ** (ನಾ). ೧. ನವರತ್ನಗಳಲ್ಲಿ ಒಂದು ; ಪದ್ಮರಾಗ ; ಕೆಂಪು ಹರಳು : "ಶೋಣಾಶ್ಮ, ಪದ್ಮರಾಗಃ—ಈ ೨ ಮಾಣಿಕ್ಯಂ" (ಹಲಾಯು. ೨೯-೨೦) ; ಭೂಪತಿಪ್ರಕರನಾನಾವಹೌಳಿಮಾಣಿಕ್ಯಸಂಕುಳದೊಳ್ ಮಾರ್ಪೊಳೆ ವೃತ್ತಮೊಯ್ಯನೆ ಬರುತ್ತಿರ್ದಳ್ ಪ್ರತೀಹಾರಿ (ಲೀಲಾಂಪು. ೨೯); ಪೊನ್ನಿಂ ಪಳುಕಿಂ ಮಾಣಿಕ್ಯದಿಂ ತೀವಿದ ಕೃತಕನಗೇಂದ್ರಾಳಿ. . . ಸೊಗಯಿಸಲೆಸಗುಂ ತತ್ಪುರೋದ್ಯಾನವೇಂದುಂ (ಜಗ. ೨-೦೬); ಮಂಗನ ಕೈಗೆ ಮಾಣಿಕ್ಯ ಕೊಟ್ಟ ಹಾಗೆ! (ಗಾದೆ). ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹತ್ತನೆಯದಾದ ಪಂಕ್ತಿ ಎಂಬ ಛಂದಸ್ಸಿನ ಒಂದು ವೃತ್ತ : ಕ್ಷೋಣೀವಾಯುಶಂಭುಧಿನೇಶಯುಗ್ಮಂ ಮೇಣೊಂದಾಗಿರೆ ಬಂದು ನಿಂದೊಡೆತ್ತಂ. . . ಮಾಣಿಕ್ಯಂ ಪೆಸರೆಂಬುದಾಯ್ತು (ಛಂದೋಂಬು. ೨-೦೨೨). [ಸಂ.]

**ಮಾಣಿಕ್ಯಭಂಡಾರ** (ನಾ). = ಮಾಣಿಕಭಂಡಾರ : ಆಗಳ್ ಮಡಿಯ ಭಂಡಾರದ ಮಾಣಿಕ್ಯಭಂಡಾರದ ನಿಯೋಗಿಗಳ್ ತಂದು ಮುಂದಿಟ್ಟ ಪೊನ್ನ ಪಡಲಿಗೆಗಳೊಳೊಟ್ಟಿದ ದೇವಾಂಗವಸ್ತ್ರಂಗಳುಮಂ . . . ಇತ್ತು (ಹಂಪಾ. ೫-೬೭ ವ). [ಮಾಣಿಕ್ಯ + ಭಂಡಾರ]

**ಮಾಣಿಕ್ಯಭಂಡಾರಿ** (ನಾ). (ಅರಮನೆ, ದೇವಾಲಯ ಮುಂತಾದ ಕಡೆಗಳಲ್ಲಿರುವ) ಕೆಂಪುಹರಳು ಮೊದಲಾದ ಅಮೂಲ್ಯರತ್ನ ಭಂಡಾರವನ್ನು ನೋಡಿಕೊಳ್ಳುವ ಅಧಿಕಾರಿ : ಹಿರಿಯ ಮಾಣಿಕ್ಯಭಂಡಾರಿ ರಾಮದೇವನಾಯಕರ ಸನ್ನಿಧಿಯಲು ಶ್ರೀಮನ್ನಯಕೀರ್ತಿದೇವರು ಕೊಟ್ಟ ಶಾಸನಪತ್ಥಳಿಯ ಕ್ರಮವೆಂತೆಂದಡೆ (ಎಕ. II. ೩೩೩-೦೨; 1206 ?). [ಮಾಣಿಕ್ಯ + ಭಂಡಾರಿ]

**ಮಾಣಿಗೆ** 'ಮಾಳಿಗೆ$_1$' ನೋ.

**ಮಾಣಿದ್ವಾರ** (ನಾ). ಮೂತ್ರದ್ವಾರ : ಮೊದಲಾ ತಂದೆಯ ಮಾಣಿದ್ವಾರದಿಂದ ಪೊಕ್ಕಮಟ್ಟು ತಾಯಿಯ ಯೋನಿಯ ಕಮಲಗರ್ಭಮಧ್ಯದೊಳ್ ಬೆಳೆದು ಸರ್ವಾಂಗಪೂರ್ಣನಾಗಿ. . . ಉದಯಿಸಿದನು (ಕೈಶಿಕ್ಕ. ೩೩೭). [ಮಾಣಿ + ದ್ವಾರ]

**ಮಾಣಿಬಂಧ** (ನಾ). ಒಂದು ಬಗೆಯ ಉಪ್ಪು; ಸೈಂಧವಲವಣ : "ಸೈಂಧವಂ, ಶೀತಶಿವಂ, ಮಾಣಿಬಂಧಂ. . . ಸೈಂಧವಲವಣದ ಹೆಸರುಗಳು" (ಸಿದ್ಧಂಕಿ. ೨೮೫). [ಸಂ.]

**ಮಾಣಿಮಂಥ** (ನಾ). = ಮಾಣಿಬಂಧ : "ಲವಣೋತ್ತಮಂ ಮಾಣಿಮಂಥಂ ಸೈಂಧವಂ" (ಕುಂಗರಿ. ೩೧-೭). [ಸಂ.]

**ಮಾಣಿಮಂಥರ** (ನಾ). = ಮಾಣಿಬಂಧ : "ಮಾಣಿಮಂಥರಂ ಸಿಂಧೂತ್ಥಂ" (ಚುತ್ತಕೋ. ೩೯-೩೩). [< ಮಾಣಿಮಂಥ]

**ಮಾಣಿವೆಣ್** (ನಾ). ಮದುವೆಯಾಗದ ಹೆಣ್ಣು ; ಕನ್ಯೆ : ಮಾಣಿವೆಣ್ಗಳ ಶಿರೋಮಣಿಯ ಸ್ತೋತ್ರಕ್ಕೆ ಮೆಚ್ಚಿ ದಾನಿಗಳರಸ ಕಸ್ತುರಿಸಿ ಏನು ನಿಃಪಿಲ್ಲಿಗೆ ಯ್ಯಂದಿರಿಯನಲು (ಕೋಹಕ. ೨೫-೦೦). [ಮಾಣಿ + ಪೆಣ್]

**ಮಾಣಿಸು, ಮಾಣ್ಸು, ಮಾನಿಸು$_1$** (ಕ್ರಿ). ೧. ನಿಲ್ಲಿಸು ; ನಿಲ್ಲುವಂತೆ ಮಾಡು : ಕರಿಸಂಘಾತಮುಮಂ ಹಯವ್ರಜಮುಮಂ ಹಿಂತಿಕ್ಕಿ ತೂರ್ಯಸ್ವನೋತ್ಕರಮಂ ಮಾಣಿಸಿ . . . ಪ್ರಶ್ರಯಾಕರವೇಷೋಚಿತರರ್ಘ್ಯಹಸ್ತರಿದಿರಂ ಬಂದರ್ (ಆದಿಪು. ೦೨-೬೯) ; ನೀನುಸಿರದಿರೆಂದು ವಲ್ಲಭೆಯಂ ಕಲ್ಲ ಸರದಿಂ ನುಡಿದು ಮಾಣಿಸುವುದುಂ (ಹಂಪಕಂ. ೦೬೦-೨) ; ಶಿವಲಿಂಗದೊಳಗೆ ಶ್ರೀಹಸ್ತವುದ್ಭವಿಸುತಿರೆ ಭವಿ ಮುಟ್ಟಬೇಡ ಬೇಡೆಂದು ಮಾಣಿಸುತಮಿರೆ (ಚಾಗಿಲ. ಲೀ. ೨೭೦-೬) ; ಏಳುದಿನಪರಿಯಂತ ಮೊರಡಿಯ ಮೇಲುಗೊಡೆಯಷ್ಟು ಹಿಡಿದು ಬಲುಮಳೆಗಾಲವನು ಮಾಣಿಸಿದ ಗಡ (ಕುಮಾ.ಸ. ೦೦-೦೬). ೨. ಅಡಗಿಸು ; ಕುಗ್ಗಿಸು ; ತಗ್ಗಿಸು : ಪವನಸುತಂಗೆ ಪಾಸಟಿಗಳೊರ್ವರುಮಿಲ್ಲದಚಿಂದಮಾಂತ ಕೌರವಬಲದರ್ಪನೊಂದಿನಿಸು ಮಾಣಿಸಿ ಪೋಪಮಿಳೀಶನಲ್ಲಿಗೆ (ಹಂಪಾ. ೦೨-೦೨೦). ೩. ಸುಮ್ಮನಿರಿಸು ; ನಿಷ್ಕ್ರಿಯಗೊಳಿಸು : ನೀನೆಮ್ಮ ಗುಡ್ಡನೈ ಪೆಜತೇನೆಂಬುದು ಪೆರ್ಗೆ ಭಕ್ತಿಮಾಡಲ್ವೇಡೆಂದೇನೊ ಬಿಡೆ ಜಡಿದು ಮಾಣಿಪ ಹೀನಗುಣಂಗೆಆಗಲಾಗದಚಿವುಳ್ಳ ನರಂ (ರಕ್ಷಾಶ. ೫-೯೩). ೪. ಕಳೆ ; ನೀಗು ; ಹೋಗಲಾಡಿಸು ; ಇಲ್ಲವಾಗಿಸು : ಅಂತನೇಕಶೀತಲಕ್ರಿಯೆಗಳಿಂ ಶರೀರಸಂತಾಪಮನೆಂತುಂ ಮಾಣಿಸಲಾಜದೆ ಪುಣ್ಯಕ್ಷಯದೊಳ್ ತನ್ನ ವಿದ್ಯೆಗಳುಂ ಬೆಸಕೆಯ್ಯದಿರೆ (ಆದಿಪು. ೨-೦೯ ವ) ; ಎನ್ನ ಮನದ ದುರಾಶೆಯ ಮಾಣಿ[ಪಾಠಾಂ. ಬಿಡಿ]ಸಿ ನಿಮ್ಮತ್ತ ತೋಜಾ ಚೆನ್ನಮಲ್ಲಿಕಾರ್ಜುನ (ಶುಹಾರ. ೩. ೦೩-೦೭) ; ನಂಬಿದ ಸುತಂ ಸಂಸಾರದೊಳ್ ನೋಯುತಿರ್ದಪರಾಧಂಗಳನೆದ್ದಿ ಮಾಣಿಸಿಯಜಸ್ರಂ ನಂಬಿಯಂ ತೊತ್ತುಗೊಂಡು ಪದಾಂಭೋಜಮನಲ್ಲಿ ತೋಜಿ ಶಿವಲಿಂಗಾಂತ[ಃ]ಸ್ಥನಾದಂ (ಹಂಪರ. ೬ ಹೊಕಜಾಪದ್ಯ) ; ಸಾಲಜಿಮ ನಿಜಸೇನೆಯನು ಪಾಂಚಾಲಸುತ ಮೋಹರಿಸಿದನು ಕಿಂಧೂಳಿ ಮಾಣಿಸಿತನಿಮಿಷತ್ವವನಮರಸಂತತಿಯ (ಕುಮಾರಧ್ಯಾ. ೯-೨೯). ೫. ಗುಣಪಡಿಸು : ವಾಸಿಮಾಡು : ಆಲದ ಬೇಟಲೊಳ್ ಸಿಕ್ಕಿದ ಗಾಲಿಯಂ ತೆಗೆದರುಸನಂ ರತ್ನಾಚಲಕ್ಕೆ ಕೊಂಡು ಬಂದು ಸಕಲೌಷಧಿಗಳಿಂ ಶಸ್ತ್ರವ್ರಣಮಂ ಮಾಣಿಸಲ್ (ರಕಾ. ೨-೬೦ ವ). ೬. ಸಂತೈಸು ; ಸಮಾಧಾನಗೊಳಿಸು : ಧರ್ಮಪುತ್ರಂ ಕೋಪತಾಪದಿಂ ಮಸಗಿದ ಮದಗಜಮನೆ ಮಾಣಿಸುವಂತೆಂ ತಾನುಂ ಮೃದುವಚನಂಗಳಿಂ ಮುಳಿಸನಾಜಿಸುತಿರ್ದಂ (ಹಂಪಾ. ೭-೫೯ ವ); ಕಡುನೋವಿಂದಮಟುತ್ತುಮಿರ್ಪ ತಂಗೆಯಂ ಧರ್ಮಶ್ರವಣದಿಂದೆಂತಾನುಂ ಮಾಣಿಸಿ (ರಕ್ಷಾಶ. ೩-೨೩೫) ; ಕಾಲತನಯನ ಸತ್ವವನು ನೀವ್ ಪಾಲಿಸುವೊಡೀ ಛಾತುರಂಗದ ಮೇಳನವು ಬೇಡೆಂದು ಮಾಣಿಸಿ ಮರಳಿದನು ಮುನಿಪ (ಕುಮಾ.ಸ. ೬೦೩. ೦೫-೯೦). ೭. ಮೋಸಗೊಳಿಸು ; ವಂಚಿಸು : ಪೆಜರಿಂತಲ್ಲದೆ ಬಂದೆನಗೆಜಗಲ್ ಕಡುಭಕ್ತಿಯಿಂದಮೇಂದುಕ್ಕೆವದಿಂ ಬಚಿದೇಂ ಮಾಣಿಸಿ ನೀನೊಳಗಜಿಯದರಂ ವಚನರಚನೆಯಿಂ ಸೋಲಿಸುವೈ (ರಕ್ಷಾಶ. ೯-೦೨೯). **ಮಾಣ್ಸು** : ೮. ಹಸು ಅಥವಾ ಎಮ್ಮೆ (ಗರ್ಭಧಾರಣೆ ಮಾಡಿ) ಹಾಲು ಕೊಡುವುದನ್ನು ನಿಲ್ಲಿಸು: ಅಶ್ವತ್ಥಕ್ಕೆ ಕೊಂಡು ಕೊಟ್ಟ ಎಂಮೆ ಮಾಣ್ಸಿಕೊಂಡಡೆ × × × ಎಂದೂ ಎಂದೂ [ಬತ್ತು] ಬಯನಾಗಿ ಒಂದು ಎಂಮೆಯನೂ ಮಠಕ್ಕೆ ನಡಸಿ ಬಹನು (ಕೌಇಶ. IX-ii, ೪೦೭-೪೫ ; 1377). **ಮಾನಿಸು$_1$** : ೮. ಹಸು ಮಾನಿಸಿಕೊಂಡಿದ್ದರಿಂದ ಮನೆಯಲ್ಲಿ ಹಾಲು ಇಲ್ಲ (ಜನಪ). [ಮಾಣ್ + — ಇಸು$_2$]

**ಮಾಣಿಸುಹ** (ನಾ). ನಿಲ್ಲಿಸುವಿಕೆ : (+). [ಮಾಣಿಸು + — ಹ$_2$ (< — ಪ$_2$)]

**ಮಾಣು** 'ಮಾಣ್' ನೋ.

**ಮಾಣ್ಕೆ** (ನಾ). ನಿಲ್ಲಿಸುವಿಕೆ ; ತಡೆಯುವಿಕೆ : ಕಾಣ್ಕೆ, ಪೂಣ್ಕೆ, ಮಾಣ್ಕೆ (ಶಬ್ದಮ. ೫೫೭ ಪ್ರಯೋ). [ಮಾಣ್ + — ಕೆ]

**ಮಾಣ್ಬು** (ಕ್ರಿ). ಕಳೆ ; ನೀಗು ; ಪರಿಹರಿಸು : ಕಾವೇರಿ ಮೈಗೊಗೆದ ಮೂರ್ಛೆಯ ಮಾಣ್ಬತು ಆನಂದಾವೇಶದಿಂ ಮಗುಳೆ ಮೂಂದ್ಯವ ತರ್ಪುದೆನ್ಯೊಳ್ (ಲೀಲಾವ. ೪೭). [ಮಾಣ್ + — ಚು$_1$]

**ಮಾಣ್ದ** 'ಮಾಣ್' ಪರಾ.

**ಮಾಣ್ಬ** 'ಮಾಣ್' ಪರಾ.

**ಮಾಣ್ಸು** 'ಮಾಣಿಸು' ನೋ.

**ಮಾತಂಗ** (ನಾ). ೧. ಆನೆ; ಗಜ : "ಮಾತಂಗಃ ದ್ವಿರದಃ . . . ಸಿಂಧುರಃ – ಈ ೧೪ ಆನೆಯ ಪೆಸರ್" (ಶಣಮ. ೩೬-೬೦); ಸಿಂಗದ ಮುಪ್ಪುಂ ನೆಗಟ್ದ ಗಾಂಗೇಯರ ಮುಪ್ಪುವಿಟೆಕಿವಡೆಗುಮೆ ವನಮಾತಂಗಂ ಗಳಿನಸುಹೃಚ್ಛತುರಂಗಬಲಂಗಳಿನದೆಂತುಮಂಗಾಧಿಪತೀ (ಪಂಭಾ. ೧೦-೦೯); ಮಾತಂಗದ ಬಲಂ, ಸಿಡಿಲ ಪೊಡರ್ಪು, ಕಡಲ ಗುಣ್ಪು, ಪಡಿಗೊಳೆ ದಶರಥಕುಮಾರಂ ರಾಜ್ಯಮನಾಳುತಿರ್ದಂ (ರಾಮಾಶ್ವ. ೭-೦೯). ೨. ಮಾದಿಗ; ಶ್ವಪಚ : "ಅಂತಾವಸಾಯಿ ಚಂಡಾಳಂ ತಾಂ ಹೊಲೆಯಂ ಜನಂಗಮಂ ಮಾತಂಗಂ" (ಚತು.ಕೋ. ೬೬-೮೭); ಮಾತಂಗನಾಗಿರ್ದುಮೇಂ ನಿಷ್ಠುರಮಲ್ಪಾಕಾರಮಿಮಾತಂಗೆ (ಕಾದಂಪೂ. ೩೬); ಲಿಂಗಪೂಜಕರಾಗದವರಿಗೆ ಹಂಗೆ ಕೂಡಿರ್ದನಿಕಬೆಳೊಳು ಮಾತಂಗಸಂಗತವಿತ್ರದೋಷವು ಪ್ರಾಪ್ತಿಸು ವುದಾಗಿ (ಬಸಪು. ೩೦-೦೦). ೩. ಬೇಡ; ಕಿರಾತ; ಶಬರ. ೧, ೩ : ಅರಣ್ಯಂ . . . ಮಾತಂಗಸಂಗಿಯಾಗಿಯುಂ ಸದ್ವಂಶವಿರಹಿತಮಲ್ಲು (ಕುಶ್ಮಪು. ೩-೬೮ ಪ). ೪. ಆನೆಯ ರೂಪದ ಒಬ್ಬ ರಾಕ್ಷಸ; ಗಜಾಸುರ: 'ಮಾತಂಗಹರ' ಪರಾ. ೫. ಒಂದು ಬಗೆಯ ಸಸ್ಯ : ಮಾತಂಗ ಜರಪತ್ರಿ ಮಾರತಿಲಕಂಗಳಿವರ ತಿರುಳಿಣ್ಣಯಜಮೂತ್ರಮುರಗದಂಷ್ಟ್ರಂ ಕೂಡಿದುರುತ್ರಿಲಮಿನಿತು ಸೋಂಕಲ್ಕೆ ವಶ್ಯಂ (ಜಿಶ. ೦೪-೯೬). ೬. [ಸಂಗೀತ] ಒಂದು ತಾಳದ ಹೆಸರು : ಧ್ರುವ ಮಟಯ ರೂಪಕ . . . ಮಾತಂಗ[ಪಾಠಾಂ. ಮತ್ತಮಾತಂಗ] . . . ಜಯಾಳಮೆಂಬವು ಮೊದ ಲಾದ ಮೂಜಿಂದುತಾಳಂಗಳುದೊಡೆ (ವಿಕೇ. ೦೯೨). [ಸಂ.]

**ಮಾತಂಗಕ** (ನಾ). = ಮಾತಂಗ ೨ : ಮಾತಂಗಕಂ ಕೃತಾಂತ ವಿಕೇತನಮಂ ಪೊಕ್ಕಂ (ವಕಳು. ೯-೯೯). [ಸಂ.]

**ಮಾತಂಗಕನ್ನಿಕೆ** (ನಾ). ಮಾದಿಗರ ಹುಡುಗಿ : ದಕ್ಷಿಣದೇಶದಿಂದ ಮಾತಂಗಕನ್ನಿಕೆಯೊಬ್ಬಳು . . . ಸಣ್ಣಾವನ ಕೈಯಲ್ಲಿ ಗಿಣಿಯ ಪಂಜರವನು ಹೊರಿಸಿಕೊಂಡು ಬಂದು (ಶಕಾ. ೦). [< ಸಂ. ಮಾತಂಗಕನ್ಯಕಾ]

**ಮಾತಂಗಕುಲ** (ನಾ). ೧. ಆನೆಗಳ ಗುಂಪು. ೨. ಚಂಡಾಲಜಾತಿ. ೧, ೨ : ಅರಣ್ಯಕಮಲಿನಿಯಂತೆ ಮಾತಂಗಕುಲದೂಷಿತೆಯುಂ ಅಮೂರ್ತೆ ಯಂತೆ ಸ್ಪರ್ಶವರ್ಜಿತೆಯುಂ . . . ಎನಿಸಿದೀಜುಂಜವ್ವನೆಯ ರೂಪಾತಿ ಶಯುಮನೆವೆಯಿಕ್ಕದೆ ನೋಡುತ್ತುಂ (ಕಾದಂಪೂ. ೯೯). [ಸಂ.]

**ಮಾತಂಗಚರಿತ** (ನಾ). ೧. ಆನೆಯ ಸ್ವಭಾವದಂತೆ ಗಾಂಭೀರ್ಯ ವನ್ನುಳ್ಳವನು. ೨. ಚಂಡಾಲನ ಸ್ವಭಾವವುಳ್ಳವನು. ೧, ೨ : ಆ ನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿಯಲ್ಲು . . . ಮಾತಂಗಚರಿತನಾಗಿಯುಂ ಮಾತಂಗಚರಿತನಲ್ಲು (ಕುಶ್ಮಪು. ೯-೬೯ ಪ). [ಸಂ.]

**ಮಾತಂಗದಾನ** (ನಾ). ೧. ಆನೆಯ ಮದಜಲ : ಮಾತಂಗದಾನ ಲೋಭಿಗಳಿರದೆ ಮಧುವನತಿಪ್ರೀತಿಯಿಂದುಂಬ ಚಂಡಾಳಿಗಳ್ ಶಿವೆಯ ಮುಖಜಾತಪರಿಮಳಕೆಳಗಬೇಡೆಂದು ಪೊಡೆವಂತೆ ಛತ್ರಚಾಮರಮೆಸೆದುವು (ಕಾವ್ಯ. ೬೭-೯೯). ೨. ಚಂಡಾಲನು ಮಾಡುವ ದಾನ. ೧, ೨ : ಮಾತಂಗದಾನವಿಭವಂ ಮಾತೇನನಿವಿರಿದಾದೊಡಂ ಚೇತಸ್ಸಂಪ್ರೀತಿಯನತೀವ ಮಳಿನವಿಜಾತಿಗೆ ಮಧುಪವ್ರಜಕ್ಕೆ ಮಾಟ್ಪುದೆ ಸಹಜಂ (ಪಾರ್ಶ್ವಪು. ೯-೦೨೨). [ಸಂ.]

**ಮಾತಂಗಪ್ರಸೂತ** (ನಾ). ೧. ಆನೆಯಲ್ಲಿ ಹುಟ್ಟಿದುದು; ಮದ ಜಲ. ೨. ಚಂಡಾಲಸಂತಾನ. ೧, ೨ : ಇದು ಜಾತಿಭಂಗವುಂ ತಳೆದುದು. ಮಾತಂಗಪ್ರಸೂತಮುನ್ನದಮಧುಪಾಸ್ಪದಮೇಪುದೆಂದದಂ ಮುಟ್ಟಿದ ತೆಜದಿಂ ತೂಜಿದನಂದು ಗಜವಾಹನಮಂ (ಪುಲಕೇ. ೦೦-೨೦). [ಸಂ.]

**ಮಾತಂಗಹರ** (ನಾ). ಗಜಾಸುರನನ್ನು ಸಂಹರಿಸಿದವನು; ಶಿವ : ಪಿಂಗಳಾಕ್ಷ ಮುಕುಂದಹರ ಮಾತಂಗಹರ ಮೃಗರಾಜಹರ ಧೂಮಾಂಗ . . . ಪಾಪಹರ ಮಹಾತೇಜ (ಬಸಪು. ೦೯-೦೭). [ಸಂ.]

**ಮಾತಂಗಿ** (ನಾ). ೧. ಚಂಡಾಲಕನ್ಯೆ; ಮಾದಿಗಿತ್ತಿ : ಕಮಲಭವಂ ಮೊದಲೊಳ್ ಮಾತಂಗಿಯೆಂದು ತಾಂ ಮಚ್ಚಿಟ್ಟದೆ ಮಾಡಿದನಕ್ಕುಂ ಕಯ್ಯೊಳ್ ಮುಟ್ಟದೊಡಿಂತಗ್ಗಳಿಸಿ ತೋರ್ಕುಮೇ ಲಾವಣ್ಯಂ (ಕಾದಂಪೂ. ೫೦); ಮಾತಂಗಿಯುನತಿಶೋಕಾನ್ವಿತೆಯುಂ . . . ಇದಿರೊಳೆ ಕಂಡಂ (ಸುಕುಮಾ. ೯-೩೭); ವ್ಯಾಸ ಬೋಯಿತಿಯ ಮಗ ಮಾರ್ಕಂಡೇಯ ಮಾತಂಗಿಯ ಮಗ (ಬಸವ. ೩೫೦). ೨. ಬೇಡಿತಿ; ಶಬರಿ : ಮಾತಂಗಿಯೊಲೆ ಪಸಲೆಯುಂ ಪಾರ್ದುದೆನೆ ನಿಡುಬಿಯಸಿ ನಿಡುಸುಯ್ದು ರಿರ್ವರುಮೊಂದುಗೂಡಿ (ಶ್ರೀರಾಮಪಾ. ೨೬೮-೦೪೯). ೩. ಒಬ್ಬ ಕ್ಷುದ್ರದೇವತೆಯ ಹೆಸರು: ಬಿಲ್ಲಿಯಾ ಮಹಕೆಂಚಿ ಮಾತಂಗಿ ಬಕ್ಕಾಯಿ ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು (ಚಿಣಸು. ೩೮-೨). ೪. ದುರ್ಗೆ; ಪಾರ್ವತಿ : ಶಾಕ್ತೇಯರು . . . 'ಮಾತಂಗಿ'ಯ ಭಕ್ತರಾಗಿದ್ದರು (ಸಂಕೋಶ. ೨೪೮). ೫. [ಜೈನ] ಪತ್ತು ಮಹಾವಿದ್ಯೆಗಳಲ್ಲಿ ಒಂದು : ಮಾತಂಗಿ ಗೌರಿ. . . ಭ್ರಾಮರಿ ಆಭೋಗಿನಿಯೆಂಬವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತ ವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಪುಂಪು. ೦೯೬). [ಸಂ. ಮಾತಂಗೀ]

**ಮಾತಟ್ಟು** (ಕ್ರಿ). ಸುದ್ದಿಯನ್ನು ಹೇಳಿಕಳುಹಿಸು; ಸಮಾಚಾರವನ್ನು ಮುಟ್ಟಿಸು : ಪಲದಿವಸಂ ಸೂಟ್ಟಡಿಯದೆ ಕರೆವುದರ್ಕಾಸೆವಟ್ಟು ಮಾತಟ್ಟಿದ ಕೆಳೆಯುನನೆಮ್ಮಬ್ಬೆಯನೊಡಂಬಡಿಸಲಣ್ಣೆಂದು ಪೋಗಲ್ವೇಟ್ದು (ಶಾಂತಿಪು. ೯-೭೭ ಪ). [ಮಾತು$_1$ + ಅಟ್ಟು$_1$]

**ಮಾತಡಕು** (ಕ್ರಿ). ವಿಷಯವನ್ನು ಒಯ್ಯು; ಸಂದೇಶವನ್ನು ತಲಪಿಸು : ಒದವಿದ ಬೇಟವಪ್ಪೊಡೆನಗತ್ತಳಗಂ ಬಗೆವೇಟ್ದೊಡೆನ್ನ ಮೇಳವ ಕೆಳೆಯರ್ಕಳಿಲ್ಲ . . . ಓತುಮಾತಡಕಲೊಂದಿದ ದೂದವರಿಲ್ಲ ನೆಟ್ಟನೆ (ಶಂಪಾ. ೯-೭೯). [ಮಾತು$_1$ + ಅಡಕು$_1$ (< ಅಡುಕು)]

**ಮಾತಬರ** 'ಮಾತ್ಬರ್' ನೋ.

**ಮಾತಬರಿ** 'ಮಾತ್ಬರ್' ನೋ.

**ಮಾತರ** (ನಾ). ತಾಯಿ; ಜನನಿ : ಸರಿ ನಾಮ್ ಪರ್ದೆಂಬಿವಜ ಸ್ವರೂಪದಿಂ ಶಾಲ್ಮಲೀಮಹೀರುಹದೊಳ್ ಮಾತರಪಿತರರಂ ಬಿಸುಟ್ಟತಿ ಭರದಿಂದೊಳ್ಪಂ ಮೃಗಾಧಿಪಾಜಚ್ಕ್ರಾಂಶಂ (ಪಾಶ. ೦೯-೦೪); ಮಾತರರುಂ ಪಿತರರುಮಾ ಭ್ರಾತರರುಂ . . . ಎಲ್ಲರುಂ ಸಲೆ ಸ್ವೈರ್ಪರ್ ಜವನನಾರ್ಮೇಂ ಬಾರಿಪರೇ (ಕವಿ.ಮ. ೦೨೨ ಪ್ರಯೋ). 'ಪಿತರ' ಪರಾ. [ಸಂ. ಮಾತೃ]

**ಮಾತರಿ** (ನಾ). = ಮಾತರ : ಪ್ರಾಗಿಹುದೊ ಮಾತರಿಯ ಮನವು (ಐಶ್ವಪು. ೯೯-೪೦); ಎಲವೊ ನಿಜಮಾತರಿಯ ಗಮನನೆ ಎಂದು ಖಿಡ್ಗವ ಸೆಳೆಯೆ ಬಿಜ್ಜಣನು (ಐಶ್ವಪು. ೦೦೨-೩೨). [<ಸಂ. ಮಾತೃ]

**ಮಾತರಿಶ್ವ** (ನಾ). ೧. ಗಾಳಿ; ವಾಯು : "ಪವಮಾನಂ . . . ಮಾತರಿಶ್ವಂ . . . ವಾತ್ಯೆ ವಾತಮಂಡಳಿಯಕ್ಕುಂ" (ಚತು.ಕೋ. ೯-೪೯); ಲತಿಕಾಲಾಸ್ಯೋಪದೇಶವ್ಯಸನಿ ವನಲತಾಂದೋಳಿತಾಮೋದಘೂರ್ಣಿತಚಂಚಚ್ಚಂಚರೀಕಂ . . . ತೀಡಿತ್ತೆಸಗಿ ಸುರಭಿವೈಭಾತಿಕಂ ಮಾತರಿಶ್ವಂ (ಕಾದಂಪೂ. ೦೯೬). ೨. ಗಾಳಿಯ ಅಧಿದೇವತೆ; ಮಾರುತ; ಮಾತರಿಶ್ವಂಗ ದ್ವಿರಾಜಂಗೇತಬಿಲಿ ಪಲ್ಲಟವ ಕೇಳೆಂದಾತನನು ಮನ್ನಿಸಿದನುಚಿತದಲಂಜನಾ ಸೂನು (ತೊರಪಾ. ೩-೦-೦೪). [ಸಂ. ಮಾತರಿಶ್ವನ್]

**ಮಾತರಿಶ್ವಮಿತ್ರ** (ನಾ). ವಾಯುವಿನ ಮಿತ್ರ ; ಅಗ್ನಿ : ಈಶ್ವರಾಜ್ಞೆಯನುಳಿಯಬಾರದೆಂಬುಕ್ತಿಯಿಂ ಶಾಶ್ವತಂ ಮಾಡಬೇಕಲ್ಲದುಳಿದರೆ ಮಾತರಿಶ್ವಮಿತ್ರಂಗಾಹುತಿಯನೀಯಬೇಡ (ಶಬ್ದ. ೩೬-೦೩). [ಸಂ.]

**ಮಾತಾಟ** (ನಾ). ೧. ಮಾತಾಡುವಿಕೆ : ಅವರ ಮಾತಾಟವಂ ಕಿವಿಯಳತೆಯೊಳ್ ಕೇಳ್ದೆ (ಪಶ್ಚಿ.ರ. ೨೨-೦೦೩). ೨. ಸರಸವಾದ ಮಾತುಕತೆ : ನೋಟದ ಬೇಟವುಂಕುರಿಸಿದಪ್ಪುದು ಮೇಳದೊಳಿಂಪುವೆತ್ತ ಮಾತಾಟದ ಮತ್ತೆ ಪಲ್ಲವಿಸಿದಪ್ಪುದು (ಚಂದ್ರಕ. ೬-೩೨). [ಮಾತು$_1$ + ಆಟ]

**ಮಾತಾಡಿಸು** (ಕ್ರಿ). ೧. ನುಡಿಸು : ಆತನಂ ಮೆಲ್ಲಮೆಲ್ಲನೆ ಮಾತಾಡಿಸಿ (ಆಕ. ೦೦-೦೯ ವ) ; ಈತನನು ಮಧುರಾಳಾಪದಲಿ ಮಾತಾಡಿಸುವೆನು (ತೊರವೆ. ೩-೪-೦೬) ; ಆ ಪ್ರಮಿಳೆ . . . ಮಣಿರಥದೊಳೊಪ್ಪುವ ಕಿರೀಟಿಯಂ ನಗುತೆ ಮಾತಾಡಿಸಿದಳು (ಕೃಟಕಾ. ೦೬-೯). ೨. ಮಾತನಾಡುವಂತೆ ಮಾಡು ; ಹೇಳಿಸು : ಹಲವು ಮಾತೇನೊಂದು ಪದ್ಯದೊಳೊಲಿಸಿ ಮಾತಾಡಿಸುವೆನೆಮ್ಮೊಡನೆಳವೇಟಿಯ ತಲೆಯಂಭವನಂ ಸಂಕೀರ್ತನಂ ಮಾಡಿ (ಬಸವ. ೪೨-೩೭). [ಮಾತಾಡು + — ಇಸು$_2$]

**ಮಾತಾಡು** (ಕ್ರಿ). ೧. ಅಭಿಪ್ರಾಯವನ್ನು ಅಥವಾ ವಿಷಯವನ್ನು ಮಾತಿನ ಮೂಲಕ ತಿಳಿಸು ; ನುಡಿ : ಚೆನ್ನಾಗಿ ತಿಳಿದುಕೊಂಡು ಮಾತಾಡಬೇಕು (ಮುಂಬಯಿ. ೪-೯೮); ಕಾಣಿಸಿದ್ದನ್ನು ಕುರಿತು ಮಾತಾಡುತ್ತೇನೆ (ಮೂಕಜ್ಜ. ೨೪). ೨. ಪ್ರತಿಯಾಗಿ ನುಡಿ; ಉತ್ತರಿಸು : ಎಮಗೆ ಮಾತಾಡಸಲ್ಲೆಂಬವ್ರೋಲ್ಮೋಜಿದೆ ನೀಂ ನಿನ್ನೊಂದು ವಾಕ್ಯಾಳಿಲಗುಣಮನಿದಂ ನಿನ್ನ ಸೌಜನ್ಯಜಾಲಂ ಪ್ರದಿರ್ದತ್ತು (ಚಾದಂಕಾ. ೦೨೩). ೩. (ಅಲಂ) ಅಭಿವ್ಯಕ್ತಿಗೊಳಿಸು ; ಪ್ರಕಟಪಡಿಸು : ದಿಟವೀರನೇ ಕೂರಲಗಿನಲಿ ಮಾತಾಡು ಬಜೀನುಡಿ ಭಂಡತನ (ಕುಮಾ.ದ್ರೋ. ೦೯-೩) ; ನೋಟದಲಿ ಮಾತಾಡಿ ಪುರ್ಬಿನ ಬೇಟದಲಿ ಬೆಳ್ಮಾಡಿ . . . ಸರ್ವಸ್ವವನು ನೆಜೆ ಕವರಿಗೋಟುಗೊಳಿಸುವ . . . ಬಹುವಿಧದ ಮಾಯೆಯ ಬೇಟಕಾತಿಯರೊಪ್ಪಿದರು (ತೊರವೆ. ೦-೩-೩೦).

**ಮಾತಾಡುವ ಪಕ್ಕಿ, ಮಾತಾಡುವ ಹಕ್ಕಿ** = ನುಡಿಯುವ ಪಕ್ಷಿ ; ಗಿಣಿ : ಮಾತಾಡುವ ಪಕ್ಕಿಗಳ್ಗೆ ದನಿದೋಱುವ ಕೋಂಚೆಗೆ ಸಣ್ಣಗಾಯ್ಗಳಿಂ ಮೂಡುವ ಮಾಮರಕ್ಕಿಗವಳಾಕೆಯೊಳೀ ಮುನಿಸೇಕೆ ಸಾಲದೇ (ಶಬ್ದ. ೬೭); "ನಿಹತಃ-ಮಾತಾಡುವ ಹಕ್ಕಿ" (೬ಕಾಂ. ೯೭). [ಮಾತು$_1$ + ಆಡು$_1$]

**ಮಾತಾಮಹ** (ನಾ). ತಾಯಿಯ ತಂದೆ ; ಅಜ್ಜ ; ತಾತ : "ತಾಯ ತಂದೆ ಮಾತಾಮಹಂ" (ಪಶ್ಚಿ.ಕೋ. ೩೩-೨೦); ಪೊಗಟ್ಟು ಪಲತೆಱದಿಂ ಪರಸಿದ ಮಾತಾಮಹಂಗೆ ಮಾರುತಿ ಕೈಗಳಂ ಮುಗಿದು (ಕಂರಾಪ. ೦೦-೫೩ ವ); ಬಂದ ಮಾತಾಮಹನ ಮಾತೆಯ ಮುಂದಹರುಷವನಱಿದು ಧಿಮ್ಮನೆ ನಿಂದು ಕೈಮುಗಿದೇನು ಬಂದಿರಿಯೆಂದು ಬೆಸಗೊಳಲು (ತೊರವೆ. ೬-೦೨-೨). [ಸಂ.]

**ಮಾತಾಮಹಿ** (ನಾ). ೧. ತಾಯಿಯ ತಾಯಿ; ಅಜ್ಜಿ. ೨. ಹಿರಿಯಳು: ಮಾಂಟೆಸೋರಿ ಆಧುನಿಕಶಿಕ್ಷಣಪದ್ಧತಿಗಳಿಗೆ ಮಾತಾಮಹಿಯೆನಿಸಿರುವರು (ಶಿಕ್ಷಣ. ೬೯೦). [ಸಂ. ಮಾತಾಮಹೀ]

**ಮಾತಾಮಾತ** (ನಾ). ಅಳಲು ; ಕಷ್ಟ ; ದುಃಖ : ಭಕ್ತರ ಸಲುವಾಗಿ ರಾಮನು ಮನುಷ್ಯದೇಹಧಾರಣ ಮಾಡಿ ಬಗೆಬಗೆಯ ಮಾತಾಮಾತಗಳನ್ನು ಸಹಿಸಿ ಸಾಧುಸಂತರನ್ನು ಸುಖಿಗಳಾಗಿ ಮಾಡಬೇಕಾಯಿತು (ತುಳಸೀ. ೬).

[← ಅರ. ಮಾಅತಮ್; ಪಾರ. ಹಿಂ. ಮಾತಮ್: ಮರಾ. ಮಾತಮ್, ಮಾತಮಿಾ]

**ಮಾತಾಯಿ** (ನಾ). ೧. ಮಹಾತಾಯಿ : ತುತ್ತೊಂದು ನಿಡಿರಮ್ಮಾ—ಮಾತಾಯಿಗಳಿರಾ (ಪಿಸೀಗೀ. ೦೯-೨). ೨. ದುರ್ಗೆ : (೬).

[ಮ್ಹಾ + ತಾಯಿ (< ತಾಯ್)]

**ಮಾತಾಳಿ** (ನಾ). ೧. ಅತಿಯಾಗಿ ಮಾತನಾಡುವ ವ್ಯಕ್ತಿ; ಗಳಹುವ ವ್ಯಕ್ತಿ : "ಮಾತಾಳಿಯೆನಲ್ ಗಳಪಂ" (ಕಾಕೋ. ೬); ಆದಿತ್ಯನ ಸಾರಥಿ ಬೆಱಗಾದಂ ಮಾತಾ[ಶಾಕಾಂ. ಜಾ]ಳಿ ಮಾತುಗೆಟ್ಟಂ ಧುರದೊಳ್ ಚೋದಿಸೆ ಹರಿಯುಂ ಶಲ್ಯನುಮಾದರದಿಂ ನರನ ದಿನಪತನಯನ ರಥಮಂ (ಕಂಶಕಾ. ೦೨-೦೬೨); "ಮಾತಾಳಿ — ಮಾತಿನ ಮಲ್ಲನು ಎಂದರೆ ಇಂದ್ರನ ಸಾರಥಿ ಮಾತಲಿ, ಮಾತುಗೆಟ್ಟಂ — ಮೂಕನಾದನು ; ಇಲ್ಲಿ ಮಾತಲಿಗೆ ಮಾತಾಳಿಯೆಂದು ಮಾಡಿರುವ ಪ್ರಯೋಗ ರಮ್ಯವಾಗಿದೆ" (ಕಂಶರು. ೯೯೪) : ನೀಱಂ ಜೂದಾಳಿ ಕರಂ ನೀಱಂ ಮಾತಾಳಿ ಕರೆಯೆ ಸಿಗ್ಗಾಳಿಯವಳ್ (ಕಾವ್ಯಾವ. ೩೭೩) ; ಸೋಲಿಸಿದ ಗೆಲವಿಂದ ಬಲುಮಾತಾಳಿಯವನೆನ್ನದಿರು (ಕುಮಾ.ವಿ. ೨-೩೬) ; ಅವಳು . . . ಎಲ್ಲ ಹೆಣ್ಣು ಮಕ್ಕಳಂತೆ ಬಹು ಮಾತಾಳಿ (ಕಂಗಾಳ. ೯೮). ೨. ಅತಿಶಯವಾದ ಶಬ್ದಪ್ರಯೋಗವುಳ್ಳುದು ; ಹೋಲಿಕೆಗಳು ಅತಿ ಪ್ರಸಿದ್ಧವಾಗಿಯೂ ಸಾಮಾನ್ಯವಾಗಿಯೂ ಇದ್ದಾಗ ಕಾವ್ಯವು ಮಾತಾಳಿಯಾಗಿಯೂ ಮಾರ್ದನಿಯಾಗಿಯೂ ಕಾಣುವುದು (ಶಪಾ. ೦೬೯). [ಮಾತು$_1$ + — ಆಳಿ$_3$]

**ಮಾತಾಳಿತನ** (ನಾ). ಅತಿಯಾಗಿ ಮಾತನಾಡುವಿಕೆ ; ಗಳಹುವಿಕೆ ; ಹರಟೆ ಕೊಚ್ಚುವಿಕೆ : ಆಳುತನಕಾಭರಣವೇ ಮಾತಾಳಿತನ ಕೈದೋಱಿ ದಹಿಸನ ಮೇಲಣೀಜಿನ ಬಾಯ ಸುಭಟರ ಹೊಗಳಬೇಡ (ಕುಮಾ.ಆ. ೪-೩೦).

[ಮಾತಾಳಿ + — ತನ]

**ಮಾತಿ, ಮಾದಿ$_1$** (ನಾ). ಒಂದು ಬಗೆಯ ಮರ ಮತ್ತು ಔಷಧಕ್ಕೆ ಬಳಸುವ ಅದರ ಕಾಯಿ : ಪ್ರಮೇಹಕ್ಕೆ . . . ಕೆಸುವಿನ ಸೊಪ್ಪು, ನರುಪಲಸೊಪ್ಪು, ಹೆಬ್ಬಜೆಯ ಕಾಯಿ, ತಗರಿನ ಕೋಡಿನ ಹಾಗೆ ಇರುವ ಮಾತಿಯ ಕಾಯಿ . . . ಕೊಡುತ್ತಾ ಬರುವುದು (ಶಿಶ್ನವಿ. ೦೫೭). **ಮಾದಿ$_1$**: ಚಿಲಕಧೂಪ . . . ಮಾದಿ, ಚಿತ್ರ, ಧೂಪ (ಪ್ರು.ಶಿ. ೦೩-೨೩೭).

[? . / ತೆಲು. ಮಾಡಿ = ಕಾಡುಪುರುಳಿ]

**ಮಾತಿಗ** (ನಾ). ಚೆನ್ನಾಗಿ ಮಾತನಾಡಬಲ್ಲವನು ; ವಾಗ್ಮಿ : ಬಾಜರನು ತುಸು ದೊಡ್ಡ್ಡೆಲೂ ನಗಮೋರೆಯವನೂ ಮಾತಿಗನೂ ಕಸುವುಳ್ಳವನೂ ಆಗಿದ್ದನು (ಕೊಜಾರ. ೩೩). [ಮಾತು$_1$ + — ಇಗ]

**ಮಾತಿಲಿ** (ನಾ). ನುಡಿಯದೆ ಸುಮ್ಮನಿರುವ ವ್ಯಕ್ತಿ; ಮೌನಿ : ಹಮ್ಮೈಸಿ ಕುಳಿತಾ ಮಾತೆ ಕಂಬನಿಯ ಕರೆದು ಮಾತಿಲಿಯಾಗಿ ರೋದಿಸಿರೆ, ಬೆರಗುಹೊಡೆದಂತಿರ್ದನಾ ಬಭ್ರುವಾಹನು (ಪತ್ರಾಂಗ. ೭೩-೨೦೫೬) ; ಮನೆಯಲ್ಲಿ ಸಂಜೀವಿನಿಯು ಒಂದು ಮಾತಿಲಿ (ಕಂಜೀ. ೬೮).

[ಮಾತು$_1$ + — ಇಲಿ$_3$]

**ಮಾತು$_1$** (ನಾ). ೧. ಮನಸ್ಸಿನ ಭಾವನೆಗಳನ್ನು ಬಾಯಿಯ ಮೂಲಕ ವ್ಯಕ್ತಗೊಳಿಸುವ ಮಾಧ್ಯಮ ; ನುಡಿ; ಸೊಲ್ಲು : ತೀರ್ಥಂಕರಪರಮದೇವರ ಮಾತಂ ಕೇಳ್ದು ಬೇಗಂ ಗಂಗಾದೇವತೆ . . . ತಣ್ಣತಪ್ಪಗಾಳಿಯುಂ ಸುಗಂಧಜಲವರ್ಷಮುಮಂ ಮಾಡಿದೊಡೆ (ವಡ್ಡಾರಾ. ೦೦೯-೦೦); ನಿನ್ನ ಮಾತುಗಳ್ ಕೀಲಿಸಿದಂತೆವೊಲ್ ಮನದೊಳಿರ್ದ್ದುವು (ಆದಿಪು. ೩-೨೩) ; ಮಾತೆಂಬುದು ಜ್ಯೋತಿರ್ಲಿಂಗ (ಅವಚ. ೨೦೦-೯೩೦) ; ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು (ಗಾದೆ). ೨. (ಬರಹದ ಮೂಲಕ ವ್ಯಕ್ತಪಡಿಸುವ) ಉಕ್ತಿ ; ಹೇಳಿಕೆ : ನೆನೆನೆನೆದು ಪೆರರ ಮಾತುಗಳನೆ ನೆಗೞ್ದಿರೆ ಕೃತಿಯೊಳದು ವರಂ ನಗದ ಗುಹಾಧ್ವನಿಯವೊಲನರ್ಥವಚನಂ (ಶಬ್ದ. ೦-೦೯). ೩. ಒಂದು ಜನಾಂಗವು ಉಪಯೋಗಿಸುವ ಎಲ್ಲ ಶಬ್ದಗಳ ಸಮುಚ್ಚಯ ಮತ್ತು ಅದನ್ನು ಉಪಯೋಗಿಸುವ ಕ್ರಮ; ಭಾಷೆ : ನುಡಿಗಳ್ಗೊಡಂಬಡಲ್ ಬಗೆದವೋಲ್ ಬಗೆಯಿಂ ಮಿಗಿಲೀಯದೊಂದೆ ನಾಟ್ಟುಡಿಯ ಬೆಡಂಗ ಕನ್ನಡದ ಮಾತಿನೊಳಾ ವಿಕಟಾಕ್ಷರಂಗಳೋಳ್ ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂಗುಡಿವಿಡು

ವಂತೆ ನೀಳ್ಪ ನಿಲೆ ಪೇಟ್ಟುದು ನೀತಿನಿರಂತರಕ್ರಮಂ (ಶಬರ. ೧-೧೯೯) ; ನವರಸವುಂಣ್ಮೆ ಮಾತು ಪೊಸತಾಗಿರೆ ದೇಶಿಯೆ ದೇಸೆವೆತ್ತುದೆಂಬವೋಲಿರೆ . . . ಪೇಟಲೊಡರ್ಚಿದೆನೀ ಪ್ರಬಂಧಮಂ (ಛಂದೋಂಬು. ೧-೧೧). ೪. ಪ್ರಾಚೀನವಾದ ನುಡಿ ; ಪಳಮಾತು : ಗೀತವ ಬಲ್ಲಾತ ಜಾಣನಲ್ಲ ಮಾತ ಬಲ್ಲಾತ ಜಾಣನಲ್ಲ ಜಾಣನು ಜಾಣನು ಆತ ಜಾಣನು ಲಿಂಗವ ನೆಜೆ ನಂಬಿದಾತ (ಬಸವ. ೦೫೩). ೫. ಸಂಗತಿ ; ವಿಷಯ : ವೃತ್ತಾಂತ : ಕಿತ್ತಯ್ಯಂಗಳ್ ಸಂನ್ಯಸನಂಗೆಯ್ದರೆಂಬಾ ಮಾತನರಸನಾದಿಯಾಗಿ ಪೊಬಲ ಜನಂಗಳೆಲ್ಲಂ ಕೇಳ್ದು (ವಡ್ಡಾರಾ. ೯೩-೪) ; ಅಂತು ಸುಯೋಧನನ ಮಲ್ಲನಂ [ಕೊಂದು] ವಲಲಂ ವಿರಾಟನ ಮನೆಯೊಳ್ ತನ್ನ ಮಾತೇ ಮಾತಾಗಿರ್ದಂ (ಪಂಪಭಾ. ೮-೫೮ ವ) ; ಈತನಿರೆ ಕಲ್ಪಾಂತರುದ್ರನ ಮಾತು ಜಗಕೇಕೆ (ಕುಮಾರವ್ಯಾ. ೬-೩೭). ೬. ಸಂಭಾಷಣೆ : ಪಾತ್ರದ ಮಾತನು ಗೀತದ ನುಡಿಯನು ಕಟ್ಟಿಕೊಟ್ಟರು ನಮ್ಮ ತಂದೆ (ಇಂಚಾಕ. ೧೧-೯೩). ೭. ಆಣೆ ; ಪ್ರತಿಜ್ಞೆ ; ಪ್ರಮಾಣ : ಆ ಬ್ರಾಹ್ಮಣನಿಗೆ ಹೇಳಿ ಅವನಿಂದ ಮಾತು ತೆಗೆದುಕೊಳ್ಳಬೇಕು (ವಚನಾ. ೪೭); ಅವಳು ಪಶುಪತಿಯ ಹೆಂಡತಿಯೆಂಬ ಸಂಗತಿಯನ್ನು ಅವಳಿಗಾಗಲಿ ಪಶುಪತಿಗಾಗಲಿ ತಿಳಿಸಬಾರದೆಂದು ಮಾತುತೆಗೆದುಕೊಂಡನು (ಬಂಕಿಮ. ೦೮೩). 'ಮಾತುಕೊಡು', 'ಮಾತುಗಳ್ಳ' ಪರಾ. ೮. (ಲಗ್ನದ) ನಿಶ್ಚಯ ; ನಿಷ್ಕರ್ಷೆ : ಕೊನರೆಣಿಕೆ ಬೇಡವಳ್ಗೆ ಆಗಿಲ್ಲ ಮಾತು (ಕಾಲೂರ. ೫೪-೬೫). ೯. ಅಪವಾದ; ದೂರು ; ನಿಂದೆ : ಮನೆಗೆ ಬಂದಳಿಯ ಮಗನಲ್ಲ ತವರಿಗೆ ಮಾತು ತಂದೋಳು ಮಗಳಲ್ಲ (ಜಾನಪ. ೬೫). ೧೦. ಜಗಳ ; ವಾಗ್ವಾದ : ಮಾತಿನಲಿ ಸೋತವನೆ ಜಾಣ (ಸರ್ವಜ್ಞ. ೦೩೪೨) ; ಮಾತು ಬಂದಾಗ ಸೋತು ಹೋದವನೇ ಜಾಣ (ಗಾದೆ).

**ಮಾತುಮಾತು, ಮಾತೋಮಾತು** (ದ್ವಿರುಕ್ತಿ) : ಮಾತುಮಾತೇ ಕಲಹ, ಕೂತುಕೂತೇ ಕಾಯಿಲೆ (ಕಾದಿಯ್ಯ. ೮೭); ಅವನು ಮಾತುಮಾತಿಗೆ ಹಟ ಮಾಡುತ್ತಿದ್ದನು (ಮುರಿಬದು. ೨-೫೦); ದಾರಿಗುಂಟ ನಡೆಯುತ್ತಿದ್ದಾಗ ಮಾತೋಮಾತು ನಡೆಯಿತು (ಹೊಸಕ್ಕಿ. ೫೪). **ಮಾತಱಿವಂ** = ಮಾತನ್ನು ಬಲ್ಲವನು : ಕುಱಿತಂತು ಪೆಱರ ಬಗೆಯಂ ತೆಱದಿರೆ ಪೞರ್ಗಱಿಪಲಾರ್ಪವಂ ಮಾತಱಿವಂ (ಶಬರ. ೧-೦೫); ಪ್ರವರರ ಪಂಡಿತರ ನೆಗಟ್ದ ಮಾತಱಿವರ ಸಬ್ಬವದವರೊಡನಂತೊಸೆದನ್ನವಾಸದೋಲಗದೊಳಿರ್ದನಾಗಳ್ ಹರಿಗಂ (ಪಂಪಭಾ. ೩-೮೦). **ಮಾತಾಗು** = ೧. ಮದುವೆ, ವ್ಯಾಪಾರ ಮುಂತಾದ ಕೊಡುಕೊಳ್ಳುವ ವ್ಯವಹಾರದ ನಿಷ್ಕರ್ಷೆಯಾಗು,— ನಿಶ್ಚಯವಾಗು : ಆತನು, ಬೇರೆಗೆ ಎಲ್ಲಿಯೂ ಮಾತಾಗಿಲ್ಲವೆಂದೂ ಆ ಮನೆ ನಿಮಗೆ ಹೊಂದಬಹುದೆಂದೂ ತಿಳಿಸಿದನು (ಕಾಲೂರ. ೩ ಕಥಾಸಾರ). ೨. ಜಗಳವಾಗು : ಅವರಿಬ್ಬರಿಗೂ ಕೆಲಸಕ್ಕೆ ಬಾರದ ಯಾವುದೋ ವಿಷಯಕ್ಕೆ ಮಾತಾಗಿ ಪರಸ್ಪರ ಮನೆಗೆ ಹೋಗುವುದನ್ನೇ ನಿಲ್ಲಿಸಿಬಿಟ್ಟರು (ರೂಢಿ). **ಮಾತಿಗೆ ತಪ್ಪು** = ವಚನಭಂಗ ಮಾಡು : ನೀನು ಮಾತಿಗೆ ತಪ್ಪಿದಂತೆಯೇ ಆಯ್ತು (ಶಿಳುವು. ೦೯೫); ಮಾತಿಗೆ ತಪ್ಪಿದವ ಮಾದಿಗ (ಗಾದೆ). **ಮಾತಿಗೆ ನಿಲುಕು** = ನುಡಿಗಳಲ್ಲಿ ಹೇಳುವುದಕ್ಕೆ ಬರು,— ಸಾಧ್ಯವಾಗು : ಸುಬ್ಬಮ್ಮನವರ ಆ ಸೌಜನ್ಯವೆನುವುದು ಮಾತಿಗೆ ನಿಲುಕದಂತಹುದು (ಇಂಚಾಕ. ೩೭-೭೮). **ಮಾತಿಗೆ ಬಾರದ ವಸ್ತು** = ಉಪಯುಕ್ತವಾಗದುದು : ಅಪ್ರಯೋಜಕವಾದುದು : ಮಾತಿಗೆ ಬಾರದ ವಸ್ತು ಬಹಳಿದ್ದರೇನು ಹೋತಿನ ಕೊರಳೊಳಗೆ ಮೊಲೆ ಇದ್ದರೇನು (ಪುರಂದ. ೧-೦೩೪ ಕಲ್ಲಿ). **ಮಾತಿಗೆ ಮಾತು ಬೆಳೆ** = ಜಗಳವುಂಟಾಗು : ಅತ್ತೆ ಅಳಿಯಂದಿರಿಗೆ ಮಾತಿಗೆ ಮಾತು ಬೆಳೆದು ಎಲ್ಲಿ ರಂಪವಾಗುವುದೋ ಎಂದು ಎದೆ ಬಡಿದುಕೊಳ್ಳುತ್ತಿದೆ (ಶಿಳುವು. ೭೦). **ಮಾತಿನ ಮಲ್ಲ** = ಅತಿಯಾಗಿ ಮಾತಾಡುವವನು ; ಹರಟೆಮಲ್ಲ : ಅವರನ್ನು ಮಾತಿಗೆ ಬಿಟ್ಟೇಯಾ ನೀನು? ಮಾತಿನ ಮಲ್ಲ (ಕುಂಗಶ. ೪). **ಮಾತಿನ ಮಲ್ಲಿ** = ಅತಿಯಾಗಿ ಮಾತನ್ನಾಡುವವಳು : ಹರಟೆಮಲ್ಲಿ : ಆ ಮಾತಿನ ಮಲ್ಲಿಯ ಭಂಡಾರದಲ್ಲಿ ಅದೆಷ್ಟು ವಿಷಯ ತುಂಬಿತ್ತೋ ? (ರೂಪಕ. ೨೪೨). **ಮಾತಿನ ಪಾಶಿ** = ಆಡಿದ ಮಾತನ್ನು ಉಳಿಸಿಕೊಳ್ಳುವ ಛಲ,— ಹಟ : ಆಸೆಯೇ ಜೀವದಲಿ ಕುರುಧರಣೀಶ ಬಿಡು ರಾಜ್ಯವನು ಮಾತಿನ ಪಾಸಿಯೇ ಕೊಡು ಕದನವನು (ಕುಮಾರವ್ಯಾ. ೦೫-೦೩). **ಮಾತುಕತೆ** = ಲೋಕಾಭಿರಾಮವಾದ ಸಂಭಾಷಣೆ ; ಹರಟೆ : ಈಚೆ ಬಂದಾಗ ನನ್ನ ಹೆಂಡತಿಯ ಮಾತುಕತೆ ನಡೆಯುತ್ತಲೇ ಇತ್ತು (ಬೀಚಿಕಥ. ೩೭). **ಮಾತುಮೀರು** = ಹೇಳುವ ಮಾತನ್ನು ಉಲ್ಲಂಘನೆ ಮಾಡು,— ಉಲ್ಲಂಘಿಸು : ತಾಯಿ ತಂದೆಗಳ ಮಾತು ಮೀರಿ ಆಕೆಯಾದರೂ ಹೊರಟಾಳೆ? (ಶಿಳುವು. ೭೦). **ಮಾತುಹಿಡಿ** = ಸಂಭಾಷಿಸು ; ಮಾತನಾಡಲು ತೊಡಗು : ಭಟ್ಟ ದಕ್ಷಿಣೆಗಾದರೆ ಮಾತು ಹಿಡಿದಾನು, ಮಂತ್ರಕ್ಕಾದರೆ ಬೆನ್ನು ತೋರಿಸ್ಯಾನು (ಗಾದೆ). **ಮಾತೆಱೆಯಳ್** = ನುಡಿಯ ಅಧಿದೇವತೆ ; ಸರಸ್ವತಿ : "ನುಡಿವೆಣ್, ಬಾಸೆವೆಣ್, ಸೊಲ್ವೆಣ್, ಮಾತೆಱೆಯಳ್, ಸಾರದೆ, ಸರಸತಿ – ಈ ೬ ಸರಸ್ವತಿಗೆ ಪೆಸರ್" (ಕಶಬ್ದಾ. ೪೮-೦೭).

[ ದೇಶ್ಯ. ತಮಿ. ಮಾಟ್ಟು, ಮಾಱ್ಱಮ್ ; ಮಲ. ಮಾಱ್ಱು ; ತುಳು. ಮಾತ್ ; ತೆಲು. ಗೊಂಡಿ. ಮಾಟ ; ಕೋತ. ಮಾಂಟ್ ]

**ಮಾತು$_2$** (ನಾ). [ಸಂಗೀತ] ಹಾಡಿನ ಸಾಹಿತ್ಯದಲ್ಲಿ ಬಳಕೆಯಾಗುವ ಅಕ್ಷರ; ▶ "ಹಾಡಿನಲ್ಲಿರುವ ಮಾತುಗಳಿಗೆ ಮಾತು ಎಂದೂ ನಾದಾಂಶ ಮತ್ತು ಲಯಾಂಶಗಳ ಸಮಷ್ಟಿಗೆ ಧಾತುವೆಂದೂ ಸಂಗೀತಶಾಸ್ತ್ರದಲ್ಲಿ ಪರಿಭಾಷೆ. ಮಾತು ಎಂಬ ಕನ್ನಡಶಬ್ದವು ಈ ಶಾಸ್ತ್ರದಲ್ಲಿ ಪಾರಿಭಾಷಿಕಸಂಜ್ಞೆಯನ್ನು ಪಡೆದಿದೆ" (ಕಸಂಶ್ರ. ೭೦ ಅಡಿಟಿ) : ಆ ಖಂಡಗಳಲ್ಲಿ ಧಾತುವು ಒಂದೇ; ಆದರೆ ಮಾತುವು ಬೇರೆಬೇರೆಯಾಗಿರುತ್ತದೆ. ಧಾತುವೆಂದರೆ ಸ್ವರವೆಂದು ಹೇಳಿದೆ. ಮಾತು ಎಂದರೆ ಅಕ್ಷರವೆನ್ನಲಾಗಿದೆ (ಕಸಂಶ್ರ. ೦೦೨). [ಸಂ.]

**ಮಾತು$_3$** (ನಾ). ೧. ಅದ್ಭುತವಾದ ಕೆಲಸ,—ಕಾರ್ಯ : (೬). ೨. ವಿಷವನ್ನಾಗಲೀ ರೋಗವನ್ನಾಗಲೀ ನಿವಾರಿಸುವ ಮದ್ದು : ವಿಷಹಾರಿ.

[ ←ಅರ. ಹಿಂ. ಮರಾ. ಮಾತ್ ]

**ಮಾತುಂಗುಟ್ಟು, ಮಾತುಗುಟ್ಟು** (ಕ್ರಿ). ಪರಸ್ಪರ ಸಂಭಾಷಿಸು,— ಅಲಾಪಿಸು : ಪುದುಂಗೊಳಿಸಿದಂ ಪುದುಗೊಳಿಸಿದಂ; ಮಾತುಂಗುಟ್ಟಿದಂ, ಮಾತುಗುಟ್ಟಿದಂ (ಕಮದ. ೦೩೭ ಪ್ರಯೋ). **ಮಾತುಗುಟ್ಟು** : ಬೂತುತನಂ ಪೆಱಗಾಗೆ ಮಾತುಗುಟ್ಟಿದಪಳೆ (ಲೀಲಾವ. ೨-೧೧೧) ; ಹುಸಿವನ ಮಾತುಗುಟ್ಟದಿರು ಲೋಬನ ಮಾತನಡಂಗಿಸಾಱದಿರೆಯೊಳ್ಕುಸಿವನ ಮಾತುಗೇಳದಿರು (ಕಇ. I. ೨೫-೪೭ ; 1186); ಇಂತರಸನರಸಿವೆರಸು ಸಂಸ್ಕೃತಿಯೊಂದು ಬಾಟಿಸ್ಗಿಡಂ ಕುಱಿತು ಮಾತುಗುಟ್ಟುತಿರ್ದಂ ಬಿದುರ್ಣಿಸಂ ಮದರ್ಣಿಸೆಂಬಂತಿರುಂಡು ಸೆಜ್ಜೆವನೆಗೆ ಪವಡಿಸಲ್ಕೆಂದು ಪೋದಂ (ರಾಜಶೇ. ೭೫-೦೨); ಸಂತೋಷೋತ್ಸಾಹಗಳಿಂದ ಮಾತುಗುಟ್ಟುತ್ತಿರುವ ಯುವರಾಜ ಶ್ರೀರಾಜಬಿಡೆಯನನ್ನೊಡಗೂಂಡು. ಬೆಟ್ಟದ ಅರಸುವಿನ ಪ್ರವೇಶ (ಬೆಟ್ಟಅ. ೦೮-೦೮). [ ಮಾತು$_1$ + ಕುಟ್ಟು$_1$ ]

**ಮಾತುಕೇಳು** 'ಮಾತುಗೇಳ್' ನೋ.

**ಮಾತುಕೊಡು, ಮಾತುಗುಡು** (ಕ್ರಿ). ಭಾಷೆಯನ್ನು ಕೊಡು : ವಾಗ್ದಾನ ಮಾಡು : ಆಚಾರ್ಯರಿಗೆ ನಾನೇ ತಮ್ಮ ಪರವಾಗಿ ಮಾತು ಕೊಟ್ಟು ಬಂದಿರುವೆನು (ದಾಪಶಂ. ೦೩೮) ; ಅಪೂರ್ವನ ಮದುವೆಯ ಸಂಬಂಧವಾಗಿ ನೀನು, ಯಾರಿಗೂ ಮಾತುಕೊಡಬೇಡ (ಚಾರಿತ್ರ. ೦). **ಮಾತುಗುಡು** : ಅವರ್ ಮಾತುಗುಡದಿರೆ ಕುಮಾರಿ ಪ್ರಿಯದತ್ತ ಸೆಟ್ಟಿ

ಮೊದಲಾಗೆ ಬಂಧುಗಳೆಲ್ಲರುಮನೊಡಂಬಡಿಸಿ . . . ಜಿನದೀಕ್ಷೆಯಂ ಕೈಕೊಂಡು (ರಮೋಪು. ೩-೨೬೨). [ಮಾತು$_1$ + ಕೊಡು$_1$]

**ಮಾತುಗ** (ನಾ). = ಮಾತಿಗ : ಮಾತುಗಂ, ಬೂತುಗಂ (ಶಮದ. ೨೦೦ ಪ್ರಯೋ); ಏವಂ ಮಾತುಗಂ, ಮಾತುಪಣಿಗಂ (ಶಬ್ದಮ. ೪೦೫ ಪ್ರಯೋ). [ಮಾತು$_1$ + – ಗ$_2$]

**ಮಾತುಗಂಟಿ$_1$** (ನಾ). ಅತಿಯಾಗಿ ಮಾತನಾಡುವವಳು ; ಹರಟೆಮಲ್ಲಿ : ಮಾತುಗಂಟಿಯಾದ ಅವಳನ್ನು ಮಾತನಾಡಿಸಲು ಎಲ್ಲರೂ ಹಿಂಜರಿಯುತ್ತಾರೆ (ಲೂ). [ಮಾತು$_1$ + – ಗಂಟು$_2$ + – ಇ$_2$]

**ಮಾತುಗಂಟಿ$_2$** (ನಾ). ೧. ಅತಿಯಾಗಿ ಮಾತನಾಡುವವನು ; ಹರಟೆ ಮಲ್ಲ: ಪಶು ಪಾಷಂಡಿ ಚಾರ್ವಾಕ ಮಾತುಗಂಟಿ ಏಷ್ಟನಾಡಿದರೂ ಶಿವಯೋಗಸಂಬಂಧಸಂಪನ್ನನೊಪ್ಪುವನೆ (ಸಕವ. II. ೩೦೧–೮೦). (ಗು). ೨. ಅತಿಯಾಗಿ ಮಾತನ್ನಾಡುವ : 'ಮಾತುಗಂಟಿತನ' ಪರಾ. [ಮಾತು$_1$ + – ಗಂಟು$_2$ + – ಇ$_3$]

**ಮಾತುಗಂಟಿತನ** (ನಾ). ಅತಿಯಾಗಿ ಮಾತನ್ನಾಡುವ ಸ್ವಭಾವ: ಯಾಚಕ ಮಾತುಗಂಟಿತನದಿಂದ ವಸ್ತುಭಾವದ ನಿಹಿತವನರಿಯದೆ ವಾಗ್ವಾದಕ್ಕೆ ಗೆಲ್ಲ ಸೋಲಕ್ಕೆ ಹೋರುವಲ್ಲಿ ಇಹಪರ ಉಭಯದಲ್ಲಿಗೆ ದೂರ (ಮೋಕಮ. ೦೩೯–೩೩೨); ಮಾತುಗಂಟಿತನದಿಂದ ಎಷ್ಟು ಮಾತನಾಡಿದಡೇನು (ಸಕವ. I. ೩೯೬–೨೩). [ಮಾತುಗಂಟಿ$_2$ + — ತನ]

**ಮಾತುಗಳ್ಳ** (ನಾ). ಕೊಟ್ಟ ಭಾಷೆಗೆ ತಪ್ಪುವವನು; ಸುಳ್ಳ : ನಾನು . . . ಆಡಿ ತಪ್ಪುವ ಕ್ಷುದ್ರಬುದ್ಧಿಯ ಕಿರುಕುಳನಲ್ಲ–ಮಾತುಗಳ್ಳನಲ್ಲ (ಮಂತ್ರಶ. ೪೦-೦೯). [ಮಾತು$_1$ + ಕಳ್ಳ$_1$]

**ಮಾತುಗಾತಿ** (ನಾ). ಬಹಳ ಮಾತನ್ನಾಡುವವಳು ; ಹರಟೆಮಲ್ಲಿ : ಓಹೋಹೋ. ಮಾತುಗಾತಿ, ಮಾಟಗಾತಿ. ಬಾ ಊಟಕ್ಕೆ ಬಡಿಸು(ಬೆಳುವ. ೦೨೩). [ಮಾತು$_1$ + – ಕಾತಿ$_5$]

**ಮಾತುಗಾರ** 'ಮಾತುಗಾಱ' ನೋ.

**ಮಾತುಗಾರಿಕೆ** 'ಮಾತುಗಾಱಿಕೆ' ನೋ.

**ಮಾತುಗಾರ್ತಿ** (ನಾ). ಮಾತು ಬಲ್ಲವಳು ; ವಾಚಾಳಿ : (ಕ). [ಮಾತುಗಾರ (< ಮಾತುಗಾಱ) + – ತಿ$_1$ (< – ಇತ್ತಿ)]

**ಮಾತುಗಾಱ**, ಮಾತುಗಾರ(ನಾ). ೧. ಅತಿಯಾಗಿ ಮಾತನ್ನಾಡುವವನು; ಹರಟೆಮಲ್ಲ : 'ಮಾತುಗಾಱತನ' ಪರಾ. ೨. ಚೆನ್ನಾಗಿ ಮಾತನ್ನಾಡುವವನು ; ವಾಗ್ಮಿ : (ಕ). **ಮಾತುಗಾರ** : ೧. ಆ ಮಾತುಗಾರನ ಹತ್ತಿರ ಕುಳಿತುಕೊಳ್ಳಲು ಯಾರೂ ಇಷ್ಟಪಡುವುದಿಲ್ಲ (ಲೂ). ೨. ಅವನು ಒಳ್ಳೆಯ ಮಾತುಗಾರ (ಲೂ). [ಮಾತು$_1$ + – ಕಾಱ]

**ಮಾತುಗಾಱತನ** (ನಾ). ಅತಿಯಾಗಿ ಮಾತನ್ನಾಡುವಿಕೆ ; ಗಳಹುವಿಕೆ ; ಮಾತುಗಾ[ಪಾಠಾಂ. ಕಾ]ಱತನದಲುಲಿವ ಪಲಮಾತವೇತಕೆ ನಾವು ಹೇಳಿದ ಮಾತನಾಲಿಸಿ ಮಾಡಬೇಹುದು ಮಕ್ಕಳಾದವರು (ಐಸಭೃ. ೩-೩೬). [ಮಾತುಗಾಱ + – ತನ]

**ಮಾತುಗಾಱಿಕೆ**, ಮಾತುಗಾರಿಕೆ (ನಾ). ೧. = ಮಾತುಗಾಱತನ : ಪೇತೆ ನೀನೇಸು ದೊಡ್ಡಿತು ನನ್ನ ಸರಲ ಮುಯ್ಯಾತುಕೊಂಬೊಡೆ ರುದ್ರ ಗರಿದು ಮಾತುಗಾಱಿಕೆ ಬೇಡ ಹಿಡಿಯೆಂದು ಭಾಳದೆ ತೂತೇಳಲೆಚ್ಚು ಬೊಬ್ಬಿರಿದ (ವೀರಹತ. ೦೨-೩೯). ೨. ವಾದ ; ತರ್ಕ ; ಚರ್ಚೆ: ಮಾತುಗಾಱಿಕೆಯಿಂದಲವರಿವರ ಸೋಲಿಸಿದ ಗೌತಮನ ಬರಹೇಳೊ (ವೀಕೃಕ. ೯-೦೨-೨೮). **ಮಾತುಗಾರಿಕೆ**: ೩. ಮಾತಾಡುವ ರೀತಿ: ಅವಳು ಮಾತುಗಾರಿಕೆಯಲ್ಲಿ ಬಹಳೇ ನಿರ್ಭಿಡೆ ಸ್ವಭಾವದವಳು (ಅಕಪಾ.೨೩೯); ಇವರ ಮಾಮಾಶಿಯ ಮಾತುಗಾರಿಕೆಯು . . . ರಸವರ್ಜ್ಯ ಸತ್ಕಲೋಕದ ಶುಭ್ರತೆಯನ್ನು ಸೇರುವವು (ಚಿತ್ರಾಪಂ. ೯೯). [ಮಾತುಗಾಱ + – ಇಕೆ]

**ಮಾತುಗಿ** (ನಾ). = ಮಾತುಗಾರ್ತಿ: ಮಾತುಗಿ, ಮಾತುಗಿತಿ; ಬೂತುಗಿ, ಬೂತುಗಿತಿ (ಶಬ್ದಮ. ೦೯೩ ಪ್ರಯೋ). [ಮಾತುಗ + – ಇ$_2$]

**ಮಾತುಗಿತಿ** (ನಾ). = ಮಾತುಗಾರ್ತಿ : ಮಾತುಗಿ, ಮಾತುಗಿತಿ ; ಬೂತುಗಿ, ಬೂತುಗಿತಿ (ಶಬ್ದಮ. ೦೯೩ ಪ್ರಯೋ). [ಮಾತುಗ + — ಇತಿ$_1$ (< — ಇತ್ತಿ)]

**ಮಾತುಗುಟ್ಟು** 'ಮಾತುಂಗುಟ್ಟು' ನೋ.

**ಮಾತುಗುಡು** 'ಮಾತುಕೊಡು' ನೋ.

**ಮಾತುಗುಳಿ**, ಮಾತುಗೂಳಿ (ಗು). ಚೆನ್ನಾಗಿ ಮಾತನ್ನಾಡುವ,– ಸಂಭಾಷಿಸುವ : ಮಾತುಗುಳಿ ತರುಣ ನೆಕ್ಕಲ್ದೋವನ ಪಕ್ಕದಲ್ಲಿ ಮೆಟ್ಟಲಿಳಿಯುತ್ತ . . . ನುಡಿದನು (ಕೃಸರು. ೨೪೪) ; ಆತ ಒಳ್ಳೆ ಮಾತುಗುಳಿ ಚತುರ (ಶ್ರೀಮಶ್ರ. ೨೩). **ಮಾತುಗೂಳಿ**: ಅವನ ಕರುಣೆ ಯಿರದ ಮಾತುಗೂಳಿ ಜಿಹ್ವೆಯಿದ್ದು ಇಲ್ಲದಂತೆ ಉಗ್ಗುತಿರುವನು (ತಂತಪ. ೩೦-೧೪). [ಮಾತು$_1$ + — ಗುಳಿ$_2$ (< — ಕುಳಿ$_3$)]

**ಮಾತುಗೂಳಿ** 'ಮಾತುಗುಳಿ' ನೋ.

**ಮಾತುಗೆಡು** (ಕ್ರಿ). ನುಡಿಯುದಂತಾಗು ; ಮೂಕವಾಗು : ಆದಿತ್ಯನ ಸಾರಥಿ ಬೆಱಗಾದಂ ಮಾತಲಿ ಮಾತುಗೆಟ್ಟಂ ಧುರದೊಳ್ ಚೋದಿಸೆ ಹರಿಯುಂ ಶಲ್ಯನುಮಾದರದಿಂ ನರನ ದಿನಪತನಯನ ರಥಮಂ (ಕಂಪಶ. ೦೨-೦೬೨). [ಮಾತು$_1$ + ಕೆಡು$_1$]

**ಮಾತುಗೇಳ್**, ಮಾತುಕೇಳು (ಕ್ರಿ). ನುಡಿಗೆ ಒಡಂಬಡು ; ಸಮ್ಮತಿಸು : ಪೊಂದರುತಿರೆ ಗಂಡಂ ಸಾಯೆಂದಡೆ ಜೀಯೆಂದು ಪೇೞ್ದೊಡಂ ಮಾಡುವರಿಂತೊಂದುದಿನ ಬೀಯಮಿಲ್ಲದೊಡಂದಾಗಳ್ಮಾತುಗೇಳರಜಿನಂ ಮುಱಿವರ್ (ಸಮುಕ. ೩-೦೦೦). **ಮಾತುಕೇಳು** : ಕೈಮೀಱಿ ಹೋದ ಮಾತಿಗೆ ಹುಡುಕಾಡಬಾರದು ಮಾತುಕೇಳದ ಮಕ್ಕಳ ಹೆಸರ ತೆಗೆಯ ಬಾರದು (ಕುರಂದ. ೨-೩೯ ಪಲ್ಲವಿ). [ಮಾತು$_1$ + ಕೇಳ್]

**ಮಾತುದೆಗೆ** (ಕ್ರಿ). ಸಂಭಾಷಣೆಗೆ ತೊಡಗು : ಇಂದಿನಿರುಳೊಳು ಮಹೇಶ್ವರಪೂಜಾಮಹೋತ್ಸವಮಂ ನೋಡಲ್ವೇಟ್ಕುಮೆಂದು ಪೋಗಿವಂದಪೆನೆ ನಗನುಜ್ಞೆಯಂ ಕುಡಿಮೆಂಬ ನೆವದೆ ಮಾತುದೆಗೆಯೆ (ಜಗಂ. ೦೩-೩ ವ). [ಮಾತು$_1$ + ತೆಗೆ$_1$]

**ಮಾತುದೋಱು** (ಕ್ರಿ). ೧. ಸಂಭಾಷಿಸು ; ಮಾತನಾಡು : ಪಾ ತರುಣಿ ನಳಿನಾಕ್ಷಿ ನಯಸುಪ್ರೀತಿಪೂರ್ವಕದಿಂದ ಕನಸಲಿ ಮಾತುದೋಱಿದೆ ಬಂದು ನನ್ನಲಿ ಕರುಣದಿಂ ನೀನು (ಪಳಕ. ೭-೯). ೨. ಅಭಿವ್ಯಕ್ತಿಗೆ ತಕ್ಕ ಶಬ್ದಗಳು ತೋರು : ಮಾತುದೋಱದು ಹೆಚ್ಚಿದಾನಂದಾತಿರೇಕಕೆ ಚಿತ್ತ ನೆಱೆಯದು (ಕುಮಾರಸ್ವಾ. ೦೩–೨). [ಮಾತು$_1$ + ತೋಱು]

**ಮಾತುಪರ** 'ಮಾತ್ಪರ್' ನೋ.

**ಮಾತುಭರಿ** 'ಮಾತ್ಪರ್' ನೋ.

**ಮಾತುಭಾರ** 'ಮಾತ್ಪರ್' ನೋ.

**ಮಾತುಭಾರಿ** 'ಮಾತ್ಪರ್' ನೋ.

**ಮಾತುಭಾರಿಕೆ** (ನಾ). ದೊಡ್ಡಸ್ತಿಕೆ ; ಪ್ರತಿಷ್ಠೆ : ಅವರ ಮಾತುಭಾರಿಕೆ, ಜಬರ್ಗಳು ಅಂಥದಿರಬೇಕು (ಮೂಕಶ. ೩೦). [ಮಾತುಭಾರ (<ಮಾತ್ಪರ್) + – ಇಕೆ]

**ಮಾತುರ** (ನಾ). ೧. ಅಳತೆ ; ಪ್ರಮಾಣ : ಮಾತ್ರ – ಮಾತುರ, ಮುಕ್ತಿ – ಮುಕುತಿ (ಶಮದ. ೨೩೪ ಪ್ರಯೋ) ; ಎರಡು ಎಂಟು ಪರಿಮಿತ ವಾದ ಮಾತುರತನಕ ರೇಚಕ ಆ ತರುವಾಯದಲಿ ಮೂವತ್ತೆರಡು ಮಾತುರತನಕ ವರಪೂರಕ (ಎಪಾಸು. ೨-೨). ೨. ಅಷ್ಟು ; ಆ ಪರಿಮಾಣ : ಎನ್ನ ಮೇಲಪರಾಧ ಲೇಶಮಾತುರಯಿಲ್ಲ ಅನ್ಯಾಯದವನಲ್ಲ ನಾನು ದೇವ (ಪೋಕ್ಷದೀ. ೨೦-೪) ; ಭಂಗ ಬಂದಡೆಸಿತೀ ನಗರಕ್ಕೆ ಕೇಳು ಕಪಿ

ಪುಂಗವನೆ ನಿನ್ನಿಂದಮಾನಳಿದ ಮಾತುರದಿ ಮುಂಗಡೆಯುಲೀ ರಾಜಧಾನಿ ವಶಮಾಯ್ತು ನಿನಗೆ (ತೊರಾ. ೩-೦೯-೨೩). [<ಸಂ. ಮಾತ್ರಾ]

**ಮಾತುಲ, ಮಾತುಳ** (ನಾ). ೧. ತಾಯಿಯ ಸಹೋದರ ; **ಸೋದರ ಮಾವ** : "ಮಾತುಲಃ, ಮಾತುಭ್ರಾತಾ – ಸೋದರಮಾವನ ಹೆಸರು" (ಸಿದ್ಧಾಂತಿ. ೦೬೬); ಅರ್ಜುನನು ಆ ಸೈನ್ಯಗಳಲ್ಲಿ ಪಿತೃಗಳು, ಪಿತಾಮಹರು, ಆಚಾರ್ಯರು, ಮಾತುಲರು . . . ಆಪ್ತರು ಇವರನ್ನು ನೋಡಿದನು (ಶಾತತ್ತ್ವ. ೦೦೨); ಮಾತುಲಗೃಹದಿ, ಲಲಿತಸುಖದ ನಿದ್ರಾರತಿಯು . . . ವಕ್ಷದೊಳ್ ಪಟ್ಟಿರ್ದ ಭರತದೇವಂ ದುಃಖಸ್ವಪ್ನಭೀತಿಯಿಂ ಬೆಚ್ಚಿ ಬೆಬ್ಬಳಿಸೆದ್ದು ನೋಡಿದನ್ (ಶ್ರೀರಾಮಪಾ. ೦೦೩-೬೯). ೨. ದತ್ತೂರದ ಗಿಡ : "ಉನ್ಮತ್ತಃ . . . ಮಾತುಲಃ, ಮದನಃ – ೬ ಉಮ್ಮತ್ತೀಗಿಡದ ಹೆಸರುಗಳು" (ಸಿದ್ಧಾಂತಿ. ೦೩೦). **ಮಾತುಳ** : ೧. "ಮಾತುಳನೆನಲ್ಕೆ ಸೋದರಮಾವನಕ್ಕು" (ಮಂಗರಾ. ೯೨-೧೩) ; ಕುಶಳಮೆ ಮಾತುಳಂಗೆ ಜಯವರ್ಮನೃಪಂಗೆ (ಪುಷ್ಪ. ೬-೩೮) ; ನಿನಗೆ ಮಾತುಳರಾವು ಮಾಣಲಿ ಮುನಿಜನಂಗೆ ಮೊಜ಼ಿಯಲ್ಲ ದುಶ್ಯಾಸನ ಜಯದ್ರಥರಲ್ಲಲಾ ಸಂಬಂಧಿಗಳು ನಿನಗೆ (ಕುಮಾ.ಭಾ. ೩-೩೩). [ಸಂ.]

**ಮಾತುಲಂಗ, ಮಾತುಳಂಗ** (ನಾ). ಒಂದು ಬಗೆಯ ಮರ ಮತ್ತು ಹುಳಿಹಣ್ಣುಗಳ ಜಾತಿಗೆ ಸೇರಿದ, ದಪ್ಪತಿರುಳೂ ದೊಡ್ಡ ಗಾತ್ರವೂ ಇರುವ ಅದರ ಹಣ್ಣು ; ಮಾದಳ ; ಸಕ್ಕರೆನಿಂಬೆ : "ಲುಂಗ – ಮಾತುಲಂಗ" (೬೩೦. ೦೯೩). **ಮಾತುಳಂಗ** : "ಕೂರಳೊಳಾಭರಣದೊಳು . . . ಮಾತುಳಂಗದೊಳು ನಿರುತದಿಂ ರುಚಕಮಕ್ಕು" (ಮಂಗರಾ. ೦೩೨-೩೯); ಒಂದು ಫಲವದು ಮಾತುಳಂಗವದೊಂದು ಫಲವದು ತಿಂತ್ರಿಣೀಕವು (ಐಸಪು. ೦೯-೬೬). 'ಮಾತುಲುಂಗ' ಪರಾ. [ಸಂ.]

**ಮಾತುಲಂಗಕ** (ನಾ). = ಮಾತುಲಂಗ : ಗುಡ ಮಾತುಲಂಗಕವು ಪೊಡವಿಯೊಳಗೆಸದಿಕ್ಕು ಒಡಗೂಡೆ ಬಿಸಿನಿರಸದೊಡನೆ ಬಡತನವಡಗಿ ಸಿರಿ ಬಕ್ಕು (ಸರ್ವಜ್ಞ. ೦೯೬೩). 'ಮಾತುಲುಂಗಕ' ಪರಾ. [ಸಂ.]

**ಮಾತುಲಕ** (ನಾ). = ಮಾತುಲ ೧ : "ಅಂಬಿಕೆಯ ಸೋದರಂ ಮಾತುಲಕಂ" (ಮಹಾಕೋ. ೩೩-೨೦). [ಸಂ.]

**ಮಾತುಲಪುತ್ರಕ** (ನಾ). ೧. ತಾಯಿಯ ಒಡಹುಟ್ಟಿದವನ ಮಗ ; ಸೋದರಮಾವನ ಮಗ. ೨. ದತ್ತೂರದ ಕಾಯಿ : ಮಾತುಲಪುತ್ರಕಃ . . . ಮದ್ದುಗಳಿಗೂ ಶಕುನಕ್ಕೂ ಉಪಯೋಗಿಸಲ್ಪಡುತ್ತ (ಸಿದ್ಧಾಂತಿ. ೦೩೦). [ಸಂ.]

**ಮಾತುಲಾನಿ, ಮಾತುಳಾನಿ** (ನಾ). ೧. ತಾಯಿಯ ಒಡಹುಟ್ಟಿದವನ ಹೆಂಡತಿ ; ಸೋದರತ್ತೆ : "ಮಾತುಲಾನೀ, ಮಾತುಲೀ–೨ ಸೋದರಮಾವನ ಹೆಂಡತಿಯ ಹೆಸರುಗಳು" (ಸಿದ್ಧಾಂತಿ. ೦೬೩). ೨. ಸೆಣಬಿನ ಗಿಡ. ೩. ಒಂದು ಬಗೆಯ ದ್ವಿದಳಧಾನ್ಯ. **ಮಾತುಳಾನಿ** : ೧. ಮಾತುಳಂಗಂ ಮಾತುಳಾನಿಗಂ ತುಟಿಲ್ಗೆಯ್ವುದಂ (ಪುಷ್ಪ. ೬-೪೯ ವ) ; ಮಾತುಳಾನಿಯ ಸುತಗೆ ವೈವಾಹಮಾಡಿತ್ತರವಳ ತಾಯ್ತಂದೆಗಳು ಪುರುಷನಾಥನು ಎಂಬಗೆ (ಶ್ರೀರಾ. ೦೨-೦೨). ೪. ತಂದೆಯ ತಂಗಿ : "ಪಿತನ ಸಹಜಾತ ನಿಜಮಾತುಳಾನಿಯೆನಿಕ್ಕು" (ಮಂಗರಾ. ೯೨-೦೩). [ಸಂ. ಮಾತುಲಾನೀ]

**ಮಾತುಲಾಹಿ** (ನಾ). ೧. ಒಂದು ಬಗೆಯ ಹಾವು : "ಕೇರೆ" (ನಾಶರಾ. ೪). ೨. ಹಾವಿನ ಜಾತಿಗೆ ಸೇರಿದ ಒಂದು ಬಗೆಯ ಹುಳು : "ಮಾಲುಧಾನಃ, ಮಾತುಲಾಹಿಃ–೨ ಊಸರವಳ್ಳಿಹಾವು, ವಿಷಗಿಡದ ಹುಳ, ಉಮ್ಮತದ ಹುಳ. ಇದು ಬಿಟ್ಟಾಂಗದ ಆಕಾರವಾಗಿಯೂ ದೀರ್ಘದೇಹವಾಗಿಯೂ ಉದ್ದವಾದ ಬಾಲವುಳ್ಳದ್ದಾಗಿಯೂ ನಾಲ್ಕುಕಾಲುಗಳುಳ್ಳದ್ದಾಗಿಯೂ ಇರುವುದು" (ಸಿದ್ಧಾಂತಿ. ೬೨). [ಸಂ.]

**ಮಾತುಲಿ** (ನಾ). = ಮಾತುಲಾನಿ ೧ : "ಮಾತುಲಾನೀ, ಮಾತುಲೀ–೨ ಸೋದರಮಾವನ ಹೆಂಡತಿಯ ಹೆಸರುಗಳು" (ಸಿದ್ಧಾಂತಿ. ೦೬೩). [ಸಂ. ಮಾತುಲೀ]

**ಮಾತುಲುಂಗ, ಮಾತುಳುಂಗ** (ನಾ). = ಮಾತುಲಿಂಗ : ಸಿತದೂರ್ವಾಂಕುರ ಮಾತುಲುಂಗ ಸಳಿನೀಭೃಂಗಾರಗೋರೋಚನಾಕ್ಷತವಧ್ವಾದಿ ವಿಡಂಬ ಮಂಗಳದೊಳೇಂ (ಆದಿಪು. ೦೩-೦೦); ನವಫಲಂಗಳಿಂ ನೆಜ಼ೆದೊಪ್ಪುವ ಮಾತುಲುಂಗದ ಪೊದಜುಗಳುಮಂ . . . ಕ್ರೂರಮೃಗನಿವಹಮುಮಂ ಕಂಡು (ಶಂಕತೊ. ೦೦೬–೧೩): ಹುಡುಗನು ಮಾತುಲುಂಗವನ್ನು ಹಿಡಿದು ಶುಕದ ಕಡೆ ತೋರಿಸುತ್ತಿರುವವು (ಪೊಯ್ಸಳ. ೨೮). **ಮಾತುಳುಂಗ** : ದೂರ್ವಾಂಕುರ ಮಾತುಳುಂಗ ಶೃಂಗಾರದರ್ಪಣ ಪೂರ್ಣಕಳಶ ಕಳಮಾವೃತಕರ ಪಲ್ಲವೆಯರಪ್ಪ ಪುರಂಧ್ರಿಯರುಂ . . . ಇದಿರ್ವಂದು ಮೆಯ್ಸಿಕ್ಕೆ (ಶಂಕಪಾ. ೩-೨ ವ) ; ಪಸಿಯಡಕೆಗಳಂ ಮಾವಿನ ರಸವಣ್ಣಳನತುಳಮಾತುಳುಂ[ಗಾಣಾಂ. ೪೦]ಗದ ಫಳಮಂ ವಸುಧೀಶಂಗೊಲಿದಿತ್ತಂ ವಸಂತಚರನಂತೆ ಋತುನಿವೇದಕನೊರ್ವಂ (ಪುಷ್ಪ. ೧-೪೦). [ಸಂ.]

**ಮಾತುಲುಂಗಕ** (ನಾ). = ಮಾತುಲಂಗ : "ಫಲಪೂರಕಃ, ಬೀಜಪೂರಕಃ, ರುಚಕಃ, ಮಾತುಲುಂಗಕಃ – ೪ ಮಾದೀಗಿಡ, ಮಾದಾಳದ ಗಿಡ" (ಸಿದ್ಧಾಂತಿ. ೦೩೦). [ಸಂ.]

**ಮಾತುವಣಿಗ** (ನಾ). ಮಾತುಗಂಟಿ ; ಹರಟೆಮಲ್ಲ : ಮಾತುಗಂ, ಮಾತುವಣಿಗಂ ; ಬೂತುಗಂ, ಬೂತುವಣಿಗಂ (ಶಬ್ದಾನು. ೪೧೩ ಪ್ರಯೋ).

[ಮಾತು$_1$ + –ವಣಿಗ$_2$]

**ಮಾತುವಲ್ಲಹ** (ನಾ). ನುಡಿಯ ಅಧಿದೇವತೆಯಾದ ಸರಸ್ವತಿಯ ಒಡೆಯ ; ಬ್ರಹ್ಮ : ಆಗಮವಿಭಕ್ತಿಗಳ ಲೋಪಕ್ಕೆ – ಮಾತುವಲ್ಲಹಂ ; ನೂಜಿ ಪತ್ತು ; ತೆಂಕವಕ್ಕಂ (ಶಮದ. ೦೬೩ ಪ್ರಯೋ).

[ಮಾತು$_1$ + ಬಲ್ಲಹ$_1$]

**ಮಾತುವೆಣ್** (ನಾ). ನುಡಿಯ ಅಧಿದೇವತೆ: ಸರಸ್ವತಿ : 'ಮಾತುವೆಣ್ಣರಸ' ಪರಾ. [ಮಾತು$_1$ + ಪೆಣ್]

**ಮಾತುವೆಣ್ಣರಸ** (ನಾ). ಸರಸ್ವತಿಯ ಒಡೆಯ ; ಬ್ರಹ್ಮ : ಮಾತುವೆಣ್ಣರಸ ಮುನಿನಿಕರ ದಿಕ್ಪಾಲ ಗಿರಿಜಾತೆಯಾಣ್ಮನ ಸುಳುಹ ಸ್ವಪ್ನದೊಳ್ ಕಾಣ್ಬುದಿಪರೀತವೆಂದುಚ್ಚರಿಪ ವೇದಸಾಕ್ಷಿಗಳದಂತಿರಲಿ (ಶ್ರೀರಾ. ೬-೩೨).

[ಮಾತುವೆಣ್ + ಅರಸ$_1$]

**ಮಾತುವೆಣ್ಣೆಱೆಯ** (ನಾ). = ಮಾತುವೆಣ್ಣರಸ : ಪಲಗಣ್ಣ ಕಾರೊಡಲ ಮಾತುವೆಣ್ಣೆಱೆಯರುಂ . . . ರಕ್ಷಿಸುಗೆ ಬಿಡದೆಮ್ಮನು (ರಾಶತ. ೦-೪).

[ಮಾತುವೆಣ್ + ಎಱೆಯ]

**ಮಾತುಹಾರಿಸು** (ಕ್ರಿ). ಮಾತಿನ ಜಾಡನ್ನು ಬಿಟ್ಟುಹೋಗು ; ವಿಷಯವನ್ನು ಬದಲಿಸು, – ಮರೆಮಾಡು : ಕ್ಷೇಮ ವಿಚಾರಿಸಿದಾಗ ಬಾಯಿಗೆ ಬಂದಂತೆ ಏನೇನೊ ಮಾತುಹಾರಿಸಿದರು (ಶಾವೇಂ. ೯೯) ; ರಾಮಣ್ಣನಿಗೆ ಬಾಯಾರಿಕೆ ಕೊಟ್ಟಿಯೇನು ? . . . ಎಂದು ಮಾತುಹಾರಿಸಿದ್ದರು (ಪಾತ್ರ. ೪). [ಮಾತು$_1$ + ಹಾರಿಸು ( < ಪಾಱಿಸು)]

**ಮಾತುಳ** 'ಮಾತುಲ' ನೋ.

**ಮಾತುಳಂಗ** 'ಮಾತುಲಂಗ' ನೋ.

**ಮಾತುಳಾನಿ** 'ಮಾತುಲಾನಿ' ನೋ.

**ಮಾತುಳುಂಗ** 'ಮಾತುಲುಂಗ' ನೋ.

**ಮಾತೃ** (ನಾ). ೧. ತಾಯಿ ; ಜನನಿ : "ಜನನಿ ಸವಿತ್ರಿ ಮಾತೃ ಸುಮತಾಯವ್" (ಮಹಾಕೋ. ೩೪-೦೬) ; ಮಾತೃಪಿತೃಬಂಧುಗೋತ್ರಜಭೀತಿಯೊಳಬ್ಬಾಕ್ಷಿ ಕಾಂತಿಮತಿ ಪೆತ್ತ ತನೂಜಾತನಂ . . . ಶ್ಮಶಾನದೊಳ್ ಬಿಸುಟ್ಟು ಬಾಯೆಂದೊಡೆ (ದಶಕು. ೯-೪೦). ೨. ಹಸು ; ಗೋವು. ೩. = ಮಾತೃಕೆ$_1$ ೨. ೪. ಲಕ್ಷ್ಮಿ. ೫. ದುರ್ಗೆ. ೬. ಆಕಾಶ. ; ಗಗನ.

೭. ಭೂಮಿ. ೮. ಪುಷ್ಯಮಾಸದ ಹುಣ್ಣಿಮೆ. ೯. 'ಅ' ಕಾರ ಮೊದಲಾದ ಅಕ್ಷರ. [ಸಂ.]

**ಮಾತೃಕ** (ನಾ). ಜೀವಕಣಗಳ ನಡುವೆ ಇರುವ ದ್ರವ್ಯ : ಈ ಕಣಧಾತುವಿನ ಜೀವಕಣಗಳಿಂದ ಸ್ರವಿಸುವ ಒಂದು ಬಗೆಯ ಮಾತೃಕದಲ್ಲಿ (Matrix) ಜೀವಕಣಗಳು ಹುದುಗಿರುತ್ತವೆ (ಪ್ರಾಣಿಶಾ. ೯೦.) [ಸಂ. ಮಾತೃಕಾ]

**ಮಾತೃಕಾಕ್ಷರ** (ನಾ). ೧. 'ಅ' ಕಾರದಿಂದ 'ಅಃ' ವರೆಗಿನ ಸ್ವರವರ್ಣ; ಮೂಲವರ್ಣ. ೨. (ಅಲಂ) ಮೊದಲನೆಯವನು : ಭೀತಿಗೊಂಡನು ದ್ರೋಣ ಸೋಲಿಕೆ ಕೇತುವಾದನು ಶಲ್ಯನಪಜಯ ಮಾತೃಕಾಕ್ಷರನಾದನಶ್ವತ್ಥಾಮನಿಂದಿನಲಿ (ಕುಮಾವ್ಯಾ. ೦೬-೦೩). [ಸಂ.]

**ಮಾತೃಕೆ₁** (ನಾ). ೧. ತಾಯಿ ; ಜನನಿ. ೨. ಸ್ಕಂದನನ್ನು ಲಾಲಿಸಿದ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ ಎಂಬ ಏಳುಜನ ಮುಖ್ಯದೇವತೆಯರು: "ಚಾಮುಂಡಿ ಕರ್ಣಮೋಟಿ ಮಹಾಮಾಯಾಮೂರ್ತಿ ಚರ್ಚಿಯುಂ ಭೈರವಿಯಾ ನಾಮಮಿವಕ್ಕುಂ ಬ್ರಹ್ಮಾಣೀಮುಖ್ಯರೆನಿಪ್ಪರೇಳ್ವರುಂ ಮಾತೃಕೆಯರ್" (ಪಸು.ಕೋ. ೪-೦೯) ; ಜಲಧಿ ಮಾತೃಕೆ ವಾರ ಕುಲಗಿರಿಗಳು ವಿಭಕ್ತಿ ದ್ವೀಪ ಸರ್ಪಾವಳಿ ಮುನೀಶ್ವರರುಗಳ ಧಾತುಗಣದ ವೇದಿಗಳ ತಿಳಿದು . . . ನಡೆವವರುಗಳು ನಿರ್ಮಲದಲೆಡಹದೆ ಬೆರೆಸಿಕೊಂಬರು ಮುಕ್ತಿರಾಜ್ಯವನು (ಕುಮಾವ್ಯಾ.ಉ. ೪-೩೪). ೩. ಅಜ್ಜಿ. ೪. ದಾದಿ. ೫. ನೆಲೆ : ಆಗರ ; ಮೂಲ : ಸಚ್ಚರಿತಕ್ಕೆ ಮಾತೃಕೆಯೆನಿಸಿ ಮೆಱೆವ ಕಾಂತಾಶಿರೋಮಣಿ ಮಹಾದೇವಿಯರ್ ಸಹಿತಮಂತಕಾರಿಯ ಪದಾಂಭೋಜಮಂ ಪರಮಾನುರಾಗದಿಂದರ್ಚಿಸುತ್ತೆ (ಶಬ್ದ.ಶಾ. ೩-೬೦); ಪ್ರಳಯಮೇಘವ ಮಾತೃಕೆಯೊ ಕರಿಕುಲವೊ . . . ಜಗಂಗಳನಳಿವ ಜಲಧಿಯೊ ಸೇನೆಯೋ ನಾವಱಿಯೆವು (ಕುಮಾವ್ಯಾ.ವಿ. ೬-೪) ; ಅಜ್ಞಗನ್ನಡದ ಕಟ್ಟಿದೆಯ ಪ್ರತಿಜ್ಞೆಯು ಅವನ ಸಂಕ್ಷೇಪವೃತ್ತಿಗೆ ಮಾತೃಕೆಯಾಗಿರಬೇಕು (ಶಾಹಿಸ. ೦೬೦). ೬. [ವ್ಯಾಕ] ವರ್ಣಮಾಲೆಯ ಮೂಲಾಕ್ಷರ ; ಅಕ್ಷರಮಾಲೆಯ ಹದಿನಾಲ್ಕು ಸ್ವರಸಮೂಹ. ೭. ಗ್ರಂಥದ ಮೂಲಪ್ರತಿ : ದಕ್ಷಿಣ ಭಾರತದಲ್ಲಿ ಅಂದು ಪ್ರಚಾರದಲ್ಲಿದ್ದ ಭಾರತದ ಮಾತೃಕೆಗಳು . . . ಅವನಿಗೆ ಆಕರವಾಗಿರಬೇಕು (ಕಾಶಾತ. ೯೪) ; ಈಗ ದೊರೆತಿರುವ ಓಲೆಗರಿಯ ಮಾತೃಕೆಯಲ್ಲಿ ಪಂಪ – ಕಂಠಿಯರ ಸಮಸ್ಯೆಗಳು ಇಪ್ಪತ್ತೂರು ಇವೆ (ಕರ್ಣಾಕ. ೬೨). [ಸಂ. ಮಾತೃಕಾ]

**ಮಾತೃಕೆ₂** (ನಾ). [ಮುದ್ರಕ] ಮುದ್ರಣದ ಅಕ್ಷರಗಳನ್ನು ಎರಕ ಹೊಯ್ಯುವ ಅಚ್ಚು : ಅಚ್ಚುಮೊಳೆಗಳನ್ನು ತಯಾರಿಸಲು ಪ್ರತಿ ಅಕ್ಷರ ಅಥವಾ ಚಿಹ್ನೆಗೂ ಬೇರೆಬೇರೆಯ ಮಾತೃಕೆಯನ್ನು (Matrix) ತಯಾರಿಸಿ ಅದರಲ್ಲಿ ಕರಗಿಸಿದ ಮಿಶ್ರಲೋಹವನ್ನು ತುಂಬಿ ಮೊಳೆಯನ್ನು (ಎರಕ ಹುಯ್ದು) ತಯಾರಿಸುವರು (ಮುದ್ರಣ. ೦೦) ; ಮೊದಲ ಮೆಟ್ಟಿಲಿನಲ್ಲಿ ಯುರೇನಿಯಮ್ ಗ್ರಾಫೈಟ್ ಮಾತೃಕೆಗಳ (Matrix) ಪಟ್ಟಿಯನ್ನು ತಯಾರಿಸುತ್ತಾರೆ (ಶಕ್ತಿಶಾ. ೨೬೨). [← ಇಂ. Matrix]

**ಮಾತೃಗಾಮಿ** (ನಾ). ತಾಯಿಯೊಡನೆ ಅನೈತಿಕಸಂಬಂಧವನ್ನು ಹೊಂದಿರುವವನು ; ತಾಯಿಗಂಡ : ಇನ್ನೇನು ಮಾಡಬೇಕೆಂದಿರುವೆ? ಬದಮಾಸ, ಮಾತೃಗಾಮಿ ? (ಅಶಪಾ. ೦೭). [ಸಂ. ಮಾತೃಗಾಮಿನ್]

**ಮಾತೃತ್ವ** (ನಾ). ತಾಯಿಯಾಗಿರುವಿಕೆ : ತಾಯಿತನ : ವೀರಪುತ್ರನ ಮಾತೃತ್ವ ಪರಮಪವಿತ್ರವಾದದ್ದು (ವೀರಯೋ. ೦೦೦). [ಸಂ.]

**ಮಾತೃದೀಕ್ಷೆ** (ನಾ). ತಾಯಿಯ ಮರಣದ ನಂತರ ಒಂದುವರುಷದವರೆಗೆ ಮುಂಡನ ಮಾಡಿಕೊಳ್ಳದೆ ಇರುವುದು. ಸಂಭೋಗಿಸದೆ ಇರುವುದು ಮುಂತಾದ ವ್ರತಗಳ ಪಾಲನೆ : (ಕ). [ಸಂ. ಮಾತೃದೀಕ್ಷಾ]

**ಮಾತೃಭಾಷೆ** (ನಾ). ಶೈಶವದಲ್ಲಿ ತಾಯಿಯು ಮಗುವಿಗೆ ಕಲಿಸುವ ಭಾಷೆ ; ತಾಯಿನುಡಿ : ಮನೆಮಾತು : ಮಾತೃಭಾಷೆಗೆ ಇಷ್ಟು ತಿರಸ್ಕಾರವಿರುವ ಸ್ಥಳದಲ್ಲಿ ಮಾನವಜೀವನದ ಶುಷ್ಕತೆ, ಶೂನ್ಯತೆ, ದೀನತೆಗಳನ್ನು ಯಾರೂ ಹೋಗಲಾಡಿಸರು (ಬಂಕಿಮ. XI ಮುಸ್ನುಡಿ). [ಸಂ. ಮಾತೃಭಾಷಾ]

**ಮಾತೃಭೂಮಿ** (ನಾ). ಹುಟ್ಟಿದ ನೆಲ ; ತಾಯಿನಾಡು : ಇಂಗ್ಲಿಷರು ತಮ್ಮ ಮಾತೃಭೂಮಿಯಲ್ಲಿದ್ದುದನ್ನೇ ಇಲ್ಲಿಯೂ ತಂದು ನಿಲ್ಲಿಸಿದ್ದಾರೆ (ಕಸ್ತೂರ. ೦೪೩) ; ವಿವೇಕಾನಂದರು ಕ್ರಿ.ಶ. ೧೮೯೭ ಡಿಸೆಂಬರ್ ೧೬ರಂದು ಮಾತೃಭೂಮಿಗೆ ಮರಳಿದರು (ಧರ್ಮಶಾ. ೩೦). [ಸಂ.]

**ಮಾತೃಮುಖ** (ನಾ). ತಿಳಿಗೇಡಿ ; ದಡ್ಡ : ಮೂರ್ಖ : "ಅಜ್ಞಃ, ಮಾತೃಮುಖಃ – ಈ ೨ ಯೇನುಮಱಿಯದವಂ" (ಶಬ್ದಮ. ೬೨-೨೨೨). [ಸಂ.]

**ಮಾತೃಮೂಢ** (ನಾ). = ಮಾತೃಮುಖ : ನಿನಗೇನು ಬೇಕು ಅದು ಎನಗೆ ಬೇಕು, ಬೇಡಾದುದೆನಗೆ ಬೇಡ. ಈ ಜ್ಞಾನಪಿಂಡ ಬೆಳೆಯುತ್ತ ಬರಲಿ ಹುಟ್ಟಾನೆ ಮಾತೃಮೂಢ (ಕೃದಶ. ೬೩-೨೦). [ಸಂ.]

**ಮಾತೃವಾಹಿ** (ನಾ). ಮರಗಳಿಗೆ ಜೋತುಬೀಳುವ ಒಂದು ಬಗೆಯ ಹಕ್ಕಿ ; ತೊಗಲುಬಾವಲಿ : ಶಂಬೂಕ ಮಾತೃವಾಹಿ . . . ಪಾದೋದರ ಕ್ರಿಮ್ಯಾದಿ ದ್ವೀಂದ್ರಿಯಗಳ್ ಸ್ಪರ್ಶನರಸನೇಂದ್ರಿಯಜ್ಞಾನೋಪೇತಂಗಳಪ್ಪುವು (ತತ್ತ್ವ.ಸೂ. ೯೮). [< ಸಂ. ಮಾತೃವಾಹಿನೀ]

**ಮಾತೃಷ್ವಸೆ** (ನಾ). ತಾಯಿಯ ಒಡಹುಟ್ಟಿದವಳು ; ಚಿಕ್ಕಮ್ಮ ಅಥವಾ ದೊಡ್ಡಮ್ಮ : "ಮಾತೆಯೊಡಹುಟ್ಟಿದಳು ಮಾತೃಷ್ವಸೆಯಕ್ಕು" (ಮಂಗರಾ. ೯೨-೦೩). [ಸಂ. ಮಾತೃಷ್ವಸ್ಯಾ]

**ಮಾತೃಶಾಸಿತ** (ನಾ). = ಮಾತೃಮುಖ : "ವೈಧೇಯಃ, ಬಾಲಿಶಃ . . . ಮೂರ್ಖಃ, ಮಾತೃಶಾಸಿತಃ – ಈ ೧೧ ಅಱಿಯದವಂ" (ಶಬ್ದಮ. ೩೬-೦೮೦). [ಸಂ.]

**ಮಾತೃಷ್ವಸೃ** (ನಾ). = ಮಾತೃಷ್ವಸೆ. [ಸಂ.]

**ಮಾತೃಷ್ವಸೇಯ** (ನಾ). ತಾಯಿಯ ಸಹೋದರಿಯ ಮಗ : ಚಿಕ್ಕಮ್ಮ ಅಥವಾ ದೊಡ್ಡಮ್ಮನ ಮಗ. [ಸಂ.]

**ಮಾತೃಷ್ವಸೇಯಿ** (ನಾ). ತಾಯಿಯ ಸಹೋದರಿಯ ಮಗಳು : ಚಿಕ್ಕಮ್ಮ ಅಥವಾ ದೊಡ್ಡಮ್ಮನ ಮಗಳು. [ಸಂ. ಮಾತೃಷ್ವಸೇಯೀ]

**ಮಾತೃಷ್ವಸ್ರೀಯ** (ನಾ). = ಮಾತೃಷ್ವಸೇಯ. [ಸಂ.]

**ಮಾತೃಸ್ಥಾನ** (ನಾ). ೧. ತಾಯಿಯ ಸ್ಥಾನ : ಅತ್ತಿಗೆ ಮಾತೃಸ್ಥಾನದಲ್ಲಿ ವಿರಾಜಮಾನಳಾಗಿ ನನ್ನ ಹೊಟ್ಟೆಗೆ ಅನ್ನಪೂರ್ಣೆಯಂತೆ ಅನ್ನ ನೀಡುತ್ತಿರುವಾಗ (ವೈ.ಶಿ. ೦೬೩). ೨. ಮೂಲಸ್ಥಳ ; ಉಗಮಸ್ಥಾನ : ಸಪ್ತಕೋಟಿಮಹಾಮಂತ್ರಂಗಳು ಉಪಮಂತ್ರಂಗಳು ಅನಂತಕೋಟಿಗಳನೂ ಗರ್ಭೀಕರಿಸಿಕೊಂಡಿಪ್ಪ ಇವಕೆ ಮಾತೃಸ್ಥಾನವಾಗಿ ಇವಕೆ ಉತ್ಪತ್ತಿಸ್ಥಿತಿಲಯ ಕಾರಣಂಗಳಿಗೆ ಕಾರಣವಾಗಿಪ್ಪ . . ಶ್ರೀಮೂಲಮಂತ್ರವು (ಬಂಶಿ. ೪ ೦೦೦–೦೯೩). [ಸಂ.]

**ಮಾತೃಹತ್ಯೆ** (ನಾ). ತಾಯಿಯನ್ನು ಸಂಹರಿಸುವುದು. – ಕೊಲೆ ಮಾಡುವುದು. [ಸಂ. ಮಾತೃಹತ್ಯಾ]

**ಮಾತೆ** (ನಾ). ತಾಯಿ ; ಜನನಿ : ಮಾತೆ ಗೌರಿ ಪಿತನಲ್ತೆ ರುದ್ರನೀ ಖ್ಯಾತಮಾದ ಭುವನತ್ರಯಕ್ಕೆ (ಕುಶಲ. ೩೯-೬೩) ; ತಾಯೆ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ ! (ಕನ್ನಡಾ. ೯೭.೦). [ಸಂ. ಮಾತಾ]

**ಮಾತ್ಬರ್**, ಮಾತಬರ, ಮಾತಬರಿ, ಮಾತುಬರ, ಮಾತುಬರಿ, ಮಾತುಭಾರ, ಮಾತುಭಾರಿ (ಗು). ೧. ಪ್ರತಿಷ್ಠೆಯುಳ್ಳ ; ಗಣ್ಯತೆಯಿಂದ ಕೂಡಿದ : ಆರುಮಂದಿ ಮಾತ್ಬರ್ ಜನರನ್ನೂ ಸಹ ಜಮಾಯಿಸಿ ಇವರನ್ನು ಕಮಿಟಿವಾಲಾ ಪಕೀ ಅಥವಾ ಪಂಚಾಯತರು ಎಂದು ಮೊಕರರ್ಮಾಡಿದರು

(ಖುಶಾಮ. II, ೨೮). **ಮಾತಬರ :** ೧. ಉಭಯಕಡೆಯಲ್ಲು ಇರುವ ಮಾತಬರ ಮನುಷ್ಯರ ಸಾಕ್ಷಿಯಿಂದಲೂ ಒಡಂಬಡಿಕೆಯಿಂದಲೂ (ರಾಜೇಂದ್ರ. ೨೬೪) ; ಆ ಬಳಿಕ ಬೆಂಗಳೂರುಪ್ಯಾಟೆ ಮಾತಬರ ವರ್ತಕರ ಕರಸಿ ಸಮ ಜಾಯಿಷೀಯಿಂದ ಪತ್ರಗಳ ಬರಕೊಟ್ಟು (ಹೈದರ. ೧೦೪). **ಮಾತಬರಿ :** (ನಾ). ೨. ಪ್ರತಿಷ್ಠಿತನಾದ ವ್ಯಕ್ತಿ ; ಗಣ್ಯ : ಯಿವರಲ್ಲಿ ಮಾತಬರಿ ಗಳೂ ಅವರಲ್ಲಿ ಮಾತಬರಿಗಳೂ . . . ಗ್ರಾಮಾಧಿಪತಿಗಳನ್ನು ಕೇಳಿದರು (ಎಕ. IX. ಆನೇಕ. ೯೦-೧೧ ; 1700). **ಮಾತುಬರ :** ೨. ತನ್ನ ಪ್ರಾಂತ ದಲ್ಲಿ ಮಾತುಬರನಾಗಿದ್ದ ಕಾರಣದಿಂದ ಇವನು ರಾಜರ ಕಣ್ಣಿಗೆ ಬೀಳುವ ಮನುಷ್ಯನಾಗಿದ್ದನು (ಇಕೇ. ೫೦). **ಮಾತುಬರಿ :** ೧. ಹಜಾಮರಲಿ ಮಾತುಬರಿ ರಾಂಪುರಿ ವೆಂಕಟಾಚಲುವನು . . . ಕೇಳುವಲಿ (ಎಕ. IX, ಆನೇಕ. ೯೦-೧೭ ; 1700). ೩. ಗೌರವ ; ಮಾನ್ಯತೆ : (೯). **ಮಾತುಭಾರ :** ೨. ಅಂಥ ಮಾತುಭಾರರು ದಿವಾಳಿ ತೆಗೆದು, ಊರು ಬಿಟ್ಟು ಹೋದ ಕತೆಯನ್ನು ಕೇಳಿದಾಗ ನಾಗಿಯ ಹೊಟ್ಟೆ ಎಷ್ಟು ತಂಪಾ ಯಿತೋ ! (ಜಾಹೀರ. ೫೦). **ಮಾತುಭಾರಿ :** ೨. ತನ್ನ ಕಾರ್ಯಗಳ ಸುಲಭಸಾಧನೆಗಾಗಿ ಮಾತುಭಾರಿಗಳ ಕಡೆ ಸೇರಿಕೊಂಡನು (ಬಿಕಾಸ. ೨೩) ; ನೀವು ಸ್ವತಃ ತುಂಬ ಘನಸ್ಥಿಕೆ ಹೊಂದಿದ ಮನೆತನದಲ್ಲಿ ಜನಿಸಿದ ದೊಡ್ಡ ಮಾತುಭಾರಿಗಳು (ಕುರುಜ. ೭೭).

[←ಅರ. ಮುಅತಬರ್, ಮೋತಬಿರ್; ಹಿಂ. ಮಾತಬರ್, ಮಾತಬರೀ; ಮರಾ. ಮಾತಬರ್, ಮಾತಬ್ಬರ್, ಮಾತಬರೀ, ಮಾತಬ್ಬರೀ]

**ಮಾತ್ರ₁** (ನಾ). ೧. ಯಾವುದಾದರೂ ವಸ್ತುವಿನ ಉದ್ದ, ಅಗಲ, ಎತ್ತರ, ಗಾತ್ರ, ದೂರ ಮುಂತಾದುವುಗಳಿಗೆ ಸಂಬಂಧಿಸಿದಂತೆ ಇರುವ ಪರಿಮಾಣ. ೨. ಅಷ್ಟು ; ಆ ಪರಿಮಾಣ : ಎನ್ನ ಕಠಿಣದ ಶಿರಮುಮಂ ಮುಟ್ಟಿಸಿದ ಮಾತ್ರದಲಿ ನಿನ್ನ ಹಸ್ತಂ ನೊಂದಿತಯ್ಯೋ (ಬಸಪು. ೩೮-೩೭) : ಕಪ್ಪೆ ಕೂಗಿದ ಮಾತ್ರಕ್ಕೆ ಕೆರೆತುಂಬೀತೇ ? (ಗಾದೆ). [ಸಂ.]

**ಮಾತ್ರ₂** (ಅ). ಬರಿಯ : ಕೇವಲ : ವಿದ್ಯೆ ಬುದ್ಧಿಗಳನ್ನು ದಡ್ಡರು ಮಾತ್ರ ಹಳಿಯುತ್ತಾರೆ (ಮುಂಬಯಿ. ೬. ೦-೪) ; ಸಿಟ್ಟು ಬಂದಾಗ ಮಾತ್ರ ತನ್ನ ಕೆಡವಿದವರನ್ನು ಚಿವರಿಕೊಳ್ಳಲಿಕ್ಕೆ ಉಗುರುಗಳನ್ನು ಹೊರಗೆ ತೆಗೆಯುತ್ತದೆ (ಮುಂಬಯಿ. ೬. ೦-೨೭). [< ಮಾತ್ರ₁]

**ಮಾತ್ರಾಂಗುಲ** (ನಾ). [ಶಿಲ್ಪಶಾ]ದೇವತಾಪ್ರತಿಮೆಗಳನ್ನು ಕಡೆಯು ವಾಗ ದೇಹದ ಪ್ರಮಾಣವನ್ನು ನಿರ್ಣಯಿಸುವ ಒಂದು ಅಳತೆ; ಬಲಗೈ ನಡುಬೆರಳಿನ ಮಧ್ಯದ ಗೆಣ್ಣಿನ ಭಾಗಕ್ಕೆ ಸಮವಾಗುವ ಒಂದು ಅಳತೆ : ಕರ್ತೃವಿನ ಮಧ್ಯಮಾಂಗುಲಿಯ ನಡುವಣ ಪರ್ವದ ದೀರ್ಘಮೇ ಮಾತ್ರಾಂಗುಲಮೆನಿಸುಗುಂ (ಶಿಪೀಠ. ೨೪೦); ಮಾನಾಂಗುಲ, ಮಾತ್ರಾಂಗುಲ, ದೇಹಲಬ್ಧಾಂಗುಲವೆಂಬ ಅಳತೆಗಳಿಂದ . . . ಮೂರ್ತಿ ಗಳನ್ನು ರಚಿಸುವ ವಿಧಾನಗಳನ್ನೂ. . . ಶಿಲ್ಪಶಾಸ್ತ್ರ ಮತ್ತು ಆಗಮ ಶಾಸ್ತ್ರಗಳು ತಿಳಿಸುತ್ತವೆ (ಕಾರಿಡ. ೯೦). [ಸಂ.]

**ಮಾತ್ರಾಕಾಲ** (ನಾ). ಒಂದು ಹ್ರಸ್ವಾಕ್ಷರವನ್ನು ಹೇಳುವಷ್ಟು ಕಾಲಾ ವಧಿ : ಅತ್ಯಲ್ಪಕಾಲ : ನಿದ್ರೆಮಾಡುವ ಆರೋಗ್ಯಶಾಲಿಪುರುಷನು ಉಸಿ ರೆಳೆಯುವ ಕಾಲ ೧ ಮಾತ್ರಾಕಾಲ (ಶಾರಿರ. ೦೬೦ ಅಡಿ). [ಸಂ.]

**ಮಾತ್ರಾಗಣ** (ನಾ). [ಛಂದ] ಅಕ್ಷರಗಳನ್ನು ಉಚ್ಚಾರ ಮಾಡುವ ಕಾಲಮಾನದಿಂದ ಅಳೆಯುವ ಒಂದು ಘಟಕ : ಇಂತಾದೌಪಚ್ಛಂದಸಿಕಂ ಮೊದಲಾಗೆ ವೈತಾಳೀಯುಂ ಉದೀಚ್ಯವೃತ್ತಿಯುಂ ಪ್ರಾಚ್ಯವೃತ್ತಿಯುಮ ಪರಾಂತಿಕೆಯುಮೆಂದು ಮಾತ್ರಾಗಣಂಗಳಿಂ ವೈತಾಳಿಗಳ್ ಬೇಱಿವೇಱ ಪೆಸರ್ವಡೆಗುಂ (ಛಂದೋಂಬು. ೩-೨೨೦ ವ); ಗಣವೆಂದರೆ ಕೆಲವು ನಿಯಮಗಳ ಗನುಸಾರವಾಗಿ ವಿಂಗಡಿಸಿದ ಅಕ್ಷರಗಳ ಗುಂಪು. ಅದು ವರ್ಣಗಣ, ಮಾತ್ರಾ ಗಣವೆಂದು ಎರಡು ವಿಧವು (ಕೃಪಾ. ೬೯). 'ಅಂಶಗಣ' ನೋಡಿ. [ಸಂ.]

**ಮಾತ್ರಾನಿಯಮ** (ನಾ). [ಛಂದ] ಪದ್ಯದ ಪಾದಗಳಲ್ಲಿಯೂ ಗಣಗಳ ಲ್ಲಿಯೂ ಎಷ್ಟೆಷ್ಟು ಮಾತ್ರೆಗಳು ಇರಬೇಕೆಂಬ ನಿಯಮ : ಮೊದಲೊಳ್ಪನ್ನೆರಡೆರಡನೆಯದಱೊಳ್ ಪದಿನೆಂಟು ಮೂಱಱೊಳ್ ಪನ್ನೆರ ಡಂತ್ಯದ ಪಾದದಲ್ಲಿ ಪದಿನೈದು ಮಾತ್ರಾನಿಯಮಮಾರ್ಯೆಯೊಳ್ (ಛಂದೋಂಬು. ೪-೨೩೦); ಮಾತ್ರಾವಿವಕ್ಷೆಯಿಲ್ಲದೆ ಅಂಶವಿವಕ್ಷೆ ಮಾತ್ರ ಉಳ್ಳ ವಿಷ್ಣುಗಣಗಳು ಮುಂಚೆ ಇದ್ದು, ಆಮೇಲೆ ಮಾತ್ರಾನಿಯಮವೂ ಉಂಟಾ ಯಿತೋ ಎಂಬ ಊಹೆಯೂ ಏಳುತ್ತದೆ (ಕೃಪಾ. ೦೪೪). [ಸಂ.]

**ಮಾತ್ರಾಬಂಧ** (ನಾ). [ಛಂದ] ಮಾತ್ರಾಗಣನಿಯಮಕ್ಕೆ ಒಳಪಟ್ಟು ರಚಿತವಾದ ಬಂಧ,–ರಚನೆ : 'ಜಾತಿ'ಯ ಮಾತ್ರಾಬಂಧಗಳಲ್ಲಿ ಅಷ್ಟ ಮಾತ್ರಕ, ಸಪ್ತಮಾತ್ರಕ, ಷಣ್ಮಾತ್ರಕ ಮತ್ತು ಪಂಚಮಾತ್ರಕ ಗಣಗಳು ಆವರ್ತನೆ ಹೊಂದುತ್ತವೆ (ಛಂದೋವಿ. ೫೦). [ಸಂ.]

**ಮಾತ್ರಾರ್ಯೆ** (ನಾ). [ಛಂದ] ಮಾತ್ರಾನಿಯಮಬದ್ಧವಾದ ಆರ್ಯಾ ವೃತ್ತ : ಅವಱಿಂ ಪೊಱಗೆ ಪುಟ್ಟುವುವೆಂದೊಡೆ ದಂಡಕ ರಘಟೆ ಮಾತ್ರಾರ್ಯಾ ತ್ರಿಪದಿ ಷಟ್ಪದಿ ಅಷ್ಟಪದಿ ಗಣನಿಯಮ ಕಂದ ಶಂಖಾವೃತ್ತ ತಾಳವೃತ್ತಾದಿ ಜಾತಿಗಳುಂಟು [ಟಾಕಾ. ಮಾಳಾವೃತ್ತ ದಂಡಕಂಗಳ್ ಮಾತ್ರಾನಿಯಮ ಸ್ಕಂಧಕಾದಿ ಜಾತಿಗಳೆಂಬಿವಕ್ಕುಂ] (ಛಂದೋಂಬು. ೦-೪೩ ವ). 'ಆರ್ಯೆ' ನೋಡಿ. [ಸಂ. ಮಾತ್ರಾರ್ಯಾ]

**ಮಾತ್ರಾವೃತ್ತ** (ನಾ). [ಛಂದ] ಮಾತ್ರಾಗಣನಿಯಮಕ್ಕೆ ಒಳಪಟ್ಟು ರಚಿತವಾದ ಪದ್ಯ : ಮಾತ್ರಾಗಣನಿಯಮಕ್ಕೊಳಗಾದ ಪದ್ಯವು ಮಾತ್ರಾ ವೃತ್ತವು (ಕೃಪಾ. ೬೯); ಇಂಥ ವೃತ್ತಗಳು ಸಂಸ್ಕೃತದಲ್ಲಿ ವರ್ಣವೃತ್ತಗಳೆಂದು ಗಣ್ಯವಾಗಿವೆಯೇ ಹೊರತು ಮಾತ್ರಾವೃತ್ತಗಳೆಂದು ಗಣ್ಯವಾಗಿಲ್ಲ (ಛಂದೋವಿ. ೫೦). [ಸಂ.]

**ಮಾತ್ರಾಸಮಕ** (ನಾ). [ಛಂದ] ಮಾತ್ರಾವೃತ್ತದ ಒಂದು ಪ್ರಭೇದ; P ಮಾತ್ರಾಸಮಕದಲ್ಲಿ ನಾಲ್ಕುಪಾದಗಳಿದ್ದು ಪ್ರತಿಯೊಂದು ಪಾದ ದಲ್ಲೂ ಹದಿನಾರುಮಾತ್ರೆಗಳಿರುತ್ತವೆ. ಸಾಮಾನ್ಯವಾಗಿ ಒಂಬತ್ತ ನೆಯ ಅಕ್ಷರ ಲಘುವಾಗಿಯೂ ಕೊನೆಯ ಅಕ್ಷರ ಗುರುವಾಗಿಯೂ ಇರುತ್ತದೆ. ಇದರಲ್ಲಿ ಅನೇಕ ಭೇದಗಳುಂಟು. ಉಪಚಿತ್ರಾ, ವಿಶ್ಲೋಕ, ಚಿತ್ರಾ, ವಾನವಾಸಿಕಾ, ಪಾದಾಕುಲಕ ಮುಂತಾಗಿ ಬೇರೆಬೇರೆ ಲಕ್ಷಣಗಳುಳ್ಳ ವೃತ್ತಗಳಿವೆ : ಸಂಸ್ಕೃತ, ಪ್ರಾಕೃತ ಗ್ರಂಥ ಗಳಲ್ಲಿರುವ ಮಾತ್ರಾಸಮಕಗಳಂತೆ ರಗಳೆಗಳನ್ನು ನಾಗವರ್ಮನು ಸಂಸ್ಕೃತ ಛಂದಸ್ಸಿಗೇ ಸೇರಿಸಿರುವುದು ಸ್ಪಷ್ಟವಾಗುತ್ತದೆ (ಕೃಪಾ. ೦೩೭). [ಸಂ.]

**ಮಾತ್ರಿಕೆ** (ನಾ). [ಛಂದ] ಒಂದು ಮಾತ್ರೆಯಷ್ಟು ಉಚ್ಚಾರಣೆಯಂ ಬೆಲೆಯುಳ್ಳುದು : ಸ್ವರಮೊಂದುಂ ವ್ಯಂಜನಮೊಂದೆರಡಕ್ಕುಂ ವರ್ಣಭೇದ ಮಾದ್ಯಕ್ಷರದಿಂ ಬರೆ ಪದಿನಾಲ್ಕುಂ ಸ್ವರಮಿಂ ಪರಿಶೇಷಂ ವ್ಯಂಜನಗಳರೆ ಮಾತ್ರಿಕೆಗಳ್ (ಕಾವ್ಯಾವ. ೭). [ಸಂ. ಮಾತ್ರಿಕಾ]

**ಮಾತ್ರೆ** (ನಾ). ೧. ಉದ್ದ, ಅಗಲ, ಎತ್ತರ, ಗಾತ್ರ, ದೂರ, ಕಾಲ ಅಥವಾ ಸಂಖ್ಯೆ ಮುಂತಾದುವುಗಳಿಗೆ ಸಂಬಂಧಿಸಿದಂತೆ ಇರುವ ಅಳತೆ,–ಪರಿಮಾಣ. ೨. (ಸ್ವಲ್ಪ) ಭಾಗ ; ಅಂಶ. ೩. ಆಸ್ತಿ ; ಐಶ್ವರ್ಯ. ೪. (ಮನೆಯ) ಉಪಕರಣ ; ಸಾಮಗ್ರಿ : "ಪರಿಚ್ಛದ ದಲ್ಲಿಯುಂ ಮಾತ್ರಾ ಎಂಬುದುಂ" (ಶಬ್ದಮ. ೦೩೨-೦೦). ೫. ಹೊರೆ : (೯). ೬. ಗೆರೆ : ಗೀಟು : ರೇಖೆ : "ಅಕ್ಷರವಿಶೇಷ ರೇಖೆ ಗೃಹ ಮುಟ್ಟುಗಳುಂ ಪೊರೆ ಮಾತ್ರೆಯುಕ್ಕು" (ನಾನಾರ. ೦೫೮). ೭. ಔಷಧಿಯ ಗುಳಿಗೆ: ಕಾಲಕಾಲಮರಿತು ಸಂಗ್ರಹಿಸಿದಂಥಾ ವಸ್ತುಗಳೊಡನೆ ಕೂಡಿದ್ದಾಗಿ, ಸ್ವಲ್ಪ ಮಾತ್ರೆಯುಳ್ಳದ್ದಾಗಿ . . . ಸೇವನಮಾತ್ರದಿಂದಲೆ ಸಕಲರೋಗ ಗಳನ್ನೂ ಪರಿಹರಿಸುವಂಥಾ ಪರಮೌಷಧವೆ ಔಷಧವೆನಿಸಿಕೊಂಬುದು (ಸಕವೈ. ೨೩); ತಾಯಿಯು ನೋಡಿ ಮಗನಿಗೆ ಮಂದಾಗ್ನಿಯಾಗಿದೆ ಎಂದು

ಒಳ್ಳೊಳ್ಳೆ ಜೀರ್ಣಕಾರಿ ಮಾತ್ರೆ ಲೇಹಗಳನ್ನು ಮಾಡಿಸಿ ಕೊಟ್ಟಳು (ರೇಚಿಕಾ. ೩೬); ಅನಂತಯ್ಯನ ಮಾತ್ರೆ ವೈಕುಂಠಯಾತ್ರೆ (ಗಾದೆ). ೮. ನಾಗರೀಲಿಪಿಯ ಎ, ಓ ಮುಂತಾದ ದೀರ್ಘಾಕ್ಷರಗಳ ಮೇಲುಭಾಗಕ್ಕೆ ಹಾಕುವ ಓರೆಯಾದ ಗೆರೆ. ೯. [ಛಂದ] ಒಂದು ಹ್ರಸ್ವಾಕ್ಷರವನ್ನು ಉಚ್ಚರಿಸುವ ಕಾಲಾವಧಿ: ಸಂಬಂಧಾಕ್ಷರದೊಳೆಲ್ಲ ಮಾತ್ರೆಗಳುಂ ತಬ್ಬಿಂಬಾಗೆ ಬೆರಸಿ ಶೋಭಾಡಂಬರಮಂ ಪಡೆಗುಮುಂಚಿತಕಾವ್ಯೋಕ್ತಿಗಳೊಳ್ (ಛಂದೋಂಬು. ೦-೬); ಸಮಾನಾಕ್ಷರಮೊಂದುಮನಣೆಯಿಂದುಚ್ಚರಿಸಿದೊಡಂ ಮಾತ್ರೆಯೆಂಬ ಪೆಸರಂ ಪಡೆಗುಂ (ಅಕ್ಷ. ೩-೪೯); ಮಾತ್ರಾಗಣವನ್ನು ಮಾತ್ರೆಗಳಿಂದ ತಿಳಿಯಬೇಕು. ಒಂದು ಲಘುವಿಗೆ ಒಂದು ಮಾತ್ರೆಯೆಂದೂ ಒಂದು ಗುರುವಿಗೆ ಎರಡು ಮಾತ್ರೆಗಳೆಂದೂ ಸಂಕೇತವು (ಬೃಬಾ. ೬೦). ೧೦. [ಸಂಗೀತ] ಕಾಲದ ಅಳತೆ: ೩೫ ಸೂಳಾದಿ ತಾಳಗಳಲ್ಲಿ ಬರುವ ಚತುರಶ್ರಲಘುವೇ ಒಂದು ಮಾತ್ರೆಯಾಗುತ್ತದೆ (ಸಂಗೀತಶಂ. ೩೬). [ಸಂ. ಮಾತ್ರಾ]

**ಮಾತ್ಸರಿಯ** (ನಾ). ಹೊಟ್ಟೆಕಿಚ್ಚು; ಅಸೂಯೆ: ಗುರುವಿರೋಧ ಮಹೀಸುರರ ಮಾತ್ಸರಿಯ ಬಂಧುದ್ವೇಷ . . . ಶರಣಜನದಂಡಿತ್ವವೆಂಬಿವನರವರಿಸದಂಗೈವ ಭೂಪನ ಸಿರಿಗೆ ಮೂಡುಗು ಕೇಡು ನಿಮಿಷಕೆ (ಕುಮಾ.ಸ. ೬೦೭ ೦-೬೩). [< ಸಂ. ಮಾತ್ಸರ್ಯ]

**ಮಾತ್ಸರ್ಯ** (ನಾ). ೧. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳಲ್ಲಿ ಒಂದು; ಅಸೂಯೆ; ಹೊಟ್ಟೆಕಿಚ್ಚು: ಅವನಿಯುಮರರ ಕಳಕಳವ ಪಾಂಡವರ ಸುಮ್ಮಾನವನು ನೃಪಕೌರವರ ಮಾತ್ಸರ್ಯೋಪಲಾಲಿತಹರುಷ ವಿಭ್ರಮವ ಅವನಿಪಾಲರು ಕಂಡರು (ಕುಮಾ.ಸ. ೬-೦೦). ೨. ಅತೃಪ್ತಿ; ಅಸಂತೋಷ. ೩. [ಜೈನ] ಪ್ರದೋಷ, ನಿಹ್ನವ, ಮಾತ್ಸರ್ಯ, ಅಂತರಾಯ, ಆಸಾದನ ಮತ್ತು ಉಪಘಾತಗಳೆಂಬ ಆರು ಆಸ್ರವಗಳಲ್ಲಿ ಒಂದು; ತನ್ನ ಶಿಷ್ಯನೇ ತನ್ನನ್ನು ಸರಿಗಟ್ಟುವನೆಂಬ ಅಸೂಯೆಯಿಂದ ಗುರುವು ಶಿಷ್ಯನಿಗೆ ಸರಿಯಾಗಿ ಕಲಿಸದಿರುವುದು: ಯತಿಗಳ ಚರಿಗೆಗೆಥಾಯೋಗ್ಯಕಾಲವನತಿಕ್ರಮಿಸುವುದೆ ಅಸ್ಮರಣೆ ಅತಿಶಯವೆನಲೊಬ್ಬ ಮಾಡೆ ಮತ್ಸರಿಸುವುದತಿಚಾರ ಮಾತ್ಸರ್ಯಾಖ್ಯ (ದ್ವಾದಶಾ. ೦೦-೬೪೪). [ಸಂ.]

**ಮಾತ್ಸ್ಯನ್ಯಾಯ** (ನಾ). [ತರ್ಕಶಾ] ದೊಡ್ಡಮೀನು ಚಿಕ್ಕಚಿಕ್ಕ ಮೀನುಗಳನ್ನು ನುಂಗುವುದು; P ಬಲಿಷ್ಠನಾದವನು ಅಶಕ್ತನನ್ನು ಹಿಡಿದು ಪೀಡಿಸುವುದು ಎಂಬುದು ಲೋಕರೂಢಿ: ಪರಚಕ್ರಕ್ಕೆಡೆಮಾಡಿ ಭೂವಲಯಮುಮಂ . . . ತವಕ್ಕೆ ಪೋಪುದನಯಂ ಭೂಪಾಲ ನಿನ್ನಂ ಪುರಂದರನೀ ರಾಜ್ಯಭರಕ್ಕೆ ಯೋಜಿಸಿ ತಪೋರಾಜ್ಯಕ್ಕೆ ಮೆಯ್ಯಂದನಂತಿರೆ ನೀನಾಚರಿಸಲ್ಲಪಂದು ಧರೆ ಮಾತ್ಸ್ಯನ್ಯಾಯಮೇನಾಗದೇ (ಶಂಕರವಿಜ. ೩-೩೩). 'ಮತ್ಸ್ಯನ್ಯಾಯ' ಪರಾ. [ಸಂ.]

**ಮಾದ$_1$** 'ಮಾದರ' ನೋ.

**ಮಾದ$_2$** (ನಾ). ಒಬ್ಬಾತನ ಹೆಸರು: ಕೇಣೆತ್ತಬ್ಬನೃಗನೆಲೆಯೊನ್ಮಾದತ್ತಚ್ಚನವನ್ ಪೆಸಜಿಜ್ಜ ನಿಧಾನಬೆಯುಲ್ × × × (ಎಕ. X, ಮಾಲೂರು. ೯೬-೪; ಕು. 750); ಎಬಿನಿನಾಗನುಂ ಕುಪ್ಪನುಂ ಮಾದನುಂ ಒಕ್ಕಲ್ಪನಂಗೆಯ್ದು (ಎಕ. XXVI, ೬೨-೦೬; 906). [?]

**ಮಾದಕ** (ಗು). ೧. ಅಮಲೇರಿಸುವ; ಮತ್ತು ಬರಿಸುವ: ಅವಳ ಮಾದಕಸೌಂದರ್ಯದಿಂದ ನಗರವೆಲ್ಲವೂ ಮುಗ್ಧವಾಯಿತು (ಅಕ್ರಮ. ೬೬). ತೆಳುನಡುವಿನ ಮೇಲ್ಭಾಗದ ಮಾಟವಾದ ಎದೆಕಟ್ಟು ಮಾದಕ ನೋಟವಾಗಿತ್ತು (ಛಿತ್ತಾಪ. ೩೦). 'ಮಾದಕಪಾನೀಯ', 'ಮಾದಕವಸ್ತು' ಪರಾ. ೨. ಸಂತೋಷಕರವಾದ; ಉಲ್ಲಾಸಗೊಳಿಸುವ. [ಸಂ.]

**ಮಾದಕತೆ** (ನಾ). ೧. ಅಮಲು; ಸೊಕ್ಕು: ಮುಚುಕುಂದಪುಷ್ಪದ ಗಂಧವು ವಸಂತದ ಆಕಾಶದಲ್ಲಿ ನಿಬಿಡಮಾದಕತೆಯನ್ನು ಪಸರಿಸಿಬಿಟ್ಟಿದೆ (ಇಶ್ವಕ. ೪೦೭). ೨. ಅಮಲಿನಿಂದ ಕೂಡಿದುದು; ಮತ್ತೇರಿಸುವ ಗುಣವುಳ್ಳದು: ಅವಳ ಕಣ್ಣುಗಳು ಮಾದಕತೆಯ ಪ್ರೇಮಜ್ಯೋತಿಯಂತೆ ಮಿನುಗುತ್ತಿದ್ದವು (ಬಂಗಾರ. ೦೯). [ಸಂ. ಮಾದಕತಾ]

**ಮಾದಕದ್ರವ್ಯ** (ನಾ). ಗಾಂಜಾ, ಅಫೀಮು ಮುಂತಾದ ಮತ್ತೇರಿಸುವ ಗುಣವುಳ್ಳ ವಸ್ತು: ಇನ್ನಾವುದಾದರೊಂದು ಮಾದಕದ್ರವ್ಯವನ್ನೊ ತಿನ್ನಬಹುದು (ಜಯಂತ. ೦೦೩). [ಸಂ.]

**ಮಾದಕಪಾನೀಯ** (ನಾ). ಮದ್ಯ ಮುಂತಾದ ಅಮಲೇರಿಸುವ ಪೇಯ: ಮಾದಕಪಾನೀಯದ ವಿಷಯ ನಿನಗೆ ಗೊತ್ತಿರುವಷ್ಟು ನನಗೆ ಗೊತ್ತಿಲ್ಲ (ಹಸುಹೂ. ೩೦೦); ಮಾದಕಪಾನೀಯಗಳ ಮತ್ತು ಆರೋಗ್ಯಕ್ಕೆ ಹಾನಿಕರಗಳಾದ ಪದಾರ್ಥಗಳ ಸೇವನೆಯನ್ನು ಪ್ರತಿಷೇಧಿಸಲು ರಾಜ್ಯವು ಪ್ರಯತ್ನಿಸತಕ್ಕದು (ಭಾಸಂ. ೪೭). [ಸಂ.]

**ಮಾದಕಪೇಯ** (ನಾ). = ಮಾದಕಪಾನೀಯ: ನನ್ನ ದುರಹಂಕಾರಿ ಮನಸ್ಸಿಗೆ ಅವಳಿಗುಂಟಾಗುವ ಅಸಂತೋಷವೇ ಮಾದಕಪೇಯಪಾನದಿಂದ ಉಂಟಾಗುವ ಉನ್ಮತ್ತಗ್ಲಾನಿಯಂತೆ ಆಗಿದ್ದಿತು (ಹೇಮಂತ. ೨೬೯); ನಿಮ್ಮನ್ನು ಎತ್ತಿಕೊಂಡು ಬಂದು ಮಾದಕಪೇಯವನ್ನು ಕುಡಿಸಿ ರಾತ್ರಿ ಎಂಟುಗಂಟೆಯ ಸುಮಾರಿಕ್ಕೆ ಇಲ್ಲಿ ಹಾಯ್ದುಹೋಗುತ್ತಿರುವಾಗ ನಮ್ಮ ಜನರು ನಿಮ್ಮನ್ನು ಬಿಡಿಸಿಕೊಂಡರು (ಸಂಬಂಧ. ೦೦೯). [ಸಂ.]

**ಮಾದಕವಸ್ತು** (ನಾ). = ಮಾದಕದ್ರವ್ಯ: ಹಲವಾರು ಹದಿಹರೆಯದ ಹುಡುಗ ಹುಡುಗಿಯರು ಮಾದಕವಸ್ತುಗಳ ಸೇವನೆಯಿಂದ ಹಾಳಾಗುತ್ತಿದ್ದಾರೆ (ಕೂಪ). [ಸಂ.]

**ಮಾದಕ್ಷಿಣಾಪಥ** (ನಾ). ಭರತಖಂಡದ ವಿಶಾಲವಾದ ದಕ್ಷಿಣಭಾಗ; ವಿಂಧ್ಯಾದ್ರಿಯ ದಕ್ಷಿಣಕ್ಕಿರುವ ದೇಶಭಾಗ: ಅಳಪಗಣಪಶುಪತಿ ಮಾದಕ್ಷಿಣಾಪಥ ಬಹುಶತಹವನಾಹವದು[ಳ್]ಪಶುಪ್ರದಾನಶೌರ್ಯೋದ್ಯಮ ಭರಿತೋ[ನ್ನಾ]ನಪಶುಪತಿಯೆನ್ನು ಪೊಗಟೆ (ವ್ಯಂಬಿ. ೦೯೩೬, ೦೬-೬; 450). [ಮಾ$_1$ + ದಕ್ಷಿಣಾಪಥ]

**ಮಾದಗ** 'ಮಾದೆಗ' ನೋ.

**ಮಾದಪ್ಪ** (ನಾ). ಒಬ್ಬಾತನ ಹೆಸರು: ಅಕ್ಕ ಕೈಲೂರ ಮುಕನ್ದಿರ್ ಮಾದಪ್ಪನ್ನ (ಎಕ. III (R), ಗುಂಡ್ಲುಪೇ. ೬೬-೩; ಕು. ೩ನೆಯ ೫೬); ಸ್ವಸ್ತಿಶ್ರೀ ಬೇಲೂರರಾಮುಗಂ ಮಾದಪ್ಪನ್ ಪ್ರಭುಗೌಡ ಬೇಟೂರಾ ಎಮ್ಮೆಯ ತೊಕೊಳೊಳೆ ಗುದ್ದಿ ಅನ್ನಿಜಿದು ಸತ್ತನ್ (ಎಕ. X, ಕೋಲಾರ. ೨೨೬-೦; ಕು. 950). [ಮಾದ$_2$ + ಅಪ್ಪ$_1$]

**ಮಾದಮಂಗಲ** (ನಾ). ಒಂದು ಊರಿನ ಹೆಸರು: × × × ರೋಡಿದಿರ್ಮಾದಮಂಗಲಮೊಡೆದಿರ್ಗೊಂಟೆ ಮಡಿದಿಡೆದಿಳೆತೂರೊ × × × (ಎಕ. III(R), ಹೆಗ್ಗಡ. ೦೦೨-೪; ಕು. ೩ನೆಯ ೬೬). [ಮಾದ$_2$ + ಮಂಗಲ]

**ಮಾದಮ್ಮ** (ನಾ). ಒಬ್ಬಾತನ ಹೆಸರು: ಕೊಡಲ್ ಸೆಟ್ಟಿಯರಾ ಮಾದಮ್ಮನ್ . . . ಸರ್ವ್ವಮಂದು ಪುಲಿಯುಮ್ಮ್ರ್ನ್ ಯಿಎ ಒಕ್ಕಲ್ ಪಡೆ [ದು]ವು (ಎಕ. IX, ೨೩-೦೨; ಕು. 800). [ಮಾದ$_2$ + ಅಮ್ಮ$_1$]

**ಮಾದರ, ಮಾದ$_1$, ಮಾದಾರ, ಮಾದಿರ** (ನಾ). ಕೀಳುಜಾತಿಯವನು; ಮಾದಿಗ: ಇಸೆ ಪಶುಮಜಿ ಯೋನಿಮುಖಪ್ರಸವಕ್ಕಲಸಿವ್ವಪೊಲೀಚ ಬಾಯಿಂ ತಾನೊಂದಮನುಮೇರಸು ಬೀಟ್ಟುದುಂ ಕರುಣಿಸಿ ಮತ್ತಂ ಮಾದರಂಗೆ ಸಲಹೆಂದಿತ್ತಂ (ಚಂಕೊಣ. ೩-೩೬); ಸನ್ನುತಾಮಳಕೀರ್ತಿ ಮಾದರ ಚೆನ್ನಯಂ ಕಟ್ಟಿಬಿಕಳೆವಂ ತನ್ನ ನಿಜಜಿಹ್ವಾಗ್ರವೇ ಪಬಿಯಾಣವಾಗಿರಲು ಪನ್ನಗಾಭರಣಂ ನಿಷೇಧವದೆನ್ನದಾರೋಗಿಸಿದನು (ಶಿತತ್ವ. ೩-೦೬೦). **ಮಾದ$_1$**: ಚದುಗಾರನು ತೊಗಲಿನ ಚೂರಿನ ತೋರಣವನ್ನು ಕಟ್ಟಿಸಿದನು.

ಮಾದರು ಎಲುಬಿನ ತೋರಣವನ್ನು ಕಟ್ಟುಬಹುದು (ಶಾರಕಂ. ೬೮); ಆಕೆ ಹೆಚ್ಚಿನವುಸ್ವಾರವನ್ನು ಹಾಕಿದ ಸೀರೆಯನ್ನು ಮಾದರಿಗೆ ಮುಟ್ಟಿಸಿದಳು (ಗಂಗಾತಾ. ೬೩). **ಮಾದಾರ** : ಸೆಟ್ಟಿ ಎಂಬೆನೆ ಸಿರಿಯಾಳನ . . . ಮಾದಾರ ಸೆಂಬೆವೆ ಚೆನ್ನಯ್ಯನ ಅನು ಹಾರುವನೆಂದರೆ ಕೂಡಲಸಂಗಯ್ಯ ನಗುವನಯ್ಯಾ (ಬಸವ. ೬೪೪). **ಮಾದಿರ** : ವಿಭಾಗಿಸಲ್ಪಡದ ಜಾತಿಗಳು . . . ಕ್ಷೇತ್ರವಾಸಿ, ಮಾದಿರ (ಹಳಗಾ. ೦೬೪). 'ಮಾದಿಗ' ಪರಾ.

**ಮಾದರಿ** (ನಾ). ೧. ರೀತಿ : ಬಗೆ ; ಪ್ರಕಾರ : ನಾನು ಆ ಲೆಖ್ಖವನ್ನು ನನ್ನದೇ ಮಾದರಿಯಲ್ಲಿ ಸ್ವಲ್ಪ ಸುಲಭವಾಗಿ ಬರೆಯಲು ಹೊರಟೆ (ಕಾಕಪ. ೪೪) ; ಯಾರು ಜೀವವನ್ನು ಪ್ರತಿಬಿಂಬ ಎಂದು ಭಾವಿಸುವರೊ ಈಶ್ವರನನ್ನು ಆ ಪ್ರತಿಬಿಂಬದ ಒಂದು ಮಾದರಿ, ಪ್ರತಿಬಿಂಬವಲ್ಲ ಎಂದು ಭಾವಿಸುವರೊ ಅವರಿಗೆ ಮುಕ್ತಿ (ತತ್ವಶಾ. ೩೦೩). ೨. ನಮೂನೆ : ರಚನೆಯ : ಅವರ ವೇಷವೂ . . . ಹಳೆಯ ಮಾದರಿಯ ಅಂಗಿ, ಅಂಥದೇ ಕೋಟು, ಒಂದು ಧೋತರ (ಕನ್ನಗೋ. ೫) ; ನಮ್ಮ ಜೀವನಸ್ಥಿತಿಗೆ ಹೊಂದಿಕೆಯಾಗುವಂತೆ ರಚಿಸಿದ ಅನೇಕ ಮಾದರಿಯ ಹೊಗೆ ಬಾರದ ಒಲೆಗಳವೆ (ಅಡುಗೆ. ೦೩). ೩. ಆದರ್ಶ ; ಮೇಲ್ಪಂಕ್ತಿ : ತಿಲಕರ ಉದಾಹರಣೆಯಿಂದ ಧೈರ್ಯ, ಕಷ್ಟಸಹಿಷ್ಣುತೆ, ಹೋರಾಟಗಳು ಜನಕ್ಕೆ ಮಾದರಿಯಾದವು (ಶ್ರಾ. ೬೬೫. ೬೬) ; ಪ್ರಪಂಚದಲ್ಲಿ ಹೆಣ್ಣಿನ ಸೌಂದರ್ಯದ ಮಾದರಿಯೆಂಬರ ಯಮುನೆಯೆಂದು ನನ್ನ ಭಾವನೆ (ಅಂಕಹೂ. ೩೫). [ದೇ.॥ ತಮಿ. ಮಾತಿರಿ ; ತುಳು. ಮಾದರಿ, ಮಾದಿರಿ, ಮಾದ್ರಿ ; ತೆಲು. ಮಾದಿರಿ ; ಮಾದ್ರಿ./ ಮರಾ. ಮಾದರೀ, ಮಾದ್ರೀ]

**ಮಾದರಿಕೆ, ಮಾದಜಿಕೆ, ಮಾದಾರಿಕೆ, ಮಾದಾಜಿಕೆ** (ನಾ). ಮಾದಿಗರು ಕೊಡುತ್ತಿದ್ದ ಸುಂಕ,-ತೆರಿಗೆ : ಮಾದರಿಕೆ (ಕ್ಯಾಂ. ೦೪೩೩, ೦೩೬ : ?). Δ**ಮಾದಜಿಕೆ** : ಬೋವಾಜಿಕೆ ಮಾದಜಿಕೆ ಮುಂತಾದ ಘನುಳ್ಳ ಸಬಲ ಸ್ವಾಮ್ಯವನು ಆಗುವಂತಿ (ಎಕ. III (R). ಗುಂಡ್ಲುಪೇ. ೩೪-೬ ; 1507). **ಮಾದಾರಿಕೆ** : ಕಂಪಾಜಿತೆಜಿಗೆ ಕುರಿಕುರಿಗೆ ಮಾದಾರಿಕೆ ಉಪ್ಪಿನ ಕಾವಲಿಸುಂಕ . . . ಬೆಟ್ಟದ ಕಾವಲು ಯಿಷ್ಟನು ಸರ್ವಮಾನ್ಯವಾಗಿ ಬಿಟ್ಟದು (ಎಕ. III (R). ಗುಂಡ್ಲುಪೇ. ೦೫೦-೬೪; 1521). Δ**ಮಾದಾಜಿಕೆ**: ಹದಿಕ ಜೋಡಿಗ್ರಾಸ ನೊಟಗೂಲಿ ಮಾದಾಜಿಕೆ ವಟ್ಟ ಕಟ್ಟಿಗೆ (ಎಕ. VII. ಶಿಕಾರಿ. ೦೪೬-೫೦ ; 1404) ; ಮಾದಾಜಿಕೆ ಅಧಿಕಾರಿಯ ಉಡುಗೊಜೆ ಸೇಸಭೋಯಿಕೆ ಬಾದಿನ ವರ್ತನೆ ಅಧಿಕಮಾಸ ಮುಂತಾಗಿ ಯೇನುಳ ಸುವರ್ಣಸ್ವಾಮ್ಯವನೂ ನೀಉ ಆಗುಮಾಡಿಕೊಂಡು . . . ಭೋಗಿಸಿ ಬಹುದು (ಐತಿಹ್ಯ. IX-ii. ೪೫೦-೫೬ ; 1419). [ಮಾದರ + – ಇಕೆ]

**ಮಾದರಿಪಾಠ** (ನಾ). ಉಪಾಧ್ಯಾಯವೃತ್ತಿಯನ್ನು ಅರಿಸಿಕೊಳ್ಳಬೇಕೆಂದು ತರಬೇತುಹೊಂದುವ ಶಿಕ್ಷಣವಿದ್ಯಾರ್ಥಿಗಳಿಗೆ ಪಾಠ ಕಲಿಸುವಾಗ ಹೇಗೆ ಪಾಠಮಾಡಬೇಕೆಂದು ದೃಷ್ಟಾಂತಕ್ಕಾಗಿ ತಜ್ಞರು ಮಾಡಿ ತೋರಿಸುವ ಪಾಠ : ಪ್ರಾಥಮಿಕಶಾಲೆಯ ಮುಖ್ಯೋಪಾಧ್ಯಾಯರೊಬ್ಬರು ಗಣಿತದಲ್ಲಿ ಮೂರನೆಯ ತರಗತಿಗೆ ಮಾದರಿಪಾಠವನ್ನು ಮಾಡಿ ತೋರಿಸಿದರು (ಅಂಗಕ. ೬೨). [ಮಾದರಿ + ಪಾಠ್ಯ]

**ಮಾದರ್‌ಚೋತ್** (ನಾ). ತನ್ನ ತಾಯಿಯೊಡನೆ ಅನೈತಿಕಸಂಬಂಧ ಇಟ್ಟುಕೊಂಡವನು ಎಂಬ ಅರ್ಥದಲ್ಲಿ ಬಳಸುವ ಒಂದು ಬಯ್ಗುಳು. 'ಬಾಂಚೋತ್' ಪರಾ. [←ಹಿಂ. (ಮಾದರ್ + ಚೋತ್)]

**ಮಾದಲ, ಮಾದಲು, ಮಾದವಾಳ, ಮಾದಳ, ಮಾದಾಳ** (ನಾ). ಹುಳಿಹಣ್ಣುಗಳ ಜಾತಿಗೆ ಸೇರಿದ (ಗಾತ್ರದಲ್ಲಿ ನಿಂಬೆಗಿಂತಲೂ ದೊಡ್ಡದಾಗಿದ್ದು ಕಡಮೆ ಹುಳಿ ಹಾಗೂ ದಪ್ಪವಾದ ತಿರುಳುಳ್ಳ) ಹಣ್ಣುಗಳನ್ನು ಬಿಡುವ ಮರ; ಮಾತುಲುಂಗ; ಸಕ್ಕರೆನಿಂಬೆ: ''ಮಧುರಾಮ್ಲಫಲ:–ಮಾದಲ'' (ಓಕಧಿ. ೦೨೨) : ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆಜಿದವರಾರಯ್ಯ (ಹುಚ್ಚರೇ. ೭. ೨೦-೩) ; ತುಜುಗಿನ ಕಾಯ್ಗಳ ಭರದಿಂ ನೆಜೆ ತಗ್ಗಿ ವಿಲಂಬಿಸರ್ವ ಮಾದಲಂ (ಶಾರಕ. ೦-೦೦೬) ; ವಂತ್ತಿಮೊಳಗರನೆಲ್ಲಿ ಮಾದಲ ... ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೋರಾ. ೩-೦-೨೬). **ಮಾದಲು**: ರಾಮಚಂದ್ರನು ಮಾದಲುಹಣ್ಣಗಾಗಿ ಬರುವನೆಂಬ ಸುದ್ದಿ ಬೇರೆ ಇತ್ತು (ಕಕಹು. ೩೪). **ಮಾದವಾಳ** : ಮಾದಳ, ಅರೆಮಾದಳ, ಮಾದವಾಳ, ಮಹಾಫಲ (ಬ್ರಿತಿಂ. ೨೨-೪೦೬). **ಮಾದಳ** : ''ಮಾತುಲುಂಗಃ—ಮಾದಳ'' (ಓಕಧಿ. ೦೨೪) ; ಮಾದಳ . . . ಸುಖಾರ್ಹ ಸಾರ್ವತ್ರಿಕಮಾದ ಫಲಂಗಳುಳ್ಳ ತರುನಿಕರಂಗಳುಂ (ಬವೇಕ. ೨೦೦); ಮಾದಳದ ಬೇರು, ಅಮುರದ ಬಳ್ಳಿ . . . ಕಷಾಯ ಮಾಡಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ ಪರಿಹಾರವಾಗುವುದು (ಸಕಕ. ೯೪) ; ಬಡವನು ಆ ಮಾದಳದ ಹಣ್ಣನ್ನು ತೆಗೆದುಕೊಂಡು ಹೋದನು (ಕಹಂ. ೦೦). **ಮಾದಾಳ** : ''ಫಲಪೂರಕಃ, ಬೀಜಪೂರಕಃ, ರುಚಕಃ, ಮಾತುಲುಂಗಕಃ —ಈ ೪ ಮಾದೀಗಿಡ, ಮಾದಾಳವ ಗಿಡ'' (ನಿಘಂಟು. ೦೬೦). [ದೇ.॥ ತಮಿ. ಮಾತಳೈ, ಮಾತುಳವಮ್, ಮಾತುಳ್ಯ; ಮಲ. ಮಾದಳ; ತುಳು. ಮಾದಲ, ಮಾಪಲ ; ತೆಲು. ಮಾದಿಫಲಮು ; ಗೊಂಡಿ. ಮಾತ್ರ]

**ಮಾದಲು** 'ಮಾದಲ' ನೋ.

**ಮಾದವ** (ನಾ). ಒಬ್ಬಾತನ ಹೆಸರು : ಬೆಳ್ವಲಾಣೆಯ ಶ್ರೀಮ ಗಾವುಂಡರುಂ ಕುಪ್ಪಾಲ್ಮಾದವರುಂ . . . ರಿಪುರಾಮಗಾವುಂಡನುಂ ಎನೆಬ್ಬರುಂ ನರಸಾಕ್ಷಿಯಾಗೆ ಪಡೆದಾಮ್ (ಎಕ. VI (R). ಶೃಂಗೇ. ೬೬-೨೦ ; ಸು. ೮೦೦). [<ಮಾಧವ$_2$]

**ಮಾದವರೆ** (ನಾ). ಒಂದು ಬಗೆಯ ಅವರೆ : ಮಾದವರೆ ಹಾಕಿದರೆ ಅದನ್ನು ಕಾಯುವುದಕ್ಕೆ ಒಂದು ಆಳು ಬೇರೆ ಆಗಬೇಕು (ಕೇಚಹು. ೦೬೭). [ ? + ಅವರೆ$_1$]

**ಮಾದವಾಳ** 'ಮಾದಲ' ನೋ.

**ಮಾದವೆ** (ನಾ). ಒಬ್ಬಾಕೆಯ ಹೆಸರು : ಶ್ರೀಪೃಥಿವೀವಲ್ಲಭಸಿಂಘಪೋತರಸರ ಮಗಳ್ವರ್ ಶ್ರೀಮಹಾದೇವಿರರಸಿ ಪೆರ್ಮ್ಮಾನಡಿಗಳ ಆರಸಿಯರ ತಾಯಿ ನೊಟಮ್ಬಮಾದವೆ ಆಳೆ (ಎಕ. XI. ಹಳ್ಳಕೆ. ೩೩-೬ ; ಸು. 815). [ಮಾದ$_3$ + ಅವ್ವೆ$_0$ (<ಅಬ್ಬೆ$_1$)]

**ಮಾದಳ** 'ಮಾದಲ' ನೋ.

**ಮಾದಳಿ** (ನಾ). ಒಂದು ಬಗೆಯ ನಸುಗೆಂಪುಬಣ್ಣದ ವಸ್ತ್ರ : ಹಳದಿ ಸಂಧ್ಯಾರಾಗ ಮಾದಳಿ ಬಿಳಿದು ಪೊಪ್ಪಳಿ ಚಂದ್ರಗಾವಿಗಳಳೆಗೆ ಪೊಸತಪ ಮಂಚೆಟಿಕೆ ಗುಜ್ಜರಿ ದುಕೂಲಗಳ ಅಳವಡಿಸಿ (ಕೋಗಹು. ೩-೩೬). [← ತೆಲು. ಮಾದಳ, ಮಾದವಳ, ಮಾದಾವಳ, ಮಾದಾವಳಿ]

**ಮಾದಳಿರ್** 'ಮಾಂದಳಿರ್' ನೋ.

Δ **ಮಾದಜಿಕೆ** 'ಮಾದರಿಕೆ' ನೋ.

**ಮಾದಾನಿ** (ನಾ). ಧಾರಾಳವಾಗಿ ನೀಡುವವನು : ಮಹಾದಾನಿ : ಮಾದಾನಿ ಬಮ್ಮಿಸೆಟ್ಟಿ ತಕ್ಕೋಲದ ದೆಲಿಕವ್ವೆಗೊಲ್ದು ವಲ್ಲಭನಾದಂ (ಕೊಣ್ಣೂ. ೯-೦೯; 1147) ; ಮಹಾದಾನಿ–ಮಾದಾನಿ (ಶಮದ. ೨೯೦ ಕೃಹೋ) ; ಶ್ರೀಪತ್ಯಾರ್ಜುನಮಿವಾವ ನಿನ್ನನೊಲವಿಂ ಮಾದಾನಿಯೆಂಬೈದೆ (ಶಾಶಕ. ೬೪). [<ಸಂ. ಮಹಾದಾನಿನ್]

**ಮಾದಾಮತ್ತರಸ** (ನಾ). ಒಬ್ಬಾತನ ಹೆಸರು : ಬಿಜಯಿತ್ತಯ್ಯಂ ಮಾದಾಮತ್ತರಸರು ಪೊಟಲಮ್ಮನಾ ಮೇಗೆಟ್ಟು ಮೂಡಕಲ್ಲಾ ಕಾಳೆಗದುಳ್ ಗಾರವರಾಳ್ ಅಪಧೀರರಾ ಮಗನ್ ಜಾತಗುದ್ದಿಯಾರುಂ . . . ಸತ್ತರ್ (ಎಕ. X, ಶ್ರೀನಿವಾ. ೪೦-೦ ; ಸು. ೯೦೦). [ ? + ಅರಸ$_1$]

**ಮಾದಾರ** 'ಮಾದರ' ನೋ.

**ಮಾದಾರಿ** (ನಾ). ದೊಡ್ಡ ಬೀದಿ; ರಾಜಮಾರ್ಗ : ಅಂದು ಮಾದಾರಿಯೊಳು ಬಪ್ಪರಂ ಸಿದ್ಧರಾಮಾ ಎಂದು ಕರೆದು ಕರೆದು (ಸಿದ್ಧರಾ. ೨-೪೬). [ಮಾ$_4$ + ದಾರಿ]

**ಮಾದಾರಿಕೆ** 'ಮಾದರಿಕೆ' ನೋ.

**ಮಾದಾಳ** 'ಮಾದಲ' ನೋ.

Δ **ಮಾದಾಚಿಕೆ** 'ಮಾದರಿಕೆ' ನೋ.

**ಮಾದಿ$_1$** 'ಮಾತಿ' ನೋ.

**ಮಾದಿ$_2$** (ನಾ). ಒಬ್ಬಾತನ ಹೆಸರು : ಶ್ರೀಮಾದಿ ಅಬಲದಲಸ್ಕಬದ ಚಿಕಾನ್ಯಾ ತುಜುಹರಗೋಳುಗಳಲ್ಕಾದಿ ಸತ್ತಂ (ಪ್ರಕಂ. ೧೯೩೨. ೩೪-೭ ; ೨ನೆಯ ೫೫). [ ? ]

**ಮಾದಿಗ** 'ಮಾದೆಗ' ನೋ.

**ಮಾದಿಗಾಮುಂಡ**, ಮಾದಿಯಗಾಮುಂಡ (ನಾ). ಒಬ್ಬಾತನ ಹೆಸರು : ಕೋಟಗಾಮುಂಡನುಂ [ಮಾದಿ]ಗಾ[ಮು]ಂಡನ ಸಹಿತ ದಿರ್ಬಲ್ಲು ಮಾದರ[ನುಂ] (ಸೌಇಇ. XI-i, ೭-೨೨ ; 837). **ಮಾದಿಯಗಾಮುಂಡ** : ಸ್ವಸ್ತಿಶ್ರೀಮಾದಿಯಗಾಮುಣ್ಡರೀ ಪೆರಿಯೂರು . . . ಆಳೆ (ಎಕ. IX. ಬೆಂಗಳೂ. ೩೯-೦ ; ಸು. 1000). [ಮಾದಿ$_2$ + ಗಾಮುಂಡ]

**ಮಾದಿಗಾವರಿಕೆ** (ನಾ). ಒಂದು ಬಗೆಯ ತಂಗಡಿಗಿಡ : ರಕ್ತಾತಿಸಾರದಲ್ಲಿ ಕೈಯಿಂದ ಕೊಡಹಿದ ಹಸುವಿನ ಮಜ್ಜಿಗೆಯಲ್ಲಿ . . . ಮಾದಿಗಾವರಿಕೆಯ ತೊಕ್ಕನಾದರೂ . . . ದಾಳಿಂಬದ ಹೂವನಾದರೂ ಅರೆದು ಕುಡಿಯಿಸಲು ಹಿತವಹುದು (ವೈದ್ಯಸಾ. I. ೨೨೦) ; ಮಾದಿಗಾವರಿಕೆಬೇರಿನ ತೊಕ್ಕು ಏಲಕ್ಕಿ, ಜೀರಿಗೆ ಪೊನ್ನ ತೂಕವಂ ಹಸುವಿನ ಹಾಲಲ್ಲರೆದು . . . ತೆಗೆದುಕೊಳ್ಳೆ ಹೆಣ್ಣೆತ್ತರು ಮಾಣ್ಬುಂ (ಸಚ್ಛ. ೧೯೯). [ ? + ಆವರಿಕೆ]

**ಮಾದಿಗಾವರೆ** (ನಾ). = ಮಾದಿಗಾವರಿಕೆ : "ಚರ್ಮಕಸಾ—ಮಾದಿಗಾವರೆ, ಹೊಮ್ಮಿಟಿಲ" (ಓಕಂ. ೫೫). [? + ಅವರೆ]

**ಮಾದಿಗಿತ್ತಿ** 'ಮಾದೆಂಗಿತಿ' ನೋ.

**ಮಾದಿಯಗಾಮುಂಡ** 'ಮಾದಿಗಾಮುಂಡ' ನೋ.

**ಮಾದಿರ** 'ಮಾದರ' ನೋ.

**ಮಾದಿವರ್ಮ** (ನಾ). ಒಬ್ಬಾತನ ಹೆಸರು : ಗಂಗಾನ್ವಯಮೂಳಸ್ತಂಭಂ ಗಂಗರ ವಂಶಾಧಿಪತಿ ಮಾದಿವರ್ಮ್ಮಪಟ್ಟಕ್ಕರ್ಹನಪ್ಪ ಸಯ್ಯಾಂತ ಎಚಿಯಂಗಪ್ಪನ ಮಗಂ ಮಾಚಿಗಂ . . . ನೊಳಂಬಾಧಿರಾಜರಾಜರೊಳ್ಕಾದಿ ಸತ್ತಂ (ಎಕ. III (R), ಹೆಗ್ಗಡ. ೨೬-೯ ; 900 ?). [ ಮಾದಿ$_2$ + ವರ್ಮ$_1$ ]

**ಮಾದೀಗ** 'ಮಾದೆಗ' ನೋ.

**ಮಾದು$_1$** 'ಮಾಯ್' ಪರಾ.

**ಮಾದು$_2$** 'ಮಾಣ್' ಪರಾ.

**ಮಾದು$_3$** (ನಾ). (ಕರಾ) ಜಲಾಶಯಗಳಲ್ಲಿ ಹೆಚ್ಚಿನ ನೀರು ಹರಿದು ಹೋಗಲು ಮಾಡಿರುವ ದಾರಿ ; ಕೋಡಿ. [ ← ತುಳು. ಮಾದ್ = ಸುತ್ತಲೂ ತಿರುಗುವಿಕೆ. ಸಣ್ಣ ಸೇತುವೆ ]

**ಮಾದುಪಳ** (ನಾ). ಒಂದು ಬಗೆಯ ಹಣ್ಣು : ಮಾದಳ : ತೆಗಟಿ ಮೊದಲಲ್ಲಿ ಮುತ್ತಾಕ್ಕಂಟು ಗವಾಮಿಷವಾಗುರು ಪಿಂಡಿಯೆಂಬಿನಿತುಮನಿಕ್ಕುಗೆ ಜಂಬುಕಮಾಂಸಮನಿಕ್ಕುಗೆ ಮೊದಲೊಳ್ ಮಾದುಪಳದ ಕಾಯ್ ತುಜುಗಿರ್ಕುಂ (ಲೋಕೋಪ. ೬-೩೪) ; ಎನಿತೊಳವಮಾಯಕೋಟಿಗಳನಿತರ್ಕಾ ಗೇಹಮಲ್ತೆ ದೇಹಮಿದಂ ನೆಟ್ಟನೆ ಪೊತ್ತು ಸುಖಮನಜಸುಪ ಮನುಜಂ ಮೊರಡಿಯೊಳ್ ಮಾದುಪಳಮಜಸದಿರಂ (ಧುಕೋಶ. ೦-೫೦). [<ಮಾದಲ + ಪಳ$_2$ (<ಪಲ$_2$). / ತೆಲು. ಮಾದಿಫಲಮು]

**ಮಾದುಫಲ**, ಮಾದೂಫಲ (ನಾ). = ಮಾದುಪಳ : ಸುವರ್ಣಪೂರ್ಣಕಳಶಮುಂ ಕನ್ನಡಿಯುಂ ಪೂಪುಮಕ್ಕಿಯುಂ ಮಾದುಫಲಮುಂ ಮೊದಲಾಗೊಡೆಯನೇಕಾರ್ಚನೆಯಿಂದಿದಿರಂ ಬಂದು ನಿಜಿಸಿ (ಪಞ್ಚ. ೭೯-೭) : ಭಾವಿಸಲೇನಂಟೆ ಮೊರಡಿಯೊಳ್ಮಾದುಫಲಂ (ಜಸ:ಚ. ೦-೦೨೩) : ಪ್ರಸ್ಪ ಕಪಾಲಮಂ ನಿಲಲೀಯದೆ ಪುಣ್ಯಪವಿತ್ರಮನಿಟ್ಟು ಖಟ್ವಾಂಗಮಂ ಬಿಡಿಸಿ ಮಾದುಫಲಮನಿಂಬುಗೊಳಿಸಿ . . . ಶಾಶ್ವತಪ್ರತಾಪನಿಧಿಯೆನಿಪ ಶಂಕರಂಗೆ ನಂದೀಶಾದಿಗಣನಾಯಕರ್ ಸಿಂಗರಮಂ ಮಾಡಿ (ಗಿರಿಜಾ. ೦೦-೭೦ ವ). **ಮಾದೂಫಲ** : ದಧಿ ಮಧು ಸುಧೆ ಮಾದೂಫಲಂ ದೂರ್ವೆ . . . ಘುಸೃಣಂ ಮಾಣಿಕ್ಯದೀಪಂ ವಿಸುಗೆ ಬಗೆಗೆ ಚೆಲ್ವಾದುದುದ್ವಾಹಗೇಹಂ (ಶ.ಹಂ. ೩-೪). ▸ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪವಿರಬಹುದು. [ < ಮಾದಲ + ಫಲ$_1$ ]

**ಮಾದುರ$_1$** (ನಾ). ದೊಡ್ಡ ಯುದ್ಧ.—ಕಾಳಗ; ಮಹಾಸಮರ : ಮುಳಿಸೆಂಬುದೆನಗೆ ಕೌರವರೊಳೆ ಪಿರಿ[ದಾ]ಬಲಿ[ದ] ಬಯಕೆಯಂ ಮಾದುರದೊಳ್ ಕಳೆವಂತನ್ನೆಗಮಿವನೊಳ್ ಕಳೆವಂ ನಿನ್ನೊಂದು ಮುಳಿಸನಬ್ಜದಳಾಕ್ಷೀ (ಪಂಪಭಾ. ೯-೬೨). [ ಮಾ$_4$ + ದುರ ]

**ಮಾದುರ$_2$** (ನಾ). = ಮಾದಲ (?) : ಕಬಸಗೂಳ ಮೊಸರಿಂಗೆ ನಿತ್ಯವೀಸದ ಲೆಕ್ಕ ಗ ೨ . . . ಮಾದುರಕಾಳ್ಗೆ ವರುಷಕ್ಕೆ ಗ ೧ ಪ ೨ (ಎಕ. XV, ಬೇಲೂರು. ೨೫೨-೦೦ ; 1298). [ < ಮಾದಲ ? ]

**ಮಾದುವರ** (ನಾ). ಒಬ್ಬಾತನ ಹೆಸರು : ಜಾಬಯ್ಯಂಗೆ ತಾಮಾದರ್ ತನಯರ್ ಪೇಟಲ್ ಮಾದುವರಂ ದೋಯಿಲಮ್ಮನೆಂಬರ್ ಪೆಸುಂ (ಎಕ. II, ೦೩೯-೫ ; ಸು. 950). [ ? ]

**ಮಾದೂಫಲ** 'ಮಾದುಫಲ' ನೋ.

**ಮಾದೆ** (ನಾ). ಮಸಣ ; ಶ್ಮಶಾನ : "ಮಾದೆ ಮಸಣಂ" (ಕಾಶಾಧ. ೯೪). [ ? ]

**ಮಾದೆಂಗ** 'ಮಾದೆಗ' ನೋ.

**ಮಾದೆಂಗಿ**. 'ಮಾದೆಗಿ' ನೋ.

**ಮಾದೆಂಗಿತಿ**, ಮಾದಿಗಿತ್ತಿ (ನಾ). ಮಾದಿಗರ ಹೆಂಗಸು : ಮಾತಂಗಿ : ವಿದ್ಯೆ ಜಾತಿ ಮಾದೆಂ[ಪಾಠಾಂ. ದಂ]ಗಿತಿಯಾಗಿ ಪೊನ್ನ ತಳಿಗೆಯೊಳ್ ಮಾಣಿಕಂಗಳಂ ಪೊಯ್ದು ಪಿಡಿದು ಬಂದ ರುಗ್ಮಿಣನಂ ಕಂಡು ಮುಂದಿಟ್ಟು ಪೊಡೆವಟ್ಟು (ಬಂಹಂ. ೯-೬೫ ವ). **ಮಾದಿಗಿತ್ತಿ** : ಮಾದಿಗಿತ್ತಿಯನಿಲ್ಲಿ ಜಯಿಸದಿರ್ದೊಡೆ ಮುಂದೆ ಮೇದಿನಿ ನಮಗಹುದಿಲ್ಲ (ಸುಶಾಕಂ. ೪೨-೦೬) ; ಮಾದಿಗಿತ್ತಿ ಮಂಗಳವಾರ ಮಾಡಿದ ಹಾಗೆ (ಗಾದೆ). [ಮಾದೆಂಗ (< ಮಾದೆಗ) + —ಇತಿ$_1$ (<— ಇತ್ತಿ)]

**ಮಾದೆಗ**, ಮಾದಗ, ಮಾದಿಗ, ಮಾದೀಗ, ಮಾದೆಂಗ (ನಾ). ೧. ಹರಿಜನರ ಒಂದು ಒಳಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು ; ಚಮ್ಮಾರ ; ಶ್ವಪಚ : ಪೆಣ್ಣಾಯಾಗಿ ಮಾದೆಗರ [ಪಾಠಾಂ. ಮಾದರ, ಮಾದಿಗರ, ಮಾದೆಂಗರ] ಮನೆಯೊಳ್ ಪುಟ್ಟಿ ಸತ್ತು . . . ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿಗಂ ಮಗಳ್ . . . ಪೊಲತಿಯಾಗಿ ಪುಟ್ಟಿ (ಪಞ್ಚ. ೯-೪) ; ಮನೋಜ್ಞರಲ್ಲದರ ಮನೆಯೊಳ್ ಕೂಸುಗುಡುವುದಜಿಂ ಮಾದೆಗರ ಮನೆಯೊಳ್ ಕುಡುವುದು ಲೇಸು (ಧುಪಾಪೆ. ೮-೨೫ ವ). **ಮಾದಗ** : ೧. ಹುನುವಲ್ಲಳ್ಳಿಯ ಮಾದಗರ ಕಮ್ಮಯನಂ ಮಗಂನ್ ಅರಿವಮ್ಮ ಗಾವುಣ್ಡಗೆಯ್ಯೆ (ಎಕ. VIII. ಸೊರಬ. ೩೩೨-೪ ; 964). **ಮಾದಿಗ** : ೧. "ಶ್ವಪಚಃ, ಪುಲ್ಕಸಃ, ಮಾತಂಗಃ, ಪ್ಲವಕಃ — ಈ ೪ ಮಾದಿಗಂ" (ಶಬ್ದಮ. ೧೯-೪೪೪) ; ಮಾದಾರನಂ ಕರೆಯಲಟ್ಟುವುದುಮೆಯ್ಯಪ್ಪವನಂ ಮಾದಿ[ಪಾಠಾಂ. ತ]ಗಂ ಕಂಡು ತನ್ನ ಪೆಂಡತಿಗಿಂತೆಂದಂ (ಪುಣ್ಯಾಸ್ರ. ೭-೪೦ ಕ) ; ಆದಿದ್ಯವವನು ತಾ ಭೇದಿಸಲಿ ಕಜ್ಜಿಯದಲೆ ಹಾದಿಯ ಕಲ್ಲಿಗೆಡೆಮಾಡಿ ನಮಿಸುವ ಮಾದಿಗರ ನೋಡು

(ಸರ್ವಜ್ಞ. ೦೬೬) ; ಜೀತಗಾರರಾದ ಹೊಲೆಯರ ಕರಿಯನೂ ಮಾದಿಗರ ಕಾಳನೂ ಬಂದರು (ಕಂಗಾಳ್ಯ. ೭). ೨. (ಅಲಂ) ನೀಚಬುದ್ಧಿಯುಳ್ಳವನು ; ಹೀನಗುಣದಿಂದ ಕೂಡಿದವನು : ಲಂಚಂ ಬೇಡ್ವರ್ ಘಳಿಲನೆ ತಾಯ್ಗಂ ತಂಗೆಗವಳಿಪಿದವಂ ಲೆಕ್ಕವಿಡುವವಂ ಮಾದಿಗಂ (ಶಿವ- IX-i, ೦೦೬-೨೩ ; 1050) ; ಚೆನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿರ್ದು ಜೀವಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯ (ಮಹಾದೇ. ೩. ೪೬-೦೦೬): ಮಾತಿಗೆ ತಪ್ಪಿದವ ಮಾದಿಗ (ಗಾದೆ). **ಮಾದೀಗ :** ೧. ಛಂಗದೆ ನಾನಾ ಮಾದೀಗಂಗೆ ಮಹಾನಿಷ್ಠುರಂಗೆ ಪಲವಂ ಪೊನ್ನಂ ಭಂಗಿಯೊಳ್ ಕೊಟ್ಟು . . . ಬೇಗಂ ಶಿರುವಂ ಕೊಲ್ಲೆಂದಟ್ಟಿದೊಡೆ (ಧರ್ಮಾಮೃ. ೦೦-೦೫೩). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಮಾದೆಂಗ :** ೧. ಚಂಪಾಪುರದೊಳು ಮಾದೆಂಗಕುಲದೊಳು ಜಾತ್ಯಂಧಕಿಯಾಗಿ ಪುಟ್ಟಿ (ಸುಕುಮಾ. ೬-೦ ವ) : ಆ ಪುರದೆ ನಿರಯನೆಂಬೊರ್ವ ಮಾದೆಂಗನಿರ್ಪಂ (ಜೀವಂಧ. ೦೪-೦೨೭). 'ಮಾದರ' ಪರಾ.

[ದೇ.॥ ತುಳು. ಮಾದಿಗೆ ; ತೆಲು. ಮಾದಿಗ : ನಾಯ್ಕಿ. ಮಾದಿಗ್ /ಸಂ. ಮಾತಂಗ]

**ಮಾದೆಗಿ**, ಮಾದೆಂಗಿ (ನಾ). = ಮಾದೆಂಗಿತಿ : ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿ [ಕಾಕಾಂ. ಮಾತಂಗಿ]ಗಂ ಮಗಳ್. . . ಪುಟ್ಟಿಂಗುರುಡಿ ಪೊಲತಿಯಾಗಿ ಪುಟ್ಟಿ (ವಡ್ಡಾರಾ. ೯-೬). **ಮಾದೆಂಗಿ :** ನೀಳನೆಂಬ ಮಾದೆಗಂಗಂ ಕೌಶಂಬಿಯೆಂಬ ಮಾದೆಂಗಿಗಂ ಮಗಳಾಗಿ . . . ಸುಖಿಗಾಣದೆ ಪಾಪಾ ಭೂತಚೇತಸ್ಕೆಯಾಗಿರ್ಪಳಂ ನೀಮಿನಾಗಳ್ ಕಂಡಿರ್ (ಸುಕುಮಾ. ೩-೨೦ ವ). [ಮಾದೆಗ + – ಇ$_2$./ಸಂ. ಮಾತಂಗೀ]

**ಮಾದೆಯ**, ಮಾದೆಯ್ಯ (ನಾ). ಒಬ್ಬಾತನ ಹೆಸರು : ನಾಗಚಂದ್ರದೇವರ ಪುತ್ರ ಮಾದೆಯ ಸೇನಬೋವ ×× ಸ ×× ಪುನಪ್ರತಿಷ್ಠೆಯುಂ ಮಾಡಿದನು (ಎಕ. VIII, ನಗರ. ೪೩-೦೬ ; ಸು. 950). **ಮಾದೆಯ್ಯ :** ಆತನ ತಮ್ಮ ರಾಯನ್ಸ ಅಳಿಯ ಮಾದೆಯ್ಯನುಮಿಾ ಕಲ್ಲ ನೆಟ್ಟರ್ (ಎಕ. VIII, ಸೊರಬ. ೨೩೪-೦೨ ; 999). [< ಮಾದ$_2$ + < ಅಯ್ಯ$_1$]

**ಮಾದೆಯೂರ್** (ನಾ). ಒಂದು ಊರಿನ ಹೆಸರು : ಮಾದಯೂರ ಸಾನ್ನಿಪರ್ವ್ಯಾ೦ ಬರಿಯೂರನಿಜೀಯ (ಎಕ. VIII. ಸೊರಬ. ೩೩೦-೩ ; 979).
[ಮಾದ್ಯ + ಊರ್]

**ಮಾದೆಯ್ಯ** 'ಮಾದೆಯ' ನೋ.

**ಮಾದೇವ** (ನಾ). ಶಿವ ; ಈಶ್ವರ ; ಮಹಾದೇವ : "ಎಣ್ಮಯ್ಯಂ . . . ಕಂದುಗೊರಲಂ. ಮಾದೇವಂ . . . ಅಯ್ಗೊಗಂ – ಈ ೩೩ ಈಶ್ವರಂಗೆ ಪೆಸರ್" (ಶಬಕಾ. ೦-೦) ; ಅವಳಪ್ಪೊಡಮುಕ್ಕ ಪೋ ತಲೆಯಿಂದೆ ಪೋಮೊಡ ವಿಂದೆ ಮಾದೇವನಾರ್ತಡಿಗೋದಡಂ . . . ನೆರೆದಲ್ಲದಿನ್ನಿರೆನೇಕಿಯೊಳ್ (ಶಂಕರಾ. ೬-೬೩) ; ಮಾಗೆ _ ಮಹಾಕಾಳಿ _ ಮಾಕಾಳಿ . . . ಮಹಾದೇವ _ ಮಾದೇವ (ಕಮುದ. ೨೪೦. ಕೃಯೊ!) ; ಆ ದೇವ ಈ ದೇವ ಮಾದೇವನೆನ ಬೇಡ ಆ ದೇವರ ದೇವ ಭುವನದ ಪ್ರಾಣಿಗಳಿಗಾದವನೆ ದೇವ (ಸರ್ವಜ್ಞ. ೦೯೦). [ಮಾ$_4$ + ದೇವ./ಸಂ. ಮಹಾದೇವ]

**ಮಾದೇವಿ** (ನಾ). ೧. ದುರ್ಗೆ ; ಪಾರ್ವತಿ : "ಮಾಕಾಳಿ, ಮಾದೇವಿ, ಸಬ್ಬಾಣಿ. ಐಕಿಲ್ವೆಟ್ಟಿಣಗಿ, ಸಿಂಗದೇರಳ್ — ಈ ೫ ಪಾರ್ವತಿಯ ಪೆಸರ್" (ಶಬಕಾ. ೦-೩) ; ಶ್ರೀವನಿತೆಯೆನ್ನುದಕ್ಕಾದೇವಿಗೆ ವಾಗ್ದೇವಿಗಳಿಳ ಜನನುತ ಸೀತಾದೇವಿಗೆ ಮಾದೇವಿಗೆ ಭೂದೇವಿಗೆ ಸಮನೆಂಬ ನೃಪಸುತಾ ಸಮುದಯವುಂ (ಎಕ. XVIII, ೨೩೩-೭: 1021) ; ಗಡಣದೆ ಮಾದೇವಿಯ ಬಗೆಯೊಡೆಯನ ನೊಸಲೊಳ್ . . . ತೋಳೆಡೆಯೊಳ್ ಬಿಡೆ ನಟ್ಟುವು ಕಾವನಂಬುಗಳ್ ತಾವ್ಯೆದಂ (ಕನ್ನಿಕಾ. ೩೦೭). ೨. (ರಾಜನ) ಪಟ್ಟದ ರಾಣಿ ; ಪಟ್ಟಮಹಿಷಿ ; ಮಹಾರಾಣಿ : ಎನ್ನ ಮಾದೇವಿ ತಪ್ಪದಿ ಲಲನೆ ತತ್ಸ್ವಯಂಪ್ರಭೆಯ ನೋಟಕ್ಕೊಡೀ ಚಿತ್ರವಿಂತಿದ್ದಾಕೆಯದೆ ಬಳ್ಳಿ ಪೇಟಿಟ್ ಪೆರ್ಜಿಗರ್ಗವಿಂತುಟಿಟೊಂದಕ್ಕುಮೋ (ಅದಿಪು. ೯-೭) ; ದುರ್ಯೋಧನನ ಮಾದೇವಿಯರಪ್ಪ ಭಾನುಮತಿಯುಂ ಚಂದ್ರವತಿಯುಂ ಮೊದಲಾದ ಅತಿರಥ ಮಹಾರಥಾರ್ಧರಥ ಪ್ರಮುಖಸಾಮಂತಮಾಂಡಲಿಕಾಂತಃಪುರ ಕಾಂತೆಯರೊಂದಾಗಿ ತಂತಮ್ಮ ಜೀವಿತೇಶ್ವರರಂ ಸಂಗ್ರಾಮರಂಗದೊಳಜಿ ಸುತ್ತಂ ಬಂದು ಕಾಣವೆ (ಗದಾಯು.೦೦-೦೨ ವ).
[ಮಾ$_4$ + ದೇವಿ./ ಸಂ. ಮಹಾದೇವೀ]

**ಮಾದ್ರ** (ಗು). ಮದ್ರದೇಶಕ್ಕೆ ಸಂಬಂಧಿಸಿದ ; ಮದ್ರದೇಶದ : ಧರ್ಮಸುತ ಮುಂಕೊಂಡು ರಣದಲಿ ಕಾದಿ ಗೆಲಿದನೆ ಮಾದ್ರಭೂಪತಿಯ (ಕುವ್ಯಾ.ಶ. ೨ ಸೂಚನೆ). [ಸಂ.]

**ಮಾದ್ರಿ** (ನಾ). ಕ್ರೈಸ್ತ ಧಾರ್ಮಿಕ ಸ್ತ್ರೀಸಂಸ್ಥೆಗಳಲ್ಲಿದ್ದುಕೊಂಡು ಸಂನ್ಯಾಸದೀಕ್ಷೆ ಸ್ವೀಕರಿಸಿದವಳು : ಈಗ ಒಂದು ತಿಂಗಳಿನಿಂದ ಒಲ್ಗಾ ದಿನಾಲು ನನ್ನ ಹತ್ತಿರ ಬಂದು ತಾನು ಮಾದ್ರಿ (Mother) ಆಗುವ ನಿರ್ಧಾರಕ್ಕೆ ಬಂದಿದ್ದೇನೆ ಎಂದು ಹೇಳುತ್ತಿದ್ದಾಳೆ (ಕೀಮೋತ. ೨೭) ; ಆಕೆ ಕ್ರಿಸ್ತ ಮಾದ್ರಿಯ ಹಾಗೆ ವೇಷ ಧರಿಸಿ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದಳು (ಕಾಯು. ೨೪೮). 'ಪಾದ್ರಿ' ಪರಾ. [← ಇಂ. Mother./ ಸಂ. ಮಾತೃ]

**ಮಾಧವ$_1$** (ಗು). ೧. ಜೇನಿನಿಂದ ಮಾಡಿದ ; ಸಿಹಿಯಾದ. (ನಾ). ೨. ಹೆಂಡ : ಮದ್ಯ. ೩. ವಸಂತಋತು : ಮನಃಪ್ರಿಯತಮನ ಬರೆದ ಸಾಭಿಜ್ಞಾನಪಟಮನೀವುದುಮಾಕೆಯುಮದಂ ನಿರ್ವಿಚ್ಛಿ ನೋಡಿ . . . ಮಾಧವಸಮಯದೊಳಲರ್ದ ಚೂತಲತೆಯನೆ ಪೋಲ್ತಳ್ (ಆದಿಪು. ೪-೨೩). ೪. ವಸಂತಋತುವಿನ ಒಡೆಯ ; ಮಧುಮಾಸದ ರಾಜ ; ವಸಂತರಾಜ : ನೆಗಟ್ದಾ ನೃಪೋತ್ತಮನ ಮಂತ್ರಿಶಿಖಾಮಣಿ ವಂದಿಬೃಂದನಂದನವನಮಾಧವಂ ವಿರಕರಪ್ರತಿಮೋರ್ಜಿತತೇಜಂ ಕುವರ ಲಕ್ಷ್ಮನನಿಂದಿತವೀರವಂಶಜಂ (ಕಾಕಮಂ. ೦೨೨೬; ಎಕ. V. ಬೇಲೂರು. ೦೦೨; ಸು. 1220) ; ಮಾಧವನೋಲಗದ ಸಾಲೆಯೆಂಬಂತಿರೆ ಕರಂ ಸಿಂಗರಂಬೆತ್ತ ತೋಂಟದೊತ್ತಿನೊಳ್ . . . ಮದನನ್ಯೆಯ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ (ರಾಜಶೇ. ೩೪-೦೨). ೫. ವೈಶಾಖ ಮಾಸ : "ಮಧುಗಳೊಳು ಕೃಷ್ಣನೊಳು ಧರಣಿಪತಿಯೊಳು ಮದ್ಯದೊಳು ವಸಂತದೊಳು ವೈಶಾಖದೊಳು ಮಾಧವಾಖ್ಯಂ" (ಮಂಗರಾ. ೦೪೯-೪೩). [ಸಂ.]

**ಮಾಧವ$_2$** (ನಾ). ೧. ಲಕ್ಷ್ಮಿಯ ಒಡೆಯ ; ವಿಷ್ಣು : ಸಾಧುಗೆ ಸಾಧು ಮಾಧೂ(ಧು)ರ್ಯ್ಯಂಗೆ ಮಾಧೂ(ಧು)ರ್ಯ್ಯಂ ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್ ಮಾಧವನೀತನ್ಸೆಜಸಲ್ಲ (ಎಕ. X, ೬೦-೩ ; ಸು. 700). ೨. ಕೃಷ್ಣ : ವಿವಿಧಪ್ರತ್ಯಾಂಪಂ ಮಾಧವ ನಿನ್ನವಕಾಶಂ (ಗದಾ. ೩-೦೦೭) ; ಯಾದವರು ಹಿಂದಿಮ್ಮೊಡನೆ ಹಗೆಯಾದವರು ಬಳಿಕವರೊಳಗೆ ತುಚಿಗಾದವನ ಕಡುಗಾದವನ ಮಾಧವನ ಮಾತೇನು (ಕುವ್ಯಾ.ಶ. ೨-೬೭). ೩. ಇಂದ್ರ. ೪. ಕುಬೇರ. ೫. ಪರಶುರಾಮ. ೬. ರಾಜ; ಅರಸು : "ಮಧುಗಳೊಳು ಕೃಷ್ಣನೊಳು ಧರಣಿಪತಿಯೊಳು ಮದ್ಯದೊಳು ವಸಂತದೊಳು ವೈಶಾಖದೊಳು ಮಾಧವಾಖ್ಯಂ" (ಮಂಗರಾ. ೦೪೯-೪೩).
[ ಸಂ. (ಮಾ + ಧವ) ]

**ಮಾಧವಕ** (ನಾ). (ಹಿಪ್ಪೆ ಹೂವಿನ) ಹೆಂಡ : ಮದ್ಯ : "ಮಧು, ಆಸವಃ . . . ಮಾಧವಕಃ, ಹಾಲಾ. ಕಲ್ಯಂ . . . ಮಧು – ಈ ೨೪ ಕಳ್ಳು" (ಹಲಾಯು. ೩೩-೦೭೪); ಪರಿದೆನಿಸಿ ಮಾಧವಕ ಮಾಧ್ವೀಪದ ರಚಿತಮೈರೇಯಮೇಧಕಸುರೆಗಳನು . . . ಬೆರಸಿ ಕುಡಿವುತ ನಗುತ ಕೆಲೆವುತಲಿರದೆ ಕುಣಿವುತಲಿದ್ದರಂದಾ ಸಕಲ ಯಾದವರು (ತಿಮ್ಮಕು. ೦-೪೦).
[ಸಂ.]

**ಮಾಧವತ್ರಿ** (ನಾ). ಒಬ್ಬಾತನ ಹೆಸರು : ಮಾಧವತ್ರಿಯರಸರ್ಗ್ಗೆ [ವಿಜ್ಞಾಪನಂಗೆ]ಯ್ಯುದ್ದ ದೋಣಗಾಮುಂ ಎಳಗಾಮುಮಂ ಮಳ್ಳಿಯರುಂ . . . ಎಂಟುಂ ಮತ್ತಲ್ ಗಟ್ಟಿದ್ದಿ ರಾಜಮಾನಂ ಜಿನೇಂದ್ರ ಭವನಕ್ಕೆ ತ್ತೂರ್ (೨೮. XI. ೬೦-೦೭ ; 567). ☞ ಇದು 'ಮಾಧವಸತ್ರಿ' ಯೆಂಬುದರ ಅಪಲಿಖಿತವಿರಬಹುದು.

[ ಮಾಧವ$_2$ + < ಸತ್ರಿ$_1$ ]

**ಮಾಧವಮನೋಹರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾಧವಮನೋಹರಿಯು (೧೩) ಸಂಪೂರ್ಣ, ಸ – ಗ್ರಹದಿಂದ ಕೂಡಿದೆ. ಆರೋಹದಲ್ಲಿ ಧ – ವು ವಕ್ರವಾಗಿದೆ, ಅವರೋಹದಲ್ಲಿ ಪ – ಇಲ್ಲ (ತತುಕ್ರ. ೦೩೬). [ಸಂ. ಮಾಧವಮನೋಹರೀ]

**ಮಾಧವಯ್ಯ** (ನಾ). ಒಬ್ಬಾತನ ಹೆಸರು : ಮಾಧವಯ್ಯಂ ಬರೆದಂ ನಾಗಂ ಬೆಸಗೆಯ್ದಂ (ಎಕ. VIII. ತೀಹಂ. ೩೬೦-೦೨; 979).

[ ಮಾಧವ$_2$ + ಅಯ್ಯ$_{11}$ ]

**ಮಾಧವಿ** (ನಾ). ೧. ಕಲ್ಲುಸಕ್ಕರೆ. ೨. ಜೇನಿನಿಂದ ಮಾಡಿದ ಒಂದು ಬಗೆಯ ಪಾನೀಯ. ೩. ಒಂದು ಬಗೆಯ ಬಳ್ಳಿ ಮತ್ತು ಅದರ ಬಿಳಿಯ ಬಣ್ಣದ, ಸುವಾಸನೆಯಿಂದ ಕೂಡಿದ ಹೂವು : "ಅತಿ ಮುಕ್ತಕಃ, ವಾಸಂತೀ, ಮಾಧವೀ – ಈ ೩ ಅದಿಮುರ್ತ್ತಿ" (ಹಲಾಯು. ೩೩-೩೩); ಇದಿರೊಳ್ ನನೆದೋಱಿ ವಸಂತದೂತಿಯೆನೆ ತಾನೆ ನೆಗಳ್ದ ಮಾಧವಿಯೆನೆ ಸಂದಿರ್ದುದತ್ತೆಯು ಪೂಗೊಂಚಲ ಪುದುವಿನೊಳೆಱಗದ ಮಧಾಳಿಗಳ್ ಮಱೆದಪ್ಪುವೇ (ಅಂಕ. ೦೦-೦೦೬); ಪಱಿಯೆ ಮದಮಂ ಮಾಗಿ ಕಱಿಯೆ ಸೊಗಸಂ ಮಾವು ನೆಱಿಯೆ ಕಳೆ ಪೆರ್ಚೆ ಸಸಿ ಮೆಱಿಯೆ ಮಾಧವಿ ಪೂತು ತೊಱಿಯೆ ಲಜ್ಜೆಯನವನಿ . . . ಕಣ್ಗೆಱಿದುದು ವಸಂತಮಾಸಂ (ಶಬ್ದಣ. ೬-೩): ಅದಿರ್ಗಂತಿಯುಂ ತಾಟಿ ಮಾಲತಿಯುಂ ಮುಟ್ಟಿ ಮಾಧವಿಯುಂ ಕಟ್ಟಿ ಬಸಗಾಳಿ ತಣ್ಣನೆ ತೀಡುಗುಂ (ರಾಮಾಶ್ವ. ೩೪-೦). ೪. ಭೂಮಿ : "ಭೂಮಿಃ — ಮಾಧವಿ" (ಓಕಧ. ೦೦೦). ೫. ತಲೆಹಿಡುಕಿ : ಕುಂಟಣಿ. [ ಸಂ. ಮಾಧವೀ ]

**ಮಾಧುಕರ** (ಗು). ದುಂಬಿಯನ್ನು ಹೋಲುವ : 'ಮಾಧುಕರವೃತ್ತಿ' ಪರಾ. [ಸಂ.]

**ಮಾಧುಕರವೃತ್ತಿ** (ನಾ). ದುಂಬಿಯು ಹೂವಿನಿಂದ ಹೂವಿಗೆ ಅಲೆದಾಡಿ ಮಧುವನ್ನು ಸಂಗ್ರಹಿಸುವಂತೆ, ಮನೆಯಿಂದ ಮನೆಗೆ ಸುತ್ತಾಡಿ ಆಹಾರವನ್ನು ಸಂಗ್ರಹಿಸುವಿಕೆ; ಭಿಕ್ಷಾವೃತ್ತಿ: ಪ್ರಕಟಿತಾತ್ಮ ಧ್ಯಾನದಲಿ ಮಾಧುಕರವೃತ್ತಿಯಲಿರ್ದು ಕೈವಲ್ಯಕೆ ನಡೆವ ಬಗೆಯುಳ್ಳಡದು ಯತಿಧರ್ಮವಹುದು (ಮ್ಮಣಂ. ೭ ೧೦). [ಸಂ.]

**ಮಾಧುಕರಿ** (ನಾ). ೧. = ಮಾಧುಕರವೃತ್ತಿ. ೨. ಮಾಧುಕರ ವೃತ್ತಿಯಿಂದ ಪಡೆದ ಆಹಾರ; ಭಿಕ್ಷೆ : ನಾರಾಯಣ್ಣನು ನೆರೆಹೊರೆಯ ಕೆಲವು ಮನೆಯಿಂದ ಮಾಧುಕರಿಯನ್ನು ತಂದು ಶ್ರೀರಾಮನಿಗೆ ನೈವೇದ್ಯ ಮಾಡಿ ಒಪ್ಪತ್ತು ಊಟ ಮಾಡುತ್ತಿದ್ದನು (ಭಕ್ತ್ಯೋ. ೬೦).

[ ಸಂ. ಮಾಧುಕರೀ ]

**ಮಾಧುರ** (ನಾ). ೧. ಸಿಹಿಯಾದುದು ; ಮಧುರವಾಗಿರುವುದು. ೨. ಒಂದು ಬಗೆಯ ಮಾದಕಪಾನೀಯ : ದ್ರಾಕ್ಷಾರಸ : ವರಸುಧಾರೋಗಣೆಗೆ ಮಾಧುರದ [ಪಾಠಾಂ. ಮಧುರದಾ, ಪಾಯಸದ] ಹಂಗೇಕೆ (ಸಿದ್ಧರಾ. ೦-೪); ಪಾವನಜ್ಯೋತಿರ್ಮಯಾಂಗಿಗೆ ದೀವಿಗೆಯ ಹಂಗುಂಟೆ ಪರಶಿವಭಾವನಾವ್ಯುತದನುಭವಿಗೆ ಮಾಧುರದ ಹಂಗುಂಟೆ (ಬಸವ. ೦೦-೦೩). ೩. ಮಲ್ಲಿಗೆಯ ಹೂವು. [ಸಂ.]

**ಮಾಧುರಿ** (ನಾ). ೧. ಸವಿ ; ರುಚಿ : ವರ್ದುರವೇಂ ಮಕರಂದ ಮಾಧುರಿಯನಱಿದಪುದೇ ! (ಶೀತಿಮಂ. ೦-೩೬೬). ೨. ಇಂಪು ; ಹಿತ ; ಆಹ್ಲಾದ : ಎದೆಯ ಮಾಧುರಿಯನರುಹೆಮಗೆ (೧೯೫೦. ೭-೭೪). ೩. ಮಾದಕಪಾನೀಯ; ಮದ್ಯ. [ ಸಂ. ಮಾಧುರೀ ]

**ಮಾಧುರ್ಯ$_1$** (ನಾ). ಯುದ್ಧದಲ್ಲಿ ಮಹಾಪರಾಕ್ರಮಿಯಾದ ವ್ಯಕ್ತಿ : ಸಾಧುಗೆ ಸಾಧು ಮಾಧೂ(ಧು)ರ್ಯ್ಗನ್ಗೆ ಮಾಧೂ(ಧು)ರ್ಯ್ಯಂ ಬಾಧಿಪ್ಪ ಕಲಿಗೆ ಕಲಿ ಯುಗವಿಪರೀತನ್ ಮಾಧವನೀತನ್ಪೆಱನಲ್ಲ (ಇಕ. X. ೬೦-೩ ; ಕು. 700). [ < ಸಂ. ಮಹಾಧುರ್ಯ ]

**ಮಾಧುರ್ಯ$_2$** (ನಾ). ೧. ಸಿಹಿ ; ಸವಿ : ನವಯೌವನಮಾದಂತುನ್ನತ ಪಂಚವಿಂಶತಿಪ್ರಾಯಮಾಗಿ. . . ಸವಿಯಲಿರ್ದಮೃತಫಳದಂತೆ ಮಾಧುರ್ಯ ಭರಿತನಾಗಿ (ಕಂಬಿರ. ೦೦-೬). ೨. ಇಂಪು; ಹಿತ : ಭುವನಸ್ವರ ಮೇಲನದಿ ನಿಯಮಸಂಯಮಪೂರ್ಣಮಾಧುರ್ಯವುಕ್ಕುತಿದೆ (ಕಶ್ಯಾಂಗ. ೦-೦೩ ) ; ಅಶ್ವವಿದ್ಯೆಯೇ ಈಗ ಅವನ ಮನಸ್ಸನ್ನು ಹಿಡಿದಿತ್ತು, ಸಹವಾಸಮಾಧುರ್ಯದ ಮೂಲಕ (ಸಮುಶೀ. ೪೨೦). ೩. ಕೋಮಲತೆ ; ಮೃದುತ್ವ : ಮಾತಿನಲ್ಲಿ ಮಾಧುರ್ಯವಿತ್ತು. ತೀವ್ರತೆಯಿರಲಿಲ್ಲ (ಮಹಾಂ. ೦೩೨). ೪. ಅಂತಃಕರಣ; ಅನುಕಂಪ. ೫. [ಕಾವ್ಯಮೀ] ಕಾವ್ಯದ ಹತ್ತುಗುಣಗಳಲ್ಲಿ ಒಂದು; ಕೇಳಿದ ಕೂಡಲೆ ಮನಸ್ಸನ್ನು ಆಹ್ಲಾದಗೊಳಿಸುವ ಶಬ್ದದ ಒಂದು ಗುಣ; ದೀರ್ಘ ಸಮಾಸಗಳಿಲ್ಲದೆ ಪ್ರತ್ಯೇಕಪದಗಳಿಂದ ಕೂಡಿರುವುದು : ಅಸಮಸ್ತ ಪದನ್ಯಾಸಂ ಪ್ರಸಾದಮಾಧುರ್ಯಗುಣಸಮಗ್ರಮುದಾರಂ ರಸಭಾವ ಭಾವಿ ತೋಕ್ತಿಪ್ರಸರಂ ವೈದರ್ಭರೀತಿಯೆನೆ ಪೆಸರ್ವಡೆಗುಂ ( ಕಾವ್ಯಾ.ಕ. ೭೬೨ ) ; ಸಮಾಸ ಪ್ರಾಸದೇಶೀಸರಣಿಶಬ್ದಾರ್ಥೋಪಮಾಚಾತುರ್ಯಮಾಧುರ್ಯ. . . ನಿಯಮಾಕ್ಷರಸಲಕ್ಷಣಭಾವಮಾಗಿರೆ ರಚಿಸುವೆಂ ಕೃತಿಯ (ಬಸವ. ೦-೦೯) ; ಶ್ಲೇಷ, ಪ್ರಸಾದ, ಸಮತೆ, ಮಾಧುರ್ಯ. . . ಸಮಾಧಿ ಈ ಹತ್ತು ಗುಣಗಳೇ ವೈದರ್ಭಕಾವ್ಯದ ಪ್ರಾಣ (ಕಾರಕಿಶಿ. ೨೯). [ಸಂ.]

**ಮಾಧುರ್ಯೆ** (ನಾ). ೧. ಸಿಹಿಯಾದುದು : ಮಧುರವಾದುದು. ೨. ಒಂದು ಬಗೆಯ ಮರ ; ಸಿಹಿಹಾಲೆ ; ಜೇವಣಿಗೆ : "ಜೀವನಿಕೆ(ಗೆ) ಮಾಧುರ್ಯೆಯಕ್ಕು" (ಮಂಗಣ. ೪೨-೩೬). [ ಸಂ. ಮಾಧುರ್ಯಾ ]

**ಮಾಧೂಕರ** (ನಾ). = ಮಾಧುಕರಿ ೨: ಮಾಧೂಕರ ಅಸಂಕ್ಲೃಪ್ತ ಪ್ರಾಕ್ಪ್ರಣೀತ ಅಯಾಚಿತ ತಾತ್ಕಾಲಿಕಮೆಂಬ ಪಂಚವಿಧಭಿಕ್ಷಂಗಳನಾದೊಡಂ . . . ಭೋಜನಂಗೈದು (ತಿವೇಕ. ೦೨೮). [ < ಸಂ. ಮಾಧುಕರ]

**ಮಾಧೂಕರವೃತ್ತಿ** (ನಾ). = ಮಾಧುಕರವೃತ್ತಿ : ಒರ್ವಳೆ ಮಾಧೂಕರ ವೃತ್ತಿಯಿಂದೆ ಪೊರೆವುತ್ತಾ ದೇಹಮಂ ಸಂತತಂ (ದಿವ್ಯಸ. ೭-೩೨).

[ < ಸಂ. ಮಾಧುಕರವೃತ್ತಿ ]

**ಮಾಧೂಕರಿ** (ನಾ). = ಮಾಧುಕರಿ ೨ : ತುಂಬಿ ಪುಷ್ಪರಸವನ್ನು ತೆಗೆದು ಕೊಳ್ಳುತ್ತಿರ್ದು ಹಂಗೆ ಹೂವನ್ನು ಬಾಧಿಸದಿಹುದು ಹಾಂಗೆ ಮನೆಯೊಡೆಯನ ದೆಸೆಯಿಂದಮಧುಕರವೃತ್ತಿಯಿಂದ ಸಿದ್ಧಿಸಿದುದಾದ ಮಾಧೂಕರಿಯೆಂಬ ಭಿಕ್ಷೆಯನ್ನು ತೆಗೆದುಕೊಂಬುದು (ಕೃಷಿಟೀ. ೩೭). [ < ಸಂ. ಮಾಧುಕರೀ ]

**ಮಾಧ್ಯಂದಿನ** (ನಾ). ೧. ದಿನದ ಮಧ್ಯದ ಸಮಯ ; ಮಧ್ಯಾಹ್ನ; ನಡುಹಗಲು. ೨. ನಡುಭಾಗ ; ಮಧ್ಯದ ಭಾಗ. ೩. ಶುಕ್ಲ ಯಜುರ್ವೇದದ ಒಂದು ಶಾಖೆ . [ಸಂ.]

**ಮಾಧ್ಯಮ** (ಗು). ೧. ಮಧ್ಯಭಾಗಕ್ಕೆ ಸಂಬಂಧಿಸಿದ; ನಡುಭಾಗದ. (ನಾ). ೨. ಮತ್ತೊಬ್ಬರಿಗೆ ತಿಳಿಸಲು ಮಧ್ಯವರ್ತಿಯಾಗಿ ಬಳಕೆ ಯಾಗುವ ಭಾಷೆ ಮೊದಲಾದ ಸಾಧನ : ಅವರಿಗೆ ಕನ್ನಡಭಾಷೆ ಯೊಂದೇ ಏಕೈಕ ಮಾಧ್ಯಮ (ಕೂಸ್ಮಕು. ೦೩೬); ಮಾಧ್ಯಮ ಏನಿದ್ದರೂ ಭಾವಪ್ರವಹಣಕ್ಕಾಗಿ ಹೊರಗಿನಿಂದ ತಂದು ಜೋಡಿಸಿಕೊಂಡ ಒಂದು ಉಪಕರಣ ಎಂದು ಅರ್ಥ ಮಾಡುವುದುಂಟು (ಶ್ರೀಂದ್ರಕ. ೬೨). ☞ ಇಲ್ಲಿ ಕೊಟ್ಟಿರುವ ಎರಡನೆಯ ಅರ್ಥ ಮತ್ತು ಪ್ರಯೋಗಗಳು

ಇಂಗ್ಲಿಷಿನ 'Medium' ಎಂಬ ಪದಕ್ಕೆ ಸಂಬಂಧಿಸಿದವುಗಳು. ಈ ಅರ್ಥ ಸಂಸ್ಕೃತದಲ್ಲಿ ಇಲ್ಲವಾದರೂ, ಸಂಸ್ಕೃತದ 'ಮಾಧ್ಯಮ' ಎಂಬುದರ ಮೂಲಾರ್ಥದಿಂದಲೇ ಅರ್ಥವಿಸ್ತಾರವನ್ನು ಹೇಳುವ ಸಾಧ್ಯತೆಯಿದ್ದು, ಇಂಗ್ಲಿಷಿನ 'Medium' ಎಂಬುದರ ಸಂವಾದಿಯಾಗಿ, ಸಂಸ್ಕೃತದ 'ಮಾಧ್ಯಮ' ಎಂಬ ಶಬ್ದವೇ ಬಳಕೆಯಾಗಿದೆ. [ಸಂ.]

**ಮಾಧ್ಯಮಿಕ** (ಗು). ೧. ಮಧ್ಯದಲ್ಲಿರುವ ; ಮಧ್ಯಭಾಗದ. (ನಾ). ೨. [ಬೌದ್ಧ] ಬೌದ್ಧಮತದ ಒಂದು ಶಾಖೆ ; ಗೋಚರಿಸುವ ವಸ್ತುಗಳೆಲ್ಲ ಸತ್ಯಾವಭಾಸಿಗಳು ಎಂದು ಪ್ರತಿಪಾದಿಸುವ ವಾದ; ಶೂನ್ಯವಾದ : ಧರ್ಮಪ್ರಭಾವಮುಮಂ ತತ್ಫಲಸ್ವಭಾವಮುಮಂ ತಿಳುಪುವವಸರದೊಳುಟಿದ ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕಮತವಿತಥಾಭಿಧಾಯಿಗಳ್ ಜೀವಾಭಾವಮನೆ ಪಿಡಿಯುಚ್ಚು ನುಡಿದು (ಆಪು. ೨-೬ ವ); ಈ ಮೂಲತತ್ತ್ವಾನ್ವೇಷಣರೂಪದಲ್ಲಿ ಚಾರ್ವಾಕ . ... ಯೋಗಾಚಾರ, ಮಾಧ್ಯಮಿಕ, ಜೈನದರ್ಶನಗಳೆಂಬ ಆರು ನಾಸ್ತಿಕದರ್ಶನಗಳೂ . . . ಆವಿರ್ಭವಿಸಿರುತ್ತವೆ (ಕಾರಿದ. ೨೨೯); ಲೋಕಾಯತಿಕ (ನಾಸ್ತಿಕ) ಯೋಗಾಚಾರ (ವಿಜ್ಞಾನವಾದ) ಮಾಧ್ಯಮಿಕ ( ಶೂನ್ಯವಾದ )ಗಳೆಂಬ ಮತಗಳನ್ನು ಬೋಧಿಸುವ ಮಹಾಮತಿ – ಸಂಭಿನ್ನಮತಿ–ಶತಮತಿಗಳೆಂಬ ಮಂತ್ರಿಗಳು ಸ್ವಯಂಬುದ್ಧನ ಹೇಳಿಕೆಗಳನ್ನೆಲ್ಲ ಖಂಡಿಸಲು ಸೊಂಟಗಟ್ಟಿದರು (ಪಾಕೋಶ. ೩೬೦). ೩. ಮಾಧ್ಯಮಿಕಮತವನ್ನವಲಂಬಿಸಿದವನು ; ಶೂನ್ಯವಾದಿ : 'ಅಭಿಧರ್ಮವಿಭಾಷಾ' ಸಂಪ್ರದಾಯಕ್ಕೆ ಸೇರಿದವರು. ಯೋಗಾಚಾರರೂ ಮಾಧ್ಯಮಿಕರೂ ಆಗಿರುವರು (ಹಿಂದಶಾ. ೨೪): ಸ್ವಚ್ಛವಾದ ಸಂವಿತ್ತೆಂಬ ಜ್ಞಾನವೇ ಮಾಧ್ಯಮಿಕರಿಗೆ ಸಮ್ಮತ (ಕಾರದ. ೨೦೪). [ಸಂ.]

**ಮಾಧ್ಯಮಿಕಶಾಲೆ** (ನಾ). ಪ್ರಾಥಮಿಕ ವಿದ್ಯಾಭ್ಯಾಸ ಮತ್ತು ಪ್ರೌಢ ವಿದ್ಯಾಭ್ಯಾಸಗಳ ನಡುವಿನ, ವಿದ್ಯಾಭ್ಯಾಸವನ್ನು ಮಾಡುವ ಪಾಠಶಾಲೆ : ಉಪನಯನವಾದ ಐದು ವರ್ಷಗಳಲ್ಲಿ ಚೀನಿ ಮಾಧ್ಯಮಿಕ ಶಾಲೆಯನ್ನು ಪೂರೈಸಿದ್ದ (ವಂಶವೃ. ೩೦೨). P ಇದು ಇಂಗ್ಲಿಷಿನ 'Middle School' ಎಂಬುದರ ಅನುವಾದ.

ಸಂ. ಮಾಧ್ಯಮಿಕಶಾಲಾ]

**ಮಾಧ್ಯಸ್ಥ** (ಗು). ೧. ಮಧ್ಯೆ ಇರುವ ; ನಡುವೆ ಇರುವ. ೨. ಯಾವ ಪಕ್ಷಕ್ಕೂ ಸೇರದ. [ಸಂ.]

**ಮಾಧ್ಯಸ್ಥವೃತ್ತಿ** (ನಾ). [ಜೈನ] ವಿನಯರಹಿತರೂ ತಮ್ಮ ಧರ್ಮದಿಂದ ವಿಮುಖರೂ ಹಟಮಾರಿಗಳೂ ಆದ ಜನರ ಬಗ್ಗೆ ವ್ರತಸ್ಥರಾದಂಥವರು ಇರಿಸಿಕೊಳ್ಳುವ ರಾಗದ್ವೇಷರಹಿತವಾದ ಭಾವನೆ : ಸತ್ವಗುಣಾಧಿಕಕ್ಲಿಶ್ಯಮಾನಾವಿನಯರೊಳ್ ಮೈತ್ರಿಪ್ರಮೋದ ಕಾರುಣ್ಯಮಾಧ್ಯಸ್ಥವೃತ್ತಿಯುಂ ಭಾವಿಸುತ್ತುಂ (ಸುಕುಮಾ. ೪-೨೧ ವ). [ಸಂ.]

**ಮಾಧ್ಯಸ್ಥಿಕೆ** (ನಾ). ಎರಡು ಪಕ್ಷಗಳ ಅಥವಾ ವ್ಯಕ್ತಿಗಳ ನಡುವೆ ಸಂಧಾನ ನಡೆಸುವುದು ; ಮಧ್ಯಸ್ಥಿಕೆ : ಇಂಥ ಸಂದರ್ಭಗಳಲ್ಲಿ ಹುಡುಗಿಯರಿಗೂ ಉಪಾಧ್ಯಾಯ–ಗಂಡಸರಿಗೂ ಮಾಧ್ಯಸ್ಥಿಕೆಗೆ (Liaison) ಯಾರಾದರೂ ಇದ್ದರೆ ಅನುಕೂಲವಾಗುತ್ತದೆ (ಹಸುಹೊ. ೩೨೬).

[ಮಾಧ್ಯಸ್ಥ + — ಇಕೆ]

**ಮಾಧ್ಯಾಹ್ನಿಕ** (ಗು). ೧. ಮಧ್ಯಾಹ್ನ ಕಾಲದಲ್ಲಿ ಆಚರಿಸಬೇಕಾದ : ಸ್ನಾನ ಮಾಧ್ಯಾಹ್ನಿಕಜಪ ವೈಶ್ವದೇವ ದೇವತಾರ್ಚನೆ ಭೋಜನಾದಿಗಳಾದ ಮೇಲೆ (ಶಕಶ. ೪). (ನಾ). ೨. ಮಧ್ಯಾಹ್ನದಲ್ಲಿ ಮಾಡುವ ಸಂಧ್ಯಾವಂದನೆಯೇ ಮುಂತಾದ ನಿತ್ಯಕರ್ಮ : ಈ ನದಿಯೊಳಗೆ ಮಾಧ್ಯಾಹ್ನಿಕವನಾಚರಿಸಿ ಬಂದಪೆನು (ಶಿಬಾಗ. ೧೧-೩೩-೪): ಮಾಧ್ಯಾಹ್ನಿಕಾದಿ ನಿತ್ಯಸಂಧ್ಯಾಕರ್ಮಂಗಳನ್ನು . . . ಮಾಡಿದವನಾಗಿ . . . ಭೋಜನ ಮಾಡಬೇಕೆಂದು ಬಲ್ಲವರ ಮತವು (ಸಕವ್ಯ. ೯೯). [ಸಂ.]

**ಮಾಧ್ವ** (ಗು). ೧. ಮಧ್ವಮತಕ್ಕೆ ಸೇರಿದ : ಈ ಪ್ರಾಂತದ ಮಾಧ್ವ ಬ್ರಾಹ್ಮಣರು ಪೊಳ್ಳೇ ವರ್ಚಸ್ಸುಳ್ಳವರಾಗಿದ್ದಾರೆ (ಕಶಾಗ. ೬೩); ಮಾಧ್ವಯತಿಗಳು ಸ್ಮಾರ್ತಪಂಡಿತನಾದ ತನ್ನನ್ನು ಸನ್ಮಾನಿಸುವರೇ ಎಂಬ ಸಂಶಯವಿವನಿಗಿದ್ದಂತೆ ತೋರುತ್ತದೆ (ಕಶು. ೯೩). (ನಾ). ೨. ಮಧ್ವಾಚಾರ್ಯರ ಮತದ ಅನುಯಾಯಿ ; ವೈಷ್ಣವಸಂಪ್ರದಾಯದವನು: ಮಾಧ್ವರು ಚಲುವರೂ, ಕಸುವುಳ್ಳವರೂ, ಪೊಳ್ಳೇ ಮೈಕಟ್ಟುಳ್ಳವರೂ ಇರುತ್ತಾರೆ (ಕಶಾಗ. ೬೩). ೩. ಮಧ್ವಾಚಾರ್ಯರ ತತ್ತ್ವ,–ಸಿದ್ಧಾಂತ. [ಸಂ.]

**ಮಾಧ್ವಮತ** (ನಾ). ಮಧ್ವಾಚಾರ್ಯರು ಸ್ಥಾಪಿಸಿದ ಮತ ; ದ್ವೈತಮತ : ಈ ಮತಕ್ಕೆ ಮಾಧ್ವಮತ, ದ್ವೈತಮತ, ವೈಷ್ಣವಮತ ಎಂದೂ ಹೆಸರು . . . ಮಧ್ವಾಚಾರ್ಯರು ಅಥವಾ ಆನಂದತೀರ್ಥರು ತಮ್ಮ ವಿಶಿಷ್ಟಶಕ್ತಿಯಿಂದ ಮಾಧ್ವಮತವನ್ನು ಬಳಕೆಗೆ ತಂದುದಲ್ಲದೆ ದೇಶ ಸಂಚಾರ ಮಾಡಿ ಅದನ್ನು ನಾನಾ ಕಡೆಗೆ ಹರಡಿದರು (ಚಾಕದ. ೨೬೬). [ಸಂ.]

**ಮಾಧ್ವಿ** (ನಾ). ೧. ಅಮಲು ಬರಿಸುವ ಪಾನೀಯ ; ಮದ್ಯ. ೨. = ಮಾಧವಿ ೩. [ಸಂ. ಮಾಧ್ವೀ]

**ಮಾಧ್ವೀಕ** (ಗು). ೧. ಅಮಲು ಉಂಟಾಗುವ ; ಮತ್ತುಬರುವ : ಮುಗ್ಧನಾಗದೆ ಭುಜಿಸು ಭುಜಿಸಲಿಹುದನು ಜಗದಿ ಮಾಧ್ವೀಕ ಭಯವಿರದು ಜಾಗರೂಕನಿಗೆ (ಮಂಕುತಿ. ೬೩೯). (ನಾ). ೨. ಹಿಪ್ಪೆಹೂವುಗಳನ್ನು ಭಟ್ಟಿಯಿಳಿಸಿ ತಯಾರಿಸುವ ಒಂದು ಬಗೆಯ ಮಾದಕಪಾನೀಯ. ೩. ದ್ರಾಕ್ಷೆಹಣ್ಣು. ೪. ದ್ರಾಕ್ಷಾರಸ : "ಮಾಧ್ವೀಕಂ – ದ್ರಾಕ್ಷೇಹಣ್ಣಿನ ಹೆಂಡದ ಹೆಸರು" (ಸಿದ್ಧಾಂತಿ. ೩೦೮). [ಸಂ.]

**ಮಾನ** (ನಾ). ೧. ಮರ್ಯಾದೆ : ಗೌರವ : ಮಾನಿಸರೊಳ್ಪುಂ ಬಾಟಮುದೇನೊಪ್ಪಮುದೇನಸ್ಸಾರವಿಸ್ತಾರಮುದೇಂ ಮಾನಮುದೇಂ ವಿಪುಳಮುದೇಂ ದೀನಮುದೇಂ ಸ್ತೋಕಸುಖಮುದೇನಧ್ರುವಮೋ (ಶಾಂತಿಪು. ೯-೧೧೨) ; ಮಾನಂ ಸದ್ಧೈರ್ಯ ದೀಕ್ಷಾಗುರು ಸುರಗಿರಿಗಂ ಕಲ್ಪವೃಕ್ಷಕ್ಕೆ ಹಸ್ತಂ ದಾನೋಪಾಧ್ಯಾಯಂ . . . ಎಂಬನ್ನಮಾದಂ ಜಗಮನೆಜಿಗಿಸಲ್ ಸುಪ್ರತಿಷ್ಠಂ ಗರಿಷ್ಠಂ (ಅರ್ಜನ. ೪-೩೩). ೨. ಆತ್ಮಗೌರವ ; ಅಭಿಮಾನ : ಪರಿಭವಕೆ ಗುರಿಯಾಯ್ತು ನಿನ್ನ ಮಾನಂ ? (ಶ್ರೀರಾಮಾ. ೬೮-೩೮೪). ೩. ಜಂಭ ; ಗರ್ವ ; ಅಹಂಕಾರ : "ದರ್ಪಃ, ಮದಃ, ಅವಲೇಪಃ, ಮಾನಃ, ಗರ್ವಃ, ಅಹಂಕಾರಃ—ಈ ೬ ಗರ್ವಂ" (ಹಲಾಯು. ೧೦೯-೩೬); ಮಾನಮನೆಂತುಂ ಮಿಥ್ಯಾಜ್ಞಾನಿಗಳೆರ್ದೆಯೊಳಗೆ ನೆಲಸಲೀಯದೆ ನಾಲ್ಕುಂ ಮಾನಸ್ತಂಭಂಗಳ್ ರತ್ನಾನದ್ಧಂಗಳ್ ನಿರಂತರಂ ಸೊಗಯಿಸುಗುಂ (ಆದಿಪು. ೧೧-೨೪); ಸರ್ವಥಾ ಮಾನ ಮತ್ಸರ ಕೇಡು ಮರ್ತ್ಯರಂಗೆ (ಅಭ್ಯಕ. ೨-೩೬). ೪. ಅಭಿಪ್ರಾಯ; ತಿಳಿವಳಿಕೆ; ಭಾವನೆ. ೫. ಅಳೆಯುವುದು: ಅಳೆಯುವಿಕೆ. ೬. ಒಂದು ಅಳತೆಯ ಪ್ರಮಾಣ; ನಾಲ್ಕು ಸೊಲಿಗೆ; ಅರ್ಧಸೇರು : "ನಾಲ್ಕು ಸೊಲ್ಲಗೆಗೆ ಮಾನಂ" (ಮುಂಗರಾ. ೧೦೪-೧೧); × × ತುಪ್ಪ ಮಾನವೊನ್ದು (ಶಾಶಾ. XI-i, ೪೦-೦೪; 966); ಐದು ಮಾನವ ಕುಟ್ಟಿ ಒಂದು ಮಾನವ ಮಾಡು ಕಂಡಾ ಮದವಳಿಗೆ (ಬಸವ. ೬೬೬); ಉಪ್ಪು ಹೇಱಂಗೆ ಮಾನ ೨ ಅಕ್ಕಿ ಬತ್ತ ಹೇಱಂಗೆ ಮಾನ ೨ (ಎಕ. VII, ಶಿಮೊ. ೬೬-೫೦; 1203). ೭. ಜಮೀನಿನ ಒಂದು ಅಳತೆ; ಕ್ಷೇತ್ರವಿಸ್ತೀರ್ಣ; ಕ್ಷೇತ್ರವಿಸ್ತಾರ : ಬಡಗಣ ತೋಂಟದ ಕಮ್ಮಂ ಕಡೆಯೊಳು ಮೂವತ್ತುವೆರಸಿದಬುಸೂಜಿಲ್ಲಿಂ ಪಡುವಣ ಬಡಗಣ ಕೋಣೆಯೊಳ್ಗಡಿಂಬದಿವರ್ತ್ತರಿಟ್ಟ ಗಟ್ಟಿಯ ಮಾನಂ (ಶಾಶಾ. IX-ii, ೦೩೬-೫೦; 1090). ೮. ಕಾಲದ ಒಂದು ಅಳತೆ,—ಪರಿಮಿತಿ : ನೀವಿವನಹವ ಮರಿಯಲು ನಿಮ್ಮ

ಮಾನಕೆ ನಿಮಿಷ ತಾನಿಲ್ಲ (ಕೋಗಮ. ೯-೯೭) ; ವರುಷ ೧ನ್ನು ದಿನ ೬ನ್ನು ದಿನವ ಮಾಡಲು . . . ಮಾನವ ಮಾಡಲು ೪೨೭೦ರಿಂದ ಗುಣಿಸಲು (ಶಾಸ್ತ್ರ. ೨೭-೨). ೯. ಅಳತೆ ಮಾಡಲು ಉಪಯೋಗಿಸುವ ಒಂದು ಸಾಧನ; ಅಳೆಯಲು ಬಳಸುವ ಪಾತ್ರೆ : ಮಾನದ ತೋರಿಹ ಅವಿಂಗೆ ಕೊಳಗದ ತೋರಿಹ ಕೆಚ್ಚಲು (ಅಜಿಂ. ೦೨-೮೬); ಆನೆಯು ಮಾನದೊಳಕ್ಕಿದ ಡಡಗುವುದೆ ದರ್ಪಣದೊಳಡಗುವುದಲ್ಲದೆ (ಶಬ್ದಮ. ೪. ೩೯೬-೯೯೦); ಮಾನದಲ್ಲಿ ಆನೆ ಹಿಡಿದೀತೇ ? (ಗಾದೆ). ೧೦. ಗಣನೆ ; ಎಣಿಕೆ : ಈ ಮಾನದಿಂದ ಅವನಿಗಿರುವಂಥ ತಿಳಿವು, ಚುರುಕು . . . ಆಜನ್ಮಸಿದ್ಧವಾದ ಹಕ್ಕನ್ನು ಕೊಟ್ಟಂತಿದೆ (ಒಂಟಿಕ. ೨೭). ೧೧. ಸತ್ಕಾರ; ಆದರ : (?). ೧೨. ಜನನೇಂದ್ರಿಯ; ಗುಹ್ಯ : ಹಸಿವನ್ನು ಹೋಗಲಾಡಿಸುವುದಕ್ಕೆ ಸ್ವಲ್ಪ ಅನ್ನ, ಮಾನವನ್ನು ಮುಚ್ಚಿಕೊಳ್ಳುವುದಕ್ಕೆ ಸ್ವಲ್ಪ ಬಟ್ಟೆ ಎಷ್ಟು ಮಾತ್ರೇನು ಬೇಕಾಗಿದೆ ? (ಶಿಂಶಿಶಂ. XII, ೨೦). ೧೩. ಶೀಲ ; ಚಾರಿತ್ರ್ಯ : ನಿನ್ನ ಮಾನವ ಕೊಂಬ ದಕ್ಕಡಿಗರಾರು ನೀ ನರಳಲ್ಲ ಮೂಲೋಕದಾದಿಶಕ್ತಿ ಸ್ವರೂಪಿ (ಶಶಕೋ. ೯-೩೯). 'ಮಾನಂಗಳೆ' ಪರಾ. ೧೪. ಮನೆ; ಕಟ್ಟಡ. ೧೫. [ಕಾವ್ಯಮೀ] ವಿಪ್ರಲಂಭಶೃಂಗಾರದಲ್ಲಿ ಒಂದು ಬಗೆ; ಸ್ತ್ರೀಯ ಪ್ರಣಯಕೋಪ : ಅಱಿಯದೆ ಗೆಯ್ದೆನಬ್ಬ ಮುಱಿವೀನಿದನೊರ್ಮೆಗೆ ಸೈರಿಸೆಂದು ಕಾಲ್ಗೆಱಗಿರೆಯುಂ ಪ್ರಿಯಂ ಸುಡು ಸುಡೇಂಗಡ ಸೈರಿಪುದೆಂದು ಕೋಪದಿಂ ಪೞಿಪಡೆ ಪೋಗೆ ನೂಂಕಿ ಕಳೆದಂದಿನ ದುಷ್ಕೃತವೆನ್ನನಾವಗಂ ಮಱುಗಿಸಿ ಮುಚ್ಚಿ ಸುಟ್ಟಪುವು ನೋಡಿರೆ ಶೀತ ಮರೀಚಿಮಾಲೆಗಳ್ (ಇದು ಮಾನಾಬ್ಧಿಂ) (ಕಾವ್ಯಾ. ೯೦೬); ಲತೆಯಾದಳ್ ವಿದ್ಯೆಯಿಂದಾ ಖಚರಿ ಚರಣದೊಳ್ ಬಿರ್ದು ಚಿತ್ತಸುಗಂ ವಾಕ್ಷರಂ ಬಂದೆನ್ನನೆಂದುಂ ಬಿರಿಯಿಸಲಣಮಿನ್ನಾಱೆನಾನೆಂದುಮಲ್ಲಾಡುತುಮಿರ್ಕುಂ ಮಾನಮಿಾ ಚೇತನೆ ತನುವಿನೊಳಿರ್ಪನ್ನಮೆಂದುಂ ಸ್ಮರಾವರ್ಜಿತೆಯಿಂದಾ ಮುಗ್ಧೆಯಿಂದೇನವಧರಿಪವರ್ಗಂ ಕೋಪಮಾಪತ್ತನೀಗುಂ (ಲೀಲಾವ. ೦೯-೯೯). ೧೬. = ಮಾನಕಷಾಯ : ಅಪ್ರಮತ್ತಗುಣಸ್ಥಾನಂಗಳೊಳಧಃಪ್ರವೃತ್ತಪೂರ್ವಾನಿವೃತ್ತಿಕರಣಪರಿಣಾಮಂಗಳಿಂದಮನಂತಾನುಬಂಧಿ ಕ್ರೋಧಮಾನಮಾಯಾಲೋಭಂಗಳಂ ವಿಸಂಯೋಜಿಸಿ (ಅಜಿತ. ೦೦-೦೯ ವ). ೧೭. = ಮಾನಸಂಜ್ವಲನ : ಕಿಱುಕಿಱಿದು ಬೇಗದಿಂ ಕ್ರಮಕ್ರಮದಿಂದಂ ಕ್ರೋಧಮಾನಮಾಯಾಲೋಭಸಂಜ್ವಲನಂಗಳಂ ಮೂಱುತೆಱದ ಕೃಷ್ಟಿಗಳಂ ಬೇಱೆ ಬೇಱೆ ಕಿಡಿಸಿ (ಅಜಿತ. ೦೦-೦೬೨ ವ). ೧೮. [ಶಿಲ್ಪಶಾ] ದೇವತಾವಿಗ್ರಹಗಳನ್ನು ಕಡೆಯಲು ಉಪಯೋಗಿಸುವ ಒಂದು ಅಳತೆ: ಪ್ರತಿಮೆಯ ದೈರ್ಘ್ಯದ ಅಳತೆಗೆ "ಮಾನ" ವೆಂದೂ . . . ಗಾಂಭೀರ್ಯದ ಅಳತೆಗೆ "ಲಂಬಮಾನ" ವೆಂದೂ ವ್ಯವಹಾರ (ಶಾಕಿದ. ೩೦೬). 'ಮಾನಕ್ರಿಯೆ', 'ಮಾನಾಂಗುಲ' ಪರಾ.

**ಮಾನ ಉಳಿಸು** = ಮರ್ಯಾದೆಯನ್ನು ಉಳಿಸು ; ಅವಮಾನವನ್ನು ತಪ್ಪಿಸು : ಇದೊಂದು ಸಾರಿ ಹ್ಯಾಗಾದರೂ ಮಾಡಿ ನನ್ನ ಮಾನ ಉಳಿಸು (ಮುಂಬಯು. ೬-೯೩); ನಾನೇ ಪಂಚಾಯ್ತಿ ಮಾಡಿ ಅವನ ಮಾನ ಉಳಿಸಿದೆ ನೋಡಿ (ಬೀಶಹಂ. ೬೩). **ಮಾನಕಾಯು** = ಮಾನ ಉಳಿಸು : ಎಂತೆಂತಹ ಸಮಯಗಳಲ್ಲಿ ಅವರು ಇತರರ ಮಾನ ಕಾದಿದ್ದಾರೆ ಗೊತ್ತೇ ? (ಕೂಶಿ). **ಮಾನ ಕೊಡು** = ಗೌರವಿಸು ; ಮರ್ಯಾದೆ ಮಾಡು : ಅಧಿಕಾರಿಗಳು ಆತನಿಗೆ ಮಾನ ಕೊಡುತ್ತಿದ್ದರು (೩ಬಾಶಾ. ೦೬). **ಮಾನ ತೆಗೆ** = ಗೌರವವನ್ನು ಕಳೆ ; ಅವಮಾನಗೊಳಿಸು : ಮನೆತನದ ಮಾನ ತೆಗೆಯಬೇಡ (ಚಿಟ್ಟಕೊ. ೩೨). **ಮಾನ ಮರ್ಯಾದೆ** = ಗೌರವಪೂರ್ವಕವಾದ ಸತ್ಕಾರ : ತಮ್ಮ ಪರಿಚಯದ ಗೃಹಸ್ಥರು ಯಾರಾದರೂ ಮನೆಗೆ ಬಂದರೆ ಅವರ ಯೋಗ್ಯತಾನುಸಾರವಾಗಿ ಮಾನಮರ್ಯಾದೆ ಮಾಡಿ . . . ಕ್ಷೇಮಸಮಾಚಾರ ಕೇಳಿ ಬಳಿಕ ಬಂದ ಕೆಲಸದ ಪ್ರಸಕ್ತಿ ತೆಗೆಯಬೇಕು (ಮುಂಬಯು. ೯-೩೯); ಇಷ್ಟು ಕಷ್ಟಬಟ್ಟು ಅವರನ್ನು ಬೆಳೆಸಿದ ಅತ್ತೆ ಈಗ ಅವರ ಮಾನ ಮರ್ಯಾದೆಗೆ ಕುಂದಾಗುವಂತೆ ಏಕೆ ನಡೆಯುತ್ತಾಳೆ (ಗಂಶೂಯ. ೨೩೨). **ಮಾನಾಪಮಾನ** = ಗೌರವ ಮತ್ತು ಅವಮಾನ : ಮಾನಾಪಮಾನವನು ಜ್ಞಾನ ತನಗಾದುದನು ಮಾನಿನಿಯು ಒಲಿದ ರತಿಸುಖವ ಪರರಲ್ಲಿ ಮಾನಿಸುವ ನೆಗ್ಗ (ಸರ್ವಜ್ಞ. ೦೩೯೬). **ಮಾನಾಪಹಾನಿ** = ಗೌರವಕ್ಕೆ ಉಂಟಾದ ಹಾನಿ ; ಅಪಮಾನ ; ಅಮರ್ಯಾದೆ : ಭೀಮ ಬಲವದರಾತಿಸೇನಾಭೀಮ ಕುರುಕುಲಕುಸುಮಮಾರ್ಗಣಭೀಮ ಮಱಿದೈ ಮಾನಿನಿಯ ಮಾನಾಪಹಾನಿಗಳ (ಕುಮ್ಯಾಅ. ೬-೨೩). [ಸಂ.]

**ಮಾನಂಗಳೆ**, ಮಾನಕಳೆ (ಕ್ರಿ). ೧. (ಸ್ತ್ರೀಯ) ಶೀಲಗೆಡಿಸು : ಶೀಲಗುಂದುವಂತೆ ಮಾಡು : ಕಡೆಗೆ ಯಿಾ ರಕ್ಕಸನ ಕೈಗೆ ವಶಮಾಡಿ ಮಾನಂಗಳೆವ ಯತ್ನಗೈದೆ (ಶಶಕೋ. ೯-೩೭). **ಮಾನಕಳೆ** : ೨. ಅಗೌರವದಿಂದ ಕಾಣು; ಅವಮಾನ ಮಾಡು ; ಅವಮಾನಿಸು : ಯಾವುದನ್ನೂ ಸರಿಯಾಗಿ ವಿಚಾರಿಸದೆ ಗ್ರಾಮದವರ ಎದುರಿಗೆ ಹೀಗೆ ಮಾನ ಕಳೆಯುವುದಾದರೆ ಸಂತೋಷ (ಶಳುಶು. ೯೬). ೩. ಅವಮಾನವಾಗು; ಅಗೌರವವುಂಟಾಗು: ಒಬ್ಬರಿಂದ ಇಡೀ ಗುಂಪಿಗೆ ಮಾನಕಳೆಯುವಂಥ ಪರಿಸ್ಥಿತಿಯುಂಟಾಯಿತು (ಕೂಶಿ). [ಮಾನ + ಕಳೆ$_1$]

**ಮಾನಂಗಿ** (ನಾ). ಸಣ್ಣ ಬಾವಿ : "ಚುರಿ ಚುಂಡಿ ಮಾನಂಗಿ" (ಮಂಗಣ. ೦೨೩-೦೯). [ ? ]

**ಮಾನಂಗೆಡಿಸು** (ಕ್ರಿ). ಗೌರವವನ್ನು ಹಾಳು ಮಾಡು ; ಹಿರಿಮೆಯನ್ನು ಕೆಡಿಸು : ಹೋರಿ ಮಾನಂಗೆ [ಶಾಶಾಂ. ನವ ಕೆ]ಡಿಸಿಕೊಳದಿರು ಭೂರಮಣ ಇವರಲ್ಲಿ (ಏಶಪು. ೨೦-೩೭). [ಮಾನ + ಕೆಡಿಸು$_1$]

**ಮಾನಂಗೆಡು** (ಕ್ರಿ). ಗೌರವವನ್ನು ಕಳೆದುಕೊಳ್ಳು : ಅವಮಾನ ಹೊಂದು : ಮಾನಂಗೆಡಬೇಡೆಂದಂ ನೀನತಿಶಯಬುದ್ಧಿಶಾಲಿಯಾದೊಡೆ ತೊಲಗು (ವ್ಯಶಿ. ೩೯-೯೯). [ಮಾನ + ಕೆಡು$_1$]

**ಮಾನಂದನ** (ನಾ). ಲಕ್ಷ್ಮಿಯ ಪುತ್ರ ; ಮನ್ಮಥ. [ಸಂ.]

**ಮಾನಕ$_1$** (ನಾ). ೧. ಅಳತೆಯ ಒಂದು ಪ್ರಮಾಣ : "ಪ್ರಮಾಣ, ಮಟ್ಟ ; ಮಾನದಂಡ, (ಪಾರಿ) ಮಾನಕ" (Standard. ಟ್ರಿಶಿ. ೭೭). ೨. ಅಳತೆಯ ಒಂದು ಸಾಧನ ; ಅಳತೆಯ ಪಾತ್ರೆ. [ಸಂ.]

**ಮಾನಕ$_2$** (ನಾ). ಒಂದು ಬಗೆಯ ಸಸ್ಯ : "ಮಾನಕ, ಕರೆಮಣಸಂಗಿ. ಬಲರಕ್ಕಸಿ. ಬಾಳರಾಕ್ಷ" (ಸಸ್ಯಶಿ. ೯). [ ? ]

**ಮಾನಕರಿ** (ನಾ). ಗೌರವಾನ್ವಿತ ವ್ಯಕ್ತಿ : ಈ ಸಮಾರಂಭವನ್ನು ನೋಡುವುದಕ್ಕೆ ಮುತ್ಸದ್ದಿಗಳೂ, ಮಾನಕರಿಗಳೂ . . . ನೆರೆದಿದ್ದರು (ಮುಂಬಯ. ೯೮). [ ← ಮರಾ. ಮಾನಕರೀ ]

**ಮಾನಕಷಾಯ** (ನಾ). [ಜೈನ] ಕ್ರೋಧ, ಮಾನ, ಮಾಯಾ ಮತ್ತು ಲೋಭಗಳೆಂಬ ನಾಲ್ಕುವಿಧವಾದ ಕಷಾಯಗಳಲ್ಲಿ ಒಂದು ; "ತೀವ್ರಮನೋವಿಕಾರರೂಪಕಷಾಯಗಳ ಯೋಗದಿಂದ ಜನಿಸುವಂತಹುದು" (ಕ್ರಕಕೋ. ೨೦೩) : ಎಮ್ಮೊಳಪ್ಪ ಮಾನಕಷಾಯಂ ಕಾರಣಮಾಗಿ ಸತ್ತು ಬೆಳ್ಗತ್ತೆಯುಂ ಪೇಪಂದಿಯುಂ ನಾಯುಂ ಪೊಲೆಯರ ಕೂಸುಮಾಗಿ . . . ಈಗಳ್ ನಾಗಶ್ರೀಯಾದಳ್ (ವಡ್ಡಾರಾ. ೨೯-೯) ; ಮಾನಕಷಾಯಮುಮರ್ಗಿನ್ನುಂ ಪತ್ತುವಿಟ್ಟುದಲ್ತದಱಿಂ ಕೇವಲಜ್ಞಾನೋತ್ಪತ್ತಿಯಾಗದಿರ್ದುದು (ಆದಿಪು. ೦೯-೦೯೩ ವ) : ಮಾನಕಷಾಯಕ್ಕೆ ತಕ್ಕ ನೆಡೆಗೊಟ್ಟಪನೇ (ಶಂಭಾಪು. ೭-೨೦). [ಸಂ.]

**ಮಾನಕಳೆ** 'ಮಾನಂಗಳೆ' ನೋ.

**ಮಾನಕಾತಿ** (ನಾ). ಗೌರವವುಳ್ಳವಳು ; ಮರ್ಯಾದಸ್ಥೆ : ನೀವೇನಿಂತು ಟಿರವುಗಾಣುವರೆ ಮಾನಕಾತಿಯರಿರ ಕೊಳ್ಳಿರೆಂದೆನೆ ನಗುತಾ ನಾರಿಯರು ಕೊಂಡರೆಲ್ಲ (ಭರತ. ೩೩-೭೯). [ಮಾನ + — ಕಾತಿ$_1$]

**ಮಾನಕ್ರಿಯೆ** (ನಾ). [ಶಿಲ್ಪಶಾ] ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ಅಳತೆ, ಪ್ರಮಾಣಗಳಿಗೆ ಅನುಸಾರವಾಗಿ ಮಾಡಿದ ಕೆಲಸ : ವೊತ್ತದಿಂದ್ರ ಮುತ್ತಮುತಂದ್ರಂ ಗುರುಮುತದಿಂದಂ ಕರ ಸೊಗಸಿಂದಂ ಜ್ಞಾನಾತ್ಮತೆಯಿಂ ಮಾನಕ್ರಿಯೆಯಿಂ ಸೊಗಯಿಸೆ ಲಿಂಗಂ ನಿಗಮತುರಂಗಂ (ಹಾಚಾಸ. ೦-೨-೮೦ ೮೧೪). [ಸಂ. ಮಾನಕ್ರಿಯಾ]

**ಮಾನಗಂಬ** (ನಾ). [ಜೈನ] ತುದಿಯಲ್ಲಿ ಚಿಕ್ಕಮಂಟಪವನ್ನೊಳಗೊಂಡ, ಬಸದಿಯ ಮುಂದಿನ ಕಂಬ : ಮಿಳಿರ್ವ ಪತಾಕೆಗಳು ಮಕರತೋರಣಮಂಡಳಿ ಮಾನಗಂಬಮುಗ್ಗಳಿಸಿರೆ (ಎಕ. VIII, ಸೊರಬ. ೨೬೨-೦೯; 1077). 'ಮಾನಸ್ತಂಭ' ಪರಾ. [ಮಾನ + ಕಂಬ$_1$ (<ಕಂಭ)]

**ಮಾನಗಟ್ಟು** (ನಾ). ತನ್ನ ಅಧಿಕಾರವನ್ನು ಸೂಚಿಸುವ ಹಸ್ತಾಕ್ಷರ: ಅಧಿಕೃತವಾದ ಸಹಿ,–ಒಪ್ಪ : ಕಪ್ಪುರಹದ ಸಾಕ್ಷ್ಯಗಳನ್ನೂ ಅವರವರ ರಾಜಮುದ್ರೆಯ ಮಾನಗಟ್ಟನೊಡನೆ ಹಾಯ್ಕಿಸಿ ನಮಗೆ ತೋರುವವನಾಗು (ಅರುಣ. ೩೬-೩). [ಮಾನ + ಕಟ್ಟು$_2$]

**ಮಾನಗರ್ವ** (ನಾ). ದುರಭಿಮಾನ ; ಜಂಭ ; ಸೊಕ್ಕು : ಪಾಪದ ಫಲದಿಂದಿನಿಪಿರಿದು ದುಃಖಮಂ ನೆಟ್ಟನೆಯ್ದಿದೈ ಮಾನಗರ್ವಮೇನಾಗಿಸದೋ (ಸುಕುಮಾ. ೩-೨೮); ವಿನಯಪ್ರಾಗ್ಭಾರದಿಂ ಮಾನಗರ್ವಮನೊಟ್ಟಿಯುಂ . . . ವಿಂಧ್ಯಾತ್ಮಮಂ ನೆಟ್ಟನುತ್ತಮುಸಮ್ಯಕ್ತ್ವಶಿತಾಸಿಯಿಂದಮಿಱಿ (ಜಗಚಿಸಂ. ೦೫೯-೬); ಭಾನುರಶ್ಮಿಗಳಂಧಕಾರದ ಮಾನಗರ್ವದ ಮುಱಿವವೊಲು ಗುರು ಸೂನುವಿನ ಶರ ಸವಱಿದವು ಕರಿಘಟೆಯ ಬಲುಮೆಳೆಯ (ಕುವ್ಯಾಕ. ೩-೦೩). ☞ ಇದು ಒಂದೇ ಅರ್ಥದ ಎರಡು ಶಬ್ದಗಳು ಸೇರಿ ಆಗಿರುವ ರೂಪ. [ಸಂ.]

**ಮಾನಗರ್ವಿತೆ** (ನಾ). ಗೌರವವುಳ್ಳವಳು; ಸ್ವಾಭಿಮಾನಿ : ದೇವಿ ಬರುವಳು; ಆಕೆ ಬಹಳ ಮಾನಗರ್ವಿತೆ (ಶಾಕುಂತ. ೯೨-೦೩). [ಮಾನ + ಗರ್ವಿತೆ]

**ಮಾನಗೆ. ಮಾನಿಗೆ** (ನಾ). ೧. ಅಳೆಯುವ ಸಾಧನ; ಅಳತೆಯ ಪಾತ್ರೆ: ಮಾನಕ : ಅಂಗನೆಯ ನಾಭಿಕೂಪದ ಶೃಂಗಾರಜಲಕ್ಕೆ ಬಾಸೆ ನೀರ್ವಾರಿ ವೃತ್ತೋತ್ತುಂಗಕುಚಂ ಮಾನಗೆ ಮದನಂ ಗಡ ಯೌವನವನಕ್ಕೆ ತೋಂಟಿಗನಾದಂ (ಅಜಿತ. ೨-೪೦). **ಮಾನಿಗೆ** : ೨. ಒಂದು ಅಳತೆಯ ಪ್ರಮಾಣ: ಅವನ ಹತ್ತಿರ ಇದ್ದುದು ಒಂದೇ ಒಂದು ಮಾನಿಗೆ ಅಕ್ಕಿ ! (ಹಳ್ಳಿಕೋ. ೯೯); ಆಗ ಅಕ್ಕಿಗೆ ಮಾನಿಗೆ ಮೂರುರೂಪಾಯಿಯಿತ್ತು ದರ (ಕಗುಳ. ೦೦೬). [ < ಸಂ. ಮಾನಕ ]

**ಮಾನಗೇಡಿ** (ನಾ). ಮರ್ಯಾದೆಯನ್ನು ಕಳೆದುಕೊಂಡವನು ; ನಾಚಿಕೆಗೇಡಿ : ಮಾನಹಾನಿಯೆ ಮರಣವೆಂದು ಮಾನವರೆಲ್ಲ ಮಾನಿಸುತ್ತಿರಲು . . . ಬದುಕಿರುವನೇತಕೋ ? ಛೀ ಮಾನಗೇಡಿ ಜೀವಾ ! (ಕೃಶಾಕು. ೯-೬); ಹದ್ದುಮೀರಿ ಅಡಿಯಿಟ್ಟುದಕ್ಕೆ ಮಾನಗೇಡಿಗಳಾಗಿ ಹೊರಬೀಳುವರು (ಬಾಬುತ್ತ. ೨೩); ಮಾನಗೇಡಿಗೆ ಬುದ್ಧಿಗೇಡಿ ಗೆಳೆಯ (ಗಾದೆ). [ಮಾನ + ಕೇಡಿ$_1$]

**ಮಾನಗೇಡು** (ನಾ). ಅವಮಾನ ; ಅಪಮರ್ಯಾದೆ ; ಅಗೌರವ : ನುಡಿದುದರಿ ನೀವಿನ್ನು . . . ನುಡಿಸಿದರೆ ಶಿವನಾದರಾಗಲಿ ಮಾನಗೇಡಹುದು (ಕೌಶಿಚ. ೨೩-೨೦) ; ಈ ಯಾವತ್ತು-ಮಾನಗೇಡನ್ನು ವ್ಯರ್ಥನಿಸದವರು ಸುಮ್ಮನೆ ತಾಳಿಕೊಳ್ಳಬೇಕಾಯಿತು (ಕುಂಜಕಾ. ೩-೦೩೬). [ಮಾನ + ಕೇಡು]

**ಮಾನಚಿತ್ರ** (ನಾ). ಭೂಪಟ ; ನಕ್ಷೆ : ಇದೋ ಎದುರಿಗಿನ ಈ ಮಾನಚಿತ್ರವನ್ನು ನೋಡಬಾರದೆ ; ಇಟಾಲಿಯ ಹತ್ತಿರ ಸಮುದ್ರವಿದೆಯಲ್ಲ. ಅದೇ (ಕುಂಜಿ. ೦೨೬). [← ಹಿಂ. ಮಾನಚಿತ್ರ]

**ಮಾನಚ್ಯುತಿ** (ನಾ). ಗೌರವವನ್ನು ಕಳೆದುಕೊಳ್ಳುವುದು ; ಅವಮರ್ಯಾದೆ : ಅತಿದಾರಿದ್ರ್ಯಂ ಮಾನಚ್ಯುತಿ. ದುಃಖಂ ಪೆರ್ಚಲ್ (ದಶಕು. ೮-೧೯೨). [ಸಂ.]

**ಮಾನಜ** (ನಾ). ಗರ್ವದಿಂದುಂಟಾದುದು : ಅಸ್ನೇಹ ಜೀವಜ ಮಾನಜ ಭೀತಿಗಳಂ ನಿರ್ಧರಿಸಲೆ ಬಾಲಕ (ಯೋಗಾನಂ. ೩-೩೦). [ಸಂ.]

**ಮಾನತೆ** (ನಾ). ದುಮ್ಮಾನ ; ದುಃಖ : ಏನವ್ವ ಬಿಡದೆ ಚಿಂತಿಸಿ ಮಾನತೆವೆತ್ತಿರ್ಪೆ ನಿನ್ನ ಮನದುಮ್ಮಳವಂ ಮೀನಾಕ್ಷಿ ಪೇಟೆನುತ್ತ . . . ಬೆಸಗೊಂಡಳ್ (ಕುಶಾಸ್ತ್ರ. ೩-೩೦). [ಸಂ. ಮಾನತಾ]

**ಮಾನದಂಡ** (ನಾ). ಅಳತೆಗೋಲು : ಕೀನೂಗೆ ಥಾಮ್ಸನ್ನರನ್ನು ಯಾವ ಮಾನದಂಡದಿಂದ ಅಳೆಯಬೇಕೆಂಬುದು ಕೂಡಲೆ ಗೊತ್ತಾಯಿತು (ಸಮಜೀ. ೬೦೬); ಇದೇ ಸುಖದುಃಖಗಳನ್ನು ಅರಿಯುವ ಮಾನದಂಡ (ಶಾರದ. ೩೯). [ಸಂ.]

**ಮಾನದಿ** (ನಾ). ದೊಡ್ಡನದಿ : ಬಾಲೆಗೆ ಗುಣಕಾಂತಿ ಮಯೋಲ್ಲೀಲೆಗೆ ವಿನಯಪ್ರಧಾನಗುಣಗಣಗೆಣೆ ಘೂಪಾಲಂ ನಿನಗವಜೀವನಾನುಕೂಲಂ ಬದಿಬಿಸುಗೆ ಸಿಂಧುವೂರ್ [ಳ್] ಮಾನದಿಯೊಳ್ [ಲ್] (ಚಂತಿ. ೩-೦೩೩). [ಮಾ$_4$ + ನದಿ. / ಸಂ. ಮಹಾನದೀ]

**ಮಾನದೆ** (ನಾ). ಚಂದ್ರನ ಹದಿನಾರು ಕಲೆಗಳಲ್ಲಿ ಒಂದು : ಅಮೃತಾ ಮಾನದಾ ಪೂಷಾ ತುಷ್ಟಿ ಪುಷ್ಟಿ ರತಿ ಧೃತಿ ಶಶಿನಿ ಚಂದ್ರಿಕಾ ಕಾಂತಿ ಜ್ಯೋತ್ಸ್ನಾ ಶ್ರೀ ಅಂಗದಾ ಪೂರ್ಣಾ ಪೂರ್ಣಾಮೃತಾ ಕಾಮದಾಯಿನಿಯೆಂಬ ಷೋಡಶಕಲಾಭಿಯುತನಾಗಿ (ಬಿವೇಕ. ೨೦೯). [ಸಂ. ಮಾನದಾ]

**ಮಾನಧನ** (ನಾ). ಗೌರವವನ್ನೇ ಸಂಪತ್ತೆಂದು ಗಣಿಸುವವನು ; ಆತ್ಮಗೌರವವನ್ನು ಹೊಂದಿರುವವನು ; ಸ್ವಾಭಿಮಾನಿ : ಮಾನಧನನೆನಿಸಿ ನಿನ್ನಭಿಮಾನಕ್ಷತಿ ಮಾಡಿದರ್ಗೆ ಸುಯೋಧನ ನೀಂ ಮತ್ತೀ ನೀರೊಳಗೆಸಡಿರ್ಪಂ ಮಾನಿರ್ಪಂ ಕಪ್ಪೆಯಿರ್ಪವಿರ್ಪರೆ ಗಂಡರ್ (ಗದಾಯು. ೬-೬); ಮಾನಧನರಿಗೆ ಮರ್ಧೆಯೆನಿಪುದಭಿಮಾನಭಂಜನವು (ಕುವ್ಯಾಕ. ೨೨-೯೦). [ಸಂ.]

**ಮಾನಧರ** (ನಾ). ಮರ್ಯಾದಸ್ಥ ; ಮಾನವಂತ : ಬಂದ ಬರವಂ ನಿಮ್ಮಂ ಬಿಡಿಸಲುಮೊಡಂಬಡಿಸಲುಮೆಂದೆ ಬಂದೆನೆನ್ನಂ ಬಿಡುವುದೆಂದು ದಾಕ್ಷಿಣ್ಯಪ್ರಯೋಗಂಗಳಿಂತಜ್ಞತೆಯನಾ ಮಾನಧರರ ಮುಂದಿಡೆಯುಂ (ಶಾಂತಿ. ೯-೬೨ ವ). [ಸಂ.]

**ಮಾನನಷ್ಟ** (ನಾ). ಆತ್ಮಗೌರವಕ್ಕೆ ಉಂಟಾಗುವ ಧಕ್ಕೆ, – ಹಾನಿ.

**ಮಾನನಷ್ಟಮೊಕದ್ದಮೆ**= ಆತ್ಮಗೌರವಕ್ಕೆ ಉಂಟಾಗುವ ಹಾನಿಗಾಗಿ ಹೂಡುವ ದಾವೆ : ಆ ದಿನ ಮಾನನಷ್ಟಮೊಕದ್ದಮೆಯೊಂದು ವಿಚಾರಣೆಯಾಗಬೇಕಾಗಿತ್ತು (ಕುಪರು. ೬೩೯). [ಸಂ.]

**ಮಾನನಿಧಾನೆ** (ನಾ). ಗೌರವವನ್ನೇ ಸಂಪತ್ತಾಗಿ ಉಳ್ಳವಳು ; ಆತ್ಮಗೌರವವನ್ನು ಹೊಂದಿರುವವಳು ; ಸ್ವಾಭಿಮಾನಿ : ಮಾನನಿಧಾನೆ ನಿಳಿಂಪವಿಮಾನಕಮನಹೀನಮತಿಯ ಹೀನಾಲಯಮಂ ಜೈನಮತರತ್ನದೀಪಿಕೆ ನಾನಾವಿಧರತ್ನರಾಶಿಯಂ ಪೇಶಲದಿಂ . . . ಕಂಡಳ್ (ಶರ್ಗೀ. ೦೩-೬೨). [ಸಂ. ಮಾನನಿಧಾನಾ]

**ಮಾನನಿಧಿ** (ನಾ). ಗೌರವವನ್ನೇ ಸಂಪತ್ತಾಗಿ ಉಳ್ಳವನು : ಆತ್ಮಗೌರವವನ್ನು ಹೊಂದಿರುವನು ; ಸ್ವಾಭಿಮಾನಿ : ಮಾನನಿಧಿಯೆಂದು ಮನ್ನಿಪೆ ನೀನೆನ್ನಂ (ಜಗಪು. ೧೨-೯೬) ; ನೀನೀ ಪ್ರಸಾದಮಂ ಶರಣತತಿಗೀಯೆನುತೆ ಮಾನನಿಧಿ ವೃಷಭಮುಖಗಿಂದೀಯೆ (ಬಸವ. ೦-೩೯) ; ತಾನೆ ತನ್ನನೆ ಹೊಗಳಿಕೊಂಬರೆ ಮಾನನಿಧಿಯಾದವರು (ಕುವ್ಯಾದ್ರೋ. ೦೬-೩೩). [ಸಂ.]

**ಮಾನನೀಯ** (ಗು). ೧. ಗೌರವಕ್ಕೆ ಅರ್ಹವಾದ ; ಮನ್ನಣೆಗೆ ಪಾತ್ರವಾದ : ದಾನಶೂರನಪವಾದಭೀರು ವಿಜ್ಞಾನಮೂರ್ತಿ ಭುವನೈಕವತ್ಸಲಂ ಮಾನನೀಯಗುಣನೆಂಬ ಪೆಂಪಿನಂದ್ವಾನಿಯಂ ತಳೆದ ದುರ್ಗನನ್ನರಾರ್

(ಶಂಕರಂ. ೩೦೦-೩). (ನಾ). ೨. ಗೌರವಕ್ಕೆ ಅರ್ಹವಾದುದು ; ಮನ್ನಣೆಗೆ ಪಾತ್ರವಾದುದು : ಈ ಬಗೆಯ ಮತಭೇದವು ರಾಜತಂತ್ರವನ್ನು ಅರಿತವರಿಗೆ ಮಾನನೀಯವಾದುದು (ಬಿಚ್ಚಿತ. ೫೭). ೩. ಗೌರವ ; ಮನ್ನಣೆ : "ಮಾನಂ . . . ಮಾನನಂ, ಮಾನನೀಯಂ, ಈ ೭ ಮನ್ನಣೆ" (ಚಾಶಕ್ಕ. ೦೩೦). ೪. ಗೌರವಾರ್ಹ ವ್ಯಕ್ತಿ ; ಮನ್ನಣೆಗೆ ತಕ್ಕ ವ್ಯಕ್ತಿ : ದಾನಧರ್ಮಪರೋಪಕಾರವಿಧಾನದೀಕ್ಷಾಕರ್ಮನಿಷ್ಠರು ಮಾನನೀಯರಲೇ (ಕುಮ್ಮಾಲಾ. ೯-೨೯). [ಸಂ.]

**ಮಾನಪತ್ರ** (ನಾ). ಅಭಿನಂದನೆಯ ಪತ್ರ ; ಬಿನ್ನವತ್ತಳೆ : ನೀನಿಷ್ಟು ಮಾಡಿದರೆ, ನಿನ್ನ ಮೇಲೊಂದು ಪದ್ಯವ ಬರೆದು, ಕನ್ನಡಿಕಟ್ಟು ಹಾಕಿ ತುಂಬುಸಭೆಯೊಳು ಮಾನಪತ್ರ ಸಲಿಸುವೆವು (ವಿಂಶು. ೨೬-೦೯). [ಸಂ.]

**ಮಾನಭಂಗ** (ನಾ). ೧. ಅವಮಾನ ; ತೇಜೋವಧೆ ; ಮಾನಹಾನಿ : ಭರತಂಗೆಱಗುವರೆಂಬಿದೆ ಪರಿಭವಮೆಮಗಿಂತು ಮಾನಭಂಗಂ ಬರೆ ಬರ್ಪರ ಸೇವುದೆಂದು ಪೂಣ್ದಾರ್ ಪರಮತಪೋಭರಮನನಿಬರುಂ ಪುರುತನಯರ್ (ಆದಿಪು. ೦೯-೩೯); ಮಿಸಲುಗಳೆದ ಬರುದಿನ ಮಾನಭಂಗದ ಕಳವಳದ ಕನಸುಗಳಲಿದ್ದುದು ರಾಯನಾಸ್ಥಾನ (ಕುಮ್ಮಾಕ. ೧-೨೦) ; ಮಾನಭಂಗವ ಮಾಡಿ ಮತ್ತೆ ಉಪಚಾರಗಳನೇನ ಮಾಡಿದರಲ್ಲಿ ಇರಬಾರದಯ್ಯ (ಪುರಂದ. ೯-೯೨ ೭೪೩). ೨. ಸ್ತ್ರೀಯ ಶೀಲಹರಣ ; ಶೀಲಭಂಗ ; ಅತ್ಯಾಚಾರ : ತುರುಕರವನು ಮಾನಭಂಗ ಮಾಡಲು ಯತ್ನಿಸಿದ್ದರೂ ಇವಳನ್ನೇ (ಮುಸಂಗ. ೩೦) ; ದ್ರೌಪದಿಯ ಮಾನಭಂಗದ ಸಮಯದಲ್ಲಿ ಗಾಂಧಾರಿಯು ನಡುಗಿ ಹೋದಳು (ಶಾರದ. ೯೬೩). [ಸಂ.]

**ಮಾನಭಂಗಿತ** (ನಾ). ಅವಮಾನವನ್ನು ಹೊಂದಿದವನು ; ತೇಜೋಭಂಗಿತನಾದವನು : ಜೈನರವರಿವರೆನ್ನದೆಲ್ಲರು ಮಾನಭಂಗಿತರಾಗಿ ಮಡಿದರು (ಬಸವಪು. ೫೨-೦೯). [ಸಂ.]

**ಮಾನಭಾವಿತನ** (ನಾ). ಮನಸ್ಸಿನಲ್ಲಿ ಕಪಟವಿದ್ದರೂ ಹೊರಗೆ ಸಂಭಾವಿತನಾಗಿ ಸವಿಮಾತನ್ನಾಡುವ ಸ್ವಭಾವ : ಕಿಟ್ಟಿ ಅವಮಾನದ ಒಳಗೇ ಮಾನಭಾವಿತನವನ್ನು ತೋರಲು ಯತ್ನಿಸಿದನು (ಗಂಡುಗಲಿ. ೩೨). [ಮಾನಭಾವಿ (ಜ ← ಮರಾ. ಮಾನಭಾವ, ಮಾನಭಾವೀಣ) + — ತನ]

**ಮಾನಮಠಯ** (ನಾ). [ಸಂಗೀತ]ಒಂದು ತಾಳದ ಹೆಸರು : ಆದಿಮಠಯ ಜಂಪಕಮಠಯ ಸರಮಠಯ ತೆಗೆದ ಮಾನಮಠಯ . . . ಸಪ್ತಮುದ್ರಿಕ ಜಯಾಳವೆಂಬಿವೇ ಮೊದಲಾದ ನೂಱೊಂದು ತಾಳಂಗಳು (ಬಸವೇಶ. ೦೯೨). [< ಸಂ. ಮಾನಮಠ್ಯ ?]

**ಮಾನಮರ್ದನ** (ನಾ). ೧. ತೇಜೋವಧೆ; ಅವಮಾನ ; ಮಾನಭಂಗ : ರಣಬಿನ್ನಾಣ ಮಸುಳಿದ ಮಾನಮರ್ದನದೂಱೆಯದ ಸವ್ಯಥೆಯ ಭಟ ಸಂತೈಸಿದನು ತನುವ (ಕುಮ್ಮಾಗ. ೭-೪೯). ೨. ತೇಜೋಭಂಗವನ್ನು ಮಾಡುವವನು ; ಅವಮಾನ ಮಾಡುವವನು : ವಸ್ತುಕಕವಿಮಸ್ತಕನ್ಯಸ್ತಂ ಅಧಟಕವಿಮಾನಮರ್ದನಂ ಗರ್ವಿತಕವಿಗಿರಿವಜ್ರಪ್ರಚಂಡಂ (ಶಶಾಸ. ೨೩೦ ೩೦). [ಸಂ.]

**ಮಾನವ** (ಗು). ೧. ಮನುವಿಗೆ ಸಂಬಂಧಿಸಿದ ; ಮನುವಿನಿಂದ ಉಂಟಾದ. (ನಾ). ೨. ಮನುಷ್ಯ ; ಮರ್ತ್ಯ : "ಮನುಷ್ಯಃ . . . ಮಾನವಃ, ನರಃ, ಪುಮಾನ್, ಪಂಚಜನಃ, ನಾ, ಪುರುಷ, ಪೂರುಷಃ, ವಿಟ್- ಈ ೧೨ ಮಾನಸರ್" (ಹಲಾಯು. ೫೫-೦೭೬) ; ಮಾನವರ್ಗಂಗ ಸ್ವರವಾ ಮಾನಂ [ರುಚಿ] ಪ್ರಕೃತಿಭಾವಗತಿ . . . ಕ್ಷೇತ್ರದಶಾನುಗತಂ ದ್ವಾದಶಾಂಗಲಕ್ಷಣಗುಣಮಂ (ಲೋಕೋಪ. ೦೦-೨); ನಿನಗಾರ್ ದೊರೆ ಮಾನವರೀ ಧರಿತ್ರಿಯೊಳ್ (ಕೃಷ್ಣಕೃ. ೦-೯೦). [ಸಂ.]

**ಮಾನವಂತ** (ನಾ). ಗೌರವಯುಕ್ತ ವ್ಯಕ್ತಿ ; ಮರ್ಯಾದಸ್ಥ : ತುಂಬ ಮಾನವಂತ, ಸಜ್ಜನನಾದ ಕೈತಾನ ಈ ಮದುವೆಯನ್ನು ಮನಸ್ಸಿಗೆ ಹಚ್ಚಿಕೊಂಡದ್ದು ಅಚ್ಚರಿಯಲ್ಲ (ಅಜೋಲಿ. ೦೦) ; ಎದುರುಪಕ್ಷದವರು ಸಕಲ ಸಿದ್ಧತೆಗಳನ್ನೂ ಮಾಡಿಕೊಳ್ಳುತ್ತಿರುವಾಗ ಮಾನವಂತ, ಶೀಲವಂತ ಶಾಂತಪ್ಪನಾಯಕರು ಸುಮ್ಮನೆ ಕುಳಿತುಕೊಳ್ಳುವುದಕ್ಕಾದೀತೆ ! (ಬೆಳುಕು. ೧೦೩). [ಸಂ. ಮಾನವತ್]

**ಮಾನವಂತೆ** (ನಾ). ಗೌರವವುಳ್ಳ ಹೆಂಗಸು ; ಮರ್ಯಾದಸ್ಥೆ : ಮಾನವಂತೆಯರಾದ ಮಾನಿನಿಯರ ಮಾನವನ್ನು ಮಾರಿಸುವುದು ಇದೂ ಒಂದು ಆರ್ಟ್ ಅಲ್ಲವಷ್ಟೆ ? (ಮ್ಯಾಪಂ. ೮೩). [ಮಾನವಂತ + — ಎ]

**ಮಾನವಜನ್ಮ** (ನಾ). ಮನುಷ್ಯನ ಹುಟ್ಟು.—ಜೀವಿತ : ಮಾನವಜನ್ಮದೊಳ್ ಜನಿಸಿ ನಿತ್ಯಮನಿಂದ್ಯಪರೋಪಕಾರಮಂ ದಾನಮನರ್ಥಪಾಲನಮನಟ್ಟಿ ಮಿಗಲ್ ಮಿಗೆ ಮಾಡದಿರ್ಪವಂ ಮಾನವನಲ್ಲವಂ ತೊವಲ ಬೊಂಬೆ (ದಶಕು. ೩-೩೦); ಮಾನವಜನ್ಮ ದೊಡ್ಡದು ಇದ ಹಾನಿ ಮಾಡಲುಬೇಡಿ ಹುಚ್ಚಪ್ಪಗಳಿರಾ (ಪುರಂದ. ೦-೦೯ ೭೪೩). [ಸಂ. ಮಾನವಜನ್ಮನ್]

**ಮಾನವತಾವಾದಿ** (ನಾ). ಮನುಷ್ಯತ್ವದಲ್ಲಿ ನಂಬಿಕೆಯುಳ್ಳವನು ; ಮಾನವಹಿತದಲ್ಲಿ ಆಸಕ್ತಿಯುಳ್ಳವನು : ಮಾನವತಾವಾದಿ ಕೂಡ ಒಂದು ದಶೆಯಲ್ಲಿ ವಿಶ್ವದ ಇಂದ್ರಿಯಾತೀತ (ಅಲೌಕಿಕ, ಅಪರೋಕ್ಷ) ದರ್ಶನವನ್ನು ಬದಿಗೆ ತಳ್ಳಿ ದೂರ ಸರಿಯುವನು (ಪಶ್ಚಿಮ. ೦೨೬). [ಸಂ. ಮಾನವತಾವಾದಿನ್]

**ಮಾನವತಿ** (ನಾ). ೧. ಗೌರವಯುಕ್ತಳಾದ ಹೆಂಗಸು ; ಸಂಭಾವಿತೆ ; ಮರ್ಯಾದಸ್ಥೆ : ರಾಜಕೀರಂ ನುಡಿಯ ಕಲಿತುದು ಮಾನವತಿಯೊಳು ನುಡಿಗಳಂ ಕೇಳಿ (ಬಸವ. ೦೦-೯೦). ೨. ಸೊಕ್ಕಿನಿಂದ ಕೂಡಿದವಳು ; ಗರ್ವಿಷ್ಠೆ : (೬). [ಸಂ. ಮಾನವತೀ]

**ಮಾನವತೆ** (ನಾ). ಮನುಷ್ಯನಿಗೆ ಸಹಜವಾಗಿ ಇರಬೇಕಾದ ಧರ್ಮ ; ಮನುಷ್ಯತ್ವ : ಮಾನವೀಯತೆ : ಬ್ರಾಹ್ಮಣರೇನು ಶ್ರಮಣರೇನು, ಮಾನವತೆ ಎಲ್ಲಿಯೂ ವಿರಳ (ಬಾಪಸ. ೬೬) ; 'ಮಮ ಶತ್ರು ಹಿತಾರ್ಥಾಯ' ಎನ್ನುವವಕ್ಕಿಂತಲೂ ಹೆಚ್ಚಿನ ಮಾನವತೆಯುಂಟೆ ? (ಹೊಸಕ್ಕ. ೯೦). [ಸಂ. ಮಾನವತಾ]

**ಮಾನವಧರ್ಮ** (ನಾ). ಮನುಷ್ಯತ್ವ : ಮನುಷ್ಯಧರ್ಮ ; ಮಾನವೀಯತೆ : ನಿಜಕ್ಕೂ ಸತ್ಯ, ಪ್ರೇಮ . . . ದಯೆ, ಮಮತೆ ಇವೇ ಮಾನವಧರ್ಮದ ಮೂಲತತ್ತ್ವಗಳು (ಧರ್ಮಸಾ. ೩); ಮಾನವಧರ್ಮದ ಬಗ್ಗೆ ಅವಳದೇ ಒಂದು ಕಲ್ಪನೆಯಿತ್ತು (ಕ್ಷಣಕು. ೦೯೯). [ಸಂ.]

**ಮಾನವಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು : ಸನತ್ಕುಮಾರಪುರಾಣ ನಾರಸಿಂಹಪುರಾಣ ನಂದಿಪುರಾಣ ಶಿವಧರ್ಮಪುರಾಣ ದೂರ್ವಾಸಪುರಾಣ ನಾರದೀಯಪುರಾಣ ಮಾನವಪುರಾಣ . . . ಭಾರ್ಗವಪುರಾಣಮೆಂಬವೇ ಆಯಾಯ ನಾಮಧೇಯಮುಳ್ಳವರಿಂ. ನಿರೂಪಿತಂಗಳಾದ ಹದಿನೆಂಟು ಉಪಪುರಾಣಂಗಳು (ಬಸವೇಶ. ೯). [ಸಂ.]

**ಮಾನವಮಿ** 'ಮಾನಾಮಿ' ನೋ.

**ಮಾನವಲೋಕ** (ನಾ). ಮನುಷ್ಯ ವಾಸಿಸುವ ಜಗತ್ತು ; ಭೂಲೋಕ : ಮಾನವಲೋಕದೊಳ್ ಪುರಮಿದರ್ಕೆಣೆ ಯಾವುದನಿಪ್ಪ ಕೀರ್ತಿಯಂ ತಾನೊಳಕೊಂಡು . . . ಚೆಲ್ವಿನುದ್ದಾನಿಯನಾಂತು ಕಣ್ಗೆ ಕರಮೊಪ್ಪುಗುಮೂರ್ಜಿತರಾಜಧಾನಿಯುಜ್ಜೇನಿ (ಸುಕುಮಾ. ೯-೯೩); ಮಾನವಲೋಕದವರೆಲ್ಲರೂ ಮರದ ಲಿಂಗವ ಪೂಜಿಸುವರಯ್ಯಾ (ಸಸವ. II· ೩೯೯-೦೩೯೩) ; ಶಾಪಗ್ರಸ್ತಳಾಗಿ ಮಾನವಲೋಕಕ್ಕೆ ನಾನು ಬರಲಿಲ್ಲವಾಗಿ ನನ್ನ ಪ್ರಭಾವಗಳನ್ನು ನಾನೂ ಬಿಟ್ಟುಬಂದಿಲ್ಲ (ಕುಹಾಪ. ೧೩೩). [ಸಂ.]

**ಮಾನವಶಾಸ್ತ್ರ** (ನಾ). "ಮನುಷ್ಯನಿಗೆ ಸಂಬಂಧಪಟ್ಟ ವಿಷಯಗಳನ್ನು ಕುರಿತ ಶಾಸ್ತ್ರ ; ಶಾರೀರಿಕ ಮತ್ತು ಮಾನಸಿಕವಿಚಾರಗಳನ್ನು ಕುರಿತ ಮನುಷ್ಯಶಾಸ್ತ್ರ ; ಮನುಷ್ಯನನ್ನು ಪ್ರಾಣಿದೃಷ್ಟಿಯಿಂದ ವಿಚಾರ ಮಾಡುವ ಶಾಸ್ತ್ರ; ಮಾನವಶಾಸ್ತ್ರ" (Anthropology· ೩೦೯೩). [ಸಂ.]

**ಮಾನವಶಾಸ್ತ್ರಜ್ಞ** (ನಾ). ಮಾನವಶಾಸ್ತ್ರವನ್ನು ಅಭ್ಯಾಸಮಾಡಿದವನು ; ಮಾನವಶಾಸ್ತ್ರವನ್ನು ಬಲ್ಲವನು : ಮಾನವಶಾಸ್ತ್ರಜ್ಞರು (Anthropologists) ಎರಡು ಶಬ್ದಗಳಿಗೂ ಒಂದೇ ಅರ್ಥವನ್ನಾಗಲಿ, ವಿರೋಧವಾದ ಅರ್ಥವನ್ನಾಗಲಿ ಕಲ್ಪಿಸದೆ ಸಂಸ್ಕೃತಿಯೆಂಬ ವಿಶಾಲವಾದ ವರ್ಗದಲ್ಲಿ ನಾಗರಿಕತೆಯನ್ನು ಒಂದು ವಿಭಾಗವಾಗಿ ಪರಿಗಣಿಸುತ್ತಾರೆ (ಶಿಲ್ಪಶಾ. ೦೬). [ಸಂ.]

**ಮಾನವಾತೀತ** (ಗು). ೧. ಮನುಷ್ಯನಿಗೆ ಮೀರಿದ, — ಅತೀತವಾದ. (ನಾ). ೨. ಮನುಷ್ಯನಿಗೆ ಮೀರಿದುದು, — ಅತೀತವಾದುದು : ಏನಾದೊಡೇನು . . . ಮಾನವೇನಭ್ಯುದಯವೇನು ? ಮಾನವಾತೀತ ವೊಂದೆಲ್ಲವನು ನುಂಗುವುದು ಜ್ಞಾನಿಸದನಾವಗಂ (ಷಂಕಸ. ೩೩೩). [ಸಂ.]

**ಮಾನವಾಹಿತ** (ನಾ). ೧. ಮರ್ಯಾದೆಯನ್ನು ಹೊಂದಿದವನು ; ಮರ್ಯಾದಸ್ಥ. ೨. ಮನುಷ್ಯರಿಗೆ ಹಿತನಲ್ಲದವನು. ೧, ೨ : ಆ ನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿಯಲ್ತು . . . ಮಾನವಾಹಿತನಾಗಿಯುಂ ಮಾನವಾಹಿತನಲ್ತು (ಧರ್ಮಾ. ೯–೩೯ ವ).
[ ಸಂ. (ಮಾನ + ಆಹಿತ ; ಮಾನವ + ಅಹಿತ) ]

**ಮಾನವಿ** (ನಾ). ಮಾನವಸ್ತ್ರೀ : ಅಸುರ ಮಾನವಿಯರಿಗೆ ಮೇಳವೆ ಪತಿಯು ಬಿಡು ಸತಿಯು (ಗೌತಾ. ೩೬–೦೦). [ಸಂ. ಮಾನವೀ]

**ಮಾನವಿಕ** (ಗು). ೧. ಮಾನವನ ಬಾಳಿಗೆ ಸಂಬಂಧಿಸಿದ. (ನಾ). ೨. ಮಾನವನ ಬಾಳಿಗೆ ಸಂಬಂಧಿಸಿದ ಸಮಾಜಶಾಸ್ತ್ರ, ಅರ್ಥಶಾಸ್ತ್ರ ಮುಂತಾದ ವ್ಯಾಸಂಗವಿಷಯ : ಈಚೆಗೆ ವಿಶ್ವವಿದ್ಯಾನಿಲಯಗಳಲ್ಲಿ ಮಾನವಿಕಗಳ ಅಧ್ಯಯನಕ್ಕೆ ಹೆಚ್ಚು ಪ್ರಾಧಾನ್ಯತೆ ಸಿಕ್ಕಿದೆ (ರೂಢಿ). [ಸಂ.]

**ಮಾನವೀಯ** (ಗು). ೧. ಮನುಷ್ಯನಿಗೆ ಸಂಬಂಧಿಸಿದ. ೨. ಮನುಷ್ಯತ್ವದಿಂದ ಕೂಡಿದ ; ಅಂತಃಕರಣಪೂರ್ವಕವಾದ : ಬೋಧನಕ್ರಮದಲ್ಲಿ ಮಾನವೀಯಬಾಂಧವ್ಯ (ಶಿಕ್ಷರ. ೨೯೯). [ಸಂ.]

**ಮಾನವೀಯತೆ** (ನಾ). = ಮಾನವತೆ : ಇದೆಲ್ಲ ನಿಯಮವಿರುದ್ಧ. ಆದರೂ ಮಾನವೀಯತೆಯಿದೆಯಲ್ಲ (ಕೃಪಕು, ೩೦೯) ; ಯಾರು ಭಗವಂತನನ್ನು ಎಲ್ಲರಲ್ಲಿಯೂ, ಎಲ್ಲೆಲ್ಲಿಯೂ ಕಾಣಬಲ್ಲರೋ ಅವರೇ ನಿಜವಾದ ಮಾನವೀಯತೆಯಿಂದ ಕೂಡಿದವರು (ರಪಃಗಾ. ೩೨).
[ಸಂ. ಮಾನವೀಯತಾ]

**ಮಾನವ್ಯ** (ನಾ). ೧. ಮನುಷ್ಯವರ್ಗ ; ಮಾನವಸಮೂಹ : "ಮಾನವ್ಯಂ ಮಾನವತತಿ" (ಅಭಿ.ಕೋ. ೦೦೩–೩೦). ೨. ಮನುಷ್ಯನಿಗೆ ಇರಬೇಕಾದ ಅಂತಃಕರಣ ; ಮನುಷ್ಯಧರ್ಮ ; ಮಾನವತೆ : ಮಾನವ್ಯವನ್ನು ಮಡಿಮಾಡುತ್ತಿರುವ ಮಡಿವಾಳ ಮಾಚಿದೇವ (ಮೋಳಿಗೆ. ೨೯ ಪ್ರಸ್ತಾ.ಪಡ) ; ಇದರಲ್ಲಿ ವಿಚಾರಿಯನ್ನು ಜಿಜ್ಞಾಸೆಗೆ ಗುರಿಮಾಡುವ ಸಮಸ್ಯೆಯೆಂದರೆ ವಾತ್ಸಲ್ಯದಿಂದ ಮಾನವ್ಯವನ್ನು ಪೋಷಿಸಬೇಕಾದ ವಿಶ್ವಪ್ರಭುವಿಗೆ ಈ ಕಠೋರವರ್ತನೆ ಉಚಿತವೇ ಎನ್ನುವುದು (ಅಧ್ಯ. XXXI, ೩೬೦೯).
[< ಮಾನವ]

**ಮಾನವ್ಯಗೋತ್ರ** (ನಾ). ರಾಜಮನೆತನಗಳು ಒಪ್ಪಿ ಅಂಗೀಕರಿಸಿದ್ದ ಮೂಲದಲ್ಲಿ ಬ್ರಾಹ್ಮಣಗೋತ್ರಕ್ಕೆ ಸಂಬಂಧ ಹೊಂದದೆ ಇದ್ದ ಒಂದು ಗೋತ್ರದ ಹೆಸರು. [ಮಾನವ್ಯ + ಗೋತ್ರ$_2$]

**ಮಾನಶಾಲಿ** (ನಾ). = ಮಾನವಂತ : ತಾನು ಮಾನಶಾಲಿಯಾದುದರಿಂದ ಆಧಿಪತ್ಯವನ್ನಾದರು ತ್ಯಜಿಸಾನು (ಕಗದ್ಯ. ೩). [ಸಂ. ಮಾನಶಾಲಿನ್]

**ಮಾನಸ$_1$** 'ಮಾನುಸ' ನೋ.

**ಮಾನಸ$_2$** (ಗು). ೧. ಅಂತರಂಗದ ; ಮನಸ್ಸಿಗೆ ಸಂಬಂಧಿಸಿದ. (ನಾ). ೨. ಅಂತರಂಗ ; ಮನಸ್ಸು ; ಚಿತ್ತ : "ಚೇತಃ, ಚಿತ್ತಂ, ಮನಃ . . . ಮಾನಸಂ — ಈ ೬ ಮನಂ" (ಹಲಾಯು. ೯೧–೩೮೦) ; ಮಾನಸದೊಳ್ ಹಂಸಯುವಾಲ್ ಮಾನಸವಾಗ್ಮನಿತೆ ತನ್ನ ಮಾನಸದೊಳಮಮಾನಸನೆಂದಗಲದೆ ನಿಲೆ ಮಾನಸನಾದಂ ಸರಸ್ವತೀಕಳಹಂಸಂ (ಕಂಪಾ. ೨–೩೬); ಮಾನಸದೊಳಿದು ಬೇಕೆಂದವೇಕ್ಷಿಸನು (ಜಕವು. ೯೬–೩೨); ಅಂತರಂಗದೊಳೇನಿಹುದು ಪೇಳೆನ್ನ ಮಾನಸಮೆ (ವಿಶೀಗೀ. ೫–೦೦). ೩. ಮನಸ್ಸಿಗೆ ಸಂಬಂಧಿಸಿದುದು ; ಅಂತರಂಗಕ್ಕೆ ಸೇರಿದುದು : ಮಾನಸಮೆನಿಸಿದ ಶುಕ್ಲಧ್ಯಾನಂ ಪ್ರತ್ಯಕ್ಷಮಾಗಿ ತಾನಲ್ಲಿ ಸುವಾಸೀನತೆ ಪಡೆವವೊಲಿರ್ದಂ ಮೌನಸುಧಾಸೂತಿ ಮಣಿಶಿಲಾಪಟ್ಟಕದೊಳ್ (ಅಜಂಪು. ೩–೯೬) ; ತುಟಿಯನ್ನು ಮತ್ತು ನಾಲಿಗೆಯನ್ನು ಅಲ್ಲಾಡಿಸದೆ ವಾಕ್ಯಾರ್ಥವನ್ನು ಅಂತರಂಗದಲ್ಲಿ ಭಾವಿಸುವುದೇ ಮಾನಸವೆನಿಸುವುದು (ಅಜ್ಞಾ.ರ. ೦೦೬). ೪. ಹಿಮಾಲಯಪರ್ವತದ ಒಂದು ಸರೋವರ : ಮಾನಸದಿಂ ಸಿತಾಂಬುಜಶತಂ ತಳರ್ವಂತೆವೊಲೆಯ್ದಿ . . . ಬಂದೆಜಗಿತ್ತು ಕೊಳಂಗಳೊಳ್ ತಟೀಫೇನವಿತಾನವಾತ್ಮರುಚಿಯೊಳ್ ತಡಮಾಗೆ ಮರಾಳಮಂಡಳಂ (ಜಗ. ೯–೬೯) ; ಮಾನಸದ ಹೊಂದಾವರೆಯ ಸೆಳೆದು ಭಂಗಿಸುತದನು ಪೊರಮಟ್ಟು ಪರಿಮಳವನೆಲ್ಲ ಪೊತ್ತು ದಾನರಾಜಿಯನಂತೆ ಸಂತತವು ಮೆರೆಯುತಿಹ ಬೀಹುದುಂಡಗಳವನ ಗಜಪತಿಗಳು (ರಾಜ್ಯಕೋ. ೦೯). ೫. [ತತ್ತ್ವಶಾ] ಚಾಕ್ಷುಷ, ಶ್ರಾವಣ, ಜಿಹ್ವಾ, ಘ್ರಾಣ, ಸ್ಪರ್ಶನ ಮತ್ತು ಮಾನಸಗಳೆಂಬ ಆರುವಿಧವಾದ ಪ್ರತ್ಯಕ್ಷಜ್ಞಾನಗಳಲ್ಲಿ ಒಂದು ; ಮನಸ್ಸಿನ ವಿಚಾರದಿಂದ ಉಂಟಾಗುವ ತಿಳಿವು : "ಪ್ರತ್ಯಕ್ಷಜ್ಞಾನ — ೬ ವಿಧ : ಘ್ರಾಣಜ, ರಾಸನ, ಚಾಕ್ಷುಷ, ಸ್ಪಾರ್ಶನ, ಶ್ರೌತ್ರ, ಮಾನಸ (ನ್ಯಾಯಮ) ೧೮೬" (ಶ್ರೀತತ್ತ್ವ. ೨೬೬). 'ಮಾನಸಜ್ಞಾನ', 'ಮಾನಸಪ್ರತ್ಯಕ್ಷ' ಪರಾ. ೬. [ಜೈನ](ಶಾರೀರ, ಮಾನಸ, ಕ್ಷೇತ್ರಜ, ಪರಸ್ಪರೋದೀರಿತ, ದನುಜೋದೀರಿತಗಳೆಂಬ) ಐದು ವಿಧವಾದ ದುಃಖಗಳಲ್ಲಿ ಒಂದು ; "ಮನಸ್ಸಿಗೆ ಹತ್ತುವಂತಹ ಮಾತುಗಳಿಂದ ಮತ್ತು ವಿಚಾರಗಳಿಂದ ಉಂಟಾಗುವ ದುಃಖ" (ಕೈಪಿಡಿ. ೨೦೫) : ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಂಗಳೆಂಬ ಯಿಪ್ಪಂತೆಜದ ದುಃಖಂಗಳೊಳಿರ್ದು ನಿಮಿಷಮಾತ್ರಮುಪ್ಪೊಡಮುಸಿರ್ವೊತ್ತಂ ಪಡೆಯದೆ (ಅರಿಷ್ಟ. ೫–೬೬ ವ) ; ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ ಸಂಕ್ಲಿಷ್ಟಾಸುರೋದೀರಿತಗಳೆಂಬ ಪಂಚಪ್ರಕಾರದುಃಖಂಗಳನನೇಕ ಪ್ರಕಾರದಿನನುಭವಿಸುತ್ತಂ (ಸುಕುಮಾ. ೦೦–೯೬ ವ). [ಸಂ.]

**ಮಾನಸಂಜ್ವಲನ** (ನಾ). [ಜೈನ] ಚಾರಿತ್ರ್ಯದ ಪೂರ್ಣತೆಗೆ ತಡೆಯನ್ನುಂಟುಮಾಡುವ ಕ್ರೋಧ, ಮಾನ, ಮಾಯಾ, ಲೋಭಗಳೆಂಬ ನಾಲ್ಕು ವಿಧವಾದ ಕರ್ಮಗಳಲ್ಲಿ ಒಂದು : ಕ್ರೋಧಸಂಜ್ವಲನಂ ಮಾನಸಂಜ್ವಲನಂ ಮಾಯಾಸಂಜ್ವಲನಂ ಲೋಭಸಂಜ್ವಲನಂ (ಗೊಮ್ಮಟಸಾ. ೩–೯). [ಸಂ.]

**ಮಾನಸಗಬ್ಬ** (ನಾ). ಮನುಷ್ಯನಿಂದ ರಚಿತವಾದ ಕಾವ್ಯ : ಕಕಾರ ತೃತೀಯಗೆ ... ಮಾನುಷಕಾವ್ಯ — ಮಾನಸಗಬ್ಬ (ಕಮಿರ. ೨೯೩ ಪ್ರ.ಪೋ).
[ಮಾನಸ$_1$ (< ಮಾನುಸ) + ಕಬ್ಬ$_1$]

**ಮಾನಸಗಮನ** (ನಾ). ಮನಸ್ಸಿನ ವೇಗ ; ಮನೋವೇಗ : ವರಗೃಹಾಕ್ಷಿಯಲಿ ಪೊರಮಟ್ಟು ಮಾರುತಮಾರ್ಗಮಂಡರ್ದು ಮಾನಸಗಮನದಿ ಬರುತ (ಪಪಕೋ. ೦೦–೩೬). [ಸಂ.]

**ಮಾನಸಗೋಲ** (ನಾ). ಮಲ್ಲಯುದ್ಧದ ಒಂದು ವರಸೆ : ವಿಕ್ಕುದು ವಜ್ರಪಾತಮುಮನೆಂಬಿನಮುಬ್ಬಸಮಾದ ತೋರಹಸ್ತಕ್ಕೆ ತಗುಳ್ದು ಪತ್ತಿಸುವ ಮಾನಸಗೋಲ[ಶಾಕಾಂ. ೪]ಮೆನಿಪ್ಪ ಡೊಕ್ಕರಕ್ಕಿಕ್ಕಿದ ವಜ್ರಲೇಪಮೆನೆ . . . ಬೆರ್ಚಿದನವಂ ಕುವರಂಗೆನಸುಂ ನಿಯುದ್ಧದೊಳ್ (ಶಂದ್ರಚಂ. ೫–೬೦). [ ? ]

**ಮಾನಸಜ** (ನಾ). [ತತ್ತ್ವಶಾ] ಇಂದ್ರಿಯಜ, ಸಮನಂತರಪ್ರತ್ಯಯಜ, ಮಾನಸಜ, ಭಾವನಾಬಲಜಗಳೆಂಬ ನಾಲ್ಕು ಪ್ರಕಾರದ ಪ್ರತ್ಯಕ್ಷ

ಗಳಲ್ಲಿ ಒಂದು ; ಮನಸ್ಸಿನ ಯೋಚನೆಯಿಂದುಂಟಾಗುವ ಜ್ಞಾನ : ಪ್ರತ್ಯಕ್ಷವು ನಾಲ್ಕುಪ್ರಕಾರ–ಇಂದ್ರಿಯಜ, ಸಮನಂತರಪ್ರತ್ಯಯಜ, ಮಾನಸಜ, ಭಾವನಾಬಲಜ ಎಂದು . . . ಮನಸ್ಸಿನ ಯೋಚನೆಯಿಂದ ಬರುವ ಜ್ಞಾನವು ಮಾನಸಜವು (ಹಿಂದಶಾ· ೨೮). 'ಪ್ರತ್ಯಕ್ಷ' ಪರಾ. [ಸಂ.]

**ಮಾನಸಜ್ಞಾನ** (ನಾ). = ಮಾನಸ೨ ೫ : ಬ್ರಾಹ್ಮಣತ್ವಾದಿ ವಿಜ್ಞಾನವು ಅನಾದಿಕಾಲದ ವ್ಯವಹಾರಮೂಲಕವಾಗಿ ಬರುವ ಮಾನಸಜ್ಞಾನವೇ ವಿನಾ ಇಂದ್ರಿಯಗಳಿಂದ ಬರುವ ಪ್ರತ್ಯಕ್ಷವಲ್ಲ (ಹಿಂದಶಾ· ೦೩೩). [ಸಂ.]

**ಮಾನಸದಟ್ಟಿಸು** (ಕ್ರಿ). ಮನಸ್ಸಿಗೆ ತಾಕುವಂತೆ ಮಾಡು; ಮನದಟ್ಟು ಮಾಡು : ತಾನನುಭವಿಸಬಹುದು ಸುಡಿದನ್ಯರ್ಗೆ ಮಾನಸದಟ್ಟಿಸಲರಿದು (ಶಠಶ· ೬೦-೦೬). [ಮಾನಸ೨ + ತಟ್ಟಿಸು]

**ಮಾನಸದೇರ**, ಮಾನಿಸದೇರ (ನಾ). ಮನುಷ್ಯನನ್ನು ವಾಹನವಾಗಿ ಉಳ್ಳವನು ; ಕುಬೇರ : "ಮಾನಸದೇರನಂ ಪಿಚ್ಚವಣಿಗನೆಂದೊಡೆ ನಿರುತಿವೆಸರಕ್ಕು" (ಕಬ್ಬಿಗ· ೦೪). ಮಾನಿಸದೇರ : "ಮಾನಿಸದೇರನೆಂದು ನೈರುತ್ಯಂ" (ಶಶಾ· ೪೯-೩೬).

[ಮಾನಸ೧ (< ಮಾನುಸ) + ತೇರ್೨ + — ಅ೭]

**ಮಾನಸಪುತ್ರ** (ನಾ). ಮನಸ್ಸಿನ ಸಂಕಲ್ಪದಿಂದ ಹುಟ್ಟಿದ ಮಗ : ಸನಕಃ, ಸನಾತನಃ, ಈ ೨ ಬ್ರಹ್ಮನ ಮಾನಸಪುತ್ರರ್ (ಕಾಶಕ್ಕ· ೩೮); ದೇವರ್ಷಿಯಾದ ನಾರದ, ಪರಮಾತ್ಮನ ಮಾನಸಪುತ್ರ (ಹೇವಾಕು· ೭). [ಸಂ.]

**ಮಾನಸಪೂಜೆ** (ನಾ). ದೇವತಾವಿಗ್ರಹ, ಪೂಜಾಪರಿಕರ ಮುಂತಾದ ಬಹಿರಂಗದ ಉಪಕರಣಗಳ ಸಹಾಯವೇ ಬೇಕಾಗದೆ ಅಂತರಂಗದಲ್ಲಿಯೇ ಮಾಡುವ ಪೂಜೆ ; ಮನಸ್ಸಿನಿಂದ ಮಾಡುವ ಪೂಜೆ : ಮಾನಸಪೂಜೆಯನ್ನು ನೀ ಮಾಡೆ ದಾನವಾಂತಕ ರಂಗನು ಮೆಚ್ಚಿ ತಾನೆ ಬಂದ ಗೋಪಾಲಕೃಷ್ಣ (ಪುರಂದ· ದಾ· ೦-೩-೯); ತಮ್ಮ ಕುಲದೇವತೆಯಾದ ಮಹಾಲಕ್ಷ್ಮಿಯನ್ನು ಪ್ರತೀಕವಾಗಿಸಿ ಆದಿಶಕ್ತಿಯ ಮಾನಸಪೂಜೆಯನ್ನು ಪ್ರಾರಂಭಿಸಿದರು (ಸಶುಜೀ· ೩೦೩). [ಸಂ. ಮಾನಸಪೂಜಾ]

**ಮಾನಸಪ್ರತ್ಯಕ್ಷ** (ನಾ). = ಮಾನಸ೨ ೫ : ಮನಸ್ಸಿನೊಳ್ ಭಾವಿಸಿ, ತನಗೀಗಳ್ ಸುಖಮಾಗಿರ್ಕುಂ ಈಗಳ್ ದುಃಖಮಾಗಿರ್ಕುಂ ಎಂಬಿವು ಮೊದಲಾಗಿ ಪುಟ್ಟುವ ತಿಳಿವು ಮಾನಸಪ್ರತ್ಯಕ್ಷಮೆನಿಪುದು (ಶಶಾ· ೩ ಪ) ; ಆತ್ಮನೂ ಅವನ ಸುಖದುಃಖಾದಿಗಳೂ ಜ್ಞಾನರೂಪವಾಗಿ ಸ್ವಯಂಪ್ರಕಾಶವಾಗಿರುವುದರಿಂದ ಮಾನಸಪ್ರತ್ಯಕ್ಷವೆಂಬುದಿಲ್ಲ (ಹಿಂದಶಾ· ೨೯೦). [ಸಂ.]

**ಮಾನಸವಾಟಿ**, ಮಾನಿಸವಾಟ್ (ನಾ). ಮನುಷ್ಯನ ಬದುಕು.— ಜೀವನ : ಮಾನಸವಾಟಿಂಬುದು ಪನಿ ಪುಲ್ಲ ಮುಗಿಲ ಸಂಜೆಯೊಳೋರಂತಪ್ಪುದಜಿಂದಾರ್ ಬಾರಿಸಿದೊಡಂ ನಿಲ್ವಿನಲ್ಲೆಂದು ಸ್ವಯಂಪ್ರಭೆಯೆಂಬೋಳ್ . . . ಮನೆಯಿಂದಂ ಪೊಜಿಮಟ್ಟು (ವಡ್ಡಾರಾ· ೯೭-೬); ಇನ್ನೀತನಿಲ್ಲದೆ ಪೇೞ್ ಮಾನಸವಾಟ ಮೋಹಮೆನಗಿನ್ನೇಬಾರ್ತೆ (ಆದಿಪು· ೩-೩೨) ; ಘನರುಚಿಯೆಂದೊಡಂ . . . ಜಲಧರೋಪಲವರ್ತುಲಮೆಂದೊಡಂ ಜಡಾತ್ಮನುಮಜಿದಿಕ್ಕಿ ಮಾನಸರ ಮಾನಸವಾಟ್ಟಭಿಧಾನಮನ್ನಿರೇ (ಅಜಿಪು· ೯-೨೦). **ಮಾನಿಸವಾಟ್**: ತಾನಜಿದು ತೋ[ಜಿ]ದು ನೆಟ್ಟನೆ ಮಾ[ನಿ]ಸವಾಟುವುದೆಂದು ಸ[ಂ]ನ್ಯಾಸನದೊ[ಳ್] (ಎಕ· X, ೦೫೩–೪೯ ; 905); ಮಾನಿಸವಾಟ ಮೋಹಕ್ಕೆ ಸಂಸಾರದೊಳಾದ ಭೋಗಕ್ಕಳಿಪಿ ಪಿರಿದಪ್ಪ ಸುಖಮಂ ಮಾಱಿ ತಪಮಂ ಕಿಡಿಸಿ ನರಕದೊಳಾದ ಮಹಾದುಃಖಕ್ಕೊಳಗಾಗಬೇಡ (ಧರ್ಮಾಮೃ· ೭-೦೩೦).

[ಮಾನಸ೧ (<ಮಾನುಸ) + ಬಾೞ್೩]

**ಮಾನಸವೇಗ** (ನಾ). ೧. ಮನಸ್ಸಿನ ವೇಗ ; ಮನೋವೇಗ. ೨. ಮನಸ್ಸಿನ ವೇಗಕ್ಕೆ ಸಮವಾಗಿ ಚಲಿಸುವ ವ್ಯಕ್ತಿ : ಉಸುರೆ ದಿವಿಜೇಶ್ವರರು ಪರಿವೆಸದಮರರ್ ದಾದಿತಾಜವೆಸದಮರರದೇಂ ಬೆಸಗಲಿಗಳ್ ಬರ್ಪರೊ ಮಾನಸವೇಗರ್ ಪವನವೇಗಧಿರುಳುಂ ಪಗಲುಂ (ಅಜಿಪು· ೩-೬೬).

[ಸಂ.]

**ಮಾನಸಪೊತ್ತಗೆ** (ನಾ). ಮನುಷ್ಯನಿಂದ ರಚಿತವಾದ ಪುಸ್ತಕ : ಮಾನುಷಪುಸ್ತಕ – ಮಾನಸಪೊತ್ತಗೆ (ಶಬ್ದಮ· ೨೯೨ ಪ್ರಯೋ).

[ಮಾನಸ೧ (< ಮಾನುಸ) + ಪೊತ್ತಗೆ]

**ಮಾನಸಶಾಸ್ತ್ರ** (ನಾ). ಚಿತ್ತ ಅಥವಾ ಅಂತರಂಗದ ವ್ಯಾಪಾರಗಳಿಗೆ ಸಂಬಂಧಿಸಿದ ಶಾಸ್ತ್ರ ; ಮನಶ್ಶಾಸ್ತ್ರ : ವೇದಾಂತ . . . ಮಾನಸಶಾಸ್ತ್ರ – ಇವೇ ಮುಂತಾದ ಶಾಸ್ತ್ರಗಳ ಮಾರ್ಗವಾಗಿಯೂ ಕಾವ್ಯವನ್ನು ಪರಿಶೀಲಿಸುವವರು ಉಂಟು (ಕಶ್ಯಕಾ· ೬೩). [ಸಂ.]

**ಮಾನಸಶಾಸ್ತ್ರಜ್ಞ** (ನಾ). ಮನಶ್ಶಾಸ್ತ್ರವನ್ನು ಅಭ್ಯಾಸ ಮಾಡಿದವನು ; ಮನೋವಿಜ್ಞಾನಿ : ಮಾನಸಶಾಸ್ತ್ರಜ್ಞರ ಅಭಿಪ್ರಾಯದಲ್ಲಿ ಮೇಲೆ ಹೇಳಿದ ಮಾತುಗಳೆಲ್ಲ ಸರಿಯಾಗಿವೆ (ಕಶ್ಯಕಾ· ೬೩). [ಸಂ.]

**ಮಾನಸಸಿದ್ಧಿ** (ನಾ). ಮಾನಸಿಕವ್ಯಾಪಾರಗಳ ಮೇಲೆ ಹತೋಟಿಯನ್ನು ತರಲು ಶಕ್ಯವಾಗುವಂತಹ ಸಿದ್ಧಿ : ಯಥಾಕಾಮೋಪಲಬ್ಧಿ ಯಥಾಕಾಮವಿನಿರ್ಗಮನ ಸರ್ವತಿರಸ್ಕರಣ ಸಕಲಗುಹ್ಯಾರ್ಥದರ್ಶನ ಕರ್ಮಾನುಗುಣನಿರ್ಮಾಣವಶಿತ್ವ ಪ್ರಿಯದರ್ಶನ ಸಂಸಾರದರ್ಶನವೆಂಬವೆಂಟು ಮಾನಸಸಿದ್ಧಿಗಳು (ವಿವೇಕ· ೨೨೩). [ಸಂ.]

**ಮಾನಸಸೃಷ್ಟಿ** (ನಾ). ಮನಸ್ಸಿನಿಂದ ಮಾಡಿದ ಸೃಷ್ಟಿ ; ಮನಸ್ಸಿನ ಸಂಕಲ್ಪದಿಂದ ಉಂಟಾದುದು : ವತ್ಸ ನಾರದನೆ ಇದೆಲ್ಲಿಂದ ಬಂತು ? . . . ಇದೇನು ಮಾನಸಸೃಷ್ಟಿಯೋ ? (ಚಾಶಂಕ· ೩೦-೬). [ಸಂ.]

**ಮಾನಸಸ್ನಾನ** (ನಾ). ದಿವ್ಯ, ವಾರುಣ, ವಾಯುವ್ಯ, ಮಾನಸ ಮತ್ತು ಆಗ್ನೇಯಗಳೆಂಬ ಐದು ವಿಧವಾದ ಸ್ನಾನಗಳಲ್ಲಿ ಒಂದು ; ಮನಸ್ಸಿನ ಶುದ್ಧತೆ, ಪರಿಶುದ್ಧಿ : ದಿವ್ಯಸ್ನಾನ ವಾರುಣಸ್ನಾನ ವಾಯುವ್ಯಸ್ನಾನ ಮಾನಸಸ್ನಾನ ಆಗ್ನೇಯಸ್ನಾನವೆಂಬ ಪಂಚವಿಧಸ್ನಾನಂಗಳೊಳಗೆ ಆಗ್ನೇಯವೆಂಬ ಭಸ್ಮಸ್ನಾನವೇ . . . ಗುಣಾಧಿಕಮಪ್ಪುದು (ವಿವೇಕ· ೦೨೭). [ಸಂ.]

**ಮಾನಸಾತ್ಮಜ** (ನಾ). = ಮಾನಸಪುತ್ರ : ಮಾನಸಾತ್ಮಜರ ನೇಮಿಸಿದನ್ಯಕೇಳ್ವುದಾ ಸನಕನಾ ಸನಂದನನಾ ಸನತ್ಕುಮಾರಂ ಪ್ರೇಮದ ಸನತ್ಸುಜಾತಂ ಸನಾತನರೆಂಬ ನಾಮದ್ಯೆವರನು (ಜೈಕೃಕಿ· ೨-೦-೦೪). [ಸಂ.]

**ಮಾನಸಾಹಾರ** (ನಾ). [ಜೈನ] ನೋಕರ್ಮಾಹಾರ, ಕರ್ಮಾಹಾರ, ಲೇಪ್ಯಾಹಾರ, ಓಜಾಹಾರ, ಕಬಳಾಹಾರ ಮತ್ತು ಮಾನಸಾಹಾರವೆಂಬ ಆರುಬಗೆಯ ಆಹಾರಗಳಲ್ಲೊಂದು;(ದೇವತೆಗಳು)ಮಾನಸಿಕವಾಗಿ ಪಡೆಯುವ ಆಹಾರ : ದೇವರ್ಕಳ್ಗೆ ಮಾನಸಾಹಾರಮಕ್ಕುಂ (ಜ್ಞಾಶಕ· ೬೨-೭) ; ನೋಕರ್ಮಾಹಾರಮುಂ ಕರ್ಮಾಹಾರಮುಂ ಕಬಳಾಹಾರಮುಂ ಲೆಪ್ಪಾಹಾರಮುಂ ಓಜಾಹಾರಮುಂ ಮಾನಸಾಹಾರಮುಮೆಂದಕ್ಕುಂ . . . ದೇವನಿಕಾಯದೊಳ್ಮಾ[ಶಾಕಾಂ. ಕ್ರ]ನಸಾಹಾರಮಕ್ಕುಂ (ಕಶಾಕ· ೩೦೩). [ಸಂ.]

**ಮಾನಸಿ** (ನಾ). ಮನುಷ್ಯಸ್ತ್ರೀ : ಮಾನವ ಹೆಂಗಸು: ಮಾನಸಿಯರ್ಗೀ ಪರಿ ಚೆಲ್ವಿನಿತುಂಟೆ ಸಗ್ಗದಾಕೆಯೆ ದಿಟಂ (ಕಬ್ಬಿಗಾ· ೦೦೪) ; ಶ್ರವಣಕುಲಮಂ ನಿಬ್ಬರದಿ ತಾಗುವ ಹೊಯಿಲುಗಳು ಮಾದವಾ ಪೈಜವೆ ವಿನಿರ್ಮಳಭಕ್ತಿ ಮಾನಸಿ[ಶಾಕಾಂ. ಸೆ]ಯಾದ ಕಾರಣವು (ಐಸಕು· ೩೨-೨೦).

[ಮಾನಸ೧ (< ಮನುಸ) + – ಇ೩]

**ಮಾನಸಿಕ** (ಗು). ೧. ಮನಸ್ಸಿಗೆ ಸಂಬಂಧಿಸಿದ ; ಮನಸ್ಸಿನಲ್ಲಿ ಉಂಟಾದ : ಭ್ರಾಂತಿಯು ಹಾವು ಎಂಬುದು ಅಖಂಡವಾದ ಒಂದು ಮಾನಸಿಕ ಗ್ರಹಿಕೆ (ಕಶ್ಯಕಾ· ೬೦೪) ; ಮನೆಗೆ ಬೇಕಾದ ಸಾಮಾನುಗಳನ್ನು ಕೊಂಡುಕೊಂಡು ಅನುಭವಿಸಿ ಪಡೆಯುವ ತೃಪ್ತಿ, ಸಂತೋಷ, ಸುಖಕ್ಕೆ

ಮಾನಸಿಕ ಆದಾಯ (psychic– income) ಎಂದು ಕರೆಯಲಾಗುತ್ತದೆ (ಗೃಹ. ೦೯೪). (ನಾ). ೨. [ತತ್ತ್ವಶಾ] ಕರ್ಮಯೋಗದ ಮೂರು ಪ್ರಕಾರಗಳಲ್ಲಿ ಒಂದು ; ಮನಸ್ಸಿನಿಂದ ಮಾಡುವ 'ಕರ್ಮ ; ಮಾನಸಿಕ ಕ್ರಿಯೆ : ಇವುಗಳು ಶಾರೀರ, ವಾಚಿಕ, ಮಾನಸಿಕವೆಂದು ಮೂರು ಪ್ರಕಾರ (ಹಿಂದಶಾ. ೯೯). [ಸಂ.]

**ಮಾನಸಿಕದೂರ** (ನಾ). [ಕಾವ್ಯವಿಾ] ಸೌಂದರ್ಯಾನುಭವದಲ್ಲಿ ಕಲಾವಸ್ತು, ಕಲಾವಿದ, ಪ್ರೇಕ್ಷಕಾದಿಗಳಿಗೆ ಇರಬೇಕಾದ ಒಂದು ವಿಶಿಷ್ಟವಾದ ಸಂಬಂಧಾಂತರ: ಯಾವ ಒಂದು ನೆಲೆಯಲ್ಲಿ ಕಲಾಕೃತಿಯಿಂದಾಗಲಿ, ಲೋಕವಸ್ತುವಿನಿಂದಾಗಲಿ ನಾವು ಸೌಂದರ್ಯಾನುಭವವನ್ನು ಪಡೆಯಲು ಸಾಧ್ಯವೋ ಅಂತಹ ಒಂದು ನಿಲುವಿನಲ್ಲಿ ನಮ್ಮನ್ನು ಹಾಗೂ ವಸ್ತುವನ್ನು ನಿಲ್ಲಿಸಿಕೊಳ್ಳುವ ಈ ಕೌಶಲವೇ ಮಾನಸಿಕದೂರ (ಕೌಂವಸ. ೬೯). [ಸಂ.]

**ಮಾನಸಿಕರೋಗ** (ನಾ). ಮನಸ್ಸಿಗೆ ಸಂಬಂಧಿಸಿದ ಕಾಯಿಲೆ ; ಮನೋರೋಗ : ಮಾನಸಿಕರೋಗಗಳಿಂದ ಬಳಲುತ್ತಿರುವವರನ್ನು ಉಪಚರಿಸಿ ಸರಿಗೊಳಿಸುವ ಶಾಸ್ತ್ರಕ್ಕೆ ಮಾನಸೋಪಚಾರಶಾಸ್ತ್ರ (Psycho-therapy) ವೆಂದು ಹೆಸರು (ಮಶೋರೋ. ೪೭). [ಸಂ.]

**ಮಾನಸಿಕವೇದನೆ** (ನಾ). ಮನಸ್ಸಿಗೆ ಉಂಟಾಗುವ ದುಃಖ,-ವ್ಯಸನ : ಮಾನಸಿಕವೇದನೆಯು ಅವರ ದೇಹದ ಮೇಲೂ ತನ್ನ ಪ್ರಭಾವವನ್ನು ಬೀರಿ ಅವರ ಶಕ್ತಿಯನ್ನು ಕುಗ್ಗಿಸಿತು (ಕೂಶ). [ಸಂ. ಮಾನಸಿಕವೇದನಾ]

**ಮಾನಸಿಕೆ, ಮಾನಸಿಕ್ಕೆ** (ನಾ). ೧. ಮಾನವೀಯತೆ ; ಒಳ್ಳೆಯತನ : ಮಾನಸಿಕೆಯುಳ್ಳಂ ಪೆಱರ ದೋಷಮಂ ಕೇಳನೆಂಬುದು ತಾತ್ಪರ್ಯಂ (ಶಬ್ದಶಾ. ೨೬-೨೪); ಮಾನಿತಮಪ್ಪ ಮಾನಸಿಕೆ ಮೆಯ್ಯೊಳೆ ಕೂಡಿರೆ ಧಾತ್ರಿನೆಂದೆಸಲ್ ತಾನೆಸೆದಿರ್ದ ಮಾನಿನಿಯರಂ . . . ಹೀನರೆನಿಪ್ಪವಂದಿರೊಳೆ ಕೂಡಿ ವಿವೇಕವಿಹೀನನಾಗಿ ಚೀ ಮಾನವಿದೂರನಕ್ಕಟಜನೆಂದಭಿಧಾನಮನಾಂತನಾಗದೇ (ಶೇಖಕೃ. ೩-೦೩೩). ೨. ಆತ್ಮಗೌರವ ; ಸ್ವಾಭಿಮಾನ : ಮಾನಸಿಕೆಯ ದೊರೆಗಿಡೆ ನೀಂ ಮಾನಸನೆನೆ ನೀರೊಳೆಲವೊ ನೀನುಂ ಮಾನೆಂಬೀ ನೆವದಿರ್ದಪುದೇಂ (ಕಃಶಶಾ. ೦೩-೭೯); ದೊರೆವೆತ್ತ ತಮ್ಮ ಮಾನಸಿಕೆಯ ಕೇಡನುನ್ನತಿಯ ಬನ್ನಮಂ . . . ವ್ಯಸನಿಗಳಾರು ಮೆತ್ತಲಜೀವರ್ ವಿಷಯಾಸವಮತ್ತಚೇತಸರ್ (ಶಂಶಾಪು. ೦೪-೦೨೯) ; ಕಡುಗಲಿತನಮುಂ ಚಾಗದ ಪೊಡರ್ಪುಮೊಳ್ಪುಡಿಯೊಳಾದ ಮಾನಸಿಕೆಯುಂ . . . ಪೆರ್ಮೆವಡೆದುಮವನಿಂದಿಲೆಯೊಳ್ (ಕಾವ್ಯಾಶ. ೩೪೪). ೩. ಆತ್ಮೀಯ ಭಾವನೆ ; ಅಂತಃಕರಣ ; ಪ್ರೀತಿ : ಮಾನಸಿಯಣಮುಲ್ಲಳೀಕ ಮರವಾನಸೆಯಾಗಿಯುಮಾದುದೊಂದು ಮಾನಸಿಕೆ (ಆದಿಪು. ೦೨-೩೯). ಮಾನಸಿಕ್ಕೆ : ೨. ಒದವಿದ ಮಾನಸಿಕ್ಕೆ ತಲೆದೋಱಿದ ಮುನ್ನಮೆ ಮುಂಬಿ ಪೂರ್ತಿಗೊಂಡುದು ಸಿರಿ ಕೆಚ್ಚುಗೊಂಡುದು ಮನಂ . . . ರಾಸಿಗೊಂಡುದು ನೆಗರ್ತೆಯ ತೇಜವನನ್ಯಪಾಳನ (ಕಾಇಇ. IX – i, ೨೦೩-೯೭, 1126) ; ಅಱಿತದ ಮಾತು ನಾಲಗೆಯ ಬಣ್ಣಿಗೆ ಬಾರದ ದೀನಮಾನಸರ್ಮಱವುಗೆ ಕಾವ ಮಾತು ಮನದೊಳ್ ಪೊಱಪೊಣ್ಮದ ಮಾನಸಿಕ್ಕೆಯಂ ನೆಱಪುವ ಮಾತು ನೀತಿನಿಲಯಕ್ಕೊಳಸಲ್ಲದಮಾತ್ಯವೃತ್ತಿಯಂ ಜಱಿವುದು ತಂತ್ರಪಾಳಕಶಿಖಾಮಣಿ ಪೆರ್ಮ್ಮನ ಕೀರ್ತಿಡಿಂಡಿಮಂ (ಎಕ. V, ಬೇಲೂರು. ೮೬-೯೩; 1177). ೪. ಹಿರಿಮೆ; ಘನತೆ : ನೆಗಟ್ಟೆವೆತ್ತ ಪತಿಭಕ್ತಿಯ ಮ್ಮೆಮೆಯ ಮಾನಸಿಕ್ಕೆಯುಗ್ಗಲದ ಪೊಗಟ್ತೆ ತನ್ನದೆನೆ ಪೆಂಪು ಮನೋಹರಿಗಲದಕ್ಕುಮೇ (ಆದಿಪು. ೦-೭೨). [ಮಾನಸ$_{2}$ + – ಇಕೆ]

**ಮಾನಸಿಕೆಗಿಡು** (ಕ್ರಿ). ಆತ್ಮೀಯತೆಯನ್ನು ಕಳೆದುಕೊಳ್ಳು : ಸ[ಂ]ನ್ಯಾಸನದೊ[ಳ್] ಮಾನಸಿಕೆಗಿಡದೆ ಕೊಕ್ಕೊನನೂನಸುಖಾಸ್ಪದಮಾನಟ್ಟಿಯೊಳ್ ಶ್ರೀವಿಜಯಂ (ಎಕ. X, ೦೩೨-೩೦; 915).
[ಮಾನಸಿಕೆ + ಕಿಡು (< ಕೆಡು$_{1}$)]

**ಮಾನಸಿಕ್ಕೆ** 'ಮಾನಸಿಕೆ' ನೋ.

**ಮಾನಸಿಗ** (ನಾ). ೧. ಮನುಷ್ಯ; ಮಾನವ : 'ಪೆಲ್ಮಾನಸಿಗ' ಪರಾ. ೨. ಒಂದು ವಂಶದ ಹೆಸರು : ಇನ್ದಾಪಾಯ್ಯಂ (ಇನ್ದಪಯ್ಯಂ) ನಾಡಾನಾಳುತ್ತಿರೆ ಪುರಿಗೆಱೆ ನಾಡ ಸರಟವುರದಾಯ್ಯದಿಮ್ಮರುಮಿಬ್ಬುನಾಡಯುಸೆ ಮಾನಸಿಗರ ಚಿದಾ(ದ)ಣ್ಣ[ಂ] ಗೋಸಾಸಮಿಱಿಟ್ಟೊ[ಂ] (ಎಕ. XXI, ೨೦೬-೩ ; 883). [ಮಾನಸ$_{1}$ (< ಮಾನುಸ) +– ಇಗ]

**ಮಾನಸೂತ್ರ** (ನಾ). ಅಳತೆಯ ದಾರ : ಕಮಳಜನಳೆಯಲ್ಮಾಡಿರ್ದ ಮಾನಸೂತ್ರಂಬೊಲೊಪ್ಪುಗುಂ ಕಟಿಸೂತ್ರಂ (ಅಜಿತ. ೨-೨೯). [ಸಂ.]

**ಮಾನಸೆ, ಮಾನಿಸೆ** (ನಾ). = ಮಾನಸಿ : ಮಾನಸೆಯಣಮುಲ್ಲಳೀಕ ಮರವಾನಸೆಯಾಗಿಯುಮಾದುದೊಂದು ಮಾನಸಿಕೆ (ಆದಿಪು. ೦೨-೩೯); ಚಱಿಗೆ ಪೋಗುತ್ತುಂ ನಾನಾಸೂನದುಃಖಿಪೀಡಿತಮಾನಸೆಯಾಗುತ್ತುಮಿರ್ದ ಪೊಲವಾನಸೆಯುಂ ಕರುಣಾಂ ಕೈಮಿಗೆ ಕಂಡು (ಸುಕುಮಾ. ೩-೨). 'ಪೊಲವಾನಸೆ' ಪರಾ. ಮಾನಿಸೆ : ಅನಪ್ಪೊಡೆ ದೇವತೆಯಿಂ ನೀನಱಿಯದೆ ಕೊರ್ವಿ ಚಪಳತನದಿಂದೆನ್ನಂ ಮಾನಿಸೆಯಿ ಗೆತ್ತು ನುಡಿದ್ಯೆ (ಧರ್ಮಾಮೃ. ೩-೦೦೨); ಮೆಯ್ಯ್ನುಸುಮಿಸುಕಿದೊಡೆ ದಿಟದ ಮಾನಿಸೆಯೆಂದೇ ಬಗೆದಂಗಭವಂ ಇಸದೆನ್ನಂ ಬಿಡನೆನುತವೆ ಮರವಾನಸೆಯುಂದಮುನನುಕರಿಸಿವಳೊ (ಶಬ್ದಮ. ೪-೨೨). [ಮಾನಸ$_{1}$ (< ಮಾನುಸ) +– ಎ$_{2}$]

**ಮಾನಸೌಕಸ** (ನಾ). ಮಾನಸಸರೋವರದಲ್ಲಿ ವಾಸಿಸುವುದೆಂದು ನಂಬಲಾದ ಪಕ್ಷಿ; ಹಂಸ : "ಹಂಸಃ, ಶ್ವೇತಚ್ಛದಃ, ಚಕ್ರಾಂಗಃ, ಮಾನಸೌಕಾಃ (ಕಸಃ) — ಈ ೪ ಹಂಸಂ" (ಹಲಾಯು. ೪೨-೯೯); "ಮಾನಸೌಕಸಂ ಶುಭ್ರಚ್ಛದಂ ಮರಾಳಂ ಹಂಸೆ" (ಮಂಗರಾ. ೩೦-೭).
[ಸಂ. ಮಾನಸೌಕಸ್]

**ಮಾನಸ್ತ** (ನಾ). ಆತ್ಮಗೌರವವುಳ್ಳವನು : ಸ್ವಾಭಿಮಾನಿ : ಮಾನಸ್ತರ ಮಾನವನ್ನು ಕಾಪಾಡುವ ಭಾರ (ಕಲಿ. ೨೨೦). [ಮಾನ + – ಸ್ತ]

**ಮಾನಸ್ತಂಭ** (ನಾ). [ಜೈನ] ಬಸದಿಯ ಮುಂದೆ ನಿಲ್ಲಿಸಿರುವ ಕಂಬ; P "ಮಾನವನ್ನು ಸ್ತಂಭನ ಮಾಡುವಂತಹ ಕಂಬ. ಸಮವಸರಣ ಮಾರ್ಗಗಳಲ್ಲಿ ನಟ್ಟನಡುವೆ ಗೋಳಾಕಾರದಲ್ಲಿರುವ ಕಂಬ. ಇದು ಕ್ರಮವಾಗಿ ಚಿಕ್ಕಚಿಕ್ಕದಾಗುತ್ತ ಹೋಗುವ ಮೂರು ಗೋಳಾಕಾರದ ಪೀಠಗಳ ಮೇಲೆ ಸ್ಥಾಪಿತವಾಗಿರುತ್ತದೆ. ಇದರ ಎತ್ತರ ತೀರ್ಥಂಕರರ ಶರೀರಾಕೃತಿಯ ಹನ್ನೆರಡು ಪಟ್ಟು ಇರುತ್ತದೆ. ಇದು ಮೂರು ಖಂಡಗಳಲ್ಲಿ ವಿಭಾಗಿತವಾಗಿರುತ್ತದೆ. ಘಂಟೆ, ಚಾಮರ, ಧ್ವಜಗಳಿಂದ ಅಲಂಕೃತವಾಗಿ ಮೂರುಲೋಕಕ್ಕೂ ಮಾನ್ಯವಾಗಿರುತ್ತದೆ. ಇದರ ದರ್ಶನದಿಂದ ನೋಡಿದವನ ಅಹಂಕಾರ ದೂರವಾಗಿ ಧಾರ್ಮಿಕಶ್ರದ್ಧೆ ಮೂಡುತ್ತದೆ" (ಜೈಪಕೋ. ೨೦೩): ಮಾನಮನೆಂತುಂ ಮಿಥ್ಯಾಜ್ಞಾನಿಗಳೆರ್ದೆಯೊಳಗೆ ನೆಲಸಲೀಯದೆ ನಾಲ್ಕುಂ ಮಾನಸ್ತಂಭಂಗಳ್ ರತ್ನಾನದ್ಧಂಗಳ್ ನಿರಂತರಂ ಸೊಗಯಿಸುಗುಂ (ಆದಿಪು. ೦೦-೨೪) ; ಮಿಥ್ಯಾಜ್ಞಾನಿಯ ಮಾನಮಂ ಸ್ತಂಭಿಸುವ ಮಾನಸ್ತಂಭಂಗಳಂ (ಶಾಪುಂಪು. ೪೪) ; ಮಾನಸ್ತಂಭದ ತುದಿಯಲ್ಲಿ ಒಂದು ಸಣ್ಣ ಮಂಟಪವೂ ಅದರಲ್ಲಿ ಒಂದು ಜೈನವಿಗ್ರಹವೂ ಇರುತ್ತವೆ (ವ್ಯಾಪಾಸು. ೩೬). [ಸಂ.]

**ಮಾನಸ್ತೆ** (ನಾ). ಆತ್ಮಗೌರವವುಳ್ಳವಳು : ಸ್ವಾಭಿಮಾನಿ : ಈಕೆ ಬಹು ಮಾನಸ್ತೆ (ಶಾಗಪ. ೨೩-೩೦). [ಮಾನಸ್ತ + – ಎ$_{2}$]

**ಮಾನಸ್ತೋಕ** (ನಾ). ('ಮಾನಸ್ತೋಕೇತನಯೇ' ಎಂದು ಪ್ರಾರಂಭವಾಗುವ) ಒಂದು ಮಂತ್ರದ ಹೆಸರು : ಚಾರುತರ ಶ್ರೀಮದ್ವಿಭೂತಿ ಘುಟಿಕೆಯನೊಲಿದು ಭೂರಮಣ ತನ್ನ ವರ ಕರದ ಸುಕುರಂಗಮುದ್ರೆ ರುಚಿರದಿಂ ಪಿಡಿದು ವಿಮಳಮಾನಸ್ತೋಕಮಂತ್ರದಿಂದೆತ್ತಿ (ಪಪಮೋ. ೦೯-೦೦). [ಸಂ.]

**ಮಾನಸ್ಥಾನ** (ನಾ). ಗುಹ್ಯಾಂಗ : ಮಾನನಾಯಕರು ತಮ್ಮ ಮಾನಸ್ಥಾನದ ಏರ್ಪಾಡುಗಳನ್ನೆಲ್ಲ ಪೂರೈಸಿಕೊಂಡಾದ ಮೇಲೆ . . . ಬೆಟ್ಟಳ್ಳಿಯ ಕಮಾನುಗಾಡಿ . . . ತೀರ್ಥಹಳ್ಳಿಯ ಕಡೆಗೆ ಹೊರಟಿತು (ಮಲೆಮ. ೩೪೮). [ಸಂ.]

**ಮಾನಹಾನಿ** (ನಾ). ಅಪಮಾನ : ಅವಮಾನ : ವೇಸಿಯ ಸಂಗ ದ್ರವ್ಯದ ಕೇಡು ದಾಸಿಯ ಸಂಗ ಮಾನಹಾನಿಗೆ ಮೊದಲು (ಸಕಲ. ಕೈ.I. ೨೩-೬೭); ಎನಗೆ ನಿಮ್ಮಯ ದೂಸರಿಂದಾಯ್ತನಿತು ಸಭೆಯಲ್ಲಿ ಮಾನಹಾನಿಗಳು (ಕುಮ್ಯಾಲ. ೧೦-೭). [ಸಂ.]

**ಮಾನಹೀನ** (ನಾ). ಗೌರವವಿಲ್ಲದವನು ; ನಾಚಿಕೆಗೆಟ್ಟವನು : ಮಾನಹೀನಗಭಿಮಾನವೇಕೆ (ಪುರಂದ. ೨-೬೨ ಕ್ಷ೭೦) ; ಸಿರಿವಂತರ ಮನೆಗೆ ಹೋಗಿ ಒಂದು ಸೇರು ಅಕ್ಕಿಯನ್ನು ಯಾಚಿಸುವುದು ಮಾನಹೀನನ ಕಾರ್ಯವೆಂದು ಅವನಿಗೆ ಗೋಚರಿಸಿತು (ಕಾವೇಂ. ೨೯) ; ಮಾನಹೀನಗೆ ಬೇರೆ ಮಾನಹಾನಿ ಆಗುವುದುಂಟೇ ? (ಗಾದೆ). [ಸಂ.]

**ಮಾನಾಂಗುಲ** (ನಾ). [ಶಿಲ್ಪಶಾ] ದೇವತಾಪ್ರತಿಮೆಗಳನ್ನು ಕಡೆಯುವಾಗ ದೇಹದ ಪ್ರಮಾಣವನ್ನು ನಿರ್ಣಯಿಸುವ ಒಂದು ಅಳತೆ : ಮಾನಾಂಗುಲ, ಮಾತ್ರಾಂಗುಲ, ದೇಹಲಬ್ಧಾಂಗುಲವೆಂಬ ಅಳತೆಗಳಿಂದ ಪಂಚತಾಲ, ನವತಾಲಾದಿ ವಿವೇಚನೆಯಿಂದ ಮೂರ್ತಿಗಳನ್ನು ರಚಿಸುವ ವಿಧಾನಗಳನ್ನೂ . . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಶಾಶಿದ. ೬೦). [ಸಂ.]

**ಮಾನಾಗ** (ನಾ). ದೊಡ್ಡ ನಾಗರಹಾವು : ಭೂನಾಗಕಮುಮ ಮಾನಾಗಗಳ ಸಂಗತಿಯೆ ? (ಹಪ್ಪರ. ೯-೩೭). [ಮಾ$_4$ + ನಾಗ./ಸಂ. ಮಹಾನಾಗ]

**ಮಾನಾನ್ವಿತ** (ನಾ). ಗೌರವದಿಂದ ಕೂಡಿರುವವನು : ಘಮಾನಾನ್ವಿತಂ ವೇಷಜಂ (ಶಾಶಿ. ೧೮೦). [ಸಂ.]

**ಮಾನಾವಿ**, ಮಹನವಮಿ, ಮಹಾನಾವಿ, ಮಾನವಮಿ, ಮಾನೋಮಿ (ನಾ). ೧. ಆಶ್ವಯುಜ ಶುದ್ಧ ನವಮಿ ಮತ್ತು ಅಂದು ಆಚರಿಸುವ ಹಬ್ಬ : ಕನ್ನಡಕ್ಕೆ-ಮಾಸಾವಂತಂ, ಮಾಲಕುಮಿ, ಮಾನಾವಿ (ಶಶಬ. ೦೭೩ ಕೃಹೋ). ೨. (ಅಲಂ) ಶಿಕ್ಷೆ ; ದಂಡನೆ : ಓಷಧೆ ಕೂರ್ಮೆಗೆಟ್ಟನಗೆ ನೀನೇ ನಾನುವೊಂದೇವಮಂ ಮನದೊಳ್ ಮಾಡಿದೊಡಂದೆ ದೀವಳಿಗೆಯುಂ ಮಾನಾವಿಯುಂ ಮಾಡೆನೇ (ಶಂಶಬ. ೯-೯೩). ಮಹನವಮಿ : ೩. ಅಂತ್ಯ; ನಾಶ: ಅರಮನೆಯೊಳಗೆ ಪಸರಿಸಿತತುಳಶೋಕದ ಜಲಧಿ ಭೂಪಾಲಕನ ಸ್ವೈರಣೆಗಾಯ್ತು ಮಹನವಮಿ (ಕುಮ್ಯಾದ್ರೋ. ೬-೮). ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು. ಮಹಾನಾವಿ : ೪. ದೊಡ್ಡ ಹಬ್ಬ : ರೇವಣ ಮೂಡಣ ಬಟ್ಟೆಯೊಳ್ ಮೆಳನಾಗಸೆಟ್ಟಿಯ ಕೊಂದಪಗೆ ಸಂಣನಾತಾನೆಂಬ ಬೇಡನನಿಱಿದುದೆ ಮಹಾನಾವಿಯಾಗೆ (ಕ೩. IV. ೩೩-೦೭ ; 1000 ?). **ಮಾನವಮಿ** : ೧. ಮಾನವಮಿಯ ಹಬ್ಬದ ದಿನದಿ ಬಾಲಕರೆಮ್ಮಯ ಪೂಬಸದಿ ಆಡಲು ಬಂದು ನುಡಿವರು (ಗ೯೭೦. ೦೯-೩೩) ; ಇವರು ಕೂಲಿಮಠದಲ್ಲಿ ಇರುವವರೆಗೆ ಮಾನವಮಿ ಹಬ್ಬ ಬಹಳ ಚೆನ್ನಾಗಿ ನಡೆಯುತ್ತಿತ್ತಂತೆ (ಪಪ್ಪೂರು. ೦೦೩). **ಮಾನೋಮಿ** : ೧. ಮಾನೋಮಿಯುಕ್ಕೆವದೊಳಿಂದೀ ನಿಮ್ಮಡಿಪೋಲಗಕ್ಕೆ ಬಂದರಸರಪ್ಪೋಲ್ ಮಿಮಾನಾಂಕನುಮೆಯ್ಪ್ಪುರೆ ತಸ್ಸೇನೆಯೆನಲ್ ಮೆಱೆದುದಮುಮ ಪಲವೆಲೆವೆಣ್ಣಳ್ (೩೪೦. ೩-೦೬೪).

ಮಾನೋಮಿಯ ದಿಬ್ಬ = ಹಂಪೆಯಲ್ಲಿ ಆಯುಧಪೂಜೆಯನ್ನು ಮಾಡುತ್ತಿದ್ದ ಒಂದು ಸ್ಥಳ : ಕ್ಷಾತ್ರವೃತ್ತಿಯ ವೀರದೃಶ್ಯಗಳು ನಡೆಯುತ್ತಿದ್ದ (ಮಹಾನವಮಿ) ಮಾನೋಮಿಯ ದಿಬ್ಬ ಈಗಲೂ ಮೂಕಮಾತುಗಳಿಂದ ಆ ಗತವೈಭವವನ್ನು ಚಿತ್ರಿಸುವ 'ಪಳವಾನಿಸ' ದಂತಿವೆ (ಶಾಹಪ್ಪ. ೦೩೭). [<ಸಂ. ಮಹಾನವಮಿ]

**ಮಾನಾಯ** (ನಾ). ಧಾನ್ಯ ಅಳೆಯುವವನಿಗೆ ಕೊಡುವ ಧಾನ್ಯರೂಪದ ಕೂಲಿ ; ಪಡಿ : ಊರಲ್ಲಿ ಚಾವಡಿಯ ಕಾವಲ್ಗಾರರು, ನೀರುಗಂಟಿ, ದೀವಟಿಗೆಯವ, ಸ್ವಾಮಿಯವದವರು . . . ಕಳ್ಳಬಂಟರು, ಅವರು, ಇವರು — ಎಲ್ಲಾ ಗರ್ಶವೆ, ಸೇನಾಯಮುದ್ರೆ, ಕಡತದ ಕಾಣಿಕೆ, ಮಾನಾಯ, ಹೊರೆಹೊರೆ ತೆನೆಹುಲ್ಲು, ಕಣದಲ್ಲಿ ಕೊಳಗಕೊಳಗ ದವಸ . . . ಸಲ್ಲಿಸಿಕೊಳ್ಳುತ್ತಾರೆ (ಕಪ್ಪಿಠ. ೦೩೩-೨೩). [ಸಂ.]

**ಮಾನಿ**$_1$ (ನಾ). ಒಂದು ಅಳತೆ : ಷೋಡಶಿಕೆ ಕುಡುಬ ಪ್ರಸ್ಥ ಆಢಕ ದ್ರೋಣ ಮಾನಿ ಖಾರಿಗಳಿವು ಚತುರ್ಗುಣಿತಂಗಳು ಇವು ಮೊದಲಾದುವು ಮಾನಪ್ರಮಾಣಮಕ್ಕುಂ (ಕಶಾಕ. ೯೪). [<ಸಂ. ಮಾನ]

**ಮಾನಿ**$_2$ (ನಾ). ದಾನವಾಗಿ ನೀಡಿದ ಭೂಮಿ ; ಉಂಬಳಿ : ಹಿರಿಯಕೆಱೆಯ ಕೆಳಗೆ ಗರ್ದೆ ಸಲಗೆ ೩ ಮಾನಿಯಾಲು ಗರ್ದೆ ಸಲಗೆ ೩ (ಎಕ. XII. ತುಮಕೂ. ೩೩-೯೩ ; 1151); ಹಿರಿಯೂರೊಡೆಯರ ಮೊದಲ ಹಸುಗೆ ಕೊಡೆಯಾಲದಲ್ಲಿ ಮಾನಿಯೊಳಗೆ ಕಂಗೋಡು ಮತ್ತರೊಂಭತ್ತು (ಸೌಇಇ. IX-i, ೩೩೩-೪೩ ; 1215) ; ಯಿಾ ಉಭಯಗ್ರಾಮಗಳ ಮಧ್ಯದಲ್ಲಿ ಯಿರುವ ಅಗಚಿಗದ್ದೆ ಮಾನಿಯಲ್ಲಿ ಮಠಾ ಕಟ್ಟಿಸಿ (ಎಕ. V. ಹಾಸನ. ೦೭-೦೩ ; 1774). 'ಮನ್ನೆಯ' ಪರಾ. [<ಸಂ. ಮಾನ್ಯ]

**ಮಾನಿ**$_3$ (ನಾ). ಗೌರವಯುಕ್ತನಾದವನು ; ಮಾನವಂತ ; ಮರ್ಯಾದಸ್ಥ : ಅಲ್ಲಿಂ ಮುನ್ನ ಮಾನಿಗಳರಸಂ ನಂಬಿಯಣ್ಣನಿಂಬಱಿವ ಮಂತ್ರಿಯಪ್ಪ ತುಂಬುರನಂ ಕರೆದು (ನಂಬಿರ. ೦೨-೩) ; ಅವರನು ಕರೆದನು ತತ್ವಜ್ಞಾನಿ ಸ್ವೈರಣೆ ಸಮತಾಭಾವದ ಮಾನಿ (೪ಶಿಸೋ. ೦೦-೨). [ಸಂ. ಮಾನಿನ್]

**ಮಾನಿ**$_4$ 'ಮಾನುವೆ' ನೋ.

**ಮಾನಿಕಪ್ಪ** (ನಾ). ಮಾನ್ಯವಾಗಿ ಕೊಟ್ಟ ಕಾಣಿಕೆ : [ಜೊಂ]ಮಂಣ ಒಡೆಯರ ನಿರೂಪದಿಂ ದೇವರಾಯಒಡೆಯರ ಅನೆವೇರಿಯದ ಉಭಯ ಮಾರ್ಗ್ಗದ ಸುಂಕದ ಮಾನಿಕಪ್ಪ ಮೂಗವಾಡಿಯ ಪುರದ × × ದ ನಾಯನಾರದೇವರಿಗೆ ಸ್ಥಳ × ಕಪ್ಪವ × × × ಜೊಂಮಣಒಡೆಯರು ವಿಜಯನಗರಕ್ಕೆ ಬಿಜಯಮಾಡುವಾಗ ದಣಾಯಕ ಕೊಟ್ಟ ಪಾಗ ಚಿಕೂರು ಆ ದೇವರಿಗೆ ಯೆರಡು (ಸೌಇಇ. IX – ii. ೪೨೮ ೦೨ ; 1405). [ಮಾನಿ$_2$ + ಕಪ್ಪ$_1$]

**ಮಾನಿಕೆ** (ನಾ). ಹಿರಿಮೆ ; ಘನತೆ : ನೀವೆಲ್ಲ ಮಾತೃಕೆಯರ ಯೋನಿಯೊಳ್ ಪೊಱಪಟ್ಟು ಬರುತೆ ಸೂನಿತವಸನದಿಂದೇಕೆ ಬಂದಪವಹ ಮಾನಿಕೆಗಳ ನೋಡಿದಪಿರಿ (ಪೋಹಕ. ೩೯-೩). [ ಮಾನ + _ ಇಕೆ ]

**ಮಾನಿಗೆ** 'ಮಾನಗೆ' ನೋ.

**ಮಾನಿತ** (ಗು). ೧. ಗೌರವಕ್ಕೆ ಪಾತ್ರವಾಗಿರುವ ; ಪೂಜ್ಯವಾಗಿರುವ: ಮಾನಿತತತ್ತ್ವಾರ್ಥಶ್ರದ್ಧಾನದಿನಾ ಸೂರ್ಯಮಿತ್ರಮುನಿಪತಿಗವಧಿಜ್ಞಾನಂ ತೊಟ್ಟನೆ ಪುಟ್ಟಿದುದು (ಸುಕುಮಾ. ೩-೪೭) ; ಮಾನಿತಗುಣತತ್ತ್ವಪರಿಜ್ಞಾನಮೆ ತಾಂ ಬೋಧಿತತ್ತ್ವಮೆಂಬುದು (ಜೀಪಸಂ. ೦೬೩-೦) ; ಮಾನಿತೋತ್ತಮಭಕ್ತಿನಿಷ್ಠಾನೂನಮಾನಸನಂ ಭವತ್ಕೃತಿಮಾನವಪ್ಪ ಸುಪುತ್ರನಂ ಕೊಟ್ಟೆನ್ನನುದ್ಧರಿಸು (ಜಕಿ. ೨-೦). (ನಾ). ೨. ಗೌರವಕ್ಕೆ ಪಾತ್ರವಾದುದು. — ಅರ್ಹವಾದುದು : ನಾನಾರ್ಥಮೇಕರೂಪಾಧೀನವಚೋರಚಿತಮಪ್ಪೊಡಕ್ಕುಂ ಶ್ಲೇಷಂ ಮಾನಿತಮಳಂಕ್ರಿಯಾನುವಿಧಾನಂ ಮತ್ತಿಂತು ತದುಪಲಕ್ಷ್ಯವಿಕಲ್ಪಂ (ಕಜಾ. ೩-೦೦೬) ; ಮಾನಿತಮಪ್ಪ ಮಾನಸಿಕೆ ಮೆಯ್ಯೊಳೆ ಕೂಡಿರೆ ಧಾತ್ರನೆಂದೆನಲ್ ತಾನೆಸೆದಿರ್ದ ಮಾನಿನಿಯರಂ . . . ಹೀನರೆನಿಪ್ಪವಂದಿರೊಳೆ ಕೂಡಿ ವಿವೇಕವಿಹೀನನಾಗಿ ಚೀ ಮಾನವಿದೂರನಕ್ಕಟಜನೆಂದಭಿಧಾನಮನಾಂತನಾಗದೇ (ಶೇಖಾಪು. ೩-೦೬೩) ; ಗುರುಕೃತಂ, ಮಾನಿತಂ, ಪೂಜಿತಂ ತಾನಲ್ಲ (ವೃಶಾಶ. ೭೩-೩೦೨). ೩. ಗೌರವಾನ್ವಿತ ವ್ಯಕ್ತಿ ; ಮರ್ಯಾದಸ್ಥ. [ಸಂ.]

**ಮಾನಿನಿ** (ನಾ). ೧. ಆತ್ಮಗೌರವವುಳ್ಳವಳು ; ಸ್ವಾಭಿಮಾನಿಯಾದ ಹೆಂಗಸು. ೨. ಹೆಂಗಸು ; ಸ್ತ್ರೀ : ಮಲ್ಲಿಗೆಯುಂ ನಗೆಯುಂ ಕರಪಲ್ಲವದಿಂದರುಣಪರಸಿರುಹಮುಂ . . . ತೋರ್ಪರ್ ಸಲ್ಲಲಿತಾಂಗದ ಲತಾಂಗಿಯರ್ ಮಾನಿನಿಯರ್ (ಚಗಪು. ೨-೨೪) ; ಭರತಭೂಮಿ . . . ಯಾರನ್ನು ಉಚ್ಛ್ವಾಸದ ಮೇಲೆ ಕುಳ್ಳಿರಿಸಬೇಕೋ ಆ ಮಾನಿನಿಯರು ಅನೇಕರಿದ್ದಾರೆ (ರಮಣೀಸಾ. ೭೬). ೩. ಹೆಂಡತಿ ; ಮಡದಿ ; ಪತ್ನಿ : ಮಾನಿನಿ ನಾಲ್ಕುಂ ನಿಯಮವಿಧಾನದ ಬಟಲಸಂದು ನಿಟ್ಟೆಯಿಂ ಚರಿಯಿಸಿ ಸಂತಾನಾರ್ಥಮೆನೆ ಚತುರ್ವಿಧದಾನವ್ಯಸನದೊಳೆ ದಿವಸಮಂ ಸಡೆಯಿಸುವಳ್ (ಪುಣ್ಯಪು. ೯-೯೬) ; ಕುಳ್ಳಿರ್ದನು ಮಹೀಪತಿ ಮಾನಿನಿಯ ಮಲಗಿ (ಕುವ್ಯಾಕ. ೦೬-೦೦) ; ಸಾನದಿ ನಿನ್ನಯ ವರರೂಪದನೂನಲಸಚ್ಚಿತ್ರಂ ಬರೆದೆನ್ನಯ ಮಾನಿನಿಯಿಂದಾಕೆಯ ಬಳಿಗಟ್ಟಿದೆನತಿಸಂತೋಷದೊಳು (ಜಯು. ೩-೭೪). ೪. ಪ್ರಿಯನ ಅವಿನಯವರ್ತನೆಯಿಂದ ಕುಪಿತಳಾಗಿ ಅವನಿಂದ ದೂರವಿರಲು ಬಯಸುವವಳು : ಪ್ರಣಯಕೋಪವುಳ್ಳ ಹೆಂಗಸು.

[ ಸಂ. ಮಾನಿನೀ ]

**ಮಾನಿಭದ್ರಗೌಡ** (ನಾ). ಒಬ್ಬಾತನ ಹೆಸರು : ತಂನ ಅನುಜ ಮಾನಿಭದ್ರಗೌಡರ ಮಕ್ಕಳು (ಎಕ. VII. ಶಿಕಾ. ೦೦೪-೦೪ ; ೪೮೦).

[ ಮಾನಿಭದ್ರ + ಗೌಡ ( < ಗಾವುಂಡ ) ]

**ಮಾನಿಷ್ಠ** (ನಾ). ಮರ್ಯಾದಸ್ಥ ; ಮಾನವಂತ : ಮಾನಕೆ ಮಾನಿಷ್ಠ ರಂಜಿ ಹಿಂಜರಿದರೆ . . . ತನಗೆಯೆ ಅಂಜಿ ಹಿಂಜರಿದರು ಭಾಪುರೆ ಎಂದುಬ್ಬಿ ಮೆರೆವನು ಮೋಡಿ (ರಂಶಾಕ. ೯೪-೩೯) ; ಅದು ಮಾನಿಷ್ಠರ ಮನೆಯೊಳಗೆ ಬರಲು ತಕ್ಕ ಮರ್ಯಾದೆಯನ್ನು ಕಲಿತಿಲ್ಲ (ಹಿಂಂದ. II. ೦೧೦). [ಸಂ.]

**ಮಾನಿಷ್ಠೆ** (ನಾ). ಆತ್ಮಗೌರವವುಳ್ಳವಳು ; ಸ್ವಾಭಿಮಾನಿ : ಮಾನಿಷ್ಠೆಯಾದ ಶಕುಂತಲೆಗೆ ಇದರಿಂದ ತುಂಬ ಅವಮಾನವಾಯಿತು (ವಚಶಾ. ೩೯೬) ; ಸರೋಜ ಬಹಳ ಮಾನಿಷ್ಠೆ (ತುಶಾಗ. ೬೩). [ಮಾನಿಷ್ಠ + -ಎ₂]

**ಮಾನಿಸ₁** ' ಮಾನುಸ ' ನೋ.

**ಮಾನಿಸ₂** (ನಾ). ಮನಸ್ಸು ; ಚಿತ್ತ : 'ಮಾನಿಸಗಳ್ಳಿ' ಪರಾ.

[<ಮಾನಸ₂]

**ಮಾನಿಸಗಳ್ಳ** (ನಾ). ಮನಸ್ಸಿನಲ್ಲಿ ವಂಚನೆಯುಳ್ಳವಳು : ನಳನಳಿಸುವ ತೋಳುಗಳಿಂದ ಪತಿಯನಾಲಿಂಗಿಸಿ ಮನದ ನೇಹದಲ್ಲಿ ಜಾರಪುರುಷನನ್ನು ಬಿಗಿಯಪ್ಪಿದ 'ಮಾನಿಸಗಳ್ಳಿ'ಯ ಜಾರೆಯ ಆಟ! (ಪೋಲೀಸಾ. ೦೦೩ ಕೃಸಾ.ಪಟ). [ಮಾನಿಸ₂ + ಕಳ್ಳಿ₁]

**ಮಾನಿಸಗಳ್ಳೆ** (ನಾ). = ಮಾನಿಸಗಳ್ಳಿ : ಕಂಗಳೊಳ್ಬೊಬ್ಬನ ಕರೆವಳು ಮನವಲ್ಲೊಬ್ಬನ ನೆರೆವಳು ಕೂಡಲಸಂಗಮದೇವ ಕೇಳಯ್ಯಾ ಮಾನಿಸಗಳ್ಳೆಯ ನಂಬದಿರಯ್ಯಾ (ಬಸವ. ೦೦೦). [ಮಾನಿಸ₂ + ಕಳ್ಳಿ₁]

**ಮಾನಿಸದೇರ** 'ಮಾನಸದೇರ' ನೋ.

**ಮಾನಿಸವಾಟ್** 'ಮಾನಸವಾಟ್' ನೋ.

**ಮಾನಿಸು₁** 'ಮಾಣಿಸು' ನೋ.

**ಮಾನಿಸು₂** (ಕ್ರಿ). ೧. ಗೌರವಿಸು ; ಆದರಿಸು ; ಸತ್ಕರಿಸು : ಭೂಸುರರ ಮಾನಿ[ಪಾಠಾಂ. ಮನ್ನಿ]ಸು ದೇಶವಮಂ ನೋಡಿ ಪಾಲಿಸು (ಪಶಕಾ. ೮-೨೪) ; ನಡೆಯ ಮನೆಗೆದವರ ಕೈಗಳ ಒಡದು ತಂಪನು ತನ್ನ ಭವನಕೆ ತಡದಿರದೆ ಮಧುಪರ್ಕವಿಪ್ಪರದಿಂದ ಮಾನಿಸಿದ (ತಂಶತ. ೩-೬೩). ೨. ಒಪ್ಪು ; ಅಂಗೀಕರಿಸು : ಸಾಮಾಜಿಕಪ್ರಪಂಚದಲ್ಲಿ ಅವರು ಬೋಧಿಸಿದ ಸುಧಾರಣೆಗಳು ಎಲ್ಲರೂ ಮಾನಿಸತಕ್ಕುವೇ ಆಗಿವೆ (ಕಾರಠ. ೪೨೦). ೩. ಹೊಂದಿಕೊಳ್ಳು ; ಒಗ್ಗು : ವಿಶೇಷವಾಗಿ ಹೆಂಗಸರಿಗೆ ಘಟ್ಟದ ಕೆಳಗಿನ ಹವೆಯು ಬಹು ಚನ್ನಾಗಿ ಮಾನಿಸುತ್ತದೆ (ಕಶಾಗ. ೨೨) ; ಬೆಳಗಾವಿಯ ಹವೆಯು ಯೂರೋಪಿಯನ್‌ಜನರಿಗೆ ಪೊಳಿತಾಗಿ ಮಾನಿಸುವದರಿಂದ . . . ಇಲ್ಲಿ ಮನೆ ಮಾಡಿದ್ದಾರೆ (ಕಶಾಗ. ೯೧೨). ೪. ಅಳತೆ ಮಾಡು : ಅಳೆ : (?). ೫. (ಮತ್ತೊಬ್ಬರೊಡನೆ) ಯೋಚಿಸು : ಸಮಾಲೋಚಿಸು : ಮಾನಾಪಮಾನವನು ಜ್ಞಾನ ತನಗಾದುದನು ಮೌನಿನಿಯು ಒಲಿದ ರತಿಸುಖದ ಪರರಲ್ಲಿ ಮಾನಿಸುವನೆಗ್ಗ (ಸರ್ವಜ್ಞ. ೦೩೯೬). ೬. ಗಣನೆಗೆ ತರು ; ಲಕ್ಷಿಸು : ಲೆಕ್ಕಿಸು : ಮಾನಿನಿಯರುಪಭೋಗಕಾಲದ ಮಾನಿಸರು ಘನಕಾಮುಕರು (ಕುವ್ಯಾಕ. ೬೦೨. ೩-೩೪). [ಮಾನ + —ಇಸು₃]

**ಮಾನಿಸೆ** 'ಮಾನಸೆ' ನೋ.

**ಮಾನೀಶ** 'ಮಾನುಸ' ನೋ.

**ಮಾನು** (ನಾ). ಒಂದು ಬಗೆಯ ಭೂಮಿ (?) : ಕೆರೆ ದಾರಿ ಮಾನು ಮರಡುವರು ಬೇನುಷಳ್ಳದ್ದನ್ನು ಸ್ವಾಮ್ಯವನ್ನು ಗಂಡಿಗೆ ಮೂಲಿ ಹೆಣ್ಣಿಗೆ ಕಂನ್ಯಾದಾನವಾಗಿ ಸುಖದಿಂ ಭೋಗಿಸುವಂತಾಗಿ (ವ್ಯಕಿಂ. ೦೯೩೪. ೨೫-೨೦ ; 1394) ; ತಂಮ ದಾನಮೂಲಕ ಸಲುವ ಭೂಮಿಮಾನುಗಾಜಿನು ಆ ವಿಷ್ಣುಭಟ್ಟರಿಗೆ . . . ನಿಧಿ ನಿಕ್ಷೇಪ ಜಲಪಾಷಾಣ ಅಕ್ಷೀಣಿ ಆಗಾಮಿ ಸಿದ್ಧಸಾಧ್ಯಅಷ್ಟಭೋಗತೇಜಸ್ವಾಮ್ಯಸಹಿತವಾಗಿ . . . ಸಲಿಸಿ (ಎಕ. VI. ಶೃಂಗೇರಿ. ೨೫-೦೦; 1408). [< ಮಾನ್ಯ ?]

**ಮಾನುವೆ, ಮಾನಿ₄** (ನಾ). ಒಂದು ಬಗೆಯ ಹುಲ್ಲು : "ಮಾನುವೆ [ಪಾಠಾಂ. ಮಾನವ, ಘಾಣವೆ, ಮಾಣುವೆ] ಸಿತೆಯಸಿಕ್ಕು (ಪಂಗಸಾ. ೭೩-೬). **ಮಾನಿ₄** : ಎತ್ತುಗಳು ಕಾವಲಿನಲ್ಲಿ ತಲೆ ಎಟ್ಟಿ ಮಾನಿಹುಲ್ಲು ಮೇಯುತ್ತಿರುವಾಗ ಅವುಗಳನ್ನೇ ಪ್ರೇಕ್ಷಕರೆಂದು ಭಾವಿಸಿ ಕುಣಿಯುತ್ತಿದ್ದ (ಪಸಮ್ಮರು. ೩೦೪).

[ ? ]

**ಮಾನುಷ** (ಗು). ೧. ಮನುಷ್ಯನಿಗೆ ಸಂಬಂಧಿಸಿದ. (ನಾ). ೨. ಮನುಷ್ಯ; ಮಾನವ : "ಮನುಷ್ಯಃ, ಮಾನುಷಃ, ಮರ್ತ್ಯಃ . . . ಪೂರುಷಃ, ವಿಟ್—ಈ ೧೨ ಮಾನಸರ್" (ಹಲಾಯು. ೩೩-೦೬೬); ಧರೆಗೆ ಮಾಯಾಗೂಢಮಾನುಷನಾಗಿ ಮೆರೆದನು ಗೋಕುಲದಲಿ (ಕಶಾಗ. ೩-೨-೦೪). ೩. ಮನುಷ್ಯನಿಂದ ಮಾಡಲು ಸಾಧ್ಯವಾದುದು.—ಶಕ್ಯವಾದುದು; ಮನುಷ್ಯಪ್ರಯತ್ನ : ಮಾನುಷವನ್ನು ವಿಚಾರಿದುದಕ್ಕೆ ವ್ಯಥೆ ಪಡಬಾರದು (ಅಗ್ರಶ. ೯೯). [ಸಂ.]

**ಮಾನುಷತ್ವ** (ನಾ). ಮನುಷ್ಯನಂತೆ ಇರುವಿಕೆ ; ಮನುಷ್ಯನಾಗಿರುವಿಕೆ : ಇನಿತೇಕೆ ಮಾನುಷತ್ವಮನೆನಸುಂ ನಟಿಯಿಸುವೆ ಕೃಷ್ಣ ಪೊಱಮಡು ಮಡುವಿಂ (ಜಗಪು. ೩-೯೩). [ಸಂ.]

**ಮಾನುಷಸಿದ್ಧಿ** (ನಾ). ಮನುಷ್ಯಪ್ರಯತ್ನದಿಂದ ಸಾಧಿಸಿದುದು : ದೇವಸಿದ್ಧಿ ಮಾನುಷಸಿದ್ಧಿಯೆಂಬೆರಡುಂ ಸಿದ್ಧಿಯುಮಂ . . . ಪಾತ್ರಸಂಕ್ರಮಣದೊಳ್ ನೆಱೆದು ತೋಱೆ (ಅತಪು. ೩-೪೦ ವ). [ಸಂ.]

**ಮಾನುಷಿ** (ನಾ). ಮಾನವಸ್ತ್ರೀ : ನೀನು ಯಾರು ಸುಂದರಿ . . . ಯಕ್ಷಿಯೋ ಮಾನುಷಿಯೋ ? (ವಚಶಾ. ೦). [ಸಂ. ಮಾನುಷೀ]

**ಮಾನುಷೋತ್ತರಗಿರಿ** (ನಾ). [ಜೈನ] ಮಧ್ಯಮಲೋಕದ ಒಂದು ಪರ್ವತ; P "ಈ ಪರ್ವತವು ಪುಷ್ಕರದ್ವೀಪದ ನಟ್ಟನಡುವೆ ಗೋಲಾಕಾರವಾಗಿರುತ್ತದೆ. ಈ ಪರ್ವತವನ್ನು ದಾಟಿ ವಿದ್ಯಾಧರರು ಮತ್ತು ಋದ್ಧಿಪ್ರಾಪ್ತಮುನಿಗಳು ಹೋಗಲಾರರು. ಆದುದರಿಂದ ಇದಕ್ಕೆ ಮಾನುಷೋತ್ತರವೆಂಬ ಹೆಸರು" (ಅರತ್ನ. ಕೈಪಿಡಿಂಭಾಟಕ ಪದ್ಯ ಕೋಶ) : ವಂದೇ ಪಂಚಸುಮಂದರಾದ್ರಿಷು ವನಾಂತ ಭಾಜಿನಃ . . . ಸೀಮನಿ ಮಾನುಷೋತ್ತರಗಿರೌ ಚತ್ವಾರಿಚತ್ವಾರಿಚ (ಅರತ್ನ. ೦೬-೬೬). [ಸಂ.]

**ಮಾನುಷ್ಯ** (ನಾ). ೧. ಮನುಷ್ಯಧರ್ಮ; ಮಾನವಸ್ವಭಾವ. ೨. ಮನುಷ್ಯ : ತಂಗಿ ಕೇಳವನನ್ನ ಮಗನೊಂದಂಗದಿಂ ಮಾನುಷ್ಯಭವವೀತಗೆ ನಿನ್ನೊಳು ಜನಿಸಲ್ಬಯಿಂತು ಲೋಕೋತ್ತರಾಗಿ (ಬಸಪು. ೩-೨೬). [ಸಂ.]

**ಮಾನುಸ**, ಮಾನಸ$_1$, ಮಾನಿಸ$_1$, ಮಾನೀಶ (ನಾ). ೧. ಮನುಷ್ಯ; ಮಾನವ. **ಮಾನಸ$_1$** : ೧. ಮುಂದಣ ಮಾನಸರಂ ಪಡಿಯುಱರ್ ತೊಲಗಿಸುತ್ತಂ ಬರೆ (ಪಂಪ.ರಾ. ೯೦-೦೩) : ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯುಂ ಲಿಂಪಿನಿಂಪುಗಳ್ಗಾಗರಮಾದ ಮಾನಸರೆ ಮಾನಸರ್ (ಪಂಪಭಾ. ೪-೨೯) ; ಎಗ್ಗಮಾನಸರ ಕುಲಗುರುವೆಯಾಗಳೆ ನಿಂದ ನಿಲವಿನಿಂ ಘಟಿತವಾಗು (ಪಂಪು. ೨೦-೨೬). **ಮಾನಿಸ$_1$** : ೧. ಅವರ ಮಗಂ ತಿಪ್ಪಯ್ಯನೆಂಬಾ ಪದಿನೇಟುಮಾನಿಸರುಂಬೆರಸಿ ಕಾಳೆಗದೊಳ್ಸತ್ತಲ್ಲಿ (ಎಕ. V, ೫೮೪. ೩೦-೬; ೯೨೦) ; ಮುರವಿರೋಧಿಯು ಬಲುಹ ಹೇಳಾ ಪಾರ್ಥನೆಂಬವನಾವ ಮಾನಿಸನು (ಕುಮಾ.ಭ. ೩-೬); ಜೇನಶಾಲೆಗಳಲ್ಲಲ್ಲಿ ಏನೆಂಬೆ ನೂತನವಹೆದಿಹುದುವುಱ್ ನೋಳ್ಪ ಮಾನಿಸರುಗಳ ಕಣ್ಮನಕೆ (ಕಂಪಂ. ೨-೬೮). ೨. ಆಳು; ಸೇವಕ : ಶ್ರೀಮ(ಂ)ನ್ಮಹಾಪ್ರಧಾನಂ ಮುದ್ದೆಯದಂಣಾಯಕ್ಕರ ಮಾನಿಸನು ಆಗಿ ಕುಡುಹೂರ ಕೋಟೀಶ್ವರದೇವರಲ್ಲಿ ಆಚಂದ್ರಾರ್ಕವಾಗಿ ನಡೆಸುವ ಧರ್ಮ್ಮದ ಕಟ್ಟಳೆ (ಕಾಇ. IX-ii, ೪೦೭-೨೪; 1377); ಮಾನಿಸರ ಕಳುಹಿದರೆ ಸಾಲದೆ (ಕುಮಾ.ಭ. ೪-೭). **ಮಾನೀಶ** : ೧. ನೀನೀಶನೀಯದೆ ಮಾನೀಶನೀವನೆ (ರೇವಾಪ. ೪೦-೬೬); ಈಶತ್ವವಿಲ್ಲಪಲೆ ಈಶ್ವರನು ಎನಿಸಿಹನೆ ಈಶನಾನೀಶನೆನಬೇಡ ಜಗದಿ ಮಾನೀಶನೇ ಈಶ (ಸರ್ವಜ್ಞ. ೦೨೨೩). ☞ ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ.

**ಮಾನುಷಗಂಡ** = ಒಂದು ಬಿರುದು : ಬಲ್ಲಹಸು(ಶೂ)ದ್ರಕನ್ . . . ಕಟ್ಟಾಣ್ಮಾನುಷಗಣ್ಡ ಮನ್ನವಟಣ್ಣನಂ ಬೀಟಿವೋಂ ಪೆಡೆಯುಂ ಬೆ[ಳ]ಪ ಬಿರುದಪ್ಪವರ ಬಿರುದನೊಡ್ಡಟಿವೊನ್ (ಎಇ. XXIV, ೧೯೩-೯; ಸು. 885). [< ಪ್ರಾ. ಮಾಣುಸ. / ಸಂ. ಮಾನುಷ]

**ಮಾಣೆ** (ನಾ). ಮೇಲ್ಪಂಕ್ತಿ ; ನಕಲು ; ಮಾದರಿ : ಇವಲ್ಲದೆ 'ಮಾಣೆ'ಗಳನ್ನು ಬರೆಯುವುದಕ್ಕೆ ಒಣಗಿದ ಎಕ್ಕದೆಲೆಗಳನ್ನು ಉಪಯೋಗಿಸುವರು (ಗುಜಾಪ. ೪). 'ಮಾಣೆಪುಸ್ತಕ' ಪರಾ. [ ? ]

**ಮಾಣೆತಿದ್ದು** (ಕ್ರಿ). ಮೇಲ್ಪಂಕ್ತಿಯನ್ನು ಅನುಸರಿಸಿ ಬರೆ,—ತಿದ್ದು : (೬). [ಮಾಣೆ + ತಿದ್ದು$_1$ (<ತಿರ್ದು$_2$) ]

**ಮಾಣೆಪುಸ್ತಕ** (ನಾ). "(ಬರಹ ಕಲಿತುಕೊಳ್ಳುವವರು) ಮೇಲ್ಪಂಕ್ತಿ ನೋಡಿಕೊಂಡು ಬರೆಯುವ ಪುಸ್ತಕ : ಮೇಲ್ಪಂಕ್ತಿಪುಸ್ತಕ ; ಮಾಣೆ ಪುಸ್ತಕ" (Copy book. ಇಂಕಪ). [ಮಾಣೆ + ಪುಸ್ತಕ]

**ಮಾನೋನ್ನತ** (ಗು). ೧. ಹಿರಿದಾದ ಗೌರವದಿಂದ ಕೂಡಿದ : ಮಹಾಮಾತ್ಯಪದಪ್ರೀ ವಿರಾಜಮಾನಮಾನೋನ್ನತಪ್ರಭುಮಂತ್ರೋತ್ಸಾಹಶಕ್ತಿತ್ರಯಸಂಪನ್ನರಪ್ಪ ಶ್ರೀಮಾತ್ ಪೆರ್ಮ್ಮಾಡಿಕದ ಪೆರ್ಗ್ಗಡೆ ಮಾಮಣಯ್ಯಂಗಳ ಬೆಸದೆ (ಕಾಇ. XX, ೩೪-೯; 1053). (ನಾ). ೨. ಹಿರಿದಾದ ಗೌರವದಿಂದ ಕೂಡಿದವನು ; ಶ್ರೇಷ್ಠವ್ಯಕ್ತಿ: ನಿನ್ನ ಮುಡಗೂಟಿನ್ನಲಂ ಮಾನೋನ್ನತ ನೀನೀಯೆ ಬಂದುದೆನಗೆ (ಅದಿಪು. ೦೪-೦೪೪); ಮಾನೋನ್ನತ ನಿರವದ್ಯ ಕುಲೀನ ಮಹಾಪುರುಷ ಪರಧನಂಗಳ ದತ್ತಾದಾನಂಗಳ್ ನಿನಗಾಗವು (ಶಾಂತಿಪು. ೩-೭೭). [ಸಂ.]

**ಮಾನೋನ್ನತಿ** (ನಾ). ಹಿರಿದಾದ ಗೌರವ : ಮಾನೋನ್ನತಿ ವರ್ಧಮಾನ ಮುಮುಕ್ಷ್ವಾನೋದಯಂ ವರ್ಧಮಾನಂ . . . ಎನಲ್ ತಾಂ ದೊರೆ ವರ್ಧಮಾನಮುನಿಯೊಳ್ ಶ್ರೀವರ್ಧಮಾನಾಹ್ವಯಂ. (ಶಬ್ದಮ. ೧-೨೩). [ಸಂ.].

**ಮಾನೋಮಿ** 'ಮಾನಾಮಿ' ನೋ.

**ಮಾನ್ಗರಿ ?** (ನಾ). ಮಾವಿನ ಎಲೆಯಾಕಾರದ ಧ್ವಜ (?) : ಮಾನ್ಗರಿ ಭಾರಿ ನಗಾರಿ ಮೇಕುಮುಂಗುಲಿಪ ಸುರಾಂತ ಸತ್ತಿಗೆ ನಿಶಾನೆಯು . . . ಶಂಖ ಸುಚಕ್ರವು ರಾಜರಾಜನಿಂದಲಿ ಪಡೆದಾತ ಘಂಟೆಯ ನರೇಶ್ವರ (ಬಸವಪು.೦-೦೩೬). [☞ ಇದು 'ಮಾಂಗರಿ' ಎಂಬುದರ ಅಪಲಿಖಿತವಿರಬಹುದು]

**ಮಾನ್ಯ** (ಗು). ೧. ಗೌರವಕ್ಕೆ ತಕ್ಕ; ಮನ್ನಣೆಗೆ ಯೋಗ್ಯವಾದ : ನಾನಾಮಾನ್ಯಜನಾಂತರಂಗನಿಹಿತಾನಂದೋದಯಂ . . . ಪಾಲಿಸಿದಂ ಮಹೀವಲಯಮುಂ ಸಂಸಾರಸಾರೋದಯಂ (ಆದಿಪು. ೬-೬೬). ೨. ಹೊಂದ ತಕ್ಕ : ಒಪ್ಪತಕ್ಕ. (ನಾ). ೩. ಮನ್ನಣೆ : ಗೌರವ : ಮನೆಯ ಜಾಮಾತೃವಿಗೆ . . . ಅನುದಿನವು ಗಳಹುವ ಪಾಪಿಗುಂಟೇ ಮಾನ್ಯ (ಕೌಶಿಚ. ೦೩-೩೦). ೪. ಗೌರವಯುಕ್ತವಾದುದು ; ಮನ್ನಣೆಗೆ ಪಾತ್ರವಾದುದು : ತನಗೆ ತಂದೆ ಬೋಧಿಸಿದ ಪರಸ್ಪರಾತನಧರ್ಮವೇ ಮಾನ್ಯವೆಂದದನು ಧರಿಸಿ ತಲೆಯಲ್ಲಿ (ಕುಸಪು. ೦೩-೬); ರಾಜಾಜ್ಞೆಯು ಸರ್ವಥಾ ಮಾನ್ಯವೇ ಆದರೂ ಮಾಡಬಾರದ ಆಜ್ಞೆಯನ್ನು ಮಾಡಿದರೆ ಅದಕ್ಕೆ ಕಟ್ಟುಬೀಳುವುದೆಂತು ? (ಮುಹಾಇ. ೨೪). ೫. ಗೌರವಯುಕ್ತನಾದವನು ; ಪೂಜ್ಯನಾದವನು : "ಮಾನ್ಯಂ ಪ್ರಕೃಷ್ಟಂ" (ಶಬ್ದಕೋ. ೦೦೦-೦೪); ಸವಿಗೆಟ್ಟನ್ನವದೂಟವೇ ಕುಜನರೊಳ್ ಕೂಡಿರ್ಪವಂ ಮಾನ್ಯನೇ (ಸೋಮೇಶ. ೨೨); ನೀವು ಮಾನ್ಯರು ನಿಮ್ಮ ದಾಸಿ ಮಹಾವಿಗಡೆ (ಬಸಪು. ೫೩-೩೬) ; ಮಾನ್ಯರೆ ಮಾನ್ಯರ ಹಿರಿಮೆಯನರಿವರು ಅರಿಯರು ನೀಚರಾದವರು (ತಿಂಹಾಕ. ೨೨೩-೨). ೬. ಇನಾಮು ; ಬಹುಮಾನ ; ಉಡುಗೊರೆ : ಇತರರು ಐದುರೂಪಾಯಿ ಸಂಬಳ ಕೊಡುವ ಕಡೆ, ನಾನು ಎಂಟುರೂಪಾಯಿ ಕೊಡುತ್ತೇನೆ . . . ಹಬ್ಬ ಹುಣ್ಣಿಮೆ ಅಂದರೆ ಅದಕ್ಕಾಗಿ ಬೇರೆ ತಸ್ತೀಕು ಕೊಡುತ್ತೇವೆ. ಅವರಿಗೆ ಮಾನ್ಯಗಳು ಇವೆ (ಋಜ್ಞ. ೦೪೪). ೭. ದಾನವಾಗಿ ನೀಡಿದ ಭೂಮಿ ; ಉಂಬಳಿ : ಅಯ್ಯಕಟ್ಟೆ ತಮ್ಮ ಮಾನ್ಯದೊಳಗೆ ಮಟ(ತ)ಕ್ಕೆ ಕೊಟ್ಟ ಕಯ್ಮತ್ತ ೫೦ (ಎಇ. XVII, ೬-೨೬ ; 1004) ; ತನ್ನ ಮಾಂನ್ಯದೊಳಗೆ ಕೊಟ್ಟ ಹರಳ ಕೆಯ ಕಂಭ ೧೦೦ (ಎಇ. XIX, ೨೬-೬೫ ; 1245) ; ಪ್ರಭುಗಳು . . . ತಾವೂ ದೇವರ ಅಖಂಡದೀಪಕ್ಕೆ ಶಾಶ್ವತ ಮಾನ್ಯಗಳನ್ನು ಕೊಂಡುಕೊಟ್ಟು, ದೇವ ದೇವಿಯರಿಗೆ ಮಸ್ತಾಲಂಕಾರ ಭೂಷಣಗಳನ್ನು ಅರ್ಪಿಸಿದ ಮೇಲೆ (ಶಂಕರಾ. ೬೨). ೮. (ತೆರಿಗೆಯನ್ನು) ರದ್ದುಗೊಳಿಸುವಿಕೆ ; (ತೆರಿಗೆಯ) ವಿನಾಯಿತಿ,— ರಿಯಾಯಿತಿ : ದಣ್ಣಾಯಕರು ಸಾಮ್ಯ ತರಬಾಳಿಕೆ ಅನುವು ಮಾನ್ಯವಾಗಿ ಪೊಕ್ಕಲಿದ್ದರು (ಎಕ. XII, ತಿಪ. ೬೬-೦೬; 1379). ೯. ಒಪ್ಪಿಗೆಯಾದುದು ; ಸಮ್ಮತಿ ಪಡೆದುದಂ : ಆದರೆ ಈ ಹೇಳಿಕೆ ಮಾನ್ಯವಾಗಲಿಲ್ಲ (ಕ್ರಾಬಿಬ. ೦೩೬). ೧೦. ಸಾಮಂತರಾಜ ; ಮಾಂಡಲಿಕ. ೧೧. (ಪತ್ರ ಬರೆಯುವಾಗ) ಗೌರವಸೂಚಕವಾಗಿ ಸಂಬೋಧಿಸುವ ಶಬ್ದರೂಪ.

**ಮಾನ್ಯದಂಗಡಿ** = ದಾನವಾಗಿ ಪಡೆದ ಅಂಗಡಿ : ದೇವರಂಗಡಿ ಮಾನ್ಯದಂಗಡಿಯೆಂನದುಡಿಸುರಿಯಂ ಕೊಂಡು ಹಸರಂಗೆಯ್ದು ಮಾಱುವಂಗಡಿಗಳೊಳಿಲ್ಲ . . . ಪ್ರತ್ಯೇಕ ಬರಿಸಕ್ಕೆ ಹಾಗವೊಂದು (ಕಇ. II, ೨೦-೨೪; 1147). [ಸಂ.]

**ಮಾನ್ಯಂಗುಡು** (ಕ್ರಿ). (ಭೂಮಿಯನ್ನು) ದಾನವಾಗಿ ನೀಡು ; ಉಂಬಳಿ ಕೊಡು : ಪನ್ನಿಮ್ಮರ್ತ್ತಿರ್ಕ್ಕೆಯ್ಯಂ ಮಾನ್ಯಂಗುಡುಗೆಯ್ದು ಪೇಟ್ ಧೋರನ ಬೆಸದೊಳ್ ನನ್ನಿವೆಡೆಂಗಂ ತನ್ನಚ್ಚಿಯೆ ಕೊಟ್ಟು ಕಿಱಿಗೆ ಯಶಮಂ ಪಡೆದಂ (ಕಇ. II, ೪-೩; 918). [ಮಾನ್ಯ + ಕುಡು$_1$ (< ಕೊಡು$_1$) ]

**ಮಾನ್ಯಕರಣ** (ನಾ). ಮನ್ನಣೆ ಪಡೆದ ಅಧಿಕಾರಿ; ಪಟೇಲ : ಪಟೇಲನಿಗೆ ಪಟೇಲ, ಗೌಡ, ನಾಡಗೌಡ, ಎಜಮಾನ, ರೆಡ್ಡಿ, ಪೆದ್ದಕಾಪು, ಮಾನ್ಯಕರಣಂ, ಮಣೆಗಾರ. . . ವಗೈರೆ ಹೆಸರುಗಳುಂಟು (ಗ್ರಾಮಾಪ. ೦). [ಸಂ.]

**ಮಾನ್ಯಕಾಜ** (ನಾ). ಉಂಬಳಿಯನ್ನು ಪಡೆದವನು ; ಭೂಮಿಯನ್ನು ದಾನವಾಗಿ ಪಡೆದವನು : ಸೆಟ್ಟಿಯರ್ಪನ್ನಿಸಿಗರ್ಗಾವುಣ್ಡುಗಳ್ಮೊದಲಾಗಿ ಮಾನ್ಯಕಾಜರ್ಮೂಜುಶ್ರಾಹೆಗೆ ಪರಿಯರ ಗದ್ಯಾಣವನ್ನಿಱುವರ್ (ಕಾಇ. IX-i, ೭೭-೨೯; ೯೯೨) ; ಕೋಗಳಿಯ ಬದ್ದಿಗನ ವೃತ್ತಿಯ ಮಾನ್ಯಕಾಜರುಂ ತೊಲಗಿಸುವ ಧರ್ಮ್ಮಮಂ ಮಱಿದು ದೆಯ್ವಕೆ ಕಾಳು ಕಱಯುಕ್ಕಿದವ

ಪ್ಪೊರ್ಲೆಯುರ್ (ಶಾಇ. IX – i, ೦೦೭–೪೭; 1055).

[ಮಾನ್ಯ + – ಕಾಜ]

**ಮಾನ್ಯಖೇಟ**, ಮನ್ನೆಖೇಟ, ಮನ್ನೆಖೇಡ (ನಾ). ಒಂದು ಊರಿನ ಹೆಸರು; P ಈಗಿನ ಗುಲ್ಬರ್ಗಜಿಲ್ಲೆಯ 'ಮಳ್‌ಖೇಡ್' ಎಂಬ ಹಳ್ಳಿ, ಇದು ರಾಷ್ಟ್ರಕೂಟ ಅರಸರ ರಾಜಧಾನಿಯಾಗಿದ್ದಿತು: ಮಾನ್ಯಖೇಟಪುರವರಮುಂ ಗೋನೂರುಮುಜ್ಜಂಗಿಯುಂ ಬನವಾಸಿದೇಶಮುಂ . . . ಕಾದಿ ಗೆಲ್ದು (ಎಕ. II, ೩೭–೯೯; ೪74). **ಮನ್ನೆಖೇಟ**: ಮನ್ನೆಖೇಟದಿ ತೆಂಕ ನಿನ್ನ ದೇಗುಲ (ಎಕ. VIII, ಹಣ. ೩೨–೩; 800). **ಮನ್ನೆಖೇಡ**: ಶ್ರೀಪ್ರಿಥ್ವೀವಲ್ಲಭಮಹಾರಾಜಾಧಿರಾಜ. . . ಚಲದಂಕಕಾಱಂ ಮನ್ನೆಖೇಡದೊಳ್ ಪ್ರಿಥ್ವೀರಾಜ್ಯಂಗೆಯುತ್ತಮಿರೆ (ಎಕ. XI, ಚಿತ್ರ. ೩೦–೩; 968). [P ಇದು 'ಮಳ್‌ಖೇಡ್' ಎಂಬುದರ ಸಂಸ್ಕೃತೀಕರಣ ರೂಪ]

**ಮಾನ್ಯಗಾಣಿಕೆ** (ನಾ). ಉಂಬಳಿ ಪಡೆದವರು ಕೊಡುವ ಕಾಣಿಕೆ: ಹತ್ತುವರಹದ ಹೊಲ ಮಾನ್ಯದ ಹೊಲವನ್ನು ಪಾಲಿಸಿಯಿದ್ದೇವೆ. . ಜೋಡಿ ಮಾನ್ಯಗಾಣಿಕೆ ಸಹ ಪೂಳಗಾಗಿ ಪಾಲಿಸಿದ್ದೇವೆ (ಎಕ. XI, ಹೊಳಲ್ಕೆ. ೩೯–೨೨; 1755). [ಮಾನ್ಯ + ಕಾಣಿಕೆ (< ಕಾಣ್ಕೆ)]

**ಮಾನ್ಯತನ** (ನಾ). ಗೌರವ; ಹಿರಿಮೆ; ಘನತೆ: ಮಾತಿನಲ್ಲಿ ಮಾನ್ಯತನ ಮನದಲ್ಲಿ ಆಶೆ ಎಂಬ ತೊಱೆಯು ಹಾಯಬಾರದೆ ಹರಿವುತ್ತಿದೆ (ಬೋಳಸಾ. ೩೯–೦೩೭). [ಮಾನ್ಯ + – ತನ]

**ಮಾನ್ಯತೆ** (ನಾ). = ಮಾನ್ಯತನ: ಆ ಮುನೀಶ್ವರನಿದಿರುಗೊಂಡೀ ರಾಮಚಂದ್ರನ ಸಕಲಸುಗುಣಸ್ತೋಮಸಾಂದ್ರನಸಧಿಕಮಾನ್ಯತೆಯಿಂದ ಸತ್ಕರಿಸಿ (ತೊರರಾ. ೩–೦–೦೭); ಯಾವುದಾದರೊಂದು ಉಪಭಾಷೆ ಅನೇಕ ಕಾರಣಗಳಿಂದಾಗಿ ಮಾನ್ಯತೆಯನ್ನೂ ಜನಪ್ರಿಯತೆಯನ್ನೂ ಪಡೆದು . . . ಆದರ್ಶಭಾಷೆಯಾಗಿ ಹುಟ್ಟಬಹುದು (ದ್ರಾಭಿ. ೩೮೦). [ಸಂ. ಮಾನ್ಯತಾ]

**ಮಾನ್ಯದರೆ** 'ಮಾನ್ಯದೆಱೆ' ನೋ.

**ಮಾನ್ಯದೆಱೆ**, ಮಾನ್ಯದೆರೆ (ನಾ). ದತ್ತಿಯಾಗಿ ನೀಡಿದ ಭೂಮಿಯ ಮೇಲೆ ಹಾಕುತ್ತಿದ್ದ ತೆರಿಗೆ: ಸಯಂಬುದೇವರ ಎಂಭತ್ತು ಪುತ್ತರು ಕೆಯ್ಯ ಮಾನ್ಯದೆಱೆಯಂ ಧಾರಾಪೂರ್ವಕಂ ಮಾಡಿ ಸರ್ವ್ವನಮಸ್ಯಮಾಗಿ ದೇವರ್ಗ್ಗೆ ಬಿಟ್ಟರು (ಶಾಇ. XX, ೭೦–೩೨; 1109). **ಮಾನ್ಯದೆರೆ**: ಶ್ರೀಸರಸಿಂಘ ದೇವರ್ಗ್ಗೆ ಬದಿಪ್ಪರ್ಳ್ಳಿಯೂರೊಡೆಯರ ಮಾನ್ಯದೆರೆಯ ಕೆಯ್ಯ ಮೂಡಣ ಪತುಗೆಯಲಿಪ್ಪತು ಮತ್ತದರೆಯ ಕೆಯ್ಯ ತಱಿಯಂ ತೆತ್ತು ಮಿಕ್ಕುದು . . . ಮಣಲ ಕೆಯ ಮತ್ತ ೬ (ಶಾಇ. IX–i, ೦೨೦–೦೨; 1058). [ಮಾನ್ಯ + ತೆಱೆ³]

**ಮಾನ್ಯದ್ವಿಷತೆ** (ನಾ). ಗೌರವಸ್ಥರಾದವರಲ್ಲಿ ಉಂಟಾಗುವ ದ್ವೇಷ: ಮಾನ್ಯದ್ವಿಷತೆ ಪತಿತಸಮೇತವಾತ್ಮಸ್ತುತಿಯೆನಿಪ್ಪವನು ಬಿಸುಟು ತದ್ವಿಪರೀತದಲಿ ವರ್ತಿಸುವನವನೇ ರಾಜನು (ಕುಭಾ. ಉ. ೩–೭೦). [ಸಂ. ಮಾನ್ಯದ್ವಿಷತಾ]

**ಮಾನ್ಯವಂತ** (ನಾ). ಗೌರವಸ್ಥ; ಮಾನ್ಯನಾದವನು: ನೀ ಮಾನ್ಯವಂತರಪೋಲು ಬೋಸರಿಪೆ (ಕಾತಿರಾ. ೦೯–೯೯). [ಸಂ. ಮಾನ್ಯವತ್]

**ಮಾನ್ಯಹೊಲ** (ನಾ). ದತ್ತಿಯಾಗಿ ಬಂದ ಜಮೀನು; ಮಾನ್ಯದ ಭೂಮಿ: ಬಡಗಹೊಲದ ಮನ್ನೆಯಸಾಮ್ಯದ ಮಾನ್ಯಹೊಲದೊಳಗೆ . . . ಬಿರಿಯ ಕೋಲೊಳ್ ಧಾರಾಪೂರ್ವ್ವಕಂ ಮಾಡಿ ಬಿಟ್ಟ ನೆಲಂ ಮತ್ತರು ೧೫೦ಕ್ಕೆ ನಿಬದ್ಧದರುವಣಂ ಗದ್ಯಾಣ ೧ (ಶಾಇ. XX, ೨೦–೬೦; 1019). [ಮಾನ್ಯ + ಹೊಲ]

**ಮಾನ್ಯೆ** (ನಾ). ಗೌರವವುಳ್ಳವಳು; ಮರ್ಯಾದಸ್ಥೆ. [ಸಂ. ಮಾನ್ಯಾ]

**ಮಾಪ**₁ (ನಾ). ಲಕ್ಷ್ಮಿಯ ಪತಿ; ವಿಷ್ಣು; ಮಾಧವ: ಮಾಪ ವಿಧಿಶಕ್ರಮುಖ್ಯರುಗಳ ವರಮನೋರಥಸಿದ್ಧಿಯಿತ್ತು ರಕ್ಷಿಸುವ ಶಂಕರ ಎನಗೆ ಚಂಪಕದ ಪೂವ ಪೂಜೆಗೆ ಕೊಟ್ಟು ಪೊರೆವುದಾಗದೆ (ಶ್ರೀಶಿನಾ. ೦೦–೩೦); ಮಾಪನಂ ನೋಡಿ ನತಿಗೆಯ್ಯದಿಲ್ಲಿಹರೆಬನಲಾ ಪದ್ಮನಾಭ ಬೇಡುದು (ರಾಶಿಕ. ೦೯–೬೮). [ಸಂ.]

**ಮಾಪ**₂ 'ಮಾಪ್ಪ₂' ನೋ.

**ಮಾಪಕ** (ಗು). ೧. ಅಳತೆಮಾಡುವ; ಅಳೆಯುವ. (ನಾ). ೨. ಅಳೆಯುವ ಸಾಧನ; ಮಾನದಂಡ: ಇತರ ಎಲ್ಲ ಕಲಾಕೃತಿಗಳನ್ನು ಪರಾಮರ್ಶಿಸಲು ರಜಪೂತರಲೆಯನ್ನೂ ನಾನು ಮಾಪಕವಾಗಿಟ್ಟುಕೊಂಡಿದ್ದೇನೆ (ಕಾರಡ. ೩೨೨). [ಸಂ.]

**ಮಾಪಡಿ** (ನಾ). ದೊಡ್ಡ ಅಳತೆಯ ಪರಿಮಾಣ; ದೊಡ್ಡಪಡಿ: ಏಸು ಕೆಲಸವನಱಿಯದಂತೆ ಹೇಳ್ದಡೆ ಮಾಡಿ ಬೇಸಱಿಕೆಯಿಲ್ಲದೊಲಿದೊಱೆದ ಭಕ್ತಿಭಾವಮಂ ಲೇಸೆಂದು ಮೆಚ್ಚಿ ರಾತ್ರಿಯಲಿ ಮಾ[ಕಾಂ. ಮಹ]ಪಡಿಯ ಪರಿಯಾಣ ಪಾತ್ರೆಯನಿತ್ತನು (ಸಿದ್ಧರಾ. ೯–೨೪). [ಮಾ₄ + ಪಡಿ₁]

**ಮಾಪಥ** (ನಾ). ದೊಡ್ಡಬೀದಿ; ರಾಜಮಾರ್ಗ; ಹೆದ್ದಾರಿ: ಮಹಾಪಥ — ಮಾಪಥ (ಶಬ್ದ.೨೮೦ ತೃಷೋ). [< ಸಂ. ಮಹಾಪಥ]

**ಮಾಪತಿ** (ನಾ). = ಮಾಪ₁: ವಿತರಣಗುಣದೊಳಪ್ರತಿಮನಾಗಿರುತ ಮಾಪತಿ ಬೇಡೆ ಕವಚವನಿತ್ತು ನುತಕೀರ್ತಿವಡೆದನೀ ಕ್ಷಿತಿಯೊಳಗತಿತ್ಯಾಗಿ ಹತ ಕರ್ಣನೆಂಬುದೆ ತಥ್ಯ (ಕೃಕಮ. I, ೯೯); ಮಾಪತಿ ಕಳಂಬ ಕರಾಳ ಕರ್ಕಶ ಕಾಲವೈರಿ ಪುರಾರ್ದನಾಜಿತಸುರಾಧ್ವರ ಧೀರ ಶಂಕರ ಚಂದ್ರಶೇಖರ ಪಾಲಯಾ (ಹಮ್ಮಿರ. ೬–೯೭). [ಸಂ.]

**ಮಾಪನ** (ನಾ). ಅಳತೆಮಾಡುವಿಕೆ; ಅಳೆಯುವಿಕೆ: ಹಾಲಿನೊಳು ಬೆಣ್ಣೆ ಕಡಲೊಳಗೆ ನೀರ್ಗಲ್ಲವೊಲು ತೇಲುವುದವೋಯಸತ್ತ್ವದಲಿ ವೇದು ಜಗವೂಲದಶೆಯೊಳಗೋದು, ಮಾಪನದ ಬಗೆಗೆರಡು ಗಾಳಿಯುಸಿರುಗಳಂತ (ಕುಂಕುಳ. ೦೦೦); ಅವರು ಸಂಗೀತಶಾಸ್ತ್ರಕ್ಕೆ ಸಲ್ಲಿಸಿದ ಸೇವೆಯ ವಿಮರ್ಶೆಯು ಮಾಪನವನ್ನು ಇಲ್ಲಿ ಕಾಣಬಹುದು (ಸಂಗೀಕ. VI, ೬೮೩೪). [ಸಂ.]

**ಮಾಪಳ**₁ 'ಮಾಪಿಳ್ಳೆ' ನೋ.

**ಮಾಪಳ**₂ (ನಾ). ದೊಡ್ಡಹಣ್ಣು; ಭಾರಿಹಣ್ಣು: "ಮಾಪಳ (ಲ) — ಮಹಾಫಲ" (ಶಬ್ದಕೋ. ೩೩). [ಮಾ₄ + ಪಳ₂ (< ಪಲ₂)]

**ಮಾಪಳ**₃ 'ಮಾಪಾಳ' ನೋ.

**ಮಾಪಾರಿ** (ನಾ). ಒಂದು ದೇಶ ಮತ್ತು ಆ ದೇಶದ ಕುದುರೆ: ಮಾಪಾರಿ ಹುರುಮಂಜಿ ಯಾಸುಸಾಂಬ್ರಾಣಿ ಕಲಹತಿ ಚೇರಮಾನಿಯೆಂಬೀ ಸಱಿಗೊಳು ಪುಟ್ಟಲಾ ದೇಶವೆಸರಿಂದಲಾ ಸುದುರೆಗಭಿಧಾನಮುಕ್ಕುಂ (ಮಂಗಣಾ. ೩೩–೨೦). [?]

**ಮಾಪಾಳ**, ಮಾಪಳ₃ (ನಾ). ಔಷಧಕ್ಕೆ ಬಳಸುವ ಒಂದು ಬಗೆಯ ಕಾಯಿ; P ಸಾಮಾನ್ಯವಾಗಿ ಎಳೆಯ ಮಕ್ಕಳ ನಾಲಿಗೆಯ ಮೇಲೆ ಪಂಡು ಬಂದಿದ್ದರೆ, ಮಿಾಯಿಸುವಾಗ ಈ ಕಾಯನ್ನು ತೇದು ನಾಲಿಗೆಗೆ ಹಚ್ಚಿ ಪಂಡು ತೆಗೆದು ಬಾಯನ್ನು ತೊಳೆಯುತ್ತಾರೆ: ದಾಳಿಂಬೆ ಕೊಗಟೆ, ಮಾವಿನ ಬೀಜ, ಸೈಂಧವಲವಣ, ಮಾದಳ ಹಣ್ಣು (ಮಾಪಾಳದ ಕಾಯಿ) . . . ಇವನ್ನು ಸಮಭಾಗ ಹಾಕಿ ಚೂರ್ಣ ಮಾಡಿ ಮಜ್ಜಿಗೆಯೊಡನೆ ಸೇವಿಸಲು ಆಮಾತಿಸಾರ, ರಕ್ತಾತಿಸಾರ ಮತ್ತು ಅಜೀರ್ಣಶೂಲೆ ಇವೆಲ್ಲಾ ಗುಣವಾಗುವುವು (ಸಕಶ್ಯ, ೪೭೩ ೩೦). **ಮಾಪಳ₃**: ಸೂತಿಕಾಪ್ರಣದ ವೇಳೆ ಕಿವ್ಯುತ್ತು ಆಗತಕ್ಕ ಚೀನಸುಗಳು, ೧ ಅಕ್ಕಲಕಾರ . . . ೧೯ ಮಾಪಳಕಾಯಿ (ಶುಂಠಿಬ್ರಾ. ೦೨೨). [?./ತುಳು. ಮಾಪಲ = ದೊಡ್ಡ ಮಾದಳಹಣ್ಣು]

**ಮಾಪಿ** (ನಾ). ೧. (ದ್ರವ್ಯ, ಧಾನ್ಯ ಮುಂತಾದುವನ್ನು) ಅಳತೆ ಮಾಡುವ ಒಂದು ಸಾಧನ. ೨. ಅಳತೆ: ೨ ಪಣದವು ೬೨ ಚೀಲ

ಗಳಾಗುತ್ತವೆ. ಅಂದ ಮೇಲೆ ಪಜನಿ (ತೂಕದ್ದು) ಮತ್ತು ಮಾಪಿ (ಅಳತೆ) ಇವ್ವರೂ ಒಂದು ೧ ಟನ್ನಿನ ಭರತಿ ಇರಬೇಕು (ಮುಂಬವ್ಯಾ. ೧೯೦).
[ಸಂ. ಮಾಪಿನ್]

**ಮಾಪಿಜಿನಿಸು**, ಮಾಪಿಜಿನಸು (ನಾ). (ತೂಕಕ್ಕೆ ಸಂಬಂಧಿಸದ) ಘನ ಅಳತೆ ಅಥವಾ ಘನಪರಿಮಾಣದ ಪದಾರ್ಥ ; ಕಾಳು, ಧಾನ್ಯ ಮುಂತಾದುವು : (೯). **ಮಾಫಿಜಿನಸು :** ಅಕ್ಕಿ ಮುಂತಾದ ಮಾಫಿಜಿನಸು ತುಪ್ಪ ಮುಂತಾದ ವಜನೀಜಿನಸು . . . ಖರೀದಿ ಮಾಡಿ (ಪ್ರಿಕಂ. ೦೯೩೩. ೨೫-೬ ; 1826). [ಮಾಪಿ + ಜಿನಿಸು (<ಜಿನಸು)]

**ಮಾಪಿಸು** (ಕ್ರಿ). ೧. ಅಳತೆಮಾಡು; ಅಳೆ. ೨. ಬೆಲೆಕಟ್ಟು ; ಮೌಲ್ಯ ನಿರ್ಧರಿಸು : ವಿಧಿಯಿಂ ಗುರುವಿಂ ಸೋಮಂ ಮಾಪಿಪಂ ಕಾಲದಲ್ಲಮಂ ತಪೋತೇಜಂಗಳಿಂ ಶತ್ರುಸೈನ್ಯಂಗಳನು ಮಳ್ಗಿಪಂ (ಕಶಂಪ. ೨-೩೬). [ಮಾಪನ + -ಇಸು]

**ಮಾಪಿಳ್ಳ** 'ಮಾಪಿಳ್ಳೆ' ನೋ.

**ಮಾಪಿಳ್ಳೆ**, ಮಾಪಳ[1], ಮಾಪಿಳ್ಳ, ಮಾಪ್ಲಾ (ನಾ). ಭಾರತದ ಪಶ್ಚಿಮ ಸಮುದ್ರತೀರದಲ್ಲಿ ವಾಸಿಸುವ, ಬಹುಶಃ ಅರಬ್ಬೀ ಪುರುಷ ಮತ್ತು ಭಾರತೀಯ ಸ್ತ್ರೀ ಸಂಬಂಧದಿಂದ ಜನಿಸಿದ ಮುಸಲ್ಮಾನರ ಒಂದು ಜನಾಂಗ : ವಿಸ್ತಾರವಾಗಿ ಮಡಗಿ ಮಾರುವ ಮಾರುವಾಡಿಯರು ಮಾಪಿಳ್ಳೆಯರು (ಕೌಗಂ೦. ೦೩೫-೩). : ಕೆಲವು ಮಾಪಿಳ್ಳೆಯರನ್ನು ಆ ದಳವಾಯಿ ಬಳಗೆ ಕಳುಹಿಸಿ ಚಿರಕಲ್ಲ ರಾಜರು ನಿಮಗೆ ಕರಾರು ಮೀರಿ ಹಣ ಕೊಡುವುದು ಇಲ್ಲ . . . ಎಂತ ತಿಳಿಸಿದ್ದರಿಂದ (ರಾಜೇಂದ್ರ. ೦೦) ; ಮಲಬಾರ್ ಡಿಸ್ಟ್ರಿಕ್ಟು ದಕ್ಷಿಣಕೆನರಾ ಡಿಸ್ಟ್ರಿಕ್ಟಿಗೆ ದಕ್ಷಿಣದಲ್ಲಿದೆ. ಮಾಪಿಳ್ಳೆಗಳು ಎಂಬ ಮಹಮ್ಮದೀಯರು ವಿಶೇಷವಾಗಿದ್ದಾರೆ (ಭೂಗೋಳ. ೬೬). **ಮಾಪಳ**[1] : ಕೊಲ್ಲಂತ ಮಾಪಳಮುಖ್ಯಂತಾದ ಕೇರಳಮಂಡಲದ ಮನ್ನೆಯರ್ಕಳನೆರ್ದೆಗಿಡಿಸಿ ಮರಳ್ದು (ಕೇನ್ಯ. ೬-೦೦). **ಮಾಪಿಳ್ಳ** : ಮಾಪಿಳ್ಳರು ಶ್ರಮಕ್ಕೆ ಮೆಚ್ಚಿದವರಾದಾಗ್ಯೂ ಉದ್ಧಟಸ್ವಭಾವದವರು (ಕಣಗಿ. ೨೯೯) ; ಬಜಿಲ . . . ಮಣಿ ಸರ್ಕಾರ-ಮಾಪಿಳ್ಳ (ತುಳುನಾ. ೦೬೨). **ಮಾಪ್ಲಾ** : ಕ್ರಿ. ಶ. ಏಳನೆಯ ಶತಮಾನದ ಹೊತ್ತಿಗೆ ಮುಸ್ಲಿಮರು ಹೆಚ್ಚುಸಂಖ್ಯೆಯಲ್ಲಿ ಮಲಬಾರಿನಲ್ಲಿ ನೆಲಸಿದ್ದರಿಂದ ಮಾಪ್ಲಾಗಳಲ್ಲೂ ಲಬ್ಬೆಗಳಲ್ಲೂ ಐತಿಹ್ಯವಿದೆ (ಭಾರತ. ೩೨೫).
[ದೇ.॥ ತಮಿ. ಮಾಪ್ಪಿಳ್ಳೈ : ಮಲ. ಮಾಪಿಳ್ಳ; ತುಳು. ಮಾಪ್ಳೆ. ಮಾಪಿಳ್ಳೆ, ಮಾಪುಳೆ. ಮಾಪ್ಳೆ]

**ಮಾಪು**[1] (ನಾ). ಅಳಿವು ; ನಾಶ : 'ಮಾಪುಗೈ', 'ಮಾಪುಗೊಳ್ಳು' ಪರಾ.
[← ತೆಲು. ಮಾಪು = ಇಲ್ಲದಂತೆ ಮಾಡು ; ನಾಶಗೊಳಿಸು]

**ಮಾಪು**[2], ಮಾಪ[2] (ನಾ). (ದ್ರವ, ಧಾನ್ಯ ಮುಂತಾದುವನ್ನು) ಅಳತೆ ಮಾಡುವ ಸಾಧನ : ಕೃಷ್ಣೆಯ ಉತ್ತರದಲ್ಲಿ ೮೦ ರೂಪಾಯಿ ತೂಕ ಶುದ್ಧ ನೀರು ಹಿಡಿಯುವಷ್ಟು ಮಾಪಿಗೆ ಪೊಂದು ಶೇರೆಂದೆನ್ನುವರು (ಕಣಗಿ. ೨೯೯) ; ಅವನು ಮಾಪನ್ನಿಡುವುದನ್ನೂ ತುಂಬುವುದನ್ನೂ ಲಕ್ಷಿಸಿ ನೋಡಿ, ನಾಲ್ಕುಜನ ಕೂಡಿದವರಲ್ಲಿ ಅವನನ್ನು ಕೊಂಡಾಡಿಬಿಟ್ಟರುವರು (ಕೇಳ. ೨). **ಮಾಪ**[2] : ಇಲ್ಲಿಯ ವಜನ ಮಾಪಗಳ ನಿಯಮಗಳು ಎರಡನೇ ಸ್ಥಳಗಳಂತೆ ಇರದೆ (ಮುಂಬವ್ಯಾ. ೬ ಕ್ರಸಾಪಟ). 'ಮಾಪಿ' ಪರಾ.
[← ಮರಾ. ಮಾಪ್ / ಸಂ. ಮಾಪಕ]

**ಮಾಪುಗೈ** (ಕ್ರಿ). ಇಲ್ಲದಂತೆ ಮಾಡು ; ನಾಶಗೊಳಿಸು : ಶರವ ಚಾಪವನ್ನು ನೆಗಪಿ ಶರವ ಕೋಪದಿಂದ ಬಿಡಲು ರಾಮ ಮಾಪುಗೈದು ತಿರುಗಿ ನೋಡಿದ (ವಾಲಿಕ. ೦೨). [ಮಾಪು[1] + ಗೈ (<ಕೆಯ್[1])]

**ಮಾಪುಗೊಳ್ಳು** (ಕ್ರಿ). ಇಲ್ಲವಾಗಿಸು ; ನಾಶಗೊಳಿಸು : ಆ ಪಾಪಿ ವಿಳವೈರೋಚನಿಶಂಬರಾದ್ಯರು ಮಾಪುಗೊಂಡೆನ್ನ ಪಟ್ಟಣವಾಳುತಿಹರು (ಸವುಯು. ೯). [ಮಾಪು[1] + ಕೊಳ್ಳು[1] (<ಕೊಳ್[1])]

**ಮಾಪುಗೋಲು** (ನಾ). ಅಳತೆಮಾಡುವ ಸಾಧನ ; ಅಳತೆಗೋಲು : ಮಾನದಂಡ : ಇದು ಅಮೆರಿಕದ ಹೆಗ್ಗಳಿಕೆ, ಅವರ ಸಂಸ್ಕೃತಿಯ ಮಾಪುಗೋಲು (ಪಾಂಗಿ. ೩೩). [ಮಾಪು[2] + ಕೋಲು[1] (<ಕೋಲ್[1])]

**ಮಾಪುತ್ರ** (ನಾ). ಲಕ್ಷ್ಮಿಯ ಪುತ್ರ ; ಮನ್ಮಥ : ಮಾಪುತ್ರಶರವಿತ್ರ ಸುದಯವಾಗಲ್ಕೆದ್ದು ತಾ ಪುಷ್ಪ ತರ ಪೋಗೆ (ಶ್ರೀಶರಾ. ೦೦-೯೯). [ಸಂ.]

**ಮಾಪುರುಷ** (ನಾ). ದೊಡ್ಡಮನುಷ್ಯ ; ದೊಡ್ಡ ವ್ಯಕ್ತಿ : ಮಹಾಪುರುಷ —ಮಾಪುರುಷ (ಕಮರ. ೨೯೦ ಕ್ರಮೋ). [ಮಾ[4] + ಪುರುಷ]

**ಮಾಪ್ಲಾ** 'ಮಾಪಿಳ್ಳೆ' ನೋ.

**ಮಾಫ್** 'ಮಾಫು' ನೋ.

**ಮಾಫ** 'ಮಾಫು' ನೋ.

**ಮಾಫಿ** 'ಮಾಫು' ನೋ.

**ಮಾಫಿಜಿನಸು** 'ಮಾಪಿಜಿನಿಸು' ನೋ.

**ಮಾಫಿರಹದಾರಿ** (ನಾ). ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸರಕನ್ನು ಸಾಗಿಸಲೆಂದು ಮುಂಚೆಯೇ ಪಾವತಿ ಮಾಡಲಾದ ಹಣಕ್ಕೆ ಪ್ರತಿಯಾಗಿ ನೀಡುವ ಒಪ್ಪಿಗೆ ಪತ್ರ : (ಕ್ರಸಗಿ. II, ೬೩೩).
[ಮಾಫಿ (< ಮಾಫು) + ರಹದಾರಿ]

**ಮಾಫೀ** 'ಮಾಫು' ನೋ.

**ಮಾಫು**, ಮಾಫ್, ಮಾಫ, ಮಾಫಿ, ಮಾಫೀ (ನಾ). ೧. ತಪ್ಪನ್ನು ಮನ್ನಿಸುವುದು ; ಕ್ಷಮೆ : ಮಹಾರಾಜಶ್ರೀ ಕರಾಚೂರಿನಂಜರಾಜೈಯ್ಯ ಅರಶಿನವರು ಅಣ್ಣನವರಿಗೆ ಹೇಳಿ ಮಾಫು ಮಾಡಿಸ್ವರು (ಹೈಪ. ೨೬). ೨. ರಿಯಾಯಿತಿ ; ಸೋಡಿ : ಆ ದಂಡಿನಲ್ಲಿರುವಂಥ ಸಾಮಾನು ಸರಂಜಾಮು ಏನು ಇದ್ದಾಗ್ಯೂ ಲಡಾಯಿ ಮಾಡುವ ವೇಳೆಗೆ ಮಾಫು ಕೊಡಿಸಬೇಕು (ರಾಜೇಂದ್ರ. ೬೦). ೩. (ತೆರಿಗೆ, ಶುಲ್ಕ ಮುಂತಾದುವುಗಳ) ರದ್ದು ; ವಜಾ : ಪಾಳುಭೂಮಿಯಲ್ಲಿ . . . ಸಾಗುವಳಿಮಾಡತಕ್ಕ ರೈತರು ವಾರಕ್ಕೆ ದರಖಾಸ್ತುಮಾಡಿದರೆ ಮೊದಲ ವರ್ಷ ಏನು ಹುಟ್ಟುವಳಿ ಆಗುತ್ತಾ ಇದೆಯೋ ಯಾವತ್ತೂ ರೈತರಿಗೆ ಮಾಫುಮಾಡಬೇಕು (ಮಹಾಪಂ. II. ೬೦). **ಮಾಫ್ :** ೧. ಮಾಫ್ ಮಾಡಬೇಕು ತಪ್ಪಿದ್ದರೆ ! (ನಮ್ಮ. ೩೩) ; ಇದೊಂದು ಸಾರಿ ಮಾಫ್ ಮಾಡಿಬಿಡಿರಿ (ಪಾಥೋಳಿ. ೧೦೦). ೩. ನಿಮ್ಮ ಜುಲ್ಮಾನೆಯನ್ನು ಮಾಫ್ ಮಾಡುತ್ತೇನೆ (ಕಮಳ. ೦೬೬). **ಮಾಫ :** ೧. ಸಾಬರು 'ಮಾಫ' ಮಾಡಿದರು. ಬೇಡಿ ಸಡಿಲಾದವು (ಸಿಕಿರ. ೩೯). ೨. ಸರಕಾರೀತೆರಿಗೆಯನ್ನು ಅಂಶತಃ ಅಥವಾ ಪೂರ್ಣವಾಗಿ ಮಾಫ ಮಾಡಿರುತ್ತದೆ (ಪಂಚಭೂ. ೩೯). **ಮಾಫಿ :** ೧. ಕಾಲೇಜಿನಲ್ಲಿ ಅವರು ಏನು ಮಾಡಿದರೂ ಮಾಫಿ (ಸ್ವಸ್ಥಪೂ. ೬೬೬). ೩. ಯಾವ ಸ್ಥಳಕ್ಕೆ ಈ ಪತ್ರಿಕೆಯನ್ನು ಕಳುಹಿಸಿದಾಗ್ಯೂ ಟಪಾಲು ಹಾಸಲು ಮಾಫಿ ಮಾಡಿ ಇದ್ದಾರೆ (ಶಾಶ್ವಿ. ೪೯೦). **ಮಾಫೀ :** ೨. ಯಾವುದಾದರೂ ಕರವನ್ನು ಹಾಕುವುದು, ವಜಾ ಮಾಡುವುದು, ಮಾಫೀ ಬಿಡುವುದು (ಕಾರಾಸ. ೩೫). ೩. ನನ್ನ ಫೀ ಏನು ? ಇಂದಿನ ತನಕಾ ಅಂತೂ ಮಾಫೀನ ! (ರೀಕಹ. II. ೦೦).
[← ಅರ. ಮುಆಫ್, ಮುಆಫೀ ; ಹಿಂ. ಮರಾ. ಮಾಫ್. ಮಾಫೀ]

**ಮಾಬ** 'ಮೌಸ್' ಪರಾ.

**ಮಾಬಲ** (ನಾ). ೧. ದೊಡ್ಡಸೈನ್ಯ,—ದಳ : ಬಮ್ಮರಸಂ ಮಾಬಲವಂ ಕಾದಿ ಸ್ವರ್ಗಸ್ಥ [ನಾ]ದಂ (ಶಾಇಇ. IX- i, ೩೦೨-೦೪ ; 1057). ೨. ಒಬ್ಬಾತನ ಹೆಸರು : 'ಮಾಬಲಯ್ಯ' ಪರಾ. [ಮಾ[4] + ಬಲ[3]]

**ಮಾಬಲಯ್ಯ** (ನಾ). ಒಬ್ಬಾತನ ಹೆಸರು : ರಾಜ್ಯಕ್ಕೀತರ ಶಿತ್ತಿಗನೆನಿಪುದು ಮಂತ್ರಿಮಹೋತ್ತಮನಂ ಮಾಬಲಯ್ಯನೆಂದೊಗೆಟಬೆರಾರ್ (ಎಕ. VII (R). ಶಾಗವು೦. ೯೯-೦೫ ; 972). [ಮಾಬಲ + ಅಯ್ಯ[1]]

**ಮಾಭೈರವ** (ನಾ). ಶಿವನ ಒಂದು ರೂಪ : ಮಹಾಭೈರವ : ಚಂಡಿಕೆಯಾಗಿ ಪೀರ್ವ ಮಾಭೈರವನಾಗಿ ನಿಂಗುವ ಮಹಾಸ್ಮಧಿನೆಚು ಮೃಡಾರಿ ಕಾದಿದಂ (ಜಗ. ೦೩-೨೦). [ಮಾ$_1$ + ಭೈರವ]

**ಮಾಮ, ಮಾವ** (ನಾ). ೧. ಸೋದರಿಕೆಯ ಸಂಬಂಧದಲ್ಲಿ ಮಾವನಾಗಿರುವವನು ; **ಸೋದರಮಾವ** : ಶ್ರೀಮತ್ಪೆರ್ಮ್ಮಾನಡಿಗಳಾ ತಮ್ಮಂ ಬೂತರಸ ತಮ್ಮ ಕಂದಿರೂರೊಳ್ಪವಿ × × × ಬವರದೊಳ್ಕೆಚ್ಚು ಜುಬಿಸತ್ತೊ ಅವರ ಮಾವ ತಿಪ್ಪುವೆಂದೆಯ ಮಾದವಾಡಿಯ ಬ್ಬಾಳ್ಗಚ್ಚು ಕೊಟ್ಟೊ (ಪ್ಮಕ೦. ೦೯೩೦, ೯೯-೪ : 886) : ನೀಮೆನಗಿನಿತಂ ಕೆಮ್ಮನೆ ಮಾವಮನಂ ನೊಂದು ಬೆಸಸಿದಿರ್ (ಶಂಶಭಾ. ೦೨-೯೯) ; ಬಲಕ್ಷಾಮಂ ಮಾವಂ ನಿಮಗೆ ಪೊಜಿವೇಟ್ಟಿಟ್ಟಿದ[ನಿದಂ] (ಕೃಷ್ಣಕೃ. ೭-೮೦). **ಮಾವ** : ೧. ನೀಮುಂ ಪೋಗಿ ನಿಮ್ಮ ಮಾವನ ಪಕ್ಕದೊಳೋದಿಮೆಂದೋಲೆಯಂ ಬರೆಯಿಸಿ ಕೊಟ್ಟೊಡೆ (ಪಜ್ಮಾರಾ. ೩-೬) ; ಎನ್ನ ಕನ್ನಿಕೆಯಾ ಕಾಲದೊಳ್ ನಾನೆನ್ನ ಮಾವಂ ಕುಂತಿಭೋಜನ ಮನೆಯೊಳ್ ಬಳೆವಂದು ದುರ್ವಾಸಮುಹಾಮುನಿ . . . ಪರವಿತ್ರರ್ (ಕುಕಭಾ. ೦-೦೦೯ ವ) ; ಮಾವನಲ್ಲಿಗೆ ಬಂದಡಾ ಮಾದ್ರಾವನೀಪತಿ ಶಲ್ಯ ಮಿಗೆ ಸಂಭಾವಿಸಿದನೊಲಿದಿತ್ತನೀತಂಗವಿಳವಸ್ತುಗಳ (ಕುವ್ಯಾಸ. ೬-೬). ೨. ಗಂಡನ ಅಥವಾ ಹೆಂಡತಿಯ ತಂದೆ : " ಶ್ವಶುರ ಶ್ವಶ್ರೂನಾಮವದೆಸೆಗುಂ ಕೂಸಿತ್ತ ಮಾವನೊಳಮತ್ತೆಯೊಳಂ" (ಪಮ್ರಕೋ. ೩೬-೨೪) ; ಈತಂ ನಿಮ್ಮ ಮಾವನೆಂದಾಗಳ್ ಕುಮಾರನುಮಿದಿರೆಟ್ಟು ತದ್ಯೋಗ್ಯಮಪ್ಪ ವಿನಯಮುಂ ಗೆಯ್ದುದರ್ೊನಂ ವಿದ್ಯಾಧರೇಂದ್ರಂ ಕುಮಾರನಂ ನೋಡಿ . . . ಸಂತುಷ್ಟಚಿತ್ತನಾಗಿ (ಪಜ್ಮಾರಾ. ೩೯-೦೦) ; ನೀಂ ಲಲಿತಾಂಗಚರಸೆಯುಷ್ಟ ದಾಜಿಂದಂ ಸ್ವಕೀಯಪ್ರಾಣೇಶ್ವರಿ ತತ್ಸ್ವಯಂಪ್ರಭಾದೇವಿ ನಿಮ್ಮ ಮಾವಂ ವಜ್ರದಂತಚಕ್ರವರ್ತಿಗಂ ನಿಮ್ಮತ್ತೆ ಲಕ್ಷ್ಮೀಮತಿಮಹಾದೇವಿಗಂ ಶ್ರೀಮತಿಯೆಂಬ ಮಗಳಾಗಿ ಪುಟ್ಟಿದಳ್ (ಆಪು. ೪-೦೯ ವ); ರಾಮನಾವೆಡೆ ಜೀಯ ಕಲಿ ರಾಘೇಯನಾವೆಡೆ ಸೂಜುಮಕ್ಕಳು ಬೀಯುವಾದರೆ ಮಾವ ವಿಂದರು ಸೊಸೆಯರಡಗೆಡೆಮ (ಕುವ್ಯಾಕ. ೧-೩). ೩. ಗೌರವಾರ್ಥವಾಗಿ ಹಿರಿಯರನ್ನು ಸಂಬೋಧಿಸುವಾಗ ಬಳಸುವ ಮಾತು : ಎಮ್ಮಯ್ಯಂ ಮಾವನೆಮ್ಮ ಮುತ್ತಯ್ಯಂ ಮತ್ತೆಮ್ಮ ಗುರುವೆಂದು ಮಜಿಯುವನಮ್ಮೊಜಿಯುವನಾಗೆ ಜಾರೆಯುರ್ವಂಚಿಸುವರ್ (ಸಮಶ. ೩-೩೦).

**ಮಾವನಂಕಕಾಜ** = ಮಾವನ ವಶವರ್ತಿಯಾಗಿ ಯುದ್ಧಮಾಡುವ ವೀರ ; ಒಂದು ಬಿರುದು : ಮಾವನಂಕಕಾಜ ಶ್ರೀವಾದಿ ಮಹಾಪ್ರಳಯ ಕಾಲಭೈರವಷಣ್ಮತದೇವರ ಪಾದಾರಾಧಕಂ ಪರಬಳಸಾಧಕಂ ನಾಮಾದಿ ಸಮಸ್ತಪ್ರಸಸ್ತಿಸಹಿತಂ (ಶಾಇಇ. XI-i, ೯೬-೨೦ ; 1062) : ವೈರಿಮಣ್ಡಳಿಕ ವಿರ್ಗಬೇಂಟೆಕಾಜಂ ಚೋಳಕಟಕಸರ್ವಸ್ವಸೂಜೆಕಾಜಂ ಮಾವನಂಕಕಾಜಂ (ಎಕ. VI, ಕೊಪ್ಪ. ೯೩-೧೬ ; 1090). **ಮಾವನಗಂಧವಾರಣ** = ಒಂದು ಬಿರುದು : ಅಭಿಮಾನಗಳ್ಯನಹಿತರಗಣ್ಯಂ ಮಾವನಗನ್ಧವಾರಣಂ (ಪ್ಮಕ೦. ೦೯೩೩, ೯೦-೩೦; 951); ಶ್ರೀಮದಾಹ[ವ]ಮಲ್ಲದೇವ ಪಾದಪಂಕಜ ಭ್ರಮರಂ ಮಾವನ ಗನ್ಧವಾರಣಂ (ಶಾಇಇ. XI-i, ೩೭-೦೪ ; 1020). **ಮಾವನಮನೆ** = ೧. ಸೋದರಮಾವನ ಮನೆ : ಪದೆಪುಗೆಡ[ಲ]ಚ್ಚೆಯೊಡವುಟ್ಟಿದ ಮಾವನಮನೆಯೊಳುಂಡುಟ್ಟುಂ ನೀಪೊದೆದೊಡೆಗೆಯ್ದುಯೊ ನಾಯುಣ್ಣದ ದೋಣಿಯೊಳೂಡಿದೊಂಗೆ ಪವಯಿದನೆ ಕರಂ (ಸುಕುಮಾ. ೨-೬೯). ೨. ಗಂಡನ ಅಥವಾ ಹೆಂಡತಿಯ ತಂದೆಯ ಮನೆ : ಸೊಸೆ " ನಮ್ಮ ಮಾವನ ಮನೆ ಹಾಲುಕ್ಕಿದಂಗೆ ಉಕ್ಕಲಿ " ಎನ್ನುತ್ತಾಳೆ (ನಮ್ಮೂರು. ೦೦೩); ಈ ಅಳಿಯದೇವರುಗಳು ಮಾವನ ಮನೆ ಬಿಡದೆ ಭದ್ರವಾಗಿ ಹೆಂಡಂದಿರ ಜೊತೆ ಇದ್ದುಬಿಟ್ಟರು (ಮಾಮನಿ. ೨೦೦). ೩. (ಆಲಂ) ಊಟಉಪಹಾರಗಳ ಮಂದಿರ ; ಹೋಟೆಲು : ಊಟ ತಿಂಡಿಗಳಿಗೆ ಹೇಗೂ ಮಾವನ ಮನೆ ಇದ್ದೇ ಇದೆ. ಮಲಗುವುದಕ್ಕೊಂದು ರೂಮು ಮಾಡಿ ಕೊಂಡರೆ ಸಾಕು (ಬಳ). ೪. ಸೆರೆಮನೆ : ಕಾರಾಗೃಹ : ಅವನು ಕಳ್ಳತನ ಮಾಡಿ ಮಾವನ ಮನೆ ಸೇರಿದ (ಬಳ). ' ಅತ್ತೆಮನೆ ' ಪರಾ. **ಮಾವನಸಿಂಗ** = ಮಾವನ ವಶವರ್ತಿಯಾಗಿ ಸಿಂಹದಂತೆ ಪರಾಕ್ರಮದಿಂದ ಹೋರಾಡುವವನು ; ಒಂದು ಬಿರುದು : ಪರಾಂಗನಾಪುತ್ರ ಸಗಳಗುಣಗಣೋತ್ತುಂಗ ಮಾವನ ಸಿಂಗ ಜಿತವೈರಿ . . . ಶ್ರೀಮತ್ ಕಲಿಯಮ್ಮರಸಂ (ಕಕುರಿ. ೯-೨೧; 1039).

[ದೇ.॥ ತಮಿ. ಮಾಮನ್, ಮಾಮಾ, ಮಾಮಾಣ್; ಮಲ. ಮಾಮನ್; **ಕೋತ.** ಮಮನ್; **ತೊದ.** ಮುಮುನ್; **ಕೊಡ.** ಮಾವೆನ್; **ತುಳು.** ಮಾಮೆ. ಮಾವೆ; **ತೆಲು.** ಮಾಮ. **ಪರ್ಜಿ. ಕುಇ.** ಮಾಮ; **ಕುವಿ.** ಮಮ, ಮಾಮ ; **ಕುರುಖ್.** ಮಮುಸ್ ; ಮಲ್ತೊ. ಮಮ: **ಬ್ರಾಹುಇ.** ಮಾಮಾ./ಹಿಂ. ಮರಾ. ಮಾಮಾ./ಪ್ರಾ. ಮಾಮ, ಮಾಮಗ, ಮಾಮಾ./ ಸಂ. ಮಾಮ]

**ಮಾಮುಂಡಿ** (ನಾ). ಒಂದು ನದಿಯ ಹೆಸರು : ಮಾದದೀಮೀನದೀ ಮಾಮುಣ್ಡ[ನ]ದೀ (ಇಅ. XIV, ೨೩೨-೩೩ ; ೮ನೆಯ ಶತ). [ ? ]

**ಮಾಮಂದಿರ** (ನಾ). ದೊಡ್ಡದೇವಾಲಯ : ಮಲ್ಲಿಕಾರ್ಜುನ ಮಾ[ಶಾಕಾಂ. ಮಹ]ಮಂದಿರಕ್ಕಾಗ್ನೇಯದಲ್ಲಿ ಜಲಜನಿತಸೆಲೆಯಂ ನೋಡಿ ಕೆಜೆಯಂಗಲವಿಲ್ಲಿತನಕೆಂದು ಸೀಮಾರೇಖೆಯಂ ಕಟ್ಟಿ (ಸಿದ್ಧರಾ. ೪-೦೯).

[ಮಾ$_4$ + ಮಂದಿರ]

**ಮಾಮುಕ** (ನಾ). ೧. ನನ್ನದು ; ನನಗೆ ಸೇರಿದುದು : ಮಾಮುಕವಿದೆಂದಾವುದಕೊ ತಾನೆ ಬಲಿಪೋಗಿ ಕಾಮನವನೊಂದುವುದು (ಮಂಕುತಿ. ೯೨೯). ೨. ನಮಸ್ಕರಿಸುವ ಒಂದು ರೀತಿ : ಸಾಮಾನ್ಯ ನಮಸ್ಕಾರಕೆ ಭಾವಿಸಿಯರ ವುದರ ತ್ರಿವಳಿಗಡ್ಡರೆ ಕೈಯಾ ಮೈಗೆ ಮುಖದ ಮೇಲಿಡೆ ಮಾಮುಕ ಮೆಂದಕ್ಕು (ಕಪ್ಪುಶಿ. ೩೩). [ಸಂ.]

**ಮಾಮುಕಾಚಿ** (ನಾ). ಒಂದು ಸ್ಥಳದ ಹೆಸರು (?) : ಅತಂಜಿಗ ಭಟಾರರ್ ಮೆಚ್ಚಿ ಕೊಟ್ಟ ಕೊಡಜಿಗ ಪದಿಕ್ಕೊರ್ಳ ಕಳನಿ ಮಾಮುಕಾಚಿಯ ಕೆಳಗೆ ಪದಿಕ್ಕೊರ್ಳ ಪಾಟಿ (ಎಕ. X, ಮುಳಬಾ. ೯೩-೪ ; ಸು. 970). [ ? ]

**ಮಾಮನಿ** (ನಾ). ಮದುವೆಯಾದ ಬಳಿಕ ಬೀಗರನ್ನು ಕಳುಹಿಸಿ ಕೊಡುವಾಗ ನೀಡುವ ಔತಣ : ಆದುದಲ್ಲಿಂ ಮೇಲೆ ಮಾಮನೆ[ಸ]ಮೇದಿನೀಪತಿ ಜನಕರಾಯಂಗಾ ದಿವಾಕರಕುಲಲಲಾಮಂಗವಿಳವಿಭವದಲಿ (ತೊರರಾ. ೦-೦೬-೩೩) ; ಮೂರನೆ ದಿನ 'ಮಾಮನಿ' ಇತ್ಯಾದಿ ಕಾರ್ಯಗಳನ್ನು ತೀರಿಸಿಕೊಂಡು ಗಾಳಿಪುರಕ್ಕೆ ಬಂಡಿಕಟ್ಟಿದರು (ಶಂದು. ೪೦) ; ಮರುದಿನ ಗಂಡಿನವರ ಮಾಮನಿಯ ಊಟಕ್ಕೆ ಅಕ್ಕನ ಜೊತೆಗೆ ನಾನೂ ಹೋಗಿದ್ದೆ (ವೃಶಿ. ೨೩).

**ಮಾಮನೀಪ್ರಸ್ಥ** = ಬೀಗರ ಊಟ : ಮಾಮನೀಪ್ರಸ್ತ ಒಂದುಳೀತವಲ್ಲಾ (ಶಿತುಗು. ೩೪) ; ಒಂಭತ್ತನೇ ದಿವಸ ವರಪಕ್ಷದವರ ಮಾಮನೀಪ್ರಸ್ತ ನಡೆಯಿತು (ಮಂಜುಳ. ೧೯೦). [ ←ಹಿಂ. ಮೆಹಮಾನೀ = ಆತಿಥ್ಯ]

**ಮಾಮನೆ** 'ಮಹಾಮನೆ' ನೋ.

**ಮಾಮರ** (ನಾ). ಮಾವಿನ ಮರ : ದಂಡಕರಿಸಿಯರ್ . . . ಮಾ[ಶಾಕಾಂ. ಮಾವಿನ]ಮರದ ಕೆಬಗೆ ಸ್ವಾಧ್ಯಾಯಂಗೆಯ್ಯುತ್ತಿರ್ದರ್ (ಪಜ್ಮಾರಾ. ೦೬೨-೨೩); ಸೊಗಯಿಸಿ ಬಂದ ಮಾಮರನೆ ತಳ್ತಿಲೆವಳ್ಳಿಯೆ ಪೂತ ಜಾತಿಸಂಪಗೆಯೆ . . . ಸೋಜೊಡಾವ ಬೆಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಶಂಪಭಾ. ೪-೨೯); ಎತ್ತಣ ಮಾಮರ ಎತ್ತಣ ಕೋಗಿಲೆ ಎತ್ತಣಿಂದೆತ್ತ ಸಂಬಂಧವಯ್ಯ (ಅಪಶಂ. ೦೩-೩೯). [ಮಾ$_3$ (<ಮಾವು) + ಮರ$_1$]

**ಮಾಮಲತಿ, ಮಾಮಲೇತಿ, ಮಾಮಿಲತ್ತು** (ನಾ). ೧. ತಹಸೀಲ್ದಾರನ ಕೆಲಸ : ತಹಸೀಲುದಾರಿಕೆ : ಮಾಮಲತಿ ಮುನಸಫಿ ಮಾಡುವ

ಮನುಷ್ಯನ ಸಂಬಳವನ್ನು ಒಪ್ಪಿ ಕಿರಾಣಿ ಅಂಗಡಿಕಾರನು ಗಳಿಸುತ್ತಿರುವನು (ಕೃಗಾ. ೩೯). **ಮಾಮಲೇತಿ :** ೧. ನಮ್ಮ ಶೇಷಣ್ಣ ಆಗ ಬಿ.ಎ. ಆಗಿದ್ರ ಆಗ ಬೇಕಾದಂಥಾ ಪ್ರೊಬೆಶನರ ಮಾಮಲೇತಿ ಮಾಡುತಿದ್ದಾ ಇಷ್ಟೊತ್ತಿಗೆ (ಕೃಪಿ. ೦೩) ; ನಿಮ್ಮ ಮಕ್ಕಳ ಬುದ್ಧಿ ನೋಡಿದರ ಅವರು ಮಾಮಲೇತಿ ಮಾಡಬಹುದು (ಕುಬಕು. ೬೭). **ಮಾಮಿಲತ್ತು :** ೨. ವ್ಯವಹಾರದ ಮಾತು ; ಕಾರುಭಾರು : ಸರಪದ್ದ ಏನಾದರೂ ಹೆಚ್ಚು ಕಡಿಮೆ ಆದರೆ, ನಮ್ಮ ಜಿಹ್ವೆಯಿಂದಾ ನಾವು ಹೇಳದೆ ಇದ್ದಾಗ್ಯೂ ಉಭಯಕಡೆ ಜನರು ಹೇಳ್ತಾರಷ್ಟೆ. ತಾವು ಮಾಮಿಲತ್ತು ತಿಳಿಯುವಂಥಾದ್ದು ರಾಸ್ತಿ ತೂಕ ಮಾಡುವಂಥಾದ್ದೂ ತಮ್ಮ ಪಕ್ಷದ ಆಟವಿದೆ (ಹಕೀಂಪ್ರ. ೨೬೨).

[← ಅರ. ಮುಆಮಲತ್, ಮುಆಮಿಲತ್ ; ಮರಾ. ಮಾಮಲತ್, ಮಾಮಲೀಯತ್ ; ಹಿಂ. ಮಾಮಲತ್, ಮಾಮಲತೀ]

**ಮಾಮಲೆ.** ಮಾಮ್ಲೆ (ನಾ). ೧. ಉದ್ಯೋಗ ; ಕೆಲಸ ; ದಂಧೆ : ಇಬ್ಬರು ಮಕ್ಕಳೂ ತಮಗಿಂತಲೂ ಹೆಚ್ಚಾಗಿ ಓದಿ ತಮ್ಮ ಮಾಮಲೆಗಿಂತ ಹೆಚ್ಚಿನ ಹುದ್ದೆಗೆ ಬರಬೇಕೆಂದು ಭೀಮರಾಯರಿಗೆ ಬಹಳ ಆಸೆ (ಕುಬಾಯಿ. ೯೯). ೨. ವ್ಯಾವಹಾರಿಕ ಅಥವಾ ವಿವಾದಾಸ್ಪದವಾದ ವಿಷಯ : ಝಾನ್ಸಿ ರಾಜ್ಯದ ಮಾಮಲೆಯನ್ನು ನಿರ್ಣಯಿಸಲು ಒಂದು ಸಮಿತಿಯು ಏರ್ಪಟ್ಟಿತು (ಝಾಲಾಕ. ೬). ೩. ತಾಲ್ಲೂಕಿನ ಕಂದಾಯವನ್ನು ನಿಗದಿಮಾಡಿ ವಸೂಲುಮಾಡುವ ಕೆಲಸ,– ಉದ್ಯೋಗ : ತಹಸೀಲುದಾರಿಕೆ : 'ಮಾಮಲೇದಾರ' ಪರಾ. **ಮಾಮ್ಲೆ:** ೩. ಮಾಮ್ಲೆ ಮಾಡೋರು ನಿನ್ನ ಅಪ್ಪ ಅಕ್ಕರೆಯಿಂದ ಮಾತಾಡಿಸಿ ಬುದ್ಧಿಹೇಳಿ ಕಳ್ಸಿದ ಮೇಲೆ . . . ಎಚ್ಚರಿಕೆಯಿಂದಿರೋದು ಒಳ್ಳೇದು (ಕೆಂಗಾಳ್ಯ. ೦೬೦).

[← ಅರ. ಮುಆಮಿಲಾ ; ಹಿಂ. ಮರಾ. ಮಾಮಲಾ]

**ಮಾಮಲೆದಾರ** 'ಮಾಮಲೇದಾರ' ನೋ.

**ಮಾಮಲೇತಿ** 'ಮಾಮಲತಿ' ನೋ.

**ಮಾಮಲೇದಾರ.** ಮಾಮಲೆದಾರ. ಮಾಮ್ಲೆದಾರ (ನಾ). ತಾಲ್ಲೂಕಿನ ಕಂದಾಯವನ್ನು ನಿಗದಿಮಾಡಿ ವಸೂಲುಮಾಡುವ ಅಧಿಕಾರಿ; ತಹಸೀಲುದಾರ : ಹುನಗುಂದದಿಂದ ಮಾಮಲೇದಾರರು ವಕೀಲರು ಆ ಸಮಾರಂಭಕ್ಕೆ ಬಂದಿದ್ದರು (ಸೀಬಮ. ೦) ; ಮಾಮಲೇದಾರರ ಉಪದೇಶದಂತೆ ಮನೆಯಲ್ಲಿ ತನ್ನ ಕಾಯಿದೆಯನ್ನು ಹಾಗೂ ಇತರ ಕೇಸುಗಳನ್ನು ಅಭ್ಯಸಿಸತೊಡಗಿದನು (ಗಂಪಹಾಯಿ. ೬೭). **ಮಾಮಲೆದಾರ :** ಅತಿಕುಪಿತ ತಾಲ್ಕು ಮಾಮಲೆದಾರ ಸುಬ್ಬರಾಯನ ಸೇವೆ (ಎಕ. VI (ಸ). ಹಾಂಡಶ. ೨೦೩-೩: ೧೫೦೭); ಗಂಡನಿಗೋದು ಎಂಜಲು ತೊಳೆಯುವ ಕೆಲಸವಿದ್ದುಕೊಂಡೇ ಇಷ್ಟು ಆಡುತ್ತಾಳೆ. ಇನ್ನು ಅವನೇನಾದರೂ ಮಾಮಲೆದಾರನಾಗಿದ್ದರೆ ಇನ್ನೆಷ್ಟು ಮಾಡುತ್ತಿದ್ದಳೊ ? (ಕಕಂಗ. ೦೨). **ಮಾಮ್ಲೆದಾರ :** ನಾ ಈವತ್ತ ಕಚೇರಿಗೆ ಬರೂದುಲ್ಲ ಅಂತ ಮಾಮ್ಲೆದಾರ ಸಾಹೇಬರಿಗೆ ಹೇಳಿ ಬಾರೋ (ಧಪಂತಿ. ೨೩).[ ← ಮರಾ. ಮಾಮಲೇದಾರ್]

**ಮಾಮಸಕ** (ನಾ). ೧. ಅತಿಯಾದ ಸಿಟ್ಟು,–ರೋಷ : ಭಗಿಲು ಭುಗಿಲೆನುತೆ ಮಾಮಸಕದಿಂ ಮಸಗಿ ತೊನೆದು ಬಸುಬಿಂ ಹೊಸದು ಹೊಯ್ದು ನೆಲನಂ ತಿರುಗಿ (ತಿರುಕ. ರೇ. ೦೬-೩); ಮಾಮಸಕದಿನೆಬ್ಬಿಂದು ರಕ್ಕಸಂ ಬಿಲ್ಲಿಡಿಯುಂ ಪೊಸ ನೆತ್ತರ ಪೂರಂಗಳ್ ಮಸಗುವಿನಂ ಕುಸುರಿದಜಿದು ಕೆಡಪಿದನಾಗಳ್ (ಉದ್ಭಟ. ೯-೭೦); ಮಾಮಸಕಂ ನಿಷ್ಠುರವಚನವೆಂಬಿವಂ ಪರಿಹರಿಸುವುದು (ಶೀತಿಮಂ. II. ೦೩). ೨. (ಅಧಿಕವಾದ) ವಿಜೃಂಭಣೆ,– ಸಂಭ್ರಮ,– ಸಡಗರ : "ಸಂಭ್ರಮವೇ ಮಾಮಸಕಂ" (ಶಕುಪಿ. ೯೦); ಎಡವರಿಯುವಡಿಯಿಡುವ ಮಾಮಸಕಕಂಜಿ ಮಣಿಕುಟ್ಟಿಮತಳದ ಪೂವಲಿಯುಂ ಬಿಟ್ಟು ಪಾಱುವ ಮಧುವಿಹಂಗಗಳ ಹುಂಕಾರದೊಳಂ (ಶಾಬಂಘ. ೬೭); ರಥದ ಕೂಡೆ ಮಾಮಸಕದಿಂ ಕುಣಿವ ಕುದುರೆಗಳ ಬಳಗದಿ ಭೂಮಿ ಬೆಸಲಾದುದೆಂಬಂತೆ ಪರಿಜನದ ತಿಂತಿಣಿಯೊಳಿ ದಿಗೊರ್ಂಡರುವಿನಪನನು (ಪಕಾ. ೦೯-೨೯); ಹೊಸ ಮಾಗಿ ಮದವಾಜಿ ಮಾಮಸಕುರಂದೋಜಿ . . . ವಿರಹಿಗಳ ಬಾಯಾಜಿ ಮಾಮಸಕದಿಂ ಬಂದನು ವಸಂತನು (ಸಿದ್ಧರಾ. ೪-೬೭).

**ಮಾಮಸಕಂಮಸಗು, ಮಾಮಸಮಸಗು = ಅತಿಯಾದ ಕೋಪ** ದಿಂದ ಕೆರಳು : ಮುರಾಂತಕನಂತಕನಂತೆ ಮಾಮಸಕಂ ಮಸಗಿ ದುರ್ಯೋಧನನನಿಂತೆಂದಂ (ಕಂಪಹಾ. ೯-೧೯ ವ); ಕುರುಕುಲಕೃತಾಂತಕನಂತಕನಂತೆ ಮಾಮಸಕಂ ಮಸಗಿ ಪ್ರಳಯಕಲ್ಪಸಂಕಲ್ಪಂಗೆಯ್ದು (ಗದಾಯು. ೬-೦೯ ವ); ಮನಮಂ ಮುನಿಸಿಂ ಮುಸುಂಕಿ ಮಾಮಸ ಮಸಗಿ . . . ಕಳವಳಿಸಿ ಪೋಪ ಕಿಳಿದಿಯು ಬಬಿಸಂದು (ಲೀಲಾವ. ೦೯-೩೩ ವ); ದೆಸೆದೆಸೆಗೆ ಹರಿಹರಿದು ಮಾಮಸ ಮಸಗಿ ಬಾದಣಗೊರೆದು ಕಡಹುವ ವಿಷಮವೀರರು ಫಾಡಿಸಿತು ಡೊಂಕಣೆಯ ತುದಿಗಳಲಿ (ಕುವ್ಯಾಭಾ. ೪-೪೩). [ಮಾ₄ + ಮಸಕ₁]

**ಮಾಮಸಕಂಗೊಳ್** (ಕ್ರಿ). ಅತಿಯಾದ ಕೋಪವನ್ನು ತಾಳು ; ಹೆಚ್ಚಾದ ರೋಷದಿಂದ ಕೆರಳು : ದೆಸೆಯಂ ವಿದ್ಗಾಂಶುಜಾಲಂ ಬೆಳಗೆ . . . ದಿಗ್ಜೇತಂಡಮಂ ಡಿಂಡಿಮರುತಿ ಚಕಿತಂ ಮಾಡಿ ದೃಪ್ತದ್ವಿಳಂ ಮಾಮಸಕಂಗೊಂಡತ್ತ ಬಂದಂ ಬಗೆಯದೆ ಪೃಥಿವೀಪಾಲನುಗ್ರಾಜಿರೋಲಂ (ಕಂಪ್ರಪು. ೦೦-೩೯). [ಮಾಮಸಕ + ಕೊಳ್]

**ಮಾಮಸಗು** (ಕ್ರಿ). ೧ = ಮಾಮಸಕಂಗೊಳ್ : ಮುಸಲ ಮುಸುಂಡಿ . . . ಮುದ್ಗರಗಳ ವಿಸರದಿಂ ಹೊಯ್ದಿಜಿದಾಡಿದರಂದು ಮಾಮಸಗಿ ಮಹಾರಾವುತರು (ಕುಬಾಹಾಂ. ೦೩-೯೯). ೨. ವಿಜೃಂಭಿಸು ; ಸಂಭ್ರಮಿಸು: ಉತ್ಸಾಹದಿಂದ ಕೂಡು : ಮುಸುಜಿದ ಕುಳಿರೊಳ್ ದೆಸೆಯಾಗಸವಿಳೆ ಬೆಟ್ಟಿಡವಿಯೆಂಬಿವೆಂತಾನುಂ ಕಾಣಿಸಲಾರ್ತುವಿಲ್ಲಮೆನೆ ಮಾಮಸಗಿರ್ದುದು ಮಾಗಿ ಮಾಗೆಸಕೆವೆಸರಿಳೆಯೊಳ್ (ಕಣಾಪು. ೬೩ ಶ್ರಯೋ). ೩. ಹೆಚ್ಚಾದ ಕಾಂತಿಯನ್ನು ಹೊಂದು ; ಪ್ರಕಾಶಿಸು: ಕಜಿದೊಂದುದ ಚಂದುಮಟ್ಟು ಮಾಮಸಗಿತೊ ಗಂಡುಮೇಳಗರ ಕೈ ಬೆಮರೊಂದದ ಸೂಳೆಮೇಳಮೇಂ (ಶಕಪಿ. ೬-೦೩೩). [ಮಾ₄ + ಮಸಗು]

**ಮಾಮಳೆ** (ನಾ). ಜೋರಾಗಿ ಬೀಳುವ ಮಳೆ; ಭಾರಿಮಳೆ: ಮಾಮಳೆ ಸಮುದ್ರದೊಳ್ ಕಜಿದಂದವೈಸೆ ನಿಮ್ಮಾ ಮನಃಪ್ರೀತಿ ಕೈಗೂಡು ವಂತೊರೆವೆನಾ ಶ್ರೀಮಹಾನಂದಿಯು ಮಹಾತ್ಮೆಯ ಕಥಾಕುತೂಹಲವನಾ ಲಿಪುದು (ಪಂದಿವಾ. ೨-೩೩). [ಮಾ₄ + ಮಳೆ (< ಮಟೆ₁)]

**ಮಾಮಾ₁** 'ಮಾ₁' ಪರಾ.

**ಮಾಮಾ₂** 'ಮಾ₄' ಪರಾ.

**ಮಾಮಾಯೆ** (ನಾ). ಒಂದು ವಸ್ತುವು ಮತ್ತೊಂದರಂತೆ ತೋರುವುದು : ಅವಿದ್ಯೆ: ಮಹಾಮಾಯೆ : ನೀಸೊಲವಿನ ಸಾಮ್ರಾಟ, ಮಾಮಾಯೆಯು ಕಣ್ಕಟ್ಟ (ಶಂಕಪ. ೨೩-೨೦). [ಮಾ₄ + ಮಾಯೆ]

**ಮಾಮಾರಿ** (ನಾ). ದುರ್ಗೆಯ ಒಂದು ಅವತಾರ : ಮಹಾಮಾರಿ : ಆ ರೂಪಿನಿ ಮೃತ್ಯುರೂಪಿನಿಂ ಕಾಲನಾ ರೂಪಿನಿಂ ಕೃತಾಂತಾಖ್ಯನಲ್ಲಿ ಮಾರಿಯಲ್ಲತ್ಯುಗ್ರಮಾರಿಯಂತಲ್ಲಿ ಮಾಮಾರಿಯಾ ಚಿತ್ರಗುಪ್ತಾಧಿಕರಣಂ (ಸಾಪಂಕ. ೩-೦೦). [ಮಾ₄ + ಮಾರಿ₂]

**ಮಾಮಿ** (ನಾ). ಸೋದರಮಾವನ ಪತ್ನಿ: ಅತ್ತೆ : ಈವರೆಗೆ ಮಾಮಾ ಮತ್ತು ಮಾಮಿ ತನ್ನನ್ನು ಮಗನೆಂದೇ ನೋಡಿರಬಹುದೆಂಬ ವಿಚಾರದಿಂದ ಅವನು ಪುಳಕಿತನಾದನು (ಗಂಪಹಾಯಿ. ೦೨೩). [ದೇ. ತಮಿ. ತುಳು. ಹರ್ಜಿ. ಮಾಮಿ. / ಮರಾ. ಮಾಮಿ, ಮಾಮೀ ; ಹಿಂ. ಮಾಮೀ. ಪ್ರಾ. ಮಾಮಿಯಾ, ಮಾಮೀ. / ಸಂ. ಮಾಮೀ]

**ಮಾಮಿಡಿ** (ನಾ). ೧. ಮಾವಿನ ಹೀಚು : ಮಾವಿನ ಕಸುಗಾಯಿ : ನಡೆಗಲಿಸುತ್ತುಮಂಚೆಗಳನೋದಿಸುತಂ ಗಿಳಿಯಂ ಪಿಕಕ್ಕೆ ಮಾಮಿಡಿಗಳ

ನಿಕ್ಕುತುಂ . . . ನಿರಂತರಂ ತೊಲಗದಿರ್ಪುದು ಪೌರಪಿಲಾಸಿನೀಜನಂ (ಮಲ್ಲಿ. ೨-೩೯); ಅಳಿಗಲಗೋಂಚಲ ಗಿಳಿಗೆ ಮಾಮಿಡಿಗಳ . . . ಈವುತಾ ಬನದೊಳಗಿಹತಂಬುಜಾಕ್ಷಿಯರು (ಕುಂಠಾಶಾಂ. ೪-೭೩). ೨. (ಉಪ್ಪಿನ ಕಾಯಿಗೆ ಬಳಸುವ) ಚಿಕ್ಕಗಾತ್ರದ ಒಂದುಬಗೆಯ ಮಾವಿನ ಕಾಯಿ : ಮಾಗುಳಿವೇರ್ಪೊಳೆಯಲ್ಲವೇಲಿ ಕಮ್ಮಿಪ್ಪ ಸುಭದ್ರೆ ಮಾಮಿಡಿ . . . ಅರೆಮಾದುಫಲಂಗಳಾದಿಯಾದುಪ್ಪಿನಕಾಯ್ಗಳಂ ಮಗ ಮಿಗಿಪ್ಪ ವನಿಕ್ಕಿದನಪ್ಪ ಪತ್ರದೊಳ್ (ಲೀಲಾವ. ೫-೭೩).

[ಮಾ₃ (< ಮಾವು) + ಮಿಡಿ₂]

**ಮಾಮಿಲತ್ತು** 'ಮಾಮಲತಿ' ನೋ.

**ಮಾಮುಗುಳ್** (ನಾ). ಮಾವಿನ ಮೊಗ್ಗು : ಮಾಮರಂ. ಮಾಮಿಡಿ. ಮಾಮುಗುಳ್ (ಶಬ್ದಾನು. ೩೩೨ ಶ್ರ ಜೋ). [ಮಾ₃ (< ಮಾವು) + ಮುಗುಳ್₂]

**ಮಾಮೂಲ್** ' ಮಾಮೂಲು ' ನೋ.

**ಮಾಮೂಲಿ** ' ಮಾಮೂಲು ' ನೋ.

**ಮಾಮೂಲು**, ಮಾಮೂಲ್, ಮಾಮೂಲಿ (ನಾ). ೧. ರೂಢಿ : ಅಭ್ಯಾಸ : ರಾತ್ರಿ ಕೆಲಸವೆಲ್ಲಾ ಮುಗಿದ ಮೇಲೆ ಅಣ್ಣತಂಗಿಯರಲ್ಲಿ ಮಾಮೂಲಿನಂತೆ ಮಾತಿಗಾರಂಭವಾಯಿತು (ಸಾವಿರ. ೧೫) ; ಪೈಪೋಟಿಯ ಕಾಲದಲ್ಲಿ ಹಾಲಿಗೆ ನೀರನ್ನು ಸೇರಿಸುವುದು, ಗೋಧಿಯ ಹಿಟ್ಟಿಗೆ ಬೆರಕೆ ಮಾಡುವುದು—ಇವು ಮಾಮೂಲಾಗಿ ಬಿಟ್ಟವು (ಶಿಲ್ಪನಾ. ೧೭೦). ೨. ಸಂಪ್ರದಾಯ ; ಪರಿಪಾಠ : ಈಗ ತತ್ತ್ವರಕ್ಷೆಯು ಬೆಳಕಿಲ್ಲದೆ ಮಾಮೂಲುಗಳ ಕುರುಡುಕತ್ತಲಲ್ಲಿ ಮುಳುಗಿವೆ (ಶಿಕ್ಷದ. ೭೫೦) ; ಸಂತೋಷದಿಂದ ನಗುವುದೂ ಮಾಮೂಲು ಮೀರಲಾರದೆ ವಿಸ(ಹಾ) ನಿಜವಾದ ಸನ್ನಿವೇಶದಿಂದ ಇರಲಿಲ್ಲ (ಹುಚ್ಚಿಹ. ೭). ೩. ರೀತಿ ; ರಿವಾಜು : ಕ್ರಮ : ಈ ವಾಯಿದೆ ಕಳೆದ ನಂತರ ಮಾಮೂಲಾಗಿ ಕೊಡಬೇಕಾದ ಗೇಣಿಯನ್ನು ಕೊಡಬೇಕಾಗುತ್ತದೆ (ಶ್ರವಾ. II, ೯೭೭). ೪. ದಿನನಿತ್ಯದ್ದು : ನಿಯತವಾದುದು : ಶ್ರೀ ಮಹಾಬಳೇಶ್ವರದೇವರ ಸಂನಿಧಿಯ ಬ್ರಾಹ್ಮಣರಿಂಗೂ ಮಾಮೂಲಿನಂತೆ ಶ್ರೀವೀರಕಾವದೇವರಸರು ಆಚಂದ್ರಾರ್ಕವಾಗಿ ಮಾಲೂರ ಗ್ರಾಮಾನುಮಾತ್ರ ದಿಂದಾ ರಾಜರು ಕೊಟ್ಟರು (ಎಇ. XXVII. ೧೭೨-೮೫: 1256) ; ಮಾಮೂಲಾಗಿ ಈ ಮನೆಗೆ ಇವಳದೇ ಹಾಲು ಸಪ್ಲೈ (ದೂಪಸಂ. ೨೦). ೫. ಲಂಚ : ಹೊಸದಾಗಿ ನೌಕರಿ ಹಿಡಿಯಲುಬರುವವರೆಲ್ಲಾ ಹೆಡ್‌ಕ್ಲಾರ್ಕರಿಗೆ ಇಪ್ಪತ್ತೈದು ರೂಪಾಯಿ ' ಮಾಮೂಲು ' ಕೊಡಬೇಕಾಗುತ್ತದೆ (ನಾಘೋಲೀ. ೩೦) ; ತಾವು ಬಂದಾ ಲಾಗಾಯಿತು ಅವನಿಗೆ ಆಳುಕಾಳುಗಳ ಸಂಬಳದಲ್ಲಿ ಬರುತ್ತಾಯಿದ್ದ ಒಂದು ಭಾಗ ಮಾಮೂಲು ಬಂದಾಗಿ ಹೋಗಿತ್ತು (ಸಾಹೇಬ್. ೨೯೨); ಬರೆದ ಪತ್ರ ರಿಜಿಸ್ಟರಾಗಬೇಕಾದರೆ ' ಆಫೀಸಿಗೆ ' ಮಾಮೂಲು ಸಲ್ಲಿಸಬೇಕು (ಗಂನಾಗ. ೯೦). **ಮಾಮೂಲ್** : ೪. ರಾತ್ರಿಯೂಟದ ನಂತರ ಒಂದು ಸುತ್ತು ನಡೆದಾಡಿ ಬರುವುದು ಅವರ ಮಾಮೂಲ್ ಪರಿಪಾಠ (ಕೂ೨). **ಮಾಮೂಲಿ** : ೧. ಇವರ ಮಾಮೂಲಿಯ ಮಾತುಗಾರಿಕೆಯು, ಕತೆಗಾರನ ಸರಸತೆಯನ್ನು ನಗೆಯಾಡುವಂತೆ, ತಾತ್ತ್ವಿಕನ ನೀರಸ-ವಿರಸಗಳ ಮಾರ್ಗವಾಗಿ ರಸಪರ್ಯ ಸತ್ಯಲೋಕದ ಶುಭ್ರತೆಯನ್ನು ಸೇರುವುದು (ವಿಚಾಮಂ. ೯೯).

[ ← ಅರ. ಮಅಮೂಲ್ ; ಹಿಂ. ಮಾಮೂಲ್, ಮಾಮೂಲೀ : ಮರಾ. ಮಾಮೂಲ್, ಮಾಮುಲೀ]

**ಮಾಮ್ಲೆ** 'ಮಾಮಲೆ' ನೋ.

**ಮಾಮ್ಲೆದಾರ** ' ಮಾಮಲೇದಾರ ' ನೋ.

**ಮಾಯ್**, ಮಾಯು₁ (ಕ್ರಿ). ಮಾಯ್ದು (ಭೂತಕೃ), ಮಾದು₁, ಮಾಯ್ದು (ಭೂತನ್ಯೂ). ೧. ಕ್ಷಯಿಸು ; ಕ್ಷೀಣಿಸು : ತಪ್ತಶೇಷವಾಗಿ ಮಾಯ್ದಿನ್ನ ಶರೀರಮಂ ಪ್ರಿಯತಮಶರೀರಸಂಯೋಗಾಹ್ಲಾದದಿ ನಾಜಿಸಿದಪ್ಪೆಂ (ಕಾದಂಬ. ೫೯೭); ಸುಡದೆ ಕಸಲ್ದ ಕಿಚ್ಚಿನೊಡನಾಡಿದ ತಂಬೆಲರಾತಪಂಗಳಂ ಕುಡಿದ ಸರೋರುಹಂ ಸುಡದೆ . . . ಹಿಮವುಂಡು ಬಾಟ್ಟಿ ತಣ್ಮಡುವಿನ ಪೂವೆ ಸುಟ್ಟಪುದು ಮಾಯ್ದು ವಿಯೋಗಿಗಳೆಂತು ಬರ್ದಪರ್ (ಅರ್ಧನೇ. ೪-೫೨). ೨. ಕಾಣೆಯಾಗು : ಮರೆಯಾಗು : ಮುಗುಳಂ ಮಾದ [ಶಾಶಾಂ. ಮ್ದು]ಲರಾಯ್ತು ಮೊಯ್ಕುರಿಸಿನಂ ಕಂಪೋಡಿತೀ ಬೆಂದ ದೀಪಿಕೆಯುಂ ಕರ್ಗಾಡಿಪಟ್ಟುದೆನ್ನಿನಿಯನಿನ್ನುಂ ಬಾರನೇಕೆಂದು . . . ಸುಯ್ದುಂಬಿಕಾಂಬಿಕಣಾನೀಕಮನಿಕ್ಕಿದಳ್ (ಲೀಲಾವ. ೨-೫೪). ೩. ಕಾಂತಿಗುಂದು : ಬಣ್ಣಗಡು : ಮಂಕಾಗು : (೯). ೪. ಕಳೆದು ಹೋಗು : ಇಲ್ಲವಾಗು : ವಿನಗರಸುತನ ಮಾಯ್ದು [ಶಾಶಾಂ. ಮಾದು] ಹೋಗಿ ವಿಶ್ವಾಮಿತ್ರಮುನಿಗಾದುದು (ಹರಿಶ್ಚ. ೮-೭೩). ೫. (ಗಾಯ. ಹುಣ್ಣು. ಮುಂತಾದುವು) ಗುಣವಾಗು ; ವಾಸಿಯಾಗು : ಕೆಲವು ದಿವಸಕ್ಕೆ ಪುಣ್ಣೆಲ್ಲಂ ಮಾಯ್ದು ಲೇಸಪ್ಪುದುಂ (ಧರ್ಮಾಮೃ. ೧೨-೫೫); ಅದೇನು ದೊಡ್ಡ ಗಾಯವಲ್ಲ. ತನ್ನ ತಾನೇ ಮಾಯ್ದು ಹೋಗುತ್ತದೆ (ಮಣ್ಣಿಮ. ೧೭೨). ೬. ಸಾಯು ; ಮರಣಹೊಂದು : ನೆಟ್ಟನಿನ್ತೀಳಾಚಾರ್ಯ್ಯವಾಮುನೀನ್ದ್ರರಾದರದಜೀಂನ್ವಾಶ್ಚರ್ಯ್ಯವೋರುಜಗಂ ಒನ್ದು ತಿಂಗಳ್ವಾನಮಂ ಭಾವಿಸಿ ಸಮಾಧಿಮರಣದಿನ್ದ ಮಾಯ್ದು ನೋನ್ತು ಸಗತಿಗೆ ಸನ್ದರ್ (ಎಕ. XIV. ಎಡತೊ. ೮೪-೧೫ ; 910). ೭. ಕೆಡು : ಹಾಳಾಗು ; ನಾಶವಾಗು : ಬಹುವರ್ಣ್ಣವಾಜಿರಾಜಿಗಳುಮನೆಯ್ದೆ ನೋಡಿ ಮನಮಿಕ್ಕಿ ಗಟೀಲ್ಲನೆ ಸತ್ತು ಮಾಯ್ದ ಲೋಭಿಗಳ ಪಪಣ್ಗೊಳಲ್ (ಎಕ. VII. ಶಿಕಾ. ೦೫೦-೩೪; 1047). ೮. ದುಷ್ಟತನವನ್ನು ಹೊಂದಿರು : ತೆಜಪನೆ ಪಾರ್ದಿರ್ಪಂ ಮಾಯ್ದುಜಗುಲಿ ಜವಂ (ಆದಿಪು. ೪-೭೭); ಜನಪದವೆನಿತೊಳವನಿತಜಿಳೊಳೆನಿತೂರೊಳವನಿತುಮಂ ಪಲರ್ಮೆಯುಮಿಮಾ ತಿಟ್ಟನೆ ತಿರಿದು ಮಾಯ್ದು ಡೊಂಬನ ಮನೆಯೊಳ್ ಮಾಲುಮಾಲನೆ ಮುಜುಗಿ ನಮೆಯುತ್ತಿರ್ಕುಂ (ಸುಕುಮಾ. ೫-೧೩); ಮಾಯ್ದ ವಿಧಾತ್ರನೆನ್ನಣುಗಿನಗ್ರುತನೂಜನಾಂತಗಲ್ಚಿ ಕೊಂಡುಯ್ದಂ (ಚಂದ್ರಪ್ರ. ೫-೧೦).

**ಮಾಯು**₁ : ೩. ಕಂಪಿನಲಿ ಸಾಮಾನ್ಯವಾದಡೆ . . . ಇಂಪನೊಡಲಂಗೀಯದಿರ್ದಡೆ ಕೆಂಪು ಮಾದಡೆ ಗಂಧಕಾಂತಿಯು ಸೊಂಪು ಬಜಿತಡೆ ಬಳಿಕಲಾ ವಿಸಗೀಶನೊಡನಂಕ (ಬಸವ. ೨೭-೫). ೪. ಒಳಗೊಂದು ಅನಿಮಿಷ ಲಿಂಗವ ಕಂಡು ಎನ್ನ ಮನೋಪುಷ್ಪದಲ್ಲಿ ಪೂಜೆಯ ಮಾಡಿದಡೆ ನಾಚಿಕೆ ಮಾದು ನಿಸ್ಸಂದೇಹಿಯಾದೆನು (ಅಪಚಂ. ೯೪-೪೦೭). ೫. ಕಂಚಿನ ಹರಿವಾಣದಲ್ಲಿ ಹಾಕಿ ತಾಮ್ರದ ಚೊಂಬಿನಿಂದ ಮರ್ದಿಸಿ ಆವೇಲಿ ಸುಣ್ಣ ಮವಡಿಗೆ ಹಾಕಿ ಹೋಂ [ಮೊ]ಗೆ ಹತ್ತಿಸುವದು. ಕಾಲುಮಂಡಲದೊಳಗೆ ಯಂತಾದ್ದು ಮಾಯುವದು (ಕೌತುಕಂ. ೩೪-೭) ; ವಿಜಯ ದುರ್ಯ್ಯೋವದ ದಂಡು ಹಿಂದೆಗೆಯಿತು ಕಲೆಯುಳಿಯಿತು ಗಾಯ ಮಾದು (ಇಂಚಾಶ. ೩೨-೯೭); ಗಾಯ ಬೇಗ ಮಾಯುವುದಿಲ್ಲ (ನವಜೀ. ೦೮೫). ೯. ಪರಿಹಾರವಾಗು : ನಿವಾರಣೆಯಾಗು : ವಿಂಧ್ಯವಡವಿಯೊಳನಂತಕೋಟಿಮೃಗಂಗಳಿರ್ದಪವವೆಲ್ಲಮಂ ಕೊಂದಾ ನೆತ್ತರಿಂ ಜೇಡಕುಳಿಯಂ ಮಾಡಿಯಲ್ಲಿ ನೀಡುಮೋಲಾಡಿ ದೇಹದ ದಾಹಂ ಮಾದು ಸುಖಿಮಕ್ಕು (ಪುಣ್ಯಾಸ್ರ. ೯-೩೭ ವ) : ಶಿಶುವಿನ ವೇದನೆ ಮಾಯಿತ್ತು ನೋಡಾ (ಸಿದ್ಧೇವ. ೫೦-೦೯೫). ೧೦. ಮುಗಿ: ತೀರು : ಮುಂದಣ ಕಾಳಗದ ಕರ್ಣಾಮೃತದ ಮಳೆಗಾಲ ಮಾದು ವಿಲೋಚನದ ಮಳೆಗಾಲವಾಯ್ತು (ಕುಮಾ.ಭ. ೨೭-೦). ೧೧. ಪಕ್ವವಾಗು: ಕಳಿ : ಮಾದಿಹ ಬಾಳೆ ಕಾಬಾಳೆ ಮೋದ ಸಕ್ಕರೆ ಮಾವು ಸೀಜಾಲವಣ್ಗಳ ಯಾದವರಿತ್ತರಾಳ್ವನಿಗೆ (ಮೋಹತ. ೧೯ ೫೫). [ದೇ. ॥ ತಮಿ. ಪರ್ಜಿ. ಗೊಂಡಿ. ಮಾಯ್ ; ಮಲ. ತುಳು. ತೆಲು. ಮಾಯು ]

**ಮಾಯು** (ನಾ). ೧. ಗಾರುಡಿ ; ಇಂದ್ರಜಾಲ ; ಕಣ್ಕಟ್ಟು : ಮಾಯುಮನೆ ಬೀಸಿ ಪೆಜಿರನುಜಾಯದೆ ತಕ್ಕಿಕ್ಕಿ ದೇವಕಾರ್ಯದೊಳನಿಸುಂ ನೋಯದೆ

ಸ್ತುತಿಯಿಸಿಪ ಸವನರೂಪಮಾಯುಮನೀ ನಿನ್ನೊಳ್ ಕಣ್ಣ ಭಾವಿಸಿ ನೋಡಾ (ಧರ್ಮಾಮೃ. ೦-೦೦೨); ಮೃದುತಳಕಕಾತಿಯಿಂ ವಿಳರ್ವ ಪೂಗುಡಿ ಕಂದಳಿರ್ದೋಂಗಲಂತೆ ತೋಜಿದೊಡದನೊಲ್ಲದೆ . . . ಮಾಮರನಲ್ಲಿದೊಂದು ಮಾಯದ ಮರ ನೆಂದು ಸಾರ್ದಳತಿಮುಗ್ಧೆ ಕುಜಾಂತರಮಂ ವನಾಂತದೊಳ್ (ಚಂದ್ರಕೆ. ೬-೦೦೭). ೨. ಮಿಥ್ಯೆ : ಭ್ರಾಂತಿ ; ತೋರಿಕೆ : ಭ್ರಮೆ : ಬಂದಪೆ ನೆಂದಜಿಯಲಿಕ್ಕಿಲ್ಲಾಗಿ ಸಂದೇಹ ಬಿಡದು ಮುಂದುಗಾಣದು ಲೋಕ ಬೆಂದ ಮಾಯಕ್ಕಂಜಿ ನಿಮ್ಮ ಮಜಿಹೊಕ್ಕೆ (ಬಸವ. ೯೨); ಇದು ಪಶುಪತಿಯು ಮಾಡಿದ ಮಾಯದ ವಿಧಿಯೆಂದು ತಿಳಿಯದೆ ಹುಸಿಗೆಟ್ಟು ಹೋಯಿತ್ತು ನೋಡಾ ಮೂಜುಗವೆಲ್ಲ (ಅಲಂಪ. ೬-೩). ೩. ಮೋಸ ; ವಂಚನೆ : ಕಪಟ : ಮಾಯದ ಟಕ್ಕಿನ . . . ಕಪಟೋಪಾಯದ ಕಣಿಗಳ್ ಸಂದ ಸ್ತ್ರೀಯರ್ಕಳಿವರ್ ಸರ್ವಜನವಂಚಕಿಯರ್ (ಧರ್ಮಾಮೃ. ೬-೦೫೬) : ಮಾಯದಬಲಿಯರು ಕಾಣುತ್ತ ಮರ್ಖ ಭಾವಧಟರಾಯ . . . ಎಂದು ಕೀರ್ತಿಸಿ ಗಾಣಾಯಕಿಯದಿರ್ದು ದಂಡಿಗೆವಿಡಿದು ಪೊಡವಟ್ಟು ಹಾಡ ಲುದ್ಯೋಗಿಸಿದರು (ಪಕಾ. ೬-೩) ; ಮಾಯವನನುಗೊಳಿಸದೆ ಮೈ ಮಜ ಸದೆ ಕಾಯಮನೋವಚನಗಳ ಆಯಸದಿಂದಳವಳಿಯದೆ ಪತಿಯನುಪಾಯ ದಿಂದುಪಚರಿಸುವುದು (ಷಡಕ್ಷ. ೪-೯). ೪. ಪ್ರೀತಿ ; ವ್ಯಾಮೋಹ : ಬಾಯೊಳಗೆ ಬ್ರಹ್ಮಾಂಡಕೋಟಿಯ ದಾಯವನು ತೋರಿಸಿಯು ತಾಯಿಗೆ ಮಾಯದಲಿ ಮಗುವಾಗಿ (ಗದಾ. ೩-೨೯). ೫. ಗಾರುಡಿಗಾರ : ಐಂದ್ರಜಾಲಿಕ : ಇನ್ನೇನಹುದೆಂಬೆ ಇನ್ನೇನುವಲ್ಲೆಂಬೆ ಎಲ್ಲಾ ಮಾಯದ ನೀನಾಗಿ ಹಿರಿದಹ ಗಿರಿಯ ಹತ್ತಿ ಬರಿದ ಕಜಿದವನಂತೆ ಒಂದ ಬಿಟ್ಟೊಂದು ಹಿಡಿವಡೆ ಅಲ್ಲಿಯೇ ಚೆಂದ (ಪೋಲವಾ. ೨-೯). ೬. ಲಕ್ಷ್ಮಿ. ೭. ದುರ್ಗೆ.

ಮಟಮಾಯ, ಮಟಾಮಾಯ, ಮಾಟಮಾಯ (ದ್ವಿರುಕ್ತಿ) : ೧. ಇದಕ್ಕಿದ್ದಂತೆ ಪೂರ್ತಿಯಾಗಿ ಅದೃಶ್ಯವಾಗುವಿಕೆ.– ಕಾಣದಂತಾಗು ವುದು : ಗಾಳಿಯೋ ಮಟಮಾಯ ಮಾತಾಡ ಮಳೆರಾಯ (ಅರಳು. ೪೯೯-೪) ; ಮಳೆಯಿರದಿರೆ ಎಲ್ಲವು ಮಟಮಾಯ (ಚುಟುಕುಶಿ. ೬೦-೦೯) : ಆ ಗಂಡ ಗಾಬರಿ ಆಗಿ ಪರಾರಿ, ಮಟಾಮಾಯ (ಪತರಾ. ೧. ೪೪೮). ೨. ಅಸ್ಪಷ್ಟವಾದುದು : ಆ ಅಟ್ಟಂಬಿಟ್ಟಂ ಅರಣ್ಯದ ನಟ್ಟನಡುವೆ ಬೆಟ್ಟ ಗೋಟೆಯೊಂದನ್ನು ಕಟ್ಟಿದ್ದು . . . ಅದರ ಸುತ್ತಿನದೆಲ್ಲ ಮಾಟಮಾಯ ನಾಡು (ಬಣಾಮಂ. ೬೯). ☞ ಇವು 'ಕಟ್ಟಕಡೆ', 'ಬಟ್ಟಬಯಲ್' ಎಂಬುವುಗಳ ರೂಪಸಾಮ್ಯದಿಂದ ಮಾಡಿಕೊಂಡಿರುವ ರೂಪಗಳು. ಮಟಮಾಯಾಗೆಯ್ = ಇದ್ದಕ್ಕಿದ್ದಂತೆ ಅದೃಶ್ಯಗೊಳಿಸು ; ಮಂಗ ಮಾಯಮಾಡು : ಮುದ್ದುಮುಖಾನ್ವಿತ ಶಿಶು ನಿನ್ನ ಮಗ್ಗುಲೊಳಿದ್ದುದ ಮಟಮಾಯಗೆಯ್ದು ಕದ್ದು ಕೊಂಡುಯ್ದು ಶಂಬರ ಶರಧಿಯೊಳಿಡೆ ಬಿದ್ದುದು ಮೀನ ಬಾಯೊಳಗೆ (ಕೋಪಕ. ೦೪-೪೦). ಮಟಮಾಯವಾಗು = ಇದ್ದಕ್ಕಿದ್ದಂತೆ ಅದೃಶ್ಯವಾಗು.– ಕಾಣೆಯಾಗು : ಕಟಕಟ ಪುಟ್ಟಿ ದಾಕ್ಷಣ ಶಿಶು ನೋಡಲ್ಕೆ ಮಟಮಾಯವಾದುದಾಶ್ಚರ್ಯ (ಕೋಪಕ. ೩-೦): ಶ್ರೀಪಾದನೂ ಎಷ್ಟೂ ತಿಳಿಯದಂತೆ ಮಟಮಾಯವಾಗಿದ್ದನು (ಕವಕ. ೪೦): ನನ್ನ ಕೈ ಪಕ್ಕಿ ಮಟಮಾಯವಾಗಿ ನಿನ್ನ ತೊಡೆಯಲ್ಲಿತ್ತು ನೀನೆ ತಾಯಾಗಿ (ಗಂಗಾತ. ೪೦-೯). ಮಾಯಮಾಗು, ಮಾಯವಾಗು = ೧. ಇಲ್ಲವಾಗು; ನಾಶವಾಗು : ದನುಜನ ಮಾಯೆಯೊಂದಿನಿಸು ಬೇಗದಿನೊರ್ವೆಯೆ ಮಾಯಮಾಗೆ ಚೇತನವಡೆದು . . . ತಜ್ಞನವನಿತಂ ಮನಂಬುತು ವಿಂದ್ರ್ಯವು ನಿಟ್ಟಿಸಲಾಱದೇನುಮಂ (ಚಂದ್ರಕೆ. ೩-೬). ೨. ಸಾಯು : ಮರಣಹೊಂದು : ಸಿಡಿಲಂತೊರ್ವೆಯೆ ಪೊಯ್ಯೆ ಪೊಯ್ದು ಭರದಿಂ ದೊಂದಾನೆ ತೋಲ್ ನೆತ್ತರೆಲ್ಲಪಗೊಂದೊಂದಜಿಹೊಳೊಂದುವೊಂದದೆ ಗದಾನಿರ್ಘಾತದಿಂ ಮಾಯಮಾದೊಡೆ (ಚಂಪಾ. ೧೦-೦೦೩). ೩. ಕಾಣೆ ಯಾಗು ; ಅದೃಶ್ಯವಾಗು : ಮರೆಯಾಗು : ನಿರುತ್ತರವೆರೆದೆನಿನುತ್ತ ಮಾಯುವಸರದೊಳಾತನು ಮಾಯವಾಗಲು (ಬಸವ. ೩೩-೦೮): ನರ್ಪೇಂದ್ರ ಯಕೆ ಮೋಹದ ಶಿಶುವದೊಂದೆ ಮುದ್ದಿನ ವಿಷಯಮಾಘವು ಮಾಯ ವಾದತ್ತಳಿದುದನಿತುಮಂ ಪ್ರಜ್ಞೆಯಿಂ ಜಗುಳ್ದು ಲಯಮೊಂದಿ (ಶ್ರೀರಾಮಪ. ೦೭-೯೯೩). ಮಾಯ ಮಾಡು = ನೀಗು : ಇಲ್ಲವಾಗಿಸು : ಈಗ ಬಂದಿರುವ ಹೊಸ ಮಾತ್ರೆ ತಲೆನೋವನ್ನು ಒಂದೇ ನಿಮಿಷಕ್ಕೆ ಮಾಯ ಮಾಡಿಬಿಡುತ್ತದೆ (ಆಧು). [ಸಂ. ಮಾಯಾ]

ಮಾಯಂಬೋಗು (ಕ್ರಿ). ಕಾಣೆಯಾಗು : ಇಲ್ಲವಾಗು : ಪಾಲ್ಗಂದಲಿಂ ಮಾಯಂಬೋದುದು ಬೆಣ್ಣೆಯಲ್ಲಿ ಯಂಲೆ ಕೃಷ್ಣಾ (ವಸ್ತುಪ. ೪-೨೦).

[ಮಾಯ + ಪೋಗು$_1$ (< ಪೋ$_1$)]

ಮಾಯಕ (ಗು). ೧. ಮೋಸದ : ಕಪಟದ : ವಂಚನೆಯ. (ನಾ). ೨. ಕೃತ್ರಿಮವಾದುದು : ಕೃತಕವಾದುದು : ಛಾಯೆಯಿಲ್ಲದ ಮಾಣಿ ಕಕ್ಕೆ ಮಾದಳರಸದಿ ಪ್ರಿಯುದಿಂದಲತಿಗೆಯ ರಸದಿ ಭಾವನೆಗೆಯ್ಯಲಾಯ್ತದಿ ಗಜನಿಂಬೆಹುಳಿಯ ಲೇಳ್ಪಂ ವೇಳೆ ಭಾವನೆಗೈಯ್ಯಲದನೂ ಮಾಯಕದ ರತ್ನವಾಗಿರೆ ತೋರ್ಪುದಲ್ಲದತೆ ಛಾಯೆ ವರ್ಧಿಪುದದಕೆ (ರತ್ನಶಾ. ೩೩-೦); ಹವಳದ ದ್ವೀಪವೆಂದರೆ ಅಸಂಖ್ಯಾತ ಹವಳದ ಹುಳುಗಳ ಒಂದು ಕೋಟೆಯೇ ಸರಿ. ಈ ಮಾಯಕದ ದ್ವೀಪಗಳು ಕೋಟ್ಯಾವಧಿ ಪ್ರಾಣಿಶರೀರಗಳಿಂದ ಆದುವು (ಪ್ರಾಚಿಶ್ರ. II. ೯೬೭). ೩. ಕಣ್ಕಟ್ಟು ; ಇಂದ್ರಜಾಲ : ಸಿನೆಮಾ ಉಡುಗೆಯ – ರಾಮಲಕ್ಷ್ಮಣರು, ಆ ಉಡುಗೆ ಯಲ್ಲಿ ಇಂಥ ಮಾಯಾಕವನ್ನೆಂದಿಗೂ ಕಲ್ಪಿಸಲಾರರು (ಯುಕ್ತಪ. ೦೦೯): ಅಯ್ಯೋ, ಯಾವ ಮಾಯಕದಾಗೆ ಬಂದು ಬಿಟ್ರಿ ಈಟು ಪತ್ರ ? (ಪುರಪು. ೩೭). ೪. (ದೇವರ) ಲೀಲೆ : ಆಟ : ಎಲ್ಲಾ ಅವನ ಮಾಯಕ. ದೇವರ ಮಾಯಕ (ಪುರಪು. ೨೦). [< ಸಂ. ಮಾಯಿಕ]

ಮಾಯಕಾತಿ 'ಮಾಯಗಾತಿ' ನೋ.

ಮಾಯಕಾರ 'ಮಾಯಕಾಜ' ನೋ.

ಮಾಯಕಾರ್ತಿ (ನಾ). ಮೋಸಗಾತಿ ; ಕಪಟಿ : ರಾಘವಂ ಮಾಡಿದುಪ ಹತಿಯಿಂ ದಶಾನನಂಗೆ ದಾಯವಂ ಪೇಳ್ದವನ ವಂಶವಂ ಸವಜಿಸಿದ ಮಾಯಕಾರ್ತಿ[ಶಾಕಾಂ.ತಿ]ಯವೊಲೆನ್ನುಲಯಕೆ ಬಂದೆನಗಪಾಯವಂ ತಾರ ದಿಲ್ಲಿಂದೆ ಪೋಗೆಂದವಳನುಸ್ಮರಿಂ ಕೋಪಿಸಿದನು (ಕೃಪಾಭಾ. ೯-೨೨).

[ಮಾಯಕಾಜ + –ತಿ$_1$ (< – ಇತ್ತಿ)]

ಮಾಯಕಾಜ, ಮಾಯಕಾರ (ನಾ). ೧. ಗಾರುಡಿಗ ; ಯಕ್ಷಿಣೀ ವಿದ್ಯೆಯನ್ನು ಬಲ್ಲವನು : ಜೀವು ವಿಗಡ ಬೃಹ್ಮಶರವಿಂದ್ರಾಯುಧವ ಮುಂಗುಡಿಯುಲಿಜಿಘದು ಮಾಯಕಾಜರ ಮೋಹರವನುಬ್ಬಟೆ ಚತು ರ್ಬಲವ ಹೋಯಿತು (ಕುಮಾರ. ೦೨-೫೨). ೨. ಮೋಸಗಾರ ; ಕಪಟಿ : ರಾಯ ಠಕ್ಕಿನ ನಿಧಿಯ ತೌಳಿಯ ಮಾಯಕಾಜನ ತಂದು ಮನ್ನಿಸಿ ರಾಯರಭಿಮಾನವ ವಿಭಾಡಿಸಿಕೊಂಡೆ ನೀನು (ಕುಮಾಸ. ೮-೩೦); ಎಲೆ ಮಾಯಕಾಜ ನಿನ್ನಂ ಮಹಾಮುನಿಗಳೊಡಗೊಂಡು ಬರವೇಳ್ದರ್ (ಶಬಪು. ೨೦-೨೩). ಮಾಯಕಾರ : ೨. ನಾರಿಯರು ಶಿರಿಗೀಕ್ಷಿಸುತೆ ಸರಸಿಯಂ ತಲ್ಲಣಂಗೊಳುತೇರಿ ಮಾಯಕಾರನು ಕೃಷ್ಣಯೆಲ್ಲಿ ಪೋದನು ಯೆನುತ್ತೆ (ಪದಮೋ. ೦೦-೩೯). [ಮಾಯ + –ಕಾಜ]

ಮಾಯಗಾತಿ, ಮಾಯಕಾತಿ (ನಾ). ಮೋಸಗಾತಿ; ಕಪಟಿ : ಮಾಯಗಾತಿ ಹಸಾದವೆನುತ ಹಿಡಿಂಬಿ ಗಮಿಸಿದಳು (ಕುಮಾಆ. ೯-೦೦); ಆ ಮಾಯಗಾತಿ ಯರು ಅವಳನ್ನು ಕೋಪದೃಷ್ಟಿಯಿಂದ ನೋಡಿ. . . ಪರಿಹಾಸ ಮಾಡಿದರು (ಕಚಕ. ೨೭). ಮಾಯಕಾತಿ : ಮಾಯಕಾತಿಯ ಪರಿಬಕಡವಿಯಲಿ ಬಂದು ಕಾದಿಯೆ ನಿಮ್ಮ ಕೈಯಲಿ ಹೊಂದಿದಾ ಖರತನುಜನೀತನು (ಕೌಶಿಕಾ. ೪೩-೦೨); ಮಾಯಕಾತಿಯ ಸಂಗ ಅಭಿಮಾನಭಂಗ (ಪುರಂದ. ರಾ. ೩-೦೦೯-೯).

[ಮಾಯ + – ಕಾತಿ$_1$]

**ಮಾಯಗಾವುಂಡ** (ನಾ). ಒಬ್ಬಾತನ ಹೆಸರು : ಎಲವರದ ಕಥವ ಬೂರ ಮಾಯಗಾವುಣ್ಡರ ಮಗ . . . ಊರಟುವಿನೊಳ್ ಕಾದಿ ಸತ್ತಮ್ (ಎಕ. X, ಮುಳಬಾ. ೨೩೬-೭; ಕ್ರಿ. 1000).

[ಮಾಯ + ಗಾವುಂಡ (< ಗ್ರಾಮುಂಡ)]

**ಮಾಯಾಕೋವಿದ** (ನಾ). ಗಾರುಡಿವಿದ್ಯೆಯಲ್ಲಿ ಪರಿಣತನಾದವನು: ಇಂದ್ರಜಾಲವಿದ್ಯೆಯಲ್ಲಿ ಪಾಂಡಿತ್ಯವನ್ನು ಪಡೆದವನು : ರಾವುತರು ಶಿಲ್ಪಿಗರು ಮಾಯಾಕೋವಿದರು. . . ಮೃಗಜೀವಿಗಳು ಶಾಕುನಿಕರೆಸೆದರು ರಾಜಸಭೆಯೊಳಗೆ (ಕುಮ್ಯಾಉ. ೨-೨೭). [ಸಂ.]

**ಮಾಯಾಚಾರ** (ನಾ). ಡಂಭಾಚಾರ: ಕಪಟ : ಮಾಯಾಚಾರ ಪರಿಣತರ್ ಮಪ್ಪಪಾತ್ರದಾನಿಗಳುಂ ತಿರ್ಯಗ್ಗ್ಯಾತಿಕ್ಷ್ವಮುಂ ಪೊರ್ದಿದ ಮಿಥುನಂಗಳಾಗಿ ಪುಟ್ಟಿ ಪರಸ್ಪರ ವೈರಂಗಳಿಲ್ಲದೆ . . . ರಮಿಯಿಸುವುವು (ಆದಿಪು. ೩-೯೦ ೭). [ಸಂ.]

**ಮಾಯಾಜಡ** (ನಾ). ಅಜ್ಞಾನದಿಂದ ಉಂಟಾಗುವ ಮೂರ್ಖತೆಯುಳ್ಳವನು : ಬಾಯೆತ್ತದಂತೆ ನುಡಿವುತೆ ಕಾಯಜರಿಪುಭಕ್ತನೆಲ್ಲರಂ ಗೆಲೆ ಸೋಲ್ತಾ ಮಾಯಾಜಡರೆಲ್ಲರ್ಗೆಲಲಾಪುಂಗಾಣದೆ ಬಳಲ್ಕೆಯಿಂದಿಂತೆಂದರ್ (ಪ್ರಭು. ೩೭-೩೪). [ಸಂ.]

**ಮಾಯಾಜಾಲ** (ನಾ). ೧. ಗಾರುಡಿ : ಇಂದ್ರಜಾಲ : ಇವರು ತಮ್ಮ ನಾಟ್ಯಗಳಲ್ಲಿ ರೇಖಿಸುವ ರಂಗ ನಮೂನೆಗಳು. . . ಅವರ ವಿವಿಧವಿಚಿತ್ರವಾದ ವಾದ್ಯಗಳು ಇವೆಲ್ಲ ಒಂದು ವಿಶಿಷ್ಟ ಮಾಯಾಜಾಲವನ್ನು ಬೀಸುತ್ತವೆ (ಶಾರದ. ೩೭೪). ೨. ಮೋಸದ ಬಲೆ : ಮೋಸಗಾರಿಕೆ : ತಾನು ಮನಸ್ಸಿನಲ್ಲಿ ದ್ವೇಷಿಸುತ್ತಿರುವ ಶತ್ರುವು ತನ್ನ ಮಾಯಾಜಾಲದಲ್ಲಿಯೇ ಸಿಕ್ಕಿ ಜೀವನವನ್ನು ಕಳೆದುಕೊಂಡಿರುವುದನ್ನು ನೋಡಿಯೂ ತೃಪ್ತಿಹೊಂದದೆ. . . ತನ್ನ ಹಗೆಯನ್ನು ಸಂಪೂರ್ಣವಾಗಿ ನಾಶಗೊಳಿಸಬೇಕೆಂದು ನಿಶ್ಚಯಿಸಿಕೊಂಡನು (ಧ೭೪. ೪೦). [ಸಂ.]

**ಮಾಯಾಜೀವಿ** (ನಾ). ಗಾರುಡಿವಿದ್ಯೆಯಿಂದ ಬದುಕುವವನು : ಇಂದ್ರಜಾಲವಿದ್ಯೆಯಿಂದ ಜೀವಿಸುವವನು. [ಸಂ. ಮಾಯಾಜೀವಿನ್]

**ಮಾಯಾತೀತ** (ನಾ). ಅವಿದ್ಯೆಯನ್ನು ಮೀರಿದವನು ; ದೇವರು ; ಪರಮಾತ್ಮ : ಸತ್ಯಜ್ಞಾನಮಯ ನಿರ್ಧೂತ ಮಾಯಾತೀತನೀ ಹರಿ (ಕುಮ್ಯಾಸ. ೯-೧೮); ಈಯುಬ್ಬೆಜಗವನುಜ್ಜಿ ಹೊದ್ದಿ ಹೊದ್ದದೆ ಭವಾಬ್ಧ್ಯಾಯುತದೆ ಜೂಟಳವ ತಿರುಗಿಸುತ್ತಿಹನು ಮಾಯಾತೀತನಪ್ಪ ಶಿವನು (ವೀಕ್ಷಪು. ೧-೫-೩೩); ಮಾಯೆಯು ನಾನು. ಮಾಯಾತೀತನು ನಾನು (ಶಾಂತಜ.೦೭-೦೫).

[ಸಂ.]

**ಮಾಯಾತ್ಮ** (ನಾ). ಅಜ್ಞಾನಕ್ಕೆ ಒಳಗಾಗಿರುವ ವ್ಯಕ್ತಿ : ಮಾಯಾತ್ಮನು ಮಾಯವೆಂಬ ಭವಜಾಲದಲ್ಲಿ ಬಂದು ಘೋರಸಂಸಾರವ ಕಂಡು ನಾಚದೇಕೆನ್ನ ಮನ (ಪೋಸವ೨. ೯೭-೦೯೩). [ಸಂ. ಮಾಯಾತ್ಮನ್]

**ಮಾಯಾದಂಡ** (ನಾ). ಇಂದ್ರಜಾಲದಲ್ಲಿ ಬಳಸುವ ಕೋಲು : ಮಂತ್ರದಂಡ: ಈ ಒಂದು ಸಣ್ಣ ಬಾಲಕನುಹರಲಾಲನ ಹೃದಯದ ಉದ್ಬೋಧನಕ್ಕೆ ಸ್ವರ್ಣಮಯ ಮಾಯಾದಂಡವಾಗಿ ಪರಿಣಮಿಸಿದನು (ಇಕ್ತ್ಕ. ೩೦೫). [ಸಂ.]

**ಮಾಯಾದೀಪ** (ನಾ). ಕತ್ತಲೆಕೋಣೆಯಲ್ಲಿಯ ಬಿಳಿಯ ಪರದೆಯ ಮೇಲೆ, ಗಾಜುಹಲಗೆಯ ಮೇಲಿನ ಚಿತ್ರದ ಪ್ರತಿಬಿಂಬವು ದೊಡ್ಡದಾಗಿ ಬೀಳುವಂತೆ ಮಾಡುವ ಒಂದು ಬಗೆಯ ದೀಪಯಂತ್ರ.— ವೈಜ್ಞಾನಿಕ ಉಪಕರಣ: ಇಂಗ್ಲಿಷ್ ಶಬ್ದಗಳ ಸ್ವೀಕರಣದ ನಾಲ್ಕನೆಯ ರೀತಿಯೆಂದರೆ, ಆ ಶಬ್ದಗಳನ್ನು ತದ್ವತ್ತಾಗಿ ಕನ್ನಡದಲ್ಲಿ ಭಾಷಾಂತರಿಸುವುದು. ಈ ರೀತಿಯಾಗಿ . . . walking stick ನಡೆಗೋಲು : Magic-lantern ಮಾಯಾದೀಪ: ಇತ್ಯಾದಿ (ಲಾಶಾಶಾ. ೧೭೭). 'ಮಾಯಾ ಲಾಂದ್ರ' ಪರಾ. [ಸಂ.]

**ಮಾಯಾದೇವಿ** (ನಾ). ೧. ದುರ್ಗೆ : ಆದಿಶಕ್ತಿ : ಮಾಯೆ ; ಎಲೆ ಮಾಯಾದೇವಿ ಲೋಕತ್ರಯಜನನಿ ಮದಾಜ್ಞಾಸಮುತ್ಪನ್ನೆ . . . ಪೂಜಿಕ್ಕೆ ಮಾಂಸಾದಿ ನಾನಾಬಲಿಯಿಂ ದೇವರ್ ನರರ್ ತ್ವಚ್ಚರಣಕಮಲಮಂ (ಜಗಾ. ೨-೩೮). ೨. ಗೌತಮಬುದ್ಧನ ತಾಯಿ: ಸರ್ವಾರ್ಥಸಿಂಹಃ . . .ಅರ್ಕಬಂಧುಃ ಮಾಯಾದೇವೀಸುತಃ — ಓ ಶಾಕ್ಯರಿಗೆ ಯಾರು ಪೂಜ್ಯನೋ ಅಂತಾ ಬುದ್ಧದೇವರ ಹೆಸರು (ಸಿದ್ಧಾಂತಿ. ೦೭). [ಸಂ. ಮಾಯಾದೇವೀ]

**ಮಾಯಾನಿದ್ರೆ** (ನಾ). ಮಂತ್ರಶಕ್ತಿಯಿಂದ ಉಂಟಾಗಿಸುವ ನಿದ್ದೆ ; ಮಾಯಾಶಕ್ತಿಯಿಂದ ಬರಿಸುವ ನಿದ್ರೆ : ಅಖಿಳಭುವನಜನನಿಯುಮಾಗಳ್ ಮಾಜಿಯಿಸಿ ಮಾಯಾನಿದ್ರೆಯಿನುಜ್ಜಿ ಮಾಯಾಶಿಶುವನಿರಿಸಿ ಮುಂದೆಂಬಿಕೆಯಾ (ಆದಿಪು. ೭-೪೫); ಮಾಯಾನಿದ್ರೆಯನಿಂದ್ರನ ಜಾಯೆ ಜಿನಾಂಬಿಕೆಗೆ ಪಡೆಮ ತಡೆಯದೆ ಭುವನಜ್ಯಾಯನನೆತ್ತಿ ಬಟಿಕ್ಕಂ ಮಾಯಾಶಿಶುವೊಂದನಿರಿಸಿ ಮುಂದೆಂಬಿಕೆಯಾ (ನೇಮಿಪು. ೮-೦೦೪). [ಸಂ. ಮಾಯಾನಿದ್ರಾ]

**ಮಾಯಾಪಾಶ** (ನಾ). ೧. ಮೋಹದ ಬಂಧನ. — ಪಾಶ : ಮಾಯಾಪಾಶ ಹಿಂಗಿ ಮನದ ಗಂಟು ಬಿಡದನ್ನಕ್ಕ ಕೂಡಲಸಂಗಮದೇವನೆಂತೊಲಿವನಯ್ಯಾ (ಬಸವ. ೨೦೨) : ದೇವ ನೀ ಮಾಯಾವಿ ಮಾಯಾಪಾಶಬದ್ಧರು ನಾವು ಬಲ್ಲೆವೆ ನಿಮ್ಮನು (ಕುಮ್ಯಾಗ. ೮-೩೨) : ಆಶಾಪಾಶ ಎಂಬೊ ಪರಮಾಬ್ಧಿಯೊಳಗೆ ಮುಳುಗಿ ಮಾಯಾಪಾಶಕ್ಕೊಳಗಾಗದೆ ಮಾನ್ಯನಾಗೊ ನೀ ಧನ್ಯನಾಗೋ (ಪುರಂದ. ೩-೩-೧). ೨. [ವೀಶೈ] ಪಂಚಪಾಶಗಳಲ್ಲಿ ಒಂದು : ಪಾಶಪದಾರ್ಥವು . . . ಮಲಪಾಶ ಮಾಯಾಪಾಶ ಕರ್ಮಪಾಶ ಬಿಂದುಪಾಶ ತಿರೋಧಾನಪಾಶವೆಂದು ಪಂಚಪ್ರಕಾರವಾಗಿರ್ಪುದು (ವಿವೇಕ. ೦೭೫) : ಮಾಯಾಪಾಶ(ದುಃಖ)ನಿವೃತ್ತಿಯೇ ಪರಮಪುರುಷಾರ್ಥ (ಶಾರದ. ೨೦೭). [ಸಂ.]

**ಮಾಯಾಫಲ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹಣ್ಣು : "ಛಿತ್ರಲಾಫಲಂ – ಮಾಯಾಫಲ(ಮಾಪಾಳ ?)" (೭೩೨. ೩೯) : "ಮಾಯಿಕಾ-ಮಾಯಾಫಲ" (೭೩೨. ೦೨೩). [ಸಂ.]

**ಮಾಯಾಬಜಾರ** 'ಮಾಯಾಬಾಜಾರ' ನೋ.

**ಮಾಯಾಬಾಜಾರ**, ಮಾಯಾಬಜಾರ (ನಾ). ಇಂದ್ರಜಾಲದಿಂದ ಸೃಷ್ಟಿಸಿದ ಪೇಟೆ : ಭಟ್ಟರು ಈ ಮಾಯಾಬಾಜಾರವನ್ನು ನೋಡಿ ಆನಂದಪುಳಕಿತರಾದರು (ಹಮ್ಮಿ. ೭೦). **ಮಾಯಾಬಜಾರ** : ಒಬ್ಬ ರಾಕ್ಷಸ ಬರುವ ; ಯಾವುದಾದರೂ ಒಂದು ಹೆಣ್ಣನ್ನು ಹಿಡಿಸಿಕೊಂಡು ಹೋಗುವ ; ಆಮ್ಯಾಲೆ ಯುದ್ಧ. ಶಾಪ. ಮಾಯಾಬಜಾರ (ಪತವಾ. I, ೩೦೮): ಈ ಪ್ರಪಂಚವೆಂದರೆ ಮಾಯಾಬಜಾರವು (ಶದ್ರ್ಯಾಹು.೦೨).

[ (ಸಂ. ಮಾಯಾ) + ಬಾಜಾರ ]

**ಮಾಯಾಭ್ರಾಂತಿ** (ನಾ). ತೋರಿಕೆಯಿಂದ ಉಂಟಾದ ಭ್ರಾಂತಿ: ಮಿಥ್ಯೆಯಿಂದ ಕೂಡಿದ ಭ್ರಮೆ : ಮಾಯಾಭ್ರಾಂತಿ ಕವಿದ ಗೀತಜ್ಞರ ಹಿರಿಯರೆನ್ನೆ (ಬಸವ. ೭೦೩) : ದೇವ ಮಜ್ಜಿವೊಕ್ಕನು ಭವತ್ಪದಪಾವನಾಂಭೋಜವನು ಭವತಾಪಾವಳಿಯಲುಜ್ಜಿ ಬೆಂದು ಮಾಯಾಭ್ರಾಂತಿಯುಳಿಸಿಲುಕಿ (ಶಿವಾಗ. ೩-೦೨-೨). [ಸಂ.]

**ಮಾಯಾಮುರತಾಪು**. ಮಾಯ್ಮುರುತಾಪು (ನಾ). (ರಾಜ, ಮಂತ್ರಾಧಿಪತಿ ಮೊದಲಾದವರು ಇಟ್ಟುಕೊಳ್ಳುವ) ಗೌರವಸೂಚಕವಾದ ಲಾಂಛನಗಳಲ್ಲಿ ಒಂದು : ಮೀನಿನ ಆಕಾರದ ಚಿಹ್ನೆಯಿಂದ ಕೂಡಿದ ಧ್ವಜ. — ಬಾವುಟ : (ಸಾಧಾರಣ ಬಿರುದುಗಳು) . . . ಬಂದೂಕುಗಳು ೨೫. ಹುಕ್ಕಾರುಗಳು. ಕತ್ತಿ ವಗೈರೆ ೫೦. ಮಾಯಾಮುರತಾಪು, ಪಂಚನಿಶಾನಿ (ಗುರುದ. ೩೧). **ಮಾಯ್ಮುರುತಾಪು** : ಭಾರಿ ನಗಾರಿ ಮೇಳ ಮಂಗುಲಿಪ ಸುರಾಂತ ಸುತ್ತಿಗೆ ನಿಶಾನೆಯು ಮಾಯ್ಮುರುತಾಪು (ಮೈಸೂ. ೬-೦೩೭)

[ ←ಪಾರ. ಮಾಹೀಮುರಾತಿಬ್ ; ಮರಾ. ಮಾಹೀಮುರಾತಬ್ : ಮಾಹೀಮೋರ್ತಬ್]

**ಮಾಯಾಮರ್ದನ** (ನಾ). ಅಜ್ಞಾನವನ್ನು ನಾಶಪಡಿಸುವವನು : ಮಾಯಾಮರ್ದನ ಗುರುವೆ ಕಾಯೊ ಪಾಮರರ ಕೃಪಾಳುದೇವನೆ (ಸಿದ್ಧಕೃ. ೨೨-೪). [ಸಂ.]

**ಮಾಯಾಮಲ** (ನಾ). ೧. [ವೀಶೈ] ಜೀವನಿಗೆ ಅಂಟಿಕೊಳ್ಳುವ ಆಣವ, ಮಾಯಾ ಮತ್ತು ಕಾರ್ಮಿಕಗಳೆಂಬ ಮಲತ್ರಯಗಳಲ್ಲಿ ಒಂದು ; (ಪರಮಾತ್ಮನನ್ನು ಮರೆತು) ದೇಹಸಂಬಂಧಿಗಳನ್ನು ಮೋಹಿಸುವಿಕೆ ; ವ್ಯಾಮೋಹ : ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದುಳಿದು ನಿರ್ಮಲವಾದ ಶಿಷ್ಯನು ಕಾಯಜೀವದ ಭ್ರಾಂತಿಸೂತಕವ ಪಿಂಗಿಸಿ ಕಳೆದು ನಿಸ್ಸಂಕನಾದ ಗುರುವು (ಅವಚಂ. ೨೬೩-೦೨೩೩) ; ಆ ಶಿಷ್ಯನ . . . ತನುತ್ರಯಂಗಳಲ್ಲಿ ಮುಸುಕಿದ ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ತನುತ್ರಯಂಗಳ ಕಳೆದು (ಅಸಂಪೇ. ೨೬೦-೧೪) ; ಕಳೆದು ಆಣವಮಲ ತೊಳೆದು ಮಾಯಾಮಲ ಉಳಿಯದಂತೆ ಕಾರ್ಮಿಕಮಲ ಮಾಡಿದ ಕಳಾತೀತ ಚೆನ್ನಬಸವಣ್ಣನ (ಸಿದ್ಧಕೃ. ೩೪-೬೨). ೨. ಜೀವನಿಗೆ ಅಂಟಿಕೊಳ್ಳುವ ರೋಧಮಲ, ಬಿಂದುಮಲ, ಕರ್ಮಮಲ, ಮಾಯಾಮಲ ಮತ್ತು ಆಣವಮಲ ವೆಂಬ ಪಂಚಮಲಗಳಲ್ಲಿ ಒಂದು : ಜನ್ಮಾಂತರಗಳಿಗೆ ಕಾರಣ ವಾದುದು : ಅಷ್ಟಭೋಗಂಗಳ ಶಕ್ತಿ ಕೆಟ್ಟಲ್ಲಿ ರೋಧಮಲ ನಷ್ಟ . . . ಕಾಯಭಾವವಳಿದಲ್ಲಿ ಮಾಯಾಮಲ ನಷ್ಟ ಮಮಸ್ತ್ವಪಿನ ಕಳೆ ತನ್ನಲ್ಲಿ ಬೆಳಗಿದಲ್ಲಿ ಆಣವಮಲ ನಷ್ಟ ಇಂತೀ ಪಂಚಮಲಂಗಳು ನಷ್ಟವಾದಲ್ಲಿ ಸೌರಾಷ್ಟ್ರಸೋಮೇಶ್ವರಲಿಂಗ ಸಮ್ಯಕ್‌ದೃಷ್ಟ (ಆದಯ. ವು. ೦೦೬-೧೯೩). ಮಲ, ರೋಧಶಕ್ತಿ, ಕರ್ಮ. ಮಾಯಾ, ಬಿಂದು ಅಥವಾ ಮಹಾಮಾಯ ಎಂಬಿವೇ ಪಾಶದ ವಿಭಾಗಗಳು . . . ಮಾಯಾಮಲವು ಭೇದಜ್ಞಾನ ವನ್ನುಂಟುಮಾಡಿ ಸ್ವಸ್ವರೂಪವನ್ನು ಮರೆಮಾಡಿ ಜನ್ಮಾಂತರಗಳಿಗೆ ಕಾರಣವಾಗುತ್ತದೆ (ಶಾಲವ. ೨೦೦). 'ಮಾಯಿಮಾಲ' ಪರಾ. [ಸಂ.]

**ಮಾಯಾಮಸ್ತಕ** (ನಾ). (ರಾಜ, ಮಠಾಧಿಪತಿ ಮೊದಲಾದವರ ಬಳಿ ಇರುವ) ಗೌರವಸೂಚಕವಾದ ಲಾಂಛನಗಳಲ್ಲಿ ಒಂದು : ಒಂದು ಬಗೆಯ ಮುಖವಾಡ : ಸಾಧಾರಣ ಬಿರುದುಗಳು . . . ಕನಕಚಾಮರ ೨ ಪಾಲುಗಳು ೨ ನೃಸಿಂಹಮುಖ ಉಡಾಸ್‌ಪಾವಡ ಮಾಯಾಮಸ್ತಕ ಘಾತಾರ ಜಯಘಂಟೆ (ಗುರುವ. ೦೦). [ಸಂ.]

**ಮಾಯಾಮಾರ್ಗ** (ನಾ). ಅಜ್ಞಾನದಿಂದ ಕೂಡಿದ ದಾರಿ: ಮಿಥ್ಯಾ ಮಾರ್ಗ : ಜಿನೇಂದ್ರಭಕ್ತಸೆಟ್ಟಿ . . . ತನ್ನ ದೇಹಾರದೊಳಿರ್ದ ಬ್ರಹ್ಮಚಾರಿಗೆ ವಂದು ತಾನವರ್ಗತಿಭಕ್ತನಪ್ಪುದರಿಂದವನೊಳಾದ ಮಾಯಾ ಮಾರ್ಗಮನರಿಯದೆ ಜಿನಮಾರ್ಗದೊಳ್ ವೃಷನೆಂದು ಕಯ್ಯಂ ಮುಗಿದು (ಧರ್ಮಾಮೃ. ೬-೬೪). [ಸಂ.]

**ಮಾಯಾಮಾಲವಗೌಲ, ಮಾಯಾಮಾಳವಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ರೂಪಾವತಿ. ಹಾಗೆಯೇ ಗೇಯಹೆಜ್ಜಜ್ಜಿರಾಗ. ವಾಟೀ, ವಸಂತಭೈರವೀ ಮಾಯಾಮಾಲವಗೌಲ (ಕ) (ತತುಶ್ರು. ೦೨೮). **ಮಾಯಾಮಾಳವಗೌಳ :** ಔತ್ತರೇಯಸಂಗೀತ ಪದ್ಧತಿಯಲ್ಲಿರುವ 'ಭೈರವಿ' ರಾಗವನ್ನು ಬಹುವಾಗಿ ಹೋಲುತ್ತದೆ, ನಮ್ಮ ಮಾಯಾಮಾಳವ ಗೌಳ (ಪೀಮುಕೂ. ೦೦೪) ; ಮಾಯಾಮಾಳವಗೌಳ . . . ಭಕ್ತಿಕರುಣಾರಸ ಪ್ರಧಾನರಾಗ (ಸಂಗೀಶಂ. ೦೩೪). [ಸಂ.]

**ಮಾಯಾಮಾಳವಗೌಳ** 'ಮಾಯಾಮಾಲವಗೌಲ' ನೋ.

**ಮಾಯಾಮುಖಿ** (ನಾ). ಮಾಯೆಗೆ ಒಳಗಾದವನು : ಅಜ್ಞಾನದ ದವಡೆಗೆ ಸಿಕ್ಕಿದವನು : ಕಾಮಕ್ರೋಧಲೋಭಮೋಹಮದಮತ್ಸರದಿಚ್ಛೆಗೆ ಹರಿದು ಹಂದಿಯೊಡನಾಡಿದ ಕಂದಿನಂತಾದರು ಇನ್ನು ಬಲ್ಲರೆ ಗುಹೇಶ್ವರ ಮಾಯಾಮುಖಿರು ನಿಮ್ಮುವನು (ಅವಚಂ. ೬೪-೩೨೪). [ಸಂ.]

**ಮಾಯಾಮೃಗ** (ನಾ). ಮೋಸದ ಜಿಂಕೆ : ಕಂಡಳುದತದ ನೆಳಲಿನಲಿ ಕೈಕೊಂಡ ಮಾಯಾಮೃಗದ ಮೂರ್ತಿಯು (ತೊರರಾ. ೩-೮-೨೪). [ಸಂ.]

**ಮಾಯಾಯುದ್ಧ** (ನಾ). ಇಂದ್ರಜಾಲ ಮುಂತಾದ ವಿದ್ಯೆಗಳ ಸಹಾಯ ದಿಂದ ಮಾಡುವ ಯುದ್ಧ : ಮಾಯಾಯುದ್ಧದೊಳಂ ದಿವ್ಯಾಯುಧ ಯುದ್ಧದೊಳಮಧಿಕಬಲರುಭಯಬಲಂ ಜೀಯೆಂಬಿನೆಗಂ ಕಾದಿದರಾಯತಿ ನಿಲೆ ಕುಂಭಕರ್ಣನುಂ ಮಾರುತಿಯುಂ (ಕಂಠೀರವಾ. ೦೩-೦೪೩) ; ಘಟೋತ್ಕಚನು ಪೊರಟು ಆಲಾಯುಧ ಮುಂತಾದವರನ್ನು ಕೊಂದು ಕರ್ಣನನ್ನು ಎದುರಿಸಿ ಮಾಯಾಯುದ್ಧ ಮಾಡುತ್ತ ಅದೃಶ್ಯನಾದನು (ವಕಥಾ. ೨೮೪). [ಸಂ.]

**ಮಾಯಾರಿ** (ನಾ). ಅಜ್ಞಾನವನ್ನು ನಾಶಪಡಿಸುವವನು : ಶ್ರೀಯುಮಾ ವರನಿಂದುಧರನಭಯಂಕರನುಗ್ರಮಾಯಾರಿ ಭಕ್ತಭವಹಾರಿ . . . ಪಂಪಾ ವಿರೂಪಾಕ್ಷನೆಮಗೀಗೆ ಭಕ್ತಿಜ್ಞಾನಸಂಪದವನು (ಪತಾ. ೦-೮) ; ಈರ್ವರು ಬಳಿಕ್ಕಾ ಓಂಕಾರದಿಂದ ಪೊನ್ನಾಂಬಲಕೆ ಬರೆ ಮುನ್ನ ಮಾಯಾರಿಯಾಜ್ಞೆ ಯಿಂ ನಡೆತಂದು (ವೀಶೃ. ೪-೯-೪); ಮಾರಾರಿ ಮಾಯಾರಿಯೆಂಬರ್ಗಳ ಚಂಚತ್ಕಾ ಹಳೀಸಂಕುಳಮೆಸೆದನವಂ ಮಾದಿರಾಜಾಭಿಧೇಯಂ (ವೃಕಶ. ೩೨-೯). [ಸಂ.]

**ಮಾಯಾರ್ಭಕ** (ನಾ). [ಜೈನ] ಮಾಯೆಯಿಂದ ಸೃಷ್ಟಿಸಿದ ಮಗು: ಕೃತಕವಾದ ಶಿಶು : P ತೀರ್ಥಂಕರನಾಗುವ ಶಿಶು ಹುಟ್ಟಿದಾಗ ಜನ್ಮಾಭಿಷೇಕಕಲ್ಯಾಣವನ್ನು ನೆರವೇರಿಸುವುದಕ್ಕಾಗಿ ಸೌಧ ರ್ಮೇಂದ್ರನ ಅಪ್ಪಣೆಯಂತೆ ಇಂದ್ರಾಣಿಯು ತೀರ್ಥಂಕರನ ತಾಯಿಗೆ ಮಾಯಾನಿದ್ರೆಯನ್ನು ಬರಿಸಿ, ಅವಳ ಪಕ್ಕದಲ್ಲಿ ಮಾಯಾ ಶಿಶುವನ್ನಿಟ್ಟು ನಿಜವಾದ ಮಗುವನ್ನು ತಂದು ಇಂದ್ರನ ಕೈಗೆ ಕೊಡುತ್ತಾಳೆ : ಐರಾದೇವಿಯ ಮುಂದೆ ಮಾಯಾರ್ಭಕನನಿರಿಸಿ, ಜಿನಾರ್ಭಕ ನನೆತ್ತಿಕೊಂಡು ಬರೆ (ಶಾಂತಿಕೃ. ೦೦-೯೩). [ಸಂ.]

**ಮಾಯಾಲಾಂದ್ರ** (ನಾ). = ಮಾಯಾದೀಪ : ಸಿನೆಮಾ, ಮಾಯಾಲಾಂದ್ರ ಮೊದಲಾದುವುಗಳಲ್ಲಿ ಬೆಳಕಿನ ಲೀಲೆಗಳು (ಶಾಂಕೃ. II, ೯೩೪).
[(ಸಂ. ಮಾಯಾ) + ಲಾಂದ್ರ (< ಲಾಂದರ)]

**ಮಾಯಾವಾದ** (ನಾ). [ವೇದಾಂತ] ಮಿಥ್ಯಾವಾದ ; P ಪ್ರಪಂಚವು ಮಾಯೆ, ಅದು ನಿಜವೆಂದು ಕಾಣುವುದು ಭ್ರಮೆ – ಎಂಬುದಾಗಿ ಶಂಕರಾಚಾರ್ಯರು ಬೋಧಿಸಿ ಅವರ ಅನುಯಾಯಿಗಳು ಅನು ಸರಿಸಿದ ವಾದ ; ಇದು ಬೌದ್ಧರ ವಾದವೂ ಆಗಿದೆ : ಆಧ್ಯಾತ್ಮ ಮತಭೇದ ಭಾಸ್ಕರೀಯ ಮಾಯಾವಾದ ಶಬ್ದಬ್ರಹ್ಮವಾದ ಕ್ರೀಡಾಬ್ರಹ್ಮ ವಾದವೆಂದು ನಾಲ್ಕುತೆಱನಾಗಿ ಪ್ರಚುರಗೊಂಡಿರ್ಕುಂ (ಐವೀಶ. ೦೩) ; ಶ್ರೀಶಂಕರಾಚಾರ್ಯರು ಬೋಧಿಸಿದ ಮಾಯಾವಾದವು ಅದೇ ಅರ್ಥವನ್ನು ಸೂಚಿಸುವುದಲ್ಲವೆ? (ಶಾಂಕೃ. III, ೦೩೬೬). [ಸಂ.]

**ಮಾಯಾವಾದಿ** (ನಾ). [ವೇದಾಂತ] ಮಿಥ್ಯಾವಾದವನ್ನು ಬೋಧಿಸುವ ವನು ; ಅದ್ವೈತತತ್ತ್ವವನ್ನು ಬೋಧಿಸುವವನು ; ಅದ್ವೈತಿ : ಮಾಯಾವಾದಿಗಳ ಗೆದ್ದಿತು ಕೂಸು ದ್ವೈತಮತವನುದ್ಧರಿಸಿತು ಕೂಸು ಮಧ್ವರಾಯರೆಂಬ ಪೆಸರಿನ ಕೂಸು (ಪುರಂದ. ೧-೦೯೩-೩) : 'ಮಾಯಾ'ವಾದಿ ಯಾದ ಈ ದಿವ್ಯಪುರುಷ ಜಗತ್ತಿನ ಮಾಯೆಯನ್ನು ನಾಶಮಾಡಿ ಪಾರ್ಥಿವ ಜೀವನದ ಸಾರ್ಥಕ್ಯವೇನೆಂಬುದನ್ನುಪದೇಶಿಸಿದರು (ಜುಶ್ರಾರ. ೧೦೬ ಶಿ೯೪). **ಮಾಯಾವಾದಿಕೋಳಾಹಳ** = ಅದ್ವೈತತತ್ತ್ವಕ್ಕೆ ವಿಶಿಷ್ಟವಾದ ಅರ್ಥವನ್ನು ನೀಡಿ, ಆ ತತ್ತ್ವವನ್ನು ವಿರೋಧಿಸಿದ ವ್ಯಕ್ತಿ : ಶ್ರೀರಾಮಾನುಜಾಚಾರ್ಯರ ಒಂದು ಬಿರುದು : ಮಾಯಾವಾದಿ ಕೋಳಾಹಳ . . . ಶ್ರೀರಾಮಾನುಜಾಚಾರ್ಯರ ಪ್ರಥಮಶಿಷ್ಯರು (ಎಕ. VI (R), ಶಾಂತವ. ೦೩೩-೩ ; 1519). [ಸಂ. ಮಾಯಾವಾದಿನ್]

**ಮಾಯಾವಿ** (ನಾ). ೧. ಮಂತ್ರ, ಮಾಟ ಮೊದಲಾದ ಮಾಯಾವಿದ್ಯೆಗಳನ್ನು ಬಲ್ಲ ವ್ಯಕ್ತಿ; ಮಂತ್ರಗಾರ: "ದಾಂಡಾಜನಿಕಃ, ಕುಹಕಃ . . . ಮಾಯಾವೀ, ಮಾಯಿಕಃ, ಮಾಯಿಾ — ಈ ೧೧ ಮಾಯಾವಿ" (ಹಲಾಯು. ೩೮-೦೯೪); ಮಾಯಾವಿಗಳ ವಿದ್ಯೆಗಳ ಪರಿಹರಿಸುವುದು ಮಾಯೆಯಿಂ (ಕುಮ್ಮಾಗ. ೩-೭); ಮಗನೆ ಕೇಳ್ ರಾಕ್ಷಸರು ಮಾಯಾವಿಗಳು (ತೊರರಾ. ೩-೩-೦೦೩). ೨. ಮೋಸಗಾರ: ಕಪಟಿ; ಕುತಂತ್ರಿ: ಅಂತು ಮಾಯಾಕೃತಕದಿಂದ ವಿಮುಕ್ತನಾಗಿ ಪೋಪ್ಪೊಡೆ ಕಿವಿಯುಂ ಮತ್ತೆನ್ನದೆ ಮಾಯಾವಿ ಮುಚ್ಚಿಕೊಳ್ವಂ (ಧರ್ಮಾಮೃ. ೬-೫೯); ಅದು ಕಾರಣದಿಂ ಕೃಷ್ಣನೊಳ್ ಕುಟಿಲೋಪಾಯಮೆ ಶರಣೀಯಂ ಆ ಮಾಯಾವಿಯುಂ ಧನುರ್ಮಹೋತ್ಸವಾಮಂತ್ರಣವ್ಯಪದೇಶದಿಂ ವಿನಾಶಮಂನೆಬ್ಬಿಸುವೆಂ (ಜಗಚ. ೩-೬೦ ವ); ಭದ್ರಪ್ಪನಾಯಕಂ ಪಡೆವೆರಸತಿತ್ವರೆಯಿಂ ದಾಳಿವರಿದಾ ಮಾಯಾವಿಗಳ ನಾಡೊಳಗಣ . . . ಸೀಮೆಗಳಂ ಕೊಂಡವರ ರಾಜ್ಯರಾಷ್ಟ್ರಮಂ ಪುಡಿಗೈಸಿ (ಕೆಳನೃ. ೮-೩ ವ). [ಸಂ. ಮಾಯಾವಿನ್]

**ಮಾಯಾವಿಗ** (ನಾ). = ಮಾಯಾವಿ ೧: ಜಗವನೇಡಿಸಿ ಕಾಡುವಾ ಮಾಯೆಗೆ ನವೀನವೆನಿಪ್ಪ ಮಾಯಾವಿಗನು ತಾನೆಂಬಂತಿರಲ್ಲದ ಬಯಲ ಬಗೆಗೊಳಿಸಿ (ಪ್ರಭುಲಿ. ೩-೩೯೮). [ಮಾಯಾವಿ + —ಗ₂]

**ಮಾಯಾವಿತನ** (ನಾ). ಮೋಸಗಾರಿಕೆ: ಸಂಚು; ಕುಟಿಲತೆ: ಮಕ್ಕಳೊಡನೆ ಮಾಯಾವಿತನವಿದವ್ಯು ತಕ್ಕುದೆ ಕುತನರ್ಥಾಂಗಿ ಉಕ್ಕಿವವನು ಬಿಟ್ಟು ಚೆಂಡು ತರಿಸಿಕೊಟ್ಟು ದಿಕ್ಕನೆ ಕಳುಹೇಕೆ ತಡವು (ಕುರಾಶಾಂ. ೩೨-೩೦). [ಮಾಯಾವಿ + —ತನ]

**ಮಾಯಾವಿದ** (ನಾ). = ಮಾಯಾವಿ ೧: ರಾವಣನ ಪರಿ ನೆಲೆಸಿತಿವನಲಿ ಸಾವಿಗಂಜುವನಲ್ಲ ವಿಳಮಾಯಾವಿದನು ನಮ್ಮಕುತಿ ಕೊಳ್ಳದು (ಕುವ್ಯಾಅ. ಶಿಂಶ. ೮-೭೭). [ಸಂ. ಮಾಯಾವಿದ್]

**ಮಾಯಾಶಕ್ತಿ** (ನಾ). ಅಜ್ಞಾನದಿಂದ ಉಂಟಾದ ಶಕ್ತಿ; ಮಿಥ್ಯಾಶಕ್ತಿ: ಶಕ್ತಿಯೆಂಬುದು ಮಾಯೆ ಮಾಯಾಶಕ್ತಿಯುದು ತನುವಿನಲಿ ನೀ ನಿಜಮುಕ್ತಿದಾಯಕನಿರಲು ಸುಖದುಃಖಾದಿಗಳಿಗಾರು ಯುಕ್ತಿಯೊಳಗಿವನಚಿತು ಮನದ ವಿರಕ್ತಿಯುಲಿ ಭಜಿಸುವಗೆ ಮುಕ್ತಿಗೆ ಭಕ್ತಿಯೇ ಕಾರಣವು (ಹಂಶಾ. ೭೩); ಘನತಮಸ್ಸತ್ತ್ವಪ್ರಧಾನಗಳೆನಿಸಿ ಧೂಮಜ್ವಾಲೆಗಳವೋಲ್ ಜನಿಸಿ ಮಾಯಾಶಕ್ತಿ ಚಿಚ್ಛಕ್ತಿಗಳೆನಿಸಿಪವು (ಅಮೃತ. ೩-೪೦). [ಸಂ.]

**ಮಾಯಾಶಲ್ಯ** (ನಾ). [ಜೈನ] ವ್ರತಗಳನ್ನು ಆಚರಿಸುವವನಿಗೆ ಉಂಟಾಗುವ ಮೂರು ಬಗೆಯ ಅಡ್ಡಿಗಳಲ್ಲಿ ಒಂದು: ಪೊಲ್ಲಮೆಯಂ ಮಾಡುವ ಮಿಥ್ಯಾಶಲ್ಯಂ ಮಾಯಾಶಲ್ಯಂ ನಿಧಾನಶಲ್ಯಮೆಂಬ ಮೂಱುಂ ಶಲ್ಯಗಳಿಂ ಪಿಂಗಿದಂ (ಧರ್ಮಾಮೃ. ೩-೦೩೦). [ಸಂ.]

**ಮಾಯಾಶಿಶು** (ನಾ). = ಮಾಯಾರ್ಭಕ: ಮಾಯಾಶಿಶುವುಮನೊರ್ವೆಯು ಮಾಯಾನಿದ್ರೆಯುಮಪತ್ಯಳೆಂಬಿಕೆಗೆ ಜಗಜ್ಜಾಯಮನಮ್ಮ ನಿಜಾಭಿಪ್ರಾಯದೆ ರಚಿ ರುಚಿಗಳಾರೊ ಕಾರ್ಯೋತ್ಕಂಠರ್ (ತಂತ್ರಕ. ೦೨-೩೩). [ಸಂ.]

**ಮಾಯಾಸಂಜ್ವಲನ** (ನಾ). [ಜೈನ] ಚಾರಿತ್ರಮೋಹನೀಯಕರ್ಮದ ಅಣುವ್ರತಿಯಾದ ಗೃಹಸ್ಥನಿಗೆ ಪ್ರತ್ಯಾಖ್ಯಾನಾವರಣದಲ್ಲಿ ಉಂಟಾಗುವ ಕ್ರೋಧ, ಮಾನ, ಮಾಯೆ ಮತ್ತು ಲೋಭ ಎಂಬ ನಾಲ್ಕು ಬಗೆಯ ಕರ್ಮಪ್ರಕೃತಿಗಳಲ್ಲಿ ಒಂದು: ಕ್ರೋಧಸಂಜ್ವಲನಂ ಮಾನಸಂಜ್ವಲನಂ ಮಾಯಾಸಂಜ್ವಲನಂ ಲೋಭಸಂಜ್ವಲನಂ × × × ಅನಂತಾನುಬಂಧಿಲೋಭಮಾಯಾಕ್ರೋಧಮಾನಂ (ಗೊಮ್ಮಸಾ. ೩-೪). [ಸಂ.]

**ಮಾಯಾಳು** (ಗು). ೧. ಮಮತೆಯುಳ್ಳ: ತನ್ನನ್ನು ಅಗಲದೇ ಇರುವ ಮಾಯಾಳು ತಂದೆಯು ಒಮ್ಮೊಂದೊಮ್ಮೆ ಗತಿಸಿದ್ದರಿಂದ ಕೃಷ್ಣಗಾದ ದುಃಖವನ್ನು ಹೇಳಲಳವಲ್ಲ (ಜತ್ತಗೃ. ೯). (ನಾ). ೨. ವಾತ್ಸಲ್ಯವುಳ್ಳವನು; ಮಮತೆಯುಳ್ಳವನು: ಇಂಥಾ ಮಾಯಾಳುವಾದ ತಂದೆಯು ತೀರಿದನೆಂಬ ಹಂಬಲವಿಲ್ಲದೆ (ಮುಂಬಯಿ. ೩-೩೦೮).

[ ← ಮರಾ. ಮಾಯಾಲು, ಮಾಯಾಳೂ = ಮಮತೆಯುಳ್ಳ. /P ಇದು ಸಂಸ್ಕೃತದ 'ಕೃಪಾಲು'. 'ದಯಾಲು' ಮುಂತಾದ ಶಬ್ದ ಗಳ ಸಾದೃಶ್ಯದಿಂದ ರೂಪುಗೊಂಡಿರಬಹುದು]

**ಮಾಯಿ** (ನಾ). ೧. ಗಾರುಡಿಗ; ಐಂದ್ರಜಾಲಿಕ; ಮಂತ್ರಗಾರ: "ದಾಂಡಾಜನಿಕಃ, ಕುಹಕಃ . . . ಮಾಯಾವೀ, ಮಾಯಿಕಃ, ಮಾಯಿಾ — ಈ ೧೧ ಮಾಯಾವಿ" (ಹಲಾಯು. ೩೮-೦೯೪); ಆ ತತ್ಕ್ಷಣ ಮಾಯಿಗಳು ಮಯನೋತು ಕಲಿವಾಗಲ್ಕೆ ಕಲಿತದರು ಸೂತ್ರಸಂತರ್ಧಾನಧಾರಣೆಯೆಂಬ ವಿದ್ಯೆಗಳ (ಭಾಗ. ೪-೦೨-೩೦). ೨. ಮೋಸಗಾರ; ಕಪಟಿ; ಕುತಂತ್ರಿ: ಕರವ ಮುಗಿದನು ಮುಖ್ಯಪ್ರಾಣ . . . ಜೀವೇಶರೈಕ್ಯವು ಜಗತು ಮಿಥ್ಯವೆಂದು ಈ ವಿಧ ಪೇಳುವ ಮಾಯಿಗಳಳಿಯೆಂದು (ಪುರಂದ. ೦-೦೯೯-೧); ಆ ಮಾಯಿ ಮರಾಟರ ಗಂಡಂ ಮಾಯಾತೀತಂಗೆ ಮಣಿದು ಬಿನ್ನತಿಗೆಯ್ದಂ (ಚಕಬ. ೩೪-೪೭). ೩. ಬ್ರಹ್ಮ. ೪. ಶಿವ. ೫. ಅಗ್ನಿ. ೬. ಕಾಮ. ೭. ಒಂದು ಬಗೆಯ ಸಸ್ಯ: "ಬುಸಃ — ಮಾಯಿ" (ಶಿಕಧಿ. ೦೦೯). [ಸಂ. ಮಾಯಿನ್]

**ಮಾಯಿಕ** (ಗು). ೧. ಮೋಸದ: ಕಪಟದ. ೨. ತೋರಿಕೆಯ; ಭ್ರಾಂತಿಯ: ಈ ಮಾಯಿಕಸಂಬಂಧವಾದ ದೇಹವ ತಾನೆಂದೆಂಬ ಮೂಢಾತ್ಮರನೇನೆಂಬೆನಯ್ಯ (ಸಿದ್ಧೇವ. ೪೭-೦೩೪). (ನಾ). ೩. ಮೋಸದಿಂದ ಕೂಡಿದುದು; ಕಪಟದಿಂದ ಕೂಡಿದುದು: ಮಾಯಿಕಕ್ಕೆ ದೇವತ್ವವುಂಟೇ ಮರುಳುಮಾನವಾ ಮಹಾದೇವನೇ ದೇವನಲ್ಲದೆ (ಸಿದ್ಧೇವ. ೪೦-೦೦೮); ಮನದಿಂದ ಮಾಯಿಕಂ ಮನದಿಂದ ಮಂಗಲಂ ಮನದಿಂದ ಸಕಲಸಂಶಯಾದಿಗಳೆಲ್ಲ ಮನದಿಂದ ಸರಕಕಿಳಿವರು (ಗುರುಬೋ. ೨-೦೭೨); ಮಾಯಿಕವಿದು, ಮಾಧವನಿಸಲ್ಲದೆ ಪೆಬರಿನಾಗದು (ಅಮೃತ. ೦೨೯). ೪. ತೋರಿಕೆ; ಭ್ರಾಂತಿ; ಭ್ರಮೆ: ದೇವ ಹುಟ್ಟುವಾಗ ಮಾಯಿಕವ ಕೌಳಿಕವ ಧರಿಸಿ ಬಂದನೆಂಬರು ಅದು ಬಣ್ಣದ ಬಚ್ಚಣೆಯ ಮಾತು (ಮೋಳಿಮ. ೪-೧೨); ನಾನಾವಿಧವಾಗಿ ತೋರ್ಪುದ ಮಾಯಿಕವಳಿಯಿತ್ತು ಮಾಯಿಕವಳಿಯಿತ್ತಾಗಿ ನಿರ್ಮಾಯನಾದೆನು ಕಾಣಾ (ಸಿದ್ಧೇವ. ೧೮೮-೩೭೩). ೫. ಭ್ರಾಂತಿಯಿಂದ ಕೂಡಿದುದು; ಭ್ರಮೆಯಿಂದ ಕೂಡಿದುದು: ಪುಣ್ಯಪಾಪಫಲಾನುಭವಕ್ಕಾಗಿ ಈಶ್ವರನಿಗೆ ಶರೀರವಿಲ್ಲದಿದ್ದರೂ ಉಪಾಸಕರ ಅನುಗ್ರಹಕ್ಕಾಗಿ ಮಾಯಿಕವಾದ ಶರೀರವನ್ನು ಅವನು ಸ್ವೀಕರಿಸುವನು (ಭಾರದ. ೨೩೭). ೬. ಮಾಯೆಯನ್ನುಂಟುಮಾಡುವವನು: ಅದ್ವೈತ ವೇದಾಂತದಲ್ಲಿ . . . ಜಗದ್ವ್ಯಾಪಾರಕ್ಕಾಗಿ ಕಲ್ಪಿತನಾದ ಸಗುಣಮೂರ್ತಿ ಎನಿಸಿದ ಈಶ್ವರನು ಮಾಯಿಕನೂ ಅವನಿಂದ ನಿರ್ಮಿತನಾದ ಪ್ರಪಂಚ . . . ಸ್ವಪ್ನಸದೃಶವೂ ಆಗಿವೆ (ಕಲ್ಪಿ. ೩೨). ೭. ಮಾಯೆಗೆ ಒಳಗಾದವನು: ಮಾಯಾಶಕ್ತಿಗೆ ಒಳಪಟ್ಟವನು: ಮುಳುಗುವಾತ ಮುಳುಗುವವನನೆತ್ತಬಲ್ಲನೆ ತಾ ಮಾಯೆಯೊಳಗಾಗಿ ಮಾಯಿಕರ ತನ್ನ ಪಾದಾಂಬುವಿಂ ಪರಿಹರಿಪೆನೆಂಬವ ತೆಗೆದುಕೊಂಬವ ಇವರಿರ್ವರೂ ಮುಳುಗಿ ಯಮಪಾಶಕ್ಕೊಳಗಾದರು ನೋಡಾ (ಸಿದ್ಧವ. ೭೧-೨೩೦). ೮. ಗಾರುಡಿಗ; ಐಂದ್ರಜಾಲಿಕ; ಮಾಯಾವಿ: "ದಾಂಡಾಜನಿಕಃ, ಕುಹಕಃ . . . ಮಾಯಾವೀ, ಮಾಯಿಕಃ, ಮಾಯಿಾ — ಈ ೧೧ ಮಾಯಾವಿ" (ಹಲಾಯು. ೩೮-೦೯೪). ೯. ಮೋಸಗಾರ; ಕಪಟಿ. ೧೦. = ಮಾಯಾಮಲ ೧: ತಾ ಮಾಡಿದೆನೆಂದಡೆ ತನ್ನ ಕೆಳಗಣವೆ ಆಣವ ಮಾಯಿಕ ಕಾರ್ಮಿಕಮಲಂಗಳು (ಮೋಳಿಮ. ೩೩-೦೩೭). [ಸಂ.]

**ಮಾಯಿಕಮಲ** (ನಾ). = ಮಾಯಾಮಲ ೧: ಧರ್ಮವ ನುಡಿವಲ್ಲಿ ಕ್ರಿಯಾಧರ್ಮ ನಿರ್ಮಲವ ನುಡಿವಲ್ಲಿ ಮಾಯಿಕಮಲಂ ನಾಸ್ತಿ ಕಾಯ

ಉಳ್ಳನ್ನಕ್ಕ ಪೂಜೆ ಜೀವವುಳ್ಳನಕ್ಕ ನೆನಹು (ಶಿವ. ೪. ೬೬೪-೦೯೬೯).
[ಸಂ.]

**ಮಾಯಿರ್ಮ** (ನಾ). ಒಬ್ಬಾತನ ಹೆಸರು : ಬೆಳ್ವೊಲಂ ಮೂನೂಱುಮಂ ಮಹಾಸಿರಿವನ್ತನಾಳೆ ಮುಳ್ಗುನ್ದ (ದ) ಪನ್ನೆರಡುಮುಂ ಮಾಯಿರ್ಮ್ಮನಾಳೆ ಸಿರಿವುರಕೆ ಬಗೆಗ ಪೆರ್ಗ್ಗಡೆವೃನ್ದಮಾಗುತ್ತಿರೆ (ಎಇ. XXVI. ೬೨-೦೦ ; ೯೦೮). [ಮಾಯಿ + < ಪರ್ಮ$_3$]

**ಮಾಯಿಸು** (ಕ್ರಿ). ಗಾಯ, ಹುಣ್ಣು ಮೊದಲಾದುವುಗಳನ್ನು ವಾಸಿ ಮಾಡು, – ಗುಣಪಡಿಸು : ಮಾಯೆಯೊಮ್ಮೊಮ್ಮೆ ತೋರುವಳು ವಿಂಗಿಲಕ್ಕರೆಯ ಮಾಯಿಪಳು ಗಾಯಂಗಳನ್ನು (ಪಂಚಶು. ೦೪೭).
[ಮಾಯು$_1$ ( < ಮಾಯ್) + – ಇಸು$_3$]

**ಮಾಯಿಾಯು** (ನಾ). = ಮಾಯಾಮಲ ೧ : ಯಾವ ಪುರವು . . . ಆಣವ, ಮಾಯಿಾಯು, ಕಾರ್ಮಿಕವೆಂಬ ಮೂರುಮಲಗಳನ್ನು ನಾಶ ಮಾಡುವ ತೀರ್ಥವೆಂದು ಪ್ರಸಿದ್ಧವಾದ ಮಲಾಪಹಾರೀನದಿಯ ತೀರದ ಕ್ಷೇತ್ರವಾಗಿರುವುದೊ . . . ಆ ಐಪುರಿಯನ್ನು ವಂದಿಸುವೆನು (ಶಿವಾಸಿ. ೩_೬ ಅವಿ) ; ಆಣವ ಮಾಯಿಾಯುಮಲಗಳಿಂದಲೂ ಅಂತಃಕರಣ ಇಂದ್ರಿಯ ದೇಹಗಳಿಂದ ಕೂಡಿದ ಜೀವಾತ್ಮನು ಸುಖದುಃಖಗಳನ್ನನುಭವಿಸುತ್ತಾನೆ (ಶಿವತ. ೨೦೪). [ಸಂ.]

**ಮಾಯು$_1$** 'ಮಾಯ್' ನೋ.

**ಮಾಯು$_2$** (ನಾ). ೧. ಮಾಟ ; ಅಭಿಚಾರ. ೨. ಪಿತ್ತ : "ಮಾಯುಃ ಪಿತ್ತಂ – ಈ ೨ ಪಿತ್ತಂ" (ಪಂಚಾ. ೯೯–೧೩೦). ೩. ಸೂರ್ಯ. [ಸಂ.]

**ಮಾಯುಚ್ಛವ** (ನಾ). ದೊಡ್ಡ ಉತ್ಸವ ; ಮಹಾಸಮಾರಂಭ : ಲೇಸ ಮಾಡಿದೆ ನಿನ್ನ ದೆಸೆಯಿಂದ ಕಿಚ್ಚು ಸಂದಿದ ತೆಜನಪೊಲು ಮಾಯುಚ್ಛವಕೆ ವಿಂಗಿಲಾಯ್ತು ಪೂತಂಜಿ ನಿಚ್ಚಟವ ಸಾಹಸಿಕ ನೀನು (ಶುವ್ಯಾಪಿ. ೭೦೨. ೪-೬೨). [ಮಾ$_4$ + ಉಚ್ಛವ]

**ಮಾಯೂರ** (ಗು). ೧. ನವಿಲಿಗೆ ಸಂಬಂಧಿಸಿದ. ೨. ನವಿಲುಗರಿಯಿಂದ ಮಾಡಿದ. (ನಾ). ೩. ನವಿಲುಗಳ ಗುಂಪು. ಸವಿಹಾ. [ಸಂ.]

**ಮಾಯೂರಧ್ವಜ** (ನಾ). ನವಿಲಿನ ಗುರುತಿರುವ ಬಾವುಟ; ಮಯೂರದ ಚಿಹ್ನೆಯಿರುವ ಧ್ವಜ; ಇದು ಚಾಳುಕ್ಯರಾಜರಿಗೆ ಸಲ್ಲುತ್ತಿದ್ದ ಒಂದು ಬಿರುದು : ಎನೆ ಸಂದಿಬ್ಬ ಚಳುಕ್ಯರುನ್ನತಿಯುದಾರ್ಗ್ಗಂ ಬಣ್ಣಿಸ ಲ್ಬಾರದೆಂಬಿನೆಗಂ ತಾರಕವೈರಿಯೊಳ್ಪಡೆದ ಮಾಯೂರಧ್ವಜಂ ಪದ್ಮಲೋಚನನಿಂ ಪೆತ್ತ ವರಾಹಮುದ್ರೆ. . . ಛತ್ರವಿಪೊಪ್ಪೆ ಭೂತಳಮುಸಾಳ್ದರ್ಬ್ಬಾಹುವಿಕ್ರಾಂತದಿಂ (ಕಪಿ. ೨-೨-೨೪; 1058). [ಸಂ.]

**ಮಾಯೂರಿ** (ಗು). ೧. ನವಿಲಿಗೆ ಸಂಬಂಧಿಸಿದ. (ನಾ). ೨. ನವಿಲಿನ ಚಿತ್ರವುಳ್ಳ ಒಂದು ಬಗೆಯ ಆಯುಧ : ಬಿಲ್ಲು ತೀರು ಮಾಯೂರಿ ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿ ಸಾಧನವಿಶೇಷಂಗಳಿಂದಲುಂ (ವಿವೇ. ೨೬೩). [ಸಂ. ಮಾಯೂರೀ]

**ಮಾಯೆ** (ನಾ). ೧. ಗಾರುಡಿ ; ಇಂದ್ರಜಾಲ : ಮಾಯೆಯೊಳೆ ಗೆಲ್ದ ದಾನವನಾಯಕನಂ ನಗುವ ಮದನಸುತನುಪಹಾಸಿಪ್ಪಾಯೆ ಬೆಡಂಗಾಯ್ತು ಯಶಶ್ರೀಯ ಮನೋಹರಸಿತಪ್ರಸಾಧನರುಚಿವೋಲ್ (ಜಗಪಿ. ೦೬-೦೩೨). ೨. ಮೋಸ ; ವಂಚನೆ ; ಕಪಟ : "ಮಾಯೆಯೆ[ಶಾಕಾಂ. ಯುಪೆ]ನೆ ವಂಚ್ಚನಕ್ಕು" (ಮಂಗರಾ. ೦೦೨-೩); ಸರ್ವಸ್ವವನು ನೆಜೆ ಕವರಿ ಗೋಟಿ ಗೊಳಿಸುವ ಬಲ್ಮೆಗಳ ಬಲ್ಲಾಟವಿಕ ಬಹುವಿಧದ ಮಾಯೆಯ ಬೇಟಕಾತಿಯ ರೊಪ್ಪಿದರು ನರನಾಥನಿದಿರಿನಲಿ (ಕೂರಣ. ೦-೩-೩೦). ೩. ಮಿಥ್ಯೆ; ಭ್ರಮೆ ; ಭ್ರಾಂತಿ : ಯುವತಿಯಲಿ ನೋಟಬೇಟದಿ ಕೂಟವನು ಪಡೆದು ಕಾಯುಮವಳಿಗಧೀನವಾಗಿರೆ ಗಾಯವಡೆದಂಗಜನ ಬಾಣಕೆ ಬಾಯ ಕಿಸಿ ವಾಯಾಸಗೊಂಬುದೆ ಮಾಯೆ (ಅಮೃತ. ೨-೭೮): ಮಾಯೆಯುನು ನೀಗಿ ! ನನ್ನಂತೆ ಲಾಂಗೂಲಯಜ್ಞದಿಂ ನವತೇಜಪುಣ್ಯಗಳ ಗಳಿಸಿ ಜೀವನ್ಮುಕ್ತರಾಗಿ (ಕಂಠೀ. ೪೩-೦೦). 'ಮಾಯೆವಿಡಿ' ಪರಾ. ೪. ಅಜ್ಞಾನ; ತಮೋಗುಣ : ಕೂಡಲಸಂಗನ ಕೂಡಿಹೆನೆಂದೊಡೆ ತಾನೆನ್ನ ಮುಂದುಗೆಡಿಸಿತ್ತು ಮಾಯೆ (ಬಸವ. ೦೪). ೫. ದಿಗ್ಭ್ರಮೆ : ನಮ್ಮದಿಯೊಂದು ಕುಟುಂಬ ಮರು ದಿನ ಮುರಿಯುವದಿತ್ತು. ಪ್ರತಿಯೊಬ್ಬರಿಗೂ ಮಾಯೆ ಆವರಿಸಿತ್ತು. (ಸ್ವ.೩೩. ೩೦೭). ೬. ಮರುಕ ; ಅನುಕಂಪ. ೭. ಅತಿಯಾದ ಪ್ರೀತಿ ; ವ್ಯಾಮೋಹ : ಧನದ ಮೇಲಿನ ಅವರ ಮಾಯೆ ವಿಪರೀತ ಹೆಚ್ಚು (ಐತ್ರ್ಯ. ೩೦೭). ೮. ಮನುಷ್ಯನಿಗೆ ಅಜ್ಞಾನವನ್ನುಂಟುಮಾಡಿ ವ್ಯಾಮೋಹವನ್ನು ಬರಿಸುವ ಶಕ್ತಿ : ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ. . . ಈ ಮಾಯೆ ಕಳೆಯೊಡೆಯೆನ್ನಳವಲ್ಲ (ಬಸವ. ೦೩). ೯. ಪಾರ್ವತಿ ; ದುರ್ಗೆ. ೧೦. ಲಕ್ಷ್ಮಿ. ೧೧. ಪಾರ್ವತಿಯ ತಾಮಸಕಳೆಯ ಒಂದು ರೂಪ : ಅಂಬಿಕೆ ತನ್ನ ತಾಮಸಕಳೆಯ ಮೂರುತಿಯಾದ ಮಾಯೆಯನಿಳೆಯೊಳುದಯಿಸಿ ಯಲ್ಲಮನ ನೀನಜೆದು ಬಾಯೆನಲು (ಪ್ರಭುಲಿಂ. ೨-೪೦). ೧೨. ಬ್ರಹ್ಮನಿಂದ ಭಿನ್ನವಾಗಿರುವಂತೆ ಮತ್ತು ಸತ್ಯವಾಗಿರುವಂತೆ ತೋರುವುದು ; ಪ್ರಪಂಚದ ಪೂರ್ವಸ್ಥಿತಿ ; ಪ್ರಕೃತಿ : ಪ್ರಕೃತಿಯೆಂದರೆ ಮೂಲಾಜ್ಞಾನ, ಮಾಯೆ, ಅವಿದ್ಯೆ ಮೊದಲಾದ ಶಬ್ದಗಳಿಂದ ಹೇಳಲ್ಪಡುವ ಪ್ರಪಂಚದ ಪೂರ್ವಸ್ಥಿತಿ (ಹಿಂದಶಾ. ೦೯೪). ೧೩. ಬುದ್ಧಿ ; ಪ್ರಜ್ಞೆ. ೧೪. ದರ್ಪ ; ಸೊಕ್ಕು. ೧೫. ಮೂರ್ಖತನ. ೧೬. [ಶೈವ] ಐದು ಬಗೆಯ ಪಾಶಗಳಲ್ಲಿ ಒಂದು ; ಮನುಷ್ಯನಿಗೆ ಅನಾದಿಯಾಗಿರುವ ಅಶುದ್ಧಿ : ಮಲ, ಕರ್ಮ, ಮಾಯೆ, ಮಹಾಮಾಯೆ, ತಿರೋಧಶಕ್ತಿಯೆಂದು ಪಾಶ ಐದುವಿಧ (ಹಿಂದಶಾ. ೨೯೬). ೧೭. [ದ್ವೈತ] ಹೃದಯಕಮಲದಲ್ಲಿರುವ ಹನ್ನೆರಡುದಳಗಳ ಹನ್ನೆರಡುರೂಪಗಳಲ್ಲಿ ಒಂದು : ಹೃದಯಕಮಲದಲ್ಲಿರುವ ೧೨ ದಳಗಳಲ್ಲಿ ೧೨ ರೂಪಗಳು, ಅವು ಶಕ್ತಿ, ಪ್ರತಿಷ್ಠಾ, ಸಂವಿತ್, ಸ್ಫೂರ್ತಿ, ಪ್ರವೃತ್ತಿ, ಪರಾ, ವಿದ್ಯಾ, ಮತಿ, ನಿಯತಿ, ಮಾಯಾ, ಕಾಲ, ಪುರುಷ ಹೀಗೆ ೧೨ ರೂಪಗಳು (ಹಜಾರ. ೪-೨೬ ತಾತ್ಪರ್ಯ). ೧೮. [ಜೈನ] ಇಪ್ಪತ್ತೈದು ವಿಧವಾದ ಕ್ರಿಯೆಗಳಲ್ಲಿ ಒಂದು : ಪಂಚವಿಂಶತಿಕ್ರಿಯೆಗಳು. ೧. ಸಮ್ಯಕ್ತ್ವಕ್ರಿಯೆ (ದೇವಗುರುಶಾಸ್ತ್ರಾದಿ ಪೂಜೆ . . . ೨೩. ಮಾಯೆ (ಜ್ಞಾನ ದರ್ಶನಾದಿಗಳಲ್ಲಿ ಕಪಟೋಪಾಯ). ೨೪. ಮಿಥ್ಯಾದರ್ಶನ (ಪರರ ಮಿಥ್ಯಾತ್ವ ಕ್ರಿಯೆಗೆ ಉತ್ತೇಜನ). ೨೫. ಅಪ್ರತ್ಯಾಖ್ಯಾನ (ಸಂಯಮದಲ್ಲಿ ಉದ್ಯುಕ್ತನಾಗದಿರುವುದು) (ಜೈಪರ. ೬೪).' ಪಂಚವಿಂಶತಿಕ್ರಿಯೆ ' ಪರಾ.

ಮಟಮಾಯೆ = ಮೋಸಗಾತಿ ; ವಂಚಕಿ : ದಿಟ್ಟೆಯರು ಕುಟಿಲೆಯರು . . . ಬೆಟ್ಟಿಯರು ಮಟಮಾಯೆ [ಶಾಕಾಂ. ಯು]ಗಳು ಬಲು ಮುಂದು ಕಾತಿಯರು (ಐಕಥ. ೪೦-೩೬). [ಸಂ. ಮಾಯಾ]

**ಮಾಯೆವಿಡಿ** (ಕ್ರಿ). ಭ್ರಾಂತಿಗೆ ಒಳಗಾಗು : ಮಾಯೆವಿಡಿದು ಜೀವಿಸುವ ಜೀವಕನಲ್ಲ ಅದೇನು ಕಾರಣವೆಂದಡೆ ಆತ ಘನಲಿಂಗವಿಡಿದು ಜೀವಿಸುವ ಜೀವಕನಾಗಿ (ತನ್ನವ. ೪. ೩೬-೦೩೩). [ಮಾಯೆ + ಪಿಡಿ$_1$]

**ಮಾಯ್ದ** ' ಮಾಯ್ ' ಪರಾ.

**ಮಾಯ್ದು** ' ಮಾಯ್ ' ಪರಾ.

**ಮಾಯ್ಮುರುತಾಪು** ' ಮಾಯಾಮುರತಾಪು ' ನೋ.

**ಮಾರ್** (ಸಪೂರೂ). 'ಮಾಜು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : ' ಮಾರ್ತಲೆ ', ' ಮಾರ್ದನಿ', ' ಮಾರ್ಪಡು ' ಪರಾ. [<ಮಾಱು]

**ಮಾರ** (ನಾ). ೧. ಕೊಲ್ಲುವಿಕೆ ; ವಧೆ. ೨. ಸಾವು ; ಮರಣ. ೩. ವಿಘ್ನ ; ತಡೆ ; ಅಡ್ಡಿ. ೪. ಮನ್ಮಥ ; ಕಾಮ : " ಪ್ರದ್ಯುಮ್ನಃ . . .

ಪ್ರದನ್ನಃ, ಮಾರಃ, ಸ್ಮರಃ . . . ಮನೋಭವಃ—ಈ ೨೮ ಕಾಮ(ದೇವ)ನ ಪೆಸರ್ '' (ಶಬ್ದಮ. ೬-೩೩); ಮಾರಂ ಬರಿಯ್ಗೊರ್ಚಿದ ಮಾರಣ ಹೋಮಾಗ್ನಿಧೂಮಪಟಲಂಗಳವೋಲ್ ಕಾರ ಮುಗಿಲ್ ನೆಗೆದುವು ರತಿ ನೀರೆಱೆದೋವಿದ ತಮಾಲಷಂಡಂಗಳವೋಲ್ (ಶಂಪಾಪು. ೬-೧೬೦); ವಿಷಯಾಭಿಲಾಷೆಯಲ್ಲಿ ವಿರಾಗವು ನೆಲೆಯಾಗಿ ಅಷ್ಟಾವರಣದ ಆಚಾರವೆ ಅಂಗವಾದಡೆ ಮರುಳುಗೊಳಿಪ ಮಾರನ ಮಾಟವು ದೂರಾಗುವುದಯ್ಯಾ (ತನ್ನವ. ೪. ೪೬೩-೦೧೪೩); ಪದೆದು ಮಾರನ ದಾಳಿ ಬಂದುದು ಕಾವರಿಲ್ಲ ಕಟಾ (ಹರಿಶ್ಚ. ೨-೭೮). ೩. [ಬೌದ್ಧ] ಪಾಪಪುರುಷ; ದುಷ್ಟ : ಪರಿನಿರ್ವೃತಿಸೆ ಮಾರ, ಬದುಕಿಂದ ತೊಲಗೇ ಬ್ರಹ್ಮಚರ್ಯದ ಧರ್ಮ ಬುದ್ಧಿಸವ ಮುನ್ನ (ಬೃಕಾವ. ೬೩-೧೭).

**ಮಾರನಯ್ಯ** = ಮನ್ಮಥನ ತಂದೆ; ವಿಷ್ಣು : ಆರು ವರ್ಣಿಸ ಬಹುದು ಮಾರನಯ್ಯನ ಭಕ್ತಿ ಸೂರೆಗೊಂಡವರ ಕಥೆ ಧಾರುಣಿಗೆ ಹೊಸದು (ಜಗದಾ. ೦೩೩). [ಸಂ.]

**ಮಾರಂಕ** 'ಮಾಱಂಕ' ನೋ.

**ಮಾರಂದೆಯ** (ನಾ). ಒಬ್ಬಾತನ ಹೆಸರು : ಸಮಣರು ಮರುದೂರ ಮಾರನ್ದೆಯರ್ ವೆದಿಜ್ಞ(?)ದರ್ ಕಿತ್ತೂರ ಮಯ್ಸರು . . . ಸಾಕ್ಷಿ (ಎಇ. XIV, ೨೪೨-೫೬; ಸು. ೯ನೆಯ ಶ). [ ? ]

**ಮಾರಂಬು** 'ಮಾಱಂಬು' ನೋ.

**ಮಾರಕ** (ಗು). ೧. ನಾಶಕಾರಕವಾದ ; ಹಾನಿಕಾರಕವಾದ. (ನಾ). ೨. ನಾಶವನ್ನುಂಟು ಮಾಡುವಂಥದು ; ಹಾನಿಕಾರಕವಾದುದು : ಈ ವಸ್ತುಗಳೆಲ್ಲವೂ ಮೋಹಕವಾಗಿರುವಷ್ಟು ಮಾರಕವಾಗಿರುತ್ತವೆ (ಶೀಮಂತ. ೪೨೧); ಸಾಹಿತ್ಯವನ್ನು ಪಾಂಡಿತ್ಯಸಿದ್ಧಾಂತದ ಹಾಗೂ ನಿರ್ಜೀವ ಅನುಕರಣೆಯ ಕಿರುದಾರಿಗೆ ತಳ್ಳಿ ಎಷ್ಟರ ಮಟ್ಟಿಗೆ ಮಾರಕವಾಗಿದೆ ಯೆಂಬುದನ್ನೂ ಪರಿಗಣಿಸಬೇಕು (ಸಾಹಿತ್ಯ. ೪೨). ೩. ಕೊಲ್ಲುವವನು; ನಾಶಮಾಡುವವನು : ತಾರಕನು ಮಾರಕನಾದಾಗ ರತಿಯಲ್ಲದೆ ಇನ್ನಾರು ಅವನನ್ನು ಸಂಹರಿಸಬಲ್ಲರು ? (ಅಶ್ವಮೇ. ೫೯). ೪. ಪ್ರಾಣಹಾನಿ ಯನ್ನುಂಟು ಮಾಡುವಂಥ ಕಾಲರಾ, ಪ್ಲೇಗು, ಸಿಡುಬು ಮುಂತಾದ ಭಯಂಕರರೋಗ. ೫. ಗಿಡುಗ; ಡೇಗೆ. ೬. ಪ್ರಳಯ ಕಾಲದಲ್ಲಿ ಆಗುವ ಸರ್ವಪ್ರಾಣಿಗಳ ನಾಶ. ೭. [ಜ್ಯೋತಿ] ಜಾತಕದಲ್ಲಿ ಎರಡು ಮತ್ತು ಏಳನೆಯ ಸ್ಥಾನಗಳ ಅಧಿಪತಿ ; ☞ ಎರಡು ಮತ್ತು ಏಳನೆಯ ಸ್ಥಾನಗಳು ಹಾನಿಕಾರಕವಾದುವೆಂಬ ನಂಬಿಕೆ ಇದೆ. [ಸಂ.]

**ಮಾರಕತ** (ಗು). ೧. ಮರಕತಮಣಿಗೆ ಸಂಬಂಧಿಸಿದ. (ನಾ). ೨. ನವ ರತ್ನಗಳಲ್ಲಿ ಒಂದು; ಪಚ್ಚೆ : ಚಿಕುರಂ ಪ್ರಜ್ವಲಿಪಿಂದ್ರನೀಲನಿಕರಂ ಬಾಯ್ವಿದ್ರುಮಂ ಛಾಯೆ ಮಾರಕತಚ್ಛಾಯೆ ನಖಾಳಿ ವಜ್ರಮಮಳಂ ದಂತೋತ್ಕರಂ ವ್ಯಕ್ತಮೌಕ್ತಿಕಂ (ಅರ್ಧನೇ. ೨-೦೩). [ಸಂ.]

**ಮಾರಕಾಣಿಕೆ** (ನಾ). ಒಂದು ಬಗೆಯ ತೆರಿಗೆ : ಅಡಿಕೆಸುಂಕ ಮಗ್ಗವು ಮಾರಕಾಣಿಕೆ × × × ಟು ಹೊಜಿವಾಜು ಪೊಟ್ಟುಸುಂಕ . . . ದೇವರಿಗೆ ವಸಂತೋತ್ಸವ ತಿರುನಾಳ ಬಿಜಯಂಗೆಯುವದಕ್ಕೆ ಆಚಂದ್ರಾರ್ಕಸ್ಥಾಯಿ ಯಾಗಿ ಬಿಟ್ಟೆವು (ಎಕ. VI (R), ಶ್ರೀರಂಗ. ೩-೦೯; 1431).

[ಮಾರ್, + ಕಾಣಿಕೆ (< ಕಾಣ್ಕೆ)]

**ಮಾರಕೇಳಿ** (ನಾ). ಕಾಮಕೇಳಿ; ರತಿಕ್ರೀಡೆ : ನೀನವಳ ಮನೆಗೆ ಬಂದು ಮಾರಕೇಳಿಯ ಬಿಟ್ಟು ಪೋಪ ಕಾರಣವನು ಪೇಳು (ತೀಮಂಸಾಂ. ೩-೩೨).

[ಸಂ. ಮಾರಕೇಲಿ]

**ಮಾರಕ್ಕ ಅರಸ** (ನಾ). ಒಬ್ಬಾತನ ಹೆಸರು : ಮಾರಕ್ಕಅರಸರ್ಬ್ಬನವಾ [ವಾ]ಸಿ ಪನ್ನಿಚ್ಛಾಸಿರಮನಾಳೆ (ಎಕ. VI, ೦೬೩-೦; ಸು. 780); ಸ್ವಸ್ತಿಶ್ರೀ ದೋರಪ್ಪರಸರ್ ಪೃಥಿವೀರಾಜ್ಯಂಗೆಯೆ ಮಾರಕ್ಕಅರಸರ್ ಬನವಾಸಿ ನಾಡಾಳೆ (ಕೌಇ. XX, ೧೦-೧; ?). [ಮಾರಕ್ಕ + ಅರಸ, ]

**ಮಾರಗ,** ಮಾರುಗ (ನಾ). ಒಬ್ಬಾತನ ಹೆಸರು : ಅಯ್ದುಗನುಂ ಮಾಳನುಂ ಮಾರಗನುಂ ನಾಗ × × × ಮುದ್ದನು ಒಡನೆ ಸಿದ್ಧಿಸಿದರ್ (ಎಕ. VII, ಶಿವಮೊ. ೨೪-೬ ; 970 ?). **ಮಾರುಗ :** ಸುಗ್ಗಗಾವುಣ್ಡನ ಮಗ ಬಸವನ × × × ಮಂದಜ್ಞರ ಮಾರುಗಂ ತಲೆಗಡಿದ (ಎಕ. V, ಅರಸೀ. ೦೬೩-೩ ; 908). [ < ಮಾರ ]

**ಮಾರಗವುಂಡ** 'ಮಾರಗಾಮುಂಡ' ನೋ.

**ಮಾರಗಾಮುಂಡ,** ಮಾರಗವುಂಡ, ಮಾರಗಾವುಂಡ (ನಾ). ಒಬ್ಬಾತನ ಹೆಸರು : × × × ಕಱು ಪ್ರಥನಿಗಗಾಮುಣ್ಡ ಮಾರಗಾಮುಣ್ಡ × × × ಪ್ಪುಯ್ಯ ಬರೆದ ಬದಿಯ್ಯಮ್ಮಾ × × × (ಎಕ. III (R), ನಂಜನ. ೩೦೯-೬; ಸು. ೯ನೆಯ ಶ). **ಮಾರಗವುಂಡ :** ಮಾರಗವುಣ್ಡ ಸನ್ನಿ ಗವುಣ್ಡಗಂ ಏಚ್ಚಿದಿ ಬೊಗ್ಗಪಳ್ಳಿ ಮರಿಗಕುಮ್ಬುಣ್ಣಗಂ ಎಳಮಕ್ಕಳ್ಗೆ ಪೆಚ್ಚಿ ಪೊಗೆವೆಗ್ಗಯ ತೆಱೆಯ ಬಿಟ್ಟ ಇ × × × (ಎಕ. III (R), ನಂಜನ. ೩೦೩-೭ ; ಸು. ೯ನೆಯ ಶ). **ಮಾರಗಾವುಂಡ :** ಗೆಲ್ಲೂರ ಮಾರಗಾವುಣ್ಡ × × × ಕೆಱೆಯ ಗಾವುಣ್ಡ ಪಸಿದು ದೇಗುಲವ ಮಾಡಿಸಿದೊಡೆ (ಎಕ. VII, ಶಿವಮೊ. ೨೨-೩; 963). [ ಮಾರ + ಗಾಮುಂಡ ]

**ಮಾರಗಾವುಂಡ** ' ಮಾರಗಾಮುಂಡ ' ನೋ.

**ಮಾರಗೊಟ್ಟೆಱ** (ನಾ). ಒಬ್ಬಾತನ ಹೆಸರು : ಮಾರಗೊಟ್ಟೆಱರೊಂದು ತೋಟ್ಟಂ ಪೊಯ್ದಾರ್ (ಪ್ರಕಆ. ೦೯೨೫, ೦೦೬-೨೫; ೩ನೆಯ ಶ).

[ ಮಾರ + < ಗೊಟ್ಟೆಱೆಯ ]

**ಮಾರಜನಕ** (ನಾ). ಮನ್ಮಥನ ತಂದೆ ; ವಿಷ್ಣು : ಮಾರಜನಕನ ಮೋಹ ನಾಂಗನ ಸೇರಿ ಸುಖಿಸಲು ಹಾರೈಸಿ ಬಂದೆವು (ಭಕಂದ. ೨-೦೦೨ ಆನುಕ್ಕಲ). ಮಾರಜನಕಂ ವಿಪುಳಸಾರಸಭವಂ ದಿವಿಜಪಾರವರನುಂ . . . ಸಮುದ ವಾರಣಮುಖಿಂ ನವಮಯೂರಪತಿವಾಹಂ ಸೇರಿ ನೆರೆದೊಪ್ಪಿರೆ (ರಾಜಶೇ. ೦೯-೬೬). [ಸಂ.]

**ಮಾರಜನಕಿ** (ನಾ.) ಮನ್ಮಥನ ತಾಯಿ ; ಲಕ್ಷ್ಮಿ : ಕ್ಷೀರವಾರಿಧಿಕನ್ನಿಕೆ ಮಾರಜನಕೆ ಈರೇಳು ಲೋಕನಾಯಿಕೆ ವಾರವಾರಕೆ ನಿನ್ನಾರಾಧಿಪುದಕೆ ಚಾರುಮನಸು ಕೊಡು (ಏಕಾಕ್ಕ. ೫೫ ಪಲ್ಲವಿ). [< ಸಂ. ಮಾರಜನಿಕಾ]

**ಮಾರಟಬೋಯ** (ನಾ). ಒಬ್ಬಾತನ ಹೆಸರು : ಮಾರಟಬೋಯಸ್ಯ ಕೌಣ್ಡಿಲ್ಯಗೋತ್ರ ವೆಣ್ಣೆಶರ್ಮ್ಮಣ (ಇಆ. VII, ೧೮೬-೯೦ ; 668).

[ ☞ ಇದು ' ಮಾರಟ್ಟಬೋಯ ' ಎಂದಿರಬಹುದು ]

**ಮಾರಡಿ,** (ನಾ). ಒಬ್ಬಾತನ ಹೆಸರು : ಅನೆಸಾಸಲಾ ಬೀರಡಿಗಳುಂ ಮಾರಡಿಗಳುಂ ಕೊತ್ತನೂರಾ ಕುನ್ದಪ್ಪಡಿಗಳುಂ . . . ಇ ಪೊಲನಂ ನಡಯಿಸಿದೋರ್ (ಎಕ. XVI, ಗುಬ್ಬಿ. ೬೩-೫೩; 733). [ ಮಾರ + ಅಡಿ, ]

**ಮಾರಡಿ,** (ನಾ). ಸತ್ಕಾರ ; ಉಪಚಾರ : ಭೋಜನಕೆ ಮಿಗಿ ಲೀಂತಿರುವ ಮಾರಡಿಯಾಯ್ತು ನಮಗಿನ್ನೇನು ಸಾಲದೆಲೇ (ತಿಪದಾ. ೨೨-೨೦); ಆ ಸಾಧನೆಗೆ ಆದಿವಂಗಳವಾಗಿ ಅಣ್ಣಾಜಿಯವರ ದಳವಾಯ್ತನಕ್ಕೆ ಬಿಡುಗೆ ವೀಳೆಯದ ಮಾರಡಿಯೇಳುವುದು (ಚಿಕ್ಕಂ. ೦೬೯-೬). [ ? ]

**ಮಾರಣ** (ನಾ). ೧. ಕೊಲೆ ; ವಧೆ ; ಸಂಹಾರ : "ಮಾರಣಂ, ನಿಶರಣಂ, ನಿರ್ಬರ್ಹಣಂ . . . ಪ್ರಮಯಾ, ಹಿಂಸಾ, ಸಂಜ್ಞಪನಂ — ಈ ೨೧ ಕೊಲೆ" (ಶಬ್ದಮ. ೬೮-೩೦೩); ಅಪಹರಣ ಮಾರಣ ವಶೀಕರಣ ದ್ವೇಷಣಾದಿಗಳ್ಗೆ ಪೆಱವುಮಿಾ ದೊರೆಯುವರ್ಕೆ ಓರಿದುಮಾಗವುಂಗಳೆ ಪ್ರಮಾಣಂಗಳ್ (ಕಾದಂಬ. ೬೪೬) ; ಆರು ಬಣ್ಣಿಸಬಹುದು ದೈತ್ಯನ ಮಾರಣದ ಹೋಮ ವನು (ಕೌಶಿಲ. ೩೬-೨೮). ೨. ಅಳಿವು ; ನಾಶ : ದುರ್ಮತಿಯಪ್ಪ ರಾವಣಂಗೀ ರಣಕೇಳಿ ಮಾರಣಮನೀಯದೆ ಕೆಮ್ಮನೆ ಸೈತೆ ಪೋಕುಮೇ

(ಶಂಗಾಪು. ೧೦-೧೬೩) ; ನೇರಿದುದು ಸ್ನಿಗ್ಧಮುಮುತೋರಸ್ಯಮುದುಷ್ಟ ನಾಲ್ಕುರೇಪೆಯು ತುರಗಂ ಮಾರಣಮುಂ ವಿಣ್ಮೂತ್ರವಿಕಾರದಿನಿರ್ಪತ್ತು ವರ್ಷದೊಳ್ ಗತಮಕ್ಕುಂ (ಅಶ್ವಶಾ.೩-೨೬). ೩. ವೈರಿನಾಶಕ್ಕಾಗಿ ನಡೆಸುವ ಮಾಟ. ಮಂತ್ರ ಮುಂತಾದುವು : ಅವರು ಕುಪಿತರಾಗಿ ಮಂತ್ರ, ಮಾಟ, ಮಾರಣಗಳನ್ನು ಮಾಡಿದರೆ ಇನ್ನೂ ಪಾಡುಪಡಬೇಕಾದೀತಲ್ಲ ಎನಿಸತೊಡಗಿತ್ತು (ಮಂಬಣ್ಣ. ೩೩೬). ೪. ಒಂದು ಬಗೆಯ ವಿಷ. [ಸಂ.]

**ಮಾರಣಮಂತ್ರ** (ನಾ). ವೈರಿನಾಶಕ್ಕಾಗಿ ಪ್ರಯೋಗಿಸುವ ಮಂತ್ರ : ಮಾರಣಮಂತ್ರನಾದವೆನಿಸಿತ್ತು ವಿರೋಧಿಗೆ ಶಾಂತಿಕಕ್ರಿಯಾಕಾರಣಮಂತ್ರ ನಾದವೆನಿಸಿತ್ತು ಧರಿತ್ರಿಗೆ . . . ಅಚ್ಚರಿ ನಿನ್ನ ಚಾಪಟಂಕಾರನಿನಾದವೊಂದೆ ಪಲವುಂ ತೆಜಂ ತಳೆದಂದದಮಾಪುದೋ (ಶಂಗಾಪು. ೪-೭೭) ; ಜಪಿಸಬಾರದು ಜಪಿಸಬಾರದು ಮಾರಣಮಂತ್ರಗಳ (ಸಿದ್ಧಪ. ೪. ೦೪೦-೪೬೬). [ಸಂ.]

**ಮಾರಣಹೋಮ** (ನಾ). ೧. ಶತ್ರುನಾಶಕ್ಕಾಗಿ ಮಾಡುವ ಹೋಮ : ಮಾರಂ ಬಿರಯಿಗೊಡರ್ಚಿದ ಮಾರಣಹೋಮಾಗ್ನಿಧೂಮಪಟಲಂಗಳವೋಲ್ ಕಾರ ಮುಗಿಲ್ ನೆಗೆದುವು ರತಿ ನೀರೆಜೆದೋವಿದ ತಮಾಲಷಂಡಂಗಳವೋಲ್ (ಶಂಗಾಪು. ೬-೦೬೦) ; ಕಾಮುಂಕಾದಿಯ ಜನಕೆ ಮಾರಣಹೋಮವನು ತನ್ನಾಭಿಕುಂಡದಿ ಕಾಮುಕಿಮೃನು ಮಾಡಲೊಗೆದಾ ಧೂಮರೇಖೆಯೊಲು ರೋಮ ರಾಜಿಸುತಿರ್ಕು (ನಾಗಶ. ೨೭-೦೭). ೨. ನಾಶ : ಅಳಿವು : ದಾಸ ಕೂಟದವರಿಂದ ಧರ್ಮದ ಮಾರಣಹೋಮವಾಯಿತೆಂದು ಗಳಹುತ್ತಿದ್ದರು (ಕಥಾ. ೪೬೭). [ಸಂ.]

**ಮಾರಣ್ಣ** (ನಾ). ಒಬ್ಬಾತನ ಹೆಸರು : ಕಾದ × × ದೊಳೆ ಸತ್ತ ಹ್ಚಮ್ಮಣ್ಣಂ ಕಂಚಣ್ಣನ ತಮ್ಮ ಮಾರಣ್ಣಂಗೆ ಪೆರ್ಮಾಡಿಗಾವು (ಎಕ. III (R.), ಗುಂಡ್ಲು.ಪೇ. ೧೦೮-೪ ; 10ಶಿಮ ಶತ). [ಮಾರ + ಅಣ್ಣ$_{1}$]

**ಮಾರಥ** (ನಾ). ೧. ದೊಡ್ಡ ರಥ. ೨. ರಥದಲ್ಲಿದ್ದುಕೊಂಡೇ ತನ್ನನ್ನೂ ತನ್ನ ಸಾರಥಿಯನ್ನೂ ಕುದುರೆಗಳನ್ನೂ ರಕ್ಷಿಸಿಕೊಂಡು ಏಕಾಂಗಿಯಾಗಿ ಹತ್ತುಸಾವಿರಯೋಧರೊಡನೆ ಯುದ್ಧ ಮಾಡುವವನು ; ಮಹಾರಥ: ಉತ್ತರಕೋಸಲದ ಬಲುಚಂದವಾದ ಪ್ರದೇಶವನು ಮಾರಥನು ದಶರಥನು ತಂದು . . . ಹೊಂದಿದನು ದೇವೇಂದ್ರನಂದದೆ ವಿಮಲಕೀರ್ತಿಯನು (ಥಟಾಪಂ. ೬೯-೦). [< ಸಂ. ಮಹಾರಥ]

**ಮಾರನೆಯ** 'ಮಱು$_{1}$' ಪರಾ.

**ಮಾರನೇ** 'ಮಱು$_{1}$' ಪರಾ.

**ಮಾರಪುಲಿ** (ನಾ). ಒಬ್ಬಾತನ ಹೆಸರು : ಕೊವರಪೆಯ ಚಿಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಮಾರಪುಲಿಯುಂ (ಎಕ. XII, ಶಿರಾ. ೨೮-೨೨; 943). 'ಮಾದಪುಲಿ' ನೋ. [ಮಾರ + ಪುಲಿ]

**ಮಾರಭತಿ** 'ಮಾಱಿಫತ್ತು' ನೋ.

**ಮಾರಬ್ಬೆ**, ಮಾರಿಬೆ, ಮಾರಿಬ್ಬೆ (ನಾ). ೧. ಒಂದು ಕ್ಷುದ್ರದೇವತೆಯ ಹೆಸರು : ಮಾರಮ್ಮ : ಮಾರಬ್ಬೆ ಮಸಣಿ ವಾಸಣಿ ಬೀರಂ ಮೈಲಾರ ನೆಂಬವರ ನೋಂಪಿಗಳೊಳ್ ಪೋರುವರಂ ಪೊಲೆಯರ್ಮಂಧರೆಂತಿರೆ ಮುಟ್ಟಲಕ್ಕುಮೆಂಬರ್ಪಾರ್ವರ್ (ಸಮ.ಶ. ೯-೯೩). ೨. ಒಬ್ಬಾಕೆಯ ಹೆಸರು : ವಿಶ್ವಾಮಿತ್ರಗೋತ್ರದ ತೊಡಕ ಕೇಸಮಯ್ಯ ತನ್ನ ಪತ್ನಿ ಮಾರಬ್ಬೆ ಧರ್ಮಕ್ಕನುಕೂಲವಾಗುತ್ತಿರಲು (ಎಕ. VII, ಶಿಕಾಂ. ೨೬೭-೦೦; 1012). **ಮಾರಿಬೆ** : ೧. ಆರಾ ತೋಣ್ಣದಿಂ ಮೂಡಣ ತೋಣ್ಬಕಣ್ಣಮುಂ ಮಾರಿಬೆಚೆತಿಯಿಂ ಬಡಗಣ ಮಣ್ಣು ಮೋಲಿವೆಡೆ ವಿಚ್ಛಣ್ಣಗುಂ (ಎಕ. IV (R), ಎಳಂದೂ. ೦೬೯-೯; 10ಶಿಮ ಶತ). **ಮಾರಿಬ್ಬೆ**: ೨. ಮಾರಮ್ಮಯ್ಯನ ಪೆಣ್ಣಿಮ್ಮಾರಿಬ್ಬೆ . . . ಸಂನ್ಯಾಸನಂಗೆಯ್ದು ಮುಡಿಪಿದರ್ (ಎಕ. III (R), ನಂಜನ. ೨೦೦-೦; 10ಶಿಮ ಶತ). [< ಮಾರಿ$_{2}$ + ಅಬ್ಬೆ$_{1}$]

**ಮಾರರಮಣ** (ನಾ). ಲಕ್ಷ್ಮೀಪತಿ; ವಿಷ್ಣು : ಮಧುಸೂದನ ಮಾರರಮಣ ಮನೋಹರ ವಿಧಿ ಪಿತಮಂದ್ಯ . . . ಕುಶಲವಿಡೆನ್ನ (ಕಕಾಂ. ೬೨-೭). [ಸಂ.]

**ಮಾರಮಥನ** (ನಾ). ೧. ಮನ್ಮಥನನ್ನು ನಾಶಮಾಡಿದವನು: ಶಿವ : ಎಲೆ ಖಳ ಮಾರಮಥನನ ನೆರೆಯ ಹೊಕ್ಕರು ಬಿಡುವೆನೇ ನಿನ್ನ (ಗಿರಿಜಾ. ೩೬-೭೦); ಆ ರಾಕ್ಷಸಂ ಮರಂಬಡದು ಲೋಕಗಳ ಸಂಹಾರಮಂ ಮಾಡುತಿರೆ ಸರ್ವಜನಮೆಯ್ದೆಂದು ಮಾರಮಥನಂಗೆ ಮೊಱೆಯಿಡೆ (ಬಿಶ್ವಕ. ೩-೩-೯). ೨. [ಜೈನ] ಅರ್ಹಂತ ; ಜಿನ : ತ್ರಿಕರಣಶುದ್ಧಿಯೊಳಾ ರಾಜಕುಮಾರಂ ಮಾರಮಥನನಂ ಸ್ತುತಿಯಿಸಿ (ಅದಿಪು. ೯-೨). [ಸಂ.]

**ಮಾರಮಯ್ಯ** 'ಮಾರಮ್ಮಯ್ಯ' ನೋ.

**ಮಾರಮಾರಣ** (ನಾ). ಮನ್ಮಥನನ್ನು ಸಂಹರಿಸಿದವನು ; ಶಿವ : ವೀರಭಕ್ತಿಗೆ ಬೀರುವಲ್ಲಾ ಮಾರಮಾರಣ ನೀವು ಬಸವಕುಮಾರನಂ ಕೇತಯ್ಯ ನೊಡನೀಗಳೆ ಕಳುಹು ಕಳುಹು ಧಾರುಣಿಗೆ (ಬಸಕ್ಕ. ೩೩-೮೫). [ಸಂ.]

**ಮಾರಮ್ಮ$_{1}$**, ಮಾರ್ಯಮ್ಮ (ನಾ). ಒಬ್ಬಾತನ ಹೆಸರು : ಶೋ(ಸೋ)ಮವಂಶೋದ್ಭವ ಶ್ರೀಮಾರಮ್ಮಾಳ್ವರಸರ್ (ಎಕ. IX, ೨೨-೪; ಸು. 800). **ಮಾರ್ಯಮ್ಮ** : ಮಂದಿರೆಗೊಣ್ಣ ಕೊಪ್ಪರಗೇರಂಮರ್ಮ್ಮಂಗೆ ಮರಿಪ ವಿಪ್ಪರ್ಪತ್ತೊಮ್ಮತ್ರಚಿಳ್ಳಬಿದ್ದುಕೂರ ರಾವಿನಾಡ ಮಾರ್ಯಮ್ಮ ಮಮ್ಮ ಗಣಿಪರಾಮ ತುಱುಮಸಿಕ್ಕಿಸಿ ಅಟ್ಟಿ ಸತ್ತನ್ (ಎಕ. X, ಕುಳಗಾ. ೨೦೩-೨; 934). [ಮಾರ + ಅಮ್ಮ$_{1}$]

**ಮಾರಮ್ಮ$_{2}$** (ನಾ). ೧. ಕಾಲರಾ, ಪ್ಲೇಗು ಮುಂತಾದ ಭಯಂಕರ ಸಾಂಕ್ರಾಮಿಕವಾದ ರೋಗ ; ಪಿಡುಗು : (೯). ೨. (ಕಾಲರಾ, ಪ್ಲೇಗು ಇತ್ಯಾದಿ ಸಾಂಕ್ರಾಮಿಕರೋಗಗಳ ಅಧಿದೇವತೆಯೆಂದು ನಂಬಿರುವ ಒಂದು ಕ್ಷುದ್ರದೇವತೆಯ ಹೆಸರು : ಬಸವನ ಮಗ ಸೇರೂಗಾರ ಸುಜುಂಡನು ಹತ್ತುಮಂದಿ ಸೇವಾರ್ಥವಾಗಿ ಬಿಾ ಬಂಗಿಮಾರಂಮನ ಗುಡಿ ಮುಂದಣ ಪಕ ಅಂಕಣ ೧ ಮುಂದಣ ಪಾಶಾಳಂಕಣ ೩ ಸಹ ಬಿಾ ಮಾರಂಮನವರಿಗೆ ಉತ್ಸಹವಿಗ್ರಹ . . . ಅರ್ಪಿತ (ಎಕ. III (R), ನಂಜನ. ೩೪೦-೦೫; 1766). [ಮಾರಿ$_{2}$ + ಅಮ್ಮ$_{2}$]

**ಮಾರಮ್ಮಯ್ಯ**, ಮಾರಮಯ್ಯ (ನಾ). ಒಬ್ಬಾತನ ಹೆಸರು : ಮಾರಮ್ಮಯ್ಯನ ಪೆಣ್ಣಿಮ್ಮಾರಿಬ್ಬೆ ಅಪ್ಪೋಪವಾಸರುಸಿಮರ ಬುಶ್ರಯ್ಯನ ಅತ್ತಯ್ಯನ ಅಬ್ಬೆಗಳ್ ಸನ್ಯಾಸನಂಗೆಯ್ದು ಮುಡಿಪಿದರ್ (ಎಕ. III (R), ನಂಜನ. ೨೦೦-೩; 10ಶಿಮ ಶತ). **ಮಾರಮಯ್ಯ** : ಕುವ್ವಿಸೆಯಂ ಕಟ್ಟಿಜಿಸ್ತಿದ್ದರಸುಂ ಮಾರಮಯ್ಯನು ಕಿಟಿಲಸುಂಗೊಡೊಲ್ ರಾಜಮಾರಮ್ ಅಯ್ಯತ್ತಲ್ಲೆಯ್ಯಂ ಕೊಟ್ಟರ್ (ಎಕ. VIII, ಸೊರಬ. ೬೫-೬ ; 876). [ಮಾರಮ್ಮ$_{1}$ + ಅಯ್ಯ$_{1}$]

**ಮಾರಯ್ಯ**, ಮಾರೆಯ, ಮಾರೆಯ್ಯ (ನಾ). ಒಬ್ಬಾತನ ಹೆಸರು : ಶ್ರೀ ಕಾವದೊಱ ಮಾರಯ್ಯನ ಮಗ ಶ್ರೀ ತೇರಕಲಿಯ ತುಱುಗೊಳಲ್ ಕಾದಿ ಸತ್ತಂ (ಎಕ. III (R), ಗುಂಡ್ಲು.ಪೇ. ೨೦೩-೨; 9ಶಿಮ ಶತ). **ಮಾರೆಯ** : ರಾಚಮಲ್ಲಗಾಮುಣ್ಣನು ಸಿಟಿನಂ ಗಂಗಗಾಮುಣ್ಣನುಂ ಮಾರೆಯನುಂ ಬೆಳ್ಗಱಿಯೊಡೆಯರುಂ . . . ಸಾಕ್ಷಿಯಾಗಿ ಕೊಟ್ಟತ್ತು (ಎಕ. XVI, ಗುಬ್ಬಿ. ೬೦-೯೭; 812). **ಮಾರೆಯ್ಯ** : ನಾಗಯಬ್ಬೆಯ ಮಗ ಮಾರೆಯ್ಯ ಕೊಟ್ಟೂರ ತುಱುಗಳೊಳೆ ಅಣ್ಣ ಸತ್ತ (ಎಕ. XI, ಹಳ್ಳಿ. ೪-೪; 974). [ಮಾರ + ಅಯ್ಯ$_{1}$]

**ಮಾರವ** (ಗು). ೧. ಮರುಭೂಮಿಗೆ ಸಂಬಂಧಪಟ್ಟ. (ನಾ). ೨. ಮರುಭೂಮಿ ; ಮರಳುಗಾಡು : ಮಾರವಕೂಪಜಲಂಗಳ್ಗಾಷ್ಟವಿ ಯಂಬುವಿನಂತೆ ತೃಷೆಯನೇಂ ಕಳೆದಪುವೆ (ಪ್ರಕಪು. ೩-೬೦). [ಸಂ.]

**ಮಾರವಳಿ** 'ಮೊರುಳಿ' ನೋ.

**ಮಾರವಾಡಿ**, ಮಾರುವಾಡಿ, ಮಾರ್ವಾಡಿ (ನಾ). ರಾಜಸ್ಥಾನದ ಮಾರವಾಡಪ್ರದೇಶದ ವ್ಯಕ್ತಿ ; ೯ ಒಡವೆ, ವಸ್ತುಗಳನ್ನು ಅಡವು

ಇಟ್ಟುಕೊಂಡು ಸಾಲಕೊಡುವ ವ್ಯವಹಾರವೇ ಇವರ ಮುಖ್ಯ ಕಸುಬು : ಮಾರವಾಡಿಗಳು ತಾಳ್ಮೆಯಿಂದ ಶ್ರಮ ಮಾಡುವವರೂ, ಬಹಳ ಕೃಪಣರೂ, ಧೈರ್ಯಶಾಲಿಗಳೂ ಇರುತ್ತಾರೆ (ಕಥಾಗ. ೦೦೩); ಮಾರವಾಡಿಗೆ ವ್ಯಾಪಾರ ಮಾಡುತ್ತಿದ್ದರೆ ಇನ್ನೇನೂ ಬೇಕಾಗುವುದಿಲ್ಲ (ದಾವತಂ. ೧೯೬). **ಮಾರುವಾಡಿ :** ವಿಸ್ತಾರವಾಗಿ ಮಡಗಿ ಮಾರುವ ಮಾರುವಾಡಿಯರು (ಸಾಗಂ೦. ೦೩೩-೩). **ಮಾರ್ವಾಡಿ:** ಈ ಬೀದಿಯ ಕೊನೆಯಲ್ಲಿ ಮಾರ್ವಾಡಿಯ ಅಂಗಡಿ ಇದೆ (ಕಕ೦). 'ಮಾರವ' ಪರಾ.

[← ಹಿಂ. ಮರಾ. ಮಾರವಾಡೀ. / ತೆಲು. ಮಾರುವಾಡಿ]

**ಮಾರವಾಳಿ** ' ಮಾರುಳಿ ' ನೋ.

**ಮಾರವಿ** (ನಾ). [ಸಂಗೀತ] ಒಂದು ರಾಗದ ಹೆಸರು : ರಾಗ ಮಾರವಿ ಏಕತಾಳ (ಕೀಲೀಕ್ರ. ೯೩). [ಸಂ. ಮಾರವೀ]

**ಮಾರಸಂಹರ** (ನಾ). ಮನ್ಮಥನನ್ನು ಕೊಂದವನು ; ಶಿವ : ಮಾರ ಸಂಹರನ ನೆನೆದಿಹರ ಮೃತ್ಯು ತಾ ದೂರಕ್ಕೆ ದೂರ (ಸರ್ವಜ್ಞ. ೨೯೩). [ಸಂ.]

**ಮಾರಸಾಲ** (ನಾ). ಮನ್ಮಥವೃಕ್ಷ : ಮಾವು : ಕವಿಕೃತನುತಿಲೋಲಂ ಪ್ರಿಯಗ್ರೀಷ್ಮಕಾಲಂ ಧರಣೀವಿಕ್ಷಿಪ್ತಮೂಲಂ ಪಡೆದುದು ಸೊಗಸಂ ಮಾರಸಾಲಂ ರಸಾಲಂ (ಶಾಶಕ. ೦-೦೦೩). [ಸಂ.]

**ಮಾರಸಿಂಗ** (ನಾ). ಒಬ್ಬಾತನ ಹೆಸರು : ಸಿರಿಊರರಾ ಮಗನು ಮಾರಸಿಙ್ಘ ಇನ್ಬತೂರ ತುಱುಗೋಳ್ ಸತನ್ (ಎಕ. IX, ಬೆಂಗಳೂ. ೩೯-೩; ಶ. 1000). [ಮಾರ + ಸಿಂಗ₁]

**ಮಾರಸಿಂಗಗಾಮುಂಡ** (ನಾ). ಒಬ್ಬಾತನ ಹೆಸರು : ಜೂಮುಗುಪ್ಪೆಯ ಮಾರಸಿಙ್ಗಗಾಮುಣ್ಡರುಂ ಎಱಿಗೆಙ್ಗಗಾಮುಣ್ಡರುಂ . . . ಸರಸಾಕ್ಷಿಯಾಗೆ ಪಡೆದಾವು (ಎಕ. VI (R), ಶ್ರೀರಂಗ. ೬೬-೧೪; ಶ. 800).

[ಮಾರಸಿಂಗ + ಗಾಮುಂಡ]

**ಮಾರಸಿಂಗಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮಾರಸಿಂಗಯ್ಯ (ಎಕ. II, ೯೭೨; ಶ. 1000). [ಮಾರಸಿಂಗ + ಅಯ್ಯ₁]

**ಮಾರಸಿಂಹ** (ನಾ). ಒಬ್ಬಾತನ ಹೆಸರು : × × ಸ್ಯಂ ಪ್ರತಿ ಮಾರಸಿಂಹ ನೃಪತಿರ್ವ್ವಿಕ್ರಾನ್ತಕ × × ಶೌರ್ಯೋತ್ರ × × ಸ್ಥಿತಿ (ಎಕ. II (R), ೬೯-೬೩; 10ನೆಯ ಶತ). [ಸಂ.]

**ಮಾರಸ್ಸಟ್ಟ** (ನಾ). ಒಬ್ಬಾತನ ಹೆಸರು : ಶ್ರೀಮಾರಸ್ಸಟ್ಟಮಹಾರಾಜನ್ ಪ್ರಿಥುವೀರಾಜ್ಯಙ್ಗೆಯೆ (ಎಕ. VI, ೨೩೬-೦; ೩೦೦). [< ಮಾರ + ಸಟ್ಟ ?]

**ಮಾರಹರ** (ನಾ). = ಮಾರಸಂಹರ : ಮಾರಹರಭಕ್ತರ್ಗಿಳೆಯೊಳಪ ಕಾರವಂ ಮಾಡುವವದಿರನವಿಚಾರದಿಂ ಕೊಲುವುದು (ಬಸವು. ೨೨-೩) : ಮಾರಹರನೆ ಬಲ್ಲ ಎನ್ನ ಸಾಮರ್ಥ್ಯಕ್ಕೆ ದಾರಿದ್ರ್ಯವು ಬರಬಹುದು (ಶಿತತ್ವಂ. ೦-೩೩).

**ಮಾರಹರಪ್ರಿಯ** = ಶಿವನಿಗೆ ಪ್ರಿಯನಾದವನು ; ಕುಬೇರ : ಮೃಗವುಂ ಪವನಂ ವಿಮಾನಮುಂ ಮಾರಹರಪ್ರಿಯಂ ವೃಷಭನಂ ಹರನೇಱಿ ಸಭಕ್ಕೆ ಸಲ್ವುದುಂ (ಕಗಾ. ೦-೬೬). [ಸಂ.]

**ಮಾರಾಟ₁** ' ಮಾಱಾಟ ' ನೋ.

**ಮಾರಾಟ₂** ' ಮರಾಟ ' ನೋ.

**ಮಾರಾಟತೆರಿಗೆ** (ನಾ). ಮಾರಾಟವಾದ ಸಾಮಾನುಗಳ ಮೇಲೆ ವಿಧಿಸುವ ತೆರಿಗೆ ; "ಮಾರಾಟ ತೆರಿಗೆ, ಮಾರಾಟಕರ" (Sales tax ಶಬ್ದಕೋ. ೬೨) : ಸಿದ್ಧಪಡಿಸಿದ ಉಡುಪುಗಳ ಮೇಲೆ ವಿಧಿಸಿರುವ ಮಾರಾಟತೆರಿಗೆ ಹೆಚ್ಚು ಎನ್ನಿಸುತ್ತದೆ (ಲೂಕ).

[ಮಾರಾಟ₁ (< ಮಾಱಾಟ) + ತೆರಿಗೆ (< ತೆಱಿಗೆ)]

**ಮಾರಾಟ್ಟ** (ನಾ). (?) : ದೇವೇನ್ದ್ರರು ಪೆಲಕೊಣ್ಡು ವಾಣಿಗತೋಟ್ಟುಂ ನ್ಪಾರ್ಕ್ಕರುಂ ಮಾರಾಟ್ಟ ತೆನ್ನನಾರ್ಕ್ಕರುಂ ಅವರ ಬಂಯು ಪೊಯ್ವಾರ್ಪ್ಪ ನ್ವಿರ್ಪ್ಪರಾ ವಿಟ್ಟರಾ ಪೊಯ್ವು ನರ್ಮ್ಮಂ (ಎಕ. IV (R), ಶಿಕಾರಿ. ೦೪೬-೮; ಶ. 750). [ ? ]

**ಮಾರಾಡು** ' ಮಾಱಾಡು ' ನೋ.

**ಮಾರಾಣಿ** (ನಾ). ಮಹಾರಾಣಿ : ಪುರಮಾವುದರೊಳ್ಸವಿ ಕೇಳ್ ಗಿರಿಶನ ಮಾರಾಣಿ ಕನಲ್ದು ಮಹಿಷಾಸುರನಂ ತರಿದಿಹಳಾ ಪುರಮಿದನಿಂ ನರಪತಿ ಸಂಪ್ರೀತಿಯಿಂದೆ ಸಲಹುತ್ತಿರ್ಪಂ (ನರಕ. ೦೦೬-೩೦೩) ; ಮಾರಾಣಿ ಬೆಸಸಿಹಳು, ತನಗಿನಿತು ಬೇಕೆಂದು (ಶಂವ್ರಸ. ೩೦-೨೦). [ಮಾ₄ + ರಾಣಿ]

**ಮಾರಾನ್** ' ಮಾಱೂನ್ ' ನೋ.

**ಮಾರಾಪು** (ನಾ). ಬೆನ್ನಿನ ಮೇಲೆ ಹೊರೆ ಇಟ್ಟು, ಎದೆಯ ಮೇಲೆ ಗಂಟು ಬರುವಂತೆ ಬಂಧಿಸುವ ಪಟ್ಟಿ : ಅವನ ಕೈಯ ಕೋಲು, ಬೆನ್ನ ಮೇಲಿನ ಮಾರಾಪು, ಅವನ ಮೈಕೈಗಳಲ್ಲಿದ್ದ ದೂಳು ಅವನು ಬಹುದೂರದ ದಾರಿ ನಡೆದವನೆಂದು ಸಾರುತ್ತಿದ್ದವು (ಕುಡಿಕ. ೦). [ ← ತಮಿ. ಮಾರಾಪ್ಪು ]

**ಮಾರಾಮಾರಿ** (ನಾ). ಪರಸ್ಪರ ನಡೆಯುವ ತೀವ್ರ ಹೊಡೆದಾಟ ಅಥವಾ ಜಗಳ : ಅಂಗಡಿಯವನಿಗೂ ಆ ಬಿದ್ದ ಟಕರನಿಗೂ ಮಾರಾಮಾರಿ ಯಾಯಿತು (ವೃವ್ರಕ. ೬೯); ನಾಯಕನಿಗೂ ಖಳನಾಯಕನಿಗೂ ಮಾರಾಮಾರಿ (ಜಾಡಿಗೇ. ೩೮).

[ ←ಹಿಂ. ಮಾರಾಮಾರ್ ; ಮರಾ. ಮಾರಾಮಾರ್. ಮಾರಾಮಾರೀ]

**ಮಾರಾಯ** ' ಮಹಾರಾಯ ' ನೋ.

**ಮಾರಾಯಿತಿ** ' ಮಹಾರಾಯಿತಿ ' ನೋ.

**ಮಾರಾಯ್ತಿ** ' ಮಹಾರಾಯಿತಿ ' ನೋ.

**ಮಾರಾರಿ** (ನಾ). ೧. ಮನ್ಮಥನ ಶತ್ರು ; ಶಿವ : ಮಾರಾರಿ ನೀಂ ಬಲೆ ವಿಚಾರವುಂಟೇ ತಂದೆ (ಸಂಶರ. ೭-೦೩೯) ; ಹಾರವಂ ವಿಕ್ರಯಿಸಿ ಎನ್ನ ಕುಮಾರಿಯಾ ಶಿವರಾತ್ರಿಯಲಿ ಮಾರಾರಿಭಕ್ತರಿಗೀಯಲೀ ಆರಾಧನೆಗಳನು (ಬಸಕ. ೯೨-೦೦) ; ಮಾರಾರಿಯ ಮಂಗಳಸಭೆಯ ಕಂಗಳು ನುಂಗಿತ್ತು ನೋಡಾ (ಅಲಂದೇ. ೨೦೩-೯೩). ೨. [ಜೈನ] ಜಿನ : ಮಾರಾರಿಗಭಿಷವಂ ಜಂಭಾರಿಯಿನಾದತ್ತು ಘೃತಸಮುದ್ರದ ಘೃತದಿಂ ಕ್ಷೀರಸಮುದ್ರದ ವಿಮಲ ಕ್ಷೀರದಿಂ (ಆಪಕ. ೯-೭೩). [ಸಂ.]

**ಮಾರಾರ್ದನ** (ನಾ). = ಮಾರಾರಿ ೧ : ತಾರಾಪೀಡನ ಗುಣವತಿ ಮಾರಾರ್ದನ ವಿಶ್ವನಾಥನಿಂದಂ ಪಡೆದಳ್ ಸಾರಸುತ ಚಂದ್ರಪೀಡನನಾರಯೆ ಮಹದೇವಿ ಪಡೆದ ವರಕದಂ ದೊರೆಯಿಂ (ಹಮ್ಮಾರ. ೨-೦೯). [ಸಂ.]

**ಮಾರಾವುತ** (ನಾ). ಶ್ರೇಷ್ಠನಾದ ಕುದುರೆಯ ಸವಾರ : ಮಲ್ಲರು ಮಾರಾವುತ ರಮ್ಮಲಸಿಕೆರು ಬಲ್ಲಿದ ಗಜವಾಹಕರು ಬಿಲ್ಲಿನಡ್ಡಣದವರು ಮುಂತಾದವರೆಲ್ಲರೊಪ್ಪಿದರೊಡ್ಡೋಲಗದಿ (ಮೋಹತ. ೨೦-೬೬).

[ಮಾ₄ + ರಾವುತ]

**ಮಾರಾಶರ್ವ** (ನಾ). ಒಬ್ಬಾತನ ಹೆಸರು : ಮಾರಾಶರ್ವ್ವಮಹಿಪತೀ ದುರ್ಗತಮಗಾದಪ್ರಾಪ್ತಪೂರ್ವಂ (ಎಕ. III (R), ನಂಜನ. ೨೭೬-೩೯; 808). [ p ಇದು ' ಮಾರಶರ್ವ ' ಎಂಬುದರ ಅಪಲಿಖಿತವಿರಬಹುದು ]

**ಮಾರಾಳ್** ' ಮಾಱಾಳ್ ' ನೋ.

**ಮಾರಾಳ** (ನಾ). ೧. ಶ್ರೇಷ್ಠನಾದ ಸಂನ್ಯಾಸಿ ; ಪರಮಹಂಸ : ಮಾರಾಳನಂತೆ ತೋರುತ್ತ ಜಗವ ಸಂಚರಿಸಿ . . . ಮಾರಾಳಜನಕನಂಘ್ರಿ ಮನದೊಳು ಧೇನಿಸುತ್ತ ಪೂರಭಕ್ತಿಯಿಂದು ಸುಖವುಂಡ ಮಾನಗಂಡ ಸರಹರಿಯ ತೋಂಡ (ಶಿಶದು. ೬-೦). ೨. ಹಂಸವಾಹನನಾದ ಬ್ರಹ್ಮ : ' ಮಾರಾಳಜನಕ ' ಪರಾ. [< ಸಂ. ಮರಾಲ]

**ಮಾರಾಳಜನಕ** (ನಾ). ಬ್ರಹ್ಮನ ತಂದೆ ; ವಿಷ್ಣು : ಮಾರಾಳನಂತೆ

ಧ್ವನಿಸುತ್ತ ಪೂರಘಕ್ಕಿಯಿಂದು ಸುಖಿಸುಂಡ ವನಗೋಡ ನರಹರಿಯ ತೋಪಿನ (೩೦ನು. ೯-೧). [ಮಾರಾಳ + ಜನಕ]

**ಮಾರಾಳಿ** ' ಮಾಜಾಳಿ ' ನೋ.

—**ಮಾರಿ**$_1$ (ಪ್ರ). ಯಾವುದಾದರೂ ವಿಷಯಕ್ಕೆ ಸಂಬಂಧಿಸಿದಂತೆ, ಶೀಘ್ರವಾದ ಸ್ವಭಾವವುಳ್ಳವನು ಎಂಬರ್ಥದಲ್ಲಿ ಸೇರುವ ಒಂದು ತದ್ಧಿತಪ್ರತ್ಯಯ : ' ಹಡವಮಾರಿ ', ' ಹಟವಮಾರಿ ' ಪರಾ.

**ಮಾರಿ**$_2$ (ಗು). ೧. ಹಿರಿದಾದ ; ದೊಡ್ಡದಾದ : ' ಮಾರಿಬಲೆ ' ಪರಾ. ೨. ಕೆಟ್ಟ ; ನೀಚ : ' ಮಾರಿಕಣ್ಣು ' ಪರಾ. ೩. ಭಯಂಕರವಾದ : ' ಮಾರಿಮುಖ ' ಪರಾ. (ನಾ). ೪. ಕೊಲ್ಲುವಿಕೆ : ನಾಶಮಾಡುವಿಕೆ. ೫. ಸಾವು ; ಅಳಿವು : ಒಂದು ದಿನಮಾ ಸಿಂಗಕ್ಕೆ ಮಾರಿ ಬರ್ಪಂತೆ ದೀರ್ಘಕರ್ಣನೆಂಬ ಮೊಲಕ್ಕೆ ಬಾರಿ ಬರ್ಪುದುಂ (ಪಂಚತಂ. ೩೪-೩೩); ಎನಗೆ ಬಂದುದು ಮಾರಿ ನಾಳಿನ ದಿನದವುದಯಕೆ (ಸಂಕಶ. ೨೨-೩೮). ೬. ಕೇಡು ; ಹಾನಿ ; ಆಪತ್ತು : ಮೆಲ್ಲನೆ ಮೃಗಮೆಂದು ಸಾರ್ದು ನೆಱಿಪಂ ನಡೆನೋಡಿ ನರೇಂದ್ರನೆಚ್ಚು ಭೋಂಕನೆ ಮೃಗಚಾರಿಯಿಂ ತನಗೆ ಮಾಣದ ತಂದನದೊಂದು ಮಾರಿಯಂ (ಪಂಪಭಾ. ೦-೦೦೦); ಆದಿಪುರಾಣ ಅಸುರರಿಗೆ ಮಾರಿ ವೇದಪುರಾಣ ಹೋತಿಂಗೆ ಮಾರಿ (ಬಸವ. ೩೬೨); ಹೋದ ಮಾರಿಯು ಕರೆದು ಮನೆಯೊಳಗಾದರಿಸಿದವರುಂಟೆ (ಕುಮಾ.ರಾ. ೨೦-೩೨); ಬೀದಿಯಲ್ಲಿ ಹೋಗೋ ಮಾರೀನ ಮನೆಗೆ ಕರೆದಂತೆ (ಗಾದೆ). ೭. ಸಾವು ತರುವಂಥ ಪ್ಲೇಗು, ಕಾಲರಾ, ಸಿಡುಬು ಮುಂತಾದ ಭಯಂಕರವಾದ ಸಾಂಕ್ರಾಮಿಕರೋಗ : ಕಳ್ಳರಾಯಿಲ ಮಾರಿಯೆಂಬ ಮಾರಿ ಪಸವಿಟ್ಟು ಬಜಂ ಪೆಱಪೂ ಭಯಂಗಳಾಕುಲಿತಗಳಲ್ಲ (೦೦೦. ೦-೩೨); ಬಜಂ ಪಸವು ಮಾರಿ ಬಂದೀಗ್ರಹಣಂ ಮಂಚಲ್ ಕಳವಾಜಿ ಭಯಸಂಚಯಮೇಬಿ ಪಜ ಪೆಸರುಮಿಲ್ಲಾ ನಾಡೊಳ್ (ಶಸ್ತ್ರ. ೨-೩). ೮. ಮಾರಕರೋಗಗಳನ್ನುಂಟುಮಾಡುವುದೆಂದು ನಂಬಲಾದ ಒಂದು ಕ್ಷುದ್ರದೇವತೆ : ಮಾರಿಯ[ಪಾಠಾಂ. ಬಳಿಯ] ಮನೆಯಂ ಪರಕೆಯ ಕುಱಿಯಂ ಪುಗಿಸುವಂತೆ ವಟವಿಟಪಿಕೋಟರಕುಟೀರಾಂತರಮಂ ಪುಗಿಸಿ (ಪಂಚತಂ. ೧೭೩-೦೦) ; ಮಾರಿ ಮಲಯಾನಿಲಂ ಸವನೀರಜವನಮೆಂಬ ಕೆಂಪದೊಳ್ ದಂಡನವು ಸ್ಮಾರಂಬವದಪನಿತ್ಸವಧಾರಿಪ್ಪುದೆಂಬಂತೆಯಿಂಲಿದುಪ್ಪರಗಿಳಿ ಬ ನ ದೊ ಳ್ (ಯಶೋಧ. ೦-೩೯); ಮಂಗಿಗ್ ಮಾರಿಯುಂ ಚೇಡಿಯಗ್ಗದ ಶಕ್ತಿಗಳು ಸದ್ಗುಣ ಸತ್ಯ ಮುಸುಕಿಪರ ಮುಟ್ಟಿವಿದು ಸದ್ಗುರುವಿನಾಜ್ಞೆ (ಸರ್ವಜ್ಞ. ೯೦). ೯. ಮೃತ್ಯುದೇವತೆ : ಇಂತಪ್ಪ ಪಂಚಮಹಾಪಾತಕನ ಮನೆಯೊಳ್ ಮಾರಿ ಬಿರ್ಕೆ (ಪಡ್ಮರಾ. ೩೭-೦೯) : ಇದು ಮನೆಯಿಂದವಲ್ಲ . . . ಬಗೆದಲ್ಲಿ ನೋಡುವೊಡವಿಟ್ಟಗೆ ಕಲ್ಮರನೆಂಬುದಿಲ್ಲ ಕೂರದವನಿದನೊಡ್ಡಿದಂ ಪಗೆಗೆ ಸಂತಸಮಾಗಿರೆ ಮಾರಿ ಸುಯ್ಯುಗ್ಗವೇ (ಪಂಪಭಾ. ೩-೯); ಭೀಮನ ತೋರಗರ್ಳನ ದಂಡವನು ಕೈಯಾರೆ ಮಾರಿಗೆ ಮುಡಿಸುವೆನು (ಕುಮಾ.ಭ. ೩-೦೮). ೧೦. ಪ್ರಳಯಕಾಲದಲ್ಲಾಗುವ ಸಕಲಜೀವರಾಶಿಗಳ ಅಳಿವು.—ನಾಶ. ೧೧. (ಅಲಂ) ಕೇಡು ; ತೊಂದರೆ ; ಧಾಡಿ : ಕೆಲಸ ಮಾಡಲು ಮಾರಿ ಇವನಿಗೆ ! ಬಲುಹು ಮೈಯಲಿ ತುಂಬಿದೆ ! (೯೦ಪೂ. ೦೯-೦೯).

**ಮಾರಿಯ ದೇವ** = ಶಿವ; ಈಶ್ವರ : ಮಾರಿಯ ದೇವನು ಮಸಣದ ದೇವನು ತಿರುಕ ಗೊರವನೆಂದು ಅಲ್ಲಲ್ಲಿ ಒಂದೊಂದನಾಡುತಿಪ್ಪರಯ್ಯ (ಅಪಶಂ. ೦೨೦-೩೪೩). **ಮಾರಿಯ ಮಾರಿ** = ಮಾರಿದೇವತೆಯ ತೆರೆದ ಬಾಯಿ.—ಉಗ್ರಸ್ವರೂಪ (?) : ನಾಡರಸಂ ತಗುಳ್ದು ಕಡೆಗಾಲದ ಮಾರಿಯ ಮಾರಿಯಂತೆ ಕಣ್ಣಾಡದೆ ಬಾಲವೃದ್ಧವನಿತಾಪಥಗೆಯ್ದು . . . ನಾಡನವಂ ಕಡಿದಿಕ್ಕಿ ಮೆಟ್ಟಿದಂ (ಕಂದಾಬೊ. ೯-೩೬) ; ಮಾರಿಯ ಮಾರಿ ಶಕ್ತನ ರೌದ್ರತೆ ನೆಱೆದ ಪ್ರಜ . . . ಸಾಹಣಿಮಲ್ಲನ ಬಾಹುವಿಕ್ರಮಂ (ಎಕ. XV. ೩೩-೦೭ ; 1180). **ಮಾರಿಯ ಹುಣ್ಣು** = ಸಿಡುಬು; ದೇವಿ : ಅಮ್ಮ : ಅಂಬುಳುವಾದಡೆ ಹಣ್ಣು ಮಸಿಎಂಬರು ಸೀವಳಿಗೆಯಾಗೆ ಸಲೆ ಮಾರಿಯ ಹುಣ್ಣೆಂಬರು ತುಱುಯಾದಡೆ ಫಣಿಪುಟಿಪೆರ್ ಮಾತಿಶೀನಸಜನರ ದೇಸಂ ಮಾತರ್ (ಸಬಾಶ. ೯-೨೬). [ಸಂ. ಮಾರಿ. ಮಾರೀ. /p ಈ ಶಬ್ದವು ದ್ರಾವಿಡಮೂಲದ್ದಿರಬೇಕೆಂದು ಭಾಷಾಶಾಸ್ತ್ರಜ್ಞರ ಅಭಿಪ್ರಾಯವೊಂದಿದೆ]

**ಮಾರಿಕಣ್ಣು** (ನಾ). ೧. ಮಾರಿಯ ಕ್ರೂರದೃಷ್ಟಿ : ಮಾರಿಕಣ್ಣು ಹೋತನ ಮೇಲೆ (ಗಾದೆ). ೨. ಕೆಟ್ಟದೃಷ್ಟಿ ; ಕ್ರೂರದೃಷ್ಟಿ: ಹೆಗಡೆಯ ಮಾರಿ ಕಣ್ಣು ನನ್ನ ಮೇಲೆ ಬಿದ್ದಿದೆ (ದೇವಹಂ. ೦೩೨). [ಮಾರಿ$_2$ + ಕಣ್ಣು (< ಕಣ್)]

**ಮಾರಿಕಬ್ಬೆ** (ನಾ). ಒಂದು ಕ್ಷುದ್ರದೇವತೆ ; ಮಾರಮ್ಮ : ಪಿಟ್ಟಾಪುರದ ಮಾರಿಕಬ್ಬೆ ಶಾಕಿನಿಯುಂ ಪೋಣವರ್ಗಾಲೆಯ ಮಂಗಳಾದೇವಿಯುಂ ಮೈಲಾಪುರದ ಕಾಮಾಕ್ಷಿಯುಮೆಂಬಿವರ್ಮೊದಲಾದ ಮಹಾವ್ಯಂತರಂಗಳ್ ಪೋಣದಿಂ ಮುಟ್ಟುವಪದಂ ಬೆರಸಿರ್ಪೊಡಂ . . . ಉಣ್ಬರ್ (ರಾಜಾಭ್ಯು. ೯-೦೦೦) ; ಮಾರಿಕಬ್ಬೆ ಮಸಣಕಬ್ಬೆ . . . ಮೊದಲಾದ ವ್ಯಂತರಂಗಳುಂ (ಶ್ರಾವಣ. ೦೦೯-೨೨). ' ಮಾರಿಕವ್ವೆ ' ಪರಾ. [ಮಾರಿಕೆ$_2$ + ಅಬ್ಬೆ$_1$]

**ಮಾರಿಕವ್ವೆ** (ನಾ). = ಮಾರಿಕಬ್ಬೆ : ಮಾರಿಕವ್ವೆಯ ನೋಂತು ಕೊರಳಲ್ಲಿ ಕಟ್ಟಿಕೊಂಬರು ಸಾಲಬಟ್ಟರೆ ಮಾಱಿಕೊಂಬರಯ್ಯಾ (ಬಸವ. ೩೩೯); ವೀರಭದ್ರನ ಕೆಣಕಿ ಹೊಗುವರೆ ಮಾರಿಕವ್ವೆಯ ಮುಱಿಯನು (ಕೌಶಿರಾ. ೩೬-೭೦).

[ಮಾರಿಕೆ$_2$ + ಅವ್ವೆ]

**ಮಾರಿಕಾಜಾಡ್ಯ** (ನಾ). ಪ್ಲೇಗು, ಸಿಡುಬು ಮುಂತಾದ ಭಯಂಕರವಾದ ಸಾಂಕ್ರಾಮಿಕರೋಗ : ಈ ಯುದ್ಧ ನಡೆದ ಕಾಲದಲ್ಲಿ ಒಂದೆ ಎಂದೆಂದಿಗೂ ಅರಿಯದ ಕಾಲರಾ (Cholera) ಎಂಬ ಮಾರಿಕಾಜಾಡ್ಯವು ಸಂಪ್ರಾಪ್ತವಾಗಿ ಮೈಸೂರಿಗೆ ವ್ಯಾಪಿಸಿ ಜನರಿಗೆ ಕಷ್ಟನಷ್ಟಗಳು ಸಂಭವಿಸಿದುವು (ಮುಹಾಪಂ. II, ೩೦). [ಸಂ.]

**ಮಾರಿಕಾರೋಗ** (ನಾ). = ಮಾರಿಕಾಜಾಡ್ಯ : ದೇವಮ್ಮಾಜಿ . . . ಒಂದೆರಡು ವರುಷದಲ್ಲಿ ಮಾರಿಕಾರೋಗದಿಂದ ತೀರಿಕೊಂಡಳು (ಪಳರಾ. ೬೩). [ಸಂ.]

**ಮಾರಿಕೆ**$_1$ (ನಾ). ೧. ಮಾರುವುದು ; ಮಾರಾಟ : ' ಮಾರಿಕೆಹುಂಡಿ ' ಪರಾ. ೨. ಮಾರಾಟದ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಇವು ಪೂರ್ವಕಾಲದ ತೆರಿಗೆಗಳು : ಮನೆತೆರಿಗೆ, ಹುಲ್ಲ ಹಣ . . . ಮಾರಿಕೆ ; ಉಪ್ಪಿನ ಮಾಳ ; ಉಬ್ಬೆಕಾಣಿಕೆ (ಪಪ್ಪುಸು. ೨೯೩).

[ಮಾರು$_1$ (< ಮಾಱು$_1$) + — ಇಕೆ]

**ಮಾರಿಕೆ**$_2$ (ನಾ). = ಮಾರಿಕಬ್ಬೆ : ' ಮಾರಿಕಬ್ಬೆ, ' ಮಾರಿಕವ್ವೆ ', ಪರಾ. [ಸಂ. ಮಾರಿಕಾ]

**ಮಾರಿಕೆಹುಂಡಿ** (ನಾ). " ತನ್ನ ಆಸ್ತಿಯನ್ನು ಮತ್ತೊಬ್ಬನಿಗೆ ಮಾರಿ ವರ್ಗಾಯಿಸಿದ ಪತ್ರ ; ಮಾರಾಟ ಮಾಡಿದ ಬಗ್ಗೆ ಬರೆದು ಕೊಟ್ಟ ಹುಂಡಿ " (Bill of Sale. ೫೨೦೨. ೯). [ಮಾರಿಕೆ$_1$ + ಹುಂಡಿ$_1$]

**ಮಾರಿಕೇಸಿ** (ನಾ). ಒಬ್ಬಾತನ ಹೆಸರು : ಕಂಪೂರಕುಲನ್ ಮಾರಿಕೇಸಿ ಲಿಖಿತಂ (ಎಕ. IV. ಎಡತೊ. ೬೦-೯೦; ಸು. ೮೯೦). [ ? ]

**ಮಾರಿಕ್ಕು** (ಕ್ರಿ). ಎದುರಿಸಿ ಹೊಡೆ ; ಪ್ರತಿಭಟಿಸಿ ತಾಗು : ಕಾಯ್ದು ನಿಂದಿರ್ದಿಲಂ ಮಾರ್ಪೊರ್ಚಿದೆಂ ಕಳದ್ವಾರಗನಂ ಮಾರಿಕ್ಕುವಂ ಸಿಂಗವಂ ಕಡಿವಂ ಭಾವಿಸೆ ಪೃಥ್ವಿಸೆಟ್ಟಿ ಪರಿಪಂ ಪೆಂಣ್ಗಾಂಬಿಕಾನಂದನಂ (ಕ್ಷ. IV. ೧-೬೬; 1204). [ಮಾರು$_1$ (< ಮಾಱು$_1$) + ಇಕ್ಕು]

**ಮಾರಿಗ** (ನಾ). ಮಾರಿದೇವತೆಯನ್ನು ಪೂಜಿಸುವವನು : ಮಾರಿಯಂ ಪೂಜಿಸುವಂ ಮಾರಿಗಂ (ಶಬ್ದಾಸು. ೪೦೩ ಕ್ರಿಯೋ). [ಮಾರಿ$_2$ + — ಗ$_2$]

**ಮಾರಿಗಾಲ** (ನಾ). ಯುಗಾಂತರದಲ್ಲಿ ನೀರುಕ್ಕಿ ಜಗತ್ತನ್ನು ಮುಳುಗಿಸುವ ಕಾಲ ; ಜಲಪ್ರಳಯದ ಸಮಯ : ಮಾರಿಗಾಲದ ಪತ್ತ್ಯ

ವೆಸ್ನಸು ಮಾಜುಗೊಳುತಿದೆ ಕರುಣವನು ನೆಜಿ ತೋಟಿ ಶಾಸಿದಕೇನ ಹೇಳು ವೆನು (ಕಬಾಗ. ೮-೨೩-೦೯).

[ಮಾರಿ$_2$ + ಕಾಲು /ತಮಿ. ಮಾರಿಕ್ಕಾಲವ್ = ಮಳೆಗಾಲ]

**ಮಾರಿಗುಡಿ** (ನಾ). ಮಾರಿದೇವತೆಯ ವಿಗ್ರಹವನ್ನು ಪ್ರತಿಷ್ಠಾಪಿಸಿರುವ ದೇವಾಲಯ : ಮಾರೀಗುಡಿಗೆ ಬಡಗಲು ಕೊಂಗನ ಘಣಿಯಾಲದ ಮರದ ಪಗಲಿಗೆ ಮೂಡಲು ಮೂಡ ಮುಖವಾಗಿ ನೆಟ್ಟ ಕಲ್ಲು ೧ (ಎಕ. V (R). ತಿರುಮ. ೦೬-೬೩೦: 1749): ಆಸಾಡಿಯ ಜಡಿಮಳೆಯಲ್ಲಿ ಒಂದುರಾತ್ರಿ ಊರಿನ ಮಾರಿಗುಡಿಯಿಂದ ಮಾರಿಯನ್ನು ಓಡಿಸುವ ಒಂದು ಕ್ರಮವಿದೆ (ದೇಶಪೊ. ೩೨). [ಮಾರಿ$_3$ + ಗುಡಿ$_3$]

**ಮಾರಿಗುತ್ತ** (ನಾ) = ಮಾರಿಕಾಜಾಡ್ಯ : ಎಮ್ಮ ಪುರಕ್ಕೆ ಮಾರಿಗುತ್ತಂ ಪೊವರಾಗೆ ಪೆಜಿವುಮಾಗುತುಕಲೀಡೆಗಳಪ್ಪುದು ಮಾನವರ್ಕೇನುಂಗೆಯ್ಯಲಜಿಯದುವಮ್ಮ ೯ಸುತ್ತಿರ್ಪುದುಂ (ಶಂಬಾಪು. ೦೯-೪೯ ವ): ಕವರ್ತೆಯ ಮೇಲೆ ಕೊಲೆಯುಂಬಂತೆ ಬಡತನದ ಮೇಲೆ ಮಾರಿಗುತ್ತಮಾಗೆ (ಧರ್ಮಾಮ. ೬-೦೬೦). [ಮಾರಿ$_4$ + ಕುತ್ತ]

**ಮಾರಿಗೆ** (ನಾ). ಮಾರಿದೇವತೆ : ಪರವೀಗುವೆ ವೈಲಾರಂ ಕೇತಂ ಕಾಟಂ ಮಾರಿಗೆ ಮಸಣಗೆಯೆನಿಪ್ಪ ಕೊಟಿದೆಯ್ವಂಗಳ್ (ಶಬುಶ. ೯-೦೨೬). [ಸಂ. ಮಾರಿಕಾ]

**ಮಾರಿಡು$_1$** (ಕ್ರಿ). ಪ್ರತಿಭಟಿಸಿ ನಿಲ್ಲು : ಎದುರಿಸು : ಘಣಕಾಟಿಮು × × × ಪನೊಪ್ಪೆ ಮಾರಿಡುವಂ ಪಕ್ಕಲಿಪಂ ಜವನಂ ನಿಚ್ಚಟಗಲಿ . . . ವೀರವಿಕ್ರಮಭೂಪಂ (ಎಡ. XX, ೦೦೬-೭; 1187). [ಮಾರು$_1$ (< ಮಾಱು$_1$) + ಇಡು$_1$]

**ಮಾರಿಡು$_2$** (ಕ್ರಿ). ಮಾರಿನಿಂದ ಅಳತೆಮಾಡು ; ಮಾರುಹಾಕು : ರವಿ ಮಾರಿಟ್ಟಳೆದಂ ವಿಯತ್ತಳಮನಾಶಾಸೀಮೆಯಂ ದಾಂಟುವನ್ನೆವರಂ (ಶಂಖಾಪು. ೦-೩೯); ಭೀಕರಕಾನನದಲೋಂದಾಲವಿರ್ದುದು . . . ಅವನಿಯ ಮಾನವನು ಮಾರಿಡುವವೊಲು ಪಸರಿಸಿತು ಶಾಖೆಗಳ (ಸಾಳ್ವಭಾ. ೪೩-೩೩). [ಮಾರು$_3$ + ಇಡು$_1$]

**ಮಾರಿಡೋಲು** (ನಾ). ದೊಡ್ಡ ಡೋಲು : ಭಾರಿ ಡೋಲು : ಅವನ ಪರಿವಾರದವರು ಮಾರಿಡೋಲು. ದುಡಿ-ಎಲ್ಲಾ ಬಾರಿಸಿ ಭಾರೀ ಕುಣಿದಾಡು ವುದುಂಟು (ದಂಬಾಪಾ. ೦೩). [ಮಾರಿ$_2$ + ಡೋಲು]

**ಮಾರಿತ** (ಗು). ಕೊಲ್ಲಲ್ಪಟ್ಟ : ಸಂಹಾರಗೊಂಡ : ಜಯಜಯ ಕುಮಾರ ಮಾರಿತ ದಿವಿಜರಿಪುಜಾಲ ಜಯಜಯ ವಿಳಾಸಕೃತವಿದಿತ್ಯಕ ಪದಲೀಲ (ರಾಶಿಕೆ. ೦೯-೨೬೯ ರಗೆ). [ಸಂ.]

**ಮಾರಿತನ** (ನಾ). ದುಷ್ಟತನ ; ಕೆಟ್ಟತನ : ಥೂ ನಾರಿಯರ ಮಾರಿತನಕೆ ಮೋರೆಯ ಗುಣಕೆ, ಥೂ ನರರ ಬೆದೆಗುದಿಗೆ ಷಂಡಗಂಡಸುತನಕೆ (ಕೃಶಾ.ಕು. ೨-೨). [ಮಾರಿ$_2$ + — ತನ ]

**ಮಾರಿದಾಸ** (ನಾ) ( ? ) : ಶ್ರೀ ಕಡ್ಡಾಣ ಪೃಥುವೀರಾಜ್ಯಂಕೆಯೆ ಸಿಯಕಲ್ಲ ಕೆಸುವುಣ್ಣು ನಾಡಾಳೆ ಮೂಟಿಬ್ಬಿ ಅರಸರಾಳ್ ಮಾರಿದಾಸ ಕರಿಯತಮ್ಮನ್ ನಾಗಶರಾಸರಾ ಮನೆದುಗವು ಬಾಗೆಲೂರುಳ್ ಬಲ್ಲಹನ್ ಎಜಸುಳ್ ಎಜಿದು ವಿಟ್ಟನ್ (ಎಕ. XVI. ತುಮಕೂ. ೯೩-೩ ; ಸು. 780). [ ? ]

**ಮಾರಿಪತ**, ಮಾರಿಫತ್ತು ನೋ.

**ಮಾರಿಪತ್ತು** ಮಾರಿಫತ್ತು ನೋ.

**ಮಾರಿಫತ** ಮಾರಿಫತ್ತು ನೋ.

**ಮಾರಿಫತಿ** ಮಾರಿಫತ್ತು ನೋ.

**ಮಾರಿಫತು** ಮಾರಿಫತ್ತು ನೋ.

**ಮಾರಿಫತ್ತು**, ಮಾರಫತಿ. ಮಾರಿಪತ. ಮಾರಿಪತ್ತು. ಮಾರಿಫತ, ಮಾರಿಫತಿ. ಮಾರಿಫತು. ಮಾರೀಪತು. ಮಾರೀಪತ್ತು. ಮಾರೀಫತ. ಮಾರೀಫತ್ತು. ಮಾರ್ಫತ. ಮಾರ್ಫತು (ಅ). ಮೂಲಕವಾಗಿ ; ಮುಖಾಂತರ : ಯಿಾ ವೆಂಕಟಗಿರ್‍ಯ್ಯನ ಮಾರಿಫತ್ತು ಪಿಾರಸಾಬರಿಗೆ ವಳಬಿದ್ದು . . . ದುಡಿದುಕೊಟು (ಕೃದಾ. ೩೯); ಶ್ರೀತ್ರಿರಪತ್ತಿಗಿರಿ ಮೇಲೆ ಬ್ರಹ್ಮೋತ್ಸವದಲ್ಲಿ ಸದರಿ ಮಠದ ಮಾರಿಫತ್ತು ಆಗತಕ ಬ್ರಾಹ್ಮಣಸಂತರ್ಪಣೆ ಜನ ೧೦೦೦ ಸಾವಿರಕ್ಕೆ . . . ಸರಕಾರದ ಸತ್ರದಿಂದಾ ಅಪ್ಪಣೆ ಪ್ರಕಾರ ಕೊಡುತ್ತಿದ್ದ ಪದಾರ್ಥದ ಕ್ರಯ (ಪಶ್ಯಕಂ. ೦೯೩೬, ೨೬-೦೩: 1830). **ಮಾರಫತಿ** : ಇಲ್ಲಿ ಇರುವ ರಾಖಿಗಳ ಮಾರಫತಿಯಿಂದ ಮಾಲ ತರಿಸಿಕೊಟ್ಟರೆ. ಎರಡು ಆಡತಿಗಳು ಬೀಳುವವು (ಮುಂಬಾಪ್ಯಾ. ೬೬). **ಮಾರಿಪತ** : ನಮ್ಮ ಕಡಿಗೆ ಬರುವವರು ನಮ್ಮ ಮಾರಿಪತ ಮಾಲ ಖರೀದಿ ಮಾಡಿದರೆ. ಅವರ ಕಡಿಯಿಂದ ಬಿಲಕುಲ ಅಡತಿ ತಕ್ಕೊಳ್ಳದೆ ಬರೇ ಕೂಲಿಯ ಖರ್ಚಿನ ಮೇಲೇ ಜಿನಸುಗಳು ಕಳುಹಿಸುವ ತಜವೀಜೆಯನ್ನು ಮಾಡುವವು (ಮುಂಬಾಪ್ಯಾ. ೨೩೨). **ಮಾರಿಪತ್ತು** : ಸರಕಾರ ಕುಂಪನಿ ಕಡೆಯಿಂದ ತಲಚೇರಿಕೋಟೆ ಮಿಸ್ಟರ್ ರಾಬರ್ಟ್ ಟೈಲರ್ ಸಾಹೇಬರ ಮಾರಿಪತ್ತಿನಿಂದ ತಹನಾಮೆಯನ್ನು ಬರೆಸಿ ತಲಚೇರಿ ಸರಕಾರದ ದಪ್ತರದಲ್ಲು ಮಡಗಿ ಇವೆ (ರಾಜೇಂದ್ರ. ೧೦೦). **ಮಾರಿಫತ** : ದಲಾಲಜನರ ಮಾರಿಫತ ಖರೀದಿಮಾಡಿ . . . ರವಾನೆ ಮಾಡುವ ತಜವೀಜಿಯನ್ನು ನಡಿಸುವರು (ಮುಂಬಾಪ್ಯಾ. ೨೩೨). **ಮಾರಿಫತಿ** : ದೊಡ್ಡ ದೊಡ್ಡ ವ್ಯಾಪಾರಿಜನರು ಬಹಳ ಮಾಡಿ ಇಲ್ಲಿಂದ ಅಡತ್ಯೆಯರ ಮಾರಿಫತಿಯಿಂದಲೇ ತರಿಸುತ್ತಾರೆ (ಮುಂಬಾಪ್ಯಾ. ೨೩೨). **ಮಾರಿಫತು** : ಯಾರ ಪರಿಚಯವಿರಲಿಕ್ಕಿಲ್ಲವೋ ಅಂಥವರು ಅಲ್ಲಿಯ ನಮ್ಮ ದುಕಾನಿನ ಮಾರಿಫತು ದುಕಾನಿನ ಮೊಹರಿನಿಂದ ಜೀನಸು ಕಳುಹಿಸಿ ರಶೀದಿಯನ್ನು ಇಲ್ಲಿಯ ದುಕಾನಿಗೆ ಕಳುಹಿಸಿದರೆ . . . ರಕಮು ಕೊಡೋಣದರಲ್ಲಿ ಬಂದೀತು (ಮುಂಬಾಪ್ಯಾ. ೨೦). **ಮಾರೀಪತು** : ಕಾವಾಗಾರಿ ನಿಂನ ಮಾರೀಪತು ಮಾಡಿದ ವಡರ ಯಿಾರನ ಬೋವಿಗೆ ಕಡಗಸ ೧ ಸರಪಣಿ ಸ ೧ (ಎಕ. XI, ಹಿರಿಯೂ. ೩೬-೦೨; 1533 ?). **ಮಾರೀಪತ್ತು** : ಬಾಕಿ ಐವಜಿಗೆ ಆಗಿಂದಾಗ್ಗೆ ಅಮಿಲನ ರುಜು ತನ್ನ ಮೊಹರಿನಿಂದ ಶಿರಸ್ತೇದಾರರ ದಾಖಲೆಯಿಂದ ಸಹ ಶೇಕದಾರ ಮಾರೀಪತ್ತು ಹೋಬಳಿ ಶೇಕದಾರ್ರಿಗೆ ರಶೀದಿ ಕೊಡಬೇಕು (ಮುಹಾಪಂ. II, ೬೬). **ಮಾರೀಫತ** : ಆ ಅಂಗಡಿಗಳ ಮಾರೀಫತ ಬದಕಿನ ರಶೀದಿ ಕಳುಹಿಸಿ ಅತ್ರಕಡಿಯ ಅಂಗಡಿಗಳೊಳಗಿಂದ ಪರಭಾರೇ ರಕಮು ತೆಗೆದುಕೊಳ್ಳುವ ಬಗ್ಗೆ (ಮುಂಬಾಪ್ಯಾ. ೨೦ ಕೃಶಾ.೩೩). **ಮಾರೀಫತ್ತು** : ನಿನ್ನ ಮಾರೀಫತ್ತು ಹೇಳಿ ಕಳಿಸೋಕೆ ಕಾರಣವೇನಪ್ಪ ? (ಕಂತ. ೩೨೦). **ಮಾರ್ಫತ** : ನಮ್ಮ ಮುಂಬಾಯಿ ಅಂಗಡಿಯ ಮಾರ್ಫತ ಉಪ್ಪು ಬೇಡಿಸಿದರೆ ಅಡತ ಬಿದ್ದೀತು (ಮುಂಬಾಪ್ಯಾ. ೨೭); ಅಂವಾ ತಕೂಪ್ನ ಅಷ್ಟ ನೋಡಿ ಇಟ್ಟರಲಿ . . . ದಾದರ್‍ಯಾನ ಮಾರ್ಫತ ಅವರ ಧೋರಣಾ ತಿಳಕೋಳಿಕ್ಕೆ ಅನಕೂಲನೂ ಆಗತದ (ಕಚಹ. II, ೦೪೮). **ಮಾರ್ಫತು** : ಅಂವ ಯಾರೋ ಇದ್ದಾನಂತಲ್ಲ — ಅವಳ ಪಾಲಕ — ಚೈತನ್ಯ ಅಂತ, ಅವನ ಮಾರ್ಫತು ಅವಳ್ನ ಭೆಟ್ಟಿಯಾಗ್ತೀವಿ (ಜಹಮ. ೨೨).

[ ← ಅರ. ಹಿಂ. ಮರಾ. ಮಾರಫತ್. ಮಾರ್ಫತ್]

**ಮಾರಿಬಲೆ** (ನಾ). (ಸಮುದ್ರದಲ್ಲಿ ಮೀನುಗಳನ್ನು ಹಿಡಿಯಲು ಹಾಕುವ) ದೊಡ್ಡ ಬಲೆ ; ಹೆಬ್ಬಲೆ : ನಮ್ಮ ಮೊಗೇರ ಮಕ್ಕಳನ್ನು ಮಾರಿಬಲೆ ದಿವಸ ಮಾತನಾಡಿಸಬಾರದು ಅಷ್ಟೇ (ತಹಸ. ೬೯) : ಹಾಯಿ ದೋಣಿಯಲ್ಲಿ ಮಾರಿಬಲೆ ಬಿದ್ದಿತ್ತು (ಮೂಕಜ್ಜಿ. ೩೭). [ ಮಾರಿ$_2$ + ಬಲೆ$_1$ ]

**ಮಾರಿಬೆ** ಮಾರಬ್ಬೆ ನೋ.

**ಮಾರಿಬೇನೆ** (ನಾ) = ಮಾರಿಕಾಜಾಡ್ಯ : ಮಾರಿಬೇನೆ ಬಂದು ಅತ್ತೆ-ಮಾವ ಕಣ್ಣು ಮುಚ್ಚಿದರು (ಅಪ. ೧೪೨) [ ಮಾರಿ$_2$ + ಬೇನೆ ]

**ಮಾರಿಚ್ಚೆ** 'ಮಾರಚ್ಚೆ' ನೋ.

**ಮಾರಿಮಳೆ** (ನಾ). ಭಾರಿ ಮಳೆ; ಅತಿವೃಷ್ಟಿ : ಒಂದು ಮಾರಿಮಳೆ ಗಾಳಿದಲ್ಲಿ ತುಂಗಾನದಿಯ ಪ್ರವಾಹವು ಮೇರೆದಪ್ಪಿ ತೀರ್ಥಹಳ್ಳಿಯ ಕೆಲವು ಮನೆಮಾತ್ರಗಳನ್ನು ಕೊಚ್ಚಿಬಿಟ್ಟಿತು (ಸಂಪ್ರ.ಕ. ೪೩); ಮಾರಿಮಳೆ ಮುಸಲ ಧಾರೆಯಂತೆ ಓರೆಕೋರೆಯಾಗಿ ಸುರಿಯುತ್ತಿತ್ತು. (ಕೃಷರು. ೪೬೬).
[ಮಾರಿ$_2$ + ಮಳೆ ( < ಮಱೆ$^3$) ]

**ಮಾರಿಮುಖ** (ನಾ). ಭಯಂಕರವಾದ ಮುಖ; ಉಗ್ರಮುಖ : ಮಾರಿಮುಖದವ ಕಠಿನಮನ ನಿಸ್ಸಾರಹೃದಯನು ಭೀಮನವನೊಳು ಮೋಹಿದವರೇನಹರು ಕೇಳ್ಳೆ ನಿನ್ನವರ ವಿಧಿಯ (ಕುಮಾ.ದ್ರೋ. ೧೩-೪೬).
[ ಸಂ. ]

**ಮಾರಿಮೊಗ** (ನಾ). = ಮಾರಿಮುಖ : ಘೋರಭೀಕರಪರಾಹನ ತಲೆ ಸಿಲುಕಿಟ್ಟು ಪೂರ್ಣ್ಯವ ವಿಷದ ಜೀರ್ಕೊಳವೆ ಮಾರಿಮೊಗದ ಡೆಂಕಣಿ ಮಸೆವಲಗುಗಳೊಳ್ ಜಾರ್ದುವತಿಭಯಾಂಕುರವ (ಕಂಡಿ. ೧೧-೦೩೨).
[ ಮಾರಿ$_2$ + ಮೊಗ ]

**ಮಾರಿರೋಗ** (ನಾ). = ಮಾರಿಕಾಜಾಡ್ಯ : ಪ್ಲೇಗು, ಕಾಲರಾ ರೋಗಗಳು ಮಾರಕವಾದುದರಿಂದ ಮಾರಿರೋಗವೆಂದೇ ಕರೆಯುತ್ತಾರೆ (ಶಂತ).
[ ಸಂ. ]

**ಮಾರಿವುಪದ್ರ** (ನಾ). = ಮಾರಿಕಾಜಾಡ್ಯ : ಸರ್ವಜಿತುಸಂವತ್ಸರದಲ್ಲಿ ಮಾರಿವುಪದ್ರವುಂಟಾಗಿ ಬಹುಜನಗಳು ಹತರಾಗುತ್ತಾ ಇರುವ ಕಾಲದಲ್ಲು (ಎಕ. V (R). ಮೈಸೂರು. ೩-೯; 1843). [ಮಾರಿ$_2$ + ಉಪದ್ರ]

**ಮಾರಿಷ** (ನಾ). (ವಿಶೇಷವಾಗಿ ನಾಟಕದಲ್ಲಿ ಪಾತ್ರಗಳು ಪರಸ್ಪರ ಗೌರವದಿಂದ ಸಂಬೋಧಿಸುವಾಗ ಬಳಸುವಂತೆ) ಪೂಜ್ಯ : ಮಾನನೀಯ : "ಹಿರಿಯನಂ ಮಾರಿಷನೆಂಬುದು" (ಹಲಾಯು. ೦೭-೯೯); "ನರ್ತನದ ಹಿರಿಯನಾ ಮಾರಿಷನೆನಿಕ್ಕು" (ಮಂಗರಾ. ೩೫-೧೦). [ಸಂ.]

**ಮಾರಿಸು** (ಕ್ರಿ). ೧. ಮಾರುವಂತೆ ಮಾಡು; ವಿಕ್ರಯಿಸುವಂತೆ ಮಾಡು : × × × ವಂಶದವರಗಳಿಂದ ಮಾರಿಸಿಕೊಳ್ಳು ಹೊಲವ ಕೊಡದವನು ನಮ್ಮ ವಂಶದಲಿ ಹುಟ್ಟತಕವನಲಾ (ಮೈಉ. ೦೬೨೯. ೯೯-೩; 1553). ೨. ಬದಲಾವಣೆ ಮಾಡು; ಮಾರ್ಪಡಿಸು : ದೇಶಾಂತರ ದವರಾದ ಪಾತ್ರಗಳ ನಾಮಧೇಯ ವೇಷಭೂಷಾದಿಗಳನ್ನು ಅಸ್ಮದ್ದೇಶೀಯರ ರುಚಿಗೆ ತಕ್ಕಂತೆ ಮಾರಿಸಿದರೂ . . . ಈ ಗ್ರಂಥವನ್ನು ಕನ್ನಡಿಸಿರುವುದು ಅಲ್ಪಗೌರವದ ಕಾರ್ಯವಲ್ಲ (ರಾಕಾಪು. ೭ ಪೀಠಿ).
[ಮಾರು$_1$ (<ಮಾಱು$_1$) + — ಇಸು$_3$]

**ಮಾರೀ** (ಕ್ರಿ). ಪ್ರತಿಯಾಗಿ ಕೊಡು,—ನೀಡು : ಹೆಸರಿಸಿ ದೇವ ದಕ್ಷಿಣೆಯ, ತಮ್ಮಲಿ ಕಲಿತ ವಿದ್ಯೆಗೀ ಜೀವವನೆ ಮಾರಿತ್ತೆ (ಪಿಸ್ರ. ೩೯-೧೦೭).
[ಮಾರು$_2$ (<ಮಾಱು$_2$) + ಈ$_2$]

**ಮಾರೀಚ** (ಗು). ೧. ಮರೀಚಿಋಷಿಗೆ ಸಂಬಂಧಿಸಿದ. (ನಾ). ೨. ಮರೀಚಿಋಷಿಯ ಮಗ: ಕಶ್ಯಪ. ೩. ಒಬ್ಬ ರಾಕ್ಷಸನ ಹೆಸರು : ಮಾರೀಚಂ ಮೊದಲಾಗೆ ಮಹಾರಥರೊಡನೇಱಿ ಸಿಂಹರಥಮಂ ರಥಿಗಳ್ . . . ಲಂಕೆಯಂ ಪೊಱಮಟ್ಟರ್ (ಪಂರಾಪ. ೦೩-೦೩). ೪. ಮೆಣಸಿನ ತೋಟ. ೫. ಯಾಗವನ್ನು ಮಾಡಿಸುವ ಪುರೋಹಿತ. ೬. ಪಟ್ಟದ ಆನೆ. ೭. ಒಂದು ಬಗೆಯ ಸಸ್ಯ : ಕಕ್ಕೋಲ. [ಸಂ.]

**ಮಾರೀಚತೆ** (ನಾ). ಮಾರೀಚರಾಕ್ಷಸನ ಗುಣ : ವಂಚನೆ : ನರನೀಚತೆ ಮಾರೀಚತೆ ದೇಷಪ್ರೇಮದ ಸೇವಿ (ಅಗ್ನಿಹಂ. ೮೨). [ಮಾರೀಚ + — ತೆ$_3$]

**ಮಾರೀಚಿ** (ನಾ). ೧. ಮೆಣಸಿನ ತೋಟ. ೨. ಮೆಣಸಿನಿಂದ ತಯಾರಿಸಿದ ಒಂದು ಬಗೆಯ ಮದ್ಯ (?) : ಮಧು ಸೀತುಂ ಕಟು ಸೀದು ಮೋ ಪುಳಿತ ಕಳ್ಳುಂ ಕರಂ ಕಯ್ತು ಬರ್ಪುದು ಮಾರೀಚಿ ತೊಡರ್ಪುಳಿಂದೆ ಸರದಿಂ ಕಂಪಿಲ್ಲ . . . ಎಂದು ಕುಡಿದರ್ ಕಾಮಾಂಗಮಂ ಕಾಂತೆಯರ್ (ಪಂಶಭಾ. ೪-೮೮). [ಸಂ. ಮಾರೀಚೀ]

**ಮಾರೀಪತ** 'ಮಾರಿಫತ್ತು' ನೋ.

**ಮಾರೀಪತ್ತು** 'ಮಾರಿಫತ್ತು' ನೋ.

**ಮಾರೀಫತ** 'ಮಾರಿಫತ್ತು' ನೋ.

**ಮಾರೀಫತ್ತು** 'ಮಾರಿಫತ್ತು' ನೋ.

**ಮಾರು$_1$** 'ಮಾಱು$_1$' ನೋ.

**ಮಾರು$_2$** 'ಮಾಱು$_2$' ನೋ.

**ಮಾರು$_3$** (ನಾ). ಅಡ್ಡವಾಗಿ ನೀಡಿದ ಎರಡು ಕೈಗಳ ಮಧ್ಯದ ಬೆರಳುಗಳ ನಡುವಿರುವ ಅಳತೆ : ನಾಲ್ಕುಮೊಳಗಳಷ್ಟು ಉದ್ದ : ಶ್ರೀಪ್ರಣಮೇಶ್ವರದೇವರ ಗಡಿಂಬದ ಗಳೆಯ ಪ್ರಮಾಣು ಮಾರು ಹನ್ನೆರಡು (ಎಕ. VII. ಶಿಕಾ. ೦೭೭-೦೭; 1020 ?) : ಹತ್ತುಮಾರು ಘಳೆಯಲಳೆದ ಭೂಮಿ (ಎಕ. VI. ತರೀ. ೬೦-೯೯; 1154) : ಪೊಳಲೊಳಿದ್ದ ವರಾಗ ಸಾವಿರಮಾರಿನಷ್ಟುಳತೆಯೊಳರಮನೆಯುತ್ತ ಸುಳಿಯದೆ ಮನಿದೋಜ ದಿದ್ದರೊಡೆಯನ ಮಂಗಲದಾನ ಸಮಯವನಱಿದು (ಪಂಕ. ೩-೩೯).

**ಮಾರುಂಚೆತೋಳುಘಳೆ** = ಒಂದು ಬಗೆಯ ಅಳತೆಯ ಕೋಲು : ಹದಿನಯ್ದುಮಾರುಂಚೆತೋಳುಘಳೆಯಲಳಕನ್ನಂ ಗೌಡುಗಳುಂ ಪಡುವ ಗೋಡಿಯ ತುಂಬಿನ ಹಳ್ಳಿಯ ಹೊಲ (ಎಕ. XI, ದಾವಡ. ೩-೯೩ : 1121).
[ದೇ.॥ ತಮಿ. ಮಾಲ. ಕೊಡ. ಮಾರ್ : ತುಳು. ಮಾರ್, ಮಾರು]

**ಮಾರು$_4$** (ನಾ). ಒಂದು ಬಗೆಯ ಮರ (?) : ಎಲವಂ ಪಾದರಿ ಹಾಲೆ . . . ನೆಲ್ಲಿ ಕಡವೀಚಲ್ ಮಾರು ತುಂಬುರ್ವೆಳಲ್ವಲಸಂ ಬಾಟ್ (ಸಂಶಿಸು. ೩-೨೩).
[ ? ]

**ಮಾರುಕಟ್ಟೆ** 'ಮಾರ್ಕಟ್ಟೆ' ನೋ.

**ಮಾರುಕಾಣ್** (ಕ್ರಿ). ಇದ್ದುದಕ್ಕಿಂತ ಬೇರೆ ಬಗೆಯ ಸುಖವನ್ನು ಅನುಭವಿಸು : ಮಾರುಕಂಡವಳು ಮಕ್ಕಳ ಸಾಕಿಯಾಳೇ ? (ಗಾದೆ).
[ ಮಾರು$_2$ ( < ಮಾಱು$_2$ ) + ಕಾಣು ( < ಕಾಣ್ ) ]

**ಮಾರುಗ** 'ಮಾರಗ' ನೋ.

**ಮಾರುಗಾಲು** (ನಾ). ಒಂದು ಮಾರಿನಷ್ಟು ದೂರಕ್ಕೆ ಹಾಕುವ ಹೆಜ್ಜೆ : ದಾಪುಗಾಲು : ನೀನು ಮಾರುಗಾಲು ಹಾಕುತ್ತಾ ನಡೆದರೆ ನಾನು ನಿನ್ನ ಜೊತೆ ಬರಲಾರೆ (ರೂಢಿ). [ ಮಾರು$_3$ + ಕಾಲು$_1$ ( < ಕಾಲ್$_1$ ) ]

**ಮಾರುಗೈ** (ನಾ). ಮಾರಿನಷ್ಟು ನೀಳವಾಗಿ ಚಾಚಿದ ಕೈ : ರಂಗನು ಎರಡೇ ಮಾರುಗೈಹೊಡೆತಗಳಿಂದ ಸಾಬಿಯ ಸಮೀಪಕ್ಕೆ ಬಂದು ನೀರು ಉಗ್ಗಹತ್ತಿದನು (ದಾಕಕು. ೩) ; ಅವನೆಷ್ಟು ದಿವ್ಯತೇಜಸ್ಸಿನ ವ್ಯಕ್ತಿ ! ಅಂಗಾಂಗಗಳು ಎಷ್ಟು ತುಂಬಿವೆ ! ಮಾರುಗೈಯಿಂದ ಅವನೆಡೆಗೆ ಸಾಗಿ ಬಂದಂತೆನಿಸಿತು (ಶೂಬಿಶಾ. ೯೬).

**ಮಾರುಗೈಹಾಕು** = ಮಾರಿನಷ್ಟು ನೀಳವಾಗಿ ಕೈಚಾಚು : ಗಂಗೆ . . . ಆ ಮುತ್ತೈದೆಯನ್ನು ಅಂಗಲಾಚಿ ಬೇಡಿಕೊಳ್ಳುತ್ತಿದ್ದಾಳೆ. ಮಾರುಗೈಹಾಕಿ ಅಡ್ಡಗಟ್ಟಿಬಿಟ್ಟಿದ್ದಾಳೆ (ಸುಮಸಂ. ೩೯).
[ ಮಾರು$_3$ + ಕೈ$_2$ ( < ಕಯ್$_2$ ) ]

**ಮಾರುಗೊಡು** 'ಮಾಱುಗೊಡು' ನೋ.

**ಮಾರುಗೊಳ್** 'ಮಾರ್ಕೊಳ್' ನೋ.

**ಮಾರುಡ**, ಮಾರುಡು$_2$ (ನಾ). ಒಂದು ಬಗೆಯ ಮರ ಮತ್ತು (ಉಪ್ಪಿನಕಾಯಿಗೆ ಬಳಸುವ) ಅದರ ಕಾಯಿ ; ಬಿಲ್ವಪತ್ರೆ ; ಬೆಲ್ಲ ಪತ್ರೆ : ಎರನುಂ ಮುತ್ತಮುಮೊಡವೆಳೆದಿರ್ಪ ಪಡುವಲದಲ್ಲದೆಂದು ಮಾರುಡ ಮೌದುಂಬರಮುಂ ಪೆಣೆದಿರೆ ಬಡಗಲ್ ದೊರೆಕೊಳ್ಳುಂ (ಪುರುಷ) ಪ್ರಮಾಣದೊಳ್ ಬಹುಳಜಳಂ (ಲೋಕೋಪಕ. ೩-೦೯). **ಮಾರುಡು$_2$** : ಕಾಡು

ಬದಿರಕುಡಿಯ ಮಾವಿನ ಮಿಡಿಯ ಮಾರುಡಿನ [ಪಾಠಾಂ. ತಿನ,ದಿನ]ಮೆಣಸು ಗಡಲೆಯ ಪುಡಿಯೊಳಡಸಿದಲ್ಲವಲ್ಲಣಿಗೆಯು ಚಕ್ಕಣಂಗಳಂ ಸವಿಸವಿದು (ಶಂಶಕ್ಷಾ. ೯–೬೬ ಪ). [ದೇ.॥ ತೆಲು. ಮಾರೆಡು, ಮಾರೇಡು]

**ಮಾರುಡು₁** (ಕ್ರಿ). ಇನ್ನೊಂದು ಬಟ್ಟೆಯನ್ನು ಧರಿಸು ; ಬೇರೆಯ ವಸ್ತ್ರವನ್ನು ಉಡು : ಮಿಂದೆಳಿಲ್ಲಾಕೆ . . . ಮಾರುಟ್ಟಳಿಲ್ಲಾಕೆ (ಶ್ರೀರಾಪಾ. ೩೨೩–೦೮೨). [ಮಾರು₂ (< ಮಾಱು₂) + ಉಡು₁]

**ಮಾರುಡು₂** ' ಮಾರುಡ ' ನೋ.

**ಮಾರುತ** (ಗು). ೧. ವಾಯುವಿಗೆ ಸಂಬಂಧಿಸಿದ ; ಗಾಳಿಯ. (ನಾ). ೨. ಗಾಳಿ ; ವಾಯು : "ಪವನಃ, ಶ್ವಸನಃ, ವಾಯುಃ, ಮರುತ್, ಅನಿಲಃ, ಮಾರುತಃ . . . ಮಹಾಬಲಃ — ಈ ೨೦ ಗಾಳಿಯ ಪೆಸರ್" (ಕಬಾಯು. ೦೯–೬೩) ; ಮಾರುತಘಾತಸಂಚಲಿತಕೇತುಸಮೂಹಮುದಗ್ರಚಕ್ರ ಚೀತ್ಕಾರಂ . . .ಅಂಬರಾಂತರಮನಳ್ಕಿಱಿದವ್ವಳಿಪನ್ನೆಗಂ ಶರಾಸಾರದಗುರ್ವೆ ಪರ್ವಿ ನಿಲೆ ತಾಗಿದುವುಗ್ರರಥಂ ರಥಾಳಿಯೊಳ್ (ಶಂಶಕ್ಷಾ. ೦೦–೬೬) ; ಮಾರುತದಿನಕರಕರಸಂಚಾರಕ್ಕಗಮ್ಯಮೆಂಬಿನಂ ವಿದ್ಯಾಪ್ರಾಕಾರಮನೀಗಳೊಡರ್ಚಿದನಾ ರಾಕ್ಷಸಪತಿಯ ಪುರಮಂ (ಶಂರಾಪಾ. ೦೦–೨೩) ; ಆ ಮಾರುತನ ಗುದ್ದಿ ಅಂಗ ನೋಯಿಪುದುಂಟೆ (ಕುಕಂದ. ೩–೦೦೯–೩). ೩. ಗಾಳಿಯ ಅಧಿದೇವತೆ ; ವಾಯುದೇವತೆ : ತಾತ ಮಾರುತ ಕೇಳ್ ಮಾರುತಮಾರ್ಗ ಕೇಳ್ ಪಗೆವರಂ ಕೊಂದೆನ್ನ ಕೋಪಾಗ್ನಿಗಾಹುತಿ ಮಾಟ್ಪಿಂ (ಗದಾಯು. ೬–೨೩) ; ಕೊಟ್ಟ ನಂಬುಗೆಯಿಂ ನೆನೆದು ಕಾಮಾರಿ ಕರುಣದಿಂ ಮಾರುತನಂ ನೆನೆಯೆ (ಶಂಬಶ. ೦೯–೬೯) ; ಹಿರಿಯರೆನಗಿಬ್ಬರು ಯುಧಿಷ್ಠಿರ ಧರಣಿಪತಿ ನೀನೊಬ್ಬನಯ್ಯಂದಿರುಗಳಬ್ಬರು ಮಾರುತನು ನೀನೊಬ್ಬನು . . . ಎಂದುಪಚರಿಸಿದನು ಪವಮಾನನಂದನನಂಜನಾಸುತನ (ಕುವ್ಯಾಕ. ೦೦–೨೯). ೪. ಒಂದು ಬಗೆಯ ರೋಗ ; ಸಂಧಿವಾತ ; ವಾತರೋಗ : ವನಿತಾಸೇವನೆ ರೂಕ್ಷಮಾಕ್ಕೆ ಪಸಿವಾಗುಟಲ್ ಚಿಂತೆ ವಿಣ್ಮೂತ್ರ ವೇಗನಿರೋಧಂ ಶ್ರಮಮತ್ಯಜೀರ್ಣಮಿವಱಿಂ ಕಾರ್ಗಾಲದೊಳ್ ಮಾರುತಂ ಜನಿಯಿಕ್ಕುಂ (ಲೋಕೋಪ. ೯–೪). ೫. ಉಸಿರು ; ಶ್ವಾಸ. ೬. ಶರೀರದ ಮೂರುಬಗೆಯ ಮುಖ್ಯವಾದ ವಾಯುಗಳಲ್ಲಿ ಒಂದು. ೭. ವಿಷ್ಣು. ೮. ರುದ್ರ; ಶಿವ. ೯. ಆನೆಯ ಸೊಂಡಿಲು. ೧೦. [ಛಂದ] ಒಂದು ಅಕ್ಷರಗಣದ ಹೆಸರು ; ಸಗಣ : ಗುರುಮೂಱಾಗಿರೆ ಧಾತ್ರಿ ಮುಂತೆರಡು ಬಣ್ಣಂ ತೋಯಮಾದ್ಯಂತದೊಳ್ ಬರೆ ವಹ್ನಿ ಶಿಖಿಯೊಂದು ಕೊಂಕು ಕಡೆಯಿಂದಾ ಮಾರುತಂ (ಛಂದೋಂಬು. ೦–೩೯). [ಸಂ.]

**ಮಾರುತಪಥ** (ನಾ). ವಾಯುಮಾರ್ಗ ; ಆಕಾಶ: ಆಗಳೆ ಬರಿಸೆ ವಿದ್ಯೆಯಿಂ ನಾರದನಂ ಮಾರುತಪಥದಿಂದಾಗಳ್ ಭೋರೆನೆ ಬರೆ ಕಂಡು (ಪೀಬಾಕ. ೬–೦೬೭). [ಸಂ.]

**ಮಾರುತಬಂಧು** (ನಾ). ವಾಯುವಿನ ಆಪ್ತ ; ಅಗ್ನಿ : ಮೇಷಮಂ ಮಾರುತಬಂಧು ಸ್ವೈರಿಭಮನುಂಬುಜಮಿತ್ರಸುತಂ . . ವೃಷಭನಂ ಹರನೇಱಿ ನಭಕ್ಕೆ ಸಲ್ವದುಂ (ಜಗಪು. ೦–೩೬) ; ಮಾರುತಬಂಧು ಮೇಷಮಂ . . . ಗಿರಿಶಂ ವೃಷೇಂದ್ರನಂ ಮಮತೆಯೊಳೇಱಿ ಪಾಲ್ಗೊಡಲ ಸಾರಿದರ್ (ದಶಾಪ. ೨–೩). [ಸಂ.]

**ಮಾರುತಭುಗು** (ನಾ). ಗಾಳಿಯನ್ನು ಆಹಾರವಾಗುಳ್ಳದು ; ಹಾವು: ಅತಿಜಡಭಾವಿಯಾಗಿ ಕಡಲಲ್ತು ನಿಜಶ್ರುತಿಶೂನ್ಯನಾಗಿ ಮಾರುತಭುಗುವಲ್ತು . . . ಎನೆ ವೃದ್ಧನಿದೇಂ ವಿರುದ್ಧನೋ (ಕುಕ್ಕಶ. ೦೩–೬೩). [< ಸಂ. ಮಾರುತಭುಜ್]

**ಮಾರುತಮಂಡಲ**, ಮಾರುತಮಂಡಳ (ನಾ). ವಾಯುಮಂಡಲ ; ಆಕಾಶ : ಮಾರುತವೇಳೆಯೊಳ್ ದಹನಮಂಡಲಮೊಂದಿದ ವಹ್ನಿವೇಳೆಯೊಳ್ ಮಾರುತಮಂಡಲಂ ನೆಗಟೆ ಮಾರಿ ಬಱಿ ಪಸಮೆಂಬಿವಕ್ಕುಂ (ಲೋಕೋಪ. ೯–೬೬). **ಮಾರುತಮಂಡಳ** : ಮಾರುತಮಂಡಳಮನಿತುಂ ತಾರಾಪಥದಂತೆ ಮಂದಚಾರಂಬಡೆದೇಂ ರಾರಾಜಿಸಿತ್ತೊ ವನಲಕ್ಷ್ಮೀರಮಣಿಯ ವದನಸುರಭಿನಿಶ್ವಾಸದವೊಲ್ (ಪುಷ್ಪಕ. ೦೯–೦೦೦). [ಸಂ.]

**ಮಾರುತಮಂಡಳ** ' ಮಾರುತಮಂಡಲ ' ನೋ.

**ಮಾರುತಮಾರ್ಗ** (ನಾ). = ಮಾರುತಪಥ : ತಾತ ಮಾರುತ ಕೇಳ್ ಮಾರುತಮಾರ್ಗ ಕೇಳ್ ಪಗೆವರಂ ಕೊಂದೆನ್ನ ಕೋಪಾಗ್ನಿಗಾಹುತಿ ಮಾಟ್ಪಿಂ (ಗದಾಯು. ೬–೨೩) ; ಶಾರ್ವರ್ಯಕನಿರ್ಗತಮಾರ್ಗಣೋತ್ಕರಂ ಮಾರುತಮಾರ್ಗಮಂ ಪುದಿಯೆ (ಶಗಪು. ೦೨–೦೩). [ಸಂ.]

**ಮಾರುತಸುತ** (ನಾ). ೧. ವಾಯುವಿನ ಮಗ. ೨. ಹನುಮಂತ ; ಮಾರುತಿ : ಜವದಿಂ ಸೌಪರ್ಣನಂ ಮಾರುತಸುತನಂ . . . ಕೀಟ್ಗೊಟ್ಟ ಸಲ್ಲಕ್ಷಣಗುಣನಿಧಿಗಳ್ ಪಲ್ಲಣಂಗಟ್ಟಿ ಬಂದಿರ್ದುವು ಹೇಷಾಘೋಷವಿದ್ರಾವಿತರಿಪುಮಹಿಭೃಟ್ಟಾತುರಂಗಂ ತುರಂಗಂ (ಪುಕ್ಕಪು.೩–೦೦). ೩. ಭೀಮ : ಹೈಡಿಂಬಿ ತೋರಗದೆಯಿಂದವರ ತೇರ್ಗಳಂ . . ಅಪ್ಪಳಿಸಿ ವಾರುವಂ ವೆರಸಿ ಕಡುವೇಗದಿಂದೈತಂದು ಮಾರುತಸುತನ ಮುಂದೆ ನಿಲುತಿರ್ದಂ (ಕೃಬಿಹಾ. ೯–೨೩). [ಸಂ.]

**ಮಾರುತಾಪ್ತ** (ನಾ). = ಮಾರುತಬಂಧು : ಮಾರುತಾಪ್ತನು ದೈವವೆಂದು ವಿಚಾರಿಪಡೆ ಭಂಗಂಬಡುವುದೇ ಧಾರುಣಿಯೊಳಗೆ ಸರ್ವಭಕ್ಷಕನಾಗಿ ಚರಿಸುವನೇ (ಬಸಪು. ೩೯–೦೦) ; ತಲೆಯ ಕೂದಲ ಕಕ್ಕಡವ ಮಾಡಿ ಮಾರುತಾಪ್ತನ ಮುಟ್ಟಿಸುತ ಪ್ರಜ್ವಲಿಪ ಕಲಿಯಾರಿಗೀಶ್ವರನೊಲಿದನು (ಗುರುಚಾ. ೬–೯೬). [ಸಂ.]

**ಮಾರುತಾಶನಿ** (ನಾ). = ಮಾರುತಭುಗು : ಧಾರುಣೀರುಹತತಿಯೊಳಾ ಕಲ್ಪವೃಕ್ಷವಾ ಮಾರುತಾಶನಿಗಳೊಳು ಶೇಷನು . . . ಎಂತಧಿಕವಂತಾರಯ್ಯಲೆಲ್ಲ ಕೃಪದೊಳು ಮಿಗಿಲೆನಿಸುವಿ ವೀರಶೈವವದು (ಶೀಕ್ಕಕ. ೭–೩–೨). [< ಸಂ. ಮಾರುತಾಶನ]

**ಮಾರುತಿ** (ನಾ). ೧. ವಾಯುವಿನ ಮಗ : ಅನುಪಮಕೀರ್ತಿ ಮೂಱನೆಯ ಮಾರುತಿ ನಾಲ್ಕನೆಯುಗ್ರವಹ್ನಿಯಯ್ದನೆಯ ಸಮುದ್ರಂ . . . ಪತ್ತನೆಯ ನಿಧಾನಮೂರ್ತಿಯೆನೆ ಪೊಲ್ವವರಾರೆಱಿಯಂಗದೇವನಂ (ಎಕ. II (R), ೩೬೬–೦೭; 1094). ೨. ಹನುಮಂತ; ಆಂಜನೇಯ: ಮಾರುತಿ ಬುದ್ಧಿ ಪೇಟಿಡ್ದಮದಂ ಬಗೆಗೊಳ್ಳನೆ (ಶಂರಾಪಾ. ೦೦–೦೬೬); ಸರಸಿಯೊತ್ತಲು ಗಂಧವೆತ್ತಲು ಬರವಿದೆತ್ತಣಿದೆತ್ತ ಘಟಿಸಿದುದರರೆ ಮಾರುತಿ ತಂದೆ ನೀನೆಂದೆನುತ ಬಣ್ಣಿಸಿದ (ಕುವ್ಯಾಕ. ೦೦–೨೭); ಗುರುರಾಯರ ನಂಬಿರೊ ಮಾರುತಿಯೆಂಬ ಗುರುರಾಯರ ನಂಬಿರೊ (ಪುಕಂದ. ೦–೨೦೬ ಪಲ್ಲವಿ). ೩. ಭೀಮ : ಮಾರುತಿ ನಿಜವೇಣೀಸಂಹಾರಂ ಮಾಡಿದೊಡೆ ಮಾಟ್ಪುದೆನಗಂ ನಿನಗಂ ಪೂರಣೆಗೆ ಜಠರಪಿಠರಕಪೂರಣೆಗೇಂ ಮಾಡದೆಂತು ಕರೆವೆಂ ನಿನ್ನಂ (ಗದಾಯು. ೨–೦೦); ಮತ್ತೆ ಮಾರುತಿ ಹರಿಸಿದನು ನಿಜರಥ ವನತಿರಥರೊಡ್ಡು ಲಟಕಟಿಸೆ (ಕುವ್ಯಾದ್ರೋ. ೨–೬೬); ಮಾರುತಿಗೆ ಪಟ್ಟವಂ ಕಟ್ಟುವೆವು ನಾವು (ಕೃಬಿಹಾ. ೨–೨೨). ೪. ಆಂಜನೇಯನ ಅವತಾರವೆನಿಸಿದ ಮಧ್ವಾಚಾರ್ಯ : ' ಮಾರುತಿಮತ ' ಪರಾ. [ಸಂ.]

**ಮಾರುತಿಮತ** (ನಾ). ಮಧ್ವಾಚಾರ್ಯರಿಂದ ಸ್ಥಾಪಿತವಾದ ಮತ ; ದ್ವೈತಮತ : ತಾರತಮ್ಯ ಪಂಚಭೇದ ಸತ್ಯವೆಂಬ ಮಾರುತಿಮತ ಪೊಂದಿದವರನು ಸಲಹು (ಪುಕಂದ. ೦–೦೯೯–೩). [ಸಂ.]

**ಮಾರುತೇಷ್ಟ** (ನಾ). ೧. = ಮಾರುತಬಂಧು. ೨. [ಛಂದ] ಒಂದು ಅಕ್ಷರಗಣದ ಹೆಸರು ; ರಗಣ : ಮಾರುತೇಷ್ಟ ದಿವಿಜಾಗ್ನಿಯುಂ ಲಗಂ ಸಾರೆಯಾಗೆ ರಸದಲ್ಲಿ ವಿಶ್ರಮಂ ದೂರಮಲ್ಲದಿರೆ ಕೇಳ್ರಥೋದ್ಧತೋದಾರನಾಮಮೆಸೆಗುಂ ರಥೋದ್ಧತೇ (ಛಂದೋಂಬು. ೩–೦೦೬). [ಸಂ.]

**ಮಾರುತ್ತರ** ' ಮಾಱುತ್ತರ ' ನೋ.

**ಮಾರುತ್ತರಕೊಡು** ' ಮಾಱುತ್ತರಂಗೊಡು ' ನೋ.

**ಮಾರುತ್ತರಿಸು** (ಕ್ರಿ). ಪ್ರತ್ಯುತ್ತರವನ್ನು ಕೊಡು ; ಜವಾಬು ನೀಡು : ಹುಡುಗಿ "ಬಾ ಸೋನ್ಯಾ" ಎಂದು ಮಾರುತ್ತರಿಸಿದಳು (ಕನ್ನ.ಕ. ೯೯). [ಮಾರುತ್ತರ (< ಮಾಱುತ್ತರ) + — ಇಸು$_1$]

**ಮಾರುದನಿ** ' ಮಾರ್ದನಿ ' ನೋ.

**ಮಾರುದನಿಗೊಡು** ' ಮಾರ್ದನಿಗೊಡು ' ನೋ.

**ಮಾರುದನಿತೋರು** ' ಮಾರ್ದನಿದೋಱು ' ನೋ.

**ಮಾರುದ್ರ** (ನಾ). ಮಹಾರುದ್ರ ; ಶಿವ : ದಂಡಿಸಿ ದೈತ್ಯರನು ರುಂಡವ ಧರಿಸಿ ಹರ ತಾಂಡವನೃತ್ಯ ಮಾಡುವಾಗ ಮಾರುದ್ರ ಕಂಡಂತೆ ಕಾಂಬುವನು ಶಿವಸಿದ್ಧ (ಸಿದ್ಧ.ಕೃ. ೦೩-೬೦). [ಮಾ$_4$ + ರುದ್ರ]

**ಮಾರುಸುಡಿ$_1$** ' ಮಾರ್ನುಡಿ$_1$ ' ನೋ.

**ಮಾರುನುಡಿ$_2$** ' ಮಾರ್ನುಡಿ$_2$ ' ನೋ.

**ಮಾರುಮಾತು** ' ಮಾಱುಮಾತು ' ನೋ.

**ಮಾರುಲಿ** (ನಾ). ಪ್ರತಿಯಾದ ಶಬ್ದ ; ಪ್ರತಿಧ್ವನಿ : ಹೆಲನರಿನ್ ಮೊದಲೆ ದ್ನುದೊಂದಾರ್ಪ್ಪು—ಬಿಲ್ಲುಲಿಯು, ನಲ್ಲುಲಿಯು ಪಾಡು, ದೀವಿಕರೆಯುರೆಗಳಿನ್ ಮೊಳಗೆ ಮಾರುಲಿಗಳ್ (ಜಾಕಸ. ೦೫-೩೫೯). [ಮಾರ್ (< ಮಾಱು$_2$) + ಉಲಿ$_2$]

**ಮಾರುವ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾರುವವು (೨೨) ಸ—ಗ್ರಹಯುತವಾದುದು, ಆರೋಹದಲ್ಲಿ ರಿ—ಇಲ್ಲ, ಗಾನತತ್ತ್ವವನ್ನು ತಿಳಿದವರು (ಇದನ್ನು) ಸದಾಕಾಲದಲ್ಲಿಯೂ ಹಾಡುತ್ತಾರೆ (ಕಕುಶ್ರ. ೦೩೩). [ಸಂ.]

**ಮಾರುವಾಡಿ** ' ಮಾರವಾಡಿ ' ನೋ.

**ಮಾರುವೆ** (ನಾ). ಮಾರಾಟ; ವಿನಿಮಯ : ಇಲ್ಲಿಗೆ ಹಣವನ್ನು ತರುವವರು ಹೆಚ್ಚುಮಂದಿಯಾಗುವುದರಿಂದ ಈ ಹಣದ ಬೆಲೆ ಹೆಚ್ಚಾಗಿ ದೇಶದ ಮಾರುವೆ ಏರುವುದು (ಹಣಶ್ರ. ೦೯೬). [ಮಾರು$_1$ (< ಮಾಱು$_1$) + — ವೆ]

**ಮಾರುವೆಹುಂಡಿ** (ನಾ). ಅಂತರ್‍ರಾಷ್ಟ್ರೀಯವ್ಯಾಪಾರದಲ್ಲಿ ಒಂದು ದೇಶವು ತರಿಸಿಕೊಂಡ ಸಾಮಾನಿಗೆ ಕೊಡಬೇಕಾದ ಹಣಕ್ಕಾಗಿ ಕಳುಹಿಸುವ ಅಪ್ಪಣೆಪತ್ರ : ಚೆಕ್ಕಿಗೂ ಮಾರುವೆಹುಂಡಿಗೂ ಒಂದೆರಡು ವ್ಯತ್ಯಾಸಗಳಿವೆ (ಹಣಶ್ರ. ೬೬). [ಮಾರುವ + ಹುಂಡಿ$_1$./p ಇದು ' Bill of Exchange ' ಎಂಬ ಇಂಗ್ಲೀಷ್ ಪದದ ಕನ್ನಡಭಾಷಾಂತರ]

**ಮಾರುವೇಷ** (ನಾ). ಬೇರೆ ವೇಷ ; ಛದ್ಮವೇಷ : ಯುಧಿಷ್ಠಿರಮಹಾರಾಜನು ಮತ್ತೊಬ್ಬ ಅರಸನ ಬಳಿ ಮಾರುವೇಷವನ್ನು ಧರಿಸಿ ಸೇವಕತನದಲ್ಲಿ ಸೇರುವಂತೆ ಆಯಿತೇ ! (ಪ್ರಾಸಶ. ೨೦೭); ಮಾರುವೇಷದಿಂದ ಶಿವನು ತನ್ನ ಹೆಂಡತಿಯ ಶೀಲವನ್ನು ಪರೀಕ್ಷಿಸಿದ ಘಟನೆಯನ್ನು ಈ ಕಥೆ ನಿರೂಪಿಸುತ್ತದೆ (ಕಶಾ. ೩೯ ಶ್ರ.ಪ್ರಾ.ಶಃ). [ಮಾರು$_2$ (< ಮಾಱು$_2$) + ವೇಷ]

**ಮಾರುವೋಗು** ' ಮಾಱುವೋಗು ' ನೋ.

**ಮಾರುಹೇಳು** (ಕ್ರಿ). ಜವಾಬು ಕೊಡು ; ಉತ್ತರವನ್ನು ನೀಡು : ಇಬ್ಬರಲ್ಲಿಯು ಒಬ್ಬನು ಮಾರುಹೇಳಿದ (ರಾಜಯೋ. ೦೩೦). [ಮಾರು$_2$ (< ಮಾಱು$_2$) + ಹೇಳು (< ಪೇೞ್)]

**ಮಾರುಹೋಗು** ' ಮಾಱುವೋಗು ' ನೋ.

**ಮಾರುಳಿ, ಮಾರವಳಿ, ಮಾರವಾಳಿ** (ನಾ). ಒಂದು ಬಗೆಯ ಹುಲ್ಲು : "ವಕ್ರ ಮಾರುಳಿ ಕಂಬು ಕಸವೆ ಸಂದಂ ಕರಡಯುತ್ಕಂ " (ಶುಂಗರಾ. ೩೩-೬). **ಮಾರವಳಿ** : " ಮಾಲಾತೃಣಕಂ, ಭೂಸ್ತೃಣಂ — ೨ ಮಾರವಳೀಹುಲ್ಲಿನ ಹೆಸರು " (ಸಿದ್ಧಾಂತಿ. ೦೫೦). **ಮಾರವಾಳಿ** : ' ದೊಡ್ಡಮಾರವಾಳಿ ' ಪರಾ. [ ←ತೆಲು. ಮಾರುವೆಲ್ಲಿ ]

**ಮಾರೆತ್ತಿ** (ನಾ). ಒಬ್ಬಾತನ ಹೆಸರು : ಮಾರೆತ್ತಿಗಳ ಮಗನ್ ಧೋಲ ಆವನ್ ವಿಜಿತಿತ್ರಿಗರಾ ಕಾಳಿಗದುಳ್ ಕಾದನಗುರುಳ್ ಏಱಿದು ಸಗ್ಗಗೆ ಪುಕ್ಕದುವನ್ (ಎಕ. X (ಕ), ಶಂಶಾಸ. ೦೬೬-೯; ೩೫೮ ೫೫). [ ? ]

**ಮಾರೆಯು** ' ಮಾರಯ್ಯ$_6$ ' ನೋ.

**ಮಾರೆಯ್ಯ$_6$** ' ಮಾರಯ್ಯ$_6$ ' ನೋ.

**ಮಾರೇಶ** (ನಾ). ಮನ್ಮಥನ ಒಡೆಯ ; ಶಿವ : ಕವಿದು ಕತ್ತಲೆ ಬನದೊಳ್ ಧೀರನು ಹೆದರದೆ ಮನದಲಿ ಮಾರೇಶನ ಧ್ಯಾನದೊಳಗೆಯಿರುತಿರೆ ಭೂಪಂ (ಹಪಾಶ. ೫೬). [ಸಂ.]

**ಮಾರೊಡ್ಡು** ' ಮಾಱೊಡ್ಡು$_1$ ' ನೋ.

**ಮಾರೋಲೆ** ' ಮಾಱೋಲೆ ' ನೋ.

**ಮಾರ್ಕಂಡಿ** (ನಾ). ಮೃಗಗಳು ಒಂದು ಕಾಡಿನಿಂದ ಮತ್ತೊಂದು ಕಾಡಿಗೆ ಹೋಗುವ ಅಥವಾ ಬರುವ ಸ್ಥಳ; ಎದುರುಕಂಡಿ: ಮೃಗಮಂ ಗಾಳಿಯನಿರ್ಕೆಯಂ ಪಕ್ಕೆಯಂ ಗಣಿದಮಂ ಕಂಡಿಯಂ ಮಾರ್ಕಂಡಿಯಂ . . . ಬಗೆದಾಗಳರಸರೊಳೆಲ್ಲ ಕೇಳ್ ನೀಂ ಬಲ್ಲೆ ಬೇಂಟೆಕಾಱರೊಳೆಲ್ಲವಾನೆ ಬಲ್ಲೆಂ (ಶಂಶಪಾ. ೫-೯೩). [ಮಾರ್ (< ಮಾಱು$_2$) + ಕಂಡಿ$_1$]

**ಮಾರ್ಕಟ್ಟಳೆ** (ನಾ). ಪ್ರತಿಯಾದ ಆಜ್ಞೆ,—ಅಪ್ಪಣೆ : ಱಕಾರಾದೇಶಮಾದ ರೇಫಗೆ ಪರಮಾದ ಕಕಾರಕ್ಕೆ— ಮಾರ್ಕೊರಲ ಭೈರವಂ, ಮಾರ್ಕಟ್ಟಳೆ (ಶಬ್ದ. ಸು. ೬೬ ಪ್ರಯೋ). [ಮಾರ್ (< ಮಾಱು$_2$) + ಕಟ್ಟಳೆ$_1$]

**ಮಾರ್ಕಟ್ಟೆ, ಮಾರುಕಟ್ಟೆ** (ನಾ). ಸರಕುಗಳನ್ನು ಮಾರುವ ಸ್ಥಳ ; ವ್ಯಾಪಾರಮಾಡುವ ಸ್ಥಳ : ತುರುಗಳಂ ಕೊಲ್ವ ಮಾರ್ಕಟ್ಟೆಗಳ ಪೊಂದಿ ಮುಲುಕಿಂ ಪೊಳಲ್ ಪರ್ವರಿಕೆ ಬೀಗರ್ಗಂ (ಕಾಂಚಶ. ೦೦೩-೨೦೭). **ಮಾರುಕಟ್ಟೆ** : ಮಾರುಕಟ್ಟೆಯಲ್ಲಿ ಕೂಲಿಮಾಡುವುದೂ ಅಷ್ಟೊಂದು ಸುಲಭಕೆಲಸವಾಗಿರಲಿಲ್ಲ (ಪಾಪೋಲೀ. ೨೩) ; ಪ್ರೀತಿಯ ವ್ಯವಹಾರದ ಮಾರುಕಟ್ಟೆಯಲ್ಲಿ ಸವಕಲುನಾಣ್ಯಕ್ಕಷ್ಟೆ ಬೆಲೆ (ಪಾಶ್ಚಾತ್ಯ. ೨೬೯). ' ಮಾರ್ಕೆಟ್ಟು ' ಪರಾ. [ <ಮಾರು$_1$ (< ಮಾಱು$_1$ ) + ಕಟ್ಟೆ$_{11}$/. p ಇದು ಇಂಗ್ಲಿಷಿನ ' Market ' ಶಬ್ದದ ರೂಪಸಾಮ್ಯದಿಂದಲೂ ಆಗಿರಬಹುದು]

**ಮಾರ್ಕಣೆ** ' ಮಾರ್ಗಣೆ$_1$ ' ನೋ.

**ಮಾರ್ಕರೆ** (ನಾ). ಪ್ರತಿಯಾದ ಕೂಗು ; ಮರುದನಿ : ಎಳಗರುವು ! ಕರೆಕರೆದು ಹಾಲುಂಬೆನೆನ್ನುವುದು ತಿಳಿಯದೇಂ ಬಿಡಿಸುತಿದೆ ಮಾರ್ಕರೆಗೆ ಕಿವಿಯುಂ (ಕಾಂಚಶ. ೬೩-೦೫೯). [ಮಾರ್ (< ಮಾಱು$_2$) + ಕರೆ$_6$]

**ಮಾರ್ಕವ** (ನಾ). ಒಂದು ಬಗೆಯ ಗಿಡ ; ಕಾಡಿಗೆಗರಗು : "ಭೃಂಗಂ ಮಾರ್ಕವ" (ವಸ್ತುಕೋ. ೩೭-೨೭). [ಸಂ.]

**ಮಾರ್ಕವಿ** (ಕ್ರಿ). ಪ್ರತಿಯಾಗಿ ಮುತ್ತು,—ಆವರಿಸು: ಕವಿವ ಶರಾಳಿಯಂ ನಿಜಶರಾಳಿಗಳಟ್ಟಿ ತೆರಳ್ಚಿ ತೂಳ್ದಿ ಮಾರ್ಕವಿದು ಪಳಂಚಿ ಪಾಯ್ದೊರಸೆ (ಶಂಶಪಾ. ೦೨-೦೯೮). [ಮಾರ್ (< ಮಾಱು$_2$) + ಕವಿ$_1$]

**ಮಾರ್ಕಾಡು** (ನಾ). (ಮೃಗಗಳಿಗೆ ಆಶ್ರಯವಾಗಿರುವ) ಎದುರುಕಾಡು: ಆಡಲಾಡಿಸಲ್ ಪಾಟಿಸುಂ ನಿಱಿಸಲುಂ ಪರಿಗೊಳಲ್ ತೊವಲಿಕ್ಕಲೊಳಗಂ ಬರಲ್ ಕಾಡ ಬೇಲಿಯುಂ ಮಾರ್ಕಾಡನಱಿಯಲುಂ . . . ಪಡೆ ಮೆಚ್ಚೆ ನೀಂ ಬಲ್ಲೆ ನೀಂ ಮೆಚ್ಚೆ ಹರಿಗ ಕೇಳಾನೆ ಬಲ್ಲೆಂ (ಶಂಶಪಾ. ೫-೯೦). [ಮಾರ್ (< ಮಾಱು$_2$) + ಕಾಡು$_2$]

**ಮಾರ್ಕಿಡಿ** ' ಮಾರ್ಗಿಡಿ ' ನೋ.

**ಮಾರ್ಕಿಡಿವಿಡು** (ಕ್ರಿ). ಎದುರುಕಿಡಿಯನ್ನು ಸೂಸು ; ಪ್ರತಿಯಾಗಿ ಕೆಂಡವನ್ನು ಉಗುಳು : ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳೆ ಬಾಳ್ ಪಳಂಚಿ ಮಾರ್ಕಿಡಿ[ಪಾಠಾಂ. ಕಿಡಿ, ಕಿಡೆ]ವಿಡೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ (ಶಂಶಪಾ. ೦೦-೯೨). [ಮಾರ್ಕಿಡಿ (< ಮಾರ್ಗಿಡಿ) + ಬಿಡು$_1$]

**ಮಾರ್ಕೆಟ್** ' ಮಾರ್ಕೆಟ್ಟು ' ನೋ.

**ಮಾರ್ಕೆಟ್ಟು, ಮಾರ್ಕೆಟ್** (ನಾ). ಹಣ್ಣು, ಹೂವು, ತರಕಾರಿ, ದಿನಸಿ, ಜಾನುವಾರು ಮೊದಲಾದುವನ್ನು ಕೊಳ್ಳುವುದಕ್ಕೂ ಮಾರುವುದಕ್ಕೂ ಸೇರುವ ಜನಸಂದಣಿಯ ಜಾಗ ; ಪೇಟೆ : ಅಂದು ಮಾರ್ಕೆಟ್ಟಿನಲ್ಲಿ ನೋಡಲಿಲ್ಲ (ಕಂದುಚಿ. ೬೮); ಮಾರ್ಕೆಟ್ಟಿಗೆ ಹೋಗಿ ಏನೇನು ಬೇಕೋ ಎಲ್ಲಾ ತೆಗೆದುಕೊಂಡು ಬಾ (ದೂಶಟ್ಟ. ೯೩). **ಮಾರ್ಕೆಟ್** : ಮಾರ್ಕೆಟ್‌ಚೌಕದ ಬಳಿಯ ಗಲಾಟೆಗಳನ್ನು ದಾಟಿಕೊಂಡು ದೊಡ್ಡ ಪೇಟೆಯ ಇಕ್ಕಟ್ಟಿನ ರಸ್ತೆಯಲ್ಲಿ ಜನಸಂದಣಿಯಲ್ಲಿ ನುಸುಳಿಕೊಂಡು ಹೋಗುತ್ತಿದ್ದಾನೆ (ರಂಗಳ. ೨). ' ಮಾರ್ಕೆಟ್ಟೆ ' ಪಾ. [← ಇಂ. Market]

**ಮಾರ್ಕೆಳರ್** (ಕ್ರಿ). ಪ್ರತಿಯಾಗಿ ವ್ಯಾಪಿಸು, ಹಬ್ಬು : ಚಪಳರ್ ಪೂರ್ಣೇನ್ದುಗಾ ತಾರೆಗಳ್ ಭ್ರಾಮಂ ಚೋದಿಸೆ ಮಾರ್ಕೆಳರ್ವ, ಮಿನುಗೆಂತೆಂತಾಗೆ ತೇಜಸ್ವಿಯಂ ತಾಮೇರಿಪ್ಪ ಪೊಲ್ಲಾಳ್ದ ದೇವನೊಸಗೆಗುದ್ಯದ್ಯಶಶ್ರೀಯುಮಂ (ಅರುಗಂ. ೦೦-೩). [ಮಾರ್ (< ಮಾಱು₂) + ಕೆಳರ್]

**ಮಾರ್ಕೊರಲ್** (ನಾ). ಮರುದನಿ : ಮಾರ್-ಕೊರಲ್, ಮಾರ್ಕೊರಲ್ : ಮಾರ್_ತಲೆ, ಮಾರ್ತಲೆ (ಶಾಶಭೂ. ೨೯ ಪ್ರಯೋ). ' ಮಾರ್ಕೊರಲ್ವಡೆ ' ಪಾ. [ಮಾರ್ (< ಮಾಱು₂) + ಕೊರಲ್]

**ಮಾರ್ಕೊರಲ್ವಡೆ** (ಕ್ರಿ). ಪ್ರತಿಯಾಗಿ ಧ್ವನಿಯನ್ನು ಹೊರಡಿಸು; ಮರುದನಿಯೆತ್ತು : ದೆಸೆಯಾನೆ ಮಾರ್ಕೊರಲ್ವಡೆಯದೆ ತಟ್ಟು ಮುಟ್ಟಿದುವು (ಶಂಖಶು. ೬-೬೩). [ಮಾರ್ಕೊರಲ್ + ಪಡೆ₁]

**ಮಾರ್ಕೊಳ್, ಮಾರುಗೊಳ್, ಮಾರ್ಕೊಳ್ಳು, ಮಾಱುಂಗೊಳ್, ಮಾಱುಕೊಳ್, ಮಾಱುಗೊಳ್** (ಕ್ರಿ). ೧. ಎದುರಾಗು ; ಸಮ್ಮುಖಕ್ಕೆ ಬರು: "ಮಾರ್ಕೊಳ್ (ಮಾಱು+ಕೊಳ್) ಸಮ್ಮುಖೇ(ಇದಿರಾಗು)" (ಶಮನಾ). ೨. ಪ್ರತಿಭಟಿಸು; ವಿರೋಧಿಸು : "ತಳ್ತೊಯ್, ತಡಂಬರೆ, ಪೋರ್ಕುಳ್, ತೊಡರ್ದುದು, ಮಾರ್ಕೊಂಡುದು ... ಮಿಗು, ತಡಂಬೊಯ್-ಈ ೨೫ ಪ್ರತಿಪತಕ್ಕೆ ಪೆಸರ್" (ಕಶಶಾ. ೫೯-೨೯೬) ; ಬನ್ದು ತಾಗಲಾಕ್ಷಣದೊಳೆ ಮಾರ್ಕೊಣ್ಡು ಪೋರ್ದು ತಳ್ತಿಱಿದು ಮಾಡಿದನೀ ಗೋಗ್ಗಿ (ಎಕ. XI, ತಳ್ಕ. ೬-೮; ಸು. ೪25); ಪವನಸುತಂ ಗದೆಗೊಳೆ ಗಾಂಡಿವಿ ಬಿಲ್ಗೊಳೆ ಕೆಯ್ದುಗೊಳ್ವ ಮಾರ್ಕೊಳ್ವದಟರ್ ಭುವನದೊಳಿಲ್ಲ (ಗದಾಯು. ೩-೦೬): ಗಂಡುಗೆಡಿಸಿದರಿಲ್ಲ ದಾನವದಿಂಡೆಯರು ಹಲರೆಪ್ಪೊಡನೆ ಮಾರ್ಕೊಂಡವರು ಮಾಮಾಪ್ರತಿಜ್ಞೆಯ ತೊಡಕು ಬೇಡ (ಕುಮಾ. ೨೮. ೬-೨೭); ಬಲ್ಲಾಳ್ಗಳ್ ಕಟ್ಟಿದೊಡೆ ಮೊನೆಯೊಳ್ ಮಾರ್ಕೊಳ್ವುದುಂ, ಸೋಲ್ತು ಕಪ್ಪಮನಿತ್ತೊಡೆ ಕೈಕೊಳ್ವುದುಂ, ಕಾವಲರ್ಗೆ ನೆಱಿಗುಂ (ರಾಮಾಶ್ವ. ೦೫-೦೬). ೩. ಆಕ್ಷೇಪಣೆಮಾಡು ; ಆಕ್ಷೇಪಿಸು : ಎನ್ನ ಕೊಟ್ಟುದರ್ಕೆ ಮಾರ್ಕೊಳ್ಳದೆ ಕೊಳ್ಳೆಮೆಂದೊಡಂತೆ ಗೆಯ್ವೆನೆಂದು ನಿಶ್ಚಯಿಸಿ (ಶಂಶಶಾ. ೬-೩ ವ) ; ಆ ನುಡಿಯ ಮಾರ್ಕೊಂಡು [ಶಾಕಾಂ. ನೊಳಕೊಂಡು] ಶಿವಶಿವದೇನನಾಡಿದೆ ತಾಯಿ . . . ತಾವು ಹೋಳ್ದ ನಿಧಾನ ತಮಗಹುದೇನು ವಿಸ್ಮಯವೆಂದ ವೃಷಭೇಂದ್ರ (ಶ್ರಶುಆೀ. ೮-೨೩). ೪. ತಡೆ ; ನಿಲ್ಲಿಸು ; ತಡೆಗಟ್ಟು : ನಿಮ್ಮನೆ ಪೋಡಿ ಮದ್ಗುರುವಿಯೋಗ ಮನಾಱಿಪೆವಾಗಳೇ ತಪಕ್ಕಮ್ಮ ಮನಂವರಲೀ ನಿಮಗೆ ಸಲ್ಲದೊಡಂ ಒಡಮೆಂದು ಕಾಲ್ಗಳಂ ತಮ್ಮಯ ನೆತ್ತಿಯೊಳ್ ನಿಱಿಸಿ ಮಾರ್ಕೊಳೆ ಮಾಣದೆ ಪೋದ ಮಕ್ಕಳಂದೇಮ್ಮನದೊಳ್ ಪಳಂಚಿದರೊ ಚಕ್ರಿತನೂಜೆಯ ವಪ್ರಜಂಭನಾ (ಆದಿಪು. ೯-೬೮); ಅಕ್ಕ ಮಾರ್ಕೊಳಲೆ ಬೇಡ ಗಮನೋದ್ಯಮಮಂ (ಕಾದಂಅ. ೪೪೬); ದುರ್ಯೋಧನಂ . . . ಅನಿತಱಿಯೊಳಂ ಮಾಣ್ದು ಸೈರಿಸಲಱಿದೆ ಸಮರೋದ್ಯೋಗಂಗೆಯ್ಯೆ ಸಂಜಯನಂಜದೆ ಮಾರ್ಕೊಂಡು . . . ನುಡಿದ ಸಂಜಯನ ನುಡಿಗೆ ದುರ್ಯೋಧನಂ ನಿರ್ವೇಗಿಸಿ (ಗದಾಯು. ೩-೪೪ ವ). ೫. ಎದುರುಮಾತನ್ನಾಡು ; ಪ್ರತಿಯಾಗಿ ನುಡಿ : ಇದು ನಿನ್ನ ಕೊಟ್ಟ ತಲೆ ನಿನಗಿದನಿತ್ತಪೆನೆಂದು ನುಡಿಯಲಾಗದು ಮಾರ್ಕೊಳ್ಳದಿರೆಂದು ಗಳಿಯ ಬನ್ದಿದ ಕುದುರೆಯನವಯ್ನ್ಗಿಱಿಸಿತ್ತು ನಗಡಪರ್ಗಂ (ಶಂಶಶಾ. ೩-೩೩); ಕಾಪ್ಯನಾಟಕಪ್ಪರಂಗಳನೋವಿಸುವೆಪೆಂದೊಡಾ ಮಹಾಸತಿ ನಿಜಪತಿಯಂ ಮಾರ್ಕೊಂಡೆಂತೆಂದಳ್ (ಶಂಶಶಂ. ೦೯೪-೨೦); ಆನೊಂದಂ ಭೇದಿಸದೆಪೆಂ ನೀನದನೆನೆಸೆಗೆವುದಣ್ಣ ಮಾರ್ಕೊಳ್ಳದೆ (ರಮಾಸಮ್ಮ. ೨-೧೬೮). ೬. ಮೀರು : ಅತಿಶಯಿಸು : ನವಯೌವನರಾಗಂ ಚಿತ್ತವನೆಂದುಂ ಪುಗಲೆ ಪದೆಯದಿರ್ದುದೊ ಪೊಱಗೆಂಬವೊಲೆಸೆದು ಪಕ್ವಬಿಂಬಿಚ್ಛವಿಯಂ ಮಾರ್ಕೊಳ್ವುದಧರಮಣಿ ಮುನಿವರನಾ (ಶಾಂತಿಪು. ೭೩೩); ಮಡದಿಯ ಮುಡಿ ಮಾರ್ಕೊಂಡುದು ಕಾರ್ಮುಗಿಲಡಿಯೊಳ್ ತಾಂಡವಮಂ ಮೆಱಿವ ಸೋಗೆನವಿಲ ಬೆಡಂಗಂ (ಶರ್ಕು. ೩-೩೩). **ಮಾರುಗೊಳ್** : ೭. ಬೆಲೆಕೊಟ್ಟು ಕೊಂಡುಕೊಳ್ಳು ; ಖರೀದಿಸು: ಗೋಪತಿನಾಯಕನಂನ ದಾನನಿಮಿತ್ತದಿ . . . ಒಂದು ಮನೆಯುಮಂ ಸರ್ವ್ವನಮಸ್ಯವಾಗಿ ಮಾರುಗೊಂಡಂ (ಮ್ಯಆಂ. ೦೯೪೦, ೩೮-೪೩; 1103). **ಮಾರ್ಕೊಳ್ಳು** : ೨. ಮಂಗಳೇಶನೂ ಮಾರ್ಕೊಂಡು ಬಂಧು ಪುಲಕೇಶಿಯನ್ನು ತಾಗಿದನು (ಕ೬೯ಶ. ೭); ರಾಜಾದಿತ್ಯನು ಕುಳಿತ ಆನೆಯು ಆತನನ್ನು ಮಾರ್ಕೊಂಡಿತು : ಬೂತುಗನಿಗೆ ಹಬ್ಬವಾದಂತಾಯಿತು (ಕ೬೯ಶ. ೩೦). **ಮಾಱುಂಗೊಳ್** : ೭. ಮನುಜೇಶ್ವರನೊರ್ವಂ . . . ಎನ್ನಯ ಮನಮಂ ತನ್ನ ವಿಲಾಸದ ಬೆಲೆಗುತ್ತತ್ತಮೆ ಮಾಱುಂಗೊಂಡಂ (ಶಯಶಾ. ೪-೨೩). ೮. ಅಧೀನಮಾಡಿಕೊಳ್ಳು ; ವಶಪಡಿಸಿಕೊಳ್ಳು : ನೀಱೆಯ ಕೊರಳತಿಶಯಿತಂ ಮಾಱುಂಗೊಂಡುದು ನೃಪಾಳತಿಳಕನ ಮನಮಂ (ಶಾರಕು. ೨-೪೩); ಅಲರ್ವಿಲ್ಲನ ಮಡದಿಯ ಮಾಱುಂಗೊಂಡ ಮನೋಹರರೂಪದ ನೀಱೆಯ ನವಲಾವಣ್ಯದ ಸಿರಿಯ ನದೇಂ ಬಣ್ಣಿಪೆನು (ಶಯಶಾ. ೩-೬೩). P ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ. **ಮಾಱುಕೊಳ್** : ೪. ತುಱುವ ಮಾಱುಕೊಳೆ (ಮ್ಯಆಂ. ೦೯೨೩, ೩೩-೨; ೪). **ಮಾಱುಗೊಳ್** : ೭. ನಾಗಯ್ಯಂ ತನ್ನ ಮಾಡಿಸಿದ ದೇಗುಲಕ್ಕನ್ನು ನಾಗವೂಲಿಗಾವುಣ್ಡನ ಕೆಯ್ಯೊಳಂ ಪನ್ನಿರ್ಪ್ಪತ್ತರ್ಕೆಯ್ಯಂ ಮಾಱುಗೊಣ್ಡು ಬಿಟ್ಟನ್ (ಎಕ. XI-i, ೩೪-೦೨; ೪25); ಯಜ್ಞನಿಮಿತ್ತಂ ಒಂದಾಡಂ ಬೇಱೂರಿಂ ಮಾಱುಗೊಂಡು ಪೆಗಲೊಳಿಕ್ಕಿ ಪೋಪನಂ . . . ಕಂಡು (ಶಂಶಶಂ. ೦೪೬-೧೦): ಹರಿಶ್ಚಂದ್ರಭೂವರನ ತನಯನಂ ಮಡದಿಯಂ ಮಾಱುಗೊಂಬಧಿಕರಿಲ್ಲ (ಹರಿಶ. ೦೦-೩). ೮. ಎನ್ನ ಮನವ ಮಾಱುಗೊಂಡನವ್ವ (ಮಹಾದೇ. ೩. ೪೦-೮೮); ಪುಷ್ಪಲಾವಿಯರತ್ತಿದ ಪಾಟಲದಾಮಮಂ ಮಾಱುಗೊಳ್ವ ನಿಜರ ಕಣ್ಣ ಮಂಕ್ಷಿಕಾಕಾಸುಮಮೆನಿಸಿಯುಂ . . . ಪಜ್ಜಳಿಪ ಸಾಂದ್ರಚಂದ್ರಾತಪಾಡಂಬರಮಂ ಕಂಡು (ಕುಸುಮಾ. ೪-೩೩ ವ) ; ಮಾರಿಗಾಲದ ಮತ್ಸ್ಯವನ್ನನು ಮಾಱುಗೊಳುತಿದೆ (ಶಿಶುಗ. ೮-೨೩-೦೯). ೯. ವಿನಿಮಯ ಮಾಡು : ಅದಲುಬದಲು ಮಾಡು : ತಮ್ಮ ಕೆಂಪಂ ಕಣ್ಗಳ್ಗೆ ಕೊಟ್ಟು ಕಣ್ಗಳ ಬೆಳ್ಪಂ ತಮಗೆ ಮಾಱುಗೊಂಡಂತೆ (ಶಂಶಶಾ. ೪-೮೮ ವ). ೧೦. ಅರ್ಪಿಸಿಕೊಳ್ಳು ; ಒಪ್ಪಿಸಿಕೊಳ್ಳು : ಸ್ವೀಕರಿಸು : ಮಾಡಿದ ಕರ್ಮವ ನೋಡಯ್ಯ ಎನ್ನ ಮನದಣಿವನ್ನಕ್ಕ ಬೇಡೆನ್ನನು ಮಾರ್ಕೊಳ್ಳೆನ್ನನು ಮೇಲೆ ರೂಢಿಗೀಶ್ವರನ ಕೂಡುವೆನು ನೀರಡಿಸಿದಂತೆ (ದೇವಾಶ. ೭-೦೨) ; ಮಾಱುಗೊಳ್ಳು ತನ್ನನೀಗಲು ತೋಱಿಸದೆ ಇನಿದ್ದೆಯಾದೊಡೆ ಭಕ್ತ ತಾನಲ್ಲ (ಸಂಶಶ. ೬-೭೭). ೧೧. ಜಗಳವಾಡು; ಕಾದಾಡು : ಪರಿಕಿಪಡೆ ಕೋಪಪ್ರಸಾದವಿವರಿಡು ಉಂಟಲ್ಲಾ ಶಿವನೊಳಂ ಧರೆಯೊಳೊಮ್ಮನ ಧಾನ್ಯಕಾದಡೆ ಮಾಱುಗೊಂಬುವರು (ಬಸಪು. ೨೨-೬೪).

**ಮಾರ್ಕೊಳ್ವರ ಗಂಡ, ಮಾರ್ಕೊಳುವರ ಗಂಡ** = ಪ್ರತಿಭಟಿಸುವವರನ್ನು ಪರಾಕ್ರಮದಿಂದ ಎದುರಿಸುವವನು; ಕದಂಬವಂಶದ ತೈಲಪದೇವನ ಒಂದು ಬಿರುದು : ಮಾರ್ಕೊರ್ಳ್ವರ ಗಣ್ಡಂ ಪ್ರತಾಪ

ಮಾರ್ತ್ತಣ್ಡಂ ನಾಮಾವಳೀವಿರಾಜಿತರಪ್ಪ . . . ತೈಲಪದೇವರ್ (ಎಇ. X. ೨೮೨-೨೯; 1108): ಕಾದಂಬರಾಜರಾಭರಣಂ ಮಾರ್ಕ್ಕೊಳ್ವರ ಗಂಡ ಮಂಡಳಿಕರ ಗಂಡ . . . ನಾಮಾವಳಿ ವಿರಾಜಿತಮಪ್ಪ ಶ್ರೀಮಂನ್ಮಹಾಮಂಡಳೇಸ್ವರಂ ತೈಲಪದೇವರಸರು ಬನವಾಸೆಪಂನಿಚ್ಛಾಸಿರಮುಮಾನಾಳುತ್ತಮಿರೆ (ಕೆಇ. IV. ೯೬-೦೬; 1247) : ಪ್ರತಾಪಮಾರ್ತ್ತಂಡ ಮಾರ್ಕೊಳುವರ ಗಂಡ ನಾಮಾದಿ ಸಮಸ್ತಪ್ರಸಸ್ತಿಸಹಿತಂ ಶ್ರೀಮನುಮಹಾಮಂಡಳೇಶ್ವರ ತೈಲಹದೇವರಸರು . . . ರಾಜ್ಯಂಗೆಯುತ್ತಮಿರೆ (ಕ್ರಿಇ. XX. ೬೬-೦೨ ; 1118). **ಮಾರ್ಕೊಳ್ವರ ಭೀಮ =** ಪ್ರತಿಭಟಿಸುವವರಿಗೆ ಭೀಮನಂತೆ ಭಯಂಕರನಾದವನು; ಒಂದು ಬಿರುದು : ವೈರಿಸಂಹಾರಿ ಮಾರ್ಕೊಳ್ವರ ಭೀಮಂ ಭೀಮಶೌರ್ಯ್ಯಂ ವಿರಟಪಟಹಕೋಟಾಘರಟ್ಟಂ (ಎಕ. VIII. ಸಾಗರ. ೨೦೬(b)-೬; 1042). [ಮಾರ್ (< ಮಾಱು₂) + ಕೊಳ್₁]

**ಮಾರ್ಕೊಳ್ವು** ' ಮಾರ್ಕೊಳ್ ' ನೋ.

**ಮಾರ್ಕೋಲ್, ಮಾರ್ಕೋಲು, ಮಾಱುಗೋಲು** (ನಾ). (ವೈರಿಯ ಬಾಣಕ್ಕೆ) ಪ್ರತಿಯಾಗಿ ಬಿಡುವ ಬಾಣ.— ಸರಳು : ಮಾಱು + ಕೋಲ್. ಮಾರ್ಕೋಲ್ (ಶಬ್ದಮ. ೯೦ ಪ್ರಯೋ). **ಮಾರ್ಕೋಲು :** ಆ ಗ್ರಾಮದ ತುಱುಮಂ ತೊಱಪರ ಕಾಳೆಯ ಆ ಪುರ್ಯ್ಯಲಿಂಗೆಜಿಗ ಮೇಲಾಳಂನಿಕ್ಕಿದು ಕುದುರೆಯಂ ಪಿಡಿದು ತಂಮ ಕೂಸನ ಕಯ್ಯ ಮಾರ್ಕೋಲು ಮಗುಳೆ ಅಳಿವರಿದು . . . ತುಱುವಂ ಮಗುಂಚ್ಚಿ ತೆಲ್ಲಿಗ ಬಮ್ಮಂಣ ಸುರಲೋಕಪಾಪ್ತನಾದ (ಎಕ. VII. ಶಿಕಾ. ೩೬-೮ : 1140): ಕುರುಭೂಪಾಲ ಸಮ್ಮುಖನಾಗು ಹಿಡಿ ಮಾರ್ಕೋಲನು (ಕುವ್ಯಾ. ೬-೩೯). **ಮಾಱುಗೋಲು :** . ಶರಣರೊಡನೆ ಶ್ರವದ ಮಾಡಿ ಮಾಱುಗೋಲ ಬಿಡುವೆನಯ್ಯಾ (ಬಸವ. ೬೦೨). ' ಮಾರ್ಸರಲ್ ' ಪರಾ.

**ಮಾರ್ಕೋಲ ಬಱಸಿಡಿಲು =** ಪ್ರತಿಯಾಗಿ ಬರುವ ಬಾಣಕ್ಕೆ ಬರಸಿಡಿಲಿನಂತಿರುವವನು : ಒಂದು ಬಿರುದು : ವೈರಿಮನೋಭಂಗ ನಯ್ಯಸ ಸಿಂಘಂ ಮಾರ್ಕ್ಕೋಲ ಬಱಸಿಡಿಲು ನಾಮಾದಿಸಮಸ್ತಪ್ರಶಸ್ತಿ ಸಹಿತಂ ಶ್ರೀಮನ್ಮಹಾಸಾಮಂತಂ ಸಿಂಗರಸ . . . ಬಿಟ್ಟ ತೋಂಟ (ಕ್ರಿಇ. IX-i. ೦೮೬-೨೬; 1111). **ಮಾರ್ಕೋಲ ಭೈರವ =** ಎದುರಾಗಿ ಬರುವ ಬಾಣಕ್ಕೆ ಭೈರವನಂತೆ ನಾಶಕಾರಕನಾದವನು : ಒಂದು ಬಿರುದು : ವಿಜಯಲಕ್ಷ್ಮೀಕಾಂತ ಶೌರ್ಯ್ಯಕಂಠೀರವಂ ಮಾರ್ಕೋಲ ಭೈರವಂ ಚೋಳಬಳಜಲಧಿವಡಬಾನಳಂ . . . ಶ್ರೀಮದ್ದೇಮರಸರ್ (ಕ್ರಿಇ. IX-i. ೦೦೬-೯೬ ; 1057); ಬಂಟರ ಬಾವ ಸತ್ಯರಾಧೇಯ ಮಾರ್ಕೋಲ ಭೈರವ ಸಿತಗರ ಗಂಡ . . . ನಾಮಾದಿ ಸಮಸ್ತಪ್ರಶಸ್ತಿ ಸಹಿತ ಶ್ರೀಮನ್ಮಹಾಸಾಮಂತನ್ ಆದಿತ್ಯ ಗಂಜೇಯಾತ್ (ಎಕ. VI. ಕಡೂರು. ೩೫-೫೦; 1136). [ಮಾರ್ (< ಮಾಱು₂) + ಕೋಲ್₁]

**ಮಾರ್ಕೋಲು** 'ಮಾರ್ಕೋಲ್' ನೋ.

**ಮಾರ್ಗ** (ನಾ). ೧. ದಾರಿ ; ಹಾದಿ : "ಅಧ್ವಾ, ಪಂಥಾಃ, ಪದ್ಧತಿಃ . . . ಮಾರ್ಗಃ, ಪದ್ಯಾ, ನಿಗಮಃ– ಈ ೧೨ ಬಟ್ಟೆ" (ಅಭಿಧಾ. ೯೩-೦೦೫); ಹೊಳಲಮಯವಾ ಮಾರ್ಗ ಮಂದಾನಿಲನ ಮಯ ದಿಗುವರ್ಗ ಸಿರಿಯೊಬ್ಬಳಿಯ ಮಯವಾ ವಿಷಯವೀಥಿ ಕುಬೇರಸಹಭವನ (ತೊರಾ. ೬-೬-೦೯); ಮಾರ್ಗದೊಳ್ ಸುರಸೆಯಂ, ಕಡಲಿನಿಂದೆದ್ದು ಬಾಯ್ದೆರೆದಡ್ಡ ನಿಂದಳಂ, ಮುರಿದು . . . ಐತರುತಲಿರ್ದ ಹನುಮನಂ . . . ತಿಳಿದಳಾ ಸಿಂಹಿಕೆ (ತೊರಾಮ. ೯೦೦-೨೦೦). ೨. ಕಾಡಿನಲ್ಲಿ ಪ್ರಾಣಿಗಳು ಓಡಾಡುವ ಜಾಡು ; ಸರುವು. ೩. ರೀತಿ : ಕ್ರಮ : ವಿಕ್ರಮಪುರದ ಬ್ರಹ್ಮಪುರಿಯ ನಾ[ಲ್ವ]ತ್ರಿವ್ವರ್ಗ್ಗ ಸುಂಕಮಂ ಮಾಣ್ದು ಮಾಡಿದ ಮಾರ್ಗ್ಗಮೆನ್ತೆನೆ ಅಡಕೆ ತೋಂಟಕ್ಕೆ ಪಣವೊಂ[ದು] ಅಡಕೆ ನೂಱು (ಕ್ರಿಇ. XI-i, ೯೬-೬: 1061): ವೇದಶಾಸ್ತ್ರಮಾರ್ಗವೆಲ್ಲವು ಹೊಗಳಿ ಕಾಣದೆಂಬುದ ಗೊಹೇಶ್ವರ ಸಾಕ್ಷಿಯಾಗಿ ಮೂಱುಲೋಕ ಬಲ್ಲುದು ಕಾಣಾ ಸಿದ್ಧರಾಮಯ್ಯ (ಆವಚ. ೨೧೬-೯೬೬): ನರಹರಿಯನಾ ವೀರಗಣನಂಬರಕೆ ಹಾಯ್ಕುವ ತೆಱದೆ ಹಾಯ್ಕುತ . . . ಹರನಿಭದೈತ್ಯನಂ ಸಂಹರಿಸಿ ಸೀಳುವ ಮಾರ್ಗದಿಂದೊಡೆ ಸೀಳ್ದನುರ್ಬಿನಲಿ (ಬಸವ. ೨೧-೯೩). ೪. ಸಂಪ್ರದಾಯ : ಪದ್ಧತಿ. ೫. ಅರಸುವಿಕೆ ; ಹುಡುಕುವಿಕೆ ; ಶೋಧನೆ ; "ಅಱಸುವಲ್ಲಿಯುಂ ಮಾರ್ಗಮೆಂಬುದು" (ಹಲಾಯು. ೦೩೯-೨೦). ೬. ಚಾಂದ್ರಮಾನ ವರ್ಷದ ಒಂಬತ್ತನೆಯ ತಿಂಗಳು ; ಮಾರ್ಗಶಿರ : "ಮಾರ್ಗಶೀರ್ಷಃ, ಸಹಾಃ, ಮಾರ್ಗಃ, ಆಗ್ರಹಾಯಣಿಕಃ – ೪ ಮಾರ್ಗಶೀರ್ಷಮಾಸದ ಹೆಸರುಗಳು" (ಸಿದ್ಧಾಂತಿ. ೩೯). ೭. ನೃತ್ಯ , ಸಂಗೀತ ಮೊದಲಾದುವುಗಳಲ್ಲಿಯ ಪ್ರೌಢವಾದ ಸಾಂಪ್ರದಾಯಿಕ ರೀತಿ,–ಧಾಟಿ : ಸರಸಂ ಸಂಗತಮಾರ್ಗ ದೇಸಿಯನೆ ರಾಗಪ್ರೌಢಿಯಂ ಬೀಱ ಬಿತ್ತರದಿಂ ಪಾಡಿದರೋಜೆಯಿಂ ಶ್ರುತಿಸುಖಶ್ರೀದಾಯಕರ್ ಗಾಯುರ್ (ಛಕ್ಕ್ಷ. ೦೨-೨೯). ೮. ಉಪಾಯ: ಅನುಕೂಲ ; ಧಾನ್ಯಾದಿ ಜೀನಸು ಚೀಲಗಳಲ್ಲಿಯೇ ತುಂಬಿ ಬರುವುದರಿಂದ, ಅದರ ತೂಕದ ಅಂದಾಜು ನಮಗೆ ತಿಳಿದು ಬರುವಂತೆ ಖರೇದಿ ಜೀನಸಿನ ವಿಷಯದಲ್ಲಿ ತಿಳಿಯುವದಕ್ಕೆ ಮಾರ್ಗವಿಲ್ಲ (ಮುಂಬಾ. ೬). ೯. (ಗಾಯದಿಂದಾದ) ಕಲೆ; ಗುರುತು. ೧೦. ಮಾರ್ಗಶೀರ್ಷ ನಕ್ಷತ್ರ. ೧೧. ವಿಷ್ಣು: ನಾರಾಯಣ. ೧೨. ಕಸ್ತೂರಿ. ೧೩. [ಕಾವ್ಯಮೀ] ಸಾಹಿತ್ಯದ ಪರಿಭಾಷೆಯ ಮೇರೆಗೆ ಸಂಸ್ಕೃತ ಭಾಷೆಯ ಶಬ್ದಗಳನ್ನು ಬಳಸಿ ರಚಿಸುವ ಪ್ರಾಚೀನ ಲಕ್ಷಣಬದ್ಧವಾದ ಕಾವ್ಯ ರಚನಾಕ್ರಮ ; P ಬೇರೆ ಬೇರೆ ದೇಶಭಾಗಗಳಲ್ಲಿ ರಚಿತವಾಗಿರುವ ಕಾವ್ಯಗಳ ವಿಶಿಷ್ಟಲಕ್ಷಣಗಳನ್ನು ಆಧರಿಸಿ ವೈದರ್ಭಿ. ಗೌಡಿ, ಪಾಂಚಾಲಿ ಎಂಬುದಾಗಿ ಶೈಲಿಗಳನ್ನು ವಿಂಗಡಿಸಲಾಗಿದೆ: ಕ್ಷಿತಿಪತಿಯಂ ಬರಿಸಿ . . . ಕುಶಲವಾರ್ತಾಂತರಮಂ ಮಿತವಚನಂ ಬೆಸಗೊಂಡತಿವಿತೀರ್ಣಮುದನಾದನಾತನೆಂಬುದು ಮಾರ್ಗಂ (ಕಲಾ. ೨-೪): ಆದಿಪುರಾಣವಸ್ತುಕೃತಿಯಂ ಪೇೞ್ದಂ ಬೆಡಂಗಪ್ಪ ಮಾರ್ಗದೊಳಂ ದೇಸೆಯೊಳಂ ಪೊದಟ್ಟಿಸೆವಿನಂ ಸಂಸಾರಸಾರೋದಯಂ (ಆದಿಪು. ೦೬-೬೯). ' ದೇಸಿ ' ಪರಾ. ೧೪. [ನಾಟ್ಯ] ಭಾವಾಶ್ರಯವಾದ ನೃತ್ಯ: ಈ ನಾಟ್ಯದೊಳತಿಶಯದಿಂ ಭೂನುತವಹ ಮಾರ್ಗ ದೇಸಿಯೆಂಬಭಿಧಾನಂ ತಾನೆಂತಾದುದೆನಲ್ಕೆ . . . ವಿಧಿ ಸುರಪ ಮುಖ್ಯರಾದ ವಿಬುಧರಿದನುಸರಿದುದಱಿಂದೆ ಮಾರ್ಗಮೆನಿಕ್ಕುಂ (ಜಾತಕ. ೧-೨೦): ಭಾವಾಶ್ರಯವಾದ 'ನೃತ್ಯ'ಕ್ಕೆ ಮಾರ್ಗವೆಂದೂ ತಾಲಲಯಾಶ್ರಯವಾದ 'ನೃತ್ತ'ಕ್ಕೆ ದೇಶಿ (ದೇಸಿ) ಯೆಂದೂ ಹೆಸರಿರುವಂತೆ ದಶರೂಪಕದಿಂದ ತಿಳಿಯಬರುತ್ತದೆ (ಕೈಬಿ. ೨೨೩). ೧೫. [ದ್ವೈತ] ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ ಮತ್ತು ಭೋಗ ಎಂಬ ನಾಲ್ಕು ಬಗೆಯ ಮುಕ್ತಿಭೇದಗಳಲ್ಲಿ ಒಂದು: ಸಾಯುಜ್ಯಪ್ರಾಪ್ತಿ : ಇದರಿಂದ ಬರುವ ಮೋಕ್ಷ, ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂದು ನಾಲ್ಕುಪರ್ವಗಳುಳ್ಳದ್ದು (ಹಿಂದಸಂ. ೨೯೨). ೧೬. [ಬೌದ್ಧ] ದುಃಖ, ಆಯತನ, ಸಮುದಯ ಮತ್ತು ಮಾರ್ಗ ಎಂಬ ನಾಲ್ಕು ಬಗೆಯ ಧರ್ಮಸಾಧನೆಯ ತತ್ತ್ವಗಳಲ್ಲಿ ಒಂದು: ಸರ್ವವಸ್ತುಗಳು ಕ್ಷಣಿಕ ಎಂದು ತಿಳಿಸುವ ತತ್ತ್ವ: ಆರ್ಯಸತ್ಯವಸ್ತುಗಳು — ದುಃಖ, ಸಮುದಯ, ಮಾರ್ಗ, ನಿರೋಧ ಎಂಬುದಾಗಿ ನಾಲ್ಕುವಿಧ (ಹಿಂದಸಂ. ೨೯) : ಸರ್ವವಸ್ತುಗಳೂ ಕ್ಷಣಿಕ ಎಂಬ ಸ್ಥಿರವಾದ ಭಾವನೆಯೇ ಮಾರ್ಗ (ಶಾಕಪ. ೨೦೯) [ಸಂ.]

**ಮಾರ್ಗಂಟಿ** (ನಾ). ಮಾರಾಟಕ್ಕೆ ಇರುವ ಆಕಳು : ಕಱು + ಕೋಲ್ = ಕಱುಗೋಲ್; ಪಿವಂ ತುಱುಗಾಡು, ಕುಱುಗಂಟು . . . ತೋಕಾರ್ಗಂ. ಮಾರ್ಗಂಟಿ (ಶಬ್ದಮ. ೯೬ ಪ್ರಯೋ).

[ ಮಾರ್ ( < ಮಾಱು₃) + ಗಂಟ₁ ]

**ಮಾರ್ಗಂದಪ್ಪು** (ಕ್ರಿ). ೧. ದಾರಿತಪ್ಪು ; ಹಾದಿತಪ್ಪು : ಒಂದು ನೊಗ ನಿಕ್ಕುವನಿತಂ ಮುಂದೀಕ್ಷಿಸಿ ಮೆಲ್ಲನಡಿಯಿಡುತುಂ ಮುನಿಮಾರ್ಗಂದಪ್ಪದಡವಿಯೊಳ್ ಮಾರ್ಗಂದಪ್ಪಿ ಬರುತ್ತುಮಿರ್ದೊಡೆ (ಪರ್ಧಪು. ೧೧-೩೦). ೨. ಸನ್ಮಾರ್ಗದಿಂದ ದೂರವಾಗು : ಧರ್ಮವನ್ನು ಕೈಬಿಡು : ಮಾರ್ಗಂದಪ್ಪಿದ ಕುರುಡರನಜದ ಬಟ್ಟೆಗುಯ್ವರ್ ಪಿರಿಯರ್ (ಶಾಂತಿಪು. ೪-೧೧೧); ಮಾರ್ಗಂದಪ್ಪಿದರನಾರುಮೇಂ ಮೆಚ್ಚುವರೇ (ಕೃಂಗಾರ. ೧-೫).
[ಮಾರ್ಗ + ತಪ್ಪು$_1$]

**ಮಾರ್ಗಕಾರ** (ನಾ). ಹೊಸಪ್ರಕಾರದ ಬರವಣಿಗೆಯ ದಾರಿಯೊಂದನ್ನು ರಚಿಸಿ ಮುಂದಿನ ಪೀಳಿಗೆಯವರಿಗೆ ಆ ರೀತಿಯ ರಚನೆಗೆ ದಾರಿಮಾಡಿಕೊಡುವ ವ್ಯಕ್ತಿ: ಶ್ರೀಯುವರು ಮಾರ್ಗದರ್ಶಿಗಳು, ಮಾರ್ಗಕಾರರು (ಬಿಆವಂ. ೧೧೭). [ಸಂ.]

**ಮಾರ್ಗಕ್ರೀ** (ನಾ). [ವೀಶೈ] ಧಾರ್ಮಿಕವಾಗಿ ಷಟ್‌ಸ್ಥಲಮಾರ್ಗವನ್ನು ಹಿಡಿದು ಬಾಳುವ ಕ್ರಮ : ಮಾರ್ಗಕ್ರೀಯು ಸಂಪಾದಿಸನಾಗಿ ದ್ವೈತಿಯಲ್ಲ ಜ್ಞಾನಾದೇವ ತು ಕೈವಲ್ಯಂ ಎಂಬುದ ಸಂಪಾದಿಸನಾಗಿ ಅದ್ವೈತಿಯಲ್ಲ (ತನ್ನಶ. ೪. ೧೦೯-೨೪೭); ಮಾರ್ಗಕ್ರೀಯಲ್ಲಿ ಸಂಬಂಧವಾದ ಭಕ್ತ ಮಾಹೇಶ್ವರ ಪ್ರಸಾದಿಗಳೆಂಬುದೀಗ ಈ ಧರೆಯವರು ಹೋಗಿ ಎಂಬ ಶಬ್ದಕ್ಕರ್ಥ (ಪೋಳಪಮಾ. ೨೬೦-೩೦೯ ಟೀಕೆ). [ಮಾರ್ಗ + ಕ್ರೀ (< ಕ್ರಿ)]

**ಮಾರ್ಗಗ** (ನಾ). ದಾರಿಹೋಕ ; ಪಥಿಕ : ಸಾರಸೌರಭಂ ಸೊಗಯಿಪ ಸುಯ್ಯೆಲರ್ಕರಕವಾರಿಯೊಳಾಗಿಸೆ . . . ಮೃದುಸುಗಂಧಮನಿಱುನಿಭಾಸ್ಯೆ ಸೂಸೆ ಮಾರ್ಗಗನೆರ್ದೆ ತಣ್ಣನಾನೆ ತನು ರೋಮಾಂಚಿಸಿ ಕಂಪಿಸೆ ನೀರನೀಂಟಿದಂ (ರಾಜಶೇ. ೨-೨೫). [ಮಾರ್ಗ + — ಗ$_2$./ಸಂ. ಮಾರ್ಗಿಕ]

**ಮಾರ್ಗಜಱು** (ಕ್ರಿ). ಪ್ರತಿಯಾಗಿ ಬೆದರಿಸು : ಸಹಪಾಂಸುಖೇಳರೆನಿಸಿದ ಬಹುನೃಪದಾರಕರ ನಡುವೆ ದಾಸೇರಕರಿಂ ಪ್ರಹಿತಮಣಿಕನಕಮಂಡನ ಸಹಿತಂ ಮಾರ್ಗಜಱಿ ನೂಂಕಿ ಪೊಕ್ಕುಪವನಮಂ (ಪುಷ್ಪಪು. ೪-೫೨).
[ಮಾರ್ (< ಮಾಱು$_2$) + ಗಜಱು$_1$]

**ಮಾರ್ಗಡೆ** (ನಾ). ಪ್ರತಿನಾಯಕ (?) : ನೊಕ್ಕಸಂ ಪೆರ್ಗ್ಗಡೆಯೆಂಬುದೇ ಧುರಕೆ ಮಾರ್ಗ್ಗಡೆಯುಂ ಪತಿಗೇಕಸಾಧನಂ (ಎಕ. VII, ಶಿವಮೊ. ೧೧-೪೨: 1085); ಪೆಡೆವಣಿಯ ಫಣೆಗಳೆಂತಿರೆ ನೊಡರಂ ಪೊತ್ತಿರಡುಕೋಡ ಕಲೆದೇಂ ಮುಂದೆ ನಡೆದುದು ಧವಳವೃಷಂ ಮಾರ್ಗಡೆಯಂತಿರೆ ನಾಲ್ಕುಕಾಲ ಘಣಿಭೀಷಣಮಂ (?) (ಅರ್ಧನೇ. ೭-೪೫). 'ಪೆರ್ಗಡೆ$_1$' ಪರಾ.
[ಮಾರ್ (< ಮಾಱು$_2$) + ಕಡೆ$_3$]

**ಮಾರ್ಗಣ** (ನಾ) ೧. ಹುಡುಕುವಿಕೆ : ಶೋಧನೆ : ಅನ್ವೇಷಣೆ : "ಅನ್ವೇಕ್ಷಣಂ, ವಿಚಯನಂ, ಮಾರ್ಗಣಂ, ಮೃಗಣಾ, ಮೃಗಃ — ೫ ಹುಡುಕಿ ನೋಡುವಿಕೆ" (ಸಿದ್ಯಂಶ. ೭೭೭). ೨. ಯಾಚನೆ; ಬೇಡುವುದು. ೩. ಭಿಕ್ಷೆ ಬೇಡುವವನು; ಯಾಚಿಸುವವನು : "ಯಾಚಕವರ್ಗಕ್ಕಂ ನಾರಾಚಕ್ಕಂ ಮಾರ್ಗಣಾಂಕವುದು" (ಚಂದ್ರಕೋ. ೦೨೭-೩೯); ಅರಸನೀ ಪರಿ ಯಜ್ಞಶಾಲಾಕರಣ ಮೊದಲಾದುಚಿತಕೃತ್ಯವ ವಿರಚಿಸುತಲಿರೆ. . . ಪರಮಸಂಪ್ರೀತಿಯನು ತಾಳ್ದರು ನೆರೆದ ಭೂಪರು ಸಂಯಮಿಗಳುರುತರದ ವಿಪ್ರರು ಸಕಲದಿಗ್ದೇಶಗಳ ಮಾರ್ಗಣರು (ಜೈಮಿ. ೭-೭೭). ೪. ಬಾಣ ; ಶರ : "ಕಂಕಪತ್ರಃ, ಶರಃ, ಮಾರ್ಗಣಃ, ಬಾಣಃ . . . ಶಿಲೀಮುಖಃ, ರೋಪಃ — ಈ ೧೬ ಅಂಬು" (ಚಂದ್ರು. ೭೭-೩೦೨); ಉಗ್ರಮಾರ್ಗಣಮಾ ವೀರನಿನಾದ ಸಿಂಹನಿನದಂ ತಮ್ಮಂ ಪಳಂಚಲ್ಕೆ ತತ್ಪ್ರಣವೃಂದಂ ಮಣಿದೋಡೆ ಮಾಣದೆ ಚಲಾತಾವರ್ತರಳ್ಕುತ್ತೆ. . . ಎಱಗಿದರ್ ಚಕ್ರಭಪಾದಾಬ್ಜದೊಳ್ (ಆದಿಪು. ೦೩-೭೭); ದೈತೇಯನುಮೆಚ್ಚಂ ವಾರುಣವಾಯುವ್ಯಕುಬೇರರುದ್ರ ಮಾರ್ಗಣದಿಂದಂ (ಜಗ. ೦೨-೪೦); ಒಪ್ಪೋವರೊಳೆ ದೇವರನಾಡಿದ ಪರುಷತರ ವಾಕ್ಯಮಾರ್ಗಣಂ ಕರ್ಣಕೋಟರಮಂ ನಾಂಟೆ (ರಾಮಾಶ್ವ. ೪೫-೭). ೪ : ಜನ್ಮಪ್ರತಿಪಾಳನಮಂ ಧರ್ಮಪ್ರೀತಿಯಿನ್ನೆದೆ ಮಾಡಿದರ್ ಸುರರತ್ತಯಿಂದಾ ಪ್ರಭುಮಾರ್ಗಣಕುಶಲಾಭಿಪ್ರಾಯನೆನಿಪ್ಪವಂಗೆ ಶಾಸನಚಿತ್ರಮೆ ದಲ್ (ಶಾಂತಿಪು. ೨-೭೩). ೫. ಸರಿಯಾದ ರೀತಿಯನ್ನು ಪಾಲಿಸುವವನು : ಕಂಸಂ ತದೀಯ ಬಾಲಹಿಂಸಾಪರನಾಗಿ ಸೂತಿಕಾಸದನಮಂ ಪೊಕ್ಕು. . . ಪಾರ್ಥಿಕರಕೀರ್ತಿಯೆನೆ ಮಾರ್ಗಣರಮಾರ್ಗಮೆನೆ ಬಂಧುಗಳಬಂಧುರಮೆನೆ . . . ಸಮುದ್ರಕ್ಷೋಭದಂತೆ ಘೂರ್ಣಿಸುವ ಜನಕ್ಷೋಭಮಂ ಕೈಕೊಳ್ವದೆ . . . . ಕೂಸನಪ್ಪಳಿಸಿ (ನೇಮಿ. ೨-೩೩ ವ). ೬. ಶತ್ರು : ವೈರಿ. ೭. ನರಕದಲ್ಲಿರುವವನು; ನಾರಕಜೀವಿ. ೮. ಬಿದಿರು : "ಆಸಯಿಂ ವೇಣ್ಚಿನೊಳು ನಾರಾಚದೊಳು ಕೀಚಕದೊಳಂ ಮಾರ್ಗಣಮೆನಿಕ್ಕುಂ" (ಮಂಗರಾ. ೮೫೦-೫೪): "ಅರಾತಿ ಯಾಚಕಾಜನ ಶರ ಕೀಚಕಾವನಿಜ ನಾರಕರೆಂಬಿವು ಮಾರ್ಗಣಾಹ್ವಯಂ" (ನಾನಾರ. ೭೦). ೯. [ಜೈನ] ಜೀವಿಗಳು ಹಾದುಹೋಗಬೇಕಾದ ಅಥವಾ ಹುಡುಕಿಕೊಂಡು ಕಂಡುಕೊಳ್ಳಬೇಕಾದ ಮಾರ್ಗ ಹಾಗೂ ಈ ಹಂತದಲ್ಲಿನ ಜೀವದ ಅವಸ್ಥಾವಿಶೇಷ: ಮಾರ್ಗಚತುಷ್ಟಯಮುಭಿನವಮಾರ್ಗದೊಳಳವಟ್ಟು ಮಕರಕೇತನನುಮನೋಮಾರ್ಗಣಮೆನೆ ನೋಲಿಸೆ ಸಭೆ ಮಾರ್ಗಣಮೆನೆ ಪೊಗಬ್ದುದೊಂದೆ ಕೊರಲಿಂದಾಗಳ್ (ಪುಷ್ಪಪು. ೮-೩೨). [ಸಂ. ಮಾರ್ಗಣ, ಮಾರ್ಗಣಾ]

**ಮಾರ್ಗಣಕ** (ನಾ). ಬೇಡುವವನು : ಯಾಚಕ : "ಅರ್ಥೀ, ಮಾರ್ಗಣಕಃ, ಯಾಚಕಃ, ವನೀಪಕಃ — ಈ ೪ ಬೇಡುವವಂ" (ಚಂದ್ರು. ೫೯-೨೮೪).
[ಸಂ.]

**ಮಾರ್ಗಣಾನುರಕ್ತ** (ನಾ). ೧. ಧನುರ್ವಿದ್ಯೆಯಲ್ಲಿ ಆಸಕ್ತಿಯುಳ್ಳವನು : ಆ ನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿಯಲ್ತು . . . ಮಾರ್ಗಣಾನುರಕ್ತನಾಗಿಯುಂ ಮಾರ್ಗಣಾನುರಕ್ತನಲ್ತು (ಪುಷ್ಪಪು. ೯-೩೯ ವ). ೨. ಬೇಡುವವನು : ಯಾಚಕ : ಮೇಲಿನ 'ಪುಷ್ಪಪು.' ಪ್ರಯೋಗವನ್ನು ನೋಡಿ. [ಸಂ.]

**ಮಾರ್ಗಣಾಸ್ಥಾನ** (ನಾ). [ಜೈನ] ಸಂಸಾರಿಜೀವಗಳು ಜ್ಞಾನದ ಮೂಲಕವಾಗಿ ಕಂಡುಕೊಳ್ಳುವ ನೆಲೆ : ದ್ವಾವಿಂಶತಿಪರೀಷಹಂಗಳುಮಂ ಗುಣಸ್ಥಾನಜೀವಸ್ಥಾನಮಾರ್ಗಣಾಸ್ಥಾನಂಗಳುಮಂ . . . ಮಧುರಕಟುಕವಿಪಾಕಮುಮಪ್ಪ ಕರ್ಮ(ಭೇದ)ಫಲಮುಮಂ ಕೇಳ್ದು ತ್ರಿಜ್ಞಾನಧರಂ ಕ್ಷಾಯಿಕಸಮ್ಯಕ್ತ್ವಾದಿ ಗುಣಂಗಳೊಳು ಸಮನ್ವಿತನಾಗಿ ಪೋದಂ (ಶಾಂತಿಪು. ೯೩) ; ಗತಿ ಇಂದ್ರಿಯ ಕಾಯಯೋಗ ವೇದ ಕಷಾಯ ಜ್ಞಾನ ಸಂಯಮ ದರ್ಶನ ಲೇಶ್ಯಾಭವ್ಯ ಸಮ್ಯಕ್ತ್ವ ಸಂಜ್ಞಾಹಾರಕಂಗಳೆಂಬ ಚತುರ್ದಶಮಾರ್ಗಣಾಸ್ಥಾನಂಗಳಂ ಅಱಿಯೆ ಪಡುವಲ್ಲಿ (ತತ್ತ್ವಸೂ. ೦೬).
[ಸಂ.]

**ಮಾರ್ಗಣೆ$_1$**, ಮಾರ್ಕಣೆ (ನಾ). ಪ್ರತಿಯಾಗಿ ಬಿಡುವ ಬಾಣ ; ಎದುರು ಬಾಣ : ಪೇರೊಡಲ ಗೋರರೂಪಿನ ದಾನವಂ . . . ಬಲ್ಗಣೆಗಳಂ ಪೂಡಿಯುಂ ಮಾರ್ಗಣೆಗಳಂ ಕಡಿದುಂ . . . ಮುಟ್ಟಿಯಿಪ ಪ್ರತಿಭಟರಂ ತಡೆದು (ರಾಜಶೇ. ೦೦೨-೩). **ಮಾರ್ಕಣೆ**: ಮಾರ್ಗಣೆ, ಮಾರ್ಕೊರಲ್, ಮಾರ್ದನಿ, ಮಾರ್ಪಡೆ (ಶಾಶಾಶೂ. ೦೨೦ ಪ್ರಯೋ) ; ಮಾರ್ಗಣೆಗಳಂ ಪಣೆಯೊಳಣೆವುತುಂ ಪೊಣೆವುತುಂ ಕೂರ್ಗೊಂಬುದುದಿಗಳಿಂದೆ ಇರ್ಕಿದ ದಾನವರನಿಱಿವುತುಂ ಮುಱಿವುತುಂ . . . ವೃಷಭಂ ಪ್ರಹಾರಿಸಿದನು (ಚಂಪು. ೪೪-೦೮). [ಮಾರ್ (< ಮಾಱು$_2$) + ಕಣೆ$_1$]

**ಮಾರ್ಗಣೆ$_2$** (ನಾ). ೧. ಹುಡುಕುವಿಕೆ ; ಶೋಧನೆ : ಮಾರ್ಗಣೆಯ ಮುಖ್ಯ : ಲಭ್ಯದ ಮಾತದಂತಿರಲಿ ಸ್ವರ್ಗವನು ಭುವಿಗಿಳಿಸಬಲ್ಲವನಾರು? (ಮಂಕುತಿ. ೮೭೯). ೨. ಬೇಡುವಿಕೆ ; ಯಾಚಿಸುವಿಕೆ. ೩. ಬಾಣ : ಅಂಬು : ಎತ್ತಲ್ ರಿಪುಪುರಮಿರ್ದಪುದೆತ್ತಲ್ ಖಳನಿಸುವನೆತ್ತ ಮಾರ್ಗಣೆ ಕವಿವತ್ತೆತ್ತ ನಿವಾರಿಪೆನೆಂಬೀ ಚಿತ್ತಂ ಪರಿಗಾದುದೇಂ ಪ್ರತಾಪಿಯೊ ಸಾಲ್ವಂ

(ಹರಿ. ೧೮-೯೭) : ಕವಿಜನಪನು ಮಾರ್ಗಣೆಯೊಳೆರಪನ ಪೊದಸಿದನು (ಕುಮ್ಮ. ೧೧-೩೪): ರಂತವನುಸುರುತಿರಲು, ಕುಮರನ ಮನಕಂತು ಮಾರ್ಗಣೆಯ ದಾಳಿಯಲಿ ಮುಂತುಗೆಡುತಲಿರೆ (ವರ್ಧ. ೩-೨೨) ೪. = ಮಾರ್ಗಣ ೬: ಉಪಶಮ ಸಮ್ಯಕ್ತ್ವಮಲ್ಲಿಂ ತೊಟ್ಟುಪಶಾಂತ ಕಷಾಯಂಬರಂ ವಿಶೇಷದಿಂ ಮಾರ್ಗಣೆಗಳೊಳಜೀವಂ ಕೊಳಗೆ (ತಜೂವ್ಯ. ೯); ಯಾವ ಯಾವ ಧರ್ಮವಿಶೇಷದಿಂದ ಜೀವದ ಅನ್ವೇಷಣವನ್ನು ಮಾಡಲಾಗುವುದೋ, ಆ ಧರ್ಮವಿಶೇಷಗಳಿಗೆ ಮಾರ್ಗಣಾಗಳೆಂದು ಹೇಳುವರು. ಇಂಥ ಮಾರ್ಗಣಾಗಳೂ ಪದಿನಾಲ್ಕು ಇರುತ್ತವೆ (ಜೈನಕ. ೩೦೩). 'ಚತುರ್ದಶಮಾರ್ಗಣೆ' ಪರಾ. [ಸಂ. ಮಾರ್ಗಣ]

**ಮಾರ್ಗದರ್ಶಕ** (ನಾ). ೧. ದಾರಿಯನ್ನು ತೋರಿಸುವಂಥದು. ೨. ಸರಿಯಾದ ಮಾರ್ಗದಲ್ಲಿ ನಡೆಯುವಂತೆ ಪ್ರೇರಿಸುವಂಥದು; ಮೇಲ್ಪಂಕ್ತಿಯಾಗಿರುವಂಥದು : ಅವರ 'ಇಂಗ್ಲಿಷ್ ಗೀತಗಳು' ಭಾಷಾಂತರಗಳಾದರೂ ಹೊಸ ಕನ್ನಡಭಾವಗೀತಗಳಿಗೆ ಮಾರ್ಗದರ್ಶಕ ಆಗಿವೆ (ಶ್ರೀಸಾಂ. ೦೦೭): ಶ್ರೀ ಕೃಷ್ಣಶಾಸ್ತ್ರಿಗಳು ತಮ್ಮ ಈ ಕೃತಿಯ ಮೂಲಕ ಮಾರ್ಗದರ್ಶಕವಾದ ವಿಮರ್ಶಕೃತಿಯೊಂದನ್ನು ನೀಡಿದ್ದಾರೆ (೭೦೬ಮ. X, ಜುಲೈ೩). ೩. ದಾರಿಯನ್ನು ತೋರಿಸುವವನು : ಕಾಕರಾಜನೆ ಮಾರ್ಗದರ್ಶಕನಾದರೆ ಹೋಗುವೆ ಮಸಣದ ಮನೆಗೆ (೩೦ಶಾಕ. ೨೦೦-೯೯): ೪. ಕಾರ್ಯಸಾಧನೆಗೆ ಉಪಾಯವನ್ನು ಸೂಚಿಸುವವನು; ಸರಿಯಾದ ದಾರಿಯಲ್ಲಿ ನಡೆಯಲು ಸಲಹೆಯನ್ನು ನೀಡುವವನು : ಮಂಟೂರ ಮಹಾದೇವಯ್ಯನವರು . . . ಅವನ ವ್ಯಕ್ತಿವಿಕಾಸಕ್ಕೆ ಮಾರ್ಗದರ್ಶಕರಾಗಬೇಕೆಂದು ಆಗಾಗ ಹೇಳುತ್ತಿದ್ದರು (ರಂಗರೂ. ೯೪). [ಸಂ.]

**ಮಾರ್ಗದರ್ಶನ** (ನಾ). ದಾರಿಯನ್ನು ತೋರಿಸುವುದು: ಕಾರ್ಯಸಾಧನೆಗೆ ಉಪಾಯವನ್ನು ಸೂಚಿಸುವಿಕೆ : ವಸಂತನಿಂದ ಅವಳು ಪಾಠಕ್ಕೆ ಮಾರ್ಗದರ್ಶನವನ್ನು ಪಡೆದುಕೊಳ್ಳುತ್ತಿದ್ದಳು (ದೂರ. ೨೬): ಯಾರಿಂದಲೂ ಅವಳಿಗೆ ಯೋಗ್ಯ ಮಾರ್ಗದರ್ಶನ ಸಿಗಲಿಲ್ಲ (ರಂಗರೂ. ೩೩).
[ಸಂ.]

**ಮಾರ್ಗದರ್ಶಿ** (ನಾ). ೧. = ಮಾರ್ಗದರ್ಶಕ ೧. ೨. = ಮಾರ್ಗದರ್ಶಕ ೨ : 'ಕವಿರಾಜಮಾರ್ಗ'ವು . . . ಪ್ರೌಢವಾದ ಗದ್ಯಪದ್ಯಕಾವ್ಯಕ್ಕೆ ಮಾರ್ಗದರ್ಶಿಯಾಗಿರುವಂತೆ ದೇಸಿಮಾರ್ಗಗಳ ಪೂರ್ವಪರಂಪರೆಗೆ ಸಾಕ್ಷಿಯೂ ಆಗಿರುತ್ತದೆ (ಕರಾಕ. ೨೩); ಹೊಸ ಉಪಾಧ್ಯಾಯರಿಗೆ ಟಿಪ್ಪಣಿ ಮಾರ್ಗದರ್ಶಿಯಂತಿರುತ್ತದೆ (ಶಿಕ್ಷಣ. ೨೩೦). ೩. = ಮಾರ್ಗದರ್ಶಕ ೩. ೪. = ಮಾರ್ಗದರ್ಶಕ ೪ : ಅವಳ ಅಭ್ಯಾಸಕ್ಕೆ ಯೋಗ್ಯ ಮಾರ್ಗದರ್ಶಿಯ ಅಗತ್ಯವಿದೆ (ಅದೇ). ೫. ಪ್ರೇಕ್ಷಣೀಯಸ್ಥಳಗಳಲ್ಲಿ ನೋಡಬೇಕಾದುವುಗಳನ್ನು ತೋರಿಸಿ ಅವುಗಳ ಬಗೆಗೆ ವಿವರಣೆಯನ್ನು ನೀಡುವವನು : ಮಾರ್ಗದರ್ಶಿಯ ಕೂಡಿ ನೋಡುತ್ತ ಹೋದೆ; ನೋಡಿದಂತೆಲ್ಲ ನಾ ಬೆಪ್ಪು ಬೆರಗಾದೆ (ಕೋಗಿಲೆ. ೨-೨೨): ಎಲ್ಲಾ ಬಿಟ್ಟು ಮಾರ್ಗದರ್ಶಿಯಾಕಾದೆ ಅಂತ ನೀವು ಕೇಳಬಹುದು (ಹರಿದ. ೭).
[ಸಂ. ಮಾರ್ಗದರ್ಶಿನ್]

**ಮಾರ್ಗಪ್ರಭಾವನೆ** (ನಾ). [ಜೈನ] ತೀರ್ಥಂಕರತ್ವವನ್ನು ಸಾಧಿಸಿಕೊಡುವ ಷೋಡಶಭಾವನೆಗಳಲ್ಲಿ ಒಂದು : ದರ್ಶನವಿಶುದ್ಧಿ, ವಿನಯಸಂಪನ್ನತೆ, ಶೀಲವ್ರತೇಷ್ವನತಿಚಾರ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗ, ಶಕ್ತಿತಸ್ತ್ಯಾಗ, ಶಕ್ತಿತಸ್ತಪ, ಸಾಧುಸಮಾಧಿ, ವೈಯಾವೃತ್ಯಕರಣ, ಅರ್ಹದ್ಭಕ್ತಿ, ಆಚಾರ್ಯಭಕ್ತಿ, ಬಹುಶ್ರುತಭಕ್ತಿ, ಪ್ರವಚನಭಕ್ತಿ, ಆವಶ್ಯಕಾಪರಿಹಾಣಿ, ಮಾರ್ಗಪ್ರಭಾವನೆ ಮತ್ತು ಪ್ರವಚನವತ್ಸಲತ್ವ ಎಂಬ ತೀರ್ಥಂಕರತ್ವನಾಮಕರ್ಮದ ಹದಿನಾರು ಭಾವನೆಗಳಲ್ಲಿ ಒಂದು: "ಜ್ಞಾನ, ದಾನ, ಜಿನಪೂಜಾವಿಧಾನ, ತಪೋನುಷ್ಠಾನ ಮುಂತಾದುವುಗಳಿಂದ ಜಿನಧರ್ಮವನ್ನು ಪ್ರಕಾಶನಗೊಳಿಸುವುದು" (ಅರ್ಥ. ಕಾ ಕ್ಷಪಣಾಂಗಾಚಿ ೯೧ ೯೦೧೭) : ಪರಪಕ್ಷದೂಷಣಪುರಸ್ಸರಮನೇಕೋಪಪತ್ತಿಗಳಿಂ ಸ್ವಪಕ್ಷಸ್ಥಾಪನೆಗೆಯ್ದು ಸನ್ಮಾರ್ಗಪ್ರಕಾಶನದಿಂ ಮಾರ್ಗಪ್ರಭಾವನೆಯಂ ಮಾಡಿ ಸಭಾಸದರಿಂ ಲಬ್ಧಪ್ರಶಂಸನಾಗಿ (ಅರ್ಥ. ೨-೨೨ ವ); ಸದ್ಧರ್ಮಪ್ರಸಿದ್ಧಪ್ರಭಾವಕಮಪ್ಪ ಮಾರ್ಗಪ್ರಭಾವನೆಯುಂ ಸದ್ಧರ್ಮಸ್ನೇಹಲಕ್ಷಣೋಪೇತಮುಮಪ್ಪ ದರ್ಶನವತ್ಸಳತ್ವಮುಮೆಂಬೀ ಷೋಡಶಭಾವನೆಗಳಂ . . . ಭಾವಿಸುತ್ತುಮಿರ್ದು (ಶಾಂತಿ. ೦೦-೨೨ ವ).
[ಸಂ. ಮಾರ್ಗಪ್ರಭಾವನಾ]

**ಮಾರ್ಗರಾಗ** (ನಾ). [ಸಂಗೀತ] ದೇಶೀರಾಗಗಳಿಗಿಂತ ಭಿನ್ನವಾಗಿದ್ದು, ಗಂಧರ್ವಲೋಕದಲ್ಲಿಯೇ ಪ್ರಯೋಗಗೊಳ್ಳುತ್ತಿದ್ದುವೆನ್ನಲಾದ ಆರು ಬಗೆಯ ರಾಗಗಳ ಸಮೂಹ ಮತ್ತು ಅವುಗಳಲ್ಲಿ ಪ್ರತಿಯೊಂದು ರಾಗ : ಗ್ರಾಮರಾಗದಿಂದ ಪ್ರಾರಂಭವಾಗಿ ಅಂತರಭಾಷೆಯಲ್ಲಿ ಮುಗಿಯುವ ಆರುಬಗೆಯ ರಾಗಗಳು ಮಾರ್ಗರಾಗಗಳೆನಿಸಿಕೊಳ್ಳುತ್ತವೆ (ಕಣ:ಕ್ರ. ೩೩). [ಸಂ.]

**ಮಾರ್ಗರುಚಿ** (ನಾ). [ಜೈನ] ಸಮ್ಯಕ್‌ದರ್ಶನವುಳ್ಳ ಹತ್ತುಬಗೆಯ ದರ್ಶನಾರ್ಯರಲ್ಲಿ ಒಂದು ವರ್ಗಕ್ಕೆ ಸೇರಿದ ವ್ಯಕ್ತಿ ; ಕೇಳಿದ ಮಾತ್ರದಿಂದಲೇ ಮೋಕ್ಷಮಾರ್ಗದಲ್ಲಿ ಆಸಕ್ತಿಯುಂಟಾಗಿ ರತ್ನತ್ರಯ ಮಾರ್ಗದಲ್ಲಿ ನಡೆಯುವವನು : ೯ ಆಜ್ಞಾರುಚಿ, ಮಾರ್ಗರುಚಿ, ಉಪದೇಶರುಚಿ, ಸೂತ್ರರುಚಿ, ಬೀಜರುಚಿ, ಸಂಕ್ಷೇಪರುಚಿ, ವಿಸ್ತಾರರುಚಿ, ಅರ್ಥರುಚಿ, ಅವಗಾಢರುಚಿ ಮತ್ತು ಪರಮಾವಗಾಢರುಚಿ ಎಂದು ಹತ್ತು ಬಗೆಯಾದ ದರ್ಶನಾರ್ಯರುಂಟು : ನಿಸ್ಸಂಗಮೋಕ್ಷಮಾರ್ಗಶ್ರವಣಮಾತ್ರಜನಿತರುಚಿಗಳ್ ಮಾರ್ಗರುಚಿಗಳೆಂಬರ್ (ತತ್ತ್ವ. ಕ್ರ. ೧೬೩). [ಸಂ.]

**ಮಾರ್ಗವಿದ್** (ನಾ). ಶಬ್ದಪ್ರಯೋಗದ ರೀತಿಯನ್ನು ತಿಳಿದವನು : ಶಾಬ್ದಿಕ : ಲಾಕ್ಷಣಿಕ : ವರ್ಗದ್ವಿತೀಯವರ್ಣಂ ವರ್ಗಚತುರ್ಥಾಕ್ಷರಂ ಮಹಾಪ್ರಾಣಮವಂ ಮಾರ್ಗವಿದರ್ ಸಂಸ್ಕೃತಿಯೊಳಂ ಭೋರ್ಗರೆವನುಕೃತಿಯೊಳಂ ಪ್ರಯೋಗಿಸುತಿರ್ಪರ್ (ಶಬ್ದ. ೦೪). [ಸಂ. ಮಾರ್ಗವಿದ್]

**ಮಾರ್ಗಶಿರ** (ನಾ). ಹನ್ನೆರಡು ಚಾಂದ್ರಮಾಸಮಾಸಗಳಲ್ಲಿ ಒಂಬತ್ತನೆಯದು : ಮಾರ್ಗಶೀರ್ಷ : ತನ್ಮಹಾದೇವಿಯ ಪರಿಪೂರ್ಣಪ್ರಸವಸಮಯಂ ಮಾರ್ಗಶಿರಬಹುಳದಶಮಿಯಾಗೆ (ಪುಷ್ಪ. ೦೦-೦ ೩) : ಆ ಮಾಸವೇ ಚೈತ್ರ . . . ಮಾರ್ಗಶಿರ ಪುಷ್ಯ ಮಾಘ ಫಾಲ್ಗುಣವೆಂದು ಹನ್ನೆರಡು ತೆಜನಾಗಿಹುದು (ಏಕೀ. ೩೨೦).
[ಸಂ. ಮಾರ್ಗಶಿರ, ಮಾರ್ಗಶಿರಸ್]

**ಮಾರ್ಗಶೀರ್ಷ** (ನಾ). = ಮಾರ್ಗಶಿರ : "ಮಾರ್ಗಶೀರ್ಷ, ಸಹಾಃ, ಮಾರ್ಗಃ, ಆಗ್ರಹಾಯಣಿಕಃ, —೪ ಮಾರ್ಗಶೀರ್ಷಮಾಸದ ಹೆಸರುಗಳು" (ನಿಘಂ. ೦೩. ೩೯) : ಹಾಡು ಇನ್ನೂ ನೆನಪಿದೆ, ಮಾರ್ಗಶೀರ್ಷಮಾಸದ ಚಳಿಗಾಲ ಅದು (ವೈ. ೩. ೭). [ಸಂ.]

**ಮಾರ್ಗಶೈವ** (ನಾ). ಶೈವದ ಪ್ರಭೇದಗಳಲ್ಲಿ ಒಂದು : ಶುದ್ಧಶೈವವ ಹೊದ್ದದೆ ಪೂರ್ವಶೈವವನಾಚರಿಸದೆ ಮಾರ್ಗಶೈವವ ಮನ್ನಣೆಯ ಮಾಡದೆ ವೀರಶೈವವನಾಧರಿಸದೆ ಆದಿಶೈವವನನುಕರಿಸದೆ ಭೇದಿಸಬಾರದ ಲಿಂಗ ಕರದಲ್ಲಿದ್ದು . . . ಏನುಮೆನ್ನದ ಲಿಂಗೈಕ್ಯಂಗೆ ಸ್ವಾನುಭಾವದಿಂದ ನಮೋ ನಮೋ ಎಂಬೆ (ಮೋಳಿಗೆ. ೦೨೬.೯೯೦) : ಶುದ್ಧಮಿಶ್ರಸಂಕೀರ್ಣಪೂರ್ವಮಾರ್ಗಶೈವಂಗಳಲ್ಲಿ ಕರ್ಮಭಕ್ತಿಯಲ್ಲದೆ ನಿರ್ಮಳಸದ್ಭಕ್ತಿ ಎಲ್ಲಿಯದೋ (ಅರಕ. ಹು. ೯೩-೭೭). 'ಪೂರ್ವಶೈವ' ಪರಾ. [ಸಂ.]

**ಮಾರ್ಗಶ್ರಮ** (ನಾ). ಪ್ರಯಾಣದಿಂದ ಉಂಟಾಗುವ ದಣಿವು; — ಆಯಾಸ : ತಮಕ್ತಿಸುಧಾಸಾರವಾರಿಧಾರೆಯಿಂದಂ ಕೊಸರ್ತ ರಾಜಪುತ್ರರ

ಮಾರ್ಗಶ್ರಮಾತಪಾಕ್ರಾಂತಮಪ್ಪ ಮಾನಮೆಂಬ ಲತೆಯನನೇಕಕುಶಲಾಲಾಪ ಪ್ರಶ್ನೆಯಿಂದಂ ಕುಸುಮಿತಮುಮಂ ಸ್ವಹಸ್ತತಾಂಬೂಲದಾನದಿಂದಂ ಫಲಿತಮುಮಂ ಮಾಡಿ (ಆದಿಪು. ೦೬-೩೨ ವ); ಗಡಣವೆಣದೆಜಿಹುಗಳೊಳಗೆ ಕಾಲಿಡುತ ಸೋದಿಸಿ ಮುಂದೆ ಹೆಜ್ಜೆಯನಿಡುತ ಪೈಸರವೋಗಿ ಮಾರ್ಗಶ್ರಮಕೆ ಬೆಮರುವನ (ಕುಮಾ.ಗ. ೩-೧೩). [ಸಂ.]

**ಮಾರ್ಗಸುಂಕ** (ನಾ). ಹಾದಿಯ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಇದರಲ್ಲಿ ಗದ್ದೆ, ಬೆದ್ದಲು, ಕಾಡಾರಂಬ, ಮಾರ್ಗಸುಂಕ, ಸ್ಥಳ ಸುಂಕ . . . ಉಪ್ಪಿನ ಮೊಳೆ, ಆಚಾರಗಾಣಿಕೆ ಇವೇ ಮೊದಲಾದವುಗಳು ಸೇರಿದ್ದವು (ಇತ್ರಾಶಾ. ೩ ಉಪೋದ್ಘಾತ). [ಮಾರ್ಗ + ಸುಂಕ$_1$]

**ಮಾರ್ಗಹಿಂದೋಲ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾರ್ಗಹಿಂದೋಲರಾಗವು (ಸ) ಆರೋಹದಲ್ಲಿ ರಿ_ಯನ್ನು ಬಿಟ್ಟದೆ (ಸಕುತ್ರ. ೦೩೬). [ಸಂ.]

**ಮಾರ್ಗಿಡಿ, ಮಾರ್ಕಿಡಿ** (ನಾ). ಪ್ರತಿಯಾಗಿ ಸೂಸುವ ಕಿಡಿ : ನಾರಿಯಿಂದುಗಿದು ಬಿಡಲಾಕ್ಷಣಂ ಉಯುವ ಮದನಾರಿಯುರಿಗಣ್ಣಂತೆ ಬರ್ಪುದಂ ಪೇಳ್ದ ಸರಣಾರಿನ್ನುಮದಱ ಮಾರ್ಗಿಡಿಗಳಿಂ ಸಕಲಲೋಕಾಳಿ ಸಂವರ್ತ ಮಾಯ್ತು (ಕಂಪು. ೦೩-೩೦). **ಮಾರ್ಕಿಡಿ** : 'ಮಾರ್ಕಿಡಿವಿಡು' ಪರಾ. [ಮಾರ್ (< ಮಾಱು$_2$) + ಕಿಡಿ]

**ಮಾರ್ಜ** (ನಾ). ೧. ಸ್ವಚ್ಛಮಾಡುವುದು ; ಶುದ್ಧಮಾಡುವುದು. ೨. ಬಟ್ಟೆಗಳನ್ನು ಸ್ವಚ್ಛಮಾಡುವವನು ; ಅಗಸ. ೩. ವಿಷ್ಣು. [ಸಂ.]

**ಮಾರ್ಜಡಿ** (ಕ್ರಿ). ಪ್ರತಿಯಾಗಿ ಹೊಡೆ. — ಬಡಿ : ಬಾರಿಪ ನಿಮ್ಮ ತರ್ಜನದಿನೀ ಜನದೊಂದುಲಿ ಮಾಣ್ಗೆ ಮಾಣಿವಾವಾರೆಮಗಿಲ್ಲ ಮಾರಕರೆ ಸುತ್ತುಮ ಮಾರ್ಜಡಿವಂದದಿಂ ಪ್ರತೀಹಾರಿಯರಂ ಪೊಡೆಬ್ದು (ಧನ್ಯಕು. ೩-೩೫). [ಮಾರ್ (< ಮಾಱು$_2$) + ಜಡಿ$_2$]

**ಮಾರ್ಜನ** (ನಾ). ೧. ತೊಳೆಯುವಿಕೆ: 'ಮುಖಮಾರ್ಜನ' ಪರಾ. ೨. (ಮಂತ್ರಿಸಿದ ನೀರಿನಿಂದ ಮಾಡುವ) ಪ್ರೋಕ್ಷಣೆ : ಕೈಯಲ್ಲಿ ಅಭಿಮಂತ್ರಿತವಾದ ಉದಕವುಳ್ಳ ಕಲಶವನ್ನೂ ದರ್ಭಕೂರ್ಚಗಳನ್ನೂ ತೆಗೆದು ಕೊಂಡು ಶಾಂತಿಮಂತ್ರವನ್ನು ಪಠಿಸುತ್ತಾ ದೇವರಾಜನಿಗೆ ಆ ಕಲಶೋದಕದಿಂದ ಮಾರ್ಜನವನ್ನು ಮಾಡಿದನು (ಪಪುರಾ. II. ೧೯೦೦). ೩. ಚೊಕ್ಕಟಗೊಳಿಸುವುದು ; ಶುದ್ಧಗೊಳಿಸುವುದು. ೪. ಅಳಿಸುವುದು : ಒರೆಸುವುದು. ೫. ಉಜ್ಜುವುದು : ತೀಡುವುದು. ೬. ಒಂದು ಬಗೆಯ ಮರ : ರಕ್ತಲೋಧ್ರ : "ಗಾಲವಃ, ಶಾಬರಃ. ಲೋಧ್ರಃ, ತಿರೀಟಃ. ತಿಲ್ವಃ. ಮಾರ್ಜನಃ ... ೬ ಲೋಧ್ರಗಿಡದ ಹೆಸರು" (ಸಿದ್ಧಾಂತಿ. ೦೦೯). [ಸಂ.]

**ಮಾರ್ಜನಿ** (ನಾ). ೧. ಸ್ವಚ್ಛಮಾಡುವುದು ; ಶುದ್ಧಮಾಡುವುದು. ೨. ಸ್ವಚ್ಛಮಾಡುವಂಥದು ; ಕಸಬರಿಗೆ ; ಪೊರಕೆ : 'ಸಂಮಾರ್ಜನಿ' ಪರಾ. ೩. ಬಟ್ಟೆಗಳನ್ನು ಸ್ವಚ್ಛಗೊಳಿಸುವವಳು ; ಅಗಸಗಿತ್ತಿ. [ಸಂ. ಮಾರ್ಜನೀ]

**ಮಾರ್ಜನೆ** (ನಾ). ೧. = ಮಾರ್ಜನ ೧ : "ಮಾರ್ಷ್ಟಿಃ, ಮಾರ್ಜನಾ, ಮೃಜಾ — ೩ ಶ್ರೀಗಂಧ ಕುಂಕುಮಕೇಸರಿ ಮುಂತಾದ ದ್ರವ್ಯಗಳನ್ನು ಮೈಗೆ ಹಾಕಿ ಉಜ್ಜಿ, ತೊಳಕೊಂಡು ಕೊಳೇ ಹೋಗಲಾಡಿಸುವುದಕೆ ಹೆಸರುಗಳು" (ಸಿದ್ಧಾಂತಿ. ೨೦೩). 'ಮುಖಮಾರ್ಜನೆ' ಪರಾ. ೨. ಮೃದಂಗದಿಂದ ಹೊರಡುವ ಧ್ವನಿ : ನನ್ನ ಮೃದಂಗದ ಮಾರ್ಜನೆಯನೆ ಥೋಂ ತುಂಬುರು ವಿಧಿಯೊಡನೆನುವನು ಹರ ಓಂ (ಗಣೇಶ. ೦೬-೪೯೦). [ಸಂ. ಮಾರ್ಜನಾ]

**ಮಾರ್ಜರ** (ನಾ). ಬೆಕ್ಕು ; ಮಾರ್ಜಾಲ : ಸೂಕರ ಶುನಕ ಮಾರ್ಜರ ರಿಸಭ ಕಾಕ ಘೂಕಾದಿ ಗರ್ಗರರವವ ನೀಕರಿಸುವ ದೀನದನಿಯಿಂದ ಮೊಱೆಯಿಡುತಲೋಕರಿಸುಗು ದೆಸೆರವವ (ಪರ್ವತ. ೮-೯೬).
[ <ಸಂ. ಮಾರ್ಜಾರ ]

**ಮಾರ್ಜಾರ** (ನಾ). ೧. = ಮಾರ್ಜರ : "ಓತುಃ. ಬಿಡಾಳಃ. ಮಾರ್ಜಾರಃ, ವೃಷದಂಶಃ — ಈ ೪ ಬೆಕ್ಕು" (ಕರಾಯು. ೪೦-೩೩) ; ಕದಳೀವನದೊಳಿರ್ದೊಟ್ಟೊಟ್ಟಿಗಂ ಮಾರ್ಜಾರನಾಗಿ ಪುಟ್ಟಿರ್ದು ಕಪೋತಂಗಳಂ ಕಾಣಲೊಡಂ ಒಡಿದು ಕೊಲ್ವುದುಂ (ಜಾಪುಂಪು. ೩೪) ; ಶರಭಂಗಳ್ ಕೇಸರಿಕೇಸರಂಗಳಂ ಕ್ರೂರಘೋರಮಾರ್ಜಾರಂಗಳ್ ತರುಣಾಖುಶಾಬಶತ ಕಂಧರಮಂ ನಖಮುಖದಿ ನುಱುಸಿ ತುಱುಸಿದುವೊಲವಿಂ (ಧನ್ಯಕು. ೦೪-೦೯). ೨. ಪುನುಗುಬೆಕ್ಕು. 'ಮಾರ್ಜಾಲ' ಪರಾ. [ಸಂ.]

**ಮಾರ್ಜಾರಿ** (ನಾ). ೧. ಹೆಣ್ಣು ಬೆಕ್ಕು ; ಮಾರ್ಜಾಲಿ. ೨. ಪುನುಗಿನ ಬೆಕ್ಕು. ೩. ಒಂದು ಬಗೆಯ ಸುಗಂಧದ್ರವ್ಯ ; ಪುನುಗು : "ಚೇಳಿಕೆಯೆನಲ್ ಪೂಣಾಗು ಮಾರ್ಜಾರಿ[ಶಾಕಾಂ. ಲಿ]ಯೆನೆ ಜವಾದಿಯೆನಿಕ್ಕು" (ಶುಂಗಠಾ. ೯೯-೨೨). [ಸಂ. ಮಾರ್ಜಾರೀ]

**ಮಾರ್ಜಾಲ** (ನಾ). ೧. = ಮಾರ್ಜರ : "ಮಾರ್ಜಾಲಂ ಬಿಡಾಲ ಮಾಖುದ್ವಿಷಂ ವೃಷದಂಶಮೋತುವೆನೆ ಬೆಕ್ಕನಿಕ್ಕುಂ" (ಶುಂಗಠಾ. ೪೯-೦೦) ; ವನಮೂಷಕ ಮಾರ್ಜಾಲಂ ವನಾಶ್ವಮಹಿಷಂ ಸೂಕರಮನಿತುಂ ಮುನಿಸಂ ಪರಿಹರಿಸಿರ್ದುವು ಮುನಿನಾಥಾಂತಿಕದೊಳುದಿತಶಾಂತರಸಂಗಳ್ (ಅಜಪು. ೩-೬) ; ಶುನಿ ಶೂಕರ ಮಾರ್ಜಾಲ ಹೆಗ್ಗಣ ಉರಗ ಮೊದಲಾದ ಮಲ ಮಾಂಸಭಕ್ಷಕಪ್ರಾಣಿಗಳು ಮೋಸದಿಂದ ಪಾದ ಪಾಣಿ ಗುದ ಗುಹ್ಯ ದೇಹವ ಕಚ್ಚಿದಡೆ ಸ್ಥೂಲವೆನಿಸುವುದಯ್ಯಾ (ತನ್ನಪ. ೪. ೩೨-೦೦೪) ; ಮಾರ್ಜಾಲಕಾಟವನ್ನು ತಡೆಯಲಾಱೆವು ಕೃಷ್ಣ (ಪುರಂದ. ೩-೦೨೯ ಅನುಬಂಧ). ೨. ಪುನುಗುಬೆಕ್ಕು. 'ಮಾರ್ಜಾರ' ಪರಾ.

**ಮಾರ್ಜಾಲಸಂನ್ಯಾಸ** = (ಆಲಂ) ಕಪಟಸಂನ್ಯಾಸ : ಮಾರ್ಜಾಲ ಸಂನ್ಯಾಸ ಮಾಡಬೇಡ, ನಿನ್ನ ಸೋಗು ನನಗೆ ಅರ್ಥವಾಗುತ್ತದೆ (ರೂಢಿ). [ಸಂ.]

**ಮಾರ್ಜಾಲಕಿಶೋರನ್ಯಾಯ** (ನಾ). 'ಬೆಕ್ಕಿನ ಮರಿಯು ತನ್ನ ಸರ್ವಸ್ವವನ್ನೂ ತಾಯಿ ಬೆಕ್ಕಿಗೆ ಒಪ್ಪಿಸಿದರೆ, ಅದು ತನ್ನ ಮರಿಗೆ ನೋವಾಗದಂತೆ ಎಚ್ಚರಿಕೆಯಿಂದ ಬಾಯಲ್ಲಿ ಕಚ್ಚಿಕೊಂಡು ಹೋಗುತ್ತದೆ' ಎಂಬ ಭಾವನೆಯುಳ್ಳ ದೃಷ್ಟಾಂತ : ಜೀವಾತ್ಮನ ಸ್ವಪ್ರಯತ್ನವಿಲ್ಲದೆಯೇ ಪರಮಾತ್ಮನು ಅನುಗ್ರಹಿಸುತ್ತಾನೆ ಎಂಬುದಕ್ಕೆ ಇದು ದೃಷ್ಟಾಂತ : ದೃಷ್ಟಾಂತಗಳ ಮೂಲಕ ಜೀವಾತ್ಮ ಪರಮಾತ್ಮರ ಸಂಬಂಧವನ್ನು ವಿವರಿಸುವಾಗ ಮರ್ಕಟ – ಕಿಶೋರನ್ಯಾಯ, ಮಾರ್ಜಾಲ–ಕಿಶೋರನ್ಯಾಯ ಎಂದು ಹೇಳುವುದುಂಟು (ಶಾಅಪ. ೨೬೪). 'ಮರ್ಕಟಕಿಶೋರನ್ಯಾಯ' ಪರಾ. [ಸಂ.]

**ಮಾರ್ಜಾಲಿ** (ನಾ). = ಮಾರ್ಜಾರಿ ೩ : "ಮಾರ್ಜಾಲಿ[ಶಾಕಾಂ. ರಿ]ಯೆನೆ ಜವಾದಿಯೆನಿಕ್ಕು" (ಶುಂಗಠಾ. ೯೯-೨೨). [ಸಂ. ಮಾರ್ಜಾಲೀ]

**ಮಾರ್ಜಿಕೆ** (ನಾ). ಕಡೆದ ಮೊಸರು : ಮಜ್ಜಿಗೆ : "ರಸಾಲಾ, ಮಾರ್ಜಿಕಾ — ೨ ಮೊಸರು ಕೈಗಡದು ಮಾಡಿದ ಮಜ್ಜಿಗೆ" (ಸಿದ್ಧಾಂತಿ. ೨೯೬). [ಸಂ. ಮಾರ್ಜಿಕಾ]

**ಮಾರ್ಜಿತ** (ಗು). ೧. ಶುದ್ಧಗೊಳಿಸಿದ ; ಸ್ವಚ್ಛಗೊಳಿಸಿದ. ೨. ಗುಡಿಸಿದ ; ಉಡುಗಿದ. [ಸಂ.]

**ಮಾರ್ಣಾಳ** (ಗು). ೧. ತಾವರೆಯ ದಂಟಿಗೆ ಸಂಬಂಧಿಸಿದ. (ನಾ). ೨. ತಾವರೆಯ ದಂಟು : ಇದು ಮತ್ಕಾಣೇಶನೆನ್ನೊಳ್ ನೆರೆದ ಪುಳಿನ ವಿಾಯಿರ್ದುದಾ ಕಾಂತೆ ಮೆಲ್ಲೊಲ್ಲದ ಮಾರ್ಣಾಳಾರ್ಧಮಿಾ ತೋರ್ಪುದು (ಕಂದೃಪು. ೬-೦೦). ೩. ತಾವರೆ ; ಕಮಲ : ಮಮಚಂಚನ್ನವಿದ್ಯೋತ

ಮುಮಟ್ಟೋಳ್ (ಶಗಾ. ೯-೦೨೬) ; ಎಳನೀರ ಮಿಡಿಗಳೊಳ್ ಮಾರ್ತೋಳಗುವ ಪಾವುರಿಯರಾನನಂಗಳುಮಲರ್ಗಣ್ಣಳುವೆಸೆವ್ವಮಲರ್ದ ಕಮಳಂಗಳ ಮಿಸ್ಸಳ ಬಳಗಮೆಂಬ ಬಗೆ ಮಿಗುವಿನೆಗಂ (ಕೃಷ್ಣಕ. ೨-೧೭).

[ಜಾರ್ (< ಮಾಱು$_2$) + ತೊಳಗು$_1$]

**ಮಾರ್ದಂಗಿಕ** (ನಾ). ಮೃದಂಗವನ್ನು ನುಡಿಸುವವನು ; ಮದ್ದಳೆಯನ್ನು ಬಾರಿಸುವವನು : "ಆ ಮಾರ್ದಂಗಿಕಂ ಮದ್ದಳೆಕಂ" (ಕೇಶಿ. ೨೬೩) ; ವೈಣಿಕ ಪಾಣಿವಿಕ ವಾಂಶಿಕ ಮಾರ್ದಂಗಿಕ ಗಾಯಕ ನರ್ತಕಾದಿ ಕಾತಪಪ್ರತತಿಯುಮಂ . . . ಬರಿಸಿ ಕುಳ್ಳಿರಿಸಿ (ಚಂದ್ರ ಕ. ೬-೮೩೮) ; ಒಡಲೆಂಬೀ ಜಡನಂ . . . ಮಹಾತ್ಮನಪಾ ತನ್ನೊಂದು ಸಾಮರ್ಥ್ಯದಿಂ . . . ನುಡಿಯಿಪಂ ಮಾರ್ದಂಗಿಕಂಬೊಲ್ (ಕಣ್ಣ. ೪-೯). [ಸಂ.]

**ಮಾರ್ದನಿ**, ಮಾರುದನಿ, ಮಾಱುದನಿ (ನಾ). ಮರುದನಿ ; ಪ್ರತಿಧ್ವನಿ: ಅಂಬರಚರಮಿಥುನರತಾಡಂಬರದೊಡನೊಗೆದ ನಗದ ಮಾರ್ದನಿ ಕಿವಿಗಂ ತುಂಬಿ ಮನೋಜಾಗಮಗುರುವೆಂಬುದನೊಡನೆಂಬ ಶಿಷ್ಯನಂ ಪೋಲ್ತಿರ್ದಂ (ಶಾಂತಿ. ೨-೧೦೨); ಕರೆಕರೆದು ಗಹ್ವರದ ಮಾರ್ದನಿಗಳಂ ಕೇಳ್ದು . . . ಕಣ್ದಿಱಿದು ನೋಡಿ ಕಾಣದೆ ಮಱುಗುತ (ಸಿದ್ಧರಾ. ೨-೬೩) ; ಕೊಪ್ಪಿನಲಿ ಸಿಂಜಿನಿಯು ಸಿಕ್ಕಿದನ್ನಳ್ಳಿಱಿದು ಮಾರ್ದನಿ ದಿಗಂತರವ್ಯೊದಱಲೊದಱಿಸಿದನು ಮಹಾಧನುವ (ಜೈಮಿ. ೦೪-೩). **ಮಾರುದನಿ** : ಕಹಳೆನುಡಿಯ ನುಡಿಯುತಿದೆ ಮಾರುದನಿ ಮೊಳಗುತಿದೆ, ಅಲಿಸಾಲಿಸುದನು ! (ಪಿಸೆಗ. ೩೯-೦). 'ಮಾರುದನಿಗೊಡು' ಪರಾ. **ಮಾಱುದನಿ** : ಚೀಱು ವಂಗನೆದುಬ್ಬರದೊಳೊದವೆ ಸಿಡಿಲಳುವ ಮಾಱುದನಿಯುವಳ ಕಣ್ಣೊಳು ಕಱೆಯೆ ಮಳೆ ಲೋಕ ಪರ್ಷಋತುವೆನಲೆಸೆದುದು (ಭಾಷಂ. ೯-೨೭).

☞ 'ಮಾರುದನಿ', 'ಮಾಱುವನಿ' ಎಂಬ ಶಬ್ದಗಳು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪಗಳು, [ಮಾರ್ (< ಮಾಱು$_2$) + ದನಿ$_1$]

**ಮಾರ್ದನಿಗುಡು** 'ಮಾರ್ದನಿಗೊಡು' ನೋ.

**ಮಾರ್ದನಿಗೊಡು**, ಮಾರುದನಿಗೊಡು, ಮಾರ್ದನಿಗುಡು (ಕ್ರಿ). ೧. ಪ್ರತಿಧ್ವನಿತವಾಗು ; ಪ್ರತಿಧ್ವನಿಸು : ಅವರ ಶಂಖಧ್ವನಿಯೂ ಸಿಂಹನಾದವೂ ಭೇರೀನಿನಾದವೂ ಭೂಮ್ಯಾಕಾಶಗಳನ್ನು ತುಂಬಿ ಮಾರ್ದನಿಗೊಡಲಾರಂಭಿಸಿದುವು (ಜಪಾ. ೨೬೩). ೨. ಪ್ರತಿಧ್ವನಿಯುಂಟಾಗುವಂತೆ ಮಾಡು : ಪೇತವದೆ ಒಡೆ ಘೋಕ್ರೋಶಲಿಕ್ಕಿ ಮಹಾವಿಂಧ್ಯಂ ಮಾರ್ದನಿಗೊಡಲಾರ್ದು ಬೊಬ್ಬಿಱಿದಬ್ಬರಿಸಿ . . . ಪುಳಿಂದಸೈನ್ಯವೆಲ್ಲವಂ ಮರ್ಬಿನೊಳಡಂಗಿಸೆ (ಪಂಪಭಾ. ೦೮-೩೯). **ಮಾರುದನಿಗೊಡು** : ೩. (ಅಲಂ) ಪ್ರತಿಕ್ರಿಯೆಯನ್ನು ತೋರು ; ಸ್ಪಂದಿಸು : ದೇವಾಂಬೆಯು ಪವಿತ್ರಪ್ರೇಮಕ್ಕೆ ಅಪ್ಪಾಜಿಯು ಹೃದಯವು ಮಾರುದನಿಗೊಟ್ಟಿದ್ದಿತು (ಪಟೀಶ. ೨೦). **ಮಾರ್ದನಿಗುಡು** : ೨. ಮೃದಂಗಧ್ವನಿ [ಧೀರವಾಗಿ] ಬೆಟ್ಟುಗಳ್ ಮಾರ್ದನಿಗುಡೆ ಗಜಱೆ ಗರ್ಜಿಪ ಕಂಠೀರವರವಂಗಳೊಳಂ . . . ವಿಂಧ್ಯಾಟವಿಯೆಲ್ಲಂ ಪ್ರಚಲಿತಮಾದಂತಾಗೆ (ಆದಿಪು. ೦೬೦). [ಮಾರ್ದನಿ + ಕೊಡು$_1$]

**ಮಾರ್ದನಿಗೊಳ್** (ಕ್ರಿ). = ಮಾರ್ದನಿಗೊಡು ೨ : ಹಾಹಾರವಮೆತ್ತಂ ಮಾರ್ಬಲನೊಳ್ ಮಾರ್ದನಿಗೊಂಡುದು (ರಾಮಾಶ್ವ. ೦೨೯-೯).

[ಮಾರ್ದನಿ + ಕೊಳ್$_1$]

**ಮಾರ್ದನಿದೋಱು**, ಮಾರುದನಿತೋರು (ಕ್ರಿ). = ಮಾರ್ದನಿಗೊಡು ೧ : ಇಳೆಯು ತಳೆದಿರ್ದನೆ ಛೀಳಡೆ ಗಗನ ಮಾರ್ದನಿದೋಱೆ . . . ಸುದರ್ಶನಪ್ರತಿಮಾನವನು ಮತ್ತೆ ಜಗಿದನು (ಕೊರಚಾ. ೬-೩೨-೩೭). **ಮಾರುದನಿತೋರು** : ರಾಷತರ ಕೇಕಗಳು ಕಾಡಿನಲಿ ತುಂಬುತ್ತ ಮಾರುದನಿತೋರುತ್ತ ಖಗಕುಲವ ಹಾರಿಸಲು (ಕರ್ಕಾಟ. ೭೭-೦೨).

[ಮಾರ್ದನಿ + ತೋಱು]

**ಮಾರ್ದನಿಯಿಡು**, ಮಾರ್ದನಿವಿಡು (ಕ್ರಿ). ೧. = ಮಾರ್ದನಿಗೊಡು ೧ : ಸಂತಸದೆ ಬಾಹಾಸ್ಫಾಲನಂಗೆಯ್ಯೆ ದಿಗ್ವಲಯಂ ಮಾರ್ದನಿಯಿಟ್ಟು ಪೋರ್ ಗಜಱಿದಂ ಚಾಳುಕ್ಯಕಂಠೀರವಂ (ಗದಾಯು. ೬-೯೬). ೨. = ಮಾರ್ದನಿಗೊಡು ೨ : ಅನುಪಮಪ್ರಾಸಾದಕೂಟಕುಹರಂಗಳೊಳ್ ಮಾರ್ದನಿಯಿಡುವ ಪಡಿಯಱರ ಕಳಕಳಂಗಳೊಳ್ . . . ಮನುಜೇಂದ್ರಂ ಪೊಱಮಟ್ಟು (ಆದಿಪು. ೬೭): ಒಗೆದಬಿಳಾಂಘ್ರಿನೂಪುರದ ರ್‍ಝಂಕೃತಿ ಮಾರ್ದನಿಯಿಟ್ಟು ನಾಡೆಯುಂ ಪುಗೆ ಕುಜಕೋಟರಂಗಳಂ (ಕುಸುಮಾ. ೩-೯೬). **ಮಾರ್ದನಿವಿಡು** : ೧. ಮಾರ್ದವದೆ ಸಖಿಯರೊಡನೆ ಜನಾರ್ದನನಾಡುತ್ತುಮಿರ್ದ ಪದದೊಳ್ ದೆಸೆಗಳ್ ಮಾರ್ದನಿವಿಡಲದ್ಭುತ ವೃಷನರ್ದನವುಣ್ಮಿದುದದೊಂದು ವಜ್ರಾಶನಿವೊಲ್ (ಹರಿ. ೩-೩೯). ೨. ಪಲವುಂ ತೆಱದ ಪಱೆಗಳೆಸೆವುದ್ದಾಮರಭಸದಿಂದಂ ಮಾರ್ದನಿವಿಟ್ಟು ಮುಂದುಗಣ್ಮನಮನುಂಟುಮಾಡಿದಂತೆ ಶಾಂತೀಶ್ವರಂಗೆ (ಶಾಂತಿಪು. ೦೦-೩೦ ವ).

[ಮಾರ್ದನಿ + ಇಡು$_1$]

**ಮಾರ್ದನಿವಿಡು** 'ಮಾರ್ದನಿಯಿಡು' ನೋ.

**ಮಾರ್ದನಿಸು** (ಕ್ರಿ). = ಮಾರ್ದನಿಗೊಡು ೧ : ಅವರ ಸಪ್ಪಳ ಮಾರ್ದನಿಸುತ್ತಿತ್ತು ಸುಂದರಿಯು ಕಿವಿಯಲ್ಲಿ (ಸಕ್ಕಜಾ. ೦೦೬) ; ಮಲೆದಾಣಮಾಪದು ತಾನೆ ಪೊಳಲಿಟ್ಟು ಮಾರ್ದನಿಸದಾ ನಿನ್ನ ಹುಯಿಲುಗಳ (ಕುಸುಮಾ. ೦೦೨).

[ಮಾರ್ದನಿ + – ಇಸು$_3$]

**ಮಾರ್ದವ** (ನಾ). ೧. ಮೃದುವಾದುದು ; ಕೋಮಲವಾದುದು : ವಿವಿಧಭಕ್ಷ್ಯಂಗಳನಮಳಮಾರ್ದವರಸರಸಾನ್ನಂಗಳಂ ತದ್ಯುವತಿಯುತ್ಸವದಿಂದ ಮಾಡುತ್ತಿರ್ಪ ಸಮಯದಲಿ (ಬಸವ. ೨೯-೩೪). ೨. ಕೋಮಲತೆ: ಸುಕುಮಾರತೆ : ಮಾರ್ದವ ಸುವಾಸನೆಗಳೊಂದೊಂದನೊಡಗೊಂಡು ಆರ್ದ್ರತಾಮಾಧುರ್ಯರಸಪುಷ್ಟಿಯನು ಪಡೆಯೆ ಆ ಹಣ್ಣು ಬೆಲೆಹಣ್ಣು (ಕೊಳಗಿರಿ. ೬೭-೦೭). ೩. ಮೃದುಸ್ವಭಾವ : ಮಾರ್ದವದೆ ಸಖಿಯರೊಡನೆ ಜನಾರ್ದನನಾಡುತ್ತುಮಿರ್ದ ಪದದೊಳ್ ದೆಸೆಗಳ್ ಮಾರ್ದನಿವಿಡಲದ್ಭುತವೃಷನರ್ದನವುಣ್ಮಿದುದದೊಂದು ವಜ್ರಾಶನಿವೊಲ್ (ಹರಿ. ೩-೩೯): ಮಾರ್ದವಮುಂ ದ್ವಿಜರೊಳ್ . . . ಮನ್ನಣೆಯುಂ ಪೊರ್ದಿಗೆಯುವರೊಳ್ ಪುದುಗಿಸಿ ಪೇರ್ದಳೆಯಿಪನಿಂತುಗೋಳಿಸಿ ರಾಜನಿಲಿಂಪಂ (ಹರಿ ೩-೦೩೦). ೪. [ಜೈನ] ದಶಧರ್ಮಗಳಲ್ಲಿ ಒಂದು ; "ಜ್ಞಾನ, ಆದರಸತ್ಕಾರ, ಕುಲ, ಜಾತಿ, ಬಲ, ಐಶ್ವರ್ಯ, ತಪ ಮತ್ತು ಶರೀರಸೌಂದರ್ಯ ಇವುಗಳ ಅಭಿಮಾನವಿಲ್ಲದೆ ಇರುವುದು" (ಆದಿಪು. ಕೈಪಿಡಿ): ಉತ್ತಮಕ್ಷಮಾಮಾರ್ದವಾರ್ಜವ . . . ಬ್ರಹ್ಮಚರ್ಯಪರ್ಯಾಯಪರ್ಯಾಪ್ತ ದಶಧರ್ಮಂಗಳಂ ಕೈಕೊಂಡು (ಆದಿಪು. ೬-೩೦ ವ): ಕ್ಷಮೆ ಬಯಿಯ್ ಮಾರ್ದವ ಮೋಜೆ ಸಾಜಮುಳವಟ್ಟಿರ್ದಾರ್ಜವಂ . . . ಸಯಂ ಬ್ರಹ್ಮಚರ್ಯ[ಮೆ] ಮಾನೋಸ್ನತಿ ವರ್ಧಮಾನಮುನಿಗಕ್ಕುಂ ಪೆಱರ್ಗಕ್ಕುಮೇ (ಸುಕುಮಾ. ೦-೨೭) ; ಕುಲ ರೂಪು ಜಾತಿ ಸುಬುದ್ಧಿ ತಪಸ್ಸು ಶಾಸ್ತ್ರ ಸಲೆ ಶೀಲ ಪ್ರಭೃತಿ ಗರ್ವದೊಳು ನೆಲಸದೆ ಗರ್ವಮಾತ್ರವ ಮಾಡದಿಪ್ಪುದು ಚಲುವೆ[ನೆ ಮಾ]ರ್ದವ ಧರ್ಮ (ದ್ವಾದಶಾ. ೦೦-೭೭೯). [ಸಂ.]

**ಮಾರ್ದವತೆ** (ನಾ). ಮೃದುತ್ವ; ಸುಕುಮಾರತ : ನರಪ್ಯಾಹದ ಮಾರ್ದವತೆ ಪಯಸ್ಸಾದಂತೆ ಕಡಮೆಯಾಗುತ್ತದೆ (ಶಿಲ್ಪ. ೨೦೩): ಅಣಕಿಸುವ ಧ್ವನಿಯು ಹಾಡಿನ ತುಂಬೆಲ್ಲ ತುಂಬಿದ್ದರೂ ಅದು ವೀರಶೈವಸಂಸ್ಕಾರವನ್ನು ಹೊಂದಿ ಬಂದಿರುವುದರಿಂದ ಮಾರ್ದವತೆಯು ತುಂಬಿ ತುಳುಕಾಡುವುದು (ಕನ್ನ. ೩೬). [ಸಂ. ಮಾರ್ದವತಾ]

**ಮಾರ್ದಳಿಕ** (ನಾ). ಮೃದಂಗ ಬಾರಿಸುವವನು ; ಮದ್ದಳೆ ನುಡಿಸುವವನು : ಯೌವನಮಧುಮದಮುದಿತ ಮಾರ್ದಳಿಕ[ಪಾಠಾಂ. ರ್ದಂಗಿಕ] ವಾಂಶಿಕಪ್ರಹಸ್ಯಮಾನವಾದ್ಯ ಮೃದಂಗಮಂಶನಿನದಲಯಮೃದಂಗಸುಂದರ

ನುತನ್ನುಂದಂಸಂದೋಹಮುಮುಖಪೂರ್ವಾಪರವಾಕ್ಯಮುಮುಪನಾಗೆ (ಅಂಕ್ರ. ೬-೩೬ ಕ). 'ಮಾರ್ದಂಗಿಕ' ಪರಾ. [ಸಂ. ಮಾರ್ದಲಿಕ]

**ಮಾರ್ದಿಟ್ಟಿ** (ನಾ). ಪ್ರತಿಯಾಗಿ ನೋಡುವ ನೋಟ, – ದೃಷ್ಟಿ : ಮಾರ್ದಿಟ್ಟಿಯನ್ನಾಚಾ ನಿಟ್ಟಿಸುತ್ತಿದ್ದು ಕಣ್ಣುಮುಳ್ಳ್ದು . . . ಮೊಗ ಕತ್ತು ಗಳನ್ನೊರಸಿಕೊಂಡು ಥಿಗ್ಗನೆ ಮೆಯ್ಮುದ್ದು (ಕುಂತ್ರಕ. ೬೯-೨೪).

[ಮಾರ್ (< ಮಾಱು₂) + ದಿಟ್ಟಿ]

**ಮಾರ್ದೊಡೆ** (ಕ್ರಿ). ಮತ್ತೆ ಉಜ್ಜು, – ತಿಕ್ಕು : ಪೂರ್ವೋತ್ತೀರ್ಣಿಗೆಜಗೆ ನೊಳಂ ಶ್ರೀನಾರ್ಸ್ಯಂಗಾಗ್ರದಿಂ ಮಾರ್ದೊಡೆಯುತ್ತುಂ . . . ಬಂದುದು ಮುದವಿದ ಳಿಶ್ರೀಗಳಾಕ್ಷಂ ಮಹೋಕ್ಷಂ (೮೬೦೯. ೩-೬೭).

[ಮಾರ್ (< ಮಾಱು₂) + ತೊಡೆ₁]

**ಮಾರ್ನಡೆ** (ಕ್ರಿ). ಎದುರಾಗಿ ನಡೆ : ನಯದ ಬಿಜ್ಜಲದ ವರ್ಣನೆಯ ಸತಿಯರೊಳು ಮಾರ್ನಡೆದವಳರಸಿ ಸೌಭಾಗ್ಯಾರ್ಣವದ ತೆರೆಗಳಂತೆ (ಚಾಶಾಂ. ೯-೨೦) ; ಯುದ್ಧಸನ್ನದ್ಧರಾಗಿ ಗಜಾಶ್ವೋರುವರೂಥವೀರಭಟಸೈನ್ಯಂ ಗೂಡಿ ಕುಂತಪಾಸಿಚಕ್ರಗದಾದ್ಯಾಯುಧಮಾತು ಮಾರ್ನಡೆದು ಬೀಡಂ ಬಿಟ್ಟ ರಾಟೋಪದಿಂ (ವೃತಶಂ. ೩೬-೬). [ಮಾರ್ (< ಮಾಱು₂) + ನಡೆ₁]

**ಮಾರ್ನುಡಿ₁**, ಮಾರುನುಡಿ₁ (ಕ್ರಿ). ೧. ಪ್ರತಿಯಾಗಿ ಮಾತನ್ನಾಡು ; ಮಾರುತ್ತರ ಕೊಡು : ಮಿಡುಕದೆ ಥೀವ್ರ ನೋಡುತಿರು ಕುಂಭಜ ಸುರ್ಕರು ಕರ್ಣ ಮಿತ್ರ ಮಾರ್ನುಡಿಯದೆ ಪ್ರೂಣುವಟ್ಟರು (೭೦ಶಣ. ೬-೩೩) ; ಇವರ್ಕೆ ನೀನೇನುಮಂ ನುಡಿಯದಿರೆಂದು ಲಕ್ಷ್ಮಣನಂ ಮಾರ್ನುಡಿ ಯದಂತು ಮಾಡಿ (ಕಂರಾಷಾ. ೦೬-೭೬ ಕ) : ಕರೆಯಲು ಮೂಕನೇ ಮಾರ್ನುಡಿಯೆ ನೀಂ (ಬಸಪು. ೦೯-೦೦). ೨. ವಿರುದ್ಧವಾದುದನ್ನು ಹೇಳು; ಎದುರುತ್ತರ ಕೊಡು : ಪತಿವಚನಕೆ ಮಾರ್ನುಡಿಪವಂಟ ದೊಡಾ ಸತಿಗೆ ನಿಷ್ಕೃತಿಯಿಲ್ಲೆಂಬ ಶ್ರುತಿಯಿಂದ ನಿಮಗೆ ನಾನುಸುರಲಂಜುವೆನು (ಚೋಚತ. ೬-೯). **ಮಾರುನುಡಿ₁** : ೧. ನಿಂತಿವ್ವ ಹಾಗೆಯೇ ಹೈಮವತಿ ಮಾರುನುಡಿದಳು (ಎಚತ. ೩೩). [ಮಾರ್ (< ಮಾಱು₂) + ನುಡಿ₁]

**ಮಾರ್ನುಡಿ₂**, ಮಾರುನುಡಿ₂, ಮಾಱುನುಡಿ (ನಾ). ೧. ಪ್ರತ್ಯುತ್ತರ : ಜವಾಬು : ಧಾರುಣಿಪಾಲ್ಣನಿದಕೆ ಮಾರ್ನುಡಿ ಯಾವುದೆಂದು ಚಿಂತಿಸುತ ಮಾಗುಳಂತೆಂದನು (ಶ್ರೀವತ್ಸ. ೯-೬೬) ; ನಿನತಾವ ಕೇಳ್ವೆಗಂ ಮಾರ್ನುಡಿಯ ನೀಯೆ ನಾನ್ (ಬಿಳ್ವಶ್ರ. ೩೦-೦೦೦೯). **ಮಾರುನುಡಿ₂** : ೧. ನಿನ್ನನೊಂದು ಕೇಳಲೆಂದು ಮನವು ತವಕಗೊಳ್ಳುದು ಇತ್ತ ನೋಡಿ ನಾಚದೆನಗೆ ಮಾರು ನುಡಿಯ ಕೊಡುವುದು (ಅರಸೋ. ೨೬-೦೬). **ಮಾಱುನುಡಿ** : ೨. ಪ್ರತಿ ಯೊದ ಮಾತು; ಬೇರೆಯಾದ ಅಭಿಪ್ರಾಯ : ಮಾಱುನುಡಿಯಿರದಿರ ಅಜ್ಞೆ ಮನ ಮಿಜುವುದಲಾಯೆಂದು ಮಣಿಗಣದೋಜುತಿಯು ಮುದ್ರಿಕೆ ಜನಿಸ್ತನು ರವೆಗೆ ರಾಘವನ (ಕೆ.ಶರಾ. ೩-೩-೯೨).

[ಮಾರ್ (< ಮಾಱು₂) + ನುಡಿ₂]

**ಮಾರ್ಪ** 'ಮಾಡು₁' ಪರಾ.

**ಮಾರ್ಪಜ್ಜೆ**, ಮಾರ್ಪೆಜ್ಜೆ (ನಾ). ವಿರುದ್ಧವಾಗ ನಡೆ.– ಚಲನೆ : ಮಾರ್ಪಜ್ಜೆಗೆಡು' ಪರಾ. **ಮಾರ್ಪೆಜ್ಜೆ** : 'ಮಾರ್ಪೆಜ್ಜೆಗೆಡು' ಪರಾ.

[ಮಾರ್ (< ಮಾಱು₂) + ಪಜ್ಜೆ]

**ಮಾರ್ಪಜ್ಜೆಗೆಡು**, ಮಾರ್ಪೆಜ್ಜೆಗೆಡು (ಕ್ರಿ). ವಿರುದ್ಧವಾದ ಚಲನೆಗೆ ಅಡ್ಡಿಯುಂಟಾಗು : ನಿನ್ನ ಶೇಮಾರ್ಪ[ಪಾಠಾಂ. ಪೆ]ಜ್ಜೆಗೆಟ್ಟುದು ಸರೋಜಾಕ್ಷಿ ನಿನ್ನಾಟ ಕಟ್ಟಿತರಸುಜನೆಸಪ್ಪುಳೆ (ಕೃಬಿಶಾ. ೩-೬೦). **ಮಾರ್ಪೆಜ್ಜೆಗೆಡು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಮಾರ್ಪಜ್ಜೆ + ಕೆಡು₁]

**ಮಾರ್ಪಡಿ** (ನಾ). ಸಮಾನ ; ಎಣೆ ; ಸಾಟಿ : "ಸರಿ, ದೊರೆ, ಪಡಿ, ಗೆಡೆ, ಸಾಟಿ, ಪಾಸಟಿ, ಎಣೆ, ತೊಣೆ, ಮಾರ್ಪಡೆ[ಡಿ] . . . ಹೋಲ್ಕೆ ಸಂಗಡಂ—ಈ ೧೮ ಸಮಾನಕ್ಕೆ ಪೆಸರ್" (ಕಶಾ. ೩೯-೨೯೦) ; ಕುಮುಪ್ಪವಾರ್ ನಡುವೆಂದು ಬಣ್ಣಿಸುವ ಬೇಳಂಬಂಗಳಂತರ್ಕೆ ಮಾರ್ಪಡಿ ಮೂಲೋಕ ದೊಳಿಲ್ಲ (೫೦ಅಕ್ಕ. ೯-೩). [ಮಾರ್ (< ಮಾಱು₂) + ಪಡಿ₂]

**ಮಾರ್ಪಡಿಸು** (ಕ್ರಿ). ವ್ಯತ್ಯಾಸಪಡಿಸು ; ಬದಲಾಯಿಸು : ಪೇೞ ಪರ್ವತಂಗೊಲಿಯದಂತವನ ಮೊಗಮಂ ಮಂಕಡಮೊಗದಂತೆ ಮಾರ್ಪಡಿಸ ಲಪ್ಪುದು (ಅದ್ಭುಕ. ೯-೨೬); ಮಾನವನ ಅಂತರಂಗ ಎಲ್ಲಿಯೂ ಒಂದೇ. ದೇಶ ಕಾಲ ಭಾಷೆಗಳು ಇದನ್ನು ಮಾರ್ಪಡಿಸಲಾರವು (ಜಗಪಾ. ೪೦).

[ಮಾರ್ಪಡು + – ಇಸು]

**ಮಾರ್ಪಡು** (ಕ್ರಿ). ಬದಲಾವಣೆಹೊಂದು ; ವ್ಯತ್ಯಾಸಗೊಳ್ಳು : ಅವತ ರಿಸಿಹನು ಬೊಮ್ಮ ವಿಶ್ವದೇಹದೊಳೆನ್ನೆ ಅವನ ವೇಷಗಳೇಕೆ ಮಾರ್ಪಡುತಲಿ ಹವೆ ? (ಮುಂಕಳ. ೩೬); ತ್ರಿಪುರಸಂಹಾರವಾದ ಬಳಿಕ ಆಯಾಸಗೊಂಡ ಶಿವನ ಹಣೆಯಿಂದ ಬೆವರುಹನಿಯೊಂದು ಬಿದ್ದು ಮರವಾಗಿ ಮಾರ್ಪಟ್ಟ ಕದಂಬ (ಹಸುಕೊ. ೪೬).

[ಮಾರ್ (< ಮಾಱು₂) + ಪಡು₁./ತಮಿ. ಮಾಱುಪಡು]

**ಮಾರ್ಪಡೆ** (ನಾ). ಎದುರುಪಡೆ ; ಶತ್ರುಸೈನ್ಯ : ಅಂತಿದಿರಾಂತ ಮಾರ್ಪಡೆ ಯಲ್ಲಮಂ ಜವನ ಪಡೆಗೆ ಪಡಿಗಚ್ಚಿಕ್ಕುವಂತಿಕ್ಕಿ (ಕಂಕಣಾ. ೦೦-೯೪ ಕ) : ಮೇಲೊಡ್ಡಿದುದ್ದೆದೆ ಬಂದ ಮಾರ್ಪಡೆಯುನಿತುಂ (ಕವ್ಯಣಾ. ೨೫೮); ಮಾರ್ಪಡೆ ಗಳ ಕೂರ್ಪುಡುಗೆ, ಘೋರ ಬಯಸಿ ಕಡೆದರೇ ! (ಜಾಶಿ. ೩-೩೩).

**ಮಾರ್ಪಡೆಗಿಡಿಗ**=ಶತ್ರು ಸೈನ್ಯಕ್ಕೆ ಗಿಡುಗನಂತಿರುವವನು ; ಒಂದು ಬಿರುದು: ಶ್ರೀಮನುಮಾಹಮಂಡ[ಳೇ]ಸ್ವರ ಕೇಸವದೇವ್ಯಡೆಯರ [ಪದದ] ಕಳಂವ ಲೊಕ್ಕಿಯ ಬೀಡು ಬಿರಿದು ಮಾರ್ಪ್ಪಡೆಗಿಡಿಗ ಮಲೆವರ ಗಂಡ ಕಾ [ರೆ] ತ್ರಿ ಮಾಡುವ ನಾಯಕಂ (ಕಣ. I. ೪೯-೬ : 1422 ?). **ಮಾರ್ಪಡೆಗೋಜಂಟ** = ಶತ್ರುಸೈನ್ಯಕ್ಕೆ ಗಡುಸಾದವನು ; ಒಂದು ಬಿರುದು : ಶ್ರೀಗಾಸ್ರಯವೆನೆ ತೇಜಸ್ವಿಗರವೆನೆ ನೆಗೞ್ದ ಗಂಗ ವಜ್ರನ ಲೆಂಕಬ್ಬೋಗಾದ್ಯನೆಂಬರವರೊಳ್ಕೋಗೆಸು ಮಾರ್ಪ್ಪಡೆಗೋಜಂಟ ನ್ಮಾನ ಬಂಟ (ಎಕ. II (R). ೭೭೦-೩; 10ನೆಯ ಶ). **ಮಾರ್ಪಡೆಭೀಮ**= ಶತ್ರುಸೈನ್ಯದವರಿಗೆ ಭೀಮನಂತಿರುವವನು; ಒಂದು ಬಿರುದು : ತೇಜ ಮಹಾರ್ಣಿಣ್ಣಂ ಮಾರ್ಪ್ಪಡೆಭೀಮಂ ಮಲ್ಲಿಕಾಮೋದಂ ಕೀರ್ತಿವಿದ್ಯಾಧರಂ (ಕ್ರೌಇ. XX. ೨೦–೬ : 1019). [ಮಾರ್ (<ಮಾಱು₂) + ಪಡೆ₂]

**ಮಾರ್ಪಣ** (ನಾ). (ಧರ್ಮವಿರುದ್ಧವಾದ ಕೆಲಸಕ್ಕೆ) ಪ್ರತಿಯಾಗಿ ಪಡೆಯುವ ಹಣ : ಅಣುಮಾತ್ರಂ ಕೂಸಿಲ್ಲದಾಳ್ದನೆಡೆಯೊಳ್ ಲಂಚಕ್ಕೊಡಂಬಟ್ಟು ಮಾರ್ಪಣಮಂ ಕೊಂಡತವಿತ್ತಮಂ ಕಿಡಿಸಿ . . . ಭಕ್ಷಿಪಾ ಗಣಕಂ ಹೆಗ್ಗಣಕಂ ಸಮಂ (ಕೋಟಿಕ. ೩೩).

[ಮಾರ್ (< ಮಾಱು₂) + ಪಣ₂]

**ಮಾರ್ಪಾಟ** 'ಮಾರ್ಪಾಡು' ನೋ.

**ಮಾರ್ಪಾಟು** 'ಮಾರ್ಪಾಡು' ನೋ.

**ಮಾರ್ಪಾಟುಗೊಳು** 'ಮಾರ್ಪಾಟುಗೊಳ್ಳು' ನೋ.

**ಮಾರ್ಪಾಟುಗೊಳ್ಳು**, ಮಾರ್ಪಾಟುಗೊಳು (ಕ್ರಿ). ವ್ಯತ್ಯಾಸವನ್ನು ಹೊಂದು ; ಬದಲಾವಣೆಯಾಗು : ಶಕ್ತಿಪೂಜೆಯ ರೀತಿಯಲ್ಲಿರುವ ಅವರ ನಂಬಿಕೆ, ಅವರ ಆಚಾರ ಮಾರ್ಪಾಟುಗೊಂಡುದು ನಿಮಗೆ ಕಾಣಿಸು ತ್ತದೆಯೇ ? (ಅಕಾ. ೦೯೨). **ಮಾರ್ಪಾಟುಗೊಳು** : ಮಾವಿನ ಬೇವಿನ ಬೇರುಗಳೊಂದಾಗಿ ನೆಲದೊಳು ಹೆಣೆದುಕೊಂಡಾಗ ಮಾವಿನ ಸಿಹಿ ಪೋಗಿ ಬೇವಿನ ಕಹಿಯಾಗಿ ಮಾರ್ಪಾಟುಗೊಳುವುದು ಬೇಗ (೩೦ಕಾಶ. ೦೦೩-೯).

[ಮಾರ್ಪಾಟು (< ಮಾರ್ಪಾಡು) + ಕೊಳ್ಳು₁ (< ಕೊಳ್₁)]

**ಮಾರ್ಪಾಡಿ** (ನಾ). ಶತ್ರುಸೈನ್ಯ ; ವೈರಿದಳ : ಈತನೆ ಗಂಡನೆಂದನುದಿಂ ಮಾರ್ಪಾಡಿಯಿಂ ಬಿಡದಿ ಪಾಳಿದ ಕೆಂಡಕ್ಕೆಣೆಯಾಗಿ ನಿಂದು ಪೃಥಿವೀ

ಪಾಲಾವನೀಪಾಲಕಂ (ತಂತ್ರಪು. ೧೧-೯೬) : ನರನಿರ್ದಂ ಮಾರ್ಪಾಡಿಯೊಳರಿದೆನಗಾವುದಟಿ ಗರ್ವಮಾವುದಜಳಪೇವಿರಿಯೆನ್ನಿವನೊಲ್ಲೆನೆನ್ನದೆ ಮರುಳೇ ನೀನಿಂತು ವೀರವಟ್ಟಮನಾಂಪೋ (ಪಂಕಾ. ೦೨-೩೩).

[ಮಾರ್ (< ಮಾಱು$_2$) + ಪಾಡಿ]

**ಮಾರ್ಪಾಡಿತನ** (ನಾ). ವಿರೋಧ : ಪ್ರತಿಕೂಲತೆ : "ಪ್ರಾತಿಕೂಲ್ಯಂ-ಮಾರ್ಪಾಡಿತನಮುಂ" (ಶಬ್ದ. ೨೮-೨೪).

[ಮಾರ್ಪಾಡಿ$_0$ (p ← ತಮಿ. ಮಾಱುಪಾಟು) + -ತನ]

**ಮಾರ್ಪಾಡು**, ಮಾರ್ಪಾಟು, ಮಾರ್ಪಾಟು (ನಾ). ಬದಲಾವಣೆ : ವ್ಯತ್ಯಾಸ : ಈ ಮಾರ್ಪಾಡನ್ನು ಅರ್ಥಮಾಡಿಕೊಳ್ಳುವುದು ಸ್ವಾಮಿಗೆ ಸಾಧ್ಯವಾಗದೆ ಹೋಯಿತು (ಸ್ವಾಮಿ. ೪೦); ಒಬ್ಬರಿಂದ ಇನ್ನೊಬ್ಬರು ಪ್ರತಿಮಾಡುವಾಗ ನಡೆಸಿದ ಮಾರ್ಪಾಡಿನ ಫಲ (ಶಿಕ್ಷ. ೩೩೩). **ಮಾರ್ಪಾಟ** : ಎಮ್ಮಾ ಮಾನಸರ ಮನೋವಿಕಾರಮುಮನಿಂಗಿತಮುಮಂ ನುಡಿಯಿಂ ನಡೆಯಿಂ ಗೆಯ್ಮೆಯಿಂ ಮೊಗದ ಮಾರ್ಪಾಟದಿಂ ಅಱಿಯಲಕ್ಕು ಮೆಂದು ಬಲ್ಲರ ಬಗೆ (ರಾಮಾಶ್ವ. ೧೦-೦೪). **ಮಾರ್ಪಾಟು** : ಜೀವಂತವಸ್ತು . . . ಪರಿಸ್ಥಿತಿಗೆ ತಕ್ಕಂತೆ ಮಾರ್ಪಾಟು ಹೊಂದುವುದು ಅವುಗಳ ವಿಶಿಷ್ಟ ಲಕ್ಷಣ (ಜ್ಞಾ. ೩೦); ತಮಿಳು – ಕನ್ನಡ ಭಾಷೆಗಳೊಡನೆ ಹೋಲಿಸಿದಾಗ ತೆಲುಗುಭಾಷೆಯ ಕೆಲವು ಪದಗಳಲ್ಲಿನ ಮಾರ್ಪಾಟು. ಅದರಲ್ಲಿಯೂ ಆ ಧ್ವನಿವ್ಯತ್ಯಾಸ ಸ್ವಾರಸ್ಯವಾದುದು (ದ್ರಾ. ೭೬. ೦೩೩).

[ಮಾರ್ (< ಮಾಱು$_2$) + ಪಾಡು$_3$]

**ಮಾರ್ಪಿಡಿ** (ಕ್ರಿ). ೧. (ವೈರಿಗಳ ರಾಜ್ಯಾದಿಗಳನ್ನು) ಪ್ರತಿಯಾಗಿ ಹಿಡಿದುಕೊಳ್ಳು-ಸ್ವಾಧೀನಪಡಿಸಿಕೊಳ್ಳು : ನುಡಿದುದೆ ನಿನ್ನ ಮಾಡಿದುದೆ ಶಾಸನಮಿತ್ತುದೆ ರಾಮರೇಸು ಮಾರ್ಪಿಡಿದುದೆ ವಜ್ರಲೇಪಂ (ಎಕ. VII. ಶಿಮೊ. ೧೦-೨೪; 1085 ?); ಅಲ್ಲಿ ನುಡಿದುದೆ ನಂಸಿ ನೋಡಿದುದೆ ಸಾಧ್ಯ ಪೊಡರ್ಪಿಂತೆ ಕಾರ್ಯಸಿದ್ಧಿ ಮಾರ್ಪಿಡಿದುದೆ ಸೊಂಮು (ಕಸ. I. ೨೩-೪೯ : 1085). ೨. ವಿರೋಧವನ್ನು ಹೊಂದು : ವಿರೋಧಿಸು : ಮಾರ್ಪಿಡಿಯೆ ಮಾಣಿನೀ ಘಟನೀರ್ವರವಿಗೀನತನಿರ್ಗೆ ಬರಲಾರ್ಪವರಾರ್ ಮಾರ್ಪಡೆಯೊಳೆನ್ನ ಘನದೋರ್ದರ್ಪಮನಾಪರಿಸಿ ನೆಗಟ್ಟ ಕಲಿ ರಣವಜ್ರಂ (ಕಾವ್ಯಾ. ೩೦೦). [ಮಾರ್ (< ಮಾಱು$_2$) + ಪಿಡಿ$_1$]

**ಮಾರ್ಪು** (ನಾ). ಬದಲಾವಣೆ ; ವ್ಯತ್ಯಾಸ : ಮಾರ್ಪಾಟು : ಅಲ್ಲಲ್ಲಿಯ ಸಂದರ್ಭ ಸನ್ನಿವೇಶಗಳಿಗನುವಾಗಿ ಆಕಾರಗಳೊಳಗೆ ಇಷ್ಟಿಷ್ಟು ಮಾರ್ಪುಗಳವೆ (ಕಾರ್ಕಸು. ೨೦): ಬೆಟ್ಟಗುಡ್ಡಗಳನ್ನೆಲ್ಲ ಕಡಿದು ನೆಲವನ್ನು ಬಯಲುಮಾಡಿದುದರಿಂದ ಪ್ರಕೃತಿಯಲ್ಲಿ ಅನೇಕ ಮಾರ್ಪುಗಳು ತಲೆದೋರಿದುವು (ಶಾಂಡಿಯ. ೪೦).

[ ಮಾರ್ (< ಮಾಱು$_2$) – ಪ್ಪು/ತೆಲು. ಮಾರ್ಪು ]

**ಮಾರ್ಪುಗೊಳ್ಳು** (ಕ್ರಿ). ಬದಲಾಗು : ವ್ಯತ್ಯಾಸ ಹೊಂದು : ದುಃಖ ಸುಖಗಳಿಂದ ಮಾರ್ಪುಗೊಳ್ಳದ ಶಾಶ್ವತಸೌಂದರ್ಯದ ಗುರಿಯತ್ತ ಸಾಗುವ ಈ ಲೌಕಿಕಾಲೌಕಿಕಮಿಶ್ರಸೌಂದರ್ಯವನ್ನೇ ನಾವೀಕ್ಷಿಸಬೇಕಾದುದು (ಕಾವೋಚ. ೩೬೦); ಬಾಳುವೆ ಮಾರ್ಪುಗೊಳ್ಳಲು ಹೊಸದೊಂದು ಕಣಿವೆಯನ್ನು ಹಿಡಿದು ಮುಂದೆ ಸಾಗಿತು (ರೂಪಾಪು. ೭೮).

[ ಮಾರ್ಪು + ಕೊಳ್ಳು$_1$ (< ಕೊಳ್$_1$) ]

**ಮಾರ್ಪೆಜ್ಜೆ** 'ಮಾರ್ಪಜ್ಜೆ' ನೋ.

**ಮಾರ್ಪೆಜ್ಜೆಗೆಡು** 'ಮಾರ್ಪಜ್ಜೆಗೆಡು' ನೋ.

**ಮಾರ್ಪೊಡೆ** (ಕ್ರಿ). ಪ್ರತಿಯಾಗಿ ಹೊಡೆ ; ಎದುರಿಸಿ ಹೊಡೆ : ಮುನ್ನಮೆ ಶಮಗ್ರಗ್ರಾಮನಿಂದಂಗರಕ್ಷಸಮೂಹಂ ದೆಸೆಗೆಟ್ಟು ಯಾನಗಜವಾಜಿಶ್ರೇಣಿ ಬೆಂಗೊಟ್ಟು ಪೋಯ್ತು ಸುಸ್ಥಿರರೊಳೆಲ್ಲಿ ಮಾರ್ಪೊಡೆವರಾ ಪ್ರಸ್ತಾವದೊಳ್ ಕೃಷ್ಣನಂ (ಜಗ. ೬-೩೩) ; ಕಾಯ್ದಿನಿಂ ಹಿಡಿಲಿಂ ಮಾರ್ಪೊ ಡೆವಂ ಕೇಳ್ದುದ್ದುರಗನಂ ಮಾರಿಕ್ಕುವಂ ಸಿಂಗವಂ ಕವಿವಂ ಭಾವಿಸಿ ಪ್ರತಿವಿಸಟ್ಟ ಹರಿಪಂ ವೆಂಕ್ಕಾಂಬಿಕಾನಂದನಂ (ಕಿ. IV. ೦-೩೩ : 1204).

[ಮಾರ್ (< ಮಾಱು$_2$) + ಪೊಡೆ$_1$]

**ಮಾರ್ಪೊಣರ್** (ಕ್ರಿ). ಎದುರಾಗಿ ಹೋರಾಡು. – ಯುದ್ಧಮಾಡು : ಎನಿತು ಮದೇಭದೊಡ್ಡನಿತು ತೇರ್ . . . ಅನಿತೆ ಮದೇಭದೊಡ್ಡನಿತೆ ತೇರನಿತಾಳನಿತಶ್ವಮಸ್ತ್ರದಿಂ ಜನಿಯಿಸಿ ಪೊರ್ದೆ ಮಾರ್ಪೊಣರ್ದು ತಳ್ತಿಱಿದೆಯ್ದೆ ಪಳಂಚಿ ಕಾದುತಿರ್ಪಿನೆಗಂ (ಜಗ. ೦೮-೩೦).

[ಮಾರ್ (< ಮಾಱು$_2$) + ಪೊಣರ್$_1$]

**ಮಾರ್ಪೊಯ್** (ಕ್ರಿ). = ಮಾರ್ಪೊಡೆ : ತನ್ನೂರ್ವಿಗಳ್ ಬಂದು ಮಂದಿದಱಿಂ ಪೋದ ತಪೋವಳಂ (?) ಗಗನವಂ ಮಾರ್ಪೊಯ್ದು ಕಣ್ಗೊಪ್ಪಿ ತೋರ್ಪುದಿದುತ್ತ್ವೇಂಬಿದಸಂಖ್ಯದಂಬಿಧವಳಂ ಗಂಭೀರನೀರಾಕರಂ (ಶಂಕರಾ. ೪-೨೪) ; ಆ ಬಿಗನಿಱಿಗಿ ಗದಾದಂಡದಿಂ ಪೊಯ್ಯೆ ಭೀಮಂ ಸಜಮಂ ಮಾರ್ಪೊಯ್ಯೆ ತದ್ವೈತ್ಯನ ಗದೆಯುಡಿಯಲ್ (ನೇಮಿಪು. ೯-೬೦) ; ವಿಲಸತ್ಕಂತುಕಮಂ ಪುಟಂನೆಗೆವವೋಲ್ ಮಾರ್ಪೊಯ್ದು . . . ಕೋಮಲೆ ಪುಷ್ಪಾಸ್ತ್ರವನೀಟ್ಟ ಮೊಱಡಿಗೆಗಳಿಂ ಪುಷ್ಪಾಸ್ತ್ರಮಂ ಪೊಯ್ದಳೇ (ದಕಪು. ೦೨-೪೯). [ಮಾರ್ (< ಮಾಱು$_2$) + ಪೊಯ್$_1$]

**ಮಾರ್ಪೊಸೆ** (ಕ್ರಿ). ಪ್ರತಿಯಾಗಿ ಉಜ್ಜು. – ತಿಕ್ಕು : ಪರ್ವರಿಕೆಗಿಡದೆ ಕಲಿ ವಿಷಖರ್ಪರನದಿರಾಂತೊಡಾಂತು ಮಲಲಂ ತಳಮಂ ಮಾರ್ಪೊಸೆದು ತಳ್ತು ಕ[ಣ್ಣರಿ]ತರ್ಪನೆಗವುವಂ[ತೆ] ಸಿಂಹನಾದದಿನಾರ್ದಂ (ಶಂಕರಾ ೮-೩೬). [ಮಾರ್ (< ಮಾಱು$_2$) + ಪೊಸೆ$_1$]

**ಮಾರ್ಪೊಳಪು**, ಮಾರ್ಪೊಳೆಪು (ನಾ). ಪ್ರತಿಬಿಂಬ ; ಪಡಿನೆಳಲು : "ಮಾರ್ಪೊಳಪು ಪಡಿನೆಟಲ್ ಪ್ರತಿಬಿಂಬಮಕ್ಕು" (ಕಬ್ಬಿಗ. ೬೦) ; ಮಣಿಮುಕುರಭೂಮಿಯೊಳ್ ನಡೆವ ಪೌರವಧೂಪ್ರತಿಬಿಂಬದಂಬದಿಂ . . . ಜಡದ ಮಾರ್ಪೊಳಪಿಂ ರಮಣೀಯಮಾ ನೆಲಂ (ಚಾರಪು. ೦-೦೪೦) ; ಮದಗಜದ ಕರದ ಮಾರ್ಪೊಳಪಂ ನಿಜಸ್ವಚ್ಛತೆಯಿಂ ರಸಾತಳದಹಿ ಬಿಣ್ಗೆ ಕಾಣಿಪಂತೆ ಕಮನೀಯಮಾಗಿಯುಂ . . . ಆ ಪೆರ್ಪೊಳೆ . . . ರಂಜಿಸಿರ್ಪುದು (ರಾಜಶೇ. ೬-೨೪ ವ). **ಮಾರ್ಪೊಳೆಪು** : "ಮಾರ್ಪೊಳೆಪೆಂದು ಪಡಿನೆಟಲೆಂದುಂ ಪ್ರತಿಬಿಂಬಂ" (ಶಸಾ. ೭೦-೩೮೦) : ಉನ್ನದಶೃಂಗನಾದದಿಂದ ವಿರಳಪುಷ್ಪಭೂಜಮೆನೆವಂತಿರೆ ಚಂದ್ರಿಕೆ ಭೂಷಣಾಂಶುವಿಂ ಕವಿದಲಗಣ್ಣ ಮಾರ್ಪೊಳೆಪಿನಿಂ ವ್ಯದಃಗೇಯುದಿನೊಪ್ಪಲ್ (ಜಗ. ೨೬-೦೦೨) ; ಬಳಸಿದ ತಾರಗೆಗಳ ಮಾರ್ಪೊಳೆಪೊಂದಿದ ಪೊನ್ನ ಬೆಟ್ಟು ಕೈಯಿಂ ಕಾಲಿಂ ತಳೆದಿರ್ದು ದೆಂಬಿನಂ ಕಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ (ಕಬ್ಬಿಗಕಾ. ೦೩೩) ; ಲಲಿತಮೆನಿಪ್ಪ ನೀರಿಂ ಪೆಳೆದು ಸಮ್ಮುದ್ದಂಗಳಿದಿರೆಂದಾ ಪಸ್ಮಾವಳಿಗಳ್ ಮಾರ್ಪೊಳೆಪಿಂ ತಪ್ಪ ಕೆದೇವತೆಯರ್ಗೆ ಘಳಮನೀವವೊಲೆಸೆಗುಂ (ಚಾರಪು. ೦-೪೪). [ಮಾರ್ (<ಮಾಱು$_2$) + ಪೊಳಪು]

**ಮಾರ್ಪೊಳೆ** (ಕ್ರಿ). ಪ್ರತಿಬಿಂಬಿಸು : ಪ್ರತಿಫಲಿಸು : ಪೊಳೆವರುಣಾಂಶುವಿಂದೆಸೆವ ತನ್ನಯ ಮುಂಪಳಮಬ್ಬಿಯಲ್ಲಿ ಮಾರ್ಪೊಳೆವಿನೆಗಂ ಸರೋಜಸಖನೊಯ್ಯನೆ ಪೊರ್ದಿದನಸ್ತಶೈಲಮಂ (ಕಾದಂಪೂ. ೨೬೩); ಚಂದ್ರಕಾಂತಶಿಲಾತಳದೊಳ್ ಮಾರ್ಪೊಳೆವ ನಿಜಬಿಂಬಮಂ ಕಂಡು (ಗಿರಿ. ೦-೦೨೬ ವ); ಕೈಪಿಡಿಯಂ ಲೀಲೆಯಿಂ ದಿಟ್ಟಿಸಿ ಮಾರ್ಪೊಳೆವ ಮುದ್ದುಮೊಗಮಂ ಪಡಿಗೂಸುಗೆತ್ತು ತನಗೆ ತಂದೀವುದೆಂದು ಚಲದಿಂ ಮಱುಗುವ . . . ಕುಮಾರನೆನೆಗಪ್ಪನೆಂದಿಂಗೋ ಸಖೀ ! (ರಾಜಾಶ್ವ. ೮೯-೦).

[ಮಾರ್ (< ಮಾಱು$_2$) + ಪೊಳೆ$_1$]

**ಮಾರ್ಪೊಳೆಪು** 'ಮಾರ್ಪೊಳಪು' ನೋ.

**ಮಾರ್ಫತ** 'ಮಾರಿಫತ್ತು' ನೋ.

**ಮಾರ್ಫತು** 'ಮಾರಿಫತ್ತು' ನೋ.

ಕೆಯ್ವಾಸಿದಾಗಳ್ (ಶಂಕಥಾ. ೦೩-೩೩ ವ) ; ಓರ್ವನೆ ಧನ್ವಿಯೆನಲ್ ಸಕಲೋರ್ವರೆಯಂ ಕಾದು ತನ್ನ ಬಾಣದ ಪೊನೆಪೊಳ್ ಮಾರ್ವಲಮಂ ತವಿಸಿದಂ (ಶಂಠಾಹಪು. ೨-೬೨). **ಮಾರ್ಬಲ$_1$** ೨ ಒಡನೆಯುವರೊಂದೆ ಮಾರ್ಬಲವೆಡೆ ಮಡಗದೆ ಪೊಗುಟ್ಟಾಗಿ ತಳ್ತಿರ್ದು ಯುಶಂಬಡೆದಂ ಗೊಗ್ಗಿ (ಎಕ. XI. ಶಳ್ಳ. ೩-೯; ಸು. ೨೭೬); ನರರಿಂ ನರರಂ ಹರಿಯಿಂ ಹರಿಯಂ ವರೂಥಮಂ ತದ್ವರೂಥದಿಂದಿಟ್ಟಸುಪ್ಪುತ್ಕರಿಯಂ ಪಡಲಿಟ್ಟಂತಿರೆ ಮುರುತ್ಸುತಂ ಮೋದಿ ತವಿಸಿದಂ ಮಾರ್ಬಲಮಂ (ಗದಾಯು. ೩-೮); ರಥಮಾಷಿಗಳ ರುಧಿರದ ಕಡಲೊಳಧ್ದಿದನುದ್ಧಿದನು ಮಾರ್ಬಲದ ಗರ್ವಿತರ (ಉವ್ವ. ೨-೯೩). **ಮಾರ್ವಳ. ಮಾಱುಬಲ :** ಸರಳ ತೂಗುತ ಮಾಱುಬಲವನು ತಱುಬಿನಿಂದನು (ಉವ್ವಾಶೀ. ೩-೦೦). ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ.

**ಮಾರ್ಬಲಮಲ್ಲ** = ಶತ್ರುಸೈನ್ಯಕ್ಕೆ ಮಲ್ಲನಂತಿರುವವನು: ಒಂದು ಬಿರುದು : ಈಮುವರಾದಿತ್ಯ ಮಾರ್ಬ್ಬಲಮಲ್ಲ ಮುಱುಮುಂಕಪ್ಪಿರವ ಅಯ್ಯಣವುತ್ರ ನಾಗರಪಿನ್ನಾವಿಟ್ಟತ್ತು ಆಳುತ್ತಿಟ್ಟು (ಎಕ. VIII. ಸೊರಬ. ೯೦೩-೦೦: ೨೮೮). **ಮಾರ್ಬಲರಾಮ** = ರಾಮನಂತೆ ಶತ್ರುಪಡೆಯಿಂದ ಗೆಲ್ಲಲಶಕ್ಯನಾದವನು ; ಒಂದು ಬಿರುದು : ಚಾಮೊನ್ಯಚೂಡಮಣಿ ಚಿಮಕೊಳ್ಗಣ್ಣ ಸಮರೈಕಪಾತ್ರ ಮಾರ್ಬ್ಬಲರಾಮ ಶ್ರೀಮಾತ್ ಅರಕೆಲ್ಲ ಕೊಟ್ಟಕೆಲ್ಲಗವುಣ್ಡಬ್ಗ (ಪ್ಪ್ರಶು. ೦೯೩೨, ೩೭-೯; ಸು. ೨೮೦). **ಮಾರ್ವಳಭೀಮ** = ಶತ್ರುಪಡೆಗೆ ಭೀಮನಂತೆ ಭಯಂಕರನಾಗಿರುವವನು : ಒಂದು ಬಿರುದು : ಮಾರ್ವ್ವಳಭೀಮಂ (ಕೊಂಕಣ. ೦೯೩೯, ೨೦ಕಾಕ್ಷರ. ೩-೦೩ ; ೨೮೪). [ಮಾರ್ (< ಮಾಱು$_2$) + ಬಲ$_3$]

**ಮಾರ್ವಲ$_2$. ಮಾರ್ಬಲ$_2$** (ನಾ). ದೊಡ್ಡ ಪಡೆ : ಮಹಾಸೈನ್ಯ : ನಿಲ್ ವೈಕುಂಠನುದಗ್ರಕೋಪನದಟಿಂ ಮಾಕೊರ್ಂಡು ಮಾಱಾಂತ ಮಾರ್ವಲಮಂ ಬೆಂಕೊಳ್ (ಶೀಬಾಕೃ. ೩-೦೫೦) ; ಬಲಕ್ಕೆ — ಅಳ್ವಲ (ಅಳ್ಬಲ) . . . ಘೂಬಲ. ಮಾರ್ವಲ (ಶಹುದ. ೨೯೬ ಕ್ರ ಮೋ). **ಮಾರ್ಬಲ$_2$:** ಖೋಳಕಾಷ್ಮಕನ ಮಾರ್ಬಲವು ಆಲಿ ಬೊಬ್ಬಿರ್ದರಮನೆಯ ದ್ವಾರವ ಸೇರಿ ಮೇಲೆ ಹತ್ತಿದರು ಪೌಳಿಯನು (ಶಃಪಂಪಾ. ೫-೯೯) ; ಕೋಳಾಲ ಬಳಲಾಪುರ ಬೊಗಳೂರ ಭೂಪಾಲರು ಮಾರ್ಬಲಸಹಿತ ಮೋಳದೆ ತಿರುಮಲೇಶ್ವರನ ಕೂಟಕೆ ಬಂದಾಳಾಪವನೇನನೆಂಬೆ (ಕೆಂಪಪ. ೩-೩೦) : ಅಕಳಂಕಮನ್ಮಥ ಮಹಾರಾಯ ತವಕದಿಂದಮೀಮಾರ್ಬಲವನೊಡಗೊಂಡು ನಡೆತಂದ (ಪಪಮೋ. ೩-೫). [< ಮಹಾ+ ಬಲ$_3$]

**ಮಾರ್ವಲೆ** 'ಮಾರ್ಬಲೆ' ನೋ.

**ಮಾರ್ವಳ** 'ಮಾರ್ವಲ$_1$' ನೋ.

**ಮಾರ್ವಾಡಿ** 'ಮಾರವಾಡಿ' ನೋ.

**ಮಾರ್ಷ** (ನಾ). ಸಭ್ಯವಾದ ವ್ಯಕ್ತಿ : ಗೌರವಸ್ಥ. [ಸಂ.]

**ಮಾರ್ಷ್ಟಿ** (ನಾ). ೧. ಸ್ವಚ್ಛಮಾಡುವುದು : ಶುದ್ಧಮಾಡುವುದು. ೨. ಸುಗಂಧದ್ರವ್ಯಗಳ ಅನುಲೇಪನ : "ಸಮಾಲಂಭನಂ, ಚರ್ಚಾ, ಮಾರ್ಷ್ಟಿಃ — ಈ ೩ ಚರ್ಚೆ" (ಕಣಾಮು. ೬೯-೩೮೬). [ಸಂ.]

**ಮಾರ್ಸರಲ್** (ನಾ). (ಶತ್ರುವಿನ ಬಾಣಕ್ಕೆ) ಪ್ರತಿಯಾಗಿ ಬಿಡುವ ಬಾಣ : ಪಂಚಶರಂಗೆ ಮಾರ್ಸರಲದಾಗಿ ವಿಜೃಂಭಿಸುವುವು ನೀಳ್ದ ಕಣ್ಣಂಚಿನ ಕಾಂತಿಗೊಂದಿಸಿತು ಸಾವ್ಯವ ನೋಡಿಯೆನುತ್ತ ತೋರ್ಪ ಪೊಳ್ಪಿಂಚಿನ ಬಳ್ಳಿಯಂ ನೆಗಪಿ . . . ಸರೋರುಹಲೋಚನೆಯಾದ ಮೊಬ್ಬವಳ್ (ಅನ್ನ. ೦-೩೩). 'ಮಾರ್ಕೊರ್ಲ್' ಪರಾ. [ಮಾರ್ (< ಮಾಱು$_2$) + ಸರಲ್]

**ಮಾಲ, ಮಾಳ$_4$** (ನಾ). ೧. ಬಯಲು ; ಕ್ಷೇತ್ರ. ೨. ಎತ್ತರವಾದ ಪ್ರದೇಶ ; ದಿಬ್ಬ. ೩. ಹಳ್ಳಿಯ ಬಳಿಯಿರುವ ಕಾಡು. ೪. ಕಪಟ ; ಮೋಸ : "ಮಾಳ — ಮಾಲ = ಕಪಟ. ವಂಚನೆ" (ತರ್ಕಕೋ. ೩೫).

**ಮಾಳ$_4$ :** ೪. 'ಮಾಳಿಗ', 'ಮಾಳಿಡು' ಪರಾ. [ಸಂ.]

**ಮಾಲಕ$_1$** (ನಾ). ಹಳ್ಳಿಯ ಬಳಿಯಿರುವ ಕಾಡು.– ಅರಣ್ಯ. ೨. ಒಂದು ಬಗೆಯ ಮರ : ಬೇವು. ೩. ಹಾರ ; ಮಾಲೆ : ತುಲಸಿಮಾಲಿಕ ಬಿಲ್ವ . . . ಸುರಹೊನ್ನೆ ಶ್ಯಾವಂತಿಗೆಗಳ ರಾಮ ಕಲಶಕರ್ಚಿಸಿದ (ಅಶ್ವಂಅ. ೩-೭೩). ೪. ನೆಲದಾವರೆ. [ಸಂ.]

**ಮಾಲಕ$_2$** 'ಮಾಲಿಕ$_2$' ನೋ.

**ಮಾಲಕಾಂಗೋಣಿ** (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಎಣ್ಣೆಯ ಅಂಶವುಳ್ಳ ಅದರ ಬೀಜ : ಮಾಲಕಾಂಗೋಣಿ-ಸಣ್ಣಗಿಡ. ಔಷಧಕ್ಕೆ ಬರುತ್ತದೆ. ಕಟ್ಟಿಗೆ ತಕ್ಕಮಟ್ಟಿಗೆ ಗಟ್ಟಿ (ಕಶಾಗಿ. ೯೩).

[← ಹಿಂ. ಮಾಲಕಂಗನೀ. ಮಾಲಕಂಗುನೀ, ಮಾಲಕಗುನೀ ; ಮರಾ. ಮಾಲಕಾಂಗೋಣೀ, ಮಾಲಕಾಂಗುಣೀ]

**ಮಾಲಕಾರ** (ನಾ). ಹೂವುಗಳನ್ನು ಕಟ್ಟಿ ಮಾರುವವನು : ಹೂವಾಡಿಗ : ಲಂಜಿಗೇಸರಂ ದೇವರ್ಗೆ ಪೂಸಿಱುವ ಮಾಲ(ಲಾ)ಕಾರರ್ಗ್ಗೆ ಅರ್ಥವಿಸದಿ ಇತ್ತೊದಾನಬೀಷೊನ್ ಪಣ್ಣುಮಹಾಪಾತಕನಕ್ಕುಂ(ಕ್ಕುಂ) (ಎಇ. X. ೩೦-೩ ; ೯೭೮). 'ಮಾಲಗಾಱ' ಪರಾ. [☞ ಇದು ಸಂಸ್ಕೃತದ 'ಮಾಲಾಕಾರ' ಎಂಬುದರ ಅಪಲಿಖಿತ]

**ಮಾಲಕಿ** 'ಮಾಲ್ಕಿ' ನೋ.

**ಮಾಲಕುಮಿ** 'ಮಹಾಲಕ್ಕುಮಿ' ನೋ.

**ಮಾಲಗಣ್ಣು** 'ಮಾಲುಗಣ್ಣು' ನೋ.

**ಮಾಲಗಾರ** 'ಮಾಲಗಾಱ' ನೋ.

**ಮಾಲಗಾರ್ತಿ** (ನಾ). ಹೂವುಗಳನ್ನು ಕಟ್ಟಿ ಮಾರುವವಳು ; ಮಾಲೆಗಾತಿ : ಪೂಗಳನೊಪ್ಪೆ ಕಟ್ಟಿ ಪೊಸಮಾಲೆಯನೆತ್ತುವ ಮಾಲಗಾರ್ತಿಯರ್ (ದಕಳು. ೦-೯೦). [ಮಾಲಗಾಱ+ –ತಿ$_1$ (< –ಇತ್ತಿ)]

**ಮಾಲಗಾಱ. ಮಾಲಗಾರ. ಮಾಲಿಗಾಱ** (ನಾ). ಹೂವನ್ನು ಮಾರುವವನು ; ಹೂವಾಡಿಗ : ಉಱಿರ್ಲ್ಲಾಗೆ ಸಾಲೆ ಒಳರೇ ವ[ರ್ಣ್ಣ]ಸಿಗೆಯಿಯುದು ಮಾಲಗಾಱ ಶ್ರೀಮಾಂಜೇ ಮೂಟ ಇನಿಥೂ ಇರ್ಪ್ಪತ್ತಯ್ದು (ಕಇ. I. ೨-೦೯ ; ೮೮೦) ; ದೀವಿಗೆಗೆ [ಧಾರೆ?]ಯೆಣ್ಣೆಮಂ ಮಾಲುಗಾಱರಲ್ಲಿ ಒಕ್ಕಲ (ದೊಂಕಣ. ೦೯೯೦, ಹರಸನಾದು. ೩೬-೯ ; ೨೨೦). **ಮಾಲಗಾರ :** ಮಾಲಗಾರರು . . . ಲಿಂಗವಂತಧರ್ಮವನ್ನೇ ಪಾಲಿಸುತ್ತಾರೆ . . . ತೋಟಗಳಲ್ಲಿ ಹೂ. ಎಲೆ, ಫಲಗಳು ಮುಂತಾದವುಗಳನ್ನು ಬೆಳೆದು ಮಾರಾಟ ಮಾಡುತ್ತಾರೆ (ಕಶಾಗಿ. ೦೦೨). **ಮಾಲಿಗಾಱ :** ಸಾಲಿಗರಯ್ವದಿಂಬರುಂ ತೆಲ್ಲಿಗನರ್ಕ್ಲಱಿರ್ಪ್ಪದಿಂಬರುಂ ಮಾಲಿಗಾಱ[ಱ್]ಯುವದಣ್ಬರು[ಂಪಂಚ ಮಠಸ್ಥಾ]ನಮುಮಿರ್ದ್ದ (ಸೌತಇ. XI-i, ೯೭-೨೭ ; 1062). 'ಮಾಲಕಾರ' ಪರಾ. [<ಮಾಲೆಗಾಱ./ಸಂ. ಮಾಲಾಕಾರ]

**ಮಾಲಗುಜಾರ** (ನಾ). ೧. ಸರ್ಕಾರಕ್ಕೆ ಕಂದಾಯವನ್ನು ಸಲ್ಲಿಸುವವನು. ೨. ರೈತರಿಂದ ಕಂದಾಯವನ್ನು ವಸೂಲು ಮಾಡಿ ಸರ್ಕಾರಕ್ಕೆ ಸಲ್ಲಿಸುವ ಅಧಿಕಾರವನ್ನು ಹೊಂದಿದ್ದ ಮಧ್ಯಪ್ರದೇಶದ ಒಂದು ಜಮೀನ್ದಾರೀವರ್ಗ ಮತ್ತು ಆ ವರ್ಗಕ್ಕೆ ಸೇರಿದವನು : ನಮ್ಮ ವರ್ಹಾಡ—ನಾಗಪುರಗಳ ಕಡೆಗೆ 'ಮಾಲಗುಜಾರ'ರೆಂದು ಇರುತ್ತಾರೆ (ಜ್ಞಾಸುಶಾ. ೦೦).

[←ಪಾರ. ಮಾಲ್ಗುಜಾರ್ ; ಮಾಲ್ಗುರ್ಝಾರ್ ; ಹಿಂ. ಮಾಲಗುಜಾರ್ ; ಮರಾ. ಮಾಲಗುಜಾರ್. ಮಾಲಗುರ್ಝಾರ್]

**ಮಾಲಗುಜಾರಿ, ಮಾಲ್ಗುಜಾರಿ** (ನಾ). ೧. ಕಂದಾಯ. ೨. ಕಂದಾಯವನ್ನು ವಸೂಲು ಮಾಡುವ ಅಧಿಕಾರಿ : ಮೂರುಜಿಲ್ಲೆಗಳ ತಾಲೂಕದಾರರ ಅಭಿಪ್ರಾಯಗಳೊಡನೆ ಇಮಾದ್‌ಜಂಗ ಸುಭೇದಾರನು ತನ್ನ ಅಭಿ

ಪ್ರಾಯವನ್ನು ಸರಕಾರಕ್ಕೆ ತಿಳಿಸಲು, ಸುಭೇದಾರನ ಅಭಿಪ್ರಾಯಕ್ಕೆ ಮಾಲಗುಜಾರಿಯವರು ಒಪ್ಪಿಗೆಯಿತ್ತರು (ಕರ್ಣಾಸಂ. ೨೦೩). **ಮಾಲ್ಗುಜಾರಿ :** ಇಮಾದ್‌ಜಂಗಬಹದೂರ ಸುಭೇದಾರನು ತನ್ನ ಅಭಿಪ್ರಾಯವನ್ನು ಮೇಲಧಿಕಾರಿಗಳಾದ ಮಾಲ್ಗುಜಾರಿಯವರಿಗೆ ತಿಳಿಸಿದನು (ಕರ್ಣಾಸಂ. ೨೦೩). [←ಪಾರ. ಮಾಲ್ಗುಜಾರೀ, ಮಾಲ್ಗುಝಾರೀ ; ಹಿಂ. ಮಾಲಗುಜಾರೀ ; ಮರಾ. ಮಾಲಗುಜಾರೀ, ಮಾಲಗುಝಾರೀ]

**ಮಾಲತಿ,** ಮಾಳತಿ (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು ; ಜಾಜಿ : "ಮಾಲತಿಯೆನಲ್ ಜಾಜಿಯಕ್ಕು" (ಶಬ್ದಗಣ. ೩೬-೨೦) ; ದಂಡೆಗಟ್ಟಿದ ಮಾಲತಿಯ ಮುಗುಳ ವನಮಾಲೆಗಳುಮುಂ ಬೇಜ್‌ವೇಜ್ ನೋಡಿ (ಶಗಪು. ೬-೦೩೮) ; ಕಲ್ಲಿಡಹೆ ಸೊಂದಳೆಂದು ಮಾಜುಗಿಯುಂ ನಿಲೆ ಸಂದುಂ ಪೋಗೆ ಪೋಗಿಯುಂ. ನೆಗೆ ನಕ್ಕುಂ ಉಪಚರಿಸಿದೆ ನೀನೀಗಳ್ ಎಂತು ಕಲ್ಪನನಾಗಿ ಮಾಲತಿಯಂ ಮೆಕ್ಕೆಯಿಂ ಸಿಂಗರಿಸಿದಯ್ ! (ರಾಜಶ್ರ. ೩೬-೨೪). **ಮಾಳತಿ :** "ಮಾಳತೀ ಜಾತೀ — ಈ ೨ ಜಾದಿ" (ಕಣಾಯು. ೩೪-೩೩) ; ಮಾಳತಿಯೊಳ್ ಬಂಡುಂಡ ಮದಾಳಿಯನಳಿಮಾಲೆ ಎಚಿಗಿ ಬಂಡುಣ್ಬಪೊರೀ ನೀಳಾಳಕಿಯೊಳ್ ಬೆರೆಸಿದ ಪೆಳೆಸ ವಿಟರೆಯ್ದಿ ಸೋಂಕೆ ಸುಖಿಯ್ಯಾಗಿರ್ಪರ್ (ಗಂಕ. ೩-೦೩೨). [ಸಂ. ಮಾಲತೀ]

**ಮಾಲದಿ** 'ಮಾಲದೀ' ನೋ.

**ಮಾಲದೀ,** ಮಾಲದಿ, ಮಾಲೀದಿ (ನಾ). (ಉಕ) ತುಪ್ಪದಲ್ಲಿ ಕರಿದ ಪೂರಿಯನ್ನು ಪುಡಿಮಾಡಿ, ಪಾಕದಲ್ಲಿ ಹಾಕಿ ಕಟ್ಟುವ ಒಂದು ಬಗೆಯ ಉಂಡೆ : ನನಗ ಮಾಲದೀ ಅಂದರ ಭಾಳ ಪ್ರೀತಿ (ಅಕಣಾ. ೬೩). **ಮಾಲದಿ :** ಮಾಲದಿಯ ಸವಿ ಮರೆತು, ಅವಳ ಅಧರದ ರಸದ ರುಚಿಯನ್ನು ಸವಿದರು (ಅಕಣಾ. ೯೬). **ಮಾಲೀದಿ :** ನೀ ಏನೋ ಇಂದ ಮಾಲೀದಿ ಮಾಡೀ ಅಂತ ನಿನ್ನ ಗಂಡ ಹೇಳಿವ (ಅಕಣಾ. ೬೩). [←ಪಾರ. ಮಾಲೀದಹ್; ಹಿಂ. ಮಾಲೀದಾ, ಮಲೀದಾ ; ಮರಾ. ಮಾಲದೀ]

**ಮಾಲಪುವಾ** (ನಾ). (ಹೋಳಿಗೆಯಂತಿರುವ) ಒಂದು ಬಗೆಯ ಸಿಹಿ ತಿಂಡಿ : 'ಮಾಲಪುವಾ', ಐದಾಮು ಮುಂತಾದುವುಗಳನ್ನು ತಿನ್ನುವದರಿಂದ, ಹೋದ ವೀರ್ಯವು ತಿರುಗಿ ಬರುವದೆಂದು ವಿಷ್ಣೋ ಮೂರ್ಖರ ತಿಳಿವಳಿಕೆಯಿದೆ (ಶ್ರೀಕೃಕೀ. ೦೩೬). [←ಹಿಂ. ಮಾಲಪೂಆ, ಮಾಲಪೂವಾ; ಮರಾ. ಮಾಲಪುವಾ, ಮಾಲಪುಹಾ, ಮಾಲಪುಆ, ಮಾಲಪೋಹಾ]

**ಮಾಲಮತ್ತೆ,** ಮಾಲುಮತ್ತೆ (ನಾ). ಆಸ್ತಿ ; ಸ್ವತ್ತು : ವಿಶ್ವಾಸನ ಮುತ್ತಜ್ಜ ಲಚ್ಚಪ್ಪ . . . ನಮ್ಮೂರಿನ ಪೇಶ್ವೆ ಜಮೀನಿನ, ಮಾಲಮತ್ತೆಯ ಸರ್ವ ವ್ಯವಹಾರದ ಪಟ್ವಾರಿಕೆಯ ಅಧಿಕಾರಸೂತ್ರ ಪಡೆದು ಇಲ್ಲಿಗೆ ಬಂದವರು (ದೀಕತ. 1. ೦೦). **ಮಾಲುಮತ್ತೆ :** ಎಲ್ಲರ ಹೃದಯದಿಂದಲೂ ಉದ್ಭವಿಸಲಿಳಿಸುವ ನಾಳಿನ ದೈವೀಜೀವನಕ್ಕೆ ಅನೇಕ ನಾಗರಿಕತೆಗಳ ಹಾಗು ಭಿನ್ನಸಂಸ್ಕೃತಿಗಳ ಉಜ್ವಲವಾದ ಪೇಟೆಯು ಮಾಲುಮತ್ತೆಯನ್ನು ಪೂರೈಸುವ ಸಿದ್ಧತೆಯಲ್ಲಿರುವುದು ಇದಕ್ಕಿಂತ ಹೆಚ್ಚಿಗೇನೂ ಇಲ್ಲವೆಂಬಂತೆ ತೋರುವುದು (ಶ್ರೀಅಂ. ೦೦). [←ಅರ. ಮಾಲ್‌ಮತಾಆ ; ಹಿಂ. ಮಾಲಮತ್ತಾ, ಮಾಲಮತಾ ; ಮರಾ. ಮಾಲ್‌ಮತ್ತಾ]

**ಮಾಲಲ್ಲೆ** (ನಾ). (?) : ಮಾರಿಬೆಜೆತಿಯಿಂ ಬಡಗಣ ಮಣ್ಣು ಮೊಳೆವೆಡೆ ಏಟ್ಟಿಣ್ಣಂಗಂ ಮಾಲಲ್ಲೆಯ ಮಣ್ಣು ಮೊಳೆವೆಡೆ ಮೂಗಣ್ಣಂಗಮೂಮಿ ಮ್ಮೇಗುಂಬಳ ಬಟ್ಟಿಬೆಮ ಸಲ್ವುದು (ಎಕ. IV (ii). ಎಳಂದೂ. ೦೭೪-೫ ; ಶು. 10 ಶತು ಕತ). [ ? ]

**ಮಾಲವಕೈಶಿಕ** (ನಾ). [ಸಂಗೀತ] ಒಂದು ರಾಗದ ಹೆಸರು : ಯಾವುದರಲ್ಲಿ (ಮೊದಲ ಪಾದದ) ಎರಡು ಖಂಡಗಳು (ರಚಿತವಾಗಿವೆಯೋ) ಅದು ನಂದಾವತೀ ಎನ್ನಿಸಿಕೊಳ್ಳುತ್ತದೆ. ಇವರಲ್ಲಿ ತಾಳವು ಪ್ರತಿತಾಳವೆಂಬುದು ; ರಾಗವು ಮಾಲವಕೈಶಿಕ (ತತುಶ್ರ. ೦೨೩). [ಸಂ.]

**ಮಾಲವಗೌಲ,** ಮಾಳವಗೌಳ (ನಾ). [ಸಂಗೀತ] ಒಂದು ರಾಗದ ಹೆಸರು : ಮಾಲವಗೌಲವೆಂಬುದು (ತv) ಪೂರ್ಣ : ಸ_ಗ್ರಹ ; ಯಾವಾಗಲೂ ಹಾಡಲ್ಪಡುತ್ತದೆ (ತತುಶ್ರ. ೦೩೪). **ಮಾಳವಗೌಳ :** ಕರ್ಣಾಟಗೌಳ . . . ಮಾಳವಗೌಳ . . . ದ್ರಾವಿಡಗೌಳವೆಂಬೀಳಂ ಉಪಾಂಗಗೌಳರಾಗಂಗಳು (ಛೇಕ. ೨೩೪). [ಸಂ.]

**ಮಾಲವಪಂಚಮ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾಲವಪಂಚಮವು (೨೪) (ಸಂ)ಪೂರ್ಣ, ಆರೋಹದಲ್ಲಿ ಧ– ವನ್ನು ಬಿಟ್ಟಿದೆ; ಷಡ್ಜಗ್ರಹವನ್ನು ಕೂಡಿಕೊಂಡಿದೆ. ಎಲ್ಲ ಕಾಲಗಳಲ್ಲಿಯೂ ಹಾಡಲ್ಪಡುತ್ತದೆ (ತತುಶ್ರ. ೦೩೩). [ಸಂ.]

**ಮಾಲವಶ್ರೀ,** ಮಾಳವಶ್ರೀ (ನಾ). [ಸಂಗೀತ] ಒಂದು ರಾಗದ ಹೆಸರು : ಮಾಲವಶ್ರೀ ರಾಗವು (೨೩) ಷಾಡವವಾಗಿದೆ ; ರಾಗಾಂಗ ; ರಿಷಭವನ್ನು ಬಿಟ್ಟಿದೆ (ತತುಶ್ರ. ೬೦). **ಮಾಳವಶ್ರೀ :** ಮಧು ಮಾಧವೀ . . . ಮಾಳವಶ್ರೀ . . . ಕರ್ಣಾಟ ಬಂಗಾಳವೆಂಬಿಪ್ಪತ್ತು ರಾಗಂಗಳೇ ರಾಗಾಂಗದಿಂದುದಿಸಿದವು (ಅಭಿಕ. ೨೩೩). [ಸಂ.]

**ಮಾಲವ್ಯ** (ನಾ). ಪ್ರಮಾಣಕ್ಕೆ ಅನುಸಾರವಾಗಿ ವಿಂಗಡಿಸಿರುವ ಐದು ಪ್ರಕಾರದ ಮನುಷ್ಯಜಾತಿಗಳಲ್ಲಿ ಒಂದು : ವರಾಹಮಿಹಿರನು ಮನುಷ್ಯರನ್ನು ಶರೀರದ ಅಳತೆ ಆಕಾರದ ಮೇಲೆ, ಐದು ಜಾತಿಗಳನ್ನಾಗಿ ವಿಂಗಡಿಸುತ್ತಾನೆ. ಹಂಸ, ಶಶ, ರುಚಕ, ಭದ್ರ, ಮಾಲವ್ಯ—ಎಂಬುದೇ ಈ ಐದು ಜಾತಿಗಳು (ಭಾರಚ. ೩೦೭). [ಸಂ.]

**ಮಾಲಾಕಂದ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಗಡ್ಡೆ : "ಆವಲಿಕಂದಃ – ಮಾಲಾಕಂದ" (೬೩೦. ೦೨). [ಸಂ.]

**ಮಾಲಾಕಾರ,** ಮಾಳಾಕಾರ (ನಾ). ಮಾಲೆಗಾರ ; ಹೂವಾಡಿಗ : "ಮಾಲಾಕಾರಃ, ಮಾಲಿಕಃ – ೨ ಹುವ್ವಾಡಿಗನ ಹೆಸರು" (ಸಿದ್ಧಾಂತಿ. ೩೦೯) ; ಇಂತೆಸೆವ ಮಾಲಾಕಾರವಧೂಜನಂಗಳಿಂ ಚೆಲ್ವುವೆತ್ತು ಪಲ್ಲವೋಲ್ಲಸಿತಮಪ್ಪ ಗಾಣಿಕ್ಯಸದನಪಂಕ್ತಿಗಳೊಳ್ . . . ಗುರುನಿತಂಬೆಯರ್ ಸೊಗಯಿಸುವರ್ (ಶಗಪು. ೨-೨೯ ವ) ; ಚತುರಶವಿಮೂಡಮ ಸತ್ಕೃತಿವೇಟ್ಟುದು ತನಗಮಿತರ ಜನಕಂ ಸುಮನಃಸ್ಥಿತಿವಾಸನೆಬಡದಿರೆ ಸನ್ನುತವಾಲೆಯನೆತ್ತುವಂತೆ ಮಾಲಾಕಾರಂ (ರರ್ಜುನಾ. ೦-೯೩). **ಮಾಳಾಕಾರ :** "ಮಾಳಾಕಾರಃ, ಮಾಲಿಕಃ, ಪಾರಿಹಾರಿಕಃ – ಈ ೩ ಮಾಲೆಗಾಱಂ" (ಕಣಾಯು. ೯೬-೯೩೩) ; ಸೌರಭಚಯಂ ಸುಯ್ಯಂಚಿನಿಂದಾವಗಂ ದಳವೇಱುತ್ತಿರೆ ಪೂತ ಜಂಗಮಲತಾಸಂದೋಹಮೆಂಬಂತೆ ಚಣ್ಣೊಳಸುತ್ತಿರ್ಪುದು ಮಾಲೆವೂದಳೆದ ಮಾಳಾಕಾರನಾರೀಜನಂ (ಕಂಪ್ರಪು. ೦-೦೩೨). [ಸಂ.]

**ಮಾಲಾದೀಪಕ** (ನಾ). [ಕಾವ್ಯಮೀ]ಒಂದು ಬಗೆಯ ಅರ್ಥಾಲಂಕಾರ ; ದೀಪಕ ಮತ್ತು ಏಕಾವಳಿ ಅಲಂಕಾರಗಳ ಲಕ್ಷಣಗಳು ಒಟ್ಟಿಗೆ ಸೇರಿ ಆದ ಅಲಂಕಾರ : ದೀಪಕಲಕ್ಷಣಂ ಏಕಾವಳೀಲಕ್ಷಣಮುಮೊಂದು ವೆರೆದಿರೆ ಮಾಲಾದೀಪಕವೆನಿಪುದು (ಅಪ್ರತಿ. ೯೬-೦೭) ; ದೀಪಕೈಕಾವಳಿಯು ಕೂಡಿಸಿ ಪೇಳೆ ಮಾಲಾದೀಪಕಾಲಂಕಾರವು (ಕುವಲ. ೯೯-೦). [ಸಂ.]

**ಮಾಲಾಪ್ರಸವ** (ನಾ). [ಜ್ಯೋತಿ] ಮಾಲಾಯೋಗದಲ್ಲಿ ಹುಟ್ಟಿದವನು : ಸುಖಸಮೇತನೆನಿಕುಂ ಮಾಲಾಪ್ರಸವನರಂ (ಜಾತತಿ. ೦೩-೦೯). [ಸಂ.]

**ಮಾಲಾಯೋಗ** (ನಾ). [ಜ್ಯೋತಿ] ಮೂರು ಕೇಂದ್ರಸ್ಥಾನಗಳಲ್ಲಿ ಮೂರು ಶುಭಗ್ರಹಗಳು ಇರುವ ಒಂದು ಯೋಗ : ಕ್ರೂರತ್ರಯ ವಿರೆ ಕೇಂದ್ರಾಗಾರತ್ರಿತಯದೊಳೆ ಸರ್ಪಯೋಗಂ ಕೇಂದ್ರಾಗಾರ ತ್ರಿತಯಮು ಗಳೊಳಕ್ರೂರತ್ರಯಮೊಂದಿದೇದು ಮಾಲಾಯೋಗಂ (ಜಾತತಿ. ೦೩-೯). [ಸಂ.]

**ಮಾಲಾರೂಪಕ** (ನಾ). [ಕಾವ್ಯಮೀ] ಒಂದು ಬಗೆಯ ರೂಪಕ : ವರ್ಣಿಸುವ ಒಂದು ವಿಷಯವನ್ನು ಅನೇಕ ಪ್ರಕಾರವಾಗಿ ನಿರೂಪಣ ಮಾಡುವುದು : ಮಾಲಾರೂಪಕಕ್ಕೆ : ಸಂಸಾರಕ್ಕೇಕಸಾರಂ ಬಿಡಿಯ ಕುಲಧನಂ . . . ಜಾಣ ಮೆಯ್ಪ್ ನಾಣ ಜೀವಂ ಮಾನಸಾಶೀನಿರ್ನಿರಿಂತ ಪ್ಪೆಳೆಯಳನಿಜಿಯಲ್ಕೆಂತು ನೀನೆತ್ತಿಕೊಂಡಯ್ (ಕಾವ್ಯಾವ. ೬೯೩) ; ವರ್ಣ್ಯವೊಂದನ್ನು ಅನೇಕಪ್ರಕಾರವಾಗಿ ನಿರೂಪಣವಾಡಿದ್ದಲ್ಲಿ ಮಾಲಾರೂಪಕ ವೆನ್ನಿಸಿಕೊಳ್ಳುವುದು (ಕೃಬಿಂ. ೫೬೪). [ಸಂ.]

**ಮಾಲಾರ್ಪಣ** (ನಾ). (ಗೌರವಾರ್ಥವಾಗಿ) ಹಾರವನ್ನು ಅರ್ಪಿಸು ವಿಕೆ : ಸಮಾರಂಭದ ಕಡೆಯಲ್ಲಿ ಕಾರ್ಯದರ್ಶಿಗಳು ಅತಿಥಿಗಳಿಗೆ ಮಾಲಾರ್ಪಣ ಮಾಡಿದರು (ಕೂ೩). [ಸಂ.]

**ಮಾಲಾರ್ಪಣೆ** (ನಾ). = **ಮಾಲಾರ್ಪಣ** : ಕೆಲವು ಸಮಾರಂಭಗಳಲ್ಲಿ ಅತಿಥಿಗಳಿಗೆ ಮಾಲಾರ್ಪಣೆ ಮಾಡುವುದರ ಬದಲು ನೆನಪಿಗಾಗಿ ಕೆಲವು ಪುಸ್ತಕಗಳನ್ನು ನೀಡುವ ವಾಡಿಕೆಯಿದೆ (ಕೂ೩). [ಸಂ. ಮಾಲಾರ್ಪಣ]

**ಮಾಲಾವೃತ್ತ**, ಮಾಳಾವೃತ್ತ (ನಾ). [ಛಂದ] ಒಂದು ವೃತ್ತದ ಹೆಸರು; ☞ ಇಪ್ಪತ್ತಾರು ಅಕ್ಷರಗಳ 'ಉತ್ಕೃತಿ' ಎಂಬ ಛಂದೋರೂಪದಿಂದ ಮುಂದಕ್ಕೆ ಹೆಚ್ಚು ಅಕ್ಷರಗಳುಳ್ಳ ಕೆಲವು ವೃತ್ತಗಳನ್ನು ಒಟ್ಟುಗೂಡಿಸಿ ಅವುಗಳನ್ನು 'ಮಾಲಾವೃತ್ತ'ಗಳೆಂದು ಒಟ್ಟಾಗಿ ಹೆಸರಿಸಿರುವುದು ಪ್ರಾಚೀನ ಛಂದೋಗ್ರಂಥಗಳಲ್ಲಿ ಕಂಡುಬರುತ್ತದೆ. ಇವುಗಳಲ್ಲಿ ಒಂದನ್ನು ಮಾಲಾವೃತ್ತವೆಂದು ಬೇರೆಯಾಗಿ ಗುರುತಿಸಿರುವುದೂ ಕಂಡುಬರುತ್ತದೆ. ಇದು ದಂಡಕವೆಂಬ ರಚನೆಯನ್ನು ಸ್ವಲ್ಪಮಟ್ಟಿಗೆ ಹೋಲುತ್ತದೆ ಎನ್ನಬಹುದು : ಮದಪದಿಭಗಮನೆ . . . ಮಾಲಾವೃತ್ತದ ಪಾಂಗನೆಯ್ದು ಕೇಳ್ (ಛಂದೋಂಬು. ೩-೨೦೩). **ಮಾಳಾವೃತ್ತ** : ಅವಜಂ ಪೊಡಿಗೆ ಮಾಳಾವೃತ್ತ ದಂಡಕಂಗಳ್ ಮಾತ್ರಾನಿಯಮಸ್ಕಂಧಕಾದಿಜಾತಿಗಳೆಂಬಿವಕ್ಕಂ (ಛಂದೋಂಬು. ೧-೯೬ ೭). [ಸಂ.]

**ಮಾಲಿ**, ಮಾಳಿ, (ನಾ). ೧. ಮಾಲೆಯನ್ನು ಧರಿಸಿದವನು : ಹಾರವನ್ನು ಧರಿಸಿದವನು. ೨. ಹೂವಾಡಿಗ : ಮಾಲೆಗಾರ : "ಮಾಲಾಕಾರಂ (ಮಾಲಿ)" (ಪಸ್ತುಕೋ. ೬೧-೬೪) ; ಬಿರಿವ ಮುನ್ನವೆ ಉದುರಿಹೋದ ಮೊಗ್ಗುಗಳೆನಿತೊ ಬಿರಿದು ಮಾಲಿಯ ಕೈಗೆ ತುತ್ತಾದುವೆನಿತೋ! (ಕರುಪ್ರ. ೦೫-೬) ; ಮಾಲಿ ಹೂವು ಸರಪರಾಜು ಮಾಡುತ್ತಾನೆ (ಬಿಂಧ. 11, ೦೯೬). ೩. ತೋಟದ ವ್ಯವಸಾಯವನ್ನು ಮಾಡಿ. ಮೇಲ್ವಿಚಾರಣೆ ನೋಡಿ ಕೊಳ್ಳುವವನು ; ತೋಟಗಾರ : ತೊಳಗುತಿಪ ತೋಟದಲಿ ತೆರತೆರ ಗುಲಾಬಿಹೂ . . . ನೋಡಿಕೊಳ್ಳಲು ಮಾಲಿ ! (ಕುಚೀಕ. ೬-೭) ; ನೀನು ನಿನ್ನಯ ಮಾಲಿಯೊಂದಿಗೆ ಮರಳಿ ಬಾ ಈ ತೋಟಕೆ (ತಂಪ್ರವಾ. ೪೦-೩). ೪. ದೇವರ ಪೂಜೆಗೆ ಹೂವನ್ನು ಒದಗಿಸುವ ದೇವಸ್ಥಾನದ ಒಂದು ಪರಿಚಾರಕವರ್ಗ ಮತ್ತು ಆ ವರ್ಗಕ್ಕೆ ಸೇರಿದ ವ್ಯಕ್ತಿ : ದೇವಸ್ಥಾನದ ಸೇವಕರು (Temple servants) ಅಂಬಲವಾಸಿ, ಬರಿಯ, ದೇವಡಿಗ, ದೇವಾಳಿ, ಮಾಲಿ . . . ಸ್ಥಾನಿಕ, ಪಾರಿಯನ್ (ತುಳುವಾ. ೦೭೩). **ಮಾಳಿ**₁ : ೩. 'ನಾನು' ಒಕ್ಕಲುತನ ಮಾಡುತ್ತೇನೆ . . . ಗೋವಳ, ತಳವಾರ, ಮಾಳಿ, ಸಿಪಾಯಿಯಾಗಿ ಕೆಲಸಮಾಡುತ್ತೇನೆ (ವಚಸಂ. XXVI. ೭ನೆ ಶ್ರವೇಶ) ; ನನ್ನನ್ನು ಎಚ್ಚರಿಸಿದವನು ತೋಟದ ಮಾಳಿ (ಹೇಮಂಕ. ೦೭೩). [ಸಂ. ಮಾಲಿನ್]

**ಮಾಲಿಕ**₁ (ನಾ). ೧. ಹೂವಿನಲ್ಲಿ ವ್ಯವಹರಿಸುವವನು : ಹೂವಾಡಿಗ : ಮಾಲೆಗಾರ : "ಮಾಳಾಕಾರಃ, ಮಾಲಿಕಃ, ಪಾರಿಹಾರಿಕಃ —ಈ ೩ ಮಾಲೆಗಾರಂ" (ಪಚಾಮು. ೯೬-೯೩೩) ; ಬರವಿತ್ತು ಮಾಲಿಕಂಗಾ ನಳಿನೇಕ್ಷಣಂ ತಳರ್ದನುತ್ಸವದಿಂ (ಜಗಬ. ೬. ೦೭). 'ಕುಸುಮಮಾಲಿಕ' ನೋ. ೨. ತೋಟಗಾರ. [ಸಂ.]

**ಮಾಲಿಕ**₂, ಮಾಲಕ₂, ಮಾಲೀಕ (ನಾ). ಯಜಮಾನ : ಒಡೆಯ : ಈ ಗಿರಿಣಿಯ ಮಾಲೀಕರು ಹೆಗ್ಗಡೆಗಳು, ಅತ್ಯಾಚಾರಿಗಳು (ಚಾರು. ೭೬) : ಚಂದ್ರಣ್ಣ ಆ ಊರಿನ ಜಮೀನುದಾರ. ಐವತ್ತು ಎಕರೆ ತೋಟದ ಮಾಲಿಕ (ವಸ್ತುಓ. ೨೨). **ಮಾಲಕ**₂ : ಮಾಲಕ ಮನೆಯಲ್ಲಿಲ್ಲ ಅಂತಾ ಮೊದಲೇ ಏಕೆ ಹೇಳಲಿಲ್ಲ? (ತಂಜುರಿ. ೯೩) ; ಇದು ನವಾಬನ ಸಂಪತ್ತಿಯು, ಅವನೇ ಇವರ ಮಾಲಕನು (ಮಂದಾಕ. ೭೬). **ಮಾಲೀಕ** : ರೈಲ್ವೆರಸ್ತೆಗಳಲ್ಲಿ ರೈತರು ದನಗಳನ್ನು ಬಿಟ್ಟರೆ ಹಾಗೆ ಬಿಟ್ಟಂಥಾ ದನಗಳ ಮಾಲೀಕರನ್ನು ಪತ್ತೆಮಾಡಿಕೊಡುವುದು ಗ್ರಾಮಾಧಿಪತಿಯ ಕರ್ತವ್ಯವಾಗಿರುವುದು (ಗ್ರಾಪಾಜಕ. ೦೫೬) ; ನಾನೇ ನೆರೆಯ ಜಮೀನಿನ ಮಾಲೀಕ (ಕುಬುದು. ೨೬೨).

[ ←ಅರ. ಪಾರ. ಹಿಂ. ಮಾಲಿಕ್ : ಮರಾ. ಮಾಲಿಕ್ ]

**ಮಾಲಿಕೆ** (ನಾ). ೧. ಹೂವುಗಳನ್ನು ಸೇರಿಸಿ ಕಟ್ಟಿದ ಮಾಲೆ ; ಹಾರ : ಅಖಿಳಶಿವಭಕ್ತಪುಂಗವರ ನಿರ್ಮಾಲ್ಯಕುಸುಮಪುಂಜಂಗಳಂ ಮಾಲಿಕೆಗಳಂ ರಚಿಸಂಗದಲ್ಲಿ ನೆಜಿಕಿ ಸುತ್ತಿ ಮತ್ತೆಯು ವೇಮಗುರುಮೂರ್ತಿ . . : ವಂದಿಸುತ (ಬಸಪು. ೯೬-೬೨) ; ಶಿವಪೂಜೆಗಳಪಟ್ಟ ಕುಸುಮಂ ಬೇಜಾಯ್ತು ತವೆ ಬಹುವಿಚಿತ್ರತರಮಾಲಿಕೆಗಳಂ ಸವೆದು (ರಾಜಶೇ. ೦೦-೩೬ ೮೧೪). ೨. ಕೊರಳಿನಲ್ಲಿ ಧರಿಸುವ ಆಭರಣ : ಸರ. ೩. ಸಾಲು ; ಪಂಕ್ತಿ. ನಮ್ಮ ದೇಶವು ಉನ್ನತಸ್ಥಿತಿಗೆ ಬರುವುದು ; ಜಗತ್ತಿನ ಪ್ರಮುಖ ರಾಷ್ಟ್ರಗಳ ಮಾಲಿಕೆಯಲ್ಲಿ ಸೇರುವುದು (ಉಕ್ಕಶ್ರ. ೦೪). ೪. ಒಂದು ಬಗೆಯ ಜಾಜಿ. ೫. ಸಣ್ಣ ಬಳದಿರುವ ಅರಮನೆ ; ಸೌಧ. ೬. ಐವತ್ತು ನಾಲ್ಕು ಬಗೆಯ ಮಂತ್ರಸಾಧನಗಳಲ್ಲಿ ಒಂದು : ಷಡಾಮ್ನಾಯ ಮೂಲ ಗುರುಪರಂಪರೆ . . . ಪಂಜರ ಮಾಲಿಕೆ ಮಾಲಿಕೆ ತಂತ್ರಬಲಿ ಆತ್ಮೈಕ್ಯಗಳೆಂಬ ಪಂಚಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (೭ಬೇಳ. ೬೦). [ ಸಂ. ಮಾಲಿಕಾ]

**ಮಾಲಿಖಾನೆ** (ನಾ). ಅಧಿಕಾರವನ್ನು ಕಳೆದುಕೊಂಡ ರಾಜ, ಜಮೀನುದಾರ ಮುಂತಾದವರಿಗೆ ಕೊಡುವ ಮಾಸಾಶನ ಅಥವಾ ವರ್ಷಾಶನ: ಬಂಗರಾಜನಿಗೆ ಬ್ರಿಟಿಷರು ಮಾಲಿಖಾನೆಯನ್ನು ಕೊಟ್ಟು ಇರಿಸಿದ್ದರು (ವಕಹ. ೨೪) ; ತಿಂಗಳು ತಿಂಗಳು 'ಮಾಲಿಖಾನೆ' ಯನ್ನು ಕಳುಹಿಸುವುದರಿಂದ ನಾನು ಚಿರಂಜೀವಿಯಾಗಿರಬೇಕು (ಮೂವುಳ. ೨).

[←ಪಾರ. ಮಾಲಿಕಾನಹ್ : ಹಿಂ. ಮಾಲಿಕಾನಾ./ತುಳು. ಮಾಲಿಕಾನ್]

**ಮಾಲಿಗ** (ನಾ). ಮಾಲೆಯನ್ನು ಕಟ್ಟುವವನು. — ತಯಾರಿಸುವವನು : ಮಾಲೆಯಂ ಮಾಡುವಂ. ಮಾಲೆಗಾಜಂ . . . ನ ವಿನೋದಾರ್ಥಂ ಮಾಲಾ ಕುರ್ವನ್ ತತ್ರ ತು ಮಾಲಿಗ ಇತಿ ಪೂರ್ವೇಣ ಇಗ ಪ್ರತ್ಯಯ ಏವೇತಿ (ಶಬ್ದಾನು. ೪೦೦ ವ್ಯಾಖ್ಯಾ). [ಮಾಲೆ + — ಇಗ]

**ಮಾಲಿಗಾಜಿ** 'ಮಾಲಗಾಜಿ' ನೋ.

**ಮಾಲಿಗೆವುಂಟಗೆ** ? (ನಾ). (?) : ಕಂಕುಮಹೋತ್ಸವಂ ರತಿಯ ನೋಂಪಿ ವಸಂತ ನೃಪಾಲಪೂಜೆಯೊಡ್ಡಂತಿಯಪೂರ್ವದಾನತಿಥಿ ಮಾಲಿಗೆ ವುಂಟಗೆ (?) ಜನ್ಮತಾರೆಯೆಂದಿಂತತಿಕೀರ್ತಿಯಂ ಪ್ರತಿದಿನಂ ತನಗಾಂ ಮಿಗೆ ಮಾಡಿದಳ್ಳಿ ದುಃಖಂ ತಲೆದೋರ್ಪಪೋಲ್ ಮುನಿದು ಬಂದಪಲ್ಲಿಗೆ ದೀಕ್ಷೆಗೋಸುಗಂ (ದಕಶ. ೬-೦೭). ☞ ಇಲ್ಲಿ ಎರಡು ಪದಗಳಿರಬಹುದೆ ? [ ? ]

**ಮಾಲಿನಿ** (ನಾ). ೧. ಹೂವನ್ನು ಮಾಲೆಯಂತೆ ಕಟ್ಟಿ ಮಾರುವವಳು : ಹೂವಾಡಗಿತ್ತಿ. ೨. ಹಾರವನ್ನು ಧರಿಸಿರುವವಳು. ೩. ದುರ್ಗೆಯ ಒಂದು ರೂಪ. ೪. (ದುರ್ಗೆಯ ಪರಿಚಾರಕವರ್ಗಕ್ಕೆ ಸೇರಿದ) ಹೆಣ್ಣುಪಿಶಾಚಿ : ಈಗಳೆ ಕೊಂದು ಪೋಬುಸಿ ಶಾಳಿಸಿ ಗಮ್ಮನೆ ನಿಮ್ಮ ನೆವ್ಮ ಮಾಲಿನಿಯರ್ಗೆ ಬಲಿಗುಡುವೆಂ (ರಾಜಶೇಕ. ೦೦೨-೦೦) ; ಅಜಚುಪ

ಶಿವಗಣಂಗಳ ಪರ್ಬುವ ಮಂಕಡರಾರ್ವ ಮಾಲಿನಿಯರ ಜೂಟ್ಟಿ ಬಳ್ಳುಗಳ . . . ಕೋಲಾಹಲಂ ಬಿಜಯಂಗೆಯ್ದೊಡಂ (ರಾಷಾಶ್ಚ. ೧೩೨-೩೨). ೫. [ಛಂದ] ಹದಿನೈದನೆಯಃ ಅತಿಶಕ್ವರಿಛಂದಸ್ಸಿನ ಒಂದು ವೃತ್ತದ ಹೆಸರು: ಅಮರಗಣಯುಗಂಗಳ್ಮೆತ್ತೆ ಭೂತ್ತೋಯುಯುಗ್ಮಂ ಕ್ರಮದೆ ನಿಲೆ ಬೆಡಂಗಂ ತಾಳ್ದು ಬಂದಾ ವಿರಾಮಂ ವಿಮಲಮೇಣೆಪ್ಪುದೆಂಟೆಂಬಲ್ಲಿ ನಿಲ್ವಂದೊಡಕ್ಕುಂ ಸಮದಗಜಗತೀ ಕೇಳ್ ಮಾಲಿನೀನಾಮವೃತ್ತಂ (ಛಂದೋಂಬು. ೨-೧೫೩) : ನನಮಯಯಯಗಣಂಗಳ್ ಮಾಲಿನೀವೃತ್ತಮಕ್ಕುಂ (ಕೈಪಿ. ೬೩).

[ಸಂ. ಮಾಲಿನೀ]

**ಮಾಲಿನ್ಯ** (ನಾ). ೧. ಕಲ್ಮಶ : ಕೊಳೆ : ಮಾಲಿನ್ಯಂ ವಿಮಲದೊಳಾಗಲಾಗ ದೆಂಬಂತಾ ಲೀಲಾವಿಮಲಸರೋವರಂ ತರಂಗವ್ಯಾಕೋಲಂ ಕಳೆದುದು ಕಜ್ಜಳಾಳಿಯಂ ತದ್ವಾಲಾಲೋಚನಕುಮುದಂಗಳಿಂದಮಾಗಳ್ (ಲೀಲಾವ. ೦೪-೩); ಅರ್ಜುನನ ಬುದ್ಧಿ ತಿಳಿಯಾಗುತ್ತದೆ. ಮನದ ಮಾಲಿನ್ಯ ಮಾಯ ವಾಗುತ್ತದೆ (ರಮಾಗೀತಾ. ೦೦೩). ೨. ಮಬ್ಬು : ಮಸುಕು : ಕ್ಷತ್ರ ಮತ್ತು ಧರ್ಮಗಳು ಪರಸ್ಪರ ಪೋಷಕಗಳಾಗಿರುವುದರಿಂದ ಕ್ಷಾತ್ರಶಕ್ತಿ ಕುಂಠಿತ ವಾದಾಗೆಲ್ಲ ಧರ್ಮದ ಪ್ರಕಾಶಕ್ಕೆ ಮಾಲಿನ್ಯ ಸಹಜ (ಮಣ್ಕಾರ. ೦೦೪ ಟೀಕೆ).

[ಸಂ.]

**ಮಾಲಿಶ್**, ಮಾಲೀಷ್, ಮಾಲೀಸ್, ಮಾಲೀಸು (ನಾ). ೧. (ಮೆರುಗು ಬರುವಂತೆ) ಉಜ್ಜುವುದು ; ತಿಕ್ಕುವುದು. ೨. (ಅಲಂ) ಪುಸಲಾವಣೆ: ಬೆಣ್ಣೆ ಹಚ್ಚುವಿಕೆ : ದೇವರಿಗೆ ಮಂಗಳಾರತಿ ಅರ್ಪಿಸಿ, ನಾಳೆಯಿಂದ ಮತ್ತೆ ನಮ್ಮ ಮಾಲಿಶ್ ಸುರುವಾಯಿತೆಂದು ಅಗಾವು ಸೂಚನೆ ಕೊಟ್ಟಬಿಟ್ಟೆವು (ಲೀಪಹ. II. ೨೩೪). **ಮಾಲೀಷ್** : ೧. ಕರಾರಿಂದ ಕೆರೆಕೆರೆದು ಮಾಲೀಷ್ ಠಗೇಲಿ ಹಾಕುವುದಕ್ಕಾರಂಭಿಸಿದ್ದ (ದಿವಾಂ. ೩೭). **ಮಾಲೀಸ್**: ೧. ಕೆಂಪು ತೈಲದಿಂದ ಕಿಬ್ಬುಹೊಟ್ಟೆಯ ಮೇಲ್ಗಡೆಯಿಂದ ಕೆಳಕ್ಕೆ ಮಾಲೀಸ್ ಮಾಡ ಬೇಕು (ದಿಚಿ. ೩೨); ಅವರಿಬ್ಬರೂ ಒಬ್ಬರು ಸಾಬರ ಹತ್ತಿರ ಕೆಲಸಕ್ಕಿದ್ದರು; ಕುದುರೆಚಾಕರಿ . . . ಮಾಲೀಸ್ ಮಾಡಬೇಕು (ತಂಗೂಂ. ೬೫). **ಮಾಲೀಸು**: ೧. ಹೇಗಿದೆ ನೋಡಿ -- ಮಾಲೀಸಿನ ಪ್ರತಾಪ ? (ಗಂಗಾವ. ೯೫); ಆದಕ್ಕೆ ಮಾಲೀಸು ಅಪ್ಪಾಜಿಯೇ ಮಾಡುತ್ತಿದ್ದರು (ಕೆಂಗಾಳ್ಕ. ೨೫): ಹೊಟ್ಟೆ ತುಂಬಾ ಹುರುಳಿಯಿಲ್ಲ, ಕುದುರೆಗೆ ಮಾಲೀಸು ಮುರಿರುತಾಸು (ಗಾದೆ).

**ಮಾಲಿಶ್‍ಮಾಡು**, **ಮಾಲೀಸ್‍ಮಾಡು**, **ಮಾಲೀಸುಮಾಡು** = ೧. (ಎಣ್ಣೆ ಮೊದಲಾದುವುಗಳನ್ನು ಸವರಿ) ಉಜ್ಜು ; ತಿಕ್ಕು : ಮಾಲಿಶ್ ಮಾಡಿದ ಕುದುರೆಯ ಮೈ ಹೊಳೆಯುತ್ತಿದೆ (ಲೂಹಿ); ಸೊಂಟದಲ್ಲಿ ಸೆಳೆತ ವಾದರೆ ಮೂತ್ರಕೋಶದ ಮೇಲೆ ಹಸುರುತೈಲವನ್ನೂ ಸೊಂಟದ ಮೇಲೆ ನೀಲಿತೈಲವನ್ನೂ ಮಾಲೀಸ್ ಮಾಡಬೇಕು (ದಿಚಿ. ೩೨) ; ಧನಿಯರ ಮತ್ತು ತಮ್ಮ ಮನೆಯ ಎತ್ತು, ಕೋಣಗಳನ್ನು ನೀರಲ್ಲಿ ನಿಲ್ಲಿಸಿಕೊಂಡು ಮಾಲೀಸು ಮಾಡುವುದೂ ಉಂಟು (ಸ್ವಸ್ವಪೂ. ೦೩). ೨. (ಅಲಂ) ಗಿಲೀಟಿನ ಮಾತ ನ್ನಾಡಿ ಮೆಚ್ಚಿಸು ; ಪೂಸಿಮಾಡು : ಕೆಲಸ ಆಗೋವರೆಗೂ ಚೆನ್ನಾಗಿ ಮಾಲೀಶ್ ಮಾಡಿ. ಆಮೇಲೆ ತಿರುಗಿಯೂ ನೋಡದೇ ಇರೋದು ಕೆಲವರ ಸ್ವಭಾವ (ಲೂಹಿ). **ಮಾಲೀಸಿನ ಮಾತು** = (ಅಲಂ) ಬೇರೆಯವರು ನಂಬು ವಂತೆ ಆಡುವ ಮಾತು ; ಬಣ್ಣಹಚ್ಚಿ ಆಡುವ ಮಾತು : ಗರುಡಾ ಚಾರ್ಯ ಬಹಳ ಮೃದುವಾಗಿ ನಗುತ್ತ ದಾಸಾಚಾರ್ಯನ ಮಾತಿಗೆ ತಾನು ಒಪ್ಪಿದೆ ಎನ್ನುವಂತೆ ನಟಿಸುತ್ತ ಹೇಳಿದ. ಇದರಿಂದ ಮಾಲೀಸಿನ ಮಾತು ಗೊತ್ತಿಲ್ಲದ ಲಕ್ಷ್ಮಣಾಚಾರ್ಯನಿಗೂ ಸಂತೋಷವಾಯಿತು (ಸಂಸ್ಕಾರ. ೩೮).

[←ಪಾರ. ಹಿಂ. ಮಾಲಿಶ್ : ಮರಾ. ಮಾಲಿಶ್, ಮಾಲಿಸ್, ಮಾಲೀಶ್, ಮಾಲೀಸ್]

**ಮಾಲಿಸು** (ಕ್ರಿ). ೧. ಕಡೆಗಣ್ಣಿನಿಂದ ನೋಡು; ಓರೆಗಣ್ಣಿನಿಂದ ನೋಡು: "ಮಾಲಿಸು ಕಟಾಕ್ಷೇ (ಕಡೆಗಣ್ಣಿನಿಂದ ನೋಡು). ದೀರ್ಘಾಲೋಕೇ ಚ (ಬಹಳ ಹೊತ್ತು ನೋಡು)" (ಶಮ). : ಮೆಲ್ಲುಡಿಯಿಂ ನಾಲ್ಕೈವ ಜೀವಿತೇಶನ ನುಡಿಗೆ ಪಡಿನುಡಿಗುಡೆಯುಂ, ನುಡಿಯದಿರೆಯುಮಾಜದೆ ಕಾಂತೆ ಕೆಲನ ಕೆಳದಿಯುಂ ಮಾಲಿಪಂದು (ರಾಷಾಶ್ಚ. ೨೦-೦೯). ೨. ನೆಟ್ಟ ದೃಷ್ಟಿಯಿಂದ ನೋಡು; ಒಂದೇ ಸಮನೆ ನೋಡು: ಆಲಿಸುತಿವೆ ಮಾಲಿಸುತಿವೆ ಹರಿಣದ ಜತೆ ಹರಿಣ (ಗಂಗಾತ. ೦೦೬-೬) ; ಕೊನೆಮುಳ್ಗಳಂತಾಗೆ ಹಿಂದುಮುಂದುಗಳೆಲ್ಲ ಕೊನೆದು ಬಾಡಿದ ನಿರತೆಯಂ ಮಾಲಿಸುವಳು (ಕಾಲೂರ. ೦೦೪-೨೩೫). ೩. (ಒಂದು ಪಕ್ಕಕ್ಕೆ) ಬಾಗಿಸು; ಓರೆಯಾಗಿಸು; ವಾಲಿಸು: ಅರಿವರಿಯದೆಯೆ ಕಾವ್ಯ ಮಾರ್ಗದಲ್ಲಿ ನರಂ ತರುಗಳಂ ಮಾಲಿಸುತೆ—ಭೂಪ ಜಾತ್ರೆಗರಂ ಪರಿಕಿಸುತೆ ತನ್ನನರಸುವ ಚವ್ವರೆ ತೆರಂ ಬರಿಯಿಸುತಿರವರೊಡನೆ ತನ್ನನೆಯ್ದುದಿರಂ (ಸಂಸಕ. ೨೦-೫೪) ; ಬಯಕೆಗಳ್ . . . ನಾಲಗೆಯೊಳೆದ್ದಂತೆ ಬೋಳ ಬಾಯ್ತೆರೆದಂ ತೋಲ್ಬಟ್ಟೆ ಕೇಡುಗಳ ಬಳಿವಿಡಿಯಲೆಳಸುತಿಹ ಮಾಲಿಸುವ ಕವಲ್ಗಳಿಳಿಮಾತುಗಳನುಗಿದಂ (ಕಾಲೂರ. ೦೨೬-೨೬೯). ೪. (ಅಲಂ) ಏರು ಪೇರು ಮಾಡು ; ಬದಲು ಮಾಡು: ವ್ಯತ್ಯಾಸಗೊಳಿಸು : ಸತ್ಯಕಥೆಯ ಮಾಲಿಸದೆ[ಪಾಕಾಂ. ಅಲಸದೆ]ಮುಗರುಹು ಗರುಡೋರಗರ ವೈರಂಗಳು ಬಂದ ಕಾರಣಗಳ ತಿಳಿವಂತೆ ವಿಸ್ತರಿಸಬೇಕೆಮಗೆ (ತುರಂಗ. ೩-೧೦).

[ಮಾಲು$_1$ + — ಇಸು$_3$]

**ಮಾಲೀಕ** 'ಮಾಲಿಕ$_2$' ನೋ.

**ಮಾಲೀದಿ** 'ಮಾಲದೀ' ನೋ.

**ಮಾಲೀಷ್** 'ಮಾಲಿಶ್' ನೋ.

**ಮಾಲೀಸ್** 'ಮಾಲಿಶ್' ನೋ.

**ಮಾಲೀಸು** 'ಮಾಲಿಶ್' ನೋ.

**ಮಾಲು$_1$** (ಕ್ರಿ). ೧. ಓರೆಯಾಗು : ಬಾಗು ; ಓಲು : ಮೇಲಯ್ಯನೊಡನೈ ತಂದಾಂ ಪೊಕ್ಕು ನಿಜಾಲಯವನು ಮೇಲ್ವನನಿಯ ಕಾಲಿಗೆಜಗಿ ಸುಖ ವಿರ್ಪನ್ನ ಮೆಲ್ಲನೆ ಮಾ[ಪಾಕಾಂ. ವಾ]ಲಿತಾ ಪಡುನೇಸಜುಬಟ್ಟು (ಸೊಬಿಸೋ. ೦೫-೩೬); ಲಾಲಿಪ ಪದ್ಮಕೈರವನಾಳ ಸತಂಗುಂದಿ ಮಾಲಿದುವೆಸಳ್ಗಳು ಬಾಡಿ (ಮೋಹತ. ೯-೪೩) : ನನ್ನ ಮಾಲಿದಂಗುಲಿಯಿನ್ನು ನೇರವಾಯ್ತಿಲ್ಲೆಂದ ಮೇಲೆಲ್ಲರೆದ್ದರಾ ಕ್ಷಣವೆ (ಶರಕ. ೪೯-೦೨೦). ೨. ತೂಗಾಡು; ತೊನೆದಾಡು; ಓಲೆ : ಇಂತು ಮದಿರಾಪಾನವಂ ಮಾಡಿ . . . ಮಾಲುತುಂ ಜೋಲುತುಂ ತೇಲುತುಂ ಮಲೆಯುತುಂ ಮನಂಗೊಳಿಪ ತದ್ವನಿತಾಜನ ಮಧ್ಯದಲ್ಲಿ . . . ಇರ್ದಂ (ಉದ್ಭಟ. ೫-೯೦ ವ) ; ಚೆಂದವ ನೋಡಿರೆ . . . ಉಡಿಯ ಘಂಟೆ ಘಳಿರೆನುತ ನುಡಿದು ಮೆಲ್ಲನೆ ಪಿಡಿದುಕೊಂಡು ನಡಗೆ ಮಾಲುತ ಸಡಗರದಲಿ ಬೆಡಗುಮಾಡಿ ಆಡುವ ರಂಗನ (ಪುರಂದ. ೩-೦೦೫-೨); ಕಿಟ್ಟಣ್ಣ ಪಾತ್ರಿಯಾಗಿ ನಡುಗುತ್ತ ಹಿಂದೆ ಮುಂದೆ ಮಾಲಿ ನಡೆಯುತ್ತ, ಬುಸುಗುಟ್ಟಿ ಅಬ್ಬರಿಸಿದ (ಸ್ವಸ್ವಪೂ. ೭೦). 'ಓಲ್ಯು$_1$'. 'ವಾಲ್ಯು$_1$' ಪರಾ.

[ದೇ. ॥ ತುಳು. ಮಾಲಷವು, ಮಾಲು]

**ಮಾಲು$_2$** (ನಾ). ೧. ಓರೆ ; ವಕ್ರತೆ : 'ಮಾಲುಗಣ್ಣು' ಪರಾ. ೨. ಬಾಗು ; ತಿರುವು : ಮುಕಾದೇವಿಕಾಸ್ಥಾನದ ಸಮಿಪದಲಿ ಮುಡಲು ಹರಿವ ಹೊಳೆಯಿಂದಂ ಪಡುವಲು ತೆಂಕಲು ಹಲಸಿನ ವಾನಿ ಕೂಲಂಬಿ ಕೂಡಲು ಅಜಿಯ ಮಾಲಿಂದಂ ಬಡಗಲು (ಶಾಇಜ. IX-ii. ೪೭೦-೩೦; 1478).

[< ಮಾಲು$_1$]

**ಮಾಲು$_3$** (ನಾ). ಸರಕು; ಸಾಮಗ್ರಿ; ಪದಾರ್ಥ : ನಾನೀಗ ಅವರ ಪಾಲಿಗೆ ದೂರದೊಂದು ಲೋಕದ ಮಾಲು (ಪಡಂ. I. ೩೮೬) ; ಸುಂಕದ ಕಟ್ಟೆಯ ಅಧಿಕಾರಿಗಳೇ ಈ ವ್ಯಾಪಾರದ ಮಾಲುಗಳನ್ನು ತಮ್ಮ ವಶಕ್ಕೆ ತೆಗದುಕೊಂಡು ಹಗಲು ರಾತ್ರಿ ಕಾವಲಿಡುತ್ತಾರೆ (ಕ್ರಪಾಇ. II, ೦೯೯).

[←ಅರ. ಹಿಂ. ಮರಾ. ಮಾಲ್]

**ಮಾಲು$_4$** 'ಮುಹಾಲು' ನೋ.

**ಮಾಲುಂ**, ಮಾಲುಮ್ (ನಾ). ತಿಳಿದಿರುವುದು ; ಗೊತ್ತಿರುವುದು. **ಮಾಲುಮ್:** ನನಗೆ ಮಾಲುಮ್ ಇದ್ದರ ನಿಮ್ಮನ್ನೇಕೆ ಕೇಳಲು ಬರುತ್ತಿದ್ದೆ ತಾಯಿ (ರಂಗರೋ. ೧೩).

**ಮಾಲುಂಮಾಡು**=ನಿಶ್ಚಯವಮಾಡು; ನಿರ್ಧಾರಪಡಿಸು : ಕಬಿಯಾ ಮುಲುಕಿನ ಕಿನಾರೆಗೆ ಬಂದರೆ, ದೋಸ್ತಿಮಾರ್ಗದಿಂದ ನಮ್ಮ ಕಡೆ ಒಬ್ಬ ಶ್ಯಾಣ ಗೃಹಸ್ಥನಿಗೆ ಕಳುಹಿಸಿ, ಎರಡು ಸರಹದ್ದನ್ನು ಮಾಲುಂ ಮಾಡಿಯೇವು (ರಾಕೇಂದ್ರ. ೯೩).

[←ಅರ. ಮಅಲೂಮ್, ಮಾಲೂಮ್; ಹಿಂ. ಮಾಲೂಮ್; ಮರಾ. ಮಾಲುಮ್, ಮಾಲೂಮ್]

**ಮಾಲುಕ** (ನಾ). ಒಂದು ಬಗೆಯ ಸುವಾಸನೆಯ ಗಿಡ; ಕಾಮಕಸ್ತೂರಿ: "ಮಾಲುಕಮೆನಲ್ಕೆ ಕಸ್ತೂರಿಕಾಮವೆನಿಸಿಕ್ಕು" (ಪಂಗಣಾ. ೩೯–೨೯). [ಸಂ.]

**ಮಾಲುಗಣ್ಣು**, ಮಾಲಗಣ್ಣು (ನಾ). ವಕ್ರದೃಷ್ಟಿಯುಳ್ಳ ಕಣ್ಣು ; ಓರೆಗಣ್ಣು : ಪಂಚೇಂದ್ರಿಯಗಳಲ್ಲಿ ಬಹುಪ್ರಾಮುಖ್ಯವಾದ ಅವಳ ಕಣ್ಣು 'ಮಾಲುಗಣ್ಣಾಗಿತ್ತು' (ನಾಗಪ. ೬೦). **ಮಾಲಗಣ್ಣು :** ಕಾಲಕಾಮ ನಾರಿಯರು ಓಲೆಗಳಿವುದ ಕಂಡೆ ಮಾಲಗಣ್ಣೊಳು ತೊಳಲುವುದ ಕಂಡೆ (ಶಿವಾನು. ೮೩೩–೬೮೯) ; ಇವನು ಕಪ್ಪಗಿದ್ದಾನೆ, ಗಿಣಿಮೂಗು, ಮಾಲಗಣ್ಣು (ಅರಿಪು. ೦೦೯). [ಮಾಲು$_2$ + ಕಣ್ಣು (< ಕಣ್)]

**ಮಾಲುಗಾಡಿ** (ನಾ). ಸಾಮಾನು, ಸರಂಜಾಮುಗಳನ್ನು ಹೊತ್ತು ಸಾಗಿಸುವ ಗಾಡಿ; ಗೂಡ್ಸ್‌ಗಾಡಿ : ತಿಂಮನು ಕೋರಿದಂತೆ ನೂರಾರಲ್ಲ–ಸಹಸ್ರಾರು ಪತ್ರಗಳು ಮಾಲುಗಾಡಿಗಳಲ್ಲಿ ಬಂದಿಳಿದವು ಧಾರವಾಡದಲ್ಲಿ (ಹುಚ್ಚುಪು. ೦೬). [ಮಾಲು$_4$ + ಗಾಡಿ$_3$. / ಹಿಂ. ಮಾಲ್‌ಗಾಡೀ]

**ಮಾಲುಧಾನ** (ನಾ). ೧. ಒಂದು ಬಗೆಯ ಹಾವು; ಕೇರೆ : "ಮಾಲುಧಾನ = ಕೇರೆ" (ನಾಚಿರಾ. ೯) ; "ಮಾಲುಧಾನಃ – ಹೆರೆಗಳೆದ ಹಾವು" (೬ಚಂಧಿ. ೦೨೪). ೨. ಹಾವಿನ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ ; ಊಸರವಳ್ಳಿ : "ಮಾಲುಧಾನಃ, ಮಾತುಲಾಹಿಃ — ೨ ವೂಸರವಳ್ಳಿ ಹಾವು, ವಿಷಗಿಡದ ಹುಳ, ಉಮ್ಮತ್ತದ ಹುಳ. ಇದು ಖಟ್ವಾಂಗದ ಆಕಾರವಾಗಿಯೂ ದೀರ್ಘದೇಹವಾಗಿಯೂ ಉದ್ದವಾದ ಬಾಲವುಳ್ಳದ್ದಾಗಿಯೂ ನಾಲ್ಕು ಕಾಲುಗಳುಳ್ಳದ್ದಾಗಿಯೂ ಇರುವುದು" (ನಿಘಾಂತಿ. ೬೨). [ಸಂ.]

**ಮಾಲುಮ್** 'ಮಾಲುಂ' ನೋ.

**ಮಾಲುಮತ್ತೆ** 'ಮಾಲಮತ್ತೆ' ನೋ.

**ಮಾಲೂರ** (ನಾ). ೧. ಒಂದು ಬಗೆಯ ಮರ; ಬಿಲ್ವಪತ್ರೆ: "ಮಾಲೂರಃ, ಶ್ರೀಫಲಃ, ಬಿಲ್ವ — ಈ ೩ ಬೆಲ್ಲವತ್ತದ ಪೆಸರ್" (ಹಲಾಯು. ೩೨–೪೦) ; ಅದು ಜಂಬೂ ಜಂಭ ರಂಭಾಕುಳಕ . . . ಕಾಶ್ಮರ್ಯ ಮಾಲೂರ ಲೋಧ್ರೋ [ಪಾಠಾಂ. ಲ್ಲೂರ ಲೊದ್ರಂ]ಗುದಿ ಕಾಕ್ಷಪ್ಲಕ್ಷಪಥ್ಯಾಮಳಕತಿಳಕಭೂರ್ಜಾದಿ ಭೂಜಾವಕೀರ್ಣಂ (ಅರ್ಜೀನಿಃ. ೩–೩೩). ೨. ಒಂದು ಬಗೆಯ ಮರ; ಬೇಲದ ಮರ : "ಮಾಲೂರಃ –ವಿಲಾವಾಲುಕ, ಬೇಳಕೆ, ಬೆಲ್ಲವತ್ತ" (೬ಚಂಧಿ. ೦೨೪). [ಸಂ.]

**ಮಾಲೂರಪತ್ರೆ** (ನಾ). ಬಿಲ್ವಪತ್ರೆ : ಪಾಲಾಶಕಲಧೌತಪುಷ್ಪಂಗಳುಂ ತುಳಸಿ ಮಾಲೂರಪತ್ರೆ ಯಿಾ ನಾಲ್ಕು ಲಿಂಗಕ್ಕೆ ಪ್ರಕ್ಷಾಲಿಸಿ ಪುನಃಪುನಃ ಧರಿಸಬೇಕಾದುದಂ ನಿರ್ಮಾಲ್ಯವಲ್ಲ (ಗುರುಚಾ. ೬–೦೭).

[ಸಂ. ಮಾಲೂರಪತ್ರ]

**ಮಾಲೆ**, ಮಾಳ್ಕೆ (ನಾ). ೧. ಹೂವಿನ ಸರ,– ಹಾರ : "ಸ್ರಗ್, ಮಾಲಾ, ಮಾಲ್ಯಂ– ಈ ೩ ಹೂವಿನ ಮಾಲೆ" (ಹಲಾಯು. ೯೦–೩೯೬) ; ಅಲರ್ಗಣೆಯನಂಗಜಂಗೀಯಲೆದು ರತಿ ಬರ್ಪ ಮಾಟಕ್ಕಿಯಿಂ ಮಾಲೆಯನಾ ಲಲಿತಾಂಗಿ ಓಡಿದು ಕಣ್ಗಂ ಕಲಕ್ಕಮಾ ದಾಶರಥಿಯ ಬಗೆಗಂ ಬಂದಳ್ (ಕಂಠಾಪು. ೩–೯೪) ; ಆ ಗಂಧರ್ವದತ್ತೆ ಚಿತ್ರಜಾತಶರಪರುಷಪತಿಗಳ್ಕಿ ಬಿಂಕದಿಂ ಘೋಂಕನೆಟ್ಟು ಮಾಲೆಯನಿಕ್ಕೆ (ಜೀಚಂ. ೩–೨೯) ; ಮಾಲೆಗೆ ಸುಯ್ಗೆ ಸೂಟ್ಸುರುತಿರಲ್ಕಿಮಾಳಿಕೆ ಮಾಲೆಗಾರ್ತಿಯುರ್ವಾಲೆಯನೆತ್ತಿ ನಿಂದಿರೆ ಮುಖೇಂದುವನೀಕ್ಷಿಸುತುಂ ಪೊವಟ್ಟು ತನ್ಮಾಲೆಗೆ ಕಯ್ಯಸಾಯ್ಕೆ (ಶಾಂತೀಶ್ವ. ೦೦–೫೦). ೨. ಕಂಠಹಾರ ; ಸರ : 'ಅಕ್ಷಮಾಲೆ', 'ಜಪಮಾಲೆ' ಪರಾ. ೩. ಸಾಲು; ಶ್ರೇಣಿ; ಪಂಕ್ತಿ : ಮಲಯಾನಿಳನೆಸಕ ದಿನಿದಿರ್ವಲರ್ಗಳ ಮಕರಂದಮಾಲೆಗಳ್ ಪರೆದೆತ್ತಂ ನೆಲದೊಳ್ ಬಿಟ್ಟಂ ಪಡೆದುವು ವಿಲೋಚನಾಂಬುಗಳನಗ್ಗಳಂ ವಿರಹಿಗಳಾ (ಕವಿರಾ. ೩–೦೩೬); ವಕುಳಮಾಲೆಯೊಳಾಲಿಸಿದಬ್ಜನೀದಳಾವಳಿಗಳ ಮಾಲೆಗುಂಡಿಗೆಗಳಂ ಸಮದಾಡುವ ಜಾಟಳಂಗಳಂ ಅಂತವಂ ನೋಡುತ್ತಂ ಪೋಗೆ (ಕಾದಂಸಾ. ೨೦೩); ದ್ವೈತಾದ್ವೈತವನೋದಿ ಏನು ಮಾಡಿದಿರಯ್ಯಾ . . . ಸ್ಥಾವರ ಜಂಗಮವೊಂದೆ ಎಂದು ನಂಬದನ್ನಕ್ಕ ಕೂಡಲ ಸಂಗಮದೇವಾ ಬಟಿಯ ಮಾತಿನ ಮಾಲೆಯಲೇನಹುದು (ಬಸವ. ೯೧೦). ೪. ಗುಂಪು; ಸಮೂಹ. ೫. ತುಳುಜನಾಂಗದವರ ಒಂದು ಒಳಪಂಗಡ : ತುಳುನಾಡಿನ ದೇವಾಲಯಗಳಲ್ಲಿ ಮಾಲೆಯರೆಂಬ ಒಂದು ಜಾತಿಪ್ರಭೇದಕ್ಕೆ ಕಾರಣವಾದ ವಿಚಿತ್ರವಾದೊಂದು ವಾಡಿಕೆಯಿದೆ (ಹುಚ್ಚಬ. ೦೯೦). **ಮಾಳ್ಕೆ** : ೩. ಮಲೆಯಲರ್ಗಳ್ಕೆ ಬಳ್ಕಿ ಮಾಚಿದುಂಬಿಯ ಮಾಳೆಗೆ ಕಾಯ್ದು ಬಯ್ದು. . . ಜೋಲ್ವರುತ್ಕಳಿಕೆಯಿನಾಮ್ರವಲ್ಲರಿಯೊಳೋಪವರಾ ಪುರನಂದನಂಗಳೊಳ್ (ಅಪಂಕ್ರ.೦–೯೩);ದೀಪ್ತಿಗಿದಿರಾದ ಪತಂಗದ ಮಾಳೆಯಾದುದುಂ(ಪುಷ್ಪಪು.೩–೦೯).

**ಮಾಲೆಹಾಕು** = ೧. ಮದುವೆಯ ಸಂದರ್ಭದಲ್ಲಿ ವಧೂವರರು ಪರಸ್ಪರ ಹೂವಿನ ಹಾರವನ್ನು ತೊಡಿಸು; ವರಿಸು : ಹಿರಿಯಳಾದ ಅಂಬೆಯು. . . ಅವನಿಗೇ ಮಾಲೆಹಾಕಬೇಕೆಂದಿದ್ದಳು (ಪಕಥಾ. ೩). ೨. ಗೌರವಸೂಚಕವಾಗಿ ಹೂಮಾಲೆಯನ್ನು ಹಾಕು,– ತೊಡಿಸು : ಸಮಾರಂಭಗಳಲ್ಲಿ ವಂದನಾರ್ಪಣೆ ಮಾಡುವಾಗ ಆಹ್ವಾನಿತರಿಗೆ ಮಾಲೆ ಹಾಕುವುದು ವಾಡಿಕೆ (ರೂಢಿ).[1] [ಸಂ. ಮಾಲಾ]

**ಮಾಲೆಕಾರ** 'ಮಾಲೆಗಾಜ' ನೋ.

**ಮಾಲೆಗಟ್ಟು** (ಕ್ರಿ). ೧. (ಹೂವು, ಮಣಿ ಮುಂತಾದುವುಗಳಿಂದ) ಹಾರವನ್ನು ಕಟ್ಟು,—ರಚಿಸು : ಮಾಲೆಗಟ್ಟುತೆ ನೋಟಕರ ಕಣ್‌ಮಾಲೆಗಟ್ಟುವರೊರ್ಮೆ . . . ಅಲ್ಲಿಯ ಮಾಲೆಗಾರ್ತಿಯರು (ಶಾಕ್ಯಚಾ. ೨–೦೨) ; ಇತ್ತರದಲಿ ಮಾಲೆಗಟ್ಟಿ ಮಾಜುವ ಪೆಂಗಳರ್ತಿಯನೇನ ಬಣ್ಣಿಸುವೆ (ಕಂಸವ. ೬–೬೨); ಕಟ್ಟುವೆನು ಕತೆಯೊಂದ ಬನದ ಗವಿಯಿಂದಾಯ್ದು, ಮರವೆಯಿಂದ ದನೆತ್ತಿ ಕೊಯ್ದು, ಎದೆಯನಪ್ಪಲು ಮಣಿಯ ಮಾಲೆಗಟ್ಟುವ ತೆರದಿ ಅಳಿವಿರದ ನೆನಹಿನಲಿ ಕೋದು (ವಕ್ಕ. ೩೯–೦೯). ೨. ಸಾಲುಗಟ್ಟಿ ನಿಲ್ಲು; ಸಾಲ್ಗಿರು : ಅಂತು ದೇವರ್ ದೇವನೊಳಾವಗಮಾದ ತಂತವ್ಯಾದರದಿಂ ಮಾಲೆಗಟ್ಟಿ ದುಗ್ಧವಾರಿಪೂರಿತ ಕನಕಕಳಶಂಗಳಂ ತಂದು ಗೊಂದಣಿಸಿ ಸಂದಣಿಸಿ ನೀಡಿದಾಗಳ್ (ಅಂಕ್ರ. ೭–೯೩ ವ). [ ಮಾಲೆ + ಕಟ್ಟು$_1$ ]

**ಮಾಲೆಗಾತಿ** (ನಾ). ಹೂವನ್ನು ಕಟ್ಟಿ ಮಾರುವವಳು ; ಹೂವಾಡಿಗಿತ್ತಿ : ಮಾಣಸಿದನೈ ದಿಟ ಮಾಲೆಗಾತಿಯ[ಪಾಠಾಂ. ಘಟ್ಟಿವಾಳ್ತಿಯ] ಮೈಯ ಮಾಹೊಜಡ (ಕುಮಾವ್ಯಾ. ೦೦–೦೭); ಪುಷ್ಪಮಾಲೆಯನೊರ್ವ ಚತುರವಿಟನಿಗೆ ಕೊಟ್ಟಳು ಮಾಲೆಗಾತಿ ತಾನತಿಶಯರೂಪಿನ ಬೆಡಗೆ (ವರ್ಧಕ. ೦–೦೦೬); ಪರಿಮಳವೆರೆದಿಂಪಿನ ದಿವ್ಯಪುಷ್ಪವ ವರಿಕೊಂಡತಿ ಹರುಷದಲಿ ಸರಗಟ್ಟಿ ಬೆಲೆಗೆ ಮಾಜುವ ಮಾಲೆಗಾತಿಯರಿರವ ನಾನೇನ ಬಣ್ಣಿಪೆನು (ಕಂಸವಿ.೨–೯೩). [ಮಾಲೆ + — ಕಾತಿ$_5$]

**ಮಾಲೆಗಾರ** 'ಮಾಲೆಗಾಜ' ನೋ.

**ಮಾಲೆಗಾರ್ತಿ** (ನಾ).= ಮಾಲೆಗಾತಿ : ಆಂ ಮುನ್ನಿನ ಭವದೊಳ್ ಪ್ರಿಯಸೇನೆಯೆಂಬ ಮಾಲೆಗಾರ್ತಿಯೆಂ (ಪಞ್ಚಾರಾ. ೪೭–೦೦೯); ಚಲ್ಲವಾಡ ಪೂವೆತ್ತುವ

ಮಾಲೆಗಾರ್ತಿಯರನಂದರಿಕೇಸರಿ ಸಿಂದು ನೋಡಿದಂ (ಶಂಶಾ. ೪-೮೦); ವರಮಲ್ಲಿಗೆ ಮೊಲ್ಲೆಗಳೊಳ್ ಬೆರಸಿದ ಮಧುಕರಕದಂಬದಿಂದಂ ನೀಲೋತ್ಕರಮುಂ ಮೌಕ್ತಿಕಮುಂ ಪೋಲ್ತಿರೆ ಮೆಱೆದಳ್ ಮಾಲೆಗಾರ್ತಿ ಮಣಿಗಾರ್ತಿಯ ಪೋಲ್ (ಗಂಕ. ೨-೯೬). [ಮಾಲೆಗಾಱ + — ತಿ$_1$ ( < — ಇತ್ತಿ) ]

**ಮಾಲೆಗಾಱ, ಮಾಲೆಕಾರ, ಮಾಲೆಗಾರ** (ನಾ). ೧. ಹೂವಿನ ಹಾರವನ್ನು ಕಟ್ಟಿ ಮಾರುವವನು; ಹೂವಾಡಿಗ: "ಮಾಲಾಕಾರಃ, ಮಾಲಿಕಃ, ಪಾರಿಹಾರಿಕಃ– ಈ ೩ ಮಾಲೆಗಾಱಂ" (ಹಲಾಯು. ೯೬-೪೩೫); ಪೂಗೊಯ್ವ ವಸಂತಕನೆಂಬ ಮಾಲೆಗಾಱನರಸನ ಸಾವಂ ಕಂಡು (ವಡ್ಡಾ. ೧೮೦-೨೫); ಮುಗಮುಗಿಪ ಜಾದಿಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಬಗೆಯಱಿದು ನೀಡುಗುಂ ಮಾಲೆಗಾಱನಂ ಪೋಲ್ತ್ರುದಗ್ರಮಾಲ್ಯಮಹೀಜಂ (ಆದಿಪು. ೫-೩೬); ಕಟ್ಟೆಯುಮಪೋಸೊ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ (ಅನಂಪು. ೦-೪೫). ೨. ತೋಟವನ್ನು ಬೆಳೆಸುವವನು ; ಮಾಲಿ : ಕಂಡವರ್ ಕಾಮನೆ ಮಾಲೆಗಾಱರೊಸೆದೋವಿದ ಪೂವಿನ ತೋಂಟಮೊಪ್ಪುಗುಂ (ಗಂಕ. ೨-೬೦); ರಾಜಗೃಹಪುರಮನೆಯ್ದೆವಂದು ಪೊಱಗಣುದ್ಯಾನದೊಳ್ ವಿಶ್ರಮಿಸಿರ್ದನನ್ನೆಗಮಲ್ಲಿಯ ಮಹತ್ತರನಪ್ಪ ಮಾಲೆಗಾಱಂ ಬಂದು ನೋಡುತ್ತಾಗಳ್ (ಜೀಪಸಂ: ೨೦೪-೩). **ಮಾಲೆಕಾರ** : ೧. ಪೂಗಳಿಂದ ತಮ್ಮ ಮಯಮಸೌಂದರ್ಯವಂ ಏಟರಿಗೆ ತೋರಿಸುವಂತೆ ಮಾರುವ ಮಾಲೆಕಾರರ ಬಾಲೆಯರಿಂ (ಸೌಗಂಧಿ. ೫-೦). **ಮಾಲೆಗಾರ** : ೧. ಹೂಗಳಿಂದ ಹಾರ ಮಾಡಿ ದೇವಾಲಯಕ್ಕೆ ಒದಗಿಸುವವನು ಮಾಲೆಗಾರನಾದ (ತಮಿಳು–ಮಾಲೈಕ್ಕಾರ) (ಶಾಸಗಿ. ೭೨).
[ಮಾಲೆ + —ಕಾಱ]

**ಮಾಲೆಗಾಱಗೇರಿ** (ನಾ). ಹೂವಾಡಿಗರು ವಾಸಿಸುವ ಓಣಿ,– ಕೇರಿ : ಆ ಪೂವಿನ ಪೊೞ್ತಿನೊಳ್ ದೇವಕೀನಂದನಂ ಮಾಲೆಗಾಱಗೇರಿಯೊಳ್ ವಿಹಾರಿಸುತ್ತಂ ಬರ್ಪಲ್ಲಿ (ಜಗಪು. ೬-೧೧೮). [ಮಾಲೆಗಾಱ + ಕೇರಿ]

**ಮಾಲೆಗಿಡಿ** (ನಾ). ಒಂದರ ಹಿಂದೆ ಮತ್ತೊಂದರಂತೆ ಬರುವ ಕಿಡಿ ; ನಿರಂತರವಾಗಿರುವ ಕಿಡಿ : ಸುಯ್ಲುಗಳ ಕಾರ್ಬೊಗೆಯ ಮುಸಕದ ಮಾಲೆಗಿಡಿಗಳ ದಾಡೆಗಳ . ರಣಧೂಳಿಯುಪ್ಪರದಸುಭಟರೊದಗಿದರು ಸಮರದಲಿ (ತೊರವೆ. ೬-೦೪-೨೦). [ಮಾಲೆ + ಕಿಡಿ]

**ಮಾಲೆಗೇರಿ** (ನಾ). = ಮಾಲೆಗಾಱಗೇರಿ : ಮದನಮದಮತ್ತೇಭವನು . . . ಚದುರರಸನಿಗಿತ್ತನೆಂಬೊಲು ಪದಿದ ಮಾಲೆಯು ಗಂಧಕುಂಕುಮ ಚದರಿಯೋಕುಳಿಯಾಡುತ್ತೈದಿತು ಮಾಲೆಗೇರಿಯಲಿ (ಪಾಗಪ. ೬-೦೮).
[ಮಾಲೆ + ಕೇರಿ]

**ಮಾಲೆಗೊಳ್** (ಕ್ರಿ). ಒಂದರ ಹಿಂದೆ ಮತ್ತೊಂದು ಬರು ; ಸಾಲಾಗು : ಮಾಲೆಗೊಳುತ್ತುಮೊತ್ತರಿಸಿ ಪಾಯ್ವ ಸರಲ್ಗಳನುಣ್ಕೆ ವಿಸ್ಫುಲಿಂಗಾಲಿ ಬರಲ್ ಸರಲ್ಕಱೆ ಸಿಡಿಲ್ಕಱೆಯುಂ ಗೆಲೆವಂದುದೆಂಬಿನಂ ಶೈಲಧರಂ ಕಱುತ್ತು ಕಱೆಯುತ್ತಿರೆ ಮಾರ್ಗಣವೃಷ್ಟಿಯುಂ (ಜಗಪು. ೦೩-೭೭).
[ಮಾಲೆ + ಕೊಳ್$_1$]

**ಮಾಲೆಜೊಡರ್** (ನಾ). ಸಾಲಾಗಿರುವ ದೀಪ ; ಸಾಲುದೀಪ : ಮಾಲೆಜೊಡರ್ ನವಚಂಪಕಮಾಲೆಯವೊಲ್ ಮೊಳೆಯ ಮೇಲೆ ಮಾರ್ಪೊಳೆಯೆ ಕರಂ ಲೀಲಾವತಿ ಪತಿಯಾಪ್ತಾಲೋಲತೆಯಿಂದೊಸೆದು ದೇವಿಯುಂ ಪೂಜಿಸಿದಳ್ (ಲೀಲಾವ. ೧೦-೮). [ಮಾಲೆ + ಸೊಡರ್]

**ಮಾಲೆದುಂಬಿ** (ನಾ). ದುಂಬಿಗಳ ಸಾಲು,_ಸರಣಿ : ಅವಳ ಕುರುಳ್ಗೆ ಮಾಲೆ ದುಂಬಿಗಳೆಣೆಯೆ (ಕಮನ. ೧೧೩ ಕ್ರ ಯೋ). [ಮಾಲೆ+ದುಂಬಿ (< ತುಂಬಿ$_1$)]

**ಮಾಲೆದೊಡಂಬೆ** (ನಾ). ಹೂವಿನ ಗುಚ್ಛ ; ಹೂದಂಡೆ: ಮಾಲೆಗಾರ್ತಿಯರ ಮೇಲ್ಗೈಗಳೊಳ್ ಸಾಲೊಂಡು ನೇಲ್ವ ಮಾಲೆದೊಡಂಬೆಯಂ ತೂಗಿ (ರಾಪಾಶ. ೨-೨೪). [ಮಾಲೆ + ತೊಡಂಬೆ$_2$]

**ಮಾಲೆದೊಡರ್** (ನಾ). ಹೂವಿನ ಆಭರಣ ; ಪುಷ್ಪಾಲಂಕಾರ : ಪಗಲ ಕೆಯ್ದಾವಿಗೆಯ ಕಾಲ ಪಾಪೆಯ ಮೊತ್ತದ ಬಾವುಲಿಯ ಮಾಲೆದೊಡರ ಮಾಸಾಳ್ಗಳ ಮಂತ್ರಣದೊಳಂ (ಗಂಕ. ೨-೧೧೫ವ). [ಮಾಲೆ + ತೊಡರ್$_2$]

**ಮಾಲೆಪೂವು** 'ಮಾಲೆವೂ' ನೋ.

**ಮಾಲೆವಡಿಗ** (ನಾ). ಹೂವಾಡಿಗ ; ಮಾಲೆಗಾರ : ಮಾಲೆಯಿಂ ಜೀವಿಸುವಂ, ಮಾಲೆವಡಿಗಂ (ಕಶಾ ಪು. ೪೧೬ ಕ್ರ ಯೋ).
[ಮಾಲೆ + — ವಡಿಗ]

**ಮಾಲೆವಡಿಗಿತಿ** (ನಾ). ೧. ಹೂವಾಡಿಗನ ಹೆಂಡತಿ. ೨. ಹೂವಾಡಿಗಿತ್ತಿ: ಪಾವಡಿಗಿತಿ, ಪೂವಡಿಗಿತಿ, ಮಾಲೆವಡಿಗಿತಿ (ಕಶಾ ಪು. ೦೯೨ ಕ್ರ ಯೋ).
[ಮಾಲೆವಡಿಗ + — ಇತಿ$_1$ (< — ಇತ್ತಿ)]

**ಮಾಲೆವೂ , ಮಾಲೆಪೂವು** (ನಾ). ೧ ಹೂವಿನ ಹಾರ; ಪುಷ್ಪಸರ: ಕತ್ತುರಿಬೊಟ್ಟನಿಟ್ಟು ಬಿಡುಮುತ್ತಿನ ಸೇಸೆಯನಿಕ್ಕಿ ಮಾಲೆವೂವೆತ್ತಿ . . . ವಿದೇಹಿ ಸಾರಘನಸಾರದ ರನ್ನದ ಬಾಯಿನಂಗಳಿಂ ಚಿತ್ರವಿಕಾಸಮಂ ಪಡೆದಳಂದಪರಾಜಿತೆಗಂ ಸುಮಿತ್ರೆಗಂ (ಶಂರಾಪು. ೫-೦೨೮); ಸೌರಭಚಯಂ ಸುಯ್ಗಂಪಿನಿಂದಾವಗಂ ದಳವೇಱುತ್ತಿರೆ ಪೂತ ಜಂಗಮಲತಾಸಂದೋಹಮೆಂಬಂತೆ ಕಣ್ಗೊಳಿಸುತ್ತಿರ್ಪುದು ಮಾಲೆವೂದಳೆದ ಮಾಲಾಕಾರನಾರೀಜನಂ (ಚಂದ್ರಪು. ೦-೦೩೨) ; ಪುಲ್ಲವಡಿಗಿತಿಯರೆತ್ತಿ ಪಿಡಿದ ಮಾಲೆವೂವಿನ ನಱುಗಂಪಿಂಗೆ ಕವ್ವರೆಗೊಂಡು ಮುತ್ತಿ ಮುಸುಱಿ ಮೊರೆವ ಮಱಿದುಂಬಿಗಳೆಂಚರದೊಳಂ (ಕಬ್ಬಿಗ. ೪೪). **ಮಾಲೆಪೂವು** : ೨. ಹಾರವನ್ನು ಕಟ್ಟುವುದಕ್ಕಾಗಿ ಬೆಳೆಸುವ ಹೂವು : ನನ್ದಾದೀವಿಗೆಗೆ ಸೊಡರೆಣ್ಣೆಗೆ ಘಾಣ ೧ ಮಾಲೆಪೂವಿಗೆ ತೋಟ ೧ (ಸೌಇ. XX, ೨೬-೦೯; 1040).
[ಮಾಲೆ + ಪೂ$_2$]

**ಮಾಲೆವೂಗಾಱ** (ನಾ). = ಮಾಲೆಗಾಱ : ಮಡಿವಾಳ ಮಾಲೆವೂಗಾಱ ಕುಂಬಾಱ . . . ಚೋಳಾಯತರ ಕೇರಿಗಳೆಡವಿಡದೊಪ್ಪಿದವಲ್ಲಲ್ಲಿ (ತ್ರೀಪಾಂ. ೦-೭೭). [ಮಾಲೆವೂ + — ಕಾಱ]

**ಮಾಲೆವೂಡು** (ಕ್ರಿ). ಮದುವೆಯಲ್ಲಿ ಮಾಲೆಯನ್ನು ಹಾಕು : ವರಿಸು : ಅಂತೆಯ್ದಿ ಸೋಲ್ತುಮಧಿಕಲಜ್ಜಾಭಾವದಿಂ ಮಾಲೆವೂಡಲಱಿಯದೆ ಕುಮಾರಗ್ರೀವಾಳೋಕನೆಯಾಗಿರೆ (ಶಾಂತಿಪು. ೫-೦೫೮ ವ).
[ಮಾಲೆ + ಪೂಡು]

**ಮಾಲೆಸೂಡು** (ಕ್ರಿ). = ಮಾಲೆವೂಡು : ಸ್ವಯಂಬರದೊಳ್ ಸುಮತಿಯೆಲ್ಲರಂ ನೋಡಿಯಾರುಮಂ ಮೆಚ್ಚದೆ ಸಿರಿದಿಣ್ಣಂಗೆ ಮಾಲೆಸೂಡಿದೊಡೆ (ವಡ್ಡಾ. ೦೦೮-೨೦); ಚೆಲ್ವಿಡಿದಿರ್ದ ರೂಪು ದೃಷ್ಟಿಗೆ ಪರೆ ಪಾಂಡುರಾಜನನೆ ಕುಂತಿ ಮನಂಬುಗೆ ಮಾಲೆಸೂಡಿದಳ್ (ಶಂಶಾ. ೦-೦೦೬); ನೀಳ್ದ ಬಾಹುಲತೆ ತೋಳ ಮೊದಲ್ ಮದನಾಸುರಾಗಮುಂ ಸಾಲಿಡೆ ಸಾರ್ದು ಸೀತೆ ರಘುವಂಶನಮೇರುಗೆ ಮಾಲೆಸೂಡಿದಳ್ (ಶಂರಾಪು. ೫-೯೫). [ಮಾಲೆ + ಸೂಡು$_1$]

**ಮಾಲೋಪಮಾನ** (ನಾ). [ಕಾವ್ಯಮೀ] ಅನೇಕ ಉಪಮಾನಗಳು ಸಾಲುಸಾಲಾಗಿ ಹೆಣೆದು ಬರುವ ಒಂದು ಶಬ್ದಾಲಂಕಾರ : ಜನಿತ ಪ್ರಗಲ್ಭದೊಳ್ [ಮಾನ]ದೊಳ್ ಮಾಹಾತ್ಮ್ಯದೊಳ್ ನಿಜೋದಾರತೆಯೊಳ್ ಅನುಪಮಗುಣದೊಳ್ ಶ್ರೀಶಂ ಘನಮೆನೆ ಮಾಲೋಪಮಾನಭೇದಮಿದಕ್ಕುಂ (ಕವಿರಾ. ೩-೮೦). [ಸಂ.]

**ಮಾಲೋಪಮೆ** (ನಾ). = ಮಾಲೋಪಮಾನ : ಉಪಮಾಲಂಕಾರವೂ ಒಮ್ಮೊಮ್ಮೆ ದೀಪಕಾಲಂಕಾರದ ಛಾಯೆಯನ್ನೊಳಗೊಳ್ಳಬಹುದು. ಇದಕ್ಕೆ 'ಮಾಲೋಪಮೆ'ಯೇ ಉದಾಹರಣೆ (ಧ್ವನ್ಯಾಲೋ. ೨೦೪).
[ಸಂ. ಮಾಲೋಪಮಾ]

**ಮಾಲ್ಕಿ, ಮಾಲಕಿ, ಮಾಲ್ಕೀ** (ನಾ). ಒಡೆತನ ; ಸ್ವಾಮ್ಯ : ಮಾಮಲೇದಾರರಿಗೆ ಈ ತೋಟವು ತಮ್ಮಿಬ್ಬರ ಮಾಲ್ಕಿಗೆ ಸೇರಿದ್ದು, ಇಬ್ಬರೂ ಅದನ್ನು

ಸಾಗುವರ ಮಾಡುತ್ತಿರುವುದಾಗಿ . . . ಸಾದರಪಡಿಸಿದ್ದ (ಪುಶಪ. ೮). **ಮಾಲಕಿ :** ಹೊಲಗಳು ಯಥಾಪ್ರಕಾರ ಲಾವಣಿಯಾಗಿದ್ದವು. ಅವುಗಳ ಮಾಲಕಿ ನರಹರಿಯ ಹೆಸರಿನಲ್ಲಿ ನಡೆಯಬೇಕು (ಸಪುಶಾ. ೯೯೬). **ಮಾಲ್ಕೀ :** ಅನಂತಶಯನಗುಡಿಯ ಎದುರಿನ ಮನೆಯ ಹಿತ್ತಲದಲ್ಲಿ ನಮ್ಮ ಮಾಲ್ಕೀಯ . . . ಒಂದು ಮನೆಯಿದೆ (ಶಕ್ತರ್ಮ. ೧೮೦); ಇಷ್ಟ ದಿನಾ ಈ ಆಸ್ತಿನಾ ಉಣಕೋತ ಬಂದೀನು, ಇನ್ನ ಮ್ಯಾಗ ಅದರ ಮಾಲ್ಕೀ ನಿಂದ ಆತು (ಗ್ರಾಪೂಡು. ೦೦).

[←ಪಾರ. ಮಾಲಿಕ್; ಹಿಂ. ಮಾಲಿಕೀ; ಮರಾ. ಮಾಲಕೀ]

**ಮಾಲ್ಕೀ** 'ಮಾಲ್ಕಿ' ನೋ.

**ಮಾಲ್ಕೀಹಕ್ಕು** (ನಾ). ಒಡೆತನದ ಹಕ್ಕು; ಸ್ವಾಮ್ಯದ ಅಧಿಕಾರ : ಗೌರೀಶ . . . ಕಾಮಿನಿಯತ್ತ ಮಾಲ್ಕೀಹಕ್ಕಿನಿಂದ ಕಣ್ಣು ಸಣ್ಣಗೆ ಮಾಡಿ ಮುಗುಳುನಗೆ ಬೀರಿದ (ಮುಕ್ತ. ೧೭೦). [ಮಾಲ್ಕೀ (< ಮಾಲ್ಕಿ) + ಹಕ್ಕು₂]

**ಮಾಲ್ಗುಜಾರಿ** 'ಮಾಲಗುಜಾರಿ' ನೋ.

**ಮಾಲ್ಮೆ** (ನಾ). ಸಲುಗೆಯಿಂದ ಉಂಟಾದುದು : ಅಧಿಕಪರಿಚಯದಿಂದಾದುದು: ನೀನು ಮಹಾರಾಣಿಯಾಗುವುದಕ್ಕೆ ನಾನು ಅಡ್ಡಬರಬಾರದು. ಅಕ್ಕನಿಗೆ ಕಲ್ಯಾಣವಾದರೆ ನನಗೂ ಸಂತೋಷವಲ್ಲವೆ ? ಹತ್ತಾರು ವರ್ಷ ಒಟ್ಟಾಗಿದ್ದುದರ ಮಾಲ್ಮೆ ಈ ಕಣ್ಣೀರು (ಶಾಂತಲಾ. ೬೯).

[ದೇ.೩ ತಮಿ. ಮಾಲಿಮಿ = ಚಿಕ್ಕಂದಿನ ಸ್ನೇಹ; ತೆಲು. ಮಾಲಿಮಿ = ಸಲುಗೆ, ವಾತ್ಸಲ್ಯ]

**ಮಾಲ್ಯ** (ನಾ). ೧. ಹೂವಿನ ಹಾರ,- ಸರ : "ಸ್ರುಗ್. ಮಾಲಾ, ಮಾಲ್ಯಂ – ಈ ೩ ಹೂವಿನ ಮಾಲೆ" (ಕಲಾಯು. ೯೦–೩೯೮); ವಸನಾಭರಣ ಮಾಲ್ಯವನು ಲೇಪನಾದಿಗಳನೆಸೆವ ವಾಹನವು ಮೊದಲಾದವೆಲ್ಲವ ಕೊಡಲು (ಶ್ರೀಶಣ. ೦೯–೩೩) ; ಅರಸನತಿಪ್ರಮೋದದಿನಪರಿಮಿತಧನಕನಕವಸನಮಾಲ್ಯಮಣಿಭೂಷಣಂಗಳಿಂ ಮಾಹೇಶ್ವರಾರಾಧನಂಗೆಯ್ದು (ರಾಶಕೇ. ೯–೩೬೮). ೨. [ಜೈನ] ಭೋಗಭೂಮಿಯ ಹತ್ತು ವಿಧವಾದ ಕಲ್ಪವೃಕ್ಷಗಳಲ್ಲಿ ಒಂದು : ಹೂಮಾಲೆಗಳನ್ನು ಒದಗಿಸುವ ಕಲ್ಪವೃಕ್ಷ : ಮಾಲ್ಯತೋದ್ಯಜ್ಯೋತಿರ್ಮಾಲ್ಯಾಭರಣಪ್ರದೀಪವನನಾಶನ ಸತ್ಕಲ್ಯಗೃಹ ಪಾತ್ರ ರಾತ್ರಿಗುಣಾಳ್ಯರ್ಜಿತ ದಶವಿಕಲ್ಪಕಲ್ಪಕುಜಂಗಳ್ (ಶಾಕ್ಯ೯ಪು. ೦೬–೩೯).

[ಸಂ.]

**ಮಾಲ್ಯಪುಷ್ಪ** (ನಾ). ಒಂದು ಬಗೆಯ ಸೆಣಬು : "ಮಾಲ್ಯಪುಷ್ಪ – ಕಿಚಿಯ ಸಣಬು" (೬ಶಂ. ೦೨೯). [ಸಂ.]

**ಮಾಲ್ಯಮಹೀಜ** (ನಾ). = ಮಾಲ್ಯ ೨ : ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಿಂ. ಬಗೆಯಚಿದೋಲಗಿಪುದು ಮಾಲೆಗಾಜಿಸಂ ಪೋಲ್ತುದಗ್ರಮಾಲ್ಯಮಹೀಜಂ (ಆದಿಪು. ೩–೪೬). 'ಮಾಲ್ಯಾಂಗ' ಪರಾ. [ಸಂ.]

**ಮಾಲ್ಯವಂತ** (ನಾ). ೧. ಮಾಲೆಯಿಂದ ಅಲಂಕರಿಸಲ್ಪಟ್ಟವನು ; ಹಾರವನ್ನು ಧರಿಸಿದವನು. ೨. ಒಂದು ಪರ್ವತದ ಹೆಸರು: ತಾನೆಡೆಗೆಡೆಗೆ ಗಂಗಾಜಲೋದ್ಧತಿಗೆ ತವೆ ಸವೆವುತಿಹ ಮಾಲ್ಯವಂತದ ಹವಣೆನಿತು (ಐಶಪು. ೦೯–೨೬) ; ಸಿತಾಂತ . . . ಮಾಲ್ಯವಂತ . . . ವೈಕಂತಕವೆಂಬೈದು ನಗಂಗಳೇ ಮೂಡಣಮಂದರಗಿರಿಯ ಟೆಂಕಣ ಗಂಧಮಾದನಶೈಲದ ಮಧ್ಯಭಾಗದಲ್ಲಿರುವುವು (ಐವೇಲ. ೨೦೯). ೩. ಒಬ್ಬ ರಾಕ್ಷಸನ ಹೆಸರು.

[ಸಂ. ಮಾಲ್ಯವತ್]

**ಮಾಲ್ಯಾಂಗ** (ನಾ). = ಮಾಲ್ಯ ೨ : ಅದಿಮುರ್ನತ್ತೆಯ ವಕುಲದ ನಾಗದ ಪೊಂಗೇದಗೆಯ ಹೇಮತಾಮರಸದ ಕುಂದವ ಬಣ್ಣವಾಸಿಗಂಗಳನುದಾತ್ತಮಾಲ್ಯಾಂಗಮಹಿರುಹಂ ಕುಡುತಿರ್ಕುಂ (ಶಾಂತಿಪು. ೬–೦೧೨) ; ಮಾಲ್ಯಾಂಗಮೆಂಬುದು ಜಾತಿ ಕೇತಕಿ ಮರುವಕ ಪ್ರಭೃತಿ ಸರ್ವರ್ತುಕಧಾಮವಿಶೇಷಂಗಳನೀವುದು (ಜಾಪುಂಪು. ೯). 'ದೀಪಾಂಗ' ಪರಾ. [ಸಂ.]

**ಮಾವ** 'ಮಾಮ' ನೋ.

**ಮಾವಂತ**, ಮಾವತ, ಮಾವುತ, ಮಾವ್ತ, ಮಾಹುತ (ನಾ). ಆನೆಯನ್ನು ನಡೆಸುವವನು ; ಮಾವಟಿಗ : "ಹಸ್ತಿಪಕಃ, ಹಸ್ತ್ಯಾರೋಹಃ, ನಿಷಾದೀ – ಈ ೩ ಮಾವಂತಂ" (ಕಲಾಯು. ೩೮–೭೨) ; ಕರಿಕರಮುಂ ಮಾವಂತನ ಕರಮುಂ ತೆಕ್ಕಾಂಡ್ಯಶಿರಮುಮೊಡನುರುಳೆ (ಸಂಶಪಾ. ೦೨–೮೬): ಮುರರಿಪು ರಾಮರ್ ಸುಬೇದರ್ ಕರಿಶಿಕ್ಷಕರಶ್ವಶಿಕ್ಷಕರ ಜೋದರ ಮಲ್ಲರ ಮಾವಂತರ ಮಂದುರಿಗರ ನೆಗಟ್ದ ವಾಸವಾರಿಗಳ ಕೇರಿಗಳೊಳ್ (ಜಗಬು. ೬–೨೬) ; ಕರಿಗಳನು ಕೌರವನ ಮಾವಂತರಿಗೆ ಕೈಗೊಳಿಸಿದರು (ಕುವ್ಯಾಸ. ೧೬–೭೨). **ಮಾವತ :** "ನಿಷಾದಿ ಹಸ್ತ್ಯಾರೋಹನೆನಲು ಮಾವತನಕ್ಕು" (ಪುಂಗಲ. ೯೬–೩) ; ಉಬ್ಬಿ ನಡೆದು ಬರುತಿಹ ಕರಿಘಟೆಗಳನಬ್ಬರಿಸಿಯೆ ಮಾವತರು ಕೊಬ್ಬಿದ ತನುವ ತಿವಿದು ಮೇಘವತ್ತಣೆಗೆಬ್ಬಿಸಿದರು ಸಬಳಿಗರು (ಅಂಬಕ. ೬–೦೨೯). 'ಮಾವತಗೇರಿ' ಪರಾ. **ಮಾವುತ :** "ಜೋದಂ ಮಾವುತನು" (ಕವಿಕಂ. ೦೩೨) : ತತ್ತುರಗಾಳಿಯುಂ ಖಂಡತುಂಡಮದಾಗೆ ಪೊಯ್ದುತಿರೌದ್ರದಿಂ ಬರೆ ಮಾವುತರ್ (ಉದ್ಭಟ. ೯–೭೮); ರಾವುತರು ಸೆಲ್ಲಿಸಿದರಗ್ಗದ ಮಾವುತರನಾನೆಗಳ ತುಡುಕಿ ಹಯಾವಳಿಯ ಬೀಸಿದರು ರಥಿಕರು ಹಾಯ್ಸಿದರು ರಥವ (ಕುವ್ಯಾಶ. ೨–೦೩) ; ಗಿರಿಶಿಖರದೆ ಪೂ ತುಂಬಿದ ಕಕ್ಕೆಯ ಮರದಂತೆಯತಿಚೆಲುವಿಂದ ಪರಿಪರಿಯಾಭರಣದ ಶೃಂಗಾರದೆ ಮೆಚಿದರು ಮಾವುತರಾಗ (ಕಂಪಬಿ. ೨೩–೦೦೯). **ಮಾವ್ತ :** ಮೊಜಿವ ಬೊಬ್ಬೆಗೆ . . . ಮಾವ್ತರಂ ಕೆಡೆಪಿಯಾನೆಗಳ್ ತಿರುಗುತಿರ್ದುವು (ಕೆಂಪು. ೨೯–೨೯) ; ಹೊಕ್ಕು ಮಾವ್ತರ ಮುರಿದು ಗಜಗಳ ಡೊಕ್ಕೆಯೊಳು ಚಾಚಿದರು (ಅಪಂಲ. ೬–೮–೩೬) ; ಮೊರೆಮೊರೆದು ಹೂಂಕರಿಸೆ ಮಾವ್ತರು ಕರದಿ ತಟ್ಟುತ ಮಸ್ತಕಾಗ್ರವ ಹೊರಜೆ ಘಂಟಾವಳಿಯ ಸೈತಿರಿಸುತ್ತ ತರುಬುವರು (ಕೋಗಯ. ೨೦–೦೩). **ಮಾಹುತ :** ಮದಕರಿಯ ಮಾಹುತನ ಕುದುರೆ ತಾ ರಾಹುತನ ಹದುಳವನಜಿದು ನಡೆವಂತೆ ಸೂಳೆ ತನಗೊದಗುವರನಜಿಗು (ಸರ್ವಜ್ಞ. ೦೯–೦೩) ; ಅವನ ಚಿತ್ತವು ಮದ್ದಾನೆಯನ್ನು ಪಳಗಿಸುವ ಮಾಹುತನ ಕಜ್ಜವನ್ನು ಎಸಗುತ್ತಿರಲಿಲ್ಲ (ರೂಪುಮು. ೦೬). 'ಮಾವಂತಿಗ', 'ಮಾವಟಿಗ' ಪರಾ. [< ಪ್ರಾ. ಮಹಾಮತ್ತ./ಸಂ. ಮಹಾಮಾತ್ರ./ ತಮಿ. ಮಾವುತ್ತನ್ ; ತುಳು. ಮಾವತೆ, ಮಾವುತೆ; ತೆಲು. ಮಾವುತುಡು./ ಹಿಂ. ಮಹಾವತ್ ; ಮರಾ. ಮಾಹೂತ್, ಮಾಹೂವ್, ಮಹಾತ್, ಮಹಾದ್]

**ಮಾವಂತಿಗ**, ಮಾವತಿಗ, ಮಾವುತಿಗ (ನಾ). = ಮಾವಂತ : ನಿಸಾದಿ– ಮಾವಂತಿಗಂ (ಕಮುದ. ೨೩೬ ಅಡಿ): ಗಂಧಸಿಂಧುರಂ . . . ಯದೃಚ್ಛೆಯಿಂದತ್ತಲಿತ್ತಲ್ ಪರಿದೋಡಿ ಮಾವಂತಿಗನಂ ಕಾಡುತ್ತುಮಿರ್ದುದಂ ಮೆಲ್ಲಮೆಲ್ಲನೆ ಸಾಮೋಪಾಯಪ್ರಯೋಗದಿಂದಲಾನಸ್ತಂಭದಂತಿಕಕೆ ತಂದು ನಿಲಿಸುವುದುಂ (ಚಾರಪು. ೮–೨೬ ಪ). **ಮಾವತಿಗ :** ಗಗನಪವನದ ಮೇಲೆ ಉದಯಮುಖವನುಭಾವ ಸದಮದಗಜವ ನಿಲಿಸುವ ಮಾವತಿಗ ಬಂದ (ಅವಶಂ. ೦೮೦–೮೦೦): ಮಾವತಿಗನ ಕಾಲಂ ಪಿಡಿದೋವದೆ ಸೆಳೆದವನನಿಕ್ಕಿಯಂಕುಸಮಂ ಕೊಂಡಾ ವಾರಣಮಸ್ತಕದಿನಿಳಾವಲ್ಲಭನಿರ್ದನತುಳಸತ್ತ್ವಸಮಗ್ರಂ (ದಶಕು. ೭–೦೦೨); ರಾವುತರ ಮಾವತಿಗರ ತೇರಾಳ್ಗಳ ಚಪ್ಪರಣೆಯೊಳ್ ಕಿಳಿರ್ವ ಹಯದ ಗೀಟಿಡುವಾನೆಯ ಕಿಜಿಗಿಜಿವ ಪೊಂದೇರೋರಣಮಿಂಬಿಡದಿರೆ. . . ಪಡೆ ನಡೆಯುತುಮಿರ್ದುದು (ರಾಪುಾಕ್ಯ. ೩೦–೩). **ಮಾವುತಿಗ :** ಪುನ್ನಾಗಂ ಪತ್ತಿ ರಂಜಿಸಿದರ್ಚದುರಮಾವುತಿ [ಪಾಠಾಂ. ವಟಿ]ಗರಂತೆ . . . ಬನದೊಳ್ಪೆಣ್ಗಳು (ಕ್ಯಶುಭ. ೬–೨೨). 'ಮಾವಂತ', 'ಮಾವಟಿಗ' ಪರಾ.

[P 'ಮಾವಂತ' ಮತ್ತು 'ಮಾವಟಿಗ' ಈ ಎರಡು ಸಮಾನಾರ್ಥವುಳ್ಳ

ಶಬ್ದಗಳ ಪ್ರಯೋಗದಲ್ಲಿ ಗೊಂದಲವುಂಟಾಗಿ ಈ ಶಬ್ದವು ರೂಪುಗೊಂಡಿರಬಹುದು]

**ಮಾವಟ** 'ಮಾವಟಿಗ' ನೋ.

**ಮಾವಟಿಗ,** ಮಾವಟಿ (ನಾ). = ಮಾವಂತ : "ಆಧೋರಣಃ, ಹಸ್ತಿಪಕಃ, ಹಸ್ತ್ಯಾರೋಹಃ, ಪಕ್ಷಾದಿನ್—ಈ ೪ ಮಾವಟಿಗ" (ನಾಚರಾ. ೦೩೪); ಅಟಿಗ ಪ್ರತ್ಯಯಕ್ಕೆ—ಕೊಲ್ಲಟಿಗಂ, ದೀವಟಿಗಂ, ಮಾವಟಿಗಂ (ಶಬ್ದ. ೨೦೪ ಪ್ರಯೋ); ಭರಿಕರ ಭರೀರದೊಳು. . . ಶಿರ ಶಿರದೊಳು ತಾಗೆ ವೈರಿಕರಿಗಳು ಪೊಣರ್ದವು ಮಾವಟಿಗರು ಮೇಲೆ ಕರವಾಳುಗಳೊಳು ಪೊಯ್ದಾಡೆ (ಪರ್ವತ. ೬-೦೦೬); ಪೊಣರ್ಚಿಸಿದಪನಾನೆಯಂ ಮಾವಟಿಗನಿನರಸಂ (ಶಬ್ದಾ. ಸು. ೩೯೦ ಪ್ರಯೋ). **ಮಾವಟಿ :** ಹೊಳೆವ ಸೂನಗಿ ನೂಂಕುತಿಹ ಮಾವಟಿಯಿಂದ ತಳರ್ದವು ಸೊಕ್ಕಿವಾನೆಗಳು (ಪರ್ವತ. ೬-೦೦೫) : ರಾಯಘಡ, ಸಿಂಹಘಡಗಳ ನಡುವಣ ಹಸುರುಹರಹಿನ ಮೇಲೆ ತಾವು ಮಾವಟಿಗಳು (ಬಳಜಃ. ೩೮).
[ಮಾ₁ + — ಅಟಿಗ./ತೆಲು. ಮಾವಟ, ಮಾವಟೀಡು]

**ಮಾವಡು** (ನಾ). (ಸಾಮಾನ್ಯವಾಗಿ ಉಪ್ಪಿನಕಾಯಿಗೆ ಬಳಸುವ) ಮಾವಿನ ಮಿಡಿ,–ಹೀಚು : ಕೂಲಿಯೋಗರದಕ್ಕಿ ಕೊಯಿಕೀರೆಯುಂ ಕೊಂಡು ಮೇಲುಗಂಪಿಡುವ ಮಾವಡುವನೊಲವಿಂ ಕೊಂಡು. . . ಬರೆ (ಅಂಕ. ದೇ. ೦೭೩-೨೦) ; ಸವಿದರೆ ಈ ಮಾವಡುವನ್ನು ಸವಿಯಬೇಕು (ಹಸುಹೂ. ೦೪). [ದೇ.॥ ತಮಿ. ಮಾವಡು, ಮಾವಟಿ]

**ಮಾವಡೆ** (ನಾ). ದಾನವಾಗಿ ಕೊಟ್ಟ ಭೂಮಿಯಲ್ಲಿ ದೊರಕುವ ಬೇಟೆಯ ಪ್ರಾಣಿಗಳು ಮತ್ತು ಅವುಗಳಿಗೆ ಸಂಬಂಧಿಸಿದ ಒಂದು ಬಗೆಯ ತೆರಿಗೆ : ಚತುಃಸ್ಸೀಮಾಮಧ್ಯದೊಳಗೆ ಸಲುವ ಗದ್ದೆ ಬೆದಲು ತೋಟ ತುಡಿಕೆ ಮಾವಡೆ ಮರುವಡೆ ನಿಧಿ ನಿಕ್ಷೇಪ . . . ಸ್ವಾಂಮ್ಯಾಂಗಳುಂನ್ನು ಶ್ರಿಂಗ್ಗೇರಿ ಶ್ರೀಮಠಕ್ಕೆ . . . ಶ್ರೀವಿಜಯದೆಂಕಟಪತಿರಾಯ ರೈಯ್ಯನವರು ಬರಸಿ ಕೊಟ ಭೂದಾನಶಾಸನ (ಮೈಕಂ. ೦೯೩೩, ೩೨-೩೨; 1318) ; ಈ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ . . . ಮಾವಡೆ ಮರವಡೆ ಕಳುವಡೆ ನಾರಡೆ ಬಳುಕುನೀರು ಊರ ಸಂತೆ ಮೊದಲಾದ ಹಲ ಉಪಾಧಿಗಳು ಸಹ . . . ಸರ್ವಮಾನ್ಯವಾಗಿ ಆಚಂದ್ರಾರ್ಕ ಸ್ಥಾಯಿಯಾಗಿ ಅನುಭವಿಸಿಕೊಂಡು (ಸೌಇಇ. IX–ii, ೪೬೬-೬; ಕು. 1472) ; ಯಿಾ ಚತುಸ್ಸೀಮೆಯೊಳಗಿನ ತೋಟ ತುಡಿಗೆ ಗದೆ ಬೆದಲು ಮಾವಡೆ ಮರವಡೆ ನಿಧಿ ನಿಕ್ಷೇಪ . . . ಎಂಬ ಅಷ್ಟಭೋಗತೇಜಸ್ಸ್ವಾಂಮ್ಯಗಳನ್ನು ನೀವೇ ಅನುಭವಿಸಿಕೊಣ್ಣು ಬರಲುಳ್ಳವರೆಂದು . . . ಬರೆಸಿಕೊಟ್ಟ ಭೂದಾನ ಶಾಸನ (ಎಕ. X, ಮುಳಬಾ. ೦-೩೬ ; 1577 ?). 'ಮರವಡೆ' ಪರಾ.
[ ← ತಮಿ. ಮಾವಟ್ಟೈ, ಮಾವಿಟ್ಟೈ ]

**ಮಾವಣ್,** ಮಾವಣ್ಣು (ನಾ). ಮಾವಿನ ಹಣ್ಣು : ಮಾವಣ್ಗಳಂ ಪೀರ್ವ ಕೀರವಿಟ್ಟಿಯ ಪಣ್ಗೆ ಚಿತ್ರಂ ಹಾರಿದವುದೇ (ಬಸಪು. ೦೦-೦೦) ; ಮಾವಣ್ಣರನೇಜಿಲ ಪಣ್ಗಳ ವೃಂದದಂಗಡಿಗಳೊಪ್ಪಿದುವು (ಶಶಿ. ೯೭-೨೦). **ಮಾವಣ್ಣು :** ತನಿಮಾವಣ್ಣಿನ ಮಧುರತೆ ಕಾಯೊಳು ಜನಿಪುದೆ (ಜೀವಂಧ. ೦೯-೯೬) ; ಪತಿಯಿತ್ತ ಮಾವಣ್ಣ ಯತಿಯೋರ್ವಗಿತ್ತಳುದ್ಧತಚಿತ್ತೆ ಕಾರಿಕಾಲಮ್ಮೆ (ಭೈರವೇ. ೪-೦೩೦) ; ಮಾವಣ್ಣನರಗಿಳಿ ಸವಿಪವೊಲಧರವಂ ಸವಿದು (ಕಂಪು. ೦೦-೩೯). [ಮಾ₁ (< ಮಾವು) + ಪಣ್₃]

**ಮಾವಣಿಗೆ** (ನಾ). (?) : 'ನುಸುಂಳ್ಮಾವಣಿಗೆ' ಪರಾ. [ ? ]

**ಮಾವಣ್ಣು** 'ಮಾವಣ್' ನೋ.

**ಮಾವತ** 'ಮಾವಂತ' ನೋ.

**ಮಾವತಗೇರಿ** (ನಾ). ಮಾವಟಿಗರು ವಾಸಿಸುವ ಬೀದಿ : ಮಾವತಗೇರಿ ರಾವುತಗೇರಿಯ ಸುತ್ತ . . . ಪಂಚಕಾರುಕರಾವಾಸಗಳಿರುತಿಹವು (ಅಂಚತ. ೬-೯೯). [ಮಾವತ (< ಮಾವಂತ) + ಕೇರಿ]

**ಮಾವತನ** (ನಾ). ಮಾವನಾಗಿರುವಿಕೆ : ಮಾವತನವಿದು ಬಿಜಿದೆ ಹೋಗದೆನುತ್ತ ಬಂದನು ಧರ್ಮಸುತ ನಗುತ (ಕುವ್ಯಾಶ. ೦೨-೩) ; ಮೆಚಿಯ ಮದವನು ಮಾವತನವದು ಹೊಜಗಿರಲಿ ಸಹದೇವ ನಕುಲರ ನಙಯಬಹುದಿನ್ನೆನುತ ಹೊಕ್ಕನು ಶಲ್ಯ ಪರಬಲವ (ಕುವ್ಯಾಶ. ೨-೪೬).
[ಮಾವ (< ಮಾಮ) + — ತನ]

**ಮಾವತಿಗ** 'ಮಾವಂತಿಗ' ನೋ.

**ಮಾವಮ್ಮ ?** (ನಾ). ಒಂದು ನದಿಯ ಹೆಸರು : ಮಹಾರಣ್ಯ ಮಜ್ಜಲಿಯ ಬದರಿನರ್ಮ ಪೂಳಿವಳ್ಳವ್ಮಾವಮ್ಮನಿತಿ ಕ್ಷುದ್ರನದೀತ್ರಯ ಪರಿಪೂರ್ಣ ವಾಪಿಮಹಾಸಮುದ್ರಪರಿಹಾಸಿಮಹಾತಟಾಕಮ್ (ಎಕ. III (R), ತಂಜವ. ೪೦೨-೬೬ ; 904). [ ? ]

**ಮಾವರ** (ನಾ). ಲಕ್ಷ್ಮಿಯ ಪತಿ : ವಿಷ್ಣು : ಮಾವರಂ ಕೊಬ್ಬಿದ ಹಿರಣ್ಯಾಕ್ಷನಂ ಕೊಲಲು (ವೀಕೃಶು. ೩-೦೦-೦೩) ; ಆವ ಗುಣವನು ನೋಡಿ ಒಲಿದಿತ್ತೆಯೊ ಕಾಣೆ ಮಾವರಾ, ನಿನ್ನನೆಂತು ನಾ ಗೆಲಿದೆಸರುಹಾ (ವಿಹೀರಿ. ೦೮-೨). [ಸಂ.]

**ಮಾವಲಿ,** ಮಾಹುರಿ₁, ಮಾಹುಲಿ (ನಾ). ೧. ಒಂದು ದೇವತೆಯ ಹೆಸರು : ಚೌಡರಿಗಳು . . . ಭವಾನಿ, ಮಾವಲಿ . . . ಪಾವನಾಯಿ ಇಷ್ಟು ದೇವತೆಗಳಿಗೆ ನಡಕೊಳ್ಳುತ್ತಾರೆ (ಕಜಾಗ. ೦೩೦). **ಮಾಹುರಿ₁ :** ೧. ತಾವರೆಗಂಗಾಳೆ ಬೆನ್ನಲಿರೊ ಕೋವಿದಗುಣಕೆ ಅಭಯ ಕೊಡುವ ಮಾಹುರೀ ಯಲ್ಲಮ್ಮಾ ಬನ್ನಿರೆನ್ನಾ ವಚನಕ (ಶ್ರೀಕ್ಷಪಾ. ೬೦). **ಮಾಹುಲಿ :** ೨. ಧರ್ಮಿಷ್ಠಳಾದ ಹೆಂಗಸು : ಅವಳು ಗರತಿಯ ಮಗಳು, ಮಾಹುಲಿಯಾಗಿದ್ದಾಳೆ (ಕೂಡಿ). [← ಮರಾ. ಮಾವಲೀ, ಮಾಹುಲೀ, ಮಾಲೂಲೀ]

**ಮಾವಶಿ,** ಮಾವಶೀ, ಮಾವಸಿ, ಮೌಸಿ (ನಾ). ತಾಯಿಯ ಒಡಹುಟ್ಟಿದವಳು ; ಚಿಕ್ಕಮ್ಮ ಅಥವಾ ದೊಡ್ಡಮ್ಮ : ಬೇರೆಯವರ ಮಾವಶಿಯರು ತಮ್ಮ ಅಕ್ಕನ ಮಗಳಿಗೆ ವಸ್ತ್ರ—ಒಡವೆ ಮಾಡಿಸಿಕೊಡುತ್ತಾರೆ (ಸ್ವಚಿತ. ೬೬). **ಮಾವಶೀ :** ಮಾವಶೀ ಇವನ್ನೆಲ್ಲ ಮಾಡಿದ್ದಾಳೆ (ಸ್ವಚಿತ. ೬೨). **ಮಾವಸಿ :** ನಿನ್ನ ಅಬಚಿಗೆ 'ಮಾವಸಿ' ಅನಬೇಕವಾ (ಬೀಳಕ. ೩೮). **ಮೌಸಿ :** ನಮ್ಮ ಮೌಸಿ ನಾಳೆ ಅಮೆರಿಕದಿಂದ ಬರುತ್ತಿದ್ದಾಳೆ (ಕೂಡಿ).
[← ಹಿಂ. ಮಉಸೀ, ಮಾಸೀ, ಮೌಸೀ ; ಮರಾ. ಮಾವಶೀ, ಮಾವಸೀ. ಪ್ರಾ. ಮಾಉಚ್ಛಾ, ಮಾಉಸಿಆ, ಮಾಉಸೀ, ಮಾಉಸ್ಸಿಆ, ಮಾಸಿಆ. ಸಂ. ಮಾತೃಷ್ವಸೃ, ಮಾತೃಸ್ವಸೃ]

**ಮಾವಶೀ** 'ಮಾವಶಿ' ನೋ.

**ಮಾವಸಿ** 'ಮಾವಶಿ' ನೋ.

**ಮಾವಳಿ** (ನಾ). ಮಹಾರಾಷ್ಟ್ರದ ಸಹ್ಯಾದ್ರಿಪರ್ವತಪ್ರದೇಶಕ್ಕೆ ಸೇರಿದ ಒಂದು ಕ್ಷತ್ರಿಯಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ : ಗಂಭೀರೋದ್ಧತಪರಿಖಾವರಣಭೀಷಣಶತಘ್ನೀಶತಸಂಕುಲಮತ್ತು ಮಾವಳಿಸೇನಾವಳೀವರ್ಜಿತ ಧರ್ಮಪುರೀಪ್ರಸಭಾಕ್ರಮಣ ಶ್ರವಣ ನಿರ್ಜನೀಕೃತ ಕೇಗೇರಿ . . . ಕನ್ನತ್ತೂರ್ ಮುಖ್ಯದುರ್ಗವರ್ಗನಿರಾಯಾಸಾಕ್ರಮಣನಿರ್ವೃತನಿಜಸೈನಿಕಸಮೂಹನಂ (ಶಕಂ. ೩೮-೨೩).
[← ಮರಾ. ಮಾವಳೀ]

**ಮಾವಳಿಗ** (ನಾ). = ಮಾವಳಿ : ನರಪತಿ ಕೇಳ್ನಿನ್ನೊಳ್ಪಡಿಬರಿಸಿದ ಮಾವಳಿಗಪಡೆಯನುಡುಗಿವ ನೆವದಿಂ ಪರಿಹರಿಸಿ ಪಾಪಮನಿತಂ ಸುರುಪ್ಪ ದೋಲರಿಸಿ ಸೊಗಮನಪುಗೊಳಿಸಿದಪ್ಪೆ (ಅಕ್ಷತ. ೬೪-೮೦).
[ಮಾವಳಿ + — ಗ₃]

**ಮಾವಳ್ಳಿ** (ನಾ). ಮಾವಿನ ಚಿಗುರು,—ಕುಡಿ : ಇದಿರ್ಗಾಳಿಗೊಲೆವ ಮಾವಳ್ಳಿಯ ದಾಂಗುಡಿಯ ನುಣ್ಪೊಗರೆ ಬಳ್ಳಿಮಿಂಚಾಗೆ . . . ಬನಂ

ಮಾನಂಗೊಂಡುದು (ಉಪಕಾಶ್ಯ. ೩೪-೦೨). [ಮ್ಮಾ₃ (< ಮಾವು) + ಬಳ್ಳಿ]

**ಮಾವಾಣೆಗ** (ನಾ). (?) : ಮಾವಾಣೆಗರುಂ ಇರ್ಗ್ಗರೆಯ ಪಾದಪ್ಪಡಿಗಳುಂ ಆನೆಸಾಣಸಲಾ ಬೀರಡಿಗಳುಂ ಮಾರಡಿಗಳುಂ . . . ಇ ಪೊಲನಂ ನಡೆಯಿಸಿ ದೋರ್ (ಎಇ. XVI. ಗುಬ್ಬಿ. ೭೩-೫೩ ; 733). [ ? ]

**ಮಾವಾನಿಕೆ ?** (ನಾ). (?) : ಕನಕಮಣಿಪ್ರವ್ಯಗಳ ದಿವಿಜರ ವನಿತೆಯರ ನಮರಾವತಿಯ ತಾನಿನಿತುವನು ವಿಂಗಡಿಸಿ ನಿಮ್ಮಡಿಗೀವೆನೀ ಕ್ಷಣದಿ ವನಿತೆ ಮಾವಾನಿಕೆಯುಳಲ್ಲವೆ ನೆನೆಯಬೇಡೆನಿತುಗ್ರಕರ್ಮವನೆನಲು ಸುರಪನ ಕೊಲ್ಲಲೆ ಸೆಗಿದರಿದ್ದು ತಮತಮಗೆ (ಕಂಐಾ. ೩೪-೯೦). [ ? ]

**ಮಾವಿ₁** (ನಾ). ಭ್ರೂಣದ ಮೇಲಿನ ಪೊರೆ ; ಮಾಸು ; ಜರಾಯು : 'ಮಾವಿಚೀಲ' ಪರಾ.

[ದೇ.₂ ತಮಿ. ಮಾ ; ಮಲ. ಮಾ, ಮಾವು ; ತೆಲು. ಮಾವಿ]

**ಮಾವಿ₂** (ನಾ). ೧. ಹಳದಿಮಿಶ್ರಿತವಾದ ಹಸಿರುಬಣ್ಣ : (ಕ). ೨. ಪಾರಿವಾಳದ ಬಣ್ಣ ; ಬೂದುಬಣ್ಣ : ಮಾಲದಲ್ಲಿ ಪಾರಿವಾಳದ (ಮಾವಿ) ಬಣ್ಣದಂಥಾ ಕಾಳುಗಳು ಕೂಡಿರಬಾರದು (ಮುಂಐತ್ಯಾ. ೫೫): ಪಾರವಳದ (ಮಾವಿ) ಬಣ್ಣ, ದಾಲಚಿನಿಯ ಎಣ್ಣೆ, ಗುಲಾಬನೀರು (ಮುಂಐತ್ಯಾ. ೦೦೦). [ ?]

**ಮಾವಿಚೀಲ** (ನಾ). = ಮಾವಿ₁ : "ಗರ್ಭಾಶಯಃ . ಜರಾಯುಃ – ೨ ಬಸುರೊಳಗೆ ಸುತ್ತಿಕೊಂಡಿರುವ ಮಾವಿಚೀಲದ ಹೆಸರು" (ಸಿದ್ಧಾಂತ. ೫೬). 'ಮಾಸಂಚೀಲ' ಪರಾ. [ಮಾವಿ₁ + ಚೀಲ]

ಮಾವಿನಶುಂಠಿ (ನಾ). (ಉಪ್ಪಿನಕಾಯಿಗೆ ಹಾಕಲು ಬಳಸುವ) ಒಂದು ಬಗೆಯ ಸುವಾಸನೆಯ ಬೇರು : ಮಾವಿನಶುಂಠಿ. ಕರ್ಪೂರಅರಿಸಿನ (ಪ್ರುಶಿ. ೨೬-೯೮೬). [< ಮಾವು + ಶುಂಠಿ]

**ಮಾವಿನೂರ್** (ನಾ). ಒಂದು ಊರಿನ ಹೆಸರು : ಚನ್ದ್ರತೇಜಭಟ್ಟಾರರ್ಗ್ಗೆ ಮಾವಿನೂರೊಳ್ ಬಗೆಗ[ನು] ಕೊಟ್ಟವರ್ ಸಾವಿರ(ವ್) ಬಳ್ಳಿಯ ತೋಣ್ಟದ ಸಾಮ್ಯವು (ಎಇ. XXVI. ೬೨-೦೯; 906).

[< ಮಾವು + ಊರ್]

ಮಾವು (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಚೂತ : "ಸಹಕಾರಮಾವುಂ ಚೂತಮೆನೆ ಮಾವೆನಿಕ್ಕುಂ" (ಶಬ್ದಮ. ೫೯-೦೦); ತುಱುಗಿದ ಪೂಗೊಂಚಲ ಕಾಡ್ಗೊಱೆದ ಮಾವುಗಳ ಬೆಳೆದ ಕಾಯ್ಗಳ ಗೊನೆ ತಳ್ತೆಱಗಿರೆ ಮಾಡದೊಳಲ್ಲಿಯ ತಿಱಿದುಕೊಳಲ್ಕಿಂಬೆನಿಸಿಕ ಮೆಸೆದುದುಪವನಂ (ಕಂಪಿಶಾ. ೩-೯೦); ದಕ್ಷಿಣದೇಶದೊಳೊಂದುಮ್ಮಾಟವಿ ಯುರ್ಪುದು ಅದಱೊಳೊಂದು ಮಾವಿರ್ಪುದು (ಕಂಚಕಿ. ೨೨೬-೨೦); ಈ ಮರಾಗ್ರಹ ನಿನ್ನ ಚಿತ್ರದೊಳಿರುವುದೇ ತಪ್ಪೇನು ಕೋಗಿಲೆಯಾದರಿಸಿದಡೆ ಬೇವು ಮಾವಹುದಾದಡೆಮಗೇನು (ಕುಮ್ಯಾ. ೬-೯) ; ಮಾವು . . . ಹಿಂದೂ ಸ್ಥಾನದಲ್ಲಿ ವಿಶೇಷವಾಗಿ ಬೆಳೆಯುತ್ತದೆ (ಸಸ್ಯಶಾ. ೦೩೨).

**ಮಾವಿನಕಾಯಿ ಸರ** = ಚಿನ್ನ ಅಥವಾ ಬೆಳ್ಳಿಯಲ್ಲಿ ಮಾಡಿಸಿದ ಮಾವಿನಕಾಯಿಗಳಿರುವ ಕಂಠಾಭರಣ : ಕಂಠಭೂಷಣಗಳು – ಕಾಳಿ, ಚಂದ್ರಹಾರ . . . ಜೋಳದ ಸರ, ಮಾವಿನಕಾಯಿ ಸರ, ಮಲ್ಲಿಗೆ ಮೊಗ್ಗಿನ ಮಾಲೆ, ಪದಕ ಇತ್ಯಾದಿ (ಕಪಿಸೋ. I. ೬೨೦). **ಮಾವಿನ ಬಟ್ಟಿ** = ಮಾವಿನ ಮರಗಳ ಮೇಲೆ ವಿಧಿಸುತ್ತಿದ್ದ ಸುಂಕ, – ತೆರಿಗೆ : ನಲ್ಲೆತ್ತು ನಲ್ಲೆಮ್ಮೆ ಮಾವಿನ ಬಟ್ಟಿ ಸುಂಕ ಕಾರುಕ . . . ಬಾವಲಿ ಬಿರಾಡ ಮುಂದೆ ಹುಟ್ಟುವ ಪೂರ್ವಾದಾಯ ಸಹವಾಗಿ ಸರ್ವಬಾಧ ಪರಿಹಾರಕ್ಕೆ ಗದ್ಯಾಣ ಗ ೧೧ ವರಹ (ಮೈಆ. ೦೯೩೯, ೨೬-೨೦; 1430).

[ದೇ.₂ ತಮಿ. ಮಾ ; ಮಲ. ಮಾ, ಮಾವು ; ಕೊಡ. ಮಾಂಗೆ ; ತೆಲು. ಮಾವಿ ; ತಾಯ್ಮ. ಕೋಲಾ. ಮಾವ್ವಿ]

ಮಾವುಕುದುರೆ (ನಾ). ಗಂಡುಕುದುರೆ : ನಕುಲನು ಧರ್ಮರಾಜುನಂ ನೋಡಿ ನಾನು ದಾಮಗ್ರಂಥಿಯೆಂಬ ಹೆಸರನ್ನು ವಹಿಸಿ . . . ಗೋಳಿಗೆ ಕುದುರೆಗಳ ಹದವನ್ನು ತಿಳಿದು ಮಾವುಕುದುರೆಗಳನ್ನು ಹತ್ತಿಸುವ ಚಾತುರ್ಯವನ್ನೂ (ಕೃಪಾಂ. ೫).

[ಮಾವು₂ (ಪ್ರಾ–ತೆಲು. ಮಾವು = ಗಂಡುಕುದುರೆ) + ಕುದುರೆ]

**ಮಾವುತ** 'ಮಾವಂತ' ನೋ.

**ಮಾವುತಿಗ** 'ಮಾವಂತಿಗ' ನೋ.

**ಮಾವುರಿ.** 'ಮೌರಿ₁' ನೋ.

**ಮಾವುಲಿಗ** (ನಾ). ೧. ಬೇಡ : "ವ್ಯಾಧಃ, ಲುಬ್ಧಕಃ, ವ್ಯಾಧಃ, ವಾಗುರಿಕಃ–ಈ ೪ ಮಾವುಲಿಗಂ" (ಶಬಾಯು. ೯೬-೯೯೨). ೨. ಕಟುಕ : ಚಂಡಾಲ : ಸಾಜಃ ಕೊಲ್ವ ಮಾವುಲಿ[ಶಾಂ. ೮]ಗಂಗೆ ದೋಷಮಿಲ್ಲಂ (ಲೀಲಾವ. ೯-೦೫೬ ಪ). 'ಪೆರ್ಮಾವುಲಿಗ' ಪರಾ. [? + – ಇಗ]

**ಮಾವ್ತ** 'ಮಾವಂತ' ನೋ.

**ಮಾಷ** (ನಾ). ೧. ಒಂದು ಬಗೆಯ ದ್ವಿದಳಧಾನ್ಯ ; ಉದ್ದು : "ಉರ್ದು ಮಾಷಂ" (ಪತ್ರುಕೋ. ೯೯-೫೬); ಅಂತು ಕೊಂಡ ಪದವಟ್ಟಗಳೊಳ್ ಕಳಮಷಷ್ಟಿಕಾವ್ರೀಹಿ . . . ಕುಲತ್ಥಮುದ್ಗಮಾಷಕುಲಮಾಷಾಢಕೀನಿಷ್ಪಾವಚಣಕ . . . ಜೀರಕಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ (ಅದಿಪು. ೬-೭೨ ಪ) ; ಇಂದ್ರಿಯವರ್ಧನಹೇತುಭೂತಮಾಷವಿದಳವಾಯಸ ಪ್ರಮುಖೇಷ್ಟರಸಸೇವಾನಿವೃತ್ತಿಯುಂ (ತತ್ತ್ವಸೂ. ೨೬೦). ೨. ಚಿನ್ನದ ಒಂದು ನಿರ್ದಿಷ್ಟಪ್ರಮಾಣದ ತೂಕ ; ಎಂಟುಗುಂಜಿ ತೂಕ : ೮ ಗುಂಜಿ ತೂಕ = ೧ ಮಾಷ ೧.೨ ಗ್ರಾಂ, ೪ ಮಾಷ = ೧ ಶಾಣ ೪.೮ ಗ್ರಾಂ (ಶಕಕ. xiii, ಕೃಷ್ಣ. ೫೩). [ಸಂ.]

**ಮಾಷಕ** (ನಾ). ೧. = ಮಾಷ ೧ : "ಮಾಷಕಃ–ಉದ್ದು" (ಬಿಶಂ. ೦೨೯). ೨. = ಮಾಷ ೨ : "ಕಾರ್ಷಾಪಣಃ, ಕಾರ್ಷಿಕಃ – ೨ ಎರಡು ಗುಲಗಂಜೀ ತೂಕದ ಬೆಳ್ಳಿ, ೧ ಮಾಷಕ – ೧೬ ಮಾಷಕಗಳಾದರೆ–೧ ಕರ್ಷವಾಗುತ್ತೆ" (ಸಿದ್ಧಾಂತ. ೪೦೦). [ಸಂ.]

**ಮಾಷಪತ್ರಿ** (ನಾ). ಒಂದು ಬಗೆಯ ಸಸ್ಯ : "ಪಾಂಡುಃ – ಕಪಿಪದಲ, ಮಾಷಪತ್ರಿ" (ಬಿಶಂ. ೯೯). [< ಸಂ. ಮಾಷಪತ್ರಿಕಾ ]

**ಮಾಷಪರ್ಣಿ** (ನಾ). ಒಂದು ಬಗೆಯ ಉದ್ದು; ಕಾಡುದ್ದು : "ಹಯಪುಚ್ಛೀ, ಕಾಂಭೋಜೀ, ಮಾಷಪರ್ಣೀ, ಮಹಾಸಹಾ – ಈ ೪ ಕಾಡುದ್ದು" (ಶಬಶಾ. ೦೦೦). [ ಸಂ. ಮಾಷಪರ್ಣೀ ]

**ಮಾಷಮುಖಿ** (ನಾ). ಉದ್ದಿನ ಕಾಳಿನಂತೆ ಮೂತಿಯುಳ್ಳದು; ನೊಣ : ಭಾಷಾವಿದರ್ ಕವಿತ್ವವಿಶೇಷಪ್ರರ್ ನಿಕಷರಪ್ಪೊಡಪ್ಪುದು ಸಭೆಯೊಳ್ ಮಾಷಮುಖಿದಂತೆ ದೋಷಗವೇಷಣಪರರಪ್ಪರೆಂದೊಡದು ಕೆಗಟಲ್ತೇ (ಅದಿಪು. ೦-೨೦); ಭೇಷಜದಂತಿರೆ ಸುಜನಂ ದೋಷಮುನಪಹರಿಸಿ ಗುಣಮುನದಱೊಳ್ ತೋರ್ಕುಂ ಮಾಷಮುಖಿದಂತೆ ಕೆಲಬರ್ ದೋಷಗ್ರಾಹಿಗಳಡುರ್ತು ಕಸವನೆ ಪಿಡಿವರ್ (ಶರ್ಣಶಾ. ೦-೦೬); ಸತ್ತುಂ ಪಿತುನಂ ವೆಱಗಾರ್ಪತ್ತುಂ ಮಾಡದಿರನೆಂದು ಮಱುಗಿದಪುದು ಮಚ್ಚಿತ್ತಂ ಮೃತಮಾಷಮುಖಿಂ ಮತ್ತನಿಸದೆ ಬವನಮೆಯ್ದುವಪೊಲುಂಬವಮಂ (ಅಲಂಕಾ. ೦-೫೭). [ಸಂ.]

**ಮಾಷಾಪೂಪ** (ನಾ). ಒಂದು ಬಗೆಯ ಕರಿದ ತಿಂಡಿ; ಉದ್ದಿನ ವಡೆ. [ಸಂ.]

**ಮಾಷೀಣ** (ನಾ). ಉದ್ದನ್ನು ಬಿತ್ತಿರುವ ಪ್ರದೇಶ; ಉದ್ದು ಬೆಳೆಯುವ ಹೊಲ : "ಮಾಷ್ಯಂ, ಮಾಷೀಣಂ – ಈ ಎರಡು ಉದ್ದಿನ ಕೆಯ್" (ಶಬಾಯು. ೨೬-೬); ಆ ನಾಡೂರೂರ್ದಪ್ಪದದೇನೆಸವುದೊ! ಕೌದ್ರವೀಣ ಶ್ಯಾಮಾಕೀನದ ತೈಲೀನದ ಮಾಷೀಣದ ಮೌದ್ಗೀನದ ಬಹುಸಾರಸಸ್ಯಸಕಳ ಕೆಳೆಗಳ್ (ಪುಶ್ವೃ. ೨-೫೨). [ಸಂ.]

**ಮಾಷ್ಯ** (ನಾ). = ಮಾಷೀಣ : "ಮಾಷ್ಯಂ, ಮಾಷೀಣಂ — ಈ ಎರಡು ಉದ್ದಿನ ಕೆಯ್" (ಶಬ್ದಮ. ೨೭-೬) ; ಲೀಲೆಯಿಂನದಚಿ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗಂ ಮಾಷ್ಯಂ ಶಾಲೇಯಂ ವ್ರೈಹೇಯಂ ತೈಲೀನಂ ಕೌದ್ರವೀಣಮಾಣ್ವ್ಯಂ ಯವ್ಯಂ (ಚಂದ್ರ ಕೆ. ೦-೯೦). [ಸಂ.]

**ಮಾಸ$_1$** (ನಾ). ಉದ್ದು; ಮಾಷ : ಮಾಸಗೋಧೂಮಪ್ರಮುಖ ಶಾಲ್ಯಾಶನವ ಸದ್ಯೋಘೃತಾಮೃತ ಪಾಸಣಿಪ ದಧಿಶರ್ಕರಾನ್ವಿತ ಬಹು ಪದಾರ್ಥಗಳ . . . ಶಂಕರಗರ್ಪಿತವ ಮಾಡಿದ ಮಹಾಮಹಿಮ (ಶಂಕರಾ. ೩-೩೩). [< ಸಂ. ಮಾಷ ]

**ಮಾಸ$_2$** (ನಾ). ೧. ಮೂವತ್ತುದಿವಸಗಳ ಅವಧಿ ; ತಿಂಗಳು : "ಮೂವತ್ತುದಿವಸಮಂ ಮಾಸಮೆಂಬುದು" (ಶಬ್ದಮ. ೪೯-೧೦೩) ; ಹೋರಾಧಿಪನಿರ್ದಸ್ತಾಗಾರದೊಳಭಿಭೂತಮಾಗೆ ಮೇಣಲ್ಲದೊಡಾ ಹೋರೇಶ ನಿರ್ದು ನಿಧನಾಗಾರದೊಳಭಿಭೂತಮಾಗೆ ಮಾಸದೆ ಮರಣಂ (ಜಾತಕ. ೬-೧೧); ಮಾಸಂ ಪಕ್ಷದ್ವಿತಯಂ ಮಾಸದ್ವಯಮೊಂದೆ ಋತು (ಶಂಕಾಮಾ. ೦-೩೨) ; ದಿವಸಂ ಮೂವತ್ತೊದವಿರಲವು ಮಾಸಂ (ವ್ಯವಹಾ. ೬-೩೭). ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ.

**ಮಾಸಗಟ್ಲೆ** = ೧. ಒಂದು ಪದ್ಧತಿಯನ್ನು ತಿಂಗಳಿಗೊಂದು ಬಾರಿ ಅನುಸರಿಸುವುದು : (೬). ೨. ತಿಂಗಳುಗಟ್ಟಲೆ ; ಹಲವು ತಿಂಗಳುಗಳ ವರೆಗೆ : ಅವರು ವ್ಯವಹಾರದ ಕಾರಣದಿಂದ ಮಾಸಗಟ್ಲೆ ಪರದೇಶಗಳಲ್ಲಿ ಪ್ರವಾಸ ಮಾಡುತ್ತಿರುತ್ತಾರೆ (ಚೂ). [ಸಂ.]

**ಮಾಸಂಕ** 'ಮಾಸಾಂಕ' ನೋ.

**ಮಾಸಂಕೆ** (ನಾ). ಅತಿಯಾದ ಹೆದರಿಕೆ,—ಭಯ : 'ಮಾಸಂಕೆಗೊಡು' ಪರಾ. [ ಮಾ$_4$ + ಸಂಕೆ$_1$ ]

**ಮಾಸಂಕೆಗೊಡು** (ಕ್ರಿ). ಅತಿಯಾದ ಹೆದರಿಕೆಯನ್ನು ಉಂಟುಮಾಡು : ದಾರಿದ್ರ್ಯಂ ಕವಿದಂದು ಕಾಯ್ವುದ ಪಗೆಗಳ್ ಮಾಸಂಕೆಗೊಟ್ಟಂದು ದುರ್ವಾರವ್ಯಾಧಿಗಳೊತ್ತಿದಂದು ಮನದೊಳ್ ನಿರ್ವೇಗಮಪ್ಪಂ (ರಕ್ಷಾಶ. ೨೩). [ಮಾಸಂಕೆ + ಕೊಡು$_1$]

**ಮಾಸಟೆ** (ನಾ). ಅತಿಯಾದ ಸುಳ್ಳು,—ಹುಸಿ : 'ಮಾಸಟೆವೆಣ್' ಪರಾ. [ಮಾ$_4$ + ಸಟೆ$_1$]

**ಮಾಸಟೆವೆಣ್** (ನಾ). ಹುಸಿ ನುಡಿಯುವವಳು : ಸುಳ್ಳುಗಾತಿ : ತಮ್ಮಬ್ಬೆ ಸತ್ತೊಡಮಾ ಮಾಸಟೆ[ಪಾಠಾಂ. ನಂಜನ]ವೆಣ್ಣ ಕಣ್ಗೆ ಪುಸಿ ಕಣ್ಣೀರಲ್ಲದೇಂ ಬರ್ಕುಮೋ (ಕಾವ್ಯಸಾ. ೦೦೦೦ ; ಲೀಲಾವ. ೨-೦೦೨ ನೋ). [ಮಾಸಟೆ + ಪೆಣ್]

**ಮಾಸತಿ, ಮಾಸ್ತಿ** (ನಾ). ೧. ಮಹಾಪತಿವ್ರತೆ,—ಸಾಧ್ವಿ : "ಮಾಸತಿ (ಮಾಸ್ತಿ) — ಮಹಾಸತೀ". (ಶಬ್ದಕೋ. ೪೩) ; ಪೊಗಬಲ್ಕ[ಜೀಯೆನಾ] ಮಾಸತಿಯ ರೂಪಂ (ಗದಾಯು. ೬-೩೭) ; ಮುಂಡುಹಿಡೆ ಬಂದೆನು ಅರ್ತಿಯು ಕೂಡಿ ನಿನಗೀ ಕೃತಿಯಂ ಮಾಸತಿನುತಿಯಂ (ಅತಿಶ. iii) ; ಪತಿಯು ಜೀವಂತನಿರುವಾಗಲೇ ಸೌಭಾಗ್ಯದಿಂದ ಅಮರಧಾಮವನ್ನು ಸೇರಬೇಕೆಂದು ಆ ಮಾಸತಿಯು ಹೆಬ್ಬಯಕೆಯಿತ್ತು (ಉಕಸಂ. ೦೩೩). ೨. (ಹಿಂದಿನ ಕಾಲದಲ್ಲಿ ಯುದ್ಧ ಮುಂತಾದ ಸಂದರ್ಭಗಳಲ್ಲಿ) ಸತ್ತ ಗಂಡನೊಡನೆ ಚಿತೆಯನ್ನೇರುತ್ತಿದ್ದ ಪತಿವ್ರತೆಯಾದ ಹೆಂಗಸು,—ಮಹಾಸತಿ : ಮಲೆಊರ ವೀರಪದೇವರು ಊರ ತುರುಮಂ ಸೂರೆಕೊಳ್ವಾಗ ಪಲರನಿದಿರ್ಚ್ಚಿ ಕೊಂದು ಸುರಲೋಕಕೆ ಸಂದೊಡೆ ಆತನ ಸತಿ ಮಾಸತಿಯಾದಳು (ಎಪಿಕ. ೦೬೨೯, ೯೨-೩ ; 1179 ?) ; ಆಸೆಯಂನುಳಿದಸುವಿನ ಮೇಲೆ ತಮ್ಮ ಜೀವೇಶರೊಡನೆ ಹರಣವನು ಮಾಸದಗ್ನಿಗೆ ಮನವೊಲಿದೀಡಾಡುವ ಮಾಸತಿಯರು ಕಣ್ಗೆಸೆವರು (ಕುಮಾರಾಂ. ೨೭-೦೨೯). **ಮಾಸ್ತಿ** : ೧. ಶರಣೆಂದೆಜಗೆ ಮಾಸ್ತಿ ಮುತ್ತೈದೆಯಾಗೇಳೆನಲ್ಕವಳ ಗಂಡನ ಪ್ರಾಣವೈದದೇ (ಕವಿಕ. ೩೭-೯೨). ೨. ಧೀರೆಯಾದ ಮಾಸ್ತಿಗೆ ವೀರತ್ವವಲ್ಲದೆ ಧಾರಿಣಿಯು ಜನರೆಲ್ಲರೂ ಓಡಿ ಮಾಸ್ತಿ ಎಂದೆ ಬಳಿಕ ವೀರತ್ವವೆಲ್ಲಿಯದೋ (ಸರ್ವಜ್ಞ. ೯೩-೪೭೪) ; ಮಾಸ್ತಿಯನ್ನು ಕುರಿತು ದಂತಕತೆ, ಸ್ಥಳಪುರಾಣ, ಮಹಾತ್ಮೆ—ಹೀಗೆ ಅರೇಬಿಯನ್ ನ್ಯಾಟ್ಸನ್ನು ಅರವತ್ತು ಪಾಲಿಗೆ ಮಿಗಿಸುವ ಸಾಹಿತ್ಯ ಉಂಟಾಗಿದೆ (ಸರಸ. ೬). ೩. = ಮಾಸತಿಕಲ್ಲು : ಆತನ ಹೆಂಡತಿ ಚಳಕೆಯ ನಾಗೌಂಡಿಗ × × × ತಾಗಾಯಿಂಚ್ಚಿ ಹೋದಳು ಆ ಚಂನಪ್ಪನ ಬೀರಗಲು ಮಾಸ್ತಿಯ ಪ್ರತಿಷ್ಟೆ ಮಾಡಿಸಿದ ಮಂಗಳ × × × (ಎಪಿಇ. XX, ೩೩೬-೬ ; ಸು. 13ನೆಯ ಶ) ; ಗಂಡಸಾದರೆ—ತನ್ನ ಸತಿ ವಿಧೇಯಳಾಗಲೆಂದು, ಹೆಂಗಸಾದರೆ—ತಮ್ಮ ಪತಿ ಒಲಿಯಲೆಂದೂ ಬೇಡಿ, ಮಾಸ್ತಿಗೆ ಕುಂಕುಮವಿರಿಸಿ . . . ಹೋಗುತ್ತಾರೆ (ಸರಸ. ೬). [ಮಾ$_4$ + ಸತಿ$_1$./ಸಂ. ಮಹಾಸತೀ]

**ಮಾಸತಿಕಲ್ಲು, ಮಾಸ್ತಿಕಲ್, ಮಾಸ್ತಿಕಲ್ಲು, ಮಾಸ್ತಿಗಲ್ಲು** (ನಾ). ಗಂಡನು ಸತ್ತಾಗ ಅವನ ಜೊತೆಯಲ್ಲಿಯೇ ಚಿತೆಯನ್ನೇರಿ ಮಹಾಸತಿ ಎಂಬ ಹೆಸರನ್ನು ಪಡೆದ ಪತಿವ್ರತೆಯ ಸ್ಮಾರಕವಾಗಿ ನಿಲ್ಲಿಸುವ ಕಲ್ಲು ; ☞ ಸಾಮಾನ್ಯವಾಗಿ ಮಾಸ್ತಿಕಲ್ಲುಗಳ ಮೇಲೆ ಎತ್ತಿದ ತೋಳಿನ ಸ್ತ್ರೀಯ ಚಿತ್ರವಿರುತ್ತದೆ. ಸ್ತ್ರೀಯ ತಲೆಯ ಹಿಂದೆ ಬೆಂಕಿಯ ಜ್ವಾಲೆಗಳನ್ನು ಕೊರೆದಿರುವುದುಂಟು. ಕೆಲವು ಕಡೆ ಮಹಾಸತಿಯ ಕೈಯಲ್ಲಿ ಒಂದು ಹಣ್ಣಿನ ಚಿತ್ರವಿರುತ್ತದೆ : ಈ ಗುಂಪಾದರೂ ಸಣ್ಣ ಗುಂಪಲ್ಲವೆಂಬುದನ್ನು ನಾಡಿನ ಮೂಲೆಮೂಲೆಗಳಲ್ಲಿ ಮಾಸತಿಕಲ್ಲುಗಳು ಕೂಗಿ ಹೇಳುತ್ತಿವೆಯಾದರೂ ಸಹಗಮನ ಮಾಡಿದ ಸತಿಯರ ಸಾಲಿನಲ್ಲಿ ಮಹಾಭಾರತದ ಮಾದ್ರಿಯ ಹೆಸರು ಲೋಕೋತ್ತರವಾದುದು (ಚಾಮರಾ. ೯) ; ಹರಿವ ಹಳ್ಳದ ದಂಡೆಗಿರುವ ಮಾಸತಿಕಲ್ಲು . . . ಎಣ್ಣೆಯುಣ್ಣುತ ಪೂಜೆಗೊಳ್ಳುವುದ ಕಂಡಿದ್ದೆ (ಚಾಪಜಾ. ೭-೦೩೭). **ಮಾಸ್ತಿಕಲ್** : ದೇವಾಲಯದ ಹೊರಗಡೆ ಪೂರ್ವದಲ್ಲಿ ವಸಂತಮಂಟಪ, ಮಾಸ್ತಿಕಲ್, ೧೮ ಅಡಿ ಎತ್ತರದ ಚೆನ್ನಾಗಿ ಅಲಂಕರಿಸಿರುವ ದ್ವಾರ ಇವೆ (ಹೊಯ್ಸಳವಾ. ೯೨). **ಮಾಸ್ತಿಕಲ್ಲು** : ಭಟಂಣನ ಮಗ ಹರಿಗೆ ಸಿದ್ದಣನೂ ತಮ್ಮ ತಂಗಿ ತಿಂಮವಾಗೆ ಮಾಸ್ತಿಕಲ್ಲ ಕಡಿಸಿ ನಿಲಿಸಿದೂ (ಎಪಿಕ. ೦೯೩೦, ೭೭-೨ ; ಸು. 1434) ; ಮಾಸ್ತಿಕಲ್ಲು ಎಂದರೆ ಮಹಾಸತಿಕಲ್ಲು. ಒಬ್ಬ ಪತಿವ್ರತೆಯಾದ ಹೆಂಗಸು ತನ್ನ ಗಂಡನು ಸತ್ತು ಹೋದರೆ . . . ಸಹಗಮನ ಮಾಡಿದ ಸಂಗತಿಯನ್ನು ಸೂಚಿಸುವಂತೆ ಆ ಸ್ಥಳದಲ್ಲಿ ನೆಟ್ಟ ಕಲ್ಲಿಗೆ ಮಾಸ್ತಿಕಲ್ಲು ಎಂದು ಹೆಸರು (ಮೈಸಾಸ್ತು. ೩೭). **ಮಾಸ್ತಿಗಲ್ಲು** : ಇದನ್ನು 'ಪ್ರಶಸ್ತಿಶಾಸನ' ವೆಂದು ಕರೆಯಬಹುದಾದರೆ ಅನೇಕ ನಿಸಿದಿಕಲ್ಲುಗಳನ್ನೂ, ವೀರಗಲ್ಲು ಮಾಸ್ತಿಗಲ್ಲುಗಳನ್ನೂ ಅದೇ ಹೆಸರಿನಿಂದ ಕರೆಯಬೇಕಾಗುತ್ತದೆ (ಕನಾಶ. ೨೯). [ಮಾಸತಿ + ಕಲ್ಲು (< ಕಲ್$_3$)]

**ಮಾಸಪತ್ರಿಕೆ** (ನಾ). ತಿಂಗಳಿಗೊಮ್ಮೆ ಪ್ರಕಟವಾಗುವ ಪತ್ರಿಕೆ : ನನ್ನ ಕೈಗೆ ಲಂಡನ್ನಿನ "ಸ್ಟ್ರಾಂಡ್" (strand) ಎಂಬ ಇಂಗ್ಲಿಷ್‌ಸಾಹಿತ್ಯ ಮಾಸಪತ್ರಿಕೆಯ . . . ಒಂದು ಸಂಚಿಕೆ ಸಿಕ್ಕಿತು (ಶೀರಹೊ. IX, ೮೩೩). [ಸಂ. ಮಾಸಪತ್ರಿಕಾ]

**ಮಾಸಪ್ರಸೂತೆ** (ನಾ). ಹೆರಿಗೆಯಾಗಿ ಒಂದು ತಿಂಗಳು ಕಳೆದಿರುವವಳು ; ತಿಂಗಳ ಬಾಣಂತಿ : ಮಾಸಪ್ರಸೂತೆ ಷಣ್ಮಾಸದ ಗರ್ಭಿಣಿ ತಾಂ ಕ್ಷುಧಾಸತಿ ಮೆಯಿಗಳಿಂಗೆಚ್ಚಿತ್ತಿವಳ್ ಮಾಸರ ನೃತ್ಯವಿಳಾಸಿನಿಗಂ ಕಾಮಸುಖಂ ಕೂಟಮುಂ ತಪ್ಪಾಲಮೆ (ಮದನ. ೦೦-೦೦). [ಸಂ. ಮಾಸಪ್ರಸೂತಾ]

**ಮಾಸರ** (ನಾ). ೧. ಅಂದ ; ಚೆಲುವು ; ಸೌಂದರ್ಯ : ಕತ್ತುರಿಬೀಲಿಯ ನಾಂತ ಚೊಲ್ಲೆಯಂ ಮಿಸುಗುವ ದೋರೆವಲ್ ಕರಮೆ ಮಾಸರಮಾದುದು ದೇಸೆಕಾರ್ತಿಯೊಳ್ (ಚಂದ್ರ ಪು. ೬-೩೦) ; ಮೆಯ್ವಾಸದ ಮಾಸರಮಂ ಪಿಡಿವ ಪಾಂಗಂ ಚಿತ್ರವಚನಚಮತ್ಕಾರಮಂ . . . ಭದ್ರಚಂಡಂ ಕಂದರ್ಪದೇವಂಗೆ ತೋಜುತ್ತುಮಿರೆ (ಕುಸುಮಾ. ೭-೬೩ ವ); ನಿಜಾರುಣಾಂಶು ಪಾಸಿದ ದುಗುಲಕ್ಕೆ

ಬಾಸರದ ಮಾಸರಮಂ ಕಂಡೆ (ಅಜಿಂಪು. ೯-೬೯). ೨. ಅಂದವಾದುದು ; ಸುಂದರವಾದುದು : ಮಾಸರಮೆನೆ ಪಾರದದಿಂ ಪೂಸಿದವೊಲ್ ಪೊನ್ನ ಮುಕುರಮಂ ಹಿಮುಲಿಪ್ತಂ ನೇಸಱ ಬಿಂಬಂ ತಿಂಗಳ ಕೂಸಿನವೊಲ್ ಕೋಡು ತಿರ್ದಿದಂದಿನ ದಿಸದೊಳ್ (ಲೀಲಾವ. ೯-೬). [ ದೇ.॥ ತೆಲು. ಮಾಸರ ]

**ಮಾಸರಂ** (ಅ). ಚೆನ್ನಾಗಿ ; ಸುಂದರವಾಗಿ : ಇದರ್ಕೆ ಮಾಸರಮಾಡಲೆಂದ ಧಿಕವಿಳಾಸದಿನಂಡಲಿಕ್ಕಿ ನೆಱೆಯೆ ಬಿಯುಮಂ ಮೆಱೆದಂ (ಶಂಶಾ. ೩-೯೯) ; ಹಸ್ತಿಮಸ್ತಕೋಲ್ಲಾಸಮಸಂಗರಾಗರಸಪೂರಸುನಿರ್ಝರಸೇತುಬಂಧನಂ ಮಾಸರ ಮೊಪ್ಪ ತೋಱುವುದು ಸಿಂಹಕಟೀತಟಮಾ ನೃಸಿಂಹನಾ (ಪರ್ಶವಾ. ೩-೦೩) ; ಮಾಸರಮೊಕ್ಕ ಕಸ್ತೂರಿಯ ಪಂಕಮನಲ್ಲದೆ ಪಂಕಮಂ . . . ನಿಶಾವಾಸದೊಳೆಂತುಟೆಂದಱಿಯಂ (ಸುಕುಮಾ. ೦೦-೦೦೭) ; ಮಾಸರಮಾಡುವ ಬೆಳೆ ಸಿರಿಯೋಸರಿಸದೆ ತಣಿಯೆ ಕಣಿಯಲೆಂದಳವಡಲಬ್ಜಾಸನನಡಸಿದ ಪಚ್ಚೆಯ ಪಾಸಱೆಯೆನೆ ಪಸಲೆಗವಿದ ಕಳಮಕ್ಷೇತ್ರಂ (ವರ್ಧಮಾ. ೩-೩೯).

[ < ಮಾಸರ ]

**ಮಾಸರಕಟ್ಟಿ** (ನಾ). ಒಬ್ಬಾಕೆಯ ಹೆಸರು (?) : ಅವಱ್ಗೆ ಮಾಸರ ಕಟ್ಟಿಯರು ಅತ್ತಾಣೆಯುಂ ಒಸೆದು ಆಯ್ಗಳ ಕೆಯ್ಯುಂಕ್ಕಲುಳೊಕ್ಕುಳ ಮುಮೂಗೆ ಕೊಟ್ಟಾರ್ (ಎಕ. X, ಕುಳಿಲಾ. ೯೨-೬ ; ಸು. 780 ?).

[ ಮಾಸರ + ಕಟ್ಟಿ$_1$ ]

**ಮಾಸರಿಕೆ**, ಮಾಸರಿಕ್ಕೆ (ನಾ). ಚೆಲುವು ; ಮನೋಹರತೆ : ತೇಜಕ್ಕೋಪಾದ ಕಾಂತಿಗಂ ಬೆಡಂಗಿಂಗೆ ಪಾಂಗಾದ ದೇಸಿಗಂ ಮಾಸರಿಕೆಗೆಕ್ಕಲಾವಣವಾದ ಸೌಷ್ಠವಕ್ಕಂ . . . ಬೆಕ್ಕಸಂಬಟ್ಟು (ಶಾಂತಿಪು. ೩-೩೩ ವ). **ಮಾಸರಿಕ್ಕೆ** : ಬರಗಲೆಯುಂ ಕೊಪ್ಪುಂ ನೂಪುರಮುಂ ಲಂಬಳಮುಂವುಲ್ಲಿ ಮುಲ್ಲೆಗೆಯ ಮುಗುಳ್ ಬಿರಿಮುಗುಳೆಂಬವು ತನಗಾಗಿರೆ ದೇಸೆಯ ಮಾಸರಿಕ್ಕೆಯುಂ ಪೊಸ ಬಿಸಿದಳ್ (ಶಾಂತಿಪು. ೬-೨೨). [ಮಾಸರ +– ಇಕೆ]

**ಮಾಸರಿಕ್ಕೆ** 'ಮಾಸರಿಕೆ' ನೋ.

**ಮಾಸರೋಹಿಣಿ** (ನಾ). ಒಂದು ಬಗೆಯ ಔಷಧೀಸಸ್ಯ : "ಮುನಿ– ಗೋರಕ್ಷದುಗ್ಧ. ಕಂಬಳ. . . ಅಗಸೆ. ಹಾಲವಕ್ಕಿ. ಕ್ಷುದ್ರದವನ. ಮಾಸ ರೋಹಿಣಿ" (ಓಕಂ. ೦೨೩). [ < ಸಂ. ಮಾಂಸರೋಹಿಣೀ ]

**ಮಾಸಲಾಣೆ** (ನಾ). (ಉಕ) ಮದುವೆ ಮುಂತಾದ ಶುಭಕಾರ್ಯಗಳಾದ ಒಂದು ತಿಂಗಳಿಗೆ ನಡೆಸುವ ಒಂದು ಸಮಾರಂಭ ; ತಿಂಗಳ ಕಂಬೋಲಿ : ಮದುವೆಯಾಗಿ ಒಂದು ತಿಂಗಳಾಯಿತು ; ಮಾಸಲಾಣೆಯ ಹಬ್ಬ ಜರುಗಿತು (ಕಶಿ. ೨೭) ; ಮಾಸಲಾಣೆಯ ದಿವಸ ಹಲವಾರು ಹೊರಗಿನ ಜನ ಊಟಕ್ಕೆ ಬಂದಿದ್ದರು (ಕಶಿ. ೨೭). 'ಕಂಭವಲಿ' ಪರಾ.

[←ಮರಾ. ಮಾಸನಹಾಣ, ಮಾಸಹ್ನಾಣ./ಸಂ. ಮಾಸಸ್ನಾನ]

**ಮಾಸಲು** (ನಾ). ೧. ಕಾಂತಿಯಿಲ್ಲದಿರುವುದು ; ಮಂಕಾದುದು : ರಿಪುವಧೂವದನಂ ಮಿಗೆ ಮಾಸಲಾದುದು (ಕಲಿ. ೪-೦೩) ; ಮನಸ್ಸಿನ ಆ ಏಕಾಂತವಲ್ಲಾದರೂ, ವೈಯಕ್ತಿಕವಾದ ಕಾಪತ್ರಯದ ಅಂಚೆ — ತಂತಿಗಳು, ಅವನ ಸ್ವೇಚ್ಛಾವಿಹಾರವನ್ನು ತಡೆದುಹಿಡುತ್ತಿವೆ ; ಪ್ರತಿಭೆಯ ಹೊಳಪನ್ನು ಮಾಸಲುಗೊಳಿಸುತ್ತಿವೆ (ಬಾಡೋಲ. ೩೩೦). ೨. ಮಲಿನವಾದುದು; ಕೊಳೆಯಾದುದು: ಮಾಸಲಂ ಕೊಳೆಯೆ ಮಡಿಯಾದ ದುಪ್ಪಟದಂತೆ . . . ಸಚ್ಚರಿತಮಂ ಕಳೆದು ಮಯನೊಪ್ಪಿರ್ದನು (ಸಮ್ಯಕ್. ೦೦-೨೦). ೩. (ಅಲಂ) ಅಸ್ಪಷ್ಟವಾದುದು ; ಸ್ಫುಟವಲ್ಲದುದು : ಚಿಕ್ಕಂದಿನಲ್ಲಿ ಅವನನ್ನು ನೋಡಿದ ನೆನಪು ನನ್ನ ಮನಸ್ಸಿನಲ್ಲಿ ಮಾಸಲಾಗಿ ಉಳಿದಿದೆ (ರೂಢಿ).

**ಮಾಸಲು ಮಾಸಲು** (ದ್ವಿರುಕ್ತಿ) : ನನ್ನ ನೆನಪಿನಲ್ಲಿರೋದು ಅದೂ ಮಾಸಲು ಮಾಸಲಾಗಿರೋದು–ಹತ್ತು ವರ್ಷಗಳ ಹಿಂದಿನ ಅವನ ಮುಖ (ಶಿಂಜೋ. ೮೫). [ಮಾಸು$_1$ + – ಅಲು (< – ಅಲ್$_3$)]

**ಮಾಸಲುಕೆಂಪು** 'ಮಾಸಲುಗೆಂಪು' ನೋ.

**ಮಾಸಲುಗೆಂಪು**, ಮಾಸಲುಕೆಂಪು (ನಾ). ತಿಳಿಗೆಂಪು ; ನಸುಗೆಂಪು : ಇದು ಮಾಸಲುಗೆಂಪು ಬಣ್ಣವನ್ನು ಹೊಂದಿದ್ದು, ಕಬ್ಬಿಣವಿಶ್ರಿತಲವಣಗಳಿಂದಾಗಿದೆ (ಶಿಶಕೋ. I, ೬೯೯). **ಮಾಸಲುಕೆಂಪು** : ಜೈವಿಸಿವಹರ್ಷ: ತೇಜಸ್ಸು . . . ಬಣ್ಣ ಮಾಸಲು_ಕೆಂಪು (ಪರಿಭಾ. I, ೩೩೯).

[ಮಾಸಲು + ಕೆಂಪು$_1$]

**ಮಾಸಲೆ** (ನಾ). ರೀತಿ ; ಮಾದರಿ ; ನಮೂನೆ : ಮೂಲು ಅದೇ ಜಾತಿಯದು, ಅದೇ ಮಾಸಲೇದು, ಅಥವಾ ದರದ್ದು ಅಂತ ದಾಖಲೆಯನ್ನು ಕೊಟ್ಟು ಬರಿಯದೆ; ಪ್ರತಿ ಒಂದು ಪತ್ರದಲ್ಲಿ ವಿಸ್ತಾರವಾಗಿ ವರ್ಣಿಸಬೇಕೆಂಬ ಬಗ್ಗೆ ಸೂಚನೆ (ಕುಂಪಿಪ್ಪ. ೫೭ ಕೃಶ್ರು ೮೫); ಕಂಡವರ ಸಂಗಡ ಕಾದಾಡೋ ಈ ಪುಂಡಹುಡುಗಿ ಮಾಸಲೆ ಎಲ್ಲೂ ಇರಲಿಕ್ಕಿಲ್ಲ (ಬಾಂಜಾಯ. ೨೫).

[← ಅರ. ಮಸಲ್ ; ಮರಾ. ಮಾಸಲಾ]

**ಮಾಸವಳ**, ಮಾಸವಾಳ, ಮಾಸಾಳ್, ಮಾಸಾಳಿ, ಮಾಸಾಳು (ನಾ). ೧. ದೊಡ್ಡ ಈಟಿ.–ಭರ್ಜಿ : ಮಚ್ಚರದಂಕಂ ಕಳದಲ್ಲಿ ನೋಡು ಬಯಲೊಳ್ಪೇಡೆಂದು ಕೈಯಾಣೆಯುಟ್ಟುರಸಂಕಂ ಪಱಿಗಟ್ಟಿ ಮಾಸವಳದಂಕಂ ಬಾಸೆಯುಂ ಸಾಱಿ ಬಿತ್ತರದಿಂದಿರ್ದದು ಮೊತ್ತದಿಂದೆ ಭೃಗುವಿದ್ಯಾಮೂರ್ತಿ ಮಾರ್ತಣ್ಡವೊಲ್ (ಅಜಿಂಪು. ೨-೨೯); ಬಿರಿದಾಳ[ಯಂ] ಮುನಂಗೊಳೆ ನಡೆತಂದು ಮಾಸವಳದಂಕಮುದಾಸುರಮಾಗಿ ಭಾಷೆಯುಂ ಗಟಹುತು ಮಿರ್ದದು ನರಪನೋಲಗದಲ್ಲಿ ವಿಭೂಷಣಾಂಚಿತಂ (ಶಾರತ. ೦೭-೦೯). ೨. ಸಾಹಸಿ ; ವೀರ ; ಶೂರ : ವಿಳಾಸದಿಂದಮಿರ್ದಾ ಶಿವಕ್ರಿಯನೆಗಟ್ಟ ಕಾವನ ಮಾಸವಳಂಬೊಲೊಪ್ಪಿದರ್ (ರಶೂಕಶ್. ೪-೦೯೪) ; ನವಯವ್ವನ ಲಕ್ಷ್ಮಿಯನಿಂತವಯವದೊಳ್ತಾಳ್ದ ರತ್ನಶೇಖರನಾಗಳ್ ಸವಿರೇಱಿದ ಕನುಮಂಕದ ಬವರಮನೊಳಕೊಳ್ವ ಮಾಸವಳನಂ ಪೋಲ್ತಂ (ಕಜ್ಯಕ್ರ. ೦-೬೭). **ಮಾಸವಾಳ** : ೨. ಮಾಸವಾಳರುಂ ಲೆಂಕವಾಳರುಂ . . . ಪಂಚಮ ಜಾತಿಯುಂ ಕಥಂಚಿದ್ವಾನಂಗೊಡಲು ಯೋಗ್ಯರಕ್ಕುಂ (ಕಾಶಿ. ೩೨೦). **ಮಾಸಾಳ್** : ೨. ಮಾಸಾಳ್ಗಳಂತೆ ಬೀಡೆನುತ್ತುಂ ಹರಿಕಾರರಂತೆ ಕಾಪಿಪುತ್ತುಂ (ರಶೂಕಶ್. ೨-೬೦). ೩. ಸೈನಿಕ ; ಯೋಧ : ಮನೆಯುರು . . . ನಿಂದರು ಮನಸಿಜನ ಮಾಸಾಳ್ಗಳಂದದಿ (ಶಾಗತ. ೪-೩೩); ಬಿರುನುಡಿಗೇಳಿ ಸುರಪಾಯಕರು ಸಿಡಿಲಿನ ಪಾಳಯದ ಮಾಸಾಳ್ಗಳಂದದೊಳೇರಿತೊಗ್ಗಿನಲಿ (ಅಂಬಿಗ. ೨೬-೩). **ಮಾಸಾಳಿ** : ೨. ಉಱೆ ಪಿಡಿಸುಮುರಕೋಳಿಯುಂ ಕಡಿಸು ಮಾಸಾಳಿಯುಂ ಕುಡಿಸು ನೆತ್ತರನೊಡಲ್ಗೆ (ತಿಂಪು. ೯೭-೨೨). **ಮಾಸಾಳು** : ೨. ಚತುರಬಲವಿಖ್ಯಾತ ಮಾಸಾಳುಗಳು . . . ಪೃಥುವಿಗಪ್ರತಿಯೆನಿಪ ಬಿರುದಿನುನ್ನತಭಟರು ಚತುರಬಲವಿರಲು (ಲಕ್ಷ್ಮೀ. ೩೦-೩೭). ೩. ಚಿತ್ತಜನ ಮಾಸಾಳೊ ಮನ್ಮಥನ ಕತ್ತಲೆಗೊ . . . ಮಾಸುತನ ದಳವೆನಲಿತ್ತಱದ ಗಣಿಕಾನಿಕರ ಮೆಱೆವುದು ವಿಳಾಸದಲಿ (ಶಿಕೊಶ. ೦೭-೩೩); ಹೊಳೆವುತಿದ್ದರು ಮನಸಿಜನ ಮಾಸಾಳುಗಳಂತೆ ದಿಟ್ಟೆಯರು (ಭರತ. ೦೨-೯೦).

**ಮಾಸವಳಮದನಮಹೇಶ** = ಮಹಾಪರಾಕ್ರಮಿಯಾದ ಮದನನನ್ನು ನಿಗ್ರಹಿಸಿದವನು ; ಒಂದು ಬಿರುದು: ಬಿರುದಿಂಗೆ–ಗಜದುಳಿ, ಗಜಪಾಲು, ನರಲೋಕದಲ್ಲಣಂ, ಮಾಸವಳಮದನಮಹೇಶಂ, ಅಂಕತ್ರಿನೇತ್ರಂ (ಕಬುತ. ೦೭೪ ಕ್ರಯೋ).

[ಮಾ$_4$ + ಸವಳ (< ಸಬಳ$_3$)]

**ಮಾಸವಾರಿ** (ನಾ). ಶ್ರೇಷ್ಠನಾದ ಅಶ್ವಾರೋಹಿ : ಶಕ್ತಿಧರರ್ ಶಕ್ತಿಯಂ ಬಿಟ್ಟು ಶಕ್ತಿಯಂ ಮಱೆಗೊಳೆಯುಂ ಮಾಸವಾರಿಗಳಾಸವಾರಿಗಳಾಗೆಯುಮಿಂತು ತನ್ನ ತಂತ್ರಂ ಭಯಾಕ್ರಾಂತಸ್ವಾಂತಮಾದುದಂ ಕಂಡು (ಪಾರ್ಶ್ವ. ೩-೮೩ ವ). ಈ ಕವಿಯು 'ಆಸವಾರಿ' ಶಬ್ದದಂತೆ ಯಮಕದ ಚಮತ್ಕಾರಕ್ಕಾಗಿ ಈ ಶಬ್ದವನ್ನು ಸೃಷ್ಟಿಮಾಡಿರಬಹುದು.

[ಮಾ$_4$ + ಸವಾರಿ]

**ಮಾಸವಾಳ** ' ಮಾಸವಳ ' ನೋ.

**ಮಾಸವೆಗ್ಗಡೆ** (ನಾ). ತಿಂಗಳಿಗೊಮ್ಮೆ ಪರ್ಯಾಯವಾಗಿ ಬರುವ ಅಧಿಕಾರವನ್ನು ಹೊಂದಿದ ಹೆಗ್ಗಡೆ : ಶ್ರೀಯೋಗನಾಥ ದೇವರ ಅಮೃತಪಡಿ ಮೊದಲಾದ ಎಲ್ಲಾ ಶ್ರೀಕಾರ್ಯ್ಯಂಗಳು . . . ಅಶೇಷ ಮಹಾಜನಂಗಳು ಅಂದಂದು ನಡವ ಮಾಸವೆಗ್ಗಡೆ ಸೇನಬೋವರಿಂದವೂ ಆರೈದು ಉದಾಸೀನ ಮಾಡದೆ ಆಚಂದ್ರಾರ್ಕ್ಕಸ್ಥಾಯಿಯಾಗಿ ನಡೆಸುವರು (ಎಕ. XII, ತಕ್ಕಹಾ. ೨-೭೦ ; 1261). [ಮಾಸ$_2$ + ಪೆಗ್ಗಡೆ (<ಪೆರ್ಗಡೆ$_1$)]

**ಮಾಸವೆಗ್ಗಡೆತನ** (ನಾ). ತಿಂಗಳಿಗೊಮ್ಮೆ ಪರ್ಯಾಯವಾಗಿ ಬರುವ ಹೆಗ್ಗಡೆಯ ಅಧಿಕಾರ : ಅಟ್ಟದದೇಕಂಣನವರೂ ಇಶ್ವರಪದಿಗಳ ಮಾದಂಣಗಳ ಮಾಸವೆಗ್ಗಡೆತನದಲಿ ಸಪ್ಪೆಯಕೇತಯ್ಯಂಗಳ ಮಕ್ಕಳಾ ಪುಲಿಗೆಱೆದೇವರು ಸೋಮಯ್ಯಂಗಳಿಗೆ ಕೊಟ್ಟ ಸಿಲಾಸಾಸನದ ಕ್ರಮವೆಂತೆಂದಡೆ (ಎಕ. VI (R), ಕೃಕ್ಕರಾ. ೯-೬ ; ಸು. 1306).

[ಮಾಸವೆಗ್ಗಡೆ + —ತನ]

**ಮಾಸಾಂಕ**. ಮಾಸಂಕ (ನಾ). ೧. ಅತಿಯಾದ ಶೌರ್ಯ : ಮೂಱು ಲೋಕದ ಗಂಡನೆಂಬ ಮಿಾಱಿದ ಮಾಸಾಂಕದ ಭಟನವನೀಗ (ಶಂರಸಾ. ೬-೬೩). ಮಾಸಂಕ : ೨. ಅತಿಯಾದ ರೋಷ.— ಸಿಟ್ಟು : ಆ ಸರ್ಪನತ್ಯುಗ್ರತೆಯನೆ ನೆಗ್ಗೊತ್ತಿದಾ ಸಾಸಿಗನ ಕಾಣುತವೆ ಅಸುರದಿಂ ಕಲಬಲದೊಳರ್ದಹಿತತಿ ಮಾಸಂಕದಿಂ ಮುತ್ತಿದವು (ಶ್ರೀಚಾ. ೧೧-೭೫) ; ಮಾಸಂಕದೀದ ಬಂಧುಶ್ರೀ ಮಾನದೊಳಿನಿತು ಹೇಸದೇ ಮಾಡಿರ್ದ ವಂಶ ಘಾತಕದ ಫಲಮಿಾ ಸಮಯವೊಂದಱೊಳೆ ಕಾಣಿಸಿದುದತ್ಯುಗ್ರಪುಣ್ಯ ಪಾಪದ ಫಲಗಳು (ಸಮ್ಮೀಕಿ. ೩-೩೮). ೩. ಸರಿಸಮಾನ ; ಸರಿಸಾಟಿ : ವರಭೋಗದಿಂದ ಶಚಿಯಲ್ಲಿ ಮಾಸಂಕ . . . ರೋಹಿಣೀದೇವಿಯಲ್ಲಿ ಸುರುಚಿರ ಕಾಂತಿಯಿಂದಿಕ್ಕುತಕ್ಕೆಯಾಗಿರ್ಪಳಾ . . . ಸೋಮೆ ಸುವ್ರತದ ಸೀಮೆ (ಸಮ್ಮೀಕಿ. ೬-೧೧). [<ಸಂ .ಮಹಾಸಾಹಸಾಂಕ. / ತೆಲು. ಮಾಸಟಿ]

**ಮಾಸಾದಿ** (ನಾ). ಶ್ರೇಷ್ಠನಾದ ಕುದುರೆಯ ಸವಾರ ; ಉತ್ತಮನಾದ ರಾವುತ : ಎಂತಪ್ಪ ದುಷ್ಟಾಶ್ವಂಗಳುಮನೇಱಲುಂ ತಿರ್ದಲುಂ ಬಲ್ಲನೆಂದು ಪೇಟ್ಟಾಳಾಗಿ ತಂತ್ರಪಾಳವೆಸರೊಳ್ ಮಾಸಾದಿಯಾಗಿರ್ದಂ (ಹಂಶಭಾ. ೬-೩೧ ಪ). [<ಸಂ. ಮಹಾಸಾದಿನ್]

**ಮಾಸಾಮಿಗ ?** (ನಾ). (?) : ದೇವಾಸುರರಾ ಶಿವಮಾರನಂ ಅಗ್ರಹಾರಮೆಳಮ್ಬುಣುಸೆ ಪ್ರಹ್ಮಾದೇಯ ಮಾಸಾಮಿಗ ಪ್ರೀ(?ವ್ರಿ)ತಿ ಅಱಿದು ಕೊಳೆ ಕೊಡಲಾರದೆ ಎನೆಬರು ಎಱಿಮಂ ಸತ್ತೋರ್ (ಪ್ರಿಆಂ.೦೪೪೪. ೬-೨ ; 808). [.? ]

**ಮಾಸಾರ್ಧ** (ನಾ). ಒಂದು ತಿಂಗಳಿನ ಅರ್ಧಭಾಗ ; ಹದಿನೈದು ದಿನ ; ಪಕ್ಷ : " ಮಾಸಾರ್ಧವಲ್ಲಿ . . . ಪಕ್ಷಮೆನಿಕ್ಕು " (ಪಂಗಣಾ. ೦೪೬-೩೩) ; ಈ ದಿನಂ ಮೊದಲಾಗಿ ಮಾಸಾರ್ಧದೊಳೊಂದು ಮಹಾಲಗ್ನಮೊಳ್ಳಿತ್ತೆಂದು ಪೇಳ್ದು (ಪಂಪರ. ೪-೭೨). [ಸಂ.]

**ಮಾಸಾವಂತ** ' ಮಹಾಸಾವಂತ ' ನೋ.

**ಮಾಸಾಶನ** (ನಾ). ೧. ಜೀವನನಿರ್ವಹಣೆಗಾಗಿ ತಿಂಗಳಿಗೊಮ್ಮೆ ಕೊಡುವ ಹಣ,— ಮಾಸದ ಸಮಯಕ್ಕೆ ಸರಿಯಾಗಿ ಕೊಡುವ ವೇತನ : ರಾಜನು ತನ್ನ ಸೇವೆಗೆ ನೂರುಮಂದಿ ವೀರಭಟರನ್ನಿಟ್ಟುಕೊಂಡು ಅವರ ಮಾಸಾಶನವನ್ನು ಒಂದೊಂದು ತಿಂಗಳಲ್ಲಿ ಒಬ್ಬೊಬ್ಬ ಮಗಳು ಕೊಡುವಂತೆ ನಿಷ್ಕರ್ಷಿಸಿದನು (ಕಶಿಕ. ೨೬) ; ಅನ್ನ ವಸ್ತ್ರಕ್ಕಾಗಿ ಸಾವಷಸ್ಕವಾಗಿ ಸ್ವಲ್ಪ ಮಾಸಾಶನದ ನಿಗದಿಯಾಗಿದೆ (ಪಿಬಂಧ. I, ೪೮೦). ೨. ನಿವೃತ್ತಿವೇತನ ; ಪಿಂಚಣಿ : ಉದ್ಯೋಗದಿಂದ ನಿವೃತ್ತರಾಗಿ ಸ್ವದೇಶಕ್ಕೆ ಹಿಂತೆರಳುವ ಬಳಿಕವೂ ಅವರ ಮಾಸಾಶನ(Pension)ಕ್ಕಾಗಿ ಇಲ್ಲಿಂದ ಹಣ ಸಲ್ಲಬೇಕಾಗುತ್ತದೆ (ಬಾಂಶ್ರ. III. ೦೩೩೬). [ಸಂ.]

**ಮಾಸಾಳ್** ' ಮಾಸವಳ ' ನೋ.

**ಮಾಸಾಳಿ** ' ಮಾಸವಳ ' ನೋ.

**ಮಾಸಾಳು** ' ಮಾಸವಳ ' ನೋ.

**ಮಾಸಿ** (ನಾ). ಎಂಟು ಗುಂಜಿಗಳ ಒಂದು ತೂಕ : ೮ ಗುಂಜಿಗಳ ತೂಕಕ್ಕೆ ಮಾಸಿ (ಉದ್ದಿನಕಾಳ ತೂಕ) ಎಂಬ ಹೆಸರು (ಗ್ರಹವ್ಯ. ೬).

[ < ಸಂ. ಮಾಷ ]

**ಮಾಸಿಕ** (ಗು). ೧. ತಿಂಗಳಿಗೆ ಸಂಬಂಧಿಸಿದ. (ನಾ). ೨. ವ್ಯಕ್ತಿಯು ಸತ್ತ ಮೊದಲನೆಯ ವರ್ಷದಲ್ಲಿ (ಸಾಮಾನ್ಯವಾಗಿ) ತಿಂಗಳಿಗೊಮ್ಮೆ ಮಾಡುವ ಶ್ರಾದ್ಧ ; ▪ ವೈದಿಕಪರಂಪರೆಯಲ್ಲಿ ಹಿರಿಯ ಮಗನು ಮೃತನ ಉತ್ತರಕ್ರಿಯೆಯನ್ನು ಮೊದಲ ಹನ್ನೆರಡು ದಿನಗಳ ಕಾಲ ಆಚರಿಸಿದ ಬಳಿಕ, ಮೃತತಿಥಿಯಿಂದ ಒಂದು ಸಂವತ್ಸರದ ಕಾಲಾವಧಿಯಲ್ಲಿ ಶ್ರಾದ್ಧಕಲ್ಪದ ಪ್ರಕಾರ ಹದಿನಾರು ಶ್ರಾದ್ಧಗಳನ್ನು ಮಾಡಬೇಕು. ಇವು ಸಾಮಾನ್ಯವಾಗಿ ತಿಂಗಳಿಗೊಂದಾಗುವುದರಿಂದ ' ಮಾಸಿಕ'ಗಳೆನ್ನುತ್ತಾರೆ: " ಅನ್ವಾಹಾರ್ಯಂ, ಮಾಸಿಕಂ - ೨ ತಿಂಗಳು ತಿಂಗಳಿಗೂ ಮಾಡತಕ್ಕ ಪಿಂಡಪಿತೃಯಜ್ಞಕ್ಕೆ ಹೆಸರು" (ಸಿದ್ಧಾಂತಿ. ೨೨೩) ; ಕ[ಟ್ಟೆ]ವೋದ ವಲ್ಲಿಕನ ಮಾಸಿಕದೊಳೊಗೆದಾಱಿಗೆಯ್ದೆವಂದೊಟ್ಟಪೆ ದೋರ್ಪ ಚೀರಮನ ಬಾಯೊಱೆಯೊಳ್ ಕಿರಿ × × × (ಎಕ. VI, ಕಡೂರು. ೩೭-೩೮ ; 1136); ಸಾವಿತ್ರಿ ಪ್ರತಿತಿಂಗಳೂ ತಪ್ಪದೆ ಮಾಸಿಕ ಮಾಡಿಸುತ್ತಿದ್ದಳು (ಶಾಯಿಕ. ೨೦೦). ೩. ತಿಂಗಳಿಗೊಮ್ಮೆ ಪ್ರಕಟವಾಗುವ ಪತ್ರಿಕೆ ; ಮಾಸಪತ್ರಿಕೆ : ನಮ್ಮಲ್ಲಿ ದೈನಿಕಗಳ ಜೊತೆಗೆ ಸಾಪ್ತಾಹಿಕ, ಪಾಕ್ಷಿಕ ಹಾಗೂ ಮಾಸಿಕಗಳೂ ಸಾಕಷ್ಟು ಬರುತ್ತಿವೆ(ಕೂ೨).

[ ಸಂ. ]

**ಮಾಸಿಗ** (ನಾ). ಒಂದು ಮನೆತನದ ಹೆಸರು : ಪುರಿಗೆಱೆನಾಡ ಸರಟಪುರದಾಯ್ಯದಿಂ[ಬ]ರುಮಿಜ್ದು ನಾಡಯಿಸೆ ಮಾಸಿಗರ ಚಿದಾಣ್ಣ ಗೋಸಾಸ(ರ)ಮಿಟ್ಟೋಂ (ಕೌಇ. XI-i, ೨೦-೫ ; 883). [ ? ]

**ಮಾಸಿಯವಾಡಿ** (ನಾ). ಒಂದು ಊರಿನ ಹೆಸರು : [ಕೋಗ]ಳಿಯಾ ಯ್ಯೂಱುಮಂ ಮಾಸಿಯವಾಡಿ [ನೂಱ] ನಾಲ್ವತ್ತುಮನಾಳುತ್ತುಮಿದ್ದು (ಕೌಇ. XI-i, ೨೨-೬ ; 897). [ ? + ಪಾಡಿ$_2$]

**ಮಾಸಿರಿವಂತ** (ನಾ). ದೊಡ್ಡ ಶ್ರೀಮಂತ ; ಭಾರಿ ಐಶ್ವರ್ಯವಂತ : ಎಮ್ಮ ತಂದೆ ಮಾಸಿರಿವಂತನಾಗಿಯುಂ ಪೊನ್ನೆಂಬ ಪೆಸರ ಚಿನ್ನಮನಿರಿಸದೆ ದಾನಧರ್ಮಂಗೆಯ್ದು (ಶಂಚಶಂ. ೦೪೬-೨೦). [ಮಾ$_4$ + ಸಿರಿವಂತ]

**ಮಾಸಿಸು** (ಕ್ರಿ). ೧. ಕಾಂತಿಗುಂದಿಸು ; ಮಸುಕಾಗಿಸು : ದೋಸಮೇನಾನುಂ ಸ್ವಲ್ಪಮಾದೊಡಂ ಮಾಸಿಸುರ್ಕಾಮಣಂ ಕೃತಿವಧುವಂ (ಕಶಾ. ೦-೦೦೨) ; ಸೂಸಿದ ಪುಷ್ಪಾಂಜಲಿಯನೆ ಬಾಸಣಿಸಿದ ಮದವದಳಿ ಕುಳಂಗಳ ಚೆಲ್ವಂ ಮಾಸಿಸಿದುವು ವಾಸವನ . . . ಕಣ್ಗಳ್ (ಅಂಕೃ.೬__೦೦೬). ೨. ಹೀಯಾಳಿಸು : ಮಾಸಿದ ರೂಪು ನೋಱೆಪ್ಪಡರೆಮಾಸಿದ ಚಿತ್ರದ ಪೆಣ್ಣ ರೂಪುಮಂ ಮಾಸಿಸೆ ನಾಡೆ ಮಾಸದಿಕೆಯುಂ ಪಡೆದಪ್ಪುದು (ಹಂಶಶಾ. ೯-೬೨). ೩. ಅಪವಿತ್ರಗೊಳಿಸು ; ಕೆಡಿಸು : ಕುಲಮಂ ಮಾಸಿಸಿ ಮಿಾಹಮಂ ತೋಱಿದು ಕಂದರ್ಪೋಸೆ ಮೆಯ್ಯೊಳ್ ಮಹಾಮಲಮಂ ತಾಳ್ದಿದ ಕಷ್ಟರಂ . . . ಕಂಡು (ರಶಾಕ್ಕು. ೦-೦೦೮).

[ಮಾಸು$_1$ + — ಇಸು$_3$]

**ಮಾಸು$_1$** (ಕ್ರಿ). ೧. ಮಲಿನವಾಗು ; ಕೊಳೆಯಾಗು : "ಮಾಸು— ಮಲೀಮಸೇ, ಜರಾಯೌಚ (ಗರ್ಭಕೋಶದ ಸತ್ತೆ)" (ಶಬ್ದಾ) ; ಮಂಡೆ ಮಾಸಿದರೆ ಮಜ್ಜನವ ಮಾಡಿದಲ್ಲದೆ ಹಿಂಗದು ವ್ಯಾಪಾರ (ಮೋಕ್ಷಪತಾ. ೪೮-೨೦೩) ; ಹಡೆದ ತಾಯಿಲ್ಲ ಕಾಯುಳ್ಳೊಡೆ ತಲೆ ಹೀಗೆ ಜಡೆಗಟ್ಟಿಕೊಂಡು ಮಾಸಿಹುದೇ (ಪೋಚಶ. ೨೦-೨೨) ; ಮಾಸಿದ ಸೀರೆ ಮಾಸಿಯು

ತಿಲಕದ . . . ಮುದಿವೇಶಿಯರೆದೆಯೊಡುತಿಪರು (ಶಂಪರಿ. ೬-೦೯೦). ೨. ಕೊಳೆಮಾಡು ; ಮಲಿನಗೊಳಿಸು : ಈ ಪುಸ್ತಕವು ಎಂಥಾ ಚಂದವಿದೆ ! ಇದನ್ನು ಮಾಸಬೇಡ (ಪುಂಬಿ. ೨-೬). ೩. ಕಾಂತಿಗುಂದು ; ಮಂಕಾಗು : ನಸುಮಾಸಿ ಪಾಡಟಿದ ರೂಪಿನೊಳುಣ್ಮುವ ಗಾಡಿ ನಾಡೆ ಕಣ್ಗೆಡಜಿ (ಶಂಶಭಾ. ೦೩-೯೯) ; ಮಾಸಿದ ಮುಕುರಂಬೊಲಂತೆ ಗಳಿತಪ್ರಭಮಾಯ್ತು ಮೃಗಾಂಕಮಂಡಲಂ (ಶಾಂತೀಶ್ವ. ೦೦-೮೮); ಆ ಸಮಯದೊಳಾದಿತ್ಯನು ತನಗೆಣೆ ಏಸು ನೋಡಿದೊಡಿಲ್ಲವೆಂಬ ವಿಳಾಸಲಳಿಮದೀ ಹನುಮನಿಂದೆನೆ ಮೊಗ ಮಾಸಿ ಬಿದ್ದನು ಜಲಧಿಯೊಳು (ಕುಂತಿ. ೦೨-೨೮). ೪. ಕುಗ್ಗು ; ಕಡಮೆಯಾಗು : ಇಂದಲ್ಲ ನಾಳೆ ಬರಲೇಬೇಕು ತನಗಾಗಿ ಕಾಗದ ಎಂಬ ಆಸೆ ಮಾಸಿರಲಿಲ್ಲ (ವಾತ್ಸ್ಯ. ೦೬೬) ; ಭವಿಷ್ಯತ್ತಿನ ವಿಚಾರ ಮಾಡಿ ಆಸೆಗೋಪುರ ಕಟ್ಟಿದರೆ ಬಲವಾದ ಗಾಯದ ನೋವು ಮಾಸುವುದೇ? (ಕುರುಕಾ. ೦೬೯). ೫. (ಅಲಂ) ಅಪವಿತ್ರಗೊಳ್ಳು ; ಕಳಂಕ ಹೊಂದು: ಅಯ್ಯನಿತ್ತುಮುಮುನಾಂ ನಿನಗಿತ್ತನಿದೇವುದಣ್ಣ ನೀನೊಲಿದ ಲತಾಂಗಿಗಂ ಧರೆಗಮಾಟಿಸಿದುದು ನೆಗಟ್ತಿ ಮಾಸದೇ (ಆದಿಪು. ೦೪-೦೩೦) ; ವಾಕ್ಕ್ತಿ ಪಟಿಗುಂ ಮನೋಜರಿಪು ಪೇಸುಗುಮಗ್ಗದ ಕೀರ್ತಿ ಮಾಸುಗುಂ (ಕುಂತಿಹಂ. ೦೬೩-೬). ೬. ಅಪವಿತ್ರಗೊಳಿಸು ; ಕಳಂಕ ತರು : ಕೊಳದೊಳಗೆ ಪೊಕ್ಕು ಮೆಯ್ಗರೆದೈ ಚಿಃ ಖಲ್ಕನೆನೆ ಬಾರ್ತೆಗೆಟ್ಟುದೆಮೂಲ್ಕ ಯಶೋರತ್ನಮೆಂಬುದಂ ಮಾಸುವೆನೇ (ಗದಾಯು. ೬-೨೪).

ಮಾಸದಿಕೆ = ಮಲಿನವಾಗದಿರುವಿಕೆ : ಮಾಸಿದ ರೂಪು ನೋಟಿಗ್ಳೊಡರೆ ಮಾಸಿದ ಚಿತ್ರದ ಪೆಣ್ಣ ರೂಪುಮಂ ಮಾಸಿಸೆ ನಾಡೆ ಮಾಸದಿಕೆಯುಂ ಪಡೆದವ್ಪುದು (ಶಂಶಭಾ. ೮-೬೨); ✱ "ಇಲ್ಲಿ 'ಮಾಸದಿಕೆ' ಎಂಬ ಪಾಠ 'ಮಾಸ [ಿ]ಕೆ' ಯಾಗಿರಬಹುದು." (ಶಂಶಪೀ. ೨೯೬).

**ಮಾಸು₁** (ನಾ). ೧. ಕೊಳೆ; ಹೊಲಸು: "ಮಲಿನಂ ಮಾಸು" (ಕಾಶಕ್ಕ. ೪೩). ೨. ಕೊಳೆಯಾದ ಬಟ್ಟೆ ; ಮಲಿನವಾದ ವಸ್ತ್ರ : ಸಕ್ಕಳಾ ತಾಯಿ ಮುದುಕಿ ಎಳೆಯುವಳಾಗಿ, ಮಾಸು ವಿಕಂಚೆಳಿಯಾಗಿ, ಸವೆದ ಮೈ ತುಂಬಿ (ಹೊಂಗಳು. ೨೦-೯). ೩. ಭ್ರೂಣವನ್ನು ಆವರಿಸಿರುವ ಪೊರೆ ; ಕಸ ; ಜರಾಯು: "ಗರ್ಭಾಶಯಃ, ಜರಾಯುಃ, ಕಲಲಃ, ಉಲ್ವಂ, ಈ ೪ ಗರ್ಭವು ಮುಸುಕಿಕೊಂಡಿದ್ದ ಮಾಸಿನ ಪೆಸರು" (ನಾತಂ. ೦೦೬) ; ಅಗಸೆ ಪೆಸಜವರೆ . . . ಬಳ್ಳಿಸೊರೆಯೆಂಬಿವನಿಕ್ಕುಗೆ ಪಾಲೊಳ್ ಮೇಣ್ ಮದ್ಯದೊಳೆ ಗೋಕುಲಂ ಮಾಸನಿಕ್ಕುಗುಂ ತತ್ಕ್ಷಣದಿಂ (ಲೋಕೋಪ. ೯-೦೯೦) : ಕೂಸು ಬಲಿಯುವುದಕ್ಕೆ ಮೊದಲೆ ಮಾಸ ಹಟಿದು ಕೂಸ ಕೊಂದು (ಸಳವ. II,೪೦೬-೦೦೯೩) ; ಶಿಶುವು ಜನಿಸಿದ ನಂತರ ಮಾಸು ಸಂಪೂರ್ಣವಾಗಿ ಬಿದ್ದು ಹೋಗಬೇಕು (ಬಶಿ. ೩೯). ೪. (ಅಲಂ) ದೋಷ ; ಪಾಪ : ಮನದಲ್ಲಿ ಮಾಸಿರಲು ಮಹಿಮರೆನೆ ನೀರ್ಮುಳುಗಿ ಮರೆನಡೆವ ಮಾನಿಸರು ಹಲವರಿಹರು (ಶುಚೀರ್. ೦೩೩-೨೭೬).

[< ಮಾಸು₁ / ತಮಿ. ಮಲ. ಮಾಚು, ಮಾಚ್ಚು; ತುಳು. ಮಾಸು ; ಕೊಡ. ಮಾಚಿ ; ತೆಲು. ಕುಇ. ಮಾಸಿ ; ಗೊಂಡಿ. ಕೋತ. ಮಾಚ್]

**ಮಾಸು₂** (ನಾ). ಬಾಡು ; ಅಡಗು ; ಮಾಂಸ : ನೆತ್ತರ್ ಮಾಸಲ್ಸು ತೊವಲ್ ಪತ್ತಿದೊಡಂಬಿದು (ಶಾಂಪಂಡ. ೯-೯) ; ಮ್ಯಾಯಾಗ ಮಾಸಿಲ್ಲ ದಿದ್ದರೇನಾತ, ಕೈಯಾಗ ಕಾಸಿಲ್ಲೇನ? (ಜನಪದಾ. I, ೨೯೬); ಇನ್ನೂ ತಲೀ ಮ್ಯಾಲಿನ ಮಾಸ ಆರಿಲ್ಲ ನಿನಗ (ಮುತ್ತ್ಯ ರ. ೩).

[← ಮರಾ. ಮಾಸ್. / ಸಂ. ಮಾಂಸ]

**ಮಾಸುಚೀಲ** (ನಾ). ಗರ್ಭದಲ್ಲಿ ಮಗು ಬೆಳೆಯುವ ಚೀಲ ; ಭ್ರೂಣದ ಹೊರಪೊರೆ : "ಗರ್ಭಾಶಯಃ, ಜರಾಯುಃ — ೨ ಬಸುರೊಳಗೆ ಸುತ್ತಿಕೊಂಡಿರುವ ಮಾವಿಚೀಲದ ಹೆಸರು . . . ಮಾಸುಚೀಲಕ್ಕೆ ಹೆಸರುಗಳೆಂತಬೂ ಕೆಲಕೆಲವರು ಪೇಳುವರು" (ಸಿದ್ಧಾಂತಿ. ೦೭೬). [ಮಾಸು₂ + ಚೀಲ]

**ಮಾಸುತ** (ನಾ). ಲಕ್ಷ್ಮಿಯ ಮಗ ; ಮನ್ಮಥ : ಚಿತ್ರಜನ ಮಾಸಾಳೊ . . . ಕಂದರ್ಪ ರಚಿಸಿದ ಸೂತ್ರವೋ ಮಾಸುತನ ಪಳಿವೆನಲಿತ್ತೆಜದಿ ಗಣಿಕಾನಿಕರ ಮೆಚಿಮದು ವಿಳಾಸದಲಿ (ಜೀವಂಧ. ೦೭-೬೩). [ಸಂ.]

**ಮಾಸಿವಾನಿ** (ನಾ). ಒಂದು ಊರಿನ ಹೆಸರು : ಸೀಮಾನ್ತರವ್ ಪಡೆಯಮಿಪ್ಪ್ಪಂತುಗಣ್ಣುಗಂ ಮಾಸಿವಾನಿ ಸೀಮೆ ಮೂಡಾಯ್ತೊಟಿವಿ (ಎಕ. V (R), ಕೃಕ್ಪ. ೦೦೩-೭೩; 890) [ ? ]

**ಮಾಸೇನ** (ನಾ). ಒಬ್ಬಾತನ ಹೆಸರು : ಶ್ರೀ ಮಾಸೇನಪ್ರ್ವರಮಪ್ರಭಾವರಿಷಿಯರ್ಕ್ಕಬ್ಬಪ್ಪಿನಾ ವೆಟ್ಟದುಳ್ಳ್ೀ ಸಂಗಂಗಳ ಪೇಟ್ದ ಸಿದ್ಧಸಮಯನ್ಸ ಪ್ಪಾದೆ ನೋನ್ತು (ಎಕ. II, ೨೭-೦; 700). [ಮ್ಹಾ₄ + ಸೇನ₄]

**ಮಾಸೇಸ** (ನಾ). ಮಹಾಶೇಷ; ಆದಿಶೇಷ : ಮೋಹಿರ್ಮ್ಮೆ ಕೀಟಿಳಿಗೆ ಪಾಟಿಯಿಡುತೆ ಪಾಯ್ದು ಮಾಸೇಸನ ಬಂಡಾರಮನಪಹರಿಸಿ (ಅನ್ತುಕ. ೨೯). [< ಸಂ. ಮಹಾಶೇಷ ]

**ಮಾಸೋಪವಾಸ**(ಗು). ೧. ಒಂದು ತಿಂಗಳವರೆಗೆ ಉಪವಾಸವ್ರತವನ್ನು ಆಚರಿಸುವ : ಮಾಸೋಪವಾಸರವಿಚಂದ್ರಸಿದ್ಧಾನ್ತಿಗಳು . . . ಮಾಘನಂದಿ ಸಿದ್ಧಾಂನ್ತಿಚಕ್ರವರ್ತ್ತಿಗಳ ಶ್ರೀಪಾದಪದ್ಮಂಗಳಿಗೆ ಧಾರಾಪೂರ್ವಕಂ ಮಾಡಿ ಕೊಟ್ಟರು (ಎಕ. III (R), ನಾಗಮಂ. ೬೦-೨೯; ಸು. 12ನೆಯ ಶಶ). (ನಾ). ೨. ಒಂದು ತಿಂಗಳವರೆಗೆ ಮಾಡುವ ಉಪವಾಸವ್ರತ : ಮಾಸೋಪವಾಸದೊಳಿರ್ದು ಪಾರಣೆಯೊಳ್ ಚರಿಗೆಗೆ ವಂದ ಧೃತಿಕರಣ ಮುನೀಂದ್ರರಂ ನಿಜೀಸಿ (ಶಾಂತಿಪು. ೯-೬೩೪). [ಸಂ.]

**ಮಾಸ್ಟರು**, ಮಾಸ್ತರ, ಮಾಸ್ತರು, ಮೇಷ್ಟರು, ಮೇಷ್ಟ್ರು (ನಾ). ಉಪಾಧ್ಯಾಯ; ಅಧ್ಯಾಪಕ : ಮಾಸ್ಟರುಗಳಿಗೆ ಮನೆ ಕಟ್ಟಿಕೊಡಲೂ ತರುದೂದು ಮಾಡಿದ್ದರು (ಹುಟ್ಟಿಕ. ೬). **ಮಾಸ್ತರ** : ಅಂದು ಮಾಸ್ತರರು ರಾತ್ರಿ ಘಂಟೆ ಹತ್ತಾದರೂ ಮನೆಗೆ ಬಂದಿರಲಿಲ್ಲ (ಕಾವೇಂ. ೩); ಹೊನ್ನಪ್ಪಮಾಸ್ತರರು . . . ಸಿದ್ಧರಾಗುತ್ತಲಿದ್ದರು (ಕ್ರಣಿ. ೩). **ಮಾಸ್ತರು** : ಅವರೊಬ್ಬ ಪ್ರಾಥಮಿಕಶಾಲೆಯ ಮಾಸ್ತರು (ಕೂಾ). **ಮೇಷ್ಟರು** : ಶಾಲೆಯ ಮೇಷ್ಟರು ತುಂಟ ವಿದ್ಯಾರ್ಥಿಯನೆಂದರು. . . ಹೋಗು ಹೆಡ್ಮಾಸ್ಟರ ಬಳಿಗೆ (೩ಂಶಾಪ. ೦೨೦-೯೨); ಅದನ್ನು ಓದುವ ಕೆಲಸ ಆ ಊರಿನ ಮೇಷ್ಟರಿಗೆ ಸೇರಿದ್ದು (ಹೊಂಡಿ. ೭೭). **ಮೇಷ್ಟ್ರು** : ಆ ಮೇಷ್ಟ್ರೇ ಸುಣ್ಣವನ್ನು ತನ್ನ ಪೆಟ್ಟದಿಂದ ಹೊಡೆಸಬೇಕು (ಮಹಾಗ. ೦೪೨); ಮೇಷ್ಟ್ರುಗಳು ಕಾಟ ಕೊಡಲು ಈಗಾಗಲೇ ಷುರು ಮಾಡಿರುತ್ತಾರೆ (ರೂಪಸಂ. ೩೩). [ ← ಇಂ. Master ]

**ಮಾಸ್ತರ** 'ಮಾಸ್ಟರು' ನೋ.

**ಮಾಸ್ತರಣೆ** 'ಮಾಸ್ಟರಿಣೆ' ನೋ.

**ಮಾಸ್ತರತಿ** (ನಾ). = ಮಾಸ್ತರಿಣೆ : ಸಣ್ಣಸಣ್ಣ ಹುಡುಗೆಯರು ಮಾಸ್ತರತಿಯ ಆಶ್ರಯದಲ್ಲಿ ಬಿದ್ದುಕೊಂಡಿದ್ದರು (ಸ್ತ್ರೀಶಿ. ೯೬೦); ಗಂಡನ್ನ ಬಿಟ್ಟು ಓಡಿ ಬಂದು ಇಲ್ಲಿ ಗರತಿಯಾಗಿ ಮಾಸ್ತರತಿ ಆಗ್ಯಾಳೇನು ? (ಕೋಪಶೀ. ೨). [ ಮಾಸ್ತರ (< ಮಾಸ್ಟರು) + — ತಿ₁ (< — ಇತ್ತಿ) ]

**ಮಾಸ್ತರಿಕೆ** (ನಾ). ಮೇಷ್ಟರ ಕೆಲಸ; ಉಪಾಧ್ಯಾಯ ವೃತ್ತಿ: ಹೆಂಡತಿಗೆ ಮಾಸ್ತರಿಕೆ ನೌಕರಿ ಬೇರೆ ಹಚ್ಚಿದ್ದಾಯಿತು (ಎಡಹ. ೦೯೯).

[ ಮಾಸ್ತರ (< ಮಾಸ್ಟರು) + — ಇಕೆ ]

**ಮಾಸ್ತರಿಣೆ**, ಮಾಸ್ತರಣೆ (ನಾ). ಉಪಾಧ್ಯಾಯಿನಿ; ಅಧ್ಯಾಪಕಿ : ನಿನ್ನ ಜೊತೆಗೆ ನಾನಿರುವೆ ಎಂದು ಮಾಸ್ತರಿಣೆ ಹಿಂದುಳಿದರು (ಅಶ್ವ. ೮೩) ; ದತ್ತೂನ ಮಕ್ಕಳ ಮೊದಲ ಮಾಸ್ತರಿಣಿಯೂ ನಾನೇ ಆದೆ (ಸ್ತ್ರೀಶಿ. ೨೦೯). **ಮಾಸ್ತರಣೆ** : ಅವರ ಮಾಸ್ತರಣೆ ಅವಳು (ಶುಕರುದಾ. ೦೯೩).

[< ಮಾಸ್ಟರು]

**ಮಾಸ್ತರು** 'ಮಾಸ್ಟರು' ನೋ.

**ಮಾಸ್ತಿ** 'ಮಾಸತಿ' ನೋ.

**ಮಾಸ್ತಿಕಲ್** 'ಮಾಸತಿಕಲ್ಲು' ನೋ.

**ಮಾಸ್ತಿಕಲ್ಲು** 'ಮಾಸತಿಕಲ್ಲು' ನೋ.

**ಮಾಸ್ತಿಗಲ್ಲು** 'ಮಾಸತಿಕಲ್ಲು' ನೋ.

**ಮಾಸ್ತಿಗುಡಿ** (ನಾ). ಮಾಸ್ತಿಕಲ್ಲು ಇರುವ ದೇವಸ್ಥಾನ; ಮಹಾಸತಿಯ ಹೆಸರಿನಲ್ಲಿ ಕಟ್ಟಿದ ಗುಡಿ: ಹುಬ್ಬಳ್ಳಿಯಿಂದ ಕಾರವಾರಕ್ಕೆ ಹೋಗುವ ಮಾರ್ಗಮಧ್ಯದಲ್ಲಿ ಸುಪ್ರಸಿದ್ಧವಾದ ಮಾಸ್ತಿಗುಡಿಯಿದೆ (ಕಜಾಅ. ೩೦೯). [ಮಾಸ್ತಿ (< ಮಾಸತಿ) + ಗುಡಿ₃]

**ಮಾಸ್ತಿಬೀಳು** (ನಾ). ಸ್ತ್ರೀಯು ಸತ್ತ ಗಂಡನೊಡನೆ ಚಿತೆಯೇರುತ್ತಿದ್ದ ಜಾಗ,– ಮಹಾಸತಿಯಾಗುತ್ತಿದ್ದ ಸ್ಥಳ: ಬಹುಕಾಲದ ಹಿಂದೆ ಆ ಸ್ಥಳದಲ್ಲಿ ಮಹಿಳೆಯರು ಸತಿಯನ್ನು ಆಚರಿಸುತ್ತಿದ್ದರಂತೆ. ಅದಕ್ಕಾಗಿ ಆ ಸ್ಥಳವನ್ನು ಮಹಾಸತಿಬೀಳು ಅಥವಾ ಮಾಸ್ತಿಬೀಳು ಎಂದು ಕರೆಯುತ್ತಿದ್ದರು (ಹಂಶಕಂ. ೦೫೩). [ಮಾಸ್ತಿ (< ಮಾಸತಿ) + ಬೀಳು₃ (< ಬೀಡು₂)]

**ಮಾಸ್ವಾರ** (ನಾ). ಒಳ್ಳೆಯ ಸವಾರ; ಶ್ರೇಷ್ಠನಾದ ಅಶ್ವಾರೋಹಿ: ಗರವಟಿಗರ ಕೊಲ್ಲಾಯ್ತರ ನುಡಿಗಾಱರ ಮಾಸ್ವಾರರ ಸಂದಣಿ ಸಲೆ ಸೊಗಯಿಸಿತಾಗ (ಜಹುಶಾ. ೦೨-೦೯). [ಮಾ₄ + ಸ್ವಾರ (< ಸವಾರ)]

**ಮಾಹಜ್ಜನ** (ನಾ). ಊರಿನ ಪಂಚರು; ಮಹಾಜನ: ಅಲನ ತೊಱು ಇಕ್ಕಿಸಿ ಬಿಟ್ಟಾನ್ ಮಾಹಜ್ಜನಮೊಸೆದು ಕೊಟ್ಟ ಕಬನಿ ಅಯ್ಗೊಳ (ಎಕ. X (s), ಮುಳಬಾ. ೦೫೩-೭; ೪೫ಡು ೩೪). [< ಮಹಾಜನ]

**ಮಾಹತ್ತರ** (ನಾ). ಮುಖಂಡ; ಮುಖ್ಯಾಧಿಕಾರಿ: ಬಂದ ಮಾಹತ್ತರಂ ಗುತ್ತರಂಗೊಟ್ಟು ದಾನಸನ್ಮಾನಂಗಳಂ ಸಂತೋಷಂಬಡಿಸಿ (ವರ್ಧಮಾ. ೩-೬೬ ಪ). [< ಸಂ. ಮಹತ್ತರ]

**ಮಾಹತ್ತು** 'ಮಹಂತು' ನೋ.

**ಮಾಹಳ** 'ಮಹಳ' ನೋ.

**ಮಾಹಾತ್ಮ್ಯ** (ನಾ). ೧. ಹಿರಿಮೆ; ಮಹಿಮೆ: ಜನಿತಪ್ರಗಲ್ಭದೊಳ್ ಮಾಂತಸದೊಳ್ ಮಾಹಾತ್ಮ್ಯದೊಳ್ . . . ಶ್ರೀಶಂ ಘನಂ (ಕವಿರಾ. ೩-೬೦); ಶ್ರೀಮತ್ಕಾರ್ಯಿಯುಂ ಸಮ್ಯಕ್ತ್ವಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು . . . ದಿವಿಜನಾದಂ (ಆದಿಪು. ೩-೭೦ ಪ); ನಿನ್ನ ಮಾಹಾತ್ಮ್ಯವೆ ವಿಸ್ತಾರವಾದ ದ್ಯುಲೋಕಕ್ಕಿಂತಲೂ ಅಧಿಕವಾಗಿ ಬೆಳೆದಿದೆ (ಋಗ್ವೆ. ೩). ೨. ಹಿರಿಮೆಯುಳ್ಳವನು; ಮಹಿಮಾಶಾಲಿ: ನೀನೆಂದ ಮಾತ ಬಾಹಿರ ಮಾಡಬಾರದು ಕರೆಸೆಂದನು ಮಾಹಾತ್ಮ್ಯನಲ್ಪಕೋಪಿಗನು (ಭರತ. ೩೫-೦೬). [ಸಂ.]

**ಮಾಹಿ** (ನಾ). ಕೋಣ ಅಥವಾ ಎಮ್ಮೆ: ದನುಜನಿಕಾಯ ತಂತಮಗಂದು ಬಳಪಂಗುಬ್ಬುವಾತಿಂ ನಿಂದು ಮಾಹಿಗೆ ಮುಗ್ಗನಿಟ್ಟಂತಾ ಮಹಾನಲಗೆ ಇಂಧನಮದಿತ್ತಂತೆ ರುದ್ರಗೆ ಕಂಪೆರೆವುಗೊಟ್ಟಂತೆ ಕೋಪಪುರಂದ್ರಿಯನು ಕಾಣಿಕೆಯನಿತ್ತರು ಬೆದರ ಸುರಕಟಕ (ಅಂಬಿಕಾ. ೪೦-೩).

[? ಇದು 'ಮಾಹಿಷ (ಷಿ)' ಎಂಬುದರ ಸಂಕ್ಷಿಪ್ತರೂಪವಿರಬಹುದೆ?]

**ಮಾಹಿತಿ** (ನಾ). ೧. ಅರಿವು; ತಿಳಿವಳಿಕೆ: ಕೆಲಸದ ಮಾಹಿತಿಯನ್ನು ಕೆಲವೇ ಮಾತುಗಳಲ್ಲಿ ಮಾಡಿಕೊಟ್ಟಿದ್ದರು (ಚಾತ್ಸಕ್ಕ. ೦೯೩); ಮಾಹಿತಿ ಸಾಲದೆ ಕೆಲಸವು ಮುಗಿಯದೆ ಬಹು ಪೇಚಿಗೀಡಾದ (ಇಂಚಾಕ. ೩೩-೩೦). ೨. ವಿವರಣೆ: ಕಾಗದದಲ್ಲಿ ಅಳಿಯನನ್ನು ಕುರಿತು ಇದ್ದ ಮಾಹಿತಿಯನ್ನು ಹೆಂಡತಿಗೆ ಕೃಷ್ಣಪ್ಪನವರು ತಿಳಿಸಲಿಲ್ಲ (ಬಳಕ್ಕಂ. ೧೨); ಹೆಚ್ಚಿನ ಮಾಹಿತಿ ಅವನಿಂದ ದೊರೆಯಲಿಲ್ಲ (ಕಂಠಪು. ೦೨೯).

ಮಾಹಿತಿ ಕೊಡು = ವಿವರಣೆ ನೀಡು; ಸಮಾಚಾರ ತಿಳಿಸು: ಆ ಹುಡುಗಿ . . . ನಮ್ಮ ಮೇಲೇ ತಿರುಗಿ ಬಿದ್ದಳು ಹೊರತು ಏನೂ ಮಾಹಿತಿ ಕೊಡಲಿಲ್ಲ (ಮೂರುಬಾ. ೨೭೦).

[← ಅರ. ಮಾಹೀಯತ್; ಹಿಂ. ಮಾಹಿಯತ್; ಮರಾ. ಮಾಹಿತೀ]

**ಮಾಹಿಷ** (ಗು). ಎಮ್ಮೆಯ: "ಮಾಹಿಷಶೃಂಗವದು ಗವಲಮಕ್ಕುಂ" (ಮಂಗರಾ. ೦೫೬-೪೦). [ಸಂ.]

**ಮಾಹಿಷವಿಷಯ** (ನಾ). ಒಂದು ನಾಡಿನ ಹೆಸರು: ಶ್ರೀಮತಿ ಮಾಹಿಷ ವಿಷಯೇ ಕಾಂಚನಮುಂದುವೋಲ್ ಇತಿ ಪ್ರಸಿದ್ಧೇ ಗ್ರಾಮೇ (ಎಇ. IV, ೬೦-೨೦; 945). [ಸಂ.]

**ಮಾಹಿಷಿ** (ನಾ). ಎಮ್ಮೆ: ಮಾಹಿಷೀಸಂತತಿ ವಿಪಿನಭಯಂ ಕಣ್ಗಗುರ್ವಾಯ್ತು ಕಾರೊಳ್ (ಶಂಪ್ರಶು. ೪-೯೬). [ಸಂ. ಮಾಹಿಷೀ]

**ಮಾಹಿಷಿಕ** (ನಾ). ೧. ಎಮ್ಮೆ ಕಾಯುವವನು. ೨. ಹೆಂಡತಿಯ ವ್ಯಭಿಚಾರದಿಂದ ಹಣ ಗಳಿಸುವವನು: ಕುಲವುಹಿಷಿ ದುರ್ವಾರ್ಗ ಮುಖದೊಳು ಗಳಿಸಿದರ್ಥವನುಂಡು ಕಾಲವ ಕಳೆವ ನಿರ್ಭಾಗ್ಯರು ಕಣಾ ಮಾಹಿಷಿಕರೆಂಬವರು (ಕುಪ್ಪಾಲ. ೪-೪೯); ವ್ಯಭಿಚಾರಿಯಾದ ಸ್ತ್ರೀಯನು ಅಂಗೀಕರಿಸಿಕೊಂಡು ಇದ್ದವನು ಮಾಹಿಷಿಕನು (ಶಾಕೀಶು. ೨೦೩-೩). ೩. ದುಶ್ಶೀಲೆಯಾದ ಹೆಂಗಸಿನ ಉಪಪತಿ. [ಸಂ.]

**ಮಾಹಿಷ್ಯ** (ನಾ). ಕ್ಷತ್ರಿಯನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದವನು: "ಮಾಹಿಷ್ಯಃ . . . ವೈಶ್ಯಸ್ತ್ರೀಗೂ . . . ಕ್ಷತ್ರಿಯನಿಗೂ ಹುಟ್ಟಿದವನ ಪೆಸರು" (ಸಿದ್ಧಾಂತಿ. ೩೦೬). [ಸಂ.]

**ಮಾಹುತ** 'ಮಾವಂತ' ನೋ.

**ಮಾಹುರಿ**$_1$ (ನಾ). [ಸಂಗೀತ] ಒಂದು ರಾಗದ ಹೆಸರು: ಬಲಹಂಸರಾಗ, ನಂತರ ಮಾಹುರೀ, ದೇವಕ್ರಿಯಾ . . . ನಂತರ ಭಾಷಾಂಗ (ರಾಗಸಮೂಹ) ವನ್ನು ಹೇಳಲಾಗುವುದು (ಕಹುಶ್ರ. ೦೩೦). [ಸಂ. ಮಾಹುರೀ]

**ಮಾಹುರಿ**$_2$ 'ಮಾವಲಿ' ನೋ.

**ಮಾಹುಲಿ** 'ಮಾವಲಿ' ನೋ.

**ಮಾಹೆ** (ನಾ). ತಿಂಗಳು; ಮಾಸ: ತಾರೀಖು ೫ ಮಾಹೆ ಮೆ ಸಂನ ೧೮೧೩ ಯಿಸವಿ (ಮೈಅಂ. ೦೯೨೯, ೯೪-೪೩; 1813); ಮಾಹೆಮಾಹೆಗೂ ಬಹಳ ಕ್ರಮವಾಗಿ ಸೇವಾಜನರುಗಳಿಗೆ ತಲಬಿನ ಬಟವಾಡೆಯಾಗುತ್ತಿತ್ತು (ಮಹಾಪಂ. II, ೦೩). [← ಪಾರ. ಮರಾ. ಮಾಹ್, ಮಾಹೆ; ಹಿಂ. ಮಾಹ್]

**ಮಾಹೆಯಾನಾ** (ಅ). ಪ್ರತಿ ತಿಂಗಳೂ; ಮಾಸಮಾಸವೂ: ಈ ಪೈಕಿ ಮೂರರಲ್ಲಿ ಎರಡು ಭಾಗ ನಗದಿಯಾಗಿ ಮಾಹೆಯಾನಾ ಬಟವಾಡೆಯಾಗುತ್ತ ಉಳಿದ ಒಂದು ಭಾಗವು . . . ಸಂದಾಯವಾಗುತ್ತಿತ್ತು (ಮಹಾಪಂ. II, ೩೩). [← ಪಾರ. ಮಾಹಿಯಾನ್; ಹಿಂ. ಮಾಹಿಯಾನಾ; ಮರಾ. ಮಾಹಾನ್]

**ಮಾಹೆವಾರಿ** (ಗು). ಪ್ರತಿ ತಿಂಗಳ; ಮಾಸಿಕ: ಮಾಹೆವಾರಿ ಜಮಾಖರ್ಚು ಲೆಕ್ಕದ ತಯಾರಿ ಮತ್ತು ಕಿಸ್ತು ವಸೂಲಿ (ಮಹಾಪಂ. II, ೩೬); ಕೊಟ್ಟಂತಾ ತಿಂಗಳಿನ ಸಂಬಳವು ಹಿಂದಿನ ತಿಂಗಳ . . . ಮಾಹೆವಾರಿ ಪಟ್ಟಿ ತಾಲ್ಲೂಕಿಗೆ ಕಳುಹಿಸಿಕೊಟ್ಟ ಹೊರತು ಮಂಜೂರ್ಮಾಡುವದಿಲ್ಲವು (ಗ್ರಾಮಾಕ. ೬). [← ಪಾರ. ಮಾಹ್‌ವಾರ್; ಹಿಂ. ಮಾಹ್‌ವಾರೀ; ಮರಾ. ಮಾಹೆವಾರೀ, ಮಾಹವಾರ್, ಮಾಹವಾರೀ]

**ಮಾಹೇಂದ್ರ** (ಗು). ೧. ಇಂದ್ರನಿಗೆ ಸಂಬಂಧಿಸಿದ. ೨. ಪೂರ್ವದಿಕ್ಕಿಗೆ ಸೇರಿದ. (ನಾ). ೩. ಇಂದ್ರಕೀಲಪರ್ವತ; ಮಹೇಂದ್ರಗಿರಿ. [ಸಂ.]

**ಮಾಹೇಂದ್ರಕಲ್ಪ** (ನಾ). [ಜೈನ] ಹದಿನಾರುಕಲ್ಪಗಳಲ್ಲಿ ನಾಲ್ಕನೆಯದು: ಸನ್ಯಸನವಿಧಾನದಿಂ ಪರಿತ್ಯಕ್ತಜೀವಿತನಾಗಿ ಮಾಹೇಂದ್ರಕಲ್ಪದೊಳಣಿಮಾದ್ಯಷ್ಟಗುಣೈಶ್ವರ್ಯೋಪೇತನುಂ . . . ಆಗಿ (ಆದಿಪು. ೨-೦೯ ಪ); ತವೆ ಸುಟ್ಟುಂ ಸಮೆಯಿಪುದಣಮಲ್ತು ಸನತ್ಕುಮಾರಮಾಹೇಂದ್ರ ಕಲ್ಪಜನಿತಾಮರರಂ (ಮಲ್ಲಿಪು. ೦೩-೦೦೦). [ಸಂ.]

**ಮಾಹೇಂದ್ರಿ** (ನಾ). ೧. ಪೂರ್ವದಿಕ್ಕು. ೨. ಹಸು; ಆಕಳು. ೩. ಇಂದ್ರನ ಪತ್ನಿ; ಶಚೀದೇವಿ. ೪. ಸಪ್ತಮಾತೃಕೆಯರಲ್ಲಿ ಒಬ್ಬಳು: "ಬ್ರಾಹ್ಮೀ

. . . ಮಾಹೇಂದ್ರೀ, ಚಾಮುಂಡಾ—ಈ ೭ ಸಪ್ತಮಾತೃಕೆಯರ ಪೆಸರ್'' (ಶಬ್ದಮ. ೪-೧೬). ೫. [ಸಂಗೀತ] ಸಪ್ತಸ್ವರಗಳ ಅಧಿದೇವತೆಗಳಲ್ಲಿ ಒಬ್ಬಳು : ಬ್ರಾಹ್ಮಿ . . . ಮಾಹೇಂದ್ರಿ ಚಾಮುಂಡಿಯವರೆಂಬವರೇ ಕ್ರಮದಿಂದಾ ಷಡ್ಜಾದಿ ಸ್ವರಾಧಿದೇವತೆಗಳು (ವಿವೇಕ. ೦೬೬).
[ಸಂ. ಮಾಹೇಂದ್ರೀ]

**ಮಾಹೇಯ** (ನಾ). ೧. ಭೂಮಿಯ ಪುತ್ರ. ೨. ನರಕಾಸುರ. ೩. [ಜ್ಯೋತಿ] ಕುಜಗ್ರಹ : ದಿವಿಜೇಜ್ಯನುಮುಡುಪತಿಯುಂ ರವಿಯುಂ ಸತ್ವಗ್ರಹಂ . . . ಭಾನವನುಂ ಮಾಹೇಯನುಂ [ಶಾಕಾಂ. ಧರಣಿಜನು] ಶನಿ ತಮೋಗ್ರಹಮೆನಿಪರ್ (ಜಾತಕ. ೪-೦). [ಸಂ.]

**ಮಾಹೇಯಿ** (ನಾ). ಆಕಳು ; ಹಸು : ''ಹೋಮಧೇನು ಮಾಹೇಯಿ ಯೆಂಬುದು'' (ಶಬ್ದಮ. ೯೩-೦೦೩). [ಸಂ. ಮಾಹೇಯೀ]

**ಮಾಹೇಶ** (ಗು). ಪರಮೇಶ್ವರನಿಗೆ ಸಂಬಂಧಿಸಿದ : 'ಮಾಹೇಶಮಂತ್ರ' ಪರಾ. [ಸಂ.]

**ಮಾಹೇಶಮಂತ್ರ** (ನಾ). ಪರಮೇಶ್ವರನು ಅಭಿಮಾನಿ ದೇವತೆ ಯಾಗಿರುವ ಮಂತ್ರ : ತನ್ನ ಚಿತ್ತದೊಳ್ಮಾಹೇಶಮಂತ್ರಮಂ ಸ್ಮರಿಸುತ್ತೆ (ಕೈವಲ್ಯ. ೨೦-೦೪). [ಸಂ.]

**ಮಾಹೇಶ್ವರ** (ನಾ). ೧. [ವೀಶೈ] ಷಟ್‌ಸ್ಥಲಗಳಲ್ಲಿ ಎರಡನೆಯ ಹಂತ ದಲ್ಲಿರುವ ಭಕ್ತ : ಮಾಹೇಶ್ವರನೇತೆಂಬೆನಯ್ಯಾ 'ಪರಸ್ತ್ರೀ ಪರರರ್ಥದಾಸೆ ಬಿಡದನ್ನಕ್ಕ (ಬಸವ. ೩೦೦); ಶಿವಯೋಗದ ವಚನಾಮೃತವನು ಸದ್ಭಕ್ತಿ ಯುಳ್ಳ ಮಾಹೇಶ್ವರನು ತನ್ನ ಶ್ರೋತ್ರಮುಖದಲ್ಲಿ ಕೇಳಿ . . . ಸಂತೋಷ ವನೆಯ್ದಬಲ್ಲಡೆ ಆ ಸುಖವು ಪರಿಣಾಮವನೊಡಗೂಡುವುದು (ಅನು. ೨೦೩-೯೨೩). ೨. ಶಿವಭಕ್ತಿಪಂಥದ ಒಂದು ಪ್ರಭೇದ : ಪಾಶುಪತ, ಕಾಳಾಮುಖ, ಲಕುಲೀಶ, ಮಾಹೇಶ್ವರ, ಶೈವಸಿದ್ಧಾಂತ, ವೀರಶೈವ ಇವೇ ಮೊದಲಾದವು ಶಿವಭಕ್ತಿಪಂಥದ ಮುಖ್ಯಪ್ರಭೇದಗಳು (ಚಾರಿತ್ರ. ೩೦೬).[ಸಂ.]

**ಮಾಹೇಶ್ವರಜ್ವರ** (ನಾ). ೧. ಶಿವನ ಹಣೆಗಣ್ಣಿನಿಂದುಂಟಾಗಬಹುದಾದ ತೀಕ್ಷ್ಣವಾದ ತಾಪ : ಹರಂ ಮಾಹೇಶ್ವರಜ್ವರವನಟ್ಟಿದಂ ಹರಣದೊಳು ಹರಿವರಿಯ ತಾಪಮಂ ಕಟ್ಟಿದಂ (ಸಂಬಿರ. ೦೬-೦೦೩). ೨. ಒಂದು ಬಗೆಯ ಜ್ವರ : ವಿಷ್ಣುಕ್ರಾಂತಿಸಮೂಲ, ಕೊತ್ತುಂಬರಿ . . . ಸಕ್ಕರೆ ಪ್ರತಿಪಾಕವಿಕ್ಕಿ ಕೊಡಲು ಮಾಹೇಶ್ವರಜ್ವರವು ಬಿಡುವುದು (ಸಕವೈ. ೦೦೩). 'ಮಹೇಶ್ವರಜ್ವರ' ಪರಾ. [ಸಂ.]

**ಮಾಹೇಶ್ವರಸ್ಥಲ** (ನಾ). [ವೀಶೈ] ಷಟ್‌ಸ್ಥಲಗಳಲ್ಲಿ ಒಂದು : ಅಜಾದಿನ ಜಾದೆಂಬನ್ನಕ್ಕ ಮಾಹೇಶ್ವರಸ್ಥಲ (ಶಿವಗೋ. ೨-೦೦೬). [ಸಂ.]

**ಮಾಹೇಶ್ವರಿ** (ನಾ). ೧. ಪಾರ್ವತಿ. ೨. ಸಪ್ತಮಾತೃಕೆಯರಲ್ಲಿ ಒಬ್ಬಳು: "ಬ್ರಾಹ್ಮೀ, ಮಾಹೇಶ್ವರಿ . . . ಚಾಮುಂಡಾ – ಈ ೭ ಸಪ್ತಮಾತೃಕೆಯರ ಪೆಸರ್" (ಶಬ್ದಮ. ೪-೦೬). ೩. [ಸಂಗೀತ] ಸಪ್ತಸ್ವರಗಳ ಅಧಿ ದೇವತೆಗಳಲ್ಲಿ ಒಬ್ಬಳು: ಬ್ರಾಹ್ಮೀ ಮಾಹೇಶ್ವರಿ . . . ಚಾಮುಂಡಿಯುವ ರೆಂಬವರೇ ಕ್ರಮದಿಂದಾ ಷಡ್ಜಾದಿ ಸ್ವರಾಧಿದೇವತೆಗಳು (ವಿವೇಕ. ೦೬೬).
[ಸಂ. ಮಾಹೇಶ್ವರೀ]

**ಮಾಹೈಷ** (ನಾ). ಕೋಣ : ಮೇಷವನು ಮಾರುತನ ಸುಖ ಮಾಹೈಷವನು ರವಿಪುತ್ರ ನೈಋತಿಯಾ ಸಮಂಜಸನರನ ಚಂಡಿಯ ಬಲಿಗೆ ಬೇಕೆಂದು ಪೋಷಿಸುವರೆನಲು (ತಿಮ್ಮಾ. ೬-೯೪). ■ ಇದು ಛಂದಸ್ಸಿಗಾಗಿ ಮಾಡಿ ಕೊಂಡಿರುವ ರೂಪ. [< ಸಂ. ಮಾಹಿಷ]

**ಮಾಳ**$_1$, **ಮೋಳ**$_1$ (ನಾ). ೧. ಗಂಡುಬೆಕ್ಕು ; ಬಾವುಗ : "ಮಾಳಂ ಮೋಳಂ ಪುಮ್ಮಾರ್ಜಾಳಮುಂ" (ಶಬ್ದಮ. ೯೩-೦೨೭). **ಮೋಳ**$_1$ : ೧. "ಮೋಳಃ = ಗಂಡುಬೆಕ್ಕು" (ಕಾಶ್ಯ. ೨೬೨) ; ಒಂದು ಮಡಕೆ ನೊರೆ ವಾಲಿಂಗೆ ಪೊಂಬತ್ತು ಮೋಳಂ ಗಡ (ಶಂತಶ. ೯೦-೩೬). ೨. (ಅಲಂ) ಕೊಬ್ಬಿರುವವನು ; ಗಡವ : ಕೊಬ್ಬಿದ್ದಾನೆ ಹ್ಯಾಗೆ, ನೋಡು ಮೋಳ (ಮೂಕರಿಜಾ. ೨೩೪).

**ಮಾಳ**$_2$, **ಮಾಳೆ**$_1$, **ಮೆಳ್ಳೆ**$_2$, **ಮೋಳೆ**$_2$ (ನಾ). ೧. (ಎತ್ತರವಾದ) ಬಯಲುಪ್ರದೇಶ, — ಮೈದಾನ : "ಮಾಳವೆನೆ ಬಯಲ್" (ಶಂಪಿ. ೨೩); ಆದಮಾನುಮಟ್ಟಿಮಾನಸನಾಗದೆ ಮಾಳದೊಳ್ ಪೋದ ದಾನುಡುವ ಸೀರೆಗಮೆನ್ನನದಿರ್ಪ ಬಾರದೆ ಪೋದೆಡೆಯೊಳೆ ತಡೆದಾಸವ ನೇದಪಂ (ಕಬಿಕಾ. ೦-೦೨೮) ; ಮರುಸ್ಥಳದ ಮಾಳದೊಳ್ ನಡುಪಗಲ್ಪರಂ ಗ್ರೀಷ್ಮದೊಳ್ ಸುರುಳ್ವನೆಗಮಟ್ಟಿ ಬೇವವರ್ಗೆ ಜೋಂಪವಿಮ್ಮಾವು ನಿರ್ಝರಾಂಬು ಕೊಳ್ವೊಲ್ (ಅಂತ್ಯ. ೦೩-೬೬) ; ಗೌಡನು ಕೆರೆಯ ಆಚೆ ತೋಪಿನಲ್ಲಿ, ಅದರಾಚೆಯ ಮಾಳದಲ್ಲಿ ಸ್ವಲ್ಪ ಹೊತ್ತು ತಿರುಗಿ ಸುತ್ತ ನೋಡಿ ಊರ ಕಡೆಗೆ ಮರಳಿ ತಿರುಗಿದನು (ಸಕ್ಕ. I, ೬-೦೨೨). 'ಗೋಮಾಳ$_1$' ಪರಾ. ೨. (ಸಮುದ್ರದ ತಡಿಯಲ್ಲಿ) ಉಪ್ಪು ತಯಾರಿಸುವ ಸ್ಥಳ,– ಕಣ : ಬೇಸಗೆಯಲ್ಲಿ ಸಮುದ್ರದ ದಂಡೆಗೆ ಒಡ್ಡುಗಳನ್ನು ಹಾಕಿ ಚೌಕ ಮಾಳಗಳನ್ನು ಮಾಡಿ, ಅವುಗಳಲ್ಲಿ ಸಮುದ್ರ ಉಕ್ಕೇರಿದಾಗ ನೀರು ಕಟ್ಟುತ್ತಾರೆ (ಮುಖಾಂಬಿ. ೪-೦೯೬). ೩. ಒಬ್ಬಾತನ ಹೆಸರು : ಅಯ್ಯುಗನುಂ ಮಾಳನುಂ ಮಾರಗನುಂ ನಾಗ × × × ಮುದ್ದನು ಒಡನೆ ಸಿದ್ಧಿಸಿದರ್ (ಎಕ. VII, ಶಿಕಾಪು. ೨೪-೬; ಸು. 970 ?). 'ಮಾಳಕ್ಕ', 'ಮಾಳಬ್ಬೆ' ಪರಾ. **ಮಾಳೆ**$_1$ : ೨. ಹುದುಲಿಲ್ಲದ ಉಪ್ಪಿನ ಮಾಳೆಗಳ ಹತ್ತಿರ ಮಹಾರಾಜರನ್ನು ಇಳಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು (ಗ್ರಾಮಚರಿ. ೩೬೭). **ಮೆಳ್ಳೆ**$_2$ : ೨. ಈಗ ಯಾವತ್ತು ಉಪ್ಪಿನ ಮೆಳೆಗಳು ಹಾಳು ಬಿದ್ದವೆ (ಕಡಾಗ. ೨೯) ; ಇಲ್ಲಿ ೧೨೮ ಆಗರಗಳಲ್ಲಿ ಕೂಡಿ ೧೯೪೦೦ ಮೆಳೆಗಳಲ್ಲಿ ಉಪ್ಪು ಮಾಡುತ್ತಾರೆ (ಕಡಾಗ. ೩೮೨). **ಮೋಳೆ**$_2$ : ೧. [ಬೇ]ವಿನ ಮೋಳೆಯು ಚೌಡಗೊಂಡನ ಗದೆ ಖ ॥ C (ಕ್ರೌಇ. IV, ೨೩೪-೭೩ ; 1513); ಊರ ಸಮೀಪದ ಹಾಳು ಮೋಳೆಗಳಲ್ಲಿ ಉಸುಕು ಭೂಮಿಗಳಲ್ಲಿ ಸಜ್ಜೆಯು ವಿಶೇಷವಾಗಿ ಬೆಳೆಯುವದು (ಕೃಷಿಕೃ. ೬೩). ೨. ಆ ಭೂಮಿಯ ಚತು ಸೀಮೆ ಮೂಡಲು ಹೆಬ್ಬುಣಸೆಯ ಹಳ್ಳ ವುಪ್ಪಿನ ಮೋಳೆ ತೆಂಕಲು (ಕ್ರೌಇ. IX-i, ೩೪೩-೩೬ ; 1226) ; ಅಲ್ಲಿಂದ ಬಡಗಲು ತಣ್ಣಸಹಳ್ಳಿಯ ಒಳಗೆರೆಯ ಉಪ್ಪಿನ ಮೋಳೆ (ಎಕ. XIV, ಮುಂಡ್ಯ. ೦೦೩-೯೯ ; 1516) ; ಸ್ವಂತ ಮೋಳೆಯಲ್ಲಿ ಬೇಕಾದಷ್ಟು ಉಪ್ಪು ಬರುವುದು (ಅದೂಟಿ. ೦೩). ೪. (ಉಪ್ಪುಮಣ್ಣಿನ) ರಾಶಿ, — ಒಟ್ಟಿಲು : (೬).

**ಮಾಳಂಮಾಡು, ಮಾಳ ಮಾಡು** = (ಅಲಂ) ಹಾಳುಮಾಡು : ಮಾಳವನ ಕೋಂಟೆಯ ಕೊಂಡು ಕೂಡೆ ಮಾಳಂ ಮಾಡುತ (ಕೇರಮ. ೪-೦೦) ; ಕ್ರೂರವಿಧಿಯು ಬಾಳಂಗೆಡಿಸಿ . . . ಮನೆಯ ಮುರಿದು ಮಾಳ ಮಾಡಿತು (ಅರ್ಚನ. ೦೦೦). **ಮಾಳ ಕಟ್ಟು** =(ಯಾವು ದಾದರೊಂದರ ಸ್ಮಾರಕವಾಗಿ) ಬಯಲುಜಾಗದಲ್ಲಿ ಕಟ್ಟೆಯನ್ನು ಕಟ್ಟು : ಗುಂಡು ಇಟ್ಟ ಜಾಗದಲ್ಲಿ ಮಾಳ ಕಟ್ಟಿದಂಥಾದ್ದು. ಬೀರಗೌಡ ಸತ್ತ ಜಾಗಾ ಸಹಾ ತೋರಿಸಿ (ದಾಕೆಂದ್ರ. ೦೯೬). **ಮಾಳವಾಗು** = (ಅಲಂ) ಹಾಳಾಗು ; ಕೆಡು : ಮನೆ ಮಾಳವಾಯಿತ್ತು ಹೊಲ ಬೆಳೆಗೆಟ್ಟಿತ್ತು ಭಕ್ತ ಭವಿಯಾದ (ಸಕವ. II, ೬೯೩-೦೬೩೪).
[ದೇ. ॥ ಕೊಡ. ಮಾಳ. / ಮರಾ. ಮಾಳ]

**ಮಾಳ**$_3$ 'ಮಹಳ' ನೋ.

**ಮಾಳ**$_4$ 'ಮಾಲ' ನೋ.

**ಮಾಳಂಗೊಳ್** (ಕ್ರಿ). ಬಯಲಿಗೆ ಬೀಳು ; ದಿಕ್ಕಾಪಾಲಾಗು : ಆ ಪಾರ್ವಂ . . . ಭಯಂಗೊಂಡಾಡಂ ಶ್ವಾನನೆಂದೀಡಾಡಿ ಮಾಳಂ ಗೊಂಡೋಡಿದಂ (ಶಂತಶಂ. ೦೯೬-೨). [ಮಾಳ$_2$ + ಕೊಳ್$_1$]

**ಮಾಳಕ್ಕ** (ನಾ). ಒಬ್ಬಾಕೆಯ ಹೆಸರು : ತುರಾಮ್ಮನ ಪೆಣ್ಣಾತಿ ಮಾಳಕ್ಕ ಅಕ್ಕಣಬ್ಬೆಬೋಯಿತಿ ಕೋಟೆಯಮ್ಮನಕ್ಕಂ (ಎಸಿ. ೧೮೫೯, ೭೯-೩ ; 964). [ಮಾಳ್ಕ₂ + ಅಕ್ಕ₁]

**ಮಾಳಜಿಗೆ** (ನಾ). ಒಂದು ಬಗೆಯ ಆಯುಧ : ತೊಳಗುವ ಬಾಳಿ ತಟತ್ತಟೀಪ ಕಕ್ಕಡೆ. . . ಅಗುರ್ವಿಸುವಾವುಕಿ ಪೂಸಿದಂತಿರಿಟ್ಟಿಳಮವರ್ದಿರ್ದ ಮಾಳಜಿಗೆ ಪಕ್ಕರೆಯಿಕ್ಕಿದ ಜಾಯಿಲಂ ಭಯಂಗೊಳಿಸೆ (ಪಂಪಭಾ. ೧೦-೭೬). [ ? ]

**ಮಾಳತಿ** 'ಮಾಲತಿ' ನೋ.

**ಮಾಳಪಕ್ಷ** 'ಮಹಳಪಕ್ಷ' ನೋ.

**ಮಾಳಬೆ** 'ಮಾಳಬ್ಬೆ' ನೋ.

**ಮಾಳಬೆಕ್ಕು**, ಮೋಳಬೆಕ್ಕು (ನಾ). ಗಂಡುಬೆಕ್ಕು ; ಬಾವುಗ : ಆ ಆವರಣದಲ್ಲಿ ಗೂಬೆ, ಕಾಡುಪಾರಿವಾಳ, ಬಾವಲಿ, ಮಾಳಬೆಕ್ಕು — ಇವು ನಮ್ಮ ಬಂಧುವರ್ಗವಾಗಿದ್ದುವು (ಹುಮಾಊ. ೦೬). **ಮೋಳಬೆಕ್ಕು** : ಬಾವಲಿಗಳು ಹೊರಬಿದ್ದ ಒಂದೆರಡು ಕ್ಷಣಗಳಲ್ಲಿ ಅಲ್ಲಿನ ಮೋಳಬೆಕ್ಕುಗಳು ಹೊರಬೀಳುತ್ತವೆ (ಸಠಸ. ೬೬) ; ಬೆಳಗೂ ಕಡೆವ ಬೆಣ್ಣೆ ಮೋಳಬೆಕ್ಕಿನ ಪಾಲಾಯಿತು (ಗಾದೆ). [ ಮಾಳ್₁ + ಬೆಕ್ಕು (<ಬೆರ್ಕು) ]

**ಮಾಳಬ್ಬೆ**, ಮಾಳಬೆ (ನಾ). ೧. ಒಬ್ಬಾಕೆಯ ಹೆಸರು : ಶ್ರೀಮದ್ದೇವಣನ್ದಿಭಟ್ಟಾರಕರ ಗುಡ್ಡಿ ಮಾಳಬ್ಬೆ ಕಡಸತವಾದಿಯ ತೀರ್ತ್ಥದ . . . ಬಸದಿಗೆ ಕೊಟ್ಟಳ್ (ಎಕ. II (R), ೩೨೦-೦ ; ?). **ಮಾಳಬೆ** : ೨. ಒಂದು ಕ್ಷುದ್ರದೇವತೆಯ ಹೆಸರು : ಕಾಳಿ ಕೊಳ್ಗಿಜಿಯುಪಂ ಮುಜೀದಿಕ್ಕುಗೆ . . . ಮಾಳಬೆ [ಶಾಸಂ. ಚಿ]ಗಿಂದು ಮೊಗವಾರವೆತ್ತುವೆಂ (ಲೀಲಾವ. ೨-೦೦೬) ; ಟಕ್ಕಿಪನಂ ತುಟಾ ಪೋಗುದೋರ್ಪನಂ ಮಾಳಬೆ [ಶಾಸಂ. ಚಿ]ಗಿಕ್ಕು (ಲೀಲಾವ. ೨-೦೦೬). [ಮಾಳ್₂ + ಅಬ್ಬೆ₁]

**ಮಾಳಯ** ' ಮಹಳ ' ನೋ.

**ಮಾಳವ** (ನಾ). ೧. ಒಂದು ದೇಶ ಮತ್ತು ಆ ದೇಶದ ಜನರ ಭಾಷೆ : ಯತ್ಪ್ರಾದಾನತಿಮಾತ್ರಮೇಕಶರಣಾನಾಲೋಕ್ಯಲಕ್ಷ್ಮೀಧಿಯಾ ದೂರಾನ್ಮಾಳವನಾಯಕೋನಯಪರೋ ಯತ್ರಾಣ ಬದ್ಧಾಞ್ಜಲಿಃ (ಎಕ. III (R), ಪಂಜಾವ. ೨೭೮-೩೫; 808); ಕರ್ಣಾಟಾಂಧ್ರ ದ್ರವಿಡ ಮರಾಟ ಲಾಟ ಮಾಳವ . . . ತೌಳವಾದಿ ದೇಶಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಶಂದೋಂಬು. ೦-೯೬ ವ); ಅಂಗ ವಂಗ ಕಳಿಂಗ ಕೊಂಗ ಮಾಳವ . . . ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಬುತ್ತುಮಿರೆಯಿರೆ (ಜಗವಿ. ೨-೩೯ವ). ೨. [ಸಂಗೀತ] ಒಂದು ರಾಗದ ಹೆಸರು : ಮಾಳವ ಗೌಳ ಬಂಗಾಳ ಗೂರ್ಜರಿ ಕರ್ನಾಟ ಕಾಂಭೋಜಿ ಕೇತಾರಂಗಳ್ ದೇಶಿಯವಾಗಿವೆ (ಹಮ್ಮಾರ. ೨-೯೦ ವ) ; ಮಾಳವಮಾ ಶ್ರೀರಾಗಂ ಸಾಳಗಮುರು ನಾಟಿ ಶಂಕರಾಭರಣಂ (ವೃಷು. ೦೦-೦೦). ೩. [ಕಾಮಶಾ] ಮದನ, ಚಿತ್ರಕ, ದಮನ ಮತ್ತು ಮಾಳವ ಎಂಬ ಪುರುಷರ ನಾಲ್ಕು ಬಗೆಗಳಲ್ಲಿ ಒಂದು : ಅನುರಕ್ತ ಭಾವದಿಂ ಪದ್ಮಿನಿ ಮೊದಲಾಗಿರ್ಪ ನಾಲ್ಕುಜಾತಿ ಸ್ತ್ರೀಯರ್ಗಿನಿಯರ್ ವರ್ತಿಪರಿಂತು ಮದನ ಚಿತ್ರಕ ದಮ[ನ ಮಾಳ]ವಾಖ್ಯರೆನಿಪ್ಪರ್ (ಮುಕ್ಕಾಪಿ. ೨-೦೧). [ಸಂ. ಮಾಲವ]

**ಮಾಳವಕೌಶಿಕೆ** (ನಾ). [ಸಂಗೀತ] ಒಂದು ರಾಗದ ಹೆಸರು : ಷಡ್ಜಗ್ರಾಮ . . . ಮಾಳವಕೌಶಿಕೆಯೆಂಬಾಜು ಶುದ್ಧಜಾತಿಯಿಂದಾದ ರಾಗಂಗಳು (ಬವೀಳ. ೦೬೬). [ಸಂ. ಮಾಲವಕೌಶಿಕ]

**ಮಾಳವಗೌಳ** ' ಮಾಲವಗೌಲ ' ನೋ.

**ಮಾಳವಶ್ರೀ** ' ಮಾಲವಶ್ರೀ ' ನೋ.

**ಮಾಳವಿ** (ಗು). ೧. ಮಾಳವದೇಶಕ್ಕೆ ಸಂಬಂಧಿಸಿದ. (ನಾ). ೨. ಮಾಳವದೇಶದ ರಾಜಪುತ್ರಿ. ೩. ರಾಮಾಯಣದ ಭರತನ ಪತ್ನಿಯ ಹೆಸರು : ಬಳಸಿದರು ಬಳಿಕವನಿಜೆಯನೂರ್ಮಿಳೆ ಮಹಾಮಾಂಗಲ್ಯಕನ್ಯಾಕುಲಶಿರೋಮಣಿ ಮಾಳವಿ [ಶಾಸಂ. ಮಾಂಡವಿ, ಮಾಳವ] ಶ್ರುತಕೀರ್ತಿಯೆಂಬವರು (ತೊರರಾ. ೦-೦೩-೨); ಅನತ್ತೆವಿರ್ಗೆಜಗಿ ಪರಕೆಗೊಂಡೆನಿಲ್ಲ ! ಮಾಳವಿಯರಂ ಬೆಸಗೊಂಡೆನಿಲ್ಲ ! (ರಾಮಾಕ್ಕ. ೨೭-೨೬). ೪. [ಸಂಗೀತ] ಒಂದು ರಾಗದ ಹೆಸರು : ಷಡಾರ ಶಕ್ಕರಾಗ ಮಾಳವಿ . . . ಹಿಂದೋಳವೆಂಬೆಂಟು ಅಪ್ಪಸಾಧಾರಣದಿಂದಾದ ರಾಗಂಗಳು (ಬವೀಳ. ೨೩೩); ದೇಶಿ ಗುಜ್ಜರಿ ಮಾಳವಿಯಾಹೇರಿ . . . ಒಲ್ದು ಪಾಡಿದ (ತ್ರಿಷು. ೬-೬೦). [ಸಂ. ಮಾಲವೀ]

**ಮಾಳವಿಕ** (ನಾ). ಒಂದು ಬಗೆಯ ಸಸ್ಯ ; ತಿಗಡೆ : " ಮಾಳವಿಕಮೆನೆ ತಿಗಡೆ " (ಪಂಗರಾ. ೪೨-೩೯). [ಸಂ. ಮಾಲವಿಕಾ]

**ಮಾಳವಿಗ** (ನಾ). ಮಾಳವದೇಶಕ್ಕೆ ಸೇರಿದವನು : ವಿಜಯಂ . . . ಮಾಳವಿಗರಂ ಕೆಬಿಗವಿಗೆಯ್ಯಲೀಯದಾಟಂದು ನಿಜನಾಮಾಂಕಿತಸಾಯಕಂಗಳಿಂದೆಚ್ಚು ನಷ್ಟಂ ಕಿಡಿಸಿ (ಪಂಪಭಾ. ೬-೨೯ ವ). [ಮಾಳವ + -ಇಗ]

**ಮಾಳಾಕಾರ** ' ಮಾಲಾಕಾರ ' ನೋ.

**ಮಾಳಾವೃತ್ತ** ' ಮಾಲಾವೃತ್ತ ' ನೋ.

**ಮಾಳಿ₁** ' ಮಾಲಿ ' ನೋ.

**ಮಾಳಿ₂** (ನಾ). ಸಂಭೋಗಕ್ಕೆ ಅಸಮರ್ಥಳಾದವಳು : (ಶ). [ ? ]

**ಮಾಳಿಂಗಿ** (ನಾ). ಒಂದು ಸ್ಥಳದ ಹೆಸರು : ತೆಂಕಣವಳ್ಳಿಯ ಗುಡ್ಡರ ಪುಬ್ಬಾಮಿಗಂಗೆ ಮಾಳಿಂಗಿ ಗ್ರಾಮಿಗಿತ್ತಿಯಾಂಗೆ ಪುಟ್ಟಿದ ಶ್ರೀಮಾರಂ (ಎಕ. VII, ಶಿಕಾ. ೨೬೬-೩ ; ಸು. 830). [ ? ]

**ಮಾಳಿಗ** (ನಾ). ಮೋಸಗಾರ ; ಕಪಟಿ : ಅನ್ಯತಕ್ಕೆ– ಅಟವುಟಿಗಂ. ಮಾಳಿಗಂ. ಪುಸಿಗಂ (ಕಪುರ. ೦೯೬ ಶ್ರದೋ). [ಮಾಳ್₄(=ಮಾಲ) + -ಇಗ]

**ಮಾಳಿಗೆ₁**, ಮಾಣಿಗೆ (ನಾ). ೧. ಮೇಲಿನ ಅಂತಸ್ತು ; ಮಹಡಿ ; ಉಪ್ಪರಿಗೆ : ಕಂಬ ಮಣಿದು ಮಾಳಿಗೆ ಉಳಿದು ಬೆಂಬಳಿಮಿಡಿದೈವರು ಮಂದಿ ತುಂಬಿತ ಕೈಮುಜಿಪರು ನೋಡಿರೇ (ಅವತಂ. ೨೯೬-೦೩೦೦); ಮೇಲಣ ನೆಲೆಯ ಮಾಳಿಗೆಗೆ ಚಿತ್ತೈಸು (ಭರತ. ೯-೦೩೭); ಮಾಳಿಗೆಯಿಂದ ಸೇವಕನೊಬ್ಬನು ಇಳಿದು . . . ಹೇಳಿದನು (ಹೊಂಠರು. ೦೯). ೨. ಉಪ್ಪರಿಗೆಯಿರುವ ಮನೆ; ಸೌಧ : ಮಾಳಿಗೆಯ ಮಾಳಿಗೆಯ ಮನಂಗೊಳಿಸುವ ನಾನಾಪ್ರಕಾರದಂಗಡಿಯುಂ . . . ವಿಲಾಸದಿಂದೆಂತು ಸೊಬ್ಬುಡಂ ರಮಣೀಯಂ (ಸುಕುಮಾ. ೯-೬೯); ಗುಡಿಸಿಲ್ ಚಿಲ್ವಾಗಿಯುಂ ಮಾಳಿಗೆಯಲ್ಲದು (ಧರ್ಮಾಮೃ. ೦೦-೦೩೬ ವ). ೩. ಮನೆಯ ಮೇಲಿನ ಮಣ್ಣಿನ ಹೊದಿಕೆ,–ಮಣ್ಣಿನ ಮೇಲ್ಛಾವಣಿ : ಏಡೆಯ ಮಾಳಿಗೆಯ ಜಂತ್ರಯನುಟ್ಟಿ ಪಟಮಾಡಿದರ್ಬೆಂಕಿಯಾಂ (ಇಳಶ. ದೇ. ೩೩-೭); ಲತೆಯ ಎಳಗುಡಿ ಮಾಳಿಗೆಗೆ ತೊಲೆಯೆ (ಉಪ್ಪಾಶೀ. ೩-೦೯); ಬೆಳ್ಳಿಯ ಬಟ್ಟಲಿನೊಳಾ ಮುತ್ತುಗಳಂ ಇರಿಸಿ ಮಾಳಿಗೆ ಮೇಲೆ ಮಡಗಲೂ ಆಗಲೆ ಮಳೆಬಂದರೆ ಆ ಮುತ್ತುಂ ನಾಗರತ್ನವೆಂದು ತಿಳಿಯುವುದು (ತಾಗಂಧ. ೩೬೬-೦೩). **ಮಾಣಿಗೆ** : ೧. ಅಲ್ಲಿಗೆ ಪೂರೈಸಿತ್ತು. ಅಂದು ಹೂವಳ್ಳಿಯ ಆ ಮಾಣಿಗೆ ಒಳಗೆ ನಡೆದಿದ್ದ ಆ ಮುಗ್ಧಘಟನೆ (ಮಲೆಮ. ೮೨); ಅವಳನ್ನು ಮಾಣಿಗೆಗೆ, ಆಗ ತಾನೆ ವಿಷಾದದಿಂದ ಹೊತಿರುಗಿದ್ದ ಚಿನ್ನಮ್ಮನ ಬಳಿಗೆ ಕರೆದೊಯ್ದರು (ಮಲೆಮ. ೬೪೨). [< ಸಂ. ಮಾಲಿಕಾ./ತಮಿ. ಮಾಳಿಕೈ]

**ಮಾಳಿಗೆ₂** (ನಾ). ಒಂದು ಕ್ಷುದ್ರದೇವತೆಯ ಹೆಸರು: ಎಲ್ಲಾಯಿ ಯಕನಾತಿ ಬಸದ ಶಂಕರಿ ಮಲ್ಲಗ ಜಟ್ಟಿಂಗ ಮಾಳಿಗೆ ಮಸಿದೇವಿ (ಬಸಸು. ೩೮-೨). [?]

**ಮಾಳಿಗೆಮನೆ** (ನಾ). ೧. ಮಹಡಿಮನೆ ; ಉಪ್ಪರಿಗೆಮನೆ : ಹೂವಿನ ಹಡಂಗಿಲೆಯ ಚಲ್ಲಿಯ ಕೇರಿಯಲ್ಲಿವರ ಮಾಳಿಗೆಮನೆ (ಶಾಇಶ. IX-i, ೨೪೯-೬೭; 1178); ಮಾಳಿಗೆಮನೆಯು ಇರಲಿ ಜಾಳಿಗೆ ಹೊನ್ನಿರಲಿ ಆಳುಮಂದಿ

ಶಾನೆ ಇರಲಿ (ಕುಕಂಪ. ೩-೯೯-೪); ಧರೆಯಲ್ಲಿ ಸೊಗಸಾದ ಮಾಳಿಗೆಮನೆಗಳಿರಲಿ ಕೆರೆ ತೊರೆಗಳಿಂದೆಸೆವ ಪಟ್ಟಣಗಳಿರಲಿ (ಕುಪು. ೦೯-೧). ೨. ಹೆಂಚಿಗೆ ಬದಲಾಗಿ ನೆಲದಂತೆಯೇ ಸಮನಾಗಿರುವ ಮಣ್ಣಿನ ಮೇಲ್ಛಾವಣಿಯಿರುವ ಮನೆ: ಮಾಳಿಗೆಮನೆಗಳಲ್ಲಿ ವಾಸ ಮಾಡುವುದರಿಂದ. . . ಶರೀರಕ್ಕೆ ಸುಖಾಲಘುತರವಾಗಿರುವುದು (ಸಕವ್ಯ. ೩೭) ; ಬೈಲುಸೀಮೆಯಲ್ಲಿ ಮಳೆ ಕಡಿಮೆ ಬೀಳುವುದರಿಂದ ಮಾಳಿಗೇಮನೆಗಳನ್ನು ಕಟ್ಟುವ ನಡಾವಳಿ ವಿಶೇಷವುಂಟು (ಮುಂಬಯಿ. ೪-೦೦೬). [ಮಾಳಿಗೆ$_1$ + ಮನೆ]

**ಮಾಳಿಡು** (ಕ್ರಿ). ಮೋಸ ಮಾಡು; ವಂಚಿಸು: ಊಳಿಡು, ದೂಳಿಡು. ಮಾಳಿಡು (ಶಬ್ದಾ. ಸು. ೯೯೯ ಕ್ರಿಯೋ). [ಮಾಳ್$_4$ (= ಮಾಲ) + ಇಡು$_1$]

**ಮಾಳಿಯಬ್ಬೆ** (ನಾ). ಒಬ್ಬಾಕೆಯ ಹೆಸರು: ಅಜವರ್ಮ್ಮರಸನುಂ ಮಾಳಿಯಬ್ಬರಸಿಯುಂ. . . ಕಾಲಂ ಕರ್ಚಿ ಧಾರಾಪೂರ್ವ್ವಕಂ ಮಾಡಿ ಬಿಟ್ಟ ವೃತ್ತಿ (ಎಕ. XI. ಹೊಳಲ. ೪೦-೩; 987). [ಮಾಳಿ$_?$ + ಅಬ್ಬೆ$_1$]

**ಮಾಳಿರಾಸಿಗ** (ನಾ). ಒಬ್ಬಾತನ ಹೆಸರು: ಮಾಳಿರಾಸಿಗನುಮೊ × ಜೀಯುರ ಮೆಚ್ಚಿ ೧ ಗುಯ್ಯಲಂ ೩ ಮತ್ತ ಕೆಯ್ಯುಮಂ ಬಿಟ್ಟರ್ (ಎಕ. XI. ಹೊಳಲ. ೨೭-೭; 962). [ ? ]

**ಮಾಳಿ**$_1$ 'ಮಾಳ್$_2$' ನೋ.

**ಮಾಳಿ**$_2$ 'ಮಾಲೆ' ನೋ.

**ಮಾಳಿಸೋಗ** (ನಾ). "ಪರರ ವಸ್ತ್ರವನ್ನು ಹಾಕಿಕೊಂಡು ಬಡಿವಾರ ಮಾಡುವ ಅಗಸ" (ಏಸ್ತೋಕು. ಟಿಪ್ಪಣಿ): ಲೌಕಿಕವೆಲ್ಲಾ ಬ್ರಹ್ಮಸ್ವರೂಪವೆಂದು ವೈಕಾರಿಕಮಾರ್ಗ ಕಾಣದವ ಅವನೆ ಮಾಳಿಸೋಗನೋ (ಏಸ್ತೋಕು. ೯೩-೧). [ಮಾಳಿ$_?$ + ಸೋಗು$_2$ + —ಅ$_?$]

**ಮಾಳ್ಕಿ** 'ಮಾಟಿಕ್ಕಿ' ನೋ.

**ಮಾಳ್ದಿ** (ನಾ). ಒಂದು ಸ್ಥಳದ ಹೆಸರು: ಕಮ್ಮಾರ್ ಕೊಟ್ಟಿಲೆಯ ಮುದುವುಣಸೆ ಮಾಳ್ದಿಯುಳ್ ಕುಡಿತ್ತು ಸೀಮೆ (ಎಕ. XVI. ಗುಬ್ಬಿ. ೭೩-೩೪; 733). [ ? ]

**ಮಾಳ್ಪ** 'ಮಾಡು$_1$' ಪರಾ.

**ಮಾಳ್ಮಕಿ** (ನಾ). ಗಂಡನನ್ನು ಅಗಲದವಳು; ಗಂಡನ ಜೊತೆಯಲ್ಲೇ ಇರುವವಳು: "ಮಾಳ್ಮಕಿ — ಗಂಡನ ಪತ್ತಿ ಬಿಡದಾಕೆ" (ಕಪುದ. ಕಂ. ೨). 'ಮಗಳ್ಮಾ' ಪರಾ. [ ? ]

**ಮಾಳ್ವೊಪೊಟ್ಟಿ** (ನಾ). ಒಬ್ಬಾಕೆಯ ಹೆಸರು: ವೀರಪೂರ ಮಾಳ್ವೊಪೊಟ್ಟಿಯರಾ ಕುಡಿಮುದ್ದನ್ ಮೇರೆಯುಳ್ಳಿಱಿದು ವಿಟ್ಟನ್ (ಎಕ. V. ಚನ್ನರಾ. ೨೦೬-೪; ಸು. 770). [? + < ಪೊಡ್ಡಿ]

**ಮಾಱಂಕ**, ಮಾರಂಕ (ನಾ). ೧. ಮತ್ತೊಂದು ಯುದ್ಧ; ಬೇರೊಂದು ಕಾಳಗ: ನಿಮ್ಮ ತೆಱದಿಂ . . . ಕಾದಲೆಂದು ಕಳದೊಳ್ ಮಾಱಂಕಮಂ ಬೇಡಿ ಬಂದುಲಿವರಾ (ವರ್ಧಪು. ೭-೩೪). ೨. ಎದುರುಕಾಳಗ: ಪ್ರತಿಭಟನೆ: ಗವುಡಗಾಱದೆ ಬಾರಿಕಂಗೆ ಕಳ್ಳಂಗಾಱದೆ ಬಟ್ಟೆಪೋಪಂಗೆ ಮಾಱಂಕಕ್ಕಾಱದೆ ಸಂಕದ ಗೊರವಂಗೆ . . . ಮುನಿವರ್ (ರಹಸ್ಯಾಪು. ೭-೦೧೪). ೩. ಎದುರಿಸುವ ಮಹಾಪರಾಕ್ರಮಿ; ಪ್ರತಿಭಟ; ಶೂರನಾದ ಎದುರಾಳು: ಅಂಕ ಕಳನೇಱೆ ಕೈಮುಱಿದಿರ್ದೊಡೆ ಮಾಱಂಕ ಬಂದಿಱಿವುದ ಮಾಣ್ಬನೆ (ಐಕವ. ೦೭೮); ಮಧು ತೆತ್ತಿಗಂ ವಿರಹಿ ಮಾಱಂಕಂ ನೃಪಂ ಚಿತ್ತಸಂಭವನಾಗಲ್ಕಡುಕೆಯ್ದು ಕಾಯ್ದು ಕಳನಂ ಬಂದೇಱುವಂತೆ (ಸೂಕ್ತಿಸು. ೬-೨೦೧). ೪. ಪ್ರತಿಸ್ಪರ್ಧೆ; ಹುರುಡು: ದೇವವಿಟರ್ಗೆ ಮಾಱಂಕದ ಕದಂ . . . ಅಳಿಮುನಿದವರ್ಗೆ ತೆಗೆವ ಕದವಲ್ಲೆಂದು ಪಲಕೆಲವು ಕಟಕಿಗಳನಾಡೆ (ಪಂಪಭಾ. ೦೩-೬೩); ಮದನನ ಮಾಱಂಕದ ಛಂದದ ಗಂಡನಂ . . . ಇವಳೋಮದೆ ಕೊಂಬಳ್ (ಯಶೋಚ. ೩-೭೩); ಉದಯಿಸುವ ಸಹಸ್ರಕರಮಂಡಲಕ್ಕೆ ಮಾಱಂಕಮಾದ ತೇಜಃಪ್ರತಾಪಂ ಮಾಱಗಮನೆಯ್ದೆ ಕಣ್ಣುಳ್ಕೆ ಬೆಳ್ಕುಱಿಸುವಿನೆಗಂ (ಅಸಂಪ. ೦೩-೪೦ ವ). ೫. ಪ್ರತಿಸ್ಪರ್ಧಿ; ಹುರುಡಿಗ: ಜೋಜೋ ಯತಿಗಳ ಮನದ ಮಾಱಂಕವೆ ಜೋಜೋಯೆಂದು ತೂಗಿದರು (ಅಂಜಕ. ೪-೩೩). ೬. ಸವಾಲಾಗಿರುವವಳು: ಧೀರರಿಗೆ ಮಾಱಂಕವನು ಪರಪಾರಿಕಾಂಕ್ಷಿಯ ಚಿತ್ತಚೌರ್ಯವಿಹಾರಿಯನು' ದ್ರೌಪದಿಯನಭಿವರ್ಣಿಸುವಡಾರು (ಕುಮ್ಯಾಕ. ೦೩-೨೨). **ಮಾರಂಕ**: ೨. ಸೈನ್ಯದ ಆಯಕಟ್ಟಿನ ಸಮಯ ಸಂಪ್ರದಾಯಗಳನ್ನೆಲ್ಲ ತನಗೆ ಪಿತ್ತವೇರಿದಂತೆ ತಿರುಗಿಸಿ ಮಾರಂಕ ಮಾಡಿ (ಮಂಕ್ರಕ. ೭೭-೨೩). [ಮಾಱು$_2$ + ಅಂಕ$_1$]

**ಮಾಱಂಡಲ**, ಮಾಱಿಂಡಳ (ನಾ). ಸಮಾನ; ಸಾಟಿ; ಎಣೆ: ನೆಲಸಿದ್ದಮ್ಮೊಂಟೆ ಬಿಣ್ಪಂ ಬಡಗಣ ದೆಸೆಯಂ ಕೊಣ್ಣು ನೆಲ್ದಪ್ಪದೋರಂಡಲ ಮಕ್ಕುಂ ವಿಶ್ವಮೆಂದುಮ್ಮಳಿಸಿ ಬೆಸಸೆ ವಿಶ್ವಾಮರಶ್ರೇಣಿ ಮಾಱಂಡಲವಾದಂ ತೆಂಕಮಯಿಯುಮುಟ್ಟಿರಡು ದೆಸೆಯೊಳಂ ತೂಕಕಂಬಂದದಿಂ. . . ಕುಂಭಜನ್ಮಂ (ಹಾಂದೇವ. ೨೪-೪೦; 12ನೆಯ ಶತ); ಅಂಬುರಾಶಿಗೆ ಮಾಱಂಡಲವಾದ ಗುಣ್ಪು (ಎಕ. XI, ದಾವಣ. ೨೩-೬೭; 1224). **ಮಾಱಂಡಳ**: ಎನ್ನು ದಾನಿಯೆ ಸುರೋರ್ವ್ವಿಜಕ್ಕೆ ಮಾಱಂಡಳಂ ಸುರರಾಜಂಗೆಣೆಯೆಂದು ಕೀರ್ತ್ತಿಪ್ಪುದು (ಎಕ. II, ೦೯೨-೦೭; 1139); ಆರ್ವನ್ನಮರಕುಜಕೆ ಮಾಱಂಡಳಂ ನೋಳ್ಪಡನ್ನಾ . . . ಭೂಪಾಲರೋಳ್ (ಎಕ. XII, ತುಮಕೂ. ೯-೩; 1151); ಶರದಾಕಾಶಮಂಡಳದ ಶಶಿಮಂಡಳಕ್ಕೆ ಮಾಱಂಡಳಮಾಗಿ (ವರ್ಧಪು. ೭-೪ ವ). 'ಓರಂಡಲ' ಪರಾ. [ಮಾಱು$_2$ + ಅಂಡಲ$_?$]

**ಮಾಱಂಡಳ** 'ಮಾಱಂಡಲ' ನೋ.

**ಮಾಱಂಬು**, ಮಾರಂಬು (ನಾ). ೧. (ಗುರಿ ಇಟ್ಟು) ಹೊಡೆದ ಬಾಣ: ಭೋಂಕನೆ ಕಂಡು ಮಾಱಂಬಿಗೆ ಪಕ್ಕಾದ ಬೆಳ್ಳಿಗವಂತೆ (ಪಂಪಭಾ. ೦೦-೪೦ ವ). **ಮಾರಂಬು**: ೨. ಪ್ರತಿಯಾಗಿ ಬಿಟ್ಟ ಬಾಣ: ಈತ ಮತ್ತದಕ್ಕೆ ಮಾರಂಬು ತೂರುವನು (ರಾಮಚಂ. ೩೦). [ಮಾಱು$_1$ + ಅಂಬು$_2$]

**ಮಾಱಣೆ** (ನಾ). ಪ್ರತಿಸೈನ್ಯ; ವೈರಿದಳ: ನನೆವಿಲ್ಲ ಬಲ್ಲಹಂ ಮಾಱಣೆಯಂ ನೆಟ್ಟನೆ ತೋಳ್ವಲದಿಂದೆಬ್ಬಟ್ಟಿದಂ (ಶಬ್ದಮ. ೨೬೩). [ಮಾಱು$_2$ + ಅಣಿ$_3$]

**ಮಾಱಪ್ಪು** (ಕ್ರಿ). (ಅಲಂ) (ಹಿಂದಕ್ಕೆ ಬಂದು) ಪ್ರತಿಯಾಗಿ ಅಪ್ಪಳಿಸು, — ಹೊಡೆ: ಗಟ್ಟಿ ಮಾಱಪ್ಪುತರಸನನಲು ಹೊಯ್ದನು ಭಾಳದಲಿ ಭೀಮು (ಕುಮ್ಯಾಗ. ೭-೨೦). [ಮಾಱು$_2$ + ಅಪ್ಪು$_1$]

**ಮಾಱಾಟ**, ಮಾರಾಟ$_1$ (ನಾ). ಹಣ ಪಡೆದು ವಸ್ತುವನ್ನು ಕೊಡುವುದು; ವಿಕ್ರಯ: "ಪರಿವೃತ್ತಿ ವಿನಿಮಯಂ ಮಾಱಾಟಮೆಂದೆನಿಕ್ಕುಂ" (ಮಂಗರಾ. ೦೦೨-೨); ಮನೆ ಮಾಱಾಟಂ ರಸಾದ್ಯೌಷಧಂ ಭ್ರಾಂತಿಯ ತೋರ್ಕ್ಕೆವೈ (ಸೋಮೇಶ. ೨೩); ಘೋಟಕರಥ ಹಸ್ತಿ ಪದಚರಾದಿಗಳ ಮಾಱಾಟದಂಗಡಿಗಳೊಪ್ಪಿದುವು (ಜೋಕಶ. ೩-೩೦). **ಮಾರಾಟ**$_1$: ಕಪ್ಪುರ . . . ಅದರ ಹಲಗೆಗಳನ್ನು ಮಾಡಿ ಮಾರಾಟಕ್ಕೆ ಕಳುಹುವರು (ಮುಂಬಯಿ. ೪-೭೦); ರಣ ಮರಣದ ಸಂತೆ ಮಾರಾಟಕೆ ಏರಾಟಕೆ ಹೊರಚೆಲ್ಲಿದೆ ಇಲ್ಲಿ (ಸೂರ್ಯಕಾ. ೬-೩).
[ಮಾಱು$_1$ + ಆಟ. / ತಮಿ. ಮಾಱಾಟ್ಟಮ್ ; ತುಳು. ಮಾರಾಟ]

**ಮಾಱಾಡು**, ಮಾರಾಡು (ಕ್ರಿ). ೧. ಹಣಕ್ಕೆ ಬದಲಾಗಿ ವಸ್ತುವನ್ನು ಕೊಡು; ವಿಕ್ರಯಿಸು; ಮಾರು: ಪೆತ್ತ ಕೊಡುಗೂಸು ಪಣಕೆ ಮಾಱಾಡಿ (ರಾಜಶೇಖ. ೭೪-೩). ೨. ಒಂದು ವಸ್ತುವನ್ನು ಕೊಟ್ಟು ಇನ್ನೊಂದು ವಸ್ತುವನ್ನು ಪಡೆ; ಬದಲಾಯಿಸಿಕೊಳ್ಳು; ವಿನಿಮಯ ಮಾಡಿಕೊಳ್ಳು: ಪುಮಂಗೊಳಿಸಿದ ಕೆಂಪಂ ನೀರ್ವೊರ್ಕುಳಿಯೊಳ್ ಮಾಱಾಡಿಕೊಂಡ ತೆಱದಿಂ ತೋರ್ಕುಂ (ಕಾವ್ಯಾಶ. ೬೦೫); ಲಲನಾಸಂತತಿ ಪಲ್ಲವಾಧರದ ಕೆಂಪಂ ಕಣ್ಮಲರ್ಗಿತ್ತು ಕಣ್ಮಲರ್ವೆಳ್ಪಂ ನಿಜಪಲ್ಲವಾಧರಕೆ

ಕೊಟ್ಟಂದೀಗ ಮಾಱಾಡಿ [ಪಾಠಾಂ. ಱೊತಿಡ್ಡಿ]ತೀ ಸಲಿಲಕ್ರೀಡೆಯೊಳ್ (ಶಗವ. ೧೪-೦೦೨). **ಮಾರಾಡು :** ೧. ಈ ಕೋಟೆಯು ಹದದ ಬೇಹಸ್ನು . . . ನಂಜರಾಜನ ಗೂಢಚಾರರಿಗೆ ಅರುವತ್ತೆಂಟು ವರಹಗಳಿಗೆ ಮಾರಾಡಿ (ಕಟ್ಟಿಅ. ೩೦-೦೯). ೩. ಎದುರಾಡು ; ಪ್ರತಿಯಾಗಿ ಮಾತನ್ನಾಡು : ಮಾಡದಿರ್ ವ್ಯಸನ ಮಡದೀಯೆನಲು ಮಾರಾಡಿದಳು ಬಲುದುಗುಡದಿ (ಕುವಜಾಂ. ೩೨). [ಮಾಱು$_1$ + ಆಡು$_1$]

**ಮಾಱಾಣೆ** (ನಾ). ಆಣೆಗೆ ಪ್ರತಿಯಾಗಿ ಮಾಡುವ ಆಣೆ : ನಿರ್ಣಯ ಮಾಡದೆ ಮಾಱಾಣೆಯಿಡೆ . . . ಆಣೆಗೆ ನಿಲ್ಬುದಲ್ಲದೆ ಮಾಱಾಣೆಯನಿಡ ಲಾಗದು (ಶೀತಿಶಾ. ೦೩-೨೩). [ಮಾಱು$_2$ + ಆಣೆ$_3$]

**ಮಾಱಾನ್, ಮಾರಾನ್** (ಕ್ರಿ). ಎದುರಿಸು ; ಪ್ರತಿಭಟಿಸು : ಕದನ ದೊಳಿದಿರಂ ಮಿಾಱಿ ಮಾಱಾಂತು ನಿಂದಾಂತರಿಭೂಪರ್ ಭಸ್ಮಮಾದರ್ (ಕಾವ್ಯಸಾ. ೨೦೫ ಕೂಡ್ರಳ); ಎನಗಿಂ ಮಾಱಾಂಪರಾರ್ ತೋಱಿರೇ (ಶಂಕಶಾ. ೦೩-೮೪) ; ತಾಂ ಗಡೆನಗಂ ಮಾಱಾಂಪ ಗಂಡಂ ಗಡ (ಶಂಗಾಪಜಾ. ೯-೬೨); ಬಳ್ಳದಳ್ಳದೆ ಮಾಱಾಂತಿದಿರ್ಚಿ ಸಾವ ನಿನ್ನೀ ನೊಸಲಕ್ಕರದೋದಿಂ ಗೇನೆಂಬೆನೊ ! (ರಾಪಜಾಶ್ಯ. ೯೦-೦೩). **ಮಾರಾನ್ :** ಮಾರಾಂತಹಿತರ ಭೀಮಂ ಪಲರಂ ತವೆ ಕೊಂದು (ವ್ಯೆಅಂ. ೦೯೩೯, ೭೩-೬ ; 1216) ; ಮರೆ ಹೊಕ್ಕರೆ ಕಾವ ಮಾರಾಂತರೆ ವೈರಿ (ಇಅ. V, ೯೦-೦೨ಮು ೯೦೦; 1587); ಮಾರಾಂತ ಸುಭಟರ ಮುಂಡಮಂ ತೋರಿಸುತೆ . . . ನಡದನು ಮುಂದ ಕುರವಣಿಸಿ (ಅಂದಿಕಾ. ೨೨-೦೦). [ಮಾಱು$_1$ + ಆನ್$_1$]

**ಮಾಱಾನೆ** (ನಾ). ಪ್ರತಿಯಾಗಿ ಬಂದ ಆನೆ : ಜಾಱಿದ ತನ್ನಾನೆಯಿನಾ ಮಾಱಾನೆಯ ಕುಂಬತಳಕೆ ಪಾಯ್ದು (ಕಬ್ಬಿಕಾ. ೨೬೩) ; ಮುಗಿಲಂ ಮಾಱಾನೆ ಗೆತ್ತಂ (ಕಮದ. ೨೩೮ ಶ್ರವೊ). [ಮಾಱು$_2$ + ಆನೆ$_1$]

**ಮಾಱಾಳ್, ಮಾರಾಳ್** (ನಾ). ಪ್ರತಿಭಟಿಸಿ ನಿಂತವನು ; ಎದುರಾಳಿ; ಶತ್ರು : ಮಾಱಾಳೊಳಂಕಮಂ ಕಾದಿ ಗಳಿಸಿದ ಧನದಿ ಜಂಗಮಕ್ಕೆ . . . ಬೇಡಿದುದನಿತ್ತು (ಅಶಿಅಂ. ೬೩-೯). **ಮಾರಾಳ್ :** ಮಾರಾಳ್ಗಳಂ ತೀಕ್ಷ್ಣತರ ಬಾಣಂಗಳಿಂದೆ ಸಂಹರಿಸುತಿರಲು (ಶೀಸಂಶಾ. ೦೦-೨೦). [ಮಾಱು$_1$ + ಆಳ್$_3$]

**ಮಾಱಾಳಿ, ಮಾರಾಳಿ** (ನಾ). ೧. ಮಾರಾಟ ಮಾಡುವವನು ; ವ್ಯಾಪಾರಿ : ಮಾಱಾಳಿಯುಮೋದಾಳಿಯುಮೇಱಾಳಿಯುಮಪ್ಪನಾಗಿ (ಕಾವ್ಯಾವ. ೪೩೩) ; ಆಳಿ ಪ್ರತ್ಯಯಕ್ಕೆ—ಜೂದಾಳಿ, ಮಾಱಾಳಿ, ಏಱಾಳಿ (ಕಮದ. ೨೦೩ ಶ್ರವೊ); ಮಾಱಾಳಿಯ ಸಂತೆ ತಿಂತಿಣಿಸಿತು (ಶಕಪಿ. ೩-೯೭). **ಮಾರಾಳಿ :** ೨. ಎದುರಾಗುವವನು ; ಎದುರಾಳಿ : ಮಹೀಶೂರರತ್ನ ಸಿಂಹಾಸನದ ಸಮರಾಂಗಣಧರ್ಮಕ್ಕೆ ಇಂತಹ ವೀರವಿಶ್ವಾಸವನ್ನೊಪ್ಪಿಸಿ, ತವಕದ ಪ್ರತ್ಯಾಶಯಿಂದ ಕುದಿಯುತ್ತಿರುವ ಕಯ್ದುಗೊಳ್ಳದ ಮಾರಾಳಿ (ಕಟ್ಟಿಅ. ೭೩-೦೭). [ಮಾಱು$_1$ + — ಆಳ್$_3$]

**ಮಾಱಿಗೆ** (ನಾ). ೧. ಮಾರಾಟದ ವಸ್ತು ; ವ್ಯಾಪಾರದ ಸರಕು : ಮಾಱಿಗೆ, ಪೊಲಿಗೆ (ಶಬ್ದಾಮ. ೩೬೩ ಶ್ರವೊ). ೨. ಬೆಲೆ ಬಾಳುವ ವಸ್ತು : ಅತಿಕೃಪಣ ಶಠಗೆ ಪರವಿಭವಕ್ಕಸೂಯನುಂ ವ್ರತ ಹಿರಿಯರಂ ಹಳಿವ ಮಾಱಿಗೆಯನಲ್ಲೆಂಬ ಸುತನಾದಿಮಿತ್ರಕಳತ್ರಮಂ ಬಿಟ್ಟು ತನ್ನ ದರಮಂ ಪೋಷಿಸುವನು (ಚಶಿಅಂ. ೪೯-೦೭). [<ಮಾಱು$_2$]

**ಮಾಱಿಟ್ಟ?** (?). (?) : ಗತಿಜೇಷ್ಟ್ಯಾವಿರಹಂ ಶುಭಾಂಗದೆ ಘನಮ್ಮಾಱಿಟ್ಟ ಮಾಸ್ಟಿಟ್ಟುವಲ್ ಯತಿಯಂ ಪೇಟ್ದಿ ವಿಧಾನದಿನ್ದು ತೋಱಿದೇ ಕಟ್ಟಿಪ್ಪನಾ ಶೈಲದುಳ್ (ಎಕ. II, ೭೭-೦; ಸು. ೭೦೦). [ ? ]

**ಮಾಱಿತು** (ನಾ). ಮಾರಿದುದು ; ವಿಕ್ರಯಿಸಿ ಕೊಟ್ಟುದು : ಮಾಱಿ ತಕ್ಕೆ ಹೊಂಗೆ ವೀಸಮಂ ಕೊಟ್ಟರು (ಎಇ. V, ೦೯-೭೭ ; 1161) ; ಒಲೆಯ ಹೊಱಿ ಮಾಱಿತಕ್ಕೆ ಒಂದು ಕಟ್ಟೊಬ್ಬಲೆ (ಮುಂಬರಾ. X, ೨೨೭-೦ ; 1205). [< ಮಾಱು$_2$]

**ಮಾಱಿಲಿ** (ನಾ). ಒಂದು ವಂಶದ ಹೆಸರು (?) : ಮುಣ್ಣನ್ ಮಗ ನೀಲಗಣ್ಣನ್ ಮಾಱಿಲಿತಟ್ಟಾರರ (ವ್ಯಅಂ. ೦೯೩೨, ೦೯೫; ೨೩ಮು ೩೩). [ ? ]

**ಮಾಱು$_1$, ಮಾರು$_1$** (ಕ್ರಿ). ೧. ಯಾವುದಾದರೊಂದು ವಸ್ತುವನ್ನು ಕೊಟ್ಟು ಹಣವನ್ನು ಪಡೆದುಕೊಳ್ಳು; ವಿಕ್ರಯಿಸು : "ಮಾಱು— ವಿಕ್ರಯೇ" (ಶಮದ); ನೆಲ್ಲಂ ಪುರಿದು ಮಾಱದೆ ಕಾಣವಂತರಿಸಂಗಡಿ ಯೊಳ್ (ಕಂದಾ. ೨-೦೩೭) ; ಇದು ಮನೆಯಾಣ್ಮನಂ ಮಾಱುವಂದಮಲ್ಲದೆ ಪೂಮಾಱುವಂದಮಲ್ತು (ಶಂಕಶಾ. ೯-೯೦) ; ಪೂರ್ವದ ಭರಣಗರ ಸನ್ನತಿಯ ಲ್ಲದೆ ಪೆಱರ್ಗೆ ಕೆಯ್ಮನೆಯುಂ ಮಾಱಲಾಗದು (ಸೌಇಇ. XI-i, ೬೪-೬೪; 1028) ; ಉರಿಯ ಪೇಟೆಗಳಲಿ ಪತಂಗದ ಸರಕು ಮಾಱದೆ ಮರಳುವುದೆ (ಕುವ್ಯಾಭ. ೦೦-೨೬); ಕಲ್ಲುಸಕ್ಕರೆ ಕೊಳ್ಳಿರೋ . . . ಸಂತೆಯೊಳಗೆ ಇಟ್ಟು ಮಾಱುವದಲ್ಲ (ಪುರಂದ. ೦-೦೨೬-೩). ೨. ಒಂದು ವಸ್ತುವನ್ನು ಕೊಟ್ಟು ಮತ್ತೊಂದು ವಸ್ತುವನ್ನು ಪಡೆ; ಅದಲುಬದಲು ಮಾಡಿ ಕೊಳ್ಳು; ವಿನಿಮಯ ಮಾಡಿಕೊಳ್ಳು : ಗತಜೀವಿತನಂತವಿವೇಕದಿಂ ತಪೋವಲ್ಲಿಯೊಳಪ್ಪನಲ್ಪಫಲಮೆಲ್ಲಮನಲ್ಪಫಲಕ್ಕೆ ಮಾಱಿ ಬಂದು (ಇಂಪು. ೨-೯೨) ; ನೂಱುಪಶುಗೆಡಹಿಗೆ ಸುರೇಂದ್ರನು ಮಾಱುವನು ಗಜ್ಜುಗೆಯ (ಕುವ್ಯಾಅ. ೭-೮೯). ೩. ಮಾರ್ಪಡಿಸು; ಬದಲಾಯಿಸು: ಪಗಲನಿರುಳ್ಗೆ ಮಾಱಿ ನಯನಾಂಚಲಚಂದ್ರಿಕೆ . . . ಬಂದಳ್ (ಶಂಪ್ರಕ. ೦೦-೦೨). ೪. ಒಪ್ಪಿಸು ; ಅರ್ಪಿಸು; ವಶಪಡಿಸು : ಹರಂಗೆ ಶಶಿಭೂಷಣಂಗೀಶ್ವರಂಗೆಯ್ದೆ ನಾಲಗೆಯಂ ಮಾಱಿದೆನೊಲ್ದು (ಶಂಶಾ ಕ.೬೦); ಮನಮಂ ಶಿವಸಂಘಗೆ ಮಾಱಿ (ಅಶ್ಯ ಟ. ೦೨-೯೦) ; ಮನವನೀತಗೆ ಮಾಱಲಿತ್ತೆ ಇಂದ್ರಿಯವೈದನನುರಾಗ ಮಿಗೆ ಸೂಱೆಯಿತ್ತೆ (ಶರಕ. ೯-೯೯). ೫. ಆದರಕ್ಕೆ ಒಳಗಾಗು; ಗೌರವ ಸಿಗು : ಇಲ್ಲಿ ನಮ್ಮ ಶಾಸ್ತ್ರ ಮಾಱುವುದಿಲ್ಲ ಸುಮ್ಮನಿದ್ದರೆ ದಾರು ಕೇಳುವರಿಲ್ಲ (ಪುರಂದ. ೨-೩೭ ಕಲ್ಲಬ). ೬. ಬದಲಾಗು; ಮಾರ್ಪಾಟು ಹೊಂದು. ೭. ಎದುರಾಗು; ಪ್ರತಿಭಟಿಸು; ವಿರೋಧಿಸು : ಕಾಳಗದಲ್ಲಿ ಪೌಜನಿಕ್ಕಿದಡೆ ಮಾಱಿದಡೆ ಅರಸಂಬರಲ್ಲದೆ ಬಂಟರೆಂಬುದಿಲ್ಲ (ಪೋಲಶಜಾ. ೨-೩). ೮. ಹೊಡೆ; ಬಡಿ : "ಮೋದೆಂದುಂ, ಮಾಱೆಂದುಂ, ಎಱಗಿದನೆಂದುಂ, ಎಱಗೆಂದುಂ ಪೊಯ್ಯುವುದು" (ಶಶಾ. ೬೨-೬೩೩). 'ಮಾಱಿಂಬು' ಪಠಾ. **ಮಾರು$_1$ :** ೧. ಅದ ಮಾರಿದರ ಶಿರಿಪುರುಷನ ಮಗ ದೇವಾತಿ (ಎಕ. VIII, ಸೊರಬ. ೬೩-೬ ; 876) ; ಆ ಪೊಸರನ್ನು . . . ಅರಕ್ಕೆ ಮೂರಾಗಿ ಮಾರುತ್ತಿದ್ದಳು (ಶೀತಿಅಂ. IX, ೨೯). ೯. ವಿಕ್ರಯವಾಗು : ಅವು . . . ಬಹಳ ತುಟ್ಟಿ, ಏಳೆಂಟು ರೂಪಾಯಿಗೆ ಒಂದು ಸೇರು ಮಾರುತ್ತದೆ (ಮುಂಬಯಿ. ೯-೯೦).

**ಮಾಱಿಕೊಳ್, ಮಾರಿಕೊಳ್ಳು** = ವಿಕ್ರಯಿಸು; ಬೆಲೆಗೆ ಕೊಡು : ಸಾಲಬಟ್ಟರೆ ಮಾಱಿಕೊಂಬರಯ್ಯಾ (ಬಸವ. ೩೩೯); ಅವನು ತನ್ನ ವರ್ಗದೊಳಗೆ ಓದುವ ಪುಸ್ತಕಗಳನ್ನು ಗಡಿಯಾಲವನ್ನೂ ಮಾರಿಕೊಂಡನು (ಮುಂಬಯಿ. ೯-೦೯೨). [ದೇ.॥ ತಮಿ. ಮಾಱು, ಮಾಱ್ಱು; ಮಲ. ತೆಲು. ಮಾಱು ; ತುಳು. ಮಾರು ; ಕೊಡ. ಕೋತ. ಮಾರ್; ತೊದ. ಮೋಱ್ ]

**ಮಾಱು$_2$, ಮಾರು$_2$** (ನಾ). ೧. ಮಾರುವಿಕೆ; ಮಾರಾಟ; ವಿಕ್ರಯ: ತಾಂ ಪರಮೇಶ್ವರನಪ್ಪುದಱಿಂ ಮಾಱಿನ ಲೆಕ್ಕಮಂ ಬಗೆಯದೆ (ಬಂಹಂ. ೦೯-೨೯೫); ಈ ಧರ್ಮಕೆ ಮಾಱುವ ಮಾಱು ಸಲ್ಲದು ಮುತ್ತುವ ಬತ್ತ ಸಲ್ಲದು (ಸೌಇಇ. IX-ii, ೯೭೯-೩೨; 1472). ೨. ವಿಕ್ರಯಕ್ಕೆ ಇಟ್ಟ ವಸ್ತು : ಮಾರಾಟದ ವಸ್ತು : ಮಲ್ಲಿಸೆಟ್ಟಿ ಮಾಱಂ ಕೊಂಡು ಅರಸರ

ಸಂನ್ನಿಧಿಯಲು. . . ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಎಕ. VII. ಶಿಮೊ. ೬೯-೯೬; 1112?); ಸಲುವುದೆ ಠಾಳಿಕದ ಮಾಱಿಳಿಯೊಳು (ಜೀವಂಧ. ೨-೩೨). ೩. ಪ್ರತಿ ; ಎದುರು : 'ಮಾಱುತ್ತರ' ಪರಾ. ೪. ಇನ್ನೊಂದು ; ಮತ್ತೊಂದು : 'ಮಾಱಂಕ' ಪರಾ. ೫. ವಿರುದ್ಧ. ೬. ಗುರಿ; ಲಕ್ಷ್ಯ : 'ಮಾಱೆಸು' ಪರಾ. ೭. ಪರವಶ ; ಅಧೀನ : 'ಮಾಱು ವೋಗು' ಪರಾ. ೮. ಮೋಹ ; ಮರುಳು : 'ಮಾಱುವೋಗು' ಪರಾ. ೯. ಜಗಳ : 'ಮಾಱುಗೊಳ್' ಪರಾ. **ಮಾರು₂** : ೪. 'ಮಾರುವೇಷ' ಪರಾ.

**ಮಾಱಾಗು** = ವಶಕ್ಕೆ ಸಿಕ್ಕು ; ಮಾರುಹೋಗು ; ಮರುಳಾಗು : ಈಶಂ ಭೀತಿಯಿಂದಂ ಬೆದಱದನೆನೆ ಮಾಱಾದರಾ ಭೂಮಿಪಾಳರು (ಎಕ. VII. ಶಿಕಾ. ೦೬೦-೦೦; 1065); ಸುಕುಮಾರಂ . . . ನುಡಿಯಲಾ ಸವಿಗೇಳ್ದ ಕಿವಿಗೆ ಮಾಱಾಗುತ್ತೆ (ಬಸವ. ರೇ. ೩೩-೦೪).

[<ಮಾಱು₁. / ತಮಿ. ಮಾಱು, ಮಾಱ್ಱು ; ಮಲ. ಮಾಱು, ಮಾಱ್ಱು ; ತೆಲು. ಮಾಱುವರ್, ತುಳು]

**ಮಾಱುಂಗುಡು** 'ಮಾಱುಗೊಡು' ನೋ.

**ಮಾಱುಂಗೊಳ್** 'ಮಾರ್ಕೊಳ್' ನೋ.

**ಮಾಱುಕೊಳ್** 'ಮಾರ್ಕೊಳ್' ನೋ.

**ಮಾಱುಗವುಚು** (ಕ್ರಿ). ಬೋರಲು ಹಾಕು ; ದಬ್ಬು ಹಾಕು : ಹೂರಣವ ಮಾಡಿಯಾಮ್ಲುಂಡೆಯೆರಡಱ ನಡುವೆ ಪೂರಯಿಸಿ ಹಱಿಯದಂತೆ ಗೇಣಗಲಂ ಮಾಡಿ ಮಾಱುಗವುಚಿದ ಹಂಚನೊಳಗಿತ್ತು ತುಪ್ಪವಂ ತೊಡೆದು ಹೂರಿಗೆ ಯಡುವುದು (ಸೂಶಾ. ೦-೨೬).

[ಮಾಱು₂ + ಕವುಚು₂ (<ಕವಿಚು₂)]

**ಮಾಱುಗುಡು** 'ಮಾಱುಗೊಡು' ನೋ.

**ಮಾಱುಗೊಡು,** ಮಾರುಗೊಡು, ಮಾಱುಂಗುಡು, ಮಾಱುಗುಡು (ಕ್ರಿ). ೧. ಒಂದು ವಸ್ತುವಿಗೆ ಬದಲಾಗಿ ಮತ್ತೊಂದನ್ನು ಕೊಡು; ವಿನಿಮಯ ಮಾಡಿಕೊಳ್ಳು : ಸಕಳಜಗತೀಶ್ವರತ್ವಮನಕಾಮಿಕಂ ಮಾಱ್ಪ ತಪಮನಲ್ಪಸುಖತ್ಕೃತ್ಯಕನೆಳಿಂ ಕುಡುವುದು ಮಾಣಿಕವಂ ತೌಡಿಂಗೆ ಮಾಱುಗೊಡುವಂತಕ್ಕುಂ [ಕಾಶಾಂ. ಮಾಱುವಂತಾಗಿಕ್ಕುಂ] (ಸಮುಕ. ೯-೨೩). ೨. ಅರ್ಪಿಸು ; ವಶವಾಗಿಸು ; ಅಧೀನಪಡಿಸು : ಹಗೆಗೆ ಮಾಱು ಗೊಟ್ಟು ನಿನ್ನವರನ್ನೊಪ್ಪಿಸುವರೆ (ಬಸವ. ೯೯); ಕನ್ನೆವೇಟಕ್ಕೆ ಜನ್ಮಂ ಮಾಱುಗೊಟ್ಟ ಪಾಱುಗೆಯ್ಯದ ಜವ್ವನಿಗನಿಯನಿತ್ತು ನಖರದಕ್ಷತಂಗಳನೆ ತೊಡವು ಮಾಡಿ (ಶಂಪ್ರಕೃ. ೬-೩೩ ವ); ನಿಮಗೆನ್ನಂ ಮಾಱುಗೊಟ್ಟೆಂ ಪುರಹರ (ರಕ್ಷಶ. ೭೮) ; ಒಕ್ಕಲಂ ಮಾಱುಗೊಂಡಂಗೆ ನಂಬಿಯನಳಿಪಿ ತೊಳ್ತು ಗೊಂಡವಂಗೆ ಅರಿದಾವುದು (ಕನ್ನಣ. ೦೩-೯). **ಮಾರುಗೊಡು** : ೧. ಕೈವುವ ಒಡಲನ್ನೂ ಒಡವೆಯನ್ನೂ ಕೆಡದ ಒಡವೆಗೆ ಎಂದೆಂದೂ ಮಾರು ಗೊಡಬೇಕು (ಭಾಮಿಂತ. ೯೦). ೨. ತನ್ನ ಮನಸನ್ನು . . . ತನ್ನ ಸ್ತ್ರೀಗೆ ಎಷ್ಟೇ ಮಾರುಗೊಟ್ಟಿದ್ದರೂ, ತಾಯ ಪ್ರೇಮದ ಪರಿಣಾಮವು . . . ತೋರಿಸದೆ ಹೋಗುವುದಿಲ್ಲ (ಕೀಗಟ್ಟು. ೦೬). ೩. ಮಾರುತ್ತರವನ್ನು ಕೊಡು ; ಬದಲು ಹೇಳು : ನಾನು ಮಾರುಗೊಡಲು ಅವಕಾಶ ಕೊಡಲಿಲ್ಲ (ಕಾಂಡಾ. ೦೩). **ಮಾಱುಂಗುಡು** : ೧. ಬಿರಿಮುಗುಳ್ವಾಸಿಗಮಂ ಮಾಱುಂಗುಡುವೆಳವೆಣ್ಗಳ ಮೂವಣ್ಣದ ಕಣ್ಗಳ ಕಾಂತಿಯೊಳು ಮಂಗಲಕೀರ್ತಿಯುಂತಂ ನಡೆದಂ (ಜಯಕಾ. ೦೯-೨೦). P ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ. **ಮಾಱುಗುಡು:** ೧. ಒಪ್ಪುವ ಮಾಣಿಕವಂ ತೌಡಿಂಗವಯವದಿಂ ಮಾಱುಗುಡುವ ಮರುಳಂ ಪೋಲ್ಗುಂ (ಕಾಂತಕೃ. ೦೦-೯೦) ; ಕೆಡುವೊಡಲೊಡವೆಯನೆಂದುಂ ಕೆಡದೊಡವೆಗೆ ಮಾಱುಗುಡು ವುದಿಱವಬೆಡಂಗಾ (ಗಿರಿಜಾಕು. ೨-೪). ೨. ಮದನಂಗೆ ಮಾಱುಗುಡುವರೇ (ಬಸವ. ೯೯) ; ಊರೊಳ್ ಮಾರಿಯೆಂದು ಮನೆವೋರಿಯಂ ಮಾಱುಗುಡು ವರೇ (ರಾಮಾಶ್ವ. ೩೫-೨೮). ೪. ಮಾರಾಟ ಮಾಡು ; ವಿಕ್ರಯಿಸು : ಹೊನ್ನುಳ್ಳ ಧನಿಕರಾರಾದೊಡಂ ಕೊಂಬವರ್ ಬನ್ನಿಯೆನ್ನಂ ಮಾಱು ಗುಡುವೆಂ (ಹರಿಶ್ಚ. ೦೦-೨೦). [ಮಾಱು₂ + ಕೊಡು₁]

**ಮಾಱುಗೊಳ್** 'ಮಾರ್ಕೊಳ್' ನೋ.

**ಮಾಱುಗೋಲು** 'ಮಾರ್ಕೋಲ್' ನೋ.

**ಮಾಱುಡೆ** (ನಾ). ಬೇರೆಯ ಸೀರೆ.–ಉಡುಗೆ : ಮಾಱುಡೆಯಿಲ್ಲ ಮಜ್ಜನ ಮಿನಿಸಿಲ್ಲ ಕರ್ಪೂರವೀಳೆಯಗೊಳಲಿಲ್ಲ (ಶೀಬಸಂ. ೩೯-೩೮). 'ಮಾಱುಡೆ ಗಾಣ್' ಪರಾ. [ಮಾಱು₂ + ಉಡೆ₂]

**ಮಾಱುಡೆಗಾಣ್** (ಕ್ರಿ). ಬೇರೆಯ ವಸ್ತ್ರವು ಸಿಗು ; ಮತ್ತೊಂದು ಉಡುಗೆಯು ದೊರಕು : ಪಚ್ಚೆಯ ಪಸುವರ್ಣಣೆಯಂ ಕಡಲಿಲ್ಲದಂತು ಬಾಯ್ತುಂಬುಲಮೆಂಬುದಂ ಪಡೆಯದಂತುಟೆ ಮಾಱುಡೆಗಾಣದಂತಿರಟ್ಟುಂ ಬಱಿಗೊಂಡು ತೇದವುದು ಬೇಟಮಿದೆನ್ನಯ ಪಾಪಮಲ್ಲದೇ (ರೀಲಾವ. ೦-೦೦೬). [ಮಾಱುಡೆ + ಕಾಣ್]

**ಮಾಱುತ್ತರ,** ಮಾರುತ್ತರ (ನಾ). ೧. ಎದುರು ಮಾತು ; ಪ್ರತ್ಯುತ್ತರ ; ಮರುಮಾತು : ತೊತ್ತಿಂಗೆ ಲಕ್ಷಣವೇಕಯ್ಯಾ . . . ಮಾಱುತ್ತರ ವೇಕೆ (ಬಸವ. ೯೬೬) ; ತನ್ನಯ ನುಡಿಗೆ ಮಾಱುತ್ತರವ ಕೊಡು (ಶುಬ್ಬಾಕ. ೬೦೩. ೨೩-೨೦) ; ವಿಷಯಾತುರರು ನೆಱೆ ಬೂತುಗೆಡೆದರೆ ಗರುವರಾದವ ರಾತು ಮಾಱುತ್ತರವ ಕೊಡುವರೆ (ತೊರವೆ. ೩-೯-೨೨). **ಮಾರುತ್ತರ** : ೧. ಇತ್ತ ನೋಡಿದರೆ ಗಂಡನ ಮಾತಿಗೆ ಮಾರುತ್ತರವನ್ನು ಕೊಡಲಾಗದು (ಕನ್ನಪಾ. ೦೦೨) ; ವಿಮಲಾ ಎಂದು ಕರೆದರೆ ಮೌನವೇ ಮಾರುತ್ತರ ವಾಯಿತು (ಕಂಕುಕು. ೯೪). ೨. ಪ್ರತಿಯಾಗಿ ಬರೆಯುವ ಕಾಗದ ; ಜವಾಬು : ನೀವು ಅವರಿಗೊಂದು ಮಾರುತ್ತರವನ್ನು ಬರೆಯಲೇಬೇಕು (ಒಂಟಿದ. ೫೯). [ಮಾಱು₂ + ಉತ್ತರ]

**ಮಾಱುತ್ತರಂಗುಡು** 'ಮಾಱುತ್ತರಗೊಡು' ನೋ.

**ಮಾಱುತ್ತರಂಗೊಡು,** ಮಾರುತ್ತರಕೊಡು, ಮಾಱುತ್ತರಂಗುಡು, ಮಾಱುತ್ತರಗೊಡು (ಕ್ರಿ). ಎದುರುಮಾತಾಡು ; ಪ್ರತ್ಯುತ್ತರ ಕೊಡು : ಎನ್ನ ಸೌಭಾಗ್ಯಕ್ಕೆ ಹಾನಿಯೆಲ್ಲಿಹುದೆಂದು ಮಾಱುತ್ತರಂಗೊಟ್ಟು ಕೆಲಬಲವ ನೋಡುತಿರಲು (ಶಿರೃ. ೯-೨೦) ; ರಘುಕುಲಲಲಾಮಂ ಕೇಳ್ದೊಡಾ ಕುಶಂ ನಸುನಗುತೆ ಮಾಱುತ್ತರಂಗೊಟ್ಟನು (ಜೈಮಿಭಾ. ೨೦-೨೪). **ಮಾರುತ್ತರಕೊಡು** : ರೇಣು . . . ಆಜ್ಞೆಗ್ಯವ ಧ್ವನಿಯಲ್ಲಿ ಮಾರುತ್ತರ ಕೊಟ್ಟಳು (ಹೇಮಂತ. ೨೯೯). **ಮಾಱುತ್ತರಂಗುಡು** : ಆ ಮುನಿನಾಥ ನಂದು ಮಾಱುತ್ತರಂಗುಡಲೆಂದು ತಱಸಂದನು (ಹರಿಶ್ಚ. ೫-೭೦). **ಮಾಱುತ್ತರಗೊಡು** : ಅವಳಿಗೆ ಮಾಱುತ್ತರಗೊಟ್ಟು ನಗುತ ನೂಱೆಲೆಗಣ್ಣ ರುಕ್ಮಿಣಿಗೊಡರ್ಚಿದ ಹೊಗರೇಱುವ ಗರ್ಭೋತ್ಸವವ (ಪೋತ್ಸಕ. ೯-೬೬). [ಮಾಱುತ್ತರ + ಕೊಡು₁]

**ಮಾಱುತ್ತರಗೊಡು** 'ಮಾಱುತ್ತರಂಗೊಡು' ನೋ.

**ಮಾಱುದನಿ** 'ಮಾರ್ದನಿ' ನೋ.

**ಮಾಱುದಾಂಟು** (ನಾ). ಮರು ನೆಗೆತ ; ಪ್ರತಿಯಾಗಿ ನೆಗೆಯುವ ನೆಗೆತ : ಮಾಱುದಾಂಟು ಬಿಡುಗಣ್ ಬಿಡುವಾಯ್ (ಶಮುರ. ೦೭೦). [ಮಾಱು₂ + ದಾಂಟು₂]

**ಮಾಱುದ್ದು** (ಕ್ರಿ). ಒಂದಕ್ಕೊಂದು ತಿಕ್ಕು : ನೆಲನಂ ಮಾಱುದ್ದಿ ಕಯ್ಯಿಂ ಧರಾತಳದೊಳ್ ಸಾಸಿದ ತನ್ನ ತೀವ್ರಗದೆಯಂ ಕಂಡೆತ್ತಿಕೊಂಡು (ಗದಾಯು. ೬-೩೬) ; ಕೋಪಾಟೋಪದಿಂ ಕರತಳವ ಮಾಱುದ್ದಿ ಕೋದಂಡಮಂ ಸೆಳೆದು (ಹರಿಶ್ಚ. ೩-೨೮) ; ನೆಲಕ್ಕೆ ಮಾಱುದ್ದಿದನು ಕರವನು (ಕುಮಾರಗ. ೭-೦೦). [ಮಾಱು₂ + ಉದ್ದು₁ (< ಉರ್ದು₁)]

**ಮಾಱುನುಡಿ** 'ಮಾರ್ನುಡಿ$_2$' ನೋ.

**ಮಾಱುಬರು** (ಕ್ರि). ಎದುರಾಗು : ಎದುರಿಸಿ ನಿಲ್ಲು : ಮಾಱುಲೋಕದ ಗಂಡ ಫಲುಗುಣ ಬಂದು ಕೊಲುತಿರಲು ಮಾಱುಬರುವರದಾರು (ಸಂಶಕ. ೨೦.೫೬). [ಮಾಱು$_2$ + ಬರು$_1$ (< ವರ್)]

**ಮಾಱುಬಲ** 'ಮಾರ್ವಲ' ನೋ.

**ಮಾಱುವಲೆ** 'ಮಾರ್ವಲೆ' ನೋ.

**ಮಾಱುಮಾತು,** ಮಾರುಮಾತು (ನಾ). ಪ್ರತ್ಯುತ್ತರ ; ಮಾರ್ನುಡಿ : ಮಾಱುಮಾತಿಗೆ ಹಱಿವನೆಣಿಸುತ ವಿಮಳೆ ಬಳಿಕಿಂತೆಂದಳಲ್ಲಮನ (ಪ್ರಭುಲೀ. ೯-೬೧) : ಮಾಱುಮಾತೇನ್ನೈ ಮಹೀಸುರರೇಱಿಸಿದರೇಱುವುದು (ಕುಮಾ.ಭ. ೦೩-೬೨) ; ಮಾಱುಮಾತಿಲ್ಲೇಕೆ ಹೇಳೈ ತಮ್ಮ ತನಗೆ (ಕೊರಂ. ೩-೦೦-೦೦). **ಮಾರುಮಾತು :** ವಿಚಾರಶೂನ್ಯತೆಯಿಂ ಮಾರುಮಾತಿನ್ನೇಕೆ (ಗಗಚಾ. ೫-೨೯). [ಮಾಱು$_2$ + ಮಾತು$_1$]

**ಮಾಱುರಿ** (ಕ್ರಿ). ಎದುರಿಸಿ ಜ್ವಾಲೆಯಾಗು : ಎನ್ನೀ ತೇಜಸ್ಸುರಿತಕ್ಕೆ ಸೆಣಸಿನೊಳ್ ಮಾಱುರಿಗುಂ ಸ್ಮರಿಸದು ತೇಜವಾ ಭುಜಬಲಿಯಾ (ಆದಿಪು. ೦೯-೯೨). [ಮಾಱು$_1$ + ಉರಿ$_1$]

**ಮಾಱುಲಿ** (ಕ್ರಿ). ಪ್ರತಿಧ್ವನಿಸು : ಮಾರ್ದನಿ ಕೊಡು : ಹಂಸ ಚಕ್ರವಾಕ ಬಳಾಕವಿಪಕ್ಷಿಗಣಂಗಳ್ . . . ನಾನಾಪ್ರಕಾರದಿಂದಂ ಮಾಱುಲಿವ ದನಿಗಳಿಂದಮತಿರಮಣೀಯಮಪ್ಪ ಕೊಳನಂ ಕಂಡು (ಶಬ್ದಾಗ. ೫೯-೨೨). [ಮಾಱು$_2$ + ಉಲಿ$_1$]

**ಮಾಱುವಡೆ** (ಕ್ರಿ). ಅಂಗಡಿಯು ಸರಕಿನ ಮಾರಾಟವಾಗು : ಮಾಱುವಡೆಯದ ಪರದನಂತೆ ಕಂದಿ . . . ಇಂತೆಂದಂ (ಧರ್ಮಾಮೃ. ೦-೧೬೮). [ಮಾಱು$_2$ + ಪಡೆ$_1$]

**ಮಾಱುವೋಗು,** ಮಾರುವೋಗು, ಮಾರುಹೋಗು (ಕ್ರಿ). ೧. ವಸ್ತುವು ಮಾರಾಟವಾಗು,–ವಿಕ್ರಯಂಗೊಳ್ಳು : ಕೆಡುವ ಭಂಡದಂತೆ ಮಾಱು ವೋಗದು (ಧರ್ಮಾಮೃ. ೯-೦೬೫) ; ಮಾಱುವೋಗನೊತ್ತೆವೋಗ ನಮ್ಮ ಕೂಡಲಸಂಗಮದೇವ (ಬಸವ. ೫೫೯). ೨. ವಶವಾಗು ; ಅಧೀನವಾಗು : ಮತಿಸಮ್ಯಗ್ದರ್ಶನಜ್ಞಾನಚಾರಿತ್ರಂಗಳ್ಗೆ ದಯಾವಲೋಕನೆಗೆ ಕಣ್ಗಳ್ ಮಾಱುವೋದಂತೆ (ಅರ್ಹಬೀ. ೦-೬) ; ಸೂಱೆವೋಯಿತು ಚಿತ್ತಕಂಗಳು ಮಾಱುವೋದವು (ಕುಮಾ.ಭಿ. ೨-೦೦) : ನಂಬಿದಳಂ ಮಾಱಿದು ಸವತಿಯೊಂದು ಪಿಸುಣ್ಗೆ ಎಱೆಯಂ ಮಾಱುವೋದಂ (ರಾಜಶೇ. ೨೨-೯). ೩. ಮೋಹಗೊಳ್ಳು ; ಮರುಳಾಗು : ಮದೀಯ ಚಿತ್ತವಾ ಸುದತಿಗೆ ಮಾಱುವೋಯ್ತು (ದಶಕು. ೦೦-೩೦). ೪. ಸೆಳೆಯಲ್ಪಡು ; ಆಕರ್ಷಣೆಗೊಳಗಾಗು : ಚಿತ್ತಕ್ಕೆ ಮಂದಂತುಟೇ ಮಾಟ್ಟುಗು ದಲ್ ಕಾದಂಬರೀದೇವಿಯ ಗುಣಪಣದಿಂ ಮಾಱುವೋದೆನ್ನನೀಗಳ್ (ಕಾದಂಬ. ೦೨೩); ನಿನ್ನ ಶೀಲಕಾಂ ಮಾಱುವೋದೆಂ ಕಾದಲೊಲ್ಲೆಂ (ಕೃಷ್ಣಾ. ೯-೫೦). -೫. ಕೈತಪ್ಪಿ ಹೋಗು ; ನೀಣಾಬಿಕೊಳ್ಳು : ನಿನ್ನಯ ಬೈತಲೆಯ ಮಣಿ ಮಾಱುವೋದುವ ಮತ್ತೆ ಬಿಡಿಸಿದಳೆ (ಕುಮಾ.ಸ. ೦೫-೫೯): **ಮಾರುವೋಗು :** ೨. ಅವರದು ತರ್ಕ ಹಾಗೂ ಬುದ್ಧಿಶಕ್ತಿಗೆ ಮಾರುವೋದ ಬಾಳು (ರಾಜವ. ೮೦). ೩. ಎದೆ ಮಾರುವೋಗದೊಡೆ ಕಣ್ ಸೊಬಗನುಂಡರೇಂ (ಮಂಕುತಿ. ೯೩೬); ಕವಿಯ ಸೂಕ್ತಿಯೊಳು ದಾಸ ಮಾರುವೋಗದ ಮನುಜನು ಯೋಗಿಯೊ ಪಶುವೊ ಆಗಿರ್ಪನು (ಶಂತಾಶ. ೧೫೨-೯೬): ಸುಬ್ಬನ ಮಗಳು ನೆರೆಮನೆಯ ಹೈದ ಚಿಕ್ಕನಿಗೆ ಮಾರುವೋಗುತ್ತಿಳವಳು (ರೂಶಸಂ. ೯). **ಮಾರುಹೋಗು :** ೨. ಸೋಮು ಥಳುಕಿನ ಜೀವನಕ್ಕೆ ಮಾರುಹೋಗಿದ್ದ (ಅಪಾಟಿ. ೫೩). ೩. ಮನಸ್ಸು ಅವಳ ಹೊಳಪಿನ ಕಣ್ಣುಗಳಿಗೆ ಮಾರುಹೋಗಿತ್ತು (ಮರಳ. ೬೦); ನಾನು ಅವಳ ರೂಪವನ್ನು ನೋಡಿ ಬಲಿಸುದಲ್ಲ. ಅವಳ ಗುಣಸಂಪತ್ತಿಗೆ ಮಾರು ಹೋದೆ (ಕಾಹುತ್ತ. ೯೬). [ಮಾಱು$_2$ + ಪೋಗು$_1$ (<ಪೋ$_1$)]

**ಮಾಱಿಸು** (ಕ್ರಿ). ಗುರಿಯಿಟ್ಟು ಬಾಣ ಬಿಡು : ಮನ್ಮಥನಾಗಳೇಱಿಸದೆ ಮಾಱಿಚ್ಚಂ ಪುರಸ್ತ್ರೀಯರಂ (ಶಂರಾಮಾ. ೫-೯೦). [ಮಾಱು$_2$ + ಎಸು$_1$]

**ಮಾಱೊಡ್ಡು$_1$,** ಮಾರೊಡ್ಡು (ಕ್ರಿ). ಪ್ರತಿಸ್ಪರ್ಧಿಯಾಗಿ ನಿಲ್ಲು : ಎದುರಿಸು : ಬೇಱಬೇಱೆ ಮಾಱೊಡ್ಡಿ ಮಾಱೆ ನಿಂದ ಗೀರ್ವಾಣ ಮುಖ್ಯರಂ ತೋಱುತಿರ್ಪ ಸಮಯದೊಳ್ (ಗಂಧ. ೬-೬೬ ವ); ಮಾಱೊಡ್ಡಿದಮರಾದ್ರಿಯಂತೆ ರಾಶಿಗಳಾಗಿ ಹೇಱೆ ತಂದೊಡವೆಯಂ ವಿವಿಧರತ್ನಂಗಳಂ ತೋಱಿಸಿ (ಕೃಂಚಾ. ೩೩-೩೦); ಗಾಳಿಗೆ ಮಾಱೊಡ್ಡಿ ಪೋಪ ಪತಾಕೆಯು ಕೌಸುಂಭಾಂಬರದಂತಿರೆ (ರಾಜಾಶೆ. ೩೯-೦೨). **ಮಾರೊಡ್ಡು :** ಮರದೆ ನಗೆಗೆಡೆಮಾಡೆ ಮಾರೊಡ್ಡಿ ಮುನಿವಂ (ಕಾಂಶೆಶ. ೫೦-೬೬); ಕೆಳಕ್ಕೆ ಬೀಳದೆ ಅದರ ಸೆಳೆತಕ್ಕೆ ತನ್ನ ಗರ್ಭಪ್ರಾಪ್ತವಾದ ವಿಕರ್ಷಣಶಕ್ತಿಯನ್ನು ಮಾರೊಡ್ಡಿ ಮೇಲೆ ತೇಲುತಪ್ಪ (ಕಾವ್ಯಕು. ೩). [ಮಾಱು$_2$ + ಒಡ್ಡು$_1$]

**ಮಾಱೊಡ್ಡು$_2$** (ನಾ). ಪ್ರತಿಬಲ ; ಶತ್ರುಸೈನ್ಯ : ತಂತಮ್ಮ ಪಿಡಿದ ಬಾಳ್ಗಳಗಿಂ ಮಾಱೊಡ್ಡಂ ಕಂಡು (ಕಬ್ಬಿಗ. ೨೬೬); ಒಡ್ಡಿತೀ ಬಲ ರಿಪು ಭಟರು ಮಾಱೊಡ್ಡ ಮೊಱೆದರು (ಕುಮಾ.ಭ. ೦೦-೬). [ಮಾಱು$_2$ + ಒಡ್ಡು$_2$]

**ಮಾಱೊತ್ತು** (ಕ್ರಿ). ಪ್ರತಿಯಾಗಿ ತಳ್ಳು, - ನೂಕು : ನೆರೆದೆಂಟುಂ ದಿಗ್ಗಜಂಗಳ್ . . . ದಂತಾಗ್ರದೊಳುರಮಸವಷ್ಟಂಭದಿಂದೊತ್ತೆ . . . ಮಾಱೊತ್ತಿ ದೈತ್ಯೇಶನಾ ಭೂಧರಧುರ್ಯೋಭಂಗಳಂ ತೊಟ್ಟನೆ ಕೆಡಪುವ ನಾಶ್ಚರ್ಯಮಿಾ ದೈತ್ಯವೀರ್ಯಂ (ಜಗಲಿ. ೦೫-೯). [ಮಾಱು$_2$ + ಒತ್ತು$_1$]

**ಮಾಱೊರಸು** (ಕ್ರಿ). (ಒಂದಕ್ಕೆ ಒಂದು ತಾಗಿ) ಉಜ್ಜು, – ತಿಕ್ಕು : ಭೂಭುಜರೆಲ್ಲರೆಬ್ಬಿರಾನುದದೆ ರತ್ನಹಾರಮಕುಟಾಂಗದ ಕಂಕಣ ಕುಂಡಲಂಗಳೊಂದೋಂದನವುಂಕಿ ಮಾಱೊರಸಿ ಬೀಱೆ ಝಣಝಣಿತಪ್ರಣಾದಮಂ (ಜಗಲಿ. ೮-೦೦೯); ತುಱುತುಱುತಿಂಬ ಕಂದರಮನೊತ್ತರಗೊಂಡು ಮಹಾ ಮಹೀಜದೊಳ್ ತಱತಱನಾಗಿ ಮಾಱೊರಸುತುಂ ಮಲೆಯುತ್ತೊಲೆಯುತ್ತ . . . ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೦೦೦೨). [ಮಾಱು$_2$ + ಒರಸು$_1$]

**ಮಾಱೊಲೆ** (ಕ್ರಿ). ಒಂದು ಕಡೆಯಿಂದ ಮತ್ತೊಂದು ಕಡೆಗೆ ಬಾಗು,– ಒಲೆದಾಡು : ನಳಿನಪತ್ರೋದಕದವೊಲು ಮಾಱೊಲೆದುದಖಿಳ ಭವಾಂಡವು (ಕುಮಾ.ಭೀ. ೬-೩೦). [ಮಾಱು$_2$+ಒಲೆ$_1$]

**ಮಾಱೋಲೆ,** ಮಾರೋಲೆ (ನಾ). ಪ್ರತಿಯಾಗಿ ಬರೆಯುವ ಕಾಗದ ; ಜವಾಬು : ಅಟ್ಟಿದ ವಿಭುಗೆ ಸಂತಸಂ ಮಾಡಿ ಬರೆದ ಮಾಱೋಲೆಯುನೆಯ್ದಿಸಿದೊಡೆ (ಕಾಂತಿಕು. ೫-೩೫). **ಮಾರೋಲೆ :** ಅಣ್ಣನಿಂದ ಮಾರೋಲೆ . . . ನಿರೀಕ್ಷಿಸಿದ್ದ (ರಂಗವ. ೦೨೩) ; ಸಾಸಿರ ಕೆಲಸಗಳಿದ್ದರೂ ಒಂದಿನಿತು ಅವುಗಳನ್ನು ಬದಿಗಿರಿಸಿ ಮಾರೋಲೆ ಬರೆಯುವರೆಂದು (ತೆಂಮುಬಿ. ೩೨). [ಮಾಱು$_2$ + ಓಲೆ]

**ಮಾೞ** (ನಾ). ಮಾಳವ ದೇಶ : ಏೞುಂ ಮಾೞಮುಮಂ ಪಾೞೆಱೆ ತಗುಳ್ದಿಱಿದು ನರಗನುರಿಪಿದೊಡೆ ಕರಿಂಕೇೞಿಸಿದಾತನ ತೇಜದ ಬೀೞಲನಸು ಕರಿಪುಮಾದುವೊಗೆದುರಿವುರಿಗಳ್ (ಶಂಶಾ. ೦-೩೫). [P 'ಸಪ್ತಮಾಳವ' ಎಂಬುದು ಪ್ರಸಿದ್ಧವಾದ ಸಂಸ್ಕೃತ ಶಬ್ದಪುಂಜ. ಇದು ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ಇದನ್ನು ಕನ್ನಡದಲ್ಲಿ 'ಮಾಳವದ ಏಳು ಭಾಗಗಳು' ಎಂದು ಅರ್ಥ ಬರುವಂತೆ ಹೊಸ ನುಡಿಗಟ್ಟನ್ನಾಗಿ ಬಳಸಲಾಗಿದೆ. ಇದರಲ್ಲಿ 'ೞ'ವು ಉಪಯೋಗಾರ್ಹವೇ ಎಂಬುದು ವಿಚಾರಣೀಯ. 'ಏೞುಂ ಮಾಳವಮುಂ' ಎಂಬುದು ಸರಿಯಾದ ಪಾಠವಿರಬಹುದು]

**ಮಾಟಿಕ್ಕೆ, ಮಾಳ್ಕೆ** (ನಾ). ೧. ಬಗೆ ; ರೀತಿ ಪ್ರಕಾರ : ಪರರ ದೋಷಂಗಳುಮಂ ಪೆಱವುಮನೀ ಮಾಟಿಕ್ಕೆಯೊಳಂ ತೋಱುವುದು (ಶಬಶಾ. ೦-೬೭) ; ದಂಡರತ್ನಹತಿಯಿಂ ೧೮ ನೊಂದು ನರಳ್ವ ಮಾಟಿಕ್ಕೆಯಂತಾಯ್ತಾಗಳ್ (ಆದಿಪು. ೦೩-೩೭) ; ದಾನವೇಶ್ವರಕುಲಮಂ ಮುರಾರಿ ಭುಜವಿಕ್ರಮದಿ ತವೆ ಕೊಂದ ಮಾಟಿಕ್ಕೆಯಿಂ (ಶಂತಕಂ. ೨೩೪-೦೭) ; ಈ ಮಾಟಿಕ್ಕೆಯಿಂ ಕಡುದೂರಂ ನಡೆದು ಘೋರಾರಣ್ಯಮನೊಂದಂ ಪೊಕ್ಕರ್ (ರಾಮಾಶ್ವ. ೩೩-೦೭). **ಮಾಳ್ಕೆ :** ೧. ತಾರಶ್ಶೈಳಮಸುಮಾಪತಿ ರಾತ್ರಿಯು ನಿಂದಳಂಕರಿಸುವ ಮಾಳ್ಕೆಯಿಂದೆ (ಶಾಶಾ. IX-i, ೨೭೭-೪೨ ; 1160) ; ತಂದು ಬೆಟ್ಟದ ಮಾಳ್ಕೆಯಿಂ ಮಾಣಮೊಟ್ಟುತಿರೆ (ಪಂಬರ. ೫-೦೯); ಸಂಸೇವ್ಯ ಭುಕ್ತಿಯು ಕೈಕೊಂಡು ದಣಿದರು ಹಂಸ ಹಾಲುಂಡ ಮಾಳ್ಕೆಯೊಳು (ಭರತ. ೩-೯೯) ; ಕೊಳಂ ಜುಮ್ಮೆಂದು ಪುಳಕಿಸುವ ಮಾಳ್ಕೆ ಕಂಪಿಸಿದತ್ತು ತಂಬೆಲರ ಚುಂಬನಕ್ರೀಡೆಯಿಂದೆ (ಚಕ್ರಾಂಗ. ೩೪-೯೦೭). ೨. ನಡೆವಳಿ ; ಆಚರಣೆ : ಆ ನೃಪಾಲಕಂ ತುರಗಮೇಧಾಧ್ವರದ ಮಾಳ್ಕೆಗೆಳಸಿ (ಕೃಬಿಶಾ. ೫-೨೪) ; ನಿನ್ನ ಜಾಣತನ ಬರಿಯ ಮಾತಿನದಾಗಲಿ ಮಾಳ್ಕೆಯದಲ್ಲ (ಶಾರದ. ೦೦೩). ೩. ಕೆಲಸ ; ಕಾರ್ಯ : ತೊಳೆಯುವುದು, ಅರೆಯುವುದು, ತಿಂಡಿಗಳನ್ನು ಬೇಯಿಸುವುದು, ಇತ್ಯಾದಿ ಮಾಳ್ಕೆಗಳನ್ನು ಮಂಜಮ್ಮನ ಕೈಗಳೇ ಎಸಗುತಲಿವೆ (ಕೊಡಗ. ೦೯) ; ಇತರ ಎಲ್ಲ ತರದ ನಿಂದ್ಯ ಮಾಳ್ಕೆಗಳನ್ನೂ ಅವರು ಎಸಗಿದ್ದರು (ಧೂಮಮ. ೦೬).

[<ಮಾಡು$_1$ + —ಕೆ]

**ಮಾಟ್ಗಟ್ಟೆ** (ನಾ). ರಚಿಸಿದ ಕಟ್ಟೆ ; ಕಟ್ಟಿದ ದಿಂಡು : ಮಾಟ್ಗಟ್ಟೆಗಳ ತಡಿಯೊಳ್ ಸೀಳ್ಗಾಯ್ಗಳ್ ಬೀಗಿ ಬೆಳೆದು ಕಂಬಿತ್ತುಗಳಿಂ ಪೊಱಟ್ಗಿ ವರ್ದಿರೆ (ಕಶಾ ಪು. ೦೯೩ ವ್ಯಾಖ್ಯಾ). [<ಮಾಡು$_1$ + ಕಟ್ಟೆ$_1$]

**ಮಾಟ್ಟೆ** 'ಮಾಡು$_1$' ಪರಾ.

**ಮಿಂಚಿಕ್ಕು** (ಕ್ರಿ). ೧. ಹೊಳಪನ್ನುಂಟುಮಾಡು : ಪ್ರಕಾಶಗೊಳಿಸು : ಗುಡಿಸಿ ಮಿಂಚಿಕ್ಕಲು ಬೀದಿಯುದ್ದವು ಪೋಪರಡಿಗಳ ಜುಮ್ಮುದಟ್ಟಿಸುತ (ಭರತ. ೨೦-೦೯). ೨. ಪ್ರಕಾಶಿಸು ; ಹೊಳೆ : ಬೆಳ್ಳುಗುರ್ಗಳಲತಗೆಯೂಡಿ ಮಿಂಚಿಕ್ಕೆ ಬಿಲ್ಲಿಯುಂಗುರವು ಕಣ್ಗೆಸೆಯೆ ಸಲ್ಲಲಿತಾಂಗಿಯು ಕೆಂಬಜ್ಜೆ ಮೆಱದುವು ಚೆಲ್ವುವಂತ್ರನುರಾಗರಸವ (ಭರತ. ೪೦-೬೨).

[ ಮಿಂಚು$_2$ + ಇಕ್ಕು ]

**ಮಿಂಚಿಡು** (ಕ್ರಿ). = ಮಿಂಚಿಕ್ಕು ೨ : ಪ್ರಸಿದ್ಧದಿ ಮೆರೆಯುದಿಹುದೆ ಮಿಂಚಿಟ್ಟ ಮಾಣಿಕ್ಯದಂತೆ (ಪಪವೋ. ೩೪ ೪೭). [ ಮಿಂಚು$_2$ + ಇಡು$_1$ ]

**ಮಿಂಚಿಸು** (ಕ್ರಿ). ೧. ಹೊಳಪು ಬರುವಂತೆ ಮಾಡು ; ಪ್ರಕಾಶಿಸುವಂತೆ ಮಾಡು : (ಕ). ೨. ಹೊರಗೆಡಹು : ಹೊರಸೂಸು : ತದೇಕ ಚಿತ್ತನಾಗಿ ನನ್ನ ವಾಚನವನ್ನು ಕೇಳುತ್ತ ಕುಳಿತ ವಿಶ್ವಾಸ ತಟ್ಟನೇ ತನ್ನ ಮಾತು ಮಿಂಚಿಸಿದ (ದೀಶಹ. II, ೯). [ ಮಿಂಚು$_2$ + — ಇಸು$_3$ ]

**ಮಿಂಚು$_1$** (ಕ್ರಿ). ೧. ಹೊಳೆ ; ಪ್ರಕಾಶಿಸು ; ಥಳಥಳಿಸು : ಮಿಂಚು ಪೊಳ್ದೊಡೆ ಮಡಂ ಸುರಿವಾ ಬೆಮರರ್ಬಿ . . . ಮನ್ಮಥಾನಳಶಿಖಿ ಬೇಗೆಯಾಗೆ ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ ೬೦೨ ಕೂದ್ರಕ) ; ನಿರುಪಮದೇಹದೀಪ್ತಿಗಳೊಳೆಕ್ಕೆಯಿನೆಯ್ದೆ ಪಳಂಚಿ ಮಿಂಚುವಾಭರಣದ ಮಿಂಚು . . . ಚೆಲ್ವಸೆಯೆ ಕಣ್ಗೆಸೆದತ್ತು (ಆದಿಪು. ೨-೫) ; ಕಾಯ ಕರ್ರನೆ ಕಂದಿದರೇನಯ್ಯ ಕಾಯ ಮಿರ್ರನೆ ಮಿಂಚಿದರೇನಯ್ಯ (ಮಹಾದೇ. ಬ. ೯೯-೦೦೭). ೨. ಆಕಾಶದಲ್ಲಿ ಮೋಡಗಳ ಘರ್ಷಣೆಯಿಂದ ಬೆಳಕು ಕಾಣಿಸಿಕೊಳ್ಳು . — ವಿದ್ಯುತ್ತು ಉಂಟಾಗು : ತಳಕ್ಕನೆ ಮಿಂಚಲೊಡನಾ ನಳಿನಲೋಚನೆ ಕಾಣುತುಂ (ಬಸಪು. ೪೨-೩೦) ; ವಿದ್ಯುದ್ವಿವು ಮುಗಿಲ್ಗಳೆಡೆಸಗಳೊಳ್ತರದೊಳಿದ್ದುವು ೧೮ಗಳಂತೆ ಮಿಂಚಿಮುವು ದಿಗ್ಗಜಗಳುದ್ದಂಡದಿಂದೆ ಪರ್ಜನ್ಯನಂ ಸೆಣಸಿ ನೋಡುವಚಲಾಪಾಂಗದಂತೆ (ಕೃಬಿಶಾ. ೧೭-೨).

೩. ಆಪ್ಯಾಯಮಾನವಾಗಿರು ; ಆಕರ್ಷಕವಾಗಿ ಕಾಣು : ಕರುಳ ಕತ್ತರಿ ಸಂಚರ ಮಾರಿ ತುತ್ತು ಮಿಂಚಿದೊಡನುಂಡು ಮತ್ತೆ ತೊಡೆ ಮಿಂಚಿದೊಡಾ ಖಳನಿಂತು ಮಾಡಿದಂ (ಅಪಂಪು. ೦೦-೪೪). ೪. ಸ್ಫುರಿಸು : ತೋಱು : ವಿಶ್ವಾಸ . . . ವಿರಾಗದ ಭಸ್ಮಭಸಿತದೇಹಿಯಾಗಿ ಪರಪರ ಅಂಡಲೆಯುವ ಕಲ್ಪನೆ ಮಿಂಚಿತು (ದೀಶಹ. II, ೦೫೯). ೫. ಮೂಡು ; ತೋರು ; ಕಾಣಿಸಿಕೊಳ್ಳು : ಪಂಚಿಕೆ ಮಿಂಚಿದುದಾ ಶ್ಮಶಾನದೊಳ್ (ಕಾವ್ಯಾವ. ೫೭) ; ಚಿಂದಳಿರ್ವಿಂಚಿದ ಬನಂ ಬನಗಳಂ ಬಳಸದೂರೂರ್ಗಳಿಲ್ಲದೆಡೆಯಿಲ್ಲಿಳೆಯೊಳು (ಕೃಬಿಶಾ. ೩-೩) : ಮಿಂಚುವುವು ಚಿತ್ರರಸಭಿತ್ತಿಯುಲಿ ಹಸ್ತಿಪುರಿ ಮೇಣಿಂದ್ರಪ್ರಸ್ಥಾದಿ ನಗರಗಳ್ (ಚಕ್ರಾಂಗ. ೪೨-೦೦೫೦). ೬. ಅಭಿವ್ಯಕ್ತಗೊಳಿಸು : ಸೂಸು : ಅಲ್ಲೇನು ಪಂದರದ ಮಣ್ಣೆ ತರುವಲಿಯಾಗಿ ನಕ್ಕೆಗಳ ಮಿಂಚುತಿದೆ (ಕಾಲೂರ. ೩೮-೪೪). ೭. (ವಿದ್ಯುತ್ತಿನಷ್ಟು) ವೇಗವಾಗಿ ಚಲಿಸು ; ಧಾವಿಸು : ತೇಜಿಗಳನೇರ್ದು . . . ಮಿಂಚಿದರಯೋಧ್ಯಾಭಿಮುಖವಾಗಿ ಭರತನುಂ ಶತ್ರುಘ್ನನುಂ (ಶ್ರೀರಾಮಾ. ೦೦೫-೦೩೩). ೮. ಮೇಲಾಗು ; ಉತ್ಕೃಷ್ಟವಾಗು ; ಅತಿಶಯಿಸು : ಅವರುಗಳೆಲ್ಲರಿಗಿಂತಲೂ ಭೀಮಸೇನನು ದೇಹಬಲದಲ್ಲಿ ಮಿಂಚಿದ್ದನು (ವ್ಯಾಸಭಿ. ೪೫). ೯. ದಾಟು ; ಮೀರು : ಸಕ್ಷವಿರಂ, ವೃದ್ಧತ್ವಂ —೨, ೫೦ ವರುಷಗಳಿಗೆ ಮಿಂಚಿದ ವಯಸ್ಸು (ಸಿದ್ಧಾಂತಿ. ೦೭೯). ೧೦. ಹೆಚ್ಚಾಗು ; ಅಧಿಕವಾಗು : ನಿಮ್ಮಂತಹ ದೊಡ್ಡವರ ಸಡತೆಯೆಂಬುದು ಪ್ರೀತಿಯಾಗಿದ್ದರೂ ಬೇಡಿಕೊಂಡುದನು ಮೀರಲರಿಯದ ದಾಕ್ಷಿಣ್ಯ ಮಿಂಚಿ ಇರುವುದು (ವಚಶಾ. ೬೬-೫). ೧೧. (ಕಾಲದ ಅವಧಿ, ಕೆಲಸ ಇತ್ಯಾದಿ) ಕೊನೆಗಾಣು : ಮುಗಿ : ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು ? (ಗಾದೆ). [ದೇ. ತಮಿ. ಮಲ. ಮಿನ್ನು : ತುಳು. ಮಿಂಚು, ಮಿಂಜು, ಮೆಂಚು; ತೆಲು. ಮಿಂಚು; ಕೋತ. ಮಿಂಚ್ : ತೊದ. ಮಿಚ್]

**ಮಿಂಚು$_2$** (ನಾ). ೧. ಹೊಳಪು ; ಕಾಂತಿ ; ಪ್ರಕಾಶ : "ತೊಳಗು, ಬೆಳಗು . . . ಮಿಂಚು, ಡಾಳಂ, ಪೊಗರ್, ತೊಳಪಂ, ಮಸೆ — ಈ ೧೪ ಕಾಂತಿ" (ಕಶಸಾ. ೩೫-೨೦೨); ನಿರುಪಮದೇಹದೀಪ್ತಿಗಳೊಳೆಕ್ಕೆಯಿನೆಯ್ದೆ ಪಳಂಚಿ ಮಿಂಚುವಾಭರಣದ ಮಿಂಚು . . . ಚೆಲ್ವಸೆಯೆ (ಆದಿಪು. ೨-೫); ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ ಸುಲಿಪಲ್ಲ ಮಿಂಚಿನಿಂ . . . ಕಣ್ಗೊಳಿಸಿದಳಾಕೆ ಪಾಲ್ಗಡಲ ಪರ್ದೆರೆಯೊಳ್ ಸಿರಿ ನಿಂದಳೆಂಬಿನಂ (ಕಬ್ಬಿಗ. ೭೯) : ಕಂಗಳಿನ ಮಿಂಚಿನ ಹಳುಕಿನೆಡೆ ಸಡೆಗೆಟ್ಟು ನಿಂದರು ಚಿತ್ರವಿಷ್ಟಲರು (ಕುವ್ಯಾವಿ. ೧-೨೫). ೨. ಆಕಾಶದಲ್ಲಿ ಮೋಡಗಳ ಘರ್ಷಣೆಯಿಂದ ಉಂಟಾಗುವ ಬೆಳಕು ; ವಿದ್ಯುತ್ತು : "ಶಂಪಾ, ಚಪಲಾ . . . ಐರಾವತೀ — ಈ ೧೧ ಮಿಂಚು" (ಹಲಾಯು. ೦೦-೬೦): ಪೊಳೆವ ಮಿಂಚುಗಳುಂ ಕರಮುಚ್ಚವಪ್ಪ ಬೆಟ್ಟುಗಳ ತಟಂಗಳಂ ಸುರಿವ ನಿರ್ಝರಮುಂ ಪೊಸಕಾರೊಳಂತು ಬೆಳ್ಗೆ ಪಥಿಕಾಂಗನಾಜನಮನಂಜಿಸುವಂತಿರೆ ತೋಱಿ ಸುತ್ತಲುಂ (ಶಬಶಾ. ೦-೧೨೪) : ಸಿಡಿಲಿಂ ಮಿಂಚಿಂ ಮೊಟಗಿಂ ಪಡೆಗುಳ್ಕಂ ಪಡೆವಹೀಂದ್ರರೆರ್ದೆಗಿಡುವಿನೆಗಂ ಸಿಡಿಲಂ ಮಿಂಚಂ ಮೊಟಗುಮನೊಡನೆ ತೆರಳ್ಚಿದುವು ಜಯನ ಶರನಿಕರಂಗಳ್ (ಆದಿಪು. ೦೩-೬೨); ಎರಗಿದನು ಸಿಡಿಲಾಗಿ ಕಂಗಳೊಳಿಣುಕಿದನು ಮಿಂಚಾಗಿ (ಕುವ್ಯಾದ್ರೋ. ೦೭-೦೦). ೩. ವಿದ್ಯುತ್ತಿನಿಂದುಂಟಾಗುವ ಶಕ್ತಿ : ವಿದ್ಯುಚ್ಛಕ್ತಿ : 'ಮಿಂಚುದೀವಿಗೆ' ಪರಾ. ೪. ಮೆರುಗು : ಬತ್ತಿರ್ದ ವಕ್ತ್ರಾಂಬುರುಹಂ ಮಿಂಚಾಗಲಿರ್ಪಂ ತೊಡೆದು . . . ಐದಿದಳ್ ವೃದ್ಧೆ (ರಜಕು. ೮-೦೪೭) : ಒಂದಿನಿಸು ತಪ್ಪಿಲ್ಲದೆಸೆವ ಸಂಭಾರಗಳನೊಂದಿಸಿಯೆ ಕಾಸಿದ ಕೊಣಬಿನಲ್ಲಿ ಮಿಂಚೊಂದುವಂದದಿಂ ಬೆಣ್ಣೆಯುಂ ಹಾಕಿ ಪೊಗ್ಗರಿಸಿ ಕೆಂಡ[ದಿಂ] ಧೂಪವನಿಡುವುದು (ಸೂಶಾ. ೬-೮) ; ಕಣ್ಣಿವೆ ಬಿಳುಪೇಱಿ ಕಪ್ಪ ಹತ್ತಿಸಿ ಮುಖಕೆಣ್ಣೆಯ ಮಿಂಚುಗಳಿಕ್ಕಿ . . . ಮುದಿಪಣ್ಣಾಂಗನೆಯುರೆ ಒಪ್ಪಿದರು

(ಶಂಸಪ. ೬-೦೯೨); ಪಶುಗಳ ಹೊಸ ಮೈ, ಮಿಂಚು ತುಂಬ ಪಶ್ಚಾವುದು (ಶಶ್ನಜಾ. ೦೪೦). ೫. ವಿದ್ಯುತ್ತಿನಷ್ಟು ಅತ್ಯಲ್ಪ ಕಾಲ; ಕ್ಷಣ: ಒಂದು ಮಿಂಚಿನಾಗ ಹತ್ತ ಇಚಾರ ಗಿರಕೀ ಹೊಡೀತಾವ (ನಾಶಂ. ೩೨). ೬. ಕ್ಷಣಿಕವಾದುದು; ಅತ್ಯಲ್ಪಕಾಲವಿರುವಂಥದು: ಒಂದು ಕಂಚಾಯಿತು ಒಂದು ಮಿಂಚಾಯಿತು ಮುಂದೆ ಕೂತಿಯಾ ಮುಂದಿಗೂಟ (ಗಾದೆ). ೭. ಆಧಿಕ್ಯ; ಹೆಚ್ಚಳ: ಇವಕಿನ್ನು ಮಿಂಚಾಗಿ ಬೇನು ಕಷ್ಟವು ಬರಲು ಮದನಜನಕನ ಧ್ಯಾನ ಮರೆಯದಿರು ನೀನು (ಹುಪಶ. ೬). ೮. ಶ್ರೇಷ್ಠತೆ; ಹಿರಿಮೆ: 'ಮಿಂಚುಕವಿ' ಪರಾ. ೯. (ಮುತ್ತೈದೆಯರು) ಕಾಲಿನ ಎರಡನೆಯ ಬೆರಳಿನಲ್ಲಿ ಧರಿಸುವ ಉಂಗುರ: ಪಾದಾಂಗುಳಿಗಳಿಗೆ ಬಿಸಜಾಕ್ಷಿಯೊರ್ವಳು ನಗುತ ಸಂತೋಷದೆ ಮಿಸುನಿಯ ಮಿಂಚನಿಕ್ಕಿದಳು (ಶಂಸಪ. ೨೪-೭೦); ಸುಮಂಗಲಿಯರು . . . ಮಿಂಚು ಪಿಲ್ಲಿ . . . ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಮಂ. ೩೬); ಮಿಂಚು ಕಡಗ ತಾಲಿ ಇಲ್ಲದೆ ಮಾದುವೆಯೆ? (ಗಾದೆ).

ಮಿಂಚಿನ ಹುಳು = ಬೆಳಕನ್ನು ಬೀರುವ ಒಂದು ಬಗೆಯ ಕೀಟ; ಮಿಣುಕುಹುಳು: ಅಡವಿಯ ಮುಳ್ಳಲಿ ಮಿಂಚಿನ ಹುಳುಗಳು ಪಂಜನು ಹಿಡಿಯುವುವು (ಶ್ರೀಗೀತ. ೪೯-೦೩); ಒಂದೊಂದು ಸ್ಥಳದಲ್ಲಿ ಮಿಂಚಿನ ಹುಳುಗಳ ಮಾಲೆಗಳಿಂದ ತುಂಬಿದ ವೃಕ್ಷಗಳು ಸ್ಪಷ್ಟವಾಗಿ ದೃಷ್ಟಿ ಗೋಚರ ವಾಗುತ್ತಿದ್ದಿತು (ಕಶಾಕಂ.೨೬). [ < ಮಿಂಚು$_1$. /ತಮಿ. ಮಲ. ಮಿಞ್ಚು; ತುಳು. ಮಿಂಚಿ, ಮೆಂಚಿ; ತೆಲು. ಮಿಂಚು ]

**ಮಿಂಚುಂಬುಳು** 'ಮಿಂಚುಂಬುಟು' ನೋ.

**ಮಿಂಚುಂಬುಟು**, ಮಿಂಚುಂಬುಳು, ಮಿಂಚುಬುಳು, ಮಿಂಚುಬುಟು, ಮಿಂಚುಹುಳ, ಮಿಂಚುಹುಳು (ನಾ). ಬೆಳಕನ್ನು ಬೀರುವ ಒಂದು ಬಗೆಯ ಹಾರುವ ಕೀಟ; ಮಿಣುಕುಹುಳು; ಖದ್ಯೋತ: ಶಶಭೃತ್ಕಾಂತಿಗೆ ಮಿಂಚುಂಬುಟು ಸಮನೆಂತಕ್ಕುಮೊ ದೊರೆಗಮೊರೆಗಮೆಣಗಂ ತೊಣಗಂ (ಶಾಂತಿಪು. ೦೨-೬೭); ಮಿಂಚುಂಬುಟುವಂ ಕಂಡುಮಿದು ಕೆಂಡಮೆಂದು ಬಗೆದದಱ ಮೇಲೆ ಪುಲ್ಲಂ ಪುಳ್ಳಿಯುಮನಿಕ್ಕಿ ಮೊಕ್ಕಳ ಮೂದುವುದಂ (ಶಂತಶಾ. ೨೪೩-೬); ಘಟೋಲನೆ ಪಿಡಿದಂ ಮಿಂಚುಂಬುಟುವಂ ಪಿಡಿವಂತೆ ವಜ್ರಮಂ ದನುಜಹರಂ (ಜಗಪ. ೦೩-೦೦೭). **ಮಿಂಚುಂಬುಳು**: ಮಿಣುಕಿದ ಕಿಡಿಯಿಪ್ಪನಿ ನೋಡ! ಕಾದಿರುಳಿನ ಮಿಂಚುಂಬುಳುವಂತೆ (ಅಶಿಕೀ. ೩೩-೭). **ಮಿಂಚುಬುಳು**: ಇನನಿರಲು ಮಿಂಚುಬುಳುವನು ಅಬಿಸುವನ ತೆಜದಿ (ಪಾಗೀತ. ಪೇ. ೨೬೦-೦೭); ಮಿಂಚುಬುಳುವಿನ ಕಿರಣವೆತ್ತಲು ಹೊಳೆಹಿಡೆತ್ತಲು ಕೋಟಿಸೂರಿಯರ (ಶುಮ್ಮಾಶೀ. ೩-೭೦). **ಮಿಂಚುಬುಟು**: "ಮಿಂಚುಬುಟುವಿನವು ಖದ್ಯೋತ ವೃಕ್ಕು" (ಶಂಗರಾ. ೩೨-೦೦); ಸರಿಯೇ ಸೂರ್ಯಗೆ ಕೋಟಿ ಮಿಂಚುಬುಟುಗಳ್ (ಸೋಮೇಶ. ೧೦). **ಮಿಂಚುಹುಳ**: ಪಂಕಿಸಿತಿಂತುಡು ಸಂಕುಳ ಹೊಂಚುವ ಮಿಂಚುಹುಳಂಗಳ ಬೇಸಗೆ ಕೊನೆವರಿಯ (ಗೀಪಂ. ೯೩-೬). **ಮಿಂಚುಹುಳು**: ಮುಂಗಾರಿನಿರುಳಲ್ಲಿ ಮಿಂಚುಹುಳು ತಂದು ಸಿಂಗರಿಸಿದುದೆ ಕೊಡುವುದವೃತಸೇಚನವಾ (ಕಂತಿ. ೨೩-೪); ತಿಳಿವು ಬೆಳಕನು ಕೆದರಿ ಮಿನುಕುವ ಮಿಂಚುಹುಳುವೆಂದೆಣಿಸಲೋ! (ಜಂಗೀತ. ೦೩-೩). [ ಮಿಂಚು$_2$ + ಪುಟು ]

**ಮಿಂಚುಕವಿ** (ನಾ). ಶ್ರೇಷ್ಠನಾದ ಕವಿ; ಉತ್ತಮ ಕವಿ: ಮಿಂಚು ಕವಿಗಳ ಪಲವು ರಸಗಬ್ಬವನು ಗಮಕದಲಿ ಉಂಚದಲಿ ಮೆಱೆದೋದಿ (ಸಾಕ್ಷ್ಯಾ. ೩೩-೨೯). [ ಮಿಂಚು$_2$ + ಕವಿ$_1$ ]

**ಮಿಂಚುಗಣ್**, ಮಿಂಚುಗಣ್ಣು (ನಾ). ಹೊಳಪಿನಿಂದ ಕೂಡಿರುವ ಕಣ್ಣು: ಮಿಂಚುಗಣ್ಣುಗಿದು ಮಾತುಡುಗಿ ತೊಳಲಿದಾಗ ಮುಂಚದ ಮೇಲೊಱಗಿದರು (ಭರತ. ೦೦-೦೦೦). **ಮಿಂಚುಗಣ್ಣು**: ಅಚ್ಚಕಾಡಿಗೆಗಣ್ಣ ಮಿಗೆ ಮಿಂಚುಗಣ್ಣ . . . ಸಜ್ಜಿತಕಂಚುಳಿಧಾರೆಯರ್ ಬರುತಿರ್ದರುತ್ಸವದೊಳು (ಚಿಶಪು. ೩೭-೪೯); ಕನ್ನೈದಿಲುಂಗಳೆಸಳುಗಣ್ಣ ಕಾಂತಿಯಿಂದುಸ್ತವಹ ಮಿಂಚುಗಣ್ಣ . . . ಹೆಣ್ಣುಗಳ್ಕದಿತ್ತೊಗ್ಗಿನಲಿ (ಶಂಸಪ. ೯-೬೨); ಬಾತು ಕೊಂಡಿದ್ದ ಕಣ್ಣುರೆಪ್ಪೆಗಳ ಕೆಳಗೆ ಕಪ್ಪನೆಯ ಮಿಂಚುಗಣ್ಣುಗಳು ಮಿರುಗು ತ್ತಿದ್ದವು (ಕುಪರು. ೦೯೨). [ಮಿಂಚು$_2$ + ಕಣ್ ]

**ಮಿಂಚುಗಣ್ಣು** 'ಮಿಂಚುಗಣ್' ನೋ.

**ಮಿಂಚುಗಾಜಿಕೆ** (ನಾ). ಹೊರಗಿನ ಪ್ರದರ್ಶನ; ಬಾಹ್ಯಾಡಂಬರ: ಕಂಚಿನೊಳಗೆ ಶಿಲೆಯೊಳಗೆ ದೇವನ ನೋಡೆ ಮಿಂಚುಗಾಜಿಕೆಯ ಭಕ್ತಿಯದು (ಭರತ. ೦೭-೦೦೭). [ಮಿಂಚು$_2$ + – ಕಾಜಿ + – ಇಕೆ]

**ಮಿಂಚುಗಿಡಿ** (ನಾ). ವಿದ್ಯುತ್ತಿನ ಕಿಡಿ.—ಕಣ: ತಡೆದಿದ್ದ ಸಮ್ಮೊಲವು ಹರಿದು ಥಟ್ಟನೆ ಕೂಡಿ ಮಿಂಚುಗಿಡಿಯನು ಸುರಿಸಿದಂತಾಯಿತು (೭೬೪ಮ. ೨೯-೮). [ಮಿಂಚು$_2$ + ಕಿಡಿ]

**ಮಿಂಚುಗುರ್** (ನಾ). ಹೊಳಪುಳ್ಳ ಉಗುರು: ಒಸರ್ದಪುದಿವಲ್ತೆ ಚಂದನ ರಸಮೆನೆ ಮಿಂಚುಗುರ ಮಿಸುಪ ನುಣ್ಬೆಳಗೆನಸುಂ ಪಸರಿಸೆ ಮುರಲ್ದ ಕರಮೊಂದೆಸೆವುದು ಚಂದ್ರಾತಪಕ್ಕೆ ಮಱಿಯೊತ್ತಿದವೋಲ್ (ಕಾದಂಪೂ. ೯೦೭). [ಮಿಂಚು$_2$ + ಉಗುರ್$_1$]

**ಮಿಂಚುಗೂಡು** (ಕ್ರಿ). ಹೊಳಪಿನಿಂದ ಕೂಡು; ಕಾಂತಿಯುತವಾಗು: ಅವಳ . . . ಕಣ್ಣು ತೀಕ್ಷ್ಣ ಶಸ್ತ್ರದಂತೆ ಮಿಂಚುಗೂಡಿದ್ದವು (ಶಮಂತ. ೪೦೩). [ಮಿಂಚು$_2$ + ಕೂಡು$_1$]

**ಮಿಂಚುದಲೆ** (ನಾ). (ಲೋಹಿನಿಂದ ಕೂದಲಿಲ್ಲದೆ ಬೋಳಾಗಿದ್ದು) ಹೊಳೆಯುತ್ತಿರುವ ತಲೆ: ಮಿಂಚುದಲೆ ಬಿದ್ದ ಪೂರ್ಬಿನ . . . ಡೊಂಬುಗಳು . . . ನೆರೆಮದು (ಸೋಮಸುತ. ೪-೪೦); ಮಿಂಚುದಲೆಗಳ ಖಂಡಿವಲ್ಲಗಳ . . . ಜೈನರ ಹಿಂಡು ನೆರೆದು (ಬಸಪು. ೩೦-೩೪). [ಮಿಂಚು$_1$ + ತಲೆ$_1$]

**ಮಿಂಚುದೀವಿಗೆ** (ನಾ). ವಿದ್ಯುದ್ದೀಪ: ಹೊತ್ತು ಆದೊಡೆ ಸಲ್ಲಿ ನೀರೂ ಹೋಗಿಬಿಡುವುದು ಗಕ್ಕನೆ ಮುರ್ಮ ಕಣ್ಕಲು ಮಿಂಚುದೀವಿಗೆ ಆರಿಬಿಡುವುದು ಪಕ್ಕನೆ (ಹಾಡುಪಾ. ೩೦-೦೦). [ಮಿಂಚು$_2$ + ದೀವಿಗೆ]

**ಮಿಂಚುನೋಟ** (ನಾ). ಹೊಳಪುಗಣ್ಣಿನ ದೃಷ್ಟಿ: ಜೀವನದಲ್ಲಿ ಹಲವು ಸಾರಿ ವಾರೆನೋಟ, ಕುಡಿನೋಟ, ಮಿಂಚುನೋಟಗಳ ಅನುಭವವಿಲ್ಲದಿರುವ ವರು ಅತಿವಿರಳ (ಏಮ್ಮಕೃ. ೭). [ಮಿಂಚು$_2$ + ನೋಟ]

**ಮಿಂಚುಬಳ್ಳಿ** (ನಾ). ಒಂದು ಬಗೆಯ ಬಳ್ಳಿ; ಜ್ಯೋತಿಷ್ಮತಿ: "ಪಾರಾವತಾಂಘ್ರಿಃ, ಕಟಭೀ ಪಣ್ಯಾ, ಜ್ಯೋತಿಷ್ಮತೀ ಲತಾ — ೫ ಕಂಗೊಂಗೇಗಿಡ . . . ಜ್ಯೋತಿಷ್ಮತೀ" (ಸಿದ್ಧಾಂತಿ. ೦೪೭); ಮುಪ್ಪುರ ಗಳನ್ನು ಉರಿಸಲು ಹೊರಟ ಶಿವನೂ ಮಿಂಚುಬಳ್ಳಿಯ ಹೂಗಳನ್ನು ಧರಿಸಿದ್ದನಂತೆ! (ಶಾಸಗ. ೬೩). [ಮಿಂಚು$_2$ + ಬಳ್ಳಿ]

**ಮಿಂಚುಬುಳು** 'ಮಿಂಚುಂಬುಟು' ನೋ.

**ಮಿಂಚುಬುಟು** 'ಮಿಂಚುಂಬುಟು' ನೋ.

**ಮಿಂಚುರಿ** (ನಾ). ವಿದ್ಯುತ್ತಿನ ಉರಿ. — ಬೆಂಕಿ: ಪ್ರಮಿಥಿಯಸನ್ನು ಬೆಸೆದು ಬಂಧಿಸಿದ್ದ ರೌಕ್ಷಶಿಖರಾಗ್ರವೇ ಪೊಳಗುದನಿಗೆ ಮಿಂಚುರಿಯ ಪೊಯ್ಲಿಗೆ ಹೋಳಾಯಿತು (ಐನ್ಕಶ್ರ. XXIII. ೬೦೭೪). [ಮಿಂಚು$_2$ + ಉರಿ$_2$]

**ಮಿಂಚುವಡಿಗ** (ನಾ). ಥಳಥಳಿಸುವ ಪೀಕದಾನಿ: ಪೊಣ್ಮಂಚಿಯ ಮೇಲ್ಗಟ್ಟು ಗಿಂಡಿ ಮಿಂಚುವಡಿಗ ವೀಣೆ ಸಂಗಲಿಸಿಮುವು ಲಾವಂಚದ ಬೀಸಣಿಗೆಗಳು (ಭರತ. ೦೩-೨೭). [ಮಿಂಚು$_2$ + ಪಡಿಗ]

**ಮಿಂಚುವಡೆ** (ಕ್ರಿ). ಹೊಳಪನ್ನು ಹೊಂದು: ತನಿಪಣ್ಣ ಗೊಂಚಲಿಂ ಮಿಂಚುವಡೆದ ಪೇಲ್ಮರಸನರ್ದ ಕೋಪಗಂಗಳ ಬಳ್ಳಿವಾಲಮನೆಳನಾಗ

ರೆಂದು ಸೆಳೆದು ಕಡಿದೀಡಾಡಲವ್ವಳಿಸುವ ಮುದಿಮುಂಗುಲಿಗಳುಮಂ . . . ನೋಡುತ್ತುಂ ನಿಚ್ಚಪಯಣದಿಂ ಬರೆವರೆ (ಶಬ್ದಕಾ. ೨೩೪).

[ಮಿಂಚು$_2$ + ಪಡೆ$_1$]

**ಮಿಂಚುವೆಳಗು** (ನಾ). ೧. ವಿದ್ಯುತ್ತಿನ ಕಾಂತಿ, — ಪ್ರಕಾಶ : ಮಿಂಚುವೆಳಗಂಚಿರಪಾಯ್ತು ಶಿಖಂಡಿ ತಾಂಡವಕ್ಕಲಸಿದುದು . . . ಶರತ್ಪ್ರಥಮಪ್ರವೇಶದೊಳ್ (ಶಗಂ. ೪-೩೭). ೨. ಕ್ಷಣಿಕವಾದ ಬೆಳಕು ; ಚಂಚಲವಾದ ಪ್ರಕಾಶ : ಮಿಂಚುವೆಳಗಿನ ಬಳಕೆಯುಲಿ ಮಸ ಮುಂಚಿ ಪ್ಯೆಗೊಂಡಳಲುವಾತುಮಪಂಚೇರು ನೀವ್ ಪಶುಗಳೆಂದರೆ ಪೇದವೇಕೆ (ಕುವ್ಯಾಕ. ೬-೨೭). [ಮಿಂಚು$_2$ + ಬೆಳಗು$_2$]

**ಮಿಂಚುವೋಗು** (ಕ್ರಿ). ವಿದ್ಯುತ್ತಿನಷ್ಟು ಕ್ಷಣಿಕವಾಗಿ ಹೊಳೆ, — ಪ್ರಕಾಶಿಸು : ಇದೇಂ ಭ್ರಮೆಯೊ ಮಾನವರ್ಗಮುಮ . . . ಪೊದಟ್ಟು ಸಿರಿಯೆಂಬುದಿಂತೊಗೆದ ಮಿಂಚುವೋದಂಚಿಯೊಳ್ ಸದೃಕ್ಷಮೆನ ಲೊಲ್ಲರೀ ಭವದೊಳುಂಡೊಡಂ ಕಂಡೊಡಂ (ಅನಂಪು. ೯-೦೯).

[ಮಿಂಚು$_2$ + ಪೋಗು$_1$ (< ಪೋ$_1$)]

**ಮಿಂಚುಹುಳ** 'ಮಿಂಚುಂಬುಳು' ನೋ.

**ಮಿಂಚುಹುಳು** 'ಮಿಂಚುಂಬುಳು' ನೋ.

**ಮಿಂಚುಳ್ಳಿ** 'ಮಿಸ್ಸುಳ್ಳಿ' ನೋ.

**ಮಿಂಚೆಳೆ** (ನಾ). ಹೊಳೆಯುವ ರೇಷ್ಮೆಎಳೆಗಳಿಂದ ಕೂಡಿದ ಸೀರೆ : ಮುಂದುಕಿ ಎಳೆಯುವಳಾಗಿ ಮಾಸು ಮಿಂಚೆಳೆಯಾಗಿ ಸವೆದ ಮೈ ತುಂಬಿ . . . ನಸುನಕ್ಕಳಾ ತಾಯಿ (ಹೂಂಗಳು. ೨೦-೮).

[ಮಿಂಚು$_1$ + ಎಳೆ$_2$ (< ಎೞೆ$_3$)]

**ಮಿಂಚೋಲೆ** (ನಾ). ಪ್ರಕಾಶಮಾನವಾದ ಕಿವಿಯ ಆಭರಣ ; ಹೊಳೆಯುವ ಓಲೆ : ಮಿಱುಗುವ ಮಿಂಚೋಲೆ ಸುಲಿಪಲ್ಲು . . . ಎಸೆಯಲು ಮೆಱೆವರು (ಶಂರಾಶಾಂ. ೨೩-೬೯). [ಮಿಂಚು$_2$ + ಓಲೆ]

**ಮಿಂಜೊಡರ್** (ನಾ). ಕಾಂತಿಯಿಂದ ಕೂಡಿರುವ ದೀಪ : ಮಿನುಗಿದುವು ಮಿಂಜೊಡರ್ ಮನೆಮನೆಗೆ, ಮಿಂಚಿನಲರಿನ ಗೊಂಚಲೋಲ್ (ಶ್ರೀರಾಮಾ. ೪೩೬-೭೩). [ಮಿನ್ (< ಮಿಂಚು$_2$) + ಸೊಡರ್]

**ಮಿಂಟಿಗೆ** 'ಮೆಂಟಿಕೆ' ನೋ.

**ಮಿಂಟೆ$_1$** 'ಮಿಟ್ಟೆ' ನೋ.

**ಮಿಂಟೆ$_2$** (ನಾ). ಒಂದು ಬಗೆಯ ಸಸ್ಯ : ಸಮಸ್ತಜ್ವರಗಳಿಗೆ :— ಹಿಪ್ಪಲಿ . . . ಮಿಂಟೆ. ಕಕ್ಕೆ, ಚಿಟ್ಟೆಅವುಡಲ, ಹಿಕ್ಕಾಡಲ್ಲಿಕೆ ಇವುಗಳ ಬೇರುಗಳು ಪ್ರತ್ಯೇಕ ೫ ತೂಕದ ಲೆಪ್ಪದಲ್ಲಿ ಕೊಂಬುದು (ವೈದ್ಯಾ. ೧೪೩). [ ? ]

**ಮಿಂಟೆಯುಂಬು** 'ಮಿಟ್ಟೆಯುಂಬು' ನೋ.

**ಮಿಂಡ** (ನಾ). ೧. ವೀರ ; ಶೂರ ; ಪರಾಕ್ರಮಿ : ಕೋಟಿಕನಾಮ ಧೇಯುಶಿಲೆ ಮುಂದಿರೆ ಭೋಂಕನೆ ಕಂಡು ಮಿಂಡರುತ್ಪಾಟಿಪೆಮೆಂದು ಪೊಣ್ಪಿಸಿಳಶಕ್ತಿಯಿನೆತ್ತುತುಪಾಳ್ಪೆ ಪೊಯ್ಯೆ ನಿಃಪಾಟವರಾಗಿ ಪಿಂಗೆ (ವರ್ಧಪು. ೩-೪೩) ; ಅಟವಿಕದಳ ಹೊಯ್ಸು ಮಿಂಡರ ಮಿಾಟನೆತ್ತಿದರವರು ಕಾಪಿನ ಕೋಟಲೆಗೆ ನಾವೊಲ್ಲೆವೆಂದರು ಚಿತ್ರಸೇನಂಗೆ (ಕುವ್ಯಾಕ. ೧೬-೩೮) ; ಮಿಂಡ ದುಂಡಿಗಳರ್ಥಿಕಾಱರು . . . ಬಿಂಡೆಯ ಕಲಿಕೆಗಳ ತರಳರ ತಂಡ ಕೂಡಿತು (ಕೊರಾ. ೫-೫-೦೪). ೨. ಮಿಗಿಲಾದವನು ; ಶ್ರೇಷ್ಠನಾದವನು : ಕಲಿಯ ಗಂಡ ಕರ್ಪುದ ಮಿಂಡ ದುರ್ಮೋಹಜಾಲಾಂಧಕಾರಮಾರ್ತಾಂಡ (ಶಿಕ. ೮-೦) ; ಹೊಸ ಬಿರುದರ ಗಣ್ಡೋ ರಾಯರಾಹುತ್ತ ಮಿಣ್ಡಃ (ಎಕ. XII, ತುಮಕೂ. ೦-೬೫ ; 1571). ೩. ಹೆದರಿಕೆಯನ್ನುಂಟುಮಾಡುವವನು ; ಭಯಂಕರನಾದವನು : ಮೂರು ರಾಯರ ಗಂಡ ಬಾಡಿ ಕೇಳ್ವರ ಮಿಂಡ (ಕುಮಾರಾಗಂ. ೦೩೪). ೪. ಉಪಪತಿ ; ಜಾರ : "ಜಾರಃ, ಉಪಪತಿಃ—ಈ ೨ ಮಿಂಡನ ಪೆಸರ್" (ನಾಚಿರಾ. ೦೦೬) ; ನಿನ್ನ ಬೇಟದ ಮಿಂಡನಾವನವನಂ ಪೇಟಿಂದು ಬೆಸಗೊಳೆ (ಶಂಕತಂ. ೭೫-೦೩) : ಒಳಗಣ ಗಂಡನವ್ವಾ ಹೊಱಗಣ ಮಿಂಡನವ್ವಾ ಎರಡನೂ ನಡೆಸಲು [ಬಾರದವ್ವ] (ಮಹಾದೇ. ವ. ೪೬-೦೦೪) ; ಪರಾಂಗನೆಗೆ ಮನವೆಳಸಲೆಳಸುವರವರ ಹೆಂಡಿರಿಗೆಲ್ಲ ಮಿಂಡರು (ಕೊರಾ. ೩-೬-೭). ೫. ಸ್ವಸಾಮರ್ಥ್ಯದಿಂದ ವಶಪಡಿಸಲು ಆಗದ ವಸ್ತು, ವ್ಯಕ್ತಿ, ಪ್ರಾಣಿ ಮುಂತಾದುವು : ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ (ಗಾದೆ) : ಕತ್ತೆ ಚಿತ್ರಗಾರನ ಮಿಂಡ (ಗಾದೆ). (ಗು). ೬. ಏರುವ ; ಉಕ್ಕುವ : 'ಮಿಂಡಪ್ರಾಯ' ಪರಾ. ೭. ಹರೆಯದ ; ಪ್ರಾಯದ : 'ಮಿಂಡಗೊರವ' ಪರಾ.

ಮಿಂಡಮಕ್ಕಳು = ಶೂರರೂ ಸಮರ್ಥರೂ ಆದ ಸ್ವಚ್ಛಂದ ತರುಣರು : ಅಂತಾ ತುಱುಪಟ್ಟಿಯ ಕಿಱುಮಕ್ಕಳಂ ಬಲ್ಮಕ್ಕಳಂ ಮಿಂಡ ಮಕ್ಕಳುಮನೊಂದೆ ಕೋಲೊಳ್ ತಂದು ಪೊಯ್ಯಲಿಡಿಸುವ ಕೃಷ್ಣನಂ . . . ಕರೆಯುತ್ತುಂ (ಅರ್ಜನೀ. ೭-೬೫ ವ).

[ದೇ.॥ ತಮಿ. ಮಿಣ್ಡು ; ತುಳು. ಮಿಂಡೆ : ತೆಲು. ಮಿಂಡಡು. ಮಿಂಡಡು : ಕೊಡ. ಮುಂಡೇ ; ಕೋತ. ಮಿಂಡ್, ಮುಂಡ್]

**ಮಿಂಡಕ್ಕರು** (ನಾ). ಪ್ರಾಯದ ಮೋಹ : ಸೊಕ್ಕುನೀರೆಯುರೆಳೆವ ಮೇಲುದಂ ಸೆಳೆಯುದಡಿಯಿಕ್ಕುವರ ಪಿಂದೆ ಪರ್ಯಂಕಮಂ ಪೊತ್ತು ಮಿಂಡಕ್ಕರಿಂ ಪಾರಿದರ್ಬಂದು (ಜಪಮು. ೫-೦೪).

[ಮಿಂಡು + ಅಕ್ಕರು (< ಅಟ್ಕಱ್$_2$)]

**ಮಿಂಡಗಾತಿ** (ನಾ). ಜಾರೆ; ಮಿಂಡಿ : ಈರ್ವರೂ ಮಿಂಡಗಾತಿಯ ಮೇಲೆ ಸಿಟ್ಟಾಗಿ, ಕೈ ಎತ್ತಿ — ಹಾಗೆಯೇ ಹಾಡುವರು (ರುದ್ರಿಮ. ೭).

[ಮಿಂಡ + — ಕಾತಿ]

**ಮಿಂಡಗಾರ** 'ಮಿಂಡಗಾಱ' ನೋ.

**ಮಿಂಡಗಾಱ**, **ಮಿಂಡಗಾರ** (ನಾ). ೧. ಜಾರ ; ವಿಟ : ಒಬ್ಬ ಸೂಳೆಯ ಬಾಗಿಲಲ್ಲಿ ಎಂಬತ್ತುನಾಲ್ಕುಲಕ್ಷ ಮಿಂಡಗಾಱರು (ಕಲ್ಯಾಶಾಂ. ೪೦). **ಮಿಂಡಗಾರ** : ೧. ಸೂಳೆ ಸುಲಿದುಕೊಂಡು ತಿಂದಳು, ಮಿಂಡಗಾರ ಕಿರಿದುಕೊಂಡು ತಿಂದ (ಗಾದೆ). ೨. ಸ್ವಾಧೀನಪಡಿಸಿಕೊಳ್ಳುವವನು ; ವಶಪಡಿಸಿಕೊಳ್ಳುವವನು : ನೀವು ಫಳಸಿದ ವೃಕ್ಷಕ್ಕೆ ಈಗ ಮಿಂಡಗಾರರು ಬರುತ್ತಾರೆ (ಮುದ್ರಾಮಂ. ೦೫೦). [ಮಿಂಡ + — ಕಾಱ]

**ಮಿಂಡಗಾಱಿಕೆ** (ನಾ). ವ್ಯಭಿಚಾರ ; ಹಾದರ : ಮಿಂಡಗಾಱಿಕೆಯಲ್ಲಿ ಗಳಿಸಿದ ಸೌಖ್ಯವನುಂಡಲ್ಲದೆ ತೀರದು (ವೋಚಕ. ೩೫-೩೮).

[ಮಿಂಡಗಾಱ + — ಇಕೆ]

**ಮಿಂಡಗುದ್ದಲಿ** (ನಾ). ಒಂದು ವಂಶದ ಹೆಸರು : ತೊಗರ ಮಾಚಿ ಸೆಟ್ಟಿಯುಂ ಮಿಂಡಗುದ್ದಲಿ ನಾಮಿಸೆಟ್ಟಿಯುಂ ಸಮಸ್ತಮುಮ್ಮುರಿದಂಡ ಗಳುಮಿಂತು ಪಟ್ಟಣಮಶೇಷದ ಸಂನ್ನಿದಾನದಲು . . . ದೇವರ್ಗ್ಗೆ ಕೊಟ್ಟ ಕಯಿ ಕಂಮ್ಮವಯ್ತುತ್ತು (ಎಕ. VII, ಶಿಕಾ. ೦೦೭-೩೬ : 1098) ; ಹುಲಿ ಗೆಱೆಯ ನಗರ ಮುಮ್ಮುರಿದಂಡ ಮಿಂಡಗುದ್ದಲಿ ಷಮಯ ಮಂತ್ರಿ ಸಾಮಂತ ಪಟ್ಟಸ್ವಾಮಿಗಳು . . . ಆದಿಯಾದ ಹಲರು ಹದಿನೆಂಟು ಸಮಯಮದೆಯ್ದೆ (ಸೌಇಮಕ. ೫-೪೫). [ ? ]

**ಮಿಂಡಗೊರವ** (ನಾ). ಹರೆಯದ ಜಂಗಮ ; ಪ್ರಾಯದ ಜಂಗಮ : ಎಲೇ ಮಿಂಡಗೊರವ ಹೋಪರೆ ಕಂಡು (ಇಹರ. ದೇ. ೩೬-೬).

[ಮಿಂಡ + ಗೊರವ]

**ಮಿಂಡಜಂಗಮ** (ನಾ). = ಮಿಂಡಗೊರವ : ಮಿಂಡಜಂಗಮವಿಸರವಾ ಭರಣಾಂಬರಾಗರು . . . ತಾಂಬೂಲಾದಿಗಳನೊದಮಿಸಿಕೊಳುತ್ತಾನಂದದಿಂ (ಬಸಪು. ೦೦-೫೦); ಸಾಱೆ ಲಕ್ಕದ ಮೇಲೆ ತೊಂಬತ್ತಾಱುಸಾವಿರ ಮಿಂಡ ಜಂಗಮ ಮಿಾಱೆ ಬಾಲರು ವೃದ್ಧರೆಯ್ತಹುದೆಣಿಕೆಗರಿದೆನಿಸಿ (ಪ್ರಭುಲಿಂ. ೨೦-೩೦). [ಮಿಂಡ + ಜಂಗಮ$_1$]

**ಮಿಂಡತನ** (ನಾ). = ಮಿಂಡಗಾಜಿಕೆ : ಚಂಡಿಗೊಂಡೋರಂತೆ ಹೋಗದೆ ಭಂಡಿಸುವುದಿದು ಭಕ್ತಿನೀತಿಯೆ ಮಿಂಡತನಕಿದು ನೀತಿಯೇ (ಬಸವ. ४೦-೩४). [ಮಿಂಡ + — ತನ]

**ಮಿಂಡತಿ** (ನಾ). ಉಪಪತ್ನಿ : ಜಾರೆ : ಹೆಂಡತಿಯು ಪುಟ್ಟು ತಿರುಗೋದು ಹರಕು ಹರಕುಚಿಂದಿ ಮಿಂಡತಿಯು ಪುಟ್ಟು ಮೆರೆವುದು ಮಿಸಲಿಯು ಮೋಲ್ವಂದಿ (ಜಾನಪದ. ४೬-೯)

[ಮಿಂಡ — ತಿ$_1$ (< ಇತ್ತಿ), ತೆಲು. ಮಿಂಡತ]

**ಮಿಂಡಪೋದಿ** (ನಾ). ಒಂದು ವಂಶದ ಹೆಸರು : ಸ್ವಸ್ತಿ ಶ್ರೀಚೋಟ ಮಹಾರಾಜಜ್ಗೆ ಚಾತೆಯುಪರಿಶಿನ × × ಕಣ್ಣ ಕೊಟ್ಟ ಜಾವಾಡಿಯ ತಳಾಜು ಮಿಣ್ಣಪೋದಿಯ ಪಳ್ಳಿಯ ತಲೆದ್ × × ಗಾರವುಂ × × (ಎಕ. X, ಗೌರಿಬಿ. ೩೩-೯ ; ಶಾ. ೫೦೦). [ ? ]

**ಮಿಂಡಪ್ರಾಯ** (ನಾ). ತುಂಬುಹರೆಯ : ನವತಾರುಣ್ಯ : ಬೀಯ ದೆಯ್ವಸದಿಂತು ಮಿಂಡಪ್ರಾಯದಾತಂಗೆಂದು ಭಕ್ತಸಹಾಯಿ ಮುದ್ದಾಡಿ ಪಡಿಯನಿತ್ತನು ಮೊನೆಯಧರನೆನಗೆ (ಬಸವ. ೨೩-೦೦).

[ಮಿಂಡ + ಪ್ರಾಯ]

**ಮಿಂಡಭಕ್ತ** (ನಾ). = ಮಿಂಡಗೊರವ : ಈಯನೇ ಇವ್ಮಡಿಸಿ ಧನವನಜೇಯುಮತಿಯೊಳು ಮಿಂಡಭಕ್ತಂಗೀಯುವನಿಯಚೀಯರ್ ಮೊನೆಯ ಧರನೆಂಬ ಗಣನಾಥ (ಬಸವ. ೦೦-೩೭) [ಮಿಂಡ + ಭಕ್ತ$_1$]

**ಮಿಂಡವಂದಿ** (ನಾ). ಪ್ರಾಯದ ಹಂದಿ : ಕೊಬ್ಬಿದ ಹಂದಿ : ಮಿಂಡ ವಂದಿಯ ಲಾವಣಿಗೆಯ ಉಲಾಯುಲಾಲನೆಯ . . . ಖಡ್ಗದ ಹಿಂಡುಗಳ ತೋಜಿಸುವೆನೇಳು (ಶಬ್ದಾರ್ಥ. ೧೩-೧೬). [ಮಿಂಡ + ಪಂದಿ]

**ಮಿಂಡಹರೆಯ** (ನಾ). = ಮಿಂಡಪ್ರಾಯ : ದಾಸಿಮಯ್ಯನ ತೆಜದಿ ತಪನಿಧಿಗಾಸೆಮಾಡೆನು ಬೇಡೆನು ಗುಂಡಯ್ಯನವೊಲು ಮಿಂಡಹರೆಯ ವನು (ಬಸವ. ೯-೩೩) [ ಮಿಂಡ + ಹರೆಯ (< ಪರಯ) ]

**ಮಿಂಡಾಟಿಕೆ** (ನಾ). ವ್ಯಭಿಚಾರ , ಹಾದರ : ತರುಣಿ ಮಿಂಡಾಟಿಕೆಯೊಳಾರ್ಜಿಸಿದುರುಮಹಾವಿತ್ತದಲಿ ಜೀವಿಪ ಪುರುಷನಾಲೋಕನವ ಮಾಡಿದ ವರ್ಗೆ ಘನನರಕ (ಅಂಬರೀ. ४೭-೬೦). [ಮಿಂಡು ಆಟಿಕೆ]

**ಮಿಂಡಾಡು** (ಕ್ರಿ). ಹಾದರ ಮಾಡು : ವ್ಯಭಿಚಾರ ಮಾಡು : ಮಿಂಡಾಡಿ ಮಾಡಿ [ಪಾಠಾಂ. ಮಿಂಡಾಟಮಾಗಿ] ಮೆಚ್ಚಿದ ರಂಡೆಯರೊಳ್ಳಿರದು ವಿಕೃತಿಪೇಷದೆ ಜಗಮುಂ ಕಂಡಜ್ಞಾನಿಯೆನೆಂಬನ ಮುಂಡಿಂಗೊಳಗಾಗದಿಪ್ಪವಂ ಸತ್ಪುರುಷಂ (ಸವಚ. ೧४-೬೮). [ಮಿಂಡು + ಆಡು$_1$]

**ಮಿಂಡಿ$_1$** (ನಾ). ೧. ತುಂಬುಯೌವನವನ್ನು ಹೊಂದಿರುವವಳು : ನವಯುವತಿ : ಶೃಂಗಾರಸಾಗರೋಗಿಯೆಂದುಟೀದ ಮಿಂಡಿಯರಾವಗ ಮೊಲ್ಲ ನೋಡಲಾ ಚಾರುವಚೋವಿಲಾಸನಿಧಿ ರಂಜಿಸುವಂ (ಉದ್ಭಟ. ೦೨-೩೬) ; ದಂಡಿಯೊಳೀಗಳುಂ ಪ್ರಾಣಕಾಂತನಪ್ಪಿಕೊಂಡಿರಿ ತೊಲಗ ಬೇಡನುತೆ ಮಿಂಡಿಯರಿಗೆ ಬುದ್ಧಿಗಲಿಸುವಂತೆಲೆವಳ್ಳಿ ಮುಂಡಿಗೆಗಳನಪರಿದಾವು (ಮೋಹತ. ೭४. ३४) ; ಮಿಂಡಿಯರ್ ಬಂದಾಣೆಪೆದೆಯುನ ದಂಡಾಳ್ಗಳೆನೆ ಹಿಂದೆಟ್ಟಿಹ್ಲಿಗಲ್ಲಿಗೆ ಸಂಚರಿಸಿ ಮೆಲ್ಲಡಿಯೊದೆಯಿಂ ಚೆನ್ನಸುಗೆಯುಂ ತಳರ್ಚಿಯುಂ (ರಾಮಾಶ್ವ. ೦३२-२೬). ೨. ಉಪಪತ್ನಿ : ಜೆಲೆ ಏರ ತಂಚಪುಂಟಮಸರು ಮನೆಪೊಕ್ಕೊಡೆ ಪೊಕ್ಕನಿಜ್ಜೆಯಗ್ಗಲಿಸಿದ ಮಾತೆ ಪಕ್ಕದಲೆಯೊಳ್ ಪಿಸುತಂ ರತಿಯಿಲ್ಲ ಮಿಂಡಿಯೊಳ್ (ಸುಕುಮಾರಚ. ೮-३४९) ; ತಕ್ಕಯೊಡೆಯದ ಮಿಂಡಿಯುಪರತಿಯು ಸುಖಿಪ ತನು ಜಕ್ಕುಲಿಸಿ ಪೊಗಳ್ದ ಪಿಟನಂತೆ (ಕೃಷ್ಣ. ೦-೬-೮). (ಗು). ३. ವಿರುಪ ; ಉಕ್ಕುವ : 'ಮಿಂಡಿವರೆಯ' ಪರಾ.

[ಮಿಂಡ + —ಇ$_2$ / ತುಳು. ಮಿಂಡಿ]

**ಮಿಂಡಿ$_2$** 'ಮಿರಡಿ' ನೋ.

**ಮಿಂಡಿ$_3$** (ನಾ.) (?) : ಕೆಂಡಗಳ ತನಿಗಿಡಿಯನಗಲದಿ ಡೆಂಡೆಸಂತೆ ಕಣ್ಣಳಲಿ ಪೊಗರಿನ ಮಿಂಡಿ ಮಿಠಾಂಟೆಯ ಸರಳ ಶರಧಿಯೊಳದ್ದಿದನು ಹರಿಯಾ (ಅಂಬರೀ. ೦೭-३೭). [ ? ]

**ಮಿಂಡಿಗೆ** (ನಾ). ಗೊರಸಿನ ಹಿಂಭಾಗ : ಮಿಂಡಿಗೆಗಳಂ ಮಿಗೆ ಚುಂಬಿಪ ವಾಲಪೊಪ್ಪಿ ನಿಂದೆಸೆವೆಳಸಣ್ಣರೋಮತತಿ ಕೊರ್ಬಿದ ಮೆಯ್ಯ್ ಮಿಗೆ ಹೇಜುವೆತ್ತಸದ್ದ ಸಹಿತಮಾ ಪನಸ್ಥಳಮಾನೆಯುದ್ದನೊರ್ವ ಮಹಾವಣಿಗ್ವರಂ (ವಚನ. ४-೭೭) : "ಗೊರಸು ?" (ಶಬ್ದ). [←ತೆಲು. ಮಿಡುಗು]

**ಮಿಂಡಿತನ** (ನಾ). ಹೆಣ್ಣಿನ ಯೌವನ,- ತಾರುಣ್ಯ : ಮಂಡೆದುಬ್ಬುಬ ಮಿಂಡಿತನದಿ ನಿಬ್ಬಣಕ್ಕೆ ನಾ ಹೋದಡೆ ಮಂಡೆ ಬೋಳಾಗದನಕವಪ್ಪದೆನಗೆ ನಿಬ್ಬಣ (ಶಿವಗೀ. ೧೩೬-೭೯४). [ಮಿಂಡಿ$_1$ + — ತನ]

**ಮಿಂಡಿದೊತ್ತು** (ನಾ). ಯೌವನಸ್ಥಳಾದ ದಾಸಿ : ಹಡದ ಹಣ ಹಾಗ ಮೊಲ್ಲಂ ಜಡೆಯಿಡಕುರವಡಗಿ ಮಿಂಡಿದೊತ್ತಿರಿಗೀವೀ ತುಡುಗುಣಿ ಗೊರವರ ಮೆಚ್ಚಂ ಪೊಡವಿಗೆ ಸಿವಶಕ್ತಿ ಶಾಸೆ ನೈಷ್ಠಿಕಮುನಿಪಂ (ಎಕ. XII, ತಿಪ್ಟೂ. ೨९-२೬; 1149). [ಮಿಂಡಿ$_1$ + ತೊತ್ತು (< ತೊಟ್ಟು) ]

**ಮಿಂಡಿವರೆಯ** (ನಾ). ತುಂಬುಪ್ರಾಯ : ನವಯೌವನ : ಕಿರುವರೆಯದಿಂ ಸಂತತಮಿಂಡಿವರೆಯದ ಸೋಕುವರೆಯ ನಡುವರೆಯದವರು (ಪವಪೋ. ३९-೦९). [ಮಿಂಡಿ$_1$ + ಪರೆಯ$_2$ (< ಪರಯ) ]

**ಮಿಂಡಿವೆಂಡತಿ** (ನಾ). ನವಯುವತಿಯಾದ ಹೆಂಡತಿ : ಪತಿಯಿಲ್ಲದವಳೆನು ತೆನ್ನಯ ಮಿಂಡಿವೆಂಡತಿಯ ಕೋಳ್ಗೊಂಡಿಹ ಕುನ್ನಿ ಧೃತಿಗಿಡಹೇಡ ಧೈರ್ಯ ವನಾಂತು ಬಾರೆಂದು ರತಿರಾಜ ಮೂದಲಿಸಿದನು (ಮೋಹತ. ೦३-९३). [ಮಿಂಡಿ$_1$ + ಪೆಂಡತಿ (< ಪೆಂಡಿತಿ) ]

**ಮಿಂಡಿವೆಣ್** (ನಾ). ತುಂಬುಪ್ರಾಯದ ಹೆಣ್ಣು ; ನವಯುವತಿ : ಗಂಡುಮಿಸೆಪ್ಪೊಗರ್ಗಣ್ಣದಿರ್ಪಜವಸ್ತ್ರಮಾಗೆ ಸುರೋರ್ವಿಯೊಳ್ಮಿಂಡಿವೆಣ್ಗಳ ತೋಳ ತಕ್ಕೆಯೊಳಾವಗಂ ಬಿಡದೊಪ್ಪಗುಂ ಚಂಡವಿಕ್ರಮಧಾಮನುದ್ಭಟ ಭೂಮಿಪಾಲಕನುಲ್ಲಸನ್ಮಂಡಲಾಗ್ರಕದಿರ್ಚ ದುನ್ನತಶತ್ರುಧಾತ್ರಿಪಸಂಚಯಂ (ಉದ್ಭಟ. ೦-९೮) ; ಉಚಿತಪಚಾದು ಮಿಂಡಿವೆಣ್ಗಳು ನವರತ್ನಖಚಿತ ಭೂಷಣಹಸ್ತದಲಿ ರುಚಿವೆತ್ತು ಬಡಸಲ್ಕೆ ಶ್ರೀಕೃಷ್ಣರಾಯನು ರುಚಿಗೆಯ್ದು ಮೊಗವನೀಕ್ಷಿಸಿದ (ಮೋಹತ. ೦४-೦४). [ಮಿಂಡಿ$_1$ + ಪೆಣ್]

**ಮಿಂಡು** (ನಾ). ೧. ಶೌರ್ಯ ; ಕಲಿತನ : 'ಮಿಂಡೇಟು' ಪರಾ. ೨. ವ್ಯಭಿಚಾರ ; ಹಾದರ : 'ಮಿಂಡಾಟಿಕೆ' ಪರಾ. ३. ನವಯೌವನ : ತುಂಬುಪ್ರಾಯ : 'ಮಿಂಡಕ್ಕರು' ಪರಾ. ४. ಇಂದ್ರಿಯಲಾಲಸೆ : ವಿಷಯಲಂಪಟತೆ : (೬). ೫. ಪುಂಡ ; ತಂಟೆಕೋರ ; ತಕ್ಕಿನ ಕರ್ಕಡೆ ಗೊಂಡು ಮಿಂಡು ಮಾರ್ಮಲೆದಿದಿರಾಂತು ನಿಂದಡಸಿ ಸುತ್ತುವ ಬಾರಿಗೆ ಮೆಯ್ಯನೊಡ್ಡಿ ಕೋಟಲೆಗೊಳಗಾಗಿ ಪಂದಿ ಸಮೆವಂದಮುದಾರ್ಗಮಸೇವ್ಯ ವರ್ಣನಂ (ಸುಕುಮಾರ. ೩-೦೬) ; ಮಸಗಿದನಿತುಂ ಮಿಂಡುಂ ತಾನುಂ ಭಯಂ ಕರಮಾಗೆ ಬಂದಸಗಪೊಟೀಯಂ ಪೊಕ್ಕು . . . ವಸ್ತ್ರವ್ರಾತಂಗಳಂ ನೆಜ ಕೊಂಡು ಸಂಕಿಸದೆ ತುಡುವಂ (ಧರ್ಮಾಮೃ. २-೩೭). ೬. ಅಹಂಕಾರ ; ದರ್ಪ : ಕಂಡಾ ಮಿಮರ್ದನಕಂ ಮಿಗೆ ಮಿಂಡಿನೊಳಿರ್ದರ್ಥಪತಿಯ ಪಕ್ಷದೊಳ ವನುದ್ದಂಡತೆಯಿಂ ಧನಮಿತ್ರನನಂಡಲೆಯುತ್ತಿರದೆ ಬೈದನೆಲ್ಲರ್ ಕೇಳಲ್ (ಧರ್ಮ. ೯-೦३३).

ಮಿಂಡುಗುದ್ದು = ೧. ಪ್ರಣಯದ ಮೋಹದಿಂದ ಬಿದ್ದ ಪೆಟ್ಟು ; ಪ್ರಿಯನಿಂದ ಮೊಡೆತ. ೨. (ಆಲಂ) ದೂರಾಲೋಚನೆಯಿಲ್ಲದೆ ಪ್ರಿಯನಿಂದ ಪಡೆದ ನಷ್ಟ. [ದೇ.॥ ತಮಿ. ಮಿಣ್ಡು]

**ಮಿಂಡುವಡೆ** (ನಾ). ಪುಂಡರ ಸಮೂಹ : ತಂಟೆಕೋರರ ಗುಂಪು : ದೇವ ಭವತ್ಪುತ್ರಂ ಕರಮೋಪದೆ ಸಂಕಿಸದೆ ಮಿಂಡುವಡೆವೆರಸಟಂಡದೊಳ್ ಪೆಂಡಿರಜ ಜನಂ ದಾವಾನಲನಂತೆ ಸುಡುವನಿರುಳುಂ ಪಗಲುಂ (ಧರ್ಮಾಮೃ. २-೭४). [ಮಿಂಡು + ಪಡೆ$_2$]

**ಮಿಂಡೆ** (ನಾ). ತುಂಬುಪ್ರಾಯದ ಸ್ತ್ರೀ : ತರುಣಿ : ಅಂಡೆಗಳ ಮಿಂಡೆಯರ್ ಕೊಂಡು ಕೊಸಱಿ . . . ನೀರ್ಗಳಂ ಚೆಲ್ಲುತಾಡಿದರ್ ಸರಸಿಯೊಳ್ ಸರಸ ಮಿಗಲು (ಪಂಪಭಾ. ೬-೨೮) ; ಕುಂಡಲಿಯಸಱಿದಾತ ಮಿಂಡೆಯರಿಗೊಲಿಯುವನೆ (ಸರ್ವಜ್ಞ. ೩೦೬); ಮಿಂಡೇರ ಬಳಗವು ಬೆನ್ಹತ್ತಿ ಬಂದು ನಿನ್ನ ರಂಡೇರ್ಯವರು ಕೂಡಿ ನಗುತಲಿ ನಿಂತು (ಕಂಠಶ. ೨೦-೨). [ಮಿಂಡು, - ಎ]

**ಮಿಂಡೆವೆಣ್ಣು** (ನಾ). = ಮಿಂಡಿವೆಣ್ : ಮಿಂಡೆವೆಣ್ಣುಗಳೆಲ್ಲ ಮದವೆದ್ದು ತವೊಳು ಕಂಡ ಕಡೆಗೆ ಚೆಲ್ಲವರಿದು . . . ಉದ್ದಂಡತನದಲಾಡುತಿಹರು (ತಂತ್ರಸಾ. ೩-೦೬). [ಮಿಂಡೆ + ವೆಣ್ಣು (<ಪೆಣ್) ]

**ಮಿಂಡೇಳ್** ' ಮಿಂಡೇಟು ' ನೋ.

**ಮಿಂಡೇಟು**, ಮಿಂಡೇಳ್ (ಕ್ರಿ). ೧. ಪೌರುಷದಿಂದ ಉಬ್ಬು : ಉರ್ಕಿನ ಕೇಣಿಯ ಚೋಣ ಸೊರ್ಕುಂಜೆರ್ಗಗಲೊಡಂ ಕಂಡು ಮಿಂಡೆಟ್ಟಿ ಪಡೆವಳರೆಲ್ಲರುಂ ರವಣಿಸಿ ಮುಂಬರಿದೊಡ್ಡಿ ನಿಂದರಾಗ ಕಾದಿ ಪೋದಿ ತಾಂ ತಮಗೆ ಜವಹುರದ ಪಡಿವಳರಾದರ್ (ರಾಮಾಶ್ವ. ೦೯೩-೨೬). **ಮಿಂಡೇಳ್** : ೧. ಎದ್ದುದೀ ಕಟಕದಲಿ ಬಲ ಮಿಂಡೆದ್ದು ಸುಭಟರು ಸಮರಭೂಮಿಯ ಹೊದ್ದಿದರು ರ್ಝಳಪಿಸುವಡಾಯ್ದದ ಹೊಗರ ಹೊಳಹುಗಳ (ಕುಮಾರವ್ಯಾ. ೯-೦೩) : ಕಿತ್ತರಾ ಮಂದರಮಹಾದ್ರಿಯುವತ್ಯಧಿಕಬಲವೀರ್ಯಶೌರ್ಯೋದ್ವೃತ್ತದೇವಾಸುರರು ಬೊಬ್ಬಿಱಿದಾರ್ದು ಮಿಂಡೆದ್ದು (ಹಿಶಾಗ. ೯-೬-೨೯). ೨. ಮದಿಸು ; ಸೊಕ್ಕು : ಪೊಚ್ಚಪೊಂದಾವರೆಗಳ ಧೂಳಿಗಳ ತನಿಗಂಪ ನುಂಡು ಮಿಂಡೆದ್ದ ಭೃಂಗಾಳಿಗಳ ಬಳಗಂ ಪರಿಯಲ್ (ಕೃಪಾಭಾ. ೩-೮) ; ಗಂಡಾರಣ್ಯದಿ ದೊಡ್ಡ ಮಂಡೂಕ ತನಗಿದಿರಂಡಲೆಯಿಲ್ಲೆನುತ್ತಾ ಕೊಂಡಾಡುವಂತಿರೆ ಮಿಂಡೆದ್ದು ಕೆಡುವಂತೆ ಕಂಡು ಕಾಣದೆ ಹೋಹರು (ಕುಮುದಾ. ೬). ೩. ತುಂಬುಪ್ರಾಯವನ್ನು ಹೊಂದು ; ನವಯೌವನಕ್ಕೆ ಬರು ; ಮಿಂಡೆದ್ದ ಹೆಣ್ಗಳುಪವನಕೆ ನಡೆತಂದು . . . ಕಂಡಕಂಡವನಿಜಾತಂಗಳಂ ಚಿಗುರಿಸಿವರೊಡನೆ ಪೂದೋಱಿಸಿದರು (ಕೃಪಾಭಾ. ೩೦-೩) : ಮಿಂಡೆದ್ದ ಪೊಲಗಾವ ಪಾಮರಿಯರುಂ ಮಸದೊಲವಿನಿಂ ಪಾಡೆ (ಪ್ರಭುಲಿಂಗ. ೧-೦೬-೩೮).
[ಮಿಂಡು - ಎಟು$_1$]

**ಮಿಂತು** ' ಮಿಟ್ಟು ' ನೋ.

**ಮಿಂದು$_1$** ' ಮೀ$_1$ ' ಪರಾ.

**ಮಿಂದು$_2$**, ಮೀದಿ (ನಾ). (ದೇವತೆಗಳ ಹೆಸರಿನಲ್ಲಿಡುವ) ಮುಡಿಪು : ಮೀಸಲು : ಗವಱಿಗಳಯ್ನೂರ್ವ್ವರುಮಭಿನವಸೋಮೇಶಂಗೆ ಮಿಂದಿನಲು ಪಣವೊಂದಂ ಧ್ರುವಮಾಗೆ ಪಸುಂಬೆಗೆ ಹಾಗವನೆಱಕದೆ ಕತ್ತ್ರ್ಯಯಲ್ಲಿ ಪೇಳಿಯನಿತ್ತರ್ (ಕ್ಷೀಇ. IX-i, ೧೬೩-೬೦: 1099). P ಇದು ' ಮೀದು ' ಎಂಬುದರ ಅಪಲಿಖಿತವಿರಬಹುದೆ ?. **ಮೀದಿ** : ಹೋದ ಇರುಳು ಕಾರಣರಿಗೆ ಇಟ್ಟ ಮೀದಿಯನ್ನು ನಾಯಿ ತಿನ್ನುತ್ತ ಇದೆ (ಹುಂಡಿಪಾ. ೧೩೧).
[ದೇ.॥ ಮಲ. ಮೀತ್ತು ; ಕೊಡ. ಮೀದಿ ; ತೆಲು. ಮೀದು]

**ಮಿಕ** ' ಮಿಗ ' ನೋ.

**ಮಿಕಿಮಿಕಿ** (ನಾ). ಆಶ್ಚರ್ಯದಿಂದ ಎವೆಮಿಟುಕಿಸದೆ ನೋಡುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : ವರ್ತಕನ ಮೋರೆಯನ್ನು ಮಿಕಿಮಿಕಿ ನೋಡುತ್ತ (ಮುಂಬಯಿ. ೩-೬೪) : ಅವೆಲ್ಲ ಹಸಿದು ತಿರುಗುವ ಅನಾಥಮಕ್ಕಳ ಹಾಗೆ ಭೂಪತಿಯ ಮುಖವನ್ನೇ ಮಿಕಿಮಿಕಿ ನೋಡುತ್ತವೆ (೨೭ ಕ. ೨೬೦).

**ಮಿಕ್ಕ** ' ಮಿಗು ' ಪರಾ.

**ಮಿಕ್ಕಡ** (ನಾ). ಹೆಚ್ಚಳ : ಅಧಿಕ : ಎಳಸೊರ್ಕು ಜಕ್ಕುಲಿಪಂತೆ ಮಿಕ್ಕಡದಿಂದ ರಾಗಾಂಕುರಂ ನೆಗೆವನ್ನವಾಗಿರೆ ಮೆಯ್ಬೆವರ್ ನಲಿದುಣ್ಕೆ ತಳ್ಳಂಕಗುಟ್ಟಿ ಮುಟುಂಗಿ ಪೊಣ್ಮೆ ನಿತಂಬದಿಂ ಮದನದ್ರವಂ (?) (ಸೊಬಗಿನ ಸು. ೦೩-೦೦). [ದೇ.॥ ತೆಲು. ಮಿಕ್ಕಟ. ಮಿಕ್ಕುಟ]

**ಮಿಕ್ಕು$_1$** (ಕ್ರಿ). ೧. ಮೀರು : ಅತಿಕ್ರಮಿಸು : ಮಿಂಚುಬೆಳಗುಚ್ಚಳಿಸಿದಂತೆ ದಟ್ಟಯಿಸಿ ಬರೆ ಸಂಚಳಿಪ ಮಾವಕೆ ಮಿಕ್ಕಲ್ತೆಱಪನೀಯದಿರೆ (ಜಗ. ಪು. ೩೨-೪): ಕನ್ನಡ ಲಯದ ಯಾವುದೇ ಗಣ ಎರಡು ಅಂಶಗಳ ವ್ಯಾಪ್ತಿಗಿಂತ ಕಡಿಮೆಯಾಗದು : ನಾಲ್ಕು ಅಂಶಗಳನ್ನು ಮಿಕ್ಕದು (ಛಂದೋ. ೬೯). ೨. ಉಳಿ : ಬಾಕಿಯಿರು : ಆಗಳಂಗನೆ ತೂಪಿಱಿದ ತನುಭಾಗವುಳಿಯಲು ಶಿವನ ಮಿಕ್ಕಿದ ಭಾಗದೊಳು ಹುಗುಳೇಳೆ (ಬಸವಪು. ೦೩-೨೨) ; ಶಿವನೇ ವಿಪತ್ತು ಹೊಂದುವಂತವನಾದನು. ಮಿಕ್ಕಿದ ಜನರುಗಳಂ ಪೇಳುವುದೇಕೆ (ಪುರಾತ. ೧೦೮). [ < ಮಿಗು]

**ಮಿಕ್ಕು$_2$** ' ಮಿಗು ' ಪರಾ.

**ಮಿಕ್ಕು$_3$** (ನಾ) ೧. ಉಳಿದುದು ; ಇತರ : ಜೀವರತ್ನಕೆಣೆಯೇ ಮಿಕ್ಕಾದ ಪಾಷಾಣಗಳ್ (ಶೂಲಪೇಶ. ೦೦): ಅವುಮೆಂದುಸಿರ್ವ ಸಮುಚ್ಚಯದಮುವಿಧಿ ನಿರುತಂ ದ್ವಿತೀಯೆಯೊಳಪ್ಪೊಕ್ಕರ್ಕುಂ ಸಮನಿಸವೆಂದುಂ ಷಷ್ಠಿಯೊಳುಮುಮವು ಮಿಕ್ಕಿನ ವಿಭಕ್ತಿಗಳ ಮೇಲಿರ್ಕುಂ (ಕಮದ. ೦೨೨). ೨. ಮಿಗಿಲು : ಅತಿಶಯ : ಸಾಯದುಳಿದವರಿಲ್ಲ ಮಿಕ್ಕಿನ ನಾಯಕರೊಳಕಟ (ಕುಮಾರವ್ಯಾ. ೩-೩೯). ೩. ಹೆಚ್ಚಳ : ಆಧಿಕ್ಯ: (?). [ < ಮಿಗು. / ತಮಿ. ಮಿಕ್ಕು. ಮಿಕ್ಕ = ಅಧಿಕವಾದ]

**ಮಿಗ**, ಮಿಕ (ನಾ). ೧. ಕಾಡಿನಲ್ಲಿ ವಾಸಿಸುವ ಮೃಗ : ವನ್ಯಪ್ರಾಣಿ : ಲಲಿತಘಟಿಗೊಂದು ಮಿಗಮುಪ್ಪೊಡಂ ಬೇಂಟೆ ಸಮನಿಸದೆ ಪೊಟಲ್ಗೆಪೋದೊರ್ (ವಡ್ಡಾರಾ. ೯೩-೨೩): ಮುಂದಣ ಮಿಗಮಂ ಕಟಿಪದೆ ಸಂದಿಸಿ ಬಱಗೊಳ್ವ ಮಿಗಮುಮಂ ಕಟಪದೆ ತಾನೊಂದಳವಿದಪ್ಪದೆಚ್ಚು ಬಲಿಂದವನಿಂ ಬಿಲ್ಲ ಬಲ್ಮೆಯುಂ ಪೊಗಟಿಸಿದಂ (ಶಂಕರಾ. ೩-೯೮) ; ಮಿಗವಲ್ಲ ಮಾನಸರೂಪಲ್ಲ ಕೇಸರಿವೊಗ ತ್ರೆಱಿವಾಯ ಪಲ್ಗಿರಿದು ನಖದಿಂದಲಹಿತನ ಗಿಂಡಿಕೊಂಡಱುಹಿದ ಪ್ರಕಟಿತ ಬಲುಹ ತೋಱಿನಗೆ (ಮೋಹತ. ೪೦-೨೨) ; ಕಾಡೊಳಿರ್ದುಂ ಮಿಗಂಗಳ್ ಬಾನೊಳಿರ್ದುಂ ಖಗಂಗಳ್ ಮಱಿಗಳನಾರಯ್ಯುತುಂ ಸೊಗಂಬಟ್ಟುವು (ರಾಮಾಶ್ವ. ೦೬-೨೩). ' ಮಿಗವೇಂಟೆ ' ಪರಾ. ೨. ಜಿಂಕೆ : ಚಿಗರೆ : " ಮಿಗವೆಂದರಲೆ " (ಶಬ್ದಮ. ೩೦-೯೯): " ಮಿಗವೆಂದಕ್ಕುಮದೆರಲೆಗೆ " (ಕವಿಕಂ. ೬೦). ೩. ಕಸ್ತೂರಿಮೃಗ : ' ಮಿಗಸೊಕ್ಕು ' ಪರಾ. **ಮಿಕ** : ೪. ಹಂದಿ ; ಸೂಕರ : " ಮೃಗಃ = ಮಿಕಂ " (ಕಾರ್ಕ. ೨೮೬); ಅನತಿ ದೂರದಲ್ಲಿಯೇ ಮಿಕ ತನ್ನ ಮರಿಗಳ ದಂಡಿನೊಡನೆ ಭೂತಾಡನ ಮಾಡುತ್ತ ಓಡಿಹೋಯಿತು (ಬಿರಿ. ೬೯). ೫. ಬೇಟೆಯ ಪ್ರಾಣಿ : ಹುಲಿಯು ತನ್ನ ನಖಪಂಜರದ ಒಂದೇ ಹೊಡೆತದಿಂದ ದೊಡ್ಡ ದೊಡ್ಡ ಮಿಕಗಳ ಹೊಟ್ಟೆಯನ್ನು ಹರಿಯುತ್ತದೆ (ಮುಂಬಯಿ. ೪-೩೦). ೬. (ಆಲಂ) ಸುಲಭವಾಗಿ ಮೋಸಕ್ಕೆ ಗುರಿಯಾಗುವ ವ್ಯಕ್ತಿ : ಬಲಿಪಶು : ನಿಮ್ಮಿಬ್ಬರ ಹಣ ನೆಲಕ್ಕ ಬಿದ್ದಾಗ ಇಬ್ಬರಿಗೂ ಬುದ್ಧಿಬರುವುದು. ಮಿಕವಾಗಿದ್ದಾನೆ (ಪಟಾಪಾ. ೨೩೩).

**ಮಿಗದರಸ** = [ಜೈನ] ನೂರು ಇಂದ್ರರಲ್ಲಿ ಒಬ್ಬ; ಸಿಂಹ ಎಂಬ ಹೆಸರಿನ ಇಂದ್ರ : ಜೋಯಿಸರಾಣ್ಮಂ ಮಿಗದರಸಂ ಮೊದಲಾಗಿ ಸಲೆ ಸೊಗಯಿಸುವ ಶತೇಂದ್ರರ್ . . . ಗಂಧಕುಟಿಯೊಳೆಡಗಿಱಿದಿಹುದು (ಜಯಚಂ. ೦೬-೩೯). **ಮಿಗದಾಣ್ಮ** = ಪ್ರಾಣಿಗಳ ಒಡೆಯ : ಮೃಗರಾಜ : ಸಿಂಹ : " ಮಿಗದಾಣ್ಮಂ ಮೃಗದೇವನಲ್ಲಿ " (ಕರ್ಣಾಟ. ೯೬).
[< ಪ್ರಾ. ಮಿಗ. / ಸಂ. ಮೃಗ]

**ಮಿಗಗಯ್ಯ** ' ಮಿಗಗೆಯ್ಯ ' ನೋ.

**ಮಿಗಗೆಯ್ಯ**, ಮಿಗಗಯ್ಯ, ಮಿಗಗೈಯ (ನಾ). ಜಿಂಕೆಯನ್ನು ಕೈಯಲ್ಲಿ ಧರಿಸಿದವನು ; ಶಿವ : " ಗೊರವನೈಕಿಲ್ವೆಟ್ಟಳಿಯನ್ನೆಮೊಗಂ . . .

ಮಿಗಗೆ[ಪಾಠಾಂ. ಗ]ಯ್ಯನುಂ . . . ಕಿಡಿಗಣ್ಣನು " (ಕಲ್ಯಕೃ. ೪): " ಎಳೆದೇರ . . . ಮಿಗಗೆ[ಪಾಠಾಂ. ಗ]ಯ್ಯನಿಂಗಳಗಣ್ಣ ಸಾಂತ ಪಂದಲೆವಚ್ಚ ಗಂದರ ಗಿರಿಯನೀಸರಂ ದೇಸಿಗಂ " (ಕಬ್ಬಿಪಂ. ೩). **ಮಿಗಗಯ್ಯ** : " ಎಣ್ಮಯ್ಯಂ . . . ಮಿಗಗಯ್ಯಂ . . . ಅಯ್ಮೊಗಂ—ಈ ೩೩ ಈಶ್ವರಂಗೆ ಪೆಸರ್ " (ಶಶಾ. ೪೭-೧). **ಮಿಗಗ್ಗೈಯ** : " ಮಿಗಗ್ಗೈಯಂ ಕಣ್ಣಡಿಗಂ . . . ಮಾದೇವ ಸಬ್ಬ ಗಂದರಗಿರಿಯಂ " (ಶಂಶಿ. ೧೭).

[ಮಿಗ + ಕೆಯ್$_2$ + –ಅ$_7$]

**ಮಿಗಗ್ಗೈಯ** ' ಮಿಗಗೆಯ್ಯ ' ನೋ.

**ಮಿಗತೆ** ' ಮಿಗುತೆ ' ನೋ.

**ಮಿಗದಾಣ** (ನಾ). ಪ್ರಾಣಿಗಳು ಇರುವ ಪ್ರದೇಶ ; ಪಕ್ಕೆ : " ನೊಸಲ್ನ ಮಿಗದಾಣ ಪಣೆ " (ಕಬ್ಬಿಪಂ. ೯೭). [ಮಿಗ + ತಾಣ]

**ಮಿಗದೇರ** (ನಾ). ಜಿಂಕೆಯನ್ನು ವಾಹನವನ್ನಾಗಿ ಉಳ್ಳವನು : ವಾಯು : " ಕಂಪುವಳಂ ಎರಲ್, ಮಿಗದೇರಂ, ಎಲರ್, ಗಾಳಿ—ಈ ೫ ವಾಯುವ ಪೆಸರ್ " (ಶಶಾ. ೪೯-೩೮); ಮಿಗದೇರನ ಮಿಗಮಲ್ಲಿಯು ಮಿಗವಗೆಯ ರವಕ್ಕೆ ಪೆಳರ್ದು ನೋಳ್ಪಂದಮಂದೇಂ ಸೊಗಯಿಸಿದುದೊ ಸವಿನೋಟದ ಬಗೆಯಂ ವಿಚರಾಬಲಾಳಿಗುಪದೇಶಿಪವೋಲ್ (ಶಂಶಂ. ೦-೩೯).

[ಮಿಗ + ತೇರ್$_2$ + –ಅ$_7$]

**ಮಿಗದೊವಲ್** (ನಾ). ಜಿಂಕೆಯ ಚರ್ಮ ; ಕೃಷ್ಣಾಜಿನ : ಒಗೆದುದೊ ತಿಂಗಳಿಂಗೊಳದೊಳೇನಸಿತೋತ್ಪಲದಿಂದು ನಾರದಂ ಮಿಗದೊವಲುಟ್ಟನೋ ಶುಚಿ (ಶಕಂ. ೭-೨೮). [ ಮಿಗ + ತೊವಲ್$_3$ ( <ತೋಲ್$_1$ ) ]

**ಮಿಗಪತಿ** (ನಾ). ಪ್ರಾಣಿಗಳ ಒಡೆಯ ; ಮೃಗರಾಜ : ಸಿಂಹ : ತಿಳಿ ಮಿಗಪತಿ ಯಾವನೊರ್ವ ಸಮ್ಯಕ್ತ್ವವ ತಳೆದನವನೆ ಧನ್ಯನಲ್ತೆ (ಪರ್ಶತ. ೯–೦೦೯). [ಮಿಗ + ಪತಿ$_2$]

**ಮಿಗಬೇರ** (ನಾ). (ಜಿಂಕೆಗೆ ಶತ್ರುವಾದ ಹುಲಿಯ ರೂಪ ಧರಿಸಿದ) ಒಬ್ಬ ರಾಕ್ಷಸನ ಹೆಸರು : ವ್ಯಾಘ್ರಾಸುರ : ತುಳಿಲಳಪಾಂತು ನಿಂದ ಮಿಗಬೇರನನಿಕ್ಕಿ . . . ಬೆಳ್ಪಸಂದಳಿದಸೆದಿರ್ದ ಬಾಸ್ಪವಿರನೊಳ್ಪರಿಜಂ ತಳೆದೊಪ್ಪಿ ತೋಱಿದಂ (ಶರಶಂ. ೩-೯). [ಮಿಗ + ಬೇರ$_1$]

**ಮಿಗಲಚ್ಚಣ** (ನಾ). ಜಿಂಕೆಯ ಚಿಹ್ನೆಯನ್ನು ಹೊಂದಿದವನು : ಚಂದ್ರ : "ಜೊನ್ನೊಡಲಂ . . . ಮಿಗಲಚ್ಚಣಂ . . . ತಿಂಗಳ್—ಈ ೨೦ ಚಂದ್ರನ ಪೆಸರ್" (ಶಶಾ. ೪೯–೨೩). [ಮಿಗ + ಲಚ್ಚಣ$_2$]

**ಮಿಗವಕ್ಕೆ** (ನಾ).=ಮಿಗದಾಣ: "ಹಣೆಯೆಂದು ಮಿಗವಕ್ಕೆ" (ಕಲ್ಯಕೃ. ೩೦): ಅವರು ಹೆಜ್ಜೆಗಳ ಗುರುತನ್ನು ಹಿಡಿದು ಮಿಗವಕ್ಕೆಗಳನ್ನು ತಿಳಿದು ಕೊಳ್ಳುವರು (ಮಹಶ. ೨೦). [ಮಿಗ + ಪಕ್ಕೆ$_1$ (< ಪಚ್ಚೆ)]

**ಮಿಗವಕ್ಕೆಗ** (ನಾ). ಜಿಂಕೆಯು ತನ್ನಲ್ಲಿ ನೆಲಸಿರುವಂಥವನು ; ಜಿಂಕೆಗೆ ಆಶ್ರಯಸ್ಥಾನವಾಗಿರುವವನು : ಚಂದ್ರ : "ಸವಿಗದಲಣುಗಂ . . . ಮಿಗವಕ್ಕೆಗಂ . . . ಶಶಿಯಿ ನಾಮಂ" (ಕಲ್ಯಕೃ. ೪೩); ಕಡುಕೊರ್ಬಿ ಪರ್ಬಿದ ಮರ್ಬಿನ ಮಿಗವಕ್ಕೆಗನೊಳಾದ ಪಗೆತನಮಂ ಬಗೆಗೊಂಡು ತಜ್ಜನಕ ಪನಸಥಿಯಂ ಕನಲ್ದು ಸುತ್ತಮೊತ್ತರಿಸಿ (ನಾಶಶ. ೦–೧೦೨ ವ).

[ಮಿಗ + ಪಕ್ಕೆ$_1$ (<ಪಚ್ಚೆ) + –ಗ$_2$]

**ಮಿಗವಗೆ** (ನಾ). ಜಿಂಕೆಯ ಶತ್ರು : ಹುಲಿ : ಮಿಗದೇರನ ಮಿಗಮಲ್ಲಿಯು ಮಿಗವಗೆಯ ರವಕ್ಕೆ ಪೆಳರ್ದು ನೋಳ್ಪಂದಮಂದೇಂ ಸೊಗಯಿಸಿದುದೊ ಸವಿನೋಟದ ಬಗೆಯಂ ವಿಚರಾಬಲಾಳಿಗುಪದೇಶಿಪವೋಲ್ (ಶಂಶಂ. ೦-೩೯).

[ಮಿಗ + ಪಗೆ$_2$]

**ಮಿಗವಟ್ಟೆ** (ನಾ). ಮೃಗಗಳು ಓಡಾಡುವ ಜಾಡು.—ಮಾರ್ಗ : "ಸರುವೆಂದು ಮಿಗವಟ್ಟೆ [ಪಾಠಾಂ.ಕ್ಕೆ]" (ಕಶಾ. ೩೦—೯೪); "ಸರುವೆಂದೆನಲ್ಕೆ ಮಿಗವಟ್ಟೆಯುಂ ತಾಂ" (ಕಶಿಂ. ೭೮). [ಮಿಗ + ಬಟ್ಟೆ$_1$]

**ಮಿಗವಱಿ** (ನಾ). ಜಿಂಕೆಯ ಮರಿ : ಮರಿಹುಲ್ಲೆ : " ಕೋಣಸು ಮಿಗ ಪಱಿಯಕ್ಕು" (ಕಲ್ಯಕೃ. ೩೨). [ಮಿಗ + ಮಱಿ]

**ಮಿಗವೇಂಟೆ** (ನಾ). ಕಾಡುಪ್ರಾಣಿಗಳ ಶಿಕಾರಿ : ವನ್ಯಮೃಗಗಳ ಬೇಟೆ : ಶಸ್ತ್ರವಿದ್ಯೆಯೊಳಂ ಮಿಗವೇಂಟೆಯೊಳಂ ನಿರತಿಶಯಪ್ರತಿಭಾಶಾಲಿಯನಾಗಿಸಿದಂ (ಮರಾತ. ೩-೩೯ ವ). [ಮಿಗ + ಬೇಂಟೆ]

**ಮಿಗಸೊಕ್ಕು** (ನಾ). ಮೃಗಮದ; ಕಸ್ತೂರಿ : ಅಜ್ಜಿವಸುಳೆಗಳು ಅನುವಂ ಪಡೆದುವು . . . ನನೆಮಿಲ್ಲನ ಪಸುರ್ಗಾವಿನ ಮಿಗಸೊಕ್ಕಿನ ಪೊಸಮಿಂಟೆ ಯೆನೆ (ಚದುಶಾ. ೮–೩೯). [ಮಿಗ + ಸೊಕ್ಕು$_3$ (<ಸೊರ್ಕು$_2$)]

**ಮಿಗಿತೆ** ' ಮಿಗುತೆ ' ನೋ.

**ಮಿಗಿಲ್**, **ಮಿಗಿಲು** (ನಾ). ೧. ಹೆಚ್ಚಾದುದು ; ಅಧಿಕವಾದುದು : ಹೆಚ್ಚಳ : ಆ ಮುನಿಮುಖ್ಯನ ಸತಿ ಲೋಪಾಮುದ್ರೆ ತನೂಜರಿಂದೆ ಮಿಗಿಲೆನಿಸಿದತಿಪ್ರೇಮದೆ ಸಡಪಿದ ವಿಟಪಿಸ್ತೋಮದಿನಾಶ್ರಮಪದಂ ಮನಂಗೊಳಿಸಿರ್ದಂ (ಕಾದಂಪೂ. ೦೦೯) ; ಮಡದಿಯೆನ್ನಗಲೊಳಗೆ ಸಕಲದೇವಾನ್ನವ ಒಡೆಯರಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದೆನು (ಬಸವ. ೯೩೯) ; ಮುಸುಕುವುದು ಮುಗಿಲೊಮ್ಮೆ ಸೂರ್ಯನ ಮಸಕ ಮಿಗಿಲಹುದೊಮ್ಮೆ (ಕುವ್ಯಾ.ಕ. ೦೦-೩೭). ೨. ಶ್ರೇಷ್ಠವಾದುದು ; ಉತ್ತಮವಾದುದು ; ಮೇಲಾದುದು : ಚಲದೊಳ್ ದುರ್ಯೋಧನಂ . . . ಧರ್ಮದೊಳ್ ನಿರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಪರ್ಗಳನೀ ಭಾರತಂ ಲೋಕಪೂಜ್ಯಂ (ಶಂಕಭಾ. ೦೪-೬೪); ಈ ಲೋಕಕ್ಕಾ ಮಾನಿನಿಯ ಕುಲಂ ಮಿಗಿಲ್ (ಶಂಬರ. ೪—೮೨). ೩. ಶ್ರೇಷ್ಠತೆಯಿಂದ ಕೂಡಿದ ವ್ಯಕ್ತಿ ; ಉತ್ತಮ ವ್ಯಕ್ತಿ : ಆ ದೇವಿಗಂ ರೂಪವಿಳಾಸಶ್ರೀಯೊಳೀ ದೇವಿಯೆ ಮಿಗಿಲ್ (ಅಂತಿ-೩-೨೨); ಧುರದೊಳಮಂ ಮಿಗಿಲೆನಗೆನೆ ನಿನಗೆ ಪಗಲೊಳೇಂ ಕಟ್ಟಲೆಯೋ (ಶಂಕಭಾ. ೦೨-೦೯೩); ಅತನುಶ್ರೀಕಾಂತೆಗೀ ಕಾಂತೆಯೆ ಮಿಗಿಲ್ (ಮಲ್ಲಿಶ. ೩-೯೭); ರತಿ ರಂಭೆ ತಿಲೋತ್ತಮೆ ಭಾರತಿಯೆಂಬಿವರ ದೊರೆಗೆ ಮಿಗಿಲೆನಿಸಿದ ಮತ್ಸತಿಯರ್ಮಲರಿರ್ದಪರ್ (ರಶರ್ಮಮ್ಮ. ೩-೦೦೪); ತನಗೆಂತುಂ ಮಿಗಿಲೀ ಮಹೀಶಮದನಂ ತಾಂ ಮೋಹನಾಕಾರದಿಂ (ಕುಕುಮಜ. ೧೦-೭೧). ೪. ಅತಿಕ್ರಮ ; ಉಲ್ಲಂಘನೆ : "ಅಶ್ಯಾಧಾನ ಮೆನಲತಿಕ್ರಮಮೆನಲು ಮಿಗಿಲೆನಿಕ್ಕುಂ " (ಮಂಗರಾ. ೦೩೩-೨೮). **ಮಿಗಿಲು** : ೧. ವೈದಿಕರಪ್ಪ ವೇದವಿತ್ತುಗಳೊಂದುಕೋಟಿಗೆ ಅನ್ನವನಿಕ್ಕಿದ ಫಲಕ್ಕೆ ಕೋಟಿಮಿಗಿಲು ಶಿವಶರಣಂಗೆ ಒಂದು ಭಿಕ್ಷವನಿಕ್ಕಿದ ಫಲ ಕೋಟಿಕನ್ಯಾದಾನದ ಫಲಕ್ಕೆ ಮಿಗಿಲು ಒಬ್ಬ ಭಸ್ಮಾಂಗಿಯ ಒಂದು ವೇಳೆಯ ತೃಪ್ತಿ (ಆದವ. ೦೨-೨೨); ಭುವನರಕ್ಷಕ ಮತ್ಸ್ಯದೇವರ ಹವಣನಾರೆಣಿಸುವರು . . . ವೇದವಾಕ್ಯಕೆ ಹತ್ತು ಮೊಳ ಮಿಗಿಲು (ಕಂಶಶ. ೪-೨೩) ; ಬಳಿಕ ನಿಂದುದು ರಾಜ್ಯಲಕ್ಷ್ಮಿಯ ವಿಲಸದಭಿನವತೇಜ ದಿಗುಮಂಡಲಪರೀತ ಪುರಂದರನ ವೈಭವಕೆ ಮಿಗಿಲೆನಿಸಿ (ಕೊರರಾ. ೦-೩-೦೭) : ಜಗದೊಳಗೆ ಜ್ಞಾನವೇ ಮಿಗಿಲು (ಸರ್ವಜ್ಞ. ೩೦೭). ೩. ಜಾಣನೊಳು ವಾಣಿಗಿಮ್ಮಿಗಿಲು . . . ಎನಿಸಿ ಮೆಱೆವಳು ಹರಿಶ್ಚಂದ್ರನೃಪಧರಸಿ (ಹರಶಾ. ೦-೪೪); ದೇವಾಸುರ ನರೋರಗನಿಕರದಲಿ ನಾರಾಯಣನೆ ಮಿಗಿಲು ಆರು ಸಂಶಯವೇಕೆ (ಕುವ್ಯಾ.ಕ. ೬-೩): ನಳಭೂಪನೇ ನರಲೋಕದೊಳಗುತ್ತಮನಲಾ ತತ್ಪತ್ನಿ ಪಾರ್ವತಿಗೆ ನಾಕುಮಡಿ ಮಿಗಿಲು (ಕೊರರಾ. ೩-೨-೦೮). ೫. ಮುಂದಾದುದು ; ಮುಂದಿರುವುದು : ಸರಳಿನಿಂ ದೃಷ್ಟಿಯಿಂ ಮನದಿಂ ರಥಾಶ್ವ ಮಿಗಿಲು (ಹರಶಾ. ೩-೩೩).

ಮಿಗಿಮಿಗಿಲು (ದ್ವಿರುಕ್ತಿ) : ಸುಖದ ಮಿಗಿಮಿಗಿಲಿನಿಂದಾಕೆ ಬೆಂದು ಮನನೊಂದು . . . ಪ್ರೇಮಧರ್ಮದಾಸ್ಯವನಾಂತು ತಂಗಿರುವಳು (ಗೊರಶಿ ಶಾ. ೩-೭೦). [< ಮಿಗು. / ತಮಿ. ಮಿಕಲ್; ತುಳು. ಮಿಗಿಲ್; ತೆಲು. ಮಿಗುಲು, ಮಿಕ್ಕಿಲಿ; ಮಲ. ಮಿಗಿಲ್=ಉಳಿ]

**ಮಿಗಿಲು** 'ಮಿಗಿಲ್' ನೋ.

**ಮಿಗಿಲೆ** (ನಾ). ಸಮವಲ್ಲದ ಸಂಖ್ಯೆ; ಬೆಸ : ಪ್ರಸಾದದ ಬಿಡುಪುಷ್ಪಗಳನ್ನೆಣಿಸಿದರು; ಲೆಕ್ಕ ''ಮಿಗಿಲೆ'' ಯಾಗಿ ಬಂದಿತು (ಸಂಬಸಾ. ೬೪) : ಐತಾಳರು . . . ಪ್ರಸಾದವನ್ನು ತೆಗೆದರು. 'ಮಿಗಿಲೆ' ಎಂದು ಹಿಗ್ಗಿನಿಂದ ಕಿರುಚಿ ನುಡಿದರು (ಮರಳು. ೩೦೯). [< ಮಿಗಿಲ್]

**ಮಿಗಿಲ್ಗಣ್** (ನಾ). ೧. (ಶಿವನ) ಹೆಚ್ಚಾದ ಕಣ್ಣು; ಮೂರನೆಯ ಕಣ್ಣು. ೨. (ಆಲಂ) ಗೆಲ್ಲಲು ಸಮರ್ಥವಾದ ದೃಷ್ಟಿಯುಳ್ಳವನು; ಕಣ್ಣಿನಲ್ಲಿ ಕಣ್ಣಿಟ್ಟು ನೋಡುವವನು : ಸಮರಕ್ಕಾಯುಧಮೀವ ಕಯ್ವುತ್ತರಣಕ್ಕಾಲೋಚನಕ್ಕಾಪ್ತಮಂತ್ರಿ ಮಿಗಿಲ್ಗಣ್ ಪರದುರ್ಗ್ಗವರ್ಗ್ಗವಿಜಯಕ್ಕಾಸ್ಥಾನರಂಗಕ್ಕೆ ರತ್ನಮಯಾಕಲ್ಪಮೆನಿಪ್ಪಿನಂ ನೆಗಳ್ದ ಬಲ್ಲಾಳಂಗಮಾ ನಾರಸಿಂಹ ಮಹೀಶಂಗವಮಾತ್ಯನಾದನಧಿಕಂ ಪೋಲಾಳ್ವದಂಡಾಧಿಪಂ (ಎಕ. XI. ದಾವ. ೨೩-೩೩: 1224). [ಮಿಗಿಲ್ + ಕಣ್]

**ಮಿಗಿಸು** (ಕ್ರಿ). ೧. ಹೆಚ್ಚಿಸು; ಅತಿಶಯಿಸು : ಮಿಗಿಸಿದನು ರವಿರಾಜವಂಶಾದಿಗಳ ರಾಮರ ರಾಜಧರ್ಮದ ಸೊಗಸನಮಲಚರಿತ್ರದಲಿ ಪಾಲನೆಯ ಲೂರ್ವರೆಯ (ಕೊರರಾ. ೧-೩-೩); ಸಾಹಸಂ ಮಿಗಿಸಿದ ಪೊರ್ಯ್ಯಾಡಿ ತನಿವೀರರಸದಿಂದೆ ಸೊಗಸಿದರ್. . . ಚತುರಚತುರಂಗದವರು (ಕೃಬಿಸಾ. ೯-೩೦). ೨. ಉಳಿತಾಯ ಮಾಡು ; ಮಿಗುವಂತೆ ಮಾಡು : ಎತ್ತುಗಳನ್ನು ಮಾರಿ ಬಂದಿದ್ದರಲ್ಲಿ ಹಣ ಮಿಗಿಸಿದ ಮೇಲೆ ಚಿಕ್ಕ ಎತ್ತುಗಳನ್ನು ಕೊಳ್ಳುವಾ (ಬಂದಜ. ೪) ; ಸಂಬಳದ ಹಣ ಸ್ವಲ್ಪ ಮಿಗಿಸಿಟ್ಟುಕೊಳ್ಳಬೇಕು (ಕೂಬಲೇ. ೨೬೩). ೩. (ಬಳಿಯಲ್ಲಿಯೇ) ಇಟ್ಟುಕೊಳ್ಳು; ಉಳಿಸಿಕೊಳ್ಳು : ಕಷ್ಟದಿಂದಾವು ಮಣ್ಣಿಯಂ ಕುಡದೆ ಮಾಣ್ಕೊಡೆಂ ನಷ್ಟಮಾದಪುದೆ ಪಾರ್ಥನ ಜೀವಂ. . . ನೀನರಿಷ್ಟನಾಗದಿರಿಸ್ನು ಮಿಗಿಸಿಕೊಳ್ವೆವು ಲೇಸನು (ಕೃಬಿಸಾ. ೨೪-೨೩). ೪. ಮೀರು ; ಮೀರಿಸು : ಮುಂದೆ ಶೋಭಾನವಂ ಪಾಡುತಡಿಯಿಟ್ಟುದಾನಂದದಿಂದ್ಯೆದೆಯುರ್ ತೂರ್ಯ್ಯತ್ರಯ ಮುಮುದಿತಿನಂದನನ ನಾಟ್ಯಶಾಲೆಯ ಮಿಗಿಸಿತೆನೆಂಬೆನಿದಿರ್ಗೊಳ್ವ ಸಂಭ್ರಮವನು (ತಬತ. ೬-೩೩). ೫. ಹೋಗದಂತೆ ತಡೆ : ಹಿಂದುಳಿಸು : ಅಡಂಗಲುಮಡಂಗಿಸಲುಮೊಡ್ಡಲುಮೊಡ್ಡಿಸಲುಂ ಪುಗಿಸಲುಂ ಮಿಗಿಸಲುಂ . . . ವಿಜಿಂದುದನೇಜಿಸಲುಂ ಜಾಣನಾಗಿ (ಶಂಶಬಾ. ೩-೪೩ ವ): ಅಳ್ದ ನಳಿಯ ಮಿಗಿಸುವಳಲ್ಲ ದೇಹವ ಪರಿಸ್ಮರಣವ ನಗಿಸ ಹೇಳೆಂದು ಪೇಳ್ದವಳು (ಮೋಹತ. ೩೪-೪). [ಮಿಗು + -ಇಸು₃]

**ಮಿಗು** (ಕ್ರಿ). ಮಿಕ್ಕು₂ (ಭೂತಸ್ಯ). ಮಿಕ್ಕ (ಭೂತಕೃ). ೧. ಹೆಚ್ಚಾಗು : ಅಧಿಕವಾಗು : ಪೆಂಸ್ಮ ಮಿಕ್ಕು ಪರವಸದಿಂದು ಕಣ್ಣೀರ್ಗಳ್ ಬಂದು ನೀಡಂ ಬೇಗಮಿರ್ದ್ದ ನೋಡಿ (ವಡ್ಡಾರಾ. ೯-೨೬); ಮುಕ್ಕುಳಿಸಿಯುಗುಟ್ವ ಮಧುವಂ ಮಿಕ್ಕೆಸೆವಾಪೋದಮಿಂದಜಿ ತಣ್ಣಿಂಪಿನೊಳೊಳಪೊಕ್ಕವು (ಆದಿಪು. ೧೧-೧೨೦); ಮಿಕ್ಕ ಸತ್ಕ್ರಿಯೆಗಳನವರನ್ನೆ ಸಕ್ಕ ಸಂತೋಷಂಬಡಿಸಿ (ಬಸಪು. ೩೨-೧೧); ಸುದೇಷ್ಣೆ ಮನದಲಿ ಹರುಷ ಮಿಗೆ ಹೊಂಗಿದಳು (ಕುವ್ಯಾವಿ. ೧-೨೮). ೨. ಶ್ರೇಷ್ಠವಾಗು : ಉತ್ತಮವಾಗು ; ಮೇಲಾಗು : ನಮಿಲೂರಾ ಸಿರಿಸಂಘದಾಜಿಗಣದಾ ರಾಜ್ಞೀಮತೀಗನ್ನಿಯಾರ್ ಅಮಲಂ ಕಲ್ಪದ ಶೀಲದಿಂ ಗುಣದಿನಾ ಮಿಕ್ಕೋತ್ತಮರ್ಮ್ಮಾರ್ಗಳಿ ದೊರ್. . . ಸ್ವರ್ಗ್ಗಲಯಂ ಪಡೆದಾರ್ (ಎಕ. II (R), ೧೧೨-೨; 7ನೆಯ ಶತ); ಉತ್ತಮಾಂ ಆಟ್ಟಂ ಮಿಕ್ಕ ದರ್ಶನಜ್ಞಾನಚಾರಿತ್ರಾರಾಧನೆಯಂ (ವಡ್ಡಾರಾ. ೭೩-೮); ಮಹೇಶ್ವರನಂ ಮೆಚ್ಚಿಸಿ ಮಿಕ್ಕ ಪಾಶುಪತಮಂ ಪೆತ್ತಾತನೇ ಸಾಹಸಂ ಪಿರಿದುಂ ಚೆಲ್ವನುಮಪ್ಪನೆಂದು ಮನದೊಳ್ ಸೋಲ್ಪುಟ್ಟಿಜಿಂ ನೋಡಿದರ್ (ಶಂಶಬಾ. ೬-೨೬); ರತ್ನಚಯಂಗಳಿಂ ಮಿಗುವ ಮುತ್ತುಗಳಿಂ ನೆಜೆ ಕೀಲಿಸಿರ್ದ ದಲ್ ನೂತ್ನಮೆನಿಪ್ಪಲಂಕರಣಮಂ ಸಲೆ ತೊಟ್ಟು (ಶಾರಪು. ೩-೦೬). ೩. ಮೀರು ; ಅತಿಕ್ರಮಿಸು ; ಉಲ್ಲಂಘಿಸು: "ಮಿಗು – ಅತಿಕ್ರಮಣೇ, ಅವಶಿಷ್ಟೇ ಚ" (ಶಮಧಾ) ; ದೇಶಿಯನೆ ನಿಜಿಸಿ ಬಿಂಡವಾಗಿ ಸಮಾನತಿಶಯಮಿದೆಂದು ಯತಿಯಂ ಮಿಕ್ಕರ್ (ಕಲಾ. ೧-೬೩): ಅರಸುಮಕ್ಕಳ್ ತಮ್ಮ ಮರ್ಯಾದೆಯಂ ಮಿಕ್ಕು ದ್ರವ್ಯಂ ಮೊದಲಾಗೊಡೆಯ ಪಜಿರೊಳ್ ಲೋಭಿಷ್ಠರಪ್ಪರ್ (ವಡ್ಡಾರಾ. ೯೭-೭): ಜಳನಿಧಿ ಮೇರೆಯಂ ಮಿಗದೆ ನಿಂದುದು (ಸಮುಕ. ೭-೪೪): ಆತ್ಮಮಾನಸಗಭೀರತೆಯಂ ಮಿಗುವಂಬುರಾಶಿ (ಕಕ್ಕಪು. ೯-೧೧೦). ೪. ಹಾಯು : ದಾಟು : ಕ್ರಮಿಸು : ಬಿಲ್ಲುದುಡುಕಿ ಕುಂತೀಭೋಜ ಹೊಕ್ಕನು ಮಿಕ್ಕನವರುಗಳ (ಕುವ್ಯಾದ್ರೋ. ೧೭-೪೦): ಶಶಿ ರವಿಗಳಂ ಮಿಕ್ಕು ತಾರಕೆಗಳನ್ನೋರಂತೆ ಪಿಂದುಳುಪಿ. . . ಮಾರುತಿಯುಂ ಪೋಗುತಿರೆ (ವಂಕಾರಾ. ೩-೦-೩೪). ೫. ತಿರಸ್ಕರಿಸು; ಕಡೆಗಣಿಸು : ನನೆಯುಂಬಂ ಮಿಗೆ ಕಣ್ಮಲರ್ ಮಕರಮಂ ಕ್ರೋಡಧ್ವಜಂ ಪೋಲೆ ಕರ್ಬಿನ ಬಿಲ್ಲಂ ಗೆಲೆ ಪುರ್ಬ್ಬ (ಗದಾಯು. ೧-೬); ಮಿಕ್ಕು ಮಿಾಜಿ ಹೋಹನ ಬೆಂಬತ್ತಿ ಕೈವಿಡಿವನು (ಮಜಾತ. ೨. ೪೦-೮೭). ೬. ಸೋಲಿಸು; ಪರಾಭವಗೊಳಿಸು : ಎನ್ನಂ ಬಿಲ್ಬಲ್ಮೆಯೊಳ್ ಮಿಗ [ಶಾಕಾಂ. ೧]ಲೆಯ್ದೆ ಬೇರ್ವರಿಂದ ಪಗೆಯುಂ ಬನ್ನಂಬಟ್ಟೆನ್ನ ಮುನ್ನಿನ ಬನ್ನಮುಂ ಪಿರಿದದೆ ನಿಮಂಗೊಂಡಾನಿಂದಿಲ್ಲಿ ನೀಗದೆ ಮಾಣ್ಬೆನೇ (ಶಂಶಬಾ. ೦೨-೦೯); ಎಂತಪ್ಪ ವಿದ್ವಾಂಸರುಂ ವಾದದಿಂ ಮಿಗುತೆ ಸಹಣರಂ ಕೂಡಿಕೊಂಡತಿಸಂಭ್ರಮದೊಳಿರಲು (ವಾಗೀರ. ದೀ. ೨೩೪-೪): ಚಿಕ್ಕನ ಚಿಕ್ಕಮಗಂ ವಿಭವಕ್ಕೆ ಕುಬೇರಂಗೆ ಸೆಣಸುವಂ ರಾಯರುಮಂ ಮಿಕ್ಕಂ (ಎಕ. XXI, ೦೩-೨೩: 1260). ೭. ಉತ್ಸಾಹಗೊಳ್ಳು: ಮೋಹರವ ಮಿಕ್ಕುಬಿಬಿದರು ಸಬಳಿಗರು ಮುಂಚಿತು ರಣಕೆ ವಿಡಿಗಳು (ಕುವ್ಯಾದ್ರೋ. ೦-೪೬); ಮಿಕ್ಕು ನೂಕುವ ಕುದುರೆಕಾಜರು ತೆಕ್ಕೆಗೆಡೆವರು (ಕುವ್ಯಾದ್ರೋ. ೩-೩). ೮. ಉಕ್ಕು; ಹೊರಹೊಮ್ಮು : ನಿಜಸ್ಮಾಪಾವಿರಹವಿಧುರೆ ಪೊಣ್ಮುವ ಕಣ್ಣ ನೀರ್ಗಳಂ ನಿದಾಘಸಮಯಸರಸಿಯಂತಜಿಸಿ ಮಿಗಲೀಯದೊಳಗಡಂಗಿಸಿ ಸಖಿಯೊಳಿಂತೆಂದಳ್ (ಚಾಂಶಿಪು. ೭-೩೭ ವ). ೯. ಮುಂದಾಗು; ಮುನ್ನಡೆ : ಕಡುಮನದ ರಥತುರಗ ಮಿಕ್ಕವು ಸರಳಸೂಠಿಯಲಿ (ಕುವ್ಯಾದ್ರೋ. ೧೧-೨೪). ೧೦. ಕಂಗೊಳಿಸು ; ಶೋಭಿಸು: ಗಿರಿಜೆಯುಂ ಚಂದ್ರಧರನುಂ ಕಂಡು ನಸುನಗುತೆ ಹರುಷರಾಗುತ್ತಜಿದು ಕಾರುಣ್ಯದಿಂ ಮಿಗುತೆ (ಸಂಬರ. ೦-೩೦). ೧೧. ತೊರೆ : ತ್ಯಜಿಸು: ಬಿಡು : ಇನ್ನಿವಜಿರೊಳ್ ಇರದೆ ಪತ್ತೆಣ್ಬು ವಳಯಂ ಜಾರಿಸದನ್ನಂ ಭೋಗ ಮಿಕ್ಕವನಲ್ಲನಿನ್ನುರಾಜಂ (ಎಕ. II (R), ೦೭೩-೦೦೭ : 982) ; ಗಂಟಲಿನ ಗಾಣದ ಮೀನು ಮಿಗುವುದೇ ಮರಣಮಯಭಯವ (ತೊರರಾ. ೬-೦೪-೭೬). ೧೨. ಉಳಿ ; ಬಾಕಿಯಿರು : ಅವಶಿಷ್ಟವಾಗು : "ಮಿಗು—ಅತಿಕ್ರಮಣೇ. ಅವಶಿಷ್ಟೇ ಚ" (ಶಮಧಾ). ೧೩. (?) : ಪೊಟ್ಟವಟ್ಟಳಿಗೆ ಸಮನಾಗೆ ಗಿರಿಗೆಯ ಕೋಲುಮಟ್ಟಿ ಮಿಗಲುಂ ನೆಲಲುಮಣಮಿಾಯವಿನೊತ್ತ ಳವಿಯೊಳ್ ಬರೆ (ಎಕ. II (R). ೦೭೩-೯೦; 982).

[ದೇ.॥ ತಮಿ. ಮಲ. ಮಿಕು; ತುಳು. ಮಿಗು, ಮಿಕ್ಕು; ಕೊಡ. ಮಿಂಜ್; ತೆಲು. ಮಿಗುಲು, ಮಿವುಲು; ಕೋತ. ತೊದ. ಮಿಕ್]

**ಮಿಗುತಾಯ** (ನಾ). ವ್ಯಯ ಮಾಡಿ ಉಳಿದುದು: ಶೇಷ : ಈ ತಿಂಗಳಿನ ಸಂಬಳದ ಮಿಗುತಾಯ ಹೆಚ್ಚಾಗಿಲ್ಲ (ರೂಢಿ).

[< ಮಿಗುತೆ + – ಆಯ₄]

**ಮಿಗುತೆ, ಮಿಗತೆ. ಮಿಗಿತೆ** (ನಾ). ೧. ಶ್ರೇಷ್ಠವಾದುದು : ಉತ್ತಮವಾದುದು : ಬಗೆಗೆಡಲಿಂತೆನಲಲ್ಲದೆಯೊಂದು ಮಿಗುತೆಯುನಜಿ ಚಿನ್ಮಾತ್ರ ಮಿದೆಂದು (ಶರಗೀ. ೬-೮): ಅಗಣಿತಬ್ರಹ್ಮಾಂಡಗಳ ತನ್ನೊಡಲೊಳಿಟ್ಟ ಮಿಗುತೆಯುಹ ಬೊಮ್ಮದೊಳಪೊಕ್ಕು ಮತಿ ಹಿಂದಕ್ಕೆ ಮಗುಳದಿರಲಂತದರ ಹೆಸರೇನು ಪೇಳಿ (ಕೈಕವ. ೩-೬೦-೨). ೨. ಉಳಿದುದು ; ಉಳಿಕೆ : ಶೇಷ : ಪುಗುತೆ. ಪುಗುತೆಗಳ್; ಮಿಗುತೆ. ಮಿಗುತೆಗಳ್ (ಶಬ್ದಾನು. ೩೬೦ ಪ್ರಯೋ). **ಮಿಗತೆ** : ೩. ಲಾಭ ; ನಫೆ: ದೊಡ್ಡವೀರರಾಜನ ದಿನದಲ್ಲಿ ಕೂಡ ವರ್ತಕಪೇಟೆಯ ಶೆಟ್ಟಿಯಜಮಾನರು ಹೀಗೆ ಹಣ ಒಪಗಿಸಿದ್ದುಂಟು ;

ಅವನ್ನು ಮಿಗತೆಯೊಡನೆ ಹಿಂದಕ್ಕೆ ಪಡೆದವ್ನುಂಟು (ತಕಶಾ. ೬೩).

**ಮಿಗಿತೆ :** ೨. ಕಾಲಾಂತರದಲ್ಲೂ ಗೃಹದ ಜೀರ್ಣೋದ್ಧಾರಕ್ಕೆ ಪ್ರತಿ ವರ್ಷವೂ ಮಿಗಿತೆಯಾಗಿ ಕೊಟ್ಟಿದ್ದದು ಪೊಂದು ಹೊನು (ಎ೯. VIII. ತೀರ್ಥಹ. ೩೩-೬೦; ೩೦. 1430). [ಮಿಗು + —ತ್ತೆ₂./ ತಮಿ. ಮಿಕುತಿ, ಮಿಕುತಿವರ್; ಮಲ. ಮಿಕುತಿ; ತುಳು. ಮಿಗ್ತೆ· ಮಿಗಿತೆ; ತೆಲು. ಮಿಗತ]

**ಮಿಗುವರಿ** (ಕ್ರಿ). ೧. ಹತೋಟಿ ಮೀರಿ ಹರಿ,– ಪ್ರವಹಿಸು ; ಉಕ್ಕು: ಕೊರಗು ಮಿಗುವರಿವ ಕಂಬನಿಯು ಕುಡಿದ ಬಾಯ್ಕೆರೆದ (ಕಾಂಜಿ. ೧೩೯-೩೯೯). ೨. ಹೆಚ್ಚಾಗು ; ಅಧಿಕವಾಗು : ಮಿಗುವರಿಯುವಳ್ಳಿಯುಂ ನಗುತ ಬರೆ ಬದ್ದಿನಂ (ಕಾಂಜಿ. ೬೨-೦೦೩); ಎನಿತೆನಿತು ಮುಪ್ಪು ಮುಂಬರಿದು ಬಗಿವಪ್ಪುತಿಹುದನಿತನಿತು ಭೋಗಿಸುವ ಬಯಕೆ ಮಿಗುವರಿ ಯುತಿರಲು (ಶವಿಶ. ೨೩-೩೩). ೩. ಉಲ್ಲಂಘಿಸು ; ಅತಿಕ್ರಮಿಸು : ಈ ಮಾಗಣೆ ಎರಡು ನಮ್ಮ ಕೊಡಗಿನ ಸಂಸ್ಥಾನಕ್ಕೆ ಸೇರಿದ್ದು ಇದೆ . . . ಇದರ ತಳ್ಳಿಗೆ ಬರಬೇಡ· ಮಿಗುಪರಿದು ಬಂದರೆ, ತಾಳತಕ್ಕದ್ದಲ್ಲಾ (ರಾಜೇಂದ್ರ. ೯೯). [ಮಿಗು + ಪರಿ₂]

**ಮಿಗೆ₁** (ನಾ). ೧. ಹೆಚ್ಚಳ ; ಆಧಿಕ್ಯ : (ಕ). ೨. ಅತಿಶಯತೆ : ಮಿಗಿಲು : 'ಮಿಗೆವರ್', 'ಮಿಗೆವರಿ' ಪರಾ.

[ದೇ.॥ ತಮಿ. ಮಿಕ್ಕೈ; ತುಳು. ಮಿಗಿ]

**ಮಿಗೆ₂** (ಅ). ೧. ಹೆಚ್ಚಾಗಿ : ಅಧಿಕವಾಗಿ : ಮಿಗೆ ದುಷ್ಕರಕಾವ್ಯಂಗಳೊಳ ಗರ್ಹಿತಪ್ರಾಯಮುಕ್ಕುಮಾ ಶ್ರುತಿಕಷ್ಟಂ (ಕವಿರಾ. ೧-೬೮); ಅಲಂಪು ಮಿಗೆ ಭೋಗಿಸಿದಂ ಸುರಲೋಕಸೌಖ್ಯಮಂ (ಅಂಕ್ಕ. ೨-೬೦); ಕೃಷ್ಣೆಗೆ ಮಿಗೆ ದೊರೆಕೊಳಸದೆ ಕೋಪವುಮಂ ಮನಸ್ತಾಪವುಮಂ (ಗದಾಯು. ೦-೩೯). ೨. ಒಳ್ಳೆಯ ರೀತಿಯಲ್ಲಿ ; ಚೆನ್ನಾಗಿ : ಮಗಳೆ ನೀನಾತನ ಕೈವಿಡಿದಂದಿನ ಬಗೆಯ ಸುಖಂಗಳನಾತು ಮಿಗೆ ಜೀವಿಸುತಿರೆಯದುದುಗೊಜಿಗಳನಿತ್ತು ನಗರಾಜಸುತೆ ಕಳುಹಿದಳು (ಪೋಹತ. ೬-೯೬). ೩. ಪೂರ್ತಿಯಾಗಿ : ಸಂಪೂರ್ಣವಾಗಿ : ತಮ್ಮ ತಮ್ಮ ನಿಖಿಳವ್ಯಾಪಾರವ[ಸುಚಿದ]ರಸನ ನೋಡುವ ತವಕದೆ ಮಿಗೆ ನಗರಲೋಕವೆಯ್ದಿತ್ತಾಗಳ್ (ಕಾದಂಪೂ. ೪೬೩); ಮಿಗೆ ಇಂದುಮುಖಿಯಿಟ್ಟಾಣೆ ತೀವಿತ್ತು (ತಿರುರ. ೨೬. ೬-೦೦). 'ಒಗುಮಿಗೆ₂' ಪರಾ.

ಮಿಗೆಮಿಗೆ (ದ್ವಿರುಕ್ತಿ) : ಪಲವು ಸೂಳ್ ಕನಕವದು ಕಾಸಿದಡೆ ಮಿಗೆಮಿಗೆ ಬಣ್ಣ ವೆಗ್ಗಳವಾಗಿ ತೋರ್ಪುವಲಾ (ಬಸಪು. ೨೨-೬೩).

**ಮಿಗೆಯುರಳ ನೋಂಪಿ** = ಆಷಾಢಮಾಸದ ನಂದೀಶ್ವರಾಷ್ಟಮಿಯಿಂದ ಕಾರ್ತಿಕನಂದೀಶ್ವರಾಷ್ಟಮಿಯವರೆಗೆ . ಒಂದು ಹೂವಿನಿಂದ ಆರಂಭಿಸಿ ಪ್ರತಿದಿನವೂ ಒಂದೊಂದು ಹೂವನ್ನು ಹೆಚ್ಚಿಸಿಕೊಂಡು ಜಿನನಿಗೆ ಅರ್ಚನೆ ಮಾಡುವ ಒಂದು ವ್ರತ : ನೀನೀ ಮಿಗೆಯುರಳ ನೋಂಪಿಯುಂ ಜಿನಭಕ್ತಿಪೂರ್ವಕಂ ಕೈಕೊಂಡು (ಮವಿಕ್ಕ. III. ೬೫೯).

[<ಮಿಗೆ₁]

**ಮಿಗೆವರ್** (ಕ್ರಿ). ಅತಿಶಯವಾಗು : ಶ್ರೇಷ್ಠವಾಗು : ಮಿಗೆವಂದಿಲ್ಲರ ಬಿಲ್ಲ ಬಿನ್ನಣದ ಬಿಣ್ಪಂ ರಾಮನೇಸಂಬಿಸಂ ಮಿಗೆ ತನ್ನೇಸುಪಮಾನಮಾದುದೆನೆ ರಾಮಂ ಕಲ್ತ ಬಿಲ್ಬಲ್ಮೆಯುಂ ಪೊಗಟಲ್ವೇಚ್ಚಿದೆ (ಕುಂರಾಮಾ. ೩-೦೫೦); ಮಿಗೆವಂದ ಪೆರ್ಮೆಗಂ ಸ್ಥಿರತೆಗಮಾಶ್ರಯಮಾದ ಗಗನಲಕ್ಷ್ಮಿಯ ಮಧ್ಯಾಧಿಗತವಳಿತ್ರಯಮೆನೆ ಸಲೆ ಸೊಗಯಿಪುದು ಜಗತ್ತ್ರಯಂ ಪುರುತ್ತ್ರಯ ವಿಧೃತಂ (ಚಂದ್ರಪ್ರ. ೦-೬೯). [ಮಿಗೆ₁ + ಬರ್ (<ವರ್)]

**ಮಿಗೆವರಿ** (ಕ್ರಿ). ಅತಿಶಯಿಸು : ಮೇಲಾಗು : ಕೊಡನೊಳಗಣ ಜ್ಯೋತಿಯು ಅಡಗಿಸಲರಿಯದೆ ಮಿಗೆವರಿದಂತಾದೆಯೋ ಅಜಗಣ್ಣಾ (ಕೂಪ್ಪಸಂ. ೨೩-೬); ನೀವು ಹೊಕ್ಕಲ್ಲಿ ಹೊಕ್ಕು ಮಿಕ್ಕು ಮೀಜಿ ಮಿಗೆವರಿವ ಲಿಂಗಾಂಗಿಗಳ ಪಾದ ದೊಳು ಹಿಂಗದಂತೆ ಇರಿಸೆನ್ನ (ಶಸವ. III. ೨೦೩-೪೬೩). [ಮಿಗೆ₁ + ಪರಿ₂]

**ಮಿಜಾಜು**, ಮಿಜಾಸಿ, ಮಿಜಾಸು (ನಾ). ೧. ಡಂಭ ; ತೋರಿಕೆ : ಶೋಕು : (ಕ). **ಮಿಜಾಸಿ** : ೨. ದಿಮಾಕು : ಜಬ್ಬು : ಯಾಕವಾ. ಬಲು ಹೆಚ್ಚಾಗೇತಿ ನಿನ್ನ ಮಿಜಾಸಿ ? (ಮೂಗಾಬ. ೨೦೦). **ಮಿಜಾಸು : ೨.** ಏನೋ ಯಾರಿಗ್ ತೋರಸ್ತೀ ನಿನ್ನ ಸಭ್ಯಗೃಹಸ್ಥನ ಮಿಜಾಸು(ಬಾಂಡಾಯ.೬೯).

[← ಪಾರ. ಮಜಾಜ್; ಅರ. ಹಿಂ. ಮಿಜಾಜ್; ಮರಾ. ಮಿಜಾಜ್. ಮಿಜಾಸ್]

**ಮಿಜಾಸಿ** 'ಮಿಜಾಜು' ನೋ.

**ಮಿಜಾಸು** 'ಮಿಜಾಜು' ನೋ.

**ಮಿಜಿಮಿಜಿ** (ನಾ). ಹಿಂದೆ ಮುಂದೆ ನೋಡುವುದು : ಸಂದೇಹ ಪಡುವುದು : ತೊಂಚಾವಣೆ : ಬಲೆ ಮಿಜಿಮಿಜಿ ಜಾತಿ – ಈ ಚಳುವಳಿಯೋರದಾಂದೀ ಮನಸು ಬಲೇ ಚಂಚಲಾ (ಜಾನ್ಪಾ. ೯೩); ನಿನ್ನದು ಇದೇ ಸ್ವಭಾವ. ಹೀಗೇಕೆ ಸುಮ್ಮನೆ ಮಿಜಿಮಿಜಿ ಮಾಡುವಿ ? (ಚಕ್ರಶ. ೯೦೩). [← ತುಳು. ಮಿಜಿಮಿಜಿ = ಜಿಗುಟಾದ]

**ಮಿಟ್** (ನಾ). ಒಂದು ಅನುಕರಣ ಶಬ್ದ.

ಮಿಟ್ಟಂ ಮಿಡುಕು = ಸ್ವಲ್ಪವಾದರೂ ಅಲುಗಾಡು,– ಚಲಿಸು : ಮಿಟ್ಟಂಮಿಡುಕದಿರೆ ಗರುಡಧ್ವಜಮಚ್ಚಾಂಕುಕಲ್ಪಂ ನಡೆವಾರಿತ್ತಾತ್ಮ ವೇಗಾಪಹಸಿತ ಸುಮರುದ್ರಹಂಸಂ ರಾಜಹಂಸಂ (ಧರ್ಮಾ. ೨-೦). **ಮಿಟ್ಟ ಮಿಸುಗು**, ಮಿಟ್ಟ ಮಿಸುಕು, ಮಿಟ್ಟು ಮಿಸುಕು, ಮಿಟ್ಟು ಮಿಸುಗು = ಮಿಟ್ಟಂಮಿಡುಕು : ಜಮಾದಾರ ಮಿಟ್ಟ ಮಿಸುಗಲಿಲ್ಲ (ಗಂಗಾಶಾ. ೬೩); ದಾರಿಯಲ್ಲಿ ಧೋ ಧೋ ಮಳೆಯಾದರೂ ಅವನು ಮಿಟ್ಟ ಮಿಸುಕಲಿಲ್ಲ, ಬಿನ್ನನಾಗಲಿಲ್ಲ (ಸ್ವಶಿ. ೨೨೬); ಆಕೆ ಏನು ಮಾಡಿದರೂ ಮಿಟ್ಟು ಮಿಸುಕುತ್ತಿದ್ದಿಲ್ಲ (ಇಶ್ವಶ. ೨೦೬); ಶ್ರೀಕಂಠಶಾಸ್ತ್ರಿಗಳು . . . ಅರ್ಧತಾಸಿನ ವರೆಗೆ ಮಿಟ್ಟು ಮಿಸುಗಲಿಲ್ಲ (ಗಂಗಾಶಾ. ೦೯೨). **ಮಿಟ್ಟೆಂದು ಮಿಡುಕು** = ಮಿಟ್ಟಂಮಿಡುಕು : ಅಂತು ಮುಳಿದ ಪವನಜನ ಕೋಪಾಟೋಪಮಂ ಕಂಡು ಕೌರವಬಲದ ನಾಯಕರೊಳೊರ್ವರಪ್ಪೊಡಂ ಮಿಟ್ಟೆಂದು ಮಿಡುಕಲ್ಪಾರಿದಿರೆ (ಶಂಶಭಾ. ೦೨-೦೫೦ ವ).

**ಮಿಟಕಲಾಡಿ** (ನಾ). ಒಯ್ಯಾರಿ : ಸೋಗಲಾಡಿ : ಅಬ್ಬಬ್ಬ! ಮಿಟಕಲಾಡಿ. ಇವಳಿಗೆ ಇಪ್ಪತ್ನಾಲ್ಕು ಗಂಟೆ ಕಾಲವೂ ಕನ್ನಡಿಯ ಮುಂದೆಯೇ ಕೆಲಸ (ಹೂಹಣ್ಣು. ೩೯). [ದೇ.॥ ತೆಲು. ಮಿಟುಕುಲಾಂಡಿ]

**ಮಿಟಕಿಸು** 'ಮಿಡುಕಿಸು' ನೋ.

**ಮಿಟಕು** 'ಮಿಡುಕು₁' ನೋ.

**ಮಿಟಗರಿಸು** (ಕ್ರಿ). ರೆಪ್ಪೆಯನ್ನು ಬಡಿ; ರೆಪ್ಪೆ ಹೊಡೆ : ಅವನು ಕೆಲಸ ವಿಲ್ಲದೆ ಸುಮ್ಮನೆ ಮಿಟಗರಿಸುತ್ತಾ ಕೂತಿದ್ದಾನೆ (ಕಂಪ).

[< ಮಿಟುಗು₁ + — ಇಸು₃ / ತೆಲು. ಮಿಡುಕರಿಂಚು, ಮಿಣುಕರಿಂಚು]

**ಮಿಟಮಿಟ** (ನಾ). (ಬಂದೇ ಸಮನೆ ನೋಡುವುದನ್ನು ಸೂಚಿಸುವ) ಒಂದು ಅನುಕರಣ ಶಬ್ದ.

ಮಿಟಮಿಟಸಗ್ಗ = ಏನೆಯಿಕ್ಕದೆ ಪರಸ್ಪರ ಸುಮ್ಮನೆ ನೋಡು ತ್ತಿರುವ ದೇವತೆಗಳಿಂದ ಕೂಡಿದ ಸ್ವರ್ಗ; ಯಾವ ಆಕರ್ಷಣೆ ಅಥವಾ ಸುಖವೂ ಇಲ್ಲದ ಸ್ವರ್ಗ : ದಿಟದಿಂದೊಲ್ದವರಂ ಲಂಪಟತೆಯಿನ ಮರ್ಪಿ ನೆರೆವ ನೆರೆವನಿತು ಸುಖಂ ಘಟಿಯಿಸದು ತಮ್ಮೊಳೆನಿಸುವ ಮಿಟಮಿಟಸಗ್ಗಂಗಳೊಳೆಯೇ ಸೌಧರ್ಮಂ (ಚಂದ್ರಪ್ರ. ೪-೬೩).

**ಮಿಟಲಿ**, ಮಿಟಿಲ, ಮಿಟಿಲಿ, ಮಿಟಿಲೆ, ಮಿಟುಣೆ, ಮಿಟ್ಟಲಿ, ಮಿಟ್ಟುಲಿ, ಮಿಟ್ಲಿ, ಮಿಟ್ಲೆ, ಮಿತಿಲಿ, ಮೆಟ್ಟಲಿ (ನಾ). ೧. ಒಂದು ಬಗೆಯ ಮರ: P ಇದರ ಎಲೆಯನ್ನು ಉಪ್ಪುಕಾಗದದಂತೆ ಬಳಸಲಾಗು ತ್ತದೆ: "ದರ್ಬುರಿಯೊಡಲು ಮಿಟಲಿಯ[ಪಾಠಾಂ. ಮಿಟಲಮ]ಕ್ಕು" (ಮಂಗರಾ. ೩೩-೦೯); ಮಿಟಲಿ :—ಈ ಬೇರಂ ನಿಂಬೆಹುಳಿಯಲ್ಲಿ ತೇದು ಪೂಸಲು

ತೊಡೆವಾಳ್ ಪೂಣ್ಬ್ರಂ (ಪಪ್ಪ. ೬). ಮಿಟಿಲ : ೧. ಬಿರಪಣ್ —ಮಿಟಿಲ" (ಓಪಂ. ೪೩). ಮಿಟಿಲಿ : ೧. ಕಿರುಗೆರೆಯು ಯಡಲಗೆರೆಯ ಮಿಟಿಲಿಪೋಡಿನಲ್ಲಿ ನಟ್ಟ ಕಲ್ಲು (ಎಕ. XIV, ಮಂತ್ಯ. ೧೦೩-೦೦೦; ಸು. 1516). ಮಿಟಿಲೆ : ೨. ಒಂದು ಬಗೆಯ ಔಷಧೀಸಸ್ಯ : ಮಾಚಿ : ಕಗ್ಗೊಜಲಿ ಬಗುಡಿ ಮಿಟಿಲೆ [ಶಾಕಾಂ. ಟಂಕೆ]ಯ ಸುಗ್ಗಿಯ ಪತ್ರಂಗಳೊಡನೆ ಮಾಡಿದ ಚೂರ್ಣಂ ಅಗ್ಗಳಮೊಂದಿರೆ ಸಸ್ಯದೊಳಿಗ್ಗಲ್ಲದೆ ವಿಷಹರಂ ಮಲಂ ಪ್ರತ್ಯೇಕಂ (ಖಮದ. ೬-೬೨). ಮಿಟುಣೆ : ೨. ಪರ ಮಿಟುಣೆ ಸುಗಂಧಿಗಳೆಂಬೆರಡು ಬೇರ್ಗಳನೆ ಚೂರ್ಣಿಸದಜಿಗೊಳ್ ತುಪ್ಪಂ ಬೆರಸಿರದೆ ಕುಡಿಸಲದು ಬಿಲ್ಲರಿಗನ ವಿಷಮಂ ಕ್ಷಣಾರ್ಧದೊಳ್ ಪರಿಹರಿಕುಂ (ಖಮದ. ೧೦-೬೩). ಮಿಟ್ಟಲಿ : ೨. "ಕರ್ಕಶ—ತೊಟ್ಟು, ಮಿಟ್ಟಲಿ. . . ಕಪಿಪಡವಲ" (ಓಪಂ. ೨೨). ಮಿಟ್ಟುಲಿ : ೧. ಘೂತಾಳಿ ಬೂರುಡೆ ಮಿಟ್ಟುಲಿಯ ದಿಂಡ ಪಾತಂಗ ಮುಂಗುಳಿಯ ಮರನು (ಶಿಪಾಂ. ೦-೩೩). ಮಿಟ್ಲೆ : ೨. (ವ್ಯಾಶಿ. ೬೨-೦೪೬೮). ೩. ಒಂದು ಬಗೆಯ ಬಾಳೆ : ಕರ್ನಾಟಕದ 'ಮಿಟ್ಲೆ' ಹಾಗೂ ರಸಬಾಳೆಗಳು—ಸಾಕಷ್ಟು ಹೆಸರುವಾಸಿಯಾಗಿವೆ (ಸುತ್ತುಮು. ೬೦). ಮಿಟ್ಲೆ : ೨. "ಮಿಟಲ, ಮಿಟ್ಲೆ. . . ಪುಂಜ್ಯ" (ಸಕ್ಕಿ. ೦೨೪). ಮಿತಿಲಿ : ೧. ಆ ಊರಿನವರು 'ಮಿತಿಲಿಸೌದೆ'ಯನ್ನು ಒಲೆಗೆ ಒಟ್ಟುವುದಿಲ್ಲವಂತೆ (ಜನ್ಪೂರು. ೦೯೬). ಮೆಟ್ಟಲಿ : ೧. ಮೆಟ್ಟಲೀಮರದ ಬಳಿಯ ಬಡಗ ಮುಖ ನೆ ೧ (ಎಕ. V (II). ತಿರುಮ. ೦೬-೩೬೮; 1749).

**ಮಿಟಾಯಿ** 'ಮಿಠಾಯಿ' ನೋ.

**ಮಿಟಿಕಿಸು** 'ಮಿಡುಕಿಸು' ನೋ.

**ಮಿಟಿಮಿಟಿ** (ನಾ). (ಒಂದೇ ಸಮನೆ ನೋಡುವುದನ್ನು ಸೂಚಿಸುವ) ಒಂದು ಅನುಕರಣಶಬ್ದ.

**ಮಿಟಿಮಿಟಿ ನೋಡು** = ಎವೆ ಮಿಟುಕಿಸದೆ ನೋಡು : ಮಿಕಿಮಿಕಿ ನೋಡು: ನನ್ನ ಮಾತನ್ನು ಕೇಳಿ ಆಶ್ಚರ್ಯದಿಂದ ಆಕೆ ನನ್ನ ಕಡೆ ಮಿಟಿಮಿಟಿ ನೋಡತೊಡಗಿದಳು (ಶರಶಾ. ೦೪೬). **ಮಿಟಿಮಿಟಿಸಗ್ಗ** = ಎವೆಯಿಕ್ಕದೆ ಪರಸ್ಪರ ಸುಮ್ಮನೆ ನೋಡುತ್ತಿರುವ ದೇವತೆಗಳಿಂದ ಕೂಡಿದ ಸ್ವರ್ಗ; ಯಾವ ಆಕರ್ಷಣೆ ಅಥವಾ ಸುಖವೂ ಇಲ್ಲದ ಸ್ವರ್ಗ : ಮಾಜಿಂಡೆಯಿಲ್ಲ ಮಜ್ಜನಮಿನಿಸಿಲ್ಲ ಕರ್ಪೂರವೀಳೆಯಗೊಳಲಿಲ್ಲ ಆರೋಗಣೆಯಿಲ್ಲದಾ ಮಿಟಿಮಿಟಿ ಸಗ್ಗದಾ ತನ್ನಿಯರಿಗೆಳಸುವರೆ (ನೇಮಿಸಂ. ೬೪-೬೮). **ಮಿಟಿಮಿಟಿಸ್ವರ್ಗ** = ಮಿಟಿಮಿಟಿಸಗ್ಗ : "ಮಿಟಿಮಿಟಿಸ್ವರ್ಗ—ಬೆರಗು. ಸುಖವಿಲ್ಲದ ಸ್ವರ್ಗ. ಕಲಸವಿಲ್ಲದ ಸ್ವರ್ಗ" (ಶಾಸಕೋ. ೩೦); ಅವು ಪತ್ತೆಯಾಗಿ ಕೈಗೆ ಮರಳುವ ತನಕ ಲಂಡನ್ನಿನ ಹೋಟೆಲುಕೋಣೆಯ ಮಿಟಿಮಿಟಿಸ್ವರ್ಗದಲ್ಲಿ ಕುಳಿತಿರುವುದಾದರೂ ಸಾಧ್ಯವೆ ? (ಸಂಟಿರು. ೦೦೪).

**ಮಿಟಿಲ** 'ಮಿಟಲಿ' ನೋ.

**ಮಿಟಲಿ** 'ಮಿಟಲಿ' ನೋ.

**ಮಿಟಿಲೆ** 'ಮಿಟಲಿ' ನೋ.

**ಮಿಟುಕಿಸು** 'ಮಿಡುಕಿಸು' ನೋ.

**ಮಿಟುಕು₁** 'ಮಿಡುಕು₁' ನೋ.

**ಮಿಟುಕು₂** 'ಮಿಡುಕು₂' ನೋ.

**ಮಿಟುಣೆ** 'ಮಿಟಲಿ' ನೋ.

**ಮಿಟ್ಟನೆ** (ಅ). ಅತಿಯಾಗಿ, ಅಧಿಕವಾಗಿ ಎಂಬರ್ಥದ ಒಂದು ಅನುಕರಣಾವ್ಯಯ : ಪ್ರೋಷಿತಪ್ರಿಯೆಯಂತೆ ಮಹಿಯೊ ಮಿಟ್ಟನೆ ಮೌನ ! (ಹಸ್ಮರ. ೨೨-೦೬೦).

**ಮಿಟ್ಟನೆ ಮಿಡುಕು** = ೧. ಬಹಳವಾಗಿ ದುಃಖಿಪಡು, —ಸಂಕಟಪಡು : "ಮಿಟ್ಟನೆ ಮಿಡುಕಿತೆನಲಟಲು" (ಕಾವ್ಯಮಂ. ೬೦); ಸೌಂದರನ ಕಾಣದೆ ಬಳಲ್ದಳಲ್ದೆಬ್ಬಿ ಮಿಟ್ಟನೆ ಮಿಡುಕಲೊಡನೆ ಜಂಬು (ಸೌಂದಕಾ. ೧೪-೦೩) : ತನ್ನರೆಯೊಪಲಂ ಕಡುಪಿಂ ಸುಡೆ ಪಿರಿ ಮಿಟ್ಟನೆ ಮಿಡುಕುತ್ತೆ ಬಾಯ್ಬಿಡುತೆ ನೃಪತಿ ಸಿಡಿಮಿಡಿಗೊಂಡಂ (ಪ್ರಕಪ. ೩೪-೯೨). ೨. ಸ್ವಲ್ಪವಾದರೂ ಅಲುಗಾಡು ; ಮಿಸುಕಾಡು : ಚಿತ್ರದ ರೂಪಿನಂತೆ ಮಿಟ್ಟನೆ ಮಿಡುಕದೆ ನಿಂದು (ಧರ್ಮಾಪ್ಪ. ೦೦-೩೦); ದಿಟ್ಟ ವಿಷಪುಷ್ಪ ಫಣಿಪತಿ ಮಿಟ್ಟನೆ ಮಿಡುಕದೆ ಬಿಟಿಲ್ವು ಪಟ್ಟದು ಭಯದಿಂ (ಶಂಹಂ. ೬-೩೬) ; ಪಟ್ಟಿಗಳಂಕದಾಳುಗಳಿದ್ದರಲ್ಲಲ್ಲಿ ಮಿಟ್ಟನೆ ಮಿಡುಕದೆ ನಿಂದು (ಭರತ. ೦-೬೪). **ಮಿಟ್ಟನೆ ಮಿಸುಕು** = ಮಿಟ್ಟನೆ ಮಿಡುಕು ೨ : ಕಟುಪಟುಪ್ರಬಲಸಾಹಸಿಕರಪ್ಪ ವೀರಭಟರೆಲ್ಲಂ ನಟ್ಟಂತೆ ಮಿಟ್ಟನೆ ಮಿಸುಕದಿರೆ ನೆಟ್ಟನೆ ಕಂಡು (ಶಾಂತೀಶ್ವ. ೮-೦೦೩ ವ). [ಮಿಟ್ + — ಅನೆ₁]

**ಮಿಟ್ಟಲಿ** 'ಮಿಟಲಿ' ನೋ.

**ಮಿಟ್ಟಿ** 'ಮಿಟ್ಟೆ' ನೋ.

**ಮಿಟ್ಟಿಗೆ** (ನಾ). ಒಂದು ಬಗೆಯ ಭಕ್ಷ್ಯ : ಮಿಟ್ಟಿಗೆ ಮಾಡಿ ಬಡಿಸಿದ್ದರು. ಬಲು ರುಚಿಯಾಗಿತ್ತು (ಮನೋಸಂ. ೬೬). [ ? ]

**ಮಿಟ್ಟಿಯಂಬು** 'ಮಿಟ್ಟೆಯಂಬು' ನೋ.

**ಮಿಟ್ಟಿಸೆ** (ನಾ). ಒಂದು ಊರಿನ ಹೆಸರು : ಮಿಟ್ಟಿಸೆ ಆ ಮಹಾಜನಕ್ಕೆ ಸಾಲೆ ಎಲಿಸೆ ಆ ಸಾಸಿರ್ವರ್ಗ್ಗಂ ಸಾಲೆ ಮುಂಟ್ಟಗುಪ್ಪೆ ಸಾಸಿರ್ವರ್ಗ್ಗಂ ಸಾಲೆ ಆಚಂದ್ರತಾರಕಂ (ಎಕ. VII, ಶಿಕಾ. ೯೩ (೨)—೦೦: ಸು. ೫೯೦೭). [?]

**ಮಿಟ್ಟು₁** (ಕ್ರಿ). ಚಿಮ್ಮು : ಮಿಡಿ : ಆನೆಯೇರಿ ಕಪಡೆಯ ಮಿಟ್ಟಿದ (ತುರಂಗ. ೩೨-೨೩). 'ಮಿಡಿ₁' ಪರಾ.

[ದೇ. II ತಮಿ. ಮಿಣ್ಣು=ತಳ್ಳು; ತೆಲು. ಮಿಟ್ಟು]

**ಮಿಟ್ಟು₂** (ನಾ). [ಸಂಗೀತ] ಮೃದಂಗದ ಬಲಮುಖದಲ್ಲಿರುವ ಚರ್ಮದ ಮೇಲೆ ತೋರುಬೆರಳಿನಿಂದ ಹೊಡೆಯುವ ಪೆಟ್ಟು : ನಾರಾಯಣಸ್ವಾಮಿಅಪ್ಪಾ ಅವರು . . . ಹೊಸದಾಗಿ ಮೃದಂಗ ವಸ್ತೋದನ್ನು ಮಾಡಿ ತಂದಾಗ, ಅದನ್ನು ಕೊಂಚಕಾಲ ನುಡಿಸಿ ಅದರ ಮಿಟ್ಟು, ಚಾಪು ಮತ್ತು ಟೊಪ್ಪಿ, ನಾದಗಳನ್ನು ಸರಿಯಾಗಿದೆಯೋ ಎಂದು ಪರೀಕ್ಷಿಸುತ್ತಿದ್ದರು (ಸಂಗೀತ. ೦೦೧). [<ಮಿಡಿ₁]

**ಮಿಟ್ಟುಲಿ** 'ಮಿಟಲಿ' ನೋ.

**ಮಿಟ್ಟೆ, ಮಿಂಟ್ಟೆ, ಮಿಟ್ಟಿ, ಮಿಣ್ಣೆ, ಮಿಂಟೆ** (ನಾ). ೧. ಎತ್ತರವಾದ ಭೂಮಿ ; ದಿಣ್ಣೆ ; ದಿಬ್ಬ; ತೆವರು : "ದಿಂಗೆ ಮಿಣ್ಣೆ ಮಿಟ್ಟೆಯದು" (ಶಬ್ದಕಂ. ೨೪೯); ಜಲವೆಲ್ಲ ಹರಿಮುಯ ಶಿಲೆಯೆಲ್ಲ ಶಿವಮಯ ಮಳಲು ಮಿಟ್ಟೆಗಳೆಲ್ಲ ಮಣಿಯ ಮಯವು(ಕುಂಂದ.೯-೯೦-೨);ಜೋಣಿಯ ಪ್ರದೇಶ ಹೊರತಾಗಿಯೆಲ್ಲ ಕಡೆಯಲ್ಲಿ ತೆರೆಯಂಥ ತಗ್ಗು ಮಿಟ್ಟೆಗಳನ್ನು ಕಾಣಬಹುದು (ಕಾಗೆ. ೯೩೪); ರಥ ಬರುವ ರಭಸಕ್ಕೆ ಗುಂಡುಕಲ್ಲು ತಗ್ಗು ಮಿಟ್ಟೆ ಗಿಡ ಸಾಪಾಗಿ ಕುಂಬಾರನ ಚಕ್ರದಂತೆ ತಿರುಗಲು ಭೂಮಿ (ಕರ್ನಾಕ. ೨೯೪). ೨. ಮಣ್ಣಿನ ಮುದ್ದೆ : ಹೆಂಟೆ : ಕಾಮದೇವನಿಮ್ಮಾವಿನ ನನೆಯ[ನ]ಂಬುಗಳುಮನವಜಿಬಿಲ್ಕಿಡಿಯನೆ ಮಿಟ್ಟೆ[ಯುಮಂ] ಮಾಡಿ ತನ್ನನೇಸಾಡಿ ಕಾಡೆ (ಶಂಕಕಾ. ೩-೦೨ ವ); ತೊಟ್ಟನೆ ಕಲ್ಲು ತಾಗಿದ ಮಿಟ್ಟೆಯವೋಲ್ನುಗುಟ್ಟಿಂ (ಸಮುಕ. ೯-೬೨); ನಮ್ಮ ಕೂಡಲ ಸಂಗನ ಶರಣರ ಕಂಡುದಾಸೀನವ ಮಾಡಿದರೆ ಕಲ್ಲತಾಗಿದ ಮಿಟ್ಟೆ[ಶಾಕಾಂ. ಮಿಂಟೆ] ಯಂತಪ್ಪರಯ್ಯಾ (ಬಸವ. ೦೯೪): ಬಿಟ್ಟ ಕಣ್ಣಿಗಳ್ ಕಲ್ಲ ತಾಗಿ ಮರಳುತ್ತಿರ್ಪ ಮಿಟ್ಟೆಯಂತಾದವು (ಚೆಬಕ. ೪೪-೦೩). ೩. ಉರುಳೆ ; ಗುಂಡು : ಅಲರ್ವಿಲ್ಲನ ಪಸಿರ್ವರಲ ಮಿಟ್ಟೆ [ಶಾಕಾಂ. ಮಿಂಟೆ]ಗಳ ಜಂಗುಳಿಯಂತೆ ಮೆರೆವ ಬಣ್ಣೊನೆಯ ತಳಿರ್ವಡಕೆಯ ಮರದ ಸಾಲ್ಗಳು ಕಣ್ಗೊಳಿಸಿಹವೇನ ಬಣ್ಣಿಪೆನು (ಶಬರಶಂ. ೩-೯೮). ೪. ಬಾಣದಂತೆ ಪ್ರಯೋಗಿಸುವ ಒಂದು ಸಾಧನ ಮತ್ತು ಅದರಲ್ಲಿಟ್ಟು ಹೊಡೆಯುವ ಗುಂಡುಕಲ್ಲು ; ಕವಣೆ : [ಕೂರಂಬಿನ ಕವಲಂಬಿನ] ಪಾಜುಂಬಳೆಯ ಕಕ್ಕಡೆಯ [ಮಿಟ್ಟೆಯ] ಮೊಟ್ಟೆ ಸರಲ ಬಲ್ಸರಿಯಂ

ಸುರಿಯೆ (ಧರ್ಮಾಮೃ. ೧೩-೧೨೪): ಬೇವಿನ ಕಟ್ಟೆ . . . ನಾನಾವಿಧ ಪಾಪದುಷ್ಟಮೃಗವಂ ಕೆಡೆಯೆಚ್ಚುವ ಮಿಟ್ಟೆ . . . ಎನೆ ರಂಜಿಪುದಲ್ತೆ (ಪಟಕು. ೧೪-೯): ಪೊಡವಿಪತಿ ಚಿಕ್ಕಂದು ಮಿಟ್ಟೆಯ ಹೊಡೆಯೆ ನಡುಗಡಲಲ್ಲಿ ಬಿದ್ದನು (ಕೌಶಿಕಾ. ೩-೧೧); ಬಿಡುವಲೆ ಸೊರ್ಕು ಮದ್ದು ಪದವಿಲ್ಲಿಡಿವಿಲ್ಲೆಲೆಯಂಬು ಮಿಟ್ಟೆ [ಪಾಠಾಂ. ಟ್ಟಿ] . . . ಎನಿಪ್ಪವಂ ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್ (ರಾಜಶೇ. ೫-೫೨). ೫. ಮೊಗ್ಗು; ಮುಗುಳು: ಹೂವಿನ ಮಿಟ್ಟೆಯನ್ನು ಹೂವಾಗಿಸಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಮಂದಾರಳನ್ನು ಬೇಗ ತಾಯಿಯಾಗುವಂತೆ ಮಾಡಿಸಲು ಸಾಧ್ಯವಿಲ್ಲ (ಚಾಳುವೈ. ೧೩). ೬. ನೆಲ; ಭೂಮಿ (?) : ಅರಸಿ ಕುಮಾರನಂ ಪಡೆದ ಭಂಗಿಯನೇವೆಸಗೊರ್ಳ್ವೆನೆಲ್ಲಮೆಲ್ಲರ ತೆಱನಲ್ತು ಮಿಟ್ಟೆಯೊಳೆ ತಾಂ ಪಡೆದಂತೆ ಸುಖಪ್ರಸೂತಿಯೊಪ್ಪಿರೆ ಪಡೆದಳ್ (ಸೂಕ್ತಿಸು. ೭-೫೬).

**ಮಿಂಟೆ$_1$** : ೨. ವಿಮಾನಂ . . . ಕಲ್ಲಂ ತಾಗಿದ ಮಿಂಟೆ [ಪಾಠಾಂ. ಟ್ಟೆ] ಯಂತೆ ಚಿಟ್ಟಮಂ ಪಳಂಚಿದ ಭೃತ್ಯರದಂತೆ ಪಿಱಿಸಾರ್ದು ನಿಂದು (ಧರ್ಮಪ. ೧-೬೫ ವ); ಈ ಕಪಟಮಂ ಮಾಡಿ ಬಳಿಕೆನ್ನ ಮಗಳ ನಾನೇ ಕೊಂದೆನೀ ತೆಱಂ ಕಲ್ಲನೆಚ್ಚಾ ಮಿಂ[ಪಾಠಾಂ. ಮಿಾಂ]ಟೆಯಾ ಕರ್ತುವಂ ತಾಗಿದಂತಾಯಿತು (ಸಮ್ಯಕ್ತ್ವ. ೭-೪೯); ಮಲ್ಲರ ಮಲ್ಲನ ಮೈಯೊಳವನ ಮುಷ್ಟಿ ಕಲ್ಲ ತಾಗಿದ ಮಿಂಟೆಯಾಯ್ತು (ನೇಮಿಸಂ. ೧೭-೧೧೬). ೩. ಸೊನ್ನೆಯ ಮಿಂಟೆ ಮಿಸುನಿಗರಡಗೆಯಂತೆ ಚನ್ನೆಯ ಕುಚಗಳೊಪ್ಪಿದವು (ಶ್ರೀಪಾಂ. ೩-೫೭); ಆ ಮುನಿಪತಿಯ ಪರಡುಗಳೆಸೆದವಾ ಸೋಮಧರಾರಿಯ ನೆಸುವ ಹೇಮದ ಮಿಂಟೆಗಳಂತಾ ನೃಪತಿಗೆ (ರಾಮಾಭ. ೪-೧೫೫); ಚಿನ್ನದ ಚಿಕ್ಕ ಮಿಂಟೆಯ ಪೋಲ್ವ ಮೊಲೆಗಳ ಸನ್ನುತ ಪೊರಮಾರುಗಳ ಚೆನ್ನೆಯರರಸಿ ಪದ್ಮಶ್ರೀನಂದೆಯ ಜೆನ್ನನೊದೆದು ಪುಟ್ಟಿದಳು (ನಾಗಕು. ೧೯-೭೨). ೪. "ಶರಮಂಡಿ ಮಿಂಟೆ [ಪಾಠಾಂ. ನೇಮಿ] ಯಾಕ್ಕಂ" (ಮಂಗರಾ. ೬೭-೩೫); ಸುರಿದನು ಸರಳ ಸಾರವನನಲಗರ್ಭದ ಬಾಯ ಧಾರೆಗಳನಿಲಗರ್ಭದ ಗಱಿಗಳಶನಿಯ ಗರ್ಭಮಿಂಟೆಗಳ್ (ಕುಮಾ.ವಿ. ೬-೩೫); ಬೋಳೆಗಳ ಮಿಂಟೆ [ಪಾಠಾಂ. ಮಿಟ್ಟಿ, ಮಿಾಟೆ]ಗಳ ದೇಹದ ಸಾಳುವನ ಗಳಿಯಂಟುಗಳ ಶಬರಾಳಿ ಬಂದುದು ಪರ್ಣಶಾಲೆಗೆ ಸೂರ್ಯವಂಶಜನ (ತೊರರಾ. ೩-೩-೩); ತಾವರೆಗಾವೊಳಾಗಿಸಿದ ಬಿಲ್ಗೆ . . . ಭೃಂಗಾವಳಿಯೆಂಬ ಮಿಂಟೆವಿಡಿದಂಟಿಸಿ ಗೆಂಟಿನೊಳಿಟ್ಟು ಪಾಱಿಪರ್ ತೀವಿದ ಕೀರಮಂಡಳಿಯನಲ್ಲಿಯ ಪಾಮರಿಯರ್ನಿರಂತರಂ (ರಾಜಶೇ. ೨-೧೭). **ಮಿಟ್ಟೆ** : ೧. ತಗ್ಗು ಮಿಟ್ಟಗಳನ್ನರಿಯದೆ ಬೀಳುತ್ತೇಳುತ್ತ. ತಲೆಗೆವರಿ ಬಾಯಿ ಬಿಡುತ್ತ ಮೈಮೇಲೆಚ್ಚರಿಲ್ಲದೆ ಅಂಬಿಕಾಭವನವನ್ನು ಸಮಿಾಪಿಸಿದ (ಬಿಡುಗಿ. ೧೬೦). ೨. "ಮಿಟ್ಟೆಯೆ ಮಿಣ್ಣೆಯುಮಕ್ಕುಂ" (ಶಬ್ದಸಂ. ೨೩೦); ಬಾಣಗಳ ನಾರಸಿಂಹನ ಮೇಲೆ ಬಿಡಲು ಕಲ್ಲ ತಾಗಿದ ಮಿಟ್ಟೆಯಂತೆ ಹಾಱಿ ಹೋಗಲು (ಭೈರಸೂ. I, ೧೧೦). ೩. ಉನ್ನತಫಲಗಳೊಂದಾಗುದಿಸಿದವೊಯೆನುತಿಪನು ಜಟ್ಟಿಯ ವಿಧದಿ ಇನಮಂಡಲಕೆ ಮಿಟ್ಟೆಯ ಮಿಡಿದೊಲ್ಯೆದಿದನು (ಅತ್ಯಕ. ೩೦-೨೬). ೪. ಕಾಮನ ಕಯ್ಯ ಮಿಟ್ಟಿ [ಪಾಠಾಂ. ಟ್ಟೆ] ಗಳೊ ಕತ್ತುರಿಗಳೊ ಕಾಮಿತಪೂಗದೊಡ್ಡುಗಳೊ (ವರ್ಧಕ. ೧-೧೧೯); ಸಿಂಗಾಡಿವಿಲ್ಲಿನ ಗುಱಿಯ ಮಿಟ್ಟಿಯನೆಸುತ ಬಂದನು ತರಹರದಿ ಶ್ರೀಹರಿಯ ನಿನ್ನನು ನೋಳ್ಪ ತವಕದಲಿ (ಕೃಷ್ಣಾಕಾ. ೨೮-೭). ೫. ಹಳ್ಳಿಗರಿಗೆ ಪ್ರಣಯ ಬರುವುದು ಚಿಗಿತ ಮಾಮರಕ್ಕೆ ಮಿಟ್ಟಿ ಕೂತಂತೆ (ಕನ್ನತಾ. ೧೧೫). **ಮಿಣ್ಣೆ** : ೧. "ಮಿಂಗೆ ಮಿಣ್ಣೆ ಮಿಟ್ಟೆಯದು" (ಶಬ್ದಸಂ. ೨೯೯). ೨. "ಮಿಟ್ಟೆಯೆ ಮಿಣ್ಣೆಯುಮಕ್ಕುಂ" (ಶಬ್ದಸಂ. ೨೩೦); ಪವನಸುತ ಕಂಡಾಗ್ರಹಿಸಿ ಮೇಲೆ ಗವಿಸಿದನು ಕುಧರವನು ಖಳನವಯವದ ಸೋಂಕಿನಲೊಡದುದಚಲಕೆ ಮಿಡಿದ ಮಿಣ್ಣೆಯೊಲು (ಅನಂರಾ. ೭-೬-೭೫). ೩. ಹೊಳಪಿರುವ ದುಂಡಗಾದ ಸಣ್ಣ ಮಿಣ್ಣೆಯನ್ನು ನೀನು ನೋಡಿದರೆ ಅದು ನಿನಗೆ ಏನಾದರೊಂದು ಸಂಗತಿಯನ್ನು ಹೇಳುವುದಿಲ್ಲವೆ? (ಮುತಂಬೆ. ೩). **ಮಿಾಂಟೆ** : ೨. ಕಲ್ಲಂ ತಾಗಿದ ಮಿಾಂಟೆಯಂತೆ ಮುಟ್ಟುಗೆಟ್ಟು (ಧರ್ಮಾಮೃ. ೧೧-೧೩೭): ಸೂಂಕಿ ಮುಗುಚಲ್ ಕಲ್ಲನಿರದೆಚ್ಚ ಮಿಾಂಟೆ ಮುಗುಚದ ತೆಱಂಬಡೆದುದಾಗಸಹಸ್ಲಿ ತಿಱಿಚ್ಚಿನುತಪೆ (ಸಮ್ಯಕ್ತ್ವ. ೧೧-೩೪). ೩. ಕಳಮೆಯ ಕದಿರ ಮಿಾಸಲ ಕಂಪನುಣಲೆಂದಳಿಶಿಶುಗಳು ಕೂಸೆಯೇಱಿ ಪೋಗಿದವು ಪೂಗಣೆಯನ ಪಸುಗಾರ್ಮಿನ ತೊಳಪ ನೀಲದ ಮಿಾಂಟೆ[ಪಾಠಾಂ. ಮಿಂಟೆ, ಮಿಾಂಟು]ಯಂತೆ (ಶ್ರೀಪಾಂ. ೧-೫೦); ಮಕರಾಂಕಮಂಡಿತ ಪೊಂಗಣೆಗಳ್ಗೆ ಮೌಕ್ತಿಕ ಮಿಾಂಟೆಯ ಸಾರ್ಚಿದಂತೆ ನಖಚಕ್ರದಶಕದಿಂ ಬೆರಳ್ಗಳೊಪ್ಪಿರ್ದು ಪಾಯಕಸಂಕ್ಷ್ಮಯುಗಳಪಲ್ಲವದಿ (ಪೋಹಕ. ೨೩-೧೪). ೪. ಎಮ್ಮಯ್ಯಂ ಪೇಳ್ದಂತೆ ನೆಗಟ್ಚೆಂದು ಕಿಱಿಯ ಬಿಲ್ಲುಂ ಮಿಾಂಟೆಯುಮಂ ಕೊಂಡು ಪೋಗಿ ಪಚ್ಚವಡದಿ ಉಟಱಿಯಂ ನೋಟ್ಪನ್ನೆಗಂ ಕರಿಯ ಪಿರಿಯ ತಲೆಯ ಸಿಡಿಯ ಪುಟು ನೆಗೆದು ತೋಱಿದೊಡೆ ಮಿಾಂಟೆ[ಪಾಠಾಂ. ಮಿಟ್ಟೆ]ಯಂ ತೊಟ್ಟು ತೆಗೆದಿಸುವಾಗಳ್ (ಜೀವಸಂ. ೧೩೪-೩೦ ವ) ; ಬಳಿಕೊಂಬತ್ತುಸಾವಿರ ಕೋಲು ಮಿಾಂಟೆಯ ಕವಲುಗಣೆ ಹನ್ನೆರಡುಸಾವಿರವು . . . ಅಱು ಬಂಡಿಯ ಲೆಕ್ಕವಿದೆ (ಕುಮಾ.ಕ. ೧೬-೨೨) ; ಗೋಪುರಪ್ರಾಕಾರಮಂಟಪ ವಿಮಾನಂಗಳೊಳ್ ನೆಲಸಿರ್ಪ ಕಿಱುವಕ್ಕಿಗಳನೂದಿ ಮಿಾಂಟೆಗಳಿಂದಿಟ್ಟು ಕೆಡಪಿ . . . ತಂತಮ್ಮ ಸತಿಸುತಪಿತರೊಡವೆರಸುಣ್ಬರ್ (ಶಿವಮಂ. ೭-೧೧).

**ಮಿಟ್ಟೆಗೊಂಡ ಚಿಟ್ಟೆ, ಮಿಟ್ಟೆಕೊಂಡ ಚಿಟ್ಟೆ** = ಮಣ್ಣಿನ ಹೆಂಟೆಯ ಹೊಡೆತಕ್ಕೆ ಸಿಕ್ಕಿದ ಮಿಡಿತೆ : ಮುಸುಱಿ ದಿವ್ಯಾಸ್ತ್ರಚಯಂಗಳ್ ಕೊಳೆ ಗಾಂಧರ್ವಬಲಂಗಳ್ ಕೆಡೆದುವು ಮಿಟ್ಟೆಗೊಂಡ ಚಿಟ್ಟೆಯ ತೆಱದಿಂ (ಶಂಖಪಾ. ೭-೩೬) ; ಬೆನ್ನನಟ್ಟಿ ನಟ್ಟ ಜಟ್ಟಿಗೆಯುಂ ಮಿಟ್ಟೆಗೊಂಡ ಚಿಟ್ಟೆ [ಪಾಠಾಂ. ಬಿಟ್ಟೆ]ಯಂತೆಯುಂ ಬಡಿಗೊಂಡ ಮೊಲದಂತೆಯುಂ ತಲೆಕೆಟಗಾಗಿ ಬಿಟ್ಟರ್ (ಶಾಂತಿಪು. ೪-೩೦ ವ) : ತದ್ವಲಂ ನಿರ್ಘರಕೋಪಂ ಬಿದಿರ್ದೊದೆಯಲ್ ಧರೆಯೊಳವಂ ಮಿಟ್ಟೆ ಕೊಂಡ ಚಿಟ್ಟೆವೊಲಿರ್ದಂ (ನೇಮಿಪು. ೧೧-೧೨೫).

**ಮಿಟ್ಟೆಯ ಭಂಡ, ಮಿಟ್ಟಿಯ ಭಂಡ** = ಬೂಟಾಟಿಕೆಗಾಗಿ ಮೃತ್ತಿಕೆಯನ್ನಾಗಲಿ ವಿಭೂತಿಯನ್ನಾಗಲಿ ಧರಿಸಿರುವ ಲಜ್ಜೆಗೇಡಿ : ಸಕಲೇಂದ್ರಿಯದೊಳಗಿರ್ದು ವಸ್ತುವನಱಿದೆನೆಂಬ ಮಿಟ್ಟೆಯ ಭಂಡರನೊಪ್ಪ ವಿಣಾಂಕಧರ ಸೋಮೇಶ್ವರಲಿಂಗವು (ಸಕವ. I. ೭೦-೨೭೫) ; ತನ್ನ ಇಷ್ಟಲಿಂಗದಲ್ಲಿ ದಾಸೋಹವ ಮಾಡಲಱಿಯದೆ ಹಲವು ಬಯಕೆಯ ಬಯಸುವ ಮಿಟ್ಟಿ [ಪಾಠಾಂ. ಟ್ಟೆ]ಯ ಭಂಡರನೇನೆಂಬೆ ತೋಱದಿರಯ್ಯಾ ಕೂಡಲಚೆನ್ನಸಂಗಮದೇವಾ (ಚನ್ನವ.ಕ. ೧೯೭-೪೩೪) ; ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವ ಮಿಟ್ಟೆಯ ಭಂಡರ ಕಂಡು ನಾಚಿತ್ತೆನ್ನ ಮನವು (ಸಮಾವ. ೭-೨೮).

[ದೇ.॥ ತಮಿ. ಮೆಟ್ಟು ; ಮಲ. ಮಿಟ್ಟಾಲ್ ; ತುಳು. ಮಿಟ್ಟೆ, ಮುಟ್ಟೆ; ತೆಲು. ಮಿಟ್ಟ, ಮೆಟ್ಟ]

**ಮಿಟ್ಟೆಗಲ್ಲು** (ನಾ). ಎತ್ತರವಾದ ಕಲ್ಲು ; ಉನ್ನತವಾದ ಶಿಲೆ : ಕುಂಭೀನಸಿಯು ಹಿಮಾಚಲದ ನೆರೆಯಲ್ಲಿಗುವ ದೊಡ್ಡದಾದ ಮಿಟ್ಟೆಗಲ್ಲ ಮೇಲೆ ಕುಳಿತಿದ್ದಳು (ಶ್ರೀರಾಪ. ೧೧೭). [ಮಿಟ್ಟೆ + ಕಲ್ಲು (<ಕಲ್$_3$)]

**ಮಿಟ್ಟೆದುಡು** (ಕ್ರಿ). ಕವಣೆಯನ್ನು ಪ್ರಯೋಗಿಸು : ಅವನೆಲ್ಲರನೆಸೆವ ಅವ ನಮ್ಮ ಕಂಡಡೆ ಬೆಟ್ಟನ್ನ ಮಿಟ್ಟೆದುಡ ಸಕಳೇಶ್ವರದೇವನಱಿಯದ ನಿರ್ಭಾಗ್ಯರನೆಸೆವಾ (ಸಕವ. II. ೫೯೭-೧೭೭೦).

[ಮಿಟ್ಟೆ + ತುಡು$_1$ ( < ತೊಡು$_1$)]

**ಮಿಟ್ಟೆನೆಲ** (ನಾ). ಎತ್ತರವಾದ ಭೂಮಿ ; ತೆವರು : (+).

[ ಮಿಟ್ಟೆ + ನೆಲ ]

**ಮಿಟ್ಟೆಯಂಬು, ಮಿಂಟೆಯಂಬು, ಮಿಟ್ಟೆಯಂಬು** (ನಾ). ಗುಂಡನೆಯ ಕಲ್ಲಿಟ್ಟು ಬಾಣದಂತೆ ಪ್ರಯೋಗಿಸುವ ಒಂದು ಬಗೆಯ ಸಾಧನ : ಬಾಲರೆಸುಗೆಯ ಮಿಟ್ಟೆ[ಪಾಠಾಂ. ಮಿಂಟೆ]ಯಂಬಿಗೆ ಸೋಲು

ವುವೆ ೧೧ (ಕುಣ್ಣಾದ್ರೌ. ೩-೨೭) ; ಬಿಟ್ಟೆನಮಿಲಿಭೋಗವನೆಂಬ ಪ್ರತಿಕನೆ ತೊಟ್ಟನೆಸುವೆನೆಂದು ಮದನ ಮಿಟ್ಟೆಯಂಬುಗಳ ಮಾಡಿಸಿದಂತೆ ಬಸವೊಳು ಬಟ್ಟಮಲ್ಲಿಗೆಗಳೊಪ್ಪಿಹವು (ಕಂಶಕ. ೨-೯೦). ಮಿಂಟೆಯಂಬು: ಥರಥರದ ಸಬಳಗಳ ಮಿಂಟೆಯಂಬನು ತಮ್ಮ ದೇಹದಲಿ ಧರಿಸಿ (ತೊರವ. ೦೦-೩೮).

**ಮಿಟ್ಟೆಯಂಬು :** ಮುಳ್ಳಂಬುಗಳು ಸಾವಿರದೇಳ್ನೂಱು ಒಂಬತ್ತುಸಾವಿರ ಮಿಟ್ಟೆ [ಪಾಠಾಂ. ಮಿಂಟೆ]ಯಂಬುಗಳು (ಭೈರಸೂ. ೧. ೬೩).

[ಮಿಟ್ಟೆ + ಅಂಬು₂]

**ಮಿಟ್ಟೆವರಹ** (ನಾ). ನಾಲ್ಕುರೂಪಾಯಿಗಳಷ್ಟು ಬೆಲೆಬಾಳುವ ಒಂದು ಬಗೆಯ ಚಿನ್ನದ ನಾಣ್ಯ : (೬). [← ತೆಲು. ಮಿಟ್ಟವರಹಾ]

**ಮಿಟ್ಟಾದಾರ** (ನಾ.) ಒಂದು ಜಿಲ್ಲೆಯ ಉಪವಿಭಾಗದ ಅಧಿಕಾರಿ : 'ಮಿಟ್ಟಾದಾರಿ' ಪರಾ.

[←ಹಿಂ. ಮಿಟ್ಟಾದಾರ್. / ತಮಿ. ಮಿಟ್ಟಾತಾರ್]

**ಮಿಟ್ಟಾದಾರಿ** (ನಾ). ಮಿಟ್ಟಾದಾರನ ಆಡಳಿತಕ್ಕೆ ಒಳಪಟ್ಟ ಪ್ರದೇಶ : ಮದರಾಸಿಗೆ ದಕ್ಷಿಣಪ್ರಾಂತದಲ್ಲಿ ಶಿವಗಂಗೆ, ರಾಮನಾಡು, ಪುದಿಕೋಟೆ. ವೆಂಕಟಗಿರಿ ಇನ್ನೂ ಕೆಲವು ಮಿಟ್ಟಾದಾರಿಗಳು ಇವುಗಳೆಲ್ಲಾ ಉಳಿದೇ ಇವೆ (ಶಾರಿನಾ. ೦೮). [←ಹಿಂ. ಮಿಟ್ಟಾದಾರೀ. /ತಮಿ. ಮಿಟ್ಟಾತಾರಿ]

**ಮಿಟ್ಟಾವು** (ನಾ). ಒಬ್ಬನ ಅಧಿಕಾರಕ್ಕೆ ಒಳಪಟ್ಟ ಆಡಳಿತದ ಪ್ರದೇಶ : ಮೈಸೂರ ರಾಜ್ಯವನ್ನು ೪೪ ಲಕ್ಷ ವರಹಾಕ್ಕೆ ಮಿಟ್ಟಾವಾಗಿ ಕೊಡಿಸ ಬೇಕೆಂದು ವಾಸಪ್ಪಾಜಿಯು ಇನ್ನೊಂದು ಸಲಹೆಯನ್ನು ಕಳುಹಿಸಿದ್ದನಂತೆ (ಕುಣಾಶ. ೯೦). [← ಹಿಂ. ಮಿಟ್ಟಾ. /ತಮಿ. ಮಿಟ್ಟಾ ]

**ಮಿಟ್ಲ** 'ಮಿಟಲಿ' ನೋ.

**ಮಿಟ್ಲಿ** 'ಮಿಟಲಿ' ನೋ.

**ಮಿಠಾಯಿ, ಮಿಟಾಯಿ** (ನಾ). ಒಂದು ಬಗೆಯ ಸಿಹಿತಿಂಡಿ : ಎರಡು ರುಪಾಯಿ ವೆಚ್ಚ ಮಾಡಿ ಮಿಠಾಯಿ ತಿಂದರೆ (ಮುಂಬಯಿ. ೩-೦೭೮) ; ಅವಲಕ್ಕಿ, ಮಿಠಾಯಿ ಸಾಕಷ್ಟು ಉಳಿದಿವೆ (ಭಾರತಿ. ೩). ಮಿಟಾಯಿ :'ಸಕ್ಕರೆ ಮಿಟಾಯಿ' ಪರಾ. [← ಹಿಂ. ಮರಾ. ಮಿಠಾಈ]

**ಮಿಠಾಯಿಗಾರ** (ನಾ). ಸಿಹಿತಿಂಡಿಯನ್ನು ತಯಾರಿಸುವವನು ಹಾಗೂ ಮಾರುವವನು : ಮಿಠಾಯಿಗಾರ ಲಾಡು, ಜಲೇಬಿ, ಬತ್ತಾಸು ಮುಂತಾದುವನ್ನು ಸಿದ್ಧಪಡಿಸಿಕೊಂಡಿರುತ್ತಾನೆ (ಜನಾತ್ಮ. ೨೨೯).

[ಮಿಠಾಯಿ + – ಗಾರ (< – ಕಾಱ)]

**ಮಿಠಾರಿ** (ನಾ). ಬೆಡಗು ; ಸೊಗಸುಗಾರಿಕೆ : ನೀಟುದೋರುತ ಮಿಠಾರಿಯ ರೊಲಿಸುತ . . . ನರ್ತನದಾಟ ನೋಡಿದರು ಕೋವಿದರು (ಕೌಂತಕಾ. ೩-೦೦೦) ; ಚಿತ್ರಿಣೀಜಾತಿ ಮಿಠಾರಿಯನ್ನು ಉತ್ತಮಳೆಂದು ಪೇಳುವರು (ಕೌಗಂಧಿ. ೪೬೯-೦೦). [← ತೆಲು. ಮಿಟಾರಿ]

**ಮಿಠಾಲಕಡಿ** (ನಾ). ಒಂದು ಬಗೆಯ ಮೂಲಿಕೆ ; ಯಷ್ಟಿಮಧುಕ ; ಅತಿಮಧುರ : "ಮಧುಕಂ. ಕ್ಲೀತಕಂ ಯಷ್ಟಿಮಧುಕಂ, ಮಧುಯಷ್ಟಿಕಾ — ೪ ಅತಿಮಧುರದ ಹೆಸರುಗಳು. ಯಷ್ಟಿಮಧುಕಃ . ಮಿಠಾಲಕಡಿ" (ಸಿದ್ಧಾಂತಿ. ೦೬೭). [← ಹಿಂ. ಮೀಠೀಲಕಡೀ]

**ಮಿಡ, ಮುರುಡ₂** (ನಾ). ಶಿವ ; ಈಶ್ವರ : "ಎಳದೇರ ಗೊರವನೈಪೊಗ . . . ಮಿಡ ಶಿಸುಳಿ . . . ಈಸರಂ ದೇಸಿಗಂ" (ಕಬ್ಬಿಮಂ. ೩) ; ಒಡೆಯಂ ಕಣ್ಣಾಡಿಯುಂ ಮಿಡಂ ತಿಸುಳಿ . . . ಮಱುಕಂಬೊತ್ತೋವುಗೆವ್ಮಂ ಕರಂ (ಜಾಲಿಂಸ್ಕ. ೦-೦೭-೩೬). 'ಮಿಡಚ್ಚಿ' ಪರಾ. **ಮುರುಡ₂** : 'ಮುರುಡ ಸುತ', 'ಮುರುಡೇಶ್ವರ' ಪರಾ. [< ಸಂ. ಮೃಡ]

**ಮಿಡಚಿ** 'ಮಿಡತೆ' ನೋ.

**ಮಿಡಚೆ** 'ಮಿಡತೆ' ನೋ.

**ಮಿಡಚ್ಚಿ** (ನಾ)-ಒಂದು ಬಗೆಯ ಮರ ಮತ್ತು ಅದರ ಕಾಯಿ; ರುದ್ರಾಕ್ಷಿ: ತಾನಸುರಿವ ಮಿಪೋಕ್ಷಕ್ಕಂ ಸಲೆ ಗುಂಜಾತದು ಗಜ ಬೂದಿಯುಂ ಮಿಡಚ್ಚಿಯು ಮಣಿಯುಂ (ಶಾಶಾಸ್ತ. ೨-೦೨-೯). [ಮಿಡ + ಅಚ್ಚಿ₆]

**ಮಿಡತೆ**. ಮಿಡಚಿ. ಮಿಡಚೆ. ಮಿಡಿಚು, ಮಿಡಿಚೆ. ಮಿಡಿತೆ. ಮಿಡುಚೆ (ನಾ). ೧. ಒಂದು ಬಗೆಯ ಹಾರುವ ಹುಳು ; ಶಿವನ ಕುದುರೆ ; ಶಲಭ : " ಮಿಡತೆ – ಪಟಚಟ(ತಿ) " (ತತ್ವಕೋ. ೩೫) ; ಮಿಡತೆಹುಳುಗಳ ಗುಂಪಿನಂತೆ, ತನ್ನ ರಥವನ್ನು ಕುರಿತು ಬರುವ ಶಸ್ತ್ರಗಳನ್ನು ಅರ್ಜುನನು . . . ತಡೆದನು (ವ್ಯಾಸಭಿ. ೩೩೩). **ಮಿಡಚಿ :** ೧. ಜಿಟ್ಟೆ ಅಥವಾ ಮಿಡಚಿ (ಕೀಟಿಪ. ೯೩). **ಮಿಡಚೆ :** ೧. " ಮಿಡಚೆ (ಮಿಡತೆ) = ಸೂರ್ಯನ ಕುದುರೆಹುಳ " (ಜಾನಕೋ. ೩೦). **ಮಿಡಿಚು :** ೨. ಒಂದು ಬಗೆಯ ಸಣ್ಣ ಮೀನು ; ಸೀಗಡಿ : ಸಲೆ ನೀರ್ವಿರ್ನ್ನಿಡಿಚಲ್ಲದುತ್ಕಮಮುಪಾತೀರ್ಥ೯೦ ಶಿವಜ್ಞಾನಯೋಗಲಸದ್ಭಕ್ತಿಪರಾಯಣಂ (೭೩೪. ೨೭). **ಮಿಡಿಚೆ :** ೧. "ಪತಂಗಃ, ಶಲಭಃ — ೨ ಪತಂಗದ ಹುಳುವಿನ ಹೆಸರುಗಳು. ಮಿಡಿಚೆಗೂ ಹೆಸರಾಗುವದು" (ಸಿದ್ಧಾಂತಿ. ೦೬೨) ; ಮಿಡಿಚೆ(ತೆ) ಯಿಲಿ(ಯಲಿ)ಯಿಂಚೆ ಮೃಗದಿಂ . . . ಕಿಡುವುದು ಫಲಮುಂ ಪರಿವುಂ (ಜಟ್ಟಿಮ. ೦೨-೦೫೯) ; ಬರಲೆ ಹುತ್ತಕ್ಕೆಯರಗಿಣಿ ಹರುವೆಯು ತೋಟಕ್ಕೆ ಮಿಡಿಚೆ ಕೋಗಿಲೆ ಹಳ್ಳಿಗೆ ತುರುವೆ ನವನಾಗಸಂಪಗೆ ಕುರುಬಂ ಸಲೆ ಜಾಣ ಖೊಳರಾಸ್ಥಾನಕ್ಕಂ (ಶೀತಿಸಾ. ೩೭೨). ೨. ಕಡುವುಳಿಗಳನ್ನೊಂದು ತಿಳಿವಟ್ಟ ಲನಿಟ್ಟೆಜೀಯಲ್ಕೆ ಮಹೋಜುಸೂಟಿಟ್ ಮಿಡಿಮಿಡಿದರ್ಥಮುಂ ಕುಡಿದು ಚಪ್ಪಿಜಿಡ್ಡಿಕ್ಕಿದ ಸಣ್ಣಮೀನ್ಗಳಂ ಮಿಡಿಚೆಗಳಂ ಕುಟಿಂಕಿ (ದಶಕು. ೬-೨೦೯). **ಮಿಡಿತೆ :** ೧. ಮಿಡಿತೆ ಹೆಗ್ಗಣ ಮೊದಲಾದ ದುಷ್ಟಜಂತುಗಳ ಬಾಧೆಗಳು ತಪ್ಪಿ ಪೈರುಗಳು ಬೆಳೆಯುವವು (ಕೃಪಾಶ. ೯೫) ; ಬಂತು ಉತ್ತರದಿಂದ ಹತ್ತಿರ ಹಳದಿ ಮಿಡಿತೆಯ ಹಾವಳಿ (ಕಲಮು. ೪೭-೦೦). ೩. ದೀಪಕ್ಕೆ ಮುತ್ತುವ ಒಂದು ಬಗೆಯ ಹುಳು ; ಪತಂಗ : ಕ್ರೋಧನಂಗೊಳಲಾಕೆ ಕೆಂಡದೆಡೆ ಮಿಡಿತೆಯಂತಟಕಟಿಸುತ (ಕಸಮು. ೦೦-೦೭). **ಮಿಡುಚೆ :** ೩. ಬೇಗೆಯೊಳಗಣ ಮಿಡುಚೆ[ಪಾಠಾಂ. ಡಿಚೆ, ಡುಚು]ಗಳ ತೆಱದಿ ವ್ಯಕ್ತ ಉರಿದೇ ಹೋಪಿರಲ್ಲದೆ ಶಕ್ತಿಯುಂಟೇ ನಿಲಲು (ಬಸವು. ೩೬-೨೯).

[ದೇ.॥ ತಮಿ. ವಿಟ್ಟಿಲ್, ಮಲ. ವಿಟ್ಟಿಲ್, ವೆಟ್ಟಿಲ್ ; ತುಳು. ಮೊಂಟೆ ; ತೆಲು. ಮಿಡತ, ಮಿಡುತ ; ಕೋಲಾ. ಮಿಟ್ಟೆ ; ಪರ್ಜಿ. ಮಿಟಕ]

**ಮಿಡಮಿಡ** (ನಾ). (ಆಧಿಕ್ಯ, ಅತಿಶಯಂತೆ ಮುಂತಾದುವನ್ನು ಸೂಚಿಸುವ) ಒಂದು ಅನುಕರಣಶಬ್ದ : 'ಮಿಡಮಿಡನೆ ' ಪರಾ.

**ಮಿಡಮಿಡ ಮಿಡುಂಕು, ಮಿಡಮಿಡ ಮಿಡುಕು** = ಬಹಳ ಸಂಕಟ ಪಡು, – ಪೇಚಾಡು : ಓರೊರ್ವರ್ ವಿರಹಾನಳನನ್ನಿಧಿವಿದಾಹದಿಂ ಕೆಂಪಡರೆ ಕಾಯ್ದು ವೆನಿಪ ಕೆಂದಾವರೆಯ ಪಾಸಿನೊಳ್ ಕೆಡೆದು ಮಿಡಮಿಡ ಮಿಡುಂಕುವದವಟಲ ಪೆರ್ಚಿನಿಂ ಕಿಚ್ಚಿನೊಳ್ ಬಿಟ್ಟ ಕಿಡಿಯಂ ನೆನೆಯಿಸುವಳ್ (ವರ್ಧಕು. ೯-೩೬ ವ) ; ಮಿಡಮಿಡ ಮಿಡುಕುವಿನಂ ಬಡಿಯೊಳೊಡೆಯೆ ಪೊಡೆ ಪೆಡತಲೆಯಂ (ಪಟ್ಟಾರಾ. ೦೨೭-೭).

**ಮಿಡಮಿಡನೆ** (ಅ). ಒಂದು ಅನುಕರಣಾವ್ಯಯ.

**ಮಿಡಮಿಡನೆ ಮಿಡುಕು** = ಬಹಳ ವ್ಯಥೆಪಡು.–ಸಂಕಟಗೊಳ್ಳು : ಪೂಜಿಸುತಿರುವ ಭೂಪಾಲನಂ ಕುಡು . . . ಮಿಡ[ಪಾಠಾಂ. ಮಿಡು] ಮಿಡನೆ ಮಿಡುಕಿತ್ತು ಪೌರಜನವು (ಹಶಕ. ೯-೩) ; ಮಿಡಮಿಡನೆ ಮಿಡುಕುತವೆ . . . ಕಡುದುರುಳನಿವನೆಂದೆನುತ ತಲೆವೊಪೆಯ ಹೊಮ್ಮಳು (ಬಸವು. ೨೯-೩೬). [ಮಿಡಮಿಡ + – ಅನೆ₁]

**ಮಿಡಿ₁** (ಕ್ರಿ). ೧. ಒಂದು ಬೆರಳಿನ ಹಿಡಿತದಿಂದ ಮತ್ತೊಂದು ಬೆರಳನ್ನು ವೇಗವಾಗಿ ಬಿಡುಗಡೆ ಮಾಡಿ ತಾಕಿಸು : " ಮಿಡಿ – ಅಂಗುಲಿಪ್ರಹರಣೇ (ಬೆರಳಿನಿಂದ ಚಿಮ್ಮು), ಶಲಾಟುಫಲೇ ಚ ಕಸುಕಾಯಿ "

(ಶಮಂಧಾ) ; ಮಿಡಿದೊಡೆ ತನಿಗ[ರ್ಪು]ರಸಂ ಬಿತುಪುವು (ಚಂಶಭಾ. ೦-೫೬) ; ಮಿಡಿಯಲೊಡಂ ಸುರಿವುದು ರಸವೆಡೆಯುಡುಗದೆನಿಪ್ಪ ನುಡಿಗೆ(ಕಡುಗೆನಿಸಿದ) ಪೋಲ್ . . . ಇಕ್ಷುವಾಟಿಗಳೆಸೆಗುಂ (ಕುಸುಮಪು. ೦-೦೦೦) ; ಗಲ್ಲವನೊಡನೆ ಮಿಡಿಯೆ ಕಳಕಳನೆ ಅಳುತ್ತಿರಲು (ಬಸಪು. ೦೫-೦೩). ೨. ಸಂತೋಷ, ಆಶ್ಚರ್ಯ, ಆಹ್ವಾನ ಮುಂತಾದುವನ್ನು ಸೂಚಿಸಲು ಎರಡು ಬೆರಳುಗಳನ್ನು ಸೇರಿಸಿ ಶಬ್ದ ಮಾಡು ; ಚಿಟಿಕೆ ಹಾಕು : ದಿವ್ಯಜ್ಞಾನದೊಳ್ ಮಹೇಶ್ವರನುದಾರಮಹೇಶ್ವರನಪ್ಪುದನಱಿದು ಬೆರಲಂ ಮಿಡಿದು ಮುಗುಳ್ನಗೆ ನಕ್ಕು . . . ಮುನೀಂದ್ರವೃಂದಮಂ ಪೋಗಲ್ವೇಳ್ದು (ಸಂಶಭಾ. ೬-೦೩ ವ) ; ಅರಸಂ ತಲೆಯಂ ತೂಗಿ ಬೆರಲಂ ಮಿಡಿದು ಲಲಿತಾಂಗನಂ ಬರಿಸಿ . . . ಇಂತೆಂದಂ (ರಪುರ್ಣಪು. ೨-೬೩) : ತಲೆಯಂ ತೂಗಿ ಬೆರಲ್ಗಳಂ ಮಿಡಿದು ಸದ್ವಿದ್ಯರ್ ಸಭಾಮಧ್ಯದೊಳ್ ಪಲಬರ್ ಸತ್ಕವಿಗಿತ್ತ ತಕ್ಕಿನ ಪೆಸರ್ ಸಲ್ವಂತೆ ನೀಚಂಗೆ . . . ಸಲ್ವುದೇ (ರಪುರ್ಣಾ. ೦-೪೯). ೩. ತಂತಿವಾದ್ಯವನ್ನು ಬೆರಳಿನಿಂದ ಮೀಟಿ ಬಾಜಿಸು, — ನುಡಿಸು : ದನಿಯಿಂಪು ಬೀಣೆಯಂ ಮಿಡಿದವೊಲಾಗೆ ಗಾನದೊಳೊಡಂಬಡೆ ಮೇನಕೆ ಮುಂದೆ ಪಾಡಿದಳ್ (ಸಂಶಭಾ. ೭-೮೯) ; ವಿಪಂಚಿವೀಣೆಯುಂ ಕೊಂಡು . . . ಮಿಡಿದು ನೋಡಿ ಮನಂಗೊಂಡು ಮೃದುಮಧುರಧ್ವನಿಗಳೊಳೆಸೆಯೆ ಬಾಜಿಸಿದೊಡೆ (ಬಂಕಾಂ. ೨-೩೦ ವ) ; ನಿನ್ನ ಜೀವದ ತಂತಿ ಮಿಡದೇನ (ಗಂ. ೦೦೦-೬). ೪. ತರ್ಜನಿಯ ಒಡಿತದಿಂದ ಹೆಬ್ಬೆರಳನ್ನು ಬಿಟ್ಟು, ಯಾವುದಾದರೂ ವಸ್ತುವನ್ನು ಮೇಲಕ್ಕೆ ಚಿಮ್ಮಿಸು, — ಎಗರಿಸು : ಕರಿಯನೇಱಿ ಮೇಲಕ್ಕೆ ಮಿಡಿದಡೆ ಕವಡೆ ಬಿಡೆ ಹಬ್ಬಿ ಹಾಱಿದನಿತುವ್ವಕ್ಕೆ ಸುರಿದ ಹೊಸಹೊನ್ನ ರಾಶಿಯನೀಯಬೇಹುದು (ಹಕಕಾ. ೦೦-೨೫) ; ಒಡಿವರ್ಜಡಬವಹ್ನಿಯಂ ಮಿಡಿವರಾದಿತ್ಯೇಂದು ಬಿಂಬಂಗಳಂ . . . ಮೃಡನ ಭಕ್ತರ್ ಬಲ್ಲಿದರ್ (ರಾಜಶೇ. ೬-೦೦೬). ೫. ಕಣ್ಣೀರನ್ನು (ಬೆರಳಿನಿಂದ) ಒರಸು ; ತೊಡೆ : ಗುಡುಗುಡನೆ ಸುರಿವ ಕಣ್ಬನಿಗಳಂ ಮಿಡಿವುತ್ತುಂ ಮತ್ತಮಿಂತೆಂದಳ್ (ಕಾದಂಪೂ. ೯೩೨) ; ಸುರಿದಶ್ರುಗಳಂ ಕಡುವೆರಲಿಂ ಶಾನೆನಸುಂ ಮಿಡಿಯುತ್ತುಂ ಭೂಪ ಕುಸುಮಾವರನಿಂತೆಂದು (ಕುಸುಮಾ. ೦೦-೫೨) ; ಕಂಬನಿಯನುಂಗುರಲಿ ಮಿಡಿದು ನೋಡನು ಪಾರ್ಥ ಹೃದಯದಲಿ (ಕುಮಾವ್ಯಾ. ೭-೨೭) ; ನಯನದಿ ನುರುಳುವಂಬಕವಾರಿಬಿಂದುವ ಬೆರಳ ಕೊನೆಯಲಿ ಮಿಡಿದು ಮಿಡುಕಿದರಧಿಕ ಶೋಕದಲಿ (ಕೂರರಾ. ೨-೨-೧೦). ೬. ಬಿಲ್ಲಿನ ಹೆದೆಯನ್ನು ಜಗ್ಗು, — ಮೀಟು, — ಎಳೆ : ಒಡೆಗುಮಜಾಂಡಮಿನ್ನಿನಿಸು ಜೇವೊಡೆದಾಗಳೆ ಬೊಮ್ಮನುಂ ಮನಂಗಿಡುಗುಮಿದೇವುದೆಂದು ಮಿಡಿದೊಯ್ಯನೆ ಜೇವೊಡೆದಾಗ[ಳ್]ಬಸಂ[ಬೊ]ಬಸೊಡನೀ[illegible] ([illegible]. ೨-೬೬) ; ಆ ಬಿಲುದಿರುವ ಮಿಡಿದೈದಿದರಾ ನಾಸಾವಿರಮಹಾರಥರು (ಕುಮಾವ್ಯಾ. ದ್ರೋ. ೦-೬೬) ; ಭೋಂಕೆನೆ ಮಿಡಿವ ರಾಳಿಯ ಬಿಲ್ಲ ಪೆಟಲ್ಗಳ ಸಂಕುಲವಿಂದುರ್ದಲ್ಲಲ್ಲಿ (ಮೋಹತ. ೨೦-೯). ೭. ಕುಟುಕು ; ಊರು : ಆ ತೇಟ್ಗ(ರುಗ)ಳುಬ್ಬರದಿಂದಂ ಮಿಡಿದಂದು ಲೋಳೆ ಮಜಾಕಂ ಶೋಕಂ . . . ಸಾವು ತದುಗ್ರಜಾತಿವಿಷದಿಂ ಮರ್ತ್ಯರ್ಕಳೊಳ್ ತೋಱುಗುಂ (ಲೋಕೋಪ. ೦೦-೨೫); ಕೆಂದೇಳ್ ಮಿಡಿದೊಡೆ ತವುಡಂ ತಂದಿಕ್ಕಿದ ಧೂಪದಿಂದೆ ತದ್ವಿಷಮುಱುಗುಂ (ಕವರ. ೦೦-೪೦). ೮. ಪುಟನೆಗೆ ; ಪುಟಿ ; ಹಾರು : ಎಡೆವಿಡೆಯ ಪಾಡನೆಡೆಯೆಡೆಯೂರಂ ಮಿಡಿದನಿತು ಬೇಗದಿಂ ಕಟಿದೊಡರಿಸಿದುದು ನೃಪತಿಗಾ ಹಯಂ ವಿಸ್ಮಯಮಂ (ಸಂರಾವೂ. ೪-೦೨೨) ; ಮುಂಗಾಲ್ಗಳಂ ನೆಗಪಿ ನಿಲ್ವ . . . ಮಿಡಿವ . . . ಬವರಿವರಿವ ಚಿಮ್ಮಟಿಗೆಗೆ ಚಳಿಯುದ ಕಡಿಯಾಣಮಂ ಕೈಕೊಳದ ಬಗೆಯಂ ಬಗೆದಂತೆ ಕಂಡು (ರಾಜಶೇ. ೬-೦೦ ವ). ೯. ಮೇಲಕ್ಕೆತ್ತು ; ನಿಗುರಿಸು : ಪುಚ್ಛವ ಮಿಡಿದು ಕಾಲ್ಗೆರದು . . . ನೋಡುತಲಿರ್ದುದಾ ಮಾಯಾಮೃಗಾಧಿಪತಿ (ಅಸಂರಾ. ೦-೪-೦೯). ೧೦. ಚಲಿಸು : ಸುಳಿ : ಬೀಸು : ನುಡಿವ ಗಿಳಿಗಳ ಸೊಂಪು ನಡೆವಂಚೆಗಳ ಗುಂಪು ಮಿಡಿವ ಮಾರುತನ ತಂಪು (ವೆಂಕಾರಾ. ೨-೦೬-೦೦). ೧೧. ಅಲುಗಾಡಿಸು ; ಚಲಿಸುವಂತೆ ಮಾಡು: ಮೇರುಗಿರಿಯನು ಮಿಡಿದು ಮೀಂಟುವ . . . ವೀರವೃತ್ತಿಯ ಕಡುಹಿನುಗ್ರಸಮಗ್ರರಿರ್ದರು ಮೃಡನ ಮುಂದೆಸೆಯಲ್ಲಿ (ಕೃಕುಂ. ೨-೨೪); ಯಂತ್ರಿ ಮಿಡಿವರೆ ಕಾದಿ ಬೀಳ್ವವು ಯಂತ್ರಮಯ ಹಾವೆಗಳು (ಕುಮಾವ್ಯಾ. ೭-೩೦); ಬಡಗ ಬೊಂಬೆಯ ಮಾಡಿ ಬೆಡಗಿನ ಕೀಲಿಕ್ಕಿ ಮಿಡಿಯೆ ಸೂತ್ರವನು ನರ್ತಿಸುವ ಬೊಂಬೆಯೊಳು ಬಡಗ ಶಾನಿಪನೆ (ಸರ್ವಜ್ಞ. ೩೩೯). ೧೨. (ಜೋರಾಗಿ) ಅಲುಗಾಡು ; ಒಲೆದಾಡು : ಮಿಸುಪ ಕುಂಡಲ ಓಲೆ ಅರಳೆಲೆಯೊಸೆಯೆ ಚಂಡಿಕೆ ಮಿಡಿಯೆ (ಬಸಪು. ೨೯-೪೪). ೧೩. ಸ್ಪಂದಿಸು ; ತುಡಿ : ಸ್ವಲ್ಪ ಹೊತ್ತು ಪ್ರಾಣವಾಯು ಮಿಡಿಯುತ್ತಿದ್ದಿತು (ಶ್ರೀರಾಯು. ೦೨೫); ಶಾಂತಲೆಯ ಹೃದಯ ಮಿಡಿಯಿತು (ಶಾಂತಲಾ. ೦೩೦). ೧೪. ತವಕಿಸು : ಆತುರಪಡು : ಕಡಿವ ದನಿಗಳು ಮಿಡಿವ ದನಿಗಳು ಕೂಡಿ ಬಯ್ವ ದನಿ ಅಡಗಲಿಸಿ ತೊಯ್ದಾಡಿ ಬಿದ್ದುದು ಪಡೆಯಲೆರಡಱಲಿ (ಕಾಶಿರಾ. ೨೬-೨೩); ಬಂತು ಪಂಚಮಿ ಬೋಲಬಗರಿಗೆ, ಹೆಣ್ಣು ತವರಿಗೆ ಮಿಡಿದವು (ಜಿಂದು. ೦೨-೪). ೧೫. ಸ್ಪಂದಿಸುವಂತೆ ಮಾಡು ; ತುಡಿಯುವಂತೆ ಮಾಡು : ಜಡವೆಂಬುದೇನು . . . ಮಿಡಿಯೆ ಪರಸತ್ವವಿದ್ಯುದ್ದೀಪ್ತಿಯದನಾಗ ನಡೆವುದದು ಜೀವಿವೊಲು (ಮಂಕುತಿ. ೦೦೦); ಇವರಲ್ಲಿಯ ಕೆಲವಾದರೂ ಒಳ್ಳೆಯ ಭಾವನೆಗಳು ಸಹೃದಯರ ಹೃದಯವನ್ನು ಮಿಡಿದರೆ ನನ್ನ ಶ್ರಮವು ಸಾರ್ಥಕವೆಂದು ಭಾವಿಸುತ್ತೇನೆ (ಸಂದ್ರಪೂ. ೮೦೪). ೧೬. ಹೊಮ್ಮಿಸು ; ಉಕ್ಕಿಸು : ವಲ್ಲಭನ ಅಡಿದಾವರೆಗಳ ಕಾಣದೆ ನಯನದಿಂ ಮಿಡಿವಳು ಬಾಷ್ಪಂಬುವನು (ಮೋಹತ. ೨೮-೬); ಮಗನ ಮಾತಿಗೆ ಮೆಚ್ಚಿ ಹಿಗ್ಗುತೆ ದೃಗುಜಲವ ಮಿಡಿದು (ಅಶ್ವಶ. ೬-೦೦); ಕಣ್ಣೀರು ಮಿಡಿಯುತ್ತ ಭಯದಿಂದ ನಡುಗುತ್ತ ತುಳಸಾಬಾಯಿ ಹೇಳಿದಳು (ಮುಹಾಗ. ೨೩೯). ೧೭. ಹೊಡೆ ; ಬಡಿ : ಮಿಡಿಬಿಲ್ಲ ಶಾಂತದೇವರೆ ತನ್ನ ಲಿಂಗವಂ ತೊಡಚಿ ಸಂಧಾನದಿಂ ನೋಳ್ಪವರನೆಲ್ಲರಂ ಮಿಡಿಯೆ ಪೋಗಲ್ಕೆ (ಶಂಪು. ೬೩-೨೬); ಪೌರವರ್ಗಳಂ ಮಿಡಿವ ಹೂಮುಡಿಯ ಒಡಿಯಲೆನೆ ಸೆರಗು ದಡದಡಿಸುತಿರೆ (ಕಾಂಜರ. ೦೨೪-೨೬೦).

[ದೇ.॥ ಮಲ. ಮಿಟಿ ; ತೆಲು. ಮಿಡಯು, ಮಿಟ್ಟು ; ಕೋಲಾ. ಮಿಟ್ ; ಪರ್ಜಿ. ನಾಯ್ಕ್. ಮಿಟ್ಟ್]

ಮಿಡಿ$_2$ (ನಾ). ೧. ಪೂರ್ಣವಾಗಿ ಬಲಿಯದ ಕಾಯಿ ; ಕಸುಗಾಯಿ ; ಹೀಚು : ಪುಷ್ಪಸಂಕುಳದೊಳ್ ನೀನೆ ವಿಳಾಸಿಯ್ಯ ಮಿಡಿಗಳೊಳ್ ನೀಂ ಚೆಲ್ವನೈ (ಆದಿಪು. ೦೦-೯೬); ಕಯ್ಪುಸೊರೆಯ ಕುಡಿಯೇಂ ಮಿಡಿಯೇಂ (ಗದಾಯು. ೩-೬೦); ಎಳೆಗಱು ಎತ್ತುಗದೇ ಲೋಕದೊಳ್ ಮಿಡಿ ಪಣ್ಣಾಗದೇ ದೈವದೊಲ್ಮೆಯಿರಲ್ (ಸೋಮೇಶ. ೩೫). ೨. (ಉಪ್ಪಿನಕಾಯಿಗೆ ಬಳಸುವ) ಚಿಕ್ಕಗಾತ್ರದ ಮಾವಿನಕಾಯಿ : ಮಿಡಿ ಹೆರಗೆಗಳಲ್ಲೇ ಇದ್ದರೆ, ಮುಗ್ಗಲು ಆದೀತು (ಮರಳು. ೬೨); ಕುಟುಂ ಎಂದು ಮಿಡಿಯೊಂದನ್ನು ದವಡೆಯಲ್ಲಿಟ್ಟು ಕಡಿದು ಎರಡು ಲೋಟ ನೀರು ಕುಡಿದು ಕೈ ತೊಳೆಯುವುದಕ್ಕೆ ಕಟ್ಟೆಗೆ ಹೋದ (ದೇವಹಂ. ೦೬೯). ೩. ಚಿಕ್ಕದು ; ಕಿರಿದು : 'ಮಿಡಿದಬ್ಬೆ', 'ಮಿಡಿಹಣ್ಣು' ಪರಾ. ೪. (ಹಾವು ಮುಂತಾದ ಪ್ರಾಣಿಗಳ) ಮರಿ : ನಾಗರ ಮಿಡಿಯಾಗಿ ಆಡೋಣ (ಕನ್ನಜಾ. ೦೪೫); ನಾಗರ ಮಿಡಿ ಬಿಸಿಲಲ್ಲಿ ಹೊಳೆಯುತ್ತಿತ್ತು (ರೂಢಿ). 'ಮಿಡಿನಾಗ' ಪರಾ.

[ದೇ.॥ ಮಲ. ಮಿಟಿ : ತುಳು. ಮಿಡಿ, ಮುಡಿ; ಕೊಡ. ಮುಡಿ; ತೆಲು. ಮಿಡಿ = ಬೇಟೆಯ ಸಾಧನ]

ಮಿಡಿ$_3$ 'ಮಡ$_1$' ನೋ.

**ಮಿಡಿಗಾಯ್.** ಮಿಡಿಗಾಯಿ (ನಾ). ಪೂರ್ಣವಾಗಿ ಬಲಿಯದ ಕಾಯಿ : ಕಸುಗಾಯಿ ; ಹೀಚು : ಇಂದ್ರಜಾತಂಗಾಕೆ ತೋರಿದಳ್, ಪೂವಾಗಿ ಪೋಗಿ ಮಿಡಿಗಾಯ್ಗಳಂ ಪಡೆದೊಪಲ ವಾಸಂತವಂತ್ಯದ ರಸಾಲದೋಲ್ (ಶಶಾಂಗ. ೫೦-೧೩೬): **ಮಿಡಿಗಾಯಿ :** " ತಿರುಕುಡೋರ್ವ ಮಿಡಿಗಾಯಿ ಕೋಮಳಂ ಶಲಾಟುಗಳ್ " (ಮಂಗರಾ. ೩೩-೭) ; ಮಿಡಿಗಾಯಿ ಪದಪಲಿದ ಕಾಯ್ ದೋರೆವಣ್ಣಂಬಿವಂ ಪಿಡಿದೊಱಗುವ ಪೊಸಮಾವು . . . ಕಿತ್ತೀಳೆಯಿಂದೆ ಕೇಳೀವನಂ ಕಂಗೆಸೆದುದು (ಹರಿಶಾ. ೩-೩೪); ಹಣ್ಣಾದ ಮಿಡಿಗಾಯಿಯೋಲೆ ನೀ ಸಂನ್ಯಾಸಿಯಾಗಿರುವೆ ; ಮಿಡಿಗಾಯಿ ಬೆಳೆಬೆಳೆದು ಹಣ್ಣಾದ ತೆರನಲ್ಲ (ಕೊಳಗಿಲೆ. ೭೭-೧೩). [ಮಿಡಿ$_2$ + ಕಾಯ್$_4$]

**ಮಿಡಿಗಾಯಿ** ' ಮಿಡಿಗಾಯ್ ' ನೋ.

**ಮಿಡಿಚು** ' ಮಿಡತೆ ' ನೋ.

**ಮಿಡಿಚೆ** ' ಮಿಡತೆ ' ನೋ.

**ಮಿಡಿತ** (ನಾ). ೧. ಹೊಯ್ದಾಟ ; ಬಡಿತ : ನನ್ನ ನೋಡುವ ನೋಟ ನನ್ನದೇ ಕಣ್ಣಾಟ ಎಲ್ಲೆದೆಯ ಮಿಡಿತ ನನ್ನೆದೆಯ ತಾವು (ಅರಳು. ೦೮೦-೭). ೨. ಮಿಡಿದುಕೊಳ್ಳುವಿಕೆ ; ತುಡಿತ ; ಸ್ಪಂದನ : ದುರ್ವಾಸರ ಶಾಪಕ್ಕಿಂತಲೂ ದುಷ್ಯಂತನ ಪ್ರೇಮ ಪ್ರಬಲತರವಾಯಿತು ; ಮರವೆ ಮುಸುಕಿದರೂ ಅದರ ಮಿಡಿತ ತಪ್ಪಲಿಲ್ಲ ! (ಕಾವ್ಯಸ. ೫೩); ಈ ಹಬ್ಬದ ಆಚರಣೆಯುಲ್ಲಿ ನಮ್ಮ ಹಳ್ಳಿಗರ ಬಾಳಿನ ಮಿಡಿತವಿದೆ (ಜೋಕುಮಾ. ೦೭).

[ಮಿಡಿ$_1$ + — ತ$_2$]

**ಮಿಡಿತೆ** ' ಮಿಡತೆ ' ನೋ.

**ಮಿಡಿದಬ್ಬೆ** (ನಾ). ಚಿಕ್ಕದಾಗಿರುವ ಬಿದಿರಿನ ಸೀಳು : ಹಡಪಿನಾಸೆಯೊಳೊರ್ವ ಬಡಸೂಳೆ ತನ್ನಯ ತಡಿಕೆಯಂತೆಸೆವ ಗಲ್ಲವನು ಮಿಡಿದಬ್ಬೆಯಿಂದ ಮಿಡಿಸಿ ಬಾತು ಸಮವಾಗಲೊಡನೊತ್ತೆವಿಡಿಯೆ ನಿಂದಿಹಳು (ಅಂಜತ. ೩-೦೫೦). [ಮಿಡಿ$_2$ + ದಬ್ಬೆ$_1$]

**ಮಿಡಿನಾಗ** (ನಾ). ನಾಗರಹಾವಿನ ಮರಿ : ಮಿಳಿಂದು ನಾಗ : ಚೋಳನಗೂಳೆಯಂ ಖಳರ ಮಂತ್ರಣಂ ಮಿಡಿನಾಗಕುಳವಿಡಿದ ಪೇಳಿಗೆಯ ಸಂತೋಷವೆನಿಸುವುದು (ಹರಿಶಾ. ೦೨-೨).

[ಮಿಡಿ$_2$ + ನಾಗ./ತೆಲು. ಮಿಡಿನಾಗು, ಮಿಣ್ನಾಗು = ಚಿಮ್ಮಿಕೊಂಡು ಹರಿಯುವ ಒಂದು ಬಗೆಯ ಹಾವು]

**ಮಿಡಿನಾಗರ** (ನಾ). = ಮಿಡಿನಾಗ : ಒಂದು ಚಿಕ್ಕ ಮಿಡಿನಾಗರ ವಸ್ತ್ರದಿಂದ ಹೊರಬಿದ್ದು ಹರಿದು ಬಾತು (ಕುವಸಂ. ೫೭) : ಮಿಡಿನಾಗರ ಹೆಡೆ ಬಿಡಿಸೆ ಅದರಡಿ ಕೂಗಿತು ಕಪ್ಪೆ (ಕ್ರೌಂಚಪ. ೫೩-೬).

[ ಮಿಡಿ$_2$ + ನಾಗರ$_1$ ( < ನಾಗರು ) ]

**ಮಿಡಿಬಿಲ್** 'ಮಿಡಿವಿಲ್' ನೋ.

**ಮಿಡಿಬಿಲ್ಲು** 'ಮಿಡಿವಿಲ್' ನೋ.

**ಮಿಡಿಮಾವು** (ನಾ). (ಉಪ್ಪಿನಕಾಯಿಗೆ ಬಳಸುವ) ಚಿಕ್ಕಗಾತ್ರದ ಮಾವಿನ ಕಾಯಿ: ಮಿಡಿಮಾವಿನ ಉಪ್ಪಿನಕಾಯಿ ಬಹಳ ರುಚಿಯಾಗಿರುತ್ತದೆ (ರೂಢಿ). [ ಮಿಡಿ$_2$ + ಮಾವು ]

**ಮಿಡಿಮಿಂಚು** (ನಾ). ಚಿಕ್ಕದಾದ ಮಿಂಚು ; ಎಳೆಮಿಂಚು : ಮಿಡಿಮಿಂಚಂ ತೊಟ್ಟು ಭೂಷಾವಳಿಯ ತೆಜದೆ ಭೂಸ್ಥಾನಮಂ ಸಾರ್ದು ಮತ್ತಂ ಬಿಡುಗಣ್ಣಾರ್ ಮೇಲೆ ಪೋಗುತ್ತಿರಲ್ (ಶಾಂತಿಪು. ೨-೯-೨೩).

[ ಮಿಡಿ$_2$ + ಮಿಂಚು$_2$ ]

**ಮಿಡಿಮೊಲೆ** (ನಾ). ಮಾವಿನ ಮಿಡಿಯಂತೆ ಕಿರಿದಾಗಿರುವ ಮೊಲೆ ; ಕಿರುಮೊಲೆ : ಮಿಡಿಮೊಲೆಯ ಬಿಡುಜಡೆಯ ನೀಱೆ (ರಾಜಶೇಖ. ೬೭-೨೩). [ ಮಿಡಿ$_2$ + ಮೊಲೆ$_1$ ]

**ಮಿಡಿಯಿಸು.** ಮಿಡಿಸು (ಕ್ರಿ). ೧. ಸ್ಪಂದಿಸುವಂತೆ ಮಾಡು ; ತುಡಿಯುವಂತೆ ಮಾಡು : ಅವರ ಜೀವದ ಮಿಡಿತಕ್ಕೆ ತನ್ನ ಜೀವವನ್ನು ಮಿಡಿಯಿಸುವ ಹಿರಿಯ ಜೀವ — ಅದು 'ಮಹಾತ್ಮ' (ರಾಷ್ಟ್ರ. ೨೯). **ಮಿಡಿಸು :** ೧. ಕಣ್ಣ ಬಾಂಬಿಲ್ಗಳಲಿ ನೇಹದಸಿ ಹೂಡುವಿರಿ ಕುದಿವ ಹೃದಯವ ಮಿಡಿಸಿ ಪ್ರಾಣ ನುಡಿಸಿ (ಪ್ರೇಕ್ಷಾ. ೦೭-೯). ೨. ಹೊಡೆ ; ತಟ್ಟು : ಹಡಪಿನಾಸೆಯೊಳೊರ್ವ ಬಡಸೂಳೆ ತನ್ನಯ ತಡಿಕೆಯಂತೆಸೆವ ಗಲ್ಲವನು ಮಿಡಿದಬ್ಬೆಯಿಂದ ಮಿಡಿಸಿ ಬಾತು ಸಮವಾಗಲೊಡನೊತ್ತಿ ವಿಡಿಯೆ ನಿಂದಿಹಳು (ಅಂಜತ. ೩-೦೫೦). [ ಮಿಡಿ$_1$ + — ಇಸು$_3$ ]

**ಮಿಡಿವಟ್ಟು** (ನಾ). ಬಿಲ್ಲಿನಲ್ಲಿಟ್ಟು ಚಿಮ್ಮಿಸುವ ಕಲ್ಲು ; ಕವಣೆಗಲ್ಲು : ಮುಡಿ ಬಿಟ್ಟು ಕಾರ ಸೋಗೆಯ ಬೆಡಂಗನಭಿನಯಿಸೆ ಮುಡಿಯ ಸೊವಡಿಂಗಲರಂಬಿತೆ ಮಧುಪಮಾಳೆ ಮಾವಿನ ಮಿಡಿಯಂ ಮಿಡಿವಟ್ಟನತನುಗಾಯ್ವ ಪೊಲಾಯ್ದಳ್ (ಪುಷ್ಪದ.೭-೭೭). [ ಮಿಡಿ$_1$ + ಬಟ್ಟು ]

**ಮಿಡಿವಲೆ** (ನಾ). ಬೇಟೆಯ ಪ್ರಾಣಿಗಳು ಬಲೆಯನ್ನು ಸಮೀಪಿಸಿದೊಡನೆ ಪ್ರಾಣಿಯ ಮೇಲೆ ಬಾಣವು ಚಿಮ್ಮುವಂತೆ ಅಳವಡಿಸಿರುವ ಒಂದು ಬಗೆಯ ಬಲೆ: ಸಿಡಿವಲೆಯು ಮಿಡಿವಲೆಯು . . . ಮೋಲು ಕೊಂಬಿನ ಬೇಟೆಗಾಱರು ಬಳಸಿದರು ಶಿವನ (ಕುಮಾರ. ೫-೫೩). [ ಮಿಡಿ$_1$ + ಬಲೆ$_1$ ]

**ಮಿಡಿವಿಲ್,** ಮಿಡಿಬಿಲ್, **ಮಿಡಿಬಿಲ್ಲು,** ಮಿಡಿವಿಲ್ಲು (ನಾ). ಬೊಂಬಿನ ಸೀಳಿನ ಒಂದು ತುದಿಯಲ್ಲಿ ಸಣ್ಣಹರಳನ್ನಿಟ್ಟು, ಆ ತುದಿಯನ್ನು ಹಿಂದಕ್ಕೆ ಬಗ್ಗಿಸುವುದರ ಮೂಲಕ ಹರಳನ್ನು ಚಿಮ್ಮಿಸುವ ಒಂದು ಬಗೆಯ ಸಣ್ಣ ಬಿಲ್ಲು : ಶಾಳವನದೊಳ್ ಕೀರಾಳಿಯಂ ಸೋವಲೊಳ್ಪಿಡಿಯಿಂವಂ ಮಿಡಿವಿಲ್ಲೊಳೆಚ್ಚಾಡೆ (ಅಸಂಪು. ೧-೬೦) ; ಪಾಱುವ ತಱಗೆಲೆಯ ತುಱುಗಲಂ ಕಿಱುವಕ್ಕಿವಿಂಡೆಂದು ಕೊಱಂಡುಗಳಂ ಮಾಱ್ವಿಡಿದು ಮಿಡಿವಿಲ್ಲೊಳಿಸಲೆಸಗಿ ಮಱುಗುವ ತುಱುಗಾವ ಕಿಱುಕುಳದ ಕಳೆಯುರುವಂ ನೋಡುತ್ತುಂ (ಕಬ್ಬಿಗಕಾ. ೨೩೪) ; ಬಿಡುವಲೆ ಸೊರ್ಕುಮರ್ದು ಪದವಿಲ್ಮಿ[ಪಾಠಾಂ. ಲ್ಮಿ]ಡಿವಿಲ್ . . . ಗಿಡಗಮೆನಿಪ್ಪವಂ ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದುವರ್ (ರಾಜಶೇ. ೫-೫೨). **ಮಿಡಿಬಿಲ್ :** ನೆಲ್ಲ ಮುಡಿಗೆ ಬರ್ಪಗಿಳಿ ಗಿಜಿಗನ ತಳುಗಿಲ್ಲದೆ ಮಿಡಿಬಿಲ್ಗಳಿಂದ [ಪಾಠಾಂ. ಒಂಡಿವಿಲ್ಲಿಂದ] . . . ಸೋವುತಲಲ್ಲಿ ಗೊಲ್ಲವೆಣ್ಗಳ ತಂಡಮಿಹುದು (ರಾಮಾಭಿ. ೨-೫೯) ; ಕೈಗಲ್ಲುರುಳ್ ಮಿಡಿ[ಪಾಠಾಂ. ಣ್]ಬಿಲ್ ಪೆರ್ಬಲೆ . . . ಪಿಡ್ಗಂ ಗಾಳಮಿಂಬಾಗೆ ಕೊಂಡೊಡನಾ ಲುಬ್ಧಕಸಂಚಯಂ ನಡೆದುದು (ಧರ್ಮಪರೀ. ೪-೫೦). **ಮಿಡಿಬಿಲ್ಲು :** ಕಂಚಿನ ಕವಣೆ ಮಿಡಿಬಿಲ್ಲು ತಕೊಂಡು ಲಂಕೆ ಹಾರಿಸಾನೆ ಗಿಳಹಿಂಡ (ಜಾನಪ. ೯೦). **ಮಿಡಿವಿಲ್ಲು :** ಮಿಡಿವಿಲ್ಲಿನೊಳಗೆ ಲಿಂಗವನೆಚ್ಚ ಆ ಲಿಂಗದೊಡನೆ ನಿರವಯಲಾದರು (ಶಿವವ. ೩೨-೨೫) ; ಮಿಡಿವಿಲ್ಲಿನೊಳು ಗಿಳಿಯೆಸುವೊಂದು . . . ಬೆಡಗಿನಿಂ ಪಥಿಕರ ನಡೆಗೆಡಿಸುವರಲ್ಲಿ ಕಡುಚೆಲ್ವ ಕಳವೆಗೋಪಿಯರು (ನಾಗಕು. ೨-೨೪).

[ ಮಿಡಿ$_1$ + ಬಿಲ್$_2$ ./ ತೆಲು. ಮಿಡಿವಿಲ್ಲು ]

**ಮಿಡಿವಿಲ್ಲು** 'ಮಿಡಿವಿಲ್' ನೋ.

**ಮಿಡಿವೆಣ್** (ನಾ). ಚಿಕ್ಕಪ್ರಾಯದ ಹೆಣ್ಣು : ಎಳೆಯ ಹುಡುಗಿ. ಮಿಡಿವೆಂಗಳು(ಬಹುವ): ಬೆಳೆವೆಣ್ಣು ಬೆಸವೆಣ್ಣು . . . ಮಿಡಿವೆಂಗಳು ಭೂಪಾಲನೇಶನ ನೋಡಿದರು (ಗೊಮ್ಮಟಜಿ. ೦-೭೭). [ ಮಿಡಿ$_2$ + ಪೆಣ್ ]

**ಮಿಡಿಸು** 'ಮಿಡಿಯಿಸು' ನೋ.

**ಮಿಡಿಹಕ್ಕಿ** (ನಾ). ಚಿಕ್ಕದಾಗಿರುವ ಪಕ್ಷಿ : ಪುಟ್ಟಹಕ್ಕಿ : ಮುದಿಯುದಿರ ಮಿಡಿಹಕ್ಕಿಗಾದರೂ ಒಂದು ಕಾಳಿಲ್ಲ ! (ಕೊಳಗಿಲೆ. ೨-೪೫).

[ ಮಿಡಿ$_2$ + ಹಕ್ಕಿ ( < ಪಕ್ಕಿ ) ]

**ಮಿಡಿಹಣ್ಣು** (ನಾ). ಚಿಕ್ಕದಾದ ಹಣ್ಣು ; ಸಣ್ಣಗಾತ್ರದ ಹಣ್ಣು : ಪಿಡಿಹಣ್ಣು ಕುಂಬಳಕೆ ಮಿಡಿಹಣ್ಣು ಆಲಕ್ಕೆ (ಸರ್ವಜ್ಞ. ೦೯೨).

[ ಮಿಡಿ$_2$ + ಹಣ್ಣು$_3$ ( < ಪಣ್$_3$ ) ]

**ಮಿಡುಂಕು** 'ಮಿಡುಕು₁' ನೋ.

**ಮಿಡುಕ** (ನಾ). ೧. ಮಿಡಿತ ; ಸ್ಪಂದನ : ಮಿಡುಕಕೆ ಮೆಚ್ಚು ತಪ್ಪದನು ವಪ್ಪುದು ಮೇಲಿಮ ಭಾಪು (ಶಶಪ. ೬–೨೫೭) ; ಮೈಯು ನೀನು, ನೀ ಮಿಡುಕ, ನನ್ನ ಒಳುಬಗೆಯು ತಿಳಲು ನೀನು (ಹೃದಸ. ೬೩–೧). ೨. ಅಳಲು ; ದುಃಖ ; ವೇದನೆ : ತಮ್ಮದಿರ ಎದೆ ತಬ್ಬಿ ನೋಡಲೆ, ಮಿಡುಕ ನಡುಕಕ್ಕೆಳೆದಿದೆ (ಪಾತುಶಾ. ೯೯–೪). [ ಮಿಡುಕು₁ + —ಅ₇ ]

**ಮಿಡುಕಾಟ** (ನಾ). ೧. ಅಲುಗಾಟ ; ಚಲನೆ : ಕೈಕಾಲುಗಳ ಮಿಡುಕಾಟ ನಿಂತಿತು, ಮುಟ್ಟಿದರೆ ಮೈ ತಣ್ಣಗಾಗತೊಡಗಿತ್ತು (ಕಾಲೂರ. ೧೭ ಕಥಾಸಾರ). ೨. ತಳಮಳ : ಕಸಿವಿಸಿ : ನನ್ನ ಕಂಡುದನ್ನು ಉಳಿದವರಿಗೂ ಹೇಳಿ ಸಕಾಲದಲ್ಲಿ ಎಚ್ಚರಿಸದೆ ಹೋದೆನಲ್ಲ. ಎಂಬ ಮಿಡುಕಾಟಕ್ಕೆ ಕಾರಣವಾಗಬಾರದು (ಮುಕ್ಷಕ್ರ. ೧೫). [ ಮಿಡುಕು₁ + ಆಟ ]

**ಮಿಡುಕಾಡು** (ಕ್ರಿ). ೧. ನಡುಗು ; ಕಂಪಿಸು : ಅರೆಮುಚ್ಚಿದಕ್ಷಿ ಮಿಡುಕಾಡುವ ತಾಳ್ಗೆ . . . ಒಪ್ಪೆ ನವಾಂಬುದಬಿಂದುವೃಂದಮಂ ಗಳಗಳನೀಂಟುತಿರ್ಪುದು ಮನಂ ತಣಿವಂತಿರೆ ಚಾತಕೋತ್ಕರಂ (ಕುಸುಮಾ. ೬–೨೦). ೨. ತಳಮಳಿಸು ; ಕಸಿವಿಸಿಗೊಳ್ಳು : ಜಗತ್ತಿನಲ್ಲಿ ಆದರ್ಶ ಸಜ್ಜನರು ಯಾರಿದ್ದಾರೆ! ಎಂದ ಮೇಲೆ ನಾನೇಕೆ ಇಷ್ಟು ಮಿಡುಕಾಡಬೇಕು (ಮುಂಗಾಳು. ೧೨). [ ಮಿಡುಕು₁ + ಆಡು₁ ]

**ಮಿಡುಕಿಸು**, ಮಿಟಕಿಸು, ಮಿಟಿಕಿಸು, ಮಿಟುಕಿಸು (ಕ್ರಿ). ೧. (ಕಣ್ಣುರೆಪ್ಪೆಯನ್ನು ಹೊಡೆದು) ಅಲುಗಾಡಿಸು ; ಅಲ್ಲಾಡಿಸು : ಬಿಟ್ಟ ಮಂಡೆವೆರಸಿ ಬಾಯ ಮಿಡುಕಿಸುತ ಕಣ್ಣ ಮುಚ್ಚಿ ಬೆರಳನೆಣಿಸು[ವಿ]ರಯ್ಯಾ (ಬಸವ. ೫೬೯). ೨. ತಳಮಳಗೊಳ್ಳುವಂತೆ ಮಾಡು : ಕಸಿವಿಸಿಗೊಳಿಸು : ಎಡೆಯಾಗದ ಮೃಗಮನವುಂಕಿಸಲುಮೊಲ್ದ[ಪೊಲ್ಲ]ದ ನಲ್ಲರಂತೆ ಮಿಡುಕಿಸಲುಂ . . . ನಿಮ್ಮಡಿಯ ಕೆಲದೊಳಾನೆ ಬಲ್ಲೆಂ (ಶಾಶಭಾ. ೫–೪೩ ವ). **ಮಿಟಕಿಸು** : ೧. ಕಣ್ಣನ್ನು ಮಿಟಕಿಸದೆ ಮುಂದ್ದಾದ ಆ ಮಗುವನ್ನೇ ಎಲ್ಲರೂ ನೋಡುತ್ತಿದ್ದರು (ರೂಶಿ). **ಮಿಟಿಕಿಸು** : ೧. ಎರೋಪ್ಪಸು . . . ಕಣ್ಣನ್ನು ಮಿಟಿಕಿಸುತ್ತಾ ಪ್ರಶ್ನಿಸುವವನಂತೆ ಒಲಿನಿನ್‌ನ ಕಡೆ ನೋಡಿದನು (ಪುಲಿಶಾ. ೬೬). **ಮಿಟುಕಿಸು** : ೧. ಅಕ್ಷಿಯ ಮಿಟುಕಿಸಿ ವಿಶ್ವದೊಳು ಅಕ್ಷರಕುಲವನು ಹುಡೆದವಳು! (ನಪಲ್ಲ. ೭೪–೧೫) ; ಅವನು ನನ್ನನ್ನು ನೋಡಿ ಕಣ್ಣು ಮಿಟುಕಿಸಿ "ಏನಪ್ಪಾ, ದೇವರಾಜ" ಎಂದ (ತಂಗಾಳಿ. ೩೦). [ ಮಿಡುಕು₁ + — ಇಸು₃. / ತೆಲು. ಮಿಡಿಕಿಂಚು ]

**ಮಿಡುಕು₁**, ಮಿಟಕು, ಮಿಟುಕು₁, ಮಿಡುಂಕು, ಮಿಡುಗು₁ (ಕ್ರಿ). ೧. ಅಲುಗು ; ಅಲ್ಲಾಡು : ಪಶ್ಚಿಮಪದ್ಮಾಸನದಲ್ಲಿ ಕುಳಿತು ನೆಟ್ಟಲುವ ಮುಜಿದು ತುಟಿ ಮಿಡುಕದೆ ಲಪ್ಪಿಯಾಡಿಸ್ಕ್ಲಾ (ಬಸವ. ೬೧೪) ; ಮಿಡುಕುವುದು ಬಾಯ್ ಚಿತ್ರವವಳಲಿ ತೊಡಕಿಹುದು (ಕುಮ್ಮಾರ. ೧೯–೩೭) ; ಆಳುತ್ತೇಳುತ ಬೆರಳು ಚಾಳಿ ಮಿಡುಕುವ ಬಾಯಿ ಮೇಳದೊಳು ತೊಡಕ ಬಿಡದವನ ಜಪವದುವೆ ಹಾಳುಮನೆಯಂತೆ (ಸರ್ವಜ್ಞ. ೧೭೩). ೨. (ಕಣ್ಣರೆಪ್ಪೆಯನ್ನು ಹೊಡೆದು) ಅಲುಗಾಡಿಸು ; ಅಲ್ಲಾಡಿಸು : ಕಣ್ಣ ಮಿಡುಕ್ಕೆ ಪಿಂಗಾಕ್ಷ ನೀನೇಕೆ ಮಿಳ್ಮಳ ನೋಡುತ್ತುಳನಿರ್ದ (ಶಂಕಥಾ. ೧೨–೧೫೦) ; ಉಪ್ಪರದಲ್ಲಿ ಕೈಯನು ಕೊಡದಿರಾ ಮಿಡುಕದಿರು ಮಂದಿಯನು (ಕುಮ್ಮಾಭೀ. ೪–೨೯) ; ಮೊಗಮಂ ತೂಗುತ್ತೆ ಪಾಲಾಗ್ರಮಂ ಮಿಡುಕುತ್ತುಬ್ಬರಿಸುತ್ತೆ . . . ಬಂದತ್ತದೊಂದೆಕ್ಕಲಂ (ರಾಜಶೇ. ೫–೬೯). ೩. ಕದಲು; ಮಿಸುಕು : ಬಾಹುಬಲಿಕುಮಾರನ ಭರತೇಶ್ವರನ ಪಕ್ಷದ ರಾಜಲೋಕ ಮನೆರಡುಂ ದೆಸೆಯೊಳಂ ಮಧ್ಯಸ್ಥರಾಗಿ ಮಿಡುಕದೆ ನೋಡುತ್ತಿರ್ಪಂತು ನಿಯಮಿಸಿದಾಗಳ್ (ಆದಿಪು. ೧೪–೧೧೪ ವ); ಒಡನೇಱಿ ಸವತಿ ನೂಂಕಲ್ಕೊಪರಿಸ ತೋಱಿಯೊಳಗೆ ಪಟುಗಲತ್ತಿತ್ತಲಣಂ ಮಿಡುಕದೆ ತಿರಿಯುತ್ತಿರೆ ಕಣ್ಡಿಡಿಗೆಜಗಿದಳತ್ತಿಯುಬ್ಬೆ ಸತಿ (ಶಾಇಷ. XI-i. ೫೨–೨೫ ; 1007) ; ಗುಡ್ಡರೆತ್ತುಗಳ ಕೊರಳಂ ಪೂಡಿ ಭರದೊಳಿದಿರಾಗಿ ಕೊಂಡೊಯ್ಯಲೆಂದುಬಿದು ಚಪ್ಪರಿಸಿ ಪೊತ್ತೆತ್ತಿ ನೂಂಕಿದೊಡೆ ಮಿಡು[ಪಾಠಾಂ. ನೂಂ]ಕದೆ ರಥಳ ಗಿರಿಯಂತೆ ನೆಲಸಿರ್ದುದು (ಸಿದ್ಧರಾ. ೬–೨೭). ೪. ಕಂಪಿಸು ; ನಡುಗು : ಅದುರು : ಮೃಡನುದಾಸೀನದಿಂ ಹಸ್ತಮಂ ನೋಡುತಿರೆ ಮಿಡುಕು ತಿರ್ದುದು ವಿಷಂ ಪರನ ಕರತಳದೊಳಗೆ (ಸಂಶರ. ೦–೨೩); ತೋಳ್ ತೊಡೆ ಮಿಡುಕೆ ಸುಯ್ ಸೂಸೆ ನಿದ್ರೆ ಕವಿದು ವಿತತಸುಖದಿಂದಿರುತಿರಲ್ಕೆ (ಹಶಶಾ. ೬–೫೨) ; ಮಿಡುಕುವ ಗಂಟಲಿರ್ದೆಸೆಗೆ ಜೋಲ್ದು ಮರಳ್ವುದೆಱಂಕೆ . . . ಬಿಸುಸುಯ್ದು ಸುಯ್ಲಿನಿಂ ಕಡುಬಡವಾದ ತಮ್ಮ ತನು ರಂಜಿಸೆ ಕೋಕಕುಳಂ . . . ನಿಂದುದದೊಂದು ತಾಣದೊಳ್ (ದಶಕು. ೬–೯೯). ೫. ನಡುಗುವಂತೆ ಮಾಡು ; ನಡುಗಿಸು ; ಕಂಪನಗೊಳಿಸು : ಒಡಲುಂ ಮಿಡುಕಿನಂ ಕಡಿವ ಕಟ್ಟಿರುಂಪೆಗಳುಂ (ಆದಿಪು. ೫–೦೩). ೬. ತುಡಿ ; ಮಿಡಿ : ಹೊಡೆದುಕೊಳ್ಳು: ನಡೆಪಂತೆ ನುಡಿವ ಪುಶ್ರಿಕೆ ಮಿಡುಕುವ ರಸಚಿತ್ರದೆಸೆವ ಪೆಣ್ಣಿಂಬೊಳ್ಪಂ ಪಡೆದಳ್ ಕಣ್ಗಂ ಮನಕಂ ಪಡೆವಳ್ ಪೊಸವೇಟದೆಸಕಮಂ ನೃಪಸುತನೊಳ್ (ಚಂದ್ರಪು. ೫–೧೧೭) ; ಜರೆಯೆಂಬ ರಕ್ಕಸಿ . . . ಖಂಡಳು ಮಿಡುಕುವೀ ಸೀಳೆರಡವನು ಹೊಜಿಹೊಳಲ ಬಾಹೆಯಲಿ (ಕುಮ್ಮಾಸ. ೨–೪೪) ; ಮಿಳಿರ್ವ ಕಿವಿಗಳ ಮಿಡುಕುವಳ್ಳೆಯು . . . ಹೊಸಜವ್ವನದ ಹೊಮ್ಮರೆ ಹೊಳಕಿತಿದಿರಿನಲಿ (ತೊರರಾ. ೩–೬–೧೫) ; ಮಿಡುಕುವ ಮನಕ್ಕಂತ ನುಡಿಯುವ ತುಟಿಗೀತ ನೀಡುವ ಕೈವೇಲು ಸತತ (ಇಂತಾಶ. ೧೫೫–೬೦). ೭. ಬೆಚ್ಚು ; ಮೆಟ್ಟಿಬೀಳು : ಕಮಲೆಗೆ ಆ ವಿಷಯ ತಟ್ಟನೆ ನೆನಪಾಯಿತು. ಮಿಡುಕಿ ಬಿದ್ದು. ನೆಟ್ಟಗೆ ಕೂತಳು (೬೦ದಿನ. ೦೫೩). ೮. ಸುಳಿ : ಚಲಿಸು ; ಸಂಚರಿಸು : ಮುಂ ಮಹಿಯೆಲ್ಲಮಂ ಶಿಶಿರರಾಜನೆ ಬಿಚ್ಚತಮಾಳ್ದನೀಗಳಾತಂ ಮಿಡುಕಲ್ಕೆ [ಸಲ್ಲಿರದೆ] ಪೋಪುದು (ಶಂಕಥಾ. ೫–೩೦); ಮೊಳೆಯೊಳ್ಮಿಡುಕುತ್ತಿದೆ ಮಿಂಚು ಕಿಚ್ಚಲೊತ್ತಿದುದು ಪಯೋಧರಾವಳಿ ತಳರ್ನಡೆಯಿಟ್ಟುದು ಪಶ್ಚಿಮಾನಿಳಂ (ಅನಂಪು. ೯–೫); ದುಶ್ಚರಿತವಿವನಲಿ ಮಿಡುಕಲುಪ್ಮವು (ತೊರರಾ. ೬–೨೦–೬೦). ೯. ಚಂಚಲವಾಗು ; ಅಸ್ಥಿರಗೊಳ್ಳು: ಕೃತಕವೋ ದಿಟವೋ ದುರಂತರ ಶ್ರುತಿಗಳಱಿಯುವೆ ನಮ್ಮ ಮಿಡುಕುವ ಮತಿಯ ಪಾಡೇ (ಕುಮ್ಮಾಕ. ೭–೩೯) ; ದಾನವನಧಿಕರೋಷದಲಿ ಮಿಡುಕಿ ಪರಿವಾರಕ್ಕೆ ನೇಮವ ಕುಡುತಹಮ್ಮಿಂದೊಗ್ಗಿ ತನ್ನಯ ಮಡದಿಯರ ನೆಮ್ಮಿರ್ದನಹಿತಧ್ವನಿಯನಾಲಿಸುತ (ಅಕ್ರೂಶ. ೭–೬೬). ೧೦. (ಧಾಳಿ ಮಾಡಲು) ಮುನ್ನುಗ್ಗು; ಧಾವಿಸು: ಕದನಕ್ಕಾರ್ಮಿಡುಕುವರೆಂದಾಹವಕರ್ಮಠನಭಿಮನ್ಯುವಿರ್ದನಾ ಧುರಧರೆಯೊಳ್ (ಪೀಬಾಪು. ೦೨–೪೮) ; ಬಲವರ್ಗದಿಂ ಮಿಡುಕಲಣ್ಮದೆ ನೋಡಿದ ಸಾಸಿಗಂ ನುಡಿಯದಿರ್ಪವೊ ಬೀರಮನಾರೊಳಂ (ಜಗ್ಗಾವ. ೩೬೦) ; ಮಿಡುಕಿಪಡೆ ಮರುಳಹಿರಿಲೇಸಲ್ಲೆಮ್ಮೊಳತಿಮಥನ (ಕುಮ್ಮಾದ್ರೋ. ೪–೬೦). ೧೧. ಆತುರಪಡು ; ತವಕಿಸು : ನೆರೆಪೊರೆಯ ಸಿರಿವಂತರ ಮನೆಗೆ ಪರಿಯಿಡಲ್ಕಡಹಡಿಸಿ ಮಿಡುಕುತಿರ್ಪ ಮಿಂಡರ ತಂಡಂಗಳುಮಂ . . . ಈಕ್ಷಿಸುತ್ತುಂ (ವರ್ಧಪು. ೯–೫೬ ವ). ೧೨. ಹಾರು ; ನೆಗೆ : ಹೊಂಗಿ ಮಿಡುಕುವ ಮೀನ ಗುದಿಗಳಂ . . . ಪೂಶಿಬೆಕ್ಕಂ ಹರಿಶ್ಚಂದ್ರರಾಯಂಗೆ ಕಾಣಿಕೆಯನಿತ್ತು (ಹಶಶಾ. ೫–೩) ; ಆರ ಕೈಕೊಂಬುದೀ ಬಿಸಿಲು ವೈಕುಂಠದಿ ನಾರಾಯಣ ನಿಲಲಂಜಿ ನೀರೊಳು ಮಿಡುಕಿ ಮೀನಾದ (ಪೋಹಶ. ೦೯–೪೮). ೧೩. ಸರಿ ; ತೆರಳು ; ನಡೆ: ಹಿಂದಕೆ ಮಿಡುಕುವವನೇ ಕರ್ಣನೀತನ ಕಡುಹ ನೋಡು (ಕುಮ್ಮಾದ್ರೋ. ೦೩–೩೨). ೧೪. ಎಚ್ಚೆತ್ತುಕೊಳ್ಳು ; ಚೇತರಿಸಿಕೊಳ್ಳು : "ಮಿಡುಕು, ಮಿಡುಂಕು — ಚೈತನ್ಯೇ (ಚೇತರಿಸು)" (ಶಮದ) ; ಕೆಡೆದಿರ್ದರೆಲ್ಲರಂ ನೋಡಿ ರಣರಂಗದೊಳಡುಕಿ ಮಾತಾಡುವಿವರಂ ಕಂಡು ಲೀಲೆಯಿಂ ಓಡಿದು ಲಪನೆಳತಂದು ಕೌತುಕವ ಕಪಿಗಳೆಂದಣ್ಣಂಗೆ ತೋಱಿಸಲ್ಕೆ (ಕೈಮಿಭಾ. ೨೦–೪೦). ೧೫. ಕೊರಗು ; ಪರಿತಪಿಸು : ಈ ಪರಿಯ ಬಿಡಬೇಸಿ

ಬಿಟ್ಟನೆಂತು ಸೈರಿಪೆನೆಂದು ಮಿಡುಕಿದಳಾತ್ಮವಲ್ಲಭಗೆ (ಪೋಕಚ. ೯-೧೦) : ನಾನು ಇನ್ನೂ ತಾಯಿಯಾಗಲಿಲ್ಲವಲ್ಲಾ ಎಂದು ಒಳದನಿ ಮಿಡುಕುತ್ತಿತ್ತು (ಕೆಮೋಡ. ೪೨). ೧೬. ಚಡಪಡಿಸು : ಒದ್ದಾಡು : ಮಿಡುಕುವಿನಂ ಪ್ರಾಣಿಗಳಂ ಮಡಿಪಿದೊಡಂ ದೋಷವಿಲ್ಲ ದೇವಾರ್ಚನೆಯುಳ್ಳಡೆ ಸಾಲ್ಗುಂ (ಸಮಶ. ೦೪-೬೬) ; ಅಧ್ವಗರ್ ಮಿಡುಕಿ ಸಿಟ್ಟಿನ ಕೀಡೆವೊಲಾದರ್ (ಧಕಶು. ೪-೨೨) ; ಏನ ಮಾಡುವೆನೆನುತ ಮನದೊಳಗೆ ಮಿಡುಕುವನು (ತೊರರಾ. ೩-೨-೭೬). ೧೭. ಪಶ್ಚಾತ್ತಾಪಪಡು : ಕೆಲವು ತಿಂಗಳುಗಳಾದ ಮೇಲೆ ನಾವು ಮಾಡಿದ ತಪ್ಪಿಗೆ ಮಿಡುಕಬೇಕಾಯಿತು (ಸುವಸ್ಂ. ೦). ಮಿಟಕು : ೧. "ಮಿಟಕು – ಮಿಣಕು (ಮಿಣಿಮಿಣಿ ಮಿಟಕತೀತಿ)" (ಶಾಪಕೋ. ೩೦). ಮಿಟುಕು₁ : ೨. ಚುಕ್ಕಿ ಕಣ್ಣು ಮಿಟುಕುತಿತ್ತು (ಶಂಗೀತ. ೮-೧). 'ಕಣ್ಮಿಟುಕು₁' ಪರಾ. ೧೪. ತರಣಿಕುಲ ಬಜಿದಾಯ್ತು ಮಿಟುಕಲು ನೆರೆಯದೆನುತವೆ ಬಾಯ ಹೊಯಿಹೊಯಿದೊಱಲಿ ಹುಡಿಯಲಿ ಹೊರಳಿ ಸಾಯಲು ಬಗೆದನಾ ಭರತ (ಕೌರಾ. ೪-೨೦). ಮಿಡುಂಕು : ೧. ಮುರಿದ ಮೀಸೆ ಮಿಡುಂಕುವ ಬಾಯ್ ಕಡಂಗಿ ಕಣ್ಗಿಟ್ಟಳಮಾಗಿ ಕೆಂಪುಗುವ ಕಣ್ಗಡಿಯುಂ ಕಱಿಯಲ್ಕೆ (ಪುಪ್ಪಾಸ್ತ್ರ. ೬-೦೩). ೨. ಚಿತ್ತಲುಂ ಮಿಡುಂಕಲ್ಪಡೆಯದೆ ಸಿಡಿಮಿಡಿಗೊಂಡು ಸಿಡಿದು ಸಿಡಿಲೇಱಿಗ್ಗಿಯೆರ್ದು ಪಲ್ಗಡಿದು ಮಹಾಮಸಕಂ ಮಸಗಿ ಮುನ್ನಾರ್ಗಮೊಳಸೋರದಗ್ಗಲಿಸಿದ ಮದದಿಂ ಮೇಗುಂ ಮೆಯ್ಯುರಿಯದೆ ತಮ್ಮೊಳ್ ಪರಿಚ್ಛೇದಿಸಿ (ಪುಷ್ಪಪು. ೩-೧೨೭ ವ). ೬. ಬಜಿತಧರದ ಮಿಡುಂಕುವ ಕಂಬುಕಂಧರದ . . . ಉಡಿವ ನಡುವಿನ ಶಶಿಮುಖಿಯರೊಗ್ಗಿನಲಿ ಬಳಿವಿಡಿದೈದಿತಚ್ಯುತನ (ಅಕ್ರೂಚ. ೪-೦೮). ೧೪. "ಮಿಡುಕು, ಮಿಡುಂಕು – ಚೈತನ್ಯೇ (ಚೇತರಿಸು)" (ಶಮುಧಾ). ಮಿಡುಗು₁ : ೧೫. "ಮಿಡುಗು – ಸಾಖಿನ್ನೇ (ದುಃಖದಿಂದ ಚಿಂತಿಸು)" (ಶಮುಧಾ).

ಮಿಡುಮಿಡುಕು (ದ್ವಿರುಕ್ತಿ) : ಮಿಡುಮಿಡುಕಿ ಬಡಿತಂಗಾಸುವರುಂ ನೋಡನೋಡೆ ಕಣ್ಗಳಂ ಮಿಂಟುವರುಂ (ಆದಿಪು. ೩-೬೩ ವ) ; ಉಡುಗಡಣದೊಡೆಯನೊಡಲೊಡಕು ನಡನಡುಗಿ ಬಡಕರಿಸಿ ಮಿಡುಮಿಡುಕಲಡಿಗಡಿಗೆ (ಪಶಚ. ೦-೨) ; ಕೊಟಕಿ ಕಾತರಿಸಿ ಮಿಡುಮಿಡುಕಲೊಸರ್ವ ನಾಣ್ಚಡೆ (ಶಬಪು. ೦೯-೩೨). ಮಿಡುಮಿಡುಮಿಡುಕು, ಮಿಡುಮಿಡುಮಿಡುಂಕು = ಬಹಳವಾಗಿ ಚಡಪಡಿಸು, .. ಒದ್ದಾಡು : ತನ್ನ ಬಾಲಂಬೆರಸುರಿಯೊಳ್ ಬಿಟ್ಟು ಮಿಡುಮಿಡುಮಿಡುಕುತಿರ್ದ ಜನನಿಯುಂ ಕಂಡು ಪಾವುಗಳುಳ್ಳ ಪಗೆಯುಂ ಮಱೆಯಿಮೆಂಬುದುಂ ನನ್ನಿಮಾಡಿ (ಶಂಪಭಾ. ೩-೯೯ ವ) ; ಬಿಸಿಲೊಳ್ ತಾನೆ ಹುಡುಹುಡನೆ ಮುಗ್ಗಿ ಮಿಡುಮಿಡುಮಿಡುಕಿ (ರಮಾರ್ಮಪು. ೦೦-೦೩೨) : ದೂಮಿಯೊಳ್ ಬಿಟ್ಟ ಪಾಪಿನಂದದಿಂ ಮಿಡುಮಿಡುಮಿಡುಂಕಿ (ವರ್ಧಪು. ೯-೬೦ ವ). [<ಮಿಡಿ₁. / ಮಲ. ಮಿಟುಕು ; ತೆಲು. ಮಿಡುಕು]

**ಮಿಡುಕು₂, ಮಿಟುಕು₂, ಮಿಡುಗು₂** (ನಾ). ೧. (ಕಣ್ಣುರೆಪ್ಪೆಯ) ಅಲುಗಾಟ; ಚಲನೆ : ಎಮೆ ಮಿಡುಕಂ ಸಂಗಳಿಸಿದಮರಿ ಗಗನಸ್ಥಳಿಯೊಳ್ ನಡೆ ಮಾಣ್ದ ಖಚರಿಯೆಂಬೀ ನುಡಿಗೆಡೆಗೊಟ್ಟಳ್ ಲತಾಂಗಿ ನವತರುಣಿಮದೊಳ್ (ಚಂದ್ರಪು. ೩-೦೦೦); ಲಲನೆ ಮೂಗಿನೊಳುಸುರನು . . . ಕೈಯ ಮೊದಲೊಳು ಮಿಡುಕನು ... ಕಾಣದೆ ನೊಂದಳು (ಹತಶಾ. ೦೨-೨೬). ೨. ನಡುಕ ; ಕಂಪನ : ಬಿಸಿಲ್ವೆಕಿಲ್ . . . ಪಾಯ್ದು ಪುಲಿಯೆಂಬೀ ಬಾಧೆಯೊಳ್ ಮೆಯ್ಯನೊಡ್ಡಿಸೆ ಮೆಯ್ಯೊಳ್ ಮಿಡುಕುಳ್ಳ ತಾಣಮಣಮಿಲ್ಲೆಂಬಂತು ನಿಷ್ಪಂದನಾಗಿ ಸಮನ್ವಿತಗುಣಂ ಗುಣಂಗೊಳಿಸಿದಂ ಯೋಗೀಂದ್ರವೃಂದಾರಕಂ (ಆದಿಪು. ೬-೩೯) ; ದೂವಿಗವಳಿಂತೆಂದಳಾ ಗರಗರಿಕೆ ಕೊರಲೊಳೀಕ್ಷಣದೊಳ್ವಾರ್ಬಿಂದು ಮಿಡುಕಿರ್ದಯೊಳೊದವೆ ಪುಳಿಂದನ ಕಣೆಗಟ್ಟಿ ನಿಂದ ವನಹರಿಣಿಯವೊಲ್ (ಯುಶೋಚ. ೨-೪೦) : ಕೊರಳ ಮಿಡುಕಿನ ಮಸೆಯ ಮುಖದಲಿ ಸುರಿವ ನೆತ್ತರ ಪತಿಯ ಸುತ್ತಲು ತಿರುಗಿ ಚೀಱುವ ವಿಹಗಸತಿಯನು ಕಂಡನಾ ಮುನಿಪ (ತೊರರಾ. ೦-೨-೦೪). ೩. ಮಿಡಿತ : ತುಡಿತ : ಸ್ಪಂದನ : ಮಿಡುಕುಱಿ ಪೊಯ್ದು ತನ್ನೆರ್ದೆಯನೊತ್ತಿ ಕರಾಗ್ರದೊಳಾರೊಳಪ್ಪೊಡಂ ನುಡಿಯದೆ ಚಿಂತಿಸುತ್ತುಮೆಮೆಯಿಕ್ಕುವುದಂ ಮಱೆದೊಂದು ಜಾವಮುಂ ಮಿಡುಕದೆ ಸಾಲಭಂಜಿಕೆವೊಲಿರ್ದ ಲತಾಂಗಿಯ ರೂಪು ಕಣ್ಗಳೊಳ್ ತೊಡರ್ದಿರೆ (ಸುಕುಸು. ೦೩-೨೩) ; ಶತಸ್ರಂದಮನು ಸುರವೈರಿಯೆಡೆಗೈತಂದು ನೋಡಿದನಸುರನೆದೆಯಲಿ ಮಿಡುಕನಾರೈದು (ತೊರರಾ. ೬-೨೪-೩೬). ೪. ಪ್ರಾಣ ; ಜೀವ : "ಅಸುವಟಲು ಮಿಡುಕು" (ಶಬ್ದಮಂ. ೬೦). ೫. ಚೈತನ್ಯ ; ಜೀವಂತಿಕೆ : (೬). ೬. ಅಂತಃಕರಣ ; ಕನಿಕರ ; ಅನುಕಂಪ : ಎಲ್ಲರೊಳು ಕಲಿಭೀಮನೇ ಮಿಡುಕುಳ್ಳ ಗಂಡನು (ಕುವ್ಯಾಭಿ. ೩-೩೪). ೭. ಪರಾಕ್ರಮ : ಶೌರ್ಯ : ಕಲಿತನ : "ಮಿಡುಕೆಂದೆನಲು ಪರಾಕ್ರಮ" (ಶಕುಪಿ. ೦೩೪): ಮಿಡುಕನುಳ್ಳರೆ ನಿನ್ನ ಮುಡಿಯನು ಹಿಡಿದು ನಾನೊಯ್ವಾಗ ರಾಘವ ತೊಡಚಿದನೆ (ಕೌರಾ. ೦೦-೬೯); ಮೇದಿನಿಯೊಳಾರಾದೊಡಂ ಮಿಡುಕುಳ್ಳೊಡುನ್ನತಪರಾಕ್ರಮಿ ತಡೆಯಲಿ ವಾಜಿಯನು (ಜೈಮಿಭಾ. ೨-೨೮); ನನ್ನ ಭಾವನ ಮಿಡುಕನ್ನು ನಾನು ಅರಿಯದವಳೆ ? (ಹುಲಿಹಾ. ೦೩೨). ೮. ಕಸುವು : ಶಕ್ತಿ : ಮೊಱಹಿನ ಮಿಡುಕುಗಳ ನಾಯ್ ನೂಕಿದವು ಹಾಸದ ವಿಳಾಸದಲಿ (ಕುವ್ಯಾಭಿ. ೦೩-೨೦). ೯. ಯಾವುದಾದರೊಂದು ಪ್ರಾಣಿಯು ಕಾಲನ್ನು ಊರಿದಾಗ ಮಣ್ಣಿನ ಮೇಲೆ ಕಂಡು ಬರುವ ಗುರುತು: ತಿವಳಿಯೊಳ್ ಮಿಡುಕಾಱದ ಮಣ್ಣಂ ದಿಕ್ಕಿದ ಲಂಡವ ಬೆಂಕೆಯಿಂ ಕವಿವ ಕಿಟ್ಟವದೊಳ್ಪೊನಲೊಳ್. ಸುಯ್ಯಾಱದ ಪೆನೋರೆಯಿಂ . . . ಒಕ್ಕ ಪಲ್ಲವನಿಕಾಯದಿನಂದಱದಂ ಕಾಡಾನೆಗಳಾಗಡೆ ಪೋದುದಂ (ಕಾವ್ಯಾವ. ೬೨೬). ಮಿಟುಕು₂ : ೧. 'ಕಣ್ಮಿಟುಕು₂' ಪರಾ. ಮಿಡುಗು₂ : ೨. ಯುವರಾಜ:–(ಮಿಡುಗಿಂದಿದ್ದು.) ಆ ರುದ್ರವ್ವೆ ಹೇಳಿಬಿಡುತ್ತಾಳೆ (ಪಟ್ಟಅ. ೦೦೦-೬). ೬. ತನ್ನ ಕೂಡುವಳಗದ ನಿಚ್ಚವಂದುಗದೊಂದು ಮಿಡುಗಿಂ ನಂಜುಂಡ ಬಾಸ್ನವಿರಂ. ಗಜಮುಖಿನ ಬರಿವೊಡೆಯ ಪಾವಂ, ಅಱುಮೊಗನ ತೇರ ಸೋಗೆಯುಂ . . . ಇನ್ನಾನುಂ ಪಗೆಯುಂ ಮಱಿತು ಸಂತಂ ಪುದುವಾಟ್ವುದೆಂದು ಬುದ್ಧಿವೇಳಿಲ್ (ರಾಮಾಶ್ವ. ೪೨-೦೦).

[< ಮಿಡುಕು₁/ ತಮಿ. ಮಿಟ್ಟುಕ್ಕು: ಮಲ. ಮಿಟುಕ್ಕಮ್, ಮಿಟ್ಟುಕ್ಕು]

**ಮಿಡುಕುಗಚ್ಚೆ** (ನಾ). (ಹಸು, ಎಮ್ಮೆ ಇತ್ಯಾದಿ ಪ್ರಾಣಿಗಳ) ಅದುರುತ್ತಿರುವ ಮರ್ಮಾಂಗ,–ಯೋನಿ : ಪೊಸನಸೆಯ ಸೊವಡನಾಘ್ರಾಣಿಸಿ ಮಣೆಯ ಮಿಡುಕುಗಚ್ಚೆಯೊಳ್ ಮೊಗಪೆತ್ತುತ್ತೆಸೆದುದು ವೃಷಮುಮರರ ನೇಡಿಸುವವೊಲೇನುಂಟೆ ನಿಮಗಮಿಾ ಸುಖಮೆನುತುಂ (ಲೀಲಾವ. ೩-೯೩).

[ಮಿಡುಕು₁ + ಕಚ್ಚೆ]

**ಮಿಡುಕುಗುಂದು** (ಕ್ರಿ). ಚಲನೆ ಕಡಿಮೆಯಾಗು : ಅಲುಗಾಟವು ಕುಗ್ಗು : ಅರೆಮುಗುಳ್ದಕ್ಷಿಗಳ್ ಮಿಡುಕುಗುಂದಿದ ಚೆಂದುಟಿ . . . ಒಪ್ಪೆ ಪೊಸ ವೇಷದ ತಾಪಸನೊಪ್ಪಿ ತೋಱಿದಂ (ರಬಕಂ. ೨-೭೯).

[ಮಿಡುಕು₂ + ಕುಂದು₁]

**ಮಿಡುಕುಗೆಡು** (ಕ್ರಿ). ಪರಾಕ್ರಮವನ್ನು ಕಳೆದುಕೊಳ್ಳು : ಶೌರ್ಯವಿಲ್ಲದಾಗು : ಮಿಡುಕುಗೆಟ್ಟನು ಬಿದ್ದ ದಧಿಮುಖನೊಡನೆ ಹಳಚಿದನವನ ನಂಗದ (ಕೌರಾ. ೨೦-೪೧). [ಮಿಡುಕು₂ + ಕೆಡು₁]

**ಮಿಡುಕುದಾಣ** (ನಾ). (ದೇಹದಲ್ಲಿ ನಾಡಿಯು) ಸ್ಪಂದಿಸುವ ಸ್ಥಳ: ಕಡೆಗಂಗಳೊಳು ಜಲ ತೋಱಿದೊಡದನಾಗೊಡನೆ ಕಾಣುತಲಾಳಿಯರು ಮಿಡುಕುದಾಣವ ಮುಟ್ಟಿಯಱಿದುಸುರನು ನೋಡಿ ಕಡುಚಪಳೆಯರು ಮೂಗಿನೊಳು (ಶಂಶಶ. ೭-೦೦೯). [ಮಿಡುಕು₁ + ತಾಣ]

×–**ಮಿಡುಕುಂಜು** 'ಮಿಡುಗುಂಜು' ನೋ.

**ಮಿಡುಗು$_1$** ' ಮಿಡುಕು$_1$ ' ನೋ.

**ಮಿಡುಗು$_2$** ' ಮಿಡುಕು$_2$ ' ನೋ.

**ಮಿಡುಗುಱು, ಮಿಡುಕುಱು** (ನಾ). ೧. ಬೆಂಕಿ : ಕಿಚ್ಚು : ಅಲ್ಲಿಯ ಮುನಿಗಳ ಮಿಾಸೆಗೆ ಮಿಡುಗುಱನಿಟ್ಟರು . . . ಆ ವೀರನ ಕಿಂಕರರು (ಶಬರಶ. ೨-೯೭); ಕಡಿದೊಟ್ಟಿದ ಪುಳ್ಳೆಗಳಂ ಮಿಡುಗುಱು ಸುಡುವಂತೆ ಸುಡುಗು (ಶರಪಾ. ೨೩-೬೨). ೨. (ಆಲಂ) ತಾಪ : ಬೇಗೆ : ಧಗೆ : ತಾಪತ್ರಯದ ಮಿಡುಗುಱಿಸಲೋರಂತೊದವಿಸುತ ಜಗದಱಿಯನೆನಿಸುವ ನಿನ್ನನಱಿಯದು ಮೂಢಜನ (ಹಭಾಗ. ೧೦-೩೨-೨೯). **ಮಿಡುಕುಱು :** ೧. ಒರೆದು ಬೆಳೆದಿಹ ವನದಿ ಮಿಡುಕುಱು ಹರಿಹರಿದು ಸುಡುವಂತೆ (ಪ್ರಭಾಕಾ. ೯-೨೬). ೩. ಬೆಂಕಿಯ ಕಿಡಿ : ಅಗ್ನಿಕಣ : ಹಲವುಕಾಲ ಧಾವತಿಗೊಂಡು ಒಟ್ಟಿದ ಹಿದಿರೆಯು ಒಂದು ಮಿಡುಕುಱಲ್ಲಿ ಬೇವಂತೆ ಸಲೆ ನೆಲೆ ಸನ್ನಿಹಿತನಾಗಿರ್ಪ ಶರಣನ ಭಕ್ತಿ ಒಂದನಾಯಾತದಿಂದೆ ಕೆಡುವುದು (ಬಸವ. ೨೦೩). [ದೇ.॥ ತೆಲು. ಮಿಡುಗುಱು, ಮಿಡುಂಗುಱು, ಮಿಣುಂಗುಱು, ಮಿಣುಗುಱು, ಮಿಣ್ಗುಱು]

**ಮಿಡುಚೆ** ' ಮಿಡತೆ ' ನೋ.

**ಮಿಡುಮಿಡನೆ** (ಅ). ಒಂದು ಅನುಕರಣಾವ್ಯಯ : ದೀರ್ಘಶೋಕವುಂ ಬಿಡೆ ಸುಡೆ ಕಿಚ್ಚಿನ ಕಿಡಿಯಂದದೆ ನೆಲದೊಳಗಿನಿಸುಂ ಮಿಡುಮಿಡನೆ ಮಿಡುಕುವೆನ್ನಂ ಕಂಡೆಂ (ಕಾಮಂಘೂ. ೯೨೨); ಸರ್ವಾಂಗಮಂ ಕಡಿಯೆ ಮಿಡುಮಿಡನೆ ಮಿಡುಕುತ್ತ (ಬಿಂದೋರ. ಪ. ೩೦೦-೧೩) ; ಮಿಡುಮಿಡನೆ ಮಿಡುಕುತ್ತ ಕೋಪದಿ ಘುಡುಘುಡಿಸಿ ಪೆಱೆಮಿಂಡನೆಂದನು (ಬಸವು. ೨೬-೦೩).

[ಮಿಡುಮಿಡು + —ಅನೆ$_1$]

**ಮಿಡುಮಿಡು** (ನಾ). ಕೋಪ. ದುಃಖ. ನೋವು ಮುಂತಾದುವುಗಳನ್ನು ಸೂಚಿಸುವಾಗ ಬಳಸುವ ಒಂದು ಅನುಕರಣಶಬ್ದ : 'ಮಿಡುಮಿಡನೆ ' ಪರಾ.

**ಮಿಡ್ಡೆ** ' ಮಡ್ಡಿ$_1$ ' ನೋ.

**ಮಿಣಕ್‌ಮಿಣಕ್** (ನಾ). (ದೀಪ. ಒಲೆ ಮುಂತಾದುವು ಮಂಕಾಗಿ ಉರಿಯುವುದನ್ನು ಸೂಚಿಸುವ) ಒಂದು ಅನುಕರಣಶಬ್ದ : ಮಂಕಾಗಿ ಉರಿಯುವ ಹಣತೆ ಮಿಣಕ್ ಮಿಣಕ್ ಎನ್ನುತ್ತದೆ (ಶ್ರೀಕೃ. ೧೦೩).

**ಮಿಣಕುಹುಳ** ' ಮಿಣುಕುಹುಳು ' ನೋ.

**ಮಿಣಕೆ** ' ಮಿನಿಕೆ ' ನೋ.

**ಮಿಣಮಿಣ** (ನಾ). (ದೀಪ, ಒಲೆ ಮುಂತಾದುವು ಮಂಕಾಗಿ ಉರಿಯುವುದನ್ನು ಸೂಚಿಸುವ) ಒಂದು ಅನುಕರಣಶಬ್ದ : ದೀಪ ಮಿಣಮಿಣ ಉರಿಯುತ್ತಿದೆ (ರೂಢಿ).

**ಮಿಣೆ** ' ಮಿಳಿ ' ನೋ.

**ಮಿಣೆಕೆ** ' ಮಿನಿಕೆ ' ನೋ.

**ಮಿಣೆಬಲೆ** ' ಮಿಣೆವಲೆ ' ನೋ.

**ಮಿಣೆಮಿಟಿ** (ನಾ). ಒಂದು ಅನುಕರಣಶಬ್ದ : ಚಾವಡಿಯ ದೀಪ ಮಿಣೆಮಿಟಿ ಉರಿಯುತ್ತಲೇ ಇತ್ತು (ಮರಳು. ೯೭); ಬೇಲಿಯನ್ನು ಕಂಡು ಕಣ್ಣು ಮಿಣೆಮಿಟಿ ಮಾಡುತ್ತ ನಿಂತೆ (ಬೆಳ್ಳಿಕೀ. ೦೩೩).

**ಮಿಣೆಮಿಣೆ** (ನಾ). ಒಂದು ಅನುಕರಣಶಬ್ದ : ಬಂದನೇನೆ . . . ಧಣಧಣಧಣರೆಂಬ ಪಾದದ ತೊಡವಿನ ಮಿಣೆಮಿಣೆ ಕುಣಿದಾಡುತ ಶ್ರೀಕೃಷ್ಣ (ಪುರಂದ. ೨-೬೨-೨).

**ಮಿಣೆಮಿಣೆಸು** (ಕ್ರಿ). ಕ್ಷಣ ಬಿಟ್ಟು ಕ್ಷಣ ಹೊಳೆ, – ಪ್ರಕಾಶಿಸು : ಆ ವಧುಗಳು . . . ಮಿಂಚಿನ ಲತೆಯಂತೆ ಮಿಣೆಮಿಣೆಸುತ ಕಂಚುಮಿಂಚಾಗಿ ಹೊಳೆವರಶ್ತಿತ್ತ (ಶರಶ. ೦೩-೦೦೯). [ಮಿಣೆಮಿಣೆ + —ಇಸು$_3$]

**ಮಿಣೆಯಾಟ** (ನಾ). ಹಗ್ಗದ ಸಹಾಯದಿಂದ ನಡೆಸುವ ಆಟ, — ಚಮತ್ಕಾರ : ಗಳೆಯಾಟ ಮಿಣೆಯಾಟ ಅದೃಶ್ಯಕರಣ ಅಗ್ನಿಸ್ತಂಭ ಆಕರ್ಷಣ ಚೌಷಷ್ಟಿಕಲಾವಿದ್ಯೆಯ ಸಾಧಿಸಿದ ಡೊಂಬನೇನು ಕಱಿಯನೇ (ಉಂಶಿ. ೪. ೨೦೭-೨೩೭). [ಮಿಣೆ (< ಮಿಳಿ) + ಆಟ]

**ಮಿಣೆವಲೆ, ಮಿಣೆಬಲೆ** (ನಾ). ಚರ್ಮದ ನೂಲಿನಿಂದ ತಯಾರಿಸಿದ ಬಲೆ : ಇತ್ತಲ್ ಮರೆಯ ಬಿಯದಪಡೆ ಮಿಣೆವಲೆಯನೊಡ್ಡಿ ಸೆರೆವಿಡಿಯುತಾ ಸಿಂಹಿಣಿಯನುಯ್ಯುದರಸನ ಬೇಂಟೆವೀಡಿರ್ದ ಕಂದರಕೆ (ಶ್ರೀರಾಪಾ. ೬೨೩-೨೦೦). **ಮಿಣೆಬಲೆ :** ಆ ಗುಡಿ ಬದೀಲೆ ಅಲ್ಲೇನು ಮಿಣೆಬಲೆಗೆ ಒಂದು ಒಂಟಿಗ ಬಿದ್ದು, ನೀನು ಭರ್ಜೀಲಿ ತಿವಿದು, ಒಂದುರುಳು ಉರುಳಿ, ಹಂದಿ ಹತ್ರಾನೆ ಬಿದ್ದದ್ದು ! (ಮಲೆಮ. ೦೦೯).

[ಮಿಣೆ (< ಮಿಳಿ) + ಬಲೆ$_1$]

**ಮಿಣುಕಿಸು** ' ಮಿನುಗಿಸು ' ನೋ.

**ಮಿಣುಕು$_1$** ' ಮಿನುಕು$_1$ ' ನೋ.

**ಮಿಣುಕು$_2$** ' ಮಿನುಕು$_3$ ' ನೋ.

**ಮಿಣುಕುದೀಪ** (ನಾ). ಮಂದವಾದ ಪ್ರಕಾಶವನ್ನು ಬೀರುವ ದೀಪ ; ಸಣ್ಣ ಬೆಳಕನ್ನು ಚೆಲ್ಲುವ ದೀಪ : ಮಿಣುಕುದೀಪದ ಮುಂದೆ ಹೆಂಗಸರಿಬ್ಬರೂ ಬಲು ಹೊತ್ತು ಕುಳಿತಿದ್ದರು (ಮರಳು. ೯೨೦); ಕತ್ತಲೆ ಇಲ್ಲವೆ ಕತ್ತಲೆಯಲ್ಲಿಯ ಮಿಣುಕುದೀಪ ಪ್ರಾಣಾನುಭವವಾದರೆ ಮೋಹಕವಾದ ಬೆಳುದಿಂಗಳು ಕಾವ್ಯಾನುಭವ (ಸಾಸಪಾ. ೯೩).

[ಮಿಣುಕು$_2$ (< ಮಿನುಕು$_3$ ) + ದೀಪ$_2$]

**ಮಿಣುಕುಬೆಳಕು** (ನಾ). ಮಂದವಾದ ಪ್ರಕಾಶ : ಕಚೇರಿಯ ದೀಪದ ಮಿಣುಕುಬೆಳಕಿನಲ್ಲಿ ಆ ಹೆಂಗಸರಿಗೆ ಊಟದ ಸಿದ್ಧತೆ ಮಾಡಿದನು (ಅನ್ನ. ೦೩೨). [ಮಿಣುಕು$_2$ (< ಮಿನುಕು$_3$ ) + ಬೆಳಕು$_2$ (<ಬೆಳಗು$_2$) ]

**ಮಿಣುಕುಹುಳು, ಮಿಣಕುಹುಳ** (ನಾ). ಮಿಂಚಿನಂತೆ ಕ್ಷಣ ಬಿಟ್ಟು ಕ್ಷಣ ಬೆಳಕು ಬೀರುವ ಒಂದು ಬಗೆಯ ಹುಳು ; ಮಿಂಚುಹುಳು : ಮಿಣುಕುಹುಳು ಒಂದೇ ಆದರೆ ಹೆಚ್ಚು ಬೆಳಕು ಕೊಡಲಾರದು (ಮುರುಕು. ೩೦). **ಮಿಣಕುಹುಳ :** "ಖದ್ಯೋತಃ, ಜ್ಯೋತಿರಿಂಗಣಃ— ೨ ಕತ್ತಲೆಯಲ್ಲಿ ದೀಪದ ಹಾಗೆ ಹೊಳೆಯುವ ರೆಕ್ಕೆಗಳುಳ್ಳ ಮಿಣಕುಹುಳ" (ಸಿದ್ಧಾಂತ. ೦೬೨); ಮಿಣಕುಹುಳ ತಿಣುಕಿದರೆ ಜೇನು ಬಂದೀತೆ ? (ಗಾದೆ).

[ ಮಿಣುಕು$_2$ ( < ಮಿನುಕು$_3$ ) + ಹುಳು ( < ಪುೞು ) ]

**ಮಿಣುಗುಟ್ಟು** 'ಮಿನುಗುಟ್ಟು' ನೋ.

**ಮಿಣ್ಣಗೆ** (ಅ). ಅಲುಗಾಡದೆ ; ನಿಶ್ಚಲವಾಗಿ : ಎರಡು ಮೂರ್ತಿಗಳ ನಡುವೆ ಮಿಣ್ಣಗೆ ಉರಿಯುವ ಕಾಲುದೀಪ (ಸರಸ. ೬೭).

ಮಿಣ್ಣಗಿರು = ಸುಮ್ಮನೆ ಇರು ; ಮಿಸುಕದಂತಿರು : ಕಣ್ಣೆತ್ತಿ ನೋಡರಾ ಕಡೆಯ ಕೌರವರಲ್ಲಿ ಮಿಣ್ಣಗಿರುವುದೊಂದು ವರುಷ (ಯುಖಶ. ೨); ನಾಳೆ ಹೆಂಡತಿಯನ್ನು ಕಟ್ಟಿಕೊಂಡು ಬೇರೆ ಹೋದಾಗ ಎಲ್ಲವೂ ತಿಳಿಯುತ್ತದೆ-ಮಿಣ್ಣಗಿದ್ದವರ ಬಣ್ಣ ! (ಬಡ್ಡಉ. ೦೦೯).

[ ಮಿಣ್$_0$ + —ಅಗೆ$_3$./ತೆಲು. ಮಿನ್ನಕ ]

**ಮಿಣ್ಣನೆ$_1$** (ಗು). ಚಿಕ್ಕದಾದ ; ಸಣ್ಣದಾದ : ಗೆಳೆಯರ ಕಯ್ಯಲ್ಲಿಯ ಮಿಣ್ಣನೆ ನೆಲ್ಲಿಯನಸಿಯಲಿ ಕೆಯ್ತುಗಲದೆ ಕೊಯ್ದು ! (ಚಿತ್ರರ. ೦-೦೩).

[ ಮಿಣ್$_0$ + —ಅನೆ$_2$ (< —ಅನೆಯ$_2$ ) ]

**ಮಿಣ್ಣನೆ$_2$** (ಅ). ೧. ಸದ್ದಿಲ್ಲದೆ ; ಮೌನವಾಗಿ : ನೂಱ್ವರನು ಕೊಂದನು ಮರನ ಹಾಯಿಕಿ ಮರಳಿ ಮಿಣ್ಣನೆ ಬಂದು ಹೊಕ್ಕನು ಬಾಣಸದ ಮನೆಯ (ಕುಮಾವಿ. ೩-೦೦೨) ; ಇಂದಿನಿತಿಂತೇಂ ಚೆಲ್ವಿನೊಂದು ಬಿತ್ತರದ ಭಂಗಿಯ ಪೊಸ ಬಣ್ಣನೆ ಮಿಣ್ಣನೆ ನಿನ್ನ ನಚ್ಚುಮೆಚ್ಚಿನ ಕಾಮನೊಂದು ಜಾಣದೊಳೆ ಬೆರೆತುದು ? (ರಾಪಾಶ್ಚ. ೦೩೯-೯). ೨. ಏನೂ ತಿಳಿಯದ

ಹಾಗೆ ; ನಿರ್ವಿಕಾರವಾಗಿ : ಎಲ್ಲವನ್ನೂ ಶಾಂತರಾಗಿ ಮಿಣ್ಣನೆ ಹೇಳು ತ್ತಿದ್ದೀರಲ್ಲ ! (ಶುಜಾಗ. ೨೬೪).

ಮಿಣ್ಣನಿರ್ = ಏನೂ ತಿಳಿಯದಂತಿರು ; ಮುಗ್ಧವಾಗಿರು : ಬೇಡವೇಡೆಂದೊಡಂ ಚಲದಿಂ ಪಿಡಿದು ಕಟ್ಟಿ ಮಿಣ್ಣನಿರ್ಪಂ (ರಾಪಾಶ್ಚ. ೦೫೩-೦೯); ನೀನೆಣಿಯಿದುದರಂತೆ ಮಿಣ್ಣನಿರ್ದುಮೆನ್ನನ್ನಿಂದೆನ್ನಂ ಕಟ್ಟಿಸಿದ ದಿಟ್ಟಂ (ರಾಪಾಶ್ಚ. ೧೬೫-೦). [ ಮಿಣ್$_0$ + —ಅನ್$_1$ ]

**ಮಿಣ್ಣಿಸು** 'ಮಿಳ್ಳಿಸು' ನೋ.

**ಮಿಣ್ಣೆ** 'ಮಿಟ್ಟೆ' ನೋ.

**ಮಿತ$_1$** (ಗು). ಸತ್ತುಹೋದ ; ಗತಿಸಿದ : "ಮಿತ – ಮೃತ = ಸತ್ತು ಹೋದ, ವಿಫಲ" (ಶಬ್ದಕೋ. ೬೩) ; ಬುತ್ತ್ವಕೈತ್ವಂ . . . ಮೃತ — ಮಿತ (ಶಮದ. ೨೬೬ ಶ್ರದೊ.). [ < ಸಂ. ಮೃತ ]

**ಮಿತ$_2$** (ಗು): ೧. ಅಳೆದ ; ಅಳತೆಮಾಡಿದ. ೨. ಮಿತಿಗೆ ಒಳಪಟ್ಟ ; ಸೀಮಿತವಾದ : ಮಿತನಖಕೇಶಶೋಭಿತತನುತ್ವಂ . . . ಪರಿಶೀತದೇಹ ಬಿಂಬತೆವೆರಸಿಂತು ಪತ್ತತಿಶಯಂಗಳವೇಂ ಜಿನನೊಳ್ ಪೊಡಬ್ದುವೋ (ಆಂಧ. ೧೧-೯೩). ೩. ಚಿಕ್ಕದಾದ; ಸಂಗ್ರಹವಾದ; ಸಂಕ್ಷಿಪ್ತವಾದ: 'ಮಿತನುಡಿ' ಪರಾ. ೪. ಕಡಮೆಯಾದ; ವಿರಳವಾದ. ೫. ಪರೀಕ್ಷಿಸಿದ ; ಪರಿಶೀಲಿಸಿದ. (ನಾ). ೬. ಅಳತೆ ಮಾಡುವುದು. ೭. ಮಿತಿಗೆ ಒಳಪಟ್ಟುದು : ಸೀಮಿತವಾದುದು : ಮಿತವಾದ್ದು ಬಾಳುವುದು. ಹಿತವಾದ್ದು ಫಲಿಸುವುದು (ಗಾದೆ). [ಸಂ.]

**ಮಿತಂಪಚ** (ಗು). ೧. ಜಿಪುಣತನದಿಂದ ಕೂಡಿದ; ಕೃಪಣತನದ. (ನಾ). ೨. ಜಿಪುಣ ; ಲೋಭಿ : "ಕದರ್ಯಃ . . . ಕಿಂಪಚನಃ ಮಿತಂಪಚಃ — ಈ ೫ ಲೋಭಿ" (ಕಣಾಯು. ೩೬-೧೪೨). ೩. ಪರಿಣತನಲ್ಲದವನು ; ಪಕ್ವತೆಯಿಲ್ಲದವನು : ಚತುರಕವಿಯೊಳ್ಪನತಿವಿಶ್ರುತ ವೈಯಾಕರಣರೊಳ್ಪು ತೀವಪ್ಪತಿರೆ ಮೂರ್ಖಿತೆಯಿಂದಮುರ್ವಿ ಕೊರ್ವಿದ ಮಿತಂಪಚರ್ ತೀವವ[ದ]ರಿದು ಪೊಸಬಗೆಯಿಂದಂ (ಚಸ್ಸ್ಪಶಾ. ೧-೦೭). ೪. ಪರಿಮಿತವಾದ ಪ್ರಮಾಣದಲ್ಲಿ ಆಹಾರವನ್ನು ತಯಾರಿಸುವುದು: ಕಡಮೆಪ್ರಮಾಣದ ಅಡುಗೆಯನ್ನು ಮಾಡುವುದು. [ಸಂ.]

**ಮಿತಕುಕ್ಷಿ** (ನಾ). ಹೊಟ್ಟೆಗೆ ಪರಿಮಿತವಾದ ಆಹಾರವನ್ನು ತೆಗೆದು ಕೊಳ್ಳುವವನು : ಮಿತಕುಕ್ಷಿ ಮಿತಭುಕ್ತ ; ಮುತ್ತ್ವಾರ್ ಜಿತೇಂದ್ರಿಯನು ? ಅತಿಚರ್ಚೆ ಸಲದಲ್ಲಿ (ಮಂಕಳ. ೩೯೦). [ಸಂ.]

**ಮಿತನುಡಿ** (ನಾ). ಅಗತ್ಯಕ್ಕೆ ತಕ್ಕಷ್ಟು ಆಡುವ ಮಾತು; ಸಂಕ್ಷಿಪ್ತವಾದ ಮಾತು : ಮಿತನುಡಿಯ ಬಾಲೆಯರು ರತಿಗೆ ಮಿಗೆ ಚೆಲ್ವೆಯರು (ಪಪಮೋ. ೨-೫೩). [ ಮಿತ$_2$ + ನುಡಿ$_2$ ]

**ಮಿತಪರಿಗ್ರಹ** (ನಾ). [ಜೈನ] ಶ್ರಾವಕನ ವ್ರತಗಳಲ್ಲಿ ಒಂದು; ಅವಶ್ಯಕತೆಗೆ ಬೇಕಾದಷ್ಟು ಮಾತ್ರ ಧನ, ಧಾನ್ಯ ಇತ್ಯಾದಿಗಳನ್ನಿಟ್ಟುಕೊಂಡು ಉಳಿದುವನ್ನು ತ್ಯಾಗಮಾಡುವ ಒಂದು ಬಗೆಯ ವ್ರತ : ದಿನವ್ರತ ದಿಗ್ವ್ರತ ಮಿತಪರಿಗ್ರಹವ ಮತ್ತನಶನವ್ರತವ ಕೈಕೊಂಡು ವನಜಮುಖಿಯರು ಕೈಕೊಂಡರು ವ್ರತಗಳ ಜಿನಮುನಿಗಳ ಸಮಕ್ಷದೊಳು (ಶರಕ. ೦೬-೬೦). [ಸಂ.]

**ಮಿತಭಾಷಿ** (ನಾ). ಅಗತ್ಯಕ್ಕಿಂತ ಹೆಚ್ಚು ಮಾತನ್ನಾಡದವನು; ಕಡಮೆ ಮಾತನ್ನಾಡುವವನು : ಸ್ವಭಾವತಃ ಅವರು ಮಿತಭಾಷಿಗಳೆಂದು ಎಲ್ಲರ ನಂಬಿಕೆಯಾಗಿದ್ದಿತು (ಸಪುಜೀ. ೯೬); ಸಭೆಯೊಳು ಮೇಲೆದ್ದು ಕುಣಿವನು ಬಹುಭಾಷಿ ಓಂದುಳಿವನು ಮಿತಭಾಷಿ (ಹಂತಾಶ. ೨೦೫-೬೩).

[ ಸಂ. ಮಿತಭಾಷಿನ್ ]

**ಮಿತಭಾಷೆ** (ನಾ). = ಮಿತನುಡಿ : ಹೋದಿರುಳು ತಾಂ ಬಾರದಿರೆ ಉಬ್ಬೆಗಂಬಡುತಿರ್ದಳಿಗೆ ನೆನವನೊರೆಯುತ್ತೆ ಮಿತಭಾಷೆಯುಲಿ . . . ಪೊಕ್ಕಳಾ ರಾಜ್ಞಿ . . . ಪಟಹರ್ಮ್ಯಮಂ (ಶಕ್ತ್ರಂಗ. ೧೮-೯೮೩).

[ ಸಂ. ಮಿತಭಾಷಾ ]

**ಮಿತಭುಕ್ತ** (ನಾ). = ಮಿತಕುಕ್ಷಿ : ಮಿತಕುಕ್ಷಿ ಮಿತಭುಕ್ತ; ಮುತ್ತ್ವಾರ್ ಜಿತೇಂದ್ರಿಯನು ? ಅತಿಚರ್ಚೆ ಸಲದಲ್ಲಿ (ಮಂಕಳ. ೩೯೦). [ಸಂ.]

**ಮಿತವಚನ** (ನಾ). ೧. = ಮಿತನುಡಿ : . . . ವಚನಯುತಂ ಕೀರ್ತಿಕಾಂತಾಸಮೇತಂ . . . ಬುಧಜನಕುಮುದಾನಂದಚಂದ್ರಂ ಸಭೇಂದ್ರಂ (ರಾಸ್ವರಂ. ೦-೩೩). ೨. = ಮಿತಭಾಷಿ : ಕ್ಷಿತಿಪತಿಯಂ ಬರಿಸಿ ಜಗನ್ನುತನಂ ಸಂತೈಸಿ ಕುಶಲವಾರ್ತಾಂತರವಾಂ ಮಿತವಚನಂ ಬೆಸಗೊಂಡತಿವಿಶೀರ್ಣ ಮುದನಾವನಾತನೆಂಬುದು ಮಾರ್ಗಂ (ಕಲಿರಾ. ೨-೮). [ಸಂ.]

**ಮಿತವಾಕ್ಯ** (ನಾ). ೧. = ಮಿತನುಡಿ. ೨. = ಮಿತಭಾಷಿ : ಮಿತವಾಕ್ಯಂ ಸದ್ಗುಣೈಕ್ಯಂ . . . ನೆಗಟ್ದಿ ತಿಬಳಭೂಪಾಲಮಂತ್ರಿಪ್ರಧಾನಂ (ಸುಕುಶಾ. ೨-೫೦). [ಸಂ.]

**ಮಿತವ್ಯಯ** (ನಾ). ಹಣ, ಪದಾರ್ಥ ಮುಂತಾದುವುಗಳನ್ನು ಹಿಡಿತದಿಂದ ಖರ್ಚು ಮಾಡುವಿಕೆ.–ಮಿತಿಯಲ್ಲಿ ಬಳಸುವಿಕೆ : ಬಂಡವಾಳಕ್ಕೆ ಮುಖ್ಯಕಾರಣವೆನ್ನಿಸುವ ಮಿತವ್ಯಯವನ್ನು ನಮ್ಮ ಅರ್ಥಶಾಸ್ತ್ರವು ಒಂದು ಪ್ರಮುಖಧರ್ಮವಾಗಿ ಉಪದೇಶಿಸಿದೆ (ಶಾರದ. ೩೫೭); ಅಕ್ಕಾಜಿಯು ತನ್ನ ಬಳಿಯಲ್ಲಿ ಸಂಗ್ರಹಿಸಿಟ್ಟುಕೊಂಡ ನೂರುರೂಪಾಯಿಗಳನ್ನು, ಮಿತವ್ಯಯದಿಂದ ನನ್ನ ಕೆಲಸಕ್ಕಾಗಿ ವೆಚ್ಚಮಾಡುವಂತೆ ತಿಳಿಸಿ ಕಳಿಸಿದ್ದಳು (ಹೇಮುಂತ. ೦೭೯). [ಸಂ.]

**ಮಿತಸಂಖ್ಯೆ** (ನಾ). ಕಡಮೆ ಅಂಕೆ; ಅಲ್ಪಸಂಖ್ಯೆ : ಮನಸ್ಸಿನ ವಿಚಾರಗಳನ್ನು, ಭಾವನೆಗಳನ್ನು ತೋಡಿಕೊಳ್ಳುವ ಜನವರ್ಗಕ್ಕೆ, ಅವರು ಕೇವಲ ಮಿತಸಂಖ್ಯೆಯವರು, ಸಂಬಂಧಿಸಿದ ಈ ಬರಹವು ಸದ್ಯಕ್ಕೆ ಮಾತು, ಲೇಖನ, ಗೀತ, ನೃತ್ಯಗಳನ್ನು ಆಶ್ರಯಿಸಿದ ವ್ಯಕ್ತಿಗಳಿಗೆ ಅನ್ವಯಿಸುತ್ತದೆ (೭೦ಬಿದ. iii. ಪೊರ೮ ಮಾತು). [ ಸಂ. ಮಿತಸಂಖ್ಯಾ ]

**ಮಿತಸಂತಾನ** (ನಾ). ಒಂದು ವ್ಯವಸ್ಥೆಗೆ ಒಳಪಟ್ಟ ಸಂತತಿ; ಕಡಮೆ ಮಕ್ಕಳನ್ನು ಪಡೆಯುವಿಕೆ : ಮಿತಸಂತಾನದ ಕಡೆಗೆ ಗಮನವು ತಿರುಗಿದೆ (ಶಿಲ್ಪಾ. ೦೭೬). [ ಸಂ. ]

**ಮಿತಾಹಾರ** (ನಾ). ಪರಿಮಿತವಾಗಿ ಮಾಡುವ ಊಟ; ಹಾಳತವಾದ ಆಹಾರಸೇವನೆ : ಅಲ್ಪವಲ್ಲದೆ ಯಥೇಷ್ಟವಲ್ಲದೆ ಯೋಗ್ಯಾನುಗುಣ್ಯವಾಗಿ ಭೋಜನಂಗೈವುದೇ ಮಿತಾಹಾರವೆನಿಸುವುದು (ವಿವೇಕ. ೦೪೮). [ಸಂ.]

**ಮಿತಿ** (ನಾ). ೧. ಅಳತೆ : ಪ್ರಮಾಣ : ಮಿಾಜಿಾತು ಭುಜಶಕ್ತಿ ಮಿತಿಯಿಲ್ಲ ತನುಕಾಂತಿದೋಚಿತ್ತು ಕಂತುನಂದನನಗೆ (ಮೋಹತ. ೩೪-೦೯). ೨. ತೂಕ ; ಭಾರ. ೩. ಮೇರೆ : ಎಲ್ಲೆ : ಮಿತಿ ಮೇರೆಯಿಲ್ಲದ ನೃಪರು ನೆರೆದುದು ಜನಕನಗರಿಯಲಿ (ತೊರರಾ. ೦-೦೨-೨೮); ಸುಳ್ಳಿಗಾದರೂ ಒಂದು ಮಿತಿಯಿರಬೇಕು (ದೇಕಪ್ನ. ೯೨). ೪. ಕಟ್ಟು ; ಕಟ್ಟಳೆ ; ನಿಯಮ : ಈ ರೋಗಂಗಳಿಗೆ ಈ ಔಷಧವೆಂಬ ಮಿತಿಯನ್ನುಂಟುಮಾಡಿ ಚಿಕ್ಕಿನವರು ಈ ಕಟ್ಟಳೆಯಿಂ ತಿಳಿದು ನಡೆಸುವುದು (ಸಕಪ್ನ. ೭) ; ಊಟದಲ್ಲಿ ಬಹಳ ಮಿತಿಯಿರಬೇಕು (ಮುಂಬರು. ೪-೩೫). ೫. ಅವಧಿಯ ಮೊದಲು ಅಥವಾ ಕೊನೆ : ಮಾರಾಟದ ರಕ್ಕಮು ಜಮಾ ಆದ ಮಿತಿಇಂದ ಮೂರುದಿವಸಗಳು ಕಡಮೆ ಮಾಡಿ ಬಡ್ಡಿಯ ಲೆಖ್ಖಕ್ಕೆ ಹಿಡಿಯೋಣದರಲ್ಲಿ ಬಂದೀತು (ಮುಂಬಿಲ್ಯಾ. ೨೬) ; ಅಂಗಡಿಯ ಬಾಕಿಯು ಬರುವದಿದ್ದರೆ, ಬಾಕಿ ಇದ್ದ ಮಿತಿ ಹಿಡಿದು ಬಡ್ಡಿ ಆಕಾರಿಸಲ್ಪಡುವದು (ಮುಂಬಿಲ್ಯಾ. ೨೦೮). ೬. ಖಚಿತವಾದ ಹೇಳಿಕೆ. ೭. ಸಾಕ್ಷಿ. ೮. ದೃಢತೆ. [ಸಂ].

**ಮಿತಿಗೆಯ್** (ಕ್ರಿ). ಮಿತಿಗೆ ಒಳಪಡಿಸು ; ಮೇರೆ ಮಿಾರದಂತೆ ಮಾಡು : ರತಿದೇವಿ ಬಸಿಜಾಂತು ಪಡೆದ ದುಕ್ಕವ ಸುತವತಿಯಾಗಿ

ನೋಳ್ಪ ಸಂತಸವ ಮಿತಿಗೆಯ್ದುಪನೆಂದು ತೊಟ್ಟಿಲ ತೂಗಿದಳತಿಶಯದಿಂದೆ ಕುವರನ (ಮೋಹತ. ೦೭-೩೯). [ಮಿತಿ + ಕಯ್‍₁]

**ಮಿತಿಮೀರು** (ಕ್ರಿ). ೧. ಎಲ್ಲೆಯನ್ನು ದಾಟು ; ಮೇರೆಮೀರು : ಸಣ್ಣ ಮೀನುಗಳನ್ನು ದೊಡ್ಡ ಮೀನುಗಳು ನುಂಗುತ್ತವೆ . . . ಇಲ್ಲದಿದ್ದರೆ ಅವು ಮಿತಿಮೀರಿ ಬೆಳೆಯುತ್ತಿದ್ದವು (ಮುಂಬರು. ೪-೦೦೩); ಮ್ಲೇಚ್ಛ ಹುಡುಗಿಯ ಮೇಲೆ ಅವನಿಗಿದ್ದ ಸಿಟ್ಟು ಮಿತಿಮೀರಿತು (ಅಣಾರ. ೬೯). ೨. ವ್ಯವಹಾರದ ಸೀಮೆಯನ್ನು ಉಲ್ಲಂಘಿಸು ; ನಡವಳಿಕೆಯನ್ನು ಮೀರು : ಈ ಬಗೆಯಲ್ಲಿ ನಾಚಿಕೆಗೆಟ್ಟು ಮಿತಿಮೀರಿಯಿರುವುದು ನನ್ನಂತಹ ಕುಲವೆಣ್ಣಿಗೆ ತರವಲ್ಲ (ಶಕಾ. ೦೬). [ ಮಿತಿ + ಮೀರು (<ಮೀಱು) ]

**ಮಿತಿಲಿ** 'ಮಿಟಲಿ' ನೋ.

**ಮಿತು** 'ಮಿದು' ನೋ.

**ಮಿತುವಾಸಿಕೆ** (ನಾ). ಮೃದುವಾದ ಹಾಸುಗೆ.—ಶಯ್ಯೆ : ಮಿತುವಾಸಿಕೆಯ ಮೇಲೆ ತನುತಾಪದೊಡನೆ ಹೊರಳುತಂ (ಶಶಮೋ. ೯-೨೨). [ ಮಿತು ( <ಮಿದು ) + ವಾಸಿಕೆ ]

**ಮಿತ್ತು** 'ಮಿಟ್ಟು' ನೋ.

**ಮಿತ್ತುಗರೆ** 'ಮಿಟ್ಟುಗರೆ' ನೋ.

**ಮಿತ್ರ** (ನಾ). ೧. ನೇಸರು ; ಸೂರ್ಯ : "ಆದಿತ್ಯ: . . . ಮಿತ್ರ:. ಚಿತ್ರಭಾನು: . . . ತ್ರಯೀತನು: —ಈ ೪೭ ಆದಿತ್ಯನ ಪೆಸರ್" (ಹಲಾಯು. ೬-೩೭) ; ಮಿತ್ರಂ ಪ್ರತಾಪಸಹಿತಚರಿತ್ರಂ ವರವರ್ಣ ಬರುತುಮಿರೆ ಘನಪಥನಕ್ಷತ್ರಪ್ರಸೂನಮಂ ದ್ರುತಪತ್ರಂಗಳೆನರುಣನುಡುಗಿದಂ (ಲೀಲಾವ. ೦೯-೦೩೩). ೨. (ಸಾಮಾನ್ಯವಾಗಿ ವರುಣನ ಜೊತೆ ವರ್ಣಿತವಾಗಿರುವ) ದ್ವಾದಶಾದಿತ್ಯರಲ್ಲಿ ಒಬ್ಬ : ಧಾತ ಆರ್ಯಮಾ ಮಿತ್ರ ವರುಣ ಇಂದ್ರ ವಿವಸ್ವಾನ್ ಪರ್ಜನ್ಯ ಪೂಷ ಅಂಶುಮಾನ್ ಗಭಸ್ತಿಮಾನ್ ತ್ವಷ್ಟೃ ವಿಷ್ಣುಗಳೆಂಬವರೇ ಕ್ರಮದಿಂ ದ್ವಾದಶಾದಿತ್ಯರು (ಶಿವೇಶ. ೨೦೬) ; ಗಣಪ ಮಿತ್ರರು ಸಪ್ತಋಷಿಗಳು ವಹ್ನಿ ನಾರದ ವರುಣನು ಇನಜಗೆ ಸಮ ಚಂದ್ರ ಸೂರ್ಯರು ಮನುಸುತೆಯು ಪೆಚ್ಚು ಪ್ರಮಹನು (ಭರತೇಶ. ೮೩. ೦-೩-೩). ೩. ಗೆಳೆಯ ; ಸ್ನೇಹಿತ : "ಮಿತ್ರಂ, ಸಖಾ . . . ಸ್ನಿಗ್ಧ:—ಈ ೫ ಕೆಳೆಯಂ" (ಹಲಾಯು. ೭೦-೨೭೯) ; ಮಿತ್ರ ವ್ಯಸನತ್ರಾಣಪವಿತ್ರೀಕೃತಗಾತ್ರನಪ್ಪ ನಿನ್ನಂ ಕಂಡಾ ಮಿತ್ರವಿಹೀನೆನೀಗಳ್ ಮಿತ್ರತ್ವಕ್ಕಾಸೆಪಟ್ಟು ಬಂದೆಂ ನಿನ್ನೊಳ್ (ಕಂಠೀರ. ೩.೨೦೭-೯೩೩) ; ಚಿತ್ರವಾಹನಪುತ್ರಿಯುಂ ಶಕ್ರತನಯನುಂ . . . ಭೋಗಿಸಿದರನುದಿನಂ ಗೃಹಬಂಧುಮಿತ್ರರಂ ಮರೆದು, ಕರ್ತವ್ಯಮಂ ತೊರೆದು (ತತ್ತ್ವಂಗ. ೯೦-೧೦೩೯). ೪. [ರಾಜನೀ] ರಾಜನ ಸಪ್ತಾಂಗಗಳಲ್ಲಿ ಒಂದು ೩ ; ಇವರಲ್ಲಿ ಸಹಜಮಿತ್ರ—ತಾಯಿಯ ಅಥವಾ ತಂದೆಯ ಮೂಲಕ ನಂಟುತನವುಳ್ಳವನು; ಪ್ರಾಕೃತಮಿತ್ರ—ನೆರೆಯ ಶತ್ರುರಾಜ್ಯದ ಆಚೆಯಿರುವ ರಾಜ್ಯದ ಅರಸು ಮತ್ತು, ಕೃತ್ರಿಮಮಿತ್ರ—ಕಾರ್ಯದ ಮೂಲಕ ಮೈತ್ರಿಯನ್ನು ಗಳಿಸಿದವನು ಎಂಬುದಾಗಿ ಮೂರು ಪ್ರಕಾರದ ಸ್ನೇಹಿತರಿರುತ್ತಾರೆ : "ಮಿತ್ರಂ . . . ಶತ್ರೋರೇಕಾಂತರಬೂ ಆಚೀಚೆ ರಸ ಅರಸನ ಮಿತ್ರ." (ಶಬ್ದಮ. ೨೩೭).

[ಸಂ.]

**ಮಿತ್ರಕಾರ್ಯ** (ನಾ). ೧. ಸ್ನೇಹಿತನ ಕರ್ತವ್ಯ. ೨. [ರಾಜನೀ] ಸ್ನೇಹಿತನನ್ನಾಗಿ ಮಾಡಿಕೊಳ್ಳುವುದು : ಅನ್ಯರೆಲ್ಲರುಮನತಿಸ್ನೇಹದಿಂ ತನ್ನವರಂ ಮಾಡಿಕೊಳ್ವುದು ಮಿತ್ರಕಾರ್ಯಮೆಂಬುದು (ಕಂಠೀರ. ೩ ೦೯-೧೦). ೩. ಕನ್ನಡದ ಪ್ರಸಿದ್ಧಗ್ರಂಥವಾದ 'ಪಂಚತಂತ್ರ'ದಲ್ಲಿ ಬರುವ ಐದನೆಯ ಪ್ರಕರಣ. [ಸಂ.]

**ಮಿತ್ರಕುಲ** (ನಾ). ೧. ಸೂರ್ಯವಂಶ ; ಇನಕುಲ : ಪತ್ತುವಿಡು ಮಗುಡಮಂ, ಮಿತ್ರಕುಲ ಮಿತ್ರವರ್ಯ (ಶ್ರೀರಾಮ. ೩೩೭-೨೩೭). ೨. ಗೆಳೆಯರ ಗುಂಪು ; ಸ್ನೇಹಿತರ ಸಮೂಹ : ಮಂತ್ರಿಯುಂ ಪೊಜೆವ ತುಂಬುರನೆಂಬನಂ ಕೊಟ್ಟು ಮಱಂತೆ ತನ್ನೊಡನಿರ್ದ ಮಿತ್ರಕುಲಮಂ ಕೊಟ್ಟು (ಸಂಶರ. ೩-೩೯). [ಸಂ.]

**ಮಿತ್ರಗುಣ** (ನಾ). ಸ್ನೇಹಿತನಲ್ಲಿರಬೇಕಾದ ಗುಣ.—ಸ್ವಭಾವ : ಸ್ವಚ್ಛತನಂ ತ್ಯಾಗಂ ಶೌರ್ಯಂ ಸಮಾನವಹ ಸುಖದುಃಖಂ ಸ್ನೇಹಂ ದಾಕ್ಷಿಣ್ಯಂ ಸತ್ಯಂ ಶೌಚಮೆಂಬಿವು ಮಿತ್ರಗುಣಂಗಳ್ (ಕಂಠೀರ. ೨೦೭-೦೯). [ ಸಂ. ]

**ಮಿತ್ರಘ್ನ** (ಗು). ಮಿತ್ರದ್ರೋಹಿಯಾದ. [ಸಂ.]

**ಮಿತ್ರಜ** (ನಾ). ೧. ಸೂರ್ಯನ ಮಗ. ೨. ಯಮ : ಮೃತ್ಯುಂಜಯನ ವಾಕ್ಯ ತಪ್ಪದೆಂದಾನುಳಿದೆ ಮಿತ್ರಜನ ದಹಿಸಿದಾಗಲೆ ಮೃಳುಹಲಿಲ್ಲವೆ (ಶಶಿವ. ೯-೩೭). [ಸಂ.]

**ಮಿತ್ರತ್ವ** (ನಾ). ಗೆಳೆತನ ; ಮೈತ್ರಿ ; ಸ್ನೇಹ : ನಿನ್ನಂ ಕಂಡು . . . ಮಿತ್ರತ್ವಕ್ಕಾಸೆಪಟ್ಟು ಬಂದೆಂ ನಿನ್ನೊಳ್ (ಕಂಠೀರ. ೩. ೨೦೭-೯೩೩) ; ಪೂರ್ಣ್ವಾ ರವಿತನೂಜನುಂ ನಾನುಮಗ್ನಿಯ ಸಾಕ್ಷಿಯಾಗೆ ಮಿತ್ರತ್ವಮಂ (ಶ್ರೀರಾಮ. ೩೦೨-೩೭). [ಸಂ.]

**ಮಿತ್ರದ್ರೋಹ** (ನಾ). ಸ್ನೇಹಿತನಿಗೆ ಬಗೆಯುವ ಕೇಡು : ಗೆಳೆಯನಿಗೆ ಮಾಡುವ ವಂಚನೆ : ಅದನಾಂ ಕೇಳ್ದುಸಿರದಿರ್ದನಪ್ಪೊಡೆ ವಿಶ್ವಾಸಘಾತುಕತ್ವಮುಂ ಮಿತ್ರದ್ರೋಹ [ಪಾಠಾಂ. ಮಿತ್ರದ್ರೋಹತ್ವ. ಮಿತ್ರೋದಾಸೀನ]ಮುಮಪ್ಪುದೆಂದಱಿಪಲ್ಬಂದೆಂ (ಕಂಠೀರ. ೦೦೦-೯) ; ಅರಸನವರಿಂದಾ ನಮಗೆ ಪ್ರಾಣೋಪಕಾರವಾದ್ದಕ್ಕೆ ಅವರಿಗೆ ನಾಲು ಸ್ವಾಮಿದ್ರೋಹ ಮಿತ್ರದ್ರೋಹ ಮಾಡಬಾರದು (ಸ್ವಪರ. ೨೯) ; ಅದ್ಯಾತ ಮತಿಯದು ಪತಿದ್ರೋಹವಾದರೆ, ಚಂಡಶಾಸನನನು ಮಿತ್ರದ್ರೋಹ (ನಾಟ್ಯಸ. ೭೭). [ಸಂ.]

**ಮಿತ್ರದ್ರೋಹಿ** (ನಾ). ಸ್ನೇಹಿತನಿಗೆ ಕೇಡನ್ನು ಬಗೆಯುವವನು : ಗೆಳೆಯನಿಗೆ ವಂಚನೆಯನ್ನು ಮಾಡುವವನು : ಮಿತ್ರದ್ರೋಹಿಯಾದವನಿಗೆ ಕಾಣುವವರೆಲ್ಲ ಶತ್ರುಗಳೇ (ಗಾದೆ). [ಸಂ. ಮಿತ್ರದ್ರೋಹಿನ್]

**ಮಿತ್ರದ್ವಿಷ** (ನಾ). ೧. ಸೂರ್ಯನ ಹಗೆ : ರಾಹು. ೨. ಸ್ನೇಹಿತನನ್ನು ದ್ವೇಷಿಸುವವನು ; ಗೆಳೆಯನಲ್ಲಿ ಶತ್ರುತ್ವವನ್ನು ಹೊಂದಿದವನು. ೧, ೨ : ದ್ವಿರಸನಂ ಮಿತ್ರದ್ವಿಷಂ ವಕ್ರಗಾಮಿ . . . ಅಶ್ಯಾಮಿಷದತ್ತಚಿತ್ತನೆನೆ ಪಾಪಂ ಪೋಲ್ತು ಲೋಕಕ್ಕೆ ಪರ್ತಿಪ ದುರ್ಯೋದನನುಗ್ರಸಂಕ್ರಮಿಸಿಯೆಂಬವರ್ಘರ್ (ಸವಿಶ. ೦೯-೦೪). [ಸಂ.]

**ಮಿತ್ರದ್ವೇಷ** (ನಾ). ಸೂರ್ಯನೊಡನೆ ಇರುವ ಹಗೆತನ.—ವೈರ : ದೋಷದೊಡೆತನವೊಂದು ಮಿತ್ರದ್ವೇಷವೊಂದು . . . ಅಬಲೆಯರಾಸ್ಯದಲಿ ಸಂಕ್ಲೇಶಿಯಾಗಿಹುದೊಂದೆನುತೆ ಶಶಿ ಹೇಸಿ ಮೆಲ್ಲನೆ ಜಾಱಿದನು ಪಡುವಣ ಸಮುದ್ರದಲಿ (ಅಶ್ವತ್ಥ. ೩-೩೦). [ಸಂ.]

**ಮಿತ್ರಪಂಚಕ** (ನಾ). [ವೈದ್ಯಶಾ] ಔಷಧಕ್ಕಾಗಿ ಬಳಸುವ ಬೆಲ್ಲ, ತುಪ್ಪ, ಗುಂಜಿ, ಜೇನುತುಪ್ಪ ಮತ್ತು ಬಿಳುಗಾರ ಎಂಬ. ಪರಸ್ಪರ ಸಹಾಯಕಗಳಾದ ಐದು ಬಗೆಯ ಪದಾರ್ಥಗಳು : ಆ ಭಸ್ಮವನ್ನು ಮಿತ್ರಪಂಚಕದಿಂದ ಕರಗಿಸುವುದು. ಮಿತ್ರಪಂಚಕವೆಂದರೆ ಬೆಲ್ಲ. ತುಪ್ಪ, / ಗುಂಜಿ, ಜೇನುತುಪ್ಪ, ಬಿಳುಗಾರ (ವೈದ್ಯ. ೩೬). [ಸಂ.]

**ಮಿತ್ರಪುತ್ರ** (ನಾ). ೧. ಸೂರ್ಯನ ಮಗ. ೨. ಶನಿ : ಕ್ಷಿತಿಜನೊಳೊಂದಿದ ಗುರುವಿಂ [ನೇತ್ರಾರಂ] ಮಿತ್ರಪುತ್ರನಿಂ ದುಃಖಿ . . . ಎನಿಕುಂ ಮನುಜಂ (ಜಾತಕ. ೦೩-೩). ೩. ಯಮ.

**ಮಿತ್ರಪುತ್ರಸಂಹರ** = ಸೂರ್ಯನ ಮಗನಾದ ಯಮನನ್ನು ನಾಶಮಾಡಿದವನು ; ಶಿವ : ತುಂಗಮಹಿಮಾಕರ ಭೀಕರ ಮಿತ್ರಪುತ್ರಸಂಹರ . . . ಜಂಪ ಶೇಖರ (ರಾಜಶೇ. ೦೩-೫೩). [ಸಂ.]

**ಮಿತ್ರಬಲ** (ನಾ). ಸ್ನೇಹಿತರಾಜರ ಬಲ : ಅಖಿಲ ಶಾರ್ದೂಲಂಗಳೇ ಮಿತ್ರಬಲಮಾಗಿಯುಂ ನಿಸರ್ಗದುರ್ಗಗಿರಿಗುಹಾಗಹ್ವರಂಗಳೇ ದುರ್ಗಂಗಳಾಗಿಯುಂ . . . ಮೃಗಾಧಿರಾಜಪದವಿಯೊಳಾಧಿಪತ್ಯಮನಾತ್ಮಸ್ವೀಕೃತಂ ಮಾಡಿ (ಶಂಕಕಂ. ೮. ೨೨-೦೦). [ಸಂ.]

**ಮಿತ್ರಭಾವ** (ನಾ). ಗೆಳೆತನ ; ಮೈತ್ರಿ : ಅವರಲ್ಲಿ ಪರಿಚಯಾಭ್ಯಾಸವೆಂಬುದಿಲ್ಲ ಮಿತ್ರಭಾವವುಮಿಲ್ಲ (ಶಂತಕಂ. ೦೦೦-೬). [ಸಂ.]

**ಮಿತ್ರಭೇದ** (ನಾ). ೧. ಸ್ನೇಹಿತರಲ್ಲಿ ಉಂಟಾಗುವ ಒಡಕು, — ವ್ಯತ್ಯಾಸ. ೨. ಕನ್ನಡದ ಪ್ರಸಿದ್ಧಗ್ರಂಥವಾದ 'ಪಂಚತಂತ್ರ'ದ ಮೊದಲನೆಯ ಭಾಗ. [ಸಂ.]

**ಮಿತ್ರಮಂಡಲ**, ಮಿತ್ರಮಂಡಳ (ನಾ). ೧. ಸೂರ್ಯಬಿಂಬ. ೨. ಸ್ನೇಹಿತರ ಗುಂಪು. ೧, ೨ : ಹಿಮಕರಮಂಡಲಮಿದು ಶತ್ರುಮಂಡಲಾಭಂ ನೃಪೇಂದ್ರ ಮಸುಳ್ದುದು ಬೇಗಂ ನಿಮಿರಲ್ ಬಗೆದಪುದೀ ಮಿತ್ರಮಂಡಲಂ ಮಿತ್ರಮಂಡಲಾಭಂ ನಿನ್ನಾ (ಉಕ್ಕ. ೦೨-೩೨). **ಮಿತ್ರಮಂಡಳ** : **೧, ೨** : ರಿಪುರಾಜಮಂಡಳಂ ಕುಂದಿ ಪದ್ಮತೇಜದಿನದೊಳ್ಮೆಯುಂ ಪೆರ್ಚದು ಭಾವಿಪೊಡೆಯ್ದೆ ಮಿತ್ರಮಂಡಳಮುಪಚಯಮಂ ತಾಳ್ದುದಂತದುಚಿತಂ ಚಿತ್ರಂ (ಕುಸ್ಕೃ. ೩-೮). [ಸಂ.]

**ಮಿತ್ರಮಂಡಳ** 'ಮಿತ್ರಮಂಡಲ' ನೋ.

**ಮಿತ್ರಲಕ್ಷಣ** (ನಾ). ಸ್ನೇಹಿತನಲ್ಲಿರಬೇಕಾದ ಗುಣ, — ಲಕ್ಷಣ : ಶೀಲಂ ಮಹಾಸ್ನೇಹಂ ಇವು ಮೊದಲಾದ ಮಿತ್ರಲಕ್ಷಣಂಗಳಾವನಲ್ಲಿಯುಂಟು ಆ ಮಿತ್ರನಲ್ಲಿ ತಾನಿಹುದು (ಶಂತಕಂ. ೨೯೩-೨೨). [ಸಂ.]

**ಮಿತ್ರಲಾಭ** (ನಾ). ೧. ಸ್ನೇಹಿತರನ್ನು ಗಳಿಸಿಕೊಳ್ಳುವಿಕೆ ; ಗೆಳೆಯರನ್ನು ದೊರಕಿಸಿಕೊಳ್ಳುವಿಕೆ. ೨. ಸಂಸ್ಕೃತದ ಪ್ರಸಿದ್ಧಗ್ರಂಥವಾದ 'ಹಿತೋಪದೇಶ'ದ ಮೊದಲನೆಯ ಭಾಗ. [ಸಂ.]

**ಮಿತ್ರವಿಯೋಗ** (ನಾ). ೧. ಸೂರ್ಯನ ಅಗಲಿಕೆ, — ವಿರಹ : ಮಂಥರನಂ ವ್ಯಾಧನುಯ್ದನೆಂದು ಮಿತ್ರವಿಯೋಗದಿಂ ಕಿಜಿವಮಂ ಬೇಗಂ ದುಃಖಿತರಾಗಿರ್ದೇಗೆಯ್ವೆಮೆನೆ (ಶಂಕಕಂ. ೨೨೬-೯) ; ಮಿತ್ರವಿಯೋಗದೊಳೀ ಶತಪತ್ರಂ ಕಡುಗಂದಿ ಕುಂದುಗೊಂಡಿರ್ಪುದು (ಮಲ್ಲಿಪು. ೬-೮). ೨. ಸ್ನೇಹಿತನ ಅಗಲಿಕೆ, — ವಿರಹ : ಮಿತ್ರವಿಯೋಗದೊಳೀ ಶತಪತ್ರಂ ಕಡುಗಂದಿ ಕುಂದುಗೊಂಡಿರ್ಪುದದೇಂ ಚಿತ್ರಮೊ ದೇಹಿಗೆ ಮಾಟ್ಕುಂ ಮಿತ್ರವಿಯೋಗಂ ವಿಶೇಷಮಪ್ಪ ದಪಟಲಂ (ಮಲ್ಲಿಪು. ೬-೮). [ಸಂ.]

**ಮಿತ್ರವಿರಹ** (ನಾ). = ಮಿತ್ರವಿಯೋಗ ೧ : ದಿವಸದವಸಾನದೊಳ್ ಕಮಳವನಂ ಬೀರೊಡಿ ನಾಡೆ ಬಾಡಿದುದೇಂ ಚಿತ್ರಮೊ ಮಿತ್ರವಿರಹದೊಳ್ ಕೊರಗುವುದೆವೆ ರಜೋಧಿಕಂ ಜಡಾಶಯನಿಳಯಂ (ಕುಸ್ಕೃ. ೦೩-೨೦). [ಸಂ.]

**ಮಿತ್ರಸಮ್ಮಿತ** (ನಾ). [ಕಾವ್ಯಮಿ] ಪ್ರಭುಸಮ್ಮಿತ, ಮಿತ್ರಸಮ್ಮಿತ ಮತ್ತು ಕಾಂತಾಸಮ್ಮಿತವೆಂಬ ಮೂರು ಬಗೆಯ ಅಲಂಕಾರಪ್ರಕಾರಗಳಲ್ಲಿ ಒಂದು ; P"ನಮ್ಮ ಕರ್ತವ್ಯಾಕರ್ತವ್ಯಗಳಿಗೆ ಸಾಧಕಬಾಧಕಗಳು ಕಂಡುಬರುವಂಥ ಕಥೆಗಳನ್ನು ರಸಪ್ರಾಧಾನ್ಯವಿಲ್ಲದೆ ಹೇಳಿ ನೀತಿಯನ್ನು ಸೂಚಿಸುವ ಪುರಾಣಾದಿಗಳು 'ಮಿತ್ರಸಮ್ಮಿತ" (ಕ್ಬಲು. ೦೬೩ ೮೨೮) : ಪ್ರಭುಸಮ್ಮಿತ ಮಿತ್ರಸಮ್ಮಿತ ಕಾಂತಾಸಮ್ಮಿತ ಎಂಬ ಮೂರು ಮೋಲಿಕೆಗಳು ಈ ಮೂರರ ದಾರಿಯನ್ನು ಸೂಚಿಸುತ್ತದೆ (ಶಾರಟಾ. ೨೩೪). [ಸಂ.]

**ಮಿತ್ರೆ** (ನಾ). ಗೆಳತಿ ; ಸ್ನೇಹಿತೆ : "ಸಾರಜ್ಞೆ ಮಿತ್ರೆ ಸಖಿಯಾಳಿ ಸಹಜೀವಿತ ವಯಸ್ಯೆಯೆನೆ ಕೆಳದಿಯಕ್ಕುಂ" (ಶುಂಗರಾ. ೯೦-೩) ; ಮಿತ್ರೆ ನೋಡೆ ! ನೋಡೆ ! ನೀಡುಂ ನೀಡದ ಪಕ್ಕಿಯುಮೆನ್ನಂ ಬಂಜೆಯೆನುತ್ತೇಡಿಪಂತಿರೆನ್ನಿದಿರೊಳ್ ಒಳ್ಳಿಯಂ ಮುದ್ದುಗೆಯ್ಯುಂ (ರಾಮಾಶ್ವ. ೦೮-೯) : ಮಿತ್ರೆಯರು ವಡಗೂಡಿಯಾ ಸುಚರಿತ್ರೆ . . . ಒಪ್ಪಿರೆ ತೂಗುವಂಚದೊಳು (ನಾಗತ. ೨೩-೮೦). [ಮಿತ್ರ + — ಎ₂]

**ಮಿಥ** (ಅ). ೧. ಪರಸ್ಪರವಾಗಿ ; ಒಂದಕ್ಕೊಂದು ಪೂರಕವಾಗಿ. ೨. ರಹಸ್ಯವಾಗಿ ; ಗುಟ್ಟಾಗಿ. ೩. ಪರ್ಯಾಯವಾಗಿ ; ಬದಲಾಗಿ. [ಸಂ. ಮಿಥಸ್]

**ಮಿಥಸ್ಸ್ಪರ್ಧೆ** (ನಾ). ಪರಸ್ಪರ ಮಾಡುವ ಹುರುಡು, — ಪೈಪೋಟಿ : ಬಿಸಿಲುಂ ಬೆಳ್ದಿಂಗಳುಂ ಕಟ್ಟಲೆಯುಮಿವು ಮಿಥಸ್ಸ್ಪರ್ಧೆಯಂ ಮಾಣ್ದು ಪೂಣ್ದೊಂದು ಸವಿತ್ವಂ ಪೆರ್ಚೆ ನಿಚ್ಚಂ ನೆಲೆಸಿದುವು (ಶಂಕ್ರಕ. ೦೦-೯೦). [ಸಂ. ಮಿಥಸ್ಸ್ಪರ್ಧಾ]

**ಮಿಥುನ** (ನಾ). ೧. ಜೋಡಿ ; ಯುಗ್ಮ ; ಯುಗಳ : ಶ್ರೀಮನ್ಮಹಾನೇತ್ರವೆನಿಸುವ ಚಕೋರತತಿ ರಾಮಣೀಯಕಮಿಥುನಚಕ್ರವಾಕಗಳು ನಲಿಯೆ (ಶಾವಕಂ. ೮-೮). ೨. ಹೆಣ್ಣು ಮತ್ತು ಗಂಡಿನ ಜೋಡಿ ; ದಂಪತಿ : "ಸ್ತ್ರೀಪುರುಷರಿರ್ವರುಮಂ ಮಿಥುನಮೆಂಬುದು" (ಹಲಾಯು. ೦೦೬-೦೩) ; ರಾಜಹಂಸಪಾರಾವತಮಿಥುನಂಗಳುತ್ತುಂಗಪ್ರಾಸಾದಶಿಖರವಣಿಗವಾಕ್ಷಾಂತರಾಳವಿವಿಧಗೃಹಾಂತರಗತಂಗಳಾದುವು (ಶಂಕಟಾ. ೯.೯೯ವ) ; ಅಂತಲ್ಲಿ ಜಿನಚಂದ್ರ(ನೆನಿಪ) ಶ್ರೀಷೇಣನುಂ ಸಿಂಹನಂದೆಯುಂ ಮಿಥುನರಾದರ್ (ಶಾಂತಿಪು. ೬-೦೨೯ ವ) ; ಮನೋಜಸುಖಕ್ಕಳವಳಿಸಿದುವಾಗಳ್ ರಥಾಂಗಮಿಥುನಶತಂಗಳ್ (ಮಲ್ಲಿಪು. ೬-೦೦೩). ೩. ಅವಳಿ ಜವಳಿ ; ಯಮಳ. ೪. ಕೂಟ ; ಸಂಭೋಗ ; ಮೈಥುನ. ೫. [ಜ್ಯೋತಿ] ಜ್ಯೋತಿಶ್ಚಕ್ರದ ಹನ್ನೆರಡುರಾಶಿಗಳಲ್ಲಿ ಮೂರನೆಯದು : ಧನು ಝಷಂ ಸುಂದರಿ ಮಿಥುನಂ ದ್ವಿಸ್ವಭಾವರಾಶಿಗಳೆನಿಕುಂ (ಶಾತಪ. ೦-೨೩) ; ಮೇಷ ವೃಷಭ ಮಿಥುನ . . . ಮೀನಮೆಂಬ ಹನ್ನೆರಡುರಾಶಿಗಳುಂ . . . ತಮ್ಮ ಅಧಿಕಾರಮಂ ಮಾಡುತ್ತಿರ್ಪವು (ಶಿವೇಕ. ೨೨೦). [ಸಂ.]

**ಮಿಥುನತ್ವ** (ನಾ). ದಂಪತಿಗಳಾಗಿರುವಿಕೆ : ಪುಟ್ಟಿದ ಜೀವರಾಶಿ ಮಿಥುನತ್ವದೊಳಲ್ಲದೆ ಪುಟ್ಟದು (ಶಾಂತಿಪು. ೬-೦೦೬). [ಸಂ.]

**ಮಿಥುನರ್ಕ್ಷ** (ನಾ). = ಮಿಥುನ ೫ : ದಿನನಾಥಂ ಮಿಥುನರ್ಕ್ಷದೊಳ್ ನೆಲಸೆ ವಿಧ್ಯಾಪಾರಗಂ ಜ್ಞಾನಿ ಧನ್ಯನೆನಿಕ್ಕುಂ . . . ನರಂ (ಜಾತಪ. ೦೬-೦೩). [ಸಂ.]

**ಮಿಥುನೀಕರಿಸು** (ಕ್ರಿ). (ಸಂಭೋಗದಲ್ಲಿ) ಸೇರಿರು : ಸುರನರೋರಗರೆಲ್ಲ ಮಿಥುನೀಕರಿಸಿಕೊಂಡಿಹರ್ಯೆಸೆ ಗುಹ್ಯದ ಲಂಪಟದ ಬದುಕು (ಅಮ್ಯಕ. ೨-೬೩) ; ಕುಸುಮಲತಾವಾಜಿಗಳು ಅಲ್ಲಿಯಲ್ಲಿಯ ಕ್ರೀಡಾಪರ್ವತದ ಗುಹಾಂತರದೊಳ್ ಮಿಥುನೀಕರಿಸಿ (ಶ್ರೀಗಂಧ. ೨೯೦-೦೦). [ಸಂ. ಮಿಥುನೀಕರಣ + — ಇಸು₃]

**ಮಿಥೋಯುಕ್ತ** (ನಾ). [ನಾಟ್ಯ] ಎಂಟು ಬಗೆಯ ಹಿಮ್ಮಡಿಗಳ ಚಲನೆಗಳಲ್ಲಿ ಒಂದು ; ಪರಸ್ಪರ ಕೂಡಿಕೊಂಡಂತಿರುವ ಹಿಮ್ಮಡಿಗಳ ಚಲನೆ : ಉತ್ಕ್ಷಿಪ್ತ, ಪತಿತ, ಉತ್ಕ್ಷಿಪ್ತಪತಿತ, ಅಂತರ್ಗತ, ಬಹಿರ್ಗತ, ಮಿಥೋಯುಕ್ತ, ವಿಯುಕ್ತ, ಅಂಗುಲಿಸಂಗತ — ಈ ಎಂಟು ಪಾರ್ಷ್ಣಿಯ ಭೇದಂಗಳ್ (ಅಜ್ಞರಂ. ೩-೦೦೦ ವ). [ಸಂ.]

**ಮಿಥ್ಯ** (ನಾ). ೧. ಸುಳ್ಳು ; ಹುಸಿ ; ಸಟೆ : ಕ್ರೋಧಾರ್ಥರೌದ್ರಮಿಥ್ಯಂಗಳಂ ಪರಿಹರಿಸಿ ಬ್ರಾಹ್ಮಣೋತ್ತಮಮುನೀಶ್ವರರೆನಿಸಿ ನೀವೆ . . . ಮೂಜಗವ ನಿಟ್ಟೊರಸಿ ದೇವರ ಹಿಂಡಿ ಹೀಯಲು (ಹಕಾಪ. ೮-೦೬). 'ಮಿಥ್ಯವಂತ' ಪರಾ. ೨. ಮಾಯೆ ; ಭ್ರಮೆ : ಮಿಥ್ಯವನೇ ಹಿಡಿದು ಮಿಥ್ಯವನೇ ಪೂಜಿಸಿ ಮರ್ತ್ಯಲೋಕದ ಭಕ್ತರೆಲ್ಲ ವ್ಯರ್ಥವಾದವರಲ್ಲ (ಅವಕಂ. ೨೬೬-೦೨೬೨). [ಸಂ. ಮಿಥ್ಯಾ]

**ಮಿಥ್ಯವಂತ** (ನಾ). ಸುಳ್ಳುಗಾರ ; ಅಸತ್ಯವಾದಿ : ಜಗದಲ್ಲಿ ಹೊತ್ತುಹೋರುವ ಮಿಥ್ಯವಂತರಿಗೆ ತತ್ತ್ವದ ಸುದ್ದಿಯ ಹೇಳಿದರೆ ನಿತ್ಯರುದ್ರನಾದಡೂ ತಪ್ಪನನಾರನೆಂದೆ (ಮೋಕವಾ. ೨೩-೯೯). [ಮಿಥ್ಯ ವಂತ]

**ಮಿಥ್ಯಾವಾದಿ** (ನಾ). = ಮಿಥ್ಯಾವಂತ : ಒಡೆಯನತಿಕೋಪಿ ಹೆಂಡತಿ ಮಹಾಮೂರ್ಖೆ . . . ನೆರೆಮನೆಯವರು ಮಿಥ್ಯಾವಾದಿಗಳು (ಹಕಕಾ. ೦೨-೩). [< ಸಂ. ಮಿಥ್ಯಾವಾದಿನ್]

**ಮಿಥ್ಯಾಚತುಷ್ಟಯ** (ನಾ). ಇದು ಸುಳ್ಳು. ಇದರ ಪರಿಚಯ ನನಗಿಲ್ಲ, ಆಗ ಅಲ್ಲಿ ನಾನಿರಲಿಲ್ಲ ಮತ್ತು ಆ ಕಾಲಕ್ಕೆ ನಾನು ಹುಟ್ಟಿರಲಿಲ್ಲ ಎಂಬ ನಾಲ್ಕು ಬಗೆಯ ಸುಳ್ಳುಗಳು : ತದ್ವಾರಾವಸಾನದೊಳ್ ನಿಂದು ಮಿಥ್ಯಾಚ[ತು]ಷ್ಟಯಾಲಂಕಾರವಾಗಿರ್ದ ಚತುಃಪಥಸಭಾಮಂಟಪದೊಳಿರ್ದ ವಿಟಕೋಟಿಯುಂ ಕಂಡು (ಶಾಂತಿಪು. ೬-೯೦ ವ). [ಸಂ.]

**ಮಿಥ್ಯಾಚರಣ** (ನಾ). ಬೂಟಾಟಿಕೆ ; ಕಪಟಾಚರಣೆ ; ಸೋಗು : ಮಿಥ್ಯಾ ಜ್ಞಾನತೆಯಿನಸನ್ಮಿಥ್ಯಾಚರಣಕ್ಕೆ ಸಂದು ಸಲೆ ಸತ್ಪಥಮಂ ತಥ್ಯಮನೊಲ್ಲದೆ ರೋಗಿಗಪಥ್ಯಕ್ರಿಯೆಯಿಯಾದ ತೆಜದೆ ಕಿಡುವರ್ ಪಲರುಂ (ಧರ್ಮಾಪು. ೦೦-೦೨೩). [ಸಂ.]

**ಮಿಥ್ಯಾಚರ್ಯೆ** (ನಾ). ೧. = ಮಿಥ್ಯಾಚರಣ. ೨. ಸುಳ್ಳು; ಅಸತ್ಯ : "ಈರ್ಷ್ಯಾ, ಕುಹನಾ, ಡಂಭಃ, ಮಿಥ್ಯಾಚರ್ಯಾ . . . ಶಠಕಲ್ಪನಾ — ಈ ೧೧ ಮಾಯೆ" (ಪಂಪಯ. ೦೨೨-೩೩). [ಸಂ. ಮಿಥ್ಯಾಚರ್ಯಾ]

**ಮಿಥ್ಯಾಚಾರ** (ನಾ). = ಮಿಥ್ಯಾಚರಣ : ನಾರೀಸಹಜವಾದ ಅಸೂಯೆ ಮತ್ತು ಪತಿಯ ವಿಶ್ವಾಸಘಾತದ ಹಾಗು ಮಿಥ್ಯಾಚಾರದ ಆಶಂಕೆ . . . ಚೆನ್ನಾಗಿ ಮೂಡಿಬಂದಿದೆ (ಇಶ್ವೆ. XIX. ಹುಮು೩). [ಸಂ.]

**ಮಿಥ್ಯಾಚಾರಿ** (ನಾ). ಬೂಟಾಟಿಕೆ ಮಾಡುವವನು ; ಕಪಟವಾದ ಆಚರಣೆಗಳಲ್ಲಿ ತೊಡಗುವವನು : ಸನಾತನಧರ್ಮವನ್ನು ಒಪ್ಪದವರೂ ವಿರೋಧಿಸುವವರೂ ಸನಾತನಿಗಳೇ ಆದರೂ ಅಂಥಾವರಿಗೂ ನಿರ್ಬಂಧವಿಲ್ಲ. ಅಂಥಾವರು ನಟನೆ ಮಾಡಿ ಮಿಥ್ಯಾಚಾರಿಗಳಾಗಬೇಕಾದುದಿಲ್ಲ (ಆರ್ಯಧ. ೩೦). [ಸಂ. ಮಿಥ್ಯಾಚಾರಿನ್]

**ಮಿಥ್ಯಾಜ್ಞಾನ** (ನಾ). [ತತ್ತ್ವಶಾ] ತಪ್ಪು ತಿಳಿವಳಿಕೆ; ಅಜ್ಞಾನ: ಶತಮತಿ ಮಿಥ್ಯಾಜ್ಞಾನಾವೃತಮತಿ ಸಂದಂ ದ್ವಿತೀಯನರಕಕ್ಕೀ ಸಂಸ್ಕೃತಿಯೊಳ್ ಧರ್ಮಾಧರ್ಮಸ್ಥಿತಿಯೆ ವಲಂ ಸ್ವರ್ಗನರಕಸುಖದುಃಖಕರಂ (ಆದಿಪು. ೩-೭೭); ಈತನಚ್ಯುತನಲ್ಲೆನಿಸಿ ವಿಪರೀತ ಮಿಥ್ಯಾಜ್ಞಾನ ತೋಜಿದಡೀತನಲಿ ತಪ್ಪೇನು (ಕುವ್ಯಾಸ. ೯-೦೦) ; ಒಂದು ವಸ್ತುವನ್ನು ಮತ್ತೊಂದೆಂದು ತಪ್ಪಾಗಿ ತಿಳಿಯುವುದೇ ಅಧ್ಯಾಸವು. ಅಧ್ಯಾಸ — ಭ್ರಾಂತಿ, ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ — ಇವೆಲ್ಲಾ ಪರ್ಯಾಯಶಬ್ದಗಳು (ಶ್ರೀಹ್ಯಶಾ. ೦೦). [ಸಂ.]

**ಮಿಥ್ಯಾಜ್ಞಾನಿ** (ನಾ). ೧. [ತತ್ತ್ವಶಾ] ಸರಿಯಾದ ತಿಳಿವಳಿಕೆಯಿಲ್ಲದವನು : ಅಜ್ಞಾನಿ : ಮತ್ತಿನ ಮಿಥ್ಯಾಜ್ಞಾನಿವೋಲ್ ನೀಂ ತರಳತೆವೆರಸಿಂತೇಕೆ ವಿಭ್ರಾಂತನಪ್ಪೈ (ಆದಿಪು. ೩-೭) ; ಗರ್ವಿತರು ಮಿಥ್ಯಾಜ್ಞಾನಿಗಳು ಕಲಿಯುಗದ ಮನುಜರು (ಕುವ್ಯಾಆ. ೦೦-೩೯). ೨. ತಾನು ಜ್ಞಾನಿಯೆಂಬ ತಪ್ಪುತಿಳಿವಳಿಕೆಯನ್ನು ಹೊಂದಿರುವವನು : ಮಾನವನೆಂತುಂ ಮಿಥ್ಯಾಜ್ಞಾನಿಗಳೆರ್ದೆಯೊಳಗೆ ನೆಲಸಲೀಯದೆ ನಾಲ್ಕುಂ ಮಾನಸ್ತಂಭಂಗಳ್ ರತ್ನಾನದ್ಧಂಗಳ್ ನಿರಂತರಂ ಸೊಗಯಿಸುಗುಂ (ಆದಿಪು. ೦೦-೨೯) ; ಪ್ರಹಸಿತನೆಂಬೊಂ ಮಗನಾತನ ಕೆಳೆಯಂ ವಿಕಸಿತನೆಂಬಿರ್ವರುಂ ಮಿಥ್ಯಾಜ್ಞಾನಿಗಳು ಶೂನ್ಯವಾದಿಗಳು (ಶಾಂತಿಪು. ೨೦). [ಸಂ. ಮಿಥ್ಯಾಜ್ಞಾನಿನ್]

**ಮಿಥ್ಯಾತಪಸ್ವಿ** (ನಾ). [ಜೈನ] ತೋರಿಕೆಗಾಗಿ ತಪಸ್ಸನ್ನಾಚರಿಸುವವನು: ಮಹಾವೀರನು . . . ಕೇವಲ ದೇಹದಮನ ಮಾಡುವುದು ಮಿಥ್ಯಾತಪಸ್ಸೆಂದು ಒತ್ತಿಹೇಳಿದನು. ಹಾಗೆ ತಪಸ್ಸುಮಾಡುವವರನ್ನು ಮಿಥ್ಯಾತಪಸ್ವಿಗಳೆಂದು ಹೇಳಿದನು (ಜೈಪಠ. ೩೩೦). [ಸಂ. ಮಿಥ್ಯಾತಪಸ್ವಿನ್]

**ಮಿಥ್ಯಾತಪಸ್ಸು** (ನಾ). ತೋರಿಕೆಗಾಗಿ ಮಾಡುವ ತಪಸ್ಸು : ಮಹಾವೀರನು . . . ಕೇವಲ ದೇಹದಮನ ಮಾಡುವುದು ಮಿಥ್ಯಾತಪಸ್ಸೆಂದು ಒತ್ತಿ ಹೇಳಿದನು. (ಜೈಪಠ. ೩೩೦). [ಸಂ. ಮಿಥ್ಯಾತಪಸ್]

**ಮಿಥ್ಯಾತ್ವ** (ನಾ). ೧. ಸುಳ್ಳು : ಹುಸಿ. ೨. ಅಜ್ಞಾನ; ಭ್ರಾಂತಿ; ಮಾಯೆ : ಸುಕವಿ ಸುಕರಕವಿ ಮಿಥ್ಯಾತ್ವಪ್ರಹರಕವಿ ಸುಭಗಕವಿ ನುತಮಹಾಕವೀಂದ್ರಂ ಸರಸ್ವತೀಮುಖಮುಕುರಂ (ಸುಕುಮಾ. ೦-೩೨). ೩. [ಜೈನ] ತತ್ತ್ವಾರ್ಥದಲ್ಲಿ ಶ್ರದ್ಧೆಯಿಲ್ಲದಿರುವಿಕೆ; "ದರ್ಶನಮೋಹನೀಯದಲ್ಲಿ ಮಿಥ್ಯಾತ್ವ, ಸಮ್ಯಗ್ಮಿಥ್ಯಾತ್ವ ಮತ್ತು ಸಮ್ಯಕ್‌ಪ್ರಕೃತಿ ಎಂದು ಮೂರು ವಿಧಗಳು. ನಿಜವಾದ ತತ್ತ್ವಜ್ಞಾನವನ್ನು ನಂಬದಿರುವುದು ಮಿಥ್ಯಾತ್ವವು" (ಜೈಪಠ. ೩೭೭) : ಎಂತುಂತೆ ಕೇಳ್ದಮಂತಂತೆ ಮಿಥ್ಯಾತ್ವಮಿನಿಸಿನಿಸು ಪಿಂಗೆ (ವಡ್ಡಾರಾ. ೬-೦೭) ; ತಮಮಂ ದ್ಯುಮಣಿ ಮಯೂಖೋದ್ಗಮಮವಲಿವೊಲಲೆಗೆ ಜಗದ ಮಿಥ್ಯಾತ್ವತಮಸ್ತಮಮ ನಕಲಂಕದೇವ ಪ್ರಮಾಣರತ್ನಪ್ರದೀಪರಶ್ಮಿಕಲಾಪಂ (ಆದಿಪು. ೦-೦೭). [ಸಂ.]

**ಮಿಥ್ಯಾದರ್ಶನ** (ನಾ). = ಮಿಥ್ಯಾತ್ವ ೩ : ಮಿಥ್ಯಾದರ್ಶನಾವಿರತಿಪ್ರಮಾದಕಷಾಯಯೋಗೋಪಾರ್ಜಿತಜ್ಞಾನಾವರಣೀಯಾದಿ ಕರ್ಮಂಗಳ್ ಸಂಸಾರಕಾರಣಂಗಳ್ (ಆದಿಪು. ೦೦-೭೩ ವ). [ಸಂ.]

**ಮಿಥ್ಯಾದೃಷ್ಟಿ** (ನಾ). ೧. ಇರುವುದನ್ನು ಇಲ್ಲವೆನ್ನುವ ವಾದ : ಪಾಷಂಡವಾದ; ನಾಸ್ತಿಕತೆ : "ಮಿಥ್ಯಾದೃಷ್ಟಿಃ, ನಾಸ್ತಿಕತಾ — ೨ ಪರಲೋಕವಿಲ್ಲವೆಂಬ ಅಪ್ರಮಾಣಿಕಬುದ್ಧಿಯ ಹೆಸರುಗಳು. ಅಂದರೆ ವ್ಯಾವಹಾರಿಕವೇ ಇಲ್ಲವೆನಿಪ ಬೌದ್ಧಭ್ರಾಂತಿ" (ಸಿದ್ಧಾಂತ. ೪೩) ; ಸಂಯಮಿಯ ವರ್ತನೆ ಲೋಕವಿಲಕ್ಷಣವಾದುದು. ಅವನು ತತ್ತ್ವದೃಷ್ಟಿಯಲ್ಲಿ ಸದಾ ಜಾಗರೂಕನಾಗಿಯೂ ಮಿಥ್ಯಾದೃಷ್ಟಿಯಲ್ಲಿ ವಿಮುಖನಾಗಿಯೂ ಇರುವನೆಂಬುದನ್ನು ವಾಕ್ಯ ಧ್ವನಿಸುತ್ತದೆ (ಧ್ವಾಲೋ. ೦೨೦). ೨. [ಬೌದ್ಧ] "ಇಹವನ್ನೂ ಪರವನ್ನೂ ಕುರಿತು ತಪ್ಪುಭಾವನೆಗಳುಳ್ಳವನು" (ಪಕ್ಮಾವು. ೦೩ ಟಿಪ್ಪಣಿ) : ಹೆಂಗುಸಾಗಿ ಇದ್ದು, ಮಿಥ್ಯಾದೃಷ್ಟಿಯವರ ಮನೆಯಲ್ಲಿ ವಾಸಮಾಡಿಯೂ, ಧರ್ಮಕ್ಕಾಗಿ ಹೀಗೆ ಪರಿತ್ಯಾಗ ಮಾಡಿದವರು ಬೇರೆ ಇನ್ನೊಬ್ಬರಿಲ್ಲ (ಪಕ್ಮಾವು. ೩೯). ೩. [ಜೈನ] ಮಿಥ್ಯಾದರ್ಶನಸಹಿತನಾದ ಜೀವಿ ; ಸಮ್ಯಕ್ತ್ವಜ್ಞಾನವಿಲ್ಲದವನು; ಅಭವ್ಯ : ಮಿಥ್ಯಾದೃಷ್ಟಿಗಳಪ್ಪವರ್ ಶ್ರಾವಕವ್ರತಂಗಳಂ ಕೈಕೊಂಡರ್ (ವಡ್ಡಾರಾ. ೬೩-೬); ಮಿಥ್ಯಾದೃಷ್ಟಿಯಪ್ಪಂ ತನ್ನನೆಂತುಂ ಸಮಾಜಿ ನೆಗಟಿಕ್ಕೊಡ ಮಾತನಪಾತ್ರಮೆ (ಆದಿಪು. ೦೦-೯ ವ) ; ಜನಾಪವಾದಭಯದಿಂದೆನ್ನಂ ಬಿಸುಟ್ಟಂತೆ ಮಿಥ್ಯಾದೃಷ್ಟಿಗಳ ನುಡಿಯಂ ಕೇಳ್ದರ್ಹತ್ಪರಮೇಶ್ವರ ಶ್ರೀಧರ್ಮಮಂ ಬಿಸುಡದಿರ್ಪುದು (ಪಂಪರಾಮಾ. ೦೩-೭೩ ವ). [ಸಂ.]

**ಮಿಥ್ಯಾಧರ್ಮ** (ನಾ). ನೈಜವಲ್ಲದ ಧರ್ಮ; ಕಪಟದಿಂದ ಕೂಡಿದ ಧರ್ಮ : ಮಕ್ಕಳಿಲ್ಲದವನೂ ಮುದುಕನೂ ಆದ ನೀನು ಮಿಥ್ಯಾಧರ್ಮವನ್ನು ಬೋಧಿಸಿ, ಮುದಿಹಂಸದಂತೆ ಜ್ಞಾತಿಗಳಿಂದ ಕೊಲೆಗೆ ಗುರಿಯಾಗುತ್ತೀಯೆ (ವಚಭಾ. ೬೩). [ಸಂ.]

**ಮಿಥ್ಯಾಧ್ಯವಸಿತಿ** (ನಾ). [ಕಾವ್ಯಮೀ] ಒಂದು ಬಗೆಯ ಅಲಂಕಾರ; P "ಒಂದು ಅರ್ಥವು ಸುಳ್ಳೆಂದು ಸಾಧಿಸಲು ಅಪ್ರಕೃತವಾದ ಮತ್ತೊಂದು ಸುಳ್ಳನ್ನು ಕಲ್ಪಿಸಿ ಹೇಳುವುದಾದರೆ ಮಿಥ್ಯಾಧ್ಯವಸಿತಿ" (ಕುವಲ. ೨೨೯ ಟಿಪ್ಪಣಿ): ಪುಸಿಯಾದರ್ಥ ಸಿದ್ಧ್ಯರ್ಥವಾಗಿ ಪುಸಿಯಿಂದರ್ಥಾಂತರ ಕಲ್ಪನೆ ಮಾಡಿ ಪೇಳಲ್ ಮಿಥ್ಯಾಧ್ಯವಸಿತಿಯೆನಿಸುವುದು (ಕುವಲ. ೦೨೨). [ಸಂ.]

**ಮಿಥ್ಯಾಪವಾದ** (ನಾ). ಇನ್ನೊಬ್ಬರ ಮೇಲೆ ಹೊರಿಸುವ ಅಸತ್ಯವಾದ ಆರೋಪ ; ಸುಳ್ಳುಆಪಾದನೆ : ಮಿಥ್ಯಾಪವಾದದಲ್ಲಿ ಮಾನನಷ್ಟ, ಮಾನನಷ್ಟದಲ್ಲಿ ಮಿಥ್ಯಾಪವಾದ ಇವು ಹೇಗೆ ಪರಸ್ಪರಾಂತರ್ಗತವಾಗುತ್ತವೆ? (ಕೃಪರು. ೩೭೧); ಮೂರ್ತಿವಂತದೈನ್ಯವೇ ಅವಳಾಗಿ ನಿಂತಿರುವುದನ್ನು ಕಂಡಾಗ ಎಂಥ ಮಿಥ್ಯಾಪವಾದ ಎಂದಿತು ಮನಸ್ಸು (ಪೊಕಕ್ಷಿ. ೨೨). [ಸಂ.]

**ಮಿಥ್ಯಾಪವಾದಿ** (ನಾ). ಇನ್ನೊಬ್ಬರ ಮೇಲೆ ಅಸತ್ಯವಾದ ಆರೋಪವನ್ನು ಮಾಡುವವನು : ಸ್ವಾಮಿಕಾರ್ಯವಿಘಾತಕಂಗತಿಕಾಮುಕಗೆ ಮಿಥ್ಯಾಪವಾದಿಗೆ. . . ಪರಲೋಕವಿಲ್ಲ (ಶುಪ್ಯಾಶ. ೪-೨೬). [ಸಂ. ಮಿಥ್ಯಾಪವಾದಿನ್]

**ಮಿಥ್ಯಾಪ್ರತ್ಯಯ** (ನಾ). = ಮಿಥ್ಯಾಜ್ಞಾನ : ಒಂದು ವಸ್ತುವನ್ನು ಮತ್ತೊಂದೆಂದು ತಪ್ಪಾಗಿ ತಿಳಿಯುವುದೇ ಅಧ್ಯಾಸವು. ಅಧ್ಯಾಸ, ಭ್ರಾಂತಿ, ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ – ಇವೆಲ್ಲಾ ಪರ್ಯಾಯಶಬ್ದಗಳು (ಬ್ರಹ್ಮಸೂ. ೦೦). [ಸಂ.]

**ಮಿಥ್ಯಾಭಾವನೆ** (ನಾ). = ಮಿಥ್ಯಾದೃಷ್ಟಿ ೩ : ಸಾಗರದತ್ತನೆಂಬ ಪರದಂಗೆ . . . ಗುಣವತಿಯೆಂಬ ಮಗಳಾಗಿ ಮಿಥ್ಯಾಭಾವನೆಯಿಂ ಕಾಲಂಗೆಯ್ದುನಿತಾನುಂ ಕಾಲಂ ತಿರ್ಯಗ್ಗತಿಯೊಳ್ ತಿರಿತಂದು (ಶಂರಾಪ. ೦೬-೩೯ ವ). [ಸಂ. ಮಿಥ್ಯಾಭಾವನಾ]

**ಮಿಥ್ಯಾಭಿಯೋಗ** (ನಾ). = ಮಿಥ್ಯಾಪವಾದ : "ಮಿಥ್ಯಾಭಿಯೋಗಃ ಅಭ್ಯಾಖ್ಯಾನಂ–೨ ಇಲ್ಲದ್ದನ್ನು ಕಲ್ಪಿಸಿ ಆಕ್ಷೇಪಿಸುವುದಕ್ಕೆ ಪೆಸರುಗಳು" (ಸಿದ್ಯಾಂತಿ. ೩೨): ಮಳಯಕೇತುವೆಂಬ ರಾಜತನೂಜನತಿತೇಜಿಷ್ಠನಾಗಿ ತನ್ನ ಮಂತ್ರಿ ಮುದ್ರಾರಾಕ್ಷಸಂಗೆ ತಥ್ಯಾಭಿಯೋಗಮಾದೊಡಂ ಮಿಥ್ಯಾಭಿಯೋಗವೆಂದು ನಿಶ್ಚೈಸಿ (ಶಂಶಕ. ೨೪೮-೦೬). [ಸಂ.]

**ಮಿಥ್ಯಾವಾದ** (ನಾ). ಸುಳ್ಳುಮಾತು; ಹುಸಿನುಡಿ. [ಸಂ.]

**ಮಿಥ್ಯಾವಾದಿ** (ನಾ). ೧. [ಅದ್ವೈತ] ಶಂಕರಾಚಾರ್ಯರ ಅನುಯಾಯಿ; ಅದ್ವೈತಿ; P ಅದ್ವೈತಮತದಲ್ಲಿ ಬ್ರಹ್ಮವೇ ಸತ್ಯ, ಜಗತ್ತು ಮಿಥ್ಯೆ ಎಂದು ಹೇಳುವುದರಿಂದ ಆ ಪಂಥಕ್ಕೆ ಸೇರಿದವನಿಗೆ ಮಿಥ್ಯಾವಾದಿಯೆಂದು ಹೆಸರು. ೨. [ಬೌದ್ಧ] ಬೌದ್ಧರಲ್ಲಿ ಒಂದು ಪಂಗಡದವನು ; ವಿಜ್ಞಾನವಾದವನ್ನು ಆಶ್ರಯಿಸಿದವನು : ಈ ಸ್ವಸಂವಿತ್ಪರಂಪರೆ ಪೋಕುಂ ಪ್ರಳಯಕ್ಕೆ ತತ್ಕ್ಷಣಿಕ ಮಿಥ್ಯಾವಾದಿವಾದೀಂದ್ರರಿಂ (ಶಾಂತಿಪು. ೬-೦೪೩). [ಸಂ. ಮಿಥ್ಯಾವಾದಿನ್]

**ಮಿಥ್ಯಾವಿನಯ** (ನಾ). ಕಪಟದಿಂದ ಕೂಡಿರುವ ನಮ್ರತೆ: ಸೋಗಿನ ಸೌಜನ್ಯ : ಕಿಮ್ಮನೆ ನಿಮ್ಮನಚ್ಚಿಗಂಬಡಿಸಿದೆನೆಂದು ಚಾಟುವಚನಂಗಳಂ ಮೆಱೆದು ಮಿಥ್ಯಾ ವಿನಯವಿನೋದೋಪಗೂಹಿತಸ್ವಾಂತಚಿಂತಿತಚಿತ್ತನಾಗಿರ್ದಂ (ಜಗು. ೩-೨೨ ವ). [ಸಂ.]

**ಮಿಥ್ಯಾಶಲ್ಯ** (ನಾ). [ಜೈನ] ವ್ರತಿಕನಿಗೆ ಬಾಧಿಸುವ ಮಾಯೆ, ಮಿಥ್ಯೆ ಮತ್ತು ನಿದಾನ ಎಂಬ ಮೂರು ಬಗೆಯ ಶಲ್ಯಗಳಲ್ಲಿ ಒಂದು ; ಮಿಥ್ಯಾದೃಷ್ಟಿಯನ್ನು ಹೊಂದಿರುವುದು : ಪೊಲ್ಲಮೆಯುಂ ಮಾಡುವ ಮಿಥ್ಯಾಶಲ್ಯಂ ಮಾಯಾಶಲ್ಯಂ ನಿದಾನಶಲ್ಯಮೆಂಬ ಮೂಱುಂ ಶಲ್ಯಂಗಳಂ ಪಿಂಗಿದಂ (ಧರ್ಮಾಮೃ. ೩-೦೩೦) ; ಮಿಥ್ಯಾದೃಷ್ಟಿಗಳೊಳಂ ರಾಗಿಸಿದುದು ಮಿಥ್ಯಾಶಲ್ಯಮಕ್ಕುಂ (ಶ್ರಾವಕಾ. ೦೨೩-೨). [ಸಂ.]

**ಮಿಥ್ಯೆ** (ನಾ). ೧. ಅಸತ್ಯ ; ಸಟೆ ; ಸುಳ್ಳು : "ಅಳೀಕಂ, ವಿತಥಂ, ಮಿಥ್ಯಾ, ಮೃಷಾ, ಅನೃತಂ – ಈ ೫ ಅಸತ್ಯದ ಪೆಸರ್" (ಹಲಾಯು. ೨೩-೦೪೩); ಪದಪದ್ಮಾನತನಾದ ಕಾದಲನ ಸೋಂಕಿಂದಾದ ರೋಮೋದ್ಗಮಂ ವಿದಿತಂ ಮಾಡೆ ಮನಃಪ್ರಸಾದಮಿದನೇನೆಂದೀರ್ಷೆಯಿಂ ಮಿಥ್ಯೆಯಿಂ ಪದುಳಂ ಮಾಡುವೆ ಮುಗ್ಧೆ (ಮಲ್ಲಿಕಾ.೭-೬೭). ೨. [ತತ್ತ್ವಶಾ] ಅಜ್ಞಾನ : ಮಾಯೆ : ಭ್ರಮೆ : ಮಿಥ್ಯೆಯನಳಿದುಳಿದ ಸತ್ಯಪ್ರಸಾದಿ . . . ಕೂಡಲಸಂಗಮದೇವರಲ್ಲಿ ತಾನೇ ಪ್ರಸಾದಿ (ಬಸವ. ೯೪೨) ; ಮಿಥ್ಯೆಯೆಂದೊಡೆ ಗಗನಕುಸುಮದೊಲಿತ್ತ ಭಾವಿಪುದು (ಗಗಶಾ. ೨೨-೭೪): ಈ ಜಗತ್ತು ಸತ್ಯವಾದುದು (ಮಿಥ್ಯೆಯಲ್ಲ, ಸುಳ್ಳಲ್ಲ) (ಶಾರದ. ೨೭೩). ೩. ಸತ್ತು ಮತ್ತು ಅಸತ್ತುಗಳೆಂಬ ಎರಡು ಮಾರ್ಗಕ್ಕೂ ಸೇರದುದು ; ಸದಸದ್ವಿಲಕ್ಷಣವಾದುದು : ಮಿಥ್ಯೆ, ಸುಳ್ಳು ಎಂಬ ಪದಕ್ಕೆ ಈಗ ಜನರು ಯಾವ ಅರ್ಥವನ್ನು ತಿಳಿಯುವರೋ ಶಾಸ್ತ್ರದಲ್ಲಿ ಆ ಅರ್ಥವಲ್ಲ. ಅದು ಎಂತಹುದೆಂದರೆ ಸದಸದ್ವಿಲಕ್ಷಣವು. ಸತ್ತೆಂದರೆ ಪರಬ್ರಹ್ಮನು. ಅಸತ್ತೆಂದರೆ ಶಶಶೃಂಗ ಮೊದಲಾದ ತುಚ್ಛಪದಾರ್ಥಗಳು. " ಇಂತಹ ಎರಡು ವಿಧವಾದ ಮಾರ್ಗದಲ್ಲೂ ಸೇರಿದುದಲ್ಲವೆಂದು ನಿರ್ಣಯವೇ ಮಿಥ್ಯಾಪದದ ಅರ್ಥ (ಹಿಂದಸಾ. ೨೨೪). ೪. = ಮಿಥ್ಯಾಶಲ್ಯ : ಶಲ್ಯಗಳು ಮೂರು– ಮಾಯಾ, ಮಿಥ್ಯಾ ಮತ್ತು ನಿದಾನ . . . ಮಿಥ್ಯೆ ಎಂಬುದು ದೃಷ್ಟಿವಿಕಾರವು. ಇದು ತತ್ತ್ವಶ್ರದ್ಧೆಯ ಅಭಾವವೂ ಆಗಿದೆ (ಶ್ರಾವಕಾ. ೩೭೩-೨೬). [ಸಂ. ಮಿಥ್ಯಾ]

**ಮಿದಿ**$_1$ (ಕ್ರಿ). ೧. ಬತ್ತ ಮುಂತಾದ ಧಾನ್ಯವನ್ನು ಒನಕೆಯಿಂದ ಕುಟ್ಟು,– ತಳಿಸು,– ತೊಳಸು : "ಮಿದಿ – ಮುಸಲಕ್ರಿಯಾಯಾಂ (ಕುಟ್ಟು), ಘಾತ, ಮರ್ದನಯೋಃ (ಅರೆಯು, ಜಜ್ಜು)" (ಕವಿಮಾ): ಕೊಟ್ಟನಿತು ಬತ್ತವ ಮಿದಿದು . . . ಕಾಲವನು ಸವೆಯಿಸುತಿರ್ದನು (ಹರಿಶ. ೦೨-೪): ಲೆಕ್ಕಿಪರಾರು ಕಲ್ಲಱೆಗಳ ಮೇಲೆ ಧುಮ್ಮಿಕ್ಕಿ ನೃತ್ಯವನಾಡುವಂತೆ ಸೊಕ್ಕಿದ ಗಜದಂತಮುಸಲದಿ ಪರ್ಬಿದರಕ್ಕಿಯ ಮಿದಿವ ಹೆಣ್ಣುಗಳ (ಪೋಹಶ. ೦೯-೭೪). ೨. (ಹಿಟ್ಟಿನಂತೆ) ನಾದು; ಮಿಸ್ದು : ಕುಮುರೆಯ ಬಿಲ್ಲ ಬಲ್ಲಣಿಯ ಕೇಣಿಯನಲ್ಲಿ ಕೆಲರ್ ನಿಶಾಟರುಣ್ಮಿದ ಬಿಸುನೆತ್ತರೊಳ್ ಮಿದಿದು ನುಣ್ಣನೆ ನುಂಗಿದರ್ (ಶಂಕಥಾ. ೦೨-೬) ; ಶಾರದಾಭ್ರಸಂಕುಳಮುಸ್ತಱೆ ಮಿದಿದು[ಪಾಠಾಂ. ಮಿದ್ದು] ಮುದ್ದೆಯನಾಗಿಸಿವನಜನೆಸಲ್ ಬೆಳ್ಪೆಸೆದುದು (ಪಂಪಭಾ. ೨-೩೯). ೩. ಹಿಸುಕು : ಅಮುಕು : ಮಲ್ಲನ ನಡಸಿ ತಿವಿದು ಕಡುಪಿಂ ಕೆಡೆ ಪಿ ಕೊಪ್ಪರದೊಳ್ ಕುಪ್ಪಿ ಮಂಡಿಯೊಳ್ ಮಿದಿದು ಕುದಿದು ನದೆದು ಸಣ್ಣಿಸುವ ಚೊಕ್ಕೆಯದಾಸೆಗೆ ಪೊಕ್ಕ ಮಲ್ಲಣನಿಕ್ಕಿ ಮೆಟ್ಟೆ (ಗಿಂಕ. ೨-೦೦೩ ವ); ಸೆಲೆಗಳ ಸಂದನೆತ್ತಿ ಮಿದಿದಾರ್ದಿಱದುಣ್ಮುವ ನೆತ್ತರಿಂದೆ ಕೊಪ್ಪರಿಗೆಯೊಳಿರ್ದ ಬತ್ತಿಗಳ ರಾಶಿಗಳಂ ನೆನೆಯಿಕ್ಕಿ (ಶ್ರೀತ್ರಿ. ೪೭-೦೨). ೪. ಅರೆ ; ನುಣ್ಣಗಾಗಿಸು : ಮರ್ದಿಸು : "ಸಮ್ಮರ್ದಃ, ಪರಿಮಳಃ –ಈ ೨ ಮಿದಿವುದು" (ಹಲಾಯು. ೦೨೭-೬೪) ; ಮಿದಿದಿಂಬಾಗಿರೆ ಖರ್ಜೂರದ ಪಣ್ಣಂ ನಾರಿಕೇಳಮಂ ಶರ್ಕರೆಯಂ ಪುದಿದಡುಗೆ ಕಣಿಕದೊಳ್ (ಲೋಕೋಪ. ೬-೬). ೫. ಉಜ್ಜು; ತಿಕ್ಕು : (ಕ). ೬. ತುಳಿ ; ಮೆಟ್ಟು : 'ಮಿದಿತ' ಪರಾ. ೭. ಕೊಲ್ಲು ; ಸಂಹರಿಸು : ಬಿರಯಿಯ ಮಿಟ್ಟು[ವ]ಂ ಮಿದಿದೊಡಲ್ಲದಣಂ ಮುಳಿಸಾಱದೆಂದು ಪಲ್ಮೊರೆದಪನಿಲ್ಲಿ ಮನ್ಮಥಂ (ಶಂಕಥಾ. ೨-೦೩). ೮. ಅಂಕೆಯಲ್ಲಿರಿಸು ; ದಮನ ಮಾಡು ; ನಿಗ್ರಹಿಸು : ಈ ಸಂಸಾರಿಗಳ ಸುಖಪಾತ್ರವಿಲ್ಲೆಂದು ಮಿದಿದು ಮನವನು . . . ಷಡುವರ್ಗವನು ಗೆಲಿದೆನು (ಶಿಬಾಗ. ೭-೦೩-೨೩). ೯. ಕೂಡಿಸು ; ಹೊಂದಿಸು : ಪಂಪನು ಅರಿಕೇಸರಿಯ ಸೈನ್ಯಾಧಿಪತಿಯಾಗಿ . . . ಉನ್ನತಿಯ ಮೆಟ್ಟಿಲುಗಳ ತುತ್ತತುದಿಯನ್ನೇರಿದ್ದನೆಂಬುದರಿಂದಲೇ ಆ ಅರಸರೆದೆಯ ಪದವನ್ನು ಮಿದಿದು ನೋಡಿಕೊಳ್ಳಬಹುದು (ನಾಡೋಜ. ೬೪) ; ಪಟ್ಟದಿಯನ್ನೂ ಕನ್ನಡನುಡಿಯನ್ನೂ ಅವನು ಮಿದಿದು ಹದಗೊಳಿಸಿದ್ದಾನೆ (ಕನಾಕ. ೦೬೨). [ದೇ.॥ ತಮಿ. ಮಿತಿ; ಮಲ. ಮೆತಿ; ತುಳು. ಮೆದ್, ಮೆದಿ, ಮೆದು; ತೆಲು. ಮೆದುಗು, ಮೆದುಚು, ಮೆದುಪು]

**ಮಿದಿ**$_2$ (ನಾ). ೧. ಒನಕೆಯಿಂದ ಕುಟ್ಟುವುದು. ೨. ಸಂಹಾರ ; ನಾಶ : "ಮುಸಲಘಾತದೊಳು ಸಂಹಾರದೊಳು ಮಿದಿ" (ಶಬ್ದಮಂ. ೯೯). [<ಮಿದಿ$_1$./ತಮಿ. ಮಿತಿ]

**ಮಿದಿಕೂಲಿ** 'ಮಿದಿಗೂಲಿ' ನೋ.

**ಮಿದಿಗೂಲಿ, ಮಿದಿಕೂಲಿ** (ನಾ). ಬತ್ತವನ್ನು ಕುಟ್ಟಿದುದಕ್ಕಾಗಿ ಕೊಡುವ ಮಜೂರಿ : " ಮಿದಿಗೂಲಿ – ಭತ್ತ ಕುಟ್ಟಿದ ಕೂಲಿ " (ಪಾವಕೋ. ೩೦). **ಮಿದಿಕೂಲಿ** : ಈ ದೇವರುಗಳ ಅಮೃತಪಡಿ ದಿನವೊಂದಕ್ಕೆ ನಿತ್ಯಪಡಿ ಅಕ್ಕಿ . . . ಮಿದಿಕೂಲಿ ಸಹಿತ ಸಲಗೆ ಹದಿನಾಲ್ಕು ಕೊಳಗ ಹನ್ನೊಂದು ಬಳ್ಳ

ಮೂಜಿಬಿ ಲೆಕ್ಕದೆ (ಎಶಿ. V (II), ತಿರುಮ. ೬೯-೪೦; 1269).
[ಮಿದಿ₁ + ಕೂಲಿ₁]

**ಮಿದಿತ** (ನಾ). ಮೆಟ್ಟುವಿಕೆ ; ತುಳಿತ : ಕಲಹ, ಕಪಟ, ಕುದಿತ, ಮಿದಿತ . . . ಇವಕೆ ಇಗೋ ಹೇಸಿದೆ (ಭಾರಂಗ. ೩೬-೧೩). [ಮಿದಿ₁ + — ತ₃]

**ಮಿದಿಪ, ಮಿದಿಹ** (ನಾ). ೧. ಕುಟ್ಟುವಿಕೆ : ಮಿದಿಪಂ, ಮಿದಿಪಂಗಳ್; ತಳಿಪಂ, ತಳಿಪಂಗಳ್ (ಶಬ್ದಾನು. ೩೬೩ ಕ್ರಿಯೋ). **ಮಿದಿಹ :** ೨. ಚೆನ್ನಾಗಿ ಕಲಸುವಿಕೆ ; ನಾದುವಿಕೆ : ಕುಂಬಾರನ ಮಣ್ಣಿನಂತೆ ಮಿದಿಹಕ್ಕೆ ವಂದು ಧಾನ್ಯದಂತೆ ಹುಗೇವಕ್ಕೆ ವಂದು (ದಶಾಶಕ್ತ್ಯ. ೩-೭೭). [ಮಿದಿ₁ + — ಪ₂]

**ಮಿದಿಲ್** (ಕ್ರಿ). (?) : ಆ ಮದಕಳಕ್ರೂರಶೂರಶೌರಭೇಯಂಗಳ್ . . . ಭೂತಳಮಂ ಕೊಳಗಿಂ ಪರಡುತ್ತುಮನುವಾಯುಗೆ ಮಿದಿಲ್ದು ಕಿಯ್ಯಕ್ಕುವ ಸೊಕ್ಕಾನೆಗಳಂತೆ ತಲೆಯಿಕ್ಕಿ ತೊಲಗದ ಮನದ ಕನಲಿಕೆಯಿಂ ಕಾದಿ (ಅರ್ಜನೀ. ೪-೦೨೩ ವ). [ ? ]

**ಮಿದಿಸು** (ಕ್ರಿ). ಧಾನ್ಯವನ್ನು ಒನಕೆಯಿಂದ ಕುಟ್ಟಿಸು : ಎದ್ದು ಮುನ್ನಿನ ದಿವಸದಲಿ ಬಿತ್ತಿದ್ದ ಬೀಜವನಾಯ್ದುದಕದಿಂದದ್ದಿ ತೊಳೆತಂದಾಗ ಹುರಿ ಯಿಸಿ ಮಿದಿಸಿ ಬೋನವನು ಇದ್ದ ಪೆರಿಯರಿ ಮಾಡಿ ಗಡಣಿಸಿ (ಬಸವ. ೨೭-೪೯). [ಮಿದಿ₁ + — ಇಸು₃]

**ಮಿದಿಹ** ' ಮಿದಿಪ ' ನೋ.

**ಮಿದು, ಮಿತು, ಮೆತು, ಮೆದು** (ಗು). ೧. ಮೃದುವಾದ; ಮೆತ್ತಗಿರುವ: "ಮಿದು (ಮೆದು, ಮೆಲ್), ಮೃದು=ಮೆತ್ತನೆ" (ಕರ್ನಕೋ. ೩೩). ೨. ನಿಧಾನ ಸ್ವಭಾವವುಳ್ಳ. ೩. ಹಿತವಾದ; ಕೋಮಲವಾದ. (ನಾ). ೪. ಮೃದುವಾದುದು ; ಮೆತ್ತಗಿರುವುದು : ಹೊಳೆವ ಮಿದುವಹ ಹಂಸತೂಲದ ಮಲಗುತಿಹ ಸತಿಗೀ ವಿಧಿಯು (ಪಶತ. ೩-೨); ಮಿದು ನಸು ಗೆಂಪು ದಟ್ಟಮದು ಶೋಭಿಪ ಪಾದತಳಂಗಳಾ ಸುದತಿಗೆ ತೋರ್ದೊಡಾಕೆ ಸೊಬಗಂ ಪಡೆಗೊಂದಿಪಳ್ (ಹಾಡಾಕ್ತ್ಯ. ೦-೦೩-೩೦); ಹತ್ತಿಯು ಉಣ್ಣೆಯು ಹಾಗೆ ಮಿದುವಿರುತ್ತದೆ (ಮುಂಬಯಿ. ೪-೨೬). ೫. ಹಿತ ; ಕೋಮಲ : ಮಿದುವಾಗಿ ಹದಗೊಂಡು ಹರಿವುದೀ ಹಾಡು (ನಿಂಪುಂ. ೩-೨). **ಮಿತು :** ೪. 'ಮಿತುವಾಸಿಕೆ' ಪರಾ. **ಮೆತು :** ೨. 'ಮೆತುಮನುಷ್ಯ' ಪರಾ. **ಮೆದು :** ೨. ಏನೋ ಮುಗಿದಿದೆ ಏನೋ ಬರಲಿದೆ, ರಾಗದಲ್ಲಿ ಮೆದು ಹುಸಿಗಾಲ (ಅರಳು. ೨೬೩-೨). ೫. ಆಕೆ " ಮಗುವಿನ ಮೇಲೆ ಇಷ್ಟೊಂದು ಸಿಟ್ಟೇಕೆ? " ಎಂದು ಮೆದುವಾಗಿ ಪತಿಯನ್ನು ಪ್ರಶ್ನಿಸಿದಳು (ಹಾಹುತ. ೨೭).
[<ಸಂ. ಮೃದು./ತಮಿ. ಮೆತು; ತುಳು. ಮದು; ತೆಲು. ಮೆತಕ, ಮೆತುಕ, ಮೆತ್ತ; ನಾಯ್ಕ. ಮೆತ್ತ]

**ಮಿದುಗ, ಮೆದುಗ** (ನಾ). ಮೃದುಸ್ವಭಾವವನ್ನು ಹೊಂದಿರುವವನು ; ನಿಧಾನಸ್ಥ :"ನರಃ . . . ನರ್ತಾ, ಈ ೪ ಮಿದುಗಂ" (ಕಾಕಕ್ತ. ೦೪೨). **ಮೆದುಗ:** ನಿನ್ನಂತಹ ಹುಡುಗಿಯು ಸ್ವಾತಂತ್ರ್ಯವನ್ನು ಅಂತಹ ಮೆದುಗನು ಹೇಗೆ ಸುಲಭವಾಗಿ ವಶಪಡಿಸಿಕೊಂಡನೆಂಬುದೇ ಆಶ್ಚರ್ಯದ ಸಂಗತಿ (ಅಕಾರ. ೨೨೦). [ಮಿದು + —ಗ₂]

**ಮಿದುಡಿಸು** (ಕ್ರಿ). ಚೆನ್ನಾಗಿ ಕಲಸು, —ಮಿಶ್ರಮಾಡು : ತುಪ್ಪದೊಳಗೆ ಮಿದುಡಿಸಿದ ಹುರಿಯೆಳ್ಳು ಹುರಿದ ಹಾಲಿನ ಮದ್ದಿಸುದುರೆ ಹಪ್ಪಳದ ಹುಡಿ ಬಡಗಸಂಡಗೆ ಮುಗುಳ್ವಪದ ಸೊಜ್ಜಿಗೆ ಹುರಿದ ತೆಂಗಾಯ ಕುಸುರೆಯುಂ ಪುದಿದಿಕ್ಕಿ (ಸೂಪಶಾ. ೩-೨೭). [ಮಿದುಡು₁ + —ಇಸು₃]

**ಮಿದುಡು₁** (ಕ್ರಿ). ಚೆನ್ನಾಗಿ ಕಲಸು ; ನಾದು ; ಮಿದ್ದು : ಹದನಾಗಿ ಕಾಯ್ದು ಹಾಲಿನ ಗಟ್ಟಿ ಕೆನೆದೆಗೆವುತದನೊಂದು . . . ತಳಿಗೆಯೊಳಗೆ ಹರಹಿ ಕೊಂಡರ್ಧಮಂ ಮಿದುಡಿ ಕಜ್ಜಾಯ ಮಾಡುವುದು (ಸೂಪಶಾ. ೦-೩೯); ಅದು ಬೇಯುದುದುರಿದೊಡೆ ಮತ್ತೊಮ್ಮೆ ಚೆನ್ನಾಗಿ ಮಿದುಡಿ ಗೋಳಕಗಳಂ ಮಾಡಿ ತುಪ್ಪದೊಳು ಸುಡಲದು ತಾನೆ ನಕ್ಷತ್ರಫೇನ (ಸೂಪಶಾ. ೦-೬೪). 'ಮಿದ್ದು' ಪರಾ. [ <ಮಿದಿ₁ ]

**ಮಿದುಡು₂** ' ಮಿದುಳ್ ' ನೋ.

**ಮಿದುದನಿ** (ನಾ). ಮೃದುವಾದ ಧ್ವನಿ : ಕೋಮಲಸ್ವರ : "ಸ್ವಲ್ಪ ಹೊರಗೆ ಬರತೀರಾ?" ಎಂದು ಮಿದುದನಿಯಿಂದ ಅಂದಳು (ಗಂಗಾಕಾ. ೬).
[ಮಿದು + ದನಿ₁]

**ಮಿದುನಗೆ** (ನಾ). ಮೃದುವಾದ ನಗೆ ; ಮಂದಹಾಸ : ಚೆಲುವೆಯ ಮೊಗದೊಳು ಮಿದುನಗೆ ಪೊಳೆದಂದು ದೆಸೆದೆಸೆ ಬೆಳಗಿತೋರಂತೆ (ಇಂಡಾತ. ೦೬೯-೪೦). [ಮಿದು + ನಗೆ]

**ಮಿದುನುಡಿ** (ನಾ). ಇಂಪಾದ ಮಾತು ; ಮೃದುವಚನ : ಮಲ್ಲಿ ಮಿದು ನುಡಿಯಿಂದೆಂದಳು (ಪಪಾ. ೨೩); ಅವರು ಜೀವಂತರಾಗಿರುವರೆಂಬುದನ್ನು ಕೇಳಿಯೇ ನನಗೆ ಪರಮಾನಂದವಾಗಿ ಹೋಗಿರುವುದು ಎಂದು ಮಿದುನುಡಿ ಗಳನ್ನಾಡಿದಳು (ಶಿಶ್ನಪೀ. ೦೬೪). [ಮಿದು + ನುಡಿ₂]

**ಮಿದುಪು** (ನಾ). ಮೃದುವಾಗಿರುವುದು : ವದನಸುಕಲಾಪೂರ್ಣಶ್ರೀಯನೂಪ ಕರಣನಿಂದುದಿತಾಮೃತಂ ತಕ್ಕನುಜೆ ತೀವುತುಭಯಪಾರ್ಶ್ವದೊಳೆಳೆಯ ತತ್ಪಸಾದವ ಸವಿಯಲೇವು ಶ್ರೀಭೂದೇವಿಯರ್ಕಳೊಲ್ದು ಮಿದುಪಾದ ಪಚ್ಚರೆ [ ಪೊಚ್ಚರೆ ] ಗಳಾಂತಂತೆ ಕಣ್ಗೆ ಚೆಲ್ವೊದವಿಸಿದುವು . . . ಕರ್ಣ ದ್ವಯಂ (ಸುಂದರಾ. ೬-೯೩). [ಮಿದು + — ಪು₁]

**ಮಿದುಬೆಲ್ಲ** (ನಾ). ಮೃದುವಾಗಿರುವ ಬೆಲ್ಲ : ಜಗವೆಲ್ಲವು ಮಿದುಬೆಲ್ಲವು ಅಗೊ ಮಲ್ಲಿಗೆಮೊಗ್ಗೆ (ನಿಂಪುಂ. ೭-೦೯). [ ಮಿದು + ಬೆಲ್ಲ ]

**ಮಿದುಲು** ' ಮಿದುಳ್ ' ನೋ.

**ಮಿದುಳ್**, ಮಿದುಡು₂, ಮಿದುಲು, ಮಿದುಳು, ಮೆದಡು, ಮೆದುಳು (ನಾ). ೧. ಮನುಷ್ಯನ ಮತ್ತು ಇತರ ಕಶೇರುಕಪ್ರಾಣಿಗಳ ತಲೆ ಬುರುಡೆಯೊಳಗೆ ಸುತ್ತುಸುತ್ತಾಗಿ ಬಳಸಿಕೊಂಡು ಮುದ್ದೆಯಂತಿ ರುವ, ಬುದ್ಧಿಶಕ್ತಿಗೆ ಆಧಾರವಾಗಿರುವ ಒಂದು ಅವಯವ ; ಮಸ್ತಿಷ್ಕ:"ಮಸ್ತಿಷ್ಕವೆಂಬುದು ತಲೆಯ ಮಿದುಳ್" (ಹಲಾಯು. ೦೦೪-೦೩); ಮಿದುಳ್ಗಣ್ಣ ಪುಷ್ಪಕೃತಶೇಖರದಂತಿರೆ ಕೊಂಡುಪೋದರಚ್ಚರಸಿಯರಣ್ಣ ಸತ್ತ ಭಟರಂ ಕೊನೆವಿಸಾಸೆಯು ಚೆನ್ನ ಗಂಡರಂ (ಗದಾಯು. ೪-೨೨) : ಬೀಸಿ ಕರಮೆತ್ತಿ ಪೊಯ್ದಡೆ ಸೂಸಿ ಮಿದುಳ್ ಪೊಟ್ಟನೊಡೆಯೆ ತಲೆ (ಜಿಂಹಂ. ೬-೩೭) ; ಮಿದುಳ್ಗಿಣವಸೆ ಕರುಳ್ಗಳಿಂ ಕಟ್ಟುಗ್ರವಾದ ರಣರಂಗ ದೊಳ್ನಾಲಿ ಕಿಮುನಿ ರಾಮನಂ ಕಂಡನು (ಶ್ರೀ ಬಿಹಾ. ೨೦-೯೬). ೨. ಮೇದಸ್ಸು ; ಕೊಬ್ಬು ; ನೆಣ : ಕೊಮುಳ್(ಡು. ಮಿದುಳ್ಳು) — ಮೇದಸಃ = ಮೆದುಳು, ಕೊಬ್ಬು " (ಕರ್ನಕೋ. ೩೩) 'ಕೊಬ್ಬಿದುಳ್' ಪರಾ. **ಮಿದುಡು₂ :** ೧. ಸಿಂಗನೆಜಿಗಿ ಮಿದುಹುಂಡು ಕಿಲಕೊಕ್ಕ ಮುತ್ತಾನೆಯ ಆಣಿಮುತ್ತುಗಳಂ . . . ತಿಜಿಬೊಟ್ಟ (ರಾಮಾಕ್ಷ. ೭೩-೦೩) ; ತಲೆಯೊಳಗಿನ ಮಿದುಡು ಶುದ್ಧವಾಗಿದ್ದರೆ, ಯಾವತ್ತು ಮನೋವ್ಯಾಪಾರಗಳು ಪ್ರತಿಬಂಧವಿಲ್ಲದೆ ಸಾಗುವುವು (ಮುಂಬಯಿ. ೪-೨೪). **ಮಿದುಲು :** ೧. ಮಿದುಲಡಗು ತೊರಳೆ ನೆಣ ವಸೆ ನೆತ್ತರ್ಗೊಂಡ ಕಾಳಿಜಗಳಂ ಜವನುಂಡೊಗಡಿಸಿದಿಳಿಯ ಪೋಲ್ತುದಾರಣದ ಕಳಂ (ಕಪ್ಪ. ೨-೯೬). **ಮಿದುಳು :** ೧. ರಣದೊಳಹಿತರ ಶಿರದ ಮಿದುಳೌತಣವು ಶಸ್ತ್ರಕೆ (ಕುಬ್ಜಾಶ. ೦೯-೪೦) ; ಖಾನಖಾನರ ಕಡಿದು ತಲೆಯ ಮಿದುಳುಗಳ ಬಿತಗಾಗ ರಣಭೂತಗಳಿಗೆ ದಂಡೆಗಳನು ಮುಡಿಸಿದರು (ಕಂಪಪ. ೦೬-೦೩) ; ಕೊಂಚ ಭೀತಿಯ ಎಳೆಯೂ ನನ್ನ ಮಿದುಳಿನಾಳದಲ್ಲಿ ಸುಳಿದಂತಾಯಿತು (ಮಗಪಹಂ. ೩೭). **ಮೆದಡು:** ೧. ಮೆದಡು ತಲೆಯಲ್ಲಿರುತ್ತದೆ (ಅಪಂಕ. ೦೩). ೨. ''ಮೇದಸ್ — ಹೃದಯದಲ್ಲಿಯೂ ಎಲುಬುಗಳಲ್ಲಿಯೂ ಇರುವ ನೆಣ. ಇದನ್ನು ಮೆದಡುಯೆನ್ನುವರು'' (ಸಿದ್ಧಾಂತ. ೦೬೭). ೩. ಕಂಠ ; ಕುತ್ತಿಗೆ ; ಕತ್ತು : ತುತುಗ ನಾಯ್ ಕೊರಳಲ್ಲಿಪೊಡೆದ ಗಡಿಗೆಯ ಕಂಠ

ಬಿಡದಿರುವೊಲಾ ದ್ವಿಜನ ಮೊದಲ್ಲಿ ಕುಜಾಹಿರಲು ಕಡೆಗೆ ತೆಗೆಯಲ್ ಬಾರದೊಡೆ (ಗುರುಚಾ. ೦೫-೩೩). **ಮೆದುಳು :** ೧. "ಮಸ್ತಿಷ್ಕಂ. ಗೋರ್ದಂ — ೨ ಎಲುವುಗಳ ಗೂಡಿನಲ್ಲಿರುವ ಮೆದುಳ ಹೆಸರುಗಳು" (ಸಿದ್ಧಾಂತಿ. ೦೬೬) ; ಅವರ ಮೆದುಳನ್ನು ಏಪೊ ಮಾಡಬಹುದೆಂದು ನನ್ನ ಅಭಿಪ್ರಾಯ (ಠಾಕು. ೬೩) ; ನಿಮ್ಮ ಮೆದುಳಿಗೆ ಬಹಳ ಗಂಭೀರ ಸ್ವರೂಪವಾದ ತೊಂದರೆಯಾಗಿದೆ (ಅಶನಾ. ೬).

[ ದೇ.॥ ತಮಿ. ಮಿತಟು, ಮಿತಟ್ : ತೆಲು. ಮೆದಡು : ಕೋಲಾ. ನಾಯ್ಕಿ. ಮಿತಿಕ್ ; ಕೋತ. ಮೆವ್ಲ್ : ಗೊಂಡಿ. ಮದ್ದುರ್, ಮೆದುರ್ ; ಕುರುಖ್. ಮೆದ್ಯೋ : ಮಲ್ತೊ. ಮೆದೊ ]

**ಮಿದುಳು** 'ಮಿದುಳ್' ನೋ.

**ಮಿದುಳ್ಗೆಸಟಿ್** (ನಾ). ಕೆಸರಿನಂತೆ ಅಜಿಗಿಜಿಯಾದ ಮೆದುಳು : ಕುಲಿಶವಿಘಾತದೊಂಬ ವೃಢಮುಷ್ಟಿವಿಘಾತದಿನುಣ್ಮೆ ಪಾಯ್ವಿನಂ ತಲೆಯ ಮಿದುಳ್ಗೆಸಟಿ. . . ಮುಸಲಾಯುಧಾನಿಕ್ಕಿದನಾ ಪ್ರಲಂಬನಂ (ಜಗಂ. ೯-೫೬).

[ಮಿದುಳ್ + ಕೆಸಟು]

**ಮಿದ್ದಿಗೆ** 'ಮುದ್ದಿಗೆ$_1$' ನೋ.

**ಮಿದ್ದು** (ಕ್ರಿ). ೧. ಚೆನ್ನಾಗಿ ಕಲಸು ; ನಾದು ; ಮಿದಿ : ಆರಲು ತುಳಿಯುತ ಮಿದ್ದಿ ಹದಗೊಳಿಪ ಕುಂಬಾರ (ಶಾಪತೀ. ೭-೦೨೦). ೨. ತಿಕ್ಕು ; ಮರ್ದಿಸು : ಮಸ್ತಕದ ಸರಮುಂಡಲವನ್ನೆಲ್ಲ . . . ಮಿದ್ದಿ, ನಾದಿ, ಗಿರಾಕಿ ಗೋಣು ಚೆಲ್ಲಪುದೆಂದು ಖಾತ್ರಿಯಾದಾಗ ಕೈತೊಳೆದುಕೊಳ್ಳುತ್ತಾನೆ (ದೀಕ್ಷ. ೬೨). ೩. ಹದಮಾಡು ; ಹದಗೊಳಿಸು : ಹಗೆಯ ತಿದ್ದಿ ಜನಮನವ ಮಿದ್ದಿ ನವಸೃಷ್ಟಿಗೈದ ಬಾವು (ಅಮಕಂ. ೫೬-೬). 'ಮಿದುಡು$_1$' ಪರಾ. [ < ಮಿದಿ$_1$ ]

**ಮಿದ್ದೆ** (ನಾ). ಮುಡಿ ; ಮಾಳಿಗೆ : ಪ್ರಭುಶೆಟ್ಟಿಯ ಮಿದ್ದೆಯೊಳು ದ್ರೋಣಕುಸುಮದ ಮಳೆಯಂ ಕಜಿಸಿದಂ (ಗುರುಚಾ. ೦೩-೯೮).

[ ದೇ.॥ ತಮಿ. ಮೆತ್ತೈ ; ಮಲ. ಮೆತ್ತ : ತುಳು. ಮೆತ್ತಿಗೆ ; ತೆಲು. ಮಿದ್ದೆ, ಮಿದ್ದಿಯ ; ಕೋತ. ಮೆದ್ : ತೊದ. ಮಿದ್ಕ್ ]

**ಮಿನ್** (ಸಪೂರೂ). 'ಮಿಂಚು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಮಿಂಜೊಡರ್' ಪರಾ. [ < ಮಿಂಚು$_2$ ]

**ಮಿನಾರ್** 'ಮಿನಾರು' ನೋ.

**ಮಿನಾರ** 'ಮಿನಾರು' ನೋ.

**ಮಿನಾರು**, ಮನಾರ್, ಮಿನಾರ್, ಮಿನಾರ, ಮಿನಾರ್ (ನಾ). ೧. ಪ್ರಾರ್ಥನೆಗೆ ಜನರನ್ನು ಎಚ್ಚರಿಸಲು ಮುಸ್ಲಿಂ ಘೋಷಕನು ನಿಲ್ಲುವುದಕ್ಕಾಗಿ ಮಸೀದಿಗೆ ಸೇರಿದಂತೆ ಕಟ್ಟಿರುವ ಎತ್ತರವಾದ ಸ್ತಂಭಗೋಪುರ ; ಬುರುಜು : ಗುಮ್ಮಟ : ಅವುಗಳಲ್ಲಿ ಯಾವ ವಿಧವಾದ ಪ್ರತಿಮಾಚಿತ್ರಗಳಾಗಲಿ ವಿಗ್ರಹಗಳಾಗಲಿ ಇಲ್ಲವೆ . . . ಮಿನಾರುಗಳೂ (ಗುಮುಟಗಳೂ) ಲಿಪಿರೇಖಾಚಿತ್ರಗಳೂ ಕಂಡುಬರುವುದು (ಇಸ್ಲಾಂಸಂ. ೨೬೭) ; ಸ್ತಂಭಗಳಂತೆ ಕಟ್ಟಿದ ಮಿನಾರುಗಳು ಮಹಮದೀಯ ಕಟ್ಟಡಗಳ ವಿಶಿಷ್ಟಮಾದರಿಗಳಾಗಿರುತ್ತವೆ (ಶಾರದ. ೯೦೦). ೨. ಸಮುದ್ರದಲ್ಲಿ ಹಡಗುಗಳಿಗೆ ದೀಪದ ಮೂಲಕ ದಾರಿ ತೋರಿಸುವುದಕ್ಕಾಗಿ ತೀರದಲ್ಲಿ ಕಟ್ಟಿರುವ ಗೋಪುರಾಕಾರದ ಕಟ್ಟಡ : "(ಕಡಲ) ದೀಪದ ಮನೆ ; (ಎತ್ತರವಾದ) ಸ್ತಂಭಗೋಪುರ : ಮಿನಾರು" (Minar.. ಇಂಕಕಂ). **ಮನಾರ್ :** ೧. ಮಿನಾರ್ ಅಥವಾ ಮನಾರ್ ಎಂದರೆ ಜ್ಯೋತಿರ್ಮಂದಿರ ಅಥವಾ ಅಗ್ನಿಮಂದಿರ ಎಂದರ್ಥ (ಇಸ್ಲಾಂಸಂ. ೦೬೭). **ಮಿನಾರ್ :** ೧. ಮಿನಾರ್ : ಕಟ್ಟಡದ ಎರಡುಕಡೆಗಳಲ್ಲಿಯೂ ದುಂಡಗೋ ಅಥವಾ ಅಷ್ಟಕೋಣಾಕಾರವಾಗಿಯೋ ಎತ್ತರವಾಗಿ ಹೋಗಿರುವ ಬುರುಜು (ವೈವಾಶಬ್ದ. ೦೫೭). **ಮಿನಾರ :** ೧. ರಣರಂಗದಲ್ಲಿ ಮಡಿದ ಸಿಪಾಯರ ರುಂಡಗಳನ್ನೆಲ್ಲ ಕೊಯ್ದು ತಂದು ಒಂದು ಮಿನಾರವನ್ನು ಕಟ್ಟಿದರಂತೆ ! (ಹಿಂದುಸಾ. ೦೭೦). **ಮಿನಾರ್ :** ೧. ದಿಲ್ಲಿಯಲ್ಲಿ ಕುತುಬ್‌ಮಿನಾರ್ ಹತ್ತಿರ ಇರುವ ಮಸೀದಿಯನ್ನು ಮುಸ್ಲೀಮರು ಜೈನದೇವಾಲಯಗಳನ್ನು ಕೆಡವಿ ಅವುಗಳ ಕಂಬಗಳನ್ನು ಉಪಯೋಗಿಸಿ ಕಟ್ಟಿದ್ದೆಂದು ಹೇಳುತ್ತಾರೆ (ವೈವಾಶಬ್ದ. ೦೫೯);

[ ← ಅರ. ಮನಾರ್, ಮನಾರಹ್ : ಪಾರ. ಮನಾರ್, ಮನಾರ, ಮನಾರತ್ : ಹಿಂ. ಮನಾರ್, ಮನಾರಾ, ಮಿನಾರಾ, ಮಿನಾರ್, ಮಿನಾರಾ ]

**ಮಿನಾಹಿ** (ನಾ). ೧. ಬರಬೇಕಾದ ಹಣವನ್ನು ಯಾವುದಾದರೂ ಲೆಕ್ಕಕ್ಕೆ ಹಿಡಿದುಕೊಳ್ಳುವಿಕೆ, — ಮುರಿದುಕೊಳ್ಳುವಿಕೆ ; ಉತ್ತಾರ : ವೆಂಕಪ್ಪಯ್ಯನ ಕೈಯಲ್ಲಿ ೬೦ಸಾವಿರವರಹವನ್ನು ದಂಡ ತೆಗೆದುಕೊಂಡು ಇವನಿಗೆ ಇದ್ದ ದರಮಾಹೆ ಸಾವಿರರೂಪಾಯಿಯನ್ನು ಮಿನಾಹಿ ಮಾಡಿಸಿ . . . ಆ ಅಧಿಕಾರವನ್ನು ಮೊಖೂಫ್ ಮಾಡಿಸಿದರು (ಮಹಾಪಂ. I ೨೩೯). ೨. ಕೆಲಸದಲ್ಲಿ ಉಂಟಾದ ಕಡಿತ : ನಿರುದ್ಯೋಗ : ಅಂತ್ಯಕಾಲದಲ್ಲಿ ಸನ್ಯಾಸವನ್ನು ತಕ್ಕೊಂಡುಬಿಟ್ಟರೆ ಯಮಸದನಕ್ಕೆ ಯಾರೊಬ್ಬನೂ ಹೋಗಲಾರನು. ಹಾಗಾದರೆ ಯಮನ ಉದ್ಯೋಗ ಮಿನಾಹಿಯಲ್ಲಿ ಬರುವುದಲ್ಲದೆ ಲೋಕದಲ್ಲಿ ಪಾಪಿಗೊಬ್ಬಗಾದರೂ ಪಾಪಭಯ ಲೇಶವಾದರೂ ಇರದು (ವಾಗ್ಭೂ. ೨೯). [← ಅರ. ಮಿನ್‌ಹಾ : ಹಿಂ. ಮಿನ್‌ಹಾಈ./ ತುಳು. ಮಿನಾಯಿ, ಮಿನಾಹಿ]

**ಮಿನಿಕೆ**, ಮಿಣಕೆ, ಮಿಣಿಕೆ, ಮಿನಿಕೆ (ನಾ). (ಸೌತೆಯ ಜಾತಿಗೆ ಸೇರಿದ) ಒಂದು ಬಗೆಯ ಬಳ್ಳಿ ಮತ್ತು ಅದರ ಹಣ್ಣು : "ಕರ್ಕಟಿಕೆಯೆನೆ ಮಿನಿಕೆ" (ಮಂಗರಾ. ೧೦-೩೬); ಎಕ್ಕೆ ಮಿನಿಕೆ ಮೊದಲಾಗಿ ಅವು ಪಕ್ವಕ್ಕೆ ಬಂದಡೆ ವಿಷ ಬಿಡುವುದೆ (ಸವಾಪ. ೩-೦೭). **ಮಿಣಕೆ :** "ಕಾಳಿಂಗದ . . . ಮಿನಕೆ, ಮಿಣಕೆಹಣ್ಣು . . . ಷಡ್‌ಭುಜಸೌತೆ" (ಸಸ್ಯಪಿ. ೪೩). **ಮಿಣಿಕೆ :** ಕೆಕ್ಕರಿಕೆ ಮಿಣಿಕೆ ಚಕ್ಕೊತ್ತ . . . ಮೊಂತಾದ ಮಧುರಫಲಂಗಳ್ (ಸೌಗಂಧಿ. ೩೭-೯). **ಮಿನಿಕೆ :** "ವೃತ್ತಫಲಾ — ಬಿದನೆ. ಮಿನಿಕೆ, ನೆಲ್ಲಿಯ ಕಾಯ್" (ಹಿತಂ. ೦೫೭). 'ಮೆಕ್ಕೆ$_3$' ಪರಾ. [ ? ]

**ಮಿನಿಕೆಬಳ್ಳಿ** (ನಾ). = ಮಿನಿಕೆ : 'ಕಾಡುಮಿನಿಕೆಬಳ್ಳಿ' ಪರಾ.

[ಮಿನಿಕೆ + ಬಳ್ಳಿ]

**ಮಿನಿಟು**, ಮಿನೀಟು (ನಾ). ೧. ಒಂದು ಗಂಟೆಯ ಅರುವತ್ತನೆಯ ಭಾಗ ; ಒಂದು ನಿಮಿಷ : ಇಬ್ಬರೂ ಇನ್ನೈದು ಮಿನಿಟಿನಲ್ಲಿ ಪತಿಪತ್ನಿಯರಾಗುವರು (ಅನ್ನ. ೨೪೭) ; ರಾತ್ರಿ ಎಂಟು ಬಡಿದು ಮಿನಿಟಿನ ಮುಳ್ಳು ಇನ್ನೊಂದು ಸುತ್ತು ಬರುವಲ್ಲಾಯಿತು (ಸಠಕ. ೨೦). **ಮಿನೀಟು :** ೨. ಅತ್ಯಲ್ಪಕಾಲ : ನಾ ಒಂದು ಮಿನೀಟಿನ್ಯಾಗ ಸ್ವಚ್ಛ ಮಾಡ್ತೀನಿ (ಕ್ಷಿತಿಜ. ೫೬); ಒಂದು ಮಿನೀಟು! ಚಹ ತಗೊಂಡು ಹೋಗಬಹುದಲ್ಲ ? (ಬಿಂಗ. ೩೦೩).

[← ಇಂ. Minute]

**ಮಿನಿಮಿನಿ** (ನಾ). ೧. ಕಾಂತಿ ; ಪ್ರಕಾಶ : 'ಮಿನಿಮಿನಿಸು' ಪರಾ. ೨. ಮಂದವಾದ ಪ್ರಕಾಶ ; ನಸುಹೊಳಪು : 'ಮಿನಿಮಿನಿಸು' ಪರಾ. ೩. (ಅಲಂ) ಅಸ್ಪಷ್ಟವಾದುದು; ಅವ್ಯಕ್ತವಾದುದು: ಏನಗೆಣಗರೆಂದು ಕಮ್ಮನೆ ಮಾನವಂ ಮುಸಿಮಾಡಿಕೊಳಲೊಡಂ ಮುನ್ನಿನ್ನ ಮಿನಿಮಿನಿಯೆನಿಪ್ಪ ಗುಣಮಾ ಮುನಿಯಂ ಪೆಜಪಿಂಗೆ ಪೋಪುದೋ ವಚ್ಚರಿಯೇ (ಅನಾಥ. ೩೯-೨೩೪). [ದೇ.॥ ತಮಿ. ಮಿನುಮಿನು = ಹೊಳೆ : ತುಳು. ಮಿಣಿಮಿಣಿ, ಮಿಣಮಿಣೆ = ಹೊಳೆಯುವ]

**ಮಿನಿಮಿನಿಗಣ್** (ನಾ). ಹೆಚ್ಚು ಹೊಳಪಿಲ್ಲದ ಕಣ್ಣು ; ಮಂಕಾಗಿರುವ ಕಣ್ಣು : ಮಿನಿಮಿನಿಗಣ್ ತಜಂಟದಲೆ ಜೋಲ್ದಿಹ ಮೈ . . . ಸೆರೆಗೊಂಡ ಕಾಲ್ಗಳಿಂ ಮನಕೆ ವಿರಕ್ತಿಯಂ ಪಡೆದ ಮುಪ್ಪಿನ ಪಾರ್ವನದೊರ್ಬನೊಪ್ಪಿದಂ (ಕೃಷ್ಣಾಸ್ವ. ೩-೮೦). [ಮಿನಿಮಿನಿ + ಕಣ್]

**ಮಿನಿಮಿನಿಸು** (ಕ್ರಿ). ೧. ಹೊಳೆ ; ಪ್ರಕಾಶಿಸು ; ಕಾಂತಿಯನ್ನು ಬೀರು : ತೊಳತೊಳಗಿ ಬೆಳಗಿ ಮಿನಿಮಿನಿ[ಪಾಠಾಂ. ಮಿನುಮಿನಿ]ಸುತ್ತುಂ ಪಲವುಂ ದೀವಿಗೆಗಳ್ ಕಳ್ತಲೆ ಪೊತ್ತಂತೊಪ್ಪುತಿರ್ದುವಾ ಮನೆಮನೆಯೊಳ್ (ಗಿರಿ. ೪-೯೦). ೨. ಮಂದವಾಗಿ ಪ್ರಕಾಶಿಸು ; ನಸುಬೆಳಕು ಚೆಲ್ಲು : ವನಿತೆಯರಿರ್ದಡಂ ತಾರಗೆಗಳಂತೆ ಮಿನಿಮಿನಿಸುತಿರ್ಪರಾ ಚಂದ್ರವದನೆಯ ಮುಂತೆ (ನೇಮಿ. ೭೯. ೨೯-೨). [ಮಿನಿಮಿನಿ + -ಇಸು$_3$]

**ಮಿನೀಟು** 'ಮಿನಿಟು' ನೋ.

**Δಮಿನುಂಗು** 'ಮಿನುಕು$_1$' ನೋ.

**ಮಿನುಕು$_1$, ಮಿಣುಕು$_1$, ಮಿನುಂಗು, ಮಿನುಗು$_1$** (ಕ್ರಿ). ಮಿನುಪ (ವರ್ತಕೃ). ೧. ಹೊಳೆ ; ಬೆಳಗು ; ಪ್ರಕಾಶಿಸು : "ಮಿನುಕು – ಅಂತರ್ಗತಸ್ವನೇ (ಪಿಸುಗುಟ್ಟು), ಕಾಂತೌ ಚ (ಪ್ರಕಾಶಿಸು)" (ಶಬ್ದಮ). ೨. ಕ್ಷಣ ಬಿಟ್ಟು ಕ್ಷಣ ಹೊಳೆ : ಎಸೆದುವು ಮಣಿಗಳ್ ಬೆಳ್ದಿಂಗಳ ಪೊರೆ ಪೊರೆಯೊಳ್ ಪಳ್ಳಿಸದೆ ಮಿನುಕುತಿರ್ಪ ತಾರಾಳಿಯವೊಲ್ (ಅಜಿತ. ೫-೭೩); ತೆಳುವುಬೆಳಕನು ಕೃದರಿ ಮಿನುಕುವ ಮಿಂಚುಹುಳುವೆಂದೆಣಿಸಲೋ ! (ಹರಿಶ್ಚ. ೧೩-೫). ೩. ಗೋಚರಿಸು; ತೋರು ; ಸ್ಫುರಿಸು : ಭೂತಳಾಧೀಶ್ವರನ ಮನದೊಳಗೀತ ಕಾರಣಪುರುಷನಹ ಸಂಕೇತ ಮಿನುಕಲು ಕೊಟ್ಟನಂದು ಮಹಾಪ್ರಧಾನಿಕೆಯ (ಕೃಶಂ. ೯-೨೨). **ಮಿಣುಕು$_1$**: ೨. ಚಿಕ್ಕ ಮಿಣುಕಲಿ ಬೆಳ್ಳಿ ತಿಣುಕಲಿ ಒಂದೆ ಎಂಬೆಯಾ ಎರಡನೂ ? (ಅರಳು. ೦೨೯-೦೦). ೪. ಮಂಕಾಗಿ ಬೆಳಕು ಬೀರು ; ಮಂದವಾಗಿ ಪ್ರಕಾಶಿಸು: ನೂರಾರು ದೀಪಗಳು, ಮಿಣುಕುತಿಹ ಸೊಡರುಗಳು . . . ತೆಕ್ಕನೆಯೆ ಹುಟ್ಟಿ ಬರೆ (ಪಕ್ಷಿಕಾ. ೦೫-೬೩) ; ನಮ್ಮ ಸೊಡರನಾಲಿಸುವಿರೇಂ ಮಿಣುಕಲಿಂತು ಬರಿಯೆ (ಗೀತಾಂ. ೯೩-೨). **Δಮಿನುಂಗು** : ೫. ಶೋಭಿಸು ; ಒಪ್ಪು : ನಸುನಗೆ ಮಿನುಂಗೆ ಮೊಗದೊಳ್ ಪಸರಿಸೆ ನಿಜದಂತಕಾಂತಿ ನೃಪವರಸಭೆಯೊಳ್ (ಪಶಕು. ೨-೯೦). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಮಿನುಗು$_1$** : ೧. ಮರಕತಕಾಂತಿಯುಂ ತಳೆದು ಸುಣ್ಣಗೆಂಪಿಗಳ್ಮಿನುಗಲ್ಕೆ ವಿದ್ರುಮಾಂಕುರದವೊಲೊಪ್ಪೆ ಚಂಚುಪುಟ ಮೊಯ್ಯನೆ ಬಂದುದು . . . ಶುಕಂ (ಕಾದಂಬ. ೬೦); ಘನವಿಕ್ರಮ ಶಿಖಿಯುತನೂತನವಿಚಲದ್ಧೂಮಲೇಖೆಯೊಳ್ಪುಂಬಿನೆಗಂ ಜನನುತನುದ್ಭಟ ದೇವನ ಮಿನುಪ ಕರಾಷ್ಟಸ್ಥಿತಾಸಿಲತೆ ಸೊಗಯಿಸುಗುಂ (ಉದ್ಭಟ. ೦-೮೬). ೨. ಕೌಲ್ಬರನು . . . ಅಲ್ಲಿಯ ವಿಜ್ಞಾನಜಗತ್ತಿನಲ್ಲಿ ನಕ್ಷತ್ರದಂತೆ ಮಿನುಗುತ್ತಿದ್ದನು (ಸಸ್ಯಶ. ೪೦) ; ಮಿನುಗಲೆ ಮಿನುಗಲೆ ಎಲೆ ನಕ್ಷತ್ರ (ರಾಮಾನ. ೦೦೩). ೩. ಇವೆಲ್ಲವುಗಳು . . ಹೊಸಅರ್ಥದಿಂದ ತುಂಬಿ ಕೊಂಡು ಮಿನುಗತೊಡಗಿದವು (ಗಂಪಾಡು. ೦೨೩). ೫. ಮಿನುಪು: ಕೃತಿಗಾವುದು ಪೊದಲ್ (ಉದ್ಭಟ. ೦-೩೬); ಸಲೆ ಮಿನುಪ ಕೊರಲ ಕರ್ಪಂ ತೆಗೆವಮರ್ದುರ್ಗಜೀವವ್ಯೋಲ್ಮಾಡಿ ತುಟಿಯೊಳಾಂತು (ಶಬ್ದಮ. ೫-೫೧): ಬಾಲಹಿಮಕರಕಿರಣನೊಡನೆ ಸಮೇಳವಹ ನಗೆ ಮಿನುಗೆ (ಕುಮಾರ. ೫-೨೪).

ಮಿನುಮಿನುಗು, ಮಿಣುಮಿಣುಕು (ದ್ವಿರುಕ್ತಿ) : ಕತ್ತಲೆಯ ನಡುವೆ ಮಿನುಮಿನುಪ [ಪಾಠಾಂ. ಮಿಸಿಮಿಸಿಪ] ಜ್ಯೋತಿಯ ತೆಱದಿ (ಬಸವಪು. ೫. ೨೮೦-೭); ಮಿಸುಮಿಸುಪ ಪೊಂಬರಿವಾಣಗಳೊಳೆಯ್ದೆ ನೀಡಿದರ್ ಪರಿಪರಿಯ ಪರಿಕರವನು (ಚಂದ್ರ. ೫-೫೯); ಇರುಳು ಕತ್ತಲೆಯಲ್ಲಿ ಮಿಣುಮಿಣುಕಿ ಮೆರೆವಲೆದ ಮಿಂಚುಹುಳು . . . ಕಣ್ಮುಟುಕುತಿದೆ (ಪಕ್ಷಿಕಾ. ೮೬.೦).

[ದೇ.॥ ತಮಿ. ಮಿನುಙ್ಕು, ಮಿನುಕ್ಕು; ಮಲ. ಮಿನುಕ್ಕು; ಮಿನ್ನುಕ, ಮಿನ್ನಿಕ್ಕ; ತುಳು. ಮಿನುಕು, ಮಿಣುಕು, ಮಿಣ್ಕು, ಮೆಣಕು, ಮೆಣ್ಕು ; ತೆಲು. ಮಿನುಕು, ಮಿನ್ಕು, ಮಿಣುಕು]

**ಮಿನುಕು$_2$, ಮಿನುಗು$_2$. ಮೊಸಗು** (ಕ್ರಿ). ೧. ತನ್ನಷ್ಟಕ್ಕೆ ತಾನು ತಗ್ಗಿದ ಧ್ವನಿಯಲ್ಲಿ ಮಾತನಾಡು ; ಗೊಣಗುಟ್ಟು : "ಮಿನುಕು – ಅಂತರ್ಗತಸ್ವನೇ (ಪಿಸುಗುಟ್ಟು), ಕಾಂತೌ ಚ (ಪ್ರಕಾಶಿಸು)" (ಶಬ್ದಮ); ತದಾಮ್ರವನದೊಳೊರ್ವಂ ಮ್ಯೆಯೊಳೆಲ್ಲಂ ಕಸಜಿನೊಟ್ಟಿಕೊಂಡು ಬತ್ತಲೆ ಮರುಳಂತೆ ತನ್ನೊಳ್ ಮಿನುಕುತ್ತುಂ ಮೋನದೊಳಿರ್ಪಂ (ವಡ್ಡಾರಾ. ೬-೨೬); ಪೆಣ್ ಕೊಯ್ಯಲ್ಲಿರ್ಪಂದು ಮಂತ್ರಮನ್ ಮಿನುಕುವನ್ ಅವನ್ ಮರುಳ್ವೈದ್ಯನ್ (ಅಭಿನಾ. ೨೪-೪೬೦). **ಮಿನುಗು$_2$** : ೨. ತಗ್ಗಿದ ಸ್ವರದಲ್ಲಿ ಮಂತ್ರವನ್ನು ಹೇಳು,– ಜಪಿಸು : ಮಿನುಗುವಮಟಿಗಳ ವಿಕಲಮಂತ್ರದ ಬಿನುಗುಗಳ ಕ್ರಿಯಾಹುತಿಗೆ ಕರೆವನಿಮಿಷರ ಪಲ್ಲಟದ ವಿಚಲಿತ ಸೂಕ್ತಿಮಯುನಿನದ ತನಿಭಯದ ತರಳಾಕ್ಷಿಗಳ . . . ಗಡ್ಡದ ಮುನಿಗಳಿದ್ದರು ಬಲಿದ ಬೆಡಗಿನಲಿ (ಕುಮಾವ್ಯಾಸ. ೦೦-೫೯). **ಮೊಸಗು** : ೧. ಲೋ, ಬಸವ, ಅಷ್ಟು ನೀರು ತಾರೋ . . . ಎಂದು ಮೊಸಗಿ ಮುಗಿಸಿದನು (ಚಳಿಗಾ. ೦೬೭). [ದೇ.॥ ತಮಿ. ಮುಣಙ್ಕು; ಮಲ. ಮಿಣುಮಿಣುಕ್ಕ, ಮಿಣ್ಟುಕ; ತುಳು. ಮುಣ್ಕು; ತೆಲು. ಮಿಸುಕು, ಮಿಸ್ಕು, ಮುಸುಕು, ಮುಸ್ಕು]

**ಮಿನುಕು$_3$, ಮಿಣುಕು$_2$, ಮಿನುಗು$_3$** (ನಾ). ೧. ಹೊಳಪು ; ಕಾಂತಿ ; ಪ್ರಕಾಶ : ನೆನೆಯಿಸುತಿರ್ದುದು ತುಂತುರ್ವನಿ ಮುಸುಕಿದ ದುಗ್ಧವಾರ್ಧಿಯುಂ ತಾನೆನಸುಂ ತನಿವೆಳ್ದಿಂಗಳ್ ಮುಸುಱುವ ಮಿನುಕಿಂದೊಪ್ಪುವ ನಭೋಂಗಣಂ ಧೃತಭಗಣಂ (ಕುಸುಮಾ. ೦೦-೧೫). ೨. ತಾಳಿ ; ಮಾಂಗಲ್ಯ : ಕಟಿಸೂತ್ರಂ ಬ್ರಹ್ಮಸೂತ್ರಂ ಸರಿಗೆ ಮಿನುಕು ಕೊಪ್ಪುಂಗುರಂ ಕರ್ಣಪೂರಂ . . . ಕೇಯೂರಮೆಂಬನ್ನವಂ ಪ್ರಸ್ಫುಟರತ್ನೋಪಾಶ್ರಯಂ ರಂಜಿಸುವಿನಮಲರಿಂ ಕಾಂತೆಯರ್ ಮಾಡಿ ಕೊಟ್ಟರ್ (ಸೂಕ್ತಿಸು. ೦೦-೪೯). **ಮಿಣುಕು$_2$** : ೩. ಮಂಕು; ಮಸುಕು : 'ಮಿಣುಕುದೀಪ', 'ಮಿಣುಕು ಬೆಳಕು' ಪರಾ. **ಮಿನುಗು$_3$** : ೧. "ತೊಳಗು, ಬೆಳಗು, ಮಿನುಗು . . . ಮಸೆ – ಈ ೧೪ ಕಾಂತಿ" (ಕರ್ನಾ. ೫೫-೨೦೨); ಕಣ್ಣ ಮಿನುಗಿಂ ತೊಳಗು ಪುಂಗುಟದ ಗಾಡಿಯಿಂ . . . ಬಿಡುಗಣ್ಣರೆಚಿಯಂ ವಿಶ್ವನಾಥಂ ಪ್ರಸನ್ನನಾದಂ (ಕರ್ಣಾ. ೭-೩೫). ೨. 'ಅಯ್ದೆಮಿನುಗು' ಪರಾ. ೪. ಕ್ಷಣ ಬಿಟ್ಟು ಕ್ಷಣ ಹೊಳೆಯುವ ಹೊಳಪು : ಹಳುಕು ಕವಿದವು ಭಟನ ಕೈ ಮೆಯ್ಗಳಲಿ ಮಿನುಗಿದವಿರುಳು ಮರನಲಿ ಹೊಳೆದು ಮುತ್ತಿದ ಮಿಂಚುಬುಳುವಿನ ಮಿನುಗಿನಂದದಲಿ (ಕುಮಾದ್ರೋ. ೫-೫೬) ; ನಳಿನಬಾಂಧವನ ಮುಂದೆಸೆಯೊಳು ಮಿಗೆ ಮಿಂಚುಬುಳುವಿನ ಮಿನುಗು ರಂಜಿಪುದೇ (ಮೋಹತ. ೦೫-೦೦) ; ಒಂದು ನಕ್ಷತ್ರವೂ ಮಿನುಗು ತೋರದು (ಸುಗುಗಂ. ೫೯-೩).

ಮಿಣುಕುಮಿಣುಕು (ದ್ವಿರುಕ್ತಿ) : ಗೋಡೆಯ ಮೇಲೆ ಕಪ್ಪುಗಟ್ಟಿಕೊಂಡು ಮಿಣುಕುಮಿಣುಕಾಗಿ ಉರಿಯುತ್ತಿದ್ದ ದೀಪದಿಂದ ಸಾಕಷ್ಟು ಬೆಳಕಿರುತ್ತಿತ್ತು (ಮಾರ್ಗದ. ೧೯).

[< ಮಿನುಕು$_1$. / ತಮಿ. ಮಲ. ಮಿನುಕ್ಕಮ್; ತುಳು. ಮಿಣುಕು, ಮೆಣಕು, ಮೆಣುಕು ; ತೆಲು. ಮಿನುಕು, ಮಿನ್ಕು, ಮಿಣುಕು]

**ಮಿನುಕುಗಲೆ** (ನಾ). ಕಣ್ಣಿಗೆ ಗೋಚರಿಸುವ ಗಾಯದ ಗುರುತು,– ಕಲೆ : ಮಿನುಕುಗಲೆ ಭೂಷಣಂ ಸುಭಟನಿಕಾಯದ ಕಾಯತತಿಗೆ (ಶಾಂತೀಶ. ೯-೫೯). [ಮಿನುಕು$_1$ + ಕಲೆ$_2$]

**ಮಿನುಗಿಸು, ಮಿಣುಕಿಸು** (ಕ್ರಿ). ೧. ಕಾಂತಿಯನ್ನು ಸೂಸು ; ಬೆಳಕನ್ನು ಚಿಮ್ಮಿಸು : ಅಳನು ಮಿಡುಕನು ಮಿನುಗಿಸನು ಕಣ್ಗಳನು (ಕೃಶಂ. ೯-೦೨). ೨. ಹೊಳೆಯುವಂತೆ ಮಾಡು ; ಥಳಥಳಿಸುವಂತೆ ಮಾಡು : ಸೂರ್ಯನ ಕಿರಣ ನೀರಿನ ಮೇಲೆ ಬಿದ್ದು ತೆರೆಗಳನ್ನು ಮಿನುಗಿಸುತ್ತಿದೆ (ರೂಢಿ). **ಮಿಣುಕಿಸು** : ೩. ಉದ್ದೀಪಿಸು ; ದೀಪ್ತಗೊಳಿಸು : ಆ ತೇಜಗಳ ತುಣುಕು ಎದೆಯ ಮಿಣುಕಿಸಲಿಲ್ಲ ಮುಗಿಲ ಮಲ್ಲಿಗೆಯಂತೆ ಅಲ್ಲೆ ಬೆಳಗಿ (ಬಿಡಾಡಿ. ೦-೦೭). [ಮಿನುಗು$_1$ (< ಮಿನುಕು$_1$) + -ಇಸು$_3$]

**ಮಿನುಗು$_1$** 'ಮಿನುಕು$_1$' ನೋ.

**ಮಿನುಗು$_2$** 'ಮಿನುಕು$_2$' ನೋ.

**ಮಿನುಗು$_3$** 'ಮಿನುಕು$_3$' ನೋ.

**ಮಿನುಗುಂಗುಡಿ** (ನಾ). ಮಂದವಾದ ಪ್ರಕಾಶವನ್ನು ಬೀರುತ್ತಿರುವ ದೀಪದ ಕುಡಿ, — ತುದಿ : ದೀವಿಗೆಯೆಡೆಯಲ್ಲಿ ನಿಂತು, ಅಭ್ಯಾಸಬಲದ ಯನ್ತ್ರಕರ್ಮದಿಂದ ಮಿನುಗುಂಗುಡಿಯನ್ನು ಮೀಂಟಿ ಉಜ್ಜ್ವಳ ಮಾಡಿ (ವಿಲ್ಯ. ೧೦೩-೦೬). [ಮಿನುಗು$_1$ (< ಮಿನುಕು$_1$) + ಕುಡಿ$_2$]

**ಮಿನುಗುಟ್ಟು, ಮಿಣುಗುಟ್ಟು** (ಕ್ರಿ). ೧. ಕ್ಷಣ ಬಿಟ್ಟು ಕ್ಷಣ ಹೊಳೆ : ನಕ್ಷತ್ರಗಳು ಮಿನುಗುಟ್ಟುತ್ತವೆ. (ಅಶಾಕ. ೦೩). **ಮಿಣುಗುಟ್ಟು** : ೨. ಹೊಳೆ ; ಬೆಳಗು ; ಪ್ರಕಾಶಿಸು : ಚಕ್ರೇಶ್ವರಿಗೆ ಪುನಃ ಆಶಾದೀಪವು ಮಿಣುಗುಟ್ಟಲಾರಂಭಿಸಿತು (ಶ್ರೀಚಾಮು. ೨೯೬). [<ಮಿನುಗು$_1$ + ಕುಟ್ಟು$_1$]

**ಮಿನುಗುತಾರೆ** (ನಾ). ಥಳಥಳಿಸುವ ನಕ್ಷತ್ರ : ತವರುಬೆಳಗದ ಮಾರ್ಗದರ್ಶನ ಮಿನುಗುತಾರೆಯು ತೆರದೊಲು ಒಲಿದ ಗಂಡನ ಸಾಹಚರ್ಯವು ಪೂರ್ಣಚಂದ್ರನ ಬೆಳಕೊಲು (ತಂಧ್ರಮಾ. ೪೦-೬).

[ಮಿನುಗು$_1$ (< ಮಿನುಕು$_1$) + ತಾರೆ$_2$]

**ಮಿನುಗುವಡೆ** (ಕ್ರಿ). ಕಾಂತಿಯನ್ನು ಹೊಂದು ; ಪ್ರಕಾಶವನ್ನು ಪಡೆ : ನಾಗಂಗಳಂ ಕೊನೆಗೊಂಬುಗಳೊಳ್ ತಾಳ್ದು ಮಿನು[ಪಾಠಾಂ. ಮಿನು]ಗು ವಡೆದ ಪಡೆವಣಿದುಬುಗಲಿಂ ತಳ್ತು ಮಾಣಿಕ್ಯದ ಮರಂಗಳಂತಿರಂದಂಬೆತ್ತ ಚಂದನಧಾರಾರುಹಂಗಳಂ (ಶಬಶಂ. ೩-೩೫ ವ).

[ಮಿನುಗು$_3$ (<ಮಿನುಕು$_3$) + ಪಡೆ$_1$]

**ಮಿನುಪ** 'ಮಿನುಕು$_1$' ಪರಾ.

**ಮಿನುಪು** (ನಾ). ಒಂದು ಬಗೆಯ ಧಾನ್ಯ ; ಉದ್ದು : ಪೆಸಱುಪ್ಪು ಕಡಲೆ ಗೋಧುವೆ ಮಿನುಪೆಳ್ಳೆಂಬಿವಱ ಪೇಱು ಮೂವತ್ತಕೊರ್ಕನ್ದೆ ನಿವ ದವಸಕ್ಕಮಾರ್ಪ್ಪನ್ದೊನ್ದಿರ್ಪತ್ತಕ್ಕೆ ಕೊಟ್ಟರೊನ್ದುಮ್ಮದದಿ (ಕ್ಶಾಇಇ. IX-i. ೦೬೩-೬೪ ; 1099). [ದೇ.॥. ತೆಲು. ಮಿನುಮು, ಮಿನ್ನು]

**ಮಿನುಮಿನನೆ** (ಅ). ಪ್ರಕಾಶಮಾನವಾಗಿ, ಥಳಥಳನೆ ಎಂಬ ಅರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಮಿನು[ಪಾಠಾಂ. ನ] ಮಿನನೆ ತೋಱ ತಾರಗೆ ಘನತರತಿಮಿರಾಪಕಾಶಪಾಕಾಶಮದೇಂ ನೆನೆಯಿಸಿದುದೊ ಕಡಲೊಳ್ ಸೀರ್ಪನಿ ತನುವಂ ಪುದಿದು ತೋರ್ಪ ಕೃಷ್ಣನ ತನುವಂ (ಶಂಠಾಮಾ. ೬-೭) ; ಮಿನುಮಿನನೆ ಮಿನುಗುತಿರ್ದುವು ನನೆದೀವಿದ ಪಾಟಲೀದ್ರುಮಂಗಳ ಕೊನೆಗಳ್ (ಧಮುಸ. ೦-೯೭). [ಮಿನುಮಿನು + — ಅನೆ$_1$]

**ಮಿನುಮಿನು** (ನಾ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣಶಬ್ದ : 'ಮಿನುಮಿನನೆ' ಪರಾ.

**ಮಿನ್ನಲ್** (ನಾ). ಮಿಂಚು : ಅರ್ಣವಶಯನನ ಕರ್ಣಯುಗದಿ ನವರನ್ನಕುಂಡಲಗಳೊಪ್ಪಿರಲು ಕನ್ನಡಿಗದಪಿನೊಳಗೆ ಬಿಂಬಿಸುತಲಿ ಗನ್ನಮಿನ್ನಲೆನೆ ಶೋಭಿಸಿತು (ಕೃಷ್ಣಗೋ. ೪-೩೩). [ಮಿನ್ನು$_1$ + — ಅಲ್$_2$ / ತಮಿ. ಮಲ. ಮಿನ್ನಲ್ ; ಪರ್ಜಿ. ಮಿನ್ನಲ್ = ಕಿಡಿ]

**ಮಿನ್ನು$_1$** (ಕ್ರಿ). ಹೊಳೆ ; ಪ್ರಕಾಶಿಸು : ಎನ್ನ ಮುಖಮೇ ದ್ವಾರವೆನ್ನ ದಂತವೆ ಅದಕೆ ಮಿನ್ನುತಿಹ ಮೌಕ್ತಿಕದ ಸೂಸಕಗಳು (ಸುಗಾರ. ೯-೨).

[ದೇ॥. ತಮಿ. ಮಲ. ಮಿನ್ನು ; ತುಳು. ಮೆಣ್ ; ಕೊಡ. ಮಿನ್ನ್]

**ಮಿನ್ನು$_2$** (ನಾ). ೧. ಹೊಳಪು ; ಪ್ರಕಾಶ : 'ಮಿನ್ನುವಡೆ' ಪರಾ. ೨. ಮಿಂಚು : ಮಿನ್ನುಗಳೆಸೆದವು ವಿದ್ಯುನ್ಮಾಲೆಯಂತೆ ರನ್ನವಳಲ ಸಿರಿಯು ನಾಂತು (ವಿಜಯ. ೦೦-೬೯); ರನ್ನತೊಡವಂ ತೊಟ್ಟು ಮಿನ್ನೆನಿಪಸೀಮಂತದಲಿ ಸಿಂದುರವನ್ನಿಟ್ಟು . . . ಕನ್ನಿಕೆಯುರೆಸೆದರು (ಪಂಕಾರ. ೦-೪-೩೭). ೩. ಹೊಳಪನ್ನುಂಟುಮಾಡುವ ಪದಾರ್ಥ : ಮಿನ್ನಿಂ ಸಾರಣೆಗೆಯ್ದಿಹ ಸನ್ನುತಭೂಮಿಯೊಳೆ ಕಳವೆಯಕ್ಕಿಯ ಪಿಟ್ಟಿಂ ಬಿನ್ನಣದೆಳೆ ಪದಿನೇಳಾಗುನ್ನತ ಷೋಡಶಸುಪಂಕ್ತಿಗಳ್ ಶೋಭಿಸುಗುಂ (ಹಾಠಾಸ್ಯ. ೪-೦೬-೩೦).

[< ಮಿನ್ನು$_1$. / ತಮಿ. ಮಿನ್, ಮಿನ್ನು; ಮಲ. ಮಿನ್ನಿ, ಮಿನ್ನು]

**ಮಿನ್ನುವಡೆ** (ಕ್ರಿ). ಹೊಳಪನ್ನು ಪಡೆ ; ಕಾಂತಿಯುಕ್ತವಾಗಿರು : ಪೊನ್ನ ಜನ್ನಿವಾರ ನೊಸಲ ಬಾಸರನಾಮ ಮಿನ್ನುವಡೆದ ಸುಲಿಪಲ್ಲು (ರಾಮಾಶ. ೦೨-೦೫) ; ಮಿನ್ನುವಡೆದಾ ನಿಡುಗೇಶವಪಾ ಘೂಳಿಂ ಸಾಂದಿದವೆಂದೆತ್ತಿಕೊಡಹಿ (ಪುರೇಶು. ೨೭-೨೮). [ಮಿನ್ನು$_2$ + ಪಡೆ$_1$]

**ಮಿಯಾವ್** (ನಾ). ಬೆಕ್ಕಿನ ಕೂಗನ್ನು ಸೂಚಿಸುವ ಒಂದು ಅನುಕರಣ ಶಬ್ದ : ಮಿಯಾವ್ ಎಂದು ಅಟ್ಟದಿಂದ ಬೆಕ್ಕು ಕೆಳಗೆ ಹಾರಿತು (ಪ್ರಕ್ಕ. ೪೩).

**ಮಿರಡಿ, ಮಿಂಡಿ$_2$** (ನಾ). ಒಂದು ಬಗೆಯ ಸಸ್ಯ : "ನಾಯಿಬೇಲಿ . . . ಮಿರಡಿ, ಮಿಂಡಿ, ಮಿರ್ಡೆ" (ಸಸ್ಯಶಿ. ೬೦) ; ಮಿರಡಿ, ಮಿಂಡಿ (ವೃಕ್ಷಶಿ. ೩೭-೭೪೦). **ಮಿಂಡಿ$_2$** : ಮೇಲಿನ ಪ್ರಯೋಗಗಳನ್ನು ನೋಡಿ.

[ ? ]

**ಮಿರಾಬು** (ನಾ). ದೇವಸ್ಥಾನದಲ್ಲಿ ದೇವರ ಉತ್ಸವಕಾಲದಲ್ಲಿ ಬಳಸುವ (ಕುದುರೆಯಾಕಾರದ) ಒಂದು ಬಗೆಯ ಅಲಂಕಾರಸಾಧನ : ಹಬ್ಬ ಹರಿದಿನಗಳಲ್ಲಿ ದೇವರನ್ನು ಹೊರುವ ಭಾರ ಇವನಿಗಿರಲಿಲ್ಲವಾದರೂ ನಂದೀಧ್ವಜ, ಚೌರಿ, ಚಾಮರ, ಮಿರಾಬು, ಅಬ್ದಾಗಿರಿಗಳನ್ನು ಉಗ್ರಾಣದಿಂದ ಹೊರಕ್ಕೆ ತಂದು ಧೂಳು ಕೊಡಹಬೇಕು (ಬೆಳುಮು. ೩).

[ ?. / ಮರಾ. ಮುರಾಪಾ ]

**ಮಿರಾಸದಾರ** 'ಮಿರಾಸಿದಾರ' ನೋ.

**ಮಿರಾಸಿ, ಮಿರಾಸು, ಮಿರಾಸೆ, ಮಿರಾಸೆ** (ನಾ). ೧. (ಹಳ್ಳಿಯಲ್ಲಿ) ರೈತರು ಸಾಗುವಳಿಮಾಡುವುದಕ್ಕಾಗಿ ಭೂಮಿಯ ಮಾಲೀಕನಿಗೆ ಕೊಡಬೇಕಾಗುವ ಧಾನ್ಯ, ಹಣ ಮೊದಲಾದುವು ಮತ್ತು ಆ ಮಾಲೀಕನು ಅದನ್ನು ಪಡೆಯಲು ವಂಶಪಾರಂಪರ್ಯವಾಗಿ ಹೊಂದಿರುವ ಹಕ್ಕು : ಸ್ಥಳದ ಹಂನೆರಡು ಮಂದಿ ಆಯಗಾರರ ನಿದಾನಿಸಿ ಯಥಾಪ್ರಕಾರ ನಿಂಮ ಸ್ಥಳ ಮಿರಾಸಿ ನಿಮಗೆ ಕೊಟು ತಾಮ್ರದ ಶಾಸನದ ಲಿಪಿ ಬರಸಿ ಕೊಟು ಯಿದ್ದೇವೆ (ಎಕ. XII, ಶಿರಾ. ೦೦೨-೩೨ ; 1720) : ಬ್ರಾಹ್ಮಣವಾಗಿ ಬರಿಸಿ ಗೌಡಿಕೆ ಮಿರಾಸಿ ತಂನದೆಂದು (ಇಬಿ. ೦೯೪೭, ರಾಜಿವಸ್ಮಂ. ೨೯೬-೦೯; ೪). ೨. ಗ್ರಾಮಸೇವಕರಿಗೆ ಊರಿನ ಮುಖ್ಯಸ್ಥರು ಮತ್ತು ರೈತರು ಹಣ ಅಥವಾ ಧಾನ್ಯದ ರೂಪದಲ್ಲಿ ಕೊಡುವ ವಾರ್ಷಿಕ ಅಥವಾ ಮಾಸಿಕವಾದ ವಿಶೇಷಸಂಭಾವನೆ, — ಭತ್ಯ : ನಿಬಂಧನೆಗಳ ಮೇರೆಗೆ ಸಲ್ಲಿಸಬೇಕಾದ ಮಿರಾಸಿಯನ್ನು ಸಲ್ಲಿಸಲಿಲ್ಲವೆಂತ ನೀರಗಂಟಿಯಿಂದ, ತೋಟಿಯಿಂದ ಅಥವಾ ತಳವಾರಿಯಿಂದ ಫಿರ್ಯಾದು ಬಂದರೆ (ಗ್ರಾಮಶಾ. ೪೫). ೩. (ಪ್ರಾಂತ್ಯದ ಪದ್ಧತಿಯ ಪ್ರಕಾರದ) ಗೇಣಿಯನ್ನು ಸಲ್ಲಿಸುತ್ತಿರುವ ತನಕ, ಗೇಣಿದಾರನಿಗೆ ಮತ್ತು ಅವನ ಉತ್ತರಾಧಿಕಾರಿಗೆ ಸಾಗುವಳಿಮಾಡಲು ಇರುವ ವಂಶಪಾರಂಪರ್ಯವಾದ ಹಕ್ಕು, — ಸ್ವಾಮ್ಯ : (ವ್ಯಗಕ. IV. ೭೭೯). **ಮಿರಾಸು** : ೨. ಅವನಿಗೆ ನಾಲ್ಕಾಣೆ ಮಿರಾಸು ಕೊಡುವರು (ಹುಟ್ಟಿಹ. ೯); ಆ ಊರಿನ ದೇವರ ಒಕ್ಕಲಿಗೆ ಸೇರಿದ ಪಕ್ಕದ ಊರುಗಳ ಒಕ್ಕಲುಗಳಿಂದಲೂ ಈಗ 'ಮಿರಾಸು' ( = ಮಾಮೂಲು) ಪಡೆಯುವ ಹಕ್ಕು ಅರ್ಚಕನಿಗಿದೆ (ಶೋಧನೆ. ೧೨). **ಮಿರಾಸೆ** : ೨. ಸುಗ್ಗಿಯ ವೇಳೆಗೆ ಅವನು ಮತ್ತೆ ಹಿಂದಕ್ಕೆ ಬಂದು ತನ್ನ ಮಿರಾಸೆಯಾದ ರಾಗಿ ಭತ್ತವನ್ನು ವಸೂಲು ಮಾಡಿಕೊಂಡು ಹೋಗುತ್ತಾನೆ (ಹಳ್ಳಿಚಿ. ೩೯) : ಅವರಿಗೆ ಪ್ರತಿ ಮನೆಯಲ್ಲೂ ವರ್ಷಕ್ಕೆ ಒಂದು ಗೊತ್ತಾದ ಪ್ರಮಾಣದಲ್ಲಿ ಮಿರಾಸೆ ಕೊಡುತ್ತಿದ್ದರು (ಕಳಹು. ೯೩). **ಮಿರಾಸೆ** : ೨. ಅವನ ಮಕ್ಕಳು . . . ತಳವಾರಿಕೆ ಹಾಗೂ ನೀರಗಂಟಿತನವನ್ನು ನೋಡಿಕೊಂಡು, ಧಾನ್ಯದ ಮಿರಾಸೆಯನ್ನು ತೆಗೆದುಕೊಂಡು ನೆಮ್ಮದಿಯಿಂದ ಬದುಕುತ್ತಿದ್ದರು (ಊರುಕ. ೭೮).

[ ← ಅರ. ಮಿರಾಸ್ ; ಹಿಂ. ಮಿರಾಸ್, ಮಿರಾಸ್ = ಪಿತ್ರಾರ್ಜಿತ ಆಸ್ತಿ ; ಮರಾ. ಮಿರಾಸ್ = ವಂಶಪಾರಂಪರ್ಯವಾದ ಸಂಪತ್ತು]

**ಮಿರಾಸಿದಾರ**, ಮಿರಾಸದಾರ (ನಾ)· ಸಾಗುವಳಿದಾರರಿಂದ ಮಿರಾಸಿಯನ್ನು ಪಡೆಯುವ ಹಕ್ಕನ್ನು ಹೊಂದಿದವನು : (೯)· **ಮಿರಾಸದಾರ :** ಒಂದು ಪ್ರಾಂತದ ಆಡಳಿತಗಳೆಲ್ಲವೂ ದೇಶಾಧಿಕಾರಿಯಾದ ದೇಶಮುಖ . . . ಮಿರಾಸದಾರ, ಜಮೀನ್‌ದಾರ ಎಂಬೀ ಅಧಿಕಾರಿಗಳ ಅಧೀನವಾಗಿದ್ದುವು (ಠಕ್ರು. ೦೩೬)·

[ ← ಪಾರ. ಮೀರಾಸೀದಾರ್ : ಮರಾ. ಮಿರಾಸ್ದಾರ್ ]

**ಮಿರಾಸು** 'ಮಿರಾಸಿ' ನೋ·

**ಮಿರಾಸೆ** 'ಮಿರಾಸಿ' ನೋ·

**ಮಿರಿ** (ನಾ)· ಕಾಳುಮೆಣಸು ; ಕರಿಮೆಣಸು : ಪಿಪ್ಪಲಿ ಮಿರಿ(ೞ)ನಾಗರಂ ಬೞದೆನಿಪ್ಪ ಪುನರ್ನವಿಯೆಂಬಿವೆಲ್ಲವುಂ ಜಲದೊಳ್ ಕೂಡಿಕೊಂಡರೆವುದಂ ಕುಡಿಸಲ್ . . . ಪೆರ್ಗಣಂಗಳ ವಿಷಂಗಳುಮಂ ಕಳೆಗುಂ (ಖಮಿತ. ೦೨-೯).

[ದೇ.॥ ತಮಿ. ಮಿರಿಯಮ್ ; ತೆಲು. ಮಿರಿಯಮು, ಮಿರೆಮು./ ಪ್ರಾ. ಮಿರಿಅ./ಮರಾ. ಮಿರೀ ; ಗುಜ. ಮರೀ./ಸಂ. ಮರಿಚ]

**ಮಿರಿದೆ** (ನಾ)· ಒಂದು ಸ್ಥಳದ ಹೆಸರು ; P ಇದು ಈಗಿನ ಮೈಸೂರು ಜಿಲ್ಲೆಯ ಕೃಷ್ಣರಾಜನಗರದ ಮಿರ್ಲೆ ಗ್ರಾಮ : ಮಿರಿದೆಯ ಉಮ್ಮಾದಗಾಮುಣ್ಡರುಂ . . . ತೆನನ್ದಾಕರುಂ ಕೊಳನೆಲ್ಲೂರ ಸಾಲತ್ತರುಂ ವಾರದರುಂ ಎನೆವ್ವರುಂ ನರಸಾಕ್ಷಿ (ಎಕ· V (R), ಕೃನ. ೦೦೩-೬೯ ; ಕಾ. 890)· [P ಇದು 'ಮಿರಿಲೆ' ಎಂಬುದರ ಅಪಲಿಖಿತ]

**ಮಿರಿಮಿರಿ** 'ಮಿಱಿಮಿಱಿ' ನೋ.

**ಮಿರಿಳೆ**, ಮುರಳಿ$_2$ (ನಾ)· ಹೊಲ, ಗದ್ದೆ ಹಾಗೂ ನದೀತೀರದಲ್ಲಿ ಬೆಳೆಯುವ ಒಂದು ಬಗೆಯ ಹುಲ್ಲು ಮತ್ತು ತಿನ್ನಬಹುದಾದ ಅದರ ಬೀಜ : ಕೀಳುವರ ಕಾವಾಗಿ ಕೊಡಲಿಗೆ ಎಳೆಗೆಯ ತನ್ನಬಿಳಕುಲ ಜಾಲಕಂ ಕಡುಪ್ಪುತ್ತ್ಕುವಾದಂತಸುರಸಂತತಿಗೆ ಮೊಳಸ್ಸೆರುತಿ ವ್ಯತ್ಕ್ಯವಾದನು ಹೇಳಲಿನ್ನೇನರಸ ದಿಕ್ಕಟಪಾಲಕರೊಡವೆರೆದು ಮಿರಿಳೆಯ ಬೀಜ ದಂದವಲಿ (ಕಂಂಕಾ. ೩೭-೨೭). **ಮುರಳಿ$_2$ :** ಎಳ್ಳಂತು ಬಿಸಿಲಿಗೆ ಒಣಗುತ್ತದೆ, ನೀನು ಯಾಕೆ ಒಣಗುತ್ತೀ ಮುರಳೀಬೀಜವೇ ? (ಗಾದೆ) ; ಎಳ್ಳೊಣಗಿದರೆ ಎಣ್ಣೆ ಬರುತ್ತದೆ, ನೀನು ಯಾಕೆ ಒಣಗುತ್ತೀ ಮುರಳೀ ಬೀಜವೇ ? (ಗಾದೆ). [ ← ಮರಾ. ಮುರಲೀ ]

**ಮಿರುಗಿಸು** 'ಮಿಱುಗಿಸು' ನೋ·

**ಮಿರುಗು$_1$** 'ಮಿಱುಗು$_1$' ನೋ.

**ಮಿರುಗು$_2$** 'ಮಿಱುಗು$_2$' ನೋ.

**ಮಿರುಗುಕೊಡು** (ಕ್ರಿ). ಹೊಳಪನ್ನು ಕೊಡು ; ಮೆರುಗು ನೀಡು : ಚಂದ್ರಿಕೆಯಲ್ಲಿ ಆ ಬಣ್ಣಕ್ಕೆ ಮಿರುಗುಕೊಟ್ಟಂತಾಗಿತ್ತು (ಬಾಡಿಲ. ೦೦೩).

[ಮಿರುಗು$_2$ (< ಮಿಱುಗು$_2$) + ಕೊಡು$_1$]

**ಮಿರುಗುಟ್ಟು** (ಕ್ರಿ). ಹೊಳೆ ; ಪ್ರಕಾಶಿಸು : ಅಲ್ಲಿ ಮಿರುಗುಟ್ಟುತ್ತ ಬಿದ್ದಿದ್ದ ಒಂದು ದುಂಡುಕಲ್ಲನ್ನು ಲಕ್ಷ್ಮಿಯ ಕೈಯಲ್ಲಿಟ್ಟು (ಬಂಕ. ೦೩೨).

[ < ಮಿರುಗು$_2$ + ಕುಟ್ಟು$_1$ ]

**ಮಿರುಗುಹುಳ** (ನಾ)· ಮಿಂಚಿನಂತೆ ಹೊಳೆಯುವ ಒಂದು ಬಗೆಯ ಹುಳು ; ಮಿಂಚುಹುಳು ; ಮಿಣುಕುಹುಳು : ತರಣಿಯಂಬರ ಬೆಳಗುವಂದದಿ ಮಿರುಗುಹುಳ ಬೆಳಗುವವೆ (ತಂಬೂ. ೦೬೯-೦೨).

[ ಮಿರುಗು$_1$ (< ಮಿಱುಗು$_1$) + ಹುಳ (< ಪುೞು) ]

**ಮಿರುತಾರಗೆ** (ನಾ). ಹೊಳೆಯುವ ನಕ್ಷತ್ರ : ಗೋಪುರದ ತುದಿಯಲ್ಲಿ ಬಾನನೆತ್ತುತ ನಿಂತು ಇರುಳನೊಳು ಮಿರುತಾರಗೆಯ ಮಾಲೆಗೊಳುತ (ಮಿಲದೀ. ೦೨-೭). [< ಮಿರುಗು$_1$ + ತಾರಗೆ]

**ಮಿರುವರಿಕೆ** (ನಾ)· "ಮಿರ್ರನೆ ಓಡುಪಿಕೆ" (ಗಿೞಂ. ೦೩೨ ಟಿಪ್ಪಣಿ) : ನಲಿನಿಯ ನನೆಮುನಿಸಿನ, ಕೋಗಿಲೆಯ ಕೊರಳ ಕನಸಿನ, ಮುಗಿಲಿನ ಮಿರುವರಿಕೆಯು ಸಲ್ಲುತಿದೆ ನೋಡ ಹರಕೆಯು ! (ಗಿೞಂ. ೩೬-೦೯).

[ಮಿರು$_?$ + ಪರಿಕೆ$_1$]

**ಮಿರ್ಜಾಯಿ** (ನಾ). ಉದ್ದವಾದ ತೋಳುಗಳುಳ್ಳ ಒಂದು ಬಗೆಯ ಅಂಗಿ ; ಕುಡತಾ : ಶ್ರೀಅರವಿಂದರು . . . ಭಾರತದೇಶದ ಗಿರಣಿಯ ಉರುಟುಬಟ್ಟೆಯ ಸಾಧಾರಣ 'ಮಿರ್ಜಾಯಿ'ಯನ್ನು (ಕುಡತಾ) ಧರಿಸುತ್ತಿದ್ದರು (ಮಹಾಯೋ· ೭೬).

[ ← ಪಾರ. ಮಿರಜಾ, ಮಿರಜಾಈ ; ಹಿಂ. ಮಿರಜಈ, ಮಿರಜಾತೀ ; ಮರಾ. ಮಿರಜಾಈ ]

**ಮಿರ್ತು** 'ಮಿಟ್ಟು' ನೋ.

**ಮಿರ್ಲೆ** (ನಾ)· ಒಂದು ಬಗೆಯ ನೀರುಹಕ್ಕಿ : (೯). [ ? ]

**ಮಿಲನ**, ಮಿಳನ (ನಾ). ೧· ಸೇರುವುದು ; ಸೇರಿಕೆ ; ಸಂಯೋಗ. ೨· ಒಬ್ಬರನ್ನೊಬ್ಬರು ಸಂಧಿಸುವಿಕೆ : ಸಮಾಗಮ : ಮೊದಲ ಮೋಹದ ಬಲೆಯ ನೆಯ್ದಡೆಯ ತಿಳಿಗೊಳಂ, ಮೊದಲ ಮಿಲನದ ಮತ್ತೆ ವಿರಹದ ಶಿವಾಲಯಂ ! (ಶ್ರೀರಾಂಗ. ೬೨-೦೬೯೭) ; ಮಿಲನದ ತರುವಾಯ ದಂಪತಿಗಳಲ್ಲಿ ವಿಯೋಗವುಂಟಾದರೆ, ಅವರಲ್ಲುಂಟಾಗುವ ವಿರಹದಲ್ಲಿ ವೇದನೆಯ ಶ್ರುತಿಯಿರುವುದು (ಕಾಹಿಕ· ೯೩)· **ಮಿಳನ :** ೧. ಇಬ್ಬರ ಹೃದಯಗಳ ಮಿಳನವಾಗುವುದು (ರ್‍ಕ್ಕಾಲೋ. XX. ೩೬೩೪) ; ವೈದಿಕ ಯಾಗ ಮತ್ತು ಕಾಡಿನಲ್ಲಿನ ಭಗವದಾರಾಧನೆ — ಇವೆರಡೂ ಅಂಶಗಳ ಮಿಳನವು ಉಪನಿಷತ್ತುಗಳಲ್ಲಿ ನಮಗೆ ಗೋಚರವಾಗುತ್ತದೆ (ಕಕ್ಕಾ. ೨೦).

[ಸಂ.]

**ಮಿಲಾಖತು** 'ಮುಲಾಖತ್ತು' ನೋ.

**ಮಿಲಾಖತ್ತು** 'ಮುಲಾಖತ್ತು' ನೋ.

**ಮಿಲಾಯಿಸು**(ಕ್ರಿ). ೧. ಸೇರಿಸು ; ಕೂಡಿಸು : ಎಲ್ಲರನ್ನೂ ಒಟ್ಟಿಗೆ ಮಿಲಾಯಿಷಿ ಅವರೆಲ್ಲರ ತಲೆಗೆ ಒಂದೇ ಹೆಸರಿನ ಚೀಟಿಯನ್ನಂಟಿಸುವುದು ತರವಲ್ಲ (ಕಾಹಿಕ್ರ. VI, ಕೃಷ್ಣಾಪಣ). ೨. ಬೆರಸು ; ಮಿಶ್ರಮಾಡು : ಕೊಳವಳಕೆ ಬೀಜ ಒಂದು ಸೇರು ಮೆಂತ್ಯ ಒಂದು ಸೇರು ಉದ್ದಿನ ಹುಟ್ಟು ಒಂದು ಸೇರು ಇವನ್ನು ಮಿಲಾಯಿಸಿ ನೆರಳಲ್ಲಿ ಒಣಗಿಸಿ . . . ಅರವತ್ತು ದಿನ ತೆಗೆದುಕೊಂಡರೆ ವೀರ್ಯವೃದ್ಧಿಯಹುದು (ಕಾಮಶಾ· ೨೬೮). ೩. **ಭೇಟಿ ಮಾಡಿಸು ;** ಪರಿಚಯ ಮಾಡಿಸು : (೯). ೪. ತಿರುಗಿ ಬೀಳು; ದಬಾಯಿಸು : ಪುರೋಹಿತಶಾಸ್ತ್ರಿಗಳಿಗೇ ಮಿಲಾಯಿಸುತ್ತಿರುವ ಮುತ್ತೈದೆಯರನ್ನು ಚಿತ್ರಿಸುವುದಕ್ಕಂತೂ ಆ ಆದಿಶೇಷನೇ ಬರಬೇಕು (ಸುವಸಂ· ೯೮); ಅಮೀರ ಸಾಬಿಯ ಕೈಯಲ್ಲಿದ್ದ ದೊಣ್ಣೆಗೆ ಭೀಷಣವಾಗಿ ಮಿಲಾಯಿಸಿ ಕೆಣಕಿದ ಸಿಂಹದಂತೆ ನಿಂತಿದ್ದಾನೆ· ಕುಳ್ಳ ವೆಂಕಟಣ್ಣ ! (ಮುಗವಾ· ೦೯). ೫. **ಹೊಡೆ:** ಬಡಿ : ಇಬ್ಬರು ಪ್ರತಿಸ್ಪರ್ಧಿಗಳಿಗೆ ಕೈಕೈ ಮಿಲಾಯಿಸುವ ಹೊತ್ತು ಬಂತು (ಏದ್ಕಾರ· ೯೬) ; ಅವರು . . . ಕೈಕೈ ಮಿಲಾಯಿಸುವ ಕಾರಬಾರ ನಡೆಸಿರುತ್ತಾರೆ (ಶಿಬಂರ· II, ೨೬೦)·

[ಮಿಲ್$_0$ (P ← ಹಿಂ. ಮಿಲನಾ ; ಮರಾ. ಮಿಳಣೇ. ಮಿಳವಣೇ) + – ಇಸು$_3$./ತುಳು. ಮಿಲಾಯಿಸು, ಮಿಲಾವು, ಮಿಲಾಸು]

**ಮಿಲಾವ್**, ಮಿಲಾವೆ (ನಾ)· ಸೇರಿಸುವುದು; ಕೂಡಿಸುವುದು : ಆ ಭೂಮಿಯನ್ನು ನಂಬರಿನೊಳಕ್ಕೆ ಮಿಲಾವ್ ಮಾಡಿಕೊಳ್ಳಲೂ ಬಹುದು (ಭೂಕಂಂ. ೩೭)· **ಮಿಲಾವೆ :** ಕೋಟೆವಳಗಣ ಮುಂದಿಯೆಲ್ಲಾ ಹೊರಕೆಗೆದು ಪರಸ್ತಳದ ಮಂದಿ ಕೋಟೆವಳಗೆ ಕಾಯಾಮಾದ ಸ್ತಳದ ಮಂದಿ ಜ್ಯತಗೆ ನಿಲಿಸಿ ಪರಸ್ತಳದ ಮಂದಿ ಮಿಲಾವೆ ಮಾಡಿ ಪೇಟೆಕಾವಲಲ್ಲಿಯಿಟ್ಟು (ಕೈಫಿಯ· ೯೭). [← ಹಿಂ. ಮಿಲಾವ್; ಮರಾ. ಮಿಳಾವಾ]

**ಮಿಲಾವಣೆ** (ನಾ). ೧. ಸೇರುವುದು; ಕೂಡುವುದು : (೯). ೨. **ಹೊಡೆದಾಟ ;** ಬಡಿದಾಟ : ಇನ್ನೇನು ರಣಕಹಳೆ ಊದುವುದೊಂದು ಉಳಿದಿತ್ತು

ಕೈಕೈ ಮಿಲಾವಣೆಯೊಗುವುದಕ್ಕೆ (ಸುವಸಂ. ೫೦). [ಮಿಲಾವ್ + —ಅಣೆ. / ಹಿಂ. ಮಿಲವಾನಾ, ಮಿಲಾನ; ಮರಾ. ಮಿಳವಣೇ]

**ಮಿಲಾವೆ** 'ಮಿಲಾವ್' ನೋ.

**ಮಿಲಿಟರಿ,** ಮಿಲಿಟೆರಿ (ಗು). ೧. ಸೈನ್ಯಕ್ಕೆ ಸಂಬಂಧಿಸಿದ; ಸೇನೆಯ : ದಂಡಿನ, ಮಿಲಿಟರಿ (Military. ಶಬ್ದಾ. ೫೩). (ನಾ). ೨. ಸೈನ್ಯ; ದಂಡು : ದೇವಾಲಯವು ಮಿಲಿಟರಿಯವರ ವಶದಲ್ಲಿದೆ (ಪ್ಯಾಪಾಸ್ತ. ೦೨೯). **ಮಿಲಿಟೆರಿ :** ೧. ಮೈಸೂರು ಮಿಲಿಟೆರಿ ಫೌಜಿಗೆ ಸೇರಿರುವಂಥವರ ಸಂಬಳ ಮತ್ತು ಅಲೋವೆನ್ಸ್‌ಗಳು (ಗ್ರಾಪಾಳ. ೩೩). ೨. ಆ ದಾರಿಯತ್ತ ಬ್ರಿಟಿಶರ ಮೂರುಮಿಲಿಯ ಮಿಲಿಟೆರಿಯೆಲ್ಲ ಕಣ್ಣಲ್ಲಿ ಕಣ್ಣಿಟ್ಟು ಸಹಾಯವನ್ನು ನಿರೀಕ್ಷಿಸುತ್ತಿದ್ದಿತು (ಕೃಜಪ. ೬೦). [← ಇಂ. Military]

**ಮಿಲಿಟೆರಿ** 'ಮಿಲಿಟರಿ' ನೋ.

**ಮಿಲಿತ,** ಮಿಳಿತ (ಗು). ೧. ಸೇರಿದ; ಕೂಡಿದ : ಹೃದಯ ಹೃದಯ ಮಿಲಿತೈಕ್ಯದಂಥದಿದೆ ಒಂದೆ ಹೃದಯಲೋಕ (ಅರಳು. ೦೬೩–೪). ೨. ಜೊತೆಗೂಡಿದ ; ಹೊಂದಿಕೆಯಾದ. ೩. ಬೆರಸಿದ ; ಮಿಶ್ರಣ ಮಾಡಿದ : ಅವನ ತಲೆಯ ಮೇಲೆ ಮೋಜಿಯೊಳೊಡಲೊಳಂತುದ್ದೂಳಿಸುತ ಜಲಮಿಲಿ [ಶಾಣಂ. ೪] ತಭಸಿತವನು (ಬಸವು. ೩೮–೦೪). ೪. ಭೆಟ್ಟಿಯಾದ; ಕಂಡ. **ಮಿಳಿತ :** ೧. ಮಿಳಿತ ಬಂಧಾಳಿ ಭದ್ರಸುಮಂಪೂರ್ತ ಮದಾಯ್ತೆನಲ್ (ಕೃಕೃವಿ. ೦೯–೩೮) ; ರತ್ನಾವಳಿಯ ಮಕುಟದ ಮಿಳಿತ ರಶ್ಮಿಗಳ ಅಷ್ಟದಿಗಧೀಶ್ವರರು ಭಾವಿಸಲು . . . ಅಷ್ಟಮೂರ್ತಿಪ್ರಿಯಸುಮ್ಯದೋಜಾದನು ಮುನಿವರಗೆ (ಶಿಭಾಗ. ೬–೯–೨೮). (ನಾ). ೫. ಸೇರುವಿಕೆ; ಸಂಯೋಗ: ತಿಳಿಯಲಿದು ಸಪಭಾಜನಸ್ಥಲಂ ಭಕ್ತಾದಿ ಮಿಳಿತಮೈಕ್ಯಾಂತ ಷಟ್‌ಸ್ಥಲಗಳಿವು (ಮಹಾಪಿ. ೦೦–೯೯). [ಸಂ.]

**ಮಿಲುಕಾಟ** (ನಾ). ಒದ್ದಾಟ; ಚಡಪಡಿಕೆ : ಬಂಡೆಯ ಮೇಲಿನ ಜೀವಿಯ ಮಿಲುಕಾಟ ಮಿತಿ ಮೀರಿತು (ಎಮುಳ. ೬೦).

[ಮಿಲುಕು (< ಮಿಲುಗು) + ಆಟ]

**ಮಿಲುಕಾಡು** 'ಮಿಲುಗಾಡು' ನೋ.

**ಮಿಲುಕು** 'ಮಿಲುಗು' ನೋ.

**ಮಿಲುಗಾಡು,** ಮಿಲುಕಾಡು (ಕ್ರಿ). ೧. ಅಲುಗಾಡು ; ಅಲ್ಲಾಡು : ನಾಯಕ ಅವರ ಮುಖವನ್ನೇ ನೋಡಿ ಮೈಸವರುತ್ತಾನೆ. ಮಗು ಮಿಲುಗಾಡುತ್ತದೆ (ಪತರಾ. I. ೩೬೬); ಬಂಗಾರಿಗೆ ಮೈ ನಡುಕ ಬಂತು. ಮಗು ಮಿಲುಗಾಡಿತು (ಬಳಕೀ. ೬). **ಮಿಲುಕಾಡು :** ೨. ಒದ್ದಾಡು ; ಚಡಪಡಿಸು : ಮಳೆಯ ಪಂಜರಕ್ಕೆ ಸಿಲುಕಿ ಮಿಲುಕಾಡುವ ಜೀವಕ್ಕೆ ಕೇಳಿತೊ ಇಲ್ಲವೊ ! (ಎಮುಳ. ೫೪). [ಮಿಲುಗು + ಆಡು]

**ಮಿಲುಗು,**ಮಿಲುಕು (ಕ್ರಿ). ೧. (ನೀರು ಹೆಚ್ಚಾಗಿ ಅನ್ನವು ಗಂಜಿಯೊಡನೆ) ಸೇರು; ಬೇರೆ : ಹೊತ್ತುವುದು . . . ಮಿಲುಗಿ [ಶಾಣಂ. ಗಿಲಿ, ಲಿಗಿ, ರಿಗಿ]ಹುದು ಪೊಡೆದಿಹುದು ನಸುಗಂಜಿ ಸುತ್ತಿಹುದು ಪೊಣಗಿಹುದು ದೋಷವಶಸಕ್ಕೆಂಟುತಜಿನವ್ಪದು (ಸೂಶಶಾ. ೩–೦). ೨. ಕೂಡಿಸು; ಬೆರಸು : ತೊಳೆದ ಗೋಧುವೆಗೆ ಜೀರಿಗೆಯರಡ ಪೊರೆಯೊತ್ತಿ ಕಳಿಯರ್ಧ ನೀರರ್ಧವಾದಸಜನೆತ್ತಿಯದಜಿಕೊಳಗಿಕ್ಕಿ ಮಿಲುಗಿ ನೀರಿಂಗುವಂದದಿನಟ್ಟು ಕೊಂಡಿಳುಹಿ (ಸೂಶಶಾ. ೩–೪೦). ೩. ಅಲುಗು; ಅಲ್ಲಾಡು : 'ಮಿಲುಗಾಡು' ಪರಾ. **ಮಿಲುಕು :** ೪. ಒದ್ದಾಡು; ಚಡಪಡಿಸು; ಮಿಡುಕು; 'ಮಿಲುಕಾಟ', 'ಮಿಲುಕಾಡು' ಪರಾ.

[ದೇಶ್ಯ. ತೆಲು. ಮೆಲಗು, ಮೆಲಯು, ಮೆಲಿಯು]

**ಮಿಶಿನ್ನು** 'ಮಿಷನ್ನು' ನೋ.

**ಮಿಶ್ರ** (ಗು). ೧. ಸೇರಿಸಿದ; ಬೆರಸಿದ. ೨. ಕೂಡಿಕೊಂಡ; ಬೆರೆತ : ಆ ಗಂಧಸ್ಮಪನೋದಿಕಂ ಮೇರುಮಹೀಧರಜಾಂಬೂನದನಿತಂಬಂಬಿದಿದಿದು ಕಾಳಾಗರುರುಮಿಶ್ರಪಯಸ್ಸೋತಸ್ಸಮುದಿತಂ ಸೌವರ್ಣಸವನೆಯ್ದಿ (ಶಾಂತಿಪು. ೦೦–೩೨ ವ); ಯತ್ನಮಿಶ್ರ ಧೃತ್ವಕ್ಕೆ ದೃಷ್ಟಂ (ಶಮುದ. ೨೬೬). ೩. ನಾನಾ ಬಗೆಯ; ವಿವಿಧ ರೀತಿಯ : ಅವನ ಹೃದಯ ಮಿಶ್ರ ಭಾವಗಳ ತುಮುಲರಂಗವಾಗಿತ್ತು (ಪುಸರು. ೦೬೩). (ನಾ). ೪. ಸೇರಿಕೆ; ಮಿಶ್ರಣ : ಗುರುಲಘುಮಿಶ್ರಂ ಮೂಜಕ್ಕರದಿಂ ಗಣಮಿಡು ಲಘುಂಗಿ (ಛಂದೋಂಬು. ೦–೩೭). ೫. ಗೌರವಾನ್ವಿತವ್ಯಕ್ತಿಗಳನ್ನು ಕುರಿತು ಹೇಳುವಾಗ ಬಳಸುವ ಒಂದು ಪದ. ೬. ಒಂದು ಬಗೆಯ ಮೂಲಂಗಿ. ೭. [ಸಂಗೀತ] ವಿಳಂಬಲಘುಗಳ ಕಾಲದ ಮಿತಿಯುಳ್ಳ ಒಂದು ಬಗೆಯ ತಾಳ : ಜಾತಿ . . . ಇದು ಐದು ವಿಧವಾಗಿದೆ. ಅವು ಕ್ರಮವಾಗಿ (೧) ತ್ರಿಶ್ರ (೨) ಚತುರಶ್ರ (೩) ಖಂಡ (೪) ಮಿಶ್ರ (೫) ಸಂಕೀರ್ಣ. ಈ ಐದು ಜಾತಿಗಳೂ ಲಘುವಿಗೆ ಮಾತ್ರ ಸಲ್ಲುತ್ತವೆ . . . ತ್ರಿಶ್ರ ಚತುರಶ್ರಗಳ ಕೂಡಿಕೆಯಿಂದ ಮಿಶ್ರವೂ . . . ಹುಟ್ಟಿವೆ (ಸಂಗೀತಸಂ. ೫೬) : ವರ್ಣತ್ರಾಳವು ತ್ರ್ಯಶ್ರ, ಮಿಶ್ರ, ಚತುರಶ್ರವೆಂದು ಮೂರು ರೀತಿ (ಕಶುಪ್ರ. ೯೬). ೮. ನಾಲ್ಕು ಬಗೆಯ ಧ್ವನಿಭೇದಗಳಲ್ಲಿ ಒಂದು : ದಿವಿಜನಾಯಕಗಾಯಕಂ . . . ಖಾವುಳ ಜೊಂಬಳ ನಾರಾಟ ಮಿಶ್ರವೆಂಬ ನಾಲ್ಕುಂ ಧ್ವನಿಯ ಭೇದಮನಱಿದು . . . ಪಾಡುತ್ತಿರೆಯುಂ (ಶಾಂತೀಶ್ವ. ೦೬–೭೭ ವ); ತಾಳಲಯ ಜೊಂಬಾಳ ಮಿಶ್ರದ ಮೇಳವದು ತಾರಾಗ (ಕುವ್ಯಾಸ. ೬೦೩. ೦–೯೭); ಆ ರಾಗಂಗಳಂ ಪಾಡುವಲ್ಲಿ . . . ಕಾವುಳ ಬಬ್ಬೋಳ ನಾರಾಟ ಮಿಶ್ರವೆಂಬ ಚತುರ್ವಿಧ ಸುಸ್ವರಗಳೆಂದುರುಳಿಸಿ ಕರ್ಣರಸಾಯನವಾಗಿ ಪಾಡಿ (ವಿವೇಕ. ೨೭೬). ೯. ಸ್ವರ. ಪಾಟ. ಬಂಧ. ಪದ, ತೇನ, ಬಿರುದ, ಚಿತ್ರ, ಮತ್ತು ಮಿಶ್ರಗಳೆಂಬ ಎಂಟು ಬಗೆಯ ಕರಣಗಳಲ್ಲಿ ಒಂದು : ರಾಸವು ತಾಳ, ದ್ರುತವೆಂಬ ಲಯ–ಇವುಗಳಿಂದ ಕೂಡಿರುವುದು ಕರಣದ ಸಾಮಾನ್ಯಲಕ್ಷಣವೆಂದು ತಿಳಿಯಬೇಕು. ಅದು ಎಂಟು ವಿಧವೆಂದು ಸಮ್ಮತಿಸಿದೆ. ಸ್ವರ, ಪಾಟ, ಬಂಧ, ಪದ. ತೇನ, ಬಿರುದ, ಚಿತ್ರ, ಮಿಶ್ರ (ಕಶುಪ್ರ. ೯೩). ೧೦. [ಕಾವ್ಯಮೀ] ರೂಪಕಗಳಲ್ಲಿನ ಮೂರು ಬಗೆಯ ಕಥಾಂಶಗಳಲ್ಲಿ ಒಂದು; ಪ್ರಸಿದ್ಧವಾದ ಕಥಾವಸ್ತುವಿನಲ್ಲಿ ಬದಲಾವಣೆಯನ್ನು ಮಾಡಿರುವಂಥದು : 'ಮಿಶ್ರ' ಎಂದರೆ ಪ್ರಸಿದ್ಧವಾದ ಕಥೆಯಲ್ಲಿ ಬದಲಾವಣೆಗಳನ್ನು ಮಾಡಿದ್ದು (ಕೈಪಿಡಿ. ೨೦೬). ೧೧. [ಗಣಿತ] ಕೂಡುವುದು : ಯುತಂ. ಯುಕ್ತಂ, ಮಿಶ್ರಂ, ಸಮ್ಮಿಶ್ರಂ . . . ಐತಂ ಇಂತಿನಿತುಂ ಕೂಡೂವಕ್ಕೆ ಹೆಸರು (ವ್ಯವಹಾ. ೦೦–೦೨ ವ). ೧೨. [ಜೈನ] ಆತ್ಮನ ಐದು ಭಾವಗಳಲ್ಲಿ ಒಂದು; ಕರ್ಮದ ಕ್ಷಯೋಪಶಮದ ಭಾವ : ಆತ್ಮನಲ್ಲಿ ಪಾರಿಣಾಮಿಕ, ಔದಯಿಕ, ಮಿಶ್ರ, ಕ್ಷಾಯಿಕ, ಔಪಶಮಿಕಗಳೆಂದು ಐದು ಭಾವಗಳುಂಟು (ಕೃಪಶ. ೨೯೬); ಬಾಕಿ ನಾಲ್ಕು ಪರಿಣಾಮಗಳು ಔಪಶಮಿಕ, ಕ್ಷಾಯಿಕ, ಮಿಶ್ರ, ಔದಯಿಕಗಳು . . . ಬಾವಿಯ ನೀರಿನ ಕಶ್ಮಲದಂತೆ ಎರಡು ವಿಧವಾಗಿಯೂ ಇರುವುದು ಮಿಶ್ರ (ಜಿಂದಶಾ. ೯೩). [ಸಂ.]

**ಮಿಶ್ರಕಾಪಿ** (ನಾ). [ಸಂಗೀತ] ಒಂದು ರಾಗದ ಹೆಸರು : ಈ ಭಾಷಾಂಗ ಕಾಪಿರಾಗಕ್ಕೆ ಹಿಂದೂಸ್ಥಾನಿಕಾಪಿ, ದೇಶ್ಯಕಾಪಿ ಮತ್ತು ಮಿಶ್ರಕಾಪಿ ಎಂಬ ಹೆಸರುಗಳೂ ಪ್ರಚಾರವಲ್ಲಿವೆ (ಸಂಗೀತ. ೫೦).

[ಸಂ. ಮಿಶ್ರಕಾಪೀ]

**ಮಿಶ್ರಕಾವ್ಯ** (ನಾ). [ಕಾವ್ಯಮೀ] ಚಂಪೂಕಾವ್ಯ, ನಾಟಕ ಮುಂತಾದುವುಗಳಂತೆ ಗದ್ಯ ಮತ್ತು ಪದ್ಯಗಳೆರಡೂ ಸೇರಿಕೊಂಡಿರುವ ಸಾಹಿತ್ಯರಚನೆ : ಗದ್ಯ ಪದ್ಯಗಳೆರಡೂ ಇರತಕ್ಕ 'ಮಿಶ್ರ' ಕಾವ್ಯವು 'ಚಂಪು' ಎನ್ನಿಸುತ್ತದೆ. ನಾಟಕಾದಿ ದೃಶ್ಯಪ್ರಬಂಧಗಳಲ್ಲಿಯೂ ಗದ್ಯಪದ್ಯಗಳೆರಡೂ ಬರುವುದರಿಂದ ಇವುಗಳನ್ನೂ ಮಿಶ್ರಕಾವ್ಯಗಳಲ್ಲಿಯೇ ಸೇರಿಸಬಹುದು (ಕೈಪಿಡಿ. ೦೮೦). [ಸಂ.]

**ಮಿಶ್ರಣ** (ನಾ). ೧. ಸೇರಿಸುವುದು; ಕೂಡಿಸುವುದು : ಈ ಮಿಶ್ರಣದ ರೀತಿ ಎಂಥದೆಂದರೆ ಇತರ ಪಾಠಗಳ ಬೆರಕೆಯಿಂದ ಗ್ರಂಥದ ಅಂತಶ್ಶುದ್ಧಿಗೆ ಒದಗುವ ಲಾಭ ಅಥವಾ ನಷ್ಟವನ್ನು ನಿರ್ಧರಿಸುವುದು ಸಾಧ್ಯವಿಲ್ಲ (ಭಾರತ. ೩೩). ೨. ಸೇರಿಸುವಿಕೆ: ಬೆರಕೆ. ೩. ಬೆರಸಿರುವುದು; ಬೆರಕೆ ಮಾಡಿದುದು : ಉಸುಕು ಸಾಕಷ್ಟು ಬಿಸಿಯಾದಾಗ ಕೇಕಿನ ಮಿಶ್ರಣವಿರುವ ಭಾಂಡೆಯನ್ನು ಉಸುಕಿನ ಮೇಲಿರಿಸುವುದು (ಅಡುಗೆ. ೩೬). ೪. ದ್ರವ ರೂಪದ ಔಷಧದ ಬೆರಕೆ : ನಾಲ್ಕು ಹೊತ್ತಿಗಾಗುವ ಮಿಶ್ರಣ ಒಂದನ್ನು ಡಾಕ್ಟರು ಮೇಜಿನ ಮೇಲಿಟ್ಟು (ಕಾವೇರಿ. ೨೦೩). [ಸಂ.]

**ಮಿಶ್ರತಳಿ** (ನಾ). ಭಿನ್ನವಂಶದ ಪ್ರಾಣಿಗಳ ಅಥವಾ ಸಸ್ಯಗಳ ಸಂಯೋಗದಿಂದ ಉತ್ಪನ್ನವಾಗುವ ಪ್ರಾಣಿ ಅಥವಾ ಸಸ್ಯ: "(ಪ್ರಾಣಿ, ಸಸ್ಯ) ಮಿಶ್ರತಳಿಯನ್ನು ಹುಟ್ಟಿಸು : ಮಿಶ್ರತಳಿಯಾಗು" (Hybridize. ಇಂಕ). [ಮಿಶ್ರ + ತಳಿ₅]

**ಮಿಶ್ರಪ್ರಕೃತಿ** (ನಾ). ನಾಲ್ಕು ಬಗೆಯ ದೇಹಸ್ಥಿತಿಗಳಲ್ಲಿ ಒಂದು; ವಾತ ಮತ್ತು ಪಿತ್ತ ಲಕ್ಷಣಗಳು ಅಥವಾ ವಾತ, ಪಿತ್ತ ಮತ್ತು ಶ್ಲೇಷ್ಮ ಲಕ್ಷಣಗಳು ಕೂಡಿಕೊಂಡಿರುವ ದೇಹಸ್ಥಿತಿ : ವಾತಪ್ರಕೃತಿ, ಪಿತ್ತ ಪ್ರಕೃತಿ, ಶ್ಲೇಷ್ಮಪ್ರಕೃತಿ, ಮಿಶ್ರಪ್ರಕೃತಿ ಎಂದು ಪ್ರಕೃತಿಯು ನಾಲ್ಕು ತೆರನಾಗಿರುವುದು . . . ವಾತಪಿತ್ತಶ್ಲೇಷ್ಮಲಕ್ಷಣವಾದರೂ ಇವುಗಳಿಂದ ಕೂಡಿಕೊಂಡಿರುವಾತನೇ ಮಿಶ್ರಪ್ರಕೃತಿಯುಳ್ಳವನೆಂದರಿವುದು (ಸಕಶ್ಯ. ೦೬). [ಸಂ.]

**ಮಿಶ್ರಪ್ರತಿ** (ನಾ). [ಗ್ರಂಥಸಂ] ಭಿನ್ನವಾದ ಹಸ್ತಪ್ರತಿಗಳ ಶಾಖೆಗಳ ಪಾಠಗಳು ಒಂದರೊಡನೊಂದು ಸೇರಿ ಉಂಟಾದ ಹಸ್ತಪ್ರತಿ : ಭಿನ್ನ ಶಾಖೆಗಳು ಹೀಗೆ ಒಂದರೊಡನೊಂದು ಸೇರುವುದಕ್ಕೆ ಪಾಠಮಿಶ್ರಣ (Crossing or intermixing) ಎಂದೂ ಮತ್ತು ಹಾಗೆ ಸೃಷ್ಟಿಯಾದ ಹಸ್ತಪ್ರತಿಗಳಿಗೆ ಮಿಶ್ರಪ್ರತಿಗಳೆಂದೂ (Misch-Codices) ಹೆಸರು (ಭಾರತ. ೩೪). [ಸಂ.]

**ಮಿಶ್ರಲಯ** (ನಾ). [ಛಂದ] ಒಟ್ಟು ಲಯಕ್ಕೆ ಹೊಂದಿಕೆಯಾಗುವಂತೆ ಬೆರಕೆಮಾಡಿದ ವಿವಿಧ ಲಯ : ಮಿಶ್ರಲಯ: ಒಟ್ಟು ಲಯಕ್ಕೆ ಹೊಂದಿಕೆಯಾಗುವಂತೆ ಬೇರೆಬೇರೆ ಲಯಗಳ ಗಣಗಳನ್ನು ಮಿಶ್ರಗೊಳಿಸಿ ಬಳಸುವ ವೈಶಿಷ್ಟ್ಯವು ಹೊಸ ಕವಿತೆಗಳಲ್ಲಿ ವಿರಳವಾಗಿಯಾದರೂ ಕಾಣುತ್ತದೆ (ಛಂದೋವಿ. ೩೦೪). [ಸಂ.]

**ಮಿಶ್ರಲೋಹ** (ನಾ). ಬೇರೆ ಬೇರೆ ಲೋಹಗಳನ್ನು ಬೆರಸಿ ತಯಾರು ಮಾಡಿದ ಲೋಹ ; ಬೆರಕೆಲೋಹ: "ಬೆರಕೆಯ ಲೋಹ; ಮಿಶ್ರ ಲೋಹ; ಚಿನ್ನ ಅಥವಾ ಬೆಳ್ಳಿಯೊಡನೆ ಕೀಳ್ತರದ ಲೋಹವನ್ನು ಬೆರಸಿ ಮಾಡಿದ ಮಿಶ್ರಲೋಹ ; ಆ ಮಿಶ್ರಣದಲ್ಲಿಯ ಕೀಳುಲೋಹ" (Alloy. ಇಂಕ); ಅಚ್ಚುಮೊಳೆಗಳ ತಯಾರಿಕೆಯಲ್ಲಿ ಕೆಲಸದ ಪರಿಮಿತಿಗೆ ತಕ್ಕಂತೆ ಮಿಶ್ರಲೋಹದೊಳಗಿನ ಲೋಹಗಳ ಶೇಕಡ ಪ್ರಮಾಣವನ್ನು ಬದಲಾಯಿಸ ಬೇಕು (ಮುದ್ರಣ. ೦೪). [ಸಂ.]

**ಮಿಶ್ರವರ್ಣ** (ನಾ). ಬೆರಕೆಯ ಬಣ್ಣ ; ಮಿಶ್ರಣ ಹೊಂದಿದ ವರ್ಣ. [ಸಂ.]

**ಮಿಶ್ರವಿವಾಹ** (ನಾ). ಬೇರೆ ಬೇರೆ ಜಾತಿಗೆ ಸೇರಿದ ಗಂಡುಹೆಣ್ಣುಗಳ ಮದುವೆ: ಅಂತರ್ಜಾತೀಯ ವಿವಾಹ : ಗಾಡಿಯಲ್ಲಿ ಮಿಶ್ರವಿವಾಹದ ಸಮಸ್ಯೆಯನ್ನು ಚರ್ಚಿಸುವ ಸುಸಂಸ್ಕೃತ ಮಹಿಳೆ (ಸಮಾಜ. ೦೬ ಜೀ೯೬)· [ಸಂ.]

**ಮಿಶ್ರವಿಷ್ಕಂಭ** (ನಾ). [ಕಾವ್ಯಮೀ] ನಾಟಕ ಅಥವಾ ದೃಶ್ಯಕಾವ್ಯಗಳಲ್ಲಿ ನಡೆದುಹೋದ ಅಥವಾ ಮುಂದೆ ನಡೆಯುವ ಕಥಾಂಶವನ್ನು ಮಧ್ಯಮ ಮತ್ತು ನೀಚಪಾತ್ರಗಳ ಸಂಭಾಷಣೆಯ ಮೂಲಕ ಸೂಚಿಸುವುದು : ವಿಷ್ಕಂಭ–ನಡೆದು ಹೋದ ಮತ್ತು ಮುಂದೆ ನಡೆಯುವ ಕಥಾಂಶಗಳನ್ನು ಮಧ್ಯಮಪಾತ್ರಗಳ ಮೂಲಕ ಸಂಕ್ಷೇಪವಾಗಿ ಸೂಚಿಸುವುದು. ಇದೇ 'ಶುದ್ಧವಿಷ್ಕಂಭ'. ಮಧ್ಯಮಪಾತ್ರಗಳೂ, ನೀಚಪಾತ್ರಗಳೂ ಸೇರಿ ಸೂಚಿಸಿದರೆ ಅದಕ್ಕೆ 'ಸಂಕೀರ್ಣವಿಷ್ಕಂಭ' ಅಥವಾ 'ಮಿಶ್ರವಿಷ್ಕಂಭ' ವೆಂದು ಹೆಸರು (ಕೃಬಿಡಿ. ೨೦೩); ಮಧ್ಯಮ ನೀಚಪಾತ್ರಗಳೆರಡೂ ಸೇರಿ ಆದರೆ 'ಮಿಶ್ರವಿಷ್ಕಂಭ'ವಾಗುತ್ತದೆ (ಸಂಪಾಟಿ. ೦೩). [ಸಂ.]

**ಮಿಶ್ರಾಲಂಕಾರ** (ನಾ). [ಕಾವ್ಯಮೀ] ಅನೇಕ ಅಲಂಕಾರಗಳ ಮಿಶ್ರಣ; ಇದರಲ್ಲಿ ಸಂಸೃಷ್ಟಿ ಮತ್ತು ಸಂಕರ ಎಂದು ಎರಡು ವಿಧಗಳಿವೆ; "ಸಂಸೃಷ್ಟಿಯಲ್ಲಿರುವ ಅಲಂಕಾರಗಳು ಒಂದರಲ್ಲಿ ಮತ್ತೊಂದು ಕಲೆಯದೆ ತಿಲತಂಡುಲಗಳಂತೆ ಇರುತ್ತವೆ. ಆದರೆ 'ಸಂಕರ'ವೆನ್ನುವುದು ಹಾಲು ನೀರುಗಳಂತೆ ಸೇರಿಹೋಗಿ ಒಂದಕ್ಕೆ ಮತ್ತೊಂದು ಉಪಜೀವಕವಾಗಿರುತ್ತದೆ" (ಕೃಬಿಡಿ. ೨೯೯) : ಅನೇಕ ಅಲಂಕಾರಗಳು ಒಂದೆಡೆಯಲ್ಲಿರುವಾಗ 'ಸಂಸೃಷ್ಟಿ'ಯೆಂದೂ 'ಸಂಕರ'ವೆಂದೂ ಮಿಶ್ರಾಲಂಕಾರ ಗಳಾಗುವುವು (ಕೃಬಿಡಿ. ೨೯೯). [ಸಂ.]

**ಮಿಶ್ರಿ**, ಮಿಸಿರಿ, ಮಿಸ್ರಿ (ನಾ). ೧. (ಈಜಿಪ್ಟ್‌ದೇಶದಲ್ಲಿ ದೊರೆಯುವ) ಒಂದು ಬಗೆಯ ಸಕ್ಕರೆ; ಕಲ್ಲುಸಕ್ಕರೆ. ೨. ಒಂದು ಬಗೆಯ ಬೇರು : (ಕ). **ಮಿಸಿರಿ** : ೨. 'ಸಾಲಾಮಿಸಿರಿ' ಹೋ. **ಮಿಸ್ರಿ** : ೨. 'ಸಾಲಾಮಿಸ್ರಿ' ಹೋ.

[←ಅರ. ಮಿಸ್ರೀ; ಹಿಂ. ಮಿಶ್ರೀ, ಮಿಸರೀ, ಮಿಸ್ರೀ; ಮರಾ. ಮಿಶ್ರೀ]

**ಮಿಶ್ರಿತ** (ಗು). ೧. ಸೇರಿದ; ಕೂಡಿದ. ೨. ಸೇರಿಸಿದ; ಕೂಡಿಸಿದ. ೩. ಗೌರವಕ್ಕೆ ತಕ್ಕ; ಗೌರವಾರ್ಹವಾದ. (ನಾ). ೪. [ಸಂಗೀತ] ಹದಿನೈದು ವಿಧವಾದ ಗಮಕಗಳಲ್ಲಿ ಒಂದು ; ಎರಡು ಅಥವಾ ಅನೇಕ ವಿಧ ಗಮಕಗಳನ್ನು ಸೇರಿಸಿ ಹಾಡುವ ಕ್ರಮ : ಮಿಶ್ರಿತ– ಎರಡು ಮೂರು ವಿಧ ಗಮಕಗಳನ್ನು ಸೇರಿಸಿ ಹಾಡುವುದು (ಸಂಗೀತಂ. ೨೬); ತಿರುಪ, ಹಾಗೆಯೇ ಸ್ಫುರಿತ, ಕಂಪಿತ, ಲೀನವೆಂಬುದು ಆಂದೋಲಿತ, ವಲಿ, ನಂತರ ತ್ರಿಭಿನ್ನ, ಕುರುಲ, ಆಹತ, ಉಲ್ಲಾಸಿತ, ಪ್ಲಾವಿತ, ಹುಂಫಿತ ಹಾಗೆಯೇ ಮುದ್ರಿತ, ನಾಮಿತ, ಮಿಶ್ರಿತ–ಹೀಗೆ ಹದಿನೈದು ಭೇದಗಳನ್ನು (ಗಮಕದಲ್ಲಿ) ವಿಧಿಸಿದೆ (ಚತುಶ್ರ. ೩೦). ೫. ನಾಲ್ಕು ಬಗೆಯ ಧ್ವನಿ ಭೇದಗಳಲ್ಲಿ ಒಂದು : ಕಾವುಳ ಬೊಂಬಾಳ ನಾರಾಟ ಮಿಶ್ರಿತವೆಂಬ ಚತುರ್ವಿಧಸ್ವರಂಗಳಂ ಪರುಠವಿಸಿ (ವಿವೇಕ. ೦೯೯); ಮೂಜು ಮೂಜು ಸ್ತ್ರೀರಾಗಂಗಳಿಂದಭ್ಯಾಸಂಗೆಯ್ದು ಮತ್ತಮಾ ರಾಗಂಗಳಲ್ಲಿ . . . ಕಾವುಳ ಬೊಂಬಾಳ ನಾರಾಟ ಮಿಶ್ರಿತವೆಂಬ ಚತುರ್ವಿಧ ಸುಸ್ವರಂಗಳಂ ಪರುಠವಿಸಿ (ಭೈರವ. ೩-೩ ವ). ೬. [ಜೈನ] ಒಂದು ನರಕದ ಹೆಸರು : ಧೂಮ ಪ್ರಭೆಯೊಳ್ ತಮಕಾ . . . ಮಿಶ್ರಿತಾಭಿಧಾನೇಂದ್ರಕಪಂಚಕ ತತ್ಸಂಬಂಧಿ ಶ್ರೇಢೀಬದ್ಧಪ್ರಕೀರ್ಣಕವಿಕಲ್ಪದಿಂ ತ್ರಿಲಕ್ಷಬಿಲಂಗಳಪ್ಪುವು (ತತ್ತ್ವಸೂ. ೦೨೦). [ಸಂ.]

**ಮಿಷ** (ನಾ). ೧. ದ್ವೇಷ ; ಹಗೆತನ ; ವೈರ. ೨. ಮೋಸ; ಕಪಟ : "ಕೈತವಂ, ಕಪಟಂ . . . ಮಿಷಂ, ನಿಭಂ, ನಿರ್ದಿಷ್ಟಂ, ವ್ಯಪದೇಶಂ– ಈ ೧೦ ನೆವಂ" (ಹಲಾಯುಧ. ೦೦೬-೨೫). ೩. ನೆಪ ; ನೆವ ; ವ್ಯಾಜ : ಗೋಪಕದಂಬಕಮಿಂದು . . . ಕಾರ್ಮುಕಪೂಜೆಗೆ ಬರ್ಪುದೆಂದು ತನ್ನಿಷದೊಳೆ ಚೆಚ್ಚರಂ ರಥಮನೇಱಿಸಿ ತರ್ಪುದು ರಾಮಕೃಷ್ಣರಂ (ಜಗಂ. ೩-೬೪); ಮೊರೆವಳಿಯ ರವಮಿಷದಿಂದರವಿಂದಿನಿ ವಾಡೆ ಮುಚ್ಚಿ ಮುತ್ತಿನ ಸರವಂ ಸರಸಿ ತೆರೆಗೈಯೊಳೀವಂತಿರೆ ಜಲಕಣಮಾಲೆ ಮೇಲದೇಂ ರಂಜಿಸಿತೋ (ರಾಜಶೇ. ೨-೬೭); ಸುಖದ ಮಿಷವು ದುಃಖ ವಿಷವು ಓಗ್ಗ ಪ್ರಾಣಪೂರಣಾ ! (ಮೂರ್ತಿಪೂ. ೨೮-೭). [ಸಂ.]

**ಮಿಷನ್** 'ಮಿಷನ್ನು' ನೋ.

**ಮಿಷನ್ನು**, ಮಿಶಿನ್ನು, ಮಿಷನ್, ಮೆಷಿನ್ನು (ನಾ). (ವಾಹನಗಳನ್ನು ಓಡಿಸುವುದು, ಧಾನ್ಯವನ್ನು ಹಿಟ್ಟು ಮಾಡುವುದು, ಮುದ್ರಣ

ಕಾರ್ಯವನ್ನು ಮಾಡುವುದು. ಬಟ್ಟೆಯನ್ನು ಹೊಲಿಯು ವುದೇ ಮುಂತಾದ ಅನೇಕ ವಿಧವಾದ ಕೆಲಸಗಳಿಗೆ ಬಳಸುವ) ಯಾಂತ್ರಿಕಶಕ್ತಿಯನ್ನು ನಿಯೋಜಿಸಲಾಗಿರುವ ಸಲಕರಣೆ; ಯಂತ್ರ: ನನಗೊಂದು ಬಟ್ಟೆ ಹೊಲಿಯುವ ಮಿಷನ್ನು ಬೇಕು (ರೂ೩). **ಮಿಶಿನ್ನು:** ಗಿರಾಕಿಯು ಮೇಲೆ ಭಾರ ಹಾಕಿ ಮಿಶಿನ್ನು ಓಡಿಸುವುದು . . . ಈ ಮೊದಲಾದ ಪ್ರಯೋಗಗಳು ಸಾಮಾನ್ಯವಾಗಿರುತ್ತವೆ (ದೇಶಪ್ರ. ೬೦). **ಮಿಷನ್:** ಮಿಷನ್ ಅಕ್ಕಿಯ ಅನ್ನಕ್ಕಿಂತ ಕೊಟ್ಟಣದ ಅಕ್ಕಿಯ ಅನ್ನದಲ್ಲಿ ಸಾರ ಹೆಚ್ಚು (ಖರ್ಕಪು. ೦೭೩). **ಮೆಷಿನ್ನು :** ಆ ಮೆಷಿನ್ನಿನ ಅಡಾಖಡಿ, ಅದರ ಭರಾಟೆ . . . ಎಲ್ಲಾನೂ ನೋಡಿ. ಎಳೇ ಮಕ್ಕಳ ಹಾಗೆ ಕೈ ಚಪ್ಪಾಳೆ ಹೊಡೆದು ಕುಣಿದುಬಿಟ್ಟೆ (ಹಂಗೂರ. ೩೭). [ ←ಇಂ. Machine ]

**ಮಿಷ್ಟ** (ಗು). ೧. ಸಿಹಿಯಾದ : ಪಂಡಿತಮಹಾಶಯರ ಮನೆಯಿಂದ ಮಾವಿನ ಹಣ್ಣು ಮತ್ತು ಮಿಷ್ಟ ಖಾದ್ಯ ಬಂದಿದೆ (ಇಶ್ವ. ೪೭೭). ೨. ರುಚಿಯಾದ ; ಸವಿಯಾದ ; ರಸವತ್ತಾದ : 'ಮಿಷ್ಟಾನ್ನ' ಪರಾ. ೩. ತೋಯಿಸಿದ ; ಒದ್ದೆಮಾಡಿದ. (ನಾ). ೪. ಸಿಹಿಯಾದುದು; ಸವಿಯಾದುದು : ಗಂಡಸರು ಕುರ್ಚಿಯ ಉದ್ಧಾರಕಾರ್ಯದಲ್ಲಿ ಪ್ರವೃತ್ತ ರಾಗಿ ಶಿಷ್ಟವೂ ಮಿಷ್ಟವೂ ಆದ ಧನ್ಯಭಾವಗಳನ್ನು ಸಂಪಾದಿಸುತ್ತಾರೆ (ಹಿಂದ. II. ೦೭೭). ೫. ಸಿಹಿತಿಂಡಿ ; ಭಕ್ಷ್ಯ. [ಸಂ.]

**ಮಿಷ್ಟಭೋಜನ** (ನಾ). ಸವಿಯಾದ ಊಟ; ರುಚಿಕರವಾದ ಭೋಜನ : ತಾನು ಈ ದ್ವೀಪಕ್ಕೆ ಬಂದುದೂ . . . ಮಿಷ್ಟಭೋಜನವನ್ನು ಮಾಡಿದುದೂ ಕಲ್ಪವಲ್ಲೀಚೂರ್ಣವನ್ನು ಸೇವಿಸಿದುವೂ ಒಂದೊಂದಾಗಿ ನೆನಪಿಗೆ ಬಂದಿತು (ರಾಜಾಪು. ೨೨೩). [ಸಂ.]

**ಮಿಷ್ಟಾನ್ನ** (ನಾ). ಸವಿಯಾದ ಊಟ ; ರಸಕವಳ ; ಮೃಷ್ಟಾನ್ನ: ಶಿಷ್ಟೋತ್ಕರಮಂ ಮಿಷ್ಟಾನ್ನದಿಂ[ದ]ತಣಿಪಿ ನಿಜ[ಕು]ಳಕ್ಕಂ ವಿಶಿಷ್ಟೋತ್ತ ಮಮ್ ತಾಳ್ದಿರೆ (ಎಇ. XIII. ೩೩೦-೦೭; ೪೭೧); ಪ್ರಯಾಣಿಕರು ದುಡ್ಡಿಲ್ಲದೆ ಮಿಷ್ಟಾನ್ನವನ್ನು ತಿನ್ನುತ್ತಿದ್ದಾಗ, ಜ್ಯೋತಿ-ಅಣ್ಣನ ಕೆಲಸಗಾರರು ತಪಸ್ವಿಗಳ ಹಾಗೆ ಉಪವಾಸ ಮಾಡುವಂಥ ಲಕ್ಷಣವೇನೂ ಕಾಣಲಿಲ್ಲ (ಹಿಂದ. II. ೯೭). [ಸಂ.]

**ಮಿಸರು** 'ಮಿಸ್ರ' ನೋ.

**ಮಿಸಲಯ** (ನಾ). ರೇಷ್ಮೆ ಬಟ್ಟೆ ; ಪಟ್ಟೆವಸ್ತ್ರ : ಹೆಂಡತಿಯು ಪುಟ್ಟು ತಿರುಗೋದು ಹರಕು ಪರಕು ಚಿಂದಿ ಮಿಂಡತಿಯು ಪುಟ್ಟು ಮೆರೆವದು ಮಿಸಲಯ ಮೇಲ್ಪಂದಿ (ಜನಪ. ೪೮-೦೦). [←ಅರ. ಮಶ್ರೂಅ]

**ಮಿಸಲು** (ನಾ). ೧. (ಸಭೆ ಮುಂತಾದ ಸಮಾರಂಭಗಳಲ್ಲಿ ಯಾರಿ ಗಾದರೂ ನಿರ್ಣಯವಾದ ಉಚಿತವಾದ) ಸ್ಥಾನ : (೩). ೨. (ಸೈನ್ಯ, ಪೇದೆಗಳು, ಕುದುರೆಗಳು ಮುಂತಾದುವುಗಳ) ಅಧಿಕೃತವಾದ ತನಿಖೆ : (೩). [←ಅರ. ಮಿಸಾಲ್; ಹಿ. ಮಿಸಿಲ್; ಮರಾ. ಮಿಸಲ್]

**ಮಿಸಿ** (ನಾ). ೧. ತರಕಾರಿಯಾಗಿ ಬಳಸುವ ಒಂದು ಬಗೆಯ ಸೊಪ್ಪು; ಸಬ್ಬಸಿಗೆ : ''ಮಿಸಿ ಶತಪುಷ್ಟಿಕೆ'' (ಪಸ್ತಕೋ. ೩೭-೨೭); ''ಶಾಲೇಯಃ, ಶೀತಶಿವಾ, ಛತ್ರಾ, ಮಧುರಿಕಾ, ಮಿಸಿಃ, ಮಿಶ್ರೇಯಾ—ಇ ಸಬ್ಬಸಿಕೇ ಹೆಸರುಗಳು'' (ಸಿದ್ಧಾಂತಿ. ೦೩೭). ೨. ಒಂದು ಬಗೆಯ ಔಷಧೀಸಸ್ಯ; ಜಟಾಮಾಂಸಿ. [ಸಂ.]

**ಮಿಸಿಕಿ, ಮಿಸಿಕೆ** (ನಾ). ೧. ಕುದುರೆಯ ಮುಖಕ್ಕೆ ತೊಡಿಸುವ ಒಂದು ಬಗೆಯ ಅಲಂಕಾರ ಸಾಧನ (?) : ಮಿಸುನಿಯ ಟಂಕೆ ಸೇರಿದ ಮೊಗಮುಟ್ಟಿನ ಮಿಸಿ[ಶಾಶಾಂ. ಸು]ಕಿಯನಾ ವಾಹಕರು ಒಸೆದು ಸೇರಿಸಿದರಿಳಿಯದೇಜಿದಂತೆ ಕಣ್ಗೆಸೆಯಲಾ ಜಾತಿತುರಗಕೆ (ಕುಂರಾಶಾಂ. ೯-೬೭); ಅರಗಡಿದ ಪಕ್ಕರೆಯ ಮಿಂಡಿಸಿದ ತಡಿಯ ಮುಜಿದ ಮಿಸಿ [ಶಾಶಾಂ. ಸು] ಕಿಯ ಹೇರಾಳದಿಂ ಬಿಡದೆಸೆದುದು ರಣಭೂಮಿ (ಕುಂರಾಶಾಂ. ೨೦-೪೪). ೨. ಮಿಸಿಕೆ : ಕುದುರೆಯ ಒಂದು ಅವಯವ (?): ಕ(ಳ)ಳಿಯುರ್ಕಿಲದೊಳ್ ತಾನಳವಡಿಸುಗು ಮಿಸಿ(ಹಿ)ಕೆ[ಶಾಶಾಂ. ಮಿಷಿರೆ]ಯೆಂಬ ಪೆಸರವಕಕ್ಕು (ಅಶ್ವಶಾ. ೯-೩೭). [ ? ]

**ಮಿಸಿಕೆ** 'ಮಿಸಿಕಿ' ನೋ.

**ಮಿಸಿರಿ** 'ಮಿಶ್ರಿ' ನೋ.

**ಮಿಸಿರಿಕೆ** (ನಾ). ಒಂದು ಬಗೆಯ ಕ್ರಿಮಿ : ಸ್ಪರ್ಶರಸಗಂಧರೂಪುಗಳೆಂಬೀ ನಾಲ್ಕುಮನಱಿವ ತುಂಬಿ ಪತಂಗ ಕೀಟ ನೊಣ . . . ತೊನಸಿ ತ್ರೋಳಿ ತೋಲೆ ಕೊಲಿಗ ಮಿಸಿರಿಕೆ ಪಚ್ಚೆ ಮಿಡುತೆ ತೆರಳಿ ಕೊಟ್ಟಾರಿಗಂಯೆಡೆವುಟಿ ಯೆಂದಿತ್ಯೇವಮಾದಿಗಳೊಳಂ (ಧರ್ಮಾ. ೪೯). [ ? ]

**ಮಿಸಿಸು** 'ಮಿಡಾಯಿಸು' ನೋ.

**ಮಿಸುಂಕು** 'ಮಿಸುಕು₁' ನೋ.

**ಮಿಸುಕಾಟ** (ನಾ). ಅಲುಗಾಟ ; ಚಲನೆ : ಯಾವುದೋ ಹಿಂಬೆಳಕ ಮಿಸುಕಾಟವೇ ಹಿಗ್ಗಿ ಇಲ್ಲದುಂಟಾಗಿ ಕತ್ತಲೆಯು ಬೆಳಕಿಗೆ ಬಾಗಿ (ಮುಕ್ತಕಂ. ೩೨-೦೧). [ಮಿಸುಕು₁ + ಆಟ]

**ಮಿಸುಕಾಡು** (ಕ್ರಿ). ಅಲುಗಾಡು ; ಹೊರಳು : ಅವನು ಮಿಸುಕಾಡದೇ ನಿಧಾನವಾಗಿ ಉಸಿರಾಡುತ್ತಾ ಮಲಗಿರುವುದನ್ನು ನೋಡಿ . . . ಗಾಳಿ ಹಾಕುವುದನ್ನು ನಿಲ್ಲಿಸಿದಳು (ಹೂಹಣ್ಣು. ೩); ಭಾಸ್ಕರ ಕುರ್ಚಿಯಲ್ಲಿ ಅತ್ತಿತ್ತ ಅಸ್ವಸ್ಥನಂತೆ ಮಿಸುಕಾಡುತ್ತಿದ್ದ (ಕಮಚ. ೨೨೨). [ಮಿಸುಕು₁ + ಆಡು₁]

**ಮಿಸುಕು₁, ಮಿಸುಂಕು, ಮಿಸುಂಗು₁** (ಕ್ರಿ). ೧. ಕದಲು; ಅಲುಗು; ಅಲ್ಲಾಡು : ಆ ಬಲೆಯೊಳುತ್ತನ್ನಮಾತಿ ತೊಡರ್ದು ತನ್ನ ಪೆಸರಂ ನೆನೆದುಸಿರನೊಳಕೆಗೆದಸು ಪೋದಂತೆ ಮಿಸುಕದಿರ್ಪುದುಮಂ (ಕಂಶಕಂ. ೦೫೯-೭) ; ಸಲೆ ಪಸುಗಳೆಲ್ಲಂ . . . ನಿಮಿಷಮಾತ್ರದಲಿ ಮಿಸುಕದುಸುರಿಡದುಸಿಕ ನಿದ್ದಂತಸುಗಳೆದವು (ಲಕಶ. ೩೦-೩೯). ೨. ಕಂಪಿಸು ; ನಡುಗು ; ಅದುರು : ''ಮಿಸುಕು—ಸ್ಪಂದನೇ (ಅದುರು)'' (ಕಪಾಠ). ೩. ಓಡಾಡು ; ಅಡ್ಡಾಡು; ಸಂಚರಿಸು: ತರುಣಿಯರ ತಂಡದೊಳ್ ಮಿಸುಕಬಾರದು ದೇವ (ಸಂಬರ. ೦೫-೦೦೪); ಎಲ್ಲಿಗೆ ಮಿಸುಕದಿರು ಮನೆಯಿಂದಗಲದಿರು (ಬಸಪು. ೦೪-೨). ೪. ಚಲಿಸು ; ನಡೆ : ದೆಸೆಯಿಂದಾಗಸದಿಂದಜಾಂಡತಟದೀವತ್ತಲ್ಲಿ ಪೊಕ್ಕು ದೂಮಿಂ ಮಿಸುಕಲ್ ತೀರ್ಗುಮೆ ವೈರಿಗೆ (ಕಂಶಶಾ. ೦೦-೦೦೯); ಅಂತು ಮಾರುತಿಯ ರಥಮಂ ಮಿಸುಕಲೀಯದಿಸುವುದುಂ (ಕಂರಾಶಾ. ೦೩-೦೨೩ ವ); ಈ ವಸುಧಾಮಧ್ಯದೊಳಿತ್ತಲ್ ಮಿಸುಕುವವನಿನ್ನೆತ್ತಲುಚಿವನಹಿತಕ್ಷಿತಿಪಂ (ಕಾವ್ಯಾವ. ೦೪೯); ಸಮೀರನ ಮಿಸುಕಲೀಯದೆ ಮುಂದೆ ಮಿಕ್ಕವು ವಿಗಡ ವಾಜಿಗಳು (ಕುವ್ಯಾವಿ. ೩-೪೭). ೫. ಕದಲಿಸು ; ಅಲುಗಾಡಿಸು : ಎಸಕವುಳ್ಳರು ನೀವು ನಿಮಗನಿಮಿಷರು ಸರಿಯೇ ಘಾವ ಹಿಡಿವುದು ಮಿಸುಕ ಲಾಗದು ನೀವು ಬಾಲವನು (ಸಂಭಶ. ೩-೦೦೬) ; ಸುರರು ಸ್ತುತಿಸಿ ಕರೆಯೆ ತುಟಿಯ ಮಿಸುಕದವ ಬಚಿದೆ ಏತಕೆ ಬಾಯ ತೆಜಿದೆ ಹೇಳೊಮ್ಮೆ (ಪುರಂದ. ೦-೯೯-೦). ೬. ತಿರುಚು ; ತಿರುಗಿಸು : ಗೌಡರು ಎತ್ತುಗಳಿಗೆ ಛಟೀರ್ ಎಂದು ಬಾರುಕೋಲಿನಿಂದ ಬಿಗಿದು ಬಾಲ ಮಿಸುಕಿದಾಗ ಗಂಗಣ್ಣನಿಗೆ ಅರ್ಧಜೀವ ಬಂತು (ಪಪ್ಪೂರು. ೦೩೪). ೭. ಹಿಂಸಿಸು ; ಒದ್ದಾಡಿಸು ; ಚಡಪಡಿಸುವಂತೆ ಮಾಡು : ಕಾಮಜ್ವರಂ ಸಂಕ್ರಮಿಸಿ ಮಿಸುಕಲೊಡನೆ ನೊಂದು ತನು ತನುವಾಯ್ತು (ಸೌಂದಕ. ೦೩-೩೩). ೮. (ಪ್ರತಿಭಟಿಸುವುದಕ್ಕಾಗಿ) ಉಸಿರೆತ್ತು ; ಬಾಯಿಬಿಡು : ಮಿಸುಕದೆ ನಿಮ್ಮ ನಿಮ್ಮ ನಿಜರಾಜಿತರಾಜ್ಯವಿಲಾಸದಲ್ಲಿ ಸಂತಸ ದೊಳಿಯಿರ್ಪುದು (ಕುಂಸುಪು. ೩-೦೨೨); ಬಸುಜಿ ಬಗಿವೆನು ಕೀಚಕನ ನಸುಮಿಸುಕಿದೊಡೆ ವೈರಾಟಪಂಶದ ಹೆಸರ ತೊಡೆವೆನು (ಕುವ್ಯಾವಿ. ೩-೩೬); ಯುದ್ಧದ ಆಶೆಯನ್ನುಳ್ಳ ರಾಜರೆಲ್ಲ ನಕುಲನೊಂದಿಗೆ ಪ್ರತಿಭಟಿಸಿ ಸೋತರು. ಅವರನ್ನು ಕಂಡು ಉಳಿದ ರಾಜರು ಮಿಸುಕದೆ ಬಂದು ಕಾಣಿಕೆಯನ್ನು ತೆತ್ತರು

(ಡಾಜಸೂ. ೪೦). ೯. ಚಲಾವಣೆಯಲ್ಲಿರು : ಸಸಿಯಿರ್ದಪನಮವಾಸೆಯ ಬಸದಿಂ ಕಾಣಲ್ಕೆ ಬಾರದಂತಿರೆ ಜಿನರುಂ ವಸುಧೆಯೊಳಿರ್ದಪರಿರ್ದುಂ ಮಿಸುಕುವ ಕಲಿಕಾಲದಸಕದಿಂ ತಲೆದೋಱರ್ (ಧರ್ಮಾಮೃ. ೩-೧೯೯). ೧೦. ಬರು ; ಪ್ರವೇಶಿಸು : ಸೊಸಲಿನಲಿ ಕಣ್ಣಾಳ್ಕೆ ದೇವನಾವೊಸೆದು ಲಂಕಾದ್ವೀಪಸೀಮೆಗೆ ಮಿಸುಕಲಮ್ಮನು (ಕುವ್ಯಾಸ. ೩-೩೬). ೧೧. ಕಾಣಿಸಿಕೊಳ್ಳು ; ತಲೆದೋರು : ಕಿಸುರುಗಾವಳಿ ಬಂದ ಗಳಹತನ ವುವಿವೇಕವುಮಿರಲೇನಾ ಚೆನ್ನಬಸವನಿಹ ರಾಜ್ಯದೊಳ್ ಮಿಸುಕವು (ಚಂಪು. ೬-೪೦); ವುಸಿ ನುಸುಳನ್ಯಾಯ ಠೌಳಿ ವಂಚನೆಗಳು ವಸುಧೇಶನಾಳ್ವ ರಾಜ್ಯದಲಿ ಮಿಸುಕಲಮ್ಮವು (ಸಂಶಾ. ೭-೬೩) ; ಮಿಸುನಿಯೊರೆಯಿಂ ಮಿಸುಕುವಸಿಧಾರೆಯಂತೆಸೆವ ನುಡಿಗಳಂ ಕೇಳುವ ಪಲಾತಗುತನ ಮಡದಿ . . . ಸಂದೇಶವುಂ ದೂತವುಖದಿಂ ಕಳುಹೆ (ಗೂಲ್ಕೊ.ಕಾ. ೭-೦೬೬). ೧೨. (ಅಲಂ) ಸುಲಭವಾಗಿ ಅರ್ಥವಾಗು,-ಅರ್ಥವು ಗೋಚರಿಸು: ವುಸಗನ್ನಡದಿಂ ವ್ಯಾವರ್ಣಿಸುವೆಂ ಸತ್ಕೃತಿಯುನೆಂದು ಕನ್ನಡವುಂ ಚಿಂತಿಸಿ ಕೂಡಲಾಱದಕ್ಕಟ ಮಿಸುಕದ ಸಕ್ಕದವುನಿಕ್ಕುವವನುಂ ಕವಿಯೇ (ಧರ್ಮಾಮೃ. ೦-೪೦). ◁ ಮಿಸುಂಕು : ೧. ಆ ಪರಳಾಂಗುಲಿಯುಂ ಮುರಾಂತಕಂ ಭರದೊಳೆ ತನ್ನ ದಕ್ಷಿಣಕರಾಗ್ರದಿನೊತ್ತೆ ಮಿಸುಂಕದಿರ್ಪುದುಂ (ಜುಕಾಪೀ. ೦೪-೯೯). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. ಮಿಸುಗು₁ : ೧. ಅಂಚಿರವುನೆ ಮಿಸುಗದ ಮಿಂಚಂಬರಚರ ಮಲ್ಲದ ಚಕೋರವುಲರ್ಗಳ್ ಸತಿಯಾ (ಕಂಪ್ರಶ. ೦೦-೯೭); ತಿರುಕುಜುಪ್ಪೆ ತೊಂಡನೆಂಬ . . . ಅಸಗನೊಂದನೆಸಗನತ್ತ ಮಿಸುಗದಭವವತದೋಪ್ಪನು (ತಿರುಕೊಂ. ದೇ. ೨೩೨-೭). ೩. ಕೊಂಬಿನೊಳ್ ವಸಿಯಿಸಿ ಮಿಸುಗುತಿರ್ದ ರಾಜಹಂಸನಂ ಆಂದೆಯೆಂದೇ ಬಗೆವ . . . ಎಚ್ಚಂ (ಶುಕಕಂ. ೦೨೯-೨). ೧೧. ಆನುಂ ತಪೋವನದೊಳ್ ಪಲಕಾಲಂ ತಪಂಗೆಯ್ಯೆ ಕೇವಲಜ್ಞಾನಂ ಪುಟ್ಟುವಲ್ಲಿ ಜನ್ಮಾಂತರದುಷ್ಕರ್ಮವಾಸನೆ ಮಿಸುಗೆ [ಪಾಠಾಂ. ಮಿಗೆ] (ಶಂಕಕಂ. ೬೦-೦೩); ಬಿಸಿಲುಗುದುರೆಯುಜ್ಜು ಬೇಸಗೆ ರಾಜನಂದೆಸಗಿ ದುವ್ವಾಳಿಸಲಾಗ ಮಿಸುಗುವ ಮಿರಧೂಳಿಯೆಂಬೊಲು ಸುಂಗಾಲ ಪಸರಿಸಿತಾ ಕಾಲದೊಳಗೆ (ಕಂಷಾ. ೯-೦೨).

[ದೇ.॥ ತುಳು. ಮಿಸ್ಕು ; ತೆಲು. ಮಿಸುಕು, ಮಿಸುಗು ; ತೊದ. ಮಿಸ್ಕ್]

**ಮಿಸುಕು₂** (ನಾ). ೧. ಅಲುಗಾಟ ; ಅಲ್ಲಾಟ : "ಮಿಸುಕಿನೊಳಗಶ್ಚಂ ತಕದೊಳೊಲೆ" (ಕಿ.ಶುಂ. ೦೦೯) ; ಮೊದಲ ನಿರ್ವಾಚ್ಯಮೆಂಬುದೆ ವಸ್ತು . . . ಅದಱೊಳೆ ಸ್ಪಂದ ತೋಱದುದದೇ ಮಿಸುಕು (ಶುಕೋಬಿ. ೨-೦೦). ೨. ಕಂಪನ ; ನಡುಕ ; ಆಕೆಯನ್ನು ಹಿಡಿದು ನಿಲಿಸಿಕೊಂಡು ಮಿಸುಕಿನಿಂದ ಬೋಧಿಸುತ್ತಿರುವಳು (ಚಶ್ಚಿ.ಕ. ೦೨೨-೪). [<ಮಿಸುಕು₁]

**ಮಿಸುಗಿಸು** (ಕ್ರಿ). ಕದಲಿಸು ; ಅಲುಗಾಡಿಸು : ಮೇಲುಂದಿನ ವಸನವುಂ ಬಟ್ಟವೊಲೆ ಮಿಸುಗಲು . . . ನವಕುಸುಮಕೋಮಲೆಯರುಗಳೊಸೆದಾಕೆಯೊಡನೆ ಭರವಸದಿ ನಡೆತರುತಿರ್ದರು (ಶ್ರೀಂಧಶ. ೦೩-೪೮).

[ಮಿಸುಗು₁ ( < ಮಿಸುಕು₁ ) + — ಇಸು₃ ]

**ಮಿಸುಗು₁** 'ಮಿಸುಕು₁' ನೋ.

**ಮಿಸುಗು₂** (ಕ್ರಿ). ೧. ಹೊಳೆ; ಪ್ರಕಾಶಿಸು: "ಮಿಸುಗು___ಕಾಂತೌ" (ಶಮಣಿ); ಕುಸುಮವುದೆಸೆಟ ಮಿಸುಗುವವುಸದಳಿಂಬದ ಮೇಗೆ ಕಿಱಿದು ಬೇಗಂ ಮಿಶ್ರಮಿಸಿ (ಆದಿಪು. ೦೦-೭೦೪) ; ಮಿಸುಗುವ ರತ್ನತೋರಣಗಣಂಗಳನೂನವಿಮಾನದೊಳ್ ಗುಳ್ದೆಸೆದವು (ಸಂಕೇತಜು. ೯-೨೦) ; ಮಿಸುಗುವ ಆರಂ ತೊಳಪ್ಪ ಕನ್ನವುರಂ ಚೆಲ್ವೆಸೆದಿರೆ (ಕಮುದ. ೬೨ ಶ್ರಹಿಣ). ೨. ಕಂಗೊಳಿಸು ; ಮನೋಹರವಾಗಿರು ; ಶೋಭಿಸು : ಮಿಸುಪ ರಸಾಂತರಂಗಳೆನೊಡಂಬಡನಾಗದ ತನ್ನೊಳಿಂತು ಪೋಲಿಸುವೊಡೆ ಪೋಲಿಸಲ್ಕೆ ದೊರೆ ವೀಣೆಯೆನಾ ಸುರತವು ವೀಣೆಯುಂ (ಅಜಿಪು. ೨-೬೭); ಸಹಜವಿಭೂಷಣದಂತಿರೆ ಮಾಹನೀಯುಕ್ತಲ್ಲಿಕ್ಷಣಂ ಮಿಸುಗೆ ಶುಭವಹನೆನಿಸಿದನಂ ಕಂಡಂ . . . ಆ ವುಹಿಪಂ (ಕಾದಂಘೂ. ೪೦೬); ದೇವ ದಯೊರಸಂ ಮಿಸುಪ ನಿನ್ನಮ ಮಾನಸದೊಳ್ ಪಿರಕ್ತಿರಾಜೀವವುದಿಂದು ಕುಂದದ ವಿಕಾಸವಿಳಾಸಮನಾಂತು ಭವ್ಯಭೃಂಗಾವಳಿಯಾಗುವುಕ್ಕಿ ಮಿಗೆ ಕಾರಣಮಾದುದು (ಪರ್ಗಪು. ೦೪-೯೯). ೩. ಶ್ರೇಷ್ಠವಾಗಿರು ; ಮೇಲಾಗಿರು : ಬಸವಲ್ಲದ ರಾಜೆಯಂ ಸ್ವೈರಿಸಲಾಱದೆ ಧರ್ಮವುಣ್ಣಾ ಕೊಲ್ಲನೆ ದಯೆಯಿಂ ವಸುಮತಿಯೊಳಿಱಿವರದುವುಂ ಮಿಸುಗುವ ಸದ್ಧರ್ಮವೆಂದು ನಂಬುವುದೆ ಬುಧಂ (ಧರ್ಮಾಮೃ. ೦-೦೬೬); ಇಂತೆಸೆದಿ ಪಾತಿವ್ರತ್ಯದ ಮಿಸುಗುವ ಜಸವೆಣ್ಣಾ ತಲೆಗೆ ತಪ್ಪೆನು ಪುಲ್ಲಂ (ಅಶಂಕ. ೦೦-೯೯).

**ಮಿಸುನಿ** (ನಾ). ೧. ಚಿನ್ನ ; ಬಂಗಾರ: "ಸೊನ್ನೆ, ಕಸವರಂ, ಚೀಬೊನ್, ಮಿಸುನಿ—ಈ ೪ ಸುವರ್ಣಂ" (ಕಕಶಾ. ೩೦-೬೦); ಮಿಸುನಿಯಿಂದುಂಟಾದ ಕಟಕ ಮಕುಟಾದಿ ತೊಡವುಗಳು ಮಿಸುನಿಯಲ್ಲದೆ ಮತ್ತೊಂದು ರೂಪಾಗ ಬಲ್ಲುದೆ ಹೇಳಾ (ಚನ್ನಪ. ೪. ೯೭-೨೦೩) ; ಆಸ್ಥಾನದಲಿ ಮಿಸುನಿಯ ಹೊಂಗೆಳೊಡನೊಡನುಕ್ಕಿ ಹೊಜವಡಲು (ಏಕಿಕ್ರ. ೨೩-೩೩); ರಥದ ಹೊಱಲೇಪದಲಿ ಹುದುಗಿದ ಮಿಸುನಿಯಂತಿರೆ (ಕುವ್ಯಾ.ಆ. ೦೫-೬). ೨. ಮೆರುಗು ; ಗಿಲೀಟು ; ಹೊಳಪು : ದೆಸೆಗಳನು ತೆರೆದು ಕವಿಯಾರೆ ಕೇಳುವನು ಮಿಸುನಿಯಾಗಸದಿ ಕೆಳೆನುಡಿಯ ನುಡಿಯುವನು (೧೯೭೬೦. ೨-೭); ಬಸವಂತಿ, ವಿಸ್ಮಯಕ್ಕೆ ನಗೆಯ ಮಿಸುನಿಯನ್ನು ಲೇಪಿಸಿ . . . ಕೇಳಿದಳು (೭೬ಕಚ. II,೦೬೬). 'ಮಿಸುನಿಸು' ಪರಾ. ೩. ಪರಿಶುದ್ಧವಾದುದು ; ಅಪ್ಪಟ : ಮಿಸುನಿಯ ಚಿನ್ನಕ್ಕೆ ಒರೆಗಲ್ಲ ಹಂಗೇಕೆ (ಅಪಕಂ. ೩೩-೪೨೩); ಮಿಸುನಿಯ ಪೊನ್ನ ಪಲ್ಲಣದೊಳುಲ್ಲಸಿತಲಬಡೆಯಲ್ಕೆ ಕೂಡೆ ತೆತ್ತಿಸಿದ ಸಮಸ್ತರತ್ನರುಚಿಗಳ್ ಪುದಿದುಣ್ಕೆ (ಕುಸಜು. ೪-೩೩).

**ಮಿಸುನಿಗಾಲ ಮಂಚ** = ಚಿನ್ನದ ಕಾಲುಗಳುಳ್ಳ ಮಂಚ : ಅಂಚೆನವಿರ ಹಾಸನುಳ್ಳ ಮಿಂಚುವಚ್ಚ ಮಿಸುನಿಗಾಲ ಮಂಚ . . . ಅಲ್ಲಿಗಲ್ಲಿಗೊಪ್ಪಿ ತೋರ್ಪವು (ತಶವ. ೯-೦೩). **ಮಿಸುನಿಯ ಕೆಲಸ**=ಬಂಗಾರದಲ್ಲಿ ಆಭರಣ ಇತ್ಯಾದಿಗಳನ್ನು ಮಾಡುವ ಕೆಲಸ; ಚಿನ್ನದ ಕುಸುರಿಗೆಲಸ: ಮಿಸುನಿಯ ಕೆಲಸದೊಳಗೆ ರನ್ನಂ . . . ಶಿವತತ್ತ್ವದೊಳು ಕೂರ್ತು ನೆಲಸಿದಾ ಪ್ರಣವದಂತರಸಂಗೆ ಪತಿವೋಹಿಯೆನಿಪ ಮಂತ್ರೀಶನೆಸೆದಂ (ಪಾಠಕಂ. ೨-೦೯). **ಮಿಸುನಿಯ ದಟ್ಟಿ** = ಚಿನ್ನದ ಎಳೆಗಳುಳ್ಳ ಬಟ್ಟೆ ; ಪೀತಾಂಬರ : ಮಿಱುಗುವ ಮಿಸುನಿಯ ದಟ್ಟಿ ಕಟಿಯೊಳೊಪ್ಪಿ ಮೆಱೆವ ರತ್ನದ ದಾಕಿನಿಂದ ಒಱೆಯನುಗಿದ ಖಡ್ಗವಿಡಿದು ಕಂಬದೆ ಬಂದ ನರಸಿಂಹನಂತೆ ರಂಜಿಸಿದ (ಕುಪಪ. ೦೩-೦೩). **ಮಿಸುನಿಯ ಬೆಟ್ಟು** = ಚಿನ್ನದಿಂದಾದುದೆಂದು ನಂಬಲಾದ ಪರ್ವತ ; ಮೇರು : ಉಱೆ ಮುಟ್ಟಿದುದಾ ನಿರ್ಜರಲೋಕಮನಾ ಮಿಸುನಿಯ ಬೆಟ್ಟು (ಜಯಕಾ. ೦-೩೩). **ಮಿಸುನಿವಸುಱವನು** = ಚಿನ್ನದ ಗರ್ಭದಿಂದ ಹೊರಬಂದವನು ; ಹಿರಣ್ಯಗರ್ಭ ; ಬ್ರಹ್ಮ : ಮಿಸುನಿವಸುಱವನ ತಲೆಯ ತಳೆದು . . . ಕರುಣಿಸುವ ಮೞಿಸಿಸಿದಲೆಯ ಕುಡುಗೆ ಮತಿಯಿಸುವುಸಿರನಸಪಸದೊಳು (ಅಧ್ಯದೇ. ೬-೨).

[ದೇ.॥ ತೆಲು. ಮಿಸಿಮಿ, ಮಿಸಿ, ಮಿಸ, ಮಿಸಮಿಸ./ಹಾ. ಮಿಸಮಿಸ. ಮಿಸಿಮಿಸ]

**ಮಿಸುನಿಕೆಲಸ** 'ಮಿಸುನಿಗೆಲಸ' ನೋ.

**ಮಿಸುನಿಗಚ್ಚು** (ನಾ). ಚಿನ್ನದ ಬಣ್ಣದ ಲೇಪ ; ಹೊಂಬಣ್ಣದ ಮೆರುಗು: ಭೂರಮೆ . . . ನಳನಳಿಸುವ ಕೆಯ್ಯೊಲಮೆಂಬ ಮಿಸುನಿಗಚ್ಚಿನ ಪೊಂಗುಪ್ಪಸವುಂ ತೊಟ್ಟು ಕಣ್ಗೆಡ್ಡಮಾದಳ್ (ಧಾಶಾಕ್ಕ. ೯೩-೦೩).

[ಮಿಸುನಿ + ಗಚ್ಚು]

**ಮಿಸುನಿಗಪ್ಪಟ** (ನಾ). ಜರತಾರಿ ಬಟ್ಟೆ ; ಪೀತಾಂಬರ : ಮಿಸುನಿಗಪ್ಪಟ ಬಿಗಿದ ಉತ್ತರಿ ವಸುಮತಿಗೆ ಸಲೆ ರುದ್ರನೆಂಬೊಲು (ಮುಹಿ. ೦೨).

[ಮಿಸುನಿ + ಕಪ್ಪಟ₁ (< ಕಪ್ಪಡ)]

**ಮಿಸುನಿಗರು** (ನಾ). ಬಂಗಾರವನ್ನು ಕರಗಿಸಿ ಎರಕ ಹೊಯ್ದು ರಚಿಸಿದ ಗೊಂಬೆ ; ಚಿನ್ನದ ಎರಕದ ಪುತ್ಥಳಿ : ಅರಲ ಸರಲ ಸೊನ್ನಾರಂ ಪಲ ಪೂ ಪರಕಲಿಸಿದ ಪಾಸೆಂಬಗ್ಗಿಟದೊಳಗಿರಿಸಿ ಮಿಸುನಿಗರುಗಳನುಗುರಿಜಿತದ ಮಾಣಿಕವತ್ತಿಗೆಯು ಬೆರಸಿ (ಜಯಕಾ. ೮-೪೭) ; ಮಿಸುನಿಗ ಪೆವ ಕಂಡರಿಸಿ ಯಂಗಜಶಿಲ್ಪಿ ಮಿಸುನಿಬಣ್ಣವನಿಡಲೆಂದು ಪೊಸೆದಗ್ನಿಯುಂ ಕಾಸಿ ಬಿಸಿಯೇಱುವವೊಲು ಬಲುಬಿಸಿಲಳಲುರಿದುದು ಭೂಪರನಾ (ಶ್ರೀಪಾಲ. ೪-೩೩).
[ಮಿಸುನಿ + ಕರು$_2$]

**ಮಿಸುನಿಗಾಸು** (ನಾ). ಚಿನ್ನದ ನಾಣ್ಯ; ಬಂಗಾರದ ಕಾಸು : ಭದ್ರ ಗಾಯಕಂಗಂ ಮೆಚ್ಚಿ ಮಿಸುನಿಗಾಸೊಂದಿರ್ಪ್ಪ (ಶೀರಮ. ೬-೪೩).
[ಮಿಸುನಿ + ಕಾಸು$_2$]

**ಮಿಸುನಿಗುಂಡಿಗೆ** (ನಾ). ಚಿನ್ನದ ಪಾತ್ರೆ : ಮುಗುದೆಯು ನೆಲೆವೊಲೆಬೆಂಬ ಮಿಸುನಿಗುಂಡಿಗೆಗಳನುರದೊಳಗಿಟ್ಟು . . . ಸುರತಾಂಭೋನಿಧಿಯೊಳ ಗೊಗುವಿಂಗೆ ತೇಂಕಾಡಿದನರಸಂ (ಜಯಕಾ. ೮-೩೪). [ಮಿಸುನಿ + ಗುಂಡಿಗೆ$_2$]

**ಮಿಸುನಿಗೆಲಸ**, ಮಿಸುನಿಕೆಲಸ (ನಾ). ಬಂಗಾರದಲ್ಲಿ ಆಭರಣ, ವಿಗ್ರಹ ಇತ್ಯಾದಿಗಳನ್ನು ಮಾಡುವ ಕೆಲಸ ; ಚಿನ್ನದ ಕೆಲಸ : ಮಿಸುನಿಗೆಲಸದ ಪುತ್ಥಳಿಗೆ ಮತ್ತಸುವು ಘಟಿಸಿತೊ (ವಾಗಹ. ೨೬-೩೯). **ಮಿಸುನಿಕೆಲಸ** : ಮಿಸುನಿಕೆಲಸ, ಕೆತ್ತನೆ, ಬಱಿ ಎಂಬಿವು ಅವರ ಬಿಡುವನ್ನೂ ಹೊಲಬನ್ನೂ ಸಾರುತ್ತವೆ (ಶಾಶಾಶಾ. ೨೩೭). [ಮಿಸುನಿ + ಕೆಲಸ]

**ಮಿಸುನಿದಾವರೆ** (ನಾ). ಹೊಂಬಣ್ಣದ ಕಮಲ ; ಹೋಂದಾವರೆ : ಎನ್ನ ಮೊಗಕೆ ಸರಿಯೆನ್ನ ಬಹುದೇಯೆಂದು ಚೆನ್ನ ಮಿಸುನಿದಾವರೆಯಾ ತನ್ನ ಕೈಸೆಱೆವಿಡಿದಂತೆ ಪಿಡಿದಳೊಂದು ಪೊನ್ನೊಳಸೆವ ಡವಕೆಯನು (ಶ್ರೀಪಾಲ. ೨-೦೭). [ಮಿಸುನಿ + ತಾವರೆ]

**ಮಿಸುನಿಪಟ್ಟೆ** 'ಮಿಸುನಿವಟ್ಟೆ' ನೋ.

**ಮಿಸುನಿಬರಹ** (ನಾ). ಬಂಗಾರದ ಚಿತ್ರಣ : ಮಿಸುನಿಬರಹದ ಪಾವರಣ ಬಸಿವ ಗಲ್ಲದ ಮದಧಾರೆಯಿಂದಾನೆಗಳ್ಸಗಿ ಬಂದುವು ರಾಯನೆಡೆಗೆ (ಶರತ. ೨೦-೬೩). [ಮಿಸುನಿ + ಬರಹ (< ಬರೆಪ)]

**ಮಿಸುನಿಮೊಗ** (ನಾ). ಪ್ರಕಾಶಮಾನವಾದ ಮುಖವುಳ್ಳವನು ; ಅಗ್ನಿ : "ಮರಗೂಟಂ . . . ಮಿಸುನಿಮೊಗಂ, ಹಗ್ಗ, ಕಿಚ್ಚು, ಇಂಗಳಂ, ಎಲರ್ಗೆಳೆಯಂ . . . ಈ ೧೩ ಅಗ್ನಿ" (ಕಬಕಾ. ೪೯-೩೩) ; "ಮಿಸುನಿಮೊಗ ಸಗ್ಗಿಗರಡಬಳನೆನ್ನಲಗ್ನಿಯಭಿಧಾನಂಗಳ್" (ಕಬಕಂ. ೩೫).
[ಮಿಸುನಿ + ಮೊಗ]

**ಮಿಸುನಿವಟ್ಟಲ್** (ನಾ). ಬಂಗಾರದ ಬಟ್ಟಲು : ಎಸೆವ ಪೊಂಬರಿವಾಣ ಮಿಸುನಿವಟ್ಟಲ್ಗಳೊಳ್ . . . ಪಾಲ್ಮೊಸರ್ಗಳಿವು ಬಗೆಗೊಳಿಸಿ ಪೊಸತನಿಸಿ ರಲ್ಪವಿದನಚ್ಯುತಂ (ಕೈವಲ್ಯ. ೬-೪೪). [ಮಿಸುನಿ + ಬಟ್ಟಲ್]

**ಮಿಸುನಿವಟ್ಟೆ**, ಮಿಸುನಿಪಟ್ಟೆ (ನಾ). ಪೀತಾಂಬರ ; ಜರತಾರಿ ವಸ್ತ್ರ : ಬಿಸಿನಿ ಬಿಸಿಲ್ಗನುಟ್ಟಳೆಂಬಂತೆ ಬಿಗಿದುಟ್ಟ ಮಿಸುನಿವಟ್ಟೆ ಮಿಸುಗುತ್ತಿರೆ (ರಾಜಶೇ. ೫-೦೯ ವ). **ಮಿಸುನಿಪಟ್ಟೆ** : ಆವ ದಿಕ್ಕಿನಲ್ಲಿ ನೋಡಲು ಥಳಿಥಳಿಸುವ ತೀವಿದ ಮಿಸುನಿಪಟ್ಟೆಗಳು (ಕಂಸವ. ೮-೯).
[ಮಿಸುನಿ + ಪಟ್ಟೆ$_3$]

**ಮಿಸುನಿವತ್ತಿಗೆ** (ನಾ). ಚಿನ್ನದ ಕುಂದಣದ ಕೆಲಸ : ಓಲೆ ಮನ್ಮಥನ ಮನೋರಥಕಿಕ್ಕಿದ ಗಾಲಿಯಂತಾಗಲಂತವಱ ಮೇಲಿಟ್ಟ ಮಿಸುನಿವತ್ತಿಗೆ ಯೆಂದೆನೆ ಕಿವಿಯೋಲೆಯೊಪ್ಪಿದುವಾ ಸತಿಗೆ (ಶ್ರೀಪಾಲ. ೩-೬೨).
[ಮಿಸುನಿ + ಪತ್ತಿಗೆ$_1$ (< ಪತ್ತುಗೆ)]

**ಮಿಸುನಿವಟಿ** (ನಾ). ಚಿನ್ನದ ಮಳೆ ; ಸುವರ್ಣವೃಷ್ಟಿ : ಆ ಕುಶಲವತಿ ಕಟ್ಟಾಸೆಯಿಂ ತೊಟ್ಟನೆ ಮೆಟ್ಟನಿಟೀಯುತ್ತಾ ಮಿಸುನಿವಟಿ ಮಸಗಿದ ತೆಱನಾವುದೆನೆ (ಜಕವ. ೬-೨೩೭ ವ). [ಮಿಸುನಿ + ವಟಿ]

**ಮಿಸುನಿವಾವುಗೆ** (ನಾ). ಚಿನ್ನದ ಪಾದುಕೆ : ಬೆಳ್ಳಡಿಯ ಬೆಳ್ಳಡಿಗೆ ಮಿಸುನಿವಾವುಗೆಯುನೊಪ್ಪಿಸಿ (ರಾಜಶೇ. ೦೩೦-೦೪). [ಮಿಸುನಿ + ಪಾವುಗೆ]

**ಮಿಸುನಿವೆಟ್ಟು** (ನಾ). ಚಿನ್ನದಿಂದಾದುದೆಂದು ನಂಬಲಾದ ಪರ್ವತ : ಮೇರು : ಮಿಸುನಿವೆಟ್ಟುವೆ ನೀರ್ಮೊಗೆಯುಲೆಂದೊಸೆದು ನೀಡಿತೊ ಕಡಲಿಗೆರಡರ್ಪಿಸುವ ತೋಳ್ಗಳೆನಿಸೆ ಸಾಲಿಟ್ಟುದೊ ದಿವಿಜವ್ಯಂದ (ಸಾಳ್ವಭಾ. ೩೩-೩೮). [ಮಿಸುನಿ + ಬೆಟ್ಟು]

**ಮಿಸುನಿಸು** (ಕ್ರಿ). ೧. ಹೊಳೆ ; ಥಳಥಳಿಸು ; ಪ್ರಕಾಶಿಸು : ಮಿಸುಣೆ [ನಿ] ಪ ಪೊಂಗೆಜ್ಜೆ ಪರಿಪೂರ್ಣಚರಣ (ತೀರ್ಥಮ. ೨೮-೪). ೨. ಕಂಗೊಳಿಸು; ಶೋಭಿಸು : ಮಿಸುಣಿ [ನಿ] ಪ ದೇವಹೂತಿ ಅಂಬುಧರ ಪ್ರೈಥೃತ ಕುಶಲ ಸುಕೃತ ಬೃಹತಿ ವೀತಾದ್ಮರು ವಸುಧೆಯೊಳಗೆ ಏಸು ಪುಣ್ಯ ಮಾಡಿದರೊ (ತೀರ್ಥಮ. ೦೦-೦). [ಮಿಸುನಿ + —ಇಸು$_3$]

**ಮಿಸುಪು** (ನಾ). ೧. ಕಾಂತಿ ; ಪ್ರಕಾಶ ; ಹೊಳಪು : ಕೆಂಬಿಸಿಲ ಮಿಸುಪಿನಿಸು ಪಡುವಣ ದೆಸೆಗವಲಂಬಿಸಲೊಡರ್ಚಿದತ್ತಿನಬಿಂಬಂ (ಕಾದಂಬ. ೨೬೭) ; ಪಸರಿಸುವ ತನ್ನ ನಯನಪ್ರಸರಂ ಜಿನಪದನಖೇಂದುಮಂಡಲಮಂ ಭ್ರಾಜಿಸೆ ಬಳಸಿದ ನಕ್ಷತ್ರದ ಮಿಸುಪಂ ತಾಳ್ದಿದವು (ಸುಕುಮಾ. ೯-೯). ೨. ಮನೋಹರತೆ ; ರಮ್ಯತೆ : ಅಮರ್ದಿನ ಪೊಸಸೋನೆಯ ಸುರಿದು ದೆಂಬಿನಂ ಪೇಟೊರ್ವಳ್ ಮಿಸುಪೆಸೆಯೆ ಪಾಡಿದಳ್ (ಸುಕುಮಾ. ೦೦-೨೩).
[< ಮಿಸುಗು$_2$ + —ಪು$_2$]

**ಮಿಸುಪುದೋಱು** (ಕ್ರಿ). ಕಾಂತಿಯನ್ನು ಸೂಸು ; ಪ್ರಕಾಶವನ್ನು ಬೀರು : ಮಿಸುನಿಯ ಚಾವಡಿ ಎಸೆವ ರನ್ನದ ಲೋವೆ ಮಿಸುಪುದೋಱುವ ವಜ್ರಗಂಭ (ಹಂಸಾಂ. ೦-೪೦). [ಮಿಸುಪು + ತೋಱು]

**ಮಿಸುಪೇಱು** (ಕ್ರಿ). ಹೊಳಪೇರು ; ಮಿಂಚು : ಅಸಮತರ ಕ್ಷುಧಾಗ್ನಿ ನೆಱೆ ನಂದೆ ಬಸಿಱೊಳ್ ಮಿಸುಪೇಱೆ ಪೊಂಗೆ . . . ದಂಪತಿಚಕೋರಚಯಂ ನಲಿದಲ್ಲಿಗಲ್ಲಿಗಿಂತೆಸೆದುದು (ಸುಕುಮಾ. ೪-೫೫).
[ಮಿಸುಪು + ಏಱು$_1$ (< ಪೆಱ್$_1$)]

**ಮಿಸುಮಿಲ್ಲಿ** (ನಾ). ಚೂರು; ತುಂಡು : ಉದಕದೊಳು ನನೆಹಿ ಮರ್ದಿಸಿದ ಸೊಜ್ಜಿಗೆಯ . . . ಹದನಱಿದು ಅಟ್ಟಳುಹಿ ಮಿಸುಮಿಲ್ಲಿಯಂ [ಶಾಶಾಂ. ಬಿಸಿ] ಕುಯಿದು ಚದುರಿಂದ ಘಟ್ಟವಾಲೊಳು ಹಾಕಿ ಪರಿಮಳಿಸೆ ತಾನೆ ಬೆಣ್ಣೆಯ ಪಾಯಸ (ಸೂಶಶಾ. ೩-೦೦); ಪುಸಿಯೇಕೆ ನಿಮ್ಮವರೆ ಯ್ಯಂದು ಬೇಗದಿ ಮುಸುಡುದೋಱುವಡಿದ ನಾನು ಮಿಸುಮಿಲ್ಲಿ [ಶಾಶಾಂ. ಸಿಮಿಲಿ] ಮಾಡಿ ಕಂಡರಿಸಿಕ್ಕಿ ಪೋಗುವೆನು (ಕುರಾಶಾಂ. ೯-೦೦೬). [ ? ]

**ಮಿಸುಸೂತ್ರ** (ನಾ). (?) : ನಿಮಿಷಾರ್ಧದಿಂ ತನ್ನೀಪ್ಸಿತಕಾರ್ಯಮಂ ಮಿಸುಸೂತ್ರಮಂ ಮಾಡಿಕೊಟ್ಟುದಱಿಂ ತ್ರಿಲೋಕದೊಳಂ ತ್ರಿಕಾಲದೊಳಂ ಸಮ್ಯಕ್ತ್ವದಿಂ ಬಿಟ್ಟ ಹಿತಮಪ್ಪ ವಸ್ತು ಪೆಱತಿಲ್ಲಂ (ರತ್ನಕ. ೦-೨೩ ವ). [ ? ]

**ಮಿಸ್ರ**, ಮಿಸರು (ನಾ). ಈಜಿಪ್ಟ್‌ದೇಶ ಮತ್ತು ಅಲ್ಲಿಯ ಜನಾಂಗ : ಮಿಸ್ರದೊಂಬತ್ತನೆಯ ಮಾರಿ ತಲೆದೋರಿತೇ ? (ಗೂರೂಭಾ. ೦೩-೩೨೨). **ಮಿಸರು** : ಈ ಸೀಮೆಯಿಂದ ಇಂಗ್ರೇಜ ಫೌಜು ಮಿಸರಿನ ಸೀಮೆಗೆ ಹೋಗಿ ಮುಸಲ್ಮಾನರ ಫೌಜಿಗೆ ಕುಮಕು ಮಾಡಿ, ಮಿಸರಿನ ಸೀಮೆಯನ್ನು ಫರಾಶೀಸರ ಕೈಯಿಂದ ಬಿಡಿಸಿದ ಕಾರಣ (ರಾಜೇಂದ್ರ. ೨೨೪).
[ ← ಅರ. ಹಿಂ. ಮಿಸ್ರ; ಮರಾ. ಮಿಸರ ]

**ಮಿಸ್ರಾನಿ** (ನಾ). ಅಡುಗೆ ಮಾಡುವವಳು; ಅಡುಗೆಯವಳು : ಏನು ಚಂಪಾ! ರೊಟ್ಟಿಯನ್ನು ತಯಾರು ಮಾಡಿಕೊಡುವಿಯಾ ? ಮಿಸ್ ರಾನಿಯಾಗುವೆಯಾ ? (ಗಂಸಮ. ೦೩೭).
[ ← ಹಿಂ. ಮಿಸರಾನೀ, ಮಿಸಿರಾಣಿನ್ ]

**ಮಿಸ್ರಿ** 'ಮಿಶ್ರಿ' ನೋ.

**ಮಿಹರಬ್** 'ಮಿಹಿರಾಬು' ನೋ.

**ಮಿಹಿಕಾಕರ** (ನಾ). ಹಿಮಕಿರಣಗಳನ್ನು ಹೊಂದಿದವನು ; ಚಂದ್ರ : ಇಹಪರಭೋಗವನೀವುದು ಮಿಹಿಕಾಕರವಾರವೂಜೆಯುದವಸೆಯೊಳ್ ಬರೆ (ಶಾಂತಿಪು. ೧-೦೬-೮). [ಸಂ.]

**ಮಿಹಿಕೆ** (ನಾ). ೧. ಮಂಜು ; ಹಿಮ ; ಇಬ್ಬನಿ : "ಪ್ರಾಲೇಯಂ . . . ಮಿಹಿಕಾ, ನೀಹಾರಃ — ಈ ೮ ಮಂಜು" (ಹಲಾಯು. ೦೦೬-೨೮). ೨. ಕರ್ಪೂರ. [ ಸಂ. ಮಿಹಿಕಾ ]

**ಮಿಹಿರ** (ನಾ). ೧. ನೇಸರು ; ಸೂರ್ಯ : "ಆದಿತ್ಯಃ . . . ಮಿಹಿರಃ, ವಿರೋಚನಃ . . . ತ್ರಯಿಾತನುಃ _ ಈ ೪೭ ಆದಿತ್ಯನ ಪೆಸರು" (ಹಲಾಯು. ೬-೩೬); ಮಿಹಿರ ಪ್ರದ್ಯೋತಿಸಂಧ್ಯಾಭವನ ಸಮಯದೊಳ್ ಪದ್ಮಿನೀಷಂಡದೊಳ್ ಪೊದಟ್ದು ಹಬಿರ್ವರ್ದುಂಗುರಂ(?) ನೀರೊಳಗಣ ಮುಗುಳೊಳ್ ಸಿಲ್ಕಿ . . . ಇರ್ದತ್ತು (ಸುಕುಮಾ. ೩-೦೫). ೨. ಚಂದ್ರ. ೩. ಮೋಡ ; ಮುಗಿಲು. ೪. ಗಾಳಿ. ೫. ಮುದುಕ; ವೃದ್ಧ. ೬. ಎಕ್ಕದ ಗಿಡ. [ಸಂ.]

**ಮಿಹಿರನಂದನ** (ನಾ). ೧. ಸೂರ್ಯನ ಮಗ. ೨. ಕರ್ಣ : ಅಹಿತನಿಟ್ಟಳಕಳುಕಿ ಕೆಲದಲಿ ಮಿಹಿರನಂದನನೆಚ್ಚಡಂಬಿನ ಲಹರಿ ಮಸಗಿತು (ಕುಮಾವ್ಯಾ. ೦೬-೪೬). [ಸಂ.]

**ಮಿಹಿರಬಿಂಬ** (ನಾ). ಸೂರ್ಯಬಿಂಬ ; ಸೂರ್ಯಮಂಡಲ : ಮಿಹಿರ ಬಿಂಬವ ಕಾಣದೀ ನೃಪಮುಹಿಳೆಗಿದು ವಿಧಿಯೇ (ಕುಮಾವ್ಯಾ. ೦೪-೭೨). [ಸಂ.]

**ಮಿಹಿರಾಧ್ವ** (ನಾ). ಸೂರ್ಯನು ಚಲಿಸುವ ಮಾರ್ಗ; ಆಕಾಶ : ಬಹುಧೂಮಲೇಖೆ ನಿಮಿರ್ದವು ಮಿಹಿರಾಧ್ವದೊಳಾಂಜನೇಯನೊಡರಿಸೆ ಲಂಕಾದಹನಮಂ (ಶಂಭಾಪು. ೦೧-೦೪೫). [ ಸಂ. ಮಿಹಿರಾಧ್ವನ್ ]

**ಮಿಹಿರಾಬು, ಮಿಹರಬ್** (ನಾ). (ಮಸೀದಿ ಮುಂತಾದ ಕಟ್ಟಡದ) ಬಾಗಿಲಿನ ಮೇಲುಭಾಗದ ಕಮಾನಿನಾಕಾರದ ರಚನೆ : ಇದರೊಳಗಿನ ಮಿಹಿರಾಬಿಗೆ ಚಿನ್ನದ ಮುಲಾಮು ಮಾಡಿದ್ದಾರೆ (ಮುಂಬಯಿ. ೬-೦೦೫). **ಮಿಹರಬ್** : ಮಿಹರಬ್ ಹಜಾರದ ಪಶ್ಚಿಮಗೋಡೆಯಲ್ಲಿನ ಗೂಡು (ವ್ಯಾಪಸ್ತು. ೦೫೬). [←ಅರ. ಹಿಂ. ಮಿಹರಾಬ್, ಮೇಹರಾಬ್; ಮರಾ. ಮೇಹರಾಬ್, ಮೇಹರಬ್, ಮೇಹರಾವ್ ]

**ಮಿಹಿಲಾಳು** (ನಾ). "ಕಿರಿಯ, ಕ್ಷುಲ್ಲಕ (?)" (ಬಸವ. ಕೋಶ); "ಪಟುಭಟ" (ಬಸವ. ಕ. ಕೋಶ) : ಆ[ಶಾಶಾಂ. ಆನು] ಮಿಹಿಲಾಳು ಭೋಜದೇವುಲಾಳು (ಬಸವ. ೩೨೬). 'ದೇವುಲಾಳು' ಪಾಠ. [ ? ]

**ಮಿಳ್** (ಕ್ರಿ). ೧. ಅಲುಗಾಡು ; ಚಲಿಸು : 'ಮಿಳ್ಳಿಸು' ಪರಾ. ೨. ಹಬ್ಬು; ವ್ಯಾಪಿಸು : 'ಮಿಳ್ಳಿಚು' ಪರಾ. P 'ಮಿಳ್ಳಿಸು', 'ಮಿಳ್ಳಿಚು' ಎಂಬ ಎರಡೂ ಶಬ್ದಗಳು ವ್ಯಾಪಕವಾಗಿ ಕವಿಗಳಿಂದ ಪ್ರಯೋಗಗೊಂಡಿವೆ. ಇವುಗಳಲ್ಲಿ 'ಇಸು' ಮತ್ತು 'ಇಚು' ಎಂಬುವು ಸೇರಿರುವುದರಿಂದ, ಮೂಲರೂಪವಾಗಿ 'ಮಿಳ್' ಶಬ್ದವು ಇದ್ದಿರಬೇಕೆಂದು ಊಹಿಸಲಾಗಿದೆ. ಇದಕ್ಕೆ ಕಾವ್ಯಪ್ರಯೋಗಗಳು ದೊರಕಿಲ್ಲ.

**ಮಿಳಕತ್** 'ಮಿಳಖತ್ತು' ನೋ.

**ಮಿಳಖತ್ತು, ಮಿಳಕತ್** (ನಾ). ಆದಾಯ ; ಉತ್ಪನ್ನ : ಕಾಕಾನ ಶ್ರೀಮಂತಿಕೆ ಆವರ ಖುದ್ದ ಮಿಳಖತ್ತಿನ ಆಸ್ತಿಯಲ್ಲಿದೆ (ದೀಶಹ. I, ೦೬). **ಮಿಳಕತ್** : ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ ಮತ್ತು ಅನ್ಯದೇಶೀಯವೆಂದು ಗುರುತಿಸಲಾಗದ ಶಬ್ದಗಳೆಂದರೆ _ ಕಚೇರಿ . . . ಬಾಬತ ; ಮಿಳಕತ್ ; ಸರಕಾರ (ಶಾಕುಶಾ. ೦೬೬).
[ ←ಅರ. ಮಿಲ್ಕತ್ ; ಮರಾ. ಮಿಳಖತ್, ಮಿಳಕತ್, ಮಿಳಗತ್ ]

**ಮಿಳನ** 'ಮಿಲನ' ನೋ.

**ಮಿಳಮಿಳ** 'ಮಿಳ್ಮಿಳ' ನೋ.

**ಮಿಳಮಿಳನೆ** 'ಮಿಳ್ಮಿಳನೆ' ನೋ.

**ಮಿಳಿ, ಮಿಣಿ** (ನಾ). ೧. ಚರ್ಮದ ಪಟ್ಟಿಗಳನ್ನು ಹೆಣೆದು ಮಾಡಿದ ಹಗ್ಗ; ತೊಗಲಿನ ಹಗ್ಗ : ನೂಚಿಾಡಿನ ಬಾಲಮಂ ಮುರಿದೊಡೇಂ ಮಿಳಿ[ಶಾಕಾಂ. ಣಿ]ಯುಕ್ಕುಮೆ ಕಣ್ಣಿಯುಕ್ಕುಮೆ (ಸಮುಕ. ೮-೨೪೮); ಪೆಗಲೊಳ್ ತಗುಳ್ಚಿ ಮಿಳಿಗಳಂ . . . ಪುಗುತರೆ (ನೇಮಿಪು. ೮-೪೬); ಮಿಳಿ ಪೆಗಲೊಳ್ ಕೆಯ್ಯೊಳ್ ಸಂಬಳಿಗೋಲ್ (ಮಹಾಪೇ. ೮-೨೩). ೨. ಹಗ್ಗ; ಪಾಶ : ಲಲಿತಲತಾಮ್ಯದುಶಾಖಾವಲಿ ಮಿಳಿಯಾಗೊರ್ವರೊರ್ವರಂ ತೂಗಿ . . . ಉಯ್ಯಲಾಡೆ (ಶಾಂತಿಪು. ೪-೯೬); ಸೌರಭೇಯಂಗಳ್ . . . ನಡುಕೋಡುಪರಂ ನಟ್ಟ ಕೋಡುಗಳಂ ಮಿಳಿಯುಂ ಕಟ್ಟಿ ಗೋಪಾಲಕರ್ ಕೇಟಿ ಸತ್ತು (ಅರ್ಜನೇ. ೪-೦೨೩ ವ); ಮರಿಚ ಮೌಕ್ತಿಕ ಲೋಹ ಹೇಮಾಭರಣ ಚರ್ಮ ದುಕೂಲ ಮಿಳಿ ಹಾಸರಿಯ ಹೂವಿನ ದಂಡೆಗೇಕನಿವಾಸವೇಕೆ (ಕುಮಾವ್ಯಾ. ೪-೪೪). ೩. ಆನೆ ಮುಂತಾದ ಪ್ರಾಣಿಗಳ ನಡುಕಟ್ಟಿಗೆ ಬಿಗಿಯುವ ತೊಗಲಿನ ಪಟ್ಟಿ; ಚೂಷೆ : ಮರುಚ್ಚಾಪಮೆಂಬ ವಿಚಿತ್ರಾಂಬರದೊಂದು ಚಿನ್ನ ಮಿಳಿಯುಂ ಮಿಂಚೆಂಬ ಕೊಂಬುಂ ಕರಾಳವೆನಲ್ ಗರ್ಜಿಸಿದತ್ತಗಲ್ದ ನಿಯರಂ ಕಾರೆಂಬ ಮಾರದ್ವಿಪಂ (ಜಗನ್ನಾ. ೪-೨೨); ಮಿಳಿ ಬತೆ ಗುಳಿಪೋ ಪತ್ರಂ ಘಳರಸಮೆ ಮದಾಂಬು (ಗಿಂಕ. ೭-೪೪); ಮದದಾನೆಯೊಂದು ಭೂಪನ ಗೃಹದೊಳ್ ಪಚಿದುದು ಹೊರಜೆಯ ಮಿಳಿಯುಂ (ರಸರ್ಸ. ೫-೦೩). ೪. ಲೋಹದ ಸರಪಣಿ : ಮಿಳಿಯೊಳ್ ಮಾತಂಗಮುಂ ಕಟ್ಟಿದೊಡೆ ನಿಲುಗುವಂತಲ್ಲದೆ . . . ಪಂಜಿಯೊಳ್ ಕಟ್ಟಿದಂದುಮ್ಮಳದಿಂ ಮತ್ತದ್ವಿಪಂ ನಿಂದಪುದೆ ಮರುಳೆ (ರಸಾರೆಮ್ಮ. ೦೧-೪೫); ಹೊನ್ನಮಿಳಿ ಸಹಿತ ಕೆತ್ತಿಸಿದವಿಕ್ಕಲದಲಂದಜುಮತ್ತುಸಾವಿರ ಪಂಚ ಘಂಟೆಯ ಮತ್ತಗಜ ಶೃಂಗರಿಸಿತು (ಸಂಭಕ. ೨೦-೬೨). ೫. ಲಗಾಮು : ಮಿಳಿ[ಶಾಕಾಂ. ಣಿ]ಗಳಾದವು ಕುಹು ಸುತಾರಾವಳಿಗಳಮಳಪ್ರಣವವಾದುದು ಮೊಳೆಯ ಬಲುಚಮ್ಮಟಿಗೆ ಹಗ್ಗಕೆ ವರ ಷಡಂಗಪಾವು (ಕುಮಾವ್ಯಾ. ೬-೬). ೬. ತೊಗಲಿನ ಹಗ್ಗದ ಮೇಲೆ-ಹಾಕುವ ಒಂದು ಬಗೆಯ ತೆರಿಗೆ : ಮಗ್ಗದೆಚಿ ತುಪ್ಪ ದಳ ಮಿಳಿ ಗುಳು ನೂಲು ಮುಖ್ಯವಾದಯೆಲ್ಲಾ ಅಪೂರ್ಬಾಯಗೂಡಿ ಕಟ್ಟಿಕೊಟ್ಟು ಗುತ್ತಗೆಯ ಸಿಧಾಯ ಗದ್ಯಾಣ ನೂಚು ೧೦೦ (ಎಕ. XV, ಬೇಲೂರು. ೨೫೨-೬ ; 1298). ೭. (ಕರಾ) ಕೆಸುವಿನ ದಂಟು. **ಮಿಣಿ**$_1$: ೧. "ಮಿಣಿ ಚರ್ಮಪಾಶಂ" (ಮಂಗರಾ. ೯೪-೨೩): ಹೆಗಲ ಮಿಣಿ ಕೆಯ್ಯ ಸಂಬಳಿಗೋಲಿನೀಶ್ವರಂ . . . ಹಿರಿಯ ವೇಷಂಗೊಂಡು ಮನೆಯ ಮುಂದಂ ಸುಳಿಯೆ (ಕಂಠೀರ. ಹ. ೨೬೩-೦೪) ; ಬಿಡದೆ ಬೆಟ್ಟದರಲಗಗಳ ನುಗ್ಗಡದ ಮುರಿಯಾಣಗಳ ಮಿಣಿಯಲಿ ಜಡಿದರಿಚಿದರು ಬಳಿಯ ಸಬಳದಲಳ್ಳೆಗುಕ್ಕಿನಲಿ (ಕೊರಟಾ. ೬-೨೬-೨೮). ೨. ಮಿಣಿಯಿಲ್ಲದುಯ್ಯಲಾಡುತಿಹನು . . . ರಾಜೇಂದ್ರ (ಭರತ. ೦೮-೬೬) ; ಹತ್ತುಸಾವಿರ ಸನ್ನೆಗಳಿಂದ ಬಿಂಬವನೆತ್ತಿಸಿ ಬಂಡಿಗೈದಿಸಿದ ಕತ್ತದ ಮಿಣಿಗಳ ಜೋಡಿಸಿ ಜನರ ತಾನಿತ್ತೆಳೆವಲಿ ನಿಲ್ಲಿಸಿದನು (ಗೋಮಟೇ. ೩-೪೦) ; ಜನರು ಹೆಗಲ ಮೇಲೆ ಕಂಡ ಮಿಣಿಗಳನ್ನು ಹೊತ್ತುಕೊಂಡು . . . ಹೊಲಗೆಲಸಕ್ಕೆ ಹೋಗಹತ್ತಿದ್ದಾರೆ (ಮಂಜಾಕ. ೬). ೩. ಉಠಿದ ಮಿಣಿ ಮೊಗರಂಬಗದ್ದುಗೆ ಬಡಿಗೆಗಳ ಸೂತ್ರಿಕೆಯ ಕಬ್ಬಿಯ ಕಡಿಯಣದ ಕುಸುರಿಗಳಲೆಸೆದುದು ಕೂಡೆ ರಣಭೂಮಿ (ಕುಮಾವ್ಯಾ. ೦೫-೭೦) ; ಕೊರಳ ಜೊತ್ತೆಗೆ ಸುರುಚಿರ ಚಿನ್ನ ಮಿಣಿ ಮತ್ತುರದೊಳು ಪೊನ್ನಘಂಟೆಗಳು (ಅಂಜನ. ೬-೯೮). ೪. ನೆಲವನ್ನು ಬಿಟ್ಟು ಅಂತರಿಕ್ಷದಲ್ಲೇ ತಿರುಗುವ ರೈಲುಹಾದಿಗಳೂ ಇವೆ. ಅಂತರಿಕ್ಷದಲ್ಲಿ ತೂಗುವ ಉಕ್ಕಿನ ಮಿಣಿಗಳೇ ಇವಕ್ಕೆ ಆಧಾರ (ಬಾಲಪ್ರ. I, ೨೬೯) ; ಬಂಡಿಗಳು ಉಕ್ಕಿನ ಮಿಣಿಗಳ ಸಹಾಯದಿಂದ ಕೆಳಗೂ ಮೇಲಕ್ಕೂ ಹೋಗಿಬರುತ್ತವೆ (ಅಭೂಕ. ೨೬೮) ; ಆ ನಾಯಿ . . ಬಿಡಾರದಲ್ಲಿ ಕಟ್ಟಿ ಹಾಕಿ ಹೋದರೆ, ಕೂಗಾಡಿ ಒದ್ದಾಡಿ ಮಿಣಿ ಕಿತ್ತುಕೊಂಡು ಬರುತ್ತಿತ್ತು

(ಮಲೆಮ. ೭). ೮. ತಂತಿಯ ಎಳೆಗಳಿಂದ ಮಾಡಿದ ಹುರಿ, – ಹಗ್ಗ. ವಿದ್ಯುತ್ತಿನ ಮಿಣಿ(cable)ಗಳಲ್ಲಿ ಒಳಕ್ಕೆ ನೀರು ಜಿನುಗದಂತೆಯೂ . . . ಇದರ ಹೊದಿಕೆಯನ್ನು ಹಾಕುತ್ತಾರೆ (ಬಾಲಪ್ರ. III, ೧೨೫೦). ೯. ಒಂದರೊಡನೊಂದು ಸೇರಿಕೊಂಡಿರುವುದು ; ಹೆಣಿಗೆ : ಕಾವ್ಯ ಬಗಟಿಲ್ಲ, ಒಡಪಿಲ್ಲ, ರಸದ ಕಣಿ, ಭಾವದ ಮಿಣಿ (ಚಂದ್ರಮಾ. ಮುನ್ನುಡಿ).

[ ದೇ.॥ ತೆಲು. ಮಿಳಿ, ಮಿಳಿಗ ; ಕೋತ. ಮಿಳ್ಕ್ ]

**ಮಿಳಿಂದ** (ನಾ). ತುಂಬಿ ; ಭ್ರಮರ : ಪುಳಿಂದಂ ಮಿಳಿಂದನಂತೆ (ಪ)ವನಾನೀತಕುಸುಮಗಂಧಮನಾರಯ್ದು ಎಡೆಮಾಡಿ ಬಂದು (ಪುಷ್ಪಕ. ೫-೧೦೯ವ) ; ವಾರಿಜಾಕ್ಷಿಯರು . . . ದೇವಾಯತನಕ್ಕೆದುತ್ತಿರೆ ತನುಗಂಪ ಚಾರುತರಮಂ ಕಂಡು ಭರದಿಂ ಮಿಳಿಂದಗಳು ತೊಳಪ ಮಂಜುಳರೂಪವ ತೋರೆ (ವಂಶಾಭಾ. ೦-೯-೪೯). [ ಸಂ. ಮಿಲಿಂದ ]

**ಮಿಳಿತ** 'ಮಿಲಿತ' ನೋ.

**ಮಿಳಿಮಿಳಿ** (ನಾ). ಒಂದು ಅನುಕರಣ ಶಬ್ದ : ' ಮಿಳಿಮಿಳಿಗಣ್ ' 'ಮಿಳಿಮಿಳಿನೇತ್ರ' ಪರಾ.

**ಮಿಳಿಮಿಳಿಗಣ್** (ನಾ). ರೆಪ್ಪೆಗಳನ್ನು ಒಂದೇ ಸಮನೆ ಬಡಿಯುವ ಕಣ್ಣು ; ಮಿಳಕಿಸುವ ಕಣ್ಣು : ಗಿಡಿಗಿಡಿಜಂತ್ರಂ ಮಿಳಿಮಿಳಿಗಣ್ಗಳಿನಲ್ ನೋಂತಳಂತು ನೋನದೆ ಸುಖಕ್ಕೆ ಬಯಸಿದೊಡುಂಟೇ (ಸುಕುಮಾ. ೯-೮).

[ಮಿಳಿಮಿಳಿ + ಕಣ್ ]

**ಮಿಳಿಮಿಳಿತ** (ನಾ). ಷಂಡ ; ನಪುಂಸಕ : ಯಾರು — ಈ ರಾಮನಾಥನೆ? — ಬರೀ ಮಿಳಿಮಿಳಿತ (ಮಾರುದಾ. ೨೯೫).

[ ←ಮರಾ. ಮಿಳಮಿಳೀತ=ನಿಸ್ಸಾರ ]

**ಮಿಳಿಮಿಳಿನೇತ್ರ** (ನಾ). = ಮಿಳಿಮಿಳಿಗಣ್ : ಜಯಮತಿಕಂತಿಯರ್ ಕಂತಿಯರಾಗೆ ತಪಂಬಟ್ಟು ಗಿಡಿಗಿಡಿಜಂತ್ರ[ಂ] ಮಿಳಿಮಿಳಿ[ಪಾಠಾಂ. ಳಮಿಳ] ನೇತ್ರವಾಗಿ ಘೋರವೀರತಪಶ್ಚರಣದೊಳ್ ನೆಗಟುತ್ತಿರ್ದರ್ (ವಡ್ಡಾರಾ. ೦೩೯-೩). [ಮಿಳಿಮಿಳಿ + ನೇತ್ರ]

**ಮಿಳಿಯಿಕ್ಕು** (ಕ್ರಿ). ಹಗ್ಗದಿಂದ ಕಟ್ಟು, – ಬಂಧಿಸು : ಒರ್ಮೆ ಪೋರಿಗಳಾಗಿ ರಾಜಮಂದಿರದ ಸೀಯಬಾರದೊಳ್ ಪೊಣರ್ದು ಮಿಳಿಯಿಕ್ಕಿ ತೆಗೆಯೆಯುಂ ಕರಮೊಳಸೋರದೆ . . . ಪೋರ್ದು ಕೋದು (ಶಾಂತಿಪು. ೯-೪೮). [ ಮಿಳಿ + ಇಕ್ಕು ]

**ಮಿಳಿರ್**, ಮಿಳಿರು (ಕ್ರಿ). ೧. ಅತ್ತಿತ್ತ ಅಲುಗಾಡು : ಮುತ್ತಿನ ಬೆಳ್ಗೊಡೆಗಳ ಬಳಗದೊಳಗೆ ಚಾಮರತತಿ ಕೆಲದೊಳ್ ಮಿಳಿರ್ದು ತೊಳಗೆ (ಜಗದಂಪು. ೯೮೨ ರಗಳೆ). ೨. ತೂಗು ; ತೊನೆ ; ಹೊಯ್ದಾಡು : ಮಾಮರನಳ್ಕೆಗೊಂಬಿನೊಳ್ ಮಿಳಿರ್ವೆಳವಳ್ಳಿ ಬಾಲಮಲ್ಗೊಂಚಲೆ ಕೇಸರಮೆಂಬಿನಂ ಮನಂಗೊಳೆ (ಆದಿಪು. ೭-೨೩) ; ಎಳಮಾವಿನಳ್ಳೆಗೊಂಬಂ ತಳ್ಪೊದ್ದೆಳಸಿದ ವಸಂತದೂತಿಯ ಮಿಳಿರ್ವುಯ್ಯಲನಾಡುವಬಲೆ ಪಾಡಿದ ಳೊರ್ವಳ್ (ಕಾವ್ಯಾವ. ೨೯೨) ; ಮಿಳಿರ್ವ ಕುಹಳಾನೀಕಮುಮರ್ದ ಪೂಗಂಗಳಿಂ (ಉದ್ಭಟ. ೩-೬೮). ೩. ಬಾಗು ; ಬಗ್ಗು : ಚೆನ್ನ ಪಣ್ಗೊನೆಯ ಭರದಿಂ ಸನ್ನತಮಾಗಿರ್ದು ಬಾಳೆಸಸಿಯೊಳ್ ಮಿಳಿರ್ಗುಂ ತನ್ನ ಶಿಶುವಿಂಗೆ ಮೊಲೆಯಂ ಮನ್ನಿಸಿ ಬಾಗಿರ್ದು ಕೊಡುವ ಬಾಲೆಯ ತೆಱದಿಂ (ಚಾರಪು. ೦-೧೦೭). ೪. ಹೊರಳಾಡು ; ಉರುಳು : "ಮಿಳಿರ್ — ಸಮೃದ್ಧೌ (ವೃದ್ಧಿಯಾಗು), ಲುಠನೇ (ಹೊರಳಾಡು)" (ಕಮುಧಾ). ೫. ನೆಗೆ ; ಜಿಗಿ ; ಹಾರು : "ಮಿಳಿರ್ದುದೆನಲ್ಕೆ ನೆಗೆದುದು" (ಕಶಕಂ. ೦೯೯). ೬. ನಿಮಿರು ; ನಿಗುರು : ಮಿಳಿರ್ವನ್ನಂ ಕುಡಿವಾಲ ಮುಪ್ಪಳಿಸುವನ್ನಂ ದಿಟ್ಟಿ . . . ತಿಳಿನೀರೂಡಿ ಮುರಾರಿ ವತ್ಸಕುಲಮಂ ಕಾದಂ (ಜಗಪು. ೩-೭೦) ; ಮೋದದಿಂ ಮಿಳಿರ್ವನ್ನಂ ಕುಡಿವಾಲಮುಪ್ಪಳಿಸುವನ್ನಂ ದಿಟ್ಟಿಗಳ್ ಸುರ್ಕಿ ಕೆಕ್ಕಳಿಪನ್ನಂ ಕಿವಿ ಪುಲ್ಗಳಂ ಕಿಱಿದು ತಂದೂಡುತ್ತೆ . . . ಸಂಚರಿಸಿದರ್ ಗೋಪಾಲಲೀಲಾಸ್ಪದರ್ (ಜಿನ್ನಪು. ೫-೨-೦೫೭). ೭. ಚಾಚು ; ನೀಡು : ಮಿಳಿರ್ವ ನಾಲಗೆಯುಬ್ಬಿದ ಪುರ್ವು . . . ಭೀತಿಯಂ ಪುಟ್ಟಿಸೆ ಬಂದು ಕಟ್ಟಿದಿರೊಳಿರ್ದನದೊರ್ವನಡುತ್ತು ಜಟ್ಟಿಗಂ (ಚಂದ್ರಪು. ೫-೭೦) ; ಬಳ್ಳಿಗಳ ಕುಡಿ ನಭಕ್ಕೆ ಮಿಳಿರ್ವೊಡಂ ಕುಟಿಗಳೊಳಗೊಱತು ನೀರ್ ಬರ್ಪೊಡಂ . . . ಇವ ನೋಡಿ ಪೇಟು ಮಟಿಯಧಿಕ ತಾನೆಂಬುದಂ (ಅಟ್ಟಮ. ೨-೦ ರಗಳೆ). ೮. ವ್ಯಾಪಿಸು ; ಹಬ್ಬು ; ಪಸರಿಸು : ಮಿಳಿರ್ವ ವಳ್ಳುರಿಯಲ್ಲದ ವಹ್ನಿ ಕಾಳಿಸಲ್ಲದ ಜವನಬ್ಧಿಮಧ್ಯಗತನಲ್ಲದ ಬಾಡವಂ (ಕಶಾ. V, ೫೨-೦೮ ; 1087) ; ಕಡೆಗಣ್ಣ ಕುಡಿಮಿಂಚು ಸಂಚಳಿಸಿ ಮಿಳಿರೆಯುಂ (ಪುಷ್ಪಪು. ೫-೩೯ ವ). ೯. ಅಭಿವೃದ್ಧಿ ಹೊಂದು ; ಏಳಿಗೆಯಾಗು : "ಮಿಳಿರ್-ಸಮೃದ್ಧೌ (ವೃದ್ಧಿಯಾಗು), ಲುಠನೇ (ಹೊರಳಾಡು)" (ಕಮುಧಾ) ; "ಮಿಳಿತುದೆನೆ ವೃದ್ಧಿಯಾದುದಕೆ ನಾಮಂ" (ಕಶಮಂ. ೨೯). ೧೦. ಉತ್ಸಾಹಗೊಳ್ಳು : ನೀಱೆಯರ ನಿಡಿಯ ಕಡೆಗಣ್ಣೀಱಿಂದಿರ್ದ ಬರಿಯೆ ಬಱಿಕಮಲರಂಬುಗಳಿಂ ಮಿಱಿ ಮಿಳಿರ್ದಸದೆ ಮಸಕದೆ ತೋಱದೆ ಮಾಣ್ದಪನೆ ತನ್ನ ಸೊಬಗನನಂಗಂ (ಅಂಬಾವ. ೪-೪೭). ೧೧. ಹೆಚ್ಚಾಗು ; ಅಧಿಕವಾಗು : ಬೆಮರ್ ಮಿಗೆ ಮೂಡೆ ಸುಯ್ಕೆಲರ್ ಮಿಳಿರೆ . . . ಗಟ್ಟಿಗಳನ್ನದು ಮುಗುಳ್ಚಿದ ರಿಂದುವಕ್ತ್ರೆಯರ್ (೧೧೫. ೨-೯೦) ; ಒಗೆದಳುರ್ದು ಮಿಳಿರ್ದ ಬಲದೊಳ್ ಪೊಗೆಯದೆ ಕಿಡಿಸೂಸದಸುಗೆಯುಳದಳಿರ್ಗಳನಾಯ್ದುಗೆವೊಯ್ದುಂತಿರೆ ನಾಲಗೆ ಸೊಗಯಿಸುವುರಿಮಾಲೆಯಂ ತಳೋದರಿ ಕಂಡಳ್ (ಅವಂತಿ. ೯-೦೨೫). ೧೨. ಹೊಳೆ ; ಮಿಂಚು ; ಪ್ರಕಾಶಿಸು : "ಮಿಳಿರೆ[ನೆ] ಪೊಳೆದುದು" (ರಪ್ನಕಂ. ೦) ; ಮಿಳಿರ್ವ ಕುಡಿಮಿಂಚು ಸುರಧನು ತಳಿರ್ದೋರಣ . . . ಬವ್ದವಣಂ ಜಳವರವಮಾಗೆ ಜಯಮಂಗಳಸೂಚಕವಾದುದತನುಗಾ ಘನಸಮಯಂ (ಚಂದ್ರಪು. ೯-೯೨) ; ಮಿಳಿರ್ವ ಕೆಂಬರಲೋಲೆಯಂ ಕಿವಿಗೆ ಸಾರ್ಚಿ (ಕದ್ಯಾಣ. ೩-೯೭). ೧೩. ಹೊರಸೂಸು ; ಹೊರಚೆಲ್ಲು : ಪೊಳೆವಲರ್ಗಂಗಳಿಂ ಮಿಳಿರ್ದ ಬೆಳ್ಪು ರಸಾತ್ಮಕಮಾಗಿ ಗಂಡಮಂಡಳತಳ ದಿಂದಮಂದಿಱಿಯುತಿರ್ದುದು (ಕಾದಂಪೂ. ೭೯೯). ೧೪. ಶೋಭಿಸು ; ಕಂಗೊಳಿಸು ; ರಂಜಿಸು : ದೇವಸೌಂದರಿಯರ ದಿವ್ಯಮಪ್ಪ ಪೊಸಗಂಪ ನಲಂಪನಪ್ಪುಂಕಿಕೊಂಡವಳ್ದಿರ ಮಿಳಿರ್ವೊಳ್ಗುರುಳ್ಗಳನೆ ಲೀಲೆಯಿನಾಡಿಸಿ . . . ಬೀಸಿದುದು ತಂಬೆಲರ್ (ಆದಿಪು. ೨-೩೫) ; ನಳನಳಿಸುವ ಕೆಂದಳಿರ ಕಾವಣಂಗಳುಮಂ ಮಿಳಿರ್ವ ಮಲ್ಲಿಕಾಮಂಟಪಂಗಳುಮಂ. . . ಲಲಿತಲತಾನಿಳಯವನೊಳಗುಮಾಡಿ ಪಲವುಂ ನೆಲೆಯ ಚೌಪಳಿಕೆಗಳನಿಕ್ಕಿಸಿ (ಅರ್ಜುನೀ. ೩-೧೦ವ) ; ಮಿಳಿರ್ವ ಮಿಡಿಯ ಗಿಳಿಯ ನುಡಿಯ ಪರಿವ ಕಾಲ ಕರ್ವುಗೋಲ ಚೆಲ್ವನಾಂತು (ಕಬ್ಬಿಗಕಾ. ೩೯೯ ರಗಳೆ). **ಮಿಳಿರು** : ೧೫. ನಗರವಲ್ಲೆಲ್ಲ ತಳಿರು ತೋರಣಗಳು ಮಿಳಿರಿದುವು (ಪಾಗಕಾ. ೫೯).

**ಮಿಳಿಮಿಳಿರ್** (ದ್ವಿರುಕ್ತಿ) : ಮರುದಾಂದೋಳಿತ ಜಂಬೂತರುಶಾಖಾ ಹಸ್ತಕಿಸಲಯಂ ಮಿಳಿಮಿಳಿರುತ್ತಿರೆ ಸನ್ನೆಗೆಯ್ದು ತೋರ್ಪಂತಿ[ರಲೆಸೆದುವು ಪವನ]ಜಂಗೆ ದುರ್ಯೋಧನನಂ (ಗದಾಯು. ೭-೪೩). **ಮಿಳಿರ್ದಾಡು** = ೧. ಅತ್ತಿತ್ತ ಅಲುಗಾಡು : ಕೇತನದ ಹಱಿಗಳ್ ವಾತವ್ರಾತಂಗಳಿಂ ಮಿಳಿರ್ದಾಡೆ (ಶಾಂತಿಪು. ೩-೦೦೯) ; ಗುಡಿಯ ದಾಂಗುಡಿಗಳ್ ಮಿಳಿರ್ದಾಡುವಂತೆ ಕಣ್ಗೆಸೆದವು ತತ್ಪುರೋತ್ತಮನ ಪುಣ್ಯಮನೊಯ್ಯನೆ ಸೂಚಿಪಂತೆವೋಲ್ (ಸುಕುಮಾ. ೯-೨೦). ೨. ಹೊಯ್ದಾಡು ; ತೂಗು : ಮಿಳಿರ್ದಾಡುವ ನುಣ್ಪಳಿರೆಲ್ಲಿಯಲ್ಲಿ . . . ಪಣ್ಗೊನೆಗಳವೆಲ್ಲಿಯಲ್ಲಿಯೆನೆ ಸೋಲಿಸುಗುಂ ಬಿಡದಾವನಂ ಬನಂ (ಕಬ್ಬಿಗಕಾ. ೩೨). ೩. ಹಾರಾಡು ; ಜಿಗಿದಾಡು : ಎಳಗಿಳಿವಿಂಡಿನಂತೆ ಮಿಳಿರ್ದಾಡುವ ತುಂಬಿಯ ಬಂಬಲಂತೆ . . . ಸೋಲಿಸದೆ ಕಾಪನ ಕಬ್ಬಮದಾರನಾದೊಡಂ (ಕಬ್ಬಿಗಕಾ. ೦೯).

[ದೇ.॥ ತಮಿ. ಮಿಳಿರ್ ; ಮಲ. ಮೆಟುಕ್ಕ ; ತುಳು. ಮೆಳಿ]

**ಮಿಳಿರು** 'ಮಿಳಿರ್' ನೋ.

**ಮಿಳಿರ್ಚು** (ಕ್ರಿ). ನಿಮಿರಿಸು ; ನಿಗುರಿಸು : ಕ್ಷೋಣೀಂದ್ರಕೇಳೀತುರಂಗಮಾ ಕುದುರೆಯಂ ಕಾಣುತುಂ ಧ್ವನಿಗೈದು ಪರಿತಂದು ಮೊಗಮನಾಘ್ರಾಣಿಸಿ ಮಿಳಿರ್ಚಿ ಕಿವಿಗಳನೊಡನೆ ಪೆಱದೆಗೆದು (ಕೃಬಿಚಾ. ೨೫-೮). [ಮಿಳಿರ್ + -ಚು₁]

**ಮಿಳಿವೊಱ್** (ನಾ). ತೊಗಲಿನ ಹಗ್ಗದ ಕಂತೆ : ಮಿಳಿವೊಱ್ಯು ತೊಗಲ ಚೀರವುಂ ತೆಗೆದು ಎಡೆಗಿರಿಸಿ (ಶಾಕೋಕೃ. ೬-೨೦). [ಮಿಳಿ + ಪೊಱ್]

**ಮಿಳಿಸುತ್ತು** (ನಾ). ತೊಗಲಿನ ಹಗ್ಗದ ಸುರುಳಿ : ಅಂತು ತಳರ್ದು ನಡೆಗೊಂಡು ಮೊದಲೊಳ್ ಮಿಳಿಸುತ್ತಿಂಗಗ್ಗಳವಾಗಿ ಕಡುಗೊಬ್ಬಿಂ ಬಳೆದ ಪೆರ್ಮರಂಗಳ ತಿಂತಿಣಿಯೊಳಂ . . . ಬರ್ಪಾಗಳ್ (ಕಾದಂಪ. ೨೬೬). [ಮಿಳಿ + ಸುತ್ತು₂]

**ಮಿಳುಮಿಳ** (ನಾ). ಒಂದು ಅನುಕರಣ ಶಬ್ದ : 'ಮಿಳುಮಿಳನೆ' ಪರಾ.

**ಮಿಳುಮಿಳನೆ** (ಅ). ಎವೆ ಮಿಟುಕಿಸದೆ, ಕಣ್ಣು ಪಿಳುಕಿಸದೆ ಎಂಬರ್ಥದ ಒಂದು ಅನುಕರಣಾವ್ಯಯ : ಅಳಿಗಣ್ಣರಂತೆ ಮಿಳುಮಿಳನೆ ನೋಡುತ್ತಿಂ (ಕೊಶಕಂ. ೦೫೬-೦೮). [ಮಿಳುಮಿಳ + -ಅನೆ₁]

**ಮಿಳ್ತು** 'ಮಿಟ್ತು' ನೋ.

**ಮಿಳ್ಳಿಳ, ಮಿಳಮಿಳ** (ಅ). ಕಣ್ಣನ್ನು ಮಿಟುಕಿಸದೆ, ರೆಪ್ಪೆ ಬಡಿಯದೆ ಎಂಬರ್ಥದ ಒಂದು ಅನುಕರಣಾವ್ಯಯ : ತಕ್ಕರೂಕವರ್ದುಕೊಂಡಾದರ್ಥವಂ ಪೂಬ್ಬು ಮಿಳ್ಳಿಳ ನೋಡುತ್ತುಂ (ಅಂಕ್ಷ. ೨-೦೫) ; ನೆಗೆಟ್ಟಿಯ ಬೀರರೆಲ್ಲಂ ಬಡವರ ಪಿತರರಂತೆ ಮಿಳ್ಳಿಳ ನೋಡುತ್ತಿರೆ (ಕಂಶಶಾ. ೬-೩೩೫). **ಮಿಳಮಿಳ**: ಬಳಮೆರಡುಂ ತನ್ನನೆ ಮಿಳಮಿಳ ನೋಡೆ (ಕಂಶಶಾ. ೦೦-೬೦) ; ನಿನ್ನಯ ತಪ್ಪುನ ನೆತ್ತರಂ ಭಯಂಗೊಳೆ ಪವಮಾನಸೂನು ತವೆ ಪೀರ್ದೆಡೆಯೊಳ್ ಕಲಿಕರ್ಣನೇಕೆ ಪೇೞ್ ಮಿಳಮಿಳ ನೋಡುತಿರ್ದಂ (ಕಂಶಶಾ. ೦೩-೨೫).

**ಮಿಳ್ಳಿಳನೆ, ಮಿಳಮಿಳನೆ** (ಅ).=ಮಿಳ್ಳಿಳ : ಸಭೆಯೊಳ್ . . . ಮಿಳ್ಳಿಳನೆ ನೋಡುತ್ತಿರ್ದ ಬಲ್ಲಾಳ್ಗಳಲ್ಲಿ ಭರಂಗೆಯ್ದಪರ್ (ಗದಾಯು. ೩-೩೬) ; ಮನುವಂಶಮಹಾನಿಧಿ ಸೂೞ್ವೋಗೆ ದುರ್ವಳವಂನರಾಗಿ ಮಿಳ್ಳಿಳನೆ ನೋಡುತುಮಿರ್ಪುದೆ ಲೋಗರಂದದಿಂ (ಪರ್ಶಕ. ೯-೬೬) ; ತುಪ್ಪುಳ್ದಱಿದ ಕೋಳಿಗಳಂತೆ ಮಿಳ್ಳಿಳನೆ ನೋಡುತ್ತುಂ (ಭ್ರಹಃ. ೩೫-೫೫ ಪ). **ಮಿಳಮಿಳನೆ** : ಮಿಳಮಿಳನೆ ಕಣ್ಣು ಬಿಟ್ಟುಕೊಂಡೇ ಯೋಚಿಸುತ್ತಿದ್ದ (ಕಾ. ೦೦೮). [ಮಿಳ್ಳಿಳ + -ಅನೆ₁]

**ಮಿಳ್ಳಿಳಿಸು** (ಕ್ರಿ). ಕಣ್ಣನ್ನು ಪಿಳುಕಿಸು ; ಎವೆ ಮಿಟುಕಿಸು : ಮೆಲ್ಲನೀಕ್ಷಿಸಲುಂ ಮಿಳ್ಳಿಳಿಸಿ ಕಣ್ದೆಱೆವ ತೆಱದೆ ಸಂಪಗೆಯ ಮಲ್ಲಿಗೆಯ ಮುಗುಳ್ಗಳುಳ್ಳಲರೆಮುಂ (ಪರ್ಶಕ. ೬-೨೩ಪ). [ಮಿಳ್ಳಿಳ + -ಇಸು₁]

**ಮಿಳ್ಳಾಸ** (ಅ). ಬಹಳವಾಗಿ ; ಹೆಚ್ಚಾಗಿ (?) : ಸುಡು ಸುಡು ಸಿರಿಯ ನಿನ್ನ ಹಸ್ತದೊಳ್ ದೀಕ್ಷೆವಡೆವ ಸ್ವೈಪಿಲ್ಲಾಸ್ಸಿಯ್ಯು ನಮಗೆ ಸಿಡಿದು ಹೋದೆಯಲಾಹಾಹಾಯೆಂದು ಮಿಳ್ಳಾಸ ಮಿಡುಕುತಿರ್ದರು ಮಾಮವರತ್ತ (ಶಶಿತ. ೬೮-೯೯). [?]

**ಮಿಳ್ಳಿ** 'ಮಿಳ್ಳೆ' ನೋ.

**ಮಿಳ್ಳಿಸು, ಮಿಣ್ಣಿಸು** (ಕ್ರಿ). ೧. ಅತ್ತಿತ್ತ ಅಲುಗಾಡು ; ಹೊಯ್ದಾಡು : ಪತಾಕೆಗಳ್ ಮಗುಬ್ಬು ಮಿಳ್ಳಿಸಿ ದಳ್ಳಿಱಿದಾಡೆ (ಶಾಂತಿಪು. ೨-೬೨) ; ಕರೆಗಳ್ ಮಿಳ್ಳಿಸೆ ಚಾಮರಂಗಳಲರಿಂದಂ ಮೆಲ್ಲಿನಿಂ ನರ್ತಿಸುತ್ತಿರೆ ನೀಳ್ದಿರ್ದ ಸೆಜಂಗು . . . ಬೆಳ್ದಿಂಗಳಂತಿರೆ ತೋಱುತ್ತಿಸೆವುತ್ತರೀಯುಮಪಸನಂ ರಾಜೇಂದ್ರ ಚಂದ್ರಾಂಕನಾ (ಕಾದಂಪೂ. ೨೮) ; ಪಸರಿಸೆ ಪೂವಲಿಗಳ್ . . . ಮಿಳ್ಳಿಸೆ ಗುಡಿಗಳ್ (ಕಂಶಪುಶ. ೩-೦೩೯) ; ಮಿಳಿರೆ ಸೆಜಂಗು ಮಿಳ್ಳಿಸೆ ಕುರುಳ್ ತೂಗುತ್ತಿರೆ ತಾರಹಾರಂ . . . ಪಾಡುತುಮುಯ್ಯಾಲಾಡಿದಳ್ (ಕಾಸುಪುಶ. ೦೦-೦೯೦). ೨. ಅಲುಗಾಡಿಸು ; ಅಳ್ಳಾಡಿಸು : ದಿಟ್ಟಿಸಿ ಕಿವಿಯ ಮಿಳ್ಳಿಸುತಾರಿ ಘುಟನಗೆದ (ಕಾಶಿಂಶ. ೯-೯೬) ; ಪಲ್ಲುಗಳ ಕರಿಕಿರಿದು ಕಿವಿಗಳ ಮಿಳ್ಳಿಸನು . . . ಪಟುಗಳ ಕಂಡು ಮುಳಲನು ಚೆಲ್ಲುವನು ಕಣ್ಣಳಿಗೆ (ಜಾಕ್ಷಪ. ೩೨-೨೫) ; ಕಿವಿಯ ಮಿಳ್ಳಿಸುತ . . . ಬಾಲಂಗಳನೆತ್ತಿ ಹೊಸುರ ಸೊಗಡಿನಿಂದಲವ್ವಳಿಸುತ್ತ ಪಥದೊಳಗೆ ಗೋಕುಲದ ಹಿಂಡುಗಳ್ ಬರುತಿರ್ದುವು (ಕುರಂಗ. ೩೭-೩೨). ೩. ನಗೆ ; ಹಾರು ; ಚಿಮ್ಮು : "ಮಿಳ್ಳಿಸಿತೆಂದು ನಗೆದುದು" (ಕಕಣ. ೩೩-೯೬೬). ೪. ನಿಮಿರು ; ನೆಟ್ಟಗೆ ನಿಲ್ಲು ; ನಿಗುರು : ನೆಗೆದ ಬೆನ್ ನಟ್ಟ ರೋಮಾಳಿ ಮಿ[ಣಿಣಿ. ಮ]ಳ್ಳಿಸುವ ಬಾಲಂ ರೌದ್ರಕೋಪವಂ ಬೀಱ್ (ತತಕಾ. ೬-೨೬) ; ಬಾಲ ಮಿಳ್ಳಿಸಿದೆ ಚಳಿಸದಿರೆ ದಿಟ್ಟಿಯೊಳು ಚಿತ್ರವು . . . ನಭದಿಂದವನೀತಂದುದು ದಿವಿಜ ಗಜವು (ಜಾಕ್ಷಪ. ೩೩-೨೦). ೫. ಆವರಿಸು ; ಹಬ್ಬು : ಅಂತು ಕುರುಬಲದ ಕರಿಘಟೆಗಳಂ ನುಂಗುವಂತೆ ದೆಸೆದೆಸೆಗೆ ಮಿಳಿರ್ದು ಮಿಳ್ಳಿಸಿದ ಸಿಂಗದ ಪಟುಪಿಗೆಯುಂ . . . ಕಿಸುವೊನ್ನ ರಥಮುಂ ಭಯಂಕರಾಕಾರಮಾಗೆ (ಕಂಶಶಾ. ೦೦-೯೩ಪ) ; ತೊಟ್ಟ ಗದ್ದಿಗೆಯ ಗರುಡಪಕ್ಕದ ಕಮಟದ ನವರತ್ನ ಕಿರಣಂಗಳ ಕಿತ್ತ ಕರವಾಳ ಬಾಯ್ದಾರೆಯೊಳ್ ಬಳ್ಳಿಗೊಂಡು ಮಿಳ್ಳಿಸಿ ಪೊಳೆಯೆಯುಂ (ಅಸಂಪು. ೦೦-೫೫ ಪ). ೬. ಹೊರಸೂಸು : ಹೊರ ಹೊಮ್ಮು : ದಳ್ಳುರಿಗಳ್ ಕಣ್ಗೊನೆಯೊಳ್ ಮಿಳ್ಳಿಸೆ ಬಿಲ್ಗೊಡವುತಸುರನಂದಿದಿರಾದಂ (ಉದ್ಧಟ. ೪-೬೩). ೭. ಸಾಗು ; ಮುಂದುವರಿ : ಅಂತು ಮುಳಿದು ಮಿಳ್ಳಿಸಿ ದೆಸೆಯನವ್ವಳಿಸಲೊಡರಿಸುವರೆಸನಂ ಸೂತಂ ನೋಡಿ (ಪರ್ಶಕ. ೯-೭ ಪ) ; ನುಡಿಸಿದರ್ ಬಳಿಕವಳ ಮಿಳ್ಳಿಸುವ ಬಾಲ್ಗಲೆಯ ಪೊಳ್ತು ಬಳಿವಿಡಿದೆ(ಕಾಬೂರ.೦೬೯-೩೬೮). ೮. ಹೊಳೆ ; ಪ್ರಕಾಶಿಸು : ತಿರುವಂ ಮುಪ್ಪುರಿಗೊಂಡು ಮಿಳ್ಳಿಸುವ ಮಿಂಚಂ ಮಾಡಿ ನೀಡುಂ ಭಯಂಕರಮಾಗೀಱಿಸಿಕೊಂಡು ಧನುವಂ . . . ನಿದಾಘಮಂ ಬೆದೞ್ ಬೆಂಕೊಂಡತ್ತು ಮೇಘಾಗಮಂ (ಕರುಂಉ. ೩೫೦) ; ಮಿಂಚು ಮಿಳ್ಳಿಸೆ ಸುರಚಾಪಂ ಪೆಗೆಯ ಬೆಗಡುಗೊಂಡವರಾ ಸಂವರಿಸಿ ಘನಾಘನಸಮಯಸ್ವರೂಪಮಂ ತಿಳಿಪಿ (ಕಂಶಶಾ. ೦-೪೦) ; ಮಿಯತ್ತಳದೊಳ್ ಮಿಳ್ಳಿಸೆ ಚಿತ್ರಲೇಖೆ ನವವಿದ್ಯುಲ್ಲೇಖೆವೊಲ್ವಾಱಿದಳ್ (ಜಗಾ. ೦೭-೦೨೯). ೯. ಕಂಗೊಳಿಸು ; ಶೋಭಿಸು : ಮಿಳ್ಳಿಸಿ ದಳ್ಳಿಱಿದಾಡುವ ಜಿನೇಂದ್ರಶಿಶುವಂ ತಳದಿಂ . . . ರಾಗದಿನೆತ್ತಿಕೊಂಡಿಂದ್ರನ ದೇವಿ ಬಂದಳ್ (ಕಾಶಿಪು. ೦೦-೧೨) ; ಮಿಳಿರ್ದು ಮಿಳ್ಳಿಸೆ ವಾನರಕೇತನಂ . . . ಮಾರುತಿಯೇಱಿದೆ ತೇರದೇಂ ತಳರ್ದುದೊ ಧರೆ ಕಂಪಿಸುವನ್ನೆಗಂ (ಕುಂಪಶಶಾ. ೦೩-೧೦೯) ; ಮಾಣಿಕಂಗಳ ಬೆಳಗಿನೊಡನೆ ಬಾಳಕನ ಮೆಯ್ಯೊಳಗು ದಳವೇಱ ಮಿಳ್ಳಿಸಿದೊಡಳ್ಳಿಱಿದಾಡುತ್ತುಂ ಕನಕ ಸರಸೀರುಹದೊಳ್ ಸಿರಿ ಮನಸಿಜನಂ ಪೆತ್ತು ಬಿಟ್ಟು ಪೋದಂತಿರೆ (ಅರ್ಶಶೀ. ೪-೯೫ ಪ). **ಮಿಣ್ಣಿಸು** : ೧. ಮಿಣ್ಣಿಸಿ ಕುಚ ಗುರುಜಘನದಿಂ ನಡು ಬಳೆ [ಳ್ಕಿ]ಬಣ್ಣದುಟಿಗಳಲುಗುತಿರೆ ಹೆಣ್ಣುಗಳ್ಮುಂದಕೊಲೆದು ಗಂಧರ್ವರೆದರು (ಗೊಮ್ಮಟಶ. ೨-೬೯). [ಮಿಳ್ + -ಇಸು₁]

**ಮಿಳ್ಳಿಱ್** (ಕ್ರಿ). ೧. ಅತ್ತಿತ್ತ ಚಲಿಸು.-ಅಲುಗಾಡು : ಕುಡಿವಾಲಂ ನೆತ್ತಿಯೊಳ್ ಮಿಳ್ಳಿಱಿಯೆ ಪೊಳೆಯೆ ಕೂರ್ದಾಡೆ . . . ಪಾಯ್ತಂದು ಮದ್ಯತ್ಪದನಖವಿಪಳತ್ಕುಂಜರೇಂದ್ರಂ ಮೃಗೇಂದ್ರಂ (ಕಶಕ. ೩-೬೨) ; ನಂದಿಕೇತನಂ ಬಾಂದಳದಲ್ಲಿ ಮಿಳ್ಳಿಱಿಯೆ . . . ನಡೆದಂ ಗಣಾಧಿಪಂ (ಭ್ರಹಃ. ೨೦-೫೨). ೨. ಅಲುಗಾಡಿಸು : ಮಿಳ್ಳಿಱಿಗು ಕಿವಿಗಳಲಿ ಕೇಳುತ ಹುಲ್ಲುಗಳ ನೆಱ್ ಕಚ್ಚಿ ಬಾಯಲಿ ಬಲ್ಲ ಪುರುಷರ ಪೋಲು ಮೇಲ್ಮೊಗವಾಗಿ ಗೋವುಗಳು . . . ಲಕ್ಷ್ಮೀವಲ್ಲಭನ ನೋಡುತ್ತಲಿರ್ದುವು ಚಿತ್ರದಂದದಲಿ (ಚಿಭಾಗ. ೧೦-೪೦-೩). ೩. ಹಬ್ಬು ; ವ್ಯಾಪಿಸು : ಮಿಳ್ಳಿಱಿದು ಬಳ್ಳಿವರಿವ ದಳ್ಳುರಿಯಳುರ್ಕೆಯಿಂ ಗೋಪುರಂ ಸೀಳ್ದುಸೀ ಮಿಡೆ (ಭ್ರಹಃ. ೦೩-೩೬ ಪ). ೪. ಹೆಚ್ಚಾಗು ; ಅಧಿಕವಾಗು : ಅಪ್ರತಿಮಲ್ಲನೊಱಗಿದನರುಣಜಲದಲಿ ಮಿಳ್ಳಿಱಿವ ಮೇಲುಸುರುಗಳ ಗದುಗದಿಪ ಕಂಠದಲಿ (ಚಿಭಾಗ. ೦೦-೫೬-೯೦). [ಮಿಳ್ + -ಇಱ್₂]

**ಮಿಳ್ಳಿ, ಮಿಳ್ಳಿ** (ನಾ). ೧. ತುಪ್ಪ ಮುಂತಾದುವನ್ನು ಬಡಿಸಲು ಬಳಸುವ ಮರದ ಅಥವಾ ಲೋಹದ ಸಣ್ಣ ಸೌಟು : ಒಳಗೆ ಅಡುಗೆಮನೆಯು ಮಿಳ್ಳಿ ಸೌಟುಗಳ ವರೆಗೆ ಎಲ್ಲವನ್ನೂ ತಾನೆ ನಿಂತು ಸಜ್ಜುಗೊಳಿಸಿದನು (ಸಪಿ. ೬೫); ವಿದ್ಯಾರ್ಥಿಗೆ ಒಂದು ಮಿಳ್ಳಿಯಷ್ಟು ತಿಳಿವಳಿಕೆಯನ್ನು ಕೊಡಬೇಕಾದರೆ ಬೋಧಕನಲ್ಲಿ ಒಂದು ಕೊಡದಷ್ಟು ಆ ಹಾಲು ತುಂಬಿರಬೇಕು (ಶಾಬಿಕ. ೬೧). ೨. (ನೀರು ಕುಡಿಯಲು ಉಪಯೋಗಿಸುವ) ಲೋಹದ ಸಣ್ಣ ಪಾತ್ರೆ : ಥಾಲಿ : ಮಿಳ್ಳಿ ಕುಡಿಕೆ . . . ಅಡಿಗೆ ಸಾಮಾನು ಬೀಸಣಿಗೆಗಳನೆಲ್ಲಮಂ ಪೊಡವಿಪತಿ ಬಂಡಿಕುದುರೆಗಳೆತ್ತುಗಳ ಮೇಲೆ ಬಿಡವೇರಿ ಕಳುಹಿದಂ (ಸಿವ್ವಶಾ. ೦೩-೪೪); ವೆಂಕಟಲಕ್ಷ್ಮಮ್ಮ ದೀಪದಲ್ಲಿ ಸೀಮೆಎಣ್ಣೆ ಮುಗಿದಿದ್ದು ಕಂಡು ಒಳಗೆ ಹೋಗಿ ಡಬ್ಬದಲ್ಲಿದ್ದ ಎಣ್ಣೆಯನ್ನು ಮಿಳ್ಳಿಯಲ್ಲಿ ತಂದು ಭರ್ತಿ ಮಾಡಿದರು (ಶಾಕವ್ಯ. ೨೦). ೩. ಎಳೆಯ ತೆಂಗಿನಕಾಯಿ ; ಕುರುಂಬೆ : ತೆಂಗಿನ ಮಿಳ್ಳಿ, ಮಾವು, ದಾಳಿಂಬೆ (ಕಂಡವು. ೩೯-೨) ; ತೆಂಗಿನ ಮರದ ತುಂಬ ಮಿಳ್ಳಿಗಳು (ಅಶಾಕ. ೨೩೧). ೪. ತೆಳ್ಳನೆಯದು ; ಸಪೂರವಾದುದು : 'ಮಿಳ್ಳಿಗಾಲ್' ಪರಾ. ಮಿಳ್ಳಿ: ೨. "ಕುಳ್ಳಿ, ಮಿಳ್ಳಿ, ಗಿಂಡಿ" (ಕಂಪುಹು. ೬೨); "ಮಿಳ್ಳಿ (ಮಿಳ್ಳಿ) = ಸಣ್ಣಕುಡಿಕೆ" (ಶಾನಕೋ. ೩೦).

[ದೇ.॥ ತುಳು. ಮಿಳ್ಳಿ ; ತೆಲು. ಮಿಲ್ಲಿ, ಮಿಲ್ಲಿ, ಮಿಳ್ಳಿ]

**ಮಿಳ್ಳಿಗಾಲ್** (ನಾ). ತೆಳ್ಳಗಿರುವ ಕಾಲು : ಪುರುಳಿಲ್ಲದ ಮಿಳ್ಳಿಗಾಲ್ಬೆಡಂಗಿಲ್ಲದ ಮೈ . . . ಕೂಡಿದ ಪುರ್ಬುಂ ತೊಟ್ಟ ಕಾಸಿಯುಂ ಬೆರಸು [ಹಂಸೆಯೊಳಗೆ ತೊಱಸು ಬಂದಿರ್ಪಂತೆ ಬರ್ಪುದುಂ] (ಧರ್ಮಾವ್ಯ. ೭-೨೨೪).

[ಮಿಳ್ಳಿ + ಕಾಲ್$_1$]

**ಮಿಳ್ಳಿಗೊಳ್** (ಕ್ರಿ). ನೆಗೆ ; ಜಿಗಿ (?) : ಮಿಳ್ಳಿಗೊಂಡುಬ್ಬರಿಸುತ್ತುಂ ತನ್ನ ಕಣ್ಗಾಳ್ಕರೆಯೆ ನಿಕಟದೊಳ್ ಕೇಳ್ದು ಗಾಳ್ಮೇಳಿಸುತ್ತುಂ ಪರಿತಂದ ತ್ರಾರ್ಷ್ಟದಿಂದಂ ಬಱಿವಿಡೆ ಮೊಲೆವಾಲುಂಡು ಧೇನುಪ್ರತಾನು (ಲೀಲಾವ. ೩-೮೬).

[ಮಿಳ್ಳಿ + ಕೊಳ್$_1$]

**ಮಿಱಿಪಿಗ** (ನಾ). ಥಳುಕುಮಾಡುವವನು ; ವಿಲಾಸಿ : ಈ ತೆಱವೆ ಮೆಱೆವ ಮಿಱಿಪಿಗರು [ಪಾಠಾಂ. ಮಿಱುಪೊಗರು] ಮುಱುಕುಮಾ ದೊರೆಯ ಭರದ ಜವ್ವನಿಗೆಯನೆಮ್ಮ ಕೆಯ್ಸಾರಲಿತ್ತಪ್ಪುದೆ ಷಿರಿದುಮೆಂದು ಮುಱುಗಿ ಮನದೊಳ್ ಮುನಿದು ಕೆಲಸದ ಕಡುಸೀಱಿರನಡರೆ ನೋಟ್ಟಿ ಬಡಮನದ ಮಂಡಳಿಕಮಂಡಳಿಯೊಳು (ವರ್ಧಪು. ೯-೯೩ ವ).

[< ಮಿಱುಪು + — ಇಗ]

**ಮಿಱಿಮಿಱಿ, ಮಿರಿಮಿರಿ** (ಅ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಮಿಱಿಮಿಱಿ [ಪಾಠಾಂ. ಮಿಱುಮಿಱು] ಮಿಱುಗಿದುದಾ ಕ್ಷೀರಧಾರೆ ಜಿನಮಸ್ತಕದೊಳ್ (ಪುಹಾವೇ. ೬-೧೨೪). **ಮಿರಿಮಿರಿ** : ಬಿಸಿಲಿನಲ್ಲಿ ಹಾವು ಮಿರಿಮಿರಿ ಮಿಂಚುತ್ತಿತ್ತು (ರೂಢಿ).

**ಮಿಱುಗಿಸು, ಮಿರುಗಿಸು** (ಕ್ರಿ). ೧. ಹೊಳೆಯುವಂತೆ ಮಾಡು; ಮೆರುಗು ಕೊಡು : ಪಣ್ಮರಗಳೆ ಪೂಮರಗಳೆ ತಣ್ಮಲೆಗಲೆಪೆರ್ ಮಿಱುಗಿಪರಳ್ಕುಲರ ಪೊಪಟ್ಟಣ್ಮಾವ ಕಂ[ಪೆ] ಕರಂ ಕೈಗಣ್ಮುವ ದಂಪತಿಯುಲಿಂಪೆ ಸಂದಸಪ್ಪನದೊಳ್ (ಶಂಹಂ. ೦-೨೨). **ಮಿರುಗಿಸು** : ೨. ಸೊಗಸುಗೊಳಿಸು : ಅನುವಾದಕರ ರಸಿಕತೆಯೂ ನಿರಂತರಾಭ್ಯಾಸವೂ ತಿದ್ದಿ ತೀಡಿ ಮಿರುಗಿಸುವ ಉತ್ಸಾಹಶೀಲತೆಯೂ ಅಷ್ಟೇ ಕಾರಣ (ಪೀಠಪೋ. VI. ಈ ನಾಟಕವನ್ನು ಕುರಿತು).

[ಮಿಱುಗು$_1$ + — ಇಸು$_3$]

**ಮಿಱುಗು$_1$, ಮಿರುಗು$_1$** (ಕ್ರಿ). ೧. ಹೊಳೆ ; ಪ್ರಕಾಶಿಸು ; ಥಳಥಳಿಸು : "ಮಿಱುಗು—ಚಕಚಕಾಯಮಾನೇ (ಪ್ರಕಾಶಿಸು)" (ಶಮದ); ಮಿಱುಗುವ ರತ್ನಭಿತ್ತಿಗಳ ದೀಪ್ತಿಗಳಂ ನಿಜದೇಹದೀಪ್ತಿಗಳ್ ಮುಱಿಸೆ (ಆದಿಪು. ೨-೬೨); ಧವಳದೊಳ್ ಮಿಱುಗುವ ನೇತ್ರಮುಂಟೆ (ಶಂಪಾಶ. ೯೯). ೨. ರಂಜಿಸು ; ಕಂಗೊಳಿಸು ; ಶೋಭಿಸು : ತೊಳಗುವ ಚಿನ್ನಪೂಗಳಲಕಾವಳಿಯೊಳ್ ಮಿಱುಗಲ್ (ಶಾದಂಪೂ. ೬೫೪) ; ಗುಣಭದ್ರದೇವರ ಮಿಱುಪಂಘ್ರಿಗಳಿತ್ತುವೆನಗೆ ಕವಿತೆಯುನಣಕಂ (ಅರ್ಗನೇ. ೦-೦೯) : ಮುಂಡಿಗೆ ಮುಂದುಡಿ ನೆಲಕೊಱಗಿದವು ಮಿಱುಗುವ ನಾಗವಲ್ಲಿಗಳು (ಕುವ್ಯಾಆ. ೦೯-೩೭). **ಮಿರುಗು$_1$**: ೧. ಮೋಣಾಷೆಯು ಥಾಳದಲಿ 'ಬೆಳ್ಳಿ' ಯೊಂದೆಯೆ ಮಿರುಗುವಂದದಲಿ (ಜಶ್ಯಾಂಗ. ೦೯-೫೧೨); ತಾರೆ ಮಿರುಗುವುದೇಕೆ ? (ಗೇಪಂ. ೨೦-೦೪). ೨. ಮಿರುಪ ಪನ್ನೆರಡೂರ್ಧ್ವಪುಂಡ್ರದ ನಿತ್ಯಸಾತ್ವಿಕದಾ ಪರಮಭಾಗವತಾಗ್ರಗಣ್ಯರು . . . ಒದಗಿಸುತಿಹರಾನಂದಬಾಷ್ಪಗಳ (ಅನಂರಾ. ೦-೩-೪೪); ದಂತಪಂಕ್ತಿಯು ಕಾಂತಿಯೊಡನೆ ಕಿರುನಗೆ ಮಿರುಗೆ (ಜಶ್ಯಾಂಗ. ೦೩-೩೪೦). 'ಮೆರುಗು$_1$' ಪರಾ.

ಮಿಱುಮಿಱುಗು, ಮಿರುಮಿರುಗು (ದ್ವಿರುಕ್ತಿ) : ಚಿನ್ನಪೂಗಳೆಡೆಯೆಡೆಯೊಳ್ ನಿಮಿರ್ದು ಮಿಱುಮಿಱುಗುವ ತಲೆದುಡುಗೆಯುಂ . . . ತೋರಮುಲ್ಲೆಗೆಯು ಮುಡಿಯುಮೊಸೆಯೆ ಕೈಗೆಯ್ದಾಗಳ್ (ಆದಿಪು. ೪-೪೧ ವ); ಮಿಱುಮಿಱುಪ ದಿವ್ಯಾಭರಣಕಿರಣದ ತುಱುಗಿನಲಿ . . . ಅವರ್ಯೈವರೊಪ್ಪಿದರಿಂದ್ರತೇಜದಲಿ (ಕಂಭಕ. ೩೩-೫೭) ; ಕೋಲ್ಮಿಂಚಿನಂದದಿಂ ಮಿರುಮಿರುಗಿ ನಿಮಿರ್ದ ಡೆಂಕಣಿಯ ಸಾಲ್ಗಳಂ ಪೊತ್ತು ನೆತ್ತಿಯೊಳೆಸೆವ ಕೊತ್ತಳಗಳಿಂದೆ . . . ರಂಜಿಸಿತು ರಾಜಧಾನಿ (ಜಶ್ಯಾಂಗ. ೫೭-೦೫೫೭).

**ಮಿಱುಗು$_2$, ಮಿರುಗು$_2$** (ನಾ). ೧. ಕಾಂತಿ ; ಹೊಳಪು ; ಮೆರುಗು : "ತೊಳಗು, ಬೆಳಗು, ಮಿಸುಗು, ಮಿಱುಗು . . . ಮಸೆ ಈ ೧೪ ಕಾಂತಿ" (ಕಕಶಾ. ೫೫-೨೬೨); ಮಚ್ಚರಿಪ ವಿಟಕೋಟಿಯಂ ತಟವುಚ್ಚಿಸೂಡುವ ನೋಟದಂಬಿನ ಹೆಚ್ಚನೀಕ್ಷಿಸೆ . . . ಅಚ್ಚರಿಯ ಕುಱುಮಿಂಚುಗಳೊ ಮಿಱುಗುಗಳ ಪಂಗಡವೊ (ಬಸಪು. ೪೦-೪). ೨. ಸೊಬಗು ; ಮನೋಹರತೆ : ಗಮಕಂ ಪ್ರಯೋಗಮಾಭೋಗಮಲಂಕಾರಂ ಪೊಗರ್ ನಯಂ ಮಿಱುಗು ಪೊಸಟ್ಟುಮರೆ ಕೊಳೆ ಪಾಡುವವರು ವೆಲಮರ್ದಂ ಮುಕ್ಕುಳಿಸಿಯುಗುಟ್ಟ ತೆಱನಂ ಪೋಲ್ತಳ್ (ಆದಿಪು. ೭-೧೩); ರಸಮೊ ಸರ್ವಸ್ನಿಗಂ ಮಿಱುಗು ಕಿತ್ತು ಪೊಗರ್ . . . ಪ್ರಯೋಗಮೊನೆಸೆದುವೊ ಪೇಱಿಮೊಂಬಿನೆಗಮಿಂಗೊರಲೊಳ್ಕೊಳೆ ಪಾಡಿಯಾಡಿ ರಂಜಿಸಿತೊ ಸಭಾಜನಂಗಳ ಮನಂಗಳನಾ ದಿವಿಜಾಂಗನಾಜನಂ (ಅಕಪು. ೫-೯೦). **ಮಿರುಗು$_2$** : ೧. "ಭೌ-ದೀಪ್ತೌ, ಮಿರುಗಿನೊಳ್" (ಕಾಶಕ. ೧೬೫) ; "ಮಿರುಗೆನಲ್ ಮಿಸುಗೆನಲ್ ಬಿಡದೆ ಕಾಂತಿಗೆ ಪೆಸರ್" (ಕಕರ. ೯೯). 'ಮೆರುಗು$_2$' ಪರಾ.

[< ಮಿಱುಗು$_1$]

**ಮಿಱುಪು** (ನಾ). ಹೊಳಪು ; ಕಾಂತಿ : ಸರಸೀತೀರಂಗಳೊಳ್ ಬೆಳ್ಗಱಿಗಳ ತಡಿಯೊಳ್ ಸಿಂಧುಕೂಲಂಗಳೊಳ್ ಶೀಕರಮುಂ ನೀಹಾರಮುಂ ಮುತ್ತಿನ ಮಿಱುಪನಣಂ ಮೆತ್ತಿದಂತೊಪ್ಪೆ ಮೆಯ್ಯೊಳ್ ಪರಮಾತ್ಮಧ್ಯಾನಮಗ್ನಪ್ರಕೃತರಜಕತರ್ ಜೈನಯೋಗೀಶ್ವರರ್ . . . ನಿಂದರ್ (ಲೀಲಾವ. ೯-೭೬) ; ತುಱುಬುಗಳ ತೋಳುಗಳ ಜಘನಸ್ಥಳದ ಚೆಲುವಿಕೆಯ ಮಿಱುಪಿನಲಿ . . . ಮಹಿಳಾಜನ ವಿರಾಜಿಸಿತು (ಕೂರರಾ. ೦-೫-೨೪).

[< ಮಿಱುಗು$_1$ + — ಪು$_2$]

**ಮಿಱುಮಿಱನೆ** (ಅ). ಕಾಂತಿಯುಕ್ತವಾಗಿ ; ಪ್ರಕಾಶದಿಂದ ಕೂಡಿ ; ಥಳಥಳನೆ : ಹೆಂಗಳು . . . ಮಿಱುಮಿಱನಾದ ಮೈಹೊಳಹಿಂದ ತೆಱೆಗಟ್ಟಿ ನಿಱಿಗಟ್ಟಿ ನಿಱಿದೋಳ್ವ ಹೊಂಗಾಸೆಯಿಂದ ಕುಱುಕುಱಿ ಮೆಟ್ಟಿ ರಂಗದೊಳು ತಂಪಿನ ಬಯಲ್ದೊಱೆ ಹೊಳೆವಂತೆ ಹೊಳೆವರು (ಚರಿತ. ೦೩-೦೦೦).

[ಮಿಱುಮಿಱು + — ಅನೆ$_1$]

**ಮಿಱುಮಿಱು** (ಅ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಪೆಱವುಱಿದ ಮಾಱು ಮಿಱುಮಿಱುಮಿಱುಪ ಶಿಶಾಸ್ತ್ರಂಗಳಂ ದ್ವಿಜನ್ಮನ ನೊಸಲಂ ನೆಱೆಗೊಳ್ಳಿನಮೆಚ್ಚೊಡೆ (ಕಂಶಶಾ. ೦೨-೭೪);

ಬಲದ ಕೆಲದೊಳ್ ಮಿಱುಮಿಱುಮಿಱುಗಿ ತನ್ನ ಪಡೆದೊಂಗಂ ತನ್ನ ಪೆಸರಿಂದಮು ದೊಡ್ಡಿವೆಸರಾಗಿ ನೆಗೞ್ದ ಚಕ್ರಮುಂ ನೋಡೆ (ಶಾಂತಿಪು. ೪-೪೯ ವ).

**ಮಿಚ್ಚುನೆ** (ಅ). ಹೊಳಪಿನಿಂದ ಕೂಡಿ; ಥಳಥಳಿಸುವಂತೆ: ಕಾಯ ಕಪ್ಪನೆ ಕಂದಿದರೇನಯ್ಯಾ ಕಾಯ ಮಿಚ್ಚುನೆ ಮಿಂಚಿದರೇನಯ್ಯ (ಬಸವಾದೀ. ೩. ೪೯_೦೦೬).

ಮಿಚ್ಚುಮಿಚ್ಚುನೆ (ದ್ವಿರುಕ್ತಿ): ಮಿಚ್ಚುಮಿಚ್ಚುನೆ ಮಿಂಚಿ ಮುಂತೊನೆ ಬಿಜ್ಜುಬಿಜ್ಜುನೆ ಬಿಡುತೆ ಕಣ್ಗಳ . . . ಡಚ್ಚುಡಚ್ಚುನೆ ತೇಗುತಿರ್ದವು ಡಾಕಿನಿವ್ರಾತ (ಮರೆಪು. ೩-೬೯). [ಮಿಱು$_0$ + — ಅನ್$_1$]

**ಮಿಟ್ಟು**, ಮಿಂತು, ಮಿತ್ತು, ಮಿರ್ತು, ಮಿಳ್ತು, ಮ್ರಿತ್ತು (ನಾ). ೧. ಸಾವು; ಮರಣ: "ಮೃತ್ಯುವಿನೊಳ್ ಮಿಟ್ಟಿಂದೆನೆ" (ಕಶಾಗಾ. ೭೮); ವಜ್ರರ್ಮಂ ಮಂತ್ರಮುಂ . . ಮಿತ್ರರ್ಕಳುಂ ಮಿಟ್ಟು [ಪಾಠಾಂ. ಮಿತ್ತು, ಮೃತ್ಯು] ಮೇಲೆರ್ದಾಗಳ್ ಶರಣಪ್ಪುದೇಕೆ ಮಾಡಿದರ್ ಪನ್ನಿರ್ವರುಂ ಚಕ್ರಿಗಳ್ (ವಡ್ಡಾರಾ. ೦೧೩-೦೭): ನೇಸಱ್ ಮೂಡಿದುದು ಕಟ್ಟಲೆಗೆ ಮಿಟ್ಟು ಮಾಡುವ ತೇಜದಿಂ (ಕಮದ. ಪ. ೦೧೪ ಕ್ರಮೋ). ೨. ಸಾವಿನ ಅಧಿದೇವತೆ; ಮೃತ್ಯುದೇವತೆ: ಕುರುಬಲಕ್ಕೆ ಮಿಟ್ಟು ಪಲ್ಮೊರೆವಂತೆ ಮೊರೆದು ಪರಿವ ತನ್ನ ಕಿಸುಪೊನ್ನ ರಥಮುಂ ಭಯಂಕರಾಕಾರಮಾಗೆ (ಕಂಪರಾ. ೦೦-೯೭ ವ). ಮಿಂತು: ೨. ಮಹಾಗಜಂ ಸುರಗಜಕೆ ಮಿಂತೆನಿಸಿ ತೋರ್ಪ ಗಜಕಂಧರದಿ ವಜ್ರದಂತಂತಕನವೋಲ್ ಕೋಪಮುಂ ಧರಿಸಿ ಬಲವೆರೆಸಿ ಬರೆ (ಕುರಂಗ. ೬೦-೨೬). P ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ. **ಮಿತ್ತು**: ೧. ಅವನ × × × ಉಳ್ಳಿತ್ತು ಪೊತ್ತಿಮಿರ್ಕ್ಕಳ್ ಪುಟ್ಟದೆ ಕಡುಗೆ (ಪ್ಮಿಲಿ. ೦೯೩೩, ೩೯-೬; ಸು. 8 ವಿಡು ೬೪); ಮಿತ್ತು ಮುಳಿವಂಗಾಳ್ದಂಗೆ ಸಂಪತ್ಕರಂ . . . ಒಳ್ಪಿನಾಗರಮೆಂಬೀ ಗುಣದಿಂ ಗುಣಂಗೊಳಿಸಿದಂ ಭೂಲೋಕಮುಂ ನಾಕಮುಂ (ಎಕ. VI, ಕಡೂರು. ೩೦-೩೩; 1169). ೨. ಜವನಿಂ ಮಾರಿಯಿಂ ಮಿತ್ತುವಿಂ ಭೈರವನಿಂ ಕಾಮಾರಿಯಿಂ ಬ್ರಿದ್ಯನೆ ಗಡ ಜಗಮುಂ ತಿಂದು ತೇಗಲ್ ಸಮರ್ಥಂ (ಜಗಿಪು. ೦೩-೪೩); ಮತ್ತೆ ಹೊಸ ಚಾಪದಲಿ ಭೀಷ್ಮನು ಮಿತ್ತು ಬಿಟಿಗೊಂಡಂತೆ ಶರದಲಿ ಕತ್ತನಾಕಾಶವನು (ಕುವ್ಯಾಭೀ. ೬-೪೭); ಬಲುಮಿತ್ತನೆನಿಸುವರು ಲೋಕದವರಿಗೆ ಮಾರಿ ಮಸಣಿಯರು (ಕಂಕಪಾ. ೬-೩೦). ೩. ಆಪತ್ತು; ಕೇಡು: ಕೋಣನೆರಡುಂ ಪೋರೆ ಗಿಡುವಿಂಗೆ ಮಿತ್ತು (ಪಕಕಾ. ೨-೦೨). **ಮಿರ್ತು**: ೧. ಮಿರ್ತುವಡಗಿದೆ ನಿನ್ನ ನಗೆದಿಂಗಳಾಟವನು ನಟಿಸುವೀ ಮೊಗವಲ್ಲಿ (ಚಂದ್ರಕ. ೧೦-೨೦). ೨. ಅರಿಶಿರವ ಚಿಂಡಾಡು! ಮಿರ್ತೊಡನೆ ಮುಂಡಾಡು! (ಕಕಾರ. ೭೮). **ಮಿಳ್ತು**: ೧. ಮಿಳ್ತುವಸವಗಡಿಸುವ ಭೈರವನಂ ಬಲ್ಬೇರತೆಯುಂ ಬೆದಬಿಸುವ . ಭಟನಿವಹಂ ನಡೆತಂದುದು (ಜಮಕಾ. ೭-೦೯); ದಾರಿದ್ರ್ಯಮೆಂಬುದೆ ಮನುಜರ್ಗೆ ಮಿಳ್ತುವಿಗೆ ಸಮಾನಮಾಗಿರ್ಪುದು (ಧಾರಾಕಾಂ. ೬-೩೨). ೨. ಜಗದ ಕೊಲೆಗುಜ್ಜುಗಿಸಿ ಬಂದ ಮಿಳ್ತುವೊ (ಶಿಪು. ೩೯-೩೩); ಕುಲಕ್ಷಯಕೆ ಕೊಣೆಯೊಡ್ಡಿದ ಮಿಳ್ತು (ಶ್ರೀರಾಮಪು. ೩೨೮-೨೯೭). ೩. ಅವರ ವಿಭವಕೆ ಮಿಳ್ತು ಮೂಡಿತ್ತೋಯೆನೆ ಪೊಳ್ತು ಮೂಡಿ ಪೆಱಿಯೆ (ಶಬ್ದರಾ. ೭-೩). **ಮ್ರಿತ್ತು**: ೨. ಬಮ್ಮಿಗಂ ಮುಳಿವಡೆ ಮ್ರಿತ್ತು ಮಿಱಿವಡೆ ಮಾರಿ (ಸಕೆ. XX, ೬೪-೨೭; 1123). [<ಸಂ. ಮೃತ್ಯು]

**ಮಿಟ್ಟುಗರೆ**, ಮಿತ್ತುಗರೆ (ಕ್ರಿ). ಸಾವನ್ನು ಆಹ್ವಾನಿಸು; ಮರಣವನ್ನು ಆಮಂತ್ರಿಸು: ಸುಸಪ್ತಕರ್ ತಮಗೆ ಮಿಟ್ಟುಗರೆವಂತೆ ವಿಕ್ರಮಾರ್ಜುನನಂ ಕರೆದುಯ್ದರ್ (ಕಂಕಪಾ. ೦೦-೬೩ ವ); ಆ ಪರಮಶೆ ತನ್ನೊಲ್ಲದನಂ ಕರೆದಳ್ ಬೆಟ್ಟೀಱ ಮಿಟ್ಟುಗರೆವಂತೀಗಳ್ (ಶಾಂತಿಪು. ೯-೬೨). **ಮಿತ್ತುಗರೆ**: ಪರಿವ ಭಂಡಿಯುಂ ಕಾಲಿಂ ಕೋವರು ಮಣಲಂ ಸುರಿವ ಪೊಸವರು ಬೆಟ್ಟೀಱ ಮಿತ್ತುಗರೆವರು (ಶಾಸಇ. IX-i. ೨೯೬-೦೮; 1190). [ಮಿಟ್ಟು + ಕರೆ$_1$]

**ಮಿಟ್ಟುಗೊಡ್ಡ** (ನಾ). ಸಾವಿನ ಹೆದರಿಕೆಯನ್ನುಂಟುಮಾಡುವ ಮಾತು ಮತ್ತು ಅಂತಹ ಮಾತಿನಿಂದ ಆಗುವ ಹಿಂಸೆ. — ಉಪಟಳ: ಪಾಣ್ಬರಂಕುಸನಾ ಪಾಣ್ಬಿಯರ ಗೆಯ್ಸು ಗೆಯ್ಸುಂಗಳುಮುಂ ತೋರ್ಪ ಸನ್ನೆಗಳುಮುಂ ಆಡುವ ಮಿಟ್ಟುಗೊಡ್ಡಂಗಳುಮುಂ ಕಂಡು ಚೋದ್ಯಂಬಟ್ಟು (ಕಂಕಪಾ. ೪-೬೩ ವ); "ಮೃತ್ಯುವಿನಂಥ ಚೇಷ್ಟೆಯ ಮಾತು" (ಕಂಕಪಾಂ. ೦೬೪); ನೋಡೆ ಮಾಱಾಂತೆನಗಮುರಿಯನಾಗಿರ್ದನೀ ಮಿಟ್ಟುಗೊಡ್ಡಂ ಸರ್ವರ್ಗಂ ಸಲ್ಲದೆಂದೆಂದೊವಜನೊದಱ (ಕಾವ್ಯಾವ. ೨೬೦). [ಮಿಟ್ಟು + ಗೊಡ್ಡ$_1$]

**ಮೀ$_1$**. ಮೀಯು (ಕ್ರಿ). ಮಿಂದು$_1$ (ಭೂತಕೃ). ೧. ಸ್ನಾನಮಾಡು; ಜಳಕಮಾಡು; "ಆಪ್ಲವನಂ, ಸ್ನಾನಂ, ಸವನಂ — ಈ ೩ ಮೀವುದು" (ಕಬಾಯು. ೬೮-೨೩೪); ಈತಂಗೆ . . . ಮೀಯಲ್ ಬೇಡಿದೊಡಮೆಟಿಯುದಿರೆಂದು ಕಲ್ಪಿಸಿದೊಡೆ (ವಡ್ಡಾರಾ. ೭೭-೬); ಪಂಚರತ್ನಗರ್ಭವಿವಿಧೌಷಧಿಸಂದರ್ಭಶಾತಕುಂಭಕುಂಭಸಂಭೃತಮಂಗಲಜಲಂಗಳಿಂದಂ ಮಿಸಿಸೆ ಮಿಂದು (ಆದಿಪು. ೪-೩೩ ವ); ತೊಟಿಯ ಮೀವಣ್ಣಗಳರಾ ತೊಟಿಯ ಮೀವ ಸ್ವಾಮಿಗಳರಾ ತೊಟಿಯಿಂ ಭೋ (ಬಸವ. ೩೪೪). ೨. ಸ್ನಾನಮಾಡಿಸು; ಜಳಕಮಾಡಿಸು: "ಮೀ-ಸ್ನಪನೇ" (ಶಮದಾ). ೩. ನೆನೆ; ತೋಯು: ಪಣ್ಗೊಲೆಯಂ ಗಿಳಿವಿಣ್ಡು ಚುಂಚುವಿನ್ಬಿಱದಡೆ ಸೋರೆ ಸೋಣೆಯೊಳೆ ದಾಂಗುಡಿ ಮಿನ್ದೆಸೆದಿರ್ಪವು . . . ಲತೆವಳ್ಳಿಯುಮಲ್ಲಿಯ ನಾಗವಳ್ಳಿಯುಂ (ಎಕ. XIII, ೩೩೦-೨೯; ೯೭೨). **ಮೀಯು**: ೧. ತಾನೋವಿ ಮೀಯುತ್ತಿರಲು ನಿನ್ನಯ ತೀವ್ರತೆರೆಗಳಲಿ ಓವನುತ ಹೊಯ್ಯಲಿಕೆ ನಿನಗೆಯು ಸಾವು ನುಡಿದೆವು (ಸಂಕ್ಷಕ. ೦೨-೨೯); ಪುಷ್ಕರಣಿಯೆರಡುಂಟಲ್ಲಿ ಮಿಂದನು ಸರಸಿಯೋದಱಿಕೊಳು (ತೊರರಾ. ೪-೨-೦೭); ಮಾವ ಮಿಂದಾಗಿಲ್ಲವಲ್ಲ; ಬಿಸಿನೀರು ಕಾಯಿಸಿದ್ದೇನೆ. ಮೀಯಿರಿ (ಮುಗಿಯು. ೦೩೩). ೩. ತೊಳೆವ ಮಳೆಯೆನಿತರಿಂ ಚಿಲ್ಲಡೆದುದೀ ಸುಗ್ಗಿ ಕುಳಿರ ತಂಬನಿಯೆನಿತರಿಂ ಮೀದಿರುವುದು (ಕಾಬೂರ. ೦೦೬-೨೯೩); ಹೊಸ ಮಳೆಯಲ್ಲಿ ಮಿಂದು ನಿಂತ ಇವಳ ಎದೆಯಲ್ಲಿ ಸ್ವರ್ಗವೇ ಪ್ರತಿಫಲಿಸುತ್ತದೆಯಂತೆ! (ಶಾವನೀ. ೬). ೪. ಋತುಸ್ನಾನಮಾಡು: ಅಂದು ವರಪ್ರಹ್ಲಾದದೇವನ ಮಂದಹಾಸದ ಗರ್ಭವಾಗಿರೆ ಮಿಂದು ಮಾಸತ್ರಯಗಳಾಗಿರಲಾ ಕಯಾತಿಯಲಿ (ಸಂಕಕ. ೮-೦೦); ಹಗಲಿರುಳೂ ನಿನಗೆ ಒಂದೇ ಯೋಚನೆ. ಮೊನ್ನೆಯಲ್ಲವೇ ನಾನು ಮಿಂದದ್ದು (ತೇಜೋಕ. ೦೩). ೫. (ಅಲಂ) ಮುಳುಗು; ಅಡಗಿಹೋಗು: ಕಣ್ಣೀರಿನೊಳಗೆ ಮೀದಳು ಮೈಮಱ ದಳು ಮೂರ್ಛೆತವಡದೆಂದು ಬಿದ್ದಳು ಭೂಪನರಸಿ (ತೇವಂಕಾಂ. ೩-೦೮); ಇಂದಿರೇಶನೆ ನಿಮ್ಮಡಿಯ ಪದದ್ವಂದ್ವವನು ನಾನೊಂದಿ ಸುಧೆಯಲಿ ಮಿಂದು ವಿಷಯದ ಬಯಸುವವ ನಾನಲ್ಲ (ಸಿಭಾಗ. ೦೦-೦೨-೨೭).

[ದೇ.॥ ತುಳು. ಮಿ; ತೊದ. ಮೀಯ್; ಪರ್ಜಿ. ಮಿ; ಗದಬ. ಮಿ. ಮಿಯ್; ಗೊಂಡಿ. ಮಿಯಾನಾ, ಮೀನಾ; ಕುಇ. ಮೀವ; ಕುವಿ. ಮೀಅಲಿ]

**ಮೀ$_2$** (ನಾ). ಒಂದು ಅನುಕರಣಶಬ್ದ: ಮಿಂಚುಳ್ಳಿಯೊಂದು ಮೀ ಮೀ ಮೀ ಎಂದು ಕರೆಯುತ್ತಿದ್ದುದೂ ಕೇಳಿಸಿತು (ಮಲೆವ. ೦೮೩).

**ಮೀಂ$_1$** 'ಮೀನ್$_1$' ನೋ.

**ಮೀಂ$_2$** 'ಮೀನ್$_2$' ನೋ.

**ಮೀಂಗುಡಿ** (ನಾ). ಮೀನಿನ ಗುರುತುಳ್ಳ ಬಾವುಟ; ಮೀನಧ್ವಜ: ಪೂಗಣೆ ಕರ್ಪುವಿಲ್ ಮಿಳಿರ್ವ ಮೀಂಗುಡಿ . . . ಸುಗ್ಗಿಯೆನಿಪ್ಪವೆಲ್ಲ ಮೊಂದಾಗಿಯೆ ದರ್ಪಕಂಗೆ ಸಮನಿಪ್ಪ ಜಗಜ್ಜಯದರ್ಪಮುಂ ಸಮಂತಾಗಿಸ ಲೊಂದೆ ಸಾಲ್ಗುಮೆನಿಸಿತ್ತು ಕುಮಾರಕೃತಪ್ರಸಾಧನಂ (ಚಂದ್ರಪ್ರ. ೬-೬೩). [ಮೀಂ$_2$ (<ಮೀನ್$_2$) + ಗುಡಿ$_2$]

**ಮೀಱುಂಜೌವನ** (ನಾ). ತುಂಬುಪ್ರಾಯ ; ಪೂರ್ಣಯೌವನ : ವನಿತಾಮಣಿಯಿಂತೊಪ್ಪುವ ರೂಪಿಗೆ ಮಿಸುಗುವ ಮೀಱುಂಜೌವನವೇೞ್ ವಿರಾಜಿಸುತಿರೆ ಕಂಡು (ಜಯಚ. ೩-೬೪). [ಮೀಱು + ಜೌವ್ವನ (< ಜವ್ವನ)]

**ಮೀಱುಹ** (ನಾ). ಮಿತಿಯನ್ನು ಮೀರುವಿಕೆ; ಉಲ್ಲಂಘನೆ : ''ಅತ್ಯಾಧಾನಂ, ಅತಿಕ್ರಮಃ – ಈ ೨ ಮೀಱುಹ'' (ಕರ್ಣಾಟ. ೦೨೪-೬೯). 'ಕೆಯ್ಮೀಱುಹ' ಪರಾ. [ಮೀಱು + – ಹ$_2$ (< – ಪ$_2$)]

**ಮುಂ$_1$** ' ಮುನ್$_1$ ' ನೋ.

**ಮುಂ$_2$** ' ಮುನ್$_2$ ' ನೋ.

**ಮುಂಕಟ್ಟು** ' ಮುಂಗಟ್ಟು$_1$ ' ನೋ.

**ಮುಂಕಣಿ** (ನಾ). ೧. ಮುಂಭಾಗ ; ಮುಂಗಡೆ ; ಎದುರುಭಾಗ : ಮುಂಕಣಿಯಲಿಟ್ಟಣಿಸಿದರು ಭಾರಂಕದಾಳುಗಳೆಂಟುಸಾವಿರ ಬಿಂಕದತಿರಥರೆಂಟುಕೋಟಿತುರಂಗ ಪಾಯದಳ (ಕುವ್ಯಾಕ. ೩-೦೪). ೨. ರಥ, ಬಂಡಿ ಮುಂತಾದುವುಗಳ ಮುಂಭಾಗ. – ಮೂಕಿ : ಕೆಲಂಬರು ಬಂಡಿಯ ಮುಂಕಣಿಯಂ [ಪಾಠಾಂ. ಮುಂದಂ] ಪಿಡಿದು ಪುರದ ತಿರುವೀಥಿಯೊಳು ನಡೆತಪ್ಪಾಗಳು (ಸಂಪತಿ. ೨-೦೯); ಒಂದು ನಿಮಿಷಕೆ ಮತ್ತೆ ಪಡಿಬಲ ಬಂದುದಗಣಿತ ಯಕ್ಷ ರಾಕ್ಷಸವೃಂದ ಮುಕ್ಕುಳಿಸಿದುದು ಕರ್ಣನ ರಥದ ಮುಂಕಣಿಯ (ಕುವ್ಯಾಭ. ೦೯-೨೬).

[ಮುಂ$_1$ (< ಮುನ್$_1$) + ಕಣಿ$_3$./ತೆಲು. ಮುನ್ಕಲಿ, ಮುನುಕಲಿ]

**ಮುಂಕಣಿಸು** (ಕ್ರಿ). ಮುಂದುವರಿ; ಮುಂದೆ ಸಾಗು ; ಮುನ್ನುಗ್ಗು : ಮೊಗ್ಗರಂಬೊಯ್ದುಗ್ಗಲಿಸಿ ನಡೆದು ಬಗ್ಗಿಸಿ ಬಯ್ದೊಗ್ಗುಗೆಡದೆ ಮುಂಕಣಿಸಿ ಭೋಂಕನೆ ನೂಂಕಿ (೧೦೪. ೩-೬೩ ಪ); ಮುಂಕಣಿಸುತ್ತೆ ಚಪ್ಪರಿಸುತುಂಗುಟದಿಂದೊದೆದಾರ್ದು ಸಾರ್ದು ಕೂರಂಕುಸವಿಟ್ಟು . . . ನೂಂಕೆ (೧೦೪. ೬-೭೨). [ಮುಂಕಣಿ + – ಇಸು$_3$]

**ಮುಂಕುಡಿ** ' ಮುಂಗುಡಿ$_1$ ' ನೋ.

**ಮುಂಕೊಂಕುಗತ್ತಿ** (ನಾ). ಮುಂದಕ್ಕೆ ಬಾಗಿರುವ ಒಂದು ಬಗೆಯ ಕತ್ತಿ : ದೈತ್ಯರು ಕಕ್ಕಡೆಯ ಮುಂಕೊಂಕುಗತ್ತಿಯ ಸಬಳ ಮುದ್ಗರವ ಕೊಂಡು ಬಂದಾ ದೈತ್ಯಗಣವನು ದಿಂಡುಗೆಡಹಿಯು ತಾಳಿಯೆ (ಸಂಶತ. ೬-೩೭) ; ಆರುತ್ಕೈತಂದೈದೆ ದೇವಸನೋರಣಸಿಯುಸಿಬಾಪಮಾರ್ಗಣ ಕೂರಲಗು ಮುಂಕೊಂಕುಗತ್ತಿಯ ಭಟರು ಮೇಳವಿಸೆ (ಸಂಶತ. ೯-೦೦೭).

[ಮುಂ$_2$ (< ಮುನ್$_2$) + ಕೊಂಕು$_2$ + ಕತ್ತಿ]

**ಮುಂಕೊಡು** (ಕ್ರಿ). ಮುಂದಾಗಿ ಕೊಡು ; ಮೊದಲೇ ಒಪ್ಪಿಸು : ನೆಲನಂ ಸರ್ವಸ್ವಮಂ ಕೊಟ್ಟಡಿಗೆಱಗಿದನಾ ಪಾಣ್ಡ್ಯನುಳ್ಳಕ್ಕೆ ಬೇಗಂ ತಲೆಯಂ ಮುಂಕೊಟ್ಟೆವಿನ್ನೇದುದು ಬೆಸನಮಿಾಗೇದಟ್ಟಿದ [ವಾರ್] ರಣಂಗಳ್ (ಶಾಇಕ. XX. ೯೯-೨೫; 1076 ?); ಲಂಕಾಧೀಶನ ಜಯವಧು ಪಂಕಜನಾಭಂಗೆ ಸೋಲ್ತು ರಣಮುಖದೆಡೆಯೊಳ್ ಮುಂಕೊಟ್ಟಿಟ್ಟದ ರನ್ನದ ಕಂಕಣ ಮೆಂಬಂತೆ ಕಯ್ಗೆ ಬಂದುದು ಚಕ್ರಂ (ಕಪ್ರಾಪು. ೩೯೫ ಪ್ರಯೋ).

[ಮುಂ$_2$ (< ಮುನ್$_2$) + ಕೊಡು$_1$]

**ಮುಂಕೊಳ್** ' ಮುಂಗೊಳ್ ' ನೋ.

**ಮುಂಕೊಳಿಸು** ' ಮುಂಗೊಳಿಸು ' ನೋ.

**ಮುಂಕೊಳು** ' ಮುಂಗೊಳ್ ' ನೋ.

**ಮುಂಕೋರೆ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ ; ಖಡ್ಗವನ್ನು ಮುಂದಕ್ಕೆ ಬಾಗಿಸುವುದು : ತಳಸಂಚು ಮೇಲ್ಸಂಚು ಹಿಂಕೋರೆ ಮುಂಕೋರೆ ಬಲಸನ್ನೆ ಯೆಡದ ಸನ್ನೆಯೊಳು ಅಲಗ ನೀಡಿದರಲಗಿನೊಳಾಂತು ಸೆಗೆದು ಮೈಸೋಳಿದು ತಪ್ಪಿಸಿದನೆಲ್ಲವನು (ಕಠಕ. ೬೩-೨೭).

[ಮುಂ$_1$ (< ಮುನ್$_1$) + ಕೋರೆ$_1$]

**ಮುಂಗಂದಾಯ** (ನಾ). ಮೊದಲ ಕಂತಿನಲ್ಲಿ ಕೊಡುವ ಕಂದಾಯ, – ತೆರಿಗೆ : (*). [ಮುಂ$_1$ (< ಮುನ್$_1$) + ಕಂದಾಯ]

**ಮುಂಗಜ್ಜ** (ನಾ). (ಯಾವುದಾದರೂ ಕಾರ್ಯಕ್ಕೆ ನಡೆಸುವ) ಪೂರ್ವ ಸಿದ್ಧತೆ : ಹೊಂಗೋಪುರಶಿಖರಕೆ ಪೋಪ ನಡೆ ನಿನ್ನ ಮುಂಗಜ್ಜವ ನೆಗಳ್ದಪೆನು (ಪೋಹತ. ೨೬-೨೯). [ಮುಂ$_1$ (< ಮುನ್$_1$) + ಕಜ್ಜ$_1$]

**ಮುಂಗಟ್ಟು$_1$**, ಮುಂಕಟ್ಟು (ಕ್ರಿ). ೧. ಮುಂಭಾಗದಲ್ಲಿ ಸೇರು, – ಜೊತೆಗೂಡು : ತಂಗದಲೆಯ ಮೆಯ್ಸು ನೀರನೂಡಿಸುತೆ ವಿಹಂಗ ಸಂತೋಷದಿ ತಮ್ಮ ಮುಂಗಟ್ಟಿದ ಮುದ್ದುಮಱಿಗಳ್ಗೆ ಗುಟುಕೀಯೆ ಕಂಗೊಳಿಸಿತು ರುಕ್ಮಿಣಿಗೆ (ಪೋಹತ. ೪-೦೯). ೨. ಮುಂಭಾಗಕ್ಕೆ ಬರು : ದಕ್ಷಿಣಕೆ ದೂಱಿತು ಬಲದ ಭಾಗದೆ ಪಲ್ಲಿ ಮುಂಗಟ್ಟಿ ಪಾಱಿತು ವಾಸುಗಿಪಕ್ಕ (ಪೋಹತ. ೬-೨೩). ಮುಂಕಟ್ಟು : ೩. ಮುಂಭಾಗದಲ್ಲಿ ಅಡ್ಡಗಟ್ಟು; ಮುಂದೆ ಹೋಗದಂತೆ ತಡೆದು ನಿಲ್ಲಿಸು : ಜಗವ ತನ್ನಯ ಮಾಯಾರೂಪಿನಿಂ ಪೊರೆವುತಿಹ ವಿಗಡತನದಿಂದವರ ಮುಂಕಟ್ಟಿ ನಿಲ್ಲಿಸುತೆ (ಶಶಪೋ. ೦೦-೬೪); ಪವಣಾದಿಂ ಪೊಕ್ಕು ಕವಿದರು ಶತ್ರುಬಲವ ಮತ್ತವರು ಮುಂಕಟ್ಟಿ ತರುಬುತ್ತಯಿರದರಿಯ ಮುಗುಳವರು ಪುರವಣಿಸಿ ಕವಿದು (ಶಶಪೋ. ೩೨-೬). [ಮುಂ$_2$ (< ಮುನ್$_2$) + ಕಟ್ಟು$_1$]

**ಮುಂಗಟ್ಟು$_2$** (ನಾ). ೧. ಗೋಡೆಯ ಹೊರಭಾಗದ ಬುಡದಲ್ಲಿರುವ ಇಳಿಜಾರಾದ ಅಂಚು: (*). ೨. ಕೆರೆಯ ದಂಡೆಯ ಒಳಭಾಗ : (*). ೩. ಅಂಗಡಿ, ಮನೆ ಮುಂತಾದವುಗಳ ಮುಂಭಾಗದಲ್ಲಿ ಕಟ್ಟಿರುವ ಕಟ್ಟಡ : ಸಂತೆಯ ಎಡಬೀದಿಯಲ್ಲಿ ಉದ್ದಕ್ಕೂ ಅಂಗಡಿ ಮುಂಗಟ್ಟುಗಳು . . . ಮುಂಗಟ್ಟುಗಳೆಲ್ಲ ಹೂವು ಮತ್ತು ತಾಂಬೂಲವನ್ನು ಮಾರುವ ಅಂಗಡಿಗಳು (ಕೂಲೀಪಾ. ೩೨); ಅಂಗಡಿ ಮನೆ ಮುಂಗಟ್ಟುಗಳಲ್ಲಿ ಇಮ್ಮಡಿಯ್ಯ ಕಿಟಕಿ ಬಾಗಿಲುಗಳನ್ನು ತೆರೆದು. ಶುದ್ಧಿಗೊಳಿಸಲಾಗಿತ್ತು (ತುಪರು. ೦೬೨) ; ಅಂಗಡಿ ಮುಂಗಟ್ಟುಗಳಂತೂ ತಳಿರುತೋರಣಗಳಿಂದ ಅಲಂಕೃತವಾಗಿದ್ದುವು (ಹೇಮಕೂ. ೭).

[ಮುಂ$_1$ (< ಮುನ್$_1$) + ಕಟ್ಟು$_2$]

**ಮುಂಗಡ** (ನಾ). ಯಾವುದಾದರೂ ಕೆಲಸಕ್ಕೆಂದು ಮೊದಲೇ ಕಡವಾಗಿ ಕೊಡುವ ಅಥವಾ ಪಡೆಯುವ ಧಾನ್ಯ ಅಥವಾ ಹಣ; ಸಂಚಕಾರ ; ಅಗಾವು : ಕೊಳ್ಳಿ ಮುಂಗಡವಿದನು ಕೊಲೆಗೈದು ಕುರುವು ತಂದೆನಗೆ ತೋರ್ದರ್ ಮೇಲೆ ಬಹುಮಾನವಿದೆ ನಿಮಗೆ ಇದಕಿಂ ಮಿಗಿಲ್ (ಸಂಪ್ರಸ. ೦೩-೦೨) : ಗಟ್ಟದಿಂದ ಮುಂಗಡಹಣ ಪಡೆದು ಜತೆಗೆ ಇಪ್ಪತ್ತೋ ಮೂವತ್ತೋ ರೂಪಾಯಿಗಳಂತೆ ಮುಂಗಡ ಹಾಕಬೇಕು (ಕಳ್ಳರೂ. ೨೮); ಅಂಗಡಿ ಇದ್ದರೆ ಸಾಲದು, ಮುಂಗಡ ಬೇಕು (ಗಾದೆ).

[ಮುಂ$_1$ (< ಮುನ್$_1$) + ಕಡ$_1$./ತುಳು. ಮುಂಗಡ, ಮುಂಗಣ]

**ಮುಂಗಡಪತ್ರ** (ನಾ). ವಾರ್ಷಿಕ ಆಯವ್ಯಯದ ಅಂದಾಜುಪಟ್ಟಿ : ''ಆಯವ್ಯಯ ಪತ್ರ, ಮುಂಗಡಪತ್ರ, ಬಜೆಟ್'' (Budget. ಶಬ್ದಾ. ೦೦); ಗ್ರಂಥಗಳನ್ನು ಕೊಳ್ಳುವ ಮುನ್ನ ಗ್ರಂಥಾಲಯದ ಮುಂಗಡಪತ್ರದಲ್ಲಿ (Budget) ಮಂಜೂರಾದ ಹಣವನ್ನು ನೋಡಬೇಕು (ಗ್ರಂಶಾಂ. ೦೦).

[ಮುಂಗಡ + ಪತ್ರ]

**ಮುಂಗಡಪ್ರತಿ** (ನಾ). ಪ್ರಕಟಣೆ ಇತ್ಯಾದಿಗಳಿಗೆ ಮುಂಚಿತವಾಗಿಯೇ ಕಳುಹಿಸುವ ಪ್ರತಿ : ''ಮುಂಪ್ರತಿ, ಮುಂಗಡಪ್ರತಿ'' (Advance copy. ಶಬ್ದಾ. ೪). [ಮುಂಗಡ + ಪ್ರತಿ]

**ಮುಂಗಡಹಣ** (ನಾ). ಮುಂಚಿತ ಸಾಲವಾಗಿ ಕೊಡುವ ಹಣ : ಆ ಹಣ್ಣುಗಳೆಲ್ಲ ನಮ್ಮ ಪಾಲಿಗೆ ಬರುವಂತಿಲ್ಲ ಅಣ್ಣ, ಅವುಗಳನ್ನು ಬಾಗವಾನರಿಗೆ ಮುಂಗಡಹಣ ತೆಗೆದುಕೊಂಡು ಮಾರಿಬಿಟ್ಟಿದ್ದೇನೆ (ಹಬ್ಬ. ೦೨೯); ಗಟ್ಟದಿಂದ ಮುಂಗಡಹಣ ಪಡೆದು ಜತೆಗೆ ಇಪ್ಪತ್ತೋ ಮೂವತ್ತೋ ರೂಪಾಯಿಗಳಂತೆ ಮುಂಗಡ ಹಾಕಬೇಕು (ಕಳ್ಳರೂ. ೨೮). [ಮುಂಗಡ + ಹಣ]

**ಮುಂಗಡಿಸು** (ಕ್ರಿ). ಅಸಹನೆಯನ್ನು ತೋರಿಸು : ಎಲೆ ರಾಯ ನೀನುಬ್ಬಿ ನೊಳ್ ಕೌರವೇಶ್ವರನಿಗೆ ಮುಂಗಡಿ[ಪಾಠಾಂ. ಡ]ಸಿ ನುಡಿದು ಕೆಡಿಸಿದೆ (ಕುರಂಗ. ೭೩-೨೩). [ಮುಂಗಡ$_{7}$ + — ಇಸು$_3$]

**ಮುಂಗಡೆ** (ನಾ). ಮುಂದುಗಡೆ; ಮುಂಭಾಗ; ಎದುರು : ಬಿರಯಿ ನೀಂ ಪೋಪೋಗು ಪೋಗೆಂದು ಮುಂಗಡೆ [ಪಾಠಾಂ. ಗುಡಿ]ಯೊಳ್ ಸಾರುವ ಡೌಡೆಯೆಂಬ ತೆಜದಿಂದಂ ಬಗ್ಗಿ ಸುತ್ತಿರ್ದುರ್ವುಗ್ಗಡದಿಂ ಕೋಗಿಲೆ (ಶಬ್ದಕಾ. ೩೩); ಆ ದೇಗುಲದೊಳಿಪ್ಪ ಭವನಂ ಕಂಡು ಪೊಡವಡುತ್ತಂ ಬಟ್ಟಲಂ ಮುಂಗಡೆ ಯೊಳಿಟ್ಟಾರೋಗಿಸೈ ಯೆನ್ನೊಡೆಯನೇ ಗುರು ಕಲ್ಲಿನಾಥಾ ಎಂದು ಬಿನ್ನೈಸಿ (ಬಸವ. ೦೯-೬); ಬೆಡಗಿನಭಿನವರಸದ ಭಾವದ ಕಡುಪುಕಾತಿಯರೈದಿದರು ಮುಂಗಡೆ [ಪಾಠಾಂ. ಗುಡಿ]ಯುಲವನಿಜೆಯ (ತೊರಶಾ. ೦-೦೯-೨೨).

ಮುಂಗಡಿಕೂಸು = ಕೊನೆಯ ಮಗುವಿನ ಹಿಂದಿನ ಮಗು : ನಮ ಮನ್ಯಾಗ ಹುಡುಗರಿಗೆ ಕೆಲಸ ಹಚ್ಚೋದುಲ್ಲ ಎತಿಗೊಳ್ಳಲಿಕ್ಕೆ ಅಂದ್ರ ಮುಂಗಡಿಕೂಸಿಲ್ಲ (ಸಮಕಾ. ೩೯); ನನ್ನ ಮುಂಗಡೀಕೂಸು ಎಚ್ಚರಾತು ನೋಡು (ಏಕಹ. II. ೬೩೯). ಮುಂಗಡೆಯಮಗು, ಮುಂಗಡಿಮಗು = ಮುಂಗಡಿ ಕೂಸು : ಆಕೆಯ ಮುಂಗಡೆಯ ಮಗುವಿಗೆ ಇನ್ನೂ ಎರಡೇ ವರ್ಷ ವಾಗಿದೆ (ರೂಢಿ); ರಂಗೂಗೆ—ಅದೇ ನನ್ನ ಎರಡು ವರ್ಷದ ಮುಂಗಡಿ ಮಗು—ಎಪ್ಪತ್ತುದಿನದ ನಾಯಿಕೆಮ್ಮು ಬಂದಿತು (ಪಾಂಗೇ. ೯೬).

[ಮುಂ$_1$ (< ಮುನ್$_1$) + ಕಡೆ$_3$]

**ಮುಂಗಣ್ಣು** (ನಾ). ೧. (ವ್ಯಾಯಾಮ, ಈಜು ಇತ್ಯಾದಿಗಳಲ್ಲಿ) ತಲೆ ಕೆಳಗಾಗಿ, ಕಾಲುಮೇಲಾಗಿ ಗಾಳಿಯಲ್ಲಿ ನೆಗೆದು ಮುಮ್ಮುಖ ವಾಗಿ ಕಾಲಮೇಲೆ ನಿಲ್ಲುವ ಒಂದು ವರಸೆ : ದೊಂಬರ ಸೂಳೆ ಯೊಬ್ಬಳು. . . ಒಂದು ಗಣೇಮರದ ಸಮೀಪಕ್ಕೆ ಹೋಗಿ ಮೇಲಕ್ಕೆ ಹತ್ತಿ ಅಲ್ಲಿ ಲಾಗ, ಅಂತರಪರಟಿ, ಹಿಂಗಣ್ಣು, ಮುಂಗಣ್ಣು, ಎರಡು ಕೈಯನ್ನು ಬಿಟ್ಟ ದೊಣ್ಣೆವರಸೆ. . . ಇದೇ ಮೊದಲಾದ ಸಾಹಸಗಳನ್ನೆಲ್ಲಾ ಮಾಡುತಿರ ಲಾಗಿ (ಅದೂಟಿ. ೦೭೬); ಅಲ್ಲಿ ಹಿಂಗಣ್ಣು ಮುಂಗಣ್ಣು ಹಾಕುವುದರಲ್ಲಿ ನಿಸ್ಸೀಮನಾದವನಿಗೆ ಯಾವ ತುಂಬುಹೊಳೆಯಲ್ಲೂ ಭಯವಿಲ್ಲ. . . ಆದರೆ ಹಿಂದೆ ಅಲ್ಲಿ ಹಿಂಗಣ್ಣು ಮುಂಗಣ್ಣುಗಳನ್ನು ಹಾಕಿದ ನರಸಿಂಹಾಚಾರ್ಯರ ತಲೆ ಅಲ್ಲಿ ಒಡೆದುದನ್ನು ಕಂಡಿರುವ ಹಿರಿಯರು ಮಾತ್ರ ದೊಡ್ಡನ ಕಲ್ಲಿಗೆ ಹೋಗುವುದಕ್ಕೂ ಅಲ್ಲಿ ಹಿಂಗಣ್ಣು ಮುಂಗಣ್ಣು ಹಾಕುವುದಕ್ಕೂ ಹೆದರು ತ್ತಾರೆ (ಗರುಡಾ. ೦೬೨).

ಮುಂಗಣ್ಣುಹೊಡೆ = (ಅಲಂ) ಪ್ರಗತಿಪರವಾಗು : ಸಾಹಿತ್ಯ ವಿಚಾರದ ತೀರ್ಪು ಆಗಾಗ್ಗೆ ಮುಂಗಣ್ಣು ಹೊಡೆಯುತ್ತದೆ. ಪುನಃ ಹಿಂಗಣ್ಣು ಹೊಡೆಯುತ್ತದೆ (ಏಬಿಂರ. II. ೮).

[ಮುಂ$_1$ (<ಮುನ್$_1$) + ಕಣ್ಣು (< ಕಣ್)]

**ಮುಂಗತೆ** (ನಾ). ಮುಂದಿನ ಕತೆ; ಮುಂದಿನ ಕಥಾಭಾಗ : ಮುಂಗತೆ [ಪಾಠಾಂ. ಥೆ]ಯನುಸಿರೆಂದು ಬೆಸಗೊಂಡನವನೀಶನು (ಕೈಶಿಭಾ. ೨೩-೦); ಪಾಂಡವಧರಣಿಪಾತ್ಮಜನಯ ಕೇಳೀ ಮುಂಗತೆಯು ಕೌತುಕವ (ಕೋಗಮು. ೨೦-೦). [ಮುಂ$_1$ (< ಮುನ್$_1$) + ಕತೆ]

**ಮುಂಗತ್ತರಿ** (ನಾ). ಖಡ್ಗಯುದ್ಧ, ದ್ವಂದ್ವಯುದ್ಧ ಮೊದಲಾದುವು ಗಳಲ್ಲಿ ಒಂದು ವರಸೆ : ನಿಲ್ಲುವ ಕಡೆಯಲ್ಲೇ ನಿಂತು ಪಾರ್ಶ್ವಗಳಿಂದ ಎರಡು ಪಾದಗಳ ಮುಂದಣಗತಿಯುಂಟಾಗುವ ಹಾಗೆ ಆವುದಾನೊಂದು ಕರ್ತರಿಗತಿಯು ಮಾಡಲು ತಕ್ಕಂಥಾದು ಅದು ಮುಂಗತ್ತರಿ ತೊಲಗುವದು (ಐದ್ಭಟೀ. ೫-೬). 'ಮುಂಗರ್ತರಿ' ಹೋ.

[ಮುಂ$_1$ (< ಮುನ್$_1$) + ಕತ್ತರಿ$_2$]

**ಮುಂಗತ್ತಲೆ** 'ಮುಂಗಳ್ತಲೆ' ನೋ.

**ಮುಂಗಥೆ** (ನಾ). = ಮುಂಗತೆ : ಮನವಿಕ್ಕು ಮೈಮರೆದು ಪರವಶಕ್ಷೀರ ಶರನಿಧಿಯ ಪೊಕ್ಕು ಮುಳುಮುಳುಗಿಯಾನಂದಿಪಂದದಿ ಪೇಳ್ವೆ ಮುಂಗಥೆಯ ಸಂಗತಿಯನು (ಶಶವೋ. ೩-೯). [ಮುಂ$_1$ (< ಮುನ್$_1$) + ಕಥೆ]

**ಮುಂಗದನ** (ನಾ). ಪ್ರಾರಂಭದ ಯುದ್ಧ; ಮೊದಲ ಕದನ : ಪಾಂಡವರಜ್ಞಾತವಿದ್ದ, ವಲಲಂ ಕೀಚಕನ ಗೆದ್ದ, ಕುರುಕುಲ ಮುಂಗದನ ವೆದ್ದ ನಾಡು ನೋಡಿದಲ್ಲವೇ ? (ಗಿರಿಹಿ. ೬೦-೦೯).

[ಮುಂ$_1$ (< ಮುನ್$_1$) + ಕದನ]

**ಮುಂಗನಸು** (ನಾ). (ಗರ್ಭಿಣಿಯು ಪ್ರಸವಪೂರ್ವದಲ್ಲಿ) ಕಾಣುವ ಸ್ವಪ್ನ : ತನುಭವಲಾಭದೌಹದನಿಮಿತ್ತದ ಸಂಗತಿ ತಕ್ಕ ನೋಂಪಿ ಮುಂಗನಸು ಬಯಕ್ಕೆ ಗೇಟುಗೆ. . . ಜನನುತಜಾತಕರ್ಮವಿನಿತುಂ ಸುತ ಶೋಭನವಣನಸ್ಥಳಂ (ಸುಕ್ತಿಸು. ೬-೦). [ಮುಂ$_1$ (< ಮುನ್$_1$)+ ಕನಸು]

**ಮುಂಗಪ್ಪು** (ನಾ). ಸೂರ್ಯ ಮುಳುಗಿದಾಕ್ಷಣ ಆವರಿಸುವ ಕತ್ತಲೆ; ಮುಸ್ಸಂಜೆಯ ಕಪ್ಪು : ಏನಾಗಲಿಯೆ ಮೋಡ ಕವಿದು ಮುಂಗಪ್ಪು ಹಬ್ಬಿಬಿಟ್ಟಿದೆ (ಚಂದ್ರಗ. ೦೦೦-೪).

[ಮುಂ$_1$ (< ಮುನ್$_1$) + ಕಪ್ಪು$_4$ (< ಕರ್ಪು$_1$)]

**ಮುಂಗಯ್** 'ಮುಂಗೆಯ್' ನೋ.

**ಮುಂಗಯ್ಯಮುರಿ** 'ಮುಂಗೈಮುರಾರಿ' ನೋ.

**ಮುಂಗರಿ** 'ಮುಂಗುರಿ' ನೋ.

**ಮುಂಗರುಳು** (ನಾ). "ಜಠರದ ಕೊನೆಯಿಂದ ಹೊರಡುವ ಸಣ್ಣ ಕರುಳಿನ ಆದಿಭಾಗ; ಮುಂಗರುಳು ಪ್ರಥಮಾಂತ್ರ" (Duodenum. ಇಂಕೋ) : ಮುಂಗರುಳು (Fore Intestine) ಮತ್ತು ಹಿಂಗರುಳು (Hind Intestine) ಹೊರಗಿನಿಂದ ಒಳಬಾಗಿ ಬೆಳೆಯುವುದರಿಂದ ಚರ್ಮದ ಪೊರೆಯಿದ್ದು (Cuticular Lining) ಕೀಟ ಪೊರೆ ಬಿಟ್ಟಾಗ ಆ ಪೊರೆಯೂ ಬಿಡುತ್ತದೆ (ಕೀಟಶಿ. ೨೭).

[ಮುಂ$_1$ (< ಮುನ್$_1$) + ಕರುಳು (< ಕರುಳ್)]

**ಮುಂಗರೆ** (ನಾ). "ಸಮುದ್ರದ ಏರುಮಟ್ಟಕ್ಕೂ ಇಳಿಮಟ್ಟಕ್ಕೂ, ಅಥವಾ . . . ಕಟ್ಟಡಗಳ ನೆಲಮಟ್ಟಕ್ಕೂ ಮಧ್ಯೇ ಇರುವ, ಕರೆಯ ಪ್ರದೇಶ; ಮುಂಗರೆ" (Foreshore. ಇಂಕೋ) : ಮುಂಗರೆಗೆ ಅಡ್ಡವಾಗಿ ಹೋಗುವ ಇಳುಕಲು ದಾರಿ (Hard. ಇಂಕೋ).

[ಮುಂ$_1$ (< ಮುನ್$_1$) + ಕರೆ$_4$]

**ಮುಂಗರ್ತರಿ** (ನಾ). ಒಂದು ಬಗೆಯ ಕತ್ತಿವರಸೆ : ನಿಂತುಕೊಂಡು ಪಾದದಲ್ಲಿ ಪಾದಪ್ರಕ್ಷೇಪವು ಮುಂಗರ್ತರಿಯೆಂಬುದು (ಐದ್ಭಟೀ. ೯-೩೯). 'ಮುಂಗತ್ತರಿ' ಹೋ. [ಮುಂ$_1$ (< ಮುನ್$_1$) + ಕರ್ತರಿ]

**ಮುಂಗಲಿ** 'ಮುಂಗುರಿ' ನೋ.

**ಮುಂಗಲಿತನ** (ನಾ). ಯುದ್ಧದಲ್ಲಿ ಬೇರೆಯವರಿಗಿಂತ ಮೊದಲು ಮುನ್ನುಗ್ಗಿ ತೋರುವ ಪರಾಕ್ರಮ : ಅಜಿಯಬಹುದೈ ಭಾವಮೈದುನ ಮೆಜೆ ಭುಜಾಟೋಪವನುಹಿಂದಣ ಕೊಜಿತೆಯನು ಕಳೆ ಮಗನೆ ಬೊಪ್ಪಕುಲ ಕ್ರಮಾಗತವ ಮಜೆಯದಿರು ಮುಂಗಲಿತನಕೆ ತಾನಿಜೆವೆ ನಾ ಮುನ್ನೆಂದು ತಮ್ಮೊಳು ಜಜೆದರೊಡವುಟ್ಟಿದರು ಬಾಂಧವಮಿತ್ರ ಭೂಮಿಪರು (ಕುವ್ಯಾಗ. ೦-೨೬). [ಮುಂ$_1$ (< ಮುನ್$_1$) + ಕಲಿತನ]

**ಮುಂಗವಚ** (ನಾ). "ಉಡುಪು ಕೊಳೆಯಾಗದಂತೆ ಮುಂದಕ್ಕೆ ಕಟ್ಟಿ ಕೊಳ್ಳುವ ಉಡಿಗೆ: ಮುಂಗವಚ; ದೂಳುಪಾವಡಿ" (Apron. ಇಂಕೋ): ಅವಳು ಹಿಂದಿನಂತೆ ಇಂದೂ ಶ್ವೇತಶುಭ್ರವಾದ ಮುಂಗವಚವನ್ನು ತೊಟ್ಟಿದ್ದಳು (ಪುನರು. ೬೩); ಕೆಲಸದ ಹೊತ್ತಿನಲ್ಲಿ ಕೆಲಸಗಾರರಿಗೆಲ್ಲ ಉಸಿರಾಟಕ (ರೆಸ್ಪಿರೇಟರ್), ಕನ್ನಡಕ, ಕೈಗವುಸು, ಮುಂಗವಚ ಇತ್ಯಾದಿ ಗಳನ್ನು ಒದಗಿಸಬಹುದು (ಕರಕೋ. I. ೩೬೯).

[ಮುಂ$_1$ (< ಮುನ್$_1$) + ಕವಚ]

ಮುಂಗಸಿ ' ಮುಂಗುಸಿ ' ನೋ.

**ಮುಂಗಳುಪು** (ಕ್ರಿ). (ತಾನು ಬರುವುದರ ಕುರುಹಾಗಿ ಉಡುಗೊರೆಯನ್ನು) ಮೊದಲೇ ಕಳುಹಿಸು ; ಮುಂಚೆಯೇ ಕಳುಹಿಸು : ತನ್ನ ಬಾಳುವೆಗೆ ನಚ್ಚಿನವಳೀ ರಾತ್ರಿವಧುವೆಂದು ಹಿಮಕರಂ ಮೆಚ್ಚಿ ಮುಂಗಳುಪಿದೆಳಮಾಣಿಕದ ಮಣಿಗಳೆನೆ ಸಂಜೆದಾರೆಗಳೆಸೆದುವು (ಕೃಬಾಶ. ೮-೪೭).

[ ಮುಂ$_2$ ( < ಮುನ್$_2$) + ಕಳುಪು (< ಕಱುಪು$_1$ )]

**ಮುಂಗಳ್ತಲೆ, ಮುಂಗತ್ತಲೆ** (ನಾ). ಸೂರ್ಯನು ಮುಳುಗಿದಾಕ್ಷಣ ಬರುವ ಸಂಧ್ಯಾಸಮಯದ ಕತ್ತಲೆ ; ಮುಸ್ಸಂಜೆಯ ಕತ್ತಲೆ : ಮುಗಿಯೆ ಪಗಲ್ ಮುಸುಕಲ್ ಮುಂಗಳ್ತಲೆ. . . ನೆಱೆ ಮುಗಿದುವು ಮುನ್ನೀರಣುಗಿಯ ಸೆಜ್ಜೆವನೆಗಳಾ ರಾತ್ರಿಯೊಳು (ಶಮುಕಾ. ೦೩-೬೩). **ಮುಂಗತ್ತಲೆ :** ನದಿಯೆಡೆಗೆ ಬರಲೊಂದು ವೃಷಭನುದಕಾರ್ಥದಿಂ ತಾನು ಮುಂಗತ್ತಲೆಯೊಳದನಱಿಯದೇ ತುಡುತಂಬನಾ ಕರ್ಣಪೂರದಿಂ ಮರೆಯೆಂದು ಬಿಡಲಾಗಿ (ಶೀಕೃತ. ೪-೭-೩೭); ದಟ್ಟವಾಗಲು ಪ್ರಾರಂಭಿಸಿದ ಮುಂಗತ್ತಲೆಯಲ್ಲಿ ಅಜ್ಜಿಯ ನಿಶ್ಚಲಮುಖ ನೋಡಿ ಹೆದರಿ (ಚಂದ್ರಶ. ೨೦-೦೨). [ ಮುಂ$_1$ ( < ಮುನ್$_1$) + ಕಳ್ತಲೆ ( < ಕಟ್ತಲೆ) ]

**ಮುಂಗಾ** (ಕ್ರಿ). ಮೊದಲು ಕಾಪಾಡು : ನಮ್ಮ ಜೋಕೆಯಂ ಬಗೆಯದೊಡೆ, ನಿನ್ನ ಜೋಕೆಯನೆ ಮುಂಗಾದು ಕೊಳು ಜೀಯಾ! (ಗೊಲ್ಲಕಾ. ೭-೦೭). [ಮುಂ$_2$ ( < ಮುನ್)$_2$ + ಕಾ$_1$ ]

**ಮುಂಗಾಣ್, ಮುಂಗಾಣು** (ಕ್ರಿ). ೧. ಮುಂಭಾಗವನ್ನು ಕಾಣು ; ಮುಂದನ್ನು ನೋಡು : ಕತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ ಪೊತ್ತುವೆಳಗಂ ಬೇಱೆ ತೋರ್ಪರಾರ್ . . . ಭೂಪ (ಕೃಬಾಶ. ೨-೦೩). ೨. ದಿಕ್ಕುತೋಚು ; ದಾರಿಕಾಣು ; ಮುಂದಾಗುವುದನ್ನು ತಿಳಿ : ಮದಮುಂ ಗರ್ವಮುಂ ಕೂಡಿಕೊಂಡಿರ್ದನಿತುಂ ಮುಂಗಾಣದತ್ಯುದ್ಧತತರಮುಖವಾಗಿರ್ಪುದೋರಂತೆ ವಿದ್ವಜ್ಜನಮಂ ಕೈಕೊಳ್ಳದೆನ್ನೀ ಮನದೊಳಗಣ ಹಂಕಾರವಿಂತಿಂತಿದಂ ದೇವನೆ ನೀಂ ತಗುರ್ತಿ . . . ರಕ್ಷಿಪ್ಪುದೆನ್ನಂ (ರಕ್ಷಾಶ. ೦೭); ಸಲಿಲವಂ ನೀನೆಱೆವುತಿರು ಪ್ರಜ್ವಳಿಸುವವು ದೀವಿಗೆಗಳಿಂತಗ್ಗಳಿಸಿ ಮುಂಗಾಣದಿಹ ಜೈನರ ಪಶುಗಳೀ ದಿನವೆ ಇಳೆಯೊಳಗೆ ಮಡಿದಹವು (ಬಸವ. ೩೦-೩೭). **ಮುಂಗಾಣು :** ೨. ಮದದಿಂದೆ ಮುಂಗಾಣದಜನಿದಿರೊಳುಂ ಪಂಚವದನದಶಭುಜ ಪಂಚದಶಲೋಚನಂಗಳಿಂ ಪೊದೆದ ಪುಲಿದೊವಲ ಕೆಂಜೆಡೆಯ ಮಂಜುಳಕಾಯನಾಕ್ಷಣಂ ಮೂಡಿರ್ದನು (ತಬಕ. ೦೮-೪) ; ನೆಲದಾಸೆಯಂ ಮೋಹವಡೆದು ಮುಂಗಾಣದೆ ಕೊಲಬಾರದವರೆಲ್ಲರನು ಕೊಲಿಸಿದವು (ಕರ್ಣವ. ೮-೦೦). ೩. (ಸನ್ನಿವೇಶ ವಿಶ್ಲೇಷಣೆಯಿಂದ) ಮೊದಲೇ ಗ್ರಹಿಸು,— ಅರಿತುಕೊಳ್ಳು : ಬಿಜ್ಜಳನು . . . ಅವನನ್ನು ಕೊಲ್ಲಿಸುವ ಹಂಚಿಕೆಯನ್ನು ಯೋಚಿಸುತ್ತಿರಬೇಕು ಅದನ್ನು ಮುಂಗಂಡೇ ಏನೋ ಬಸವೇಶ್ವರನು ಇನ್ನು ಕೆಲ ಕೆಲದಿನ ಕತ್ತಿಶಿವದ್ರೋಹವು ಉದಯಿಸಲಿಕ್ಕಿದೆ . . . ಎಂದಿರಬೇಕು (ಮೂರುಉ. ೯೨); ಗುರಿಗೆಂದೆ ಮುಂಗಂಡು ಹುಡುಗನೊದೆದಾ ಚೆಂಡು ಹರಿದಾಡಲಾಡುಂ ಬೊಲದೊಳದಕೆ ಗುರಿಯಿಲ್ಲವೆಂಬೆಯೇನು ? (ಶಾಂತಕ. ೪೮-೦೩).

[ಮುಂ$_1$ ( < ಮುನ್$_1$ ) + ಕಾಣ್ ]

**ಮುಂಗಾಣಿಕೆ** ' ಮುಂಗಾಣ್ಕೆ ' ನೋ.

**ಮುಂಗಾಣಿಕೆಗೊಡು** (ಕ್ರಿ). ಮೊದಲ ಕಾಣಿಕೆಯನ್ನು ಕೊಡು : ಪುಷ್ಪೇಷುಗಂ ಪುಷ್ಪಬಾಣದ ಮುಂಗಾಣಿಕೆಗೊಟ್ಟೆನಾನೆ ಪೆಱತೆನ್ನಂತಾದುದೇ ಮೈಮೆಗಾಸ್ಪದಮೆಂಬಂತೆವೊಲಾಯ್ತು ಮಾಧವಿ ಮದಾಳಿಧ್ವಾನಸಂತಾನದಿಂ (ಜಗಬ. ೦೪-೬೩).

[ಮುಂಗಾಣಿಕೆ ( < ಮುಂಗಾಣ್ಕೆ) + ಕೊಡು$_1$ ]

**ಮುಂಗಾಣಿಸು** (ಕ್ರಿ). ಮುಂದೆ ಇರುವುದು ಕಣ್ಣಿಗೆ ಬೀಳು : ಬವರಕೆ ನಿಲಲು ತಿಮಿರವು ನೂಕಿ ಮುಂಗಾಣಿಸದು ಮುನಿವರು ವಾಕಿನೀಪತಿ ವಿಷ್ಣು ವಿಶ್ವೇಶ್ವರರುಗಳು ಕೇಳೆಂದ (ಉತ್ತಕ. ೨೪-೭).

[ ಮುಂ$_1$ ( <ಮುನ್$_1$ ) + ಕಾಣಿಸು ]

**ಮುಂಗಾಣು** ' ಮುಂಗಾಣ್' ನೋ.

**ಮುಂಗಾಣ್ಕೆ,** ಮುಂಗಾಣಿಕೆ (ನಾ). ೧. ಮುಂದಾಗುವುದನ್ನು ತಿಳಿಯುವಿಕೆ ; ಮುಂದಾಲೋಚನೆ : ಮುಕುಂದಯ್ಯನ ಮುಂಗಾಣ್ಕೆ ಒದಗಿಸಿದ್ದ ಬೆಚ್ಚನೆಯ ಕಂಬಳಿಯ ಮೇಲೆ ಬೆಚ್ಚಗೆ ಹೊದೆದುಕೊಂಡು ಮಲಗಿದ ಮೇಲೆಯೆ . . . ಚಿನ್ನಮ್ಮನ ಹೃದಯ ಅಳುಕತೊಡಗಿದ್ದು (ಮಲೆಮ. ೬೪೭). ೨. ಮೊದಲು ಅರ್ಪಿಸುವ ಕಾಣಿಕೆ ; ಮುಂಚಿತವಾದ ಕಾಣಿಕೆ : ಪುಷ್ಪೇಷುಗಂ ಪುಷ್ಪಬಾಣದ ಮುಂಗಾಣ್ಕೆ [ಪಾಠಾಂ. ಣಿಕೆ] ಗೊಟ್ಟೆ ನಾನೆ ಪೆಱತೆನ್ನಂತಾದುದೇ ಮೈಮೆಗಾಸ್ಪದಮೆಂಬಂತೆವೊಲಾಯ್ತು ಮಾಧವಿ (ಜಗಬ. ೦೪-೬೩); ತಂಗಿ ಊರ್ಮಿಳೆಯ ಕಣ್ಣೀರುಗಳ್ ಮುನ್ ಬರ್ಪ ಸೊಗಸುರ್ಕಿ ಮುಂಗಾಣ್ಕೆಗಳನರ್ಪಿಸಿಹವೈ ಪ್ರಾಣೇಶ್ವರನ ಚರಣತಲಕೆ ! (ಶ್ರೀರಾಮಾ. ೨೦೩-೨೩೮). **ಮುಂಗಾಣಿಕೆ :** ೧. " (ಮುಂದೆ ಬರುವುದನ್ನು) ಮೊದಲೇ (ತಿಳಿದು) ಹೇಳುವುದು ; ಮುನ್ ಸೂಚಿಸುವುದು . . . ಮುಂಗಾಣಿಕೆ ; ಮುನ್ನರಿವು " (Prognosis. ೩೦೪೩); ತಲೆದೋಱಿದನು ದಿನಪ ನಗೆಯುಡುಗಿ ನಾಚಿದವು ಕುಮುದಾಳಿಗಳು ಮುಂಗಾಣಿಕೆಯ ಹರುಷದೊಳಗಿದು ವಿರಹವ ಬೀಳುಕೊಟ್ಟುವು ಚಕ್ಕವಕ್ಕಿಗಳು (ಕುವ್ಯಾಶೀ. ೦-೨೮). ೨. ಮುಂಗಾಣಿಕೆಯ ಹೊನ್ನಂ ಕೊಟ್ಟರು (ಎಕ. XI. ದಾವಣ. ೪-೪೦: 1143); ಬವರವೆನ್ನದು ಬಳಿಕ ಮುಂಗಾಣಿಕೆಯು ನಿನ್ನದಲೈ ಜನವ ತೋಱು ತೋಱಿಸಲು (ಐಭಾಗ. ೦೦-೩೪-೨೬). ೩. ಮೊದಲ ನೋಟ ; ಪ್ರಥಮ ನೋಟ : ಕಾಣೆನಾಕೆಯ ಮುಂಗಾಣಿಕೆಯಲೇ ಸೂಱೆಹೋದುದು ಮನದ ಸರ್ವಸ್ವ (ಕುವ್ಯಾಅ. ೨-೩೪).

[ಮುಂ$_1$ ( < ಮುನ್$_1$ ) + ಕಾಣ್ಕೆ]

**ಮುಂಗಾದಾಡು** (ಕ್ರಿ). ಮುಂಭಾಗದಲ್ಲಿ ನಿಂತು ಕಾದಾಡು : ಮುಂದೆ ಹೋರಾಡು : ಚೂಣಿಯ ಭಟಂ ಗಾಯದಳಲ ಲೆಕ್ಕಿಸದೆ ಮುಂಗಾದಾಡಿ ಮಡಿದು ಜಯವಡುವಂತೆ (ಗೊಲ್ಲಕಾ. ೦೨-೩೦೦).

[ಮುಂ$_2$ ( < ಮುನ್$_2$ ) + ಕಾದಾಡು ]

**ಮುಂಗಾರ್,** ಮುಂಗಾರಿ, ಮುಂಗಾರು (ನಾ). ೧. ಮೊದಲ ಮಳೆಗಾಲ ; ವರ್ಷಾರಂಭ : ವಿರಹಿ ಸಮಾಜದ ಬಾಷ್ಪಬಿಂದುಗಳ್ವೆರಸುದಿರ್ದುವು ಘನತೋಯಬಿಂದುಗಳ್ ಮುಂಗಾರೊಳ್ (ಕುಸುಮಾ. ೬-೦೭); ವಿಷಮನುಗುಳುತೆ ಗುಡುಗುಬ್ಬಿನಿಂದಲಿ ರಸನವೆನಲು ಮಿಂಚಿ ನೀಡಿ ಅಸಿತೋರಗ ತೆಕ್ಕೆಗೊಂಡಿರ್ದುದೆನೆ ಮೇಘದೆಸಕವೊಪ್ಪಿದುದು ಮುಂಗಾರ (ಪ್ರಭಸ. ೯-೬೩) ; ಮೊಳಗಿನಬ್ಬರವಳಿದ ಗಗನಸ್ಥಳವೊ ಮೇಣ್ಮುಂಗಾರ ಮೇಘದ ಸುಳಿವು ನಿಂದಂಬುಧಿಯೊ . . . ದಶಕಂಠನ ಸಭಾಮಂಡಲವೊ ಹೇಳುವುದೇನು ಮೋನದೊಳಿರ್ದುದಾಸ್ಥಾನ (ತೊರರಾ. ೬-೪೦-೨). **ಮುಂಗಾರಿ :** ೧. ಮುಂಗಾರಿ ಮಿಂಚಿನಂದದಿ ದೇಶದೊಳಗೆ ನಿಸ್ಸಂಗನಾಗಿ ತಿರುಗಿ ಕಾಲ ಕಳೆಯಬೇಕು (ಬಸಾಸು. ೦೩-೩) ; ಬೈಲುಶೀಮೆಯಲ್ಲಿ ಹಿಂಗಾರಿಗಿಂತ ಮುಂಗಾರಿಯ ಮಳೆಯು ಹೆಚ್ಚು ಅನಿಯಮಿತವಾದದ್ದು (ಕೃಶಾಗ. ೨೦) ; ಮುಂಗಾರಿಯ ಮಳೆಯಾದ್ದರಿಂದ ಕೋಲುಮಿಂಚಿನ ಹೊಯ್ಲುವೂ ಗುಡುಗು ಸಿಡಿಲುಗಳ ಅಬ್ಬರವೂ ಭಯವನ್ನುಂಟುಮಾಡುತ್ತಲಿವೆ (ಕಗದ್ಯ. II. ೪೯). ೨. ವರ್ಷದ ಮೊದಲು ಬೀಳುವ ಮಳೆ, — ಆರಂಭದ ಮಳೆ ; ಮೊದಲ ಮಳೆ : ವೇಳುಗ್ರಾಮದ ನಾಗರಿಕರು ಕಾದ ಹಂಚಿನಂತೆ ಮುಂಗಾರಿಯ ಬರವನ್ನು ನಿರೀಕ್ಷಿಸುತ್ತಿದ್ದರು (ರಕ್ತರ. ೦೩೦). ೩. ವರ್ಷದ ಮೊದಲ ಮಳೆಗಾಲದಲ್ಲಿ ಬಿತ್ತುವ ಧಾನ್ಯ : ಮುಂಗಾರಿ. ಹಿಂಗಾರಿ, ಯೆರಡೂ ಬೆಳೆಯುವಂಥ ಭೂಮಿಯಲ್ಲಿ ಪೊಂದುವರ್ಷ

ಮುಂಗಾರಿಯು ಬಿತ್ತಿದರೆ ಮುಂದಿನ ವರ್ಷ ಹಿಂಗಾರಿಯು ಬಿತ್ತುವರು (ಕಣಗ. ೨೬೬) ; ಮುಂಗಾರಿಯಾಗಲಿ ಬಿಳಿಜೋಳವನ್ನಾಗಲಿ ಜೋಳವನ್ನು ಬಿತ್ತುವ ವರ್ಷ ಗೊಬ್ಬರವನ್ನು ಹಾಕಿ . . . ಬಿತ್ತಬೇಕು (ಕೃಷಿಶ್ರ. ೬೮) ; ಮೃಗನಕ್ಷತ್ರದ ವ್ಯಾಳೆಯಲ್ಲಿ ಬಿತ್ತುವ ಮುಂಗಾರಿ ಅಂದೆನಿಸಲ್ಪಡುವ ಜ್ವಾಳವು ಇಲ್ಲೆ ಸಾಧಾರಣವಾಗಿ ಬೆಳೆಸುತ್ತದೆ (ಮುಂಬಯಿಪ್ರಾ. ೩೩).

**ಮುಂಗಾರು :** ೧. ಮುಂಗಾರ ಮುಗಿಲೊಡ್ಡಿನಂತೆ ಮದಂಗಳಿಗಂಗೈಸುವ ತುಂಬಿವಿಂಡ ಹಿಂಗದೆ ಕರ್ಣತಾಳದಲಿ ಸೋವುತ ಮಾತಂಗ ನೀಗ್ಗೈದುವುವಲ್ಲಿ (ಕಂಪಭಿ. ೨-೫೬) ; ಒಡನೊಡನೆ ರೆಪ್ಪಾಪ್ಪಿ ಮಿಡುತ ತನುಲತೆ ನಡುಗಿ ಹೊಂಪುಳಿಯಾಗಿ ನೋಟದ ಕುಡಿಗದಿರು ಮುಂಗಾರು ಮಿಂಚುಗಳಂತೆ ಚಂಚಲಿಸೆ (ಅಪಂಚಾ. ೦-೨೩-೩೫). ೨. ಕೇಳಿದೈ ನೃಪಸೂನು ನಿಮ್ಮ ನೃಪಾಲರಾ ಪ್ರಸ್ರವಣಶೈಲದ ಮೇಲಿರಲು ಮೈದೋಱಿದುದು ಮುಂಗಾರು ಧಾರುಣಿಗೆ (ತೊರರಾ. ೪-೬-೧) ; ವಸಂತಋತು ಆಗ ತಾನೆ ಆರಂಭವಾಗಿತ್ತು. ಆ ಪ್ರಾಂತದಲ್ಲೆಲ್ಲ ಮುಂಗಾರು ಚೆನ್ನಾಗಿ ಆಗಿದ್ದಿತು (ಶಾಂತಲಾ. ೨೯೪).

[ ಮುಂ$_1$ ( < ಮುನ್$_1$ ) + ಕಾರ್$_2$. / ತೆಲು. ಮುಂಗಾರಿ, ಮುಂಗರಿ ]

**ಮುಂಗಾರಿ** ' ಮುಂಗಾರ್ ' ನೋ.

**ಮುಂಗಾರಿಮಳೆ** ' ಮುಂಗಾರುಮಳೆ ' ನೋ.

**ಮುಂಗಾರಿಯ** (ನಾ). ಮುಂದಿನ ಕೆಲಸ, – ಕರ್ತವ್ಯ : ಪೂಗೋಲನ ಬಿಗಿಯುಪ್ಪಿ ಮುಂಗಾರಿಯದಾಗಮಾಂತರವ ಪೇಳದಳು (ಮೋಹತ. ೦೦-೬೪).

[ ಮುಂ$_1$ ( < ಮುನ್$_1$ ) + ಕಾರಿಯ ]

**ಮುಂಗಾರಿರುಳು** (ನಾ). ಮುಂಗಾರುಮಳೆಯ ಕಾಲದ ರಾತ್ರಿ ; ದಟ್ಟವಾದ ಮೋಡಗಳಿಂದ ಕೂಡಿದ ಕಗ್ಗತ್ತಲೆಯ ರಾತ್ರಿ : ಮುಂಗಾರಿರುಳ ತನಿಯೆರಕ ನೀಲಾಚಲದ ಖಂಡರಣೆ ಘೋರರಾಹುವ್ಯೂಹವೆನೆ ಸುರವೈರಿಗಳ ಮೈಗಾಂತಿ ಲಹರಿಯ ಪೂರದಲಿ ಜಗ ಮುಳುಗೆ ಬಂದುದು ಲಕ್ಷ ಸಂಖ್ಯೆಯಲಿ (ಕುವ್ಯಾ.ಅ. ೯-೩೪).

[ ಮುಂಗಾರ್ + ಇರುಳು ( < ಇರುಳ್ ) ]

**ಮುಂಗಾರು** ' ಮುಂಗಾರ್ ' ನೋ.

**ಮುಂಗಾರುಗಾಳಿ** (ನಾ). ವರ್ಷದ ಮೊದಲ ಮಳೆಯ ಕಾಲದಲ್ಲಿ ಬೀಸುವ ಗಾಳಿ; - ಮಾನ್‌ಸೂನ್ : ಮಳೆಗಾಳಿ, ಮುಂಗಾರು ಗಾಳಿ (ಭೂವಿವ. ೬೨). [ ಮುಂಗಾರು ( < ಮುಂಗಾರ್ ) + ಗಾಳಿ$_1$]

**ಮುಂಗಾರುಮಳೆ, ಮುಂಗಾರಿಮಳೆ** (ನಾ). ವರ್ಷದ ಮೊದಲು ಬೀಳುವ ಮಳೆ.– ಆರಂಭದ ಮಳೆ,– ಮೊದಲ ಮಳೆ : ಮುಂಗಾರು ಮಳೆಗೆ ಸಿಕ್ಕ ಮಗು ಅಳುವಂತೆ ಅಳುತ್ತಿದ್ದಳು (ಎಳೆ. ೪೫). **ಮುಂಗಾರಿಮಳೆ :** ಅಶ್ವಿನ ಶುದ್ಧಹುಣ್ಣಿಮೆಯೇ ಶೀಗೆಹುಣ್ಣಿಮೆ. ಆಗ ಮುಂಗಾರಿ ಮಳೆಗಳು ಮುಗಿದು ಹಿಂಗಾರಿಮಳೆಗಳು ಪ್ರಾರಂಭವಾಗುವುವು (ಕನ್ನಜಾ. ೦೬೫). [ ಮುಂಗಾರು ( < ಮುಂಗಾರ್ ) + ಮಳೆ ( < ಮೞೆ$^3$) ]

**ಮುಂಗಾರ್ಗಾಲ** (ನಾ). ಮುಂಗಾರು ಮಳೆಯ ಕಾಲ ; ವರ್ಷದ ಮೊದಲ ಮಳೆಗಾಲ : ಧುಮುಕುವ ಶೋಣಿತ ಗಿರಿಝರಿಯಲ್ಲಿ ನರರುಂಡಗಳು ನರಮುಂಡಗಳು ಮುಂಗಾರ್ಗಾಲದ ಬಲ್ಸರಿಯಲ್ಲಿ ಆಲಿಯ ಕಲ್ಲುಗಳುರುಳುರುಳ್ವಂತೆ ಧುಮುಕುತಲಿರುವುವು ! (ಶಾಂಕಜ. ೬೯-೦೮).

[ ಮುಂಗಾರ್ + ಕಾಲ ]

**ಮುಂಗಾಲ್, ಮುಂಗಾಲು** (ನಾ). ೧. ಚತುಷ್ಪಾದಪ್ರಾಣಿಯ ಮುಂಭಾಗದ ಅಥವಾ ಮುಂದಿನ ಕಾಲು : ಮುಂಗಾಲ್ಗಳಿಂದಂ ಮುಗಿಲಂ ಮುಟ್ಟಿಪ್ಪುದೆಂಬಂತತಿಜವಮಿದಿರೊಳ್ ಬಂದು ದಿಂದ್ರಾಯು ಧಾಶ್ವಂ (ಕಾದಂಪೂ. ೪೫೬); ಬೀಗಿ ಬೆನ್ನಿಂ ಬಿರಿವನ್ನಂ ಕೊರ್ವಿ ಮುಂಗಾಲ್ಗಳ ಗಡಿಯೆನೆ ಕಡುಗೆಚ್ಚಲ್ ಮೊದಲ್ಪಿಂದು . . . ಮಾಹಿಷೀಸಂತತಿ ವಿಪಿನಭವಂ ಕಣ್ಗಗು ಪರ್ಚಿಯುತ್ತು ಕಾರೊಳ್ (ಕಾದ್ರಶ್ರೀ. ೪-೪೮) ; ನಿಮಿರ್ದಗಂ ನೀಳ್ದ ಮುಂಗಾಲುಡುಗಿ ನಡೆವ ಹಿಂಗಾಲ್ ಚಲದ್ವಾಲದಂಡಂ (ಗಂಕ. ೦-೯೫). ೨. ಕಾಲಿನ ಮುಂಭಾಗ ; ಹೆಜ್ಜೆಯ ಮೇಲ್ಭಾಗ : ಅಂಗಯ್, ಅಂಗಾಲ್ . . . ಮುಂಗಯ್, ಮುಂಗಾಲ್ (ಶಮದ. ೦೬೬ ವೃತ್ತಿ) ; ಕಯ್ಯ ಮುಂದು, ಮುಂಗಯ್ ; ಕಾಲ ಮುಂದು ಮುಂಗಾಲ್ (ಶಬ್ದಾನು. ೩೦೬ ವೃತ್ತಿ). **ಮುಂಗಾಲು:** ೧. ಮುಗಿದ ಮುಂಗಾಲುಗಳ ಮುಂದಕೆ ಹೊಗುವ ಹಿಂಗಾಲುಗಳ . . , ನಿಗುರೊಡಲ ಮುಂಬರಿವ ಚಿಮ್ಮುವ ಚಿಗಿವ ಚಲನೆಯ ಚಂಗುವಾಜಿನ ಮೃಗಮೃಗೀನಿಕುರುಂಬದೊಳಗಡ ಹಾಯ್ದುದಗಲದಲಿ (ತೊರರಾ. ೩-೮-೪೫); ಎರಡು ಜನ್ನಗುದುರೆಗಳೂ ಒಂದಕ್ಕೊಂದು ಇದಿರಾದುವು . . . ಮುಂಗಾಲುಗಳಿಂದ ಒಂದನ್ನೊಂದು ಅಡರಿದುವು (ಬದುಕಿ. ೧೦೬). ೨. ಎತ್ತಿದ ಕೈಗಳ ಪೊಡೆವ ತಲೆಯ ಸೆಗಪುತ್ತಿರೆ ಪೊಡೆವ ಮುಂಗಾಲ ಒತ್ತಿ ನೂಂಕಿದೊಡೆ ಪೊಡೆವ ವೀರವಿನ್ನಾಣರೆತ್ತ ನೋಡಿದರತ್ತಲಿಹರು (ವರ್ಧತ. ೬-೯೨).

[ ಮುಂ$_1$ ( < ಮುನ್$_1$ ) + ಕಾಲ್$_1$. / ತೆಲು. ಮುಂಗಾಲು ]

**ಮುಂಗಾಲು** 'ಮುಂಗಾಲ್' ನೋ.

**ಮುಂಗಾಲುಪುಟಿಕೆ** 'ಮುಂಗಾಲ್ಪುಟಿಗೆ' ನೋ.

**ಮುಂಗಾಲುಪುಟಿಗೆ** 'ಮುಂಗಾಲ್ಪುಟಿಗೆ' ನೋ.

**ಮುಂಗಾಲ್ಪುಟಿಗೆ, ಮುಂಗಾಲುಪುಟಿಕೆ, ಮುಂಗಾಲುಪುಟಿಗೆ** (ನಾ). (ಆಲಂ) ಹಾರಿಕೆಯ ಮಾತು ; ಜಾರಿಕೆಯ ಮಾತು ; ಉಡಾಫೆಯ ಮಾತು : ಇಲ್ಲದ್ದನ್ನು ಹೇಳುವುದೆಂದರೆ ಆಶೀರ್ವದಿಸುವುದು ಎಂದರೆ ಮುಂಗಾಲ್‌ಪುಟಿಗೆಯನ್ನು ಇಡುವುದು (ಮುಂಗಾಪು. ೩ ಮುನ್ನುಡಿ) ; ವಿದ್ಯಾರ್ಥಿಯಾಗಿದ್ದಾಗಲೇ 'ಇಲೆಕ್ಟ್ರ'ನಾಟಕದ ಮುಂಗಾಲ್‌ಪುಟಿಗೆಯನ್ನಿಟ್ಟ ಶ್ರೀ ಎನ್ಕೆಯವರ ಸಾಹಿತ್ಯವಾಹಿನಿ ಈಚೆಗೆ ಬಗೆಬಗೆಯಾಗಿ ಹರಿದುಬಂದಿದೆ (ಸಾಸವಾ. ೦೬೬). **ಮುಂಗಾಲುಪುಟಿಕೆ :** ದೊಡ್ಡದೊಡ್ಡ ಗೃಹಸ್ಥರು ಕಾಣಲಿಕ್ಕೆ ಬಂದಾಗ ಅವನು ಮುಂಗಾಲುಪುಟಿಕೆಯ ಮಾತಿನಿಂದ ಅವರ ಇಂಗಿತವನ್ನು ತಿಳಿದುಕೊಳ್ಳಲಿಕ್ಕೆ ಯತ್ನಿಸುತ್ತಿದ್ದನು (ತಂಸಂ. ೫೨). **ಮುಂಗಾಲುಪುಟಿಗೆ :** ಖಿನ್ನತೆಯ ಕ್ಷುಬ್ಧತೆಯ ತೋರಗೊಡದಲೆ . . . ಮುಂಗಾಲುಪುಟಿಗೆಯಲಿ ಮುನ್ನುಗ್ಗುತ್ತಿರಬೇಕು (ಅರಳು. ೩೪೮-೦೨) ; ಮುಂಗಾಲುಪುಟಿಗೆಯ ಮರುಸವಾಲಿನಿಂದ ಅವನು ಉತ್ತರ ಕೊಟ್ಟನು (ಅನ್ನ.೦೦೫) ; ಪಂತರು ಮುಂಗಾಲುಪುಟಿಗೆ ಹೊಡೆದರು (ದಃಶಹ. ೧, ೮೪).

[ ಮುಂಗಾಲ್ + ಪುಟಿಗೆ ]

**ಮುಂಗಾವಲು** (ನಾ). ಮುಂಭಾಗದಲ್ಲಿರುವ ಕಾವಲು, – ರಕ್ಷಣೆ : ಮುಂಗೈಯ ಪೋಲೆ ಅಂಗಜನ ಅರಗಿಳಿಯಿರಿಸಿ ಮುಂಗಾವಲೆಂದು ಸುಗ್ಗಿಯ ಕೋಕಿಲವ ಸರಿಸಿ (ಗಂ. ೩೦-೨).

[ ಮುಂ$_1$ ( < ಮುನ್$_1$ ) + ಕಾವಲು ( < ಕಾವಲ್$_1$ ) ]

**ಮುಂಗಾವಳ** (ನಾ). = ಮುಂಗತ್ತಲೆ : ಅಲ್ಲಿರುವ ಕನ್ನೆವೆಣ್ಣುಗಳ. . . ಮುಡಿಗಳ ಕತ್ತಲೆಗಳಿಂದ ಕೃಷ್ಣಪಕ್ಷದ ಮುಂಗಾವಳ ತೋಱಿದಂತೆ . . , ಇರುವುದು (ವತಕ. ೪೯). 'ಮುಂಗಾಳು' ಪರಾ.

[ ಮುಂ$_1$ ( < ಮುನ್$_1$ ) + ಕಾವಳ$_1$ ]

**ಮುಂಗಾಳು** (ನಾ). = ಮುಂಗತ್ತಲೆ : ಅರೆವೀದಿಯಲ್ಲಿಯೇ ಮುಂಗಾಳು ಮುಸುಕಿತ್ತೈ ! (ನಾವರೀ. ೦೨-೦೫); ಮುಂಜಾವದಿಂದ ಮುಂಗಾಳು ಕವಿಯುವವರೆಗೆ ಓರಿಗೆಯ ಹಸುಳೆರೊಡನಾಡಿ, ಬಿಸಿಲಿನ ಬೇಗೆ ಬೆಳುದಿಂಗಳಿನ ಕಳೆಯುತಿದ್ದೆ (ಉಷ್ಯಾಕಿ. ೭೦೨).

[ಮುಂ$_1$ (< ಮುನ್$_1$) + ಕಾಳು$_3$ (< ಕಾೞ್$_3$)]

**ಮುಂಗಾಳಿಗ** (ನಾ). ಮುಂಚೂಣಿಯ ಯುದ್ಧ : ದಿನಕರನುದಯದಲಿ ಮುಂಗಾಳಿಗದ ಗಾಢಾಭಿಲಾಷರು ಬಂದು ಕಣನೊಳಗೆ . . . ಬಲಿದರು

ತಪ್ಪ ಮೋಹರವ (ಕುಮಾ.ಭಾ. ೬-೧); ಕೋಲ ಮಳೆಯನು ಕಜಿದವಾ ಮುಂಗಾಳೆ [ಶಾಕಾಂ. ೪]ಗದ ತವಕಿಗರಿಗೆ (ಸಿಧಾಗ. ೯-೬-೦೬).
[ಮುಂ$_1$ (< ಮುನ್$_1$) + ಕಾಳೆಗ]

**ಮುಂಗಿ** 'ಮುಂಗುರಿ' ನೋ.

**ಮುಂಗಿಡು** 'ಮುಂಗೆಡು' ನೋ.

**ಮುಂಗಿಮೋವುಗಿಡ** (ನಾ). ಒಂದು ಬಗೆಯ ಸಸ್ಯ : ಸರ್ಪಾಕ್ಷಿ : "ನಾಕುಲೀ, ಸುರಸಾ, . . . ಸುವಹಾ ೮ ಸರ್ಪಾಕ್ಷಿಗಿಡದ ಹೆಸರುಗಳು . . . ಹಾವುಕಣ್ಣಿನ ಗಿಡ, ನಂಜಾರೇಗಿಡ, ಮುಂಗೀಮೋವುಗಿಡ" (ಸಿದ್ಧಾಂತಿ. ೦೩೬).
[ಮುಂಗಿ (< ಮುಂಗುರಿ) + ಮೋವು + ಗಿಡ (< ಗಿಡು)]

**ಮುಂಗಿಲಿ** 'ಮುಂಗುರಿ' ನೋ.

**ಮುಂಗಿಲು** 'ಮುಂಗುರಿ' ನೋ.

**ಮುಂಗು$_1$** (ನಾ). ೧. "ಮುಂಭಾಗ" (ಕಕಸಾಂ ಕೋಶ) : ಬೆಡಗಿಯ ರಂಗ ರಂಗಾಯೆಂದು ಮುಂಗನಾವರಿಪಳ ಸಂಗವದೆಂತು ಸಾರುವುದೊ (ಕಕಸಾಂ. ೨೨-೭). ೨. ಮೊಳಕೆ ; ಅಂಕುರ ; ಚಿಗುರು : ಈ ಬೀಜ ಒಂದೂ ಈ ದರಿದ್ರಮಳೆ ಏಕಸಾನು ಹೊಡೆದು ಮುಂಗು ಬಂದ ಸಸಿಗಳೂ ಕೊಳೆತುಹೋದವು (ಮರಕಮ. ೩೦).
[< ಮುನ್$_1$./ತುಳು. ಮುಂಗು, ಮುಂಗೆ]

**ಮುಂಗು$_2$** (ನಾ). ಒಂದು ಬಗೆಯ ಸಸ್ಯ : 'ಆನೆಮುಂಗು', 'ನೆಲ ಮುಂಗುಹುಲ್ಲು' ಪರಾ. [ ? ]

**ಮುಂಗುಚ** (ನಾ). ಎದ್ದು ಕಾಣುವ ಕುಚ : ತರಳಲೋಚನೆ ಮುಂಗುಚಂಗಳೊಳಾದ ಚೆಲ್ವುಗಳಂ ಮುಖಾಂಬುರುಹದೊಂದು ವಿಲಾಸಮಂ . . . ಸರೋರುಹಾನನೆ ತೋಱಿ ನಿಂ (ರರ್ತ್ಮವ್ಯ. ೩-೦೨೮).
[ಮುಂ$_1$ (< ಮುನ್$_1$) + ಕುಚ]

**ಮುಂಗುಡಿ$_1$**, ಮುಂಕುಡಿ (ನಾ). ೧. ಮುಂದಿನ ತುದಿ, – ಕೊನೆ : (೬). ೨. ಮುಂದಿನ ಭಾಗ ; ಮುಂಭಾಗ ; ಅಗ್ರಭಾಗ : "ಮೂಗೆನೆ ಮುಂಗುಡಿಯುಕ್ಕುಂ" (ಕತುಂ. ೨೦೩); ಅಂತು ದಕ್ಷಿಣದಿಕ್ಪಾಲ ಪುರಸ್ಸರರವನಿಪತಿಗಳೊಳಾಳ್ತನಮಂ ಪೂಣ್ದು ಸಾರಸರ್ವಸ್ವನಿವೇದನಂಗೆಯ್ದು ಮುಂಗುಡಿಯ ಬಂದ ಚಕ್ರವರ್ತಿ ವೈಜಯಂತೀ ದ್ವಾರಾಭಿಮುಖನಾಗಿ ಬೀಡಂಬಿಟ್ಟೋಲಗಂಗೊಟ್ಟರೆ (ಶಾಂತಿಪು. ೦೦-೬ ವ); ನಡೆತಂದಳ್ ಶಿವಪೂಜೆಗೆಂದಗಜೆ ಪುಷ್ಪವ್ರಾತಮಂ ಕೊಂಡು . . . ಸುಯ್ದುಂಪಿನೊಳ್ ಸಾರ್ದುರ್ ಮುಂಗುಡಿಯೊಳಂ ತೀಡುವ ದಕ್ಷಿಣಾನಿಲನಿನೊಪ್ಪಂಬೆತ್ತ ವಿಸ್ತಾರದೊಳ್ (ಗಿಣಿ. ೯-೩೦) ; ಹಾಯ್ದು ರಥವನು ಭೀಮಸೇನನ ರಥದ ಮುಂಗುಡಿಗೆ (ಕುಮಾ.ಕ. ೨೦-೨೩). ೩. ಬಳ್ಳಿಯ ಮುಂಭಾಗದ ಕುಡಿ, – ತಳಿರು ; ಚಿಗುರು : ಒಸಗೆಯ ಮುಂಗುಡಿ ಚೆಲ್ವಿನ ಪಸರಂ . . . ಸಿರಿಯ ಮೆಯ್ಸಿರಿ ಪಸುರ್ವಣ್ಣದರ್ ನೃಪನ ಕಣ್ಣದೇಂ ರಂಜಿಸಿತೋ (ವರ್ಧ. ೬-೪); ಬರಪರಲ್ಮುಂಗುಡಿಯ ಕಂಪು ಕರದಿಂ ತೀಡೆ ಹರಹರ ವಿರೂಪಾಕ್ಷ ನಿಮಗೆನುತ್ತಂ ಕೊಡೆ (ಪುಷ್ಪರ. ಹ. ೩೨೩-೦೦); ಮುದ್ದುತನದ ಮೋಹದ ಮುಂಗುಡಿಯ ಎದ್ದಪ್ಪನ್ನನು ಎಳಲತೆಗುಡಿಯ (ಪಕಣ. ಶಂ ೨೦೭). ೪. ಮುಂಭಾಗದ ಸೈನ್ಯ ; ಅಗ್ರಭಾಗದ ಸೈನ್ಯ : ಮುಂಚೂಣಿ: "ಮುಂಗುಡಿಯೆನೆ ಮುಂದುಚೂಣಿಯೆನೆ ಮುಂಬಲಮುಂ" (ಕತುಂ. ೦೭೬) ; ಶ್ರೀವೀರಬಲ್ಲಾಳದೇವರು ಮುಂಗುಡಿಯಂ ಬೆಸಸಲು (ಮೈಅಅ. ೦೯೪೦, ೦೪-೭ ; 1189) : ನಿಚ್ಚಟದ ಕಲಿಗಳ್ ಕಾದುತಿರ್ದ ಠಿರ್ಬಲದ ಮುಂಗುಡಿಯವರ್ (ಶಂಪು. ೪೯-೨೬). ೫. (ಆಲಂ) ಮುನ್ಸೂಚನೆ : ಗೌರಿಗೆ . . . ಬಹು ಬೇಗ ಅದೊಂದು ಕೆಲಸವಷ್ಟೇ ಅಲ್ಲ, ಸೋಮಕ್ಕನ ದಬ್ಬಾಳಿಕೆಯ ಮುಂಗುಡಿಯೆಂಬುದರ ಅರಿವಾಗತೊಡಗಿತು (ಪಡಾ. II, ೯೯೩). **ಮುಂಕುಡಿ** : ೪. ಮುಂಕುಡಿಯ ನಾಯಕರಿವರು ಪತಿಮುಂಕಕಾಱರು ಇವರ ಬಳಿಯಲಿ ಬಿಂಕದೆರಡಕ್ಷೋಣಿ ಬಲವದೆ (ಕುಮಾ.ಭಾ. ೨-೦೦).

**ಮುಂಗುಡಿಕೂಸು** = ಕೊನೆಯ ಮಗುವಿನ ಹಿಂದಿನ ಮಗು : ಆ ಕುರಿಮರಿ ಗೌರಿಗೆ ಮುಂಗುಡಿ ಕೂಸಾಯಿತು (ಪಡಾ. II, ೮೪೩).
[ಮುಂ$_1$ (< ಮುನ್$_1$) + ಕುಡಿ$_2$]

**ಮುಂಗುಡಿ$_2$** (ನಾ). ಮುಂಭಾಗದಲ್ಲಿರುವ ಧ್ವಜ : ಅಗ್ರಭಾಗದಲ್ಲಿರುವ ಪತಾಕೆ, – ಬಾವುಟ : ಅದು ಭುವನಕ್ಕೆ ಮಂಗಳದ ಮುಂಗುಡಿ . . . ಬಹುಲಕ್ಷ್ಮಿಯ ಲಾಸ್ಯಮಂದಿರಂ (ಪುಷ್ಪಪು. ೦೩-೦೦೪) ; ಅಲರ್ದ ಪೊಂದಾವರೆಯ ಪಂತಿಯೊ . . . ಕಾಂತಾಜನವೊ ಕಮಲಾಸನೆಯ ಮುಂಗುಡಿಯೊ ಬಂದವಳೂರ್ವಶಿ (ಕುಮಾ.ಕ. ೯-೦೨). [ಮುಂ$_1$ (< ಮುನ್$_1$) + ಗುಡಿ$_2$]

**ಮುಂಗುಡಿ$_3$** (ನಾ). ೧. ಮುಂಭಾಗದಲ್ಲಿರುವ ಗುಡಿಸಲು : ಸಾಣೆವಿಡುವ ಕಮ್ಮಾಱರ ಮುಂಗುಡಿಯಿಂ ಪುರಂ ಕಣ್ಗಿಂಬಾದುದು (ರಾಜಶೇ. ೦೦೩-೨೬). ೨. (ಅಂಗಡಿಯ) ಮುಂಭಾಗದಲ್ಲಿರುವ ಕಟ್ಟಡ; ಮುಂಗಟ್ಟು : ಎರಡು ತೆಱದೊಳಗೊಪ್ಪುವಂಗಡಿಯ ಮುಂಗು[ಶಾಕಾಂ.ಗ]ಡಿಯ ಸುರಿದ ಧಾನ್ಯದ ರಾಸಿಯೊತ್ತುಗಳ ಜೊತ್ತುಗಳ . . . ಪಾಳೆಯಂ ಕಣ್ಗೆಸೆದುದು (ಕಿರಾ. ೪೨-೦೩); ನವರತ್ನಗಳ ದೀಪ್ತಿ ಮುಸುಗಿನ ಸಾಲು ಮಳಿಗೆಮುಂಗಡಿ ಮುಂಗುಡೀ. . . ಹರದ ಸೆಟ್ಟಿಯರ ಸೌಭಾಗ್ಯಸಂಪತ್ತ ನಾರು ಪೇಳ್ವರು (ಪಪೋ.೨-೩೦). [ಮುಂ$_1$ (<ಮುನ್$_1$) + ಗುಡಿ$_3$]

**ಮುಂಗುಡಿದಾಯ** (ನಾ). ಪ್ರಾರಂಭದಲ್ಲಿ ಯುದ್ಧಮಾಡುವ ಅವಕಾಶ : ಜೀಯ ಖಾತಿಯಿದೇಕೆ . . . ತಾ ತಾ ವೀಳಯವನೆನುತ ಹಾಯಿದರು ತಮತಮಗೆ ಮುಂಗುಡಿದಾಯದಲಿ ಥಟ್ಟಿಸುವ ನಿಸ್ಸಾಳಾಯತದ ಬಹುವಿಧದ ವಾದ್ಯದ ಬಳಿಯ ಲಗ್ಗೆಯಲಿ (ಕುಮಾ.ಅ. ೦೨-೩೦). 'ಮುಂಗುಳದಾಯ' ಪರಾ. [ಮುಂಗುಡಿ$_1$ + – ದಾಯ$_1$]

**ಮುಂಗುಡಿಬಿಡು** 'ಮುಂಗುಡಿವಿಡು' ನೋ.

**ಮುಂಗುಡಿವರಿ** (ಕ್ರಿ). ೧. ಮುಂಭಾಗಕ್ಕೆ ಬರು ; ಮುಂದೆ ಬರು : ಮುಂಗುಡಿವರಿದು ಕಡುಕೈದ ಶಬರರೊಳಗೊಬ್ಬರುಳಿಯದ ತೆಱದಿ ಕೊಂದಿಕ್ಕಿ (ಪಪಕಾ. ೬-೨೦); ರಥರಾಜಿ ಮುಂಗುಡಿವರಿದುದವನೀಪತಿಯ ಚೂಣಿಯ ನೃಪರ ಜೋಕೆಯಲಿ (ಕುಮಾ.ದ್ರೋ. ೦-೪೬). ೨. ಕುಡಿಯಿಡು ; ಕೊನರು ; ವರ್ಧಿಸು : ಕಮಳಿನಿಯಿನಿಯನಸ್ತಮಿಸಿದಳಲುರಿಯಲೊದವಿ ಮುಂಗುಡಿವರಿದು ಗಗನಮಂ ತಳ್ಕಿದು ಬೆಂದ ಕಾರ್ಬೊಗೆಯೋಯೆನೆ . . . ರಾತ್ರಿ ಕಣ್ಗೆಸೆದುದು (ಸೋಮಚ. ೨-೯); ಬೇಕು ಬೇಡೆಂದೆಂಬುದೊಂದವಿವೇಕವುಳ್ಳನ್ನಬರ ನಾನಾ ಶೋಕಮೋಹಾದಿಗಳು ಮುಂಗುಡಿವರಿದು ಮುಸುಱುವುವು (ಪ್ರಭುಲಿ. ೨೪-೦೩).
[ಮುಂಗುಡಿ$_1$ + ವರಿ$_2$]

**ಮುಂಗುಡಿವಿಡು**, ಮುಂಗುಡಿಬಿಡು (ಕ್ರಿ). ಮುಂದಕ್ಕೆ ಕುಡಿ ಬಿಡು : ಚಿಗುರು ; ಕೊನರು : ಕಡುನೀಱಿ ಪೂಗೊಯ್ಯಲೇಱುವ ಭರಕೆ ಮುಂಗುಡಿವಿಡುವೆಳಲತೆ ಮರನ ಬಿಡಲು ತನ್ನೋಪನ ಸತಿಯಪ್ಪಲು ಕಾಣುತೊಡನಗಲ್ದಬಲೆಯಂತಾಯ್ತು (ಶ್ರೀಚಾರಿ. ೩-೩೩). **ಮುಂಗುಡಿಬಿಡು** : ಮುಂಗಾರಿಯ ಗುಡುಗಿಗೆ ಸಂಭ್ರಿಗೆ ಮುಂಗುಡಿಬಿಟ್ಟು ಪಾರಿಜಾತ ಮೊಗವೆತ್ತಿದೆ ಹಸುರಂಗಿಯ ತೊಟ್ಟು (ಮುಕ್ತಕಂ. ೪೪-೦೦).
[ಮುಂಗುಡಿ$_1$ + ಬಿಡು$_1$]

**ಮುಂಗುರಿ**, ಮುಂಗರಿ, ಮುಂಗಲಿ, ಮುಂಗಿ, ಮುಂಗಿಲಿ, ಮುಂಗಿಲು, ಮುಂಗುಲಿ, ಮೂಗುರಿ, ಮೊಂಗುರಿ (ನಾ). ೧. (ಹಾವನ್ನು ಕೊಲ್ಲುವ) ಒಂದು ಬಗೆಯ ಪ್ರಾಣಿ ; ನಕುಲ : "ಮುಂಗುರಿ ನುಲ್ಲಿಯುಂ ಬಭ್ರುವೆಂಬುದು" (ಹಲಾಯು. ೦೩೭-೩೦); ಪಾಪಂಗಳಂ

ಗೆಯ್ದು ಪರಾನೆಯುಂ ಸಿಂಹಮುಂ ಪುಲಿಯುಂ . . . ಕಪ್ಪೆಯುಂ ಮುಂಗುರಿಯುಂ ಮೊದಲಾಗೊಡೆಯ ಸ್ಥಲಚರಂಗಳುಂ . . . ಆಗಿ (ಪಶ್ಚಾ.ರಾ. ೯೭-೬) ; ತದ್ವಂಶ್ಯಪದ್ಮಂಗಳನ್ನೆದೆ ಮಚ್ಚಿ ನೆಲಸಿರ್ದಪುವೀ ಪುಲಿ ಪಂದಿ ಕೋಡಗಂ ಮುಂಗುರಿಯೆಂಬ ನಾಲ್ಕುಟಿ ಭವಾವಳಿಯುಂ ಬೆಸಸಿಂ ಮುನೀಶ್ವರಾ (ಆದಿಪು. ೩-೦೯) : ಅಂತು ಸಾರ್ತರ್ಪ ಭುಜಂಗನನಾ ಮುಂಗುರಿ ಕಂಡು ನಿಸರ್ಗವೈರಮಂ ನೆನೆದುರದೆ ಸರ್ಪನಂ ಶತಖಂಡಂ ಮಾಡಿ ಕೊಂದು ತಿನುತ್ತಿರ್ಪುದುಂ (ಕಂತಕಂ. ೦೯೯-೩). ೨. ಒಂದು ಬಗೆಯ ಸಸ್ಯ : ಜಳದಂ ಮುಂಗುರಿಯುಂ ತರು ಜಳ ಚಮರಮುಂ ಸಕ ದೋಷಮುಂ ಪಿರಿದಕ್ಕುಂ (?) (ಕಲ್ಯಾ.ಕಾ. 11, 3). ಮುಂಗರಿ : ೨. " ದ್ರುಪದೀ–ಬಂದಣಿಕೆ, ಮುಂಗರಿ " (ಚಿತ್ರ. ೭೮). ಮುಂಗಲಿ : ೧. ಮರೆ ಮುಂಗ [ಪಾಠಾಂ. ಮೂಗಿ] ಲಿ ಕಕ್ಕರುಪಕ್ಕಿ . . . ಬೂರಗೆಯೆಂಬಿವನ್ನೆದೆ ಕಾಸಿನೊಳ್ಗಣದೆ ಪೊತ್ತು ಬೇಡಪಡೆ ಬಂದುದು ಕಾನನದೊಳ್ ನಿರಂತರಂ (ಸೂಕ್ತಿ ಸು. ೩-೦೬೮) ; ತೆಂಗು ಬಟ್ಟಲು ನುಂಗಿ ಮುಂಗಲಿಯುನಿಲಿ ನುಂಗಿ ಗಂಗೆವಾಳಂಕರ ಹರ ನುಂಗಿ ಜಗವು ಬೆಳದಿಂಗಳಂತಿಕ್ಕು (ಸರ್ವಜ್ಞ. ೨೦೭೦); ಅಲ್ಲಿ ಒಬ್ಬ ಹಾವಾಡಿಗನು ಆಟ ಹೂಡಿದ್ದನು . . . ಒಂದು ಬದಿಗೆ ಮುಂಗಲಿಯನ್ನು ಗೂಟಕ್ಕೆ ಕಟ್ಟಿದ್ದನು (ಕತೆ. ೩-೩೬). ಮುಂಗಿ : ೧. ' ಮುಂಗಿಮೋವು ಗಿಡ ' ಪರಾ. ಮುಂಗಿಲಿ : ೧. ನು ನಾಯ್ನಂದಿ ಸಾರಂಗ ಕಡವೆ ಮುಂಗಿಲಿ [ಪಾಠಾಂ. ಗುರಿ] ಬೆಕ್ಕು . . . ತೋಳಗಳರಲೊಪ್ಪಿಕಾ ಬಲ್ಗಾಡು (ಶ್ರೀಪಾಂ. ೭-೦೭) ; ಶರಭ ಶಾರ್ದೂಲ . . . ಮುಂಗಿಲಿಗಳ ಮೊತ್ತವಾವರಿಸಿ ಕೊಂಡಿಹುವು ಹೆಮ್ಮಲೆಯ (ಕಂಪಿ. ೦೬-೯೦). ಮುಂಗಿಲು : ೧. ವೈರವ ಬಿಟ್ಟು ಹುಲಿ ಹುಲ್ಲೆ ಒಂದಾಗಿ ಕರಿ ಸಿಂಹಗಳು ಚಂದದಿ ಮುಂಗಿಲ ಫಣಿ ನವಿಲುಗಳೀಗ (ಹಂಪಾಂ. ೦-೭೬). ಮುಂಗುಲಿ : ೧. ಮುಂಗುಲಿಯ ಮೇಲೆ ಹೆಡೆಯಿಟ್ಟು ಕೇಳ್ವಹಿಗಳುಂ ಸಂಗಣಿಸುವಹಿಯು ಹೆಡೆಗೆಡೆಗುಡುವ ಶಿಖಿಗಳುಂ (ಅನಾಥ. ದೀ. ೦೬೩-೩); ಮೇಲ್ಮರನಸಡರ್ಪ ಕೋಡಗಂಗಳ ಪಳ್ಳಿವಾಲವಾನೆಳನಾಗರೆಂದು ಸಳೆದು ಕೆಡಪಿ ಕಡಿದೀಡಾಡಲಪ್ಪಳಿಸುವ ಮುಂದಿಮುಂಗುಲಿ [ಪಾಠಾಂ. ರಿ] ಗಳುಮಂ (ಕಲ್ಯಾ.ಕಾ. ೨೩೯); ಪುಲ್ಲೆಗಳ್ಬರ್ಬುಲಿಗಳೊಳ್ಸರಸವಾಡುವುವು ಪಾವು ಮುಂಗುಲಿಗಳೊಡಗೂಡುವುವು (ಕೈವಲ್ಯ. ೦೩-೦೯). ಮೂಗುರಿ : ೧. ಪೊಲ ಮರೆ ಮೂಗುರಿ ಕೂರ್ಗುರಿಯಾಳಲು ಬೆಕ್ಕುರತೆ . . . ಎರಡುತಲೆಯ ಪಕ್ಕಿಯಿನೊಪ್ಪಿದುದಾ ದಾರುಣ ಮಪ್ಪಡವಿ (ಜಯನೃ. ೦೩-೨೯); ಪಲ್ಲಿ ಮೂಗುರಿ ಮೂಷಕ ಮೊದಲಾದ ತಿರಿಕ ನಾರಕಗತಿಯೊಳು ಪುಟ್ಟಿ (ಶೀಬಸಂ. ೭-೩೭). ಮೊಂಗುರಿ : ೧. ನಕರಿಯೆಂಬ ಪೆಸರ ತಾಳಿರ್ದ ಗಿಡವನಂಟುತ್ತ ಮೊಂಗುರಿ ಮಹಾವ್ಯಾಳ ವಿಷಮಂ ಕಳೆವುದೇ (ಪೀಕ್ಷಿತ. ೪-೬-೭೮). ' ಮುಂಗುಸಿ ' ನೋ.

[ದೇ.॥ ತಮಿ. ಮೂಙ್ಕ : ತುಳು. ಮುಂಗಿಲಿ, ಮುಂಗಿಲೆ, ಮುಂಗುಲಿ ; ತೆಲು. ಮುಂಗಿ]

**ಮುಂಗುರುಡು** (ನಾ). (ಆಲಂ) ಮುಂದುಗಾಣದಿರುವಿಕೆ ; ದಿಕ್ಕು ತೋಚದಿರುವಿಕೆ : ದಿಗ್ಭ್ರಮೆ : ಚಿಂತಿಸುವ ಚಿತ್ತದಲು ಗುರಿಯುರದ ಬಾಣದೊಲು ಎತ್ತಲೋ ಎತ್ತಲು ಮುಂಗುರುಡ ಮನದೊಲು (ಮುಕ್ತಿಕಾ. ೪೦-೦೩). [ಮುಂ$_1$ (< ಮುನ್$_1$) + ಕುರುಡು]

**ಮುಂಗುರುತು** (ನಾ). ಮುಂಗುರುಹು ; ಮುನ್ಸೂಚನೆ : ಹೀಗೆ ಬಹುವಿಧವಾದ ಸುಗುಣಗಳಿಂದ ಕೂಡಿದ ಈ ಕತೆಯ ಗೊಂಚಲು ಮುಂದೆ ಬರಲಿರುವ ಅನೇಕ ಫಲಸಂಚಯದ ಮುಂಗುರುತೆಂದು ನಾನು ಆಶಿಸುತ್ತೇನೆ (ಕಿರುಬೀಡ. ೭ ಮುನ್ನುಡಿ); ' ಹೂಬಿಸಿಲು ' ಬರಲಿರುವ ವಸಂತೋತ್ಸವದ ಮುಂಗುರುತು (ಹಾಡಿಸಂ. ೦೯೯) ; ಧಾರವಾಡದ ಕರೆಯು ಅತ್ತ ಕರೆಯುತ್ತಿದೆ—ಎಂಬ ಮುಂಗುರುತು ಈಗಾಗಲೆ ಮೂಡಿದೆ (ಸೂರ್ಯಕಾ. ೨ ಮುನ್ನುಡಿ). [ಮುಂ$_1$ (< ಮುನ್$_1$) + ಗುರುತು (< ಗುರುತು)]

**ಮುಂಗುರುಹು** ' ಮುಂಗುಜುಪ್ಪು ' ನೋ.

**ಮುಂಗುರುಳ್**, ಮುಂಗುರುಳು (ನಾ). ಮುಂದಲೆಯ ಕೂದಲು : ಮುಂಗೂದಲು ; ಅಳಕ : ಮೆಲ್ಲಡಿ ಕಂಜ ಮುಡಿ ಸೋಗೆ ತುಂಬಿಗಡಣ ಮುಂಗುರುಳ್ಗಳಿಬನವ ಪುಳ್ಳಿಯ ಕಚ್ಚು ಸುಡಲು ಸೈರಿಪನೆ ನಿನ್ನಾಣೆ (ಪರ್ವತ. ೬-೨೮). ಮುಂಗುರುಳು : ಮುಂಗುರುಳೊಳು ಬಿಗಿವಡೆದಿಹ ಮಣಿಯ ಕುಚ್ಚುಗಳ ನಿಡುದೋಳ ಬಳೆ ತಾತಿ ಕಡಗ ಕಂಕಣವಾಂತ ಕಡು ಚೆಲುವೆಯುರೆಸೆದಿಹರು (ಕಂಪಿ. ೬-೦೦೯) ; ಸರಸಿಜೋಪಮವದನದಲಿ ಮುಂಗುರುಳ ತುಂಬಿಗಳೊಲೆಯೆ (ಅಸಂಗ. ೦-೧೭-೨೭).

[ಮುಂ$_1$ (< ಮುನ್$_1$) + ಕುರುಳ್$_1$]

**ಮುಂಗುರುಳು** ' ಮುಂಗುರುಳ್ ' ನೋ.

**ಮುಂಗುರುಳ್ಚು** (ಕ್ರಿ). ಆಯುಧವನ್ನು ಮುಂದಕ್ಕೆ ರಭಸದಿಂ ಚಲಿಸು : ಕಯ್ಯ ಕರವಾಳವನ್ನು ಮುಂಗುರುಳ್ಚಿ ಚಿನ್ನಣದಿಂದ ಆತನ ಆಯುಧವನ್ನು ಹಾರಿಸಿಬಿಟ್ಟು . . . ಕೊರಲ್ಗಿಡಿದಾಂಕೆ ನಿಲಿಸಿಕೊಳ್ಳನು (ಬಂಕ್ರ ಕ. ೦೦೩-೩).

[ಮುನ್$_2$ (< ಮುಂ$_2$) + ಕುರುಳ್ಚು ]

**ಮುಂಗುಲಿ** ' ಮುಂಗುರಿ ' ನೋ.

**ಮುಂಗುಸಿ**, ಮುಂಗಸಿ (ನಾ). ಹಾವನ್ನು ಕೊಲ್ಲುವ ಒಂದು ಬಗೆಯ ಪ್ರಾಣಿ ; ನಕುಲ ; ಇತ್ತ ನೋಡ್ಮುಂಗುಸಿಯ ಮೊಗದ ಚಂದಗಳ (ಪಾಂಡ. ೯); ಒಂದು ಮುಂಗುಸಿ . . . ಒಂದು ಹೆಗ್ಗಣ ; ಇವು ಅಲ್ಲಿದ್ದುವು (ಕಸಂ. ೭). ಮುಂಗಸಿ : ಮುಂಗುಸಿಯಂತೆಯು ಮಂಟೆಗಳಂತೆಯು ನಡಗೆ ಉಳ್ಳ ಕುದುರೆಗಳು ಪಡೆಯನಿಗೆ ಸಂಪದಭಿವೃದ್ಧಿಯಂ ಕೊಡುವವು (ಅಶ್ವಗಂಧ. ೩೦೩-೬); ಅಲ್ಲಿ ಒಂದು ಬಿಲದಿಂದ ಒಂದು ಮುಂಗಸಿ ಹೊರಟು ಬಂತು (ಕಥಾ. ೩೭೩). ' ಮುಂಗುರಿ ' ನೋ.

[ದೇ.॥ ತೆಲು. ಮುಂಗಿಸ, ಕೋಲಾ, ಗೊಂಡಿ. ಮುಂಗೂಸ್./ ಪ್ರಾ. ಮಂಕುಸ, ಮಂಗುಸ ; ಮುಂಗ್ಗಸ./ ಕೊಂಕಣಿ. ಮುಂಗಸ/. ಮರಾ. ಮಂಗೂಸ್, ಮುಂಗಸ್, ಮುಂಗೂಸ್./ಇಂ. Mongoose]

**ಮುಂಗುಸಿಗಿಡ** (ನಾ). ಒಂದು ಬಗೆಯ ಸಸ್ಯ ; ಮುಂಗಿಮೋವು ಗಿಡ : "ಗರುಡಪಾತಾಳ, ಪಾತಾಳಗರುಡ, ಸರ್ಪಾರಿ, ಮುಂಗುಸೀಗಿಡ" (ಶಬ್ದ.ರ. ೯೮); ಮುಂಗುಸಿಗಿಡ, ಪಾತಾಳ ಗರುಡ, ಸರ್ಪಾರಿ (ವೈ.ಶಿ. ೩೮-೦೦೩೯).

[ಮುಂಗುಸಿ + ಗಿಡ (< ಗಿಡು)]

**ಮುಂಗುಳದಾಯ** (ನಾ). ( ? ) : ತಳಾಜ ಕೇತಮಲ್ಲನಾಯಕಪ್ರಮುಖವಾಗಿ ಮಾಯಿಲೆಯ ಬವರಕ್ಕೆ ಹಲರಂ ಹೇಳಲು ಯೆಲರಿಂದ ಮುಂಗುಳದಾಯವಾಗಿ ನಡೆದು ಯಿದಿರಾಂತರು ಹಲರಂ ಕೊಂದು ಸ್ವಾಮಿಕಾರ್ಯ್ಯವಂ ನೆಱಹಿ ಸುರಲೋಕಪ್ರಾಪ್ತನಾದಂ (ಎಕ. VII, ಶಿಕಾ. ೦೯೯_೦೦; 1181); ಚಕ್ರವರ್ತ್ತಿಗಳ ಹೇಳಿಕೆಯಿಂ ಮುಂಗುಳದಾಯದಿಂ ನಾಲ್ಕುದಿಶಾವರಕ್ಕಂ ನಡದು ಹೇಳ್ದ ಕೆಲಸಮಂ ಸಾಧ್ಯಂಮಾಡಿ (ತಿಕ. XII, ೯೭-೨೯ ; 1187). 'ಮುಂಗುಡಿದಾಯ' ಪರಾ. [ ? ]

**ಮುಂಗುಜುಪ್ಪು**, ಮುಂಗುರುಹು, ಮುಂಗುಜುಹು (ನಾ). = ಮುಂಗುರುತು : ರಂಗ ನಿನ್ನಯ [ರಕ್ತಿವೆತ್ತ ಕೌಮೋದಕಿಮಂ]ಗಳಜನನ ಸಂಸ್ಥಿತಿಗೆ ಮುಂಗುಜುಪಾಗಿ ಪೊರೆವುದು ಗಾ[ಡಿಯುದನ್ನು] ಕಂಗಳ ಬಜನ ಕಳುಚುಗೆ (ಕಕಾಂ. ೨-೯). ಮುಂಗುರುಹು : ಧೂಮಕೇತು ಕವಲ್ತು ಬಾನೊಳಗೆ ಬೆಳರುತಿದೆ ! ಕೇಡ ಮುಂಗುರುಹು ! (ಹೆಪ್ಪು ರ. ೨೦-೦೦೦); ಜೀವನದ ಆರಂಭದಲ್ಲಿಯೇ ಆವನು ತನ್ನ ಸ್ವಚ್ಛಂದವೃತ್ತಿಯ . . . ಮುಂಗುರುಹುಗಳನ್ನು ತೋರಿಸದೇ ಹೋಗಲಿಲ್ಲ (ಬಾಪಾದ. ೦೯). ಮುಂಗುಜುಹು : ರಂಗ ನಿನ್ನಾಜಾನುಬಾಹು ಬೆರಳು ನಖಮಂ ಗಂಡವರು ಮಜುಹುಟ್ಟಿ ಮುಂಗುಜುಹಜೀಯರು (ಕಕಾಂ. ೩-೦೩).

[ಮುಂ$_1$ (< ಮುನ್$_1$) + ಕುಜುಪ್ಪು (< ಕುಜುಪ್ಪು)]

**ಮುಂಗುಜುಹು** 'ಮುಂಗುಜುವು' ನೋ.

**ಮುಂಗೂದಲ್**, ಮುಂಗೂದಲು (ನಾ). =ಮುಂಗುರುಳ್: ಕೋಪದಿಂ ಬಂದಡಸಿ ಪಿಡಿದು ಮುಂಗೂದಲಂ ಪೊಯ್ದು (ಶಾರತ. ೩-೩೩). **ಮುಂಗೂದಲು** : ಮಠದಲ್ಲಿ ಆದ ಮುಂಜಿಯ ದಿನ ತೆಗೆದುಹಾಕಿದ ಮುಂಗೂದಲು ಬೆಳೆಯಲು ಮೂರುತಿಂಗಳು ಬೇಕಾಗಿ (ಹೊಸಕ್ಕಿ. ೦೨೩).
[ಮುಂ$_1$ (<ಮುನ್$_1$) + ಕೂದಲ್ (< ಕೂಂದಲ್)]

**ಮುಂಗೂದಲು** 'ಮುಂಗೂದಲ್' ನೋ.

**ಮುಂಗೂಲಿ** (ನಾ). ಮುಂದೆ ಮಾಡುವ ಕೆಲಸ : ನಾನೇನೋ ಮುಂಗೂಲಿಯ ಕೆಲಸ ಮಾಡಿದ್ದೇನೆ. ಆದರೆ ಈ ದಾರಿಯಲ್ಲಿ ಯಾವ ಸೇನಾಪತಿಯೂ ಸೇನೆ ತೆಗೆದುಕೊಂಡು ಬರುವ ಸಮಾಚಾರವನ್ನು ಕೇಳಿಲ್ಲ (ಶಿಂಕಿಮು. ೯೩೩). [ಮುಂ$_1$ (< ಮುನ್$_1$) + ಕೂಲಿ$_1$]

**ಮುಂಗೂಳೆಯ** (ನಾ). ಮುಂಭಾಗದಲ್ಲಿರುವ ಗುಂಪು ; ಮುಂದಿರುವ ಸಮೂಹ : ಆರ್ತರೌದ್ರಧ್ಯಾನಮೆಂಬ ಮುಂಗೂಳೆಯದ ನಾಯಕರ್ವೆರಸು ದುರ್ಜನರ ಕೂಟಮೆಂಬ ಪಿಂಗೂಳೆಯದ ವೀರರ್ವೆರಸು (ಧರ್ಮಾಮೃ. ೦೦-೯೭). [ಮುಂ$_1$ (< ಮುನ್$_1$) + ಗೂಳೆಯ]

**ಮುಂಗೆಡಿಸು** (ಕ್ರಿ). ಮುಂದುಗಾಣದಂತೆ ಮಾಡು: ದಿಕ್ಕು ತೋಚದಂತೆ ಮಾಡು : ಮುಂಗೆಡಿಸುವುದು ಲಜ್ಜೆ ನಾಚಿಕೆಯುಂಗುಸಂಗವದೇಕೆ ಹೊಲ್ಲ ತೊಲಂಗು ನೀನೆಂದಾವ ಪರಿಯಲಿ ಹೇಳಿದಡೆ ಮಾಣೆ (ಬಸತ. ೯೦-೯೯) ; ಮನುಜನಾಥರ ಮುಂಗೆಡಿಸಿದ ಕಾರ್ಮುಕವನು ಸಲ್ಲೀಲೆಯಿಂ ಜಯಿಸಿ ವನಿತೆಯ ಮುಂದಲೆವಿಡಿದೆಳೆತಹೆವು (ಜೈಮಿಂಶಾ. ೦೭-೩೦); ಪಶುಪತಿ ಮುಳಿದೆಚ್ಚ ಶರ ತ್ರಿಪುರವನಾಗ ಮುಸುಕಿ ಮುಂಗೆಡಿಸುವಂದದಲಿ ವಸುಧೇಶನ ಪಡೆ ನಡೆದುದು (ಕಿಂಶಿ. ೦೪-೩೦). [ಮುಂಗೆಡು + – ಇಸು$_3$]

**ಮುಂಗೆಡು**, ಮುಂಗಿಡು (ಕ್ರಿ). (ಮುಂದಿನ) ದಿಕ್ಕು ತೋಚದಿರು : ದಿಗ್ಭ್ರಮೆಗೊಳ್ಳು : ವೈರಿ ಮುಂಗೆಟ್ಟಿರೆ ಚಂಡವರ್ಮ ನರಪಂ ನಡೆಗೊಂಡನತೀವಕೋಪದಿಂ (ದಶಕು. ೭-೩೭) ; ಹುಟ್ಟಿದುದು ಮೊದಲಿದುವೆ ಕಡೆ ಮುಂಗೆಟ್ಟು ದುರ್ವೃತ್ತಿಯಲಿ ಪುಣ್ಯದ ಬಟ್ಟೆಯೆಂತ ಹದೆಂದರಿಯೆ ನೀ ಕನಸಿನೊಳಗಾಗಿ (ಬಸತ. ೯೦-೯) : ಬಿಡು ಬಿಡೆಲೆ ಸಹದೇವ ಯೆನ್ನಯ ನುಡಿಗೆ ಮಾರುತ್ತರವ ಕೊಡು ಮುಂಗೆಡದೆ ಮುಂದಣ ನಿನ್ನವನ ಕಂಡಿಂತು ಮರುಳಪರೆ (ಕುಮ್ಯಾ. ೨೩-೨೦). **ಮುಂಗಿಡು** : ಧಾರಿಣೀತಿಲಕನಸೊಲ್ದು ಚಿತ್ರಪಟದೊಳಿಪನನಿಲ್ಲಿಗೆ ತಂದು ತೋರಿದಿಂತ ಬಲಿಪೆಯೇಕೆಯೆನ್ನನೆನುತಂಗನೆ ಮುಂಗಿಡುತಿರ್ದಳಾಕ್ಷಣಂ (ದಶಕು. ೦೦-೩೩).
[ಮುಂ$_1$ (< ಮುನ್$_1$) + ಕೆಡು$_1$]

**ಮುಂಗೆಡೆ** (ಕ್ರಿ). ಮುಖ ಮುಂದಾಗುವಂತೆ ಬೀಳು ; ಮುಖವಡಿಯಾಗಿ ಬೀಳು : ಹೊಡೆಗೆಡೆದವಾನೆಗಳು ಥಟ್ಟಿಗೆ ಕೆಡೆದವಗ್ಗದ ತುರಗದಳ ಮೈಗಡಿತದಲಿ ಮುಂಗೆಡೆದು [ಪಾಠಾಂ. ಮುಂಕೊಂಡು]ಹೊರಳಿತು ಕೂಡೆ ಪಾಯದಳ (ಕುಮ್ಯಾಶ. ೯-೦೨). [ಮುಂ$_2$ (<ಮುನ್$_2$) + ಕೆಡೆ$_1$]

**ಮುಂಗೆದಱು** (ಕ್ರಿ). (ಮೈಯನ್ನು) ಮುಂದಕ್ಕೆ ಚಾಚು; ನಮಸ್ಕರಿಸು (?) : ಅಲ್ಲಿ ಬಾಗಿಲ್ಗೆ ಬರಲಿಲ್ಲ ಮೈಮುಂಗಿದೆದ್ದು ಮೆಲ್ಲನೈತಂದು ಮುಂಗೆದಱಿ ನೆಱೆ ಕಣ್ದೆಱೆದು (ಬಸರ. ೯-೦೭೪).
[ಮುಂ$_2$ (< ಮುನ್$_2$) + ಕೆದಱು$_1$ (< ಕೆದಱು$_1$)]

**ಮುಂಗೆಯ್**, ಮುಂಗಯ್, ಮುಂಗೈ (ನಾ). ೧. ಕೈಯ ಮುಂಭಾಗ; ಮಣಿಕಟ್ಟು : "ಪ್ರಕೋಷ್ಠಮೆಂಬುದು ಮುಂಗೆಯ್ಗೆ" (ಶಬ್ದಮ. ೯೯-೩೭೯): ಮಹೇಂದ್ರದತ್ತನೆಂಬರಸನಾತನ ಮುಂಗೆ [ಪಾಠಾಂ. ಗೈ]ಯ್ ಧಾತ್ರಿವಾಹನನ ಯೋಧನಿಂ ಚಕ್ರಪಾಣಿಯುಂ ಖಂಡಿಸೆ ಪಟ್ಟುದಾಗಿ (ಪಜ್ಞಾರಾ. ೦೯೯-೯) ; ಅಂತು ಬೃಹಂದಳೆಯಾಗಿ ಗಾಂಡೀವಜ್ಯಾಘಾತದೋರ್ದಂಡ್ರನೀಲಂಗಳನಡಸಿದಂತಿರ್ದರಡುಂ ಮುಂಗೆಯ್ಗಳ ಕರ್ಪಂ ತೀವೆ ತೊಟ್ಟ ಬಳೆಗಳ್ ಮಾಜಿಸೆ (ಪಂಪಭಾ. ೯-೩೩ ವ) ; ಕನಕವಳಯಮಂ ಮುಂಗೆಯ್ಯೊಳ್ [ಪಾಠಾಂ. ಗೈಯೊಳ್] ಸಂಗಳಿಸಿಯುಂ (ಪಂಪ್ರಶ. ೬-೬೩ ೨). ೨. ಕೈಯ ಮೇಲುಭಾಗ ; ಹಸ್ತದ ಮೇಲುಭಾಗ : (*). ೩. (ಮನೆ ಅಥವಾ ಹಳ್ಳಿಯ ) ಮುಂಭಾಗ ; ಎದುರುಭಾಗ : (*). **ಮುಂಗಯ್** : ೧. ಕಯ್ ಮುಂಗಯ್ ಪೊಗಂ. . . ಕಾಲಡಿಯೆಂದಿಂತಿ ವನರ್ಚಿ ಪೊದುವಿಸೆ ತತ್ಪ್ರಜನ್ಯಕಂದಾಂಕುರಂ (ಶಾಂತಿಪು. ೪-೦೭) ; ಮುಂಗಯ್ಯಂ ಪಿಡಿದೊತ್ತಿ ಕೈಯ ಕರವಾಳ್ ಬೀಟ್ಟರ್ಜನಂ ವೀರಂಗೆ ದೋರ್ಭಂಗಂ ಮಾಡಿದನೇನಲಂಘ್ಯಬಲನೋ ರಾಮಾನುಜಂ ಲಕ್ಷ್ಮಣಂ (ಪಂಪರಾ. ೯-೨೯) ; ಕನ್ನಡ ಸಮಾಸಕ್ಕೆ . . . ಮರ ಗಿಡು ಬಳ್ಳಿ ಪುಲ್ಲೊಬ್ಬೆ ಪಕ್ಕಿ ಮಿಗಂಗಳ್ ಮುಂಗಯ್ (ಕವಿರ. ೭೨ ಪ್ರಯೋ). **ಮುಂಗೈ** : ೧. "ಪ್ರಕೋಷ್ಠಮೆನೆ ಮುಂಗೈಗೆ ನಾಮಮಕ್ಕುಂ" (ಕುಂಗರಾ. ೯೩-೯); ಕಂಕಣದಂತೆ ಮುಂಗೈಯಂ ಪತ್ತಿ ಕೊಱೆವರ್ (ಧರ್ಮಾಮೃ. ೩-೬೩) ; ಟೊಂಕಮನೊಱಗಿಸಿ ನಿಂದೇಡಿಸುತಂ ಮೊಳಕೈ ಮುಂಗೈಗಳನಾಡಿಸುತಂ (ಶೃಂಗಾರ. ಹ. ೯೭೨-೨೯). ೨. ಅಂಗಯ್ಯಲಾಡುವ ಗಿಳಿ ಮುಂಗೈಯ[ಪಾಠಾಂ. ಗಯ್ಯ]ಮೇಲಣ ಗಿಳಿ (ಕುಕಂದ. ೧-೦೦೨-೭) ; ಕಾವನ ಮುಂಗೈಯ ಗಿಳಿಯಂತೆ ನುಡಿದುಱೆ ಕಾವನ ಬಿಲ್ಗೋಲ ಪಿಡಿದು ಕಾವನ ರಥವಾಜಿ ಭುಂಜಿಸದಂತೆ ಕೈಗಾವ ಪಾಮರಿಯರೊಪ್ಪಿದರು (ಮೋಹತ. ೨-೯೩) ; ಕಡಿದು ಮುಂಗೈಯ ಕೋಪಾಟೋಪದಲಿ ಖಳ ಜಡಿದು ಖಂಡೆಯವ ಚಿಮ್ಮಿದನು (ಕಿಂಶಿ. ೦೩-೭೩). [ಮುಂ$_1$ (< ಮುನ್$_1$) + ಕೆಯ್$_3$]

**ಮುಂಗೆಯ್ಸರಲ್** (ನಾ). ಮುಂಗೈಯಲ್ಲಿ ಹಿಡಿಯುವ ಬಾಣ (?) ; "ಮುಂಗೈಯಲ್ಲಿ ತೊಟ್ಟುಕೊಳ್ಳುವ ಕಂಕಣ" (*); ಬೆರಲ್ . . . ನರಲುಂ ಮುಂಗೆಯ್ಸರಲುಂ[ಪಾಠಾಂ. ಮುಂಗೈಸರಲುಂ] ಲಾಂತಂ (ಕವಿರ. ೨೯) . [ಮುಂಗೆಯ್ + ಸರಲ್]

**ಮುಂಗೆಲಸ** (ನಾ). ಮುಂದೆ ಮಾಡಬೇಕಾದ ಕೆಲಸ : ಮುಂದಿನ ಕಾರ್ಯ : ಹರನಿಂದೆ ಹತನಾದ ಕಂತು ರುಕ್ಮಿಣಿಯ ಸುತನಾಗಿ ಹುಟ್ಟಿ ಮುಂಗೆಲಸಕ್ಕೆ ಬಯಲಾದ ಕತೆಯ ಬಿತ್ತರಿಪೆ (ಮೋಹತ. ೩-೨).
[ಮುಂ$_1$ (< ಮುನ್$_1$) + ಕೆಲಸ]

**ಮುಂಗೇಣಿಕಾಱ** (ನಾ). ಪ್ರಧಾನನಾದ ಗುತ್ತಿಗೆದಾರ : ಗೇಣ ಕೊಯ್ಲಿನ ಕಾಮಣಕೆ ಮುಂಗೇಣಿಕಾಱನು ಮೊಳಗಿದನು ಘಡ ಕೇಣ ವಿನ್ನೇಕೆನುತ ಕೈದೋಱಿತು ಭಟಸ್ತೋಮ (ಕುಮ್ಯಾಶ. ೨೯-೪೨).
[ಮುಂ$_1$ (< ಮುನ್$_1$) + ಕೇಣಿಕಾಱ$_1$ (< ಕೇಣಿಗಾಱ)]

**ಮುಂಗೈ** 'ಮುಂಗೆಯ್' ನೋ.

**ಮುಂಗೈಕಂಕಣ** 'ಮುಂಗೈಗಂಕಣ' ನೋ.

**ಮುಂಗೈಕಸುವು** (ನಾ). ಮುಂಗೈಯ ಬಲ, –ಶಕ್ತಿ, – ಸಾಮರ್ಥ್ಯ: ರೂಪಚಂದನೆಷ್ಟೋ ಮುಂಗೈಕಸುವಿನ ಮನುಷ್ಯನಿದ್ದರೂ ನೀತಿಯ ಪ್ರಸಂಗ ಬಂದಾಗ ಆ ರಾಮಸಿಂಹನು ಆತನ ಗುರುವಾಗುತ್ತಿದ್ದ (ಖಾನಾಪ್ರಾ. ೭೭) ; ತುಪ್ಪ ಹಾಲು ಮೊಸರು . . . ಇವನ್ನೆಲ್ಲ ಕನಸಿನಲ್ಲಿಯೂ ಕಾಣುತ್ತಿರಲಿಕ್ಕಿಲ್ಲ. ಆದರಿಲ್ಲಿ ಒಂದು ನಾಲಗೆ, ಒಂದು ಮುಂಗೈಕಸುವಿನಿಂದ ಆ ಪದಾರ್ಥಗಳ ಸುರಿಮಳೆಯೇ ಆಗುತ್ತದೆ (ಶ್ರೀಪಾಶ್ರ. ೩೯).
[ ಮುಂಗೈ (<ಮುಂಗೆಯ್) + ಕಸುವು (<ಕಸು$_3$) ]

**ಮುಂಗೈಗಂಕಣ**, ಮುಂಗೈಕಂಕಣ (ನಾ). ಕೈಯ ಮುಂಭಾಗದಲ್ಲಿ ಧರಿಸುವ ಕಂಕಣ : ಮುಂಗೈಗಂಕಣಕೆ ಕುಲದೀಪ ಕನ್ನಡಿಯೇಕೆ ತರಿಸು ಪ್ರತಾಪವಾಜಿಯನೆಂದು ಬಿನ್ನೈಸಿದನು ನಸುನಗುತ (ಶಳತ. ೭-೪). **ಮುಂಗೈಕಂಕಣ** : ಮುಂಗೈಕಂಕಣಕೇಂ ಕನ್ನಡಿಯ ಸಾಕ್ಷಿಯಾದುವೆ ಧರೆಯೊಳ್ (ಶೃಶಾ. ೩೭-೨೦).
[ ಮುಂಗೈ ( < ಮುಂಗೆಯ್ ) + ಕಂಕಣ ]

**ಮುಂಗೈಗೊಳ್** (ಕ್ರಿ). ತೋಳಿನ ಮುಂಭಾಗದಲ್ಲಿ ಹೊಂದಿಸಿಕೊಳ್ಳು,–ಹಿಡಿದುಕೊಳ್ಳು : ತಿರುಹಿ ಗಾಳಿಯ ತೆಗೆದು ಮುಂಗೈಗೊಂಡು ನಡೆನಡೆದು ಅರಿಬಲವನಿಡೆ ಮುಗ್ಗಿ ಕೆಡೆದುದು ತುರಗವಜ್ರಗಿಜಿಯಾದುದಿಭತತಿ (ಕುಮಾ.ರಾ. ೬-೫೫). [ ಮುಂಗೈ (<ಮುಂಗೆಯ್) + ಕೊಳ್$_{1}$ ]

**ಮುಂಗೈಗೊಳಿಸು** (ಕ್ರಿ). =ಮುಂಗೈಗೊಳ್ : ಕಳಲಿ ರಣದಲಿ ಕೆಡೆದ ರಕ್ಕಸವಲಗೆಯಿರಲವ ಕೊಂಡು ಮುಂಗೈಗೊಳಿಸಿ ಯಜ್ಞದ ವೀರಭದ್ರನ ರಣಕೆ ಗುರುವಾದ (ತೊರರಾ. ೩-೬-೪೦). [ ಮುಂಗೈಗೊಳ್ + –ಇಸು$_{3}$ ]

**ಮುಂಗೈನಿಗಳ** (ನಾ). ಮುಂಗೈಗೆ ಧರಿಸುವ ಸರಪಳಿಯಂಥ ಒಂದು ಬಗೆಯ ಆಭರಣ : ಮುಂಗೈನಿಗಳವನು ತಿರುಹುತ್ತ ನಸುನಗುತೆದ್ದ ನಭಿಮನ್ಯು (ಕುಮಾ.ರಾ. ೪-೩೪).

[ ಮುಂಗೈ (<ಮುಂಗೆಯ್) + ನಿಗಳ (=ನಿಗಲ) ]

**ಮುಂಗೈಮುರಾರಿ**, ಮುಂಗಯ್ಯಮುರಿ, ಮುಂಗೈಯಮುರಿ (ನಾ). ಮುಂಗೈಯಲ್ಲಿ ಧರಿಸುವ ಒಂದು ಬಗೆಯ ಕಂಕಣ : ಪಗಲುದೀವಟಿಯು ಪಂಜೆಯು ಬಗೆಗತಿಶಯಮಾದ ಸಿಂಹಲಕ್ಷ್ಮಪತಾಕಂ ಮೃಗಧರ ಪಂಕಿ [ಯು] ಪೇಡೆಯು ಬಗೆಯದೆ ಮುಂಗೈಮುರಾರಿಯೆಂಬುದನಿತ್ತಂ (ಬೀಳಪಂ. ೦-೦೦೮) ; ಕಣ್ಗೆ ಕಾಮನ ರಕ್ಷೆ, ಬೆನ್ಗೆ ಭೀಮನ ರಕ್ಷೆ, ಮುಂಗೈ ಮುರಾರಿ ರಕ್ಷೆ (ಕನ್ನಜಾ. ೦೦೩); ಗಂಡುಕಚ್ಚೆ ಹಾಕಿ ಪೀತಾಂಬರವುಟ್ಟು . . . ಕರ್ಣಕುಂಡಲ, ರತ್ನಹಾರ, ಮುಂಗೈಮುರಾರಿಗಳಿಂದ ಲಲಿತ ಸಾಲಂಕೃತಳಾದಳು (ರಾಗಪ. ೦೫೫). **ಮುಂಗಯ್ಯಮುರಿ** : ಮುಂಗಯ್ಯಮುರಿ ಹಸ್ತಸರ ಸರಪಣಿ . . . ಮೇಗಯ್ಯ ಮುತ್ತಿನ ಸರಗಳಿಂ ಸಿಂಗರಿಸಿದಳಾ ಸೀಜ (ಕುರಾಕಾಂ. ೨೯-೯೬). **ಮುಂಗೈಯಮುರಿ** : ಮುಂಗೈಯ ಮುರಿ ಮುರಡಿಯ ಸರಪಳಿ ಹೊನ್ನುಂಗುರ ತೋಳ ಬಾಪುರಿಯ ಶೃಂಗಾರದ ನಾಯಕಜಾಲ ಬಹಳಬೆಡಂಗಿನೊಳೈತಂದುದಾಗ (ಕಂಪಿ. ೨೩-೮೪).

[ ←ತೆಲು. ಮುಂಗಯಿಮುರಾರಿ, ಮುಂಗೈಮುರಾರಿ, ಮುಂಗಾಮುರಾರಿ, ಮುಂಗಾಮುರಮು ]

**ಮುಂಗೈಯಮುರಿ** 'ಮುಂಗೈಮುರಾರಿ' ನೋ.

**ಮುಂಗೈವಲ** (ನಾ). ಮುಂಗೈಯ ಬಲ,–ಶಕ್ತಿ : ದೋರ್ವಲಮುಂ ಪೊಪಟ್ಟ ಮುಂಗೈವಲಮುಂ ಪಿರಿದಾದುದೆನ್ನನಿನ್ನಾರ್ ಕೊಲ್ವರ್ (ಪಂಹಂ. ೬-೪೬). [ ಮುಂಗೈ (<ಮುಂಗೆಯ್) + ಬಲ$_{3}$ ]

**ಮುಂಗೈಹೊಡೆ** (ನಾ). ಬಿಲ್ಲುಗಾರರು ಬಿಲ್ಲಿನ ಹಗ್ಗವು ಕೈಗೆ ತಗಲದಂತೆ ಮುಂಗೈಗೆ ಕಟ್ಟಿಕೊಳ್ಳುವ ರಕ್ಷಾಕವಚ ; ಗೋಧೆ : ಬಲಿದ ಮುಂಗೈಹೊಡೆ[ವಾಕಾಂ.ದೆ]ಯ ಬಿರುದಿನೊಳುಲಿವ ಘಂಟೆಯ ಬೆನ್ನಲೆವ ಬತ್ತಳಿಕೆಗಳಲ್ಲೈದಿತ್ತು ಬಿಲ್ಲಾಳುಭಯಸೇನೆಯಲಿ (ಕುಮಾ.ಶ. ೪-೦೦). 'ಕೆಯ್ಪೊಡೆ' ಪರಾ. [ಮುಂಗೈ (<ಮುಂಗೆಯ್) + ಹೊಡೆ$_{3}$ (<ಪೊಡೆ$_{3}$)]

**ಮುಂಗೊರಲ್** (ನಾ). ಕುತ್ತಿಗೆಯ ಮುಂಭಾಗ ; ಕೊರಳ ಮುಂದಿನ ಭಾಗ : ಉರದೊಳ್ ಫಣಿ . . . ಮುಂಗೊರಲೊಳ್ ಕಜ ಮಣಿ ಯಿಲ್ಲದೆ ದೊರೆಕೊಳೆ ಮೃಡನಡಿಗೆ ಪರಿಗನೆಜಗಿದನಾಗಳ್ (ಪಂಪರಾ. ೮-೨೪).

[ ಮುಂ$_{1}$ (<ಮುನ್$_{1}$) + ಕೊರಲ್ ]

**ಮುಂಗೊಳ್**, ಮುಂಕೊಳ್, ಮುಂಕೊಳು (ಕ್ರಿ). ೧. ಎದುರಿಗೆ ಬರು ; ಮುಂದೆ ಬರು,–ನಿಲ್ಲು : (ಕ). ೨. ಮುಂದೆ ಹೋಗು ; ಮುಂದೆ ಸಾಗು ; ಮುಂದೆ ಚಲಿಸು : ಭಯಾಬ್ಧಿಯಲ್ಲಿ ಮುಂಗೊಂ[ಪಾಠಾಂ. ಕೊಂ] ಡು ಮುಳುಂಗಿ ತೇಲ್ದುವವನೀಕ್ಷಣಮುಗ್ಮಪಯಶ್ಚರದ್ವಯಂ (ಕಾಕಂ. ೪-೦೦೦). ೩. ಮುಂದೆ ನುಗ್ಗು ; ಧಾವಿಸು : ಆ ಮಹಾಚಲಪತಿಯ ರಮಣೀಯಜಂಗಮಾವತಾರಮೂರ್ತಿಗಳೆ ಮುಂಗೊಳ್ವಾಯದಿಂ ಪರಿದು ಕೆಡೆದುವೆಂಬಂತೆ ದೆಸೆದೆಸೆಗೆ ಪರಿದು ಕೋದನೂಜ ಕೆಡೆವನೇಕದ್ವಿಪಸಂಕುಳಂಗಳುಮಂ (ಪಗಪ. ೬-೫೫ ವ). **ಮುಂಕೊಳ್** : ೧. ಪಂಕಜಮುಖಿಯುರಿತ್ತಡಿಯ ಸೋಪಾನದೆ ಮುಂಕೊಂಡು ಮೆಟ್ಟಿದರತಿಯಲಿ (ಕಂಪಿ. ೫-೫೨). ೩. ಮಲಗು ತೇಳುತ ಕೆಚ್ಚಲುಗಳಗ್ಗಳಿಸಿ ತೊರೆಯಲು ಮೋಹದಿಂದಾಕಳುಗಳಂಬೆಯೆನುತ್ತ ಮುಂಕೊಂಡಚಚುತಿರಲಾಗಿ (ಬಸಪು. ೬೦-೩೫) ; ಧರ್ಮಸುತ ಮುಂಕೊಂಡು ರಣದಲಿ ಕಾದಿ ಗೆಲಿದನು ಮಾದ್ರಭೂಪತಿಯ (ಕುಮಾ.ಶ. ೨ ಸೂಚನೆ) ; ಮುರಿಮುರಿದುರ್ವಿಯಾ ತಳದಲ್ಲಿ ಮುಂಕೊಂಡು ಪರಿದಳು ತುಂಗಬೆಳ್ಗಂಗೆ (ಸೋಹಕ. ೬-೩೫). ೪. ಮುಂಭಾಗದಲ್ಲಿ ಹೊಂದು : ಮುಂದಿಟ್ಟುಕೊಳ್ಳು : ಧೇನುಗಳಂ ಮುಂಕೊಂಡು ಬರ್ಪ ಶಿಷ್ಯ ಸಮೂಹಂಗಳುಮಂ (ಪಂಕಕಂ. ೦೦೬-೨) ; ತಲೆವಣೆಗಳ ತಾಳ್ದು ನಿಲೆ ಚವಿ ನಿಖಿಳಭೂಪಲೆಯ ಸಗ್ಗಿಗರ ಮುಂಕೊಂಡು ಕಲೆಗಧಿನಾಥ ಚಂದ್ರನ ನೋಡ ಪೋಪಂತೆ ನೆಲೆನೆಲೆಗಡರ್ದಳಾ ಕುವರಿ (ಸೋಹಕ. ೨೬-೩೦). ೫. ಪ್ರಾರಂಭಿಸು ; ತೊಡಗು ; ಮೊದಲುಮಾಡು : ಗಿರಿದುರ್ಗಸಿಂಘಂ ಮೊನೆಯ ಮುಂಕೊಳ್ವರ ಪೆಣ್ಣರ ಗಣ್ಡಂ ಪೆರ್ಗ್ಗಡೆ ಹಿರಿದಾಸನ ಸನ್ನಾಹ ಸುಭನಾಮದಿ ಸಮಸ್ತಪ್ರಶಸ್ತಿಸಹಿತಂ(ಎಪಿಕ. XI–i, ೬೦ ೦೪ ; 1024) ; ನಾಕನಿಳಯರು ತಂದ ಜಯವೇ ಸಾಕು ಸೋಲುವರಲ್ಲ ನೀವಿದಕೇಕೆ ನೆಣ ಮುಂಕೊಂಡಿರೆಂದನು ನಗುತ ಕಲಿಪಾರ್ಥ (ಸಂಭಾ. ೩೬-೪೫) ; ಮುಂಕೊಂಡ ಮಹಾವ್ರತಮಂ ಪಜ್ಜಪಡಿಸದ ತೀವ್ರಪರಿಗ್ರಹಕೊಂದಿನಿಸುಂ ಚಿತ್ತವನು ಎಜಗಿಸದ . . . ಸಾಧುಸಮಿತಿಗತಿಸಮತೆಯೊಳೆಜಗುವನು (ಸಯಚಾ. ೦-೫). ೬. ಮಾರ್ಗವನ್ನು ಹಿಡಿ ; ದಾರಿಯನ್ನು ಹಿಡಿ : ವಿಭವಂ ಕೈಮಿಗೆ ಚಾತುರಂಗಸಹಿತಂ ಪ್ರಸ್ಥಾನಮಂ ಮಾಡಿ . . . ವಿದರ್ಭದೇಶಪಥಮಂ ಕೊಂಡನುತ್ಸಾಹದಿಂ (ಪಳಕಂ. ೨೩೪). ೭. ಸ್ವೀಕರಿಸು : ಪಡೆ : ಸುಗ್ಗಿಯ ಪುಗಿಲೊಳ್ ಮುಂಕೊಂಡುಗ್ಗಿಯನುಜ್ಜವಿಸಿದಂತೆ ಮೋನಮನುಟಿದೇಂ ಬಗ್ಗಿಸಿದುವೊ ಕೋಗಿಲೆಗಳ್ ಪೊಗ್ಗಪ್ಪ ವಿಯೋಗಿಯುಂ ಪುಗಲ್ ಪುಗಲೆನುತುಂ (ಕಾವ್ಯಾವ. ೮೯೨). ೮. ಎದುರಿಸು ; ಪ್ರತಿಭಟಿಸು : ವೈರಿವ್ರಾತವನು ಮುಂಕೊಂಡು ಹೊಯ್ದನು ಹೊಳೆವ ಖಡುಗದಲಿ (ಕುಮಾ.ದ್ರೋ. ೬-೩೬) ; ಕೋದಂಡದ ಜೀವೆಯ ನೀಖಿ ಪುಂಡರೀಕಾಕ್ಷ ರಾಮನ ಪಿಂತುಮಾಡಿ ಮುಂಕೊಂಡನು ಖಚರ ಚಕ್ರಿಯನು (ಪರ್ಣಕ. ೬-೬). ೯. ಅತಿಕ್ರಮಿಸು : ಮೀರು : ಬಾಲರವಿಕೋಟಿಪ್ರಭೆಯನೊಳಕೊಂಡು ಮುಂಕೊಂಡು ಬಾಲನ ಘನತೇಜಮುರ್ವಿಯ ಮೇಲೆ ಪರ್ಬಲು (ಬಸಪು. ೩-೩೦). ೧೦. ಆತುರಪಡು; ತವಕಿಸು; ಉತ್ಸಾಹಿಸು: ಸೊಗಸಿವಡೆ ರತಿಗೆಯ್ದು ಸೊಕ್ಕಿದಡಗಲದೊಳಪೊಕ್ಕಂ ಪುಗಲು ಕಣು ಮುಗಿವಡಂ ಕೈಕೊಂಡು ಮುಂಕೊಂಡಡೆ ನಲಿವು ಮಿಕ್ಕು ಮಿಗೆ ನುಡಿಗಳಿಂದೊಲಿಸಿ (ಬಸಪು. ೪೨-೦೫) ; ತುರಗ ಖುರಗಳಲಿ ದಿಂಡುದಿರುಹುತ್ತಿರಲದಕ್ಕಾ ಗಂಡುಗಲಿ ಶಾಬರನೃಪನು ಮುಂಕೊಂಡು ಹೊಗಳುತ್ತಿರಲು ತುರಗದ ಪೂರ್ವಪಾಯವನು (ಸಂಭಾ. ೩-೦೪) ; ತೆಂಕ ನಾವೆಯ್ದುತಿದ್ದಪೆವೆಂಗಿದಿರಾಗಿ ತೆಂಕಣಿಂ ಬಪ್ಪರಾರೆಂದು ಮುಂಕೊಂಡು ಪಡೆಯೆಲ್ಲ ನೋಡುತಿದ್ದುದು ಗಗನಾಂಕಕೆ ದೃಷ್ಟಿಯನಿಟ್ಟು (ಶರಶ. ೪೬-೦೬). **ಮುಂಕೊಳು** : ೧. ತೊಲಗಿರ್ಪ ಕಾಲಾಳು ಮೇಲಾಳಳವಿಗೊಡಲಿ ಮಹಾರಥರು ಮುಂಕೊಳಲಿ (ಕುಮಾ.ದ್ರೋ. ೫-೯). ೧೦. ವಿಗಡೆಯರ್ನೆರೆದು ಕಾಳೆಗಕೆ ಮುಂಕೊಳುತಿರ್ದರು (ಕೃಪಿಜಾ. ೦೬-೫). ೧೧. ಆಕ್ರಮಿಸು ; ಮುತ್ತು ; ಕವಿ : ಅರಿಸ್ಯಂದನವ ಮುಂಕೊಳಲು ದಶಕಂಠ ಧನುವಿನೊಳಂಕಿಸುತ ಸೀತಾಸ್ತ್ರವನು ಘಾರಾಂಕನೆಸಗುವೆನಸುರ ಸೇನೆಯೆನುತ್ತಲೈತಂದ (ಉತ್ತರ. ೨೫-೬) : ಪಿರಿದಾದ ಚತುರಂಗದ ಪದಹತಿಯಲಿ ಮುರಿದೇಳ್ವ ಕೆಂದೂಳ್ಗಳಾಗ ತರಣಿಮಂಡಲವ ಮುಂಬಲಿದು ಮುಂಕೊಳುತಂದು ಕಿರಣದೇಳಿಗೆಯ ತಗ್ಗಿಸಿತು (ಕಂಪಿ. ೦೬-೨೮).

[ಮುಂ$_{2}$ (<ಮುನ್$_{2}$) + ಕೊಳ್$_{1}$]

**ಮುಂಗೊಳಿಸು**, ಮುಂಕೊಳಿಸು (ಕ್ರಿ). ೧. ಎದುರುಮಾಡು ; ಮುಂದು ಮಾಡು : ಎದ್ದು ನಿಟ್ಟಿಸುವಿನಿಯನ ನೋಟಕೆ ತನ್ನ ಮುದ್ದುಮೊಗವ ಮುಂಗೊಳಿಸಿ ನಿದ್ದೆಯೊಳೆಸಗಿದ ನಿಖಿಲಾಪಚಾರವ ತಿದ್ದುವುದಿನಿವಾತಿನೊಳು (ಹರಿಚ. ೬-೬). ೨. ಮುಂಭಾಗಕ್ಕೆ ಬರು ; ಎದುರಿಗೆ ಬರು ; ಮುಂದೆ ಬರು : ತಲೆವರಿಗೆಯಲಿ ಖಡ್ಗಿಗರು ಮುಂಗೊ[ಪಾಠಾಂ. ಕೊ]ಳಿಸಿ ನಿಂದರು (ಕೊರಟಾ. ೬-೦೩-೦೦). ೩. ಮುಂದುವರಿ ; ಮುಂದೆ ಸಾಗು,- ನಡೆ : ಮುಂಗೊ[ಪಾಠಾಂ. ಕೊ]ಳಿಸುವುದು ಸದ್ಧರ್ಮದಲಿ ಕಳವಳಿಸದಿರು ಷಡುವರ್ಗದಲ್ಲಿ (ಕುಮಾ.ಅ. ೯-೨೦). ೪. ಉಂಟಾಗು ; ಒದಗು : ಬಳಲಿದನು ಬಲುಹಾಗಿ ಸಾಕಿನ್ನೆ ತಟವು ತನಗೆಂಬ ಬಗೆ ಮುಂಗೊ[ಪಾಠಾಂ. ಕೊ]ಳಿಸಿದುದು (ಕೊರಟಾ. ೩-೬-೬೯). **ಮುಂಕೊಳಿಸು** : ೧. ಜಲಜನಾಭನು ದೇವದುಂದುಭಿ ಮೊಳಗೆ ನಸುನಗೆಯಿತ್ತಮಂ ಮುಂಕೊಳಿಸಿ ಸರಳ್ಗಳ ಸುರಿವನಸುರನ ಮೇಲೆ ಕಡುಬಂದ (ಗದೇಶು. ೯೦-೬೨). ೨. ಸೆಳೆದಡೊತ್ತಿ ದಡೆ ಮಿಸುಕದಿಹ ಕದಕೆ ಮುಳಿದು ಮುಂಕೊಳಿಸಿ [ಪಾಠಾಂ. ಮುಂಕಣಿಸಿ, ಮುಂಕಳಿಸಿ, ಪೂಂಕರಿಸಿ] ಸೊಂಡಿಲಂ ಸುತ್ತಿ . . . ಘೀಳಿಟ್ಟೊರಲಿ ಕಡೆದ ವಾನೆಗಳು ಕಂಡಪರಳುಕಲು (ಜೈಮಿನಿ. ೯-೩೯) ; ಆಳವನಜಾಯದೆ ಕೆಣಕಿತಹ ಮುಂಕೊಳಿಸಿ ಕದನವ ಕೋಡ ಕೈಯವರಳವಿಗೊಟ್ಟರೆ ನೋಡಿ ಸಿಡಿಮಿಡಿಗೊಂಡು ಕೆಲಸಿಡಿವ . . . ನಿರುಪಮವೀರರೊದಗಿತು ತಿಗುಳರಾವುತರು (ಕುಮಾ.ದ್ರೋ. ೯-೬೩). ೫. ಮುಂಭಾಗದಲ್ಲಿರು ; ಎದುರಿನಲ್ಲಿರು : ದಳದ ಕೊನೆಯೊಳಗಿಹುದದಕೆ ಮುಂಕೊಳಿಸಿದೀಶಾನ್ಯದ ದೆಸೆಯ ದಳದೊಳಗಿರು ವುದೈ ಛಂದಶ್ಶೈಲಪೆ ಪುಸಿಪ ಕೇಳೆಂದ (ಗದೇಶು. ೩೦-೬). ೬. ಮುಂದುವರಿಯುವಂತೆ ಮಾಡು ; ಮುಂದುವರಿಸು ; ನಡೆಸು : ಸುರರ ಬಾಯಾರೈಸುತ ರಿಪುಭೂವರರ ಮುಂಕೊಳಿಸುತ್ತ . . . ಮೋಕ್ಷದ ಸಿರಿಯ ಕೈಗೂಡಿಸುತ ನಡೆದುದು ತುರಗ ದೆಸೆದೆಸೆಗೆ (ಜೈಮಿ. ೩-೨೬) ; ಭಾರಿ ಗದೆಯನು ಪಿಡಿದು ರಭಿಡಿದು ಮುರಾರಿಯನುಮತದಿಂದ ಮುಂಕೊಳಿಸಿದರು ಕಾಳಗವ (ಕೃಪಾ.ಅ. ೦೬-೩೬). ೭. ಮುನ್ನುಗ್ಗು ; ಮೇಲೆಬೀಳು : ಬಲುಕಣಗಳಿವದಿರನು ಕರಿ ಮುಂಕೊಳಿಸಿ ಕೆಡಹಿತು (ಕುಮಾ.ದ್ರೋ. ೩-೨೪). ೮. ಆವರಿಸು ; ವ್ಯಾಪಿಸು : ಐರಾವತವನಿಂದ್ರನ ಮುಸುಕಿದನು ಶರತತಿಗಳಲಿ ಮಾಯಾದಿ ಮೃಗ ಪಂಗಳನು ಮುಂಕೊಳಿಸಿ (ಉತ್ತ.ಕ. ೨೬-೬೬). ೯. ಉತ್ಸಾಹಿಸು ; ತವಕಿಸು : ರಥ ಕಾಲಾಳು ಮುಂಕೊಳಿಸಿ ಅರಸನನುಜರು ಸಹಿತ ಕೃಷ್ಣನ ಬೆರಳ ಸನ್ನೆಯೊಳೈದೆ ಬಿಡೆ ಮೋಹರಿಸಿ ನಿಂದುದು ಮುರಿದ ಮಕರವ್ಯೂಹರಚನೆಯಲಿ (ಕುಮಾ.ದ್ರೋ. ೯-೨೨). ೧೦. ಲೀನವಾಗು ; ನಿರತವಾಗು ; ತನ್ಮಯಗೊಳ್ಳು : ಭುವನಾವಳಿಯ ತೋರ್ಕೆಗೆ ತಾನೆ ನೆಲೆಯೆಂದೆನಿಪ ನಿಜಪದವ ಬಲಿದು ತನ್ನಲಿ ತಾನೆ ತಾನಾಗಲಿಭುಸುವಿ ಸಂವಿತ್ಸ್ವರೂಪದಲಳಿದ ಮನದಲಿ ಮುಂಕೊಳಿಸುತಿರ್ದನು ಸಮಾಧಿಯಲಿ (ಬಿಡಾಗ. ೦೦-೬೬-೩೯). [ಮುಂಗೊಳ್ + — ಇಸು$_3$]

**ಮುಂಗೋಣೆ** (ನಾ). ಕಟ್ಟಡದ ಮುಂಭಾಗದಲ್ಲಿರುವ ಕೊಠಡಿ : ಚಿಕ್ಕಮ್ಮ ಸೋಫಿಯಾಮಾವಾನೆಂಬವ್ವ ಮಾತ್ರ ಮುಂಗೋಣೆಯಲ್ಲಿ ಅವನನ್ನೆದುರುಗೊಂಡಳು (ಶ್ರೀಶಕು. ೬೯) ; ಮುಖ್ಯಕೋಣೆಯನ್ನು ಪ್ರವೇಶಿಸುವುದಕ್ಕೆ ಮುನ್ನ ಇರುವ ಚಿಕ್ಕಕೋಣೆಯೇ ಅಂತರಾಳ, ಇದನ್ನು ಮುಂಗೋಣೆ (ಆಂಟಿರೂಮ್) ಎನ್ನಬಹುದು (ಕಶಿಶಾ. I. ೦೦೯).

[ಮುಂ$_1$ (<ಮುನ್$_1$) + ಕೋಣೆ$_2$ (<ಕೋಣ್)]

**ಮುಂಗೋಪ** (ನಾ). ಬಹಳ ಬೇಗನೆ ಬರುವ ಸಿಟ್ಟು : ಶೀಘ್ರಕೋಪ : ದೇವ ಮುಂಗೋಪದೊಳಗೆಮ್ಮ ನುಡಿಯುಚಿತವಲ್ಲ (ಶಾಪಸಂ. ೦-೪೨) ; ಕೇಳುತಾಕ್ಷಣದಿ ಮುಂಗೋಪ[ಪಾಠಾಂ. ಮುಕ್ಕೋಪ]ಸಂಭವಮಾಯ್ತು (ವಂಶಾ. ೩-೩-೦೩) : ನಮ್ಮ ತಾಯಿಗೆ ತುಂಬಾ ಮುಂಗೋಪ ಎಂತ ಅದಕ್ಕೇ ಅಗ್ನೀ ಅಂಕಿತಮಾಡ್ಕೊಂಡೆ (ವೃಕ್ಷ. ೦೦). [ಮುಂ$_2$ (<ಮುನ್$_2$) + ಕೋಪ]

**ಮುಂಗೋಪಿ** (ನಾ). ಬಹಳ ಬೇಗನೆ ಕೋಪಗೊಳ್ಳುವ ಸ್ವಭಾವದವನು ; ಕೂಡಲೆ ಸಿಟ್ಟಿಗೇಳುವವನು : ಹಿಂದೆ ನೀನು ಮುಂಗೋಪಿಯಾಗಿ ಒರಟೊರಟಾಗಿ ವರ್ತಿಸಿದೆ (ಮಹಾಗ. ೨೬೩) ; ಬಹಳ ಮುಂಗೋಪಿಗಳು, ದುಡುಕುಸ್ವಭಾವದವರು (ರಾಶ್. ೩೩೩). [ಮುಂಗೋಪ + — ಇ$_3$]

**ಮುಂಗೋಲ್**, ಮುಂಗೋಲು (ನಾ). ೧. ತಕ್ಕಡಿಯ ತೊಲೆಯು ಹೆಚ್ಚು ತೂಕದಿಂದ ಒಂದು ಕಡೆಗೆ ಬಾಗಿರುವುದು : (ಕ). **ಮುಂಗೋಲು** : ೨. ತಕ್ಕಡಿಯಲ್ಲಿ ಬಟ್ಟಿನ ತೂಕಕ್ಕಿಂತ ಹೆಚ್ಚಾಗಿ ತೂಗುವ ತೂಕ : ಅವನು ಬೆಣ್ಣೆಯನ್ನು ಮುಂಗೋಲಾಗಿ ತೂಗಿ ಕೊಟ್ಟನು (ಕಿಟೆ). [ಮುಂ$_1$ (<ಮುನ್$_1$) + ಕೋಲ್$_1$]

**ಮುಂಗೋಲು** 'ಮುಂಗೋಲ್' ನೋ.

**ಮುಂಗೋಳ್** (ನಾ). ಸೈನ್ಯದ ಮುಂಭಾಗ, — ಮುಂದುಗಡೆ : ಮುಂಚೂಣಿ : ವಿರಾಟಂ ಶ್ವೇತನುತ್ತರಂ ಶಂಖನೆಂಬ ಮೂವರ್ ಮಕ್ಕಳುಂ . . . ಪನ್ನೊರ್ವರ್ ತಮ್ಮಿಂದಿರುಂಬೆರಸು ನೆಲನದಿರೆ ಮುಂಗೋಳೊಳ್ ನಡೆಯೆ (ಪಂಪಭಾ. ೯-೯೩ ವ) ; ಜನಕ ಕನಕರಿರ್ವರ್ ವಿಜಯಗಜಮಂ ನೇಜ ಮುಂಗೋಳೊ[ಪಾಠಾಂ. ಲೊ]ಳ್ ನಡೆಯೆ (ಪಂಪರಾ. ೯-೩೩ ವ) ; ಅರಾತಿಗಜಮಸ್ತಕಕ್ಕೆ ಲಂಘಿಸುವ ಮುಸಕದಿಂ ಸಿಂಗದ ಜಂಗುಳಿಯಂತೆ ಮುಂಗೋಳೊಳ್ ಕಡಂಗುವಣಿಯ ನಾಯಕರ್ಗೆ . . . ಕೈವೀಸುವುದುಂ (ವರ್ಧಮಾ. ೬-೯೩ ವ).

[ಮುಂ$_1$ (<ಮುನ್$_1$) + ಕೋಳ್. / ತೆಲು. ಮುಂಗೋಲು = ಮೊದಲನೆಯ]

**ಮುಂಗೋಳಿ** (ನಾ). ಮುಂಜಾವದಲ್ಲಿ ಕೂಗುವ ಕೋಳಿ : ನಸುಕಿನಲ್ಲಿ ಕೂಗುವ ಕೋಳಿ : ಶಿವ ಶಿವೆಯರಿನಿತೆಸಗಿದೀ ವಿವರಮನ್ನಲಕೆ ಸಾರ್ವಂತೆ ಮುಂಗೋಳಿಗಳ್ ಕೂಗೆ (ಶಿಶು. ೩-೩೦) ; ದಾವೀದಕುಲದಾದಿತ್ಯನ ನವ ಪ್ರಬೋಧನದ ಮುಂಗೋಳಿ (ಗೊರೂಪ. ೩೦-೩೬೦) ; ಮುಂಗೋಳಿ ಕೂಗ್ಯಾವು ಮೂಡು ಕೆಂಪೇರ್ಯಾವ (ಜಾಗೀ. ೬).

[ಮುಂ$_1$ (<ಮುನ್$_1$) + ಕೋಳಿ$_1$ (<ಕೋೞ್$_1$)]

**ಮುಂಚ** (ನಾ). ನಾಯಕ ; ಮುಖಂಡ : ಬಿಲ್ಗಾರರಲಿ ಮುಂಚನೆನಿಸಿ ಸೊಗದಿಂ ಬಾರ ! (ಹಟ್ಟಿ. ೬-೬೪). [ಮುಂಚು$_2$ + — ಅ$_7$]

**ಮುಂಚಾಚು** (ಕ್ರಿ). ೧. ಮುಂಭಾಗಕ್ಕೆ ಚಾಚು ; ಮುಂದುಗಡೆಗೆ ನೀಡು : ಹಗಲ ಮೇಲಿಂದ ಹರಿದಾಸನನ್ನು ಮೆಲ್ಲಗೆ ಇಳಿಸಿ, ಕಿರಣಾಲೀಪೆಯ ತೊಡೆಯ ಕಡೆಗೆ ಅವನನ್ನು ಮುಂಚಾಚಿದನು (ಇತ್ಯ. ೯೨೬) ; ಮುಂಚಾಚಿದ ಅವನ ಕೈಯನ್ನು ಕಾಣದವಳಂತೆ ನಟಿಸಿ ಕೈ ಕುಲುಕದೆಯೆ . . . ಬಿರುಬಿರನೆ ನಡೆದಳು (ಶ್ರೀಶಕು. ೩೨೨). ೨. ಮುಂಭಾಗಕ್ಕೆ ಚಾಚಿಕೊಳ್ಳು ; ಮುಂದುಗಡೆಗೆ ನೀಡಿಕೊಳ್ಳು : ಮುಂಚಾಚಿದ ಹಗಲೆಲುಬಿನ . . . ಚುರುಕುಮುದಿಯನೊಬ್ಬ ಮತ್ತೊಂದು ಕುದುರೆಯನ್ನು ನಡೆಸಿಕೊಂಡು ಬರುತ್ತಿದ್ದನು (ಶ್ರೀಶಕು. ೨೬೬). [ಮುಂ$_2$ (<ಮುನ್$_2$) + ಚಾಚು$_1$]

**ಮುಂಚಿತ**, ಮುಂಚಿತ್ತು (ಅ). ಮೊದಲೇ ; ಮುಂಚೆಯೇ : ಪೂರ್ವಭಾವಿಯಾಗಿ: ಎಲವೊ ನೀನಾ ಸತಿಯ ಕಂಡಾ ಕಲಹ ಮುಂಚಿತ[ಪಾಠಾಂ. ತು] ಕಂಡನಲ್ಲದೆ ಗಲಭೆಕಾಱರು ಘಾಸಿಮಾಡಿದರಣಕಸಣಕದಲಿ (ಕೊರಟಾ. ೩-೬-೨೯); ಕನ್ನಡಸಾಹಿತ್ಯಚರಿತ್ರೆಯಲ್ಲಿ ಹತ್ತನೆಯ ಶತಮಾನವು ಬಹಳ ಮಹತ್ವಪೂರ್ಣವಾದುದು. ಇದಕ್ಕೆ ಮುಂಚಿತವಾಗಿಯೂ ಕನ್ನಡಸಾಹಿತ್ಯ ಇದ್ದಿತು (ಸಾಹಿಸ. ೦); ಕೃತಿಯ ಮುಂಚಿತವಾಗಿ ಕೊಟ್ಟಿರುವ ಕಥಾಸಾರದಲ್ಲಿ ವಸ್ತು ಪಾತ್ರ ಸನ್ನಿವೇಶಗಳ ಪರಿಚಯವನ್ನೇ ಚೆಲುವಾಗಿ ಮಾಡಿಕೊಟ್ಟಿರುತ್ತಾರೆ (ಕಾಂಜರ. ಮುನ್ನುಡಿ). **ಮುಂಚಿತ್ತು** : ಗುಲ್ಮವ್ಯಾಧಿಸ್ಥನಿಗೆ ಮುಂಚಿತ್ತಾಗಿ ಸ್ನೇಹವಿಧಿಯನು ಮಾಡಿ, ನಾಡಿಗಳು ಸಡಿಲವಾದ ಬಳಿಕ ವಾಯುವು ಮುಂದುವರಿಯದು (ವೈದ್ಯಸಾ. I. ೨೯೪). **P** ಇದು ಸಂಸ್ಕೃತದ 'ವಂದಿತ,

ಕಥಿತ, ವಿದಿತ, ಪೂಜಿತ ಇತ್ಯಾದಿ ಶಬ್ದಗಳ ಸಾದೃಶ್ಯದಿಂದ ರೂಪುಗೊಂಡಿರುವ ಶಬ್ದ. [< ಮುಂಚು$_1$]

**ಮುಂಚಿತ್ತು** 'ಮುಂಚಿತು' ನೋ.

**ಮುಂಚಿಸು** (ಕ್ರಿ). ಮುಂದುವರಿಯುವಂತೆ ಮಾಡು; ನಡೆಸು : ಪಂಚವಕ್ತ್ರಗಳನು ಹಂಚಿಸಿ ಮರ್ತ್ಯರ ಸಂಚಲತ್ವವ ನೆಱೆ ಸುಟ್ಟು ಕಂಚನಾದ್ರಿಗೆ ಬೇಗ ಮುಂಚಿಪ ಜಂಗಮಲಾಂಛನಕ್ಕೆ ನಮಸ್ಕಾರ (ಕೋಡಿಕ. ೦-೬); ನಮ್ಮ ಕಡೆಯಿಂದಲೇ ಶರಾರತ್ತು ನಡಸಿದರು ಎಂತ ಕಂಡೀತು ಎಂಬುದಾಗಿ, ನಾವು ಈ ಮೇರೆ ತಿಳಿದು, ಈಗ ಅವರು ಮುಂಚಿದಾಗ್ಯೂ, ಅವರ ಮೇಲೆ ಮುಂಚಿಸಬಾರದು (ರಾಜೇಂದ್ರ. ೬೨). [ಮುಂಚು$_1$ + — ಇಸು]

**ಮುಂಚು$_1$** (ಕ್ರಿ). ೧. ಮುಂದೆ ಹೋಗು; ಮುಂದುವರಿ; ಮುಂದಕ್ಕೆ ಚಲಿಸು : "ಮುಂಚು ಅಗ್ರಗಮನೇ (ಮುಂದರಿ)" (ಕವಿಧಾ); ಶುಚಿಸ್ವಾಭಾವಂಗಳಪ್ಪುದಱಿನಾರ್ದ್ರತೆಯನಪ್ಪುಕೆಯ್ಯುತ್ಕಂಠಶಯನಪರಿಕಲ್ಪನಕ್ಕಾವಾವೆ ಮುಂಚುವವೆಂಬಂತೆ ಕುಮುದಿನಿಗಳೊಂದೊಂದು ಗಱಿಗಳುಳ್ಳಲರೆ (ಕಾದಂಬ. ೩೭೫); ಸಾಟಿ ಹಿಂಚಿತು ಮುಂಚಿದವನು ತಲೆಕಳನೊಳಗೆ ನೋಟಕ್ಕೆ ಕಣ್ಣಾಯಿದಂತೆ ಬಿದ್ದುದು ಕೆಳಗೆ (ಚೆನ್ನಬ. ದೇ. ೦೦೬-೭); ಮುಂಚಿದ ಪಿಂಚದಂಚೆಗಳೆಂಚರದಂಚರಮಾಗದಂಚಿಪೆರ್ಚಿಚರಮಿಾಯಿ (ಸುಕುಸು. ೦೪-೨೦). ೨. ಮುಂಚಿತವಾಗಿ ಹೋಗು; ಮೊದಲು ಹೋಗು; ಮುಂದಾಗು : ರಥದಿಂದಂ ಮುಂಚಿ ಮನೋರಥಂ ಮನೋರಥದಿನತ್ತಲದು ಮುಂಚಿ ಬೃಹದ್ರಥವಿಂತು ಭರತರಾಜನರಥವ ಮನೋರಥದ ಬೇಗಮೊದವಿದುದಾಗಳ್ (ಆದಿಪು. ೦೨-೬೦); ಬಾಲತ್ವದಿಂದೆಲ್ಲಿಯುಂ ವಿನಯೋಲ್ಲಂಘನಮಾದುದಿಲ್ಲ ಮರಣಕ್ಕಿನ್ನಿಂದೆ ನೀಂ ಮುಂಚಿಮಯ್ (ಗದಾಯು. ೩-೭); ಮುರಹರ ರಥವ ಮರಳಿಚು ಮರಳಿಚ್ಚಿರಥ ಮುಂಚುವುದೊ ಮನ ಮುಂಚುವುದೊ ಎಂದ (ಕುಮಾರ. ೦೪-೦೨). ೩. ಮೊದಲಿನದಾಗು; ಪೂರ್ವಭಾವಿಯಾಗು : ನನೆಮೊನೆಯಾಗಿ ಬಂದುವೆಳಮಾವೆಳಮಾವಿನ ಮುಂಚಿ ಬಂದ ಪೂವಿನ ಪೊಸಗೊಂಚಲೊಪ್ಪಿದುವು (ಶಾಂತಿಪು. ೭-೦೫); ಬಿರಯಿಗಳ ಸುಯ್ಯಲೊಡನೆಯೆ ಪಿರಿಯವು ದಿವಸಂಗಳಾದುವವರವರ ಪರಿಸ್ಫುರಿತಂಗಳೊಡನೆ ಕುಂದಿದು ವಿರುಳ್ಗಳುಂ ಮುಂಚಿ[ಪಾಠಾಂ.ಚಿ] ಬಂದ ಪಳಮಾಗಮದೊಳ್ (ಕಾವ್ಯಾವ. ೬೦೫); ಪೋಗೆಂಬ ನುಡಿ ಪಿಂಚೆ ಮುಂಚಿ ಜೀವಂ ನೆಗೆದು ತಾಗಿ ನಡುನೆತ್ತಿಯುಂ ಬಗಿದು ಬಾದಣದೆಗೆದು ವೇಗಡರ್ದು ಗಗನಕ್ಕೆ ದಂಡಾಯಮಾನದುರಿಯಾಗಿ ನೆಗೆಯಲ್ಕೆ (ಸಿದ್ಧರಾ. ೪-೩೬). ೪. ಮುನ್ನುಗ್ಗು; ಧಾವಿಸು : ಮುಂಚಿನವೊಲ್ಪೊಳೆಯುತ್ತುಂ ಮುಂಚುವ ಸಿಡಿಲಂತೆಱಂಗಿವಕ್ಷಿದ್ವಾಲಪಾಸಂಚುಮದವೋಲುಚ್ಚಳಿಸುಱೆ ತಾಂ ಚಕ್ರದೆ ಪೊರ್ದರಂದು ಪಟುತರಶೂರರ್ (ಉದ್ಭಟ. ೪-೦೦೫); ಕಣ್ಣಕೆಂಪಿನ ವಿಷಮುರಗ್ಗದ ಕರ್ಣತನುಜರು ಮುಸಗಿ ಮುಂಚುವ ಮೋಹರವನಡಹಾಯ್ದು ತಱಿಬಿದರು (ಕುಮಾರ. ೦೦-೩೨); ಬಾಹುಗಳನ್ನು ಮುನ್ನೀಡಿ, ಪ್ರೇಮಾಲಿಂಗನಕ್ಕೆ ಮುಂಚುವವನು (ಶಿಲ್ಪಿಶ. ೧೬-೨೪). ೫. ಮುಂಚೆ ಒದಗು; ಮುಂದಾಗಿ ಉಂಟಾಗು, — ಸಂಭವಿಸು : ಅಂತು ಮುಂಚಿದ ಕಾರ ಕಾರ್ಮುಗಿಲಂತೆ ಶರವರ್ಷಮುಯುಮಾಗೆ ದೆಸೆಯೆಲ್ಲಮಂ ಪರ್ಬಿರ್ಪ ದಮಿತಾರಿಯೆಚ್ಚುರಮಂ ಕಂಡು (ಶಾಂತಿಪು. ೪-೧೩ ವ); ಭೃಗುವೇಟಿದಿನಕ್ಕಸ್ವಮಿಸುಗುಮೆನೆ ಮುಟ್ಟಿಕೊಂಡುದಿಲ್ಲ ವೇಗಣ ಮುಟಿಗಳ್ ಭೃಗುವೇಟಿ ದಿವಸದೊಳ್ ಮೂಡುಗುಮೆನೆ ಮುಟಿ ಮುಂಚಿಕೊಂಡೊಡ್ಡೊಳ್ಳಿತು (ಜಿತ್ಸಿತು. ೦೭-೦೪೪). ೬. ಮಿಗಿಲಾಗು; ಮೇಲುಗೈಯಾಗು : ಇಂಚೆಯು ಪಸವಿನ ಬಜದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚಿದೆ ಪಿಂಚಿದೆ ಬಳೆದು ಮಿಂಚಿಯ ಕಱ್ಗಿಡಿವೊಲಾದುವಾ ನಾಡುರ್ಗಳ್ (ಶಂಶಕಾ. ೬-೩೦); ಪಂಚನಳಲೆಲ್ಲದಿಂದಂ ಮುಂಚುವವೆಂದು ಸ್ವಯಂವರಾಲಯದ ಬಿಸತ್ತಾಂಚನಸಿಂಹಾಸನದೊಳ್ ಸಂಚಲಿಸದೆ ನೆಲಸಿದರ್ ವಿಚಿತ್ರಾಕೃತಿಯಿಂ (ಪಳತು. ೩೦೦); ದನುಜ ಮುಂಚಿದ ಮನುಜ ಹಿಂಚಿದ ಮನುಜ ಮುಂಚಿದ ದನುಜ ಹಿಂಚಿದ ನೆನಲು ದೈವದಲಸುರ ಹಿಂಚಿದ ಮನುಜ ಮುಂಚಿದನು (ಕೌಶಿರಾ. ೩೩-೭೦). ೭. ವೇಗವಾಗು; ತೀವ್ರಗೊಳ್ಳು : ಸೀತೆಗೆ ವೈಮಾನಸರ ಮುತ್ತೈದೆಯರನೇವೊಟ್ಟಿಂಗೆ ಕಾಣ್ಬೆನೋ ಎಂಬೋಂದು ತವಕದಿಂ ನಡೆ ಮುಂಚಿದುದು (ರಾಮಾಶ್ವ. ೩೩-೦). ೮. ಮೀರು; ಅತಿಕ್ರಮಿಸು; ದಾಟು : ಮುಂಚಿದೆ ಅಯ್ಯಾ ಪರಬ್ರಹ್ಮವ ಮುಂಚಿದೆ ಅಯ್ಯಾ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯಪದವಿಯ ಮುಂಚಿದೆ ಅಯ್ಯಾ (ಸರ್ವವ. ೬೬-೪೬೬); ಸಂಚಳಿಸುತಿರೆ ಮಿಕ್ಕು ಮಿಾಱೆ ತಮ್ಮೆಲ್ಲರಂ ಮುಂಚಿ ಬಸವನ ಭಕ್ತಿ ಬಂದಿವಿಡಿಯಲ್ ಕರಂ (ಬಸರ. ೯-೩೦); ಮುಂಚುವುದು ಕೈ ಮನವ ಕೈಮೆಯ್ಯ ಸಂಚವನು ಮನ ಮುಂಚುವುದು (ಕುಮಾರ. ೨೩-೦೦). ೯. ಆವರಿಸು; ವ್ಯಾಪಿಸು : ಮನಮಂ ತವಕಂ ಮುಂಚಿರೆ ತನು ರೋಮಾಂಚನಮನೊಂದೆ ಕಾಂಚಿಪೆರಸು ಮೆಲ್ಲನೆ ನೀವಿ ಜಗುಱೆ ತತ್ಕಾಮಿನಿಯಾಲಿಂಗಿಸಿದಳುದ್ವೃತ್ತೋರ್ವೀಧವನಂ (ಉದ್ಭಟ. ೬-೦೦೭); ಸರಸಿಜಾಯತದಂದವನು ಮೋಹರಿಸಿ ಮುಂಚುವ ಪರಿಮಳವನಂದರಸಿ ಬೀಱುತ ಬಂದು ಹೊಕ್ಕಳು ರಾಜಮಂದಿರವ (ಕುಮಾರಭಿ. ೦-೨೬). ೧೦. ಹೊರಹೊಮ್ಮು; ಹೊರಸೂಸು; ಉಕ್ಕು : ಗುರುಪುಂಗವನೆ ನಿನ್ನೊಳುರವಣಿಸಿ ಮುಂಚುತಿಹ ಕರುಣಾಂಬುವೆನ್ನ ಮನದ ಮಲಿನಂ ದೊಳೆಯೆ ಪರಿಶುದ್ಧನಾದೆನಿದು ಸತ್ಯಂ (ಅಪಮಾ. ೬-೪೪); ಇನ್ನಿದಕೆ ಮೆರುಗಿಡುವ ಕಲೆ ಒಂದು ಉಂಟೇ ? ಸೊಗಸು ಇನ್ನಿನಿಸಾದರೂ ಮುಂಚಬಹುದೇ ? (ಕಲುಪು. ೩-೪); ಮಿಂಚಿನಲ್ ಕುಡುಗೋಲ ಸೆಳೆದೊಡನೆಯೆ ಬೆಳ್ಳಿ ಮುಂಚಿದುದು ಕೆನ್ನೆತ್ತರೊತ್ತರದಿ ಸಿಡಿದು (ಕಾಲೂರ. ೦೧೦-೨೩೩). ೧೧. ಮಾಗಿ; ಮುಕ್ತಾಯವಾಗು : ಮಾತು ಮುಂಚದ ಮುನ್ನಲೆದ್ದು ವಿನೀತತೆಯೊಳಾ ಮುನಿಗೆ ವಂದಿಸಿ ಭೂತಪತಿಯ ಶರಾಸನದ ಕಡೆನೋಡಿ . . . ನಡೆವನು (ಅನಂರಾ. ೦-೨೩-೩೦).

[ಮುಂ$_2$ (< ಮುನ್$_2$) + — ಚು$_1$./ತೆಲು. ಮುಂಚು]

**ಮುಂಚು$_2$** (ನಾ). ೧. ಮೊದಲು; ಮುಂದು : ಎನ್ನ ಸುಖ ದುಃಖಕ್ಕೆ ಮುಯ್ಯಾಂತು ನೀ ಮುಂಚು ನಾ ಹಿಂಚಾಗಿ ಇದ್ದ ಮತ್ತೆ ಎನಗೆ ಬಂದ ಉಬ್ಬಸವಾವುದು (ಸಕಲ. II, ೬೩೩-೦೬೦೩); ಅಂಗ ನೆನಹೇ ಹಿಂಚಾಗಿ ಲಿಂಗ ನೆನಹೇ ಮುಂಚಾಗಿಪ್ಪುದಯ್ಯ ಅಂಗವಿಷಯಂಗಳೇ ಹಿಂಚಾಗಿ ಲಿಂಗ ವಿಷಯಂಗಳೇ ಮುಂಚಾಗಿ ಇಪ್ಪುವಯ್ಯ (ಸಿದ್ಧೇವ. ೬೩-೨೪೭). ೨. ಹಿಂದಿನದು; ಮುಂಚಿನದು; ಮೊದಲಿನದು : ತಕ್ಕ ಮಾನದೆ ಹಂಚಿಹೋದರು ರೆಕ್ಕೆಪಕ್ಕಗಳಂತೆ ಸೊರಗದೆ ಮಿಕ್ಕಿ ಮುಂಚಿನಗಿಂತ ವೆಗ್ಗಳವಾಗಿ ಬೆಳೆದಿಹುದು (ರಘುವಂ. ೨-೨೪); ಈ ದೇಶಕ್ಕೆ ಈಗ ಮುಂಚಿಗಿಂತ ಹೆಚ್ಚು ಶಾಪ್ರು ಬರುತ್ತದೆ (ಮುಂಜಯ. ೪-೦೬೪).

[ಮುಂ$_2$ (< ಮುನ್$_2$) + — ಚು$_2$]

**ಮುಂಚುಂಗು** (ನಾ). ಮುಂಭಾಗದಲ್ಲಿರುವ ಕುಚ್ಚು : ಚೆಲುವಿನ ಬಿರಿದುಬಿಬು ಮುಂಚುಂಗಿನಿಂ ನಲವೆತ್ತು ಸಿಂಗಾರವಾದ (ಜ್ಞಾನತಿ. ೦೬-೦೦೪).

[ಮುಂ$_1$ (< ಮುನ್$_1$) + ಚುಂಗು$_1$]

**ಮುಂಚುಟು** (ಅ). ಮೊದಲೇ; ಮುಂಚೆಯೇ; ಪೂರ್ವಭಾವಿಯಾಗಿ: ನಿನಗೆ ಆರೋಗಣೆಯ ಮಾಡಿಸೂವಕ್ಕೆ ಮುಂಚುಟಾಗಿ ಶ್ರೀಗುರುವಿನ ಪ್ರಸಾದವ ಕೊಂಬೆ (ಶರಗೋ. ೨೦೬-೯); ನೀನು ಬಲ್ಲಡೆ ಮುಂಚುಟಾಗಿ [ಪಾಠಾಂ. ಚಿತಾಗಿ] ಮಹಾನರೇಂದ್ರನ ಮಾನ್ಯ ಮಾರ್ಗದ ಮಾನಿನಿಯ ಕೊಯೊಯ್ದು ಕೊಡು ರಕ್ಷಿಸುವನಿದು ಸಿದ್ಧ (ಕೃಪರಾ. ೬-೬-೩೬). P ಇದು 'ಅಂತುಟು', 'ಎಂತುಟು' ಎಂಬ ಶಬ್ದಗಳ ಸಾದೃಶ್ಯದಿಂದ ರೂಪುಗೊಂಡಿರುವ ಶಬ್ದ. [< ಮುಂಚು$_1$]

**ಮುಂಚೊಣೆ** 'ಮುಂಚೂಳಿ' ನೋ.

**ಮುಂಚೂಳಿ,** ಮುಂಚೂಣಿ (ನಾ). ೧. ಸೇನೆಯ ಮುಂಭಾಗ: ದಂಡಿನ ಅಗ್ರಭಾಗ : ಕರೆಕರೆದಾಗ ಮನ್ನೆಯ ಮಂಡಲಿಕರ ದುರಗಲಿ ನಾಯಕರುಗಳ ನೆಟಿ ಮುಂಚೂಳಿಯು ಜಗಳಕೆ ನೇಮಿಸಿ ಪರಿವಾರದೊಡನೆ ಬೀಳ್ಕೊಟ್ಟ (ಕಂಪಿ. ೦೫-೦೬); ಮುಂಚೂಳಿಯ ಕಾಳಗದಲ್ಲಿ, ಮಾರ್ಬಲವನ್ನು ಹೊಕ್ಕು ಅದನ್ನು ಕುಟ್ಟಿ ಕೋಲಾಹಲವನ್ನೆಬ್ಬಿಸಿದನು (ಕವೀರ. ೦೦೯). **ಮುಂಚೂಣಿ :** ೧. ಬೀರವ ನುಡಿದ ಮೂವರ ವಾಕ್ಯವ ಕೇಳಿ ಮಾರ ಮನ್ನಣೆಗೈದನವರ ಓರಂತೆ ಮುಂಚೂಣಿಮಲಿಂಬಿಟ್ಟು ವಿಸ್ತಾರದಿ ತೆರಳ್ದ ಮುಂದೆಸೆಗೆ (ವೀರಕ. ೬-೨೪); ಕರ್ಣನು ಆ ಏಟುಗಳನ್ನು ತಾಳಲಾರದೆ ಸೈನ್ಯದ ಮುಂಚೂಣಿಯಿಂದ ಹಿಂದಕ್ಕೆ ಹೋಗಿಬಿಟ್ಟನು (ಪಕಥಾ. ೨೦೪). ೨. ಯುದ್ಧದಲ್ಲಿ ಎಲ್ಲಕ್ಕೂ ಮುಂದೆ ಇರುವ ಸೈನ್ಯದ ತುಕ್ಕಡಿ; ಅಗ್ರಗಾಮಿ ದಳ : ನಿಲದತಿವೇಗದಿಂ ನೃಪ ಬಂದು ತನ್ನ ಮುಂದಲೆವ ಬೇಡಂ ಪಡೆಗಂಡು ತಳುವದೆ ಮುಂಚೂಣಿಯಟ್ಟಲಾಭಯದೊಳು ಕಲಹ ಗಂಟಿಕ್ಕಿತು (ಜೀವಂಧಾ. ೮-೩೨) ; ಕಳುಹಿ ಅನುಚರರೊಡನೆ ತಾ ಬಹು ಬಲಸಮೇತದಿ ಪಾಚ್ಛಳಿದ್ದೆಡಗಳಿಗೆ ಬರುವರ ಕಂಡು ಮುಂಚೂಣಿಯನು ಕಳುಹಿದರು (ಮುಣ್ಣಾಶಾ. ೫-೨೦). ೩. ಮುಂಭಾಗ ; ಮುಂದುಗಡೆ : ಬೊಬ್ಬಿರಿಯೆ ವೀರಧ್ವನಿಯಿಂದ ತರುಗಿರಿ ಹಬ್ಬಿ ಮುಂಚೂಣಿ ಉರಿ ಹೊಗರೆದ್ದು ಸುತ್ತೆ (ಶಿವಾಕ್. ೬೫-೫); ಪೈದಿಗಳ ಮೆರೆವಣಿಗೆ ಎಷ್ಟು ದೀರ್ಘವಾಗಿತ್ತೆಂದರೆ, ಮುಂಚೂಣಿಯು ಜನ ಕಣ್ಮರೆಯಾಗುವವರೆಗೆ . . . ಬಂಡಿಗಳು ಹೊರಟಿರಲಿಲ್ಲ (ಪ್ರಸರು. ೯೬೬); ದೇಶಿಯನ್ನು ಹಿಂದೊತ್ತಿ ಮಾರ್ಗವನ್ನು ಮುಂಚೂಣಿಯಲ್ಲಿ ತಂದಿವೆ (ಶವಾ. ೬೩).

[ ಮುಂ$_1$ ( < ಮುನ್$_1$ ) + ಚೂಳಿ$_1$ ]

**ಮುಂಚೆ** (ಅ). ೧. ಮುಂಭಾಗದಲ್ಲಿ ; ಮೊದಲಿನಲ್ಲಿ; ಮುಂದೆ : ಅಪೂರ್ವಿಕೆ ನಾ ಮುಂಚೆ ಇಹೆ. ತಾ ಮುಂಚೆ ಇಹೆನೆಂದು ಒಬ್ಬರಿಗೊಬ್ಬರು ಅತಿಕ್ರಮಿಸಿ ಮುಂಚುವುದು (ನಾಶಾ. ೬). ೨. ಮುಂಚಿತವಾಗಿ : ಪೂರ್ವಭಾವಿಯಾಗಿ : ತಚಿಸಂದುವ್ಪತವ್ಯೆಭೂಪಬಲದೊಡ್ಡಣ್ಯಾಡ ಲೆಕ್ಕಕ್ಕೆ ತಳ್ತಚಿದೆನ್ನಾಳ್ದನಿನಾನೆ ಮುಂಚೆ ನಿಚಿಪೆಂ ಕೆಯ್ಕೊಂಡು ಕಟ್ಟಾಯಮುಂ (ಶಂಕಥಾ. ೯-೬೦); ಮಾನಸಕೆ ಮುಂಚಿಚಿವ ಹುಸ್ತಮುಂ ವ್ಯಸ್ತಮುಂ ನಾನಾಸ್ತ್ರಸಂತತಿಯು ಘಾತಿಯುಂ ಪಾತಿಯುಂ ದೇವಾಸುರರ್ದಿಗೊಳಿಸಿದುದು (ನೆಬೆಕ್. ೧೩-೩೮). ೩. ಹಿಂದೆ ; ಪೂರ್ವದಲ್ಲಿ : ಮುಂಚೆ ಕಿನ್ನರರರಣನಸುವಂ ಹೀಚಿ ಬಸವರಸನ ಹರಣಮಂ ಪಂಚಮುಖಿನಲಿ ಪಡೆದು ಮೆಚಿದನು ಮಾಚಿದೇವಯ್ಯ (ಬಸಪು. ೩೬ ಸೂಕನ); ಕೈ ತುಂಬಾ ಹಣ ಅವರಲ್ಲಿ ಮುಂಚೆ ಇತ್ತಂತೆ (ರಾದು. ೦). [ < ಮುಂಚು$_1$ ]

**ಮುಂಚೆಕಡೆ** (ನಾ). ಮುಂದುಗಡೆ, ಮುಂಭಾಗ: ಇಷ್ಟೆಲ್ಲವೂ ಆ ಮನೆಯ 'ಮುಂಚೆಕಡೆ'ಯ ಚಿತ್ರ (ಕಾಪೂರು. ೩೭). [ ಮುಂಚೆ + ಕಡೆ$_3$ ]

**ಮುಂಜ$_1$** (ನಾ). ಒಂದು ಬಗೆಯ ಚಿಕ್ಕ ನೇಗಿಲ ಕುಳ. ರೆಂಟೆಯ ಕುಳ : ಕಬ್ಬಿಣದ ಸಾಮಾನುಗಳಲ್ಲಿ ಮುಂಜ, ಬಳಿ . . . ಕುಡಗೋಲು ಮುಂತಾದ ಯಾವತ್ತು ಸಾಮಾನುಗಳು ಹದನಾಗಿಯೂ ಮೊನೆಯಾಗಿಯೂ . . . ಇರಬೇಕು (ಕೃಷಿಶ್ರ. ೨೦); ಕಾದ ಕಬ್ಬಿಣ ಬಡಿದು ಮುಂಜವ ಮಾಡಿ (ಲೋಕಗೀ. ೦೨೯); ಪುರುಷರ ಕೈಯಲ್ಲಿ ಮುಂಜ, ಹಾರಿ. ಗುದ್ದಲಿ. ಸಲಿಕೆ ಶೋಭಿಸುತ್ತಿದ್ದುವು (ಕೆಚಿಹಾ. ೩೦).

**ಮುಂಜ$_2$** (ನಾ). ೧. ಒಂದು ಬಗೆಯ ಜೊಂಡು ; ನೊದೆಹುಲ್ಲು: ನೊಸೆಹುಲ್ಲು : "ಶರಃ ಮುಂಜಃ — ಇವೆರಡುಂ ಪೊದೆ" (ಹಲಾಯು. ೩೨-೩೮) : ಮುಂಜ – ನೊದೆ (ಶಬ್ದಾಮ. ೦೬೦ ಕೃದೋ). ೨. ನೊದೆ ಹುಲ್ಲಿನಿಂದ ತಯಾರಿಸಿದ (ಬ್ರಹ್ಮಚಾರಿಗಳ) ಉಡಿದಾರ ; ಕಟಿಸೂತ್ರ. ೩. (ಹಸುರು ಬಣ್ಣದ) ಒಂದು ಬಗೆಯ ಕುದುರೆ : "ನೆಟಿ ಹಸುರಿರಲು ಮುಂಜಸವು. . . ಸಿಲ್ಕಾದ ಕುದುರೆ ಸೂಕಳನೆನಿಕ್ಕುಂ" (ಮಂಗರಾ. ೬೨-೦೩). [ಸಂ.]

**ಮುಂಜಕೇಶಿ** (ನಾ). ವಿಷ್ಣುವಿನ ಒಂದು ಹೆಸರು : ಆ ಕೇಶಿಯುಂ ಮುಂಜಕೇಶಿ ಮಾರ್ಕೊಂಡು ಕರಮಂ ತೂಂತಿ ತದಾಸ್ಪದೊಳ್ ಬಳೆಯಿಸಲ್ (ಜಗಂ. ೫-೯೫ ವ). [ ಸಂ. ಮುಂಜಕೇಶಿನ್ ]

**ಮುಂಜಕ್ಷಯು** (ನಾ). ಒಂದು ಬಗೆಯ ಪಕ್ಷಿ ; ಗೀಜಗ : "ಮುಂ[ಜಾತಾಂ. ಮ, ಮುಂ]ಜಕ್ಷಯುಂ ಗೀಜಗವೆನಿಕ್ಕು" (ಮಂಗರಾ. ೩೨-೯). [ಸಂ.]

**ಮುಂಜಗಲಿ,** ಮುಂಜಗುಲಿ (ನಾ). ಮನೆಯ ಮುಂಭಾಗದಲ್ಲಿರುವ ಜಗಲಿ. – ಮುಂದುಗಡೆಯಲ್ಲಿರುವ ಕಟ್ಟೆ : ರಂಜಿಸುವ ಪೊಂಗೊಳಲ ನಡುಮನೆ ಮುಂಜಗಲಿಯೊಳಗಿರಿಸೆನುತ್ತವೆ ಮುಂಜಿಜಗ ಪಿಡಿದೆಳೆದು ಹೊರಳಿದ ಚಿತ್ರಲೀಲೆಯಲಿ (ಕೃಶಾ.ಕಾ. ೩-೯೩). **ಮುಂಜಗುಲಿ :** ಶಾಸ್ತ್ರವನು ನಕ್ಷತ್ರ ನೆಲೆಗಟ್ಟವನೆಯ ಮುಂಜಗುಲಿಯೊಳಗೋದುತ (ತ್ರಿಶುಪೋ. ೯-೩೯). [ ಮುಂ$_1$ ( < ಮುನ್$_1$ ) + ಜಗಲಿ ]

**ಮುಂಜಗುಲಿ** 'ಮುಂಜಗಲಿ' ನೋ.

**ಮುಂಜರಿ** (ಕ್ರಿ). ಮುಂದೆ ಸರಿ; ಮುಂದಕ್ಕೆ ಹೋಗು; ಮುಂದುವರಿ: ರಜನಿ ಮುಂಜರಿದಂತೆ ಹಿಂಜರಿದುದೊಯ್ಯನಾ ಪುರದ ರಾತ್ರೀಂಚರತ್ವಂ (ತ್ರೀರಾಮಪ. ೧೩೮-೯೭). [ಮುಂ$_2$ (<ಮುನ್$_2$) + ಜರಿ$_1$ (<ಸರಿ$_1$)]

**ಮುಂಜವಿ** 'ಮುಂಜಿ' ನೋ.

**ಮುಂಜಾಗ್ರತೆ** (ನಾ). ಮೊದಲೇ ವಹಿಸುವ ಎಚ್ಚರ ; ಮುನ್ನೆಚ್ಚರಿಕೆ : ಅಯ್ಯೋ, ಹಾಗಿದ್ದರೆ ಮುಂಜಾಗ್ರತೆ ವಹಿಸಬೇಕು (ಕಾವೇರಿ. ೦೦೩); ಸುದ್ದಿ ಹರಡಿದ ಎರಡುದಿನ ಮುಂಚಿತವಾಗಿ ಶಾಲೆಗೆ ಬರುವಾಗ ಮನೆಯಲ್ಲೇ ನಿದ್ದೆ ಪೂರೈಸಿ ಮುಂಜಾಗ್ರತೆ ವಹಿಸಿದರು (ಕಾವೇರಿ. ೦೦೬).

[ಮುಂ$_1$ ( < ಮುನ್$_1$ ) + ಜಾಗ್ರತೆ ]

**ಮುಂಜಾನೆ** (ನಾ). ೧. ಬೆಳಗಿನ ಜಾವ; ದಿನದ ಮೊದಲಿನ ಯಾಮ : ಮುಂಜಾನೆಯ ಮಳೆ ಅಲ್ಲ, ಮಧ್ಯಾಹ್ನದ ನೆಂಟನಲ್ಲ (ಗಾದೆ); ಅಂಜನಕ್ಕೆ ಅಂಜಬೇಡ. ಮುಂಜಾನೆಗೆ ಆಪಬೇಡ (ಗಾದೆ). ೨. ಬೆಳಗ್ಗೆ; ಪ್ರಾತಃಕಾಲ : ಅವರೆಲ್ಲ ಮಡದಿ ಮಕ್ಕಳೊಡನೆ ಮುಂಜಾನೆಯೇ ಲಿಂಗಯ್ಯನ ಮನೆಗೆ ಆಗಮಿಸಿದ್ದರು (ಹಾಕುತ್. ೮೮); ಆಗ ಮುಂಜಾನೆ ಎದ್ದು ನೀರನ್ನು ತರಲು ಪಕ್ಕದ ಬಾವಿಯ ಕಡೆಗೆ ಓರ್ವ ನಾರೀಮಣಿ ಹೋಗುತ್ತಿದ್ದಳು (ಮಚಕ. ೩೯); ಮುಂಜಾನೆ ೧೦ ಗಂಟೆಗೆ ಊಟಾ ಮಾಡಿ ಹೋಗೇನಿ (ಕುಂಕುಮ. ೫೩). [ <ಮುಂಜಾವ ]

**ಮುಂಜಾವ,** ಮುಂಜಾವು (ನಾ). ೧. ಬೆಳಗಿನ ಜಾವ; ದಿನದ ಮೊದಲಿನ ಯಾಮ : ಮುಂ[ ಪಾಠಾಂ. ಮುಂದು ]ಜಾವದಲೆದ್ದು ಲಿಂಗದಂಘ್ರಿಯ ಮುಟ್ಟಿ ಸುಪ್ರಭಾತದಲ್ಲಿ ಶಿವಶರಣರ ಮುಖವ ನೋಡುವುದು (ಬಸವ. ೯. ೧೩೨-೦೬೩೯); ತರುಣಿಗೆ ಪುತ್ರಸಂತಾನ ಸಿದ್ಧಿಸಲಾಗಿ ದೊರೆದುದು ಸ್ವಪ್ನ ಮುಂಜಾವ ಕೆಂಜೆಡೆಗಳು ಸುಲಿಪಲ್ಲಿನ ವದನವು ರಂಜಿಪ ಕರ್ಣಕಂಡಲದಿ ಮುಂಜಾವದೊಳು ಬಂದು ನಿಂದು ಬ್ರಾಹ್ಮಣನಿಗೆ ಅಂಜಬೇಡೆಂದನೀಶ್ವರನು (ಅಬ್ಬಲ. ೨-೩೨). ೨. ಬೆಳಗ್ಗೆ : ಪ್ರಾತಃಕಾಲ : ಸೂಳು ವಿಂಗಳಲ್ಲೀಪವುರುನಿಸ್ವಾಳತತಿ ಮುಂಜಾವದಲಿ ಹೆಗ್ಗಾಳೆ ಮೊಳಗಿದವು (ಕುಮಾ.ಭಾ. ೬-೦) ; ಮುಂಜಾವ ಧಾರೆಯಾಯ್ತೆರಡು ಜಾವದೊಳರ್ತಿ ರಂಜಿಸಿ ನಿದ್ರೆ ಹಿಂಗಿದುದು ಹಿಂಜಾವದೊಳು ಮತ್ತೆ ಪೊಸಬರಾಗಿದ್ದರು ( ಭರತ. ೧೦-೦೬೯) ; ಮುಂಜಾವವಡಿಗೆ ಸಂಜೆಗಾಗಲೇ ತಂಗೂಳು (ಶಿಂಪು. ೩೨-೦೯). **ಮುಂಜಾವು :** ೧. ರಾಯನು ಮುಂಜಾವಿನಲ್ಲಿಯೆ ಎದ್ದುಬಿಡುತ್ತಿದ್ದನು (ಕೃದೇವ. ೦೦). ೨. ಮುಂಜಾವಿನ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಅವನು ಸ್ನಾನ ಮಾಡುತ್ತಿದ್ದನು (ರಂಗರೋ. ೦೯) ; ಸಂಜೆ—ಮುಂಜಾವಿನ ಅಡುಗೆಯ ನಿಮಿತ್ತದಿಂದ ಹೆಂಗಸು ಮನೆಯಲ್ಲಿರಬೇಕಾಗಿ, ಮೇಲ್ಕಾಣಿಸಿದ ಬಗೆಯ ಆನಂದೋತ್ಸವ

ಗಳಿಗೆ ಅವರು ಎರವಾಗಬೇಕಾಗುತ್ತದೆ (ಯಾಕ್ಷಕ್ರ. ೧೯೬) ; ಮುಂಜಾವಿನಲ್ಲಿ ಶ್ರೀಮಂತ ಅದೇ ಸಂಜೆಗೆ ದರಿದ್ರ ಅನ್ನೋ ಹಾಗೆ ಅವನ ಸ್ಥಿತಿ (ಗಾಳಿಗು. ೨೯).
[ಮುಂ$_1$ (<ಮುನ್$_1$) + ಜಾವ$_1$]

**ಮುಂಜಾವು** ' ಮುಂಜಾವ ' ನೋ.

**ಮುಂಜಿ**, ಮುಂಜವಿ, ಮುಂಜಿವಿ, ಮುಂಜಿವೆ, ಮುಂಜೆ (ನಾ). ೧. ಒಂದು ಬಗೆಯ ಹುಲ್ಲು ; ನೊಸೆಹುಲ್ಲು: 'ಮುಂಜಿಹುಲ್ಲು' ಪರಾ. 'ಮುಂಜ' ಹೋ. ೨. (ನೊದೆ ಹುಲ್ಲಿನಿಂದ ತಯಾರಿಸಿದ) ಉಡಿದಾರ ; ಕಟಿಸೂತ್ರ : ಸರಿಗೆಯೊಳ್ ಸಮೆದಕ್ಷಮಾಲಿಕೆ ಪೊನ್ನಮುಂಜ . . . ಪಿಂಗಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರವೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ (ಶಂಪಣಾ. ೩-೮) ; ಮುಂಜಿ ಕಟ್ಟುಟಂ ಗುಂಡಿಗೆ ಭೋಳಮುಂಡೆ ಮಣಿದಂಡ ಮಿವೀಕ್ಷಣಸೌಖ್ಯಹೇತುವೇ (ಶಂಪಾಪ. ೪-೬೦) ; ಕೌಪುಕೃಷ್ಣಾಜಿನವು ವರಯಜ್ಞೋಪವೀತವ ದಂಡ ಮುಂಜಿಯನಾ ಪವಿತ್ರೋತ್ತಮನು ಕೊಡೆ ವಿಡಿದಲ್ಲಿಗೈತಂದ (ಸಂಶಕ. ೧೧-೦೩). ೩. ಬ್ರಾಹ್ಮಣ ಬಾಲಕನು ಶಾಸ್ತ್ರೋಕ್ತವಾಗಿ ಯಜ್ಞೋಪವೀತವನ್ನು ಧರಿಸುವ ಕ್ರಿಯೆ ಮತ್ತು ಅದರ ಅಂಗವಾಗಿ ನಡೆಯುವ ಸಮಾರಂಭ : ಉಪನಯನ; ಬ್ರಹ್ಮೋಪದೇಶ : "ಮುಂಜಿಯುಪನಯನಮಕ್ಕುಂ " (ಮಂಗರಾ. ೩೫-೯) ; ವಿರಸಪೆನಗಿದು ಮುಂಜಿಯೆಂಬುದನೊರೆಯದಿರು (ಐಕಪು. ೩-೪೭); ವಿಪ್ರನ ಸುತನ ಮುಂಜಿಗೆ ತೀವಿದ್ಯೆಸನುಯಿತ್ತು ಮಾಡಿಸೆ (ಸಂಶಕ. ಶಂ. ೩೯೯-೨೯) ; ಎಲ್ಲಿ ನೋಡಿದಡೆ ಕುವರರ ಮುಂಜಿ ಸಂಭ್ರಮವುಲ್ಲಾಸದಿಂ ರಾಜಿಸುವ ಮುನಿಗಳಾಶ್ರಮವ ಕಂಡು ಪ್ರಭು ಚೋದ್ಯವಾಂತಂ (ಶ್ರಶುಪು. ೯-೦೬೩). **ಮುಂಜವಿ**, **ಮುಂಜಿವಿ** : ೩. ಈ ಮೂವರಿಗೂ ಮುಂಜಿವಿ ಮಾಡಬೇಕೆಂಬ ವಿಚಾರ ಮನೆಯಲ್ಲಿ ಸುರುವಾಯಿತು (ಸ್ವ. ಶಿತ. ೨೨೬); ಅರಳಿಮರದ ಮುಂಜಿವಿಯನ್ನು ಮಾಡುತ್ತಾನೆ (ಶಾಠಸಂ. ೨೦೩). **ಮುಂಜಿವೆ:** ೩. ಮದುವೆ—ಮುಂಜಿವೆ ಇತ್ಯಾದಿ ಎಲ್ಲ-ಆಚಾರವನ್ನು ಅವರೇ ಶಿರಸಾವಹಿಸಿದರು (ಸ್ವ. ಶಿತ. ೨೦) ; ಒಂಭತ್ತು ವರ್ಷ ನಡೆಯುವಾಗ ಜಗನ್ನಾಥಮಿಶ್ರನು ಮಗನ ಮುಂಜಿವೆ ಮಾಡಿದನು (ಗೌರಾಂಗ. ೨೦). **ಮುಂಜೆ :** ೨. ಪೊನ್ನ ಮುಂಜೆ . . . ತನ್ನ ಪಾಂಡುರಾಕಾರದೊಳೊಪ್ಪೆ ನಾರದನದೇನಿಟಿತಂದನೊ ನೀರದಾಧ್ವದಿಂ (ಜಗಪು. ೧೧-೩). ೩. ತನಯರಿಗೆ ಮುಂಜೆಯಾಗಲ್ಕೆ ಮೆದೆವುಲ್ಲಗಳಂ ಮುನಿಗಳಗೆ ಸೀಲ್ದೀವ ಭಲ್ಲೂಕಸಂಕುಳಂ(ಶ್ರಶುಪು. ೯-೦೮೩); ಇವನ ಮುಂಜಿಯಲ್ಲಿ ಯಜ್ಞೋಪವೀತವನ್ನು ಹಾಕತೊಡಗಲು, ಬಸವನು . . . ಶಿವನ ಹೊರ್ತು ಬೇರೆ ಗುರುವನ್ನು ನಾನು ನಂಬುವದಿಲ್ಲೆಂತಲೂ ಹೇಳಿದ್ದರಿಂದ ತಂದೆಯು ಅವನನ್ನು ಮನೆಯ ಹೊರಗೆಅಟ್ಟಿದನು (ಕಠಾಗ. ೪೦).

**ಮುಂಜೀಮಣಿ**, **ಮುಂಜವಿಮಣಿ** = ಉಪನಯನವಾದ ಮಾಣಿ ; ವಟು ; ಬ್ರಹ್ಮಚಾರಿ : ಮುಂಜೀಮಣಿಯಾದ ನಿಮಾಯಿಯನ್ನು ಕಂಡು ಜನರೆಲ್ಲರೂ 'ಬಾಲಗೋಪಾಲನೇ ಈತ' ಎಂದು ಕಣ್ತುಂಬ ನೋಡಿ ಆನಂದಪಡುವರು (ಗೌರಾಂಗ. ೨೦) ; ಅವರೆಲ್ಲ ಮುಂಜವಿಮಣಿಗಳಾಗಿದ್ದರೂ ಯಾರ ತಲೆಯ ಮೇಲೂ ಚಂಡಿಕೆ ಇದ್ದಿಲ್ಲ (ಕವಲು. ೩೬).
[<ಸಂ. ಮೌಂಜೀ. / ತುಳು, ತೆಲು. ಮುಂಜಿ]

**ಮುಂಜಿಕೇಶ** (ನಾ). = ಮುಂಜಕೇಶಿ : " ವಿಷ್ಣುಃ ಕೃಷ್ಣಃ ಕೇಶವಃ ಮುಂಜಿಕೇಶಃ . . . ವನಮಾಲೀ, ಗದಾಧರಃ —ಈ ೪೫ ನಾರಾಯಣನ ಪೆಸರ್ " (ಶಠಾಡು. ೩-೨೨) : " ಹರಿ ಶೌರಿ ವಿಷ್ಣು ನಾರಾಯಣಂ . . . ಮುಕುಂದಂ ಮುಂಜಿಕೇಶ[ಶಾಕಾಂ. ಶಿ] . . . ಗೋವಿಂದನಕ್ಕುಂ " (ಮಂಗರಾ. ೩-೦೭) ; ನವಸ್ಮಶ್ರುಕಳಾಪಸಂಪ[ದ ಮದಾಳಿ] ಶ್ರೀಣಿತಂ ಮುಂಜಕೇಶನ ವಕ್ತ್ರಾಂಬುಜಮೆಂಬಿನಂ ಸೊಗಯಿಕುಂ ವಾಗ್ದೇವತಾಧಿಷ್ಠಿತಂ (ಶರಸಾ. ೩-೦೭). [p ಇದು 'ಮುಂಜಕೇಶಿ' ಎಂಬುದರ ಅಪಲಿಖಿತ]

**ಮುಂಜಿಗಟ್ಟಿಸು** (ಕ್ರಿ). ಉಪನಯನವನ್ನು ಮಾಡು ; ಮುಂಜಿಯನ್ನು ಮಾಡು : ಮುಂಜಿಗಟ್ಟಿಸಿದನಾ ಕುವರಂಗೆ ಸೌಂದರೇಂದ್ರ (ಸೌಂದ್ಕ. ೦೭-೭೩). [ಮುಂಜಿಗಟ್ಟು + — ಇಸ್$_1$]

**ಮುಂಜಿಗಟ್ಟು** (ಕ್ರಿ). ನೊದೆಹುಲ್ಲಿನಿಂದ ಮಾಡಿದ ಉಡಿದಾರವನ್ನು ಕಟ್ಟು ; ಉಪನಯನವನ್ನು ಮಾಡು : ಮುಂಜಿಗಟ್ಟುವ ಪ್ರಾಯ ಮಾದೊಡೆ ಪ್ರಶಸ್ತದಿವಸವಾರನಕ್ಷತ್ರಮುಹೂರ್ತದೊಳ್ ಮುಂಜಿಬಂಧನ ಕ್ರಿಯೆಯುಂ ಮಾಡಿದ ಬಟಿಕ್ಕೆ (ವಡ್ಡಾರಾ. ೭೩-೨೦) : ಶಿವದೀಕ್ಷೆಯಿಲ್ಲದವನ ಪೊಲೆನ್ನಂ ಮುಂಜಿಗಟ್ಟುವ ಮನವಿದೆಂತಾಯ್ತಾಗ ನಿನಗವಿವೇಕಿಯಂದದಲಿ (ಐಕಪು. ೩-೪೪). [ಮುಂಜ + ಕಟ್ಟು$_1$]

**ಮುಂಜಿಬಂಧನಕ್ರಿಯೆ** (ನಾ). ನೊದೆಹುಲ್ಲಿನಿಂದ ಮಾಡಿದ ಕಟಿ ಸೂತ್ರವನ್ನು ಕಟ್ಟುವಿಕೆ ಮತ್ತು ಅದಕ್ಕೆ ಸಂಬಂಧಿಸಿದ ಸಮಾರಂಭ; ಉಪನಯನ : ಮುಂಜಿಗಟ್ಟುವ ಪ್ರಾಯಮಾದೊಡೆ ಪ್ರಶಸ್ತದಿವಸವಾರ ನಕ್ಷತ್ರಮುಹೂರ್ತದೊಳ್ ಮುಂಜಿಬಂಧನಕ್ರಿಯೆಯುಂ [ಟಿಪಾಂ. ಮುಂಜಿಗಬದ್ಧನಕ್ರಿಯೆಗಳಂ] ಮಾಡಿದ ಬಟಿಕ್ಕೆ (ವಡ್ಡಾರಾ. ೭೩-೨೦).
[< ಸಂ. ಮೌಂಜಿಬಂಧನಕ್ರಿಯಾ]

**ಮುಂಜಿವಿ** ' ಮುಂಜಿ ' ನೋ.

**ಮುಂಜಿವೆ** ' ಮುಂಜಿ ' ನೋ.

**ಮುಂಜಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ನೊದೆಹುಲ್ಲು ; ನೊಸೆಹುಲ್ಲು : ಮುಂಜಿಹುಲ್ಲು, ಹೊದಕೆಹುಲ್ಲು (ವೃಶಿಗಿ. ೭೭-೦೩೭೭) : ಬ್ರಹ್ಮವಿಚಾರವನ್ನು ಮಾಡುವವನು ಮುಂಜಿಹುಲ್ಲಿನ ನಡುವೆ ಇರುವ ಕಡ್ಡಿಯನ್ನು ವಿಂಗಡಿಸಿ ತೆಗೆಯುವ ಹಾಗೆ ದೇಹೇಂದ್ರಿಯಗಳ ದೆಸೆಯಿಂದ ಆತ್ಮಸ್ವರೂಪವನ್ನು ವಿಂಗಡಿಸುವನು (ಶ್ವಪಾಉ. ೬೦).
[ಮುಂಜ + ಹುಲ್ಲು (<ಪುಲ್)]

**ಮುಂಜುಟ್ಟು** (ನಾ). ಮುಂದಲೆಯ ಕೂದಲು ; ಮುಂಭಾಗದ ಶಿಖೆ,- ಮುಡಿ : ವಾರಿಶಿಖಿ ತುರುಬು ಮುಂಜುಟ್ಟು ನಡುವಣ ಶಿಖಿಯು ಚಾರುಮಕುಟಂ (ಗುರುಶಾ. ೩-೪೯); ಮೃತ್ಯು ಮುಂಜುಟ್ಟನು ಹಿಡಿದಿಹುದೆಂಬಂತೆ ಮಾಳ್ಪುದು ಸತ್ಕಾರ್ಯಗಳನು (ಇಂಪಾಪ. ೦೫೬-೭೯).
[ಮುಂ$_1$ (<ಮುನ್$_1$) + ಜುಟ್ಟು]

**ಮುಂಜೂರ್**, ಮುಂಜೂರು (ನಾ). ೧. ಮುಂಭಾಗದ ಛಾವಣಿ : ಮುನ್-ಸೂರ್, ಮುಂಜೂರ್ (ಶಾಶಾಶ. ೩೩ ಶ್ರಯೋ) ; ಮುಂಜೂರ್ ; ಮುಂಜೆಜಿಂಗು ; ತಜ್ಜೂಡರ್ (ಶಮದ. ೬೬ ಶ್ರಯೋ). ೨. ಛಾವಣಿಯ ಮುಂಭಾಗ : ಸಂಬಳಿಗೋಲ ಮುಂಜೂರೊಳಗೆ ಸಮಂತಿಟ್ಟು (ಅರಾಕ. ೦-೭-೦೩). **ಮುಂಜೂರು :** ೨. ಮುಂಜೂರ ಹಿಡಿದುಕೊಂಡು ಹಿಂದೆ ಮನೆಯ ಸುಟ್ಟು ನಿರಂಜನ ಪರಮಸಿದ್ಧ ಗುಹೇಶ್ವರಲ್ಲಯ್ಯನು (ಅವಶಂ. ೨೯೯-೦೩೦೯) ; ಗನ್ನದಿಂ ಬಜಾಗೋಪಮಂ ಶಾಳ್ದು ಝಂಕಿಸುತೆ ಮುಂಜೂರ ಹುಲ್ಲನುರ್ಚುತ್ತೆ ಶಿವಧಾಯೆನುತೆ (ತಿರುಶ. ದೇ. ೦೩-೦೩).
[ಮುಂ$_1$ (<ಮುನ್$_1$) + ಸೂರ್]

**ಮುಂಜೂರಿ** (ನಾ). (ರಾಜನ) ವಸ್ತ್ರಾಲಂಕಾರದ ಮುಂಭಾಗದಲ್ಲಿ ಕಟ್ಟಿರುವ ಚೂರಿ : ಅವುಗಳಲ್ಲಿ ರಾಜರು ಧರಿಸುವ ಕಿರೀಟ, ಭುಜಕೀರ್ತಿ . . . ಕರ್ಣಕುಂಡಲ, ಮುಂಜೂರಿ ಮುಂತಾದವುಗಳನ್ನೂ ಬಣ್ಣಿಸಿರುವರು (ಹುಬ್ಬಿಹ. ೬೩). [ಮುಂ$_1$ (<ಮುನ್$_1$) + ಚೂರಿ]

**ಮುಂಜೂರು** ' ಮುಂಜೂರ್ ' ನೋ.

**ಮುಂಜೆ** ' ಮುಂಜಿ ' ನೋ.

**ಮುಂಜೆರಗು** ' ಮುಂಜೆಜಿಂಗು ' ನೋ.

**ಮುಂಜೆಜಿಂಗು**, ಮುಂಜೆರಗು, ಮುಂಜೆಜು (ನಾ). (ಸೀರೆಯ ಅಥವಾ ವಸ್ತ್ರದ) ಸೆರಗಿನ ತುದಿ,- ಮುಂಭಾಗ,- ಅಂಚು : ಮುಂಜೂರ್;

ಮುಂಚೆಚೆಂಗು ; ತಗೊಳ್ಳುಡರ್ (ಶಬ್ದರ. ೬೬ ಪ್ರಯೋ.) ; ಮುಂಜೂರ್, ಪೊಂಜುರಿಗೆ, ಮುಂಚೆಜಿಂಗು (ಶಬ್ದಾ.ಮ. ೯೩ ಪ್ರಯೋ.). **ಮುಂಚೆರಗು** : ಕಡುವುರ್ಕೊರ್ಘೆಯಾಂತಿರುವ ಕಾಂತನಂ ಮುಂಚೆರಗಿನಿಂದ ಬೀಸುತಲೊರ್ವೆ ಸೈಪಿಡುವುದಂ ಕಂಡನು (ವಂಕಾರಾ. ೩-೬-೯೭) ; ನೋಡಲಮ್ಮದೆ ಕಂಗಳಿಗೆ ಮರೆಮಾಡಿದರು ಮುಂಚೆರಗ ಸೆರಗನು (ಕೊಡ್ಮಾ.ಕ. ೩೬). **ಮುಂಚೆಜಗು** : ತಳರ್ನಡೆ ಮುದ್ದುಮೊಗಂ ಪೊರಳ್ದ ಮುಂಚೆಜಗು ಕಿವುಚ್ಚಿ ಪೀರ್ವ ಮೊಲೆ ದಟ್ಟಡಿಯೊಳ್ಪರಿದೋಡುವಂಗಣಂ ನೆಜಿ ತನಗೊಪ್ಪುವರ್ಧಕನನೊ ರ್ವನನಾಂ ಪಡೆವಂದವಾವುದೋ (ಸುಕುಮಾ. ೯-೯೯) ; ಮದುಪಕ್ಕಳ ರಂಜಿಪ ಮುಂಚೆಜಗೆರಡಂ ಭೂದಿವಿಜಂ ಗಂಟಿಕ್ಕಿಸಿದ ಸಮನಂತರವಲ್ಲಿ (ಅಕ್ಕ್ರು. ೯-೬೯ ಪ). [ಮುಂ$_1$ (< ಮುನ್$_1$) + ಸೆಜಂಗು]

**ಮುಂಚೆಜಗು** ' ಮುಂಚೆಜಿಂಗು ' ನೋ.

**ಮುಂಚೋಗಿಲ್** (ನಾ). ಉಟ್ಟ ವಸ್ತ್ರದ ಮುಂಭಾಗದಲ್ಲಿ ಚೀಲದಂತೆ ಮಾಡಿದ ಭಾಗ, — ಉಡಿ ; ಮಡಿಲು : ಮಾಂಸೋತ್ಕರಮಂ ಪೊತ್ತೆಯ್ದೆ ತಮ್ಮುಳ್ಳುಡೆಯು ತೊವಲ ಮುಂಚೋಗಿರ್ನೊ[ಲೊ]ಳ್ ತೀವಿ ಕೊಂಡು. . . ನಡೆದರಾ ಕಾಡೊಳಂ ಬೇಡರಾ [ಗಳ್] (ಸುಕುಮಾ. ೦೯-೩೨). [ಮುಂ$_1$ (< ಮುನ್$_1$) + ಸೋಗಿಲ್ (< ಸೋಂಕಿಲ್)]

**ಮುಂಜೋಲಿ**, ಮುಂಜೋಲೆ (ನಾ). ೧. ಮುಂದಕ್ಕೆ ವಾಲುವಿಕೆ : ಮುಂಭಾಗಕ್ಕೆ ಓರೆಯಾಗುವಿಕೆ ; ಬಾಗುವಿಕೆ : ರಥವು ಓಡುವಾಗ ಮುಂಜೋಲಿ ಇರುತ್ತದೆ (ಮುಂಶಿಯ. ೪-೬೨) ; ಗೋವಿಂದರಾಯರಿಗೆ ಯಾರೋ ಹಿಂದಿನಿಂದ ತಮ್ಮ ಕತ್ತು ಹಿಡಿದು ದಬ್ಬಿದ ಭಾವನೆಯಾಗಿ ಮುಂಜೋಲಿಯನ್ನು ತಡೆದು ನಿಲ್ಲುವಂತೆ ಗಕ್ಕನೇ ನಿಂತರು(ಶುಂಗಬು. ೦೦೩). **ಮುಂಜೋಲೆ** : ೨. ಚಾಂಚಲ್ಯ ; ಅಸ್ಥಿರತೆ : ಈ ಮುಂಜೋಲೆ ಹಿಂಜೋಲೆಯ ದೆಸೆಯಿಂದ ನಾನು ಬರೆವುದಾದರೂ ಅಟಗೊಪ್ಪೆ ಸೋಣ ಕ್ಕೊಮ್ಮೆ (ಕಂಡಾಸಾ. ೦೨).

**ಮುಂಜೋಲಿಯನ್ನು ಹೊಡೆ** = ವಾಲು ; ಬಾಗು : ಈಗ ರಾಯರ ಮಾತಿನ ಒಲವು ವನಮಾಲಿಯ ಕಡೆಗೆ ಹೆಚ್ಚು ಮುಂಜೋಲಿಯನ್ನು ಹೊಡೆಯಿತು (ಧರ್ಮಶ. ೩೬). **ಮುಂಜೋಲಿಯಾಗು** = ಮುಂದಾಗು ; ಮುಂದುವರಿ ; ಪ್ರಗತಿಯನ್ನು ಸಾಧಿಸು : ಆ ಮಗುವೇ ಬುದ್ಧಿ-ಭಾವನೆಗಳಲ್ಲಿ ಸ್ವಲ್ಪ ಮುಂಜೋಲಿಯಾಗಿತ್ತೂ ಅಥವಾ ಗೌರಿಯ ವಾತ್ಸಲ್ಯದ ಪಾಶಶಾಲೆ ಆ ಬುದ್ಧಿ ಭಾವನೆಗಳನ್ನು ಸ್ವಲ್ಪ ಮುಂದಾಗಿ ಕುದುರಿಸಿತ್ತೂ ಯಾರು ಬಲ್ಲರು (ಕಕರಾ. II. ೬೬೬). [ಮುಂ$_1$ (< ಮುನ್$_1$)+ಜೋಲ್$_3$]

**ಮುಂಜೋಲೆ** ' ಮುಂಜೋಲಿ ' ನೋ.

**ಮುಂಡ$_1$** ' ಮುಂಡು$_1$ ' ನೋ.

**ಮುಂಡ$_2$** (ಗು). ೧. ತಲೆಯನ್ನು ಮುಂಡನ ಮಾಡಿದ. ೨. ಎಲೆಗಳನ್ನು ಕತ್ತರಿಸಿದ, ಸವರಿದ. ೩. ಕೊಂಬಿಲ್ಲದ ; ಶೃಂಗವಿಲ್ಲದ. ೪. ಮೊಂಡಾದ ; ಹರಿತವಿಲ್ಲದ ; ಮೊನಚಿಲ್ಲದ. ೫. ಕ್ಷುದ್ರವಾದ ; ಅಲ್ಪವಾದ. (ನಾ). ೬. ತಲೆಯಲ್ಲಿ ಕೂದಲಿಲ್ಲದವನು ; ಬೋಳು ತಲೆಯವನು : "ಮುಂಡಃ, ಮುಂಡಿತಃ– ೨ ತಲೇ ಮೇಲೆ ಕೂದಲು ಬೆಳೆಯದ ಬೋಳುತಲೆಯವನು" (ಸಿದ್ಧಾಂತಿ. ೦೮೨); "ಬೋಟಂ=ಮಿಟ್ಟು; ಮುಂಡಂ ; ಒಂದೌಷಧಂ" (ಕಬಿರ. ಶಂ. ೦). ೭. ಮುಂಡನ ಮಾಡಿದ ತಲೆಯವನು ; ಕ್ಷೌರ ಮಾಡಿದ ತಲೆಯವನು. ೮. ಕೊಂಬೆ, ರೆಂಬೆಗಳನ್ನು ಕತ್ತರಿಸಿದ ಮರದ ಕಾಂಡ : ಬೇರು ಮುಂಡ ಗಳು ಸಾಮಾನ್ಯವಾದ ಗಾಳಿಯ ಹೊಡೆತಕ್ಕೆ ಕದಲುವುದಿಲ್ಲ (ಜೀಶಾಖಾ. ೦೭೭). ೯. ಮೊನಚಿಲ್ಲದ ಆಯುಧ ; ಮೊಂಡಾದ ಆಯುಧ : ಮೊನೆಯಿಲ್ಲದ ಮುಂಡವ ಹಿಡಿದು ಇಱಿದಲ್ಲಿ ಘಾಯಕ್ಕೆ ಕುಱುಹುಂಟೆ(ಸಕಸ.೪. II. ೭-೦೩). ೧೦. ಹಣೆ ; ನೆತ್ತಿ. ೧೧. ಕ್ಷೌರಿಕ ; ನಾಯಿಂದ. ೧೨. ತಲೆ : ರುಂಡ : "ಮುಂಡಃ . . . ಮೂರ್ಧಾ, ಶಂ — ಈ ೮ ಮಂಡೆ" (ಶಬಾಯು. ೮೩-೩೬೪) : ಹಿಡವಿಲ್ಲದ ಶ್ರಾವ ಮುಂಡವಿಲ್ಲದ ದೇವ ಹೆಂಡ ರಿಲ್ಲದನ ಮನೆವಾರ್ತೆ ಆವಗಂ ಬಂಡು ಕಾಣಾಯ್ಸ (ಸರ್ವಜ್ಞ. ೦೬೬೩). ೧೩. ತಲೆಯಿಲ್ಲದ ದೇಹ : ಅಟ್ಟೆ : "ಕಬಂಧಃ, ರುಂಡಃ – ಈ ೨ ಮುಂಡಂ" (ಶಬಾಯು. ೦೦೯-೬) : ಪಂಚಾಶತ್ಕೋಟಿ ಭೂಮಂಡಲದ ಸೊಂದು ತಲೆಯಿಲ್ಲದ ಮುಂಡ ನಂಗಿತ್ತ ಕಂಡೆನು (ಅವಕಂ. ೬-೨೯) ; ಕೆಡೆದ ಮುಂಡದ ಬಿಟ್ಟ ತಲೆಯ ಚೆಲ್ಲಿದ ಕರುಳ . . . ವಿಶ್ವಾಮಿತ್ರನು ಅಡವಿ ಯೊಳಗೆಯ್ದಿ (ಹಕಾ. ೦೨-೩೪). ೧೪. ನ್ಯೂನಗೊಂಡ ಅವಯವವುಳ್ಳ ವನು ; ಅಂಗಹೀನನಾದವನು : ಛಂಡನೀತನು ಕಪಟವೇಷದ ತೊಂಡು ಕಾಜಿನ ಮೋಟಕ್ಕೆಗಳ ಮುಂಡನು (ಐಕತು. ೩೬-೨೨). ೧೫. ಔಷಧಿಗೆ ಬಳಸುವ ಒಂದು ಬಗೆಯ ಸುವಾಸನಾಸಸ್ಯ : "ಅಶುತಕಃ–ಮುಂಡ ರಾಜಾನ್ನ" (೬೩೦. ೩) ; "ಮುಂಡಃ–ಬೋಟ" (೬೩೦. ೦೨೬). ೧೬. ಒಂದು ಬಗೆಯ ಸಸ್ಯ : ಇಲಿಕಿವಿ ಗಿಡ : "ಮುಂಡಂ–ಇಲಿ ವಾಲ" (೬೩೦. ೦೨೬). ೧೭. ರಾಹು. ೧೮. ಒಂದು ಬಗೆಯ ಲೋಹ: ಕಬ್ಬಿಣ : "ಮುಂಡಂ–ಮುಂಡಲೋಹ" (೬೩೦. ೦೨೬). ೧೯. (ಭೂಮಿ ಯನ್ನು ಅಳೆಯುವ) ಒಂದಾಳು ಎತ್ತರದಷ್ಟು ಅಳತೆ ; ಪುರುಷ ಪ್ರಮಾಣ : ಪುಲಿಗಿಲ ಕೆಲದೊಳ್ ಪನ್ನಗನಿಲಯಂ ಪುಸಿಯಿದೊಡದು ತಂಕಣದೆಸೆಯೊಳ್ ಜಲಮುಕ್ಕುಂ ಮುನ್ನಂ ಕಾಣಲಕ್ಕುಮೊಮ್ಮುಂಡದನಿತ ಱೊಳ್ ಕಟ್ಟುವನಂ (ಲೋಕೋಪ. ೩-೨೨). ೨೦. ಒಂದು ನಾಡಿನ ಹೆಸರು: ' ಮುಂಡರಾಷ್ಟ್ರ ' ಪರಾ. ೨೧. ಒಬ್ಬ ರಾಕ್ಷಸನ ಹೆಸರು. ೨೨. (ಅಕ್ಕಸಾಲೆ, ಕಮ್ಮಾರ ಮುಂತಾದವರು) ಲೋಹದ ವಸ್ತುಗಳನ್ನು ಇಟ್ಟು ಬಡಿಯಲು ಉಪಯೋಗಿಸುವ ಕಬ್ಬಿಣದ ಗಟ್ಟಿ ; ಅಡೆಗಲ್ಲು : "ಅಕ್ಕಡೆ ಮುಂಡಮುಕ್ಕು" (ಮುಗಿರಾ. ೦೦೩-೬). ೨೩. [ಗಣಿತ] "ಶಂಕು, ಗೋಪುರಾಕೃತಿ, ಮೊ. ಸಮರೂಪದ ಘನಾಕೃತಿಯ ಮೇಲ್ಭಾಗವನ್ನು ಆಧಾರಕ್ಷೇತ್ರಕ್ಕೆ ಸಮಾನಾಂತರವಾಗಿ ಕತ್ತರಿಸಿ ಹಾಕಿ ಉಳಿದ ಭಾಗ, ಇಂತಹ ಕತ್ತರಿಕೆಯು ಎರಡು ಸಮಕ್ಷೇತ್ರಗಳ ಮಧ್ಯಭಾಗ" (Frustum. ೨೪೩೨) : ಸೂಚೀಮುಖಾಕೃತಿ ಅಥವಾ ಬರ ಮಿದ್ದಿನ (Pyramid) ಮುಂಡ (Frustum)ದ . . . ಘನಕ್ಕೆ ಈ ಸೂತ್ರವನ್ನು ಭಾಸ್ಕರನು ಕೊಟ್ಟಿದ್ದಾನೆ (ಗಣಿತ. ೨೬೭).

**ಮುಂಡ ಮೋಚಿಕೊಳ್ಳು** = (ಆಲಂ) ಹಾಳಾಗು ; ನಾಶವಾಗು ; ಅಪ್ಪ ಮಾಡಿದ ೨೦,೦೦೦ ರೂ. ಸಾಲಕ್ಕೆ ಅವನೇ ಮುಂಡ ಮೋಚಿ ಕೊಳ್ಳಲಿ (ಪ್ರಕ್ಕ. ೨೭) ; ನಮ್ಮೆಲ್ಲರನ್ನೂ ಬಿಟ್ಟು ಸೀನಪ್ಪ ಮೈಸೂರಿಗೆ ಹೋಗಿ ಮುಂಡ ಮೋಚಿಕೊಳ್ಳುವುದು ನಾನು ನೋಡದೆ ಇರುತ್ತೇನೆಯೇ (ಅಶೆಕಾ. ೪). **ಮುಂಡಮೋಚು** = ೧. ಬ್ರಾಹ್ಮಣಸ್ತ್ರೀಯು ಗಂಡನನ್ನು ಕಳೆದುಕೊಂಡುದರ ಸಂಕೇತವಾಗಿ ತಲೆಯನ್ನು ಬೋಳಿಸಿಕೊಂಡು ಸೆರಗಿನಿಂದ ಮುಸುಕನ್ನು ಹಾಕಿಕೊಳ್ಳು : (೬). ೨. = ಮುಂಡ ಮೋಚಿಕೊಳ್ಳು : ಈ ಪ್ರಕಾರದೊಳಾಸಜದ ತಾಂ ಮುಂಡ [ಮಾಡಂ. ಡ] ಮೋಚವ ಹಾಂಗೆ ಅಱಚುವರೆ (ಐಕತು. ೩೬-೦೩); ಮುಂಡಮೋಚಿದ ನಾನು ಇನ್ನಾರು ಗತಿಯೆನಗೆ ಪುಂಡರೀಕಾಕ್ಷ ನೀ ಪಾಲಿಸೈ ತಂದೆ (ತ್ರಿಶಂಕ. ೦-೨೬-೨). [ಸಂ.]

**ಮುಂಡಂಗಿ** ' ಮುಂಡಿಗೆ$_1$ ' ನೋ.

**ಮುಂಡಕ** (ನಾ). ೧. ಕೊಂಬೆಗಳನ್ನು ಕತ್ತರಿಸಿಹಾಕಿದ ಮರದ ಕಾಂಡ ; ಬೊಡ್ಡೆ. ೨. ನಾಯಿಂದ ; ಕ್ಷೌರಿಕ ; ಹಜಾಮ. ೩. ತಲೆ; ಶಿರಸ್ಸು. ೪. ತಲೆಗೂದಲನ್ನು ಬೋಳಿಸಿಕೊಂಡವನು ; ಮುಂಡನಮಾಡಿ ಕೊಂಡವನು : ಮುಂಡಕರು, ಶ್ರಮಣಕರು, ಇಭ್ಯರು . . . ಇವರೊಡನೆ ಮಾತುಕತೆಯಾಡುವಾಗ ಪೂಜ್ಯಗೌರವಸೂಚಕನೆ ಹೇಗೋ ಹಾಗೆ

(ಶಬ್ದಕ. ೯೦). ೫. ಅಥರ್ವವೇದದ ಒಂದು ಉಪನಿಷತ್ತು: ಶ್ರೀರುದ್ರ ಬೃಹದಾರಣ್ಯಕ . . . ಮುದ್ಗಲ ಮುಂಡಕವೆಂಬಿವು ಮೊದಲಾದವೇ ಉಪನಿಷತ್ತುಗಳು (ಏಕೇಶ. ೩). 'ಮುಂಡಕೋಪನಿಷತ್ತು' ಪರಾ. [ಸಂ.]

**ಮುಂಡಕಲ್** (ನಾ) ಒಂದು ಊರಿನ ಹೆಸರು: ಕಾರ್ತಿಕಪೌರ್ಣಮಾಸ್ಯಾಂ ಪೈತಾಮಹೀ ಹಿರಣ್ಯಗರ್ಭಮಹೋತ್ಸವಸಮಯೇ ಮುಣ್ಡಕಲ್ಲು ಗ್ರಾಮಸ್ಯ ಪಳ್ಳಿಗಳಿಗ್ರಾಮಸ್ಯಚ . . . ರಾಜಮಾನೇನದತ್ತಾ (ಇಅ. XI, ೬೭-೦೬; ೭ನೆಯ ಶಕ). 'ಮುಂಡಿಕಲ್' ಪರಾ. [ಮುಂಡ$_1$ + ಕಲ್$_3$]

**ಮುಂಡಕಾಟಿ** (ನಾ). ಮೋಟುಕೈಗಳುಳ್ಳವನು: ಮೋಟಕೈಗಳ ವಂಡಗೊಡುತಂ . . . ಮುಂಡಕಾ[ಪಾಠಾಂ. ಮುಂಡುಗಾ]ಟಿಜನು ಮಸರಿ ದೇವನ ಬಳಿವಿಡಿದು ಸಾರ್ದು (ಬಸಪು. ೩೯-೦೮). [ಮುಂಡ$_2$ + — ಕಾಟಿ]

**ಮುಂಡಕೋಪನಿಷತ್ತು** (ನಾ). ಅಥರ್ವವೇದದಲ್ಲಿ ಪ್ರಸಿದ್ಧವಾದ ಒಂದು ಉಪನಿಷತ್ತು; P ಈ ಉಪನಿಷತ್ತಿನ ಪವಿತ್ರತತ್ತ್ವಗಳನ್ನು ಯಾರು ಗ್ರಹಿಸುವರೋ ಅವರ ದೋಷಗಳೆಲ್ಲವೂ ಛೇದಿಸಲ್ಪಟ್ಟು ಬಿಡುಗಡೆ ಹೊಂದುವರೆಂಬ ನಂಬಿಕೆಯಿದೆ: ಮುಂಡಕೋಪನಿಷತ್ತು ಅಥರ್ವವೇದದ ಶೌನಕಶಾಖೆಗೆ ಸೇರಿದೆ (ಭಾರತ. ೩೬).

[ < ಸಂ. ಮುಂಡಕೋಪನಿಷದ್ ]

**ಮುಂಡಗಂಭ** (ನಾ). ಮರದ ಕಾಂಡದಿಂದ ತಯಾರಿಸಿದ ಕಂಬ: ಮಕರತೋರಣದ ಬಹಿರ್ಭಾಗದುಭಯಪಾರ್ಶ್ವದೊಳಮೋಳಿವಿಡಿಯೆ ಸುರ ಕರೀಂದ್ರಮನೆ ಕಟ್ಟಲ್ ನಟ್ಟ ಪಾರಿಜಾತದ ಮುಂಡಗಂಭಂಗಳಂ ಪೋಲ್ತೊಪ್ಪಿ ಸಾಹಣಾಫಮೊಳ್ ನಿಚ್ಚಮೋಲಗಿಸುವ ಪಂಚಕಲ್ಯಾಣಂಗಳುಮಂ ಕಟ್ಟುವಾನೆಗಂಭಂಗಳುಮಂ . . . ನೋಡಿ (ಶಾಂತಿಪು. ೩-೦೯ ವ).

[ ಮುಂಡ$_2$ + ಕಂಭ ]

**ಮುಂಡಗಳ್ಳಿ**, ಮಂಡಗಳ್ಳಿ, ಮುಂಡುಗಳ್ಳಿ, ಮೊಂಡಗಳ್ಳಿ, ಮೊಂಡುಗಳ್ಳಿ (ನಾ). ಎಲೆಗಳಿಲ್ಲದ, ದಟ್ಟವಾದ ಮುಳ್ಳುಗಳುಳ್ಳ ಒಂದು ಬಗೆಯ ಕಳ್ಳಿಗಿಡ: "ಮಹಾವೃಕ್ಷಃ, ಸ್ನುಹೀ — ಈ ೨ ಮುಂಡಗಳ್ಳಿ" (ಪದಾರ್ಥ. ೩೩-೯೯). **ಮಂಡಗಳ್ಳಿ**: ಯವಕ್ಷಾರ, ಚಿತ್ರಮೂಲಂಗಳಂ ಮಂಡಗಳ್ಳಿಹಾಲಿಂದರೆದು ಎಣ್ಣೆಯಲ್ಲಿ ಕಾಯಿಸಿ ಮೊಳೆಗೆ ಲೇಪವಂ ಮಾಡೆ ಕರಗಿ ಹೋಗುವುದು (ಸಳಪ್ಪ. ೨೯೩); ದೊಡ್ಡಬರದಲ್ಲಿ ಮೂರುವರ್ಷ ಮಳೆಯಿಲ್ಲ . . . ಉಳುವುದಕ್ಕೆ ಎತ್ತಿಲ್ಲದೆ ಮುಂಡಗಳ್ಳಿ ಎಳೆದು ಬಿತ್ತನೆ ಮಾಡಿದರಂತೆ (ಜನಪ್ರ್ಯ. ೧೯೨). **ಮುಂಡುಗಳ್ಳಿ**: "ಮುಂಡುಗಳ್ಳಿ ಸ್ನುಹಿಯೆನಿಕ್ಕು" (ಮಂಗರಾ. ೭೦-೩೯); ಎಕ್ಕೆಯ ಹಾಲು, ಮುಂಡು ಗಳ್ಳಿಯ ಕೊನರು, ಕಹಿಸೋರೆಯ ಎಲೆ, ಹೊಂಗೆಯ ನಾರು ಇಪ್ಪನು ಆಡಿನ ಮೂತ್ರದಿಂದ ಅರೆದು ಲೇಪವಂ ಮಾಡಿಸಲು ಮೂಲವ್ಯಾಧಿಯ ಮೊಳೆ ಕರಗಿಹೋಗುವುದು (ವೈದ್ಯಸಾ. I. ೧೯೩). **ಮೊಂಡಗಳ್ಳಿ**: ಮೊಂಡಗಳ್ಳಿಮೊಗರು, ಕಹಿಸೋರೆಯೆಲೆ, ಹೊಂಗೆನಾರು, ಕಳ್ಳಿಹಾಲು ಸಹ ಆಡಿನ ಮೂತ್ರದಿಂದರೆದು ಲೇಪವಂ ಮಾಡೆ ಮೊಳೆ ಕರಗಿಹೋಗುವುದು (ಸಳಪ್ಪ. ೨೯೩). **ಮೊಂಡುಗಳ್ಳಿ**: ಬೇವಿನ ಕೊರಡು ಗರಿಕೆ ಮೊಂಡುಗಳ್ಳಿ (ತಾಗಂ೨. ೩೯-೩).

[ < ಮುಂಡ$_0$ ( P ← ತಮಿ. ಮುಣ್ಣುಕಮ್ = ಮುಳ್ಳು, ಮುಳ್ಳಿನ ಪೊದೆ ) + ಕಳ್ಳಿ$_2$ ]

**ಮುಂಡಜೀವಿತ** (ನಾ). (ಒಡೆಯನಿಗಾಗಿ) ತನ್ನ ತಲೆಯನ್ನು ಮುಡಿಪಾಗಿಟ್ಟಿರುವ ಬದುಕು (?): ಬಿಟ್ಟಿದೇವ ಹೊಯ್ಸಳಸಾಹಣಿ ಬಾಸಯನ ಕಲಿದೊರೆಯ . . . ಮೇಲಾಳಿಪ್ಪರ ಕೊಂದು ಕಾಲಾಳಿಪ್ಪರನಿಱಿದು ಜೋಳವಾಳಿಯ ನೆಱಿದ ಬಾಸಿ . . . ತಂನ ಜೀವಿತವಂ ಮುಗಿಣ್ಣಜೀವಿತವಾಗಿ ನಿಲಿಸಿದ (ವೈಕಂ. ೧೯೩೯-೦೨-೯; 1117). [ಸಂ.]

**ಮುಂಡನ** (ನಾ). ೧. ತಲೆಯನ್ನು ಬೋಳಿಸುವಿಕೆ; ಕ್ಷೌರ; ವಪನ: "ಕ್ಷೌರಂ ವಪನಂ ಮುಂಡನಮುದಱಿಗೆ ಭದ್ರಾಕರಣಂ" (ವಸ್ತುಕೋ. ೦೮೯-೨೦); ಮುಂಡನ ಜಟ ಕೇಶದುರುಭಕ್ತಿಸುಜ್ಞಾನವಿರಕ್ತಿ ತಂದು ಕಂಡರು ಭೈರವಾಂಕನನ್ನತಿಯು (ಭೈರವೇ. ೯-೨೦). ೨. ತೀರ್ಥಯಾತ್ರೆ, ಸಂನ್ಯಾಸಸ್ವೀಕಾರ ಮುಂತಾದ ಪವಿತ್ರಸಂದರ್ಭಗಳಲ್ಲಿ ತಲೆಗೂದಲನ್ನು ತೆಗೆಸುವ ಒಂದು ವಿಧಿ: ಚಕ್ರಧರನ ಮುಂಡನವಾಯಿತು. ಸಂನ್ಯಾಸವನ್ನು ಸ್ವೀಕರಿಸಿದನು (ಕರ್ಣಾಸಂ. ೬೭). ೩. ಗಂಡನನ್ನು ಕಳೆದುಕೊಂಡ ಸಂಪ್ರದಾಯಸ್ಥಬ್ರಾಹ್ಮಣಸ್ತ್ರೀಯ ತಲೆಯನ್ನು ಬೋಳಿಸುವಿಕೆ, — ಮಡಿಮಾಡುವಿಕೆ: ಮಗಳ ಮುಂಡನಕಾರ್ಯವು ಅವರಿಗೆ ಅವಳ ವೈಧವ್ಯಕ್ಕಿಂತಲೂ ಕ್ರೂರವಾಗಿ ಕಂಡುಬಂದಿತ್ತು (ಪೇಮುಂತ. ೦೯೦).

**ಮುಂಡನ ಮಾಡಿಸು** = ೧. ಸಂನ್ಯಾಸ ಸ್ವೀಕಾರ, ಉಪನಯನ ಮುಂತಾದ ವಿಧಿಗಳಿಗಾಗಿ ತಲೆಗೂದಲನ್ನು ತೆಗೆಸು: ತಲೆಯನ್ನು ಮುಂಡನ ಮಾಡಿಸಿ . . . ಮೂರುಜನ ವಟುಗಳನ್ನೂ ಮೂರನೆಯ ಅಂತಸ್ತಿನ ಕೊಠಡಿಯಲ್ಲಿ ಮೂರು ದಿನಗಳವರೆಗೆ ಕೂಡಿಹಾಕಿದರು (ಒಂ೦ರ. II, ೩೬); ಆ ಮಹಾಯೋಗಿಯು ತಲೆಯನ್ನು ಮುಂಡನ ಮಾಡಿಸಿಕೊಂಡು . . . ವಿಭೂತಿಯನ್ನು ಧರಿಸಿ ಬರೀ ಮೈಯಲ್ಲಿದ್ದನು (ಸೀತಿಸಂ. VI, ೨೦). ೨. ವೈಧವ್ಯಸೂಚಕವಾಗಿ ಹೆಂಗಸು ತಲೆಯನ್ನು ಬೋಳಿಸಿಕೊಳ್ಳು; ಮಡಿಯಾಗು: ಇವರಲ್ಲಿ ವಿಧವೆಯರು ಇತರ ಬ್ರಾಹ್ಮಣವಿಧವೆಯರಂತೆ ಮುಂಡನ ಮಾಡಿಸುವುದಿಲ್ಲ (ಕಥಾಗ. ೬೨). [ಸಂ.]

**ಮುಂಡಪಾಷಾಣ** (ನಾ). ಕಬ್ಬಿಣ: ಉಕ್ಕು: "ಮುಂಡಾಯಸಂ—ಮುಂಡಪಾಷಾಣ" (೬ಕಂ. ೦೨೬). [ಸಂ.]

**ಮುಂಡಮೋಟಿ**[1] (ನಾ). (?): ಅನಂದಿನಾ ಭವದಲ್ಲಿ ಹಸಿದಾನವಂ ಮಾಡಲೊಲ್ಲದೇ ಇವಳೆನ್ನ ಬದುಕ ಜಿಡಳೆಂದೆಂಬ ಮುಂಡಮೋಟಿಯವಿವೇಕತನವಲ್ಲವೇ (ಸಮ್ಯಕ್ತ್ವ. ೩-೨೦). [ ? + ಮೋಟಿ$_2$ ]

**ಮುಂಡಮೋಪಿ** (ನಾ). ಗಂಡನನ್ನು ಕಳೆದುಕೊಂಡು ತಲೆಗೂದಲನ್ನು ತೆಗೆಸಿರುವವಳು; ಮಡಿಹೆಂಗಸು: ವಿಧವೆಯರನ್ನು ಕುರಿತು ಹೇಳುವಾಗ ಕೆಲವರು ಅಗೌರವದಿಂದ ಮುಂಡಮೋಪಿ ಎಂದು ಹೇಳುವುದುಂಟು (ರೂಢಿ).

[ದೇ. ॥ ತಮಿ. ಮುಣ್ಡೈಮೋಪ್ಪಿ ; ತೆಲು. ಮುಂಡಮೋಪಿ]

**ಮುಂಡರಾಷ್ಟ್ರ** (ನಾ). ಒಂದು ನಾಡಿನ ಹೆಸರು: ಧರ್ಮ್ಮಯುವ ಮಹಾರಾಜ (ಜಸ್ಯ) ಶ್ರೀವಿಷ್ಣುಗೋಪವರ್ಮ್ಮಣೋ ವಚನೇನ ಮುಣ್ಡರಾಷ್ಟ್ರೇ ಉರುವುಪಲ್ಲಿಯೋ ಗ್ರಾಮೋ ಯಕಾ(ಕಾ) ವಕ್ತವ್ಯಾಃ (ಇಅ. V, ೫೦-೦೬; ೫ನೆಯ ಶಕ). [ಸಂ.]

**ಮುಂಡಲೋಹ** (ನಾ). ಕಬ್ಬಿಣ; ಉಕ್ಕು: "ಕೃಷ್ಣಲೋಹಂ — ಕಬ್ಬುನ, ಅಯಸ್ಕಾಂತ, ಮುಂಡಲೋಹ" (೬ಕಂ. ೩೮). [ಸಂ.]

**ಮುಂಡಾ** (ನಾ). ದ್ರಾವಿಡವರ್ಗಕ್ಕೆ ಸೇರಿದ ಭಾರತದ ಮೂಲನಿವಾಸಿಗಳಲ್ಲಿಯ ಒಂದು ಜನಾಂಗ ಮತ್ತು ಅವರ ಭಾಷೆ: ಆರ್ಯರು ಇಲ್ಲಿಗೆ ಬರುವ ಮುನ್ನ ಇದ್ದ ಜನಾಂಗ ಮುಂಡಾಭಾಷೆಯನ್ನು ಆಡುತ್ತಿದ್ದಿರಬಹುದು (ದ್ರಾಜಿ. ೨೬).

**ಮುಂಡಾಟ** (ನಾ). ಮುದ್ದಾಡುವಿಕೆ; ಪ್ರೀತಿಸುವಿಕೆ; ಲಲ್ಲೆಗರೆಯುವಿಕೆ: ಮುತ್ತಿನ ಬೊಟ್ಟಿನ ನೊಸಲೊಳು ನವರಸ ಮುಂಡಾಟದ ಕಲೆಯೋ ಅದಱೊತ್ತಿನ ನಾಮಾಂಕಿತವೋ (ಶಿವಾನೀ. ೦೬೯-೮೦೯); ನೋಟವೆಲ್ಲಂ ಶಂಭುವನೆ ನೋಡುವಿರವು ಮುಂಡಾಟವೆಲ್ಲಾ ಶಂಕರನ ಭಜನೆ (ತಾಂಡಪು. ೯-೦೬). 'ಮುದ್ದಾಟ' ಪರಾ. [ < ಮುಂಡಾಡು ]

**ಮುಂಡಾಡು** (ಕ್ರಿ). ೧. ಮುದ್ದಾಡು; ಪ್ರೀತಿಸು; ಲಾಲಿಸು; ಮುದ್ದುಗರೆ: ಕುಂತಿಯೊಡನೆ ಮದ್ರರಾಜನ ಮಗಳ್ ಶಲ್ಯನೊಡವುಟ್ಟಿದ ಮಾದ್ರಿಯುಮನೊಂದೆ ಪಸೆಯೊಳಿರಿಸಿ ಗಾಂಗೇಯಂ ವಿಧಾತ್ರಂ ಮುಂಡಾಡುವಂತೆ ತಾಂ ಮದುವೆಯಂ ಮಾಡಿ (ಪಂಪಭಾ. ೦-೦೦೬ ವ); ಕೊಂಡಾಡುಗೆ

ಕಲ್ಪೋದುಗೆ ಮುಂಡಾಡುಗೆ ಮುದ್ದಿಸುಗೆ ಮರಲ್ದಪ್ಪುಗೆ ಕೈಕೊಂಡೀ ಕಾವ್ಯಮನಗಜೆಯು ಗಂಡನಲಂಪಿಂದೆ ಹಂಪೆಯು ವಿರೂಪಾಕ್ಷಂ (ಗಿಂಕ. ೧-೧೧); ಕುಲವುಂ ವರ್ಧಿಪ ಕಂದನಂ ಪಡೆದು . . . ಮುಂಡಾಡಿಯುಂ ಮುದ್ದಿಸಿಯುಂ . . . ಮನದ ಬೇಸಱಂ ಕಳೆವೊಂದು ಸೈಪೆನ್ನೊಳೆಂದಿಂಗಾದಪುದೋ (ರಾಜಶೇ. ೦೪-೦೯). ೨. ಚುಂಬಿಸು ; ಮುತ್ತಿಡು : ಮದನಂ ತನ್ನಧಿದೈವದಾಕೃತಿಯನೊಲ್ದಾರಾಧಿಸಲ್ಕೆಂದು ಚಿತ್ರದ ರೂಪಂ ಬರೆದಂತೆ ಮತ್ತೆ ರತಿ ತತ್ಸೌಂದರ್ಯಮಂ ಕಂಡು ಮೋಹದಗುರ್ಬಿಂದಸುವೊಯ್ದುಳಾದೊಡದಱೀವಾಂ ರೂಪುಗೆಟ್ಟಪ್ಪೆನೆಂದಿದನುರ್ವೀತಳದೊಳ್ ಪ್ರತಿಷ್ಠಿಸಿದನೆಂದಾ ಕಾಂತೆ ಮುಂಡಾಡಿದಳ್ (ಪಶಶಾ. ೦೦-೩೯); ಕಾಮಿನಿಯ ಕಡುನೊಂದೆಲಾ ಮುಖಿತಾಮರಸವನು ತೋಱು ತೋಱೆನುತಾ ಮುನೀಶ್ವರನಪ್ಪಿ ಮುಂಡಾಡಿದನು ನಿಜಸತಿಯ (ಶುಪ್ರಾ೩. ೯-೦೩); ನೀಱಿನ ಮೊಗದೊಳು ಮೊಗವಿಟ್ಟು ಮುಂಡಾಡಿ ಮಿಱುಗಿದ ಚಂದುಟಿರಸವ ಹೀರಿ ಒಪ್ಪೆಯ ಮಾಡಿದಲ್ಲದೆನ್ನದು ಜಿಹ್ವೆ ಮೇರೆಗೆ ನಿಲದಲೆ ಕೆಡಿ (ಕೆಂಸಬಿ. ೯-೦೦೯). ೩. (ಪ್ರೀತಿಯಿಂದ) ನೇವರಿಸು ; ಮುಟ್ಟು ; ಸೋಕು : ತುಂಗಸ್ತನಂ ಮುಂಜರಿಯೊಳ್ ಮುಂಡಾಡೆ ಕಣ್ಗಳ್ಪರಸೆ ಕುಸುಮದೊಳ್ . . . ಪೂಗೊಯ್ದುಳೊರ್ವಳ್ (ಲೀಲಾಕ. ೦೪-೬೦); ಮುಗಿಲಂ ಮುಂಡಾಡುವಂತಿರುದ್ದಮಾದ ಪಲತೆಱದ ಕುಱುಂಪಿನ ವಿಳಿರ್ವ ಪಟಿಯುಗೆಗಳ ಗಾಳಿಗಾಳಿವಟ್ಟೆಯೊಳ್ ನಡೆವ ಪಗಲೊಡೆಯನ ಕುದುರೆಯ ಸೇದೆಯಂ ಪಿಂಗಿಸೆಯುಂ (ಕಬ್ಬಿಗ. ೨೪೬); ಪ್ರಳಯದಲಿ ಸಾಗರದ ತೆರೆ ಮುಂಡಾಡದವು ಸಾಗರದ ತೆರೆಯಲಿ ಸಕಲ ಜಲಧಿಗಳೇಕ ರೂಪದಲಿ ಧರೆಯ ಮುಳುಗಿಸಿ ಮೇಲೆವೇಲುಬ್ಬರಿಸಿ . . . ನೀರೇಱಿತಗ್ಗದ ಸತ್ಯಲೋಕದಲಿ (ಶುಪ್ರಾ೩. ೦೯-೧೯). 'ಮುದ್ದಾಡು' ಪರಾ.

[<ಮುದ್ದು + ಆಡು₁]

**ಮುಂಡಾಸ** 'ಮುಂಡಾಸು' ನೋ.

**ಮುಂಡಾಸನ** (ನಾ). ೧. ತಲೆಕೆಳಗಾಗಿರುವಿಕೆ ; ತಲೆ ಕೆಳಗಾಗಿರುವ ಸ್ಥಿತಿ : ಇಳುಪಿದನು ಬಲುಗುಳವ ಖಂಡಿಸಿ ಕಳಚಿದನು ಮೊಗರಂಬವನು . . . ಛತ್ರ ಚಮರಾವಳಿಯ ಸೀಳಿದು ಬಿಸುಟನಾ ಗಜತಿಲಕ ಮುಂಡಾಸನದ ಲಿರ್ದುದು (ಶುಪ್ರಾ.ದ್ರೋ. ೩-೩೨). ೨. [ನಾಟ್ಯ] ಒಂದು ಬಗೆಯ ಭಂಗಿ : ಮತ್ತಂ ದಿಂಡು ಮುಂಡಾಸನಂ ವಪ್ಪಸರಣ . . . ಲಂಕಾದಹನ ಮೆಂಬ ಪಲವುಂ ತೆಱದ ಕರಣಂಗಳಂ ವಿಚಿತ್ರಮಪ್ಪ ಚಿತ್ರವಿದ್ಯೆಯುಂ ಲಾಸ್ಯ ತಾಂಡವಮೆಂಬೆರಡುಂತೆಱದ ನೃತ್ಯಭೇದದಿಂದಾಡಿ (ರಮಾಕ. ೨-೨೬ ವ). ೩. [ಯೋಗ] ಕುಳಿತುಕೊಳ್ಳುವ ಒಂದು ನಿರ್ದಿಷ್ಟಭಂಗಿ. [ಸಂ.]

**ಮುಂಡಾಸು. ಮುಂಡಾಸ** (ನಾ). ತಲೆಯುಡುಗೆ ; ರುಮಾಲು ; ಪೇಟ: ಹರಿಕರುಣವೆ ಅಂಗಿ ಗುರುಕರುಣ ಮುಂಡಾಸು ಹರಿದಾಸರ ದಯವೆಬೊ ವಲ್ಲಿ (ಪುರಂದ. ೨-೦೩-೦); ಪಟ್ಟೆಯ ಹಚ್ಚಡ ಧೋತ್ರ ಮುಂಡಾಸನು ಕೊಟ್ಟು (ಗೋಪುರಿ. ೦೭-೦೩); ತಲೆಗೆ ಚೌಕುಳಿಬಟ್ಟೆಯ ಮುಂಡಾಸು ಸುತ್ತಿದ್ದವ ಗ್ರಾಮದ ಹಿರಿಯ ಗೌಡನಿರಬೇಕು (ಸಂಪ್ಯಾ.ಕ. ೯೭). **ಮುಂಡಾಸ:** ಶಿವ . . . ಮಾಸಿದಂಗದಿ ಮಲಿನದಂಗಿ ಮುಂಡಾಸದಿಂದಾ ಸುಮಂದಿರದ ಪೊಱಬಾಗಿಲೊಳು ನಿಂದು (ಶ್ರೀಶರಾ. ೬-೩೨); ಹರಿಗೆಗಳನು ಖಂಡಿಸಿ ಬೆನ್ನೊಳಗಿಹ ತರಕಸಗಳ ಹುಡಿಮಾಡಿ ಸಿರದ ಮುಂಡಾಸವ ಸೀಳ್ದಿಕ್ಕಿ ದಗಲೆಯ ಪರಿಪಾಟ ಮಾಡಿದರಾಗ (ಕೆಂಪಟಿ ೦೩-೯೬); ಸೀರೆ, ಜರತಾರಿ, ಕಿವಿಯೋಲೆ ಕಾಲ್ಬೆರಳಿನ ತನಕವೂ ಚಿನ್ನಾಭರಣ, ಮುಂಡಾಸ, ಬಾಸಿಗ, ಅಕ್ಷತೆ ಇವೆಲ್ಲವೂ ಮಂಟಪದಲ್ಲಿ ಹಬ್ಬುವ ಹೊಗೆಯಿಂದಾಗಿ ಒಂದು ಹುಸಿಸದು ಕೊರಡಿಗೂ ಚಂದವನ್ನು ಪ್ರೇರಿಸುತ್ತಿರಬೇಕು (ಮುಕಜ್ಜ. ೧೧೦). [←ಹಿಂ. ಮುಂಡಾಸಾ; ಮರಾ. ಮುಂಡಾಸೇ, ಮುಂಡಾಸೇ./ತುಳು. ಮುಂಡಾಸ್]

**ಮುಂಡಿ₁** (ನಾ). ೧. ಬೋಳಿಸಿದುದು : ಬೋಳಾದುದು. ೨. ರೆಂಬೆಗಳನ್ನು ಸವರಿದ ಮರ; ಬೋಳುಮರ. ೩. ಕೊಂಬಿಲ್ಲದುದು ; ಶೃಂಗವಿಲ್ಲದುದು : ಈ ಸುರಕಾಂತೆಯಂ ಮಹಾವೇಗದೆ ಕೊಂಡುಪೋಗಿ ಬಳಿಕಂ ಪರಮುಂಡಿ [ಪಾಠಾಂ. ಮುಂಡೆ]ಯ ಗೋವು ಕೊಂದು ಸಂಕ್ಷ್ಯಾಗಿಸಿ ಬಿಟ್ಟು ಕೋಮಟಿಗನಂ ಸಲೆ ತರ್ಪುದು ತಳ್ವದಾದೊಡಂ (ಹಾದಾಸ್ಯ. ೨-೯-೫೦). ೪. ಕ್ಷೌರಿಕ ; ನಾಯಿಂದ ; ಹಜಾಮ : "ಕ್ಷುರಿ ಮುಂಡಿ ನಾಪಿತಂ" (ವಸ್ತುಕೋ. ೬೬-೪೯). ೫. ಒಂದು ಬಗೆಯ ಸಸ್ಯ; ಬೋಳ: "ಬೋಟಚರ ಮುಂಡಿ" (ಮುರ. ಪ. ಶು. ೦); ತಾನಿದೊ ಮುಂಡಿಯು ಮೇಲಕದ್ದಿಹುದು ಮಾನಿತ ಮೂಲಂಗಿ ಮಾಸದಂತಿಹುದು (ಕಲಂತು. ೨೪). ೬. ತಲೆಯನ್ನು ಬೋಳಿಸಿಕೊಂಡವನು ; ಸಂನ್ಯಾಸಿ ; ಯತಿ : ಯಶೋಧರಕುಮಾರಂ ಖುಷಿಪುತ್ರನಪ್ಪ ವಜ್ರಾಂಬಾತನ ಪ್ಪೆಮುಸರ್ ಮೇಳದಿಂ ಮುಂಡಿಯ ವಂಶಜನೆಯೆಂದು ಕುಮಾರನೊಡನೆ ನಗುವುದಱಿಂದದುವೆ ಪ್ರಸಿದ್ಧಮಾಗಿ ಮುಂಡಿಯ ವಂಶಮಾದುದು ರಶಚಾಪ್ಯ. ೦೦-೦೪೯). ೭. ತುದಿಗಳಲ್ಲಿ ಲೋಹದ ಅಣಸುಗಳಿಲ್ಲದ ಒನಕೆ : (೯). [ಸಂ. ಮುಂಡಿನ್]

**ಮುಂಡಿ₂** 'ಮುಂಡಿಗೆ₂' ನೋ.

**ಮುಂಡಿ₃** (ನಾ). ೧. ಜಮೀನಿನ ಒಂದು ಭಾಗ : ಮಡಿ (?): ಹೊಲದ ಇನ್ನೊಂದು ಮುಂಡಿಯಲ್ಲಿದ್ದ ಬೇಸಾಯ ಇವನ ಕಣ್ಣಿಗೆ ಬಿತ್ತು . . . ತಿರುಗಿ ಇವನಿರುವ ಮುಂಡಿಗೆ ಬರುವವರೆಗೂ ಇವನು ಏನು ಮಾಡಬೇಕು ? (ಸುಕಸಂ. ೯೭). ೨. (?): ತನ್ನ ಕೀರ್ತಿಯಂ ನಿಱಿಸಿದಳ್ ಭಾರಂಗಿಯೂರ್ಗ್ಗೆ ಮುಂಡ್ಡಿ ಜೀವ್ಯಾರ ಪೊಳಂ ತನ್ನೂರ ನನ್ದಗೆಱೆಯ × × × ಗೆಗೊಟ್ಟಂ (ಎಕ. VII (೮), ಶಿಕಾ೦. ೩೬೬-೨೨; ೫೦೭). [ ? ]

**ಮುಂಡಿಗೆ₁** (ನಾ). ಕಟ್ಟು ; ಕಂತೆ ; ಪಿಂಡಿ : ಕಟ್ಟುವರ್ಸರ್ವಱಿಕೆಯ ನೀವಿಯೊಳಗೆ ಕೈಗಟ್ಟುವರ್ಕಂಕಣಗಳನು ಕಟ್ಟುವರ್ಧಮ್ಮಿಲ್ಲವೆಲೆಯ ಮುಂಡಿಗೆಯನು ಕಟ್ಟು ಕಾಟ್ಟೆಂಬುದಲ್ಲಿ (ಕೋಶಚ. ೨-೨೩).

**ಮುಂಡಿಗೆ₂** (ನಾ). ೧. ರೆಂಬೆಗಳಿಲ್ಲದ ಮರದ ಬುಡ ; ಕಾಂಡ : ಬಲದ ಪದಘಟ್ಟಣೆಗೆ ಹೆಮ್ಮರನುಳಿದು ಬಿದ್ದುವು . . . ಮುಂಡಿಗೆ ಮುಮುಡಿ ನೆಲಕೊಱಗಿದವು ಮಿಱುಗುವ ನಾಗವಲ್ಲಿಗಳು (ಶುಪ್ರಾ೩. ೦೮-೩೬); ಎಲೆವಳ್ಳಿ ಮುಂಡಿಗೆಗಳನಡರಿದುವು (ಸೋಶಚ. ೨೯-೩೩). ೨. ಮರದ ದೊಡ್ಡ ತುಂಡು,— ದಿಮ್ಮಿ ; ತೊಲೆ : "ಮುಂಡಿಗೆ—ಮುಂಡಕ—ಕಂಬ, ತೊಲೆ" (ಕನ್ನಕೋ. ೩೬): ಹಾರೆ ಮುಂಡಿಗೆಗಳುಡಿದು ಮದಗಜಂ ಕಡಿದವಲ್ಲದೆ ಕದಂದೆಗೆಯದು (ಸೋಶಮುಕ. ೯-೬೨); ಆನೆ . . . ದೊಡ್ಡದೊಡ್ಡ ಮುಂಡಿಗೆಗಳನ್ನು ಒಮ್ಮೆಲೆ ಎತ್ತಿ ಇಡುತ್ತದೆ ! (ಕಕತ್ತು. ೯-೬೪). ೩. ಮರದ ಕಂಬ,—ಸ್ತಂಭ : ನಂಜನ ಭೂಮಿಯ ಮೇಲೆ . . . ಮಂಜುಳದ ಮೂಱಂಗದ ಮುಂಡಿಗೆಯ ನಟ್ಟು . . . ಏಱಿಸಿದ ಗಳು ಚಿತ್ರಶುದ್ಧಮೆಂಬ ಮೂಗುತಿ ಕೋಲಿನಲ್ಲಿ ನಿಂದಿತ್ತು (ಸಳವ. I. ೦೩೬-೩೩೦); ಹೆಬ್ಬಾಗಿಲ ಒಂದೊಂದು ಮುಂಡಿಗೆಯೋ ಐತಾಳರ ಜಬರದಸ್ತನ್ನು ಸಾರುವಂತಿತ್ತು (ದೇಪಹಿಂ. ೩೩); ಅವರ ಮನೆಯ ಜಗಲಿಯ ದೊಡ್ಡ ದೊಡ್ಡ ಮುಂಡಿಗೆಗಳೇ ಚಿತ್ರಕರ್ಮದಲ್ಲಿ ಆ ಕಲ್ಲುಕಂಭಗಳಿಗಿಂತಲೂ ಮೇಲುಮಟ್ಟದ್ದಾಗಿದ್ದುವು (ಮುಕಪ. ೫೦೬). ೪. (ಕುದುರೆಗಳನ್ನು ಕಟ್ಟುವ) ಮರದ ಗೂಟ : "ಗೂಂಟಂ ಶಂಕುವಾರಯ್ಕೆ ಮುಂಡಿಗೆ ಸ್ಥಾಣುವೆಂದನಿಸಿಕ್ಕು" (ಮುಂಗರಾ. ೫೯-೦೩); ಖುರಮಣಿಕಥೊಳ್ ಕಾಲನಿಕ್ಕಿ ಮುಂದುಳದ ಮುಂಡಿಗೆಯಂ ಮಲಂಗಿ ಕೌತುಕಂಬೆರಸು ಕೇಯೂರಕನನೀತೆಂಪಂ (ಕಾದಂಬ. ೦೯೬); ಕೃತಾನು ಸುತ್ತಿ ಸುಡೆ ಮುಂಪಿರಮಂ . . . ಮುಂಡಿಗೆಯಂ ಮುಱಿದಾಗಳೇಂ ಬಿಸಿಲ್ಗುದುರೆಗಳೆಂದದಿಂ ಕುದುರೆಗಳ್ ಪಲವುಂ ದೆಸೆಬಿದ್ದು ಮಾಡುವೋ (ಕಂಠಮತು. ೦೦-೦೩೯); ಬಿಲ್ಲೆಚ್ಚಿನ ಮುಂಡಿಗೆಯಂ ಪ್ಪುಱಿದು ಪಿಸಟಂಬರಿದ ಸೂಕರಶೃಂಗಳನಂಕಣಿಯಂ ಬಗೆಯದೆ ಮುಂಕೊಂಡು ಶಂಕಿಸದೇಱೆ (ರಾಜಶೇ. ೬-೦೦ ವ). [ < ಸಂ. ಮುಂಡಕ ]

**ಮುಂಡಿಗೆ$_{3}$**, ಮುಂಡ್ಗಿ$_{2}$, ಮುಂಡು$_{3}$, ಮುಡಿಗೆ (ನಾ). ೧. ಸವಾಲು; ಸಮಸ್ಯೆ: ಉತ್ತರಗುಡುವವರಿಗೆ ಇಕ್ಕುವೆ ಮುಂಡಿಗೆಯ ಎತ್ತುವರುಳ್ಳರೆ ತೋಚುರ್ಯೆ (ದೇದಾಶ. ೬-೩); ಜಗಕ್ಕೆ ಇಕ್ಕಿದೆ ಮುಂಡಿಗೆಯನೆತ್ತಿಕೊಳ್ಳಿ, ಕೂಡಲ ಸಂಗಯ್ಯನೊಬ್ಬನೇ ದೈವವೆಂದು (ಬಸವ. ೭೯೭); ಇಕ್ಕಿದೆನು ಮುಂಡಿಗೆಯ ದಿಕ್ಕು ದಿಕ್ಕಿನೊಳಗೆ ಅಖಂಡೇಶ್ವರನೆಂಬ ಮುಕ್ಕಣ್ಣ ಪರಶಿವನೇ ಘನಘನವೆಂದು (ಅಖಂಡೇ. ೦೨೯-೬೯). ೨. "ವಿಶೇಷಾತ್ಮಾನುಭವವನ್ನು ವಿಶಿಷ್ಟವಾದ ಒಗಟಿನ ರೀತಿಯಲ್ಲಿ ಹೇಳುವದು" (ಸಾಹಿಶಿ. iii. ೭೫೩): ಶರೀಫರ ಕಾವ್ಯಗಳಿಗೆಯಲ್ಲಿ ಇಂತಹ ಬಿಡಿಸಲಾರದ ಮುಂಡಿಗೆಗಳು ಸಿಗುವವು (ಶರೀಶ. ೭೩); ಕನಕನ ಮುಂಡಿಗೆಯೆಂಬ ಹೆಸರಿನ ಹಾಡುಗಳು ಬೆಡಗಿನ ವಚನಗಳಂತೆ ಸಂಕೇತ ಬಲ್ಲವರಿಗೆ ಗಮ್ಯ, ಉಳಿದವರಿಗೆ ಗೂಢವಾಗಿ ಬಿಡುತ್ತವೆ (ಕದಾಶ. ೨೯೭). ೩. ತಲೆಯ ಮೇಲೆ ಧರಿಸುವ ವಸ್ತ್ರ; ಶಿರೋವಸ್ತ್ರ: ಮುಂಡಿಗೆ ಮತ್ತು ಮುಡಿಗೆಗಳು ಮೊದಲು ಶಿರೋವಸ್ತ್ರವನ್ನು ಸೂಚಿಸುತ್ತಿದ್ದು ಕ್ರಮೇಣ 'ಸವಾಲು' ಎಂಬ ಅರ್ಥವನ್ನು ಪಡೆದುವು (ಸಂಕೋಶ. ೦೦೯). **ಮುಂಡಿ$_{2}$**: ೨. ಕೆಲವು ಸಿದ್ಧಾಂತಗಳನ್ನು 'ಮುಂಡಿ'ಗಳಂತೆ ಅರ್ಥವರಿಯದೆ ಜೀವನದಲ್ಲಿ ಸ್ವೀಕರಿಸಿ ಅದರಂತೆ ನಡೆಯುವವರೂ . . . ಮೂರ್ಖರೆಂದು ಆಗ ನಾವು ಸಪ್ರಮಾಣವಾಗಿ ಸಿದ್ಧಪಡಿಸಿದೆವು (ಶವಶಾ. vii, ಕ್ರಶಾ ವಶ). ೪. (?): ಮುಂಡಿಗೆ ಮುಂಡಿ ಕಟ್ಟಿಕೊಂಡ ರುಂಡರಿಗೇಕೆ ಗುರುಪರಭಕ್ತಿ (ದೇದಾವ. ೩೭-೭೦). **ಮುಂಡು$_{3}$**: ೪. ಮಿಂಡಾಟವಾಗಿ ಮೆಚ್ಚಿದ ರಂಡೆಯರೊಳ್ಳರೆದು ವಿಕೃತಿವೇಷದೆ ಜಗವಂ ಕಂಡ ಜ್ಞಾನಿಯೆನೆಂಬನ ಮುಂಡಿಂಗೊಳಗಾಗದಿಪ್ಪವಂ ಸತ್ಪುರುಷಂ (ಕಮುಶ. ೦೯-೬೯). **ಮುಡಿಗೆ**: ೧. ಇಕ್ಕಿದೆಂ ಶ್ರುತಿನಿಚಯ ಮುಡಿಗೆಯ ನಿಕ್ಕಿದೆಂ ಶಾಸ್ತ್ರಾದಿ ಮುಡಿಗೆಯನಿಕ್ಕಿದೆಂ ಶೈವಾಗಮಾದಿಯ ವಾಕ್ಯಮುಡಿಗೆ ಯಿದಂ ಚಿಕ್ಕನೆತ್ತುವೊ ನಿನ್ನ ದೈವಂ (ಶಾವಂತ. ೯-೦೨೨); ಮುಡಿಗೆಯಂ ಹಾಯ್ಕಿದೇಂ ಬಂದಂಜದೆನ್ನೊಳಗೆ ನುಡಿಯಲಿರ್ಪವರುಂಟೆ (ಶೀಕೃಶ. ೪-೦೦-೬); ಮುಂಗುರಿರಾಯನೊಡ್ಡಿದ ಮುಡಿಗೆ ಬಾದುರಖಾನನ ಕೊರಳಿಗುರುಳಾಗುತ್ತದೆ (ಕಂಶಾಂಡ. ೩೭). ೨. ಮುಡಿಗೆಯಿದು ಮುಕ್ತಿ ಕಾರಣ ಭಕ್ತಿಯೆಂಬುದಕೆ ಮುಡಿಗೆಯಿದು ಶಿವಭಕ್ತರೇ ಶ್ರೇಷ್ಠರೆಂಬುದಕೆ (ಶಾಶಿಶ. ೦೯-೧೦೮). ೩. ಮುಂಡಿಗೆ ಮತ್ತು ಮುಡಿಗೆಗಳೆರಡೂ ಸಮಾನಾರ್ಥಕಗಳು. ಎರಡಕ್ಕೂ ಟೊಪ್ಪಿಗೆ ಅಥವಾ ತಲೆಯ ಮೇಲಿನ ಉಡುಪು ಎಂಬುದು ಮೂಲಾರ್ಥ (ಸಂಕೋಶ. ೦೦೩); ಈ ಮುಡಿಗೆಯ ಅಷ್ಟಕ ಮುಗಿಯುತ್ತಲೆ ಕೆಳಗೆ ಬಿದ್ದಿದ್ದ ಮುಡಿಗೆ ಹರಿಹರನ ಶಿರಸ್ಸನ್ನು ಅಲಂಕರಿಸಿತಂತೆ (ಶರಶ. ೩೪೭).

**ಮುಂಡಿಗೆಯಿಕ್ಕು**, ಮುಡಿಗಿಕ್ಕು. ಮುಡಿಗೆಯಿಕ್ಕು = ಸವಾಲು ಹಾಕು; ಸಮಸ್ಯೆಯನ್ನು ಒಡ್ಡು: ಭೂಪಾಲಮಸ್ತಕದ ಮಕುಟವನು ಉತ್ತಮ ತೆಗೆದಿಟ್ಟ ಭಾವ ಇತ್ತುಮ ಕಣ್ಗೆ ತನ್ನ ಪೊಲಾರಿಲ್ಲೆಂದೆತ್ತಿ ಮುಂಡಿಗೆಯಿಕ್ಕಿದಂತೆ (ಅಪಂಶ. ೯-೩೩); ಅಂತು ವಿಜಯನಶ್ವಗ್ರೀವನ ಮಗನಪ್ಪ ವಿಪುಳಕಂಠನು ತನ್ನವಾರ್ಯವೀರ್ಯಕ್ಕೆ ಮುಡಿಗಿಕ್ಕುವಂತಿಕ್ಕ (ಶಾಂತಿಪು. ೩-೩೩ ವ); ತಡವೇಂ ಪೂಣ್ಕೆಗೆ ದಿವ್ಯಂಬಿಡಿವೆಂ ರುಕ್ಮಿಣಿಯೊಳಲ್ಲದಿಂ ಹರಿ ಮಚ್ಚಿವಂ ಗಡ ಸತ್ಯಭಾಮೆಗೆಬಗಂ ಮುಡಿಗಿಕ್ಕಿದನಾರ್ಪರೆತ್ತಿಕೊಳ್ಳಂ ಸಭೆಯೊಳ್ (ಜಗಿಪು. ೦೨-೭೯); ಮುಂದೆ ತಿಸುಳಿಯಂ ಗೆಲ್ವುದರ್ಕೆ ಮುಡಿಗಿಕ್ಕುವಂತೆ ನಿಡುಗೈಗಳಂ ಮುಡಿಗಿಕ್ಕಿ ನಡೆದು (ಕಬ್ಬಿಶಾ. ೨೩೨); ಕಾಮನೊಡ್ಡೋಲಗದೊಳ್ ಮುಡಿಗೆಯಿಕ್ಕಿಯುಂ ಕೈಯನೆತ್ತಿ ಪೊಗಳ್ದಂ ತಣಿಯನೆ ಮಧುಸ್ತವಂ ಮಲ್ಲಿಗೆಯಂ (ಅದಿಪು. ೦೦-೦೦೩); ಸುದತಿಗೆ ಪೆಱತೊವಿ ಳ್ ಹೇಮದಾಮಕಮನೀಯಚಂಚಲಚ್ಛಾಮರಮಂ ಮುದದಿಂದ ಮಿಕ್ಕಿದರ್ ಮೆರ್ಚಿಸಿನೊಸಗೆಗವಯವದೆ ಮುಡಿಗೆಯಿಕ್ಕುವ ತೆಱದಿಂ (ಸುಕುಶಾ. ೦೦-೦೭). **ಮುಂಡಿಗೆ ಹಾಕು** = ಮುಂಡಿಗೆಯಿಕ್ಕು: ಪರದೈವವೇ ನೀನೆ ಭೂಪನ ಜೀವನ ಪರಮಗುರುವಾದರೆ ಎನ್ನ ನುಡಿಗಳು ನಿಲ್ಲಲೆಂದು ಶರಣನಿಗೋಸುಗ ಮುಂಡಿಗೆ ಹಾಕಿದರು (ಬೋಗ್ಗಲಿ. ೩-೨).

[?]

**ಮುಂಡಿಗೆ$_{4}$**, ಮುಂಡಂಗಿ, ಮುಂಡುಗ (ನಾ). ಕೇದಗೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ: ಮುಂಡಿಗೆ ಒಲಿಯ ಚಾಪೆ, ತಲೆದಿಂಬು, ಜಮಖಾನೆ ಜಗುಲಿಗೆ ತಂದಿಟ್ಟರು (ಶಾಗಿ. ೦೭). **ಮುಂಡಂಗಿ**: ಹಯನಿಕರದ ಕಜ್ಜಗೆ . . . ಮುಂಡಂಗಿಯ ಮಸಿಯೊಡನಿರದೆಳ್ಳೆಣ್ಣೆಯನೆಱೆ ತುಱುಯನಿಸುವಿಲ್ಲದಂತಿರೆ ಪೋಕಂ (ಲೋಕೋಶ. ೯-೨೯೦). **ಮುಂಡುಗ**: ಗಡಿ ಬೇಲಿಯ ಮುಂಡುಗದ ಓಡಲಿನಲ್ಲಿ ಕಣ್ಮರೆಯಾಗಿದ್ದ ಕಾಲುದಾರಿಯ ಸಮೇತ ನುಣ್ಣನ ಬೂದುಬಣ್ಣದ ರೇಖೆ . . . ಪ್ರಧಾನವಾಗಿತ್ತು (ಋಶಶ. ೪೩); ಮುಂಡುಗ, ಬೆತ್ತ ಜಂಜರಗಿ, ಮುಕ್ಕಡಕ ಮುಂತಾದ ಗಿಡುಬಳ್ಳಿ ಪೊದೆಗಳಿದ್ದವು (ಶಂಜಶಂ. ೨). [<ಸಂ. ಮುಂಡಿಕಾ./ತಮಿ. ಮಣ್ಣಕವರ್; ತುಳು. ಮುಂಡಗೆ, ಮುಂಡಿಗೆ, ಮುಂಡೆಯಿ; ಕೊಡ. ಮುಂಡೆ]

**ಮುಂಡಿತ** (ಗು). ೧. ಕ್ಷೌರಮಾಡಿದ; ಬೋಳಿಸಿದ: ನಿನ್ನೊಡನೆ ಹುತವಹನ ಹೊಗುವೆವು ಮನ್ನಣೆಯ ಮಾತಲ್ಲ ನಿನ್ನಂ ಮುನ್ನ ಮುಂಡಿತ ಶಿರವಲೆಸುವೆವು ತೀರ್ಥಯಾತ್ರೆಯಲಿ (ಕುವ್ಯಾಶ. ೨೦-೩೦). ೨. ಕತ್ತರಿಸಿ ಹಾಕಿದ. ೩. ಕೂದಲು ಬೆಳೆಯದ; ಬೋಳಾದ. ೪. ರೆಂಬೆಗಳನ್ನು ಕಡಿದ, –ಸವರಿದ. (ನಾ). ೫. ತಲೆಯನ್ನು ಬೋಳಿಸಿಕೊಂಡವನು: ಮುಂಡನ ಮಾಡಿಸಿಕೊಂಡವನು: ಮುನಿಯಾಗಿ ಮುಂಡಿತನಾಗಿ ದಾರ್ದೊಡಂ ಸಂಜೆಸಂಜೆಯೊಳೋರೊಂದು ಮನೆಗಳಲ್ಲಿ ಭಿಕ್ಷೆಯಂ ತಿರಿದುಂಡಾದೊಡಮಿ ದೇಹಮಂ ತೊಲಗಿಸಿ ಬಿಡುವೆನು (ಶಾರಶಾಂ. ೪೦). ೬. ತಲೆಯ ಮೇಲೆ ಕೂದಲು ಬೆಳೆಯದವನು; ಬೊಕ್ಕತಲೆಯವನು: "ಮುಂಡಃ, ಮುಂಡಿತಃ – ೨ ತಲೇ ಮೇಲೆ ಕೂದಲು ಬೆಳೆಯದ ಬೋಳು ತಲೆಯವನು" (ಸಿದ್ಧಾಂತಿ. ೦೮೨). [ಸಂ.]

**ಮುಂಡಿಸು**, ಮುಂಡಿಸು$_{1}$ (ಕ್ರಿ). ೧. ಕತ್ತರಿಸಿಹೋಗು; ತುಂಡಾಗು: ತೊಡೆಗಳು ಮುಱಿದು ಬಿಡದೆ ಕೈಕಾಲು ಮುಂಡಿಸಿ ರಿಪುಬಲ ನೆಱೆ ಮಡಿದುದು ರಣಭೂಮಿಯೊಳಗೆ (ಶಂಶವಿ. ೩-೯೪). **ಮುಂಡಿಸು$_{1}$**: ೨. ಮೊಂಡತನಮಾಡು; ಹಟಹಿಡಿ: ಕೆಲಕ ಚಿಮ್ಮುವ ದುಂಡಿಸಿ ನೆಗೆವ ಮುಂಡಿಸಿ ನಿಲ್ವ . . . ಸುಕಳಾಶ್ವಮಂ ಬೇಗದಿಂ ಬೆಂಗೆವಾಯ್ದು (೧೦೪. ೨-೧೦೩ ವ). ೩. (ಆಲಂ) ವಿರೋಧಿಸು; ಪ್ರತಿಭಟಿಸು: ಮಹಾಸಾಗರಕೆ ಮುನಿ ಮುಂಡಿಸಿದವೋಲು . . . ಪರಬಲಾಂತಕ ಭೀಮ ನಿಂದನು ತಱುಬಿ ಪರಬಲವ (ಕುವ್ಯಾಕ. ೦೩-೬); ಬಲವೆರಡಾತ್ತುದಸುರಾವಳಿ ಸುರಾವಳಿ ಪೂರ್ವಯುಗದಲಿ ಮುಲೆತು ಮುಂಡಿಸಿದಂತೆ ಕೋಟಿಯ ಕ್ರೋಳ ತೀಟೆಯಲಿ (ಕೊರಶಾ. ೯-೦೯-೩೨). [ಮುಂಡು$_{2}$ + –ಇಸು$_{3}$]

**ಮುಂಡೀಚಲು** (ನಾ). ಒಂದು ಬಗೆಯ ಈಚಲುಮರ: "ಗರ್ಗರಃ– ಕೋಲುಮಿನು, ಕಬ್ಬೋರಿ, ಕಱುಯೋಲಕ್ಕ. ಮುಂಡೀಚಲು" (೬೩೧. ೪೩). [ಮುಂಡು$_{?}$ + ಈಚಲು$_{1}$ (< ಈಂಚಲ್)]

**ಮುಂಡು$_{1}$**, ಮುಂಡ$_{1}$ (ನಾ). ೧. ಸೊಂಟಕ್ಕೆ ಸುತ್ತಿಕೊಳ್ಳುವ ವಸ್ತ್ರ ವಿಶೇಷ; ದಟ್ಟಿ: ಪೊಳೆವ ಬಚ್ಚಣೆಯ ಹರಿಗೆ ಬಿಚ್ಚುಗತ್ತಿಯ ಹೊಳೆವ ಕಟಿಯ ಮುಂಡುಗಳ ಬಲಗಳ ಮಧ್ಯದೆ ಸರ್ಪಸುಭ್ರಮದೊಳು ಮಳೆಯಾಳ ದವನೀಶ ಬಂದ (೪೦ಶವಿ. ೨೦-೭೩); ಒಂದೊಂದು ಪ್ರಾಂತದಲ್ಲಿ ಒಂದೊಂದು ಸಂಪ್ರದಾಯವಿದೆಯೆಂದೇ ಹೇಳಬೇಕು . . . ಮಂಗಳೂರಿನ ಮುಂಡು, ಕೊಲ್ಹಾಪುರದ ಪಾವುಡ ಇತ್ಯಾದಿ (ಮುಂಗಾಕು. ೨೩). ೨. ತಲೆಯುಡುಗೆಯಂತೆ ಬಳಸುವ ಚಿಕ್ಕವಸ್ತ್ರ: (+). **ಮುಂಡ$_{1}$**: ೧. ನಾಯರರ . . . ಗಂಡಸರೂ ಹೆಂಗಸರೂ ಒಂದೆ ಪ್ರಕಾರವಾಗಿ ಮುಂಡವೆಂಬ ವಸ್ತ್ರವನ್ನು ನಡುವಿಗೆ ಸುತ್ತಿಕೊಳ್ಳುತ್ತಾರೆ (ಕಥಾಗ. ೦೦೩).

ಮುಂಡುಪಂಚೆ = ದಟ್ಟಿವಸ್ತ್ರ : ಮುಂಡುಪಂಚೆ ಸುತ್ತಿದ ಅವನ ರೂಪು ಆಕರ್ಷಕವಾಗಿತ್ತು (ಶಾಲಪ್ಪ. ೯೩).

[ದೇ.॥ ತಮಿ. ಮಲ. ಮುಣ್ಡು; ತುಳು. ಮುಂಡು ; ಕೊಡ. ಮುಂಡ್, ಮುಂಡಿ :. ಕೋತ. ಮುಂಡ್./ಮಾರಾ. ಮುಂಡೆ]

**ಮುಂಡು$_2$**, ಮೊಂಟು$_2$, ಮೊಂಡ, ಮೊಂಡು, ಮೊಣ್ಣ, ಮೊಣ್ಣು (ನಾ). ೧. ರೆಂಬೆಗಳನ್ನು ಕತ್ತರಿಸಿದ ಮರದ ಕಾಂಡ ; ಬೋಳುಮರ: ಹೆಗ್ಗಡೆಯವರು . . . ಕಡಿಸಿದ್ದ ಒಂದು ದೊಡ್ಡ ತೇಗದ ಮರದ ಮುಂಡು ನಿಂತಿದ್ದನ್ನು ನೋಡಿ ಅವರ ಸಂಬಂಧದ ಒಂದು ಕಥೆಯನ್ನ ಹೇಳಿದರು (ಮರಿಮು. ೩೪೦). ೨. ರುಂಡವಿಲ್ಲದ ದೇಹ ; ಮುಂಡ : ತಲೆವೊಂದೆಸೆಯಾಗಿ ಮುಂಡೊಂದೆಸೆಯಾಗಿ ನೀ ಬಿಳ್ದಿರ್ದ ಕಂದನ ಪೋಲ್ವೆಯ ಪುತ್ಥಳಿಯನು ತೋಱಲು (ಕೃಕಂಜ. ೨-೧೧೩); ೩. ತಲೆ ; ರುಂಡ : ಸಿಡಿಲ ಬಳಗಂಗಳಂ ಬಱಸಿಡಿಲ ಚಯಂ ಪೊಯ್ವ ತೆಱದೆ ವಾಹಕ ರಂದಿರ್ಪಡೆಯವರ್ಗಳೊಡನೆ ಪೊಯ್ವರ್ ಕಡಿಖಂಡಂ ದಿಂಡು ಮುಂಡು ಮುರುಳೆ ಪೆಣಂಗಳ್ (ಶೇಖಿಕ್ಕ. ೧೧-೨೬೧). 'ಮುಂಡುಮುಳುಕ' ಪರಾ. ೪. ತುಂಡು; ಚೂರು : ಅವರಿಗೆ ಜೋಬಿನಲ್ಲಿದ್ದ ಸಿಗರೇಟು ಮುಂಡು ಏಕೋ ಕೈಹಾಕಿದಾಗ ಸಿಕ್ಕಿಬಿಟ್ಟಿತು (೧೦ಶಾ. ೪೧) ; ಹಡಗಿಗೆ ದಾರ ಬಿಗಿಯುತ್ತಿದ್ದ ಸೀನನ ಬಾಯಲ್ಲಿ ಬೀಡಿಯ ಮುಂಡಿತ್ತು (ದೀಪಕಂ. ೦೪೦); 'ಮುಂಡುವೋಗು' ಪರಾ. ೫. ಒಂದಾಳು ಎತ್ತರದಷ್ಟು ಆಳತೆ ; ಪುರುಷಪ್ರಮಾಣ : ನಾವು ಯಾನ ಮಾಡಿ ಬಂದ ಭೂಮಧ್ಯ ಸಮುದ್ರದ ಆಳ ಸಾಧಾರಣ ೧.೨೦೦ ರಿಂದ ೧,೪೦೦ ಮುಂಡುಗಳಷ್ಟಾಗ ಬಹುದು (ಕೃಪಾಸಿ. ೦೩). ೬. ಮರದ ಕಂಬ. ಸ್ತಂಭ. (ಗು). ೭. ಹಠಮಾರಿಯಾದ ; ಹಿಡಿದ ಪಟ್ಟುಬಿಡದ : 'ಮುಂಡುಕಾಱ' ಪರಾ. **ಮೊಂಟು$_2$** : ೮. ಗಿಡ್ಡಾದುದು ; ಮೋಟಾದುದು : ಮೊಂಟಾಗಿ ಕೈಗಳೆರಡುಂ ಗೆಂಟಾಗಿರೆ ತನಗೆ ಸಿರಿಯು ಕೂಟುಂ ಕಾಲುಂ ಕುಂಟಾಗಿ ನದೆಯುತಿರ್ಪರ್ ಟೆಂಟಣಿಸಿ ಮಹಾತಪಂಗಳಂ ಕಿಡಿಸಿದವರ್ (ಧರ್ಮಾಮೃ. ೬-೦೪೦). ೯. ಹರಿತವಿಲ್ಲದ : ಮೊಂಡಾದ : ತರ ತರಹದ ಮೊಂಟು ಆಯುಧಪಾಣಿಗಳಾದ ಹಳ್ಳಿಯ ತರುಣರು . . . ತಮ್ಮ ತಮ್ಮ ಕೈಗಳನ್ನು ಬರಿದುಮಾಡಿಕೊಂಡರು (ಕರಾವ. ೩೨). **ಮೊಂಡ**: ೭. ಆ ಮೊಂಡ ಹುಡುಗಿ ಯಾರ ಮಾತನ್ನೂ ಕೇಳುವುದಿಲ್ಲ (ರೂಶಿ). ೯. ಮೊಂಡ ಕೊಡಲಿ ರೆಟ್ಟೆಗೆ ಮೂಲ (ಗಾದೆ). 'ಮೊಂಡಗತ್ತಿ' ಪರಾ. ೧೦. ಯಾವು ದಕ್ಕೂ ಜಗ್ಗದ$_2$– ಸಗ್ಗದ : ಬಡ್ಡಿಯು ತಪ್ಪದೆ ಪ್ರತಿವರ್ಷ ಬರುತ್ತಿದ್ದಿತು. ಅದರಲ್ಲಿಯೂ ಒಬ್ಬಿಬ್ಬ ಮೊಂಡ ಸಾಲಗಾರರಿದ್ದರೆಂದು ಮರೆಯಲಾಗದು (ಜಯಂತ. ೪೨೬). ೧೧. ಹರಿತವಿಲ್ಲದುದು ; ಮೊನಚಿಲ್ಲದುದು : ಬಡ್ಡು : ಈ ಕತ್ತಿಯ ಬಾಯಿ ತುಂಬ ಮೊಂಡ (ರೂಶಿ). ೧೨. ಮೋಟಾದ ಅಂಗಗಳುಳ್ಳವನು ; ಅಂಗವಿಕಲ : ಮೂಕನು ಮೊಂಡ ಲಂಡ ಕಿವುಡಂ ಚಂಡಾಲ ತಾನಾದೊಡಂ . . . ಒಲಿವರ್ ಪೊಸ್ನಿತ್ತೊಡಂ ಸೂಳೆಯರ್ (ಸೋಮೇಶ. ೬೦); ಬಾಲವನಕಾಲದಲಿ ಬಿಂಡಿಸಿಧೆ . . . ಹಂದಿ ಕೋಳಿಗಳು ಬಳಿಸಂದು ಕಿಲಕಿಲನೆ ನಗರೇ ಮೊಂಡನೆಂದು (ಕಂಠೀ. ೪೨-೩). ೧೩. ಹಠಮಾರಿತನ ; ಶಠಸ್ವಭಾವ : 'ಮೊಂಡತನ', 'ಮೊಂಡಾಟ' ಪರಾ. ೧೪. (ಆಲಂ) ಪರಿಣಾಮ ವನ್ನು ಕಳೆದುಕೊಂಡುದು ; ಸತ್ವಹೀನ ; ಸಪ್ಪೆ : ಅವರ ತಲೆ ಬೋಳಿಸಿ, ಕೈಗೆ ಕೋಳಗಳನ್ನೂ ಮೈಗೆ ಜೈಲುಬಟ್ಟೆಗಳನ್ನೂ ತೊಡಿಸ ಲಾಯಿತು . . . ಒಟ್ಟಿನಲ್ಲಿ ಅವರ ಬಾಳು ಹರಿತವಾಗುವುದರ ಬದಲು ಮೊಂಡವಾಯಿತು (ಕೃಪರು. ೩೩೦). **ಮೊಂಡು** : ೧೩. 'ಮೊಂಡು ಗರೆ'. 'ಮೊಂಡುತನ' ಪರಾ. ೧೪. ಗಿಡ್ಡಾದ; ಮೋಟಾದ : ಒಂದು ಕಣ್ಣೊಂದು ಕಾಲ್ಕುಂಟು ಹಜ್ಜಿಗಿವಿ ಮೊಂಡು [ಶಾಶಾ. ಮೊಣ್ಣ]ಬಾಲ (ಸಮ್ಯಕ್ತ್ವ. ೨-೭೬); ಮೊಂಡು ಕಸಬರಿಗೆಯನ್ನು ತೆಗೆದಿಟ್ಟಿದ್ದೇನೆ (ದೀಪಾಸ್ತ. ೦೭೦). **ಮೊಣ್ಣ** : ೧೨. ಮೂವಣ್ಣದಣ್ಣಗಳನು ಮೊ[ಶಾಶಾ. ಪೆ]ಣ್ಣ ಮಾಡಿಯೆ ಹಿಡಿತಪನು (ತ್ರಿಕ್ವಗಂ. ೨೨-೦೩). **ಮೊಣ್ಣು** : ೮. ತಾಗಿದ ಕೈಯ್ಯ ಮೊಣ್ಣಾಗುವಂತೆ ಮಾಡುವುದುಚಿತವೇ (ಸಮ್ಯಕ್ತ್ವ. ೦೦-೩೩).

ಮೊಂಡುಬೀಳು = ಹಟಮಾಡು ; ಪಟ್ಟುಹಿಡಿ : ಹೀಗಾಗುತ್ತೆ ಅಂತ ನನಗೆ ಗೊತ್ತು. ಹೋಗೊಲ್ಲ ಅಂತ ಮೊಂಡು ಬಿದ್ದೆ (ಶಿವರಾ. ೩೮).

[ದೇ.॥ ತಮಿ. ಮುಣ್ಡು. ಮೊಣ್ಡು. ಮೊಣ್ಣೈ : ತುಳು. ಮುಂಟು. ಮೋಂಟು; ಗೊಂಡಿ. ಮೊಟ್. ಸಂ. ಮುಂಡ]

**ಮುಂಡು$_3$** 'ಮುಂಡಿಗೆ$_3$' ನೋ.

**ಮುಂಡುಕಾಱ** (ನಾ). ಹಿಡಿದ ಪಟ್ಟು ಬಿಡದಿರುವವನು ; ಧಾರ್ಷ್ಟ್ಯವುಳ್ಳ ವನು : ಆಟಗಾಱಂ, ಮುಂಡುಕಾಱಂ, ಅರಮನೆಕಾಱಂ (ಶಬ್ದಾನು. ೧೬೭ ಪ್ರಯೋ); ಸುಡಿಕಾಱಂ, ಆಟಕಾಱಂ, ಮೋಸಕಾಱಂ, ಮುಂಡುಕಾಱಂ . . . ಮುಂಡು ಇತಿ ಧಾರ್ಷ್ಟ್ಯಂ (ಕರ್ನಾ.ಶ. ೪೨೩ ಪ್ರಯೋ).

[ಮುಂಡು$_2$ + – ಕಾಱ]

**ಮುಂಡುಗ** 'ಮುಂಡಿಗೆ$_4$' ನೋ.

**ಮುಂಡುಗಳ್ಳಿ** 'ಮುಂಡಗಳ್ಳಿ' ನೋ.

**ಮುಂಡುಮಾಳಿಗೆ** (ನಾ). ಮನೆಯ ಮೇಲ್ಛಾವಣಿಗೆ ಹೊಂದಿಕೊಂಡಿರುವ ಕೋಣೆ ; ಅಟ್ಟದ ಕೋಣೆ : (ಕಿಸಂಗ್ರಾ. ೯೩). [ಮುಂಡು$_2$ + ಮಾಳಿಗೆ$_1$]

**ಮುಂಡುಮುಳಕ** 'ಮುಂಡುಮುಳುಕ' ನೋ.

**ಮುಂಡುಮುಳ್ಳುಗ** 'ಮುಂಡುಮುಳುಕ' ನೋ.

**ಮುಂಡುಮುಳುಕ**, ಮುಂಡುಮುಳಕ, ಮುಂಡುಮುಳ್ಳುಗ (ನಾ). ತಲೆಯನ್ನು ಆಗಾಗ ನೀರಿನಲ್ಲಿ ಮುಳುಗಿಸುವ ಒಂದು ಬಗೆಯ ಜಲಪಕ್ಷಿ ; ಗುಂಡುಮುಳುಕನ ಹಕ್ಕಿ : "ಪ್ಲವ ಎಂದು ಮುಂಡು ಮುಳುಕ ; ನೀರುಗೋಟಿಯೆಂದೂ ಎಂಬರು" (ಶಾರಿಶಾ. ೬). **ಮುಂಡು ಮುಳಕ** : "ಆತಾಪೀ . . . ಚಿಲ್ಲಃ— ೨ ಮುಂಡುಮುಳಕನ ಹಕ್ಕಿ ಹೆಸರು" (ಸಿದ್ಧಂತಿ. ೧೩೯). **ಮುಂಡುಮುಳ್ಳುಗ** : ನೀರುಕೋಳಿ ಮುಂಡು ಮುಳ್ಳುಗ ಸಮುದ್ರದ ಕಾಗೆಗಳು ಇವು ಮೊದಲಾದ ಜಲಪಕ್ಷಿಗಳಿಂದಲೂ (ಕೃಪಾಸಿ. ೩೦). [ಮುಂಡು$_2$ + ಮುಳುಕ]

**ಮುಂಡುವೋಗು** (ಕ್ರಿ). ತುಂಡಾಗು ; ಕತ್ತರಿಸಿಹೋಗು : ಅಗಳ್ವರ್ಪಲವ ಕಡಿತಲೆಕಾಱರಲಗಲಗಿನೊಳ್ ಪಳಂಚೆ . . . ಕುಣಿಲ್ದಾಡುವ ಮುಂಡಮುಂ ಮುಂಡುವೋದ ಕಯ್ಯುಂ ಕಂಡುವೋದ ತೊಡೆಯುಂ ಪಿಸುಳ್ದ ಕಿಬ್ಬೊಟ್ಟೆಯುಂ ಕಣ್ವೋದ ಕಣಕಾಲುಂ ದೊಣ್ವೋದ ಮೇಗಾಲುಂ . . . ಅಗುರ್ವುವಡೆಯೆ (ಹಂರಾವಾ. ೦೩-೩೪ ವ).

[ಮುಂಡು$_2$ + ಪೋಗು$_1$ (< ಪೋ) ]

**ಮುಂಡೆ$_1$** (ನಾ). ೧. ಗಂಡನನ್ನು ಕಳೆದುಕೊಂಡು ತಲೆಯನ್ನು ಬೋಳಿಸಿಕೊಂಡ ಹೆಂಗಸು : "ವಿಶ್ವಸ್ತಾ, ವಿಧವಾ–ಈ ೨ ಮುಂಡೆ" (ಪಾಶಶಾ. ೧೬೭) ; ಬಱುಗೊಡನೆಣ್ಣೆ ಪಟ್ಟಿ . . . ಗಳಿತಾಶ್ರು ಮುಂಡೆ ಮೂಕೊಱತಿ ವಿಮುಕ್ತಕೇಶಿಯಿದಿರೊಳ್ ಬರೆ ಕಾಣಲುಮಾಗದು (ಲೋಕೋಪ. ೦೨-೦೦); ಕಂಡಿರೆಯಕ್ಕ ವಿಪರೀತವ ನಿಜಮುಂಡೆ ಮುತ್ತೈದೆ ಯಾದಳು ನೋಡಿರೇ (ಅವತು. ೨೯೬-೦೩೦೦); ನಿನ್ನ ಪತಿಯು ಕೊಂದು ನೀ ಮೊದಲಾದಖಿಲವಲ್ಲಭೆಯರ ತಂದು ಮುಂಡೆಯರ ಮಾಡುವರು (ಅಂಜತ. ೦೪-೨೩೧); ಕಳ್ಳನ ಹೆಂಡತಿ ಎಂದಿದ್ದರೂ ಮುಂಡೆ (ಗಾದೆ). ೨. ಜೈನಸಂನ್ಯಾಸಿನಿ; ಕಂತಿ : "ಶ್ರಮಣಾ, ಭಿಕ್ಷುಕೀ, ಮುಂಡಾ–ಈ ೩ ಕಂತಿ" (ಹಲಾಯು. ೯೦-೩೩೩); ಗೊರತಿಯು ಕಂತಿಯು ಕುಂಟಣಿಯರ ಮುಂಡೆಯು . . . ನಾದಿತಿಯರ ಮುಂದಂ ನುಡಿಯಲೀಯಲಾಗದು ವಧುವಂ (ಮಂಡ. ೬-೨೬). ೩. ನಡತೆಗೆಟ್ಟವಳು; ಜಾರೆ: ಕೆಟ್ಟ

ದರ್ಪಣದಂಬಿಮುಂಡೆಯುಮರ್ಪನೆಯೊಳಗುಳ್ಳುದಂ ತವಿಸಿ ಗಂಡರನೇಂ ಕಾಜುಮಾಡಿ ತಿಂದಪರ್ (ಸಮುಕ. ೯-೦೦೩): ಗಂಡನ್ನ ತಾ ಬಿಡುತಿಹಳು ಪರಮಿಂಡನ್ನ ಕೂಡಿ ಲೋಲಾಡುತಿಹಳು ಮುಂಡೇರು ಹೆಚ್ಚು ಜಗದೊಳು (ಕೈಕಂದ. ೧-೦೯೯-೩).

**ಮುಂಡೆಗಂಡ** = ವಿಧವೆಯ ಪತಿ : ಒಂದು ಬಯ್ಗುಳು : ಸತ್ತ ದನ ದನಕರುಗಳ ಮಾಂಸ ತಿನ್ನುವ ಈ ಮುಂಡೆಗಂಡರು . . . ನಮ್ಮ ಸತ್ವ ಹರಣರಾಗಬೇಕೆ ? (ಹೊಸಹ. ೧೯): ಅಯ್ಯೋ ಮುಂಡೇಗಂಡಾ ! ನೀನೂ ನಿಮ್ಮಮ್ಮನಿಗೇ ಅಂತೀಯೇನೋ ! (ಬಂಗವ. ೨೨೩). **ಮುಂಡೆಮಗ** = ವಿಧವೆಯ ಪುತ್ರ; ಒಂದು ಬಯ್ಗುಳು : ಮುಂಡೆಮಗನೆ ನಾ ಹೇಳುವನೆಂದು ಬೈಬ್ಯಾಡಿ (ಕದಾಕ. ೦೩೦-೩) : ಎಲಾ, ಮುಂಡೇಮಗನೆ ನಾನು ಈ ವ್ಯಾಪಾರ ಬಿಟ್ಟುಬಿಟ್ಟರೆ ಊಟ ಕೊಡುವುದು ಯಾರು–ನಿನ್ನ ಅಪ್ಪನೋ ? (ಕುಂಗಾಮು. ೪). **ಮುಂಡೇದು** = (ಆಲಂ) ಹೀನವಾದುದು : ಕೀಳಾದುದು ; ಅಲ್ಪವಾದುದು : ಮುಂಡೇದು ಈ ನಾಯಿ ದಾರಿಯಲ್ಲೇ ಮಲಗಿದೆ (ಆಡು). **ಮುಂಡೆದೈವ** = (ಆಲಂ) ಕೀಳಾದ ದೈವ; ಕ್ಷುದ್ರದೇವತೆ : ಕಂಡದ್ದು ಬಿಡದು ಮುಂಡೇದೈವ (ಗಾದೆ). [ಸಂ. ಮುಂಡಾ]

**ಮುಂಡೆ₂** (ನಾ). ಮಲ್ಲಯುದ್ಧದ ಒಂದು ವರಸೆ (?) : ತಿರುಣಿ ಕಾಳಾಡೆ ಬಾಹುಗೆಣೆ ಸಂದ ಸುಭಾಹುಡೆ ಮುಂಡೆ ಮುಷ್ಟಿ ಕಮ್ಮರಿ ಮುಹುಡಂ. ಪೋವುಡ ಚಲ್ಲಣವಟ್ಟೆ ಪಟ್ಟೆಕತ್ತರಿಗಳೆನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಪುರ. ೨೬-೦೮). [ ? ]

**ಮುಂಡೆತನ** (ನಾ). ಗಂಡನಿಲ್ಲದಿರುವಿಕೆ ; ವೈಧವ್ಯ : ಅಂಗವೆಂಬ ಅಂಗನೆಯು ಆತ್ಮನೆಂಬ ಪುರುಷನಪ್ಪಿ ಮುಂಡೆತನ [ಪಾಠಾಂ. ನು]ವಿಲ್ಲದಿಪ್ಪ ಭೇದವ ತಿಳಿದು ನೋಡಿರಣ್ಣಾ (ಅರವ. ೩೨-೯೪). [ ಮುಂಡೆ₁ + —ತನ ]

**ಮುಂತಳರ್** ' ಮುಂದಳರ್ ' ನೋ.

**ಮುಂತಾಗು₁** ' ಮುಂತು₁ ' ಪರಾ.

**ಮುಂತಾಗು₂** ' ಮುಂತು₂ ' ಪರಾ.

**ಮುಂತಾಸನ** (ನಾ). ಮುಂಭಾಗದಲ್ಲಿರುವ ಆಸನ : ಅಗ್ರಪೀಠ : ದರ್ಶನಸ್ಥರ ಮುಂತಾಸನದಲ್ಲಿ ಕುಳ್ಳಿರಿಸಿಯುವರ್ಗಳ್ . . . ಶಂತಮ್ಮ ದೇವತಾಸ್ತುತಿಪಾರಮ್ಯಮನುಸಿರೆ (ರಿವ್ಯಕ. ೬-೨೩). [ಮುಂತು₂ + ಆಸನ]

**ಮುಂತಿಕ್ಕು** ' ಮುಂದಿಕ್ಕು ' ನೋ.

**ಮುಂತಿಡು** ' ಮುಂದಿಡು ' ನೋ.

**ಮುಂತಿರ್** ' ಮುಂದಿರ್ ' ನೋ.

**ಮುಂತಿರಿಸು** ' ಮುಂದಿರಿಸು ' ನೋ.

**ಮುಂತು₁**, ಮುಂದು₁ (ನಾ). ೧. ಮುಂಭಾಗ : ಮುಂದುಗಡೆ : ದುಷ್ಪಾರ್ಶ್ವದ ಮುಂತುಂ ಪಿಂತುಂ. . . ಬೆಸನಿಯ ನುಡಿಯುಂ ನಡೆಯುಂ ಪೊಲ್ಲ (ದಶಾಗಸು. ೯-೦೩೨); ತುಕಾರಕ್ಕೆ– ಮುಂದು. ಮುಂತು; ಪಿಂದು, ಪಿಂತು (ಕಮುದ. ೭೨೦ ವ್ರ ವೃ). ೨. ಮೊದಲ ಸ್ಥಾನದಲ್ಲಿರುವಿಕೆ; ಮೊದಲು : ಸಾಮಾನ್ಯಜಗದಾಳ ಮಲೆಪ ತೊತ್ತಳಮುಳಿವ ಯತ್ತಿದ ಮೊಸೆಗೆ ಮುನ್ನು ಕಡಿಕಾಳಗಕ್ಕೆ ಪಿನ್ನು (ಎಕ XII. ತಿಪಟೂ. ೦೦೯-೨೩, 1130); ನಾನು ಮುಂತು ನೀನು ಮುಂತು ಕಡಲು ಮೂರು ಮೊರೆವಮಿಂತು (ಸೂರ್ಯಶಾ. ೨೨-೦೦). **ಮುಂದು₁** : ೧. ಆ ಧರಿತ್ರೀನಾಥನತ್ಯಂತ ಹರುಷಾಂತರಂಗನಾಗಿ ಸಿಂಹಾಸನದಿಂದಿಳಿದು ಮುಂದನೇಬಿಡಿಯುಂ ನಡೆದು ಅವರರ್ದ ದೆಸೆಗೆ ಪೊಡೆವಟ್ಟು (ಸುಕುಮಾ: ೬-೪೬ ವ) : ಉರಿಯ ಬಣ್ಣದ ಸೀರೆಯನುಟ್ಟು ಹರಶರಣರೆಲ್ಲರು ಮದುವೆಗೆ ಹೋದರು ನಿಬ್ಬಣಿಗನ ಹಿಂದಾಳಿಪಿ ಮದುವೆಯ ಹಜೆ ಮುಂದೊಳಿತ್ತು (ಬೋಳಬಸ. ೯೦-೩೬೦); ಕುಮಾರನ ಮುಸುಡ ಮುಂದಕೆ ಬಿದ್ದು ಬದುಕುವುದುಂಟೆ ಭಟನಿಕರ (ಕುಮ್ಯಾರ್ದ್ರೋ. ೬-೪೦). ೨. ಅಹಂಪೂರ್ವಿಕಾ . . . ನಾನು ಮುಂದು ತಾನು ಮುಂದುಮುಯೆಂಬುದಾಗಿ ಮಾಡಲ್ಪಡುವ ಕೆಲಸಕ್ಕೆ ಹೆಸರು (ಸದ್ಯಾಂಶಿ. ೨೬೮): ಕಣ್ಣಿಗೆ ಮುಂದು. ಕಡಿವಾಣಕ್ಕೆ ಹಿಂದು (ಗಾದೆ). ೩. ಮೊದಲಿನದು ; ಮುಂಚಿನದು : ನಿರ್ಮಲನಾದ ಶಿಷ್ಯನು ಕಾಯ ಜೀವದ ಭ್ರಾಂತುಸೂತ್ರಕ ಹಿಂಗಿ. ನಿಶ್ಶಂಕನಾದ ಗುರು ಈ ಉಭಯ ಭಾವದೊಳಗೆ ಆವುದು ಮುಂದು ಆವುದು ಹಿಂದೆಂದರಿಯಬಹುದು (ಅಶಂ. ೨೦೮-೯೨೬); ನೀರ ಕ್ಷೀರದಂತೆ ನೀನಿಪ್ಪೆಯಾಗಿ ಆವುದು ಮುಂದು ಆವುದು ಹಿಂದು ಎಂದರಿಯೆನು (ಬಸವ ಶಾ. ೩. ೦೩-೦೦). ೪. ಅನಂತರದ ಕಾಲ: ತರುವಾಯದ ಕಾಲ : ನಂಬಿ ಹೋಗದು ದೇವಂ ನುಡಿವ ಮಾತಿಂಗೆ ನಂಬಿಯೆಂಬಾ ನಾಮವಾದುವದು ಮುಂದಿಂಗೆ[ಪಾಠಾಂ. ಮುದ್ದಿಂಗೆ] (ನಂಬಿರ. ೦-೮೮); ಶಿಶುವಿವನು . . . ಎಂದುಳುಹಿದೊಡೆ ರಕ್ಕಸನಹನು ಮುಂದಕೆ ತನಗವನು (ಕುಮ್ಯಾರ. ೬-೨೮); ಈ ಚಂದ್ರಹಾಸಂ. . . ನಮಗೆ ಮುಂದಕೆ ಸರ್ವಥಾಮಿತ್ರನಪ್ಪಂ (ಜೈಮಿನಿ. ೩೦-೨೩) : ಮುಂದಿನ ಮುಕ್ತಿಗಿಂತ ಈಗಿನ ಭುಕ್ತಿ ಲೇಸು (ಗಾದೆ). ೫. ಏಳಿಗೆ : ಉತ್ತರೋತ್ತರ : ಭವಿಷ್ಯ : ಹಿಂದಿಲ್ಲಾ ಸ್ವಾಮಿ ಮುಂದಿಲ್ಲಾ ಗೋವಿಂದ ನೀನಲ್ಲದೆ ಇಹಪರವಿಲ್ಲ (ಪುರಂದ. ೦-೨೪ ಪಲ್ಲ) : ಮುಂದನರಿಯದ ಗುರುವು ಹಿಂದನರಿಯದ ಶಿಷ್ಯ ಸಂದೆರಡುವರ್ಗವರಿಯದಿದ್ದರುಪದೇಶ ಕೊಂದು ಕೊಂಡಂತೆ (ಸರ್ವಜ್ಞ. ೬೪); ಕೂಸಿನಾ ಮುಂದು ಎಣಿಸದೆ, ನಿಂದೆ ಗಣಿಸದೆ, ಹಿಂದೆ ಬಂದವಳು ಪಾಪಿಯೂ (ಕುಕ್ಕು. ೪೦ ೩೩).

**ಮುಂತಣ್**, ಮುಂದಣ್ = ೧. ಎದುರು ; ಮುಂಭಾಗ; ಸಮ್ಮುಖ : ಮತ್ತೊರ್ವಂ ತನಗೆರಡರಿಯದೊಲ್ದ ನಲ್ಲಳನೇತಱೊಳಪ್ಪೊಡಮೇವಮಂ ಮಾಡದೆ ಬೇಟಮಂ ಸಲಿಸುವುದರ್ಕೆ ಸಂತಸಂಬಟ್ಟು ಮುಂತಣ್ಗೆ ಕಾಪನಿಟ್ಟಂತೆಂದಂ (ಕಂಪಾ. ೪-೯೨ ವ); ಎನ್ನ ಮುಂತಣಿಂ ತೊಲಗಿ ಪೋಗು (ಕಂಠಪಾ. ೦೪-೦೩ ವ); ಮಾಣ್ದು ಬಂದರ ಮೆಯ್ಯೊಳಗೆನೆ ಕಣ್ಗಳೆ ಕೋರೈಸೆ ತೊಳಗಿ ಬೆಳಗುತ್ತಂ ಮುಂದಣ್ಗಾಗಿ ನಡೆದು ನೃಪನಂ ಜಾಣ್ಕೊಂಡ ನಿಜ ಪ್ರಗಲ್ಭವಚನದೆ ನುಡಿದಳ್ (ಲಾದಂಕಾ. ೬೬೩); ರೈಸುಂಪಿಸುತ ಮುಂದಣ ಗೊನೆದು ಬದ್ದನು ಭೀಮ ಪಾಂಡವಸೇನೆ ಕಳವಳಿಸೆ (ಕುಮ್ಯಾಕ. ೩-೨೬): ಮಂತ್ರಲಕ್ಷಂ ಮಿತವಚನಸಮೇತಂ ವಿವಿಧವಿಳಾಸಮಂ ತಳೆದು ಮುಂದಣ್ಗೆ ಬರೆವರೆ (ಲಾಜಕೇ. ೦೩-೯೩ ವ). ೨. ಅನಂತರದ ಕಾಲ ; ಮುಂದೆ ಬರುವ ಕಾಲ : ಸರಸಿಜಾಸನ ಕೇಳು ಸಂದುದು ಮದವಗೆ ನಿನ್ನಂದ . . . ನೊಂದಿರಿ ಹಿರಿದು ನೀವದಱಿಂದ ಮುಂದಣ್ಗರಿವಧಾಸಮುಯುಕ್ಕಿಪಾಯುವ ಕೇಳಿ ನೀವು (ಕೃರಾ. ೦-೬-೬೩). **ಮುಂತಣ**, ಮುಂದಣ, ಮುಂದಳ = ೧. ಮುಂಭಾಗದಲ್ಲಿರುವ ; ಮುಂಬದಿಯ : ಬಲಿವು . . . ಮುಂತಣ ಪಿಂತಣರ್ಕಲಂಗಳ ಭಟರ್ಗಲ್ಲವೆಲ್ಲೆಡೆಯೊಳಂ ನೆರೆದಾಂತುದುಮಲ್ಲದಾ ಮಹಾಬಲದನಿಬರ್ಗಮಂತನಿಬರಾಗಿಯೆ ತೋಱದನಾಜಿರಂಗದೊಳ್ (ಪಂಪಭಾ. ೬-೩೮) ; ಮುಂತಣ ವಿಪಿನಾಂತರದಲ್ಲಿ ವೀರವಸಂತಪಾದಪನಿಚಯವನು ಸಂತಸಗೊಳಿಸುತಿರುತಿರೆ ರತಿ ತನ್ನ ಕಾಂತನ ಬಿವಕಿ ನೋಡಿದಳು (ಬೋಹಕ. ೪-೩೨) ; ಮುಂದಣ ಮಹಾನಸರಂ ಪಡಿಯರ್ ತೊಲಗಿಸುತ್ತಂ ಬರೆ (ಪಶ್ಚಾಕಾ. ೬೦-೦೨) ; ಸಾಹಸಭೀಮನು . . . ಪಾರ್ವನ ಮನೆಯ ಮುಂದಣ ಬಂಡಿಯ ಕೂಟಂ ಕೆಯ್ಕೊಂಡು ನಿಲ್ವುದುಂ (ಪಂಪಭಾ. ೩-೨೬ ವ). ೨. ಮುಂದೆ ಬರುವ ; ಮುಂದಿನ : ಇಂತಿದನುಪ್ರಾಸಂ ಪಾದಾಂತದೊಳೊಂದಾವುದಾನುಮಿಟ್ಟಕ್ಕರಮಂ ಮುಂತಣ ಪಾದಾಂತಂಗಳೊಳಂ ತಡೆಯದೆ ಘಳಿಲ್ಕೊಡಂತದಂತಪ್ರಾಸಂ (ಕವಿರಾ. ೨-೪೩) ; ಪೆಱಗಣ ಮುಂತಣ ರಿತುಗಳ ತೆಱೆಯಂ ನಿಶ್ಚಯಿಸಿ ಮಧುಕರಂ ಮಧುಕರಮಂ ತಿಳಿಲಾಗದೆ ಪಲ್ಲೆಗಳೊಳ್ ಸಱಿಗೆಯ್ದಂತಿರ್ದುದೊಂದು ಪರಿಮಳಫಲಮಂ (ಅಜಿತ. ೩-೦೯) ; ಮುಂತಣ ಕಥೆಯ ವಿಸ್ತರವ ನಿರೂಪಿಸು (ಕಾಂತಿಕ. ೩-೨) ;

ನಗಾವುದೊ ಮೆಳ್ಪಡೆಪ್ಪ ಮುಂದಾದ ವಿರೋಧಿಸಾಧನಮನೆನ್ನ ಗದಾಶನಿಯಿಂದುರುಳ್ಚುವೆಂ (ಕಂಕಪಾ. ೧೪-೪೯). ೨. ಮುಂದೆ ಒದಗಿಬರು : ಬಳಿಕ ಸಂಭವಿಸು : ಇತ್ತಲ್ ತಂತುವಾಯಿಕೆಯುಂ ತನಗೆ ಮುಂತಪ್ಪ ನಿರ್ಗಮೋಪಾಯಮಂ ಚಿಂತಿಸಿಕೊಂಡು ಸಂತಸಂಬಟ್ಟು (ಕಂತಕಂ. ೭೬-೦೯) : ಮುಂತಪ್ಪ ಕಜ್ಜಗಳ್ ಕನಸಿನೊಳು ರಕ್ಕಸರ ಕಾಂತನರಿದು (ವಂಕಾರಾ. ೩-೬ ೭೦೩೭) : ಮುಂದಪ್ಪ ದುಸ್ವಪ್ನಫಲಂಗಳಂ ಆದಿಭಟ್ಟಾರಕರ್ ಬೆಸಸೆ (ಶಾಪುಂಪು. ೩೪) ; ಇಂದಿರ್ದಂ ಪೆರ್ಮಾವಾಂಟುವನೆಂದು ಕಯ್ಯಾಗಿ ಮುಂದಪ್ಪುದಂ ನೆರೆಯುಲಣಿಯೆನಲ್ ನಿಂದಂ (ಶಾಬಾರ. ೦೩೭-೨೯೩). ೩. ಹಿಂದೆ ಆಗಿಹೋಗಿರು ; ಮುಂದೆ ಸಂಭವಿಸು : ಸುರ ಮನುಜ ಭುಜಗ ಭುವನಾನ್ತರದೊಳ್ ಮುನ್ನಾದವಿನ್ನು ದಿಪ್ಪುವವಿನ್ನೀದೊರೆಯ ಜಿನಭವನವಲ್ಲೆಂಬರ ಮಾತು ದಿಟಂ (ಎಕ. VII. ಶಿವಮೊ. ೯೭-೯೨ : 1113). ೪. ಮುಂಚಿತವಾಗಿ ಬರು : ಪೂರ್ವಭಾವಿಯಾಗಿ ಬರು : ಮುಂದಾಗಿ ದಿನಪನುದಯಾಸಂದದೊಳಸ್ತಮಯಸಮಯದೊಳ್ ಸಂಜೆ ಕರಂ ಪಿಂದುಟಿದುದಂತೆ ಕೆಲರೊಡವಂದಾದುದಯದೊಳೆ ಸಾರ್ವರೆಡರೊಳಗಲ್ವರೆ (ಕಾವ್ಯಸಾ. ೮೯೯ ಟಿಪ್ಪಣ).

[< ಮುಂತು₁. / ತೆಲು. ಮುಂದು ; ನಾಯ್ಕಿ. ಕುರುಖ್. ಮುಂದ್ ; ಪರ್ಜಿ. ಮಲ್ತೊ. ಮುಂದಿ]

**ಮುಂತುಗಾಣ್** 'ಮುಂದುಗಾಣ್' ನೋ.

**ಮುಂತುಗೆಡಿಸು** 'ಮುಂದುಗೆಡಿಸು' ನೋ.

**ಮುಂತುಗೆಡು** 'ಮುಂದುಗೆಡು' ನೋ.

**ಮುಂತುಗೊಳ್** 'ಮುಂದುಗೊಳ್' ನೋ.

**ಮುಂತುದಿ** (ನಾ). ಮುಂಭಾಗದ ತುದಿ : ಅಂಚು : (ಮುಂತುದಿಗಿಂತ) ಹಿಂಭಾಗ ನೀರಿನಲ್ಲಿ ಹೆಚ್ಚಾಗಿ ಮುಳುಗಿ (sterm. ೩೬೪೩).

[ಮುಂ₁ (< ಮುನ್₁) + ತುದಿ]

**ಮುಂತೆ₁.** ಮುಂದೆ₁ (ನಾ). ೧. ಮುಂಭಾಗ : ಮುಂದುಗಡೆ : ತುಂಕಾರಕ್ಕೆ – ಮುಂದು. ಮುಂತು : ಹಿಂದು. ಹಿಂತು : ಮುಂದೆ. ಮುಂತೆ (ಶಮದ. ೦೨೦ ವೃತ್ತಿ). ೨. (ಅಲಂ) ಮುಂದಿನ ಯೋಚನೆ : ಗಂಡುಜೆಂಕೆಗೇನು ಚಿಂತೆ ಪ್ರಣಯಕಿಲ್ಲ ಹಿಂತೆ ಮುಂತೆ (ಸ್ವಪ್ನಕೊ. ೩೨೯). **ಮುಂದೆ₁** : ೧. ಮೇಲಿನ 'ಶಮದ' ಪ್ರಯೋಗವನ್ನು ನೋಡಿ. [< ಮುಂತು₁]

**ಮುಂತೆ₂.** ಮುಂದೆ₂ (ಅ). ೧. ಮುಂಭಾಗದಲ್ಲಿ ; ಮುಂದುಗಡೆಯಲ್ಲಿ : ಚಿತ್ರಪಟಮನಾ ಚೈತ್ಯಾಲಯದ ಕೆಲದ ಪಟ್ಟಸಾಲೆಯ ಮುಂತೆ ನೇಜಿ ನಿಜಾಭಿಲಷಿತಕಾರ್ಯಸಿದ್ಧಿಯನೆ ಪಾರುತ್ತಮಿರ್ದಳ್ (ಆದಿಪು. ೩-೪೩ ವ) : ಕಂತುಕವನು ಕೈಗೆ ಬರಲೀಯದೆ ಮೇಲಾಂತು ಕುಟಿಲದೇವತೆಗಳು ಕಾಂತೆಗೀಸಿಮುಂತರತ್ನ ರಶ್ನಾಜಿಯ ಮುಂತೆ ಬೇಗದೊಳರಿಸಿದವು (ಶಬರಶಂ. ೩೧-೦೦೯). ೨. ಎದುರಿಗೆ : ಸಮ್ಮುಖದಲ್ಲಿ : ಸಮಕ್ಷದಲ್ಲಿ : ರೂಢಿಗೆಂದೆಲ್ಲರ ಮುಂದೆಯುಂ ಪೊಗಟಿಪಂ ಮರುಳಲ್ಲನೆ (ಕಬ್ಬಿಗ. ೩-೭೦) : ಅರಸಂ . . . ಲಲಿತಾಂಗನಂ ಬರಿಸಿ ಮುಂತೆ ಕುಳ್ಳಿರಿಸಿ ಬಟ್ಟೆಕ್ಕಮಿಂತೆಂದಂ (ಧರ್ಮಾಮೃ. ೨-೭೩) : ವೃಷಭರಾಜಂ ಹರುಷದಿಂದಿಪ್ಪ ಸಮಯದೊಳು ಮುಂತೆ ಕಿನ್ನರರು ನವರಸದಿ ಪಾಡಲ್ಕೆ (ಬಸರ. ೦-೨೩). ೩. ಮುಂಚಿತವಾಗಿ ; ಪೂರ್ವಭಾವಿಯಾಗಿ : ಮುಂತೆ ನೀಂ ಪೋಗಾಸುಂ ಪೆಜಗನೆ ಬಂದಪೆಂ (ಆದಿಪು. ೦೨-೨೦) ; ನಿನಗೆ ವಸಂತದೂತಿ ಮೆಸರೊಪ್ಪುವುದೆಂತೆನೆ ಮುಂತೆ ಬಂದು ನೀನೆನಗೆ ವಸಂತನಾಗಮನಮಂ ನೆಜೆ ಸೂಚಿಸಿ ಕೊಟ್ಟೆ (ಶಂಪ್ರಪು. ೭-೪೦). ೪. ಅನಂತರದಲ್ಲಿ : ತರುವಾಯ ; ಆಮೇಲೆ : ಮುಂತೆ ಪೇಟ್ವ ಕುಜಿಪಂ ಕುಜಿಗೊಂಡು ಕವೀಶರಾರ್ವಂತು ಪಿಂಗಿಸುಗೆ ಕಾವ್ಯದಿನಾ ಲಘುದೋಷಮಂ (ಕಬರಾ. ೦-೦೨೯) ; ಮುಂತೆ ತದುದ್ಭಟಭೂವಿಭಾಕಾಂತಂಗರ್ಧಾಂಗಿಯಪ್ಪುದುಂ ತೋರ್ಪವೊಲಾ ಕಾಂತೆ ಬೇಂ ಮೆಯ್ಯಗಂದಿದಳಂತಗಲದೆ ವರ್ಮಿದತನುತಾಪೋದಯದಿಂ (ಜಾನ್ನ. ೭-೩೭) : ಇಂತು ಕರ್ಣನ ಸಖ್ಯದಲಿ ಭೂಕಾಂತನಾ ಕೆಲಕಾಲವಿದ್ದಾ ಮುಂತೆ ಕಲಿತರು ದ್ರೋಣನಲಿ ಬಲುಕಬಿನವಿದ್ಯೆಗಳ (ಕಂಭಷ. ೦೯-೨೨). ೫. ಹಿಂದೆ ; ಪೂರ್ವದಲ್ಲಿ : ಅಂತ್ಯಜಾತಿಯೊಳಿರ್ಪ ಮುಂತೆ ತೀರ್ಥದೊಳಿರ್ಪ ವಂಶಿಯೇಜಿರ್ಪ ತಿರಿದುಂಬ ಶಿವಯೋಗಿ ಎಂತಿರ್ದಡೇನು (ಕರ್ಣಾ. ೩೨೨); ಮುಂತೆ ರಾವಣನೆನಿವನೊರ್ವನುದಿಸಲ್ ಬಾಧೆಯುಂ ತಡೆಯುದಮರರುಂ ಹರಿಯ ಪ್ರಾರ್ಥಿಸೆ (ವಂಕಾರಾ. ೨-೨೦-೨೯). **ಮುಂದೆ₂** : ೧. ಗಟಿಯಿಸಿ ವರ್ಧಂ ಸಲೆ ಪಾಂಗಟಿಯದೆಯುಂ ಶಬ್ದಮೋದದಿರ್ದೊಡೆ ಮುತ್ತುಂ ಮೆಟಸುಂ ಕೋದಂತಿರ್ಕುಂ ಕಟಲ್ದಿ ಕಳೆಗೊಂದಿ ಮುಂದೆ ಬಾರದ ಪದಮಂ (ಕಬರಾ. ೨-೩) ; ಮನೆಮನೆಗಳ ಬಾಗಿಲು ಬಾಗಿಲ ಮುಂದೆ ಕನಕದೋರಣದ ಸಾಲಿಂದ ಘನತರವಹ ನವಿಲುಯ್ಯಾಲೆಗಳಿಂದಲನಿಮಿಷಪುರವ ಪೋಲ್ತಿಹುದು (ಕಸವ. ೨-೭೦) ; ಕುದುರೆಯ ಹಿಂದೆ ಅರಮನೆಯ ಮುಂದೆ ಇರಬಾರದು (ಗಾದೆ). ೨. ನಂದಿಮಿತ್ರಂ ಬಂದು ಮುಂದೆ ನಿಂದು ಕೈಗಳಂ ಮುಗಿದಿಂತೆಂದಂ (ಶಬ್ದರಾ. ೭೯-೩) ; ದನುಜಾಂತಕನೆಂಬೀ ನಿನ್ನ ನಚ್ಚುವೋದಂಕೆ ಮೆಲವೊ ಮುನ್ನೆನ್ನನ್ನಂ ದನುಜಂ ಪುಟ್ಟಿದೆ ಸಂದುದು ನಿನಗೀ ಪೆಸರೆನ್ನ ಮುಂದೆಯುಂ ಸಲಪುದೇ (ಕಂಕಪಾ. ೩-೩೪) ; ಗುರುವಂ ಮುಂದೆ ಪೊಗಟ್ವುದು ಮಿತ್ರರಂ ಬಂಧುಗಳಂ ಪಿಂದೆ ಪೊಗಟ್ವುದು (ಕಂತಕಂ. ೩೭-೦೬) ; ನಿಮ್ಮ ಶರಣರ ಮುಂದೆ ನಾನೇತರ ಭಕ್ತನಯ್ಯಾ ನಿಮ್ಮ ಶರಣರ ಮುಂದೆ ನಾನೇತರ ಯುಕ್ತನಯ್ಯಾ (ಬಸವ. ೩೩೩). ೩. ಮುಂದೆ ದಶಾಂಕೆಯಿಂದಿಜಿದುವಂ ಪರಮಾಯುವಿನಿಂದಮೊತ್ತೆ ದಲ್ ನಿಂದುದು ವರ್ಷಂ (ಜಾತಕ. ೨೪-೨೯) ; ತಂದೆತಾಯಿಗಳಿಗೆ ಮುನ್ನಗ್ನಿಯುಂ ಕೊಡದೆ ನೀ ಮುಂದೆ ಮಾಡಿಯಲುಬಹುದೆ (ಹಕಕಾ. ಶಂ. ೨೨೨-೨೦) ; ಹಿಂದೆ ಸೋಮೇಶನು ಬರುತ್ತಿಂ ಮುಂದೆಯನ್ನಂ ಕಳುಹಿದಡೆ ನಾ ತಂದೆ (ಬಸವ. ೩೩-೦೭). ೪. ಹಿಂದೆ ನಾನಾಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲ (ಬಸವ. ೦೭) ; ಮುಂದಾ ಸ್ತ್ರೀರತ್ನಮನೊಲವಿಂದಂ ಪಡೆದಪ್ಪನೆಂಬುದಂ ಸೂಚಿಸುವಂತೊಂದೆರಡು ದಿನದೊಳತ್ಯಾನುದದೆ ಕಡುಜಾಣೆ ಮಾಣಿಕಂಗಂಡಿರ್ದಳ್ (ಗಿರಿಕ. ೩-೨೦) : ಇಂದು ನೀನಾ ಪಾಂಡುಪುತ್ರರನಂದಗೆಡಿಸದೆ ಬಿಟ್ಟೆಯಾದೊಡೆ ಮುಂದೆ ಬಿಟ್ಟಿತು ರಾಜಕಾರಿಯ (ಕುಮ್ಯಾಭಾ. ೬-೨೦). ೬. ಮೊತ್ತಮೊದಲು ; ಪ್ರಥಮತಃ : ಮುನ್ನಮೆ ತೆಜಿದಜದಿಂಗಳ್ವರಮಾಜಿದ ಕಾಂಡಕಪ್ರಪಾತಗುಹೆಯೊಳಗಣಿಂದ ಚಕ್ರರತ್ನಂ ಮುಂದೆ ನಡೆಯೆ (ಆದಿಪು. ೦೩-೬೦ ವ) ; ಕಳಪೋವರೆ ಕನ್ನದುಳಿಯ ಹಿಡಿವೆ ಬಂಡಿವಿಡಿದರೆ ನಿಮ್ಮಿಂದ ಮುಂದೆ ನಡವೆ (ಬಸವ. ೭೯೭).

ಮುಂದೆಬರ್, ಮುಂದೆಬರು = ೧. ಅನಂತರ ಸಂಭವಿಸು : ತರುವಾಯದಲ್ಲಿ ಉಂಟಾಗು. —ಒದಗು : ನಿಜಧೈರ್ಯದೆ ಗಣಿಸದೆ ಮುಂದೆಬರ್ಪುದಂ . . . ಬೆಳ್ಜಸಮಾಳ್ವುದು ಕಜ್ಜಂ (ರಾಜಶೇ. ೦೩-೦೬) ೨. ಮುಂದುವರಿ : ಆಸಕ್ತಿವಹಿಸು : ಕಾಳೂರಿನ ಆಡಿಗಳು ಹೆಣ್ಣು ಕೊಡಲು ಮುಂದೆ ಬಂದರು (ಶವ್ಯಶ. ೦೭). ೩. ಅಭಿವೃದ್ಧಿಯನ್ನು ಹೊಂದು: ಏಳಿಗೆಯಾಗು: ಅವಿರತವಾದ ಅವರ ದುಡಿಮೆಯಿಂದ ಎರಡೇ ವರ್ಷಗಳಲ್ಲಿ ಅವರ ಸಂಸ್ಥೆ ಮುಂದೆಬಂದಿತು (ರೂಢಿ). [< ಮುಂತೆ₁]

**ಮುಂದಂಡೆ₁** (ನಾ). ಮುಂಭಾಗ ; ಮುಂದುಗಡೆ : ಹೆಂಗಸರು ಬಾಗಿಲಿಗೆ ಬಂದು ಗುಡಿಸಲುಗಳ ಮುಂದಂಡೆಯಲ್ಲಿ ನಿಂತುಕೊಂಡು . . . ಅಕ್ಕಪಕ್ಕದಲ್ಲಿದ್ದವರಿಗೆ ಅವನನ್ನು ತೋರುತ್ತಿದ್ದರು (ಪುಶಶು. ೨೭೩).

[ಮುಂ₁ (< ಮುನ್₁) + ದಂಡೆ₂]

**ಮುಂದಂಡೆ₂** (ನಾ). ಮಲ್ಲಯುದ್ಧದ ಒಂದು ಬಗೆಯ ಪಟ್ಟು.—ವರಸೆ : ಚೀರದೇವಂ . . . ಅವನು ತುಡುಂಕೆ ಮುಳಿಸಿಂದವನುಂ ಮೊಜಿದೆಟ್ಟು

ಮುಟ್ಟಿ ಮುಂದಂಡೆಯನೂಱು ಮೇಲ್ವರಿವನೇಂ ಬಗೆ ಸೊರ್ಕಿರೆ ಮುಂದು ದೋರ್ಕರ್ಪೇ (ಶಶಿ. ೯-೦೯೦).

[ ಮುಂ$_1$ ( < ಮುನ್$_1$ ) + ದಂಡೆ$_3$ ( < ದಂಡಿ$_3$ ) ]

**ಮುಂದಟ್ಟು** (ಕ್ರಿ). ೧. ಮುಂದಕ್ಕೆ ಅಟ್ಟು,-ಓಡಿಸು : ಮುಳಿಸಿಂ ಮುಟ್ಟುವ ನಾಯ್ಗಳನೆ ತುಂಡಿಸಲ್ಕೆಂದುಱೆ ಕಿರ್ಗುಟ್ಟುತೆ ಮುಂದಟ್ಟಿ ಪೆಡಂಮುಟ್ಟುತೆ ಸೂಕರನಡರ್ದು ಸಾರ್ದುದು ಮೆಳೆಯಂ (ಗಿರಿಶ. ೦-೦೦೨). ೨. ಮುಂಚಿತವಾಗಿ ಅಟ್ಟು ; ಪೂರ್ವಭಾವಿಯಾಗಿ ಕಳುಹಿಸು : ತನ್ನೊಳ್ ನೆರೆಯಲಿದು ಜಯಶ್ರೀಯೆ ಮುಂದಟ್ಟಿದೆಕ್ಕಾವಳಿಯೆಂ ಬಂತಿರ್ದುದು ಕಂಠಿಕೆಯಂ . . . ಕಟ್ಟಿದಂ ಖೇಚರೇಂದ್ರಂ (ಅಂಜ. ೦-೬೬); ಗಿರಿಜಾವಲ್ಲಭನೊತ್ತೆಗೊಟ್ಟ ಪೆಱೆಯಂ ಸ್ಥಿತಿಕ್ಕವೇಱೆ ಬಂದಪಂ ಹರಿ ಮುಂದಟ್ಟಿದನಿಂದು ಕೌಸ್ತುಭಮಂ (ಸೂಕ್ತಿಸು. ೯-೦೪೪); ಆಳ್ಗಳಂ ಮುಂದಟ್ಟಿ ಸಡಗರದಿ ಬರುತಿರ್ಪನು (ಕಾಬೂರ. ೯೯-೦೬೮).

[ ಮುಂದು$_2$ ( < ಮುಂತು$_2$ ) + ಅಟ್ಟು$_2$ ]

**ಮುಂದಡಿ** (ನಾ). ಕಾಲಿನ ಮುಂಭಾಗ ; ಮುಂಗಾಲು : ಅಡಿಗಡಿಗೆ ಗಡಬಡಿಸುತಿಹ ಮುಂದಡಿ ಎಸೆಯೆ . . . ಹೆದಱೆ ಕಂಗೆಟ್ಟು ಡೆಂಡಣಿಸಿ ಸರಳಸುವ ಹರಿಣಂಗಳಂ ನೋಡಿ ಮುಂದೋಡಿ ಕೆಡಹಿದವು ದೀಹದ ಹುಲಿಗಳು (ಸೋಮಶ. ೪-೨೯). [ಮುಂದು$_1$ (< ಮುಂತು$_1$) + ಅಡಿ$_1$]

**ಮುಂದಡಿಯಿಡು** (ಕ್ರಿ). ಮುಂದಕ್ಕೆ ಹೋಗು ; ಮುಂದುವರಿ : ತುಡುಕುವರೆ ಧನುವಿಲ್ಲ ಮುಂದಡಿಯಿಡಲು ಸಾರಥಿಯಿಲ್ಲ ರಥ ಕಡಿವಡೆದುದು (ಕುಮಾ.ದ್ರೋ. ೬-೪೬); ದೃಢನಿಶ್ಚಯದಿಂದ ಪ್ರಯತ್ನಿಸುವವನಿಗೆ ಎಂತಹ ದೊಡ್ಡಕಾರ್ಯವಾದರೂ ನಿಶ್ಚಯವಾಗಿ ಕೈಗೂಡುವುದು. ಅವನು ಧೈರ್ಯದಿಂದ ಮುಂದಡಿಯಿಡಲಿಕ್ಕೆ ಬೇಕು ಮಾತ್ರ (ದೃಢ. ೪). [ಮುಂದು$_2$ ( < ಮುಂತು$_2$ ) + ಅಡಿಯಿಡು ]

**ಮುಂದರಿ** ' ಮುಂದುವರಿ ' ನೋ.

**ಮುಂದರಿವು** (ನಾ). ಮುಂದಿನದನ್ನು ತಿಳಿಯುವ ಜ್ಞಾನ ; ಭವಿಷ್ಯ ಜ್ಞಾನ : ಇವನು ಮೊದಲು ಟ್ರೈಟನರೊಡನೆ ಯುದ್ಧಮಾಡುತ್ತಿದ್ದ ಸ್ಕೂಸಿಗೆ ಸಹಾಯ ಮಾಡಿದನು. ಹಾಗೆ ಮಾಡಲು ಕಾರಣವೇನೆಂದರೆ ಅವನಿಗೆ ಮುಂದರಿವಿತ್ತು (ಐತ್ಮ.ಕ್ರ. I.X, ೩೬೭).

[ಮುಂದು$_2$ ( < ಮುಂತು$_2$ ) + ಅರಿವು ( < ಅಱಿವು) ]

**ಮುಂದರುಗು** (ಕ್ರಿ). ಮುಂದಕ್ಕೆ ಚಲಿಸು ; ಮುಂದುವರಿ : ಈ ಬಸದೊಳಗೆ ಇರುಳಿದ್ದು ಭಾಸ್ಕರೋದಯವಾದ ಬಳಿಕ ಮುಂದರುಗುವೆವು (ವೆಂಕರಾ. ೨-೦೩-೪). [ ಮುಂದೆ$_3$ ( < ಮುಂತೆ$_2$) + ಅರುಗು$_1$ ]

**ಮುಂದಲೆ** (ನಾ). ೧. ತಲೆಯ ಮುಂಭಾಗ : ಬಲದೆ ಸುಱಿದಾವರ್ತಂ ಪುಂಸ್ತ್ರೀಜನಕ್ಕೆ ಶುಭಪ್ರದಂ . . . ಒಂದೆ ಮುಂದಲೆಯು ಸುಱಿಯಿಂದಕ್ಕುಂ ಕಳ್ಳಂ ಮಹೀವಳಯಾಗ್ರದೊಳ್ (ರೋಶ. ೦೦-೨೩); ಶಾಂಕಿಗೆಸೆದುದು ಮುಂದಲೆಯೊಳಗರಳಿಲೆ ಬಹುರತ್ನನೂತ್ನಕಾಂತಿಪ್ರಕರಂ (ಗಿರಿಶ. ೪-೬೦) : ಮಾರುತಿ ಹೊಯ್ದು ಕರ್ಣನ ಕೆಡಹಿದನು ಮುಱಿಯೊಡೆದನೆದೆಯನು ಹಾಯ್ದು ಮುಂದಲೆಗೆ (ಕುಮಾ.ಕ. ೦೨-೨೬). ೨. ತಲೆಯ ಮುಂಭಾಗದಲ್ಲಿರುವ ಕೂದಲು; ಮುಂಗೂದಲು : ಕೃಷ್ಣೆಯ ಮುಂದಲೆಯಂ ಪಿಡಿದೆಱೆವಲ್ಲಿಯೆ ತಲೆವಿಡಿದರ್ ನಮ್ಮ ಬೀರಮಂ ಕೌರವರುಂ (ಪಂಪಭಾ. ೬-೩೬) ; ಮುಂದಲೆಯಂ ಪಿಡಿದನ್ನೆಯ ಮುಂದೆಱೆವನಲಱೆಯನುಯ್ದು ಪರಿಭವಿಸಿ ವಳ್ಳಿಂಮುರಿದು ಸೊರ್ಕಿದವನಂ ಕೊಂದಂ ಕುರುಪತಿಯುಮಂ ಕೊಲಲ್ಪಡೆದವನೇ (ಗದಾಯು. ೬-೨೬); ನಿಲಲಿ ಸುಭಟರು ಜೋಡಿಯಲಿ ಪರಬಲಕೆ ಜಾಱುವ ಜಯಸಿರಿಯ ಮುಂದಲೆಯ ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುಮಾರಾಯ (ಕುಮಾ.ಕ. ೨-೩೦). ೩. ಮುಂಭಾಗ : ಮುಂದುಗಡೆ : ಮಹಾಲಿನ ಮುಂದಲೆಯುಪ್ಪರಿಗೆಯ ನೆಲೆ ಮೆಟ್ಟಿದೆ ಗುಡಿಸಲೋಪರೊಲಿದೆ (ಸಿದ್ಧ. ೨-೦೦). ೪. ಮುಂದಿನದು ; ಭವಿಷ್ಯಕ್ಕೆ ಸೇರಿದುದು : ಅಂಚು ಅಂಚುಗಳಲ್ಲಿ ಬಳಿಯ ಇರಿತ ಹದನವಾಗುತ್ತಿದ್ದರೂ ಮುಂದಲೆಯ, ಸಿಹಿಕಹಿಗಳಿಗಾಗಿ ಬಳಲಬೇಕಾಗಿತ್ತು (ರಕ್ತರ. ೩೪೬).

ಮುಂದಲೆಯ ಹೂ = ಮುಂದಲೆಬೊಟ್ಟು : “ ಮುಂದಲೆಯ ಹೂ ಲಲಾಮಕವೆಂಬುದು ” (ಹರಾಯು. ೯೦-೩೯೯).

[ ಮುಂ$_1$ ( < ಮುನ್$_1$ ) + ತಲೆ$_1$ ]

**ಮುಂದಲೆಗೊಡು** (ಕ್ರಿ). ತಲೆದೋರು : ಬೆಱಗು ಬೆಳೆದುದು ಮನದ ಮಿಡುಕಿನ ಮಱುಕ ಮುಂದಲೆಗೊಟ್ಟುದಱಿವಿನ ಸೆಱಗು ಹಾಱಿತು (ಕುಮಾ.ಸ. ೦೯-೨೮). [ಮುಂದಲೆ + ಕೊಡು$_1$ ]

**ಮುಂದಲೆಗೊಳ್** (ಕ್ರಿ). ಮುಂಗೂದಲನ್ನು ಹಿಡಿದುಕೊಳ್ಳು : ಕೆಡೆನುಡಿದಿಂತು ನಡೆದು ಮುಂದಲೆಗೊಂಡು ಕೆಡಹಿ ಕೆಕ್ಕಳಗೆಳದರ್ದಗೆ ಅಡಿಯಿಟ್ಟು ಕರುಳ ಸೀಱುಂಬುಳಾಡುವನೆಂದು ಪೊಡಗೆ ಕೂರಸಿಯಿತ್ತು ದಾಗ (ತ್ರಿಪುರ. ೫೫೩). [ ಮುಂದಲೆ + ಕೊಳ್$_1$ ]

**ಮುಂದಲೆಬೊಟ್ಟು** (ನಾ). ಹೆಂಗಸರು ತಲೆಯ ಮುಂಭಾಗದಲ್ಲಿ ಧರಿಸುವ ಒಂದು ಬಗೆಯ ಆಭರಣ ; ಬೈತಲೆಬೊಟ್ಟು : ಮುಂದಲೆಬೊಟ್ಟು :— ಸ್ತ್ರೀವೇಷಕ್ಕೆ ಮಾತ್ರವೇ ಮೀಸಲಾಗಿರುವ ತೊಡಿಗೆ ಇದು (ಶಾಕೀಸು. ೪೬).

[ ಮುಂದಲೆ + ಬೊಟ್ಟು$_2$ ( < ಬಟ್ಟು) ]

**ಮುಂದಲೆವಣಿ** (ನಾ). = ಮುಂದಲೆಬೊಟ್ಟು : ವಣಿಜಸತಿಯರು . . . ಹಿಣಿಲ ಚೂರಿಯ ಹೊಳೆವ ಮುಂದಲೆವಣಿಯ ಮುಕುರ ಮಹಾಂಬುಜದ ಪವರ್ಣಾಣರ್ಣಾಣತ್ಕೃತಿ ಜಡಿಯೆ ನಡೆದುದು ಬೀದಿಬೀದಿಯಲಿ (ಕುಮಾ.ಗ. ೧೦-೦೬). [ ಮುಂದಲೆ + ಮಣಿ$_3$ ]

**ಮುಂದಲೆವಾಯ್** (ಕ್ರಿ). ತಲೆಯ ಮುಂಭಾಗಕ್ಕೆ ಹಾಯು,- ಎರಗು : ಹೊಯ್ದರೋಳಬಿದ್ದವರ ಮುಂದಲೆವಾಯ್ದು ತಿವಿದರು . . . ಉಭಯದ ಕಯ್ದುಗಾಱರು ನೀಗಿದರು ನಿಜಪತಿಯ ಹಣರೂಣವ (ಕುಮಾ.ಅ. ೦೯-೦೦).

[ಮುಂದಲೆ + ಪಾಯ್$_1$]

**ಮುಂದಲೆವಿಡಿ** (ಕ್ರಿ). ತಲೆಯ ಮುಂಭಾಗದ ಕೂದಲನ್ನು ಹಿಡಿದು ಕೊಳ್ಳು : ಮುಂದಲೆಯ ಜುಟ್ಟನ್ನು ಹಿಡಿದುಕೊಳ್ಳು : ಪಾಂಚಾಲಸುತನು . . . ಐದಿ ಮುಂದಲೆವಿಡಿದು ಬಾಗಿಸಿ ಕೊಯ್ದನಾತನ ಕೊರಳನು (ಕುಮಾ.ದ್ರೋ. ೦೯-೨); ಅಪಸ್ಮಾರವತಿಕೋಪದಿಂ ರುದ್ರನಂ ಮುತ್ತೆ ಮುಂದಲೆವಿಡಿದು ಕೆಡಹಿ ಪಾದಂಗಳಿಂ ತೊತ್ತಳಂದುಳಿದು ತಾಂಡವ ರೂಪಮಂ ಧರಿಸಿ ಕುಣಿವುತಿರೆ (ಶಿವಪು. ೨೦-೪೩).

[ಮುಂದಲೆ + ಪಿಡಿ$_1$]

**ಮುಂದಳ$_1$** (ನಾ). ಮುಂಭಾಗದಲ್ಲಿರುವ ಸೈನ್ಯ ; ಮುಂಚೂಣಿಯ ಪಡೆ : ಮುಂದಳವನು ಪೊಯ್ಯುತ ಕದನದೊಳುರುಳದನವನು (ಪರ್ಣಶ. ೬-೯೪); ಜಪಾನದವರು . . . ಮುಂದುವರಿಯುತ್ತ ಬಂದರೆ. ಅವರ ಮುಂದಳವನ್ನು ತಡೆಯುವದಕ್ಕಾಗಿ ಮೊಗಲ ಸರಾಯಿ ಎಂಬುದು ಬಿರಡನೆಯ ಸೇನಾಮುಖವೆಂದು ಬಗೆಯಲಾಯಿತು (ಹರಹ. ೪೬).

[ ಮುಂ$_2$ ( < ಮುನ್$_2$ ) + ದಳ$_2$ (=ದಲ) ]

**ಮುಂದಳ$_2$** (ನಾ). ಮುಂಭಾಗದ ನೆಲ,—ಭೂಮಿ : ಗೋದಾವರಿಯು . . .ತುದ ನೀರನ್ನು ಬಾಗಿಲದ ಮುಂದಳಕೆ ಚಿಮುಕಿಸಿದಳು (ರಕ್ತರ. ೩೪೬). 'ಮನೆದಳ' ಪರಾ. [ಮುಂ$_2$ (< ಮುನ್$_2$) + ತಳ (= ತಲ) ]

**ಮುಂದಳರ್**, ಮುಂತಳರ್ (ಕ್ರಿ). = ಮುಂದರುಗು : ಮೋನದೊಳ್ ಮುಂದಳರುತ್ತೀ ಪಾಡಿದಾಕೆಗಳ್ಗೆ ಪಾವುಡಮಂ ಕುಡುವೆಂ (ಶಶಿ. ೦೬-೦೬೫೪). **ಮುಂತಳರ್** : ಮುಂತಳರ್ದು[ಪಾಠಾಂ. ತಣದಿ] ಮಿಗೆ ತನ್ನ ಬಾಂಧವ ಸಂತತಿಯನೊಡಗೊಂಡು ನಿಷಧನ ಚಿಂತೆಯನು ಪರಿಹರಿಸಬೇಕೆಂದೈದಿತಾ ಹಂಸೆ (ನಳಚ. ೨-೯೨). [ಮುಂ$_2$ (<ಮುನ್$_2$) + ಅಳರ್]

**ಮುಂದಳೆ** (ಕ್ರಿ). ಮುಂದಕ್ಕೆ ಚಲಿಸು, – ಸಾಗು : ಆ ಬಲಂ ಕಂಡುದಪ್ರ ಮಾರ್ಗದೊಳೆ ಮುಂದಳೆಯುತಿಹ ಮೇಘನಾದನಂ (ಕೃ.ಬಿಶಾ. ೯-೦೩) ; ಸೌಮಿತ್ರಿ ಮತ್ತೆ ಭೂಜಾತೆಸಹಿತ. . . ಮುಂದಳೆದುಗ್ರಮೃಗಪಕ್ಷಿಗಣದಿಂದೆ ಘೋರ್ವಿಸುವ ಹಳುವಮಂ ಪೊಕ್ಕನು (ಕೃ.ಬಿಶಾ. ೦೯-೭).

[ಮುಂ$_2$ (< ಮುನ್$_2$) + ತಳೆ$_7$]

**ಮುಂದಱ್** (ಕ್ರಿ). ೧. ಮುಂದಾಗುವುದನ್ನು ತಿಳಿ : ಭವಿಷ್ಯವನ್ನು ತಿಳಿದುಕೊಳ್ಳು : ಅಂತೊಗೆದನೇಕೋತ್ಪಾತಂಗಳಂ ಕಂಡು ಮುಂದಱಿವ ಚದುರ ವಿದುರನಿಂತೆಂದಂ (ಕಂಪಶಾ. ೦-೦೩೨ ವ) ; ಮುಂದಱಿಯದೆ ಪರೂಥವ ಕಳುಹಿ ಕೆಟ್ಟೆವು ಕಲಹಕವನಿಪನ . . . ಎಂದಳೆವಾಱಿತು ಸಕಲಸುರನಿಕರ (ಕೂರಶಾ. ೭-೫೦-೦೯). ೨. ಮುಂದಾಲೋಚನೆಯಿಂದ ಕೂಡು ; ದೂರದೃಷ್ಟಿಯನ್ನು ಹೊಂದು : ತಂದೆನಿಂದು ಮುಂದಱಿಯದೆ ಸೀತೆಯಂ (ಕಂಠಾಪಶಾ. ೯-೦೩೦) : ಕಣ್ಣು ಕೋಪಕ್ಕೆ ಮುಂದಱಿಯದೆ ನುಡಿದೆ ಮನ ಮೆಚ್ಚಿ ಮರುಳಾದೆ ನೋಡವ್ವಾ (ಬಸವ. ೩೨೦) : ಮುಂದಱಿಯದ ಮುಗ್ಧೆಯೆಂದುದಕ್ಕೆ ನಗುತ್ತಂ ನಡೆದು (ಅಜಿತ. ೯-೨೩ ವ). ೩. ದಾರಿ ಕಾಣು ; ದಿಕ್ಕು ತೋಚು : ಶಿವಶಿವಾ ಬಲುಮಬ್ಬಿನಲಿ ಮುಂದಱಿಯದೆನ್ನಯ ಕೊಬ್ಬನೇವಣ್ಣಿಸುವೆನು (ಕುಮಾ.ಶೀ. ೭-೭೭) ; ಇತ್ತಲವನಿಪನಸುರಹರನ ಕಳುಹಿದ ಚಿಂತೆಗಿತ್ತು ನಿಜಬುದ್ಧಿಯಂ ಮುಂದಱಿಯದಿರೆ (ಕೃ.ಬಿಶಾ. ೫-೨೦) ; ಭಾವಕಿಯೊರ್ವಳ ಬೆನ್ನಟ್ಟಿ ಕಡು ಮದನಾವಸ್ಥೆಯಿಂ ಮುಂದಱಿಯದೆ ನೀವಿಯನೆತ್ತಿ ಹಿಂಗೂಡಿ ನಗಿಪ ಹಾಸ್ಯ ಭಾವದ ವಿಟನೊರ್ವನೆಸೆದ (ಕಂಪಶಾ. ೬-೦೨೬).

[ಮುಂದು$_1$ (< ಮುಂತು$_1$) + ಅಱ್]

**ಮುಂದಾಗು$_1$** 'ಮುಂತು$_1$' ಪರಾ.

**ಮುಂದಾಗು$_2$** 'ಮುಂತು$_2$' ಪರಾ.

**ಮುಂದಾಲೋಚನೆ** (ನಾ). ೧. ಮುಂದಾಗುವುದರ ಬಗೆಗಿನ ಆಲೋಚನೆ; ಮುಂದಿನ ಆಲೋಚನೆ : ಚಂದ್ರನಿಗೊ ಮಂಗಳಗ್ರಹಕ್ಕೊ ವಲಸೆ ಹೋಗುವ ಪ್ರಯತ್ನ ಈ ಮುಂದಾಲೋಚನೆಯಿಂದಲೆ ಆರಂಭವಾಗಿರ ದಿದ್ದರೂ, ಅದು ಬೇಗನೆ ಕೈಗೂಡಿದಷ್ಟು ಕ್ಷೇಮವೆಂದು ಕಾಣುತ್ತದೆ (ದೇಶಕ್ಕ. ೪೬). ೨. ವಿವೇಕ : ವಿವೇಚನೆ : ನಾನು ಆಗ ಮುಂದಾಲೋಚನೆ ಯಿಲ್ಲದೆ ಆ ಕೆಲಸವನ್ನು ಮಾಡಿದ್ದರಿಂದ ಈಗ ಪಶ್ಚಾತ್ತಾಪಪಡುತ್ತಿದ್ದೇನೆ (ರೂಢಿ). [ಮುಂದು$_2$ (< ಮುಂತು$_2$) + ಆಲೋಚನೆ]

**ಮುಂದಾಳ್**, ಮುಂದಾಳು(ನಾ). ೧. ಎಲ್ಲರಿಗಿಂತ ಮುಂದೆ ಇರುವವನು; ಮುಖಂಡ ; ನಾಯಕ : 'ಮುಂದಾಳ್ತನ' ಪರಾ. **ಮುಂದಾಳು** : ೧. ಆತ್ಮನಿರೀಕ್ಷಣೆಯಿಂದಲೇ ನಾವು ಮುಂದುವರೆಯಬಹುದು ಎಂಬ ಮುಂದಾಳುಗಳ ಭಾಷಣದಿಂದ ಏನೂ ಪ್ರಯೋಜನವಿಲ್ಲ (ಅಕಪಾ. ೩) ; ರಾಜರೂ ನಮ್ಮೂರಿನ ಒಬ್ಬ ಗಣ್ಯವ್ಯಕ್ತಿಗಳೆಂದೂ ಮುಂದಾಳುಗಳೆಂದೂ ಮಹಾಪುರುಷರೆಂದೂ ತಿಳಿದೇ ಇವರ ಸಹಾಯವನ್ನು ಅಪೇಕ್ಷಿಸಿರಬೇಕು (ರಾಜುಶ. ೩೦) ; ಶಾಸ್ತ್ರಜ್ಞರಲ್ಲಿ ಅವರು ಮುಂದಾಳು (ಪನ್ನಿಕೊ. ೪೦). 'ಮುಂದಾಳುತನ' ಪರಾ. ೨. ಮುಂದಕ್ಕೆ ಕರೆದೊಯ್ಯುವವನು : ಮುನ್ನಡೆಸುವವನು : ಅಂಧನ ಕೈಲಿ ಕೋಲಿತ್ತು ಕರದೊಯ್ವನು ಮುಂದಡಿ ತಪ್ಪಿ ಗುಂಡಿಗೆ ಕೆಡಹಲು ಅಂಧಕನ ತಪ್ಪೊ ಮುಂದಾಳಿನ ತಪ್ಪೊ (ಶಪಶ. ೦೨೦-೩). [ಮುಂದು$_2$ (< ಮುಂತು$_2$) + ಆಳ್$_3$]

**ಮುಂದಾಳಿಕೆ** (ನಾ). ನಾಯಕತ್ವ ; ಮುಂದಾಳುತನ : ಅವರ ಮುಂದಾಳಿಕೆಯಲ್ಲಿ ಇದರ ಕೆಲಭಾಗವನ್ನು ರಂಗದಲ್ಲಿ ತೋರಿ ನನ್ನ ಮನಸ್ಸಿಗೆ ಉಲ್ಲಾಸವನ್ನು ತಂದಿತು (ರೋಕುಶ. X, ಮುನ್ನುಡಿ).

[ಮುಂದಾಳು (< ಮುಂದಾಳ್) + – ಇಕೆ]

**ಮುಂದಾಳು** 'ಮುಂದಾಳ್' ನೋ.

ಮುಂದಾಳುತನ 'ಮುಂದಾಳ್ತನ' ನೋ.

**ಮುಂದಾಳ್ತನ**, ಮುಂದಾಳುತನ (ನಾ). = ಮುಂದಾಳಿಕೆ : ಹಿಂದುಸ್ಥಾನ ವಿಂದು ಪೂರ್ಣಸ್ವಾತಂತ್ರ್ಯ ಪಡೆದಿವೆ. ಪೌರ್ವಾತ್ಯಜಗತ್ತಿನ ಮುಂದಾಳ್ತನದ ದಾರಿಯಲ್ಲಿ ಹೆಜ್ಜೆ ಇಟ್ಟಿದೆ (ಅಮುಗಾಂ. ೮) ; ಯಾವ ಕಾರ್ಯಕ್ರಮವಾಗ ಬೇಕಾದರೂ ರಂಗನ ಮುಂದಾಳ್ತನ ಬೇಕೇಬೇಕು (ರಂಗರೂ. ೨೮). **ಮುಂದಾಳುತನ**: ಸಮಾಜದ ಮುಂದಾಳುತನವನ್ನು ವಹಿಸಿ (ತಿಪ್ಪೆರ. ೦೮೯).

[ಮುಂದಾಳ್ + – ತನ]

**ಮುಂದಿಕ್ಕು**, ಮುಂತಿಕ್ಕು (ಕ್ರಿ). ೧. ಮುಂಭಾಗದಲ್ಲಿ ಇಡು ; ಎದುರಿಗೆ ಇರಿಸು : ಸೂಟ್ಟಟ್ಟನಾಗಳ್ ಜವಂ ಒಡಿದೀಡಾಡುವ ಮಾಟ್ಕೆಯಂತೆ ಪಲರಂ ಕೊಂದಿಕ್ಕಿ ಮೆಯ್ಮುಟ್ಟಿವಂದೆಡೆಯೊಳ್ ಮಾಣದುರುಳ್ಚಿ ಕಟ್ಟಿ ರಿಪುವಂ ಮುಂದಿಕ್ಕಿದಂ ದ್ರೋಣನಾ(ಕಂಪಶಾ. ೨-೬೨). ೨. ಮುಂದೆ ಮಾಡು ; ಮುಂದೆ ಒಡ್ಡು : ಪರುಸದಿಂ ಕೇಪನಂ ಮುಂದಿಕ್ಕಿಕೊಂಡು ಮಣಿವರಸಿ ರಣಮಂಡಲಿಕ ಕಲಿಬಭ್ರುವಾಹನಂ ಬರಲು (ಕೃ.ಬಿಶಾ. ೨೫-೪೩). **ಮುಂತಿಕ್ಕು** : ೨. ಈ ಸಾಮಮಂ ಮುಂ ಪ್ರಯೋಗಿಸದೇ ಕೆಟ್ಟಪುದೆಂದು ದಂಡಮಂ ಮುಂ ಮುಂತಿಕ್ಕುವಂ ಮಂತ್ರಿಯೇ (ಕಂಠಾಪಶಾ. ೯-೦೯).

[ಮುಂದು$_2$ (< ಮುಂತು$_2$) + ಇಕ್ಕು]

**ಮುಂದಿಡು**, ಮುಂತಿಡು (ಕ್ರಿ). ೧. = ಮುಂದಿಕ್ಕು ೧ : ಇವು ದಿವ ದೊಳಗಗ್ಗಳವೆನಿಸುವ ರತ್ನವ್ರಾತಮೆಮ್ಮ ಮನೆಯೊಳ್ ವಿಗಿಲಪ್ಪವು ನಿಧಿಗಧಿವಾಸಿಸಲಪ್ಪವೆಂದು ರತ್ನಂಗಳನಿತುಮಂ ಮುಂದಿಟ್ಟಂ (ಅಜಿತ. ೦೨-೦೬) ; ಇತ್ತಲ್ ಸೌಮಿತ್ರಿಯುಮಂ ತನ್ನ ಮನೆಗೆ ಬಂದು ಪೊನ್ನ ಪುಡಿಯ ನತ್ತವಿರ ಮುಂದಿಟ್ಟು ಪೊಡಮಟ್ಟೊಡೆ (ಕಂಪಶಾ. ೦೩೬-೦) ; ದಿನಮಣಿ ಯರುಣನ ಮುಂದಿಡದೊಡವನೆಂತು ತಮಮಂ ತೂಳ್ವಂ (ಶಾಕುಂತ. ೦೦೦-೦೬೭). ೨. ಮುಂದುಗಡೆಯಲ್ಲಿ ನಿಲ್ಲಿಸು,– ಇರುವಂತೆ ಮಾಡು : ಮುಂದುಮಾಡಿಕೊಳ್ಳು : ಅಲ್ಲಿಯ ಮುನಿಜನಮೆಲ್ಲಮಾ ಕೂಸುಗಳುಮಂ ಕುಂತಿಯುಮಂ ಮುಂದಿಟ್ಟೊಡಗೊಂಡು ನಾಗಪುರಕ್ಕೆ ಪಂದು (ಕಂಪಶಾ. ೨-೨೮ ವ) ; ಆನುಂ ಪ್ರಲಂಬಪ್ರಸೂದನನುಂ ಯಾದವಪರಿಸ್ಪಂದಮುಮಂ ಮುಂದಿಟ್ಟೊಡಗೊಂಡು ಪೋದೆವು (ಜಗನ್ನಾ. ೯-೮೪ ವ) ; ಕೇತಯ್ಯನಂ ಬಸದನನಸಂಖ್ಯಾತರ ಸಮಕ್ಷದೊಳನುನಯದಿ ಲಾಲಿಸುತ ಹರುಷಂಬಟ್ಟು ಮುಂದಿಟ್ಟು . . . ಸಾಷ್ಟಾಂಗದಂಡಪ್ರಣಮಮಂ ಮಾಡಿ (ಬಸವ. ೩೭-೫೦). ೩. ಮುಂದುವರಿ ; ಮುನ್ನುಗ್ಗು : ಕೊಂದು ಜಟಾಯುವನಾತು ಮುಂದಿಟ್ಟಾ ಜನಕಸುತೆಯನೊಯ್ದಂ (ಶಬರಾ. ೩-೦೯೪). ೪. ಮುಂದೆ ತರು ; ಗಮನಕ್ಕೆ ತರು: ಸೂಚಿಸು: ಬಯ್ಚಿಟ್ಟು ಕುಡುವುದೀ ಪಾತ್ರೆಯಂ ಎಂದದನವರ ಪಶದೊಳಿರಿಸಿ ಹತ್ತಡಿಯಿಟ್ಟು ಬಂದು ಮತ್ತೊಂದು ಕುಹಕ ವನಲ್ಲಿ ಮುಂದಿಟ್ಟು . . . ಇದ ನೀವೆ ಬಲ್ಲಂತೆ ಪರಿರಕ್ಷಿಸುವುದೆನುತ (ತಿರುಕ. ದೀ. ೦೦-೦೮) : ಅದೇ ಸಮಯದಲ್ಲಿ ಮನೆಯ ಯಜಮಾನಿತಿ ತನ್ನ ದೊಂದು ಬೇಡಿಕೆಯನ್ನು ಮುಂದಿಟ್ಟಳು (ಯೋಧ. ೨೯). ೫. ಒಪ್ಪಿಸು ; ಅರ್ಪಿಸು ; ಕೊಡು : ಬೆಸನಾವುದೆಮಗೆ ಬೆಸನಂ ಬೆಸಸೆನೆಯೇಬಾಟ್ಕೆ ಯೆಂದು ಮುಂದಿಟ್ಟರ್ ಸ್ರಗ್ವಸನವಿಲೇಪನಭೂಷಾಪ್ರಸರಂಗಳನಲ್ಲಿ ಕೆಲಬರತಿಜಡಮತಿಗಳ್ (ಅಜಿತ. ೯-೧೨೫) ; ಸಂಗಂಗೆ ಸಾಷ್ಟಾಂಗದಿಂವಲ್ಲಿ ಪೊಡಮಟ್ಟು ಹಿಂಗದೀಶಂಗೆ ಭಯಭಕ್ತಿಯಿಂ ಮುಂದಿಟ್ಟು . . . ಬೀಳ್ಕೊಂಡ ನಪ್ಪಜಂ ಲಾಲಿಸುತ್ತಾಲಿಸುತ (ಬಸವ. ೩-೭). ೬. ತೋರ್ಪಡಿಸು; ಪ್ರಕ ಟಿಸು : ಪ್ರದರ್ಶಿಸು : ಸಪ್ತಕಕ್ಷಪರಿಕ್ಷಿಪ್ತಮಾಗಿ ಅಡಕಿಲ್ಗೊಂಡಿದ್ದ ಮೇಟಿಂ ಕುಳನಗಮೆನೆ ಶದ್ಯೂಮಿಕಾಸಪ್ತಕಂ ಮುಂದಿಡೆ ಚೆಲ್ವಂ (ಚಂದ್ರಪ್ರ. ೦-೦೪೨). ೭. ಪ್ರತಿಯಾಗಿ ನಿಲ್ಲಿಸು; ಎದುರಾಗಿ ಒಡ್ಡು : ಲಲನಾ ಸ್ವರ್ಣಘನಸ್ತನೋಲ್ಲಸಿತಲಾವಣ್ಯಾಮೃತಸ್ನಾನಮಂಗಲಮಂ ಮುಖ್ಯಮನಂ ದೊಡರ್ಚಿ ನೃಪಸೌಂದರ್ಯಕ್ಕೆ ಮುಂದಿಟ್ಟು ತನ್ನಲರ್ವಿಲ್ಲಂ . . . ಅರ್ಘ್ಯ

ಮನೆತ್ತಿ ಮನ್ಮಥನೃಪಂ ಕೊಟ್ಟಂ ಮಹೋತ್ಸಾಹದಿಂ (ಪುಲ್ಲಿಕೆ. ೩-೩೦). ೮. ಉಂಟುಮಾಡು ; ಒದಗಿಸು : ಉದಯಂಗೆಯ್ದುಮೃತಾಂಶುಬಿಂಬ ಮೆರ್ದೆಗಂ ಕಣ್ಗಂ ಮಹೋತ್ಸಾಹದೊಂದೊದವಂ ಮುಂದಿಡುವಂತೆ ತನ್ನ ಭುವನಪ್ರಖ್ಯಾತಸೌಂದರ್ಯದಿಂ . . . ಮನಂಗೊಳಿಸಿದಂ ಸಂಸಾರಸಾರೋದಯಂ (ಆದಿಪು. ೩-೯೨) ; ಜವದ ಜಾಣುಮೆಯುಱಿದು ಸೂಳ್ಗಳು ಸವಿಯು ಮುಂದಿಡೆ ಮೆಱೆವ ಮೈಗುಡೆ ಸವಿಸುಸಿಲಿ ಸುಖರಸದೊಳೋಲಾಡಿಸಿದನಾ ಕುವರ (ಸಾಳ್ವಭಾ. ೪-೧೦); ತನ್ನ ಕುಲಕಂ ಚಲಕಂ ಮುಂದಿಟ್ಟು ಕುಂದ ನೊಂದಿದ ದಂದುಗದೊಳ್ ಕೂಂಟ ನಡೆವ ಕಲಿಯುಂ ಕಲಿಯೇ ! (ರಾಮಾಶ್ವ. ೦೨೬-೧೪). ೯. ನೆಪವಾಗಿ ಇಟ್ಟುಕೊಳ್ಳು; ಕಾರಣವಾಗಿ ಮಾಡಿಕೊಳ್ಳು : ಮುಂದಿಟ್ಟು ಪಗೆಕಾಯ್ದ ಪೊಲುನೆಯ್ಕೇಸ ಕಲಹಮನ್, ಅರ್ಸ್ಟಟಿಸಿ ಮುಳಿದಾರ್ದು ನಾಡ ಮೇಲ್ ನುರ್ಗಿದನ್ (ಅಂತಿಗೊ. ೭-೯೩). **ಮುಂತಿಡು :** ೧. ಜಾಂಬವತಿಯೆಂಬ ಆತನ ಕುಮರಿ ಕನ್ಯಾರತ್ನವು ಈ ಶಮಂತರತ್ನವನ್ನು ಸಹಾ ಕೊಟ್ಟು ನನ್ನ ಮನ್ನಿಸಿದನು ಎಂದು ಅವರುಗಳ ಮುಂತಿಟ್ಟು (ತಾತ್ಪ. ೦೦೦-೨). ೨. ಅಂತು ಧರ್ಮಪುತ್ರನಂ ಮುಂತಿ[ಪಾಠಾಂ. ದಿ]ಟ್ಟು ಭೀಮಾರ್ಜುನನಕುಲಸಹದೇವರುಂ ದುರ್ಯೋಧನನಂ ಮುಂತಿಟ್ಟು ಯುಯುತ್ಸು ದುಶ್ಶಾಸನ. . . ಸದ್ಬಾಹುಗಳ್ ಮೊದಲಾಗಿ ನೂರ್ವರುಂ ಬಂದು (ಶಂಕಭಾ. ೨-೭೦ ವ). ೪. ಹಿಮಕೃದ್ವಂಶಜರಪ್ಪ ಪಾಂಡುಸುತರಂ ಕೆಯ್ಕೊಂಡು ನಿನ್ನಯ್ದು ಬಾಡಮನಿತ್ತುಂ ನಡಪೆಂದು ಸಾಮಮನೆ ಮುಂ ಮುಂತಿಟ್ಟೊಡೆ (ಶಂಕಭಾ. ೯-೬೮). ೬. ಶಿವಲಿಂಗ[ಂ] ಮೂರ್ತಿಗೊಂಡು ನಂದಿಯು ಹೃದಯಕಮಳಮನೊತ್ತರಿಸಿ ಪೊಱಮಟ್ಟು ಸದ್ಯೋಜಾತಮುಖಮಂ ಮುಂತಿಟ್ಟೊಳಗೊಳಗೆ ಗಳಗಳನೆ ನಡೆದು ಬರೆ (ಬಸರ. ೪-೬೦). ೧೦. ಮುಂದೆ ನಿಲ್ಲು; ಪ್ರಧಾನವಾಗಿ ನಿಲ್ಲು : ಅಂತವರ್ಗೆ ಜಾತಕರ್ಮನಾಮಕರಣಾನ್ನಪ್ರಾಶನಚೌಲೋಪನಯನಾದಿಷೋಡಶಕ್ರಿಯೆಗಳಂ ಗಾಂಗೇಯಂ ತಾಂ ಮುಂತಿಟ್ಟು ಮಾಡಿ (ಶಂಕಭಾ. ೦-೬೭ ವ). [ಮುಂದು$_2$ (< ಮುಂತು$_2$) + ಇಡು$_1$]

**ಮುಂದಿರ್,** ಮುಂತಿರ್ (ಕ್ರಿ). ೧. ಮುಂಭಾಗದಲ್ಲಿರು; ಎದುರಿನಲ್ಲಿರು; ಸಮ್ಮುಖದಲ್ಲಿರು : ಧುರದೊಳ್ ಮೂಱುಂಲೋಕಂ ನೆರೆದಿರೆಯುಂ ಕುಡುವ ಪೊ[ಟ್ಟ]ಱೊಳ್ ಮೇರುವೆ ಮುಂದಿರೆಯುಂ ಬೀರದ ಬಿಯದಂತರಕ್ಕೆ ಕಿಱಿದೆಂದು ಚಿರತಿಪಂ ಪ್ರಿಯಗಳ್ಳಂ (ಶಂಕಭಾ. ೦-೪೮); ಕುರುಡನೂರ್ವರ್ನೆರೆದುಂ ಸುರಗಿರಿ ಮುಂದಿರ್ದಾದೊಡಂ ಕಾಣ್ಬರೆ (ದವರ್ಣಪು. ೭-೬೬); ಮುಂದಿರ್ದ ವೃಷಭಮುಖನಂ ಕರೆವುತಿರಲಲ್ಲಿ ಹರುಷದಿಂದೈತಂದು ಕೈಮುಗಿದು ನಿಂದಿರಲು (ಬಸರ. ೦-೨೦೩). **ಮುಂತಿರ್ :** ೧. ಮುಂತಿರೆ ಪಂಚಲಂ ಬೆಸಸಿ ಪಿಂತಿರೆ ಸೂಮ್ಮನಡಿತೈಲನಾಂತ ಸಾಮಂತಕದಂಬಕಂ ತೊಲಗೆ ಪಂಚಲನಂ ಪೆಣದಿಕ್ಕಿ ಕೊಂದ ಶೌರ್ಯ್ಯಂ ತನಗಾಗೆ (ಇಅ. XII. ೯೭-೪; 1187). ೨. ಮುಂದಾಗಿರು; ಪ್ರಮುಖವಾಗಿರು : ಮುಂತಿರೆ ಕೂರ್ಪ ನಯಜ್ಞತೆ ಪಿಂತಿರೆ ರಿಪುಮಂಡಳಂಗಳಂ ಕೊಂಡಿರೆ ನಿಶ್ಚಿಂತಮನಸಿ ಕೂರ್ಪಂ ತರ್ಪಂತುಪಶಮಮಿರ್ದಾ ನರೇಂದ್ರೋತ್ತಮನೊಳ್ (ಶಾಂತಿಪು. ೦೦-೦೦೦). [ಮುಂದು$_2$ (< ಮುಂತು$_2$) + ಇರ್$_1$]

**ಮುಂದಿರಿ** (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ; ಗೇರು ; ಗೋಡಂಬಿ : 'ಮುಂದಿರಿಪಪ್ಪು' ಪರ್ಯಾ.

[ದೇ.॥ ತಮಿ. ಮುನ್ತಿರಿ ; ಮಲ. ಮುನ್ದಿರಿ]

**ಮುಂದಿರಿಪಪ್ಪು** (ನಾ). ಗೇರುಪಪ್ಪು : ಗೋಡಂಬಿ, ಗೇರುಪಪ್ಪು, ಮುಂದಿರಿಪಪ್ಪು, ಜಿಡಿ (ಪ್ರಸಿ. ೬-೦೦೩).

[ಮುಂದಿರಿ + ಪಪ್ಪು (< ಪರುಪ್ಪು)]

**ಮುಂದಿರಿಸು,** ಮುಂತಿರಿಸು (ಕ್ರಿ). ೧. = ಮುಂದಿಕ್ಕು ೧ : ಲವಲವಿಕೆಯುಂ ಪರಿಯಣಮಂ ಬಿತ್ತರಿಸಲುಂ ಪದ್ಮಿಕೆಯನಗಲಂ ತಂದು ಮುಂದಿರಿಸಲುಂ . . . ಪೇಟಿಪ್ಪಾಗಳ್ (ಅಬಿ. ೭-೨೦ ವ); ಸಂದು ಪಿಂಗಿಲಿಲ್ಲದಡೆ ತಪ್ಪೆಂತೆಂದು ಭಂಡಾರದ ಸಿಪ್ಪಡಿಯುಂ ಮುಂದಿರಿಸಿ ಬಸವಣ್ಣನಾ ಕರಣಿಕರನೋಡಿಸಲು (ಬಸಪು. ೩೦-೨೯). ೨. ಮುಂಭಾಗದಲ್ಲಿ ಇರುವಂತೆ ಮಾಡು; ಮುಂದುಗಡೆಯಲ್ಲಿ ನಿಲ್ಲಿಸು : ತನ್ನಯ ರಾಣಿವಾಸವಂ ಕರೆಸುತ್ತ ಬಂದವರನೋಯಾರದಿಂದ ಮುಂದಿರಿಸುತ್ತ ತೋಱಲೆಲ್ಲರನೊಲ್ಲೆನೊಲ್ಲೆನೆಂದೆನುತಮಿರೆ (ಇಹರ. ದೀ. ೩೩-೧೨). **ಮುಂತಿರಿಸು :** ೧. ಸಕಲ ವಸ್ತ್ರಾಭರಣದುಡುಗೊಱೆಗಳ ಮುಂತಿರಿಸಿ ಸತ್ಕಪೂರಂಗೆಱಗಿ ತನ್ನ ಮನೆಗಂ ತಿರುಗಿದಂ ಬಿಜ್ಜಳಂ (ಕಬಿ. ೩-೧೮). ೨. ನೂರ್ವರ್ ತಮ್ಮಂದಿರುಮಂ ಪಿಂತಿರಿಸಿ ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಮಂ ಮುಂತಿರಿಸಿ (ಶಂಕಭಾ. ೯-೨೮ ವ). [ಮುಂದು$_2$ (< ಮುಂತು$_2$) + ಇರಿಸು]

**ಮುಂದಿರುಹಿಸು** (ಕ್ರಿ). ಮುಖವನ್ನು ತಿರುಗಿಸುವಂತೆ ಮಾಡು ; ಹಿಮ್ಮುಖವಾಗುವಂತೆ ಮಾಡು : ಅರ್ಜುನನು . . . ಕರ್ಣ ಮೊದಲಾದವರ ಮುಂದಿರುಹಿಸಿದು ಗರ್ಭವ್ಯೂಹವನು ಮುಱಿದ (ಕುವ್ಯಾದ್ರೋ. ಸಂ. ೨೯೦). [ಮುಂ$_2$ (< ಮುನ್$_2$) + ತಿರುಹಿಸು (<ತಿರುವಿಸು)]

**ಮುಂದಿವಸ** (ನಾ). ಮಾರನೆಯ ದಿನ; ಮುಂಚಿನ ದಿವಸ : ಇಂದು ಚೂಡನು ಸುತ್ತಿದೋಲೆಯನೊಂದು ನಂದಿಯ ಹಳವಿಗೆಯನಾಗಳು ಹಿಡಿದುಕೊಂಡು ಮುಂದಿವಸದಲಿ ಹಗಲುಪಡಿಹಱಿಯಂದದಲಿ ಕಣಜಂಗಳಿಗೆ ಹರಿತಂದು ಪಡಿಗಳನಳೆವ ಬಾಚರಸಂಗೆ ಇಂತೆಂದ (ಬಸಪು. ೩೩-೦೭).

[ಮುಂ$_2$ (< ಮುನ್$_2$) + ದಿವಸ]

**ಮುಂದಿಟಿಪು** (ಕ್ರಿ). ಮುಂಭಾಗದಲ್ಲಿ ಇಳಿಸು ; ಮುಂದುಗಡೆಯಲ್ಲಿ ಇಳುಹು : ಪಡಿಯಱತಿ. . . ಕನ್ನಡವಕ್ಕಿಯ ಪಂಜರಮಂ ತಡೆಯದೆ ತಂದವನಿಪತಿಯ ಮುಂದಿಟಿ[ಪಾಠಾಂ.ಟು]ಪುವುದುಂ (ಕಾದಂಪೂ. ೮೨) ; ಮುಂದಿಟಿಪಿ ತನ್ನ ತಂದಾ ನಂದನೆಯಂ (ನೇಮಿಚ. ೬-೭೭).

[ಮುಂ$_2$ (< ಮುನ್$_2$) + ಇೞಿಪು]

**ಮುಂದು$_1$** 'ಮುಂತು$_1$' ನೋ.

**ಮುಂದು$_2$** 'ಮುಂತು$_2$' ನೋ.

**ಮುಂದುಗ** (ನಾ). ಮುಂದಾಳು ; ನಾಯಕ : 'ಮುಂದುಗತನ' ಪರ್ಯಾ.

[ಮುಂದು$_2$ (< ಮುಂತು$_2$) + – ಗ$_2$]

**ಮುಂದುಗಡೆ$_1$** (ನಾ). ೧. ಮುಂಭಾಗ; ಮುಂದಿನ ಭಾಗ : ಮುಂತೆ = ಮುಂದುಗಡೆಯಲ್ಲಿ (ಕಮರ. ೪೨ ಬೀಕ); ಅವನು ಮುಂದುಗಡೆಯ ಬೆಂಚ್‍ಯಲ್ಲಿ ಕುಳಿತಿದ್ದಾನೆ (ರೂಢಿ). ೨. ಎದುರು; ಅಭಿಮುಖ : ನಾವು ಹೋಗುವಾಗ ಮುಂದುಗಡೆಯಿಂದ ಒಂದು ಕಾರು ಬಂದಿತು (ರೂಢಿ).

[ಮುಂದು$_2$ (< ಮುಂತು$_2$) + ಕಡೆ$_3$]

**ಮುಂದುಗಡೆ$_2$** (ಅ). ಮುಂಭಾಗಕ್ಕೆ; ಮುಂದೆ : ನಡೆ ಪಜ್ಜೆವಿಡಿ . . . ಅಡಗಿ ಪೊಯ್ಜಡಿ ಕೋಲನಿಡು ಮುಂದುಗಡೆ ನಾಯ ಬಿಡು (ಕೈವಿಃಭಾ. ೨೮-೪೩); ಅವರ ಮನೆಯ ಮುಂದುಗಡೆ ಬೃಂದಾವನವಿದೆ (ರೂಢಿ).

[< ಮುಂದುಗಡೆ$_1$]

**ಮುಂದುಗತನ** (ನಾ). ಮುಂದಾಳುತನ ; ಮುಖಂಡತ್ವ; ನಾಯಕತ್ವ : ನಿಯೋಗಿ ಹೂವಯ್ಯನ ಮುಂದುಗತನದಲ್ಲಿ – ಇಕ್ಕೇರಿಯ ಸಂಸ್ಥಾನದ ರಾಯಭಾರದ ಪ್ರವೇಶ (ಮುಂತ್ರಕ. ೦೨೦-೦೯). [ಮುಂದುಗ + – ತನ]

**ಮುಂದುಗಾಣ್,** ಮುಂತುಗಾಣ್, ಮುಂದುಗಾಣು (ಕ್ರಿ). ೧. ಮುಂದಿರುವುದನ್ನು ಕಾಣು ; ಮುಂಭಾಗವನ್ನು ನೋಡು : ಅಯ್ಯಾ ನಿಮ್ಮ ಮಹಾವ್ರತಗಳಸಗಲಿ ಬರ್ಮಂಕಲಾಱೆನು ಶಿವಧೋ ಶಿವಧೋ ಕಂಗಳಶ್ರುಗಳಲ್ಲಿ ಮುಂದುಗಾಣೆನು (ಬಸವ. ೩೭೮). ೨. ಮುಂದಾಲೋಚನೆಯನ್ನು ಹೊಂದು ; ವಿವೇಚನೆಯನ್ನು ಪಡೆ : ಸಪ್ತಾಷ್ಟಿಯ ಮದದಿಂ ಮುಂದುಗಾಣದೆ ತನ್ನ ನೆಳಲಂ ಪ್ರತಿಗಜವೆಂದುಱದೆ

ಕಜಾತ್ರಿಜಗಿ . . . ಸಾರುತಿರ್ಪ ಮದಾಂಧಗಂಧಸಿಂಧುರಂಗಳಿಂ (ಗಿರಿ. ೦-೦೨೯ ವ) ; ಉಚಿತಮನುಚಿರ್ದೊಡಮದನೊಂದುಮನವಧರಿಸದವಳನೊಲಿಸುವ ಬಗೆಯುಂ ತಾದಂ ಕಾತರನಂತೆ ದಲೆಂದುಮುದ್ದೇಂ ಮುಂದುಗಾಣ್ಬರೇ ಕಾಮಾಂಧರ್ (ಕಾಶ್ಯಕೃ. ೩-೯೬). ೩. ದಾರಿ ಕಾಣು ; ದಿಕ್ಕು ತೋಚು : ವಿಹತಯೂಥಪತಿಮುಷ್ಟ ಕರಿಕಲಭ ದಂತತಿತ್ರಸ್ತನಾಗಿ ಮುಂದುಗಾಣದೆ ವಿಹ್ವಲನಾಗಿ . . . ಬರ್ಪನ್ನೆಗಂ (ಕಾದಂಬ. ೪೩೬). **ಮುಂತುಗಾಣ್** : ೨. ಮುಂತುಗಾಣದೆ ಮೂಜು ಲೋಕದ ಪ್ರಭುವನೀನಿಂತೊಯ್ವರೆ ತರಳಾಕ್ಷಿ (ಅಜಿತ. ೯-೨೭೦).

**ಮುಂದುಗಾಣು** : ೨. ಮುಂದುಗಾಣದ ಪರಮಯೋಗಾನಂದಮೂರ್ತಿಯನನ್ಯಭಾವನೆಯಿಂದೆ ಭಾವಿಸಲಹುದೆ (ಬಸವು. ೩೪-೦೦) ; ಭೀಷ್ಮನ ಶಕುತಿಗಂದಿದಿರಾದ ಮದದಲಿ ಮುಂದುಗಾಣನಿವ (ಕುಮಾರವ್ಯಾ. ೨-೪೦). ೩. ಬಂದಹೆನೆಂದಜೀಯುಲಿಕ್ಕಿಶ್ಲಾಗಿ ಸಂದೇಹ ಬಿಡದು ಮುಂದುಗಾಣದು ಲೋಕ (ಬಸವ. ೪೨) ; ಸೈರಂಧ್ರಿ ತನ್ನಯ ಮಂದಿರಕೆ ಬರೆಯಾ ತಿಲೋತ್ತಮೆ ಮುಂದುಗಾಣದೆ ನಗ್ನೆಯಾಗಿರೆ ಶಾಪವಶೆಯಾಗಿ (ಸಂಕ್ಷಿ. ೩-೦೯) ; ತಾಪದಲಿ ಮುಮ್ಮುಳಿತನಾದನು ಮುಂದುಗಾಣದೆ ಹಲವನೆಣಿಸುತ ಪುರುಷ ಗೆಟ್ಟಂತೆಂದನಾ ಮುನಿಪ (ಕೊರವಂ. ೦-೯-೨೯). ೪. ಮುಂದಾಗುವುದನ್ನು ತಿಳಿ ; ಭವಿಷ್ಯವನ್ನು ಅರಿ : ಮಾಣದೆ ಅರಳೆಯು ತಿಟ್ಟನೆ ತಿರುಗುವ ಗಾಣದೆತ್ತಿನಂತೆ ಪೂರ್ವಲಿಖಿತ ಮುಂದುಗಾಣಲೀಯದು (ಬಸವ. ೩೯೦). [ಮುಂದು$_2$ (< ಮುಂತು$_2$) + ಕಾಣ್]

**ಮುಂದುಗಾಣಿಸು** (ಕ್ರಿ). ದಾರಿ ತೋರು ; ಉಪಾಯ ತೋಚು : ಇಂದಿವರನಾಂ ಕಳಿಪಲಸುರವೈರಿಗೆ ಬೇಸಱೊಂದಿನಿಸು ತೋಚದಿರ್ಪುದೆ ಜೀಯ ತನಗಿದಕೆ ಮುಂದುಗಾಣಿಸುದು (ಕೃಬಿಲಾ. ೨-೪೩). [ಮುಂದು$_2$ (< ಮುಂತು$_2$) + ಕಾಣಿಸು]

**ಮುಂದುಗಾಣು** 'ಮುಂದುಗಾಣ್' ನೋ.

**ಮುಂದುಗಾಣ್ಕೆ** (ನಾ). ಮುಂದಿನದನ್ನು ಕಾಣುವಿಕೆ ; ಮುಂದಾಲೋಚನೆ ; ದೂರದೃಷ್ಟಿ : ಪೊಗಟ್ತೆನಜ್ಞೆ. ನಿನ್ನ ಮುಂದುಗಾಣ್ಕೆಯನ್ (ಅಶ್ವಶಾ. ೨೨-೪೪೪). [ಮುಂದು$_2$ (< ಮುಂತು$_2$) + ಕಾಣ್ಕೆ]

**ಮುಂದುಗಿಡಿಸು** 'ಮುಂದುಗೆಡಿಸು' ನೋ.

**ಮುಂದುಗಿಡು** 'ಮುಂದುಗೆಡು' ನೋ.

**ಮುಂದುಗೆಡಿಸು**, ಮುಂತುಗೆಡಿಸು, ಮುಂದುಗಿಡಿಸು (ಕ್ರಿ). ೧. (ಭಯ, ದುಃಖ, ಕೋಪ, ಮುಂತಾದವುಗಳಿಂದ) ದಿಕ್ಕುತೋಚದಂತೆ ಮಾಡು ; ಕಂಗೆಡಿಸು : ಪಟ್ಟದಾನೆ . . . ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ ಮಾವಂತರಂ ಮುಱಿದಿಕ್ಕುತುಂ ಆರೆಕಾಱರ ನರೆದು ಸಣ್ಣಿಸುತ್ತುಂ ಮಂದಿಯುಂ ಮುಂದುಗೆಡಿಸುತುಂ . . . ಬಂದು (ಪಂಪಭಾ. ೨-೨೪) ; ರಾಧೇಯನರಸನ ಮುಂದುಗೆಡಿಸದೆ ಮಾಣನೋ (ಕುಮಾರ. ೦೦-೩೨) ; ವಿಜಯನ ವಾಜಿ ಬಂದು ಕೊಳಸಂ ಪೊಕ್ಕು ಸೀಗುರ್ಡಿದು ಪುಲಿಯಾಗಿ ಮುಂದುಗೆಡಿಸಿತು (ಕೃಬಿಲಾ. ೦೩-೩೩). ೨. ವಿವೇಕವಿಲ್ಲದಂತೆ ಮಾಡು ; ವಿವೇಚನೆಯನ್ನು ಕಳೆದುಕೊಳ್ಳುವಂತೆ ಮಾಡು : ತನುಲೋಭ ಮನಲೋಭ ಧನಲೋಭ ಮುಂದುಗೆಡಿಸಿ ಕಾಡುವೆನಾ (ಬಸವ. ೩೦೩). **ಮುಂತುಗೆಡಿಸು** : ೧. ಮಱಹು ಮನವ ಮುಂತುಗೆಡಿಸಲು ಹರವಸಂ ಮೂಱಲಾದಿಮಯ್ಯಂ ತಾನಿದಿರಿದೆಂದಱಿಯದಿರುತಿರಲ್ಕಾ ದಿನಂ ತೀರ್ದುದು (ಸೋಮೇಶ. ೪-೯). ೩. ನಾಶಮಾಡು ; ಧ್ವಂಸಗೊಳಿಸು : ಶತಣ್ಬಿಕ್ಕ ಸದ್ವೃಕ್ಷಸಂತತಿಯುಘಶಿವಿರವನು ಮುಂತುಗೆಡಿಪ ಮುನ್ನೇಸಱಿದದಿ ಮುನಿಕಾಂತನ ಮೂರ್ತಿಯೊಪ್ಪಿದುದು (ತ್ರಿಶಂಕ ೦-೩೬). **ಮುಂದುಗಿಡಿಸು** : ೧. ಬ್ರೂತಳದೊಳ್ ಹಿಮಮೊತ್ತರಿಸಿತು ಭೂವನಜನಮನುಱ್ ನಡುಗಿಸುತ್ತಂ . . . ಮುಂದುಗಿ[ಡಿಸುತ್ತಂ] ಮುಸುಕಿಡುತ್ತಂ (ಗಿರಿ. ೯-೩೯) ; ಕಳ್ವಡಗಿನ ವರ್ಗಳ್ ರತ್ನಂ ತುಂಬಿರ್ದ ತದ್ಬಹಿತ್ರಮನಂಬುಗಳಿಂದೆಚ್ಚು ಮುಂದುಗಿಡಿಸಿದರಾಗಳ್ (ಚಂದ್ರ. ೦೨-೩೩). [ಮುಂದುಗೆಡು + – ಇಸು$_3$]

**ಮುಂದುಗೆಡು**, ಮುಂತುಗೆಡು, ಮುಂದುಗಿಡು (ಕ್ರಿ). ೧. (ಭಯ, ದುಃಖ, ಕೋಪ ಮುಂತಾದುವುಗಳಿಂದ) ದಿಕ್ಕು ತೋಚದಾಗು ; ಕಂಗೆಡು : ಸಂಸಾರವೆಂಬ ಸರ್ಪ ಮುಟ್ಟಲು ಪಂಚೇಂದ್ರಿಯವಿಷಯವೆಂಬ ವಿಷದಿಂದೆ ಆನು ಮುಂದುಗೆಟ್ಟೆನಯ್ಯ (ಬಸವ. ೨೦) ; ದಸಿ . . . ಇಂತಂಗಾಲ ನೆಟ್ಟು ಕಟ್ಟುಗಿಯಲಾ ನೋವಿನಿಂ ನಡೆಯುಡುಗುತಂದು ನೊಂದು ಕಂದಿ ಕುಂದಿ ಮುಂದುಗೆಟ್ಟು (ಉದ್ಭಟ. ೦೦-೧೦೩ ವ) ; ವಿವಿಧ ಭಾವದ ಭೇದದಲಿ ಮನ ಮುಂದುಗೆಡುತಿರ್ದುದು ಧನಂಜಯನ (ಕುಮಾರ. ೬-೩೨) ; ವಿರಹದೆ ಪಲುಬುವಳಳುವಳು ಮುಂದುಗೆಡುವಳು ಚಿಂತಿಪಳು (೪೦ವಾ. ೯-೨೦೩). ೨. ವಿವೇಕವಿಲ್ಲದಾಗು; ವಿವೇಚನೆಯನ್ನು ಕಳೆದುಕೊಳ್ಳು : ನಾರಿಯೆಂಬ ರೂಹಿಂಗೆ ನೀವು ಒಲಿದು ಬಂದಿರಣ್ಣಾ ಮೂತ್ರವು ಬಿಂದು ಒಸರುವ ನಾಳವೆಂದು ಕಂಗಾಣದೆ ಮುಂದುಗೆಟ್ಟು ಬಂದಿರಣ್ಣಾ (ಕುಹಾರೆ. ಬ. ೬೬-೦೬೬) ; ಎಲ್ಲರುಂ ಮುಂದುಗೆಟ್ಟೇನುವಂ ಕಾಣದಿರೆ ಎಲ್ಲರ್ಗೆ ಭಯವೇಱ್ ನುಡಿ ಮುಂದುದೋಚದಿರೆ (ಕುಶೇಶ. ದೇ. ೬೬-೬). ೩. ಏಳಿಗೆಯುಂ ಕೆಡು; ಭವಿಷ್ಯವು ಹಾಳಾಗು: (೪). ೪. ನಷ್ಟಕ್ಕೊಳಗಾಗು; ಹಾನಿಗೊಳ್ಳು: (೬). **ಮುಂತುಗೆಡು** : ೧. 'ಮುಂತುಗೆಡಿಸು' ಪರಾ. **ಮುಂದುಗಿಡು** : ೧. ಕಾಮನ ಬಾಣಕ್ಕೆ ಗುಱಿಯಾಗಿ ಮಱುಗಿ ಮಲ್ಲಳಿಗೊಂಡು ಮೆಲ್ಲನೆಳ್ದು ಮುಂದುಗಿ[ಡುತ್ತಂ ಗೆ]ಟ್ಟಂತಂತೆ ಸಿಂಗರಿಸಿ ಸಿಡಿಮಿಡಿಗೊಂಡು ನಡೆತರ್ಪಾಗಳ್ (ಗಿರಿ. ೨-೦೦೩ ವ) ; ಮುಂದುಗಿಡೆ ಗೂಗೆ ಬೆಳಗದೆ ನಿಂದನೆ ರವಿ ಜಗಮನಂತೆ ಕವಿ ದುರ್ಜನನೇಂ ಮುಂದುಗಿಡೆ ಬುಧರ್ಗೆ ಪರಮಾನಂದಂಬಡೆವಂತು ಪೇೞದಿರ್ಪುಮೆ ಕೃತಿಯಂ (ಕಾಶ್ಯಕೃ. ೦-೮೩). [ಮುಂದು$_2$ (< ಮುಂತು$_2$) + ಕೆಡು$_1$]

**ಮುಂದುಗೆಯ್** (ಕ್ರಿ). ಮುಖ್ಯವಾದುದೆಂದು ಪರಿಗಣಿಸು : ನಿಸಗಪ್ಪರಸ ದುರ್ಯೋಧನನೊಲಪಂ ಮುಂದುಗೆಯ್ದು ಬೆಸಕಯ್ವರೆ ನಿನ್ನನುಜರೆ ರಟ್ಟಿಸೆಗಂ ಕಿಸುಱನಿಸಾಗದು ಮಗನೆ ನೀನೊಡಂಬಡವೇಱ್ಕುಂ (ಪಂಪಭಾ. ೯-೬೩). [ಮುಂದು$_1$ (< ಮುಂತು$_1$) + ಕೆಯ್$_1$]

**ಮುಂದುಗೊಳ್**, ಮುಂತುಗೊಳ್, ಮುಂದುಗೊಳ್ಳು (ಕ್ರಿ). ೧. ಮುಂದೆ ಇಟ್ಟುಕೊಳ್ಳು : ತನತನಗೆ ಪೊನ್ನ ರಾಶಿಯನನವರತಂ ಮುಂದುಗೊಂಡನೇಕ ಕುಬೇರರ್ ಜನಿಯಿಸಿ ನಿಂದಂತಿರ್ಪುದು ಕನಕವ್ಯವಹಾರದಿಂದೆ ವೈಶ್ಯಕದಂಬಂ (ಗಿರಿ. ೨-೯೩). ೨. ಮುಖ್ಯವಾದುದಾಗು; ಪ್ರಮುಖವೆಂದು ಪರಿಗಣಿಸು : ತನ್ನ ಸ್ವೇಚ್ಛಾಲೀಲಾವಿಲಾಸದ ನೆನಹಿಂದ ತನ್ನ ಚಿತ್ಪ್ರಭಾಸಾಮರ್ಥ್ಯಶಕ್ತಿಯು ಮುಂದುಗೊಂಡು . . . ಅನಂತಕೋಟಿ ಆತ್ಮರುಗಳನು ತನ್ನಲ್ಲಿಯೆ ಪುಟ್ಟಿಸಿ (ಶೂನ್ಯಸಂ. ೨-೨) : ಮುಂದೆ ತಮಂಧವಿಟ್ಟಣಿಸಿ ರಾಹುವಿನಂತಿರೆ ಪೂರ್ವವೈರಮಂ ಮುಂದುಗೊಳುತ್ತೆ ಎನ್ನನಿದು ಮಾಡುವ ಪಾಳ್ಕೆಯನಿಂದು ಮಾಳ್ಪನಾನೆಂದು ತದೀಯರೂಪನುಱ್ ನುಂಗೆ (ಗಿರಿ. ೪-೦೦೦). **ಮುಂತುಗೊಳ್** : ೩. ಮುಂದಾಗು; ಮುನ್ನುಗ್ಗು; ಮುಂದುವರಿ : ಮುಂತುಗೊಂಡಲ್ಲಿ ಜಗಳವ ಹತ್ತಿಸುವೆನೆಂದು ಚಿಂತಿಸುವ ಮನ ಕೊಂಡೆಯಕ್ಕೆಳಸಿ ಗುದಗದನೆ ತಿಂತೆಮಸಗುವ ಬಾಯಿ . . . ಸಿಂಗರಂ ಸಾರದಂಗೆ (ಸೋಮೇಶ. ೦-೨೯). **ಮುಂದುಗೊಳ್ಳು** : ೨. ಆಳಿಯಾಸೆಯನ್ನೇ ಮುಂದುಗೊಂಡು ಸುಳಿದಾಡಿ . . . ತನ್ನನ್ನೇ ಮಾರಿ ಬಂದ ಸುಖವನುಂಬ ಮೈಯರಿಯದ ಮರುಳು. ಮಾನವನ ಕಾಡುಬಾಳಿನಂತಲ್ಲ ಆವರ ಬಾಳು (ದೋಳಬಾ. ೩೩ ಕ್ರಿಸ್ತಾಶಕ). [ಮುಂದು$_2$ (< ಮುಂತು$_2$) + ಕೊಳ್$_1$]

**ಮುಂದುಗೊಳ್ಳು** 'ಮುಂದುಗೊಳ್' ನೋ.

**ಮುಂದುದೆಗೆ** (ಕ್ರಿ). ಸ್ಪಷ್ಟಗೊಳಿಸು ; ವ್ಯಕ್ತಪಡಿಸು : ಸುಗ್ಗಿ ಬರ್ಪುದನೀ ನಂದನಕಾನೆ ಮುಂದುದೆಗೆದಂ (ಜಗಪ. ೧೪-೬೩).
[ಮುಂದು$_1$ (< ಮುಂತು$_1$) + ತೆಗೆ$_1$]

**ಮುಂದುದೋಱು** 'ಮುಂದುದೋಱು' ನೋ.

**ಮುಂದುದೋಱು**, ಮುಂದುದೋಱು (ಕ್ರಿ). ೧. ತೋಱು ; ವ್ಯಕ್ತವಾಗು : ಎಲ್ಲರುಂ ಮುಂದುಗೆಟ್ಟೇನುವಂ ಕಾಣದಿರೆ ಎಲ್ಲರ್ಗೆ ಭಯವೇಱೆ ನುಡಿ ಮುಂದುದೋಱದಿರೆ (ಮೋಹನ. ದೀ. ೬೬-೮). **ಮುಂದುದೋಱು**: ೨. ವಿವೇಚನೆಯುಂಟಾಗು ; ವಿವೇಕದಿಂದಿರು : ಮುಳಿಸಿಂದವನುಂ ಮೊಱೆದೆಬ್ಬಿ ಮುಟ್ಟಿ ಮುಂದುಡೆಯನೂಱೆ ಮೇಲ್ವರಿವನೇಂ ಬಗೆ ಸೋರ್ಕಿರೆ ಮುಂದುದೋರ್ಕುಮೋ (ಜಕವ. ೪-೧೪೦).
[ಮುಂದು$_2$ (< ಮುಂತು$_2$) + ತೋಱು]

**ಮುಂದುರು** 'ಮುಂದುಱು$_1$' ನೋ.

**ಮುಂದುರುಗಯ್** (ಕ್ರಿ). ಮುಂದಕ್ಕೆ ಚಾಚಿದ ಹಸ್ತ: ನೀಡಿದ ಕೈ : ಗುಂಡಪ್ಪ:—(ಮುಂದುರುಗಯ್ಯಿಂದ ಅದನ್ನೆಳೆದುಕೊಂಡು ಓದಿಕೊಳ್ಳುತ್ತಿರುವನು) (ಮುಂತ್ರಶ. ೦೩೦-೪).
[ಮುಂದುರು (< ಮುಂದುಱು$_1$) + ಕಯ್$_2$ (< ಕೆಯ್$_2$)]

**ಮುಂದುವಡು** (ಕ್ರಿ). ಮುಂದಕ್ಕೆ ಸಾಗು; ಮುಂದೆ ಬರು: ಬೇಹುಕಾರ: —(ಮುಂದುವಟ್ಟು. ಲಿಂಗರಾಜನಿಗೆ ಗುಟ್ಟಿನ ವರದಿಯನ್ನು ಕಿವಿಗೇಳಿಸತೊಡಗುವನು) (ಮುಂತ್ರಶ. ೦೨೦-೦೪).
[ಮುಂದು$_2$ (<ಮುಂತು$_2$)+ಪಡು$_1$]

**ಮುಂದುವರಿ**, ಮುಂದರಿ-(ಕ್ರಿ). ೧. ಮುಂದಕ್ಕೆ ಹೋಗು, — ನಡೆ : ಒಂದೆರಡು ಕುಱುಹುಗಳ ಕಂಡೇ ಮುಂದುವರಿಯುರು ನೀತಿವಂತರು (ಕಾಶಿರಾ. ೩೮-೫) ; ಸಮರಸಜೀವನದ ದ್ವೈವೀಪಥದಲ್ಲಿ ಅವನು ಮುಂದುವರಿಯುತ್ತಾನೆ (ಜಗರಾ. ೩೪). ೨. ರಭಸದಿಂದ ಮುನ್ನುಗ್ಗು ; ಧಾವಿಸು : ನೊಂದು ಮರಳದೆ ಮಸಗಿ ಸೂರ್ಯನ ನಂದನನು ತಾಗಿದನು ಗುರುಸುತ ಮುಂದುವರಿದನು ತಲೆ ಹಱಿದರೆನ್ನಟ್ಟಿ ಕಲಿಯೆನುತ (ಕುಮಾವ್ಯಾ. ೦೪-೩೩) ; ಶರವಿಬ್ಬುಗಿಯು ಮಾಡಿತು ಮುಂದುವರಿದಂಡಿಸಿದ ಸೂಕರನ (ತೊರರಾ. ೩-೩-೨೦) ; ಇಂದುವದನೆ ರುಕ್ಮಿಣಿದೇವಿಗೆ ಗರ್ಭ ನಿಂತು ಗರ್ಭಿಣಿಯಾದುದಕೆ ಮುಂದುವರಿದು ಮೇಘ ಗರ್ಜಿಸಿದುವು ದೇವದುಂದುಭಿಗಳ ಹೊಡೆದಂತೆ (ಕೋಹಕ. ೪-೩೨). ೩. ಮುಂದಾಗು ; ಮುಂದೆ ಬರು : ಅವನದ್ದು ಯಾವ ಕೆಲಸಕ್ಕೂ ಮುಂದುವರಿಯುವ ಸ್ವಭಾವವಲ್ಲ (ರೂಢಿ). ೪. ಮೊದಲು ಕಾಣಿಸಿಕೊಳ್ಳು, — ಮೂಡು : ಅವಳಾಡಿದ ಮಾತಿಗೆ ಮೈನವಿರ್ಮುಂದುವರಿದು ಗುಡಿಗಟ್ಟಿ ಕುಂದದ ಗದ್ಗದದುಲುಹಿಂದ ಸಖಿಯೊಡನೆಂದಳು ಮಾಱುತ್ತರವ (ಕಂಪರಿ. ೯-೦೩೬). ೫. ಮುಂಚಿತವಾಗಿ ಹೋಗು : ತನ್ನ ಮಯ್ದುನನಪ್ಪಮೋಘಾಸ್ತ್ರ ಧನಂಜಯನ ಬರವಿನ ಸಂತಸದೊಸಗೆ ಪಡೆಮಾತಂ ಮುಂದುವರಿವಱಿಪುವಂತೆ . . . ಕೆತ್ತಿತ್ತು ದಲ್ ಬಲಗಣ್ಣುಂ ಬಲದೋಳುಮಾ ಬಲಿಬಲಪ್ರಧ್ವಂಸಿಗೆ (ಶಂಶಭಾ. ೪-೩೨೮). ೬. ಆತುರಪಡು ; ತವಕಿಸು : ಮನಮೊನ್ನಂ ಮುಂಬರಲ್ ಮುಂದುವರಿವುದನೆ ತೋರ್ಪಂತೆ ನೀಳ್ದತ್ತು ಸುಯ್ (ಕಾದಂಪೂ. ೬೫೬) : ಬೆಲೆಗೊಂಡು ನತರ್ಕಳ ಪಾಪರಾಶಿಯುಂ ಭರವಹನಕ್ಕೆ ಮುಂದುವರಿವೀಯುಭಯಪ್ರದಹಸ್ತಮೊಂದು ಮೇಣ್ (ವಸ್ತವಂ. ೦-೫). ೭. ಅಭಿವೃದ್ಧಿ ಹೊಂದು ; ಏಳಿಗೆಯನ್ನು ಪಡೆ : ಆತ್ಮನಿರೀಕ್ಷಣೆಯಿಂದಲೇ ನಾವು ಮುಂದುವರಿಯಬಹುದು (ಅಕನಾ. ೫) ; ಮುಂದುವರಿದ ರಾಷ್ಟ್ರಗಳ ಸರಿಸಮಕ್ಕೆ ನಮ್ಮ ದೇಶವೂ ನಿಲ್ಲಬೇಕು (ರೂಢಿ). ೮. ಅಧಿಕವಾಗು ; ಅತಿಶಯಗೊಳ್ಳು : ಮುಂದುವರಿವುತ್ಸವದ ಮೊಳೆನಗೆಯ . . . ಇಂದುಮುಖಿ ಗಂಡನಂ ಕರೆದಿರುಳು ಕನಸ ನಾನಿಂತಿಂತು ಕಂಡೆನೆನಲು (ಸೋವುಶ. ೦-೬೩) ; ಮುಂದುವರಿದ ವಿಲಾಪಮಂತ್ರದ ಸಂದ ಪೂಜಾಸ್ತವವಲೊಯ್ಯನೆ ಸಂದರುಶನವ ಮಾಡಿದಳು ಮಾಯಾಮಹೇಶ್ವರನ(ತೊರರಾ. ೪-೫-೦೬). **ಮುಂದರಿ** : ೧. ಪತ್ನೀ ಸೋದರರು ಮಾರ್ಗಮಧ್ಯದಲ್ಲಿ ವ್ಯತರಾಗುತ್ತಾರೆ, ಯುಧಿಷ್ಠಿರನೊಬ್ಬನೇ ಮುಂದರಿಯುತ್ತಾನೆ (ಭಾರದ. ೦೦೩). ೨. ಎನ್ನಯಾ ಭಾರಿಗದೆಯು ನಿನ್ನ ಜಯಿಸಿ ಸಾರವರಿವುದು ಸಾರಿ ಮುಂದರಿವುತಿದೆಕೊ ಮಿಾರಿ ಬರುವುದು (ಕರ್ಣಾಕಾ. ೦೦). ೩. ಹೆಂಗಸರನ್ನು ಕೊಲ್ಲುವ ಗಂಡಸರ್ವಾರೂ ಶಕ್ತಿಯನ್ನೆತ್ತಿ ಮುಂದರಿಯದ್ದರಿಂದ ವಿಷಕ್ಕೆ ಈ ಕಾರ್ಯವನ್ನು ಮಾಡಬೇಕಾಯಿತು (ಕೃಷ್ಣಾಕು. ೨-೦). ೪. "ಮುಂದರಿ . . . ಆತುರದಿ ಕೆಲಸ ಮಾಡು ; ಮುನ್ನಡೆ ಇಡು" (ಶಾಪಕೋ. ೩೨). ೭. ಎರಡನೇ ದೇಶದವರಿಗಿಂತ ತಾವು ಮುಂದರಿಯಬೇಕೆಂದು ಯಾವಾಗಲೂ ಬಯಸುತ್ತಿರುತ್ತಾರೆ (ಮುಂಬಬು. ೪-೦೩೯).
[ಮುಂದು$_2$ (<ಮುಂತು$_2$) + ಪರಿ$_2$]

**ಮುಂದುವರಿಕೆ** (ನಾ). ೧. ಯಾವುದಾದರೂ ಕೆಲಸವನ್ನು ಮುಂದಕ್ಕೆ ಹಾಕುವಿಕೆ,–ಮುಂದೂಡುವಿಕೆ : "ನಿಲುವಳಿ. ಮುಂದುವರಿಕೆ" (Adjournment ಶಬ್ದಸಿ. ೩). ೨. ಮುನ್ನಡೆಸುವಿಕೆ ; ಸಾಗಿಸುವಿಕೆ : ಈ ಕೆಲಸದ ಮುಂದುವರಿಕೆಗಾಗಿ ನಾವು ಎಲ್ಲ ಪ್ರಯತ್ನಗಳನ್ನೂ ಮಾಡಿದ್ದಾಯಿತು (ರೂಢಿ). [ಮುಂದುವರಿ + — ಕೆ]

**ಮುಂದುವರಿಸು** (ಕ್ರಿ). ಮುಂದುವರಿಯುವಂತೆ ಮಾಡು ; ಮುಂದಕ್ಕೆ ಸಾಗಿಸು : ಮನುಷ್ಯನು ಕಾರ್ಯ ಮಾಡುವದನ್ನು ನಿಲ್ಲಿಸಿದರೂ ಪ್ರಕೃತಿಯ ಗುಣಧರ್ಮಗಳು ತಮ್ಮ ಕಾರ್ಯವನ್ನು ಮುಂದುವರಿಸುತ್ತವೆ (ಧರ್ಮಸಾ. ೦೩೨) ; ಅಪ್ಪಾಜಿಯೂ ಆ ಬ್ರಾಹ್ಮಣನೂ ಸಂಭಾಷಣೆಯನ್ನು ಮುಂದುವರಿಸುತ್ತಾ ಕುಳಿತುಕೊಂಡರು (ಕೆಂಗಾಳ್ಕೆ. ೩).
[ಮುಂದುವರಿ + — ಇಸು$_3$]

**ಮುಂದುವಾಯ್** (ಕ್ರಿ). ಮುಂದುವರಿ : ಮುನ್ನುಗ್ಗು : ದಂಡೆಯ ನೊಡ್ಡಿ ನಿಂದು ಪರಿದಿತ್ತಲುಮತ್ತಲುಮೊರ್ಮೆ ಚೆಲ್ಲದಿಂ ಚೆಂಡಿಸಿ ಮುಂದುವಾಯೆ ಚೆಲದೇವನುಮಂ ಕವಿದೊತ್ತೆ (ಜಕವ. ೪-೦೪೦).
[ಮುಂದು$_2$ (<ಮುಂತು$_2$)+ಪಾಯ್$_1$]

**ಮುಂದುಱು**$_1$. ಮುಂದುರು (ಕ್ರಿ). ೧. ಮುಂದೆ ಸಾಗು; ಮುಂದುವರಿ: 'ಮುಂದುಱುವರಿ', 'ಮುಂದುಱುವಾಯ್ಯರ್' ಪರಾ. **ಮುಂದುರು** : ೨. ಮುಂದಕ್ಕೆ ಚಾಚು.– ನೀಡು : 'ಮುಂದುರುಗಯ್' ಪರಾ.
[ದೇ.॥ ತಮಿ. ಮುನ್ನುಱು]

**ಮುಂದುಱು**$_2$ (ನಾ). ಮುಂದೆ ಸಾಗುವುದು; ಮುಂದುವರಿಯುವುದು: "ಮುಂದುಱುವೆನಲ್ ಮುಂಬರಿವುದಕ್ಕೆ ನಾಮಂ" (ಕಬ್ಬಿಗ. ೨೩) ; "ಮುಂಬರಿವುದು ಮುಂದುಱುವೆನಿಕು" (ಶಬ್ದಮಂ. ೫೦). [<ಮುಂದುಱು$_1$]

**ಮುಂದುಱುವರಿ** (ಕ್ರಿ). ಮುಂದೆ ಸಾಗು ; ಮುಂದುವರಿದು ಹೋಗು : ಗುಡಿಯುಂ ಸಿಂಧಂಗಳುಂ ಮುಂದುಱುವರಿಯೆ ದಿನಾಧೀಶಬಿಂಬಂಬರಂ (ಶಂರಾಪೂ. ೦೫-೨). [ಮುಂದುಱು$_1$ + ಪರಿ$_2$]

**ಮುಂದುಱುವಾಯ್ಯರ್** (ಕ್ರಿ). ಮುಂದುವರಿದು ಬರು : ಧಾವಿಸಿ ಬರು : ಮುಂದುಱುವಾಯ್ತರ್ಪಳಗದಿಗಳ್ ತೊರೆದು ತೋರಂಬೆತ್ತ ಬಲ್ಗೆಚ್ಚಲೊಳ್ಪೊಱೆಯುಂ ಪೆರ್ದೊಡೆಯಿಂದಿಱುಂಕೆ ಮೊಲೆಯಿಂ ಪಾಯ್ತರ್ಪ ಪಾಲಿಂದೆ ಪಾಲ್ಗೊಱೆಯಂತಾ ತೊಱೆಯಪ್ಪುದು (ಲೀಲಾವ. ೫-೮೨).
[ಮುಂದುಱು$_2$ + ಪಾಯ್ತರ್]

**ಮುಂದೂಕು** (ನಾ). (ಕರಾ) ರೋಗ ಮುಂತಾದುವುಗಳ, ತುಂಬ ಮುಂದುವರಿದ ಸ್ಥಿತಿ,– ಉಲ್ಬಣಸ್ಥಿತಿ. [←ತುಳು. ಮುಂದೂಕು]

**ಮುಂದೂಡು** (ಕ್ರಿ). ೧. ಮುಂಭಾಗಕ್ಕೆ ತಳ್ಳು, –ನೂಕು : ರಘುನಾಥ ಮಾಸ್ತರರು ಮನೆಯ ಬಾಗಿಲವನ್ನು ಮುಂದೂಡಿದರು (ರಂಗರೋ. ೦೦೪).

೨. ಮುಂಭಾಗಕ್ಕೆ ನೀಡು : ಮುಂಚಾಚು : ಹಂದಿಯು . . . ಮುಂದಿರುವ ಬಲೆಯನ್ನು ಸೀಳಿಬಿಡಬೇಕೆಂದು ಮೂತಿಯನ್ನು ಮುಂದೂಡಿ ಬಲೆಯ ಕಣ್ಣಿನಲ್ಲಿ ಸಿಕ್ಕಿಕೊಂಡಿತು (ಹುಟ್ಟಿಹ. ೨೦). ೩. (ಕಾಲದ ವಿಚಾರದಲ್ಲಿ) ಮುಂದಕ್ಕೆ ಹಾಕು : ಇಷ್ಟುಕಾಲ ಮುಂದೂಡಿ ಅಂತೂ ಈ ದಿನ ಹೊರಟಿದ್ದ ನಮ್ಮ ಕಾಶೀಯಾತ್ರೆ — ನಿಮ್ಮ ಸಹವಾಸದಿಂದ ನನಗೊಂದು ಪುಣ್ಯಯಾತ್ರೆ ಎಂದೇ ಅನಿಸುತ್ತದೆ (ಹೊಸಶ್ರಿ. ೩೫) ; ಬೇಗನೆ ಮಾಳ್ಪುದು ಪುತ್ರಿಯ ಮದುವೆಯ ಮುಂದೂಡಲಾಗದು ನೋಡ (ಇಂಜಾಶ. ೨೦೪-೬). ೪. ಮುಂದೆ ಹೋಗುವಂತೆ ಮಾಡು ; ಮುಂದುವರಿಯುವಂತೆ ಪ್ರೇರಿಸು : ಆ ಹಾಳುಗುಡಿಯ ದಾರಿಯಲ್ಲಿ ಯಾರೂ ಕಾಣಲಿಲ್ಲ . . . ಆದರೂ ಆಶೆ ಅವರನ್ನು ಬಿಡಲಿಲ್ಲ. ಮುಂದೂಡಿತು (ಕಾಂಕುವು. ೨೩).

[ಮುಂ$_2$ (< ಮುನ್$^2$) + ದೂಡು (< ದೊಂಟು$_1$)]

**ಮುಂದೂಳ್** (ನಾ). (?) : ತತ್ತಮೋಬಳದ ಮುಂದೂಳ ದಾಟಿಯಾಗ್ಗಳಂತಿರೋಳಿಯೊಳ್ ಕೇಳೀಮಯೂರಂಗಳ್ ಉದ್ದಮೊಗೆದು ಪೊಂಗಿದೆಯ ಪಕ್ಕವಣಿಗೆ ಪಾಜಿಯುಂ (ಪರ್ಚಪು. ೬-೨೩ ಪ). [ ? ]

**ಮುಂದೆ$_1$** ' ಮುಂತೆ$_1$ ' ನೋ.

**ಮುಂದೆ$_2$** (ನಾ). ಜಾಡಿಯಾಕಾರದ ಒಂದು ಬಗೆಯ ಹಿತ್ತಾಳೆಯ ಪಾತ್ರೆ : (೬). [ದೇ.॥ ತಮಿ. ಮುನ್ತೈ, ಮೊನ್ತೈ; ಮಲ. ಮೊಂತ ; ತೆಲು. ಮುಂತ; ಕೂ. ಮೂತ; ಕುವಿ. ಮೂಂತ]

**ಮುಂದೆ$_3$** ' ಮುಂತೆ$_2$ ' ನೋ.

**ಮುಂದೆಣಿಕೆ** (ನಾ). ಮುಂದಾಗುವುದನ್ನು ಕುರಿತು ಆಲೋಚಿಸುವಿಕೆ ; ಮುಂದಾಲೋಚನೆ : ಆ ವಿರಹಿಯವಳ ಬೇಡಿಕೊಂಡು ಭರದಿಂದವನ ಕರೆಸಿ ಕೂಡಿದಳು ಕಾತರಗರ್ಗಂಟೆ ಮುಂದೆಣಿಕೆಯು (ಶ್ರೀಕೃಜಾ. ೨-೪೬).

[ ಮುಂದು$_2$ ( < ಮುಂತು$_2$ ) + ಎಣಿಕೆ ]

**ಮುಂದೆಣಿಸು** (ಕ್ರಿ). ಮುಂದಾಗುವುದನ್ನು ತಿಳಿ : ಭವಿಷ್ಯವನ್ನು ಅರಿ; ರಾಯವಜೀರನೆಂಬ ಪಿರಿದುಂ ಬಿರುದಾಂಕಿದಿರಾಂಪರಿಲ್ಲವೆಂಬೀಯದಟಿಂದೆ ಮುಂದೆಣಿಸಲಗ್ಗದ ವಾರುಪಮೊಗ್ಗರಂಗಳಿಂ . . . ಮುತ್ತಿದಂ (ಚಳಿ. ೨-೬೪). [ ಮುಂದು$_2$ ( < ಮುಂತು$_2$ ) + ಎಣಿಸು ]

**ಮುಂದೆಯ್ದು, ಮುಂದೈದು** (ಕ್ರಿ). ಮುಂದಕ್ಕೆ ಸಾಗು ; ಮುಂದುವರಿ : ನಡೆ ಸಾರ್ ಮುಂದೆ[ಪಾಠಾಂ. ದ]ಯ್ದು ಬೆಳ್ಳಾರಮನೆ ಬಗಿನಿಕಾಂಜಂಗಳಂ ಸೋದಿಸು (ಜಕಶಂ. ೬-೪೬). **ಮುಂದೈದು** : ಮುಂದೈದುವ ತುರಂಗವಾಧ ಕೂಡೆ ನಡೆಯುತ್ತೆ (ಕೈಬಿಚಾ. ೦೩-೨೦) ; ಮುಂದೈದಲಾ ಗಿರಿಯ ಸಾರವತ್ತಾದ ವೃಕ್ಷಗಳೆಲ್ಲ ಪಿಂದೈದುತೋರಂತೆ ನಿಜಬಂಧುಗಳನು ಬೀಳ್ಕೊಡುವಂತೆ ಮಹೂರ್ತಮನುಸರಿಸಲು (ಕೊಂಕಾರಾ. ೫-೦-೨೦).

[ ಮುಂದು$_2$ ( < ಮುಂತು$_2$ ) + ಎಯ್ದು ]

**ಮುಂದೆಸೆ** (ನಾ). ಮುಂದುಗಡೆ ; ಎದುರು : ಸ್ಥೂಲ ಸೂಕ್ಷ್ಮ ಕಾರಣ ಈ ಮೂಜಿ ಮುಂದೆಸೆಯಲ್ಲಿ ಕಂಡೆ (ಮೋಳೀಪಾ. ೦೪೪-೫೬೭) ; ಬಸವನಂ ಬರಹೇಳ್ದು ಕಳುಹಲು ಬಸವನಾಗಳೆ ಕೇಳ್ದು ಬಂದಾ ವಸುಮತೀಶನ ಮುಂದೆಸೆಯೊಳಿರಲು (ಬಸಪು. ೫೬-೨೪) ; ನಳಿನಬಾಂಧವನ ಮುಂದೆಸೆಯೊಳುಮಿಗೆ ಮಿಂಚುಬುಳುವಿನ ಮಿನುಗು ರಂಜಿಪುದೇ (ಮೋಚಶ. ೦೩-೦೦). [ ಮುಂ$_2$ ( < ಮುನ್$^2$ ) + ದೆಸೆ$_2$ ]

**ಮುಂದೆಜಿಪು** (ನಾ). ಮುಂಭಾಗದಲ್ಲಿರುವ ಖಾಲಿಯಾದ ಪ್ರದೇಶ ; ಮುಂದುಗಡೆಯ ಬಯಲು : ಸಜೀಜಪ್ಪನೆಯೊರ್ವಳ್ ಸೌಧದ ಮುಂದೆಜಿಪೊಳ್ನಿಜಿದಳ್ (ಅಧ್ಯದೇ. ೪೩-೨೩).

ಮುಂ$_1$ ( < ಮುನ್$_1$ ) + ತೆಜಪು ]

**ಮುಂದೈದು** ಮುಂದೆಯ್ದು ' ನೋ.

**ಮುಂದೊತ್ತು** (ಕ್ರಿ). ಮುಂದುವರಿ ; ಮುನ್ನುಗ್ಗು : ಭರದಿಂ ಬಂದೊತ್ತೆ ಮುಂದೆಮ್ಮ ಸಕಲೆಸಕದಿಂ ತೀವಿ ಮುಂದೊತ್ತೆ ಗೋದಾವರಿ (ಸಮಶ. ೧-೩೯); ಮುಂದೊತ್ತುವ ನಾಯ್ಗಳ ಬೊಗಳುವ ಬಾಯ್ಗಳ ಗೇಣಂಬುಗಳ್ ಕಟ್ಟಿದೆನು (ಹದ್ಮರ. ೨೬-೭). [ ಮುಂದು$_2$ ( < ಮುಂತು$_2$ ) + ಒತ್ತು$_1$ ]

**ಮುಂದೊದಗು** (ಕ್ರಿ). ೧. ಮುಂದೆ ಹೋಗು : ಮುಂದಾಗು : ಶಚಿಯುಮೊಲಿದು ಕೈಗೊಟ್ಟು ಕರೆತರೆ ಜಿನನ ಕಾಣುತ್ತಲೆ ಮುಂದೊದಗಿ ಪೊಜಿವರ್ಥ್ಯವೆತ್ತಿ ಜಯೆಂದು ಭಕ್ತಿಯಲೆಜಗಿ (ಜಾಶ್ಮಚಾ. ೩೩-೯೦). ೨. ಅನಂತರದಲ್ಲಿ ಉಂಟಾಗು ; ತರುವಾಯದಲ್ಲಿ ಸಂಭವಿಸು : ಮುಂದೊದಗಬಹುದಾದ ತೊಂದರೆಗಳಿಗೆ ಈಗಲೇ ಪರಿಹಾರವನ್ನು ಕಂಡುಕೊಳ್ಳಬೇಕು (ರೂ೨). [ ಮುಂದೆ$_2$ ( < ಮುಂತೆ$_2$ ) + ಒದಗು$_1$ ]

**ಮುಂದೋಳು** (ನಾ). ತೋಳಿನ ತುದಿ : ತನ್ನ ನಿತಂಬವು ನೀರಿನೊಳಲುಗಲು ಮುಂದೋಳು ದಡದೊಳಗಿರಲು ಮಂಡೂಕಿ ಪುರುಷಾಯಿತಾಸಕ್ತೆಯಂತೆ ಪ್ರತಿಬಿಂಬದೊಳು ತೋರ್ಪಳಲ್ತೆ (ಗಾಥಾಶ. ೪-೯೦).

[ ಮುಂ$_1$ ( < ಮುನ್$^1$ ) + ತೋಳು ( < ತೋಳ್ ) ]

**ಮುಂಧಾಳಿ** (ನಾ). ಮುಂದೆ ಧಾವಿಸಿ ಮಾಡುವ ಮುತ್ತಿಗೆ ; ನುಗ್ಗಿ ಮಾಡುವ ಧಾಳಿ : ಮೇಲು ಮುತ್ತಿಗೆಯಾಯ್ತು ಯವನರ ಧಾಳಿ ಗಂಧರ್ವಾವಳಿಯ ಮುಂಧಾಳಿಗುರಗಾಧಿಪತಿಯೊಬ್ಬನೆ ನಿಂದನಿದಿರಾಗಿ (ಚಿಕಾಗ. ೪-೦೬-೦೩). [ ಮುಂ$_1$ ( < ಮುನ್$^1$ ) + ಧಾಳಿ ( < ದಾಟಿ ) ]

**ಮುಂಧೋರಣ** (ನಾ). ಮುಂದಾಗುವುದರ ಬಗೆಗಿರುವ ಗಮನ : ಮುಂದಿನ ಯೋಚನೆ ; ಮುಂದಾಲೋಚನೆ : ನಾನು ಸುಮ್ಮನಿದ್ದು, ಪರಾವಲಂಬಿಯಾಗಿ, ಮುಂಧೋರಣವಿಲ್ಲದ ಲಗ್ನಮಂಟಪದಲ್ಲಿ ಅವಮಾನಿತಳಾಗತಕ್ಕದ್ದಲ್ಲ (ಗಂಪಾಯು. ೦೩೪).

[ ಮುಂ$_2$ ( < ಮುನ್$^2$ ) + ಧೋರಣ ]

**ಮುಂಧೋರಣೆ** (ನಾ). = ಮುಂಧೋರಣ : ನಾನು ಮುಂಧೋರಣೆಯವಳು. ಮುಖ್ಯ ಮುಖ್ಯ ಸಾಮಾನುಗಳನ್ನು ಬದಿಗೆ ಸರಿಸಿಟ್ಟುಕೊಂಡು ಉಳಿದ ತಿನಿಸನ್ನು ದಾನಧರ್ಮಕ್ಕಾರಂಭಿಸಿದೆ (ಸ್ವ.ತಿ. ೨೭೪) ; ಪ್ರೇಮಭಂಗದಿಂದ ಸಾಯುವವರು ಜೀವಘಾತಕರೇ ಸರಿ. ಅದರಲ್ಲಿ ಧ್ಯೇಯವೂ ಇರುವುದಿಲ್ಲ . . . ಮುಂಧೋರಣೆಯೂ ಇರುವುದಿಲ್ಲ (ಜಮಂತ. ೩೨೭).

[ ಮುಂ$_2$ ( < ಮುನ್$^2$ ) + ಧೋರಣೆ ]

**ಮುಂಪಥ** (ನಾ). ಮುಂದಿನ ಮಾರ್ಗ : ಮರಾಳಧ್ವಜಂ . . . ಹರಿಯ ಮುಂಪಥದೊಳಡಗೆದೆಯುತ . . . ಕೈಗಳ ಮುಗಿದನು (ಕೈಶಿಜಾ. ೦೪-೨೬).

[ ಮುಂ$_2$ ( < ಮುನ್$^2$ ) + ಪಥ ]

**ಮುಂಪಾಲು** (ನಾ). ಮೊದಲೇ ತೆಗೆದಿಟ್ಟ ಭಾಗ ; ಮಿಸಲು : ಮಿಂದು ಪೂಜ್ಯರ್ಗೆ ಮುಂಪಾಲಂ ನೀಡದೇನನುಮುಣ್ಣನುಂ ಅಧರ್ಮದಿಂ ಪಾಲ್ಗೆ ಗೋವಂಬೊಲ್ ಗೋವಂ ಕರೆಯಂ ದಿಟಂ (ಶಿವಂತ. ೨-೦೪).

[ಮುಂ$_2$ ( < ಮುನ್$^2$ ) + ಪಾಲು$_2$ ( < ಪಾಲ್$_2$ ) ]

**ಮುಂಪುದಿ** (ನಾ). ಮುಂಭಾಗಿಲಿನ ಪಕ್ಕ, – ಪಾರ್ಶ್ವ : ಬರವ ಸೂಚಿಸಬಾರದಿರೆ ವಿಟಂ ಮುಂಪುದಿಗೆ ನೆಟಿ ನೆಮ್ಮಿ ನಿಂದು . . . ಮೈಮಜಿ ವುತರೆಳೆಗೆಗೆಟ್ಟಜುತ - ಸಭಿಯರುಪಚರಿಸಲೊಂದೆಡೆಯೊಳಿರ್ದಳದೊರ್ವಳು (ಅಖಿಶ. ೭-೯೩). [ ಮುಂ$_2$ ( < ಮುನ್$^2$ ) + ಪುದಿ$_2$ ]

**ಮುಂಪೇಳ್** ' ಮುಂಪೇಟ್ಟು ' ನೋ.

**ಮುಂಪೇಟ್ಟು, ಮುಂಪೇಳ್** (ಕ್ರಿ). ಮುಂಚಿತವಾಗಿ ಹೇಳು; ಮೊದಲೇ ಹೇಳು : ಜಾಂಬೂನದಂ . . . ಪೇಟಲುತುರನಾದಂ ದನುಜಂಗೆ ದಿವ್ಯಮುನಿಗಳ್ ಮುಂಪೇಟ್ಟ ವೃತ್ತಾಂತಮಂ (ಶಂಶಾಪು. ೦೦-೭) ; ಎಂತುಂ ಮುಂ[ಪಾಠಾಂ. ಎಂತುಂಟು ಮುನ್ನಂ] ಪೇಟ್ದ ರ್ಥಾಂತರಮಂತಟನೆ ಬಟಿಕ ತೋಜುವುದದು ದೃಷ್ಟಾಂತಂ (ಕಾವ್ಯಾ.ಶ. ೭೦೪). **ಮುಂಪೇಳ್** : ಮುಂಪೇಳ್ದ ಬಂಧನಿಯಮಸೂತ್ರಮಂ ಲೇಸಾಗಿ ಭಾವಿಸಿ ತೀರ್ಥಬಂಧಮ

ಸಂಯುತಾದಿ ಚತುರ್ಗುಣಸ್ಥಾನದೊಳೆಯುಕ್ಕುಂ (ಗೊಮ್ಮಸಾ· ೦೩-೦೦).
[ ಮುಂ$_2$ ( < ಮುನ್$_2$ ) + ಪೇಟಿ ]

**ಮುಂಪೋಗು** (ಕ್ರಿ). ೧. ಮುಂದಕ್ಕೆ ಹೋಗು ; ಮುಂದೆ ಸಾಗು : ತೇಜಾಢ್ಯರುಗಳು ಮುಂಪೋಗಿ ವಿಮಲಸರೋಜಪತ್ರಿಕೆಯು ಪೊಟ್ಟಣದಿ ರ್ಭಾಜಾಮ್ಯತವೆನೆ ತಣ್ಣೀರ ತಂದಿತ್ತರಾ ಜಿತಕಂತುನಂದನಗೆ (ಪೋಹಚ. ೦೯-೩೪). ೨. ಮುಂಚಿತವಾಗಿ ಹೋಗು ; ಮೊದಲು ಹೋಗು : ವ್ಯಪದೇಶಂ ಮುಂಪೋದುದನಪೂರ್ವಮಂ ಕಂಡು ನೆನೆವುದದು ತಾಂ ಸ್ಮರಣಂ (ಕಾವ್ಯಾ.ಪ. ೭೦೩).
[ ಮುಂ$_2$ ( < ಮುನ್$_2$ ) + ಪೋಗು$_1$ ( < ಪೋ$_1$ ) ]

**ಮುಂಪ್ರತಿ** (ನಾ). "ಪ್ರಕಟನೆಯಾಗುವ ಮೊದಲು ಕಳುಹಿಸಿದ ಪುಸ್ತಕದ ಪ್ರತಿ; ಮುಂಪ್ರತಿ "(Advance copy of a book. ೩೦೪೦).
[ ಮುಂ$_2$ ( < ಮುನ್$_2$ ) + ಪ್ರತಿ ]

**ಮುಂಬಕ್ಕಿ** (ನಾ). ಸೂರ್ಯೋದಯಕ್ಕೆ ಮೊದಲು ಧ್ವನಿಮಾಡುವ ಹಕ್ಕಿ : ದಿವಕಂದು ದೇವಕುವರಂ ಮರಳೆ ಬಹನೆಂಬ ಗೆಲುವಿಂದ ದೇವ ದೂತರೆ ಬಾರಿಸುವರೊ ಮಂಗಲವಾದ್ಯವೆನಲು ಮುಂಬಕ್ಕಿಗಳ ಮೇಳವಂ ಮೊಳಗಾಡೆ (ಗೊರೊತ್ಕಾ· ೩೭-೯). [ಮುಂ$_2$ (< ಮುನ್$_2$ ) + ಪಕ್ಕಿ ]

**ಮುಂಬಗಲ್, ಮುಂಬಗಲು** (ನಾ). ಹಗಲಿನ ಮೊದಲ ಭಾಗ ; ಬೆಳಗ್ಗೆ ; ಪ್ರಾತಃಕಾಲ : "ಮುಂಬಗಲ್, ನಡುವಗಲ್, ಪಡುವಗಲ್ – ಇವು ಹಿ ತ್ರಿಕಾಲಂಗಳ್ ,, (ಕಚಾ. ೩೭-೨೩೦) ; ಅಂತು ಮುಂಬಗಲ್ವರಂ ತುಮುಲಂ ಕಾದುವ ಸಮ[ರಭರಂ] ಮನೋರಾಗಮಂ ಮಾಡಿಯುಂ (ಶಂಕಥಾ· ೦೪-೩೭ ಪ) ; ರಾಘವನೆನ್ನಂ ತೃಣದಿಂ ಲಾಘವಮೆನೆ ಬಗೆದನೆಂಬ ಮನಮಮ್ಮಳದಿಂದಾಘಮನೊಳಕೊಂಡಂತೆ ನಿದಾಘದ ಮುಂಬಗಲೆ ತಳೆದುದಿಳೆ ಕಡುಗಾಯ್ಪಂ (ಶಂರಾಮ. ೭-೦೦೦) ; ಪಲ್ಲಟಿಗೊಟ್ಟುತ್ತಮ ವಾನರಾಳಿ ನಡುಗುತ್ತಿರ್ದತ್ತು ಶಾಖಾಗ್ರದೊಳ ಸಜಿಗೆಯ್ದಂದದೆ ಮುಂಬಗಲ್ವರಮದೆತ್ತಂ ಪೋಗದಾ ಮಾಗೆಯೊಳ್ (ಕಸಮಸು· ೭-೦೩). **ಮುಂಬಗಲು** : " ಇನನುದಯಕಾಲದೊಳ್ ಮುಂಬಗಲೆನಿಕ್ಕು " (ಕಶ. ೯೦) ; ಇಂದಿನ ಮುಂಬಗಲೊಳಗೇ ಕಾಂತೆ ನಾವೆಲ್ಲರು ಸಹಿತ ಕಂತುನಿವಾಸವೆಂದೆಂಬ ನಂದನಕತಿಸಂತೋಷದಿಂದೆಯ್ದಿದಳು (ಶ್ರೀಚಾಂ. ೩-೦೩) ; ಮುಂಬಗಲಿಂತು ಲೀಲೆಯೊಳು ಸಾಗಿತರ (ಜಶ. ೯೦-೨೭) ; ಮೊದಲ ದಿನದ ಮುಂಬಗಲಿನಲ್ಲಿ ಪಾಂಡವಸೇನೆ ಭೀಷ್ಮರ ದಾಳಿಯಿಂದ ನಡುಕಹೊಂದಿತು (ವ್ಯಾಸಕಿ. ೩೨೩).
[ ಮುಂ$_2$ ( < ಮುನ್$_2$ ) + ಪಗಲ್ ]

**ಮುಂಬಗಲು** 'ಮುಂಬಗಲ್' ನೋ.

**ಮುಂಬಗೆ$_1$** (ಕ್ರಿ). ೧. ಮುಂದಾಲೋಚಿಸು ; ಪೂರ್ವಭಾವಿಯಾಗಿ ಗ್ರಹಿಸು : ಬೀರಮನಿದನಾವೊ[ಂ] [ಮು]ಮ್ಬಗೆದು ಪೊಗಟಲಂಪ್ಪೊಂ (ಎಇ· XX, ೭೦-೦೦; ೨೭ನೇ ಸಾ ೭೩). ೨. ಮೊದಲು ಲಕ್ಷಿಸು,–ಗಮನಿಸು : ಪಲರುಂ ವಿದ್ಯಾಧರಸ್ತ್ರೀಯರುಮಮರಿಯರುಂ ಮಾನವಸ್ತ್ರೀಯರುಂ ತಮ್ಮೊಲವಿಂ ಮೇಲ್ವಾಯ್ದೊಡಂ ಮುಂಬಗೆಯದ ಬಗೆಯೇನಾ ದುದು (ಶಂರಾಮ. ೯-೮೩). [ಮುಂ$_2$ (< ಮುನ್$_2$) + ಬಗೆ$_1$]

**ಮುಂಬಗೆ$_2$** (ನಾ). ಪೂರ್ವದ ಹಗೆ : ಹಿಂದಿನ ದ್ವೇಷ : (೬).
[ಮುಂ$_1$ (< ಮುನ್$_1$) + ಪಗೆ$_2$]

**ಮುಂಬಜ್ಜೆ** (ನಾ) ಮುಂದಿನ ಹೆಜ್ಜೆ ; ಮುಂದಿನ ಹಾದಿ,– ಜಾಡು : ಎಡಬಲನತ್ತಿತ್ತ ನೋಡದೆ ಮುಂಬಜ್ಜೆವಿಡಿದು ನಿಟ್ಟಿಸುತೊಯ್ಯನೈದಿ (ಶಶ. ೩-೦೬). [ಮುಂ$_1$ (< ಮುನ್$_1$) + ಪಜ್ಜೆ]

**ಮುಂಬಟ್ಟೆ** (ನಾ). ಮುಂದಿನ ದಾರಿ ; ಮುಂದಿರುವ ಮಾರ್ಗ : ತಂತಮ್ಮ ಮೇರೆಯಂ ತಪ್ಪಿದೊಡೆ ದಂಡಮಂ ಕೊಳ್ವ ಭೂಪಾಲರ ನಾಡ ವರ ಮಾಟದಿಂದೆ ಮುಂಬಟ್ಟೆಗಳೂರಂ ಪೊರ್ದಿ ಪೋಪಂತೆ (ರಕಾಸಿಮ್ಮ· ೯-೬೬): ಕಂಬನಿದುಂಬಿದನೊಡನೆದ್ದು ದಕ್ಷಿಣ ಮುಂಬಟ್ಟೆಯೊಳಗಡ್ಡಬಿದ್ದು ಇಂಬುಗೊಳ್ಳಲೆ ಸ್ವಾಮಿ ನಿಮ್ಮ ಸೋಯಿಸಿದೆನೇನೆಂಬೆ ನಾನತಿಕ್ರೂರನು (ಶರಶ. ೯೯-೩೨). [ಮುಂ$_1$ (< ಮುನ್$_1$) + ಬಟ್ಟೆ$_1$]

**ಮುಂಬಡಿಸು** (ಕ್ರಿ). ಮುಂದೆ ನಡೆಯುವಂತೆ ಮಾಡು ; ಮುಂದು ವರಿಸು : ಬಿನ್ನನಿರ್ದರಿವ ಮರೆಗೆಯ್ಗಳ್ದು ವಾಗೆಪೋಲಲುಗುಗೊಂಡೆನ್ನ ನಿಂಗಿತದಿಂದೆ ಮುಂಬಡಿಸೆ ತೇಂಕುಮುಮ್ಮಗಿಲ್ಗೆ ಕಾಲ್ಮೊಳೆತಂತೆ ಕನಸಿನೊಳ್ (ಸಂಸಕ. ೩೨-೮). [ಮುಂಬಡು + – ಇಸು$_3$]

**ಮುಂಬಡು** (ಕ್ರಿ). ಮುಂದಕ್ಕೆ ಸಾಗು ; ಮುಂದೆ ನಡೆ : ಈ ಪರಿಯೊಳ್ ಸುಮಿತ್ರಾಪುತ್ರಂ . . . ದಮನನಂ ಸಂತವಿಟ್ಟುಂ ಮುಂಬಟ್ಟು ಪಡೆವೆರಸು ಪಯದ ಬೆಸ್ನೊಳೆ ನಡೆಯುತಿರೆಯಿರೆ (ರಾಮಾಶ್ವ. ೦೦೦–೨೬). [ಮುಂ$_1$ (< ಮುನ್$_1$) + ಪಡು$_1$]

**ಮುಂಬಡೆ** (ನಾ). ಮುಂಭಾಗದಲ್ಲಿರುವ ಸೈನ್ಯ : ಕಡಲು ಮೇರೆಯ ತಪ್ಪಿದೊಲು ಮುಂಬಡೆಗಳಸುರರ ಬಲವ ಮುಸುಗುತ ಸಿಡಿಲು ಬಡಿವಂದದಿ ಕಡಿದೊಟ್ಟಿದರು ಬೊಬ್ಬಿಡುತ (ಅಪಂಡ. ೦·೦೦–೨). [ಮುಂ$_1$ (<ಮುನ್$_1$) + ಪಡೆ$_2$]

**ಮುಂಬಣ್ಣ** (ನಾ). ಮೊದಲು ಕಾಣುವ ಬಣ್ಣ : ಪೊಸಜವ್ವನದ ಮುಂಬಣ್ಣದಂತೆ ಕರ್ಪಂ ಕೈಕೊಂಡು ಕತ್ತುರಿಯಲ್ ಬರೆದಂತಪ್ಪ ವಿಕ್ರಾಂತ ತುಂಗನ ಮೀಸೆಗಳಾತನ ತೀವ್ರಪ್ರತಾಪಾನಳಧೂಮಲೇಖೆಯಂತಾದುವು (ಶಂಕಥಾ· ೨–೩೯ ಪ). [ಮುಂ$_1$ (<ಮುನ್$_1$) + ಬಣ್ಣ]

**ಮುಂಬದ, ಮುಂಬದನ್** (ನಾ). ರತಿಕ್ರೀಡೆಯ ಆರಂಭದಲ್ಲಿ ಸೂಸುವ ಸುರತದ್ರವ : ಬೆಂಡೇಟ್ಟ ಕಣ್ ಬೇಯದಚ್ಚುಟೊಳಂ ಪಾಸಿಗೆ ನಾಂಬ ಮುಂಬದಮಳುಂಬಂ ಕೂಟದೊಳ್ ನಲ್ಲರಾ (ಶಂಕೃಷ್ಣ. ೯-೬೬) ; ಮುಂಬದಂ ಗೆಳಿಯಿಸಿ ಕೂಡಿ ಗದ್ಗದದ ಕಂಠದಿ ಕೂಜಿತಮಂ ನೆಗಳ್ಚಿದಳ್ (ರಾಜಶೇ· ೦೦–೦೯೩). **ಮುಂಬದನ್** : ಉಚ್ಚರಿಸುವ ಮೆಯ್ಯವಿರ್ಪಾವ ಮುಂಬದನೊಪ್ಪಿರೆ ದೀವದೊಳ್ಪರಲ್ದೆರಲೆಯು ಭಾಪಮುಚ್ಚರಿಯಾನಚ್ಚಿಗೊಡರ್ಚಿದುದಾ ನೃಪೇಂದ್ರನಾ (ಅಪಂಕ್ಲ· ೦೦-೯೦); ಒಂದೆರಡೊಳ್ಪುಡಿ ತವಕದೊಳೊಂದೆರಡಾಲಿಂಗನಂ ಮುಗುಳ್ನಗೆ ನೋಟಂ ಸಂಪಣಿಸುವ ಮುಂಬದನೊಳಗಿಂದಿಕವರನಯನೆ ಪಾಣ್ಬನಂ ಬೀಟಿಸ್ತೊಂಡಳ್ (ಸೂಕ್ತಿಸು. ೮-೦೩೩). [ಮುಂ$_1$ (< ಮುನ್$_1$) + ಪದ$_1$]

**ಮುಂಬದಂಗೂಡು** (ಕ್ರಿ). ರತಿಕ್ರೀಡೆಯ ಆರಂಭದಲ್ಲಿ ಸುರತದ್ರವವನ್ನು ಸ್ರವಿಸು : ಮುಂಬದಂಗೂಡದಿರ್ಪಳ ಕೂಟಂ ಬಿಡದೇಳಚಾಟುವ ದನಾವಂ ನಚ್ಚುವಂ ಮೆಚ್ಚುವಂ (ರಾಜಶೇ. ೦೦-೦೩೪).
[ಮುಂಬದ + ಕೂಡು$_1$]

**ಮುಂಬದನ್** 'ಮುಂಬದ' ನೋ.

**ಮುಂಬದಿ** (ನಾ). ಮುಂಭಾಗ ; ಮುಂದುಗಡೆ : ಇದೇ ಗೋಡೆಯಲ್ಲಿ ರಂಗಸ್ಥಳದ ಮುಂಬದಿಗೆ ಇನ್ನೊಂದು ಬಾಗಿಲಿದೆ (ಚೀರಯೋ. ೦); ಸುಮಾರು ಐವತ್ತುವರ್ಷದ . . . ರೈತನೊಬ್ಬ ಗುಂಪಿನ ಮುಂಬದಿಗೆ ಬಂದನು (ಕೃಷರು· ೨೩೪) [ಮುಂ$_1$ (<ಮುನ್$_1$) + ಬದಿ$_1$]

**ಮುಂಬನ** (ನಾ). ವನದ ಮುಂಭಾಗ ; ತೋಟದ ಮುಂದುಗಡೆ : ಬಲಗೂಡಿ ತರಳ್ದು ರಸಿಕರಾಜೇಂದ್ರ ಮುಂಬನದಲ್ಲಿ ಕಂಡು ರಂಜಿಸುವ ಚೆಂಚಿತಿಯರಾಟಗಳ (ವೋಚಕ. ೦೯-೭೦). [ಮುಂ$_1$ (< ಮುನ್$_1$) + ಬನ$_1$]

**ಮುಂಬನಿ** (ನಾ). (ನೆಲದ ಮೇಲೆ ಬೀಳುವ) ಮೊದಲ ಮಳೆಯ ಹನಿ : ಮುಂಬನಿಯಿಂ ಜಾದಗೆವಕ್ಕಿ ಹಂಸೆ ಕೊಳನಂ ಪದ್ಮಂಗಳಾದಿತ್ಯನಂ ನೆನೆವಂತಾಂ ನೆನೆವೆಂ ಸರೋಜಮುಖಿಯಂ (ಅಂತ್ಯ· ೦೨-೪೦); ಮುಂಬನಿಯಂ ಜಾದಗೆಯಿರಾಂಟಿ ತನ್ನಯ ಪವಣ್ಗೀಂ ತುಷ್ಟಿಯಂ ಮಾಡದೇ

(ಶಾಂತೀಶ್ವ. ೧-೬೫); ಕಾವರ್ಗಿಲ ಮುಂಬನಿಗಳೊಳು . . . ಜಿನುಗಿನಲಿ ಬಹುಮಳೆಗಳಲಿ ನೆನೆನೆನೆದು ಸಾಗರತೀರದಲಿ ಬಂದನು ಕಿರೀಟಿ (ಕುಮಾ.ಭಾ. ೧೯-೨೦). [ಮುಂ$_2$ (< ಮುನ್$_2$) + ಪನಿ$_2$]

**ಮುಂಬಯಣ** (ನಾ). ಮುಂಚಿತವಾಗಿ ಮಾಡುವ ಪ್ರಯಾಣ : 'ಮುಂಬಯಣಂಬೋಗು 'ಪರಾ.
[ಮುಂ$_2$ (< ಮುನ್$_2$) + ಪಯಣ]

**ಮುಂಬಯಣಂಬೋಗು** (ಕ್ರಿ). ೧. ಮುಂಚಿತವಾಗಿ ಪ್ರಯಾಣ ಮಾಡು. ೨. (ಅಲಂ) ಮುಂಚಿತವಾಗಿ ಸಾಯು,–ಮಡಿ : ಇಂಬಟ್ಟಿದನುವರದೊಳವಂ ಮುಂಬಯಣಂಬೋದಂ (ಶಂಕರಾ. ೧೨-೨).
[ ಮುಂಬಯಣ + ಪೋಗು$_1$ (< ಪೋ$_1$) ]

**ಮುಂಬಯಸು** (ಕ್ರಿ). ಮುಂಚಿತವಾಗಿ ಬಯಸು,– ಅಪೇಕ್ಷಿಸು : ಮುಂಬಯಸಿ ಕೈಗೈದ ಸೊಬಗಿನ ಕೆಂಬಲರ ಮ್ಯೆಮಚ್ಚೆ ಕೆಂಬಲು ತುಂಬು ಗುಂಕುಮ ತಿಮಿರು ಚೆಂದುಟಿಯುಟ್ಟರುಣವಸನ (ಶಾಕ್ಯಶಾ. ೩-೩೪).
[ಮುಂ$_2$ (< ಮುನ್$_2$) + ಬಯಸು$_1$]

**ಮುಂಬರ್**, ಮುಂಬರು (ಕ್ರಿ). ೧. ಮುಂಭಾಗಕ್ಕೆ ಬರು ; ಮುಂದಕ್ಕೆ ಬರು : ಮನಮೆನ್ನಂ ಮುಂಬರಲ್ ಮುಂದುಮಾವುದನೆ ತೋರ್ಪಂತೆ ನೀಳ್ದತ್ತು ಸುಯ್ (ಕಾದಂಪೂ. ೬೫೬); ಮುಂಬರ್ಪ ತನ್ನ ಮೊಮ್ಮನ ಕಾಲ ಸೊಪ್ಪುಳಂ ಕೇಳ್ದು (ಗದಾಯು. ೩-೪೦ ವ); ಮುಂಬಂದೆಚ್ಚೊಡೆ ನಡು ವಾಯಂ ಬಗಿದೊಳಪೊಕ್ಕು ವಾಯುರಂಧ್ರದೊಳಂ ಬೀಳ್ವಂಬಂ ಕಡುವಿರು ಗುಜ್ ಕೂರ್ಕೊರ್ಂಬಿದು ಕಡಿದುದುದು ಪಟುಕಿಟಿಯುಮುಮಾ (ಹರಿಶ್ಚಂ.ರ. ೪-೪೫). **ಮುಂಬರು** : ೨. ಅನಂತರದಲ್ಲಿ ಬರು ; ಮುಂದೆ ಒದಗು : ತಮಗೆ ಮುಂಬಹ [ಶಾಶಾಂ. ಬಾಹ] ಸುಖದುಃಖಂಗಳನಱಿಯದವರು ಮತ್ತೊಬ್ಬರ ಸುಖದುಃಖಗಳ ಮೊದಲೆ ಅಱಿಯರು (ಶಬ್ದವ. ೪. ೨೨೨-೪೭೩); ರಾಜ್ಯದ ಮಹಾದಣ್ಣಾಯಕನು ನಾಡಿನ ಮೇಲೆ ಹೀಗೆ ಸಂಚರಿಸಿಮುದರಿಂದ ಮಂದಿಯ ಮನಸ್ಸು ಮುಂಬರುವ ಕಾಳೆಗದತ್ತ ತಿರುಗಿತು (ಸಪತಿ. ೬೨). [ಮುಂ$_2$ (< ಮುನ್$_2$) + ಬರ್ (< ವರ್)]

**ಮುಂಬರಪ** (ನಾ). ಮುಂಚಿತವಾಗಿ ಬರೆದ ಬರವಣಿಗೆ ; ಮೊದಲೇ ಬರೆದ ಬರಹ : ಸಿರಿಯಾಡಿಸೋಂಕಿನಿಂ ಪಣೆಯ ಮುಂಬರಪಂ ಪಸನಾಗೆ ಸೈಪು ಪೇರ್ವರಿಯೆ . . . ನಿಂದಳಮ್ಮಣಾಬ್ಧಿತರಂಗದೆ ತೇಂಕುಪಂನದಿಂ (ಚಿತ್ರಾ. ೬-೨೪೪). [ಮುಂ$_2$ (< ಮುನ್$_2$) + ಬರಪ (< ಬರೆಪ)]

**ಮುಂಬರಿ$_1$** (ಕ್ರಿ). ೧. ಮುಂದೆ ಚಲಿಸು ; ಮುಂದೆ ನಡೆ ; ಮುಂದಕ್ಕೆ ಸಾಗು : ಸುಪ್ರಭಮುನೀಶನಮಳತನುಪ್ರಭೆ ಮುಂಬರಿದು ಬೆಳಗಿದತ್ತು ಶಿವಜ್ಞಾನಪ್ರಭೆ ದಯಾಮೃತಾಸಾರಪ್ರಭೆಯೆನೆ ತನ್ಮುನೀಶನೊಡ್ಡೋಲಗಮಂ (ಶುಕುಪರಾ. ೩-೧೦೩); ಗೋಮುಖವ್ಯಾಘ್ರಂಗಳಂದದ ಕಾಮ ಮೊದಲಾದಖಿಳವಿಷಯಸ್ತೋಮಮನು ಮುಱಿದಿಕ್ಕಿ ಮುಂಬರಿದಂತರಂಗದಲಿ ಆ ಮಹಾಶಿವಲಿಂಗಸಂಗಪ್ರೇಮಿಯಾಗಿ ಶಿವೈಕ್ಯಪದವನು ನೇಮಿಸಿದ ಮಹದೇವಿಯಕ್ಕಗೆ ಶರಣು ಶರಣಾರ್ಥಿ (ಶ್ರಶುಂ. ೧-೫); ಅಂಬರ ಚರಿಯರಸೀ ಪಟ್ಟಣದೊಂದು ಸಂಭ್ರಮವನು ನೋಡಿಯೆನುತ ಕುಂಭಿನಿ ಕೈನೀಡಿ ಕರೆವೋಲು ಡೆಂಕಣಿ ಮುಂಬರಿದಸೆದುವರ್ತಿಯಲಿ (ಕಂಪಿಲಿ. ೬-೮). ೨. ಮುಂದಕ್ಕೆ ಹರಿ,– ಪ್ರವಹಿಸು : ನಿಂದಿದನು ನಿಮ್ಮಯ್ಯನಿದಿರಲಿ ಸಂಧಿಸುವ ರಣಗಲಿಗಳುಗ್ರಸ್ಯಂದನದ ಮುಂಭಾಗದಲಿ ಮುಂಬರಿವ ಹೆದ್ದೊಱೆಯ ಮುಂದೆ ನಿಲುವ ಮಹಾದ್ರಿಯುವೋಲು . . . ನಲವೇಱಿದನು ಕಲಿ ಹನುಮ (ಕೂರರಾ. ೬-೩೦-೧೬). ೩. ಮುಂದುವರಿ ; ಬೆಳೆ ; ಅಭಿವೃದ್ಧಿ ಹೊಂದು : ಈಗ ಸುಮಾರು ಮೂವತ್ತು ನಲವತ್ತು ವರ್ಷಗಳಿಂದಲೂ ನಮ್ಮ ಸಾಹಿತ್ಯ ನಾನಾಶಾಖೆಗಳಲ್ಲಿ ಮುಂಬರಿದು ಹಬ್ಬಿ ಹರಡುತ್ತಿದೆ (ಬಂಕಿಮು. IX. ಮುನ್ನುಡಿ). ೪. ಅಧಿಕವಾಗು ; ಹೆಚ್ಚಾಗು ; ವಿಶೇಷವಾಗು : ಅಂಬರಚರಿಯರ ತನುಗಂಪಿಗೆಱಗುವ ತುಂಬಿಯ ಬಳಗದಂದದಲಿ ಮುಂಬರಿದೆಸೆವ ಕಪ್ಪಿಡಿದ ಘಟಾಳಿಯಿಂ ಜಂಬುನೇಱಿಲೆಗಳೊಪ್ಪಿದುವು (ಕಂಪಿಲಿ. ೨-೪೪); ಬೆರಲಂ ಕೊಟ್ಟೊಡೆ ಬೇಟಮೋ ಕುರುಳುಮಂ ಕೊಯ್ದಿತ್ತೊಡೇಂ ಕೂರ್ಮೆ ಕೇಳರಮಿಂದಾನನೆ ಮನ್ಮನಃಪ್ರಿಯೆಯಿದಲ್ತೇ ದೇಹಮಂ ನಲ್ಮೆ ಮುಂಬರಿವುತ್ತಿತ್ತೊಡಿವೆಲ್ಲಮೇಂ ಪೆಱತೆ (ರಾಜಶೇ. ೧೦-೦೫೮). ೫. ಹರಡು : ವ್ಯಾಪಿಸು : ಪಸರಿಸು : ತನ್ನ ತೇಜದೊದವಿಂ ಹಾರಂಗಳೆಂಬಂತೆ ಭಾಸುರದಂತದ್ಯುತಿಮಾಲೆ ಮುಂಬರಿವಿನಂ ವ್ಯಾಖ್ಯಾನಮಂ ಮಾಡುತಚ್ಚರಿವೆತ್ತಿರ್ದ ಸುಧರ್ಮಯೋಗಿವರನಂ ಕಂಡಂ ಧರಾಧೀಶ್ವರಂ (ಕುಸುಮಾ. ೪-೯೯); ಮಣಿಭೂಷಣದ್ಯುತಿ ಮುಂಬರಿವುತಿರೆ ಬಂದನಾಕೆಯ ಹರಣ ಬಂದಂತೆ (ಶಾಕ್ಯಶಾ. ೩-೧೬); ಬಿಂಬಾಧರದ ಕೆಂಬೆಳಗು ಮುಂಬರಿದು ಕುಂಭಕುಚಕ್ಕೆ ಕೆಂಬರಲ ಸರಮಂ ಕೆಳಗೊಳಿಸೆ (ರಾಜಶೇ. ೪-೦೪ ವ). ೬. ಉಂಟಾಗು ; ಒದಗು : ಬಳಲಿದೆನು ಬಲುಹಾಗಿ ಸಾಕಿನ್ನೆಳತಟವು ತನಗೆಂಬ ಬಗೆ ಮುಂಕೊಳಿಸಿದುದು ಮುಂಬರಿದುದುಗ್ರಾಟೋಪಕೋಪಶಿಖಿ (ಕೂರರಾ. ೩-೮-೬೯). ೭. ಪರಿಣತವಾಗು ; ಪಕ್ವಗೊಳ್ಳು : ಪ್ರಾಚೀನ ಬೌದ್ಧಧರ್ಮವು . . . ಮುಂಬರಿದ ಚೇತನಗಳ ಏಕಾಂತತೆಯನ್ನೂ ಹೊರಗಿನ ನೆರವನ್ನೂ ಬಯಸದೆ . . . ಸ್ವಂತಪರಿಶ್ರಮದಿಂದ ಮೋಕ್ಷವನ್ನು ಗಳಿಸಬೇಕೆಂಬುದನ್ನೂ ಒತ್ತಿ ಹೇಳಿತು (ಕಕ್ಕಪ್ರಾ. ೦೭೩).

ಮುಂಬರಿ ಬೀಳು=ಮುಗ್ಗರಿಸಿ ಬೀಳು : ಥಗೆ ಹೊಡೆದಳ್ಳೆ ಹೊಯ್ಮ್ಯತ ಬಿಸಿಲಿಂಗೆ ನಾಲಗೆನೀರು ತಟಗುಟ್ಟಿ ಸುರಿಯೆ ಮಿಗೆ ಓಡುವವನ ಮುಂಬರಿ ಬೀಳಲೆಳೆವ ನಾಯಿಗಳಡಸಿದುವೆಡಬಲದೆ (ಬೊಕಿಹಕ. ೦೯-೦೪).
[ ಮುಂ$_2$ ( < ಮುನ್$_2$ ) + ಪರಿ$_2$]

**ಮುಂಬರಿ$_2$** (ನಾ). ಮುಂದಕ್ಕೆ ಚಲಿಸುವಿಕೆ : ' ಮುಂಬರಿವರಿ ' ಪರಾ.
[ಮುಂ$_2$ ( < ಮುನ್$_2$ ) + ಪರಿ$_3$ ]

**ಮುಂಬರಿತ** (ನಾ). ಮುಂದುವರಿಕೆ ; ಅಭಿವೃದ್ಧಿ : ಇದುವರೆಗಿನ ಎಲ್ಲ ವಿವರಣೆಗಳಿಂದ್ಯ ಸುಮಾರು ಕ್ರಿ. ಶ. ೧೨ನೆಯ ಶತಮಾನದ ಆರಂಭದಿಂದ ಕ್ರಿ. ಶ. ೧೭ನೆಯ ಶತಮಾನದ ವರೆಗಾದ ಕೋಟೆಗಾಳೆಗದ 'ಸಂಪರಣೆ' ಯ ಮುಂಬರಿತವನ್ನು ಕಂಡುಕೊಳ್ಳಬಹುದಾಗಿದೆ (ಕೋಟೆಗಾ. ೨೭). [ಮುಂಬರಿ$_1$ + – ತ$_2$]

**ಮುಂಬರಿವರಿ** (ಕ್ರಿ). ಮುಂದಕ್ಕೆ ಹೋಗು. ಚಲಿಸು : ಮಿಕ್ಕು ಮುಂಬರಿವರಿದು ನೀಡಿವನಿಕ್ಕಿಲದ ಕೋಲುಗಳ ಕಿಡಿ ಸಿಡಿದಿಕ್ಕಿ ಬಾಲದ ಶಿಖಿಯ ಸೀವರಿಸುವ ಶಿಖಾಳಿಗಳ (ಕೂರರಾ. ೫-೮-೪೭). [ಮುಂಬರಿ$_2$ + ಪರಿ$_2$]

**ಮುಂಬರು** ' ಮುಂಬರ್ ' ನೋ.

**ಮುಂಬರೆಯ** (ನಾ). ಹರೆಯದ ಆರಂಭ : ನವಯೌವನ : ಸಿರಿ ಚೆಲ್ವಂ ಸಿರಿಯಲ್ಲಿ ರೂಪು ಮಿಗೆ ಚೆಲ್ವಂ ರೂಪಿನೊಳ್ ಪೆತ್ತು ಮುಂಬರೆಯಂ ಚೆಲ್ವನಿನಿತ್ತುಮೆಯ್ದೆ ಕಡುಚೆಲ್ವಂ ಬೇಟದಿಂ ಬೇಟಮೊಂಬರಸಂ ಮನ್ನಿಸದಂದ ನಾಯಕಮುಂ (ಅನಂಪು. ೮-೫೮); ಮುಱುಕದ ಗಾಡಿ ಮುಂಬರೆಯ [ಶಾಶಾಂ. ರಿಯ]ದೊಟ್ಟಜೆ ರಂಜಿಪ ದೇಸೆ ಸೌಷ್ಠವಂ ಮೆಱೆದಿರೆ (ಲೀಲಾವ್ರ. ೭-೪); ಧರಿಸಿದ ಕನಕಾಂಬರದಪಾರಶೋಭಾವೈಭವಮಂ ಮುಂಬರೆಯದ ಮೆಯ್ಸಿರಿಯಿಂ ಜರಿಯುತ್ತುಂ (ಮುದ್ರಾಮಂ. ೫-೮೯ ವ).
[ ಮುಂ$_1$ ( < ಮುನ್$_1$) + ಪರೆಯ$_2$ (< ಪರಯ) ]

**ಮುಂಬಲ್**, ಮುಂಬಲ್ಲು (ನಾ). ಮುಂಭಾಗದ ಹಲ್ಲು ; ಮುಂದಿನ ಹಲ್ಲು : ಸಂಧಿಸಿ ಮಂತ್ರದೆ ಮುಂಬಲ್ಲಿಂದರಳಿಯ ಮುಗುಳನಗಿವುತುಂ ಥೂಥೂಯೆಂದಂದಭಿಮಂತ್ರಿಸಿ ಭಸ್ಮಮಂನಂದಿಟ್ಟಿವರ್ ತೇಟ ವಿಷಮುದಾಕ್ಷಣ ಮಿಟ್ಟಿಗುಂ (ಕಬ್ಬಿಗ. ೦೦-೦೧); ಮುಂಬಲ್ಲಂ ನಾಲ್ಕಕ್ಕಮದೆಂಬುದು ಸಂದುಂತಮೆಂಬ ಪೆಸರುಂ ಮೇಗಣ ಕೆಂಬಲ್ಲುಮುಗ್ರದಂತಮದೆಂಬುದು (ಅಶ್ವಶಾ. ೯-೯). ಮುಂಬಲ್ಲು : ಕುರುಳು ಬೆರಳು ಮುಂದುಹು ಮುಂಬಲ್ಲ

ಕೊಳ್ವ ಸಿಜಯನಿಕ್ಕಿ ದಾಂಟಿದರೆ ಅಂತೆಸ್ನ ನಂಬಾ (ಚಂಪ. ೩೦೧); ಮುಂಬಲ್ಲು ಬಿದ್ದು ವೀಳೆಯವ ಕಲ್ಲೊಳು ಚಿಜ್ಜ ತಿಂಬರಲ್ಲದೆ ಬಿಟ್ಟರಾರು (ಶರಶ. ೬೦-೧೧೨); ನಗೆಮುಖಿ ಮುಂಬಲ್ಲೆಲ್ಲ ಚೆನ್ನ ಕಾಣೆ ಗೆರೆ ಬರದಾ ವಿಭೂತಿ ಕಪ್ಪುಗೊರಳ ಕಾಣೆ (ವಾಶವ. ೨೦೬).

[ಮುಂ$_1$ (<ಮುನ್$^*_1$) + ಪಲ್]

**ಮುಂಬಲ** (ನಾ). ಮುಂಭಾಗದ ಸೈನ್ಯ, – ದಂಡು ; ಮುಂಚೂಣಿ : "ಮುಂಗುಡಿಯೆನೆ ಮುಂದುಚೂಣಿಯೆನೆ ಮುಂಬಲಮುಂ " (ಚತುರ. ೧೬೬); ಮಲಯಮಾರುತನ ಬೆಂಬಲಮುಮಂ ಚೈತ್ರಮಿತ್ರನ ಮುಂಬಲ ಮುಮಂ . . . ದರ್ಪಕನ ದರ್ಪಂಬೆರಸೆಟಕುಳಿಗೊಂಡು ಗಂಡೇಟಿದ ಗಂಡಗಾಡಿ ರೂಢಿವಡೆಯೆ (ಅನಂಪು. ೬-೨೨ ವ); ಚಂಡ ಕೋದಂಡನ ದಂಡಾಧಿನಾಯಕಂ ವೀರಜಂಭರಾಜಂ ಮುಂಬಲದೊಳ್ ಕದನಕ್ಕೆ ಕಡಂಗಿ ಕದುಂಬಿ ಸನ್ನದ್ಧನಾಗಿ (ಹಮ್ಮಿರ. ೩-೩೩ ವ); ಅಟ್ಟುದುಟ್ಟಿದ ಬೆಂಬಲಂ ಮುಂಬಲವಾಗೆ ಬೆಂಗೊಟ್ಟೋಡಿ ತಮ್ಮಾಣ್ಮಂಗೀತಿದಂ ಕೇಳಿ ಸಿದರ್ (ರಾಮಾಶ್ವ. ೦೯೬-೧). [ಮುಂ$_1$ (<ಮುನ್$^*_1$) + ಬಲ್$_3$]

**ಮುಂಬಲಿ** (ಕ್ರಿ). ಮೊದಲು ವ್ಯಾಪಿಸು : ಏರಿದಾದ ಚತುರಂಗದ ಪದಹತಿಯುಲಿ ಮುರಿದೇಳ್ದ ಕೆಂದೂಳ್ಗಳಾಗ ತರಣಿಮಂಡಲವ ಮುಂಬಲಿದು ಮುಂಕೊಳುತಂದು ಕಿರಣದೇಳಿಗೆಯು ತಗ್ಗಿಸಿತು (ಕಂಹಪ. ೦೬-೨೮).

[ಮುಂ$_2$ (<ಮುನ್$^*_2$) + ಬಲಿ$_1$ (< ಬಲ್$^*_1$)]

**ಮುಂಬಲ್ಲು** 'ಮುಂಬಲ್' ನೋ.

**ಮುಂಬಸಿಱು** (ನಾ). ಗರ್ಭ ಧರಿಸಿದ ಪ್ರಾರಂಭದ ಕಾಲ : ಬಸುಗದಿರಿನ ಮುಂಬಸಿಱೊಳು ಮೂಡಣ ದೆಸೆವೆಣ್ಣಿ ಸೀಮಂತದ ಒಸಗೆಯ ವಾದ್ಯ ಗಳೆನೆ ದೇಗುಲಗಳೊಳೆಸೆವವು ಶಂಖನಿನಾದಂ (ಶ್ರೀಶಾಂ. ೨-೨೮)

[ಮುಂ$_1$ (< ಮುನ್$^*_1$) + ಬಸಿಱು (< ಬಸಿಱ್)]

**ಮುಂಬಳೆ** (ನಾ). ಕೈಯ ಮುಂಭಾಗದಲ್ಲಿ ಧರಿಸುವ ಬಳೆ : ಬಾಜೀ ಬಂದು, ಹಿಂಬಳೆ, ಮುಂಬಳೆ, ದೋರ್ಯ, ಪೌಂಚಿ . . . ಡಾಬು ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಪಂ. ೩೮).

[ಮುಂ$_1$ (<ಮುನ್$^*_1$) + ಬಳೆ$_2$]

**ಮುಂಬಾಗಿಲ್**, ಮುಂಬಾಗಿಲು (ನಾ). (ಕಟ್ಟಡದ) ಮುಂಭಾಗದಲ್ಲಿರುವ ಬಾಗಿಲು; ಮುಂದಿನ ದ್ವಾರ; ತಲೆಬಾಗಿಲು: ಪೋಗಿ ನೀಂ ಗಿಳಿಯೆಮ್ಮ ದೇಗುಲದೊಪ್ಪವುನ್ನತವಾದ ಮುಂಬಾಗಿಲಲ್ಲಿ ತೊಳಪ್ಪ ಪೂಗೊಳದೊಳ್ಮ ಲಂಗೆನಲು (ಉತ್ತರ. ೭-೦೦೦); ಅಗಳನೂನಸಂಭ್ರಮಪರಿಭ್ರಮ ದಂಗನೆಯರ್ . . . ಮುಂಬಾಗಿಲೊಳುನ್ನತಧ್ವಜಚಯಂಗಳನೆತ್ತಿಸಿ ರಂಗ ವಾಲಿಯಂ ರಾಗದೊಳಿಕ್ಕಿ ಬೀದಿಯೊಳ್ ಮುಂದಟ್ಟಿ ಮಾಡಿದರಷ್ಟಶೋಭೆಯಂ (ಶಾರಕ. ೩-೧೩). **ಮುಂಬಾಗಿಲು**: ಇಂದ್ರಿಯದ ಬಾಗಿಲಲ್ಲಿ ಮನಪಿಪ್ಪುದು ಮನದ ಮುಂಬಾಗಿಲಲ್ಲಿ ಭೋಗಲಿಂಗವಿದ್ದು ಸಕಲಭೋಗಂಗಳ ಭೋಗಿಸಿ . . . ಸೌರಾಷ್ಟ್ರಸೋಮೇಶ್ವರಲಿಂಗವ ಬಲ್ಲರೆ ಬಲ್ಲೆ (ಆದಶ. ೨೨-೬೦) ; ಕನಕಾಂಬುಜಮುಖಿಯಾ ಗೃಹದ ಮುಂಬಾಗಿಲ ಗೋಪುರದ ಚಿತ್ರದ ಭಿತ್ತಿ ಇಂಬಾಗಿರೆ ನೋಡಿದಳು (ಶ್ರೀಶಾರಿ. ೬-೬೩) : ದಮಯಂತಿ ಗಂಡನನ್ನು ಎದುರುನೋಡುತ್ತಾ ಮುಂಬಾಗಿಲಿನಲ್ಲಿ ನಿಂತಿದ್ದಳು (ದೂಶಿಟ್ಟ. ೬೯).

[ಮುಂ$_1$ (< ಮುನ್$^*_1$) + ಬಾಗಿಲ್]

**ಮುಂಬಾಗಿಲು** 'ಮುಂಬಾಗಿಲ್' ನೋ.

**ಮುಂಬಾಗು** (ಕ್ರಿ). ಮುಂದುಗಡೆಗೆ ಬಾಗು ; ಮುಂದಕ್ಕೆ ಓಲು : ಒಂಬತ್ತುತಿಂಗಳು ಹೊತ್ತ ಮಾತೃಕೆಯ ಪಾದಾಂಭೋರುಹಕಲರ್ಗರೆದು ಮುಂಬಾಗಿ ಕೈನೀಡಿ ಶರಣೆಂಬ ರೀತಿಯೊಳ್ ಪೊಂಬಾಳೆ ಬನದೊಳೊಪ್ಪಿ ದುವು (ಮೋಹತ. ೨೪-೪೦). [ಮುಂ$_2$ (< ಮುನ್$^*_2$) + ಬಾಗು$_1$]

**ಮುಂಬಾಯ್**$_1$ (ಕ್ರಿ). ೧. ಮುಂದಕ್ಕೆ ನುಗ್ಗು : ಅವ ಪೆರ್ಗಡಲ್ ಅಗಳು ಆವ ಮಲೆ ಬಲ್ಗೋಂಟೆ, ಅದರ ಮುಂಬಾಯ್ವರಿವು ಮೊಗಗೆಟ್ಟು ನಿಲಲು (ಶಾರಸಿ. ೬-೦೨೯). ೨. ಮುಂದಕ್ಕೆ ಹಬ್ಬು, – ಹರಡು : ಚಂದ್ರಧ್ವಜಾ ವನಿಪಂ...ಮೇಧಾವಿಳಾಂಕನ ವಕ್ತ್ರೇಂದುವನೊಯ್ಯನೀಕ್ಷಿಸುತುಮುತ್ಕೌತ್ಸುಕ್ಯ ದಿಂದೊಂದನೆಂದೆನಲುದ್ಯೋಗಿಸಿದಂ ದ್ವಿಜದ್ಯುತಿನಿಕಾಯಂ ನೀಟ್ಟು ಮುಂಬಾ ಯ್ವಿನಂ (ಕುಸುಮಾ. ೦೩-೬೩). ೩. ಮುಂದಕ್ಕೆ ಹರಿ, – ಪ್ರವಹಿಸು : ಸೋರ್ವಾ ವಾರಿಧಾರಾವಳಿಯಿನಿರದೆ ಮುಂಬಾಯ್ದ ವಾರಿಪ್ರವಾಹಾವಳಿಯಾ ವಾರಿಪ್ರವಾಹಾವಳಿಯಿನಿಳೆ ಪಯೋರೂಪವಾದತ್ತದೆತ್ತಂ (ಕುಸುಮಾ. ೬-೪೦). [ಮುಂ$_2$ (<ಮುನ್$^*_2$) + ಪಾಯ್$^*_1$]

**ಮುಂಬಾಯ್**$_2$ (ನಾ). ಬಾಯಿಯ ಮುಂಭಾಗ ; ತುಟಿ : ಮುಂಬಾಯ ಕರ್ಪೂರವೀಳೆಯದಿಂದ ಕಣ್ಗೆಂಬಾದನಾ ಗಾಡಿಕಾಜ (ಭರತ. ೦-೩೩).

[ ಮುಂ$_1$ (< ಮುನ್$^*_1$) + ಬಾಯ್ ]

**ಮುಂಬಾರೆಕಾಱ** (ನಾ). ಸೈನ್ಯದ ಮುಂಭಾಗದಲ್ಲಿ ಕಠಾರಿಯನ್ನು ಹಿಡಿದು ಯುದ್ಧಮಾಡುವ ಸೈನಿಕ ; ಮುಂಚೂಣಿಯ ಭಟ : ತಿರುಹಿ ಬಿಸುಟುವು ಕಾಲುಗಾಹಿನ ತುರಗವನು ಮುಂಬಾರೆಕಾಱರ ಶಿರವನೈದಾಳಿಗಳ ನಡಸಿದವಣಲ ಹೊಳಲಿನೊಳು (ಕುಮ್ಮಾಶಿ. ೪-೭೬).

[ ಮುಂಬು$_2$ + ಆರೆ$_3$ + – ಕಾಱ]

**ಮುಂಬಾಲೆ** (ನಾ). ಕಿವಿಯ ಹಾಲೆಯ ಮುಂಭಾಗ : ಪೋಲುದಂ ಮಱೆದು ಮೆಯ್ಮಱೆದೊರ್ವಳೊಱಲ್ದು ಮುಂಬಾಲೆಯಂ ತಿರಿಪಿ ನೂಂಕಿ ಪವಿತ್ರಮನಿಟ್ಟು ಪಚ್ಚೋಲೆವಚ್ಚದೊಳೊಡಂಬಡೆ ಬಂದು ವಿದಗ್ಧ ಭೂಪಾಲ ನಂದನನನಂದರುಣಾಧರೆ ನೋಡಿದಳ್ (ಕಾವ್ಯಾವ. ೨೨೦).

[ಮುಂ$_1$ ( < ಮುನ್$_1$) + ಪಾಲೆ$_3$]

**ಮುಂಬಾಳು** (ನಾ). ಮುಂದಿನ ಬಾಳು ; ಭವಿಷ್ಯದ ಜೀವನ : ಹಿಂದೆ ಮಾಡಿದ ತಪ್ಪುಗಳನ್ನು ಇನ್ನು ಮುಂದೆ ಮಾಡದೆ, ಮುಂಬಾಳನ್ನು ಹಸನಾಗಿಸಿಕೊಳ್ಳುತ್ತೇನೆ ಎಂಬ ವಿಶ್ವಾಸವು ಉಂಟಾಗಿರುತ್ತದೆ (ಮಹಶೀಪಂ. ೨೪೯). [ಮುಂ$_1$ (< ಮುನ್$^*_1$) + ಬಾಳು$_2$ (< ಬಾಟ್$^*_3$)]

**ಮುಂಬಿಗ** (ನಾ). ೧. (ಸೈನ್ಯದ) ಮುಂಭಾಗದಲ್ಲಿರುವವನು ; ಮುಂಚೂಣಿಯಲ್ಲಿರುವವನು : ಸೂತಸುತ ದಳಪತಿಯೆ ಘಡ ಮುಯ್ಯಾಂತರೇ ಮುಂಬಿಗರು (ಕುಮ್ಮಾಕ. ೨-೬) ; ಅನಿತಱೊಳೆ ಗದೆಯಂ ಸದೆದು ಮೋಹರಿಡಱ ಮುಂಬಿಗನಂ ನಿರ್ಯಾಯೋಧನಂಗೆಯ್ದು . . . ಕಣದೊಳ್ ಕೆಡೆಪಿದಂ (ರಾಮಾಶ್ವ. ೦೯೩-೨೯). ೨. (ಸಾಹಿತ್ಯಕ್ಷೇತ್ರದಲ್ಲಿ) ಪ್ರತಿಷ್ಠಿತನಾಗಿರುವ ವ್ಯಕ್ತಿ : ಮುಂಬಿಗರಿದನಂತೆ ನೂಕೆ, ಬಳ್ಳಿ ಬರಿದೆ ಕೊರಗಲೇಕೆ ? ಹೆತ್ತಳೈಸೆ ಫಲಮನಾಕೆ ಕಡುಸಾಜತೆಗೆ ? (ಗೀಶಂ. ೦೦೪-೩೭).

[ಮುಂಬು$_2$ + – ಇಗ]

**ಮುಂಬಿಡು** (ಕ್ರಿ). ೧. ಮುಂದಕ್ಕೆ ಬರುವಂತೆ ಮಾಡು : ಕಿಱಿಯಂ ಮುಂತ್ತಾಂ ಧನದಂ ಬಱಿಯಂ ತೊಱೆದಂ ಗೃಹಸ್ಥನೆನ್ನದೆ ಮುಂಬಿಟ್ಟಱಸಿ ಕೊಲುತಿರ್ಪ ಜವನೆಂಬಱಿಯಿಯ ಪಗೆವಂಗದೆಂತು ಪಂಗಿಗನಪ್ಪೆಂ (ಅರಿಪು. ೪-೭೭) ; ಏಂ ನಿಷ್ಕರುಣಿಯೊ ಪಸುಮಗನೆನ್ನದೆ . . . ಮರುಳಕ್ಕಟ ಮಾಣೆನ್ನದೆ ಮುಂಬಿಟ್ಟು ಕೊಂದಪಂ ಯಮರಾಜಂ (ಅಶಪು. ೦೦-೨೩) ; ರಟ್ಟರ ಕೈಗೆ ಪಿರ್ದ್ದೆಳೆಯುಂ ಪಟ್ಟಮುಮಂ ರಟ್ಟರಾಜ್ಯದರಸುಗಳಂ ಮುಂಬಿಟ್ಟು ತಱೆದೊಟ್ಟಿ ರಟ್ಟಘರಟ್ಟಂ ಚಾಳುಕ್ಯರಾಜ್ಯಪಟ್ಟಮನಾನ್ತಂ (ಎಕ. VII, ಶಿಕಾಂ. ೦೨೩-೦೨ ; 1029). ೨. ಎದುರಾಗು ; ಅಭಿಮುಖ ವಾಗು : ಮುಂಬಿಟ್ಟು ಪರಿವ ಕಟ್ಟಲೆಯಂ ಬೆದಱೆ ತೆರಳ್ವ ಬೆಳಪಂ ಬೆಳಗಿಂದೆಸೆದಿರ್ಪಂಬುಜಪಖನಂತಿರೆ ಮಿನಂಬುಟು ಬೆಳಗಿದಪುದಖಿಳ ಗಗನಾಂತರಮಂ (ಕಾವ್ಯಾವ. ೬೮೨). ೩. ಮುಂದಕ್ಕೆ ಹರಡು : ಶೋಣಾಬ್ಜದೊಳ್ ಕೆಲೆಗೊಂಡಿಂದುಕಲಾಂಕುರಚ್ಛವಿಯವೊಲ್ ಬಿಂಬೋಷ್ಠ ವಿಂಬಾದ ಬೆಂಬಲೆಯೊಳ್ ಮುಂಬಿಡೆ ದಂತಕಾಂತಿ ಬಱಿಕೀತೆಂದವಳ್

ಮಹೀಕಾಂತನೊಳ್ (ಅಸಂಪು. ೨-೩೨). [ಮುಂ$_2$ (< ಮುನ್$_2$) + ಬಿಡು$_1$]

**ಮುಂಬಿಡುವಲೆ** (ನಾ). (ಮುಂಭಾಗದಲ್ಲಿ ಅಗಲವಾಗಿ ಹಾಸುವಂಥ) ಒಂದು ಬಗೆಯ ಬಲೆ : ಗೂಂಟವಲೆ ಪೊಣಚುರ್ವ ಬಲೆ ಮುಂಬಿಡುವಲೆ ನಡುವಲೆ. . . ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (ಗಿರಿ. ೦-೬೦). [ಮುಂ$_2$ (< ಮುನ್$_2$) + ಬಿಡುವಲೆ]

**ಮುಂಬಿಸಿಲ್**, ಮುಂಬಿಸಿಲು (ನಾ). ಪ್ರಾರಂಭದ ಬಿಸಿಲು : ಬೆಳಗಿನ ಬಿಸಿಲು : ಎಳೆಬಿಸಿಲು : ಊರಿಂ ಪೊಱಮಟ್ಟು ಗಾವುದದೊಳ್ ಮುಂಬಿಸಿಲಂ ಮೂಡಿಸಿದಂ (ಕರ್ನಾ. ಸು. ೫೪೩ ವ್ಯಾಖ್ಯಾ.); ಹೊಂಬಣ್ಣವೆರಚುವುದು ಮುಂಬಿಸಿಲ್ (ಕರ್ನಾಂಗ. ೫೩-೦೯೩೯). **ಮುಂಬಿಸಿಲು** : ಇಂಬಾಗಿ ನಗುನಗುವ ಮುಂಬಿಸಿಲ ಮೋರೆಯಲಿ, ಅಂಬುಜಸಖಂ ಬಂದನಂಬರದಲಿ (ಶಂಪು. ೨೬-೦). [ಮುಂ$_1$ (< ಮುನ್$_1$) + ಬಿಸಿಲ್]

**ಮುಂಬಿಸಿಲು** ' ಮುಂಬಿಸಿಲ್ ' ನೋ.

**ಮುಂಬು$_1$** (ಕ್ರಿ). ೧. ಮುಂದಕ್ಕೆ ಬರು ; ಮುಂದೆ ಬರು : ಒದವಿದ ಮಾನಸಿಕ್ಕೆ ತಲೆದೋಱಿದ ಮುನ್ನಮೆ ಮುಂಬಿ ಮೂರ್ತಿಗೊಂಡುದು ಸಿರಿ ಕೆಚ್ಚುಗೊಂಡುದು ಮನಂ . . . ರಾಸಿಗೊಂಡುದು ನೆಗರ್ತೆಯ ತೇಜವನನ್ತಪಾಳನ (ಶಾಶಾ. IX-i, ೨೦೩-೫೩ ; 1126). ೨. ಮೊದಲು ಬರು ; ಮುಂಚೆ ಬರು : ತೋಱಬರ್ತ್ತೇಱಜಿಸೊಳ್ ಪರಿಮೇಷಮಾದೊಡಂ . . . ನೂಱ ನಾಲ್ವತ್ತೇಱುಂ ದಿನದೊಳೆತ್ತ ಮುಂಬಿ ನಿಲೆ ಮಾಗಿಲ್ ಕರ್ಗಿಕೊಂಡಿರ್ಪೊಡಂ ಮೇಘಸಂತತಿಗಾದ ಗರ್ಭಮೆಲ್ಲಂ ತುಂಬಲ್ ಮಾತೇನೊ ಗಾಳಿಸಲೆಂದಱಿಗೆ ಬಿಟ್ಟಕಂದರ್ಪನ ಸೂತ್ರೋಕ್ತದಿಂ (ಅಲ್ಪಿಶು. ೬-೭೦). [ಮುಂ$_1$ (< ಮುನ್$_1$) + < - ಪು$_1$ ]

**ಮುಂಬು$_2$** (ನಾ). ೧. ಮುಂಭಾಗ; ಮುಂದುಗಡೆ ; ಎದುರು : ಅರಿಭಟರು ಪವನಜನನುನುತ ಮುರಳುತುಬ್ಬುರಬವರವನು ತಂದರನೆಲೆಗೆ ಹಾಯ್ಕಿದರು ಕರ್ಣಾದಿಗಳ ಮುಂಬಿನಲಿ (ಕುಮಾ.ದ್ರೋ. ೦೩-೦೯); ದೇಶಿಯ ನಾಡಿದಳು ಪರವೆನಾಚಿ ವಲ್ಮೀಕನಾಥನ ಮುಂಬಿನೊಳು (ಹರಿಶ್ಚಂ. ೬-೦೦); ಉಲುಹುದೆಗದೀಗುವ ಸಮುದ್ರದ ಸಲಿಲದವೊಲಾಯ್ತಖಿಳಸೇನಾಜಲಧಿ ಕೌಣಿಸು ಮಲೆವ ಮಹಿಪರ ಮುನಿಯು ಮುಂಬಿನಲಿ (ತೊರವೆ. ೦-೦೭-೩); ಮುಂಬಿನೊಳನಿರುದ್ಧ ಪೊಱಮಟ್ಟು ನಿಖಿಳನಿತಂಬಿನಿಯರ ಸಮುದಯದಿ (ಜೋತಿಷ. ೪೦-೩೯). ೨. ಸೈನ್ಯದ ಮುಂಭಾಗ; ಮುಂಚೂಣಿ : ಬಿಱಿತಕೆ ನಿಲುವ ಚೂಣಿಗರಿಲ್ಲ ಮುಂಬಿಗೆ ಹೊಳಕ ಬಲ್ಲವರಿಲ್ಲ ನಮ್ಮಯ ಬಲದ ನಾಯಕರು (ಕುಮಾ.ದ್ರೋ. ಶಂ. ೨೯೮-೬); ಕಳಕಳದ ಬೊಬ್ಬೆಗಳ ಕೈಮನಡುಭಯುಬಿಲ ಮೋಹಿದುದು ಮುಂಬಿನಲಿ (ತೊರವೆ. ೬-೩೬-೦). ೩. ಮೊದಲು ; ಪ್ರಾರಂಭ : ಸುರತದ ಸುಗ್ಗಿ ಕಾಮನ ಸರಲ್ಗಳ ಪೂವಿನ ಪೊಟ್ಟು . . . ಸುರಾಗರಸಂಗಳ ಕಾರ ಮುಂಬು ತತ್ಪುರವರದಲ್ಲಿ ಸಾತ್ವಿಕದ ಮೈನಡುಕಂಗಳ ಮಾಗಿಯಾಗಳುಂ (ಅರ್ಧನೇ. ೦-೬೮) ; ಮತ್ತೆ ಭಾನು ಮೂಡುವ ಪದದೊಂದು ಮುಂಬಿನೊಳೆ ಬೆಳ್ಕರಿಪಂತಿರೆ ಕೂಡೆ ಪಾಂಡುರಚ್ಛವಿಯೊಳಕೊಂಡುದೋದೆ ದಿನಮಿಂತುಟು ಚಿಂತೆ ನರೇಂದ್ರದೇವಿಯಾ (ಶಕ್ರಶಿ. ೩-೦೦೦); ವನಿತೆಯರ್ವರುಂ ಚಲವಿಲೋಚನಮಿಂದುಕಳಾವಿಲಾಸಮುಂ ಜನಿಯಿಸೆ ತನ್ನಿವಾಸದೊಳಳಂಕೃತಿಮುಂಶುಗಳಂತದಕ್ಕೆ ಮುಂಬಿನ ತೇಜದಿಂದೆ ಮುಂದುವರಿಯಲ್ ಬರೆ (ಮಹಾಪೇ. ೭-೭೮). ೪. ಮೊದಲು ಕಾಣಿಸಿಕೊಳ್ಳುವ ಗುರುತು: ಮುನ್ನೊಱೆಪನೆ : ಉದಯಿಸಿತು ಕೇವಲಜ್ಞಾನದ ಮುಂಬಿದು ನೋಟಿಸೊಱೆಬಿನಂ ತಪಮುಂ ಕೊಳ್ವುದುಮೊಡನೆ ಮನಃಪರ್ಯಯ ಮುದಾತ್ತ ಮನನೆನಿಪ ತಮ್ಮ ನೀಂದ್ರೋತ್ತಮನೊಳ್ (ಶಂಪ್ರಪ್ರ. ೦೩-೧೦೨). ೫. ಮುಂದಿರುವವನು ; ಮುಂದಾಳು : ಪಂಚಾನನದಂತೆ ಗರ್ಜಿಸಿ ದಶಾನನನೆಬ್ಬುರೆ . . . ತಾಗಿದಂ ದಾನವರಶ್ವಸಂ ಜವನ ಮುಂಬಿವನೆಂಬ ನೆಗಂ ವಿಭೀಷಣಂ (ಶಂಚತಾ. ೦೪-೦೦). ೬. ಹಿಂದಿನದು : ಪ್ರಾಚೀನದು : (?). ೭. ಮುಂದಿನದು ; ಅನಂತರ ಒದಗುವುದು : ಭವಿಷ್ಯ : ' ಮುಂಬುಗಳೆ ' ಪರಾ. ೮. ಗುರಿ ; ಉದ್ದೇಶ : ಲಕ್ಷ್ಯ : ಮಕ್ಕಳು ನಿರ್ದಿಷ್ಟ ಮುಂಬಿನಲ್ಲಿ ಬೆಳವಣಿಗೆ ಸಾಧಿಸುವಂತೆ ಕಲ್ಪಿಸಬೇಕು (ಶಿಕ್ಷಣ. ೪೬). ೯. (ಜಮೀನಿನಲ್ಲಿ) "ಕೊಯ್ಯುವ ಸಾಲು : ಅಕ್ಕಡಿ" (ಜಾನಕೋ. ೩೩) ; "ಹೊಲಗದ್ದೆ ಕೊಯ್ಯುವವರು ತಮತಮಗೆ ಕೊಯ್ಯಲಾಗುವಷ್ಟು ಜಾಗದಲ್ಲಿ ಅಥವಾ ಮೊದಲೇ ಇರುವ ಸಾಲಿನಲ್ಲಿ ಕೊಯ್ಯುತ್ತ ಮುಂದುವರಿಯುವುದು" (ವಸ್ತು.ಕೋ. ಕೋಶ) : ಗದ್ದೆ ನಾಟಿಮಾಡುವಾಗ . . . ಹಾಡುತ್ತಾ ನಾಟಿಮಾಡುತ್ತಿದ್ದರೆ ಮುಂಬು ಹತ್ತುವುದೇ ಗೊತ್ತಾಗುವುದಿಲ್ಲವಂತೆ (ವಸ್ತು.ಕೋ. ೨೩).
[< ಮುಂಬು$_1$. / ತಮಿ. ಮುಂಪು ; ಮಲ. ಮುಂಪು ; ತೆಲು. ಮುನುಪು]

**ಮುಂಬುಗಳೆ** (ಕ್ರಿ). ಮುಂದಾಗುವುದನ್ನು ಅಲಕ್ಷಿಸು ; ಮುಂದೆ ಒದಗುವ ಅಪಾಯವನ್ನು ನಿರ್ಲಕ್ಷಿಸು : ಮುಂಬುಗಳೆದು ಕಾದಿದವರ ಬಿರುದರ್ ಕಾದುವಂತೆ ಕುರುಪಾಂಡುಸುತರ್ (ಗದಾಯು. ೬-೦೪). [ಮುಂಬು$_2$ + ಕಳೆ$_1$]

**ಮುಂಬುಗೊಳ್** (ಕ್ರಿ). ಮುಂದೆ ಹರಡು, — ಆವರಿಸು, — ವ್ಯಾಪಿಸು : ಅದೆ ಪೂತ್ಕಾರೋಚ್ಚಳಚ್ಛೀಕರತಿಮಿತಚಮೂರೇಣು ದಿಗ್ಭಿತ್ತಿಯಂ ಮುತ್ತಿದುದೆತ್ತಂ ಮುಂಬುಗೊಂಡಂಬರಮನಿತುಮನುದ್ಯತ್ತತಾಕಾಂಬರಂ ನುಂಗಿದುದು . . . ಎಂಬಸ್ತಂ ಜಗನ್ಮಂಡಳವೆಡೆಗಿಡೆ ಬಂದತ್ತು ಮತ್ತೇಭವ್ಯೂಹಂ (ಪರ್ವಪು. ೬-೯). [ಮುಂಬು$_2$ + ಕೊಳ್$_1$]

**ಮುಂಬುಟ್ಟು** (ನಾ). ಮುಂದಿನ ಹುಟ್ಟು ; ಮುಂದಿನ ಜನ್ಮ ; ಭವಿಷ್ಯಜ್ಜನ್ಮ : ಗಂಡುಗಿಳಿ ಮರುಕವೆತ್ತದಂ ನಿರುಕಿಸುತೆ ಮುಂಬುಟ್ಟನೊಳಗಿವಳನಿತು ನಾಂ ತೊರೆಯಿಸುವೆನಿನನೆಂದೊರೆದು ಗಂಗಾವರ್ತದೊಳ್ಕೆಡೆದು ಮಡಿದುದು (ಕೇಶರಾ. ೫-೨೭). [ ಮುಂ$_1$ (< ಮುನ್$_1$) + ಪುಟ್ಟು$_2$ ]

**ಮುಂಬೆಚ್ಚು** (ಕ್ರಿ). ಅತಿಶಯವಾಗಿ ಹೆಚ್ಚು ; ವಿಶೇಷವಾಗಿ ವೃದ್ಧಿಯಾಗು : ಬೆಚ್ಚನಾದೆಡೆಯಿಂದೆ ಕಾರ್ತಲಿಸಿ ಮುಂದುಡುಗೊಂಬೆಚ್ಚಿ ಬೆಂದೋಲ್ವ ರೋಮಾಂಚನದೊಳಾಸೆ ಮುಂಬೆಚ್ಚಿ ಬೆಮರುವ ಬಾಲೆ ಬೇಸಱದೆ ನಿಂದು ನಿಟ್ಟಿಸುತಿರ್ದಳು (ಕೈವಲ್ಯ. ೪೦-೨೨). [ಮುಂ$_2$ (< ಮುನ್$_2$) + ಪೆಚ್ಚು$_1$ (< ಪೆರ್ಚು$_1$)]

**ಮುಂಬೆದೆ** (ನಾ). ಮೊದಲ ಬಿತ್ತನೆಯ ಕಾಲ ; ಬಿತ್ತನೆಯ ಪ್ರಾರಂಭದ ಕಾಲ : ರೈತನಾದವನು ಭೂಮಿಯ ಹಿಂಬೆದೆ ಮುಂಬೆದೆಗಳ ಹದವನ್ನು ತಿಳಿದು ಬಿತ್ತನೆ ಮಾಡಿದರೆ ಒಳ್ಳೆಯ ಬೆಳೆಯನ್ನು ತೆಗೆಯಬಹುದು (ರೂಢಿ). [ಮುಂ$_1$ (< ಮುನ್$_1$) + ಬೆದೆ]

**ಮುಂಬೆಳಕು** ' ಮುಂಬೆಳಗು ' ನೋ.

**ಮುಂಬೆಳಗು**, ಮುಂಬೆಳಕು (ನಾ). ೧. ಮುಂಜಾನೆಯ ಮೊದಲ ಬೆಳಕು; ಉಷಃಕಾಲದ ಬೆಳಕು : ಪ್ರಸ್ತುತದೊಳೊಗೆದ ಮುಂಬೆಳಗಮಲದಂತದ ಗಭಸ್ತಿನವಪೂರ್ವಸಂಧ್ಯಾರುಣಂ ಭಾಳವಿನ್ಯಸ್ತಸಿಂಧೂರಂ (ಕೈವಲ್ಯ. ೦-೩) ; ಇಂಬಾದ ದೇಹಕ್ಕೆ ಮುಂಬೆಳಗು ಸಂಭ್ರಮಿಸಿ ತುಂಬಿ ನೇರಾದ ಮಧ್ಯದ ಪುರುಷನು ಶಂಭುನಿಗೆ ಮೇಳ (ಸರ್ವಜ್ಞ. ೦೩೩೪); ಮೂಡಲೊಳು ಮುಂಬೆಳಗು ತೋರಿದ್ದುದು (ವೆಂಕಟಾ. ೩-೩-೨೪). ೨. ಮುಂಜಾನೆ ; ಉಷಃಕಾಲ ; ಅರುಣೋದಯ ಕಾಲ : ಅನಿತಱೊಳ್ ಮುಂಬೆಳಗಿನ ಕೋಳಿ ಕೂಗಿತು ಮೂಡಣದೆಸೆಗೆಂಪಡರ್ದುದು (ತಿಬಪು. ೪೮-೩೩) ; ಇಂದೆ ಮುಂಜಾನೆ ಕನಸಾಂತು ನಾನತಿ ಸಂಕಟಂಬಟ್ಟೆ : ಮುಂಬೆಳಗ ಕನಸು ಬರಿದಾಗದೀ ಸರಪರಾಧಿಯ ತಂಟೆ ಬೇಡೆಮಗೆ

(ಗೊರೃ್ರಸಾ. ೯೩-೦೫೦). **ಮುಂಬೆಳಕು :** ೧. ಮತ್ತೆ ಕತ್ತಲೆಯಿದುದಯ ದೆಡೆ ಮುಂಬೆಳಕು ಮೈದೋರಿದುದು ಮಳೆಯ ಮರ್ಬಿನಲಿ (ತತ್ತ್ವಾಂಗ. ೯೩-೨೨೭); ಈಗಿನ ಕತ್ತಲೆ ಹರಿದು ಮುಂಬೆಳಕು ತೋರಿಯೇ ತೋರುತ್ತದೆ (ಕಳಹು. ೦೨೨). [ಮುಂ$_1$ (< ಮುನ್$_1$) + ಬೆಳಗು$_2$]

**ಮುಂಬೆಳಸು** (ನಾ). ಮುಂದಿನ ಬೆಳೆ.– ಫಸಲು : ಚೈತ್ರನ ರಥದ ಮುಂಬೆಳಸು ಮೆಚ್ಚಿದರ ಮನಮೆಚ್ಚು . . . ಎನಿಪ ಮಲ್ಲಿಗೆಗಳೇಂ ಬಿರಿದುವೋ (ತೆಂಕ್ಕು. ೯೩-೨೬) ; ಎಂಬತ್ತು ನಾಲ್ಕುಲಕ್ಷದ ಜೀವರುಗಳೆಂದೆಂಬ ಬೀಜವ ಸೃಷ್ಟಿಕರ್ತ ಮುಂಬೆಳಸಿಗೆ ಪಣತವ ಕಟ್ಟಿದಂದದಿ ಪೊಂಬೆಟ್ಟ ಕಣ್ಗೆ ರಂಜಿಸಿತು (ಬೋಕಹ. ೨-೦೨). [ಮುಂ$_1$ (< ಮುನ್$_1$) + ಬೆಳಸು$_1$]

**ಮುಂಬೆಜಗು** (ನಾ). ದೇಹವು ಮುಂದಕ್ಕೆ ಬಾಗಿ ಸೆಟೆದುಕೊಳ್ಳುವ ಒಂದು ಬಗೆಯ ಅಪಸ್ಮಾರ : ಶರೀರವ ಬಿಲ್ಲಿನ ಹಾಗೆ ಮುಂದ ಕ್ಕಾಗಿ ಬಗ್ಗಿಸಿ ನೋಯಿಸುವುದು . . . ಇದನೇ ಮುಂಬೆಜಗು ಎಂಬರು (ವೈದ್ಯಸಾ. I. ೯೦೫). [ಮುಂ$_1$ (< ಮುನ್$_1$) + ಬೆಜಗು]

**ಮುಂಬೊಗು** (ಕ್ರಿ). ಮುಂದಕ್ಕೆ ಪ್ರವೇಶಿಸು : - ಮುನ್ನುಗ್ಗು : ಹಡಗೊಡನೆ ಹಡಗು ಹಿತ್ತಲೆಯ ಮೂತಿ ಮೂತಿಗಳಮರಿ ತೊಡರಿದುವು ; ಹೊನರದು ಕೊಕ್ಕು ಮುಂಬೊಕ್ಕು ಫಿನಿಷಿಯರ ಕಪ್ಪಲಿಂದೆಗರಿಸಿತು ಮುಂಬುಬೊಂಬೆಯನು (ಶಾರಸಿ. ೦೬-೩೭೭).

[ಮುಂ$_2$ (< ಮುನ್$_2$) + ಪೊಗು]

**ಮುಂಬೊಳ್ತು** 'ಮುಂಬೊಟ್ಟು' ನೋ.

**ಮುಂಬೊಟ್ಟು, ಮುಂಬೊಳ್ತು** (ನಾ). ಬೆಳಗಿನ ಮೊದಲನೆಯ ಜಾವದ ಸಮಯ : ಮುಂಜಾನೆ ; ಪ್ರಾತಃಕಾಲ : "ಮುಂಬೊಟ್ಟಿಂದು ಮುನ್ನೇಸಜಿ಼್ " ( ಕಶಸಾ. ೩೭ – ೨೫೨ ). **ಮುಂಬೊಳ್ತು :** ವಿಬಿನಾಂತರದಿ ಇನಿತು ಮುಂಬೊಳ್ತಿನೊಳಗೇಂಗೆಯ್ದು ತಿರುಗುತಿಹೆ ? (ತತ್ತ್ವಾಂಗ. ೦೨-೩೨೦).

[ ಮುಂ$_1$ ( < ಮುನ್$_1$) + ಪೊಟ್ಟು ]

**ಮುಂಭಾಗ** (ನಾ). ಮುಂದಿನ ಭಾಗ ; ಮುಂದುಗಡೆ : ಶಂಬರಾಸುರ ನೋಲಗ ನೀರೊಟ್ಟಲೆಂದೆಂಬಂತೆ ರಾಜಿಸುತಿರಲು - ಕುಂಭಸಂಭವನಂತೆ ನಾರದಮುನಿರಾಯ ಮುಂಭಾಗದಲಿ ಬಂದಿಳಿದ (ಪೋಹಹ. ೦೦-೬೯); ಮುಂಭಾಗಂಬಿಡಿದೆಯ್ದುತಿರ್ಪ ದಡಿಗರ್ ಮುಂಗ್ಮಾಣದರ್ ದಿಂಡರ್ ಶಂಭುಸ್ವಾರಮಹತ್ವಸಿದ್ಧವರನಂ ಕಾಣುತ್ತೆ (ಶಾಲಾಸ್ಮ. ೨-೫-೦೧) ; (ಪ್ರೇಕ್ಷಕರು) ಬಲಬದಿಗೆ ಒಂದು ಗುಡಿಸಲಿನ ಮುಂಭಾಗವೂ ತೆರೆದಿಟ್ಟ ಬಾಗಿಲೂ ಕಾಣಿಸುವುದು (ಆಕೃವೋ. ೩೨).

[ ಮುಂ$_1$ ( < ಮುನ್$_1$ ) + ಭಾಗ ]

**ಮುಂಭಾರ** (ನಾ). ಮುಂದುಗಡೆ ಹೆಚ್ಚು ಭಾರವಾಗಿರುವಿಕೆ; ಮುಂಭಾಗದಲ್ಲಿ ಹೆಚ್ಚು ತೂಕವಿರುವಿಕೆ : ಮೂಗುತಿ ಮುಂಭಾರ ತುರುಬೀನ ಹಿಂಭಾರ ಸೇರಿನ ಒಂಕಿ ಕೈಭಾರ (ಜಾನಪದ. ೯೭) ; ಗಾಡಿಯಲ್ಲಿ ಮುಂಭಾರವಾಗಿದೆ, ಹಿಂದಕ್ಕೆ ಒಂದಿಬ್ಬರು ಕುಳಿತುಕೊಳ್ಳಬೇಕು (ರೂಢಿ).

[ ಮುಂ$_1$ ( < ಮುನ್$_1$ ) + ಭಾರ ]

**ಮುಕ** ' ಮೊಗ ' ನೋ.

**ಮುಕದಮಿ** ' ಮೊಕದ್ದಮೆ ' ನೋ.

**ಮುಕರು** 'ಮುಕ್ಕುಟ್ಟು$_1$' ನೋ.

**ಮುಕಾದವು** (ನಾ). ಗ್ರಾಮದ ಪಟೇಲ,—ಮುಖ್ಯಸ್ಥ : ಅವನು ನನ್ನ ಕೈಕಳಿಗೆ ಕಟ್ಟಿಗೆಯನ್ನೊಡೆಯಲು ಬಂದಿದ್ದನು ಎಂಬ ಸಂಗತಿಯನ್ನು ಬಿಟ್ಟು ಮುಕಾದಮನು ಅವಳಿಗೆ ವಿಶದಪಡಿಸಿದನು- (ದೋರಾಕ. ೧೦).

[ ← ಅರ. ಮುಕದ್ದಮ್; ಮರಾ. ಮುಕಾದಮ್ ]

**ಮುಕುಂದ** (ನಾ). ೧. ವಿಷ್ಣುವಿನ ಹೆಸರುಗಳಲ್ಲಿ ಒಂದು; ಕೃಷ್ಣ : "ವಿಷ್ಣುಃ ಕೃಷ್ಣಃ ಕೇಶವಃ ...ಮುಕುಂದಃ, ಗೋಪೀವಕ್ಷಃ... ಗದಾಧರಃ– ಈ ೪೫ ನಾರಾಯಣನ ಪೆಸರ್" (ಹಲಾಯು. ೩-೨೨); ಮುಕುಂದನನೇಕ ಮುಕುಂದಬೃಂದಂಗಳ್ ಮೊಟಗೆ ಶುಭಮುಹೂರ್ತದೊಳರಿಕೇಸರಿಯಂ ಮುಂದಿಟ್ಟು ಹಸ್ತಿನಪುರೋಪವನಮನೆಯ್ದೆ ವಂದಾಗಳ್ (ಪಂಪಭಾ.೦೯-೦೦ ವ); ಕಾವ್ಯಸಮಾಧಿಯಿಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ (ಜಗಪ. ೦-೦೭) ; ಮುರಹರ ನಗಧರ ಮುಕುಂದ ಮಾಧವ . . . ನಮೋ ನಮೋ (ಹರಿಭಕ್ತಿ. ಧಾ. ೨-೬೬-೦). ೨. ಒಂದು ಬಗೆಯ ವಾದ್ಯ : ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶ ವೀಣಾಸ್ವರಂ ಗಳೆಸೆಯೆ (ವರ್ಧಮಾ. ೬೩-೨೮) ; ' ಸುರವ್ಯುವಂಗರವಮೊಂದೆಡೆಯೊಳ್ ನೆಗಬ್ದುದು ರಾಜ್ಯಸಮರ್ಪಣಯುಗಪತ್ಪ್ರಹಿತ ಮುಕುಂದ [ಶಾಂತಿ. ಮದಂದ]ರವಮೋದೆಡೆಯೊಳ್ (ಅಂಕ್ತು. ೯-೬೬); ಸಕಳಗಣಸಂದೋಹ ನಂದಿತನಂದೀಶ್ವರ ಮುಕುಂದಹಸ್ತಾಹತವಿತತಮೃದುಮೃದಂಗಮಂಗಳರವ (ರಾಜಶೇ. ೦೩-೩೮ ವ). ೩. ಒಂದು ಬಗೆಯ ಸುಗಂಧದ್ರವ್ಯ; ಕುಂದುರುಷ್ಕ : "ಹೇಲಾಖ್ಯಂ, ಮುಕುಂದಃ, ಕುಂದಃ, ಕುಂದುರುಃ– ಈ ೪ ಕುಂದುರುಷ್ಕ" (ಶಾಶಶಾ. ೦೦೦) ; "ಪಾಲಂಕ್ಯಾ, ಮುಕುಂದಃ, ಕುಂದಃ, ಕುಂದುರು – ೪ ಕುಂದುರುಷ್ಕವೆಂಬುವ ಗ್ರಂಧ್ಯದ್ರುವ್ಯವು" (ನಿಘಂಟು. ೦೯೦); "ಮುಕುಂದಃ – ಕುಂದುರುಷ್ಕ" (ನಿಘ. ೦೨೬). ೪. ಕುಬೇರನ ನವನಿಧಿಗಳಲ್ಲಿ ಒಂದು : ದಿಕ್ಪಾಲಕರೊಳಾ ಕುಬೇರನೇ ಪದ್ಮ ಮಹಾಪದ್ಮ ಶಂಖ ಮಕರ ಕಚ್ಛಪ ಮುಕುಂದ ಕುಂದ ನೀಲ ಚರ್ಚಂಗಳೆಂಬ ನವನಿಧಿಗೊಡೆಯನಾಗಿ ಈಶ್ವರನಿಗೆ ಸಖನಾಗಿರ್ಪಂ (ವಿವೇಕ. ೦೬೭). ೫. ಒಂದು ಬಗೆಯ ಪಕ್ಷಿ : ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಕುಂದಂ ಬಲಾಕ ಲಾವುಗೆ ಸೇನಂ (ಕಾವ್ಯಸಾ. ೦೦೯೯ ಕೊಡ್ರಕ). [ ಸಂ. ]

**ಮುಕುಟ$_1$** ' ಮುಕುಡಕ ' ನೋ.

**ಮುಕುಟ$_2$** (ನಾ). ಕಿರೀಟ; ಮಕುಟ : "ಮುಕುಟಂ ಕೋಟೀರಂ ಮೌಳಿ ಕಿರೀಟಂ ತಾನೆನಿಕ್ಕುಮುಷ್ಣೀಷಂ" (ವಸ್ತುಕೋ. ೬೩.೨); ಅದುರಿತು ಪಾದಾಘಾತದಿಂದ ಧರೆ ಬಿದಿರಿದುವು ಮುಕುಟ ತಾಗಿ ತಾರಕೆಗಳು ಉದುರಿದುವು ಕೈತಾಗಿ ಲೋಕಂಗಳೆಲ್ಲಾ . . . ನಮ್ಮ ಕೂಡಲಸಂಗಮ ದೇವನಿಂದು ನಾಟ್ಯವನಾಡೆ (ಬಸವ. ೫೯೦); ಉಜ್ವಳಿಪ ವಿದ್ರುಮಲತಾಂ ಕುರದಂತೆ ಕೆಂದಳಿರ ತೊಂಗಲಂತೆ ಪಸರಿಸುವ ಪದ್ಮರಾಗಮುಕುಟಮುಂ (ಕೃಷ್ಣಕ. ೫-೦೩ ವ). [ ಸಂ. ]

**ಮುಕುಟೆ** ' ಮುಕುಡಕ ' ನೋ.

**ಮುಕುಡಕ, ಮುಕುಟ್ಟು$_1$, ಮುಕುಟೆ, ಮುಕುತೆ, ಮುಕ್ಕಡಕ** (ನಾ). ಒಂದು ಬಗೆಯ ಸಸ್ಯ : ರಾಮಿ, ಮುಕುಡಕ, ಮುಕುತೆ, ಏನುಜಾರಿಗ (ವೃಕ್ಷಿಗ. ೯೯-೯೬೦). **ಮುಕುಟು$_1$ :** "ಕೋಟೀರಃ – ಮುಕುಟ, ಗೋರ, ಗದುಗು, ಓತಿ, ಕೋತಿ, ಗಂಧ, ನಖ" (ನಿಘ. ೯೦); ಅದಟ ತದನಾಸ್ತರ ಮುಕುಟ ಆಲದ ಹಾಳ ಅಧಟ ತದನಸ್ತರ ಚೈಕೋಲ ಶಾಬಮರ (ಶಾಸನ. IX-i, ೯೦-೨೩; ಶು. 11ನೆಯ ಶಕ). **ಮುಕುಟೆ :** "ಏಣುಜಾರಿಗ, ರಾಮಿ, ಮುಕುಟೆ, ಮುಕುತೆ, ಮುಕುಡಕ" (ಸಸ್ಯ. ೬೨). **ಮುಕುತೆ :** ಮೇಲಿನ 'ಸಸ್ಯನಿ' ಪ್ರಯೋಗವನ್ನು ನೋಡಿ. **ಮುಕ್ಕಡಕ :** ಕೆಲವು ಕಡೆಗಳಲ್ಲಿ ಗುರಗಿ, ಬಿದಿರು . . . ಜಿಂಜರಗಿ, ಮುಕ್ಕಡಕ, ಮುಂತಾದ ಗಿಡಬಳ್ಳಿಪೊದೆಗಳಿದ್ದವು (ಶಂಕಹಂ. ೨).

[< ಸಂ. ಮುಕುಷ್ಟಕ = ಒಂದು ಬಗೆಯ ಹುರುಳಿ ]

**ಮುಕುಡಿದೆಜ಼್** (ನಾ). ಒಂದು ಬಗೆಯ ತೆರಿಗೆ : ಕಳುವ ಸಾಯಣ್ಣನವರಿಗೆ ಆ ಶ್ರೀವೀರಬಲಸ್ಥಳದೇವರಸರು ಆ ಸ್ಥಳದ . . . ಪಣ್ಣುಕಾರುಕ ಅಲಿದೆಜ಼್ ಮುಕುಡಿದೆಜ಼್ ಜೆಟ್ಟಿದೆಜ಼್ ಕೊಸದೆಜ಼್ ನಾನಾ ಸಂಬಳಪೊಳಗಾದ

ಪೂರ್ಬ್ಬಾಯ ಅಪೂರ್ಬ್ಬಾಯ ಯೆಲ್ಲವನೂ ಕಾರುಣ್ಯಂ ಮಾಡಿ ಧಾರಾ ಪೂರ್ಬ್ಬಕಂ ಮಾಡಿ ಕೊಟ್ಟರು (ಎಕ್. VI. ಕಡೂರು. ೯೯–೪೨; 1291). [ಮುಕುಡಿ₁ + ತೆಜ್₃]

**ಮುಕುತ** (ಗು). ೧. (ಬಾಣ ಮುಂತಾದುವನ್ನು) ಪ್ರಯೋಗಿಸಿದ; ಬಿಟ್ಟ: ನಕುಲ . . . ಯುಯುತ್ಸು ಸೃಂಜಯರು ಸಕಲಸನ್ನಾಹದಲಿ ಯುದ್ಧೋದ್ಯುಕುತರಾದರು ಚಡಿತಚಾಪರು ಮುಕುತ ಶಸ್ತ್ರಾವಳಿಯ ಮಳೆಗಾಲವನು ನಿರ್ಮಿಸುತ (ಕುಮ್ಮಾ.ಶಲ್ಯ. ೬–೨೪). (ನಾ). ೨. ಬದುಕಿನ ಬಂಧನವನ್ನು ಕಳೆದುಕೊಂಡವನು; ಮರಣಹೊಂದಿದವನು: ಭಕುತವತ್ಸಲನಾಳ ಕೈಯಲಿ ಮುಕುತರಾದರು ಮೂಜುಸಾವಿರ ಮಕುಟವರ್ಧನರು (ಕೌಶಿಕ. ೪೪–೦೭). ೩. ಲೌಕಿಕಬಂಧನಗಳಿಂದ ಬಿಡುಗಡೆಯನ್ನು ಹೊಂದಿದವನು; ಪ್ರಾಪಂಚಿಕವಿಷಯಗಳಿಂದ ಮುಕ್ತನಾದವನು: ನೀನನ್ನರುಗಳಲ್ಲಿ ಯುಕುತಿಯಿಂದವೆ ತಿಳಿದು ನಡೆಯಲು ಮುಕುತನಹೆ [ಪಾಠಾಂ. ಯುಕುತಿಯಿಂದವೆ ಮಾಡಿದರೆ ನಿರ್ಮುಕುತನಹೆ, ಯುಕುತಿಯಿಂದದ ಮಾಡದಿರು ನಿರ್ಮುಕುತನಹೆ] (ಕುಮ್ಮಾ.ಉ. ೯–೦೩); ಮುಕುತ ನಾನಾದೆಂ ಪ್ರಕಟಮಾರ್ಗಕ್ಕಂ ಮುಕುತಿಯಾ ಭಸ್ಮಂ ಸುಕರ ಕೇಳೆಂದುಂ (ಪಾಲಾಸ್ತ. ೪–೦೦–೨೯). [< ಸಂ. ಮುಕ್ತ]

**ಮುಕುತಿ** (ನಾ). ವಿಮೋಚನೆ; ಮೋಕ್ಷ; ಮುಕ್ತಿ: ಅಪರಿರವು ಮುಕುತಿ ಗಿಕುತಿಯ ಸುಖಿಗಳ ಪವಣೆ (ತಿಸುರ. ದೇ. ೯–೦೪); ಧೂರ್ತತನದಿಂ ಕಾದಿ ಕೂಡುವೆನಾರ್ತು ಪರಿಯಂತರದಲಾ ತ್ರ್ಯಮೂರ್ತಿಯನು ಮೂದಲಿಸಿದಲ್ಲದೆ ಮುಕುತಿಯಿಲ್ಲೆಂದ (ಕೌಶಿಕ. ೨೩–೦೯); ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣಾ ಮುಕುತಿ (ಪುರಂದ. ೩–೦೯೯ ಪಲ್ಲವಿ). [< ಸಂ. ಮುಕ್ತಿ]

**ಮುಕುತಿವಟ್ಟೆ** (ನಾ). ಮುಕ್ತಿಯನ್ನು ಸಾಧಿಸುವ ದಾರಿ; ಮೋಕ್ಷ ಮಾರ್ಗ: ಎಱಗುವೆನಲರ್ವಕ್ಕೆಯೊಳು ಧರ್ಮಕರ್ಮದ ತೆಱವನೆಲ್ಲವ ಭವ್ಯತತಿಗೆ ಅಱುಪಿ ಮುಕುತಿವಟ್ಟೆದೋಱುವುಪಾಧ್ಯರ ಮಿಱುಪುಂಬ್ಯಯರುಣಾಂಬುಜಕೆ (ಶ್ರೀಪಾಲ. ೦–೬). [ಮುಕುತಿ + ಬಟ್ಟೆ₁]

**ಮುಕುತೆ** 'ಮುಕುಡಕ' ನೋ.

**ಮುಕುರ₁**, ಮುಕ್ಕರ, ಮುಖರ₁ (ನಾ). ಒಂದು ಬಗೆಯ ನಾಸಿಕಾಭರಣ; ಮೂಗುತಿ; ಮೂಗುಬೊಟ್ಟು; ನತ್ತು: ಪರಮಸೊಬಗಿಂ ದೆಸೆವ ಆ ದೇಶವೆಣ್ಣಿನ ಮುಕುರದಂತೆ ಒಪ್ಪಿ ವಿದ್ಯಾನಗರಮೆಸೆಯೆ (ಪ್ರೌಢರಾ. ೦–೬೬); ಮುತ್ತುಗೊಂಚಲು ಬುಗುಡಿ ಮುಕುರ ಚಳತುಂಬುಗಳು (ಬಾಲಾಶ. ೦೦). ಮುಕ್ಕರ: ಯುದ್ಧರಂಗಕ್ಕೆ ಬಂದ ರಾಮನು ರಾಮಬಾಣದಂತೆ ಆ ಪ್ರಬಲಸೈನ್ಯದೊಳಕ್ಕೆ ನುಗ್ಗಿ, ಮಾತಂಗಿಯೊಡನೆ ಕಾದಿ, ಅವಳ ಮುಕ್ಕರವನ್ನು ಹಿಡಿದೆಳೆಯುತ್ತ . . . ಧಿಕ್ಕರಿಸಿ ಅವರನ್ನು ಪ್ರಾಣಸಹಿತವಾಗಿ ಬಿಟ್ಟು ಬಿಟ್ಟನು (ಕರಾರ. ೦೦೦). ಮುಖರ₁: ನಿನ್ನ ಮೂಗಿನಲ್ಲಿ ಧರಿಸಿರುವ ಮುಖರವು ನಿನ್ನ ಶೌರುವಿನಂತೆಯೆ ಕೊಡುಗೆಯುಷ್ಟೆ (ಕಥಾ. ೦೩೦); ಗೃಹಿಣಿಯು ಒಮ್ಮೊಂದೊಮ್ಮೆ ಮೂಗಿನ ಮುಖರವನ್ನು ಅಲುಗಾಡಿಸುತ್ತ . . . ಪ್ರಫುಲ್ಲೆಯೂ ಅವಳ ತಾಯಿಯೂ ಬಂದ ಸಮಾಚಾರವನ್ನೆಲ್ಲಾ ಆದ್ಯೋಪಾಂತವಾಗಿ ಹೇಳಿದಳು (ದೇವೀಚೌ. ೯).

[ದೇ.॥ ತೆಲು. ಮುಕ್ಕಱ, ಮುಂಗರ; ಕೋಲಾ. ಮುಕ್ಕರ, ಮೊಕರ]

**ಮುಕುರ₂** (ನಾ). ೧. ಕನ್ನಡಿ; ದರ್ಪಣ: "ಆದರ್ಶಃ, ದರ್ಪಣಃ, ಮುಕುರಃ — ಈ ೩ ಕನ್ನಡಿ" (ಹಲಾಯು. ೬೦–೪೦೦); ನೈರ್ಮಲ್ಯಶೋಭಾ ಕಲಿತಂ ತ್ರೈಲೋಕ್ಯಲಕ್ಷ್ಮೀಮಣಿಮುಕುರಮೆನಲ್ ಚೆಲ್ವುವಾಯ್ತುಬ್ಜಪಂಡಂ (ಕಾದಂಪೂ. ೬೩೪); ಮುಕುರಂ ಕೈಯೊಳಿಳಲ್ಕೆ ನೀರ ನೆಳಲೇಕ್ಕೆ (ಶೋಪಾವೇಶ.೩); ಮಸುಬುದ್ದಿ ಮಾಸಿದ ಮುಕುರಂಬೋಲಂತೆ ವಿಗತಪ್ರಭನಾಯ್ತು ಮೃತಾಂಶುಮಂಡಲಂ (ಕುಸುಮಾ. ೪–೬೬); ಆನೆ ಮುಕುರದೊಳಡಗಿ ಭಾನು ಸರಸಿಯೊಳಡಗಿ ಆನಿನ್ನ ಗುರುವಿನೊಳಡಗಿ ಸಂಸಾರ ತಾನೆತ್ತಣದು (ಸರ್ವಜ್ಞ. ೩೬೩). ೨. ಕುಂಬಾರನ ಚಕ್ರದ ಹಿಡಿ, –ತಿಗುರಿಯ ಹಿಡಿಕೆ. [ಸಂ.]

**ಮುಕುರಂದೋಱು** (ಕ್ರಿ). (ಪ್ರತಿಬಿಂಬವನ್ನು ನೋಡಿಕೊಳ್ಳಲು) ಕನ್ನಡಿಯನ್ನು ತೋರಿಸು: ಮಂಗಳಾರತಿಯಿತ್ತು ಚಮರ ಸೀಗುರಿಯಿಕ್ಕಿ ಅಂಗಜಹರಂಗೆ ಮುಕುರಂದೋಱು ಮೈಯಿಕ್ಕಿ ನಿಂದಿರ್ದು (ಬಸವ. ೩–೬೨). [ಮುಕುರ₂ + ತೋಱು]

**ಮುಕುರತೋರಣ** (ನಾ). ಕನ್ನಡಿಗಳಿಂದ ತಯಾರಿಸಿದ ತೋರಣ; ಕನ್ನಡಿಗಳ ಸಾಲುತೋರಣ: ಮುಕುರತೋರಣಮೊಪ್ಪಿರೆ ಮಂಗಳ ಧ್ವಜಂ ಕುಣಿಯೆ . . . ಗುರುಪ್ರಣತಿಸಮುತ್ಸುಕಂ ಮುದದಿನಂದಿದಿರ್ಗೊಂಡ ಸವಂ ನರಾಧಿಪಂ (ರಾಜಶೇ. ೩–೯೦). [ಮುಕುರ₂ + ತೋರಣ]

**ಮುಕುರಿಕ್ಕು** 'ಮುಕ್ಕುಱಿಕ್ಕು₁' ನೋ.

**ಮುಕುರಿಸು₁** 'ಮುಕ್ಕುಱಿಸು₁' ನೋ.

**ಮುಕುರು₁** 'ಮುಕ್ಕುಱು₁' ನೋ.

**ಮುಕುಲ₁**, ಮುಕುಳ (ನಾ). ೧. ಅರಳುತ್ತಿರುವ ಮೊಗ್ಗು; ಮುಗುಳು; ಕುಟ್ಮಲ: ಗಿರಿಶಿಖರ ಮುಕುಲದೊಲು ಮೊಗವನೆತ್ತಿವೆ ನಭವಲಲ್ಲಲ್ಲಿ (ಅಯ್ಯಾರ. ೨೦–೩). ೨. ಮೊಗ್ಗಿನಂತೆ ಮುಗಿದ ಕೈ,— ಜೋಡಿಸಿದ ಹಸ್ತ. ಮುಕುಳ: ೧. "ಕೋರಕಃ, ಜಾಲಕಃ, ಕಳಿಕಾ, ಕುಟ್ಮಳಃ, ಮುಕುಳಃ — ಈ ೫ ಪೂವಿನ ಮುಗುಳ್" (ಹಲಾಯು. ೩೦–೩೨); ಆತನ ಕರತಲಸ್ಪರ್ಶಸುಖದಿಂ ಕಪೋಲತಲಕದಂಬಮುಕುಳಕರ್ಣಪೂರದಂತುಣ್ಮಿದ ಪುಳಕವುಂ ಬೆರಸು (ಕಾದಂಪೂ. ೬೪೦); ಮುಕುಳಂ ಮಾದಲ ರಾಯ್ತು ಬೆಯ್ಯರಿಸಿನಂ ಕ್ಷಂಪೋಡಿತು (ಲೀಲಾವ. ೨–೩೪); ಸಲೆ ನಲೆ ಮಾವು ಪೂವು ವಕುಳಂ ಮುಕುಳಂ . . . ಕಂಪು ಸೊಂಪುಗುಂದಲೆಯೆನೆ ರಮ್ಯಮಾ ವಿಷಯದುರ್ಗಳ ನಂದನವೃಂದವೆತ್ತಲುಂ (ಶಿಶುಪು. ೩–೨೩). ೩. [ಛಂದ] ಕನ್ನಡಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಗಳಲ್ಲಿ ಆರನೆಯದಾದ ಗಾಯತ್ರಿಛಂದಸ್ಸಿನ ಒಂದು ವೃತ್ತ: ಉರ್ವ್ಯಗ್ರಂ ಮರುತಂ ಪರ್ವಿರ್ದುದಲೇ ಸರ್ವಾದ್ಯಂತದೊಳಂ ನಿರ್ವ್ಯಾಜಂ ಮುಕುಳಂ [ಪಾಠಾಂ. ಕಮಳಂ, ಕುಮುದಂ] (ಛಂದೋಂಬು. ೨–೬೦). ೪. [ನಾಟ್ಯ] ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತಹಸ್ತಗಳಲ್ಲಿ ಒಂದು: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತಹಸ್ತಗಳು ಯಾವುವೆಂದರೆ — ೧. ಪತಾಕ, ೨. ತ್ರಿಪತಾಕ . . . ೨೨. ಮುಕುಳ, ೨೩. ಊರ್ಣನಾಭ, ೨೪. ತಾಮ್ರಚೂಡ (ಅಭಾಸ್ತ. ೯೬). ೫. ಇಪ್ಪತ್ತು ಬಗೆಯ ಸಂಚಾರಿದೃಷ್ಟಿಗಳಲ್ಲಿ ಒಂದು; ಅಲಿಗಳನ್ನು ಚಲಿಸದೆ ರೆಪ್ಪೆಗಳನ್ನು ಮುಚ್ಚುವುದು: ಶೂನ್ಯ, ಮಲಿನ, ಶ್ರಾಂತ, ಲಜ್ಜಿತ, ಶಂಕಿತ, ಮುಕುಳ (ಅರ್ಧಮುಕುಳ), ಗ್ಲಾನ . . . ಮದಿರೆ — ಈ ಇಪ್ಪತ್ತು ಸಂಚಾರಿದೃಷ್ಟಿಗಳು (ಲಾಸ್ಯರಂ. ೩–೬ ವ); ಸೊಗಸಿಂದಂ ಕಣ್ಣೆವೆಗಳ್ ಮುಗುಳ್ದಿರ್ದುಂ ತಿರದ ತಾರೆ ಮುಕುಳಮೆನಿಕ್ಕುಂ (ಲಾಸ್ಯರಂ. ೩–೩೦). [ಸಂ.]

**ಮುಕುಲತೆ** (ನಾ). ಮೊಗ್ಗಿನಂತೆ ಸೇರಿಕೊಂಡಿರುವ ಸ್ಥಿತಿ, – ಕೂಡಿಕೊಂಡಿರುವ ಸ್ಥಿತಿ: ಕ್ಷಿತಿಪತಿಯ ಕರಸರೋಜದ್ವಿತಯಮನಡಿಗಡಿಗೆ ಮುಕುಲತೆಯನೈದಿಸಿ ತದ್ಕ್ಷಿತಿಪತಿ ನಿಜಕುವಲಯಬಂಧುತೆಯಂ ಪ್ರಕಟಿಸಿದನಾ ಸಭಾಭ್ಯಂತರದೊಳ್ (ಕಂದ್ರಪು. ೩–೪). [ಸಂ. ಮುಕುಲತಾ]

**ಮುಕುಲನ** (ನಾ). ಕಣ್ಣನ್ನು ಮೊಗ್ಗಿನಂತೆ ಮುಚ್ಚಿಕೊಳ್ಳುವಿಕೆ: ಮುಕುಲನ ನಿಮೀಳನಂಗಳ್ ವಿಕಾಸಹಾಸಪ್ರಬೋಧನೋನ್ಮೇಷಂಗಳ್ ಪ್ರಕಟಿಸುಗುಮ್ಮೈಕ್ಯಮಂ ನಿರ್ವಿಕಲ್ಪದಿಂ ಗೌಣಮುಖ್ಯವೃತ್ತಿಕೃತಂಗಳ್ (ಕಾವ್ಯಾವ. ೯೦೪). [ಸಂ.]

**ಮುಕುಲಿತ**, ಮುಕುಳಿತ (ಗು). ೧. ಮೊಗ್ಗಾದ; ಮೊಗ್ಗನ್ನು ತಳೆದ: ಚಾರುವಿಟಪಾವಲೀವೃತಕೋರಕಿತಾಂಕುರಿತ ಪಲ್ಲವಿತ ಮುಕುಲಿತ [ಪಾಠಾಂ. ಮುಕುಳಿತ, ರುಚಿರ]ವಿಸ್ಫಾರಿತ ರಮ್ಯಾಶೋಕಮಹೀರುಹಮುಮಮನಭವನಂಗ

ರುಚಿ ಪುದಿದಿರ್ಕುಂ (ಅಜಿಪು. ೧೦-೯೦). ೨. ಮೊಗ್ಗಿನಂತೆ ಮುಚ್ಚಿಕೊಂಡಿರುವ, – ಸೇರಿಕೊಂಡಿರುವ ; ಮುಗಿದ : 'ಮುಕುಲಿತಕರ', 'ಮುಕುಲಿತಾಂಜಲಿ' ಪರಾ. **ಮುಕುಳಿತ :** ೧. ಪುರಬಹಿರ್ಭಾಗವಿಸ್ತರಿತನಂದನದೊಳ್ ಕುರಿತ ಪಲ್ಲವಿತ ಮುಕುಳಿತ ಕುಸುಮಿತ ಪರಿಮಿತ ಫಲಿತ ತರುಗಳಿ ಇಂತತಿಶಯವಿಲಾಸಕ್ಕೆ ನಿವಾಸಮುಂ (ಸುಕುಮಾ. ೨-೯೭) ; ಮುಕುಳಿತ ನೀಲೋತ್ಪಲಮಮ್ಮೃತಕರೋದಯದೊಳಗಲರ್ದು ಪೊಜಿಸೂಸುವ ಪೋಲ್ಮೆ ಕರಂದವ್ವನಿನಂ ಬಾಲಿಕೆ ನೋಡುತೆ ತಳೆದಲೊಗ್ಗುವ ಹರ್ಷಾಶ್ರುಗಳಂ (ಉದ್ಭಟ. ೬-೯೯). ೨. ಮುಕುಳಿತಪಾಣಿಪಲ್ಲವಪುಟರ್ನಮಿತಾನನಪದ್ಮರೆಂದರಂತಕನಳವಂ ತ್ರಿಳೋಕದಟಿವಂ ಪರಿಭಾವಿಸಿ (ಮಲ್ಲಿಕ. ೦೩-೦೬೨). ೩. ಅರೆಮುಚ್ಚಿದ ; ಅರ್ಧಮುಚ್ಚಿದ : ಮುಕುಳಿತವಿಳೋಚನಂ ಕಂಟಕಿತಾಂಗಂ ಸ್ವೇದಬಿಂದುದಂತುರಿತಮುಖಂ ಪ್ರಕಟಶ್ವಸಿತೋತ್ಕಂಪಂ ನಿಕಾಮಕಮನೀಯಮಾದುದಿಂತು ರತಾಂತಂ (ಕಾವ್ಯಾವ. ೧೦೩), (ನಾ). ೪. ಮೊಗ್ಗುಗಳುಳ್ಳುದು ; ಮುಗುಳುಗಳುಳ್ಳುದು : ಸಮುಪದಸ್ಖಲನಸುಖನಿಮೀಳಿತೋನ್ಮೀಲಿತನಯನಂಗಳಿಂ ಮುಕುಳಿತಮುಂ ಕುಸುಮಿತಮುಮಾದ ನಿಶ್ವಾಸಪವನನಿಂ ಪರಿಮಳಮುಂ ಬೀಱುವ ವಧೂವರರಾಗವಿಷಯವಲ್ಲರಿ ಫಲಿತಮಾದುದೆನಿಸಿ (ಜಗಂ. ೨-೩೨ ವ). [ಸಂ.]

**ಮುಕುಲಿತಕರ,** ಮುಕುಳಿತಕರ (ನಾ). ಮುಗಿದ ಕೈ ; ಜೋಡಿಸಿದ ಕೈ : ಮಾರುತಿ ಮೇಘರುತಿಯನುದಾತ್ತರಾಘವಂಗೆ ಮುಕುಲಿತಕರಸರೋಜನಾಗಿ (ಶಂರಾಮಾ. ೦೧-೪೨ ವ); **ಮುಕುಳಿತಕರ :** ಅನಂತರಂ ವಿಶ್ವಸೇನಾವನೀನಾಥನುಮೈರಾ ಮಹಾದೇವಿಯುಂ ಕುರುಕುಳಾಗ್ರಗಣ್ಯರಪ್ಪ ಬಂಧುಗಳುಂ ಮುಕುಳಿತಕರಕಮಳರ್ ಬಳಸಿಯುಮಿರೆ (ಶಾಂತಿಪು. ೦೦-೬೮ ವ) ; ವಂದಿಸುತ ಮುಕುಳಿತಕರಂಗಳ ಸಂದಿಸಲು ಭಾಳಸ್ಥಳಗಳಿಂ ನಂದಿಕೇಶನ ನಂಕಿಸುತ ಕೀರ್ತಿಸಿದರರ್ತಿಯಲಿ (ಬಸಪು. ೨-೨೬). [ಸಂ.]

**ಮುಕುಲಿತಾಂಜಲಿ,** ಮುಕುಳಿತಾಂಜಲಿ (ನಾ). ೧.=ಮುಕುಲಿತಕರ : ಅಂತು ವಿನತನಾದನಂತರಂ ಸುರೇಂದ್ರಮನ್ನು ವಜ್ರಬಾಹು ಪುರಂದರರೊಳಂ ವಿನಯಮೃತ್ತಿಯಿಂ ಮೆಱೆದು ಸಮುಚಿತಾಸನದೊಳ್ ಕುಳ್ಳಿರ್ದು ಮುಕುಲಿತಾಂಜಲಿಪುಟನಾಗಿ . . . ಬಿನ್ನವಿಸೆ (ಶಂರಾಮಾ. ೩-೩ ವ). ೨. ಕೈಗಳನ್ನು ಮುಗಿದವನು,—ಜೋಡಿಸಿದವನು : ಹರ್ಷಿತಚಿತ್ತಂ ಮರುತ್ತನಖಿಲ ರಾಮಚಂದ್ರಂಗೆ ಮುಕುಲಿತಾಂಜಲಿಯಾಗಿ. . . ಬಿನ್ನವಿಸೆ (ಶಂರಾಮಾ. ೦೦-೬೮ ವ) ; ಅಂತು ಪೊಕ್ಕು ಮುಕುಲಿತಾಂಜಲಿಯಾಗಿ ಮುಂದೆ ನಿಂದಿರ್ದ ಮೇದಿನೀದೇವಿಯ ದೈನ್ಯಭಾವಮಂ ವಿರಿಂಚಿ ಕಾರುಣ್ಯಚಿತ್ತದಿಂ ನೋಡಿ (ಜಗಂ. ೦-೨೭ ವ). **ಮುಕುಳಿತಾಂಜಲಿ :** ೧. ಅಂತು ಬೆಸಗೊಳ್ವುದುಂ ಮುಕುಳಿತಾಂಜಲಿಪುಟನಾಗಿ ವಿಪುಲಮತಿ. . . ಆಗಳುದ್ಯತನಾದಂ (ಶಂರಾಮಾ. ೦೦-೬೩ ವ) ; ತ್ರೇತೆಯೊಳಿಂದ್ರಂ . . . ಬಂದಾತುರನಾಗಿ ವಾರಿರುಹಸಂಭವನಂ ನುತಿಗೆಯ್ದು ಭಕ್ತಿಯುಕ್ತಾತಿಶಯೋಕ್ತಿಯಿಂ ಮುಕುಳಿತಾಂಜಲಿಯುಂ ಪಣೆಗಿಟ್ಟು ನಿಂದು (ಲಾಸ್ಕರಂ. ೦-೨). ೨. ಆ ವ್ಯತಿಕರಮಂ ಭಗೀರಥು ಕೇಳ್ದು. ತಾನುಮುವರಲ್ಲಿಗೆ ಬಂದು ಪಂತಮುಪ್ಪಿಯಿಂ ಬಂದಿಸಿ ಕುಳ್ಳಿರ್ದು . . . ಬೆಸಸುವುದೆಂದು ಮುಕುಳಿತಾಂಜಲಿಯಾಗಿ ಬಿನ್ನಪಂಗೆಯ್ದಾಗಳ್ (ಅಜಿಪು. ೦೦-೦ ವ). [ಸಂ.]

**ಮುಕುವಾಡು** (ನಾ). ಒಂದು ಬಗೆಯ ಹಾಡು,—ಗೀತೆ : ಕುಣಿವವರ ಕಂಡು ತಾನುಂ ಮುಗುಳ್ದು ನರ್ತಿಸುತಲಣಿಯರದಿ ಮುಕುವಾಡುಗಳ ತಾನು ಹಾಡುತಂ . . . ಪ್ರಭುದೇವ ಬರಲು (ಶ್ರೀಶುಕ್ಷ. ೯-೩೯). [? + ಪಾಡು₁]

**ಮುಕುಳ** 'ಮುಕುಲ' ನೋ.

**ಮುಕುಳಿ** (ನಾ). ೧. ಸ್ತ್ರೀಯ ಜನನಾಂಗ ; ಯೋನಿ : (*). ೨. ಆಸನದ್ವಾರ ; ಪೃಷ್ಠ : ಮಕ್ಕಳ ಮುಕುಳಿಯ ವರಸಿದ ಕೋರಿಯ ಸಿಕ್ಕಿಲ್ಲದೆ ಪೆಗಲೊಳಗೆ ಹೊತ್ತು ತಿರುಗುವ ಪಂದಿಗಳ ಮುಕ್ಕಣ್ಣನ ಭಕ್ತರೆಂದು . . . ಕೊಂಡಾಡುತಿರುವೆ ಸೀ ಬಸವ (ಬಸ್ತೊ. ೯-೬೦) ; ಬಯಸಿನಿಂದ ತಿವೀರಿ ಆತನ ಮುಕುಳಿಗೆ, ಅವನ ಗುಟಿಲುಸ್ವರ ಸ್ವಲ್ಪ ಕೇಳೋಣ (ಚರಸ್ಯ. ೨೨೦). 'ಪುಕುಳಿ' ಪರಾ. [ ? ]

**ಮುಕುಳಿತ** 'ಮುಕುಲಿತ' ನೋ.

**ಮುಕುಳಿತಕರ** 'ಮುಕುಲಿತಕರ' ನೋ.

**ಮುಕುಳಿತಹಸ್ತ** (ನಾ). ೧.=ಮುಕುಲಿತಕರ : ಎದ್ದು ಮುಕುಳಿತಹಸ್ತಗೂಡಿ ರಾಮಾಚಾರ್ಯರೊಲ್ದು ವಂದಿಸಿಯುನ್ನತಾಸನವನಿಕ್ಕಿ . . . ಶ್ರೀವಿಶಿಷ್ಣಾಚಾರ್ಯರ ಕ್ಷೇಮಮಂ ಬೆಸಗೊಂಡು (ಬಕೋಶ. ೭-೩೭). ೨. ಕೈಮುಗಿದಿರುವವನು : ಸಾಷ್ಟಾಂಗ ದಂಡಪ್ರಣಾಮಮಂ ಮಾಡಿ ಮುಕುಳಿತಹಸ್ತನಾಗಿ ನಿಂದಿರ್ದ ನಿಜಶಿಷ್ಯನಂ ನೋಡಿ (ನಾನಾಗು. ೬-೦೦). [ ಸಂ. ಮುಕುಲಿತಹಸ್ತ ]

**ಮುಕುಳಿತಾಂಜಲಿ** 'ಮುಕುಲಿತಾಂಜಲಿ' ನೋ.

**ಮುಕುಳಿಸು** (ಕ್ರಿ). ೧. ಮೊಗ್ಗಾಗು ; ಮೊಗ್ಗು ಬಿಡು : ಮುಕುಳಿಸಿ ತಲರೆಳಸಿದ ಚಂಪಕ ಮುಕುಳದ ಚೆಲ್ವನೆಸೆವ ಲಸಿತಸ್ವಾಭಾವಿಕನತಮುಂದೋ ಜ್ಯಾಸಪ್ರಕರ್ಷನಾಸಾವಿಳಾಸಮಾ ನರ್ತಕಿಯಾ (ರೀಲಾವ. ೯-೦೦೬). ೨. (ಕಣ್ಣು) ಮುಚ್ಚು : ಮುಚ್ಚಿಕೊಳ್ಳು : ಆತನ ಕುಡುವಿಲ್ಲ ಜೇವಡೆಗೆ ಬಿಗುರ್ತಂತೆ ಕಣ್ ಮುಕುಳಿಸಿದುವು (ಕಾದಂಬ. ೬೬೬) ; ಮೊವಲವೆಗಳನು ಮುಕಳಿಸನ್ನ ಸಿರಿಯೇ ! ತೊದಲನ್ನು ನಿಲ್ಲಿಸನ್ನಯ ಹೊನ್ನ ಮರಿಯೇ ! (ಕುಪು. ೨೯-೦). [ ಮುಕುಳ (= ಮುಕುಲ) + —ಇಸು₃ ]

**ಮುಕುಳೀಕೃತ** (ಗು). ೧. (ಮೊಗ್ಗಿನಂತೆ) ಮುಚ್ಚಿರುವ ; ಜೋಡಿಸಿದ ; ಮುಗಿದ : ಸುಬಳಧರಾಧೀಶ್ವರಂ . . . ಸಮುದಾಯಮುಮಂ ಬಂದಿಸಿ ಸಮುಚಿತೋದ್ದೇಶವಾಸನದೊಳ್ ಕುಳ್ಳಿರ್ದು ಮುಕುಳೀಕೃತ ಕರಕಮಲಯುಗಲನಾಗಿ (ಸುಕುಮಾ. ೬-೯೬ ವ). (ನಾ). ೨. (ಮೊಗ್ಗಿನಂತೆ) ಮುಚ್ಚಿಕೊಂಡಿರುವುದು : ಮುಕುಳೀಕೃತಂ ಲಳಿತಮಧುರಂ ಲಜ್ಜಾಳೋಳಂ ಸ್ಮರಾಕುಳಿತಂ ಮನಂ ದಳಿತಮಪಸನ್ನುಗ್ಧಂ ಸ್ನಿಗ್ಧಂ ವಿಳೋಕನಮೋಪಳಾ (ಶಂಕಶಾ. ೯-೭೭). [ಸಂ. ಮುಕುಲೀಕೃತ]

**ಮುಕುಱು** 'ಮುಕ್ಕುಱು₁' ನೋ.

**ಮುಕೊಡಲ್** 'ಮುಕ್ಕೊಡಲ್' ನೋ.

**ಮುಕೋಪು** 'ಮೋಕೂಫ್' ನೋ.

**ಮುಕ್ಕ₁** (ನಾ). (ಮಣ್ಣು ಮೊದಲಾದುವನ್ನು) ಮುಕ್ಕುವಂಥದು : 'ನೆಲಮುಕ್ಕ', 'ಮಣ್ಮುಕ್ಕ' ಪರಾ. [ ಮುಕ್ಕು₁ + —ಅ₇ ]

**ಮುಕ್ಕ₂** (ನಾ). ಅಂಗಹೀನನಾದವನು ; ಊನ ಹೊಂದಿದವನು : ಮೋಟನಂ ಮುಕ್ಕನಂ ಕೀಳುಜಾತಿಯನು ಪುರುಳಿಲ್ಲದ ಮೆಯ್ಯಾದೊಡಂ ಬೇಳಿ ಬೆಲೆಯಿತ್ತೊಡವಸಂ ಕಾಮನೆಂಬ ದುಶ್ಶೀಲೆಯರು ಕಣ್ಗೆಸೆದರು (ಜಕಶಾ. ೯-೯೯). [ಮುಕ್ಕು₄ (<ಮುಱುಕು) + —ಅ₇]

**ಮುಕ್ಕ₃,** ಮೂರುಕ, ಮೂರ್ಕ (ನಾ). ತಿಳಿಗೇಡಿ ; ಅಜ್ಞ ; ಮೂಢ : "ಮುಕ್ಕ — ಮೂರ್ಖ = ಬುದ್ಧಿಹೀನ" (ಕನ್ನಕೋ. ೩೬) ; ನಾನ್ ಮೆಚ್ಚೆನ್ ಇಲ್ಲದಾಸೆಗೆ ಕಿರ್ಚು ಕಾಯಿಸುವ ಮುಕ್ಕನನ್ (ಅಕ್ಕತಾ. ೦೯-೯೦೦) ; ಈ ಮುಕ್ಕ ಸನ್ಯಾಸಿಯಾದರೆ ಬಟ್ಟೆಗೆ ಬಣ್ಣ ಕೇಡು (ಮಲ್ಲಿ. ೦೦). **ಮೂರುಕ :** ಕಾಮಿನಿಯರುಗಳಾರು ಕೆಲಬರು ಕಾಮಿತವ ಕಾಮಿಸುವರಲ್ಲದೆ ತಾಮುಸದ್ಧಿನಾ ಮೂರುಕರು ಪೂಜಿಸಿದ ಪೂಜೆಗಳ ಪ್ರೇಮದಿಂದೊಡಬಡುವರು (ಕುಮ್ಯಾಅ. ೩-೨೩) . **ಮೂರ್ಕ :** ಬಲ್ಲಂಗ ಮೂರ್ಕಗಾಪದವ ನೋರ್ಪಡವಂ ಜವದೊಳ್ ಮಾರ್ಕೊರ್ವಲ ಭೈರವಂ (ಎಕ. VI. ತಕ್ಕಮ. ೯೯-೨೦ ; ಕ. 1060 ?). [ <ಪ್ರಾ. ಮುಕ್ಖ /ಸಂ. ಮೂರ್ಖ ]

**ಮುಕ್ಕಂಡುಗ** 'ಮೂಗಂಡುಗ' ನೋ.

**ಮುಕ್ಕಂಡೆ** (ನಾ). (ಕರಾ) ಹಾಳು ; ನಾಶ; ಮೂರಾಬಟ್ಟೆ : ಮೂವರು ಹೋದ ಕೆಲಸ ಮುಕ್ಕಂಡೆ (ಮೂರಾಬಟ್ಟೆ) (ಕ್ಷವೂಂಕ. ೩೩). [ ? ]

**ಮುಕ್ಕಂದಿ** (ನಾ). ಮೂರುವರುಷಗಳಿಗೊಮ್ಮೆ ಕರುಹಾಕುವ ಹಸು : "ಮುಕ್ಕಂದಿ – ಮೂರುವರುಷಕ್ಕೆ ಈಯುವ ಆಕಳು" (ಜಾನಕೋ. ೩೦). [ < ಮೂಱು + ಕಂದಿ$_2$ ]

**ಮುಕ್ಕಂಥಾಯ** 'ಮೂಗಂದಾಯ' ನೋ.

**ಮುಕ್ಕಟ,** ಮುಕ್ಕಟೆ, ಮುಕ್ಕಟ್ಟ, ಮುಕ್ಕಟ್ಟು$_3$ (ಅ). ೧. ಮುಂಚೆ ; ಮೊದಲು : ಪೂರ್ವಭಾವಿಯಾಗಿ ; ಮುಂಚಿತವಾಗಿ : ಈ ಪಿರಂಗೇರು ಬರೋ ಮುಕ್ಕಟ ಹೀಂಗೇ ಇರತಿತ್ತಂತ (ಕುವಂಶಾ. ೦೭೨). ೨. ಮುಂಭಾಗದಲ್ಲಿ ; ಮೊದಲಿನಲ್ಲಿ : ಎತ್ತು ಜತ್ತಗಿ ಸುಂಗಿ ಭತ್ತ ಬಾನವ ಸುಂಗಿ ಮುಕ್ಕಟ ತಿರುವೊ ಅಣ್ಣನ ಮೇಳಿ ಸುಂಗಿತ (ಕಂಕ. ೨೯-೦೯). **ಮುಕ್ಕಟೆ** : ೧. ನೀ ಬರುವ ಮುಕ್ಕಟೆ ಈ ಮನೆಗೆ ಬಂದೀನಿ ಅವ್ವಾ ! (ಮಡ್ಡಮ. ೫೬). **ಮುಕ್ಕಟ್ಟ**: ೧. ಅದರ ಯವಸ್ಥಾ ಮುಕ್ಕಟ್ಟ ಮಾಡಿದ್ದು ಶ್ಯಾಣೇತನ ಅತಿಲ್ಲೊ ಆಚಾರೆಪ್ಪ ? (ಗ್ರಾಮಾಯ. ೦೦೩) ; ಪಾವಳ್ಯ ಬಿಟ್ಟು ನಾ ಎಲ್ಲೂ ಹೋಗಾಣಿಲ್ಲಾ ಅಂತ ಅವರು ಮುಕ್ಕಟ್ಟ ಹೇಳಿದ್ದರಲೀ (ಗ್ರಾಮಾಯ. ೩೦೩). **ಮುಕ್ಕಟ್ಟು$_3$** : ೧. "ಮುಕ್ಕಟ್ಟು–ಮೊದಲು, ಮೂರುಗಂಟು, ಮುಂಭಾಗ" (ಜಾನಕೋ. ೩೦). ೩. ಮುಂಭಾಗಕ್ಕೆ ; ಮುಂದಕ್ಕೆ ; ಮುಂದುಗಡೆಗೆ : ಮೂರು ಹಾಡಿನ ಮಾಳ ಮುಕ್ಕಟ್ಟು ಬರಬೇಡ (ಹಕ್ಕಿ. ೭೭) ; ರಥವು ಓಡುವಾಗ ಮುಂಚೋಲಿ ಇರುತ್ತದೆ ; ಆದರಿಂದ ಮುಕ್ಕಟ್ಟು ಹಾರಿಕೊಂಡರೆ ಬೊಕ್ಕಬೋರ್ಲ ಬಿದ್ದು ಬಹಳ ಪೆಟ್ಟು ತಾಗುವುದು (ಮುಂಬಯಿ. ೪-೭೨).

[ < ಮುನ್$_1$ ]

**ಮುಕ್ಕಟೆ** 'ಮುಕ್ಕಟ' ನೋ.

**ಮುಕ್ಕಟ್ಟ** 'ಮುಕ್ಕಟ' ನೋ.

**ಮುಕ್ಕಟ್ಟು$_1$** (ನಾ). ಮುಂಭಾಗ ; ಮುಂದುಗಡೆ : ಮುಕ್ಕಟ್ಟಿಗೆ ಎಣ್ಣೆ ಯನೊತ್ತಿಕೊಳ್ಳುವುದರ ಗುಣ (ಸಕಪ್ರ. ೩೦) ; ಹಡಗಿನ ಮುಕ್ಕಟ್ಟಿನಲ್ಲಿ ಗಡುತರವಾದ್ದೊಂದು ಕಬ್ಬಿಣಸರಪಳಿಯು ಇರುವುದು (ಮುಂಬಯಿ. ೩-೦೦೩). 'ಮುಂಗಟ್ಟು' ಪರಾ. [ < ಮುನ್$_1$ + ಕಟ್ಟು$_2$ ]

**ಮುಕ್ಕಟ್ಟು$_2$** 'ಮುಗ್ಗಟ್ಟು' ನೋ.

**ಮುಕ್ಕಟ್ಟು$_3$** 'ಮುಕ್ಕಟ' ನೋ.

**ಮುಕ್ಕಡಕ** 'ಮುಕುಡಕ' ನೋ.

**ಮುಕ್ಕಡಪ್ಪು** (ನಾ). ಮೂರು ಹಾಯ್ಗಡಗಳನ್ನುಳ್ಳುದು : ಮೂಡ ಮುಕ್ಕಡಪ್ಪಿನ ಹೊಳೆ ತೆಂಕಯೊಂಡೆಯು ಹೊಳೆ ಪಡುವ ಪುಳಕಳಿಯುವ ಹೊಳೆ ಬಡಗ ಭಲಿಮೆಯು ಹೊಳೆ ಈ ನಾಲ್ಕು ಹೊಳೆಗಳನು . . . ದೇವರ್ಗೆ ಮಾಡಿಕೊಟ್ಟ ಧರ್ಮ ಕ್ಷೇಮದ ವಿವರ (ಎಕ. V. ೪೦-೬; 1587). [ < ಮೂಱು + ಕಡಪ್ಪು$_0$ (< ಕಡಪ್ಪು$_2$) ]

**ಮುಕ್ಕಡಲೆ** (ನಾ). ಕಡಲೆಯ ನುಚ್ಚು : ಸೇವಗೆಯ ಪಾಯಸ, ಮುಕ್ಕಡಲೆಯ ಹುಗ್ಗಿ, ಹಿಂಡಿಯ ಕಚ್ಚರಿ, ಅಲಸಂದೆಯ . . . ಕಾಣಿಕೆ ತಾಂಬೂಲ ಮಂತ್ರುಸಮನ್ವಿತವಾಗಿ ಶಿರುವಿಗೆ ಮೂರು ಸೂಳು ನಿವಾಳಿಸಿ (ದಾರಿತ. ೦೨೯-೨). [ಮುಕ್ಕು$_4$ (<ಮುಱುಕು) + ಕಡಲೆ]

**ಮುಕ್ಕಡಿ$_1$** (ನಾ). ೧. ಮೂಗು ಕಡಿದುಹೋಗಿರುವಿಕೆ ; ಮೂಗಿಲ್ಲ ದಿರುವಿಕೆ. ೨. ಮೂಗು ಕಡಿದು ಹೋದವನು ; ಮೂಗಿಲ್ಲದವನು: "ವಿಗ್ರಃ, ವಿಗತನಾಸಿಕಃ — ೨ ಮೂಗಿಲ್ಲದವನು, ಮುಕ್ಕಡಿಯುವನು" (ಸಿದ್ಧಾಂತಿ. ೦೬೦) ; ಮೂಗುಳ್ಳ ಮುಕ್ಕಡಿಗಳು ನಾವು . . . ಕಸ್ತೂರಿಯ ವಾಸನೆಯನ್ನು ನೋಡಿದೆವಾದರೆ ನಮಗೆ ಮೂಗಿನಲ್ಲಿ ನೆತ್ತರು ಬೀಳುವುದು! (ಸಾಹಿಜೀ. ೩೨). [ < ಮೂಗು + ಕಡಿ$_3$ ]

**ಮುಕ್ಕಡಿ$_2$** (ನಾ). ಮೂರು ತುಂಡು, — ಭಾಗ : ವರನಿರ್ಶನಕುಳಿಶ ದಿನುದ್ಧರವಿಖ್ಯಾತ್ವಾದ್ರಿಪಕ್ಷಮಂ ದ್ವಿರದೇಂದ್ರಂ ಭರದಿಂ ಖಂಡಿಸೆ ಮುಕ್ಕಡಿ ನಿರತಂ ತಾನಾಯ್ತು ದುಸ್ತರಂ ವಿಖ್ಯಾತ್ವಂ (ಪಾರ್ಶ್ವಪು. ೫-೯೨) ; ಕೂರಲ ಗನಾ ಕರ್ಣ ಬರೆಸೆಳೆದಾರಿ ಹಿಂದಣಿನೆಚ್ಚು ಪಾರ್ಥಕುಮಾರಕನ ಚಾಪವನು ಮುಕ್ಕಡಿಯಾಗಿ ಖಂಡಿಸಿದ (ಕುವ್ಯಾದ್ರೋ. ೬-೩೨) ; ಮುಂದಣಯುಗಂ ಗಳಲಿ ಮನುಜಗೋಚರವಾಗದವೊಲೀ ವನನಿಧಿಯ ಸೇತುವ ವಿಭಾಗಿಪು ದೆನಲು ಬಿಲುಗೊಪ್ಪಿಂದ ಮುಕ್ಕಡಿಯಾಗಿ ಖಂಡಿಸಿದ (ತೊರರಾ. ೬-೩೯-೦೭).

[ < ಮೂಱು + ಕಡಿ$_3$ ]

**ಮುಕ್ಕಡಿಗೆಯ್** (ಕ್ರಿ). ಮೂರು ತುಂಡುಮಾಡು ; ಮೂರು ಭಾಗ ವಾಗುವಂತೆ ತುಂಡರಿಸು : ಮಂತ್ರಮಂ ತಂತ್ರದಿಂ ತಱದು ಪೊಸಮುಸೆಯ ವಿಶಿಖಂಗಳಿಂ ಪಗೆಯ ಬಿಲ್ಲಂ ಪೆಲ್ಲಂ ಕಡಿವಂತು ಮುಕ್ಕಡಿ ಗೆಯ್ದು ಬೊಬ್ಬಿಱದಂ (ರಾಮಾಶ್ವ.೦೯೩-೨೬). [ ಮುಕ್ಕಡಿ$_2$ + ಕೆಯ್$_1$]

**ಮುಕ್ಕಣ್**, ಮುಕ್ಕಣ್ಣು (ನಾ). ಮೂರು ಕಣ್ಣುಗಳು : ಎರಡು ತೊಡೆಗಳ ಮೇಲೆ ಪರಮನನಿರಿಸಿ ಸತಿ ಅಭ್ಯಂಗನವನಾಚರಿಸುತ್ತೊಯ್ಯನೆ ಮೂಗನೊತ್ತುತ ಕಿವಿಯನೂದುತ್ತ ಒರೆಸುತಂ ಮುಕ್ಕಂಗಳಂ (ಐಕಿಕ್ಷಿ. ೦೩-೬). 'ಮುಕ್ಕಣ್ಣ' ಪರಾ. **ಮುಕ್ಕಣ್ಣು** : ಗಂಗೆಯ ಧರಿಸಿ ಭಸಿತವಿಟ್ಟು ಫಲದೊಳು ಹಿಂಗದೆ ಮುಕ್ಕಣ್ಣನಾಂತು ಅಂಗಜಹರನಂತೆಯಿರಾಮದೊಳಗಾ ತೆಂಗಿನ ಮರಗಳೊಪ್ಪಿದುವು (ಕಂಪವಿ. ೨-೯೨). [ < ಮೂಱು + ಕಣ್ ]

**ಮುಕ್ಕಣ್ಣ** (ನಾ). ೧. ಮೂರುಕಣ್ಣುಗಳುಳ್ಳವನು ; ತ್ರಿನೇತ್ರ ; ಶಿವ : "ಗೊರವನೆನಲ್ ಮುಕ್ಕಣ್ಣಂ" (ತಕಾಪಿ. ೨೮) ; ಕಾಮಹರನೊಳ್ ಮುಕ್ಕಣ್ಣನೊಳಖಿಳವೇದಶಾಸ್ತ್ರಕ್ರಮಮಂ ವಿಕ್ಕವನೊಳ್ ಚಿತ್ರವನದೊಳ್ ಪೊಕ್ಕವನೊಳದೆಂತು ಚಿತ್ರವಿಟ್ಟೆ ಲತಾಂಗೀ (ಗಿಂಕ. ೩-೦೦೦) ; ರಕ್ಕಸನೆರಡು ತೋಳ್ಗಳ ಕಡಿದಪೆನೆಂದು ಚಕ್ರವ ಪುನರಪಿ ತುಡುಕೆ ಮುಕ್ಕಣ್ಣನೈತರು ತುಭಯವೀರರಿಗಡ್ಡ ಹೊಕ್ಕನು ಮಧ್ಯಸ್ಥನಾಗಿ (ವೀರಹಕ. ೪೦-೬೨). ೨. [ಜೈನ] ಜ್ಞಾನದ ಮೂರನೆಯ ಕಣ್ಣುಳ್ಳವನು ; ಕೇವಲಜ್ಞಾನಿ ; ಜಿನ : ಲೆಕ್ಕವಿಲ್ಲದೆ ಬಂದ ರಕ್ಕಸನಾಯಕರಿಕ್ಕಿದ ಪೌಜುಗಳೆಲ್ಲವನು ಮುಕ್ಕಣ್ಣನ ಪರಿವಾರ ಕಾಣಾತ ವಿತಿ ಮಿಕ್ಕು ನಡೆದುದಿದಿರಾಗಿ (ತ್ರಿಪುರಾಂ. ೦೬-೨೦೩) ; ಎರಡುಗಣ್ಣಿಂದ ಲೋಕವ ನೋಡಬೇಕು ತನ್ನಿರವ ಸುಜ್ಞಾನ ದೃಷ್ಟಿಯೊಳು ತಿರುಗಿ ನಿಟ್ಟಿಸಬೇಕು ಮುಕ್ಕಣ್ಣಗಲ್ಲದೆಲ್ಲರಿಗೆ ಬಹುದೆ ಸುಖಸಿದ್ಧಿ (ಭರತ. ೫-೭೭).

ಮುಕ್ಕಣ್ಣನರಸಿ = ಶಿವನ ರಾಣಿ ; ಪಾರ್ವತಿ : ಮುಕ್ಕಣ್ಣ ನರಸಿಯ ಬೀಳ್ಕೊಂಡು ರತಿದೇವಿ . . . ಬಂದು ಹೊಕ್ಕಳು ಕುಸುಮಾ ವತಿಯ (ಮೋಪಕ. ೬-೯) ; ಮುಕ್ಕಣ್ಣನರಸಿಯಂಶವೆ ಬಂದು ಧರೆಯೊಳಗೆ . . . ನಿರ್ವಾಣಪದಮಯನಾಂತ ಮಾದೇವಿಯಕ್ಕನ ಪದಕ್ಕೆ ಶರಣು (ಕಿಬಪು. ೦-೦೩). [ಮುಕ್ಕಣ್ + — ಅ$_7$ ]

**ಮುಕ್ಕಣ್ಣವೈಜ್ಯ** (ನಾ). ಒಂದು ಬಗೆಯ ವಾದ್ಯ : ಮಕರತೋರಣ ಪಾಯಿಮುಸ್ತಿಪು ಮುಕ್ಕಣ್ಣವೈಜ್ಯ ಬಸವನ ಢಕ್ಕೆ ನಂದಿಧ್ವಜ ಭೇರಿ ಢೆಂಕ ಪಂಚವಾದ್ಯ ಮುಂತಾಗಿ ನಮಸ್ಕರಿಸಿ ವಿನ್ದಾಶಿ ಯಿದುವೆ (ಎಕ. VI. ತಕ್ಕಮ. ೦೦೯-೩೭; 1717). [ ಮುಕ್ಕಣ್ಣ$_?$ + ವೈಜ್ಯ$_0$ ]

**ಮುಕ್ಕಣ್ಣು** 'ಮುಕ್ಕಣ್' ನೋ.

**ಮುಕ್ಕನಗಿಡು** (ನಾ). ಒಂದು ಬಗೆಯ ಸಸ್ಯ : "ಕಿಣಃ—ಬೂದಿ, ಮುಕ್ಕನ ಗಿಡು" (ಓಷಧಿ ೩೩). [ ? + ಗಿಡು ]

**ಮುಕ್ಕಬ್ಬೆ** (ನಾ). ಒಬ್ಬಾಕೆಯ ಹೆಸರು : ಆತನ ಪೆಣ್ಡತಿ ಮುಕ್ಕಬ್ಬೆ ಮಾಡಿಸಿದಳ್ (ಎಕ. VIII, ಸೊರಬ. ೪೦೬-೦೨ ; 951 ?).

[< ಮೂಱಾಂಬೆ]

**ಮುಕ್ಕರ** 'ಮುಕುರ$_1$' ನೋ.

**ಮುಕ್ಕರಿ** ' ಮುಕ್ಕುಱು$_2$' ನೋ.

**ಮುಕ್ಕರಿವೆ** ' ಮೂಕರಿವೆ ' ನೋ.

**ಮುಕ್ಕರೆ** ' ಮುಕ್ಕುಱು$_2$' ನೋ.

**ಮುಕ್ಕಲ್** (ನಾ). ಒಂದೇ ಎಡೆಯಲ್ಲಿ ಮೂರುಕಲ್ಲುಗಳು ಸೇರಿರುವ ಪ್ರದೇಶ : ಅನ್ತೆ ಪೋಗಿ ಕಲ್ಕುಪ್ಪೆಯ ಅನ್ತೆ ಪೋಗಿ ಮುಕ್ಕಲ್ಲೆ ಪೋಗಿ ಅಡವಳಿಕೆಱೆಯ ಪಡುವಣ ಖಿಡಗೋಡೆ ಏರಿಯ ಮೇಗೆ (ಎಕ. XVI. ತಿಪಟೂ. ೦೯೦-೬೯; ಸು. ೯೦೦). [ < ಮೂಱು + ಕಲ್$_3$ ]

**ಮುಕ್ಕವಲು** ' ಮೂಗವಲ್ ' ನೋ.

**ಮುಕ್ಕಳಿಸು** ' ಮುಕ್ಕುಳಿಸು$_1$' ನೋ.

**ಮುಕ್ಕಳೆ** (ನಾ). ಮೂರುಬಣ್ಣಗಳಿಂದ ಕೂಡಿದ ಕಾಂತಿ–ಹೊಳಪು : ಥಳಥಳಿಪ ಪೊಂಬಟ್ಟೆ ಪಟ್ಟಾವಳಿಗಳನು ತಾನುಟ್ಟು . . . ಉಳಿದ ಗೋಪರಿಗೆಲ್ಲ ನಸುಮಾಂದಳಿರ ಸಾಲಿಯ ಚಂದ್ರಿಕೆಯ ಮುಕ್ಕಳೆ [ಕಾಂತಿ] ಯ ವಸ್ತ್ರವನಿತ್ತು ಹೊಸ್ಕನು ಮತ್ತೆ ಪಟ್ಟಣವ (ಅಕ್ರೂರ. ೬-೨೬).

[ < ಮೂಱು + ಕಳೆ$_6$ (= ಕಲೆ$_3$) ]

**ಮುಕ್ಕಱಿಸು** ' ಮುಕ್ಕುಱಿಸು$_1$' ನೋ.

**ಮುಕ್ಕಾಂ**, ಮುಕಾಂ, ಮುಕ್ಕಾಮು, ಮೊಕಾಂ, ಮೊಕ್ಕಾಂ, ಮೊಕ್ಕಾಮ, ಮೊಕ್ಕಾಮು, ಮೊಖಾಮು (ನಾ). ತಾತ್ಕಾಲಿಕವಾಗಿ ತಂಗುವಿಕೆ,– ಬೀಡುಬಿಡುವಿಕೆ ; ಬಿಡದಿ ; ಶಿಬಿರ ; ಠಾಣ್ಯ : ಗಿರಗಾಂವ ನಿವಾಸದಿಂದ ನಾವು ನಮ್ಮ ಮುಕ್ಕಾಂ ಕಿತ್ತಿದ್ದೇವೆ (ರಕ್ತಗೋ. ೬೬); ನನ್ನ ಮುಕ್ಕಾಂ ಇದ್ದ ಊರಿನಿಂದ ಮಾವನ ಮನೆ ಸಮೀಪ ಇತ್ತು (ಕಂಡುಬ. ೦೦೯) ; ಡಾಕ್‌ಬಂಗಲೇದಾಗ ಈ ಸಾಬನ ಮುಕ್ಕಾಂ ಇತ್ತು (ದೀಕಹ. II, ೦೭). **ಮುಕಾಂ** : ಚೆಂನಪಟ್ಟಣದ ಗಿಡದಲ್ಲಿ ತಂದು ರಘಾಜೀಜಂಗಲ್ ತಿರುಗಿಸುತ್ತಾ ಧಣಿದು ಯಲ್ಲ ಮುಕಾಂ ಮಾಡಿ (ಹೈದ. ೯೩). **ಮುಕ್ಕಾಮು**: ಬೆಂಗಳೂರು ಮುಕ್ಕಾಮಿನಲ್ಲಿ ಕೆಲವು ದಿವಸ ಶಿವಪೂಜಾನಂದಲೋಲರಾಗಿರುತ್ತಿರಲು (ಗುರುವ. ೦೩); ಒಂದು ಅನಪೇಕ್ಷಿತ ಕಾರಣಕ್ಕಾಗಿ ನನ್ನ ಇಲ್ಲಿಯ ಮುಕ್ಕಾಮನ್ನು ಅರ್ಧಕ್ಕೇ ಮುಗಿಸಬೇಕಾಗಿದೆ (ಹೊಸಕ್ಷಿ. ೦೬೨). **ಮೊಕಾಂ** : ಪ್ರಜೋತ್ಪತ್ತಿಸಂವತ್ಸರದ ಮಾರ್ಗಸಿರ ಬ ೧ ಲು ಮೊಕಾಂ ಬೆಂಗಳೂರು ಬಿದು ಸೂರಪ್ಪ ಮುನಸಿ (ಎಕ. VI, ಕೊಪ್ಪ. ೯೮-೫೯; 1811). **ಮೊಕ್ಕಾಂ** : ಇಂಗ್ಲಿಷ್‌ಕಂಪೆನಿಕ್ಯಾವಲ್ರಿಯ ಪದ್ಧತಿಯಂತೆ ಏರ್ಪಟ್ಟ ೫೦೦ ಮಂದಿ ಸವಾರರು ಕ್ಲೋಸ್‌ಪೇಟೆಯಲ್ಲಿ ಮೊಕ್ಕಾಂಮಾಡಿದ್ದರು (ಮುಹಾಪಂ. II. ೯೬); ಮೇರಿಯ ಮನೆಯಲ್ಲಿ ಅಧಿಕಾರಿಗಳ ಮೊಕ್ಕಾಂ (ಕಾವೇರಿ. ೦೨೨); ಅಲ್ಲಿನ ಚಿಕ್ಕ ಇನ್‌ಸ್ಪೆಕ್ಷನ್ ಲಾಡ್ಜಿನಲ್ಲೇ ಮೊಕ್ಕಾಂ ಮಾಡಿದೆ (ಕಂಪ. ೩೩೩). **ಮೊಕ್ಕಾಮ** : ಖಿತ ಸುಬ್ಬರಾವ ಮುನಷಿ ಹಜೂರಹ ಮೊಕ್ಕಾಮು ನಂಜನಗೂಡ ಸಾಲ್ಲೇಯಾನಾ ಕಂಟಿರಾಯಿ ಐದುವರಹಾದ ಪ್ರಕಾರಾ ಜೋಡಿ ತಗೆದುಕೊಂಡು (ಮೈಅಐ. ೦೯೨೯, ೯೯–೯೫; 1813). **ಮೊಕ್ಕಾಮು** : ನಿಮ್ಮ ಹಿರಿಯರವರು ನಮ್ಮ ಅಜ್ಜಯ್ಯನವರ ಕೂಡೆ ಜಗಳ ಮಾಡಿ ಕೋಪುರದ ಮೊಕ್ಕಾಮಿನಲ್ಲಿ ತೀರಿಹೋದರು (ರಾಜೇಂದ್ರ. ೩೨); ಡೆಪ್ಯೂಟಿ ಕಮಿಷನರು . . . ಒಂದು ಜಮಾಬಂದಿ ಮೊಕ್ಕಾಮನ್ನು ಕದಬಹಳ್ಳಿಗೇ ಹಾಕಿದರು (ನಷ್ಟರು. ೦೫೫). **ಮೊಖಾಮು** : ಅವಳು ಅಲ್ಲೇ ಇದಾಳೆ, ಊರುಕೇರಿ ಬಿಟ್ಟು ಅಲ್ಲೇ ಮೊಖಾಮು ಅಂದ (ತಂಗೂಂ. ೦೯೬).

[ ← ಅರ. ಪಾರ. ಮುಕಾಮ್; ಹಿಂ. ಮರಾ. ಮುಕಾಮ್, ಮುಕ್ಕಾಮ್, ಮೋಕಾಮ್ ]

**ಮುಕ್ಕಾಣೆ** (ನಾ). ಮೂರು ಕಾಣೆ ; ಹಣದ ಅರುವತ್ತುನಾಲ್ಕನೆಯ ಮೂರು ಭಾಗ : ಕಾಣೆಯ ಹಾಕಿ ಮುಕ್ಕಾಣೆಯನಱಸುವನಂತೆ ಒಂದ ಬಿಟ್ಟು ಒಂದ ಹಿಡಿದಿಹೆನೆಂಬ ಸಂದೇಹಿಗೇಕೆ ಲಿಂಗಾಂಗ (ಮೋಳಿಗೆ. ೩೫-೨೯೭); ನಾಲ್ಕು ವೀಸ ಮುಕ್ಕಾಣೆ ಫಣಸಹಿತೇಕೊಪ್ಪು ಮಿತಿರ್ದುದಕ್ಕಾಧಾರದಿಂದಂ ಪೇಳು ನೀಂ ಭಾವಿಸಿದರೇನತಿ ಮುತ್ಸಾನಿರಲ್ ರಾಗದಿಂದಂ (ಬಾಸ್ಕರ. ೩೯ ೯).

[ < ಮೂಱು + ಕಾಣೆ$_1$ ]

**ಮುಕ್ಕಾಮು** ' ಮುಕ್ಕಾಂ ' ನೋ.

**ಮುಕ್ಕಾಲ್**, ಮುಕ್ಕಾಲು$_1$ (ನಾ). ೧. ಮೂರುಸಾಲು,– ಪಾದ : 'ಮುಕ್ಕಾಲ್ವಾಡು' ಪರಾ. **ಮುಕ್ಕಾಲು$_1$** : ೨. ಮೂರುಕಾಲು: 'ಮುಕ್ಕಾಲುಮಣೆ' ಪರಾ. ೩. ಮೂರುಕಾಲುಗಳುಳ್ಳ ಮಣೆ, –ಪೀಠ ; ಮುಕ್ಕಾಲಿ ; ತ್ರಿಪಾದಿ : ಎಂಜಿನಿಯರನ್ನು ಕರೆದುಕೊಂಡು ಹೋಗಿ ಮನೆ ತೋರಿಸಿದ್ದಾಯಿತು. ಅತ ಟೇಪು, ಮುಕ್ಕಾಲು ಮುಂತಾದ್ದೇನನ್ನೂ ತುದಿರಲಿಲ್ಲ (ಹೋರಪು. ೨೬).

[ < ಮೂಱು + ಕಾಲ್$_1$ ]

**ಮುಕ್ಕಾಲಟ್ಟೆ** (ನಾ). ದೇವಸ್ಥಾನದ ಪರಿಚಾರಕರು ವಾಸಿಸುವ ಹಟ್ಟಿ : ಕುಂದಾಪುರದ ವೊಳಗಣ ಕುಂದೇಶ್ವರದೇವರ ಸಂನಿಧಿಯಲೂ ಪೂರ್ವದಲೂ ವೂರು ಜಗತ್ತು ಅದ್ದಿಕದಲೂ ಕುಡಾಕೂರ ದೇವಂಣಸೇನಬೋವ ಮಾಡಿಸಿದ ಧ(ಂ)ರ್ಮವೂ ನಡೆಯದೇಯಿರಲಾಗಿ ಆ ನರಸಿಂಹದೇವವೊಡೆಯರು ಕುಂದಾಪುರದೊಳಗಣ ಗ್ರಾಮ ಜಗತ್ತು ಮುಕ್ಕಾಲಟ್ಟೆಗ[ಳ]ನು ಕರಸಿ ವಿಚಾರಿಸಿ (ಸೌಇಇ. IX – ii, ೯೯೦-೦೫; 1425). [ ? ]

**ಮುಕ್ಕಾಲು$_1$** ' ಮುಕ್ಕಾಲ್ ' ನೋ.

**ಮುಕ್ಕಾಲು$_2$** (ನಾ). ೧. ನಾಲ್ಕನೆಯ ಮೂರು ಭಾಗ (3/4) : ಮುಕ್ಕಾಲು ಮೊಗ ಕಾಣುವಂತೆ ನೋಡುತ್ತ ತನ್ನ ಕರದೊಳ್ ಕಪೋಲವನ್ನಿಟ್ಟು (ಸೌಗಂ. ೨೦೯-೦೫); ಶ್ರೀಮಂತನಾತನು ಸಂನ್ಯಾಸಿಯಾತನು ಎಂದೆಲ್ಲರುಗ್ಗಡಿಸಿರಲು ಒಕ್ಕಾಲು ಮಾತ್ರವೆ ವಿಟನೆಂಬ ತಿಳಿ ನೀನು ಸುಳ್ಳನ ಕಂತೆ ಮುಕ್ಕಾಲು (ಇಂದಾಹ. ೨೦೬-೬೭); ಸ್ವಲ್ಪ ಸರಿ ಎಂದರೆ ಅರ್ಧ ಮುಕ್ಕಾಲು ಕೊಡುವ ಅನಿವಾರ್ಯವೇ ಇಲ್ಲ (ಶಿಕ್ಷಣ. ೩೫೨). ೨. ಒಂಬತ್ತು ಕಾಸು ; **ಮುಕ್ಕಾಲಾಣೆ** : ಮಂಗಳೂರು ನಶ್ಯ ಒಂದು ಮುಕ್ಕಾಲಿನದ್ದು ಮರೆಯಬೇಡ (ಪಾಠಗ. ೬೫). ೩. ಹಿಂದಿನ ಕಾಲದಲ್ಲಿ ಬಳಕೆಯಲ್ಲಿದ್ದ ಮೂರುಕಾಸಿನ ಒಂದು ತಾಮ್ರದ ನಾಣ್ಯ : (ಇ).

**ಮುಕ್ಕಾಲಾಣೆ** = ಒಂಬತ್ತು ಕಾಸಿನ ನಾಣ್ಯ : ನನಗೆ ನನ್ನ ತಾಯಿ ಮುಕ್ಕಾಲಾಣೆ ಕೊಟ್ಟು ಕಳುಹಿಸಿದರು (ರೂಢಿ). **ಮುಕ್ಕಾಲುಪಾಲು**, **ಮುಕ್ಕಾಲುಮೂರುಪಾಲು** = ೧. ಮುಕ್ಕಾಲುಭಾಗ ; ನಾಲ್ಕರಲ್ಲಿ ಮೂರು ಭಾಗ ; ಬಹುಭಾಗ : ಮುಕ್ಕಾಲುಪಾಲು ಇವರೆಲ್ಲಾ ಊರೋಗೆ ರೈತರ ಮನೆಯಲ್ಲಿ ಜೀತಗಾರರಾಗಿದ್ದರು (ಹುಟ್ಟಿಹ. ೭೫); ಮಾನವನ ಮುಕ್ಕಾಲುಮೂರುಪಾಲು ಸಾಮಾನ್ಯವ್ಯವಹಾರವು ಪ್ರತ್ಯಕ್ಷ, ಅಪ್ರತ್ಯಕ್ಷವಾಗಿ 'ಆಹಾರನಿದ್ರಾಭಯಮೈಥುನಂ ಚ' ಎಂಬ ಸೂತ್ರದಲ್ಲಿ ಪವಣಿಸಿಹೋಗಿದೆ (ಸಾಹಿ. ೨೭). ೨. ಪ್ರಾಯಶಃ; ಬಹುಶಃ : ಮುಕ್ಕಾಲುಪಾಲು ಈ ಹೊತ್ತಿನಲ್ಲಿ ಅವರು ಮನೆಯಲ್ಲಿರುವುದಿಲ್ಲ (ರೂಢಿ). **ಮುಕ್ಕಾಲುರೂಪಾಯಿ** = ಒಂದು ರೂಪಾಯಿಯಲ್ಲಿ ನಾಲ್ಕನೆಯ ಮೂರು ಭಾಗ; ಹನ್ನೆರಡಾಣೆ : (ಇ). **ಮುಕ್ಕಾಲುವಾಸಿ** = ೧. ಬಹುಪಾಲು : ಅವರ ಖಾಯಿಲೆ ಮುಕ್ಕಾಲುವಾಸಿ ಗುಣವಾಗಿದೆ (ರೂಢಿ). ೨. = ಮುಕ್ಕಾಲುಪಾಲು ೨ : ಅವರು ಮುಕ್ಕಾಲುವಾಸಿ ಇಂದು ನಮ್ಮ ಮನೆಗೆ ಬರಬಹುದು (ರೂಢಿ).

[ < ಮೂಱು + ಕಾಲು$_3$ (< ಕಾಲ್$_3$) ]

**ಮುಕ್ಕಾಲುಮಣೆ** (ನಾ). ಮೂರುಕಾಲುಗಳುಳ್ಳ ಮಣೆ,– ಪೀಠ : ಇದು ಸಾಹಿತ್ಯವೆಂಬ ಮುಕ್ಕಾಲುಮಣೆಯ ಮೂರು ಕಾಲು (ರಾಮುರಾ. ೯೬).

[ ಮುಕ್ಕಾಲು$_1$ (< ಮುಕ್ಕಾಲ್) + ಮಣೆ$_1$ ]

**ಮುಕ್ಕಾಲ್ವಾಡು** (ನಾ). ಮೂರುಪಾದಗಳುಳ್ಳ ಹಾಡು ; ಮೂರು ಸಾಲಿನ ಗೀತೆ; ತ್ರಿಪದಿ : ಮುಪ್ಪುಮುಕ್ಕಾಡೀ ಮುಕ್ಕಾಲ್ವಾಡುಗಳ್

ಸಿಲ್ಕೆ ಜೋಕೆಯಿಂ ಚೌಕಂಗೊಂಡು ಬಣ್ಣಿಗೆಯೊಳ್ ತುಂಬುವಾಡಂ ಪಾಡಿವೆಂಬುದುಂ (ಶಕಪಿ. ೬-೦೫೪ ವ); ಸಾಂಗತ್ಯವಾದರೂ ಈ ಮುಕ್ಕಾಲ್ಪಾಡುಗಳು(ತ್ರಿಪದಿ) ಚೌಕಂಗೊಂಡಾದುವೆಂಬುದನ್ನೂ ಅವನು ಸೂಚಿಸದೆ ಇಲ್ಲ (ಕಾಹಿಪಿ. ೦೦೫). [ ಮುಕ್ಕಾಲ್ + ಪಾಡು$_2$ ]

**ಮುಕ್ಕಿ** (ನಾ). ಮೂರ್ಖಳಾದ ಹೆಣ್ಣು; ತಿಳಿಗೇಡಿ ಹೆಣ್ಣು : ಇದ್ದರಲ್ಲಿ ಸಹಸ್ರಸಂಖ್ಯೆಯ ಮದ್ದುಕುಟಿಲದ ಮಾಯಕಾತಿಯರಿದ್ದೆಸೆಯ ಕವಿಗೊಬ್ಬೆಯರು ಮೂಳಿಯರು ಮುಕ್ಕಿಯರು (ಕೊರರಾ. ೫-೨-೩೪). [ ಮುಕ್ಕ$_3$ + — ಇ$_2$ ]

**ಮುಕ್ಕಿಸು** (ಕ್ರಿ). ೧. ಮುಕ್ಕುವಂತೆ ಮಾಡು ; ಗಪಗಪನೆ ತಿನ್ನುವಂತೆ ಮಾಡು.– ತಿನ್ನಿಸು : ಹಕ್ಕಿಗಳು . . . ಕಾಳುಕಡ್ಡಿ ಹಕ್ಕಿ ಮರಿಗಳಿಗೆ ಮುಕ್ಕಿಸಿ ತಮ್ಮ ಆಹಾರಕ್ಕಾಗಿ ಹೊಲ ಗದ್ದೆಗಳಿಗೆ ಹಾರಿಹೋಗಿದ್ದವು (ಕುಪ್ಪರ. ೦೦). ೨. (ಆಲಂ) ನುಂಗುವಂತೆ ಮಾಡು; ನಾಶಗೊಳಿಸು: ಅರಿಭೂಭೃದ್‌ಬಳಕಾಳವಂಡನೊಹೊಹೋ ಕೊಂದಿಕ್ಕಿಪಂ ಮುಕ್ಕಿಪಂ (ಎಕ. VIII. ಸಾಗರ, ೦೦೯-೩೦: 1042). [ ಮುಕ್ಕು$_1$ + — ಇಸು$_3$ ]

**ಮುಕ್ಕಿಬ್** ' ಮುಕ್ಕುಬ್$_1$ ' ನೋ.

**ಮುಕ್ಕು$_1$** (ಕ್ರಿ). ೧. (ಕಾಳು, ಹಿಟ್ಟು ಮುಂತಾದುವನ್ನು ಬಾಯಿತುಂಬ ತುಂಬಿಕೊಂಡು) ಅವಸರವಸರವಾಗಿ ತಿನ್ನು; ಗಪಗಪನೆ ತಿನ್ನು; ಕಬಳಿಸು : "ಮುಕ್ಕು – ಖಾದನವಿಶೇಷೇ" (ಶಮಪ್ರ); ಪುಟಿ ಘನವಾಗೆ ಕೊಕ್ಕರಿಸಿ ಗುಗ್ಗುರಿಯಂ ಕೊಳೆ ಮುಕ್ಕಿ ಮಿಕ್ಕುದಂ ಕೆಲದವರ್ಗಿತ್ತು (ದಕಸು. ೬-೨೦೫). ೨. (ಆಲಂ) ನುಂಗಿ ನೊಣೆ ; ನಾಶಮಾಡು : ಇನ್ನುಮೆಲ್ಲರಂ ಯಮಸುತನಂ ಸುರೇಂದ್ರಸುತನಂ ಪೊಸೆದೀಗಳೆ ಮುಕ್ಕಿ ತೋಱಿರೆ (ಶಂಕಭಾ. ೪-೬); ಅನೇದಿಂಬಂಗಾಡಾವರಿದೆಂಬವೋಲ್ ಪೊಸೆದು ಮುಕ್ಕಲ್ ಸಾಲನೇ ಶಾರ್ಙ್ಗಿ ನಮ್ಮಂ ಗಂಡಾಳ್ತನವೇಪುದಾಶ್ರಯಿಸುವಂ ಶ್ರೀಪಾದಮಂ ಕೃಷ್ಣನಾ (ಜಗಪಿ. ೬-೯೫) ; ಉಕ್ಕಿಱುವ ಕೋಪಾಗ್ನಿ ದಳ್ಳಿಸಿ ದಿಕ್ಕುಗಳನಳ್ಳಿಱಿಡಿ ಲಕ್ಷ್ಮಣನಕ್ಕತೊಳದಲಿ ಬಂದನಾ ಲಯಕಾಲದಲಿ ಜಗವ ಮುಕ್ಕಿ ಪೋದುವ ಮದನಹರನವೊಲು (ತೊರರಾ. ೨-೩-೦೦).
[ದೇ.॥ ತಮಿ. ಮುಕ್ಕು, ಮೊಕ್ಕು; ತುಳು. ಮುಕ್ಕು; ತೆಲು. ಬೊಕ್ಕು]

**ಮುಕ್ಕು$_2$** ' ಮುಲುಕು$_1$ ' ನೋ.

**ಮುಕ್ಕು$_3$** ' ಮುಱುಕು$_2$ ' ನೋ.

**ಮುಕ್ಕು$_4$** ' ಮುಱಿಕು ' ನೋ.

**ಮುಕ್ಕು$_5$** (ನಾ). (ಉಕ) ೧. ಒಂದು ಸಾರಿ ಮುಕ್ಕಳಿಸುವಷ್ಟು ದ್ರವ ; ಗುಟುಕು : ಮತ್ತೊಂದು ಮುಕ್ಕು ನೀರೇ ಹೆಚ್ಚಿಗೆ ಕುಡಿದು ಅಲ್ಲಿಯೇ ಕುಳಿತೆ (ಮೀಠವು. ೦೦); ಇಲ್ಲಿ ಮುಕ್ಕು ನೀರಿಗೂ ಗತಿಯಿಲ್ಲ (ಕೃತಿಚಿ. ೪೬೪); ಮನೆಯಲ್ಲಿ ಒಂದು ಮುಕ್ಕು ಕೂಡ ನೀರು ಇರುವದಿಲ್ಲ (ಹಂಪಾ. ೨೦). ೨. ಮುಷ್ಟಿಯಲ್ಲಿ ಹಿಡಿಸುವಷ್ಟು ಪ್ರಮಾಣ ; ಬೀಸುವ ಕಲ್ಲಿನ ಕುಳಿಯಲ್ಲಿ ಹಿಡಿಸುವಷ್ಟು ಪ್ರಮಾಣ ; ಒಂದು ಹಿಡಿ : ಬೆಕ್ಕು ಮನೆಯೊಳು ಲೇಸು ಮುಕ್ಕು ಕಲ್ಲಿಗೆ ಲೇಸು (ಸರ್ವಜ್ಞ. ೦೩೬೪); ಮುಕ್ಕು (ಒಂದು ಹಿಡಿ ಧಾನ್ಯ, ಬೀಸುವ ಕಲ್ಲಿನಲ್ಲಿ ಒಮ್ಮೆ ಹಿಡಿಯುವಷ್ಟು ಧಾನ್ಯ) ಮನ್ನಾಗ ಮುಕ್ಕು ಜ್ವಾಳಿಲ್ಲ (ಸುವರ್ಣ. ೩೨೬) ; ಆದ ಮುಕ್ಕಿಗೆ ಶರಣು ಗೋದಿಕಲ್ಲಿಗೆ ಶರಣು (ಗರತಿ. ೦೩೬). [< ಮುಕ್ಕಳ್ ?]

**ಮುಕ್ಕುಗಳೆ** (ಕ್ರಿ). ಒಡೆ ; ಭಿನ್ನಗೊಳಿಸು ; ಭಂಗಮಾಡು : ತಾಗಿ ವಜ್ರವು ಮುಕ್ಕುಗಳೆವಡೆ ಸಾಗರವ ಹೊಗಲೇಕೆ ಗಿರಿಗಳು (ಕುಮ್ಮಾದ್ರೋ. ಪಾ. ೧೬-೨೭). [ಮುಕ್ಕು$_4$ (< ಮುಱಿಕು) + ಕಳೆ$_1$]

**ಮುಕ್ಕುಗೆಲಸ** (ನಾ). ಅಪೂರ್ಣವಾದ ಕಾರ್ಯ ; ಪೂರ್ತಿಯಾಗದ ಕೆಲಸ : ಈಗಿನ ಕಾಲದಲ್ಲಿ ಕಂಟ್ರಾಕ್ಟರ್‌ಗಳು ಬಹುಪಾಲು ಮಾಡುವುದೇ ಮುಕ್ಕುಗೆಲಸ (ರೂಢಿ). [ಮುಕ್ಕು$_4$ (< ಮುಱಿಕು) + ಕೆಲಸ]

**ಮುಕ್ಕುಚಿಕ್ಕೆ** (ನಾ). ಒಂದು ಬಗೆಯ ಧಾನ್ಯ.– ಕಾಳು (?) : ಬಿತ್ತುವರೆ ಬಿತ್ತುವವು ಮುಕ್ಕುಚಿಕ್ಕೆಯ ಕಾಳು ಮುತ್ತು ರತ್ನನವ ಬಿತ್ತಿ ಮಾಡದಿರು ಹೊಲ ಹಾಳು (ಗಾ. ೩೦-೨); ಮುಕ್ಕುಚಿಕ್ಕೆಯ ಕಾಳನ್ನೇನೊ 'ಶ್ರೀ'ಯವರು ಬಿತ್ತಿದ್ದಾರೆ (ಗೋತ್ರು ಗು. ೦೩೦). [ ? ]

**ಮುಕ್ಕುಟುಕ** (ನಾ). ಒಂದು ಬಗೆಯ ಪಕ್ಷಿ : ಮುಕ್ಕುಟುಕ ಮರಕುಟುಗ . . . ಪೆಱುವರ್ದಪಱಿಕೊಳೊಳ್ಪುದುದು (ಸಾಳ್ಕಾ. ೫-೩೩). [ ? ]

**ಮುಕ್ಕುಡಿ** (ನಾ). ೧. ತೊಂದರೆ ; ವಿಪತ್ತು : "ಮುಕ್ಕುಡಿ ಬೆಸಲವಗಡಕೆ ನಾಮಂ" (ರಾರಪಿ. ೪). ೨. ಹಾಳು ; ನಾಶ ; ಧ್ವಂಸ : ಖಳ ಪದಾತಿಯ ಮುಕ್ಕುಡಿಯ ಮಾಡಿದನು ರಣಮಂದದುಬ್ಬಿನಲಿ ರಾಮ (ತೊರರಾ. ೬-೪೫-೩೬). [ ? ]

**ಮುಕ್ಕುಡಿತೆ** (ನಾ). ಮೂರು ಬೊಗಸೆ : ಶ್ರೇಯಾಂಸಂ . . . ನವವಿಧಪುಣ್ಯಸಪ್ತಗುಣಯುಕ್ತನಾಗಿ ಇಕ್ಷುರಸಮಂ ಮುಕ್ಕುಡಿತೆಯಂ ಕೊಂಡಕ್ಷಯ ದಾನಮೆಂಬುದುಂ (ಕೃಣ್ಕಸ್ರ. ೦೦-೨೦ ವ); ಈ ಮಂತ್ರಮನೋಮಂತ್ರಂಬುಜಸಖನುದಯದಲ್ಲಿ ಮುಕ್ಕುಡಿತೆಯುಮಂ ಕೊಂಬುದು ಜಲಮಂ ಮೂಮೆಯದುಂ ಬಾಚ(ಚಿ)ಸೆ ಪರರ ವಿದ್ಯೆಯುಂ ಭೇದಿಸುಗುಂ (ಖಪುಚ. ೦೪-೦೭). [<ಮೂಱು + ಕುಡಿತೆ]

**ಮುಕ್ಕುದಿ** (ನಾ). ಮೂರು ಕುದಿ ; ಮೂರು ಸಾರಿ ಕುದಿಯುವಿಕೆ : ಅಳಗೆಯೋಗಣ್ಣೆಯಂ ಬಿಟ್ಟುಪೊಗ್ಗರಿಸಿಯದ ಮುಕ್ಕುದಿಯ ಬಿರಿಸಿಕೊಂಡು ಇಳುಹಿ (ಸೂಶಪಾ. ೩-೩೨). [< ಮೂರು + ಕುದಿ$_3$]

**ಮುಕ್ಕುಪ್ಪೆ** (ನಾ). ೧. ಮೂರು ಗುಡ್ಡೆ ; ಮೂರುರಾಶಿ.–ಒಟ್ಟಿಲು : ಹ್ರಸ್ವದ್ವಿತ್ವಂಗಳ್ಗೆ–ಮುಕ್ಕುಪ್ಪೆ . . . ಮುಪ್ಪುರಿ, ಮುಮ್ಮಾಱು (ಶಮದ. ೦೭೮ ಕ್ರ ಮೋ); ಮುಕ್ಕೊಡೆ, ಮುಕ್ಕೋಡಿ, ಮುತ್ತಟಿ, ಮುಕ್ಕುಪ್ಪೆ (ಶಬ್ದಾಮ. ೦೦೦ ಕ್ರ ಮೋ). ೨. ಜಮೀನಿನ ಉತ್ಪತ್ತಿಯನ್ನು ಮೂರುಭಾಗ ಮಾಡಿ ಒಂದು ಭಾಗವನ್ನು ಜಮೀನುದಾರನೂ ಎರಡುಭಾಗಗಳನ್ನು ರೈತನೂ ತೆಗೆದುಕೊಳ್ಳುವ ಒಂದು ವ್ಯವಸಾಯಕ್ರಮ : ಗಕ್ಕನೆ ಹಮ್ಮು ತಡೆದು ಗರ್ವವ ಮೈಯಿಕ್ಕಿದ ಹಾಗಿರಲೇನಹುದು ಪಕ್ಕಲಿಗನ ದೆಸೆಯಿಂ ಕೊಂಡರ್ಥಕೆ ಮುಕ್ಕುಪ್ಪೆಯ ಫಲವೆನಲಹುದು (ಕಕೃಕ. IV, ೦೨-೨೦); ಮುಕ್ಕುಪ್ಪೆ ಸಾಗುವಳಿ. ಮುಕ್ಕುಪ್ಪೆಪಾಲು (ಕಶ್ವಿದ್ರು. ೩೨೬). [< ಮೂಱು + ಕುಪ್ಪೆ$_1$]

**ಮುಕ್ಕುರಿ** ' ಮುಕ್ಕುಱು$_1$ ' ನೋ.

**ಮುಕ್ಕುರಿಕ್ಕು$_1$** ' ಮುಕ್ಕುಱಿಕ್ಕು$_1$ ' ನೋ.

**ಮುಕ್ಕುರಿಕ್ಕು$_2$** ' ಮುಕ್ಕುಱಿಕ್ಕು$_2$ ' ನೋ.

**ಮುಕ್ಕುರಿಸು** ' ಮುಕ್ಕುಱಿಸು$_1$ ' ನೋ.

**ಮುಕ್ಕುರು** ' ಮುಕ್ಕುಱು$_1$ ' ನೋ.

**ಮುಕ್ಕುರುಕು** ' ಮುಕ್ಕುಱಿಕ್ಕು$_1$ ' ನೋ.

**ಮುಕ್ಕುವೋಗು** (ಕ್ರಿ). ೧. (ಆಯುಧ ಮೊದಲಾದುವು) ಸ್ವಲ್ಪ ಮುರಿದು ಹೋಗು ; ಮುಕ್ಕಾಗು : ಬಾಳಂ ಕಲ್ಲ ಮೇಲಿಡಾಡಿದೊಡದು ಮುಕ್ಕುವೋದುದಂ ಕಂಡು ಕಡುಮುಳಿದು (ಶಂಕಶಂ. ೬೮-೦೯); ವಿಶಾಖನಂದಿಯಂ ಕಂಡು ಮುನ್ನಂ ತನ್ನಿಱಿಯ ಮುಱಿದು ಕಿಱುಮುಕ್ಕುವೋದ ಬಾಳನೀಡಾಡಿ (ವರ್ಧಮಾ. ೨-೩೩ ವ); ಪೆಸರಿಂಗೊಯ್ಯನೆ ಮುಕ್ಕುವೋದಡೆ ಬಱಿಕ್ಕಾ ಲಿಂಗಮಂ ಮುಟ್ಟಿ ಪೂಜಿಸಲಾಗ (ಸಪುಕ. ೯-೪). ೨. ಊನವಾಗು ; ಕುಗ್ಗು ; ನಾಶವಾಗು : ಓರೆವೋಗದ ಚಲಮುಮಂ ಮುಕ್ಕುವೋಗದಳುರ್ಕುಮಂ ನೋಟಕರಪ್ಪಿನಮಪ್ಪವರಿಂ ಪೊಗೞಿಸುವೆನೆಂದು ತಱಿಸಂದು (ಶಾಂತಿಪು. ೪-೩೩ ವ); ಭಿಕ್ಷಾನ್ನಮನಿಕ್ಕುವಲ್ಲಿ ಸತಿಯಂ ಬೇಡೆಂದು ಕಣ್ಕೆತ್ತುಮಂದಿನ ಸೊರ್ಕಕ್ಕಟ ಮುಕ್ಕುವೋಗಿ ಕಡೆಯೊಳ್ ಭೈಕ್ಷಕ್ಕೆಪಕ್ಕಾದಿರೇ (ಸುಕುಮಾ. ೪-೨೬). [ಮುಕ್ಕು$_4$ (< ಮುಱಿಕು) + ಪೋಗು$_1$ (< ಪೋ$_1$)]

**ಮುಕ್ಕುಳ್,** ಮುಕ್ಕುಳು (ನಾ): ೧. ಬಾಯಿಯ ಒಳಭಾಗ ಮತ್ತು ಬಾಯಿ ತುಂಬ ತುಂಬಿಕೊಂಡ ನೀರು ಇತ್ಯಾದಿ ದ್ರವಪದಾರ್ಥ : ಜಲಧಿಯೊಳಿರ್ದವರ್ದನ ಮುಕ್ಕುಳನುಗುೞುತ್ತಿಳಿಗೆ ವಂದುದೆನಿಸಿ ಖಲೀನಸ್ಖಲನಭವಬಹುಳಲಾಲಾಜಲಮುಗುತಿರೆ ತುರಗರತ್ನ ಮೆಸೆದತ್ತಾಗಳ್ (ಶಾಂತಿಪು. ೪೩೪); ತತ್ಸಿಂಧುಬಂಧದ ನೀರೆಲ್ಲಮನೊಂದೆ ಮುಕ್ಕುಳೊಳೆ ತಂದಾ ವಹ್ನಿಯಂ ತೂಳ್ದಿದಂ (ಜಗ. ೧೮-೫);ತೆಱವಿಂ ನೀಳ್ಕೆ ಗವಾಕ್ಷಮಂ ತೆಱೆವ ನೀರಂ ಮುಕ್ಕುಳೊಳ್ ತೀವಿಕೊಂಡೆಱೆವ . . . ಸೆಱಂಗಿಂ ಬೀಸುತಿರ್ಪೋಪರಬ್ಬಿಱಲಂಪಂಗನೆಯರ್ಗೆ ರಾಗಮನದೇಂ ಮಾಡಿತ್ತೊ ರತ್ಯಂತದೊಳ್ (ವರ್ಧ. ೬-೫೨). ೨. ಬಾಯಲ್ಲಿ ನೀರನ್ನು ತುಂಬಿಕೊಂಡು ಶುಚಿಮಾಡುವಿಕೆ; ಮುಕ್ಕುಳಿಸುವಿಕೆ ; ಗಂಡೂಷ : "ಗಂಡೂಷಃ, ಮುಖಪೂರಣಾ..ಈ ೨ ಮುಕ್ಕುಳ್" (ಹಲಾಯು. ೦೩೦-೨೦೦); "ಮುಕ್ಕುಳೆನೆ ಗಂಡೂಷವು" (ಅಭಿಮಂ. ೭೦). ಮುಕ್ಕುಳು : ೧. ತುಳುಕುವೊಡೆಯ್ದುವೊರ್ಱಡಿತೆಗಂ ತೆಗೆದೀಂಟುವೊಡಾಗದೊಂದು ಮುಕ್ಕುಳಗೆನೆ ಸಾಲ್ವುದಿಲ್ಲ (ಜಗ. ೬-೦೭); ಮೊಗೆಯಿಂದ ಹೊಮ್ಮಿ ಬಂದ ಕಂಬಿಗೆ ಮಾಗೊಡ್ಡಿದ ಗುತ್ತಿಗೆ ಬ್ರಹ್ಮಾನಂದವಾಗಿ ಒಂದು ಮುಕ್ಕುಳು ಅದರಿಂದಲೇ ಕುಡಿದೇ ಬಿಟ್ಟನು (ಮಲೆಮ. ೫೬೦). ೨. "ಮುಕ್ಕುಳೆನಲು ಗಂಡೂಷದಭಿಧಾನ" (ಅಅಶ. ೯೦). ೩. ತುಳುಕಿಸುವಿಕೆ : ಹೊರಹೊಮ್ಮಿಸುವಿಕೆ : ಮೇಲುಸುರೆ ಬಿಕ್ಕುಳನ ಬಿಗುಹಿನ ತಾಳಿಗೆಯು ನೀರುಗಳ ಮುಕ್ಕುಳನಾಲಿಗಳ [ಪಾಠಾಂ. ನಿದ್ರ್ಯವದ ನೀರೊಗುವಾಲಿಗಳ] ನರನಾಥ ತೆಗೆದಪ್ಪಿದನು ಫಲುಗುಣನ (ಕುವ್ಯಾಕ. ೦೮-೦). [ದೇ.॥ ತುಳು. ಮುಕ್ಕುಲಿ, ಮುಕ್ಕುಳ]

**ಮುಕ್ಕುಳಿಸು₁,** ಮುಕ್ಕಳಿಸು (ಕ್ರಿ). ೧. ನೀರು ಮೊದಲಾದ ದ್ರವವನ್ನು ಬಾಯಲ್ಲಿ ತುಂಬಿಕೊಳ್ಳು.— ಇಟ್ಟುಕೊಳ್ಳು: ಮುಕ್ಕುಳಿಸಿದಮರ್ದನುಗುಳ್ದ ಪಳಕ್ಕುಮಿವಳ್ ವಂಶಮುಖದಿನೆನೆ ಕಳರುತಿ ಕೈಮಿಕ್ಕು ಕಿವಿವೊಕ್ಕು ಬಗೆಯಂ ಜಕ್ಕುಲಿಸೆ ಲತಾಂಗಿ ವಂಶಮಂ ಬಾಜಿಸಿದಳ್ (ಮಲ್ಲಿಪು. ೦೦-೦೦೦) ; ಎಳೆಗೆಲರ್ವೊಯ್ಲಿನಿಂ ಪೊಸರ್ವ ಪಣ್ಗಳ ಸದ್ರಸಬಿಂದು ವೃಂದಮಂ ಫಳಿಲನೆ ಪೋಗಿ ಮುಕ್ಕುಳಿಸಿ-ತಂದು . . . ತನ್ನ ಪೆಣ್ಗಳಗೆಱೆ ಯುತ್ತುಮಿರ್ದುದೆನಸುಂ ಸಲಿವಿಂ ಸುರತೋತ್ಸುಕಂ ಶುಕಂ (ಕುಸುಮಾ. ೫-೮೬) ; ಕೇದಗೆದೊಱೆಯ ನಿರ್ಮಳಸಲಿಲಮಂ ಮುಕ್ಕುಳಿಸಿ ಕಣ್ಣಿಂದನೊಲವಿಂದ ಬಲುಸರಳುಗಳು ಎಡದ ಕೈಯಲಿ ಬಲದ ಕೈಯಲಿ ಮಾಂಸವಹ ಪೇರೆಲೆಯ ಜೊನ್ನೆಯನಾ ಶಿವೈಕ್ಯಂ ಪಿಡಿದು ನಡೆತಂದು (ಬಸವ. ೦೮-೩೦). ೨. ಬಾಯಲ್ಲಿ ನೀರನ್ನು ತುಂಬಿಕೊಂಡು ಗುಳುಗುಳಿಸು: "ಮುಕ್ಕುಳಿಸು-ಗಂಡೂಷೇ" (ಶಬ್ದಮ. ೫) ; ಬಳೆಯಲ್ಕಣ್ಮದುದಿಲ್ಲ ವಿಂಧ್ಯಗಿರಿಯುಂ ತನ್ನಾಜ್ಞೆಯಿಂದೊರ್ವೆ ಮುಕ್ಕುಳಿಸಲ್ಕಂಬುಧಿ ಸಾಲ್ವುದಿಲ್ಲ(ಸಂಶಾ. ೪-೨೦); ಕುರುಕುಳಸರೋಧಾಜಹಂಸಂ . . . ಕರಚರಣಪದಸಪ್ರಕ್ಷಾಳನಂಗೆಯ್ದು ಮುಕ್ಕುಳಿಸಿಯುಗುಳ್ದಾಚಮನಕ್ರಿಯೆಗಳಂ ನಿರ್ವರ್ತಿಸಿ (ಗದಾಯು. ೩-೦೩ ವ); ಮಂತ್ರಿಸಿದ ಸಲಿಲದ ಮುಕ್ಕುಳಿಸಿಯುಗುಳ್ದ ಸಮುಸಾಹಸಿ ಕೊಂಡ ವರ ಕರ್ಪೂರದ ವೀಳೆಯವ (ಕುವ್ಯಾಕ. ೦೦-೩೦). ೩. ಪಕ್ಷಿಗಳು ಬಾಯಲ್ಲಿ ತುಂಬಿಕೊಂಡಿರುವುದನ್ನು ಮರಿಗಳಿಗೆ ತಿನ್ನಿಸು,–ಗುಟುಕುಕೊಡು : ದೀಪದ ಚಕೋರಿಗಳಬ್ಬಿಱೆಂ ಮುಕ್ಕುಳಿಪ ಮುಂಡಾಡುವ ಕರ್ಪುಂಕುವೊದೆವ ಚೆಲ್ಲಕೆ ಮೈಸಾರ್ಚಿಪಮಂ (ಚಂದ್ರಪ್ರ. ೯-೪೪ ವ); ತನ್ನ ನಚ್ಚಿನ ನಳ್ಳಿಳಂ ಗಜೆಸಿನ್ನೆಯಿಂ ಕೆಲಕ್ಕೆ ಕರೆವಳ್ಕಱೆಂ ಮುಕ್ಕುಳಿಸಿ ತಿಂಬುಗೊಡಿ ಗಾಡಿಯಿಂದೆಱೆ ದವಳ್ನೋಡಿ (ರಾಜಶೇ. ೨-೩೬ ವ). ೪. ಹೊರಹೊಮ್ಮು ; ಹೂರಸೂಸು : ಸೊಕ್ಕು ಮುಕ್ಕುಳಿಸಿದಂತಿರ್ದಿರವುಂ ಬಟಲ್ದಂತೆ ಜೋಲ್ದಿಂದಮುಂ ಮುನ್ನಮಭ್ಯಾಸಮಿಲ್ಲದುದರ್ಕೆಂತು ದೊರೆಕೊಳ್ಗುಂ (ಶಾಂತಿಪು. ೬೩೯); ಅಕ್ಕುಳಿಸಿದೆ ಹೊಟ್ಟೆ ಕೆಕ್ಕರಿಸಿದ ಕಣ್ಣು ಮುಕ್ಕುಳಿಸಿದ ರಕ್ತ ಪೆಣನು ಸಿಕ್ಕನೆ ಸೀಳುತ ಬೊಬ್ಬಿಡುತಲಿ ಅಡಿಯಿಕ್ಕಿದರಾರು ನೀವೆನುತ (ವಸ್ತು. ೬-೩೩); ಸ್ನೇಹಕಾಂತಿ ಮುಕ್ಕುಳಿಸುತ್ತಿದ್ದ ಅವಳ ಮುಖದಲ್ಲಿ ಕಣ್ಣುಗಳು ಪ್ರಮುಖವಾಗಿ ಎದ್ದುಕಾಣುತ್ತಿದ್ದುವು (ಪುಸರು. ೦೪೨). ೫. ಹೊರಹೊಮ್ಮಿಸು : ಹೊರಕ್ಕೆ ಚಿಮ್ಮಿಸು : ಮುಕ್ಕುಳಿಸಿಯುಗುಟ್ಟ ಮಧುವಿಂ ಮಿಕ್ಕಸೆವಾಮೋದಮಿದಱ ತಣ್ಣಂಪಿನೊಳೊಳ್ ಪೊಕ್ಕುವೆನೆ ಮಧುವ ಕಂಪಂ ಮುಕ್ಕುಳಿಸಿದ ವಕುಳಮಾರುಮಂ ಸೋಲಿಸದೇ (ಅಜಿ. ೦೨-೦೨೦): ಶಶಿಕಳೆಯ ಮುಱಿಗಳಂ ಮುಕ್ಕುಳಿಸಿದೆಳಗಾರ ಕಿಱುಮುಗಿಲ ಜವಳಿಗಳಿವೆನಿಸಿ ವಿಮಳಶೀತಳಮೃಣಾಳಶಕಳಮಂ ಸೆಱೆಗೆಯ್ದು ಶತಪತ್ರಪತ್ರಪುಟಿಕೆಗಳಂ (ವರ್ಧ. ೫-೬೩ ವ); ಅಗ್ನಿದೇವ. ನಿರ್ಮಲಪ್ರಭೆಯನ್ನು ಮುಕ್ಕುಳಿಸುವ ಸ್ಫಟಿಕದೀಪದಂತೆ ನಗುನಗುತ್ತ ಹೇಳಿದ (ಚಿತಂಶಾ. ೪). ೬. ಸುರಿಸು; ಸ್ರವಿಸು : ಮದಮಂ ಮುಕ್ಕುಳಿಸಿರ್ದಿಭಂಗಳನುದಗ್ರಾಶ್ವಂಗಳಂ ತಕ್ಕಿನಗ್ಗದ ಬಾಡಂಗಳನಾಯ್ದು ಕೊಟ್ಟು ತಣಿದಂ (ಸಂಶಾ. ೨-೫೩); ಮದಮಂ ಮುಕ್ಕುಳಿಸಿದು ವೆಣ್ಬತ್ತುನಾಲ್ಕುಲಕ್ಕ ಗಜಂಗಳ್ (ಶಾಂತೀಶ. ೦೦-೦೨೬) ; ಪದಿನೆಣ್ಸಾಸಿರ ಲೋಹವಕ್ಕರೆಯ ಜಾತ್ಯಶ್ವಂಗಳೆರ್ಘಾಸಿರಂ ಮದಮಂ ಮುಕ್ಕುಳಿಸಿರ್ದ ದಂತಿಘಟೆಗಳ್ (ಕಾವ್ಯಾವ. ೭೭). ೭. ಹೊರದೂಡು ; ನಿವಾರಿಸು ; ಬಿಡು ; ಕಳೆ : ನನೆಗಣೆಯಂ ಕೆಲಬಲದ ಪಸಾಯ್ತರ ಮೊಗಮಂ ನೋಡಿ ಮುಳಿಸಂ ಮುಕ್ಕುಳಿಸಿ ನಸುನಗೆವೆರಸು ಇಂತೆಂದಂ (ಕಬ್ಬಿಗ. ೧೮೮). ೮. ತಿರಸ್ಕರಿಸು; ಹೀಯಾಳಿಸು; ಹೀಗಳೆ: ರಸದಾಡಿಮದ ಬಿತ್ತುಮಂ ಪೊಸಮುತ್ತುಮಂ ಮುಕ್ಕುಳಿಸಿದಂತಪ್ಪ ವಿಬುಧವನಜವನಕಳಹಂಸನ ದಂತಪಂಕ್ತಿಗಳಮೃತಕಿರಣನ ಕಾಂತಿಗಳನಿಳಿಸುವಂತಾದುವು (ಸಂಶಾ. ೨-೩೯ ವ); ಹೊಳೆಹೊಳೆದುದಾಭರಣ ರತ್ನಾವಳಿಯ ರುಚಿ ಮಣಿರುಚಿಗಳನು ಮುಕ್ಕುಳಿಸಿತಂಗಚ್ಛವಿ ತದಂಗಪ್ರಭೆಯನಡೆಹಾಯ್ದು ಥಳಥಳಿಸಿದುದು ವದನ (ಸಂಪಕ. ೨೯-೨೪); ಹೊಳೆವ ಮಣಿದೀಪಾಂಶುಗಳ ಮುಕ್ಕುಳಿಸಿದವು ಕಡೆಗಂಗಳಿಂದೊಪ್ಪಳದ ಭಿತ್ತಿಯ ಬೆಳಗನಣೆದುದು ಬಹಳ ತನುಕಾಂತಿ (ಕುವ್ಯಾಅ. ೬-೦೫). ೯. (ಕಣ್ಣೊಳಗೆ) ಒಳಗೊಳ್ಳು ; ತುಂಬಿಕೊಳ್ಳು : ಲಲಿತಮಧುರಾಪಾಂಗದಲಿ ಮುಕ್ಕುಳಿಸಿ ತಣಿಯವು ಕಂಗಳು (ಕುವ್ಯಾಅ. ೦೫-೩೪); ಉಕ್ಕಿದುದು ಮನವಱೆದು ಕಂಗಳು ಮುಕ್ಕುಳಿಸಿದುವು ಮೂರ್ತಿಯನು (ಕೃಶಾಂ. ೨೨-೪೦). ೧೦. ತುಂಬು; ಆವರಿಸು ; ವ್ಯಾಪಿಸು : ಹೊಕ್ಕವಾಸೆಗಳೆರಡುಸೇನೆಯೊಳೊಕ್ಕಲಿಕ್ಕಿದ ವೆಸುವ ಜೋದರ ತೆಕ್ಕೆಗೋಲಿನ ಮಾಲೆ ಮುಕ್ಕುಳಿಸಿದವು ದಿಗುತಟವ (ಕುವ್ಯಾಭೀ. ೪-೭೫). ೧೧. ಹಿರಿದಾಗು ; ಅತಿಶಯವಾಗು : ಸಲುಗೆ ಮುಕ್ಕುಳಿಸೆ ಮುಚ್ಚಿದ ಮುನಿಸುವೆರಸು ಕದಡಿದ ಗಂಗೆಯಂತೆ ಬಂಡಣಬಾಧಿಪತಿಯು ಸಭೆಯಂ ಹೊಕ್ಕನು (ಸಿದ್ಧರಾ. ೬-೪೬). ೧೨. (ಅಲಂ) ಊದಿಕೊಂಡಿರು : ಅಕ್ಕಜದ ರುಜೆಯೇನು ಮಾನಸವೋ ಶರೀರಜವೋ ಮುಕ್ಕುಳಿಸಿಕೊಂಡಿರದಿರು (ಕುವ್ಯಾಸ. ೦೨-೦೦). ಮುಕ್ಕಳಿಸು : ೨. ಲಿಂಗಾಗ್ರದೊಳ್ನಿಂದು ಕಾಲ್ಬೊಳೆದು ಮುಕ್ಕಳಿಸುವರೆ ಮೂಢರೆರೆಯನೆ ಎನುತ್ತಂ ಬೈದು (ಮಹಾದಿ. ೦೪-೦೮); ಉಪ್ಪಿನ ನೀರಿನಿಂದ ಬಾಯಿಯನ್ನು ಚೆನ್ನಾಗಿ ಮುಕ್ಕಳಿಸಬೇಕು (ಕರಸಾ. ೨೫); ಉಣ್ಣೋದು ಗಂಜಿ, ಮುಕ್ಕಳಿಸೋದು ಪನ್ನೀರು (ಗಾದೆ). ೪. ಎಳೆದೇರ ಗೌರೀಶ ಪಿನ್ನೊಳೆಸೆವ ದಯೆಯ ಸರೆ ಮುಕ್ಕಳಿಪ ನೋಟವೆನ್ನ ಸುತ್ತು ಕಟ್ಟಿಕಾಯಲಿ (ಅಕಿಸ. II. ೩೩-೫). ೧೦. ವಿಶ್ವ ಜಗತ್ಪ್ರದೇಶವಂ ಮುಕ್ಕಳಿಸಿತ್ತು ಮತ್ತೆ ಜಯಭೇರಿಯ ಘೂರಿಗಭೀರನಿಸ್ವನಂ (ಚಂದ್ರಪ್ರ. ೦೦-೨). [ಮುಕ್ಕುಳ್ + ... ಇಸು₃]

**ಮುಕ್ಕುಳಿಸು₂** (ಕ್ರಿ). ೧. ಗಪಗಪನೆ ತಿನ್ನು ; ಮುಕ್ಕು : ಒರ್ವಳು ಕೈವೆರಲ್ಗಳಿಂದಳ್ಳೆಯಂ ಜಕ್ಕುಲಿಸಿ ಬಗೆಬಗೆಯಲ್ಲಿ ನಗುಪಿ ಪ್ರಸಾದಮಂ

ಮುಕ್ಕುಳಿಸಿ ಕುಕ್ಷಿಯಿಂ ಅಕ್ಕುಳಿಸಿ ಕಣ್ಣೀರಾಮದೆಂದು ಮೋಪರಿದು . . . ಮಮತೆಯಿಂ ಮನಮುಟ್ಟಿ (ಕೃಶೋಚಂ. ೬-೨). ೨. (ಅಲಂ) ನುಂಗಿ ನೊಣೆ; ನಾಶಮಾಡು : ಕಣೆಕಣೆಯು ಹಳಚಿದವು ಮಾರ್ಗಣೆ ಕಣೆಯ ಕಡಿದವು ಕವಿವ ಕಣೆ ಕಿಬಿಗಣೆಯ ಮುಕ್ಕುಳಿಸಿದವು ಪೆಕ್ಕಳಿಸಿದವು ಪರಿದೆಗರ (ಕುಭಾಶಿಃ. ೪-೦೪). [< ಮುಕ್ಕು₁ + — ಇಸು₁]

**ಮುಕ್ಕುಳು** 'ಮುಕ್ಕುಳ್' ನೋ.

**ಮುಕ್ಕುಱಿಕು** 'ಮುಕ್ಕುಱಿಕ್ಕು₁' ನೋ.

**ಮುಕ್ಕುಱಿಕ್ಕು₁**, ಮುಕುರಿಕ್ಕು, ಮುಕ್ಕುರಿಕ್ಕು₁, ಮುಕ್ಕುರುಕು, ಮುಕ್ಕುಱಿಕು (ಕ್ರಿ). ಕವಿ; ಮುಸುಕು; ಆವರಿಸು ; ಮುತ್ತು : ಕಡುಮುಳಿದ ಪರಸಮಯಿಗಳ್ ಘುಡುಘುಡಿಸಿ ಬಂದು ಮುಕ್ಕುಱಿಕ್ಕಿ ತಕ್ಕುಗೆಡಿಸಿ ಘೋಂಕನೆ ಕೆಡಹಿ . . . ಅಭಿಮಾನಂಗೆಡಿಸಿ ಬಿಡಲೊಡಂ(ನಾಶರ. ೦೭೬-೬೪); ನಾಯ್ಗಳು ಪೆರಸಿ ಮುಕ್ಕುಱಿಕ್ಕಲು . . . ಎಲ್ಲರೊಡಲ ಕಳವಳಿಗೆಯ್ದು ಬೀದಿವರಿದೊಕ್ಕಲಿಕ್ಕಿತ್ತು ರಕ್ಕಸಮಿಗಂ ಕಾಡೊದಜಲು (ಹತಶಾ. ೬-೭). **ಮುಕುರಿಕ್ಕು**: ತುಡಿಕ್ಕಿ ತಳದೊಕ್ಕಿಲಿಕ್ಕಿಯೆ ಯೊಡಲಿಲದಲ್ಲಿ ಮುಕುರಿಕ್ಕಿ ಮೂಜಾಂತವರ × × × ತೊಲುವ ತೆಱದಿಂದಿಡವಳಿಯದೆ ತಿವಿಮು ಕೊಂದನು ಸಮರಾಂಗಣದೊಳ್ (ಎಕ. VIII. ಸಾಗರ. ೦೦೨-೦೬ : 1203). **ಮುಕ್ಕುರಿಕ್ಕು₁** : ನನ್ನಿದಿರು ನೋಡಿದಲ್ಲೆಲ್ಲ ಪೂಜ್ಯಪೂರ್ವಜರಾದ ನಮ್ಮ ಎರೆಯಂಗ, ಬಿಟ್ಟಿದೇವ, ವೀರ ಬಲ್ಲಾಳರ ಕೃದ್ಧಪ್ರತಿಮೆಗಳು ಮುಕ್ಕುರಿಕ್ಕಿ, 'ಹೊಯ್ ಸಳ ! ಮತ್ತೆ ಹೊಯ್ ! ಹೊಡೆ ! ' ಎಂದು ತಿವಿತಿವಿದು ಆಡುತ್ತಿವೆ (ಬಿಜಾ. ೩). **ಮುಕ್ಕುರುಕು** : ಸರಳೊಂದರಲಿ ಮುಕ್ಕುರುಕಿ ಬಿಡಲು ಶತಸಾವಿರ ಲಕ್ಷಶತಕೋಟಿಯರ್ಬುದವಾಗಲು (ತುರಂಗ. ೦೫-೨೦); ಗೋಡೆಗಳ ಬಿರುಕು, ಮನೆಗಳ ಹರುಕು, ಚರೇಡಿಯ ಕೊಳಕು ಇವೆಲ್ಲಾ ಮುಕ್ಕುರುಕಿ ನನ್ನ ದುಃಖವನ್ನು ಉಕ್ಕಿಸಿದುವು (ಬಿಸರು. ೦೫). **ಮುಕ್ಕುಱಿಕು** : "ಮುಕ್ಕುಱಿಕಿದುದೆನೆ ಮುತ್ತಿದುದು" (ಶಬ್ದಾ. ೯೯); ಮುಱಿಯೆಸುತ ಗಂಧರ್ವಬಲ ಮುಕ್ಕುಱಿಕಿ ಕೌರವಬಲವ ತತ್ತಱದಱದು ತರಹರವಿಲ್ಲೆನಿಸಿ ಹೊಗಿಸಿದರು ಪಾಳೆಯವ (ಕುಭಾಶಿ. ೦೯-೩೪) ; ಘಡ ಸೂಕುಸೂಕೆನುತೇಱು ರಥಗಳನು ಮುಕ್ಕುಱಿಕಿ ಕವಿತರಲು (ಶಿಭಾಗ. ೦೦-೭೪-೪೯); ಸಿಡಿದ ಜಲಕಣಾವಳಿ ಯುವರ ಮುಖಪಂಕಜಂಗಳೊಳಗೆ ಮುಕ್ಕುಱಿಕಿ (ಕಬಳ. ೩೭-೬೭).

[ಮುಕ್ಕುಱು₁ + ಇಕ್ಕು]

**ಮುಕ್ಕುಱಿಕ್ಕು₂**, ಮುಕ್ಕುರಿಕ್ಕು₂ (ಕ್ರಿ). ೧. (ಭಾರವನ್ನು ಹೊರುವುದರಿಂದ ಅಥವಾ ನೋವು, ಹೆದರಿಕೆ ಇತ್ಯಾದಿಗಳಿಂದ) ತಿಣುಕು : ಮುಕ್ಕು : ರಕ್ಕಸರು ತಾವೆಲ್ಲ ಭಯದಲಿ ಮುಕ್ಕುಱಿಕ್ಕಿ ನರಾದಿವರಹನದೆಕ್ಕಲಸು ತಾ ಬಂದನಲ್ಲಿಗೆ (ಸಂಶಪ. ೭-೩೭) ; ದಿಗ್ದಂತಿಗಳ್ ಮುಕ್ಕುಱಿಕ್ಕಿದುವು ಪೊಱೆಯ ಬಲ್ಪುಗ್ಗಿನಿಂ ಕುಸಿದ ತಲೆಗಳನೆತ್ತಿ ಕಚ್ಛಪಂ ಹಿಗ್ಗಿ ಕಾಲಾಡಿದಂ (ಶ್ರೀರಾಮ. ೫-೫೫). ೨. (ಹಸು, ಎತ್ತು ಮೊದಲಾದುವು) ಅರಚು : ಪೆರ್ಚಿದೊಂದು ಸಂತಸದಿಂ ಬೈಗಿನೊಳ್ ಕೆಲೆದುಂ ಮುಕ್ಕುಱಿಕ್ಕಿಯುಂ ನೆಗೆದಾಡಿಯುಂ ಚಿದಱಿ ಪೋಪಾಕಳ ಮಂದೆಯು ಮಾಚಿಕ್ಕಿಯಿಂ ನೆರೆದು ಬಂದ ಜಾತ್ರೆಯ ಪಮಣಿಗರ್ (ರಾಮಾಶ್ವ. ೮೨-೦೪); ಕಣ್ಬೊಟ್ಟೆಸಿನ ಕರಡಿಯ ಮುಕ್ಕುಱಿಕ್ಕುವ ಕಾಟ್ಕೋಣನ . . . ಗಜಬುಜದ ಸಂಚಾರಂ ಬಲ್ಪಿರಿದಾಯ್ತು (ರಾಮಾಶ್ವ. ೪೪-೯). **ಮುಕ್ಕುರಿಕ್ಕು₂**: ೩. ಗೂಳಿಗಳು ಕಾಲು ಕೆರೆದು ಕದನಕ್ಕೆಂದು ಅರ್ಭಟಿಸು : ಹುಲಿಯ ಹೆದರಿಕೆಯಿಂದ . . . ಬೀಜದ ಹೋರಿಯು ಕಟ್ಟಿಹಾಕಿದುದರಿಂದ ಸರಿಯಾಗಿ ಹೊಟ್ಟೆಗಿಲ್ಲದ ದೆಸೆಯಿಂದ ಮುಕ್ಕುರಿಕ್ಕುವುದನ್ನೂ ಮರೆತು ಮೇಲೆ ನೋಡುತ್ತಿದೆ (ಕಿಹುಂ. ೯೯).

[ಮುಕ್ಕುಱು₂ + ಇಕ್ಕು./ತುಳು. ಮುಕ್ಕುರುದಕ್ಕು]

**ಮುಕ್ಕುಱಿಸು₁**, ಮುಕುರಿಸು, ಮುಕ್ಕುಱಿಸು, ಮುಕ್ಕುರಿಸು (ಕ್ರಿ). ೧. ಕವಿ; ಆವರಿಸು ; ಮುತ್ತು : ನಾಡೆಯುಂ ಬೇಗೆಡೆದೆತ್ತಂ ಬೆಟ್ಟುಗಳ್ಮುಕ್ಕುಱಿಸೆ (ಚಾಂತೀಶ್ವ. ೦೨-೫೬); ಉಱುಗಲಿಳೆ ದಳಮುಕುರಿಸಿ ಮುಕ್ಕುಱಿಸಿ [ಶಾಶಾಂ. ಱುಕಿ]ತಂಕಕೆ ಗಗನತಳ ಬಿಡದೊಱಲಿತಿವವರದ್ರಿಗಳ ಕೈದುಗಳ ಕದನದಲಿ (ಕೊರಶಾ. ೬-೦೩-೪೪). **ಮುಕುರಿಸು** : ೨. ಮುತ್ತುವಂತೆ ಮಾಡು ; ಆವರಿಸುವಂತೆ ಮಾಡು ; ಆಕ್ರಮಿಸುವಂತೆ ಮಾಡು: ಬಭ್ರುವಾಹನ ಮಧುಬಾಣವನ್ನೆಚ್ಚು ಅವುಗಳ ಮೇಲೆ ಜೇನ್ನೊಳೆಗರೆದ ; ಮೇಲೆ ಪಿಪೀಲಿಕಾಸ್ತ್ರವನ್ನು ಬಿಟ್ಟು ಕಟ್ಟಿರುಹೆಗಳನ್ನು ಅವುಗಳಿಗೆ ಮುಕುರಿಸಿದ (ಜಮಿ. ೧೦೭). **ಮುಕ್ಕುಱಿಸು**: ೧. ಭಂಗು ಮುಕ್ಕುಱಿಸಿರ್ಪ ಮುತ್ತ ಳನದೊರ್ವಂ ಕುಡುವ ತಾಯ್ನನ್ನಯಾ ಭಂಗಂ ಪೋಪುದು . . . ಎನುತ್ತಿ ಸಲೆ ಸಬ್ಬಂಗೆಯ್ವನಾ ತಾಣದೊಳ್ (ಜೀರಪು. ೬-೦೩೫). **ಮುಕ್ಕುರಿಸು** : ೧. ಸೊಕ್ಕಿದೆಕ್ಕಲಸೊಂದು . . . ಮುಕ್ಕುರಿಪ ನಾಯ್ಗಳಂ ಕೆಕ್ಕರಿಸಿ ಡುರುಗುಟ್ಟಿ ಸಿಕ್ಕದೋಡಿತು ಕಾಡ ಕೆಳದೋಱಿದಂತೆ (ಶಾಲಶ. ೯೩-೦೮೩).

[ಮುಕ್ಕುಱು₁ + — ಇಸು₁]

**ಮುಕ್ಕುಱಿಸು₂** (ಕ್ರಿ). ಕಷ್ಟಪಡು ; ಒದ್ದಾಡು ; ಬಳಲು ; ಆಯಾಸ ಹೊಂದು : ಆ ವಸುದೇವ ಮನೆಯನು ಹೊಱವಡುತ ಬರೆ ಮುಂದೆ ಮಾರ್ಗಮಹಾಂಧಕಾರದಲಿ ಕಱಿವ ಮಳೆಯಲಿ ಕೆಸಱಿನಲಿ ಮುಕ್ಕುಱಿಸಿ ಮಂಗುಡಿ ನೂಕದಿರಲದನಱಿದನಂತನು ಬಂದನಾಕ್ಷಣವಾಳ್ದನಿದ್ದೆಡೆಗೆ (ಶಿಭಾಗ. ೦೦-೪-೦೨). [ಮುಕ್ಕುಱು₂ + — ಇಸು₁]

**ಮುಕ್ಕುಱು₁**, ಮುಕರು, ಮುಕುರು, ಮುಕುಱು, ಮುಕ್ಕಿಱು, ಮುಕ್ಕುರು (ಕ್ರಿ). ೧. ಕವಿ; ಮುತ್ತು ; ಆವರಿಸು: "ಮುಕ್ಕುಱು=ಮುಸುಱುಹ" (ಶಬ್ದ. ಕಂ. ೨); "ಮುಕ್ಕುಱು ಮುಸುಱುಹನೊಳ್" (ಶಶಾಕಿ. ೪೦). **ಮುಕರು** : ೧. ಜೇನ ನೊಣಗಳು ಅಲ್ಲಲ್ಲಿಗೆ ಮುಕರಿಕೊಂಡು ಕೂತಿದ್ದವು (ಮುಂಬಾ. ೯. ೪-೦೭೦); ಮನೆಯೆದುರು ಜನಸಂಗುಳ ಮುಕರಿತ್ತು (ಶಮ. ೦೦೦); ಒಬ್ಬನು ಪತ್ರಿಕೆ ಕೊಂಡರೆ ಸಾಕು; ಹತ್ತುಜನ ಅದನ ಸುತ್ತಲೂ ಮುಕರಿರುತ್ತಾರೆ (ಕನ್ನಾ. ೧). **ಮುಕುರು** : ೧. ಗಾಳಿ ಬೆಳಕುಗಳು, ಸಂದುಗೊಂದುಗಳಲ್ಲಿ ಕೂಡ ನುಸುಳಿ ಅವರ ದೇಹವನ್ನು ತಟ್ಟಿದಂತೆ ಜನ ಮುಕುರಿತು (ಕಾಗೆ. ೦೬); ನರಹರಿಯು ಬಂದೊಡನೆ ಅವನನ್ನು ನೋಡಲು ನೂರಾರು ಜನ ಮುಕುರಿದ್ದರು (ಸಮುಹ. ೦೨೪೦). **ಮುಕುಱು** : ೧. ಅಕಳಂಕಮುನಿಯೊತ್ತಿಸೋರ್ಪ ಕುದುರೆಯಂ ಕಾಣುತಿವ ಕಳ್ಳನೆಂದು ಮುಕುಱಿಕೊಳುತ್ತಾತನಂ ಬಳಸಲ್(ಶಪು. ೯-೦೦-೬೬). **ಮುಕ್ಕಿಱು** : ೧. ಲೆಕ್ಕವಿಲ್ಲದ ರಾಜಕಾರ್ಯ ನಿನಗೆ ಬಂದು ಮುಕ್ಕಿಱಿದಿದೆ ಮುಂದೆ ರಾವು (ಕಂಠಾ. ೩೦-೩೭). ೨. ಎದುರುಬೀಳು; ವಿರೋಧಿಸು; ಪ್ರತಿಭಟಿಸು: ಇನಿಯನ ಸುದ್ದಿಗೇಳ್ವೆಡೆಗೆ ತಾನೆಯ್ತಂದು ಮನೆವಾಟಿಪ್ಪೆಟ್ಟ ಮಾತೆಯೊಳು ಮೊನೆದೋಱಿ ಮುನಿದು ಮುಕ್ಕಿಱಿದು ಕಲುಪಿ ಮುನ್ನಿನಮಾತುಗಳ ನಾಲಿಪುದು(ಶಕಂ. ೬-೦೭೭, ಸಾಂಗತ್ಯ ೯). **ಮುಕ್ಕುರು**: ೧. ಸಮಸ್ತ ಉತ್ಪಾತಗಳು ತನ್ನ ತಲೆಯ ಮೇಲೆ ಮುಕ್ಕುರಿದರೂ ತಾಳ್ಮೆಯಿಂದ ಅವುಗಳನ್ನೆಲ್ಲ ಹೇಗೋ ಹೊತ್ತುಕೊಂಡು ನಡೆಯುತ್ತಿದ್ದನು (ಜಯಂತ. ೦೨೬); ಬದುಕಿಗಾಗಿ ಜನ ಯಾವುದೊಂದು ಪಾತಕಕ್ಕೂ ಮುಕ್ಕುರುವರು (ಹುಕ್ಕಶ್ರ. ೦೬೬).

[<ಮುಸುಱು₁]

**ಮುಕ್ಕುಱು₂**, ಮುಕ್ಕರಿ, ಮುಕ್ಕರೆ, ಮುಕ್ಕುರಿ (ಕ್ರಿ). (ಭಾರವನ್ನು ಹೊರಲಾರದೆ ಅಥವಾ ನೋವು ತಡೆಯಲಾರದೆ) ಕಷ್ಟಪಡು : ಒದ್ದಾಡು; ಮೇಲುಬ್ಬಸ ಪಡು : 'ಮುಕ್ಕುಱಿಸು₂' ಪರಾ. **ಮುಕ್ಕರಿ**: ರಾಮಯ್ಯಂಗಾರಿ . . . ತನ್ನ ಚೀಲವನ್ನು ಮುಕ್ಕರಿದು ತಲೆಯ ಮೇಲೆ ಹೊತ್ತುಕೊಂಡು ಊರ ಕಡೆ ಹೊರಟನು (ಹೀಪತಿ. ೫); ತಂಗಾಳಿಯು ಅದನ್ನೆಲ್ಲ ಹೊತ್ತು ತರಲಾರದೆ ಮುಕ್ಕರಿಯುವಂತೆ ಉಸ್ ಎಂದುಕೊಂಡು ನಿಧಾನವಾಗಿ ಬೀಸುತ್ತಿದೆ (ನನಲ. II. ೦೪೭೪). **ಮುಕ್ಕರೆ** : ಹುಗು ಶೀತ,

ನೆಗಡಿಯಿಂದ ಮುಕ್ಕುರಿಯುತ್ತಿದೆ (ಕಾಂ). ಮುಕ್ಕುರಿ : ತಳ್ಳಿ ಕತ್ತಲೆಯಾದ ಮೇಲೆ ಮುಕ್ಕುರಿಯುತ್ತ ಚೀಲವನ್ನು ಸುಂದರಿಯು ಬಿಡಾರಕ್ಕೆ ಸಾಗಿಸಿದ (ಸಪ್ಪರು. ೨೪೦). [< ಮುಲುಕು₁]

**ಮುಕ್ಕುಱುವಲ್** (ನಾ). ಒಂದರ ಮೇಲೊಂದು ಬೆಳೆದಿರುವ ಹಲ್ಲು : ಕೆಕ್ಕಳಗಣ್ ಕೆದಱಿದ ಕೆಂಗೂದಲ್ ಮೊಕ್ಕನೊಸಲ್ . . . ಮುಕ್ಕುಱುವಲ್ ಮುಂದಮೊಗ ನೀಡುಂದೋಳಿಕ್ಕಲವಂ ಪೊದಮೆಯ್ಯೊಳೆಸೆವ ಪಲರಕ್ಕಸಿಯರ ತಂಡಂ ನಡೆತಂದುದು ತದ್ಧರಧರಣಿಯೊಳು (ಜಯಕಾ. ೬-೨೬).
[ಮುಕ್ಕುಱು₁ + ಪಲ್]

**ಮುಕ್ಕೂಟ** (ನಾ). ೧. ಮೂರರ ಕೂಟ,— ಮೇಳ : "ಮೂರರ ತಂಡ, ಮುಕ್ಕೂಟ, ತ್ರಿತಯ" (Torn. ೬೦೪೨). ೨. (ಪರಸ್ಪರ ಸಂಬಂಧವಿರುವ ಅಥವಾ ಪರಸ್ಪರ ಪೂರಕಗಳಾದ) ಮೂರು ನಾಟಕಗಳ ಗುಂಪು : ಒರೆಸ್ಟಿಯಾ ಎಂದು ಪ್ರಖ್ಯಾತವಾಗಿರುವ ಮುಕ್ಕೂಟದ . . . ಮೂರು ರುದ್ರನಾಟಕಗಳು (ಅಂಕಾ. ೨೧೨) : ಮುಕ್ಕೂಟವು ಇವನಿಗೆ ಅಷ್ಟಾಗಿ ಹಿತವಾಗಲಿಲ್ಲವೆಂದು ಕಾಣುತ್ತದೆ (ಅಂಕಾ. ೨೦೩) : ಈ ಮುಕ್ಕೂಟದಲ್ಲಿ ಮೊದಲನೆಯ ಭಾಗ ಇನ್ನೂ ಆಗ ತಾನೆ ನಾಟಕಕಲೆಯ ಅಭ್ಯಾಸಕ್ಕೆ ತೊಡಗಿರುವವನ ಕೆಲಸ (ಷೇಕ್ಸ್ಪಿ. ೬೦).
[< ಮೂಱು + ಕೂಟ₁]

**ಮುಕ್ಕೂಡಲ್.** ಮುಕೂಡಲ್, ಮುಕ್ಕೂಡಲು (ನಾ). ಮೂರು ಪ್ರದೇಶಗಳು ಕೂಡಿರುವ ಸ್ಥಳ,— ಜಾಗ : ಅಸ್ತೆ ಬಸ್ದು ನೈರಿತ್ಯನಾ ದೆಸೆಗೆ ಸೀಮೆ ಮೂಱು ಮೂರ ಪೊಲದ ಮುಕ್ಕೂಡಲೆ ವರುಣನಾ ದೆಸೆಗೆ ಸೀಮೆ (ಎಕ. IX (8), ಬೆಂಗಳೂ. ೦೩೦-೩೯; 828) ; ಕಡೆಕೊಳಂ ಪಾರವುರಂ ಪಡುವಗೆಯ ಮುಕ್ಕೂಡಲ್ಲೈಣ್ಯ ಮೊಗದೆ ಪೋಗಿ (ಪ್ರಾಕಂ. ೧೯೩೪, ೩೮-೬; 11ನೆಯ ಶತ). **ಮುಕೂಡಲ್ :** ಈಶಾನತಃ ಮುಕೂಡಲ್ . . . ಬಿದಿರೂರ್ಗ್ಗಿಱ ಮುಕೂಡಲ್ (ಎಕ. XII, ಗುಬ್ಬಿ. ೩೦-೮೮; 812). **ಮುಕ್ಕೂಡಲು :** ಅಸಗಪೊಱೆಯ ಕಿಱುಬೇಡಿಂ ಬಱೆಯ ಪೊಣಸೆ ಕಡೆಕೊಳಂ ಪಡುವಗೆ ಪಾರವುರಂ ಮೂಱೂರ ಮುಕ್ಕೂಡಲ್ಲಿ ಪೊಲ ಸೀಮೆ ಕೂಡಿತ್ತು (ಪ್ರಾಕಂ. ೧೯೩೪, ೩೮-೨೦; 11ನೆಯ ಶತ).
[< ಮೂಱು + ಕೂಡಲ್]

**ಮುಕ್ಕೂಡಲು** 'ಮುಕ್ಕೂಡಲ್' ನೋ.

**ಮುಕ್ಕೂಡಿಸು** (ಕ್ರಿ). ಮೂರುಪಟ್ಟು ಮಾಡು : ಕೊಪ್ಪದಲ್ಲಿ ಅಂಗ ಉಪಾಧ್ಯಗೆ ಆಗ್ನೆಯ ಮಾಡಿ ಹೊರಡಿಸಿದ ಸಂಮಂಧ ಆತನ ಸ್ವಾಸ್ತಿ ಅಡಕೇ ಮರ ಸಾ ೧೦೦೦ಕಂ ಕೊಟ್ಟ ರೊಕ್ಕ ಗ ೩೦ ವರಹಗೆ ಬಡ್ಡಿ ಗ ೬ ವರಹಂನೂ ಮುಕ್ಕೂಡಿಸುತ ದೀವಿಗೆ ಸಹ ಬಿಟ್ಟನು (ಎಕ. VI, ಕೊಪ್ಪ. ೩೦-೨೮; 1598). [< ಮೂಱು + ಕೂಡಿಸು]

**ಮುಕ್ಕೂಡು** (ನಾ). = ಮುಕ್ಕೂಡಲ್ : ಕಡೆಕೊಳಂ ಪಾರವುರಂ ತಣ್ಣಿಯೂರ ಮುಕ್ಕೂಡು ಮೂಡ ಮೊಗದೆ ಪೋಗಿ ಬೆಳ್ಳೊಱಿ ಕಡೆಕೊಳಂ ಪೆರ್ವ್ವಡು ತಣ್ಣಿಯೂರ ಮುಕ್ಕೂಡು ಬಡಗ ಮೊಗದೆ ಪೋಗಿ (ಪ್ರಾಕಂ. ೧೯೩೪, ೩೮-೭; 11ನೆಯ ಶತ); ಮುಕ್ಕೂಡು ದಾರಿಯಲಿ ಕೊಲೆಗೊಂಡನವನೆಂದು (ಶೂರಾ. ೧೨೨). 'ಮುಕ್ಕೂಡಲ್' ಪರಾ. [< ಮೂಱು + ಕೂಡು₃]

**ಮುಕ್ಕೆ** (ನಾ). ಮುರ್ಬಿಣಾದ ಹಣ್ಣು ; ತಿಳಿಗೇಡಿಹಣ್ಣು : ಮುಡುಕಿನ ಮುಕ್ಕೆ [ಬಾಶಾ. ಕ್ಕೆ. ಕ್ತೆ] ಸೊಕ್ಕದಿರದೇನಭಿಮಾನದ ಜೋಡೆ ಬಾಲಮಂ ಬಡಿವಪೆ (ಅಪಂಕು. ೮-೩೦; ಸೂಕ್ತಿಸು. ೮-೪೨೪ ನೋ); ಮನಮುಂ ನೋಯಲಾಡಿದನ್ ; ಮಸ್ಸಿಸೀ ಮುಕ್ಕೆಯನ್, ತಾಯಿ (ಶ್ರೀರಾಪ. ೭೦೨-೯೦).
[ಮುಕ್ಕ₃ + — ಎ₂]

**ಮುಕ್ಕೇಡು** (ನಾ). ಮೂರು ಬಗೆಯ ಕೇಡು,— ಹಾನಿ : ತ್ರಿದೋಷ : 'ಬರೆಹಳಿಸಿಱರ ಕೈಗಳ ಕೇಡು _ಸುಣ್ಣಸಪ್ಪಳಿಕದ ಕೇಡು—ಪೇಱಿಸಿದೊಡಘಟಿಸಿ ಕೇಡು' ಎಂಬ 'ಬೆಳ್ಗೆಳ ಕೃತಿಬಂಧ'ದ ಈ ಮುಕ್ಕೇಡುಗಳನ್ನು ಬತ್ತಬಿಸಿ ಕೊಳ್ಳರಿ (ಸಾತೂಜ. ೧೪೩). [< ಮೂಱು + ಕೇಡು]

**ಮುಕ್ಕೊಂಗು** 'ಮೂಗೊಂಕು' ನೋ.

**ಮುಕ್ಕೊಡೆ** 'ಮೂಗೊಡೆ' ನೋ.

**ಮುಕ್ಕೊಡೆಯ** (ನಾ). [ಜೈನ] ಚಕ್ರವರ್ತಿಲಾಂಛನವಾದ ಮೂರು ಕೊಡೆಗಳನ್ನು ಉಳ್ಳವನು ; ಜಿನ ; ಅರ್ಹಂತ : ಮುಕ್ಕೊಡೆಯನ ದಿವ್ಯಮಂತ್ರಮೇಂ ಕೇವಳಮೋ (ಜಿನಮ. ೧೧-೮).
[ಮುಕ್ಕೊಡೆ (< ಮೂಗೊಡೆ) + — ಅ₇]

**ಮುಕ್ಕೋಟಿ** (ನಾ). ಒಂದು ಸಂಖ್ಯೆ ; ಮೂರುಕೋಟಿ : ಭೀಷಣಂ ಮುಳಿದೆದ್ದು ನಡೆಯುತಿರಲು ಮುಕ್ಕೋಟಿರಕ್ಕಸರ್ಪೊಱಮಟ್ಟರವನ ಕೂಡೆ (ಕೈಪಿಡಾ. ೧೬-೩೦) : ವಾರುಣಾಸುರನೆನಿಪ ದೈತ್ಯನ ಮೈರುಚಿಯನನುಕರಿಸಿ ತೋರುವ ಘೋರಭೀಕರರಕ್ಕಸರು ಮುಕ್ಕೋಟಿ ಕಾಣಿಸಿತು (ಕೋಗಯು. ೨೩-೪೨). [< ಮೂಱು + ಕೋಟಿ₁]

**ಮುಕ್ಕೋಣ** (ನಾ). ೧. ಮೂರುಮೂಲೆ. ೨. ಮೂರುತುದಿಗಳಿಂದ ಕೂಡಿದ ಒಂದು ಬಗೆಯ ಆಯುಧ : ಈ ಸುಸ್ಮೃತಿಯ ಆಯುಧಗಳಲ್ಲಿ ಹರಿಯುವ ಆಯುಧಗಳು, ಮೊನಚಾದ ಆಯುಧಗಳು, ಮುಕ್ಕೋಣಗಳು, ಸುಧಾರಿತವಿಧಾನಗಳಿಂದ ಮಾಡಲ್ಪಡುತ್ತಿದ್ದವು (ಕರಕೋ. I, ೬೦೩). ೩. [ರೇಖಾಗ] ಮೂರುಕೋನಗಳಿಂದ ಕೂಡಿದುದು : ತ್ರಿಭುಜ : ತ್ರಿಕೋನ: ಮೂರು ಸರಳರೇಖೆಗಳಿಂದ ಕೂಡಿದ ಕ್ಷೇತ್ರಕ್ಕೆ ತ್ರಿಭುಜವೆಂದೂ ಮುಕ್ಕೋಣವೆಂದೂ ಹೆಸರು (ಭೂಮಿ. ೯). [< ಮೂಱು + ಕೋಣ₂]

**ಮುಕ್ಕೋಲ್** (ನಾ). ಒಟ್ಟಾಗಿ ಸೇರಿಸಿ ಕಟ್ಟಿದ ಮೂರು ದಂಡಗಳು : ಯತಿಗಳು ಹಿಡಿಯುವ ದಂಡ ; ತ್ರಿದಂಡ : ಶ್ರೀ ನಾರಾಯಣನ ಸೇವಾಸಮಯದೊಳ್ ಕೊರಲ್ಗೆ ಧರಿಸಿದ ಸಂಪಗೆಯ ದಂಡಿಗೆಯುಂ ಪೋಲ್ವ ಸಿರಿದೋಳ್ಗಳುಂ . . . ಪಟಿಸುಡಿಮೊಡಿರ ಕುರುಳ್ ಸಿಕ್ಕುವಿಡಿಸಲ್ಕೊಂಡ ಸಿಕ್ಕಟಿಗೆಯುಂ ಪೋಲ್ವ ಮುಕ್ಕೋಲುಂ ಎಳವಿಸಿಲ ಸೋಂಕಿನೊಳೆಸೆವ ಕೆಂದಾವರೆಗಳಂತೆಳಗಾವಿಯುಡೆವಡೆದ ಸಿರಿಯುಡಿಯುಮಾಗಿ ಪದ್ಮಾಸನದೊಳಿರ್ಪಂದಮಂ ತನ್ನ ಮನದೊಳ್ ಬಂದಿವಿಡಿದೆಣಿಸಿದಂ (ಚಿಕವಾ. ೦೦೯-೦೯).
[< ಮೂಱು + ಕೋಲ್₁]

**ಮುಕ್ತ** (ಗು). ೧. ಬಿಡುಗಡೆಯನ್ನು ಹೊಂದಿದ ; ಬಂಧಮುಕ್ತವಾದ. ೨. ಬಿಚ್ಚಿದ ; ಬಂಧನವನ್ನು ಕಳಚಿದ : ಚಕ್ರಮುಕ್ಕಿಯ ಟಲ್ಲಿನಂತರಂಗದೊಳಗ್ಗಿ ಗುಪ್ತವಾಗಿರ್ಪಂತೆ, ಬಾಹ್ಯವಿಸ್ಮೃತಿಯ ಮಧ್ಯೆ ಮಂಥರೆಯ ಹೃದಯದಲಿ ಸುಪ್ತವಾಗಿರ್ದ ರತಿ, ಚಿಲುಪೊಲವುಗಳ ಚಿಲುಮೆ ತಾಂ ಕಣ್ದೆರೆದುದೊಯ್ಯನೆಯೆ ಮುಕ್ತ ಮುಕ್ತಾಹಾರಧಾರೆಯಲಿ (ಶ್ರೀರಾಪ. ೨೩-೬೨೩). 'ಮುಕ್ತಕೇಶ', 'ಮುಕ್ತಕೇಶಿ' ಪರಾ. ೩. ಬಿಟ್ಟ ; ತ್ಯಜಿಸಿದ ; ತೊರೆದ : 'ಮುಕ್ತಕಂಚುಕ' ಪರಾ. ೪. ತೆರೆದ : 'ಮುಕ್ತದ್ವಾರ' ಪರಾ. ೫. (ಬಾಣ ಮೊದಲಾದುವನ್ನು) ಪ್ರಯೋಗಿಸಿದ : ಎಸೆದ ; ತೂರಿದ : ಕೊಂಡಪುದುರಿ ಬನಮನದಂ ಕಂಡೆಂತಿರಲಿಕ್ಕುಮೆಂದು ತಾಗಿದ ನೆಗಱ್ಗೊಳ್ಗಂಡರ ಗಂಡೋಡು ವಿನಂ ಕೊಂದುವು ಗಾಂಡೀವಮುಕ್ತಬಾಣಗಣಂಗಳ್ (ಶಂಕಪು ೩-೯೯). ೬. ನಿರ್ಬಂಧವಿಲ್ಲದ ; ತಡೆಯಿಲ್ಲದ : ಸಾಹೇಬರು ಹೋಗುವಾಗ . . . ನನಗೆ ಬೇಕಾದದ್ದನ್ನು ಆರಿಸಿಕೊಳ್ಳುವ ಮುಕ್ತ ಮುಕ್ತೇ ಕೊಟ್ಟಿದ್ದರು (ಬೀಶಹ. II, ೩೨೭). ೭. ನಿಷ್ಕಪಟವಾದ ; ಕುಟಿಲತೆಯಿಲ್ಲದ ; ಮುಚ್ಚುಮರೆಯಿಲ್ಲದ : 'ಮುಕ್ತಕಂಠ' ಪರಾ. ೮. [ತತ್ತ್ವಶಾ] (ಸಂಸಾರಬಂಧನದಿಂದ) ಬಿಡುಗಡೆಯನ್ನು ಹೊಂದಿದ ; ಮುಕ್ತಿಯನ್ನು ಪಡೆದ ; ಮೋಕ್ಷವನ್ನು ಹೊಂದಿದ : 'ಮುಕ್ತಾತ್ಮ' ಪರಾ. (ನಾ). ೯. ಬಿಡುಗಡೆಯನ್ನು ಹೊಂದಿದುದು ; ಬಂಧನದಿಂದ

ಕಳಚಿಕೊಂಡುದು : ಬದ್ಧವೆಂಬುದು ಮುಕ್ತವೆಂಬುದು ಬುದ್ಧಿಗೇ ಸರಿಯಾತ್ಮಕಿಲ್ಲಿಲೆ ಅದ್ವಯಾನಂದೈಕರಸವದಕೆಂತೊ ಆ ನುಡಿಯು (ಅನು.ಶ. ೩-೧೪೦). ೧೦. ತೆರೆದುದು ; ತೆಗೆದುದು : ಪದಿಬದೆಯಾದವಳಿಗೆ ಸ್ವರ್ಗದ ದಾರಿ ಮುಕ್ತವಿದೆಯೆಂಬ ಮಾತೂ ಅಷ್ಟೇ ಪ್ರಚಲಿತವಿತ್ತು (ಕರ್ನಾಕ. ೦೯೩). ೧೧. ಬಿಡುಗಡೆಯನ್ನು ಹೊಂದಿದವನು ; ಪಾರಾದವನು : ತೀವ್ರವೇ ಸಿಂಗಪ್ಪನೂ ಅವನ ಮಕ್ಕಳೂ ವಿಪತ್ತಿನಿಂದ ಮುಕ್ತರಾದರು (ಮುಂಬಿಮು. ೪-೭೮). ೧೨. [ತತ್ತ್ವಶಾ] (ಸಂಸಾರದ ಬಂಧನದಿಂದ) ಬಿಡುಗಡೆಯನ್ನು ಹೊಂದಿದವನು ; ಮೋಕ್ಷವನ್ನು ಪಡೆದವನು : ಮುಕ್ತ್ಯಾವಳೀತಪಸ್ತಪನತಾಪದಿಂ ಸಮಾಧಿಮರಣದಿಂದೀಶಾನ ಕಲ್ಪದೊಳ್ ಕನಕಪ್ರಭನೆಂಬೊಂ ದೇವನಾಗಿ ಬಂದಿಲ್ಲಿ ಪುಟ್ಟಿ ಮುಕ್ತನಕ್ಕುಂ (ಶಾಂತಿಪು. ೯-೦೪ ವ) ; ಮುಕ್ತನಪ್ಪನು ಜೀವನುಂ ನಿರ್ಮುಕ್ತನಪ್ಪನು ಶಿವನು(ಬಸವ. ೩೦-೨೮) ; ಭಕ್ತನೆಂದೆನಿಸಯ್ಯ ಎನ್ನ ಮುಕ್ತನೆಂದೆನಿಸಯ್ಯ ಎನ್ನ (ಅಲ್ಲಮ. ೭೮-೭೦). [ಸಂ.]

**ಮುಕ್ತಕ₁** (ನಾ). ೧. ಅರ್ಥದೃಷ್ಟಿಯಿಂದ ಸ್ವಯಂಪೂರ್ಣವಾದ ಬಿಡಿಪದ್ಯ. – ಬಿಡಿಕವನ : ಇತುಸಂಗಬ್ಬಂ ಮುಕ್ತಕಂ (ಕಾವ್ಯಾ.ಶ. ೯೩೦) ; ಮುಕ್ತಕ ಬಂಳಕ ಮುಂತಾದ ಕವಿತ್ವದ ಯುಕ್ತಿಯೊಳರುಹನ ಪೊಗಳ್ದು ಮುಕ್ತಿಗಾವಿಗಳಾತ್ಮಕಲೆಯು ಭೇದಾಭೇದಭಕ್ತಿಯೊಳೊರೆವರು ಮತ್ತೆ (ಶರತ. ೬೪-೭೪) ; ನಾಲ್ಕಾರು ಪಂಕ್ತಿಗಳಲ್ಲಿ ಸುಂದರವಾದ ಭಾವಪ್ರಪಂಚ ವೊಂದನ್ನು ಸೃಷ್ಟಿಸಬಲ್ಲ ಕವನರೂಪ 'ಮುಕ್ತಕ' (ಕಾವಗೀ. ೯೪) ; ಈ ಕಾಲದ ಸಾಹಿತ್ಯ ಎರಡು ರೂಪಗಳಲ್ಲಿ ನಮಗೆ ದೊರೆಯುತ್ತದೆ. ಮೊದಲನೆಯುದು ಮುಕ್ತಕ-ಅಂದರೆ ಬಿಡಿಕಾವ್ಯಗಳು : ಎರಡನೆಯುದು ಪ್ರಬಂಧಗಳು (ಕಾರತ. ೯೩೭). ೨. ಸಮಾಸಪದಗಳಿಲ್ಲದ ಸರಳವಾದ ಗದ್ಯ : ಕೆಲವರು ಮುಕ್ತಕ, ವೃತ್ತಗಂಧಿ, ಉತ್ಕಲಿಕಾಪ್ರಾಯ, ಚೂರ್ಣಕ ಎಂದು ನಾಲ್ಕುಭಾಗ ಮಾಡಿ ಅವುಗಳಲ್ಲಿ ಮುಕ್ತಕವು ಸಮಾಸರಹಿತವಾದದ್ದೆಂದೂ ಚೂರ್ಣಕವು ಅಲ್ಪಸಮಾಸವೆಂದೂ ಹೇಳುತ್ತಾರೆ (ಕೃಶಿ. ೦೭೪ ಅಡಿ). [ಸಂ.]

**ಮುಕ್ತಕ₂** (ನಾ). ಮುತ್ತುಗದ ಮರ ಮತ್ತು ಅದರ ಹೂವು ; ಕಿಂಶುಕ ; ಪಲಾಶ : ರಕ್ತಾಶೋಕಲತಾಂತದ ಮುಕ್ತಕಮಂಜರಿಯ ಸೂಸಕಂ ತಿಲಕದ ಸಮ್ಯಕ್ತಿಲಕಮುಮ[ರೆ] ತನಗನುರಕ್ತಂ ಮಾಡಿದಳನೇಕ ಕಾಮುಕಜನಮಂ (ಶಾಂತಿಪು. ೯-೨೦); ಸ್ಥಿರದಿಂ ಕಾಮೇಶ್ವರಮಂತ್ರ ಮನುಚ್ಚರಿಸುವುದೊಂದೇ ಲಕ್ಷಮನು ತರದಿಂ ಪಂಚಾಶಿರ ಮುಕ್ತಕದೊಳ್ಪರಳಿಂ [ಪಾಠಾಂ. ಭರದಿಂದೈಸಾಸಿರ ಮುತ್ತುಗದ ಪೊಸ ಅರಳಿಂ] ಮಾಳ್ಪುದು ಹೋಮವನು (ಶಸವ. ೦೩-೨೪) ; ಆ ವನಂ ಘನಾಗಮದಂತೆ ಘನಕದಂಬ ಮುಕ್ತಕವಿಲಸಿತಮುಂ . . . ತತತಾಪಸಸಮುಚ್ಚಯಮಾಗಿಯುಮಶೋಕ ಸಂಗತಮೆನಿಸಿರ್ದುದು (ರಾಜಶೇ. ೩-೭೪ ವ). [ℙ ಇದು 'ಕನ್ನಡದ 'ಮುತ್ತುಗ' ಎಂಬುದರ ಸಂಸ್ಕೃತೀಕರಣರೂಪವಿರಬಹುದು]

**ಮುಕ್ತಕಂಚುಕ** (ನಾ). ಪರೆಯನ್ನು ಕಳಚಿದ ಹಾವು ; ಪರೆಬಿಟ್ಟ ಹಾವು : "ನಿರ್ಮುಕ್ತಃ, ಮುಕ್ತಕಂಚುಕಃ – ೨ ಪೊರೆ ಬಿಟ್ಟ ಹಾವಿನ ಹೆಸರು" (ಸಿದ್ಧಾಂತ. ೭೨). [ಸಂ.]

**ಮುಕ್ತಕಂಠ** (ನಾ). ಸಂಕೋಚವಿಲ್ಲದೆ ನೇರವಾಗಿ ಹೇಳುವ ಮಾತು ; ಬಿಚ್ಚುಮಾತು : ಆನಂದವರ್ಧನನ ಕಾಲದಲ್ಲಿ ಪ್ರಾಕೃತಕಾವ್ಯಕ್ಕೆ ಇನ್ನೂ ಹೆಚ್ಚಾದ ಮನ್ನಣೆಯಿತ್ತು . . . ಅದನ್ನು ಅವನು ಮುಕ್ತಕಂಠದಿಂದ ಹೇಳಿದ್ದಾನೆ (ಧ್ವನ್ಯಾಲೋ. XI. ಮುನ್ನುಡಿ) ; ಪುಣ್ಯಶಾಲಿಗಳು ಮುಕ್ತಕಂಠದಿಂದ ಹಾಡಿ ಲೋಕಕ್ಕೆಲ್ಲ ತಮ್ಮ ಸಂತೋಷವನ್ನು ಹಂಚುತ್ತಾರೆ (ಗಾಸ. ೯೨). [ಸಂ.]

**ಮುಕ್ತಕಾಲ** (ನಾ). ಪ್ರಾಪಂಚಿಕಬಂಧನದಿಂದ ಬಿಡುಗಡೆ ಹೊಂದಿದ ಕಾಲ ; ಮರಣವನ್ನು ಹೊಂದಿದ ಸಮಯ : ಅರಿಷ್ಟನೇಮಿದೇವರ್ ಬಾಬ್ಬಪ್ಪತೀರ್ತ್ಥದೊಳು ಮುಕ್ತಕಾಲಮು ಪಡೆದು (ಎಕ II. ೦೪-೨ : ಕು. ೬೦೦). [ಸಂ.]

**ಮುಕ್ತಕೇಶ** (ನಾ). ಬಿಚ್ಚಿದ ತಲೆಗೂದಲು : ಸಮರತಸೌಖ್ಯದೊಳ್ ಸತಿ ದಿಗಂಬರವೇಷಮನಾಂತು ಮುಕ್ತಕೇಶಮುದೆಸೆಯಲ್ಕೆ ಕಣ್ ದರನಿಮೀಲಿತಮಾಗೆ . . . ತನ್ನನೋರಮಣನ ಪ್ರನ್ನಿಧಾನಮನುಪಾರ್ಜಿಪ ಯೋಗಿನಿಯಂತಿರೊಪ್ಪಿದಳ್ (ಕಾವ್ಯಸಾ. ೭೭೩). [ಸಂ.]

**ಮುಕ್ತಕೇಶಿ** (ನಾ). ೧. ತಲೆಗೂದಲನ್ನು ಬಿಚ್ಚಿಕೊಂಡಿರುವ ವ್ಯಕ್ತಿ : ಎನಿತುಂ ದ್ರೌಪದಿ ಮುಕ್ತಕೇಶಿ ನಮೆವಳ್ ತದ್ದುಃಖಮುಂ ಕಂಡು ಕಂಡೆ ನಿತುಂ ಸೈರಿಪೆನಾನುಮೆನ್ನನುಜರುಂ (ಗದಾಯು. ೭-೨೪) ; ಒರ್ವಂ ದ್ವಿಜಂ ಮುಕ್ತಕೇಶಿ ಜಟಿ ರಕ್ತಂ . . . ಕೊಂದಾಟಮಂ ಧೂಮಮುಂ ನಿಪುಣರ್ ಕಂಡರೆ ಪೋಗರ್ಕೆ (ಸೂಪಶಾ. ೬೮). ೨. ಮರುಳು ; ಪಿಶಾಚಿ : ಕಪಾಲಪಾತ್ರೆಯನರೆನೆಗಪಿ ಕೊಂಕನಲಿ ಕುಡಿದರು ಮುಕ್ತಕೇಶಿಯರು (ಕುಮಾರಾ. ೩-೩೨). ೩. ಒಬ್ಬ ಶಕ್ತಿದೇವತೆಯ ಹೆಸರು : ರತಿ ಮುಕ್ತಕೇಶಿ ಶವವಾಹಿನಿ ಮೋಹಿನಿ ಚಂಡಿ . . . ಮಾಲಿನಿಯೆಂಬ ಶಕ್ತಿಯರ್ (ಕಬಕಂ. ೩-೦೨). [ಸಂ. ಮುಕ್ತಕೇಶಿನ್]

**ಮುಕ್ತಛಂದ** (ನಾ). [ಛಂದ] ಛಂದಸ್ಸಿನ ಕಟ್ಟುಪಾಡುಗಳಿಂದ ಮುಕ್ತವಾದ ಕಾವ್ಯರಚನಾಬಂಧ ; ಛಂದಸ್ಸಿನ ಕಟ್ಟಿಗೆ ಒಳಪಡದ ಪದ್ಯರಚನೆ : ℙ 'ಸ್ವಚ್ಛಂದಛಂದ' ಎಂದು ಮೊದಲು ನಾಮಕರಣಗೊಂಡ ಪದ್ಯಸ್ವರೂಪವೇ ಈಗ 'ಮುಕ್ತಛಂದಸ್ಸು' ಎಂಬ ಹೆಸರಿನಲ್ಲಿ ಪ್ರಚಾರದಲ್ಲಿದೆ. ಇದು ಫ್ರೆಂಚ್‌ಭಾಷೆಯ 'Verse Libre' ಅಥವಾ ಇಂಗ್ಲಿಷಿನ 'Free Verse' ಎಂಬ ಶಬ್ದಪುಂಜಗಳ ಕನ್ನಡ ಅನುವಾದ : ಮುಕ್ತಛಂದ—ಎಂದರೆ, ಕನ್ನಡದ ಸರಳ ರಗಳೆಯನ್ನು ಹೋಲುವ ಛಂದ (ಕಾರತ. ೯೭೦) ; ವಚನಸಾಹಿತ್ಯದಲ್ಲಿ ಈ ಮುಕ್ತಛಂದದ ಅಂದಚೆಂದಗಳೆಲ್ಲ ಪ್ರಯೋಗವಾಗಿವೆ (ಛಂದೋವಿ. ೨೩೦) ; ಭಾವಗೀತಾತ್ಮಕವಾದ ಮುಕ್ತಛಂದದ ಮುಕ್ತಕಗಳು ಈ ವಚನಗಳು (ಶಂಶೀ. ೯೪). [ಸಂ. ಮುಕ್ತಛಂದಸ್]

**ಮುಕ್ತಛಂದಸ್ಸು** (ನಾ). = ಮುಕ್ತಛಂದ : ಹಿಂದಿಸಾಹಿತ್ಯದಲ್ಲಿ ಮುಕ್ತಛಂದಸ್ಸಿನಲ್ಲಿ ಕಾವ್ಯರಚನೆ ಮಾಡಿದ ಮೊದಲನೇ ಕವಿ ನಿರಾಲ (ಕಾಕದ. ೯೭೦); ಮುಕ್ತ ಛಂದಸ್ಸು : ಕನ್ನಡ ನಾಡಿನಲ್ಲಿ ಭಕ್ತಿಗೆ ಬಂದ ಹೊಸ ಉಕ್ಕಿನೊಡನೆ ಈ ಬಂಧಗಳು ಹೀಗೆ ಏರಿ ಬಂದುವು (ಛಂದೋವಿ. ೨೩೦). [ಸಂ. ಮುಕ್ತಛಂದಸ್]

**ಮುಕ್ತಜಾನು** (ನಾ). [ನಾಟ್ಯ] ನೃತ್ಯದಲ್ಲಿ ಕುಳಿತುಕೊಳ್ಳುವ ಒಂದು ಭಂಗಿ ; ℙ "ಉತ್ಕಟಸ್ಥಾನಕದಲ್ಲಿ ಒಂದು ಮೊಳಕಾಲನ್ನು ಮಾತ್ರ ನೆಲದ ಮೇಲಿಡುವುದು. ಹೆಂಗಸರನ್ನು ಒಲಿಸುವುದು, ಹವನ, ಸಜ್ಜನರನ್ನು ಸಂತೈಸುವುದು ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಶಾಸ್ತ್ರರಂ. ೩೩೨ ಗದ್ಯಾನುವಾದ) : ಸ್ವಸ್ಥ, ಮಂದಾಲಸ, ಕ್ರಾಂತ, ವಿಷ್ಕಂಭಿತ, ಉತ್ಕಟ, ತ್ರಸ್ತಾಲಸ, ಜಾನುಗತ, ಮುಕ್ತಜಾನು, ವಿಮುಕ್ತ ಈ ಒಂಬತ್ತು ಕುಳ್ಳಿರ್ದ ಸ್ಥಾನಕಂಗಳ್ (ಶಾಸ್ತ್ರರಂ. ೭-೦೨ ವ) ; ಉತ್ಕಟಮಳವಟ್ಟು ಜಾನುವೊಂದುಮದಿಳೆಯೊಳಗೊಂದಲ್ಕೆ ಮುಕ್ತಜಾನುವೆನಿಕ್ಕುಂ (ಶಾಸ್ತ್ರರಂ. ೭-೩೮). [ಸಂ.]

**ಮುಕ್ತದ್ವಾರ** (ನಾ). ೧. ಎಲ್ಲರಿಗೂ ಪ್ರವೇಶವಿರುವ ಬಾಗಿಲು ; ತೆರೆದ ಬಾಗಿಲು : ಮಾಮಾನ ಮನೆ ಎಲ್ಲರಿಗೂ ಮುಕ್ತದ್ವಾರ. ಅದರಿಂದ ಅವರಲ್ಲಿ ಸದಾ ಜನಸಂದಣಿ (ಸ್ವ..ತಾ. ೩೦). ೨. (ಅಲಂ) ಪೂರ್ಣ ಸ್ವಾತಂತ್ರ್ಯ : ನಿನಗೆ ಮುಕ್ತದ್ವಾರವಿದೆ (ಪಯಂತ. ೯೩೭). ೩. ಎಲ್ಲರಿಗೂ ಇರುವ ಅವಕಾಶ : ವಿಚಾರಗೋಷ್ಠಿಯಲ್ಲಿ ಭಾಗವಹಿಸಲು ಸರ್ವರಿಗೂ ಮುಕ್ತದ್ವಾರವಿದೆ (ರೂಢಿ). [ಸಂ.]

**ಮುಕ್ತಮನ** (ನಾ). ಪೂರ್ವಗ್ರಹವಿಲ್ಲದ ಮನಸ್ಸು ; ತೆರೆದ ಮನಸ್ಸು : ದೇಶಸ್ಥರ ಮುಕ್ತಮನವು ಉದಾರಪೂರ್ಣವಾದದ್ದು (ಸ್ವ. ತಿತ. ೨೩೦). [ಸಂ. ಮುಕ್ತಮನಸ್]

**ಮುಕ್ತಹಸ್ತ** (ನಾ). ೧. ಧಾರಾಳವಾಗಿ ನೀಡುವ ಕೈ ; ಕೊಡುಗೈ : ಕೃಷ್ಣಪ್ಪನವರದು ಮುಕ್ತಹಸ್ತ (ಅನಾಖ. ೨). ೨. ನೀಡಿದ ಕೈಯುಳ್ಳವನು : ಮೋಹಿನಿಯು ಪಾರ್ಶ್ವಗಳಲ್ಲಿ ಮುಕ್ತಹಸ್ತನಾದ ಗರುಡ ಮತ್ತು ಚಾಮರಧಾರಿಣಿಯರಿರುವರು (ಹೊಯ್ಸಾ. ೩೪). ೩. ಧಾರಾಳವಾಗಿ ನೀಡುವವನು ; ಕೊಡುಗೈಯವನು ; ಉದಾರಿ : ಶೌರ್ಯಮಿರೆ ಕೃಪಣವಿಧಿ ಮುಕ್ತಹಸ್ತಂ (ಶ್ರೀರಾಮಾ. ೯೨-೦೦೩). [ಸಂ.]

**ಮುಕ್ತಾಗುಣ** (ನಾ). ೧. ಮುತ್ತಿನ ಹಾರ : ಮೌಕ್ತಿಕದ ಸರ : "ತಾರಂ ಮುಕ್ತಾಗುಣಕಂ ಪರ್ಯಾಯಂ" (ವಸ್ತುಕೋ. ೦೩೯-೦೨೩). ೨. ಮುತ್ತಿನ ಶ್ರೇಷ್ಠತೆ. ೩. ಮುತ್ತಿನ ಕಾಂತಿ. [ಸಂ.]

**ಮುಕ್ತಾಜಾಳ** (ನಾ). ಮುತ್ತುಗಳ ಸಮೂಹ : ಜೋಳವನುರು ಮುಕ್ತಾಜಾಳವಾಗಿಸಿ ಜಂಗಮಾಳಿಗಿತ್ತನು ಬಸವೇಶ (ಭೈರವೇ. ೨-೨೦೦). [ಸಂ. ಮುಕ್ತಾಜಾಲ]

**ಮುಕ್ತಾತ್ಮ** (ನಾ). ಸಂಸಾರಬಂಧನದಿಂದ ಬಿಡುಗಡೆಯನ್ನು ಹೊಂದಿದ ಆತ್ಮ ; ಮುಕ್ತಿಯನ್ನು ಪಡೆದ ಆತ್ಮ : ಕರ್ಮದಿಂದ ಸಂಪೂರ್ಣವಾಗಿ ಬಿಡುಗಡೆಹೊಂದಿದ ಆತ್ಮನು ಪುನಃ ಕರ್ಮದೊಂದಿಗೆ ಸೇರುವುದಿಲ್ಲ. ಇದಕ್ಕೇ ಮುಕ್ತಿಯೆಂದು ಹೆಸರು. ಈ ಮುಕ್ತಾತ್ಮನೇ ದೇವರು (ಭಾರದ. ೦೬೭). [ಸಂ. ಮುಕ್ತಾತ್ಮನ್]

**ಮುಕ್ತಾದಾಮ** (ನಾ). ಮುತ್ತಿನ ಹಾರ; ಮೌಕ್ತಿಕದ ಸರ : ಅನೂನ ಮರಕತರತ್ನಭಿತ್ತಿವಿಭ್ರಾಜದೊಳಾಲಂಬಮಾನಮುಕ್ತಾದಾಮಲಂಬೂಷಭೂಷಿತದೊಳ್ (ಸುಕುಮಾ. ೯-೦೭ ವ). [ಸಂ. ಮುಕ್ತಾದಾಮನ್]

**ಮುಕ್ತಾಧಾರ** (ನಾ). ೧. ಆಧಾರವಿಲ್ಲದಿರುವಿಕೆ; ಆಶ್ರಯವಿಲ್ಲದಿರುವಿಕೆ. ೨. ಮುತ್ತುಗಳಿಗೆ ಆಶ್ರಯವಾಗಿರುವುದು,– ಆಧಾರವಾಗಿರುವುದು. ೧, ೨ : ಆ ಮಹಾರ್ಣವಂ . . . ಮುಕ್ತಾಧಾರಮಾಗಿಯುಮನಂತಾಧಾರಮುಂ . . . ಚತುರ್ಮುಖನಂತೆ ಸರಸ್ವತೀಪತಿಯುಮೆನಿಸಿದುದು (ಜಗನ್ಜ. ೦-೪೪ ವ). [ಸಂ. (ಮುಕ್ತ + ಆಧಾರ; ಮುಕ್ತಾ + ಆಧಾರ)]

**ಮುಕ್ತಾಫಲ, ಮುಕ್ತಾಫಳ** (ನಾ). ೧. ಮುತ್ತು; ಮೌಕ್ತಿಕ:ಕರಿಮಕರಂಗಳ ಕಯ್ಯೀಱಿನೊಳ್ ಬಿಬ್ಬಿಱಿಬಿಱಿದೊಡೆದ ಶುಕ್ತಿಪುಟೋದರಂಗಳೊಳಗಣಿಂದ ಮುಚ್ಚಳಿಸಿದ ತಾರಾತರಲಮುಕ್ತಾಫಲಂಗಳುಮನಟ್ಟಿಮಟ್ಟು ನೋಡುತ್ತುಂ ಪೋಗೆಪೋಗೆ (ಆದಿಪು. ೦೨-೭೯ ವ); ನಯನಂ ನೀಳಸರೋಜಭಾಸಿ ರದನಂ ಮುಕ್ತಾಫಲ[ಪಾಠಾಂ.ಳ]ಸ್ಪರ್ಧಿ . . . ಸುರೂಪಾಶ್ಚರ್ಯಮಾ ಕನ್ನೆಯಾ (ಸುಕುಮಾ. ೩-೩೩); ಬೇಱೆ ಬೇಱೆವರವರ್ಗೆ ಪ್ರತ್ಯೇಕಮೊಂದೊಂದು ಬಳ್ಳ ಮುಕ್ತಾಫಲಮಂ . . . ಒಂದು ಭಾರ ಪೊನ್ನಂ ಕುಡುವುದು (ಚೈಬಸಾ. ೨-೨೭). ೨. (ಅಲಂ) ಬಯ್ಗುಳು; ಕೆಟ್ಟಮಾತು : ಅತ್ತೆಯೂ ಬಹಳ ಸಂತಾಪಗೊಂಡಿದ್ದಳು. ಅವಳ ಬಾಯಿಂದ ಒಂದೇ ಸಮನೆ ಮುಕ್ತಾಫಲಗಳು ಉದುರುತ್ತಲೇ ಇದ್ದವು (ಸ್ವ. ತಿತ. ೨೪). **ಮುಕ್ತಾಫಳ** : ೧. ಮೂಕಾಂಬಿಕಾ ಭಕ್ತಿಜನಿತಮುಕ್ತಾಫಳ ಲಕ್ಷ್ಮಾದೇವೀಮನಸ್ಸರೋವರರಾಜಹಂಸನಾಮಾದಿ ಸಮಸ್ತಪ್ರಸಸ್ತಿಸಹಿತಂ (ಕರ್ನಾ. XX, ೦೦೩-೬; 1146); ಕುಂಭಿಕುಂಭನೀಧರ ಶುಂಭತ್ಕುಂಭತಟಗಳಿತ ವಿಪುಳವಿಮಳಮುಕ್ತಾಫಳಾವಳೀಪರಿಷ್ಕೃತಮಹಿತ ಮಹಾಮಹಿಮಾನೀಕನುಂ (ರಾಜಶೇ. ೩-೧ ವ). [ಸಂ.]

**ಮುಕ್ತಾಫಳ** 'ಮುಕ್ತಾಫಲ' ನೋ.

**ಮುಕ್ತಾಭರಣ** (ನಾ). ೧. ಆಭರಣಗಳನ್ನು ಕಳಚಿದವನು; ನಿರಾಭರಣನಾದವನು : ವಿರಹಿಯಂತೆ ಮುಕ್ತಾಭರಣನುಂ . . . ಶಿಶಿರಸಮಯದಂತಾರೂಢತಪನುಮಾಗಲೊಡಂ (ಶಂಪ್ರಪು. ೯-೪೦ ವ). ೨. ಮುತ್ತಿನ ಆಭರಣ, – ಒಡವೆ : ಧೃತಮುಕ್ತಾಭರಣಂ ಪಯಃಕಣಗಣಂ . . . ಮಲ್ಲಿಕಾಸ್ಮಿತದಾಮಂ ತೆರೆಮಾಲೆಯಾಗೆ ವಿಮಳಕ್ಷೀರಾರ್ಣವಶ್ರೀಯನಾ ಶತಪತ್ರಾನನೆ ಪೋಲ್ತು ಬೆಳ್ವಸದನಂಗೊಂಡೇರಿ ಮನಂಗೊಂಡಳೋ (ಧರ್ಮಪು. ೯-೯೪); ಧನಕನಕ ದೇವಾಂಬರಾದಿಮುಕ್ತಾಭರಣಪೂರವೀಟಿಕಾದಿಗಳನಿತ್ತು . . . ಬೀಳ್ಕೊಡಲು (ಭಾಮಜಂ. ೩-೩೦). [ಸಂ. (ಮುಕ್ತ + ಆಭರಣ ; ಮುಕ್ತಾ + ಆಭರಣ)]

**ಮುಕ್ತಾಮಾಳಿಕೆ** (ನಾ). ಮುತ್ತಿನ ಮಾಲೆ, – ಹಾರ : ತೋರಣಗ್ರಥನ ಮುಕ್ತಾಮಾಳಿಕಾಳಂಬನ ವ್ಯಸನವ್ಯಗ್ರಕರಂ ಕರಂ ಸೊಗಯಿಸಿತ್ತಂತಲ್ಲಿ ಕಾಂತಾಜನಂ (ಶಂಪ್ರಪು. ೭-೩೩). [ಸಂ. ಮುಕ್ತಾಮಾಲಿಕಾ]

**ಮುಕ್ತಾಮುಕ್ತ** (ನಾ). ಕೈಯಲ್ಲಿ ಹಿಡಿದು ಎಸೆದು ಪ್ರಯೋಗಿಸುವ ಈಟಿ ಮುಂತಾದ ಆಯುಧ : "ಶಕ್ತಿ ಮೊದಲಾಗೆ ಪಾಣಿವಿಮುಕ್ತಂ ಛುರಿಕಾದಿ ತಾನಮುಕ್ತಂ ಯಂತ್ರೋನ್ಮುಕ್ತಂ ಶರಾದಿ ಮುಕ್ತಾಮುಕ್ತಂ ಯಷ್ಟ್ಯಾದಿಕಂ ತದಸ್ತ್ರಾಂತರದೊಳ್" (ವಸ್ತುಕೋ. ೯೪-೦೪); ಕರಮುಕ್ತವಾ ಯಂತ್ರಮುಕ್ತ ಮುಕ್ತಾಮುಕ್ತ ಉರುತರದ ಮೂದೆಱದ ಕೈದುಕಾಱರು ಸಿಂಗವಱಗಳೆನೆ ಕಡುಕೆಯಿದು ಹೂಣೆಸಿ ಮಚಾರಿಸುತೆ (ಶಾಳ್ವಭಾ. ೨೩-೦೪); ಕರಮುಕ್ತ ಯಂತ್ರಮುಕ್ತ ಮುಕ್ತಾಮುಕ್ತ ವಿಮುಕ್ತವೆಂಬ ಪಲವು ತರದ ಕೈದುಗಳಿಂ (ಧರ್ಮಾಮೃ. ೦-೦೬). [ಸಂ.]

**ಮುಕ್ತಾಯ** 'ಮುಗಿತಾಯ' ನೋ.

**ಮುಕ್ತಾಯಗೊಳಿಸು** (ಕ್ರಿ). ಮುಗಿಸು ; ಪೂರೈಸು : ಗಾಯಕ ಅಥವಾ ಪ್ರಧಾನವಾದಕ ಕಚೇರಿಯ ಕಡೆಯಲ್ಲಿ ಮಂಗಳ ಹಾಡಿ, ಮಧ್ಯಮಾವತಿ ರಾಗಾಲಾಪನೆಯಿಂದ ಕಚೇರಿ ಮುಕ್ತಾಯಗೊಳಿಸುವುದು ಹಿಂದಿನಿಂದ ಬಂದ ಸಂಪ್ರದಾಯ (ಸಂಗೀತಂ. ೦೦೨).
[ಮುಕ್ತಾಯ (< ಮುಗಿತಾಯ) + ಕೊಳ್$_1$ + – ಇಸು$_3$]

**ಮುಕ್ತಾಯಗೊಳ್ಳು** (ಕ್ರಿ). ಮುಗಿ ; ಕೊನೆಗೊಳ್ಳು : ಮೂಲನೊಳಂಬ ರಾಜವಂಶದ ಸಂತತಿ . . . ಕ್ರಿ. ಶ. ೧೦ನೆಳರಲ್ಲಿ ಮುಕ್ತಾಯಗೊಂಡಿತೆಂದು ಹೇಳಬಹುದು (ನೊಳಂಬ. ೩೯); ನೆಕ್ಲದೋವನ ಮನೋರಥ ನಿರೀಕ್ಷೆಗಳಿಗನುಗುಣವಾಗಿಯೆ ವ್ಯವಹಾರ ಮುಕ್ತಾಯಗೊಂಡಿತ್ತು (ಸ್ವಪರು. ೨೭೦).
[ಮುಕ್ತಾಯ (< ಮುಗಿತಾಯ) + ಕೊಳ್ಳು$_1$ (< ಕೊಳ್$_1$)]

**ಮುಕ್ತಾಲಿ, ಮುಕ್ತಾಳಿ** (ನಾ). ೧. ದುಂಬಿಗಳಿಂದ ಬಿಡುಗಡೆಯನ್ನು ಹೊಂದಿದುದು. ೨. ಮುತ್ತುಗಳಿಂದ ಮಾಡಿದ ಮಾಲೆ,– ಹಾರ. ೧, ೨ : ಆ ಮಂಟಪಂ . . . ಸಮಧುರವಿತತಶಾಖೋಪಲಸಿತಮಾಗಿಯುಂ ಮುಕ್ತಾಲಿ [ಪಾಠಾಂ. ಳಿ] ವಿತಾನಮುಂ ಶಿವಪ್ರಭಾವಾಶ್ರಿತಮಾಗಿಯುಮತನು ವಿಳಾಸಾಸ್ಪದಮೆನಿಸಿರ್ದುದು (ರಾಜಶೇ. ೬-೯ ವ). **ಮುಕ್ತಾಳಿ** : ೨. ಜಗಮೆಲ್ಲಂ . . . ಮುಕ್ತಾಳಿಯುಂ ತೊಟ್ಟುದೋ . . . ಎಂಬಿಂತದೇಂ ಪರ್ವಿದುದೊ ನೃಪನತಿಸ್ಫೂರ್ತಿಕೀರ್ತಿಪ್ರತಾನಂ (ಶೃಜ್ಞಪು. ೩-೦೪); ಆಗಿನ ಅವರ ಆಭರಣಗಳೆಂದರೆ ಅಂಗುಟಿಕೆ ಮೀರಮುದ್ರೆ, ಹೊನ್ನ ಕಾಲುಂಗರ . . . ಮುಕ್ತಾಳಿ, ರತ್ನಪದಕ . . . ಚೆಲುವನ್ನು ಹೆಚ್ಚಿಸಿ ತೋರಿಸುವಂತಹವು (ಕರ್ನಾಜ. ೦೬೨). [ಸಂ. (ಮುಕ್ತ + ಆಲಿ ; ಮುಕ್ತಾ + ಆಲಿ)]

**ಮುಕ್ತಾವಲಿ, ಮುಕ್ತಾವಳಿ** (ನಾ). ೧. ಮುತ್ತಿನ ಹಾರ, – ಸರ. **ಮುಕ್ತಾವಳಿ** : ೧. "ಹಾರಃ, ಮುಕ್ತಾವಳೀ . . . ೨ ಮುತ್ತಿನ ದಂಡೆಗಳ ಹೆಸರುಗಳು" (ಚಿದ್ದಾಂತ. ೨೦೦); ಕದಱುವ ನುಣ್ಚೆಳಗಿಂ ಮುಕ್ತಾವಳಿ ಕಣ್ಗೊಳಿಸಿಮದಗಜಪತಾಕೆಯಿಂದದಿನುರದೊಳ್ (ಕಾದಂಪೂ. ೯೩೩). ೨. [ಜೈನ] ಒಂದು ಬಗೆಯ ವ್ರತ : ತನ್ನ ಭವಸಂಬಂಧಮಂ ಕೇಳ್ದು ಮುಕ್ತಾವಳಿಯಂ ನೋಂತು . . . ಲಕ್ಷ್ಮಣೆಯೆಂಬೊಳಾಗೆ (ಶಾಪುಂಪು. ೩೩೪); ಮುಕ್ತಾವಳಿಯೆಂಬ ವ್ರತಮಂ ಮಾಡಿ ಆಯುರಾಂತ್ಯದೊಳ್ ಮೋಕ್ಷಮನೈದಿದನು (ಧರುಕ. ೩೦). [ಸಂ.]

**ಮುಕ್ತಾವಳಿ** 'ಮುಕ್ತಾವಲಿ' ನೋ.

**ಮುಕ್ತಾವಳೀತಪ** (ನಾ). = ಮುಕ್ತಾವಲಿ ೨: ವಾಸವನುಂ ಮಹೀಧರಂಗೆ ವಿದ್ಯಾಧರ ವಿಭೂತಿಯುಂ ಕೊಟ್ಟರಿಂಜಯಾಖ್ಯಮುನಿಮುಖ್ಯ ನಿಕಟದೊಳ್ ಮುಕ್ತಾವಳೀತಪಮುಂ ಕೈಕೊಂಡು ಗೆಲ್ಲಂಗೊಂಡಂ (ಅಂತಿ. ೩-೩೮ ವ); ವಾಸವಂ ಮಹೀಧರಂಗೆ ವಿದ್ಯಾಧರಶ್ರೀಯುಂ ಕೊಟ್ಟರಿಂಜಯಮುನಿಪತಿಗಳ ಪಕ್ಕದೆ ಮುಕ್ತಾವಳೀತಪಮುಂ ಕೈಕೊಂಡು ಗೆಲ್ಲಂಗೊಂಡಂ (ಶಾಪುಂಶಿ. ೨೦). [ಸಂ. ಮುಕ್ತಾವಲೀತಪ]

**ಮುಕ್ತಾಸಾರ** (ನಾ). ಶ್ರೇಷ್ಠವಾದ ಮುತ್ತು : ಸಾರತರ ತಾಮ್ರಪರ್ಣಿಯ ವಾರಿಯೊಳೆಳೆದಳಿಸಿ ಬಳೆದ ಶುಕ್ತಿಯ ಮುಕ್ತಾಸಾರಮನೀವ ಪಯೋನಿಧಿ ತೀರದ ನೃಪರಾತ್ಮಯಶಮನೀವಂತಾದರ್ (ಶಾಂತಿಪು. ೧೧-೧೩). [ಸಂ.]

**ಮುಕ್ತಾಸ್ಫೋಟ** (ನಾ). ಮುತ್ತಿನ ಚಿಪ್ಪು; ಶುಕ್ತಿ : "ಮುಕ್ತಾಸ್ಫೋಟಂ ಶುಕ್ತಿ ಶಂಬೂಕಮಂಭಶ್ಶುಕ್ತಿಪುಟ್ಟಿಂ" (ಚನ್ನ್ಯಕೋ. ೨೩-೯). [ಸಂ.]

**ಮುಕ್ತಾಸ್ರಜ** (ನಾ). ಮುತ್ತಿನ ಸರ, —ಹಾರ : ನಿಜಪತಿಯಭಿಧಾನಮನೀ ದ್ವಿಜನಾಂತಃದು ಮಣಾದೆಂದು ಹಂಸಂಗಾನೀ ರಜನಿ ಪಡೆದಿತ್ತ ಮುಕ್ತಾ ಸ್ರಜಮನೆ ತತ್ಕನುಪೂಲಿದ ಜಳಕಣಮೆಸೆಗುಂ (ರಾಜಶೇ. ೨-೬೩). [ಸಂ. ಮುಕ್ತಾಸ್ರಜ್]

**ಮುಕ್ತಾಹಾರ** (ನಾ). ೧. = ಮುಕ್ತಾಸ್ರಜ : ಬಾಹ್ಯವಿಕೃತಿಯ ವೃದ್ಧೆ ಮಂಥರೆಯ ಹೃದಯದಲಿ ಸುಪ್ತವಾಗಿರ್ದ ರತಿ, ಚಿಲುಪೊಲವುಗಳ ಚಿಲುಮೆ ತಾಂ ಕಣ್ದೆರೆದುದೊಮ್ಮನೆಯ ಮುಕ್ತ ಮುಕ್ತಾಹಾರಧಾರೆಯಲಿ (ಶ್ರೀರಾಮಾ. ೨೩-೬೩೩). ೨. ಆಹಾರವನ್ನು ತ್ಯಜಿಸುವುದು; ಅನಶನ; ನಿರಾಹಾರ. ೧, ೨ : ಬಿಡದೆ ಮುಕ್ತಾಹಾರದಿಂದ ಸಮರೂಪದಿಂ ದೃಢತವೆತ್ತೂರ್ಧ್ವ ಮುಖಮಾಗಿ ಕರ್ಕಶವೃತ್ತದೊಡಗೂಡ ಕುಚಯುಗಂ ಮೆಚ್ಚಿದುದು ಕಠೋರತಪದಿಂದೆಸೆವ ಯೋಗಿಯಂತೆ (ಕೈಲಾಸ. ೩೦-೦೭). [ಸಂ. (ಮುಕ್ತಾ + ಹಾರ ; ಮುಕ್ತ + ಆಹಾರ)]

**ಮುಕ್ತಾಳಿ** 'ಮುಕ್ತಾಲಿ' ನೋ.

**ಮುಕ್ತಿ** (ನಾ). ೧. ಬಿಡುಗಡೆ; ವಿಮೋಚನೆ; ಸ್ವಾತಂತ್ರ್ಯ. ೨. ಬಿಡುಗಡೆಯನ್ನು ಹೊಂದುವಿಕೆ; ಸ್ವತಂತ್ರವಾಗುವಿಕೆ. ೩. ಬಿಟ್ಟು ಬಿಡುವಿಕೆ ; ತ್ಯಜಿಸುವಿಕೆ. ೪. ಎಸೆಯುವಿಕೆ. ೫. ಬಿಡುಗಡೆ ಮಾಡುವುದು ; ಬಂಧಮುಕ್ತಗೊಳಿಸುವುದು. ೬. ಬಿಚ್ಚುವಿಕೆ ; ಕಳಚುವಿಕೆ. ೭. (ಸಾಲದಂತೆ) ತೀರಿಸುವುದು; ಸಲ್ಲಿಸುವುದು. ೮. ಆತ್ಮವು ಹುಟ್ಟು, ಸಾವುಗಳ ಬಂಧನದಿಂದ ಕಳಚಿಕೊಳ್ಳುವುದು; ಮೋಕ್ಷ; ಕೈವಲ್ಯ : "ಕೈವಲ್ಯಂ, ನಿರ್ವಾಣಂ, . . . ಮುಕ್ತಿಃ, ಮೋಕ್ಷಃ, ಮಹಾನಂದಃ—ಈ ೧೧ ಮೋಕ್ಷದ ಪೆಸರ್" (ಹಲಾಯು.೨೦-೦೨೪); ಅನಾದಿಬಂಧನಬದ್ಧದ್ರವ್ಯಭಾವಕರ್ಮವಿಗಮದಿನನಂತಜ್ಞಾನಾದಿ ನಿಜರೂಪಮಂ ಪಡೆವುದು ಮುಕ್ತಿ (ಅಂತಿ. ೧೧-೬೩ ವ); ಒಲಿದೊಮ್ಮೆ ಶಿವ ಶರಣೆನ್ನಿರಯ್ಯಾ ಒಂದು ನೊಲ್ಲಿಂಗೆ ಮುಕ್ತಿಸಿದ್ಧಿ (ಬಸವ. ೦೬೦). [ಸಂ.]

**ಮುಕ್ತಿಕಲ್ಲು** (ನಾ). ಬಾವಿಯಲ್ಲಿ ಪತ ಹಾಕುವುದಕ್ಕೆ ಆಧಾರವಾದ ಉದ್ದನೆಯ ಕಲ್ಲು; ಈ ಕಲ್ಲನ್ನು ಹಾಕಿಸುವುದರಿಂದ ಬಾವಿಯ ಕೆಲಸ ಮುಕ್ತಾಯವಾಗುವುದರಿಂದ ಈ ಹೆಸರು ಬಂದಿದೆ : ಬಾವಿಗೆ ಮುಕ್ತಿಕಲ್ಲು ಹಾಕಿಸಬೇಕಾಗಿದೆ (ಬಳಕೆ). [< ಮುಗಿತೆ + ಕಲ್ಲು (< ಕಲ್)]

**ಮುಕ್ತಿಗಾಮಿ** (ನಾ). ಮೋಕ್ಷಮಾರ್ಗದ ಅಭಿಮುಖನಾಗಿರುವವನು : ಮುಕ್ತಕ ಕುಳಕ ಮಹೋತಾದ ಪವಿತ್ವದ ಯುಕ್ತಿಯೊಳೆರುಪನ ಪೊಗಳ್ದು ಮುಕ್ತಿಗಾಮಿಗಳಾತ್ಮಕಲೆಯ ಭೇದಾಭೇದಭಕ್ತಿಯೊಳೊರೆದರು ಮತ್ತ (ಶಿಶಿ. ೬೮-೬೮). [ಸಂ. ಮುಕ್ತಿಗಾಮಿನ್]

**ಮುಕ್ತಿಗೇಡಿ** (ನಾ). ಪರಮಪದವಿಯೆನ್ನು ಕೆಡಿಸಿಕೊಳ್ಳುವವನು ; ಭಕ್ತಿಯ ಸ್ಥಳಕುಳವನರಿಯದೆ ಬರಿದೆ ಭಕ್ತರೆನಿಸಿಕೊಂಬ ಮುಕ್ತಿಗೇಡಿಗಳನೇನೆಂಬೆನಯ್ಯ (ಅಂಟೀ. ೬೮-೩೪). [ಮುಕ್ತಿ + ಕೇಡಿ$_1$]

**ಮುಕ್ತಿದಾಯಕ** (ನಾ). ಮೋಕ್ಷವನ್ನು ಕೊಡುವವನು; ಪರಮಾತ್ಮ : ಮುಕ್ತಿದಾಯಕ ನೀನು ಹೊಸಪ್ಪೂರುಪುರವಾಸ (ಭಕಂದ. ೦-೯೩-೩). [ಸಂ.]

**ಮುಕ್ತಿಪಥ** (ನಾ). ಕೈವಲ್ಯವನ್ನು ಹೊಂದುವ ಮಾರ್ಗ; ಮೋಕ್ಷ ಮಾರ್ಗ : ಎನ್ನ ಮುಕ್ತಿಪಥಕ್ಕೆ ಈ ರುದ್ರಾಕ್ಷಿ ಸಾಧನವಯ್ಯಾ (ಅಜಃ. ೯೩೯). [ಸಂ.]

**ಮುಕ್ತಿಪದ** (ನಾ). ಮೋಕ್ಷಪದವಿ ; ಕೈವಲ್ಯ : "ಅಪವರ್ಗಂ ನಿಶ್ರೇಯಸಂ . . . ಮುಕ್ತಿಪದಂ ಬ್ರಹ್ಮಂ ಕೈವಲ್ಯಪದವಿ ಶಿವಗತಿ ನಿರಾಮಯಂ ನಿರ್ವಾಣಂ" (ಚನ್ನ್ಯಕೋ. ೨೧-೦೯); ಕಾರ್ಯಮಿವೆ ಸತ್ತತ್ವಮೆಮಗೆ ಸಪರ್ಯ ಮಿದೇ ಮುಕ್ತಿಪದಮನೆಯ್ದುವಿನಂ (ಸುಕುಮಾ. ೦-೨೭). [ಸಂ.]

**ಮುಕ್ತಿಲೋಕ** (ನಾ). ಮೋಕ್ಷ; ಸ್ವರ್ಗಲೋಕ : ಅರ್ಚನೆಯವಸರ್ಚಿನಿ ದಲ್ಲಿ ಪುಣ್ಯದ ಫಲ ಭಕ್ತಿಯಿಂ ದ್ರವ್ಯದ ಕೊಡುವುದು ಮುಕ್ತಿಲೋಕದೊಳಗು (ಪುರಾತನ. ೦೬-೬೦). [ಸಂ.]

**ಮುಕ್ತಿಸ್ಥಾನ** (ನಾ). = ಮುಕ್ತಿಪದ : ಕಷ್ಟಂ ದುಃಖಾನಲಪರಿಪ್ಲುಷ್ಟಂ ಚಿಃ ಗತಿಚತುಷ್ಟಯಂ ಪ್ರಾಣಿಗೆ ಸಂತುಷ್ಟತೆಯನೆಯ್ದೆ ಪಡೆದುಮಭೀಷ್ಟಸುಖಪ್ರದಮದೊಂದೆ ಮುಕ್ತಿಸ್ಥಾನಂ (ಅಂತಿ. ೯-೩೦); ಆಗಮೋಕ್ತ ಸಮಾಧಾನ ವಿಧಾನದಿಂ ಮುಡಿಪಿ ಮುಕ್ತಿಸ್ಥಾನಮಂ ಮುಂಚೆ ಸಾಧಿಸಿಕೊಂಡೊಳ್ಪು ಕುಮಾರಸೇನಮುನಿಪಂಗಕ್ಕುಂ ಪಜರ್ಗಕ್ಕುಮೇ (ಶಾಪುಂಶಿ. ೩). [ಸಂ.]

**ಮುಕ್ತಿಹೇತು** (ನಾ). ಮೋಕ್ಷಕ್ಕೆ ಕಾರಣವಾದುದು : ಷೋಡಶಜಿನ ಪತಿನುತಚರಣಾಡಂಬರಮಂ ಭುವಿಪ್ರಾಪ್ತಿಯೆನೆ ತತ್ಪ್ರತಿಮಾನೀಡಾಗಮನಪ್ಪು ಮಾರ್ಹಕ್ರೀಡನಮುಂ ಮುಕ್ತಿಹೇತುವಪ್ಪುದು ಒರಿದೇ (ಶಾಂತಿಪು. ೦೨-೯೯). [ಸಂ.]

**ಮುಕ್ತೆ** (ನಾ). ೧. ಮುತ್ತು ; ಮೌಕ್ತಿಕ : "ಮುಕ್ತಾನುಮಂ ಮೌಕ್ತಿಕಂ" (ಚನ್ನ್ಯಕೋ. ೨೩-೯). ೨. ವೇಶ್ಯೆ; ಸೂಳೆ : "ಬಂಧಕೀ, ಕುಲಟಾ, ಮುಕ್ತಾ, ಪುನರ್ಭೂ, ಪುಂಶ್ಚಲೀ, ವಿಲಾ—ಜಾರಿಣಿಯರ ಹೆಸರು" (ರಕ್ಕಂ. ೭-೩೫ ೩೬೮). ೩. ಒಂದು ಬಗೆಯ ಸಸ್ಯ. [ಸಂ. ಮುಕ್ತಾ]

**ಮುಕ್ತೇಸರ** 'ಮೊಖ್ತೇಸರ' ನೋ.

**ಮುಕ್ತೋಷ್ಠ** (ನಾ). ೧. ತೆರೆದ ತುಟಿ. ೨. ಅತಿಯಾಗಿ ಮಾತನಾಡುವವನು; ಹರುಕುಬಾಯಿಯವನು : ಅವರೊಳೊರ್ಬಂ ಮುಕ್ತೋಷ್ಠನುಂ ನಿಕೃಷ್ಟನುಮಪ್ಪ ಭಟ್ಟನಿಂತೆಂದಂ (ಕಂಚಕ. ೦೭-೬). [ಸಂ.]

**ಮುಕ್ತ್ಯಾತುರ್ಯ** (ನಾ). ಮೋಕ್ಷದ ಬಗೆಗಿರುವ ಆಸಕ್ತಿ (?) : ಹಸಿವು ತೃಷೆ ವೆಸನಂಗಳಲ್ಲಿ ಅಲಕ್ಷಿತನಾಗಿ ಪಾಶಬದ್ಧ ವಿರಹಿತನಾಗಿ ಗುಣಾವಗುಣವ ವಿಚಾರಿಸದೆ ಶಿಕ್ಷಾತುರ್ಯ ಮುಕ್ತ್ಯಾತುರ್ಯ ಸ್ಥಯಿಷ್ಠಾತುರ್ಯ ಮೆಂಬ ಮೂಬ ಠಾವಿನಲ್ಲಿ ಬದ್ಧನಾಗದೆ ಸ್ತುತಿಗೆ ನಿಲ್ಲದೆ ನಿಂದೆಗೋಡದೆ ಉಭಯಮವನೇನೆಂದು ಅರಿಯದೆ (ಶರಗೋ. ೦೦೯-೦೨೩). 'ಶಿಕ್ಷಾತುರ್ಯ' ಪರಾ. [?]

**ಮುಕ್ರಿ$_1$** (ನಾ). ಮುಸಲ್ಮಾನರ ಧಾರ್ಮಿಕಗುರು : ಮಸೀದಿಯಿಂದ ಮುಕ್ರಿಗಳು ನಿನಗೆ ಆದೇಶ ಕಳುಹಿದರೂ ನೀನು ಕೇಳಲಿಲ್ಲ (ಹುಂಗಾಕಾ.೦೦). [← ಅರ. ಫಾರ. ಮುಕಿರ್]

**ಮುಕ್ರಿ$_2$** (ನಾ). ಕರ್ನಾಟಕದಲ್ಲಿ ಇರುವ ಒಂದು ಕೆಳವರ್ಗದ ಜನಾಂಗದ ಹೆಸರು : ಮುಕ್ರಿಗಳು—ಇವರು ಕಾನಡಾಜಿಲ್ಲೆಯಲ್ಲಿ ಘಟ್ಟದ ಕೆಳಗೆ ಇರುತ್ತಾರೆ (ಕಹಾಗ. ೨೨೩) ; ಮಾದಿಗರ ಅಥವಾ ಮುಕ್ರಿಯರ ಒಂದು ಮಗು ಮನೆಯೊಳಗೆ ನುಗ್ಗಿಬಿಟ್ಟರೆ ನಮಗೆ ಬ್ರಹ್ಮಾಂಡ ಕೋಪ ! (ಬಾಣಾಣ. ೯೯). [?]

**ಮುಖ** (ನಾ). ೧. ಬಾಯಿ : "ವಕ್ತ್ರಂ, ಆಸ್ಯಂ. . . ಮುಖಂ—೭ ಬಾಯಿ" (ಓದ್ಯಾಂತಿ. ೦೯೩) : ತಂಬುಲದಿಂ ವಿಭಾ ಪೋಲ್ಪನೋಲಗಂಗುಡಮಹಿಯೊಳ್

...ಮುಖಾರ್ಪಿತವಮಂ ಕಟಶೋಧನದಿಂ ಪ್ರಭೇದವಕ್ಕೊಡಸಿದ ಬೇರನಾಮದ ಕಳವೆರಸಿರ್ದಮಾರೇಂದ್ರುದಂತಿಯುಂ (ಶಾಂತಿಪು. ೧೧-೯೩) ; ಲಿಂಗಪಥವ ತಪ್ಪಿ ನಡೆವರು ಜಂಗಮಮುಖದಿಂದೆ ನಿಂದೆ ಬಂದರೆ ಕೊಂಡ ಮೂಜಿಂಗೆ ಹೋಹುದು ತಪ್ಪದು (ಬಸವ. ೦೦೬) ; ಹಿಂದೆ ನಾರದಮುನಿಯ ಮುಖದಿಂದೆ ಕೇಳ್ದಿಂ ಮುಕುಂದನ ವಿಶಾಲಲೀಲಾಮಾಲೆಯಂ (ಕೃಬಾ. ೦೦-೨). ೨. ಮೊಗ ; ಮೋರೆ : "ವದನಮಾನನಮಾಸ್ಯಂ ಮುಖಂ ತುಂಡಂ ಲಪನಂ ವಕ್ತ್ರಂ ಮೊಗಕ್ಕೆ ನಾಮಂ" (ಪತ್ತುಕೋ. ೬೯-೦೩) ; ಉದಧಿವೃತೋರ್ವಿಗೆ ಮುಖಮೆನಿಸಿದ ಬೆಳುವಲನಾಟ್ಗೆ ತಿಲಕದಂದದ ನಜುಗುಂಡದ ವಿಪ್ರ ಕುಲೋತ್ತಮನಭ್ಯುದಿತಯಶಂ ಶ್ರೀಧರಂ (ಜಾತಕ. ೦-೯) ; ಕಣ್ಮಲರೊಳಾ ನಂದಾಶ್ರು ಮೈಯೊಳ್ ಸಮುದ್ಗತ ರೋಮಂ ಮುಖದೊಳ್ ವಿಲಾಸ ಮೆಸೆಯುತ್ತಿರ್ಪನ್ನಮಿಂತೆಂದರಾನತಮೂರ್ಧರ್ ಪಿತೃಮಾತೃಗಳ್ (ಜಗ. ೩-೫) ; ಮುಖಚತುಷ್ಟಯದಾತನಾರೀ ಮುಖಗಳ್ಗೆದಱ ಮಹಿಮಸಾರು (ಕೊರವಂ. ೬-೦೦-೬೨); ಬಿರುನುಡಿಗಳಂ ತನ್ನ ಮೊಗಕಿರಿದು ಜರೆದೇಡಪರ್ಜುನನ ಮುಖಕೆ ದಿಟ್ಟಯಿನೊದ್ದು ಓಂತಿರುಗಿದಂ ಬಭ್ರುವಾಹನಂ (ಜೈಮಿನಿ. ೮೦-೨೨೦೦). ೩. ಪಕ್ಷಿಯ ಕೊಕ್ಕು ; ಚಂಚು. ೪. ಪ್ರಾಣಿಯ ಮೂತಿ ; ಮುಸುಡಿ. ೫. ಮುಂಭಾಗ ; ಮುಂದುಗಡೆ : ಆ ವೀರನು ಸೇನೆಯ ಮುಖದಲ್ಲಿ ನಿಂತಿದ್ದನು (ರೂಢಿ). 'ಮುಖಮಂಟಪ' ಪರಾ. ೬. ತಲೆ ಬಾಗಿಲಿನ ಮುಂಭಾಗ ; ಅಂಗಳ : "ಮುಖಂ, ನಿಃಸರಣಂ—ಈ ೨ ಹೆಬ್ಬಾಗಿಲ ಮುಂತಂ" (ಹಲಾಯು. ೮೯-೦೪೯). ೭. (ಬಾಣ, ಈಟಿ ಮುಂತಾದುವುಗಳ) ಚೂಪಾದ ತುದಿ ; ಮೊನೆ. ೮. ಮೊಲೆತೊಟ್ಟು ; ಚೂಚುಕ. ೯. ಪಾತ್ರೆ ಮೊದಲಾದುವುಗಳ ಬಾಯಿ. ೧೦. ಆಯುಧವ ಹರಿತವಾದ ಅಂಚು ; ಅಲಗು. ೧೧. ಮೇಲುಭಾಗ ; ಅಗ್ರಭಾಗ. ೧೨. ಹೊರಮೈ ; ಹೊರಭಾಗ : 'ಮುಖಲೇಪನ' ಪರಾ. ೧೩. ರಂಧ್ರ ; ತೂತು. ೧೪. ದಿಕ್ಕು ; ದಿಶೆ ; ಕಡೆ : ನೀವು ನೇರವಾಗಿ ಆ ಮುಖಕ್ಕೆ ಹೋದರೆ ಅವರ ಮನೆ ಸಿಕ್ಕುತ್ತದೆ (ರೂಢಿ). 'ಒಮ್ಮುಖ' ಪರಾ. ೧೫. ನದಿಯು ಸಮುದ್ರಕ್ಕೆ ಸೇರುವ ಸ್ಥಳ ; ಅಳುವೆ. ೧೬. ಪ್ರಾರಂಭ ; ಉಪಕ್ರಮ ; ಮೊದಲು : "ಆದಿ ಮುಖಂ" (ಪತ್ತುಕೋ. ೦೦೯-೬೦) ; ಶ್ರೀವಾಗ್ದೇವಿಗೆ . . . ನಿರ್ಮಲಮೂರ್ತಿಗಿಪಾವಂದ್ಯೆಗೆ ಶಾಸ್ತ್ರಮುಖದೊಳವನತನಪ್ಪೆಂ (ಶಬ್ದಮ. ೦. ೬೦೫೯) ; ಮುಖ ಮೆಂಬುದು ಪ್ರಾರಂಭಾರ್ಥವಪ್ಪರ್ಥ (ಶಬ್ದಾ. ೩೦). 'ದಿನಮುಖ' ಪರಾ. ೧೭. ಏನನ್ನಾದರೂ ಸಾಧಿಸಲು ಸಹಾಯಕವಾದುದು ; ಸಾಧನ : "ಉಪಾಯ ಲಪನಾದಿ ವಾಚಕಂ ಮುಖಮಕ್ಕುಂ" (ಪತ್ತುಕೋ. ೦೩೩-೯೨). ೧೮. ಮಗ್ಗುಲು ; ಪಾರ್ಶ್ವ ; ಬದಿ : ಹೊರಗಿನ ಕಂಬಗಳು ಹದಿನಾರು ಮುಖಗಳನ್ನು ಹೊಂದಿವೆ (ಹೊಯ್ಸಳ. ೨೨೫) ; ಪ್ರತಿಭಾಗಕ್ಕೂ ನಾಲ್ಕು ಮುಖಗಳುಂಟು (ಕೀಟಪ. ೦೦). ೧೯. ಮೂಲ ; ಕಾರಣ ; ಹೇತು. ೨೦. ಮಾತಾಡುವಿಕೆ ; ಉಚ್ಚರಿಸುವಿಕೆ. ೨೧. ಸಂದರ್ಭ; ಸನ್ನಿವೇಶ: ಎಲ್ಲರೂ ವೀರರು ಎಲ್ಲರೂ ಧೀರರು ಎಲ್ಲರೂ ಮಹಿಮರು ಎಲ್ಲರೂ ಪ್ರಮಥರು ಕಾಳಗದ ಮುಖದಲ್ಲಿ ಕಾಣಬಾರದು ಓಡುವ ಮುಖದಲ್ಲಿ ಕಾಣಬಹುದು (ಬಸವ. ೯೯೪) ; ಸವನಿಪುದಯತ್ನಕೃತ ಗೌರವ ಮುಖದೊಳ್ ಗುರು ಮುನೀಶ್ವರಾದಿ ವಿಶಿಷ್ಟೋದ್ಭವ ವಿನಯ ದೊಳೊಂದಿದಸಹ್ಯವೃತ್ತಿಯೊಳ್ ತಾಂ ಬಹುತ್ವಮೇತತ್ವದೊಳಂ (ಶಬ್ದಮ. ೦೦೨). ೨೨. ಮಾರ್ಗ ; ರೀತಿ : ಸ್ಥಾವರ ಜಂಗಮಂಬೊಬ್ಬುಭಯಪಕ್ಷ ಒಂದೇ ಆವ ಮುಖದಲಿ ಬಂದರೂ ತೃಪ್ತಿಯೊಂದೇ (ಬಸವ. ೪೦೫) ; ಎಲ್ಲಿಯುಮಾಮಂತ್ರಣದೊಳ್ ಬಲ್ಲರ್ ಪ್ರಥಮೈಕವಚನಮಂ ಲೋಪಿಸುವರ್ ನಿಲ್ಲದೆ ವಿಕಲ್ಪಮುಖದಿಂ ಸೊಲ್ಲಿಸುವರ್ ಹ್ರಸ್ವದೀರ್ಘ ಕಾಕುಗಳೆರಡಂ (ಶಬ್ದಮ. ೦೨೩). ೨೩. ಅಭಿಮುಖ ; ಎದುರು : ಮುಕ್ತಿಗೆ ಮುಖವಾಗಿ ಯುಕ್ತಿಗೆ ಹೊಱಗಾಗಿ ಅಱಿವಿಂಗೆ ಅಱಿವಾಗಿಪ್ಪ ಭೇದ ಕಾಣಬಂದಿತ್ತು ನೋಡಾ (ಅಪ್ರಸಂ. ೨೦೨-೯೩೬). ೨೪. ಶ್ರೇಷ್ಠವಾದುದು ; ಉತ್ತಮವಾದುದು. ೨೫. ಮುಖ್ಯ ; ಪ್ರಧಾನ : ಸೊರ್ಕ್ಕಾ ಗಾಮುಂಡ್ಡರುಂ ಎದೆಯುಗಾಮುಂಡ್ಡರುಂ . . . ನೀರಿಲ್ಲಿಯಾ ಸಿನ್ದೆ ಜಗಾಮಿ ಗರುಂ ಮುಖವಾಗೆ ಎರಡುಂಬಾಟ್ಕಿ ರಾಜಶ್ರಾವಿತಮಾಗೆ ಪ್ರಸಾದಂಕೆಯ್ದಾರ್ (ಎಪಿ. XIX. ೦೯೩-೦೦ ; ಶ. ೬೮೦). 'ಮುಖಸ್ಥಾನ' ಪರಾ. ೨೬. ಮುಖ್ಯವಾದ ವ್ಯಕ್ತಿ ; ಪ್ರಧಾನವ್ಯಕ್ತಿ : ನಿಂದಿಸಿ ಧರ್ಮಜ ಪ್ರಮುಖರಂ ಮುಖರಂ ಮುಖರಂಧ್ರಘೋಷನಿಂತೆಂದಂ (ಜಗ. ೦೭-೩೩). ೨೭. ಪ್ರತ್ಯಕ್ಷ ; ಸಮಕ್ಷಮ : 'ಮುಖತಃ' ಹೋ. ೨೮. ದೃಷ್ಟಿ ; ಗಮನ : ಪರಮೇಶ್ವರನ ಅಱಿದವಂಗೆ ಜಗದಾಶೆಯ ಮುಖವಿಲ್ಲವೆಂದೆ (ಪೋರಪಚ. ೯೦-೦೬೭). ೨೯. (ಆಲಂ) ನೈತಿಕಬಲ ; ಸ್ಥೈರ್ಯ : ಗುರುರಾಜರಾಯರು . . . ಯಾವ ಮುಖದಿಂದ ಕೇಳುತ್ತಾರೆ (ಮರಳ. ೦೬೯). ೩೦. [ಕಾವ್ಯಮೀ] ನಾಟಕದ ಐದುಬಗೆಯ ಸಂಧಿಗಳಲ್ಲಿ ಒಂದು ; ಐದು 'ಅರ್ಥಪ್ರಕೃತಿ'ಗಳೂ ಐದು 'ಅವಸ್ಥೆ'ಗಳೂ ಕ್ರಮವಾಗಿ ಸೇರಿದಾಗ ವಸ್ತುವಿನಲ್ಲಿ ವಿಭಾಗಗಳಾಗುವ ಐದು ಬಗೆಯ ಸಂಧಿಗಳಲ್ಲಿ ಮೊದಲನೆಯದು : ಸವಸಂದ ಮುಖಂ ಪ್ರತಿಮುಖ ಮವಮರ್ಶಂ ಗರ್ಭಮಂತೆ ನಿರ್ವಹಣಮೆನಿಪ್ಪವವೆಯ್ದೆ ಸಂಧಿಯಂ ಸಹಿತ (ಕಾವ್ಯಾವ. ೯೩೬) ; ಮೇಲೆ ಹೇಳಿದ ಐದು 'ಅರ್ಥಪ್ರಕೃತಿ'ಗಳೂ ಐದು 'ಅವಸ್ಥೆ'ಗಳೂ ಕ್ರಮವಾಗಿ ಸೇರಿದರೆ, ವಸ್ತುವಿನಲ್ಲಿ ೧. ಮುಖ. ೨. ಪ್ರತಿಮುಖ. ೩. ಗರ್ಭ, ೪. ಅವಮರ್ಶ, ೫. ಉಪಸಂಹೃತಿ (ನಿರ್ವಹಣ) ಸಂಧಿಗಳೆಂಬ ಐದು ವಿಭಾಗಗಳಾಗುತ್ತವೆ (ಕೃಷಿಪ. ೨೦೬).

ಮುಖಕಪ್ಪಗೆಮಾಡಿಕೊಳ್ಳು = ಮುಖದ ಕಳೆಯನ್ನು ಕಳೆದು ಕೊಳ್ಳು ; ಮಂಕಾಗು : ಅವನ ಮನಸ್ಸು ಸ್ವಲ್ಪ ದಿವಸದಿಂದ ವಿರಸವಾಗಿ ತನ್ನಲ್ಲಿ ಅಭಿಮಾನವನ್ನು ಬಿಟ್ಟದೆಂದು ಇವಳೂ ಹಾಗೆಯೇ ತನ್ನ ವಿಚಾರವಾಗಿ . . . ಪ್ರಬಲವಾದ ಅಸಮಾಧಾನವನ್ನು ತೋರಿಸುತಿದಾಳೆಂದು ಅವನೂ ತಿಳಿದುಕೊಂಡು ಮುಖ ಕಪ್ಪಗೆ ಮಾಡಿಕೊಂಡಿದ್ದರು (ಅರುಣಿ. ೦೩೩). ಮುಖಕಪ್ಪಿಡು = ಮುಖವು ಕಳೆಗುಂದು ; ಕಂಗೆಡು : ಮರುಕ್ಷಣವೇ ಮುಖ ಕಪ್ಪಿಟ್ಟಿತು (ಪಟಿಕಾ. ೬೩೦). ಮುಖಕಿರಿದಾಗು = ಮುಖವು ಮುದುಡಿ ಹೋಗು ; ಖಿನ್ನವಾಗು : ಅಳಿಯರ ಶಾಯಡಿಗೆ ಆಗ ಕಳುಹಲು ನಾನೆ ಬಹೆನಾ ಬಾಗಿಲೊಳಗಿರಲೆಂಬ ಬೆಸನಾಯ್ತಾಗಲೆನಲೂಳಿಗರು ಮುಖ ಕಿರಿದಾಯ್ತು ಬಿಜ್ಜಣಗೆ (ಬಿಜ್ಜಳ. ೦೦೦-೯೦). ಮುಖಕೆವಿಚು = ಮುಖವನ್ನು ವಕ್ರಗೊಳಿಸು ; ಸೊಟ್ಟಗೆ ಮಾಡು : ನಾನು ನಿನಗೆ ಯಾವ ಅಪರಾಧವನ್ನು ಮಾಡಿದ್ದೇನೆ ಹೇಳು ; ನನ್ನನ್ನು ಕಂಡ ಕೂಡಲೇ ಮುಖ ಕಿವಿಚುತ್ತೀ (ರಂಗಗೂ. ೦೪೭). ಮುಖ ಕೆಂಪಗಾಗು = ಮುಖದ ಬಣ್ಣ ಕೆಂಪಾಗು ; ರಂಗೇರು : ನಾಚಿಕೆಯಿಂದ ಅವಳ ಮುಖ ಕೆಂಪಗಾಯಿತು (ಕೀರ್ತಿಕ. ೦೦೨). ಮುಖಕೆಂಪೇರು = ಮುಖ ಕೆಂಪಗಾಗು : ಖಾನ್ ಸಾಹೇಬರು ಮರಳಿ ಬಂದು ಕುಳಿತರು. ಅವರ ಮುಖ ಕೆಂಪೇರಿತ್ತು (ಪಟಿಕಾ. ೦೬೭). ಮುಖಕೆಡು = ಮುಖ ಕಪ್ಪಿಡು : ಲಜ್ಜಾಹೀನೆಯಾದ ಮೋತಿಬೀಬಿಯು ತಿರಸ್ಕಾರದಿಂದ ಮುಖ ಕೆಡದೆ . . . ಎಂದಳು (ಕೃಷ್ಣಕುಂ. ೬೬). ಮುಖಕೆಳಗೆಹಾಕು = ತಲೆ ತಗ್ಗಿಸು ; ಅವಮಾನವನ್ನು ಹೊಂದು : ನಾಳೆ ಪಂಚನಾಮೆಯ ಕಾಲಕ್ಕೆ ನಾನಾ ಸಾಹೇಬರು ನನಗಾಗಿ ಮುಖ ಕೆಳಗೆ ಹಾಕುವ ಪ್ರಸಂಗ ಬಂದೇ ಬರುವದು (ಸ್ವಪ್ನ. ೦೯೦). ಮುಖಕೊಟ್ಟು ಮಾತನಾಡು = ನೇರವಾಗಿ ಮಾತನಾಡು : ಜಗಳವಾದಂದಿನಿಂದ ಅವರಿಬ್ಬರೂ ಸರಿಯಾಗಿ ಮುಖ ಕೊಟ್ಟು ಮಾತನಾಡುವುದಿಲ್ಲ (ರೂಢಿ). ಮುಖಕ್ಕೆತಣ್ಣೀರೆರಚಿದಂತಾಗು = ನಿರುತ್ಸಾಹವುಂಟಾಗು ; ಉತ್ಸಾಹ

ಭಂಗವಾಗು : ಮಗನು ನಪಾಸಾದ ಸುದ್ದಿಯನ್ನು ಕೇಳಿ ಅವರ ಮುಖಕ್ಕೆ ತಣ್ಣೀರೆರಚಿದಂತಾಯಿತು (ಕೂ೩). **ಮುಖಕ್ಕೆಮಂಗಳಾರತಿ ಎತ್ತು** = ಮಾಡಿದ ತಪ್ಪನ್ನು ಎತ್ತಿ ಹೇಳಿ ಅವಮಾನಗೊಳಿಸು ; ಛೀಮಾರಿ ಹಾಕು : ಯಾರೂ ಮಾಡದ ಕೆಲಸ ತಾನು ಮಾಡಲು ಹೋಗಿ ಮುಖಕ್ಕೆ ಮಂಗಳಾರತಿ ಎತ್ತಿಸಿಕೊಂಡಳೆಂದಲ್ಲ! (ಚಿಣ್ಣ ೭ ೨೦). **ಮುಖಕ್ಕೆ ಮಸಿ ಬಳಿ** = ಅವಮಾನಗೊಳಿಸು ; ನಾಚಿಕೆಗೇಡುಮಾಡು : ನಿಮ್ಮ ಮುಖಕ್ಕೆ ಮಸಿ ಬಳಿಯುವಂಥ ಕೆಲಸ ನಾನು ಮಾಡಿಲ್ಲ (ಕೂ೩). **ಮುಖ ಗಂಟಿಕ್ಕು** = ಮುಖವು ಬಿಗಿದುಕೊಳ್ಳು, –ಗಡುಸಾಗು: "ಎಂತಹ ಕ್ರೂರಿಗಳಿರಬೇಕು ಇವರು '' ಎಂದುಕೊಂಡು ಮುಖ ಗಂಟಿಕ್ಕಿ ನನ್ನ ಕೋಣೆಗೆ ಹೋದೆನು (ಕೃಕಾಕ. ೦೨೦). **ಮುಖ ಗಂಟುಹಾಕಿಕೊಳ್ಳು** = ಮುಖಗಂಟಿಕ್ಕು : ಇವರಿಬ್ಬರೂ ಈ ವಿಚಾರವಾಗಿ ಒಬ್ಬರ ಸಂಗಡ ಒಬ್ಬರು ಯಾವ ಮಾತನ್ನೂ ಆಡದೆ ಸುಮ್ಮನೆ ಮುಖ ಗಂಟುಹಾಕಿಕೊಂಡೇ ಇರುತ್ತಿದ್ದರು (ಅಜ್ಜಟಿ. ೦೬೦); ನಾನು ಅವರ ಕೈಗೆ ಕಾರ್ಡನ್ನು ಕೊಟ್ಟ ತಕ್ಷಣ ಅವರ ಕಣ್ಣಿಗೆ ಮೊದಲು ಬಿದ್ದದ್ದು ಆ ಎರಡು ನಂಬರು. ಅವರು ಮುಖ ಗಂಟುಹಾಕಿಕೊಂಡರು (ಚಾರಮು. ೯೦). **ಮುಖ ಗಡಿಗೆಯಾಗು** = ದುಮ್ಮಾನವುಂಟಾಗು : ನಮ್ಮ ಮನೆ ಹುಡುಗನಿಗೆ ಓದೋ ವಿಚಾರ ಹೇಳಿದರೇ ಮುಖ ಗಡಿಗೆಯಾಗುತ್ತೆ (ಕೂ೩). **ಮುಖ ಚಿಕ್ಕದಾಗು** = ಮುಖ ಕಿರಿದಾಗು : ಆದನ್ನು ಕೇಳಿ ಚಿಕ್ಕಜ್ಜಿಯ ಮುಖ ಚಿಕ್ಕದಾಯಿತು (ಕಂಕುವು. ೦೦೦). **ಮುಖ ತಗ್ಗಿಸು** = ಮುಖ ಕೆಳಗೆ ಹಾಕು : ಏನೂ ಮಾಡಲು ತೋಚದೆ ವಾಸಂತಿ ಮುಖ ತಗ್ಗಿಸಿ ನಿಂತುಬಿಟ್ಟಳು (ಕೆಮೋಡ. ೦೦೨). **ಮುಖತಪ್ಪಿಸಿಕೊಳ್ಳು** = ಜನರ ಕಣ್ಣಿಗೆ ಬೀಳದಂತಿರು ; ತಲೆ ತಪ್ಪಿಸಿಕೊಳ್ಳು ; ಮರೆಯಾಗಿರು : ವಸಂತರಾಯನಿಗೆ ರಾಘಪ್ಪ ಮುಖ ತಪ್ಪಿಸಿಕೊಳ್ಳುತ್ತಿದ್ದಾನೆಯೇ ಎಂಬ ಸಂದೇಹ ಬರತೊಡಗಿತ್ತು (ಗಂಪಾಯಿ. ೨೩). **ಮುಖ ತಿರುಗಿಸಿಕೊಳ್ಳು** = ತಿರಸ್ಕರಿಸು ; ನಿರ್ಲಕ್ಷ್ಯಮಾಡು : ನಾನು ಮಾತನಾಡುತ್ತಿರುವಂತೆಯೇ ಅವನು ಮುಖ ತಿರುಗಿಸಿಕೊಂಡು ಹೊರಟೇ ಹೋದ (ಕೂ೩). **ಮುಖದ ನೀರಿಳಿಸು** = ತೇಜೋವಧೆ ಮಾಡಿ ಅಹಂಕಾರವನ್ನು ತಗ್ಗಿಸು : ಇನ್ನೊಂದು ಸಲ ಏನಾದರೂ ನನ್ನ ಕೆಣಕಲಿ, ಮುಖದ ನೀರಿಳಿಸಿ ಕಳಿಸಿ ಬಿಡುತ್ತೇನೆ (ಆಕಾಕೂ. ೦೦). **ಮುಖದ ನೀರಿಳಿಸು** = ಮುಖದ ನೀರಿಳಿಸು : ಎದುರಿದುರಿಗೇ ಇವನು ನಮ್ಮ ಮುಖದ ನೀರಿಳಿಸುತ್ತಿದ್ದಾನೆ (ಪಕಪ. ೨೬೩). **ಮುಖಪರಚಿಕೊಳ್ಳು** = ದಿಕ್ಕು ತೋಚದಾಗು : ಕೆಲಸ ಮಾಡಿ ಸಾಕಾಗಿ ಮುಖ ಪರಚಿಕೊಳ್ಳೋ ಹಾಗಾಗಿದೆ (ಕೂ೩). **ಮುಖಮುಚ್ಚಿಕೊಳ್ಳು** = ಮುಖ ತಪ್ಪಿಸಿಕೊಳ್ಳು : ಯಾವಾಗಲೂ ಹೀಗೆ ಮುಖ ಮುಚ್ಚಿಕೊಂಡು ಕೂಡಬೇಡಿ (ಜುಕೇ. ೦೬೪). **ಮುಖ ಮುರಿ** = ೧. ಅವಮಾನಗೊಳಿಸು ; ಮುಖಭಂಗಮಾಡು : ಈ ಮಾನುನಿಯು ಕರದು ಮುಖ ಮುರಿದು ಅಯಿರಾವತನ ನೋಂಪಳಾನೆಂದದಿ ಕುಂತಿ (ಶಾಂತಕ. ೭-೨೦); ರಾಮಚಂದ್ರಯ್ಯನವರು . . . ಬಂದಿರುವಾಗ ಮದುವೆಗೆ ಒಪ್ಪಲಿಲ್ಲವೆಂದರೆ ಅವರ ಮುಖ ಮುರಿದಂತಾಗುತ್ತದೆ (ಕಲಾ. ೭೦). ೨. ಹಿಮ್ಮೆಟ್ಟು ; ಹಿಂದಿರುಗು : ನಿನ್ನ ಸೈನ್ಯಗಳು ಆತನ ಪೆಟ್ಟುಗಳನ್ನು ತಡೆಯಲಾರದೆ ಮುಖ ಮುರಿದು ಓಡವೆ (ಕೃವಾ೦. ೦೨೩). **ಮುಖಮರಳು** = (ಸಂತೋಷದಿಂದ) ಮುಖವು ವಿಕಾಸಗೊಳ್ಳು, –ಹಿಗ್ಗು : ಇಂದಿರೆಯ ಮುಖಮರಳಿತು. (ಚಿಕಾಕ. ೦೨೪). **ಮುಖ ಸಿಂಡರಿಸಿಕೊಳ್ಳು** = ಮುಖಗಂಟಿಕ್ಕು : ಆ ಮಾತನ್ನು ಮೊದಲೇ ನಿರೀಕ್ಷಿಸಿದ್ದಳು ಗಿರಿಜೆ. ಸುಮ್ಮನೆ ಮುಖ ಸಿಂಡರಿಸಿಕೊಂಡು ನಿಂತಳು (ದೀಪಹೂ. ೦೩೦). **ಮುಖಸುಕ್ಕು** = ಮುಖವನ್ನು ತಿರಿಚು, –ಕಿವುಚು : ಅವರು ಹೋಗುವುದನ್ನೇ ತುಟಿಗಚ್ಚಿ, ಮುಖಸುಕ್ಕಿ ನೋಡುತ್ತಾ ನಿಲ್ಲುತ್ತಾನೆ (ಕಂದ್ರಕ. ೦೩-೨೦). [ಸಂ.]

**ಮುಖಂಡ** (ನಾ). ಮುಂದಾಳು ; ನಾಯಕ : ಇಬ್ಬರು ಮುಖಂಡರು ಮುಂದಾಳಾಗಿ ನಾವು ಹೋಗುವೆವೆಂದರು (ಕೇಚಿಚ. ೨೭); ಈ ನಾನಾ ಸಾಹೇಬನೇ ಕ್ರಿ. ಶ. ೧೮೫೭ರ ಸಂಗ್ರಾಮಕ್ಕೆ ಮುಖಂಡನಾಗಿ ಮುಂದು ವರಿದನು (ಕ್ರಾಂತಿ. ೩೭). [← ಮರಾ. ಮುಖಂಡ ]

**ಮುಖಕ್ಷೌರ** (ನಾ). ಮುಖದ ಮೇಲಿನ ಕೂದಲನ್ನು ಬೋಳಿಸು ವುದು : ನಾನು ಬೇಗಬೇಗನೇ ಮುಖಕ್ಷೌರ ಮಾಡಿಸಿಕೊಂಡೆನು (ಹೇಮುಂತ. ೨೩೭). [ಸಂ.]

**ಮುಖಗೇಡಿ** (ನಾ). ಜನರೊಂದಿಗೆ ಸರಿಯಾಗಿ ಬೆರೆಯದವನು ; ಸಂಕೋಚಸ್ವಭಾವದವನು ; ಮುಸುಂಡಿ : ನಾವು ಸಾಮಾನ್ಯವಾಗಿ ಎಂಥವನನ್ನು ಸಿಡುಕು ಮುಖಗೇಡಿ . . . ಜೊತೆ ಬೆರೆದ ಗೊಡ್ಡು ಎಂದು ಕರೆಯುತ್ತೇವೆಯೋ ಅಂಥವನು ಸಹ ಸಮಾಜಸಂಬಂಧಗಳನ್ನು ಒದರಡ ನ್ನಾದರೂ ಉಳಿಸಿಕೊಂಡಿರುತ್ತಾನೆ .(ರಾಶ್ಮಿಶಾ. ೩೭). [ಮುಖ +ಕೇಡಿ$_1$]

**ಮುಖಗೊಡು** (ಕ್ರಿ). ಮುಖವನ್ನು ತೋರಿಸು ; ಕಾಣಿಸಿಕೊಳ್ಳು : ಬುಧರ ಮತಿಸಂಪಾದನೆಗೆ ಮುಖಗೊಡದ . . . ಬ್ರಹ್ಮೇಂದ್ರಾದಿ ಸುರರುಬ್ಬಟೆಗೆ ಸೋಲದನಾದಿದೇವರ ದೇವ ಶಿವನನು ಕಂಡನುಬುಜಭವ (ಕುಮ್ಮಾಕ. ೭-೦೭). [ ಮುಖ + ಕೊಡು$_1$ ]

**ಮುಖಚರ್ಯೆ** (ನಾ). ಮುಖದಲ್ಲಿ ತೋರಿಬರುವ ಅಭಿವ್ಯಕ್ತಿ : ಮುಖಭಾವ : ಮಾಸ್ಲೆಸಿಕೋವನ ಮುಖಚರ್ಯೆಯಲ್ಲಿ ನಿರುತ್ಸಾಹ ಮ್ಲಾನತೆಗಳು ತಲೆದೋರಿದುವು (ಕೃಪಶು. ೨೫೦); ರಸಾನುಭವವನ್ನು ಉಪಾಧ್ಯಾಯರು ಅವರ ಮುಖಚರ್ಯೆಯಿಂದ ಅರಿತುಕೊಳ್ಳಬೇಕು (ಶಿಕ್ಷದ. ೨೪೦). [ಸಂ. ಮುಖಚರ್ಯಾ]

**ಮುಖಚಹರೆ** (ನಾ). ಮುಖದ ಮೋಡಿ,– ರೀತಿ : ಅವಳ ಮುಖ ಚಹರೆಯುಳ್ಳದ್ದ ಒಂದೊಂದು ಗೆರೆಯೂ, ಸುಕ್ಕೂ ಅವಳ ಕಠೋರತೆ ಯನ್ನು ವ್ಯಕ್ತಪಡಿಸುತ್ತಿದ್ದವು (ಮಾಂಗಿಕ. ೨); ಬಾಲ್ಯದ ಕನಸುಕಾಣುವ ಮುಗ್ಧಹುಡುಗಿಯಂತಿವಳ ಮುಖಚಹರೆ (ಕಂಚು. ೯೬-೩). [ಮುಖ + ಚಹರೆ]

**ಮುಖಚಾರಿ** (ನಾ). [ನಾಟ್ಯ] ನೃತ್ಯದ ಒಂದು ಭಂಗಿ : ತಿರುಪುಗಳ್ಚರಿ ಲವಣಿ ಲಾಗು ಮುಖಚಾರಿವುಪ್ಪರಬೆಡಗು ಗುಂಡಲಾದಿಯು ಬೀಕ ಬಿನ್ನಣದ ಗರುವಿಕೆಯ ಪಾತ್ರದೊಳು ನಿಲ್ಲಲು ಮಲುಹಣಿದು ಮಲುಹಣ ಕಂಡು ಬೆರಗಾದನು (ಸಭಕ. ೨-೨೯). [ಸಂ. ಮುಖಚಾರೀ]

**ಮುಖಚಾಳಿಯ** (ನಾ). [ಸಂಗೀತ] ರಾಗೋಚಿತವಾದ ಸ್ವರಗಳನ್ನು ಗಮಕಸಹಿತವಾಗಿ ಪ್ರಯೋಗಿಸಿ ಹಾಡುವಿಕೆ.

**ಮುಖಚಾಳಿಯರು** = ರಾಗೋಚಿತವಾದ ಸ್ವರಗಳನ್ನು ಗಮಕ ಸಹಿತವಾಗಿ ಪ್ರಯೋಗಿಸಿ ಹಾಡುವವರು : ಮೇಳದಲಿ ಗಂಧರ್ವ ರಿಪ್ಸರ್ತ್ರೀಳು ತುಂಬುರಸಹಿತ ಶುದ್ಧದ ಸಾಳಗದ ಸಂಕೀರ್ಣದೇಶಿಯ ವಿವಿಧ ರಚನೆಗಳ ಬಾಳಿಯರ ಸುರಗಣಿಕೆಯರ ಮುಖಚಾಳಿಯರ ಸಂಗೀತತಾಳದ ತೂಳುವಟಿ ತುಂಬಿದುದು ಕುಸುಮಾಯುಧನ ಕಳಕಳವ (ಕುಮ್ಮಾಸ. ೦-೨೦). [ಮುಖ+ಚಾಳಿಯ (<ಚಳಯ್ಸು)]

**ಮುಖಚಿಟ್ಟು** (ನಾ). ಯಾವುದಾದರೊಂದು ಆಹಾರದ ಅತಿಸೇವನೆ ಯಿಂದ ಬಾಯಿಕಟ್ಟು ಜುಗುಪ್ಸೆಯುಂಟಾಗುವುದು, –ಚಟ್ಟರೆ ಯಾಗುವುದು : ಮೂರುದಿನಗಳಿಂದ ಮದುವೆಮನೆಯಲ್ಲಿ ಸಿಹಿ ಊಟಮಾಡಿ ಮುಖಚಿಟ್ಟು ಬಂದಿದೆ (ಕೂ೩). [ಮುಖ+ಚಿಟ್ಟು]

**ಮುಖಚಿತ್ರ** (ನಾ). ಪುಸ್ತಕ, ಪತ್ರಿಕೆ ಮೊದಲಾದುವುಗಳ ರಕ್ಷಾಪುಟದ ಮೇಲಿನ ಚಿತ್ರ : ಈ ಪೀಠಿಕಾಭಾಗಕ್ಕೆ ಸಂಬಂಧಿಸಿದ ಭಾಗಗಳಾವುವೆಂದರೆ : (೧) ಪುಸ್ತಕದ ಸಂಕ್ಷೇಪವಾದ ಹೆಸರು, (೨) ಮುಖಚಿತ್ರ, (೩) ಮುಖ ಪತ್ರ . . . (೧೧) ಉಪನಾಮ (ಮುದ್ರಕ. ೯೨). [ಸಂ.]

**ಮುಖಚೂರ್ಣ** (ನಾ). ಅಲಂಕಾರಕ್ಕಾಗಿ ಮುಖಕ್ಕೆ ಹಚ್ಚಿಕೊಳ್ಳುವ ಒಂದು ಬಗೆಯ ಸುಗಂಧದ ಪುಡಿ : ಮುಖಚೂರ್ಣ ಎಂಬ ಪದವನ್ನು ರಘುವಂಶಕಾವ್ಯದಲ್ಲಿ ಕಾಳಿದಾಸಮಹಾಕವಿಯು ಉಪಯೋಗಿಸಿದ್ದಾನೆ (ಶಾರದ. ೩೭೬ ಅಡಿ) ; ಮುಖಚೂರ್ಣದ (Face Powder) ಬಳಕೆಗೆ ಯಾವಳೋ ಕಪ್ಪಗಿದ್ದ ಹೆಂಗಸೊಬ್ಬಳು ಕಾರಣವಿರಬಹುದು (ನಾತಿಗೆ. ೨೬೭); ಬತ್ತಿದ ಕೆನ್ನೆಗೆ ಹಚ್ಚಿದ ಮುಖಚೂರ್ಣದ ಬಣ್ಣ (ತಿರಂ. ೧೧-೧೪). [ಸಂ.]

**ಮುಖಚೇಷ್ಟೆ** (ನಾ). ೧. ಮುಖದ ಭಾವ ; ಮುಖಚರ್ಯೆ ; ಮುಖಭಂಗಿ : ಇವನ ಗತಿ ಮುಖಚೇಷ್ಟೆ ಭಾವೋತ್ಸವ ವಿಲಾಸವುಪೇಕ್ಷೆ . . . ಇವೇ ಸಾಕಿವನು ಘಾಟದ ವೀರನೆಂದರು ವೀರರರ್ಜುನನ (ಕುವ್ಯಾ. ೮. ೧೫-೨೩). ೨. ಕೀಟಲೆ, ತಮಾಷೆಗಳಿಗಾಗಿ ಮಾಡುವ ಮುಖವಿಕಾರ : ರಂಗವ್ವ . . . ಮಗುವಿನೆದುರು ನಿಂತು, ತಮ್ಮ ಹಲ್ಲಿಲ್ಲದ ಬಾಯಿಯನ್ನು ತೋರಿಸುತ್ತಾ, ಮುಖಚೇಷ್ಟೆ ಮಾಡಿದರು (ರಂಗವ. ೬೩).

[ಸಂ. ಮುಖಚೇಷ್ಟಾ]

**ಮುಖಜ** (ನಾ). ೧. ಬ್ರಹ್ಮನ ಬಾಯಿಯಿಂದ ಹುಟ್ಟಿದವನು ; ಬ್ರಾಹ್ಮಣ ೨. ಬಾಯಿಯಲ್ಲಿ ಹುಟ್ಟಿದುದು ; ಹಲ್ಲು. ೩. ಅಂಗಜ ; ಕಾಮ. ೪. [ನಾಟ್ಯ] ಆಂಗಿಕಾಭಿನಯದ ಮೂರು ಬಗೆಗಳಲ್ಲಿ ಒಂದು : ಆಂಗಿಕಾಭಿನಯವು ಶಾರೀರ, ಮುಖಜ, ಚೇಷ್ಟಾಕೃತ ಎಂದು ಮೂರು ವಿಧ ; ಕೈ ಕಣ್ಣು ಮುಂತಾದ ಅಂಗೋಪಾಂಗಗಳ ಚಲನೆಗಳು ಶಾರೀರ ಮತ್ತು ಮುಖಜ (ಕಂಪಾಟಿ. ೧೧) ; ಮುದ್ರೆಗಳು ಮೂರು ವಿಧವಾಗಿವೆ. ೧. ಶಾರೀರ, ೨. ಮುಖಜ, ೩. ಚೇಷ್ಟೀಕೃತ (ಅಭಾಕ್ಷ. ೯೪). **ಮುಖಜನ್ಯೆಯ** = ಮನ್ಮಥನ ತಂದೆ ; ವಿಷ್ಣು : ಮುಖಜನ್ಯೆಯನೆ ಮುಕುತಾರ್ಥವಾಹದೇನೊ ಅಖಿಳತಾಮಸಗಳು ಎನಗಿಲ್ಲವೊ (ಎಡಕ್ಕ. ೧೦೭-೧). [ಸಂ.]

**ಮುಖತಃ** (ಅ). ಪ್ರತ್ಯಕ್ಷವಾಗಿ ; ಮೊಖ್ತಾ : ಶಚೀಂದ್ರನು ಅವನ ಹತ್ತಿರಕ್ಕೆ ಹೋಗಿ ವಿಷಯಗಳನ್ನೆಲ್ಲಾ ಮುಖತಃ ತಿಳಿದುಕೊಂಡನು (ಬಂಕಿಮ. ೯೨). [ಸಂ. ಮುಖತಸ್]

**ಮುಖದರುಶನ** (ನಾ). ಮುಖವನ್ನು ಕಾಣುವುದು : ವರುಣದೇವರಿಗೊಬ್ಬ ಪುತ್ರನ ವರಸಿ ಬೇಡಿದೆ ಪುತ್ರವರಮುಖದರುಶನವ ಮಾಡುವೆ ನೆನುತಲಾ ಮಗನು ಮೋಜಿಯನು ತೋಜಿ ಮುಜುದಿನವಗಲಿ ಹೋದನು (ಸಂಶಶ. ಶಂ. ೧-೧೭) ; ಏನಯ್ಯ ಕಾಲಪುರುಷ ನಿನ್ನ ಮುಖದರುಶನ ವನೊಮ್ಮೆ ದಯಪಾಲಿಸಯ್ಯ (ಶಲಮು. ೫೬-೨). [<ಸಂ. ಮುಖದರ್ಶನ]

**ಮುಖದರ್ಶನ** (ನಾ). = ಮುಖದರುಶನ : ವನಜಮುಖಿ ಕೇಳ್ ಪುತ್ರ ಮುಖದರ್ಶನವು ಸುಲಭವೆ ಪುಣ್ಯಹೀನರಿಗೆ (ಕುವ್ಯಾ. ೮. ೯-೨೯) ; ಅವನ ಮುಖದರ್ಶನದಿಂದ ಅವಳಲ್ಲಿ ಕೋಪವೇ ಎದ್ದು ನಿಂತಿತು (ಕಂಠೀರವ. ೦೬).

[ಸಂ.]

**ಮುಖದಾಕ್ಷಿಣ್ಯ** (ನಾ). (ಮನಸ್ಸಿನಲ್ಲಿ ಇಷ್ಟವಿಲ್ಲದಿದ್ದರೂ) ಬೇರೆಯವರ ಮನಸ್ಸಿಗೆ ನೋವಾಗದಂತಿರಲು ತೋರಿಸುವ ಸೌಜನ್ಯ, ಕರುಣೆ ಮುಂತಾದುವು : ಆ ಸಿಟ್ಟಿನಲ್ಲಿ ಆತನಿಗೆ ಯಾವ ಸಂಯಮವೂ ಉಳಿಯುವುದಿಲ್ಲ, ಯಾರ ಮುಖದಾಕ್ಷಿಣ್ಯವನ್ನೂ ಅತ ನೋಡುವುದಿಲ್ಲ (ಚಿಕಂಜಾ. ೧೭).

[ಸಂ.]

**ಮುಖದಿರುಹು** (ಕ್ರಿ). ೧. ಮುಖವನ್ನು ಹಿಮ್ಮುಖವಾಗಿ ಹೊರಳಿಸು ; ಹಿಂದಕ್ಕೆ ತಿರುಗು : ಬೆಜಗಡರಿ ಮುಖದಿರುಹಿ ಹಿಂದಣನಿಜದ ಕರ್ಣನ ನೋಡಿ ಮುಖದಲಿ ಕಿಜುನಗೆಯ ಕೇವಣಿಸಿ ನುಡಿದನು (ಕುವ್ಯಾ. ದ್ರೋ. ೭-೩೩). ೨. ಕೋಪ, ಅಸಮಾಧಾನಗಳಿಂದ ಮುಖವನ್ನು ಬೇರೆಡೆಗೆ ತಿರುಗಿಸು ; ದುಮ್ಮಾನವನ್ನು ಸೂಚಿಸು : ದಾಯಾದ್ಯರೊಳಗವತರಿಸಿದನು ಮಗನೆನುತ ಮುಖದಿರುಹಿದಳು ಗಾಂಧಾರಿ (ಕುವ್ಯಾ. ೮. ೯-೪೪) ; ಎಲೆ ಹೊಲೆಯ ಪೋಗೆಂದಬಲೆ ಮುಖದಿರುಹಿದಳು ಖಾತಿಯಲಿ (ಹರಿಶ್ಚ. ೫-೩-೩೩). ೩. ಹಿಂದಕ್ಕೆ ಹೋಗು ; ಹಿಮ್ಮೆಟ್ಟು ; ಸೋಲು : ಪವನಸುತ ಮುಖದಿರುಹಿದನು . . . ಕರ್ಣನ ಖಾತಿ ಮೊಪ್ಪರಿಸೆ ಐವರ ಮುಜಿದುದು ವಿಜಯಲಕ್ಷ್ಮಿಯ ಸವತಿ ಸೇರಿತು ಸುಭಟರಿಗೆ (ಕುವ್ಯಾ. ಕ. ೧೧-೪೦). ೪. ಹಿಮ್ಮೆಟ್ಟುವಂತೆ ಮಾಡು ; ಸೋಲಿಸು : ವಿಗಡರೆಸುಗೆಯ ಭೂರಿಘಾಯದ ಹಿಂಡು ತಜಿದವು ಹೊಗುವ ಗಂಡಿಗರ ವಾರುವನ ಮುಖದಿರುಹಿದವು ಮದವಾರಣಂಗಳ ಕೊಡಹಿದವು (ಕುವ್ಯಾ. ೮. ೦೬-೪೧). ೫. ನಿರ್ಲಕ್ಷಿಸು ; ಉಪೇಕ್ಷಿಸು : ಜೀಯ ಸಾಕಿನ್ನುಳಿದವರದೊಳಿನಗೇನ ಬೆಸಸಿದರನಿತ ತಾ ಮುಖದಿರುಹಿದರೆ ಡಿಂಗರಿಗನಲ್ಲ (ಕುವ್ಯಾ. ಶಲ್ಯ. ೩-೪೦).

[ಮುಖ + ತಿರುಹು$_1$ (<ತಿರಿಪು$_1$)]

**ಮುಖದೋಜು** (ಕ್ರಿ). ಮುಖವನ್ನು ತೋರಿಸು ; ಕಾಣಿಸಿಕೊಳ್ಳು ; ಗೋಚರಿಸು ; ಮುಂದೆ ಬರು : ಬಾಲಕರ ಪೂರ್ಣೇಂದು ಬಾರೋ ರಿಪುಕುಲಾಂತಕನಿಪುಣ ಮುಖದೋಜೆಲೊ (ಕುವ್ಯಾ. ದ್ರೋ. ೬-೨೦).

[ಮುಖ + ತೋಜು]

**ಮುಖದ್ರೋಣಿಕೆ** (ನಾ). [ಅಶ್ವಶಾ] ಕುದುರೆಯ ನಾಲಗೆಯು (ದೋಣಿಯಂತೆ) ಬಾಗುವ ಒಂದು ಬಗೆಯ ರೋಗ : ತಾವರೆಯಂ ಕನ್ನೆಯ್ದಿಲ ಪೂವಂ ಪ್ರೋಥಾಯುರೇಷೆ ಪೋಲೆ ವಿಶೇಷಂ ತೀವಿ ಮುಖ ದ್ರೋಣಿಕೆಯಿಂದಾ ವಾಜಿಗೆ ಮರಣಮಿರ್ಪತಯ್ದು ಬ್ದದೊಳ್ (ಅಶ್ವಶಾ ೫-೬೧).

[ಸಂ. ಮುಖದ್ರೋಣಿಕಾ]

**ಮುಖದ್ವಾರ** (ನಾ). ಬಾಯಿ : ಮುಖದ್ವಾರದಿಂದ ಗರ್ಭಕುಹರವನ್ನು ಪ್ರವೇಶಿಸಿದ ಆ ಮದ್ಯಭೂತವು ಸ್ವಲ್ಪ ಹೊತ್ತಿನೊಳಗಾಗಿ ಬುದ್ಧಿಯನ್ನೆಲ್ಲ ಹಾಳುಮಾಡಿದುದರಿಂದ ಮತ್ತನಾಗಿ ಅವಿವೇಕಿಯಾದನು (ಕಲಿಶ. ೩೯).

[ಸಂ.]

**ಮುಖಪಟ್ಟೆ** (ನಾ). ಕುದುರೆ ಮುಂತಾದ ಪ್ರಾಣಿಗಳ ನೆತ್ತಿಗೆ ಹಾಕುವ ಒಂದು ಬಗೆಯ ಅಲಂಕಾರಸಾಧನ : ಆಗ ಭಗದತ್ತನು ಹದಿನಾಲ್ಕು ತೋಮರಗಳನ್ನು ಆ ದಶಾರ್ಣದೇಶಾಧಿಪತಿಯ ಆನೆಯ ಮೇಲೆ ಇರುವ ಸುವರ್ಣಮಯವಾದ ಮುಖಪಟ್ಟಿಯ ಮೇಲೆ ಪ್ರಯೋಗಿಸಲು (ಕೃವಾಶೀ. ೧೪೮). 'ಮೊಗವಟ್ಟೆ' ಪರಾ.

[ಸಂ. ಮುಖಪಟ್ಟ. / ತಮಿ. ಮುಕಪಟ್ಟು. / ಮರಾ. ಮುಖಪಟ್ಟಾ]

**ಮುಖಪತ್ರ** (ನಾ). ಪುಸ್ತಕ ಅಥವಾ ಪತ್ರಿಕೆಯ ಮೊದಲಿನ ಪುಟ,— ಹಾಳೆ ; ಮುಖಪುಟ : ಈ ಶೀರ್ಷಿಕಾಭಾಗಕ್ಕೆ ಸಂಬಂಧಿಸಿದ ಭಾಗಗಳಾವುವೆಂದರೆ : (೧) ಪುಸ್ತಕದ ಸಂಕ್ಷೇಪವಾದ ಹೆಸರು, (೨) ಮುಖಚಿತ್ರ, (೩) ಮುಖಪತ್ರ (ಗ್ರಂಥದ, ಗ್ರಂಥಕರ್ತೃವಿನ ಮತ್ತು ಪ್ರಕಾಶಕನ ಹೆಸರುಳ್ಳದ್ದು) . . . (೧೧) ಉಪನಾಮ (ಮುದ್ರಕ. ೯೨); ಮುಖಪತ್ರ ಮುದ್ದಾಗಿ ಮುದ್ರಣವಾಗಿ . . . ವರ್ಣಚಿತ್ರಗಳಿಂದ ಪರಿಪೂರ್ಣವಾಗಿರಬೇಕು (ಚಿತ್ರದ. ೨೬೯); "ಬಲದೇವ ಮತ್ತು ತಾರೆಯರ ನರ್ತನವೆಂದು" ಮುಖಪತ್ರಗಳ ಮೇಲೆ ವರ್ಣಚಿತ್ರಗಳನ್ನೊಳಗೊಂಡು ಪ್ರಚಾರವಾಯಿತು (ಕಲಾಶಾ. ೧೦೩). [ಸಂ.]

**ಮುಖಪತ್ರಿಕೆ** (ನಾ). ಮುಖ್ಯವಾದ ಪತ್ರಿಕೆ ; ಪ್ರಸಿದ್ಧವಾದ ಪತ್ರಿಕೆ : ಇವರ ಹೆಸರು ಸಾಧ್ಯವಿದ್ದರೆ . . . ಮುಖಪತ್ರಿಕೆಯಲ್ಲಿ ಬಂದುಬಿಟ್ಟರೆ ಇವರಿಗೆ ಸದ್ಗತಿ ಸಿಕ್ಕಂತೆಯೇ (ಹುತ್ತು. ಹು. ೯೭). [ಸಂ. ಮುಖಪತ್ರಿಕಾ]

**ಮುಖಪರಿಚಯ** (ನಾ). (ಯಾರೋ ಒಬ್ಬ ವ್ಯಕ್ತಿಯನ್ನು) ಹಿಂದೆ ನೋಡಿದ ಗುರುತು : ಎಲ್ಲೋ ನೋಡಿದ ನೆನಪು . . . ಮುಖಪರಿಚಯವೂ ಇದೆ (ಚಳುವ. ೯೭). [ಸಂ.]

**ಮುಖಪರಿಮಳ** (ನಾ). ಮುಖದಿಂದ ಹೊರಡುವ ಸುಗಂಧ ; ಉಸಿರಿನ ಸುವಾಸನೆ : ಚಂದ್ರಕಾಂತಸುಧಾವೇದಿಕಾಮಧ್ಯಭೂಮ್ಯಂತ

ರಾಳೆದೊಳ್ ಒರ್ವಳ್ ಮುಖಪರಿಮಳನಿಪತದ್ಭ್ರಮರವಾತಾಕ್ರಾಯಾಸಿತೆ ಯಾದಳಂ (ಶಾಂತಿಪು. ೮-೮೭ ವ). [ಸಂ. ಮುಖಪರಿಮಲ]

**ಮುಖಪಾಠ** (ನಾ). ಪುಸ್ತಕದ ಆಧಾರವಿಲ್ಲದೆ ಬಾಯಲ್ಲಿಯೇ ಹೇಳು ವಂತೆ ಅಭ್ಯಾಸಬಲದಿಂದ ಜ್ಞಾಪಕದಲ್ಲಿಡುವುದು ; ಬಾಯಿಪಾಠ ; ಉರು : ಅವುಗಳನ್ನು ಮೇಲಿಂದ ಮೇಲೆ ಓದಿ ಧ್ಯಾನದಲ್ಲಿಡಬೇಕು. ಆದಷ್ಟು ಮುಖಪಾಠ ಮಾಡಬೇಕೆಂದು ಒತ್ತಾಯಪಡಿಸುತ್ತಿದ್ದರು (ಶೇಪಾಪ. ೩೭). [ಸಂ.]

**ಮುಖಪಾವಡ,** ಮುಖಪಾವುಡೆ (ನಾ). ೧. ಅವಕುಂಠನ ; ಮುಸುಕು : ಹಡಪ ಕನ್ನಡಿಯು ಮುಖಪಾವಡ ಕುಜಾಯುಮಂ ಪಿಡಿದು . . . ಮಾನುನಿಯರು (ಪಪರೋ. ೫-೯೩). **ಮುಖಪಾವುಡೆ :** ೨. ಮುಖವನ್ನು ಒರಸಿಕೊಳ್ಳಲು ಉಪಯೋಗಿಸುವ ಬಟ್ಟೆ : ಅೞಳಂಕ ರೂಪನ ಮುಖಚಂದ್ರಮನ ಕೂಡಿ ಸುಖದೊಳೋಲಾಡು 'ನೀನೆಂದು ಸುರಿ ದರಹಸಿತ ಬೆಳ್ದಿಂಗಳೀವೊಲು ಶುಭ್ರಮುಖಪಾವುಡೆಯು ನೀಡಿದಳು (ಕಂಪಿ. ೨೪-೬೪). [ಮುಖ + ಪಾವಡ$_1$ (< ಪಾವುಡ$_1$)]

**ಮುಖಪಾವುಡೆ** 'ಮುಖಪಾವಡ' ನೋ.

**ಮುಖಪುಟ** (ನಾ). = ಮುಖಪತ್ರ : ಶ್ರೀ ಕಾರಂತರು ಈ ಪುಸ್ತಕದ ಮುಖಪುಟಕ್ಕೆ ತಮ್ಮ ಚಿತ್ರದಿಂದ ಈ ಸಂಗ್ರಹವನ್ನು ಅಲಂಕರಿಸಿದ್ದಾರೆ (ಕೇಪೋಡ. ೯ ಶಪ್ಪ ಪುಟ); ಇವುಗಳನ್ನು ಸಾಮಾನ್ಯವಾಗಿ ಗ್ರಂಥದರ್ಶಕದ ಮೇಲೆ, ಮುಖಪುಟದ ಹಿಂಬದಿಗೆ . . . ಬರೆಯಲಾಗುತ್ತದೆ (ಗ್ರಂಶಾಂ. ೩೨). [ಸಂ.]

**ಮುಖಪೂರಣ** (ನಾ). ನೀರು ಮುಂತಾದ ದ್ರವಪದಾರ್ಥಗಳಿಂದ ಬಾಯಿ ಮುಕ್ಕಳಿಸುವುದು : "ಗಂಡೂಷಃ, ಮುಖಪೂರಣಂ – ಈ ೨ ಮುಕ್ಕುಳ್" (ಕಣಾಯು. ೧೩೦-೦೨೦). [ಸಂ.]

**ಮುಖಪ್ರಕ್ಷಾಳನ** (ನಾ). ಮುಖವನ್ನು ತೊಳೆಯುವಿಕೆ ; ಮುಖ ಮಜ್ಜನ : ಅಂತು ನೃಪತಿ ವ್ಯಗ್ರನಾಗಿ ಮುಖಪ್ರಕ್ಷಾಳನಾರ್ಥಂ ಪೇರಡವಿ ಯೊಳಂಜಳಿಯಿಂ ಜಲಮಂ ತಂದು (ಕಾದುಕೂ. ೭೦೦); ತಣ್ಣನೆಯ ನೀರಿ ನಲ್ಲಿ ಮುಖಪ್ರಕ್ಷಾಳನ, ಪಾದಪ್ರಕ್ಷಾಳನಗಳನ್ನು ಮಾಡಿ . . . ಪ್ರಯಾಣ ವನ್ನು ಮುಂದುವರಿಸಿದರು (ಚಾಂಶಲಾ. ೨೧೬). 'ಪಾದಪ್ರಕ್ಷಾಲನ' ಪರಾ. [ಸಂ. ಮುಖಪ್ರಕ್ಷಾಲನ]

**ಮುಖಪ್ರಸಾಧನ** (ನಾ). ಮುಖದ ಅಲಂಕಾರ : ಪೊಸಮಾಣಿಕವಲ್ಲಣ ಮಚ್ಚಮುತ್ತು ತಳ್ತಿಸವ ಮುಖಪ್ರಸಾಧನಂ . . . ಒಪ್ಪೆ ಬಂದುಮಂದಸ ದೃಶವಾಜಿಗಳ್ (ರಾಶಕೀ. ೧೩-೬೨). [ಸಂ.]

**ಮುಖಬಿಲೆ** 'ಮೋಕಾಬಿಲೆ' ನೋ.

**ಮುಖಬೆಲೆ** (ನಾ). ೧. ಹಣ ಅಥವಾ ವಸ್ತುವಿನ ಮೇಲೆ ನಮೂ ದಿಸುವ ಬೆಲೆ ; ನಮೂದು ಬೆಲೆ : ಆ ಪುಸ್ತಕದ ಮುಖಬೆಲೆ ನಾಲ್ಕು ರೂಪಾಯಿ (೭೦೦). ೨. (ಅಲಂ) ಯೋಗ್ಯತೆ ; ಅಂತಸ್ತು : ಅವನು ಯಾರನ್ನಾದರೂ ಅವರ ಮುಖಬೆಲೆಗೆ ಮಾತ್ರ ಸ್ವೀಕರಿಸುವವನು (ಗಂಶಾಯು. ೭೫). [ಮುಖ + ಬೆಲೆ$_1$]

**ಮುಖಭಂಗ** (ನಾ). (ಅಲಂ) ಎದುರೆದುರಿಗೇ ಮಾಡುವ ಅವ ಮಾನ ; ತೇಜೋವಧೆ : ಊರಲ್ಲೆಲ್ಲ ಜಂಬ ಕೊಚ್ಚುತ್ತ ಅಲೆಯುತ್ತಿದ್ದ ಶಾಮಣ್ಣನ ಗುಂಪಿನವರಿಗೆಲ್ಲ ಮುಖಭಂಗವಾದಂತಾಗಿತ್ತು (ಕುಶ್ಯಾ.ಕೆ. ೭೮) ; ಹಿಂದೆ ಎಷ್ಟೋ ಸಲ ನಿನ್ನಿಂದ ಅವರಿಗೆ ಮುಖಭಂಗವಾಗಿದೆ (ಹಳ್ಳಿಪಾ. ೨೮). [ಸಂ.]

**ಮುಖಭಂಗಿ** (ನಾ). ಮುಖದ ಭಾವ, – ರೀತಿ ; ಮುಖಮುದ್ರೆ : ರಾಮನುಂ . . . ಶೋಕಮುಖಭಂಗಿಯಿಂದಶ್ರುಲೋಚನನಾಗಿ ನಿಡು ಸುಯ್ದುನೆರ್ದೆ ನೊಂದನೋಲ್ (ಶ್ರೀರಾಪಮ. ೦೭೬-೫೦೮); ಶಿಂಗನ ಮುಖ ಭಂಗಿಯನ್ನು ನೋಡಿಯಾದ ಮೇಲೆ ಸ್ವಲ್ಪ ಹಿಂದೇಟು ಹಾಕಿದ (ಕಸುಹೊ. ೭೭). [ಸಂ. ಮುಖಭಂಗೀ]

**ಮುಖಭಂಗಿತ** (ನಾ). ಅಪಮಾನವನ್ನು ಹೊಂದಿದವನು ; ನಾಚಿಕೆಗೆ ಈಡಾದವನು : ಮರುಕ್ಷಣ ನಾನು . . . ಕೋಣೆಯಿಂದ ಹೊರಗೆ ಮುಖ ಭಂಗಿತನಂತೆ ಬಂದೆನು (ಹೇಮಂತ. ೩೭೭). [ಸಂ.]

**ಮುಖಭದ್ರ** (ನಾ). ಮುಂಭಾಗದ ಅಂಗಳ ; ಮುಖಮಂಟಪ : ಶ್ರೀಮನ್ಮಹಾಮಣ್ಡಳೇಶ್ವರಂ ಎಚಿಪರಸದೇವಂ ಬಡಗಣಮುಖಭದ್ರವ ನಳಂಕಾರಸಹಿತ ಮಾಡಿಸಿದ ಮಂಗಳಮಹಾಶ್ರೀ (ಎಕ. VII (s), ಶಿಕಾಂ. ೩೩೦-೦ ; ಸು.1200). [ಸಂ.]

**ಮುಖಭಾವ** (ನಾ). = ಮುಖಭಂಗಿ : ಅವನು ಮಾತಾಡುತ್ತಿದ್ದಾಗ ವ್ಯಕ್ತವಾಗುತ್ತಿದ್ದ ಮುಖಭಾವ ಅವಳ ನೆನಪುಗಳನ್ನು ಕೆರಳಿಸುತ್ತಿತ್ತು (ಕೃಪರು. ೦೯೦). [ಸಂ.]

**ಮುಖಮಂಟಪ** (ನಾ). ದೇವಾಲಯ, ಅರಮನೆ ಮುಂತಾದುವುಗಳ ಮುಂಭಾಗದ ಹಜಾರ ; ಮೊಗಸಾಲೆ : ಮುಖಮಂಟಪದ ಕ್ಷುಲ್ಲಕ ದ್ವಾರದ ಹೇಮಕುಂಭ ಎಂಟುಸಾವಿರ (ಕಶಾರ. ೦೬೭); ಅದರ ಮುಂದೆ ರಮಣೀಯವಾದ ಮುಖಮಂಟಪವನ್ನು . . . ಮಾಡಿದ್ದಾರೆ (ಶುಂಶಾಯು. ೬-೫೭); ಮುಖಮಂಟಪ ದೇವಾಲಯಗಳಲ್ಲಿ ನವರಂಗದ ಮುಂಭಾಗದಲ್ಲಿ ಸಾಧಾರಣವಾಗಿ ಇರುತ್ತದೆ. ಇದರ ಮೂಲಕವೇ ಜನಗಳು ಒಳಕ್ಕೆ ಹೋಗುವುದು (ಶ್ಮಪಾಶು. ೬೪). [< ಸಂ. ಮುಖಮಂಡಪ]

**ಮುಖಮಂಡನ** (ನಾ). ತುಟಿಯನ್ನು ಅಂದಗೊಳಿಸುವಂತಹುದು ; ತಾಂಬೂಲ : 'ಮುಖಮಂಡನಕ್ರೀಡೆ' ಪರಾ. [ಸಂ.]

**ಮುಖಮಂಡನಕ್ರೀಡೆ** (ನಾ). ತಾಂಬೂಲಚರ್ವಣ : ಗಗನಮಂಡಲಮಂ ಚಕ್ರವರ್ತಿ ಮುಖಮಂಡನಕ್ರೀಡೆಯಿಂ ನೋಡುತ್ತಿರ್ಪನ್ನೆಗಂ (ಚಂದ್ರಪು. ೯-೪ ವ). [ಸಂ. ಮುಖಮಂಡನಕ್ರೀಡಾ]

**ಮುಖಮಂಡಪ** (ನಾ). = ಮುಖಮಂಟಪ : ಹೊರಗಿನ ಮುಖ ಮಂಡಪ ಮತ್ತಾವುದೋ ದೇವಾಲಯದ ಕಲ್ಲುಗಳಿಂದ ನಿರ್ಮಿತವಾಗಿದೆ (ಹೊಯ್ಸಪಾ. ೯೫). [ಸಂ.]

**ಮುಖಮಜ್ಜನ** (ನಾ). ಮುಖವನ್ನು ತೊಳೆಯುವಿಕೆ; ಮುಖಪ್ರಕ್ಷಾಳನ; ರಾವಣನು ವಿದಿತ ಮುಖಮಜ್ಜನದ ಸಲಿಲಿರೆ . . . ಚಾರರು ಬಂದು ಹೇಳಿದರು (ಶಾರಾ. ೦೭-೦) ; ಹಾಸಿಗೆಯನ್ನು ಸುರುಳಿ ಮಾಡಿ ಒಳಕೋಣೆಯಲ್ಲಿರಿಸಿ, ಮುಖಮಜ್ಜನಕ್ಕೆ ಹೊರಟೆ (ಮೂಳಕ್ಕ. ೬೬). [ಸಂ.]

**ಮುಖಮಣಿ** (ನಾ). ಹಾರದ ಮಧ್ಯದಲ್ಲಿರುವ ರತ್ನ ; ನಾಯಕಮಣಿ : "ತರಳಃ, ಹಾರಮಧ್ಯಗಃ—ಹಾರದ ನಡುವೆಯಿರುವ ನಾಯಕಮಣಿ . . . ಸರದ ಮುಖಮಣಿ" (ಸಿದ್ಧಾಂತಿ. ೦೯೯). [ಸಂ.]

**ಮುಖಮಾಯ** (ನಾ). ಮುಖವು ಕಾಣದಂತೆ ಮಾಡುವಿಕೆ, — ಅದೃಶ್ಯ ಗೊಳಿಸುವಿಕೆ : ಕತ್ತರಿ ಮಳಲು ಚಂಡವೇದಿಯು ಕಿತ್ತ ಹಿಡಿಯಂಬಿಡುವ ಕಲ್ಲುಂ ಮತ್ತೆ ಮುಖಮಾಯದ ತಿಲಕವುಂ ಕರ್ಕಟಿಯ ರಜ್ಜು ನೀಲಗಪ್ಪಡ ದುಡಿಗೆ . . . ನಾಯಿಗಳ ಬಾಯ್ಕಟ್ಟು ಓಳಿಯಿಂದಿವು ಮೆಚಿಯೆ (ದಕ್ಷಪು. ೫೦-೩). [ಸಂ. ಮುಖಮಾಯಾ]

**ಮುಖಮಾರ್ಜನ** (ನಾ). = ಮುಖಮಜ್ಜನ : ಮರುದಿವಸ ಮುಂಜಾನೆ ಮುಖಮಾರ್ಜನಾದಿ ವಿಧಿಗಳನ್ನು ತೀರಿಸಿಕೊಂಡು, ಬಾಬೂರಾಯನು ತನ್ನ ಆಫೀಸುರೂಮಿಗೆ ಬಂದು ಕುಳಿತುಕೊಳ್ಳಲು, ಆ ದಿನದ ಟಪಾಲು ಬಂತು (ಕೆಳ್ಳಾಕಾ. ೨೩). [ಸಂ.]

**ಮುಖಮಾರ್ಜನೆ** (ನಾ). ಮುಖವನ್ನು ತೊಳೆಯುವಿಕೆ: ಎದ್ದವನೇ ಕೆಳಗೆ ಹೋಗಿ, ಮುಖಮಾರ್ಜನೆ ಮಾಡಿಕೊಂಡ (ಅಕಪಾ. ೦೩).
[ಸಂ. ಮುಖಮಾರ್ಜನ]

**ಮುಖಮುದ್ರಿತ** (ನಾ). ೧. ಬಾಯಿ ತೆರೆಯದಿರುವಂಥದು : ಶ್ರುತ ಲಕ್ಷ್ಮೀಬುಧ[ಸಭಾ]ಮುದ್ರಿತವಾದುದು ಸುಜನವೃತ್ತಿ ದುರ್ಜನಮುಖ ಮುದ್ರಿತವಾದುದೀ ಜಗನ್ಮುದ್ರಿತವಾದುದು ಪೆಂಪನನ್ನದಣ್ಣಾಧಿಪನ (ಶಾಸನ. XX, ೬೯-೨೩ ; 1112). ೨. ಬಾಯಿ ಕಟ್ಟಿಸುವವನು,— ಮುಚ್ಚಿಸುವವನು : ದಿಟನುಡಿವನ್ಯವಾದಿ ಮುಖಮುದ್ರಿತನುದ್ಧವಾದಿ ವಾಗ್ವಲೋದ್ಭಟ ಜಯಕಾಳದಂಡನಪಶಬ್ದುವಾದಾನ್ಧಕುವಾದಿ ದೈತ್ಯ ಧೂರ್ಜ್ಜಟಿ ಕುಟಿಳಪ್ರಮೋಯ ದುದವಾದಿಭಯಂಕರನೆನ್ಸು ದಂಡುಳಂ ಸ್ಫುಟಪಟುಘೋಷದಿಕ್ತಟಮನೆಯ್ದಿತು ವಾಕುಪಟು ಗೋಪನನ್ನಿಯ (ಎಕ. II, ೬೯-೯೮ ; 1100). [ಸಂ.]

**ಮುಖಮುದ್ರೆ** (ನಾ). ಮುಖದಲ್ಲಿ ಕಂಡುಬರುವ ಭಾವ ; ಮುಖಚರ್ಯೆ : ಸ್ವಭಾವಮುಗ್ಧೆ ಮುಗ್ಧವದನವನಜಮನೆಜಿಗಿ ತನ್ನ ಮುನ್ನಿನ ಜನ್ಮಂಗಳನಿಂತೆಂದು ಬರೆದು ತೋರ್ಪಂತೆ ನೆಲನಂ ಬರೆಯುತ್ತ ಮುಪಗತಮುಖಮುದ್ರೆಯಾಗಿ (ಆದಿಪು. ೩-೩೨ ವ) ; ಇದರಲ್ಲಿ . . . ರಸ ಭಾವಗಳನ್ನು ಸುವ್ಯಕ್ತವಾಗಿ ತೋರ್ಪಡಿಸುವ ಮುಖಮುದ್ರೆಗಳೂ ಇವೆ (ಭಾರತ. ೩೩೭). [ಸಂ. ಮುಖಮುದ್ರಾ]

**ಮುಖಮುನಿಸು** (ನಾ). ಮನಸ್ತಾಪ ; ವೈಮನಸ್ಯ : ಮಾತಿಗೆ ಮಾತು ಕಲಿತು ನುಡಿಗೆ ನುಡಿಯು ಕಲಿತು ತರ್ಕವಿತರ್ಕಟರಂತೆ ಹೋರುವ ಬಯಲ ಸಂಭ್ರಮದ ತರ್ಕಗಳ ಕಂಡರೆ ಮಾಗಿಯು ಕೋಗಿಲೆಯಂತೆ ಮುಖಮುನಿಸಾ ಗಿರಿಶಯ್ಯ (ಸಿದ್ಧೇಶ. ೬೩-೨೦೮). [ಮುಖ + ಮುನಿಸು]

**ಮುಖಮೂಲ್ಯ** (ನಾ). ನಮೂದಿಸಿದ ಬೆಲೆ ; ಮುಖಬೆಲೆ : "(ನಾಣ್ಯ, ಕಾಗದದ ಹಣ, ಮೊ.ಗಳ ಮೇಲೆ ಹಾಕಿರುವ) ಮುಖಮೂಲ್ಯ ; ನಮೂದು ಬೆಲೆ" ( Face Value. ಇಂಕನ). [ಸಂ.]

**ಮುಖರ**₁ 'ಮುಕುರ₁' ನೋ.

**ಮುಖರ**₂ (ಗು). ೧. ಅತಿಯಾಗಿ ಮಾತನ್ನಾಡುವ ; ಗಳಹುವ : ಹರಟುವ. ೨. ಸದ್ದುಮಾಡುವ ; ಧ್ವನಿಸುವ : ಧವಳಚಮರರುಹ ಪವನನಪವಮಾನಂಗೆಯ್ದು ಕಂದ ನಿಷ್ಠುರಚೀರೀರವಮುಖರ ಪರುಷಕಾನನ ಪವಮಾನನ ಸೋಂಕನಾಸೆಗೆಯ್ಕಲ್ ಬಗೆದೈ (ಶಂರಾಮಾ. ೭-೦೦). ೩. ಝಣಝಣಿಸುವ; ಝಣತ್ಕಾರ ಮಾಡುವ : ಪರಹಂಸಕದಂಬಕ ಮದು ಶರದಂಬುದಮಲ್ತು ಮುಖರನೂಪುರಸಂವಾದಿರವಂ ನೆಗಬ್ಧಪ್ಪುದು ಬಂಧುರಪದಜಲಂದಿದಜಕೊಳೆಂಬುದುಪಮಾಕ್ಷೇಪಂ (ಕವಿರಾ. ೩-೦೦೩). ೪. ಮಾರ್ದನಿಯನ್ನು ಕೊಡುವ ; ಅನುರಣನ ಮಾಡುವ. ೫. ಭಾವವನ್ನು ಸೂಚಿಸುವ, ಹೊರಗೆಡಹುವ. ೬. ತೆಗಳುವ; ನಿಂದಿಸುವ : 'ಮುಖರಭಾಷೆ' ಪರಾ. ೭. ಲೇವಡಿ ಮಾಡುವ : ಅಣಕಿಸುವ. (ನಾ). ೮. ಶಬ್ದ ; ಧ್ವನಿ : ಉಪಹಾರ ಕುಸುಮಮತ್ತಮಧುಕರಝಂಕಾರಮುಖರಮುಮಪ್ಪ ಪುರಮಂದಿರಮನೆಯು ಮುನತಿವಿಭೂತಿಯಿಂ ಪುಗಿಸಿ (ಶಂರಾಮಾ. ೬-೯೫ ವ) ; ಅವಿವೇಕಂ ತದ್ಧರ್ಮ ಶ್ರವಣದಿನೋಸರಿಸಿದಂತಿರಾಶ್ರಯಮಣಮಾಗವೆ ಚಂಪಕಧಾತ್ರೀರುಹನಿವಹಂ ಗಳ್ ಮುಖರಮಲಿನಮಧುಪಪುಂಜದಾ (ಶಂಪುರು. ೨-೯೪) ; ತನಗ ಹಮಿಕೆಯಿಂದಿರದೆಚಿಪ ನೃಪಾಳರ ಮೌಳಿಮಾಳೆ ಕುಟ್ಟಿಮಸಂಘಟ್ಟನದಿನತಿ ಮುಖರಮಾಗಿರ್ಪನೆಗಂ (ಕುಸುಪು. ೪-೭೦). 'ಮುಖರಗೊಳ್' ಪರಾ. ೯. ಚೆನ್ನಾಗಿ ಮಾತನ್ನಾಡುವವನು : ವಾಚಾಳಿ : ಮುನಿಪತಿನಾರದ ನಭಿನುತಮತಿಮುಖ[ಶಾಕಾಂ. ಕು]ರನಾಗಿ ಹರಿಗಿಂತೆಂದಂ (ಜಗವಿ. ೫-೯೬). ೧೦. ಮಾತು ಕೊಟ್ಟವನು : ಮುಖರನಾದೈ ಪಾರ್ಥ ಬರ್ಹಿಮುಖರ ಬಾಣಸದಾತನೀತನು ಸುಖವೆ ಹೇಳ್ಕೆ ತಂದೆ ಖಾಂಡವವನದ ನಿರ್ವಹನ (ಕುವ್ಯಾಕ. ೨೦-೧೭). ೧೧. ನಿಂದಿಸುವವನು ; ಅಪ್ರಿಯವಾದ ಮಾತು ಗಳನ್ನಾಡುವವನು : "ಮುಖ್ರ್ಯಂ ಮುಖರನವಂ" (ವಸ್ತುಕೋ. ೧೦೦-೦೭). ೧೨. ಅಣಕಿಸುವಿಕೆ ; ಪರಿಹಾಸ್ಯಮಾಡುವಿಕೆ. ೧೩. ಮಾತು : ನುಡಿ ; ವಚನ : ಅಂತುತ್ತನ್ನಾಪಧಿಬೋಧಂ ಧರ್ಮಾಮೃತಾಸ್ವಾದನ ಪರನಾಗಿ ಕಿಚಿಂದುಪೊತ್ತನಿರ್ದು ನಿಜಮನೋಗತಕಾರ್ಯವಿಜ್ಞಾಪನಮುಖರ ಮುಖನಾಗಿ (ಆದಿಪು. ೧೫-೨೨ ವ) ; ಮುಹುರ್ಮುಹುರಾಶೀರ್ವಾದಮುಖರ ಮುಖನಾದ ರಾಜಾಧಿರಾಜನಂ ಲಕ್ಷ್ಮಣಂ ಮದಂಬಿಕೆಯುಂ ಕಂಡೆನಲ್ಲಿತ್ತಲಿರ್ದ ಹಳಂಬುದುಂ (ಶಂರಾಮಾ. ೯-೦೩೨ ವ). 'ಮುಖರಿಸು' ಪರಾ. ೧೪. ಕಾಗೆ. ೧೫. ಮುಂದಾಳು : ಮುಖಂಡ : ನಾಯಕ. ೧೬. ಶಂಖ. [ಸಂ.]

**ಮುಖರಂಬ** 'ಮೊಗರಂಬ' ನೋ.

**ಮುಖರಗೊಳ್** (ಕ್ರಿ). ಧ್ವನಿಯಿಂದ ತುಂಬು : ನಾದಮಯವಾಗು : ಸಿದ್ಧರಾದ ಬ್ರಹ್ಮವೇತ್ತರಿಂದುಪಾಶ್ರಿತವಾಗಿ ಹಾಜ್ಯೂ ಹಾಜ್ಯೂ ಹಾಯೆಂದು ಸಾಮಧ್ವನಿಯಿಂ ಮುಖರಗೊಂಡು (ವಿವೇಕ. ೨೯೯). [ಮುಖರ₂ + ಕೊಳ್₁]

**ಮುಖರತ** (ನಾ). [ಕಾಮಶಾ] ಚುಂಬನ : ರತದೊಳಗ್ಗಳಂ ಮುಖ ರತಂ ಸುರತೋತ್ಸವಕೆ (ಆದಿಪು. ೦೦-೯೭). [ಸಂ.]

**ಮುಖರತಿ** (ನಾ). [ಕಾಮಶಾ] ಬಾಯಿಯಲ್ಲಿ ಮಾಡುವ ಒಂದು ಬಗೆಯ ನೀಚತರವಾದ ರತಿಕೇಳಿ : ಪತಿ ತೊಡೆಯೊಳಿರ್ದು ಮುಖರತಿ ಗೆಯ್ವುತಿರೆ (ಜನವ. ೦೦-೨೬). [ಸಂ.]

**ಮುಖರತೆ** (ನಾ). ೧. ಗಳಹುವಿಕೆ ; ಹರಟುವಿಕೆ : ಮೊದ ಮೊದಲು ಇಂಗ್ಲಿಷ್ ಕಲಿತವರು . . . ಮದ್ಯ ಮಾಂಸ ಮುಖರತೆ (ವಾಚಾಳತ್ವ) ಇವೇ ನಾಗರಿಕತೆಯ ಮುಖ್ಯ ಉಪಕರಣಗಳೆಂದು ತೀರ್ಮಾನ ಮಾಡಿ ಕೊಂಡರು (ಸಿಂರಂ. II, ೨೯೦). ೨. ನಿಂದೆ ; ದೂಷಣೆ : ದಶಮುಖನ ಮುಖರತೆಯುಮನುದ್ಧತತೆಯುಮಂ ನೆಟಿಸಿಯೆ ಬಿನ್ನವಿಸಿ ಮಾಣ್ಬುದುಂ (ಶಂರಾಮಾ. ೦೨-೭೭ ವ). ೩. ಶಬ್ದ ; ಗದ್ದಲ. ೨. ೩ : ಮುಖರತೆ ಪುರುಳಿಯೊಳ್ . . . ಮಹಾಮಾತ್ರವರ್ತನಂ ಸೃಣಿಯೊಳಲ್ಲದಿಲ್ಲಮೆಲ್ಲಿಯುಂ (ಶಂಪ್ರಭು. ೩-೯ ವ). [ಸಂ. ಮುಖರತಾ]

**ಮುಖರಭಾಷೆ** (ನಾ). ನಿಂದೆಯ ಮಾತು ; ತೆಗಳಿಕೆ : ಮೊಗಗಪ್ಪಾಗಿ, ತಮಿಳಲ್ಲಿ ಮುಖರಭಾಷೆಯಿಂದ ಕೊರಲ್ಚಿಯೊಳರಿಕೊಳ್ಳುತ್ತಿದ್ದು, ಕಟ ಪಾಯಲ್ಲಿ ನೊರೆಗಟ್ಟಿ, ಮುಚ್ಚಿಪೋಗಿ — ಮಲಗಿಸಲ್ಪಡುವವನು (ಖುಂತ್ರಕ. ೦೨೨-೫). [ಸಂ. ಮುಖರಭಾಷಾ]

**ಮುಖರಸ** (ನಾ). ೧. ಜೊಲ್ಲು ; ಲಾಲಾಜಲ : ನಿದ್ದೆಯೊಳ ಗಿಂದ ಎಚ್ಚರಿಸಿತ್ತು, ಬಂಜೆಗೆ ತೊರೆಗರೆಯಿಸಿತ್ತು. — ಈ ಮುಖರಸ (ಉದ್ಭೂಕ. ೦೦೭-೯). ೨. ಮುಖದ ಕಾಂತಿ, — ಕಳೆ : ವಿಭೂಷಣ ಪ್ರಭಾತ್ಯುನ್ನತಿ ಮಾಣೆಯುಂ ಮುಖರಸೋನ್ನತಿ ಮಾಣದೆ ಜೈನತತ್ವ ಸಂಪನ್ನರನಾಜವಂಜವಭಯಂ ಗೆಲಲಾರ್ಕುಮೊ ಪಿಂಜಲಾರ್ಕುಮೋ (ಶಾಂತಿಪು. ೬-೭೯). [ಸಂ.]

**ಮುಖರಾಗ** (ನಾ). ಮುಖದ ಬಣ್ಣ, — ರಂಗು : ಪ್ರಕಟಿತಪ್ರವಾಳಮುಖ ರಾಗಮುಂ ಸ್ವಸ್ತಿಕಪ್ರಶಸ್ತಮಣಿವರ್ಣನಸಮರ್ಥಿತಮುಮಪ್ಪ ಕಳಧೌತ ಮಂಗಳಕಳಶಮಂ ಬಳಸಿ (ಮಲ್ಲಿಪು. ೯-೧೦೦). [ಸಂ.]

**ಮುಖರಿ**₁ (ನಾ). ೧. ಒಂದು ಬಗೆಯ ದೇಶೀತಾಳ: 'ಮುಖರಿಗಾನ' ಪರಾ. ೨. ಮದ್ದಳೆಗಳಲ್ಲಿ ಒಂದು ಪ್ರಕಾರ : ಶ್ರೀವಿರೂಪಾಕ್ಷ ನೋಲಗದಲ್ಲಿ ಮುಖರಿ ಮೊದಲಾದ ನಾಲ್ಕು ತೆಜಿದ ಮದ್ದಳೆಗಳೊಳಗೆ . . . ನುಡಿಸಿ (ವಿರೂಪಾ. ೬೦). [ಸಂ. ಮುಖರೀ]

**ಮುಖರಿ**₂ (ನಾ). ಒಂಬತ್ತು ಬಗೆಯ ವಿಷದ ಹಲ್ಲುಗಳಲ್ಲಿ ಒಂದು : ಅವರಲ್ಲಿಯೊಂಬತ್ತು ವಿಷದ ಹಲ್ಲುಗಳು ಅವಾವವೆನೆ ಕಾಳರಾತ್ರಿ ಕರಾಳಿ ಯಮದೂತಿ ವಿಭೀಷಣಿ ಭದ್ರಕಾಳಿ ಮುಖರಿ ಸರ್ಪದಂತಿ ಉಗ್ರಭೀಷಣಿ ಅತ್ಯುಗ್ರಭೀಷಣಿ (ವಿಷಚಿ. ೯-೨). [< ಸಂ. ಮುಖರಾ ?]

**ಮುಖರಿಗಾಣ** (ನಾ). [ಸಂಗೀತ] ದೇಶೀತಾಳವನ್ನು ಪ್ರಯೋಗಿಸಿ ಹಾಡುವವನು: ನಾನಾವಿಧದಿಂ ಪ್ರಯೋಗಿಸುವುಪಾಂಗಂಗಳ್ ರಸಂಬೆತ್ತು ಬಿತ್ತರಿಪಂತಾಣತಿ ಮಾಡಿದಂ ಮುಖರಿಗಾಣಂ (ಮಲ್ಲಿಪು. ೬-೨೩) ; ರಾಜಾಂಗಣದೊಳಗೆ ಮಂಗಳಾಚಾರಸಂಗೀತಕವಂ ನೆಗಳ್ಚೆ ಮುಖರಿಗಾಣರ ತಾಳವಾದ್ಯಕೋಳಾಹಳದೊಳಂ (ಅನಂತ. ೩-೩ ವ). [ಮುಖರಿ$_1$ + ಗಾಣ$_3$]

**ಮುಖರಿತ** (ಗು). ೧. ಶಬ್ದದಿಂದ ಕೂಡಿದ ; ಧ್ವನಿಸುವ : ವಧೂವರರಿರ್ವರುಮಂ . . . ಅಲಕ್ತಕದ್ರವಾರುಣಚರಣಸಂಚರಣರಣಿತಮಣಿನೂಪುರಮುಖರಿತದಿಗಂತರಾಂತಃಪುರಜನಾಶೀರ್ವಾದಕೋಳಾಹಳಮುಮೆಸೆಯೆ ಮುಂದಿಟ್ಟು ತಂದು (ಅಜಿತ. ೪-೪೭ ವ) ; ಪಾಂಡವಬಲಜಳನಿಧಿಯನಳಕುಳರ್ಝೇಂಕಾರಮುಖರಿತವಿಶಾಳಕರಟತಟಮಾ ದಿಶಾಗಜೇಂದ್ರಂ ಕಲಂಕೆ (ಗಂದಾ. ೧೦-೭೦ ವ). (ನಾ). ೨. ಧ್ವನಿಯಿಂದ ಕೂಡಿದುದು ; ಶಬ್ದದಿಂದ ತುಂಬಿದುದು : ಜೀರುಂಡೆಯ ಸ್ವರದಿಂದ ವನಭೂಮಿ ಎಲ್ಲವೂ ಮುಖರಿತವಾಯಿತು (ಇಪ್ಪ. ೪೧೦) ; ಶಾಂತಿನಿಕೇತನದ ಶಾಲವನದ ನಡುವೆ ನನ್ನ ಜ್ಞಾಪನಸಭೆಯು, ಮರ್ಮರಿತವಾಗಲಿ, ಮುಖರಿತವಾಗಲಿ (ಶಿವಂರ. II. ೦೬೩). [ಸಂ.]

**ಮುಖರಿಸು** (ಕ್ರಿ). ಸ್ಪಷ್ಟವಾಗಿ ಮಾತನ್ನಾಡು ; ಹೇಳು : ಸುಖದೊಳಿರ್ವರ್ಗಿಲ್ಲ ಸುಮುಖರಾಗಿರಬಹುದಖಿಲವ್ಯಾಕುಲ ತಟ್ಟಿದಾಗ ಮುಖಕೆ ಕವಿದ ನೋವನೊದಱುವುದರಿಗೆಂದು ಮುಖರಿಸಿ ಪೊಗಳ್ದನಾ ಫಣಿಪ (ಭರತ. ೭೪-೬೬). [ಮುಖರ$_2$ + — ಇಸು$_1$]

**ಮುಖರೆ** (ನಾ). ಹೆಚ್ಚು ಮಾತನ್ನಾಡುವವಳು ; ಗಳಹುವವಳು ; ವಾಚಾಳಿ : ಈ ಆಭರಣಗಳೆಲ್ಲಾ ಆ ದೇಹಕ್ಕೇ ಒಪ್ಪತಕ್ಕವು . . . ನೀನೂ ಅವುಗಳನ್ನೆಲ್ಲ ಒಮ್ಮೊಮ್ಮೆ ಅವಳಿಗೆ ತೊಡಿಸಿ, ಮುಖರೆಯಾದೀ ವಿದೇಶೀ ಹೆಂಗಸನ್ನು ಜ್ಞಾಪಿಸಿಕೊ (ಕಾಳಿಂ. ೫೦). [ಸಂ. ಮುಖರಾ]

**ಮುಖರೋಗ** (ನಾ). ಮುಖ ಅಥವಾ ಬಾಯಿಗೆ ಬರುವ ಒಂದು ಬಗೆಯ ರೋಗ : ಎಕ್ಕೆಯ ಎಲೆ, ಔಡಲ . . . ಅಪ್ಪರಸ, ಈ ಸೊಪ್ಪುಗಳಂ ಸಮಾನಂಗೊಂಡು ಹಳೆಯ ಕಲಶವಂ ತುಂಬಿ ನೀರಂ ಹೊಯ್ದು ಲೇಸಾಗಿ ಕುದಿಸಿ ಮೈನೋವವರಿಗೆ, ಮುಖರೋಗದಾತಂಗೆ . . . ಸೇಕಂಗೊಳ್ಳಲು ಆ ವ್ಯಾಧಿ ತೀರ್ಗುಂ (ವೈವಿ. ೬೪) ; ಶುಂಠಿರಸವನ್ನು ಲೊಕ್ಕಿ ಸೊಪ್ಪಿನ ರಸದಲ್ಲಿ ಏಳುದಿನ ತೆಗೆದುಕೊಳ್ಳಲು ಮುಖರೋಗಂ ಮಾಣ್ಗುಂ (ಸಕಪ್ರ. ೦೦೩). [ಸಂ.]

**ಮುಖರೋಮ** (ನಾ). ಮುಖದಲ್ಲಿ ಬೆಳೆಯುವ ಕೂದಲು ; ಮೀಸೆ : "ಮುಖರೋಮಂ ಶ್ಮಶ್ರು" (ವಸ್ತುಕೋ. ೭೦-೨೨) ; ಆವಾಲಶಾರ್ದೂಲಮುಖರೋಮ ಕರಾಲಸ್ವಕ್ಕೋಪಾಂತಪ್ರರೂಢಶ್ಮಶ್ರುಜಾಲಂ (ಅಂಜ. ೦೩-೬೩ ವ). [ಸಂ. ಮುಖರೋಮನ್]

**ಮುಖಲಕ್ಷಣ** (ನಾ). ಮುಖದ ರೀತಿ ; ಮುಖಚರ್ಯೆ : ಅವಳು ಎಳೆಹರೆಯದಲ್ಲಿ ಅನುಪಮಸುಂದರಿಯಾಗಿದ್ದಿರಬಹುದೆಂದು ಅವಳ ಮುಖಲಕ್ಷಣದಿಂದ ವೇದ್ಯವಾಗುತ್ತಿತ್ತು (ಕುಸರು. ೦೯೦) ; ಕಾದಂಬರಿಯ ಮುಖಲಕ್ಷಣ, ನೋಡಿದ ಮನುಷ್ಯ ಹೆದರುವ ಹಾಗಿತ್ತು (ಇಪ್ಪ. ೨೪). [ಸಂ.]

**ಮುಖಲೇಪನ** (ನಾ). ೧. ಯಾವುದಾದರೊಂದು ವಸ್ತುವಿನ ಮೇಲುಭಾಗಕ್ಕೆ ಬಳಿಯುವ ಮತ್ತೊಂದು ಲೇಪನವಸ್ತು : ಎಲೆಕ್ಟ್ರೋಫಲಕವು ಸ್ಟೀರಿಯೋಫಲಕಕ್ಕಿಂತ ಹೆಚ್ಚು ಉಪಯೋಗವುಳ್ಳದ್ದಾದರೂ ಅದರ ಬೆಲೆ ಹೆಚ್ಚು . . . ನಿಕ್ಕಲ್ ಮುಖಲೇಪನ ಮಾಡಿದರೆ ಅದರಿಂದ ಇನ್ನೂ ಹೆಚ್ಚು ಪ್ರತಿ ತೆಗೆಯಬಹುದು (ಮುದ್ರ. ೬೦). ೨. ಮುಖಕ್ಕೆ ಹಚ್ಚಿಕೊಳ್ಳುವ ಪೌಡರು, ಸ್ನೋ ಮುಂತಾದ ಕಾಂತಿವರ್ಧಕವಸ್ತು : ಟಿ.ವಿ. ಯಲ್ಲಿ ಮುಖಲೇಪನಗಳ ಅತ್ಯಾಕರ್ಷಕವಾದ ಜಾಹಿರಾತುಗಳನ್ನು ನೋಡುತ್ತೇವೆ (ರೂಢಿ). [ಸಂ.]

**ಮುಖಲೋಮ** (ನಾ). ಮುಖದ ಮೇಲೆ ಉದ್ದ ಕೂದಲುಗಳುಳ್ಳ ಒಂದು ಬಗೆಯ ಕೀಟ ; ಜಿರಲೆ : "ಮುಖಲೋಮ ತೋಡಂಗಿ ಯುಕ್ಕುಂ" (ವಂಗರಾ. ೪೯-೦೩). [ಸಂ. ಮುಖಲೋಮನ್]

**ಮುಖವರ್ಣಿಕೆ** (ನಾ). (ನೃತ್ಯ, ನಾಟಕಗಳಲ್ಲಿ) ಮುಖಕ್ಕೆ ಹಚ್ಚುವ ಬಣ್ಣ, ಬಣ್ಣದ ಅಲಂಕಾರ, ವೇಷ ಮುಂತಾದುವು : ಕಥಾನಕದ ಪಾತ್ರಗಳಿಗೊಪ್ಪುವಂತೆ ವೇಷ, ಮುಖವರ್ಣಿಕೆಗಳನ್ನು ಸೃಷ್ಟಿಸಿದರು (ಯಕ್ಷಬ. ೦೦). [ಸಂ. ಮುಖವರ್ಣಿಕಾ]

**ಮುಖವಸ್ತ್ರ** (ನಾ). ೧. ಮುಖವನ್ನು ಒರೆಸಿಕೊಳ್ಳಲು ಬಳಸುವ ಬಟ್ಟೆ ; ಮುಖಪಾವಡ : ಮುತ್ತಿನುರೆ ಛತ್ರ ಚಾಮರ ಕುಂಚ . . . ವ್ಯಜನ ಮುಖವಸ್ತ್ರಯೆತ್ತಿ ಬೀಸುವ ಧವಳಚೌರಿಯ ಜಡಾಳಿಪರಿಕ್ಕಲದಿ ವರ್ತರಿಸುತ (ನವಮೋ. ೩-೨೪) ; ಹಡಪ ಕನ್ನಡಿ ಹೂಜೆ ಕಾಳಂಜಿ ಮುಖವಸ್ತ್ರ . . . ಮುಚ್ಚಧ್ವಜವಾಂತು (ನವಮೋ. ೪-೩೮). 'ಕರವಸ್ತ್ರ' ಪರ್ಯಾ. ೨. (ಪ್ರತಿಮಾಪ್ರತಿಷ್ಠಾನದ ವಿಧಿಯಂತೆ) ಮುಂಭಾಗದಲ್ಲಿ ತೊಡಿಸುವ ಬಟ್ಟೆ (?) : ಆಚಾರ್ಯಪ್ರತಿಮೆಯಂ ಪಂಚಗವ್ಯಶುದ್ಧಿಯಂ ಮಾಡಿ ಸುಗಂಧಾನುಲೇಪನಂಗೆಯ್ದು ದರ್ಭೆಯಿಂದಲಂಕರಿಸಿ ಮುಖವಸ್ತ್ರ ಮನಿಕ್ಕಿಯಿರಿಸುವುದು (ಪ್ರತಿಷ್ಠಾ. ೩-೨ ವ). [ಸಂ.]

**ಮುಖವಾಡ** 'ಮೊಗವಡ' ನೋ.

**ಮುಖವಾದ್ಯ** (ನಾ). ಬಾಯಿಯಿಂದ ಊದುವ ಕೊಳಲು, ನಾದಸ್ವರ ಮುಂತಾದ ವಾದ್ಯ ; ಸುಷಿರವಾದ್ಯ. [ಸಂ.]

**ಮುಖವಾರ್ತೆ** (ನಾ). ಸಮಾಚಾರ ; ಸುದ್ದಿ ; ವಿಷಯ ; ವಿಚಾರ : ಧರ್ಮಪುತ್ರಂ . . . ವಿದುರನಟ್ಟಿದೋಲೆಯಾತಂ ಬಂದೇಕಾಂತದೋಲೆಯ ಸಿಕ್ಕಿದೊಡೆ ಮುಖವಾರ್ತೆಯೇನೆಂದೊಡೆ (ಜಂಪಾ. ೦೦-೩೬ ವ). [ಸಂ. ಮುಖವಾರ್ತಾ]

**ಮುಖವಾಸ** (ನಾ). ೧. ಬಾಯಿಯನ್ನು ಸುವಾಸನೆಗೊಳಿಸುವ ಒಂದು ಬಗೆಯ ಪರಿಮಳದ್ರವ್ಯ : ವಿಧವಿಧದೊಳೆಸೆವ ಕುಸುಮೋತ್ಕರದ ಪರಿಮಳದ ಮಧುರಾಸವಕೆ ತಮ್ಮ ಮುಖವಾಸದೊಳ್ಗಂಪಿನಧರದಿನಿದಂ ಬೆರಸುವಂತೆ ಮೊಗವಿಟ್ಟು ಪೊಂಬಟ್ಟಲೊಳ್ಸವಿದು (ಶ್ರೀಪಂಚಾ. ೦೩-೯೩) ; ಗಂಧಹುಡಿಯುರಂಗಡಿಗೈದಿ ಕಮ್ಮಿಣ್ಣಿ ಕಸ್ತುರಿಯ . . . ತಾಂಬೂಲಮುಖ್ಯ ಮುಖವಾಸಗಳನೂ ತೆಗದು ಮುನ್ನಡೆದು (ಪಲವೋ. ೦೭-೬೦). ೨. ಮುಖಕ್ಕೆ ಕಟ್ಟಿಕೊಳ್ಳುವ ಬಟ್ಟೆ, — ವಸ್ತ್ರ : ಪರಿಮಳಂ ತೀಡಿದಡೆ ಕಡೆಗೆ ಸಂಗಂಗನುತೆ ಚರಿತದಿಂ ಮುಖವಾಸಮಂ ಸುತ್ತಿ ರಂಜಿಸುತೆ (ಬಸರ. ೩-೦೬). [ಸಂ.]

**ಮುಖವಾಸನ** (ನಾ). ೧. = ಮುಖವಾಸ ೧ : "ಆಮೋದೀ, ಮುಖವಾಸನಃ — ೨ ಪಚ್ಚಕರ್ಪೂರ ಮುಂತಾದ ಮುಖಪರಿಮಳಕ್ಕೆ ತಕ್ಕ ಸುದ್ರವ್ಯದ ಹೆಸರುಗಳು" (ಸಿದ್ಧಾಂತಿ. ೪೭). ೨. = ಮುಖವಸ್ತ್ರ ೨ : ಆವಾಹನ ಆಸನ್ನ . . . ನೈವೇದ್ಯ ಮುಖವಾಸನ . . . ಅತ್ಯಾರೋಪಣವೆಂಬ ದ್ವಾತ್ರಿಂಶದುಪಚಾರಂಗಳಂ ಸಮಂತ್ರಕಮಾಗಿ ಮಾಡಿ (ವಿವೇಕ. ೬೩). [ಸಂ.]

**ಮುಖವಿಕಾರ** (ನಾ). (ಮನಸ್ಸಿನ ಭಾವನೆಗೆ ತಕ್ಕಂತೆ) ಮುಖದಲ್ಲಿ ಉಂಟಾಗುವ ಬದಲಾವಣೆ, — ಮಾರ್ಪಾಟು : ಮುಖಭಾವ : ಪರುಷಾಳಾಪಮುಮಂತಿನಿಷ್ಠುರವೀಕ್ಷಣಮುಮುಖವಿಕಾರಮುಮಂ ಮುಳಿಸಿರೆಯುಂ ತರಳಾಪಾಂಗಮುಮಾಕೆಯ ವರಹಸಿತಮುಮುಡಿಯೆ ಪೇಟ್ಟುವೆಂಜಿಕವು ನಿರ್ದಯೊಳ್ (ಕವಿರಾ. ೩-೦೦೯); ನಾನು ಹೇಳಿದ್ದೆಲ್ಲವನ್ನೂ ಅವರು ಯಾವ ಮುಖವಿಕಾರವಿಲ್ಲದೆ ಕೇಳಿಸಿಕೊಂಡರು (ರೂಢಿ). [ಸಂ.]

**ಮುಖವಿಕಾಸ** (ನಾ). ಮುಖವು ಅರಳುವಿಕೆ, — ಹಿಗ್ಗುವಿಕೆ : ವಿಪಕ್ಷಭೂಮಂಡಲೇಶ್ವರಶೋಭಾವಹವನದ ಮುಖವಿಕಾಸದಲಿ ತಮನ ತಸಿಮುಸಕದಲಿ

ಭುಜವಿಕ್ರಮ ಛಡಾಳಿಸಲೆದ್ದು ಭೂಪೋತ್ತಮನು ಕೊಂಡನು ಗದೆಯನು (ಕುಮಾ.ಗ. ೭–೧೪). [ಸಂ.]

**ಮುಖವಿಕೃತಿ** (ನಾ). = ಮುಖವಿಕಾರ ೨ : ಭಂಗದಲಿ ಸಂದೇಹ ಮುಖವಿಕೃತಿಯಲಿ ದುರ್ನೀತಿ ಇಂಗಿತದಲಾಂಗಿಕದ ಭಾವಾಭಂಗಪರಿಯನು ಯೋಗಯುಕ್ತನಯಂಗಳಲಿ ತಿಳಿದುಸುರದಿರ್ದಾಡು ಸಭೆ ಸುಭೀತಿಯಲಿ (ಕುಮಾ.ಶ. ೧೪–೯೩). [ಸಂ.]

**ಮುಖವಿಕ್ಷೇಪಣ** (ನಾ). ಮುಖವನ್ನು ಅತ್ತ ಇತ್ತ ತಿರುಗಿಸುವಿಕೆ : ಬಲವ ಕೋಡ ಮೇಲೆ ಕೆಯ್ಯಂ ಪೇಜಿ ಮುಖವಿಕ್ಷೇಪಣಂಗೆಯ್ದು ಘನಾಘನನಿನಾದದಿಂ ಬೃಂಹಿತಂಗೆಯ್ದು ವಿಜಯಗಜಮುಂ (ಶಂಕಥಾ. ೬–೯೩ ವ). [ಸಂ.]

**ಮುಖವೀಣೆ** (ನಾ). ಬಾಯಿಂದ ಊದಿ ಬಾರಿಸುವ ಒಂದು ಬಗೆಯ ವಾದ್ಯ : ಮುಖವೀಣೆಯ ಮೋಹಿಗಳಿಂದಂ ರಾವಣವೀಣೆಯ ರಂಜಕರಿಂ . . . ವೇಣ್ ಅಖಿಳನಿಯೋಗದಚ್ಚುಳಿಯ್ತುರಿಂದೊಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹಮ್ಮಿರ. ೬–೯೦ ವ) ; ತಾಳ ದಂಡಿಗೆ . . . ವಿವಿಧ ವಿದ್ಯಾಜಾಲ ಮುಖವೀಣೆಗಳ ತಂದಿಳುಹಿದರು (ಜಾತಕ. ೨೨–೩೯) ; ನುಡಿಸುವವನ ಶ್ವಾಸಗಾಳಿಯಿಂದ ನುಡಿಯುವ ವಾದ್ಯಗಳು : ಕೊಳಲು, ನಾಗಸ್ವರ . . . ಮುಖವೀಣೆ, ಶಹ್ನೈವಾದ್ಯಗಳೂ ಈ ಪಂಗಡಕ್ಕೆ ಸೇರುತ್ತವೆ (ಸಂಗೀತಸಂ. ೦೨೦). [ ಸಂ. ಮುಖವೀಣಾ ]

**ಮುಖವೇಣು** (ನಾ). = ಮುಖವೀಣೆ : ರಂಧ್ರಗಳಲ್ಲಿ ವಾಯುಸಂಚಾರದ ಮೂಲಕ ನಾದವನ್ನು ಸೃಷ್ಟಿಸುವುವು ಎರಡನೇ ಸುಷಿರಜಾತಿ : ಕೊಳಲು, ಸನ್ನಾಯಿ, ಮುಖವೇಣು ಮೊದಲಾದವು (ನಾಟಕ. ೯೫). [ಸಂ.]

**ಮುಖಶಾಲೆ** (ನಾ). ದೇವಸ್ಥಾನ ಅಥವಾ ಭವನಗಳ ಮುಂಭಾಗದ ಹಜಾರ ; ಮುಖಮಂಟಪ ; ಮೊಗಸಾಲೆ : ಈಶ್ವರಸೆಟ್ಟಿ ಎರಡು ದೇಗುಲದ ಕಳಸಮನಿಡಿಸಿ ಮುಖಶಾಲೆಯುಂ ಸಮೆಯಿಸಿ (ಶಾಸಕ. ೫೦–೦೨ : 1005) ; ಪಚ್ಚೆಯ ತೊಲೆ ಪವಳದ ಕಂಬ ಬೋದಿಗೆ ನಿಚ್ಚಳವಹ ನೀಲದಿಂದ ಮುಚ್ಚುಳ ಮುಖಶಾಲೆಯ ಮಣಿಮಂಟಪವಚ್ಚರಿಯಾಗಿರುತಿಹುದು (ಕೃಷ್ಣಸಂ. ೭–೬೦). 'ಮೊಗಸಾಲೆ' ಪರಾ. [ ಸಂ. ಮುಖಶಾಲಾ ]

**ಮುಖಶುದ್ಧಿ** (ನಾ). ೧. ಬಾಯಿಯನ್ನು ಮುಕ್ಕಳಿಸುವುದು. ೨. (ಉಕ) ತಾಂಬೂಲ. [ಸಂ.]

**ಮುಖಶ್ರೀ** (ನಾ). ಮುಖದ ಸೌಂದರ್ಯ, – ಚೆಲುವು : ಕ್ಷಾಯಿಕ ದೃಷ್ಟಿ ತುಷ್ಟಿಯೊಳೊಡಂಬಡೆ ಜೈನವಚೋಮೃತಂ ಮುಖಶ್ರೀಯ ಪೊಟ್ಟಿಯು ಬೆಳಗೆ (ಶಾಂತಿಪು. ೦–೪). [ ಸಂ. ]

**ಮುಖಸಂಧಿ** (ನಾ). [ಕಾವ್ಯಮೀ] ಐದು ಅರ್ಥಪ್ರಕೃತಿಗಳೂ ಐದು ಅವಸ್ಥೆಗಳೂ ಕ್ರಮವಾಗಿ ಸೇರಿದರೆ ವಸ್ತುವಿನಲ್ಲಿ ಆಗುವ ಮುಖ, ಪ್ರತಿಮುಖ, ಗರ್ಭ, ಅವಮರ್ಶ ಮತ್ತು ಉಪಸಂಹೃತಿಯೆಂಬ ಐದು ಬಗೆಯ ಸಂಧಿಗಳಲ್ಲಿ ಮೊದಲನೆಯದು : ಅದರ 'ಮುಖಸಂಧಿ'ಯೆಂಬ ಮೊದಲನೆಯ ಭಾಗದಲ್ಲಿ ಕಥೆ ಇನ್ನೂ ಬೀಜರೂಪವಾಗಿರುತ್ತದೆ (ಕೃಹಿಾ. ೨೦೬). [ಸಂ.]

**ಮುಖಸಾಲೆ** 'ಮೊಗಸಾಲೆ' ನೋ.

**ಮುಖಸಿರಿ** 'ಮೊಗಸಿರಿ' ನೋ.

**ಮುಖಸುತ್ತು** (ನಾ). ಕಕ್ಕಾಬಿಕ್ಕಿ ; ಗೊಂದಲ ; ಕಕಮಕ : ನಿನ್ನೆಯ ಯುದ್ಧದಲ್ಲಿ ನೀವು . . . ಯಾವ ಶೌರ್ಯವನ್ನು ತೋರಿಸಿದಿರೋ ಅದರಿಂದ ಯವನಸೇನೆಗೆ ಮುಖಸುತ್ತಾಗಿದೆ (ಚಕ್ರ.ಕೋ. ೯೦) ; ತುರುಕರನ್ನು ಇಟ್ಟುಕೊಳ್ಳತಕ್ಕದ್ದೇನೋ ನನಗೆ ಸರಿಯಾಗಿ ತೋರುವುದಿಲ್ಲ. ಈ ವಿಷಯದಲ್ಲಿ ಬಹು ಮುಖಸುತ್ತಾಗಿದೆ (ಮುಖಸುಗ. ೯೭). [ ಮುಖ + ಸುತ್ತು$_2$ ]

**ಮುಖಸುರತ** (ನಾ). = ಮುಖರತಿ : ಮುಖಸುರತಂ ಮುನಿಗಳಿಂ ದೂಷಣೆಯಪ್ಪುದರಿಂ . . . ಪೇಳಲಿಲ್ಲ (ಕಾಮಸೂ. ೨೯೩). [ಸಂ.]

**ಮುಖಸ್ತುತಿ** (ನಾ). ಎದುರಿನಲ್ಲೇ (ಅಕಾರಣವಾಗಿ) ಹೊಗಳುವುದು, – ಪ್ರಶಂಸೆ ಮಾಡುವುದು : ಇದನ್ನು ಮಾತ್ರ ಮುಖಸ್ತುತಿಯೆಂದು ತಿಳಿಯಬೇಡಿರಿ (ಅನ್ನ. ೧೭೫). [ಸಂ.]

**ಮುಖಸ್ಥಾನ** (ನಾ). ಪ್ರಮುಖವಾದ ಸ್ಥಳ : ಆ ಭೂಭಾಗದೊಳ್ ಉನ್ನತಂ ತಾನತ್ಯೂರ್ಜಿತಮಲ್ಲಿ ಭೋಗಿಜನರಮ್ಯಂ ಬೆಳ್ವೊಲಂ ತನ್ಮುಖಸ್ಥಾನಂ ಶೋಭಿಕುಮಾಗಳುಂ ಪುರಿಕರಶ್ರೀರಾಜಧಾನ್ಯಾಹ್ವಯಂ (ಶಾಸಕ. XX, ೯೭–೦೪ ; 1074). [ಸಂ.]

**ಮುಖಹೀನ** (ನಾ). ಸಂಕೋಚಸ್ವಭಾವದವನು ; ಮುಖಹೇಡಿ : ಅಪರಿಚಿತಸ್ಥಳಕ್ಕೆ ಹೋದರೆ ಅವನು ಉದ್ಧಟನಾಗುತ್ತಾನೆ. ಇಲ್ಲವೆ ಮುಖಹೀನನಾಗುತ್ತಾನೆ (ಇಶ್ಮ. ೧). [ಸಂ.]

**ಮುಖಹೇಡಿ**, **ಮುಖೇಡಿ**, **ಮುಖೇಡಿ** (ನಾ). ಸಂಕೋಚಪ್ರವೃತ್ತಿಯ ವ್ಯಕ್ತಿ ; ಸಿಗ್ಗಾಳಿ : "ಲಜ್ಜೆಯಿಂದ ಕೂಡಿದ ; ನಾಚುವ ; ಮುಖಹೇಡಿಯಾದ ; ಸಂಕೋಚಪ್ರಕೃತಿಯ ; ಸಿಗ್ಗಾಳಿ" (Bashful. ಇಂಕಂ). 'ಮುಖಹೇಡಿತನ' ಪರಾ. **ಮುಖೇಡಿ** : ಸಮುದ್ರ ಶಾಂತವಾಗಿದೆ, ಗಾಳಿ ಮುಖೇಡಿಯಂತಿದೆ (ಸಹಿಂರ. II. ೫೦೭) ; ದಾಮು ಎಲ್ಲಾ ಅವರಪ್ಪನ ಹಾಗೇ ಮುಖೇಡಿ (ವೃದ್ಧವಿ. ೦೩). **ಮುಖೇಡಿ** : ಅವಳ ಸ್ವಭಾವವೇ ಹಾಗೇಂದ್ರೆ. ಮೊದಲಿನಿಂದಲೂ ಅದು ಮುಖೇಡಿ (ಕಥಸಂ. ೨೫೩). ಹೆಡ್ಮಾಸ್ಟರ್ ಲಕ್ಷ್ಮಣರಾಯರು ಸುಬ್ಬುವಿನ ಬೆನ್ನು ತಟ್ಟಿ "ನೋಡಿದೆಯಾ. ಮುಖೇಡಿಯಾಗಬಾರದು" ಎಂದು ಬಹಳ ಹೊಗಳಿದರು (ಶೇಷುಕಾ. ೩೦). 'ಮುಖೇಡಿತನ' ಪರಾ. [ ಮುಖ + ಹೇಡಿ ( < ಪೇಡಿ$_1$ ) ]

**ಮುಖಹೇಡಿತನ**, **ಮುಖೇಡಿತನ**, **ಮುಖೇಡಿತನ** (ನಾ). ಸಂಕೋಚಸ್ವಭಾವ ; ನಾಚಿಕೆಯ ಪ್ರವೃತ್ತಿ : ಮಕ್ಕಳು ವಿಲಕ್ಷಣರೀತಿಯಲ್ಲಿ ವರ್ತಿಸುವರು . . . ಕೆಲವರಿಗೆ ಮುಖಹೇಡಿತನ (ಶಿಕ್ಷಕ. ೬೪೯) ; ಒಂದು ವಿಧವಾದ ಮುಖಹೇಡಿತನ ಅವನನ್ನು ಎಲ್ಲರಿಂದ ಬೇರೆ ಮಾಡಿತ್ತು (ಏಂತ. ೬೩). **ಮುಖೇಡಿತನ** : ಈ ಮುಖೇಡಿತನವನ್ನು ಬಿಟ್ಟು ನಾಲ್ಕುಜನರ ಜತೆ ಓಡಾಡುವುದನ್ನು ಕಲಿ (ರೂಂ). **ಮುಖೇಡಿತನ** : ನೀನು ಅವಳಿಗೆ ಬುದ್ಧಿ ಹೇಳಿ ಮುಖೇಡಿತನ ತಪ್ಪಿಸಬೇಕು (ಕಥಸಂ. ೨೫೬). [ ಮುಖಹೇಡಿ + – ತನ ]

**ಮುಖಾಂತರ** (ಅ). ಆ ಮಾರ್ಗವಾಗಿ ; ಮೂಲಕ : ಜೋಡುರಿಪೇರಿಯವನ ಮುಖಾಂತರ ನನ್ನ ಕೊಬ್ಬು ಕರಗಿತ್ತು (ವೃದ್ಧವಿ. ೦೦೭) ; ಬಂದಣ್ಣ . . . ವೈನಿಯ ಮುಖಾಂತರ ಅಣ್ಣನ ಪರವಾನಿಗೆ ಪಡೆದುಕೊಂಡ (ವೃವಿ. ೦೯೫).

**ಮುಖಾಂತರವಾಗಿ** = ಬೇರೆಯವರ (ಮಾತಿನ) ಮೂಲಕವಾಗಿ : ನಮ್ಮ ಅಪ್ಪಾಜಿಯವರ ಪ್ರಾರಂಭ ಅಳಗಿಯ ಮನವಾಳ ರಾಮಾನುಜ ಜೀಯ್ಯರವರ ಮುಖಾಂತರವಾಗಿ ನಡೆಸಿಕೊಂಡು ಬರುವ ನಿತ್ಯಕಟ್ಟಳೆ ಕೈಂಕರ್ಯ (ಎಕ. III, ಶ್ರೀರಂಗ. ೦೦೦–೦೪೪ ; 1734) ; ಸೃಷ್ಟಿಯ ಮುಖಾಂತರವಾಗಿ ಕಾಣಿಸುವ ಆತನ ಮಹಿಮೆಯ ಕುರುಹುಗಳನ್ನು ತಿಳುಕೊಂಡು ಕೃತಜ್ಞರಾಗಿ ಭಕ್ತಿಯಿಂದ ನಾವು ಆತನನ್ನು ಯಾವಾಗಲೂ ಸೇವಿಸಬೇಕು (ಮುಂಬಯಿ. ೪–೩೦). [< ಮುಖ]

**ಮುಖಾಡ** 'ಮೊಗವಡ' ನೋ.

**ಮುಖಾಣಿ** (ನಾ). ಒಂದು ಬಗೆಯ ತೆರಿಗೆ : ಯಾ ಪಾರಪತ್ಯಗಾರ ೩ ಸೇನಭೋಗರು ಸುಂಕದ ಸೇನಬೋಗರು ಸಹ ಜನ ೧೪ಕ್ಕೆ ೧ ಮುಖಾಣಿ . . . ವರುಷಂಪ್ರತಿಯೂ ಪ್ರತಿವರುಷಂಗಳಿಗೂ ಮಹದೇ [ ವೇ ]ಶ್ವರಸ್ವಾಮಿಯವರ ಭಂಡಾರಕ್ಕೆ ಕೊಡುವ ಹಾಗೆ ಕಟ್ಟಳೆಯನ್ನು ಮಾಡಿಸಿಯಿದ್ದೇವೆ (ಎಕ. IX, ಚನಪ. ೯೪–೨೭ ; 1662).

[ ? + < ಕಾಣ$_1$ ]

**ಮುಖಾಬಿಲೆ** 'ಮೊಕಾಬಿಲೆ' ನೋ.

**ಮುಖಾಮಿ** (ನಾ). ೧. ಒಡೆತನ ; ಸ್ವಾಮ್ಯ : ಅವನ ಮುಖಾಮಿಗೆ ೧೨ ವರಹದ ಭೂಮಿಯನ್ನೂ ಕೊಡುವದು (ಮುಖಾಮಿ. I, ೩೮). ೨. ಒಡೆತನವುಳ್ಳವನು; ಸ್ವಾಮ್ಯವುಳ್ಳವನು: ವಸ್ತ್ರಾಭರಣವವಿರತಂ ಕೊಡುತಿರುವರೆಂಬ ವರದಿಗೆ ಮುಖಾಮಿಗಳು ಕಾದಿರುತಿರ್ಪರು (ಕೃ.ಕ. ೬.೨-೧೨). [?]

**ಮುಖಾಮಿತನ** (ನಾ). = ಮುಖಾಮಿ ೧: ದೊರೆಗಳವರು . . . ಲಕ್ಷ್ಮಯ್ಯಂಗಾರಿ ಎಂಬವನಿಗೆ ಈ ಪರಕಾಲಮಠದ ಮುಖಾಮಿತನವನ್ನು ನೇಮಕ ಮಾಡಿಸಿದರು (ಮುಖಾಮಿ. I, ೦೬೩). [ಮುಖಾಮಿ + -ತನ]

**ಮುಖಾಮುಖಿ** (ಗು). ೧. ಪ್ರತ್ಯಕ್ಷವಾದ ; ನೇರವಾದ : ಪ್ರತಿಯೊಬ್ಬ ಮತದಾರನಿಗೂ ಮತ್ತು ಹುರಿಯಾಳುವಿಗೂ ಮುಖಾಮುಖಿ ಸಂಬಂಧವನ್ನು ಒದಗಿಸಿಕೊಂಡು ಅವರಿಗೆ ಹೇಳಿಕೊಳ್ಳುವ ವಿಚಾರ, ಹೊಸಮನಿಯದು (ಅಶವಾ. ೯೦) ; ಅವರಿಬ್ಬರೂ ಮುಖಾಮುಖಿ ಬೆಟ್ಟಿಯಾಗಲಿ, ಗೌಪ್ಯದ ಹಿಂದುಗಡೆಯಲ್ಲಿ ದಟ್ಟಯಿಸಿದ್ದ ಕತ್ತಲೆ ತೊಲಗಲಿ ಎಂದು ಅವಳ ವಿಚಾರ (ಎರಶ. ೦೩೦). (ನಾ). ೨. ಭೇಟಿ ; ಸಂದರ್ಶನ : ಹಿಂದೊಮ್ಮೆ ನೀನಲ್ಲಿ ಹೋಗಿ, ನಿನ್ನಯ ಬಯಕೆ ನೆರೆಯದೆಂದರಿತೊಡಂ ನಿನ್ನ ಜೀವಕೆ ಮೋಸವಿರದೆಂದೆ ಬೀಳ್ಕೊಟ್ಟೆ ನಿನ್ನನೀ ಹೊಸ ಮುಖಾಮುಖಿಯೊ ಜೀವಕ್ಕೆ ಮುಳ್ಳುವೇದೆ ಮನಸಿನ ಕವಲು ! (ಪಪ್ಪ.ರ. ೦೯-೭೩). [ಸಂ.]

**ಮುಖಾರ** (ನಾ). ಮನೆಯ ಮುಂಭಾಗ : ಆ ಗೇಟಿನಿಂದ ಮನೆಯ ಮುಖಾರದ ವರೆಗೂ ಹೂವಿನ ಗಿಡಗಳ ಮತ್ತು ಚಿತ್ರವೃಕ್ಷಗಳ ವಲಯಾಕಾರವಾದೊಂದು ತೋಟವು ರಚಿಸಲ್ಪಟ್ಟಿತ್ತು (ಕಾವಿಯ. ೨೦). [?]

**ಮುಖಾರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮುಖಾರಿ ಹಿಂದೋಳವಸಂತವೆಂಬುವೀ ವಸಂತಮಿಶ್ರರಾಗಂಗಳು (ವಿವೇಕ. ೦೬೯) ; ವರವಸಂತ ಮುಖಾರಿ ಗುಜ್ಜರಿ . . . ಮೋಹನದ ರಾಗಂಗಳಲಿ ಪಾಡಿದರು (ಹಾರವ. ೦೦-೯೯) ; ಮುಖಾರಿ—ಪ್ರಸಿದ್ಧ ಪ್ರಾಚೀನರಾಗ. ೨೦ನೇ ಮೇಳಕರ್ತ ನಠಭೈರವಿಯಲ್ಲಿ ಜನ್ಯ (ಸಂಗೀತಂ. ೦೩೯). [ಸಂ.]

**ಮುಖಾವಲೋಕನ** (ನಾ). ಮುಖವನ್ನು ನೋಡುವುದು ; ಮುಖದರ್ಶನ : ಅವರು ಪಿತೃಗಳ ಮರಣಾನಂತರ . . . ಬಹಳ ವರ್ಷಗಳಿಂದಲೂ ಅನ್ಯೋನ್ಯಮುಖಾವಲೋಕನವಿಲ್ಲದವರಾಗಿದ್ದರು (ಶವಕ. ೦). [ಸಂ.]

**ಮುಖಾಸಿ** 'ಮೊಖಾಸ' ನೋ.

**ಮುಖಾಸೆ** 'ಮೊಖಾಸ' ನೋ.

**ಮುಖಿ** (ನಾ). ಅಧಿಕಾರಿ ; ಮುಖ್ಯಸ್ಥ : ಮಠಗಳ ಮುಖಿಗಳೂ, ತಿರುನಂದಿಯ ಕೈಲಾಸದೇಗುಲದ ಸ್ಥಾನಾಧಿಪತಿಗಳೂ ಸರ್ವಮಾನ್ಯದತ್ತವಾಗಿ ಭೂಮಿಯನ್ನು ಅನುಭವಿಸುವಂತೆ ರಾಜಾಜ್ಞೆ ಇತ್ತು (ತುಳುವಾ. ೦೩೦). [← ತುಳು. ಮುಖಿ]

**ಮುಖೇಡಿ** 'ಮುಖಹೇಡಿ' ನೋ.

**ಮುಖೇಡಿತನ** 'ಮುಖಹೇಡಿತನ' ನೋ.

**ಮುಖ್ತ್ಯಾರ್** 'ಮೊಖ್ತಿಯಾರ್' ನೋ.

**ಮುಖ್ತ್ಯಾರನಾಮೆ** 'ಮೊಖ್ತಿಯಾರ್‌ನಾಮು' ನೋ.

**ಮುಖ್ಯ** (ಗು). ೧. ಬಾಯಿ ಅಥವಾ ಮುಖಕ್ಕೆ ಸಂಬಂಧಿಸಿದ. ೨. ಪ್ರಮುಖವಾದ ; ಪ್ರಧಾನವಾದ : ಸರ್ವಜ್ಞತ್ವ ಸರ್ವೇಶ್ವರತ್ವ . . . ಸರ್ವಶಕ್ತಿತ್ವಾದಿಗಳೇ ಈಶ್ವರನ ಮುಖ್ಯಗುಣಗಳು (ವಿವೇಕ. ೨೮). ೩. ಉನ್ನತಮಟ್ಟದಲ್ಲಿರುವ ; ಶ್ರೇಷ್ಠವಾದ ; ಮೊದಲ ದರ್ಜೆಯ. ೪. ಅತ್ಯಂತ ಮುಂದಿರುವ ; ಅಗ್ರಸ್ಥಾನದ. ೫. ಮೊದಲಾದ ; ಮುಂತಾದ : ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕ ಮಿಂದ್ರಮುಖ್ಯದಿವಿಜರ್ ಸ್ವಪರಿಗ್ರಹಂ (ಜಗ. ೦-೨೦) ; ಸರಸಿಜಾಸನ ಮುಖ್ಯದೇವರನೊರಸುವಂ ಗಡ (ಬಸವ. ೨೩-೨೨). (ನಾ). ೬. ಪ್ರಮುಖವಾದುದು ; ಪ್ರಧಾನವಾದುದು ; ಮಹತ್ತ್ವವಾದುದು : "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ, ಮುಖ್ಯಂ . . . ಅಗ್ರಣೀಃ— ಈ ೧೩ ಮುಖ್ಯಂ" (ಹಲಾಯು. ೦೦೩-೩) ; ಬಡವನಾಗಲಿ ಬಲ್ಲಿದನಾಗಲಿ ಇನಿತು ಮುಖ್ಯವಾಗಿ ಮಾಡಿಸಿಕೊಂಬುದು ಜಂಗಮಸ್ಥಲ (ಬಸವ. ೬೬೯) ; ಕೂಡಿ ನುಡಿವೆಡೆಯೊಳೆಂದುಂ ಕೂಡದು ಲಿಂಗತ್ರಯಕ್ಕೆ ತರತಮಭಾವಂ ನೀಡುಂ ವಾಕ್ಯದ ಕಡೆಯೊಳ್ ಕೂಡಿರ್ದುದದಾವುದದುವೆ ಮುಖ್ಯಮೆನಿಕ್ಕುಂ (ಶಬ್ದ. ೦೯) ; ರಸಾಭಿವ್ಯಕ್ತಿಗೆ ಮತ್ತೊಂದು ಮುಖ್ಯವಾದ ನಿಯಮವೆಂದರೆ—'ಮುಖ', 'ಪ್ರತಿಮುಖ', 'ಗರ್ಭ', 'ಅವಮರ್ಶ', 'ನಿರ್ವಹಣ' ಪಂಚಸಂಧಿಗಳನ್ನೂ . . . ಕೇವಲ ರಸಾಭಿವ್ಯಕ್ತಿಯ ದೃಷ್ಟಿಯಿಂದಲೇ ರಚಿಸುವುದು (ಧ್ವನ್ಯಾ.ಲೋ. ೦೫೦). ೭. ಶ್ರೇಷ್ಠವಾದುದು ; ಉತ್ತಮವಾದುದು : "ಪ್ರಧಾನಂ, ಪ್ರಮುಖಃ, ಪ್ರವೇಕಃ, ಅನುತ್ತಮಃ, ಉತ್ತಮಃ, ಮುಖ್ಯಃ . . . ಅಗ್ರಿಯಂ— ೧೭ ಮುಖ್ಯವಾಗಿಯೂ, ಉತ್ತಮವಾಗಿಯೂ, ಇತರದಿಂದ ಅಪೇಕ್ಷಿಸಲ್ಪಡತಕ್ಕದ್ದಾಗಿಯೂ ಇರುವ ಶ್ರೇಷ್ಠವಾದಂಥಾದ್ದರ ಹೆಸರುಗಳು" (ನಿಘಂ.೦೩. ೩೩೬). ೮. ಪ್ರಧಾನನಾದವನು ; ಪ್ರಮುಖವ್ಯಕ್ತಿ: "ಅಗ್ರೇಸರಂ ಪುರಸ್ಸರನಗ್ರಣಿ ಮುಖ್ಯಂ ಪುರೋಗವುಂ ಪ್ರಷ್ಠಂ" (ವಸ್ತು.ಕೋ. ೯೩-೯) ; ಅವರ್ಣವಾದಕ್ಕೆಡೆಯಾಗದೊಳ್ಪಿಂದವರ್ಣಕಾವರ್ ಗುಣವೃದ್ಧಿಧಾವರ್ ದಿವ್ಯಾಕರರ್ ವ್ಯಾಕೃತಿನಾಮಿಗಳ್ವೋಲ್ ದಿವಕ್ಕೆ ಪನ್ನಿರ್ವರ್ ಮುಖ್ಯರಾದರ್ (ಕಾವ್ಯಾ.ವ. ೧೩) ; ಪಾಲೆಯನೆತ್ತಿ ಮುಗಿಲೊಡೆಯನ ನಕ್ಕವನೇ ದೊರೆ ನಿನಗೆಂದೇ ಈ ಮುಖ್ಯನ ಕಳಿಸಿಹನೇ (ಗೋಕುಲ. ೯೭-೦೩). ೯. ಅಗತ್ಯವಾದುದು ; ಅವಶ್ಯವಾದುದು : ಈ ಕಾಲದಲ್ಲಿ ಎಲ್ಲ ವಿಚಾರಗಳಲ್ಲೂ ತುಂಬ ಎಚ್ಚರಿಕೆಯಿಂದಿರುವುದು ಬಹಳ ಮುಖ್ಯ (ಕಿತಿ). ೧೦. [ತತ್ತ್ವಶಾ] ಜೀವಸಂಬಂಧವಾದ ನಾಲ್ಕು ಬಗೆಯ ವಾಯುಗಳಲ್ಲಿ ಒಂದು : ವೈರಂಭ ಮುಖ್ಯ ಪ್ರಭಂಜನ ಅಂತರ್ಯಾಮಿ ಸೌಜ್ಞೆಯುಳ್ಳ ನಾಲ್ಕುಜೀವಸಂಬಂಧವಾದ ವಾಯುಗಳೇ ಮಾನಸಾದ್ಯಂತಃಕರಣಚೇಷ್ಟಾಕಾರಣಂಗಳಾಗಿರ್ಕುಂ (ವಿವೇಕ. ೩೯). [ಸಂ.]

**ಮುಖ್ಯತೂರ್ಯ** (ನಾ). (?) : ಖುಣಾತೂರ್ಯ ಮುಖ್ಯತೂರ್ಯ ಸ್ವೇಚ್ಛಾತೂರ್ಯವೆಂಬ ಮೂಱು ವಾಟವ ಕಂಡು ಭಕ್ತಿ ಜ್ಞಾನ ವೈರಾಗ್ಯವೆಂಬ ತ್ರಿವಿಧವಿಶ್ವವನಱಿದು . . . ಕೊಡುವಲ್ಲಿ ಇಂತೀ ಭಾವ ಸದ್ಭಕ್ತನ ಸ್ಥಲ (ವೋಳಿಪೂ. ೦೦೬-೯೩೩). 'ಖುಣಾತೂರ್ಯ' ಪರಾ. [?]

**ಮುಖ್ಯತೆ** (ನಾ). ೧. ಪ್ರಾಧಾನ್ಯತೆ ; ಪ್ರಾಮುಖ್ಯತೆ : ಕೂಡ ನುಡಿವೆಡೆಯೊಳ್ ಲಿಂಗತ್ರಯಕ್ಕೆ ತಮ್ಮೊಳ್ ಮುಖ್ಯತೆಯಮುಖ್ಯತೆಯುಮಿಲ್ಲ (ಶಬ್ದ. ೦೮೦ ವೃತ್ತಿ) ; ಪದನೆರಡುಂ ಮೇಣ್ ಪಲವುಂ ಪದಾರ್ಥಮಂ ಬಯಸುತಿರೆ ಬಹುವ್ರೀಹಿ ಪದಾರ್ಥದ ಗಡಣಂ,ದ್ವಂದ್ವಮೆನಿಪ್ಪುದವ್ಯಯೀಭಾವವಮಾದಿಪದಮುಖ್ಯತೆಯಿಂ (ಶಬ್ದ. ೦೬೩). ೨. ಮೊದಲನೆಯ ಸ್ಥಾನ,—ದರ್ಜೆ. [ಸಂ. ಮುಖ್ಯತಾ]

**ಮುಖ್ಯತ್ವ** (ನಾ). = ಮುಖ್ಯತೆ ೧ : "ಬಲ್ಲಿಃ, ಬಲ್ಲನಂ, ಬಲ್ಲನೀಯಂ, ಈ ೩ ಮುಖ್ಯತ್ವಂ" (ಕಾಶ್ಯ. ೦೨೩) ; ಪುರುಷತ್ರಯಂ ಕ್ರಮದಿನಿರ್ದೊಡಂ ವ್ಯತ್ಯಯವಾಗಿರ್ದೊಡಂ ಕೂಡಿ ನುಡಿವೆಡೆಯೊಳ್ ಉತ್ತಮಪುರುಷಕ್ಕೆ ಮುಖ್ಯತ್ವಂ (ಶಬ್ದ. ೨೨೩ ವೃತ್ತಿ). [ಸಂ.]

**ಮುಖ್ಯನ್ಯಾಯಾಧಿಪತಿ** (ನಾ). ಶ್ರೇಷ್ಠನ್ಯಾಯಾಧೀಶ ; ಉಚ್ಚನ್ಯಾಯಾಧಿಪತಿ : ಭಾರತದ ಮುಖ್ಯನ್ಯಾಯಾಧಿಪತಿಯವರಿಂದ ನಿಯುಕ್ತವಾಗತಕ್ಕ ಮಧ್ಯಸ್ಥಗಾರರು ನಿರ್ಧರಿಸತಕ್ಕಂಥ ಅಂಶದಾನವನ್ನು . . . ಪಾವತಿ ಮಾಡತಕ್ಕುದು (ಭಾರತ. ೦೬೭). [ಸಂ.]

**ಮುಖ್ಯನ್ಯಾಯಾಧೀಶ** (ನಾ). = ಮುಖ್ಯನ್ಯಾಯಾಧಿಪತಿ : ಜಿಲ್ಲೆಯ ಸಿವಿಲ್‌ನ್ಯಾಯಾಲಯದ ಮುಖ್ಯನ್ಯಾಯಾಧೀಶನೇ ಕ್ರಿಮಿನಲ್ ಪ್ರಕರಣ

ಗಳಿಗೆ ಸಂಬಂಧಿಸಿದಂತೆ ಜಿಲ್ಲೆಯ ಸೆಷನ್ಸ್ ವಿಭಾಗದ ಮುಖ್ಯನ್ಯಾಯಾಧೀಶನಾಗಿರುತ್ತಾನೆ (ಕರ್ನಾಟ. XI, ೩೯೭); ಮುಖ್ಯನ್ಯಾಯಾಧೀಶ ಹೊತ್ತಿಗೆ ಮುಂಚೆ ಕೋರ್ಟಿಗೆ ಬಂದಿದ್ದನು (ಭುವರು. ೨೩). [ಸಂ.]

**ಮುಖ್ಯಪ್ರಾಣ** (ನಾ). ಆಂಜನೇಯ ; ಹನುಮಂತ : ಕೂಸಿನ ಕಂಡೀರ್ಯಾ ಗುರು ಮುಖ್ಯಪ್ರಾಣನ ಕಂಡೀರ್ಯಾ (ಭುರಂವ. ೧-೦೯೩ ಪಲ್ಲವಿ); ಜೋ ಜೋ ಜೋ ಮುಖ್ಯಪ್ರಾಣಾ ಮಲ್ಲರ ಗಂಟಲ ಗಾಣಾ (ವಾದಿಕೀ. ೦೩೭ ಪಲ್ಲವಿ). [ಸಂ.]

**ಮುಖ್ಯಮಂತ್ರಿ** (ನಾ). ರಾಜ್ಯದ ಮಂತ್ರಿಮಂಡಲದ ಮುಖ್ಯಸ್ಥ ; ಪ್ರಧಾನಸಚಿವ : ಶಾಸನಸಭೆಯಲ್ಲಿ ಸಾವಿರಮಂದಿಯಿದ್ದರೂ ಕೆಲಸದ ಜವಾಬ್ದಾರಿ ಹೊರಲು ರಾಜ್ಯಕ್ಕೆ ಒಂದು ಮಂತ್ರಿಸಂಪುಟವೂ ಒಬ್ಬ ಮುಖ್ಯಮಂತ್ರಿಯೂ ಇರಬೇಕು (ರಾಜ್ಯಶಾ. ೬೩). [ಸಂ. ಮುಖ್ಯಮಂತ್ರಿನ್]

**ಮುಖ್ಯರಸ್ತೆ** (ನಾ). ವಿಶಾಲವಾದ ರಸ್ತೆ ; ಪ್ರಧಾನರಸ್ತೆ : ಗುಡಿಗಾರ ಪೇಟೆಯ ಒಂದು ಓಣಿಯಿಂದ ಹೊರಬಿದ್ದ ತುಂಗಕ್ಕ ಮುಖ್ಯರಸ್ತೆಯನ್ನು ಸೇರಿ ನಡೆಯುತ್ತಿದ್ದಳು (ಪುಣ್ಯಭೂ. ೦೩೭). [ಮುಖ್ಯ + ರಸ್ತೆ]

**ಮುಖ್ಯಸ್ಥ** (ನಾ). ಪ್ರಧಾನವಾದ ಅಧಿಕಾರವುಳ್ಳವನು : ಮುಖಂಡ; ನಾಯಕ : ಮಹಾಮಾತ್ಯನು ಮಂತ್ರಿಮಂಡಲದ ಮುಖ್ಯಸ್ಥನೆಂದು ಭಾವಿಸಬಹುದು (ಕಣಾಟ. ೩೩೦). [ಸಂ.]

**ಮುಖ್ಯಸ್ಥೆ** (ನಾ). ಪ್ರಧಾನವಾದ ಅಧಿಕಾರವುಳ್ಳವಳು; ಮುಖಂಡಳು: ಅವರು ಈ ದಿನ ಆ ಕಚೇರಿಯ ಮುಖ್ಯಸ್ಥೆಯಾಗಿ ಅಧಿಕಾರವನ್ನು ವಹಿಸಿಕೊಂಡರು (ರೂಢಿ). [ಮುಖ್ಯಸ್ಥ + -ಎ$_2$]

**ಮುಖ್ಯಾಧಿಕಾರಿ** (ನಾ). = ಮುಖ್ಯಸ್ಥ : ತೆರೆಯು ನಿಧಾನವಾಗಿ ಎದ್ದು ಜೈಲಿನ ಮುಖ್ಯಾಧಿಕಾರಿಯ ಕೊಠಡಿಯು ಪ್ರಕಟವಾಗುವುದು (ವೀರಯೋ.೧). [ಸಂ. ಮುಖ್ಯಾಧಿಕಾರಿನ್]

**ಮುಖ್ಯಾನಂದ** (ನಾ). [ತತ್ತ್ವಶಾ] ಆನಂದದ ಅಷ್ಟಭೇದಗಳಲ್ಲಿ ಒಂದು : ವಿಷಯಾನಂದ ಬ್ರಹ್ಮಾನಂದ ವಾಸನಾನಂದ ಮುಖ್ಯಾನಂದ ನಿಜಾನಂದ ಆತ್ಮಾನಂದ ಅದ್ವೈತಾನಂದ ವಿದ್ಯಾನಂದವೆಂಬವೇ ಆನಂದದಷ್ಟ ಭೇದಂಗಳವರಲ್ಲಿ . . . ಹಾನೋಪಾದಾನವಿಲ್ಲದುಪೇಕ್ಷಾಬುದ್ಧಿಯಲ್ಲಿ ತೋರ್ಪುದೇ ಮುಖ್ಯಾನಂದವೆನಿಸುವುದು (ವಿವೇಕ. ೨೪). [ಸಂ.]

**ಮುಖ್ಯಾರ್ಥ** (ನಾ). [ಕಾವ್ಯಮೀ] ಶಬ್ದಪ್ರಧಾನವಾದ ಅರ್ಥ : ವಾಚ್ಯಾರ್ಥ : ಒಂದು ಶಬ್ದವನ್ನು ಕೇಳಿದ ಕೂಡಲೆ ತಟ್ಟನೆ ಮನಸ್ಸಿಗೆ ಹೊಳೆಯುವ ಅದರ ಸುಪ್ರಸಿದ್ಧವಾದ ಅರ್ಥವು ಮುಖ್ಯಾರ್ಥ ಅಥವಾ ವಾಚ್ಯಾರ್ಥವೆನ್ನಿಸುತ್ತದೆ (ಕೃಮೀ. ೦೭೭). [ಸಂ.]

**ಮುಖ್ಯೆ** (ನಾ). = ಮುಖ್ಯಸ್ಥೆ : " ವರಾರೋಹೆಯೆನೆ ಮುಖ್ಯೆಯಕ್ಕು [ಶಾಶಾ. ಮುಖ್ಯಳಕ್ಕು] " (ಮಂಗನಾ. ೯೦-೬). [ಸಂ. ಮುಖ್ಯಾ]

**ಮುಗದಾಣ** ' ಮೂಗುದಾಣ ' ನೋ.

**ಮುಗಲ್** ' ಮುಗುಳ್$_1$ ' ನೋ.

**ಮುಗಳಕ್ಕಿ** ' ಮುಗುಳಕ್ಕಿ ' ನೋ.

**ಮುಗಳ** ' ಮುಗುಳ್$_1$ ' ನೋ.

**ಮುಗಿ** (ಕ್ರಿ). ೧. ಹೂವಿನ ದಳಗಳು ಮುಚ್ಚಿಕೊಳ್ಳು,-ಸಂಕೋಚನ ಹೊಂದು : " ಮುಗಿ-ಪುಷ್ಪಸಂಕೋಚನೇ (ಮೊಗ್ಗಾಗು) " (ಶಮಧಾ) ; ಸರಸಿಜಬಾಂಧವನಸ್ತಾಂತರಗತನಾಗಿರೆ ಸರೋಜಿನೀವನಮಾದಂ ಕೊರಗುತ್ತೆ ಮುಗಿಗುವಿನಾಶ್ವರವಿರಹದೆ ಶೋಕಾಕುಲಂ ವಿಶೇಷಾಪ್ತಜನಂ (ಕವಿರಾ.೩-೩೧); ಪಗಲಂತಿರ್ದಚ್ಚವೆಳ್ದಿಂಗಳನಿನಕಿರಣದ್ಯೋತಿಗೆತ್ತಾಗಳಾಗಳೆ ಮುಗಿದಿರ್ದಂ ಭೋಜಮೋರಂತಲರ್ದುವು ... ವಲಯಷಂಡಂಗಳಾಶಂಕೆಯಿಂದಂ ಮುಗಿಯಲ್ಕೆಂದಿರ್ದವೇನುಜ್ಜ್ವಳಿಸಿದುದೊ ಜಗಚ್ಚಕ್ರಮಂ ಚಂದ್ರಬಿಂಬಂ(ಆದಿಪು. ೦೨-೯); ದಿನಪನಪರಾಂಬುಧಿಯನೈದಲು ವನಜ ಮುಗಿದವು (ಕುಮಾವ್ಯಾ. ೩-೬); ಮುಗಿದವಿೀ ಚಂದ್ರಾನನೆಯ ಬರವಿಗೆ ಸರೋರುಹಷಂಡ (ತೊರರಾ. ೩. ೯. ೨೦). ೨. ಕಣ್ಣು ತನಗೆ ತಾನೇ ಮುಚ್ಚಿಕೊಳ್ಳು,- ನಿಮೀಲಿತವಾಗು : ತವದ ಕಾಮೋದ್ರೇಕದಲಿ ಕೂಡುವ ಸಮಪ್ರಣಯಿಗಳ ನಿಡುಗಣ್ಣೆವೆಗಳರೆ ಮುಗಿವುತಿರೆ (ಸೌಳ್ಯಾ. ೦೯-೩೭) ; ಚೆನ್ನಿಗ ನಿನ್ನಂಗವ ನೋಳ್ಪೆವೆಂದಕ್ಷಿಯಿನ್ನೊಂದ ನಿಟ್ಟಿಸೆವೆಂದು-ಮುನ್ನವೆ ಮುಗಿದಿವೆ ಚೆಲುವಿಕೆಯನು ತೋರುತೆನ್ನ ನೇತ್ರಕೆ ಸುಖವೀಯೊ (ಕಂಪಿ. ೯-೦೯೦). ೩. ಕಣ್ಣನ್ನು ಮುಚ್ಚಿಕೊಳ್ಳು,- ನಿಮೀಲಿತಗೊಳಿಸು : ಅರೆಮುಗಿದಿರ್ದ ಜಾನಿಸುವ ಕಣ್ಮಲರಾಪ್ತ ಪದಾರ್ಥತತ್ತ್ವಮಂ ಸ್ಮರಿಯಿಪ ಚಿತ್ತಂ (ಸುಕುಮಾ. ೯-೦೭) ; ನಸು ಮುಗಿದ ಕಣ್ಣರೆಗಚ್ಚಿದೆಳಗಲುಕೆ . . . ಗೋರಿಗೆ ಸಿಕ್ಕಿದೆರಲೆಗಳನಕಟಕಟ ನಿಷ್ಕರುಣ ಲುಬ್ಧಕರು ಕಡೆಯೆಚ್ಚರು (ಹರಿಶಾ. ೮-೨೭) ; ಕುಮಾರಿತಿ . . . ಪಾರ್ವತೀ ಶಾಂಕರಿ ಶಿವೇಯೆನುತ ನೆನೆವುತಿರಲೊಂದು ದಿವರಾತ್ರಿಯೊಳು ನಿಡುಗಣ್ಮಲರ ಮುಗಿದಿರ್ದಳು (ಸೌಂದಪು. ೮-೨೭) ; ಭಾರವಿದು ನಿನಗಿದುವೆ ವ್ಯತಸಂಸ್ಕಾರ ಪರಿಯಂತರಸ ಕೇಳೆಂದೂರುಜವ್ರತಿ ಸರಳ ಕೀಲಿಸಿ ಮುಗಿದನಕ್ಷಿಗಳ (ತೊರರಾ. ೨-೫-೦೯). ೪. (ಗುರು ಹಿರಿಯರನ್ನು ಕಂಡಾಗ ಗೌರವಸೂಚಕವಾಗಿ ಕೈಗಳೆರಡನ್ನೂ) ಜೋಡಿಸು ; ಸೇರಿಸು : ನಂದಿಮಿತ್ರಂ . . . ಬಂದು ಮುಂದೆ ನಿಂದು ಕೈಗಳಂ ಮುಗಿದಿಂತೆಂದಂ (ವಡ್ಡಾರಾ .೭೯-೬) ; ಚಾರಣಯುಗಳಕ್ಕೆ ಕರಕಮಲಯುಗಲಮಂ ಮುಗಿದತಿತ್ವರಿತಗತಿಯಿಂ ಬರುತ್ತುಂ (ಆದಿಪು. ೨-೯೯ ವ) ; ಕೈಯ ಮುಗಿದುದು ನಿಖಿಳಪರಿವಾರ (ಕುಮಾವ್ಯಾದ್ರೋ. ೧-೩೯) ; ಕಾಣಿಕೆಯನಿತ್ತೆರಗಿ ಕಂಡರು ಸಕಲಜನಶ್ರೇಣಿ ತಮತಮಗೆ ಮುಗಿದೆತ್ತಿವನೋಸಲೆಡೆಗೆ ಪಾಣಿಗಳನು (ಜೈಮಿಭಾ. ೬-೦೩). ೫. ಪೂರೈಸು ; ಮುಕ್ತಾಯವಾಗು ; ಕೊನೆಗೊಳ್ಳು : ತದ್ಯಾಗಮೊಂದುಬರಿಸಕೆ ಮುಗಿವುದು (ಜೈಮಿಭಾ. ೮-೦೦) ; ಅಂತಪ್ಪೊಡೆ ನೀಂ ಪೇಳ್ದ ನಲ್ನುತೆ ಮುಗಿಯೆ ಪಂದುದು (ರಾಮಾಶ್ವ. ೦೭೩-೨೭) ; ಮದುವೆ ಮುಗಿದರೂ ಮದುಮಗನ ನೋಡಲಿಲ್ಲ (ಗಾದೆ). ೬. ಬರಿದಾಗು ; ನಿಶ್ಶೇಷವಾಗು : "ಕುಸುಮ ಸಂಕೋಚನದೊಳಿಲ್ಲಮೆಯೊಳಂ ಮುಗಿಯೆನಿಸುಗು" (ಶಬ್ದಮಂ. ೮೦) ; ಆ ಪೊಟ್ಟು ಕಾಮಂ ತನಗೆ ಬೆಂಬಲಮಾಗೆ . . . ನಿಷಂಗಂ ಮುಗಿವನ್ನಂ ಐವಡಿಗಣೆಯಿಂ ಮಾಱುವಕ್ಕದೊಳಿರ್ದಾ ರಾಮನನಿಸುತಿರ್ದಂ (ರಾಮಾಶ್ವ. ೩೯-೦೯); ಬತ್ತಿಯುಮೆಣ್ಣೆ ಮುಗಿದ ದೀವಿಗೆಯಂತೆ. ಕ್ಷಿತಿಜದಿಂ ಸಿಡಿದ ಮಿಂಚೆಂಬರದೊಳಣೆವಂತೆ ಭಗವಂತನೊಡನೆ ಪರಿನಿರ್ವಾಣವಡೆದಂ (ವೃಶಾಖ. ೯೮-೩೭೭). ೭. ಮುಳುಗು ; ಅಡಗು : ಗಗನನೀಲಿಮೆಯೆನ್ನ ಕಣ್ಗೆ ಸೊಗವೀವಂತೆ ಮುಗಿವ ತರಣಿಯ ರಕ್ತ ಹಿತವೆನಿಸದೇಕೋ (ಮಂಕುಕ. ೩೨). ೮. ಕವಿ ; ಆವರಿಸು ; ವ್ಯಾಪಿಸು : ತನ್ನನರಿಯದ ವಿಶ್ವದಲಿ ನಿಂತು ತಾಳಿದರು ಒಳಗೊಳಗೆ ಬುದ್ಧಿಯದು ಕೇಕಳಿಸಗಿ ಜೀವಿಸದೆ ಹೋಗುವದು ಮಾನವನ ಜೀವಿತವು ಮುಕುರವದ ಮುಗಿದಂತೆ ಮಂಜು ಮುಸುಗಿ (ಕಡಣ. ೩೯-೧೯). 'ಮುಗಿಬೀಳು' ಪರಾ. ೯. ಹೆಚ್ಚಾಗು ; ಮೀರು ; ಮಿಗಿಲಾಗು : ಸಗುಣಗುಣಾಢ್ಯಭೂಪತಿಗಳೇಕಾಂತದಿ ಮಗುಟಗಳೊಂದೊಂದೊರಸಿ ಉಗುವ ಮಾಣಿಕಪೇಪುರದ ನೂಱುಕೋಟಿಗೆ ಮುಗಿದು ಕೊಟ್ಟಹರು ವೈಶ್ಯರಿಗೆ (ಮೋಹತ. ೨೦-೩೩). ೧೦. ಕೊನೆಗೊಳಿಸು : ಮುಕ್ತಾಯಗೊಳಿಸು ; ಪೂರೈಸು : ಕಾರ್ಯವ ಮುಗಿದು ಬಂದನೀಶಗುಸುರಲಾಶ್ಚರ್ಯವಾಯ್ತಂದಪ್ಪಿ ಮಗನ . . . ತಾತ್ಪರ್ಯದಿಂದಿತ್ತ ಮನ್ನಣೆಯೊ (ಭರತ. ೭೩-೨೦) ; ದುಗುಡವಿಲ್ಲದೆ ದಿನವ ತೋಷದೆ ಮುಗಿವನೇ ಸುಖಿಮಾನುಜನ್ಮೆ ! (ಕುಪ್ಪ. ೪೦-೩). ೧೧. ಶೀರಿಹೋಗು ; ಸಾಯು : 'ಮುಗಿವು', 'ಮುಗಿಸು' ಪರಾ. [ದೇ.॥ ತಮಿ. ಮುಕಿ ; ತುಳು. ಮುಗಿ; ತೆಲು. ಮುಗಿಯು; ಕುವಿ. ಮೂಗು]

**ಮುಗಿಡಿ** ? (ನಾ). ಒಂದು ಬಗೆಯ ಭೂಮಿ (?) : ಮೆಚ್ಚಿ ಮಣ್ಣು ಮೂಗಣ್ಣುಘ ಪೊಲ×ನ್ನಿನ ಅ[ಪ್ಪ]ಕೆಯ ಕೆಯ್ಯು ಮಖುರ್ಣಾಗ ಕೊಳಗ

ಭಕ್ತ ಮುಗಿಡಿಯ ಕೆಯ್ಯುಮಿನ್ನಿನಿತು ಸಲ್ಕೆ (ಸೌಇ. IX-i, ೩೩-೩೩ : ಸು. 10ಶದು ೬೬ ?). [ ? ]

**ಮುಗಿತ** (ನಾ). ೧. ಸಂಕೋಚಗೊಳ್ಳುವಿಕೆ ; ಕುಗ್ಗುವಿಕೆ : "ಕುಚ– ಸಂಕೋಚನೇ. ಮುಗಿತದೊಳ್" (ಶಾಶಕ್ಕ. ೨೬೦). ೨. ಮುಕ್ತಾಯ ಗೊಳ್ಳುವಿಕೆ ; ಪೂರೈಸುವಿಕೆ : "ಯಮು_ಉಪರಮೇ. ಮುಗಿತದೊಳ್" (ಶಾಶಕ್ಕ. ೪೦). 'ಮುಗಿತಾಯ' ಪರಾ. [ಮುಗಿ+–ತ$_2$]

**ಮುಗಿತಾಯ**, ಮುಕ್ತಾಯ (ನಾ). ೧. ಕೊನೆ ; ಕಡೆ ; ಅಂತ್ಯ : ಮಂಗಳೂರಿನ ಘಟನೆಯೊಂದಿಗೆ ವಿದ್ಯೆಗೆ ಮುಗಿತಾಯ–ಮಾನವಸಹಾಯಕ್ಕೆ ಮುಗಿತಾಯ (ಪಾಶ್ಚಾ. ೨೩೦). ೨. ಕೊನೆಯ ನಿರ್ಧಾರ ; ಅಂತಿಮ ನಿರ್ಣಯ : ಮಾವಿಯ ಸಂಗಡ . . . ಈ ಮಾತಿನ ಮುಗಿತಾಯ ಆಗಲೇಬೇಕೆಂದೂ ಅಮಲನು ನಿರ್ಧರಿಸಿದನು (ಇಶ್ವಕ. ೨೬೩). 'ಉಳಿತಾಯ' ಹೋ. **ಮುಕ್ತಾಯ** : ೧. ವಿನೋದವೇ ಇಂಥ ಕಥೆಗಳ ಮುಕ್ತಾಯ (ಕಥೆ. ೨೪). ೩. ಕೊನೆಯ ಭಾಗ,–ಅಂಶ : ಮೂರು ನಾಲ್ಕು ನಿಮಿಷ ಮೊಂಡತನದಿಂದ ಮಾತಾಡಿದ್ದ ಕಡೆಗೆ ಸೋಲನ್ನೊಪ್ಪಿ ಮುಕ್ತಾಯಕ್ಕೆ ಸಂದುಬಿಟ್ಟೆ (ಪಂಟರು. ೩೯). ೪. [ಸಂಗೀತ] ಗಾಯನ ಅಥವಾ ವಾದನಗಳ ಏಳು ಹಂತಗಳಲ್ಲಿ ಕೊನೆಯದು : ಅಂಕುರ ಸ್ಥಾಯಿಕ ಶ್ರುತಿಸ್ಥಾಯಿ ಮೂರ್ಛನಸ್ಥಾಯಿ ಚೌಕ ಪೇಚರೀಸ್ಥಾಯಿ ರವಸಂಗತಿ ಮುಕ್ತಾಯಗಳೆಂಬ ಸಪ್ತಾವಸ್ಥೆಗಳಲ್ಲಿಯುಂ (ವಿವೇಕ. ೨೩೩) ; ಕೊರವರ ಭೀಮನು . . . ಸುದೀರ್ಘವಾದ ಪಲ್ಲವಿಯನ್ನು ಸನಾದದಲ್ಲಿ ನುಡಿಸಿ. ಕರಡಿಯವನನ್ನು 'ಮುಕ್ತಾಯ'ಕ್ಕೆ ಆಹ್ವಾನಿಸಿದ್ದಾನೆ (ಪಟ್ಟಹೊ. ೦೩).

**ಮುಕ್ತಾಯಕೊಡು** = (ಸಂಗೀತದಲ್ಲಿ) ಸಮಾಪ್ತಿಗೊಳಿಸು : ಉಪ ಸಂಹಾರ ಮಾಡು : ಮೇಳದವರು ಅದಕ್ಕೆ ಪೊಟ್ಟಮೊದಲು 'ಮುಕ್ತಾಯ' **ಕೊಟ್ಟು**. ಚಾಲತಿಯನ್ನು ಬಾರಿಸಿ ಮುಗಿಸುವರು (ಪಟ್ಟಹೊ. ೦೩). **ಮುಕ್ತಾಯಭಾಷಣ** = ಕಾರ್ಯಕ್ರಮದ ಕೊನೆಯಲ್ಲಿ ಮಾಡುವ **ಭಾಷಣ** : ಅಂದು ಅಧ್ಯಕ್ಷರೇ ಮುಕ್ತಾಯಭಾಷಣಮಾಡಿದರು (ರೂಢಿ). **ಮುಕ್ತಾಯಸಮಾರಂಭ** = ಕಾರ್ಯಕ್ರಮದ ಕೊನೆಯಲ್ಲಿ ನಡೆಸುವ **ಸಮಾರಂಭ** : ಮುಕ್ತಾಯಸಮಾರಂಭದ ದಿನ . . . ರಾಜ್ಯದ ನಾನಾ ಭಾಗಗಳಿಂದ ಆಗಮಿಸಿದ ಸಮಾಜದ ಜನರು ಹಾರಗಳನ್ನು ಸಮರ್ಪಿಸಿ ಗೌರವಿಸಿದರು (ಪಟ್ಟೊಶಾ. IV. ೬೦೪).

[ಮುಗಿತ + – ಆಯ$_4$./ತುಳು. ಮುಗುತಾಯಿ; ತೆಲು. ಮುಕ್ತಾಯ]

**ಮುಗಿತೆ** (ನಾ). ೧.=ಮುಗಿತ ೧ : "ಚುಣ _ ಸಂಕೋಚೇ. ಮುಗಿತೆಯೊಳ್ . . . ಚುಣನಂ, ಚುಣನೀಯಂ, ಈ ೨ ಮುಗಿತೆ" (ಶಾಶಕ್ಕ. ೨೬೩). ೨.=ಮುಗಿತ ೨ : "ಲಡ – ಉಪಸೇವಾಯಾಂ. ಕೆಲಸದ ಮುಗಿತೆಯೊಳ್" (ಶಾಶಕ್ಕ. ೨೩೪). [ಮುಗಿ+ – ತೆ$_2$./ತುಳು. ಮುಗಿತೆ]

**ಮುಗಿಬೀಳು** (ಕ್ರಿ). (ಉಕ) ಕವಿ ; ಮುತ್ತು ; ಮುಸುರು : ಅಗಣಿತರಾದ ಶಿವಾಜಿಯ ಭಟರು ಇರುವೆಯಂತೆ ಬೆಳವಡಿಕೋಟೆಯನ್ನು ಮುಗಿಬಿದ್ದರು (ಕಮಂಕ. ೬೨) ; ನನ್ನ ಪಾಡಿಗೆ ನಾನು ಹೂ ಹಡೆದರೇಕಿವರು ಮುಗಿಬೀಳುವರೊ ಮೇಲೆ ! (ಕರುಶ್ರ. ೦೩–೦೬).

[ಮುಗಿ+ಬೀಳು$_1$ (<ಬೀೞ್$_1$)]

**ಮುಗಿಯಿಸು**, ಮುಗಿಸು (ಕ್ರಿ). ೧. ಹೂವಿನ ದಳಗಳು ಮುಚ್ಚಿಕೊಳ್ಳುವಂತೆ ಮಾಡು : ವನಜದಳಂಗಳೊಳೊಂದೊಂದನೆ ಮುಗಿಯಿಸಿ ಕುಮುದವನದಳಂಗಳೊಳೊಂದೊಂದನೆ ಒಡಿವಲರ್ಚುತಿರ್ದಪುವೆನೆ ಪೂಗೊಳದೊಳಗೆ ಪೊಳೆದುವಿಂದುಕರಂಗಳ್ (ಕಾದಂಟಾ. ೪೨೦) ; ಜಿನಲಕ್ಷಣನಿರೀಕ್ಷಣಮೆಂಬ ಚಂದ್ರನಿಂದಂತರಾಯಮೆಂಬ ತಾವರೆಯುಂ ಮುಗಿಯಿಸದೆ (ಧರ್ಮಾಮೃ. ೭–೯೭). ೨. ಕೈಗಳನ್ನು ಜೋಡಿಸುವಂತೆ ಮಾಡು, — ಸೇರಿಸುವಂತೆ ಮಾಡು : ಮರ್ತ್ಯವಿದ್ಯಾಧರರಾಜವ್ಯಂತರಾಧೀಶ್ವರಕರಸರಸಿಜಂಗಳಂ ಪಕ್ಷಚಂದ್ರಸ್ಫುರಿತೋದ್ಯತ್ಕಾಂತಿ ನಿಚ್ಚಂ ಮುಗಿಯಿಸೆ (ಆದಿಪು. ೩–೪೭); ಇತರಪ್ರಚಂಡರ ಕರಾಬ್ಜಮನೀಕ್ಷಣಚಂದ್ರಿಕಾಂಶುವಿಂ ಮುಗಿಯಿಪುದೆಂಬಿನಂ ಮುಗಿದುಮಂದವನೀಶಕರಾಂಬುಜೋತ್ಕರಂ (ಜಗಂ. ೦೩–೬೨). ೩. ಆವರಿಸುವಂತೆ ಮಾಡು; ಕವಿಯಿಸು : ಮುಗಿಯವಿಪೆಂದುಮೆಂದೆನಿಪ್ಪವಂ ಹರಿಸೈನ್ಯರಜೋಂಧಕಾರದಿಂ ಮುಗಿಯಿಸಿದಂ ದಿವಾಕರಕರಾಬ್ಜಮಂ (ಜಗಂ. ೦೩–೬೨). **ಮುಗಿಸು** : ೧. ವಿಂಗಿಸಿದಂ ವಾದ್ಯರವದಿಂದಬ್ಧಿಘೋಷಮಂ ಮುಗಿಸಿದಂ ತಾವರೆಯನಾ ಬಭ್ರುವಾಹನಂ ಧೂಳ್ಗಳಿನನಂ ಮುಸುಕಲು (ಜೈಮಿಭಾ. ೦೭–೫೭): ಕೆಂದಾವರೆಗಳ ಮುಗಿಸುತ . . . ಪರಿಪೂರ್ಣೇಂದು ಪದನೆಯರ್ಕೈದಿದರು (ಕಂನವಿ. ೨೦–೭೬). ೨. ಈ ಬಾಲಕಂ ಭೂಪಾಲಕರ ಕಯ್ಯಂ ಮುಗಿಸಿಕೊಂಡು ಬರ್ದುಂಕುವಧಿಗತಪರಮಾರ್ಥನಪ್ಪತ್ಯಂತ ಕಾರಣಿಕಂ (ಸಂಬರ. ೨–೬೬). ೪. ತೆಗೆಯದಂತೆ ಮಾಡು; ಮುಚ್ಚಿಸು : ಬಹುಚಾಟುಚಪಳರ ಬಾಯ ಮುಗಿಸಿ . . . ವಧೂಟಿಯರು . . . ಸುವಿಲಾಸದಿಂ ಬರುತಿರ್ದರು (ಪವಮೋ. ೨೪–೨೨). ೫. ಕೊನೆಗೊಳಿಸು; ಮುಕ್ತಾಯ ಮಾಡು ; ಪೂರೈಸು : ವಿಂಗೆ ಮೂಜಗಂ ತಣಿಯೆ ಹಯಮೇಧಯಜ್ಞಮಂ ಮುಗಿಸಿ ಧರ್ಮಾತ್ಮಜಂ . . . ಸುಖದಿಂದೆ ರಾಜ್ಯಂಗೈದನು (ಜೈಮಿಭಾ. ೩೪ ಸೂಕಪ); ಹೊಸಗನ್ನಡದ ಕವಿತೆಯಲ್ಲಿ ಚರಣದೊಂದಿಗೆ ಪದವನ್ನೂ ಮುಗಿಸುವುದೇ ಪದ್ಧತಿ (ಸಮಾಲೋ. ೦೯೪). ೬. ಬರಿದು ಮಾಡು; ನಿಶ್ಶೇಷಗೊಳಿಸು : ಎಲ್ಲರ ತಿಂಡಿಯನ್ನೂ ಆ ಹುಡುಗ ಒಬ್ಬನೇ ಮುಗಿಸಿಬಿಟ್ಟಿದ್ದಾನೆ (ರೂಢಿ). ೭. ನಾಶಮಾಡು ; ಹಾಳುಮಾಡು ; ಧ್ವಂಸಗೊಳಿಸು : ಆ ಅವಿವೇಕಿ ತನ್ನ ತಂದೆಯ ಆಸ್ತಿಯನ್ನೆಲ್ಲಾ ಮುಗಿಸಿ ಬಿಟ್ಟನು (ರೂಢಿ). ೮. ಕೊಲ್ಲು ; ಸಾಯಿಸು; ತೀರಿಸು : ಅವಳಿಗೆ ದ್ರವ್ಯದಾಸೆ ತೋರಿಸಿ ಅವಳ ಮಗುವನ್ನು ನಮ್ಮ ವಶಪಡಿಸಿಕೊಂಡು . . . ರಾತ್ರೋರಾತ್ರಿ ಶ್ಮಶಾನಕ್ಕೆ ಒಯ್ದು ಮುಗಿಸಿಬಿಟ್ಟೆವು (ಶ್ರಶಾಶ. ೦೮). [ ಮುಗಿ + — ಇಸು$_3$ ]

**ಮುಗಿಲ್**, ಮುಗಿಲು (ನಾ). ೧. ಮೋಡ ; ಮೇಘ : "ಅಭ್ರಂ, ಅಬ್ದಃ, ಘನಃ, ಮೇಘಃ . . . ಜಲಾಹಕಃ – ಈ ೧೦ ಮುಗಿಲ ಪೆಸರ್" (ಹಲಾಯು. ೦೦–೫೮); ತಡೆತಡೆದು ಕಾಂತನಲ್ಲಿಗೆ ನಡೆಯಲ್ ಬಗೆದನಗೆ ಕಾರ ಕಾರಿರುಳೊಳ್ ಸಪ್ಪುಡಮಡಿಕೆಗಳಂ ತೊಡೆದತ್ತೆಡಪಱಿಯದೆ ಪೊಳೆವ ಮಿಂಚು ಮುಗಿಲೆಡೆಯೆಡೆಯೊಳ್ (ಕವಿರಾ. ೩–೦೨೯); ಇರ್ವರುಂ . . . ಸಹಸ್ರಕೂಟಾಕಾರಮಪ್ಪುದೊಂದು ಮುಗಿಲಂ ಕಂಡು (ವಡ್ಡಾರಾ. ೦೦೯–೩); ಪಾಱುವ ವಿಮಾನದೊಂದಳ್ಳೆಱಿಂ ಪರಿದುಗುವ ಮುಗಿಲ ನೀರ್ಗಳ ಪಲವುಂ ಜೇಱುಗಳೊಳಿಳಸಿ ಖಚರರನಾಱಿಸಿದುದು ಗಗನದೊಳ್ ವಿಯತ್ತಳಪವನಂ (ಆದಿಪು. ೪–೮೬). ೨. ಬಾನು ; ಆಗಸ ; ಆಕಾಶ : "ಆಕಾಶದೊಳ್ ಕಾದಂಬಿನಿಯೊಳು ಮುಗಿಲ್" (ಶಬ್ದಮಂ. ೦೦೮). ವಾಮನಕ್ರಮಂ ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ (ಅಲಾಪ. ೦–೦೦): ಅಲ್ಲಿಯ ಜನಂ ಮುಗಿಲೆಡೆಯೊಳೆಡೆವಿಡದೆಡೆಯಾಡಿ ಬಟಲ್ದ ಬಜೊಂದರಿಯರ್ಕಳಱವಟ್ಟಿಗೆದಾಣಮೆಂಬಂತೆಸೆವೆಳನೀರ್ಗಳಂ ಪೊತ್ತಾಗಸದೆಡೆಗಡರ್ವ ಚೆಂದೆಂಗಿನ ಮರಂಗಳೊಳಂ . . . ಬಸಂತಂಗೆ ನೆಲೆವೀಡಾಗಿರ್ದುದು (ಕಬ್ಬಿಗ. ೩೦). **ಮುಗಿಲು** : ೧. "ಮುಗಿಲೆನಲ್ಮೇಘ" (ಕಶಠ. ೪೦); ಮುಗಿಲು ಹಱಿದು ಬಿದ್ದರೆ ಎನಗೆ ಮಜ್ಜನಕ್ಕೆಱೆದರೆಂಬೆನು (ಮಹಾದೇ. ೩. ೩೦–೬೩); ಭಯರಸದ ಹಬ್ಬುಗೆಯಲುಬ್ಬಿದ ಶೋಕದೊಡ್ಡನ ಮುಗಿಲು ಕಱಿದುದು ಕುರುಬಲದ ಕಂಬನಿಯ ಬಿಱುವಳೆಯ (ಕುಮ್ಯಾಕ. ೨೦–೩೬); ಮುಗಿಲು ಮುಸುಕಿದ ಚಂದ್ರಬಿಂಬವೊ ಪಗಲೊಳೆಸೆವ ಸದೀಪಕಾಂತಿಯೊ (ಪಳಕ. ೭–೨೪); ನೀಲಾಕಾಶದಲ್ಲಿ ನಿರ್ದಿಷ್ಟರೂಪದ ಬಿಳಿಯ ಮುಗಿಲೊಂದಿದ್ದರೆ ನಮ್ಮ ಗಮನ ಆ ಕಡೆ ಚೆನ್ನಾಗಿ ಬೀಳುತ್ತದೆ (೬ಶ್ವಧ. ೪೬೮). ೨. ಅಗಳಿಗಟ್ಟಣೆಯನಿಟ್ಟಿರುವರಲ್ಲದೆ ಮುಗಿಲಿಗಟ್ಟಣೆಯನಿಕ್ಕುವರೆ

(ಶಾಂತೀಶ. ೬-೩೦); ಮಳೆ ಯಾವಾಗ ಆದೀತೋ ಎಂದು ಮುಗಿಲ ಕಡೆ ನೋಡುವುದೇ ಅವನ ಕೆಲಸ (ಪಪಂ. ೩). ೩. ಮೇಲುಗಡೆ ; ಮೇಲು ಭಾಗ : ' ಮುಗಿಲ್ನೂಲು ' ಪರಾ.

**ಮುಗಿಲು ಮುಟ್ಟು, ಮುಗಿಲು ಮುಟ್ಟು** = ೧. (ಆಲಂ) ಮೇಲೇರು ; ಉಚ್ಚಾಸ್ರಯಸ್ಥಿತಿಯನ್ನು ತಲುಪು : ನೆಗಟ್ದಿಕ್ಷ್ವಾಕು ಕುಲಾಂಬರೇಂದುಭರತಂ ನಿನ್ನಗ್ರಜಂ ಸಾಹಸಂ ಮುಗಿಲಂ ಮುಟ್ಟಿ ... ದಿಗ್ಭ್ರಯಕ್ಕೆ ಪೊಜಮಟ್ಟಾ ಪೆಂಪು ಸಾಮಾನ್ಯಮೇ (ಆದಿಪು. ೧೪-೫೨). ೨. ಆಕಾಶವನ್ನು ತಲುಪು ; ಗಗನಕ್ಕೇರು : ವಿದ್ವಾಂಸರ ವೇದಾ ಶೀರ್ವಚನಗಳು, ಪುರಜನರ ಜಯಘೋಷಗಳು ಮುಗಿಲು ಮುಟ್ಟುತ್ತಿದ್ದವು (ಶ್ರೀರಾಯ. ೩೪೪). **ಮುಗಿಲ ಕಿಚ್ಚು** = ಮೋಡಗಳ ಘರ್ಷಣೆಯಿಂದುಂಟಾಗುವ ಬೆಳಕು; ಮಿಂಚು : "ಮೇಘವಹ್ನಿಃ ಇರಮ್ಮದಃ– ಈ ೨ ಮುಗಿಲ ಕಿಚ್ಚು" (ಹಲಾಯು. ೦೩-೭೦). **ಮುಗಿಲ ದನಿ** = ಮೋಡಗಳ ಘರ್ಷಣೆಯಿಂದುಂಟಾಗುವ ಧ್ವನಿ ; ಗುಡುಗು ; ಮೇಘಧ್ವನಿ : "ಮೊಟಗು = ಮುಗಿಲ ದನಿ" (ಕಬಿಪ. ಕಂ. ೧); ಮುಗಿಲ ದನಿಯಂ ಕೇಳ್ದ ಮುದಿಹಂಸೆಯಂತೆಯಾ ಮಗನ ದನಿಯಂ ಕೇಳಿ ಕೈಯ ನೆಟ್ಟಿಯ ಮುಜಿದು (ಸಮ್ಮಕೌ. ೨-೬೪). **ಮುಗಿಲ ಧ್ವನಿ**=ಮುಗಿಲ ಧನಿ : "ಮೊಟ ಗೆಂದು ಮುಗಿಲ ಧ್ವನಿಯದು" (ಶಕುಂ. ೦೬೫). **ಮುಗಿಲ ಪೂ, ಮುಗಿಲ ಹೂ**= ಮಳೆನೀರು : "ಮುಗಿಲ ಪೂವೆಂದು ಜಲಂ"(ಕಶಶಾ. ೫೩-೦೪೯); "ಜಲಮೆಂದುಂ ಮುಗಿಲ ಹೂ[ಶಾಶಾಂ. ಪೂ]ವೆನಿಕ್ಕುಂ" (ಕವಿಕಂ. ೪೭೦-೯೦). **ಮುಗಿಲಮಲ್ಲಿಗೆ, ಮುಗಿಲುಮಲ್ಲಿಗೆ** = ೧. ಒಂದು ಬಗೆಯ ಮಲ್ಲಿಗೆ : ಹೊರಗೆ ಎಡಬಲದಲ್ಲಿ ಎರಡು ಮುಗಿಲ ಮಲ್ಲಿಗೆಯ ಗಿಡಗಳಿರುವುವು (ಕೃಶಂದ. ೯೩). ೨. (ಆಲಂ) ಕೈಗೆ ಎಟುಕದುದು; ದುರ್ಲಭವಾದುದು: ಅವರ ಗ್ರಂಥಗಳು ಕನ್ನಡಸಾಹಿತ್ಯಲೋಕಕ್ಕೆ ಮುಗಿಲ ಮಲ್ಲಿಗೆಯೇ ಆಗಿರುವುವು (ಶಾಟಿಸ. ೧); ಜ್ಞಾನಯೋಗವಂತೂ ನೂರಕ್ಕೆ ತೊಂಬ ತ್ತೊಂಬತ್ತು ಜನರ ಪಾಲಿಗೆ ಮುಗಿಲು ಮಲ್ಲಿಗೆ (ಧರ್ಮಸಾ. ೦೦೭). **ಮುಗಿಲವಟ್ಟೆ** = ಆಕಾಶಮಾರ್ಗ ; ಗಗನಪಥ : ಆತನುಂ ಕೂಡೆ ಕಾವಲ್ಗೈತರೆ ಮುಗಿಲವಟ್ಟೆಯ ಬೇಹಿನಾಳಾಗಿ, ಬಟ್ಟೆವಿಡಿದರ್ ಪಂಚವಟಿಗೆ (ಶ್ರೀರಾಮಪ. ೦೪೪-೦೭). **ಮುಗಿಲಿಗೇರಿಸು** = (ಆಲಂ) ಹೊಗಳು ; ಅಟ್ಟಕ್ಕೇರಿಸು : ಸರ್ವಹಾನಿಗಳಿಗೂ ಕಾರಣವಾದ ಕ್ರೂರಕೃತ್ಯಗಳನ್ನು ಮೇರುಸಾಹಸಕೃತ್ಯಗಳೆಂದು ಮುಗಿಲಿಗೇರಿಸುವ ಸಮಾನಾಭಿರುಚಿಯ ಜನರ ನಡುವೆ ಈ ರಾಜಕೀಯದುರ್ಮಾರ್ಗಿಗಳು ಸ್ವಚ್ಛಂದದಿಂದ ವರ್ತಿಸು ತ್ತಿದ್ದಾರೆ (ಪುಸರು. ೩೦೦). **ಮುಗಿಲುದ್ದ, ಮುಗಿಲುದ್ದಂ** = ಆಕಾಶದಷ್ಟು ಎತ್ತರ ; ಗಗನದಷ್ಟು ಎತ್ತರ : ನಟು . . . ಮುಗಿಲುದ್ದವಾದ ನೋಪವಟಮಟಗಂ ದಿಟಕ್ಕನೆ ಕರಂ ಬಳೆದಂ ಮನದಂತೆ ವಾಮನಂ (ಅರ್ಧನೇ. ೬-೨೪); ಮುಗಿಲುದ್ದವಾಗಿ ಮೂವಳಿಸಿದ ಕೋಟೆಯಿಂ . . . ಉರ್ಗ್ಗೊಳೊಪ್ಪುಗು (ಕೌಇಇ. IX-i, ೨೪೭-೦೦; 1177); ಮುಗಿಲುದ್ದಂ ಪೊದೆತ್ತು ಹರ್ಷರಸಮೂ ಪುರದೊಳ್ (ಶಂರಾಪಾ. ೪-೨೮). **ಮುಗಿಲು ಮಾಳಿಗೆ** = (ಆಲಂ) ಕಲ್ಪನೆಯ ಸೌಧ, –ಮಹಲು : ವಿಜಯಸಿಂಹನಿಗೆ ತಾನು ಯೋಚಿಸುತ್ತಿದ್ದ ವಿಷಯವು ಬಹಳ ಮನೋಹರವಾಗಿದ್ದುದರಿಂದ . . . ತನ್ನ ಮುಗಿಲುಮಾಳಿಗೆಯನ್ನು ಪುನಃ ಕಟ್ಟಿಕೊಳ್ಳಲಾರಂಭಿಸಿದನು (ರಾಜಿಹ. ೨). **ಮುಗಿಲು ಮೂರೇಗೇಣು** = (ಆಲಂ) ಅತ್ಯಂತ ಉನ್ನತ ಮಟ್ಟದಲ್ಲಿರುವಿಕೆ : ಆಂಗ್ಲಭಾಷೆಯ ರಚನಾಶಕ್ತಿಯ ಸಂಬಂಧದಲ್ಲಿ ಅವನ ಗ್ರಹಿಕೆ, ಇನ್ನೇನು ಮುಗಿಲು ಮೂರೇ ಗೇಣು ಎಂಬಂತಾಗಿತ್ತು (ಇಕ್ಕಿಶ. ೨೨೫). [ದೇ.॥ ತಮಿ. ಮಲ. ಮುಕಿಲ್; ತುಳು. ಮುಗಲ್, ಮುಗಳ್; ತೆಲು. ಮೊಗುಲು, ಮೊಯಿಲು; ಕೋಲಾ. ಮೊರ್ಗರ್; ಪರ್ಜಿ. ಮುಲ್ಗುರ್; ಗದಬ. ಮೊಗುಲ್, ಮೊಗ್ಗುಲ್; ಗೊಂಡಿ. ಮೊಯಿಲ್]

**ಮುಗಿಲಟ್ಟಣೆ** 'ಮುಗಿಲಟ್ಟಳೆ' ನೋ.

**ಮುಗಿಲಟ್ಟಳೆ, ಮುಗಿಲಟ್ಟಣೆ** (ನಾ). ಗಗನವನ್ನು ಮುಟ್ಟುವಷ್ಟು ಎತ್ತರವಾಗಿರುವ ಬುರುಜು; ಆಕಾಶವನ್ನು ಸೋಕುವಂಥ ಬತೇರಿ : ಮುಗಿಲಟ್ಟಳೆಗಳ ಕೆಲದಂಬುಗಂಡಿಯಿಂ ನುಸುಳ್ದು ಸಡೆವ ದಿನಕರನ ಹಯಂ ಗಗನಾಧ್ವಪೇದಮುಂ ಪಟಯಿಗೆಗಳ ತಣ್ಣೆಲರ ತೀಟದಿಂ ತೊಲಗಿಸುಗುಂ (ಶಂರಾಪಾ. ೦-೦೦೬); ಬಲಿದುದನಿತಕೆ ಕೋಟೆ ಪರಿಖಾವಳಯರಚನೆಯ ಲಾಳುವೇರಿಯ ಹುಲಿಮುಖದ ಮುಗಿಲಟ್ಟಳೆಯ ಸಾಲುಗಳ ಸೊಗಸಿನಲಿ (ತೊರಂ. ೦-೦೩-೨) ; ಕಣ್ಗೆ ರಮಣೀಯವಾಗಿದೆ ಕರ್ಣತನಯ ನೋಡೀ ಪುರದ ಮುಗಿಲಟ್ಟಳೆಯ ಸಾಲ್ಗಳು (ಕೃಬಂಶಾ. ೩-೨೦). **ಮುಗಿಲಟ್ಟಣೆ** : ಅಗಟೊಳಗಬ್ಜಾಕೃತಿಯಿಂ ಮುಗಿಲಟ್ಟಣೆಯೊಳಗೆ ಚಂದ್ರಬಿಂಬಾಕೃತಿಯಿಂ ಮೊಗಮೊಪ್ಪೆ ವಿಮಾನಲೋಚನೆ ಮೃಗೇಕ್ಷಣದ ಸಗರನೃಪನನಭಿವೀಕ್ಷಿಸಿದಳ್ (ಅಜಿಪು. ೯-೩೭) ; ಬೆಟ್ಟವ ಕಿತ್ತು ತಂದಿರಿಸಿದುದದಿ ಮುಗಿಲಟ್ಟಣೆತೆನೆಗಳಗ್ರದಲಿ ಬಟ್ಟರನ್ನಗಳ ತೆತ್ತಿಸಿದ ಹೋಗಲಸಂಗಳಿಟ್ಟಿರ್ದುವು (ಬೋಹಕ. ೨೦-೯).
[ಮುಗಿಲ್ + ಅಟ್ಟಳೆ]

**ಮುಗಿಲು** ' ಮುಗಿಲ್ ' ನೋ.

**ಮುಗಿಲುಗಡವು** ' ಮುಗಿಲ್ಗಡವು ' ನೋ.

**ಮುಗಿಲುನೂಲು** (ನಾ). ನೆಯ್ಗೆಯ ಮಗ್ಗದಲ್ಲಿ ಹಾಸುನೂಲಿನ ಮೇಲು ಭಾಗದಲ್ಲಿ ಬರುವ ನೂಲು, – ಎಳೆ : ಹಾಸನ್ನು ಇರಿಸಿಯಾಗಲು ಅದರ ಎಳೆಗಳನ್ನು ಬೇರೆಬೇರೆ ಹೊಕ್ಕುಗಳಲ್ಲಿ ತಂದು, ಪ್ರತಿ 'ಸರಿ' ಯ ನೂಲು ಮೇಲೆ ಬರಲು 'ಮುಗಿಲು'ನೂಲು ಕೆಳಕ್ಕೆ ಹೋಗುವಂತೆ ಏರ್ಪಡಿಸಿ, ಇವೆರಡರ ಎಡೆಯಿಂದ ಹೊಕ್ಕನ್ನು ತರುವ ಲಾಳಿಯನ್ನು ಓಡಿಸುವರು (ದಾಂಕೃ. I. ೪೨೦).
[ಮುಗಿಲು (< ಮುಗಿಲ್) + ನೂಲು$_2$ (< ನೂಲ್$_2$)]

**ಮುಗಿಲುವಟ್ಟೆ** 'ಮುಗಿಲ್ವಟ್ಟೆ' ನೋ.

**ಮುಗಿಲೂಱು** (ಕ್ರಿ). ಗಗನವನ್ನು ಆಶ್ರಯಿಸು; ಅಂತರಿಕ್ಷದಲ್ಲಿ ಸೇರು: ಅಂತು ಮುಗಿಲೂಱಿದ ಮೂಱುಲೋಕಮುಂ ಕರ್ಣಾರ್ಜುನರ ಯುದ್ಧಮಂ ನೋಡಲ್ ನೆರೆದು(ಪಂಪಭಾ. ೦೨-೦೯೪ ವ). [ಮುಗಿಲ್ + ಊಱು$_1$]

**ಮುಗಿಲ್ಗಡವು, ಮುಗಿಲುಗಡವು** (ನಾ). ಒಂದು ಬಗೆಯ ಈಚಲು ಮರ : ಮೃಣಾಳನಾಳಧಾರಾಗೃಹಂಗಳ ಮೇಲೆ ಮುಗಿಲ್ಗಡವಿನಲರ ಧೂಳಿಯೊಳ್ ಪೊರೆದು ನಿಲಿಸಿದ ಯಂತ್ರಮಯೂರಂಗಳುಮಂ . . . ನೋಡುತ್ತಂ ಪೋಗೆ (ಲೀಲಾವ. ೨೦೪). **ಮುಗಿಲುಗಡವು** : "ನೀಪಃ, . . . ಹಲೀಪ್ರಿಯಃ—ಈ ೪ ಮುಗಿಲುಗಡವಿನ ಮರ" (ನಾಚಿರಾ. ೦೦೭). [ಮುಗಿಲ್ + ಕಡವು (< ಕಡಂಬ)]

**ಮುಗಿಲ್ಗಲ್, ಮುಗಿಲ್ಗಲ್ಲು** (ನಾ). ಮೋಡದಿಂದ ಬೀಳುವ ಕಲ್ಲು ; ಆಲಿಕಲ್ಲು : "ಆಲಿವರಲೆಂದುಂ ಮುಗಿಲ್ಗಲ್ಲೆಂದುಂ ಘನೋಪಲಂ" (ಕಶಶಾ. ೫೩-೦೫೪). **ಮುಗಿಲ್ಗಲ್ಲು** : "(ವಾಯುಮಂಡಲದಲ್ಲಿಯ ನೀರಿನ ಆವಿ ಗಡ್ಡೆಗಟ್ಟಿ ಮಳೆಯಂತೆ, ಮಳೆಯೊಂದಿಗೆ ಬೀಳುವ) ಆಲಿಕಲ್ಲು ; ಮುಗಿಲ್ಗಲ್ಲು" (Hail. ಇಂಕಕಿ). [ಮುಗಿಲ್ + ಕಲ್$_3$]

**ಮುಗಿಲ್ಗಲ್ಲು** 'ಮುಗಿಲ್ಗಲ್' ನೋ.

**ಮುಗಿಲ್ಗಿಚ್ಚು** (ನಾ). ಆಕಾಶದಿಂದ ಭೂಮಿಗೆ ಹರಿಯುವ ವಿದ್ಯುತ್ಪ್ರವಾಹ; ಸಿಡಿಲು; ಅಶನಿ : "ಮುಗಿಲ್ಗಿಚ್ಚೆಂದು ಸಿಡಿಲ್" (ಕಶಶಾ. ೫೩-೦೫೩). [ಮುಗಿಲ್ + ಕಿಚ್ಚು]

**ಮುಗಿಲ್ದನಿ** (ನಾ). ಮೋಡಗಳ ಘರ್ಷಣೆಯಿಂದ ಉಂಟಾಗುವ ಶಬ್ದ ; ಗುಡುಗು ; ಮೇಘಧ್ವನಿ : "ಮೊಟಗು = ಮುಗಿಲ್ದನಿ" (ಕಬಿಪ. ಕಂ. ೧) ; "ಮೊಟಗೆನೆ ಮುಗಿಲ್ದನಿ [ಶಾಶಾಂ. ಮುಗಿಲ ದನಿ]" (ಕಾಪಿಪಂ. ೩೭).
[ಮುಗಿಲ್ + ದನಿ$_1$]

**ಮುಗಿಲ್ದುಱುಗು** (ಕ್ರಿ). ಮೋಡವು ಕವಿ — ಆವರಿಸು : ಅಲ್ಲಿ ಮಹಾಂಬುಧಿಯೆ ಗೆತ್ತು ಮುಗಿಲ್ದುಱುಗಿ ನೀರ ಮೊಗೆವವೊಲೆಂದೇಂ ಕತ್ತಲಿಸಿ ಬಂದು ನೀರಾಡುತ್ತಿರ್ದುವು ಸುತ್ತಮಲ್ಲಿ ವನಕರಿನಿವಹಂ (ಶಾಂತಿಪು. ೦೦೪). [ಮುಗಿಲ್ + ತುಱುಗು$_1$ (< ತುಱುಕು$_1$)]

**ಮುಗಿಲ್ದೇರ** (ನಾ). ಮೋಡಗಳನ್ನು ರಥವಾಗಿ ಉಳ್ಳವನು : ದೇವೇಂದ್ರ : "ಇಂದಿರಾಪತಿಗಣ್ಣಂ, ಮುಗಿಲ್ದೇರಂ, ಸಗ್ಗಿಗರಾಣ್ಮಂ— ಈ ೪ ಇಂದ್ರನ ಪೆಸರ್" (ಕಕಾ. ೯೯-೨೦) ; ಅಂತಪ್ಪ ಬನವಮಂ ನೋಡೆ ಅಲರಿಚಂ, ಮುಗಿಲ್ದೇರಂ, ಮುಂತಪ್ಪ ಬಿಡುಗಣ್ಣರುಂ, ನಾರದಾದಿ ರಿಸಿಗಳುಂ ಸಾರ್ತಂದು ಒಳಗೆ ಪುಗೆ ಗಲಭೆಗೆಯ್ದರ್ (ಅದ್ಭುತ. ೦೯). [ಮುಗಿಲ್ + ತೇರ್$_2$ + –ಅ$_7$]

**ಮುಗಿಲ್ದೊರೆ** 'ಮುಗಿಲ್ವೊರೆ' ನೋ.

**ಮುಗಿಲ್ಬಟ್ಟೆ** 'ಮುಗಿಲ್ವಟ್ಟೆ' ನೋ.

**ಮುಗಿಲ್ಮುಱು** (ನಾ). ಮೋಡದ ಚೂರು ; ಮೇಘದ ತುಣುಕು : ಇದುಪರಿದಿರ್ದ ಪಾವನ ಮುಗಿಲ್ಮುಱಿಯೆಂಬಿನಮಿಂಬುಗೆಟ್ಟು ಕಂದಿದ ಪಬಗಂಬುಗನ್ನಡಿವೊಲೇನಿಬಿದಾದುದೊ ಚಂದ್ರಮಂಡಲಂ (ಶಂಕ್ರಪು. ೯-೫). [ಮುಗಿಲ್ + ಮುಱು$_2$]

**ಮುಗಿಲ್ವಟ್ಟೆ**, ಮುಗಿಲುವಟ್ಟೆ, ಮುಗಿಲ್ಬಟ್ಟೆ (ನಾ). ಮೋಡಗಳು ಸಂಚರಿಸುವ ಪಥ ; ಆಕಾಶ : "ಆಗಸಂ, ಮಿಂಬಟ್ಟೆ, ಎರಲ್ವಟ್ಟೆ, ಸಗ್ಗಿಗವಟ್ಟೆ, ಮುಗಿಲ್ವಟ್ಟೆ, ಬಾನ್—ಈ ೬ ಆಕಾಶಂ" (ಕಕಾ. ೯೯-೯೦) ; ಅಟ್ಟಿದ ಜಟ್ಟಿಗರ್ತಡೆದುದರ್ಕೆ ಕನಲ್ದು ವಿಭೀಷಣಂ ಮುಗಿಲ್ವಟ್ಟೆಯನಟ್ಟಿ ತಿಂಬ ಜವನಂತಿರಯೋಧ್ಯೆಗೆ ಬಂದು ಪೊಕ್ಕು (ಶಂರಾಪು. ೩-೨೮) ; ಮುಳಿದು ಮುಗಿಲ್ವಟ್ಟೆಗೆ ಮಿಱು ಪಾಱುವ ಬಜ್ರೋದರಿ ಬಿಗಿದುಟ್ಟ ಸುವರ್ಣಾಂಬರದ ಸೆಱಂಗು ನಿಶಿತಮೆನೆ ಕೊಂಕಿದ ನಿಜಕಂಟಕದೊಳ್ ತೊಡರ್ದು (ಕಚಂ. ೩-೩೫ ವ). **ಮುಗಿಲುವಟ್ಟೆ** : ಗಗನಮಾರ್ಗದಿ ನಾರದನು ಬರಲೆಸಗಿದವರ ಯುದ್ಧವದು ನಿಜದೃಷ್ಟಿಗೆ ಸೊಗಸುಗೊಡೆ ನೋಡುತಿರ್ದನು ಮುಗಿಲುವಟ್ಟೆಯಲಿ (ಶಾಕ್ಲಭಾ. ೨೯-೫೦). **ಮುಗಿಲ್ಬಟ್ಟೆ**: "ಮುಗಿಲ್ಬಟ್ಟೆಯೆನೆ ಗಗನದೊಳ್" (ಕರ್ಣಾ. ೬೦-೨೩). [ಮುಗಿಲ್ + ಬಟ್ಟೆ$_1$]

**ಮುಗಿಲ್ವಟ್ಟೆಗ** (ನಾ). ಆಕಾಶದಲ್ಲಿ ಸಂಚರಿಸುವವನು ; ದೇವತೆ : ಮೊಗದಿಂದ ಪಾರ್ವರ ಪಡೆದು ನಿಗಮಶಾಸ್ತ್ರಾದಿಗಳತ್ತು ಜನ್ನಗೈಸುತ್ತೆ ಮುಗಿಲ್ವಟ್ಟೆಗರಿಗೆ ಮುದವನಿತ್ತ ರಂಗೇಶ ಬಗೆವಂದು ಬಿಡದೆನ್ನ ಸಲಹು (ಕಕಾಂ. ೩-೨೯). [ಮುಗಿಲ್ವಟ್ಟೆ + – ಗ$_2$]

**ಮುಗಿಲ್ವನಿ** (ನಾ). ಮೋಡದಿಂದ ಬೀಳುವ ನೀರಿನ ತೊಟ್ಟು ; ಮಳೆಯ ಹನಿ : ಜಲನಿಧಿಯುಂ ಮುಗಿಲ್ವನಿಗಳಿಂದಮುಗುರ್ವಿಸುವಂತೆ ನಿಮ್ಮನಾಂ ತಿಳಿಪಿದಪೆಂ ಗಡ (ಶಾಂತಿಪು. ೪೮೭). [ಮುಗಿಲ್ + ಪನಿ$_1$]

**ಮುಗಿಲ್ವೆಳಗು** (ನಾ). ಮೋಡಗಳ ಘರ್ಷಣೆಯಿಂದ ಉಂಟಾಗುವ ಬೆಳಕು; ಮಿಂಚು : "ಮುಗಿಲ್ವೆಳಗೆಂದು ಮಿಂಚು" (ಕಕಾ. ೫೩-೧೨೨). [ಮುಗಿಲ್ + ಬೆಳಗು$_2$]

**ಮುಗಿಲ್ವೊರೆ**, ಮುಗಿಲ್ದೊರೆ (ನಾ). ಮೋಡದ ಪದರ ; ಮೇಘದ ತೆರೆ : ನೀಱಿ ಮುಗಿಲ್ವೊರೆಯೊಳ್ ಮೊಯ್ವೊಱುವ ಶಶಿಕಳೆಯು ಗಾಡಿಯುಂ ಗೆಲೆವಂದಳ್ (ಶಂರಾಪು. ೩-೯೦). **ಮುಗಿಲ್ದೊರೆ** : ಕರಿಯ ಮುಗಿಲ್ದೊರೆಯೊಳ್ ಸಂಚರಿಸುವ ವಿದ್ಯುಲ್ಲತಾವಿಳಾಸಮನಾಂತಾದರದಿಂ ನಿಜ ವಲ್ಲಭ ನೆಟ್ಟರಮಂ ಪಾರುತ್ತುಮಿರ್ದಳಂ ದ್ರೌಪದಿಯುಂ ಭೋಂಕೆನೆ ಕಂಡು (ಸೇಬಿಪು. ೦೦-೬೦). [ಮುಗಿಲ್ + ಪೊರೆ$_1$]

**ಮುಗಿವು** (ನಾ). ೧. ಕೊನೆ ; ಮುಕ್ತಾಯ ; ಅಂತ್ಯ : ನದಿಯ ತೆರೆಯವೊಲುರುಳಿ ಹೊರಳುತಿರುವುದು ಜೀವ ಮೊದಲಿಲ್ಲ ಮುಗಿವಿಲ್ಲ ನಿಲುವಿಲ್ಲವದಕೆ (ಮುಂಕಾಕ. ೦೮) ; ಲಕ್ಷ್ಮಣನೊಡನೆ ಬಳಿಯ ಪರ್ವತವಾಲ್ಯವಂತನ ಗುಹಾಗೃಹದಿ ಮಳೆಯ ಮುಗಿವಂ ಪಾರುತಿರ್ದನ್ ರಘೂದ್ವಹಂ (ಶ್ರೀರಾಪಟ. ೩೦೯-೯). ೨. ಸಾವು ; ಮರಣ : ಹದ್ದಿನಂತೆ ಹೊಂಚು ಹಾಕುತ್ತಿರುವ ಕೃಷ್ಣದೇವ ನನ್ನ ಮುಗಿವಿನ ನಂತರ ರಾಜ್ಯಾಧಿಕಾರವನ್ನು ಕಸಿದುಕೊಳ್ಳದೆ ಸುಮ್ಮನಿದ್ದಾನೆಯೆ! (ಅರಳ. ೦೦). [ಮುಗಿ + – ವು./ತಮಿ. ಮುಕಿವು]

**ಮುಗಿಸು** 'ಮುಗಿಯಿಸು' ನೋ.

**ಮುಗಿಹ** (ನಾ). (ಕೈಗಳನ್ನು) ಜೋಡಿಸುವಿಕೆ ; ಸೇರಿಸುವಿಕೆ : 'ಕೈಮುಗಿಹ' ಪರಾ. [ಮುಗಿ + – ಹ$_2$ ( < – ಪ$_2$) ]

**ಮುಗುಟು** 'ಮೊಗಳು' ನೋ.

**ಮುಗುಡ್ಡೆ** 'ಮೂಗುಡ್ಡೆ' ನೋ.

**ಮುಗುದ**, ಮುದ್ದ$_2$ (ಗು). ೧. ಮುಗ್ಧತೆಯಿಂದ ಕೂಡಿದ ; ಕಪಟವರಿಯದ : ಕೊಟ್ಟು ಬೇಸಜದ ಮುಗುದರಸು ದೊರಕಿದನಲೇ (ತಕಾ. ೯-೭). (ನಾ). ೨. ಕಪಟವನ್ನು ತಿಳಿಯದವನು ; ಸರಳ ಸ್ವಭಾವದವನು : ಎನ್ನ ಅಜಗಣ್ಣ ತಂದೆ ಶಬ್ದಕ್ಕೆ ಹೇಸಿ ಮುಗುದ ನಾದನು (ಕೂಷ್ಟಸಂ. ೩೦-೨೮) ; ಅಗಯಲಲುಗುವ ತಲೆಯ ಮುಪ್ಪಿನ ಮುಗುದನೀತವ ಕಾದ ಹೇಳಿದು ನಗೆಯ ಸುರಿದೈ ರಾಯ ಕಟಕದೊಳು (ಕುವ್ಯಾಭೀ. ೦-೩೫) ; ನಿಗಮನುತ ಗೀರ್ವಾಣ ರಕ್ಷಿಸು ಮುಗುದರನು ಕರುಣದಲ್ಲಿ ನೋಡುತಲಿ (ವಕಕ. ೩-೩೫). ೩. ದಡ್ಡ ; ತಿಳಿಗೇಡಿ ; ಮೂಢ : ಹಗೆಗಳಿಗೆ ತಂಪಾಗಿ ಬದುಕುವ ಮುಗುದರಿನ್ನಾರುಂಟು . . . ಲೋಕದಲಿ (ಕುವ್ಯಾಭಿ. ೩-೬೧) ; ಶ್ರೀಪಾದನಂಥ ಮುಗುದಯ್ಯನು ಹೇಗೆ ಎಲ್ಲಿಗೆ ಹೋಗಿದ್ದಾನು! (ಕನಕ. ೩೦). ೪. ಚೆಲುವ ; ಸ್ಫುರದ್ರೂಪಿ : "ಮುಗುದ (ಮುಕುಡು) —ಮುಗ್ಧ=ಸುಂದರ, ಮೂಢ" (ಕರ್ನಕೋ. ೩೭). **ಮುದ್ದ$_2$** : ೨. ಮುದ್ದರಾವ್ರಂ ಲೌಕಿಕರು ಕರೆವರೆನ್ನ ಗೊಗ್ಗಯ್ಯನೆಂದು (ಕ್ರಕುಪು. ೭-೦೦೭). [ <ಸಂ. ಮುಗ್ಧ]

**ಮುಗುದತನ** (ನಾ). ೧. ಮುಗ್ಧಸ್ವಭಾವ ; ಸರಳತನ ; ಕಪಟವಿಲ್ಲದ ನಡವಳಿಕೆ : ನಗುತ ರಾಮನ ನರಚರಿತ್ರದ ಮುಗುದತನಕೆ ನಮೋ ಯೆನುತ ಪದಯುಗಳಕಾನತನಾಗಿ ಹಾಯ್ದನು ನಭಕೆ ವಿಹಗೇಂದ್ರ (ತೊರಾ. ೬-೦೭-೩೯). ೨. ಎಳೆತನ ; ಬಾಲ್ಯ : ಮುಗುದತನದೊಳಿದ ಮುಚ್ಚಿರೆ ಹರಯದ ತೆರೆಯದೆ ? ಅದ ನಚ್ಚಲು ಬಹುದೇ? (ಪಲ್ಪ. ೬-೨೨). [ಮುಗುದ + – ತನ ]

**ಮುಗುದಾಣ** 'ಮೂಗುದಾಣ' ನೋ.

**ಮುಗುದೆ** (ನಾ). ೧. ಸರಳಸ್ವಭಾವದ ಹೆಣ್ಣು ; ಕಪಟವರಿಯದವಳು : "ಮುಗುದೆ — ಮುಗ್ಧಾ" (ಕರ್ನಕೋ. ೩೭); ನೇಹದ ಮುಗುದೆ ವಿಳೆಯಾಗಿ ಮಹಾಲಿಂಗಗಜೇಶ್ವರನಲ್ಲಿ ಏಕಾಹಾರಗೊಂಡು ಇದ್ದಳವ್ವೆ (ಸರ್ವ. ೭೩-೪೦೪) ; ಕಳವಳದ ಕರಣದ ಮುಗುದೆ ಬಂದಳು ಬಾಣಸಿನ ಮನೆಗೆ (ಕುವ್ಯಾವಿ. ೩-೩೫); ಸೊಗಯಿಪ ಚಂದ್ರಕಾಂತದ ಭಿತ್ತಿಯೊಳು ತನ್ನ ಯುಗಳಸ್ವರೂಪ ಬಿಂಬಿಸಲು ಅಗಲ್ದನಿಯನ ತೋಱಸು ಬಾಬಾ ಯೆಂದು ಮುಗುದೆ ಬಿದ್ದಳು ಚರಣದಲಿ (ಜೋಹಕ. ೦೮-೫೫). ೨. ಎಳೆಯ ವಯಸ್ಸಿನ ಹುಡುಗಿ ; ಬಾಲೆ : 'ಮುಗುದೆತನ' ಪರಾ. ೩. ಚೆಲುವೆಯಾದ ತರುಣಿ ; ಸುಂದರ ಯುವತಿ : ರತಿಕೌಶಲವ ಮೆಱೆವ ಮುಗುದೆಯರು ಮುರಹರನ ಮನವನು ಸೆಗೆಯಲರಿಯರು (ಚಿಕಾನ್ ೦೦-೬೭-೩೦). [ < ಸಂ. ಮುಗ್ಧಾ]

**ಮುಗುದೆತನ** (ನಾ). ಎಳೆತನದ ಸರಳಸ್ವಭಾವ ; ಅರಿವಿಲ್ಲದಿರುವಿಕೆ : ಕುಂತಿಭೋಜಗೆ ಮಗಳಹೆನು ತಾಂ ತನ್ನ ಬಾಲ್ಯದೆ ಮುಗುದೆತನದೊಳು ಬಳೆಯುತಿರಲು (ಕುವ್ಯಾಉ. ೬೦೩. ೦೦ ೩೦ ಅತಿಕತ್ತ). [ಮುಗುದೆ + – ತನ]

**ಮುಗುವಳಿ** (ನಾ). ೧. ಸಂಬಳ, ಬಾಡಿಗೆ ಕೆಲಸ ಮುಂತಾದವುಗಳ ಬಗ್ಗೆ ಮಾತುಕತೆ ಮುಗಿದ ಮೇಲೆ ಮಾಡಿಕೊಳ್ಳುವ ಒಪ್ಪಂದ, — ಕರಾರು, — ಗೊತ್ತುವಳಿ : ಈಗಲೇ ನಾವು ಗುಪ್ತವಾಗಿ ಹೋಗಿ ಪರ್ವತ ರಾಜನಲ್ಲಿ ಸೂರೆ ಮಾಡದಂತೆ ಮುಗುವಳೀ ಹೊತ್ತುಕೊಂಡು ಅವರವರ ಶಕ್ತ್ಯನುಸಾರವಾಗಿ ಹಂಚಿಕೊಂಡು ತುಂಟರಿಗೆ ಆಸ್ಪದವಾಗದಂತೆ ಮಾಡಬೇಕು (ಮುದ್ರಾಮಂ. ೧೦೬); ಈ ಮುಗುವಳಿಯು ಸದ್ಯಕ್ಕೆ ಮೂರು ತಿಂಗಳವರೆಗೆ ನಡೆಯಲಿ ; ಆಮೇಲೆ ನೋಡೋಣ (ರಾಜಾವಂ. ೦೩೩). ೨. ಮುಂಚಿತವಾಗಿ ತೆಗೆದುಕೊಳ್ಳುವ ಹಣ ; ಮುಂಗಡಹಣ : ಕೆಲವು ಜನಗಳ ಕಡೆಯಿಂದ ಮುಗುವಳಿಯನ್ನೂ ತೆಗೆದುಕೊಂಡು . . . ಶ್ರೀರಂಗಪಟ್ಟಣಕ್ಕೆ ಬಂದು ಸೇರಿದರು (ಮುಖಾವಂ. I. ೨೦೪); ನಾಟಕದ ಖರ್ಚಿಗೆ ಆಳಿಗೆ ಒಂದೊಂದು ರೂಪಾಯಿ ಮುಗುವಳಿ ಕೊಡಬೇಕೆಂದು ತೀರ್ಮಾನವಾಯಿತು (ಪಮ್ಮಾರು. ೩೦೨).

[ < ಮುಗಿ + — ವಳಿ$_3$ ]

**ಮುಗುಳ್$_1$**, ಮುಗುಳು$_1$ (ಕ್ರಿ). ೧. ಮೊಗ್ಗಾಗು ; ಮೊಗ್ಗು ಕಾಣಿಸಿಕೊಳ್ಳು : "ಮುಗುಳ್ವುದೆಂದು ಮುಗುಳೇಱುದುದು" (ಶಶಪಾ. ೩೪-೧೪೦) ; ಮಾಧವಿ ಮುಗುಳ್ತುವೊಲಿರ್ದಳವೆಂದಿರಿಂದಮೇಂ ಪಡೆದುವೊ ಲೀಲೆಯಂ ಮಣಿಮರೀಚಿವಿಚಿತ್ರಿತನಾಟ್ಯಶಾಲೆಗಳ್ (ಪುಲ್ಲಪು. ೨-೬೦) ; ಕಟಿದುದು ಮೊಲ್ಲೆ ಮಲ್ಲಿಗೆ ಮುಗುಳ್ತುದು (ಅರ್ಧನೇ. ೩-೫೯) ; ಮುಗುಳ್ತೊಡಗಿರ್ದ ಮನೋಜ್ಞಮಲ್ಲಿಕಾಬ್ಭೃದಮನೂನಪುಷ್ಪಚಯಮೊಪ್ಪಿರೆ ನಂದನಮಲ್ಲಿ ರಂಜಿಕುಂ (ಶಬಶಂ. ೨-೪೦). ೨. (ಹೂವು ತನ್ನ ದಳಗಳನ್ನು ಮುಚ್ಚಿಕೊಳ್ಳುವಂತೆ) ಕಣ್ಣನ್ನು ಮುಚ್ಚಿಕೊಳ್ಳು, — ನಿಮೀಲನಗೊಳಿಸು : "ಮುಗುಳ್ — ನಿಮೀಲನೇ (ಕಣ್ಣು ಮುಚ್ಚು), ಕುಟ್ಮಲೇ ಚ(ಮೊಗ್ಗು)" (ಕಭಾಭೂ) ; ಸೊಗಯಿಪ ಮುನ್ನಿನಿರ್ದ ಪರಿಜಂ ಕಡುಚೆಲ್ವು ಗಡಂ ಜಿನೇಂದ್ರನಂ ಬಗೆವ ಮನಂ ಗಡಂ ಮುಗುಳ್ದು ಜಾನಿಪ ಕಣ್ ಗಡಮಾತ್ಮತತ್ತ್ವದೊಳ್ ಬಗೆ ಗಡಂ (ಆದಿಪು. ೨-೬೦) ; ಪಱಿದ ತಲೆ ಬಿಟ್ಟ ಬಾಯ್ ನಸುಮುರಿದ ಕೊರಲ್ಮುಗುಳ್ದ ಕಣ್ಗಳರುಣಜಲದಿಂ ಪೊರೆದ ತನುವೆರಸು ಬೀಭತ್ಸರಸಮನಭಿಯಿಸುತಿರ್ದರಿಲ್ಲಿ ಭಟರ್ಕಳ್ (ಗದಾಯು. ೪-೨೫) ; ನೆಟಿ ಮುಗುಳ್ದಕ್ಷಿಯ ಮಿಡುಕದಂಗದ . . . ಪೊಡರ್ಪನೆಯೆ ತಾಪಸಂ ತಪಮಿರ್ದಂ (ಶಬಶಂ. ೨-೯೪). ೩. ಮೂಡು ; ಮೊಳೆ ; ಅಂಕುರಿಸು : ನೀರಜದ ನಗೆ ಮುಗುಳ್ತುದು . . . ಚಕೋರದ ಮದಮುಡುಗಿ ಹೋಯ್ತು ಮುನ್ನೇಸಱಿನೊಳ್ (ಕಂಸುವಪಾ. ೧೦-೬೯). **ಮುಗುಳ್ಳು$_1$** : ೧. ಅಂಥ ಒಂದು ಅನುಭವಮುಹೂರ್ತವು ಸ್ಮೃತಿಬೀಜವಾಗಿ ರಸಸೇಚನವನ್ನು ಹೊಂದಿ ಮೊಳೆತು, ಚಿಗಿತು, ಕೊನರಿ, ಮುಗುಳಿ ಕಾವ್ಯಕೃತಿಯಲ್ಲಿ ಅರಳುವುದು (ಕಾಹಿಂ. ೦೪೦). ೩. ಎನಿತು ಚೆಲುವಿನ ನೋಟ ಏನು ಒಲವಿನ ಕೂಟ ಎಂಬ ಬಗೆಯಲಿ ನಗುವು ಮುಗುಳುತಿತ್ತು. (ಬಿಶಾನಿ. ೦-೧೪). ೪. (ಹೂವಿನ ದಳಗಳು) ಸಂಕೋಚನ ಹೊಂದು ; ಮುಚ್ಚಿಕೊಳ್ಳು : ಬೆಳಕು ಮೂಡೆ ಮಲರಿ, ಮುಳುಗೆ ಮುಗುಳಿ . . . ಆಃ ಇಂತನ್ನ ಬಾಳಳರಿದರೆ ಧನ್ಯನಲ್ತೆ (ಅಂಶೀ. ೨೩-೦೪).

[ದೇ. ॥ ತಮಿ. ಮುಕಿಟು; ಮುಕಿಟಿ : ತುಳು. ಮುಗುರು, ಮುಗುರು ; ತೆಲು. ಮೊಗುಡು]

**ಮುಗುಳ್$_2$**, ಮುಗುಳು$_2$ (ನಾ). ೧. ಅರೆಬಿರಿದ ಹೂವು ; ಕುಟ್ಮಲ : "ಕೋರಕಃ, ಜಾಲಕಃ, ಕಳಿಕಾ, ಕುಟ್ಮಲಃ, ಮುಕುಳಃ — ಈ ೫ ಪೂವಿನ ಮುಗುಳ್" (ಅಭಾಧು. ೩೦-೩೨) ; ತಾವರೆಯುರಲೊಳ್ ಸರಸನಿಜಾಮೋದದೊಳೊಂದಿ ನಲಿದು ಮಕರಂದರಜೋವ್ಯಾಮುಗ್ಧದೊಳೀ ಮುಗುಳೊಳಮಾ ಮಾಟ್ಕೆಯನಱಿಸು ಸುಟಿವುದಳಿ ಕಲಕಲದೊಳ್ (ಕಬಂಗ. ೩-೦೫೬) ; ನಿನ್ನೆ ನೀನಾದಿತ್ಯಂಗೆ ನೀರಂ ಸೂಸಿ ಪೊಡೆವಡುವಾಗಳಾ ನೀರ್ವೆರಸು ಸೂಸಿ ತಾವರೆಗೆಱೆಯೊಳಗೆ ಮುಟಿಗಿರ್ದ ಮುಗುಳ ಮೇಗೆ ತಗುಳ್ದಿರ್ದುದು (ವಡ್ಡಾರಾ. ೫-೦೫) ; ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಕಂಶಭಾ. ೦-೫೬ ರಗಳೆ) ; ಪೂವಳ್ಳಿಗಳ್ ನನೆಕೊನೆಮುಗುಳರೆಮುಗುಳ್ ಬಿರಿಮುಗುಳುಳ್ಳಲರ್ದ ಪೊಸಮಲರ್ಗಳಿಂದೆ ಸೊಗಯಿಸೆಯುಂ (ರಾಜಾಶ್ವ. ೦೬-೨). ೨. ಮೊಗ್ಗಿನಾಕಾರದಲ್ಲಿ ಮಾಡಿದ ಒಂದು ಬಗೆಯ ಆಭರಣ : ಬೆಳತಿಗೆಗಣ್ಣ ಬಳವಿಗಿದುವೆ ಗುಜಿಯೆಂದು ಕುಱುಪನಿಕ್ಕುವಂತೆ ಕೊನೆಗೊಡಂಕಿಯೊಳ್ ತೋರಮುತ್ತಿನ ಮುಗುಳಂ ತೆಗಳ್ಚಿಯುಂ (ಕಂಪ್ರಕೃ. ೬-೬೩ ವ). **ಮುಗುಳು$_2$** : ೧. "ಕುಟ್ಮಲಃ, ಮುಕುಲಃ — ಈ ೨ ಮುಗುಳು" (ಚಾಶಂ. ೦೦೬); ಆಕಾಶ ಸರಸಿಯೊಳಡಿದ ತಾವರೆಮುಗುಳುಗಳೂ ಸುರಪಡೆಯೊಳೊತ್ತಿದ ಮುಗಿದ ಕೈಗಳೂ ಚಿತ್ರವಾಯ್ತು (ಶುವಾಶ್ವ. ೭-೩೬); ಸರಸಿಜಗಂಧಿಯ ವದನನಂದನದಲಿ ನೆಱೆ ಪೂತು ಸಾಲುಗೊಂಡಸೆವ ಒಂದು ಮೊಲ್ಲೆಯ ಮುಗುಳುಗಳೆನೆ ಮೆಱೆದುವು ಮಿಱುಗುವ ದಂತಪಂಕ್ತಿಗಳು (ಕಂಶಂ. ೯-೩೩).

ಮುಗುಳ **ಕಂಕಣ** = ಕೈಗೆ ತೊಡುವ ಒಂದು ಬಗೆಯ ಮೊಗ್ಗಿನಾಕಾರದ ಆಭರಣ : ಧುರದೊಳಸಲತೆಯನುಚ್ಚಿಡದರಿನೃಪಯುವತಿಯರ ಮುಗುಳ ಕಂಕಣದಾ ಕೀಲ್ತರತರದಿನುಟ್ಟಿದವು ನಿಜಕರದುಟ್ಟಿವುವರ್ಕೆ ಕೀಲೆ ಶಾನ್ತರನ್ನಪತಿ (ಎಕ. VIII, ಪಗರ. ೩೬-೨೪; 1082). **ಮುಗುಳಾಗು** = ೧. ಮೊಗ್ಗಾಗು; ಹೂವಾಗಿ ಅರಳದಿರು : ಅಲರಾಗಿ ನಿರೀಕ್ಷಿಸಿ ಕಾದಲಸಂ ಮುಗುಳಾಗಿ ಸೋಂಕಿಡೆಡೆಯೊಳ್ ಕಾಮಂಗಲಸದೆ ಸರಳಾಗಿ ಪಳಂಚಲೆವುದು ತೊಳಪವಳಪಾಂಗವಲರ್ಗಳ ಪಾಂಗಂ (ಅರ್ಧನೇ. ೦-೬೫); ಕಮಲವುದಯದೊಳರಳಿ ಸಂಜೆಯಲಿ ಮುಗುಳಾಗಿ ಸುವ್ರುವಪ್ಪದಂತೆ ಮರುವಗಲು ಮುಗುಳ್ದು (ಮಂಕಾಕ. ೯೦). ೨. ಮೊಗ್ಗುಬಿಡು ; ಮೊಗ್ಗು ಕಾಣಿಸಿಕೊಳ್ಳು : "ಪದದಿಂ ಮುಗುಳ್ವುದೆನೆ ಮುಗುಳಾದುದು" (ಕನ್ನಕೃ. ೦೯೩-೦೯); ಗಗನಾಪಗೆಯ ಜಲಕಣಾದಂಬಮೊ ಮುಗುಳಾದುದೊ ಗಗನವೆಂಬ ಕಡಬದ ಮರನಂ (ಹಮ್ಮಾರ. ೨-೬೨).

[ < ಮುಗುಳ್$_1$. / ತಮಿ. ಮುಕಿಟವುಟ್. ಮೊಕ್ಕುಳ್; ಮಲ. ಮುಕಿಟು; ತುಳು. ಮುಗುರು. / ಸಂ. ಮುಕುಲ ]

**ಮುಗುಳಂಬ** (ನಾ). ಮೊಗ್ಗಿನ ಬಾಣಗಳುಳ್ಳವನು ; ಪುಷ್ಪಬಾಣ; ಕಾಮ; ಮನ್ಮಥ : ಮುಗುಳಂಬನೊಡಲ ಬೇಡಿದಳು ರುಕ್ಮಿಣಿ ಗಂಡುಮಗನಾಗಬೇಕೆನಲು (ಪೋಹತ. ೦೦-೦೦); ಮುಗುಳಂಬನುಱುಬೆಗಾಱದೆ ಪೊರಳುತಿಪ ಮಂತ್ರಿಮಗಳೆಡೆಗೆ ಪಂತಂದು ನುಡಿದಳೊಸಗೆಯನಾಪ್ತಸಖಿಯೊರ್ವಳವಳ ಕೂಡೆ (ಕೈಬಿಖಾ. ೩೦-೨) ; ಮುಗುಳಂಬನ ಮಾಡಿಗಮಂದ ಪರಿಮುಳಪೊಗುವ ಪೂದೊಂಬೆಯಂತಿಪರು (ಕಂಶಂ. ೬-೯೪).

ಮುಗುಳಂಬ**ಕೇಳಿ** = ಮದನಕೇಳಿ ; ಕಾಮಕೇಳಿ ; ರತಿಕ್ರೀಡೆ : ಎನ್ನ ಬಿಗಿದಪ್ಪಿ ಚುಂಬನವನೀಯೆ ಕೂಡಿ ಮುಗುಳಂಬಕೇಳಿಯೊಳು ಸುಖಿಯೆಯೆಂಬಗಡುರಕ್ಕಸನ ವಾಕ್ಯ ಕೇಳ್ದು ಕಂಗೆಟ್ಟು (ಶಾಂಡಕ. ೩೩-೨೦). **ಮುಗುಳಂಬನಣುಗ** = ಮನ್ಮಥನ ಮಗ ; ಅನಿರುದ್ಧ : ಹೊಗಳಲಚ್ಚರಿಗೆಯ್ವ ಚಕಿತನಾರಿಯುರನು ಮುಗುಳಂಬನಣುಗನೀಕ್ಷಿಸಿದ (ಪೋಹತ. ೦೬-೬೦).

[ ಮುಗುಳಂಬು + — ಅ$_7$ ]

**ಮುಗುಳಂಬು** (ನಾ). ೧. ಮೊಗ್ಗಿನ ಬಾಣ : ಬಿತ್ತರದ ಭಲ್ಲೆಯ ಮಾಟದಿ ಸುಸಂಪಗೆಯ ಮುಗುಳಂಬು ದೊರೆವಡೆದ ಕಣಗಿಲ ಪುಳುಂಬಿವು . . . ಬತ್ತಳಿಕೆಗಳು ನೆರೆದಿರ್ದವವರಲ್ಲಿ (ಶಾಕ್ಷಭಾ. ೫-೦೪). ೨. (ಮನ್ಮಥನ) ಹೂಬಾಣ; ಪುಷ್ಪಬಾಣ : ಮಗಳೆ ನಿನ್ನಯ ರೂಪಗುಣ ಶೀಲವ ನೋಡಿವಗಣಿತಸುರನರೋರಗರು ಮುಗುಳಂಬಿಗೊಳಗಾದರು (ಪೋಹತ. ೨೫-೩೩). ೩. ಒಂದು ಬಗೆಯ ಚಿಕ್ಕಬಾಣ : ಕಿಱುಮೊನೆಯ ಮುಗುಳಂಬುಗಳ ಸ್ಪೈಗಱಿದನಭಿಮನ್ಯುವಿನ ಮೆಯ್ಯಲಿ ತುಱು

ದವು ಮಱಿದುಂಬಿ ಕೆಂದಾವರೆಗೆ ಕವಿವಂತೆ (ಕುಮಾ. ದ್ರೋ. ೫-೩೪); ಅಲಿಸ್ಸೆ ಮುಗುಳೇಱು ಸಾವಿರವೇಳು ಬಳಿಕೊಂಬತ್ತುಸಾವಿರಕೋಲು ಮಿಂಟೆಯು ಕವಲುಗಣೆ ಹನ್ನೆರಡುಸಾವಿರವು (ಕುಮಾ. ಶ. ೦೬-೨೨).

[ಮುಗುಳ್$_2$ + ಅಂಬು$_2$]

**ಮುಗುಳಕ್ಕಿ**, ಮುಗಳಕ್ಕಿ (ನಾ). ಸರಿಯಾಗಿ ಬೇಯದೆ, ಮೊಗ್ಗಿನಂತಿರುವ ಅನ್ನ ; ಪೂರ್ತಿಯಾಗಿ ಅರಳದೆ, ಅರೆಬೆಂದ ಅನ್ನ, — ಪಕ್ವವಾಗದ ಅನ್ನ : ಇವತ್ತು ಒಲೆ ಸರಿಯಾಗಿ ಉರಿಯದೆ ಅನ್ನ ಮುಗುಳಕ್ಕಿಯಾಯ್ತು (ಕಊ). **ಮುಗಳಕ್ಕಿ** : ಸಮಯ ತಪ್ಪಿ ಯಾವಾಗಲಾದರೂ ಇವಳು ಅಡಿಗೇ ಒಲೇ ಮುಂದಕ್ಕೆ ಹೋದರೆ, ಅನ್ನ ಮುಗಳಕ್ಕಿಯೋ ಇಲ್ಲ ಮಿಡ್ಡೆಯೋ ಆಗುತ್ತಿತ್ತು (ಹೂಪುರಾ. ೮೩).

**ಮುಗಳಕ್ಕಿಗಂಜಿ** = (ಔಷಧಕ್ಕಾಗಿ ಬಳಸುವ) ಅರೆಬೆಂದ ಅನ್ನದ ಗಂಜಿ ; ಪಕ್ವವಾಗದ ಅನ್ನದ ಗಂಜಿ : (ಕ).

[ಮುಗುಳು$_2$ (< ಮುಗುಳ್$_2$) + ಅಕ್ಕಿ$_2$]

**ಮುಗುಳಲರ್** (ನಾ). ಅರಳುತ್ತಿರುವ ಹೂವು; ಅರೆಬಿರಿದ ಹೂವು : ಪೊಟಲ ಬೀದಿವೀದಿಗಳನಿತುಮನೋರಂತೆ ತಳಿದು ಗುಡಿಗಟ್ಟಿಸಿ ನೀಂ ನಸೆಯ ಮುಗುಳಲರ ತುಱುಗಲನನಂತಮಂ ನೆಱೆಯೆ ಕೆದಱಿಪೇಟ್ ನೃಪತಿಳಕಾ (ಅಂತ. ೫-೬) ; ಮುರಹರನೇತ್ರಃಪುರಪುರಂಧ್ರಿಕಾನಿಕಾಯಮಾ ವನೋದರದ ಪೂವುರದ ಲತೆಯ ಸಂತತಿಯ ಮುಗುಳಲರ ತುಱುಗಲ್ಗಳಂ ನೆಱೆವಿನ ಮಾಯ್ದುಕೊಂಡು ಮಂಡನಾವಳಿಯನೆಸೆಯೆ ಸಮೆದು ಪಸದನಂಗೊಂಡು (ನೇಮಿಚ. ೦೩-೨೦ ಪ) ; ಮುಗುಳಲರ್ ಪೆಣ್ಣಾಯ್ತೊ ಪೆಣ್ಣೆ ಮುಗುಳಲ ರಾಯ್ತೊ (ಶ್ರೀರಾಮಪ. ೦೮೬-೦೬೭). [ಮುಗುಳ್$_1$ + ಅಲರ್$_2$]

**ಮುಗುಳಿ$_1$**, ಮುಗಲ್, ಮುಗಳಿ (ನಾ). ೧. ಒಂದು ಬಗೆಯ ಮುಳ್ಳಿನ ಮರ : ದಿಂಡ ಪಾತಂಗ ಮುಗುಳಿಯ ಮರಸು. . . ಬಳಲಿ ಬಂದವರಿಗೆ ವಳಲೆಯಮೃತದಂತೆ ನೆಳಲಾಹ ವೃಕ್ಷವಲ್ಲಿಹವು (ಶಿಶಿಸಾಂ. ೦-೩೫); ಮುಗುಳಿಯ ಮರದ ನೆರಳಿಂದ ನುಂಗುವ ನೆಗಳು ಲೇಸೆಂದ (ಸರ್ವಜ್ಞ. ೦೩೬೬); ಮುಗುಳಿಯ ಒಳನಾರಂ ಆಡಿನ ಹಾಲಿನಲ್ಲಿ ಅರೆದು ಕುಡಿಯೆ ಎಂಥಾ ಕೆಮ್ಮುಲಾದರೂ ಮಾಣ್ಗುಂ (ಸಳವೈ. ೨೦೦). ೨. ಒಂದು ಊರಿನ ಹೆಸರು : ಪಸುಣ್ಡ ಮುಗುಳಿ ಪರನ್ತಿ ಮುಳ್ಳುನ್ದು ಏತೇಷಾಂ . . . ಮಧ್ಯಸ್ಥಿತೇ (ಇಇ. VII, ೨೨೦-೨೪; 658); ಮುಗುಳಿಯ ನಾಗಮಯ್ಯ ಬಸವನ ಹಳ್ಳಿಯ ಬಸವಯ್ಯ (ಎಕ. XV, ಬೇಲೂರು. ೪೦೬-೦೦; 971). **ಮುಗಲ್** : ೧. "ಮುಗಿನ ಹುಳಿಮರ . . . ಮರುವಿನ ಹುಳಿ, ಮುಗಲ್, ಮರ್ಗಲ್, ಕೋಕಂಮರ" (ಸಸ್ಯಶಿ. ೬೩). **ಮುಗಳಿ** : ೧. "ಮುಗಳಿ, ಮುಗ್ಲಿ, ಶಮಿ, ಚೆಲಯುದಿ, ಬನ್ನಿಮರ, ಮುಗಳಿ" (ಸಸ್ಯಶಿ. ೪); ಮುಗಳಿ, ಮುಗ್ಲಿ (ವೃಕ್ಷಶಿ. ೨-೦೯) ; ಮುಗಳಿ, ಸೀಗೆ, ಬಾಗೆ, ಸೀಮೆಹುಣಿಸೆ (ಪಶುಸು. ೨೩೪).

[ದೇ.॥ ತಮಿ. ಮುಕಿಲ್, ಮುಕಿಲಮ್ ; ಮಲ. ಮುಕಿಲ್]

**ಮುಗುಳಿ$_2$** (ನಾ). ೧. ಎತ್ತರವಾದ ಪ್ರದೇಶ; ದಿಣ್ಣೆ : 'ಮುಗುಳಿಗದ್ದೆ' ಪರಾ. ೨. (ದೇವಸ್ಥಾನ ಮೊದಲಾದುವುಗಳ) ಗೋಪುರ ; ಶಿಖರ: ಆ ದೇವಸ್ಥಾನದ ಮುಗುಳಿ ತುಂಬ ಎತ್ತರವಾಗಿದೆ (ಕಊ).

[← ತುಳು. ಮುಗುಳಿ]

**ಮುಗುಳಿಗದ್ದೆ** (ನಾ). ಬೆಟ್ಟದ ತುದಿಯಲ್ಲಿದ್ದು ಮಳೆಯ ನೀರನ್ನೇ ಆಶ್ರಯಿಸಿರುವ ಗದ್ದೆ,— ಜಮೀನು : (ಕಸಂಗ್ರ. ೦೬೫).

[ಮುಗುಳಿ$_2$ + ಗದ್ದೆ (< ಗಟ್ಟಿ)]

**ಮುಗುಳಿಸು** (ಕ್ರಿ). ೧. ಮೊಗ್ಗು ಬಿಡು ; ಮೊಗ್ಗು ಕಾಣಿಸಿಕೊಳ್ಳು : ಸಂಪಕಮಾದ ಚಂಪಕಾಲತೆಯ ಪಿಣಿಲೇಱಿದ ಕರವೀರಲತೆಯ ಮುಗುಳಿಸಿದ ವಕುಳಲತೆಯ ಬಾಳ್ದೊಂಪದ ಬಳಸು ವಿಳಸಮಾದ ರತ್ನರಚಿತಕೃತಕಾಚಲಂ ಗಳೊಳ್ (ಅಸಂಶ. ೦೦-೨೪ ವ). ೨. (ಮೊಗ್ಗಿನಂತೆ) ಮುಚ್ಚಿಕೊಳ್ಳು : ತನ್ನ ಕಡುಸೊಡರ ಬೆಳ್ಳನ್ನ ತಿಳಿಮುಂಜಾವದನ್ನ ಮುಗುಳಿಸುವ ಬೆಳ್ಳಿಯು ಬಟ್ಟಲಿಂ ಚೆನ್ನೆಸುವ ಕೊರ್ಗನೆಗಳನ್ನದೆಲ್ಲಿಹುದೆಂಬುದನ್ನರಿವೆವೆಂತೂ ಕಂಗೊಳ ದನ್ನೆಗಂ (ಗೀಶಂ. ೫-೬). ೩. ಅರಳಿಸು; ವಿಕಾಸಗೊಳಿಸು: ಪೂಜೆಯಿಲ್ಲದಾ ಪೂಜ್ಯನು ಹೃದಯದಿ ಪೂನಗೆ ಮುಗುಳಿಸಿ ತಾಳುವನು (ಅರಳು. ೦೬೩-೦೪).

[ಮುಗುಳ್$_1$ + —ಇಸು$_3$]

**ಮುಗುಳು$_1$** 'ಮುಗುಳ್$_1$' ನೋ.

**ಮುಗುಳು$_2$** 'ಮುಗುಳ್$_2$' ನೋ.

**ಮುಗುಳುಗಣ್**, ಮುಗುಳುಗಣ್ಣು (ನಾ). ಮುಚ್ಚಿಕೊಂಡಿರುವ ಕಣ್ಣು : ನಿಮೀಲಿತ ನೇತ್ರ : ಮುಗುಳುಗಂಗಳ ಮೇಲುಗುಡಿದೋಳುಗಳ ಮಿಡುಕುವ ತುಟಿಯ . . . ಹೊಸ ತಪಸು ತೊಡಗಿದನು ಬಲುತಪವ (ಕುಮಾ. ೪-೪೩); ಅರ್ಘ್ಯಮೆತ್ತಿದ ಕೈಯು ಅಂಜಲಿಗದೇನೊ ಬಿಳ್ದುವೋಲಾಗ್ಯು ತವಳ ಮೆಯ್ ಜುಮ್ಮೆನೆ ನಿರ್ವಿಕಾರರೆಳೊಯ್ತನೆ ಮಲ್ದರ್ವಾ ಮುಗುಳು ಗಣ್ (ಶ್ರೀರಾಮಪ. ೫೦೬-೨೦೫). **ಮುಗುಳುಗಣ್ಣು** : ಮುಗುಳುಗಣ್ಣುಗಳು, ಮೇಲೆತ್ತಿದ ತೋಳುಗಳು, ಮಿಡುಕುವ ತುಟಿಗಳು (ಶಾಮಚಿ. ೯೨).

[ಮುಗುಳು$_1$ (<ಮುಗುಳ್$_1$) + ಕಣ್]

**ಮುಗುಳುಗಣೆ** 'ಮುಗುಳ್ಗಣೆ' ನೋ.

**ಮುಗುಳುಗಣೆಯ** 'ಮುಗುಳ್ಗಣೆಯ' ನೋ.

**ಮುಗುಳುಗಣ್ಣು** 'ಮುಗುಳುಗಣ್' ನೋ.

**ಮುಗುಳುಗಾಯಿ** 'ಮುಗುಳ್ಗಾಯ್' ನೋ.

**ಮುಗುಳುಗೊಂಬು** (ನಾ). (ಆನೆಯ) ಮೂಡುತ್ತಿರುವ ಕೊಂಬು: ಮೊಳೆಯುತ್ತಿರುವ ಕೋರೆ, — ದಂತ : ಚೋಟುಕೊಂಬಿನ ಆನೆ ೧ಕ್ಕೆ ೩೦ ವರಹ ಕ್ರಯ, ಮುಗುಳುಗೊಂಬಿನ ಆನೆ ೧ಕ್ಕೆ ೨೫ ವರಹ ಕ್ರಯ (ಶುಹಾವಂ. 1, ೩೯). [ಮುಗುಳು$_1$ (<ಮುಗುಳ್$_1$) + ಕೊಂಬು$_1$]

**ಮುಗುಳುದೆನೆ** (ನಾ). ಅಂಕುರಿಸುತ್ತಿರುವ ತೆನೆ ; ಮೊಳೆಯುತ್ತಿರುವ ಹೊಡೆ : ವ್ಯರ್ಥವಲ್ಲವೆ . . . ಮುಗುಳುದೆನೆಯ ಎಳೆತುಳಸಿದಳಗಳ ತಂದು ಪ್ರೇಮದಿಂದ ಜಗನ್ಮೋಹನಪೂಜೆಯ ಮಾಡಿ ಚರಣಕೆಱಗದವನ ಜನುಮ (ಪುರಂದ. ಭಾ. ೨-೩೯-೨). [ಮುಗುಳು$_1$(<ಮುಗುಳ್$_1$) + ತೆನೆ$_1$]

**ಮುಗುಳುನಗು** 'ಮುಗುಳ್ನಗು$_1$' ನೋ.

**ಮುಗುಳುನಗೆ** 'ಮುಗುಳ್ನಗೆ' ನೋ.

**ಮುಗುಳುಬೊಕ್ಕೆ** (ನಾ). ಬಿರಿಯಲಿರುವ ಬೊಕ್ಕೆ ; ಒಡೆಯಲಿರುವ ಗುಳ್ಳೆ : "ಮುಗುಳು [ಪಾಠಾಂ. ಮುಳ್ಳು]ಬೊಕ್ಕೆ ಪಿಟಕಂ ಸ್ಫೋಟಕ ಪೊನಿಕ್ಕು" (ಮಂಗರಾ. ೦೦೩-೦).

[ಮುಗುಳು$_1$ (<ಮುಗುಳ್$_1$) + ಬೊಕ್ಕೆ$_1$]

**ಮುಗುಳುವಾಳೆ** (ನಾ). ಬಾಳೆಯ ಹೂವು ; ಬಾಳೆಮೋತೆ : ಮುಗುಳು ವಾಳೆಯ ಹೊಡೆಯ ನುಚ್ಚಾಗಿ ಕತ್ತರಿಸಿ ಒಗರು ಹೋಹಂತೆ ಸುಣ್ಣದ ನೀರಿನಿಂ ಕುದಿಸಿ ತೆಗೆದು (ಸೂಶಾ. ೪-೬೦).

[ಮುಗುಳು$_2$ (<ಮುಗುಳ್$_1$) + ಬಾಳೆ$_1$ (<ಬಾೞ್$_3$)]

**ಮುಗುಳುವಿಡಿ** (ಕ್ರಿ). ಮೊಗ್ಗು ಬಿಡು, — ಕಾಣಿಸಿಕೊಳ್ಳು : "ಮುಗುಳ್ತು ದೆನೆ ಮುಗುಳುವಿಡಿವುದು" (ಶಬ್ದಸಂ. ೪೬೬-೬೬).

[ಮುಗುಳು$_2$ (<ಮುಗುಳ್$_2$) + ಬಿಡಿ$_1$]

**ಮುಗುಳುಹೊಡೆ** (ನಾ). = ಮುಗುಳುದೆನೆ : ಮುಗುಳುಹೊಡೆಗಳಲೆಹೊಡೆ . . . ತಾಳುದೆಂಬುದೆನೆಸು ಶಾಲಿ ಸೊಗಸನಿತ್ತುವು ನೋಳ್ಪರಿಗೆ (ಕಂಶಪ. ೫-೬೨). [ಮುಗುಳು$_2$ (<ಮುಗುಳ್$_2$) + ಹೊಡೆ$_3$ (<ಪೊಡ$_3$)]

**ಮುಗುಳೇಱು** (ಕ್ರಿ). = ಮುಗುಳುವಿಡಿ : ಮುಗುಳೇಱಿದ ಚಂಪಕಲತೆವೋಲಿ ದರ್ಪಂತಾಕ್ಷಣದೊಳ್ (ಕಾದಂಬ. ೩೨೩); ಅವಳ ಕೋಮಲಿತಕಾಯದುಂಬ

ಪೊಳೆವ ಸನ್ಮಾರ್ಗಲತೆ ಮುಗುಳೇಱಿದೊಲ್ ಮೆಲ್ಪುವಳೆಯೆ ನೀರಾಡಿದರ್ ಗಾಡಿಯಿಂ ಕೂಡಿಯಾ ನಳನಾಯತಾಂಬಕಿಯರುಂ (ಸಂವಿವಶಾ. ೬-೨೯).
[ಮುಗುಳ್$_2$ + ಏಱು$_1$ (< ಏಱ್$_1$)]

**ಮುಗುಳೊತ್ತು** (ಕ್ರಿ). ೧. ಅಂಕುರಿಸು ; ಮೊಳೆ ; ಮೂಡು : ಮೊಲೆ ಮುಗುಳೊತ್ತುವಂದು ಮೊದಲಿಂದುವರಂ ಬಗೆದಂತಿರಿಚ್ಚೆಯುಂ ಸಲಿಸಿ . . . ಕೂರ್ತ ಮನಃಪ್ರಿಯನಂ ಬಿಡೆಂದು ನೀನೆಲೆ ಮುದುಪಾಱಿದೊಲ್ತೆ ನುಡಿಯಲ್ಪಗೆದಂದುವನೆಂತು ಸೈರಿಪೆಂ (ರಾಜಶೇ. ೧೦-೧೬೨); ಉತ್ತಮಜ್ಞಾನಸಲಿಲವನೆಱೆದು ಶರೀರ ಸುಚಿತ್ರಭೂಮಿಯೊಳೆಳ್ಳಿಯಿಂ ಬಿಳ್ತಲದುವೆ ಮುಗುಳೊತ್ತಿ ಪಲ್ಲವಿಸುತೇಕೋತ್ತರಶತಸ್ಥಲಂಗಳನಾಂತಿರುತ್ತಿರ್ಪನಂ (ಕೊಟ್ಟೂರ. ೧-೬೮). ೨. ಅರಳು ; ವಿಕಾಸವಾಗು: ... ದಯೆಗೆ ಚಿತ್ತವಂಕುರಿಸಿ ಬುದ್ಧಿ ಪಲ್ಲವಿಸಿ ಮನಂ ಮುಗುಳೊತ್ತಿ ಕುಸು... ಬಸವರಾಜನಂ . . . ಕಂಡು (ಬಸರ. ೨-೩೩). ೩. ಮೊಗ್ಗುಗಳಿಂದ ತುಂಬು,– ಕೂಡಿರು : ಸಮ್ಮದವಂ ಕರಂ ತಳೆಯೆ ಜಾದಗೆಗಳ್ವೆಳಸತ್ಕದಂಬಜಾಲಂ ಮುಗುಳೊತ್ತೆ . . . ತಾಂ ಮುಂ ಮಟಗಿಗಾಲದೊಳ್ಮರಿದು ತೀಡಿಮುದೊಯ್ಯನೆ ಪಸ್ಸಿಮಾನಿಲಂ (ಉದ್ಭಟ. ೯-೦೫೦). [ಮುಗುಳ್$_2$ + ಒತ್ತು$_1$]

**ಮುಗುಳ್ಗಣ್** (ನಾ). ಮೊಗ್ಗಿನಂತಿರುವ ಕಣ್ಣು ; ಕುಟ್ಮಲದಂತಿರುವ ನೇತ್ರ: 'ಮುಗುಳ್ಗಣ್ಣ' ಪರಾ. [ಮುಗುಳ್$_2$ + ಕಣ್]

**ಮುಗುಳ್ಗಣೆ**, ಮುಗುಳುಗಣೆ (ನಾ). ಮೊಗ್ಗಿನ ಬಾಣ ; ಹೂವಿನ ಸರಳು ; ಪುಷ್ಪಬಾಣ : ಪಗೆಗಳುಮಂ ಪೆಂಡಿರುಮಂ ಮಿಗೆ ಸೋಲಿಪುವವನ ಬ... ಗಾಡಿಯುಮಾವಗಮಡಸಿ ತಾಗೆ ಕಣೆಯುಂ ಮುಗುಳ್ಗಣೆಯುಂ ಮೊಸೆಯೊಳಂ ಪೊಚಲ್ವಿದಿಯೊಳಂ (ಶಬ್ದಶಾ. ೯೯); ಸಲೆ ಪರವಶದೊಳಾದ ಕೂರುಗುರ ಕೊನೆವಲ್ಲ ಕಲೆ ಮೆಯ್ಯೊಳಿಲ್ಲದರ್ ಮುಗುಳ್ಗಣೆಯ ಮುದ್ರೆಯುಜ್ವಲಿಸದರ್ . . . ಮೋಹಿಗಳ ಕುಲಕೆ ಹೊಱಗೆಂದು ನೂಪುರರವದೆ ನಾದಮಂ ಪೊಯ್ಸುರಂಗನೆಯರಲ್ಲಿ (ಶದ್ವರಾ. ೬-೯೦); ನಿಜಕಟಾಕ್ಷಶರಮಿರ್ದಂತೆ ಮುಗುಳ್ಗಣೆಗಳೇವಾಳ್ತೆಯೆಂದು ಕಾಮನ ಕರತಳದಿನವಂ ಕವರ್ತೆಗೊಂಡು ಚೆಲ್ಲುವಂತೆ ಪುಷ್ಪಪುಟಹಸ್ತದಿಂ ಪುಷ್ಪಾಂಜಲಿಯಂ ಕೆದರ್ದು (ರಾಜಶೇ. ೩-೦೯ ಪ). **ಮುಗುಳುಗಣೆ** : ' ಮುಗುಳುಗಣೆಯು ' ಪರಾ.
[ಮುಗುಳ್$_2$ + ಕಣೆ$_1$]

**ಮುಗುಳ್ಗಣೆಯ**, ಮುಗುಳುಗಣೆಯ (ನಾ). ಹೂವಿನ ಬಾಣವನ್ನು ಹೊಂದಿದವನು ; ಕಾಮ ; ಮನ್ಮಥ : ಮುಕ್ತಿಪದದ ಹೊಲಬಂ ಮುಗುಳ್ಗಣೆಯನ ಶಕ್ತಿಗಿಡಿಪ ಪರಿವಿಡಿಯಂ . . . ಯುಕ್ತಿಗೆ ಯುಕ್ತಮೆನಿಸುವಾಗಮಮಂ ವ್ಯಕ್ತೀಕರಿಸುವುಪಾಧ್ಯಾಯರೆನಾಂ ಭಕ್ತಿಯಿನಭಿವಂದಿಸುವೆಂ (ಜಿನಶಾ. ೦-೯). **ಮುಗುಳುಗಣೆಯ** : ಮುಗುಳುಗಣೆಯನ ಶುಭ ಕುವರನು ರುಗುಮಿಣಿಯ ಸಾರಿರಲು ಕೋಡಿಮನಗರದಿಂ ಮಂತ್ರಿಗಳು ಬಂದೆಂದಂತೆ ಬಿನ್ನೈಸೆ (ಹರಿಶ್ಚರಾ. ೩೦-೦೨). [ಮುಗುಳ್ಗಣೆ + – ಅ$_7$]

**ಮುಗುಳ್ಗಣ್ಣ** (ನಾ). ೧. ಮೊಗ್ಗಿನಂತೆ ಕಣ್ಣುಗಳನ್ನುಳ್ಳವನು. ೨. ಕೃಷ್ಣ : ಮೊಗಮೆಲ್ಲ ಮುಚ್ಚಿಕೊಂಡಿಪ ಕಣ್ಣ ಮುಗುಳ್ಗಣ್ಣ ತಾವರೆಯ ಕಣ್ಣ (ಕೃಷ್ಣವಿ. ೩-೬೦). [ಮುಗುಳ್ಗಣ್ + — ಅ$_7$]

**ಮುಗುಳ್ಗಾಯ್**, ಮುಗುಳುಗಾಯಿ (ನಾ). ೧. ಆಗ ತಾನೆ ಹೂವಿನಿಂದ ಹೊರಬಂದ ಕಾಯಿ ; ಅತಿ ಎಳೆಯ ಕಾಯಿ ; ಹೀಚು : ಮುಗುಳ್ಗಾಯ್ ಅಮುಳ್ವೊಂಗಲ್, ಎಸಳ್ವಸೆ, ಅಮುಳ್ಚಂತ್ರಂ (ಶಬ್ದರ. ೯೩ ಪ್ರಯೋ) : ತಳಿರ್ಗೆಂಪು, ಬೆಳರ್ಗೆಂಪು, ಮುಗುಳ್ಗಾಯ್, ಎಸಳ್ಗೆಂಪಂ (ಶಬ್ದಾನು. ೬೩ ಪ್ರಯೋ). ೨. ಹೀರೆಕಾಯಿ ಮೊದಲಾದ ತರಕಾರಿಯಿಂದ ತಯಾರಿಸುವ ಒಂದು ಬಗೆಯ ಖಾದ್ಯ : ಕೆಲವ ಭಂಜಿತಶಾಕವುಂ ಕೆಲವ ಮುಗುಳ್ಗಾಯ . . . ಮಾಡಿ ಹಲವು ಚಂದದೊಳು ಹೀರೆಯ ಕಾಯ ಪಾಕಮಂ ಹಿರಿದಾಗಿ ಹಸಮಾಳ್ಪುದು (ಸೂಪಶಾ. ೩-೭).

**ಮುಗುಳುಗಾಯಿ** : ೨. ಭಂಜಿತಶಾಖಿ, ಮುಗುಳುಗಾಯಿ, ನವಜಿಷ್ಣುಸಂಧೆ . . . ಶಾಕವಂಗಿ ಮೊದಲಾದ ಹೀರೆಯ ಕಾಯ ಪಾಕವನ್ನು ಹಸನಾಗಿ ತಯಾರಿಸುವುದು (ಸೂಪಶಾ. ೩-೬ ಅವ). [ಮುಗುಳ್$_2$ + ಕಾಯ್$_4$]

**ಮುಗುಳ್ಚು** (ಕ್ರಿ). ೧. (ಹೂವು ಮೊದಲಾದುವನ್ನು) ಮುಚ್ಚಿಕೊಳ್ಳುವಂತೆ ಮಾಡು : ಮೊಗ್ಗಾಗಿಸು : "ಮುಗುಳ್ಚು – ಸಂಕೋಚಕರಣೇ (ಕುಗ್ಗಿಸು)" (ಶಮದ) ; ಪಗಲಕನಿರುಳ್ಪಿಧುಬಿಂಬಮಿಂಬುಮಾಟ್ಪಂತೆ ಮುಗುಳ್ಚುಗುಂ ಕುಮುದಕಾನನಮಂ ಕಮಳಪ್ರತಾನಮಂ (ಲೀಲಾವ. ೬-೬೪). ೨. (ಕಣ್ಣು) ಮುಚ್ಚಿಕೊಳ್ಳು, – ಮುಗಿ : ಸುರತಾಂತದೊಳಕ್ಷಿಗಳಂ ಮುಗುಳ್ಚಿ ಪಟ್ಟಿರೆ ಪರವಾಯು ತೀವಿತಿವಳೆಂದಿರದೋಡಿದನೂರ್ವನೂರಿಚಂ (ರಾಜಶೇ. ೧೦-೦೪೯). [ಮುಗುಳ್$_1$ + — ಚು$_1$]

**ಮುಗುಳ್ದೊಂಗಲ್** (ನಾ). ಮೊಗ್ಗುಗಳ ಗೊಂಚಲು; ಹೂಗೊಂಚಲು; ಪುಷ್ಪಗುಚ್ಛ: ಮುಗುಳ್ದೊಂಗಲ್, ಎಸಟಟ್ಟಾಣಂ (ಶಬ್ದಾನು. ೬೩ ಪ್ರಯೋ).
[ಮುಗುಳ್$_2$ + ತೊಂಗಲ್]

**ಮುಗುಳ್ದೋಱ್** ' ಮುಗುಳ್ದೋಱು ' ನೋ.

**ಮುಗುಳ್ದೋಱು**. ಮುಗುಳ್ದೋಱ್ (ಕ್ರಿ). ಮೊಗ್ಗುಬಿಡು ; ಹೂಬಿಡು ; ಪುಷ್ಪಿತವಾಗು : "ಮುಗುಳ್ಚುದು ತಾನದೆನೆ ಮುಗುಳ್ದೋಱಿದುದು " (ಶಬ್ದಮಂ. ೨೨೦-೨೨). **ಮುಗುಳ್ದೋಱ್** : ಬೆಳ್ಗೆ ಪುಟ್ಟಲ್ಕೆ ಸಂಪಗೆ ಮುಗುಳ್ದೋರ್ಪ ಸುದತಿಯರ ಬಟ್ಟಮೊಗಕಣೆಯತಹವೆ ತಾವರೆಗಳೆಂದವಂ ಬಿಟ್ಟು ತುಂಬಿದ ಜವ್ವನೆಯರ ತನುಪರಿಮಳಕೆ ಕವಿದವಾಬನದಳಿಗಳು (ಕೃಬಿಜಾ. ೯-೦೭). [ಮುಗುಳ್$_2$ + ತೋಱು]

**ಮುಗುಳ್ನಗು**$_1$, ಮುಗುಳುನಗು (ಕ್ರಿ). ಮಂದಹಾಸವನ್ನು ಬೀರು ; ನಸುನಗು : ಪಂಪಕವಿ ಪೊನ್ನನ ಕಡೆ ತಿರುಗಿ ಮುಗುಳ್ನಕ್ಕನು (ದಾನಚಿಂ. ೬). **ಮುಗುಳುನಗು** : ಬೋಳನು ಕೈಮುಂಚಿ ಉಡುಗೊರೆ ಕೊಡಲು ಮುಗುಳುನಗುತ್ತ ಕೋಲ್ಕಾರರು ಹೀಗೆಂದರು (ಕಾರೂರ. ೧೦ ಕಥಾಸಾರ).
[ಮುಗುಳ್$_2$ + ನಗು$_1$]

**ಮುಗುಳ್ನಗು**$_2$ (ನಾ). ಮಂದಹಾಸ ; ನಸುನಗು : ಅವರ ಮುಗುಳ್ನಗುವನ್ನು ಕಂಡು ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು (ರೂಢಿ).
[ಮುಗುಳ್$_2$ + ನಗು$_2$]

**ಮುಗುಳ್ನಗೆ**, ಮುಗುಳುನಗೆ (ನಾ). = ಮುಗುಳ್ನಗು$_2$ : " ಸ್ಮಿತವೆಂಬುದು ಮುಗುಳ್ನಗೆ" (ಕರಾಹೂ. ೯೩-೯೦೩) ; ಮಗಳ ಮೊಗವಂ ಮುಗುಳ್ನಗೆವೆರಸು ನೋಡಿದಾಗಳ್ (ಅಂಜ್ಞ. ೩-೯೯ ವ) ; ಮುಗುಳ್ನಗೆ ಪದೆಪಿಂ ಪೊದಟ್ಟುದು ಕುಮಾರನ ಕೋಮಳವಕ್ತ್ರಬಿಂಬದೊಳ್ (ಕುಸುಮಾ. ೬-೦೨೩) ; ದಾರಿಗನ ಮೋರೆಯಲ್ಲೊಂದು ಮುಗುಳ್ನಗೆ ಮಿಂಚಿತು (ಮುತ್ತಸ. ೩). **ಮುಗುಳುನಗೆ** : ಮೃಗನಯನೆ ನೀನೆನ್ನನೀಕ್ಷಿಸಿ ಮುಗುಳುನಗೆಯುಂ ಚಿಂತೆಯುಂ ನಿನಗೇಕೆ ಪೇಳೆನಲು (ಬಸಪು. ೯೦-೩) ; ಮುಗುಳುನಗೆ ನಸುವೊಳೆಯೆ ಭೀಮಾದಿಗಳಿಗೆಂದನು ಕೃಷ್ಣನು (ಕುಬ್ಜಾಲೀ. ೭-೦೨) ; ಮುಗುಳುನಗೆಯುಲಿ ಸೂರ್ಯತನುಜನ ಮೊಗವ ನೋಡಿ (ಶಾಕ್ಶಾ. ೯೩-೨೫) : ಅದೃಷ್ಟದ ಕುಲಿಮೆಯಿಂದ ನೆಗೆವ ಕಿಡಿಯಂತಿತ್ತು ಅವನ ಮುಗುಳುನಗೆ ! (ಅಕ್ಕರ್ಶ. ೦೬೭). [ಮುಗುಳ್$_2$ + ನಗೆ]

**ಮುಗುಳ್ನನೆ** (ನಾ). ಅರಳುತ್ತಿರುವ ಮೊಗ್ಗು,—ಕುಟ್ಮಲ : ಮುಗುಟ್ಟುಂ ಮುಗುಟ್ಟುಂ ಪೊಸಮಲ್ಲಿಗೆಯ ಮುಗುಳ್ನನೆಯ ದೇಸೆಯುಂ ಕಂದರ್ಪಂ ಪೊಗಟ್ಟಂ (ಮಲ್ಲಿ. ೩-೦೪) ; ಬಲ್ಲನೆಯ ಪೊದಱ್ ಮುಗುಳ್ನನೆಯ ಪೆರ್ಮನೆ . . . ಪೊಸವಣ್ಣ ಗೊತ್ತಿದೆನೆ ಕಣ್ಗೆಸೆದಿರ್ದುದದೊಂದು ಮಾಮರಂ (ಶಬ್ದಶಾ. ೦೦೦). [ಮುಗುಳ್$_1$ + ನನೆ]

**ಮುಗುಳ್ಮೊಲೆ** (ನಾ). ಮೊಗ್ಗಿನಂತಿರುವ ಕುಚ, – ಮೊಲೆ : ಹೊಗರೆಸೆವ ಮುಗುಳ್ಮೊಲೆಯೊಪ್ಪಿಗೆ... ನೃಪನಂದನೆಗೆ (ಜಯನೃ. ೦೩-೦೨) ;

ಸಣ್ಣ ಮುಗುಳ್ಮೊಲೆಯು ಪರಲ್ಮೊಲೆಯು . . . ಬೆದರ್ದ ಕಣ್ಣಸೋಟದ ಬಾಲೆಯರ್ . . . ಎಸೆದರು (ಶಬಪು. ೧೦-೧೯). [ಮುಗುಳ್$_2$ + ಮೊಲೆ$_1$]

**ಮುಗುಳ್ವಡೆ** (ಕ್ರಿ). ಮೊಗ್ಗು ಬಿಡು ; ಹೂಬಿಡು ; ಪುಷ್ಪಿತವಾಗು: ಬೊಗಸೆಗಂಗಳೆಯಂಗಲತಿಕೆಗೆ ತಿಗುರಿ ತೀಡಿದ ಮೃಗಮದದ ಮಗಮಗಿಪ ಸುರಭಿಯು ಕಾಮಿಯಭಿರತಿ ಮುಗುಳ್ವಡೆಯುತಾಸ್ವಾದಿಪಂತೆ (ಕೃಕಸ. ೩-೩-೩). [ಮುಗುಳ್$_2$ + ಪಡೆ$_1$]

**ಮುಗುಳ್ವದ** (ನಾ). ಮೊಗ್ಗು ಬಿಡುವ ಪದ ; ಹೂ ಬಿಡುವ ಸ್ಥಿತಿ : ಮುಗುಳ್ವದನಾವ ಸಂಪಗೆ ಮಡಲ್ವದಿರ್ದುರ್ತ್ತೆ ಮರಲ್ದರಲ್ದ ಮಲ್ಲಿಗೆ ಮನಮುಂ ಕವರುತ್ತಿರೆ (ಕಂಕಥಾ. ೩-೩೩) ; ಒರಿದು ಮೃದುವಾಗಿ ನಸದಕ್ಕಿ ಯೊಳಗರಿಸಿನವ ಪೊರೆಯೊತ್ತಿ ಮುಗುಳ್ವದದಿ ಬೆಂದ ವಿದಳಗಳನೊಡವೆರಸಿ . . . ಪಾಕಂ ಮಾಡಿ ತೆಂಗಾಯ ತೆಗೆಯ ಕಾ ಹಸನಪ್ಪುದು (ಸೂಶಕಾ. ೩-೫) ; ಹುರಿಯಕ್ಕಿಯೊಳ್ಳು ಜೀರಿಗೆ ಮೆಣಸು . . . ಮುಗುಳ್ವದದಿ ಬೆಂದ ಬೇಳೆಯು ಹೆಸರು ಫುಲ್ಲಸೊಜ್ಜಿಗೆಯು ಕೂಳು (ಸೂಶಕಾ. ೯-೦). [ಮುಗುಳ್$_1$ + ಪದ$_1$]

**ಮುಗುಳ್ವಳೆ** (ನಾ). ಮೊಗ್ಗುಗಳ ಮಳೆ ; ಹೂಮಳೆ ; ಪುಷ್ಪವೃಷ್ಟಿ : ಮುಗುಳ್ವಳೆಯಂ ಸುರಿವ ಜಂತ್ರದ ಮುಗಿಲ್ಗಳ ತೆಗೆದು ತರಂಗೋಳಿಸಿದ ಪಂಚವಣ್ಣಿಗೆಯ ಪಟ್ಟೆಯ . . . ಗಾಡಿವಡೆದ ಮಂಟಪದ ಮಧ್ಯದಲ್ಲಿ ನೆರೆದ ವಿಬುಧರಿಂ (ಚಾಕಕೀ. ೮-೩ ವ). [ಮುಗುಳ್$_2$ + ಮಳೆ (<ಮಟ್‌)]

**ಮುಗುಳ್ವಿಲ್** (ನಾ). ಹೂವಿನ ಧನುಸ್ಸು ; ಪುಷ್ಪಚಾಪ : 'ಮುಗು ಳ್ವಿಲ್ಲ' ಪರಾ. [ಮುಗುಳ್$_2$ + ಬಿಲ್$_1$]

**ಮುಗುಳ್ವಿಲ್ಲ** (ನಾ). ಹೂವಿನ ಧನುಸ್ಸನ್ನುಳ್ಳವನು ; ಕಾಮ ; ಮನ್ಮಥ : ಮುಗುಳ್ವಿಲ್ಲಂ ಮುಗುಳ್ದೆಚ್ಚ ಶಿಳೀಮುಖ ಮುಗುಳೆ ಕುಲಟೆಯರ ಮೆಲ್ಲೆರ್ದೆಯಿಂ ನೆಟ್ ಮುಗಿದುವು ಮುನ್ನೀರಣುಗಿಯ ಸಜ್ಜೆವನೆಗಳಾ ರಾತ್ರಿಯೊಳು (ಕಚುಹಾ. ೧೩-೬೬) ; ಮುಗುಳ್ವಿಲ್ಲನಾ [ಚಾಕಾಂ. ಮುಗು ಳಿಲ್ಲವಾ]ರತಿದೇವಿಯರಾಡುವ ನಗರಜನದ ಸಾರಿಯಿರ್ಪ ಪಗಡೆವಾಸೆಂದೆನೆ ರವಿ ಸೋಮವೀಥಿಗಳ್ಗೊಗಸಿಹವಾ ನಗರಿಯೊಳು (ಶ್ರೀಚಾಂ. ೦-೭೩). [ಮುಗುಳ್ವಿಲ್ + — ಅ$_7$]

**ಮುಗುಳ್ಪುಣ್** (ನಾ). = ಮುಗುಳುಬೊಕ್ಕೆ : ಅಸುರೆ ಶರದದ ಬಿಸಿಲ್ ಕೋಮಲಕಿಯನುಬಿಚಿದಿನಿಸು ಬಾಡಿ ಕಂದಿರ್ದಳ್ ಕುಂದಳತಾಕುಮಾರಿ ಮುಗುಳ್ಪುಣ್ಣೊ[ಚಾಕಾಂ. ಳ್ವೊಳ್ಳ]ಳೆತೊಡೆ ಮೆಯ್ಯಾಯ್ದು ಬಡಬಡಾ ದಂತಾದಳ್ (ಲಲಾವ. ೩-೩೭). [ಮುಗುಳ್$_2$ + ಪುಣ್]

**ಮುಗುಳ್ವೆಳಗು** (ನಾ). ಮೊಗ್ಗಿನಂತಹ ಕಾಂತಿ : ಬೆರಲೆಡೆಯೊಳಡಸಿದ ಕಪ್ಪುರವಳುಕಿನೊಳೆ ನಗಿಸುವ ರೋಡಗರನಿಡುವ ನೆವದಿಂ ಪರಿವ ಮುಗುಳ್ಗ ಗೆಯ ಮುಗುಳ್ವೆಳಗಿಂಗೆ ತಕ್ಕುಗುಡುವಂತೆಯುಂ (ಅಪಂಪು. ೯-೭ ವ). [ಮುಗುಳ್$_2$ + ಬೆಳಗು$_2$]

**ಮುಗುಳ್ಸರಿಗೆ** (ನಾ). ಮೊಗ್ಗುಗಳಿಂದ ಮಾಡಿದ ಸರ,— ಹಾರ : ವನಕುಸುಮಂಗಳಂ ಬಗೆಗೆವಂದುವನಟ್ಟಿಯೊಳಾಯ್ದು ಕೊಯ್ದು . . . ಮುಗುಳ್ಸರಿಗೆ ತೋಳ್ವಳೆ ಕಂಕಣವಾರಮೆಂದು ಬೇಟ್ಟನಿತನೆ ಮಾಡಿ ತೊಟ್ಟು ಕರಮೊಪ್ಪಿದಳಾಕೆ ಬಸಂತಕಾಂತೆವೋಲ್ (ಕಂಕಥಾ. ೨-೦೬). [ಮುಗುಳ್$_2$ + ಸರಿಗೆ]

**ಮುಗುಟು$_1$** (ಕ್ರಿ). (?) : ಶಿಥಿಲದ್ವಿತ್ವಕ್ಕೆ — ಮುಗುಟ್ಟಿಂ, ಅಗುಟ್ಟಿಂ. . . ಮುಗುಟ್ಟಿಂ, ತೆಗಟ್ಟಿಂ (ಶಮಕ. ೩೩ ಕ್ರ ಯೋ). [ ? ]

**ಮುಗುಟು$_2$** (ನಾ). (?) : ಪೊಕ್ಕುಟು, ಕೌಂಕುಟು, ನೆಗಟು, ಮುಗುಟು, ನೆಮುಟು, ತೆಮುಟು (ಶಬ್ಧಾನು. ೦೯೦ ಕ್ರ ಯೋ). [ ? ]

**ಮುಗುಟಿ** (ನಾ). (?) : ಅಗುಟಿ, ಪೊಗಟಿ, ಮುಗುಟಿ, ನೆಗಟಿ (ಶಬ್ದಾನು. ೩೩೯ ಕ್ರ ಯೋ). [ಮುಗುಟು$_1$ + — ತೆ$_2$]

**ಮುಗ್ಗಟ್ಟು** (ನಾ). ೧. ವಿಷಮಸ್ಥಿತಿ ; ಕಷ್ಟ ; ತೊಂದರೆ ; ಪೇಚು : ಕಂಚಿನ ನಾಗರಿಕತೆಯು ಪರಡದ ಹಾಗೂ ತಾವು ಮತ್ತು ತವರದ ಅಭಾವದಿಂದ ಎಲ್ಲರಿಗೂ ಹತಾರಗಳು ದೊರೆಯದೆ ಮುಗ್ಗಟ್ಟು ತಲೆದೋರಿತು (ಶಿಲ್ಪಾ. ೬೭) ; ಹೀಗೆ ಅವರನ್ನು ಬಲವಂತ ಮಾಡಿ ಮುಗ್ಗಟ್ಟಿಗೆ ಸಿಕ್ಕಿಸುವುದು ಬಹಳ ತಪ್ಪು (ಕುಕಾಯ. ೭೦). ೨. ಕೊರತೆ; ಅಭಾವ : ಇಲ್ಲಿ ಸ್ಥಳಕ್ಕೆ ಬಹಳ ಮುಗ್ಗಟ್ಟಂತೆ ! (ಕೂಪಕೇ. ೨೯೪) ; ಅವನಿಗೆ ಹಣದ ಮುಗ್ಗಟ್ಟು ಬಲವಾಗುತ್ತಿತ್ತು (ರಕ್ತರೂ. ೯೬). 'ಇಕ್ಕಟ್ಟು', 'ಬಿಕ್ಕಟ್ಟು' ಪರಾ. [ದೇ.॥ ತಮಿ. ಮುಕ್ಕಟ್ಟು]

**ಮುಗ್ಗರಿಸು** ' ಮುಗ್ಗುರಿಸು ' ನೋ.

**ಮುಗ್ಗಲು** (ನಾ). ೧. ಬೂಷ್ಟು ಹಿಡಿದುದು; ಮುಗ್ಗಿದುದು : ಒಂದೇ ಸಮನೆ ಮಳೆ ಹಿಡಿದು, ಥಂಡಿಯಿಂದ ಎಷ್ಟೊಂದು ಹಪ್ಪಳ ಸಂಡಿಗೆಗಳು ಮುಗ್ಗಲಾದುವು (ಕೂಂ). (ಗು). ೨. ಬೂಷ್ಟು ಹಿಡಿದ; ಕೆಟ್ಟುಹೋದ : ದೊರೆಯು ಇವಳ ತೊಟ್ಟಿಗೆ ಕೊಡುತಾ ಇದ್ದ ಖಾಸಾಸೋಬಸ್ಕರವನ್ನು ದಿನಕ್ರಮೇಣ ಕಡಿಮೆ ಮಾಡುತ್ತಾ ಕಡೆಗೆ ಕಗ್ಗಲ ರಾಗಿ ಮುಗ್ಗಲ ಹುರಳಿಗೆ ಇಳಿಸಿದನು (ಪಟಿಪಾ. ೦೬). 'ಮುಚುಕಿಲ್$_1$' ಪರಾ.

**ಮುಗ್ಗಲಗೇಡಿ** = ಅಸಹ್ಯವ್ಯಕ್ತಿ : ಹೊಲಾ ಮನಿ ಎಲ್ಲಾ ಹಾಳು ಮಾಡೋ ಮುಗ್ಗಲಗೇಡಿಗೆ ಮಗಳ ಕೊಟ್ಟು ಯಾವ ನರಕಕ್ಕ ಹೋಗ ಬೇಕಂತೀರೀ ನೀವು ? (ಸಪುಜೀ. ೨೯೬). [ಮುಗ್ಗು$_{\text{ಗ}2}$ + — ಅಲು (< — ಅಲ್$_2$). /ತಮಿ. ಮುಕ್ಕಲ್ = ಮುಗ್ಗುನಾತ]

**ಮುಗ್ಗಾಲಿ** ' ಮೂಗಾಲಿ ' ನೋ.

**ಮುಗ್ಗಿಸು** ' ಮೊಟ್ಟಿಸು ' ನೋ.

**ಮುಗ್ಗಿಜು** (ಕ್ರಿ). ಮುಗ್ಗರಿಸಿ ಬೀಳು ; ಎಡವು : ಮುಡಿಗೆ ಮುಡಿ ಯಂದವಳ ಕಯ್ಯೊಳಗೆ ತಂದು ಕೊಡಲೊಡನೆ ಹಾವಾಗಿ ಹೂಂಕರಿಸಿ ಕೋಪದಿ ಕಯ್ಯ ಕಡಿಯಲು ಕ್ಷಣದೊಳಗೆ ವಿಷವೇಱೆ ಮುಗ್ಗಿಜಿದು ಕಾಮಲತೆ ಭೂತಳಕ್ಕೆ ಕೆಡೆಯಲು (ಸಮ್ಯಕ್ತ್ವ. ೬-೯೪) ; ಡೊಳ್ಳುಹೊಟ್ಟೆಯನೆತ್ತಿ ಕೊಂಡೋಡಲಾಱದೆ ಹಳ್ಳಕೊಳ್ಳದಲಿ ಮುಗ್ಗ[ಗ್ಗಿ]ಜಿದು ಮುಳ್ಳಲ್ಲಿ ಬಿದ್ದು ಮೂಗರಿಸಿಕೊಂಡರ ಲೆಕ್ಕವಿಲ್ಲವನಾರು ಬಣ್ಣಿಪರು (ಕಂಪವಿ. ೦೭-೩೩). [ಮುಗ್ಗು$_{\text{ಗ}1}$ (< ಮೊಟ್ಟು$_{\text{ಗ}1}$) + ಇಜು$_1$]

**ಮುಗ್ಗು$_{\text{ಗ}1}$** ' ಮೊಟ್ಟು$_{\text{ಗ}1}$ ' ನೋ.

**ಮುಗ್ಗು$_{\text{ಗ}2}$** (ಕ್ರಿ). ೧. ಹಳಸು ; ಕೆಟ್ಟವಾಸನೆ ಬರು ; ಕೆಟ್ಟುಹೋಗು : ಅದಱಡಗು ಮುಗ್ಗಿ ಪುಟು ಪತ್ತಿದೊಡಾಟಲ್ ಪರಪೆ ಕಾಗೆಯುಂ ನಾಯುಂ ಮುಟ್ಟದುದು (ಯಶೋಚ. ೩-೩೬) ; ಇನಿವಣ್ಣಳಾವಾವವೃಂಟವಱವಱ ರಸ ಮನನುವಾಗಿ ಹಿಳಿದು ಹಂಜಿಯ ಅರಲೆಯೊಳಗೂಡಿಯಿನಿಸು ಮುಗ್ಗದ ತೆಱದಿ ನೆಳಲೊಳೊಣಗಿಸಿ (ಸೂಶಕಾ. ೨-೩೩) ; ಮುಗ್ಗದ ಮುಗಿಯದ ಬಾಡದ . . . ಪೂವೆ ಪೂಬನದೊಳಳುಂಬಂ (ರಾಷಾಶ್ವ. ೫೩-೨೫). ೨. (ಅಲಂ) ಅಸಹ್ಯವಾಗು ; ಇಂದಿನ ಹದಗೆಟ್ಟ ವಾತಾವರಣದಲ್ಲಿ ಮೋಜು ಮಾಟಲು ಗಳು ಮುಗ್ಗಹತ್ತಿವೆ (ಕನ್ನಶಾ. ೩೫).

[ದೇ.॥ ತಮಿ. ಮುಱು ; ತುಳು. ಮುರ್ಗು ; ತೆಲು. ಮುಗ್ಗು, ಮುಱುಗು, ಮುಗ್ಗು; ಗೊಂಡಿ. ಮುರ್ಕನ್ನಾನ]

**ಮುಗ್ಗು$_{\text{ಗ}3}$** (ನಾ). ಕೆಟ್ಟವಾಸನೆ ; ಹಳಸಲು ; ಬೂಷ್ಟು : ಖಂಡಸಕ್ಕರೆಯ ಮೆಲುವಾತ ಮುಗ್ಗಿನ ಹಿಂಡಿಗೆಜಗುವನೆ (ಸರ್ವಜ್ಞ. ೫೦೬) ; ಹೊಟ್ಟೆ ಗಿಲ್ಲದಕ್ಕ ಇದ್ದ ಮುಗ್ಗ ಕಾಳೆಲ್ಲ ಮುಕ್ಕಿಬಿಟ್ಟನರಿ (ಗ್ರಾಮಕೂಡು. ೬೭). [<ಮುಗ್ಗು$_{\text{ಗ}2}$./ತುಳು. ಮುಗ್ಗ್, ಮುಗ್ಗು; ತೆಲು. ಮುಗ್ಗ; ಕೋಲಾ. ಮುರ್ಗ್ ; ಪರ್ಜಿ. ಮುರ್ಗ್, ಮುರ್ರು]

**ಮುಗ್ಗುಡಿ** (ನಾ). ಮೂರು ಕುಡಿ : ' ಮುಗ್ಗುಡಿವರಿ ' ಪರಾ. [< ಮೂಱು + ಕುಡಿ$_2$]

**ಮುಗ್ಗುಡಿವರಿ** (ಕ್ರಿ). ಮೂರುಕುಡಿಗಳಾಗಿ ಹಬ್ಬು : ಮುಗ್ಗುಡಿವರಿದು ರವಣಿಸಿಯೆ ತನತನಗುಗ್ಗಡದೊಯ್ಯಾರದ ಮೋಹರಿಸುವ ಭರದಿಂ ನೆರೆದುದು ಧರೆಯುಗಲದಲಿ (ವೀರೇಶ. ೨-೨೭). [ಮುಗ್ಗುಡಿ + ಪರಿ$_1$]

**ಮುಗ್ಗುಡ್ಡೆ** 'ಮೂಗುಡ್ಡೆ' ನೋ.

**ಮುಗ್ಗುರಿಸು**, ಮುಗ್ಗರಿಸು (ಕ್ರಿ). ಎಡವಿ ಬೀಳು ; ಮುಗ್ಗು: ದೃಷ್ಟಮಲ್ಲದ ಸೂಕ್ಷ್ಮಮೋಹಸೂತ್ರದಿ ಪದಂ ಬಿಗಿದಂತೆಪೋಲಾಗೆ ಮುಗ್ಗುರಿಸಿ ನಿಲ್ಲುತುಂ (ತತ್ತ್ವಾಂಗ. ೩೦-೦೬೬೪) ; ರಣರಂಗದಿಂದ ಬೆಳೆದು ಬಂದಿದ್ದ ರಾಷ್ಟ್ರದ ಶಕ್ತಿ ಕುಗ್ಗಿ ಮುಗ್ಗುರಿಸುವುದೋ ಎಂಬ ಹಾಗಿತ್ತು (ರಾಜಪ. ೦೯). **ಮುಗ್ಗರಿಸು** : ಮುಗ್ಗರಿಸುವುದು ಮೊದಲಾದ ದುರ್ಗುಣಗಳಿಂದ ರಹಿತಗಳಾದ ಅಶ್ವಗಳು (ಕೌಸಂಧಿ. ೩೨೩-೪) ; ಯಾವುದೋ ಬಳ್ಳಿಯಲ್ಲಿ ಕಾಲು ಸಿಕ್ಕಿಹಾಕಿಕೊಂಡಿದ್ದರಿಂದ ಎಡವಿ ಮುಗ್ಗರಿಸಿ ಬಿದ್ದರು (ಹಸುಪೊ. ೭೭) ; ಬಿಡಿಸಿಕೊಳ್ಳಲು ಹೋದ ಅವಳು ಆಯ ತಪ್ಪಿ ಮುಗ್ಗರಿಸಿದಳು (ಅಂಕಪೂ. ೩೦). 'ಕುಕ್ಕುಟಿಸು', 'ತುಂಡರಿಸು' ನೋ.
[< ಮುಗ್ಗು$_{n1}$ + — ಇಸು$_3$]

**ಮುಗ್ಗುರು ?** (ನಾ). ಎಡವಿ ಬೀಳುವಿಕೆ ; ಮುಗ್ಗುರಿಸುವಿಕೆ : ನಿಲಿಸಿ ಪರಾಶರಸ್ಮೃತಿಗೆ ನೀಂ ಕಲಿಕಾಲದಿ ಕೆತ್ತ ಕತ್ತಲಂ ತೊಲಗಿಪ ಕೆಯ್ಸೋಡಂಕ ಮಿರುಟ್ಟೀಕೆಯು, ಮಾಣಿಸಿದೆಮ್ಮ ಮುಗ್ಗುರಂ (ಗಿರಿಜಾ. ೩೦-೩).
[< ಮುಗ್ಗು$_{n1}$]

**ಮುಗ್ಗೇರಿ** (ನಾ). ಒಂದು ಪ್ರದೇಶದ ಹೆಸರು : ಎಲಿಸಲ್ಮುಗ್ಗೇರಿಯುಂ ಮುಂ ಮುನಿಯ ಮುಸಕವುಂ ಮುಳ್ಗಿಸಲ್ಕನ್ಯಕುಬ್ಜೇಶ್ವರನಂ ಹಿಮಾದ್ರಿಯುಂ ಪಾಯಿಸಲ(ರಾ ?)ದಂಸುಮು . . . ಕುಂಥರರಾಜಂ (ಶಾಸಂ. ೭-೭; ೧೧೧).
[? + ಕೇರಿ]

**ಮುಗ್ಗೊಲಿ**, ಮುಗ್ಗೊಳಿ (ನಾ). (ಹೈದರ್ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ವಿಧಿಸುತ್ತಿದ್ದ) ಒಂದು ಬಗೆಯ ತೆರಿಗೆ : (ಕಸಂಗ್ರಾ. ೦೫೩). **ಮುಗ್ಗೊಳಿ** : (ಕಸಂಗ್ರಾ. ೦೫೩). [← ತುಳು. ಮುಗ್ಗೊಲಿ, ಮುಗ್ಗೊಳಿ]

**ಮುಗ್ಗೊಳಿ** 'ಮುಗ್ಗೊಲಿ' ನೋ.

**ಮುಗ್ತೆ** (ನಾ). ಒಪ್ಪಂದ ; ಕರಾರು ; ಕಂಟ್ರಾಕ್ಟು : 'ಮುಗ್ತೆಕೆಲಸ' ಪರಾ. [← ತುಳು. ಮುಗಿತೆ, ಮುಗ್ತೆ]

**ಮುಗ್ತೆಕೆಲಸ** (ನಾ). ಒಪ್ಪಂದ ಮಾಡಿಕೊಂಡ ಕೆಲಸ ; ಕರಾರಿನ ಕೆಲಸ ; ಕಾಂಟ್ರಾಕ್ಟ್ : (ಕಸಂಗ್ರಾ. ೦೨೨). [ಮುಗ್ತೆ + ಕೆಲಸ]

**ಮುಗ್ಧ** (ಗು). ೧. ಮೂಢತನದಿಂದ ಕೂಡಿದ ; ಮೌಢ್ಯದ : 'ಮುಗ್ಧತನ' ಪರಾ. ೨. ಕಪಟತನವಿಲ್ಲದ ; ಸರಳಮನಸ್ಸಿನ : ಯುದ್ಧಾನುಭವವಿಲ್ಲದಿಹ ಮುಗ್ಧರಾಮನಿಂ . . . ರಣವಿದಗ್ಧರನೆಂತು ಗೆಲಲಹುದೊ ? (ಶ್ರೀರಾಮಪ. ೨೯-೩೯); ಅವರ ಮುಗ್ಧ ನಡೆನುಡಿಗಳಿಂದ ಪ್ರಭಾವಿತರಾದವರು . . . ಧನ್ಯರು (ಶಿಕ್ಷದ. ೬೭೮). ೩. ಆಕರ್ಷಕವಾದ ; ಮೋಹಕವಾದ : ಬಳಲ್ದ ಶಿಶು ನೋವಂ ಮರೆತು ನೆಮ್ಮದಿಯನಾಂತು ಮುಗ್ಧನಿದ್ರಾಮುದ್ರೆಯಪ್ಪಂತೆ (ಶ್ರೀರಾಮಪ. ೧೭೪-೩೯೬). (ನಾ). ೪. ಮೌಢ್ಯ ; ಮೂಢತನ : ಮೂಗರ ಮೂಗರ ಪ್ರಸಂಗದಂತೆ ಇದೆ ಎನ್ನೊಳಗೆ ಅಚಿವಿನ ಪರಿಮಳ ಹೊಚಿಗೆ ನೋಡಿದರೆ ಮುಗ್ಧವಾಯಿತ್ತು (ಅಖಂ. ೨೦೬-೯೩೪). ೫. ಆಕರ್ಷಕವಾದುದು ; ಮೋಹಕವಾದುದು : ಲಳಿತ ಮಧುರಂ ಲಜ್ಜಾಲೋಳಂ ಸ್ಮರಾಕುಳಿತಂ ಮನಂ ದಳಿತ ಮಪಸನ್ಮುಗ್ಧಂ ಸ್ನಿಗ್ಧಂ ವಿಲೋಕನಮೋಪಳಾ (ಶಂಪರಾ. ೪-೭೭); ಅಜಿಂಹು ಕರಗಿ ನಿರವಯಲಾಗಿತ್ತಾಗಿ ಅಖಂಡೇಶ್ವರನೆಂಬ ಶಬ್ದ ಮುಗ್ಧವಾಯಿತ್ತು (ಅಖಂಡೇ. ೩೦೩-೦೦೩). ೬. ಕಪಟವನ್ನು ತಿಳಿಯದವನು ; ಸರಳ ವ್ಯಕ್ತಿ : ತನಗರಿವಿಲ್ಲವೆಂಬರಿವಿರುವಾತನು ಮುಗ್ಧನು ನೀ ಬುದ್ಧಿ ಕಲಿಸು (ತಂತಾತ. ೦೮೦-೬೬). ೭. ಮೋಹಿತನಾದ ವ್ಯಕ್ತಿ ; ಆಕರ್ಷಿತನಾದ ವ್ಯಕ್ತಿ : ಅಂದು ನೀನು ಎಳೆಯ ಹುಡುಗನಾಗಿ ಅವಳ ಸೌಂದರ್ಯಕ್ಕೆ ಕೇವಲ ಮುಗ್ಧನಾದವನಾಗಿದ್ದೆ (ಹೇಮಂತ. ೪೦೯): ಅದನ್ನು ಪ್ರಭುಗಳೂ, ಮಹಾರಾಣಿ ಶಾಂತಲೆ, ಲಕ್ಷ್ಮಿಯರೂ ನೋಡಿ ಮುಗ್ಧರಾದರು (ಶಾಂತಲಾ. ೦೫೩). [ಸಂ.]

**ಮುಗ್ಧಜನ** (ನಾ). ಕಪಟವನ್ನು ತಿಳಿಯದ ಜನ ; ಸರಳಸ್ವಭಾವದ ಜನ : ಮುಗ್ಧಜನದಜಿತವೆನಿಸಿ ವಿದಗ್ಧರುಮಿದು ಕನಕಗಿರಿಯೊ ರಜತಾದ್ರಿಯೊ ಸಂದಿಗ್ಧಮನಿಸಿವುದು ಸುರಗಿರಿ (ಕೃಷ್ಣಕೃ. ೮೦-೪೦); ಮುಗ್ಧ ಜನರನ್ನು ಬಂಧಿಸಿ . . . ಅವರನ್ನು ವಂಚಿಸಿದ್ದಕ್ಕಾಗಿ ಆ ಪುರೋಹಿತರು ಅಪರಾಧಿಸ್ಥಾನದಲ್ಲಿದ್ದರು (ಕೃಪರು. ೦೮೦). [ಸಂ.]

**ಮುಗ್ಧತನ** (ನಾ). ಮೂಢತನ ; ಮೌಢ್ಯ : ಮುಗ್ಧತನವೇನೆಂದೆಣಿಸುವೆನು ಶಿವನನಲ್ಲದೆ ಪೆಜತನಜಾಯದುದು (ಶಿಕಪು. ೦೩-೦೭).
[ಮುಗ್ಧ + —ತನ]

**ಮುಗ್ಧತೆ** (ನಾ). = ಮುಗ್ಧತನ : ಮುಂದಿಂದಲೊಮ್ಮೆ ಮುಗ್ಧತೆಯಿಂದ ಲೊಪ್ಪೊಮ್ಮೆ . . . ಅಚ್ಚಿಸುತ್ತ (ಶಿರುರ. ದೇ. ೩-೪); ದೈತ್ಯಬಾಹು ಮುಗ್ಧತೆಯನು ಹಿಸುಕಲು ಬಾಚಿತು ಹಲ ಪಾಲಿ (ನಂಶಮು. ೩೯-೦೩) ; ದುಗ್ಧ ಧವಳಿಮ ಮುಗ್ಧತೆಜಿ ಮೈ ಹೊರೆಯುವಂತೆ (ಅಶೀಕೀ. ೨೩-೪).
[ಸಂ. ಮುಗ್ಧತಾ]

**ಮುಗ್ಧತ್ವ** (ನಾ). = ಮುಗ್ಧತನ : ಸಮುಸಂದೊಂದಿದ ಲಜ್ಜೆ ಯುಜ್ಜುಗಮೆ ಲಜ್ಜಾಭಾವಮಂ . . . ಮುಗ್ಧಭಾವಮೆ ಮುಗ್ಧತ್ವ ಮಹತ್ವಮಂ ನೆಚಿಯೆ ಕಲ್ತೋತಾಮದಾ ಕನ್ನೆಯೊಳ್ (ಕಾದಂಬ. ೨೯೩); ಉತ್ತಮಮುಗ್ಧತ್ವಕ್ಕೆ ಮೆಚ್ಚಿದ್ದರ್ತಿಶಯವುಹಿವಂ ಶಂಭು ರಕ್ಷಿಕ್ಕೆ ನಮ್ಮಂ (ಎಇ. XIV. ೨೭೦-೦೩ ;1181). [ಸಂ.]

**ಮುಗ್ಧಭಾವ** (ನಾ). ಕಪಟವಿಲ್ಲದ ಭಾವನೆ ; ಸರಳಭಾವ : ಸಮುಸಂದೊಂದಿದ ಲಜ್ಜೆಯುಜ್ಜುಗಮೆ ಲಜ್ಜಾಭಾವಮಂ . . . ಮುಗ್ಧಭಾವಮೆ ಮುಗ್ಧತ್ವಮಹತ್ವಮಂ ನೆಚಿಯೆ ಕಲ್ತೋತಾಮದಾ ಕನ್ನೆಯೊಳ್ (ಕಾದಂಬ. ೯೩) ; ಲೌಲ್ಯದೃಷ್ಟಿಯಿಂ ನೋಡುವ ನಂಬಿಯಣ್ಣನ ಮುಗ್ಧಭಾವಕ್ಕೆ ಮುಯ್ಯಾನುತುಂ (ನಂಬಿಶ. ೪-೦೯). [ಸಂ.]

**ಮುಗ್ಧಹೃದಯ** (ನಾ). ಕಪಟವಿಲ್ಲದ ಹೃದಯ ; ಸರಳಹೃದಯ . ನನ್ನ ಮುಗ್ಧಹೃದಯವನ್ನು ನಿಮ್ಮ ಅಧೀನವನ್ನಾಗಿ ಮಾಡಿ . . : ನಡೆಯಿಸುವೆನು (ಕಂಠೀ. ೬). [ಸಂ.]

**ಮುಗ್ಧಾಂಗನೆ** (ನಾ). ಕಪಟತನವರಿಯದವಳು ; ಸರಳಸ್ವಭಾವದವಳು : ಸೋಜಿಗದಿಂ ನೋಳ್ಪರೊಲ್ದು ಮುಗ್ಧಾಂಗನೆಯರ್ (ಹರಿವಂ. ೪-೨೦). [ಸಂ. ಮುಗ್ಧಾಂಗನಾ]

**ಮುಗ್ಧಾಲಾಪ**, ಮುಗ್ಧಾಳಾಪ (ನಾ). ಕಪಟತನವಿಲ್ಲದ ಮಾತುಕತೆ ; ಸರಳಸಂಭಾಷಣೆ : ನಚ್ಚಿನ ಮುಗ್ಧಾಲಾಪಮಿಂಪಂ ಕಜಿದು ಬಟಿತು ದೇಬನ್ನೆಗಂ ಬತ್ತಿರಲ್ ಬಾಯ್ (ಕಾದಂಬ. ೩೨೩). **ಮುಗ್ಧಾಳಾಪ** : ಬಹುಮುಗ್ಧಾಳಾಪವಾಕ್ಯಂಗಳಾಪರಿಸುತ್ತುಂ ಪೊಸದೇಸಿವೆತ್ತಸೆಯೆ (ಸುಕುಮಾ. ೦೦-೪೦). [ಸಂ.]

**ಮುಗ್ಧಾಳಾಪ** 'ಮುಗ್ಧಾಲಾಪ' ನೋ.

**ಮುಗ್ಧೆ** (ನಾ). ೧. ಕಪಟವನ್ನು ತಿಳಿಯದವಳು ; ಸರಳಸ್ವಭಾವದವಳು : ಮಾಮರನಲ್ಲಿದೊಂದು ಮಾಯದ ಮರನೆಂದು ಸಾರ್ದಳತಿ ಮುಗ್ಧೆ ಕುಜಾಂತರಮಂ ಪಾಂತದೊಳ್ (ಶಂಪ್ರಕೃ. ೭-೦೦೬); ಓಘನ ತೆಜಿಂ ಪೆಜತಾದೊಡೆ ಮುಗ್ಧೆ ನಿಲ್ವಳೇ (ಕೃಷ್ಣಕೃ. ೬-೩೯); ಕಪಟವೆನ್ನುವುದನ್ನೇ ಅರಿಯದ ಈ ಮುಗ್ಧೆಯನ್ನು . . . ತಿರಸ್ಕರಿಸುವುದು ನಿನಗೆ ಯುಕ್ತವಲ್ಲವಲಾ ? (ಶಾಕುಂತ. ೬೦-೦೯). ೨. ಚೆಲುವೆ ; ಸುಂದರಿ : ಮುಗ್ಧೇ ಕೈರವನೇತ್ರೆ ಏಗ್ಗೆಯವೋಲ್ ಮುಳಿಸಾಂತೊಡಾನೇಂತಿರ್ವೆಂ (ಗಿರಿಜಾ. ೪-೦೬೭);

ಮುಂದೆ ಕನ್ನಡಿವಿಡಿದು ನಡೆವ ಮುಗ್ಧೆಯರೊಳಗೆ . . . ಬರುತಿರ್ದ ನಪ್ರತಿಮಸುಕುಮಾರಶೇಖರಂ (ಸಂಬರ. ೩-೮೩) ; ಪೊಸ ಮುತ್ತಿನ ತಲೆವಡುಗೆಯು ಪಸರಿಪ ಕಾಂತಿಮಯವಗುಂತಿಮಾಲೆವೊಲಿರೆ ಕಂಡು ಸಮಂತು ಮುಗ್ಧೆಯರ್ ಮುಡಿಯಿಸರೆ ಕಿಲರ್ ಮುಂಚಿ ಮುಡಿದರೆಂಬೀ ಭ್ರಮೆಯಿಂ (ಕೃಷ್ಣ. ೬-೩೩). ೩. [ಕಾವ್ಯಮೀ] ಮುಗ್ಧೆ, ಮಧ್ಯೆ ಮತ್ತು ಪ್ರಗಲ್ಭೆ ಎಂಬ ಮೂರುವಿಧವಾದ ನಾಯಿಕೆಯರಲ್ಲಿ ಒಬ್ಬಳು ; ತಾರುಣ್ಯ, ಲಜ್ಜೆ ಮತ್ತು ಸರಳತನಗಳಿಂದ ಮನಸ್ಸನ್ನಾಕರ್ಷಿಸುವ ಹೆಂಗಸು : ಅತಿಲಜ್ಜಾನ್ವಿತೆ ಸಂಚಳಮತಿಯವಿರಳಲೋಲ ಭಾವಸಂಭ್ರಮೆಯಾವಿಷ್ಕೃತಚಿತ್ತೆಯೆನಿಪ ಬಾಲಿಕೆ ಸತತಮವಳ್ಗೆ ಮುಗ್ಧೆಯೆಂಬ ಪೆಸರಂ ಪಡೆಗುಂ (ಶೃಂಗಾರ. ೩-೨೭); ಪುರುಷನಿದಿರೊಳ್ಳೆದೆ ಲಜ್ಜೆವೆರಸು ಚಲಿಸುವ . . . ಲೋಭದಿರವನರಿಯದವಳೆ ಮುಗ್ಧೆಯೆನಿಪಳು (ಶಬ್ದ. ೩-೮) ; ಸ್ತ್ರೀಯಳಲ್ಲಿ ಯೌವನ ಮತ್ತು ಸಂಸಾರಾನುಭವದ ಮೇಲೆ ' ಮುಗ್ಧೆ ', ' ಮಧ್ಯೆ ', ' ಪ್ರಗಲ್ಭೆ ' ಎಂದು ಮೂರುವಿಧ (ಕೃಷಿ. ೨೦೦). [ಸಂ. ಮುಗ್ಧಾ]

**ಮುಚುಕುಂದ** (ನಾ). ೧. ಒಂದು ಬಗೆಯ ಹೂವಿನ ಗಿಡ : " ಸದಾಪುಷ್ಪಮೆನಲು ಮುಚುಕುಂದಮುಕ್ಕುಂ " (ಮಂಗರಾ. ೩೬-೨೩) ; ಕುಂದಮುಚುಕುಂದಮಂದಾರ . . . ಮಲ್ಲಿಕಾದ್ಯನೇಕಸುರಭಿಕುಸುಮಂಗಳಂ ಸಜ್ಜುಕಮಪ್ಪುವಂ ಪುಟ್ಟಿಯೊಳ್ ತೀವಿಕೊಂಡು (ಶಂಕರಂ.೦೮೭-೩); ಪಾಟಲ ಮುಚುಕುಸ್ದ ಕುಸ್ದ ಲತಿಕಾವೃತದಿಂದಮೆ ಒಳ್ಳಿಗಾವಿ . . . ಒಪ್ಪಿತೋಱುಗುಂ (ಪ್ರಕರಂ. ೦೪೪೦, ೩೬-೨೦; 1103). ೨. ಒಬ್ಬ ರಾಜಋಷಿಯ ಹೆಸರು : ಮಱೆವ ಮುಚುಕುಂದನೆಂಬನ ಮಱೆವೊಕ್ಕುದನೆಂದು ನೀನ್ ಜರಾಸಂಧುಗಂ ಬಿಱುತೋಡಿದುದಂ ಭೂತಳಮಱಿಯದೆ ನೆನೆಯೆಲವೊ ಗೋವುಗಾದುದು ಪುಸಿಯೇ (ಶಂಶಾ. ೬-೩೩) ; ಒಱಗಿರ್ದಂ ನಿದ್ರೆಯನೆಚ್ಚಱಿಸಿದರಂ ಕೋಪಶಿಖಿಯಿನುರುಪುವ ವರದಿಂ ನೆಱೆದು ಕೃತಯುಗದೊಳ ಸುರರೊಳಿಱಿದ ಪರಿಶ್ರಮದೆ ರಾಜಮುನಿ ಮುಚುಕುಂದಂ (ಜಗಾ. ೪-೯೩) ; ಮುಚುಕುಂದನ ಮನೆಗೆ ಮುಕ್ಕುಂದ ಬಂದಂತೆ (ಪುರಂದ. ಧಾ. ೦-೦೪೬-೦). [ಸಂ.]

**ಮುಚುಗ** (ನಾ). ಮುಟ್ಟಿದರೆ ತನ್ನ ಎಲೆಗಳನ್ನು ಮುಚ್ಚಿಕೊಳ್ಳುವ ಒಂದು ಬಗೆಯ ಗಿಡ ; ಮುಟ್ಟಿದರೆ ಮುನಿ : ಅವಳ ಆಶೆ ಮುಟ್ಟದರೆ ಮುದುಡಿಕೊಳ್ಳುವ 'ಮುಚುಗ'ದಂತೆ ಆಯಿತು (ದಂಕು. ೩೭). [< ಮುಚ್ಚು$_1$]

**ಮುಚ್ಚಂಜೆ** ' ಮುಸ್ಸಂಜೆ ' ನೋ.

**ಮುಚ್ಚಂಡಿ** ' ಮುಸುಂಡಿ$_1$ ' ನೋ.

**ಮುಚ್ಚಂದಿ** (ನಾ). ಮೂರುಪ್ರದೇಶಗಳ ಕೂಟ, — ಸೇರುವೆ : ಊರ ಪೊಲ ಮೇರೆ ಮೂಡ್ಪದೆಸೆ ಎಲವೆ ಕಿಱುವಜ್ಜಿಕ್ಕೆಯ್ಕೆಱೆ ತೆಂಕಾ ಅದರುಳ್ಳಡುಗಲ್ಲೆ ಮುಚ್ಚನ್ದಿನ್ನಡುಗಲ್ಲೆ ಪಡುವಯಾಲೆ ತಾಯನ್ದೆಕೆಱೆಯ (ಎಕ. X (S). ಕೋಲಾ. ೦೦೭-೬೪ ; ೮೫೦); ಅಲ್ಲಿಂದ ಮೂಡಲು ಮುಚ್ಚಂದಿಯ ಯಲ್ಲೆಗಲ್ಲು (ಎಕ. XIV. ಕೃಷ್ಣ. ೦೦೩-೦೦೨; 1516).

[< ಮೂಱು + ಸಂದಿ (< ಸಂಧ್ಯು$_2$)]

**ಮುಚ್ಚಱೋಗು** (ಕ್ರಿ). ಮೂರ್ಛೆಹೋಗು ; ಎಚ್ಚರತಪ್ಪು : ಕೆಚ್ಚಗಿರೆ ಕಣ್ಣ ಪೊಟ್ಟೆಯುಮುಚ್ಚಿಗಳುಂ ತಾಲುದೇಶಮುಂ ಗುದಮುಖಮುಂ ಮುಚ್ಚಂಬೋಗಿ ಮನಂ ಕಣ್ಮುಚ್ಚಿರೆ ದಕ್ಕಾಲಿವೀಱೆ ಬಾಱದು ತುರಗಂ (ಅಶ್ವಶಾ. ೬-೬೨). [< ಮುಚ್ಚು$_2$ + ಪೋಗು$_1$ (< ಪೋ$_1$)]

**ಮುಚ್ಚಟೆ** (ನಾ). ೧. ಅಕ್ಕರೆ ; ಮಮತೆ ; ಪ್ರೀತಿ : ಹೆಣ್ಣು ಗಂಡಿನ ಮುಚ್ಚಟೆಯ ಮಾತುಗಳಿಗೆ ಬಾಯಿಬಿಟ್ಟು ತಾಯಿತನದ ಹೊರೆಗೆ ಹಿಂದು ಮುಂದು ತಿಳಿಯದೆ ತಲೆಕೊಡುವಷ್ಟು ತಿಳಿಗೇಡಿಯೇ ? (ಸಿದ್ಧಾಂ. ೭೦); ಅವರು ತಮ್ಮನ್ನು ಮುಚ್ಚಟೆಯಿಂದ ಬೆಳೆಸಿದ್ದರು (ಕಂಕ್ಕ. ೪೪೨). ೨. ಅಚ್ಚುಕಟ್ಟು; ಓರಣ : ಲಕ್ಕಿ ಸಾಯಲು ಬಿಡಬಾರದವ್ವ. ಮಾದನ ಮುಚ್ಚಟೆ ಸಂಸಾರ ಕೆಟ್ಟುಹೋಗುತ್ತದೆ (ಗೃಹಂ. ೦೩೨); ಉಳಿದವರಂತೆ ತಾನೂ ಮುಚ್ಚಟೆಯಾಗಿ ಬದುಕಿ ಬಾಳುವ ಆಕಾಂಕ್ಷೆಯಿರಲಿಲ್ಲವೇ ? (ಮುಕುಕು. ೦೪೦). ೩. ತಾತ್ಸಾರ; ತಿರಸ್ಕಾರ : ಗಂಡ ಅಂದರೆ ಅಷ್ಟು ಮುಚ್ಚಟೆಯಾಗಿ ಹೋಯಿತೇನೇ (ತಾಯಿಕ. ೦೬). ೪. ನಟನೆ; ಸೋಗು : ನಿಚ್ಚ ಏಳುವ ಸಮಯ ಮೀರಿತೋ ಇಂದೀಗ ಎಚ್ಚರಿಕೆ ಪುಟ್ಟದೇ . . . ಮುಚ್ಚಟೆಯದೇಂ ನಿದ್ರೆ ತಿಳಿಯಲಾಗದೆ ಸ್ವಾಮಿ (ಶಿವಾಕ್ಕ. ೮೨-೬).

[ದೇ.॥ ತಮಿ. ಮುಚ್ಚಟ್ಟೈ; ತುಳು. ಮುಚ್ಚಟೆ = ಉತ್ಸವ; ತೆಲು. ಮುಚ್ಚಟ ]

**ಮುಚ್ಚಣ**, ಮುಚ್ಚಲ, ಮುಚ್ಚಳ್, ಮುಚ್ಚಳ, ಮುಚ್ಚಳು, ಮುಚ್ಚುಳ್, ಮುಚ್ಚುಳ, ಮುಚ್ಚುಳು (ನಾ). ೧. ಪೆಟ್ಟಿಗೆ, ಕರಡಿಗೆ, ಪಾತ್ರೆ ಮುಂತಾದುವುಗಳ ಮುಚ್ಚುವ ಸಾಧನ. ೨. (ಮನೆಯ) ಮೇಲ್ಭಾಗದ ಛಾವಣಿ, — ಸೂರು : ನೆಲಗಟ್ಟು ನಾಗಲೋಕಂ ತಳಮವನಿ ದಶಾಭಿತ್ತಿ ಭಿತ್ತಿಬ್ರಜಂ ಸ್ವಸ್ಥಲಭಾಗಂ ಮುಚ್ಚಣಂ ಮೇಗಣ ಸುರರ ವಿಮಾನೋತ್ಕರಂ (ಎಕ. II. ೨೩೪-೨೪; 1180). **ಮುಚ್ಚಲ** : ೧. ಆ ಹಾರ್ಮೋನಿಯಮ್ಮೊ — ಮುಚ್ಚಲ ತೆಗೆದ್ರೆ ಗೆಜ್ಜಲು ಬಂತೋಂತಾರಲ್ಲ ಹಾಗೆ . . . ಸಾಲು ಸಾಲಾಗಿ ಸೈನ್ಯವಾಗಿ ಹೊರಟುಬಿಟ್ಟವು (ದುರಂಪಾ. ೬೨). **ಮುಚ್ಚಳ್** : ೨. ಬೋದಿಗೆಯ ಕೂಟದಂತೆ ಮುಚ್ಚಳಂತೆ ಪ್ರತಿಷ್ಠೆಯಂತೆ . . . ಪದಿಮೂಱು ಗುಣಸ್ಥಾನಂಗಳಿರ್ದಪುವು (ಧರ್ಮಾಮೃ. ೦೨-೨೪) ; ಪಚ್ಚೆಗಳ ಕಂಬಂಗಳಿಂ ಪವಳವಲಗೆಗಳ ಮುಚ್ಚಳ್ಗಳಿಂ . . . ಕೇರಿಕೇರಿಯೊಳ್ ಪಚ್ಚೆದುವು ಗೃಹಗೃಹದ್ವಾರಂಗಳೊಳ್ ಮಹಾಮೇರುವೆಗಳು (ಕಂಪು. ೩-೩). ೩. ಕದ; ಬಾಗಿಲು : ವಾಗೀಶ್ವರದೇವರಂ ವರಿಸಲೆಂದು ಕೊಂಡು ಬಂದು ಪುರದ ಹೊಱಗಣ ಮಾಳಿಗೆಯೊಳು ಕಣ್ಣೋಳು ನೋಡಲರಿದೆನಿಸುವ ಸುಣ್ಣಮಂ ಸುರಿದವರಂ ಪುಗಿಸಿ ಮುಚ್ಚಳಂ ಮುಚ್ಚಿ (ವಾಗೀಶ.ದೇ. ೨೩೭-೦೦). **ಮುಚ್ಚಳ**: ೧. ಎತ್ತಿ ಹೇಳಿಗೆಯ ಕೂಡೆ ಮುಚ್ಚಳ ವನಿಕ್ಕಿದ ಮತ್ತೆ ಮುಕ್ಕಿಕೆ ಮುತ್ತಿ ಇಲ್ಲವೆಂದೆ (ಪೋಳಸಾ. ೪೪-೦೮೨); ಬಿಗಿದ ನೇಣ ಖಂಡಿಸಿ ಬಳಿಕ ಮುಚ್ಚಳ ತೆಗೆದು ನೋಡಲು (ಸಿದ್ಧರಾ. ೬-೦೪); ನಿರ್ಧನಂ ನಿಧಿಗಂಡಂತೆ ತನ್ನ ಮನೆಗೆ ಮಂದಸಮಂ ಕೊಂಡು ಬಂದು ನಿಜ ವಧುವಪ್ಪ ಕುಸುಮಾವಳಿಗೆ ಕುಡುವುದುಂ ಮಾಕೆಯಾ ಮಂದಸಿನ ಮುಚ್ಚಳಮಂ ತೆಱೆದು ನೋಟ್ಟನ್ನೆಗಂ (ಧರ್ಮಾಮೃ. ೨-೭೦ ಪ) ; ಮೇಲುಮುಚ್ಚಳ ತೆಱೆದ ತನುವಿನ ಹೇಳಿಗೆಯ ಶೋಕಾಹಿಯಂತಿರೆ (ಕುಮಾ.ಭಾ. ೨-೦೬); ಎಲ್ಲದಕ್ಕೂ ಮುಚ್ಚಳವಿರುವುದು ಒಳ್ಳೆಯದು (ಅಡುಗೆ. ೩೩). ೨. ರತ್ನಲೋವೆ ಮಿಸುನಿಯ ಮುಚ್ಚಳದ ವಲಗೆಯಿಂ . . . ಭದ್ರಮಂಟಪಮೆಸೆದುದು (ಶಶಾಂ. ೦-೨-೭೦). ೩. ಇಂದಿರೆ ಪದ್ಮಮಂದಿರದೊಳಿರ್ದು ಮಹಾಪ್ರಣಯಪ್ರಕೋಪದಿಂದೊಂದಿರುಳಿಕ್ಕೆ ಮುಚ್ಚಳಮಂ (ಚಕಕು. ೩-೩೪). **ಮುಚ್ಚಳು**: ೧. ಕಾಶೀಪಟ್ಟಣಕ್ಕೆ ಪೋಗಿ ಸೂರ್ಯನನಾರಾಧಿಸಿ ಆ ಸೂರ್ಯನಿಂದ ಮುಚ್ಚಳುಸಟ್ಟುಗಸಹಿತಮಾದ ಅಕ್ಷಯಪಾತ್ರೆಯಂ ಕೊಟ್ಟು (ಕಾಶೀಮ. ೨೪೬-೩). **ಮುಚ್ಚುಳ್**: ೧. ಉಪೇಂದ್ರನುರ್ಬಿದ ಮುಳಿಸಿಂದೆ ಮಂದಸಿನ ಮುಚ್ಚುಳ ನುಂಗಿಟದಿಂದೆ ಮೀಂಟಿ ಪೋಗೊದೆದು (ಜಗಾ. ೬-೭೦); ಬಿದಿ ಮಿಸುನಿ ಗೊಡಂಗಳಲ್ಲಿ ತೀವಿ ಮಿಸುಪ ನೀಲದ ಮುಚ್ಚುಳಿಟ್ಟವೊಲ್ ಮೊಲೆದುದಿಗಳ್ ಕರ್ಪಿಡಿದು ಮೆಱೆನಾವಾ ಶಶಿಮುಖಿಯಾ (ಅದ್ಭುತ. ೬-೯೪). ೨. ಕೇಳೀವನದ ಕೃತಕಾಚಳದ ನಡುವಣ ವಜ್ರದ ಮುಚ್ಚುಳ ಸೆಜ್ಜೆಯ ಮನೆಯ ಹಂಸತೂಳದ ತಣ್ಣೆಳಲ ತಳ್ಪದೊಳ್ ಬಿಜಯಂಗೆಯ್ಸಿ (ಸಂಬರ. ೦೪-೩). ೩. ತೆಱೆದುವು ಮುನ್ನಮಿಕ್ಕಿದ ವಿಮಾನದ ಮುಚ್ಚುಳ್ (ಅಪಂಪು. ೦೨-೩೬). ೪. (ರೊಟ್ಟಿ ಸುಡುವ ಮೊದಲು) ಮೇಲೆ ಮುಚ್ಚಲು ಸಿದ್ಧಪಡಿಸುವ, ಕಲಸಿದ ಹಿಟ್ಟಿನ ಬಟ್ಟಲು, — ಕಣಕದ ಬಟ್ಟಲು : ನನೆದ ಸೊಜ್ಜಿಗೆಯ

ಸಲೆ ಕುಟ್ಟಿ ಸರಿಕನೆಯನಿಕ್ಕಿನಿಸು ಬೆಣ್ಣೆಯನಿಕ್ಕಿದಾ ರೊಟ್ಟಿಯನು ಮುಚ್ಚು ಳೊಳಗಿಕ್ಕಿ ಬೇಯಿಸಲು ತಾನುದುರುರೊಟ್ಟಿವೆಸರಂ ಪಡೆದುದು (ಸೂಶಾ. ೧-೧೮). **ಮುಚ್ಚುಳ :** ೨. ಪಚ್ಚೆಯ ತೊಲೆ ಪವಳದ ಕಂಬ ಬೋದಿಗೆ ನಿಚ್ಚಳವಹ ನೀಲದಿಂದ ಮುಚ್ಚುಳ ಮುಖಶಾಲೆಯು ಮಣಿಮಂಟಪವಚ್ಚರಿಯಾಗಿರುತಿಹುದು (ಕೃಕುಸಾಂ. ೬೦). **ಮುಚ್ಚುಳು :** ೧. ಬಳಿಕ ಬೇವಾಗ ಗಂಜಿಯ ಬಸಿದುಕೊಂಡು ಮುಚ್ಚುಳನಿಕ್ಕಿ . . . ಮೃದುವಾಗಿ ಮಾಡಿದುದು ತಾ ಶುದ್ಧಮಪ್ಪೋದನಂ (ಸೂಶಾ. ೩-೨); ಅಗರು ಚಂದನ . . . ಕರ್ಪೂರ ತುಂಬಿ ಮೆಱೆವ ಮಿಗೆ ಭರಣಿಯ ಮುಚ್ಚುಳನುಗಿದಂದದೆ ಮಗಮಗಿಸಿದುದಾಸ್ಥಾನ (ಲಂಪಂ. ೬-೧೨).

[ಮುಚ್ಚು$_1$ +–ಅಣ./ತಮಿ. ಮುಚ್ಚನ್; ತುಳು. ಮುಚ್ಚಲ, ಮುಚ್ಚಿ, ಮುಚ್ಚಿಲ್]

**ಮುಚ್ಚಣಿಕೆ** 'ಮುಚ್ಚಳಿಕೆ$_1$' ನೋ.

**ಮುಚ್ಚಲ** 'ಮುಚ್ಚಣ' ನೋ.

**ಮುಚ್ಚಲಿಕೆ** 'ಮುಚ್ಚಳಿಕೆ' ನೋ.

**ಮುಚ್ಚಲು, ಮುತ್ತಲು** (ನಾ). (ಮಕ್ಕಳಾಡುವ) ಸಣ್ಣ ಮೊರ : "ಮುಚ್ಚಲು=ಮೊರ, ಸಿಬ್ಬಲು, ಮುಚ್ಚುವ ಸಾಧನ, ಟಪಾರಿಕೆ; ಒಂದು ಮಕ್ಕಳಾಟಿಕೆ" (ರವಾಆಂ. ೩೦೩). **ಮುತ್ತಲು :** "ಮುತ್ತಲು = ಮಕ್ಕಳಾಡುವ ಸಣ್ಣಮೊರ" (ಜಾನಕೋ. ೩೨); ದೇವರ ಮನಿಯಾಗ ಹೋದಳ ಚೆಂಗಳಕಿ ಮುತ್ತ ತಂದಾಳ ಮುತ್ತಲಿ[ಲ]ತುಂಬ (ಲೋಕಗೀ. ೧೬೩). [ದೇ. ತಮಿ. ಮುಚ್ಚಿಲ್, ಮುಱ್ಱಿಲ್; ತೆಲು. ಮುಚ್ಚಿಲಿ]

**ಮುಚ್ಚವಡಿ, ಮುಚ್ಚೋಡಿ** (ನಾ). ೧. ಮೂರು ಜೊತೆ,–ಜೋಡಿ: ಮುಚ್ಚೋಟು, ಮುಚ್ಚವಡಿ (ಶಮದ. ೧೬೮ ಪ್ರಯೋ) ; ಮು + ಕೊಡೆ, ಮುಕ್ಕೊಡೆ ಎಂಬಂ ಮುಗ್ಗುಡೆ, ಮುಚ್ಚವಡಿ (ಶಬ್ದಾಪು. ೬೮ ಪ್ರಯೋ). **ಮುಚ್ಚೋಡಿ :** ೨. ಮೂರು ಮಡಿಕೆ,–ಪದರ : ನೀಡಗಲದ ಗಗನದ ನಟ್ಟನಡುವೆ ಮುಚ್ಚೋಡಿಯ ನಿಡುಚೀಲದಂತೆ ಕೂಡಿ ಗಾಳಿಗಳ್ ಮೂಱುಹುವದಱೊಳ್ ತುಂಬಿದೀಡಿನಂತಿಹುವಾಱು ವಸ್ತು (ಚಕಚ. ೬೬-೬೯). [<ಮೂಱು + ಸವಡಿ$_1$]

**ಮುಚ್ಚಳ್** 'ಮುಚ್ಚಣ' ನೋ.

**ಮುಚ್ಚಳ** 'ಮುಚ್ಚಣ' ನೋ.

**ಮುಚ್ಚಳದೆಗೆ, ಮುಚ್ಚಳ್ದೆಗೆ, ಮುಚ್ಚುಳಂದೆಗೆ, ಮುಚ್ಚುಳ್ದೆಗೆ** (ಕ್ರಿ). ಪೆಟ್ಟಿಗೆ, ಕರಡಿಗೆ, ಪಾತ್ರೆ ಮುಂತಾದುವುಗಳ ಮುಚ್ಚಳವನ್ನು ತೆಗೆ, –ಬಾಯಿತೆರೆ : ತಡಬಡಂಬಡುತೆಯುಳುಕುತ್ತ ಮುಚ್ಚಳದೆಗೆಯಲು ಅಲ್ಲಿರ್ದ ಪಾತ್ರೆಯುಪ್ಪಲದಿರೆಯುಚ್ಚಿಗಗೊಂಡು ತಲ್ಲಣಿಸಿ (ಸಿದ್ಧೇಪು. ೦೯-೩೩). **ಮುಚ್ಚಳ್ದೆಗೆ :** ಕಡೆಗಾಲದ ಕಿಚ್ಚಿನ ಮುಚ್ಚಳ್ದೆಗೆದಂದದೆ ಘುಡುಘುಡಿಸುವ ನಡುಗಣ್ಣೆಮೆಯೊಡೆಯಲು (ಶಿರೀಶ. ೨-೨). **ಮುಚ್ಚುಳಂದೆಗೆ:** ಬೆಳುದಿಂಗಳ ನಡುವಿರ್ದ ಚಂದ್ರಮನಂತೆ ಸರ್ವಾಂಗೋದ್ಧೂಳಿತಗಾತ್ರನಾಗಿರೆ ಮಱುದಿವಸಂ ಮುಚ್ಚುಳಂದೆಗೆದು ನೋಡಿ (ಶಾಗೀರ. ದೇ. ೨೬೬-೧೬); ಮುಚ್ಚುಳಂದೆಗೆದೇನುವಿಲ್ಲದಿರೆ ಬೆಱಗಾಗಿ (ಶಿರುರ. ದೇ. ೧೨-೧೩). **ಮುಚ್ಚುಳ್ದೆಗೆ :** ಶೌರಿಗಲಂಕರಿಸಲ್ಕೆ ಬಣ್ಣಗರಡಿಗೆಯ ಮುಚ್ಚುಳ್ದೆಗೆವ ರನ್ನಸರಮಂ ಸೆಗಟ್ಟುವ ಭಂಡಾರಿಗರಂತೆ ಬಗೆವಡೆದ ದಾಡಿಮಂಗಳುಂ (ಶಕಪಂ. ೧೧೨-೨೦); ಪ್ರಭಾಜಾಲಂ ನೀಲಂಬಡಿಸಿ ಮಸಗಿತ್ತೆಣ್ದೆಸೆಯೊಳಂ . . . ಚೆಂಬೊಂಗರಡಿಗೆಯ ಮುಚ್ಚುಳ್ದೆಗೆದವೋಲ್ (ಶಕಪಂ. ೩-೮೩).

[ಮುಚ್ಚಳ (< ಮುಚ್ಚಣ) + ತೆಗೆ$_1$]

**ಮುಚ್ಚಳರೊಟ್ಟಿ** (ನಾ). (ಕಣಿಕದ ಬಟ್ಟಲೊಳಗೆ ಹಿಟ್ಟನ್ನಿಟ್ಟು ಲಟ್ಟಿಸಿ ಸುಡುವ) ಒಂದು ಬಗೆಯ ರೊಟ್ಟಿ : ಉತ್ತಮದ ಸೂಜಿಗೆಯ ಬಟ್ಟುವಾಲೊಳು ನನೆಹಿ ಮೆತ್ತನಾದಾಗ ತೆಗೆದದನು ಬಟ್ಟೆಯ ಹಿಟ್ಟನೊತ್ತಿ ಲತೆಯಱಿದೆರಡು ಬಟ್ಟಲ ನಡುವೆಯಿರಿಸಿ ಎರಡೆಬಾಗಳ ಮುರಿದು ಹೊತ್ತದಂದದೊಳು ಕೆಂಡದೊಳಿರಿಸಿ ಮೋಜಿದಿಂದ ಮತ್ತದಂ ಬೀಸಿ ಬೇಯಿಸಿ ತೆಗೆದುಕೊಂಡಾಱಿಸುತ್ತ ತಿಳಿದುಪ್ಪ ಸಕ್ಕರೆಯ ಕಲಸೆ ಮುಚ್ಚ[ಪಾಠಾಂ.ಚ್ಚು]ಳರೊಟ್ಟಿವೆಸರಂ ಪಡೆದುದು (ಸೂಶಾ. ೧-೧೧).

[ಮುಚ್ಚಳ (< ಮುಚ್ಚಣ) + ರೊಟ್ಟಿ]

**ಮುಚ್ಚಳಿಕೆ$_1$, ಮುಚ್ಚಣಿಕೆ, ಮುಚ್ಚಳಿಗೆ** (ನಾ). ಮುಚ್ಚುವ ಸಾಧನ; ಮುಚ್ಚಳ : ಆ ದೋಣಿಯ ಅರೆಕಲ್ಲಿನಲ್ಲಿ ಒಂದು ಈ ಎರಡು ಗಜ ಪ್ರಮಾಣವಾಗಿ ಇರುವುದು ಅದಕ್ಕೆ ಮಂದ ಮುಚ್ಚಳಿಕೆಯು ಕಲ್ಲು ಸೇರಿಸಿ ವಜ್ರ ಬಿಗಿದಿರುವದು (ಧಶಾ. ೧೨೦-೩) ; ಭಯದ ಮುಚ್ಚಳಿಕೆಯು ಅದನ್ನು ಅದುಮಿತ್ತು. ಈ ಮುಚ್ಚಳಿಕೆಯನ್ನು ತೆಗೆದಾಗ ಜ್ವಾಲಾಮುಖಿಯು ಸ್ಫೋಟವಾಗದಿದ್ದೀತೆ? (ಹಬ್ಬಿ. ೧೬೩). **ಮುಚ್ಚಣಿಕೆ :** "ಮುಚ್ಚಳ" (ಜಾನಕೋ. ೩೨). **ಮುಚ್ಚಳಿಗೆ :** ಮನೆಯೊಳಗಣ ಒರಳು ಜಂಬೂದ್ವೀಪ ನವಖಂಡ ಪೃಥ್ವಿಯ ನುಂಗಿತ್ತು ನುಂಗಿದ ಮುಚ್ಚಳಿಗೆ ತೆಱಹಿಲ್ಲದೆ ಮತ್ತೆ ಆ ಮನೆಯ ನುಂಗಿತ್ತು (ವೋಳಿಪಾ. ೨೨೮-೭೬೦).

[ಮುಚ್ಚಳ (<ಮುಚ್ಚಣ) + – ಇಕೆ]

**ಮುಚ್ಚಳಿಕೆ$_2$, ಮುಚ್ಚಲಿಕೆ** (ನಾ). (ಅಪರಾಧಿಗಳಿಂದ ಸರಕಾರವು ಕರಾರು ಹಾಕಿ ಬರೆಸಿಕೊಳ್ಳುವ) ಒಳ್ಳೆಯ ನಡತೆಯ ಹೇಳಿಕೆಯುಳ್ಳ ಕರಾರುಪತ್ರ; ಒಡಂಬಡಿಕೆಯ ಪತ್ರ: ಸುಬೇದಾರನು ಪೈರುಪಚ್ಚೆ ಮುಂತಾದ ಬಾಬುಗಳಿಂದ ಹೆಚ್ಚು ಹುಟ್ಟುವಳಿಯನ್ನು ಮಾಡುವೆನೆಂದು ಮುಚ್ಚಳಿಕೆ ಬರೆದು ಕೊಟ್ಟು (ಮಹಾಮ. I, ೧೨೬); ಪಂಚಾಯ್ತರು ಕೊಡುವ ತೀರ್ಮಾನಕ್ಕೆ ತಾವು ಬದ್ಧರಾಗಿರುವೆವೆಂದು ಕಕ್ಷಿಗಾರರು ಒಪ್ಪಿ ಮುಚ್ಚಳಿಕೆಯನ್ನು ಬರೆದುಕೊಡಬೇಕಾಗಿತ್ತು (ಮಹಾಶಂ. II, ೨೩) ; ಈ ಪ್ರಾಂತದಲ್ಲಿರುವ ತನಕ ಯೋಗ್ಯ ನಡತೆಯಿಂದಿರುವರೆಂದು ಮುಚ್ಚಳಿಕೆ ಕೊಡಬೇಕು (ದೀಪರೂ. ೧೦೯). **ಮುಚ್ಚಲಿಕೆ:** ಖುಥಾವತ್ತಾಗಿ ದುಮಾಷ್ಠಿ ಮಾಡಿ ರುಜು ಮುಚ್ಚಲಿಕೆಯು ಬರೆಸಿಕೊಂಡು (ಮಹಾಶಂ. II, ೩೯).

[← ಪಾರ. ಮುಚಲ್ಕಾ; ಹಿಂ. ಮುಚ್ಚಲಕಾ ; ಮರಾ. ಮುಚಲಕಾ, ಮುಚಲ್ಕಾ]

**ಮುಚ್ಚಳಿಗೆ** 'ಮುಚ್ಚಳಿಕೆ$_1$' ನೋ.

**ಮುಚ್ಚಳು** 'ಮುಚ್ಚಣ' ನೋ.

**ಮುಚ್ಚಳ್ದೆಗೆ** 'ಮುಚ್ಚಳದೆಗೆ' ನೋ.

**ಮುಚ್ಚಱು** (ನಾ). ಸೊನ್ನೆ; ಶೂನ್ಯ : "ಮುಚ್ಚಱಿಂದಮುಂ ಸೊನ್ನೆಯೆಂದುಂ ಶೂನ್ಯಂ" (ಕಕಾ. ೩೯-೨೧೭); "ಮುಚ್ಚಱ್ ಸೊನ್ನೆಯು ಶೂನ್ಯಂ" (ಕಪಿಕಂ. ೧೩೦). [ ? ]

**ಮುಚ್ಚಾಲ್** (ನಾ). ಮೂರು ಸಾಲು,–ಶ್ರೇಣಿ : ಮುಚ್ಚೆರೆ ; ಮುಚ್ಚಾಲ್ (ಶಮದ. ೬೮ ಪ್ರಯೋ). [<ಮೂಱು + ಸಾಲ್$_3$]

**ಮುಚ್ಚಾಲೆ** (ನಾ). ಒಬ್ಬರು ಕಣ್ಣು ಮುಚ್ಚಿಕೊಂಡು ಇತರರು ಅಡಗಿಕೊಂಡ ಮೇಲೆ ಕಣ್ತೆರೆದು ಅವರನ್ನು ಹುಡುಕುವ ಆಟ; ಕಣ್ಣುಮುಚ್ಚಾಲೆ ಆಟ : ಮುಚ್ಚಾಲೆಯಾಡಿ ದೊಲ್ಲಯಿಸುವೇಕೆನ್ನ (ಗೀಪಂ. ೨೬-೨). [? ಇದು 'ಕಣ್ಣುಮುಚ್ಚಾಲೆ'ಯೆಂಬುದರ ಸಂಕ್ಷಿಪ್ತರೂಪ]

**ಮುಚ್ಚಿ** (ನಾ). ಸಾರ್ವಜನಿಕಕಚೇರಿಗಳಲ್ಲಿ ಮಸಿ ತಯಾರಿಸುವ, ಕಾಗದವನ್ನು ಒದಗಿಸುವ, ಪುಸ್ತಕಗಳ ರಟ್ಟುಕಟ್ಟುವುದೇ ಮೊದಲಾದ ಕೆಲಸಕ್ಕೆ ನೇಮಕಗೊಂಡ ವ್ಯಕ್ತಿ : (ಕೃಶಗ. II, ೩೩೬).

[< ಮುಚ್ಚು$_1$. / ತಮಿ. ಮುಚ್ಚಿ. / ಹಿಂ. ಮೋಚಿ]

**ಮುಚ್ಚಿಕೆ, ಮುಚ್ಚಿಗೆ** (ನಾ). ೧. ಹೊದಿಕೆ ; ಆವರಣ : ಚಿಪ್ಪಿನಾ ಮುಚ್ಚಿಕೆಯೊಳುಪ್ಪುಹುದು ಮುತ್ತು (ಗೀಪಂ. ೩೦-೧೧೬). **ಮುಚ್ಚಿಗೆ :** ೨. ಮನೆಯ ಮೇಲುಭಾಗದ ಛಾವಣಿ,– ಸೂರು : ಚಂದ್ರಯ್ಯ . . .

ಕೊಟಡಿಯ ಮುಚ್ಚಿಗೆಯನ್ನು ನೋಡುತ್ತಾ ನಗತೊಡಗಿದ (ಸರಸ. ೮೩) ; ಅಡುಗೆಕೋಣೆಯ ಮುಚ್ಚಿಗೆ, ಗೋಡೆ . . . ನೆಲ–ಇವುಗಳ ಕಡೆಗೂ ಆಗಾಗ ಗಮನ ಕೊಡುತ್ತಿರಬೇಕು (ಅಡುಗೆ. ೩೭). 'ಮಚ್ಚಿಗೆ' ಪರಾ.

ಮುಚ್ಚಿಗೆಯ ಮನೆ, ಮುಚ್ಚಿಗೆ ಮನೆ=ಇಟ್ಟಿಗೆ, ಗಾರೆಗಳಿಂದ ಕಟ್ಟಿದ ಮನೆ : ಮುಚ್ಚಿಗೆಯ ಮನೆಯಾದರೂ, ಮನೆಯ ಮಾಡು ಹೆಂಚಿನದಲ್ಲ. ಪ್ರತಿವರ್ಷ ಸೋಗೆ ಹೊಚ್ಚಬೇಕು (ಬಾಳ್ವೆ. ೦೭೯); ಸುಬ್ರಾಯರ ಮುಚ್ಚಿಗೆ ಮನೆ ಒಂದು ದಿವಸ ಗ್ರಾಮದವರ ಹಗೆಗೆ ತುತ್ತಾಯಿತು (ಹಹಸ. ೭೦).

[ಮುಚ್ಚು$_1$ + — ಇಕೆ]

**ಮುಚ್ಚಿಗ$_1$** (ನಾ). ೧. ಇಟ್ಟಿಗೆ ಅಥವಾ ಗಾರೆ ಕೆಲಸ ಮಾಡುವವನು; ಉಪ್ಪಾರ : "ಪಲಗಂಡನೆನೆ ಮುಚ್ಚಿಗಂ" (ಶಂಗರಾ. ೦೦೦–೯). ೨. ಕಲ್ಲು ಕೆಲಸ ಮಾಡುವವನು; ಕಲ್ಲುಕುಟಿಗ : (೯). [ಮುಚ್ಚು$_1$ + —ಇಗ]

**ಮುಚ್ಚಿಗ$_2$** ' ಮೊಚ್ಚಿಗ ' ನೋ.

**ಮುಚ್ಚಿಗೆ** ' ಮುಚ್ಚಿಕೆ ' ನೋ.

**ಮುಚ್ಚಿಲು** (ನಾ). ಒಂದು ಬಗೆಯ ಸಸ್ಯ : ಮುಚ್ಚಿಲು. ಕಲ್ಪೇಗ (ವೃಕ್ಷಗಿ. ೩೦–೩೬೬). 'ನೆಲಮುಚ್ಚಿಲು' ಪರಾ. [ ? ]

**ಮುಚ್ಚಿಸು** (ಕ್ರಿ). (ರಂಧ್ರ, ಬಾಗಿಲು ಮುಂತಾದುವನ್ನು) ಬಂದು ಮಾಡಿಸು : ಬಿಲದ ರಂಧ್ರವನ್ನು ಮಣ್ಣುಹಾಕಿಸಿ ಮುಚ್ಚಿಸಿದನು (ರೂಢಿ).

[ಮುಚ್ಚು$_1$ + — ಇಸು$_3$]

**ಮುಚ್ಚು$_1$** (ಕ್ರಿ). ೧. ಮರೆಮಾಡು ; ಹೊದಿಸು : "ಮುಚ್ಚು–ಆಚ್ಛಾದನೇ" (ಶಬ್ದಾನು) ; ಪೊಂಗೊಡನು ತಮಾಳಪಲ್ಲವದೊಳೆ ಮುಚ್ಚಿದಂದದೊಳ್ ಚೂಚುಕಮಾತುಮ ಕರ್ಪನಾಕೆಯಾ (ಶಂಶಬಾ. ೦–೦೨೩); ನಾಲ್ಕು ದಿಕ್ಕಿನ ಶರಧಿಗಳು ಪರಿತಂದು ಲೋಕವನರಸ ಮುಚ್ಚಲು (ಸಂಶಶ. ೪–೭). ೨. (ಕಣ್ಣನ್ನು) ಮುಗಿ ; ನಿಮೀಲನಗೊಳಿಸು : ಪೆಣನಂ ಕಂಡ ಪಂದೆಯಂತೆ ಕಣ್ಣಂ ಮುಚ್ಚುತ್ತಂ (ರಶಾರ್ತಿಪು. ೦–೦೪೪). ೩. ಕಾಣದಿರುವ ಹಾಗೆ ಮಾಡು ; ಮರೆಸು ; ಅಡಗಿಸು : ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮುಡಿ (ಕಾವ್ಯಸಾ. ೧೩೩ ಶೂದ್ರಕ) ; ಕವಿಮಾರ್ಗದೊಳೊಳಪೊಕ್ಕುಂ ನವರಸಮುಂ ತೆಱೆಯೆ ನುಡಿದನೆನಿಸಿದ ಕವಿ ಸತ್ಕವಿಯೆನಿಕುಂ ಗೂಢಾರ್ಥದ ಕವಿಯಂತಿರೆ ಮುಚ್ಚಿ ಪೋದ ಕವಿಯುಂ ಕವಿಯೇ (ಅಜಿತ. ೦–೬೩) ; ಪರಗುಣಂಗಳ ಮುಚ್ಚುವ ತನ್ನನೆ ಪೊಗಳ್ವ ಲೋಗರಂ ಪೞಿವ ನೀಚನೊಳ್ ನೀಚಗೋತ್ರದಾಸ್ರವಮಕ್ಕುಂ (ಸುಕುಮಾ. ೬–೨೪). ೪. (ಬಾಗಿಲು ಮೊದಲಾದುವುಗಳನ್ನು) ಹಾಕು ; ಬಂದು ಮಾಡು : ಗುಹೆಯ ಬಾಗಿಲಂ ಪಿರಿದೊಂದು ಸಿಲೆಯುಂ ತಂದಿಟ್ಟು ಮುಚ್ಚಿ (ವಡ್ಡಾರಾ. ೦೨೨–೨೦) ; ತೆಱೆಯದೆ ಮುಚ್ಚಿದ ಪಡಿಗಳ್ ತೆಱೆದುವು (ಸುಕುಮಾ. ೯–೦೯) ; ಖಗರಾಜ ವಿನತೆಯರಮನೆಗೈದಿ ಬಾಗಿಲು ತನತನಗೆ ಮುಚ್ಚಿರಲು . . . ಬಂದನು ಮನೆಗೆ ಕದ್ರುವಿನ (ಸಂಶಶ. ೩–೩೨). ೫. ಗುಟ್ಟುಮಾಡು ; ರಹಸ್ಯವಾಗಿಡು : ಎರಡೆರಡು ಛಿದ್ರವನಾರು ಮಾಡಿದರು ಮುಚ್ಚಿದರು ನೀನೆಚ್ಚೆಯಾದೊಡೆ ಸಚ್ಚಿದಾನಂದೈಕನಾಣೆಯು ನಿಶ್ಚಯವ ಹೇಳೆಂದು ಪಾರ್ಥನ ಕೇಳದನು ಭೀಷ್ಮ (ಸಂಶಶ. ೦೬ ೦೩).

[ದೇ.॥ ತಮಿ. ಮುಚ್ಚು ; ಕೊಡ. ಮುಚ್ಚ್ ; ತುಳು. ಮುಚ್ಚು ; ತೆಲು. ಮುಚ್ಚು, ಮುಂಚು, ಮೂಯು ; ಕೋಲಾ. ಮುನ್ಸ್ ; ನಾಯ್ಕಿ. ಮುಸ್ ; ಪರ್ಜಿ. ಮುಯ್ಞ್ ; ಗದಬ. ಮೂಯ್ ; ಗೊಂಡಿ. ಮುಚ್ಚ್, ವಚ್ಚಾನಾ ; ಕೂಇ. ಮುಸ, ಮುಸಿ ; ಕುವಿ. ಮೂಚಾಲಿ, ಮುಜ್ಜಿನೈ ; ಕುರುಖ್. ಮುಚ್ಚಾನ, ಮುಂಧಾನ ; ಮಲ್ಟೊ. ಬ್ರಾಹುಈ. ಮುಸ್]

**ಮುಚ್ಚು$_2$**, ಮುಚ್ಚಿ$_1$ (ನಾ). ೧. (ಹೂವಿನ ದಳಗಳು) ಮುಚ್ಚಿರುವುದು: ಕೈರವಾಭ್ಯುದಯದರಲ್ಚು ನೀರಜದ ಮುಚ್ಚು ರಥಾಂಗದಗಲ್ಕು . . . ಜಗತ್ತಿನ ಪುಣ್ಯದಚ್ಚು ಬಂದುದಯಗಿರೀಂದ್ರಮಸ್ತಕದೊಳಿರ್ದುದು ಪೂರ್ಣ ಶಶಾಂಕಮಂಡಲಂ (ಸೂಕ್ತಿಸು. ೬–೨೨೪). ೨. ಮುಚ್ಚುವ ಸಾಧನ ; ಮುಚ್ಚಳ : ರಾಜನು ಗುಡಾಣದ ಮುಚ್ಚನ್ನು ತೆಗೆದು ಹೊರಗೆ ಬಂದನು (ಮಣಿಸ. ೯೨). ೩. ಗುಟ್ಟು ; ರಹಸ್ಯ : ಕುತ್ತಂ ಪಗೆ ಮುಚ್ಚು . . . ವಿಷಾಗ್ನಿ ಬಾಧೆಯಿವು ಕೇಳೀ ನಾರಕಾವಸ್ಥೆಯಂ (ಅನಂಪು. ೯–೪೨) ; ತನ್ನ ನೋಟದ ಕಳವು ನಗೆ ತೆರೆಯ ಮುಚ್ಚು (ಕಾಲಾರ. ೪೨–೩೪) ; ಮುಚ್ಚೇನು ಮತ್ತೆ ಬಚ್ಚೇನು ಇಲ್ಲಿ (ಮುಕ್ತಕಂ. ೦೩–೩). **ಮುಚ್ಚೆ$_1$**: ೨. ಮುಸುಂಕಿದಳ್ . . . ಮಱೆವೆಂಬ ಮುಚ್ಚುಳಿಂದರೆಮುಂಗುಳ್ವೆಚ್ಚಯಂ ಸವಿಯ ಮುಚ್ಚಿದ ಮುಚ್ಚೆಯಿನಾಕೆ ಚಿತ್ರಮಂ (ಲೀಲಾವ. ೦೩–೧೭). 'ಏಸರ್ಮುಚ್ಚೆ' ಪರಾ.

[< ಮುಚ್ಚು$_1$./ತಮಿ. ಮುಚ್ಚು; ಕೊಡ. ಮುಚ್ಚಿ; ತುಳು. ಮುಚ್ಚ, ಮುಚ್ಚಿ, ಪುಚ್ಚು ; ತೆಲು. ಮೂತ : ಗೊಂಡಿ. ಮುಚ್ಚೀ, ಮುಚ್ಚಿ]

**ಮುಚ್ಚುಂಗಣ್**, ಮುಚ್ಚುಗಣ್ (ನಾ). ರೆಪ್ಪೆ ಮುಚ್ಚಿದ ಕಣ್ಣು; ಮುಗಿದ ಕಣ್ಣು : (ಎಮೆಯಳದು ಅಂಗಾರಗಳಂತೆ ಹೊಳಹೊಳೆವ ಕ್ರೂರ ದೃಷ್ಟಿಗಳನ್ನು ಮಹಾರಾಜನ ಮುಚ್ಚುಂಗಣ್ಗಳಿಗೆ ನಟ್ಟು ನಿರೀಕ್ಷಿಸಿಕೊಂಡು) (ಚಿಕ್ಕ. ೯೯–೨೩). **ಮುಚ್ಚುಗಣ್** : ಈತನಿದ್ದನು ಬಲೆಗೆ ಸಿಲುಕಿದ ಕೋತಿಯಂದದಲುಸುರದೊಡಕಿನ ಥಾತುಗುಂದಿದ ಮುಖದ ಮುರುಹಿನ ಮುಚ್ಚುಗಂಗಳಲಿ (ಕೊರವಾ. ೩–೭–೦೯) ; ಮಚ್ಚರದಿ ನಡೆವ ಮಗ ಪೊಲ್ಲ ಸೊಳೆಗೆ ಮುಚ್ಚುಗಣ್ಣೊಲ್ಲ (ಸರ್ವಜ್ಞ. ೦೯೦೨). [ಮುಚ್ಚು$_1$ + ಕಣ್]

**ಮುಚ್ಚುಗಣ್** ' ಮುಚ್ಚುಂಗಣ್ ' ನೋ.

**ಮುಚ್ಚುಗಣೆ** (ನಾ). ಮೂಡಿಗೆಯಲ್ಲಿ ಅಡಗಿರುವ (ವಿಧ ವಿಧದ) ಬಾಣ: ಅಚ್ಚಕೈಗಂಕಣಕೆ ಮಣಿಮಯದಚ್ಚಗನ್ನಡಿಯೇಕೆ ನಮ್ಮಯ ಮು [ಪಾಠಾಂ. ನು, ಮು]ಚ್ಚುಗಣೆಗಳ ಕಲಹವನು ನೀ ನೋಡು (ಕೊರವಾ. ೬–೩೦–೯). [ಮುಚ್ಚು$_1$ + ಕಣೆ$_1$]

**ಮುಚ್ಚುಗತ್ತಿ** (ನಾ). ಒರೆಯೊಳಗೆ ಸೇರಿಸಿಟ್ಟಿರುವ ಕತ್ತಿ : ನಡುವಿನಲ್ಲಿ ಮುಚ್ಚುಗತ್ತಿಯೂ ಕಠಾರಿಯೂ ಇದ್ದಾವು (ಶ್ರೀರಂಗ. ೬೬).

[ಮುಚ್ಚು$_1$ + ಕತ್ತಿ]

**ಮುಚ್ಚುಗದಹು** (ನಾ). ಮುಚ್ಚಿದ ಬಾಗಿಲು ; ಬಂದು ಮಾಡಿದ ಕದ : ಮುಚ್ಚುಗದಹುಗಳಂ ತೆಗೆದುಕೊಳುತುಚ್ಚದಿಂ ಗಮನಿಸುವ ಲಿಂಗ ಸಮುಚ್ಚಯಂ (ಏಕಶ. ೩೭–೪೩). [ಮುಚ್ಚು$_1$ + ಕದಹು$_2$ (<ಕದವು$_1$)]

**ಮುಚ್ಚುಗಲ್ಲು** (ನಾ). ಕಾಲುವೆ, ಚರಂಡಿ ಮೊದಲಾದುವುಗಳನ್ನು ಮುಚ್ಚುವ ಕಲ್ಲು ; ಹಾಸುಗಲ್ಲು : ಚರಂಡಿಯ ಮುಚ್ಚುಗಲ್ಲು ಸೀಳಿ ಹೋಗಿದೆ (ರೂಢಿ). [ಮುಚ್ಚು$_1$ + ಕಲ್ಲು (<ಕಲ್$_3$)]

**ಮುಚ್ಚುದೂಂಬು** (ನಾ). (ನೀರು ಹೊರಕ್ಕೆ ಹೋಗದಂತೆ) ಹಾಕುವ ತೂಬು ; ಮುಚ್ಚಿದ ತೂಬು : ಉಚ್ಚಿದರು ದೋರ್ವಳತಟಾಕದ ಮುಚ್ಚುದೂಂ[ಪಾಠಾಂ. ದೂ]ಬನು (ಕೊರವಾ. ೩–೬–೦೬). [ಮುಚ್ಚು$_1$ + ತೂಂಬು]

**ಮುಚ್ಚುಮರೆ** ' ಮುಚ್ಚುಮಱೆ ' ನೋ.

**ಮುಚ್ಚುಮಱೆ**, ಮುಚ್ಚುಮರೆ (ನಾ). ಬಚ್ಚಿಡುವುದು ; ಗೋಪ್ಯ : ರಹಸ್ಯ : ಇದು ಮಟ್ಟಮೆಂದು ತಾಂ ಚಪ್ಪರಿಸಿದೊಡಾನಿರೆನೆ ಮುಚ್ಚು ಮಱೆಯೇಕೆ (ಅರ್ಜನೀ. ೩–೪); ಮುಚ್ಚುಮಱೆಯೇಕಿನ್ನು ನಮಗುಣ ಬಡಿಸು (ಕುಮಾ. ೩೦–೦೯); ಮುಚ್ಚುಮಱೆಯೇತಕೆ ಮನೆಮನೆಯಲಿ (ಪುರಂದ. ೦–೦೭೦–೨). **ಮುಚ್ಚುಮರೆ** : ತರಲ ಗೋವರ್ಧನರ ಭೆಟ್ಟಿಯಾಗಿ ಯಾವುದೂ ಮುಚ್ಚುಮರೆಯಾಗಿ ಉಳಿಯಲಿಲ್ಲವೆಂದು . . . ನಿಶ್ಚಿಂತೆಳಾದಳು (ಎರಸ. ೦೩೩); ತನ್ನ ಮನಸ್ಸಿನಲ್ಲಿದ್ದುದನ್ನು ಮುಚ್ಚುಮರೆಯಿಲ್ಲದೆ ಸ್ಪಷ್ಟವಾಗಿ ಉದ್ದೇಶಪೂರ್ವಕವಾಗಿ ಹೇಳಿದುದನ್ನೂ ಜ್ಞಾಪಿಸಿಕೊಂಡನು (ಮುನಿಸಾ. ೭); ಯಾವ ಮುಚ್ಚುಮರೆಯೂ ಇಲ್ಲದೆ ಸ್ವಾಮಿ ಹೇಳಿಬಿಟ್ಟ (ಸ್ವಾಮಿಸ್ಮೃ. ೪೩). [ಮುಚ್ಚು$_1$ + ಮಱೆ$_2$]

**ಮುಚ್ಚುಮಾತು** (ನಾ). ಗುಟ್ಟಾದ ನುಡಿ; ಮುಚ್ಚುಮರೆಯ ಮಾತು: ಕನಕದಾಸರೂ ತಮ್ಮ ದೊರೆಯ ಹೆಸರನ್ನು . . . ಬಿಚ್ಚುಮಾತಿನಲ್ಲಿ ಹೇಳಿಲ್ಲವಾದರೂ ಮುಚ್ಚುಮಾತಿನಲ್ಲಿ ತುಂಬ ಹೇಳಿಪ್ಪಾರೆ (ಕರ್ನಾಕ. ೬೭). 'ಬಿಚ್ಚುಮಾತು' ಪರಾ. [ಮುಚ್ಚು$_1$ + ಮಾತು$_1$]

**ಮುಚ್ಚುವಲಗೆ** (ನಾ). ಛಾವಣಿಯ ಹಲಗೆ; ಸೂರುಕಟ್ಟು: ವಿವಾಹ ಮಂಟಪವಂ ಪೊಂಗೋಡೆ . . . ಬೆಳ್ಳಿಯ ಮುಚ್ಚುವಲಗೆ . . . ಮಿಕ್ಕ ವಾಣಿ ಮಿಸುನಿ ಕುಸುರಿಗೆಲಸಂಗಳಿಂದಲಂಕರಿಸಿ (ಹಾಲಾಸ್ಯ. ೦-೬-೨೭ ವ). [ಮುಚ್ಚು$_2$ + ಪಲಗೆ]

**ಮುಚ್ಚುವಲೆ** (ನಾ). ಗುಬ್ಬಿ ಮುಂತಾದ ಸಣ್ಣಪಕ್ಕಿಗಳನ್ನು ಮುಚ್ಚಿ ಹಿಡಿಯುವಂಥ ಬಲೆ: ಗುಬ್ಬಿಯ ಮುಚ್ಚುವಲೆಯಲಿ ಶಿವಶಿವಾ ಭೇರುಂಡ ಸಿಲುಕುವುದೆ (ಉತ್ತರಾ. ೦೬-೩೭). [ಮುಚ್ಚು$_1$ + ಬಲೆ$_1$]

**ಮುಚ್ಚುಳ್** 'ಮುಚ್ಚಳ' ನೋ.

**ಮುಚ್ಚುಳ** 'ಮುಚ್ಚಳ' ನೋ.

**ಮುಚ್ಚುಳದೆಗೆ** 'ಮುಚ್ಚಳದೆಗೆ' ನೋ.

**ಮುಚ್ಚುಳಿಕ್ಕು** (ಕ್ರಿ). ೧. ಮುಚ್ಚುವ ಸಾಧನವನ್ನು ಹಾಕು; ಮುಚ್ಚು: ತರುಣಿ ಭರಣಿಗೆ ಮುಚ್ಚುಳಿಕ್ಕುವ ಪೋಲು ಲಿಂಗಸಂಗರವ ಮಾಡಿದಳು (ಬಸವ. ೪೦-೦೩೦). ೨. ಕದ ಮುಚ್ಚು; ಬಾಗಿಲು ಹಾಕು: ಮುಚ್ಚುಳಿಕ್ಕಿ [ಪಾಠಾಂ. ಮುಚ್ಚುಳಿಕ್ಕಿ] ಪೋದರವುನೆಗಿಂದು ಪೇಟಿರೆ ಮಹತ್ತರರಂ ನೃಪಸಿಂಹ ನೀಂ ತಪಸ್ವರಣಿಗೆ ಕೂರ್ತುದಂ ನುಡಿವೊಡೀಯರೆ ಪೇಱ ಗರ್ಗಂಗಚಿತ್ತಮಂ (ಅನಂತ. ೩-೦೦೮). [ಮುಚ್ಚುಳ(<ಮುಚ್ಚಳ)+ಇಕ್ಕು$_1$]

**ಮುಚ್ಚುಳು** 'ಮುಚ್ಚಳ' ನೋ.

**ಮುಚ್ಚುಳ್ದಿಗೆ** 'ಮುಚ್ಚಳದೆಗೆ' ನೋ.

**ಮುಚ್ಚುಱು** (ಕ್ರಿ). ಮೂರ್ಛೆಹೋಗು; ಪ್ರಜ್ಞೆತಪ್ಪು: "ಮುಚ್ಚುತ್ತಂ= ಮೂರ್ಛೆವೋದಂ" (ಶಬ್ದ. ಶಂ. ೨); ಎಚ್ಚಂಬಿರ್ದೆಯಿಂದುರ್ಚಲ್ ಮುಚ್ಚುತ್ತಂ ತಕ್ಕೆ ನಾಡೆ [ಪಾಠಾಂ. ಮುಚ್ಚುರ್ತ್ತಂತಕ್ಕನಾಡ] ತೆರ್ಪತ್ತಾಗಳ್ ಬೆಚ್ಚದೆ ಕೋಪಾನಲಮುಱ ಬಿಚ್ಚಳಿಸಲ್ ಪರಿ ಬಳಿಕ್ಕೆ ನಿಡುಸ್ಸೈವಿನೆಗಂ (ಪೀಠಿ. ೦೨-೩೭). [< ಮುಚ್ಚು$_2$ + ಉಱು]

**ಮುಚ್ಚೊಳು** (ನಾ). ಮೂರು ಬಾರಿ, —ಸಲ: ಅಲ್ಲಿಂ ವಿಗತಜೀವಿಗಳಾಗಿಯೆಲೆ ಭೂವಲ್ಲಭ ನಿನಗೆ ಮುಚ್ಚೊಳು ಸಲ್ಲಲಿತಾಕಾರವಮುಳಗಳಾಗಿ ತಾವುಲ್ಲಾಸದಿಂ ಜನಿಸುವರು (ಪೀಠಿಕಂ. ೦೯-೦೩೦); ಬಲಮುದು ಮುಚ್ಚೊಳಿಂದವೆ ಧರಣಿಪಲನೇಶನಾ ದೇಗುಲದ. . . ಕುಲಿಶದ ಪಡಿಯ ನೋಡಿದನು (ಶ್ರೀಪಾಂ. ೬-೬೪). [< ಮೂಱು + ಸೂಳು$_2$ (< ಸೂಟ್)]

**ಮುಚ್ಚಿ$_1$** 'ಮುಚ್ಚು$_2$' ನೋ.

**ಮುಚ್ಚೆ$_2$**, **ಮುರ್ಛೆ** (ನಾ). ಮೈಮರೆಯುವುದು; ಎಚ್ಚರ ತಪ್ಪುವುದು; ಮೂರ್ಛೆ: "ಹಮ್ಮುದಾ, ಹರವಸಂ, ಮುಚ್ಚೆ—ಈ ೩ ಮೂರ್ಛೆ" (ಕರ್ನಾ. ೩೭-೨೩೨); ಎಚ್ಚ ಶರವಂ ಕಲಿ ಚಕ್ಕನೆ ಕಿಟ್ಟುರಃಪ್ರದೇಶವನಿಸೆ ನೆತ್ತರೊಕ್ಕು ಪತಿ ಮುಚ್ಚೆಯೊಳಿಚ್ಚೆಯಿಗೆಟ್ಟು ಜೋಲ್ದೊಡೆ (ಶಂಕರಾ. ೦೨-೧೦೬); ಮುಚ್ಚೆಯ ಬಾಷ್ಪಕ್ಕಾಗಳೆ ಮುಚ್ಚೆ[ಮುಂಪಾ]ಕ್ಷಣದೆ ಹಾಸ್ಯಮುಂ ಶೋಕಮುಂ. . ಪಲ್ಲಚ್ಚಿನಮುಪ್ಪುದಮನೂನ(ಮಾ)ಮಾಣ್ಬುದುಮಕ್ಕುಂ (ಜಗದ. ೦೫-೨೦). **ಮುರ್ಛೆ**: ಸೀತೆ ದೊಪ್ಪನೆ ಕುಳಿತ್ತುಸ್ಸೆನುತ್ತೊರಗಿದಳ್ ಮರಕೆ ಮುಚ್ಚಿದುವಕ್ಷಿ ತಾಳಲಾರದ ಸೇದೆಯಿಂ ಪೇಳಿಳ್ಳರಳ್ದುದೊ ಮುರ್ಛೆಗಂಬಂತೆ (ಶ್ರೀರಾಮಾ. ೦೨೮-೯೫). [< ಸಂ. ಮೂರ್ಛಾ]

**ಮುಚ್ಚೆಗೊಳ್** (ಕ್ರಿ). ಮೈಮರೆ; ಎಚ್ಚರ ತಪ್ಪು; ಮೂರ್ಛೆಹೋಗು: ಆ ವರ್ಚಸ್ವಿಯುಂ ಕಣಿಣದಿರಲಾರೆ ಹಾ ರಾಮರಾಮೆಂದು ಮುಚ್ಚೆಗೊಂಡಂ (ಶರಶ. ೪-೬೨); ಇಂದ್ರಜಿತು ಕಾಲಪೋಘವನಡರಿ ಶಕ್ತ್ಯಾಯುಧವನಿಸಲ್ಕಾ ಲಕ್ಷ್ಮಣಂ ಮುಚ್ಚೆಗೊಳೆ (ಶರಶ. ೮-೨೩). [ಮುಚ್ಚೆ$_2$ + ಕೊಳ್$_1$]

**ಮುಚ್ಚೆದಿಳಿ** (ಕ್ರಿ). ಎಚ್ಚರವುಂಟಾಗು: ಜ್ಞಾನಬರು; ಪ್ರಜ್ಞೆಬರು: ಮುಚ್ಚೆದಿಳಿವದರಸಿಯೊಳ್ ಬಗೆ ಬೆಚ್ಚರೆ ಶೀಲವತಿ ಸೀತೆ ಪೂಣ್ದುದನೆಂತುಂ ಪುಚ್ಚಱಯುಳೆನ್ನದಬೆಂಪಿಂ ಚೆಚ್ಚರಮಾ ಸಭೆಗೆ ರಾಘವಂ ಬಬುಸಂದಂ (ಶಂರಾಮಾ. ೦೬-೪೩); ಆ ವೀರನೊಯ್ಯನೊಯ್ಯನೆ . . . ಮುಚ್ಚೆದಿಳಿದೆದ್ದನು (ಕೀಶರಾ. ೦೬-೨೩); ಕಿಱದಾನುಂ ಬೇಗದಿಂ ಮುಚ್ಚೆದಿಳಿದು ಮಃಖಾರ್ತೆಯಾಗಿ . . . ಬಾಯಾಱ ಮಱುಗಿದಳ್ (ರಾಜಶೇಕ. ೩೩-೨೯). [ಮುಚ್ಚೆ$_2$ + ತಿಳಿ$_1$]

**ಮುಚ್ಚೆರೆ** (ನಾ). ಮೂರು ಬೊಗಸೆ.—ಸೇರೆ: ಕವರ್ಗ ಪವರ್ಗಮಲ್ಲದಲ್ಲಿಯುಂಮಿಮಾ ಲಕ್ಷಣಮಾಯ್ತು. . . ಮುಚ್ಚೆರೆ, ಮುಚ್ಚಾಲ್ (ಶಬ್ದ. ೦೫೯ ಪ್ರಯೋ); ಅರೆದ ಸಾಸುವೆಯ ಶುಂಠಿಯುಸಿಕ್ಕಿ ಪೊಚ್ಚರೆ ಮೊಸರಿನಲ್ಲಿ ಮುಚ್ಚೆರೆ[ಪಾಠಾಂ. ಚ್ಚರೆ, ಚ್ಚೆಳಿ]ಯ ನೀರ ಕದಡಿ ಮೋದವನಿರದೆ ಸರೆಗೊಟ್ಟು ನೀರೋಗರವನಿಕ್ಕಲು ಸುಗಂಧತಕ್ರೋದನ (ಸೂಪಶಾ. ೩-೨೭). [< ಮೂಱು + ಸರೆ$_2$ (< ಸೇರೆ$_1$)]

**ಮುಚ್ಚೆವೋಗು** (ಕ್ರಿ). = ಮುಚ್ಚೆಗೊಳ್: ಅಱವನೆಡೆವಱದು ಕೆಟ್ಟು ದನಱಸಲ್ ಪೋಪಂತೆ ಮುಚ್ಚೆವೋಪುದುಂ (ಪಾಂಡವ. ೪-೯೯); ರತಿಯತಿ ಶೋಕಂಗೆಯ್ದು. . . ಬಱಯಿಂ ಪೊಸೆದು ಚೇತನಂಗೆಟ್ಟು ಭೂತಳದೊಳ್ ಬಳ್ದು ಕಿಚ್ಚುಗಟ್ಟಿದಳಲಿಂ ಮುಚ್ಚೆ [ಪಾಠಾಂ. ಮೂರ್ಛೆ]ವೋಗಿ (ಗಂಕ. ೯-೭೭ ವ); ಮೇರೆದಪ್ಪುವ ಸುಖಿಕೆ ಮುಚ್ಚೆವೋಪಳೊ ಏನೊ ಕಂದನಂ ಕಂಡು (ಚಂದ್ರಸ. ೪೦-೦). [ಮುಚ್ಚೆ$_2$ + ಪೋಗು$_1$ (< ಪೋ$_1$)]

**ಮುಚ್ಚೋಟು** 'ಮುಂಚೋಟು' ನೋ.

**ಮುಚ್ಚೋಡಿ** 'ಮುಚ್ಚವಡಿ' ನೋ.

**ಮುಚ್ಚೋರೆ**, **ಮುತ್ತುಸಾರೆ** (ನಾ). ಅಕ್ಕಿ ಮತ್ತು ಹೆಸರುಬೇಳೆಯ ಹಿಟ್ಟನ್ನು ಕಲಸಿ, ಮೂರುರಂಧ್ರವಿರುವ ಒರಳಿನಲ್ಲಿ ಚಕ್ಕುಲಿಯಂತೆ ಒತ್ತಿ ಕರಿಯುವ ಒಂದು ಬಗೆಯ ತಿಂಡಿ,—ತಿನಿಸು: ಪೂರಿ, ಚಟ್ನಿ, ಮುಚ್ಚೋರೆಗಳನ್ನು ತಂದು. . . ಕರೆವಳು (ಕಿವಕಂ. ೦೦೭); ಮುಚ್ಚೋರೆ, ಕೋಡುಬಳೆ, ಆಂಬೊಡೆ ಮುಂತಾಗಿ ತಿಂಡಿಗಳನ್ನು ಮಾಡಿಸುತ್ತ (ಪಾಂಕ್ಷ. II. ೦೦೬). **ಮುತ್ತುಸಾರೆ**: ಕರುಗಾದ ಮುತ್ತುಸಾರೆಯ ಚಕ್ಕುಲಿಗಳ ನರಸಿಯನೆರಿಸೆರಿಕೆನುತ (ಜ್ಞಾನಸ. ೩೯-೦೩೦). [< ಮೂಱು + < ಸೋರ್]

**ಮುಜಗರ**, **ಮುಜುಗರ** (ನಾ). ೧. ಸಂಕೋಚ; ದಾಕ್ಷಿಣ್ಯ: ಆ ಮನುಷ್ಯ ಏನೋ ಮುಜಗರಪಡುತ್ತಿದ್ದಂತೆ ಅವನ ಚರ್ಯೆಯಲ್ಲಿ ಕಂಡು ಬಂದಿತು (ರಂಗಕ. ೩೮); ಮುಜಗರ ಮಾಡದೆ ತಗೋ ಎಂದು ಚಿರುಕಂಡ ಒತ್ತಾಯಿಸಿದ್ದ (ಶರಕ್ಕ. ೦೩೩). ೨. ಹಿಂಸೆ; ಕಷ್ಟ: ಹೇಮಲತೆಯು ಅನಾರೋಗ್ಯದ ನಿಮಿತ್ತವಾಗಿ ಮುಜಗರಪಡುತ್ತಿದ್ದಳು (ಬಿಶಾಕ. ೫೦). ೩. ಬಿಗಿ; ಹಿಡಿತ: ಈಗಲೀಗ ಮನೆಯಲ್ಲಿ ವಿಪರೀತ ಮುಜಗರ (ಶಾಂಗೆ. ೯೮). **ಮುಜುಗರ**: ೧. ಏನೋ ಒಂದು ರೀತಿಯ ಮುಜುಗರ ಮನಸ್ಸಿನಲ್ಲಿತ್ತು (ದೂಡಬ್ಬಿ. ೦೫). ೨. ಮತ್ತೆಲ್ಲದರ ಜೊತೆಗೆ ಶಕುಂತಲೆಗೆ ಶಾರದೆಯನ್ನು ಶಾಮಣ್ಣ ತನ್ನ ಕಾರಿನಲ್ಲಿ ಕರೆದೊಯ್ದುದು ತುಂಬ ಮುಜುಗರವಾಗಿತ್ತು (ಕೂಸಿಲೀ. ೦೦೦); ಚಿಕ್ಕಮ್ಮ ತನ್ನ ಮಗಳೊಡನೆ ಯಾವುದೋ ವಿಷಯ ಮಾತನಾಡುತ್ತ ಮನಸ್ಸಿನಲ್ಲಿ ಬಹಳ ಮುಜುಗರ ಪಟ್ಟುಕೊಂಡು. . . ಹೇಳುತ್ತಿದ್ದುದು ಕೊಟಡಿಯಲ್ಲಿದ್ದ ಸರೋಜಳಿಗೆ ಕೇಳಿಸಿತು (ಪಂಹಾಗ. ೩೭೩); ಗಿರಿಜ ತಮ್ಮನ್ನು ಕೊಂದು ರಕ್ತ ಕುಡಿದರೂ ಅವರಿಗೆ ಇನಿತೂ ಮುಜುಗರವಿರಲಿಲ್ಲ (ಶಧ್ವಕ. ೨೪೦). ೩. ಹೊರಗೆ ಮೋಡಗಳು ಭಾರವಾಗಿ ತೂಗಾಡುತ್ತಿದ್ದಾಗ ಮನೆಯಲ್ಲಿ ಎಂತಹ ಮುಜುಗರವೊದಗುವುದೋ ಅಂತಹ ವಾತಾವರಣ ಕಲ್ಪಿತವಾಗಿದೆ (ಕನ್ನಡ. ೩). [?]

**ಮುಜರಾ** 'ಮುಜರೆ' ನೋ.

**ಮುಜರಾಯ್** ' ಮುಜರಾಯಿ ' ನೋ.

**ಮುಜರಾಯಿ, ಮುಜರಾಯ್** (ನಾ). ದೇವಸ್ಥಾನ, ಮಠ ಮೊದಲಾದುವುಗಳ ದಾನದತ್ತಿಗಳಿಗೆ ಸಂಬಂಧಿಸಿದುದು: ಮುಜರಾಯಿ ಬಾಬಿನ ವಿಚಾರಣೆಗೋಸ್ಕರ ಅವಶ್ಯಕವಾದ ಲವಾಜಮೆಯು ಮೊಕರರಾಯಿತು (ಮಹಾಪಂ. II, ೦೦೦); ಮೈಸೂರು ಸೀಮೆಯ ಮುಜರಾಯಿ ಕಮಿಷನರವರ ಕಚೇರಿ (ಗುರುಚ. ೧೦); ಅವರು ತಮ್ಮ ಜೀವನದಲ್ಲಿ ಮುಜರಾಯಿ ಗುಮಾಸ್ತಗಿರಿ. . . ಎಲ್ಲಾ ಮುಗಿಸಿ, ಇಪ್ಪತ್ತು ಮೂವತ್ತು ಸಾವಿರ ರೂಪಾಯಿ ಸಂಪಾದನೆ ಮಾಡಿ (ಅವತಂ. ೯೬). **ಮುಜರಾಯ್** : ಮಠದ ಆಸ್ತಿಯನ್ನೆಲ್ಲಾ ಮುಜರಾಯ್ ಇಲಾಖೆಗೆ ಬರೆದುಕೊಡಲಾಯಿತು (ರೂಢಿ).

[← ಹಿಂ. ಮುಜರಾಈ]

**ಮುಜರಾಯ್ಬಕ್ಷಿ** (ನಾ). ಮುಜರಾಯಿ ಇಲಾಖೆಯ ಅಧಿಕಾರಿ : ಓರಿಯರಸನೊಡನಾಡಿಯಿವನೆಂದುರೆ ಮಹತ್ವದ ನಣಗೆ ಕಲ್ಪಿಸಿ ಪರಿಕಿಸದೆ ದಕ್ಷತೆಯ ಮುಜರಾಯ್ಬಕ್ಷಿ ಪದವಿತ್ತು (ರಾಜಾಸಂ. ೦-೦-೦೭).

[ಮುಜರಾಯ್ (< ಮುಜರಾಯಿ) + ಬಕ್ಷಿ]

**ಮುಜರೆ, ಮುಜರಾ, ಮುಜುರೆ** (ನಾ). ೧. (ಗೌರವಪೂರ್ವಕವಾಗಿ) ಬಿಟ್ಟುಕೊಡುವುದು ; ಮಾಫಿ ; ವಜಾ : ದಿವಾನ್ ಪೂರ್ಣಯ್ಯನವರು ಅದುವರೆಗೆ ಸರ್ಕಾರಕ್ಕೆ ಬರಬೇಕಾಗಿದ್ದ ಕಂದಾಯ ಮುಂತಾದ ತೆರಿಗೆಯ ಬಾಕಿಯನ್ನೆಲ್ಲಾ ಮುಜರೆಯಾಗಿ ಬಿಟ್ಟುಕೊಟ್ಟು ಜಮೀನು ಮತ್ತು ಸಾಯರು ಬಾಬುಗಳಲ್ಲಿ ಹಿಂದಿನ ಮಹಾಪ್ರಭುಗಳವರ ಕಾಲದಲ್ಲಿದ್ದಂತೆಯೇ ತೆರಿಗೆಯನ್ನು ದಾಖಿಲ್ಮಾಡಿದರು (ಮಹಾಪಂ. II, ೩೦). ೨. (ಗೌರವದಿಂದ ಅರ್ಪಿಸುವ) ನಮಸ್ಕಾರ ; ಸಲಾಂ ; ವಂದನೆ : ಭಯಭರಿತಭಕ್ತಿಯೊಡನೆ ನೆಲತನಕ ತಲೆಗಳಂ ಬಗ್ಗಿಸುತ ಮುಜರೆಯಂ . . . ನಿಲವಿಲ್ಲದೇ ಗೈದರ್ (ಅರ್ಜಾವಿ. ೨೯-೬೦) ; ಬಂದ ಜನರುಗಳು ಮುಜರೆಯಂ ಮಾಡಿದರು (ಮಹಾಪಂ. I, ೩೭) ; ಎದ್ದು ನಿಂತು ಮುಜರೇ ಮಾಡಿ (ಮಂಜುಕ. ೦೪೯); ಸಭಾಸದರೆಲ್ಲರೂ ಆತನಿಗೆ ನಜರು ಮುಜರೆಗಳನ್ನು ಒಪ್ಪಿಸಿದರು (ರಾಚಿಚ. ೭೩): **ಮುಜರಾ** : ೧. ಲೆಖ್ಖಮಾಡುವದರಲ್ಲಿ ರತಲಿನ ಅಂಶ ಬಂದಿದ್ದರೆ, ಅದರ ಬಗ್ಗೆ ಒಂದು ರತಲ ಹಿಡಿದು ಲೆಖ್ಖವನ್ನು ಮಾಡಿ ಮುಜರಾ ಹಿಡಕೊಳ್ಳುವರು (ಮುಂಬಿಪ್ಯಾ. ೨೦೭). ೨. ಮುಜರಾ— "ನಮಸ್ಕಾರ, ಸಲಾಮು" (ಜಾನಕೋ. ೩೨). **ಮುಜುರೆ** : ೨. ಕಪಾತು ಮುಜುರೆಗಳನ್ನು ತೆಗೆದುಕೊಂಡಿಲ್ಲ (ದೌಲತ್. ೦೨).

[←ಅರ. ಮರಾ. ಮುಜರಾ, ಮುಜ್ರಾ; ಹಿಂ. ಮುಜರಾ]

**ಮುಜಾರಿಯಾನ್** (ನಾ). ಸಾಗುವಳಿ ಮಾಡಿದ ಜಮೀನು,– ಭೂಮಿ : ಮೊಕದ್ದಮಾನೆ ಮುಜಾರಿಯಾನೆ ತಾಲುಕೆ ಕೊಪದ ಹೋಬಳಿ ಸರಕಾರ . . . ಬರಸಿ ಕಳಿಪಿಸ್ತ ನಿರುಪ (ಎಕ. VI, ಕೊಪ್ಪ. ೪೮-೨೨; 1811).

[←ಅರ. ಮುಜ಼ಾರಿಅ ; ಪಾರ. ಮುಜ಼ಾರಿಆನ್ ; ಮರಾ. ಮುಜಾರಿಯಾನ್ = ವ್ಯವಸಾಯ ಮಾಡುವವನು]

**ಮುಜುಗರ** ' ಮುಜಗರ ' ನೋ.

**ಮುಜುರೆ** ' ಮುಜರೆ ' ನೋ.

**ಮುಜ್ಜಗ** ' ಮೂಜಗ ' ನೋ.

**ಮುಜ್ಜು** ' ಮುಸ್ಕು ' ನೋ.

**ಮುಜ್ಜ್ಯೋತಿ** (ನಾ). ಮೂರು ದೀಪಗಳು,– ಜ್ಯೋತಿಗಳು : ಎಪ್ಪ ಳಾಟು ಕಮಲಗಳೆಸಳುಗಳೊಳಗೆ ಪೊಸಳೆ ಮುತ್ತಿ ಮುಜ್ಜ್ಯೋತಿ ಉರಿವುತಿದೆ (ಶಪಣೀ. ೬೪೨). [< ಮೂರು + ಜ್ಯೋತಿ]

**ಮುಜ್ಜಟ** (ನಾ). ಮಲ್ಲಯುದ್ಧದ ಒಂದು ವರಸೆ: ಭೂರವಮಂ ಭಟಂ ನಿಮಿರ್ದು ಕುತ್ತಿದೊಡುರ್ಚಿದ ಚಂಡಶಾಸನಂ ಚಾರಣದಾಸಿಯಿಂ ನುಸುಳ್ದು ಮುಜ್ಜಟದೊಳ್ಮಗುಟ್ಟಿಕ್ಕಿವಟ್ಟಿ ಸೈಪಾರಿಸೆ (ಅಸಂಕೆ. ೦೦-೬೦). [ ? ]

**ಮುಟಗೆ** ' ಮುಟ್ಟಿಗೆ$_1$ ' ನೋ.

**ಮುಟ್ಟ** ' ಮುಟ್ಟೆ ' ನೋ.

**ಮುಟ್ಟಗುಪ್ಪೆ** (ನಾ). ಒಂದು ಊರಿನ ಹೆಸರು : ಕಾರ್ತ್ತಿಕಬಹುಳ ಪಣ್ಣಾಮಿ ಬೃಹಸ್ಪತಿವಾರದಂದು ಮುಟ್ಟಗುಪ್ಪೆಯುಂ ಮಹಾಜನಕ್ಕೆ ಕೊಟ್ಟು (ಎಕ. VIII, ಸೊರಬ. ೪೭೪-೦೭ ; 954). [ಮುಟ್ಟು + ಕುಪ್ಪೆ]

**ಮುಟ್ಟಯಿಸು, ಮುಟ್ಟಯ್ಸು, ಮುಟ್ಟವಿಸು, ಮುಟ್ಟಿಸು, ಮುಟ್ಟೈಸು** (ಕ್ರಿ). ೧. ಹತ್ತಿರ ಬರು ; ಸಮೀಪಿಸು : ಅಚ್ಚರಿ ಪಟ್ಟಾರವಳೆಂದಜ್ಜೊಡೆಂದು ಮುಟ್ಟಯಿಸಿ ಬಂದು (ರಾಮಾಶ್ವ. ೪೦-೪) ; ಜೀಯ ಇವಳೆನ್ನಣುಗಿ, ಶ್ರೀಮತಿಯೆಂಬ ಪೆಸರ್. ಪ್ರದಾನಸಮಯಮುಂ ಮುಟ್ಟಯಿಸಿ ಬಂದುದು (ಅದ್ಭುತ. ೬–೨೭). **ಮುಟ್ಟಯ್ಸು** : ೨. ಮೇಲೆ ಬೀಳು ; ಮುತ್ತು ; ಎರಗು : ಪೊಯ್ಯ ಘನಭೇರಿಯಂ ಭಾರಿಯಂಕಕ್ಕೆ ಮುಟ್ಟಯ್ಸಲಿ ಚತುರ್ಬಲಂ (ಜಂಕೆ. ೪೭-೩೨). ೩. ತಾಕು ; ತಟ್ಟು; ತಗುಲು : ಮನಮಂ ಮುಟ್ಟಯ್ಸಿ [ಪಾಠಾಂ. ಟ್ಟೈಸಿ] ಮಧ್ಯಂದಿನದ ಬಿಸಿಲೆ ಬೆಳ್ದಿಂಗಳಂತಾಗೆ . . . ಯೋಗೀಂದ್ರನತಂದ್ರಂ ನಿರ್ನಿಮೇಷಂ ನಗನಿಕಟಘಟದ್ವೃತ್ತಕೂಟಂಬೊಲಿರ್ದಂ (ಶಂರಾಪಹ. ೨-೦೪). **ಮುಟ್ಟವಿಸು** : ೧. ಉಟ್ಟ ಪೊಸ ಬೆಳುವಟ್ಟೆ ಪೊಮ್ಮಜ್ಜು ಮುಟ್ಟವಿಸೆ ಹೊಂಬಣ್ಣ ವಾಸನೆಯು (ಶೊರಾ. ೩-೮-೩೦) ; ಬಾಳೆಯಂ ಮುಟ್ಟವಿಸಿ ನಡೆತರ್ಪ ನಕ್ರಮಂ ನಕ್ರಮಂ ಮೆಟ್ಟಿ ಬಹ ಶಕುಲಮಂ . . . ಬಣ್ಣಿಸಲ್ಕೆರೆವರಾರ್ (ಶ್ರೀರಾಹ. ೩-೨೭). ೨. ಗದೆಯಿಂ ಮುಟ್ಟವಿಪ ನೈರುತಿಯನಿರಿದನು ಬಿಳಚಿಲಾಯುಧದಿ (ಅಂಧಾ. ೨೨-೦೨). **ಮುಟ್ಟಿಸು**: ೪. ಸ್ಪರ್ಶ ಮಾಡು : ಸ್ಪರ್ಶಿಸು : ಕಾಯ ಭಿನ್ನವಾಯಿತ್ತೆಂದು ಮುಟ್ಟಿಸುವರು ಲಿಂಗವನು (ಅವತಂ. ೯೦-೯೦೨). ೫. ಸೇರುವಂತೆ ಮಾಡು ; ತಲುಪಿಸು ; ಬಿಟ್ಟು ಬೆರಸಿದೆ ಸಾಕು ಹರಿಬಿಕೆ ಮುಟ್ಟಿಸಿದ ಗೆಲವಾಯ್ತು (ಕುಮಾ. ೬. ೦೨-೨೯) ; ನನ್ನ ಮನೆಗೆ ಮುಟ್ಟಿಸಿಬಿಡಿ ಸ್ವಾಮಿ (ಕಳಕು. ೬೯) ; ಈ ಚೀಟಿ ಅವರಿಗೆ ಒಯ್ದು ಮುಟ್ಟಿಸು (ಸೀಮಂತ. ೨೩೭). ೬. ಕಚ್ಚು ; ಕಡಿ : ಲೋಹಿತಾಶ್ವ . . . ಹುಳ್ಳಿಯನು ತಾಪಿಡೆಯೊಳ್ ಫಣಿ ಮುಟ್ಟಿಸಿರ್ದುದಂ ನೆನೆಯಿರೆ (ಕಜಕಂ. ೬೪). ೭. ಎಡೆಮಾಡು ; ನೈವೇದ್ಯ ಮಾಡು: ಲಿಂಗವಿರಹಿತರು ಮಾಡಿದ ಬೋನವ ಲಿಂಗವ ಮುಟ್ಟಿಸುವರೆ ದ್ವಾಪಾಕವ ಇಂತೀಯೆರಡು ಪ್ರಕಾರದಿ ಸರಕಂ (ಲಿಂಕಾಚಿಡೋ. ೬೪-೩೭). ೮. ಸಂದಾಯಮಾಡು; ಸಲ್ಲಿಸು : ಅವರ ಸಾಲ ಮುಟ್ಟಿಸು (ರೂಢಿ). **ಮುಟ್ಟೈಸು** : ೨. ಮುಟ್ಟೈಸುವ [ಪಾಠಾಂ. ಮುಟ್ಟೈದುವ, ಜೊಬ್ಬಿಜೊಪುತ] ಸುರನಸೆಚ್ಚ ನಾರಾಮ (ತೊರರಾ. ೬-೨೫-೨೩). [ಮುಟ್ಟು$_1$ + — ಇಸು$_3$]

**ಮುಟ್ಟಯ್ಸು** ' ಮುಟ್ಟಯಿಸು ' ನೋ.

**ಮುಟ್ಟಲ್, ಮುಟ್ಟಲು, ಮುಟ್ಟಲೆ$_1$, ಮುಟ್ಟಳೆ** (ನಾ). ೧. ಸಾಮೀಪ್ಯ; ಹತ್ತಿರ. ೨. ಹೊಲೆ ; ಮುಟ್ಟು ; ಸೂತಕ : "ಮುಟ್ಟವೆ, ಮಾಣಿಕಂ, ಮುಟ್ಟಲ್–ಈ ೩ ಸೂತಕಂ" (ಕಶಸಾ. ೬೦-೬೦೪). **ಮುಟ್ಟಲು** : ೧. ಇದೆ ಲಗ್ನ ಮುಟ್ಟಲಾಯ್ತೆನೆ ತನ್ನ ತಂಗಿಯ ಪಡೆದು ಪಲ್ಲಕ್ಕಿಯೊಳಿಟ್ಟು ಮದುವೆಯ ಮಂಟಪಕಾ ನಮಿರಾಜ ಗಾಡಿಯೊಳೆಯ್ದುತಿರ್ದನು (ಭರತ. ೪೧-೨). ೨. "ರಜಸಂ, ಪುಷ್ಪಂ, ಆರ್ತವಂ – ಈ ೩ ಮುಟ್ಟಲು" (ನಾಚಿರಾ. ೧೧೭) ; "ಮುಟ್ಟವೆ ಮಾಣಿಕಮೆನುತುಂ ಮುಟ್ಟಲುಮೆನೆ ಸೂತಕಾಭಿಧಾನಂ" (ಕಲಿಕಂ. ೨೩೦). **ಮುಟ್ಟಲೆ$_1$** : ೨. ' ಮುಟ್ಟಲೆಗಾಣ್ ' ಪರಾ. **ಮುಟ್ಟಳೆ** : ೩. (?) : ತೊರವೆಯ ಪುರವರಾಧಿಪನಿನ ತನೂಜಾದಿಗಳ ಗಡಣದಲಿ ತಿರುಗಿದನು ಪಾಳೆಯಕೆ ಲಂಕಾಪುರಕೆ ಮುತ್ತಿಗೆ ಯೂದುಪಾ ದಿನದಿರುಳಂಬುಖದಲಿ ಮುಟ್ಟಳೆಯ [ಪಾಠಾಂ. ಮಟ್ಟಳದ, ಮುಟ್ಟಳದ] ಕಟ್ಟಳೆಯ ಕಾಹಿನಲಿ (ತೊರರಾ. ೬-೦೬-೨೯).

[ಮುಟ್ಟು$_2$ + — ಅಲ್$_2$]

**ಮುಟ್ಟಲತಿ** (ನಾ). ಮುಟ್ಟಾದವಳು ; ರಜಸ್ವಲೆ : ಬಾಣತಿ ಬಸುರಿ ಮುಟ್ಟಲತಿಯಾದಲ್ಲಿ ಶೋಣಿತ ಶುಕ್ಲ ದುರ್ಮದವ ಕಾಣುತ ಪೊದಕುಳಿ ಗೊಳುತಿಹರದಜಲ್ಲಿ (ಶರಶ. ೬೫-೩೩).[< ಮುಟ್ಟಲ್ +_ತಿ$_1$ (<–ಇತ್ತಿ)]

**ಮುಟ್ಟಲಮುರಕೆ** 'ಮುಟ್ಟಲುಮುರಿಕೆ' ನೋ.

**ಮುಟ್ಟಲವ್ವಿಯೂರ್** (ನಾ). ಒಂದು ಊರಿನ ಹೆಸರು : ಮುಟ್ಟಲವ್ವಿಯೂರ್ನಾಮ್ನಗ್ರಾಮಮಂ (ಎಸ್ಕಿ. ೧೯೩೬, ೫೩-೨೩ ; 550).

[ ? + ಊರ್]

**ಮುಟ್ಟಲು** 'ಮುಟ್ಟಲ್' ನೋ.

**ಮುಟ್ಟಲುಗಾಣ್** 'ಮುಟ್ಟಲ್ಗಾಣ್' ನೋ.

**ಮುಟ್ಟಲುಮುರಿಕೆ**, ಮುಟ್ಟಲಮುರಕೆ, ಮುಟ್ಟಲುಮುರುಕ (ನಾ). ಮುಟ್ಟಿದರೆ ಮುರುಟಿಕೊಳ್ಳುವ ಒಂದು ಬಗೆಯ ಸಸ್ಯ ; ಮುಟ್ಟಿದರೆ ಮುನಿ : "ಮುಟ್ಟಲುಮುರಿಕೆ = ಖದಿರಿ, ಗಂಡಕಾರಿ, ಗಂಡಕಾಲಿ" (ಗಂಗಾವು. ೪) . **ಮುಟ್ಟಲಮುರಕೆ :** ಮುಟ್ಟಲಮುರಕೆ ಮುಂತಾದ ಕೆಲವು ವನಸ್ಪತಿಗಳು ಕೈಹಚ್ಚಿದ ಕೂಡಲೇ ಮುಚ್ಚಿಕೊಳ್ಳುತ್ತವೆ (ಮುಂಬಯಿ. ೩-೩೫). **ಮುಟ್ಟಲುಮುರುಕ :** ಮುಟ್ಟಲುಮುರುಕದ ಸಸಿಯಂತಿದ್ದ ಇವನು ಒಂದುದೇಶದಿಂದ ಇನ್ನೊಂದುದೇಶಕ್ಕೊಯ್ಯುವದರಲ್ಲಿಯೇ ಕಮರಿಹೋಗಬಹುದೆಂಬ ಭೀತಿಯು ನೋಡುವವರಲ್ಲಿ ಹುಟ್ಟುತ್ತಿತ್ತು (ಸಮಾಜ. ೫೭೯) ; ಪ್ರೀತಿ-ಸಹಾನುಭೂತಿಗಳಿಲ್ಲದ ಜೀವ ಒಂದು ನಾಚಿಕೆಗಿಡ ; ಮುಟ್ಟಲುಮುರುಕ (ಪಶ್ಚಿಮ. ೦೩).

[< ಮುಟ್ಟು$_1$ + ಮುರಿಕೆ$_1$ (< ಮುರಿಗೆ$_1$)]

**ಮುಟ್ಟಲುಮುರುಕ** 'ಮುಟ್ಟಲುಮುರಿಕೆ' ನೋ.

**ಮುಟ್ಟಲೆ$_1$** 'ಮುಟ್ಟಲ್' ನೋ.

**ಮುಟ್ಟಲೆ$_2$** (ನಾ). ಮುಟ್ಟಾದವಳು : ಹೊರಗಡೆಯಾದವಳು ; ರಜಸ್ವಲೆ : ಮುಟ್ಟಲೆಯಾಗಿ ಮೀಯದೆ ಸುಮ್ಮನಿರಬಹುದು ಸುಟ್ಟ ಭಸ್ಮವು ಹಣೆಯೊಳಿರಲು (ಬಸ್ವರಾ. ೨-೪೦) ; ಮುಚ್ಚಿ ಕರಗಸದೆ ಸೀಳ್ವರು ಮುಟ್ಟಲೆಯಂ ನೆರಸಿ ನಡೆದ ಮಹಪಾತಕಿಯಂ (ಮಂಡ್ಯ. III. ಪ್ರಕಸ್ತರೂಪ).

[ಮುಟ್ಟಲ್ + –ಎ$_2$]

**ಮುಟ್ಟಲೆಗಾಣ್** 'ಮುಟ್ಟಲ್ಗಾಣ್' ನೋ.

**ಮುಟ್ಟಲೆಗೊಳ್** (ಕ್ರಿ). ಮುಟ್ಟಾಗು ; ರಜಸ್ವಲೆಯಾಗು : ರಕ್ತಸ್ರಾತಿಂ—ಮುಟ್ಟಲೆಗೊಂಬುದಂ ಕುರಿತು (ನಾಹಟೀ. ೨-೦-೪೭ ವ).

[ಮುಟ್ಟಲೆ$_1$ (< ಮುಟ್ಟಲ್) + ಕೊಳ್$_1$]

**ಮುಟ್ಟಲ್ಗಾಣ್**, ಮುಟ್ಟಲುಗಾಣ್, ಮುಟ್ಟಲೆಗಾಣ್ (ಕ್ರಿ). ಮುಟ್ಟಾಗು : ರಜಸ್ವಲೆಯಾಗು : ರಜಸ್ವಲಾಭಿಗಾಮಿ = ಮುಟ್ಟಲ್ಗಂಡಳಂ ಪೋಪಲು ಗಂಡಳಂ (ಅಭಿವಾ. ೨೫-೪೭). **ಮುಟ್ಟಲುಗಾಣ್** : ಪುಟ್ಟದು ಜಗುಳ್ದೊಡೆ ಕೈಗಂ ನೆಟ್ಟನೆ ಬಪ್ಪಂತೆ ಬಂದೊಡಾತನೆ ಮಿಷ್ಟಂ ಇಟ್ಟೆದ ವಸರಮಾದೊಡೆ ಮುಟ್ಟ[ಟ್ಟ]ಲುಗಂಡಂತೆ ತೊಲಗುವಾತನೆ ಕಷ್ಟಂ (ಅಭಿನಾ. ೨೭೧). **ಮುಟ್ಟಲೆಗಾಣ್ :** "ಪುಷ್ಪವತಿ ಮುಟ್ಟಲೆಗಂಡ ಸ್ತ್ರೀ" (ನಾತರಾ. ೪); ಮುಟ್ಟಲೆಗಂಡ ಸ್ತ್ರೀಯಂತಿಟ್ಟುಮಿರಲ್ಕಿಲ್ಲ ನಾಲ್ಕುದಿವಸಂ (ಧರ್ಮಾಮೃ. ೦೪-೦೫೮) ; ಮುಟ್ಟಲೆಗಂಡು ಮಕ್ಕಳನು ಹಡೆಯದಿರ್ದ ಹುಟ್ಟುಬಂಜೆಯರೆಂದೆನುತ . . . ನಗುತಿಹರು (ಗೋಪಸುದೀ. ೦-೦೨೪).

[ಮುಟ್ಟಲ್ + ಕಾಣ್]

**ಮುಟ್ಟವಿಸು** 'ಮುಟ್ಟಯಿಸು' ನೋ.

**ಮುಟ್ಟವೆ** (ನಾ). ಮುಟ್ಟಾಗುವುದು ; ಹೊರಗಾಗುವುದು : "ಮುಟ್ಟವೆ, ಮಾಣಿಕಂ, ಮುಟ್ಟಲ್ – ಈ ೩ ಸೂತಕಂ" (ಕಶಾ. ೭೦-೬೦೪); ಮುಟ್ಟವೆಯನಳಿದ ಸತಿಯಂತೆ ರಂಜಿಸಬೇಕು (ಲಿಂಗಪು. ೨೨-೨).

[< ಮುಟ್ಟು$_2$ + –ವೆ]

**ಮುಟ್ಟವೆಗಾಣ್** (ಕ್ರಿ). = ಮುಟ್ಟಲ್ಗಾಣ್ : "ಅವೀಃ, ಉದಕ್ಯಾ, ರಜಸ್ವಲಾ, ಆತ್ರೇಯಿಕಾ, ಪುಷ್ಪವತೀ – ಈ ೫ ಮುಟ್ಟವೆಗಂಡವಳ್. ಕನ್ಯಕಿಯಾಗಿ ಮುಟ್ಟವೆಗಂಡವಳ್ ತಾಕಾಯೆಂಬುದು" (ಪರಾಯು. ೮೦-೩೩೪).

[ಮುಟ್ಟವೆ + ಕಾಣ್]

**ಮುಟ್ಟಸ** 'ಮುಷ್ಟ$_2$' ನೋ.

**ಮುಟ್ಟಸು** 'ಮುಷ್ಟ$_2$' ನೋ.

**ಮುಟ್ಟಹಾಳ** 'ಮುಟ್ಟಾಳ' ನೋ.

**ಮುಟ್ಟಳೆ** 'ಮುಟ್ಟಲ್' ನೋ.

**ಮುಟ್ಟಾಟ** (ನಾ). ಪರಸ್ಪರ ಸ್ಪರ್ಶಿಸುವುದು, – ಮುಟ್ಟುವುದು : ಕಟ್ಟಾಸೆ ಅರಮನೆಗೆ ಮೆಟ್ಟಾಸೆ ಕಾಲಿಂಗೆ ಪಟ್ಟಣದಾಸೆ ಹರದಂಗೆ ಹಾದರಕೆ ಮುಟ್ಟಾಟದಾಸೆ (ಸರ್ವಜ್ಞ. ೦೭೭೪) ; ಆಡತ – ನಗೆ ಕುಲುಕುಲಿಸಿ ಕಣ್ಣುಮುಚ್ಚಣಿಕೆಯಲಿ ಮುಟ್ಟಾಟ ಹುಡುಕಾಟವಾಡುತಿಹುದು (ಗಂಗಾತ. ೬೦-೦). [ಮುಟ್ಟು$_1$ + ಆಟ]

**ಮುಟ್ಟಾಳ**, ಮುಟ್ಟಹಾಳ, ಮುಟ್ಟುಹಾಳ, ಮುಟ್ಠಾಳ, ಮುಟ್ಠಾಳ, ಮುಠ್ಠಾಳ (ನಾ). ಮುಟ್ಟಿದುದನ್ನು ಹಾಳುಮಾಡುವವನು, ಬುದ್ಧಿಗೇಡಿ ಎಂಬರ್ಥದಲ್ಲಿ ಬಳಸುವ ಒಂದು ಬೈಗುಳು : ಗುರುಗಳು ಇವರು ಮುಟ್ಟಾಳರೆಂದು ನಿಶ್ಚಯಿಸಿ . . . ಹೊರಟುಹೋದರು (ಪಗಗ. ೦). **ಮುಟ್ಟಹಾಳ :** ನಮ್ಮ ಅಧಿಕಾರಿಗಳೆಲ್ಲಾ ಮುಟ್ಟಹಾಳರು, ಅವರಿಗೆ ಉಪಾಯವಾಗಿ ಕೆಲಸ ಮಾಡುವುದಕ್ಕೆ ಬಾರದು (ಕೇದಿಶು. ೫೪). **ಮುಟ್ಟುಹಾಳ :** "ಪ್ರತಿಷ್ಠೆ ತೋರಿಸುವ ಕೀಳಧಿಕಾರಿ, ಮುಟ್ಟುಹಾಳ" (Bumble. ೨೦೪೫). **ಮುಟ್ಠಾಳ :** ಛತ್ರದ ಜನರು ಮುಟ್ಠಾಳರಾಗಿದ್ದಾರೆ (ಪುಷ್ಪಮ. ೦೫೭) ; ಮೂರ್ಖ – ಮಂಕ – ಮಡೆಯ – ಮುಟ್ಠಾಳ (ಜೀವಾಕ. ೫); ಮುಟ್ಠಾಳ, ತಿಳಿಗೇಡಿ, ದುರ್ವಿದಗ್ಧ ! ಮುಚ್ಚು ಬಾಯಿ (ರಾಮಾಸ. ೭೩). **ಮುಟ್ಠಾಳ :** ನೆಕ್ಲುದೋವ್ ವಿಧಿಯಿಲ್ಲದೆ 'ಮುಟ್ಠಾಳ' ಎಂದು ಗೊಣಗಿದನು (ಪುನರು. ೨೫೩). **ಮುಠ್ಠಾಳ :** ನಮ್ಮ ವರ್ಗದಲ್ಲಿ ಈ ಮುಠ್ಠಾಳರನ್ನು ಬಿಟ್ಟರೆ ಇಂಥ ಹೇಸಿ ಕೆಲಸವನ್ನು ಮಾಡುವವರು ಇರುತ್ತಾರಾವರೂ ಯಾರು ? (ರಂಗರಿಕೀ. ೯೦) ; ಏನು ಮುಠ್ಠಾಳನೊ ನೀನು ಹರಿ ! (ಪತಿದಾ. II. ೬೭೭) ; ಲೋ ಮುಠ್ಠಾಳ, ಇದೇನೋ ಕಾಳಭೈರವನ ನೃತ್ಯ ! (ಕಲಾಶಾ. ೨).

[ದೇ.॥ ತಮಿ. ಮುಟ್ಟಾಳ್ ; ಮಲ. ಮುಟ್ಟಾಳ್, ಮುಟ್ಟಾಳನ್ ; ತುಳು. ಮುಟ್ಟಾಳ್]

**ಮುಟ್ಟಾಳು** (ನಾ). ಮುಟ್ಟಬಹುದಾದ (ಜಾತಿಗೆ ಸೇರಿದ) ಮನುಷ್ಯ–ಆಳು ; ಅಸ್ಪೃಶ್ಯಜಾತಿಗೆ ಸೇರದವನು : ಪುಟ್ಟಣ್ಣ, ಸೇರೆಗಾರರು, ನಿಂಗ ಮೊದಲಾದ ಮುಟ್ಟಾಳುಗಳು (ಮುಟ್ಟಬಹುದಾದ ಜಾತಿಯವರು ಎಂದರ್ಥ . . . ) ಆ ಪದಾರ್ಥಗಳನ್ನೆಲ್ಲ ಹೇಳದಂತೆ ಎರಡು ಭಾಗವಾಗಿ ಬೇರೆ ಬೇರೆ ಮಾಡತೊಡಗಿದರು (ಕಾನೂರು. ೩೪೦); ಅಯ್ಯೋ, ಮುಟ್ಟಿದ್ದಕ್ಕೆ ಬೇಸರವಾಯಿತೇ ? ನಾನು ಗೌಡ, "ಮುಟ್ಟಾಳು" (ಜಗುಳ. ೦೦೦).

[ಮುಟ್ಟು$_1$ + ಆಳು$_3$ (< ಆಳ್)]

**ಮುಟ್ಟಾಳೆ** (ನಾ). (ಕರಾ) ಅಡಕೆಪಟ್ಟೆಯಿಂದ ಮಾಡಿದ ಟೋಪಿ ; ಪಟ್ಟೆಟೋಪಿ : ವಾಸುದೇವಭಟ್ಟರು ತಲೆಗೆ ಮುಟ್ಟಾಳೆಯಿಟ್ಟು ಕೈಯಲ್ಲಿ ಕತ್ತಿ ಹಿಡಿದು ತೋಟಕ್ಕೆ ಹೊರಡಲನುವಾಗಿದ್ದರು (ಶ್ರಾಂತಿಸು. ೭೦) ; ಕಣ್ಣ ಮುಟ್ಟಾಳೆ ತಲೆಗಿಟ್ಟು ಬಳೆತೊಟ್ಟು ಹೊಂಗದಿರ ಕಳಕೆ ನಡೆತಂದ (ಜಾನಗೀ. ೨೮). [← ತುಳು. ಮುಟ್ಟಲೆ, ಮುಟ್ಟಳೆ]

**ಮುಟ್ಟೆ$_1$** (ನಾ). ಮುಚ್ಚಿದ ಅಂಗೈ ; ಮುಷ್ಟಿ : "ಮುಟ್ಟೆ – ಮುಷ್ಟಿ – ಬಲಿದ ಕೈಹಿಡಿ" (ಶಬ್ದಕೋ. ೩೭) ; ವೀರನಾದೊಡೆ ಕೈದು ಮುಟ್ಟೆಗಳ ಘೋರಪ್ರಹಾರಮಂ ತೋಜಿಸು (ಕ್ಷೈಮಿಭಾ. ೪-೩೩). [< ಸಂ. ಮುಷ್ಟಿ]

**ಮುಟ್ಟಿ₂** 'ಮುಟ್ಟಿಗೆ₁' ನೋ.

**ಮುಟ್ಟಿಗೆ₁**, ಮುಟಗೆ, ಮುಟ್ಟಿ₃ (ನಾ). ೧. = ಮುಟ್ಟಿ₁ : ಗಾಡಿಗ ಡಿಂಬು ಗಂಗೆ ಚಿಕ್ಕು ಮುಟ್ಟಿಗೆ ಹಸುರಂಬಲಿ ಮುಟ್ಟಿಗೆ ಹುರಿಬುತ್ತಿಯು ಬೇಡಿ . . . ಈಡಾಡಿದ ಕೂಳಂಬಲಿಯುನಾಯ್ದು ಕುಟುಕುವ ಹೇಸಿದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ (ಬಸವ. ೩೩೭) ; ಷಕಾರಕ್ಕೆ ಟತ್ವಂ . . . ಮುಷ್ಟಿಕಾ – ಮುಟ್ಟಿಗೆ (ಶಮಂದ. ೨೮೩ ಕ್ರಿಡೆ೩೯) ; ಗಟ್ಟಿಕಾಳುಗಳನ್ನೆ ಮುಟ್ಟಿಗೆಯಲ್ಲಿ ಹಿಡಿಯಬೇಕೆಂದೇಕೆ ಚಪಲ (ನೆಲಮು. ೨೭-೭). ೨. ಯಾವುದಾದರೂ ವಸ್ತುವೊಂದನ್ನು ಚಿವುಟಿ ಹಿಡಿಯುವ ಇಕ್ಕುಳದಂತಹ ಒಂದು ಬಗೆಯ ಸಾಧನ : "ಮುಟ್ಟಿಗೆ (ಮುಟ್ಟಿ) – ಮುಷ್ಟಿಕಾ = ಒಂದು ಉಪಕರಣ" (ತದ್ಭಕೋ. ೩೭) ; ಐಟಿಸೆಯ ನರಕದೊಳ್ ಮಹಾಪತ್ಸುಮಹಾಜುಸಾಗರೋಪಮಾಯುಷ್ಯಮನೊಡೆಯರ್ ನಾರಕರಾಗಿ ಪುಟ್ಟಿ ಛೇದನಭೇದನಪೂರಣಚೂರಣಪೀಡನಬಂಧನಂಗಳುಮಂ ಮುಟ್ಟಿಗೆಯೊಳಿಟ್ಟು ತೆಗಪುವುದುಂ ಕೋಂತಂಗಳಿಂ ಮುಟ್ಟಿಗಳಿಂದಂ ಕರುಳ್ಗಳಂ ಸೋರೆಕುತ್ತುವುದುಂ . . . ಪೋಟ್ಟುದುವೆಂದಿವು ಮೊದಲಾಗೊಡೆಯ ದುಃಖಂಗಳಂ . . . ಅನುಭವಿಸುವರ್ (ವಡ್ಡಾರಾ. ೯೭-೨೭) ; "ಮುಟ್ಟಿಗೆಯೊಳಿಟ್ಟು-ಕೊಡತಿಗಳಿಂದ ಹೊಡೆದು" (ವಡ್ಡಾರಾ. ೬೫೬). ೩. ದಿಕ್ಕುಗಳಿಗೆ ಎಸೆದು ಚೆಲ್ಲುವ ಬಲಿ : ಜಗಕ್ಕಿದು ಮಂಗಳವೆಂದು ರೌದ್ರದೇವತೆ ಪಿಡಿದಿಕ್ಕುವಾವಿಷದ ಮುಟ್ಟಿಗೆಯೆಂಬಿನೆಗಂ ಸಿಡಿಲ್ದು ದಿಗ್ವಿತತಿಗೆ ಸೂಸೆ ಮುನ್ನಮೆರೆಯಾದ ರುರುಪ್ರಜಪಾಗಳಾಸ್ಯದಿಂ ಪ್ರತಿಘದೊಳೆತ್ತಿ ಬೀಸಿದುದದೊಂದು ಮದದ್ವಿರದಂ ಮಹಾಹಿಯಂ (ಜಗಂ. ೧೭-೭); ಧರೆಯೊಳತಿಬಲನೆನಿಪ ಕೀಚಕನ ಸಾನುಜರ ಮುಜಿದು ಮುಟ್ಟಿಗೆಯ ಮಾಡಿದೆಲ ಭಾಪುರೆ (ಕುರಂದ. ೩-೭೫-೨). ೪. (?) : ಕಟ್ಟಿದರು ರಕ್ಷೆಗಳ ವಜ್ರದ ಮುಟ್ಟಿಗೆಯ ತಾಬ್ಬಿತಗಳ ಮಣಿಗಳ ನೆಟ್ಟ ಕಾಲಂದುಗೆಯ ಖಡೆಯ ದೊಳೆಸೆದ ಗಜಪಾಳಿ (ಅಂಬಿಕಾ. ೨೮-೧೭). **ಮುಟಗೆ :** ೫. ಒಂದು ಬಗೆಯ ಆಯುಧ (?) : ತೀಮಯ್ಯಸೆಟಿ ಮಾಡಿ ಧರ್ಮ ಭೇರಿ ಜೇಗಟೆ ಕಂಚು ಮುಟಗೆ ಮಾಡಿದು ಮುಗುದಿನ ಪೋಗೆ ತ್ರಸೆಯಲಿ (ಕಾಇಶಾ. IX–ii, ೯೭೦–೯೭ ; 1482). **ಮುಟ್ಟಿ₂ :** ೬. "ಮುಟ್ಟಿಗೆ (ಮುಟ್ಟಿ) – ಮುಷ್ಟಿಕಾ = ಒಂದು ಉಪಕರಣ" (ತದ್ಭಕೋ. ೩೭). ೭. ನೆಲವನ್ನು ಕುಟ್ಟಿ ಸಮಮಾಡುವುದಕ್ಕಾಗಿ ಬಳಸುವ ಒಂದು ಬಗೆಯ ಮರದ ಸಾಧನ ; ದಮ್ಮಸು : 'ಕೈಮುಟ್ಟಿ' ಪರಾ.

[ < ಸಂ. ಮುಷ್ಟಿಕ./ತಮಿ. ಮುಟ್ಟಿಕೈ = ಸಣ್ಣ ಉಳಿ ; ಮಲ. ಮುಟ್ಟಿ = ಸಣ್ಣ ಉಳಿ]

**ಮುಟ್ಟಿಗೆ₂**, ಮುಟ್ಟುಗೆ (ನಾ). ೧. ಸೌದೆ ; ಕಟ್ಟಿಗೆ : ಅನಲಂಗೆ ಸಮಿಧೆ ದರ್ಭೆಯ ತುಪ್ಪಕೊಡಗಳಂ ಚನ್ನಾಗಿ ಮುಟ್ಟಿಗೆಯ ಹೊರೆಗಳಂ ವಿಪುಳತರ ಯಾಗಕಂ ಕೂಡಿಸಿದರು (ಕುರಂಗ. ೭-೨೯). ೨. ಹೆಣವನ್ನು ಸುಡಲು ಒಟ್ಟಿದ ಸೌದೆಯ ರಾಶಿ ; ಚಿತೆ : ಮುಟ್ಟಿಗೆಯ ಮೇಲಿರ್ದ ಸುತನ ಹಿಂಗಾಲ್ವಿಡಿದು ಸೆಳೆದು ಬಿಸುಟಂ ಭೂಪನು (ಹಕಾ. ೧೨-೩೭). **ಮುಟ್ಟುಗೆ:** ೨. ಮುಟ್ಟುಗೆಯ ಪೆಣನನೊರ್ವಂ ಜಟ್ಟಂಗಂ ನೆಗಪೆ (ಮುಹಾವೇ. ೪-೩೨).

[ ? ]

**ಮುಟ್ಟಿಗೆ₃**, ಮುಷ್ಟಿಗೆ (ನಾ). ಒಂದು ಬಗೆಯ ಸಸ್ಯ : ದೊಡ್ಡಪತ್ರೆ : ತೆಗೆಬ ಕುಡಿಯಿಸುಗೆ ಶಿವೆ ಕಳವಿಗೆ ಬಾಳಂ ಕಕ್ಕ ಮುಸ್ತೆ ಪರ್ಪಟಕಂ ಮುಟ್ಟಿಗೆಯೆಂಬಿವಿನಿತುಮಂ ಪೈತ್ತಿಗಜ್ವರಂ . . . ಅಟುಗಾ (ಲೋಕೋಪ. ೯-೧೮). **ಮುಷ್ಟಿಗೆ :** ಸಿರಿಕಂಡಂ ಮುಷ್ಟಿಗೆ . . . ಕೊತ್ತುಂಬರಿಯೆಂಬಿವನೆಂಟೊಂದಾಗಿರೆ ಮುಜುಗಿಸಿ ಕುಡಿಯೆ ಪೈತಿಕಜ್ವರ ಹರಣಂ (ಲೋಕೋಪ. ೯-೧೭) ; ಮಧುಕಂ ಮುಷ್ಟಿ[ಶಾಕಾಂ. ದ್ವಿ]ಗೆ ಸಕ್ಕರೆ ಮಧುಜೀವನಿ ಪದ್ಮಕಂಗಳಂ ತಳ್ತು (ಅಶ್ವಶಾ. ೭-೬೩). [ ? ]

**ಮುಟ್ಟಲಿ** (ನಾ). ಮುಟ್ಟಿದುದನ್ನು ಇಲ್ಲವಾಗಿ ಮಾಡುವವನು : ನಿಮ್ಮಂಥಾ ಮುಟ್ಟಲಿಗಳಿಂದಲೇ ನಮ್ಮ ದೇಶವು ಹಾಳಾಯಿತು (ಮುಸುಗ. ೧೯೭). [ ಮುಟ್ಟು₁ + – ಇಲಿ₃ ]

**ಮುಟ್ಟವಿಡಿ** (ಕ್ರಿ). ಮುಷ್ಟಿಯನ್ನು ಭದ್ರವಾಗಿ ಮುಚ್ಚು — ಬಿಗಿಗೊಳಿಸು : ಮುಟ್ಟವಿಡಿದಂದು ಗುರ್ದುತೆ ಕಷ್ಟರ್ ಸಕಲಾಯುಧಂಗಳಂ ಬಂಧಿಸುತಂ ದುಷ್ಟಪೂಜೆಗಳನೆಸಗುತ್ತೆ ಶಿಷ್ಟತೆಯಂ ಬಿಟ್ಟು ಕೆಟ್ಟು ನುಡಿವರ್ ತಡೆವರ್ (ಜಾರಾಸ. ೪-೧೫-೨೮). [ಮುಟ್ಟಿ₁ + ಪಿಡಿ₁ (<ಬಿಡಿ₁)]

**ಮುಟ್ಟಿಸು** 'ಮುಟ್ಟಯಿಸು' ನೋ.

**ಮುಟ್ಟು₁** (ಕ್ರಿ). ೧. ಸೋಕು ; ಸ್ಪರ್ಶಿಸು ; ತಾಕು : "ಮುಟ್ಟು – ಸ್ಪರ್ಶನೇ, ಉಪಕರಣೇ ಚ" (ಶಮಧಾ) ; ಉರಿ ಮುಟ್ಟಿದರಳೆಯಂತಂ ಬಿರಮುರಿದತ್ತು (ಶಂಶಬಾ. ೧೦-೩೭) ; ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನ ಕ್ರಮಂ ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ . . . ಕವಿಗಳ್ ಕೃತಿಬಂಧದೊಳಲ್ತೆ ಕಟ್ಟಿದರ್ ಮುಟ್ಟಿದರ್ (ರೇಚಾವ. ೧-೧೦) ; ತೊಲಗು ತೊತ್ತಿನ ಮಗಳೆ ಮುಟ್ಟದಿರೆಲೆಯ ವಿಬುಧರ (ಕೊರಾ. ೧-೧೦-೧೩) ; ಮುಟ್ಟಿ ಭಾಷೆಯ ಕೊಟ್ಟು ಮೋಸವನೆ ಮಾಡುವರು (ಪುರಂದ. ೧-೨೮-೨). ೨. ಸೇರು ; ತಲುಪು : ಜಾಣನಂತು ಮೆಚ್ಚಿದ ತೇಜದಾಸೆಪಟ್ಟಲಸಡೆತ್ತಿದಪೋಲ್ ದೊರೆವೆತ್ತು ದೂಟಿದಾಟಿದ ದನಿ ಮುಟ್ಟಿ ಮೇನಕೆ ಸರಸ್ವತಿ ಬಾಜಿಬ್ಬೆಜಿದಂತೆ ಪಾಡಿದಳ್ (ಶಂಶಬಾ. ೭-೮೮) ; ಇಳೆಯುಂ ಸಾಸಿರಯೋಜನಂಬರೆಗಮಾನುರ್ಚಿರ್ದನಿರ್ದುಂ ಮಹೀತಳಮಧ್ಯಸ್ಥನೆನಂತುಮಲ್ಲದೆಯುಮಿಂದ್ರಾವಾಸಮಂ ಮುಟ್ಟಿದಂ (ಸುಕುಮಾ. ೧-೭೩) ; ಮೂದಲೆಗಳವು ಮುಟ್ಟುವಡೆ ಮುನಿಸಾದಹೊಳ್ಳಿತು (ಕುಪ್ಪಾರಪ್ರಿ. ೧೯-೨೭) ; ನೇಮಿಕೆಯ ಪತ್ರವು ಬಂದು ಮುಟ್ಟಿತು (ಹೇಮಂಕ. ೧೮೦). ೩. ಹತ್ತಿರಬರು ; ಸಮೀಪಿಸು : ಸಿಡಿಲ್ವೊಡೆದವೊಲಟ್ಟಿ ಮುಟ್ಟಿ ಕಡಿದಿಕ್ಕಿದುದಾದೆಡರಂ (ಶಂಶಬಾ. ೦-೯೯) ; ನೆಗಟ್ಟಿದ್ದ್ಯಚ್ಚಿವಮೂರ್ತಿಗೀಯೆ ಸತಿಯಂ ತದ್ಬಾಂಧವಶ್ರೇಣಿ ಬಂದು ಗಡಂ ತಾಂ ಬಿಡದಟ್ಟಿ ಮುಟ್ಟಿ ಕವಿಯಲ್ (ಉದ್ಭಟ. ೦೨-೦೪). ೪. ಸೇವಿಸು ; ಸ್ವೀಕರಿಸು : ತನಗೆಂದಿಟ್ಟ ಪಾಲನೀ ಶಿಶು ಮುಂದೆ ಮುಟ್ಟನೆಂದುಮ್ಮಳಿಸಿ (ಸಿದ್ಧರಾ. ೦-೩೦) ; ಅವನು ಒಂದು ತುತ್ತು ಆಹಾರವನ್ನು ಮುಟ್ಟಲಿಲ್ಲ (ರಾವಿಜ. ೫). ೫. ದೇಹ ಸಂಬಂಧವನ್ನು ಹೊಂದು ; ಕೂಡು : ಮುನ್ನ ಮುಟ್ಟಿತ್ತೆ ಮುಟ್ಟಿತ್ತು ಇನ್ನು ಮುಟ್ಟಿದೆನಾದರೆ ನಿಮ್ಮ ರಾಣಿವಾಸದಾಣೆ (ಬಸವ. ೬೯೭) ; ನೀಂ ಮುಟ್ಟಿದ ನಂದನೆಯಂ ಬಹುಮತಿಸುತೆ ನಿನ್ನನೆ ಪಾತ್ರೀಕರಿಸಿ ಬಿಟ್ಟ ಮುನಿಯ ವಿಮಾನ್ಯಂ (ಶಾಕುಂತ. ೩೮-೦೨೦). ೬. ಸಲ್ಲು ; ಸಂದಾಯವಾಗು : ಇದು ನನ್ನ ಪಾಲು, ನನಗೆ ಮುಟ್ಟಿತು (ಮುಂಬಯಿ. ೬. ೪-೧೦). 'ಮುಟ್ಟುವಳಿ' ಪರಾ. ೭. ಅನುಭವಿಸು : ಪುಟ್ಟದ ಜಾತಿ ಮೆಟ್ಟದ ನೆಲಂ ನೆಟಿ ಕೊಳ್ಳದ ಕಾಲ ಮೊರ್ಮೆಯುಂ ಮುಟ್ಟದ ಭಾವವೇದದ ಭವಂ ಪೆಱತಿಲ್ಲನೆ (ಶಬ್ದಶಾ. II. ೬೦೭). ೮. ಪಡೆ ; ಹೊಂದು : ಕೊಟ್ಟಿದ್ದು ಮುನ್ನಿಲ್ಲ ಮುಟ್ಟಿದಱಿವುಗಳಿಲ್ಲ ಕೆಟ್ಟ ವಿಷಯಗಳ ಬಿಡಲಿಲ್ಲ ಸ್ವರ್ಗದ ಬಟ್ಟೆ ಬೇಱೆ (ಸರ್ವಜ್ಞ. ೬೯೭). ೯. ಕಚ್ಚು ; ಕಡಿ : ಶಾಪದೆ ಪಾವು ಮುಟ್ಟದೊಡೆ (ಎಶಿ. II, ೨೦-೦ ; 700) ; ಅಳುರದು ಕಿರ್ಚು ಮುಟ್ಟದ್ದು ವಿಷಾಹಿ ಮಹಾಸತಿಯಿರ್ದ ಮಂಡಲಂ ಬೆಳೆವುದು (ಅಕಳ. ೦-೭೫). ೧೦. ತಿನ್ನು ; ಮೇಯು : ಆಡು ಮುಟ್ಟದ ಗಿಡುವಿಲ್ಲ (ಧರ್ಮೋತ್ತು. ೩-೪೨).

ಮುಟ್ಟಿದರೆಮುನಿ=ಮುಟ್ಟಿದ ತಕ್ಷಣ ಎಲೆಗಳನ್ನು ಮುದುಡಿಕೊಳ್ಳುವ ಒಂದು ಬಗೆಯ ಸಸ್ಯ : "ಅಂಬಾಲಿಕ—ಮುಟ್ಟಿದರೆ ಮುನಿ" (ಅಕಾಶ. ೦-೯) ; ಮುಟ್ಟಿದರೆ ಮುನಿ . . . ಲಜ್ಜಾವತಿ (ಪ್ರಶಿಗ. ೩೪-೦೦೭೯). ಮುಟ್ಟಿದರೆ ಮುರುಟ=ಮುಟ್ಟಿದರೆ ಮುನಿ : ಮುಟ್ಟಿದರೆ

ಮುರುಟಿಯನ್ನು ಹಿಡಿಹಿಡಿಕೆಯನ್ನೂ ಅಂಬಿಲದಲ್ಲಿ ಅರೆದು ಪೂಸಲು ಅಂಡವಾತ ಮಾಣ್ಗುಂ (ಖಗೇಂ.ದ. ೯೦).

[ದೇ.॥ ಮಲ. ತುಳು. ತೆಲು. ಮುಟ್ಟು : ಕೋತ. ತೊದ. ಮುಟ್]

**ಮುಟ್ಟು$_2$** (ನಾ). ೧. ಸೋಕುವುದು; ಸ್ಪರ್ಶ : ಹಸುವಿಂಗೆ ಸಂಜ್ಞೆ ಎತ್ತಿಂಗೆ ಮುಟ್ಟು ಕಜುವಿಂಗೆ ಲಲ್ಲೆ (ತುಉಗಾ. ೪. ೪೩೭-೭). ೨. ಹತ್ತಿರ : ಸಮೀಪ : 'ಮುಟ್ಟೊಳಗೆ' ಪರಾ. ೩. ಅಶುದ್ಧತೆ ; ಮೈಲಿಗೆ : 'ಮುಟ್ಟುಪಡು' ಪರಾ. ೪. ಹೆಂಗಸಿನ ರಜಸ್ಸು : "ಮುಟ್ಟುವೆಯೆನೆ ಮಾಣಿಕವೆನೆ ಮುಟ್ಟನೆ ಪೊಲೆ ಸೂತಕಾಭಿಧಾನಂ" (ಚಕುಂ. ೩೦) ; ಮುಟ್ಟಿನ ಪೊಲೆಯೊಳಗೆ ಹುಟ್ಟಿಹನು ಶಿವಯೋಗಿ (ಸರ್ವಜ್ಞ. ೯೬೩) ; ಮುಟ್ಟಿನ ದೋಷದಿಂದ ಮಗುವಿಗೆ ಈರಲಾಗಿದೆ (ರೂಢಿ). ೫. ಸಾಮಾನು ; ಉಪಕರಣ ; ಸಾಧನ : "ಪರಿಸರದೊಳುಪಕರಣದೊಳ್ ಮುಟ್ಟು" (ಶಬ್ದಮಂ. ೮೯) ; ತೊಟ್ಟನೆ ಕೊಳೆ ಚತುರಂಗದ ಮುಟ್ಟಂ ಕಿದಱಿದವೊಲ್ (ಶಾಂತಿಪು. ೩-೩೯) : ಕನ್ನದ ಮುಟ್ಟುಂಗಳಂ ತಂದಂ (ಶಂಕಹಂ. ೦. ೦೭೦-೦೭) ; ಸುತ್ತಿಗೆಯು ಕೈವಾರದ ಕಂಜಚ್ಚಿನ ಕೊಱಪೆಯಡಗಲ್ಲ ಆರಸ ಮುಟ್ಟೊಪ್ಪಟ್ಟಯಿಸಿರೆ (ರಾಜಶೇಖ. ೦೦೩-೨೦). ೬. ಮದ್ದಳೆಯ ಮರದ ಚೌಕಟ್ಟು : (ಕ). ೭. ಚರ್ಮವಾದ್ಯವನ್ನು ಬಾರಿಸಲು ಬಳಸುವ ಕೋಲು : "ಆವುಜದ ಮುಟ್ಟಿನೊಳ್ ಲಾಳವಿಂಡಿಗೆಯೊಳಂ ಬಲ್ಲರಿಂದಗುಬಾಯಕ್ಕುಂ" (ಸಂಜೀವ. ೦೩) ; ಅಗ್ಗ ಟೀಕೆ— ಲಾಳವಿಂಡಿಗೆ, ಆವುಜದ ಮುಟ್ಟು (ಶಮದ. ಶಂ. ೧). ೮. ಅಡ್ಡಿ ; ಎಡರು : ಪ್ರತಿಬಂಧ : 'ಮುಟ್ಟುಗೋಳು'. 'ಮುಟ್ಟಿಡೆ' ಪರಾ. ೯. ಕಕ್ಕಾಬಿಕ್ಕಿ ; ದಿಗ್ಭ್ರಮೆ : (ಕ). ೧೦. ಉಪಯೋಗ ; ಪ್ರಯೋಜನ : ಆ ಗಿರೀಂದ್ರ ಕಂದರದೊಳ್ ತಪಂಗೆಯ್ವ ತಪೋಧನರ ತಪಂಗಳೆಲ್ಲಮಾತನ ತಪೋಮಯಶಿಖಿಗಳಿಂ ಬೆಂದು ಬೆಂದ ನುಲಿಯಂತೇ ತರ್ಕಂ ಮುಟ್ಟಲ್ಲದೆ ಮುಟ್ಟುಗಿಡೆ (ಶಂಕಶಾ. ೭-೬೦ ವ) : ಪರಮ ದಯೆಗೆಯ್ ನಿನ್ನೊಳ್ ತೊಟ್ಟೊಂದು ಭಕ್ತಿಯನಾದರಂಬೆರಸು ಪೆಱತೊಂದೇ ಮುಟ್ಟಾಮೊಲ್ಲೆಮಂತದನೆಂಬ ತತ್ಪುರಸಮವಾದಮಂ ಚೇತೋವಾಕ್ಕಾಯ ಶುದ್ಧಿಗಳೊಳ್ ತಮೋಹರನನೆಱೆದರ್ (ಶಾಂತಿಪು. ೧೧-೨೦). 'ಮುಟ್ಟುಗೆಡು' ಪರಾ. ೧೧. ಸಮಾನ ; ಸಾಟಿ : ಮಾನಿಯುಂ . . . ಮನಸ್ವಿಯುಮಂತಾ ಮಾನಸರನಾರುಮಂ ಮನಕೇನುಂ ಮುಟ್ಟಲ್ಲದಂತು ಬಗೆವುದು ದೋಷಂ (ಶಾಂತಿ. ೩-೦೭೦) ; ಜಯವರ್ಮಂ ಕೊಟ್ಟಪೆನೆಂದಿದಿರ್ದಾತನಚಿರಾಯುಷ್ಯಂ ಮುಟ್ಟಿಟ್ಟಲ್ಲನೆಂದು ಮಾಣಿಸಿ (ಚಂದ್ರಪ್ರ. ೩-೦೦೨).

**ಮುಟ್ಟಾಗು** = ಹೊರಗಡೆಯಾಗು : ರಜಸ್ವಲೆಯಾಗು : ಮುಟ್ಟಾಗಿ ಇದ್ದೇನೆ ಮನೆಯೊಳಗ್ಯಾರಿಲ್ಲ ನಿಷ್ಠುರ ಮಾಡದೆ ಹೋಗೋ ದಾಸಯ್ಯ (ಪುರಂದ. ೦-೦೪೦-೩) ; ಶಾರದೆ . . . ಮುಟ್ಟಾದಾಗ ಹೀಗೆ ತವರು ಮನೆಗೆ ಬಂದುಬಿಟ್ಟದ್ದು ಇದುವೆ ಮೊದಲ ಸಾರಿಯಲ್ಲ (ಮೂಕಿಂಬ. ೩೭). **ಮುಟ್ಟುತಟ್ಟು**=ಮುಟ್ಟುಚಟ್ಟು ೧ : ಬ್ರಾಹ್ಮಣಸ ಭಕ್ತಿ ಮುಟ್ಟುತಟ್ಟಿನಲ್ಲಿ ಹೋಯಿತ್ತು (ಮುದ್ದಣ. ೦೩-೦೫) ; ಒಡಸೆಯ ಒಡಲೆಲ್ಲ ಸವಿರೂಪು ನುಡಿಕಂಪು ಮುಟ್ಟುತಟ್ಟಿನೊಳಿದೆ ಭೂಭುವನ (ಮುಕ್ತಕಂ. ೨-೦೯). **ಮುಟ್ಟುನಿಲ್ಲು** = ಹೊರಗಡೆಯಾಗುವುದು ನಿಂತುಹೋಗು : ಅರೆತಲೆಬೇನೆ . . . ಕೆಲವೇಳೆ ಮುಟ್ಟು ನಿಂತ ಮೇಲೆ (ಮೆನೋಪಾಸ್) ಹೆಚ್ಚಾಗುತ್ತದೆ (ಶಬ್ದಕೋ. ೧-೪೯೭). **ಮುಟ್ಟುನೀರು** = ಹೊರಗಡೆಯಾದ ಕೂಡಲೆ ಅಥವಾ ಹೊರಗಡೆಯಾದ ಮೂರುದಿನಗಳ ನಂತರ ಮಾಡುವ ಸ್ನಾನ : ಮುಟ್ಟುನೀರು ಹಾಕಿಕೊಂಡು ಆಕೆ ಊರಿಗೆ ಹೊರಟಳು (ರೂಢಿ). **ಮುಟ್ಟುಮನೆ** = ಹೊರಗಡೆಯಾದ ಅಥವಾ ಹೆತ್ತ ಹೆಂಗಸು ಇರತಕ್ಕ ಕೊಟಡಿ : (ಕ).

[< ಮುಟ್ಟು$_1$./ ತಮಿ. ತುಳು. ತೆಲು. ಮುಟ್ಟು; ತೊದ. ಮುಟ್ ]

**ಮುಟ್ಟುಂಗಾಱ** (ನಾ). ಮದ್ದಲೆಯನ್ನು ಬಾರಿಸುವವನು : ಲತೆಯ ಕೆಂದಳಿರ್ಗಳ್ ಬಿಜಗಾಳಿಯ ಸೋಂಕಿಂ ಪೊಸಪಱಿಸಿನ ನಿಱುವಣ್ಣಂ ಪೊಡೆಯುತ್ತಿರೆ ಚೈತ್ರವೆಸರ ಮುಟ್ಟುಂಗಾಱಂ . . . ಕುಲಿಶಪ್ರಿನದ್ಧ ಮುರಜಮಂ ನುಡಿಸುವ ತೆಱನಾಯ್ತು (ಜಗನ್ನಾ. ೧೧-೭).

[ ಮುಟ್ಟು$_2$ + — ಕಾಱ. / ತಮಿ. ಮುಟ್ಟುಕ್ಕಾರನ್ ]

**ಮುಟ್ಟುಕಟ್ಟು** (ನಾ). ೧. ಮುಟ್ಟು ತಡವಾಗುವ ಒಂದು ಬಗೆಯ ರೋಗ. ೨. ಒಂದು ಬಗೆಯ ಮೂತ್ರರೋಗ : ಕೃಮಿಗೆ ವಿಳಂಗಚೂರ್ಣ ಜೇನುತುಪ್ಪದಲ್ಲಿ ಕೊಳ್ಳುವುದು. ಮುಟ್ಟುಕಟ್ಟಿಗೆ ಎಕ್ಕೆಹಾಲು ಬೂದಿ ಕಲಸಿ ಬಾಳೇಹಣ್ಣಿನಲ್ಲಿ . . . ಕೊಳ್ಳುವುದು (ಖಗೇಂ.ದ. ೨೩); ಮುಟ್ಟುಕಟ್ಟಿಗೆ:– ಜೇವಿನ ಸೊಪ್ಪಿನ ಎಲೆಯ ರಸ. ಬೆಳ್ಳುಳ್ಳಿಗೆಡ್ಡೆ ರಸ, ಈ ಎರಡಕ್ಕೂ ಸರಿಯಾಗಿ ಎಣ್ಣೆಯನ್ನೂ ಕೂಡಿ . . . ಕೊಡಲು ಹುಳು ಮೂತ್ರದಲ್ಲಿ ಬೀಳುವುದು (ಖಗೇಂ.ದ. ೦೦೯).

[ ಮುಟ್ಟು$_2$ + ಕಟ್ಟು$_2$ ]

**ಮುಟ್ಟುಕುಟ್ಟು** (ನಾ). ಹೊರಗಡೆಯಾಗುವುದಕ್ಕೆ ಮುಂಚೆ ಅಥವಾ ಆಮೇಲೆ ಬರುವ ನೋವು : (ಕ).

[ ಮುಟ್ಟು$_2$ + ಕುಟ್ಟು$_2$./ ತಮಿ. ಮುಟ್ಟುಕ್ಕುಟ್ಟು ]

**ಮುಟ್ಟುಗ** (ನಾ). ಅಶುದ್ಧವಾಗಿರುವವನು (?) : ನಗಧರನಗ್ರವಲ್ಲಭೆಯೆ ನಾನೆಲೆ ಮುಟ್ಟುಗ ಮುಗ್ಧ ನಿನ್ನ ಮೈಲಗೆಯನದೇಕೆ ಪಿಂದಿ [ದಪೆನಾಂ] (ಜಗನ್ನಾ. ೦೯-೪೦). [ ಮುಟ್ಟು$_2$ + — ಗ$_2$ ]

**ಮುಟ್ಟುಗಿಡಿಸು** (ಕ್ರಿ). ಸಾಧನವಿಲ್ಲದಂತೆ ಮಾಡು ; ಅಸಹಾಯಕನನ್ನಾಗಿಸು : ಮೂವತ್ತಿರ್ವರುಮೊಳ್ಪೆಂಡಿರ್ಕಳುಮಂ ಮೂವತ್ತೆರಡುಕೋಟಿ ಕನವರಮುಮಂ ಕೊಳದ ಪುಲ್ಲ ದರ್ಕಂ ತೊಱವಂತನಿತುಮಂ ತೊಱೆದು ಕರ್ಮಕ್ಷಯಾರ್ಥಂ ತಪಂಬಿಟ್ಟಾತನನಿಳಿಸಿ ಪರಿಭವಿಸಿ ಮುಟ್ಟುಗಿಡಿಸಿ ನುಡಿಯಲ್ವೇಡ (ವಡ್ಡಾರಾ. ೪೭-೦೩).

[ ಮುಟ್ಟುಗಿಡು ( < ಮುಟ್ಟುಗೆಡು ) + — ಇಸು$_3$ ]

**ಮುಟ್ಟುಗಿಡು** 'ಮುಟ್ಟುಗೆಡು' ನೋ.

**ಮುಟ್ಟುಗೆ** 'ಮುಟ್ಟಿಗೆ$_2$' ನೋ.

**ಮುಟ್ಟುಗೆಡು, ಮುಟ್ಟುಗಿಡು** (ಕ್ರಿ). ೧. ಸಾಧನವನ್ನು ಕಳೆದುಕೊಳ್ಳು; ಅಸಹಾಯಕವಾಗು : ಕೂರದರ್ ನೆಲಸನೊಟ್ಟಜೆಯಿಂ ಕೊಳೆ ಕೊಟ್ಟು ಮುಟ್ಟುಗೆಟ್ಟನ್ನುಮರಣ್ಯದೊಳ್ ನಮೆದಪಂ ಯಮಸಂದನಂ (ಶಂಕಶಾ. ೭-೩೩) ; ಬೆಂಬಱಿಯಸುಱಿಯದೆ ಮುಟ್ಟಿವಂದೀ ಮುಟ್ಟುಗೆಟ್ಟ ದುರಾತ್ಮನಂ ವಿಸಾರಿಸುವೆಂ (ಶಂಕಶಾ. ೧೧-೧೧೯ ವ). ೨. ಪ್ರಯೋಜನವಿಲ್ಲದಂತಾಗು ; ನಿಷ್ಪ್ರಯೋಜಕವಾಗು: ಕಲ್ಲಂ ತಾಗಿದ ಮಿಂಚಿಮಂತೆ ಮುಟ್ಟುಗೆಟ್ಟು . . . ಶ್ರೀದತ್ತಸೆಟ್ಟಿ ಪುಸಿಗೂರ್ಮೆಯಿಂದಿಂದ್ರದತ್ತಸೆಟ್ಟಿಯನಿಂತೆಂದಂ (ಧರ್ಮಾಮೃ. ೧೧-೦೩೭) ; ಜರಾಸಂಧಚಕ್ರವರ್ತಿ ಕೇಳ್ದು ಮುಳಿದಾತನ ಮೇಲೆ ದಂ[ಡಂ] ಪೇಱೆಟ್ಟೊ[ಡಾ] ದಂಡು ಕಾದಿ ಪಡಲ್ವಟ್ಟು ಸೋಲ್ದುಱಿಯೆ ಮುಟ್ಟುಗೆಟ್ಟು ಬಾಯ್ಬಿಟ್ಟೋಡಿದೊಡೆ (ನೇಮಿಪು. ೩-೨೬ ವ). **ಮುಟ್ಟುಗಿಡು** : ೨. ಆ ಗಿರೀಂದ್ರಕಂದರದೊಳ್ ತಪಂಗೆಯ್ವ ತಪೋಧನರ ತಪಂಗಳೆಲ್ಲಮಾತನ ತಪೋಮಯಶಿಖಿಗಳಿಂ ಬೆಂದು ಬೆಂದ ನುಲಿಯಂತೇ ತರ್ಕಂ ಮುಟ್ಟಲ್ಲದೆ ಮುಟ್ಟುಗಿಡೆ (ಶಂಕಶಾ. ೭-೬೦ ವ). ೩. ಹೀಯಾಳಿಸು; ಜರಿ (?) : ನಿನ್ನ ಪರಿಜ್ಞಾನದ ತೆಱನನಱಿಯಲಾದುದು ನೀಂ ಮುಟ್ಟುವಿರೆಂದಾ ಘಟ್ಟಿಸಂ ಮುಟ್ಟುಗಿಡೆ ನುಡಿದಂ (ಶಂಕಶಂ. ೦೩-೯).

[ ಮುಟ್ಟು$_2$ + ಕೆಡು$_1$ ]

**ಮುಟ್ಟುಗೋಲು** 'ಮುಟ್ಟುಗೋಳು' ನೋ.

**ಮುಟ್ಟುಗೋಳು, ಮುಟ್ಟುಗೋಲು** (ನಾ). ಸಾಲ ವಸೂಲಿ ಮುತ್ತಿತರ

ಕಾರಣಗಳಿಗಾಗಿ ಒಬ್ಬರಿಗೆ ಸೇರಿದ ಸ್ವತ್ತನ್ನು, ಸರ್ಕಾರ ಅಥವಾ ನ್ಯಾಯಾಲಯ ಮುಂತಾದುವುಗಳ ಆದೇಶದಂತೆ ಸ್ವಾಧೀನಕ್ಕೆ ತೆಗೆದುಕೊಳ್ಳುವುದು : ಈ ಮಹೀಪಾಲಕಂಗೀ ಮನೆಯನು ಮುಟ್ಟುಗೋಳಿಂಗೀಡುಮಾಡಿ ಮನೆಮಕ್ಕಳುಂ ಕೆಟ್ಟುಪೋಪಂತೆ ಮಾಡಿದೆನಲಾ (ಸಮ್ಯಕ್. ೦೦-೬೯) ; ತೋಳುಡಿದಸುರಾಧಿಪನ ಗೇಹವ ಮುಟ್ಟುಗೋಳ ತನ್ನಯ ದ್ರವ್ಯಸಹಿತ ಬಾಳುವೆಗಿರಬೇಕೆನದು ವಂಚಿಸದೆ ಕೃಪಾಳುವಿಗಿತ್ತು ವಂದಿಸಿದ (ಕೋಡಕ. ೪೦-೩೩) ; ಇವನ ಸರ್ವೈಶ್ವರ್ಯವನ್ನು ಮುಟ್ಟುಗೋಳು ತೆಗೆದುಕೊಂಡು ಹೆಂಡಿರುಮಕ್ಕಳೊಡನೆ ಬಂಧಿಸಿ ಸೆರೆಗೆ ತಳ್ಳಿರಿ (ಕಾಕ್ಷಮು. ೨೬). **ಮುಟ್ಟುಗೋಲು** : ಸೇನಾವಿಧಿಯ ಮೇರೆಗೆ ಸಾದರಾದ ಯಾವುದಾದರೂ ದಂಡಾಜ್ಞೆಯನ್ನು, ವಿಧಿಸಿದ ಶಿಕ್ಷೆಯನ್ನು, ಆದೇಶಮಾಡಿದ ಮುಟ್ಟುಗೋಲನ್ನು ಅಥವಾ ಮಾಡಲಾದ ಇತರ ಕೆಲಸವನ್ನು ಮಾನ್ಯಗೊಳಿಸಬಹುದು (ಕಾಥಾಶ. ೨೦); ಪರಂಗಿಗಳು . . . ಇವೆಲ್ಲವನ್ನು ಇಲ್ಲಿ ಮುಟ್ಟುಗೋಲು ಕೊಟ್ಟು ಹೋಗಬೇಕಾಗುತ್ತದೆ (ಬೆಂಕಣ. ೨೪).

**ಮುಟ್ಟುಗೋಲುಹಾಕು** = ೧. ಸ್ವಾಧೀನಪಡಿಸಿಕೊಳ್ಳು ; ವಶಪಡಿಸಿಕೊಳ್ಳು : ಅಂಗಡಿಯಲ್ಲಿನ ಸಾಮಾನುಗಳನ್ನೆಲ್ಲ ಮುಟ್ಟುಗೋಲು ಹಾಕಿಕೊಂಡು ತನ್ನನ್ನು ಬಂಧಿಸಿ ಕೊಂಡೊಯ್ಯಲು ತಿಳಿಸಿರುವನೊ ಏನೊ (ಗಿಂಪ. ೦೦೨). ೨. ಸಂಪೂರ್ಣವಾಗಿ ನಿಲ್ಲಿಸು,— ಇಲ್ಲವಾಗಿಸು : ಆತನ ವಾರ್ಷಿಕವೇತನಕ್ಕೆ ಮುಟ್ಟುಗೋಲು ಹಾಕಲ್ಪಟ್ಟಿದೆ (ಕುಣಾಕ. ೯೯). ೩. ಅಡ್ಡಿಯುಂಟುಮಾಡು ; ಪ್ರತಿಬಂಧಿಸು : ನಿಬಂಧನೆಯು ಕಮ್ಯುನಿಸ್ಟ್‌ಪಕ್ಷವೊಂದನ್ನು ಬಿಟ್ಟು ಎಲ್ಲ ರಾಜಕೀಯಪಕ್ಷಗಳಿಗೂ ಮುಟ್ಟುಗೋಲು ಹಾಕಿದೆ (ಕಾಶಕ. ೬೦).

[ಮುಟ್ಟು₂ + ಕೋಲ್₂ (< ಕೋಳ್)./ತೆಲು. ಮುಟ್ಟುಕೋಲು]

**ಮುಟ್ಟುಚಟ್ಟು**, ಮುಟ್ಟುಚಿಟ್ಟು, ಮುಟ್ಟುಚೆಟ್ಟು (ನಾ). ೧. ಮುಟ್ಟು, ಸೂತಕ ಮುಂತಾದುವುಗಳ ಸಂಸರ್ಗದಿಂದ ಉಂಟಾಗುವ ಮೈಲಿಗೆ, —ಹೊಲೆ : ಮನೆಯಲ್ಲಿ ದೇವತಾಕಾರ್ಯಗಳು ನಡೆಯುವಾಗ ಮುಟ್ಟುಚಟ್ಟು ಆಗಬಾರದು (ಜಾ). **ಮುಟ್ಟುಚಿಟ್ಟು** : ೧. ಮನೆಯಲ್ಲಿ ಏನೋ ಅನಾಚಾರ ನಡೆದು ಮುಟ್ಟುಚಿಟ್ಟು (ಮೈಲಿಗೆ) ಆಗಿಬಿಟ್ಟಿದೆ (ಕಾಷುಕು. ೬೦೯); ಜಾತಿಕೆಟ್ಟು ನೀತಿಕೆಟ್ಟು ಕೇರಿಗೆಲ್ಲ ಮುಟ್ಟುಚಿಟ್ಟು ! (ಮರಿಮು. ೦೯೯). **ಮುಟ್ಟುಚೆಟ್ಟು** : ೧. ಮಕ್ಕಳಿಗೆ ದಡಾರ ಎದ್ದಾಗ ಮನೆಯಲ್ಲಿ ಮುಟ್ಟುಚೆಟ್ಟಾಗಬಾರದೆಂದು ಹಿರಿಯರು ಹೇಳುವುದುಂಟು (ಜಾ). ೨. ಅಶುದ್ಧತೆ; ಅಪಾವಿತ್ರ್ಯ : ವಿದ್ಯೆಗೆ ಮುಟ್ಟುಚೆಟ್ಟು ಎಲ್ಲಿಂದ ಬಂತು ? (ಮುಖ್ಯ. ೦೦೩).

[ಮುಟ್ಟು₂ + ಚಟ್ಟು₂./ ತುಳು. ಮುಟ್ಟುಚಟ್ಟು, ಮುಟ್ಟುಚಿಟ್ಟು]

**ಮುಟ್ಟುಚಿಟ್ಟು** 'ಮುಟ್ಟುಚಟ್ಟು' ನೋ.

**ಮುಟ್ಟುಚೆಟ್ಟು** 'ಮುಟ್ಟುಚಟ್ಟು' ನೋ.

**ಮುಟ್ಟುಡುಗು** (ಕ್ರಿ). ಹೊರಗಡೆಯಾಗುವುದು ನಿಲ್ಲು ; ಮುಟ್ಟುನಿಲ್ಲು: ಮುಟ್ಟುಡುಗಿ ಮುತ್ತ ಮುದುಪಾಗಿಯುಂ ಪೂವತ್ತುಂಬಿರಿಸಿದೆಳಜವ್ವನೆಯಂತೆ ಗಳವುವದು (ಶಶಿಂ. ೬-೨೩೬ ಪ). [ಮುಟ್ಟು₂ + ಉಡುಗು₁]

**ಮುಟ್ಟುಪಡ** 'ಮುಟ್ಟುಪಡು' ನೋ.

**ಮುಟ್ಟುಪಡು**, ಮುಟ್ಟುಪಡ (ನಾ). ಮುಟ್ಟಲು ಅಯೋಗ್ಯವಾದುದು; ಸ್ವೀಕಾರಾರ್ಹವಲ್ಲದುದು : ಅನಜಿಂದಿದೆ ಕೊಕ್ಕರಿಕೆಗೆ ಕಾನೆಚಿ[ದು] ಸಾಲ್ದಿರ್ದುಮಚಿಯುಮೇಟ್ಟುದೆ ಲೋಕಂ ಮಾನಿತೆಗೆ ಮುಟ್ಟುಪಡ[ಕಾಕಾಂ. ಡಾ]ದೆ [ದು] ದೇನೊ ಪೆಜರ್ ಕಂಡದಲ್ಲದಾಗದೆ ಬಿಸುಡಲ್ (ಜಂಹಂ. ೪-೯) ; ಮುಟ್ಟುಪಡಾಪ್ಪು ಜೊನ್ನಮಣಿಸುಂಬ ಚಕೋರಜಮಕ್ಕೆ ಬಂಧನಂ ಬಿಟ್ಟುದು ಪದ್ಮಕೋಶವೊಳಕೊಂಬ ಮದಾಳಿಗೆ (ಸೂಕ್ತಿಸು. ೬-೨೬). **ಮುಟ್ಟುಪಡ** : ಪಂದೋಲ್ . . . ಅಸ್ಥಿಯೆಂಬಿವೇಱುಂ ಕುಂದದೆ ಮುಟ್ಟುಪಡಮಕ್ಕುಮಾರ್ಹನ ಮತದಿಂ (ಧರ್ಮಾಮೃ. ೫-೦೩೩) ; ವಿಮಲಶುದ್ಧ ತಪಃಫಲಸೌಖ್ಯಭೋಗದೊಳ್ ತಲೆನವಿರಲ್ತೆ ಮುಟ್ಟುಪಡಮೆಂಬವೊಲೂರ್ಜಿತಪುಣ್ಯಸಂಚಯಂ (ಲಕಂಶ. ೪-೯).

[ಮುಟ್ಟು₁ + < ಪಡು₁]

**ಮುಟ್ಟುವಳಿ** (ನಾ). ಸಲ್ಲಬೇಕಾದ ಖರ್ಚು ; ಸಂದಾಯದ ವೆಚ್ಚ,— ವ್ಯಯ : ಮುಟ್ಟುವಳಿ ಸಾಲ ಬಡ್ಡಿ . . . ಎಲ್ಲಾವನ್ನೂ ಸಲ್ಲಿಸಿಕೊಳ್ಳುತ್ತಾರೆ (ಕಿಬ್ಬಿಂ. ೦೩೩-೨೯೨) ; ದೊರೆಗಳವರು ಒಂದುವರ್ಷ ಆದ ಫಲವನ್ನು ರೇಖೆಮಾಡಿಸಿ, ರೈತರ ಮುಟ್ಟುವಳಿಯನ್ನು ವಿಚಾರಿಸಿ ನೋಡುವಲ್ಲಿ ಹುಟ್ಟುವಳಿ ಮುಟ್ಟುವಳಿ ಸಮವಾಗಿದ್ದುದರಿಂದ . . . ಮುಂದೆ ಸಮವಾರ ಕೊಡುವಂತೆಯೂ ನಿಬಂಧನೆ ಮಾಡಿದರು (ಮಹಾಶಂ. I, ೦೦೬). 'ಹುಟ್ಟುವಳಿ' ಪರಾ.

[ಮುಟ್ಟು₁ + – ವಳಿ./ತುಳು. ಮುಟ್ಟುವಳಿ, ಮುಟ್ಟೊಳಿ]

**ಮುಟ್ಟುಹ** (ನಾ). ಸೋಕುವಿಕೆ : ಮುಟ್ಟುವಿಕೆ : ವರ್ಮವಂ ಮುಟ್ಟುಹ ವಿದಚ್ಚರಿಯೆನುತ ಶಿಶುವಂ ನುತಿಸುತಿಂತೆಂದ (ಸದ್ಬುಕು. ೬-೦೭).

[ಮುಟ್ಟು₁ + – ಹ₂ (< – ಪ₂)]

**ಮುಟ್ಟುಹಾಳೆ** 'ಮುಟ್ಟಾಳ' ನೋ.

**ಮುಟ್ಟೂಳಿಗ** (ನಾ). ಸಮೀಪದಲ್ಲಿ ಇದ್ದು ಮಾಡುವ ಸೇವೆ,— ಪರಿಚರ್ಯೆ : ನಿಟ್ಟುಸಿರಿಂದೆ ಕೀರ್ತಿಪ ಹೊನ್ನ ಸೆಳೆಗೆಯ್ದುಗಟ್ಟುವರುಂಗಳ ಸನ್ನೆಯಲಿ ಮುಟ್ಟೂಳಿಗದ ಬೋಳುಕರನೆಲ್ಲರ ಬೀಳುಕೊಟ್ಟೊಳಪೊಕ್ಕ ನುತ್ಸವದಿ (ಕೋಡಕ. ೨೦-೬೨). [ಮುಟ್ಟು₂ + ಊಳಿಗ (<ಊಳಿಗ)]

**ಮುಟ್ಟೆ**, ಮುಟ್ಟ (ಅ). ತನಕ ; ವರೆಗೆ : ಹತ್ತುಕಯ್ಯುಂ ಕಳದೂರೊಡೆಯರ ಮನೆ ಮುಟ್ಟೆ ಮನೆಯ ನಿವೇಶನದಗಲ ಕೆಯ್ ೫೪ ತೆಙ್ಕಣ ಮೆಯ್ಯು ನೀಳಂ (ಎಕ. XIII. ೯೮-೭೩ ; 1112) ; ಬಡಗ ಮುನ್ನಾಗಿ ಹೋದ ಹುದುಗೆಱೆಯೊಳಗು ಮುಟ್ಟೆ ಗದ್ದೆಯಡಕ್ಕ ತೆಱೆಯೊನ್ದು ಹಣವ ನಿಕ್ಕುವರ್ (ಎಕ. V. ಹಾಸನ. ೩೩-೬೦ ; 1170) ; ಮುಟ್ಟೆ ಎಂಬುದುಂ ಸೀಮಾರ್ಥಮಂ ಪೇೞ್ಗುಂ (ಶಮದ. ೨೯೮ ವೃತ್ತಿ). **ಮುಟ್ಟ** : ಉದಯದೊಳು ಕಾದ ಹಾಲಂ ಸಂಜೆಮುಟ್ಟ ಕೆಂಡದೊಳಿರಿಸಿ . . . ಹೆಪ್ಪನಿಡೆ ಮೊಸರು ಕಡುಗೆಂಪಹುದು (ಸೂಶಶಾ. ೨-೭) ; ವೈಶಾಖಶುದ್ಧದ್ವಾದಶಿ ಮುಟ್ಟ ತಾಳಬೇಕೆನ್ನ ಮಾತ ಮನ್ನಿಪೊಡೆ (ಕೋಡಕ. ೨೩-೩೪).

[< ಮುಟ್ಟು₁. / ತಮಿ. ಮುಟ್ಟ, ಮುಱ್ = ಸಂಪೂರ್ಣವಾಗಿ ; ತುಳು. ಮುಟ್ಟ]

**ಮುಟ್ಟೆಡೆ** (ನಾ). ಕಷ್ಟದ ಸಂದರ್ಭ ; ಆತಂಕದ ಪರಿಸ್ಥಿತಿ : ಪಟ್ಟಣ ಖಿಳವಶವಾಗೆ ಕರ್ಣಾಟಕ ಕೆಟ್ಟು ನಮ್ಮಯ ರಾಜ್ಯಸಿರಿಗೆ ಮುಟ್ಟ[ಟ್ಟೆ]ಡೆಯಾಗುವಂದವ ನಿಲಿಸಿದನು (ಕೆಂಶಂ. ೦೬-೯೩) ; ಅಟ್ಟುಂಬ ಕಾಲದಲಿ ಕೊಟ್ಟುಂಬುದೊಬ್ಬರಿಗೆ ಕೊಟ್ಟುಂಬುದಱಿಯದಧಮಂಗೆ ಹಲತೆಱದ ಮುಟ್ಟೆಡೆಗಳಕ್ಕು (ಸರ್ವಜ್ಞ. ೬೬೦). [ಮುಟ್ಟು₂ + ಎಡೆ₁]

**ಮುಟ್ಟೈಸು** 'ಮುಟ್ಟಯಿಸು' ನೋ.

**ಮುಟ್ಠಾಳ** 'ಮುಟ್ಠಾಳ' ನೋ.

**ಮುಟ್ಠಾಳ** 'ಮುಟ್ಠಾಳ' ನೋ.

**ಮುಠಾರಿ** (ನಾ). ಕೈಗೆ ಧರಿಸುವ ಒಂದು ಬಗೆಯ ಆಭರಣ : ಮುಂಗೈಯ ಮುಠಾರಿ ಮುರಕೇಣ ಕಡಗಾವ ಒಂಟಿ ನಾಗರಸುತ್ತ ಉಲ್ಪೇಟ (ಕೋಳಗಂ. ೨೦೦). [ ? ./ಮರಾ. ಮುಠಾರ=ಒಂದು ಬಗೆಯ ಆಯುಧ]

**ಮುಠ್ಠಾಳ** 'ಮುಟ್ಠಾಳ' ನೋ.

**ಮುಡಕಲು** 'ಮುಡುಕಲು' ನೋ.

**ಮುಡದಾರ** (ನಾ). (ಉಕ) ಬುದ್ಧಿವಾದವನ್ನು ಕೇಳದವನು; ಮೂಢ : ಇಷ್ಟು ದಿವಸ ನಿನಗೆ ಹೇಳುವವರು ಕೇಳುವವರು ಯಾರೂ ಇದ್ದಿಲ್ಲ . . .

ಅದಕ್ಕೆ ಈ ಮುಡದಾರ ಮುದುಕನ್ನ ತಂದೀರೇನು ? (ಬಾಂದಾಯ. ೩೪) ; ಇಂಥಾ ನಮ್ಮ ಗೌಡರ ಉಪಕಾರ ತೀರಿಸದ ಮುಡದಾರ ಅನಿಸಿಗೋಳೋ ಜಾತಿ ನಮ್ಮದು ಅಲ್ಲ ತಗೀರಿ ! (ಗ್ರಾಮಾಯ. ೩೨೩).

[←ಪಾರ. ಮುರ್ದಾರ್ ; ಮರಾ. ಮುಡದರ್]

**ಮುಡದಾರಶಿಂಗಿ** 'ಮುರದಾರಸಿಂಗಿ' ನೋ.

**ಮುಡದಾರಸಿಂಗ** 'ಮುರದಾರಸಿಂಗಿ' ನೋ.

**ಮುಡದಾರಸಿಂಗಿ** 'ಮುರದಾರಸಿಂಗಿ' ನೋ.

**ಮುಡಪು** 'ಮುಡಿಪು₂' ನೋ.

**ಮುಡಬ** 'ಮುಡುಬ' ನೋ.

**ಮುಡಾವು** (ನಾ). ಒಂದು ಬಗೆಯ ಮೀನು : ನಿಮಗೆ ಬೇಕಾದ ಹೊಳೆಯ ಮೀನು, ಮುಡಾವು, ಅಬ್ರೋಣಿ, ಕೂಸೆ, ಕಲ್ಲೂರು, ಕೊಂತಿ ಯಾವುದೂ ಇಲ್ಲ (ಮೂಸಕ್ಕ. ೩೪). [←ತುಳು. ಮುಡುವು]

**ಮುಡಿ₁** (ಕ್ರಿ). ೧. (ಹೂ ಮುಂತಾದುವನ್ನು ತಲೆಯಲ್ಲಿ) ಧರಿಸು ; ತಾಳು ; ಸೂಡು : ಪುಟ್ಟಿಗೆಯನುಟ್ಟು ಮೆಯ್ಯಂ ಪೂಸಿ ಪೂವಂ ಮುಡಿದು . . . ಪೆಱತ್ತೆಯುತ್ತಂ (ವಡ್ಡಾರಾ. ೦೩೩-೦) ; ಕಟ್ಟಿಮುಮ್ಮೇನೊ ಮಾಲೆಗಾಜನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ (ಅಪಂಪು. ೦-೪೩) ; ಕರುಳ ದಂಡೆಯನ್ನೈದೆ ಸಿರಿಮುಡಿಗೆ ಅಂದದಿಂದಲೆ ಮುಡಿದು (ಕುಮಾವ್ಯಾ.ಸ. ೦೬೩. ೦೬-೪೩). ೨. (ತಲೆಗೂದಲನ್ನು) ಗಂಟು ಹಾಕು : ಮುಡಿಯಂ ಪಿಡಿದೆೞೆದವನಂ ಮಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ ಮುಡಿಯಿಸುವಿನೆಗಂ ಮುಡಿಯಂ ಮುಡಿಯೆಂ ಗಡ (ಶಂಕಥಾ. ೬-೦೦) ; ಮರುಳಂತೆ ಮರುಳೆ ತಲೆಯಂ ಪರಪಿರದೆ ಮನೋನುರಾಗದಿಂ ಮುಡಿ ಮುಡಿಯಂ (ಧರ್ಮಾಮೃ. ೩-೦೨೬). ೩. ಮುಗಿ ; ತೀರು ; ಕೊನೆಗೊಳ್ಳು : ಆದೊಡೆ ಬಲ್ಲಿತೆ ಕಣಾ ! ಒಂದೆರಟ್ಟಿಪಕ್ಕೆ ಮುಡಿಯದು (ರಾಮಾಶ್ವ. ೩-೦೦). ೪. ನಿವಾರಣೆಯಾಗಂ; ಪರಿಹಾರವಾಗು: ಈವುಪಚಾರ ದಿನಾತನ ಪಸಿವುಂ ಬಟಲ್ಕೆಯುಂ ಮುಡಿಯೆ (ರಾಮಾಶ್ವ. ೦-೦೨). ೫. ಇಲ್ಲವಾಗು ; ನಾಶವಾಗು : ಅಂತು ತನ್ನ ಪಗೆಯುಂ ಬಗೆಯುಂ ಮೊದನೊಡನೆ ಮುಡಿಯೆ (ಶಂಕಥಾ. ೦೨-೦೩೩ ಪ) ; ಕೆಡುವಂತಿದ್ದಿತೇ ಕೌರವನ ರಾಜ್ಯ ಮುಡಿವಂತಿದ್ದಿತೇ ರಾವಣನ ಬಲ್ಲಾಳಿಕೆ (ಸಪಾಪ. ೦-೦೩). ೬. ಸಾಯು ; ಗತಿಸು : 'ಮುಡಿಪು₁' ಪರಾ. ೭. ಸಾಧ್ಯವಾಗು ; ಶಕ್ಯವಾಗು : 'ಕೈ ಯಾತಕ್ಕೂ ಮುಡಿಯು' ಎಂದು ಐತಾಳರು ಎಣ್ಣೆ ಸವರಿಕೊಂಡು ಉಜ್ಜುತ್ತಿದ್ದಾರೆ (ಮರಳು. ೩೩).

[ದೇ.॥ ತಮಿ. ಮಲ. ಮುಟಿ; ತುಳು. ಮುಡಿ; ತೆಲು. ಮೂಡು]

**ಮುಡಿ₂** (ನಾ). ೧. ತಲೆಯ ಕೂದಲು; ತಲೆಗೂದಲು : ಮುಡಿಯ ಸಂವರಿಸುಲೆ ಸೀರೆಯನುಡು ನವಾಂಬರವಿದೆ (ಕುಮಾವ್ಯಾ.ಆ. ೩-೦೪). 'ಒಳ್ಮುಡಿ' ಪರಾ. ೨. ಕಟ್ಟು; ಗಂಟು : ಅವರ ಕೈಕಾಲುಗಳನ್ನು ಮುಡಿ ಹಾಕಿ ಬಿಗಿದರು (ವಂಶವೃ. ೯೩೪). ೩. ಕಟ್ಟಿದ ತಲೆಗೂದಲು; ತುರುಬು : ಮುಡಿ ಮಕರಧ್ವಜಂಬೊಲೆಬಲುತ್ತಿರೆ (ಶಂಕಥಾ. ೪-೯೦) ; ಸುರರಮಣಿಯರ ಮುಡಿಗೆ ಮಲ್ಲಿಗೆಯರಲುಗಳವೊಲು . . . ರಂಜಿಸಿತು (ಜಾಶ್ವಶಾ. ೩೩-೩೭) ; ಬಿರುತಿದೆ—ಸಡಲಿಸಿ ಮಡದಿಯರುಡಿಯನು ಮುಡಿಯನು . . . ತೆಂಕಣಗಾಳಿಯು (ಕುಪ್ರು. ೨೬-೩) ; 'ಮುಡಿಯಿಕ್ಕು' ಪರಾ. ೪. ತಲೆ; ಶಿರಸ್ಸು : ಪರ ಜಂಗಮಕೆ ಮಾನಕಂಜನಣುಗೆಯು ಮುಡಿಯನರಿದಿತ್ತು (ಶಂಪು. ೩೩-೯೧) : ನಿನ್ನಡಿಯಾಣತಿಯನೆನ್ನ ಮುಡಿ ಮೊಳಾಂತೆನು (ಹರಿಶ. ೧-೪೪) ; ಆವಳು ಅಡಿಯಿಂದ ಮುಡಿಯವರೆಗೂ ನಡುಗಿಬಿಟ್ಟಳು (ಬಾಜಿಲ. ೩೯೯). ೫. ಕಿರೀಟ ; ಮಕುಟ : ಆ ಕುರು ಜಾಂಗಲವಿಷಯ ಮಹೀಕಾಂತೆಗೆ ಪೊಸತೆ ಸಮೆದ ಮುತ್ತಿನ ಮುಡಿ ಧಾತ್ರೀಕರ್ಣಪೂರಮಪನಿಸ್ತ್ರೀಕರ ಲೀಲಾಂಬುಜಂ ಧರಿತ್ರೀತಿಳಕಂ (ಶಾಂತಿಪು. ೯-೦೩೬) ; ಮಕುಟಬದ್ಧರ ಮುಡಿಯ ರತ್ನಪ್ರಭೆಗಳಿಂ ಜರ್ಝರಿತ ತನುವಾಯ್ತು (ಕುಮಾವ್ಯಾದ್ರೋ. ೦೩-೨೭) ; ನೃಪ ಎಂಬ ಹೆಸರೊಡನೆ ಮುಡಿಯೊಂದನಾಂತೊಡನೆ ಕಳ್ಳರೊಡೆಯನು ಕೃಪೆಯ ಮೂರ್ತಿಯೇನು? (ಕೋಗಿಲೆ. ೦೩-೯). ೬. ತುದಿ ; ಶಿಖರ : ಮೂಡುವೆಟ್ಟಿನ ಮುಡಿಯ ತಪನೀಯಮಣಿಯಂತೆ ತಳತಳಿಸುತಿರ್ಪುದಯ ತಪನಬಿಂಬದಿ ಮೂಡಿ (ತತ್ವಾಂಗ. ೬-೦೬೦). ೭. ಸುಮಾರು ನಲವತ್ತೆರಡು ಸೇರು ಧಾನ್ಯದ ಅಳತೆಯ ಪ್ರಮಾಣ : ಹಾನೆ ೪೦ಕೆ ಮುಡಿ ೧ಲೂ ಮುಡಿ ೯ ವಂಬತ್ತು ಮುಡಿ ಅಕ್ಕಿಯನು . . . ಕೊಟ್ಟು (ಎಕ್ಕಶಾ. ೦೪೩, ೩೪-೪೦ ; 1673) ; ೧೪ ಕುಡವಕ್ಕೆ ೧ ಮುಡಿ, ೨೦ ಮುಡಿಗೆ ೧ ಖಂಡಗ (ಕಣಾಗ. ೨೯೦) ; ಒಂದು ಮುಡಿಯಲ್ಲಿ ಒಂದು 'ಮುರ' ಅಕ್ಕಿ ಇರುತ್ತದೆ. ಒಂದು ಮುರ ಎಂದರೆ ಎಂಬತ್ತು ತೊಲ ತೂಕದ ೪೨ ಸೇರು ಅಕ್ಕಿ (ಕೃಪಾಇ. II, ೨೬೭). ೮. ಸುಮಾರು ನಲವತ್ತೆರಡು ಸೇರಿನ ಅಳತೆಯ ಧಾನ್ಯವನ್ನು ತುಂಬಿ ಕಟ್ಟುವ ಹುಲ್ಲಿನ ಚೀಲ : ಬೀಜಕ್ಕೆ ಇಡತಕ್ಕ ಬತ್ತವನ್ನು . . . ೭ ದಿನ ಒಣಗಿಸುವರು. ಇಪ್ಪಾದ ಮೇಲೆ ಮುಡಿಗಳನ್ನು ಕಟ್ಟಿ ಮನೆಗೆ ತರುವರು (ಮುಂಬಯ. ೩-೨೦೨). ೯. ಮೂಟೆ ; ಹೇರು ; ಹೊರೆ : ಆಣಿಮುತ್ತಿನ ಜಾಳಿಗೆಯೇ! ಕಸ್ತೂರಿಯ ಪೊಱೆಯೇ ! ಕಪ್ಪುರದ ಮುಡಿಯೇ ! (ರಾಮಾಶ್ವ. ೦೬೩-೦೭). ೧೦. ಕೊನೆ ; ಮುಕ್ತಾಯ : 'ಮುಡಿಗೊಳ್', 'ಮುಡಿವು' ಪರಾ. ೧೧. ಬೆಳ್ಳಿ ಅಥವಾ ಹಿತ್ತಾಳೆಯಿಂದ ಮಾಡಿದ ಬಳೆಯಾಕಾರದ ಟೊಳ್ಳು ಭಾಗದ ಒಳಗೆ ನಿರ್ದಿಷ್ಟವಾದ ಕೆಲವು ಸಸ್ಯಮೂಲಿಕೆಗಳನ್ನು ತುಂಬಿ, ತೋಳಿಗೆ ಕಟ್ಟಿಕೊಳ್ಳುವ ಒಂದು ಬಗೆಯ ರಕ್ಷಾ ಸಾಧನ : ತಡ ಕಟ್ಟುವವನ ಮುಂದೆ ಮುಡಿಬೇನು ? (ಗಾದೆ). 'ಮುಡಿಬಳೆ' ಪರಾ. ೧೨. (ಅಲಂ) ಒಗಟು ; ಹದಿರು : ಪ್ರವಿಶಾಲೆ ನಿಮಗೆ ಒಡಹುಟ್ಟಿದವಳಾದಳಿನ್ನೇನೆನ್ನಲ್ಕವಳ ಮುಡಿಯ ಮಾತಂ ಕೇಳ್ದು ಮೋಳಿವ ನಸುನಗೆಯ ಬೆಳ್ಪಡಿಯೆ (ಸ್ತ್ರೀಶಿಕ್ಷಾ. ೩೩-೦೪). ೧೩. [ಛಂದ] ಚರಣದ ಕೊನೆಗೆ ನಿಂತು ಮುಕ್ತಾಯವನ್ನು ತರುವ ಅಕ್ಷರ : ಚರಣದ ಕೊನೆಗೆ ನಿಂತು ಅದಕ್ಕೆ ಮುಡಿವು ಕೊಡುವ ಅಕ್ಷರಕ್ಕೆ "ಮುಡಿ" ಎಂಬ ಹೆಸರನ್ನು ಇಲ್ಲಿ ಕೊಡಲಾಗಿದೆ (ಸತಶಾಲೋ. ೨೦೦) ; ಇದರಿಂದ ಆ ಗಣದ ಪೂರ್ವಾರ್ಧವು ಮೊದಲ ಒಳವಾದಕ್ಕೆ "ಮುಡಿ"ಯಾಗಿಯೂ . . . ನಿಂತುಕೊಂಡಿತು (ಸಂಚೋತ. ೦೬೭).

**ಮುಡಿಕೊಡಿಸು** = ದೇವರಿಗೆ ಕೊಡುವೆನೆಂಬ ಹರಕೆ ಹೊತ್ತು ತಲೆಯ ಕೂದಲನ್ನು ಅರ್ಪಿಸು : ಮಗೂಗೆ ಮನೆದೇವರ ಗುಡಿಯಲ್ಲೇ ಮುಡಿಕೊಡಿಸ್ತೀವಿ (ಮನೋಸಂ. ೧೩೩). **ಮುಡಿಕೊಡು** = ದೇವರಿಗೆ ಕೊಡುವೆನೆಂಬ ಹರಕೆ ಹೊತ್ತು ತಲೆಗೂದಲನ್ನು ಕೊಡು : ಈ ಕೆಲಸ ಸುಸೂತ್ರವಾಗಿ ಮುಗಿದರೆ ನಂಜನಗೂಡು ನಂಜುಂಡೇಶ್ವರನಿಗೆ ಮುಡಿಕೊಡುವ ಹರಕೆಯನ್ನು ಹೊತ್ತಿದ್ದೆ (ಓಂ). **ಮುಡಿಗಂಟು** = (ಕುಣಿಕೆ ಹಾಕಿ) ಕಟ್ಟುವ ಗಂಟು : ಅಕ್ಕಪಕ್ಕದ ಮನೆಯ ಗಂಡಸರು ಬಂದು ಈ ದುರ್ಯೋಧನನ ಮುಡಿಗಂಟನ್ನು ಬಿಚ್ಚಿದ ಮೇಲೆ, ಅವರನ್ನು ಕಟ್ಟಿದವನು ಗಂಧರ್ವನಲ್ಲದೆ ಅವರ ತಮ್ಮ ಕಿಟ್ಟಪ್ಪನೇ ಎಂದು ತಿಳಿದು ಮನಸ್ಸಿನೊಳಗೇ ನಕ್ಕರು (ವಂಶವೃ. ೯೩೩). **ಮುಡಿಬಿಡು** = ೧. ತುರುಬು ಕಟ್ಟದೆ ಕೂದಲನ್ನು ಇಳಿಬಿಡು : ಕರವೊಸೆದರಬಲೆಯರ್ ನೋಟಕರ ಮನಮೊಸೆಯೆ ಮುಡಿಬಿಟ್ಟು ಸೋಗೆ ನವಿಲಂತೆ ಸೊಗಯಿಸಿ ತೋಱಿ (ಅಜಪು. ೪-೭ ರಗಳೆ). ೨. ದೇವರಿಗೆ ಮುಡಿಕೊಡುವ ಹರಕೆ ಹೊತ್ತು ತಲೆಯ ಕೂದಲನ್ನು ಕತ್ತರಿಸದೆ ಬೆಳೆಯಲು ಬಿಡು : ಕೊಂಡ ಹಾಯುವ, ಮುಡಿ ಬಿಡುವ, ಬಾಯಿಬೀಗ ಚುಚ್ಚಿಸಿಕೊಳ್ಳುವ ಸಂಪ್ರದಾಯ . . . ಚಾಲ್ತಿಯಲ್ಲಿದೆ (ಸಂಜಂತ. ೦೩೪).

[< ಮುಡಿ$_1$./ತಮಿ. ಮುಟಿ; ಮಲ. ಮುಟಿ, ಮುಟೆ; ತುಳು. ಕೋಲಾ. ಮುಡಿ ; ತೆಲು. ಮುಡಿ ; ಮುಡಿಯು]

**ಮುಡಿಕಟ್ಟು** 'ಮುಡಿಗಟ್ಟು$_2$' ನೋ.

**ಮುಡಿಕು** 'ಮುಡುಕು$_2$' ನೋ.

**ಮುಡಿಗಂಪು** (ನಾ). ತಲೆಗೆ ಹಚ್ಚಿದ ಸುಗಂಧತೈಲ, ಮುಡಿದ ಹೂವು ಮುಂತಾದವುಗಳ ವಾಸನೆ : ಮುಡಿಗಂಪಿಂಗಾರ್ದು ಸಾರ್ತಂದೆಜಿಗೆ ಪಜಿಮೆಗಳ್ . . . ಮಣಿವಳವರ ದಿವ್ಯಾಂಘ್ರಿಯೊಳ್ ದೇವಿಯಾಗಳ್ (ರಾಕಶೀ. ೪-೨). [ಮುಡಿ$_2$ + ಕಂಪು]

**ಮುಡಿಗಚ್ಚು** (ಕ್ರಿ). (ಛಲ, ಕೋಪ ಮುಂತಾದುವುಗಳಿಂದ) ಎರಡು ಸಾಲುಗಳ ಹಲ್ಲುಗಳ ತುದಿಯು ಒಂದಕ್ಕೊಂದು ತಾಗುವಂತೆ ಕಡಿ : ಮಗರ ಅರಬಸ್ ಮತ್ತೆ ಬ್ಯಾಕ್ಟ್ರಿಯರ ಅರ್ತಮಿಾಸ್ ಆ ಕರೆಯ ಮಣ್ಣ ಮುಡಿಗಚ್ಚಿ ಸತ್ತೊಡಂ ಬಿಡೆವೆಂದು ಕಾದಿರ್ದರ್ (ಶಾರಸಿ. ೦೪-೩೦೪). 'ಹಲ್ಲುಮುಡಿ' ಪರಾ. [ಮುಡಿ$_2$ + ಕಚ್ಚು$_1$ (< ಕರ್ಚು$_1$)]

**ಮುಡಿಗಟ್ಟು$_1$** (ಕ್ರಿ). ೧. ತುರುಬನ್ನು ಕಟ್ಟು; ಕೇಶಾಲಂಕಾರಮಾಡು : ಒರ್ವ ಮಡದಿ ಬಲ್ಪಿನೊಳಬಲೆಗೆ ಮುಡಿಗಟ್ಟಿದಳ್ ಮುಡಿಗಟ್ಟುವಂತೆ ನೋಡುವರೆರ್ದ (ತ್ರಿಶುಪ. ೨೨-೪೨) ; ಮತ್ತೆ ಮುಡಿಗಟ್ಟಿ ಹೂಮುಡಿದು ಅಲಂಕರಿಸಿಕೊಂಡ ದ್ರೌಪದಿ . . . ಕಳೆಗೊಂಡು ಶೋಭಿಸಿದಳು (ಭಾಮುತಿ. ೬೧). ೨. ತುರುಬನ್ನು ಕಟ್ಟಿಕೊಳ್ಳು : ಕವಲಿಜೀದು ನೀಳ್ದ ಬೆಂಬಿಡದಿಳಿವ ಕುಂತಳಂ ಕಾಮನ ಪತಾಕೆಯಂತಿರೆ ಮೆಜೆವ ಮುಡಿಗಟ್ಟಿ ಕೋಮಳೆಯ ಲಾವಣ್ಯರಸವಲ್ಲಿ ಮಡುಗಟ್ಟಿ (ಮಾಪಶ. ದೇ. ೦೬೪-೦). ೩. ಹೊರೆಗಟ್ಟು; ಪೆಂಡಿಗಟ್ಟು : ನಿಮ್ಮಾಮಂ ಸೀಳಿ ಪೊಳ್ಳೆದು . . . ಮೂಗರಿದು ಮುಡಿಗಟ್ಟುತ್ತ (ನವಪೋ. ೪-೩೧). [ಮುಡಿ$_2$ + ಕಟ್ಟು$_1$]

**ಮುಡಿಗಟ್ಟು$_2$**. ಮುಡಿಕಟ್ಟು (ನಾ). ೧. ತಲೆಗೆ ಕಟ್ಟಿಕೊಳ್ಳುವ ವಸ್ತ್ರ; ಪಾಗು; ರುಮಾಲು : ಎಲ್ಲರುಮನೊಂದೆ ಸಮ್ಮೊಹನಾಸ್ತ್ರದಿಂ ಮೋಹಿಸಿ ಮೂರ್ಧಾಭಿಷಿಕ್ತರ ಮುಡಿಗಟ್ಟಿನ ಪಟ್ಟಿಗಳನಾಗಿಪಟಂಗೊಂಡು (ಜಗಾ. ೦೩-೩ ವ) ; ಬೆನ್ನಚಿತ್ರಾಳಿಕೆಯ ಸುತ್ತಿದ ಕೇಲಿಯ ಮುಡಿಗಟ್ಟಿನ ಪಟ್ಟೆಯ . . . ಸಿಂಗರಂಬೆರಸಿ (ಗಂಶ. ೬-೩೩ ವ). **ಮುಡಿಕಟ್ಟು**: ೨. ಕೂದಲನ್ನು ಸೇರಿಸಿ ಹಾಕಿದ ಗಂಟು ; ಮುರಿವಣೆಕ್ಕಿದ ಗಡ್ಡಮಿಾಸೆ ಮುಡಿಕಟ್ಟಂ ತಲ್ತ ಕೆಂಜಟ್ಟೆ (ಗಿಸಂಪು. ೦-೦೬೩). ೩. ತಲೆಗೆ ಧರಿಸುವ ಒಂದು ಬಗೆಯ ಆಭರಣ : ಮುತ್ತಿನ ಮೂಗುತಿ ಮುಡಿಕಟ್ಟು ಭುಜಕೀರ್ತಿ ವೃತ್ತಕುಚದ ನಡುವೆಸೆವ ಕತ್ತೂರಿಯಚ್ಚಿನ ಕಾಂತೆಗೊಲಿಯುದನ ವೃತ್ತಾಂತವನುಸುರುವೆನು (ಶುರಾಸಾಂ. ೧-೦೦೮). [ಮುಡಿ$_2$ + ಕಟ್ಟು$_2$]

**ಮುಡಿಗವಿ** (ಕ್ರಿ). ಕಿರೀಟವನ್ನು ಇಡು ; ಮುಕುಟವನ್ನು ತೊಡಿಸು : ಮೃಗಮದಸಲಿಲದೊಳ್ ಪೊಲ್ಲಮೆಲ್ಲನುಳ್ಳಲರ್ದು ಚೆಲ್ವಿಂಗೆ ಮುಡಿಗವಿದಂತೆ ತೋಜುವ ತೋರಮುಲ್ಲೆಗೆಯ ಮುಡಿಯುಮೆಸೆಯೆ ಕೈಗೆಯ್ದಾಗಳ್ (ಆಪು. ೪-೪೦ ವ) ; ನಮನಕುವಲಯಮಾಲೆಯುಮನಾಂತು ಬಬಿಲ್ಮುಡಿ ಚೆಲ್ವಿಂಗೆ ಮುಡಿಗವಿದಂತೆ ಸೊಗಯಿಸೆಯುಂ (ಶಂರಾಪಾ. ೩-೬೬ ವ). [ಮುಡಿ$_2$ + ಕವಿ$_1$]

**ಮುಡಿಗಾಜಿ** (ನಾ). ಸಮಸ್ಯೆಯನ್ನು ಒಡ್ಡುವವನು : ಕಡುದುರುಳತನದಿ ಮುಚ್ಚರವನೊಲಿದಿಕ್ಕೆಪ ಮುಡಿಗಾಜಿರೆರ್ದಗೆ ಕಿಚ್ಚಿಕ್ಕಿ ಶಿವಕವಿನಿಕರವಡಿ ವಿಡಿದು ನಡಸುವೆನು ಮೃಡಸೊಲ್ಮೆಯಿಂ ಪಡೆವ ರಾಘವಾಂಕನ ಚರಿತವ (ರಾಶಿತ. ೦-೦೬). [< ಮುಡಿಗೆ + — ಕಾಜಿ]

**ಮುಡಿಗಾಜಿಕೆ** (ನಾ). ೧. ದ್ವಂದ್ವಾರ್ಥವುಳ್ಳ ಮಾತು (?) : ಮುಡಿಗಾಜಿಕೆಯ ನುಡಿಗಳಲ್ಲ ಕೇಳ್ಸಿನ್ನಾಣೆ (ಪ್ರಭುಪು. ೩-೩೩) ; ೨. (?) : ಊರೊಳಗೆ ಪರರಲ್ಲಿ ಸಾಲಮಂ ತೆಗೆದು ಮುಡಿಗಾಜಿಕೆಯೊಳೋಡಿ ಬಂದಾ ಸೊನ್ನಲಾಪುರದೊಳತಿಸಾಧುಸಜ್ಜನಸದಾಚಾರಿಯೊಲು ಬಿಲ್ಲೇಶಬೊಮ್ಮಯ್ಯನುಂ . . . ಸೇವೆಗೆಯ್ಯುತ್ತಿರ್ದಂ (ರಾಶಿಶ. ೦೩-೩೯). [ಮುಡಿಗಾಜಿ + — ಇಕೆ]

**ಮುಡಿಗೆ** 'ಮುಂಡಿಗೆ$_3$' ನೋ.

**ಮುಡಿಗೆದರು** (ಕ್ರಿ). ತಲೆಕೆದರು ; ಕೂದಲು ಹರಡಿಕೊಂಡಿರು : ಶ್ರೀತಪೋಧನರು ಜರ್ಜರಿಸಿ . . . ವ್ಯಾಘ್ರಾನನವ್ರಾತಗಳನುಳಿದು ಮುಡಿಗೆದರಿ ನಿಡುಜಡೆಗಳಿಳಿವುತ್ತೆಯುತಿಭಯದಿ ಪರಿದು (ನವಪೋ. ೬-೨೪) ; ನಿಂತಿರುವಳು ರಣರಂಗದಲಿ ದ್ರೌಪದಿ ಮುಡಿಗೆದರಿ (ಶಾಂತಶ. ೧೩-೨೦). [ಮುಡಿ$_2$ + ಕೆದರು (< ಕೆದಱ್$_1$)]

**ಮುಡಿಗೆಯಿಡು** (ಕ್ರಿ). ಆಣೆಯಿಡು ; ಪ್ರಮಾಣಮಾಡು : 'ಕೈಮೇಲೆ ಕೈಯಿಟ್ಟು ಭಾಷೆಕೊಡು' ಎಂದು ಮುಡಿಗೆಯಿಟ್ಟು . . . ಶಪಥ ಮಾಡಿದ ರಂತೆ ! (ತುಲಿಮ. ೩೦೩). [ಮುಡಿಗೆ (< ಮುಂಡಿಗೆ$_3$) + ಇಡು$_1$]

**ಮುಡಿಗೊಳ್** (ಕ್ರಿ). ಕೊನೆಯಾಗು ; ಪೂರ್ಣಗೊಳ್ಳು : ನಿನಗೆ ನಾನ್ ನಚ್ಚಿತ್ತು ಸಂತೈಸೆನಿಂದು, ತಜಿಸಂದ ತೀರ್ಪಿಂತು ಮುಡಿಗೊಳ್ಳದೆಂದು (ಅಂತಿಗಿಪ. ೪೨-೯೬೩). [ಮುಡಿ$_2$ + ಕೊಳ್$_1$]

**ಮುಡಿಗೊಳಿಸು** (ಕ್ರಿ). ತುರುಬು ಕಟ್ಟಿಕೊಳ್ಳು : ಕೆದರ್ದ ಕುಂತಳಮಂ ಮುಡಿಗೊಳಿಸಿ . . . ರತಿಯು . . . ಪ್ರಳಾಪಿಸುತೆ ಬರುತಿರ್ದಳು (ನವಪೋ. ೬-೬೩). [ಮುಡಿ$_2$ + ಕೊಳ್$_1$ + — ಇಸು$_3$]

**ಮುಡಿದಂಡೆ** (ನಾ). ತುರುಬಿಗೆ ಮುಡಿಯುವ ಹೂವಿನ ಮಾಲೆ : ಕಡೆಹರುಷದೆ ಜಡೆಯೆಡೆಯೊಳು ಗಂಗೆಯ ಮುಡಿದಂಡೆಯಾಗಿ ಧರಿಸಿದ . . . ಚೆನ್ನನಂಜುಂಡನಡಿದಾವರೆಗೆಜಗುವೆನು (ಕಂಪಿ. ೦-೭). [ಮುಡಿ$_1$ + ದಂಡೆ$_1$]

**ಮುಡಿದಲೆ** (ನಾ). ಕಿರೀಟವನ್ನು ಧರಿಸುವ ತಲೆ : ಜೆಡೆದಲೆಗೆ ಕೊಟ್ಟನು ಮುಡಿದಲೆಯನೆನಲಲಘುಮತಿ ಕರವೂರ ಚೋಳನ ಭೃತ್ಯರಾಳಾನು (ಬಸಪು. ೨೭-೩೮) ; ಪಗಲ್ಕೋಳಸೆಂದೆಂಬ ಧಾರುಣೇಶಂ ಜಡೆಯ ತಲೆಗೆ ಮುಡಿದಲೆಯಿತ್ತು ಕಾರುಣ್ಯಸಾಗರನ ಕೈಲಾಸಮಂ ಪೊಕ್ಕನು (ಚೆಂಪು. ೩೩-೩೦). 'ಜಡೆದಲೆ' ಪರಾ. [ಮುಡಿ$_2$ + ತಲೆ$_1$]

**ಮುಡಿನಾಳಿ** (ನಾ). ಧಾನ್ಯವನ್ನು ತುಂಬಿ ಬಾಯಿ ಕಟ್ಟಿರುವ ಮೂಟೆಯಿಂದ ಪರೀಕ್ಷಾರ್ಥವಾಗಿ ಧಾನ್ಯವನ್ನು ಹೊರತೆಗೆಯಲು ಬಳಸುವ ಚೂಪಾದ ಸಾಧನ; ಸಕ್ಕರೆಗುತ್ತಿ; ಚಕ್ರಗುತ್ತಿ : (ಕಸಂಗ್ರಾ. ೬೯). [ಮುಡಿ$_2$ + ನಾಳಿ$_1$ (=ನಾಲಿ)]

**ಮುಡಿಪಿಕ್ಕು** (ಕ್ರಿ). (ದೇವರ ಹೆಸರಿನಲ್ಲಿ) ಯಾವುದಾದರೊಂದು ವಸ್ತುವನ್ನು ನಿರ್ದಿಷ್ಟ ಉದ್ದೇಶಕ್ಕಾಗಿ ತೆಗೆದಿಡು ; ಮಿಾಸಲಾಗಿರಿಸು : ಮುಡಿಪಿಕ್ಕಬೇಕೆಂದೂ ಮದ್ದೇ ಆಗಬೇಕೆಂದೂ ಕೆಲವರು ಹೇಳುತ್ತಿದ್ದಂತೆ ಒಬ್ಬನು ಮದ್ದೊಂದನ್ನು ಸಿದ್ಧಪಡಿಸಿದನು (ಕಾಲೂರ. ೧೪ ಶತಾಕಾರ). [ಮುಡಿಪು$_2$ + ಇಕ್ಕು]

**ಮುಡಿಪಿಡು**. ಮುಡುಪಿಡು (ಕ್ರಿ). = ಮುಡಿಪಿಕ್ಕು : ನನ್ನ ಧ್ಯೇಯ ಸಾಧನೆಗಾಗಿ ಮುಡಿಪಿಟ್ಟ ಜೀವನ ನನ್ನದು (ದೀಶರ. ೦೪೨) ; ಸತ್ವವರನೆಂಬ ವೀರವರನೊಬ್ಬ ಮಗನು ತನ್ನ ಶಿರವನ್ನು ಕೊಯ್ದು ದೇವಿಗೆ ಮುಡಿಪಿಟ್ಟನು (ತಪಸಿ. ೪೬). **ಮುಡುಪಿಡು** : ಅದರ ಕೊನೆಮುಟ್ಟಲು ಒಂದೇ ಉಪಾಯ ನನ್ನ ಜೀವನವನ್ನು ನಿನಗೆ ಮುಡುಪಿಟ್ಟು ಧಾರೆಯೆರೆಯುವುದು (ಜಗದಾ. ೦೨) ; ಏಳೇಳು ರಾಜಕುವರ ಮಾನುಕುಲದ ಕಲ್ಯಾಣಕಾಗಿ . . . ಅದಕಾಗಿ ನನ್ನ ಜನನ ಮುಡುಪಿಡಲು ಬೇಕು ಪ್ರಾಣ (ಸ್ವದರ್ಶಿ. ೭). [ಮುಡಿಪು$_2$ + ಇಡು$_1$]

**ಮುಡಿಪು$_1$**. ಮುಡಿಪ್ಪು, ಮುಡಿಹು, ಮುಡುಪು$_1$, ಮುಡುಹು$_1$ (ನಾ). ೧. [ಜೈನ] ನೋಂಪಿಯ ಮೂಲಕ ಗತಿಸು,– ಸಾವನ್ನು ಹೊಂದು : ಗೋವರ್ಧನಭಟ್ಟಾರರ್ ಸಮಾಧಿಮರಣದಿಂದಂ ರತ್ನತ್ರಯಮಂ ಸಾಧಿಸಿ ಮುಡಿಪಿ ದೇವಲೋಕಕ್ಕೆಪೋದರ್ (ವಡ್ಡಾರಾ. ೭೪-೨೮) ; ಘೋರವೀರತಪದೊಳ್ ತನುವಂ ಬಡಮಾಡಿ ನೋಂಪಿಯೊಳ್ ಮುಡಿಪಿ

(ಅಪು. ೩-೯೦). **ಮುಡಿಪ್ಪು**: ೧. ಶ್ರೀ ಅಗಟಿಯ ಮೋನಿಗುರುವರ ಶಿಷ್ಯ ಕೊಟ್ಟರದ ಗುಣಸೇನಗುರುವನ್ನೋರ್ನನ್ತು ಮುಡಿಪ್ಪಿದಾರ್ (ಎಕ. II. ೯-೨ ; 700). **ಮುಡಿಹು** : ೧. ಮಾವಣ್ಣನ ಸಿಷ್ಯರುಂ ಸನ್ಯಸನಗೆಯ್ದು ಮುಡಿಹಿದ ನಿಸಿದಿ (ಎಕ. VI. ತರೀಕೆ. ೫೦-೭ ; 1116) ; ಗೋಕವೆಯ ಮಗಳು ಸ[ಮಾ]ಧಿವಿಧಿಯಿಂದ ಮುಡಿಹಿ ಸ್ವರ್ಗಸ್ಥೆಯಾದಳು (ಪ್ರಕಂ. ೦೯೧೦. ೩೦-೭ ; ಸಂ. ೧೨ನೆಯ ಶ). **ಮುಡುಪ್ಪು₁**: ೧. ನಿಜಾಯುರವಸಾನದೊಳ್ ಸಮಾಧಿವಡೆದು ಮುಡುಪಿ ಸೌಧರ್ಮಕಲ್ಪದೊಳ್ ಸಾಮಾನಿಕ ದೇವರಾದೊರ್ (ಶಾಂತಿ. ೬-೮೩ ಪ) ; ತಪದಿಂ ತಾಜಿದ ತನುವಂ ನಿಧಾನದಿಂ ಮುಂ ಬಿಟ್ಟಂ ಅಂತು ಮುಡುಪಿ (ಅನಂತ. ೦೨-೩೩ ಪ) ; ಹರಿಪಮನು ಸಮಾಧಿಇಂ ಮುಡುಪಿ ಸರ್ಗಪ್ರಾಪ್ತನಾದ (ಕವಿ. IV. ೯-೬ : 1203). **ಮುಡುಹು₁**: ೨. ಸಾಯುವಂತೆ ಮಾಡು ; ಕೊಲ್ಲು ; ಸಾಯಿಸು : ಕಲಿಕರ್ಣನೀಗಳೆ ಮುಡುಹುವನು ಪವನಜನನೊಂದರೆ ಘಳಿಗೆಮಾತ್ರದಲಿ (ಕುಮಾ. ಕ. ೦೯-೨೩). [ಮುಡಿ₁ + —ಪು₁]

**ಮುಡಿಪ್ಪು₂**, ಮುಡಪು, ಮುಡುಪ್ಪು₂ (ನಾ). ೧. ಹೊರೆ ; ಮೂಟೆ : ರತ್ನಾಭರಣರಾಶಿಗಳ ಚಿಂತಾಮಣಿಯ ಮುಡಿಪುಗಳ ಪರುಷದ ಕಣಿಯ ತನತನಗೆ ಒಡದು (ಗಿಕ. ೦೦-೭೭ ಪ). ೨. ಚೀಲ ; ಸಂಚಿ : ಮುಡುಪಿನೊಳಗೆ ಇಟ್ಟ ಕೈಜೀತವು (ಪುರಂದ. ೨-೦೩-೯). ೩. (ವಿಶೇಷವಾಗಿ ದೇವರ ಹೆಸರಿನಲ್ಲಿ ಹರಕೆಹೊತ್ತು) ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ (ಬಟ್ಟೆಯ ಗಂಟಿನಲ್ಲಿ) ಪ್ರತ್ಯೇಕವಾಗಿ ತೆಗೆದಿರಿಸಿದ ಹಣ, ಒಡವೆ ಮುಂತಾದ ವಸ್ತು ; ಮೀಸಲು : ಎನ್ನೊಡೆಯನನ್ ಮುಳಿವ ರುದ್ರನೇ ಪೋಯ್ದನೋ . . . ತನಗೆ ಮುಡಿಪನ್ ಕಟ್ಟಿ ತಂದುದಿಲ್ಲೇದು ? (ಅಶ್ವತ್ಥಾ. ೬-೭) ; ದೇವರ ಹೆಸರಿನಲ್ಲಿ ಮುಡಿಪು ತೆಗೆದಿಟ್ಟು ಬರುವ ಪ್ರಯತ್ನ ಮಾಡುತ್ತಿದ್ದೆ (ತದ್ಭವ. ೨೦೩). ೪. ಒಬ್ಬ ವ್ಯಕ್ತಿಗೆ ಮೀಸಲಾಗಿರುವುದನ್ನು ಸೂಚಿಸುವ ಪ್ರೀತಿಯ ಗುರುತು : ಕುರುಳೊಳ್ ಕೊಂಕಿದ ಭಂಗಿಯಂ ಸಮಚಿ ವಕ್ಷೋಜಂಗಳೊಳ್ ಚಿತ್ರಮಂ ಬರೆದೊಪ್ಪೆತ್ತಿರೆ ಪಚ್ಚೆಮಾಲೆ ಮುಡಿಪಂಗೊಲ್ದಿಕ್ಕೆ ಮುಂಗೈಗೆ ಬೊಪ್ಪರವಂ ಮುಟ್ಟಿ ಮುಸುಂಕಿ ದಂತವಲಯಂ ತಳ್ತೊತ್ತಿದಳ್ ಬೇಟಮಂ ಕರೆದಳ್ ಕೂರ್ತು ಬೊಜಂಗನೊಲ್ಲದುಟಿವಂ (ಅನಂತ. ೯-೦೯). **ಮುಡಪು** : ೩. ಆಚಂದ್ರಾರ್ಕಸ್ಥಾಯಿಯಾಗಿ ಸೋಮೇಶ್ವರದೇವರ ಮುಡಪಿನ್ಗೆ ಭಂಡಾರಕೆ ಸಲುವುದು (ಎಕ. III. ತಂಜನ. ೦೭೩-೬ ; ?). **ಮುಡುಪ್ಪು₂** : ೧. ಒಡವೆಯೊಳಗರೆ ಕಾಣೆಯಂ ಸವೆದಡೆ ಬಳಿಕ ನಾಂ ಭಕ್ತನಲ್ಲೆ ಮುಡುಪಿನೆಣಿಕೆಗೆ ಕುಂದ ದಂತೆ ವಿಚಾರಿಸೈ (ಅಸಷ. ೦೦-೦೯). ೩. ಮುಡುಪು ಮಾಡಿ ಚಂದ್ರನಿಗೆ ಯದುರಾಗಿ ಮೂರು ಭಾರಿ ನಿವಾಳಿಸಿ (ತಾಗಂಂ. ೦೩೯-೬) ; ಬಲುವರ್ಷಗಳಿಂದ ಮನೆಯಲ್ಲಿದ್ದ ಮುಡುಪನ್ನೊಪ್ಪಿಸುವುದರ ವಿನಾ ಆತನಿಗೆ ಬೇರೆ ಉದ್ದೇಶವಿರಲಿಲ್ಲ (ಕಥೆ. ೦೦೨) ; ಬರಲಾರೆನಯ್ಯ ಬಹುದೂರ ನಿನ ಮುಡುಪ ಬರುವವರ ಕೂಡ ಕಳುಹೇನೊ (ಜನಪ. ೨೦).

**ಮುಡಿಪುಕಟ್ಟು** = ೧. ಮೀಸಲಾಗಿ ತೆಗೆದಿರಿಸು : ಬಂದ ಕಷ್ಟ ಪರಿಹಾರವಾಗಲೆಂದು ದೇವರಿಗೆ ಮುಡಿಪುಕಟ್ಟಿಟ್ಟೆ (ರೂಢಿ). ೨. ಸಮಾರ್ಜಿಸಿಕೊಳ್ಳು ; ಅರ್ಜಿಸಿಕೊಳ್ಳು : ಸಸ್ಯಸಂಪತ್ಸಂಗ್ರಹಣ ಕಾರ್ಯಕ್ಕೆ ಮುಡಿಪುಕಟ್ಟಿದ್ದವರಲ್ಲಿ ಬಹುಮಂದಿ ವರ್ಗೀಕರಣವಿಭಾಗದ ಹವ್ಯಾಸಿಗಳೇ ಆಗಿದ್ದಾರೆ (ಸಸ್ಯಪೂ. ೦೨೦). [ದೇ.॥ ತಮಿ. ಮುಟಿಪ್ಪು ; ಮಲ. ಮುಡಿಪ್ಪು ; ತುಳು. ಮುಡಿಪು, ಮುಡುಪು ; ತೆಲು. ಮುಡುಪು]

**ಮುಡಿಪ್ಪು** 'ಮುಡಿಪ್ಪು₁' ನೋ.

**ಮುಡಿಬಳೆ** (ನಾ). = ಮುಡಿ₂ ೧೧ : ಸಿದ್ಧಿಕಾಲದೊಳ್ ಮಾಡಿದ ಮುಡಿಬಳೆ ವಿಭೂತಿಗಳು ಮಣಿಗಳು ಬಿತ್ತ ನವಿಲುಗರಿ ಅಂಕೋಲೆಕಡ್ಡಿ ಬೇವಿನ ಕೊರಡು ಗರಿಕೆ (ತಾಗಂಂ. ೩೯-೩). [ಮುಡಿ₂ + ಬಳೆ₂]

**ಮುಡಿಯ** (ನಾ). ಒಬ್ಬಾತನ ಹೆಸರು : ಮುಡಿಯನುಂ ಎರೆಯನುಂ ಸನಮಡಿಯನುಂ ಪರಿಯಟ್ಟರಾಳ ಕೊತ್ತಕ್ಕೆಯೂರ ಪೂರ್ವ್ವದ ಬೆಸಮಕ್ಕಳಾ ಪರುಂ . . . ಪೊಲದೆ ಸೀಮೆಯೆಲ್ಲಮಂ ಓಲೆಯೊಳ್ಬರೆನ್ದು × × ಕಲ್ಲು ಸಾಸನಮಾಗೆ ಬರೆದುಕೊಣ್ಡೆಮು (ಎಕ. III. ನಂಜನ. ೦೩೯-೦೦ ; 915 ?).

[ ? ]

**ಮುಡಿಯಾಳ** 'ಮುಡಿವಾಳ' ನೋ.

**ಮುಡಿಯಿಕ್ಕು** (ಕ್ರಿ). ತಲೆ ಬಾಚು ; ಕೇಶಶೃಂಗಾರ ಮಾಡು : ಮುಡಿಯಿ [ಶಾಕಾಂ. ವಿ]ಕ್ಕುವಡಿಯಾಡುವಡಿಗಟ್ಟುವಾರತಿಯೆತ್ತುವ ತಿಳಕವಿಡುವ . . . ಆಚಾರವತಿಯರಂ (ಚಂದ್ರಪ್ರ. ೬-೮೫ ಪ) ; ಮುಡಿಯಿಕ್ಕುವ ತಿಲಕವಿಡುವ ತೊಡಂದುಡಿಸುವ . . . ನಿಖಿಳಪರಿಚಾರಿಣೀಜನಂ ನಿಜನಿಯೋಗನಿಷ್ಠಾಪರತೆಯಿಂ ನಿರಂತರಮೋಲಗಿಸುತೊಪ್ಪುತಿರೆಯಿರೆ (ಕುಸುಮಾ. ೬-೬ ಪ). [ಮುಡಿ₂ + ಇಕ್ಕು]

**ಮುಡಿಯಿಸು**, ಮುಡಿಸು (ಕ್ರಿ). ಹೂವು ಮೊದಲಾದುವುಗಳನ್ನು ತಲೆಗೆ ಸಿಕ್ಕಿಸು, – ಸೂಡು ; ಅಲಂಕರಿಸು : ಮುಡಿಯಂ ಒಡಿದೆಟಿ ದಪನಂ ಮುಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ ಮುಡಿಯಿಸುವಿನೆಗಂ ಮುಡಿಯಂ ಮುಡಿಯೆಂ ಗಡ (ಶಂಕಷ. ೭-೦೦) ; ನೆಲೆಯುಂ ಗಾಡಿಯುಮಳವಡೆ ಲಲನೆ ಪೆಜಿಳ್ ದಿವ್ಯಮಾಲೆಯಂ ಮುಡಿಯಿಸಿದಳ್ (ಜಗಂ. ೦೦-೦೨೭). **ಮುಡಿಸು** : ನಾನು ಪುಷ್ಪವ ಮುಡಿವುದಕ್ಕೆ ಮುನ್ನವೇ ಜಂಗಮಕ್ಕೆ ಪರಿಮಳಪುಷ್ಪವ ಮುಡಿಸುವೆ (ಮಹಾದೇ. ಬ. ೬೯-೨೦೩) ; ಭೀಮನ ತೋರಗರುಳಿನ ದಂಡೆಯನು ಕೈಯಾರೆ ಮಾರಿಗೆ ಮುಡಿಸುವೆನು (ಕುಮಾ. ಕ. ೩-೦೯). [ಮುಡಿ₁ + — ಇಸು₃]

**ಮುಡಿಯೊಡೆ** (ಕ್ರಿ). ಕೂದಲು ಬಿಚ್ಚಿ ಹೋಗು ; ತಲೆ ಕೆದರಿಹೋಗು: ಇರದೆ ಮುಡಿಯೊಡೆದು ಮುಂಗುರುಳ್ಮೋಘಮ್ಮೆದೆ ಬಂಧುರವದನವಿಂದು ಮಂಡಲ ಮುಸುಕಲ್ . . . ಸತಿ ವಿರಹದಿಂ ಹುಡಿಯೊಳುರುಳ್ದು ರೋದಿಸುತ್ತೆ (ನವವೋ. ೬-೩೯). [ಮುಡಿ₂ + ಒಡೆ₁]

**ಮುಡಿಲು** (ನಾ). ಒಂದು ಬಗೆಯ ಮೀನು : ಕೊರವಂ . . . ಮುಡಿಲುಂ ಪಂದಿಗನೆಂಬ ಮೀನ್ದೆಗೆದನಾ ಭಕ್ತಂ (ತ್ರಿಪುರ. ೫೭-೬). [ ? ]

**ಮುಡಿವಕ್ಕಿ** (ನಾ). ಸೋಗೆ ನವಿಲು : ನಡೆವಕ್ಕಿಯೊಡನೆ ನಡೆದಾಡಿ . . . ಮುಡಿವಕ್ಕಿಯೊಳ್ ಮುಡಿಯ ಮುಜುಕವಂ ಮಾಡಿ ಸವಗಡೆಯ ಸಜು ಮಿಂಡಿಯರ್ ಮಿಂಡೆಳ್ದು . . . ವಿಹರಿಸಿದರು (ನಂವಚಾ. ೪-೨೨).

[ಮುಡಿ₂ + ಪಕ್ಕಿ]

**ಮುಡಿವಣಿ** (ನಾ). ತಲೆಯಲ್ಲಿ ಧರಿಸುವ ರತ್ನ ; ಬೈತಲೆಮಣಿ : ಮುಡಿವಣಿಯಂ ಸೊಂಪುಂದಿಟ್ಟು (ಕಬ್ಬಿಗ. ೩೨೩). [ಮುಡಿ₂ + ಮಣಿ]

**ಮುಡಿವಲೆ** (ನಾ). ಕೂದಲನ್ನು ಸೇರಿಸಿ ಕಟ್ಟಲು ಉಪಯೋಗಿಸುವ ಬಲೆಯಂತಹ ಒಂದು ಬಗೆಯ ಆಭರಣ : ಮೌಕ್ತಿಕಗಳ ಮುಡಿವಲೆ ಮೆಜೆವ ಬಾವುಲಿಯ ನಿಡುಗುರುಳಿನ ಮುತ್ತಿನ ಕುಚ್ಚಿನಿಂದ ಬಲ್ಪೆಡಗಾಗಿ ಮೆಜೆದರರ್ಶಿಯಲಿ (ಶಂಷಟ. ೨೪-೪೨). [ಮುಡಿ₂ + ಬಲೆ₁]

**ಮುಡಿವಳ** 'ಮುಡಿವಾಳ' ನೋ.

**ಮುಡಿವಾಳ**, ಮುಡಿವಾಳ₂, ಮುಡಿಯಾಳ, ಮುಡಿವಳ (ನಾ). ಒಂದು ಬಗೆಯ ಸಸ್ಯ ಮತ್ತು ಸುವಾಸನೆಯಿಂದ ಕೂಡಿರುವ ಅದರ ಬೇರು: "ಕರಂ ಬಾಳಮೆಂಟೆ ಮುಡಿವಾಳವುಕ್ಕು" (ಅಂಗುಲಾ. ೩೯-೨೯) ; ಸೆಳಲಿಂದ ಮುಡಿವಾಳದ ನೆಳೆಗೆಯ್ದುಂದಗತಸ . . . ಪರಿಮಳದ ಬೇರ್ಗಳಂ ಬರೆ ತೆಗೆದಳ್ (ಗಿಂಕ. ೩-೬೩) ; ಮುಡಿವಾಳ ಬಾಳದ ಹರವರಿಯ ಹರಹಿದನು ಉಂಗುಲದಲಿ ಕಲಿಹನುಮ (ತೊರರಾ. ೩-೯-೦೩) ; ಗೊಜ್ಜಿಗೆಯ ಜಾದಿಯ ಮುಡಿವಾಳದ ಮಡಿಯ . . . ಋಷ್ಯಾಶ್ರಮೋಪವನಂ ಸೀತೆಗೆ ಕಣ್ಗೆ ವಂದತ್ತು (ರಾಮಾಯ. ೯೩-೬). **ಮುಡಿವಾಳ₂** : "ಇಕ್ಷುರಕಂ — ಮುಡಿ

ವಾಳ, ನಾಂಗುಲಿಕ" (ಹಿಹಿ. ೧೩) : ಜನದೊಳು ಮುಡಿವಾಳ ಲಾವುಚವಿಹವು (ಅಂಜನ. ೨-೯೭). **ಮುಡಿಯಾಳ** : ಮುಡಿಯಾಳ ಮುಪ್ಪಾದರೆ ಪರಿಮಳ ಬಿಡುವುದೆ (ಕನ್ನಡ. ೧೬೫). **ಮುಡಿವಳ** : ಕಿದಟವಡೆ ನಾಯಿದಜಿ ತಿಪ್ಪೆಯೊಳು ಮುಡಿವಳದ ಬೇರು ಕಾಣಿಪುದೆ ಯೆನಗೆ (ರಾಶಿತ. ೪-೩೭) ; ರತ್ನಗರ್ಭಾಂಗನೆಯು ಶಿರದಿ ಸದ್ಗಂಧಮೂಲವನು ನಿಕ್ಷೇಪಿಸಿದನೆನೆ ಮುಡಿವಳ ಗಳೆಸೆದವು (ಚಕೋಕೃ. ೩-೩೮). [ದೇ.॥ ತಮಿ. ಮುಟಿವ್ವಾಟ್ಟಿ ; ತುಳು. ಮುಡಿವಾಳ, ಮುಡ್ನೆಲ, ಮುಡ್ಯಲ, ಮುಡ್ಯೆಲ ]

**ಮುಡಿವಿಡಿ** (ಕ್ರಿ). ತಲೆಯನ್ನು ಹಿಡಿದುಕೊಳ್ಳು : ಅಂಗವನು ಖಳನ ಕಾಣಿಯು ಕಂಡು ಮುಡಿವಿಳಿದೆಳೆದು ಕೆಡಹಿದನು (ಕೌಶಿಕಾ. ೩೮-೪೦) ; ವೀಣಾವಾದ್ಯವೊರ್ಕೆಯ್ಯು ಮತ್ತೊರ್ಕೆಯ್ಯಿಂ ಬಾಣನ ಮುಡಿವಿಡಿದೆತ್ತಿ ಕ್ಷೀಣ ಸಂತೋಷದೆ ಹರಸಲ್ಕೆ (ಪೋಹತ. ೩೩-೧೧). [ ಮುಡಿ$_2$ + ಹಿಡಿ$_1$ ]

**ಮುಡಿವು** (ನಾ). ೧. ಕೊನೆ ; ಮುಕ್ತಾಯ : ಚರಣದ ಕೊನೆಗೆ ನಿಂತು ಅದಕ್ಕೆ ಮುಡಿವು ಕೊಡುವ ಅಕ್ಷರಕ್ಕೆ "ಮುಡಿ" ಎಂಬ ಹೆಸರನ್ನು ಇಲ್ಲಿ ಕೊಡಲಾಗಿದೆ (ಕವಿಮಾರ್ಗ. ೨೦೦). ೨. ತೀರ್ಮಾನ ; ನಿರ್ಣಯ : ಈ ವಿಷಯದಲ್ಲಿ ಯೋಚನೆಯನ್ನು ಮಾಡಿದ್ದೆಲ್ಲ ಮುಗಿದಿದೆ. ನನ್ನ ಮುಡಿವನ್ನು ತಿಳಿಸಿದ್ದೇನೆ (ಪಸುಮೊ. ೨೨೯).

[ ಮುಡಿ$_2$ + — ವು. / ತಮಿ. ಮಲ. ಮುಟಿವು ]

**ಮುಡಿವೂ**, ಮುಡಿಹೂ (ನಾ). ತಲೆಯಲ್ಲಿ ಧರಿಸುವ ಹೂವು : ಮುಡಿವೂಮಂ ಬಿಟ್ಟು ಝೇಂಕಾರಿಸುವಳಿಗಣಮಂ ನೀಟ್ಟು ಮೇಲೇಟಿಯುಂ (ಕುಸುಮ. ೬-೦೫೦) ; ಸೀಗುರಿ ಬಿಜ್ಜಣ ಮುಡಿವೂ ಕರಗಂಬೊತ್ತ ಮುಡದಿ ದುರ್ಗಂ ದೀವದ ಖಗಮೃಗಂ ಬಿಡದಡಸಿತು . . . ಕಡುಸೋವು (ಜಯಣ. ೨-೪೦). **ಮುಡಿಹೂ** : ಕೊರಳ ಯಜ್ಞೋಪವೀತದ ಮುಡಿ ಹೂಗಳ ಪರಿಮಳಿಸುವ ಗಂಧದಿಂದ ಕರದೊಳು ಹಿಡಿಯನಾಂತರಸುಮಕ್ಕಳು ಗಳು ಧುರಕನುವಾದರು (ಕಂಠಿ. ೦೭-೪೨); ಈ ಮುಡಿಹೂಗಳ್ ಬಾಡದ ಸದ್ವಿಧದಿಂದಾ ಬಡಕೂಸನು ಸಲಹೊ ಮುಕುಂದಾ ! (ಕಂಕೃ. ೬-೨೦).

[ ಮುಡಿ$_2$ + ಪೂ$_2$ ]

**ಮುಡಿವೆಜ್**$^3$ (ನಾ). ಮುಂದಲೆಯಲ್ಲಿ ಧರಿಸುವ ಅರ್ಧಚಂದ್ರಾಕೃತಿಯ ಒಂದು ಬಗೆಯ ಆಭರಣ : ಮುಡಿವೆಜ್‌ಯ ಮುಕ್ತಿನ ಬೈತಲೆಯ ಮೂಗುತಿಯನೀಡಾಡಿ ಅಜಿಸಿದರು ಹರಿಹರಿದು ತಮ್ಮಮೈಟ್‌ಯಾರನು (ತೊರವಾ. ೬-೫೦-೯೩). [ಮುಡಿ$_2$ + ಪೆಜ್$^3$]

**ಮುಡಿವೊಜ್**$^3$ (ನಾ). ಹೊರೆಯುಂತಿರುವ ತಲೆಗೂದಲು ; ಕೇಶಭಾರ : ಮುಡಿವೊಜ್‌ಯು ವಿಷಯದೆ ಮಜ್‌ಗೆ ಮದಾಂಧತಮಸಮಂ ಪೆಜಗಿಕ್ಕಿ ತನ್ನೊಳ್ ಮಾಲೆವ ಲಲನೆಯರ ಮದನವಿಧುಬಿಂಬದೊಳ್ . . . ಪೊಕ್ಕು ಪೋರ್ಕುಳಿಯುಕ್ಕಿಯುಂ . . . ವಿಜೃಂಭಿಸಿತ್ತಮಳಕೌಮುದೀವಿಸ್ತಾರಂ (ಪರ್ಣಕೃ. ೬-೯೩ ವ). [ಮುಡಿ$_2$ + ಪೊಜ್$^3$ ]

**ಮುಡಿಸರ** (ನಾ). ಕಿರೀಟದಲ್ಲಿ ನೇಲುವಂತೆ ಅಳವಡಿಸಿರುವ ಎಳೆ.— ಹಾರ : ಅರಳುಮಲ್ಲಿಗೆಮುಡಿಸರವನಾಂತಿಹನಾರೆ ದುರಗಲಿ ನರಸರಾಜೇಂದ್ರ (ಕಂಠಿ. ೨೩-೪೨). [ಮುಡಿ$_2$ + ಸರ$_2$]

**ಮುಡಿಸು** 'ಮುಡಿಯಿಸು' ನೋ.

**ಮುಡಿಹ** (ನಾ). ತಲೆಯಲ್ಲಿ ಧರಿಸುವುದು ; ಮುಡಿದುಕೊಳ್ಳುವುದು : ಪ್ರೀತವನದೊಳಗ ಬಳದ ಹೂವಾಳ ಮುಡಿಹಕ್ಕೆ ಯೋಗ್ಯಂ (ಹಕಣ. ೬-೦೮). [ಮುಡಿ$_1$ + — ಹ$_2$ ( < — ಪ$_2$ )]

**ಮುಡಿಹು** 'ಮುಡಿಪ್ಪು$_1$' ನೋ.

**ಮುಡಿಹೂ** 'ಮುಡಿವೂ' ನೋ.

**ಮುಡುಕಲು**, ಮುಡಕಲು (ನಾ). ಇಕ್ಕಟ್ಟಾದ ಜಾಗ : ಸಂದು : ತಪ್ಪಿಸಿಕೊಂಡಿದ್ದ ಪಸುವಿಗಾಗಿ ಅವನು ಊರಿನ ಮೂಲೆ ಮುಡುಕಲನ್ನೆಲ್ಲ ಮುಡುಕಿದನು (ಕೂಂ). **ಮುಡಕಲು** : ಮೂಲೆ ಮುಡಕಲಲ್ಲಿದ್ದವರೆಲ್ಲ ದೊಡ್ಡ ಪದವಿಗೆ ಬರುತ್ತಾರೆ (ತೆಂಗಾಗ್. ೨೩).

[ ಮುಡುಗು$_2$ + — ಅಲು ( < — ಅಲ್$_2$ )]

**ಮುಡುಕು**$_1$, ಮುಡುಗು$_1$. ಮುದುಕು, ಮುದುಗು$_1$ (ಕ್ರಿ). ೧. ಬಗ್ಗು ; ಬಾಗು; ಕೊಂಕಾಗು : (ಕಿ). ೨. ತಬ್ಬು ; ಆಲಿಂಗಿಸು : "ಮುಡುಕು (ಮುದುಕು) — ಶರೀರೋಪಗೂಹನೇ (ಆಲಿಂಗನ ಮಾಡು)" (ಕಮಾ). ೩. ಒದಗು ; ಉಂಟಾಗು : ಇನಿತು ಮೂರಂ ನಡೆತರಲು ಪೇಳ್ ನಿನಗೆ ಮುಡುಕಿದ ಕಾರ್ಯವೇನು (ಬಿಕೃ. ೨೯-೧೧). ೪. ತಡೆತಡೆದು ಮಾತನಾಡು ; ತಡವರಿಸು: ಬಳುನುಡಿಗಳು ನುಡಿವ ತಾ ತನ್ನೊಳು ನುಡಿಯುತಂ ಮುಡುಕಿ ನುಡಿವೆಡೆಯಲಿ ಸಲಿಸಿ ದೀಪಿಸುವ ಶಿವಲಿಂಗದೊಳ ಡಂಗಿದಲು ನೆಜಿಯೊಲಿವ (ಬಸಕೃ. ೩೫-೨೦). **ಮುಡುಗು$_1$** : ೧. ಗುಡುಗಿನ ಮುಗು ಮುಡುಗಿ ಮೊರಸೆ ಕಿನ್ನರಿಗರಿಯನ್ನ (ಗೀವಾಂ. ೯೩-೬೦). 'ಮುಡುಗುಗಿವಿ' ಪರಾ. ೫. ಬಾಗಿಸು ; ಕೊಂಕಿಸು : ಗಗನದನೊಡೆ ದೆನೊ ಮಿಡಿದೆನೊ ಶಿಶಿರವಿಗಳ ತಾರಗೆಗಳ ಮುಡುಗುವೆನೋ (ಶಿರೇತ. ೨-೦೨). **ಮುದುಕು** : ೨. "ಮುಡುಕು (ಮುದುಕು) — ಶರೀರೋಪ ಗೂಹನೇ (ಆಲಿಂಗನಮಾಡು)" (ಕಮಾ). **ಮುದುಗು$_1$** : ೬. ಮುದುಡು ; ಸಂಕುಚಿತವಾಗು : ನಡುನಡುಗಿ ನಡೆವನೊಲೆದೆಂದೆಗೆ ಮುದುಗಿಸ ಮೆಯ್ಯ ಲಕ್ಷ್ಮಣಂ (ಕ್ರಿರಾಮ. ೨೦೦-೦೭೨) ; ಯಾವುದೋ ಮಹಾ ದೊಡ್ಡದರ ಮುಂದೆ ತನ್ನ ಅಲ್ಪತ್ವ ಮುದುಗಿ ನಾಚಿ ಹೆದರಿ ಕುಗ್ಗಿ ನೆಲಸಮವಾಗಿ ಹೋದಂತಾಗಿತ್ತು ಅವನಿಗೆ (ಮಲೆಮ. ೫೬೪).

[ ದೇ.॥ ತಮಿ. ಮುಟಜ್ಜು, ಮುಟಕ್ಕು ; ಮಲ. ಮುಟಕ್ಕು; ತುಳು. ಮೊಡಂಕು; ತೆಲು. ಮುದುಗು; ಪರ್ಜಿ. ಮುಡ್ ]

**ಮುಡುಕು$_2$**, ಮುಡಿಕು, ಮುಡುಗು$_2$, ಮುದುಗು$_2$, ಮೊಡಕು (ನಾ). ೧. ಬಾಗಿರುವುದು ; ಕೊಂಕಿರುವುದು : (ಕಿ). ೨. ಮೂಲೆ ; ತಿರುವು : ಬೆಳಲ ಗದ್ದೆಯ ಮುಡುಕಿನಲು (ಎಕ. VIII, ತೀರ್ಥಹ. ೨೦೭-೨೨; 1415); ವಾಯುವ್ಯಭಾಗದ ಕಿಬ್ಬೆಯ ಕಂಬರೆ ಮುಡುಕಿನಲ್ಲಿ. . .ಯಲ್ಲಿಗಳು (ಎಕ. III, ತಿರುಮ. ೭೨-೦೫; 1622). ೩. ಇಕ್ಕಟ್ಟಾದ ಸ್ಥಳ; ಗೊಂದಿ: 'ಮುಡುಕಲು' ಪರಾ. **ಮುಡಿಕು** : ೨. ತೆಂಕಲ ಮುಡಿಕಿನಲ್ಲಿ. . . ನೆಟ್ಟ ಕ ೧ (ಎಕ. III, ತಿರುಮ. ೬೩-೬೬೩; 1748). ೩. ಮನೆಯ ಸಂದಿ ಮೂಲೆ ಮುಡಿಕಿನಲ್ಲಿ ಹುಡುಕಿ ನೋಡಲ್ಕಿಲ್ಲದಿರಲು (ಭೈರಸೂ. 1, ೩೯೯). **ಮುಡುಗು$_2$** : ೧. 'ಮುಡುಗಿಸು' ಪರಾ. **ಮುದುಗು$_2$** : ೪. ಮುದುರುವಿಕೆ; ಸಂಕೋಚ : 'ಮುದುಗಿಸು' ಪರಾ. **ಮೊಡಕು** : ೩. ವಿಸ್ತಾರದಲಿ ಬಾಳು, ವೈಶಾಲ್ಯದಿಂ ಬಾಳು ಕತ್ತಲೆಯ ಮೊಡಕು ಮೂಲೆಗಳ ಸೇರದಿರು (ಮುಕುಕ. ೪೦೩). [ < ಮುಡುಕು$_1$. / ತಮಿ. ಮುಟಜ್ಜು, ಮುಟುಕ್ಕ, ಮುಟುಕ್ಕು ; ಮಲ. ಮುಟಕ್ಕವ್. ಮುಟುಕ್ಕು; ತುಳು. ಮುಡಂಕ್, ಮೊಡಂಕ್ ]

**ಮುಡುಗಾರ** (ನಾ). ಒಂದು ವಂಶದ ಹೆಸರು (?) : ಬಿನಪತಿಅಪ್ಪೆ ಊರಾಳೆ ಮುಡುಗಾರ ತೊಣ್ಣೆಸ್ವರ ಮಗನುಂ (ಕೌಶ. XX. ೦೦-೨ : ೪).

[ ? ]

**ಮುಡುಗಿಸು**, ಮುದುಗಿಸು (ಕ್ರಿ). ೧. ಬಾಗಿಸು ; ಬಗ್ಗಿಸು ; ಕೊಂಕಿಸು : ಕಾಳೆಯ ನಾದದ ಕೇಳುತ ಗಜಗಳು ನೀಳದೋಳ್ರುತಿಹ ತೋಳ್ಗಳ ಮುಡುಗಿಸಿ ಚಾಳಿಸಿವೋಡುತಲಿ (ಹಮತ. ೦೮). **ಮುದುಗಿಸು**: ೨. ಸಂಕುಚಿತಗೊಳಿಸು; ಹುದುಗಿಸು : ತಲೆ ಕೆರೆದುಕೊಳ್ಳುತ್ತಾ ಮೈ ಮುದುಗಿಸಿ ನಿಂತಿದ್ದನು ಬಚ್ಚ (ಮಲೆಮ. ೬೬೯).

[ ಮುಡುಗು$_2$ (< ಮುಡುಕು$_2$) + — ಇಸು$_3$ ]

**ಮುಡುಗು$_1$** 'ಮುಡುಕು$_1$' ನೋ.

**ಮುದುಗು$_2$** 'ಮುದುಕು$_2$' ನೋ.

**ಮುದುಗುಗಿವಿ** (ನಾ). ಬಗ್ಗಿದ ಕಿವಿ ; ಮುದಿಚಿಕೊಂಡ ಕಿವಿ : ಹನುಮನ . . . ಚಿಗಿವ ಬಾಲವ ಮುದುಗುಗಿವಿಗಳ ಪೊಳೆವ ದಂಷ್ಟ್ರಗಳಾ ನಗುವ ಮುಸುಡ ನಿರೀಕ್ಷಿಸುತಲಿ (ಅನಂರಾ. ೪-೩-೩೯).

[ ಮುದುಗು$_1$ (< ಮುದುಕು$_1$) + ಕಿವಿ$_3$ ]

**ಮುದುಗುದಾವರೆ** (ನಾ). ಒಂದು ಬಗೆಯ ಸಸ್ಯ : ಮುಟ್ಟಿದರೆ ಮುನಿ. ಮುದುಗುದಾವರೆ, ನಾಚಿಕೆಗಿಡ, ಲಜ್ಜಾವತಿ (ವೈಕಿಗ. ೩೪-೧೧೬೯).

[ ← ತೆಲು. ಮುದುಗುತಾಮರ, ಮುದುಂಗುದಾಮರ ]

**ಮುದುಪಿಡು** 'ಮುಡಿಪಿಡು' ನೋ.

**ಮುದುಪು$_1$** 'ಮುಡಿಪು$_1$' ನೋ.

**ಮುದುಪು$_2$** 'ಮುಡಿಪು$_2$' ನೋ.

**ಮುದುಪು$_3$**, ಮುದುಬು$_3$, ಮುದುವು, ಮುದುಹು$_2$ (ನಾ). ಹೆಗಲು ; ಭುಜಾಗ್ರ : ಅಡಿಯಂ . . . ಮುಯ್ವಂ ಮುದುಪಂ ಬೆನ್ನಂ ಕೊರಲಂ ನಡುನೆತ್ತಿಯನೆತ್ತಿ ಪೊಯ್ದುರೊರ್ವರನೊರ್ವರ್ (ಗದಾಯು. ೮-೦೩) ; ಮೊಲೆಮೇಲಿಂ ಮೇಲುದಂ ತಂದೆಡದ ಮುದು[ಪಾಠಾಂ. ಡಿ]ಪಿನೊಳ್ಳಿಕ್ಕಿದುತುಂ (ಅರ್ಜವೀ. ೩-೬೩). **ಮುದುಬು$_3$** : 'ಮುದುಬುಶೂಲೆ' ಪರಾ. **ಮುದುವು:** 'ಮುದುವಿಕ್ಕು' ಪರಾ. **ಮುದುಹು$_2$**: "ಭುಜಶಿರಸ್, ಅಂಸ :– ಈ ೨ ಮುದುಹು" (ನಾಚಿರಾ. ೦೨೦) ; ಕುರುಳು ಬೆರಳು ಮುದುಹು ಮುಂಬಲ್ಲ ಕೊಳ್ಳಾ ನಿಜಿಯನಿಕ್ಕಿ ದಾಂಟಿದರೆ ಅಂತೆನ್ನ ನಂಬಾ (ಬಸವ. ೩೦೦) ; ಮುದುಹಂ ಪೊಯ್ದುಕೊಳುತ್ತುಂ (ಕುಸುಮಾ. ೧೦-೧೬೩). 'ಮುಯ್ಪು' ಹೋ. [ದೇ.‖ ತುಳು. ಮುದು]

**ಮುದುಪುಕುಡು** 'ಮುದುಪುಕೊಡು' ನೋ.

**ಮುದುಪುಕೊಡು**, ಮುದುಪುಕುಡು (ಕ್ರಿ). ಮಾಸಲು ತೆಗೆದಿರಿಸು : ಒಡೆಯನೆಂದೋ ಬಂದು ಕೇಳ್ವನು . . . ಎನುವವೊಲು ಸುಜಾತೆಯಿಂದ ಒಡಲು ಜಾಣ್ಮೆ ಜೀವಶಕ್ತಿಗಳನೆಲ್ಲವನು ಮುದುಪುಕೊಟ್ಟನು ಭರತ (ಮುಂಕುಶ. ೭೦೭). **ಮುದುಪುಕುಡು** : ಮಾತೆವೊಲೊ . . . ಭ್ರಾತೃಸುತ ಸಖರವೊಲೊ ಪಾತ್ರವೊಂದಕೆ ತಾಂ ಕಾತರಿಸುತಿಹುದು ತನ್ನೆಲ್ಲವನು ಮುದುಪುಕುಡೆ ಪ್ರೀತಿಯಾ ಹುಚ್ಚುಹಟ (ಮುಂಕುಶ. ೪೨೭).

[ಮುದುಪು$_2$ (<ಮುಡಿಪು$_2$) + ಕೊಡು$_1$]

**ಮುದುಬ**, ಮುಡಬ (ನಾ). ಊನವಾದ ಅವಯವಗಳುಳ್ಳವನು : ಅಂಗವಿಕಲ : ಅಲ್ಲಿ ಕೈ ಬಲಿಮದಿರೆ ಮುದುಬನಾ [ಪಾಠಾಂ. ದುಡೆಯಾ] ಗುತೆ ಬಂದ (ಬಿಂದೋರ. ಹ. ೩೦೦-೨೪) ; ಕೈಕಾಲ್ ಮುದುಬಗಳವಟ್ಟಂತೆ ಕುರುಡಗೆ ಕಣ್ಣು ಬಂದಂತೆ (ಕೃಶುಲೀ. ೧೧-೨೪) ; ಎರಡುಕಾಲೊಡೆದು ಹುಣ್ಣಾಗಿ ಮುದು[ ಡು ]ಬನಾದನು (ಶೃರಸೂ. I. ೩೭೦). **ಮುದಬ** : ತನ್ನ ಕರದೊಳಿಹ ಚೆಂಬಿನಲಿ ಭರದಿಂದ ಪೊಡೆಯಲ್ಕೆ ಎರಡುಮೊಳಕಾಲೊಡೆದು ಸುರಿವುತಿರೆ ರಕ್ತ ತರತರಿಸುತ್ತಲಾ ಭಾಗ್ಯನಿಧಿ ಮುದಬನಾಗಿರ್ದನು (ತ್ರಿಶಂಚ. ೩-೩೭) ; ಕಡವೆಯುವರ ಮಾತೇನು ದೊರೆ ರಾಯವಲ್ಲಭೆಯು ಮುದುಬಗೆ ಮನವಿಟ್ಟ ಬಳಿಕ (ಕುವಲಯಾ. ೦೭೦), 'ಉದುಹ$_1$' ಪರಾ.

[ ಮುದುಬು$_2$ + – ಅ$_7$. / ತಮಿ. ಮುಟವನ್ ]

**ಮುದುಬು$_1$** (ಕ್ರಿ). ಅಂಗವು ನ್ಯೂನತೆಯನ್ನು ಹೊಂದು ; ಊನವಾಗು: ಮಸದಿ ಮೊಣಕಾಲೂರಿ ಬಾಗುತ ನಡೆಯೆ ಮೊಣಕಾಲ್ ಕೈಗಳುಂ ಮುದುಬಿ [ಪಾಠಾಂ. ಮುದುಡಿ]ವಡೆ (ಬಸವ. ೩೭-೩೯).

**ಮುದುಬು$_2$**, ಮುದುಹು$_3$ (ನಾ). ಅಂಗದ ನ್ಯೂನತೆ; ಊನ : ಕಲಿಕಾಮ ಭೂವರನಂಗದಲಿ ಶೂಲೆಯುದಿಸಿ ಕರಚರಣವು ಮುದುಬಾಗೆ (ಪೂಲೀಶು. ೨-೦೬೪). **ಮುದುಹು$_3$** : 'ಮುದುಹುಗೊಳ್' ಪರಾ.

[<ಮುದುಬು$_1$./ತುಳು. ಮುದುಬು–ಊನ]

**ಮುದುಬು$_3$** 'ಮುದುಪು$_3$' ನೋ.

**ಮುದುಬುಶೂಲೆ** (ನಾ). ಹೆಗಲಿನಲ್ಲುಂಟಾಗುವ ನೋವು : ಹೊಸ ತರುತುಂಬಿಯ ನಿಲಾಭಿಯ ಹಣ್ಣಿನ ರಸದಲ್ಲಿ ಅರೆದು ಕಟ್ಟುವುದು . . . ಮುದುಬುಶೂಲೆ ಹರ (ವೈಸಿಂ. ೦೧೭).

[ಮುದುಬು$_3$ (< ಮುದುಪು$_3$) + ಶೂಲೆ$_1$]

**ಮುದುಮುದಿಸು** (ಕ್ರಿ). ಥಳಿಸು ; ಆರ್ಭಟಿಸು (?) : ತಡಿಯೊಳೆಡೆಗೊಳದಲ್ಲಿಗಲ್ಲಿ ಗುಂಪಗಳುಂ ಕೊಡುವ ಘನತುಂಬಿಗಳ ಕಂಡು ನೀರಾನೆಗಳ್ ಮುದುಮುದಿಸಿ ವೈರದಿಂ ಬಂದಿರಿಯೆ (ವಂಕಾರಾ. ೯-೩೦-೧೪).

[ಮುದುಮುದು + – ಇಸು$_3$]

**ಮುದುಮುದು** (ನಾ). ಒಂದು ಅನುಕರಣ ಶಬ್ದ : ನೃತ್ಯರು ಮುದುಮುದು ಪಳಚಿ ಮತ್ಸರಿಸಿ ಕಡಿದಾಡುವ ಖಡ್ಗಧಾರೆಯಿಂದುರ್ಗವರ್ಕೆಂಗಿಡಿಗಳ ನೋಡುತಿಯ್ದುವಳು (ತೋಹಿಕ. ೨೯-೦೩).

**ಮುದುವಿಕ್ಕು** 'ಮುದುಹಿಕ್ಕು' ನೋ.

**ಮುದುವು** 'ಮುದುಪು$_3$' ನೋ.

**ಮುದುಹಿಕ್ಕು**, ಮುದುವಿಕ್ಕು (ಕ್ರಿ). ಭುಜವನ್ನು ಚಪ್ಪರಿಸು ; ಭುಜಾಸ್ಫಾಲನ ಮಾಡು : ಕಣ್ಣ ಕೆಂಚನೆ ಮಾಡಿ ಗಂಡುಗೆದರಿ ಮುದುಹಿಕ್ಕಿ ಕೆಲೆವವರ ಕಂಡಡಾಜಾವೆ (ಬಸವ. ೪೪೭) ; ಕೈಯೆತ್ತಿ ಕೂಗಿಟ್ಟು ಕರೆಕರೆದು ಹಿಗ್ಗುತುಂ ಮೈಮುಕ್ಕಿ ಮುದುಹಿಕ್ಕಿ ಕಡುಹಿಗ್ಗಿ ಹೆಚ್ಚುತುಂ (ಕಂತೀರ. ಹ. ೦೪೦-೨೬). **ಮುದುವಿಕ್ಕು** : ನಲಿದು ಮುದುವಿಕ್ಕಿ ಗುಮ್ಮಡಿಗೆಲವಂ ಪೆರ್ಗರಡಿಯುತೆ ಕುಪ್ಪಿಕ್ಕಿ ಕರಂ ಕೆಲವಂ ಕಣ್ಣಪ್ಪಂ ಮುಂದಲೆ ದುಜುಬಿ ದುಮ್ಮಸಾಲೆಯೆನುತಂ ಕೆಲವಂ ಓರಿದುಂ ಕೊಂಬು ಕೊಳಲ್ ಮಾರ್ಬರಿಗಳ ಸುಣ್ಣರಮನಾಸ್ಯದೊಳ್ ತೋಱುತ್ತ (ಶ್ರೀಪುರಿ. ೨೭-೦೪೭)

[ಮುದುಹು$_2$ (< ಮುದುಪು$_3$) + ಇಕ್ಕು]

**ಮುದುಹು$_1$** 'ಮುಡಿಪು$_1$' ನೋ.

**ಮುದುಹು$_2$** 'ಮುದುಪು$_3$' ನೋ.

**ಮುದುಹು$_3$** 'ಮುದುಬು$_2$' ನೋ.

**ಮುದುಹುಗೊಳ್** (ಕ್ರಿ). ಊನವಾಗು ; ವಿಕಲತೆಯುಂಟಾಗು : ಕೆಡೆದವು ಮೇಘದೊಳಾಡುವ ಖಗತತಿ ಮುದುಹುಗೊಂಡ ರೆಕ್ಕೆ ಮುರುಟಿ (ಗೊಮ್ಮಚ. ೩-೪೦). [ಮುದುಹು$_3$ (< ಮುದುಬು$_2$) + ಕೊಳ್$_1$]

**ಮುಡ್ಡಿ** (ನಾ). ಹಿಂಭಾಗ; ಪೃಷ್ಠ : ಉಟ್ಟ ಪಟ್ಟೆಯ ಕಾಸೆ, ಹೊಂಬಟ್ಟೆಯ ನಡುಕಟ್ಟು ಮುಡ್ಡಿಯ ಮೇಲೆ ರಾರಾಜಿಸುವ ಐದಂಗುಲ ಅಗಲದ ಕಟಿಸೂತ್ರ (ಅವಕಂ. ೩೭ ಹಿಂಳೆ. ಅಬಿ.). [ದೇ.‖ ತುಳು. ಮುಡ್ಡಿ ; ತೆಲು. ಮುಡ್ಡಿ; ಮೂಡಿ]

**ಮುಣುಂಗು** 'ಮುಳುಂಗು' ನೋ.

**ಮುಣುಗಿಸು** 'ಮುಳುಂಗಿಸು' ನೋ.

**ಮುಣುಗು$_1$** 'ಮುಳುಂಗು' ನೋ.

**ಮುಣುಗು$_2$** 'ಮುಳುಕು$_2$' ನೋ.

**ಮುತ್‌ಫರ್ಖಿತ್** 'ಮುತಫರ್‌ಖಾತು' ನೋ.

**ಮುತಫರ್‌ಖಾತು**, ಮುತ್‌ಫರ್ಖಿತ್ (ನಾ). ೧. ಬೇರೆ ಬೇರೆ ಬಗೆಯ ಸಾಮಗ್ರಿ, — ವಸ್ತು ; ವಿವಿಧ ಬಗೆಯ ಸರಂಜಾಮು. ೨. ಬೇರೆ ಬೇರೆ ವಿಭಾಗ : ಮುತಫರ್‌ಖಾತಿನಿಂದ (Mutfar-Khat) ಆರುಮಂದಿ ಮಾತ್ಬರ್‌ಜನರನ್ನೂ ಸಹ ಚುನಾಯಿಸಿ . . . ಪಂಚಾಯತರು ಎಂದು ಮೊಕರರ್ಮಾಡಿದರು (ಮೈಶಾಸ. II. ೨೮). **ಮುತ್‌ಫರ್ಖಿತ್** : ೩. ವಿಶ್ರಾಂತಿವೇತನ ; ಪಿಂಚಣಿ : (ಮೈಗಜೆ. IV. ೬೬೦).

[← ಅರ. ಮುತ್‌ಫರ್ರಿಕಾತ್ ; ಹಿಂ. ಮುತ್‌ಫರ್‌ಕಾತ್ ; ಮರಾ. ಮುತ್‌ಫರ್ಕಾತ್]

**ಮುತಯ್ಯ** (ನಾ). ಒಬ್ಬಾತನ ಹೆಸರು : ಮುತಯ್ಯನ ಮ[ಗ] (ಕ್ವೆ೨. XI-i, ೨೯-೭೭; ಸ. 912). [ < ಮುತ್ತು$_3$ + ಅಯ್ಯ$_1$ (< ಅಯ್ಯ$_1$)]

**ಮುತವರ್ಜಿ** ' ಮುತುವರ್ಜಿ ' ನೋ.

**ಮುತವ್ವೆ** ' ಮುತ್ತವ್ವೆ' ನೋ.

**ಮುತಾಕಲು** (ನಾ). (?) : ೭೨ ಸುತ್ತಲೂ ಮುತಾಕಲಿಗೆ ದೊಡ್ಡ ೨೦ ಚಿಕ್ ೫೨ (ಎಕ. XIV, ಕಂಡಿಸ. ೨೪೯ ಪುಟ ೧೮೦ ; 1847). [ ? ]

**ಮುತಾಕು** (ನಾ). (?) : ೭೨ ಮುತಾಕಿಗೆ ದೊ ೨೦ ಚಿಕ್ ೫೨ (ಎಕ. XIV, ಕಂಡಿಸ ೨೪೯. ಪುಟ ೦೪೯ ; 1847). [ ? ]

**ಮುತಾಬಕ್** (ಅ). ಅನುಸಾರವಾಗಿ ; ಮೇರೆಗೆ : ಬಿತಾಳೀಮು ಛಂದ್ ೨೧ನೇ ಮಾಹೆ ಜಿಲ್ಹಿಜಿ, ೧೧೯೭ನೇ ಹಿಜರೀ ಮುತಾಬಕ್ ಛಂದ್ ೨೭ನೇ ಮಾಹೆ ನವೆಂಬರ್ ೧೭೮೩ನೇ ಇಸವಿ (ತಾಮಪಂ. ೨೨೭).

[← ಅರ. ಹಿಂ. ಮುತಾಬಿಕ್ ; ಮರಾ. ಮುತಾಬಿಕ್, ಮುತಾಬೀಕ್]

**ಮುತಾಲಿಕ, ಮುತ್ತಲ್ಲಿಕ, ಮುತ್ತಾಲಿಕ** (ನಾ). ಯಾವುದಾದರೂ ಒಂದು ವಿಶೇಷವಾದ ಕೆಲಸದ ನಿರ್ವಹಣೆಗಾಗಿ ನೇಮಕಗೊಂಡವನು ; ನಿಯೋಗಿ ; ಕಾರ್ಯಭಾರಿ : ಶ್ರೀಕೃಷ್ಣರಾಜಒಡೆಯರೈಯ್ಯನವರು . . . ಮುತಾಲಿಕ ವೆಂಕಟರಾಮೈಗೆ ಬರೆಸಿ ಕೊಟ್ಟ ಕ್ರಯಭೂದಾನ ಶಾಸ್ವ ಸಾಧನದ ಕ್ರಮವೆಂತೆಂದರೆ (ಎಕ. IV (R), ಎಕಂಡೂ. ೧೪೩-೬ ; 1763) ; ಕುಲಕರ್ಣಿ ಮುತಾಲಿಕ ತಿಂಮಪ (ಇಂ. ೧೯೯೭, ರಾಜಿನಸ್ಮಾರ್, ೨೪೮-೨; ?). **ಮುತ್ತಲ್ಲಿಕ:** ಬರದಾತ ಶಾನುಬೋಗರ ಮುತ್ತಲ್ಲಿಕ ನರಸಪ್ಪನ ಸ್ವದಸ್ತೂರ ಬರಹ (ಮೈಆಂ. ೦೯೨೯, ಕಿ೨-೪೯; 1768). **ಮುತ್ತಾಲಿಕ :** ಅವರ ಮುತ್ತಾಲಿಕರಾಗಿ . . . ನಾವು ಆ ಧನವನ್ನು ಬಡವರ ಉದ್ಧಾರಕ್ಕಾಗಿ ಉಪಯೋಗಿಸಬೇಕು (ಹಿಶ್ಮಾಮ. ೦೭೬).

[← ಅರ. ಹಿಂ. ಮುತಅಲ್ಲಿಕ್; ಮರಾ. ಮುತಾಲೀಕ್]

**ಮುತುವರ್ಜಿ, ಮುತವರ್ಜಿ** (ನಾ). ೧. ಆಸಕ್ತಿ ; ಶ್ರದ್ಧೆ ; ಆಸ್ಥೆ : ಪ್ರತಿಯೊಬ್ಬರೂ ನಿಮ್ಮ ನಿಮ್ಮ ಕೆಲಸಗಳನ್ನು ಪ್ರಾಮಾಣಿಕರಾಗಿ ಮುತು ವರ್ಜಿಯಿಂದ ಮಾಡಬೇಕು (ಕಾಲಿಮ. ೦೮೦); ಆಕೆಗೆ ತಕ್ಕ ಹಾಗೆ ಮುತು ವರ್ಜಿಯಿಂದ ಕೆಲಸ ಮಾಡುವ ತೋಟಗಾರರಿರಬೇಕು (ಕರಜಿ. ೦). ೨. ಎಚ್ಚರಿಕೆ ; ಜಾಗರೂಕತೆ : ನೀನು ವಾರಕ್ಕೊಂದುಸಲ ಪರೀಕ್ಷೆ ಮಾಡಿಸಿಕೊಳ್ಳಬೇಕು. ತುಂಬ ಮುತುವರ್ಜಿಯಿಂದ ನಡೆದುಕೊಳ್ಳಬೇಕು (ವಂಕಪ್ಕ. ೨೫೭). **ಮುತವರ್ಜಿ :** ೨. ಆ ಆಟವನ್ನಾಡಲು ನಾನು ಬಹಳ ಮುತವರ್ಜಿ ಮಾಡಬೇಕಾಗಿದೆ (ಗರುಂ. ೨೯).

**ಮುತುವರ್ಜಿ ವಹಿಸು, ಮುತವರ್ಜಿ ವಹಿಸು** = ಆಸಕ್ತಿಯನ್ನು ತೋರು ; ಶ್ರದ್ಧೆವಹಿಸು : ನನ್ನನ್ನವನು ಸ್ಮೃತಿಸುತ್ತಿದ್ದನೇ ಹೊರತು ಅಷ್ಟೇನೂ ಮುತುವರ್ಜಿ ವಹಿಸಲಿಲ್ಲ (ಕೃಪರು. ೨೦೯) ; ಅಷ್ಟು ಮುತವರ್ಜಿ ವಹಿಸಿ ಮಾಡಿದ್ದ ಏರ್ಪಾಡುಗಳೆಲ್ಲ ಒಂದೇ ಒಂದು ಕ್ಷಣದಲ್ಲಿ ಪ್ಲೇಗಿನ ಅವಾಂತರದಿಂದ ಧ್ವಂಸವಾದುವಲ್ಲ (ರಂಗಕ. ೦೨೮).

[←ಅರ. ಹಿಂ. ಮುತಅವಜ್ಜ಼ಹ್; ಮರಾ. ಮುತವಜೀ, ಮುತವಜ್ಜೀ, ಮುತವಜಾ]

**ಮುತ್ತ$_1$** ' ಮುದು$_1$ ' ಪರಾ.

**ಮುತ್ತ$_2$** (ನಾ). ೧. ವಯಸ್ಸಾದ ವ್ಯಕ್ತಿ : ಮುದುಕ ; ವೃದ್ಧ : ಕಿಱಿಯಂ ಮುತ್ತಂ ಧನದಂ ಬಱಿಯಂ ತೊಱೆದಂ ಗೃಹಸ್ಥನೆನ್ನದೆ ಮುಂಬಿಟ್ಟಱಿ ಕೊಲುತಿರ್ಪ ಜವನೆಂಬುಱಿಕೆಯ ಪಗೆವಂಗದಂತು ಪಂಗಿಗನಪ್ಪೆಂ (ಅಂಕೃ. ೪-೭೭) ; ಮುತ್ತನಿವಂ ಕೂಸಿವಂ . . . ಎಂದಿಂತು ಮಿಡ್ಯೋನ್ನತ್ತಂ ಬಗೆದಪನೆ ಬಗೆಯಸಂತಕರಾಜಂ (ಜೀವಸಂ. ೯-೩೨). ೨. ಅಜ್ಜ ; ತಾತ : ಶ್ರೀಮತು ಶ್ರೀಬಿಟ್ಟಿಮಯನ ಮುತ್ತಂ ವಿನಯಾದಿತ್ಯ ಪೊಯ್ಸಳದೇವರ ರಾಜಂ (ಎಕ. VI. ೩ಕ್ಮಮ. ೬೮-೯: 1012). ೩. ಹಿರಿತನವುಳ್ಳವನು : ಗಣ್ಯ : ನೆಲೆವೆತ್ತ ಮುತ್ತರಿಂ ಮಿಗೆ ನೆಲೆವೆತ್ತಂ ಜಾಮ ರಾಜಂ (ಚಕವ. ೨-೬೩). (ಗು). ೪. ವಯಸ್ಸಾದ ; ಮುಪ್ಪಿನಿಂದ ಕೂಡಿದ : ' ಮುತ್ತಾಣ್ಮ ' ಪರಾ. ೫. ಹಿಂದಿನ ; ಪೂರ್ವಿಕ . ಇದು ನಮ್ಮ ಮುತ್ತ ಮೂವರ ಭವಪಂಚಕಪ್ರಪಂಚಿತಪ್ರೀತಿನಿಮಿತ್ತಂ (ಅರ್ಥನೇ. ೯-೯ ೨). ೬. ಇಳಿಯುವ ; ಅಡಗುವ : 'ಮುತ್ತಂಜೆ' ಪರಾ.

**ಮುತ್ತರ್, ಮುತ್ತವರು** (ಬಹುವ) : ಮುತ್ತರುಂ ಕುರುಡರುಮೆನ ದೆವ್ವ ಸುಡಿಗೇಳ್ ಮಗನೇ (ಕಂಕಠ. ೦೪-೦೨); ನಿನ್ನನು ಹೆತ್ತವರು ಮುತ್ತ ವರು ಮುನಿಗಳು ಮುಕ್ತಿಕಾಮರು ಭಜಿಸುವರದಾವನ ಪದಾಂಬುಜವ ವರ್ತಿಸುವಳಾಜ್ಞೆಯಲಿ ಮಾಯಾಮುತ್ತಕಾಳಿನಿ (ಹಿಶಾಗ. ೯-೦-೯೮).

[<ಮುದು$_1$. / ತಮಿ. ಮೂತ್ತವನ್, ಮೂತ್ತೋನ್; ಮಲ. ಮುತ್ತನ್; ತೆಲು. ಮುತ್ತ]

**ಮುತ್ತ$_3$** ' ಮುಟ್ಟುಗ ' ನೋ.

**ಮುತ್ತಂಡ** (ನಾ). ಮೂರು ತಂಡ,– ಗುಂಪು : ಮುತ್ತಂಡದಲಿ ದಾಸ ವರು ಪೊಯ್ಮಲಾಗಿ ತಾನಿತ್ತನಯ್ಯನೊಳಾತಿ ಪ್ರಾಣವಂ (ಅಕ್ಕಾ. ೧-೦೯-೭೭). [<ಮೂಱು + ತಂಡ]

**ಮುತ್ತಂದೆ** (ನಾ). ಅಜ್ಜನ ಅಥವಾ ಅಜ್ಜಿಯ ತಂದೆ ; ಮುತ್ತಾತ : ಅವರ ಮನೆಯಲ್ಲಿ ಅವರ ಮುತ್ತಂದೆಯ ಕಾಲದಿಂದಲೂ ಆ ಪದ್ಧತಿಯನ್ನು ಅನುಸರಿಸುತ್ತಾ ಬಂದಿದ್ದಾರೆ (ರೂ೨). [ಮುತ್ತ$_2$ + ತಂದೆ]

**ಮುತ್ತಕ** ' ಮುಟ್ಟುಗ ' ನೋ.

**ಮುತ್ತಗ** ' ಮುಟ್ಟುಗ ' ನೋ.

**ಮುತ್ತಜ** ' ಮುತ್ತಜ್ಜ ' ನೋ.

**ಮುತ್ತಜ್ಜ, ಮುತ್ತಜ** (ನಾ). = ಮುತ್ತಂದೆ : ಅರಿಕೇಸರಿಗೆ ಮುತ್ತಜ್ಜ ನಾದ ಅವನು ಅರಿಕೇಸರಿಯೊಡನೆ ಹೋರಾಡಿದನೆಂಬುದನ್ನೂ ಒಪ್ಪಲಿಕ್ಕಾ ಗುವುದಿಲ್ಲ (ಪಾರೋಜ. ೦೬೩); ಬಡತನವು ಹೆಚ್ಚಿದ್ದುದರಿಂದ ರೈತರು ಅಜ್ಜ; ಮುತ್ತಜ್ಜರು ಹೂತಿಟ್ಟಿದ್ದ ರೂಪಾಯಿಗಳನ್ನು ಕೊಟ್ಟಿದ್ದರು (ಹುಟ್ಟಿಹ. ೩). **ಮುತ್ತಜ :** ಶ್ರೀಮತು ಹಟಿಹೊಳಲೂರ ಗೌಡುಗಳ ಮಂಮಕ್ಕಳು ಮುತ್ತಜ ಬಯ್ರಪ್ಪಗೌಡನ ಮಗ . . . ಮಾಡಿದ್ದು ದೇವಸ್ಥಾನ ದೀಪಮಾಲೆ ಕಂಭ ಸಹಾ ಕೆರೆ ಸಹಾ ೨ (ಎಕ. VIII, ಶಿವಮೊ. ೮೨-೦; ?)

[ಮುತ್ತ$_2$ + ಅಜ್ಜ$_2$]

**ಮುತ್ತಜ್ಜಿ** (ನಾ). ಅಜ್ಜಿಯ ಅಥವಾ ಅಜ್ಜನ ತಾಯಿ : ಅವರು ತಮ್ಮ ಮುತ್ತಜ್ಜಿಯ ಕಾಲದ ಒಡವೆಗಳನ್ನು ಹಾಗೆಯೇ ಕಾಪಾಡಿಕೊಂಡು ಬಂದಿ ದ್ದಾರೆ (ರೂ೨). [ಮುತ್ತ$_2$ + ಅಜ್ಜಿ]

**ಮುತ್ತಡಸು** (ಕ್ರಿ). ಮುತ್ತನ್ನು ಹದಿ,– ಮೆಟ್ಟು,– ಕೂರಿಸು : ಇತ್ತೆಱ ದೊಳು ನಿಂದಿಹ ಜೀವರನ್ನದೆ ಪುತ್ತಳಿಗಳು ಸೊಡರ್ವಿಡಿದು ಮುತ್ತಡಿ[ಡ]ಸಿದ ಮಹದುಪಕರಣಗಳಿಂದೆ ಚಿತ್ರಯಿಸಿದುವಲ್ಲಲ್ಲಿ (ವೀಪಪ. ೨೨-೯).

[ಮುತ್ತು$_5$ + ಅಡಸು]

**ಮುತ್ತತ್ತಿ** (ನಾ). ಒಂದು ಸ್ಥಳದ ಹೆಸರು : ನನ್ನಿಯ ಸೇಕರ ಶ್ರೀ [ಮು] ತ್ತತ್ತಿಯಂ ನಾಗಕುಮಾರಯ್ಯಂಗೆ ಕೊಟ್ಟೆಡೆನ್ಗೊಡೆ (ಎಕ. V. (R), ತಿರುಮ. ೬೯-೩; ಸಂ. 9ನೆಯ ಶತ). [?]

**ಮುತ್ತಪ್ಪ** (ನಾ). ಅಜ್ಜನ ಅಥವಾ ಅಜ್ಜಿಯ ತಂದೆ; ಮುತ್ತಾತ : ಈತನು ನಹುಷನ ಮಗನಾದ ಯಯಾತಿರಾಯನು ; ನನಗೆ ತಂದೆಯು . . . ನಿಮಗೆ ಮುತ್ತಪ್ಪನು ಆಗಬೇಕು (ಕೃಪಾಆ. ೦೯೭); ನಮ್ಮ ಮುತ್ತಪ್ಪ ನಾದ ಹಿರಣ್ಯಕಶಿಪುವು ಧರಿಸಿದ ಕುಂಡಲವು ಇವು (ಕೃಕ್ವರಾ. ೬-೪೯).

[ಮುತ್ತ$_2$ + ಅಪ್ಪ$_1$]

**ಮುತ್ತಬ್ಬೆ** (ನಾ). ೧.=ಮುತ್ತಜ್ಜಿ. ೨. ತಾಯಿಯ ಅಥವಾ ತಂದೆಯ ತಾಯಿ : ಅಜ್ಜಿ : ಪೆಱರ ಕಿಱಿಲೋಳೆಮ್ಮಬ್ಬೆಯುಂ ಮುತ್ತಬ್ಬೆಯುಂ

ಸಾದುರ್ ಬದಗುಗೆಯ್ದುಣೆ (ಅರಿಕೃ. ೩-೩೪ ವ); ಪಡುವಳ್ ಕೀಟುೞೊಳಮ್ಮು ತೊಟ್ಟು ಪಡುವಳ್ ಮುತ್ತಬ್ಬೆಯೂ ಕೋಣೆಯೊಳ್ (ಕಾವ್ಯಾವ. ೬೦೭) ; ಮುತ್ತಬ್ಬೆಯುಂ ಪೆತ್ತ ತಾಯುಂ ಮೃತ್ಯುನಿವಾಸಮಂ ಪುಗಲು (ಕೃಷ್ಣಾಸ್ರ. ೯-೯೩ ವ). [ಮುತ್ತ$_2$+ಅಬ್ಬೆ$_1$]

**ಮುತ್ತಮ್ಮ$_1$** (ನಾ). = ಮುತ್ತಂದೆ : ಇಂದ್ರನೆಂಬ ವಿದ್ಯಾಧರಚಕ್ರವರ್ತಿ ನಿಮ್ಮ ಪಿರಿಯ ಮುತ್ತಮ್ಮನಪ್ಪ ಮಾಲಿಯುಂ ಕೊಂದು ನಮ್ಮನ್ವಯದಿಂ ಬಂದ ಲಂಕೆಯುಂ ಕೊಟ್ಟೊಡೀತನದೆನಾಳುತ್ತಿರ್ಪಂ (ಕಂರಾಪು. ೦೦-೧೪೩ವ). [ಮುತ್ತ$_2$ + ಅಮ್ಮ$_1$]

**ಮುತ್ತಮ್ಮ$_2$** (ನಾ). ಒಬ್ಬಾತನ ಹೆಸರು : ಕೇಸವಾದಿತ್ಯರ ದೇಗುಲ ಸಿದ್ಧೇಸ್ವರ ಮುತ್ತಮ್ಮನ ಕಲ್ಲನ್ತನ್ನ ಮಕ್ಕಳಿರ್ವ್ವರ ಕಲ್ಲ ಮಾಡಿಸಿದನ್ (ಸೌಇಇ. XI-i, ೩೪-೬; 933). [ಮುತ್ತ$_6$ + ಅಮ್ಮ$_1$]

**ಮುತ್ತಯ** 'ಮುತ್ತಯ್ಯ' ನೋ.

**ಮುತ್ತಯಿದೆ** 'ಮುತ್ತಯ್ದೆ' ನೋ.

**ಮುತ್ತಯ್ದೆ**, ಮುತ್ತಯಿದೆ, ಮುತ್ತೈದೆ (ನಾ). ೧. ವೃದ್ಧಳಾದ ಸುಮಂಗಲಿ : ಶೋಭನಾರ್ಥಕ್ಕಾದಡಂ ಕೆಲವಾಭರಣಮಂ ತೊಡಿಸವೇಳ್ಕು ಮದೇಭಗಮನೆಗೆನುತ್ತೊಸೆದು ಮುತ್ತಯ್ದೆ [ಪಾಠಾಂ. ತ್ತೈದೆ]ಯರು ಬಂದು (ಬಸವು. ೯-೩೩). ೨. ಸುಮಂಗಲಿ ; ಸುವಾಸಿನಿ : ಮಿಣುಕಿದೆ ಕಿಡಿಯುಬ್ಬನಿ ನೋಡ . . . ಮುತ್ತಯ್ದೆಯ ಮೂಗುತಿ ಹರಳಂತೆ (ಅನಿಕೇ. ೩೩-೯); ಮುತ್ತಯ್ದೆ ಕೆಯ್ಯ ಭಿಕ್ಷೆ ಮೂರು ಹಿಡಿ ಸಾಕು (ಗಾದೆ). **ಮುತ್ತಯಿದೆ:** ೨. ಮುತ್ತಯಿದೆಯರೂ ಉಂಭ ಧರ್ಮ್ಮ ಆಚಂದ್ರಾರ್ಕವಾಗಿ ನಡವ ಹಾಗೆ ... ಮಾಡಿದ ಧರ್ಮ್ಮ (ಮೈಆ. ೦೯೩೪, ೦೮-೩; 1498). **ಮುತ್ತೈದೆ :** ೩. "ಚಿರಂಟೀ, ಸುವಾಸಿನೀ–ಈ ೨ ಮುತ್ತೈದೆಯ ಹೆಸರು" (ನಾಪರಾ. ೦೦೬); ಜಗವೆಲ್ಲಾ ಅಜ್ಜಿಯಲು ಎನಗೊಬ್ಬ ಗಂಡನುಂಟು ಅನು ಮುತ್ತೈದೆ ಆನು ನಿಚ್ಚೈದೆ (ಬಸವ. ೩೦೩); ವಿಲಾಸದಿಂ ಪಾಡಿದರು ಮುತ್ತೈದೆಯರು ಶೋಭನವ (ವಳಚ. ೩-೬೮); ಮಹಾಪುರುಷರು . . . ಮುತ್ತೈದೆಯರಿಗೆ ಅರಿಶಿನ ಕುಂಕುಮ ಫಲಪುಷ್ಪತಾಂಬೂಲಗಳನ್ನೂ ದಕ್ಷಿಣೆಯನ್ನೂ ಇತ್ತು ಸತ್ಕರಿಸಿದನು (ಶ್ರೀರಾಪು. ೬).

**ಮುತ್ತಯ್ದೆಯಾಗು** , **ಮುತ್ತೈದಾಗು**, **ಮುತ್ತೈದೆಯಾಗು** = ಗಂಡನುಳ್ಳವಳಾಗಿರು ; ಸುಮಂಗಲಿಯಾಗಿರು : ಚಿತ್ರಜಾರಿಯನೊಲಿಸಿ ಗಂಡನಸುವಂ ಪಡೆದು ಮುತ್ತಯ್ದೆಯಾಗಿ ಕೆಲದಿನವಿರ್ದು ಚೆನ್ನೆ ಬಳಿಕು ತ್ತಮದ ಪದವಿಯಂ ಪಡೆದಳು (ಶಬಪು. ೩೩-೪೩); ಮುತ್ತೈದಾಗಿರಬೇಕು ಮುಗದಿಂದಲಿ ಹತ್ತುಸೂಜುನಾಮದೊಡೆಯ ಪರಿನಾಮ ಪತಿಯೆಂದು (ಪುರಂದ. ೧-೩೪ ಕಲ್ಪ); ಸರ್ವರೊಳಗೆ ಮುತ್ತೈದೆಯಾಗಿರ್ದ ವೈಧವ್ಯವನಾಂತು ಬಾಳುವೆನೆ (ವೀರಹಕ. ೮-೩೬). **ಮುತ್ತೈದೆಪೂಜೆ** = ಕೋಮಟಿ ಜನಾಂಗದವರ ಮದುವೆಯಲ್ಲಿ ನಾಲ್ಕನೆಯ ದಿನ ಮಾಡುವ ಒಂದು ವಿಧಿ ; ಹಿಂದೆ ಸುಮಂಗಲಿಯಾಗಿ ಸತ್ತವರ ನೆನಪಿನಲ್ಲಿ ಮಾಡುವ ಪೂಜೆ: (ಎಕಮ್ಮ. IV. ೬೬). **ಮುತ್ತೈದೆ ಬಾಗಿನ**= ಶುಭಸಂದರ್ಭಗಳಲ್ಲಿ ಸುಮಂಗಲಿಯರಿಗೆ ಕೊಡುವ ಬಾಗಿನ : ಗೌರಿಪೂಜೆಯನಂತರ ಸುಮಂಗಲಿಯರಿಗೆ ಮುತ್ತೈದೆಬಾಗಿನ ಕೊಡುವುದುಂಟು (ರೂಢಿ). **ಮುತ್ತೈದೆಸಾವಿತ್ರಿ** = (ಪುರಾಣಗಳಲ್ಲಿ ಹೇಳಿರುವಂತೆ, ಸತ್ತ ಗಂಡನನ್ನು ಯಮನಿಂದ ಮರಳಿ ಪಡೆದು) ಶಾಶ್ವತವಾದ ಸುಮಂಗಲೀಪದವಿಯನ್ನು ಪಡೆದ ಮದ್ರದೇಶದ ಅಶ್ವಪತಿಯೆಂಬ ರಾಜನ ಮಗಳು: ಮುತ್ತೈದೆಸಾವಿತ್ರಿಪೂಜೆಗಳು ನಡೆದವು (ಶಾಂತಲಾ. ೦೦೦) **ಮುತ್ತೈದೆಸಾವು** = ಗಂಡನಿಗಿಂತ ಮೊದಲು ಹೆಂಡತಿ ಪಡೆಯುವ ಸಾವು ; ಸುಮಂಗಲಿಯಾಗಿ ಸಾಯುವಿಕೆ : ಮಲ್ಲಿದೇವರ ಬಳಿ ಕೇಳಿ ಕೊಡದದ್ದು ಮುತ್ತೈದೆಸಾವನ್ನು! (ಸೌಂದಕ. ೩೩೨).

[< ಮುತ್ತ$_2$ + ಅಯ್ದೆ$_2$/ತುಳು. ಮುತ್ತಯಿದೆ, ಮುತ್ತೈದೆ : ತೆಲು. ಮುತ್ತಯಿದುವ, ಮುತ್ತೈವ, ಮುತ್ತೈದುವ]

**ಮುತ್ತಯ್ದೆತನ**, **ಮುತ್ತೈದೆತನ** (ನಾ). ಸುಮಂಗಲಿಯಾಗಿರುವಿಕೆ ; ಸುವಾಸಿನಿಯಾಗಿರುವಿಕೆ : ಉದಯಾಸತಿ ತನ್ನ ನಲ್ಲಂ ಉದಧಿಯೊಳಿಳಿಯಲ್ಕೆ ತನಗೆ ಮುತ್ತಯ್ದೆತನಕ್ಕಿದು ಸಲ್ಲದೆನುತ್ತುಂ ಹಾರದ ಮಣಿಯಂ ಕಳಲ್ಚುದಿರ್ದಪೊಲುಡುಗಣಮೆಸೆಗುಂ (ಗಿರಿಶ. ೯-೯೩ ಅರಿಪದ್ಯ); ಓಸರಿಸುತಿದೆ ಮುತ್ತಯ್ದೆ [ಪಾಠಾಂ. ಮುತ್ತೈದೆ, ನಿಚ್ಚೈದೆ]ತನವೆಲೆ ಸರಮೆ ಕಳುಹೌ ಬೇಗ ಪತಿಯೆಡೆಗೆ (ತೊರರಾ. ೬-೦೨-೩೪): ಬಾಲೆಗೀ ಲಕ್ಷಣಂ ಮುತ್ತಯ್ದೆ [ಪಾಠಾಂ. ಮುತ್ತೈದೆ]ತನಮಾಗಲರಿಯದು (ಕೈವಲ್ಯ. ೩-೩೩); ಅವಳ ಮುತ್ತಯ್ದೆತನ ತನ್ನ ಮುಟ್ಟಿಗೇ ಗುಟ್ಟಾಗಿದ್ದ ವಿಷಯ (ಎರಡು. ೯೮). **ಮುತ್ತೈದೆತನ :** ಎಳಸಿ ಮುತ್ತೈದೆತನದಲಿ ಮುಂದೆ ಹೋದಪೆಂ ಕಳುಹಿಕೊಡಬೇಕೆಂದು ಮೈಯಿಕ್ಕಿ ಬೇಡಿಕೊಂಡಳು ಗಂಡನಂ ಚಂದ್ರಮತಿ (ಹಕಚ. ೦೦-೨೦); ಕೇಳಿದಳು ಹರುಷದಲಿ ಪುತ್ರಕರೇಳಿಗೆಯ ಮುತ್ತೈದೆತನದಲಿ ಬಾಳುವೆಯ ಕೈಕೊಂಡೆನೆಂದಳು ನಗುತ ಗಾಂಧಾರಿ (ಕಂಭಕ. ೩೦-೬); ಮನದೊಳು ನೆನೆದೊಡೆ ಬರ್ಪ ನಿನ್ನಾಳ್ದ ಮನಸಿಜನೆನಿಸಿ ಜೀವಿಪನೆಂದು ಮುತ್ತೈದೆತನವಿತ್ತನೀಶ್ವರ ರತಿಗೆ (ವೀರಚಕ. ೮-೪೦). [ಮುತ್ತಯ್ದೆ+—ತನ$_1$]

**ಮುತ್ತಯ್ಯ**, ಮುತ್ತಯ, ಮುತ್ತಿಯ, ಮುತ್ತ, ಮುತ್ತಾ, ಮುತ್ತಾ$_6$ (ನಾ). ೧. ಅಜ್ಜಿಯ ಅಥವಾ ಅಜ್ಜನ ತಂದೆ; ಮುತ್ತಾತ: (೯). ೨. ತಾತ; ಅಜ್ಜ : ಮಾರ್ತ್ತಣ್ಡಯ್ಯಂ ತಮ್ಮ ಮುತ್ತಯ್ಯಂ ಮಾಡಿಸಿದ ಬಸದಿಯಂ ಪಡಿಸಲಿಸಿ . . . ತನ್ನ ಕೀರ್ತ್ತಿಶಿಳಾಸ್ತಂಭಮಂನಾಚನ್ದ್ರಾರ್ಕ್ಕತಾರಂಬರಂ ನಿಲಿಸಿದ (ಸೌಇಇ. XI–i, ೬೮-೯೬; 1045); ಅಪ್ಪನು ಡೋಹಾರ ಕಕ್ಕಯ್ಯನಾಗಿ ಮುತ್ತಯ್ಯ ಚೆನ್ನಯ್ಯನಾದರೆ ಆನು ಬದುಕೆನೆ (ಬಸವ. ೩೪೨); ಗುರುಮಲಾ ಮುತ್ತಯ್ಯ ನಮ್ಮನು ಪೊರೆದ ತಂದೆಗೆ ತಪ್ಪಿದರು ಕಡುನರಕಗಳು ಪಾಂಡವರು (ಕುಪ್ಪಾಭೀ. ೦೦-೦೨). ೩. ಮುದುಕ : ವೃದ್ಧ : ಮುತ್ತಯ್ಯ ಚದುರಿದೇನು (ಕಾವ್ಯಾವ. ೬೦೨); ಮುತ್ತಯ್ಯ ಮುಳುಮುಳು ಅತ್ತ (ಅರಳು. ೩೩೬-೩). **ಮುತ್ತಯ :** ೧. ಮುತ್ತಯ ಸರಸಿಜಾಸನ ನಮ್ಮ ಹಿರಿಯರ ಹೆಸರ ಕಿಡಿಸದಿರು (ಕೌಶಿರಾ. ೦೯-೨೩): ಭೂಪರ ಪಿತಪಿತಾಮಹರ ಅವರ ಮುತ್ತಯ ಬದರಿಕಾಶ್ರಮದಿ ಕ್ರತುಸಹಸ್ರದನಂತಕೋಟಿ ಕ್ಷಿತಿಯೊಳುಳ್ಳ ಸಮಸ್ತತೀರ್ಥದ ಗತಿಯನೀವ ಮಹಾನುಭಾವರ ಪಿತನು ಸಡೆತಂದ (ಕಂಭಕ. ೩-೧). ೨. ಮುತ್ತಯನ ಕರತಳದ ಧನುವನು ಕತ್ತರಿಸಿದನು (ಕುಪ್ಪಾಭೀ. ೯-೪೬); ಕುಶನೆ ಕೇಳೈ ನಿಮ್ಮ ಮುತ್ತಯ ದಶರಥನು ಮಾಡಿದ ಮಹಾಧ್ವರದೆಸಕಕಿದು ಹೊಯ್ಕೈಯೆನಲು ಮಾಡಿದನು ಸತ್ಕ್ರತುವ (ತೊರರಾಂ. ೧-೦೨-೨೬). **ಮುತ್ತಿಯ :** ೧. "ಮುತ್ತಪ್ಪ–ಮುತ್ತಿಯ (ಮುತ್ತಾ)" (ಶಾಪಕೋ-೩೨). **ಮುತ್ತ :** ೧. ನಮ್ಮ ಅಜ್ಜ ಮುತ್ತಂದಿರು ಈ ಪಟ್ಟಣವು ಬನಾದಿಯಿಂದಿರುತ್ತದೆಂದು ಹೇಳುವರು (ಮುಂಬಯಿ. ೬-೨೩೬). ೨. ಬಲ್ಲಿದ ಕಂಸನ ಮುರಿದಿಟ್ಟಾ ಕೋಲು ಉಲ್ಲಾಸದಿ ಪೆತ್ತಾ ತಾಯಿಯ ಕಡೆಯಿಲ್ಲದೆ ಬಡಿಸೀಸಲ್ಲಿಸಿ ಮುತ್ತಗೆ ಪಟ್ಟವ ಗಟ್ಟಿದ ಕೋಲು (ಶ್ರೀಕೃಪಾ. ೬೦). **ಮುತ್ತಾ :** ೧. ಅಜ್ಜ ಆರುತಲೆ, ಮುತ್ತಾ ಮೂರುತಲೆ ನಡೆದುಬಂದುದೇದು ಹೇಳಿದರು (ದಾಸಪು. ೬೬). ೨. ಶ್ರೀವಿಜಯದಾಸರ ತಂದೆಗಳು ಶ್ರೀನಿವಾಸಪ್ಪನವರಿಗೆ ಮುತ್ತಾ ದಾಸರ ಮುತ್ತಾ ಈ ಉಭಯರಿಗೆ ನಾಯಿಯ ಜನ್ಮ ಬಂದಿತ್ತಂತೆ (ಶಿಜದು. ೦೩೯). **ಮುತ್ತಾ$_6$:** ೨. ಹೆತ್ತ ತಾಮೆಮನಚುಯನೆ ಮುತ್ತಾನ ಪ್ರಸ್ತಾಪವ ಹೇಳುವ (ಅಮೃತೀ. ೦೦೮-೩೦). [ಮುತ್ತ$_6$ + ಅಯ್ಯ$_1$]

**ಮುತ್ತರ$_1$** (ನಾ). ಮೂರುಬಗೆ, – ವಿಧ : ಇದು ಪೃಥ್ವಿಯೊಳಗಣ ಮುತ್ತರದ ಅಚ್ಚಿಗವು ಇದ ಬಿಡಿಸಾ ನಿಃಕಳಂಕಮಲ್ಲಿಕಾರ್ಜುನಾ (ವೀರಪಾ. ೦೬೨-೬೦೬) [<ಮೂಜು + ತರ$_6$ (<ತರಹ)]

**ಮುತ್ತರ$_2$** (ನಾ). ಒಬ್ಬಾತನ ಹೆಸರು : ಶ್ರೀಮದೆಱೆಯಪ್ಪರಸನ ಸಮಸ್ತ ರಾಜ್ಯಾಜ್ಞೆಯುತ್ತಮಿರೆ ಅವನ ಸಾಮನ್ತಂ ಶ್ರೀಮುತ್ತರ ಅತಿರಥಗಣ್ಣ . . . ಆಸನ್ದಿನಾಡನಾಳುತ್ತಿರೆ (ಎಕ. XV, ಅರಸೀ. ೨೧೩-೩; ಸು. 890). [< ಮುತ್ತರಸ]

**ಮುತ್ತರಸ** (ನಾ). ಒಬ್ಬಾತನ ಹೆಸರು : ಕೆಱೆಗಾಳೆ ಮುದವ ಮುತ್ತರಸರಾ ಮರಪ್ಪನ ಪರಮಿಳ್ಳಿ ಎಱಿತು ವೀರಸ್ವರ್ಗ್ಗಂ ಪೊಕ್ಕಂ (ಎಕ. XII, ತುಮ್ಕೂ. ೯೭-೩; ಸು. 750) ; ಮುತ್ತರಸರ್ಮನೆಯಿಂ ಪಡುವಣಮ್ಮನೆಯುಂ ಮುತ್ತರಸರ ಊರುಂ ಇಟ್ಟು (ಎಕ. III, ತಿರುಮ. ೦೦೩-೩; ಸು. 900). [ಮುತ್ತು$_5$ + ಅರಸ$_1$]

**ಮುತ್ತಲ** 'ಮುಚ್ಚಿಗ' ನೋ.

**ಮುತ್ತಲು$_1$** 'ಮುಚ್ಚಲು' ನೋ.

**ಮುತ್ತಲು$_2$** 'ಮುಚ್ಚಿಗ' ನೋ.

**ಮುತ್ತಲು$_3$** (ನಾ). ಒಣಗಿದ ಬೇರು : ಆಡುಸೋಗೆಯ ಮುತ್ತಲು, ಅಮರದವಳ್ಳಿಯ ಮುತ್ತಲು, ಮುಳ್ಳುಸೊಂಡೆಯ ಮುತ್ತಲು, ಈ ಮೂರನ್ನು ಕತ್ತರಿಸಿ ಜಜ್ಜುಗುಟ್ಟಿ ಕಷಾಯಮಿಟ್ಟು . . . ಸೇವಿಸುತ್ತಾ ಬರಲು . . . ಹಳೆಕೆಮ್ಮಲು, ಉಬ್ಬಸ ಸಹ ಪರಿಹಾರವಹುದು (ಸಕವೈ. ೨೨೩).

**ಮುತ್ತಲೆ** (ನಾ). ಮೂರು ತಲೆ : ಅವನ ತಲೆಗೆ ತಲೆಯ ಪಳಿಯಿಂದರಿದು ತಿರುಕೊಳವಿನಾಚಿ ಮಡಗಿದರೆ ಮುತ್ತಲೆಯೊಡನೆಯೊದಱಿತ್ತು ಶಿವಮಂತ್ರವ (ಭಾಶಿಪಂ ೯-೩೮); ಮುತ್ತಲೆ, ಮೂಱುತಲೆ (ಶಬ್ದಾನು. ೩೬೦ ವೃದೊ.). [< ಮೂಱು + ತಲೆ$_1$]

**ಮುತ್ತಲ್ಲಿಕ** 'ಮುತಾಲಿಕ' ನೋ.

**ಮುತ್ತವರ** (ನಾ). ಒಂದು ಮನೆತನದ ಹೆಸರು : ಇದಾ ಪಡೆದೊರ್ ಸುಸೇನವಡಿಯರ ಸ್ವರ್ಣ್ನಗೋಸಾಸಿ ಮುತ್ತವರರ ಅಡಿಮುಪಸೆಟ್ಟಿಯ (ಎಇ. IX, ೨೨-೦೦; ?). [ ? ]

**ಮುತ್ತವ್ವೆ**, ಮುತವ್ವೆ (ನಾ). = ಮುತ್ತಜ್ಜಿ : ತಮ್ಮ ಮುತ್ತವ್ವೆ ಲಚ್ಚಿಯಬ್ಬರಸಿಯರು ಮಾಡಿಸಿದ ಬಸದಿಯಲಿಪ್ಪ ರಿ(ಷಿ)ಯಿಯರ್ಗಾಹಾರ ದಾನನಿಮಿತ್ತಂ . . . ಮೂಱು ಪಣಮಂ ತೆತ್ತಂಬೀತಾಗಿ ಬಿಟ್ಟರು (ಎಇ. XVIII, ೦೭೩-೯೩; 1145); ಮುತ್ತಾಗವೆ ಮುತ್ತವ್ವೆ ಚಂಗಳೆ ಅತ್ತಿಯೇ ನಾನಿಹಗಿಹುದು ನಿನಗರ್ತಿಯೋ (ಐಕಳ. ೯೩-೩೯). ಮುತವ್ವೆ : ತಮ್ಮ ಮುತವ್ವೆ ಲಚ್ಚಿಯಬ್ಬರಸಿಯರು (ಬೆಂಗಳೂ. ೦೯೯೦, ಶರಸಗಾಡು. ೩೨-೯೩; 1067). [ಮುತ್ತು$_2$ + ಅವ್ವೆ]

**ಮುತ್ತಲಿ[3]** (ನಾ). ಮೂರುಸತ್ತಿಗೆಗಳು : ಮುಕ್ಕೊಡಿ, ಮುತ್ತಱಿ[3], ಮುಕ್ಕುಪ್ಪೆ (ಶಬ್ದಾನು. ೦೦೦ ವೃದೊ.). [< ಮೂಱು + ತಱಿ[3]]

**ಮುತ್ತಾಣ್ಮ** (ನಾ). ವಯಸ್ಸಾದ ಗಂಡ: ಏಂ ನಿಷ್ಕರುಣೆಯೊ ಪಸುಮಗನೆನ್ನದೆ ಮುತ್ತಾಣ್ಮನೆನ್ನದೆ . . . ಮುಂಬಿಟ್ಟು ಕೊಂದಪಂ ಯುವರಾಜಂ (ಅಶ್ವ. ೦೦-೨೩). [ಮುತ್ತು$_2$ + ಆಣ್ಮ (< ಆಳ್)]

**ಮುತ್ತಾತ** (ನಾ). = ಮುತ್ತಂದೆ: "ಪ್ರಪಿತಾಮಹಃ_೧ ತತ್ಪಿತಾ . . . ತಂದೆಗೆ ಪಿತಾಮಹ, ಮುತ್ತಾತ" (ಸಿದ್ಧಾಂತ. ೦೭೬); ಇಲ್ಲಿ ನಮ್ಮ ಮುತ್ತಾತ ಅಂದರೆ, ಭೀಮರಾಯರ ತಂಗಿ ಬಳಗದವರು ಒಬ್ಬರಿದ್ದರಂತೆ (ಮುಶೇ. ೯೦); ತಾತನೋ ಮುತ್ತಾತನೋ ಹೆತ್ತಯ್ಯನೋ ಕಟ್ಟಿಸಿದ ಮನೆಯಲ್ಲಿ ಅವರ ಸಂತತಿ ವಾಸಿಸುತ್ತಾರೆ (ಪತಿದಾ. II, ೯೩೯). [ ಮುತ್ತು$_2$ + ತಾತ ]

**ಮುತ್ತಾರ** (ನಾ). ಮುತ್ತಿನ ಸರ ; ಮೌಕ್ತಿಕದ ಮಾಲೆ : ಇಡಿದೊತ್ತಿಂ ಪೊಳೆ ಮುಂದೆ ಪಾಯೆ ಕುಣಿಯುತ್ತೆತ್ತಾಡೆ ಮುತ್ತಾರಮುಂ . . . ಕಾದಲೆಯರ್ಕಳಲ್ಲಿ ಮೆರೆವರ್ ಚೆಂಡಾಟದೊಳ್ರಯ್ಯದಿಂ (ಮಲ್ಲಿಕಾರ್ಜು. ೩-೨೯). [< ಮುತ್ತು$_5$ + ಆರ$_2$. / ತಮಿ. ಮುತ್ತಾರಮ್. / ಸಂ. ಮುಕ್ತಾಹಾರ]

**ಮುತ್ತಾಲಿಕ** ' ಮುತಾಲಿಕ ' ನೋ.

**ಮುತ್ತಿಂಥಿಬೋಯ** (ನಾ). ಒಬ್ಬಾತನ ಹೆಸರು : ಮುತ್ತಿನ್ಥಿಬೋಯಸ್ಯ ಕೌಣ್ಡಿಲ್ಯಗೋತ್ರ ವೆಣ್ಣಶರ್ಮ್ಮಣ (ಇಆ. VII, ೦೯೯-೯೭ ; 686). [ ? + ಬೋಯ ]

**ಮುತ್ತಿಕ್ಕು** 'ಮುದ್ದಿಕ್ಕು' ನೋ.

**ಮುತ್ತಿಗೆ** (ನಾ). ೧. ಆವರಿಸುವಿಕೆ ; ವ್ಯಾಪಿಸುವಿಕೆ ; ಹಬ್ಬುಗೆ : ಸುಡುವ ಪೊಸವಿಷದುರಿಯ ಮುತ್ತಿಗೆಯ ನಡುವಿರ್ದ ಮೃಡನಂತೆ [ಪಾಠಾಂ. ನಡುವಿರ್ದ ಮೃಡನಂತೆ ಬಿಡದಡಸಿ] . . . ಇರ್ದನವನಿಪ ನುರಿಯ ದಾಳಿಯೊಳಗೆ (ಹಕಣ. ೦೦-೦೨) ; ಮತ್ತೆ ಕವಿದುದು ಹೆಣನ ತುಳದೊತ್ತೊತ್ತೆಯಲಿ ರಿಪುಸೇನೆ ಮಂಜಿನ ಮುತ್ತಿಗೆಯ ರವಿಯಂತೆ ಕಾಣಿಸು ಕಳಶಸಂಭವನ (ಕುವ್ಯಾದ್ರೋ. ೦೯-೨೦) ; ಈ ತಮದ ಮುತ್ತಿಗೆ ತೆಗಸುವಡೆ ಮಾರ್ತಾಂಡನೇ ಕ್ಷಮನು (ಸಭಾಗ. ೦೦-೨೬-೦೩). ೨. ಬಳಸುವಿಕೆ : ಪದ್ಮಾವತಿಯುಂ ಆದಯ್ಯನುಂ ಗಾಢಾಲಿಂಗನದ ಮುತ್ತಿಗೆಯತ್ತಲಗ್ಗಳವಾಗಿ ಸಕಲೇಂದ್ರಿಯಂಗಳೊಳಗುಗೊಟ್ಟು . . . ಸವಿವೃತ್ತಿವರ್ಣ ಸುಖಿಸವುಯದೊಳಂ (ಅಪ. ಹ. ೯೩೩-೨೦). ೩. ಮೇಲೆ ಬೀಳುವಿಕೆ ; ಆಕ್ರಮಣ ; ಧಾಳಿ : ಆ ಪರ್ವಲಮೆಯ್ದೆ ಸುತ್ತಱಿದು ಮುತ್ತಿಗೆಯುಂ ನೆಱೆ ಬಿಟ್ಟು ಬಂದು ಸೈತೂರ್ವಳಿಗೊಂಡು ಸಾದರ್ಽದಿರದಾಗಳೆ ಸಿಂಹ ಬಳಾಪನೀತನಾ (ಕುಸುಮಾ. ೦೦-೯೭) ; ಮುಸುಗಣದ ಮುತ್ತಿಗೆಗೆ ಖಳ ಬೆಸ್ಕಸನೆ ಬೆಱಗಾಗುತ್ತ ಸುಯ್ದನು (ಕೌಶಿರಾ. ೨೦-೯) ; ನವಿಷ್ಟಾ ಪೊಳಲ ನೊತ್ತರಿಸಿದಾ ಮುತ್ತಿಗೆಯೊಳೀ ಪೆಂಡಿರೀ ಮಕ್ಕಳೆಲ್ಲತುಂ ಸತ್ತುಪೋದಂ ತಾಯಿತು (ಸಮ್ಯಕ್. ೬-೩೩).

ಮುತ್ತಿಗೆಯನಿಕ್ಕು = ಎರಗು ; ಆಕ್ರಮಣಮಾಡು : ಬರುತಲೇ ಮುತ್ತಿಗೆಯನಿಕ್ಕಿದರೆರಡುಮೈಯಲಿ ಬೀದಿವರಿದೊಡಮುರಿದು ಪೆಡ್ಗೈಸಿದರು (ಕೊರಣ. ೬-೭-೩೨) ; ಮುತ್ತಿಗೆಯನಿಕ್ಕಿಕೊಂಡಿರ್ಪೆಳಮುಗಿಲ್ಗಳೆನಲು ಗಗನ ಪಡರ್ದ ಸೌಧಂಗಳ ಮರೀಚಿಯಿಂ ಪೊಗರುಗುವ ಪೊಚ್ಚಪೊಸಪೊನ್ನ ಕೋಂಟೆಗಳ ಕಾಂತಿಗಳ್ಸದೆ ಮುಸುಕಿಕೊಂಡೆಸೆದಿರ್ದುವು (ಕೃಬಿಶಾ. ೦೭-೭). ಮುತ್ತಿಗೆ ಹಾಕು = ೧. ಸುತ್ತುವರಿ ; ಬಳಸು : ಅದರ ಸುತ್ತಲೂ ಹೊರಗೆ ಸೊಳ್ಳೆಗಳು ಮುತ್ತಿಗೆ ಹಾಕಿ ಝೇಂಕಾರ ಮಾಡುತ್ತಿರುತ್ತವೆ (ಪಂಚಿರು. ೯೨) ; ಜನ ಅವನಿಗೆ ಮುತ್ತಿಗೆ ಹಾಕಿದರು (ಕುಶರು. ೨೯೬). ೨. = ಮುತ್ತಿಗೆಯನಿಕ್ಕು : ಮುಸಲ್ಮಾನರು ರಾಜಧಾನಿಗೆ ಮುತ್ತಿಗೆ ಹಾಕಿ ತಮ್ಮೆಲ್ಲರನ್ನೂ ತುಕ್ಕಡ ತುಕ್ಕಡ ಮಾಡಿಬಿಡುವರು (ಬಿಂಕಮು. ೩೦೯). [ಮುತ್ತು$_1$ + — ಇಗೆ / ತಮಿ. ಮುತ್ತಿಕೈ. ಮುಱ್ಱಿಕೈ. ಮುಱ್ಱುಕೈ ; ತುಳು. ಮುತ್ತಿಗೆ, ಮುತ್ತಿ ; ತೆಲು. ಮುತ್ತಿಕ]

**ಮುತ್ತಿಗೆದೆಗೆ** (ಕ್ರಿ). ಆಕ್ರಮಣವನ್ನು ಕೈಬಿಡು ; ದಾಳಿಯನ್ನು ಹಿಂದಕ್ಕೆ ತೆಗೆದುಕೊಳ್ಳು : ಅಳುಕಿ ಮುತ್ತಿಗೆದೆಗೆದು ಶಾಲ್ವನ ದಳ ಮುರಿದು ನಿಜಪುರಕೆ ಹಾಯ್ದುದು (ಕುವ್ಯಾಅ. ೨-೨೩) ; ಮಿಗೆ ಬಲಾಹಕ ಕಡೆಗೈದಲು ಕಾಂತಿಯಿಂ ಸೊಗಸುವ ಮಾರ್ತಂಡನಂತೆ ರಘುಗರ್ಜುಗಿಸಿದುದು ಪಟ್ಟಣ ಬಲು ಮುತ್ತಿಗೆದೆಗೆಯಲು (ಕಂಪಿ. ೦೩-೦೨೬). [ಮುತ್ತಿಗೆ + ತೆಗೆ$_1$]

**ಮುತ್ತಿಗೆಯಿಕ್ಕು** (ಕ್ರಿ). ಎರಗು ; ಆಕ್ರಮಣ ನಡೆಸು : ಅರಿಪುರದೆಡ ಬಲ ಗಡಿದುರ್ಗಗಳನೀಗ ಭರದೆ ಮುತ್ತಿಗೆಯಿಕ್ಕಿ ಸೆಳೆಯೆ (ಕಂಪಿ. ೩-೨೦). [ಮುತ್ತಿಗೆ + ಇಕ್ಕು]

**ಮುತ್ತಿಡು** ' ಮುದ್ದಿಡು ' ನೋ.

**ಮುತ್ತಿಯ** ' ಮುತ್ತಯ್ಯ ' ನೋ.

**ಮುತ್ತಿಸು** (ಕ್ರಿ). ಸುತ್ತುಗಟ್ಟುವಂತೆ ಮಾಡು; ಸುತ್ತುವರಿಯಿಸು : "ಮುತ್ತಿಸು-ದುರ್ಗಸಂವೇಷ್ಟನೇ" (ಕಧಾರ).

ಮುತ್ತಿಸಿಕೊಳು = ಆವರಿಸಲ್ಪಡು; ಸುತ್ತುವರಿಯಲ್ಪಡು : ಬೆಳ್ಳವೆ

ನೀ ಮುದ್ದುವೆಂಗಳ್ ಮೃದುವಾಯು ಬೆಲ್ಲವಾದಿರದೆ ಬಂದಿಲ್ಲಿ ಪೊಲ್ಲಿಹ ನೊಣನ ಮುತ್ತಿಸಿಕೊಳ್ಳೇಡ (ಮೋಹತ. ೨೦-೨೪). [ಮುತ್ತು1 + -ಇಸು3]

**ಮುತ್ತು1** (ಕ್ರಿ). ೧. ಆವರಿಸು; ಕವಿ; ವ್ಯಾಪಿಸು : ಒಂದು ದೆಸೆಯೊಳ್ ತಗುಳ್ವ ಮುಕುಂದನ ಕರಚಕ್ರಂ. . . ಒಂದು ದೆಸೆಯೊಳ್ ಕುಂದದೆ ದಹನಾರ್ಚಿ ಸುತ್ತಿ ಮುತ್ತುವ ಪದದೊಳ್ (ಕಂಶಪಾ. ೩-೯೮); ಜಲವವಗಡಿಸಿ ನೊಕ್ಕುದು ಮುಸಗಿದಂಬುಧಿ ಬಡಬನನು ಮೋಗೆವಂತೆ ಮುತ್ತಿತು ಕಳಶ ಸಂಭವನ (ಕುಮಾ.ದ್ರೋ. ೧೭-೩೩); ಕಳಸಕುಚಗಳ ಕಾವಿಸಿಯುಕ್ಕಿಗಳ ಕಾಂತಿ ಬಳಸಿ ಮುತ್ತಿತು ನೆರವಿಗರ (ಕಂಸವ. ೯-೬೮). ೨. ಸುತ್ತುಗಟ್ಟು; ಸುತ್ತುವರಿ; ಬಳಸು : ಸುತ್ತಿದ ಸಂದನವನದಿಂ ಮುತ್ತಿದ ಕೆಯ್ವೊಲ ದಿನೆಸೆವ ಪದ್ಮಾಕರದಿಂದುತ್ತುಂಗಜಸಾಲಯುದಿಂದುತ್ತಮಪುರವೆನಿಸಿ ನೆಗಟ್ದ ಚಂಪಾಪುರದೊಳ್ (ಧರ್ಮಾಮೃ. ೩-೩); ಸಿಂಹದರ್ಮಧರಾದೇವರ ಸೇನಾಪತಿ ಚಂಪಾಪುರಮಂ ಪರಿಯಿಟ್ಟು ಮುತ್ತಿದಂ ಮೊವಳಸಿಂ (ಕೃಷ್ಣಪು. ೩-೦೨೭); ಹಾವಿನ ಹೆಡೆಯು ತುಳಿವರೇ! ಅಂಜಿಕಿಲ್ಲವೆ ಹಾವು ಮೈಗೆ ಮುತ್ತಿರಲು ಹೇಗೆ ಜೀವಿಪನೆ (ಪುರಂದ. ೨-೭೩-೪). ೩. ಧಾಳಿಮಾಡು; ಆಕ್ರಮಣ ನಡೆಸು; ಲಗ್ಗೆ ಹಾಕು : "ಮುತ್ತು ಸಿರೋಧಾವರೇ, ಮೌಕ್ತಿಕೇ ಚ" (ಶಮಣಿ); ಬಲ್[ವ]ತೆ ಸು (ಸೂ)ರ್ತ್ರನ್ ಪ್ರಳಯಧನು ಮುತ್ತಿ ಅಣಿಯೆ [೦] ಕದಿವೊಂಗಂ ಚಲಮುಚಿವೊಂಗಂ ಅಟ್ಟಿವೊಂಗಂ ಕುಡಲಪ್ಪೊಂಗಂ ಒಬ್ಬನೊ(ನೆ) ಆಚಾರ್ಯ(ಯ್ಯ)ನ್ (ಎಪಿ. XXIV, ೦೯೩-೬ ; ಸು. ೫೫೮) ; ಅನಿತುಂ ಬಲಮುಂ ಮುತ್ತಿ ಬಳಾಕಾವರ್ತರ್ ಸುತ್ತಲುಮೇಸಾಡಿ ಪಿರಿದ ತಿಣಿಕಂ ತಂದರ್ (ಆದಿಪು. ೦೪-೭೦) : ವಜ್ರಾಯುಧನ ಮೊಮ್ಮನ ರಥವ ನಿರ್ದಾಯದಲಿ ಮುತ್ತಿದರು ಕುರುಸೇನಾಪಹಾರಥರು (ಕುಮಾ.ದ್ರೋ. ೩-೨೪). ೪. ಗುಂಪುಗೂಡು ; ಸಂದಣಿಸು : ಪೆಣ್ದುಂಬಿಗಳ್ ಮುತ್ತುತ್ತುಂ ಮುಸುಕುತ್ತುಂ ಬರೆ ಬಂದುದಿಂದ್ರವನದಿಂ ಪೂದೇವಲ್ (ಕಂಶಪಾ. ೯-೯೭); ಶ್ರೀವೀರನಾಥಂ ನೆಲಸಿರೆ ವಿಪುಲಾದ್ರೀಂದ್ರದೊಳ್ ಶೋಭೆಯಿಂ ಮುತ್ತಿದ ದೇವಾನೀಕದಿಂ . . . ಶ್ರೇಣಿಕಂ ಸಂತೋಷಂ ಮಿಗೆ ಕೂರ್ತು ಕೇಳ್ವನಧಿಕಶ್ರೀಗಾರ್ಮಮಂ ಧರ್ಮಮಂ (ಧರ್ಮಾಮೃ. ೦-೬೦) ; ಮುತ್ತಿ ಮುಸುಕುತ್ತು ಜನಂ ಕೆಡೆದಿರ್ದ ಯೋಗಿಯಂ (ಧರ್ಮಾಮೃ. ೩-೦೦). ೫. (?) : ಈ ಧರ್ಮಕೆ ಮುಳುವ ಮಾಜು ಸಲ್ಲದು ಮುತ್ತುವ ಬತ್ತ ಸಲ್ಲದು (ಕರ್ನಾ. IX-ii, ೯೬೪-೬೨ ; 1472).

ಮುತ್ತಿಕೊಳ್, ಮುತ್ತಿಕೊಳ್ಳು = ೧. ಆವರಿಸು; ಕವಿ; ಮುಸುರು : ತನ್ನೆರಡುಕೆಯ್ಯೊಳಮೆಚ್ಚ ಶರಾಳಿಗಳ್ ಭಯಂಕರತರಮಾಗೆ ಭೂಭುವನ ಮೆಲ್ಲಮನೊರ್ಮೆಯೆ ಸುತ್ತಿ ಮುತ್ತಿಕೊಂಡಿರೆ ದೆಸೆಗಾಣಲಾಗದು (ಕಂಶಪಾ. ೦೨-೦೦೭); ಮಧ್ಯಾಹ್ನಸೂರ್ಯನ ಜೀಮೂತವೆ ಮುತ್ತಿಕೊಂಡಂತೆ ಆತನ ಶರಕಿರಣಗಳಿಂದೆ ಮದಗಜವ್ರಾತ ಸುಗ್ಗಾದುದು (ಮೋಹತ. ೪೪-೪೦); ಬೆಲ್ಲಕ್ಕೆ ನೊಣಗಳು ಮುತ್ತಿಕೊಳ್ಳುತ್ತಿವೆ (ರೂ). ೨. ಮುತ್ತಿಗೆ ಹಾಕು; ಧಾಳಿ ನಡೆಸು: ಪೆಣ್ಸೈಮನಪುನೆಯು ಮುತ್ತಿಕೊಳ್ವ ಲ್ಯಾರಬಿವಿನೊಳೆ (ಎಕ. VIII, ಸೊರಬ. ೨೨-೨; ಸು. ೮೦೦); ಕರ್ಣನಂ ಸುತ್ತಿ ಮುತ್ತಿಕೊಂಡು . . . ವಿವಿಧಾಯುಧಂಗಳೊಳಟ್ಟುವೆಚ್ಚು ಮಿಂಚುದುಮುಗುರ್ವುಮದ್ಭುತಮುಮಾಗೆ ಕಾದುವಾಗಳ್ (ಕಂಶಪಾ. ೦೨-೦೦೪ ಪ); ಮುತ್ತೆ ರಥವಜುವತ್ತುಸಾವಿರ ಮುತ್ತಿಕೊಂಡುದು ಗಜವನು (ಕುಮಾ.ದ್ರೋ. ೩-೩೪).

[ದೇಶಿ ತವಿ. ಮಲ. ಮುಜ್ಞು; ತುಳು. ಮುತ್ತು; ತೆಲು. ಮುಟ್ಟು; ಕೋತ. ಮುತ್]

**ಮುತ್ತು2** 'ಮುದ್ದು1' ಪರಾ.

**ಮುತ್ತು3** 'ಮುದ್ದು' ನೋ.

**ಮುತ್ತು4** 'ಮುಟ್ಟಿಗೆ' ನೋ.

**ಮುತ್ತು5** (ನಾ). ೧. ನವರತ್ನಗಳಲ್ಲಿ ಒಂದು : ಮೌಕ್ತಿಕ : "ಮುಕ್ತಾ ಮೌಕ್ತಿಕಂ, ಶೌಕ್ತಿಕೇಯಂ – ಈ ೩ ಮುತ್ತು" (ಶಬ್ದಮ. ೧೯೩); ಗಜಯಾಸಿತರ್ಥಂ ಸಲೆ ಮಾಂಗಜಾಯದೆಯುಂ ಶಬ್ದದೊಂಸಿರ್ದೊಡೆ ಮುತ್ತುಂ ಮೆಟುಸುಂ ಕೋದಂತಕ್ಕುಂ (ಕಬಾ. ೨-೩); ಲಂಬಣ ಪಡಿಯೆ ಮುತ್ತಿನ ಕೇಡನ ನೋಡಿ ನೋಡಿ ಬಿಕ್ಕುತ್ತಿರೆ (ಕಂಶಪಾ. ೯-೬೯); ಮುತ್ತು ನೀರಲ್ಲಿ ಹುಟ್ಟಿ ಮುತ್ತೆ ನೀರಪ್ಪುದೆ (ಬಸವ.೭೭೭); ಮತ್ತಹಸ್ತಿಗಳ ಮಸ್ತಕದಿಂ ಬಿದಿರಿಂ ಫಣೀಂದ್ರೋತ್ತಮಾಂಗದಿನಗುರ್ವಿಪ ಪಂಬಿಯ ಕೋಡುಗಳಿಂ ಪತ್ತು ವಿಟ್ಟಗನಿಕುಂಜದೊಳೊಕ್ಕಳದುತ್ತಮಾನಾಯುತ್ತಮಿರ್ಪ ಬುರುಶ್ಚಿಯಿಂಕಾನಿಸಿ ಯರ್ಕಳಿಂ (ಕಾವ್ಯಾವ. ೦೦೯; ಕಮದ. ೧೩೩ ಪ್ರಯೋ. ನೋ.) : ಧವಳಶಂಖ ಝಷ ಮಸ್ತಕಾಂಬುಭೃದ್ವ್ಯತಿಕಂಠ ಫಣಿಸತ್ವಣಂಗಳೊಳ್ ತಮೆಸುವೇಣು ಪೊಳದಾತ್ತದಂಷ್ಟ್ರೋತ್ಸವದ ಕೋಲದಿಯೋಳಿಭೇಂದ್ರದಂತದೊಳ್ ... ಸಿತೇಕ್ಷು ವಿನ ಪರ್ವದೊಳ್ ಶಾಲಿಯುಜ್ಜ್ವಳಾಯುತದ ತಂಬದೊಳ್ ಲಲಿತಶುಕ್ತಿ ಯೊಳ್ ಲೋಕದೊಳ್ ಇಳಾಕರ[ಟ]ಸಾಯುವದ್ವಿಜದೊಳಂ ಸಮುಪ್ಪೊ ತಮಾಕಳಾಯುತದ ಮುತ್ತು ತಾನೊಗೆದುದಲ್ತೆ ಭೂಪಾಪರಂ (ದಾಣಸ್ಕ. ೨-೦-೩೯). 'ಎಳೆಮುತ್ತು', 'ಜಾತಿಮುತ್ತು' ಪರಾ. ೨. ಮೂಗಂಬಟ್ಟಿನ ಕೆಳಗೆ ನೇತಾಡುವಂತೆ ಧರಿಸುವ, ಮೂರು ಅಥವಾ ನಾಲ್ಕು ಮುತ್ತು, ವಜ್ರ, ಚಿನ್ನ ಮುಂತಾದುವುಗಳಿಂದ ಸಣ್ಣಸಣ್ಣ ಗುಂಡುಗಳ ಆಕಾರದಲ್ಲಿ ಮಾಡಿದ ಒಂದು ಬಗೆಯ ಆಭರಣ: ಕರಮೆಸೆವತ್ತು . . . ಅಂಬರದ ಪುಳಿಂದಿ ತಾಳ್ದಿಸಿದ ಮೂಗಿನ ಮುತ್ತು (ಗಿರಿ. ೪-೯೩). ೩. ಆನೆಯ ಕುಂಭಸ್ಥಳದಲ್ಲಿರುವುದೆಂದು ಭಾವಿಸಲಾದ ಬಿಳುಪಾದ ಗುಂಡನೆಯ ವಸ್ತು : ಮತ್ತಗಜಂಗಳ ಮಸ್ತಕಕ್ಕೆ ಪಾಯ್ದು ಗಜಗಿಮಾಡುವಲ್ಲಿ ಪೊಳೆವಂಕುದಂತಿರೆ ಕೊಂಕುವೆತ್ತ ಕೂರುಗುರ್ಗಳೊಳೆಯ್ದೆ ತೆತ್ತಿಸಿದ ಮುತ್ತಿನ ಲೋಭದೆ ಕೊಲ್ವಲೆತ್ತಲುಂ ಮೃಗಪತಿಯೂಥಮಂ (ಶಬಂಶು. ೯೯); ಮುತ್ತಿನ ಬಯ್ಕೆಯಂ ತೆಗೆವೊ ಡಂಜಿಪುಲ್ಲೆ ಮದೀಯ ಬಿಡ್ಡಮೆಂದೆತ್ತಿದ ದಾಯುಗಿಂ ಗಜದ ಮಸ್ತಕಮಂ ಕಡುಕೆಯ್ದು ಪೊಯ್ವೊಡಾ ಸತ್ತಿಯ ಮುತ್ತು ಝಲ್ಲೆನೆ ರಣಾಂಗಣದೊಳ್ ಕೆದಱಲ್ಕೆ . . . ಬಿಂದೆಯುಕಂಡರೊಪ್ಪಿದರ್ (ಧಕಂ. ೭-೭೨); ತಾರಕೆಗಳೆಸೆ ದಭ್ರಮೆನೆ ರಿಪುವಾರಣದ ಮಸ್ತಕದ ಮುತ್ತುಗಳೋರಣಿಸಲೊಪ್ಪಿದುದು (ಕುಮಾ.ದ್ರೋ. ೬-೯೩). ೪. (ಅಲಂ) ಪ್ರೀತಿಪಾತ್ರರನ್ನು ಕರೆಯುವಾಗ ಬಳಸುವ ಒಂದು ಪದ : ಏಕೆ ಅತ್ತೆ, ಹೇಳು ಮುತ್ತೆ, ಹೊತ್ತು ಮುರಂಗುವಂದದಿ (ಏಕಸ. ೦೩-೦). ೫. ಕಣ್ಣೀರಿನ ಹನಿ : ಅಶ್ರು ಬಿಂದು : ಎರಡೇ ಎರಡು ಮುತ್ತುಗಳು ಅವನ ಕಣ್ಣುಗಳಿಂದ ಉದುರುವುವು (ತುಂಗಭ. ೦೦೭). ೬. ಶ್ರೇಷ್ಠವಾದುದು ; ಉತ್ತಮವಾದುದು : 'ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸಪಶ್ಯತಿ' ಎಂಬುದು ಗೀತೋಪನಿಷತ್ತಿನ ಮುತ್ತಿನ ಮಾತು (ನಾಡೋಜ. ೨).

ಮುತ್ತಿನಕಂತೆ = "ಲಿಂಗವಂತರ ಒಂದು ಗೋತ್ರನಾಮ" (ಶೀಕ್ಷ ಬಾ. ೨೪). ಮುತ್ತಿನಚಿಪ್ಪು, ಮುತ್ತಿನಸಿಪ್ಪು = ಮುತ್ತು ಹುಟ್ಟುವ ಚಿಪ್ಪು : ಬಿಚ್ಚದೆ ಬಿಗಿದ ಮುತ್ತಿನ ಚಿಪ್ಪಿನಂದದಿ . . . ಇರ್ದಗಣಿತಾಮಲ ಪುಣ್ಯಚರಿತೆಯ ಕಂಡನಾ ಹನುಮ (ತೊರಾರಾ. ೩-೩-೨೪) : ಈಗಿಪ್ತದ ಎಲೆಗಳು ಮುತ್ತಿನ ಚಿಪ್ಪು (Oyster shell) ನಂತೆ ಎರಡು ಮುಚ್ಚಳಗಳುಳ್ಳವು (ಪಾಶ್ಚಿ. I. ೫೦೩) ; "ಮುಕ್ತಾಸ್ಫೋಟಃ, ಶುಕ್ತಿಃ – ಈ ೨ ಮುತ್ತಿನ ಸಿಪ್ಪು" (ಶಬ್ದಮ. ೦೦೯-೪೨). ಮುತ್ತಿನಬಲೆ = ೧. ಮುತ್ತುಗಳನ್ನು ಪೇರಿಸಿ ಹೆಣೆದ ಬಲೆ : ರತ್ನದ ಸಂಕೋಲೆಯಾದರೆ ತೊಡರಲ್ಲವೆ ಮುತ್ತಿನ ಬಲೆಯಾದರೆ ಬಂಧನವಲ್ಲವೆ (ಪುರಾಪ್ತ. ಬ. ೪೨-೯೨). ೨. ಮುತ್ತುಗಳನ್ನು ಹೆಣೆದು ಮಾಡಿದ ಒಂದು ಬಗೆಯ ಕೇಶಾಲಂಕಾರಸಾಧನ : ತುಂಬಿನ ಮುತ್ತಿನ ಬಲೆ ಚಿನ್ನಗೇದಗೆಗಳಿಗಳಿಂ ಸಿಂಗರಿಸಿದಳು (ಶಂತಾಸಾ. ೨೯-೯೭). ಮುತ್ತಿನಬೀದಿ = ಮುತ್ತುಗಳನ್ನು ಸಾಲುಸಾಲಾಗಿ

ಪೋಣಿಸಿ ಮಾಡಿದ ಅಲಂಕಾರಸಾಧನ (?) : ಪೊಂಗೆಜ್ಜೆ ಘಂಟೆ ಮುತ್ತಿನ ಜೇಬಿಯ ಜೀನ ಸಿಂಗರ ಲೋವೆಯನದಟ ಅಂಗದೊಳಗೆ ಸಂಗಡಿಸಲಾ ದಿವ್ಯತುರಂಗ ಕಣ್ಗಾಲಿಸಿ ರಾಜಿಸಿದುದು (ಕುಮಾರಾಂ. ೯-೬೯). ಮುತ್ತಿನ ಜೊಟ್ಟು = ಬೈತಲೆಯ ಮೇಲೆ ಧರಿಸುವ ಒಂದು ಬಗೆಯ ಮೌಕ್ತಿಕದ ಆಭರಣ : ಪಚ್ಚೆನೊಸಲಾಚಿ ಪಣೆಗಟ್ಟು ಮುತ್ತಿನ ಜೊಟ್ಟು . . . ಚಿನ್ನಗೇದಗೆಗಳಿಂಗಳಿಂ ಸಿಂಗರಿಸಿದಳು (ಕುಮಾರಾಂ. ೨೯-೯೭). ಮುತ್ತಿನ ಮುಗುಳು = ಮುತ್ತುಗಳಿಂದ ಮಾಡಿದ ಒಂದು ಬಗೆಯ ಕರ್ಣಾಭರಣ : ಕಿವಿಗೆ ಮುತ್ತಿನ ಮುಗುಳನ್ನು ಅಂದವಾಗಿ ಜೋಡಿಸಿ ದೇವರಿಗೆ ಕೈಮುಗಿದು ಚಾಮರಸೇವೆಗೆ ಆರಂಭಿಸಿದಳು (ದೇವಶಂ. ೦೦). ಮುತ್ತಿನ ಸತ್ತಿಗೆ = ಮುತ್ತುಗಳ ಕುಚ್ಚುಗಳನ್ನು ಕಟ್ಟಿದ ಛತ್ರಿ : ಪಗೆ ಸುತ್ತಿ ಸಾವಡಮುತಿದೆ ನಿನ್ನ ಮುತ್ತಿನ ಸತ್ತಿಗೆಯನಿತ್ತು ಸಲಹು ಭೂಭುಜ (ಹರಿಶ್ಚ. ೬-೯). ಮುತ್ತಿನ ಸರ = ಮುತ್ತುಗಳನ್ನು ಸೇರಿಸಿ ಮಾಡಿದ ಹಾರ : ನೀವು ಈ ದಿನ ಬೆಳಗ್ಗೆ ನನಗೆ ಉಡುಗೊರೆಯಾಗಿ ಕಳುಹಿಸಿದ ಮುತ್ತಿನ ಸರ – ಅದರ ಬೆಲೆ ಎಷ್ಟೊ (ಏಕ್ಶಾ.ಮು. ೦೩). ಮುತ್ತಿನಸುಣ್ಣ = ಮುತ್ತನ್ನು ಸುಟ್ಟು ಅದರ ಭಸ್ಮವನ್ನು ಹಾಕಿ ಮಾಡಿದ ಸುಣ್ಣ : ಮುತ್ತಿನ ಸುಣ್ಣ–ಒಂದು ಮಡಕೆಯಲ್ಲಿ ಒಳ್ಳೆಮುತ್ತು ಒಂದು ತೊಲೆ ಹಾಕಿ . . . ಪುಟಪಾಕಲು ಬೆಳ್ಳಗೆ ಸುಣ್ಣವಾಗುವದು (ಕಾವುಶಾ. ೨೭೦). ಮುತ್ತಿನ ಸೇಸೆ = ಮುತ್ತುಗಳಿಂದ ಮಾಡಿದ ಅಕ್ಷತೆ : ಗೆಲಿಸನಸುತನೆಂದು ಮುತ್ತಿನ ಸೇಸೆಯನು ಪರಸಿ ತಳಪರಿಸಿನಂಗನೆಯರು (ತೊರವೆ. ೪-೪-೨೩). ಮುತ್ತಿನಹಾರ = ಮುತ್ತಿನ ಸರ : ಪಕುಳಮಾಲೆಯೆಂಬ ವಿಳಾಸಿನಿಗೆ ಮುತ್ತಿನ ಹಾರಮಂ ಲಂಚಂಗೊಟ್ಟು (ಪುಣ್ಯಾಶ್ರ. ೦೦-೬ವ); ಮುತ್ತಿನ ಹಾರ ಹಜೀಯಲು ಕೆದಜಿದವು ದೆಸೆದೆಸೆಗೆ ಮುತ್ತುಗಳು (ಕುಮಾ.ಭಾ. ೪-೮೭). ಮುತ್ತಿನಾರ = ಮುತ್ತಿನ ಸರ : ಪೊಸಪ್ಪುಣಾಳದ ತೋಳ್ವಳೆ ಮುತ್ತಿನಾರಂ . . . ಕಣ್ಗೊಳ್ಳೆ ನೆಲಸಿರ್ದರಲ್ಲಿ ಜಲದೇವಿಯಾರಂತೆ ವಿಳಾಸಿನೀಜನಂ (ಕಾದಂಬ. ೪೩೯). ಮುತ್ತಿನಾರತಿ = ಮುತ್ತುಗಳನ್ನು ಅಲಂಕಾರವಾಗಿ ಹುದುಗಿಸಿದ ತಟ್ಟೆಯಲ್ಲಿ ಮಾಡುವ ಆರತಿ : ಮುತ್ತಿನ ದೀವೊಗಳು . . . ಪಿಡಿಯಕ್ಕಿದಳಿದು ಬಂದರು ಮುತ್ತಿನಾರತಿವಿಡಿದಾ ರತಿದೇವಿಯೊಡನೆ (ಪೋಹಶ. ೦೭-೪೮); ಮುತ್ತಿನಾರತಿ ರನ್ನದಾರತಿಗಳ ತಂದು ಮುತ್ತೈದೆಯರೆತ್ತಿ . . . ತರಳನನರ್ತಿಯಿಂದಲಿ ಪಾಡಿದರು (ಕುಸಬಿ. ೪-೬೦). ಮುತ್ತಿನುಂಡೆ = ೧. ಮೌಕ್ತಿಕದ ಗೋಲಿಯು.–ಗೊಂಡೆ: ತೆತ್ತಿಸಿದ ನವರತುನದಿಂದಲಿ ಮುತ್ತಿನುಂಡೆಯ ಜಾಳಿಯಂಗಳ . . . ರಥಾಳಿಶ ಮೇಲೆಸೆಯೆ (ಕುಪ್ಯಾದ್ರೌ. ೬೦೩. ಶಂ. ೨೭೭). ೨. ಹಾಲು ತುಂಬಿ ಪಕ್ವವಾದ ಕಾಳುಗಳ ತೆನೆ : ಮುತ್ತಿನುಂಡೆಯ ಮಾದಿರ ಸಿರಿನೆತ್ತಿಯನ್ನುತ್ತು ಬತ್ತಮುಂ ಬಿತ್ತಿ ಬೆಳೆಯುವ ಉತ್ತಮದ ಹೊತ್ತು ಹತ್ತಿರಕೆ ಹತ್ತಿರಕೆ ಬರುತಿರುಪುದೊತ್ತೊತ್ತಿ ! (ಕೊಳಗಿರಿ. ೦೬-೬೦). ಮುತ್ತಿನೋಲೆ = ಮುತ್ತುಗಳಿಂದ ಮಾಡಿದ ಓಲೆ ; ಮೌಕ್ತಿಕದ ಕರ್ಣಾಭರಣ : ತೊಳಗುವ ಮುತ್ತಿನೋಲೆಗಳ ಬೆಳ್ಪೆಳಗಿಂ . . . ಸೆಳ್ಳುಗುರ ಮೊಯ್ದೊಳೆಪಿಂ ಮಿಗೆ ಪೆರ್ಚಿದುವೆತ್ತು ಕಣ್ಗೊಳಿಸಿ ದಳಾಕೆ (ಕಬ್ಬಿಗಕಾ. ೬೯). [< ಸಂ. ಮುಕ್ತಾ./ ಪ್ರಾ. ಮುತ್ತಾ. / ತಮಿ. ಮುತ್ತು, ಮುತ್ತಮ್, ಮುರುವ್ವು ; ಮಲ. ತುಳು. ಮುತ್ತು ; ಕೊಡ. ಮುತ್ ; ತೆಲು. ಮುತ್ಯಮು, ಮುತ್ತೆಮು, ಮುತ್ತಮು ; ತೊದ. ಮುತ್]

**ಮುತ್ತುಂಗಾಲ್** (ನಾ). (ಅಲ) ಮುದಿವಯಸ್ಸು ; ಇಳಿವಯಸ್ಸು (?): ಒಲಿಯೊಡನೆ ಮುತ್ತುಂಗಾಲೊಳ್ ನರೆ ಬರ್ಪನ್ನೆಗಮಿರು (ಕಸುವ. ೨೪೭ ಪ್ರದೋ). [ ? ]

**ಮುತ್ತುಕ** ' ಮುಟ್ಟುಗ ' ನೋ.

**ಮುತ್ತುಕಾರಾಚಿ** (ನಾ). ಒಂದು ಬಗೆಯ ಮರ : " ಮಾಚಿಪತ್ರೆ, ಗ್ರಂಥಪರ್ಣೆ, ಮುತ್ತುಕಾರಾಚಿ . . . ಕಾಡ ಉದ್ದು " (ಸಸ್ಯಶಿ. ೬೬); ಮುತ್ತುಕಾರಾಚಿ, ಮಾಸಿಪತ್ರೆ (ವೈಶಿಗಿ. ೧೦-೬೯೩). [ ಮುತ್ತು₇ + ಕಾರಾಚಿ]

**ಮುತ್ತುಕೊಡು** ' ಮುದ್ದುಗೊಡು ' ನೋ.

**ಮುತ್ತುಗ** ' ಮುಟ್ಟುಗ ' ನೋ.

**ಮುತ್ತುಗಣೆ** (ನಾ). ಮೌಕ್ತಿಕವು ದೊರೆಯುವ ನೆಲೆ ; ಮುತ್ತಿನ ಆಶ್ರಯಸ್ಥಾನ : ಪೇರಾನೆವಟ್ಟುಗಳ ನೆತ್ತಿಯ ಮುತ್ತುಗಣೆಯನಗುಚ್ಚಿ ಪಪ್ಪುವ ಗುದ್ದಲಿಗಳನಿಸಿ . . . ಅಳುಂಬಮಾದ ದಂಷ್ಟ್ರಾಂಕುರಂಗಳೊಳಂ (ವರ್ಧಕ. ೦೦-೩ವ). [ಮುತ್ತು₅ + ಗಣ್ಣೆ (< ಕಣ್ಣೆ) ]

**ಮುತ್ತುಗದಬಳ್ಳಿ** (ನಾ). ಒಂದು ಬಗೆಯ ಸಸ್ಯ : ಮುತ್ತುಗದ ಬಳ್ಳಿ, ಮುಳ್ಳುಮುತ್ತುಗ (ವೈಶಿಗಿ. ೦೩-೨೬೬). [< ಮುತ್ತುಗ + ಬಳ್ಳಿ]

**ಮುತ್ತುಗಾರ** (ನಾ). ಮೌಕ್ತಿಕವನ್ನು ಮಾರುವವನು : ಮುತ್ತಿನ ವ್ಯಾಪಾರಿ: ಮುತ್ತುಗಾರ ಭಾಗ್ಯವನ್ನು ಲೆಕ್ಕಿಸನವನು. ತಾಯಿ ಮಾಡಿದಿಯ ಹರ್ಷಬಾಷ್ಪವೇ ಅವನ ಬದುಕಿನ ಹುರುಳು (ಉದ್ಭ್ಯಾ.೮.೬-೬).

[ಮುತ್ತು₅ + – ಗಾರ (< – ಕಾಜ) ]

**ಮುತ್ತುಗಿಡಿ** (ನಾ). ಆವರಿಸುವ ಕಿಡಿ; ಮುಸುರುವ ಕಿಡಿ : ಪೊತ್ತ ಹೊಗರಿನ ಮೊಜೆವ ಗಜಗಳ ಮುತ್ತುಗಿಡಿ [ಶಾಕಾಂ. ಪ] ಗಳ ಹೊಳೆವ ಧಾರೆಯ ಪೊತ್ತವಂಬೊಳದವು ಮೃತ್ಯುಂಜಯನ ಸಮ್ಮುಖಿಕೆ (ಕುಮ್ಯಾ.೮. ೬-೦೦). [ಮುತ್ತು₁ + ಕಿಡಿ]

**ಮುತ್ತುಗು** (ಕ್ರಿ). ಮುತ್ತು ಸುರಿ,–ಚೆಲ್ಲು : ಕರಿಶಿರದತ್ತಣಿಂ ಮುತ್ತೊಕ್ಕು ಮೆಬಲ್ಲಿ ಕರಿಶಿರದಿಂ ಮುತ್ತೊಕ್ಕುವೆಂದಾಯ್ತು (ಕಮಂದ. ೦೩೩ ಪ್ರದೋ); ಕಣ್ಬನಿಗಳ್ಗೊಟ್ಟನೆ ಸತಿಯ ತೋರಮೊಳಗಾರಮನಾಗಳ್ಪಡಿಸಿ ನನ್ನಿ ಮಾಡಿದುವಬ್ಬರೆ ಮುತ್ತೊಕ್ಕುವೆಂಬರಣಕದನುಡಿಯಂ (ರರ್ವಾಣಾ. ೩-೧೪೦).

[ಮುತ್ತು₅ + ಉಗ್ಗು₁]

**ಮುತ್ತುದೊಡವು** (ನಾ). ಮುತ್ತಿನ ಒಡವೆ ; ಮೌಕ್ತಿಕದ ಆಭರಣ : ನೇಜಿಲ ಪಣ್ಣನೆಣ್ಣೆಯುಳಿ ಎಳಸಿ ತೊಯ್ದಂತಪ್ಪ ಮೈಯುಮ್ಪಳಿಸುವಾನೆಯ ಮುತ್ತುದೊಡವಿನ ಚೆಲುವೆ (ಶಾಳ್ವಾ. ೩-೦೦). [ಮುತ್ತು₅ + ತೊಡವು]

**ಮುತ್ತುಮಣಿ** (ನಾ). ಮುತ್ತಿನ ಮಣಿ; ಮೌಕ್ತಿಕ : ಪೊಸಜೋಳರಾಸಿಯಂ ಮುತ್ತುಮಣಿ ಮಾಡಿದಾ ಬಸವನೆಯ್ತಂದಪಂ (ಮುಂಡ್ಶ. IV. ೬೨೩ ಬಸವಸ್ತೋತ್ರ). [ಮುತ್ತು₅ + ಮಣಿ₃]

**ಮುತ್ತುಮಸರ** (ನಾ). ಮುತ್ತನ್ನು ಮಾರುವ ಅಂಗಡಿ : ನೀರೊಳಿರ್ದೊಡೆ ಬೆಲೆವಡೆಯೆವಾವೆಂದು ಮುನ್ನೀರನುಳಿದು ಬಂದಂತೆ ನೀರನುಗುಳುತಿಸೆದವು ಮುತ್ತುಮಸರಗಳ್ (ಕುಮಾರಾಂ. ೩-೭೬). [ಮುತ್ತು₅ + ಪಸರ]

**ಮುತ್ತುಮಸೆ** (ನಾ). ಮುತ್ತುಗಳನ್ನು ಅಳವಡಿಸಿ ಮಾಡಿದ ಪೀಠ ; ಮುತ್ತಿನ ಹಸೆಮಣೆ : ಆ ಯುವತೀಜನಂ . . . ತೋಯಜನೇತ್ರೆ ಸೌಂದರಿಗೆ ಮಂಗಳಮಜ್ಜನಮಂ ನಿಮಿರ್ಚಿಸಲ್ಕಾಯತಮಾಗಿ ಮುತ್ತು ಮಸೆಯಂ ನಲಿದಿಕ್ಕಿದರ್ (ಉದ್ಭಟ. ೬-೦೨). [ಮುತ್ತು₅ + ಪಸೆ₂]

**ಮುತ್ತುಸಾರೆ** ' ಮುಚ್ಚೋರೆ ' ನೋ.

**ಮುತ್ತುಹ** (ನಾ). ಮೇಲೆ ಬೀಳುವಿಕೆ ; ಮುತ್ತಿಗೆ ಹಾಕುವಿಕೆ ; ಆಕ್ರಮಣ : "ಅಭ್ಯವಸ್ಕಂದನಂ ಅಭ್ಯಾಸಾದನಂ – ಪರಿದು ಮುತ್ತುಹ" (ನಾಶಾ. ೬). [ಮುತ್ತು₁ + –ಹ₂ (< –ಪ₂)]

**ಮುತ್ತೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು ; ಅದಿಮುರ್ತ್ತೆ : ಮುತ್ತೆ ನನೆದೋಜಿ ತಳಗಳ ನಾಡೆ ಪೇಜಿ . . . ಕೋಭಿಸುತ್ತೆಮವಿದದೆತ್ತ [ಮುಗ್ಗಳಿಸಿ ನಾಡೆ ವಿ]ಗುರ್ವಿಸುವಪ್ಪ ಕಾಲದೊಳ್ (ಕುಶಪಾ. ೬-೦೩). 'ಪರಿಮುತ್ತೆ' ಪರಾ. [< ಅದಿಮುರ್ತ್ತೆ]

**ಮುತ್ತೆರಿ** (ನಾ). ಒಂದು ಸ್ಥಳದ ಹೆಸರು ; ಗುರ್ದ್ದ(ಟ್ಟ)ದ ಪಳ್ಳಮುತ್ತೆರಿಯ(ಯೆ) (ಇಅ. VIII. ೨೦೩. ೨೩ : 10ನೆಯ ಟಶ). [ ? ]

**ಮುತ್ತೈರೆಯ** (ನಾ). ಒಬ್ಬಾತನ ಹೆಸರು : ನಗರಲ ನನ್ನಯ್ಯನ ದೇಗುಲಕ್ಕೆ ಮುತ್ತೈರೆಯಂ ಪಡೆದು ಕೊಟ್ಟಂ (ಎಕ. III, ನಂಜನ. ೦೩೩-೪ ; ಸು. 970 ?). [ಮುತ್ತು₅ + ಎರೆಯ (<ಎಱೆಯ)]

**ಮುತ್ತೈಱ** 'ಮೂದೆಱ' ನೋ.

**ಮುತ್ತೈದೆ** 'ಮುತ್ತಯ್ದೆ' ನೋ.

**ಮುತ್ತೈದೆತನ** 'ಮುತ್ತಯ್ದೆತನ' ನೋ.

**ಮುತ್ತೈದೆವೆಣ್**, ಮುತ್ತೈದೆಹೆಣ್ಣು (ನಾ). ಸುಮಂಗಲಿ: ಸುವಾಸಿನಿ. **ಮುತ್ತೈದೆಹೆಣ್ಣು** : ಇಷ್ಟು ದೊಡ್ಡ ಅರಮನೆಯಲ್ಲಿ ಒಬ್ಬೇ ಒಂದು ಮುತ್ತೈದೆಹೆಣ್ಣು ಇಲ್ಲದಿರುವುದು ಎಲ್ಲ ಸಂತೋಷಗಳನ್ನೂ ಮೆಟ್ಟಿ ನಿಂತಿದೆ (ಶಾಂತಲಾ. ೩೦).

**ಮುತ್ತೈದೆವೆಂಗಳು** (ಬಹುವ) : ಮುತ್ತೈದೆವೆಂಗಳು ಸಿರಿಮುಡಿಯ ಪೂದುಂಡೆಗಳೊಡನೆ ಹಿಡಿಯುಕ್ಕಿದಳೆದು ಬಂದರು ಮುತ್ತಿನಾರತಿವಿಡಿದು (ಪೋಷಕ. ೦೭-೪೮). [ಮುತ್ತೈದೆ (<ಮುತ್ತಯ್ದೆ) + ಪೆಣ್]

**ಮುತ್ತೈದೆಹುಣ್ಣಿವೆ** (ನಾ). ಚೈತ್ರಶುದ್ಧಹುಣ್ಣಿಮೆ ಮುತ್ತು ಅಂದು ಆಚರಿಸುವ ಎಲ್ಲಮ್ಮನ ಹಬ್ಬ : ಚೈತ್ರಶುದ್ಧಹುಣ್ಣಿವೆಯಂದು ಶ್ರೀರೇಣುಕಾ(ಎಲ್ಲಮ್ಮ) ದೇವಿಯ ಸೌಮಾಂಗಲ್ಯಸಮಾರಂಭ ನಡೆಯುತ್ತಿದೆ. ಇದು ಮುತ್ತೈದೆಹುಣ್ಣಿವೆ ಎಂದು ಜನಸಾಮಾನ್ಯರಿಗೆಲ್ಲ ಪರಿಚಿತವಾಗಿದೆ (ಶಾಪ್ನ. ೬೯). ¶ ಹಿಂದೆ ಕಾರ್ತವೀರ್ಯನಿಂದ ಜಮದಗ್ನಿಯು ಪ್ರಾಣಾಂತಿಕವಾಗಿ ಗಾಯಗೊಂಡಾಗ ರೇಣುಕೆಗೆ ವೈಧವ್ಯವು ಪ್ರಾಪ್ತವಾಗಿ ಪರಶುರಾಮನಿಂದ ಪುನಃ ಮುತ್ತೈದೆತನವು ಲಭಿಸಿತು. ಇದರ ನೆನಪಿಗಾಗಿ ಎಲ್ಲಮ್ಮನ ಜಾತ್ರೆಯಂದು ಭಕ್ತರು ದೇವಿಯ ಕೈಬಳೆಗಳನ್ನು ಒಡೆದು ಪುನಃ ತೊಡಿಸುತ್ತಾರೆ. [ಮುತ್ತೈದೆ (<ಮುತ್ತಯ್ದೆ) + ಹುಣ್ಣಿವೆ (<ಪುಣ್ಣಿಮೆ)]

**ಮುತ್ತೈದೆಹೆಣ್ಣು** 'ಮುತ್ತೈದೆವೆಣ್' ನೋ.

**ಮುತ್ತೋಣಿ** (ನಾ). ಒಂದು ಓಣಿಯ ಹೆಸರು : ಮದೊರ ಕಾಲುವೆಯ ದಾಟಿ ಹುಂಗಿಯ ತೆವರು ಮುತ್ತೋಣಿಯುಂ ದಾಟಿ . . . ಮೂಡಣ ಪಳ್ಳದ ಕೂಡಿತು (ಎಕ. IV (R), ಎಳಂದೂ. ೪೯-೦೬; 963). [?+ಓಣಿ]

**ಮುತ್ಯಾ** 'ಮುತ್ತಯ್ಯ' ನೋ.

**ಮುತ್ಯ** 'ಮುತ್ತಯ್ಯ' ನೋ.

**ಮುತ್ಯಾ** 'ಮುತ್ತಯ್ಯ' ನೋ.

**ಮುತ್ಸಂಜೆ**, ಮುಚ್ಚಂಜೆ, ಮುಸ್ಸಂಜೆ (ನಾ). ಸೂರ್ಯನು ಮುಳುಗುವ ಹೊತ್ತು ; ಇಳಿಹೊತ್ತು ; ಸಾಯಂಕಾಲ : ತುದಿಹಗಲಿನ ಮಬ್ಬಿನ ಮೇಲೆ ಸೂರ್ಯಾಸ್ತದ ಬೆಳಕು ಬಿದ್ದು ಅಂದಿನ ಮುತ್ಸಂಜೆ . . . ಮನೋಹರವಾಗಿ ಕಾಣುತ್ತಿತ್ತು (ಶಿಶಿಂರ. II, ೬೮). **ಮುಚ್ಚಂಜೆ** : ಬಂಧನಂ ನಚ್ಚಣಿಯುಂ ಮೊಲೆಗಟ್ಟೊಳಚ್ಚರಿಯು ರಾಗಮುಂ ಮುಚ್ಚಂಜೆಯೊಳಗಲ್ಲದಿಲ್ಲವಾ ದೇಶದೊಳಗೆ (ಉದ್ಭರ. ೨-೦೪) ; ಕೆಂಜವಿಯ ದೀಪ್ತಿ ದೇಗುಲ್ವರಗಳೆಸೆದವಾ ಸಂಜೆಯೊಳ್ ಶಿಯು ಮುಚ್ಚಂಜೆಯೊಳ್ಪೊಂಬಿಸಿಲ್ಸಂಜೆಯೊಳ್ (ಮಲ್ಲೇಶ. ೦೩-೪) ; ಎಲ್ಲವೂ ನಶ್ವರ, ಮುಚ್ಚಂಜೆಯ ಮುಗಿಲಿನಂತೆ (ತುಂಗಭ. ೩೪). **ಮುಸ್ಸಂಜೆ** : ಈ ಮುಸ್ಸಂಜೆ ಹೊತ್ತಿಗೆ ಏಕೆ ಬಂದೆ ? (ಈಶಪ. ೪೮) ; ಅತಿ ಬಿಳುಪಲ್ಲದೆ ಮುಸ್ಸಂಜೆಯ ನಸುಗೆಂಪಿನಲ್ಲಿ ವಿಲಸವಾಗಬಹುದಾದ ವೈವರ್ಣ (ಶಾರ್ಗದ. ೬೮). [< ಮುತ್ತು₂ + ಸಂಜೆ]

**ಮುತ್ಸದ್ದಿ**, ಮುಸದ್ದಿ (ನಾ). ೧. ರಾಜ್ಯದ ವ್ಯವಹಾರಗಳನ್ನು ನೋಡಿಕೊಳ್ಳುವ ಒಬ್ಬ ಅಧಿಕಾರಿ : ಪನಾಮನೀ ... ಮುತ್ಸದ್ದಿಯನು ಕಂಡು ಕೊಂಡ್ಯೋಗಿ (ಅಶ್ವಾಪಿ. ೩೦-೪೦) ; ಅರಮನೆಯ ಮುತ್ಸದ್ದಿಗಳು ಪುರೋಹಿತರನ್ನೂ ರಾಮಣ್ಣನವರನ್ನೂ ಆ ಬೈಠಕ್‌ಖಾನೆಗೆ ಕರೆದುಕೊಂಡು ಹೋದರು (ಶ್ರೀರಾಮು. ೭೩) ; ಆಯಾಸ್ಥಳಗಳಲ್ಲಿ ಅವರವರನ್ನು ಅರಮನೆಯ ಮುತ್ಸದ್ದಿಗಳು ಕೂಡಿಸುತ್ತಿದ್ದರು (ಕವೇವ. ೧೩೦). ೨. ನಿಯೋಗಿ; ಕಾರ್ಯಭಾರಿ : ಮೃತಪಟ್ಟವನ ಮುತ್ಸದ್ದಿಯಿಂದ ಅಥವಾ ಅವನ ನವುಕರನಿಂದ ಹಾಗೆ ಮಾಡಲ್ಪಟ್ಟರೆ ೭ ಸಂವತ್ಸರಗಳ ಪರ್ಯಂತರ (ಗ್ರಾವಾಶ. ೦೯೬). ೩. ಕಾರ್ಯನಿರ್ವಾಹಕ ; ವ್ಯವಸ್ಥಾಪಕ : ಸ್ಥಾನಿಕ ಪೆಟ್ಟಾರರು ಒಬ್ಬ ಮುತ್ಸದ್ದಿ ಯಾ ಮೆನೆಜರರನ್ನು ಇಟ್ಟುಕೊಂಡು ಸರ್ಕಾರಕ್ಕೆ ಲೆಕ್ಕ ಪತ್ರಗಳನ್ನು ಕಳುಹಿಸುತ್ತಿದ್ದರು (ಕುಗುಜಾ. ೦೦೩). ೪. ರಾಜಕಾರಣಪಟು ; ರಾಜನೀತಿನಿಪುಣ : ಅನೇಕ ವರ್ತಮಾನ ಪತ್ರಿಕೆಯ ಮುದ್ರನಿರೀಕ್ಷಕರು ದೊಡ್ಡ ಮುತ್ಸದ್ದಿಗಳಂತೆ ಹೀಗೆ ಹೀಗೆ ಆಗುವುದು ನಿಶ್ಚಿತವೆಂದು ಅನಾಯಾಸ ಕಟ್ಟಿ ಹೇಳುತ್ತಿದ್ದರು (ಅನ್ನ. ೩೪). ೫. ತೀಕ್ಷ್ಣವಾದ ಬುದ್ಧಿಯುಳ್ಳವನು; ಚಾಣಾಕ್ಷ : ಶರೀಫನು ತುಂಬ ಮುತ್ಸದ್ದಿ. ಈ ಕುಟಿಲತಂತ್ರಗಳನ್ನೆಲ್ಲ ಬಲ್ಲ (ಪೂರಾಜ. ೨) ; ರಾವಜೀ ಕಾಕಾ, ಮುತ್ಸದ್ದಿ (ದೀಪಶ. II, ೩೬೩). **ಮುಸದ್ದಿ** : ೬. ಕರಣಿಕ; ಕಾರಕೂನ; ಗುಮಾಸ್ತ : ಸೀಮೆಯ ಜಮಾಖರ್ಚಿನಾ ಲೆಕ್ಕವ ಮುಸದ್ದಿಗಳೊಳಾಲಿಸುವುದೊಂದೆಸೆಯ ರೊಕ್ಕ ಬರಬೇಕೆಂದು ವಿಚಾರಿಸುತಲೊಂದೆಸೆಯ . . . ವಿಚಾರಿಸುತ್ತ (ಕೃಷ್ಣವಿ. ೩-೪೯). [← ಅರ. ಮುತ್ಸದ್ದೀ; ಹಿಂ. ಮುತ್‌ಸದ್ದೀ; ಮರಾ. ಮುತ್‌ಸದೀ, ಮುತ್‌ಸದ್ದೀ, ಮುತ್ಸುದೀ, ಮುತ್ಸುದ್ದೀ]

**ಮುತ್ಸದ್ದಿತನ** (ನಾ). ೧. ರಾಜನೀತಿನೈಪುಣ್ಯ; ರಾಜತಂತ್ರಜ್ಞತೆ : "ರಾಜನೀತಿನಿಪುಣತೆ, ಮುತ್ಸದ್ದಿತನ" (statesmanship. ತಶ್ರಿಶಿ. ೭೮). ೨. ಅತಿಬುದ್ಧಿವಂತಿಕೆ ; ಚಾಣಾಕ್ಷತನ : ಶ್ಯಾಮರಾಯನಲ್ಲಿ ಮತ ಕುಟುಂಬದ ದೊಡ್ಡಸ್ತಿಕೆ ಇರದಿದ್ದರೂ ಅವರಲ್ಲಿಯ ಮುತ್ಸದ್ದಿತನ . . . ರೋಮರೋಮದಲ್ಲಿ ಸೆಲೆಯಾಡುತ್ತಿತ್ತು (ದೀಪಶ. II, ೩೦). [ಮುತ್ಸದ್ದಿ + -ತನ]

**ಮುದ** (ನಾ). ಹಿಗ್ಗು ; ಸಂತೋಷ; ಆನಂದ : "ಪ್ರೀತಿ ಸುಖಂ ಮುದಂ . . . ಸುಸುಖಮೆನಿಸಿಕ್ಕು" (ಮಂಗರಾ. ೬-೨೩) ; ವಿದಿತಸವಾ ಸಂಸ್ಕೃತೋದಿತಪದಂಗಳೊಳ್ ಪುದಿದು ಬೆರಸಿ ಬರೆ ಕನ್ನಡದೊಳ್ ಮುದಮನಪು ತರ್ಕಂ (ಕಂಠಾ. ೦-೨೩) ; ಭರತೇಶ್ವರಂ . . . ಪನಾಭ್ಯಂತರಮಂ ತೊಟಲಿ ಮುನ್ನಿಂತಿಲ್ಲದ ಮುದಮನುಂಟು ಮಾಡಿದುದು ಬನಂ (ಆದಿಪು. ೦೦-೮೦) ; ಅರ್ಜುನನು . . . ಮುರಹರನೊಡನೆ ಮುದದಲಿ ರಥಕೆ ಬಂದನು (ಕುಮ್ಮಾದ್ರೊ. ೨-೦೭). [ಸಂ. ಮುದಾ]

**ಮುದಂಗೆಡು** (ಕ್ರಿ). ಸಂತೋಷವನ್ನು ಕಳೆದುಕೊಳ್ಳು ; ಆನಂದವಿಲ್ಲದಾಗು : ಬಹುದುಃಖಿದೊಗ್ಗಿನಿಂ ತಾಮಸದಿರ್ಕೆಯಿಂ ನೆರೆ ಮುದಂಗೆಡುತ್ತೈದನೆ (ಶಶಿ. ೦೬೦-೨೩). [ಮುದ + ಕೆಡು₁]

**ಮುದಂದಳೆ**, ಮುದದಳೆ (ಕ್ರಿ). ಹಿಗ್ಗು ; ಸಂತೋಷಿಸು : ತೊಳಗುವ ರನ್ನದೊಟ್ಟಿಲೊಳೆ ಪಟ್ಟಿರಿಸುತ್ತೆ ಕುಮಾರನಂ ಮುದಂದಳೆದೆಳವೆಣ್ಗಳೊಲ್ದು . . . ಏಳು ಜೋಯೆಸುತೊಪ್ಪಿ ತೂಗಿದರ್ (ರಾಜಶೇ. ೪-೬೦). **ಮುದದಳೆ** : ಚತುರಾಸ್ಯನಿವರನೆಲ್ಲೆಂದಲ್ಲಿ ಕೂಡಿಸಿದನೆಂದು ಯತಿ ಮುದವಳೆಯಲು (ನವಪೋ. ೩೩-೦೬). [ಮುದ + ತಳ್₁]

**ಮುದಂಬಡು**, ಮುದವಡು (ಕ್ರಿ). =ಮುದಂದಳೆ : ನಿಜಬಳಂ ಮುದಂಬಡುತ್ತಮಿರೆ ಪಡಿಬಳಂ ಕಂಗೆಡುತ್ತಮಿರೆ . . . ಪನ್ನತಿಕೆಯಿಂ ತನ್ನ ಬಲಂಬೆರಸು ಸುತ್ತಿ ಪಶ್ಚಿಮದಾಗಳ್ (ರಾಜಶೇ. ೬-೦೦೩ ವ). **ಮುದವಡು** : ಬಂದು ಹೊಕ್ಕನು ಪುರವ ಮೆಚ್ಚಿವತಿಚಂದವನು ನೆಚ್ಚಿ ನೋಡಿ ಮುದವಡುತಂದು [ ಪಾಠಾಂ. ಮನದೊಳಗಂದು ಕೊಂಡಾಡಿದನು] ಋತುಪರ್ಣನ ಮಹಾಸಿರಿಯ (ನಳಚ. ೬-೨೮) ; ನಿಟ್ಟಿಸುವಳು ಕೆಲಬಲನ ಇಟ್ಟದಿರೊಳು ಕಂಡಂತಾಗಲಲ್ಲೆ ಮುದಪಟ್ಟು (ಕರ್ಣಾಕ. ೨೨೭). [ಮುದ + ಪಡು₁]

**ಮುದಂಬೆರು** 'ಮುದಂಬೆಱು' ನೋ.

**ಮುದಂಬೆಱು,** ಮುದಂಬೆರು, ಮುದವೆಱು (ಕ್ರಿ) = ಮುದಂದಳೆ: ಸೋವಿಯಕ್ಕನ ಚೆನ್ನಭಕ್ತಿಗೆ ಮೆಚ್ಚಿಯಾರೋಗಿಸಿ ಮುದಂಬೆತ್ತು (ಬಸಪು. ೨೪-೬೩); ಜಂಭರಿಪು ನಿಜರೂಪುವೋಱುತೆ ಪರಸಿ ಮುದಂಬೆತ್ತು ಸಗ್ಗಕೆಯ್ದಿದಂ (ಶಬರ. ೨-೮೨). **ಮುದಂಬೆರು :** ಎತ್ತಿದ ಪಲ್ಲವ ಪ್ರತತಿವಾಣಂಗಳಂ ವನದೇವಿಯರ್ ಮುದಂಬೆತ್ತೊಡನಿತ್ತರೀ ತೊಡವನೆಲ್ಲ ವಂನನ್ನಕುಜಂಗಳತ್ತಣಿಂ (ಶಾಕುಂತ. ೫೦-೬೩). **ಮುದವೆಱು :** ಗಂಡ ಹೆಂಡಿರು ನಂದಿಯಂ ಬಲಗೊಂಡು ವಂದಿಸಿ ಬರಿದು ಶುಭವಿದಿರ್ಗೊಂಡ ವೋಲು ನಿಜಮಂದಿರಕೆ ನಡೆತಂದು ಮುದವೆತ್ತು (ಬಸಪು. ೨-೩೫); ಓಡಿದಳು ಗಲ್ಲವ ಮುದ್ದಿಸಿ ಮುದವೆತ್ತು ನುಡಿದಳು ಖಳರಾಯನರಸಿ (ಮೋಹತ. ೧೧-೪೦). [ ಮುದ + ಪೆಱು$_1$ ]

**ಮುದಗೊಳ್ಳು** (ಕ್ರಿ). = ಮುದಂದಳೆ : ಶಾಂತಲಾದೇವಿ ಮನಸ್ಸಿನಲ್ಲಿ ಮುದಗೊಂಡಳು (ಸಪಿ. ೪೨). [ಮುದ + ಕೊಳ್ಳು$_1$ (<ಕೊಳ್$_1$)]

**ಮುದತಿ** 'ಮುದ್ದತು' ನೋ.

**ಮುದತ್ತು** 'ಮುದ್ದತು' ನೋ.

**ಮುದದಳೆ** 'ಮುದಂದಳೆ' ನೋ.

**ಮುದಮುಱು** (ಕ್ರಿ). = ಮುದಂದಳೆ : ಸುಧೆಯೊಳುದ್ಭವಮಾದ ಸುರ ಕರೀಂದ್ರನ ಮೇಲೆ ಮುದಮುತ್ತು ಹರ್ಯಿಯೇಱಿರಲು (ಅಸಂತ. ೩-೨೩). [ ಮುದ + ಉಱು ]

**ಮುದಲ್** 'ಮೊದಲ್$_1$' ನೋ.

**ಮುದಲಿ** 'ಮೊದಲಿ' ನೋ.

**ಮುದಲಿಯಾರ್** 'ಮೊದಲಿಯಾರ್' ನೋ.

**ಮುದಲೆಕರು** 'ಮುದಲೆಗರು' ನೋ.

**ಮುದಲೆಗರು,** ಮುದಲೆಕರು (ನಾ). ಚಾವಣಿಯೇಣಿನ ತೊಲೆಗೆ ಆಧಾರವಾಗಿರುವಂತೆ ಜೋಡಿಸಿರುವ ಪಾರ್ಶ್ವದ ಶೀರು, — ಜಂತೆ : (ಕಸಂಗ್ರಾ. ೩೦). **ಮುದಲೆಕರು :** (ಕಸಂಗ್ರಾ. ೩೦). [ ← ತುಳು. ಮುದಲೆಗರು, ಮುದಲೆಕರು ]

**ಮುದವದು** ' ಮುದಂಬಡು ' ನೋ.

**ಮುದವಡೆ** (ಕ್ರಿ). = ಮುದಂದಳೆ : ಮುದವಡೆದೆಸೆವ ಚೌರಾಸೀತಿಬಂಧದ ವಿಧದ ರತಿಯ ತೋಱಿ ಮೆಱೆವ ಪುದುಗಿದ ಸವರತ್ನದ ಪ್ರತಿಮೆಗಳಿಂದ ಮದನವಿಲಾಸ ರಂಜಿಸಿತು (ಕುಂಪಾ. ೭-೩೯). [ ಮುದ + ಪಡೆ$_1$ ]

**ಮುದವಲರ್** (ಕ್ರಿ). ಬಹಳವಾಗಿ ಹಿಗ್ಗು ; ಅತಿಯಾಗಿ ಆನಂದಿಸು : ಮುದವಲರ್ದಾಚರಿಸೆನೇ ಸಮುಗುರುಪರಿಯೆಗಳ (ಬಸಪು. ೬೫-೧೭). [ ಮುದ + ಅಲರ್$_1$ ]

**ಮುದವೂಡು** (ಕ್ರಿ). ಸಂತೋಷಗೊಳಿಸು : ಆನಂದವನ್ನುಂಟು ಮಾಡು : ಆಡು ಬಾ ಮುದವೂಡು ಬಾ ಭಯದೂಡು ಬಾ ಒಲವೇ (ಗೋಕುಲ. ೨೬-೬); ಬೇರೊಂದು ಹಕ್ಕಿಯ ಜತೆಗೂಡಿ ಹಾಡನು ಹಾಡುತ ಮುದವೂಡು ಮನಕೆ (೨೦ಶಾಕ. ೨೦೨-೪೮). [ ಮುದ + ಊಡು$_1$ ]

**ಮುದವೆಱು** ' ಮುದಂಬೆಱು ' ನೋ.

**ಮುದವೇಱಿಸು** (ಕ್ರಿ). ಸಂತೋಷವನ್ನು ಹೆಚ್ಚು ಮಾಡು, — ಅಧಿಕ ಗೊಳಿಸು : ಪೆಣ್ಮಕ್ಕಳನಾದರಿಪುದು ಮುದವೇಱಿಪುದು ಮುದ್ದಿಪುದು (ಶಂಖ. ೩-೨೬). [ ಮುದವೇಱು + — ಇಸು$_3$ ]

**ಮುದವೇಱು** (ಕ್ರಿ). = ಮುದಂದಳೆ : ಪಸುಮಕ್ಕಳ ಮುದ್ದಿಸಿ ಮುದವೇಱುವುದು (ಶಂಖ. ೪-೫೦). [ ಮುದ + ಏಱು$_1$ (<ಏಱ್$_1$) ]

**ಮುದಶ್ರು** (ನಾ). ಸಂತೋಷದಿಂದ ಉಕ್ಕಿಬರುವ ಕಣ್ಣೀರು ; ಆನಂದ ಬಾಷ್ಪ : ಕಣ್ಗಳಿಂ ಸುರಿಯೆ ಮುದಶ್ರು . . . ಕಾಂತನೊಳ್ ನೆರೆದು ರಥಾಂಗಕಾಂತೆಯಿರ್ದೆಯಾಱದಾದಾವಮೆ ತತ್ಪ್ರಘಾತದೊಳ್ (ಕಂಪ್ರ ಕ. ೬-೧೦೦) ; ಸುರಿವ ಮುದಶ್ರುವೆ ಚಳೆಯಂ . . . ಗದ್ಗದರುತಿ ವರವಾದ್ಯ ಮದಾಗೆ ಶಿವನನವನಿದಿರ್ಗೊಂಡಂ (ರಾಜಶೇ. ೧೩-೩೦). [ಸಂ.]

**ಮುದಿ** (ನಾ). ೧. ಇಳಿವಯಸ್ಸು ; ವೃದ್ಧಾಪ್ಯ : ನಾಲಿಗೆಯ ಕೀಲವನು ಶೀಲದಲಿ ತಾನಱಿದು ಶೂಲವದು ರುಜೆಯು ಎಂದಿಹನು ಮುದಿಯಲಿ ಬಾಲನಂತಿಹನು (ಸರ್ವಜ್ಞ. ೨೦೦೩). ೨. ಮುದುಕ ; ವೃದ್ಧ : ಮುದಿಗಾ ಯುವ್ವನೆ ಶತ್ರುವೈ (ಸೋಮೇಶ. ೬೭) : ಜಮುರೆಯಲ್ಲದಳ ಮನೆವಾರ್ತೆ ಮುದಿ ಗೂರಲೊದಱ ಸತ್ತಂತೆ (ಸರ್ವಜ್ಞ. ೧೭೨೬). (ಗು). ೩. ವಯಸ್ಸಾದ : ಮುಪ್ಪಿನ : ಆ ಮುದಿರೈತ . . . ಡಾಕ್ಟರನ ಕಡೆಗೆ ನೋಡಿದ (ಮಹಾತ್ಮಾ. ೫). ೪. ದೊಡ್ಡಗಾತ್ರದ : ಭಾರಿಯಾದ : ' ಮುದಿ ಕಾಗೆ ' ಪರಾ. ೫. ಹಳೆಯ ; ಹಿಂದಿನ : ' ಮುದಿಗನಸು ' ಪರಾ. [ ದೇ.ದ ತುಳು. ಕೊಡ. ಮುದಿ ; ತೆಲು. ಮುದಿ, ಮುತ್ತಿ ]

**ಮುದಿಕಾಗೆ** (ನಾ). ೧. ವಯಸ್ಸಾದ ಕಾಗೆ : ಒಂದು ಮುದಿಕಾಗೆಯು ಹಾರಲಾರದೆ ಎರಡು ದಿನಗಳಿಂದ ಅಲ್ಲೇ ಕೂತಿದೆ (ರೂಂ). ೨. ಕಾಗೆ ಜಾತಿಗೆ ಸೇರಿದ ಒಂದು ಬಗೆಯ ದೊಡ್ಡ ಪಕ್ಷಿ : ಡೊಂಬಕಾಗೆ : " ದ್ರೋಣಕಾಕಃ, ಕಾಕೋಲಃ – ಈ ೨ ಮುದಿಕಾಗೆ " (ನಾಕಾಂ. ೧೦೪). [ ಮುದಿ + ಕಾಗೆ ]

**ಮುದಿಕುಂಟಣಿ** ' ಮುದಿಗುಂಟಣಿ ' ನೋ.

**ಮುದಿಗನಸು** (ನಾ). ಹಳೆಯ ಕನಸು ; ಹಿಂದಿನ ಕನಸು : ಮುದಿಗನಸು ಗಳನು ತೂರುತ್ತ, ಹೊಸಗನಸನು ಪೊಳೆದೋರುತ್ತ ಪಾವನಪವನನು ಬರುತಿಹನು (ಚಾಂಶಕ. ೨೩-೦೭). [ ಮುದಿ + ಕನಸು ]

**ಮುದಿಗಲ್ಲು** ' ಮುದುಗಲ್ ' ನೋ.

**ಮುದಿಗುಂಟಣಿ,** ಮುದಿಕುಂಟಣಿ (ನಾ). ಮುದುಕಿಯಾದ ಕುಂಟಿಲ ಗಿತ್ತಿ,— ತಲೆಹಿಡುಕಿ : ಇವ್ವರಲ್ಲಿ ಸಹಸ್ರಸಂಖ್ಯೆಯ ಮುಪ್ಪುಕುಟಿಲದ ಮಾಯಕಾತಿಯರು . . . ಮುದಿಗುಂಟಣಿ[ಪಾಠಾಂ. ಮುದುಕುಂಟಣಿ, ಮುದು ಗುಂಟಣಿ, ಮುದುಗೂಟಣಿ]ಗಳು (ತೊರವೆ. ೫-೨-೩೪) ; ಮುದಿಗುಂಟಣಿ ಪೇಳ್ದ ಸೂಳೆಸಿದ್ಧಾಂತವ ಸವಿರೊಡವೆರಸು ಸಂತಸ ಮಿಗೆ ಕೇಳಿ ಸಲ್ಲಾಪ ದಿಂದ ಭೂಕಾಂತನೆಯ್ದುವನತ್ತತ್ತ (ನಾಗಕು. ೩೦-೧೫೫). **ಮುದಿಕುಂಟಣಿ :** ಮುವುತ್ತೆ ವೆಗ್ಗಳಿಸಿ ನಿಜತನುವ ನೋಯಿಸ್ಕೊಡದಿರೆನುತಾಗ ಮುದಿಕುಂಟಣೆಯು ಬೋಧಿಸಿದಳಾತ್ಮಭವೆಗೆ (ವಂಕಾಚಾ. ೫-೬-೩೦). [ಮುದಿ + ಕುಂಟಣಿ]

**ಮುದಿಗೂಡು** (ನಾ). ವಯಸ್ಸಾದ ದೇಹ ; ಜೀರ್ಣಶರೀರ : ಮುಪ್ಪ ಮುದಿಗೂಡು ತಪದಿಂದೊಣಗಿತಿದನೊಲ್ಲೆನು (ಕೃ ಬಿಖಾ. ೨೬-೩೪). [ಮುದಿ + ಗೂಡು]

**ಮುದಿಗೂಬೆ** (ನಾ). ೧. ವಯಸ್ಸಾದ ಗೂಬೆ ; ಮುದಿಯಾದ ಗೂಬೆ : ಮುದುಕ ಜವ್ವನೆಯನೊಡಗೂಡೆ ಮುದಿಗೂಬೆಯೊವಱಿಕೊಂಡಂತೆ (ಸರ್ವಜ್ಞ. ೧೬೦೩). ೨. (ವ್ಯಂಗ್ಯಾರ್ಥವಲ್ಲಿ) ಬಹಳವಯಸ್ಸಾದ ವ್ಯಕ್ತಿ : ನನ್ನಂಥ ಮುದಿಗೂಬೆಯ ಮಾತು ಯಾರಿಗೆ ಲಕ್ಷ್ಯ ? (ಅಪಾರು. ೬) ; ಒಂದು ಕಂಚಾಯಿತು, ಒಂದು ಮಿಂಚಾಯಿತು, ಮುಂದೆ ಕೂತಿಯಾ ಮುದಿಗೂಬೆ ? (ಗಾದೆ). [ಮುದಿ + ಗೂಬೆ (<ಗೂಗೆ)]

**ಮುದಿಗೊಡ್ಡು** (ನಾ). ಬಹಳ ವಯಸ್ಸಾದವನು ; ಮುದಿಯ : ನಿಮ್ಮಂಥವರು ಯಾವಾಗಲೂ ಅಂಥ ಮುದಿಗೊಡ್ಡಿನ ಹಿಂದೆ ಇರುವುದು ಸರಿಯಲ್ಲ (ಹಳ್ಳಿಹಾ. ೯೦) ; ಮುದಿಗೊಡ್ಡುಗಳಾಗಿ ಮದುವೆಯೇಕೆ ಮಾಡಿ ಕೊಳ್ಳುತ್ತಾರೋ ನನಗೆ ಗೊತ್ತಿಲ್ಲ (ಗಜೇಂದ್ರ. ೦೪೮). [ಮುದಿ + ಗೊಡ್ಡು$_1$]

**ಮುದಿಗೋಡ** (ನಾ). ಮುದಿಕೋತಿ ; ವೃದ್ಧಕಪಿ : ಮನೆಯೊಳಗೆ ಕಟ್ಟಿರ್ದುದೊಂದು ಮುದಿಗೋಡನಂ ಬಸಕೆ ಹಿಡಿತರಿಸಿ (ಸಮ್ಯಕ್ತ್ವ. ೨-೮೦). [ಮುದಿ + ಕೋಡ್ಗ (<ಕೋಡಗ)]

**ಮುದಿತ** (ಗು). ೧. ಸಂತೋಷಗೊಂಡ ; ಸಂತುಷ್ಟವಾದ : ಹಿಗ್ಗಿನಿಂದ ಕೂಡಿದ : ಪ್ರಭಾಮಂಡಲಂ ಪ್ರಮೋದಮುದಿತಹೃದಯನಾತನಂ ರಾಮಸ್ವಾಮಿಯಲ್ಲಿಗುಯ್ವುದುಂ (ಶಂಣವಾ. ೦೯-೧೬೭) ; ಗೋಪಾಲರಂ ಕಂಡತಿಮುದಿತಹೃದಯನಾಗಿ ಮುಕುಂದಂ . . . ಅನುರಾಗದಿಂ ನೋಡಿ (ಜಗ. ೪-೬೦ ವ) ; ಮುದಿತ ತಾಂಡವರೂಪವೆಂತೆನೆ ನೋಡು ನೀನು (ಬಸವ. ೦೭-೦೪). ೨. ಸಂತೋಷವನ್ನುಂಟುಮಾಡುವ : ಶೀಧಿತ್ತಿರದೆ ಮುದಿತವಿಶ್ವಂ ನಾಭಸಂ ಮಾತರಿಶ್ವಂ (ಶಂದ್ರ. ೪-೩೦). (ನಾ). ೩. ನಲಿವು; ಹಿಗ್ಗು ; ಸಂತೋಷ: "ಮುತ್ . . . ಮುದಿತಂ . . . ಮೋದ್ಯಂ, ಈ ೧೨ ನಲಿವು" (ಶಾಶಕ್ಕ. ೬೩) ; ಮುದಿತ ಎಂದರೆ ಒಳ್ಳೆಯ ವಿಷಯಗಳನ್ನು ಕಂಡರೆ ಸಂತೋಷ (ಅಪ್ಪಕ. ೬-೩ ಟೀಕು). ೪. ಸಂತೋಷಗೊಂಡವನು : ನಿಲ್ಲಿಸೆಂಬ ಮಾತನಿಂತು . . . ಕೇಳಿ ಮುದಿತನಾದ ಹರಿಯು ಶುಭವನೆಸಗೆ ಮಾಡಲಿ (ಕೃಷ್ಣಾ ಲೋ. ೨೨೧). [ಸಂ.]

**ಮುದಿತನ** (ನಾ). ಮುಪ್ಪು ; ಇಳಿವಯಸ್ಸು ; ವೃದ್ಧಾಪ್ಯ : "ಸ್ಥಾವಿರಂ, ವೃದ್ಧತ್ವಂ . . . ಮುದಿತನ, ಮುಪ್ಪು" (ಸಿದ್ಧಾಂತಿ. ೦೬೪) ; ರಂಗಾಭಟ್ಟರ ಬಾಳುವೆಗೆ ಮುದಿತನದಲ್ಲಿಯೂ ಒಂದು ಮುಗುಳು ಬಿಟ್ಟಂತಾಯಿತು ! (ಶೇಶರಂ. ೯೩). [ಮುದಿ + — ತನ]

**ಮುದಿಪಾಜ್** (ನಾ). ವಯಸ್ಸಾದ ಸೂಳೆ ; ವೃದ್ಧವೇಶ್ಯೆ : ತನ್ನೊಳ್ ತಾನೆ ಜಿನುಂಗಿ ನುಡಿವ ಮುದಿ[ಶಾಶಾಂ. ದು]ಪಾಜಿಯುಂ ನೋಡುತುಂ ನಗುತುಂ ಬರೆ (೧೧೪. ೪-೦೩೬ ವ) ; ಹುಣ್ಣನೊಳಗುಳ್ಳ ವರಮಧುರ ಕಸು ಗಾಯೊಳುಂಟೆ ಕೂಡಿದೊಡೆನ್ನ ಪರಿಯು ತೋಱುವೆ ಪೊಸತ ನಿನ್ನಾಣೆಯೆಂಬ ಮುದಿಪಾಜಿಯಿರ್ದಳದೊಂದೆಡೆ (ಶಬ್ದಾಶ. ೨-೯೬) ; ಎನಗೆ ನೀನಲ್ಲದಾರಿಲ್ಲೆಂದು ನಿನ್ನ ಮನ ಸಿಲ್ಕಿಸದಿರೆಂದು ಮುದಿಪಾಜ್ ಮಗಳಿಗೆ ಬುದ್ಧಿಯಂ ಪೇಳ್ದಳು (ಶ್ರೀರಂಗ. ೬-೦೦). [ಮುದಿ+ಪಾಜ್]

**ಮುದಿಪ್ರಾಯ** (ನಾ). = ಮುದಿತನ : ಇಷ್ಟು ಮುದಿಪ್ರಾಯದಲ್ಲಿ ಅವರಿಗೆ ಇಂಥಾ ಕಷ್ಟ ಬರಬಾರದಿತ್ತು (ಕೂ೩). [ಮುದಿ+ಪ್ರಾಯ]

**ಮುದಿಭ್ರಾಂತಿ** (ನಾ). ಅರೆಮರುಳು ; ಅರ್ಧ ಹುಚ್ಚು : ಒಂದು ವೇಳೆ ಜಹಾಂಗೀರನಿಗೆ ನನ್ನ ಸಮಾಚಾರ ತಿಳಿದರೆ ನನಗೆ ಮುದಿಭ್ರಾಂತಿ ಹಿಡಿದಿತ್ತು ಎಂದು ನಗುವನೇ ? (ಶಹಾಮು. ೬೨). [ಮುದಿ+ಭ್ರಾಂತಿ]

**ಮುದಿಮುಂಡೆ** (ನಾ). ವಯಸ್ಸಾದವಳನ್ನು ಕುರಿತು ಅವಹೇಳನಾರ್ಥದಲ್ಲಿ ಹೇಳುವ ಒಂದು ಬಯ್ಗುಳು : ನಡೆ ಮುದಿಮುಂಡೆ ನೀನೇಬೊತ್ತುವಲ್ಲಿನ ಸಜುವವೆಸೆದುದು ಸೂಳೆಗೇರಿಯಲಿ (ಕೂರರಾ. ೩-೬-೬೭). [ಮುದಿ+ಮುಂಡೆ$_1$]

**ಮುದಿಯ** (ನಾ). ೧. ವಯಸ್ಸಾದವನು ; ಮುದುಕ; ವೃದ್ಧ : ತಾಟುತ್ತ ಪ್ರೆಯು ಬಡಿವಾಗ ಮುದಿಯನ ಕೋಟಲೆಯ ನೋಡ (ಸರ್ವಜ್ಞ. ೦೬೦೦) ; ಸತ್ತರೆಲ್ಲ ಮುದಿಯನೊಬ್ಬನೋಟಿಯಾಗಿ ಮನೆಗೆ ಉಳಿದ (ಅರ್ಜುನ. ೦೦೦). ೨. ವಯಸ್ಸಾದುದು ; ಮುದಿಯಾದುದು: ಹಣಿದು ಘಾಯದ ವಿಷ್ಣು ನೊಂದು ಸಿಂಹವನಯ್ದೆ ಕಣಕುಪೆತ್ತಿನ ಮುದಿಯನಂತೆ ದಿವ್ಯಾಸ್ತ್ರಮಂ ಗಣನಾಯಕನ ಮೇಲೆ ಬಿಡಲು (ವೀರಶೈ. ೩-೪-೩೬). [ಮುದಿ + — ಅ$_7$/ತವಿ. ಮುತಿಯನ್, ಮುತ್ತಿಯಾನ್, ಮುತಿಯವನ್ : ತುಳು. ಮುದಿಯೆ]

**ಮುದಿಯಳು** (ನಾ). ಮುದುಕಿ ; ವೃದ್ಧೆ : ಗಣಿಕನ ನೆರೆ ಪೊಲ್ಲ ಗಣಿಕೆ ಮುದಿಯಳು ಪೊಲ್ಲ (ಸರ್ವಜ್ಞ. ೬೪೬). [ಮುದಿಯ+ — ಅಳ್$_4$ (< — ಅಳ್$_5$)]

**ಮುದಿರ್**, ಮುದುಡು$_1$, ಮುದುರು (ಕ್ರಿ). ೧. ಸೊರಗು; ಕೃಶವಾಗು: ಅಮೃತಮತಿಯಪ್ಪವಂಕಂಗೆ ಮರುಳ್ಗೊಂಡತ್ತೆ ಗಂಡನಂ ವಿಷದಿಂಕೊಂದು ಮುದಿರ್ತು ಯುಧಂ ಕೊಲೆ ಪಂಚಮನರಕದೊಳಟ್ಟಳ್ (ಯಶೋಚ. ೪-೩೬). ೨. ಕಡಮೆಯಾಗು ; ಇಳಿ : ಎಳವಿಸಿಲೀಗಳೀಗಳೆ ಮುದಿ[ಶಾಶಾಂ. ಸು]ರ್ವುದು ಚೂತಕುಜಾತಮಿಾಗಳೀಗಳೆ ಸನೆದೋಱಿತು (ಅದಿಪು. ೧೩-೩). ೩. ಮುಚ್ಚು ; ಮುಗಿ : ಮಾಣೆಲೆ ಜೋಗಿ . . . ಮುದಿರ್ದ ಕಣ್ಣೆವೆಯುಂ ಬಿದಿರ್ಚಿ ನೋಡೆವ್ವುಂ (ರಾಮಾಶ್ವ. ೬೦-೩). **ಮುದುಡು$_1$**: ೪. ಅಡಗು; ಹುದುಗಿಕೊಳ್ಳು: ಆಣವಮಾಯಾಕಾರ್ಮಿಕ ಮೂಱುಸುರೆಯಲ್ಲಿ ಮುದುಡುತ್ತ ನಾ ತಂದ ಸುಧೆ ನಿಮಗಿಲ್ಲ ಎಂದೆ (ಸರ್ವ. ೦೯೨-೬೯೭) ; ಯಕ್ಷಂ ಮರುಳಾದಂ ಮಿಕ್ಕವರ್ಗೊಂಟಿನೊಳೆ ಮುದುಡಿದವರ್ (ಅಪಂಶು. ೦-೦೧೨) ; ಅಜಯ . . . ಜನಜಂಗುಳಿಯ ನಡುವೆ ಒಂದು ಮೂಲೆಯಲ್ಲಿ ಮುದುಡಿ ಕುಳಿತ (ಆಶ್ವಾಸ. ೦೩೭). ೫. (ಚರ್ಮ, ಬಟ್ಟೆ ಮೊದಲಾದುವುಗಳು) ಸುಕ್ಕಾಗು ; ಸುಕ್ಕುಗಟ್ಟು ; ನೆರಿಗೆ ಬೀಳು : ಚೆನ್ನಾಗಿ ಗರಿಮುರಿಯಾಗಿ ಇಸ್ತ್ರಿ ಮಾಡಿದ್ದ ಸೀರೆ ಬಸ್ಸಿನ ದೊಂಬಿಯಲ್ಲಿ ಮುದುಡಿ ಹಾಳಾಯಿತು (ಕೂ೩). ೬. (ಬಿಸಿಯ ರಭಸಕ್ಕೆ ತಾಗಿದ) ಹೂವು, ಎಲೆ ಮುಂತಾದುವುಗಳು ಸುರುಟು ; ಮುರುಟಿಕೊಳ್ಳು : "ಮುದುಡು—ಸಂಕೋಚನೇ" (ಶಮಶಾ) ; ಮಂಜಿನ ಭಾರದಿಂದ ಬಾಗಿ ಮುದುಡಿದ ಪುಷ್ಪಗಳು ಮತ್ತೊಮ್ಮೆ ಅರಳಿ ಎಸಳೆತ್ತಿ ಮುಂಬೆಳಕಿನಲ್ಲಿ ನಲಿವಂತೆ ನಮ್ಮ ಜೀವ . . . ಹಗುರವಾಯಿತು (ಪಠದಾ. I. ೩೯೩). ೭. ಬಾಗು; ತಿರುಗು : ತಿರುಚಿಕೊಳ್ಳು : 'ಮುದುಡುಗಿವಿ' ಪರಾ. ೮. ಕೈ, ಕಾಲು ಮುಂತಾದುವು ಸೇದಿಕೊಳ್ಳು,— ಎಳೆದುಕೊಳ್ಳು : ಒಂದು ವರುಷದ ಕೂಸಂ ನಂದಿನಿಯೆಂಬ ದೇವತೆ ಪಿಡಿದೊಡಾ ಕೂಸು . . . ಕೈಯುಂ ಮುದುಡಿ ಕಚ್ಚಿಕ್ಕುಂ (ಬಾಲಚ. ೦೩೦-೩). ೯. ಕುಗ್ಗು ; ಕುಸಿ : ನಿರ್ಮಲವು ಅರಳಿಕೊಂಡಿದ್ದ ಮನಸ್ಸು ಮುದುಡಿಬಿಟ್ಟಿತು (ಶೀವೋಚ. ೦೦೪). ೧೦. ಆಯಾಸಗೊಳ್ಳು; ಬಸವಳಿ : ಮಲಮೂತ್ರ ಹೇಸಿಕೆಯಿಂದಲೆ ಯುಳಿದು ಸೂಲಗಿತ್ತಿಯು ಕೆಯ್ಯ ಮೊಱಿದೊಳ್ಮುದುಡಿ ಬೀಳ್ವ (ಶಿಂಡೂರ. ಹ. ೩೦೦-೨೦). ೧೧. ಮುದ್ದೆಯಾಗು ; ಮುದುಡೆಯಾಗು: ತವೆ ರೋಗಂ ಪತ್ತಿ ಗಾತ್ರಂ ಧರಣಿಗೆ ಕೆಡೆದಿರ್ಪಲ್ಲಿಯುಗ್ರುದ್ಬಿಪಂ ಬಂದವಿಚಾರಂ ಕಾಯ್ದು ಬಲ್ಪಿಂದೊಡೆಯೆ ಮುದುಡಿ ಬೀಳ್ವಲ್ಲಿ . . . ನೀವಲ್ಲದಾರ್ ಕಾವವರ್ (ರತ್ನಾಕ. ೩೭); ಮೆಲ್ಲಗೆ ಆಕೆಯು ಕಿಸೆಯಿಂದ ಒಂದು ಮುದುಡಿದ ಬೆಕ್ಕಿನ ಮರಿ ಈಚೆಗೆ ಬರುತ್ತಿತ್ತು (ಬಾಡಿ. ೨). ೧೨. ಅಡಗಿಸಿಕೊಳ್ಳು; ಹುದುಗಿಸಿಕೊಳ್ಳು : ಈ ವನಮಿದಂ ಸೋಂಕೆ ಸದ್ಗತಿಯಿಲ್ಲವೆಂದು ರವಿ ತೊಲಗಿ ಕಿರಣಂಗಳಂ ಮುದುಡಿ[ಶಾಶಾಂ. ರುಬು] ಪೋಪನೊ ಪೇಳೆನೆ ಮಿತಿಯಿಲ್ಲದಾಗಸಕೆ ಬೆಳೆದ ತರುಪತ್ರಸಂತತಿಯ ಸಾಂದ್ರತ್ವದಿಂ ಕತ್ತಲಿಸುತಿದೆ (ಜಿಂಪು. ೦೦-೨೩). ೧೩. ಮುದ್ದೆಮಾಡು; ಮುದುಡೆಗೊಳಿಸು : ಕುಳಿಯೊಳಿಕ್ಕುವ ಮುದುಡಿ ಮುಚ್ಚಿ ಮುಗ್ಗುವ . . . ನೆಱೆ ಸುಳಿವ ವಿಳಿತ ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೬-೨೪); ಹಾಸ್ಯಕ್ಕಾಗಿ ಬರೆದ ಲೇಖನವನ್ನು ಮುದುಡಿ ಬಿಸುಡುವೆನು (೧ಚಾಮು. ೩೪). ೧೪. ತಿರುಚು; ಮಡಿಸು; ಬಗ್ಗಿಸು : ಒಂದು ದಸಿಯಂಗಾಲ ನಟ್ಟಡೆ ನೊಂದು . . . ಹಿಂದೆಸೆಗೆ ಕಾಲ್ ಮುದುಡ ಬಾರದು ಮುಂದೆಸೆಗೆ ನೀಡಲ್ಕೆ ಬಾರದು (ಬಸವ. ೯೩-೬೪) ; ಕಯ್ದುನ್ನೊಳ ಕೊಂಡ ಆ ವೀರನ ಮುಷ್ಟಿಯನ್ನು ವಿದ್ಯುದ್ವೇಗದಿಂದ ತುಡುಕಿ . . . ಅದನ್ನಾತನ ಬೆನ್ನಿಗೆ ಮುದುಡಿ, ತೋಳ್ಮುರಿಚಿ . . . ಕೆಡಹಿ ಬಿಡುವನು (ಬರುಗಂ. ೦೩-೨೬). ೧೫. ಹಿಂದೆಗೆ; ಹಿಂಜರಿ; ಅಳುಕು : ದೇವದಾಸ ಮಾಂಸಾಹಾರಿಯಲ್ಲ. ಅದನ್ನು ನಾನು ಬಲ್ಲೆ. ಆದರೂ ಮನಸ್ಸು ಮೊದಲು ಮುದುಡಿತು (ಪಟಿಶಾ. ೩೬೬). ೧೬. ಹತೋಟಿಗೆ ತರು; ನಿಯಂತ್ರಿಸು; ನಿಗ್ರಹಿಸು : ಮಱಿಣ ಮುದುಡಿ ಆಜನಡಗಿಸಿ ಎಂಟು ಗಂಟಿಕ್ಕಿ . . . ಮುಡಿಯ ಮೇಲೆತ್ತಿದ ಮತ್ತೆ ಅವು ಹಿಂಗುವ ಠಾವಿಲ್ಲ (ಸರ್ವಪ. ೩೬-೦೬೦).

ಮುದುರು : ೪. ಮಕ್ಕಳೆಲ್ಲ ಮುದುರಿ ಕುಳಿತರು (ಪಸಿಪಾ. II, ೧೦೨೭); ಎಷ್ಟು ಹೊತ್ತು ತಾನೆ ಕಿಷ್ಕಿಂಧದಲ್ಲಿ ಮುದುರಿ ಕುಳಿತುಕೊಳ್ಳಬಲ್ಲ ? (ಹಸುತೂ. ೨೩೭). ೫. ರೇಷ್ಮೆಬಟ್ಟೆಗಳು . . . ಇವಕ್ಕೆ ಸ್ಥಿತಿಸ್ಥಾಪಕಶಕ್ತಿ ಇರುವುದರಿಂದ ಬಟ್ಟೆಗಳು ಬೇಗ ಮುದುರುವುದಿಲ್ಲ (ಗೃಶಾ. ೭೭). ೧೭. ಗಾತ್ರವನ್ನು ಕಳೆದುಕೊಳ್ಳು; ಚಿಕ್ಕದಾಗು : ಭೂಮಿಯು ಒಳಭಾಗ ಇನ್ನೂ ಆರಿದ ಮೇಲೆ ಅದರ ಗಾತ್ರ ಕಡಿಮೆಯಾಯಿತು. ಸಂಕೋಚವಾಗುತ್ತಿದ್ದ ಒಳಪದರದ ಮೇಲೆ ಘನಪದರವು ಇಳಿದು, ಮುದುರಿ ಮುದುರಿ ಪರ್ವತಶ್ರೇಣಿಗಳನ್ನುಂಟುಮಾಡಿತು (ಭೂಹುಟ್ಟು. ೯೪); ಸೂರ್ಯನು ಮುದುರುತ್ತಿರುವನೆಂಬುದು ನಿಜವಾದರೂ ೮೬,೦೦೦ ಮೈಲು ವ್ಯಾಸವುಳ್ಳ ಅವನ ಮೈಯಲ್ಲಿ ೨೫೦ ಅಡಿ ಮುದುರುವಿಕೆಯು ಎಷ್ಟು ಸ್ವಲ್ಪ ! (ಜಾಂಶ್ರ. I, ೬೩).

ಮುದುರಿಕೊಳ್ಳು, ಮುದುಡಿಕೊಳ್ಳು = ೧. ಸುರುಟಿಕೊಳ್ಳು; ಮುರುಟು : ಸೂರ್ಯಕಿರಣ ಬಿದ್ದೊಡನೆಯೇ ನೆಯ್ದಿಲು ಮುದುರಿಕೊಳ್ಳಬೇಕೆಂಬ ನಿಯಮವೂ ಇಲ್ಲ (ಹಸುತೂ. ೬೭೩); ಹೂಗಳು (ಕಮಲ, ತಾವರೆ ಇತ್ಯಾದಿ) . . . ಸಂಜೆಯಿಂದ ಮರುದಿನ ಮುಂಜಾನೆಯವರೆಗೆ ಮುದುಡಿಕೊಂಡಿರುತ್ತವೆ (ಸಸ್ಯಕ. ೧೦೪). ೨. ಅಡಗಿಕೊಳ್ಳು; ಹುದುಗಿಕೊಳ್ಳು : ಇದ್ದ ಜಾಗದಲ್ಲೇ ಎಲ್ಲರೂ ಮುದುರಿಕೊಂಡು ಮಲಗಿದರು (ಕೂಂ); ನಾನು ಕೊಂಚ ಮುದುಡಿಕೊಂಡು ಕುಳಿತುಕೊಂಡೆ (ಪಾಘೋಲೆ. ೬೮); ನಾಯಕ . . . ಅದರ ತುದಿಯಲ್ಲಿ ಮುದುಡಿಕೊಂಡು ಕುಳಿತುಕೊಳ್ಳುತ್ತಾನೆ (ಜೀಕಘೋ. ೬೪). ೩. ಒಳಕ್ಕೆ ಎಳೆದುಕೊಳ್ಳು,— ಸೆಳೆದುಕೊಳ್ಳು : ನಮ್ಮ ರೆಕ್ಕೆಗಳನ್ನು ಮುದುರಿಕೊಂಡು ಆಕಾಶದಿಂದಿಳಿದು . . . ಭೂದ್ವೀಪವನ್ನು ಮರಳಿ ಸೇರೋಣ (ಕಿನ್ನರಿಜೋ. ೭೮). ೪. ಕುಗ್ಗು; ಕುಸಿ : ಯೋಚನೆ ಮೂಡಿದಾಗ ಮೋಹಿನಿ ಒಳಗಿನಿಂದಲೇ ಮುದುಡಿಕೊಳ್ಳುತ್ತಿದ್ದಳು (ಕಮನ. ೧೦೭); ಗಿರಿಯನ ಮನಸ್ಸು ನಾಚಿಕೆಯಿಂದ ಮುದುಡಿಕೊಂಡಂತಾಯಿತು (ಕುಣ್ಣಹ. ೭೪). ೫. ಬೇರೆಯವರೊಂದಿಗೆ ಬೆರೆಯದಿರು ; ಒಂಟಿಯಾಗಿರು : ನರಹರಿಯು ಇನ್ನಷ್ಟು ಮುದುಡಿಕೊಂಡ. ಯಾರೊಡನೆಯೂ ಅವನು ಮನಸ್ಸು ಬಿಚ್ಚಿ ಮಾತಾಡುತ್ತಿರಲಿಲ್ಲ (ಕಮುಕೀ. ೪೦೩).

[ದೇ.॥ ತಮಿ. ಮುತಿರ್; ಮಲ. ಮುಕಿರು; ಕೊಡ. ಮುದ್ರ್. ತೆಲು. ಮುದುರು]

ಮುದಿರ (ನಾ). ೧. ಮೋಡ ; ಮುಗಿಲು : "ಅಭ್ರಂ, ಮೇಘಂ . . . ಮುದಿರಃ, ಜಲಮುಕ್, ಧೂಮಯೋನಿಃ—೧೫ ಮೇಘಗಳ ಹೆಸರುಗಳು" (ಅಭ್ಯಾಶಿ. ೨೮); ತುದಿಯೊಳಗೆ ಸರೆಗೊಳಿಸಿ ಸಂಕನು ಮುದಿರನಿನದದಿ ಭೋರೆನುತ ಪೂರಿಸಿದನೊಡನೊಡನೆ (ಅಚ. ೨-೭೩). ೨. ಪ್ರಣಯಿ. ೩. ವಿಷಯಲಂಪಟ. ೪. ಕಪ್ಪೆ; ಮಂಡೂಕ. [ಸಂ.]

ಮುದಿರೆ (ನಾ). ಒಂದು ಊರಿನ ಹೆಸರು : ಇದಕ್ಕೆ ಸಕ್ಷಿ ಮುದಿರೆ ಬೂವಯ್ಯ ಬೆಳ್ಳನ ಕರಕುಡಿ ಬಾರದಕೆಱೆಯಮ್ಮ (ಎಕ. IV, ಹುಣಸೂ. ೯೨-೧೨; ಸು. ೬೦೦). [ ? ]

ಮುದಿಪಾರ್ವ (ನಾ). ವಯಸ್ಸಾದ ವಿಪ್ರ ; ವೃದ್ಧಬ್ರಾಹ್ಮಣ : ಈ ಮುದಿಪಾರ್ವರಂ ಗೆಲ್ಲದಿರಲಾಗ ಮುಪ್ಪೊಟಲೊಡೆಯನಾಗಿಯುಮಲ್ತು (ಅದ್ಭುಕ. ೩೦). [ಮುದಿ + ಪಾರ್ವ]

ಮುದಿಪು (ನಾ)₁ = ಮುದಿತನ : ತನಗೆ ಮುಪ್ಪೊಟಲೊಡೆತನಮುಂ ಬರ್ಪಂತೆ ಮೇಣ್ ಮುದಿಪಱಿವುಂ ಬಾರದಂತೆ ವಿಧಿಯಂ ಒಲಿಸಿಕೊಳ್ವುದು (ಅದ್ಭುಕ. ೨೮). [ಮುದಿ + — ಪು]

ಮುದಿವೆಣ್ (ನಾ). ವಯಸ್ಸಾದ ಹೆಂಗಸು; ಮುದುಕಿ.

ಮುದಿವೆಣ್ಗಳು (ಬಹುವ) : ಬಳೆದೊಡವ ಕುಂಟಣಿಯ ಸಡೆಯಿಸುವ ಮುದಿವೆಣ್ಗಳು . . . ಬರುತಿರ್ದರು (ಶಂಕೃ. ೪೭-೯೨). [ಮುದಿ + ಪೆಣ್]

ಮುದಿವೇಶಿ, ಮುದಿವೇಸಿ (ನಾ). = ಮುದಿಪಾಱೆ : ಮಾಸಿದ ಸೀರೆ ಮಸಿಯ ತಿಲಕದ . . . ಮುದಿವೇಶಿಯರೆಡೆಯಾಡುತಿಪರು (ಕಂಪಚ ೬-೧೯೦). ಮುದಿವೇಸಿ : ನರೆದಲೆಯ ಮಸಿದೊಡೆಯ . . . ಸುಳಿವರ ಕರೆವ ಮುದಿವೇಸಿಯರ ನಗುತವನೀಶನೀಕ್ಷಿಸಿದ (ತೀಖಂತ. ೧೭-೩೯).

[ಮುದಿ + ವೇಶಿ]

ಮುದಿವೇಸಿ 'ಮುದಿವೇಶಿ' ನೋ.

ಮುದಿಷ್ಟ (ನಾ). ಒಂದು ಬಗೆಯ ಸಸ್ಯ : "ಮುದಿಷ್ಟಮೆನೆ ಕಿಱುಕುಸಾಲೆಯುಕ್ಕಂ" (ಮಂಗರಾ. ೪೨-೯೦). [ ? ]

ಮುದಿಸೂಳೆ (ನಾ). = ಮುದಿಪಾಱೆ : ತಕ್ಕೆಯೊಳ್ವರಿಸು ನಸುಸೋಂಕಿ ವಿಟರಿಂ ಪಣಂದೆಗೆಯೆಂದು ಮುದಿಸೂಳೆ ಮಗಳ್ಗುಸುರ್ದಳು (ಶಂಬಿಕಾ. ೨೩-೪೩); ಬಾಗಿಲ ಕೈಸಾಲೆಯಲ್ಲಿ ಮುದಿಸೂಳೆಯು ಯುಳಿಹುಡುಗಿಯರಿಗೆ ಬುದ್ಧಿಯಂಗಲಿಸುತ್ತ (ಶ್ರೀಗಂಧ. ೧೯೦-೨). [ಮುದಿ + ಸೂಳೆ₁]

ಮುದಿಹೋತು (ನಾ). ಮುದಿಯಾದ ಗಂಡಾಡು.

ಮುದಿಹೋತುತಲೆಯ = ವಯಸ್ಸಾದ ಹೋತದ ತಲೆಯನ್ನು ಹೊಂದಿರುವವನು; ದಕ್ಷ : ಮುದಿಹೋತುತಲೆಯಂ ದಕ್ಷನಾಗ ನಡನಡುಗುತಂ ಸಾಷ್ಟಾಂಗವೆಱಗಿ ವಂದಿಸುತೆದ್ದು ಮೃಡನ ಕೀರ್ತಿಸುತಿರ್ದನು (ಶೀಕೃಷ್ಣ. ೩-೪-೩೮). [ಮುದಿ + ಹೋತು₂ (<ಪೋಂತು)]

ಮುದು₁ (ಕ್ರಿ). ಮುತ್ತು₁ (ಭೂತಕೃ), ಮುತ್ತು₂ (ಭೂತನ್ಯೂ). ೧. ಮುದಿಯಾಗು; ವಯಸ್ಸಾಗು; ವೃದ್ಧಾಪ್ಯವನ್ನು ಹೊಂದು : "ಮುದು –ವೃದ್ಧೌ" (ಕಧಾ); ಮುಸು ಮುತ್ತುತೆ ತೆರಳ್ದ ತನ್ನ ಮೊಗಮಂ ಕಂಡಳ್ಕನೋ (ಅದಿಪು. ೨ ೪೩); ಪೆತ್ತುಂ ತೆಳ್ಪಱಿಯದ ನಡು ಮುತ್ತುಂ ಬೀಟದ ಪಯೋಧರಂ . . . ಮೆಯ್ಯೆತ್ತಿರೆ ಕರಮೊಪ್ಪಿದಪ್ಪರಲ್ಲಿಯ ಪೆಂಡಿರ್ (ಕಾವ್ಯಾಕ. ೭೪೪); ತೊಂಬತ್ತುವರುಷಂಗಳು ಸಲಲು ನೆಱೆ ಮುತ್ತುದಲ್ಲಾ ದೇಹವೆನ್ನದಹಂಗೆ ವರ್ತಿಸುತ (ಶಿಸಕೃ. ೪೪-೩). ೨. ಮಾಗು; ಬಲಿ; ಪಕ್ವವಾಗು : ಕಾರಿಕಾಲಮ್ಮೆ ಮುತ್ತ ಮಾವಿನ ಹಣ್ಣನೀಯಲು ಮತ್ತೆ ಮೆಲಿದು (ಶಸಕೃ. ೦೩-೨೩); ಮುತ್ತೊಡೆ ಮಿಡಿ ಪಣ್ಣಕ್ಕುಂ ಮುತ್ತಿನ ತಳಿರೇನುಣಲ್ಕೆ ಪಣ್ಣಾದಪುದೇ (ಶೀಶಂ. I, ೩೮). ೩. ಕುಗ್ಗು; ಕ್ಷೀಣಿಸು; ಕುಂದು : ಚಂದ್ರಿಕೆ ಕಂಡು ನಾತರ್ಪದೋ . . . ರತಿ ಮುತ್ತುದೊ ಪೊಟ್ಟನಾದುದೋ ಕಾವನ ಕೈದು (ಲೀಲಾಶ. ೨-೯೪); ಮುತ್ತುದು ನೇಸಱ ತೇಜಂ ಸುತ್ತುದು ದಾವಾಗ್ನಿ (ಕಮುತ. ೨೩೯ ಕೃಯೋ); ಕೈದು ಕಾಱರ ದಟಿಂ ತಂತಮಗೆ ದಟವುಟದಿಂ ಕುಶಲವರಿಸುಗೆಯಿಂ ಸತ್ತುಂ ಮುತ್ತುಂ ಕಟೆದಮಟೆದುಂ ಪೋಪುದುಂ (ಶಾಪುಶ್ಯ. ೦೩೮-೦೭).

ಮುತ್ತಂಚೆ = ಮುದಿಯಾದ ಹಂಸಪಕ್ಷಿ : ಕಮಳಮಧುಪಾನದಿಂ ಸೊಕ್ಕಿದ ಮುತ್ತಂಚೆಯ ಧ್ವನಿಗಳಂತೆ ಜರ್ಝರಮಾದ ಕ್ರೌಂಚೆಗಳ ಮೆಲ್ಲುಲಿಯೊಳಂ (ಕಾದಂಪೂ. ೬೬). ಮುತ್ತಕಾಯ್ = ಬಲಿತ ಕಾಯಿ : "ತಟಲ್=ಮುತ್ತ ಕಾಯ್" (ಕಮುದ. ಕಂ. ೧); "ತಟಲೆಂದು ಮುತ್ತ ಕಾಯ್" (ಕಶಾ. ೫೦-೭೯). ಮುತ್ತಜಾಣ್ಮೆ = ಪಕ್ವವಾದ ಜ್ಞಾನ,- ತಿಳಿವಳಿಕೆ : ಆಂ ಮುನ್ನಮಾಗಳಾಗಳ್ ಪೆಱದಿಸದ ಬಿಱುದ ಮುತ್ತಜಾಣ್ಮೆಯ ಬಲ್ಲಿದರ ನೆರೆಯ ಮಟೆಯ ನೆರವಂ ಪಾರುತುಮಿರ್ಪೊಡಾವಂ (ರಾಶಾಶ್ಯ. ೦೦೯-೯). ಮುತ್ತದಿನ = ಮುದಿವಯಸ್ಸು; ಇಳಿಗಾಲ; ಮುಪ್ಪು : ತುರಂಗಮಂಗಳಿರ . . . ಇನ್ನೆವರಂ ರಾಯನ ಪಯ್ತಾಲೆಯೊಳ್ ಬಳೆದು ಬಾಟ್ಟಿಮಿ ಮುತ್ತದಿನಂಗಳೊಳಿಂತೊಂದು ಯೋಗಂ ದೊರೆಕೊಂಡುದೆ ! (ರಾಶಾಶ್ಯ. ೨೯-೩). ಮುತ್ತನೇಸಱ್ = ಅಡಗುತ್ತಿರುವ ಸೂರ್ಯ; ಸಂಜೆಯ ಸೂರ್ಯ : ಬಗೆಯ ಕಾಪು ಕಡೆವಗಲ ಮುತ್ತನೇಸಱ ಕಾಯ್ಪಿಂಗೆ ಪಾಸಟಿಯಾಗೆ . . . ರಕ್ತಸಂ ಸೋಲ್ತು ಸುಣ್ಣದೊಳಾದಂ (ರಾಶಾಶ್ಯ. ೦೦೩-೨೮). ಮುತ್ತಪೊಟ್ತು = ಮುತ್ತನೇಸಱ್ : ಏನೆನ್ನ

ನುಡಿಯಂ ಕಡೆಗಣ್ಣಿ ಮುತ್ತಂ ಮುತ್ತಂ ಮುತ್ತ ಪೋಟ್ಟಿನಂತೆ ಮೈವೆರ್ಚುವೈ? (ರಾಜಶ್ಮ. ೧-೧೨). ಮುತ್ತಮುದಿ=ಬಹಳ ವಯಸ್ಸಾದ ; ತುಂಬಾ ಮುದಿಯಾದ : ಮುತ್ತ ಮುದಿಯಾಗಿರ್ದ ಧೇನುವದೆಲ್ಲಿಯೆಲ್ಲಿ (ಕೃಷ್ಣಾ.ಕೋ. ೧೬೧). ಮುತ್ತಮುದುಕಿ = ಬಹಳ ವಯಸ್ಸಾದವಳು ; ಅತಿವೃದ್ಧೆ : ನಿಟ್ಟಿಸಿದರೆ ಮುತ್ತ ಮುದುಕಿಗಾದರು ಜುಮ್ಮುದಟ್ಟಿಸುತಿಹುದು ರೂಪವನ (ಭರತ. ೧-೩೧). ಮುತ್ತಮುದುಗುಂಟಣಿ = ಬಹಳ ವಯಸ್ಸಾದ ತಲೆಹಿಡಿಕಿ: ಮುತ್ತ ಮುದುಗುಂಟಣಿಯರ್ಕಳ ಕೃತ್ರಿಮಂಗಳಂ ಭಾವಕಚಕ್ರವರ್ತಿ ಕವಿಕೇಶವದೇವನೆ ಬಲ್ಲನುರ್ವಿಯೊಳ್ (ಸೂಕ್ತಿಸು. ೬-೩೮೧). ಮುತ್ತಸಂಜೆ = ಸಂಜೆಯ ಕೊನೆ : ಇಳಿಹೊತ್ತು : ಹೊತ್ತು ಎಷ್ಟಾದರೂ ಚಿತ್ರಜನಿಘನಿಂದು ಮುತ್ತ ಸಂಜೆಗೆ ಬಹನು (ಚಂದ್ರವೀ. ೪-೦೪).

**ಮುದು₂** (ನಾ). ೧. ವಯಸ್ಸಾದ ವ್ಯಕ್ತಿ; ಮುದಿಯ : ಕುರೂಪು ಕುತ್ಸು ಮುದು ಗುಜುಗುಜುಕುಂ ಸೂರುಳಿತುಂ ದುಷ್ಪ್ರಾತುಂ ದೂಱುವುದುಂ ಮುನ್ನುಮ್ಮುಂತುಸುಡು ಭೂತುಂತುಂ (ಮುಕಕಿ. ೧೧-೫). (ಗು). ೨. ವಯಸ್ಸಾದ; ಮುದಿಯಾದ: 'ಮುದುಗರಡಿ', 'ಮುದುಗಟಿತ್ತಿ' ಪರಾ. ೩. ಜೀರ್ಣವಾದ; ಹಳೆಯದಾದ : 'ಮುದುದೊವಲ್' ಪರಾ. ೪. ದೊಡ್ಡ; ಭಾರಿಯಾದ : ಮುದುಗರ₁ ' ದುಗಾಗೆ' ಪರಾ.

[ದೇ.॥ ತಮಿ. ಮುತು, ಮೂತು; ಮಲ. ಮುತು; ತುಳು. ಮುದು; ಕೋತ. ಮುದ್]

**ಮುದುಕ** (ನಾ). ೧. ವಯಸ್ಸಾದವನು ; ವೃದ್ಧ : "ಪ್ರವಯಾಃ, ಸ್ಥವಿರಃ ... ಜರತ್ –ಈ ೬ ಮುದುಕನ ಹೆಸರು" (ನಾಚಿರಾ. ೧೧೪); ಮುದುಕರಂತೆ ಲೋಳೆಸುರಿವ ಬಾಯುಂ ಕೀವುಗಿವಿಯುವರಂತೆ ಕೀವುಸುರಿವ ಕಿವಿಯುಂ. . . ಅದ್ಭುತವಾಗೆ ಮೂಱುಂಲೋಕದ ಬೀಭತ್ಸಮನೆಲ್ಲಮನೊಂದು ಮಾಡಿ ವಿಧಾತ್ರಂ ರೂಪು ಮಾಡಿದು (ರಶರ್ವಾಕ್ಕು. ೪-೭೩); ಗಡ್ಡದ ಮುದುಕರಲುಗುವ ತಲೆಯು ಕೈಕಾಲುಗಳ ಕಂಪನದ ಬೆದಱಿನಲಿ . . . ಕಂಗೆಟ್ಟು ಹಾಯ್ದರು (ಕೊರಗಾ. ೧-೧೧-೦೨); ಕಣಿವೆಯಲ್ಲಿ ಮುದುಕರೊಬ್ಬರು ಬರುತ್ತಿದ್ದರು (ಕಳಹು. ೦). (ಗು). ೨. ವಯಸ್ಸಾದ; ಮುದಿಯಾದ: ವೃದ್ಧಾಪ್ಯವನ್ನು ಹೊಂದಿದ : ಮುದುಕ ಜಂಗಮರು ಚಟ್ಟಿಗರೋಡಿದರು ಮುಂದೆ ಪಡೆದಾವು ಬಿಂದುಳಿದವೈ (ಸಿದ್ಧೇಶ್ವ. ೦೬-೦೪); ಕಡುಮುದುಕತಾಯ್ಗಳಂದೆಗಳ ಕಾವಡಿಯೋಟ್ಟಂ ಪೊತ್ತು ತಿರುಗುತಲಿ (ಅನಂರಾ. ೨-೩-೦೦); ಅಲ್ಲೊಬ್ಬ ಮುದುಕ ಬೇಸಾಯ ಗಾರನಿರುವನಂತೆ (ಜಾಹುತ್. ೬೭).

[ಮುದು₁ + – ಕ₃./ಮಲ. ಮುತುಕ್ಕ; ತುಳು. ಮುದುಕೆ; ಕೊಡ. ಮುದೀಕೇ; ತೆಲು. ಮುದುಕ ; ಕೋತ. ಮುದ್ಕ್; ಪರ್ಜಿ. ಗದಬ. ಮುತ್ತುಕ್]

**ಮುದುಕತನ** (ನಾ). ಮುಪ್ಪು: ಮುದಿತನ; ವೃದ್ಧಾಪ್ಯ : "ವಾರ್ಧಕಂ ಅಂದರೆ ಮುದುಕತನಕ್ಕೂ ಪೆಸರಾಗುವುದು" (ಸಿದ್ಧಾಂತಿ. ೦೬೪); ಯಯಾತಿಗೆ ಮುದುಕತನ ಬಂತು (ಶೀತಂ. I. ೦೮). [ಮುದುಕ + –ತನ]

**ಮುದುಕಿ** (ನಾ). ವಯಸ್ಸಾದವಳು ; ವೃದ್ಧೆ : "ವೃದ್ಧಾ, ಪಲಿಕ್ನೀ – ಈ ೨ ಮುದುಕಿ" (ನಾಚಿರಾ. ೧೧೭); ಮದನಜನಕ ನಿಚ್ಚ ಚೆಲುವನೆಂತೆಂಬೆನೆ ಮುದುಕಿ ಕುಬುಜೆಯನ್ನು [ಪಾಠಾಂ. ಮುದದಿಂದ ಕುಬ್ಜೆಯ] ಕೂಡುವನೆ (ಪುರಂದ. ದಾ. ೩-೯೩-೫): ನಾನು ಸುಮ್ಮನೆ ದಾರಿ ಹಿಡಿದು ಹೊರಟವರಂತೆ ಮುದುಕಿಗೆ ತೋರಿಸಿಕೊಂಡೆ (ಕ್ಷಾಮಜಾ. ೦೬೧).

[ಮುದುಕ + – ಇ₂./ ಕೊಡ. ಮುದೀಕಿ]

**ಮುದುಕು** 'ಮುದುಕು₁' ನೋ.

**ಮುದುಕೊತ್ತೂರ್** (ನಾ). ಒಂದು ಊರಿನ ಹೆಸರು : ಮುದುಕೊತ್ತೂರ ವಿಷಯೇ ಪೆಬ್ಬೊಟಲ್‍ಗ್ರಾಮೇ (ಎಕ. X, ಮಾಲೂರು. ೭೩. ೦೫; ಸು. 370 ಕ್ರಿಶ).

[ ? + ಊರ್ ]

**ಮುದುಗಣ್**, ಮುದುಗಣ್ಣು (ನಾ). ೧. ವಯಸ್ಸಾದ ಕಣ್ಣು; ಎಳೆಯದಲ್ಲದ ಕಣ್ಣು; ಮುದಿಕಣ್ಣು. ೨. ಜೀರ್ಣವಾದ ಕಣ್ಣುಗಳುಳ್ಳವನು; ಮುದುಕ; ವೃದ್ಧ : ಎರಡು ಮನೆಗೆ ತಾನೆ ಮುದ[ದು]ಗಣ್ [ಪಾಠಾಂ. ಣು] ತನ್ನಿಂದಮಗ್ಗಳಂ ಪೆಱರ್ವಿರ್ತರಿಲ್ಲದಱಿನೆಮ್ಮನಟ್ಟಿದ ಮಾನಸರಂ ಮುಂದಿಟ್ಟು ರಾವಣನಂ ಕಾಣಿಸಿ ಕಾರ್ಯಸಿದ್ಧಿಯಂ ಮಾಡುಗೆ (ಕಾವುಂಶ. ೩೦೪). ಮುದುಗಣ್ಣು : ೧. ಅಗ್ರಫೇನಾಪೆತ್ರೋವ್ವಳ ಮುದುಗಣ್ಣುಗಳಲ್ಲಿ ಹೊಳವು ಮಿಂಚಿ ಮಾಯವಾಯಿತು (ಕೃಸಮ. ೦೩೪).

**ಮುದುಗಣ್ಗಳ್, ಮುದುಗಂಗಳ್** (ಬಹುವ) : ಮುದುಗಣ್ಗಳಾಗಿ ನಿಮ್ಮಂತು ಪಱಿಯ ನುಡಿವರುಮೊಳರೇ (ಅದಿಪು. ೯-೦೦೫); ಮುದುಗಣ್ಗಳುಚಿತಮುಂ ನುಡಿವುದು (ಶಾಂತಿಪು.೦೦-೧೨೦); ನೀಂ ವೀರಪಂಗ್ರಹಪರೀತನಪ್ಪೆ ಯೊಡಹಂ ಮುದುಗಂಗಳ ಮಾತಂ ಮೀಱಲಾಗದು (ಮುಹಾಪೀ. ೦೦-೦೦೦ ವ).

[ಮುದು₂ + ಕಣ್]

**ಮುದುಗಣ್ಣು** 'ಮುದುಗಣ್' ನೋ.

**ಮುದುಗಣ್ತನ** (ನಾ). ಮುಪ್ಪು; ಮುದಿತನ; ವೃದ್ಧಾಪ್ಯ : ವಿನಯದಿನಾಮಿಾ ಭುವನೈಕನಾಥನಂ ಸಲೆ ವೆರಸು ಬೇಡುತ್ತಿರೆ ಬಂದನುವಿಸುವ ನಿಮ್ಮ ಮುದುಗಣ್ತನದೊಳೀದೇನುಂತೆ ಬಟ್ಟೆವೋಪೊಡೆ ಪೋಗಿಂ (ಆದಿಪು. ೯-೦೦೬); ಒರ್ಮೊದಲೆ ಮೊಗುವ ಪಲವುಂ ತೆಱದ ಪಳಿಗಳೆಸೆ ವೃದ್ಧಾಮರಭಸದಿಂದಂ ಮಾರ್ದನಿಮಿಟ್ಟು ಮುದುಗಣ್ತನಮನುಂಟು ಮಾಡಿದಂತೆ ಶಾಂತೀಶ್ವರಂಗೆ (ಶಾಂತಿಪು. ೦೦-೩೦ ವ); ಮುದುಗಣ್ತನಂ ಶಿಶುತೆಯೇರುಂಜವ್ವನಂ . . . ಇಂತಿವೆಲ್ಲವರೊಳಂ ತಾನಿರ್ಪಂ (ಸಂಸಕ. ೪೪-೩೧). [ಮುದುಗಣ್ + –ತನ]

**ಮುದುಗರ₁** (ನಾ). ೧. ದೊಡ್ಡ ಗ್ರಹ. ೨. ಶನಿಗ್ರಹ : ಮುಸಕಿಟ್ಟೊತ್ತಗೆ ಸ್ವಾರ್ದ ವೃದ್ಧನೊಳೊಡಂಬಟ್ಟೊತ್ತೆಯಂ ಕೊಂಬ ತಾಯ್ಗೆ ಸರೋಜಾರುಣನೇತ್ರೆ. . . ಒರ್ವಳ್ ಮುದುನಾಯ ಮುತ್ತ ಮುದು ವೃದ್ಧಂಗೆನ್ನನಿಂತೋವದೊಪ್ಪಿಸಿ ಪೊಂಗಟ್ಟುವ ಚೀಲದೊಳ್ ಮುದುಗರಂ ತಂದಿಕ್ಕುವೆ ನಿಕ್ಕುವಂ (ಸೂಕ್ತಿಸು. ೮-೪೩೭); ಅವನಿಪನ ಮುಪ್ಪಿನಲಿ ಮುದುಗರವವಚಿತು (ಕೊರಗಾ. ೨-೩-೦೨).

[ಮುದು₂ + ಗರ₂./ತಮಿ. ಮುತುಮುಕನ್]

**ಮುದುಗರ₂** (ನಾ). ಗುದಿಗೆಯಂಥ ಒಂದು ಬಗೆಯ ಆಯುಧ : "ಮುದುಗರ – ಮುದ್ಗರ = ಮಾರುವ್ದದ ಗುದಿಗೆ" (ಕರ್ನಕೋ. ೩೬).

[ < ಸಂ. ಮುದ್ಗರ ]

**ಮುದುಗರಡಿ** (ನಾ). ಮುದಿಯಾದ ಕರಡಿ, – ಭಲ್ಲೂಕ : ಮುದು ಗರಡಿಯ ಮುದುದೊವಲಂದದೆ ಕರಿಯಂ (ಜುಕೋಕ. ೨-೪೦); ಅದು ಮುದುಗರಡಿಯಾಗಲಾಪುದಲಾ ಮಿಸುಕಲಾಱದೆ ಕುಳ್ಳಿರ್ದುದು (ಜಸ್ಸ. ೩೯-೬). [ಮುದು₂ + ಕರಡಿ₁]

**ಮುದುಗಲ್**, ಮುದಿಗಲ್ಲು, ಮುದುಗಲ, ಮುದ್ಗಲ್ (ನಾ). ಒಂದು ಸ್ಥಳದ ಹೆಸರು : ಶ್ರೀಕಾಲಿಕ(ಕಾ)ದೇವೀಕಮುಳೇಶ್ವರದೇವರ ದಿವ್ಯಶ್ರೀ ಪದ್ಮಪಾದಾರಾಧಕರಾದ ಮುದುಗಲ್ಲ (ಇಇ. X, ೬೨-೩; ಸು. ೮ನೆಯ ಶಕ); ಅತಿಪ್ರಸಿದ್ಧನೆನೆ ಸಂದನನಿಂದ್ಯಗುಣಾನ್ವಿತಂ ಸದಾಮರನೆನೆ ಸರ್ವಶಾಸ್ತ್ರ ಕುಶಲಂ ಮುದುಗಲ್ಲೊಳುದಾತ್ತಕೀರ್ತಿಯಿಂ (ಕೋಕಿಅಶ. ೦-೫ ಟಿ೬೪). **ಮುದಿಗಲ್ಲು** : ಬಾದಾಮಿ ಮುದಿಗಲ್ಲು ಕೊಪಣದ ತೆಱಿನ ರಾಜ್ಯವೆಲ್ಲವನು ಇಱಿದು ಕೆಡಿಸುತ ಕುಮ್ಮಟದುರ್ಗದೊತ್ತಿನ ತೆಱಿನೊಳಗೆ ಬಿಟ್ಟು ನೋಸದು (ಕುರಾಣಾಂ. ೦೯-೪೬). **ಮುದುಗಲ** : ಮಲ್ಲಿಸೆಟ್ಟಿನಾಮಾಮಾತ್ಯಃ (ತ್ಸೋ) ಮುದುಗಲಗ್ರಾಮೇ ವಸ(ಸ)ನ್ (ಇಇ. VII, ೩೦೪-೨೩; 1249).

**ಮುದ್ಗಲ್** : ರಾಯಚೂರ ಜಿಲ್ಲೆಯ ವಿಖ್ಯಾತ ಪುರಾತನ ಕೋಟೆಯಾದ ಮುದ್ಗಲ್ ಸಮೀಪದ ಓಕಳಿಹಾಳ ಎಂಬಲ್ಲಿ ಬೇರೆಬೇರೆ ಕಾಲದ ಸ್ತರಗಳು ಹೊರಟವೆ (ಕರ್ನಾಟ. ೯೯). [ ಮುದು$_1$ + ಕಲ್$_3$ ]

**ಮುದುಗಲ** 'ಮುದುಗಲ್' ನೋ.

**ಮುದುಗಲ್ಲೆ** (ನಾ). ಮುದುಕಿ ; ವೃದ್ಧೆ : ಇಂತು ಮುದುಗಲ್ಲೆ ನಿಯೋಜಿಸಿದಳ್ ತನುಜೆಯೊಳ್ (ಶಾಂತೀಶ. ೧೦-೭೬). [ ? ]

**ಮುದುಗಲ್ಲೆಗೊಂಟಣಿ** (ನಾ). = ಮುದಿಗುಂಟಣಿ : ಮುದುಗಲ್ಲೆ ಗೂಂಟಣಿ ಮಗಳ್ಗುಪದೇಶಮನಿಂತು ಮಾಡಿದಳ್ (ಶಾಂತೀಶ. ೧೦-೯೭) [ ಮುದುಗಲ್ಲೆ + ಕೊಂಟಣಿ (<ಕುಂಟಣಿ) ]

**ಮುದುಗಲ್ತಿ** ' ಮುದುಗಟ್ತಿ ' ನೋ.

**ಮುದುಗಟ್ತಿ**, ಮುದುಗಲ್ತಿ (ನಾ). ಮುದಿಯಾದ ಕತ್ತೆ; ಮುದಿಕತ್ತೆ: ಕುದುರೆಯನೋವದೆ ಸೀಲ್ಡೆತ್ತು ಮುದುಗಟ್ತಿಯನಿಟ್ಟು ಕೆಡಪಿದೈ ಬಲ್ಲಿದನೈ (ಜಗ. ೦೭-೯೩). **ಮುದುಗಲ್ತಿ** : ಮುದುಗಲ್ತಿಗಳೂ ಮೌನವಾಗಿರುವುದಿಲ್ಲ ! (ಮಂತ್ರಶ. ೦೦-೦೦). [ ಮುದು$_2$ + ಕಟ್ತಿ ]

**ಮುದುಗಾಗೆ** (ನಾ). ಒಂದು ಬಗೆಯ ದೊಡ್ಡ ಕಾಗೆ ; ಡೊಂಬಕಾಗೆ; "ದ್ರೋಣಕಾಕ" (ನಾಚಿರಾ. ೬). [ ಮುದು$_2$ + ಕಾಗೆ ]

**ಮುದುಗಿಸು** 'ಮುಡುಗಿಸು' ನೋ.

**ಮುದುಗಿಳಿ** (ನಾ). ಮುದಿಯಾದ ಗಿಣಿ : ಬಚಿಗೆಯ್ವುತಿರ್ದ ಮಾಯ್ದುಬಿಗುಲಿ ಕರ್ವೇಡನಲ್ಲಿ ಮುದುಗಿಳಿಗಳುಮಂ (ಕಾದಂಪೂ. ೦೭೮). [ ಮುದು$_2$ + ಗಿಳಿ ]

**ಮುದುಗು$_1$** 'ಮುಡುಕು$_1$' ನೋ.

**ಮುದುಗು$_2$** 'ಮುಡುಕು$_2$' ನೋ.

**ಮುದುಗುಂಟಣಿ** (ನಾ) = ಮುದಿಗುಂಟಣಿ : ಒರ್ವಳ್ ಮುದುಗುಂಟಣಿ ಪೊಱಗೆ ನಿಂದು ದೆಸೆಯುಂ ನೋಡುವಾಕೆ ಲಲಿತಾಂಗನ ಬರವಂ ದೂರದೊಳ್ ಕಂಡು (ಧರ್ಮಾಮೃ. ೨-೩೩); ಗುಣಿ ರಾಗಮಂಜರಿಗೆ . . . ನೀತಿವಂತೆ ಮುದುಗುಂಟಣಿಯಪ್ಪಳ್ ಮಾತೆವೋಲ್ ಸೃಗಾಲಿಕೆಯೆಂಬಳ್ (ರಕಕು. ೬-೨೨೦). [ ಮುದು$_2$ + ಕುಂಟಣಿ ]

**ಮುದುಗುಂದೂರ್** (ನಾ). ಒಂದು ಸ್ಥಳದ ಹೆಸರು : ಮುದುಗುನ್ದೂರ್ವೋಪವಿಷ್ಟ ರಾಷ್ಟ್ರಕೂಟಚಾಳುಕ್ಯಹೈಹಯಪ್ರಮುಖಪ್ರವೀರಸನಾಥವಲ್ಲಭಸೈನ್ಯವಿಜಯ ವಿಖ್ಯಾಪಿತಪ್ರಭವಃ (ಎಕ V (R), ಕೃಷ್ಣರಾ. ೯೯-೬೮, ೬೦೯). 'ಕುಂದೂರು' ಪರಾ. [ ? + ಊರ್ ]

**ಮುದುಗುಂಪೆ** ' ಮುದುಗುಪ್ಪೆ ' ನೋ.

**ಮುದುಗುಡ್ಡ** (ನಾ). ದೊಡ್ಡ ದಿಬ್ಬ ; ಎತ್ತರವಾದ ತೆವರು : ಆ ಊರ ಹಡುವಲು ಮುದುಗುಡ್ಡ ಅಲ್ಲಿಂ ಬಡಗಲು ಹುಣಿಸೆ (ಎಕ. V, ಬೇಲೂರು. ೦೭-೯೯ ; 1136). [ಮುದು$_2$ + ಗುಡ್ಡ$_{a1}$ ( < ಗುಡ್ಡ$_{a2}$) ]

**ಮುದುಗುದುರೆ** (ನಾ). ವಯಸ್ಸಾದ ಕುದುರೆ: ಇವರಂ ನೀತಿವಿದರಪ್ಪಂತು ತಿಳಿಪುವಂದಂ ಮುದುಗುದುರೆಯಂ ತಿರ್ದುವಂತಕ್ಕುಂ (ಕುಕಕಂ. ೦೭-೦೦); ಮುದು [ಪಾಠಾಂ. ದಿ] ಗುದುರೆ ತಿರ್ದೆ ಬಡವಾದುದು (ಕವುಕ. ೦೩-೯೦). [ಮುದು$_2$ + ಕುದುರೆ]

**ಮುದುಗುಪ್ಪೆ**, ಮುದುಗುಂಪೆ (ನಾ). ಒಂದು ಸ್ಥಳದ ಹೆಸರು : ಮುದುಗುಪ್ಪೆಯ ಮಾರಸಿಜ್ಜಗಾವುಣ್ಣರುಂ ಎಚಿಗಜ್ಜಗಾವುಣ್ಣರುಂ... ಎನೆಪ್ಪರುಂ ನರಸಾಕ್ಷಿಯಾಗೆ ಪಡೆದಾವ್ (ಎಕ. VI(R), ಶ್ರೀರಂಗ. ೭೭-೦೬; ಸು. 800). **ಮುದುಗುಂಪೆ** : ಮುದುಗುಂಪೆಯ ಇನ್ದರಗಾವುಣ್ಣರು ಶ್ರೀದಾವುಗವುಣ್ಣರುಂ . . . ವಾರದರುಂ ಎನೆಪ್ಪರುಂ ನರಸಾಕ್ಷಿ (ಎಕ. V (R), ಕೃಷ್ಣರಾ. ೦೦೫-೭೦; ಸು. 890). [ಮುದು$_2$ + ಕುಪ್ಪೆ$_1$]

**ಮುದುಗುರುಡ** (ನಾ). ವಯಸ್ಸಾದ ಕುರುಡ : ಈ ಮುದುಗುರುಡನಿಕ್ಕಿದ ನಂಬುಗೆಯ ವಿಷವ್ಯಸನೇ ತಲೆಗೇಱಿತಗ್ರಜನ (ಶಬ್ದಾಸ. ೦೫-೩೫). [ಮುದು$_2$ + ಕುರುಡ]

**ಮುದುಗೂಗೆ** (ನಾ). ೧. = ಮುದಿಗೂಬೆ ೧: ಶಿವಶಿವಾ ಮುದು [ಪಾಠಾಂ. ದಿ] ಗೂಗೆ ಪೆಚಚ್ಚದು ರವಿಪಂನು (ಶಬ್ದಾಸ. ೦೦-೩೩). ೨. = ಮುದಿಗೂಬೆ ೨ : ಮುದುಗೂಗೆಯ ಬಾಗಿಗೆ ಕೈನೆ ತಾನೆ ಪ್ಯೆಗರೆದೆನಗೊತ್ತಗೊಟ್ಟ ಸುಖ ಮಾಟ್ಕೆವೆಪಟ್ಟದನಕ್ಕ ಬಟ್ಟಪೆಂ ? (ಸೂಕ್ತಿಸು. ೬-೪೨೨). [ಮುದು$_2$ + ಗೂಗೆ]

**ಮುದುಗೆಱಿ** (ನಾ). ಒಂದು ಸ್ಥಳದ ಹೆಸರು : ಮುದುಗೆಱೆಯ ಪೂರ್ವ್ವಶೃಂಘ(ಗ)ದ ಪುಲ್ಲತ್ತಿಎ(ಯ) (ಇಇ. VIII. ೨೦೪-೩೭; 10ನೆಯ ಶಕ). [ಮುದು$_1$ + ಕೆಱಿ]

**ಮುದುಗೊಂಥಬೋಯ** (ನಾ). ಒಬ್ಬಾತನ ಹೆಸರು : ಮುದುಗೊನ್ಥಬೋಯಸ್ಯ ಭಾರದ್ವಾಜಗೋತ್ರ ದುಗ್ಗಶರ್ಮ್ಮಣ (ಇಇ. VII. ೦೮೮-೩೯; 668). [ ? + ಬೋಯ ]

**ಮುದುಡಿಸು** ' ಮುದುರಿಸು ' ನೋ.

**ಮುದುಡು$_1$** ' ಮುದಿರ್ ' ನೋ.

**ಮುದುಡು$_2$** (ನಾ). ೧. ಬಾಗು ; ಕೊಂಕು : " ಕುಂಚಾ = ಚೋಂಕು, ಮುದುಡು" (ಶಾಶಕ. ೦೦). ೨. ಸಂಕೋಚ ; ಕುಗ್ಗುವಿಕೆ: ' ಮುದುಡುಗೊಳ್ ' ಪರಾ. [ < ಮುದುಡು$_1$. / ತೆಲು. ಮುಡುತ = ಸುಕ್ಕು]

**ಮುದುಡುಗಿವಿ** (ನಾ). ಹೊರಭಾಗದಲ್ಲಿ ತಿರುಚಿಕೊಂಡಿರುವ ಕಿವಿ : ಮುದುಡು [ಪಾಠಾಂ. ರುಟು]ಗಿವಿಗಳ ಹಬಱುಕುಗಡ್ಡದ ಕಿದಱುವಿಸೆಯ . . . ಕಿಱುಕುಲರು ಬಂದರು ನೆರೆದು ಕಾಗೆಯು ಹಳವಿಗೆಯೊಳು (ಬಸವಪು. ೩೬-೯೯). [ಮುದುಡು$_1$ ( < ಮುದಿರ್) + ಕಿವಿ$_3$]

**ಮುದುಡುಗೊಳ್** (ಕ್ರಿ). ೧. ಮುರುಟಿಕೊಳ್ಳು ; ಸುರುಟಿಹೋಗು : ಪಲವು ನೆನಹನೆಲ್ಲ ಮಱೆತು ಬೆಂದ ನಾಲಗೆ ಮುದುಡುಗೊಂಡ ಬಗೆಯ ನಾನೆಂತು ಪೇಱುವೆನಮ್ಮ (ಗೀತಗೋ. ೩೦-೪). ೨. ಅಡಗಿಕೊಂಡಿರು ; ಮುದುರಿಕೊಂಡಿರು : ಬೆಚ್ಚನಾದೆದೆಯಿಂದೆ ಕಾತರಿಸಿ ಮುದುಡುಗೊಂಚೆಚ್ಚಱಿಂದೇಳ್ವ ರೋಮಾಂಚನದೊಳಾಸೆ ಮುಂಬೆಚ್ಚಿ ಬೆಮರುವ ಎಲೆಬಬೇಸಱದೆ ನಿಂದು ನಿಟ್ಟಿಸುತಿರ್ದಳು (ಕೃಪಿ:ಶಾ. ೩೦-೨೨); ಆ ದುಗುಡದಿಂದೊಂದೆಡೆಯೊಳ್ ಮುದುಡುಗೊಂಡು ಮುಸುಂಕಿ ಪಟ್ಟಿರಲ್ (ಜಲಶಿ. ೬-೦೯೩೭). [ಮುದುಡು$_2$ + ಕೊಳ್$_1$]

**ಮುದುಡೆ** (ನಾ). ೧. ಸುಕ್ಕು ; ನೆರಿಗೆ : ಇಸ್ತ್ರಿ ಮಾಡಿ ಹಾಕಿಕೊಂಡಿದ್ದ ಬಟ್ಟೆಗಳು ದೊಂಬಿಯಲ್ಲಿ ಮುದುಡೆಯಾಗಿ ಹೋಯಿತು (ರೂಶಿ). ೨. ಮುದುರಿಕೊಂಡಿರುವುದು : ಮುದ್ದೆ : ಅಲ್ಲಿ ತನು ಬಲಿಯದಿರೆ ಮುದುಡೆಯಾಗುತೆ ಬಂದು ಜೀವಂ ಬಲಿಯದಿರಲ್ಬುಸುಱಿಳಿವುತಂ ಬಂದು (ಬಿಂಕೊಳಿ. ಹ. ೫೦೦-೦೦) ; ಪಡಸಾಲೆಯಲ್ಲಿ ಮುದುಡೆಯಾಗಿ ಕುಳಿತ ತಂದೆಯನ್ನು ನೋಡಿ ಜಾನಕಿ ಗಾಬರಿಯೇ ಆದಳು (ಮುಕ್ತ್ಯರ. ೦೨); ಭಾಗೀರಥಿ ಕುಳಿತಲ್ಲಿಯೇ ಒರಗಿದಳು. ಮುದುಡೆಯಾದಳು (ಶಾಲಿ. ೦೯). [ < ಮುದುಡು$_2$]

**ಮುದುತಪಸಿ** (ನಾ). ಮುದುಕನಾದ ತಪಸ್ವಿ ; ವೃದ್ಧನಾದ ಋಷಿ : ನೀನೀ ಜಿನಮುನೀಂದ್ರರಿಗೆಲ್ಲಕೆಗ್ಗಂ ಮುನಿದು ಮಾಡಿದೆ. ಮುದುತಪಸಿಗಳ ಮಂತ್ರಯಂತ್ರಾಳಿ (ಬಸವಪು. ೫೨-೨೦). [ಮುದು$_2$ + ತವಸಿ ( < ತವಸಿ)]

**ಮುದುದೊವಲ್** (ನಾ). ಹಳತಾದ ತೊಗಲು.; ಜೀರ್ಣವಾದ ಚರ್ಮ : ಮುದುಗರಡಿಯ ಮುದು [ಪಾಠಾಂ. ಱು]ದೊವಲಂದದೆ ಕರಿಯಂ (ಜಯೋಕ. ೨-೪೦). [ಮುದು$_2$ + ತೊವಲ್$_3$ ( <ತೋಲ್$_1$)]

**ಮುದುನಾಯ್** (ನಾ). ೧. ಮುದಿಯಾದ ನಾಯಿ. ೨. ಒಂದು ಬಯ್ಗುಳು : ಮುದುನಾಯ ಮುತ್ತ ಮುದುವೃದ್ಧಂಗೆನ್ನನಿಂತೋವ

ದೊಬ್ಬಿಸಿ ಪೊಂಗಟ್ಟುವ ಚೀಲದೊಳ್ ಮುದುಗರಂ ತಂದಿಕ್ಕುವೆಂ ನಿಕ್ಕುವಂ (ಸೂಕ್ತಿಸು. ೯-೯೭೭). [ಮುದು$_1$ + ನಾಯ್]

**ಮುದುನೆಲ್ಲಿ** (ನಾ). ಒಂದು ಸ್ಥಳದ ಹೆಸರು : ಅನ್ತೆ ಬನ್ದು ನೆಲ್ಲಿಪಳ್ಳದಾ ಪೇರೊಟ್ಟಿಯೊಳಗಿರ್ಪ ಮುದುನೆಲ್ಲಿಯಿ ಅನ್ತೆ ಮೂಡನೋಡಿ ಪರಿದ ಪೇರೊಟ್ಟಿ (ಎಕ. IX (8), ಬೆಂಗಳೂ. ೦೫೦-೯೭; 828). [ಮುದು$_1$+ನೆಲ್ಲಿ]

**ಮುದುಪ** (ನಾ). ೧. ಮುದುಕ ; ವೃದ್ಧ : "ಕಿಟವನೆನೆ ಮುದುಪಂ" (ಸಂಕೀತ. ೯೬೦-೯); ಒಡಿದ ಬಿಲ್ಲೆ ದಂಟಿಂಗೆಣೆ ಮುದುಪಂಗೆ ಪಗೆವರ ನಿಟ್ಟೆಲ್ವಿಂ ಮುಜುಪೊಡನೆಗೆ ಪಟ್ಟಂಗಟ್ಟಾ (ಶಂಕರಾ. ೦೦-೦೭); ಆ ಮುದುಪಂ ಗಡ ಕೊಟ್ಟನೊತ್ತಿಯುಂ ಗರಗರನಾಯ್ತು ಬಲ್ಮೆ (ಸೂಕ್ತಿಸು. ೯-೯೨೨); ಮುದುಪಂ ಮುದವನಾಂತು ತಾನೆಡೆಮಾಡಿದ ಮನೆಗುಣಲ್ಪೋಗೆನಲ್ (ಕೃಷ್ಣಾಸ್ತ್ರ. ೩-೫೨ ಪ). (ಗು). ೨. ಮುದಿಯಾದ ; ವಯಸ್ಸಾದ : ಮುದುಪ ಬೊಜಂಗನಂ ಕಂಡ ಬೆಲೆವೆಣ್ಣಿನಂತೊಳಸಾರುತ್ತುಂ (ರಹರಾಮ. ೯-೭೭); ಪರಿಕಿಸೆ ಕಡುಮುದುಪ ತಂದೆಗೋರ್ವನೆ ಕೆಂದಂ (ಕಳಿ. ೬-೬೦). [ಮುದುಪು + -ಅ$_7$]

**ಮುದುಪತನ** (ನಾ). ಮುದಿತನ ; ವೃದ್ಧಾಪ್ಯ ; ವಾರ್ಧಕ್ಯ : 'ಮುದುಪತನಂಬೆಱು' ಪರಾ. [ಮುದುಪ + -ತನ]

**ಮುದುಪತನಂಬೆಱು** (ಕ್ರಿ). ವೃದ್ಧಾಪ್ಯವನ್ನು ಹೊಂದು; ವಯಸ್ಸಾಗು : ಮುದುಪತನಂಬೆತ್ತಾ ದೇವರಾಜನರಪತಿಗಾದರ್ ನಾಲ್ಗುವರರ್ (ಕಳಿ. ೩-೪). [ಮುದುಪತನ + ಪೆಱು$_1$]

**ಮುದುಪಾರ್ವ** (ನಾ). ಮುದುಕನಾದ ಬ್ರಾಹ್ಮಣ ; ವೃದ್ಧಬ್ರಾಹ್ಮಣ: ಕಂಡು ನಿಜಶನಯನನಳಪೆರ್ವೆಗೊಂಡಿರೆ ಮುದುಪಾರ್ವನಾಗಿ ಮೆಲ್ಲನೆ ಸಾರ್ವಾ ಖಂಡಳನಂ ಕಾಣಲೊಡಂ ಗೌಂಡಿವಿಗಿರದರ್ಚಿ ಪಾಯ್ದುವಶ್ರುಜಲಂಗಳ್ (ಶಂಕರಾ. ೬-೨). [ಮುದು$_2$ + ಪಾರ್ವ]

**ಮುದುಪಾಱಿ** (ನಾ). ವಯಸ್ಸಾದ ವೇಶ್ಯೆ ; ಮುದಿಸೂಳೆ : ನೆಜಿ ಜನಜಲದ ನಡುವೆ ವ್ಯಪನನೀಕ್ಷಿಸುವುದು ಬಾಲಕಿಯುಂದಮಿದಲ್ಲೆನುತ್ತುಂ ಮುದುಪಾಱಿವಲುಂಬಿವಳು (ಜಯುನಾ. ೦೦-೫೯). [ಮುದು$_2$+ಪಾಱಿ]

**ಮುದುಪಾಱು** (ನಾ). = ಮುದುಪಾಱಿ : ಕೊಳೆತ ಹಾಡ ಬಗುಳುತ ಗಂಡುವೆಸರು ಸುಳಿಯಲ್ಕೆ ಬಾರೆನ್ನಾಣೆಯೆಂಬ ಮುದುಪಾಱಿರ್ದ ಲೊಂದೆಸೆಯೊಳು (ಹಕಳಾ. ೯-೨೭); ಕೂರ್ತ ಮನಃಪ್ರಿಯನಂ ಬಿಡೆಂದು ನೀಸೆಲೆ ಮುದುಪಾಱು[ಪಾಠಾಂ. ದಿ ಪಾಱಿ]ದೊಲ್ತೆ ನುಡಿಯಲ್ಬಗೆದಂದುದನೆಂತು ಸೈರಿಪೆಂ (ರಾಜಶೇ. ೦೦-೦೬೩). [ಮುದು$_2$ + ಪಾಱು$_3$]

**ಮುದುಪ್ಪು** (ನಾ). ಮುಪ್ಪು ; ವೃದ್ಧಾಪ್ಯ : ಕಡುಮುದುಪಾದ ಕಾಲದೊಳು ತನ್ನನಾಗರಿಗಡಕಮನಿಪ್ಪುದುಪಲೆಯುರ (ಹರಿವಿ. ೯-೯೭); ಪುರುಷನೇ ಮುದುಪಿನೊಂದು ಪರಿಜಿಂ ಮೆಂಪ್ಗೊಂಡು ನಡೆತಂದನೋ (ರಾಮಾಶ್ವ. ೫೦-೦೯). [ಮುದು$_2$ + -ಪ್ಪು$_2$]

**ಮುದುಬಂಬೋಯ** (ನಾ). ಒಬ್ಬಾತನ ಹೆಸರು (?) : ಮುದುಬಂ ಬೋಯನ್ಸ್ಯ ಕೌಣ್ಡಿನ್ಯಗೋತ್ರ (ಇಕ. VIII, ೦೫೭-೨೫; 688).

[ ? + ಬೋಯ ]

**ಮುದುಮಂಕಡ** (ನಾ). ಮುದಿಕೋತಿ : ಕಾಡ ಮುದುಮಂಕಡನೊಂದು ಕೈಚಳಕವಂ ಪರಿಕಿಪುದೆಂದು ತನ್ನಡಿಯೊನೆರ್ದೆಯನೊದೆದಂ (ರಾಮಾಶ್ವ. ೯೯-೬). [ ಮುದು$_2$ + ಮಂಕಡ (< ಮರ್ಕಟ) ]

**ಮುದುಮೊಗ** (ನಾ). ವೃದ್ಧಾಪ್ಯದಿಂದ ಸುಕ್ಕುಗಟ್ಟಿರುವ ಮುಖ ; ಮುದಿಮುಖ : ಮುಕ್ಕುಱುಚಲ್ ಮುದ[ದು]ಮೊಗ ನೀಡುಂ ದೋಳಿಕ್ಕಲವಂ ಪೊದಮೊಯ್ಕೊಳಿಸವ ಪಲರಕ್ಕಸಿಯರ ತಂಡಂ ನಡೆತಂದುದು (ಜಯುನಾ. ೬-೨೭). [ಮುದು$_2$ + ಮೊಗ]

**ಮುದುರಿಸು**, ಮುದುಡಿಸು (ಕ್ರಿ). ಸುರುಟಿಕೊಳ್ಳುವಂತೆ ಮಾಡು ; ಮುರುಟಿಸು : ಹೂವನ್ನು ಬಿಗಿಯಾಗಿ ಹಿಡಿದು ಮುದುರಿಸಬೇಡ (ರೂಢಿ). **ಮುದುಡಿಸು** : ಮುದುಡಿಸುತ್ತುಂ ಕೈರವಮುಂ . . . ಉದಯಾಚಳ ಚೂಡದಲ್ಲಿ ಮೂಡಿದನರ್ಕಂ (ಗಿರಿಜಾ. ೩-೯) ; ವಿದ್ಯಾರ್ಥಿಗಳಲ್ಲಿ ಸುಪ್ತವಾದ ಶಕ್ತಿಯನ್ನು ಅರಳಿಸುವದೇ ಶಿಕ್ಷಕನ ಕರ್ತವ್ಯವಾಗಿರುವಾಗ ನಾನು ಆ ಶಕ್ತಿಯನ್ನು ಹೇಗೆ ಮುದುಡಿಸಲಿ ? (ರಂಗಲೇಖ. ೨೦೦).

[ಮುದುರು (< ಮುದಿರ್) + - ಇಸು$_3$]

**ಮುದುರು** 'ಮುದಿರ್' ನೋ.

**ಮುದುವಕ್ಕ** (ನಾ). ಒಂದು ಸ್ಥಳದ ಹೆಸರು : ಮಣಲಿಮುಕ್ಕಿಯುಸ್ಯ ಮುದುವಕ್ಕಗ್ರಾಮಸ್ಯ ಉಭಯತಟಯೋರ್ (ಪ್ರಮಣಿ. ೦೯೦೯. ೦೦ : 700).

[ ? ]

**ಮುದುವನ್ನಿಕೊಱಲು** (ನಾ). ಒಂದು ಸ್ಥಳದ ಹೆಸರು : ಮೂಡಣ ಕೊರ್ನೆಡ್ದು ಮುದುವನ್ನಿಕೊಱಲು ಮೂಡನ ಸೀಮೆ ಕಳ್ಳಿವೆಟ್ಟಿನ ಮೂಡಣ ಪೊರೆಯೊ ಮಱೂಱು ಬೆಟ್ಟು ಒಳಗು (ಪ್ರಮಣಿ. ೦೯೨೭, ೨೨೨-೬೨; 808). [ ? ]

**ಮುದುವರ್ದು**, ಮುದುಹದ್ದು (ನಾ). ೧. ಮುದಿಯಾದ ಹದ್ದು : ದುಶ್ಯಾಸನನಂ ಕಂಡಾತನಂ ಮುತ್ತಿ ಸುತ್ತಿಱಿದ ಮುದುವರ್ದುಗಳುವುನಗಲೆ ಮೆಟ್ಟಿ ಪೋಟ್ದು (ಶಂಕರಾ. ೦೭-೫೭ ಪ). **ಮುದುಹದ್ದು** : ೨. (ವ್ಯಂಗ್ಯಾರ್ಥದಲ್ಲಿ) ಮುದುಕ ; ಮುದಿಯ : ಮಂಚದಲೆ ಒಣಕರುಂ ನಿಡುಗಯ್ಯ ದಡಿಗರುಂ . . . ಅಂಡೆದಲೆಯುತ್ತುಸ್ಕರು ಸವೆದ ಮುದುಹದ್ದುಗಳು . . . ಸುತ್ತ ಮುತ್ತಿರಲು (ಪಾಗೀರ. ದೇ. ೨೫೯-೨೪).

[ಮುದು$_2$ + ಪರ್ದು]

**ಮುದುವುಣುಸೆ** (ನಾ). ಒಂದು ಸ್ಥಳದ ಹೆಸರು : ಆನೆಗಲ್ಲ ಕಮ್ಮಾರ್ ಕೊಟ್ಟಲೆಯ ಮುದುವುಣುಸೆ ಮಾಳ್ದಿಯುಳ್ ಕೂಡಿತ್ತು ಸೀಮೆ (ಎಕ. XVI. ಗುಬ್ಬಿ. ೭೫-೫೩; 733). [ ಮುದು$_1$ + ಪುಣುಸೆ (< ಪುಳಿಸೆ) ]

**ಮುದುವೇಡ** (ನಾ). ಮುದುಕನಾದ ಬೇಟೆಗಾರ : ಕೆಱಗೆಲ್ಲಂ ಪರೆದು ಬಿರ್ದ ಶುಕಸಂತತಿಯಂ ಗಟ್ಟಿಗಟ್ಟಿ ಕಟ್ಟಿ ನಡುಬೆನ್ನಿಱಿವಿನೆಗಂ ಪೊತ್ತು ಪೋದನಾ ಮುದುವೇ [ಪಾಠಾಂ. ಬೇ]ಡಂ (ಕಾದಂಪೂ. ೦೭).

[ಮುದು$_2$ + ಬೇಡ$_1$]

**ಮುದುವೊಳಲ್** 'ಮುದುವೊಟಲ್' ನೋ.

**ಮುದುವೊಱಸು** (ನಾ). ೧. ಮುದಿಯಾದ ಹೊರಸುಪಕ್ಷಿ. ೨. (ವ್ಯಂಗ್ಯಾರ್ಥದಲ್ಲಿ) ಮುದಿಯ ; ಮುದುಕ : ಸೀಂತುಂ ಮೊರೆದುಂ ನಿದ್ರೆಯನೆ ಕೆಡಪ ಮುದುವೊಱಸಂ ಮತ್ತಿರಡಿಲ್ಲದೊಲ್ಲಿಂ (ರಹರಾಮ. ೨-೯೫).

[ಮುದು$_2$ + ಪೊಱಸು]

**ಮುದುವೊಟಲ್**, ಮುದುವೊಳಲ್ (ನಾ). ಒಂದು ಊರಿನ ಹೆಸರು ; P ಈಗಿನ ಬಿಜಾಪುರಜಿಲ್ಲೆಯ ಮುಧೋಳ : ನೆಗಟ್ದ ಮುದುವೊಟಲೊಳೆ ಪುಟ್ಟಿ ಸುಪುತ್ರನೆನಿಸಿದಂ ಕವಿರತ್ನಂ (ಅಜಿತ, ೦೨-೯೭). **ಮುದುವೊಳಲ್** : ಮುದುವೊಳಲ ದಾರಿಯಿಂ ಬಡಗ . . . ಬಿಟ್ಟ ಮತ್ತರು (ಸೌಇಇ. XI-ii, ೦೦೯-೯೯; 948). [ಮುದು$_1$ + ಪೊಟಲ್]

**ಮುದುಹದ್ದು** 'ಮುದುವರ್ದು' ನೋ.

**ಮುದೋಡಿ** (ನಾ). ಮುಟ್ಟಿನಿಂದ ಕೂಡಿರುವ ವ್ಯಕ್ತಿ ; ಇಳಿವಯಸ್ಸಿನ ವ್ಯಕ್ತಿ : ಮುದೋಡಿಯಾದ ನಿಮ್ಮ ಅತ್ತೆಯು ಏನಾದರೂ ವಿಘ್ನವನ್ನು ತಂದಿಡಬಹುದು (ಕವಶೀ. ೦೦೯). [ ? ]

**ಮುದ್ಗ** (ನಾ). ೧. ಒಂದು ಬಗೆಯ ದ್ವಿದಳಧಾನ್ಯವನ್ನು ಬಿಡುವ ಸಸ್ಯ ಮತ್ತು ಅದರ ಕಾಳು ; ಹೆಸರುಕಾಳು : "ಮುದ್ಗಮೆನಲ್ಕೆ ಹೆಸಱು" (ಶಬ್ದಮಣಿ. ೦೦೦-೩) ; ಕುಲುತ್ಥಮುದ್ಗಮಾಷರಾಜಮಾಷ . . . ಜೀರಕಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ (ಅಧ್ಯಾಪು. ೬-೬೨ ಪ) ; ಇಂಗುಳಿಕ ದಣ್ಣೆಯಿಂ ನಯನಂಗಳ್ ಕಾಡಿಗೆಯ ತೊಡಪದಿಂ ರಂಜಿಸೆ ಸರ್ವಾಂಗಂ

ಮುದ್ಗಶ್ಯಾಮತರಂಗಿತತುಷ್ಪಂ ಸಪುಷ್ಪಾನೀ ಪರಪುಷ್ಪಂ (ಮಲ್ಲಿ. ೫-೩೭). ೨. ಮುಚ್ಚಳ ; ಹೊದಿಕೆ ; ಆಚ್ಛಾದನೆ. [ಸಂ.]

**ಮುದ್ಗಚೂರ್ಣ** (ನಾ). ಹೆಸರುಕಾಳಿನ ಹಿಟ್ಟು ; ಹೆಸರುಹಿಟ್ಟು : ಚರಣಯುಗ್ಮಂಗಳಿಗೆ ನಯಮುದ್ಗಚೂರ್ಣದಿಂದಿರದೆ ಪಾದೋದ್ವರ್ತನು ಮಾಡಿಯುಷ್ಣಾಂಬುವೆಣೆದು (ಲಕಿತಂ. ೪೪-೩). [ಸಂ.]

**ಮುದ್ಗಚ್ಛವಿ** (ನಾ). ಹೆಸರುಕಾಳಿನ ಬಣ್ಣ ; ಹಸುರು : ಅಂತು ಗೋಮೂತ್ರಚ್ಛವಿಯುಂ ಮುದ್ಗಚ್ಛವಿಯುಂ ಕಪೋತಚ್ಛಾಯೆಯುಮಪ್ಪ ಘನೋದಧಿಯುಂ (ಲೋಕ. ೧೧-೪ ವ). [ಸಂ.]

**ಮುದ್ಗಪರ್ಣಿ** (ನಾ). ಒಂದು ಬಗೆಯ ಹೆಸರುಕಾಳಿನ ಗಿಡ : "ಮುದ್ಗಪರ್ಣೀ, ಕಾಮುದ್ಗಾ, ಸಹ್ಯಾ— ೩ ಕಾಡುಹೆಸರುಕಾಳಿನ ಗಿಡ, ಅಡವೀ ಹೆಸರುಗಿಡದ ಹೆಸರು" (ನಿಘಂತ. ೦೩೭). [ಸಂ. ಮುದ್ಗಪರ್ಣೀ]

**ಮುದ್ಗರ** (ನಾ). ೧. ಒಂದು ಬಗೆಯ ಆಯುಧ : "ಮುದ್ಗರಃ, ದ್ರುಘಣಃ—ಈ ೨ ಡಂಗೆ" (ಕಠಾಯು. ೭೮-೩೨೦) ; ಮುಸುಂಡಿ ಭಿಂಡಿವಾಳ ಮುದ್ಗರ ಗದಾದಿ ವಿವಿಧಾಯುಧಂಗಳೊಳಮತಿಪ್ರವೀಣ[ನು]ಂ . . . ಅಗಿ (ಶಂಕಶಾ. ೨-೨೪ ವ) ; ಅಪ್ರಮೇಯಬಲನುದ್ಗತಮುದ್ಗರಹಸ್ತನೇಣಿ ರತ್ನಪ್ರಭಮಂ ವಿಮಾನಮನಗುರ್ವಿಸಿದಂ ನಭದೊಳ್ವಿಭೀಷಣಂ (ಕಂದಾವಾ. ೦೩-೩೦) ; ಸುರಗಿ ಚಕ್ರಂ ಮುದ್ಗರಂಗಳಾ ಸಬುದದಿಂದೊಗೆದ ಕಿಡಿ ಗಜಗಲಿಸೆ (ಹಕಳ. ೫-೦೩). ೨. ಸುತ್ತಿಗೆ : ಲೋಹಸಂಸರ್ಗದೊಳಗ್ನಿದೇವನು ಘನಮುದ್ಗರಹತಿವಡೆದಪನು (ಇಂಡಾಶ. ೨೦೯-೩೨). ೩. ಮೊಗ್ಗು ; ಮುಗುಳು. ೪. ಒಂದು ಬಗೆಯ ಮೀನು. ೫. ಒಂದು ಬಗೆಯ ಮಲ್ಲಿಗೆ. [ಸಂ.]

**ಮುದ್ಗಲ್** 'ಮುದುಗಲ್' ನೋ.

**ಮುದ್ಗಲ** (ನಾ). ೧. ಉಪನಿಷತ್ತುಗಳಲ್ಲಿ ಒಂದು : ಶ್ರೀರುದ್ರ ಬೃಹದಾರಣ್ಯಕ . . . ಮುದ್ಗಲ ಮುಂಡಕವೆಂಬಿವು ಮೊದಲಾದವೇ ಉಪನಿಷತ್ತುಗಳು (ವಿವೇಕ. ೩). ೨. ಒಬ್ಬ ಋಷಿಯ ಹೆಸರು : ಚ್ಯವನ ಮುದ್ಗಲ . . . ಮೃಕಂಡುಸುತಾದಿ ಭೂಮಿಪ್ರವರಮುನಿಗಳು ಬಂದು ಕಂಡರು ಧರ್ಮನಂದನನ (ಕುಮ್ಯಾಗ. ೦೩-೨). [ಸಂ.]

**ಮುದ್ಗಾನ್ನ** (ನಾ). ಹೆಸರುಬೇಳೆ ಮತ್ತು ಅಕ್ಕಿಯನ್ನು ಒಟ್ಟಿಗೆ ಬೇಯಿಸಿ ಮಾಡುವ ಒಂದು ಬಗೆಯ ಖಾದ್ಯ ; ಹುಗ್ಗಿ ; ಕಿಚ್ಚಡಿ : ಹರಿದ್ರಾನ್ನ ಪರಮಾನ್ನ ಮುದ್ಗಾನ್ನ . . . ಗುಡಾನ್ನವೆಂಬ ಷಡ್ವಿಧಅನ್ನಾದಿ ನೈವೇದ್ಯಂಗಳಂ . . . ಸಂಪಾದಿಸಿ (ವಿವೇಕ. ೯೫) ; ಪರಮಾನ್ನವೆಂದು . . . ವಿಮಲಮುದ್ಗಾನ್ನಮಿವು ಷಡ್ವಿಧಾನ್ನನೈವೇದ್ಯ ಶಿವಗೆ (ಗುರುಕಾ. ೬-೫೫). [ಸಂ.]

**ಮುದ್ದ**$_1$ (ನಾ). ೧. ಮುದ್ದಾಗಿರುವವನು ; ಚೆಲುವ ; ಸುಂದರ : ಕಂದ ಮುದ್ದನ ಅಚ್ಚ ನಿಡುಹಣೆಗೆ ತಾಯ್ತರಳೆ ಚಂದದಿಂ ಬೊಟ್ಟಿಟ್ಟ ಕತ್ತುರಿಗೆ ಜೋ (ಕುಷ. ೪-೦). ೨. ಇಷ್ಟನಾದವನು ; ಆಪ್ತ : ಕವಿಗಳ ಮುದ್ದನಾಶ್ರಿತರ ಮುದ್ದನನಾಥರ ಮುದ್ದನ (ಎಕ. VIII (s), ಸೊರಬ. ೫೩೬-೯೫ ; 1201). ೩. ಒಬ್ಬಾತನ ಹೆಸರು : ಈ ಕಲ್ಲ ಸಂದಿಗರ ಬಳಿ × × × ಮುದ್ದನ್ನಿಱಿಸಿದೊಂ (ಎಕ. VII, ಶಿಕಾ, ೨೦೪-೨೩;918) ; ಉಪ್ಪವಳ್ಳಿಯ ಪೋಚಿಗಾಮುಣ್ಣ ಪಳಿಯೆಱೆ ಮುದ್ದ ಮಾಗುಣ್ಡಯೆಱೆಗ (ಎಕ. XV, ಬೇಲೂರು. ೩೦೯-೦೩ : 971). [ಮುದ್ದು + — ಅ$_7$]

**ಮುದ್ದ**$_2$ 'ಮುಗುಂದ' ನೋ.

**ಮುದ್ದಂಚೆ** (ನಾ). ಚೆಲುವಾಗಿರುವ ಹಂಸ : ಚೆಲ್ವಿಂದೆ ಸಾರ್ತಂದು ಬೇಡುವ ಮುದ್ದಂಚೆಗೆ ಕೈಯ ತಾವರೆಯ ಕಾವಂ ಚೆಲ್ಲದಿಂ ನೀಡುತುಂ (ಶಬ್ದಾ. ೦೩೭). [ಮುದ್ದು + ಅಂಚೆ$_3$]

**ಮುದ್ದಂಚೆವಱಿ** (ನಾ). ಚೆಲುವಾದ ಹಂಸಪಕ್ಷಿಯ ಮರಿ : ಒಲ್ದಾಡುವ ಮುದ್ದಂಚೆವಱಿಗಳಿಂ ನಱುಗಂಪಿಂ ತೀಡುವೆಳೆಗಾಳಿಯಿಂ ಸಿರಿಗೂಡಿದ ಗೃಹದಂತಿರಿರ್ದುದಲರ್ದಂಭೋಜಂ (ರಾಜಕೇ. ೧೨-೨೩). [ಮುದ್ದಂಚೆ + ಮಱಿ]

**ಮುದ್ದಕ** (ನಾ). ಒಬ್ಬಾತನ ಹೆಸರು : ಶಕವರ್ಷಮೆಂಟುನೂಱೆಣ್ಬತ್ತಯ್ದಾದಪ್ಪು ಮುದ್ದಕನ ನಾಸಕಾ ಭೋಗಿ ಅಗ್ನಿಪ್ರವೇಶಗೆಯ್ದಂ (ಎಕ. X, ಮುಳಬಾ. ೬೬-೨; 973). [ಮುದ್ದ$_1$ + — ಕ$_3$]

**ಮುದ್ದಣ** (ನಾ). (ಕರಾ) (ಪ್ರಾಯಕ್ಕೆ ಬಂದಾಗ) ಮುಖದ ಮೇಲೆ ಏಳುವ ಗುಳ್ಳೆ ; ಮೊಡವೆ. [ ← ತುಳು. ಮುದ್ದಣ್, ಮುದ್ದನ್, ಮುದ್ದಾನ್ ]

**ಮುದ್ದತಿ** 'ಮುದ್ದತು' ನೋ.

**ಮುದ್ದತಿಠೇವು** (ನಾ). (ಬ್ಯಾಂಕು ಮುಂತಾದ ಕಡೆಗಳಲ್ಲಿ) ನಿರ್ದಿಷ್ಟ ಕಾಲಾವಧಿಯವರೆಗೆ ಇಡುವ ಇಡುಗಂಟು. — ಠೇವಣಿ : ಅವಧಿಯ ಇಡುಗಂಟಿನ (ಮುದ್ದತಿಠೇವು) ಅವಧಿ ಮುಗಿಯುವ ಪೂರ್ವದಲ್ಲಿ ಅದರ ರಕಮು ಸಿಗಲಾರದು (ಬ್ಯಾಂಕಕ್ಕೆ. ೦೦) ; ಗೌಡರ ಪೇಢಿಯಲ್ಲಿದ್ದ ಮುದ್ದತೀಠೇವಿನ ಹಣದ ಬಡ್ಡಿಯನ್ನು ಪಣಿಗೆ ಕಳಿಸುತ್ತಿರಬೇಕು (ದೀಕಪ. II. ೦೦೪). [ಮುದ್ದತಿ ( < ಮುದ್ದತು ) + ಠೇವು]

**ಮುದ್ದತಿದರ** (ನಾ). (ವ್ಯಾಪಾರದಲ್ಲಿ) ನಿರ್ದಿಷ್ಟಕಾಲಾವಧಿಗೆ ಮುಂಗಡವಾಗಿಯೇ ವಸ್ತುಗಳ ಮೇಲೆ ಹಾಕುವ ಧಾರಣೆ ; ಸಟ್ಟಾ ; ಮುಂಗಡ ಒಪ್ಪಂದದ ದರ : ಬ್ಯಾಂಕುಹುಂಡಿಯನ್ನು ಕೊಳ್ಳುವಾಗ (೧) ಸ್ಪಾಟ್ ದರ, ತಕ್ಷಣದ ಸ್ಥಳದ ದರ (Spot Rate), (೨) ಮುಂಗಡ ಒಪ್ಪಂದದ ದರ, ಮುದ್ದತಿದರ (Forward Rate), ಎಂಬ ಎರಡು ಬಗೆಯ ದರಗಳಿರುವುವು (ಹಣಕ್ರ. ೦೦೪). [ಮುದ್ದತಿ ( < ಮುದ್ದತು ) + ದರ$_3$ ]

**ಮುದ್ದತಿಪತ್ರ** (ನಾ). ವಾಯಿದೆ ದಿನದ ಪಟ್ಟಿ : ರಟ್ಟಿನ ಒಳಮುಗ್ಗಲು ಪಾಕೀಟನ್ನೂ (Book packet) ಅದರ ಎದುರಿನ ಕಾಗದದ ಮೇಲೆ ಮುದ್ದತಿಪತ್ರವನ್ನೂ (Due date label) ಹಚ್ಚುವರು (ಗ್ರ. ೦ಶಾ. ೦೫). [ಮುದ್ದತಿ (< ಮುದ್ದತು) + ಪತ್ರ]

**ಮುದ್ದತಿಹುಂಡಿ** (ನಾ). ನಿರ್ದಿಷ್ಟಕಾಲಾವಧಿಗೆ ಮೊದಲೇ ನೀಡುವ ಚೆಕ್ಕು. — ಹುಂಡಿ : ಅವರು ನಡೆಸುವ ಹುಂಡಿಗಳ ವ್ಯಾಪಾರದಲ್ಲಿ — ಕೆಲವು ನಗದುಹುಂಡಿಗಳೂ ಇರಬಹುದು, ಇನ್ನು ಕೆಲವು ಮುದ್ದತಿ ಹುಂಡಿಗಳೂ ಇರಬಹುದು (ಅಾಂಶ್ರ. III, ೦೫೫೯). [ಮುದ್ದತಿ ( < ಮುದ್ದತು ) + ಹುಂಡಿ$_1$]

**ಮುದ್ದತು, ಮುದತಿ, ಮುದತ್ತು, ಮುದ್ದತಿ, ಮುದ್ದತ್ತು** (ನಾ). ೧. ಒಂದು ನಿರ್ದಿಷ್ಟ ಕಾಲಾವಧಿ ; ಗಡುವು ; ವಾಯಿದೆ : ಜೀತದ ಮುದ್ದತಿನೊಳಗೆ ಸಾಲ ಕೊಟ್ಟವನು ತೀರಿದರೆ ಅವನ ವಾರಸುದಾರರು ದುಡಿಸಿಕೊಳ್ಳುವರು (ಕಭಾಗ. ೨೪೭) ; ಮೂರು ತಿಂಗಳ ಮುದ್ದತಾದರೂ ಕೊಡಿರಿ (ಸವುಜ. ೩೫). **ಮುದತಿ** : ೧. ಮುದತಿ (ವಾಯಿದೆ)ಯಿಂದ ನೀಲಿಯ ಡಿಕ್ರಿಯ ಬಗ್ಗೆ ಜಮಾ ಮಾಡಲ್ಪಟ್ಟ ರಕಮಿಗೆ . . . ನೂರಕ್ಕೆ ಒಂದು ರೂಪಾಯಿ ಒಟ್ಟು ಬೀಳುವದು (ಮುಂಬವ್ಯಾ. ೦೦೦). **ಮುದತ್ತು** : ೨. ಯಾವುದಾದರೊಂದು ವಿಷಯವನ್ನು ಮುಂದಕ್ಕೆ ಹಾಕುವುದು; ಮುಂದೂಡುವುದು : ನನ್ನ ಬಿಟ್ಟೀದ ಕೆಲಸ ಬರೀ ಮುದತ್ತು ಹಾಕುತಾ ಇದಾರ (ಕೋಕಾ. ೦೨೨). **ಮುದ್ದತಿ** : ೧. ಮುದ್ದತಿಯೊಂದ ಕೊಟ್ಟ ನೀಲಿಯ ಮಾರಾಟದ ರಕಮು ಜಮೆ ಆಗುವದು (ಮುಂಬವ್ಯಾ. ೩೨ ಶ್ರಸ್ತಾವನೆ); ಆ ಮಾಲಿನ ಪೂರ್ಣ ಕಿಮ್ಮತು ಮುದ್ದತಿಯ ಒಳಗೆ ಆಸಾಮಿಯವರು ನಮ್ಮ ಕಡೆಗೆ ಕಳುಹಿಸಬೇಕು (ಮುಂಬವ್ಯಾ. ೨೬೪). **ಮುದ್ದತ್ತು** : ೧. ಎಷ್ಟೋ

ಕತಿಬಿಗಳ ಮುದ್ದತ್ತು ವಿಚಾರಿ ಗುಟು ಬಾರದಂತಾಯಿತು (ಗುರುಕೃ. ೭). ೨. ಖಟ್ಲೆಯ 'ಮುದ್ದತ್ತು' ಮುಂದೆ ಬೀಳುತ್ತ ನಡೆದಿತ್ತು (ಶಾಕರ. ೨೦೮).

**ಮುದ್ದತ್ತಿನ ಜ್ವರ** = ನಿಯಮಿತ ದಿನಗಳವರೆಗೆ ಇರುವ ಜ್ವರ ; ಕಟ್ಟಿನ ಜ್ವರ ; ವಾಯಿದೆಜ್ವರ : ದುರ್ದೈವದಿಂದ ತಾಯಿಯು ಮುದ್ದತ್ತಿನ ಜ್ವರದಿಂದ ಹಾಸಿಗೆ ಹಿಡಿದಳು (ಪುಣ್ಯಕೋ. ೬೮).

[ ← ಅರ. ಹಿಂ. ಮುದ್ದತ್ ; ಮರಾ. ಮುದ್ದತ್, ಮುದತ್ ]

**ಮುದ್ದತ್ತು** 'ಮುದ್ದತು' ನೋ.

**ಮುದ್ದಮೂಬೋಯ** (ನಾ). ಒಬ್ಬಾತನ ಹೆಸರು : ಮುದ್ದಮೂರ್ ಬೋಯಸ್ಯ . . . ರೇವಶರ್ಮ್ಮಣ (ಇ. VII, ೧೬೮-೯೦ : 668).

[ ? + ಬೋಯ ]

**ಮುದ್ದಯ** 'ಮುದ್ದಯ್ಯ' ನೋ.

**ಮುದ್ದಯ್ಯ, ಮುದ್ದಯ, ಮುದ್ದೆಯ್ಯ** (ನಾ). ಒಬ್ಬಾತನ ಹೆಸರು : ರಾಚಾಲ ಪೊಂಪಲ ಚಲ್ಪನತ್ತಪ್ಪ ಮುದ್ದಯ್ಯನುಮೇಜಿಯಪ್ಪನೆಸುವ ರಾದಿತ್ಯಂ ತುಱುವಸಿಕ್ಕಿಸಿ ಸತ್ತೊಂಗೆ ದಿಲೀಪಯ್ಯ × × × (ಎಕ. X. ತಂಕಾಮು. ೧೯೩-೦೦ ; 956 ?) ; ಮುದ್ದಯ್ಯ ಭಾಪಿದುನ ಗಳಿಸಿದಂ (ಎಕ. VIII. ಸೊರಬ. ೯೬೦-೦೬ ; 1012). **ಮುದ್ದಯ** : ಕುನ್ದತೂರಬೀವಿನೊಳ್ × × × ಸಳಗ ತಿರಮಣ್ಣಗವುಣ್ಡರ ಮುದ್ದಯಂ ಕಾದಿ ಸ್ವರ್ಗಸ್ಥನಾದ (ಎಕ. X. ಮುಳಬಾ. ೨೬೭-೭ : ಸು. 900?). **ಮುದ್ದೆಯ್ಯ** : ಮುದ್ದೆಯ್ಯ ತೆಱುಗೊಳೊಳ್ ಮುಕ್ತಿಗೆ ಸನ್ದ (ಎಕ. XII. ಹೊಳಲ್ಕೆ. ೮೯-೫ ; ಸು. 965) ; ನಾಗಮಯ್ಯನ ಮಕ್ಕಳು ಬಿದಿವಾರಯ್ಯ ನುಂ ಮುದ್ದೆಯ್ಯನುಂ ಬಿಟ್ಟರ್ (ಎಕ. III (R). ಪಂಶಪ. ೨೫೩-೦೦ ; ಸು. 10ನೆಯ ಶತ). [ ಮುದ್ದು + ಅಯ್ಯ$_1$ ]

**ಮುದ್ದಲು** 'ಮೊದಲ್$_1$' ನೋ.

**ಮುದ್ದಾ** 'ಮುದ್ದೆ$_2$' ನೋ.

**ಮುದ್ದಾಂ** 'ಮುದ್ದಾಮು' ನೋ.

**ಮುದ್ದಾಟ** (ನಾ). ೧. ಮುದ್ದು ಮಾಡುವಿಕೆ ; ಲಲ್ಲೆ ; ಲಾಲನೆ : ಬೇಟಕ್ಕೆ ತವದ ಕೂಟಂ ಕೂಟಕ್ಕೆ ತನೂಜರಾ ತನೂಜರೊಳಂ ಮುದ್ದಾಟಂ ಫಲಮದೆ ತಮ್ಮೊಳ್ ನಾಟದು ಗಡ ಪೆಜವು ಸುಖಿಲವಂಗಳೊಳೇನೋ (ಸಂಧ್ಯಾಶ. ೩-೯೨). ೨. ಚೆಲುವಾದ ಆಟ ; ಮನಸೆಳೆಯುವ ಕ್ರೀಡೆ : ಕಿಸುರಿಲ್ಲದ ಮುದ್ದಾಟಂ ಮುಳಿಸಿಲ್ಲದ ಕಾಟಂ ಬಾಲಭಾವಮಚ್ಚರಿ ಜನನ (ಅಸಂಕ. ೬-೮) ; ಸಾವು ಸುಳಿಯಲು ಬಾಳಿ ತಿಳಲು ಎನೆ ಸವಿಗೂಡಿ ಮುದ್ದಾಟವೆನೆ ಬಂತು ಕಾಳಿದಾಸನ ಸುಗ್ಗಿ (ಮುಕ್ತಕಂ. ೩೨-೦೯).

[ಮುದ್ದು + ಆಟ]

**ಮುದ್ದಾಡಿಸು** (ಕ್ರಿ). ೧. ಲಲ್ಲೆಗರೆ ; ಲಾಲಿಸು ; ಮುದ್ದಿಸು : ಕೂಸು ಗಳಂ ಮುದ್ದಾಡಿಸಿ ದೇಸಿಯ ಮಾತುಗಳನಾಡಿ ಪೆರ್ಚಿಸಿ ಪೆಱರಂ ಲೇಸಾಗಿ ತನಗೆ ಚೊತ್ತಿಸುವಾಶಾಪರನೈದಲಾಱನುರುನಿರ್ವೃತಿಯಂ (ರಸರ್ಕಾಪು. ೩-೯೦) : ಒಡಿದು ಚುಂಬುಕಾಗ್ರಮಂ ನಲವೊಡರಿಸೆ ಮುದ್ದಾಡಿಸುತ್ತು ವಿರ್ದರ್ ಸುತನಂ (ಸಂಸ್ಕ್ರಶ. ೬-೯೭) ; ನವಿಲಂ ಮುದ್ದಾಡಿಸಿ . . . ಜೀವಿಸಾಚಂದ್ರಾರ್ಕಂ ಎಂದು ಪರಸುವುದುಂ (ಮಹಾಸೀ. ೫-೫೫ ವ). ೨. ಪರಸ್ಪರ ಮುದ್ದಾಡುವಂತೆ ಮಾಡು : ನೀರ ಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸು ತ್ತಿರ್ದನಯ್ಯ (ಚೂಷ್ಯಸಂ. ೨೬-೦೫). [ಮುದ್ದಾಡು + -- ಇಸು$_3$]

**ಮುದ್ದಾಡು** (ಕ್ರಿ). ೧. ಪ್ರೀತಿಸು; ಲಾಲಿಸು; ಮುದ್ದಿಸು : ಪರಿದಾಡುವ ಮಗನಂ ಮುದ್ದಾಡುವಂತೆ . . . ಕೊಲ್ಲದ ವ್ರತಮಂ ಕೈಕೊಂಡು (ರಸರ್ಕಾಪು. ೦೦-೬) : ಕಕ್ಕಯ್ಯ ಹಿರಿಯಯ್ಯ ಚಿಕ್ಕಯ್ಯ ಚೆನ್ನಯ್ಯ ಎತ್ತಿ ಮುದ್ದಾಡಿ ಸಲಹಿದರೆನ್ನ (ಬಸವ. ೩೩೨) : ಕಣ್ಣೊಳು ಮುದ್ದಾಡಿ ಮನದ ಮಗ್ಗುಲೊಳಿರಿಸಿ ಚಿತ್ತದೊಳಚ್ಚೊತ್ತಿ (ಸಂಬರ. ೨-೭೦). ೨. ಚುಂಬಿಸು; ಮುತ್ತುಕೊಡು : ಪೂವಲಿಯೊಳ್ ಮುದ್ದಾಡೆ ತುಂಬಿಗಳ್ಮಿಗಲುದ್ದಂ ಪರಿದತ್ತು ಹರ್ಷರಸಮಾ ಪುರದೊಳ್ (ಸಂಗಾಪು. ೯-೨೮) ; ಮುದ್ದಾಡು ವಳು ಮುಸುಡೊಗ್ಗಿ ಮುದ್ದಂ ಬೇಡುವಳು (ಬಸಪು. ೦೫-೦೯) ; ಎಂದಪ್ಪಿ ಕೊಂಬೆ ರಂಗಯ್ಯನ . . . ನಾನೆಂದು ಮುದ್ದಾಡುವೆ (ಪುರಂದ. ೨-೬೬ ಅನುಕಲ್ಪ). [ಮುದ್ದು + ಆಡು$_1$]

**ಮುದ್ದಾವ್** 'ಮುದ್ದಾಮು' ನೋ.

**ಮುದ್ದಾಮ** 'ಮುದ್ದಾಮು' ನೋ.

**ಮುದ್ದಾಮು, ಮುದ್ದಾಂ, ಮುದ್ದಾವ್, ಮುದ್ದಾಮ** (ಅ). ೧. ಉದ್ದೇಶಪೂರ್ವಕವಾಗಿ ; ಉದ್ದೇಶದಿಂದ ಕೂಡಿ : "ನಿನ್ನ ಕತೆಯಲ್ಲಿ ಉಪ್ಪು - ಖಾರ ಇಲ್ಲವೇನು ?" "ಇರಬಹುದು ; ಆದರೆ ನಾನು ಮುದ್ದಾಮಾಗಿ ಏನೂ ಹಾಕಿಲ್ಲ" (ಮುಕ್ತ. ೯೩). ೨. ಖುದ್ದಾಗಿ ; ಸ್ವತಃ : ಅದರ ಸಲುವಾಗಿ ಮುದ್ದಾಮು ತಿಳಿಸುತ್ತೇವಲ್ಲಾ (ಮುಂಬಯಾ. ೨೦೫); ಅವರು ವೆಂಕಟರಾಮುನನ್ನು ಮುದ್ದಾಮು ಹುಡುಕಿ, ಕಂಡು, ಹಸ್ತಲಾಘವ ಮಾಡಿ ಅವನ ಹಸ್ತದಲ್ಲೇ — ಒಂದು ಲಕೋಟೆಯನ್ನು ಬಿಟ್ಟು ಹೋದರು (ಅಳಿ. ೯). **ಮುದ್ದಾಂ** : ೧. ನಾನು ಮುದ್ದಾಂ ಬಡವರ ಸಲುವಾಗಿ ಅಂತ ಎರಡ ರೂಪಾಯಿ ಕಡಿಮೆ ಮಾಡೀನಿ (ನಡುಮು. ೨೭). ೨. ಮುದ್ದಾಂ ಸುಬ್ಬಕ್ಕನವರು ಆಡಿದ ಈ ಮಾತನ್ನು ಗೋವಿಂದರಾಯರ ಎದುರಿಗೆ ಹೇಳಿದನು (ಇತಿಶ್ರೀ. ೧೮೯) ; ನೋಟೀಸನ್ನು ಮುದ್ದಾಂ ಕಳುಹಿಸಿದ ಕಾಲ ದಲ್ಲಿ ತಲಪಿದ್ದಕ್ಕೆ ಒಂದು ಅಕನಾಲೆಡ್ಜ್ ರಶೀದಿಯನ್ನು ಪಡೆಯಬೇಕು (ಗ್ರಾಮಶಾ. ೬೦). ೩. ಖಂಡಿತವಾಗಿ; ನಿಖರವಾಗಿ : ಆತನಿಗೆ ಸಾಸುವೆ ಯಷ್ಟೂ ಸಂಶಯ ಬಾರದೆ 'ಮುದ್ದಾಂ' ಮಾತನಾಡಿದೆ (ಕೋಕೂ. ೨೯). **ಮುದ್ದಾವ್** : ೨. ನಾನೇ ಮುದ್ದಾವ್ ನಿಮ್ಮಲ್ಲಿಗೆ ಬಂದು ವಿಷಯ ಹೇಳುತ್ತೇನೆ (ಕೂಶಿ). **ಮುದ್ದಾಮ** : ೧. ನದೀತೀರದ ಊರಿನ ಮಿತ್ರ ರೊಬ್ಬರು ಮುದ್ದಾಮ ಅಲ್ಲಿಗೆ ಕರೆದೊಯ್ದು ಹೊಳೆಯ ದಂಡೆಯ ಮೇಲೆ ಸೊಗಸಾದ ಔತಣ ಕೊಟ್ಟರು (ಅಬ್ಬಿ. ೬೩). ೨. ಹೀಗೆ ಆಗಬಾರದೆಂಬು ದರ ಸಲುವಾಗಿ ಮುದ್ದಾಮ ಸೂಚನೆ ಮಾಡೋಣದರಲ್ಲಿ ಬರುತ್ತದಲ್ಲಾ (ಮುಂಬಯಾ. ೯೯). [← ಅರ. ಹಿಂ. ಮುದಾವಮ್; ಮರಾ. ಮುದ್ದಾಮ್]

**ಮುದ್ದಾಯಿ, ಮುದ್ದೈ** (ನಾ). ದಾವಾ ಹಾಕುವ ವ್ಯಕ್ತಿ; ಫಿರ್ಯಾದಿ : ಸಾಹೇಬರಿಗೆ ಏಳಿ ಸಿಕ್ಕಿತು . . . ಮುದ್ದಾಯಿಯ ಕಡೆ ತಿರುಗಿದರು (ದಾಸಳೂ. ೯). **ಮುದ್ದೈ** : ಅವಳು ಮುದ್ದೈಯಾಗಿ . . . ಮೆಜಿಸ್ಟ್ರೇಟರ ಮುಂದೆ ಬಂದವಳಲ್ಲ (ಹಹಸ. ೫೦). [← ಅರ. ಮುದ್ದಈ ; ಹಿಂ. ಮುದ್ದಈ, ಮುದ್ದಇಯಾ ; ಮರಾ. ಮುದಾಈ]

**ಮುದ್ದಿಕೆ** 'ಮುದ್ದಿಗೆ$_1$' ನೋ.

**ಮುದ್ದಿಕ್ಕು, ಮುತ್ತಿಕ್ಕು** (ಕ್ರಿ). ೧. ಚುಂಬಿಸು ; ಮುತ್ತುಕೊಡು : ಅರವಿಂದಾನನೆ ಕೇಳು ಅರಮೊರೆಯಿಲ್ಲದೆ ಅಜಿಯದಂದದಿ ಬಂದು ಅಧರ ಮುದ್ದಿಕ್ಕಿದ (ಪುರಂದ. ೦-೨೦೮-೦) ; ಅಕಸ್ಮಾತ್ ಮುದ್ದಿಕ್ಕುವ ಪ್ರಸಂಗ ಬಂದಿದ್ದರೆ ಕುದುರೆಗಳಾದರೂ ಸರಿಯಬೇಕಿತ್ತು (ಬಂಗಾರ. ೫). ೨. ಸೋಂಕು; ಮುಟ್ಟು; ಸ್ಪರ್ಶಿಸು : ಕಾಡಿನ ಹೆಮ್ಮರಗಳು ಆಕಾಶವನ್ನು ಮುದ್ದಿಕ್ಕುತ್ತಿದ್ದುವು (ಕೂಶಿ). **ಮುತ್ತಿಕ್ಕು** : ೧. ಅವಳು ಪ್ರೀತಿಯಿಂದ ಮಗುವಿಗೆ ಮುತ್ತಿಕ್ಕಿದಳು (ಕೂಶಿ). [ಮುದ್ದು + ಇಕ್ಕು]

**ಮುದ್ದಿಗ** (ನಾ). ಪ್ರೀತಿಗೆ ಪಾತ್ರನಾದವನು : ಹೊದ್ದಲೀಯದೆ ಮಾಯೆಯಂ ನೆಱೆಗೆದ್ದ ಶರಣರು ನೋಡಿ ಲಾಲಿಪ ಮುದ್ದಿಗಂ ಬಂದಂ (ಬಸಪು. ೨೯-೭). [ಮುದ್ದು + — ಇಗ]

**ಮುದ್ದಿಗೆ$_1$, ಮಿದ್ದಿಗೆ, ಮುದ್ದಿಕೆ** (ನಾ). ದ್ರಾಕ್ಷಿಯ ಬಳ್ಳಿ ಮತ್ತು ಅದರ ಹಣ್ಣಿನ ಗೊಂಚಲು ; ಮೃದ್ವೀಕಾ – ಮುದ್ದಿಗೆ (ಕಮಂದ. ೨೬೮ ಕ್ರಿಯೆ) :

ಎಲೆಗೊಂದು ಪಣ್ಗೊನೆಯುನಾಂತಿರ್ಪ ಮುದ್ದಿಗೆಯಿಂ .... ಆ ವನಂ ಮೆರೆದುದು (ಶಾಂತಿ. ೭-೧೦೦) ; ಅಲ್ಲಿಗಲ್ಲಿಗೆ ಪಣ್ತು ತೊಂಗಲಿಂಬಿಡಿದ ಮುದ್ದಿಗೆಯು ಕಾವಣಮುಂ . . . ಕಾಡುಮಲ್ಲಿಗೆಯ ಬಳ್ಳಿವಾಡಮುಂ ರಾಜಿಸೆ (ರಾಜಶೇ. ೬೦-೧೭). ಮಿದ್ದಿಗೆ : ಮೃದ್ವೀಕಾ., ಮಿದ್ದಿಗೆ (ಶಬ್ದಾ.ಸು. ೧೬೦ ಪ್ರಯೋ). ಮುದ್ದಿಕೆ : "ಮುದ್ದಿಗೆ (ಕೆ)-ಮೃದ್ವೀಕಾ" (ಕರ್ನಾ.ಶಬ್ದ. ೩೬). [< ಸಂ. ಮೃದ್ವೀಕಾ]

**ಮುದ್ದಿಗೆ₂** (ನಾ). ಮೊಹರು; ಮುದ್ರಿಕೆ: ಮುದ್ರಿಕಾ – ಮುದ್ದಿಗೆ (ಶಬ್ದಮ. ೨೫೦ ಪ್ರಯೋ); ಮುದ್ರಿಕೆ, ಮುದ್ದಿಗೆ (ಶಬ್ದಾ.ಸು. ೦೫೪ ಪ್ರಯೋ). [< ಸಂ. ಮುದ್ರಿಕಾ]

**ಮುದ್ದಿಡು, ಮುತ್ತಿಡು** (ಕ್ರಿ). ಚುಂಬಿಸು; ಮುತ್ತುಕೊಡು : ಗೋಪಿಯ ಭಾಗ್ಯವಿದು ಆ ಪರಮಾತ್ಮನ ಅಪ್ಪಿ ಮುದ್ದಿಡುವುದು (ಪುರಂದ. ದಾ. ೪-೨ ಕಲ್ಯಾ); 'ತಪ್ಪದಲೆ ಶಿವನ ಮುದ್ದಿಟ್ಟು', 'ಕಪ್ಪುಕಾಡಿಗೆ ಮಾಡಿ ಅಪ್ಪಿ ಮಗುವಿಗೆ ಹಚ್ಚಿ' ಮೊದಲಾದ ನುಡಿಗಳು ತಾಯ್ತನದ ಬೆಳ್ನುಡಿಗಳಲ್ಲವೇ ? (ಜನಪದ. ೦೬೭); ಮನೆಯ ದೀಪವೆಂದು ಮುದ್ದಿಟ್ಟರೆ ಗಡ್ಡ ಮೀಸೆ ಸುಟ್ಟಿತು (ಗಾದೆ). ಮುತ್ತಿಡು : ನುಣ್ಗಲ್ಲಮಂ ಬಿಡದಾಘ್ರಾಣಿಸಿ ಸೋಗೆ ಗಣ್ಗೊನೆಗಳಂ ಮುತ್ತಿಟ್ಟು . . . ಪೇರಬ್ಬಿಯಿಂ ತೊಡರ್ದಲ್ಲಾ ಬೆಲೆವೆಣ್ಗಳಂ ನಲಿಯಿಸುಂ ತಣ್ಗಾಳಿಯೇಂ ನೋಂತುದೋ (ಶಶಿ. ೬-೩೭). [ಮುದ್ದು + ಇಡು₁]

**ಮುದ್ದಿಮಯ್ಯ** (ನಾ). ಒಬ್ಬಾತನ ಹೆಸರು ; ಮುದ್ದಿಮಯ್ಯಂಗೆ ಪರಕಯ್ಯಂ ಪನ್ನಿರ್ವರ ಅರಸಿನ ಸಾಧಿಷ್ಟಿತದೊಳ್ ಕಾಲುನ್ ಕಟ್ಟಿ ಕೊಟ್ಟ ಭೂಮಿ (ಎಕ. XI. ಚಾಮ. ೦೭-೧೦; ೪೪೨). [< ಮುದ್ದು + ಅಯ್ಯ₆₁]

**ಮುದ್ದಿಸು** (ಕ್ರಿ). ೧. ಪ್ರೀತಿಮಾಡು; ಲಲ್ಲೆಗರೆ : ಮೋಹಿಸಿ ಮುದ್ದಿಸಿ ಮರುಳಾದೆನವ್ವ (ಬಸವಾದಿ. ೭. ೯೪-೯೯) ; ಮುನಿಯುತ್ತುಂ ಮುದ್ದಿಸುತ್ತುಂ ತೊನೆದು ತವಕಿಸುತ್ತುರ್ವುತುಂ ಗರ್ವಿಸುತ್ತುಂ (ರಸ್ಯಾ.ಕ. ೩೭) ; ಪರಿಪರಿಯೊಳಿಂತಾ ಕುಮಾರನಂ ಮುದ್ದಿಸುತ್ತಿರೆ ಹರ ಹರಾ ಪುತ್ರಮೋಹ ವಿನ್ನೆಂತಟೋ (ಬೆಂಕಿ. ೩-೨೭). ೨. ಚುಂಬಿಸು : ಅಪ್ಪ ದೇವರ ಮೇಲೆನುತ ಬಿಗಿಯಪ್ಪುವಂ ಮುದ್ದಿಸುವಂ . . . ಕಣ್ಣಪ್ಪದೇವನು (ಐತಿಸ್ಯ. ೦೬-೩೩) ; ನೇಹಮುರ್ವಿ ಮೊಗದಲ್ಲಿ ಮೊಗವಿಟ್ಟು ಮುಂಡಾಡಿ ಮುದ್ದಿಸುತೆ (ಕರ್ನಾ. ೬-೫೦) ; ಭರದಿಂದೆ ಬಂದಪ್ಪಿದಂಗನೆಯ . . . ಮುದ್ದಿಸಿ ತನ್ನ ಬೆರಳುಂಗುರಂಗೊಟ್ಟು ಸಂತೈಸಿ ವೃಷಕೇತು ಕಾಂತೆಯಂ ಬೀಳ್ಕೊಂಡನು (ಜೈಮಿನಿ. ೯-೧೨). ೩. ಪ್ರೀತಿಯಿಂದ ತಡವು,— ನೇವರಿಸು : ಕೋಣನ ಬೇಂಟೆಯಾಡಿ ಕಡು ನೊಂದು ವಿಜೃಂಭಿಪ ತಮ್ಮ ನಲ್ಲರಂ ಕಾಣುತೆ ಬಂದು ಮುದ್ದಿಸಿ ವಿಷಾಣ ವಿಘಾತದಿನಾದ ಗಾಯಮಂ ಮಾಣದೆ ಹಸ್ತಪಲ್ಲವದೆ ಮುಟ್ಟಿ ನಿರೀಕ್ಷಿಸುತೊಪ್ಪಿದ ಸ್ವಮಂತ್ರೇಣಕಿಶೋರನೇತ್ರಿಯರ್ (ಅದ್ಭುತ. ೨-೮೭) ; ಬಿರಿವೂಗಳು ಚುಂಬಿಸುತ, ಪರ್ಣಮಂ ಮುದ್ದಿಸುತೆ . . . ಶೀಡುತ್ತೈತಂದ ತಂಗಾಳಿಯಂ ಸಖಿಯೆಂದು ಕ್ರೀಡಿಸುತೆ (ಕಿನ್ನಾಂಗ. ೬೨-೧೭೦೦) ; ಆರಾಧ್ಯರು ನನ್ನನ್ನು ಮುದ್ದಿಸಿ ಹರಸಿದರು (ತಂಗಾಳ್. ೫೦). [ಮುದ್ದು + — ಇಸು₁]

**ಮುದ್ದು, ಮುತ್ತು₃** (ನಾ). ೧. ಅಕ್ಕರೆ; ಒಲವು; ಪ್ರೀತಿ : "ಅಜುಮೆಯು ತಾಂ ಲಲ್ಲೆಯೆನ್ನಲಿವು ಮುದ್ದೆನಿಕ್ಕುಂ" (ಕವಿಕಂ. ೦೬೦) ; ಆಕೆಯ ಮಾತಾಕೆಯ ಮುದ್ದಾಕೆಯಂದವಾಕೆಯ ತನುಸೋಂಕು . . . ಆಕೆಯ ಕೂಟಮೆ ದಲಿರ್ದುದವರ್ಗ ಮನದೊಳ್ (ಕಾದಂಬ. ೬೬೨) ; ನಿನ್ನ ಮುದ್ದನೆ ನಚ್ಚಿ ಮೆಚ್ಚು ಮನಾಗಳುಂ ನಿನ್ನಗಲ್ಕೆಯೊಳಿಂತು ಸೈರಿಸುವೆಂ (ರಘುವ. ೩-೨೨೦); ಬಲದಾಯಿ ಮುದ್ದ ಬಲ್ಲಳೆ ನೊಂದ ನೋವ ನೋಯದವರೆತ್ತ ಬಲ್ಲರು (ಬಸವಾದಿ. ೩. ೦೪೦-೩೦೪) ; ನಾನೇದರೆ ಅವಳಿಗೆ ಎಷ್ಟೊಂದು ಮುದ್ದು ಎಂದು ಗೊತ್ತಿದೆಯೆ ? (ಅಪೋಲೀ. ೪೦). ೨. ಚುಂಬನ : "ಮುದ್ದು [ಚಾಮ. ತ್ತು] ಚುಂಬನಮದೋಷ್ಠಪಾನಂ" (ಶಬ್ದಮ. ೯೭-೦೭) ; ಲಂಬೋದರ ಗುಹರ್ಗಂ ಮುದ್ದುಗಳನೂಡಿ ಬೇಡಿದರ್ಗಭಿಮತವಿತತಿಯುಂ ನೀಡಿ (ಐಶಿ. ೦-೩೦); ಅಳ್ತಿಯಿಂ ಮುದ್ದುಗಳನು ಬೇಡುವರ್ ಕಯ್ಗಳೊಳ್ ಮೊಯ್ಗಳೊಳ್ ಬಾಯ್ಗಳೊಳಗೆ (ಪಂಪ. ೩-೨೬). ೩. ಅತಿಯಾದ ಪ್ರೀತಿ ಯಿಂದ ಉಂಟಾದ ಸಲುಗೆ ; ಸದರ : ಮುದ್ದು ವಿದ್ಯಾರ್ಥಿಗೆ ಸಲ್ಲ . . . ಜಿದ್ದು ಬೋಧಕನಿಗೆ ಸಲ್ಲ (ಇಂಚರ. ೦೬೦-೪೩) ; ಅಜ್ಜಿಯ ಮುದ್ದಿನಿಂದ ಮೊಮ್ಮಗ ಯಾರು ಹೇಳಿದ ಮಾತಿಗೂ ಕಿವಿಗೊಡುವುದಿಲ್ಲ (ರೂಢಿ). ೪. ಚೆಲುವು ; ಸೊಗಸು ; ಅಂದ : ಮಸೆದ ಮದನನಲಗಿನಲರ್ಗಳಂತೆ ಕಣ್ಗೊಳಿಸಿ ಬಳಸಿ ಬಂದಿರ್ದ ಪಾಟದಾಟದ ಮುದ್ದಿನ ಬರ್ದಿನ ಪರಿವಾರ ದೇವಿಯರುಮಂ . . . ಕಂಡು (ಆದಿಪು. ೨-೬೩ ವ) ; ನುಡಿಯ ಮಾತಿನ ಮುದ್ದು ಶಿವನನೊಲಿಸುವ ಮುದ್ದುತಾನೆನಲ್ ಶಿವೆ ಮೆರೆದಳು (ಕವಿಶಿ. ೩೭-೨೨) ; ಕಂದನಾಡುವ ಬಾಲಲೀಲೆಯಂ ನೋಡಿ ತೊದಲೋದಿದಿನಿ ವಾತನುರೆ ಕೇಳ್ದು ಮುದ್ದಿನ ಮುದ್ದೆಯುಂಪದಂಗವನೆತ್ತಿಕೊಂಡು ನಳಿತೋಳ್ಗಳಿಂದಪ್ಪಿ (ಜೈಮಿನಿ. ೦೬-೨೦). ೫. ಮಕ್ಕಳಾಟಿಕೆ ; ಬಾಲ ಲೀಲೆ : ನಡೆವ ತಳರ್ನಡೆಯೊಳ್ ಪುಡಿವುಡಿಯಾದುವು ಶಿಲೆಗಳೊಡೆದು ಕರಿಗಳ್ ಭೀಮಂ ಪಿಡಿದಡರ್ಮೊಡೆ ಜಾಯ್ಗಟ್ಟಲ್ ಪಡಗಾದುವು ಮುದ್ದದೆಂತು ಸೊಗಯಿಸವೇಡಾ (ಗಂಗೆಶ. ೨-೩) ; ಇನಿವಿರಿದಬಲನ್ನರೊಳಂ ಜನಿಯಿಸಿತನೆ ಬಯಸಿ ಪಡೆದು ತೊಡೆಯೇಱಿಸಿ ಮುದ್ದನೊಱಲ್ದು ನೋಡಿ ನಡೆಪಿದ ಜನನೀಜನಕರ್ಗದೆನಿತಲ್ ಜನಿಯಿಸಿತುಮೋ (ಪಾರ್ವ. ೪೬೩) ; ಮುದ್ದಿ ಬಿನದಮನೊಡರ್ಚಯಾಡುವ ತನಯಂ ಸಂಸಾರಶರಧಿಸೀಮೆಯುದಲ್ತೇ (ರಕಕ. ೩-೩೬). ೬. ಪ್ರೀತಿಗೆ ಪಾತ್ರವಾದ ವ್ಯಕ್ತಿ ಅಥವಾ ವಸ್ತು : ಎನ್ನ ಮುದ್ದೆ ಮುನಿಯದಿರಿದಾವ ಗಹನಂ (ರಹಸ್ಯ. ೨-೦೨೪) : ಯಶೋದೆ ಪರಮಸುಖಾರ್ದ್ರಾಲೋಚನದಿನೀಕ್ಷಿಸಿ ನಂದನನಂ . . . ಇದಾರ ನಿಧಾನವಿದಾರ ಮುದ್ದಿದಾರರಸಂ . . . ಇದಾರ ಸಿಂಹಮೆಂದಿರ ದಮರ್ದಪ್ಪಿದಳ್ (ಜಗ. ೩-೪೦) ; ನಿನ್ನ ಮಗನು ಮುದ್ದು ನಿನಗಾದರೆ ಗೋಪಿ ಯಾರಿಗೇನೆ (ಪುರಂದ. ೨-೮೩ ಕಲ್ಯಾ). ೭. ತುಟಿ ; ಅಧರ : ನಿದ್ರಾನ್ವಿತೆಯಾಗಿ ಕಣ್ದಟ್ಟಿಯೊಳಗನಿರುದ್ಧನ ಕಂಡಮರ್ದಪ್ಪಿ ಮುದ್ದಾಡಿ ಮುದ್ದ ಬಾಯೊಳಗಿಟ್ಟು ಚುಂಬಿಸುತಿದ್ದಳು ರತಿಶಾಸ್ತ್ರದಲಿ (ಉಷಾಪಹ. ೩೭-೪೦). ೮. ಅಪೇಕ್ಷಿಸಿದುದು ; ಬಯಸಿದುದು : ಇಷ್ಟಾರ್ಥ : ಆರುಂಟು ಶಿವಶರಣರೊಳ್ ಕುಲಗುಣಾದಿಗಳನಾರಯ್ಯದವರ ಮುದ್ದಂ ಸಲಿಸಿ ಸಂತವಿಪರೀ ರಸೆಯೊಳ್ (ಚನ್ನಬಸ. ೦೪-೨೦), (ಗು). ೯. ಪ್ರೀತಿ ಪಾತ್ರವಾದ ; ನಲ್ಮೆಯ ; ಅಕ್ಕರೆಯ : ಅಳದೆ ನೀ ಪಿಡಿದಾಡೆನ್ನಯ ಮುದ್ದುಬಾಲ (ಪುರಂದ. ೦-೨೨೬-೨) ; ಜಂಭಭೇದಿಯ ಮುದ್ದುಪೂರ್ವಾಶಿಯನೆ ಗೆದ್ದು ಬೊಂಬೆಯು ಕಾರೊಳಿಟ್ಟಿಹರು (ಮೋಹತ. ೧೯-೪೩) ; ನಿಮ್ಮ ಮುದ್ದು ಹುಡುಗಿಗೆ ತಕ್ಕಂತಹ ಅಚ್ಚು ಮೆಚ್ಚಿನ ನವಯುವಕನೊಬ್ಬನನ್ನು ಹುಡುಕಿ (ಸುಂದ. ೩). ೧೦. ಚೆಲುವಿನಿಂದ ಕೂಡಿದ ; ಮನೋಹರವಾದ : ನೀಲೋತ್ಪಲನಿಭಾಂಗದ ಮುದ್ದುಮುಸುಡಿನ ಚಲುವ ದೇವರ ದೇವನೆಸೆದನು (ತೊರವೆ. ೦-೬-೮೦); ಪಾಲಿಸಮ್ಮ ಮುದ್ದುಶಾರದೆ (ಪುರಂದ. ೦-೦೯೦ ಕಲ್ಯಾ); ಓಲಗಶಾಲೆಯ . . . ಮಣಿಯ ಭಿತ್ತಿಗಳೆಡೆಯಲಿ ಮುದ್ದುಬಾಲಕಿಯರು ರಾಜಿಸಿದರು (ಕಂಸವ. ೨೦-೨೪). ೧೧. ಇಂಪಾದ ; ಮಧುರವಾದ ; ಸವಿ ಯಾದ : 'ಮುದ್ದುನುಡಿ' ಪರಾ. ಮುತ್ತು₃ : ೨. "ನಿರೋಧಾವರಣ ದೊಳು ಮೌಕ್ತಿಕದೊಳು ಚುಂಬನದೊಳುಂ ಮುತ್ತೆನಿಕ್ಕುಂ" (ಶಬ್ದಮ. ೪೬); ಮುತ್ತಯ್ಯ ಚದುರಿದೇನೆನೆ ಮುತ್ತಲ್ಲದುದುಂಟೆ ವಸ್ತು ಪೆಱತೆನೆ ಸತಿ ನೀಮುತ್ತಿರಿಮೆನೆ ಕರಮೊಳ್ಪಿತ್ತಾಗಡೆ ನಿಮ್ಮೊಳರ್ಪವೆನೆ ವೃದ್ಧವಿಟಂ "(ಅಪ್ಪಾ.ಪ. ೬೦೨) ; ಮಸ್ತಕವನು ಚುಂಬಿಸಿ ಮಗುಳರದಪ್ಪಿ ಎತ್ತಿಕೊಂಡನು ಮುತ್ತನಿತ್ತು (ಅಂಜನ. ೭-೩೦) ; ಆತ ಕೊಟ್ಟ ವಸ್ತು ಒಡವೆ ನನಗೆ ಅವಗೆ

ಗೊತ್ತು ತೋಳುಗಳಿಗೆ ತೋಳಬಂದಿ ಕಿನ್ನೆ ತುಂಬ ಮುತ್ತು (ಶಾದಂ. ೫೯-೧೩). ೲ ಮೇಲಿನ 'ಕಾವ್ಯಾವ' ಮತ್ತು 'ನಾದಲೀ' ಪ್ರಯೋಗಗಳಲ್ಲಿ 'ರತ್ನ' ಎಂಬರ್ಥವೂ ಶ್ಲೇಷಾರ್ಥವಾಗಿ ಹೊರಡುತ್ತದೆ.

ಮುದ್ದಿನ ಕಣಿ = ಚೆಲುವಿನ ಆಕರ,–ನೆಲೆ ; ಸೌಂದರ್ಯದ ಖನಿ : ಮುದ್ದುಗಾಳೆಡರ ಮನೆ ಮುದ್ದಿನ ಕಣಿಯಾಗಿ ಉದ್ಧರಿಸ ಬಂದೆ ನೀ ಲೋಕಕ್ಕೆ ಸೊನ್ನಲಿಗೆ ಸಿದ್ಧ ಸುಕ್ಷೇತ್ರ (ಸಿದ್ಧಪು. ೩-೯೬). ಮುದ್ದುಮುಚ್ಚಟೆ = ಅತಿಶಯವಾದ ಪ್ರೀತಿ,– ಪ್ರೇಮ : ವಿವಾಹಾದಿಕಾರ್ಯಗಳನ್ನು ಮಾಡಿ ಮುದ್ದುಮುಚ್ಚಟೆಗಳನ್ನು ತೀರಿಸಿಕೊಳ್ಳಲಿಕ್ಕೆ ಮತ್ತೆ ಯಾರೂ ಇಲ್ಲ (ಲಕ್ಷ್ಮೀಶ್ರ. ೦೧೨). [ದೇ.II ತಮಿ. ಮುತ್ತು, ಮುತ್ತಮ್ ; ಮಲ. ಮುತ್ತು, ಮುತ್ತಮ್, ಮುತ್ತಿ ; ತುಳು. ಮುದ್ದು ; ಮುತ್ತ, ಮುತ್ತು, ಮುದ್ದ : ತೆಲು. ಮುದ್ದು ; ಕೊಡ. ಮುತ್ತ ; ಕೋಲಾ : ಮುದ್ ; ಪರ್ಜಿ. ಮೊತ್]

**ಮುದ್ದುಕೊಡು** 'ಮುದ್ದುಗೊಡು' ನೋ.

**ಮುದ್ದುಗ** (ನಾ). ಚೆಲುವನಾದವನು : ಅಂದಗಾರ ; ಸುಂದರ : ಗೋಪಿಯರ್ಕ್ಕೆದೆ . . . ನಗುತ್ತೆತಂದು ಮುದ್ದುಗರಿರವನೀಕ್ಷಿಸುತೆಂದರುನ್ನತ ಬಾಲಲೀಲೆಗಳ (ಹರಿಭಾಗ. ೧೦-೬-೨೨) : ನನ್ನಿಯ ನಲ್ಲನಣ್ಣನಾಣ್ಮಂ ಪುಸಿವರ ಬೊಜಗಂ ಮುದ್ದುಗರ ಮೊದಲಿಗಂ . . . ಬಲ್ಲಿದರ್ ಬಲ್ಲಹನೇಬವು ಮೊದಲಾವ ಪಲವುಂ ಬಿರುದರುಂ ಕೇಳ್ದು (ಶಶಪಂ. ೩೩-೦೦).

[ಮುದ್ದು + — ಗ$_2$]

**ಮುದ್ದುಗಜ್ಜ** (ನಾ). ಪ್ರಿಯವಾದ ಕೆಲಸ : ಇಷ್ಟವಾದ ಕಾರ್ಯ : ಉದ್ದಂಡರಾಜ ವೇತಂಡರಾಜರು ಬಂದರಿದ್ದವರೆಲ್ಲರಿನ್ನೆಮ್ಮ ಮುದ್ದುಗಜ್ಜವನೆಸಗೆನಲೆಸಗಿದನೆಲ್ಲ ಬಿದ್ದಿನರನುಮತದಿಂದ (ಭರತ. ೩೯-೬೦).

[ಮುದ್ದು + ಕಜ್ಜ$_1$]

**ಮುದ್ದುಗರೆ** 'ಮುದ್ದುಗಱೆ' ನೋ.

**ಮುದ್ದುಗಱೆ**, ಮುದ್ದುಗರೆ (ಕ್ರಿ). ೧. ಪ್ರೀತಿಯನ್ನು ಸೂಸು ; ಲಲ್ಲೈಸು ; ಅಕ್ಕರೆಯನ್ನು ತೋರಿಸು : ದೇಶಾವಳಲದಾತ್ಮಜನಂತೆ ನಿನ್ನಯ ಮಸ್ತಕಾಗ್ರದಲಿ ನಿಲಿಸುತಿದೆ ಪುಷ್ಕರವ ನಿನಗೀ ಪಲವು ತೆಜದಲಿ ಮುದ್ದುಗಱೆವುತ ನಲಿವುತಿದೆ ಇದ ನಿನ್ನನಗಲಿಸೆನಂಜಬೇಡ (ತಿಮ್ಮಕ. ೬-೬೦). ೨. ಚೆಲುವನ್ನು ಬೀರು, –ಹೊರಹೊಮ್ಮಿಸು : ಸೋಗಿರೊಳ್ ನಕ್ಕಾಡುತುಂ ಮುದ್ದುಗಱೆವುತಂ ಲೀಲೆಯಿಂ ಮಕ್ಕಳಾಟಿಕೆಯೊಳೆಸೆದಂ ಜಗವನಾಡಿಸುವ ಸೂತ್ರಧಾರಂ (ಕೆಂಪು. ೫-೩೬). **ಮುದ್ದುಗರೆ** : ೧. ಶಾಂತಲಾದೇವಿಯ ನೊಂದ ಮನಸ್ಸು ಮಗುವಿನ ಈ ಮುದ್ದುಗರೆವ ಮಾತನ್ನು ಕೇಳಿತು (ಶಪಶಾ. ೦೬೩); ಮಗುವಿನ. . . ಗಲ್ಲವನ್ನು ಸವರಿ ಮನಸ್ಸು ತಣಿಯುವಂತೆ ಮುದ್ದುಗರೆಯುತ್ತಿದ್ದಳು (ಹೊಸಕ್ಕಿ. ೩೬). ೩. ಚುಂಬಿಸು : ಪಾರಿಜಾತಗಳು ಮುದ್ದುಗರೆಯುವವು ಹವಳದುಟಿಗಳಿಂದ ಕಂಪ ಸೂಸಿ ಮಂದಾರ ಉಸಿರ ಬೆರೆಯುವವು (ಹಾಡುಹಾ. ೨೭).

[ಮುದ್ದು + ಕಱೆ$_1$]

**ಮುದ್ದುಗಾತಿ** (ನಾ). ಚೆಲುವೆ ; ಸೊಗಸುಗಾತಿ; ಸುಂದರಿ : ರಾಯನಂ ಅರೆನೋಟದಿಂ ನೋಡಿ. . . ಮುದ್ದುಗೊಳುತಲಿರುವ ಮುದ್ದುಗಾತಿಯಂ ನೋಡಿ (ಕೌಗಂಧಿ. ೩೬೦-೦೦೦). [ಮುದ್ದು + — ಕಾತಿ$_5$]

**ಮುದ್ದುಗಾರ** 'ಮುದ್ದುಗಾಱ' ನೋ.

**ಮುದ್ದುಗಾಱ**, ಮುದ್ದುಗಾರ (ನಾ). ೧. ಚೆಲುವನಾದವನು; ಸುಂದರ : ಒಂದು ಮೊಲೆಯನುಂಡವಳಸುವನೆ ಕೊಂದ ಮುದ್ದುಗಾಱ ಕಳ್ಳ ಕೊಕೊಕೊ ಎನ್ನಿರೊ (ಕವಕ. ೨೦೨-೦). **ಮುದ್ದುಗಾರ** : ೧. ಮುದ್ದುಗಾರನಾದ ಮಂದಮಾರುತನ ಮುಂದುಮಾಡಿ. . . ಅಂದಗಾರನಾದ ಚಂದ್ರನು (ಕೌಗಂಧಿ. ೩೩೯-೪). ೨. ಅಂದವಾದುದು : ಚೆಲುವಾದುದು : ಕಣ್ಣಗಂದವಾದ ಮಗುವೊ. ಮುದ್ದುಗಾರನಾದ ಮರಿಯೊ ಕಣ್ಣು ನೆಟ್ಟು ನೋಡುತಿದ್ದೆನು (ಬಂಗೀತ. ೬-೦೩); ಯುಳೆಂದೂರು ಜಹಗೀರದಾರರ ಕಡೆಯ ಕನ್ಯೆ ಮುದ್ದುಗಾರನ ಹಾಗೆ ಇರಲಿಲ್ಲವೆ ? (ಬಾಗಿಡ. ೧೯೨).

[ಮುದ್ದು + — ಕಾಱ]

**ಮುದ್ದುಗುಪ್ಪು** (ಕ್ರಿ). ಪುನಃ ಚುಂಬಿಸು, – ಮುತ್ತು ಕೊಡು : ಅಪ್ಪಿ ವಣಿಮನು ಮುದ್ದುಗುಪ್ಪಿ ತಾ ದಣಿಯ (ಶ್ರೀಕೃಪಾ. ೭೪).

[ಮುದ್ದು + ಕುಪ್ಪು$_1$]

**ಮುದ್ದುಗೆಯ್**, ಮುದ್ದುಗೈ (ಕ್ರಿ). ೧. ಪ್ರೀತಿಯನ್ನು ತೋರಿಸು; ಮುದ್ದಾಡು; ಲಲ್ಲೆಗರೆ : ನೂತನ ಮೊಳೆವಲ್ಲೊಗೆದುವು ತೊದಳ್ವಾತ ಮಾತನಾಡುವ ಮುದ್ದುಗೆಯ್ವ ಭೂತಳದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ವೀಣಾಹ. ೦೦-೩೯); ನೀಡುಂ ನೀಡದ ಪಕ್ಕಿಯುಮೆಸ್ಸಂ ಬಂಜೆಯೆನುತೇಡಿಪಂತಿರೆನ್ನಿದಿರೊಳ್ ಒಳ್ಳೆಯುಂ ಮುದ್ದುಗೆಯ್ಯುಂ (ರಾಜಶೇಖ. ೧೬-೬). ೨. ಚುಂಬಿಸು; ಮುತ್ತಿಡು : ಮಲ್ಲಿಗೆಗೋಲನ ರ್ಥಾಂಗಿಯ ಸುತವಾತ್ಸಲ್ಯದಿ ಬಿಗಿಯಪ್ಪಿಕೊಂಡು ಚೆಲ್ಲಿದಳವುಪದಲ್ಲಿ ದಿಟ್ಟೆಯ ಸೊಲ್ಲಿಸಿವಳು ಮುದ್ದುಗೆಯ್ದು (ವೀಣಾಹ. ೧೬-೬೨). **ಮುದ್ದುಗೈ** : ೧. ಪಡೆದವರ್ಮುದ್ದುಗೈವಪರೂಟದೆಡೆಗಳೊಳ್ ಜೋದ್ಯಮೆಂದಳ್ ಸತ್ಯಭಾಮೆ ನಗುತೆ (ಕೃಷ್ಣಾಭ್ಯು. ೬-೯೭); ಬರೆತೆಗೆದಪ್ಪಿ ಬಾಯ್ವಿಡಜಿಯ ನೊಯ್ಯನೆ ಚುಂಬಿಸಿ ಮುದ್ದುಗೈದು . . . ಪೊಂಪುಳಿಯಿಂ ಪೊದಿಸುತ್ತ ನಲ್ಲಳಾ (ರಾಜಶೇ. ೦೦-೦೦೪). [ಮುದ್ದು + ಕೆಯ್$_1$]

**ಮುದ್ದುಗೆಯಿತ** 'ಮುದ್ದುಗೆಯ್ತ' ನೋ.

**ಮುದ್ದುಗೆಯ್ತ**, ಮುದ್ದುಗೆಯಿತ (ನಾ). ೧. ಸರಸ; ವಿನೋದ : ಲಲ್ಲೆ : ಲೀಲೆಗಾಲಯಮಾದ ಮುದ್ದುಗೆಯ್ತಕ್ಕಂ ಗಾಡಿಗೆ ಪಾಡಾದ ಪಸದನಕ್ಕಂ. . . ಬೆಕ್ಕಸಂಬಟ್ಟು (ಶಾಂತಿಪು. ೩-೩೩ ವ); ನೋಟದೆ ಬೇಟ ಮಂಕುರಿಸಿದಪ್ಪುದು. . . ಮುದ್ದುಗೆಯ್ತುದಲರ್ದಪ್ಪುದು (ಚಂದ್ರಪ್ರ. ೬-೩೨); ಒರ್ವಳ್ ತನ್ನ ವಲ್ಲಭನ ಮೋಹದ ಮುದ್ದುಗೆಯ್ತಮಂ ನೆನೆದು ಕೆಲದೊಳಿರ್ದ ಬರ್ದಗಿಂತೆಂದಳ್ (ಅಜಿತಪು. ೬-೪೪ ವ). ೨. ಬಾಲಲೀಲೆ ; ಮಕ್ಕಳಾಟಿಕೆ : ಚುಂಬಿಸಿ ಲೋಳೆವಾಯ್ದೆಱೆಯನೀಕ್ಷಿಸಿ ಮಕ್ಕಳ ಮುದ್ದುಗೆಯ್ತದೊಳ್ಪಂ. . . ತಣಿವೆಯ್ದುವರೇಂ ಕೃತಾರ್ಥರೋ (ಚಂದ್ರಪ್ರ. ೩-೪೪); ಓಹೋ! ಮುದುಗಣ್ಣಸದ ಮುದ್ದುಗೆಯ್ತದ ರಮಣೀಯ ರಮಣ ! (ಮುಂತ್ರಶ. ೩೦-೨೪). ೩. ಪ್ರಾಣಿಗಳ ಮರಿಗಳ ಸಂತೋಷದಾಯಕವಾದ ಆಟ : ಈ ತಮಾಳದ ತಳದೊಳಾಡುವ ಮಱಿಯಂಚೆಯ ಮುದ್ದುಗೆಯ್ತಮುಮಂ. . . ಕಂಡು (ಮಲ್ಲಿಪು. ೪-೨೩). **ಮುದ್ದುಗೆಯಿತ** : ೨. ನೋಡಿ ದಣಿಯರು ಗೋಪಿಯರು . . . ಕೊಂಡಾಡಿ ದಣಿಯರು ಬಾಲಕೃಷ್ಣನ ಮುದ್ದುಗೆಯಿತವನು (ಕಾಳ್ಕಾ. ೨೦-೨೬).

[ಮುದ್ದು + ಕೆಯ್ತ$_1$]

**ಮುದ್ದುಗೈ** ' ಮುದ್ದುಗೆಯ್ ' ನೋ.

**ಮುದ್ದುಗೊಡು**, ಮುತ್ತುಕೊಡು, ಮುದ್ದುಕೊಡು (ಕ್ರಿ). ಚುಂಬಿಸು; ಮುತ್ತಿಡು : ಅಬ್ಬೊಳುವ ನಾಬ್ಗೆ ಮುದ್ದುಗೊಡಲೀಕ್ಷಿಸುವರ್ (ಸೂಕ್ತಿಸು. ೦೩-೩೦); ಒಲವಿಂದೆತ್ತಿ ತಕ್ಕೈಸಿ ಮುಂಡಾಡಿ ಮುದ್ದುಗೊಟ್ಟು (ಕೌಂಡಪು. ೩-೪೪). **ಮುತ್ತುಕೊಡು** : ತಿರೆಯೊಲ್ಮೆ ಸಿರವೆತ್ತಿ ಸಗ್ಗನೀಲಿಗೆ ಮುತ್ತುಕೊಡುವಂತೆವೋಲ್ (ಶಶ್ರಾಂಗ. ೯೦-೨೯೯೩); ಚೇಳಿಗೆ ಮುತ್ತುಕೊಟ್ಟ ಹಾಗೆ (ಗಾದೆ). **ಮುದ್ದುಕೊಡು** : ಮೆಲ್ಲಮೆಲ್ಲನೆ ಬಂದು ಗಲ್ಲಕ್ಕೆ ಮುದ್ದುಕೊಟ್ಟು ನಿಲ್ಲದೆ ಓಡಿ ಹೋದ ಕಳ್ಳಗೆ ಬುದ್ಧಿ ಪೇಳೆ (ಕುರಂಡ. ೦-೯೦ ಅನುಪಲ್ಲವಿ); ಭಟ್ಟರ ಎರಡನೆಯ ಮಗುವನ್ನು ಸರಸ್ವತಿ. . . ಲಟಲಟ ಮುದ್ದುಕೊಟ್ಟಳು (ಹಳ್ಳಿ. ೦೩). [ಮುದ್ದು + ಕೊಡು$_1$]

**ಮುದ್ದುಗೊಸರು** (ಕ್ರಿ). ಸರಸದಲ್ಲಿ ಕೊಸರಾಡು: ಲಲ್ಲೆಯಿಂದ ತಪ್ಪಿಸಿ

ಕೊಳ್ಳಲು ಯತ್ನಿಸು : ಮುನಿಸ ಸಸುದೋರುತಿರು ಮುದ್ದುಗೊಸರುತ್ತಿರು. . . ಮನವೊಲಿದು (ವಿಂಕಾರಾ. ೩-೬-೩೦).

[ಮುದ್ದು + ಕೊಸರು1 (< ಕೊಸರ್)]

**ಮುದ್ದುಗೊಳು** (ಕ್ರಿ). ಪ್ರೀತಿಯನ್ನು ಹೊಂದು, — ಪಡೆ : ರಾಯನಂ ಅರೆನೋಟದಿಂ ನೋಡಿ. . . ಮುದ್ದುಗೊಳುತಲಿರುವ ಮುದ್ದುಗಾತಿಯಂ ನೋಡಿ (ಕಾಗಂ೦. ೫೦-೦೦). [ಮುದ್ದು + ಕೊಳು (< ಕೊಳ್1)]

**ಮುದ್ದುತನ** (ನಾ). ಚೆಲುವು; ಮೋಹಕತೆ: ಸೋಗೆಯ ಮಣಿಯ ಮುದ್ದುತನಮಂ ಮುದ್ದುಗಣ್ಗಳ ಬೆಳಗಿಂಬೆಳಮಿಂಚಿನ ಗೊಂಚಲಿಂ ಮುಂಡಾಡುತ್ತುಂ(ಅರ್ಜನೀ. ೦-೯೩ ವ); ನಿಜಾವಿಡಿದು ಮೊಗಮಂ ನೋಡುವ ತೂಗಾಡುವ ಮಗನ ಮುದ್ದುತನಮಂ ಬಸವರಾಜಂ ಕಂಡು (ಬಸವ. ೦೦-೦೩೦); ಬೀಜುತಿರ್ದಳು ಮುದ್ದುತನವನು ಕಳೆಯೇಜುತಿರ್ದಳು ಮಾಯೆ (ಪ್ರಭುಲೀ. ೩-೩೦). [ಮುದ್ದು + —ತನ]

**ಮುದ್ದುದೋಱು** (ಕ್ರಿ). ಅಕ್ಕರೆಯನ್ನು ತೋರಿಸು ; ಪ್ರೀತಿಸು : ಮೂಱುಲೋಕದ ಕರ್ವು ಸಮಾಗಿದಿರೆ ದೀಕ್ಷಿದೋಱಿಂದು ಮುದ್ದುದೋಱಿದರು (ಶಶ. ೭೦-೩೯). [ಮುದ್ದು + ತೋಱು]

**ಮುದ್ದುನಗೆ** (ನಾ). ಮೋಹಕವಾದ ನಗು; ಚೆಲುವಾದ ನಗೆ : ಗುರುತರ ಶಿವಧ್ಯಾನಿ ಮುದ್ದುನಗೆಗಳ ದಾನಿ. . . ತೊದಳ್ನುಡಿಯ ತವಕಿಗಂ (ಬಸವ. ೦-೦೬೬); ಕಾಂತೆಯರ . . . ತಳಿರ್ದುಟಿಗಳಂ ಮುದ್ದುನಗೆಗಳಂ ಕಂಡು ನಡೆಯಲ್ ಮುಂದೆ ಕಾಲೇಳವೆ. . . ಪಥಿಕಸಂಕುಳಮಿರ್ದುದು (ಕಬ್ಬ. ೦೦-೦೯). [ಮುದ್ದು + ನಗೆ]

**ಮುದ್ದುನುಡಿ** (ನಾ). ಸವಿಯಾದ ನುಡಿ; ಇಂಪಾದ ಮಾತು : ಕಾಂತೆಯರ ಮೇಲ್ನುಡಿಯುಂ ಸಂಜೆಸುರುಳಿಯೆನ್ನದೆ ಮುದ್ದುನುಡಿಯೇಂದೊಡಂ ತನ್ನ ಕೇಡಂ ಬಗೆವಲ್ಲದೆ ಸುಖಮಂ ಬಗೆಯಂ (ಧರ್ಮಾಮೃ. ೭-೦೫೩); ಅಕ್ಕರಂಗಳೊಳೆಸೆಯುದಿಹ ಮುದ್ದುನುಡಿಗಳಿಂ . . . ಶಿಶುಲೀಲೆಯಿಂ ಕೆಲದಿನಂ ತಾಮ್ಬೆಲ್ಗಿ ಪರುಷಂದೋಱಿದ ಕುವರಸು (ಶಂಭು. ೩-೬೩).

[ಮುದ್ದು + ನುಡಿ2]

**ಮುದ್ದುಮರಿ** 'ಮುದ್ದುಮಱಿ' ನೋ.

**ಮುದ್ದುಮಱಿ, ಮುದ್ದುಮರಿ** (ನಾ). ಅಕ್ಕರೆಯ ಮರಿ; ಪ್ರೀತಿಯ ಶಾಬ : ವಿಹಂಗ ಸಂತೋಷದಿ ತಪ್ಪು ಮುಂಗಟ್ಟಿದ ಮುದ್ದುಮಱಿಗಳ್ಗೆ ಗುಟುಕೀಯೆ ಕಂಗೊಳಿಸಿತು ರುಕ್ಮಿಣಿಗೆ (ಮೋಹತ. ೪-೯). **ಮುದ್ದುಮರಿ:** ತನ್ನ ಮುದ್ದುಮರಿಗಳನ್ನು ಹಗಲೆಲ್ಲಾ ಅದು ನೋಡಿಕೊಳ್ಳುವ ರೀತಿ ಯಾರಿಗೂ ಒಂದು ಗಳಿಗೆ ನಿಂತು ನೋಡುವಂಥಾದ್ದು (ಸಕ್ಕೂರು. ೦೩).

[ಮುದ್ದು + ಮಱಿ]

**ಮುದ್ದುಮಾತು** (ನಾ). ೧. ಪ್ರೀತಿಯ ಮಾತು ; ನಲ್ಮೆಯ ನುಡಿ : ಮೆಚ್ಚಿದಳೆನಿಮನಾಡಿದ ಮುದ್ದುಮಾತಿಗೆ (ಮೋಹತ. ೦೬-೯೨); ಮುದ್ದುಮಾತಿನಲಿ ಮೋಹವ ಬೀಱುಯುವನೊಳಗಿದ್ದ ಹಣವ ತೆಗೆ (ಕುಮಾ. ೬-೦೫೦). ೨. = ಮುದ್ದುನುಡಿ : ಇವನ ಮುದ್ದುಮಾತುಗಳನ್ನು ಕೇಳಿ ಪಾರ್ವತಮ್ಮ ಮರುಳುಗೊಂಡ ಚಿಗುರಿಯಂತೆ ನೋಡುತ್ತಿದ್ದಾಳೆ (ಕೆಳುಕು. ೦೯೦).

[ಮುದ್ದು + ಮಾತು1]

**ಮುದ್ದುಮೊಗ** (ನಾ). ಚೆಲುವಾದ ಮುಖ; ಸುಂದರವದನ : ಬಿಡದ ದರಿ ಕೊಬ್ಬಿ ಕುಚಯುಗವೆತಗಿಱಿದಿರೆ ಮುದ್ದುಮೊಗವಸೆಂದುಂ ನೋಡಲ್ ಪಡೆಯದೆ ಬಡವಾದಂತಿರೆ ಬಡನಡು ಸೊಗಯಿಸುವುದಾ ಸರೋಜಾನನೆಯಾ (ಕಾದಂಬ. ೯) ; ಕೆಂಜೆಡೆ ತಳರ್ನಡೆ ಮುದ್ದುಮೊಗಂ . . . ವಚ್ಚಡಿಯೊಳ್ಪರಿದೋಱುವಂಗಣಂ ನೆಱೆ ತನಗೊಪ್ಪವರ್ಧಕನನೊರ್ವನನಾಂ ಪಡೆವಂದವಪ್ಪುವುದೋ (ಸುಕುಮಾ. ೯-೯೯); ಥಳಥಳಿಸುವ ಮುದ್ದುಮೊಗದ ನರ್ತಕಿಯುರು ಘಳಿಲನೆ ನಡೆತಂದರಾಗ (ಶಂಕರ. ೬-೩೬). [ಮುದ್ದು + ಮೊಗ]

**ಮುದ್ದುವಡೆ** (ಕ್ರಿ). ಚೆಲುವಾಗು ; ಸೊಗಸಾಗು ; ಮನೋಹರತೆಯನ್ನು ಹೊಂದು : ಮುದ್ದುವಡೆದು ಮನೆಯಂಗಣದೊಳ್ ಮಸಮೊಸದಾಡುವ ಮಕ್ಕಳ ವಿನೋದಮಂ ಕಾಣ್ಬ ದಿವಸಮೆಂದಾದಪುದೋ (ಸುಕುಮಾ. ೯-೦೦೦). [ಮುದ್ದು + ಪಡೆ1]

**ಮುದ್ದುವೀಱು** (ಕ್ರಿ). ಚೆಲುವನ್ನು ಹೊರಸೂಸು, — ಹೊಮ್ಮಿಸು : ಕೃಷ್ಣನ ಮೇಲೆ ಬಾಲೆ ಕಣ್ಣೋಲದಿನಂದು ಬಿತ್ತರಿಸಿದಳ್ ನಗೆವೀಱುವ ಮುದ್ದುವೀಱುವ . . . ಮುಗ್ಧ ಕಟಾಕ್ಷಮಾಲೆಯಂ (ಜಗನ್. ೦೦-೭೯) ; ಕಡೆವಾಯೊಳ್ ಪಾಲಧಾರೆ ಪೊಳೆವಲ್ಗಳವ್ವೊಲ್ ಬಿಡದೆಸೆಯೆ ಮುದ್ದುವೀಱುತ್ತಡಿಯಿಡುವುವು ಪಲ್ಲವಮಱಿಯ ಮಱಿಗಳ್ ವನದೊಳ್ (ಶಬರ. ೩-೪೩). [ಮುದ್ದು + ಬೀಱು1]

**ಮುದ್ದುವೆಣ್.** ಮುದ್ದುವೆಣ್ಣು (ನಾ). ಮುದ್ದಾಗಿರುವ ಹೆಂಗಸು : ಸುಂದರಿ ; ಚೆಲುವೆ : ಮುದ್ದುವೆಣ್ಗೆ ಅಸು ಹೋಹ ಹೊತ್ತನಱಿಯದೆ ಮೋಹಿಸುವರು ರಸಿಕರು (ಕುಮಾರಾಂ. ೨೯-೦೦೪) ; ಬೆಲ್ಲವೆ ನೀ ಮುದ್ದುವೆಂಗಳ ಪ್ರಾಣಾಯಾಮ ಬೆಲ್ಲವಾಗಿರದೆ ಬಂದಿಲ್ಲಿ ಹೋಲ್ಲಿಹ ಸೋಣನ ಮುತ್ತಿಸಿಕೊಳಬೇಡ (ಮೋಹತ. ೨೦-೨೪). **ಮುದ್ದುವೆಣ್ಣು** : ಮುದ್ದುವೆಣ್ಣು ಮುದ್ದುವೆಣ್ಣಿಗೆ ಹೇಳಿದಳು ನಿನ್ನ ಬಿಟ್ಟು ಕಾಲಿದ್ದು ಪೋಪೆನೆ ಪೋಪುದಿಲ್ಲ (ಮೋಹತ. ೨೯-೩); ಬಣ್ಣದುಟಿಯ ಭಾವವ ಬೀಱುತ ಮುದ್ದುವೆಣ್ಣುಗಳ್ಕೆ ತಂದರಾಗ (ಶಂಕರ. ೨೦-೭೪). [ಮುದ್ದು + ಪೆಣ್]

**ಮುದ್ದುವೆಣ್ಣು** 'ಮುದ್ದುವೆಣ್' ನೋ.

**ಮುದ್ದುಸೂಸು** (ಕ್ರಿ). ಪ್ರೀತಿಯನ್ನು ವ್ಯಕ್ತಪಡಿಸು ; ಒಲವನ್ನು ತೋರಿಸು : [ವಿನಯ ಪುಳಿಂದ . . . ಮುದ್ದುಸೂಸಿ ಚಂದ್ರಹಾಸನೆಡೆಗೆ ಓಡುತ್ತಾನೆ] (ಶಂಪ್ರಕ. ೩೬-೨೦). [ಮುದ್ದು + ಸೂಸು1]

**ಮುದ್ದುಸೊಲ್ಲು** (ನಾ). = ಮುದ್ದುಮಾತು ೧ : ನೀನೆ ನಿನ್ನ ನಲ್ಲಗೆ ನೆಱೆ ಸೋತಳಹುದು ಅಲ್ಲಾ ವರರಸನನೀತು ಬಣ್ಣಿಪ ಮುದ್ದುಸೊಲ್ಲೇಕೆ ಬಿಸವಕ್ಕಿ ನಿನಗೆ (ಶಶ. ೬-೪೬). [ಮುದ್ದು + ಸೊಲ್ಲು2 (< ಸೊಲ್2)]

**ಮುದ್ದೆ1** (ನಾ). ೧. ಕಲಸಿದ ಆಹಾರ, ಹಿಟ್ಟು ಮುಂತಾದುವುಗಳ ಮೆದುವಾದ ದಪ್ಪ ಉಂಡೆ : ಅಶನದ ಮುದ್ದೆಯ ಕೇಳಿ (ಕನ್ನಡಭಾ. ೬೦); ಪಾರ್ಥನ ಕರುಳ ದೊಂಡೆಯ ಕೂಳ ಮುದ್ದೆಯ ಬಡಿಸಿ ದೈತ್ಯರಿಗೆ . . . ದಣಿಸಿದಡರಸು ಕೌರವನೆನ್ನ ಸಾಕಿಕಹಂದು ಫಲವು (ಕುಮಾವ್ಯಾ. ೯-೯೩); ತೆಂಗಾಯರೆದು ಕಡದಿ ಹಾಲೊಳಗೊಂದು ಮುದ್ದೆ ಬೆಣ್ಣೆಯನಿಕ್ಕಿ (ಸೂಪಶಾ. ೪-೯೩). ೨. ಕಲಸಿದ ಮಣ್ಣು, ಗಂಧ ಮುಂತಾದುವುಗಳ ಗಡ್ಡೆ, — ಕರಣೆ : ಉಳ್ಳೆರುವೊಂದಪ್ಪಂತಿರೆಯು ಮಣ್ಣಮುದ್ದೆಯೊ ಪೇಟಿಂ (ಸಪುಶ. ೨-೩೩); ಮೇಣದ ಮುದ್ದೆ . . . ಎಕ್ಕಲನ ಕುರುಣೆಗಳಿಂತಿವನು ಕೊಂಡೊಲಿದು ಪೋಪ ಬೇಡರ ನೆರವಿಯೊಪ್ಪಿದುದು (ಸಾಶ್ವಶಾ. ೦೩-೬); ಗಾತ್ರಾನುಲೇಪನಿ, ವರ್ತಿಃ— ಸುಗಂಧದ್ರವ್ಯಗಳೆಲ್ಲವನ್ನೂ ಕುಟ್ಟಿ ಅರೆದ ಮುದ್ದೆ (ಸಿದ್ಧಾಂತ. ೨೦೯). ೩. ರಾಗಿ ಮುಂತಾದವುಗಳ ಹಿಟ್ಟನ್ನು ಬೇಯಿಸಿ ಉಂಡೆ ಮಾಡಿದ ಒಂದು ಬಗೆಯ ಆಹಾರ ಪದಾರ್ಥ ; ಹಿಟ್ಟು : ಒಂದು ಮುದ್ದೆ ಸಲೀಸಾಗಿ ಹೊಡೀತಿದ್ದ ಬರಿ ಸಾರಿನಲ್ಲಿ. ಜೊತೆಗೆ ತುಂಡುಗಳು ಬಿದ್ದರಂತೂ ಎರಡು ಮುದ್ದೆಗೆ ಕಡಿಮೆಯಿಲ್ಲ (ಕಮೂರು. ೨೨೨) ; ಮುದ್ದೆಗೆ ಎದ್ದ, ಗುದ್ದಲಿಗೆ ಬಿದ್ದ (ಗಾದೆ). ೪. ಆಹಾರ : ಕೈಯ ಮುದ್ದೆಯ ಕೆಡಹಿದಲ್ಲಿ ಬಾಯಿಗೆ ಬಯಲು (ಪುರಾಣ. ೨೬೬-೩೦); ಅವಱ ಮೇಲೆ ಸರುಗದ ಮುಟ್ಟಗೆಗಳನಿಟ್ಟು ಮುದ್ದೆಗಳನಿಟ್ಟು ಮೊದೆವಟ್ಟು (ಪ್ರಾವಚ. ೦೦೬-೩). 'ಮುದ್ದೆಗೊಳ್ಳು' ಪರಾ. ೫. ಒಂದು ಬಗೆಯ ತಿನಿಸು : ಹೊರೆ ಚಕುಲೆ ಚಿಗುಳಿಯು ಕಕುಳ್ಳ ಮುದ್ದೆಯು (ದೇವಾಂಶ. ೩-೨೨೩). ೬. (ಅಲಂ) ಮೊತ್ತ ; ರಾಶಿ ; ಸಮೂಹ : ಅಡಗಿದ ತತ್ತ್ವಂಗಳ ತತ್ವದ ಮುದ್ದೆಯ ತುತ್ತನೊಲ್ಲದೆ. ನಿಶ್ಚಯನಾದ ನಿಃಕಳಂಕಮಲ್ಲಿಕಾರ್ಜುನಾ

(ಕೋಳಿವಾ. ೬-೦೯); ಮುದ್ದಿನ ಮುದ್ದೆ ಲಲ್ಲೆಯ ಮೆಲ್ಲೆದೆಗಾರ್ತಿ (ಅರ್ವಿ. ೩-೩೩ ಪ) ; ಕಂದನ . . . ಮುದ್ದಿನ ಮುದ್ದೆಯಂದದಂಗವನೆತ್ತಿಕೊಂಡು ನಲಿತೋಳ್ಗಳಿಂದಪ್ಪಿ (ಕೃಖಿಶಾ. ೦೬-೨೦). ೭. ಮುರುಟಿದುದು : ಮುದುಡಿದೆ : ಮುದ್ದೆಯಾಗಿ ಬಿದ್ದ ಅವಳ ಅವಸ್ಥೆ ಅವಳ ಮನಸ್ಸಿನ, ಅವಳ ದೇಹದ ಅವಸ್ಥೆಯನ್ನು ನಿರ್ದೇಶಿಸುವಂತಿತ್ತು (ಕವುನ. ೨೬೦); ಮಕ್ಕಳ ಚಟು ವಟಿಕೆಗಳಿಗೆ ಅವಕಾಶವಿದ್ದರೂ . . . ಮುದ್ದೆಗಳಂತೆ ಕುಳಿತಿರಬೇಕಾದ ಸನ್ನಿವೇಶ ಒದಗುತ್ತಾ ಬಂತು (ಕಿಕ್ಷರ. ೯೬೦). ೮. ನೇಕಾರನು ನೇಯ್ಗೆಯ ಎಳೆಗಳನ್ನು ಬಿಗಿಗೊಳಿಸಲು ಉಪಯೋಗಿಸುವ ಗೂಟ : (೬).

ಮುದ್ದೆಮಾಡು=೧. ರಾಗಿಹಿಟ್ಟನ್ನು ಬೇಯಿಸಿ ಉಂಡೆಮಾಡು : ಇಂದು ಊಟಕ್ಕೆ ಮುದ್ದೆಮಾಡಿ ಜೊತೆಗೆ ಅವರೆಕಾಳುಹುಳಿ ಮಾಡಿದ್ದೆ (ಕೂಡ). ೨. ಒಟ್ಟುಸೇರಿಸು : ರಾಶಿಮಾಡು : ಮದನನ ಶೃಂಗಾರ ಮನೊವರ್ಧದಲಂಗನೆ ಮುದ್ದೆಮಾಡಿ ತೋರ್ಪವೊಲೊಪ್ಪಿರ್ದುದು ಚೆಲ್ವ ಸೆಂಡುವಿಟ್ಟರಲ್ಲೆರ್ದೆಯೊಯ್ಯನೆ ಕಂತುಕಾವತಿಯ ಬಲಗೆಯ್ಯೊಳ್ (ದಕಕು. ೦೨-೨೯). ೩. ಮುದುರಿಕೊಳ್ಳು ; ಸಂಕುಚಿತಗೊಳಿಸಿಕೊಳ್ಳು ; ಹುದುಗಿಸು : ಗೌಡ ಮೈಯನ್ನು ಮುದ್ದೆಮಾಡಿ ಮೂಲೆಯಲ್ಲಿ ಒರಗಿದ್ದ (ಮಹಾರಾ. ೬). ಮುದ್ದೆಯಾಗು= ೧. ದ್ರವಪದಾರ್ಥಗಳನ್ನು ಕಾಯಿಸಿ ಅಥವಾ ಹಾಗೆಯೇ ಹಿಟ್ಟು ಮುಂತಾದುವುಗಳನ್ನು ಸೇರಿಸಿ ಕಲಸುವುದರಿಂದ ಗಟ್ಟಿಯಾಗು,—ಮೆದುವಾದ ಉಂಡೆಯಾಗು : ಹದನಾಗಿ ಕಾಯ್ದ ಹಾಲಿನ ಗಟ್ಟಿ ಕೆನೆದೆಗೆವುತ . . . ತುಋವೆಯ ಬೇರಿನಿಂ ತೊಳಸೆ ಮುದ್ದೆಯಹುದು (ಸೂಶಶಾ. ೦-೩೯) ; ಎರಡು ತೊಲೆ ಮೇಣ ಬೆರಸುವುದರಿಂದ ತೈಲವು ಸ್ವಲ್ಪ ದಪ್ಪವಾದೀತಲ್ಲದೆ ಬೆಣ್ಣೆಯಂತೆ ಮುದ್ದೆಯಾಗಲಾರದು (ಶೀಮುಸೂ. ೬-೨೦ ಅಖಿ); ಹಾಲನ್ನು ಕಾದಿಸಿ, ಚೆನ್ನಾಗಿ ಗಾಳಿಸಿದ ಹಿಟ್ಟಿನೊಡನೆ ಬೆರಸಿ ಮುದ್ದೆಯಾಗುವವರೆಗೆ ಕಲಸುವುದು (ಅಡುಶಾ. ೯೪). ೨. ಅಕ್ಕಿ, ರವೆ ಮುಂತಾದುವು ಹೆಚ್ಚು ನೀರಿನೊಂದಿಗೆ ಅತಿಯಾಗಿ ಬೇಯುವುದರಿಂದ (ಉದುರಾಗದೆ) ಮಿದ್ದೆಯಾಗು : ಇಂದು ಅನ್ನ ಮುದ್ದೆಯಾಗಿದೆ (ಕೂಡ). ೩. ಹುದುಗು; ಅಡಗು : ಕುಗ್ಗು : ಚಳಿಯಿಂದಲೂ ಭಕ್ತಿಯಿಂದಲೂ ವಿನಮ್ರನಾಗಿ, ಮುದ್ದೆಯಾಗಿ ಒಳ ಸೇರುವ ಇನ್ನೊಬ್ಬ ಭಕ್ತನು . . . ನನ್ನ ಮೋಂಡದ ಮಾದರಿಯಲ್ಲಿ ಕಾಲಿಟ್ಟರೆ ಏನು ಗತಿ! (ದೀಕನ್ನ. ೯೪). [ದೇ.॥ ತಮಿ. ಮುತ್ತೈ, ಮೊತ್ತೈ; ತುಳು. ಮುದ್ದೆ; ತೆಲು. ಮುದ್ದ]

ಮುದ್ದೆ₂, ಮುದ್ದಾ (ನಾ). ೧. ವಿಚಾರ; ಸಂಗತಿ; ವಿಷಯ: ನಾನು ಬೆಳಗಾಂವ್ಯಾಗ ನಿಂತದ್ದು ಯಾಕ ಅನೂದನ್ನ ಹೇಳತೀನಿ ಅಂದಿದ್ದೆ. ಅದು ಮುಖ್ಯ ಮುದ್ದೇ (ದೀಕಹ. II, ೬೩). ೨. ಮೊಕದ್ದಮೆಯಲ್ಲಿ ವಾದಿ, ಪ್ರತಿವಾದಿಗಳು ಮಾಡುವ ವಾದ : (ಕಸಂಗ್ಯಾ. ೩೫). ೩. ಕದ್ದ ಮಾಲು; ಕಳುವಾದ ಪದಾರ್ಥ. ಮುದ್ದಾ : ೪. ಅಭಿಪ್ರಾಯ; ತಾತ್ಪರ್ಯ: ಈ ಮಾತಿನ ಮುದ್ದಾ ಏನು? (ಶ್ರಶಾಕಿ. ೯೬-೦೩).

ಮುದ್ದೆಹಿಡಿ=ಅಭಿಪ್ರಾಯವನ್ನು ಹೊಂದು : ಪತ್ರಗಳಲ್ಲಿಯ ಮಜಕೂರವು ಎಷ್ಟು ಸ್ವಲ್ಪದಲ್ಲಿ ಎಷ್ಟು ಮುದ್ದೆಹಿಡಿದು ಮತ್ತು ಕಲಮವಾರ ಇದ್ದೀತು ಅಷ್ಟು ಒಳತಾದದ್ದು (ಮುಂಬಿವ್ಯಾ. ೩೬). ಮುದ್ದೇಮೊಲ್, ಮುದ್ದೇಮಾಲು = ಕಳುವಾದ ಪದಾರ್ಥ ; ಕದ್ದ ಮಾಲು: ಅವರವ ಸಾಕ್ಷಿ ಹಾಕಿಸಿ ಮುದ್ದೇಮಾಲ್ ಸಹಿತ ಹಿಡಿದು ಪೋಲೀಸರ ತಾಬೇಕ್ಕ ಕೊಟ್ಟುಬಿಡತೇವು (ಹೊಸಂಶಾ. ೦೦೧). ಅವನು . . . ಮುದ್ದೇಮಾಲು ಸಹ ಹೇಗೆ ಪಾರಾಗಿ ಹೋಗುವನೋ ನೋಡೋಣ ! (ಕಳ್ಳಶಾ. ೨೩).

[←ಅರ. ಮುದ್ದಅ, ಮುದಾಅ ; ಹಿಂ. ಮುದ್ದಾ, ಮುದ್ದಅ; ಮರಾ. ಮುದ್ದಾ, ಮುದಾ]

ಮುದ್ದೆಗಣ (ನಾ). (?) : ಪೊಟ್ಟಿ ವಿನಿತೀಶ್ವರಕ್ಕಂ ಸರ್ವ್ವಪರಿಹಾರಂ ಕೊಟ್ಟವರ್ಮ್ಮಾಣ್ಣಂ ಮನೆಯುಂ ತೋಟ್ಟಕ್ಕಂ ದೇವೇನ್ದ್ರತಪ್ಪುಡಿಗಳಾ ಮುದ್ದೆಗಣರಾ ಗೋಷ್ಠಿಥವ್ರ್ಮ್ಮವರ್(ಎಳ. IV (R), ಶಾಮುಶಾ. ೧೯೬-೩; ಸು. 750). [ ? ]

ಮುದ್ದೆಗೊಳ್ಳು (ಕ್ರಿ). ಆಹಾರವನ್ನು ಸ್ವೀಕರಿಸು,—ತೆಗೆದುಕೊಳ್ಳು; ಊಟಮಾಡು : ಮುಸುಡ ಮುಜ್ಜಂಕಿಸಿ ಮುದ್ದೆಗೊಳ್ಳೆಂದಾ ಹಸಿದು ಕೋಪದೊಳು ನಿಂದಿರ್ದ ಅಸುರನಿದಿರು ನಡೆದಣಕವಾಡುವನಾ ಅಸಮ ವಿಕ್ರಮಿಜಾನಿಲಜನು (ಜೇಮಿಸಂ. ೨೩-೦೩೪).

[ಮುದ್ದೆ₁ + ಕೊಳ್ಳು₁ (<ಕೊಳ್₁)]

ಮುದ್ದೆಯ್ಯ 'ಮುದ್ದಯ್ಯ' ನೋ.

ಮುದ್ದೈ 'ಮುದ್ದಾಯಿ' ನೋ.

ಮುದ್ದೈಯಾಲೆ (ನಾ). ಆರೋಪಕ್ಕೆ ಗುರಿಯಾದ ವ್ಯಕ್ತಿ: ಪ್ರತಿವಾದಿ: ಅವಳು ಮುದ್ದೈಯಾಗಿ, ಇಲ್ಲವೆ ಮುದ್ದೈಯಾಲೆಯಾಗಿ—ಎರಡೂ ವಿಧದಿಂದಲೂ ಮೆಜಿಸ್ಟ್ರೇಟರ ಮುಂದೆ ಬಂದವಳಲ್ಲ (ಹಹಕ. ೩೦).

[←ಅರ.ಹಿಂ.ಮುದ್ದಾಅಲೇಹೆ; ಮುದ್ದಾಲೇಹ್; ಮರಾ. ಮುದಾಇಲೈ]

ಮುದ್ರಕ (ನಾ). ಪುಸ್ತಕ, ಪತ್ರಿಕೆ ಮೊದಲಾದುವನ್ನು ಅಚ್ಚುಮಾಡುವವನು,—ಮುದ್ರಿಸುವವನು : ಪ್ರತಿಯನ್ನು ಓದಿ . . . ನಿವಾರಿಸದ ದೋಷಗಳು ಮುದ್ರಿಸಿದ ಪ್ರತಿಯಲ್ಲಿ ಕಂಡುಬರುವುದರಿಂದ ಮುದ್ರಕನ ಮೇಲೆ ಅದರ ದುಷ್ಪರಿಣಾಮಗಳು ಉಂಟಾಗುವುವು (ಮುದ್ರಕ. ೨೯). [ಸಂ.]

ಮುದ್ರಣ (ನಾ). ೧. ಅಕ್ಷರದ ಮೊಳೆ ಮುಂತಾದುವುಗಳನ್ನು ಜೋಡಿಸಿ ಕಾಗದ, ಬಟ್ಟೆ ಮುಂತಾದುವುಗಳ ಮೇಲೆ ಮುದ್ರಿಸುವುದು; ಅಚ್ಚು : ಅಕ್ಷರಗಳು, ಅಂಗಗಳು . . . ಕುರುಹುಗಳು ಮೊದಲಾದುವನ್ನು ಕಾಗದ, ಬಟ್ಟೆ, ಹಾಗೂ ಮತ್ತಾವುದಾದರೂ ಸ್ಥಿತಿಸ್ಥಾಪಕ ಗುಣವುಳ್ಳ ಹಾಳೆಯ ಮೇಲೆ ಒತ್ತುಯಂತ್ರದ ಒತ್ತಡದಿಂದ ಮಸಿಯಲ್ಲಿ ಪ್ರತಿ ತೆಗೆಯುವುದಕ್ಕೆ ಮುದ್ರಣವೆಂದು ಹೆಸರು (ಮುದ್ರಕ. ೧); ಕನ್ನಡ ವರ್ಣಮಾಲೆ ಕಲಿಯುವುದು ಕಷ್ಟ . . . ಮುದ್ರಣಕ್ಕೂ ತೊಡಕಾಗಿದೆ (ದ್ರಾಖಿ. ೯೬). ೨. ಮುದ್ರೆಯೊತ್ತುವುದು; ಮೊಹರು ಮಾಡುವುದು. [ಸಂ.]

ಮುದ್ರಣಕಾರ (ನಾ). = ಮುದ್ರಕ : ನಾಲ್ಕೈದು ಮುದ್ರಣಕಾರರಲ್ಲಿ ಹೋಗಿ ಕೇಳಿದ್ದಾಯಿತು (ಕಂಗಾಳ. iii. ಮುನ್ನುಡಿ). [ಸಂ.]

ಮುದ್ರಣಯಂತ್ರ (ನಾ) ಅಚ್ಚುಮಾಡುವ ಯಂತ್ರ: ಛಾಪುಯಂತ್ರ: ಮುದ್ರಿಸಬೇಕಾದ ವಸ್ತುವಿನ ಮೇಲೆ ಮಸಿ ಲೇಪಿಸಿ ಕಾಗದವನ್ನು ಅದರ ಮೇಲಿಟ್ಟು ಒತ್ತಿ ಪ್ರತಿತೆಗೆಯಲು ಉಪಯೋಗಿಸುವ ಸಾಧನವೇ ಮುದ್ರಣಯಂತ್ರ (ಮುದ್ರಕ. ೬೭). [ಸಂ.]

ಮುದ್ರಣಾಲಯ (ನಾ). ಮುದ್ರಿಸುವ ಸ್ಥಳ : ಅಚ್ಚುಕೂಟ; ಛಾಪಖಾನೆ : ಗುಪ್ತ ಮುದ್ರಣಾಲಯವಿದ್ದ ಮನೆಯೊಂದರಲ್ಲಿ ಕೆಲವು ಸಂಚುಗಾರರೊಡನೆ ಅವಳು ವಾಸಿಸುತ್ತಿದ್ದಳು (ಪ್ರಪರು. ೨೯೦). [ಸಂ.]

ಮುದ್ರಹಸ್ತ (ನಾ). ಯಾವನಾದರೂ ಒಬ್ಬ ರಾಜ, ದಂಡನಾಯಕ ಮುಂತಾದವರ ಪರವಾಗಿ ರಾಯಸದ ಪತ್ರಗಳಿಗೆ ಮುದ್ರೆಯನ್ನು ಒತ್ತಲು ಅಧಿಕಾರವನ್ನು ಪಡೆದಿರುವ ವ್ಯಕ್ತಿ (?) : ಶ್ರೀಮನು ಮಹಾಪ್ರಚಣ್ಡದಣ್ಡನಾಯಕ ಸೇ[ನಾ]ಧಿಪತಿ ಮುದ್ರಹಸ್ತಂ ಸುಂಕದ ಮಾಯಿದೇವದಂಡನಾಯಕರು (ಶಾಇಇ. XX. ೦೬೬-೯೯; 1193); ಆ ಸ್ಥಳದ [ಮುದ್ರಹ]ಸ್ತ ವಂಕುಡೆಯರ × × ಗೌಡನಾಡಗಳುಡ (ಶಾಇಇ. XX. ೨೨೬-೦೩; 1306)).

[℘ ಇದು 'ಮುದ್ರಾಹಸ್ತ' ಎಂಬುದರ ಅಪಲಿಖಿತವಿರಬಹುದು]

ಮುದ್ರಾಂಕಿತ (ಗು). ೧. ಮುದ್ರೆಯೊತ್ತಿದ ; ಅಚ್ಚೊತ್ತಿರುವ. ೨. ಅಚ್ಚಾದ; ಮುದ್ರಿತವಾದ : (೬). (ನಾ). ೩. ಮೊಹರು

ಮಾಡಿದುದು : ಮುದ್ರೆಯುಳ್ಳುದು : ಅರಸಂಗೆ ಮನೆವೆರ್ಗಡೆ ಮುದ್ರಾಂಕಿತಮಪ್ಪಶಾಸನದ ಮುದ್ರೆಯುಂ ಕಳೆದು ಸುತ್ತನಟಿಸಿದು ತೋಱುವುದುಂ (ಶಾಂತಿಪು. ೨-೨೨ ವ). ೪. ಗುರುತು ; ಲಾಂಛನ : ಚರಣಾಲಕ್ತಕಲಾಂಛನಂ ನಿಟಿಲದೊಳ್ ಕೇಯೂರಮುದ್ರಾಂಕಿತಂ ಕೊರಲೊಳ್ . . . ತಳ್ತೊಪ್ಪುವ್ಯ ನಿಚ್ಚಂ ವಿಚಿತ್ರರತಪ್ರೌಢತೆ ಭಾವಗಮ್ಯ ಮೆನಿಕುಂ ಶ್ರೀರೂಪಕಂದರ್ಪನಾ (ಜಗ್ಗನ್ನಾ. ೬೩೩). ೫. [ದ್ವೈತ] ವೈಷ್ಣವರು ಧರಿಸುವ ಶಂಖ, ಚಕ್ರ, ಗದಾ, ಪದ್ಮ ಮತ್ತು ನಾರಾಯಣ—ಎಂಬ ಐದು ಗುರುತುಗಳು : ಹೆಂಗಸರಲ್ಲಿಯೂ ಅನೇಕರು ಮುದ್ರಾಂಕಿತಪೊಂದಿ ಕೆಲಸಾರಿವರು (ವಾಗ್ಭೂ. ೪). ೬. ವಿಷ್ಣುಲಾಂಛನದಿಂದ ಕೂಡಿದ ಮುದ್ರೆಯನ್ನು ಹಾಕಿಕೊಳ್ಳುವವನು; ಮಾಧ್ವ: ವೈಷ್ಣವ : ದ್ವೈತದ ದಿವ್ಯಜ್ಞಾನವನ್ನು ಮುದ್ರಾಂಕಿತರಲ್ಲವವರಲ್ಲಿ ಮುದ್ರಿಸಿ ಹಂಚುವದು ಪಾಪವೋ ಪುಣ್ಯವೋ ಎಂಬ ಸಮಸ್ಯೆಯೇ ಇನ್ನೂ ಕೆಲವರಿಗೆ ಬಗೆಹರಿದಿಲ್ಲ (ವಿಚಾಮಂ. ೫). [ಸಂ.]

**ಮುದ್ರಾಕರ** (ನಾ). ೧. ಮೊಹರನ್ನು ತಯಾರಿಸುವವನು. ೨. ಚಿತ್ರ, ಅಕ್ಷರ ಮುಂತಾದುವನ್ನು ಕೆತ್ತುವವನು. ೩. ನಾಣ್ಯವನ್ನು ಟಂಕಿಸುವವನು. [ಸಂ.]

**ಮುದ್ರಾಕ್ಷರಶಾಲೆ** (ನಾ). = ಮುದ್ರಣಾಲಯ : ಶ್ರೀ ಸಿದ್ಧೇಶ್ವರಪುರಾಣವು . . . ಸ್ವಕೀಯ ಶಂಕರವಿಲಾಸ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಿ ಪ್ರಕಟಿಸಲ್ಪಟ್ಟಿತು (ಸಿದ್ಧೇಪು. ಮೊದಲ ಪುಟ). [ಸಂ. ಮುದ್ರಾಕ್ಷರಶಾಲಾ]

**ಮುದ್ರಾಧಾರಕ** (ನಾ). ೧. ಮೊಹರುಗಳನ್ನು ಹೊಂದಿರುವವನು. ೨. [ದ್ವೈತ] ತಪ್ತ ಮತೀಯಲಾಂಛನವಾದ ಮುದ್ರೆಯನ್ನು ಧರಿಸಿದವನು ; ವೈಷ್ಣವ ; ಮಾಧ್ವ. [ಸಂ.]

**ಮುದ್ರಾಧಾರಣ** (ನಾ). [ದ್ವೈತ] ವಿಶೇಷವಾಗಿ ಚಾತುರ್ಮಾಸದಲ್ಲಿ ಸುದರ್ಶನ ಹೋಮಮಾಡಿದ ಅಗ್ನಿಯಲ್ಲಿ ಶಂಖ, ಚಕ್ರಗಳ ಗುರುತುಗಳುಳ್ಳ ಲೋಹದ ಮುದ್ರೆಯನ್ನು ಕಾಯಿಸಿ, ಅದನ್ನು ಗುರುಗಳು ಗಂಡಸರ ಭುಜ, ಎದೆಗಳ ಮೇಲೂ ಹೆಂಗಸರ ಕೈ ಮೇಲೂ ಒತ್ತುವ ವಿಧಿ : ಮುದ್ರಾಧಾರಣದ ಮಾತು ಬಂದಾಗ ಮೇನಕೆ ಜಾನಕಿಬಾಯಿಯರ ನಡುವೆ ಮಹಾಯುದ್ಧವಾಗಿ ಕೊನೆಗೆ ಮೇನಕೆಯೇ ಗೆಲ್ಲುತ್ತಾಳೆ (ತವಂತಿ. ೬ ೩೬೪). [ಸಂ.]

**ಮುದ್ರಾಧಾರಣೆ** (ನಾ). ೧. = ಮುದ್ರಾಧಾರಣ : ಮುದ್ರಾಧಾರಣೆಯನ್ನು ಮಾಡಿಸಿಕೊಳ್ಳುವುದಕ್ಕಾಗಿ ಮತದ ಶಿಷ್ಯರ ದೊಡ್ಡ ಸಮೂಹವು ನೆರೆದಿತ್ತು (ವಾಗ್ಭೂ. ೩). 'ತಪ್ತಮುದ್ರಾಧಾರಣೆ' ಪರಾ. ೨. ಶಂಖ, ಚಕ್ರ, ಗದಾ, ಪದ್ಮ, ನಾರಾಯಣ ಎಂಬ ಐದು ಗುರುತುಗಳುಳ್ಳ ಲೋಹದ ಸಾಧನವನ್ನು, ಕಲಸಿದ ಗೋಪೀಚಂದನದಲ್ಲಿ ಅದ್ದಿ ಹಣೆ ಮತ್ತಿತರ ದೇಹಭಾಗಗಳಿಗೆ ಒತ್ತಿಕೊಳ್ಳುವಿಕೆ : ಆಚಾರ್ಯರು ಢಾಳಾಗಿ ಕಾಣುವಂತೆ ನಾಮವನ್ನು ಹಾಕಿಕೊಂಡು, ಮುದ್ರಾಧಾರಣೆ ಮಾಡಿಕೊಂಡರು (ಕೂಪ). [ಸಂ. ಮುದ್ರಾಧಾರಣ]

**ಮುದ್ರಾಧಿಕಾರ** (ನಾ). ರಾಜನ ಅಂಕಿತದ ಉಂಡಿಗೆಯ ಮೇಲಿನ ಅಧಿಕಾರ : ಮಹಾಸ್ವಾಮಿಯವರ ಮಹಾಸನ್ನಿಧಾನದಲ್ಲಲ್ಲದೆ ಸಂಪುಟದ ಮುದ್ರೆಯನ್ನು ಸಡಿಲಿಸಲಾಗದು . . ಮುದ್ರಾಧಿಕಾರವಿರುವುದು ಮಹಾಸ್ವಾಮಿಯವರಿಗೆ ಮಾತ್ರ (ಮಂತ್ರಶ. ೧೧-೧೭). 'ಮುದ್ರಾಧಿಕಾರಿ' ಪರಾ. [ಸಂ.]

**ಮುದ್ರಾಧಿಕಾರಿ** (ನಾ). = ಮುದ್ರಹಸ್ತ : ಮುದ್ರಾಧಿಕಾರಿ ಸಚಿವಾತಿ ವಿಶುದ್ಧವು (ಬು)ದ್ಧಿ[ಃ] (ಎಇ. XXX, ೧೬೭-೧೩: 13ನೆಯ ಶತ). [ಸಂ. ಮುದ್ರಾಧಿಕಾರಿನ್]

**ಮುದ್ರಾಪಂಚಕ** (ನಾ). [ವೀಶೈ] ಭಿಕ್ಷಾಪಾತ್ರೆ, ಭಸ್ಮಘುಟಿಕೆ, ಕಂಥೆ, ದಂಡ ಮತ್ತು ಕಮಂಡಲುಗಳೆಂಬ ದೀಕ್ಷಾವಿಧಿಯ ಐದುಬಗೆಯ ಲಾಂಛನ : ನಿದ್ರೆಗೆಯ್ದಿರೆ ಭೂಪಾಲಂ ರುದ್ರಂ ಜಂಗಮವೇಷದಿಂ ಭದ್ರಾಕಾರದಿನೆಯ್ತಂದು ಮುದ್ರಾ[ಪಾಠಾಂ. ದ್ರ]ಪಂಚಕಯುಕ್ತದಿಂ (ಹಾಲಾಸ್ಯ. ೦-೪-೫೦). 'ಪಂಚಮುದ್ರೆ' ಪರಾ. [ಸಂ.]

**ಮುದ್ರಾಪಚಾರ** (ನಾ). ಅಧಿಕಾರದ ಮುದ್ರಿಕೆಯನ್ನು ದುರುಪಯೋಗ ಮಾಡಿಕೊಳ್ಳುವ ಅಥವಾ ಖೋಟಾನಾಣ್ಯಗಳನ್ನು ಬಳಸುವ ಅಪರಾಧ : ಮುದ್ರಾಪಚಾರೇ ವಿನಯೇ ರೂಪಕಾಃ ಷಟ್ಪಾದಾಃ ಸಹ ಧಾರ್ಮಿಕೇಣ (ಎಇ. XXX, ೦೭೯-೦೪ ; 605). [ಸಂ.]

**ಮುದ್ರಾಪಣ** (ನಾ). ಯಾವುದಾದರೊಂದು ನಿರ್ದಿಷ್ಟಲಾಂಛನವುಳ್ಳ ನಾಣ್ಯ,— ಹಣ : ದೇವಮಾನ್ಯವು ಧರ್ಮವಿಚಾರದಲ್ಲಿ ಮುದ್ರಾಪಣ ಮಾಡಿ (ಕಲಂಶಾ. ೭-೨೫ ; 1091); ಆ ದೇವರಲ್ಲಿ ಶಪಥಂಗೆಯ್ದರು ಕೊಟ್ಟ ಮುದ್ರಾಪಣಂ ಒಳಗಾಗಿ ಶ್ರೀರಾಮೇಶ್ವರದೇವರ ಗೋಪುರದೊಳಗಣ ನಷ್ಟೋದ್ಧಾರಕ್ಕಂ ಕೊಟ್ಟರು (ಕೆಇಆ. ೦-೦-೦೯; 1092); ಸೆಟ್ಟಿಗುತ್ತಂ ತನ್ನ ಬಿಟ್ಟಾಯಮಂತೆಂದೊಡೆ ಹಸುಂಬೆಯನಿಕ್ಕುವಲ್ಲಿ ಹಸೆಯ ಜವಳಿ ಗಂಧರ ಬಟ್ಟಲು ಒಂದು ಗೋಂಟು ವಿಚಾರಂಗೆಯ್ದವರಲ್ಲಿ ಮುದ್ರಾಪಣಂ ಹೊಂಗೆ ಹಾಗಂ (ಎಇ. XIX, ೭೮-೭೦; 1144). [ಸಂ.]

**ಮುದ್ರಾಪಣೆ** (ನಾ). ಹೈದರನ ಕಾಲದಲ್ಲಿ ಕಂದಾಯದ ಅಧಿಕಾರಿಗಳ ಅಗತ್ಯಗಳನ್ನು ಪೂರೈಸದಿದ್ದವನ ಮನೆಯನ್ನು ಗುರುತುಮಾಡಿ ಅಥವಾ ಮೊಹರುಮಾಡಿ ಮುಚ್ಚುತ್ತಿದ್ದ ಒಂದು ಕ್ರಮ ; ಹೀಗೆ ಮಾಡಿದ ಮೇಲೆ ಸೈನಿಕರು ಆ ಮನೆಗೆ ಮುತ್ತಿಗೆ ಹಾಕುತ್ತಿದ್ದುದರಿಂದ ಆ ವ್ಯಕ್ತಿಯು ಶರಣಾಗುತ್ತಿದ್ದನು: (ಕಸಂಗ್ರಾ. ೦೩೪). [ಸಂ. ಮುದ್ರಾ]

**ಮುದ್ರಾಪತ್ರಿಕೆ** (ನಾ). ಮೊಹರುಮಾಡಿದ ಕಾಗದ : ಮುದ್ರೆಯೋಲೆ: ಸಂಶಯಕ್ಕೆ ಎಡೆಯೇ ಇಲ್ಲ; ಅದು ನಮ್ಮ ಮುದ್ರಾಪತ್ರಿಕೆ (ಮಂತ್ರಶ. ೧೭೦-೮). [ಸಂ. ಮುದ್ರಾಪತ್ರಿಕಾ]

**ಮುದ್ರಾಪ್ರಭು** (ನಾ). = ಮುದ್ರಹಸ್ತ : ಕಲ್ಲಿನಾಥದೇವರ ಮಾನ್ಯ ಸರ್ವಮಾನ್ಯ ಸರ್ವಬಾಧೆ ಎಲ್ಲ ಪರಿಹಾರವೆಂದು ಆ ಮುದ್ರಾಪ್ರಭು ಮಾನ್ಯಕಾಜಿ ಸಮಸ್ತಪ್ರಜೆ . . . ದೇವರಿಗೆ ಬಿಟ್ಟ ಧರ್ಮ (ಕಇ. II. ೪೨-೨೯; 1306). [ಸಂ.]

**ಮುದ್ರಾಮಂಜೂಷ** (ನಾ). ೧. ಮೊಹರುಮಾಡಿದ ಪೆಟ್ಟಿಗೆ.— ಸಂದೂಕ. ೨. ಕೆಂಪುನಾರಾಯಣನೆಂಬ ಕವಿಯು ಹತ್ತೊಂಬತ್ತನೆಯ ಶತಮಾನದಲ್ಲಿ ರಚಿಸಿದ ಒಂದು ಕನ್ನಡಗದ್ಯಗ್ರಂಥ : ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ಪರ್ವತರಾಜ ಸೇನಾಗಮನ ಕಥನವೆಂಬ ಚತುರ್ಥಾಶಯಸ್ಸಮಾಪ್ತಃ (ಮುದ್ರಾಮಂ. ೪೦); ಕೆಂಪುನಾರಾಯಣನ ಒಂದೇ ಒಂದು ಗ್ರಂಥವಾದ—'ಮುದ್ರಾಮಂಜೂಷ'ವನ್ನು ನೋಡಿದರೆ ಹೊಸಗನ್ನಡ ಗದ್ಯದ ನಸುಕುಮೂಡಿತೆಂದು ನಿಚ್ಚಳವಾಗಿ ತೋರುತ್ತದೆ (ಕಸಾತ. ೩೭೮). [ಸಂ.]

**ಮುದ್ರಾರಾಕ್ಷಸ** (ನಾ). ೧. ವಿಶಾಖದತ್ತನೆಂಬ ಕವಿಯು ಸಂಸ್ಕೃತದಲ್ಲಿ ಬರೆದಿರುವ ಒಂದು ಪ್ರಸಿದ್ಧನಾಟಕ : 'ಇದು ಮುದ್ರಾರಾಕ್ಷಸವೆಂಬ ಸಂಸ್ಕೃತನಾಟಕಕ್ಕೆ ಗದ್ಯರೂಪವಾದ ಭಾಷಾಂತರವು' ಎಂಬ ಹೇಳಿಕೆ ಯಥಾರ್ಥವಲ್ಲ (ಕಸಾತ. ೩೭೮); ಮೌರ್ಯವಂಶದ ಚಂದ್ರಗುಪ್ತನಿಗೆ (ಕ್ರಿ.ಪೂ. ೩೨೩–೨೯೮) ರಾಜ್ಯಕೊಡಿಸುವ ಪ್ರಯತ್ನದಲ್ಲಿ ಚಾಣಕ್ಯನು ಜೈನರನ್ನು ಸಹಾಯಕ್ಕೆ ತೆಗೆದುಕೊಂಡ ವಿಷಯ ಮುದ್ರಾರಾಕ್ಷಸನಾಟಕದಲ್ಲಿ (ಕ್ರಿ.ಶ. ೪೦೦) ಬಂದಿದೆ (ಕಶಾಅ. ೭೦). ೨. (ಅಲಂ) ಮುದ್ರಣದಲ್ಲಿಯ ತಪ್ಪು,— ದೋಷ : ಮುದ್ರಾರಾಕ್ಷಸನನ್ನು ಹಿಡಿತದಲ್ಲಿ ತರಲು ಅಚ್ಚುಕೂಟದಿಂದ ದೂರದಲ್ಲಿದ್ದ ನಮಗೆ ಸಾಧ್ಯವಾಗಲಿಲ್ಲ (ಹಾಮ್ಯಾಕ. XXV, ಮುನ್ನುಡಿ). [ಸಂ.]

ಆವರಿಸುವಂತೆ ಮಾಡು : ತತ್ತ್ವಾರ್ಥಸೂತ್ರಮಂ ಬರೆದು ಗೃಧ್ರಪಿಂಛಾಚಾರ್ಯರ್ಜಸದಿಂ ದಿಗಂತಮಂ ಮುದ್ರಿಸಿ ಜಿನಶಾಸನದ ಮಹಿಮೆಯಂ ಪ್ರಕಟಿಸಿದರ್ (ಶಾಕುಂಪು. ೨); ಚತುರಬ್ಧಿಮೇಖಲಾವಳಯಿತ ಭೂಮಿಗಾದನೆಱೆಯಂ ನೃಪತಿ ಪ್ರಭುಲೋಕಮಂ ನಿಜೋಜ್ಜ್ವಳತರಕೀರ್ತಿಯಿಂ ನೆಱೆಯೆ ಮುದ್ರಿಸಿ ಶೂದ್ರಕನೆಂಬ ಭೂಭುಜಂ (ಶಾದಂಘ. ೮); ಆವ ಮಹಿಲದೊಳರ್ಜುನನ ಬಾಣಾವಳಿಯು ತಱಿದೆಸೆಟ್ಟ ಮುಗುಳೆ ಶರಾವಳಿಯ ಕೊನೆಗಳಲಿ ಮುದ್ರಿಸಿದನು ಧನಂಜಯನ (ಕುಮಾಭಾ. ೨೦-೬೨). ೧೧. ಅಡಗು : ಕಣ್ಣಿಗೆ ಕಾಣದಿರು ; ಮಾಯವಾಗು : ಜರಿದುದತಿರಥರಾಜಿ ಬಾಯಲಿ ಕರಿಷ ಹಾಯ್ದುದು ಭೂಮಿಪಾಲರ ಬಿರುದು ಮುದ್ರಿಸಿದವು ಸಮೀರಕುಮಾರನುರವಣೆಗೆ (ಕುಮಾದ್ರೋ. ೦೬-೦೮). ೧೨. ಅಡಗಿಸು ; ಕಾಣದಂತೆ ಮಾಡು ; ಮರೆಮಾಡು : ಮುದ್ರಿಸಲಾದಿರಾಜಚರಿತಂಗಳ ಸಾತ್ಮಚರಿತ್ರಂ . . . ವಿಷ್ಣುಸಮುದ್ರನೊಪ್ಪುವಂ (ಎಕ. III (R). ಶಂಜನ. ೨೩೮-೯; 1169); ಶಾಲೆಯಂ ನಿಸ್ಸಂಘವಣೆಯ ಛಪಾಳತನವನು ಮುದ್ರಿಸುವೆನೆನುತೆಚ್ಚನಭಿಮನ್ಯು (ಕುಮಾದ್ರೋ. ೫-೪೦). ೧೩. ಬಚ್ಚಿಡು; ಹುದುಗಿಸು : ಹುಗಿ : ತತ್ಪರಿತಮಂ ಖಂಡಿಸುತ ಶೋಧಿಸುತ ನೋಡುತ ತಂಡತಂಡದ ನವ್ಯಶಾಕಂಗಳನೊಲಿದು ಮಾಡಿ ಕ್ಷಾರದಲ್ಲಿ ಮುದ್ರಿಸಿ ಮಡದಿ ಜನರಾರುಮಱಿಯದ ಹಾಂಗೆ ರುದ್ರಾಕ್ಷಕಾರನಂ ಬಿಜಯಂಗೆಯಿಸಿ (ಬಸವ. ೨೮-೨೨). [ಮುದ್ರೆ + -ಇಸು]

ಮುದ್ರೆ (ನಾ). ೧. ಹುಂಡಿ, ಭಾಂಗಿ ಮುಂತಾದುವುಗಳ ಮೇಲೆ ಭದ್ರತೆಗಾಗಿ ಹಚ್ಚುವ ಅರಗು, ಸೀಸ ಮೊದಲಾದವುಗಳ ಮೇಲಿನ ಮುದ್ರಿಕೆ. - ಉಂಡಿಗೆ. - ಮೊಹರು : ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ (ಗದಾಯು. ೦-೪೮) ; ನಿಧಿ ನಿಕ್ಷೇಪ ಅಂಕ ಟಂಕ ಆಣೆ ಗೋಸನೆ ಮುದ್ರೆ . . . ಪಾರಣೆಯ ಜಂಗಮಾರಾ[ಧ]ನೆಗೆ ಕೊತ್ತಸಿಗೆ ಇ (ಈ) ಧರ್ಮಕ್ಕೆ [ಇ]ದು ವಿವರವೆಂದು ನಾಗರಸ[ರು] ಕೊಟ[ಟ್ಟ] ಸಾಸನ (ಎಕ. XXI. ೦೯-೬೩ ; 1200) ; ತನ್ನ ಮಗ ಮದನಂಗೆ ಮುದ್ರೆಸಹಿತ ಸರ್ವಜನಮಱಿಯದಂತೀವುದೀ ಪತ್ರಿಕೆಯನು (ಕೃಷ್ಣಾ. ೨೮-೪೯) ; ಕರಣಿಕನು ಮುದ್ರೆಯನ್ನು ಒಡೆದು ಚೀಲದೊಳಗಿಂದ ಓಲೆಯನ್ನು ಹೊರತೆಗೆದ (ಶಾಂತ. ೯೮). ೨. ಮೊಹರುಮಾಡುವ ಅರಗು, ಸೀಸಗಳ ಮೇಲೆ ಒತ್ತುವ- ಸರಕಾರ, ಅಧಿಕಾರಿ, ರಾಜ ಮುಂತಾದವರ ನಿರ್ದಿಷ್ಟ ಚಿಹ್ನೆಯುಳ್ಳ (ಲೋಹದ) ವಸ್ತು ; ಮುದ್ರಿಕೆ : ಹಿರಿಯ ಬಿರುದಿನ ಮುದ್ರೆಯಿದು ನಗರವಿದು . . . ಮೇಲಾಳ್ಕೆ ಸರ್ವಸ್ವವಿದು ನೋಡಿಕೋ ಮಹಾಪುರುಷ (ಜಕಶಾ. ೯-೯). ೩. ಪತ್ರ, ದಸ್ತೈವಜು ಮುಂತಾದುವುಗಳ ಮೇಲೆ ಸ್ಥಿರೀಕರಣಕ್ಕಾಗಿ ಸರ್ಕಾರ ಅಥವಾ ರಾಜನ ಪರವಾಗಿ ಮೊಹರನ್ನು ಒತ್ತುವುದರಿಂದುಂಟಾಗುವ ಗುರುತು. -ಚಿಹ್ನೆ : ರಾಜನ ಮುದ್ರೆ ಪ್ರತಿ ಆಣೆಯ ಮೇಲಾದರೆ ದೇವರ ಮುದ್ರೆ ಪ್ರತಿ ಕಾಳಿನ ಮೇಲೆ ಇರುತ್ತದೆ (ವಾಶಕ. ೩) ; ಹಣವೆಂದರೆ ಮೂಲತಃ ಯಾವುದಾದರೊಂದು ರಾಜ್ಯದಲ್ಲಿ ಅಲ್ಲಿನ ಅಧಿಕಾರಿಗಳು ತಮ್ಮ ಮುದ್ರೆ ಒತ್ತಿ ಬಳಕೆಗೆ ತರುವ ಒಂದು ಬಗೆಯ ಪದಾರ್ಥವಿಶೇಷ (ಹಣಶ. ೨). ೪. ಗುರುತು: ಲಾಂಛನ; ಚಿಹ್ನೆ : ಪದಗಳು ಜನಮನದ ಟಂಕಸಾಲೆಯಲ್ಲಿ ಭಾವದ ಮುದ್ರೆಯನ್ನು ತಳೆದು ಚಲಾವಣೆಗೆ ಬರುವ ನಾಣ್ಯಗಳಿದ್ದಂತೆ (ಶ್ರೀಂದಸ. ೯೨). ೫. ಸಂಕೇತವನ್ನು ಕೆತ್ತಿರುವ ಉಂಗುರ ; ಮುದ್ರಿಕೆ : "ಮುದ್ರಾಯೆಂಬುದು ಅಕ್ಕರಂ ಬೆರಸಿದರ್ಪಂಗುರಂ" (ಶಬ್ದಮ. ೯೨-೯೦೫) ; ಪರಕಥೆಗೆ ಕಿವಿಗೊಡುವ ಓಲೆಯ ಬೆರಳ ಧರ್ಮಕ್ಕೊಲಿವ ಮುದ್ರೆಯ ಧರಿಸಿಹರು ಪಾತಾಳಲಂಕೆಯ ಪುರದ ನಾರಿಯರು (ಕೌಶಿಕ. ೪೯-೬). ೬. ಲಾಂಛನವನ್ನು ಮುದ್ರಿಸಿರುವ ನಾಣ್ಯ. ಪದಕ ಮುಂತಾದುವು.

೭. ರಹದಾರಿ ; ಪರವಾನಗಿ. ೮. ಮುಚ್ಚಿರುವಿಕೆ ; ತೆರೆಯದಿರುವಿಕೆ. ೯. ಸಂಧ್ಯಾವಂದನೆ, ಸಂಕಲ್ಪ, ಪೂಜೆ ಮುಂತಾದ ಸಂದರ್ಭಗಳಲ್ಲಿ ಬೆರಳುಗಳನ್ನು ನಿರ್ದಿಷ್ಟಕ್ರಮದಲ್ಲಿ ಮಡಿಚಿ ತೋರುವ ವಿನ್ಯಾಸ. ೧೦. ಕಾವ್ಯ, ಹಾಡು ಮುಂತಾದುವುಗಳ ಕೊನೆಯಲ್ಲಿ ಸೂಚಿತವಾಗುವ ಕರ್ತೃವಿನ ಇಷ್ಟದೈವ, ಕುಲದೇವರು ಅಥವಾ ಕೃತಿಕರ್ತನ ಹೆಸರು. - ಅಂಕಿತ : ಯಾವ ಕೃತಿಕರ್ತನೂ ತನ್ನ ದೇಹವನ್ನೂ ಕೃತಿಯನ್ನೂ ತನ್ನ ಆರಾಧ್ಯದೇವರಿಗೆ ಸಮರ್ಪಿಸುವುದು ಸಂಪ್ರದಾಯ. ಈ ಸಮರ್ಪಣೆ ಅಥವಾ ಮುಡಿಪಿಗೆ 'ಅಂಕಿತ' ಅಥವಾ 'ಮುದ್ರೆ' ಎಂದು ಹೆಸರು (ಸಂಗೀತಂ. ೬೦) ; ಪಟ್ಣಂ ಸುಬ್ರಮ್ಹಣ್ಯ ಅಯ್ಯರ್ . . . ಕೆಲವು ರಚನೆಗಳಲ್ಲಿ "ವರದ ವೆಂಕಟೇಶ್ವರ", "ಆದಿ ವೆಂಕಟೇಶ" . . . ಎಂಬ ಮುದ್ರೆಯನ್ನು ಉಪಯೋಗಿಸಿದ್ದಾರೆ (ಸಂಗೀತ. ೨೮). ೧೧. ಅಭಿವ್ಯಕ್ತಿ ; ಮುಖಭಾವ : ನಿದ್ರೆಯಿಂ ಸುಖವಿಲ್ಲ ಮದ್ರದಿಂ ಅರಿವಿಲ್ಲ ಮುದ್ರೆಯಿಂದಧಿಕ ಮಾತಿಲ್ಲ (ಸರ್ವಜ್ಞ. ೨೬೦) ; ಹುಡುಗನ ಮುಖದಲ್ಲಿ ಕರುಣಾಜನಕಮುದ್ರೆ ಮೂಡಿ ನಿಂತಿತು (ಕುಂಗಿಶು. ೩) ; ದುಷ್ಟಬುದ್ಧಿಗೆ ಮಗಳನ್ನು ನೋಡಿದೊಡನೆ ಅಭ್ಯಾಸಬಲದಿಂದೆಂಬಂತೆ ಸಂತೋಷದ ಮಂದಸ್ಮಿತಮುದ್ರೆಯೊಂದು ಸುಳಿದು ಒಡನೆಯೆ ಮಾಯವಾಗಿ, ಬದ್ಧಭ್ರುಕುಟಿಯ ವದನವಿಕಾರತೆಯುಂಟಾಗುತ್ತದೆ (ಚಂದ್ರಸ. ೯೦-೫). ೧೨. (ಆಲಂ) ಬಿಗುಹು ; ಭದ್ರತೆ : ಯೌವನದ ಮುದ್ರೆಯನೊಡೆದಿಯಲ್ ಬರ್ಪ ಮನೋಜನಂತೆ . . . ಸೌಂದರಂ ಪರವೆಯರ ಮನೆಗೆ ನಡೆತಂದು (ಸುಂದರ. ೦೦-೩೦). ೧೩. ಪರಿಣಾಮ ; ಪ್ರಭಾವ ; ವರ್ಚಸ್ಸು : ಕಲಿಯುವಾಗ ಆಗುವ ಅನುಭವ ಮಕ್ಕಳ ನರವ್ಯೂಹದಲ್ಲಿ ತನ್ನ ಮುದ್ರೆಯನ್ನೊತ್ತುತ್ತದೆ (ಶಿಕ್ಷಣ. ೦೯೦) ; ಗುರುಚರಣರ ಹೃದಯದ ಮೇಲೆ ಗಿರೀಂದ್ರನ ಮಾತುಗಳು ಚೆನ್ನಾಗಿ ಮುದ್ರೆಯನ್ನು ಹಾಕುತ್ತಿದ್ದುವು (ಶಂಕೆ. ೪೫). ೧೪. [ದ್ವೈತ] ವೈಷ್ಣವರ ಲಾಂಛನವಾದ ಶಂಖ, ಚಕ್ರ ಮೊದಲಾದುವುಗಳ ಗುರುತುಳ್ಳ ಲೋಹದ ಸಾಧನ ಮತ್ತು ಆ ಸಾಧನದಿಂದ ದೇಹದ ಮೇಲೆ ಹಾಕಿಕೊಳ್ಳುವ ಗುರುತು : ಒಂದೊಂದು ಕೈಮೇಲೆ ಒಂದೊಂದು ಮುದ್ರೆಯನ್ನು ಬಹು ಸೂಕ್ಷ್ಮವಾಗಿ ಒತ್ತಿಬಿಟ್ಟು . . . ಅವಳ ಕೃತಜ್ಞತೆಗೆ ಪಾತ್ರರಾದರು (ವಾಗ್ದೇವಿ. ೩) ; ಈ ಗುಣಗಳನ್ನು ಅಳವಡಿಸಿಕೊಳ್ಳುವುದೇ ನಿಜವಾದ ಧರ್ಮ. ಇದಿಲ್ಲದೆ ನಾಮ, ಮುದ್ರೆ, ಲಿಂಗ, ಜನಿವಾರ, ಗಡ್ಡಗಳೆಲ್ಲವೂ ಡಂಭಾಚಾರ (ಹುಕ್ಕೇರಿ. ೦೬೨). ೧೫. [ವೀರಶೈ] ದೀಕ್ಷಾವಿಧಿಯಂ ಭಿಕ್ಷಾಪಾತ್ರೆ, ಭಸ್ಮಘುಟಿಕೆ, ಕಂಥೆ, ದಂಡ ಮತ್ತು ಕಮಂಡಲುಗಳೆಂಬ ಐದುಬಗೆಯ ಸಾಧನ : ಕರದಲ್ಲಿ ಕಪ್ಪರವಿಲ್ಲ ಕೈಯಲ್ಲಿ ಕಟ್ಟಿಗೆ ಇಲ್ಲ ಕರ್ಣದಲ್ಲಿ ಮುದ್ರೆ ಇಲ್ಲ ಶಿರದಲ್ಲಿ ಜಟಾಬಂಧವಿಲ್ಲ ಕಕ್ಷೆಯಲ್ಲಿ ಭಸ್ಮಗಂಟಿಕೆ ಇಲ್ಲ (ಶೂನ್ಯಸಂ. ೦೫೫-೫೯೩) ; ಗುರೂಪದೇಶದಲಿ ಮುದ್ರೆಯನು ಮುಟ್ಟುವರು ಸೌಖ್ಯಸಮೃದ್ಧಿಯೊಳಗೋಲಾಡುವರು (ಶ್ರೀಕುಂ. ೦೦೦). ೧೬. [ನಾಟ್ಯ] ನೃತ್ಯ, ನಾಟಕಗಳಲ್ಲಿ ಅಂಗಗಳ ಚಲನವಲನದಿಂದ ತೋರಿಸುವ ವಿನ್ಯಾಸ : ಅಭಿನಯದಲ್ಲಿ ಮುದ್ರೆಗಳಿಗೆ ಇರುವ ಸ್ಥಾನವು ಅಗ್ರಗಣ್ಯವಾದುದು . . . ಅಭಿನಯದಲ್ಲಿ ನಟನ ಇಡೀ ದೇಹವು ಪ್ರವೃತ್ತವಾಗಿದ್ದರೆ, ಮುದ್ರೆಗಳಲ್ಲಿ ಅವನ ಒಂದೊಂದು ಅಂಗ ಮಾತ್ರ ಕೆಲಸ ಮಾಡುತ್ತದೆ. ಮುದ್ರೆಗಳನ್ನು ಮಾಡುವಾಗ್ಗೆ ಒಂದು ಅಂಗದ ಚಿಕ್ಕಚಲನೆ ಕೂಡ ಮಹತ್ತರವಾದ ಅರ್ಥವನ್ನು ಸೂಚಿಸಬಲ್ಲುದು (ಅಭಿನ. ೪೩). ೧೭. [ಶಿಲ್ಪಶಾ] "ಪ್ರತಿಮೆಗಳ ಕೈ ಮತ್ತು ಬೆರಳುಗಳ ವಿಶೇಷ ಸ್ಥಿತಿಗೆ "ಮುದ್ರೆ" —ಎಂದು ಹೆಸರು" (ಶಿಲ್ಪ. ೫೦೩). ೧೮. ಮಂತ್ರಶಾಸ್ತ್ರ ಪ್ರಸಿದ್ಧವಾದ ಒಂದು ಬಗೆಯ ವಿನ್ಯಾಸ (?) : ಅಸ್ತ್ರಮುದ್ರೆ ಚಕ್ರಮುದ್ರೆ . . . ಸಂಹಾರ

ಮುದ್ರೆಯೆಂಬ ಸಕಲಮುದ್ರಾಲಕ್ಷಣವಸಜಾದಾಯುಕ್ರಿಯೆಗಳಲ್ಲಿ ಪ್ರಯೋಗಿಸಿ (ಶಿಲೀಕ. ೯೩). 'ದ್ರವ್ಯಮುದ್ರೆ' ಪರಾ.

**ಮುದ್ರೆಯಅದ್ದಿಕೆ** = ಮೊಹರಿನ ಮೇಲ್ವಿಚಾರಣೆ.– ಉಪ್ಪುವಾರಿ: ಮುದ್ರೆಯಅದ್ದಿಕೆಕ್ಕೆ ಗ ೧೨ ಗಂಧಕಡಿ ನೀರವರಿಗೆ ೧೩ (ಎಕ. V (R), ತಿರುಹು. ೯೩-೪೪; 1276). **ಮುದ್ರೆಯುವ** = ೧. ಸಾರ್ವಜನಿಕ ವ್ಯವಹಾರ ಪತ್ರಗಳಿಗೆ ಮುದ್ರೆಯೊತ್ತುವವನು: (*). ೨. ವಿಷ್ಣುವಿನ ಲಾಂಛನವಾದ ಶಂಖ, ಚಕ್ರ ಮುಂತಾದುವನ್ನು ತನ್ನ ದೇಹದ ಮೇಲೆ ಧರಿಸುವವನು ; ವೈಷ್ಣವ. **ಮುದ್ರೆಯುವೋಲಗ**= ರಾಜನ ಮೊಹರನ್ನು ನೋಡಿಕೊಳ್ಳುವ ಕೆಲಸ, – ಸೇವೆ: ಸೇನಬೋಕೆಯೊಂದಕ್ಕಂ ಗದ್ಯಾಣಂ ಹನ್ನೆರಡು ಮುದ್ರೆಯು ವೋಲಗಕ್ಕೆ ಗದ್ಯಾಣಂ ಹನ್ನೆರಡು (ಎಕ. V (R), ತಿರುಹು. ೬೬-೬೭ ; 1276).

[ಸಂ. ಮುದ್ರಾ]

**ಮುದ್ರೆಕೊಳಗ** (ನಾ). ಸರಿಯಾದ ಅಳತೆಯದೆಂದು ಅಧಿಕೃತವಾಗಿ ಒಪ್ಪಿಗೆ ಪಡೆದು ಸರ್ಕಾರದ ಮೊಹರನ್ನು ಹೊಂದಿರುವ ಕೊಳಗ : ಆರೋಗಣೆಗೆ ಸಲುವುದು ಅವಸರವಂದಕೆ ಅಮೃತಪಡಿ ದಿನವೊಂದಕೆ ಮುದ್ರೆಕೊಳಗದಲಿ ೧೫೦ ಇ ೪ಕೆ ಕೊಳಗ ಒಂದಕೆ ಪಡಿ ೧೪ಬ ಲೆಕದಲಿ ಸಲುವ ಪಡಿ ೧೯೬ಕೆ ಪ್ರಸಾದವೆಚ (ಎಕ. VI (R). ಕಾಂಡರ. ೧೨೯-೭ ; 1545). [ಮುದ್ರೆ + ಕೊಳಗ$_1$]

**ಮುದ್ರೆಕೋಲು** (ನಾ). ಅರಮನೆಯ ಅಪ್ಪಣೆಯನ್ನು ಮೀರಿ ನಡೆದವರ ಧಾನ್ಯದ ರಾಶಿಗೆ ಮುದ್ರೆಹಾಕಲು ತೋಟಿ, ತಳವಾರ ಮುಂತಾದವರು ಬಳಸುತ್ತಿದ್ದ ಮೊಹರುಳ್ಳ ಮರದ ಕೋಲು. –ದಂಡ : ಆಚೆ ಈಚೆ ಸೂರ್ಯಚಂದ್ರರನ್ನೂ ಮಧ್ಯೆ 'ದೇ' ಎಂಬ ಅಕ್ಷರವನ್ನೂ ಕೆತ್ತಿಸಿದ ಈ ಮುದ್ರೆಕೋಲನ್ನು ಗ್ರಾಮಗಳ ಚಾವಡಿಯಲ್ಲಿ ಇರಿಸಿ . . . ಆ ಮುದ್ರೆಕೋಲನ್ನು ತೆಗೆದುಕೊಂಡು ಹೋಗಿ ಮುದ್ರೆಹಾಕುವಂತೆ ನಿಬಂಧನೆ ಮಾಡಿದರು (ಹಾಕುಶಂ. I. ೦೦೯). [ಮುದ್ರೆ + ಕೋಲು$_1$ (< ಕೋಲ್$_1$)]

**ಮುದ್ರೆಗಟ್ಟು** (ನಾ). ಪತ್ರ ಮುಂತಾದುವುಗಳನ್ನು ದಾರದಿಂದ ಕಟ್ಟಿ ದಾರದ ಗಂಟಿನ ಮೇಲೆ ಹಾಕುವ ಮೊಹರು.–ಉಂಡಿಗೆ: (ಓಲೆಯನ್ನೀಯಿಸಿಕೊಂಡು, ಅದರ ಮುದ್ರೆಗಟ್ಟನ್ನು ತಿರುಗಿಸಿ ಪರೀಕ್ಷಿಸಿ) (ಚಿಕ್ಕ. ೬೬-೨೬). [ಮುದ್ರೆ + ಕಟ್ಟು$_2$]

**ಮುದ್ರೆಗಾಣಿಕೆ** (ನಾ). ಒಂದು ಬಗೆಯ ತೆರಿಗೆ (?): ಹತ್ತಿಪೊಂಮು ಮಾರ್ಗದ ಸುಂಕ ದೇವರಾಯವಟ್ಟ ಪಟ್ಟಿಗಾಣಿಕೆ ಮುದ್ರೆಗಾಣಿಕೆ ಸೂಪ್ಪಿನ ತೋಟ . . . ನಿರ್ವಿವಾದವಾಗಿ ಸಲುವದು (ಎಕ. V (R). ತಿರುಹು. ೦೬-೦೬೬೯; 1749). [ಮುದ್ರೆ + ಕಾಣಿಕೆ (< ಕಾಣ್ಕೆ)]

**ಮುದ್ರೆಗೂಳಿ** (ನಾ). ಒಂದು ನಿರ್ದಿಷ್ಟ ಕಾರಣಕ್ಕಾಗಿ ಮೀಸಲು ಮಾಡಿ, ಯಾವುದಾದರೊಂದು ನಿರ್ದಿಷ್ಟ ಲಾಂಛನವನ್ನು ಬೆನ್ನಿನ ಮೇಲೆ ಮುದ್ರಿಸಿ ಸ್ವೇಚ್ಛೆಯಾಗಿ ತಿರುಗಲು ಬಿಟ್ಟಿರುವ ಗೂಳಿ : ಅಣ್ಣನು ಒಬ್ಬ ಗೌಳಿಗನ ವೇಷ ಹಾಕಿಕೊಂಡು ಆ ಮುದ್ರೆಗೂಳಿಯನ್ನು ತಂದು ಅರಮನೆಗೆ ಕೊಟ್ಟನು (ಲೀಲಾಕ. ೩೩). [ಮುದ್ರೆ + ಗೂಳಿ$_1$]

**ಮುದ್ರೆಪಡಿ** (ನಾ). = ಮುದ್ರೆಕೊಳಗ : ಆ ಪೊನ್ನ ಮುದ್ರೆಪಡಿಯ ತಂದು ಅಳಕೊಳ್ಳ (ಕೆಶಾ. ೬೨). [ಮುದ್ರೆ + ಪಡಿ$_1$]

**ಮುದ್ರೆಪ್ರಭು** (ನಾ). = ಮುದ್ರಾಹಸ್ತ : ಆ ಮುದ್ರೆಪ್ರಭು ಮಾನ್ಯಕಾಜ ಸಮಸ್ತಪ್ರಜೆ [ಗಳು] ಆಚಂದ್ರಾರ್ಕಸ್ಥಾಯಿಯಾಗಿ ಕಲ್ಲಿನಾಥದೇವಂಗೆ ಬಿಟ್ಟ ಧರ್ಮ (ಸೌಇಇ. XX, ೨೨೬-೨೯; 1306). [ಮುದ್ರೆ + ಪ್ರಭು]

**ಮುದ್ರೆಬಸವಿ** (ನಾ). (?) : ಯಡಗೈ ಬಲಗೈ ಮನೆ ೧೬ ಮುದ್ರೆಬಸವಿಗೆ ಮಗನಿಕಿವಾ ದೇವಾಂಗದವರು ಜಾತಿಗಟ್ಟಿಯವರು ಸಹಾ ಮಗ ೧ಕ್ಕೆ ಮೇರೆಯಲ್ಲು ಕೊಡಲುಳವರು (ಎಕ. XIV. ಗುಣ್ಣ. ೬೯-೬೩; ಸು. 1776). [ ? ]

**ಮುದ್ರೆಮನುಷ್ಯ** (ನಾ). = ಮುದ್ರಾಹಸ್ತ : ಮಲ್ಲರಸ ಅಯ್ಯನವರ ಮುದ್ರೆಮನುಷ್ಯನು . . . ರಾಮಾಯ್ಯನೊ (ಎಕ. IV (R), ಎಳಂದೂ. ೬೭-೦೦; 1531). [ಮುದ್ರೆ + ಮನುಷ್ಯ]

**ಮುದ್ರೆಯುಂಗುರ** (ನಾ). (ರಾಜ ಮುಂತಾದವರ) ಲಾಂಛನವನ್ನು ಕೆತ್ತಿರುವ ಉಂಗುರ, –ಮುದ್ರಿಕೆ : ಕಡಗ ಕಂಕಣ ಮುದ್ರೆಯುಂಗುರ . . . ದಿವ್ಯನೂಪುರಗಳನಾಂತ ಮಾಡದ ರನ್ನೆಯರ್ಕೈದಿದರು (ಕಂಪಿಂ. ೨೦-೦೩); ಬೆರಳಿಗೆ ಮುದ್ರೆಯುಂಗುರವಿದ್ದುದರಿಂದ ಹಿಂದೊಮ್ಮೆ ಹಿಳಿಯೆಂದು ಕೊಂಡೆ (ಕೃ.ತಿಕ. ೪೦೦). [ಮುದ್ರೆ + ಉಂಗುರ]

**ಮುದ್ರೆಯೂಳಿಗ** (ನಾ). ರಾಯಸ, ಪತ್ರ ಮುಂತಾದುವುಗಳಿಗೆ ರಾಜನ ಮೊಹರನ್ನು ಒತ್ತುವ ಕೆಲಸ : ಅರಮನೆಯ ಊಳಿಗದಾಳ್ಗಳು ರಾಯಸಿಗರು ; ಮುದ್ರೆಯೂಳಿಗದವರು (ಚಿಂಕ್ರಕ. ೭-೦೨). [ಮುದ್ರೆ + ಊಳಿಗ (< ಊಳಿಗ)]

**ಮುದ್ರೆಯೊಡೆ** (ಕ್ರಿ). ಮೊಹರನ್ನು ತೆಗೆ ; ಉಡಿಗೆಯನ್ನು ಒಡೆ : ಮುದ್ರೆಯೊಡೆದು, ಓದಿಕೊಂಡು, ಚಿಟ್ಟದ ಅರಸಿನ ಪೊರ್ದುಗೆಗಯ್ದು (ಚಿಕ್ಕ. ೬೬-೨೩). [ಮುದ್ರೆ + ಒಡೆ$_1$]

**ಮುದ್ರೆಯೊತ್ತು** (ಕ್ರಿ). ೧. ರಾಜನ ಮೊಹರನ್ನು ಒತ್ತುವುದರ ಮೂಲಕ ಆಜ್ಞೆ, ಒಪ್ಪಿಗೆ ಮುಂತಾದುವನ್ನು ಸ್ಥಿರೀಕರಿಸು : ಇತರ ಪ್ರಭುಗಳಿಗೆ ನಮ್ಮ ಆಶ್ರಿತರಿಂದ ಉಪಟಳವು ನಷ್ಟವು ಅಪಮಾನವು ಆದ ಸದಂತೆ ಮುದ್ರೆಯೊತ್ತಿ ನಿಬಂಧಿಸಿ (ಚಿಕ್ಕ. ೬೯-೦೬). ೨. ಪ್ರಭಾವವನ್ನು ಬೀರು ; ವರ್ಚಸ್ಸನ್ನು ಬೀರು : ಮಕ್ಕಳ ಎಳೆಯ ಮನಸ್ಸಿನ ಮೇಲೆ ಮುದ್ರೆಯೊತ್ತಿ ಅವರ ಬೆಳವಣಿಗೆಯನ್ನು ಸಾಧಿಸಬೇಕು (ಶಿಕ್ಷಣ. ೪೦೩). ೩. ಮಾಧ್ವರ ಲಾಂಛನವಾದ ಶಂಖ, ಚಕ್ರಗಳ ಗುರುತನ್ನು ಹಾಕು : ಶಂಖಚಕ್ರಮುದ್ರೆಗಳನ್ನು ಮುದ್ರಾಧಾರಣೆಯ ಹೋಮಾಗ್ನಿಯಲ್ಲಿ ಚೆನ್ನಾಗಿ ಕಾಯಿಸಿ . . . ಶಿಷ್ಯರಿಗೆ ಜಾಗ್ರತೆಯಾಗಿ ಮುದ್ರೆಯೊತ್ತಿಬಿಡುವರು (ಜಾಗ್ವೀಂ. ೯). [ಮುದ್ರೆ + ಒತ್ತು$_1$]

**ಮುದ್ರೆಯೋಲೆ** (ನಾ). ಮೊಹರು ಸಹಿತವಾದ ಕಾಗದ, –ಪತ್ರ : ನಂಜರಾಜಯ್ಯನವರನ್ನು ಸರ್ವಾಧಿಕಾರಿಯ ಊಳಿಗಕ್ಕೆ ನಿಯಮಿಸಿಕೊಂಡಿರುವ ಹಳೆಯಪಯ್ಯದವರ ಮಹಾಸಭೆಯ ಮುದ್ರೆಯೋಲೆಯಿಂದು (ಚಿಂಕ್ರಕ. ೦೩೦-೩). [ಮುದ್ರೆ + ಓಲೆ]

**ಮುದ್ರೆವೊರು** (ಕ್ರಿ). ಆಜ್ಞೆಯನ್ನು ಪಡೆ ; ಅಪ್ಪಣೆಯನ್ನು ಹೊಂದು: ಇರುಳ ಕಯ್ದಾವಿಗೆಗಳ ಕಿರಿಯ ಪ್ರಮಾಣಗಳಲ್ಲಿಯೇ ಮುದ್ರೆವೊತ್ತ ನಮ್ಮ ಕರ್ತವ್ಯಗಳನ್ನು ನೆರವೇರಿಸಿಕೊಳ್ಳೋಣ (ಚಿಕ್ಕ. ೬೩-೨೦). [ಮುದ್ರೆ + ಪೊರು (< ಪೊಱು)]

**ಮುದ್ರೆಹಸ್ತ** (ನಾ). = ಮುದ್ರಾಹಸ್ತ : ಲಖ್ಮೀದೇವರ ಅಧಿಕಾರಿ ಮುದ್ರೆಹಸ್ತ ಮಲ್ಲಣ್ಣನುಂ ಪ್ರಭುಗಳುಂ . . . ಬಿಟ್ಟ ಮತ್ತರು (ಸೌಇಇ. XX. ೧೬೩-೩; 1197). [< ಸಂ. ಮುದ್ರಾಹಸ್ತ]

**ಮುದ್ಲಿಯಾರ್** 'ಮೊದಲಿಯಾರ್' ನೋ.

**ಮುಧಸೆ ?** (ನಾ). (?): ಕಿತ್ತೂರ ಪುದಿವತ್ತಮುಂ ಪೆರ್ಗ್ಗಡೆ ಗದ್ಯಾಣ ಮುಧಸೆಮಟ್ಟಿಗೆಯುಂ ಪುದುವೊದಲುಂ . . . ಪುದಿವತ್ತಮುಂ ಕೊಟ್ಟು (ಎಕ. III (R). ಹೆಗ್ಗಡೆ. ೦೨೩-೪೦; 1079). [ ? ]

**ಮುಧಾ** (ಅ). ೧. ವ್ಯರ್ಥವಾಗಿ ; ನಿಷ್ಪ್ರಯೋಜಕವಾಗಿ : ಅದನರಿಯದ ಬೋಧಬೋಧಿತ ತಪೋದಾನವಿಧಾನದಿಂ ಮುಧಾ ಕ್ಲೇಶಾಯಾಸನಿರತರಾಗಿ ನವೆವರ್ (ಅಂಪು. ೨-೯ ವ). ೨. ತಪ್ಪಾಗಿ ; ಸುಳ್ಳಾಗಿ; ಹುಸಿಯಾಗಿ.

[ಸಂ.]

**ಮುನ್$_1$, ಮುಂ$_1$, ಮುನ್ನ$_1$** (ನಾ). ೧. ಮುಂದುಗಡೆ ; ಮುಂದು ; ಎದುರುಭಾಗ : (೬). ೨. ತರುವಾಯದ್ದು ; ಆಮೇಲಿನದು ; ಭವಿಷ್ಯಕ್ಕೆ ಸೇರಿದುದು ; 'ಮುನ್ನಜು' ಪರಾ. ೩. ಆದಿ ; ಮೊದಲು ; ಆರಂಭ. ೪. ಹಿಂದಿನದು ; ಪೂರ್ವಕಾಲಕ್ಕೆ ಸೇರಿದುದು ; ಮುಂಚಿನದು : ತತ್ಸ್ಯನ್ಯಪಾದೋತ್ಥಿತಂ ಪೃದಿದೆತ್ತಂ ರಜಮಂಬರಸ್ಥಳಮುಮಂ ಮುಟ್ಟಿತ್ತು ತಳ್ತುರ್ವಿ ಪರ್ವಿದೊಡಾ ಮುನ್ನಿನ ತೆಳ್ಪುಗೆಟ್ಟು ಕೆಸಱಾಯ್ತಾಕಾಶಗಂಗಾಜಲಂ (ಶಂಶಕಾ. ೦೦-೨೯); ನಾಂ ಪತಿವ್ರತೆಯಾದೊಡೆ ಮನೆದೈವಂಗಳೆನಗೆ ಸನ್ನಿದವಾದೊಡೆನ್ನ ಮೂಗು ಮುನ್ನಿನಂತಾಗಲಿ (ಶಂಶಶಂ. ೬೬-೦೨); ಮುನ್ನಿನ ಕುಲಮಂ ಸಿರಿಯಂ . . . ಅಳಿಪಿಂದಂ ನೆನೆಯುತ್ತಿರ್ಪ ದುರ್ಜನಂ ಮುನಿಯಲ್ಲಂ (ಧರ್ಮಾಮೃ. ೩-೦೦೨). (ಗು). ೫. ಮುಂದುಗಡೆಯ ; ಮುಂದಿನ ; ಮುಂಭಾಗದ. ೬. ಅನಂತರದ ; ಆಮೇಲಿನ; ತರುವಾಯದ : ಎನ್ನ ಜನ್ಮಕೆ ಸಾಫಲ್ಯ ಮಾದುದು ನಿನ್ನ ಚೆನ್ನಡಿಯುಳಿಗದಿಂದ ಪಿನ್ನೇಳು ಮುನ್ನೇಳು ತರದವರನಿ ಬರುಮುನ್ನತಿವಡೆದರೆನ್ನಿಂದ (ಹಂಬಿ. ೦-೩೯). ೭. ಆರಂಭದ ; ಪ್ರಾರಂಭದ; ಶುರುವಿನ : 'ಮುನ್ನಿರುಳ್', 'ಮುನ್ನೇಸಱು' ಪರಾ. ೮. ಹಿಂದಿನ ; ಮುಂಚಿನ ; ಪೂರ್ವದ : 'ಮುನ್ನಿರವು' ಪರಾ. ೯. ಅಭಿವೃದ್ಧಿಯ ; ಉತ್ಕರ್ಷದಿಂದಕೂಡಿದ ; ಏಳಿಗೆಯುಳ್ಳ : 'ಮುನ್ನಡೆ$_2$' ಪರಾ. ಮುಂ$_1$ : ೧. 'ಮುಂಗಾಣ್' ಪರಾ. ೨. 'ಮುಂಗಾಣ್' ಪರಾ. ೩. ಮುಂ ಪಿಂತೆಂಬುದಿದಲ್ತೆ ನಿಳಿಂಪಮುಗಕ್ಕಿಲ್ಲ ಮಿಂತು ಬಾಯುಟಿವುದೆ ಚಿಃ ಗಾಂಪು ಬಗೆಗೊಂಡು ಜಿನಪತಿಯಂ ಪೂಜಿಸು ಪಡೆಮೆಯಿನಿಯನಂ ಮಱುಭವದೊಳ್ (ಆದಿಪು. ೩-೦೬). ೫. 'ಮುಂಗುರುಳ್', 'ಮುಂಜಗಲಿ' ಪರಾ. ೬. 'ಮುಂಗಡೆ' ಪರಾ. ೭. 'ಮುಂಗಾರ್', 'ಮುಂಜಾವ' ಪರಾ. ಮುನ್ನ$_1$: ೩. "ಆದಿಃ, ಅಗ್ರಂ. ಪು(ರಾ)ರಂ, ಪೂರ್ವಂ, ಪ್ರಥಮಂ, ಪ್ರಾಕ್, ಪುರಃ –ಈ ೭ ಮುನ್ನಂ" (ಹಲಾಯು. ೦೦೬-೨೨). ೪. ಕರಮೆಸೆಯೆ ಮುನ್ನಿನ ದಿನಂ ಶಂಕರನಿಗರ್ಚಿಸಿ ಮಱುದಿವಸ ಪರಿಹರಿಸಿದಾ ಪತ್ರಯನಿನಿತನಾವೋಹಿಲನು ತಂದು (ಬಸಪು. ೪೩-೬೬) ; ಮುನ್ನಲುಳ್ಳಾಚಾರ್ಯರುಗಳ ಪದಗಳು ಮತ್ತೆನ್ನ ಚಿತ್ತದೊಳಿರ್ದ ಬಳಿಕ ಚೆನ್ನುನಡೆವುದು ಕವಿತೆ ಸೋಂಪ್ರದೋರ್ಪುದು (ವರ್ಧಿತ. ೦-೦೩) ; ಒಲಿದು ತನ್ನೊಡವುಟ್ಟು ಸೊಸೆ ಮಗಳೆಂದೆಂಬ ಪಲರು ಮುನ್ನಿನ ಬಾಂಧವರು ಕುಲದೇವತೆಯೆಂದು ಕೂರ್ತು ತಂತಮ್ಮಿಷ್ಟಫಲವ ಪಡೆವರೆನ್ನಿಂದ (ಹಂಬಿ. ೦-೪೦). ೯. ಮುನ್ನಜನ್ಮದ ಪಡೆದ ಫಲವಿದು ಎನ್ನ ಬಿಡುವುದೆ (ಗೋಹಾಡು. ೦೬-೯೯). ೧೦. ಹಿಂಭಾಗದ ; ಹಿಂಬದಿಯ : ಪೊಸೆದು ಕಟ್ಟಿದ ಮುನ್ನ ಕಚ್ಚೆಯ ಬೆಸುಗೆ ಶಿಖಿಗಳ ಗಂಟು . . . ಎಸೆವ ಪೊಂಬಣ್ಣದ ಶರೀರದಿ ಮಿಸುಪ ವಾಮನರೂಪನಾಂತಾ ವಿಷ್ಣುಮುನಿ ಬಂದ (ಸಾಳ್ವಭಾ. ೦೬-೨೩).

ಮುನ್ನಾದಿನ = ಹಿಂದಿನ ದಿನ : ಓಬಳಮ್ಮ ನಾಗತಿಯು . . . ತನಗೆ ಮುನ್ನಾದಿನ ಆದ ಸ್ವಪ್ನದ ಸಂಗತಿಯನ್ನು ಹೇಳಿದಳು (ಚಿತ್ರನಾ. ೬೦) ; ನಾನು ನಾಡಹಬ್ಬದ ಮುನ್ನಾದಿನ ಹಲಸಂಗಿಗೆ ಹೋಗಿ ತಲುಪಿದೆನು (ಶ್ರಬಂಧ. ೯೩). ಮುನ್ನಿನವ = ಹಿಂದಿನವನು ; ಪೂರ್ವಜ : ನಿಮ್ಮಲಿ ಮುನ್ನಿನವನು ಯಯಾತಿಯಯ್ಯನು ನನ್ನ ನಾಮವೆ ನಹುಷನೆಂಬುದು (ಕುಮ್ಯಾಭಾ. ೦೩-೬೩). [ದೇ.॥ ತಮಿ. ಮುನ್ ; ಮಲ. ಮುನ್, ಮುನ್ನು ; ಕೊತ ಮುನ್, ಮು ; ತೆಲು. ಮುಂ, ಮುನಿ, ಮುನು, ಮುನ್ನು]

**ಮುನ್$_2$, ಮುಂ$_2$, ಮುನ್ನ$_2$, ಮುನ್ನಂ** (ಅ). ೧. (ಸ್ಥಳಕ್ಕೆ ಸಂಬಂಧಿಸಿದಂತೆ) ಮುಂದೆ ; ಮುಂಭಾಗದಲ್ಲಿ ; ಮುಂದಕ್ಕೆ : ಎದುರಿಗೆ: 'ಮುನ್ನುಗ್ಗು', 'ಮುನ್ನೂಕು' ಪರಾ. ೨. (ಕಾಲಕ್ಕೆ ಸಂಬಂಧಿಸಿದಂತೆ) ಅನಂತರದಲ್ಲಿ : ಭವಿಷ್ಯದಲ್ಲಿ : ಮುಂದೆ : ಪರಮಕವೀಶ್ವರಚೇತೋಹರಮೆಂಬಿನಮೆಸೆವ ಮಾಳವೀಮಾಧವಮಂ ವಿರಚಿಸಿದ ಕನ್ನಮಯ್ಯಂಬರಮಾಗಂ ಸುಕವಿ ಬಗೆವೊಡಿನ್ನುಂ ಮುನ್ನುಂ (ಶಂಶಶಂ. ೩-೪). 'ಮುನ್ನುಟಿ' ಪರಾ. ೩. ಮೊದಲು ; ಮುಂಚೆ ; ಆರಂಭದಲ್ಲಿ : ನಡೆನೋಡಲ್ ರೂಪು ಕೇಳಲ್ ನುಡಿ ಪುರದ ಜನಕ್ಕಾಯ್ತು ಮುನ್ನಂತೆ ಮೇಗಣ್ಣಡರ್ದಾಗಳ್ ಮೆಯ್ಯ ಕಾಣಲ್ ಕಳಕಳಮಿನಿಸಂ ಕೇಳಲಾಯ್ತು (ಆದಿಪು. ೬-೩೬) ; ನೀವಿದನೆಮಗಱಿಪಿರ್ಮುನ್ನೀ ವಾರ್ತೆಯನಱಿಯೆವು (ಧರ್ಮಾಮೃ. ೨-೬೩) : ಮನದೊಳ್ ಮುನ್ನೊಗೆದಿರ್ದ ಸಂಶಯಮುದೆಲ್ಲಂ ಪಿಂಗೆ ಚಂದ್ರಧ್ವಜಾವನಿಪಂ ಸಂತಸದಂತಮೆಯ್ದಿ . . . ಉದ್ಯೋಗಿಸಿದಂ (ಕುಸುಮಾ. ೦೩-೬೪). ೪. ಹಿಂದೆ ; ಪೂರ್ವದಲ್ಲಿ : ಮುನ್ನೆಗಟ್ಟಿ ವೇಳೆವಡಿಚರುಮಿನ್ನಪ್ಪೊರುಮಿಗಾದುಳ್ಳೊರುಂ ಬಗೆವೊಡವರ್ ನಿನ್ನನ್ನರೆ ನಿನ್ನನ್ನರೆ ನಿನ್ನನ್ನರೆ ನಿನಗೆ ನೀನೆ ದೊರೆಯಯ್ ಸಮ್ರಾಟ್ (ಇಕ. XX, ೬೦-೧೦ ; ಸು. ೨ನೆಯ ೪೪); ತನ್ನೊಳಗಣ ಪನ್ನಗನಂ ಮುನ್ನೀನ್ ಪಿಡಿದೊಗೆಯೆ ಕಾಯಲಾಱದೆ ಪಿರಿದು ಬನ್ನದ ಕರ್ಪೆಸೆದುದು ತೋಱಿಗಿನ್ನುಂ ಹರ ಗಳ ತಮಾಳನೀಳಚ್ಛವಿಯಿಂ (ಶಂಶಥಾ. ೩-೩೪) ; ಉರಗ ನರ ದಿವಿಜಾದಿಗಳಿಗಿದು ಪರಿಹರಿಸಲಳವಲ್ಲ ದೈವದ ಪರುಠವಣೆ ಮುನ್ನಾದಿಯಲಿ ನಿರ್ಮಿಸಿತು ಮೃತ್ಯುವನು (ಕುಮ್ಯಾದ್ರೋ. ೬-೨೯). ಮುಂ$_2$ : ೧. ದಂಪತಿಗಳ ಮಾಡಿ ಬೀಳ್ಕೊಟ್ಟು ಕೆಳೆಯರು ಮುಂ ಪೋಗಲನಿರುವ್ವನೊಡನೆ ಚಂಪಕಥಾವು ಕೋಮಲೆಯರು ಮರುಳ್ಗೊಂಡು ಮುಂಪೋದುದೇನ ಪೇಳುವೆನು (ಮೋಹತ. ೦೬-೬೦) ; ಪೊಸನೀರ ಹೂರದೊಳಗೆ ಮಱಿಮೀನ್ಗಳು ಮಸಗಿ ಮುಂ ಪೊಳೆದಾಡುವಂತೆ ಮಿಸುಗುವ ಮರಲಾವಣ್ಯಾಂಬುವಲಿ ಕಣ್ಣೆಸೆದುವು ಪೊಳಪೇಱಿ ನಗುತ (ಶಂಶವಿ. ೦೦-೩೮). ೨. ಮುಂ ಕೆಲವಾನುಂ ದಿವಸಕ್ಕೆ ದೇವ ಪಡೆವ್ಯೆ ಶ್ರೀಮಂಡನ ಕ್ಷಾತ್ರಮಂಡಲಮಾಗೋಚಿತಗಾತ್ರನಂ ಬಹುಕಳಾಸತ್ಪಾತ್ರನಂ ಪುತ್ರನಂ (ಕಾದಂಪೂ. ೩೬೦). ೩. ಪವಡಿಸಿದನಂತನೊಸೆದುಪ್ಪವಡಿಸಿ ತನ್ನೆರಡುಮಡಿಯನೊತ್ತುತ್ತಿರ್ದಹವವಿಜಯುಯಪ್ಪ ವಿಜಯನನೆ ವಲಂ ಮುಂ ಕಂಡು ಬೞಿಕ ನೃಪನಂ ಕಂಡಂ (ಶಂಶಥಾ. ೯-೦೦) ; ತನಗಾಕಸ್ಮಿಕ ಶಂಕೆ ತನ್ನ ಮನದೊಳ್ ಮುಂ ಪುಟ್ಟೆ ತತ್ಕಾಂತೆಯಂ[ದಿನಿ]ರುಳ್ ಚಿಂತಿಸಿ ನಿದ್ದೆಗೆಟ್ಟು (ಸುಕುಮಾ. ೦೨-೦೯) ; ಬಸವಪಟ್ಟಣಕೆ ಮುಂ ಜನದಿಂದ ನಡೆತಂದು ಮಸೆವ ಮುತ್ತಿಗೆಯನೆ ಬಲಿದು ಬಸಮಾಡಿಕೊಂಡರಂ ಕೋಪದೆ ತಾನಾಗಳೆಸವ ಸಂತಸವ ತಳೆದನು (ಶಂಶವಿ. ೦೬-೨೬). ೪. ಮನುಷ್ಯಗತಿಯೊಳ್ ಪುಟ್ಟಿ ಮುಂ ಗೆಯ್ದ ಪಾಪಕರ್ಮದುದಯದಿಂದಂ . . . ದುಃಖಂಗಳನೆಯ್ದಿ (ವಡ್ಡಾರಾ. ೯೭-೦೪) ; ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತಮನಪೂರ್ವಮಾಗೆ ಸಲೆ ಪೇಟ್ದ ಕವೀಶ್ವರ[ರಿ]ಲ್ಲ (ಶಂಶಭಾ. ೦-೦೦) ; ಮುಂ ಪುಣ್ಯಕರ್ಮಮನಂತಾಗಿರೆ ಮಾಡದೀಗಳಟಲಿಂ ಪೇಟಿಂತಟುತಿರ್ದಳಕ್ಕುಮೆ (ಕಾದಂಪೂ. ೩೪೬). ಮುನ್ನ$_2$ : ೧. (೬). ೨. ಎನ್ನದಾನೆಂಬೆರಡಱಿಂದವೆ ಬನ್ನಬಡುವನು ಜೀವನಲ್ಲದೆ ಮುನ್ನವಿನ್ನೆಂದೆಂದಿಗಾತ್ಮಂಗಿಲ್ಲ ಭವಬಂಧ (ಕುಮ್ಯಾದ್ರೋ. ೬-೨೮) ; ಎನ್ನ ವಂಶದ ಗೋವ್ಗಳೊಳಗೆ ನಿನ್ನ ವಂಶದ ಗೊಲ್ಲರೊಳಗೆ ಮುನ್ನ ಸಂಕ್ರಾಂತಿ ಹಬ್ಬದೊಳಗೆ ಚೆನ್ನಕೃಷ್ಣನ ಭಜಿಸಿಯೆ ಪಾಲುಪೊಂಗಲನಿಕ್ಕಿಸಯ್ಯ (ಗೋಹಾಡು. ೨೨-೦೦೯) ; ಚೆನ್ನೆನೀಂ ಪೋದೆಯಿನ್ನವನ ಹಿಂದೆಯೆ ಕಳುಹಿ ಮುನ್ನ ಬಾಳ್ವೆಯದೆಂತು ಪೇಳೆನ್ನ ಮಗಳೆ (ಕಾಬೂರ. ೦೬೪-೩೯೦). ೩. ದುರ್ಯೋಧನನಪ್ಪೊಡೆ ಶ್ವೇತಕೃಷ್ಣಕಾರಕಂ ಕೃಷ್ಣನಂ ತನಗೆ ಮಾಡದನ್ನೆಗಂ ಮುನ್ನಮೆ ಪನ್ನಗಶಯನನಂ ನಮಗೆ ಮಾಡುವುದುತ್ತಮಪಕ್ಷಂ (ಶಂಶಭಾ. ೯-೦೦ ವ) ; ಈ ಬಿಂಬೋಷ್ಠೆಯಂ ಸರ್ಪದಷ್ಟೆಯನೆನಗೆ ಮದುವೆಮಾಟ್ಪರಪ್ಪೊಡೆ ನಾಳೆ ನೇಸಮೂರ್ಡದ ಮುನ್ನಮೆ ವಿಷಾಪಹಾರಂ ಮಾಡಿದಪ್ಪೆಂ (ಸುಕುಮಾ. ೬-೪ ವ) ; ನಾಳೆ ಪಡುವಣ ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ (ಕುಮ್ಯಾದ್ರೋ. ೬-೩೩). ೪. ಅಂ ಮುನ್ನ ಜನನೀಚರ ಲಲಿತಾಂಗದೇವ

ನೊಳನುಬಂಧಿಸಿದ ಮೋಹದೊಳು ನಿನ್ನ ದೇವನಪ್ಪ ಲಲಿತಾಂಗಂ ಬೆರಸಿರ್ಪತ್ತಿರ್ವರ್ಲಲಿತಾಂಗದೇವರಂ **ಪೂಜಿಸಿದೆಂ** (ಶಾಪುಂಪು. ೨೦) ; ಧರೆಯಂ ದ್ವಾಪರದೊಳ್ ವದಾನ್ಯತಿಲಕಂ ಲೋಕೋತ್ತರಂ ಮುನ್ನ ಭಾಸ್ಕರಪುತ್ರಂ ನಿಜದಾನದಿಂ ತಣಿಪಿದಂತೀರೇಳ್ಮ ಪೀಭಾಗಮಂ ದೊರೆವೆತ್ತುತ್ತಮಭೋಗದೊಳ್ ತಣಿಪಿದಂ ಭೂಪೋತ್ತಮಂ (ಪಂಕಶಂ. ೬-೦೦) ; ಈ ವಿಧಿಯಿಂ ಪಾಂಡವರಿಗ ಕಟಾ ಸ್ವಾಪ್ಯ ಸೇರದು ತನಗೆ ತಾ ಮುನ್ನಾವ ನೋಡಿಯುನಳಿದೆನೋ ಭವ ಭವಸಹಸ್ರದಲಿ . . . ಎನುತ ಮಿಗೆ ಮರುಗಿದನು ಧೃತರಾಷ್ಟ್ರ (ಕುಭಾ.ಅ. ೧೬-೬). **ಮುನ್ನಂ** : ೧. (*). ೨. ನಾಭಿರಾಜಂಗೆ ರಾಜ್ಯಾಭಿಷೇಕಂಗೆಯ್ದು ಮರುದೇವಿಗೆ ಮಹಾದೇವಿ ಪಟ್ಟಂಗಟ್ಟಿ ಪೂಜಿಸಿ ಮುನ್ನಮಾಱು ದಿಂಗಳುಂಟೆನೆ ವಸುಧಾರೆಯುಮನಯೋಧ್ಯಾಪುರದೊಳು ಸುರಿವಂತು ಧನದಂಗೆ ಬೆಸಸಿದೊಡೆ (ಶಾಪುಂಪು. ೩೦). ೩. ಸಕ್ಕದಮುಂ ಪಾಗದಮುಮವಕ್ಕಂ ಬಗೆದಂತೆ ಸಮಱ ಪೇಟಿಲ್ ಮುನ್ನಂ ನಿಕ್ಕುವಮೊಳವಪ್ಪುದಱಿಂತಕ್ಕಂತವ ಱವಱ ಲಕ್ಷ್ಯಮುಂ ಲಕ್ಷಣಮುಂ (ಕವಿರಾ. ೧-೪೧) : ಮುನ್ನಂ ಪೂಜಿಸಿ ಶರಮಂ ರನ್ನದ ಪಡಲಗೆಯೊಳಿಟ್ಟು ನಿಜಪರಿವಾರಂ ತನ್ನುಳ್ಳನಿತುಂ ಬೆರಸು ಭಯನ್ನಡುಕನಾನೀಯೆ ಬಂದು ಕಂಡಂ ದಿವಿಜಂ (ಆದಿಪು. ೧೨-೦೨೦) ; ಈ ಬಿಱುನುಡಿಯಂ ಲಾಲಿಸುತಾ ಬಾಲೆ . . . ಮುನ್ನಂ ಕಾಣಿಸಿಕೊಂಡ ದಿವ್ಯಪುರುಷನಂ ಮನದೊಳ್ ಜಾನಿಸಿ ತವಸಿಗಳೊಳೊರ್ವಂಗೆ ಸರವನಿಕ್ಕುವೆನೆಂದು ಮುಂದಡಿಯಿಟ್ಟಳ್ (ಅದ್ಭುತ. ೦೨-೨೦). ೪. ಭೂಪಮುನ್ನ ನಿನ್ನಮಿಂತಾರ್ವಿರೋಧಿಗಳಂ ಸಾಧಿಸಿ ವೀರಮಂ ತಳೆದರ್ (ಎಕ. XIII, ೩೨೯-೨ ; 929) ; ನುಡಿ ಮುನ್ನಂ ಸ್ಪಷ್ಟಮಾಗಿರ್ದುದು ಬಱಿಕಮದಸ್ಪಷ್ಟಮಾಯ್ತುಗ್ನಿ ಶಾಪಂ ಗುಡಲಲ್ಲಿಂದಿತ್ತಲಿಂತೀ ಶುಕಸಮಿತಿಗೆ (ಕಾದಂಪೂ. ೬೬) ; ದುರ್ಧರದುಃಖಮೆನ್ನನಲಿವಂತುಂ ಮುನ್ನಮೇಗೆಯ್ದೆನೋ (ಸುಕುಮಾ. ೯-೦೦೯).

**ಮುಂಮುಂ, ಮುನ್ನಮುನ್ನ** (ದ್ವಿರುಕ್ತಿ) : ೧. ಮುಂದುಮುಂದಕ್ಕೆ ; ತುಂಬ ಮುಂಭಾಗಕ್ಕೆ ; ಹೆಡೆ ನಿಮಿರಿ ಹರಿವಂತೆ ಹರಿದುದಾ ಸೇತುಸರ್ಪಂ. ಕ್ಷಣಕ್ಷಣಕೆ ಮುಂಮುಂ ಬೆಳೆದು (ತೊರಾಮಾ. ೫೯೨-೨೨೦). ೨. ಮೊದಮೊದಲು ; ತುಂಬಾ ಹಿಂದೆ : ಪುಣ್ಯವುಳ್ಳ ಕಾಲಕ್ಕೆ ಪಾಷಾಣ ಪುರುಷವಪ್ಪುದು ನೋಡಯ್ಯ ಮಣ್ಣು ಹೊನ್ನಪ್ಪುದು ಮುನ್ನಮುನ್ನವೆ ಅಚ್ಚೊತ್ತಿದ ಭಾಗ್ಯವೆನ್ನ ಕಣ್ಣ ಮುಂದೆ ಕಾಣಬಂದಿತ್ತು ನೋಡಾ (ಲಪಸಂ. ೨೦೬-೯೩೨). [<ಮುನ್$_1$]

**ಮುನ್**$_3$ 'ಮುೞ$_1$' ನೋ.

**ಮುನಶಿ**, ಮುನಷಿ. ಮುನಿಷಿ, ಮುನುಷಿ. ಮುನ್ಷಿ (ನಾ). ೧. ಬರೆಹಗಾರ ; ಲೇಖಕ : ಮೊಕಾಂ ಬೆಂಗಳೂರು ಖದು ಸುರಪ ಮುನಶಿ (ಎಕ. VI. ಕಡೂ, ೪೮-೫೪; 1811); ಅಶ್ವಥನಾರಣ್ಯಯ್ಯ ಮುನಶಿ (ಮೈಅಂ. ೧೯೩೦,೪೩-೪೬: 1812). ೨. (ಅರಬ್ಬಿ, ಪಾರಸಿ ಭಾಷೆಗಳನ್ನು ಬಲ್ಲ) ಗುಮಾಸ್ತ : ಕಾರಕೂನ : ಮುನಶಿಯು ಚಮನಲಾಲನನ್ನು ಕರೆಯಬೇಕೆಂದು ದಫೆದಾರನಿಗೆ ತಿಳಿಸಿದನು (ಏಧಿವ್ಯ. ೦೬೫). **ಮುನಷಿ** : ೧. ಸುಬ್ಬರಾವ ಮುನಷಿ (ಮೈಅಂ. ೦೯೨೯, ೯೪-೪೫; 1813). ೨. ಕರಿಯದಿವಾನರು ಅದನ್ನು ಚಂದವಾಗಿ ಓದಿ ನೋಡಿ ಮುನಷಿಯನ್ನು ಕರೆಸಿ . . . ನುಡಿದನು (ವಾಗ್ದೇವಿ. ೦೯೫); ಮೂರುವಿಧದ ಮುನಷಿಗಳನ್ನು ಇರಿಸಿಕೊಂಡು ಅವರ ಯೋಗ್ಯತಾನುಸಾರವಾದ ಸಂಬಳವನ್ನು ಕೊಡುವುದು ತಿಳ್ಳವಾಗಿತ್ತು (ಮುಕಾಗ. ೪೫). **ಮುನಿಷಿ** : ೨. ಓರ್ವ ಮುನಿಷಿಯಂ ಕರೆಮುಕೊಂಡುದ್ಯೋಗಿಗೈದಿ (ಅಶ್ವಾವಿ. ೩೦-೩೮). ೩. (ಪಾರಸಿ, ಅರಬ್ಬಿ ಭಾಷೆಗಳ) ಶಿಕ್ಷಕ : (*). ೪. ಕಾರ್ಯದರ್ಶಿ ; ಕಾರಭಾರಿ : (*). **ಮುನುಷಿ** : ೨. ಕೋರ್ಟಿನ ಮುನುಷಿಯೊಬ್ಬನು ಪ್ರಮಾಣವಚನಗಳನ್ನು ಹೇಳಿಕೊಡಲಾರಂಭಿಸಿ (ಗಮಕ. ೦೬೬); ಶೀಲವತೀನೀರ್ಕಟ್ಟೆಯ ತಾಣದಲ್ಲಿ ಒಬ್ಬ ಸಾಮಾನ್ಯ ಮುನಷಿಯಾಗಿದ್ದ – ಹೆಸರು ಶೇಷಾಚಲಯ್ಯನೆಂದು (ನೊಂದಾರ. ೦೫೨). **ಮುನ್ಷಿ** : ೨. ದೊರೆಗಳ ಅಧೀನದಲ್ಲಿದ್ದ ಮುನ್ಷಿಗಳು ಫಾರಸಿ, ದಕ್ಖನಿ, ಕನ್ನಡ ಭಾಷೆಗಳನ್ನು ಚೆನ್ನಾಗಿ ಬಲ್ಲವರಾಗಿಯೂ ಇರುತ್ತಿದ್ದರು (ಅದೇ). ೫. ಬೇರೆ ಬೇರೆ ಭಾಷೆಗಳನ್ನಾಡುವವರ ಮಾತುಗಳನ್ನು ಭಾಷಾಂತರಿಸಿ ಪರಸ್ಪರರಿಗೆ ತಿಳಿಸುವವನು : (ಮೈಗೆಜ಼. IV, ೭೮೦).

[ ← ಪಾರ. ಹಿಂ. ಮುನ್ಷೀ : ಮರಾ. ಮುನಶೀ, ಮುನ್ಶೀ ]

**ಮುನಷಿ** 'ಮುನಶಿ' ನೋ.

**ಮುನಸಿಪ** 'ಮುನಸೀಫ' ನೋ.

**ಮುನಸಿಫ** 'ಮುನಸೀಫ' ನೋ.

**ಮುನಸೀಫ್** 'ಮುನಸೀಫ' ನೋ.

**ಮುನಸೀಫ**, ಮುನಸಿಪ, ಮುನಸಿಫ. ಮುನಸೀಫ್. ಮುನಸುಫ್. ಮುನಸೂಫ್, ಮುನಸೂಫ, ಮುನ್ಸೀಫ್ (ನಾ). ಕೆಳದರ್ಜೆಯ ನ್ಯಾಯಾಲಯಗಳಿಗೆ ಬರುವ ವ್ಯವಹಾರಗಳನ್ನು ಇತ್ಯರ್ಥಗೊಳಿಸುವ ನ್ಯಾಯಾಧೀಶ : ಈಗಿರೋ ಮುನಸೀಫರು ಅವರಿಗೆ ಬೇಕಾದವರು (ತಂದಕೋ. ೦೫೯); ಹೆಂಗಸರು ಮಾಮಲೇದಾರ – ಮುನಸೀಫರಾಗುವರು (ಸ್ವಾಲವಿ. ೨೦೪); ಹಳೆಮುನಸೀಫರಿಗೆ ವರ್ಗ ಆತು ಅಂತ ಚಹಾ ಕೊಡ್ತಾರೆ ವಕೀಲ್ರೆಲ್ಲ (ಹನ್ನೊಂದ. ೦೦೯). **ಮುನಸಿಪ** : ಅಂಕೋಲಾ ತಾಲೂಕ ಮುನಸಿಪರು ಹರತಿ ಲಕ್ಷುಮಯನವರು (ಪೊಂಕಶಾ. ೦೯೪೦, ಕುಮುಟ. ೦೦೩-೭; 1771). **ಮುನಸಿಫ** : ಗ್ರಾಮ ಮುನಸಿಫನು ಗ್ರಾಮಕೋರ್ಟಿನಲ್ಲಿ ದಾಖಲ್ಮಾಡಲ್ಪಟ್ಟ ವ್ಯಾಜ್ಯಗಳ ಒಂದು ರಿಜಿಸ್ಟರನ್ನು ಇಡತಕ್ಕದ್ದು (ಗ್ರಾಮಾಕ. ೧೯). **ಮುನಸೀಫ್** : " ಪ್ರಾಡ್ವಿವಾಕಃ, ಅಕ್ಷದರ್ಶಕಃ . . . ನ್ಯಾಯನಿರ್ಣಾಯಕನ ಹೆಸರುಗಳು. ಜಡ್ಜ. ಮುನಸೀಫ್. ಧರ್ಮಾಧಿಕಾರಿ " (ಸಿದ್ಧಾಂತ. ೨೩೬). **ಮುನಸುಫ್** : ಮುನಸೂಫ್ – ಗ್ರಾಮದ ಶಿವಿಲ್ ಅಧಿಕಾರಗಳನ್ನು ಚಲಾಯಿಸತಕ್ಕವನಿಗೆ ಮುನಸೂಫ್, ಗ್ರಾಮ ಮುನಸೂಫನೆಂದು ಹೆಸರು (ಗ್ರಾಮಾಕ. ೦). **ಮುನಸೂಫ್** : ಮೇಲಿನ 'ಮುನಸುಫ್' ಉಲ್ಲೇಖದ ಪ್ರಯೋಗವನ್ನು ನೋಡಿ. **ಮುನಸೂಫ** : ಚಿದೂ . . . ಸಾಹೇಬ ಆಗಲಿ. ಮುನಸೂಫ ಆಗಲಿ (ಮುಕ್ತ್ಯರಿ. ೭). **ಮುನ್ಸೀಫ್** : 'ಮುನ್ಸೀಫ್‌ಕೋರ್ಟು' ಪರಾ.

[ ← ಅರ. ಹಿಂ. ಮುನ್ಸಿಫ್ ; ಮರಾ. ಮುನಸಫ್, ಮುನಸಿಫ್, ಮುನಸೀಫ್, ಮುನಸೂಫ್, ಮುನ್ಸಫ್ ]

**ಮುನಸುಫ್** 'ಮುನಸೀಫ' ನೋ.

**ಮುನಸುಫ್‌ಕೋರ್ಟು** 'ಮುನ್ಸೀಫ್‌ಕೋರ್ಟು' ನೋ.

**ಮುನಸೂಫ್** 'ಮುನಸೀಫ' ನೋ.

**ಮುನಸೂಫ** 'ಮುನಸೀಫ' ನೋ.

**ಮುನಾಫೆ** (ನಾ). ಲಾಭ ; ಫಾಯಿದೆ ; ಆದಾಯ : ಅವರು ಮುನಾಫೆ ಯಿಂದಿಸಿ ಮಾರಿದ್ದೇಂಬುದೇ ಇಲ್ಲ (ಜಾರುದಾ. ೪೬); ಹತ್ತಿಪ್ಪತ್ತಕ್ಕೆ ಟಕ್ಕರ್ ವಿನಹ ನಿಮ್ಮಿಂದ ಒಂದು ಪೈ ಮುನಾಫೆಯಿಲ್ಲ (ಜೀವಮ. ೫೬).

[ ← ಅರ. ಮುನಾಫಅತ್, ಮುನ್ನಾಫಅ. ಮುನ್ಫಅ, ಮುನಾಫಾ ; ಹಿಂ. ಮರಾ. ಮುನಾಫಾ ]

**ಮುನಾಸಬು** (ಗು). ೧. ಉಚಿತವಾದ ; ಸೂಕ್ತ ; ತಕ್ಕುದಾದ : ಈ ಹದಿನೇಳು ಸ್ಥಳಗಳ ಪಾಳೆಯಗಾರರಿಗೆ ಅವರವರ ಸ್ಥಿತಿ ತರಗತಿಗಳಿಗನುಸಾರ ಮುನಾಸಬು ಮಾಹೇಯಾನಾ ಮರ್ಯಾದೆಯ ತಲಬು (stipend) ಮೊಕರೂರಾಯಿತು (ಮಹಾಮಂ. II, ೦೫). (ನಾ). ೨. ಅರ್ಹತೆ ; ಸೂಕ್ತತೆ : ಕುಳದ ಆದಾಯ ಮುನಾಸಬಿನಂತೆ ವಾರದ ದಿವಸದ ಗುಡ್ಡೆಯಲ್ಲಿ . . . ಸಲ್ಲುತ್ತಿತ್ತು (ಶಾಳಗ್ರಾ. ೫೪).

[ ← ಅರ. ಹಿಂ. ಮುನಾಸಿಬ್ ; ಮರಾ. ಮುನಾಸಬ್ ]

**ಮುನಿ₁** (ಕ್ರಿ). ೧. ಸಿಟ್ಟಾಗು ; ಕೋಪಗೊಳ್ಳು : "ಮುನ—ಕ್ರೋಧೇ. ತಪಸ್ವಿನಿ ಚ" (ಶಮ); ಅಳುವವೇಡಮಖಿಸಾಸಿರನುಮಪಾಸ್ ಚಿತ್ರ ವಾಹನನಾಳುತ್ತುಂ ಬಾಯ್ಕೇಳದಿರೆ ಮುನಿದು ಕೊಲ್ಲಿಪಲ್ಲವನೊಬವ್ವುಂ ನೊಪುವ್ಪುರಾದಿತ್ಯನ್ ಪೆಸಸಲ್ (ಎಕ. VIII, ಸೊರಬ, ೦೦-೩; ಕು. ೬೦೦); ಒಸೆಗೆ ಮೇಣ್ ಮುನಿಗೆ ಮೇಣವರೆಲ್ಲರುಮಂತೆ ಬಗ್ಗ[ಸುಗೆ] ಮತ್ತುಮುಬಾಯ ಲಾಗದು (ಕಂಗಿ. ೦-೦೪೫) ; ಮುನಿದಿರ್ಪತ್ತೊಂದುಸೂಬಿರ ಕ್ಷತ್ರಿಯರ ನಟಿಸಿ ಕೊಂದಿಕ್ಕಿದಾ ರಾಮುನೀಂದಿತ್ತ ನರೇಂದ್ರುರ್ ಪೊಕ್ಕರಿಲ್ಲೊರ್ಬರುಂ (ಗದಾಯು. ೦-೨೯); ಅವರಿವರ ಹವಣಲ್ಲ ಗುರು ಮುನಿದವಗಡಿಸಿದರೆ ನಿಲುವ ನಾವನು (ಕುವ್ಯಾ,ದ್ರೋ. ೯-೨೫); ಒಲಿದರೆ ನಾರಿ, ಮುನಿದರೆ ಮಾರಿ (ಗಾದೆ). ೨. ಅಸಮಾಧಾನಗೊಳ್ಳು ; ಬೇಸರಹೊಂದು ; ಜುಗುಪ್ಸೆ ಪಡು : ತನ್ನ ಕರಿ ಮಾಡಿದಪರಾಧಂ ತನ್ನದೆನುತಂ ಪೆದಖಿ ಜೋಳನು ತನ್ನ ಜೀವಕೆ ಮುನಿದನಂತಾಗಿ (ಬಸಪು. ೨೨-೨೦); ನೊಂದನೀಪರಿ ತನ್ನ ಕಂಗಳೆ ಮುಂದೆ ನರಪತಿ ಪಾರ್ಥನಿನ್ನೇನೆಂದು ಮುನಿದನೊ ಶಿವಶಿವಾ ಎಂದಳಲಿದನು ಭೀಮ (ಕುವ್ಯಾ,ಕ. ೦೨-೭). ೩. ಹೊಟ್ಟೆಕಿಚ್ಚುಪಡು ; ಮತ್ಸರಿಸು : ಒಡೆಯರ ಸಿರಿಯುಂ ಕಂಡೊಡೆ ಬಡವರ್ ಮುನಿವಂತೆ ನರಕ ಗತಿಗಿಬಿಪ್ಪವರುಂ ತಡೆಯದೆ ನಿರ್ವೃತಿಸುಖಿಮುಂ ಪಡೆವವರಂ ಕಂಡೊಡಾ ಗಳುಂ ಕಡುಗಾಯ್ವರ್ (ಧರ್ಮಾಮೃ. ೦೦-೯೬); ನಿಮ್ಮವರೊಡನೆ ಸರಸಾಗಿಪ್ಪ ವರ ಕಂಡರೆ ನಾಸವರಿಗೆ ಮುನಿವೆ ನೋಡಾ ಕಪಿಲಸಿದ್ಧಮಲ್ಲಿನಾಥ ನೀಸವರಲ್ಲಿ ಇಪ್ಪೆಯಾಗಿ (ಸಿದ್ಧವ. ೩೨-೦೭೯); ಈರ್ಷ್ಯೆಗೆ – ಕವಿಗೆ ಕವಿ ಮುನಿಪಂ (ಕವಿರಾ. ೦೩೦ ಕ್ರ ಪೂ). ೪. ಪ್ರತಿಭಟಿಸು : ಮಲೆ : ಮುನಿದಿದಿರ್ಪಾಗೆ ಶರಣ್ಬುಗೆ ಮನಮೊಲ್ದುದನೆರೆಯೆ ಫಲ್ಗುಣ(ನ)ಂ ಧಾತ್ರುಂ ಕರ್ಣ್ಣನೆನಲ್ ಗೊಜ್ಜಗಭೂಪಾಳನನುವ್ವುವ ಭೂಮಿಪಾ[ಳಕ]ರ್ಕ್ಕಲರೊಳರೇ (ಎಕ. XIII, ೩೩೦-೦೦; ೨೭೯); ಸಾಕೆನ್ನಿವರವರಲೇನರ್ಜುನನು ಮಾಧವನು ಮುನಿವಡೆ ಗೆಲುವೆನಂಜದೆ. ರಥವ ಹರಿಸು (ಕುವ್ಯಾ,ದ್ರೋ. ೪-೩೬) ; ಮುನಿಯುದಿರು ರಾಮಂಗೆ ಮಲೆತರೆ ಮರಣವಹುದು (ತೊರಾ. ೦೪-೨೯).

**ಮುನಿವರ ಸಿಂಗ** = ಪ್ರತಿಭಟಿಸುವವರನ್ನು ನಾಶಮಾಡುವವನು : ಒಂದು ಬಿರುದು : ನುಗುನಾಡ ರಾಘವಂ ಮುನಿವರ ಸಿಜ್ಗಮಾಚಕದಾವಳು ಚಣ್ಣವಿಕ್ರಮಂ (ಎಕ. III (R), ಹೆಗ್ಗಡ. ೬೦-೩೦; 1057).

[ ದೇ.॥ ತಮಿ. ಮಲ. ತುಳು. ಮುನಿ]

**ಮುನಿ₂** (ನಾ). ೧. ತಪಸ್ಸನ್ನು ಆಚರಿಸುವವನು ; ಋಷಿ : ತಪಸ್ವಿ : "ಋಷಿಃ, ತ್ರಿಕಾಲದರ್ಶೀ, ಮುನೀ, ವಾಚಂಯಮಃ – ಈ ೪ ಋಷಿಗಳ್" (ಶಬ್ದಮಂ. ೩೮-೨೩೬); ಮುನಿವನನಮನೆ ಬಿಸುಟುವು ಮುಂ ಮುನಿಯರ ಸೋಂಕಿನೊಳೆ ಒಳೆದ ಸಿಂಗಂಗಳ್ ಮುದ್ದಿನೊಳಡರ್ವ ಪಿಡಿವ ಗುರ್ದುವ ಮುನೆಗೆಟಿಪನಿತರ್ಕಮಲಸಿ ಮರುದಾತ್ಮಜನಾ (ಕಂಕಶಾ. ೨-೭) ; ಬೆಟ್ಟದ ಮುನಿಯಂ ನೆನೆದೊಡೆ ಮುಟ್ಟವು ರಾಕ್ಷಸ ಪಿಶಾಚಿ ವಿಷಮಾಹಿಗಳುಂ (ನೇಮಿಕು. ೦-೦೭); ಅಂಬುಧಿಯ ಮುನಿಯಾಪೋಷಣದ ಕೊಂಬಲ್ಲಿ ಚಂದ್ರ ಮನದ್ದಬಿಂದನೆ (ಬಸವ. ೨೫). P ವಿಶೇಷವಾಗಿ ವಿಷ್ಣು, ಶಿವ, ನಾರದ, ಭರತ, ಅಗಸ್ತ್ಯ, ವ್ಯಾಸ, ಪಾಣಿನಿ, ಅರ್ಹಂತ, ಬುದ್ಧ ಮುಂತಾದವರಿಗೆ ಈ ವಾಚಕವನ್ನು ಬಳಸುತ್ತಾರೆ. ೨. (ಏಕಾಂಗಿ ಯಾಗಿದ್ದುಕೊಂಡು) ಮೌನವ್ರತವನ್ನು ಆಚರಿಸುವ ತಪಸ್ವಿ. ೩. ದರ್ಭೆ. ೪. ಒಂದು ಬಗೆಯ ಮರ ; ಪಲಾಶ ; ಮುತ್ತುಗ. ೫. ಮಾವಿನ ಮರ. ೬. ಪ್ರಿಯಾಲವೃಕ್ಷ; P ಇನ್ನೂ ಅನೇಕ ಬಗೆಯ ಮರಗಳಿಗೆ ಈ ಹೆಸರುಂಟು : ಅಶೋಕ ಬದರಿ ಮಂದಾರ ಸುಪಟೀರ ಮುನಿ ಮಾತುಲುಂಗ . . . ಹೊನ್ನೆಯಿಂದಾ ಬನಂ ಕಣ್ಗೆಸೆದುದು (ನಂದಿಶಾ. ೩-೦೬). ೭. [ಜೈನ] ಶ್ರಮಣ; ಸವಣ : "ಮುನಿಃ. ತಪೋಧನಃ . . . ಶ್ವೇತವಾಸಾಃ. ಸಂಯತಃ – ಈ ೯ ಸವಣರ ಪೆಸರ್"

(ಶಬ್ದಮಂ. ೩೭-೦೯೦); ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆದಂ ಈ ಮುನಿನಾಥಂ ಮಂತ್ರಗುಪ್ತಿಯೊಳ್ ನೆರೆದಂ (ಆದಿಪು. ೩-೨೯ ವ); ಮುನಿಮುಖ್ಯರ ಬರವಂ ಭೋಂಕನೆ ಕಂಡು (ಧರ್ಮಾಮೃ. ೯-೦೨). ೮. ಐದುವರ್ಗದ ಗುರುಗಳಲ್ಲಿ ಒಬ್ಬ : ಪಂಚಪರಮೇಷ್ಠಿಗಳಲ್ಲಿ ಒಬ್ಬ ; ಸಿದ್ಧ : ಮುನಿಜನದೋದಿಸಿದೋಜೆಯೊಳನುವದಿಪ್ಪುದಿದೊಂದೆ ಕೊಂಡಕುಂದಾನ್ವಯಸಂದನವನರುಕಮೆಂದೆನಗಿನಿಸನುಗ್ರಹಂಗೆಯ್ಗೆ ಕರುಣ ದಿಂ ಮುನಿನಿವಹಂ (ಆದಿಪು. ೦-೦೨೯); ಅರ್ಹತ್, ಮುನಿ(ಸಿದ್ಧ), ಆಚಾರ್ಯ, ಉಪಾಧ್ಯಾಯ, ಸಾಧು ಇವರು ಪಂಚಪರಮೇಷ್ಠಿಗಳು (ಸಿಂದಶಾ. ೯೦). ೯. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : ಗಿರಿ ಮುನಿ . . . ಪರ್ವತಾದ್ರಿಯೋಬಿಜ ನಾಮಂ (ವ್ಯವಹಗ. ೯-೬). ೧೦. [ಕಾಮಶಾ] ಸ್ತ್ರೀಯರ ಹನ್ನೆರಡು ಬಗೆಯ ಮನೋಧರ್ಮಗಳಲ್ಲಿ ಒಂದು : ಶಾಂತಸ್ವಭಾವ : ಸುರ ಯಕ್ಷ . . . ಮುನಿ ಪಿಶಾಚ ರಾಕ್ಷಸ ಕಿನ್ನರ ಖರವೆಂಬ ಪೆಸರ ಪನ್ನೆರಡುಸತ್ತ್ವದ ಬಗೆಯನೊರೆವೆನು (ಜನವ. ೫-೨೫). 'ಮುನಿಸತ್ತ್ವ' ಪರಾ.  [ಸಂ.]

**ಮುನಿಕೊಲ್ಪೋಯ** (ನಾ). ಒಬ್ಬಾತನ ಹೆಸರು : ಮುನಿಕೊಲ್ ಬೋಯಸ್ಯ ಭಾರದ್ವಾಜಗೋತ್ರ ಕನ್ದಶರ್ಮ್ಮಣ ಏಕ್ಕಂಶಃ (ಎಕ. VII, ೦೬೬-೫೩; 668). [ ? ]

**ಮುನಿನಿವೇದಕ** (ನಾ). ತಪಸ್ವಿಯ ಆಗಮನವನ್ನು ತಿಳಿಸುವವನು : ಋಷಿನಿವೇದಕ : ನಡೆದೇಬಿಡಿಯಂ ಜಿನನಿರ್ದೆಡೆಗೆಬಿಗಿ ಬಿಬಿಕ್ಕಂ ಮುಖ್ಯ ಗೊಟ್ಟಂ . . . ಆ ಮುನಿನಿವೇದಕಂಗೆ ನೃಪೇಂದ್ರಂ (ಶಾಂತಿಪು. ೦-೬೩).

[ ಸಂ. ]

**ಮುನಿಪ** (ನಾ). ತಪಸ್ವಿಗಳಲ್ಲಿ ಮುಖ್ಯನಾದವನು : ರಾಗವಂ ಮುನಿಸುಮನೊಲ್ಲದಂ ಮುನಿಪನೆಂಬುದು (ಧರ್ಮ. ೨-೦೦೬); ಮುನಿಪಂ ಮಾಸೋಪವಾಸಾಂತರದೊಳನುಸಯಂ ಪಾರಿಸಲ್ಕೆಂದು ಪೊಕ್ಕೊಯ್ಯನೆ ಚರ್ಯಾಮಾರ್ಗದಿಂ ಬರೆ (ಶಂಹರ. ೫-೩೯); ಅತಿಪ್ರಮುಖಿಮುನಿಪಶ್ರೇಣಿಗಳ ವಾಜ್ಮನಸಗಳಿಗೆ ಕ್ಷೀಣಪದದಲಿ ಮಾಜಿ ತೋಜುವ ನಿರುಪಮಿತಮೂರ್ತಿ (ಜಸಿ. ೫೦-೭೦). [ಸಂ.]

**ಮುನಿಮ** 'ಮುನೀಬ' ನೋ.

**ಮುನಿಮತ** (ನಾ). ೧. ಋಷಿಯ ಅಭಿಪ್ರಾಯ.– ಮತ. ೨. [ಛಂದ] ಇಪ್ಪತ್ತಾರನೆಯ ಉತ್ಕೃತಿ ಎಂಬ ಛಂದಸ್ಸಿನಲ್ಲಿ ಹುಟ್ಟುವ, ಒಂದು ಪಾದದಲ್ಲಿ ಇಪ್ಪತ್ತಾರು ಅಕ್ಷರಗಳಿಂದ ಕೂಡಿರುವ ಒಂದು ವರ್ಣವೃತ್ತ : ಏನಮಿಂತಬಲಿಶಪದೋಕ್ತಿಗಳಿಂ ಜನಹಿತಮಿಂತಿದು ಮುನಿಮತಮೆಂಬುದು (ಛಂದೋಂಬು. ೨-೦೯೬). [ಸಂ.]

**ಮುನಿಯಿಸು, ಮುನಿಸು₁** (ಕ್ರಿ). ೧. ಕೋಪಗೊಳ್ಳುವಂತೆ ಮಾಡು; ಸಿಟ್ಟು ಬರಿಸು : ಮುನಿಯಿಸಿದಂ ಕರಂ ಬಿರಿಯನಪ್ಪುದು ಬೇಟ್ಟನ ಬೇಟ್ಟ ವಸ್ತು ಕಾಂಚನಗಿರಿಯುಂದಮುಗ್ಗಳಮೆನಿಪ್ಪುದಾದೊಡಮೇನೊ . . . ದೊರೆಯಾರಿಕೇಸರಿ ನಿನ್ನಪೋಲ್ ಪೆಜಂ (ಕಂಕಶಾ. ೫-೭೭); ಮುನಿಯಿಸಿದ ರಾತಿಯಂ ಕೊಲ್ವೆನೆಂದು ಪೂಣ್ದಂತೆ ಪೂಣ್ಕೆ ತಪ್ಪದೆ ಕೊಲಲೇಂ ನಿನಗಲ್ಲದಿಂತು ತೀರ್ಗುಮೆ (ಗದಾಯು. ೦೦-೮); ಮುನಿಯಿಸುವೆಂ ಸಪತ್ನಿಯ ರನೆಂದಮರದ್ರುಮದೊಂದು ಪುಷ್ಪಮಂ ಮುನಿ ಹರಿಗಿತ್ತಂ (ಜಗನ. ೦೩-೯). **ಮುನಿಸು₁**: ೧. ಮುನಿಯದ ಕೂರದ ಮುನಿಸದ ಮುನಿಪತಿ ಭಾವಿಪೊಡೆ ತಾನೆ ಜಿನಪತಿಯಲ್ತೆ (ಸುಕುಮಾ. ೮-೩೭); ವಾರಿಜೋದ್ಭವನೀ ಸರೋಜ ವಳಾಯತಾಕ್ಷಿಯ ಮೂಗಿನಾಕಾರಮಂ ನೆಜೆ ಪೋಲ್ಮಿರೆಂದುಖಿ ನೋಡಿ ಸಂಪಗೆಗಳ್ಗೆ ನಿಷ್ಕಾರಣಂ ಮುನಿಸಿರ್ದನಪ್ಪುದಜಿಂದದೇಂ ಮನದಟ್ಟಜಿಂ ಸಾರಲಣ್ಮದೆ ಭಾವಿಪಂದವನೊಂದು ಪೊರ್ದವು ತುಂಬಿಗಳ್ (ಧರ್ಮಾಮೃ. ೩-೦೬೨ ಅನಂತರ). ೨. ಕೋಪಗೊಳ್ಳು : ಸಿಟ್ಟಾಗು : ಇಂತು ಪೊಯ್ದು ಪೆ

ನಿಂತು ಬಯ್ವುವೇ ಮುನಿಸಿದೊಡೆ ತಿಳಿಪಿ ರತಿಯು ಕಾಲವಿಡಿದಿಂತು ನೆರೆವಪೆನವನೊಳ್ (ತಿರು. ೧೯-೯೦); ಚಿಂತೆಯಾದರ್ನನು ಯಾರಿಗೆ ಹೇಳಾಲಿ ಅತ್ತೆ ಎಂದಾರೆ ಮುನಿಸ್ಯಾಳು ಸಿಡುಕ್ಯಾಳು (ಜಾನಪ. ೬೪).

[ ಮುನಿ$_1$ + — ಇಸು$_3$ ]

**ಮುನಿವಧು** (ನಾ). ಋಷಿಯ ಹೆಂಡತಿ; ಋಷಿಪತ್ನಿ : — ಮುನಿವಧು ಗಾತ್ರವಲ್ಲಭನನಿತ್ತ ಪುಲೋಮಜೆ (ಶಬ್ದಮ. ೨-೦೦೯); ಇನ್ನು ಪಾಂಡವ ರಾಜ್ಯಸಿರಿಯೆಮಗಿನ್ನು ಲೇಸಹುದಕಟ ದೈವದ ಗಸ್ಣಗತಕವೆಯೆಸುತ ಓಗ್ಗಿತು ಮುನಿವಧೂನಿಕರ (ಕುಮ್ಯಾರ. ೦೯-೩೩). [ ಸಂ. ಮುನಿವಧೂ ]

**ಮುನಿವಾಳು** (ನಾ). ಋಷಿಯ (ಶಾಂತವಾದ) ಬದುಕು.–ಜೀವನ : ಮನೆವಾಳು ಸಾಕಾಯ್ತು ಮುನಿವಾಳು ಬೇಕಾಯ್ತು (ಶರತ. ೩೨-೦೦೪).

[ ಮುನಿ$_2$ + ಬಾಳು (< ಬಾಳ್$_3$) ]

**ಮುನಿವೃಕ್ಷ** (ನಾ). ಒಂದು ಬಗೆಯ ಮರ : ಅತ್ತಿಮಾಲವು ಅರಳಿ ಮತ್ತಿ ಮಹಿಷಾಕ್ಷಿ ಮುತ್ತುಕವು ಮುನಿವೃಕ್ಷ (ಶರೀ. ೧೨೯-೬). [ಸಂ.]

**ಮುನಿಷಿ** 'ಮುನಸಿ' ನೋ.

**ಮುನಿಸತ್ತ್ವ** (ನಾ). ೧. ಋಷಿಯ ಚೈತನ್ಯ. ೨. [ಕಾವ್ಯಶಾ] ಸ್ತ್ರೀಯರಲ್ಲಿರುವ ಹನ್ನೆರಡುಬಗೆಯ ಮನೋಧರ್ಮಗಳಲ್ಲಿ ಒಂದು; ಶಾಂತಸ್ವಭಾವ : ವಿನಯದ ವಿವೇಕದಿಂಪಿನ ಸೈರಣೆಯ ನುಡಿಯ ಜನನಿ ಜನಕರ್ಗಂಜಿ ನಡೆವ ಹಿತವ ನೆನೆವ ನಿರ್ಮತ್ಸರದ ಘನಭಕ್ತಿರತದ ಮಾನಿನಿಯೆ ಮುನಿಸತ್ತ್ವದವಳು (ಜನವ. ೩-೬೬). [ಸಂ.]

**ಮುನಿಸತ್ವ** (ನಾ). ೧. = ಮುನಿಸತ್ತ್ವ ೧. ೨. ಮುನಿಸತ್ತ್ವ ೨ : ದೇವಸತ್ವ . . . ವಾನರಸತ್ವ ಮುನಿಸತ್ವ ಪಿಶಾಚಸತ್ವ ರಾಕ್ಷಸಸತ್ವ ಕಿನ್ನರಸತ್ವ ಖೇಚರಸತ್ವವೆಂಬ ದ್ವಾದಶಸತ್ವ ಸತಿಯರಿಂ (ವಿವೇ. ೦೬೩). [ಸಂ.]

**ಮುನಿಸಪ್ತಕ** (ನಾ). ವಿಶ್ವಾಮಿತ್ರ, ಜಮದಗ್ನಿ, ಭರದ್ವಾಜ, ಗೌತಮ, ಅತ್ರಿ, ವಸಿಷ್ಠ ಮತ್ತು ಕಶ್ಯಪ ಎಂಬ ಏಳುಜನ ಋಷಿಗಳು; ಸಪ್ತರ್ಷಿಗಳು : ಚತುರಾನನನ ಸಭೆಯಲ್ಲಿ ಪೂಜ್ಯಂ ಮುನಿಸಪ್ತಕ ಮುನಿಜನಕೊಳತ್ರಿಮುನಿವರನಧಿಕಂ (ಶಾಸ. XX. ೨೯೯-೦೨; ೧೨೨೮). [ಸಂ.]

**ಮುನಿಸಾನು** (ಕ್ರಿ). ಕೋಪವನ್ನು ತಾಳು; ಕೆರಳು; ಸಿಟ್ಟಾಗು : ನೀನಿನಿತು ಮುನಿಸಾನು [ಬಾಕಾಂ. ಮಾಡು] ವರೆ ಸಾಕಿನ್ನಾರು ಗತಿಯೆನಗೆ (ತಲೆ. ೩-೯).

[ ಮುನಿಸು$_2$ + ಆನು$_1$ (< ಆನ್$_1$) ]

**ಮುನಿಸಿಪಾಲಿಟಿ**, ಮುನಿಸಿಪಾಲ್ಟಿ, ಮುನ್ಸಿಪಾಲಿಟಿ (ನಾ). ಸ್ಥಳೀಯ ಆಡಳಿತಾಧಿಕಾರವನ್ನು ಹೊಂದಿರುವ ನಗರದ ಸಂಸ್ಥೆ; ಪುರಸಭೆ; ನಗರಸಭೆ : ಕೆಲವು ಮುಖ್ಯವಾದ ಜಿನಸಿಗಳ ಮೇಲೆ ಮೊಕದ್ದಮೆಯ ಆಕ್ಟ್ರಾಯಿ ಎಂಬ ತೆರಿಗೆಯೂ ಸರ್ಕಾರದ ಮೊಹತರ್ಫ ತೆರಿಗೆಯೂ ಈ ಮುನಿಸಿಪಾಲಿಟಿಗಳಿಗೆ ಸೇರಿದುವು (ಮಹಾರಾಷ. II. ೦೦೨): ಭಾರತೀಯರು . . . ಮುನಿಸಿಪಾಲಿಟಿಗಳು, ಜಿಲ್ಲಾಬೋರ್ಡುಗಳು, ಪ್ರತಿನಿಧಿಸಭೆಗಳು, ಇವು ಹೇಗೆ ಕೆಲಸ ಮಾಡಬೇಕೆಂಬುದನ್ನು ತಿಳಿದರು (ಭಾರತ. ೪೨೬). **ಮುನಿಸಿಪಾಲ್ಟಿ** : "ಮುನಿಸಿಪಾಲ್ಟಿ" ನೀರಿನ ಖಾತೆ ಕೆಲಸಗಾರರ ಸಂಪಂತಲ್ಲ (ಸುಹುತು. ೨೩). **ಮುನ್ಸಿಪಾಲಿಟಿ** : ಮುನ್ಸಿಪಾಲಿಟಿಯ ಮೇಲೆ ದಾವೆ ಹೂಡಿ, ಈ ಕಾಯಿದೆ ತೆಗೆದುಹಾಕುವ ಕಾಲ ಎಂದು ಬಂದೀತು ? (ಅಪ್ಪಣ. ೬). [ ← ಇಂ. Municipality ]

**ಮುನಿಸಿಪಾಲ್ಟಿ** 'ಮುನಿಸಿಪಾಲಿಟಿ' ನೋ.

**ಮುನಿಸು$_1$** 'ಮುನಿಯಿಸು' ನೋ.

**ಮುನಿಸು$_2$** (ನಾ). ೧. ಸಿಟ್ಟು : ಕೋಪ : ಕ್ರೋಧ : "ಕೋಪಃ ಕ್ರೋಧ, ಅಮರ್ಷಃ, ರೋಷಃ, ಪ್ರತಿಘಃ—ಈ ೫ ಮುನಿಸು" (ಕಜಾಯು. ೩೯-೨೦೭) ; ವನರುಹದಳನಯನೇ ನಿನ್ನನೆ ನೆನೆನೆನೆದಿರುಳೊ ಳೊಜಗಿರೆ ಕಡೆಗಣ್ಣಿಕ್ಕಿ ನಿನಗೆ ಘನಯೊಳಪವೊಲ್ಲೆಮ್ಮನೆ ರಕ್ಷಾಂಘೋಜರುಚಿಯ ನಿಟ್ಟಿಳಿಗೊಳ್ವಂ (ಶಬರ. ೦-೯೩); ನಿಮಗಂ ತಮಗಂ ಮುನಿಸುಂಟೆ ಕಾಯ್ದು ಬೆನ್ನೀರ್ ಮನೆ ಸುಡದಂಬೊಂದು ನುಡಿಯ ಪೋಲ್ ಕುರುರಾಜಾ (ಶಂಕರಾ. ೯-೩೯) : ಕಂದ ಮನ ಮುನಿಸಿಲ್ಲಲೇ ನಾವೆಂದ ನುಡಿಗೆ (ಕುಮ್ಯಾರ. ೬-೭೭) ; ಕೊಟ್ಟು ಬರುವ ನಿಷ್ಠುರಕ್ಕಿಂತ ಕೊಡದೇ ಬರುವ ಮುನಿಸು ಲೇಸು (ಗಾದೆ). ೨. ಸೇಡು : ವೈರ ; ದ್ವೇಷ : ನೀನಿಂತಿರಾನನ್ನೆಗಂ ಮುನಿಸಂ ತೀರ್ಚಿ ನರೇಂದ್ರವೈರಿತರುವಂ ನಿರ್ಮೂಲನಂ ಮಾಡುವೆಂ (ಗದಾಯು. ೬-೨೩).

**ಮುನಿಸುಮಾಡು** = ಕೋಪ ಬರುವಂತೆ ಮಾಡು : ಕೆರಳಿಸು ; ಸಿಟ್ಟುಬರಿಸು : ಆ ಮುನಿಗೆ ಮುನಿಸುಮಾಡಲೆಂದಿದ್ದನುಪಾಯ ದೊಳಟ್ಟಿದ ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮಂ . . . ಉರ್ಚಿ ಪೋಗೆಯುಂ (ಶಂಕರಾ. ೦-೦೦೪ ಪ). [ಮುನಿ$_1$ + —ಸು$_3$]

**ಮುನಿಸುಗುಟ್ಟು** (ಕ್ರಿ). ಸಿಟ್ಟಾಗು : ಕೋಪಗೊಳ್ಳು; ಕೆರಳು ; ರೇಗು: ಘೂದೇವಿ, ನೀನು ಈ ಚರಾಚರಜಗತ್ತಿನ ಶರೀರವಾಗಿದ್ದೂ ಅಜ್ಞಾನಿಯಂತೆ ಅಳಿಯನ ಮೇಲೆ ಮುನಿಸುಗುಟ್ಟುತ್ತೀ (ಉರಾತ. ೦೨೪).

[ಮುನಿಸು$_2$ + ಕುಟ್ಟು$_1$]

**ಮುನಿಸುಗೊಳ್ಳು** (ಕ್ರಿ). = ಮುನಿಸುಗುಟ್ಟು : ಮುನಿಸುಗೊಂಡಗ ಲಿರುವ ಪಿಟಪಿಟರ್ವನಿತ ವಿರಹಾನಲನ ಪೆರ್ಚಿಸಲ್ಕನಿಜನಟ್ಟಿದ ಚರರವೊಲು ತಂಬೆಲರು ಪರಿತಂದು (ಭಾಗತ. ೩೦-೦೬).

[ಮುನಿಸು$_2$ + ಕೊಳ್ಳು (< ಕೊಳ್$_1$)]

**ಮುನಿಸುವ್ರತ** (ನಾ). [ಜೈನ] ವರ್ತಮಾನಕಾಲದ ಇಪ್ಪತ್ತುನಾಲ್ಕು ಜನ ತೀರ್ಥಂಕರರಲ್ಲಿ ಇಪ್ಪತ್ತನೆಯ ತೀರ್ಥಂಕರನ ಹೆಸರು : ವೃಷಭ ಅಜಿತ . . . ಮುನಿಸುವ್ರತ ನಮಿ ನೇಮಿ ಪಾರ್ಶ್ವ ವರ್ಧಮಾನರೆಂಬಿಪ್ಪತ್ತು ನಾಲ್ವರ್ ತೀರ್ಥಂಕರರ್ (ಶಾಪುಂಪು. ೪೦೨). [ಸಂ.]

**ಮುನೀಂದ್ರ** (ನಾ). ೧. ಋಷಿಗಳಲ್ಲಿ ಮುಖ್ಯನಾದವನು : ಶ್ರೀದೇವೇಂದ್ರ ಮುನೀಂದ್ರವಂದಿತಗುಣವ್ರಾತಂ . . . ದಯೆಗೆಯ್ವನಕ್ಕೆಮಗೆ ಮುಕ್ತಿ ಶ್ರೀಸುಖಾವಾಪ್ತಿಯಂ (ಅದಿಪು. ೦-೦) ; ಪಸರಿಸಿದ ಮುನೀಂದ್ರನ ಮೃದು ಕಿಸಲಯಸಮಪಾಣಿಪಾತ್ರದೊಳ್ ಶುದ್ಧಮನಂ ಮಸುಳ್ದೇಶನಕ್ಕದಂ ಪಾಯಸಮಂ (ಪ್ರಶ್ನ. ೦೯-೦೨). ೨. ಬುದ್ಧ. ೩. ಜಿನ. ೪. ಶಿವ. [ಸಂ.]

**ಮುನೀಬ**, ಮುನೀಮ (ನಾ). ೧. ಮೇಲ್ವಿಚಾರಣೆ ಮಾಡುವವನು : ನಿರ್ವಾಹಕ : ವ್ಯವಸ್ಥಾಪಕ : ಮುತ್ಸದ್ದೀರೂ ಮುನೀಬರೂ ಗಣತಿ ಮಾಡಿ ಜೇಗಾ ಹಾಕಿಸಿದರು (ಮುಸುಗ. ೦೬೦); ಅರಮನೆಯ ಮುತ್ಸದ್ದಿಯೂ ಮುನೀಬರೂ . . . ರಾಜಾಜ್ಞೆಯನ್ನು ಎದುರುಗೊಂಡರು (ಶ್ರೀರಾಮು. ೦೨೪). **ಮುನೀಮ** : ೨. ಲೆಕ್ಕಪತ್ರಗಳನ್ನು ನೋಡಿಕೊಳ್ಳುವವನು; ಗುಮಾಸ್ತ; ಕಾರಕೂನ : ದುಕಾನಿನ ಮುನೀಮನ ಪರಿಚಯದೊಳಗಿನವ ರಿದ್ದರೆ ಅಥವಾ ಅವರು ಮುನಿಮನಿಗೆ ತಪ್ಪು ಖಾತ್ರಿ ಕೊಟ್ಟರೆ . . . ರಕಮು ಕೊಡೋಣದರಲ್ಲಿ ಬಂತು (ಮುಂಬಾ. ೨೦).

[ ← ಅರ. ಹಿಂ. ಮುನೀಬ್, ಮುನೀಮ ; ಮರಾ. ಮುನೀಮ್]

**ಮುನುಷಿ** 'ಮುನಸಿ' ನೋ.

**ಮುನೂಜು** 'ಮುನೂಜು' ನೋ.

**ಮುನ್ನ$_1$** 'ಮುನ್$_1$' ನೋ.

**ಮುನ್ನ$_2$** 'ಮುನ್$_2$' ನೋ.

**ಮುನ್ನಂ** 'ಮುನ್$_2$' ನೋ.

**ಮುನ್ನಡಸು** 'ಮುನ್ನಡೆಯಿಸು' ನೋ.

**ಮುನ್ನಡಿ** (ನಾ). ೧. ಪಾದದ ಮುಂಭಾಗ : ಕಾಲಿನ ಮುಂದುಗಡೆ.– ಎದುರು : ಗಜೆಯಂ ಭೋರನೆ ಪರ್ವಿ ಬೀಸಿ ಕಡುಪಿಂದೆಯ್ದಂದು

ಮಾಱಾಂತ ಸಾಮಜಸಂಘಾತಮನೊಂದುಗೊಳ್ಳೆರಡುಗೊಳ್ಳೆಂದುರ್ವಿ ಪೊಯ್ವೊಂದು ಪೊಯ್ಗೆ ಜವಂಗುಂದಿ ಸಿಡಿಲ್ದು ಮುನ್ನಡಿಗುರುಳ್ವರ್ಪನ್ನೆಗಂ ಬೀೞೆ . . . ಕೊಂದಂ ಮರುನ್ನಂದನಂ (ಶಂಕರಾ. ೧೧-೧೦೨); ಯೋಗಿ ಪದತಳಮಿಳೆಯಂ ನೆಱೆ ಮುಟ್ಟದ ಮುಂದುಗುಲದ ಸೆಱಗಂ ಪಡಿಪಾಸಿ ಮೊಟ್ಗಿದಂ ಮುನ್ನಡಿಯೊಳ್ (ಚಂದ್ರಪ್ರ. ೩-೨೨); ದಿವಿಜಾರಾಧ್ಯನ ನೀಂದ ಮುನ್ನಡಿಗೆ ವಾನವ್ಯಂತರರ್ ಮಾಟ್ಪರಷ್ಟವಿಧಾಭ್ಯರ್ಚನಂ (ಆದಿಪು. ೯-೯೬). ೨. ಕಾಲಿನ ಮುಂತುದಿ ; ಮುಂಗಾಲು : (೩). [ಮುನ್$_1$ + ಅಡಿ$_1$]

**ಮುನ್ನಡಿಯಿಕ್ಕು** (ಕ್ರಿ). (ಅಲಂ) ಆಸಕ್ತಿತೋರಿಸು ; ಆಸೆಪಡು ; ಬಯಸು : ನೀರ ಕಡೆದು ಬೆಣ್ಣದೆಗೆವಂತೆ ಗೊಡ್ಡಿಗಪಾರ ಮುನ್ನಡಿಯಿಕ್ಕುವಂತೆ (ಭುಕ್ತ.ಕ. ೦೨-೧೦೨). [ಮುನ್ನಡಿ + ಇಕ್ಕು]

**ಮುನ್ನಡೆ$_1$** (ಕ್ರಿ). ೧. ಮುಂದಕ್ಕೆ ಸಾಗು,–ಚಲಿಸು ; ಮುಂದುವರಿ: ಶಿಕ್ಷಣ ಫಲಮಾರ್ಗದಲ್ಲಿ ಮುನ್ನಡೆಯುವ ಸೂಚನೆ ವ್ಯಕ್ತಪಡುತ್ತದೆ (ಶಿಕ್ಷದ. VIII, ಮುಖ್ಯಾಂಶ); ಕಾಡುಂಪೆಳೆಮುಕ್ಕಳಂ ಪೊತ್ತು ಮುನ್ನಡೆದು (ಗಾಂಧಾರ. ೭೫೦–೬೬೦). ೨. ಮುನ್ನುಗ್ಗು ; ಮೀರಿನಡೆ : ಮಲೆಯ ಸೆರಗಂ ಸೆರೆಗೆ ಕೊಂಡೊಪ್ಪು ನಾಡೊಡೆಯ ಗೆಲುವಡೆದು ಮುನ್ನಡೆಯೆ ಪಡೆಯ ಪಾಂಗಿನಲಿ (ಕಾಲಾರ. ೧೧೧–೧೦೨). [ಮುನ್$_2$ + ನಡೆ$_1$]

**ಮುನ್ನಡೆ$_2$** (ನಾ). (ಅಲಂ) ಏಳಿಗೆ ; ಪ್ರಗತಿ ; ಉತ್ಕರ್ಷ : "ಮುನ್ನಡೆ, ಅಭಿವೃದ್ಧಿ " (Advance. ಶಬ್ದಾ. ೪). [<ಮುನ್ನಡೆ$_1$]

**ಮುನ್ನಡೆಯಿಸು,** ಮುನ್ನಡಸು (ಕ್ರಿ). ಮುಂದಕ್ಕೆ ಒಯ್ಯು ; ಮುಂದು ವರಿಸಿಕೊಂಡು ಸಾಗು : ರಾಷ್ಟ್ರವನ್ನು ಯುಕ್ತಮಾರ್ಗದಲ್ಲಿ ಮುನ್ನಡೆಯಿಸುವುದು ಇವರಿಂದಾದೀತೆ ? (ಬಾಜಪ. ೦೯). **ಮುನ್ನಡಸು** : ಆ ಶಾಲೆಯನ್ನು ಯೋಗ್ಯರೀತಿಯಲ್ಲಿ ಮುನ್ನಡಸಿದ ಕೀರ್ತಿ ಅಲ್ಲಿನ ಮುಖ್ಯೋಪಾಧ್ಯಾಯರಿಗೇ ಸಲ್ಲಬೇಕು (ರೂಂ). [ಮುನ್$_2$ + ನಡೆಯಿಸು]

**ಮುನ್ನಡೆವಿಡಿ** (ಕ್ರಿ). (ಅಲಂ) ಮೀರು; ಅತಿಶಯಿಸು : ಉನ್ನತಲಲಾಟಪಟ್ಟಂ ಮನ್ನಿಸದಷ್ಟಮಿಯ ಚಂದ್ರನಂ ನಗೆಗಣ್ಗಳ್ ಮುನ್ನಡೆವಿಡಿದುವು ಕಮಳಮನಿನ್ನೇವಣ್ಣಿಪುದೊ ರಾಮನಭಿರಾಮತೆಯಂ (ಶಂರಾಮಾ. ೩–೦೫೩). [ಮುನ್ನಡೆ + ಪಿಡಿ$_1$]

**ಮುನ್ನರಿ** 'ಮುನ್ನಱಿ' ನೋ.

**ಮುನ್ನಱಿ,** ಮುನ್ನರಿ (ಕ್ರಿ). (ಸೂಕ್ಷ್ಮಜ್ಞಾನದಿಂದ) ಮುಂದಾಗುವುದನ್ನು ಮೊದಲೇ ತಿಳಿ, – ಮುಂಚಿತವಾಗಿ ಊಹಿಸು : ಬಿನ್ನವಿಸಲೆಂದಿರ್ದ ಹದನಂ ಮುನ್ನಱಿದು ಪರಮೇಶ್ವರು ಹಿಮಗುನ್ನಯುನದಿಂ ನೋಡುವವಸರದೊಳ್ (ಚಕಪು. ೦-೫೩). **ಮುನ್ನರಿ** : ಸ್ಫೂರ್ತಿಯಿಂದ, ಸೂಕ್ಷ್ಮಜ್ಞಾನದಿಂದ, ಮಂತ್ರತಂತ್ರದಿಂದ. ಅಥವಾ ಊಹೆಯಿಂದ ತಿಳಿ. ಊಹಿಸು; ಮುನ್ನರಿ: ಭವಿಷ್ಯ ತಿಳಿ (Devine. ಇಂಕಕಿ) ; ಹಕ್ಕಿ ಮುನ್ನರಿಯುವುದೆ ತನ್ನ ಪಯಣದ ತೆರನ ? (ಮುಂಕುಳ. ೬೩೦). [ಮುನ್$_1$ + ಅಱಿ]

**ಮುನ್ನಱಿಕೆ** (ನಾ). ಮುಂದೆ ಆಗುವುದರ ಸೂಚನೆ,–ತಿಳಿವಳಿಕೆ : ಮೊದಲೆ ಮುನ್ನಱಿಕೆಯನ್ ಪೇೞ್ದನಿತು ಪೇೞ್ದಿನೇ ಅಕ್ಕ ! (ಅಂತಿಗೂ. ೫೩-೫೩೪). [ಮುನ್$_1$ + ಅಱಿಕೆ]

**ಮುನ್ನಿ** (ನಾ). ನೃತ್ಯಗಾರನು ನಡುಪಟ್ಟಿಗೆ ಸೇರಿದಂತೆ ನಡುವಿಗೆ ಕಟ್ಟಿಕೊಳ್ಳುವ, ನೆರಿಗೆಗಳುಳ್ಳ ಒಂದು ಬಗೆಯ ವಸ್ತ್ರಾಲಂಕಾರದ ವಸ್ತು : ನಡುಪಟ್ಟಿಯನ್ನೂ ಮುನ್ನಿಯನ್ನೂ ಮಾಲಿಂಗ ವೀರಭದ್ರನ ನಡುವಿಗೆ ಹೋದಿಸಿ ಬಿಗಿದ . . . ನಡುವಿಗೆ ಸುಂದರವಾದ ನಾಲ್ಕಾರು ಬೆರಳುಗಳ ಅಗಲದ ಪಟ್ಟಿ . ಅಲ್ಲಿಂದ ಕೆಳಕ್ಕೆ ಇಳಿದು ನಿಂತ ಅಷ್ಟೆ ಅಗಲದ ವೆಲ್‌ವೆಟ್‌ನಿಂದ ಮಾಡಿದ ಜರಿ ಹೊಂದಿಸಲ್ಪಟ್ಟ ಮುನ್ನಿ (ಜಾನ್ಪಕು. ೯೦). [ ← ತುಳು. ಮುನ್ನಿ = ನೆರಿಗೆ ]

**ಮುನ್ನಿರವು** (ನಾ). ಮೊದಲು ಇದ್ದ ಸ್ಥಿತಿ,—ಅವಸ್ಥೆ : ಅನಾವಳಿನ್ನ ಮುನ್ನಿರವಾವುದು ಮತ್ತೀ ನಿನ್ನ ದಯುವಾವುದು (ಹರಿ. ೦-೩೮). [ಮುನ್$_1$ + ಇರವು$_1$ (< ಇರ್ದು)]

**ಮುನ್ನಿರುಳ್** (ನಾ). ರಾತ್ರಿಯ ಮೊದಲ ಭಾಗ ; ವಯಸ್ಸಂಜೆ : "ಮುನ್ನಿರುಳಂ ಪ್ರದೋಷವೆಂಬುದು" (ಹರಿಹರು. ೦೬-೦೦೯). [ಮುನ್$_1$ + ಇರುಳ್]

**ಮುನ್ನಿಱಿ** (ಕ್ರಿ). ಮುಂದೆ ನುಗ್ಗಿ ಇರಿ ; ಮುನ್ನುಗ್ಗಿ ನಾಶಮಾಡು : ರಿಪುಸೈನ್ಯಮೆತ್ತ ಧುರದೊಳ್ ನೃಪರಂ ಮುನ್ನಿಱಿದು ಪಲವು ಕಾಳಗದೊಳ್ ಭೂಮಿಪಚೂಡಾಮಣಿಸಿಂಗಂ . . . ಪೆಸರಂ ಪಡೆದು (ಎಕ. VIII. ಸೊರಬ. ೦೬೪-೦೬ ; 1033 ?) ; ಮತ್ತಗಜವಂ ಕೊಂದದಟಿಸುವನೆತ್ತಿ ಮುನ್ನಿಱಿದವನ ಹರಣವನಿತ್ತು ಮೆಱೆದನು ಕಟಕದೊಳು ಪಡಿವಾಳ ಮಾಚಯ್ಯ (ಬಸಪು. ೨೦ ಸೂಚನ). [ಮುನ್$_2$ + ಇಱಿ$_1$]

**ಮುನ್ನೀಡು** (ಕ್ರಿ). ಮುಂದಕ್ಕೆ ಚಾಚು,—ನೀಡು : (ಬಾಹುಗಳನ್ನು ಮುನ್ನೀಡಿ, ಪ್ರೇಮಾಲಿಂಗನಕ್ಕೆ ಮುಂಚುವವನು) (ಚಿತ್ರಾ. ೦೬-೨೪). [ಮುನ್$_2$ + ನೀಡು$_1$]

**ಮುನ್ನೀರ್,** ಮುನ್ನೀರು (ನಾ). ಭೂಮಿಗಿಂತ ಮೊದಲು ಸೃಷ್ಟಿಯಾದ ಜಲ ; ಕಡಲು ; ಸಮುದ್ರ : "ಮುನ್ನೀರ್, ನೀರೊಟ್ಟಿಲ್, ಕೊಱೆಗಳಾಣ್ಮಂ, (ಕತಲ್)— ಈ ೪ ಸಮುದ್ರಂ" (ಕಬಾ. ೫೩-೦೫೦) ; ಸಾರಗುಣಂ ತದ್ರಾಜಕುಮಾರನೊಳುಳ್ಳನಿತು ಪೆಱರೊಳಿಲ್ಲೆಂತೆನೆ ಮುನ್ನೀರೊಳ್ ನೆಲಸುಗುಮಲ್ಲದೆ ನೀರೊಳ್ ನೆಲಸುಗುಮೆ ಸಾರರತ್ನಾವಳಿಗಳ್ (ಶಾಂತಿಪು. ೨-೬) ; ಮುನ್ನೀರ್ಬ್ಬಳಸಿರೆ ಧರಣಿಯೊಳ[ನ್ನಂ] ಮಾಧುರ್ಯ್ಯಸುಕರಚಾತುರ್ಯ್ಯಗುಣಪ್ರೋನ್ನತರಿಲ್ಲೆನೆ ಸಾಸನಮನ್ನಿದೆ ಚೆಲ್ವಾಗೆ ಸಾಮಿಯಣ್ಣಂ ಬರೆದೋಂ (ತಿಸಿಇ. XI-I. ೯೦–೫೬ ; ೧೦೦) ; ಎನ್ನಂತೆ ರತ್ನವಿತತಿಗೆ ತಾನ್ನೆಲೆಯಾಯ್ತೆಂಬ ಸಮಗುಣಪ್ರಣಯದಿನಾ ಮುನ್ನೀರ್ ಬಂದಪ್ಪಿದುದೆನೆ ತನ್ನಗರಮನವಮಪರಿಖೆ ಬಳಸಿದುದೆತ್ತಂ (ಚಂದ್ರಪ್ರ. ೦-೦೦೫). **ಮುನ್ನೀರು** : "ಮುನ್ನೀರೆನಲ್ ಶರಧಿ" (ಕಕ. ೯೦) ; ಅವರ್ ಶೀಘ್ರದಿಂ ಮುನ್ನೀರ ತಡಿಗೆಯ್ದಲ್ (ಕರ್ಣಾ. ೧೦-೦೬೦) ; ತನ್ನನೆ ಹೀರಿ ಬಡಮಾಳ್ಪ ವಡಬಾಗ್ನಿಯಂ ತನ್ನನೇ ಹೆಚ್ಚುಗೆಯ ಮಾಳ್ಪಮೃತಕಿರಣನಂ ಮುನ್ನೀರು ತನ್ನ ಗಂಭೀರತನವನೇ ಮೆಱೆದು ಗರ್ಭೀಕರಿಸಿಕಿಲ್ಲವೇ (ಸಮ್ಮು. ೬-೩೦) ; ಅಲ್ಲದೋ ಮುನ್ನೀರು ಅದರೊಳಗೆ ಚಾಚುದು ಭೂಮಿ ತಾ ಕೂರ್ಮದಂತೆ ! (ಪ್ರಜಾತ್ಕ. ೯೭-೦). ☞ ಕಿಟೆಲ್ ಅವರ ನಿಘಂಟು ಮತ್ತು ತಮಿಳುಕೋಶಗಳಲ್ಲಿ ಈ ಶಬ್ದವನ್ನು 'ಮುನ್' (<ಮೂಱು)+ನೀರ್=ಮಳೆಯ ನೀರು, ನದಿಯ ನೀರು ಮತ್ತು ಒರತೆಯ ನೀರು ಎಂದು ಅರ್ಥ ಮಾಡಿದ್ದಾರೆ. [ಮುನ್$_1$+ನೀರ್./ತಮಿ. ಮುನ್ನೀರ್; ತುಲು. ಮುನ್ನೀರು]

**ಮುನ್ನೀರಣುಗ** (ನಾ). ಕಡಲಿನಲ್ಲಿ ಹುಟ್ಟಿದವನು ; "ಚಂದ್ರ" (ಕ್ರಶಬ್ಜ). [ಮುನ್ನೀರ್ + ಅಣುಗ (<ಅಣುಂಗ)]

**ಮುನ್ನೀರಣುಗಿ** (ನಾ). ಕಡಲಿನಲ್ಲಿ ಹುಟ್ಟಿದವಳು ; ಲಕ್ಷ್ಮಿ : ಮುಗಿಯೆ ಪಗಲ್ ಮುಸುಳಲ್ ಮುಂಗಳ್ತಲೆ . . . ಮುಗಿದುವು ಮುನ್ನೀರಣುಗಿಯ ಸೆಜ್ಜೆವನೆಗಳಾ ರಾತ್ರಿಯೊಳು (ಜಹುಳ. ೦೫-೬೩). [ಮುನ್ನೀರ್ + ಅಣುಗಿ (<ಅಣುಂಗಿ)]

**ಮುನ್ನೀರು** 'ಮುನ್ನೀರ್' ನೋ.

**ಮುನ್ನೀರೆರೆಯ** 'ಮುನ್ನೀರೆಱೆಯ' ನೋ.

**ಮುನ್ನೀರೆಱೆಯ,** ಮುನ್ನೀರೆರೆಯ (ನಾ). ಕಡಲಿನ ಒಡೆಯ : ಸಮುದ್ರಾಧಿಪತಿ ; ವರುಣ : "ಮುನ್ನೀರೆಱೆಯಂ ಪ್ರಚೇತನೊಳ್ ಕಡಲ[ಱೆಯಂ]" (ಕರ್ಣಾ. ೦). **ಮುನ್ನೀರೆರೆಯ** : "ಮುನ್ನೀರೆರೆಯನೆನೆ ವರುಣ" (ಕಕ. ೯೦). [ಮುನ್ನೀರ್ + ಎಱೆಯ]

**ಮುನ್ನೀರ್ಗಂದ** (ನಾ). = ಮುನ್ನೀರಣುಗ : ರನ್ನವಸಿರ್ಪಲವೊಗ ವೇಳ್ವಾಲಗೆಯುನ್ನಿಲ್ಲದೆ ನಡೆವ ನೆರಲ್ಸರಿವುಮ್ಮುನ್ನೀರ್ಗಂದಂ ಬಿಸುಗದಿರ ನೊಡಲ್ಪಿಡಿದವನೆಂಬೆಂತು ನಿನ್ನಯ ಪರಿಜು (ಅರ್ಕರೇ. ೦-೩೨).
[ಮುನ್ನೀರ್ + ಕಂದ$_1$]

**ಮುನ್ನೀರ್ಗಟ್ಟೆ** (ನಾ). ಕಡಲಿನ ಎಲ್ಲೆ ; ಸಮುದ್ರದಿಂದ ಉಂಟಾದ ಸೀಮೆ.-ಗಡಿ : ಮುನ್ನೀರ್ಗಟ್ಟೆಯ ನಡುವಣ ಇಳೆಯೂಣ್ಮರು ಬೇಗದಿಂದ ತಳರ್ದರೋಲಗಕೆ (ಕುಂಣಾಣಾಂ. ೦೬-೪೦). [ಮುನ್ನೀರ್ + ಕಟ್ಟೆ$_1$]

**ಮುನ್ನೀರ್ಗಿಚ್ಚು** (ನಾ). ಸಮುದ್ರದ ಒಳಗಿರುವ ಬೆಂಕಿ ; ಕಡಲ್ಗಿಚ್ಚು ; ಬಡಬಾಗ್ನಿ : "ಕಡಲುರಿ ಮುನ್ನೀರ್ಗಿಚ್ಚಿನೆ ವಡಬಾನಳಂ" (ತತುಃ. ೦೦೨). [ಮುನ್ನೀರ್ + ಕಿಚ್ಚು]

**ಮುನ್ನೀರ್ಮಗ** (ನಾ). = ಮುನ್ನೀರಣುಗ : "ಜೊನ್ನೊಡಲಂ ಪಗಲ್ವಗೆಯುಂ ಮುನ್ನೀರ್ಮಗಂ . . . ಎನ್ನಲ್ಕಿರುಳೆಱೆಯೆನಿಪ್ಪನು" (ತತುಃ. ೨೦೦).
[ಮುನ್ನೀರ್ + ಮಗ]

**ಮುನ್ನೀರ್ವಕ್ಕಿಗ** 'ಮುನ್ನೀರ್ವಟ್ಕಿಗ' ನೋ.

**ಮುನ್ನೀರ್ವಟ್ಕಿಗ, ಮುನ್ನೀರ್ವಕ್ಕಿಗ** (ನಾ). ಕಡಲನ್ನೇ ಹಾಸುಗೆ ಯನ್ನಾಗಿ ಉಳ್ಳವನು ; ವಿಷ್ಣು : "ಅರಲ್ವೊಡೆಯಂ . . . ಮುನ್ನೀರ್ವಟ್ಕಿಗಂ, ಕಾರೊಡಲಂ, ಕಾವನಯ್ಯಂ—ಈ ೧೨ ವಿಷ್ಣುಗೆ ಪೆಸರ್" (ಕಕಾ. ೪೭-೯). ಮುನ್ನೀರ್ವಕ್ಕಿಗ : "ರಕ್ಕಸಪಗೆಯುಂ ಮುನ್ನೀರ್ವಕ್ಕಿಗಂ . . . ಹರಿಯಕ್ಕುಂ" (ತತುಃ. ೬).
[ಮುನ್ನೀರ್ + ಪಟ್ಕೆ + — ಗ$_2$]

**ಮುನ್ನೀರ್ವೆಂಕೆ** (ನಾ). = ಮುನ್ನೀರ್ಗಿಚ್ಚು : "ಮುನ್ನೀರ್ವೆಂಕೆಯೊಂದು. ಕಡಲ್ಗಿಚ್ಚೆಂದು ಬಡಬಾನಲಂ" (ಕಕಾ. ೩೩-೦೯೭). [ಮುನ್ನೀರ್ + ಬೆಂಕೆ]

**ಮುನ್ನು** (ನಾ). ಒಂದು ಬಗೆಯ ಸಸ್ಯ : ನರುವಲು, ನಾರಲೆ, ನರವೆ, ಮುನ್ನು, ಮಡಿಕೆ (ವ್ಯಜಿಗಿ. ೬೯-೦೩೦೦). [ ? ]

**ಮುನ್ನುಗ್ಗು** (ಕ್ರಿ). ರಭಸದಿಂದ ಮುಂದುವರಿ.—ಮುಂದಕ್ಕೆ ಸಾಗು : ಖಿನ್ನತೆಯ ಕ್ಷುಬ್ಧತೆಯ ತೋರಗೊಡದಲೆ . . . ಮುಂಗಾಲುಪೃಟಿಗೆಯಲಿ ಮುನ್ನುಗ್ಗುತಿರಬೇಕು (ಅರಕು. ೩೭೮-೦೨) ; ಎರಡನೆಯ ರಾಜೇಂದ್ರನು ಮತ್ತೆ ಮುನ್ನುಗ್ಗಿ ಚಾಳುಕ್ಯರ ಸೈನ್ಯವನ್ನು ಚೆಲ್ಲಾಪಿಲ್ಲಿಮಾಡಿದನು (ಕೊಳಂಬ. ೩೬). [ಮುಂನ್$_2$ + ನುಗ್ಗು$_1$ (<ನುರ್ಗು$_1$)]

**ಮುನ್ನುಡಿ** (ನಾ.) ೧. ಯಾವುದಾದರೊಂದು ಗ್ರಂಥದ ಆದಿಯಲ್ಲಿ ಪ್ರಕೃತಗ್ರಂಥದ ವಸ್ತು, ಉದ್ದೇಶ, ವ್ಯಾಪ್ತಿ, ನಿರೂಪಣಾಮಾರ್ಗ, ಗ್ರಂಥಕರ್ತ ಮುಂತಾದ ವಿಚಾರಗಳನ್ನು ಕುರಿತು ಬರೆಯುವ ಪರಿಚಯಾತ್ಮಕವಾದ ಬರವಣಿಗೆ : ಪೀಠಿಕೆ ; ಉಪೋದ್ಘಾತ : ಮುನ್ನುಡಿಯ ಪದ್ಧತಿ ನನಗೇನೋ ಪ್ರಿಯವಾದದ್ದಲ್ಲ (ಪುಪಾಗ. ii. ಸ್ವೀಪರ ಮಾತು) ; ಒಬ್ಬ ದೊಡ್ಡವರು . . . ಒಲಿದು ಮುನ್ನುಡಿ ಬರೆದು ಕೊಟ್ಟಿರುವರು (ಕಾರೂರ. ೫ ಬರೆದವನ ಪಾಲ್ಕುಮಾತುಗಳು). ೨. (ಅಲಂ) (ಯಾವುದಾದರೊಂದು ಕಾರ್ಯದ) ಆರಂಭ ; ಮೊದಲು; ನಾಂದಿ; ಸಾಮಾನ್ಯದಿ ಸುಖಿಪುದೆ ಚಿರಶಾಂತಿಗೆ ಮುನ್ನುಡಿ (ಅಶಕೀ. ೩೯-೯) ; ಇನ್ನೆಗಂ ನೀನ್ ಕೇಳ್ದ ನುಡಿಗಳ್, ಮುಂದಾಗಲಿರ್ಪುದರ್ಕೊಂದುಮುನ್ನುಡಿ ಯುಮಲ್ಲಂ (ಬಧ್ರಕ್ರ. ೪೯-೬೩೦). [ಮುಂನ್$_1$ + ನುಡಿ$_2$]

**ಮುನ್ನುಲಿ** (ನಾ). ಮೊದಲ ಮಾತು ; ಆರಂಭದ ನುಡಿ ; ವೇದದ ಈ ಗೀತೆಗಳು . . . ಮಾನವಜನಾಂಗ ತನ್ನ ಮುಹುತ್ತಿಗೆ ಕಣ್ಣು ತೆರೆಯುತ್ತಿದೆ ಎಂಬುದರ ಮುನ್ನುಲಿಯಾಗಿದೆ (ಛಾಪಗೀ. ೦೦೯). [ಮುಂನ್$_1$ + ಉಲಿ$_2$]

**ಮುನ್ನುಸಿರ್** (ಕ್ರಿ). ಮುಂದಾಗಿ ಹೇಳು ; ಮುಂಚೆಯೇ ನುಡಿ,— ತಿಳಿಸು : ಈ ಎಣಿಕೆಯನ್ ಮುನ್ನುಸಿರ್ದು, ಅರ್ಗ್ಯಮಿನ್ ಅಱಿಕದಾದೊಡ ಮಿರ್ದು (ಅಂತಗೂ. ೪-೩೯). [ಮುಂನ್$_2$ + ಉಸಿರ್$_1$]

**ಮುನ್ನುಱಿ** (ಕ್ರಿ). ಅನಂತರದಲ್ಲಿ ಬಿಡು.—ತ್ಯಜಿಸು (?) : ಗಟಿಗೂಸಾತುವರಿಂದ್ರನಂ ಗಿರಿಶನಂ ಸರ್ವಸ್ವಮಂ ಕೊಂಡು ಮುನ್ನುಱಿ ವರ್ (ಕಪುಡ. ೬೩ ಕ್ರದೊ೦). [ಮುಂನ್$_2$ + ಉಱಿ$_1$]

**ಮುನ್ನುಱಿವು** (ನಾ). ಮುಂದಿನ ಜೀವನ.—ಬದುಕು ; ಭವಿಷ್ಯ : ಚದುರ್ ತನಗುಳ್ಳೊಡೆ ಮೆಲ್ಪು ಮೇಳಮಂ ಪೊಸಯಿಸಿ ತನ್ನ ಮುನ್ನುಱಿವು ಬೇಟದ ಅಲ್ಲೆಯ ಬಲ್ಮೆ ಪತ್ತಿ ಸುತ್ತಿಸೆ ಪುರುಡಿಂಬುಕ್ಕೆಸೆ ಬಿಯಪಾಱಿಸಿ ಪೊಡಪವಂ ಬೊಜಂಗನೇ (ಅಂಕೃ. ೦೨-೦೭). [ಮುಂನ್$_1$ + ಉಱಿವು]

**ಮುನ್ನೂಕು** (ಕ್ರಿ). ಒತ್ತಾಯದಿಂದ ಮುಂದಕ್ಕೆ ತಳ್ಳು ; ಮುಂದು ವರಿಯಿಸು : ನಮ್ಮ ಶತ್ರುಗಳಿಂದ ಮಾಡಲ್ಪಟ್ಟ ಈ ಯೋಚನೆ ನಮ್ಮನ್ನು ಕೂಡ ಪಾಪಮಾಡಲು ಮುನ್ನೂಕುತ್ತಿದೆ (ವ್ಯಾಕಡಿ. ೦೨೬).
[ಮುಂನ್$_2$ + ನೂಕು$_1$ (<ನೂಂಕು$_1$)]

**ಮುನ್ನೂರು** 'ಮೂನೂಱು' ನೋ.

**ಮುನ್ನೂಱು** 'ಮೂನೂಱು' ನೋ.

**ಮುನ್ನೆಗಪು** (ಕ್ರಿ). ಮುಂದಕ್ಕೆ ಚಾಚು.—ಎತ್ತು : ಶೌರ್ಯೋನ್ನತಿಯುಂ ಮುಂಗಾಲ್ಗಳಂ ಮುನ್ನೆಗಪುತುಗುರ್ಗಳಿಂ ಪೊಯ್ದು ಮೇಲ್ವಾಯ್ದು ಗರ್ವೋದ್ಧತಗರ್ಜಶ್ಸಿಂಹಮಂ . . . ಖಡ್ಗದಿಂ ಪೊಯ್ದನತ್ಯದ್ಭುತಸತ್ತ್ವಂ (ಕಬಕಂ. ೩-೩೩). [ಮುಂನ್$_2$ + ನೆಗಪು$_1$]

**ಮುನ್ನೆಣಿಕೆ** (ನಾ). ಮುಂಚಿತವಾಗಿ ಮಾಡುವ ಆಲೋಚನೆ ; ಮುಂದಿನ ಆಲೋಚನೆ ; ದೂರದೃಷ್ಟಿ : ತಾಯಿ ಹೇಳಿದ ವಿವೇಕ ಅವನ ಮೈಗಾಪಲಿಗಿದ್ದರೂ ವಿಧಿಯು ಹಠಕ್ಕೆ ಗೆಲುವಾಗಿ, ಅವಳ ಮುನ್ನೆಣಿಕೆ ನಿಜವಾಗುತ್ತದೆ (ಪಂಜುಂಡ. ೩೯) ; ಸಟೆಯು ಕರೆದಪರ್ ಬಾನವರ್, ಪ್ರಮಿ ತ್ಯೂಸ್ ಮುನ್ನೆಣಿಕೆಯುಳ್ಳವನ್ – ಎಂದು (ಶಿತ್ಮಕ್ರ. ೬-೦೨೬).
[ಮುಂನ್$_1$ + ಎಣಿಕೆ]

**ಮುನ್ನೆಲೆ** (ನಾ). ೧. ಮುಂಭಾಗ ; ಇದಿರು ; ಎದುರುಭಾಗ ; ಬೆಟ್ಟಿನ ನೀರಟ್ಟಿನ ಪೋಲಟ್ಟಲಿಗಳ್ ಬೆಟ್ಟಿತಾದೊಡಂ ಮುನ್ನೆಲೆಯೊಳ್ ನೆಟ್ಟನೆ ನಡುಂಗದೆ ಕದಡದೆ ಕಟ್ಟಿದಟಿಂ ದೊಡ್ಡದೇವನಸೆದಂ ದಿಟ್ಟಂ (ತಳಪ. ೩-೦೮). ೨. ಮುಂಚೆ ಇದ್ದ ಜಾಗ ; ಮೊದಲಿನ ಸ್ಥಳ : ಒಲೆಯಿಂ ಪಾಲ್ಗಂದಲಂ ಕೀಟ್ಗಿಳುಪಿ ಕಡೆವೊಸರ್ಗಂದಲಂ ಪಲ್ಲಟಂಗೆಯ್ದೊಲವಿಂ ಮಕ್ಕಳ್ಗೆ ಪೊಯ್ದಾಲಿಡಿದೊಳಲೆಗಳಂ ಕೌಚಿ ಮೇಣ್ ಸುಣ್ಣನೀರ್ ಮುನ್ನೆಲೆ ಯೊಳ್ ತೋರ್ಪಂತೆ ತುಂಬಿಟ್ಟು . . . ನಲಿಗುಮಾ ನಂದಬಾಲಂ (ತಳಪ. ೩-೩೬). ೩. (ಅಲಂ) ಪ್ರಮುಖವಾದ ಸ್ಥಾನದಲ್ಲಿರುವ ವ್ಯಕ್ತಿ : ಒಲಿದ ಮುನ್ನ ಜಗಕೆಲ್ಲಕು ನಾ ಒಲಿದ ಮೇಲೆ ಜಗಕೆಲ್ಲಕು ನೀ ಹಿನ್ನೆಲೆ ನಾ ಮುನ್ನೆಲೆ ನೀ (ಗೋಕುಂ. ೨೩-೦೦). [ಮುಂನ್$_1$ + ನೆಲೆ$_1$]

**ಮುನ್ನೇಸಱ್, ಮುನ್ನೇಸಱು** (ನಾ). ೧. ಬೆಳಗಿನ ಸೂರ್ಯ; ಉದಯ ಕಾಲದ ನೇಸರು ; ಬಾಲಸೂರ್ಯ : ರನ್ನದ ತೊಡವು ರಂಜಿಸುವ ಮಕುಟ, ಪೊಸ ಪೊನ್ನಬಣ್ಣದ ಮೈವೆಳಗು ಚೆನ್ನೆಸೆದನು ಬಿಸಿಯುಳಿದಳೆ ಗೆಯ್ವುದ ಮುನ್ನೇಸಱಿಂಬ ಮಾಳ್ಕೆಯೊಳು (ಶ್ರೀಪಾಂ. ೩-೨೨) ; ತನಿ ಜೊನ್ನಪಾಲನೀಂಟುವ ಪದೆದೊಳದು ಬತ್ತೆ ಮನದೊಳಂ ಕಂದಿತೋಱುವ ಹಂಸಪಾಱಿಯೊ ಪೋಳಿನಲೆಪೆದುದಸ್ತಾದ್ರಿಯೊಳ್ ಚಂದ್ರಮಂಡಲಂ ಮುನ್ನೇಸಱಾಗಮದೊಳು (ತಂಕೃ. ೧೦-೮೦). ೨. ಪ್ರಾತಃಕಾಲ; ಅರುಣೋದಯದ ವೇಳೆ ; ಉಷಃಕಾಲ : "ಮುಂಬೊಟ್ಟೆಂದು ಮುನ್ನೇಸಱ್" (ಕಕಾ. ೩೭-೨೩೨); ಕರಿಣಿ ಕರ್ಣಂಗಳನೆಚ್ಚಱಿಸಿದುವಾಗಳ್ ಬಾಯುಂ ತೆಱೆದುವು ಪಿಂಗಳಿಗಳ್ಗಳ್ಲಿ ಮುನ್ನೇಸಱಿನೊಳ್ (ಕಾದಂಪೂ. ೦೯೩); ಬಾಡಿದ ದೇವಿಯ ತನುಲತೆ ಬಾಡಿಸಿದುದು ನೋಡಿ ಬಾಡುವೆನ್ನಯ ಪೊಗಪಂ ಬಾಡಿ ಬಸವಟಾದು ಸಸಿಯುಂ ಬಾಡಿಸಿದುತ್ಪಳಿನಿಯಂತೆ ಮುನ್ನೇಸಱಿನೊಳ್ (ಅರ್ಜನೀ. ೦.೦೦೪) ; ಚಕೋರದ ಮುದಮುಡುಗಿ

ಪೋಯ್ತು ಮುನ್ನೇಸಜಿನೊಳ್ (ಕುಸುಕು. ೧೦-೭೯). ಮುನ್ನೇಸ ಜು: ೨. ನಿನ್ನನೊಲಿಸಿದಜೀಕೆಯು ಜಯಭೂಷಂ ಮುನ್ನೆಯುರೊಳ್ನಿಚ್ಚೆಯು ವರನಂ ವರಿಯಿಪ ಮಂಡಪಕೆ ಮುನ್ನೇಸಜಿ ಪೊತ್ತಿಂಗೆಯ್ದುರ್ಘಂ (ಜಯುಕಾ. ೯-೯೯).

**ಮುನ್ನೇಸಜು** 'ಮುನ್ನೇಸಜಿನ್' ನೋ.

**ಮುನ್ನೊಡಲ್** (ನಾ). ಹಿಂದಿನ ಹುಟ್ಟು : ಪೂರ್ವಜನ್ಮ : ಏನೊಂದು ಮುನ್ನೊಡಲ ಅಬಿಸಗೆಯ್ಮೆಯು ಬೆಸುಗೆಯುನೀಗಳೀ ಪಾತಕಕ್ಕೆ ಕೈನೀಡು ಪೊಡಾವವಾಡೆಂ (ರಾಜಶೇ. ೩೭-೨೯). [ಮುನ್₁ + ಒಡಲ್]

**ಮುನ್ನೋಟ₁** (ನಾ). ಮೊದಲಿನ ಓಟ : ಮುಂಚಿತವಾದ ಓಟ : 'ಮುನ್ನೋಟವಿಕ್ಕು' ಪರಾ. [ಮುನ್₁ + ಓಟ]

**ಮುನ್ನೋಟ₂** (ನಾ). ೧. "ಮುಂದಿನ ನಿರೀಕ್ಷೆ" (ಕಾಂಡಾರ. ೭೩-೦೩೩ ೦೨೪) : ಒಸಗೆ ಸವಿಯುಲಿ ನನ್ನ ಮುನ್ನೋಟ ಕಂಪೊರೆಯ ಬಗೆಯ್ದುದು ತಣಿಯುತಿರೆ ಬಳಗಕ್ಕೆಂ ಪಾರ್ತಂ (ಕಾಂಡಾರ. ೭೨-೦೩೩). ೨. ಮುಂದೆ ಪ್ರದರ್ಶಿತವಾಗುವ ಅಥವಾ ಪ್ರಕಟವಾಗುವ ದೃಶ್ಯ ಅಥವಾ ವಿಷಯಗಳ ಪೂರ್ವಚಿತ್ರ, –ಪೂರ್ವಪರಿಚಯ : ದೂರದರ್ಶನದಲ್ಲಿ ವಾರಕ್ಕೊಮ್ಮೆ ಆಯಾವಾರದ ಮುಖ್ಯಕಾರ್ಯಕ್ರಮಗಳ ಮುನ್ನೋಟವನ್ನು ತೋರಿಸುತ್ತಾರೆ (ಪತ್ರಿ). [ಮುನ್₁ + ನೋಟ]

**ಮುನ್ನೋಟವಿಕ್ಕು** (ಕ್ರಿ). (ಯುದ್ಧವು ಪ್ರಾರಂಭವಾಗುವುದಕ್ಕೆ) ಮುಂಚೆಯೇ ಓಡಿಹೋಗು, –ಮೊದಲೇ ಪಲಾಯನ ಮಾಡು : ಹುದುಳವಿಡುವವರಿಲ್ಲ ಸೇನೆಯು ಮೊದಲಿಗರು ಮುನ್ನೋಟವಿಕ್ಕಿತು ಕದನದಲಿ (ಕುಮಾಭಾ. ೯-೨೭). [ಮುನ್ನೋಟ₁ + ಇಕ್ಕು]

**ಮುನ್ಸಿ** 'ಮುನಸಿ' ನೋ.

**ಮುನ್ಸಿಪಾಲಿಟಿ** 'ಮುನಿಸಿಪಾಲಿಟಿ' ನೋ.

**ಮುನ್ಸೀಫ್** 'ಮುನಸೀಫ್' ನೋ.

**ಮುನ್ಸೀಫ್‌ಕೋರ್ಟು**, ಮುನಸುಫ್‌ಕೋರ್ಟು (ನಾ). ಕೆಳವರ್ಜೆಯ ನ್ಯಾಯಾಲಯ: ಊರೆಲ್ಲಾ ನಮ್ಮ ಕೈಲೇ ಇದೆ. ಮುನ್ಸೀಫ್‌ಕೋರ್ಟನ್ನೂ ಹಿಡಿದುಕೊಂಡಿದ್ದೇವೆ (ಅಗ್. ೦೯). ಮುನಸುಫ್‌ಕೋರ್ಟು : ಬೊಂಬ್ಬೈ ವಗೈರೆ ಪ್ರಾಂತ್ಯಗಳಲ್ಲಿಯೂ ಗ್ರಾಮಪಂಚಾಯಿತಿಗಳಂತಲೂ ಗ್ರಾಮ ಮುನಸುಫ್‌ಕೋರ್ಟುಗಳೆಂತಲೂ ಮೊಕದ್ದಮೆ ತೀರ್ಮಾನವಾಗುವುದು (ಗ್ರಾಮಸ. ೨). [ಮುನ್ಸೀಫ್ (<ಮುನಸೀಫ್) + ಕೋರ್ಟು]

**ಮುನ್ಸೂಚನೆ** (ನಾ). ೧. ಮುಂದೆ ಆಗುವುದರ ಬಗೆಗೆ ಮೊದಲೇ ಕೊಡುವ ತಿಳಿವಳಿಕೆ: ಅವರು ಕೊಟ್ಟ ಮುನ್ಸೂಚನೆಯಿಂದ ನನಗೆ ಬಹಳ ಉಪಕಾರವಾಯಿತು (ರೂಢಿ). ೨. ಮುಂದೆ ಆಗುವುದರ ಬಗೆಗೆ ತೋರಿ ಬರುವ ಸುಳಿವು. — ಜಾಡು : ಮುಂದ್ಬದ ಮುನ್ಸೂಚನೆಯನ್ನೇನೋ ಕಂಡಂತೆ ಆಗುತ್ತಿದೆ (ಸವಿ. ೩೦). ೩. ಭವಿಷ್ಯವನ್ನು ತಿಳಿಸುವಿಕೆ : ಭವಿಷ್ಯಹೇಳುವುದು ; (ಮು. ಕೇಡಿನ) ಮುನ್‌ಸೂಚನೆ ; ಶಕುನ (Foreboding. ಇಂಕ). [ಮುನ್₁ + ಸೂಚನೆ]

**ಮುನ್ಸೂಚಿಸು** (ಕ್ರಿ). ಮೊದಲೇ ತಿಳಿಯಪಡಿಸು : ಕೇವಲ ಸಾಧಾರಣ ಒಂದು ತಿಗಣೆಯ ಜೀವಚಕ್ರವನ್ನು . . . ಯಾರೂ ಮುನ್ಸೂಚಿಸಲಾರರು (ಕೀಟಜ. ೬೯). [ಮುನ್₂ + ಸೂಚಿಸು₁]

**ಮುಪ್** 'ಮೂ₁' ನೋ.

**ಮುಪ್ಪಗ** 'ಮುಪ್ಪಾಗ' ನೋ.

**ಮುಪ್ಪಟ್ಟೆ** (ನಾ). ೧. ಮೂರು ಸಮಾನಾಂತರ ರೇಖೆಗಳುಳ್ಳ ಘನಾಕೃತಿಯ ಮೂರುಮುಖಿ : ಕೈಗಾರಿಕಾಕೇಂದ್ರಗಳಲ್ಲಿ ಯಂತ್ರಾಗಾರಗಳ ಕೆಳಗಿನ ಅಂತಸ್ತುಗಳಿಗೆ ಹೆಚ್ಚು ಬೆಳಕು ಬರುವ ಹಾಗೆ ಮುಪ್ಪಟ್ಟೆಯ ಗಾಜುಗಳನ್ನು (Prisms) ಬಳಸುತ್ತಾರೆ (ಶಿಲ್ಪ. ೩೨೯) ೨. ಮೂರು ಮೂರು ಪಟ್ಟೆಗಳುಳ್ಳ ಒಂದು ಬಗೆಯ ಸೀರೆ (?) : ಮುಪ್ಪಟ್ಟೆಯ ಬಣ್ಣದ ಬೀದಿಮಡಲು ಕಡೆಯಲ್ಲಿ ಕಪೋತ ಕೆಂಪು ಮುಚ್ಚಿತ್ತು (ಸವಿರ ೭೮-೪೩೩); ಕಂದರ್ಪ ಕುಸುಮಂಗಳಿಗೆ ಭಾಗಿ ಮುವಿದಾ ಚಂದಾಕಂದರ ಮುಪ್ಪಟ್ಟೆಗಳು (ಅಮುಸಾಂ. ೯-೦೯). [ಮುಪ್ (<ಮೂಜು) + ಪಟ್ಟೆ₃]

**ಮುಪ್ಪತ್ತು** 'ಮುವತ್ತು' ನೋ.

**ಮುಪ್ಪದರ** (ನಾ). ಮೂರುಪದರ, –ಮಡಿಕೆ, –ಸ್ತರ : ಪ್ರಾಣಿಯು ಇಪ್ಪದರದ ಜೀವಿಯೆ . . . ಮುಪ್ಪದರದ ಜೀವಿಯೆ ? (ಪ್ರಾಣಿಶಾ. ೦೩). [ಮುಪ್ (<ಮೂಜು) + ಪದರ (<ಪದರು₃)]

**ಮುಪ್ಪರಿಜು** (ನಾ). ಮೂರು ಬಗೆಯ ಆಕಾರ, –ರೂಪ, –ಆಕೃತಿ : ಪಿಡಿದೊನಾವನ್ ನಿಯತಿಯಧಿಕಾರಸೂತ್ರಮನ್ ? ಮುಪ್ಪರಿಜು ವಿಧಿದೇವಿಯರ್. ಮೋಣ್ ಮುಜಿಯದಾ ರೌದ್ರಿಯರ್ (ಬದ್ಧಕ್ರ. ೨೭-೩೮೯). [ಮುಪ್ (< ಮೂಜು) + ಪರಿಜು]

**ಮುಪ್ಪಳ₁** (ನಾ). ಬಾಳೆ, ಮಾವು ಮತ್ತು ಹಲಸು ಎಂಬ ಮೂರು ಬಗೆಯ ಹಣ್ಣುಗಳು : ಶಿವಸಾರಾಮೃತಮಂ ರಸಪೂರ್ವ ಮುಪ್ಪಳಮಂ ಜಿಲುಪಾಲ ತಿರುಳ ಕರಚಿಗಳುಮಂ . . . ಶಿವಾರ್ಪಿತದೊಡನೆ ಕೈಕೊಂಡು (ಸಂಬಸ ೦೦-೩೩). [ಮುಪ್ (<ಮೂಜು) + ಪಳ₂ (=ಪಲ₂). / ತಮಿ. ಮುಪ್ಪಳಮ್]

**ಮುಪ್ಪಳ₂** ? (ನಾ). (?) : ಆ ಅಯಿವತ್ತು ಹಾಂಸ್ಯ ಹಣ ಮುಪ್ಪಳಊ ಬಿಃಸಕ್ಕೆ (ಎಕ. VIII, ತೀರ್ಥಹ. ೦೯೦-೦೭ : 1407). [ ?.]

**ಮುಪ್ಪಾಗ**, ಮುಪ್ಪಗ (ನಾ). ೧. ಮುಕ್ಕಾಲು ಭಾಗ : ನಾಲ್ಕನೆಯ ಮೂರು ಅಂಶ : ಆ ರಾಜಸತಿಗೆ . . . ಮೂಜುಗಳಿಗೆಯ ಕಳೆದು ಮುಪ್ಪಾಗದಿಂ ಮೇಲೆ ಸುತನಾದೊಡೊಲ್ದಿತು (ಶಾಂತಪು. ೩-೭೯) ; ಅವರ ಅರ್ಥವಿವೇಚನೆ ನಿನ್ನಿನ ರಾತ್ರಿಯ ಕಟ್ಟಿತು.ಬೆಟ್ಟಹತ್ತುವುದಕ್ಕೆ ಮೊದಲಿಟ್ಟಾಗ ಮುಪ್ಪಾಗ ಕಟ್ಟಿತು (ಕಾಂತಲಾ. ೩೩೭). ೨. ಒಂದು ಬಗೆಯ ನಾಣ್ಯ : ಮುಕ್ಕಾಲು ಹಣ : ಹಿಂದಿನ ಕಾಲದ ಮೂರು ಆಣೆ : ಆರುಕಾಸುಗಳಷ್ಟು ಬೆಲೆಯುಳ್ಳ ಒಂದು ನಾಣ್ಯ : ಯೆಂಭತ್ತು ನಾಲ್ಕು ಹೊನ್ನು ಹಣ ಮುಪ್ಪಾಗವನು ತೆರುವುದು (ಎಕ. VI, ಕೊಪ್ಪ. ೩೫-೦೨ ; 1400) ; ಗಿಳಿಯು ಪಂಜರದೊಳಿಲ್ಲ . . . ಮುಪ್ಪಾಗ ಬೆಣ್ಣೆ ಯನ್ನು ತಪ್ಪದೆ ನಾ ಹಾಕಿ ಸಾಕಿದೆ (ಪುರಂದ. ೦-೦೦೨-೪) ; ಹಾಗದ ಕೋಳಿ ಮುಪ್ಪಾಗದ ಮೇವು ತಿಂದಿತು (ಗಾದೆ). ೩. ಅಳತೆಯ ಒಂದು ಪ್ರಮಾಣ : ಯರಡು ಬಳ್ಳ ಅಕ್ಕಿಯ ತಳಿಗೆ ಪ್ರಸಾದ ಎಂಟು ಮುಪ್ಪಾಗ ರಕ್ಷಾಯ ಇಷ್ಟನೂ . . . ಧಾರಾಪೂರ್ವಕವಾಗಿ × × × (ಎಕ. XIV, ಶ್ರೀರಂಗ. ೨-೨೦ ; 1529). ಮುಪ್ಪಗ : ೨. ಸಿಡಿಲಿಯ್ಯಂಗೆ ಪೊಂದುಂ ಮುಪ್ಪಗ ವೃತ್ತಿ . . . ಅಜ್ಜಿಯಂಗೆ ಮುಪ್ಪಗ ವೃತ್ತಿ (ಎಕ. XII, ತಿಪಟೂ. ೦೩-೨೦ ; 1251). [ಮುಪ್ ( < ಮೂಜು ) + ಪಾಗ₁]

**ಮುಪ್ಪಿಡಿ** (ನಾ). (ಮೂರು ಕಡೆ ಬಾಗುಗಳುಳ್ಳ) ಒಂದು ಬಗೆಯ ಆಯುಧ ; ಬಾಕು : ಬಡಿಕೋಲುಮುಪ್ಪಿಡಿ[illegible] ವಿದಿತಚಕ್ರಂ . . . ಮಡಿ ಮುಖ್ಯವಾದ ಕೈದುಗಳಂ ಪಿಡಿದು (ಶಾಂತಪು. ೦೯-೩೭) : ಸೊಂಟದ ಮುಪ್ಪಿಡಿಯನು ಕಿತ್ತುಕೊಂಡು ದರ್ಪಕನೆದೆಯಲ್ಲಿ ತಿವಿದು ರಕ್ಕಸ ಬಹು ದರ್ಪವಡೆದು ನಿಂದಿರ್ದ (ದೇವಚ. ೦೨-೭೩) : ಭಲ್ಲೆಯ ಕತ್ತಿ ಕಠಾರಿ ಮುಪ್ಪಿಡಿ ಮಂಕಿ ಸಲ್ಲಿಹ ಗದೆ . . . ಕಿರಿಸೆಗಳಾ ಗೃಹದಲ್ಲಿದ್ದವುರಿಮಾರಿಯಂತೆ (ಭರತ. ೨೦-೦೩೨). [ ಮುಪ್ ( < ಮೂಜು ) + ಪಿಡಿ₂. / ತೆಲು. ಮುಪ್ಪಿಡಿ ]

**ಮುಪ್ಪಿಡು** ? (?)·(?) : ಅಪ್ಪಿದರಪ್ಪುವಳುಗುರಿಟ್ಟರುಗುರಿಕ್ಕಿ ಉಪ್ಪರಿಸುವಳೊದಱುವಳು ನೆಪ್ಪುಗಾತಿಯು ನೇಮಗಾಜನು ಹೊಕ್ಕರು ಮುಪ್ಪಿಡೆ ಸಾವನೆಗೆಂದು (ಭರತ. ೧೦-೬೯). [ ? ]

**ಮುಪ್ಪು** (ನಾ). ಮುದಿತನ ; ವೃದ್ಧಾಪ್ಯ ; ಇಳಿವಯಸ್ಸು : "ಜರಾ, ವಿಸ್ರಸಾ —ಈ ೨ ಮುಪ್ಪು" (ಶಬ್ದಮ. ೬೬-೩೪೯) ; ಸಿಂಗದ ಮುಪ್ಪುಂ ನೆಗಬ್ಬೇ ಗಾಂಗೇಯರ ಮುಪ್ಪುಮಿಬ್ಬೊಳವಡೆಗುಮೆ (ಕುಶಭಾ. ೧೦_೦೯) ; ಮುಪ್ಪಿಂದೊಪ್ಪವಳಿಯದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮ ದೇವನ (ಬಸವ. ೦೬೦); ಮುಪ್ಪಿನ ಮುಗುದನೀತನ ಕಾದ ಕೇಳದು ನಗೆಯ ಸುರಿದ್ಯೆ ರಾಯ ಕಟಕದೊಳು (ಕುಮ್ವಾ.ಭಾ. ೦-೩೩).

**ಮುಪ್ಪಿನ ಮುತ್ತೈದೆ** = ವಯಸ್ಸಾದ ಮುತ್ತೈದೆ ; ವೃದ್ಧ ಸುಮಂಗಲಿ : ಮುಪ್ಪಿನ ಮುತ್ತೈದೆಯ ರೂಪದಿಂದಯಿರುವಳಾದ ಕಾವೇರಿನದಿಗೆ ಪುನಃ ನಮಸ್ಕರಿಸಿ (ಅಳಗಸು. ೧೩೦). **ಮುಪ್ಪುಬೆಪ್ಪು** = ಅರೆಮರುಳಿನಿಂದ ಕೂಡಿರುವ ವ್ಯಕ್ತಿ : ನಾನಾಗಳೆಯೊ ನಿನ್ನ ತೆರೆದ ಬಟ್ಟಕದೊಳೊಂದು ಸೀರೆಯಂ ಕಂಡೆನಾದೊಡಮರಿವುದೇತಯ್ಯ ಪೇಳ್, ಈ ಮುಪ್ಪುಬೆಪ್ಪು ? (ಕ್ರೀಡಾಸು. ೨೬೯-೨೯೩).

[ದೇ.೩ ತಮಿ. ಮಲ. ಮೂಪ್ಪು ; ತುಳು. ಮುಪ್ಪು, ಮುಚ್ಚು ; ತೆಲು. ಮುಪ್ಪು ]

**ಮುಪ್ಪುದಪ್ಪುಗ** (ನಾ). ವೃದ್ಧಾಪ್ಯವಿಲ್ಲದವನು; ಅಮರ: ದೇವತೆ: ನಯಮೆತ್ತಿನಿನುಡಿಯಿಂ ಜಾಣ್ಮೆಯಿನಾವಗಮಿನಿಜಸೆರ್ದೆಯನಿರ್ಕುಳಗೊಳ್ವೀ ಮುಪುಣನ ಗೆಳೆಯೆನಿಪಳ ಮನೆಮಯನೆನಿಕುಂ ಮುಪ್ಪುದಪ್ಪುಗರಪಸುವಾಗಳ್ (೭೪೮೩. ೬-೧೨೩). [ ಮುಪ್ಪು + ತಪ್ಪು$_4$ + — ಗ$_2$ ]

**ಮುಪ್ಪುರ** (ನಾ). ೧. ತಾರಕಾಸುರನ ಮಕ್ಕಳಾದ ಮೂರು ಜನ ದೈತ್ಯರು ನಿರ್ಮಿಸಿದ ಮೂರು ಪಟ್ಟಣಗಳು ; ತ್ರಿಪುರ ; ೯ ಆಕಾಶ ದಲ್ಲಿ ವಿದ್ಯುನ್ಮಾಲಿಯ ಕಬ್ಬಿಣದ ಪಟ್ಟಣ. ಅದರ ಮೇಲೆ ಅಂತರಿಕ್ಷ ದಲ್ಲಿ ಕಮಲಾಕ್ಷನ ಬೆಳ್ಳಿಪಟ್ಟಣ ಮತ್ತು ಅದಕ್ಕೂ ಮೇಲುಭಾಗದಲ್ಲಿ ತಾರಕಾಕ್ಷನು ನಿರ್ಮಿಸಿದ ಚಿನ್ನದ ಪಟ್ಟಣ : ಬಾಗಿಲ ಮುಂದೆ ನಿಂದಾ ಮುಪ್ಪುರದಂದಕೆ ನಿಜಮುಕುಟವನು ಕಂದರ್ಪವಿಜಯನಲುಗಿ ನುಡಿದನು ಮೋಹೇಂದ್ರನಧುಟನಾವನೇದು (ಕ್ರಿಶಾಂ. ೨೨-೨೪೯) ; ಎಸೆವ ಮುಪ್ಪುರದ ಸಿರಿಯ ಬಣ್ಣಪೊಡಾವಗಂ ತೀರದು (ಶಿಪು. ೪೦-೨೩) ; ಹರನ ಸಾಹಸ ಕಂಜದೆ ಪಲವಗಲು ಮುಪ್ಪುರ ಪಡಿಬರಿಸಿ ಪೋರಿದುದು (ಹಂಪ. ೨-೪೮). ೨. ಮೂರುಲೋಕಗಳು ; ತ್ರಿಲೋಕ : ಮುನಿ ಮಾರ್ಕಂಡೇಯಾ . . . ಮುಪ್ಪುರದೊಳಗಿದಕೆ ಎದುರುಗಾಣನೆಂದು ಅಲ್ಪಮನಸುಮಾಡದೆ ವಾಸವಾದನು ಇಲ್ಲಿ (ಶೀರ್ಶಸು. ೩೬-೨). 'ಮುಪ್ಪುರಗೊಳ್' ಪರಾ.

**ಮುಪ್ಪುರ ಗೆಲಿದವನು** = ತ್ರಿಪುರವನ್ನು ಜಯಿಸಿದವನು ; ಶಿವ : ಕಂಡೆ . . . ಮುಪ್ಪುರ ಗೆಲಿದವನ ಮುನಿಸುತ ಸರ್ಪಭೂಷಣ ಶಿವನ ಭವನ (ಶರಂತ. ೦-೦೮೩-೩). [ ಮುಪ್ ( < ಮೂಱು ) + ಪುರ$_2$ ]

**ಮುಪ್ಪುರಗೊಳ್** (ಕ್ರಿ). ಮೂರುಲೋಕಗಳನ್ನು ಗೆಲ್ಲು ; ತ್ರಿಲೋಕ ಗಳನ್ನು ಜಯಿಸು : ಮುಪ್ಪುರಗೊಂಡ ಮಾಧವನ ಅಪ್ಪಣೆವಡೆದು ಬತ್ತರಿಸುವ ಕೃತಿ ಜೇನ ತುಪ್ಪದ ತೊಟಿಯಾಗಲೆಜಿಯಾ (ಮೋಹತ. ೦೬-೦).

[ ಮುಪ್ಪುರ + ಕೊಳ್$_1$ ]

**ಮುಪ್ಪುರವಗೆಯ** (ನಾ). ತ್ರಿಪುರವೈರಿ : ಶಿವ ; "ಜಡೆಗ ಮುಪ್ಪುರ ವಗೆಯುಂ ಎಲುಗೈಯು ಬೂದಿಮೆಯ್ಯಂ . . . ಸ್ಮರಹರಂಗೆ ನಾಮವಿದು" (೪೭೪೦. ೦೬). [ ಮುಪ್ಪುರ + ಪಗೆಯ ]

**ಮುಪ್ಪುರಹರ** (ನಾ). ತ್ರಿಪುರಗಳನ್ನು ಧ್ವಂಸಮಾಡಿದವನು ; ಶಿವ : ತುಪ್ಪೀನ ಅಭಿಷೇಕ ಅಪ್ಪ ಸಿದ್ಧರಾಮಯ್ಯ ಮುಪ್ಪುರಹರನಿಗೆ ಮಾಡುವಾಗ ಚರಾಚರ ತುಪ್ಪುಂಡು ತೇಗಿತು ಆ ಚಣ (ಸಿದ್ಧಕೃ. ೦೯-೦೨).

[ ಮುಪ್ಪುರ + ಹರ ]

**ಮುಪ್ಪುರಿ** (ನಾ). ೧. ಮೂರುಹುರಿಗಳು, — ಎಳೆಗಳು. ೨. ಮೂರುಹುರಿಗಳನ್ನು ಸೇರಿಸಿ ಹೊಸೆದ ದಪ್ಪಹುರಿ ; ಹೊರಜೆ : ಕೆದಱಿದ ತಲೆಯನಡಸಿ ಸುತ್ತಿದ ಮುಪ್ಪುರಿ [ಪಾಠಾಂ. ಮುಂಗುಡಿ, ಮುಂಗುರುಳಿ]ಯ ಬಾರಿ ಕಡ್ಡಣಿಗೆಯ . . . ಬಿಱುನುಡಿಯ ಕಲಿ ವೀರ ಬಾಹುಕ ಬರುತ್ತಂ (ಜಕೀ. ೧೦-೦೬) ; ಕಾಳ್ಮನಿಸನೊರ್ವನುಂ ಕಾಪಟ್ಯದಿಂ ಕರೆದು ತಂದು . . . ಮುಪ್ಪುರಿಯಂ ಕಟ್ಟಿ ಬಟೀತಟಕ್ಕೆ ಸುಲಿದೊಳ್ಪಿಂ ಪಲ್ಗಳಂ ಕಾಲ್ಗಳಂ ಕರದಿಂದಂ ತೊಳೆದೊಂದು ಕೋವಣಮನಾಂತಂಗೊಲ್ವು ಕೆಯ್ಗೆಯ್ವುತುಂ (ವ್ಯಶಬ. ೨೬-೧೧). ೩. (ಮೂರು ವಸ್ತುಗಳ)ಕೂಡಲು; ಸಂಗಮ: ಸಮಾಗಮ: ಅನವರತದಾನದಿಂ ವಿಕ್ರಮೋನ್ನತದಿನಸಮ ಶೌರ್ಯೋನ್ನತಿಯಿಂ ವನನಿಧಿಪರೀತ ಸಕಲಾವನಿಯೊಳ್ ಮುಪ್ಪುರಿವೊ ಲಾದುದಾ ನೃಪನ ಗುಣಂ (ಅಪ್ಸ್ವ.ಪ. ೨೬೩) ; ಕುಮಾರನ ಯೌವರಾಜ್ಯ ಸಂಪದದೊಳಮಾಧಿರಾಜ್ಯನಿಜಲೀಲೆಯೊಳಂ ಪಿತೃ ವೃದ್ಧ ರಾಜ್ಯಸಂಪದದೊಳ ಮೊಪ್ಪಿದಂ ಸಿರಿಯ ಮುಪ್ಪುರಿವೊಲ್ಬಿವನೈಕಭೂಷಣಂ (ಅಜಿತ. ೯-೩) ; ವಿನಯಭಯಭಕ್ತಿಗಳು ಮುಪ್ಪುರಿಯೆನಿಸಿ ತನ್ನೊಳಗೆಸೆಯೆ ನಿಜಕಾಂತನಿಗೆಱಗಿ (ತಿಪ್ಪು.ಕ. ೨-೬೦). ೪. ಬಲವಾದುದು ; ಬಿಗಿಯಾದುದು : ಮೂಢ ಮಾನವರು ಮುಪ್ಪುರಿಯ ಮಾಯಾಪ್ರಬಂಧಕೆ ತಪ್ಪದೊಳಗಾಗಿಪ್ಪರು (ಅಪು.ಕ. ೨-೦೦೩). ೫. ದಪ್ಪವಾಗಿರುವುದು ; ಒತ್ತಾಗಿ ಸೇರಿದುದು : ಮುಪ್ಪುರಿಯ ಹುಬ್ಬುಗಳ ಮುರಿದ ಮೀಸೆಯ ಮೇಚಕಾದ್ರಿಯ ಸರಿಸದ ವನವನೀಗ ಮಂಡೋದರಿಯ ಮಗನು (ತೊರಾ. ೬-೯-೮) ; ಮು[ಪಾಠಾಂ. ದಿ]ಪ್ಪುರಿಯ ಹುಬ್ಬುಗಳ ಸುಯ್ಲುಗಳ . . . ಅಸಮಭಟರೊದಗಿದರು ಸಮರದಲಿ (ತೊರಾ. ೬-೦೪-೨೦). ೬. ಆಧಿಕ್ಯ ; ಅತಿಶಯತೆ : 'ಮುಪ್ಪುರಿಗೊಳ್' ಪರಾ.

[ಮುಪ್ (<ಮೂಱು) + ಪುರಿ$_3$./ತಮಿ. ಮುಪ್ಪುರಿ ; ತೆಲು. ಮುಪ್ಪುರಿ]

**ಮುಪ್ಪುರಿಗೂಡಿಸು** (ಕ್ರಿ). ಮೂರುಎಳೆಗಳನ್ನು ಸೇರಿಸು, _ ಕೂಡಿಸು: ನವಪವಿತ್ರಸೂಕ್ಷ್ಮವಾದ ಇಪ್ಪತ್ತೆಳೆಗಳಿಗೆ ಸಮಭಾಗದಿಂ ಮುಪ್ಪುರಿಗೂಡಿಸಿ ಪೋಣಿಸುವದಿದು ಉತ್ತಮ (ಬಸಲ. ೯೩).

[ಮುಪ್ಪುರಿಗೂಡು + — ಇಸು$_3$]

**ಮುಪ್ಪುರಿಗೂಡು**(ಕ್ರಿ). ೧. ಮೂರು ಎಳೆಗಳು ಸೇರು, _ ಕೂಡು, —ಒಟ್ಟಾಗು : ತತ್ವದ ಕಾವು ನಿಜನಿಶ್ಚಯದ ಬಿದಿರು ಭಕ್ತಿ ಜ್ಞಾನ ವೈರಾಗ್ಯ ಇಂತೀ ತ್ರಿವಿಧ ಮುಪ್ಪುರಿಗೂಡಿದ ನೂಲಿನಲ್ಲಿ ಕಟ್ಟುಗಳ ಬಿಟ್ಟ (ಸರ್ವಪ. ೩೦-೩೨೨). ೨. ಒಟ್ಟಾಗು ; ಸೇರು ; ಒಂದಾಗು : ಮೇಖಲೆಯ ಪಾರಿಹಾರ್ಯದ ಮಣಿನೂಪುರದ ಮಧುರಸ್ವನಂ ಮುಪ್ಪುರಿಗೂಡಿದ ಮದನಪಾಶಮೆನೆ ನಡೆತಂದಳ್ (ಶಂಗಾಸು. ೩-೬೪) ; ಕಣ್ಣ ಕೇಸುರಿಯುಂ ಪುರ್ವಿನ ತಳ್ತ ಕಬೊರ್ಗೆಯುಂ ಮುಗ್ರೇಭಪ್ರತಾಪಕ್ಕೆ ಮುಪ್ಪುರಿಗೂಡುತ್ತಿರೆ (ಅಜಿತ. ೦೪-೭) ; ತಪ್ಪದಹುದು ಕೌಶಿಕನ ಕೋಟಲೆ ಈಗ ಮುಪ್ಪುರಿಗೂಡಿ ರಾಯನಿಗೆ ಹೆಪ್ಪಳಿಸಿತು (ಹಂಸಾಂ. ೦೯-೮೬). [ಮುಪ್ಪುರಿ + ಕೂಡು$_1$]

**ಮುಪ್ಪುರಿಗೊಳ್**, ಮುಪ್ಪುರಿಗೊಳು, ಮುಪ್ಪುರಿಗೊಳ್ಳು (ಕ್ರಿ). ೧. ಕೂಡು ; ಸೇರು ; ಒಂದಾಗು : ಹರಿವಿರಿಂಚಿಗಳ ಮನದ ಬಯಕೆಯುಂ ಕಂದರ್ಪನ ಪಂಚಬಾಣಾನುಸಂಧಾನಮುಂ ಪಾರ್ವತಿಯ ಮನೋರಥಮುಂ ಮುಪ್ಪುರಿಗೊಂಡು (೧೦೪.೯-೪೩ ಪ); ಮುಪ್ಪುರಿಗೊಂಡ ಹುಬ್ಬುಗಳ ನೆಗೆದ ರೋಮಾವಳಿಯ ಬಿಗುಹಿನ . . . ರಕ್ಕಸರನೀಕ್ಷಿಸಿ ನುಡಿದನಸುರೇಂದ್ರ (ತೊರಾ. ೬-೨೩-೬). ೨. ಅತಿಶಯವಾಗು : ಅಧಿಕ ಗೊಳ್ಳು ; ಹೆಚ್ಚಾಗು : ತುಱುಂಬಿದ ಕುಸುಮಾವಳಿಯ ಪೊಸಕಂಪುಂ ಸೊಗಯಿಸುವ ಸೊಂಪುಂ ಮೋಹಿಸುವ ಬೆಳಗುಂ ಮುಪ್ಪುರಿಗೊಂಡು ಬಳಸಿ ಬೀದಿವರಿಯೆ (ಪುಲಕ. ಹ. ೦೬೯-೦೬) ; ಕೋಪಾಗ್ನಿ ಮುಪ್ಪುರಿಗೊಂಡು ಮುಱಿದಗೆಟ್ಟು ಮುಖದಿಂದೆ ವಲ್ಮೀಕನಾಥನ ಸದನಕೆಯ್ತಂದು ಬಿನ್ನಪಗೆಯ್ದು (ತ್ರಿಪು. ೦೬-೪೨) ; ಮುಪ್ಪುರಿಗೊಂಡ ವೈರದಲೆಮ್ಮೊಳು ಮೋರೆದಪ್ಪಿದ ದುಷ್ಕೃತದಿಂದೆ (ಕರ್ಣಪ್ಪ. ೮-೩೪). ೩. ದೃಢಗೊಳಿಸು ; ಬಿಗಿಮಾಡು :

ತಿರುವಂ ಮುಪ್ಪುರಿಗೊಂಡು ಮಿಳ್ಳಿಸುವ ಮಿಂಚಂ ಮಾಡಿ . . . ನಿದಾಘಮಂ ಬೆದಱೆ ಬೆಂಕೊಂಡತ್ತು ಮೇಘಾಗಮಂ (ಶಾಂತಿಉ. ೩೩೦).

**ಮುಪ್ಪುರಿಗೊಳು:** ೧. ಪರಮಹರುಷಾದ್ಭುತಭಯಂಗಳು ಬೆರಸಿ ತನ್ನಮ ಮನದೊಳಗೆ ಮುಪ್ಪುರಿಗೊಳಲು ನಮಿಸುತ್ತ ಸಂಸ್ತುತಿಸಿದನು (ತಿಪ್ಪುಅ. ೩-೯೦). **ಮುಪ್ಪುರಿಗೊಳ್ಳು :** ೧. ಮೂರುವಿಷಯಂಗಳು ಮುಪ್ಪುರಿಗೊಂಡು ಮುಡಿಕೇರಿಯನ್ನು ಬಿಟ್ಟು ಹೊರಡುವ ವಿಷಯ ತೀರ್ಮಾನವಾಯಿತು (ಏಣ್ಮರಿ. ೮೫); ಶಾಂತಿ, ಚೆಲುವು, ಜೀವನದ ಪ್ರಗತಿ, ಇವು ಆ ಸನ್ನಿವೇಶದಲ್ಲಿ ಮುಪ್ಪುರಿಗೊಂಡಿದ್ದುವು (ಸಮಚಿ. ೦೦೭೬). ೨. ಸುರಪತಿ ಯೆಂಬ ಪೆರ್ವೆ ದೆಸೆಯಾಣ್ಮರಸಾಳ್ದಪೆನೆಂಬ ಹಮ್ಮು ದುರ್ಧರದಿಶಿಜೇಂದ್ರನಂ ಜಯಿಸಿದಾಳ್ತನ ಮುಪ್ಪುರಿಗೊಂಡು (ರಜಾಪ. ೩-೩೦); ಘನರೋಷ ಮುಪ್ಪುರಿಗೊಂಡು ಪಾಪಕನೆರಡುಗಣ್ಣೊಳು ಕುಡಿದನೋ (ದೇವಿಭಾ. ೪-೨). ೪. ತೀಕ್ಷ್ಣವಾಗು ; ಚುರುಕಾಗು : ಪ್ರತಿಭೆ, ಅಭ್ಯಾಸ, ಜ್ಞಾನಗಳಿಂದ ಮುಪ್ಪುರಿಗೊಂಡ ಇವರ ಕವಿತಾಶಕ್ತಿ ಇವರ ಪ್ರತಿಯೊಂದು ಕೃತಿಯಲ್ಲಿ ಬಿಂಬಿತವಾಗಿದೆ (ಜಗದಾ. ೨೯೦). [ಮುಪ್ಪುರಿ + ಕೊಳ್$_1$]

**ಮುಪ್ಪುರಿಗೊಳಿಸು** (ಕ್ರಿ). (ಗಟ್ಟಿಯಾಗುವಂತೆ) ಸೇರಿಸು ; ಕೂಡಿಸು : ಒಂದುಮಾಡು : ಸರ್ವದಿವ್ಯಾಂಬರನಿಕರಮಂ ಹೊಸೆ ಹೊಸೆದು ಮುಪ್ಪುರಿಗೊಳಿಸಿ (ಬಸವ. ೩೭-೦೬). [ಮುಪ್ಪುರಿಗೊಳ್ + – ಇಸು$_1$]

**ಮುಪ್ಪುರಿಗೊಳು** 'ಮುಪ್ಪುರಿಗೊಳ್' ನೋ.

**ಮುಪ್ಪುರಿಗೊಳ್ಳು** 'ಮುಪ್ಪುರಿಗೊಳ್' ನೋ.

**ಮುಪ್ಪುರಿವಿಡಿ** (ಕ್ರಿ). ಹೊಸೆದು ಬಲಗೊಳಿಸು : ಸಿಡಿಲ ಬಳಗವ ಹಿಡಿದು ಮುಪ್ಪುರಿವಿಡಿದ ತೆಱನಂತಿರ್ದ ಕಣ್ಣು (ಕುಮಾ. ಕಿಂಕ. ೦೦-೨೮ ಅಕ್ಷರ). [ಮುಪ್ಪುರಿ + ಪಿಡಿ$_1$]

**ಮುಪ್ಪುರಿಸು** (ಕ್ರಿ). ಸೇರು ; ಕೂಡು ; ಒಂದಾಗು : ಕುಸಿದು ನಿಲ್ಲದ ಜಯಜಯಸ್ವನವಸದಳದ ವೃಷಿಯುಘರಮಂ ಪಸರಿಸಿದ ಪರಹರರುಚಿಮಮುಂ ಮುಪ್ಪುರಿಸಿ (ಶಾಂತಿತ. ೬-೬೩). [ಮುಪ್ಪುರಿ + – ಇಸು$_1$]

**ಮುಪ್ಪೊಡವಿ**(ನಾ). ಮೂರುಲೋಕ ; ತ್ರಿಲೋಕ : ಮುಪ್ಪೊಡವಿ ಯೊಳುಳ್ಳ ಕೃತ್ರಿಮಾಕೃತ್ರಿಮಮಪ್ಪ ಮಾಣಿಕಮಯದಿಗಳ ಒಪ್ಪುವ ಚೈತ್ಯ ಬಿಂಬಗಳನೇ ಪೊತ್ತು ತಪ್ಪದೆಯೆಭಿವಂದಿಸುವೆನು (ತ್ರಿಶಾಂ. ೦-೯); ಅವಿರಳ ಮಾದ ಸಮರಸನ್ನಾಹದ ವಿವಿಧ ಮಹಾಭೇರಿಯ ಬಲ್ದನಿ ಬಳಸಿತು ಮುಪ್ಪೊಡವಿಯನು (ಜಯಶಾ. ೬-೨೨). [ಮುಪ್ (< ಮೂಱು) + ಪೊಡವಿ (< ಪೃಥುವಿ)]

**ಮುಪ್ಪೊಳಲ್** 'ಮುಪ್ಪೊಟಿಲ್' ನೋ.

**ಮುಪ್ಪೊಳಲು** 'ಮುಪ್ಪೊಟಿಲ್' ನೋ.

**ಮುಪ್ಪೊಳಲುರಿಕ** 'ಮುಪ್ಪೊಟಿಲುರಿಕ ನೋ'

**ಮುಪ್ಪೊಱಡು** 'ಮೂಹೊಱಡು' ನೋ.

**ಮುಪ್ಪೊಟಿಲ್**, ಮುಪ್ಪೊಳಲ್, ಮುಪ್ಪೊಳಲು, ಮುಪ್ಪೊಟಿಲು (ನಾ). ೧. ಮೂರುಊರುಗಳು, – ಪಟ್ಟಣಗಳು : ಈ ಚಿಕ್ಕದೇವನೊರ್ವ ನದಟಿಂದಂ ತೂಳ್ದಿದಂ ಚೆನ್ನರಾಯನ ದುರ್ಗಂ ಮಿಡಿಗೇಶಿ ಮದ್ದಗಿರಿಯೆಂಬೀ ಮುಪ್ಪೊಟಿಲ್ಪಿಂಕಮಂ (ಗೀತಗೋ. ೫೨-೮). **ಮುಪ್ಪೊಳಲ್ :** ೨. = ಮುಪ್ಪುರ ೧ : ರಕ್ಕಸರ ಮುಪ್ಪೊಳಲ ಜೈಸಿ ಪ್ರಮದಮಂ ಸಕಲಲೋಕದೊಳು ಪೂರೈಸಿದನು (ಶಾಂಪು. ೦೫-೧). **ಮುಪ್ಪೊಳಲು :** ೨. ಆ ಗಿರಿಯ ತಪ್ಪಲೊಳಗಾ ಪಾರು ಶತಖಂಡಮಾಗಿ ಧೊಪ್ಪನೆ ಕೆಡೆಯಲೊಡನೆ ಮುಪ್ಪೊಳಲೊಂದುಭಾಗವೆಂಬಂತಿಂದು ಬಳೆದ ಮಾರುತಿಯಂಗಮಂ ಕಂಡು (ಶೀತರಾ. ೦೫-೯೦). **ಮುಪ್ಪೊಟಿಲು :** ೩. ಮೂರುಲೋಕಗಳು : ತ್ರಿಲೋಕ : ಮುಪ್ಪೊಟಿಲುಂ ನಡುಗಿದುದು (ಅದ್ಭುತ. ೦೦-೦೬). [ಮುಪ್ (< ಮೂಱು) + ಪೊಟಿಲ್]

**ಮುಪ್ಪೊಟಿಲು** 'ಮುಪ್ಪೊಟಿಲ್' ನೋ.

**ಮುಪ್ಪೊಟಿಲುರಿಕ**, ಮುಪ್ಪೊಳಲುರಿಕ (ನಾ). ತ್ರಿಪುರಗಳನ್ನು ದಹಿಸಿದವನು ; ಶಿವ : "ಎಳೆದೇರ ಗೊರವನೈ ಮೊಗ ಕಂದುಗೊರಲ ಮುಪ್ಪೊಟಿಲುರಿಕಂ . . . ಈಶ್ವರನ ನಾಮಂ" (ಕಬ್ಬಿಮಂ. ೩) ; ಮುಪ್ಪೊಟಿಲುರಿಕ ನೊಳ್ಪೆಯುಂಟೆಂದುಂ, ಮುಪ್ಪೊಟಿಲೆ ಬಲ್ಲದು (ಅದ್ಭುತ. ೯೩-೩). **ಮುಪ್ಪೊಳಲುರಿಕ :** "ಮುಪ್ಪೊಳಲುರಿಕನೆನೆ ಮಹಾದೇವನಕ್ಕು" (ಕಶಶ. ೯೦). [ಮುಪ್ಪೊಟಿಲ್ + ಉರಿಕ]

**ಮುಪ್ಪೋಳು** (ನಾ). ಮೂರುಹೋಳು, – ಭಾಗ, – ತುಂಡು : ಮುತ್ತ ಬಾಳೆಯ ಕಾಯನುಕ್ಕರಿಸಿ ಕಮುಕಿಱಿದು ಮತ್ತದಂ ಮುಪ್ಪೋಳು ಮಾಡಿ (ಸೂಶಶಾ. ೯-೬೭). [ಮುಪ್ (< ಮೂಱು) + ಪೋಳ್$_2$ (< ಪೋೞ್$_2$)]

**ಮುಫತ್ತು** (ನಾ). ಪುಕ್ಕಟೆ ; ಉಚಿತವಾದುದು : ಅವನಿಗೊಂದು ಎರಡನೆಯ ದರ್ಜೆಯ ಟಿಕೇಟನ್ನು ಮುಫತ್ತಾಗಿ ಕೊಟ್ಟಿದ್ದಾರೆ (ಆಳಸಿ. ೯); ಒಂದು ಸದಸ್ಯರಾಷ್ಟ್ರದ ಅಂಚೆಯನ್ನು ಇನ್ನೊಂದು ಸದಸ್ಯರಾಷ್ಟ್ರ ಮುಫತ್ತಾಗಿ ಸಾಗಿಸಬೇಕೆಂದೂ ಒಪ್ಪಂದವಾಯಿತು (ಕಸಿಕೋ. I- ೬೪). [← ಅರ. ಮುಫತ್, ಮುಫ್ತ್; ಪಾರ. ಹಿಂ. ಮುಫ್ತ್; ಮರಾ. ಮುಫತ್, ಮೋಫತ್]

**ಮುಬದಲು** 'ಮುಬಾದಲೆ' ನೋ.

**ಮುಬಾದಲೆ**, ಮುಬದಲು, ಮುಬಾದಿಲೆ, ಮೂಬದಲು, ಮೂಬದಲೆ, ಮೋಬದಲಿ (ನಾ). ೧. ಪ್ರತಿಯಾದುದು; ಅದಲುಬದಲು: ವಿನಿಮಯ : ಮುಬಾದಲೆ ಮುಂತಾದ ಖರ್ಚಿಗೆ ಅವಕಾಶವಾಗದಂತೆ ನೋಡಿಕೊಳ್ಳಬೇಕೆಂತಲೂ ಸನ್ ೧೮೨೭ರಲ್ಲಿ ಹುಕುಂನಾಮ ಸಾದರ್ಮಾಡಿದರು (ಮಹಾಪಂ. II, ೫೬). **ಮುಬದಲು :** ೧. ಮಹಾರಾಜನು ತನ್ನ ಸಹಾಯದ ಮುಬದಲು . . . ಇಂಗ್ಲಿಷರಿಗೆ ನೆರವಾಗುವೆನೆಂದು ಹೇಳಿದನು (ತಂಕಂ. ೨೦೬). **ಮುಬಾದಿಲೆ :** ೨. ತಾತ್ಕಾಲಿಕವಾಗಿ ಕೊಟ್ಟ ಸಾಲ : (ಕಸಂಗ್ರಾ. ೬೩). **ಮೂಬದಲು :** ೧. ತೋಟದೊಳಗೆ ಹೂ ಬೆಳೆಯೋದು ಹೆಚ್ಚಲ್ಲ, ಬಂಜರಭೂಮಿಯೊಳಗ ಹೂ ಬೆಳೆದರ ಅದ ನಿನ್ನ ಬುದ್ಧಿಗೆ ಮೂಬದಲು (ವಾಐಂ. ೦೦೪). **ಮೂಬದಲೆ :** ೧. "ಪ್ರತಿ, ಸಮಾನವಾಗಿರುವ ಮತ್ತೊಂದು ವ್ಯಾಪಕತ್ವ, ಅಸಾಧಾರಣ ಧರ್ಮ, ಮೂಬದಲೆ" (ಸಿದ್ಧಾಂತಿ. ೪೩೦). **ಮೋಬದಲಿ :** ೧. ನನ್ನ ರೂಪಾಯಿಗಳಿಗೆ ಮೋಬದಲಿಯನ್ನು ಮುಟ್ಟಿಸುತ್ತೇನೆಂದು ಕಾಗದ ಬರಮಕೊಡು (ಮೋಟಿನೀ. ೯೭). [← ಅರ. ಮುಬಾದಲಾ; ಪಾರ. ಮುಬಾದಲ, ಮುಬದ್ದಲ್; ಹಿಂ. ಮುಬಾದಿಲಾ; ಮರಾ. ಮುಬಾದಲಾ, ಮುಬದಲಾ, ಮೋಬದಲಾ, ಮೋಬಾದಲಾ]

**ಮುಬಾದಿಲೆ** 'ಮುಬಾದಲೆ' ನೋ.

**ಮುಬಾರಕ್** (ಗು). ೧. ಮಂಗಳಕರವಾದ ; ಶುಭದಿಂದ ಕೂಡಿದ ; ಒಳ್ಳೆಯ : ಯಾವದೊಂದು ಕಾರ್ಯಕ್ಕೂ ಆ ಇಂಗ್ರೇಜ ಬಹಾದ್ದರ ಕುಂಪನಿ ಮುಬಾರಕ್ ಮರ್ಜಿ ಯಾವ ಮೇರೆ ಇದೆಯೋ ಅದರಲ್ಲಿ ಈ ದೋಸ್ತುದಾರರಿಗೆ ಅಬ್ರುಕೀರ್ತಿ ದೊಡ್ಡದಾದೀತು (ರಾಕೇಂಪ್ರ. ೨೪೪). (ನಾ). ೨. ಶುಭ; ಮಂಗಳಪ್ರದ. [←ಅರ. ಪಾರ. ಹಿಂ. ಮರಾ. ಮುಬಾರಕ್]

**ಮುಬ್ಬಣ್ಣ** 'ಮೂವಣ್ಣ' ನೋ.

**ಮುಮ್** 'ಮುಮ್ಮ$_1$' ನೋ.

**ಮುಮುರಿದಂಡ** 'ಮುಮ್ಮುರಿದಂಡ' ನೋ.

**ಮುಮುಕ್ಷು** (ಗು). ೧. ಐಹಿಕ ವ್ಯವಹಾರಗಳಿಂದ ದೂರವಾಗಲು ಬಯಸುವ ; ಮೋಕ್ಷಾಪೇಕ್ಷೆಯಿಂದ ಕೂಡಿರುವ ; ಮುಕ್ತಿಯನ್ನು

ಬಯಸುವ : ಆವನೊಬ್ಬನ ವಿಮಳಕೀರ್ತಿಸುಧಾವಗಾಹನದಿಂದ ಪಾತಕ ಪಾವನತೆಯುಮಂ ಪಡೆವುದೀ ಜಗವಪ್ರಯತ್ನದಲಿ ಸೇವಿಸುವುದನುದಿನ ಮುಮುಕ್ಷುಜನಾವಳಿಗಳು (ಏಕಾಗ. ೪-೩-೨೮). (ನಾ). ೨. ಮುಕ್ತಿಯನ್ನು ಬಯಸುವವನು; ಮೋಕ್ಷಾಪೇಕ್ಷಿ : ಆ ಮುಮುಕ್ಷುಗಳ ಸಮಕ್ಷದೊಳವರ ಪೇಳ್ದ ಮಾಟ್ಕೆಯೊಳೆ ಪರಮಜಿನಪತಿ ಪರಿಭಾಷಿತಮಪ್ಪ ಪೋಷಿತವ್ರತಮಂ ಕೈಕೊಂಡು* (ಆದಿಪು. ೩-೪೦ ವ); ಆಕ್ಷಣದೊಳಗ್ನಿಭೂತಿ ಮುಮುಕ್ಷುಗೆ ಮುಂಜಿನೆಯು ದಿವ್ಯಸರ್ವಾವಧಿ ಪುಣ್ಯಕ್ಷೇತ್ರ ಶುಭಸ್ಥಾನ ಸಮಕ್ಷದೊಳಾದುದು (ಸುಕುಮಾ. ೮-೪೬); ಶೌರಿ ಭವತ್ಸಾದ ಲವದಿಂದೆ ಮುಮುಕ್ಷುಗೆ ಮೋಕ್ಷಲಕ್ಷ್ಮಿ ಸಂಸಾರಿಗೆ ರಾಜ್ಯಲಕ್ಷ್ಮಿ ದೊರೆಕೊಳ್ವುದು (ಜಗದಿ. ೧೭-೩೮). [ಸಂ.]

ಮುಮುಕ್ಷುತ್ವ (ನಾ). ಲೌಕಿಕವ್ಯವಹಾರಗಳಿಂದ ದೂರವಾಗಿ ಮುಕ್ತಿಯನ್ನು ಬಯಸುವಿಕೆ; ಮೋಕ್ಷಾಪೇಕ್ಷೆ : ಇಲ್ಲಿ ನಿತ್ಯವಸ್ತುವಿವೇಕದಿಂದ ಮೋಕ್ಷದಲ್ಲಿ ಇಚ್ಛೆಯೆಂಬ ಮುಮುಕ್ಷುತ್ವವೂ . . . ಭೋಗವೈರಾಗ್ಯವೂ ಬರುವುವು (ಹಂಪಾ. ೨೨೦). [ಸಂ.]

ಮುಮುಕ್ಷುವೃತ್ತಿ (ನಾ). ಮುನಿಧರ್ಮ; ಮೋಕ್ಷಾಪೇಕ್ಷೆಯ ನಡವಳಿಕೆ : ಕಾಮಸುಖೋಚಿತಮತಿಗಳ್ ನಾಮೆತ್ತ ಮುಮುಕ್ಷುವೃತ್ತಿಯಂ ತಾಳ್ದಿದವರ್ ತಾಮೆತ್ತ (ಆದಿಪು. ೫-೬೮). [ಸಂ.]

ಮುಮೂರ್ಷು (ಗು). ೧. ಪ್ರಾಣಬಿಡಲು ಇಚ್ಛಿಸುವ; ಜೀವವನ್ನು ತ್ಯಜಿಸಲು ಅಪೇಕ್ಷಿಸುವ. ೨. ಸಾವು ಸನ್ನಿಹಿತವಾಗಿರುವ; ಮರಣಾವಸ್ಥೆಯಲ್ಲಿರುವ : ತನ್ನ ತೊರೆದರ್ಭಕರ ಹಂಬಲಿಸುವ ಮುಮೂರ್ಷು ತಾಯಂತೆ. . . ತನ್ನಳಲಸವರ ಹಂಬಲದಿ ಮರೆತುಸುರಿದಂ (ಗೂರೊತಾ. ೧೨-೩೦೨). (ನಾ). ೩. ಸಾವು ಸಮೀಪಿಸಿದ ವ್ಯಕ್ತಿ; ಮರಣಾಸನ್ನನಾದ ವ್ಯಕ್ತಿ : ಆನೆಯುನಿರುಳುಂ ಪಗಲುಂ ಜಾನಿಸಿ ತನು ಮೂರ್ಛಾವೃತ್ತಿ ಪೊರ್ದಿದವೋಲಜ್ಞಾನಿ ನಯಾನಯಚಿಂತೆಯುಸೇನುಮನಱಿಯನೆ ಮುಮೂರ್ಷುತೆಜಿನಱಿದಪನೇ (ಚಂದ್ರಪು. ೧೧-೩೬); ನವಕುಮಾರನು ಮುಮೂರ್ಷುವಿನಂತೆ ಕಾಪಾಲಿಕನ ಸಂಗಡ ಹೋದನು (ಕಪಾಕುಂ. ೨೫). [ಸಂ.]

ಮುಮ್ಮಡ, ಮುಮ್ಮಡಿ$_2$ (ನಾ). ಕಾಲಿನ ಹರಡಿನ ಮುಂಭಾಗ : ಪೆರ್ದೊಡೆ ಕಟಿ ಮುಮ್ಮಡಂ ಪರಡು ಸಂದಿ ನೊಸಲ್ ಪಣೆ ಕಣು ಕದಂಪಿವೆಂಬೆಡೆಯನೆ ನಟ್ಟುವುರ್ಚಿದುವು . . . ಪಾರ್ಥನಂಬುಗಳ್ (ಕಂಪಭಾ. ೧೧-೦೩೬); ಒಂದೆಡೆಯೊಳ್ ಗೋಣ್ಣವಿರ್ ಮುಮ್ಮಡಂಬರಂ ಮುಸುಂಕಿರೆ ಪಟ್ಟೊಂದು ಮುತ್ತ ಸಿಂಗಕ್ಕೆ ತನ್ನ ಕೇಸರಮೆ ಜಾಲಮಾಗಿ . . . ಏಬಲರಾಟಿಸಿಯುಮಾಜದಿರೆ (ರಾಮಾಶ್ವ. ೪೨-೨೪). ಮುಮ್ಮಡಿ$_2$ : ಕಾಲು, ಕಣಕಾಲು, ತೊಡೆ, ಹಿಮ್ಮಡಿ, ಮುಮ್ಮಡಿಗಳ ಸಹಾಯದಿಂದ ಮಾಡುವ ಒಂದು ಚಲನೆಗೆ 'ಚಾರಿ' ಎನ್ನುತ್ತಾರೆ (ಅಭಾಕ್ಕ. ೫೦).

[ಮುಂ$_1$ (< ಮುನ್$_1$) + ಮಡ$_1$]

ಮುಮ್ಮಡಿ$_1$ 'ಮೂವಡಿ' ನೋ.

ಮುಮ್ಮಡಿ$_2$ 'ಮುಮ್ಮಡ' ನೋ.

ಮುಮ್ಮಡಿಸು 'ಮೂವಡಿಸು' ನೋ.

ಮುಮ್ಮಣ್ಣು (ನಾ). ಮೂರುಸಲ ಬತ್ತದ ಬೆಳೆಯನ್ನು ಕೊಡುವ ಭೂಮಿ: (ಕಸಂಗ್ರಾ. ೦೬೩).

[ ಮುವ್ (< ಮೂಱು) + ಮಣ್ಣು (< ಮಣ್) ]

ಮುಮ್ಮನ (ನಾ). ಹಿಂದಿನ ನೆನಪು,-ಆಲೋಚನೆ : ಮರೆತಿದೆ ಪೂರಾ ಮುಮ್ಮನವು, ಆದರು ಆತ್ಮಕೆ ಘನ ನೆನವು (ಅರಳು. ೦೬೭-೦೩).

[ ಮುಂ$_1$ (< ಮುನ್$_1$) + ಮನ ]

ಮುಮ್ಮನೆ$_1$ (ನಾ). ೧. ಮುಂದಿರುವ ಮನೆ ; ಎದುರುಮನೆ : ನೆರೆಮನೆಯು ಮುಮ್ಮನೆಯು ಹೆಮ್ಮಕ್ಕಳಂ ಬೇಗ ಕರೆ (ಸಿದ್ಧರಾ. ೨-೨): ನೆರೆಮನೆಯು ಮುಮ್ಮನೆಯು ಭಕ್ತರು ನರರುವಱಿಯುವ ಹಂಗೆ. . . ನಿಕ್ಷೇಪಮಂ ಮಾಡರುತ್ತಿರಲು (ಬಸವ. ೪೮-೨೦). ೨. ಮನೆಯ ಮುಂಭಾಗ, —ಮುಂಬದಿ : ನಮ್ಮದು ತುಂಬ ಹಿಂದಿನ ಕಾಲದ ಮನೆ . . .ಮುಮ್ಮನೆ ಒಳಮನೆಗಳ ನಡುವೆ ತೋಟ (ಸಾಂಧ. II. ೧).

[ ಮುಂ$_1$ (< ಮುನ್$_1$) + ಮನೆ ]

ಮುಮ್ಮನೆ$_2$ (ಅ). ಅತಿಯಾಗಿ; ಹೆಚ್ಚಾಗಿ : ಅತಿಶಯವಾಗಿ : ಪಿಂಗಳಕಂ . . . ಹಮ್ಮದಂಬೋಗಿ ಮುಮ್ಮನೆ ಬೆಮರ್ತು (ಪಂತಂ. ೪೬-೦೩). ' ಮುಮ್ಮಲನೆ ' ಪಠಾ. [ ? ]

ಮುಮ್ಮಯ್ ' ಮುಮ್ಮೆಯ್ ' ನೋ.

ಮುಮ್ಮರಿ$_1$ ' ಮುಮ್ಮುರಿ$_3$ ' ನೋ.

ಮುಮ್ಮರಿ$_2$ (ನಾ). ನಾಶ; ಹಾಳು : ತೇರ್ತೇರೊಳ್ ಸರಭಸದಿಂ ಪೂರ್ತಾಗೆ ಘಟಿಸಲಾದು . . . ಕಾದಿ ನೆರಪಿ ಮುಮ್ಮರಿಯಾದರ್ (ಬಂಹಂ. ೬-೬೨).

[ ? ]

ಮುಮ್ಮರಿದಂಡ ' ಮುಮ್ಮುರಿದಂಡ ' ನೋ.

ಮುಮ್ಮಲ (ನಾ). [ವೀರಶೈ] ಜೀವನಿಗೆ ಅಂಟಿಕೊಳ್ಳುವ ಆಣವ, ಕಾರ್ಮಿಕ ಮತ್ತು ಮಾಯೆಗಳೆಂಬ ಮೂರುಬಗೆಯ ಮಲಗಳು,— ದೋಷಗಳು : ವ್ಯಸನಸಪ್ತಕದ ನೀಮರ್ಚುಕ್ಕುಳಿಸುತ ಮುಂದೆ ಮುಮ್ಮಲವೆಂಬ ಸುರೆಯನತಿಹೊಟ್ಟೆಯೊಡೆವಂದದಿಂದೀಂಟಿ . . . ಭವವನಾಳುವರ ಮೇಳವಂ ಬಿಡು (ಕಬಸ. II. ೦೬೩-ವೈರಾಗ್ಯಶಬ್ದ೧).

[ಮುವ್ (< ಮೂಱು) + ಮಲ$_3$]

ಮುಮ್ಮಸಗು (ಕ್ರಿ). ಮುಂಚೆಯೇ ಆವೇಶವನ್ನು ಹೊಂದು; ಮೊದಲೇ ಉದ್ವೇಗಗೊಳ್ಳು : ದಿಮ್ಮಿದರ್ ಗುಜುಗುಜಿಸದಿರಿಮತುಳರುದ್ರಗಣ ಮುಮ್ಮಸಗ ಬೇಡ (ತಂಪು. ೨-೨೬). [ಮುಂ$_1$ (< ಮುನ್$_1$) + ಮಸಗು]

ಮುಮ್ಮಳಿ ' ಮಣ್ಮಳಿ ' ನೋ.

ಮುಮ್ಮಳಿಗಡಲು (ನಾ). ಕ್ಷೋಭೆಗೊಂಡ ಸಮುದ್ರ ; ಹೊಯ್ದಾಡುವ ಕಡಲು : ಘುಳುಘುಳಿಸಿ ಕವಿವ ತೆರೆಗಳು ಹಳಚಿ ಕುದಿವ ಮುಮ್ಮಳಿಗಡಲು (ಪಕಣ. ೧೧-೨೮). [ಮುಮ್ಮಳಿ (<ಮಣ್ಮಳಿ)+ಕಡಲು (< ಕಡಲ್$_2$)]

ಮುಮ್ಮಳಿಗೊಳ್ ' ಮಣ್ಮಳಿಗೊಳ್ ' ನೋ.

ಮುಮ್ಮಳಿಗೊಳು ' ಮಣ್ಮಳಿಗೊಳ್ ' ನೋ.

ಮುಮ್ಮಳಿಯೋಗು 'ಮಣ್ಮಳಿವೋಗು' ನೋ.

ಮುಮ್ಮಳಿಸು ' ಮಣ್ಮಳಿಸು ' ನೋ.

ಮುಮ್ಮಳೆ (ನಾ). ಬೇಸಗೆಯ ನಂತರ ಬರುವ ಮೊದಲ ಮಳೆ ; ಮುಂಗಾರು : ನಾನೆ ಮರ್ಬಿನ ಕರ್ಪು ನಾನೆ ಕದಿರ್ಜೊನ್ನಮುಂ ಮುಮ್ಮಳೆಯು ತನಿಗಂಪು ಬೇಸಗೆಯ ಬಿರುಜಳಂ (ಸಂಕಟ. ೩೦-೪). ' ಮುನ್ಮುಳೆಗಾಲ ' ಪಠಾ.

[ಮುಂ$_1$ (< ಮುನ್$_1$) + ಮಳೆ (<ಮೞೆ)]

ಮುಮ್ಮಳೆಗಾಲ (ನಾ). ಮಳೆಗಾಲದ ಆರಂಭ; ಮುಂಗಾರಿನ ಸಮಯ: ಶರಧಿ ಮುಮ್ಮಳೆಗಾಲದಲ್ಲಿ ಭೋರ್ಗರೆವವೊಲು ಭೋರೆಂದು ಹಱಿಯುಬ್ಬರಿಸಿದುವು (ಕೊರಾ. ೬-೩೫-೧೦).

[ಮುಂ$_1$ (< ಮುನ್$_1$) + ಮಳೆಗಾಲ (< ಮೞೆಗಾಲ)]

ಮುಮ್ಮಱಿದಂಡ ' ಮುಮ್ಮುರಿದಂಡ ' ನೋ.

ಮುಮ್ಮಱಿಸು (ಕ್ರಿ). ಎದುರಿಗೆ ಮರೆಮಾಚು (?) : ಘಡ ಹೋಗದಿರ್ ಮುಮ್ಮಱಿಸಿ ಮಂಟಪಕೆ ಕಿಚ್ಚನಿಕ್ಕಿದ ಕಳ್ಳಬಂಟರಿವರಂ ಬೇಗದಿಂ ಪಿಡಿ (ತಂಪು. ೩೦-೨೬).

[ಮುಂ$_1$ (< ಮುನ್$_1$) + ಮಱಿಸು (< ಮಱಿಯಿಸು)]

ಮುಮ್ಮಳಿ ' ಮಣ್ಮಳಿ ' ನೋ.

ನೆನಗೆ ಪೊನ್ನಕ್ಕುಮೆಂದಿಲ್ಲಿ ಜಿಂ ಮಾಡುವ ದಾನಂ ದಾನಮಲ್ಲಂತದು ಬಗೆವೊಡೆ ಮುಯ್ಯಿಂಥುಗಳ್ಗಿವುದಕ್ಕುಂ (ಧರ್ಮಾಮೃ. ೬-೯೭) ; ನೆರೆವದಳ ದರೆವ ಸಾಂದಿನ ಮೊರೆವಳಿಗಳ ಪರೆವ ಕಂಪನೆರೆವನಿಳನ ಮುಯ್ಯೊರೆಪ ಷಟ್ಪಧೋಗಿಗಳ ವಿಸ್ತರದಿಂ ಸೊಗಯಿಪುವು ಘಟ್ಟಿವಳರಂಗಡಿಗಳ್ (ಶಿಶ್ಚ. ೨-೯೩) ; ಮುನಿವರನು ಬಿಜಯಂಗೈದು . . . ಮುಕ್ಕಳ ಪರಮವಿಭ ವಕೆ ಮು[ಶಾಕಾಂ. ವ್ಯ]ಯ್ಯನಾಂತು ಮುನೀಂದ್ರನಿಂತೆಂದ (ಶಬ್ದಾ.೮. ೪-೯). ೨. (ಮದುವೆಯ ಸಮಾರಂಭದಲ್ಲಿ ವಧೂವರರಿಗೆ ನೆಂಟರಿಷ್ಟರು ಕೊಡುವ) ಬಳುವಳಿ; ಉಡುಗೊರೆ : "ತಿಲ್ಲಟಿಯೆನಲ್ಕೆ ಮುಯ್‌" (ಶಕಾಂ. ೭೦) ; ಘಟ್ಟಿ ಪಟ್ಟೆಯ ಸೀಳ ಸುರಳ ತಲೆಯ ಮೇಲಿಟ್ಟಾ ಶಂಭು ಕುಮಾರ ಮುಟ್ಟಿ ಮುಯ್ಗಳ ಜೀರವಿಡಿದು ಕಣ್ಬಗೆಗಳಪಟ್ಟು ಬರಲು ಬಂದನಾಗ (ವೀಬಸಂ. ೨೦-೩೦) : ಮೇದಿನೀಶ್ವರರಾಗ ಮುಯ್ಗಳನೋದಿಸಿ ದರಪನಿಪಗೆ ಸತಿಗಿನ್ನೈದೆತನ ಮಿಗಿಲೆಂದು ಪರಸಿತು ಮುಸಿವಧೂನಿಕರ (ನಳಚ. ೯-೨೨). ೩. ಮಾಡಿದುದಕ್ಕೆ ಪ್ರತಿಯಾಗಿ ಮಾಡುವುದು ; ಪ್ರತೀಕಾರ ; ಸೇಡು : ಭೀಮಂಗೆ ಪಾರ್ಥಂಗೆ ಕೃಷ್ಣಂಗೆ ತೀರಿಸಿದ ಮುಯ್ಗಳನ್ ಕೀಜಿ, ಅಣತಿಸುತೆ . . . ಬಂದನ್ (ಅಶ್ವಶಾ. ೧೩-೨೬೦). ೪. ಮಾಡಿದ ಕೆಲಸಕ್ಕೆ ಪ್ರತಿಯಾಗಿ ದೊರೆಯುವ ಲಾಭ; ಪ್ರತಿಫಲ: ಸತ್ಯಪ್ರತಿಜ್ಞನೆನೆ ಕುರುಪತ್ಯೂರುಕೀಲಿಟಭಂಗಮಂ ಪಡೆದು ಜಗತ್ಸುತ್ಯ ಕೃತಕೃತ್ಯನೆನಿಸದೆ ಸತ್ಯಾಶ್ರಯಮೆಸರ್ಗೆ ಮುಯ್ಯನಾಂಪನೆ ಭೀಮಂ (ಗದಾಯು. ೦-೬೪) ; ಪೊಸದೇಸೆಯೊಳೊಂದಿದ ಮಾರ್ಗಮೊಳ್ಪುವೆತ್ತ ಸದಿರೆ ಪೇಟ್ಟು ಅಂಜಿಸದೆ ಕಮ್ಮನೆ ಬಲ್ಮೆಗೆ ಮುಯ್ಯನಾಂಪುದೇ (ಸುಕುಮಾ. ೦-೯೪) ; ಹಕ್ಕಲಂತೆ ಬಡಹಕ್ಕಿ ಬಂದು ಮುಯ್ಯಿಲ್ಲದೊಕ್ಕಲಂತೆ ಬಡುಗುಲಿಗೆ ಬಂದು (ಧರ್ಮಾಮೃ. ೩-೭೭) ೫. ಗೌರವ; ಸತ್ಕಾರ; ಆದರ : ಪ್ರಿಯಚಿತ್ತದಿಂ ನಿನ್ನ ಮೆಲ್ಲಚಿನಂಗಳ್ಗಂ ನೆಜೆ ಕೇಳ್ದು ಮುಯ್ಯನೆ ಮಾಡುವೆಂ (ಧರ್ಮಾಮೃ. ೩-೨೨೦). ಮುಯಿ$_1$: ೧. ಶುಭಮುಹೂರ್ತದಲಿ ಪಟ್ಟವ ಕಟ್ಟಿದರು ನೃಪಗೆ. . . ಧರೆಯರಸುಗಳು ಕೈಮುಗಿದು ಮುಯಿಗಳನಿತ್ತರವನಿಪಗೆ (ರಾಮಚ. ೩೨-೧೦೭). ೨. ಹದಿನಾಱುದಿನಮುಟ್ಟ ಸಮಿರಾಜ ತವಗೆ ಮಾಡಿದ ಲೇಸ ಪಾಜೆಯದೆ ತಾವು ಮದುವೆಯೊಳ್ ನೆಜೆರಿ ಮುಯಿಗಳ ಸಲಿಸಿ ತಿದ್ದಿದರು ಭೂಮಿಪರು ವ್ಯಂತರರು (ಪರಶ. ೯೩-೭೭೬). ೪. "ಪ್ರತಿಯಾತನಂ ಪ್ರತಿ ಪ್ರತಿಕೃತಿಯೆನಲ್ಕೆ ಮುಯಿ" (ಮಂಗರಾ. ೦೩೨-೩೭). ೬. ಪಡೆದುದಕ್ಕೆ ಪ್ರತಿಯಾಗಿ ಕೊಡುವುದು : ವಿರವ ಮುಯಿ ಮುಟ್ಟುಂಟು ವಸ್ತೂತ್ಕರದೊಳಗೆ ಭಾವಿಸಲು ಮುಕ್ಕಳ್ ನೆರವ ಕೊಟ್ಟುವರುಂಟೆ ಮಾರಿಯ ನಾಲಿಗೆಯ ಸವಿಗೆ (ಶಬ್ದಾ.೮. ೧೦-೧೬). ಮುಯ್ಯ : ೩. ಮುಯ್ಯಕ್ಕೆ ಮುಯ್ಯ ತೀರಿತು . . . ನಿನ್ನ ಮುಯ್ಯಕೆ ಮುಯ್ಯಿ ತೀರಿಸಿ ಕೊಡಯ್ಯ (ಪುರಂದ. ೦-೭೩-೨) ; "ಮುಯ್ಯಕ್ಕೆ ಮುಯ್ಯ" ತೀರಿಸದೆ ಬಿಡುವುದಿಲ್ಲ ನಮ್ಮ ಜನ ಎಂಬುದೇ ಅವರ ಚಿಂತೆಯಾಯಿತು (ಪ್ರಶ್ನಿ. ೪೦). ೪. ಗುರುವಿಂಗೆ ತನು ಲಿಂಗಕ್ಕೆ ಮನ ಜಂಗಮಕ್ಕೆ ಧನ ಇಂತಿವ ಕೊಟ್ಟು ಮುಕ್ತಿಯ ಗಳಿಸಿಕೊಂಡಿಹೆನೆಂಬ ಮುಯ್ಯ ಬಂಧುಗಳಂತೆ (ಮೋಚವಾ. ೨೯-೦೦೬). ಮುಯ್ಯಿ : ೧. ಕೊಡಬೇಕು, ಸಂತರ ಮುಯ್ಯಿ, ದಾನ, ಬ್ರಾಹ್ಮಣರಿಗೆ ಬಡವರಿಗೆ ಕಿರಿಜನರಿಗೆ (ಕಂಗೂರಿ. ೦೭೨) ; ಕರನಾಟಕದವರು ನಮ್ಮಾವರು ನಾರಿಗುಳ್ಳವ್ವ ಕರಕೀಯ ಮುಯ್ಯ ತಂದಾರ (ಕನ್ನಶಾ. ೦೯೩). ೨. ನಮ್ಮ ಕೈಲಾದರೆ ಮುಯ್ಯಿ ಉಡುಗರೆ ಮಾಡುತ್ತೇವೆಯೇ ವಿನಾ, ಇಲ್ಲದೆ ಇದ್ದರೆ ಇಲ್ಲ (ಮುಣ್ಯಹಾ. ೨೦). ೩. ಶ್ರೀರಾಮನಿಗೆ ಸಂದೊರೆ ಯಾರು . . . ಸೀತಾಪಹರಣದ ಮುಯ್ಯಿಗಾಗಿ ರಾಕ್ಷಸವಂಶವನ್ನೆ ಹೆಸರಳಿ ಯಿಸಿದನು (ನಾಡೋಜ. ೩) ; ಒಂದೇ ಜೇಕು ನೊಂದ ಮನಕೆ ! ಸೇಡು ! ಮುಯ್ಯಿ ! (ಅರ್ಜುನ. ೦೦೨). ೪. ಸುತೆಯ ಪೋಷಿಸಿ ಬೆಳಸಿ, ಧನಕನಕ ದೊಡನವಳನ್ ಇತರ ಗೃಹಕಿತ್ತು ನೀಂ ಕೇಳ್ವ ಮುಯ್ಯೇನು ? (ಮುಂಗುಶ. ೯೭). ೫. "ಮುಯ್ಯಿನಲು ಮುರ್ಯಾದೆ" (ಕಪಅ. ೪೦). ೬. ಸಿರಿಯಾಳನಂತೆ ಉಣಲಿಕ್ಕ ಬಲ್ಲನೆ ದಾಸಿಮಯ್ಯನಂತೆ ಉಡಕೊಡ ಬಲ್ಲನೆ ಉಂಡುಟ್ಟು ಕೊಟ್ಟರೆ ಮುಯ್ಯಿಗೆ ಮುಯ್ಯಿನಿತ್ತು (ಬಸವ. ೩೦೯) ; ಮುಯ್ಯ ಮಾತಲ್ಲಿದುವೆ ನಮ್ಮ ಬು ಕಯ್ಯಲಪ ಸೇವೆಯನು ಕೈಕೊಂಡಯ್ಯ ನಾಗಿಹುದು (ಕೊರಡಾ. ೩-೦-೪೩). ಮುಯ್ಯು$_1$ : ೧. ಆಪ್ತಶ್ರೇಷ್ಠ ಪುರುಷ ಇಜೆದು ಬಸವಂಟಿಪ್ರೌಷ್ಠ] ಬೀಟಿಯ್ಯೊರನ್ ತೆಜನ ಮೆಚ್ಚದೊಂ . . . ಸೆಣ್ಬದೇವಂಗಟಿಸ್ಸಿ ಮುಯ್ಯುವುಪ್ಪಡೆದೊಂಗರ ಅಲೆದೊಂ ಮಾಮವಲಿಪೊಂ (ಎಇ. XXIV. ೧೯೩-೦೩ ; ಸಂ. 885). ೩. ಕ್ಷಿತಿತಳದೊಳ್ ಸೆಗಟ್ಟಿದ್ದರ್ ಪ್ರತಿಮಲ್ಲನನಿಕ್ಕಿ ಮುಯ್ಯುನಣವಾನದೆ ದರ್ಪಿತದುರಿತಮಲ್ಲನುವಮನಿಡಿದ ತಕ್ಕನಿಂ ಸಭೆಗೆ ಸಡೆದನಿಂದ್ರಾರ್ಚಿತನಾ (ಅಜಿಪು. ೧೪-೦೩೪). ೪. ಆತಂಗೀವ ಮುಯ್ಯಂ ನಿನಗೆ ಕೊಡುವೆನೇಟಿಕ್ಕ ಪೋಗು (ಅನಂಪು. ೯-೦೩) ; ಬಿಯ್ದ ಹನಸುಗಳಿಂದ ಬೇಳ್ದ ಬಗೆ ವಳ್ಳಿಸಲ್ ಮುಯ್ಯುಗಳ ಕೊಡುವೆನೆಂದಂ ಪಲ್ಲನಗಿದಂ (ಕಾಲೂರ. ೦೩೦-೨೭೯). ೫. ಮುಯ್ಯನಾನುವುದವರ್ಗೆ ಭುವನವು ಬೈವುದೈ ನಿಮ್ಮಿನಿಜರನು (ಶಬ್ದಾ.೯. ೦-೨೩).

ಮುಯಿಮಾಡು, ಮುಯ್ಮಾಡು, ಮುಯ್ಯಮ್ಮಾಡು = ೧. ಒಂದಕ್ಕೆ ಪ್ರತಿಯಾಗಿ ಮತ್ತೊಂದನ್ನು ಕೊಡು : ಕಮಲಕೆ ವದನವ ಹಂಸೆಗೆ ನಡೆಯನು ಕುಮುದಕೆ ಪೊಳೆಪ ಕಂಗಳನು ಭ್ರಮರಕೆ ಕುರುಳನು ಮುಯಿ ಮಾಡಿ ಮೆಜೆದರಾ ರಮಣಿಯರಾ ವನದೊಳಗೆ (ಜೀವಂಧಾಂ. ೦೩-೩೭) ; ಚುಂಬನಸುಖದ ನಾಲವ ತಿದ್ದಿ ತೆಗೆವರು ತಂಬುಲ ಮುಯಿ ಮಾಡುತಿಹರು (ಭರತ. ೧೧-೦೦೩). ೨. ಪ್ರತೀಕಾರ ಮಾಡು : ಎನ್ನ ಉಪಕೃತಿಗಳನ್ ಇಂತು ದುಷ್ಕೃತಿಗಳನ್ ಮುಯ್‌ಮಾಡಿದೆಲ್ಲ ದೇವರ್ಕಳ್ಗಂ ಎನಗೆ ಪಗೆಗಳೆಂದೇ ಎಣಿಸುವಪ್ಪೆನ್ (ಬಿದ್ದಕ್ರ. ೫೦-೦೧೨೪). ೩. ಬಳುವಳಿ ಕೊಡು : ಉಡುಗೊರೆ ನೀಡು : ಹರಸಿದಿಂದವರ್ಗೆ ಸೀಸೆಯನಿಕ್ಕಿ ನವರತ್ನ ಖಚಿತವಾದ ವಸ್ತ್ರಗಳನಿರದೆ ಮುಯ್ಯಮ್ಮಾಡಿ ತೆರಳಲು (ಸಿದ್ಧಕಾ. ೧೦-೩೭). ಮುಯ್ಯಿಗೆ ಮುಯ್ಯ = (ಒಳ್ಳೆಯದಾಗಲಿ- ಕೆಟ್ಟದಾಗಲಿ) ಪಡೆದುದನ್ನು ಹಿಂತಿರುಗಿ ಕೊಡುವುದು : ಪ್ರತೀಕಾರ : ಪಾದಾರ್ಚನೆಯ ಮಾಡುವೆನಯ್ಯಾ ಪಾದೋದಕವ ಹಂಗಿಂಗೆ . . . ಕೂಡಲಸಂಗನ ಶರಣರ ನಿಲವನಜೆಯದೆ ಮುಯ್ಯಿಗೆ ಮುಯ್ಯಾಗಿ ಕಟ್ಟಿತ್ತಯ್ಯಾ ಎನ್ನ ಭಕ್ತಿ (ಬಸವ. ೩೯೭). ಮುಯ್ಯಿ ತೀರಿಸಿಕೊಳ್ಳು = ಸೇಡುತೀರಿಸಿಕೊಳ್ಳು ; ಹಗೆಸಾಧಿಸು : ಕುತುಬ್‌ಷಾಹಿ ದೊರೆಯು . . . ವಿಜಯನಗರದ ಮೇಲೆ ಮುಯ್ಯಿ ತೀರಿಸಿಕೊಳ್ಳಬೇಕೆಂದು ಸಮಯ ನೋಡುತ್ತಿದ್ದನು (ರಾಐಶ. ೦೦೨) ; ಗ್ರಾಕ್ರಿ ಅವರ ಶಿಬಿರಕ್ಕೆ ಹೋಗಿ ಮುಯ್ಯಿತೀರಿಸಿಕೊಂಡೆವು (ವತಭಾ. ೩೦೭). ಮುಯ್ಯಿತೀರು = ಸೇಡು ಕೊನೆಗೊಳ್ಳು ; ಹಗೆಯು ಸಾಧಿತವಾಗು : ದಡಕ್ಕಾದರೂ ಹೋಗಿ ಗಟ್ಟಿನೆಲದ ಮೇಲೆ ನಿಂತುಕೊಂಡು ಮುಯ್ಯಿತೀರುವ ತನಕ ಬಯ್ಯುತ್ತಿರು (ಹಸುಹೂ. ೩೬೪). ಮುಯ್ಯಿಹಾಕು = ಉಡುಗೊರೆ ನೀಡು ; ಬಳುವಳಿ ಕೊಡು : ಅಕಸ್ಮಾತ್ ಮದುವೆಗೆ ಹೋಗದಿದ್ದರೆ ಮುಯ್ಯಿಹಾಕುವುದನ್ನು ತಪ್ಪಿಸಿಕೊಳ್ಳುವುದಕ್ಕೋಸ್ಕರ ಬರಲಿಲ್ಲವೆಂದು ಆಕ್ಷೇಪಿಸುತ್ತಾರೆ (ವಸ್ಕೂರು. ೯೩). [ ದೇ.॥ ತಮಿ. ಕೊತ. ಮೊಯ್‌; ಕೊಡ. ಮುಯ್‌; ತುಳು. ಮುಯಿ ]

ಮುಯ್‌$_2$ 'ಮುಯ್ಯು$_1$' ನೋ.

ಮುಯ್‌$_3$ 'ಮುಯು$_1$' ನೋ.

ಮುಯಿ$_1$ 'ಮುಯ್‌$_1$' ನೋ.

ಮುಯಿ$_2$ (ನಾ). ಹಾಳು : ನಾಶ ; ಧ್ವಂಸ (?) : ವಿಣಪತಿ [ಶನಿ] ನೋಡೆ ಕಾಡಿಗೆ ಧರಣಿಯ ತ[ನಯನೆ] ನೋಡೆ ಕಾಡಿಗೆ ಕಳಕುಳಂ ಘಣಿ ನೋಡೆ ಮುಯಿ ನಿಶ್ಚಯಮಕ್ಕುಂ (ಲೋಕೋಪ. ೨-೯೦) : ಘಣಿ ನೋಡೆ

ಮುಯಿ ನಿಶ್ಚಯಮುಕ್ಕುಂ ... ಮಂಗಳ ರಾಹುಗಳ ವೃಷ್ಟಿಯಿರ್ದೊಡೆ ಬೆಳೆ ಪಾಟಿಯಾಗಿ ಕೆಡುವುದು (ಲೋಕೋಪ. ೨-೪೦ ಟೀಕೆ). [ ? ]

**ಮುಯ್ಯಾಕು** (ಕ್ರಿ). ಸೇಡನ್ನು ಹೊರಹಾಕು ; ದ್ವೇಷವನ್ನು ಕಕ್ಕು ; ಅರೇಸ್ ದೇವನಲ್ಲಿ ತಾನ್ ಕಂಡನ್ . . . ಮುಯ್ಗಾಜ್ವ ಕಣ್ಗಳನ್ ಕೊಲೆಗಯ್ಮಿನಿಱಿದುದನ್ (ಅಂತಿಗೊ. ೪೩-೯೦೦).

[ಮುಯ್$_1$ + ಕಾಜು$_1$ (< ಕಾಜ಼್)]

**ಮುಯ್ದಿಗೆ** (ಕ್ರಿ). ಪ್ರತೀಕಾರವನ್ನು ಮಾಡು ; ಪ್ರತಿಭಟಿಸು ; ಎದುರಿಸು : ಸುಭಟನ ಸಿಂಹನಾದಕೆ ಮುಯ್ದಿಗೆದು ಕರಿ ಕಾದುತಿರ್ದುದು ಭೀಮಸೇನನಲಿ (ಕುಮಾ.ದ್ರೋ. ೩-೩೭). [ ಮುಯ್$_1$ + ತೆಗೆ$_1$ ]

**ಮುಯ್ಪು, ಮುಯ್$_2$, ಮುಯ್ವು$_2$** (ನಾ). ೧. ಹೆಗಲು; ಭುಜಾಗ್ರ : "ಭುಜಾಗ್ರಃ, ಅಂಸಂ — ಈ ೨ ಮುಯ್ಪು" (ಹಲಾಯು. ೮೭-೩೭೦) ; ರಾವಣನಂ ಕೊಂದು ಜಯಶ್ರೀವಧುವಂ ತಾಳ್ದಿ ಮುಯ್ಪಿ [ಪಾಠಾಂ. ಯ್ವಿ] ನೊಳ್ ಪರಸೀತಾದೇವತೆಯುಂ ತರ್ಪನ್ನೆಗಮೋವದೆ ಪುರುಷಪ್ರತೋಚಿತಂ ವೀರರಸಂ (ಕಬ್ಬಿಗ. ೩-೦೯೦) ; ನೀಮುಮೊಡದ ಕೈಯುನೆಬಲಿಕ್ಕಿಯರ್ಧಗಪ್ಪಡ ಮಸೆಡದ ಮುಯ್ಪಿನ ಮೇಗಿಕ್ಕಿ . . . ಬಲದ ಕೈಯೊಳ್ ಭೈಕ್ಷದ ಭಾಜನಮಂ ಪಿಡಿದು (ವಡ್ಡಾರಾ. ೯೨-೦೭) ; ಬಲವಂದು ಬಾಹುಬಲಿಯ ನಣಂ ಭೇದಿಸಲಾಜದುದಱಿಸಿರ್ದುದು ಮಸುಳ್ದಿಸಸಂಗೆಟ್ಟು ಬಲದ ಮುಯ್ಪಿನ ಕೆಲದೊಳ್ (ಆದಿಪು. ೦೪-೦೦೭). ೨. ಪಕ್ಷಿಗಳ ರೆಕ್ಕೆಗಳು ಮೂಡುವ ಜಾಗ ;— ರೆಕ್ಕೆಗಳ ಮೂಲ : ಜೋಲ್ದಬೀಯಲ್ ಮುಯ್ಪುಗಳಾವಗೆವಬೀಯಲ್ ಬಲವಾಜದಂತು ಮುಪ್ಪಿಂ ಪಾಜಲ್ (ಕಾದಂಪೂ. ೧೩೩) ; ಎಜಕೆಗಳಂ ಮೆಲ್ಲನುರ್ಬೆತ್ತಿ ಸಿಂದೊಯ್ಯನೆ ಮುಯ್ಪುಂ ತ್ರೋಟಿಯಿಂದಂ ತೊಡೆದು . . . ಕುಕ್ಕುಟಂ ಕೂಗಿತಾಗಳ್ (ಕುಸುಮಾ.೪-೩೭). **ಮುಯ್$_2$** : ೧. "ತ್ರೋಳ್ಪಲೆ ಮುಯ್ಯೆನಲ್ ಭುಜದ ತುದಿಪೆಸರು" (ಕಬ್ಬಿಮ. ೭೨) ; ಪಿರಿದುಂ ಸಂತೋಷದಿಂದಂ ತನಗೆ ಸಕಲಸಾಮ್ರಾಜ್ಯಮುಂ ಕೈಗೆವಂದಂತಿರೆ ಪೆರ್ಚಿದರ್ಪಂಮು ಮುಯ್ಯಿಲ್ಲದೆ ನಲಿದನನಂಗಾಂತಕಂ (ಧರ್ಮಾಮೃ.೧-೨೦೯). **ಮುಯ್ವು$_2$**: ೧. "ತ್ರೋಳ್ಪಲೆ ಮುಯ್ವೆ [ಪಾಠಾಂ. ಯ್ಕೆ] ನಲ್ ಭುಜಾಗ್ರಕ್ಕೆ" (ಕಬ್ಬಿಕೈ. ೭೭) ; ಬಳೆದುವು ತ್ರೋಳ್ಗಳಿಕ್ಕೆಯಿನಮಳ್ ಬಳೆವಂತಿರೆ ಮುಯ್ವುಗಳ್ ಕುಳಚಳಶಿಖರಂಗಳಂ ಮಸುಳಿವಂದುವು (ಶಂಕರಾ. ೨-೩೭) ; ಉರಮುಂ ಮುಯ್ವುಂ ಮುಡುಪುಂ ಬೆನ್ನುಂ ಕೊರಲುಂ ನಡುನೆತ್ತಿಯುನೆತ್ತಿ ಪೊಯ್ದುರೊರ್ವರ ನೊರ್ವರ್ (ಗದಾಯು. ೯-೦೫). ೩. (ಪ್ರಾಣಿಗಳ) ಬೆನ್ನು; ಹಿಂಭಾಗ : ಆ ಪಕ್ಷಮನಾಶ್ರಯಿಸಿದ ಠಾವೆರಡು ಕಕುದಸಂಬಂಧಿಯಂಶ(ಸ)ಮೆನಿಕ್ಕುಂ ಆ ವಂಶದ ಮೊದಲಾಶ್ರಯ ಠಾವಿನ ಮುಯ್ವುಗಳೆ ದಾಪಮೆಂಬಭಿಧಾನಂ (ಅಶ್ವಶಾ. ೯-೩೦). ೪. (ಅಲಂ) ಭುಜಬಲ ; ಸಾಮರ್ಥ್ಯ : ಕಲಿಸಿದ ಭಾರ್ಗವಾತ್ಮಜರ ನೋಡದೆ ತಜ್ಞರ ಮುಯ್ವು ನೆತ್ತಿಯುಂ ಗೆಲೆ ಸಬೆ ರಾಮಲಕ್ಷ್ಮಣರದೇಂ ನೆಜ಼ೆ ಕಲ್ತರೊ ಕೈದುವೆಲ್ಲಮುಂ (ಶಂರಾಮಾ. ೩-೦೫೦); ಬಲ್ಲಾಳದೇವನ ಬೆನ್ನ ಮುಟ್ಟೆ ನೋಡಿ ಮೆಚ್ಚಿ ಮುಯ್ವುಂ ಕೊಂಡಾಡೆ (ಪ್ರ್ಯಾಅಂ. ೦೯೩೭, ೩೦-೭; 1310). 'ಮುಡುಪು$_3$' ನೋ.

ಮುಯ್ಪು ನೋಡು, ಮುಯ್ವು ನೋಡು = ೧. ಸಾಮರ್ಥ್ಯವನ್ನು ಕಂಡುಕೊಳ್ಳು; ಭುಜಬಲವನ್ನು ಅರಿತುಕೊಳ್ಳು : ಎನ್ನಂತು ಸಂದ ಕಳ್ಳರಿಲ್ಲೆಂದು ಮುಪ್ಪುಂ ನೋಡಿ ಮತ್ತಂ ತನ್ನೊಳಿಂತೆಂದಾಳೋಚಿಸಿದಂ (ಧರ್ಮಾಮೃ. ೭-೫೪). ೨. ಹೆಮ್ಮೆಪಡು ; ಗರ್ವಿಸು ; ವಜ್ರಕುಮಾರನಂ . . . ಮಣಿಮಾಲಿಮಹಾದೇವಿ ಕಂಡು ಮುಯ್ಪುಂ ನೋಡಿ ರಾಗದಿಂ ವಿಳಾಸಿನಿಯರ್ಗಿಂತೆಂದಳ್ (ಧರ್ಮಾಮೃ. ೯-೦೪೨); ಸುಂದರಿಯೆರಡುಂ ಮುಯ್ವುಂ ಪಡೆದಗ್ಗಳಿಕೆಗೆ ಮೆಯ್ವೆರ್ಚಿ ವಿಧಾತ್ರನಿಂದೆ ಮುಯ್ಪುಂ ನೋಟ್ಟಿಂ (ಕಾವ್ಯಾವ. ೧೯೦). ೩. ಹೆಗಲನ್ನು ಮುಟ್ಟಿಕೊಳ್ಳು : ಭುಜವನ್ನು ತಟ್ಟಿಕೊಳ್ಳು : ಕದನೋತ್ಸಾಹದೆ ಸೂಸೂಬಿಡರೆ ಮುಯ್ವುಂ ನೋಡುತುಂ ಬಾಹುಕಾಂಡದ ಕಂಡೂತಿಗಳಂ ತೆರಳ್ಚಲೆಡೆಯಾಯ್ತೆಂದಂದು ಮೆಯ್ವೆರ್ಚಿದಂ (ಜಗನ್ನಾ. ೭-೪೪). ೪. ಸಂತೋಷಿಸು : ಉಬ್ಬು : ಕೆಟ್ಟ ಸಾಲಂ ಬಂದ ಪರದನಂತೆ ಮುಯ್ವುಂ ನೋಡಿ (ಧರ್ಮಾಮೃ. ೬-೦೨೫). **ಮುಯ್ವುಂ ನೋಡಿಸು** = ಸಂತೋಷಪಡುವಂತೆ ಮಾಡು : ಬಾಳಕಾಲದೊಳ್ ತೊಡರ್ದ ಪೊಡರ್ದಯ್ವರ ಬಾಲಕ್ರಿಯೆಯುಂ ಮುಯ್ವುಂ ನೋಡಿಸಿತು ತಾಯುಮಂ ತಂದೆಯುಮಂ (ಶಂಪಥಾ. ೨-೧೧); " ಮುಯ್ವುಂ ನೋಡಿಸಿತು ... ತಮ್ಮ ಹೆಗಲುಗಳನ್ನು ತಾವು ನೋಡಿಕೊಳ್ಳುವ ಹಾಗೆ ಮಾಡಿತು ಎಂದರೆ ಇಂಥ ಮಕ್ಕಳು ಇದ್ದಾರಲ್ಲಾ ಎಂದು ಸಂತೋಷಿಸುವ ಹಾಗೆ ಮಾಡಿತು " (ಶಂಶದೀ. ೫೯). **ಮುಯ್ಯಾಗು** = (ಅಲಂ) ಆಧಾರವಾಗು ; ಆಶ್ರಯ ನೀಡು (?): ನಿಮಿರ್ಚೆ ಬಿಕ್ಕುಳಿಕೆ ಮೆಯ್ ಮುಯ್ವಾಗೆ ಕಂಷಕ್ಕೆ ವಲ್ ಕುರುರಾಯಂ ಗದೆವೊಯ್ಲಿನಿಂದಿಳೆಗೆ ಬಿಜ್ಜಿಂ ಬೆಟ್ಟು ಬಿಜ್ಜಿಂದದಿಂ (ರಸರ. ೯-೦೯೦).

[ದೇ.॥ ತಮಿ. ಮೊಯ್ಮುಪ್ಪು; ಮಲ. ಮುಟ್ಟ್‌ಪ್ಪು; ತೆಲು. ಮೂಪು]

**ಮುಯ್ಮೆ** 'ಮೂಮೆ' ನೋ.

**ಮುಯ್ಯ** 'ಮುಯ್$_1$' ನೋ.

**ಮುಯ್ಯಚ್ಚಿ** 'ಮೂವಚ್ಚಿ' ನೋ.

**ಮುಯ್ಯಚ್ಚಿಗ** (ನಾ). ಮೂರುಕಣ್ಣುಗಳುಳ್ಳವನು ; ಶಿವ ; ಮುಯ್ಯಚ್ಚಿಗಂ ತನ್ನೊಳುಂ ತಾನೆ ಮಚ್ಚುತ್ತಂ ಶಯ್ಯೆಯುಂ ಬಿಟ್ಟಪಳ ಮೆಜ಼ೆವೆನೆಂದುಜ್ಜುಗಿಸಿ ಪೂಜಿಮುಟ್ಟು ಬಂದನು (ರಾಶತ. ೭-೦೦೪).

[ಮುಯ್ಯಚ್ಚಿ ( < ಮೂವಚ್ಚಿ ) + — ಗ$_2$]

**ಮುಯ್ಯಡಿ** (ನಾ). ಮೂರುಅಡಿ,—ಪಾದ : ಮುಯ್ಯೆಂಬುದರ್ಕೆ— ಮುಯ್ಯಾರಡಿ, ಮುಯ್ಯೆಂಪಂ, ಮುಯ್ಯಡಿ (ಶಮದ. ೦೯೯ ಪ್ರಯೋ). 'ಮುಯ್ಯಡಿಯ' ಪರಾ· [ಮುಯ್$_3$ ( < ಮೂಜು ) + ಅಡಿ$_1$]

**ಮುಯ್ಯಡಿಯ** (ನಾ). " ಮೂಜುಪಾದಗಳುಳ್ಳವನು, ಭೃಂಗಿರಿಟಿ. ಭೃಂಗೀಶ " (ಶ್ರಶಬ್ದ) : ಅಮಳಕೈಲಾಸಪರ್ವತವಿಳದು ದೃಢದಿಂ ಮೃಡಾಭಿಷವಮಂ ಬಿಡದೆ ನಿಜದಿಂದೆ ಪೊಡವಿಗಂ ನಡೆತಂದನತ್ಯಂತಮಹಿಮಾತಿಶಯ ಪಾಂತ ಮುಯ್ಯಡಿಯನು (ಶಾಸೋಕೃ. ೦-೭೨). [ಮುಯ್ಯಡಿ + — ಅ$_7$]

**ಮುಯ್ಯರ್ಧ** (ನಾ). ಮೂರು ಮತ್ತು ಅರ್ಧ ; ಮೂರುವರೆ : ಬಾದಿಶರ್ಮ್ಮಣ ಮುಯ್ಯರ್ದ್ಧಾಂಶಃ (ಇಅ. VII, ೦೮೭-೯೨; 688).

[ಮುಯ್$_3$ ( < ಮೂಜು ) + ಅರ್ಧ]

**ಮುಯ್ಯಾನ್$_1$, ಮುಯ್ಯಾನು$_1$, ಮುಯ್ವಾನ್$_1$** (ಕ್ರಿ). ೧. (ಒಳ್ಳೆಯದು ಅಥವಾ ಕೆಟ್ಟುದನ್ನು ಮಾಡಿದುದಕ್ಕೆ) ಪ್ರತಿಯಾಗಿ ಕೊಡು ; ಪ್ರತೀಕಾರ ಮಾಡು : ಅನುಜನ ನೆತ್ತರನೀಂಟಿದವನ ನೆತ್ತರ ಜೀವಸಹಿತವಿಾಂಟದೆ ದುರ್ಯೋಧನನೆಂಬ ಪೆಸರ್ಗೆ ಮುಯ್ಯಾಂಪೆನೆ (ಗದಾಯು. ೫-೮): ಪೂತುದು ಕುರವಕ ಫಲಪಣ್ಣು ಬರಲು ಮುಯ್ಯಾತುದು ವ್ಹಾಗಿ ಮರ್ತ್ಯರಿಗೆ (ವೋಹಶ. ೯-೯೨): ೨. ಉಡುಗೊರೆಯನ್ನು ಕೊಡು : ಬಹುಮಾನವನ್ನು ನೀಡು : ಸೋತುದರಿಬಲ ಹೋಗೆನುತ ಮುಯ್ಯಾಂತು ಮನ್ನಿಸಿ ಹೊಸ್ಸಬಟ್ಟಲೊಳಾತಗಳಿಗೊಲಿದಿತ್ತನೈ ಕರ್ಪೂರದ ವೀಳೆಯವ (ಕುಮಾ.ದ್ರೋ. ೯-೦೦). ೩. ಬಹುಮಾನವನ್ನು ಪಡೆ ; ಮೆಚ್ಚನ್ನುಗಳಿಸು : ವಾಜಿಮುಖ್ಯನ ಮನಂ ಮೆಚ್ಚಲ್ಕೆ ಮುಯ್ಯಾಂಪ ತನ್ನಿರವಿಂಗಳ್ಕುವ ಚಿಂತೆಯಿಂ ನಿಲಿಸಿದಂ ಸೌಹಾರ್ದದಿಂ ಬಾಹುಕಂ (ನಳಚಂ. ೭೪೮). ೪. ಪ್ರತಿಭಟಿಸು ; ಸೆಣಸು ; ಎದುರಿಸು : ಇನ್ನುಂ ದನುಜರಿಪುವಿನೊಳ್ ಕಾಪದೇಕರ್ಪೆ ಸಂಕ್ರಂದನ ನೀಂ ಪೌಲೋಮಿಯಪ್ಪೆ ಸ್ನಧಿಪನೆನಿಸಿ ಬನ್ನಕ್ಕೆ ಮುಯ್ಯಾಂತು ನಿಲ್ವೆ (ಜಗನ್ನಾ. ೦೩-೭೦) ; ಸೂತಸುತ ದಳಪತಿಯೆ ಘಡ ಮುಯ್ಯಾಂತರೇ ಮುಂಬಿಗರು (ಕುಮಾ.ಕ. ೨-೮).

೫. ಎದುರಾಗು ; ಅಭಿಮುಖವಾಗು ; ಇದಿರಾಗಿ ಬರು : ಐಯ್ಯನೆ ಕರೆದಡೆ ಮುಂದೆ ಬಂದು ನಿಂದಿತ್ತು ಮುಯ್ಯಾಂತಡೆ ಬಯಲಾಯಿತ್ತು ಗುಹೇಶ್ವರ (ಅಪ್ರಸಂ. ೮-೩೦) ; ಲಾಂಛನವ ಹೊತ್ತು ಮುಯ್ಯಾಂತು ಅಡಿಗೆಱಗಿ ಪ್ಪೃಡನೆಂದೆ ಪ್ರಮಾಣಿಸಿ . . . ನಮೋ ನಮೋ ಎಂಬೆ (ಬೋಳಬಸ. ೯೬-೦೭೭). ೬. ಪ್ರತಿಫಲವನ್ನು ಅಪೇಕ್ಷಿಸು ; ಪ್ರಯೋಜನವನ್ನು ಬಯಸು : ತನ್ನ ಮಾಟಕೆ ತಾನೆ ಮುಯ್ಯಾನ ದಾಸೋಹಿ (ಶಿಶಗೀ. ೦೬-೬೨). ೭. ಸಲುಗೆಯನ್ನು ತೋರು : ಸದರ ದಿಂದಿರು : ದೇವನೊಲ್ಲಿದನೆಂದು ಮುಯ್ಯಾನಲು ಬೇಡಾ ಕಱಕಟ ಕಾಡಿದ ನೊಲ್ಲಿದನೆ (ಬಸವ. ೦೯೬). ೮. ಹಿಗ್ಗು : ಸಂತೋಷಿಸು : ಧವಳಿತನುತ ಕೀರ್ತಿವರಂ ವಂದಿವೃಂದಾಧಾರಂ ಮುಯ್ಯಾಂತನೆತ್ತಂ ಸುಲಲಿತಕವಿತಾ ಕಲ್ಪವಲ್ಲೀವಸಂತಂ (ಕುಶಾ. ೬-೩೯). **ಮುಯ್ಯಾನು$_1$** : ೭. ಇಂತಪ್ಪ ಬೇಡಂಗೆ ಮುಯ್ಯಾನುವರೆ (ಕಥಾ.ಕ. ರೇ. ೦೯೨-೯). ೮. ಮಾನನಿಧಿ ನಿಮಗೆ ನಾಂ ಕೈಯಾನುವೆ ಕರುಣಾಪ್ರಸಾದಮಂ ಕೊಟ್ಟರೆ ಮುಯ್ಯಾನುವೆ (ಶಂಕಸಂ. ೦೦-೩೭). **ಮುಯ್ವಾನ್$_1$** : ೮. ತರಲಾಪಾಂಗದಿನಾ ನೃಪಾಲತಿಲಕಂ ಮುಯ್ಯಾಂ [ಪಾಠಾಂ. ಯ್ಯಾಂ] ತರಲ್ದು . . . ನಿರಂತರ ಮುದ್ಯಾನವಿನೋದಮಂ ಸಲಿಸುವಂ ಭೂಕಾಂತನಾಕಾಂತೆಯಿಂ (ಅಶಂಪು. ೨-೦೮). ೯. ಪೈಪೋಟಿಯಾಗು ; ಪ್ರತಿಸ್ಪರ್ಧಿಯಾಗು : ವಿಷಯವರ ವನಿತೆಯ ಸೀಮಂತದ ಮಣಿಕಾಂತಿಗೆ ಮುಯ್ಯಾಂತುದು ಚೆಲ್ವಿಂ ಪ್ರಭಾಕರೀ ವಾಮಪುರಂ (ಶಾಂತಿಪು. ೦-೬೫).

ಮುಯ್ಯಾತುಕೊಳ್ = ಎದುರಿಸು ; ಸೆಣಸು : ಪ್ರತಿಭಟಿಸಂ : ನನ್ನ ಸರಲ ಮುಯ್ಯಾತುಕೊಂಡೊಡೆ ರುದ್ರಗರಿದು (ಪಿ.ಅಪಕ. ೦೨-೫೯).

[ಮುಯ್$_1$ + ಆನ್$_1$]

**ಮುಯ್ಯಾನ್$_2$**, ಮುಯ್ಯಾನು$_3$, ಮುಯ್ವಾನ್$_2$ (ಕ್ರಿ). ಗರ್ವಿಸು : ಬೀಗು ; ಹೆಮ್ಮೆಪಡು : ನಾನಾವಿಲಸನ್ಮನೋಹರಸುಖಂ ಬೇಱೊಂದು ಲಾವಣ್ಯಮೆನ್ನದೆ ಬೇಱೊಂದು ಪಲಾಲಮಂ ಗಟಪಿ ಚಾತುರ್ಯಕ್ಕೆ ಮುಯ್ಯಾಂಪುದೇ (ಸುಕುಮಾ. ೦೦-೦೦೯); ಅಬಲೆಯರೊಳ್ ಮುಯ್ಯಾಂಪಳ್ ಸೊಬಗಿಂಗಾ ಸತ್ಯಭಾಮೆ ಬೇಡಿಂ ತನಗಾ ಸೊಬಗೆಯುರಲರಂ ಮುಂಡಿದಿರೆ ಸೊಬಗೇಕಚ್ಛತ್ರಮಾಯ್ತು ಭೀಷ್ಮಕಸುತೆಯಾ (ಜಗಿಂ. ೦೨-೬೦). **ಮುಯ್ಯಾನು$_2$** : ಆ ಶರಣನು ತಾನು ತಾನಾಗಿ ಆಱುದರುಶನಕ್ಕೆ ಯಾಚಕನಲ್ಲ ಷಡುದರುಶನಕ್ಕೆ ಮುಯ್ಯಾನುವನಲ್ಲ (ಅಪ್ರಸಂ. ೨೫೦-೦೦೯೬). **ಮುಯ್ವಾನ್$_2$** : ಇಂತು ಸುಯೋಧನಂ ನಿನಗೆ ಮಾಡಿದ ರಾಜ್ಯವಿಭೂತಿ ಗುಂತೆ ಮುಯ್ಯಾಂ [ಪಾಠಾಂ. ಯ್ಯಾಂ]ತಿರದಿರ್ (ಶಂಕಭಾ. ೨-೮೬); ಈ ಭಂಡಮೆನಿಪ್ಪೊಡಲಂ ಕೈಕೊಂಡುಂ ಗಡ ಜೀವನಾವಗಂ ಮುಯ್ಯಾಂಪಂ (ಶರಶ್ರೀ. ೦೨-೬೯). [ಮುಯ್$_2$ (<ಮುಯ್ಪು) + ಆನ್$_1$]

**ಮುಯ್ಯಾಸು$_1$** 'ಮುಯ್ಯಾನ್$_1$' ನೋ.

**ಮುಯ್ಯಾಸು$_2$** 'ಮುಯ್ಯಾನ್$_2$' ನೋ.

**ಮುಯ್ಯಾನೆ** (ನಾ). ಮೂರು ಆನೆ : ಮುಯ್ಯಾನೆ, ಮೂಱಾನೆ (ಶಬ್ದಾ.ಸು. ೩೩೦ ಪ್ರಯೋ). [ಮುಯ್$_3$ ( < ಮೂಱು) + ಆನೆ$_1$]

**ಮುಯ್ಯಾಳ್**, ಮುಯ್ಯಾಳು (ನಾ). ಒಬ್ಬನ ಕೆಲಸಕ್ಕೆ ಪ್ರತಿಯಾಗಿ ಬರುವ ಮತ್ತೊಬ್ಬ ಆಳು; ಬದಲಿ ಆಳು : ರಂಗ ನೀ ಕಾರ್ಗದ್ದೆ ಕಳೆಯುವ ಹೆಂಗಳನು ಮುಯ್ಯಾಳ್ಗೆ ಕರಕೊಂಡಿಂಗದೇ ಕೀಳೆಂದು ನೇಮಿಸಿ (ಅಶಾಕಿ. ೩೦-೩೨). **ಮುಯ್ಯಾಳು** : ಮುಯ್ಯಾಳು ಬರದಿದ್ದರೆ ಲಗ್ನ ಕಟ್ಟಿದ ದಿನ ವಿವಾಹಭಂಗ ಮಾಡಿದವನ ಪಾಪವನ್ನು ಅವನ ತಲೆಯ ಮೇಲೆ ಹೊರಿಸುತ್ತಿದ್ದರು (ಹುಟ್ಟಿ.ಹ. ೬೦) : ಗಿರಿಯಪ್ಪಗೌಡರೂ ಈರಪ್ಪನೂ ಮುಯ್ಯಾಳಿನ ಕೆಲಸಕ್ಕಾಗಿ ಬೇರೆ ಒಕ್ಕಲುಗಳ ಜಮೀನಿಗೆ ಹೋಗಿ ಕೆಲಸ ಮಾಡುತ್ತಿದ್ದರು (ಶಂಕಣ. ೧೯). [ಮುಯ್$_1$ + ಆಳ್$_3$]

**ಮುಯ್ಯಾಳು** 'ಮುಯ್ಯಾಳ್' ನೋ.

**ಮುಯ್ಯಾಱಡಿ** (ನಾ). ಹದಿನೆಂಟು ಅಡಿ : ಮುಯ್ಯೇೞ್ ಸೂೞ್, ಮುಯ್ಯಾಱಡಿ (ಛಾಶಾಭೂ. ೦೫೫ ಉದಾ); ಮುಯ್ಯಾಳ್, ಮುಯ್ಯೇೞು, ಮುಯ್ಯಾಱಡಿ (ಶಬ್ದಾ.ಸು. ೩೮ ಪ್ರಯೋ).

[ಮುಯ್$_3$ (< ಮೂಱು) + ಆಱು$_2$ + ಅಡಿ$_1$]

**ಮುಯ್ಯಿ** 'ಮುಯ್$_1$' ನೋ.

**ಮುಯ್ಯಿರ್**, ಮುಯ್ಯಿರ್ (ನಾ). ಒಂದು ಸಂಖ್ಯೆ; ಆರು: 'ಮುಯ್ಯಿಮೊಗ' ಪರಾ. **ಮುಯ್ಯಿರ್** : 'ಮುಯ್ಯಿರಡಿ' ಪರಾ.

[ಮುಯ್$_3$ (< ಮೂಱು) + ಇರ್$_2$]

**ಮುಯ್ಯಿಮೊಗ**, ಮುಯ್ಯಿಮೊಗ (ನಾ). ೧. ಆರುಮುಖ. ೨. ಆರು ಮುಖಗಳುಳ್ಳವನು ; ಷಣ್ಮುಖ: "ನವಿಲ್ದೇರಂ, ಮುಯ್ಯಿಮೊಗಂ (ಅಱುಮೊಗಂ), ಮುರಗೂಟ ಪುಗಂ—ಈ ೪ ಕಾರ್ತಿಕೇಯಂಗೆ ಪೆಸರ್" (ಕಶಾ. ೯೭-೫). **ಮುಯ್ಯಿಮೊಗ** : ೨. "ತಾರಕಮಥನಂ ಮುಯ್ಯಿಮೊಗನೆನಿಸಿಕೊಂಬಂ" (ಶತುಪ. ೩೦). [ಮುಯ್ಯಿರ್ + ಮೊಗ]

**ಮುಯ್ಯಿ** (ಕ್ರಿ). ಉಡುಗೊರೆ ನೀಡು ; ಬಳುವಳಿಕೊಡು : ಮದುವೆಗೆ ಬಂದ ಬಿಜ್ಜಾಧರರಾಯರ್ಗೆ ಸದಮಲಮಣಿಭೂಷಣಗಳ ಮುದದಿಂ ಮುಯ್ಯಿತ್ತು . . . ಬೀಳ್ಕೊಟ್ಟನು (ಶ್ರೀಪಾಂ. ೦೦-೦೦). [ಮುಯ್$_1$ + ಈ$_2$]

**ಮುಯ್ಯಿರ್** 'ಮುಯ್ಯಿರ್' ನೋ.

**ಮುಯ್ಯಿರಡಿ** (ನಾ). ೧. ಆರು ಪಾದ,-ಕಾಲು : ಮುಯ್ಯಂಬುದರ್ಕೆ- ಮುಯ್ಯಿರಡಿ, ಮುಯ್ಯಂದಂ, ಮುಯ್ಯಡಿ (ಶಮದ. ೦೯೯ ಪ್ರಯೋ). ೨. ಆರುಕಾಲುಗಳುಳ್ಳುದು; ಆರಡಿ; ದುಂಬಿ : "ಮುಯ್ಯಿರಡಿ= ತುಂಬಿ" (ಶಮದ. ಶಂ. ೨) ; ಮುಯ್ಯಿರಡಿ ಮೊತ್ತದ ಭೋಜನಶಾಲೆಯೊ ತಾನಿದೆನಲ್ಕೆಱೆ ರಂಜಿಸಿತು ಪೂವಿನ ಪಸರಂ (ಜಿಶಂ. ೬-೧೦೨); ಬಂಡುಣಲೆಂದು ತಂಡತಂಡದಿಂ ಮಂಡಳಿಸಿ ಮುಯ್ಯಿರಡಿಗಳ್ ಬಂದೆಱಗುಗುಂ (ಅಪುಶ. ೯-೧). [ಮುಯ್$_3$ (< ಮೂಱು) + ಈರಡಿ]

**ಮುಯ್ಯಿಮೊಗ** 'ಮುಯ್ಯಿಮೊಗ' ನೋ.

**ಮುಯ್ಯಿರಡಡಿ** (ನಾ). = ಮುಯ್ಯಿರಡಿ ೨ : "ಅಲರ್ಕ . . . ಮುಯ್ಯಿರಡಡಿ—ಈ ೭ ಭ್ರಮರಂ" (ಕಶಾ. ೫೫-೦೯೯). [ಮುಯ್ಯಿರಡು + ಅಡಿ$_1$]

**ಮುಯ್ಯಿರಡು** (ನಾ). = ಮುಯ್ಯಿರ್ : 'ಮುಯ್ಯಿರಡಡಿ' ಪರಾ.

[ಮುಯ್$_3$ (< ಮೂಱು) + ಎರಡು]

**ಮುಯ್ಯೇೞ್**, ಮುಯ್ಯೇೞು (ನಾ). ಒಂದು ಸಂಖ್ಯೆ; ಇಪ್ಪತ್ತೊಂದು: ಮುಯ್ಯೇೞ್ ಸೂೞ್, ಮುಯ್ಯಾಱಡಿ (ಛಾಶಾಭೂ. ೦೫೫ ಉದಾ). **ಮುಯ್ಯೇೞು** : ರಾಯೆಂಬೀ ಪೆಸರಿಲ್ಲದಂತು ಮುಳಿಸಿಂ ಮುಯ್ಯೇೞು ಸೂೞಿಂತು ಕಟ್ಟಾಯಮಂ ಪೊಂಪುಳಿವೋಗೆ ತಂದೆಯುಳಿವಿಂಗಾ ಭಾರ್ಗವಂ ಕೊಂದಂ (ಶಂಕಭಾ. ೦೨-೩೮) ; ಚಲದಿಂ ಮುಯ್ಯೇೞುಸೂೞ್ ಕ್ಷತ್ರಿಯರನಱಿಸಿ ಕೊಂದಿಕ್ಕಿದಂ ಜಾಮದಗ್ನ್ಯಂ (ಶಮದ. ೦೯೯ ಪ್ರಯೋ).

[ಮುಯ್$_3$ (< ಮೂಱು) + ಏೞ್$_2$]

**ಮುಯ್ಯೇೞು** 'ಮುಯ್ಯೇೞ್' ನೋ.

**ಮುಯ್ವಾನ್$_1$** 'ಮುಯ್ಯಾನ್$_1$' ನೋ.

**ಮುಯ್ವಾನ್$_2$** 'ಮುಯ್ಯಾನ್$_2$' ನೋ.

**ಮುಯ್ವು$_1$** 'ಮುಯ್$_1$' ನೋ.

**ಮುಯ್ವು$_2$** 'ಮುಯ್ಪು' ನೋ.

**ಮುಯ್ವೊನೆ** (ನಾ). ಹೆಗಲಿನ ತುದಿ; ಭುಜಾಗ್ರ : ಮನುಜರ ಗೆಯ್ತಮಂ ಬಸಟು ದೇಪರೆಮೆಂಬಭಿಮಾನಮೇಱೆ ಮುಯ್ವೊನೆಗಳ ನೋಟ್ಪರಿನ್ನೆರಡು ತೋಳೊಳವೆಂಬವೋಲುರ್ವರೇಶ್ವರರ್ (ಶಾಂಪು. ೫೬೮).

[ಮುಯ್$_2$ (< ಮುಯ್ಪು) + ಮೊನೆ]

**ಮುರ₁** 'ಮುರಿವು' ನೋ.
**ಮುರ₂** 'ಮುರುವು₂' ನೋ.
**ಮುರ₃** (ನಾ). ಒಂದು ಬಗೆಯ ಸುಗಂಧವುಳ್ಳ ಸಸ್ಯ ಮತ್ತು ಅದರಿಂದ ತಯಾರಿಸುವ ಗಂಧದ್ರವ್ಯ : "ಮುರ—ಮುರ ಎಂಬ ಗಂಧದ್ರವ್ಯ" (೬೩೦. ೨೮). [ಸಂ. ಮುರಾ]
**ಮುರಕಲಿ** 'ಮುಱುಕಿಲ್₂' ನೋ.
**ಮುರಕಲು** 'ಮುರುಕಲು' ನೋ.
**ಮುರಕಳಿ** 'ಮುರುಕಳಿ' ನೋ.
**ಮುರಕಿ** 'ಮುರಿಗೆ₁' ನೋ.
**ಮುರಕಿಲ** 'ಮುಱುಕಿಲ್₂' ನೋ.
**ಮುರಗಡೆ,** ಮುರುಗಡೆ (ನಾ). (ಉಕ) ೧. ಮುರಿಯುವಿಕೆ; ಭಗ್ನವಾಗುವಿಕೆ; ಭಂಗವಾಗುವಿಕೆ: ವಿವಹ ಮುರಗಡೆಯಾಗುವದೇನು ಎಂಬ ವಿಲಕ್ಷಣ ಹೆದರಿಕೆಯಾಗುವದು (ಸುತ್ತು ಕು. ೬೩). **ಮುರುಗಡೆ :** ೧. ತನ್ನ—ಶಕೂನ ಮದುವೆಯ ಮುರುಗಡೆಯನ್ನು ಮಾಡಲು, ಶ್ಯಾಮರಾಯ ಅಸಮರ್ಥನಿದ್ದ ಬಗ್ಗೆ ಅವನಿಗೆ ಖಾತ್ರೀ ಇತ್ತು (ದೀಕಹ. II, ೨೬೯). ೨. ಸಂಬಂಧವು ಕಡಿದುಹೋಗುವಿಕೆ : ಗಂಗಕ್ಕ ನನಗ ಖಾಸ ಅಕ್ಕ ಆಗಬೇಕು . . . ಆಕೀದು ನನ್ನದು ಮುರುಗಡೆ ಆಗಿ ಇಂದಿನ ಮಿತಿಗೆ ಹದಿನೈದುವರ್ಷ ಆದವು (ಗಂಪಾಡು. ೦೦೩).

**ಮುರಗಡೆಮಾಡು** = ಮುಕ್ತಾಯವನ್ನು ತರು ; ನಿಲುಗಡೆ ಮಾಡು ; ನಿಲ್ಲಿಸು : ಮೆಚ್ಚಿಗೆಯ ಮಾತುಗಳಿಗೆ ಇಲ್ಲಿ ಮುರಗಡೆ ಮಾಡುತ್ತೇನೆ (ಗಾಳಕ. XI. ಮೆಚ್ಚಿಗೆಯ ಮಾತು). [< ಮುಱು₁ + ಕಡೆ]
**ಮುರಗಿ₁** 'ಮುರಿಗೆ₁' ನೋ.
**ಮುರಗಿ₂** (ನಾ). ಹೆಣ್ಣುಜಿಂಕೆ : "ಮುರಗಿ – ಮೃಗೀ – ಹರಿಣಿ" (ಕದ್ಯಕೋ. ೩೦). [<ಸಂ. ಮೃಗೀ]
**ಮುರಗಿಕಾಯಿ** 'ಮುರ್ಗಿಕಾಯಿ' ನೋ.
**ಮುರಜ** (ನಾ). ೧. ಒಂದು ಬಗೆಯ ಚರ್ಮವಾದ್ಯ ; ಮದ್ದಳೆ : "ಮೃದಂಗಃ, ಮುರಜಃ— ಈ ೨ ಮದ್ದಳೆ" (ಹಡಾಯು. ೦೭–೯೭) ; ಅದು ವಾಯುತ್ರಯವೇಷ್ಟಿತಂ . . . ವೇತ್ರಾಸನರಝಲ್ಲರೀಮುರಜದಂತೊಪ್ಪಿರ್ಪುದು (ಶಬ್ದಾ. ೦-೯೯) ; ಅಲ್ಲಿ ಮುರಜದ ಮದದ ಕಹಳೆಗಳ ದನಿಯೊಳಗೆ ಅಲ್ಲಿಯಾವುಜದ ಶಂಖದ ಘನಧ್ವನಿಯೊಳಗೆ . . . ಸಾಂದ್ರ ರುಚಿಗೊಡುವ ಪರಿಯಾಣಂಗಳುಮನಿಂತೆ ನೀಡುತಿರೆ (ಐಸರ. ೭-೦೦೩). ೨. [ಕಾವ್ಯಮೀ] ಚಿತ್ರಕವಿತ್ವದ ಒಂದು ಪ್ರಕಾರ ; ಒಂದು ಪದ್ಯವನ್ನು ಮದ್ದಲೆಯ ಆಕಾರದಲ್ಲಿ ರಚಿಸುವ ಒಂದು ಚಿತ್ರಬಂಧ: ಶರಶೂಲಚಾಪಚಕ್ರಾಸಿರೂಪವಿಭೇದಪತುರಂಗಪದಗತಪಾಠ ಮುರಜಂ ಗೋಮೂತ್ರಿಕೆ ಪುಷ್ಕರವರ್ಧಪುಮಣಸರ್ವತೋಭದ್ರಂಗಳ್ (ಕಾವ್ಯಾವ. ೩೬೯). [ಸಂ.]
**ಮುರಜಕೇತನ** (ನಾ). ಮದ್ದಳೆಯ ಚಿಹ್ನೆಯುಳ್ಳ ಬಾವುಟ—ಧ್ವಜ : ಅಗಳ್ ಧರ್ಮಪುತ್ರಂ ತ್ರಿಭುವನಂಗಳಾಕಂಪಂಗೊಳೆ ಮುರಜಕೇತನವಿರಾಜಿತಪುಷ್ಪ ತನ್ನ ರಥಮನದಿರದಿದಿರಂ ಪರಿಯಿಸಿ (ಪಂಪಭಾ. ೦೩–೯೯ ಪ). [ಸಂ.]
**ಮುರಜಬಂಧ** (ನಾ). = ಮುರಜ ೨ : ಪರದಾನ ಪರಾದನ್ನಂ ಪರದಾನ ಪರಾದವಮಂ ನೆರೆದಾವದಿರಾಜನ್ನಂ ಪರಿಜನಪರಾದಮಂ (ಮುರಜಬಂಧಂ) (೯೦೮. ೨-೦೯೦) ; ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಇತರ ಶಬ್ದವೈಚಿತ್ರಕ್ಕೆ ಚಿತ್ರಕವಿತ್ವವೆಂದೂ 'ಬಂಧ' ವೆಂದೂ ಹೆಸರು . . . ಇವುಗಳಲ್ಲಿ . . . ಹಾರಬಂಧ, ಮುರಜಬಂಧ ಮೊದಲಾದ ನಾನಾವಿಧಗಳುಂಟು (ಕೃಶಿ. ೨೬೯). [ಸಂ.]
**ಮುರಜಬಂಧಕ** (ನಾ). = ಮುರಜ ೨ : [ಗೋಮೂತ್ರಿಕಂ] . . . ಶ್ರೀಮದರ್ಧಭ್ರಮಮುಂ ಚಕ್ರನಾಮಮುಂ ಮುರಜಬಂಧಕಂ ಇವು ದುಷ್ಕರಕಾವ್ಯಂಗಳ್ (೪) ವಿಶೇಷವರ್ತಿಗಳ್ (ಕಾಶಾ. ೨-೦೦೩). [ಸಂ.]
**ಮುರಜೆ** (ನಾ). = ಮುರಜ ೧ : "ಮೃದಂಗಾಃ, ಮುರಜಾಃ-೨ ಮದ್ದಳೆ ಹೆಸರುಗಳು" (ಶಿಪ್ಸ್ವಾಂ. ೩೬) ; ಮುರಜೆಯ ಗತಿಯಜಿದು . . . ಗುರು ಲಘು ಪ್ಲುತ ದ್ರುತವನು ತಾಳದೊಳವ ಪರಿವಿಡಿಯುಂಯೊತ್ತಿದನು (ಜೀಸಂಶಾ. ೯-೯೬) ; ಸುಡ್ನಾನವೆಂಬ ಕೊಡತೆಯಿಂದ ಆ ವಾಡಕೆಯುಂ ತಟ್ಟುವ ಧ್ವನಿ . . . ಮುರಜೆ ಮೃದಂಗ ವುಡುಕು ಕಹಳೆಯಂತಾಗೆ (ಶೃರತೂ. I. ೨೩೯). [ಸಂ. ಮುರಜಾ]
**ಮುರಡಿ₁** 'ಮುರುಡಿ₁' ನೋ.
**ಮುರಡಿ₂** 'ಮೊರಡಿ₂' ನೋ.
**ಮುರಡು** 'ಮುರುಟು₃' ನೋ.
**ಮುರದಾರಸಿಂಗಿ,** ಮುಡದಾರಶಿಂಗಿ, ಮುಡದಾರಸಿಂಗ, ಮುಡದಾರಸಿಂಗಿ, ಮುರುದಾರಶೃಂಗಿ, ಮುರುದಾರಸಿಂಗಿ (ನಾ). ಒಂದು ಬಗೆಯ ಖನಿಜಲವಣ ; ಮೈಲುತುತ್ತ (ಕಸಂಗ್ರಾ. ೦೦೬). **ಮುರದಾರಸಿಂಗಿ :** ಹವೆಯೊಳಗೆ ಇದನ್ನ ಕಾಸಿದರೆ ಅವ್ವವಿಕಾರದ (ಜಂಗಿನ) ಕೆನೆ ಬರುವದು. ಅದಕ್ಕೆ ಮುಡದಾರಶಿಂಗಿಯೆನ್ನುವರು (ಪುಂಡಾರು. ೬-೨೩). **ಮುಡದಾರಸಿಂಗ :** ೨೦ ಮುಡದಾರಸಿಂಗ; ೨೧ ರೇವಚಿನ್ನಿ (ಮುಂಬಾವ್ವಾ. ೦೨೨). **ಮುಡದಾರಸಿಂಗಿ :** (ಕಸಂಗ್ರಾ. ೦೦೬). **ಮುರುದಾರಶೃಂಗಿ :** ಮುರುದಾರಶೃಂಗಿಯುಂ ತಂದು ನಿಂಬೇಹುಳಿಯಲ್ಲಿ ತೇದು ತೊಡೆಯಲು ಎನಿತಪ್ಪ ಸೊಸೆಹುಣ್ಣು ಮಾಣ್ಗುಂ (ಶಿಪ್ರ. ೭೭). **ಮುರುದಾರಸಿಂಗಿ :** (೬). [<ಪಾರ. ಮುರದಾರ್‌ಸಂಗ್ ; ಹಿಂ. ಮುರದಾಸಂಖ್; ಮರಾ. ಮುಡದಾರಶಿಂಗ್, ಮುಡದಾರಸಿಂಗ್, ಮುಡದಾರ್‌ಸೇಂಗ್. / ತೆಲು. ಮುರುದಾರಸಿಂಗಿ]
**ಮುರಬ್ಬ,** ಮುರಬ್ಬಾ, ಮೊರಬ್ಬ (ನಾ). ಪಪ್ಪಾವು, ನೆಲ್ಲಿ ಮುಂತಾದ ಕಾಯಿಗಳನ್ನು ಸಕ್ಕರೆ ಅಥವಾ ಬೆಲ್ಲದ ಪಾಕದಲ್ಲಿ ಹಾಕಿ ತಯಾರಿಸುವ ಒಂದು ಬಗೆಯ ಖಾದ್ಯ ; ಗುಳಂಬ : ಹಣ್ಣಿನ ಮುರಬ್ಬ. ಮಣ್ಣಿನ ಬೊಂಬೆ... ಮೊದಲಾದ ಆಶ್ಚರ್ಯ ಆಶ್ಚರ್ಯಕರವಾದ ಸಾಮಾನುಗಳು ಮಾರಿದುವು (ಶಾಂಂಠ. II, ೦೦೯); ಹಕೀಮರ ಲೇಹ್ಯ, ಮುರಬ್ಬ ಎಲ್ಲವನ್ನೂ ತರಿಸಿದಂತೆ ತಿಪ್ಪೆಗೆ ಎಸೆದಾಯಿತು (ಶಾಂ. ೦೦೬). **ಮುರಬ್ಬಾ :** ಅತಿಯಾಗಿ ಮಾಗಿದ ಹಣ್ಣುಗಳಿದ್ದರೆ . . . ಮುರಬ್ಬಾ ತಯಾರಿಸಬಹುದು (ಅಡು. ೬೭). **ಮೊರಬ್ಬ :** ಸಕ್ಕರೆಪಾಕದಲ್ಲಿ ಕೆಲವು ಹಣ್ಣುಗಳನ್ನು ಅಥವಾ ಹಣ್ಣಿನ ರಸಗಳನ್ನು ಬೇಯಿಸಿ ಜಾಂ . . . ಮೊರಬ್ಬಗಳನ್ನು ಮಾಡಿ ಕೆಲವು ದಿನ ಈ ಆಹಾರಗಳು ಕೆಡದಂತೆ ರಕ್ಷಿಸಲಾಗುತ್ತದೆ (ಗೃಹಪ. ೩೬).

[← ಅರ. ಮುರಬ್ಬ, ಮುರಬ್ಬಾ ; ಪಾರ. ಮುರಬ್ಬ ; ಹಿಂ. ಮುರಬ್ಬಾ ; ಮರಾ. ಮುರಂಬಾ, ಮುಱಬ್ಬಾ, ಮೋರಂಬಾ]
**ಮುರಬ್ಬಾ** 'ಮುರಬ್ಬ' ನೋ.
**ಮುರಮು** (ನಾ). ಗಟ್ಟಿಮಣ್ಣಿನ ಪೆಂಟೆ : P ಕರಿಕಲ್ಲು ರೂಪಾಂತರಗೊಂಡು ಉಂಟಾದ ಗಟ್ಟಿಮಣ್ಣು ಅಥವಾ ಹರಳು. ಇದು ಕಪ್ಪು ಮೊದಲಾಗಿ ಅನೇಕ ಪ್ರಕಾರವಾಗಿರುತ್ತದೆ : ಮಾರ್ಗಗಳನ್ನು ಮಾಡಲಿಕ್ಕೆ ಮುರಮು ಮತ್ತು ಕಲ್ಲುಗಳ ಅನುಕೂಲವಿರಬೇಕು (ಶಿಶೂ. ೩೦).

[← ಮರಾ. ಮುರೂಮ್]
**ಮುರಮುರ** (ನಾ). (ಗರಿಗರಿಯಾಗಿರುವುದನ್ನು ಸೂಚಿಸುವ) ಒಂದು ಅನುಕರಣ ಶಬ್ದ : ಮುರಮುರ ಮಾಡುತ್ತಿರುವ ಮುರುಕನ್ನು ಬಿಟ್ಟು ಮಾಡುವುದೆಂದರೇನು ? (ಪಟುತೂ. ೨೬೦).
**ಮುರಮುರಿ** (ನಾ). ಪುರಿ ; ಚುರುಮುರಿ : ಕನ್ನಡದಲ್ಲಿಯ ಸಿಳ್ಳು . . . ಚುರಮುರಿ, ಮುರಮುರಿ, ಡಮರುಗ, ಝಾಂಗಟೆ, ಜೋಪೊಡೆ, ಟಂಕಾರ —

ಮೊದಲಾದ ಶಬ್ದಗಳು ಅನುಕರಣದಿಂದಲೇ ಬಂದುವು (ಶಾಶಾಶಾ. ೩).
[← ಹಿಂ. ಮರಾ. ಮುರಮುರಾ]

**ಮುರರ್ಜಿಲ** (ನಾ). ಒಂದು ಬಗೆಯ ಅಕ್ಕಿ: ಅರಸಿನ ಕೆಂಬಟ್ಟೆ, ಸುಕದಾಸ, ಮುರರ್ಜಿಲ, ಯಾಲಕ್ಕಿರಾಜಾ (ಕಸಂಗ್ರ. ೬). [ ? ]

**ಮುರಲಿ, ಮುರಳಿ₁** (ನಾ). ಒಂದು ಬಗೆಯ ಸುಷಿರವಾದ್ಯ; ಕೊಳಲು ; ವೇಣು : ಮುರಲಿನಾದವ ಕೇಳಿ ತರಳೆಯರೆಲ್ಲ ಮರುಳಾಗಿ ಬರುತಿದ್ದೇವೆ (ಪುರಂದ. ದಾ. ೪-೦೦೦-೬). 'ಮುರಲಿಗಾನ' ಪರಾ. **ಮುರಳಿ₁** : ಬಂದು ನಿಂದ ಕಣ್ಣು ಮುಂದೆ . . . ಮುರಳಿಪಾನೂದುತ್ತ ಮರುಳುಗೊಳಿಸಿ ಜನರ ಕೊರಳ ಪದಕ ಹಾರ ಧರಿಸಿ ತಾ ನಲಿಯುತ್ತ (ವಿದಾಶ್ಕ. ೨೦-೨); ಮುರಳಿಯ ಕೈಕೊಳ್ಳುವೆಂದು ಮುರಳಿ ಬರುವೆನು (ಗೋಕುಶ. ೫೪-೨೩).
[ಸಂ. ಮುರಲೀ]

**ಮುರಲಿಗಾನ, ಮುರಳಿಗಾನ** (ನಾ). ಕೊಳಲನ್ನು ಬಾರಿಸುವಿಕೆ ; ವೇಣುಗಾನ : ಪುರರಿಪು ವಿಧಿ ಪೊಗಳುತಿರಲು ವಿರಚಿಸಿದ ಪುರಂದರ ವಿಠಲ ಮುರಲಿಗಾನ.ಮಾಡಿದ (ಪುರಂದ. ದಾ. ೪-೯೯-೩). **ಮುರಳಿಗಾನ** : ವತ್ಸವ ಪರಿ ಕಾವನಾ . . . ಕೊಳಲು ತನ್ನ ಕೈಲಿ ಪಿಡಿದು ಮುರಳಿಗಾನ ಮಾಡುತ್ತ (ವಿದಾಶ್ಕ. ೧೩-೦). [< ಸಂ. ಮುರಲೀಗಾನ]

**ಮುರಲೀಧರ, ಮುರಳೀಧರ** (ನಾ). ಕೊಳಲನ್ನು ಹಿಡಿದಿರುವವನು ; ವೇಣುಗೋಪಾಲ ; ಕೃಷ್ಣ. **ಮುರಳೀಧರ** : ಕೊಳಲುಲಿವಾಲಿಪವೆಲ್ಲ ಆದೊಡೆ ಮುರಳೀಧರ ಕಾಣಲೊಲ್ಲ (ಗೋಕುಶ. ೦೦-೦೬). [ಸಂ.]

**ಮುರವ₁** 'ಮುರುವ' ನೋ.

**ಮುರವ₂** (ನಾ). ಒಂದು ಬಗೆಯ ವಾದ್ಯ ; ಮುರಜ : ತಜ್ಜಲ ನಿಧಿಯಲ್ಲಿ ಲಕ್ಷಯೋಜನಗಾಧಮಧ್ಯಮಧ್ಯವಿಸ್ತಾರವದಶಸಹಸ್ರಯೋಜನತಳವದನ ವಿಸ್ತಾರದ ಮುರವಾಕಾರದ ಪಾತಾಳಂಗಳ್ ದಿಕ್ಚತುಷ್ಟಯದೊಳ್ ನಾಲ್ಕುಂ . . . ಇರ್ಕುಂ (ಕಶ್ಯ.ಶ್ರ. ೧೯೩) ; ಸಮಸ್ತಪಾತಾಳಂಗಳು ಸಾಸಿರದೆಂಟು ಮುರವದಾಕಾರವದಟ ತ್ರಿಭಾಗದ ಕೆಳಗೊಂದು ಭಾಗದೊಳಂ ವಾಯು ಪೊಂದೆ ತೀವಿರ್ಕ್ಕುಂ (ಶಾಶ್ವ ೬೯. ೨೬). ' ಮುರುಜ ' ಪರಾ.
[< ಪ್ರಾ. ಮುರವ, ಮುರಯ./ಸಂ. ಮುರಜ]

**ಮುರವತ್ತು, ಮುರುವತ್ತು** (ನಾ). ೧.(ಉ.ಕ.) ದಾಕ್ಷಿಣ್ಯ : ಹಂಗು : ಪಣ್ಣುವಿ . . . ಯಾರ ಮುರವತ್ತು, ಒಲುಮೆ, ಬಲುಮೆಗಳಿಗೆ ಒಳಗಾಗಿ ಹೋಗಿದ್ದನೋ ತಿಳಿಯದು (ಶೂರುಶಾ. ೩೩). ೨. ಒತ್ತಾಯ; ಜುಲುಮೆ; ಬಲಾತ್ಕಾರ : ಅರ್ಧ ಮುರವತ್ತಿಗಾಗಿ ಅರ್ಧ ಮಗನಲ್ಲಿಯ ವಿಶ್ವಾಸಕ್ಕಾಗಿ ಪರಹರಿಯನ್ನು ಮುಂದೆ ಕಳಿಸಲು ಆಚಾರ್ಯರು ಒಪ್ಪಿಕೊಂಡರು (ಸವುಚೀ. ೯೩) ; ಪೋಲೀಸರ ಮುರವತ್ತಿನಿಂದ ನಮ್ಮ ಪಂತನು ಆ ಪ್ರಕರಣದ ಶೋಧಕ್ಕಾಗಿ ಆ ಹಳ್ಳಿಗೆ ಹೋದನು (ಅಂಬಿಕ. ೮೨) ; ನಾಚಿಕೆ ಮುರವತ್ತುಗಳೀವಾಗಲಿ . . . ಅಪ್ರಿಯಅನ್ನವನ್ನು ಸ್ವಲ್ಪಾದರೂ ಭಕ್ಷಿಸಬೇಡಿರಿ (ಬ್ರಹ್ಮಕೀ. ೦೩೪). ೩. ಮರ್ಜಿ ; ಲಹರಿ : ಮಾನವು ಮಾರಾಟವಾಗಬಾರದೆಂದು ಎಷ್ಟು ಜನರ ಮುರವತ್ತು ಕಾಯಬೇಕಾಗುವದೋ ಕಾಣೆ (ಕೂ೦ಪಿ. ೦೬೪). ೪. ಅಂಜಿಕೆ ; ಭಯ : ಅರುವತ್ತು ಮುಗಿದೀತು ಅರುವು ಮರುವಾದೀತು ಎಂಬ ಮುರವತ್ತಿನಲಿ ಹಾಡಲಾರೆ (ಶ್ರೀಮ. ೬೦-೦೦) ; ಯಾರ ಭಿಡೆ—ಮುರವತ್ತುಗಳಿಲ್ಲದೆ ಮುಚ್ಚುಮರೆಯಿಲ್ಲದೆ ಅವನು ಕಂಡದ್ದನ್ನಾಡಿದ್ದಾನೆ (ಕಶಾಕ. ೩೯೩). **ಮುರುವತ್ತು** : ೨. ಬಳಗದಲ್ಲಿ ಮುರುವತ್ತಿಗಾಗಿ ಅನುರೂಪವಾಗದ ಗಂಡು ಹೆಣ್ಣನ್ನು ಮದುವೆ ಮಾಡುವುದೂ ಕಂಡುಬರುವುದು (ಕಪ್ಪಚಾ. ೦೨೩). ೩. ಮುಂದೆ ಮದುವೆ ಯಾವ ಮೇಲೆ . . . ಇನ್ನೊಬ್ಬರ ಮೂಡು ಮುರುವತ್ತುಗಳನ್ನರಿತು ಅವರಂತೆ ನಡೆಯಬೇಕು (ಸವುಚೀ. ೧೯೭). [←.ಅರ. ಮುರವ್ವತ್ ; ಹಿಂ. ಮುರವ್ವತ್, ಮುರೌವತ್ : ಮರಾ. ಮುರವತ್]

**ಮುರವು₁** 'ಮುರಿವು' ನೋ.

**ಮುರವು₂** 'ಮುರುವು₂' ನೋ.

**ಮುರಸು, ಮುರುಸು** (ನಾ). (ಮನಸ್ಸಿನ) ವಿರೋಧ ; ವೈಷಮ್ಯ : 'ಇರಸುಮುರಸು' ಪರಾ. **ಮುರುಸು** : ಅವನು ತನ್ನ ದೊಡ್ಡಿಯನ್ನು ತಲುಪಿ ಕಾರ್ಯನಿರತನಾದ ನಂತರ ಮನಸ್ಸಿನ ಮುರುಸು ಬೇಸರಗಳೆಲ್ಲ ಮಾಯವಾದುವು (ಪುನರು. ೨೯೯). ' ಇರಸುಮುರುಸು ' ಪರಾ.
[<ಮುರಿ₁ + — ಸು]

**ಮುರಳಿ₁** ' ಮುರಲಿ ' ನೋ.

**ಮುರಳಿ₂** ' ಮಿರಿಳೆ ' ನೋ.

**ಮುರಳಿ₃** (ನಾ). [ಅಶ್ವಶಾ] ಕುದುರೆಯ ಆರು ಬಗೆಯ ಲಕ್ಷಣಗಳಲ್ಲಿ ಒಂದು : ಭಂಜಳಿ ಮುರಳಿ ಝುಳಂಪಿ ವಾಹಿಣಿ ರೂಪು ರಂಜಪ ರೇವೆಯೆಂದೆಂಬ ಮಂಜುಳಮಾದ ಷಡಂಗದೊಳಾ ಹಯ ರಂಜನೆವಡೆದುದತ್ತಾಗ (ಶ್ರೀಪಾರಿ. ೯-೦೨). P ಇದು ಕುದುರೆಯ ಗತಿಭೇದವೇ ಎಂಬುದು ವಿಚಾರಣೀಯವಾಗಿದೆ.
[ ?./ತೆಲು. ಮುರಳಿ = ಅಶ್ವಗತಿಗಳಲ್ಲಿ ಒಂದು ಬಗೆ]

**ಮುರಳಿಗಾನ** ' ಮುರಲಿಗಾನ ' ನೋ.

**ಮುರಳೀಧರ** ' ಮುರಲೀಧರ ' ನೋ.

**ಮುರಾದ** (ನಾ). ಹಟ ; ಮೊಂಡುತನ : ನಡೆಸಿಕೊಡದೆ ಏನು ? ಅದಕ್ಕೆ ಈ ಮುರಾದವೇ ಅಣ್ಣ ? (ಕುಂಗರ. ೩).

**ಮುರಾದ ಹಾಕಿಕೊಳ್ಳು** = ಪಟ್ಟುಹಿಡಿ : ಹಟಮಾಡು : ಶ್ಯಾಮಲೆ ಬರುವುದಿಲ್ಲವೆಂದು ತಿಳಿದುಕೊಂಡೇ ಈ ಕುಮುದೆಯು ಮುರಾದ ಹಾಕಿಕೊಂಡು ಕುಳಿತಿರುವಂತೆ ಕಂಡುಬರುತ್ತದೆ (ಮಬುಸಂ. ೦೦೭).
[?./ ಅರ. ಹಿಂ. ಮರಾ. ಮುರಾದ್=ಆಸೆ, ಇಚ್ಛೆ]

**ಮುರಾಲಿ** (ನಾ). ಆನೆಗೆ ತೊಡಿಸುವ ಒಂದು ಬಗೆಯ ಆಭರಣ : ಆನೆಕೊಂಬಿಗೆ ಪಿತ್ತಾಳೆ ಅಣಸು ಮುರಾಲೀ ಆನೆಕಾಲಿಗೆ ಪಿತ್ತಾಳೆ ತೊಡೆ ಸರಪಣಿ (ಎಕ. XIV, ಶಂಜಪ. ೨೯೨-ಪುಟ. ೦೯೨; 1847). [ ? ]

**ಮುರಿ₁** (ಕ್ರಿ). ೧. ಬಾಗು ; ಬಗ್ಗು: "ಮುರಿ—ವಕ್ರಭಾವೇ(ಬಗ್ಗು)" (ಕಮಧಾ); ಎಡಗೆಯ್ಯನೂಙಿ ಪೀಠದ ಕಡೆಯೊಳ್ ಮುಯ್ಯುದ್ದಮಾಗೆ ಮುರಿದ ಬೆಡಂಗಟ್ಟುಡಿದಿರೆ ಹಾರಂ ಕೆಲಕೋರ್ಗುಡಿಸೆ ನಿಜಾನುಜರೊಳಾಗ ಳೊರ್ವಂ ನುಡಿದಂ (ಶಾಂತಿಪು. ೩-೦೦೩); ಮುರಿದೆಡಗೈ ನಿಜಾಂಗಳನೋಸರಿಸೆ (ಅಜಿಪು. ೬-೪೪) ; ಕಂಬಿಯೊಳೊಂದುದಿನದಲಿ ಹೊತ್ತುದಕವಂ ಶೀಘ್ರದಿಂದ ತರುತ್ತ ಹಳ್ಳದನಾಚೆ ದಾಟಲು ಬೆನ್ನು ಮುರಿದಿರಲು ಬಿಡದೆ ಕಂಬಿಯನವಚಿ ಕೊಂಡು (ಬಸವ. ೪೪-೩). ೨. ಬಾಗಿಸು; ಬಗ್ಗಿಸು : ವೃಕೋದರನೊಯ್ಯನೆ ನಕ್ಕು ಬಾಲವಂ ಸಲೆ ಮುರಿದೆತ್ತಲಾಟಿಸೆ ಧರಿತ್ರಿಗೆ ಕೀಲಿ[ಸಿ]ದಂತಟಾಗೆ ಬೋರ್ವಲದ ಪೊಡರ್ಪುಗಟ್ಟು ನಡೆನೋಡಿ ಮರುತ್ಸುತನಂ ಮರುತ್ಸುತಂ (ಸಂಕಭಾ. ೮-೩೨); ಕೆಂದಾವರೆಗೆತ್ತಡಿಯೊಳ್ ಸಂಧಿಸಿ ಕಳಭಂಗಳೆಳಸೆ ಕೆಯ್ಯುಂ ಮುರಿದಾಸ್ಯೆಂದುಮನೀಕ್ಷಿಸಿ ಸಿಂಗದ ಚೆಂದದಿನೆಂದಂಬೆಗಾಲೊಳೆಸೆವನೊ ಕಂದಂ (ಪುಶ್ಯಪು. ೩-೯೩). ೩. ವಕ್ರವಾಗು ; ಡೊಂಕಾಗು ; ಸೊಟ್ಟಾಗು : ಕರಂಗಳ್ ಚೆಲ್ವನಾಂತಿರ್ದೊಡಂ ಮುರಿದಂತಿರ್ದವರ ಮೇಲೆ ಪೇಳಿ ನಡೆವರ್ (ಕೋಪೋಶ. ೫೩) ; ಮುರಿದ ಕಾಲ್ಗಳನೆಳೆಕೊಳುತೆ ಇಜಾಡುವಾಕಾಶವೀರರ ಕಂಡಳು ಪರಿಣಾಮಿಕೆ ನಸುನಗುತೆ (ಮೋಹಕ. ೨೯-೦೨). ೪. ಹೊರಳು ; ತಿರುಗು : ಪೋಪ ಜರ್ಪ ಜನಮಂ ಮುರಿದೀಕ್ಷಿಸೆ ಕಾಂತೆ ಬೀದಿಯಂತೆಯ್ದುವಿನಂ ಪೊದಟ್ತಿದಸಂಗರಸಾಬ್ಧಿಯೊಳುಯ್ದು ತೊಯ್ದು (ಶಾಂತಿಪು. ೬-೮೬); ಮುರಿದ ಕೊರಲ್ ಬಟಲ್ದಳಪಲಾಟಪ ಮೆಯ್ . . . ಕತ್ತುರಿವೊನೆಗೊಂಡೆಚಲ್ವ ಕಿವಿ ಸೂಚಿಸಿದಪ್ಪುದು ಸೋಲ್ದ ಭಾವಮಂ (ಶಾರಂಪು. ೧೩೦): ಮಗುಳೊರ್ವಳಾಟದೊಳ್ ಮತ್ತೊರ್ವಳಂ ತನ್ನ ಬಗಸೆ

ಗಣ್ಣಿಂ ಮುರಿದು ನೋಡೆ (ಶಬ್ದಮ. ೬-೯೭). ೫. ಹೊರಳಿಸು ; ತಿರುಗಿಸು: ಗುರುಭುಜಾವಾಹರಿಂದ ಮೋಙೆಯು ಮುರಿದ ವಿಜಯವಧೂಕಟಾಕ್ಷವ ತಿರುಹಿ ಹಾಯ್ಕುವ ಗಂಡನಾವನು ನೀವು ತಪ್ಪಿದಡೆ (ಕುಮಾ.ಕ. ೩-೩೩): ಅಗಲದಾಱದ ಮುರಿದ ಮೋಙೆಯು ದುಗುಡದಲಿ ಹಯವಶ್ರುವಾರಿಯ ನಾಗುಳಿ ಗತಿಗುಂದಿದವು ಗುಣಭರಿತನ ವಿಯೋಗದಲಿ (ತೊರಮ. ೨-೩-೨). ೬. ವಿಮುಖವಾಗು ; ಪರಾಙ್ಮುಖವಾಗು : ಮುರಿದು ಕಣ್ಣಿಟ್ಟರೆ ಕ್ಷಣಕ ಮುಕ್ತಿಯು ಕಾಂಬ ಭರತಚಕ್ರಿಯು ಹೇಳಲೇವೆ (ಭರತ. ೧-೨೦). ೭. ಓಲು; ಜೋಲು ; ಓರೆಯಾಗು : ಮುರಿಯೆ ಕೊರಲ್ ಕೆಲಕ್ಕೆ ಮುಡಿ ಜೋಲ್ವಿನೆಗಂ ಕರವಂ ಕದಂಪು ಸಾರ್ತರೆ . . . ಕರುವಿಟ್ಟ ಚಿಂತೆಯನೆ ಚಿತ್ರಿಸಿದಂತೆ ಪೊಲಿರ್ದ ನಲ್ಲಳಂ . . . ನರಪತಿ ಭಾವಿಸಿ (ವರ್ಧಮಾ. ೯-೭೭) ; ಮುರಿದ ಗೋಣಿನ ಕರದ ತಲೆಗಿಂಬುಗಳ ಕಾಲಾಳೊಱಗಿತವನಿಯಲಿ (ಕುಮಾ.ರಾಮ. ೧೭-೭). ೮. (ನಿದ್ರೆ, ಜಡತೆ ಮುಂತಾದುವನ್ನು ಹೋಗಲಾಡಿಸಲು ಕೈಕಾಲು ಮುಂತಾದುವುಗಳನ್ನು) ನೀಡು.– ಚಾಚು.– ನೆಟ್ಟಗೆ ಮಾಡು : ಒಂದು ದಿನದ ಕೂಸಂ ವನಧಿಯೆಂಬ ದೇವತೆ ಒಡಿದೊಡಾ ಕೂಸು ಬೆನ್ನು ಕೊರಳುಮಂ ಮುರಿವುತಿರ್ಕ್ಕುಂ (ಜಾಂಬ. ೦೨೯-೦೭); ಒತ್ತರಿಸಿ ನಡೆವುತ್ತ ಕಾಲ್ಪಿಚ್ಚುತ್ತ ಒದೆವುತ ಬೆನ್ನ ಮುರಿದುಕೊಳುತ್ತ . . . ಮುಂಡುಗಾಱನು ದಸರಿದೇವನ ಬಳಿವಿಡಿದು ಸಾರ್ದ (ಬಸವ. ೩೬-೦೭). ೯. ನುಲಿ ; ತಿರುಚು : ಕಾಲ್ಗಿಡಿಸಲುಂ ಮುರಿದು ಕಿಟ್ಟಿಡಾ ತಡಮೆಂಬವ ಱಿಂದಂ ಬಾಹು ಕೈಕೊಳ್ಳೆಂಬಿವು ಮೊದಲಾಗಿ ಗೋಮೂತ್ರಮಂಡಲಮು ಮಾಕಾಶಂ ವೇಜವಿತಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲಂ (ಶಾಂತಿಪು. ೩-೨೩ ವ); ಮಗಧೇಶನನಿಕ್ಕಿ ಮೆಟ್ಟಿವಂ ಲಾಳನ ಗಂಟಲಂ ಮುರಿದವಂ (ಕ.ಶಾ. XI-i, ೩೨-೦೫; 1007 ?). ೧೦. ಹುರಿ ಮಾಡು ; ಹೊಸೆ; ತೀಡು : ಮುರಿದಣ್ಪಕ್ಕಿದ ಗಡ್ಡ ಮೀಸೆ ಮುಡಿಕಟ್ಟಂ ಕಳ್ತ ಕೆಂಬಟ್ಟೆ (ಅನಂತಪು. ೦೦-೭೩); ನೆಲಕ್ಕೆ ತೂಂತಿಟ್ಟುಪೊಲಿರ್ದ ಮ್ಯೆಮುರಿದ ಮೀಸೆ ಮಿಡುಂಕುವ ಬಾಯದ್ (ಭಮಾ.ಸ್ತ್ರೀ. ೬-೦೫) ; ಮೀಸೆಯು ಮುರಿದು ಹುಬ್ಬನು ಬಲಿದು . . . ಭಾರ್ಗವದತ್ತ ಬಾಣಕೆ ನೀಡಿದನು ಕರವ (ಕುಮಾ.ದ್ರೋ. ೦೩-೫೦). ೧೧. ಹೆಣೆದುಕೊಂಡಿರು ; ಸೇರಿಕೊಂಡಿರು : ಜಡೆಯುಡೆಯ ಬಾಂದೊಱೆಯ ಮಕರಂದಸಂದೋಹದ ಮುರಿದ ಜಡೆಗಳ . . . ಪಂಪಾವಿರೂಪಾಕ್ಷಕಲ್ಪದ್ರುಮಂ ಪೊರೆಯಲಾನತಜನರನು (ಚಂಪು. ೩-೧). ೧೨. ಮತ್ತೆ ಬರು ; ಹಿಂದಿರುಗಿ ಬರು ; ಪುನಃ ಬರು : ಪೆಱಪಿಂಗುವನಂ ಮುರಿದಡಸಿ ಒಡಿದು ಘಟ್ಟಿಸಿ ಒರಿಯಱೆಯೊಳ್ ಪೊಪ್ಡನಸಗವೊಯ್ವಂ ಭೀಮಂ (ಸಂಕರ. ೩-೩೦) ; ಕಮಲದಳಾಯತಾಂಬಕಿ ನಳನ ರೂಪಿನ ನಾಲ್ವರಿರೆ ಕಂಡು ಮಾಯವಿದು ತಾನಱಿಯೆನಿವರ ನಿಜಾಯತವ ನೆಂದೆನುತ ಮುರಿದಾ ವಾಯುಗತಿಯಲಿ ಬಂದು ಹೊಕ್ಕಳು ತನ್ನ ಮಂದಿರವ (ನಳಚ. ೩-೩೦). ೧೩. ಹಿಂಜರಿ ; ಹಿಮ್ಮೆಟ್ಟು ; ಹಿಂದೆಗೆ : ಉರವಣಿಸುವುದು ಕೊಂಡ ಹಜ್ಜೆಗೆ ಮುರಿಯಲಾಗದು (ಕುಮಾ.ದ್ರೋ. ೦೫-೨೦); ಆ ತರುಣಿಯರ . . . ಸುತರಳಾಪಾಂಗರೋಚಿಯಲಿ ಮುರಿದುದಾ ಮರಗತ್ತಲೆಯು ಮೈ್ಯ್ಸರಿ (ತೊರಮ. ೧-೩-೯೫); ಒಡೆದ ನೆತ್ತಿಗಳಿಂದ ರಕುತದ ಮಡು ಹರಿಯೆ ತರಹರಿಸಲಾಱದೆ ಪಡೆ ಮುರಿದು ಬರುತಿರಲು (ನಳಚ. ೯-೨೭). ೧೪. ಹಿಮ್ಮೆಟ್ಟಿಸು : ಹಿಂದೆ ಸರಿಯುವಂತೆ ಮಾಡು : ತನಗೆ ಮಲೆತ ನರಸಿಂಹಪುರ ಬೇಲೂರ ಜನಪತಿಗಳ ಮುರಿದು (ಕಂಠೀ. ೩-೫೦). ೧೫. ಕುಗ್ಗು : ಅಡಗು ; ಕುಸಿ ; ತಗ್ಗು : ಜರೆಬಂದಂ ಪೂರ್ಬ ಜೋಲ್ದೆ ತೆರೆ ತರತರದಿಂದಮ್ಮ ಪೊಣ್ಮಲ್ಕೆ ಗಂಟಲ್ ಮುಱಿದತ್ತೊಂದೊಂದಱೊಳ್ ಶಳ್ಳೊಗೆಬೆ ಸಿರೆಗಳ್ (ಕಾರಂಭು. ೦೭೫): ಮೋಹದಿಂದಿನ್ನೆಗಂ ಭವವಾರ್ಧಿಯೊಳ್ ತಿರಿದೆಂ ಮನಂ ಮುರಿವನ್ನೆಗಂ (ರಮಾಕು. ೬-೦೨೦). ೧೬. ಅಣಿಗೊಳ್ಳು : ಸಿದ್ಧವಾಗು : ಅರಸನನುಜರುಸಹಿತ ಕೃಷ್ಣನ ಬೆರಳ ಸನ್ನೆಯೊಳೈದೆ ಬಿಡೆ ಮೋಹರಿಸಿ ನಿಂದುದು ಮುರಿದ ಮಕರವ್ಯೂಹರಚನೆಯಲಿ (ಕುಮಾ.ದ್ರೋ. ೯-೨೨); ಉರವಣಿಸಿದರು ಮುರಿದು ಮಕರವ್ಯೂಹದತಿರಥರು (ಕುಮಾ.ದ್ರೋ. ೦೦-೦). ೧೭. ಕಡೆಗಣಿಸು ; ತಿರಸ್ಕರಿಸು : ಅವರವರ ಕೃತಕರ್ಮಸಂಸ್ಕರ ಹೋರಿಸುವುದಳಿಸುವುದು . . . ಇದಕಹಿತ ಹಿತರೆಂದಾರ ಮುರಿವುದು ಮನ್ನಿಸುವುದೈ ಭೀಮ (ಕುಮಾ.ಆ. ೨೦-೦೩). ೧೮. ಬಿಚ್ಚು ; ಹರಡು : ಮುರಿದಿಳಿವ ವೇಣಿಕಾಬಂಧುರ ಯಮುನಾನದಿಯು ಪೂರ್ಣಪುಳಿನಸ್ಥಳದಂತಿರೆ ಕರಮೆಸೆದುದು ಘನಜೀವರಜಘನಂ ಚಕಿತತರುಣಹರಿಣೇಕ್ಷಣೆಯಾ (ಪ್ರಭು. ೯-೦೦೩). ೧೯. ಹೊರಹೊಮ್ಮು ; ಉಂಟಾಗು : ಪಾದರಿಗಲರ್ಗಂಗಳಿಂದೆ ಮಕರಂದಮದತ್ತು ತುಟಿಕೆ ಪಲ್ಲವಂ ಮುರಿದುವು ತೋಳೊಳಿಂದು ಮಲಯಾನಿಳನಿರ್ದಪನೆಂದು ತೋರ್ಪವೋಲ್ (ಅನಂತ. ೭-೦೦); ಅಲ್ಲಲ್ಲಿಯಕ್ಕಿ ಮುರಿವಲ್ಲಲ್ಲಿ ಕೆಂಪಾಗುವಲ್ಲಲ್ಲಿ ಕುಯ್ಯಲಾಗುವ ಪಲವು ಪೆಸರ್ವಡೆವ ನೆಲ್ಲ ಗದ್ದೆಗಳಿತಿ ಮುದಂಬಡಿಸಿದುವು ತಮ್ಮನೋವಿದ ಕುಟುಂಬಗಳಿಗೆ (ಸಮ್ಯ.ಕೌ. ೦-೨೨). ೨೦. (?) : ಉದ್ದವಱಮೊಱೆವರೆಂಬುದೆ ಬಿದ್ದಂ ಮುನ್ನಲ್ಲಿ ಕಡುಪಿನೊಳ್ ಬಹುವಿಧದಿಂದುದ್ದವಱಮೊಱೆದು ಮುರಿಗುಂ ಬಿದ್ದಮೆನಲ್ ಬಲಳ ಪೊಱಗನೆಱೆವ ಬೆಡಂಗಂ (ಎಪಿ. II. ೦೩೩-೦೦೯; ೩೩೩).

ಮುರುತುಕೊಳ್ಳು, ಮುರಿತುಕೊಳ್ಳು = ೧. ಬಿಗುಮಾನವಾಗಿರು ; ಬಿಗಿಯಲ್ಲಿರು : ತನಗೆ ಬರೆಯಲಿಲ್ಲವಲ್ಲ ಎಂದು ಮುರುತುಕೊಂಡು ತಾನೂ ಬರೆಯಲಿಲ್ಲ (ಬಂಕಿಮ. ೭೯); ಅವನು ಮುರುತುಕೊಂಡೇ ಬಿಗಿಯಾಗಿ ನಡೆದನು (ಗರುಡಾ. ೦೬೦). ೨. ಸಿಟ್ಟಾಗು ; ಕೆರಳು; ಕೋಪಮಾಡಿಕೊಳ್ಳು : ತಾಯಿಯ ಮಾತೂ ಅವನಿಗೆ ಹಿತವಾಗಲಿಲ್ಲ; ಆದ್ದರಿಂದ ಮುರುತುಕೊಂಡು ಮತ್ತೆ ಸಭೆ ಬಿಟ್ಟು ಹೊರಟು ಹೋದನು (ಪಡಮಾ. ೨೩೭); ಹೀಗೆ ಅಳುತಾ ಕೊಡುವ ದಾನವನ್ನು ನಾನು ಒಲ್ಲೆನೆಂದು ಮುರಿತುಕೊಂಡು ಹೋದನು (ಜನಪದ. XIII$_9$, ೨೭). [ದೇ.॥ ತಮಿ. ಮುರಿ ; ಮಲ. ಮೂರಿ ; ತುಳು. ಮುಲ್ರ್ ; ತೆಲು. ಮುರಿಂಚು, ಮುರಿಯು ; ಪರ್ಜಿ. ಗದಬ. ಮುರ್ಗ್]

ಮುರಿ$_2$ ‘ ಮುಱಿ$_1$ ’ ನೋ.

ಮುರಿ$_3$ ‘ ಮುರಿವು ’ ನೋ.

ಮುರಿ$_4$ ‘ ಮೂರಿ ’ ನೋ.

ಮುರಿಕ (ನಾ). ೧. “ವಕ್ರಸ್ವಭಾವದವನು” (ಶ.ಕೋ.). ೨. ಸಿಟ್ಟಿನ ಮನುಷ್ಯ: “ಮುರಿಕನೆನಲ್ ಕೋಪಿ” (ಶಾರದಾ. ೯೩).

[ಮುರಿ$_1$ + — ಕ$_3$]

ಮುರಿಕಟ್ಟು (ನಾ). ಮಜಾ ; ಕಳೆಯುವಿಕೆ ; ಮುರಿದುಕೊಳ್ಳುವಿಕೆ: ನಿನ್ನ ಮಗನೆ, ಅನ್ನ ಬಟ್ಟೆ ಎಲ್ಲಾನೂ ಕೊಟ್ಟು ಅದರ ಜೊತೆಗೆ ನಿನ್ನ ಸಾಲದೊಳಗೆ ವರ್ಷ ಹದಿನೈದುರೂಪಾಯಿ ಮುರಿಕಟ್ಟನೂ ಮಾಡಿಕೊಡಬೇಕು (ಸುಭಸಂ. ೬೦). [ಮುರಿ$_2$ (< ಮುಱಿ$_1$) + ಕಟ್ಟು$_3$]

ಮುರಿಕಿನಾಡು, ಮುರಿಗನಾಡು, ಮುಲಕನಾಡು (ನಾ). ಒಂದು ನಾಡಿನ ಹೆಸರು ಮತ್ತು ಅಲ್ಲಿಗೆ ಸೇರಿದ, ತೆಲುಗು ಮಾತನಾಡುವ ಸ್ಮಾರ್ತಬ್ರಾಹ್ಮಣರ ಒಂದು ಒಳಪಂಗಡ : ಇವರೊಳಗೆ ಕಾಸಲನಾಡು, ಮುರಿಕಿನಾಡು, ತೆಲಗನ್ಯ, ವಾಗನಾಡು, ವೇಲನಾಡು ಎಂದು ಐದು ಪೊಳಭೇದಗಳುಂಟು (ಕರ್ನಾ. ೯೩). ಮುರಿಗನಾಡು : ಪಲ್ಲವಿಶೇಷಯ್ಯರ್ ಅವರು ಮುರಿಗನಾಡು ತೆಲಗು ಬ್ರಾಹ್ಮಣರು (ಸಂಗೀತ. ೯೭). ಮುಲಕನಾಡು : ಅವರು ಮುಲಕನಾಡು ಬ್ರಾಹ್ಮಣರು (ಕೊಡ).

[← ತೆಲು. ಮುರಿಕಿನಾಡು, ಮುಲಿಕಿನಾಡು, ಮುಲ್ಕಿನಾಡು, ಮುಱಿಕಿನಾಡು]

ಮುರಿಕಿಲು ‘ ಮುಱುಕಿಲ್$_2$ ’ ನೋ.

ಮುರಿಕಿಸು ‘ ಮುಱುಕಿಸು ’ ನೋ.

ಮುರಿಕೆ$_1$ ‘ ಮುರಿಗೆ$_1$ ’ ನೋ.

**ಮುರಿಕೆ$_2$**, ಮುರಿಗ್ಗೆ, ಪುರುಕೆ (ನಾ). ೧. ಔಷಧೀಸಸ್ಯ; ವನಸ್ಪತಿ; **ಗಿಡಮೂಲಿಕೆ:** (?) ೨. ಒಂದು ಬಗೆಯ ಸಸ್ಯ: ಮುರಿಕೆಯ ಕಾಯ್ ಮುಡುವಾಗಲ್ ಬೆರಸಿದ ಮಧುವಂ ವಿಲೋಚನಂಗಳೆಱೆಚ್ಚಲ್ ಪಱೆಗುಂ ಕಡವಿನ ವಿಷಮುಂ (ಜಕುರ. ೦೬-೭೦). **ಮುರಿಗ್ಗೆ$_2$** : ೨. ಜಾವನಿಗೂಲೆ . . . ಕಾಡುಪಪ್ಪತಂಗ, ಮುರಿಗೆ (ಖ್ಯ ೨೧. ೧೦-೭೯೯). **ಮುರುಕೆ:** ೨. "ಮಾಹಾಜ್ವಾಲಿನೀ—ಮುರುಕೆಯ ಮರ" (ಓಪಿಂ. ೦೨೨); 'ಮುರ್ಗಿ', 'ಮುಱುಕಿಲ್$_2$' ಪರಾ. [ ? ]

**ಮುರಿಕೊಂಬು** (ನಾ). ಮೇಲುಮುಖವಾಗಿ ಬಾಗಿಕೊಂಡಿರುವ ಒಂದು ಬಗೆಯ ಊದುವ ವಾದ್ಯ: ಒದಗಿರ್ಪ ಪರೆಕೊಂಬು ಮುರಿಕೊಂಬುಗಳ ಮೊಳಗಿನ ಪದಪಿನಿಂ ಬೀಗರಂ ಕರೆದುಲಿಯುತಿತ್ತು (ಕಾರಾಜ. ೦೭೬-೨೦೬). [ಮುರಿ$_1$ + ಕೊಂಬು$_1$]

**ಮುರಿಗಟ್ಟಿಗೆ** (ನಾ). ನೆಯ್ಗೆಯ ಒಂದು ಉಪಕರಣ : ಹರುಗುಣಿ ಗೂಟ ಕವಣೆಗೋಲು ಲಾಳಿಯು ಮುರಿಗಟ್ಟಿಗೆಯು . . . ನಾಲಿಗೆಗೂಟವ ನಿರಿಡೊಂದುಳಿಯದೆ ಕಟ್ಟಿದನು (ಅಮುಕಾಂ. ೫-೩). [ಮುರಿ$_1$ + ಕಟ್ಟಿಗೆ$_1$]

**ಮುರಿಗಡಲು** (ನಾ). (ಕ್ಷೋಭೆಯಿಂದ) ಹೊಯ್ದಾಡುತ್ತಿರುವ ಸಮುದ್ರ: ಮುಂದೆ ತವಕಿಗ ಭಟರ ತೆರೆಕೆಯಿಂದ ಮೊಳೆವ ಗಭೀರಭೇರಿಯ ಮಂದರದ ಮುರಿಗಡಲ ಗಜಱೆನೊಲೊದಱಿತರಿಸೇನೆ (ಕುವ್ಯಾಕ್ರೋ. ೨-೦೯). [ಮುರಿ$_1$ + ಕಡಲು (< ಕಡಲ್$_2$)]

**ಮುರಿಗನಾಡು** 'ಮುರಿಕಿನಾಡು' ನೋ.

**ಮುರಿಗಿನಮರ** 'ಮುರುಗಿನಮರ' ನೋ.

**ಮುರಿಗೆ$_1$**, ಮುರಕಿ, ಮುರಗಿ$_1$, ಮುರಿಕೆ$_1$, ಮುಱಿಕ್ಕು (ನಾ). ೧. ಸುರುಳಿ ; ಸುತ್ತು : ಮಸ್ತಕಾಂಬುಜಕೆ ಮುರಿಗೆಯಾಕಾರ ಕೃತ ಕೌಶೇಯದಂಬರು ದೇಹದೊಳ್ಮುರಿಗೆಯಾಗಿರೆ ಪೊದೆದ ಶಾಲುಮದು ರಂಜಿಸುತಿರೆ (ಮುಜಾಂ. ೦೭-೬); ಚಿನ್ನಕಾರವೆಂಬ ಜಾತಿಯು ಕಾನಡಾಜಿಲ್ಲೆಯಲ್ಲಿ ಇಲ್ಲ . . . ಕೋಡು ೧೨ ಇಂಚು; ಬುಡದಲ್ಲಿ ಮುರಿಗೆಗಳಿರುತ್ತವೆ (ಕಶಾಗ. ೬೫). ೨. ಇರಿಕೆ ; ಸಿಂಬಿ : ಇವರಲ್ಲಿಯು ಬಂಧವು ದೇವಾಲಯಗಳ ಗೋಡೆಗಳಲ್ಲಿ ಕಲ್ಲುಗಳ ಮೇಲೆ ಅಲ್ಲಲ್ಲಿ ಕಂಡುಬರುವ ನಾಗರಹಾವಿನ ಮುರಿಗೆಯಂತಿದೆ (ಗೂಕ್ಕುಗು. ೦೬೮). ೩. ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ ; "ವಂಕಿ; ನಾಗಮುರಿಗೆ" (ಜಾಪಕೋ. ೩೩) : ಮಟ್ತಿನ ಚೌಕಳಿ ಮುರಿಗೆ ತಿದ್ದಿದ ಮಿಡಿಸೆ ಹತ್ತುಗಟ್ಟೀವು ಎಡಪದಕವ (ಲೋಕಗೀ. ೫೮). 'ನಾಗಮುರಿಗೆ' ಪರಾ. ೪. (ಅಲಂ) ತೊಡಕು; ಸಮಸ್ಯೆ; ಗೋಜು: ಮನಸ್ಸಿನ ಮುರಿಗೆಗಳನ್ನು ಕಳೆದು ಅದನ್ನು ಸರಲ ಮಾಡಲು ಭಗವಂತನನ್ನು ಅನನ್ಯಭಾವದಿಂದ ಪ್ರಾರ್ಥಿಸಲಾಗಿರುವುದು (ಶರಿಷ. ೪೬); ಈ ಮನಸ್ಸಿನ ಈ ಮುರಿಗೆಯೊಮ್ಮೆ ಬಿಚ್ಚಿದರೆ . . . ನಿರ್ಣಯಿಸುವುದು ಸುಲಭವಾದ ಮಾತು (ಜಾಸಹು. ೪೯). **ಮುರಕಿ :** ೫. ತಿರುವು ; ಬಾಗು : ಘಟ್ಟದ ಮುರಕಿಯಲ್ಲಿ ಮುಂದಿನ ವಿರು ಹಿಂದಿನ ಬಿಚಿ ನಿಟ್ಟಿನಲ್ಲಿಯೇ ಹೋಗುವಂತೆ ಕಾಣುತ್ತದೆ (ಜುಕ್ಕ್ರಾ. ೬೮); ಇವರು ರಸ್ತೆಯ ಈ ಮುರಕಿಯ ತನಕ ಮುಟ್ಟಿಸಿ ಹೋದರು (ಜುಂಕುರಾ. ೫೫). **ಮುರಗಿ$_1$** : ೧. ರತ್ನದ ಶಿಖರಗಳವೆ ಸಾವಿರ ಬಂಧನ ಮುರಗಿಗಳಿಂದ (ಛಧು. ೬೬೦). **ಮುರಿಕೆ$_1$** : ೬. ಮುದುರಿಕೊಳ್ಳುವುದು; ಸಂಕೋಚ : 'ಮುಟ್ಟಲುಮುರಿಕೆ' ಪರಾ. **ಮುಱಿಕ್ಕು** : ೫. 'ಪೆರ್ಮುಱಿಕ್ಕು' ಪರಾ.

[ಮುರಿ$_1$ + — ಗೆ./ತುಳು. ಮುರಿಗೆ]

**ಮುರಿಗ್ಗೆ** 'ಮುರಿಕೆ$_2$' ನೋ.

**ಮುರಿಗೆಗೊಳ್ಳು** (ಕ್ರಿ). ಗೋಜಿನಲ್ಲಿ ಸಿಲುಕಿಕೊಳ್ಳು; ಸಿಕ್ಕಿನಲ್ಲಿ ಬೀಳು : ಕರುಳುಗಳು ಮರಮಂಚ ಮುರಿಗೆಗೊಳ್ಳುವವು . . . ನೋವು ಪರಿಹರಿಸುವವರಾರು? (ಜಕ್ಕ. ೦೨೯). [ಮುರಿಗೆ$_1$ + ಕೊಳ್ಳು$_1$ (<ಕೊಳ್$_1$)]

**ಮುರಿಗೆಡಹು** (ಕ್ರಿ). ಚೂರುಚೂರಾಗುವಂತೆ ಕತ್ತರಿಸಿ ಬೀಳಿಸು : ನಾಶಮಾಡು : ಕವಿವ ಪದಾತಿ ಪೊಗುವಾನೆಗಳ ಕುದುರೆ ಪೊಂದೇರ್ಗಳ ಮುರಿಗೆಡಹಿದಂ (ತುರಂಗ. ೫೨-೦೫).

[ಮುರಿ$_2$ (< ಮುಱಿ$_1$) + ಕೆಡಹು (<ಕೆಡಪು)]

**ಮುರಿಗೆಡು** (ಕ್ರಿ). ಭಂಗವಾಗು ; ಭಗ್ನವಾಗು: ಪರಮುವಾದ್ಯದ ನೆರವಿ ಮಧ್ಯದೊಳರರೆ ಖಿಳಪತಿ ಸುರರ ದಳಗತಿ ನೆರೆಗೆಡಲು ಮುರಿಗೆಡಲು ಬೆರವಂತುರುಬಿ ತರುಬಿದನು (ಅಂಬಾ. ೧೦-೦೨).

[ಮುರಿ$_2$ (< ಮುಱಿ$_1$) + ಕಡು$_1$]

**ಮುರಿಗೆಡೆ** (ಕ್ರಿ). ೧. ತಿರುಗು; ಹೊರಳು: ಊರ ಹೊಗುವದರಡೆದಿದು ಹಮ್ಮಾರಿಯನು ಕೇಡಾಯ್ತೆನುತ ಧವಳಾರಗೋಪುರದೇಱೆಕೆಯು ನೋಟಕರು ಮುರಿಗೆಡದು ದೂರದಲಿ ನಿಂದಿಹರು (ಕುರಂಗ. ೫-೭-೧೩). ೨. ಹಿಮ್ಮೆಟ್ಟು; ಹಿಂಜರಿ : ಗರುಡನ ಗಱಿಯ ಗಾಳಿಗೆ ಫಣಿಗಳ ಮೊತ್ತ ಮುರಿಗೆಡೆದೋಡುವಂದದಲಿ ನರಸರಾಜೇಂದ್ರನ ಸಾಹಸದುಱುಬೆಗೆ ತುರುಕರೋಡಿದರ್ದೆಸೆದೆಸೆಗೆ (ಕಂಠಿರ. ೦೩-೦೦೭). [ಮುರಿ$_1$ + ಕೆಡೆ$_1$]

**ಮುರಿಗೇಶ** (ನಾ). ಡೊಂಕುಡೊಂಕಾಗಿ ಬೆಳೆದಿರುವ ಕೂದಲು ; ವಕ್ರವಾಗಿರುವ ಕೂದಲು : ಲೋಹದ ಕೋರಗಂಭಂಗಳೊಳಗೆ ಮುರಿಗೇಶದಿನಿಸವ ಶಬರರ ತಲೆಗಳೋಳಿಯಂತೆ ರಕ್ತಚಾಮರಂಗಳ ಸೊಳಕಿಯ್ದು . . . ಚೆಂಡಿಕಾಗೋಪುರದ್ವಾರವುರೋಭಾಗದೊಳ್ . . . ಅವತರಿಸಿ (ಕಾದಂಠ. ೨೬೯). [ಮುರಿ$_3$ (< ಮುರಿವು) + ಕೇಶ]

**ಮುರಿಚು**, ಮುರುಚು (ಕ್ರಿ). ೧. ತಿರುಗಿಸು; ತಿರುವು; ತಿರುಚು: ಸೆಳೆದು ಮುರಿಚುವ ತಿರುಚುತಾಕ್ಷಣ ಹೊಳಕಿ ತೊಡಚುವ ಬಾಹು ಬಗೆಯ (ಅಂಬಾ. ೦೬-೨೬). ೨. ನೂಕು; ತಳ್ಳು : ಕಡೆಯ ಝಣಝಣರವ ಮುಸಲವನೊಡನೆ ಹೊಱವಂಟರು ನೃಪಾಲಕನೊಡನೆ ಮುರಿಚಿದರು ಹಿಡಿವ ಸಚಿವ ಪ್ರಮಾಯ್ತ ಮಂತ್ರಿಗಳ (ಕುವ್ಯಾಸ. ೬೦೨. ೯-೪೩). **ಮುರುಚು** : ೧. ಮದಮುಖನ ಭುಜಬಲವ ನೋಡುವವಿದು ವಿಕಾರವಲಾ ಎನುತ ಮುರುಚಿದನು ಬಲ ಬಲಗಯ್ಯನುರವಣಿಸಿದನು ಪಾಪಿಯಲಿ (ಕುವ್ಯಾಗ. ೬-೩೦) : ಅರರೆ ಸುರಪನ ಪಟ್ಟದಾನೆಯು ತರುಬಿ ಹಿಡಿಹಿಡಿ ಕಾಲನಡಗನು ಮುರುಚಿ ಕೊಯ್ ಕೊಯ್ (ಅಂಬಾ. ೨೭-೭). ೨. ಉರೆ ಹಡೆದರವರಂದೊಬ್ಬರೊಬ್ಬರು ಮುರುಚಿ ಕರತಳವ (ಅಂಬಾ. ೭೯-೬೯). ೩. ನುಣುಚಿಕೊಳ್ಳು ; ತಪ್ಪಿಸಿಕೊಳ್ಳು : ಕೈಯ್ಯ ಹಿಡಿವರೆ ಅಂತು ಮುರುಚುವೆ ಎನ್ನ ಉರದಲಪ್ಪಿ ಓಡಿವಡೆಂತು ಮುರುಚುವೆ (ತೂಕ್ಕಸಂ. ೪೭-೫೦).

**ಮುರುಚಿಕೊಳ್** = ನುಣುಚಿಕೊಳ್ಳು ; ತಪ್ಪಿಸಿಕೊಳ್ಳು : ಬಲು ನಾಯ ಬಾಯಿಂದ ಮುರುಚಿಕೊಂಡೋಡುವ ಮೊಲಂ (ಹಕಾ. ೫-೨೮) ; ದ್ರುಪದಸುತೆಯನ್ನು ಓಡಿದೆಳೆಯಲ್ಕೆ ಬಿಲ್ಲಿಯಿಂ ಹೊಗಿ ಖಳನನ್ನುಕ್ಕೆ ಮುರುಚಿಕೊಂಡಳಲಿದಳು (ಕುರಂಗ. ೨೫-೫). [ಮುರಿ$_1$ + —ಚು$_1$]

**ಮುರಿತ$_1$** (ನಾ). ೧. ಬಗ್ಗಿದುದು ; ಬಾಗು : ನಳಿ — ಮುರಿತಂ (ಕಾಕ್ಕ. ೫೦). ೨. ಕೊಂಕುನಡೆ ; ವಕ್ರಗತಿ : 'ಇಂಗ್ಲಂಡ ನಾವಿಕರು' ಎಂಬ ಕವನದ ಛಂದದೋಜಸ್ಸು, ಮುರಿತ, ತಿರುಪುಗಳ ಅಂದ, ಗಮಕದಿಂದಲೇ ಪ್ರಕಟವಾಗಬೇಕು (೭ಶಾಮು. ೦೨೭). [ಮುರಿ$_1$ + —ತ$_1$]

**ಮುರಿತ$_2$** 'ಮುಱಿತ' ನೋ.

**ಮುರಿತಾಪ** 'ಮುರುತಾಪು' ನೋ.

**ಮುರಿದಲೆ** (ನಾ). ವಾಲಿಸಿರುವ ತಲೆ ; ಓರೆ ಮಾಡಿದ ಶಿರಸ್ಸು : ಜಡಿವ ಬಿರಿಯುಬ್ಬಿನದ ಹೆಚ್ಚಿದ ಮುಡುಹುಗಳ ಮುರಿದಲೆಯ ಚರಣದ ತೊಡರ ಮೊಳಗಿನ ಬಾವುಲಿಗಳಲಿ ಘಣಘಣಧ್ವನಿಯ . . . ದಡಿಗ ದಾನವಸವನಿ ಹೆಜ್ಜೆಗೆ ನೆಗ್ಗಲೆಸೆದ (ಕುವ್ಯಾಕ್ರೋ. ೦೫-೯೯).

[ಮುರಿ$_1$ + ತಲೆ$_1$]

**ಮುರಿದಿಟ್ಟಿ** (ನಾ). ಓರೆನೋಟ ; ಕೊಂಕುನೋಟ : ತರುಣ ಹರಿಣಗಣಕ್ಕೆ ಸರಸೇಕ್ಷಣದ ಸವಿನೋಟಮನುಪದೇಶಿಪಂತೆ ದೆಸೆವಡೆದು ಮುರಿದಿಟ್ಟಿ ಪರಿದಿಟ್ಟ ನೆಱೆ ಮೆಱೆಯೆ (ರಾಜಶೇ. ೧-೦೩೫ ವ). [ಮುರಿ$_1$ + ದಿಟ್ಟಿ]

**ಮುರಿನೋಟ** (ನಾ). ೧. = ಮುರಿದಿಟ್ಟಿ : (ತಮತಮಗೆ ಮುರಿನೋಟವನ್ನಾಡಿಸಿ, ನಕ್ಕು ಬಿಡುವರು) (ಮಂತ್ರಶ. ೩೯-೧೭). ೨. (ಅಂತರಂಗದ ಕಡೆಗೆ) ತಿರುಗಿಸಿದ ದೃಷ್ಟಿ : ತನ್ನಚ್ಚಿಯ ಮುರಿನೋಟದ ವಿಶ್ರಾಂತಿಯೆಡೆಯಿದೆನೆ ನೀಳ್ದ ನಾಸಾಪುಟಂ ರಂಜಿಸೆ (ರಾಘವಾಶ್ವ. ೪೦-೨೨). [ಮುರಿ$_1$ + ನೋಟ]

**ಮುರಿಪಾತ್ರೆ** (ನಾ). ಬಾಗಿರುವ ಹಿಡಿಕೆಯುಳ್ಳ ಪಾತ್ರೆ : ಕಮಂಡಲ : ಲೋಹದಿಂದೆ ವಿರಚಿಸಿದ ಮುರಿಪಾತ್ರೆಯುಂ ಕುಂಡಲಂ ತನ್ನ ಕರದಿನಗಲದ ಶಾಂತಮಲ್ಲಿಕಾರ್ಜುನಲಿಂಗಮುರುಪ್ರಣವಮಂತ್ರಮಾ ಋಗ್ವೇದಮುತುಳ ಕೇಸರಿವಾಹನಂ ಕೇಳ್ವುದು (ತಿಂಪು. ೫೯-೨೨). [ಮುರಿ$_1$ + ಪಾತ್ರೆ]

**ಮುರಿಪು$_1$**, ಮುರಿಹು, ಮುರುಹು$_1$ (ಕ್ರಿ). ೧. (ಮುಷ್ಟಿಯಲ್ಲಿ ಹಿಡಿದು) ನುಲಿ; ತಿರುಚು;ಹಿಂಡು : "ಮುರಿಪು– ಮುಷ್ಟಿ ಭ್ರಮಣೇ" (ಶಮಧಾ). ೨. ಬಾಗಿಸು ; ಬಗ್ಗಿಸು : ಮುರಿಪಿದ ಕರಂಬಿಬಾಸಿಗದೆರಡುಂ ಕಡೆಯುಂ ವಿಳಾಸವತಿ ಪಿಡಿದೆರಡುಂ ಕ ರ ದಿ ನ ನು ಕ ರಿ ಸಿ ದಳ್ ಸುರತರಾಸನಶ್ರೀಯುನಾಳ್ದ ಗಗನಶ್ರೀಯುಂ (ಚಂದ್ರಪ್ರ. ೧೭-೭೯). **ಮುರಿಹು:** ೧. ವಸ್ತ್ರಕುಲಮನಲ್ಲಿ . . . ಏಕನಿಷ್ಠೆಯಿಂದ ತಿರಿಹಿ ಮುರಿಹಿ ಹಿಳಿದು ಹಿಂಡಿ (ತಿರುಕೊಂ. ದೇ. ೨೩೩-೦೦). **ಮುರುಹು$_1$** : ೧. ಬಿಮ್ಮು ಸುಮ್ಮು ತೆಗೆಯಲಲ್ಲಿ ತಿರುಹಲ್ಲಿ ಮುರುಹಲಲ್ಲಿ ಮಳೆಗಳೊಳಗೆ (ತಿರುಕೊಂ. ದೇ. ೨೩೭-೦೩) ; ಸಾರಥಿ ತುಡುಕಿ ವಾಘೆಯ ಮುರುಹಿ ಮರಳಿಚಿ ರಥದ ಕುದುರೆಗಳ ತಡೆಯುದಶ್ವತ್ಥಾಮನಲ್ಲಿಗೆ ನಡೆದು ಬರುತಿರೆ (ಕುಮಾ.ದ್ರೋ. ೦೯-೫): ಮುರುಹಿ ಹಿಡಿಯಲು ಮಡದ ಸನ್ನೆಗೆ ತಿರುಗಿತತಿವೇಗದಲಿ ಹಯವು (ನಳಚ. ೭-೭). ೨. ಬೆರಳ ದರ್ಭೆಯು ಹಜೆದು ಬಿಸುಟನು ಜೋಡುಹೀಸಕ ಬಾಹುರಕ್ಷೆಗಳ ಮುರುಹಿ ಬಿಗಿದನು (ಕುಮಾ.ದ್ರೋ. ೯-೦೫). ೩. ಪಕ್ಕಕ್ಕೆ ತಿರುಗಿಸು, ಹೊರಳಿಸು : ನರನು ಕಣುಹಿಸಿ ಕೊಳಲು ಗುರುವೋಹರವನಪಸವ್ಯದಲಿ ವಂಚಿಸಿ ಮುರುಹಿದನು ಮುರವೈರಿ ರಥವನು ಮುಂದಣೊಡ್ಡಿಂಗೆ (ಕುಮಾ.ದ್ರೋ. ೧೦-೦) ; ಮುರುಹುವ ಮುಸುಡ ನೇತ್ರಕೆ ಹೇಳುವವು ಪಾತಕವಿಘಾತಕವ (ಸಿಧಾಗ. ೭-೧೨-೪). ೪. ಕೊಂಕಿಸು ; ಸೊಟ್ಟಮಾಡು : ಪಾಂಚಾಲ ಮತ್ಸ್ಯರು ಹಲರು ನಡೆಮುದೆ ಮಾರ್ಗವೆಂದೇ ಮುರುಹಿದರು ಮುಖವ (ಕುಮಾ.ಭೀ. ೯-೨೭). ೫. ಮುರಿಗೊಳಿಸು ; ಹೊಸೆ : ಮುರುಹಿದನು ಮೀಸೆಯನು ಕಣ್ಣುಗಳರಳದವು (ಕುಮಾ.ದ್ರೋ. ೦೯-೦೩) : ತಿದ್ದಿ ಮೀಸೆಯ ಮುರುಹಿ ರಕ್ಕಸನೆದ್ದು ನಿಂದಿದ್ದನುಚರರ ಬಿತಮದ್ದಳಿಸೆ (ತೊರವೆ. ೫-೬-೩). ೬. ಬಾಗು ; ಬಗ್ಗು : ಮುರುಹಿ ನಿಂದವು ಕೊಡಹಿದವು ಕೇಸರವನಧ್ವರ್ತ್ಯ ಮುದಫಗೆ ಪರಿಹರಿಸೆ ನೀರೊಳು ಹೊಗಿಸಿದನು ಹರಿಹಯಚತುಷ್ಟಯವ (ಕುಮಾ.ದ್ರೋ. ೧೦-೩೯). [ಮುರಿ$_1$ + — ಪು$_1$]

**ಮುರಿಪು$_2$**. ಮುರುಪು, ಮುರುಹು$_2$ (ನಾ). ೧. ಹಿಮ್ಮೆಟ್ಟುವಿಕೆ : ಹಿಂಜರಿತ : ಹಿನ್ನಡೆ : "ಮುರಿಪೆನೆ ಮರಳಿದ ಭಾವಂ" (ರನ್ನಕಂ. ೨). ೨. ಯುದ್ಧ ಮಾಡುವಾಗ ಬಳಸುವ ಗತಿಗಳಲ್ಲಿ ಒಂದು : ಸುತ್ತು ತಿರುಗುವುದು : ಆವರ್ತನೆ : ಬೆರಸಿ ಪೊಯ್ದಾಡಿನುಮ . . . ಕೃದುಗಳೊಳು ಕರಚಮತ್ಕಾರ ಲಾಘವ ಲವಣಿ ಪಯಪಾಡು ಮುರಿಪು ವ್ಯಾಳಂ ಲಾಗು ಲವಣಿ ಲಕ್ಷ್ಯಂಗಳಿಂ ಧುರದೊಳೇಱಂ ತೋಱೆ ಮಿಱು ತತಿಬಲದಲ್ಲಿ ನಾನಾಪ್ರಕಾರದಿಂದೆ (ತಿಂಪು. ೩೮-೩೮). **ಮುರುಪು** : ೨. ಬಹುಲಾಗುವೇಗದಿಂ ತಿರುಪು ಮುರುಪುಗಳಿಂದ ಪೊಯ್ದಾಡಿ . . . ಕಾದಿದರು ಬಾತ್ರಿಯಿಂದುಭಯಭಟರು (ತುರಂಗ. ೩೩-೨೪). **ಮುರುಹು$_2$** : ೩. ಸುತ್ತು : ಬಾಗು : ತಿರುವು : ಹಿರಿಯ ಭವನದ ಸುತ್ತುವಳೆಯದ ಮುರುಹಿನಲಿ ಮನೆಮನೆಗಳಾ ಮಂದಿರನಿಕಾಯಕೆ ಬಾಗಿಲೊಂದಾದ್ವಾರದೇಶದಲಿ (ಕುಮಾ.ಅ. ೬-೭೦) ; ಕೋಟೆಯುದ್ದುದು ಮುಂದೆ ಶಿವನ ಕರೋಟಿಮಾಲಾವಳಯದಪ್ಪೊಲುಱೆ ಪಾಟಿಸಿದ ಕೊತ್ತಳದ ಮುಗಿಲಟ್ಟಳೆಯ ಮುರುಹಿ[ಪಾಠಾಂ.ವಿ]ನಲಿ . . . ವಿವಿಧರಚನೆಯಲಿ (ತೊರವೆ. ೫-೨-೪). ೪. ನದಿಯ ಹರಿಯುವಿಕೆಯಲ್ಲಿರುವ ಬಾಗು. — ಮುರಿವು : ಚಕ್ರಾದಿಯೆನೆ ನೀರ ಮುರುಹಕ್ಕು (ಮಂಗರಾ. ೦೨೩-೦೩). ೫. ಕಿವಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ ; ಮುರು : ಬೆಂಡೋಲೆ ಮುರುಹು ಮಾಗಾಯ್ . . . ಉಡಿದಾರಂ ಭೂಮಂಡಲಪತಿಯಾತ್ಮಜಂಗೆ ರಂಜಿಸುತಿರ್ದಂ (ದಶಕು. ೨-೭೩) ; ಬೆಳ್ಳಿ ಮೊದಲು ತಿ ಮುರುಹು ತಾಂಬ್ರಂ ನಲ್ಲ ಲೋಹಂ ಕಂಚು ಮೊದಲಾದೆಲ್ಲಮಂ ಒಟ್ಟೈಸಿ ತರಿಸಿ (ಬಿಕಪು. ೦೭-೬). ೬. [ನಾಟ್ಯ] ವೃತ್ತಾಕಾರವಾಗಿ ಸುತ್ತುವ ಒಂದು ಭಂಗಿ : ಮುರುಹು ತಿರುಪು . . . ಕರಣ ಭ್ರಮರಿಗಳನಱಿದು ತರುಣಿ ರಂಗಸ್ಥಳದಲಿ ನರ್ತಿಸಿದಳು (ಜೀವಂಧರಾ. ೯-೯೪) ; ಮುರುಹು ಗುಂಡಾಲಮೆನಿಪ್ಪಡವುಗಳನು (ಶೀಪಂ. ೩೨-೪೬). [ಮುರಿ$_1$ + — ಪು$_2$]

**ಮುರಿಬಡಿ** (ಕ್ರಿ). ಹಿಂಜರಿಯುವಂತೆ ಮಾಡು ; ಹಿಮ್ಮೆಟ್ಟಿಸು : ದಂಗೆ ಎಬ್ಬಿಸಿದ್ದ ಸಾಮಂತರನ್ನೂ ವಿಜಯಾಕಾಂಕ್ಷಿಗಳಾದ ಶತ್ರುಗಳನ್ನೂ ಮುರಿಬಡಿದು . . . ಅಧಿಪತಿಯಾದನು (ಕನಾಗ. ೫೭). [ಮುರಿ$_1$ + ಬಡಿ$_1$]

**ಮುರಿಮಲಕು** (ನಾ). (ಬಟ್ಟೆಯನ್ನು) ತಿರಿಚಿ ಹಾಕಿದ ಗಂಟು : ಕಳಶ ಜಲದಲಿ ಮಿಯ್ಯ ನೆತ್ತರ ತೊಳೆದು ಪೊಸಮಡಿವರ್ಗದಲಿ ಮುರಿಮಲಕ ಬಿಗಿದನು (ಕುಮಾ.ಕ. ೨೪-೨೪). [ಮುರಿ$_1$ + ಮಲಕು$_2$]

**ಮುರಿಮೀಸೆ** (ನಾ). ಹುರಿಮಾಡಿದ ಮೀಸೆ ; ಹೊಸೆದ ಮೀಸೆ : ನಿಡಿಯೊಡಲ ಮುರಿಮೀಸೆಗಳ ಕೆಂಪಡರ್ದ ಕಂಗಳ. ಹೊಳೆವ ದಾಡೆಯ ದಡಿಗದಾನವನವನಿ ಹಜ್ಜೆಗೆ ನೆಗ್ಗಲೈತಂದ (ಕುಮಾ.ದ್ರೋ. ೦೫-೪೪) ; ಸರಸ ಸಂಗೀತವೆ ತಡವಾಡಬೇಡಮ್ಮ ಭರತರಾಜೇಂದ್ರನ ಮೊಗದಾ ಮುರಿಮೀಸೆಯಂತೆ ಮೋಹಿಸುತ ಬಾ ಬಾರೆಂದು ಕರೆವುತ ನಗುತ ಹಾಡಿದಳು (ಭರತ. ೦೧.೭೦). [ಮುರಿ$_1$ + ಮೀಸೆ]

**ಮುರಿವಡೆ** (ಕ್ರಿ). ಹೊಸೆದುಕೊಂಡಿರು ; ಹುರಿಯಾಗಿರು : ಮುರಿವಡೆದ ಮೀಸೆಗಳ ಮಕುಳಿಯ ಮಣಿಕಿರೀಟಗಳಾ ಥರಥರದ ರತ್ನಪ್ರಭಾಬಂಧುರದ ಹೊರಳಿಯುಳಿಯಲತಿಸಿಂಗರಮೆಸಗೆ (ಅಮರಾ. ೫-೨-೦೦). [ಮುರಿ$_2$ + ಪಡೆ$_1$]

**ಮುರಿವು**, ಮುರ$_1$, ಮುರವು$_1$, ಮುರಿ$_3$, ಮುರು$_1$, ಮುರುವು$_1$ (ನಾ). ೧. ಬಳುಕು ; ಕೊಂಕು : ಹರಿದು ಹಬ್ಬುವ ಬಳ್ಳಿವೆಳಗಿನ ಮುರಿವು ಮಂಡಳಿಸಿದುದು (ಕುಮಾ.ಭೀ. ೭-೩೩). ೨. ಬಾಗಿರುವುದು ; ತಿರುವು ; ಬಾಗು : ಹರಿಯ ವೀಧಿಯ ಸೋಮವೀಧಿಯ ಮುರಿವುಗಳ ಕೇರಿಗಳ ನೆಲೆಯುಪ್ಪರಿಗೆಗಳ ಹೊಂಗೆಲಸದಲಿ ಹೊಳೆಹೊಳೆದುದಾ ನಗರ (ಕುಮಾ.ಆ. ೦೮-೧೦) ; ಸೋಮ ಸೂರ್ಯರ ವೀಥಿ ಕೇರಿಗಳ ಮುರಿವುಗಳ ಮಣಿಮಯದ ರಚನೆಯಿಂ ಪೊಳೆಪೊಳೆದು ಸುರಪುರಿಗೆ ಹರಸುವಿನ ಪುರಿಗೆ ಮಿಗಿಲೆನಿಸಿತದು (ತುರಂಗ. ೦೪-೦೯). ೩. ಡೊಂಕು ; ವಕ್ರತೆ : ಮಾತಿನ ಮುರಿವುಗಳು ಗೆಲ್ಲವಲೆ ನೀ ನೆಱೆ ನೋಡು ಕೈಗುಣವ (ಕುಮಾ.ದ್ರೋ. ೦೦-೫೩). ೪. ನದಿ ಮೊದಲಾದ ಜಲಾಶಯಗಳಲ್ಲಿರುವ ಸುಳಿ.— ಚಕ್ರ : "ಚಕ್ರಾದಿ. ಪುಟಭೇದಃ—ಈ ೨ ತೋಯದ ಮುರಿವು" (ಹಲಾಯು. ೧೧೦-೪೯) ; ಮೊಱೆಮೊಱೆ ಘೂರ್ಮಿಸುವ ಪರಿವುಗಳ ಮುರಿವುಗಳ . . . ಮುನಿಜನಂ ಸೇವಿಸುವ ಭಾವಿಸುವ ಗಂಗೆಗವನಿಜೆ ಬಂದಳು (ಕೃಬಾ. ೦೯-೫). ೫. ಲೋಹದ ತಂತಿಯನ್ನು ಬಾಗಿಸಿ ಮಾಡಿರುವ, ಕಿವಿ ಅಥವಾ ಮೂಗಿಗೆ ಹಾಕಿಕೊಳ್ಳುವ ಒಂದು ಬಗೆಯ ಒಡವೆ : ಉಡಿಗಂಟೆ ಮುರಿವು ಮಾಗಾಯ್ . . . ಅಂದುಗೆ ಕಡುಚೆಲ್ವಾಗಿಪ್ಪ

ಸುತನಡಂಗಿದಂ (ಧಕಳ. ೩-೬೩). ೬. ಓಂಜರಿತ : ಹಿಮ್ಮೆಟ್ಟುವಿಕೆ ; ಹಿಂದೆ ಸರಿಯುವಿಕೆ : ಸಿಂಗದ ಮುರಿವುಂ ಮೇಷದ ಪಿಂಗುಂ ನಯವಿದರ ವಿನಯಮುಮಿಂತಿವು ಮೂಜುಂ ಭಂಗಮೆನಿಸಲ್ಕೆ ಪಡೆಯವು (ಕಂತಕಂ. ೨೬೯-೪); ಇಂದಿನೀ ಮೋಹರದ ಮುರಿವಿಪದಲ ನಿಧಾನಿಸಲರಿದು (ಕುಮ್ಮಾದ್ರೌ. ೪-೨೬). ೭. ಆವರಿಸುವಿಕೆ ; ಸುತ್ತುವರಿಯುವಿಕೆ ; ಆವರಣ : (೬). ೮. ಸುತ್ತಿರುವುದು ; ಸುತ್ತು ; ಸುರುಳಿ : ಮಿಸುಪ ಮೊಳೆಗಳ ಮುರಿವುಗಳ ನೆಣವಸೆಯ ತೊರಳೆಯ ತೊಂಗಲಿನೊಳೆಂದೆಸೆವ ಚಕ್ರವ ನೋಡಿದನು ದೈತ್ಯಾರಿ ಕೋಪದಲಿ (ಕುಮ್ಮಾಶ. ೬-೩೨). ೯. ಕುಗ್ಗುವಿಕೆ ; ಕುಸಿತ : ಇದಿರುವಂದು ಸುಮಂತ್ರನಿಳಿಗಿಳುಹಿದನು ಮುದಕರಿಯಿಂದ ಮುರಿವಿನ ಮುಂದದ ಹೊಳೆಪಶ್ವಗಳ ಸಂತಾಪದಲಿ ರಘುಪತಿಯು (ತೊರಂಗ. ೨-೨-೨೪). ೧೦. (ಕಣ್ಣು) ಮುಚ್ಚಿಕೊಳ್ಳುವಿಕೆ : ತಾರಕೆಯ ಮುರಿವುಗಳು ಕಾಣಿವ ಸಮೀರಣನ ಶಶಿಯೆಡೆಗೆ ರಜನೀನಾರಿ ತೋಳೆಡೆಗೊಟ್ಟ ಳಂಬುಜಬಂಧು ಹೊಜವಂಟ (ಕುಮ್ಮಾದ್ರೌ. ೦೭-೪೩). ೧೧. (ಮನಸ್ಸಿನ) ಓಲುವಿಕೆ ; ಹೊರಳುವಿಕೆ ; ಓಲಾಟ : ಚಿತ್ತದ ನೆಲೆಯುಜಿದು ಸೆಮ್ಮ ವುದು ಮುರಿವಿನ ಹೊಳವಜಿದು ಹಿಂಗುವುದು (ಕುಮ್ಮಾಶ. ೦೩-೨೪). ಮುರ₁ : ೫. ಕಿವಿಯಲಿ ಹೊನ್ನಿನ ಆಗಸೆಯ ಹೂ, ಮುರ; ತಲೆ ಮೋಗಡೆ ಪಾಗು (ರಾಮಚ. ೬-೦). ಮುರವು₁ : ೫. "ಮುರವು (ಮುರುವು) —ಕಿವಿಯ ಆಭರಣ" (ಶಾಪಕೋ. ೩೭). ಮುರಿ₃ : ೨. ಮುರಿಗಳಂ ಲ್ಖುರಿಗಳಂ ಕಳಿದಿವರು ಏರಿ ಕಂಡರು ಮೇಲಕಂ ಪರಿವ ಸುರನದಿಯನು (ತುರಂಗ. ೧೯-೨೩). 'ಬಲಮುರಿ' ಪರಾ. ೩. "ಕರಾಭರಣ ವಕ್ರತೆ ಬಲೀವರ್ದ ಸಮಕಟ್ಟುಗಳೊಳಂ ಮುರಿಯಲಾ" (ಕಠ್ಠಮಂ. ೦೦೬). ೫. ಬಾಲನ ಕಿವಿಗೆ ಕಡಕುಂಟು ಮುರಿಯುಂಟು (ಪುಟ್ಟಪ. ೦೦೦). ೧೨. ಗೆರೆ ; ರೇಖೆ : 'ಮುಮ್ಮುರಿ₂' ಪರಾ. ೧೩. ಧಾರೆ ; ಹೊಸಲು : ಬಿಂಜವೆಟ್ಟನಿಬಿ ತರ್ಪ ಶೋಣಾನವದೆರಡುಂ ಪೊಸಲೆಂಬಂತಿರೊಂದು ಪೃತ್ತಿಸತ್ವಣಂ ಕವಲ್ವ ರಿವ ನೆತ್ತರ ಮುರಿಯುಂ . . . ಸೋಟ್ಟುದುಂ (ರಾಮಾಶ್ವ. ೩೬-೦೪). ೧೪. ಕೈಗೆ ತೊಡುವ ಒಂದು ಬಗೆಯ ಆಭರಣ : ಪಸ್ಸದ ಮುರಿ ಮಣಿಮಯುದುಡಿದಾರ ಬೆರಳುಂಗುರ ಗೆಜ್ಜೆಯೊಂದುಗೆ ಪಾಜಿದುವಾ ಭರತ ರಾಜೇಂದ್ರನಾತ್ಮಜಗೆ (ಭರತ. ೨೫-೨೫). 'ಮುಂಗೈಮುರಾರಿ' ಪರಾ. ೧೫. ಕಬ್ಬಿನ ಗಾಣದಲ್ಲಿ ಯಂತ್ರಕ್ಕೆ ಅಳವಡಿಸುವ ಕಬ್ಬಿಣದ ಬಳೆ ಯಾಕಾರದ ಒಂದು ಬಗೆಯ ಸಾಧನ : (೬). ೧೬. ಎತ್ತು, ಕುದುರೆ ಮೊದಲಾದುವುಗಳ ತಡಿಯ ಬುಡದಲ್ಲಿ ಹಾಕುವ ಉಣ್ಣೆ ಅಥವಾ ತುಪ್ಪಳಿನ ಮೆತ್ತೆ : (೬). ೧೭. ಮಲ್ಲಯುದ್ಧದ ಒಂದು ಪಟ್ಟು, —ವರಸೆ : ಘಲ್ಲಾಬ್ಬನಮುನಂ ಜಲಂಧರಂ ಸಾಮಾಸ್ಮರಲ್ಲ ರವದಿರು ಲವಣ ಲಾಗು ಮುರಿ ಮೊದಲ ಬಗೆಯಿಂದ ಹೊಗುತ್ತಿರ್ದರು (ಏಕ್ಕಶ. ೨-೦೨-೪೦). ಮುರು₁ : ೫. "ಮುರು . . . ಕಿವಿಯೋಲೆ. ಕರ್ಣಾಭರಣ" (ಕಸೂಕೋ. ೭೩೩). ಮುರುವು₁ : ೨. ಮೂಡಲ ವಿಲ್ಲ ಹಳ್ಳದ ಮುರುವಿನಲ್ಲಿ ನೈರಾತ್ಯದ ಕೋಣೆಯೊಳ್ ನಟ್ಟ ಕಲ್ (ಮುಂಬಾರಾ. X· ೨೨೬-೫೭; 1205) ; ಕಬ್ಬಲ ಮುರುವಿನ ಇಂನೆಸಲ ನಟ್ಟ ಕಲ್ಲಿಂದ ಬಡಗ (ಎಕ. XII. ತಿಪಟೂ. ೪೨-೪೦; 1229). ೪. ಒಂದರ ತರುವಾಯ ಒಂದರಂತೆ ಮೂರು ವರ್ಷ ನದಿಯು ಮಣಿದು ಮುರುವಾಗಿದ್ದ ಮೆಟ್ಟಿನಲ್ಲಿ ಮಿಾನಗಳು ತೀರ ಕಡಮೆ ಬಂದವು (ಇಕ್ಕೇಶ. ೪೦೫). ೫. ವಾಲೆ ಮುರುವು ಬಾವುಲಿಗಳಲ್ಲಾಡುವಂತೆ (ಶೌಗಂಂ. ೨೦೭-೦೬). ೧೭. ಪರಿದು ಬೇಹಿನ ಚರರು . . . ಕಟಕದ ಗಜಬಜವನಲ್ಲಲ್ಲಿ ಪಾಣಿಸುತ ನೆರವಿ ನಗೆಗೆಡೆಯಾಗೆ ಮುಸುಕಿನ ಮುರುವಿನಲಿ ಪಾಳಯದ ಹೊಕ್ಕರು (ಕುಮ್ಮಾದ್ರೌ. ೬-೪೬); ಪಟುಭಟರು ತಿರುವಿನೊಳ್ ಮುರುವಿನೊಳ್ ಹುರಿಕಟಿಸಿ ಬೊಬ್ಬಿರಿದು ಮಾರ್ಮಲೆತರು (ತುರಂಗ. ೫೭-೫೫). [ಮುರಿ₁ + — ವು]

ಮುರಿವೋಗು (ಕ್ರಿ). ವಕ್ರತೆಯನ್ನು ಹೊಂದು : ಬಾಗುವಿಕೆಯನ್ನು ಪಡೆ : ಹೊಗೆ ಮುರುತನಿಂದ ಮುರಿವೋಗಿ ಬಸದೆಗೆ ತೆರಳಿ ಬರ್ಪ ವಿಧಿಗಳ ಪರಿಪೂತವೆಂದೆನಿಸಿ ಸಂದುದಂದು (ಬಲೀಚ. ೦-೯೩). [ಮುರಿ₂ + ಪೋಗು₁ (<ಪೋ₁)]

ಮುರಿಸು₁ 'ಮುಱಿಯಿಸು' ನೋ.

ಮುರಿಸು₂ (ನಾ). ವಕ್ರ ; ಡೊಂಕು : ಅಪ್ಪಾದಿಡ್ಡಿ : ಆ ಬೊಕ್ಕಸಿಂಗನ ಕ್ರೂರಾಸಿವಿಘಾತಿಯಿಂ ಸದಾಶಿವನಾಯಕಂ . . . ವೆಗಲ್ವಿಡಿದು ನಡುವೆನ್ನಿಂ ಬರಂ ಮುರಿಸಾದ ಮುಸೆದೋರಲಾಗಳಾ ಗಾಯಮುಂ ಸ್ಮರಿಸಿ (ಕೆಳಪ್ಕೃ. ೨-೬). [ಮುರಿ₁ + — ಸು₃]

ಮುರಿಹ (ನಾ). ತಿರುಚುವಿಕೆ ; ನುಲಿತ : ಮೊಲನಂತೆ ಬಡಿಪಕ್ಕೆ ವಂದು ಮುಡಿಯಂತೆ ಮುರಿಹಕ್ಕೆ ವಂದು (ಧರ್ಮಾಮ್ಸ. ೩-೭೭). [ಮುರಿ₁ + — ಹ₂ (<—ಪ₂)]

ಮುರಿಹು 'ಮುರಿಪು₁' ನೋ.

ಮುರು₁ 'ಮುರಿವು' ನೋ.

ಮುರು₂ 'ಮುರುವು' ನೋ.

ಮುರುಂಗಿ (ನಾ). ಒಂದು ಬಗೆಯ ಸಸ್ಯ : ನುಗ್ಗೆ : "ಮುರುಂಡ— ಮುರುಂಗಿ, ಸಿಗುಡಿತ. ಕಾಡನುಗ್ಗಿ" (ಓಕಂ. ೦೩೩). [ಸಂ. ಮುರುಂಗೀ]

ಮುರುಂಟಿಸು, ಮುರುಟಿಸು₁ (ಕ್ರಿ.) ೧.(ಚಳಿ, ಭಯ ಮುಂತಾದುವು ಗಳಿಂದ) ಕುಗ್ಗಿಸು ; ಮುದುಡುವಂತೆ ಮಾಡು ; ಮುದುರಿಸು : ಉಜಿ ಹಿಮಂ ನೆಸೆವ ಮನಮಂ ಮುರುಂಟಿಪುದಯ್ಯೋ (ಶಾಪಂತ. ೪-೦೨೬ ರಗಳೆ) ; ಚಿತ್ತದೊಳಾಕುಳಿ ಸುಯ್ಯು ಸುಯ್ಲನಿಂ ತನ್ನ ಕರಾಗ್ರಪಂಕಜ ಮನೆಯ್ದೆ ಮುರುಂಟಿಸುತಿರ್ಪಳಾಪಗಂ (ಶಾರಷ್ಠ. ೩-೬). ಮುರುಟಿಸು₁ : ೧. ಮುತ್ತಿ ನೆರೆತಿಹ ಜೀವಜಾಳರಿಗೆತ್ತಿ ಕಾಮುಗ್ರಹವಿಕಾರತೆ ಮುತ್ತಿ ಮುರುಟಿಸುತಿರ್ಮುದೇನೆಂದೆಂಬೆನಚ್ಚರಿಯು (ಕೃಶುಲೀ. ೩-೦೩) ; ಕೈಮೀರಿ ದವರನ್ನು ಹೊತ್ತು ಹೊಗಳಿ, ಮೀರದವರನ್ನು ಮುರುಟಿಸಿ ಮುಕ್ಕುವುದು ಚಳಗಾಲಪುರುಷನ ವಿಶಿಷ್ಟವಾದ ರಾಜನೀತಿ (ಏಳಬಂ. ೨೦). ೨. ತಿರುಚು : ಸೊಟ್ಟಮಾಡು : "ಎಷ್ಟು ದಿನ ಹೀಗೆ ಬ್ರಹ್ಮಚಾರಿ ಕೊರಡಾಗಿರು ತ್ತಾನಂತೆ ಅವನು" ಎಂದು ಮುಖ ಮುರುಟಿಸಿ ಹೇಳುವುದನ್ನು ಕೇಳಿ (ಕೃಶ್ಟಪೂ. ೨೬೦). [ಮುರುಂಟು₁ + — ಇಸು₁]

ಮುರುಂಟು₁, ಮುರುಟು₁, ಮುರುಡು₁ (ಕ್ರಿ). ೧. (ಎಲೆ, ಬಳ್ಳಿ, ಮುಂತಾದುವು) ಸುರುಟಿಕೊಳ್ಳು : ಮೇಗಣ ನಾಲ್ಕುಜೊಳ್ಳೆದಜ ಮೇಗಣಭಾಗದೊಳಗುರ್ವು ಘರ್ಮಂ ಪಿಮದಿಂದಾಗಳ್ ಮುರುಂಟುವರ್ ಮಂಭಾಗದೊಳಟಜಪಜಿಳೆನ್ನವೇಟುಂ ಸರಕಂ (ಅಂಕೃ. ೫-೮೨) ; ಗೆಂಟಾಗಿ ವಿಕಾಸಕ್ಕೆ ಮುರುಂಟಿದ ಮಲ್ಲಿಗೆಯುಸಲರಿಪಂತೆ ವಸಂತಂ . . . ಪೊಕ್ಕಂ (ಅರ್ಜಪ. ೪-೦೯೯). ೨. ಸೊಟ್ಟಾಗು ; ಡೊಂಕಾಗು ; ವಕ್ರಗೊಳ್ಳು : ತಾಂ ತೊನ್ನನಾಗಿ ಮುರುಂಟಿದ ಕೈಯುಂ ಕಾಲುಂ ಬೆರಸು . . . ಲೋಗರ ಮನೆಗಳೊಳ್ ಭೈಕ್ಷಮಂ ಬೇಡಿ (ವಡ್ಡಾರಾ. ೦೨೨-೨೨); ಉಂಬರಕುಪ್ಪಂ ಮೂಡಿದೊಡೆಂಬಜಿಯೆ ಮುರುಂಟಿ ಬಾತು ಕೀತೊಡೆ (ಶಂಪರಿ. ೧೩-೩೪). ೩. ಕುಗ್ಗು ; ಮುದುಡು : ನೆನೆದೊಡೆ ಮನಂ ಮುರುಂಟುವ ಸೀತಳದ ನಡುವೆ ತನು ಕರಗಿ ಕೋಣಿಸುವ ಬಹಳ ಶೀತದ ನಡುವೆ ಕೊಲುವ ಹಿಮವಾತಂಗೆ ಶಿಶಿರೋಪಚಾರವದು (ಪುಲಿಚ. ೫. ೦೭೪-೨೫) ; ಮಿಥ್ಯಾವೇದಿಪೇಟಕರ್ ದಂತಿಸಂತಾನದಂತೆ ಮುರುಂಟಿಯುಂ (ಅನಂತ. ೦೪-೪೭ ವ). ಮುರುಟು₁ : ೧. ಹರಿದ ಗಾಳಿಂಗೆಸಳು ಮುರುಟಿದ ಕೊನೆ ಮುಱಿದ ನೆಜಿ ಮುತ್ತದಿಂ ತೊಜಿದು . . . ಸೊಂಪಿನ ಬಲ್ಪಪತ್ರ ಯನಾಗ ಕೊಯಿತಂದು (ಏಕಷ್ಠ. ೦೬-೫೦); ವೃಕ್ಷಗಳು ಯಲೆ ಮುರುಟಿದವು (ಕಂಶ. ೧೦೫-೨೦). ೨. ಕುಚಸೊಸಲಬಿಗಣ್ಣೊಜಿವಾಯ್ ಹಪ್ಪ

ಮೂಗಂ ಮುರುಟಿದ ಕಿವಿ (ಮುಕೋತ. ೨-೩೮) ; ಪಿರಿದಪ್ಪ ನೀರಡಿಕೆಯಿಂ ರಸವನು . . . ಪಾನವ ಮಾಡುವೆನೆಂದೆನ್ನ ಕರವ ನೀಡುವ ಸಮಯದೊಳು ಇದಜಿಸೊಳು ಮುರುಟಿದವೆನ್ನೀ ಹಸ್ತಗಳು (ಶೇಬಸಂ. ೦೦-೨೨೫) : ಮುರುಟಿದವು ರಸ ಸೋಂಕೆ ತನ್ನಯ ಕರಚರಣ (ಶಾಶ್ವ.ಶಾ. ೦೭-೬೫). ೩. ಅರಗು ತಿಂದು ಕರಗುವ ದೈವವ ಉರಿಯ ಕಂಡರೆ ಮುರುಟುವ ದೈವವನೆಂತು ಸರಿಯೆಂಬೆನಯ್ಯಾ (ಬಸವ. ೫೫೬) ; ಒಮ್ಮೆ ಊಟ ಮುಗಿದು ಬಿಟ್ಟತೆಂದರೆ ತಾಯಿ ಹಾಸಿಕೊಟ್ಟ ಚಾಪೆಯಲ್ಲಿ ಮುರುಟಿ ಬಿದ್ದುಕೊಳ್ಳುತ್ತಿದ್ದೆ (ಮುಂಗಾಮು. ೬೮). ೪. ಸುಕ್ಕಾಗಿರು ; ನೆರಿಗೆಗಳಿಂದ ಕೂಡಿರು : ಕೊಂಕಿದ ಕೋಡಿನ ಮುರುಟಿದ ಮುಸುಡಿನ ಹಳ್ಳದ ಮೂಗಿನ . . . ಮೃಗವಿದಿಗೋ (ಶಾವಗೀ. ೪೪೭). ೫. ಕೀಳು ; ಚಿವುಟು ; ಕೊಯ್ಯು : ಮೊಳೆಯಲ್ಲಿ ಮುರುಟುವುದನದು ಬಲಿದ ಬಳಿಕ ಮುರುಟಬಪ್ಪುದೆ (ಶಬ್ದ.ಚ. ೨-೯೦);ಮುರುಟಿದೆಯಲಾ ನೀನೆ ಮಳ್ಳಿ ನೀನೆ ಬೆಳೆದ ಬಯಕೆ ಬಳ್ಳಿ ! (ಅಹಲ್ಯ. ೫೩-೦೮). ಮುರುಡು₁ : ೩. ತವರುಮನೆಯ ವಿಚಾರದಿಂದ ಅವಳ ಮನಸ್ಸು ಭಾರವಾಗಿತ್ತು. ಮನಸ್ಸು ಮುರುಡಿ ಕೊಂಡಿತ್ತು (ರಪಂ. ೦೬೦).

ಮುರುಟಿಕೊಳ್ಳು = ಮುದುಡಿಕೊಳ್ಳು ; ಸುರುಟಿಕೊಳ್ಳು : ಯಶೋದೆ . . . ಮಲಗಿದಲ್ಲೆ ಮುರುಟಿಕೊಂಡಳು (ವಾತ್ಸ. ೦) : ನೀನು ಬೇರೆಯಾಹುಳು ಕಂಡಿದ್ದೀಯಲ್ಲ, ಅದನ್ನು ಮುಟ್ಟಿದರೆ . . . ಥಟ್ಟನೆ ಮುರುಟಿಕೊಂಡು ಮಲಗಿ ಬಿಡುತ್ತದೆ (ಮುಕ್ತ. ೭೦).

[ದೇ.॥ ಮಲ. ಮುರಟು ; ತುಳು. ಮುರುಂಟು]

ಮುರುಂಟು₂, ಮುರುಟು₂ (ಕ್ರಿ). ೧. ಬೆಂಕಿಯನ್ನು ಹೊತ್ತಿಸು ; ಉರಿಯುವಂತೆ ಮಾಡು : "ಮುರುಂಟು — ದಹನಕರಣೇ" (ಶಮದ). ೨. ಸುಡು ; ಸೀಯು ; ಕರಿಕಾಗು : ದೇಹದ ದಾಹ ದೇಟ್ಗೆ ಗಾಜಾಪಳನೇತ್ರ ಸುಯ್ಯೆ ಮುಖಸೌರಭಸೇವೆಗಡುರ್ತು ಸಾರ್ದ ಭೃಂಗೀಪಟಳಂಗಳಾಕ್ಷಣಮುರಲ್ದುವೆಱಂಕೆ ಮುರುಂಟೆ ಧಾತ್ರಿಯೊಳ್ (ಶಬಸುಮ. ೦೩-೯೯) ; ಬೆಳಗಾಗಲೊಡಂ ಮುರುಂಟೆ ಬಿರ್ದಿರ್ದಾಱುಂ ಪೆಣಂಗಳಂ ಕಂಡು (ಮುಚಾಸೇ. ೯-೫೭ ವ) ; ಸಪ್ತಜಡಧಿಗಳ್ ತಕಪಕನೆ ಕುದಿದುಕ್ಕೆ ಬತ್ತುತ್ತಿರ್ದುವು ಕೆಳಗೆ ಫಣಿ ೦ರಿಗಳ ಹೆಡೆಗಳುಂ ಕೈಕಾಲ್ಗಳುಂ ಮುರುಂಟುತ್ತಿರ್ದುವು (ತೆರಪು. ೪೭-೨೫). ೩. ಬಾಡು ; ಒಣಗು ; ಬತ್ತು : ಕುಡಿ ಮುಱುವಿರ್ದೊಡಂ ಕೊನೆ ಮುರುಂಟಿದೊಡಂ ನಱುಕಿರ್ದೊಡಂ ಬೆಳೆತೋಡಪೋಣಿರ್ದೊಡಂ ಸರಜವಿಮಾ ದ್ರುಮಮೆಂವಜ್ . . . ಕರಿಯ ಮಣ್ಣುಮನೊಟ್ಟುಗೆ ಬಾಟ್ಗುಮಾ ಮರಂ(ಲೋಕೋಪ. ೬-೦೩); ಪುಷ್ಪಬಾಣಾನಿಸೆ ನಾಂಟಿ ಮುರುಂಟಿದ ಪೂವೆ ಪುಳ್ಳಿಯಾಗಿರೆ ಮನಮೆಯ್ದೆ ಬೆಂದಪ್ಪುದದಿಲ್ಲದೊಡೆಲ್ಲಿಸುದಂಗಜಾಸಳಂ (ಅರ್ಜುನ. ೪-೦೦೨) ; ನಾರಿಯುನೆಜ್ಜ ನಾದೊಡಲರೆಬು ಮುರುಂಟುಗುಮೆಂದು ಮನ್ಮಥಂ ದೂರದೊಳಿರ್ಪನೋ (ಸಳತಂ. ೦೪೭). ಮುರುಟು₂ : ೨. ಕಿಚ್ಚಂ ಪೊಕ್ಕಲ್ಲಿ ಮುರುಟಿ ಸಾಪಮುರ್ಗೊಡರ್ (ಸಪಚ. ಅನುಬಂಧ. I. ೧೨-೨೭) ; ತರಪಂಕಿಗೊಂಬುದೆ ತರಣಿಕಿರಣಸ್ಫುರಣೆಯಲಿ ಮಱಿಮಾಡಿದೆನು ತಪ್ಪಂಗೆ ಪಕ್ಷಗಳ ಮುರುಟಿ [ಶಾಕಾಂ. ಡಿ]ದವು ತನ್ನುಭಯಪಾರ್ಶ್ವದ ನಿರಿಕಿಶಯಪಕ್ಷಗಳು (ಕೋರಂ. ೪-೦೦-೦೪). ೩. ಉಷ್ಣಕರನ ೦ರಂಗಳ್ ಪರೆಯುವ ಮುಟ್ಟದ ಮುನ್ನವೆ ಮುರುಟಿದುವೆನೆ ಮುಗಿದುವುತ್ಪಲಪ್ರಕರಂಗಳ್ (ರಾಜಾವ. ೩-೬) ; ಈ ತೊತ್ತಿನ್ನ ಬಂಲಿದ ಕುಡಿ ಮುರುಟಿತು (ಹಶಕಾ. ೦೨-೦೦). ೪. ಇಲ್ಲವಾಗು ; ನಾಶಹೊಂದು ; ಹಾಳಾಗು : ಬಂದು ನುಡಿಯುಂ ತಲೆದೋಱದು ಚಿತ್ರದುತ್ಸವಂ ಮುರುಟಿತು (ರಕಶು. ೫-೫೭) ; ಯುಕುತಿ ಮುಸುಳಿಸದ ಗುಣಕಿಡದ ಸತ್ಯಾಪರಣ ಮುರುಟದಿಹ ಘನವಿತರಣ (ಶಶಿ. ೪-೫೦) ; ಅಚ್ಚಳಿಯದ ಆ ಪ್ರೇಮಕ್ಕೇನಾಯಿತು ? ಅದು ಹಾಗೆಯೇ ಮುರುಟಿತೆ ? (ಮೂಶಕ. ೪೦).

ಮುರುಟಿಹೋಗು = ೧. ಬಾಡು ; ಬತ್ತು ; ಒಣಗು . ಅವಳ ಆಸೆಯ ಕುಡಿ ಮುರುಟಿಹೋಗಿತ್ತು (ವಾಗಶಾ. ೬೮) ; ಅವರ ಎದೆಯ ಆಶೆ-ಆಕಾಂಕ್ಷೆಗಳು ಮರದಿಂದ ಕಿತ್ತು ಬಿಸಿಲಿಗೆ ಎಸೆದ ಮೊಂದಲೆಗಳಂತೆ ಆರಕ್ಷಣದಲ್ಲಿ ಮುರುಟಿಹೋಗುತ್ತಿದ್ದುವು (ಭೂಕಮ. ೦೮). ೨. ನಾಶವಾಗು; ಹಾಳಾಗು; ಈ ಹಾಳುಊರಿನಲ್ಲಿ ಮುರುಟಿ ಹೋಗ ಬಾರದು ಇವನ ಪ್ರತಿಭೆ (ಮುಶುರುದ. ೦೫೬). [ದೇ.॥ ತಮಿ. ಮಲ. ಮುರುಟ್ಟು]

ಮುರುಕ₁ 'ಮುಱುಕ್ಕ₂' ನೋ.

ಮುರುಕ₂ 'ಮುಱುಕ್ಕು₂' ನೋ.

ಮುರುಕಲು, ಮುರಕಲು (ನಾ). ೧. ಮುರಿದುದು : ಚೂರು : ತುಂಡು : ಪೆಟ್ಟುಣಗಳಿದ್ದ ಚಕ್ಕಳಿಯೆಲ್ಲ ಮುರುಕಲಾಗಿಬಿಟ್ಟವೆ (ರೂಢಿ). (ಗು). ೨. ಮುರಿದ : ಭಗ್ನವಾದ : ಅದರಲ್ಲಿ ಇದ್ದು ದೆಂದರೆ ಫಲಕೊಡುವಂತಹ ಹತ್ತೆಂಟು ತೆಂಗಿನ ಮರಗಳು ; ಮತ್ತೊಂದು ಮುರುಕಲು ಗುಡಿಸಲು (ತಾರುದಾ. ೨೦೩); ಮೊದಲು ಮೊದಲು ಮುರುಕಲು ಮಂಟಪವಿತ್ತು (ಹುಟ್ಟಿಹ. ೬೨). ಮುರಕಲು : ಆ ಮುರಕಲು ಮನೆಗೆ ವೃಥಾ ತೇಪೆಹಾಕಿದರೆ ಏನು ಪ್ರಯೋಜನ ? (ಯೋರಕೃ. ೨೮).

[ ಮುರುಕು₃ ( < ಮುಱುಕು ) + -ಅಲು ( < -ಅಲ್₂ ) ]

ಮುರುಕಳಿ, ಮುರಕಳಿ (ನಾ). ಮುರಿಯುವ ಸ್ಥಿತಿ ; ಭಗ್ನಾವಸ್ಥೆ : ಚಪ್ಪರದ ಹಲಭಾಗವು ಮುರುಕಳಿಗೆ ಬಂದಿತ್ತು (ಅಂಚಿ. ೨೮). ಮುರಕಳಿ: ಹಾಳಾಗಿದ್ದ ಉದ್ಯಾನಗಳೂ, ಮುರಕಳಿಗೆ ಬಂದಿದ್ದ ಕೃತಕಾದ್ರಿಗಳೂ . . . ದುಃಖದಾಯಕವಾಗಿ ನಾಯಕನ ಮೈಯಲ್ಲಿ ನಡುಗನ್ನು ಹುಟ್ಟಿಸಲು (ಶುಮುಬು. ೫). 'ಸವಕಳಿ' ನೋ. [ < ಮುರುಕಲು ]

ಮುರುಕಾಟ (ನಾ). ಬಿಂಕ ; ಬಿನ್ನಾಣ : ಆಟ ಮುಗಿಯಿತು, ಗಂಗೆಯ ಮುರುಕಾಟ ಮುಗಿಯಲಿಲ್ಲ (ಸುಷಂ. ೬೨).

[ ಮುರುಕು₂ ( < ಮುಱುಕು₂ ) + ಆಟ ]

ಮುರುಕಿಲು 'ಮುಱುಕಿಲ್₂' ನೋ.

ಮುರುಕು₁ 'ಮುಱುಕು₁' ನೋ.

ಮುರುಕು₂ 'ಮುಱುಕು₂' ನೋ.

ಮುರುಕು₃ 'ಮುಱುಕು' ನೋ.

ಮುರುಕುನುಡಿ (ನಾ). ಒಯ್ಯಾರದ ಮಾತು ; ಬಿಂಕದ ನುಡಿ : ಮುರುಕುನುಡಿ . . . ಚವುಳನುಡಿಗಳಿಂ ಪುರುಷರನು ಬೆಗಡುಗೊಳಿಸುವ ಬನ್ನಣೆಯ ನುಡಿಯ ಭಾವೆಯರು ಬರುತಿರ್ದರು (ಪಪಕೋ. ೨೪-೮೫)

[ ಮುರುಕು₂ ( < ಮುಱುಕು₂ ) + ನುಡಿ₂ ]

ಮುರುಕೆ 'ಮುರಿಕೆ₂' ನೋ.

ಮುರುಗ, ಮುರುಘ (ನಾ). ೧. ಒಬ್ಬ ದೇವತೆಯ ಹೆಸರು : ಸುಬ್ರಹ್ಮಣ್ಯ ; "ಷಣ್ಮುಖದೇವ" (ಕ್ರಿಶಬ್ದ). ಮುರುಘ : ೨. ಅರುವತ್ತುಮೂವರು ಪುರಾತನರಲ್ಲಿ ಒಬ್ಬನ ಹೆಸರು : "ಮುರುಘ-ಷಣ್ಮುಖಸ್ವಾಮಿ, ಅರುವತ್ತುಮೂವರಲ್ಲಿ ಒಬ್ಬ ಶರಣ" (ಶಿಸ್ತಿಶಾ. ೨೪-೬).

[ ದೇ.॥ ತಮಿ. ಮುರುಕನ್ ; ಮಲ. ಮುರುಗನ್ ]

ಮುರುಗಕಾಯಿ 'ಮುರ್ಗಿಕಾಯಿ' ನೋ.

ಮುರುಗಡೆ 'ಮುರಗಡೆ' ನೋ.

ಮುರುಗಿಕಾಯಿ 'ಮುರ್ಗಿಕಾಯಿ' ನೋ.

ಮುರುಗಿನ ಮರ, ಮುರಿಗಿನಮರ (ನಾ). ಒಂದು ಬಗೆಯ ಮರ : "ಮುಷ್ಕರಃ — ಮುರುಗಿನ ಮರ" (ಟಕಾ. ೦೨೬). ಮುರಿಗಿನಮರ : "ವಿಘಾಂಡೀ — ಆವರ್ತಿಕೆ, ಮುರಿಗಿನಮರ" (ಟಕಾ. ೦೫೪).

[ ಮುರುಗು₁ + ಮರ₁. / ತಮಿ. ಮುರುಙ್ಕೈ = ನುಗ್ಗೆಮರ. / ಸಂ. ಮುರುಂಗೀ = ನುಗ್ಗೆ ]

**ಮುರುಗುಟ್ಟು** (ಕ್ರಿ). ಮುರಮುರ ಎಂದು ಶಬ್ದಮಾಡು : ಕೈಯಲ್ಲಿ ಕಾಗದ ಮುರುಗುಟ್ಟಿತು (ಎರಾತ. ೯೮). [ <ಮುರಮುರ + ಕಟ್ಟು$_1$ ]

**ಮುರುಗೆ** (ನಾ). (?) : ಮತ್ತೆ ನೋಡಿದ ಜೈನವಳಕದಿರೆತ್ತಿ ಮುರುಗೆಯ ನೆತ್ತಿ ಸೇವರಿಸುತ್ತ ಸುರಗಿಯ ಕಿತ್ತು ಪೊಕ್ಕನು ವೀರಬೊಪ್ಪೆಯಲಿ (ಶರಂ: ೫೩೭-೦೮). [ ? ]

**ಮುರುಘ** ' ಮುರುಗ ' ನೋ.

**ಮುರುಚು** ' ಮುರಿಚು ' ನೋ.

**ಮುರುಜ**, ಮುರುಜೆ (ನಾ). ಒಂದು ಬಗೆಯ ವಾದ್ಯ ; ಮುರಜ : ಧುರಕೆ ನಿಲೆ ಮುರುಜ ಡಿಂಡಿಮ ಪಟಹ . . . ಮೃದಂಗಚಯ ಮೊರೆದವು (ಕುರಂಗ. ೫೭-೯೭) ; ಧರೆಯ ನೃಪರಾರಾವಡಿಯುಮಿಾ ಮುರುಜವನು ಭಾಜಿಸಿಯು ಮೆಚ್ಚಿಸಿ ತರುಣಿಮಣಿಯನು ಗೆಲ್ವುದು (ನಾಗಷ. ೨೨-೪೦). **ಮುರುಜೆ** : ಬಿಡದೆ ನಿಂದಿಪ ದುರ್ಜನನ ಬಾಯಿಗೆ ತುತ್ತನೊಡನಿತ್ತು ನುತಿಸಿಕೊಂಬಂತೆ ಕಡುಹೀನರವಗೆಪ್ಪು ಮುರುಜೆಗನ್ನವನಿಟ್ಟು ನುಡಿಸಿದ ಕುಶಲದಿಂದವನು (ಕವಿಂಶಾ. ೯-೮೪). ' ಮುರವ$_2$ ' ಪರಾ.

[ <ಸಂ. ಮುರಜ ]

**ಮುರುಜೆ** ' ಮುರುಜ ' ನೋ.

**ಮುರುಟಿಸು$_1$** ' ಮುರುಂಟಿಸು ' ನೋ.

**ಮುರುಟಿಸು$_2$** (ಕ್ರಿ). ೧. ಚಿವುಟು ; ಕೀಳು ; ಕತ್ತರಿಸು : ಮೊಳೆಯಲೇ ಮುರುಟ[ಶಾಕಾಂ. ಡಿ]ಸಲು ಬೇಹುದು ಬಲಿದ ಬಳಿಕದು ನಿನ್ನ ಹವಣೇ (ಕುವ್ಯಾ.ಕ. ೬-೦೮). ೨. ಇಲ್ಲವಾಗಿಸು ; ನಿರ್ನಾಮಮಾಡು ; ನಾಶಗೊಳಿಸು : ಬಳಿಯುಗುಡದೆ ತನಗಹಿತರಾದವರನು ಮೊಳೆಯೊಳೆ ಮುರುಟಿಸಬೇಕು (ಮೋಹತ. ೦೦-೦೨) ; ನಾನು ಕೊನರಿದ ಆಸೆಯನ್ನು ಅಲ್ಲಿಗೇ ಮುರುಟಿಸಿಕೊಂಡು ಡ್ರಾಯಿಂಗರೂಮಿನಿಂದ ಹೊರಗಾದೆ (ಮುಸಳೂ. ೬೬). [ ಮುರುಟು$_1$ ( < ಮುರುಂಟು$_1$ ) + — ಇಸು$_3$ ]

**ಮುರುಟು$_1$** ' ಮುರುಂಟು$_1$ ' ನೋ.

**ಮುರುಟು$_2$** ' ಮುರುಂಟು$_2$ ' ನೋ.

**ಮುರುಟು$_3$**, ಮುರಡು, ಮುರುಡು$_2$ (ನಾ). ೧. ತಿರುಚಿಕೊಂಡಿರುವುದು ; ಡೊಂಕಾದುದು ; ಸೊಟ್ಟಗಿರುವುದು : ' ಮುರುಟು ಗಟ್ಟು ' ಪರಾ. ೨. ಮುದುಡಿಯಾದುದು ; ಮುದ್ದೆ : (ಕ). ೩. ಮೂಲೆ : ವಾಮನಮುದ್ರೆ ತಿದ್ದಿಯಿರುವ ಮುರುಟ ಹುಚ್ಚಿಗಲ್ಲು ೧ (ಎಕ. XIV, ಮೈಸೂರು. ೦೦೫-೩೬೨ ; 1674) ; ಇದಕ್ಕೆ ವಾಯುವ್ಯದ ಮುರುಟೀ ಮೂಡಪತ್ತಿನಲ್ಲಿ ಈಶಾನ್ಯ ಮುಖವಾಸೆ ೧ (ಎಕ. III, ತಿರುಮ. ೬೩-೯೩೭ ; 1748.) (ಗು). ೪. ಡೊಂಕಾಗಿರುವ ; ಸೊಟ್ಟಗಿರುವ ; ವಕ್ರವಾದ : ಛಂದೋಲಂಕಾರಲಕ್ಷಣಗಳ ಕುಂದ ನೋಡದೆ ಪುಣ್ಯಕಥೆಯ ಒಂದನೆ ನೋಡಿ ಮುರುಟುಚೇದನದೊಳು ಗಂಧಮ ಮುಖ್ಯವೆಂತಂತೆ ಆ ಕಥೆಯನು ಪೇಳ್ದರಾರೆನೆ (ಕಾಂತಿತ. ೦-೦೨). **ಮುರಡು** : ೫. ಕೀಳಾದ : ಕ್ಷುದ್ರವಾದ : ಬಾರಿಬಾರಿಗೆ ನಿಮ್ಮ ಹಾರೈಸಿ ಆಸೆಂಬ ವಾರಿಧಿಯಲಿ ಮಗ್ನರಾಗಿ ತಾರರು ಮನಸಿಗೆ ಮುರಡುದೇವತೆಗಳ ಸಾರಹೃದಯರು ನಿಂದಿಪರು (ಅಣಾಕ್ಕ. ೭೭-೫). **ಮುರುಡು$_2$** : ೧. ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ ಸ್ಮರಚಾಪಮನಿಱಿಕಿಲ್ವುದೆ (ಧುಕೋಡ. ೨-೪೨) ; ಬಿಳನೋಟ ಕುರುಡು ಕೈಕಾಲು ಮುರುಡು ಕುಟ್ಟುತ್ತಿರುವೆ, ತವುಡು (ತಂದ್ರಮಾ. ೩-೦). ೬. ಬಾಗಿರುವ ಭಾಗ : ಪಚ್ಚೆಯ ಬಟ್ಟಲೊಳ್ ಶಂಖದ ಮುರುಡನಿಟ್ಟಿರ್ಪಂತೆ ತಾವರೆಯೆಲೆಯೊಳಿಪೆ ಮಿಡುಕದೆ ಕುಳ್ಳಿರ್ಪ ತರುಣಮರಾಳಂಗಳ್ (ಲೀಲಾವ. ೭-೭೯ ವ) ; ಶರಧಿಯ ನೊರೆಯುಂ ಶಂಖದ ಮುರುಡುಂ ಪೊಸ ಚಲ್ಲಗೊಟ್ಟೆಯುಂ ಮಣಿಶಿಲೆಯುಂ ಪರಿಯಾಗಿರೆ ಮಧುವಿಂದಿಡೆ ಪರಿಹರಿಕುಂ ಕಣ್ಣ ಪೂಗಳಂತರ್ಕ್ಷಣದಿಂ (ಗೋಮ್ಮಟ. ೨೦೦-೩೨). ೭. ಗೂನು ; ಡೂಗು : ತಿರುಜ್ಞಾನಸಂಬಂಧಿ ಸೋಂಕಿದ ಮಾತ್ರದಿ ಮುರುಡೆಲ್ಲ ಪೋಗಿ ರುಜುವಾಗಿ ನಿಂದಿರಲು (ಸೌಂದಪು. ೦೨-೮೮). [ < ಮುರುಂಟು$_1$ ]

**ಮುರುಟುಕೂದಲು** (ನಾ). ವಕ್ರವಾಗಿರುವ ಕೂದಲು ; ಡೊಂಕು ಡೊಂಕಾಗಿ ಬೆಳೆದಿರುವ ಕೂದಲು : ಅಳಿಕುಂತಳಂದ ಮುರುಟು ಕೂದಲಾ ಬಲುಸಿಂಹನಡುವೆಂದ ಮೊಸಳೆಂತ ನಡುವನು (ತದಾರ. ೩೪-೬). [ ಮುರುಟು$_1$ ( < ಮುರುಂಟು$_1$) + ಕೂದಲು ( < ಕೂಂದಲ್)]

**ಮುರುಟುಗಟ್ಟು** (ಕ್ರಿ). ಡೊಂಕಾಗು ; ಸೊಟ್ಟಾಗು : ಮುಡುಬರಾ ದರ್ಕಲರು ಕೈಕಾಲ್ಮುರುಟುಗಟ್ಟಿ ಗುಡುಗುರಿಸೆ ಕೆಲರು (ತತು. ೯-೫-೩೯). [ ಮುರುಟು$_3$ + ಕಟ್ಟು$_1$ ]

**ಮುರುಟುಗೈ** (ನಾ). ವಕ್ರವಾಗಿರುವ ಕೈ ; ಸೊಟ್ಟಗಿರುವ ಕೈ : ಮುರುಟುಗೈ[ಶಾಕಾಂ. ಕೆಯ್]ಮೋಟುಗಳ ಕೌಟಿಲ ವಿಕರದೊಂದೆಸೆಯ . . . ವಿಗತಾಂಬರದ ಭಟರೊಂದೆಸೆಯ ಕಾಣಿಸಿತನಿಲನಂದನಗೆ (ಕೂರಣ. ೫-೬-೬೭). [ಮುರುಟು$_3$ + ಕೈ$_2$ (<ಕೆಯ್$_2$) ]

**ಮುರುಟುರೋಗ** (ನಾ). ದೇಹದ ಅಂಗಾಂಗಗಳು ತಿರುಚಿಕೊಳ್ಳುವ ಒಂದು ಬಗೆಯ ರೋಗ : ಅಪರ ದೇಹಗಳಲ್ಲಿ ಉಳಿದವುಗಳೆಂದರೆ ಎಲುವಿನ ಹಂದರಗಳು ಮಾತ್ರ. ಮುರುಟುರೋಗದಿಂದ ಸತ್ತಿರಬೇಕೆಂದೆನಿಸಿತು (ಅನ್ನಬಾ. ೫). [ಮುರುಟು$_1$ (<ಮುರುಂಟು$_1$) + ರೋಗ]

**ಮುರುಟುಹ** (ನಾ). ಮುದುಡುವುದು ; ಸಂಕುಚಿತವಾಗುವುದು : ಹತ್ತಿದರೆ ಮುರುಟುಹಂ ರಕ್ತಪದಿ ಶೀಘ್ರಯದು (ಪುಂಗರಾ. ೯೩-೯೩). [ಮುರುಟು$_1$ (< ಮುರುಂಟು$_1$) + — ಹ$_2$ (< — ಪ$_2$)]

**ಮುರುಡ$_1$**, ಮೊರಟ, ಮೊರಡ(ನಾ). ೧. ಮೈಯೆಲ್ಲಾ ಗಂಟುಗಂಟಾಗಿರುವವನು : ಕುಂಟನಾಗುವ ಮುರುಡನಾಗುವ ಕನ್ನವಿಕ್ಕುವ . . . ಮುನ್ನ ಸೊಡ್ಡಳನ ಆರಾಧನೆ ಇಲ್ಲದ ಕುನ್ನಿಗಳಿಗೆಲ್ಲಾ ಈ ವಿಧಿ ತಪ್ಪದು (ಸರ್ವವ. ೦೭೯-೭೮೭) ; ಗೊರವನ ರೂಪಮನಾ ನೀರುಮನುಪಸಂಹರಿಸಿ ಗುಜ್ಜನುಂ ಪೊಱಂಡನು[೦] ಮುರುಡನುಮಾಗಿ ಬರೆ ಕೇಡ[ಪರ್ ನಗೆ] (ಬಂಹಂ. ೯-೨೫ ವ) ; ತಾಳಕಾಯ ಮೋಳಿಗೆಯೊಂದಂದದ ಮುರುಡನಷ್ಟವಕ್ರಂ ಮೊದಲೊಣಗಿದ ಕೂಸಗೊಂಜಿನಂದದೆ ಕೊಂಕಂ (ಧುಕೋಡ. ೨-೪೦). ೨. ಒರಟುಸ್ವಭಾವದವನು ; ಉದ್ಧತ ; ಅನಾಗರಿಕ : ಸುರೆಯಿಂದ ಸೊಕ್ಕುವನ ಪರದೇಶಕೈದುವನ ಮುರುಡನ ನಪುಂಸಕನ . . . ಬಧಿರನ ಪೆಂಡಿರು ಪರರ ಪೆಂಡಿರಲ್ತೆ (ಜನವ. ೦೨-೯೯). **ಮೊರಟ** : ೨. ಈ ವಿಕ್ರಮರಾಯನು ಒಳ್ಳೆಯ ಬುದ್ಧಿಕೌಶಲಶಕ್ತಿಯುಕ್ತಿಶೌರ್ಯಸಾಹಸಗಳಲ್ಲಿ ಅಪ್ರತಿಮನಾಗಿರಬಹುದಾದರೂ . . . ಮೊರಟನೂ ಆಗಿರಬೇಕು (ಪಟ್ಟಿಆ. ೦೪೦-೦೦). **ಮೊರಡ** : (ಕ).

[ಮುರುಡು$_3$ (<ಮುರುಟು$_3$) + — ಅ$_7$ / ತಮಿ. ಮುರಣ್ಣನ್, ಮುರುಟನ್ ; ಮುರಟನ್ ; ಮಲ. ಮುರಟನ್]

**ಮುರುಡ$_2$** ' ಮಿಡ ' ನೋ.

**ಮುರುಡ$_3$** (ನಾ). ಒಂದು ವಣಿಕನದ ಹೆಸರು : ಮುರುಡರ ಕಾವಿಸೆಟ್ಟಿ ಮಾದಿಸೆಟ್ಟಿ ಮುಖ್ಯವಾಗಿ ಸಮಸ್ತ[ ತ ]ಳದವರುಂ ಗವಚಿರಾಜಸೆಟ್ಟಿ ಓಲೆಯ ಚಟ್ಟಿಸೆಟ್ಟಿ . . . ಹಸುಂಬೆ[ ಗೆ ]ಹಾಗವಂ ಸ್ಥಾಯಿಯಾಗಿ ಬಿಟ್ಟರು (ಕೌಂಡ. XX, ೭೮-೨೫; 1118). [ ? ]

**ಮುರುಡಸುತ** (ನಾ). ೧. ಈಶ್ವರನ ಮಗ. ೨. ಗಣಪತಿ ; ವಿಘ್ನೇಶ್ವರ: ಮುರುಡಸುತನ ಅಂಘ್ರಿಗೆ ಎರಗಿ (ಕಶಾಗೀ. ೯೨). ೩. ಷಣ್ಮುಖ.

[ಮುರುಡ$_2$ (<ಮಿಡ) + ಸುತ]

**ಮುರುಡಸೆ** (ನಾ). ಒಂದು ಬಗೆಯ ಗಿಡ : " ಆವರಿಕೆಯೆನಲ್ಕೆ ಮುರುಡಸೆ " (ಪುಂಗರಾ. ೯೨-೩೪). [ ? ]

**ಮುರುಡಿ**, ಮುರಡ್ಡಿ (ನಾ). ಕೈಬೆರಳುಗಳ ಉಂಗುರಗಳೂ ಬಳೆಗಳೂ, ಸಣ್ಣ ಸಣ್ಣ ಸರಪಣಿಗಳ ಮೂಲಕ ಒಂದಕ್ಕೊಂದು ಹೊಂದಿಕೊಂಡಿರುವಂತೆ ಇರುವ ಒಂದು ಬಗೆಯ ಹಸ್ತಾಭರಣ: ಬೆಸಲುಳಿ ಸರಪಳಿಯ ಮುಂಗೈತಳದ ಮುರುಡಿಗಳ . . . ಹಾರದ ಸುಗುಣ ಕಾಂಚಿಯ ದಾಮದಬಲೆಯುರ್ಕೆದಿದರು ಹರಿಯ . (ಅಕ್ರೂ.ಚ. ೪-೯೦). **ಮುರಡ್ಡಿ**: ನಾಯಕರು 'ಮುಂಗೈಯ ಮುರಿ, ಮುರಡಿಯ ಸರಪಳಿ, ಹೊನ್ನುಂಗುರ, ತೋಳಬಾಪುರಿ'ಗಳಿಂದ ಸಿಂಗರಿಸಿಕೊಂಡಿರುತ್ತಿದ್ದರು (ಕಣಾಗ. ೦೭೦). [?./ ತೆಲು. ಮುರಿಡಿಗೊಲುಸು = ಮುಂಗೈಗೆ ತೊಡುವ ಒಂದು ಬಗೆಯ ಆಭರಣ]

**ಮುರುಡಿಸು** (ಕ್ರಿ). ಎದುರುಬೀಳು; ವಿರೋಧಿಸು: ಗಂಡುಗಲಿಯುವನೆಂದು ಭಯದಲಿ ಕಂಡವರ ಮನ್ನಿಸುತ ಮುರುಡಿಸಿಕೊಂಡ ಮೂರ್ಖರಂ ಸದೆದು ಸಪ್ತಾಂಗಗಳ ಕೈಕೊಳುತ (ಉತ್ತ.ಕ. ೦೭-೩).

[ಮುರುಡು$_3$ + — ಇಸು$_3$]

**ಮುರುಡು$_1$** 'ಮುರುಂಟು$_1$' ನೋ.

**ಮುರುಡು$_2$** 'ಮುರುಟು$_1$' ನೋ.

**ಮುರುಡು$_3$**, ಮೊರಡು$_1$ (ನಾ). ೧. ಒರಟಾದುದು: ಬಿರುಸಾದುದು: 'ಮುರುಡುಗಲ್ಲು' ಪರಾ. ೨. (ಮರ. ಸೌದೆ ಮುಂತಾದುವುಗಳ) ಗಂಟುಗಂಟಾಗಿರುವ ಭಾಗ.-ಕೊರಡು: ಮುನಿಸ ಮುನಿವಡೆ ಶ್ರೀಗಂಧದ ಮುರುಡಿನ ಹಾಗಿರಬೇಕಪ್ಪಾ (ಸವಚ. ೭೮-೩೬೩); ಮಾಯೆ ಬಿದಿರ ಮುರುಡಿನಂತೆ (ಪಹಾರ. ೦೨). ೩. ಎದುರುಬೀಳುವುದು; ವಿರೋಧಿಸುವುದು: 'ಮುರುಡಿಸು' ಪರಾ. **ಮೊರಡು$_1$**: ೧. ನೆಲದ ಒಳಉರಿಯೆದ್ದು ತೂರಿರುವ ಮೊರಡಾದ ಸಿಲೆಯ ಸಾವಿರದ ಗುಡಿ-ಬಸದಿ-ರಥ ಗೊಮ್ಮಟರ . . . ಸುಡಿ-ಹೂವುಗಳ ತುಳಿಯುತಿಹರೊ! (ಶಾಸಿಗ. ೩೩-೦೩). ೨. ಕಾಡುಹಂದಿಯೊಂದು ಮೂತಿಯನ್ನು ಮುಂದೆ ಚಾಚಿ, ತನ್ನ ಕೋರೆದಾಡೆಗಳಿಂದ ಕಾಡುಗೆಣಸಿನ ಮೊರಡೊಂದನ್ನು ಅಗೆಯುತಿತ್ತು (ಹುಂಚಾ. ೨೫೯). [ದೇ.॥ ತಮಿ. ಮುರಣ್ಣು; ಮುರಟು, ಮುರುಟು; ಮಲ. ಮುರಟು; ತುಳು. ಮುರುಡು; ತೆಲು. ಮೊರಡು, ಪ್ರೋಡು]

**ಮುರುಡು$_4$** (ನಾ). (ಕರಾ) ಮೀಸೆಗಳುಳ್ಳ, ಒಂದು ಬಗೆಯ ಬಾವಿ ಮೀನು. [ದೇ.॥ ತುಳು. ಮೊರಂಟೆ; ತೆಲು. ಮುರುಂಡ = ಒಂದು ಬಗೆಯ ಕ್ಷುದ್ರಜಲಜಂತು]

**ಮುರುಡುಗಲ್ಲು**, ಮೊರಡುಕಲ್ಲು (ನಾ). ಒರಟಾದ ಕಲ್ಲು; ಬಿರುಸಾದ ಶಿಲೆ: ಮುರುಡುಗಲ್ಲನು ಶರಣೆಯ ಮಾಡಿತೀ ಪಾದ (ಕೃ.ಕ.ಗೀ. ೩೪-೪೩). **ಮೊರಡುಕಲ್ಲು**: ಮೊರಡುಕಲ್ಲಿಗೆ ನೀರಿನಾ ಮೃದುತರವಿಶೇಷಂ ದೊರಕುವುದೇ (ಶಿವೇಶ. ೬-೨೦). [ಮುರುಡು$_3$ + ಕಲ್ಲು (< ಕಲ್$_3$)]

**ಮುರುಡುಗೊಳ್ಳು** (ಕ್ರಿ). ಬಾಗು; ಗೂನಾಗು: ಮುರುಡುಗೊಂಡದೇಹವೇಕೀ ಪರಿಯೊಳಾಯ್ತೆನುತ ಹರಿ ಚಿಬುಕವ ಕರದೆ ಪಿಡಿದೆತ್ತಿದನು ಚರಣದೊಳುಂಗುಟವ ಮೆಟ್ಟಿ (ಅಕ್ರೂ.ಚ. ೬-೩೩).

[ಮುರುಡು$_2$ (< ಮುರುಟು$_1$) + ಕೊಳ್ಳು$_1$ (< ಕೊಳ್$_1$)]

**ಮುರುಡುಗೋಲ್** (ನಾ). ಅಂಕುಡೊಂಕಾದ ದೊಣ್ಣೆ; ಸೊಟ್ಟಗಿರುವ ಕೋಲು: 'ಮುರುಡುಗೋಲ್ವಿಡಿ' ಪರಾ.

[ಮುರುಡು$_2$ (< ಮುರುಟು$_1$) + ಕೋಲ್$_1$]

**ಮುರುಡುಗೋಲ್ವಿಡಿ** (ಕ್ರಿ). ಅಂಕುಡೊಂಕಾಗಿರುವ ಕೋಲನ್ನು ಹಿಡಿದುಕೊಳ್ಳು: ಮುರುಡುಗೋಲ್ವಿಡಿದು ತಡವರಿಸಿ ನಡೆದ ಮುದುಪಂ ಕಲಜಮುಖಿಯೊರ್ವಳೀ ಕಂಡು ಭ್ರುಮೆಗೊಂಡು (ಪುಷ್ಪ. ೮೦-೭೭).

[ಮುರುಡುಗೋಲ್ + ಪಿಡಿ$_1$]

**ಮುರುಡೇಶ್ವರ** (ನಾ). ಶಿವನ ಹೆಸರುಗಳಲ್ಲಿ ಒಂದು: ⓟ ಉತ್ತರ ಕನ್ನಡಜಿಲ್ಲೆಗೆ ಸೇರಿದ ಭಟ್ಕಳದ ಸಮೀಪದಲ್ಲಿರುವ ಮುರುಡೇಶ್ವರ ಎಂಬ ದೇವಾಲಯ ಮತ್ತು ಆ ದೇವಾಲಯವಿರುವ ಊರು: ಮುರುಡೇಶ್ವರದೇ × × × ಭೂಮಿರಾಪೋಹ್ಯುದಯಂ ಯಮುಶ್ಚ ಅಹ × × × (ಶಾ. I. ೩೭-೦೬; ಸು. 1424).

[ಮುರುಡ$_2$ (< ಮಿಡ) + ಈಶ್ವರ./ಸಂ. ಮೃಡೇಶ್ವರ]

**ಮುರುತಾಪು**, ಮುರಿತಾಪ (ನಾ). ಒಂದು ಬಗೆಯ ವಾದ್ಯ: ಕರಡೆ ಡವುಡೆ ಚಿನ್ನತಿತ್ತಿರಿ ಹೆಗ್ಗಾಳೆ ಮುರುತಾಪು ಡೋಳು . . . ಕೊಳಲ ರವ ಗಳಿಂದರಸನೈದಿದನಾಹವವ (ರಾಶಾಂ. ೦೭-೦೦೦). **ಮುರಿತಾಪ**: ಪಟಹ ಡಿಂಡಿಮುವಾದ್ಯ ಮುರಿತಾಪ ಭೇರಿ ತಂಬಟ ದಮಾಮಿಗಳಾದಿಯಲಿ ಲಟಕಟಿಸುವ ನಾನಾವಾದ್ಯ ಸಕಲದಿಕ್ತಟ ಬಿರಿವಂತೆ ಗರ್ಜಿಸಿತು (ಕೋಹಕ. ೩೭-೪).

[← ತುಳು. ಮುರ್ತಾಪ, ಮುರ್ತಾಮ = ಗರ್ವ; ಮುರ್ತಾಪದ ದೋಲು = ಒಂದು ಬಗೆಯ ಡೋಲು]

**ಮುರುದಲೆ** (ನಾ). ಅಡ್ಡರಸ್ತೆಗೆ ತಿರುಗುವ ಜಾಗ,— ಸ್ಥಳ: (೪).

[< ಮುರಿವು + — ದಲೆ]

**ಮುರುದಾರಶೃಂಗಿ** 'ಮುರದಾರಸಿಂಗಿ' ನೋ.

**ಮುರುದಾರಸಿಂಗಿ** 'ಮುರದಾರಸಿಂಗಿ' ನೋ.

**ಮುರುಪು** 'ಮುರಿಪ್ಪ$_2$' ನೋ.

**ಮುರುಮುಚ್ಚಿ** 'ಮುರುಮುರಿ' ನೋ.

**ಮುರುಮುರಚಿ** 'ಮುರುಮುರಿ' ನೋ.

**ಮುರುಮುರಿ**, ಮುರುಮುಚ್ಚಿ, ಮುರುಮುರಚಿ, ಮುರುಮುರುಚಿ (ನಾ). ಒಂದು ಬಗೆಯ ಸಸ್ಯ: ಶುಂಠಿ, ನೆಗ್ಗಿಲ ಬೇರು . . . ಕೊಮ್ಮೆ ಬೇರು ಮುರುಮುರಿಯ ಸೊಪ್ಪು, ಇವಱ ಕಷಾಯವ ಕೊಡಿಸುವುದು (ಕೃ.ಶಾ. I. ೩೩೦). **ಮುರುಮುಚ್ಚಿ**: "ದಾರ್ವೀ – ಮರದರಿಸಿನ, ಮುರುಮುಚ್ಚಿ" (೬ಕಧಿ. ೬೩); "ಮುರುಸತ್ರಾ – ಮುರುಮುಚ್ಚಿ (ಮುಂಜೆ)" (೬ಕಂ. ೦೨೬). **ಮುರುಮುರಚಿ**: "ಅರಾತಿ – ಮುರುಮುರಚಿ, ದೇವದಾಳಿ" (೬ಕಂ. ೦೦). **ಮುರುಮುರುಚಿ**: "ದಾರಿಕಾ– ಮುರುಮುರುಚಿ" (೬ಕಧಿ. ೭೫). [ದೇ.॥ ತಮಿ. ಮುರಿಮುರಿ]

**ಮುರುಮುರುಚಿ** 'ಮುರುಮುರಿ' ನೋ.

**ಮುರುವ**, ಮುರುವ$_1$, ಮುರವ$_1$ (ನಾ). ೧. ದಡ್ಡ; ಮೂರ್ಖ: ಆವೂರ ಗೌಡನ ಮನೆಯ ನಳಿನಮುಖಿಯರು ಶುಚಿಯುವಳನ ಕರೆದು ಮುರುವ ನೀಂ ಕಱೆದು ಕುಡಿದೆಯೊ ಹಾಲನು ತಿಳುವದುಸಿರು . . . ಎನೆ (ಸಿದ್ಧೇಶ್ವ. ೯-೩೯); ಸೂಳೇಗೆ ಹೋದವನು ಏನಾದ ಎಂತಾದ . . . ಆ ಮುರುವ ಸೂಳೆಕಾಲೀಗೆ ಕೆರವಾದ (ಜಾ.ಮು. ೦೦೯). ೨. ಬಡವ; ದರಿದ್ರ; ನಿರ್ಗತಿಕ: ಕತ್ತಿ ಹಿಡಿಯುವ ಕ್ಷತ್ರಿಯ; ಮೇಣಿ ಹಿಡಿಯುವ ಮುರುವನಾಗಬೇಕೇ? (ಶಿಅವು. ೦೦೦); ಕಾಣದ ಮುರುವ ಕನಸ ಕಂಡರೆ ಏಳುಬಾರಿ ಎದ್ದು ಕೂತ (ಗಾದೆ). **ಮುರುವ$_1$**: ೧. ಗಂಡಾನ ಕಾಣೀರೋ ಗಂಡ್ಸೊಟ್ಟೆ ಮುರುವಾನ . . . ಕೊಂಡ್ಹೋದ್ರು (ಜಾ.ಮು. ೦೬೩). ೨. ಹೊಟ್ಟೆಗಿಲ್ಲದೆ ಮುರುವ ಒಣಗಿ ತೆಳುವಾಗಿದ್ದ, ಕವಳ ದೊರಕಿತು ಊದಿದಾನೆ (ಪಕಾ. II. ೨೫). **ಮುರವ$_1$**: ೧. ಅಭ್ಯಾಸವಿಲ್ಲದ ಮುರವ ಔಪಾಸನ ಮಾಡಿ ಗಡ್ಡಮೀಸೆ ಸುಟ್ಟುಕೊಂಡ (ಗಾದೆ); ತಲೇಕೂದಲು ಸೆರೆಯಾದ ಮೇಲೆ ತಬ್ಬಿಕೊಂಡ ತಬ್ಬಲಿ ಮುರವ (ಗಾದೆ).

**ಮುರುವತ್ತು** 'ಮುರವತ್ತು' ನೋ.

**ಮುರುವನ ಹುಳಿ** (ನಾ). ಒಂದು ಬಗೆಯ ಸಸ್ಯ: ಮುರುವನ ಹುಳಿ, ಮುಗಲ್, ಮುರ್ಗಲ್. 'ಕೋಕಂ' ಮರ (ಪ್ರ.ಶಿ. ೩೯-೬೩೩). [?]

**ಮುರುವಿಕ್ಕು** (ಕ್ರಿ). (ದನ. ಕರು ಮುಂತಾದುವುಗಳಿಗೆ) ಕಲಗಚ್ಚನ್ನು ಇಡು.– ನೀಡು : ಮುರುವಿಕ್ಕಿ ಪೊರೆದು ಗೊಡ್ಡಂ ಕಱೆದೊಡೆ ಪಾಲುಂಟೆ (ರಾಜಶೇಖರ. ೧೦-೯೦). [ಮುರುವು₂ + ಇಕ್ಕು₁ ]

**ಮುರುವಿಡು** (ಕ್ರಿ). = ಮುರುವಿಕ್ಕು : ಮುಂಜಾನೆ ಎದ್ದು . . . ಕೊಟ್ಟಿಗೆಗೆ ಹೋಗಿ ಹಸುಗಳಿಗೆ ಮುರುವಿಟ್ಟು, ಹಾಲು ಕರೆದುಕೊಂಡು ಬರುವುದು (ದುಂಡಿ. ೯೬); ಆಕಳಿಗೆ ಮುರುವಿಟ್ಟು ಎಮ್ಮಿಗೆ ನುರುಗಿಟ್ಟು ರಂಜಣಿಗಿ ಹಾಲು ಹಿಂಡ್ಯಾರೊ (ಕನ್ನಡ. ೩೩೮).

[ ಮುರುವು₂ + ಇಡು₁ ]

**ಮುರುವು₁** ' ಮುರಿವು ' ನೋ.

**ಮುರುವು₂**, ಮುರ₂, ಮುರವು₂, ಮುರು₂, ಮುರುಹು₃ (ನಾ). ಹಾಲುಕೊಡುವ ದನಗಳಿಗೆ ಮತ್ತು ಎತ್ತುಗಳಿಗೆ ಹುರುಳಿ, ಹತ್ತಿಕಾಳು, ಹಿಂಡಿ, ಹೊಟ್ಟು ಮೊದಲಾದುವುಗಳನ್ನು ನೀರಿನೊಂದಿಗೆ ಬೆರಸಿಡುವ ಆಹಾರ; ಕಲಗಚ್ಚು, ಬೇಯಿಸಿದ ಅಂಬಲಿ, ಮುಸುರೆ ಇತ್ಯಾದಿ : ಅವಂ ತುಱುಸು ತಳೆಯುಕ್ಕು ತಡೆಯದೆ ಮುರುವಂ ಸುರಿ (ಲೀಲಾವ. ೩-೧೦೯); P ಇಲ್ಲಿ ಪ್ರಾಸಸ್ಥಾನವೆಂದು ಗ್ರಂಥದಲ್ಲಿ 'ಱ' ವನ್ನು ಬಳಸಿದೆ ; ಎಳಗಱುವಂ ಬಿಡು ಮುರುವಂ ತಳಿದು . . . ಗೋಕುಳವಂ ಕಱೆ (ತ್ರಿ.ಪು. ೦೩-೨೬); ಆಕಳ ಕರೆಸಿ ವೃಷಕೆ ಮುರುವ ಹಾಕಿ ಶಿಶುಗಳಾಕ್ರೋಶವ ಕೇಳದೆ . . . ರಾಕಾಚಂದ್ರಾಸ್ಯೆಯರು ನಡೆದರು (ಕೃಷ್ಣ. ೩೬-೯); ಒಂಡುವಾಗ ದನಗಳನ್ನು ಪ್ರಸನ್ನಗೊಳಿಸಬೇಕಾದರೆ, ಮುರುವು ಮೊದಲಾದ ತಿನಿಸು ಕೊಡಬೇಕಾಗುವದು (ಸ್ತ್ರೀ.ಧ. ೦೦೦). **ಮುರ₂** : ಸೀತಕ್ಕ ದನಗಳಿಗೆ ಕಲಗಚ್ಚು ಮುರ ಕೊಟ್ಟು ಹಾಲು ಕರೆಸಿ (ಕ್ರಿಶ್ಚಿ. ೦೨೨). **ಮುರವು₂**: ಪಾಲ್ಗೆ ಮುರವೇಂ ಬೆಲೆಯೆ (ರಾಜಶೇ. ೦-೦೦೯): ಮನವೆಂಬ ಕರುವನ್ನು ಬಿಡು. ಘನಭಕುತಿಯ ಮುರವನ್ನಿಡು (ಹರಿ. ೦೬೬); ಅದಕ್ಕೆ ನಾನೇ ಮುಸುರೆ ಮುರವು ತಿನ್ನಿಸುತ್ತಿದ್ದೆ (ಸುಹಾಸ. ೬೭). **ಮುರು₂**: ಸಗಣೀ ಬಾಚುವುದು. ಮುರು ಬೇಯಿಸಿ ಕರೆಯುವ ಎಮ್ಮೆ ದನಗಳಿಗೆ ಇಡುವುದು (ಮಲೆ. ೭೮೦); ಹೋದವರಗೇಡಿಗೆ ಹಿಂದೆಯೆ ಬಂದೆಯ ಮುರು ಕಂಡ ಎಮ್ಮೆಯ ಹಾಗೆ (ತಂತ್ರಿ. ೨೩-೯೦). **ಮುರುಹು₃**: ಹೊಲೆಯರ ಮನೆಯ ಮುರುಹ ಹೋಜಗಿರಿಸಿದಡೆ ಹಂದಿ ಬಂದು ಮೂಸಿ ಪೋವಂತೆ (ದೇವ. ೩೯-೬೦).

**ಮುರುವಿನ ಒಲೆ** = ದನಗಳಿಗೆ ಅಂಬಲಿ ಮುಂತಾದುವನ್ನು ಬೇಯಿಸುವ ಒಲೆ : ಗುತ್ತಿ ಕಿರುಜಗಲಿಯ ಮೂಲೆಯಲ್ಲಿ ಮುರುವಿನ ಒಲೆಯ ಬೆಂಕಿಗೆ ಸ್ವಲ್ಪ ಹತ್ತಿರವಾಗಿ. . . ಕುಳಿತುಕೊಂಡನು (ಮಲೆ. ೦೬).

**ಮುರುಸು** ' ಮುರಸು ' ನೋ.

**ಮುರುಹು₁** ' ಮುರಿಪು₁ ' ನೋ.

**ಮುರುಹು₂** ' ಮುರಿಪು₂ ' ನೋ.

**ಮುರುಹು₃** ' ಮುರುವು₂ ' ನೋ.

**ಮುರುಹು₄** ' ಮುಱುಕು₂ ' ನೋ.

**ಮುರೆ** (ನಾ). ಸುಗಂಧದಿಂದ ಕೂಡಿದ ಒಂದು ಬಗೆಯ ಸಸ್ಯ ಮತ್ತು ಅದರಿಂದ ತಯಾರಿಸುವ ಸುಗಂಧದ್ರವ್ಯ : "ತಾಳಪರ್ಣೀ–ಮುರೆಯೆಂಬ ಗಂಧದ್ರವ್ಯ" (ಚಿಕಿ. ೬೭); ಮುರೆ ಬೋಟಂ ರುಜೆ ಮಾಂಸಿ ಪೂತಿಪಳಂ ತಾಮಿಂತಿವೊಂದಂಶಮಾಗಿರೆ (ಲೋಕೋಪ. ೭-೨೭); ಒಂದೆಲಗನ ಸೊಪ್ಪು . . . ಮುರಾ, ತ್ರಿಫಲೆ . . . ತನ್ನೆಲೆಹುಳಿಗನ ಗೆಡ್ಡೆ ಇವುಗಳನ್ನು ಸಮಾಂಶವಾಗಿ ಆನೆಯ ಮೂತ್ರದಲ್ಲಿ ಅರೆದು (ಕೃ.ಕೃ.ಸಂ. II. ೩೦). [ ಸಂ. ಮುರಾ ]

**ಮುರ್ಕಲಿ** ' ಮುಱುಕಿಲ್₂ ' ನೋ.

**ಮುರ್ಕಳ್** ' ಮುಱುಕಿಲ್₂ ' ನೋ.

**ಮುರ್ಗಳ** ' ಮುಱುಕಿಲ್₂ ' ನೋ.

**ಮುರ್ಗಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ : 'ಮುರ್ಗಿಕಾಯಿ' ಪರಾ. [ ? ]

**ಮುರ್ಗಿಕಾಯಿ**, ಮುರಗಿಕಾಯಿ, ಮುರುಗಕಾಯಿ, ಮುರುಗಿಕಾಯಿ (ನಾ). ಒಂದು ಬಗೆಯ ಕಾಯಿ : (೯). **ಮುರಗಿಕಾಯಿ** : "ಎಡಮುರಿ, ಮುರುಡಿ . . . ಮುರಗಿಕಾಯಿ" (ಸಸ್ಯ. ೩೯). **ಮುರುಗಕಾಯಿ** : ಓಮ ಎಂಟು ತೂಕ, ಮುರುಗಕಾಯಿ ನಾಲ್ಕು ತೂಕ . . . ಸಕ್ಕರೆ ೧೨ ತೂಕ, ಇವನ್ನು ಚೂರ್ಣವಂ ಮಾಡಿ (ಅಶ್ವ. ೯೦). **ಮುರುಗಿಕಾಯಿ** : ಎಡಮುರಿ, ಮುರುಗಿಕಾಯಿ . . , ಕರ್ಗಿ (ವ್ಯ.ಶಿ. ೯೨-೬೩೨). [ಮುರ್ಗಿ + ಕಾಯಿ₄ (< ಕಾಯ್₄) ]

**ಮುರ್ಗಿನಕೋಡುಸೊಪ್ಪು** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಸೊಪ್ಪು : ಕಿರೀಹುಳಿವ, ಹುಳಿ, ಮುರ್ಗಿನಕೋಡುಸೊಪ್ಪು, ಸಣ್ಣಗೂಗೆ, ಬಿಳಿಕೊಪ್ಪೆ (ವ್ಯ.ಶಿ. ೬-೦೨೭).

[ < ಮುರ್ಗಿ + ಕೋಡು₅ + ಸೊಪ್ಪು₂ ]

**ಮುರ್ಗು** ' ಮೊಱಗು₁ ' ನೋ.

**ಮುರ್ಚೆ** ' ಮುಚ್ಚೆ₂ ' ನೋ.

**ಮುರ್ತೆ**, ಮೂರ್ತೆ (ನಾ). ಈಚಲು, ತಾಳೆ ಮುಂತಾದ ಮರಗಳಿಗೆ ಕಚ್ಚುಮಾಡಿ ಹೆಂಡವನ್ನು ಇಳಿಸುವಿಕೆ : ಕೂಕ್ರ ತನ್ನ ಕುಲಕಸುಬು ಮುರ್ತೆಯನ್ನೇ ಮಾಡಿಕೊಂಡು ಬಂದ (ಚಿತ್ರಾ. ೯೭). **ಮೂರ್ತೆ**.

**ಮೂರ್ತೆ ಮಾಡು** = ಹೆಂಡವನ್ನು ಇಳಿಸುವುದಕ್ಕಾಗಿ ತಾಳೆ, ಈಚಲು ಮುಂತಾದ ಮರಗಳ ಕಾಂಡವನ್ನು ಕಚ್ಚುಮಾಡು: ಗದ್ದೆಯ ಸಮೀಪದ ಬದಿಯಲ್ಲಿರುವ ಮರಗಳನ್ನು ಮೂರ್ತೆಮಾಡಿದರು ಬಿಲ್ಲವರು (ತುಳುನಾ. ೩೯) ; ಎಲ್ಲರ ಕೈಯಲ್ಲು ಮೂರ್ತೆಮಾಡುವ ಕತ್ತಿಗಳು (ಜಪತ. ೨೫). [ ← ತುಳು. ಮುರ್ತೆ, ಮೂರ್ತೆ ]

**ಮುರ್ದಾರಿ** (ಗು). ಮೂಢಸ್ವಭಾವದ ; ದಡ್ಡತನದ : ತಿಳಿವಳಿಕೆಯಿಲ್ಲದ : ಅವನ ವಿಷಯಕ್ಕೆ ಮಾತ್ರ ನಾನು ಏನನ್ನೂ ಹೇಳಲಾರೆ. ಅವನು ಮೊದಲೇ ಮುರ್ದಾರಿ ಮನುಷ್ಯ (ರೂಢಿ).

[←ಪಾರ. ಮುರ್ದಾರ್ : ಮರಾ. ಮುರ್ದಾಡ, ಮುಡದಾರ್]

**ಮುರ್ದಾರಿಕೆ** (ನಾ). ಮೂಢತನ ; ದಡ್ಡತನ : 'ಮುರ್ದಾರಿಕೆ' ಮಾಡಿ, ಛೀ ಎನ್ನಿಸಿ ನೂರುವರ್ಷ ಬಾಳುವುದಕ್ಕಿಂತಲೂ ಒಳ್ಳೆತನದಿಂದ ಮನುಷ್ಯ ಹತ್ತೇ ವರ್ಷ ಬದುಕಿದ್ದರೆ ಚಂದ (ಚಿತ್ರಾ. ೬೦).

[ಮುರ್ದಾರ್ಶ್ಯ (P←ಮರಾ. ಮುರ್ಧಾರ್) + – ಇಕೆ]

**ಮುರ್ಮುರ** (ನಾ). ಹೊಟ್ಟು ಹಾಕಿ ಮಾಡಿದ ಬೆಂಕಿ ; ಉಮಿಬೆಂಕಿ ; ತುಷಾಗ್ನಿ. [ಸಂ.]

**ಮುಲಕನಾಡು** 'ಮುರಿಕಿನಾಡು' ನೋ.

**ಮುಲಕಿ** 'ಮುಲ್ಕಿ' ನೋ.

**ಮುಲಕೀಪರೀಕ್ಷೆ** 'ಮುಲ್ಕಿ' ಪರಾ.

**ಮುಲಖಿ** ' ಮುಲ್ಕಿ' ನೋ.

**ಮುಲಾಖತು** 'ಮುಲಾಖತ್ತು' ನೋ.

**ಮುಲಾಖತ್ತು**, ಮಿಲಾಖತು , ಮಿಲಾಖತ್ತು, ಮುಲಾಖತು (ನಾ). ೧. ಹೊಂದಿಕೆ ; ಹೊಂದಾಣಿಕೆ : ಅವರಿಬ್ಬರ ಅಭಿಪ್ರಾಯಗಳು ಮುಲಾಖತ್ತಾಗಲಿಲ್ಲ (ರೂಢಿ). ೨. ಭೇಟಿ ; ಸಂದರ್ಶನ : ಅವರ ಮುಲಾಖತ್ತಿನ ಮ್ಯಾಲಿಂದ ನಿನ್ನ ಅನುಭವಕ್ಕ ಬಂದೇ ಬಂದದ (ಶಾಂತಾಯ. ೩೩) ; ಕುಸುಮಾ ಪ್ರಮೀಳೆಯರ ' ಮುಲಾಖತ್ತು ' ಸ್ಮರಣೀಯವಾಗಿದೆ (ಸಮಾಜ. ೨೩ ಶೀಲ). **ಮಿಲಾಖತು** : ೨. ತಾವು ಇಲ್ಲಿಗೆ ಬಂದು, ತಮ್ಮ ಮಿಲಾಖತಿನ ಫಾಯಿದೆಯಿಂದ ಸಂತೋಷಪಡಿಸಬೇಕು (ಅಕ್ಕೇಂದ್ರ. ೩೬).

ಮಿಲಾಖಿತ್ತು : ೨. ಮಿಲಾಖಿತ್ತಿಗೆ ಬರಬೇಕು ಬಂದರೆ ರಾಜ್ಯಕೊಡುತ್ತೇನೆ (ಮದಕ. ೪-೧೬). ಮುಲಾಖಿತು : ೨. ದೇರಣ್ಣ ಮಹಾ ಹುಮ್ಮಸದಿಂದ. ನನ್ನ ಅವನ ಮುಲಾಖಿತಿನಿಂದ ತೊಡಗಿ . . . ಯಾವತ್ತು ವಿಷಯಗಳನ್ನು ವಿವರಿಸಿದನು (ಚಟ್ಟಜೀ. ೬).

[← ಅರ. ಹಿಂ. ಮುಲಾಕಾತ್ : ಮರಾ. ಮುಲಾಕತ್, ಮುಲಾಖಿತ್, ಮುಲಾಕಾತ್]

**ಮುಲಾಜ್** 'ಮುಲಾಜು' ನೋ.

**ಮುಲಾಜು, ಮುಲಾಜ್** (ನಾ). ೧. ದಾಕ್ಷಿಣ್ಯ ; ಭಿಡೆ ; ಸಂಕೋಚ : ನಿಮ್ಮ ಕರ್ತರಾಮರ ದೋಸ್ತಿ ಮುಲಾಜು ಮಡಗುವದು . . . ನ್ಯಾಯ ಮಾಡುವದು. ಇಂಥಾ ಅನ್ಯಾಯದ ಮಾರ್ಗಹಿಡಿದು ಹೋಗುವಂಥಾ ಜನರ ಮೇಲೆ ನಮ್ಮ ದಯ ಪ್ಳಿತಾಗಿ ಬರಲಿಕ್ಕಿಲ್ಲ (ರಾಜೇಂದ್ರ. ೨೩೪); ಧನಿಗಳ ಮಕ್ಕಳನ್ನು ಸಹ ಮುಲಾಜಿಲ್ಲದೆ ಛಗಳು ಕೋಲಿಂದ ಕಾಯಿಸುವುದನ್ನು ಕಂಡಿದ್ದಾನೆ (ಕೃಕೃಪೊ. ೨); ಮಂಜನು . . . ತಿಮ್ಮಪ್ಪಹೆಗ್ಗಡೆಯ ನೀಚತನವನ್ನು ಮುಲಾಜಿಲ್ಲದೆ ಬಯಲಿಗೆಳೆಯತೊಡಗಿದನು (ಶುಲಿಪು. ೩೫೦). ೨. ಹಂಗು ; ಋಣ : ಮದುವೆ ಆಗಿಹೋಗಿದೆ. ಬಿಪ್ಪರ ಮುಲಾಜು ಇನ್ನೊಬ್ಬರಿಗಿಲ್ಲ ಸರಿ. ಬೀಗರನ್ನು ಜರೆಯಲು ಆರಂಭಿಸುತ್ತಾರೆ (ಪಪ್ಪುರು. ೦೦೩) ; ಮತ್ತೆ ಹೆದರಿಕೆ ಇಲ್ಲ. ಹಾಗಂತ ಹೆದರಲಿಕ್ಕೆ ತನಗೆ ಯಾರದು ಮುಲಾಜು (ಹೂಕಟ್ಟ. ೯೯). ಮುಲಾಜ್ : ೧. ನಮಗೆ ಗರ್ಜು ಬಂದಾಗ ನಿಮ್ಮ ಹಣ ಬಾರದೆ ಹೋದರೆ ನಾವು ಮುಲಾಜ್ ಇರಿಸಿಕೊಳ್ಳುತ್ತೇವೆಯೋ ? (ಶಾರುದಾ. ೦೨೦).

[← ಅರ. ಮುಲಾಹಜಾ, ಮುಲಾಹಝಾ ; ಹಿಂ. ಮುಲಾಹಜಾ ; ಮರಾ. ಮುಲಾಜಾ, ಮುಲಾಇಜಾ, ಮುಲಾಹಿಜಾ]

**ಮುಲಾಮು, ಮುಲಾವು** (ನಾ). ೧. ಚಿನ್ನ, ಬೆಳ್ಳಿ, ಹಿತ್ತಾಳೆ ಮೊದಲಾದ ಲೋಹಗಳಿಗೆ ಮೆರುಗು ಹೆಚ್ಚಿಸಲು ಬಳಿಯುವ ಚಿನ್ನ, ಬೆಳ್ಳಿ ಮೊದಲಾದ ಲೋಹಗಳಿಂದ ಮಾಡಿದ ಲೇಪನ ವಸ್ತು ; ಗಿಲೀಟು : ಚಿನ್ನದ ಮುಲಾಮಿನ ಕೆಲಸವನ್ನು ನೋಡಿ (ಮುಂಬಯಿ. ೪-೧೪೨) ; ಸುಲ್ತಾನನು ಬೇಟೆಗೆ ಹೋಗುವಾಗ . . . ಅವನನ್ನು ಹಿಂಬಾಲಿಸಿ . . . ಚಿನ್ನದ ಮುಲಾಮಿನ ಕವಚದಿಂದ ಅಲಂಕೃತವಾದ ಇನ್ನೂರು ಹಸ್ತಿದಳವೂ ಹಿಂಬಾಲಿಸುತ್ತವೆ (ಕೃಪಾಇ. II. ೦೭೬) ; ಬೆಳ್ಳಿ ಮುಲಾಮನು ಹಿತ್ತಾಳೆಲೋಟಕ್ಕೆ ಕೊಟ್ಟಾಪರೂ ತೋರು ಜಗಕೆ (ಚಂದ್ರಶೀ. ೩೦-೨೦). ೨. ಗಾಯ, ಹುಣ್ಣು ಮುಂತಾದುವುಗಳನ್ನು ಗುಣಪಡಿಸುವುದಕ್ಕಾಗಿಯೂ ಸೌಂದರ್ಯವರ್ಧಕಗಳನ್ನು ಮಾಡುವುದಕ್ಕಾಗಿಯೂ ಬಳಸುವ, ಔಷಧದ್ರವ್ಯಗಳಿಂದ ಮಾಡಿದ ಒಂದು ಬಗೆಯ ಜಿಡ್ಡು ಪದಾರ್ಥ : ಗಾಯಕ್ಕೆ ಹಚ್ಚಲು ಮುಲಾಮು ಕೊಟ್ಟರು (ಕಕಪು. ೩-೩೭): ಡಾರ್ವಿನನು . . . ಸ್ವತಃ ಒಂದು ಮುಲಾಮನ್ನು ತಯಾರಿಸಿ ತನ್ನ ಹಲವಾರು ಗಾಯಗಳಿಗೆ ಹಾಗಿಸಿದನು (ಪೋಡರು. ೦೨) ; ಈ ಮರದ ಹಣ್ಣಿನಿಂದ ಸುವಾಸನೆಯ ಎಣ್ಣೆಯನ್ನು ತೆಗೆದು ಹೆಚ್ಚಾಗಿ ಮುಲಾಮಿಗೆ ಉಪಯೋಗಿಸುತ್ತಾರೆ (ಕೃಪಾಇ. II. ೦೨೭). ಮುಲಾವು : ೧. ಚಿನ್ನದ ಮುಲಾವಿನ ಸಾಮಾನು ೧ ವಿಲಾಸದ ಅರಳೆಲೆ ೬ ಮೊಕಪಟೀ ತುಂಡು (ಎಕ. XIV. ಸಂಜನ. ೨೯೯– ೦೭ನೆಯ ಕಲಂ ; ಸು. 1848) ; ಈ ದೇವಸ್ಥಾನದಲ್ಲಿರುವ ಎಲ್ಲಾ ದೇವರಿಗೂ ಸಮರ್ಪಣೆ ಮಾಡಿರುವ ವಸ್ತುಗಳು ಯಾವುವೆಂದರೆ . . . ಬಾಗಿಲಿಗೆ ಚಿನ್ನದ ಮುಲಾವಿನ ಬಾಗಿಲವಾಡ (ಮಹಾಪಂ. II. ೦೨೭).

[← ಅರ. ಮುಲಮ್ಮಅ್. ಮುಲಮ್ಮಾ; ಹಿಂ. ಮುಲಮಾ, ಮುಲಮ್ಮಾ; ಮರಾ. ಮುಲಾಮಾ, ಮುಲಾಮ್ಮಾ]

**ಮುಲಾವು** 'ಮುಲಾಮು' ನೋ.

**ಮುಲು** (ನಾ). (ಹುಳುಗಳು ಹರಿದಾಡುವುದನ್ನು ಸೂಚಿಸುವ) ಒಂದು ಅನುಕರಣಶಬ್ದ: 'ಮುಲುಗುಟ್ಟು' ಪರಾ.

ಮುಲುಮುಲು (ದ್ವಿರುಕ್ತಿ) : ಇರುವೆಗೂಡಿನ ಹತ್ತಿರ ನಿಂತದ್ದರಿಂದ ಕಾಲುಮೇಲೆಲ್ಲಾ ಇರುವೆಗಳು ಮುಲುಮುಲು ಅಂತ ಹತ್ತಿಬಿಟ್ಟುವು (ರೂ೭).

**ಮುಲುಕು$_1$, ಮುಕ್ಕು$_2$, ಮುಲುಗು, ಮುಲ್ಗು, ಮೂಲಗು, ಮೂಲುಗು** (ಕ್ರಿ). ೧. ಹೆರಿಗೆಯ ಸಮಯದಲ್ಲಿ ಬೇನೆಯನ್ನು ತಾಳಲಾರದೆ ತಿಣುಕು, – ಮುಕ್ಕಿರಿ : "ಮುಲುಕು – ಪ್ರಸವನ ಕ್ರಿಯಾಯಾಂ" (ಕಮಧಾ) : ಮುಲುಕಿ ಬೆಳಗನ್ನೆಗ ಬಸುಚೆಯಸುಗಳೆದ ಕೂಸಂ ಹೆಱುವ ತೆಱದಿಂ . . . ಎನ್ನರವಳಿದು ನಿಃಫಲವೆನಿಸಿತಲ್ಲಾ (ಬಸವ. ೫೭-೦೫) ; ತಲೆ ಪೆಟ್ಟಿ ಮಾಜಿಯರೆ ಗರ್ಭಭಾರದಿ ಹುಲ್ಲೆ ಮುಲುಕುರ್ತಿದುದು ಬೇನೆ ಮಸಗಿ (ನಾಗಕು. ೦೩-೪): ಮುಲುಕಿ ಬೇನೆಯೊಳಿರುವ ಪುಲ್ಲೆಯ ಕಂಡು (ನಾಗಕ. ೦೩-೨೪). ೨. ಹೆಚ್ಚಾದ ವ್ಯಥೆ. ತಳಮಳ ಮುಂತಾದುವುಗಳಿಂದ ಸಣ್ಣದನಿಯಲ್ಲಿ ನರಳು: ಮಾಚಿಕಬ್ಬೆ ಸ್ವಲ್ಪ ಮುಲುಕಿದರು (ಚಂಕರಾ. ೩೨೭); ವೆಂಕಪ್ಪಯ್ಯನವರು ಮುಲುಕುತ್ತಾ ಹಜಾರದಲ್ಲಿ ಮಲಗಿದ್ದರು (ಐದ್ಯಾಕ. ೪) ; ಹನುಮಪ್ಪ ಮೂಕನಂತೆ ಮುಲುಕುತ್ತಾ ಕೂತನು (ಕಂಡಕೀ. ೬೨). ೩. ಭಾರವಾದ ವಸ್ತುವನ್ನು ಎತ್ತುವ ಮೊದಲಾದ ಹೆಚ್ಚು ಶ್ರಮಸಾಧ್ಯವಾದ ಕೆಲಸಗಳನ್ನು ಮಾಡುವಾಗ ಆಯಾಸದಿಂದ ಕೂಗು, – ಧ್ವನಿಮಾಡು : (ಜಾನಕೋ. ೩೩). ೪. ಸರಿ ; ಚಲಿಸು ; ಕದಲು : "ಅಲುಗು . . . ಮಿಸುಕು, ಮುಲುಕು, ಸರಿ" (ಕಂಪುಹು. ೭೬); ಎರಡು ಕಡೆ ಬೋರ್ಜುಗಳಿಗೂ ಪೂರ್ತಾ ಜನ ನಿಂತು . . . ಹೆದ್ನ ಕೊಡದೆ ಹೋದರೆ ಈ ತೇರು ಮುಲುಕುವುದಿಲ್ಲ (ಗರುಡಾ. ೬೨). ಮುಕ್ಕು$_2$ : ೩. ಆ ವೃದ್ಧರು ತಮ್ಮ ಕೈಯಲ್ಲಿದ್ದ ಚೀಲದ ಭಾರದಿಂದಾಗಿ ನಡೆಯಲಾರದೆ ಮುಕ್ಕುತ್ತಿದ್ದರು (ರೂ೭). ಮುಲುಗು: ೨. ಅಲರ್ದ ಚಂಪಕವೃಕ್ಷಕೆರಗಿಯಳಿವಳಿದಯುಳಿಬಳಗದಂದದಲಿ ಮುಲುಗುತ ಬರ್ಪಯರೆಜೀವಿಗಳ ನೋಡಿ (ಪಹೊ. ೦೨-೯೭); ಲಲನೆಯರಿಗೆಳೆಯರ್ಕಳಿಗೆ ವೃದ್ಧರಿಗೆ ಬೇನೆಗಳು ಮುಸುಂಕಿದವು . . . ಮುಲುಗುವ ಪಲುಂಬುವ ನರಳ್ವ ಹೊಯಿಕೊಳ್ವ ಬೊಬ್ಬಾಟವಿಡಿದುದಾಗ (ಶುಲ್ಲಕ. ೦೦-೨೩); ಒಳಗೆ ಹಾಸಿಗೆಯ ಮೇಲೆ ನವಾಬರು ಸಣ್ಣಗೆ ಮುಲುಗುತ್ತಾ ಮಗ್ಗುಲಿಗೆ ತಿರುಗಿದರು (ದಾಂಕ. ೦೦). ಮುಲ್ಗು: ೧. ಹೆರುವ ವೇದನೆಯಿಂದ ಮುಲ್ಗು ವಳರಸಿ (ಅರ್ಜಾ. ೩-೬). ಮೂಲಗು: ೨. 'ಮೂಲಗಿಸು' ಪರಾ. ಮೂಲುಗು : (೪).

[ ದೇ.॥ ತಮಿ. ಮುಕ್ಕು ; ಮಲ. ಮುಕ್ಕು, ಮೂಲುಕ ; ತುಳು. ಮುಕ್ಕುರು ; ತೆಲು. ಮುಕ್ಕು. ಮುಲುಗು, ಮೂಲ್ಗು ; ಕೋಲಾ. ಮೂಲ್ಗ್ ; ಕೋತ. ತೊದ. ಮುಕ್]

**ಮುಲುಕು$_2$** (ನಾ). ೧. ಹೆರಿಗೆಯ ಸಮಯದಲ್ಲಿ ನೋವಿನಿಂದ ಮುಕ್ಕಿರಿಯುವಿಕೆ,—ತಿಣುಕುವಿಕೆ : "ಪ್ರಸವವೇದನಪಹೃತ್ತ ಮುಲುಕೆಂದಕ್ಕು" (ಕಾಪುಂ. ೬೦): ಆರು ಪೆತ್ತವಳಿಗೆ ಮೂರು ಹೆತ್ತವಳು ಮುಲುಕು ಕಲಿಸಿದಳಂತೆ (ಗಾದೆ). ೨. ನರಳುವಿಕೆ ; ನರಳಾಟ; ಒದ್ದಾಟ; ಮರುಕ್ಷಣವೇ . . . ಜೀವ ಸಂಕಟದಿಂದ ನರಳುವ ಕೊನೆಯಾರದ ಮುಲುಕು (ಅವಾಕ. ೦೪).

[< ಮುಲುಕು$_1$. /ಮಲ. ಮೂಳಲ್; ತೆಲು. ಮೂಲುಗು, ಮೂಲ್ಗು]

**ಮುಲುಕು$_3$** 'ಮುಲ್ಕಿ' ನೋ.

**ಮುಲುಖಿ** 'ಮುಲ್ಕಿ' ನೋ.

**ಮುಲುಖು** 'ಮುಲ್ಕಿ' ನೋ.

**ಮುಲುಗು** 'ಮುಲುಕು$_1$' ನೋ.

**ಮುಲುಗುಂದ** 'ಮುಳ್ಗುಂದ' ನೋ.

**ಮುಲುಗುಟ್ಟು** (ಕ್ರಿ). ೧. ಹುಳುಗಳು ಒತ್ತೊತ್ತಾಗಿ ಹರಿ,–ಸರಿದಾಡು : ತೇವವಿರುವ ಸ್ಥಳದಲ್ಲಿ ಗೆದ್ದಲುಹುಳುಗಳು ಮುಲುಗುಟ್ಟುತ್ತಿರುತ್ತವೆ

(ರೂಪ). ೨. ಹುಳುಗಳು ಮೈಮೇಲೆ ಹರಿದಾಡಿದಂತೆ ಭಾಸವಾಗು : ಬೆಳಗ್ಗೆ ಕೈ ಮೇಲೆ ಹಲ್ಲಿ ಬಿದ್ದಿದ್ದು ಆ ಜಾಗ ಇನ್ನೂ ಮುಲುಗುಟ್ಟುತ್ತಾ ಇದೆ (ರೂಪ). ೩. (ಆಲಂ) ಪರದಾಡು ; ಚಡಪಡಿಸು : ಎಲ್ಲ ಜ್ಯೂರಿಗಳಿಗೂ ಆಯಾಸವಾಗಿತ್ತು; ಯಾವುದಾದರೊಂದು ನಿರ್ಣಯಕ್ಕೆ ಬಂದು ತಮಗೆ ಬಿಡುಗಡೆಯಾದರೆ ಸಾಕೆಂದು ಮುಲುಗುಟ್ಟುತ್ತಿದ್ದರು (ಕುಹು. ೦೦೩) ; ಸೈಕೆ, ನಿಶ್ಚೇತನಳಾಗಿ ನೆಲದ ಮೇಲೆ ಬಿದ್ದು, ಮುಲುಗುಟ್ಟುತ್ತಾ . . . ನಿಟ್ಟುಸಿರಿಡುವಳು (ಕಲ್ಗಾ. ೪೭). [ಮುಲು + ಕುಟ್ಟು₁]

**ಮುಲುವೃನ್ನೆ** (ನಾ). ಒಂದು ಬಗೆಯ ಔಷಧೀಸಸ್ಯ : ಹಿಪ್ಪಲಿ . . . ಮುಲುವೃನ್ನೆಬೇರು, ನೆಲಗುಳ್ಳ, ಕೊನ್ನಾರಿಗೆಡ್ಡೆ ಇವನ್ನು ಕಷಾಯವಿಟ್ಟು ಕೊಡಲು ಕಫ . . . ಛರ್ದಿ ಸಹ ಗುಣವಾಗುವುವು (ಸಕವೈ. ಶಂ. ೪೩೩).

[ ? ]

**ಮುಲ್ಕಿ**, ಮುಲಕಿ, ಮುಲಖಿ, ಮುಲುಕ್ಕು, ಮುಲುಖಿ, ಮುಲುಖು (ಗು). ೧. ಕಂದಾಯಕ್ಕೆ ಸಂಬಂಧಿಸಿದ ; ಕಂದಾಯದ : ಅಲ್ಲಿಂದ ಮುಂದೆ ಮುಲ್ಕೀಕಚೇರಿಗಳ ಸಮೂಹದಲ್ಲಿ ಪ್ರವೇಶಿಸಿದರು (ಗೃಕಕ. ೬೪). ೨. ದೇಶೀಯ ; ಸ್ಥಳೀಯ : (+). (ನಾ). ೩. ರೆವಿನ್ಯೂ ಇಲಾಖೆಗೆ ಸಂಬಂಧಿಸಿದುದು ; ಕಂದಾಯದ ವಿಷಯಕ್ಕೆ ಸೇರಿದುದು : ಈ ಕೋರ್ಟಿನಲ್ಲಿಯೇ . . . ಮುಲ್ಕಿ ಎಂದರೆ ರೆವಿನ್ಯೂ ಬಾಬಿನಲ್ಲಿ, ರೈತರು ಮುಂತಾದವರ ಫಿರ್ಯಾದುಗಳನ್ನು ಸಹ ವ್ಯಾಸರಾಯರು ಕೇಳಿ ವ್ಯವಸ್ಥೆ ಮಾಡುತ್ತಿದ್ದರು (ಮಹಾಶಂ. II, ೨೮); ಮುಲ್ಕಿ ಮತ್ತು ನ್ಯಾಯಖಾತೆಯಲ್ಲಿ ಕಂಡುಬಂದ ಈ ಮನುಷ್ಯಸ್ವಭಾವವೇ ದಂಡಿನಲ್ಲಿ ಇನ್ನೂ ಹೆಚ್ಚಿನ ಸ್ವರೂಪದಲ್ಲಿ ಅನುಭವಕ್ಕೆ ಬಂದರೆ ಸೋಜಿಗವೇನು ? (ಹುಕ್ಷಕ್ರ. ೩೩). ೪. ಮಾಧ್ಯಮಿಕಶಾಲೆಯ ಕೊನೆಯ ವರ್ಗದ ಪರೀಕ್ಷೆ: ನೀನು ಹೇಗಾದರೂ ಮುಲ್ಕಿ ಆಗಿರುವಿ. ಅದರ ಬಲದಿಂದ ಎಲ್ಲಿಯಾದರೂ ಶಿಕ್ಷಕನಾಗಿ ಬಾಳು (ಹಬ್ಬಿ. ೦೩೯) ; ಹುಡುಗಿಯರಿಗೆ ಇಂಗ್ಲೀಷ್ ಬೇಡವೇ ಬೇಡ. ಮುಲ್ಕೀ ಪಾಸಾದರೆ ಸಾಕು (ಮೂರುಬಾ. ೯೬). **ಮುಲಕಿ** : ೧. ಮುಲಕೀ ಕೆಲಸವು ಯೋಗ್ಯರೀತಿಯಿಂದ ನಡೆದಿರುವದೆಂಬುದನ್ನು ಪ್ರತ್ಯಕ್ಷವಾಗಿ ನೋಡಬೇಕು (ಕಜಾಕೂ. ೩೩). ೨. ಸರಕಾರದವರು ಕಾದಿಟ್ಟ ಅಡವಿಯ ನೆರೆಹೊರೆಯ ಊರವರಿಗೆ ಮುಲಕೀ ಅಧಿಕಾರಿಗಳು ಅಡವಿಗೆ ಬೆಂಕಿ ಹತ್ತಗೊಡಬಾರದೆಂತ ಆಗಾಗ್ಗೆ ತಿಳಿಸುತ್ತಿರಬೇಕು (ಮುಂಜಾಯ. ೫.೪). ೪. ನೆರೆಮನೆ ಪಾಂಡ್ಯಾ . . . ಈ ಸಲ ಮುಲಕಿ ಕುಂತಾನು (ಬಾಬಂ. ೯). **ಮುಲುಖು** : ೫. ಸ್ಥಳ; ಪ್ರದೇಶ : ನಮ್ಮ ಪ್ರೇಮಚಂದ ಈಗೀಗ ಮಾರವಾಡಿ ಮುಲಖಿ ಬಿಟ್ಟು ಬಂದಾವ್ (ಮೋಹಿಶ. ೪೨); ಇದು ಚಾಲಿ ನಿಮ್ಮ ಮುಲಖದಾಗ್ ಬಹುತ್ ಅದಾವ್ (ಮೋಹಿಶ. ೩೯). **ಮುಲುಕ್ಕು**: ೫. ಟೀಪುಸುಲ್ತಾನರ ಕಡೆಯ ಮನುಷ್ಯರು ತಮ್ಮ ಮುಲುಕಿನಲ್ಲಿ ಬರಲಿಕ್ಕೆ ಬಿಡದ ಹಾಗೆ, ಬಂದೋಬಸ್ತು ಮಾಡುವದು (ಶಾಕೀಂಶ್ರ. ೯೫). **ಮುಲುಖು** : ೫. ನೃಸಿಂಹವಾಡಿಯು ಕೊಲ್ಲಾಪುರದ ಛತ್ರಪತಿಗಳ ಜಹಗೀರಿನ ಮುಲುಖವಾಗಿದ್ದು, ವಾಡಿಯ ಸುತ್ತಮುತ್ತಲು . . . ಬ್ರಿಟಿಶಮೆಯೂ ಇರುತ್ತದೆ (ಡಿಕಶ. ೨೦). **ಮುಲುಖು** : ೫. ನಾನೀಗ ಏನಾದರೂ ದುಡುಕಿದರೆ, ಬಂತು ಪ್ರಾಣಕ್ಕೆ ಸಂಚಕಾರ! ಅಯ್ಯೋ, ಇದು ಮಹಮ್ಮದೀಯರ ಮುಲುಖಾಗಿದ್ದರೆ ! (ಅಶಾಪ. ೦೭೦).

**ಮುಲ್ಕೀಪರೀಕ್ಷೆ**, ಮುಲಕೀಪರೀಕ್ಷೆ = ಮಾಧ್ಯಮಿಕ ಶಾಲೆಯ ಕೊನೆಯ ವರ್ಗದ ಪರೀಕ್ಷೆ : ಶಿಶುನಾಳಶರೀಫಸಾಹೇಬರು . . . ಕನ್ನಡ ಮುಲ್ಕೀಪರೀಕ್ಷೆಯವರೆಗೆ ಅಧ್ಯಯನಮಾಡಿದರು (ಕಜೀಶ. ೩೩) ; ಜಮುಳ ವಿದ್ಯಾಭ್ಯಾಸಂಗವು ಮುಲ್ಕೀಪರೀಕ್ಷೆಯವರೆಗೆ . . . ಸಾಗಿತ್ತು (ಬಾಗಿಶ. ೦೦); ಸುಮತಿಗೆ ಈಗ ೨೦ ವರುಷ ವಯಸ್ಸು. ಕನ್ನಡ ಮುಲಕೀಪರೀಕ್ಷೆ ಪಾಸಾಗಿ . . . ಶಿಕ್ಷಕಿಯಾಗಿದ್ದಾಳೆ (ಅಹೋಕ. ೭೩).

[← ಅರ. ಮುಲ್ಕ್; ಹಿಂ. ಮುಲಕೀ, ಮುಲ್ಕೀ; ಮರಾ. ಮುಲಕೀ, ಮುಲಖೀ, ಮುಲೂಕ್, ಮುಲೂಖ್, ಮುಲ್ಕೀ ]

**ಮುಲ್ಕಿಖಾತೆ** (ನಾ). ಕಂದಾಯದ ವಿಭಾಗ : ರೆವಿನ್ಯೂ ಇಲಾಖೆ : ನಾನು . . . ಮುಲ್ಕಿಖಾತೆಯಲ್ಲಿ ಗುಮಾಸ್ತೆಯ ಕೆಲಸವನ್ನು ಹೇಗೆ ಸರಿಯಾಗಿ ಮಾಡಬೇಕೆಂಬುದನ್ನು ಕಲಿತುಕೊಂಡೆನು (ಹೇಮಂತ. ೦೯೩).

[ಮುಲ್ಕಿ + ಖಾತೆ₂]

**ಮುಲ್ಕೀಪರೀಕ್ಷೆ** ' ಮುಲ್ಕಿ ' ಪರಾ.

**ಮುಲ್ಕು** ' ಮುಲುಕ್ಕು₁ ' ನೋ.

**ಮುಲ್ತಾನಿ** (ಗು). ೧.(ಆಲಂ) ದೊಡ್ಡಸ್ತಿಕೆಯ ; ಆಡಂಬರದ : ತವರನ್ನು ಬಾಯಿತುಂಬಾ ಹಳಿಯೋದಿಕ್ಕೆ ಬರುತ್ತಲ್ವೆ ನಿಮಗೆ ಬಾಯಿದ್ದ ? ನೋಡಬೇಕಾಗಿತ್ತು, ನೀವು ಮಾಡಿದ ಮುಲ್ತಾನೀ ಅಳಿಯತನವನ್ನು (ಕೂಕಸಂ. ೩). (ನಾ). ೨. ಮುಲ್ತಾನವೆಂಬ ದೇಶ ಮತ್ತು ಅಲ್ಲಿಗೆ ಸಂಬಂಧಿಸಿದ ವ್ಯಕ್ತಿ : ಮುಲ್ತಾನೀ ಎಂಬ ಪೂರ್ವಪರ್ಶಿಯಾದೇಶದ ಯವನರ ಪುರದ ನಿವಾಸಿ (ಪುಂತಶಿ. ೩೪೦). ೩. [ಸಂಗೀತ] ಒಂದು ರಾಗದ ಹೆಸರು: ಬಿಲಾವಲ್, ಮುಲ್ತಾನಿ, ರಾಮಕಲಿ ರಾಗಗಳು ಕ್ಷಯರೋಗವನ್ನೂ . . . ಗುಣಪಡಿಸುವುವೆಂಬ ಭಾವನೆ ಉತ್ತರಭಾರತದಲ್ಲಿದೆ (ಭಾರಕ. ೩೪೪) ; ಗೌಡಿಯು ರಾಮಕ್ರೀಮೇಲದಲ್ಲಿ ಹುಟ್ಟಿದೆ . . . ಮುಲ್ತಾನೀರಾಗವು ಇದರ ಪೂರ್ವಿಕ (ಶುಂತಶಿ. ೩೯೯). [← ಹಿಂ. ಮರಾ. ಮುಲತಾನೀ]

**ಮುಲ್ಲ** ' ಮುಲ್ಲಾ ' ನೋ.

**ಮುಲ್ಲಂಗಿ** ' ಮೂಲಂಗಿ ' ನೋ.

**ಮುಲ್ಲಗಿವಿ** (ನಾ). ತಿರುಚಿಕೊಂಡಿರುವ ಕಿವಿ : ಮುರುಟುಗಿವಿ : ನಿನ್ನ ಒಂದು ಕಿವಿ ಆಗಲೇ ಯಾರೋ ಕಿತ್ತು ಹಾಕ್ಯವರೆ (ಆದಕ್ಕೋಸ್ಕರವೇ ನನ್ನೂರ ಶಾನುಭೋಗರಿಗೆ 'ಮುಲ್ಲಗಿವಿ ಶಾನುಭೋಗ' ಅಂತ ಅಡ್ಡ ಹೆಸರೂ ಇತ್ತು) (ಶಶ್ನುರು. ೦೪೯) ; ಒಂದು ಕಿವಿ ಇರಲೇ ಇಲ್ಲ ಶಾನುಭೋಗರಿಗೆ. ಇನ್ನೊಂದು ಮುಲ್ಲಗಿವಿಯಾಗಿತ್ತು (ಶಶ್ನುರು. ೦೩೦). [ಮುಲ್ಲ₁ + ಕಿವಿ₁]

**ಮುಲ್ಲಶಾಸ್ತ್ರ** ' ಮುಲ್ಲಾಶಾಸ್ತ್ರ ' ನೋ.

**ಮುಲ್ಲಾ**, ಮುಲ್ಲ₁ (ನಾ). ೧. ಮುಸಲ್ಮಾನರ ಧರ್ಮಗುರು : ಮುಲ್ಲಾನು ಹೇಳುವುದನ್ನೋ ಅಥವಾ ಟಾರ್ಟರ್ ಪುರೋಹಿತ ಹೇಳುವುದನ್ನೋ ಕೇಳಿ (ಶುಶಿಶಾ. ೯೦). ೨. ಅರಬ್ಬಿ, ಪಾರಸಿ ಮುಂತಾದ ಭಾಷೆಗಳನ್ನು ಹೇಳಿಕೊಡುವವನು : ಮೌಲ್ವಿ : (+). **ಮುಲ್ಲ₁** : ೧. ' ಮುಲ್ಲಶಾಸ್ತ್ರ ' ಪರಾ. [←ಅರ. ಮೌಲಾನಾ ; ಹಿಂ. ಮುಲ್ಲಾ ; ಮರಾ. ಮುಲನಾ, ಮುಲಾನಾ, ಮುಲ್ಲಾ]

**ಮುಲ್ಲಾಶಾಸ್ತ್ರ**, ಮುಲ್ಲಶಾಸ್ತ್ರ (ನಾ). ಮುಸಲ್ಮಾನರ ಧರ್ಮಗ್ರಂಥ : ಕೊರಾನು : ಕಾಲವನು ವಿಚಾರಿಂ ಬಾಳುವರೆ ಶ್ರೀವರ್ಧಮಾನವ್ಯಾಳಿ ಮುಲ್ಲಾಶಾಸ್ತ್ರವಾದುವು ಸಕಲ ಸಮ್ಯಕ್ತ್ವ (ಶಾಕಪು. ೩೪-೩೦) ; ಆ ದಿವಸ ಮಸೀತಿಯಲ್ಲಿ ನೀನು ಮುಲ್ಲಾಶಾಸ್ತ್ರ ಓದುವುದನ್ನು ನೀನು ನನಗೆ ಮೊದಲು ತಿಳಿಸಲೇ ಇಲ್ಲ (ಶುಚಿಶುಗ. ೦೩). **ಮುಲ್ಲಶಾಸ್ತ್ರ** : ಮುಲ್ಲಶಾಸ್ತ್ರದ ನೆಲೆಯ ಗುಜುತಬೀಯದೆ ಜಳ್ಳುಕೂಗನು ಕೂಗಿ ಬಗುಳಿ ಬಾಯಬಾಯಿಪಂಥ ಕಳ್ಳ ತುರುಕರಿಗೆಲ್ಲ ವೀರಸ್ವರ್ಗನುಂಟೆ (ಕಶಕ.೦೨೬-೪). [ಮುಲ್ಲಾ + ಶಾಸ್ತ್ರ]

**ಮುಲ್ಲಿ** (ನಾ). (ಉಕ) ನಾಜೂಕು ; ಸೂಕ್ಷ್ಮ : ನನ್ನ ಮಾತ ನೀ ನಡಸದಿದ್ದರೆ ನಿನ್ನ ಲಗ್ನ ಹ್ಯಾಂಗ ಆಗತದ ನೋಡತೇನಿ ವಿಶ್ವಾಸ ಮುಲ್ಲೀ ಮಾಡಿ ಕೊಡತ್ತೇನಿ (ದೇಶಶ. II, ೨೬೬). [← ಅರ. ಮುಲಾಯಮ್, ಮುಲಾಯಿಮ್ : ಹಿಂ. ಮುಲಾಯಮ್ ; ಮರಾ. ಮುಲಾಈಮ್, ಮುಲಾಯಮ್ ]

**ಮುಲ್ಲಾಕ**, ಮುಲ್ಲೂಕ (ನಾ). ಮುಸಲ್ಮಾನ ಸೈನಿಕ ; ಮಹಮ್ಮದೀಯ ಯೋಧ : ಮೋಡಿಯ ಹರಿಗೆಯ ಭಟರು ನೇಜೆದುಗಳ ನೀಡುತಿರುವ

ಮುಲ್ಲುಕರ ಪಾಡುಗೆಡಿಸಿ ಹೊಯ್ದು ಜಯಿಯಟ್ಟಿ ದೆಸೆದೆಸೆಗೋಡಿಸಿದುದ ನೇವೇಳ್ವೆ (ಕಂಪ. ೧೩-೪೦). **ಮುಲ್ಲೂಕ :** ಬೆರಸಿದ ತಳವಾರ ರಾಮನ ಬೇಗದಿ ಕರಸಿದ ಮಲ್ಲ ಮುಲ್ಲೂಕರ (ಬಿಜ್ಜ. ೯-೩೩).

[←ಅರ. ಮುಲ್ಕ್; ಹಿಂ. ಮುಲುಕ್, ಮುಲ್ಕ್; ಮರಾ. ಮುಲೂಕ್, ಮುಲೂಖ್ = ಪ್ರಾಂತ, ರಾಜ್ಯ, ದೇಶ]

**ಮುಲ್ಲೂಕ** 'ಮುಲ್ಲುಕ' ನೋ.

**ಮುಲ್ಲೋಕ** 'ಮೂಲೋಕ' ನೋ.

**ಮುವಜ್ಜಲ್** (ನಾ). (ಮಹಮ್ಮದೀಯ ಕಾಯಿದೆ ಪ್ರಕಾರ) ಇಂತಿಷ್ಟು ವಾಯಿದೆಯೊಳಗೆ ಸಲ್ಲಿಸಬೇಕೆಂದು ನಿಗದಿಯಾಗುವ ಸ್ತ್ರೀಧನ: ೧೦೩. ಕೇಳಿದ ಕೂಡಲೆ ಕೊಡಬೇಕಾದ ಮುವಜ್ಜಲ್ ಎಂಬ ಸ್ತ್ರೀಧನದ ಬಗ್ಗೆ ಒಬ್ಬ ಮಹಮ್ಮದೀಯನಿಂದ. ಮೂರು ವರ್ಷಗಳು ೧೦೪. ಮುಂದೆ ಯಾವ ಸಮಯದಲ್ಲಿಯಾದರೂ ಕೊಡಬೇಕಾದ ಮುವಜ್ಜಲ್ ಎಂಬ ಸ್ತ್ರೀಧನಕ್ಕಾಗಿ ಒಬ್ಬ ಮಹಮ್ಮದೀಯನಿಂದ. ಮೂರು ವರ್ಷಗಳು (ಗ್ರಾ ವ೩೪. ೦೬೪). [←ಪಾರ. ಮುಅಜ್ಜಲ್, ಮುಅಜ್ಜಿಲ್]

**ಮುಹಾನೆ** (ನಾ). ಮೂರು ಹಾನೆಗಳಷ್ಟು ಅಳತೆ: ಕೊಡಗಿಯ ಶಂಕರ ನಾರಾಯಣದೇವರಿಗೆ ಮುವಾನೆ ಅಕಿಯ ನಯಿವೇದ್ಯ (ಶಾಇ. IX–ii, ೪೦೯–೯; 1380). [<ಮೂಱು + ಹಾನೆ]

**ಮುವೊಲ್ಪೋಗೆ** (ನಾ). ಒಂದು ಊರಿನ ಹೆಸರು: ತೊಱೆಕ್ಕಾರಾಟ್ಟಿಯ ಪೆಕ್ಕವಿಯ ಮುವೊಲ್ಪೋಗೆಯಕೂಡಲೂರು (ಎಇ. III (R), ಗುಂಡ್ಲುಪೇ. ೭೭–೩; ಸು. 750). [ ? ]

**ಮುವ್ವತ್ತು** 'ಮೂವತ್ತು' ನೋ.

**ಮುಶಲ** (ನಾ). ೧. ಒಂದು ಬಗೆಯ ಆಯುಧ; ಗದೆ. ೨. ಒನಕೆ. ೩. ದಂಡ; ಕೋಲು. [ಸಂ.]

**ಮುಶಲಿ₁** (ನಾ). ಗದೆಯನ್ನು ಧರಿಸಿರುವವನು; ಗದಾಧರ; ಬಲರಾಮ. [ಸಂ. ಮುಶಲಿನ್]

**ಮುಶಲಿ₂** (ನಾ). ೧. ಹಲ್ಲಿ: "ಮುಶ[ಶಾಕಂ-ಸ]ಲಿ ಗೃಹಗೋಧಿಕಂ ಗೃಹ ಪಿಕಂ ಹಲ್ಲಿಯುದು" (ಮಂಗರಾ. ೪೯–೦೪). ೨. ಒಂದು ಬಗೆಯ ಸಸ್ಯ; "ನೆಲತಾಳೆ" (ಸಸ್ಯ. ೪೨). [ಸಂ. ಮುಶಲೀ]

**ಮುಶಲಿಕೆ** (ನಾ). ೧. ಹಲ್ಲಿ; ಗೌಳಿ. ೨. ಹಲ್ಲಿಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ; ಉಡು: "ಗೋಧಂ ಮುಶಲಿಕಾಖ್ಯಮೆನಲುಡು ವೆನಿಕ್ಕುಂ" (ಮಂಗರಾ. ೪೮–೦೦). [ಸಂ. ಮುಶಲಿಕಾ]

**ಮುಶಾಯಿರಾ** 'ಮುಶೈರಾ' ನೋ.

**ಮುಷಿ** 'ಮೂಸೆ' ನೋ.

**ಮುಶೀರಿ** (ನಾ). ಸಿಂಹಾಸನ (?): ಮುತ್ತು ಮಾಣಿಕ ರತ್ನ ವಜ್ರ ವೈಡೂರ್ಯದಿಂದರ್ಶಿಯ ವೈದೊಡವುಗಳನಿತ್ತೂ ಹಸ್ಕರಿಕೆ ಹಲ್ಲಣ ಸಮ ಕಟ್ಟನು ಎತ್ತಬಾರದ ಮುಶೀರಿಯನು ತರಿಸಿಕೊಟ್ಟು (ಅಮುಶಾಂ. ೩–೦೯).

[p ಇದು 'ಪಶೀರ' ಎಂಬುದರ ಅಪಲಿಪಿತವಿರಬಹುದು]

**ಮುಶೈರಾ**, ಮುಶಾಯಿರಾ (ನಾ). ಅನೇಕ ಕವಿಗಳು ಒಂದೆಡೆ ಸೇರಿ ತಮ್ಮ ತಮ್ಮ ಕವಿತೆಗಳನ್ನು ವಾಚನ ಮಾಡುವ ಸಭೆ; ಕವಿಗೋಷ್ಠಿ: ಈವತ್ತು ಸಂಜೆ ರವೀಂದ್ರಕಲಾಕ್ಷೇತ್ರದಲ್ಲಿ ಪ್ರಖ್ಯಾತಕವಿಗಳ ಮುಶೈರಾ ನಡೆಯಲಿದೆ (ಆಡು). **ಮುಶಾಯಿರಾ :** ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ . . . ಶಬ್ದಗಳೆಂದರೆ ಕಚೇರಿ, ಮುಶಾಯಿರಾ, ಗೈರಮರ್ಜಿ (ಶಾಸ್ತ್ರೀ. ೦೭೭).

[←ಅರ. ಮುಶಾಅರಹ್; ಹಿಂ. ಮುಶಾಯರಾ]

**ಮುಷಕರ** 'ಮುಷ್ಕರ₁' ನೋ.

**ಮುಷಿತ** (ಗು). ೧. ಕದಿಯಲ್ಪಟ್ಟ: ಕಳುವಾದ. ೨. ಕಳೆದುಹೋದ; ನೀಗಿದ; ಸೂರೆಹೋದ: ಹಯಕಂಠನಮರ್ತ್ಯಕಮಳಾಲಯದಿಂ ಸಿರಿ ಸಂಜೆವೊಟ್ಟು ಬರೆ ಮುಷಿತಸುಪೋದಯೆಯಾಗಿ ಪುಗಿಸಿ ತದ್ಯುತಿಯಿಂದೆ ಮುಚ್ಚುವವೊಲಾಯ್ತು ನಳಿನನಿಕೋಚಂ (ಪರ್ಶ್ವಪು. ೯–೨೪). ೩. ನಾಶಮಾಡಿದ; ಧ್ವಂಸಗೊಳಿಸಿದ. ೪. ಸುತ್ತುವರಿದ; ಮುತ್ತಲ್ಪಟ್ಟ. (ನಾ). ೫. ಕಳುವಾದುದು; ಕದ್ದೊಯ್ದುದು: "ಮೂಷಿತಂ, ಮುಷಿತಂ _ ೨ ಕದಿಯಲ್ಪಟ್ಟದ್ದು" (ಸಿದ್ಧಾಂತ. ೩೪೭). ೬. ಕದಿಯುವುದು; ಕಳ್ಳತನ. [ಸಂ.]

**ಮುಷ್ಕ** (ನಾ). ೧. ಅಂಡ; ವೃಷಣ: "ಮುಷ್ಕಂ, ಅಂಡಃ . . . ಮುಷ್ಕೌ _ ಈ ೬ ಅಂಡಂ" (ಕರಾಯು. ೬೭–೩೭೪); ತಲೆ ಮೇಷಂ . . . ವೃಶ್ಚಿಕವಸತಿ ಗುದಂ ಮೇಹನಂ ಚಾಪ ಸಂಭೂನಿಳಯಂ ಮುಷ್ಕಂ ಮೃಗಾಖ್ಯಂ ಕಟಿಘಟವುರು ಮೀನೋದಯಂ ಬಾಲಮುಖ್ಯಂ (ಜಾತಕ. ೩–೩); ಆ ಮಹಾಮುನಿಯ ಶಾಪದೊಳಿಂದ್ರ ಮುಷ್ಕಾಂಡರಹಿತಘೋರಾಕೃತಿಯನು ತಾಪಸದೊಳಾಳ್ದು (ವಂಶಾರಾ. ೦–೦೬–೦). ೨. ಒಂದು ಬಗೆಯ ಮರ; ಮೊಕ್ಕೆ. [ಸಂ.]

**ಮುಷ್ಕಕ** (ನಾ). ೧. = ಮುಷ್ಕ ೧. ೨. = ಮುಷ್ಕ ೨: "ಗೋಲೀಢಃ . . . ಮೋಕ್ಷಃ, ಮುಷ್ಕಕಃ _ ೬ ಮೊಕ್ಕೆಮರದ ಹೆಸರು" (ಸಿದ್ಧಾಂತ. ೧೨೦). [ಸಂ.]

**ಮುಷ್ಕರ₁**, ಮುಷಕರ (ನಾ). ೧. ಹಟ: ಮೊಂಡುತನ; ಆಗ್ರಹ: ಉಣಾವಾಗ ಪೀನಘಂಟೆಗಳುಲಿದು ಬತ್ತಿಗಳಾನಿಸುತ ಕರ್ಣದಲಿ ಕಾಲವ ಸಾನಗಾಯ್ದುಹರೆಲ್ಲ ಭವ್ಯರು ಮುಷ್ಕರಗಳಿಂದ (ಬಸವ. ೯–೨೪). ೨. ಸೊಕ್ಕು; ದುರಹಂಕಾರ: (+). ೩. ಯಾವುದೇ ಸಂಘ ಅಥವಾ ಸಂಸ್ಥೆಯ ಕೆಲಸಗಾರರು, ವಿದ್ಯಾರ್ಥಿಗಳು ಮುಂತಾದವರು ತಮ್ಮ ಬೇಡಿಕೆಗಳು ಮನವಿಗಳಿಂದ ಈಡೇರದಿದ್ದಾಗ ಅವನ್ನು ಕಾರ್ಯಗತ ಮಾಡಿಸುವ ಉದ್ದೇಶದಿಂದ ಮೂಲಸಂಸ್ಥೆಯ ವಿರುದ್ಧವಾಗಿ ಹೂಡುವ ಸಂಪು.— ಚಳುವಳಿ: ಎಷ್ಟೇ ಕಷ್ಟ ಬಂದರೂ ಮುಷ್ಕರಗಳನ್ನು ಹಿಡಿಯದೆ ತಮ್ಮ ನ್ಯಾಯವಾದ ಬೇಡಿಕೆಗಳನ್ನು ಶಾಂತರೀತಿಯಲ್ಲಿ ಪಡೆಯಬೇಕು (ಕಾಗ್ರೆ. ೪ ಮಾರ್ಚಿಯೂ); ಈ ವರ್ಷ ಮುಷ್ಕರದ ಪರಿಣಾಮವಾಗಿ ಮಾಲೀಕ ಅವನನ್ನು ವಜಾಮಾಡಿದ್ದನು (ಕೃಪಟು. ೦೩೯). **ಮುಷಕರ :** ೧. ವೆಂಕಟ್ರಾಮಶಾಸ್ತ್ರಿಗಳಿಗೆ . . . ನಾಲ್ಕು ತಡವೆ ಪ್ರವರ್ತಿ ಆಗಿ ತೀರಿ ಹೋದದ್ರಿಂದ ಅವರ ಕುಟುಂಬ ಸಹಗಮನ ಮಾಡಬೇಕೆಂಬದಾಗಿ ಯಾರು ಹೇಳಿದಾಗ್ಯು ಕೇಳದೆ ಮುಷಕರ ಮಾಡಿಕೊಂಡು ಅಪ್ಪಣೆ ಕೊಡ್ಸಿ ಬೇಕೆಂಬದಾಗಿ ಯಿದಾರೆ (ಪ್ರಶಂ. ೦೯೩೬, ೩೩–೭; 1805).

ಮುಷ್ಕರ ಹಿಡಿ = ೧. ಹಟಹಿಡಿ; ಆಗ್ರಹಪಡಿಸು: ನನ್ನ ಮನೆಯವಳು . . . ನನ್ನೊಡನೆ ಬಂದೇ ತೀರುತ್ತೇನೆಂದು ಮುಷ್ಕರ ಹಿಡಿದಿದ್ದಾಳೆ (ಹುತ್ತುಹು. ೪೩). ೨. ಸಂಪು ಹೂಡು; ಸತ್ಯಾಗ್ರಹವನ್ನು ಆರಂಭಿಸು: ಪರೀಕ್ಷೆಗಳನ್ನು ಮುಂದೂಡಬೇಕೆಂದು ವಿದ್ಯಾರ್ಥಿಗಳು ಮುಷ್ಕರ ಹಿಡಿದಿದ್ದಾರೆ (ಆಡು). ೩. (ವಿರೋಧದಿಂದ) ಕಾರ್ಯವನ್ನು ನಿಲ್ಲಿಸು; ಅಸಹಕಾರವನ್ನು ಸೂಚಿಸು: ಮೇಲಕ್ಕೆ ಅಡರುವ ಧೂಮಸ್ತೋಮವನ್ನು ಮೂಗು ಬಾಯಿಗಳು ಮುಷ್ಕರ ಹಿಡಿಯುವ ತನಕ ಹೀರಿ ಹೀರಿ . . . ಮಂತ್ರ ಜಪಿಸಿದೆ (ಹುಟಿರು. ೩೮). **ಮುಷ್ಕರ ಹೂಡು** = ಮುಷ್ಕರ ಹಿಡಿ ೨: ಕೆಲಸಗಾರರಿಗಂತೂ ಏನೂ ಉಪಯೋಗವಾಗಲಿಲ್ಲ. ಅಸಮಾಧಾನವಾದಾಗ ಮುಷ್ಕರ ಹೂಡುವುದೊಂದೇ ಅವರಿಗಿದ್ದ ದಾರಿ (ಶಿಲ್ಪಶಾ. ೭೪). [ದೇ.॥ ತಮಿ. ಮುಷ್ಕರಮ್, ಮುಕ್ಕರಮ್; ಮಲ. ಮುಷ್ಕರಮ್, ಮುಷ್ಕು=ಬಲ; ತೆಲು. ಮುಷ್ಕರ]

**ಮುಷ್ಕರ₂** (ನಾ). ಗಂಗರ ಒಬ್ಬ ರಾಜನ ಹೆಸರು: ಶ್ರೀಮತ್ಕೊಂಗಣಿವೃದ್ಧರಾಜಸ್ಯ ಪ್ರಣೀತಮುಷ್ಕರದ್ವಿತೀಯ ನಾಮಧೇಯಸ್ಯ ಸರ್ವವಿದ್ಯಾ

ಪಾರಗಸ್ಯ ಸೂನೋಃ (ಎಕ. IV (R), ಚಾಮರಾ. ೩೧೬-೯; ೧೬ನೆಯ ಶ); ಮುಷ್ಕರನಾಮಧೇಯಃ ತಸ್ಯ ಪುತ್ರಃ ಚತುರ್ದಶವಿದ್ಯಾಸ್ಥಾನಾಧಿಗತ ವಿಮಲಮತಿಃ (ಎಕ. III (R), ನಂಜನ. ೧೦೨-೯; ೧೦೮). [ ? ]

**ಮುಷ್ಕರಕಾರ** (ನಾ). ಸಂಪು ಹೂಡುವವನು ; ಚಳುವಳಿ ನಡೆಸುವವನು: ರಾಜಕೀಯಪಕ್ಷಗಳು, ಸಮಾಜವಾದಿಗಳು ಮತ್ತು ಮುಷ್ಕರಕಾರರೂ ಅಂಥವರು (ಪ್ರಜಾ. ೧೦೪). [ಮುಷ್ಕರ₁ + — ಕಾರ₁ (< —ಕಾಐ)]

**ಮುಷ್ಕಿ**, ಮುಸಿಗೆ (ನಾ). ಕೈಗಳನ್ನು ಬೆನ್ನಿನ ಹಿಂಬದಿಗೆ ತಂದು ಕಟ್ಟುವಿಕೆ; ಹೆಡಮುರಿಗೆ : ನಿರ್ದಯವುಳ್ಳ ಆಳು ಆ ಕ್ಷಣ ಮೇಳಲಾಗ ಕಟ್ಟ ಮುಷ್ಕಿಗಳನ್ನು ಬೇಡಿಯೊಲು ಬೇಗ ನವಾಬರ ಕಡೆ ದಾರಿನವರು . . . ಒಳಕ್ಕೆ ಬಂದು, ಆ ೬೦ ಮಂದಿಯನ್ನೂ ಹಿಡಿದು (ಕಂಠೀ. ೦೯) ; ಮುಷ್ಕೀ ಕಟ್ಟಿ ಪಹರೆಯಲ್ಲಿ ಇರಿಸಿದರು (ಶಾಕುಂ. ೨೩೦) ; ಬಾಚಿಗನನ್ನು ಹಿಡಿದು . . . ಹಗ್ಗಗಳಿಂದ ಮುಷ್ಕೀಕಟ್ಟಿ . . . ತಳ್ಳಿದರು (ಕಥಾಮೃ. IV, ೦೦೦). **ಮುಸಿಗೆ** : 'ಮುಸಿಗೆಬಿಗಿ' ಪರಾ. [ ? ]

**ಮುಷ್ಕಿಲ್**, ಮುಷ್ಕೀಲು (ನಾ). ಕಷ್ಟ ; ಕ್ಲೇಶ ; ತೊಂದರೆ : ಬರುವ ಲಾಭದಲ್ಲಿ ಈ ದೊಡ್ಡ ಕುಟುಂಬದ ಜಾನಬಚಾವದ ಕೆಲಸವೇ ಮುಷ್ಕಿಲ್ ಆಗಿತ್ತು (ಬೀಹಚ. I, ೦೫೨) ; ಸವಕರಿಯನ್ನು ಸಹಜಾಸಹಜೀ ಬಿಡುವದು ಮುಷ್ಕಿಲ್ (ಬೀಹಚ. II, ೩೨೯). **ಮುಷ್ಕೀಲು** : ನಮ್ಮ ಸೀಮೆಗೆ ಒಂದು ತೃಣ ಬಾರದಂತೆ ಪಥಮಾರ್ಗವೆಲ್ಲಾ ಈ ಏಳು ಎಂಟು ತಿಂಗಳಿಂದ ಬಂದು ಮಾಡಿ, ಬಹಳ ಮುಷ್ಕೀಲು ಮಾಡಿದ್ದಾರೆ (ರಾಜೇಂದ್ರ. ೦೩೬).

[← ಅರ. ಮುಶ್ಕಿಲ್; ಹಿಂ. ಮುಶ್ಕಿಲ್, ಮುಷ್ಕಿಲ್; ಮರಾ. ಮುಶಕೀಲ್, ಮುಶ್ಕೀಲ್, ಮುಸಕೀಲ್]

**ಮುಷ್ಕೀಲು** ' ಮುಷ್ಕಿಲ್ ' ನೋ.

**ಮುಷ್ಟ₁** (ಗು). ೧. ಕದ್ದ ; ಕಳವು ಮಾಡಿದ : ದೋಚಿದ. (ನಾ). ೨. ಕಳ್ಳತನ ; ಚೌರ್ಯ. [ಸಂ.]

**ಮುಷ್ಟ₂**, ಮುಟ್ಟಸ, ಮುಟ್ಟಸು (ನಾ). ಮಂತ್ರ : ಮಾಟ : ಅಭಿಚಾರ. ನೆಲ ಸುಟ್ಟು ಬೆಲ್ಲ ಹಾಕಿದರೆ ಎಲ್ಲ ಮರೆತು ಹೋಗಿ ಸೇರಿದ ಮನೆಯನ್ನು ಬಿಡುವುದಿಲ್ಲವಂತೆ . . . ಅಂತೂ ನೆಲ ಸುಟ್ಟು ಬೆಲ್ಲದನ್ನ ಹಾಕಿ ಮಾಡಿದ 'ಮುಷ್ಟ' ಸುಳ್ಳಾಗಲಿಲ್ಲ (ಹುಲಿಸು. ೦೫೨); ಅವಳು ಹರಿಗೆ ಮಾಡಿಸುವುದು . . . ದನಕರುಗಳಿಗೆ ಕಾಯಿಲೆಯಾದರೆ ಮುಷ್ಟ ಮಾಡುವುದು . . . ಇತ್ಯಾದಿಗಳಲ್ಲಿ ತೊಡಗಿ ಜೀವನಯಾಪನೆ ಮಾಡುತ್ತಿದ್ದಳು (ಹುಲಿಸು. ೩೭೦). **ಮುಟ್ಟಸ** : ಬೇರು ಬಳ್ಳಿಗಳನ್ನು ತಂದು ಖಾಯಿಲೆಯಾದವರಿಗೆ ಮುಟ್ಟಸ ಮಾಡೋದು—ಏನಾದರೂ ಸಮಯ ಉಳಿದರೆ, ಜನಿವಾರ ಮಾಡ್ತ ಕೂರೋದು (ಹೊಸ್ತಿ. ೫೯೯); ಹೀಗಾದರೂ ಇದು ಬದುಕಿಕೊಳ್ಳಲಿ ಎಂದು ಮುಟ್ಟಸಮಾಡಿ ಕತ್ತಿಗೆ ಹತ್ತು ಬಗೆಯ ತಾಯಿತ ಕಟ್ಟಿ (ಪ್ರಕ್ಷ. ೦೩೪). **ಮುಟ್ಟಸು** : ನಾಲ್ಕುದಿಕ್ಕಿಗೂ 'ಮುಟ್ಟಸು' ಮಾಡಿ ಕಟ್ಟಿದರಾಯಿತು. ಆಗ ಕದ್ದರೆ, ಕದ್ದವರು ರಕ್ತಕಾರಿ ಸಾಯುತ್ತಾರೆ (ಚುಂಚು. ೦೩೧).

[< ಸಂ. ಮುಷ್ಟಿ ?]

**ಮುಷ್ಟಾಮುಷ್ಟಿ** (ನಾ). ಪರಸ್ಪರ ಮುಷ್ಟಿಗಳಿಂದ ಹೊಡೆದಾಡುವುದು ; ಗುದ್ದಾಟ : ಚಾಣೂರ ನಾಯಕರು ಒಟ್ಟೈಸಿ ಕೀಚಕನ ಮುಂದಿದರೆಯಟ್ಟ ಹೊಯ್ದರು ಪುರಕೆ ಮುಷ್ಟಾಮುಷ್ಟಿಯಲಿ ಗುರು ಭೀಷ್ಮ ರವಿಸುತರಡ್ಡ ಗಟ್ಟಿದರು (ಕುಮಾ.ಭಾ. ೬೦೫. ೨೫-೩); ಕೇಶಾಕೇಶಿ ಬಳಿಕ ದಂತಾದಂತಿ ಯೆಂದೆನಿಪ್ಪಾ ಬೆಡಗಿನಿಂದೆಸೆವ ಮುಷ್ಟಾಮುಷ್ಟಿಯಿಂ ಘೋರ ಪೊಡವಿ ಕಂಪಿಸೆ . . . ಆ ವೀರಭದ್ರಂ ಕೃತಕಘಣಿಗಳೀರ್ವರು ಭಾವು ಕಾದಿದರಲಾ (ಜೈಮಿ. ೩-೬-೦೩). [ಸಂ.]

**ಮುಷ್ಟಿ₁**, ಮುಷ್ಟೆ, ಮುಸುಟೆ (ನಾ). ೧. ಒಂದು ಬಗೆಯ ಮರ : "ಗಿರಿವೃಕ್ಷಃ— ಮುಷ್ಟಿ" (ಚಿಪಂ. ೯೮). ೨. ಒಂದು ಬಗೆಯ (ಸೊಪ್ಪಿನ) ಗಿಡ : ಬಹುಮೂತ್ರವಾಗಿ ಇರುವಂಥವರುಗಳಿಗೆ ಕೊಡುವ ಪಥ್ಯವರ್ಗಂಗಳ ಕ್ರಮವು . . . ಮುಷ್ಟಿಯಸೊಪ್ಪು. ಮಜ್ಜಿಗೆ ೧ ಹೊಸಗೊನ್ನೆ (ಶಿವ್ಯ.ಶಿ. ೦೫೩). **ಮುಷ್ಟೆ** : ೨. "ದ್ಯುತಿಯೆಂಸಲು ಮುಷ್ಟೆಯಕ್ಕು" (ಶಬ್ದಮ. ೯೫-೯೮); "ಕಟುಕಾ — ಮುಷ್ಟೆ, ಕಡಸಿಗ" (ಚಿಪಂ. ೨೩). **ಮುಸುಟೆ** : ೨. "ಮುಸುಟಿ — ಖಾಕ್ಷಗಂಧೆ, ಭಗಲಾಂತಿ, ಅಮೇಗಿ, ವೃದ್ಧದಾರಕ, ಜುಂಗ" (ನಾಶರಾ. ೯). [ದೇ.॥ ತಮಿ. ಮುಚುಟ್ಟೈ; ತೆಲು. ಮುಷ್ಟಿ, ಮುಸಿಂಡಿ, ಮುಸಿಡಿ, ಮುಸ್ಟಿ; ಹರ್ಜಿ. ಮೂಟಿ. / ಸಂ. ಮುಸಟೀ]

**ಮುಷ್ಟಿ₂** (ನಾ). ೧. ಬೆರಳುಗಳನ್ನು ಮಡಿಚಿದ ಮುಂಗೈ : ಮುಚ್ಚಿದ ಮುಂಗೈ; ಮುಟ್ಟಿಗೆ: " ಪಿ(ಹಿ)ಡಿಕೆಯ್ಸಿದ ಕೆಯ್ಯ ಕುಡಿತೆಯುಂ ಮುಷ್ಟಿ ಯೆಂಬುದು" (ಶಬ್ದಮ. ೬೮-೩೬೩) ; ಅಬ್ಬರಿಸಿ ಬಲುಮುಷ್ಟಿಗಳ ಸಭೆಕಟ್ಟಿ ಸುತ್ತ ಕಯ್ದುಡುಕಿದರು ಸುರರುಬ್ಬರಿಯ ಸುಳಿಸಿದರು ಮುಷ್ಟಿಯ ಸೂಳು ಪಾಳಿಸಲಿ (ಕುರಂಗ. ೯-೩-೯) ; ರ್ಝುಗರ್ಝುಗಿಸೆ ಕೌಕ್ಷೇಯಕಂ ರಾಜಗೌರವಕೆ ಮುಷ್ಟಿಯುಲಿ, ಛಂದೋಗಮಾನದಿಂದೆ ಮನದಿಂದೆ ನಡೆದರ್ (ಶಶ್ಯಾಂಗ. ೬೯-೨೯೩೦). ೨. ಮಲ್ಲಯುದ್ಧದ ಒಂದು ವರಸೆ; ಮುಷ್ಟಿಯಿಂದ ಹೊಡೆಯುವಿಕೆ : ಗುದ್ದುವಿಕೆ : ಪಲತೆಱದ ಜೊಯ್ಸು ರಂಜಿಸೆ ಪಲತೆಱ ದೋಜೆಗಳ ತತಿಯೊಳಾಸನಗತಿಯೊಳು ಪಲತೆಱದ ಮುಷ್ಟಿಯೊಳು ನಿಮ್ಮಗಳ ಮನೆ ತಿಳಿಪಲ್ಕೆ ಬಿಟ್ಟದೇವಂ ಬಲ್ಲಂ (ಎಕ. XII, ತಿಪ್ಟೂರು. ೦೭-೨೯; 1216 ?): ಹೊದಱಗಿಡಿಗಳ ಕೇಸುರಿಯ ಹಾರದಲಿ ಪರಿತಂದಹಿತ ದಳಪತಿಯೆದೆಯ ನೊದೆದುದು ನೆಲಕೆ ನಟ್ಟುದು ನಾಲ್ಕು ಮುಷ್ಟಿಯಲಿ (ಕುಮಾ.ಭಾ. ೩-೬೭). ೩. ಮುಚ್ಚಿದ ಕೈಯಲ್ಲಿ ಹಿಡಿಯುವಷ್ಟು ಪ್ರಮಾಣ : ಹಿಡಿಯಲ್ಲಿ ಅಡಗುವಷ್ಟು ಪ್ರಮಾಣ : ಆ ಮಡ್ಡಿಯನ್ನು ನೀನು ಹೇಗೆ ತಿನ್ನುತ್ತೀ ? ನಿನಗೆ ಬಲವಾದ ಆಸ್ಥೆ ಇದ್ದರೆ ಒಂದು ಮುಷ್ಟಿಯಾದರೂ ಹಿಡಿಯುತ್ತದೆ (ಹುಲಿಸು. ೨೨). ೪. ಕತ್ತಿ ಮೊದಲಾದ ಆಯುಧಗಳ ಹಿಡಿ,- ಹಿಡಿಕೆ : "ತ್ಸರುಃ, ಮುಷ್ಟಿಃ — ಈ ೨ ಪಿ(ಹಿ)ಡಿ" (ಶಬ್ದಮ. ೩೮-೩೦೯). ೫. ಕೈಯಿಂದ ಹಿಡಿಯಲು ಅನುಕೂಲವಾದ ಮಧ್ಯಭಾಗ,— ನಡುವಣ ಭಾಗ : "ಬಿಲ್ಲ ಹೆದೆ ಜೀವೆ ಸಿಂಜಿನಿ ಮೌರ್ವಿ ಜ್ಯಾಗುಣಮೆನಿಕ್ಕು ನಡು ಮುಷ್ಟಿಯಕ್ಕುಂ" (ಶಬ್ದಮ. ೬೭-೩೩). ೬. ಉದ್ದವನ್ನು ಅಳೆಯುವ ಒಂದು ಅಳತೆ : ಅಂಗುಲವ ನಾಲ್ಕ ಕೂಡಲು ಮುಷ್ಟಿ [ ಷ್ಟಿ ] ಯಾರದುದೆ ಹಸ್ತ ಚತುರಕೆ ದಂಡು (ಶಾಸ್ತ್ರ. ೫೨-೦೦). ೭. ಭಿಕ್ಷೆ : ಮುಷ್ಟಿಯಂ ಬೇಡಿ ತಂದಾ ದ್ರವ್ಯದೊಳಗೆ ತನ್ನಿಷ್ಟಗುರುವಿಂಗೆ ನಿರ್ಭರಭಕ್ತಿಯಿಂದ ಸಂತುಷ್ಟಿ ಪುಟ್ಟಿದುದಿಂ ನಿತ್ಯದಾನಂ ಮಾಡಿ (ಶಬ್ಬಕ. ೩-೩); ಮೃಡಭಕ್ತ ದ್ವಿಜವೇಷ ಮನುಜುಗದೆ ಕೈಕೊಂಡು ಬಂದು ಮುಂದೆ ನಿಲುತ್ತಂ ಮಡದಿತಲೆರನ್ನೆ ಮುಷ್ಟಿಯನೊಡನಿತ್ತೊಡೆ ಸುಂದರೇಶನೋವಳಿನಿಸ್ಸಂ (ಶಾಲಾಸ್ತ್ರ. ೨-೬-೯೦). ೮. ಕದಿಯುವುದು. ೯. ವೃಷಣ ; ಅಂಡ : "ಮುಷ್ಕಂ . . . ಸಂಗ್ರಾಹಃ, ಮುಷ್ಟಿಃ — ಈ ೬ ಅಂಡಂ" (ಶಬ್ದಮ. ೩೩-೩೬೯); ಸಂಗ್ರಾಹಂ ಮುಷ್ಟಿ ಮುಷ್ಕಂ ವೃಷಣಮೆಂದೆನಲು ಲಿಂಗದೆಡೆಯಂಡಮಕ್ಕು" (ಶಬ್ದಮ. ೯೬-೦೯). ೧೦. ಅಸ್ತ್ರಪ್ರಯೋಗವನ್ನು ಮಾಡುವ ಮಂತ್ರ : ತನಗೆ ದೇವೇಂದ್ರನಿತ್ತ ಐಂದ್ರಮೆಂಬ ದಿವ್ಯಾಸ್ತ್ರಮುಮಂ ನೈಷ್ಟಿಕಮೆಂಬ ಮುಷ್ಟಿಯುಮಂ ಕೆಯ್ಕೊಂಡು (ಶಂಕಚ. ೬-೩೬ ವ) : ಅವನುಗ್ರಪಾಶುಪತ ಬಾಣದಿನಲ್ಲದೆ ಸಾಯನಂತವಂ ಹರನೊಸೆದಿತ್ತುಮೇಸದಱ ಮುಷ್ಟಿಯ ನೀಯನೆ . . . ಎಂದು ಚಕ್ರಿ ಶಿವನಲ್ಲಿಗೆ ಕೊಂಡೊಗೆದಂ ಕಿರೀಟಿಯಂ (ಶಂಕಚ. ೧೦-೦೩೦) ; "ಅದಱ ಮುಷ್ಟಿಯಂ = ಅದರ ಮಂತ್ರವನ್ನೂ (ಟಿ)" (ಶಂಕಟೀ. ೯೨೯); " ಮುಷ್ಟಿ—ಮಂತ್ರ, ಪ್ರಯೋಗ ಕ್ರಮ " (ಶಂಕಚ. ೯೦೯೫). ೧೧. [ನಾಟ್ಯ] ಇಪ್ಪತ್ತು ನಾಲ್ಕು ಅಸಂಯುತಹಸ್ತಗಳಲ್ಲಿ ಒಂದು : ನಾಲ್ಕುಬೆರಳುಗಳನ್ನು ಮಡಿಚಿ ಹೆಬ್ಬೆರಳನ್ನು ಅವುಗಳ ಮೇಲೆ ಇಟ್ಟು ತೋರುವ ಒಂದು ಬಗೆಯ ಹಸ್ತವಿನ್ಯಾಸ :

ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ—೧. ಪತಾಕ, ೨. ತ್ರಿಪತಾಕ . . . ೭. ಮುಷ್ಟಿ (ಅಭಾಶ್ಯ. ೪೭). 'ಮುಷ್ಟಿಕ ಸ್ವಸ್ತಿಕ' ಪರಾ. [ಸಂ.]

**ಮುಷ್ಟಿಕ** (ನಾ). ೧. ಅಕ್ಕಸಾಲಿಗ; ಚಿನಿವಾರ: "ನಾಡಿಂಧಮಃ, ಕಳಾದಃ, ಸುವರ್ಣಕಾರಃ, ಮುಷ್ಟಿಕಃ — ಈಳಿ ಅಕ್ಕಸಾಲೆ" (ಕಳಾಯು. ೯೬-೯೩೪); "ನಾಳಿಂಧಮಂ ಕಳಾದಂ ಮುಷ್ಟಿಕನದಕ್ಕಸಾಲೆಯೆನಿಸಿಕ್ಕು" (ಮಂಗರಾ. ೦೦೦-೦). ೨. ಮುಷ್ಟಿಯಿಂದ ಮಾಡುವ ಯುದ್ಧ; ಗುದ್ದಾಟ; ಮುಷ್ಟಾಮುಷ್ಟಿ. ೩. = ಮುಷ್ಟಿ ೧೧: 'ಮುಷ್ಟಿಕ ಸ್ವಸ್ತಿಕ' ಪರಾ. ೪. ಕಂಸನ ಆಸ್ಥಾನದಲ್ಲಿ ಇದ್ದು, ಕೃಷ್ಣ ಬಲರಾಮರೊಡನೆ ಸೆಣಸಿ ಹತನಾದ ಒಬ್ಬ ಜಟ್ಟಿ. [ಸಂ.]

**ಮುಷ್ಟಿಕಸ್ವಸ್ತಿಕ** (ನಾ). [ನಾಟ್ಯ] ಮೂವತ್ತು ಬಗೆಯ ನೃತ್ತಹಸ್ತಗಳಲ್ಲಿ ಒಂದು: P "ಒಂದು ಕೈಯನ್ನು ಅರಾಲಹಸ್ತದಲ್ಲಿ ಆವೇಷ್ಟಿತಹಸ್ತಕರಣದಿಂದಲೂ ಮತ್ತೊಂದು ಕೈಯನ್ನು ಅಲಪಲ್ಲವ ಹಸ್ತದಿಂದಲೂ ಅನೇಕಾವರ್ತಿ ಸುತ್ತಿಸಿ ಎರಡು ಕೈಗಳಿಂದಲೂ ಕಟಕಾಮುಖಹಸ್ತವನ್ನು ಮಾಡಿ ಒಂದನ್ನೊಂದು ಮುಟ್ಟದಂತೆ ಕೈಗಳನ್ನು ಸ್ವಸ್ತಿಕಾಕಾರದಲ್ಲಿ ಹಿಡಿಯುವುದು" (ಅಶ್ಯರಂ. ಗದ್ಯಾಂಕುವಾರ. ೨೩೪): ಚತುರಸ್ರ . . . ಮುಷ್ಟಿಕಸ್ವಸ್ತಿಕ . . . ವಲಿತ, ಲಲಿತ — ಈ ಮೂವತ್ತು ನೃತ್ತಹಸ್ತಂಗಳ್ (ಅಶ್ಯರಂ. ೨-೪೪ ಪ). [ಸಂ.]

**ಮುಷ್ಟಿಕೀಲು** (ನಾ). ಮುಂಗೈಯ ಕೀಲು ಹಿಡಿದುಕೊಳ್ಳುವ ಒಂದು ಬಗೆಯ ರೋಗ: ೨೬ ತೇರಣದ ಬೀಜವಂ ಮೊಸರ ನೀರಿಂದ ತೇದು ತಣಿಗೆಗೆ ಮೆತ್ತಿ ಬಿಸಿಲಲ್ಲಿ ಇರಿಸಲು ತೈಲಂ ಬರುವುದು. ಆ ತೈಲವಂ ಪೂಸಿಕೊಂಡರೆ ಮುಷ್ಟಿಕೀಲು ಕಳೆವುದು (ಅಶ್ವ ಶಿ. ೩೩).

[ಮುಷ್ಟಿ₂ + ಕೀಲು ( < ಕೀಲ್ )]

**ಮುಷ್ಟಿಕೆ** (ನಾ). ಮುಷ್ಟಿ: ಹಿಡಿ: "ಮುಷ್ಟಿಕಾ — ಮುಟ್ಟಿಗೆ" (ಕಬುಕ. ೨೩೩ ಶ್ರ ನೋ). [ ಸಂ. ಮುಷ್ಟಿಕಾ ]

**ಮುಷ್ಟಿಗೆ** 'ಮುಟ್ಟಿಗೆ₃' ನೋ.

**ಮುಷ್ಟಿಗೆಯ್** (ಕ್ರಿ). ೧. ಕೈಯ ಬೆರಳುಗಳನ್ನು ಮಡಿಸಿ ಹಿಡಿಯಾಗಿ ಮಾಡು; ಮುಷ್ಟಿಹಿಡಿ: ಕಯ್ಯ ಮುಷ್ಟಿಗೆಯ್ದು ಅಳೆಯೆ[ಶಾತಾಂಗುಕೈಯುಂ ಮುಷ್ಟಿಗೈದಳೆಯೆ] ರತ್ನಿಯಕ್ಕುಂ (ಮಂಗರಾ. ೯೩-೪). ೨. ಹಿಡಿಗೆ ಒಳಪಡುವಂತೆ ಮಾಡು: ಮುಷ್ಟಿಗೆಯ್ದು ಮಯೂರಪಿಂಛಸಮೂಹಮಂ ನೆಗಪುತ್ತೆ ತಾವಷ್ಟು ಮಂತ್ರಿಸಿ ಬೀಸಲಾತನ ತಾಪಮಾಜದೆ ಪೆರ್ಚಿರಲ್ (ಜಾತಾಶ್ಯ. ೪-೦೪-೨೭). [ ಮುಷ್ಟಿ₂ + ಕೆಯ್₁ ]

**ಮುಷ್ಟಿಗ್ರಾಹ್ಯ** (ಗು). ೧. ಹಿಡಿಯಲ್ಲಿ ಹಿಡಿಯಬಹುದಾದ; ಮುಷ್ಟಿಯಲ್ಲಿ ಅಡಗುವ: ಮಧುಮಾಸಕುಸುಮಸಮೃದ್ಧಿಯಂತೆ ವಿಜಾತಿಯುಂ ಮದನಚಾಪಲತೆಯಂತೆ ಮುಷ್ಟಿಗ್ರಾಹ್ಯಮಧ್ಯೆಯುಂ . . . ಎನಿಸಿದೇಜಂ ಜವ್ವನೆಯ ರೂಪಾತಿಶಯಮಂ ನೆಮೆಯಿಕ್ಕದೆ ನೋಡುತ್ತುಂ (ಶಾರಂಪು. ೪೪). (ನಾ). ೨. ಹಿಡಿಯಲ್ಲಿ ಅಡಗುವಂಥದು; ಮುಷ್ಟಿಯಲ್ಲಿ ಗ್ರಹಿಸಬಹುದಾದುದು: ಹಿಡಿಯೆನಿಪ್ಪ ನುಡಿ ಮುಷ್ಟಿಗ್ರಾಹ್ಯದ ಪೆಸರುಂ ಕಠಿಣಯ ಪೆಸರಿಪನಜಂ (ಶಕುಶಿ. ೦೪); ಈ ಎಲ್ಲ ವೈವಿಧ್ಯಮಯವಾದ ರೂಪಗಳೆಲ್ಲವೂ ದೃಷ್ಟಿಗ್ರಾಹ್ಯವೇ ಹೊರತು ಮುಷ್ಟಿಗ್ರಾಹ್ಯವಲ್ಲ (ಶಾಂಕಸ. ೯೯). [ಸಂ.]

**ಮುಷ್ಟಿಘಾತ** (ನಾ). ಮುಷ್ಟಿಯಿಂದ ಹೊಡೆಯುವಿಕೆ: ಗುದ್ದುವಿಕೆ. [ಸಂ.]

**ಮುಷ್ಟಿಘಾತ** (ನಾ). ಮುಷ್ಟಿಯಿಂದ ಹೊಡೆಯುವುದು; ಗುದ್ದುವುದು: ಮಲ್ಲಯುದ್ಧದ ದೋಷಗಳಲ್ಲಿ ಒಂದು: ಕಳಂಬೊಕ್ಕು ನಿರಿಸುಗೆಯ್ದು ನಖಹತಿ ದಶನಹತಿ ಪದಪಾತಂ ಮುಷ್ಟಿಪಾತಮೆಂಬ ದೋಷಂಗಳಿಂ ಪೊರ್ದದ ನಾಲ್ಕುಂ ಸ್ಥಾನದೊಳಂ . . . ಪಟತೆಜದ ಪಾತಂಗಳೊಳಂ ನೆಜೆದು (ಚಂದ್ರಪು. ೩-೭೭ ಪ). [ಸಂ.]

**ಮುಷ್ಟಿಪ್ರಶ್ನೆ** (ನಾ). ಹಿಡಿಯಲ್ಲಿ ಅಡಗಿಸಿರುವುದನ್ನು ಬೇರೊಬ್ಬರು ಕಂಡುಹಿಡಿಯುವ ಸಮಸ್ಯೆ: ಕನಕದಾಸರ . . . ಬಾಳೆಯ ಹಣ್ಣಿನ ಕಥೆಯನ್ನು ಪವಾಡವೆಂದು ಹೇಳಲಿಕ್ಕೆ ಬಾರದಿದ್ದರೂ ಎರಡನೆಯ 'ಮುಷ್ಟಿಪ್ರಶ್ನೆ'ಯಂತೂ ಹೇಳಿ ಕೇಳಿ ಪವಾಡ (ಕಣಾಕಜ. ೬೯).

[ ಸಂ. ಮುಷ್ಟಿಪ್ರಶ್ನಾ ]

**ಮುಷ್ಟಿಪ್ರಹಾರ** (ನಾ). ಮುಷ್ಟಿಯಿಂದ ಕೊಡುವ ಪೆಟ್ಟು, —ಹೊಡೆತ: ಗುದ್ದು: ಇನ್ನು ಕೈದುಗಳೇಕೆ ದೃಢ ಮುಷ್ಟಿಪ್ರಹಾರ ಪ್ರಕಟಸತ್ವರಿಗೆ (ಕುವ್ಯ. ೪. ೦೯-೩೯). [ಸಂ.]

**ಮುಷ್ಟಿಬಂಧ** (ನಾ). ೧. ಮುಷ್ಟಿಯನ್ನು ಬಿಗಿಮಾಡಿ ಹಿಡಿದುಕೊಳ್ಳುವಿಕೆ: "ಮುಷ್ಟಿಬಂಧಃ, ಸಂಗ್ರಾಹಃ — ೨ ಗಟ್ಟಿಯಾಗಿ ಹಿಡಿಯನ್ನು ಹಿಡಕೊಳ್ಳುವದಕ್ಕೆ ಹೆಸರು" (ಸಿದ್ಧಾಂತಿ. ೩೩೯). ೨. ಒಂದು ಹಿಡಿಯಲ್ಲಿ ಅಡಗುವಷ್ಟು ಪ್ರಮಾಣ. [ಸಂ.]

**ಮುಷ್ಟಿಬಲ** (ನಾ). ಮುಂಗೈಯ ಬಲ, —ಸಾಮರ್ಥ್ಯ: ದಾನವರು ದಕ್ಕಡರು ಧೈರ್ಯೋದ್ದಾನಶೀಲರು ಘಾಯವನು ಗಿರಿಯಾನಬಾರದು ಮುಷ್ಟಿಬಲವೆಗ್ಗಳರು ಸತ್ವದಲಿ (ಕುವ್ಯದ್ರೋ. ೦೩-೩೩). [ಸಂ.]

**ಮುಷ್ಟಿಮೈಥುನ** (ನಾ). [ಕಾಮಶಾ] "ಹಸ್ತದಿಂದ ಕೃತಕವಾಗಿ ಮಾಡುವ ರತಿಕೇಳಿ" (ಸಿಂಕೋ. ೯೩೩). [ಸಂ.]

**ಮುಷ್ಟಿಯುದ್ಧ** (ನಾ). ಪರಸ್ಪರ ಮುಷ್ಟಿಗಳಿಂದ ಹೊಡೆದಾಡುವುದು; ಮುಷ್ಟಾಮುಷ್ಟಿ: ಮಾಣ್ಗೆ ಶಸ್ತ್ರನಿಶಾತಾಸ್ತ್ರನಿಕಾಯದಿಂ ನೆಗಳ್ದ ಯುದ್ಧಂ ಮುಷ್ಟಿಯುದ್ಧಕ್ಕೆ ನಿಂದನುವಾಗು (ಶಬಶಂ. ೪-೬೩); ಸುಖಾರುವು ಮುಷ್ಟಿಯುದ್ಧದಲ್ಲಿ ಗಟ್ಟಿಗನಾಗಿದ್ದನು (ಸುಚಿಸ. ೩೯). [ಸಂ.]

**ಮುಷ್ಟಿಶೂಲೆ** (ನಾ). ವೃಷಣಕ್ಕೆ ಸಂಬಂಧಿಸಿದ ನೋವು: ಮುಷ್ಟಿಶೂಲೆಗೆ:—ಬೆಲ್ಲ ಗಣಿಕೆಸೊಪ್ಪು ಅರೆದು ಆ ರೋಗಿಯ ಮೂತ್ರದಲ್ಲಿ ಕಲಸಿ ಬಿಸಿ ಮಾಡಿ ಇಕ್ಕ ಕಚ್ಚೆಯಲ್ಲಿ ಕಟ್ಟಲು . . . ತನ್ನ ಸ್ಥಾನಕ್ಕೆ ಬರುವುದು (೬ವ್ಯ ಶಿ. ೦೪೭). [ ಸಂ. ಮುಷ್ಟಿಶೂಲಾ ]

**ಮುಷ್ಟೆ** 'ಮುಷ್ಟಿ₁' ನೋ.

**ಮುಸಂಡಿ** 'ಮುಸುಂಡಿ₁' ನೋ.

**ಮುಸಂಬಿ** 'ಮೂಸಂಬಿ' ನೋ

**ಮುಸಡಿ** 'ಮುಸುಡು' ನೋ.

**ಮುಸದ್ದಿ** 'ಮುತ್ಸದ್ದಿ' ನೋ.

**ಮುಸರೆ** 'ಮುಸುಱೆ' ನೋ.

**ಮುಸಲ₁**, ಮುಸಳ (ನಾ). ೧. ಬತ್ತ ಮೊದಲಾದುವುಗಳನ್ನು ಕುಟ್ಟಲು ಉಪಯೋಗಿಸುವ ಮರದ ಒಂದು ಸಲಕರಣೆ; ಒನಕೆ: "ಒನಕೆ ಮುಸಲಮೆನಿಕ್ಕು" (ಮಂಗರಾ. ೬೨-೨೨); ಮದದಂತಿದಂತಮುಸಲಪ್ರವಿಭಗ್ನಮಹಾಮಹೀರುಹಾಸ್ಪದಂ (ಶಂಶಹಾ. ೩-೦೦): ತೆಗೆದು ಸೀಳ್ದಡೆಯೊಳದಱ ಪೊಡೆಯೊಳಾ ಮುಸಲಾಂಶಮಂ ಮಾಂತೆ ಕಂಡು (ಪದ್ಮರಾ. ೦೦-೦೯೪); ಉಲೂಖಲದ ಸೋಮವಲ್ಲಿಯ ಮುಸಲದ . . . ಬಹುಸಾಧನಂಗಳಿಂ . . . ಮಖಶಾಲೆ ಕಣ್ಗೆಸೆದುದು (ಕೈಬಿಶಾ. ೩೩-೩೯); ೨. ಒನಕೆಯಾಕಾರದ ಒಂದು ಬಗೆಯ ಆಯುಧ: ಅಸಿ ಮುಸಲ ಕಣಾಪ ಕಂಪನ ಮುಸುಂಡಿ ಬಿಂಡಿವಾಳ . . . ಅಂಕುಶಾದಿ ಶಸ್ತ್ರಾಸ್ತ್ರಂಗೊಳೊಳೆಚ್ಚು (ಶಂಶಾಶಾ. ೦೩-೭೬ ಪ); ಮುಸಲ ಗದಾ ತೋಮರ ಶಂಕು ಶಕ್ತಿ ಚಕ್ರಚ್ಛುರಿಕಾದ್ಯಾಯುಧದೊಳಧಿಗತಶ್ರಮನಾದಂ (ಕೃಷ್ಣಪು. ೪-೬೦); ಮುದ್ಗರ ಮುಸಲ ತೋಮರ ಪೇಟಕಾದಿ ಸಮಸ್ತಶಸ್ತ್ರದ ಘಾತದತಿಬಲಖಳರು ಕೂಡಿತು ಕೋಟಸಂಖೆಯಲಿ (ಕೂಶರಾ. ೩-೩-೦೩). ೩. ಗದೆ:

ಕಂಧರದ ಮುಸಲದ ವಿಮಳನೀಲಾಂಬರದ ರಾಮನ ಸುಳಿವ ಕಂಡರು ಕೃಷ್ಣಪಾಂಡವರು (ಕುವ್ಯಾ.ಗ. ೬-೩೭). ೪. ಗಂಟೆಯ ನಾಲಗೆ. ೫. ಒಂದು ಬಗೆಯ ಶಸ್ತ್ರಚಿಕಿತ್ಸೆಯ ಸಲಕರಣೆ. ೬. [ಜ್ಯೋತಿ] ನಕ್ಷತ್ರಪುಂಜ. ೭. " ಆಶ್ರಯಯೋಗಗಳಲ್ಲಿ ಒಂದು ; ಸ್ಥಿರರಾಶಿಗಳಲ್ಲಿ ಎಲ್ಲಗ್ರಹಗಳೂ ಇರುವುದು" (ಜಾತಕ. ಶಂ. ೩. ೩೬೩) : ಚರರಾಶಿಯೊಳ್ ಜು ಗ್ರಹವಿರೆ ಯೋಗಂ ರಜ್ಜುವೆನಿಸುಗುಂ ಸ್ಥಿರದೊಳ್ ಕೂಡಿರೆ ತಾನದು ಮುಸಲಂ (ಜಾತಕ. ೦೩-೦). **ಮುಸಳ :** ೧. " ಮುಸಳಮುಯೋಗ್ರಂ " (ವಸ್ತುಕೋ. ೫೦-೩೨) : ಮುವಗಜದಂತಕಾಂತ ಮುಸಳಂಬಿಡಿದೆತ್ತುವ ತೋಳ ನುಣ್ಪೊಗರ್ ಮದನನ ಬಾಳ ನುಣ್ಪೊಗರನೇಳಿಸೆ (ಪುಷ್ಪ.ಕ. ೫-೯೨). [ಸಂ.]

**ಮುಸಲ್ಮ2** (ನಾ). ಇಸ್ಲಾಂ ಮತದವನು ; ಮಹಮ್ಮದೀಯ : ಆ ಮುಸಲರವ ಇಂದುಮತಿನ್ನ ಲಗ್ನಾದನಂತ ನೋಡ್ರಿ (ಅಪನಾ. ೨೦೩) : ಮಂತ್ರೋಚ್ಚಾರದಿ ಮಂತ್ರಾಕ್ಷತೆಯನು ಬೀರಿದ ಕೂಡಲೆ ಮುಸಲರು ಚಿತೆಯನು ಸೇರುವರಯ್ಯಾ ಸೇರುವರು (ಕೊಗಿಲೆ. ೨೦-೬೫) : ಮಾತು ಅರಿಯದ ಮುಸಲ ಹಾಸುವ ಕವುದಿ ಒಯ್ದ (ನಾಡ). [< ಮುಸಲ್ಮಾನ]

**ಮುಸಲಘಾತ** (ನಾ). ಒನಕೆಯಿಂದ ಬೀಳುವ ಪೆಟ್ಟು--ಹೊಡೆತ. [ಸಂ.]

**ಮುಸಲಧರ** (ನಾ). ಗದೆಯನ್ನು ಧರಿಸಿದವನು ; ಬಲರಾಮ : ಆ ನಿಖಿಳಪರಿವಾರದನುಸಂಧಾನ ವೃಷ್ಣಿಗಳತ್ತ ತಿರುಗಿದವೇನನಂಬೆನು ಮುಸಲ ಧರನಾಗಮನಸ್ಸಗತಿಯ (ಕುವ್ಯಾ.ಗ. ೫-೩೭). [ಸಂ.]

**ಮುಸಲಧಾರೆ** (ನಾ). ಒನಕೆಯಷ್ಟು ದಪ್ಪವಾಗಿ ಸುರಿಯುವ ಮಳೆ : ಭಾವಗಳು ಮುಸಲಧಾರೆಯಾಗಿ ಸುರಿದು . . . ಓಡುವುದಕ್ಕೆ ಮೊದಲುಮಾಡಿದುವು (ಬಂಕಿಮ. ೧೯೩) ; ಮುಸಲಧಾರೆಯಾದ ಮಳೆ, ಪರಿಚಯವಿಲ್ಲದ ಸ್ಥಳ, ಅವಳು ಎಲ್ಲಿಗೆ ತಾನೇ ಹೋದಾಳು ? (ಅಜಾಶ. ೧೯೦) : ಇಷ್ಟರಲ್ಲಿಯೇ ಮುಸಲಧಾರೆಯಿಂದ ಮಳೆಯು ಸುರಿಯ ಬಹುದೆಂದು ನನ್ನ ನಂಬಿಗೆಯು (ಲಿಶಕ. ೨೦೦). [ಸಂ. ಮುಸಲಧಾರಾ]

**ಮುಸಲಪಾಣಿ** (ನಾ). ೧. ಗದೆಯನ್ನು ಹಿಡಿದಿರುವವನು. ೨. ಬಲರಾಮ : ಕೌಂತೇಯನೃಪಸಂ ಮುಸಲಪಾಣಿ ಮನದೊಳ್ ಪೊಗಟ್ಟಂ (ಗದಾಯು. ೬-೬೦). [ಸಂ.]

**ಮುಸಲಮಾನ್** ' ಮುಸಲ್ಮಾನ ' ನೋ.

**ಮುಸಲಮಾನ** ' ಮುಸಲ್ಮಾನ ' ನೋ.

**ಮುಸಲಸ್ನಾನ** (ನಾ). ಒನಕೆಯನ್ನು ನೀರಿನಲ್ಲಿ ಅದ್ದಿ ತೆಗೆಯುವಷ್ಟು ಕ್ಷಿಪ್ರಕಾಲದಲ್ಲಿ, ದೇಹವನ್ನು ನೀರಿನಲ್ಲಿ ಮುಳುಗಿಸಿ ಮೇಲೇಳುವಿಕೆ; ತೀರ್ಥಕ್ಷೇತ್ರಗಳಲ್ಲಿ ಮಾಡುವ ಕ್ಷಿಪ್ರಕಾಲದ ಸ್ನಾನ : ಈ ತೀರ್ಥದಲ್ಲಿ ಒನಕೆ ಮುಳುಗಿದಂತೆ ಸುಮ್ಮನೆ ಮುಳುಗುವ ಮುಸಲಸ್ನಾನವೂ ಸಮಸ್ತ ಪಾಪಗಳನ್ನು ಪರಿಹರಿಸುವದೋ ಅದರಿಂದ ಹೇಳಲ್ಪಟ್ಟಿತು (ಅರ್ಕಪಮಾ. ೨೦). [ಸಂ.]

**ಮುಸಲಹತಿ** (ನಾ). ಒನಕೆಯ ಪೆಟ್ಟು--ಹೊಡೆತ : ಪುರಜನಂಗಳ ಮುಸಲಹತಿ [ಪಾಠಾಂ. ಪುರಜನದ ಮುಸಲಾಪಹತಿ]ಯಲಿ ಮುಚುರಿದು ಬಂದುದು ಕೌರವೇಂದ್ರನ ವಳ ವಿಘಾತಿಯಲಿ (ಕುವ್ಯಾ.ಅ. ೬-೩೫). [ಸಂ.]

**ಮುಸಲಾಯುಧ** (ನಾ). ೧. ಮುಸಲವೆಂಬ ಆಯುಧ. ೨. ಗದೆ. ೩. ಗದೆಯನ್ನು ಹಿಡಿದವನು ; ಬಲರಾಮ : ಹಲ ಮುಸಲಾಯುಧಂ ನಡೆವ ಶಾರಣಗೇಂದ್ರದುಮನೊಂದು ಕರ್ಮಗಿಲ್ ಬಳಸಿದಪೋಲ್ ವಿರಾಜಿಸೆ ವಿನಿಲಪಟಂ (ಶಂಕಾಮಹಾ. ೬-೬೬). ೪. ಒಬ್ಬ ರಾಕ್ಷಸನ ಹೆಸರು : ಬಕಾಸುರ ಜಟಾಸುರರ ಮಕ್ಕಳ್ ಚತುಸ್ತ್ರಿಂಶತ್ಸಹಸ್ರನಕ್ತಂಚರಪರಿವೃತ ಮಳಂಭೂಷ ಮುಸಲಾಯುಧ ಕಾಳನೀಳ ವಿದ್ಯುನ್ಮಾಲ್ಯಾದಿಗಳುಂ ಬಂದು ಕೂಡೆ (ಶಂಕಾ. ೧೦-೩೭ ವ). [ಸಂ.]

**ಮುಸಲಿ1** (ನಾ). ೧. ಗದೆಯನ್ನು ಧರಿಸಿರುವವನು. ೨. ಬಲರಾಮ: "ನೀಲಾಂಬರಂ. . . ಮುಸಲಿ ಹಲಿ ರೌಹಿಣೇಯಂ ತಾಳಧ್ವಜಂ ರಾಮ ನೆಸಲು ಬಲನಕ್ಕು" (ಮಂಗರಾ. ೭-೨೦) ; ದಾನವಮದವಿದಳಿತ ಮುಸಲಿಯ ಮಾತಿಗಾನಂದವಡೆದು (ಪೋಹತ. ೦೩-೦೯). [ಸಂ. ಮುಸಲಿನ್]

**ಮುಸಲಿ2** (ನಾ). ೧. ಹಲ್ಲಿ ; ಗೌಳಿ : "ಮುಸಲಿ ಗೃಹಗೋಧಿಕಂ ಗೃಹಪಿಕಂ ಹಲ್ಲಿಯದು" (ಮಂಗರಾ. ೯೯-೦೯). ೨. ಹಲ್ಲಿಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ : ಮೊಸಳೆ. ೩. ಹಲ್ಲಿಯ ಜಾತಿಗೆ ಸೇರಿದ ಒಂದು ಪ್ರಾಣಿ ; ಓತಿಕೇತ : "ಸರಟಃ, ಕೃಕಲಾಸಃ--೨ ತೊಂಡೇ ಹೆಸರು, ಹೆಂಟೇಗೊದ್ದ. . . ಹಾವುರಾಣಿಗೂ ಇದೇ ಹೆಸರು" (ಸಿದ್ಧಾಂತ. ೦೫೭). ೪. ಒಂದು ಬಗೆಯ ಸಸ್ಯ ; ನೆಲತಾಳೆ : "ಮುಸಲೀ, ತಾಲಮೂಲಿಕಾ--೨ ನೆಲತಾಟ ಹೆಸರು. ನೆಲತಾಳೇಗೆಡ್ಡೆಯನ್ನು ವರು" (ಸಿದ್ಧಾಂತ. ೧೫೯). ೫. ನಪುಂಸಕಸತ್ತ್ವದ ಕುದುರೆ : ವಂದು ಪಾದ ಮಾತ್ರವೆ ಶುಭ್ರವಾಗಿ ಪುಷ್ಪಹೀನವಾದ ಅಶ್ವವು ಮುಸಲೀಯೆನಿಸಿ ಕೊಳ್ಳುವದು (ಅಶ್ವಶಾ. ೩೦೨-೭). [ಸಂ. ಮುಸಲೀ]

**ಮುಸಲಿಕೆ, ಮುಸಳಿಕೆ** (ನಾ) ೧. ಹಲ್ಲಿ ; ಗೌಳಿ. ೨. ಹಲ್ಲಿಯ ಜಾತಿಗೆ ಸೇರಿದ ಒಂದು ಪ್ರಾಣಿ : ಉಡ : "ಗೋಧಾ- ಮುಸಲಿಕಾ--ಈ ೨ ಉಡು" (ಶಬ್ದಮ. ೩೯-೬೦). **ಮುಸಳಿಕೆ :** ಮುಸು [ಸ] ಳಿಕಾದ್ಯಾಕರ ಪರಿಸರ್ಪಂಗಳ ಉತ್ಕೃಷ್ಟಾಯುಃಸ್ಥಿತಿ ನವಪೂರ್ವಾಂಗಂ (ತತ್ತ್ವಸೂ. ೦೭೮). [ಸಂ. ಮುಸಲಿಕಾ]

**ಮುಸಲುಮಾನ** ' ಮುಸಲ್ಮಾನ ' ನೋ.

**ಮುಸಲ್ಮಾನ್** ' ಮುಸಲ್ಮಾನ ' ನೋ.

**ಮುಸಲ್ಮಾನ,** ಮುಸಲಮಾನ್, ಮುಸಲಮಾನ, ಮುಸಲುಮಾನ, ಮುಸಲ್ಮಾನ್, ಮುಸಿಲ್ಲಮಾನ, ಮುಸುಲಮಾನ, ಮುಸುಲು ಮಾನ, ಮುಸುಲ್ಮಾನ (ನಾ). ಇಸ್ಲಾಂಧರ್ಮವನ್ನು ಅನುಸರಿಸುವ ವನು; ಮಹಮ್ಮದೀಯ : ತಾನೇ ಬಿದ ಮುಸಲ್ಮಾನರೆಂಬಭಿಮಾನದಿಂ (ಕದಂಕ. ೬೯) ; ಅರೇಬಿಯಾದಿಂದ ಶಕ್ತಿಯನ್ನು ರಭಸದಿಂದಾತ್ತ ಹೊರಟ ಅಚ್ಚ ಮುಸಲ್ಮಾನರು ರೋಮಿನಲ್ಲಿರುವಾಗ ರೋಮನರಂತಿರು ಎಂದುಕೊಂಡು ಮುಂದುವರೆದಿರಬೇಕು (ನಾರಡ. ೪೦೭). **ಮುಸಲಮಾನ್ : ಮುಸಲಮಾನ್** ನೃಪ ನಿಮ್ಮನ್ನು ಕೊಲ್ಲ ಹೇಳಿಯೆ (ಚಿತ್ರಾ. ೬-೦೨). **ಮುಸಲಮಾನ :** ಬಸವರಾಜನ ಭಾಗ್ಯವೆಲ್ಲವ ವಸುಧೆಯೊಳು ನಿಕ್ಷೇಪಿಸುತ ನೃಪ ಅಸುವ ಕಳೆಯಲು ಅಧಿಕಪಟ್ಟವು ಮುಸಲಮಾನರಿಗೆ (ಶರಂ. ೯೫೦-೦೯) ; ಮುಸಲ ಮಾನರು ಹಂದಿ ಬಕ್ಷಣೆ × × × (ಎಕ. IX, ತನ್ನಶ. ೦೬೫-೦೩ ; 1761) : ಆ ವಾರ್ತೆಯಂ ಮುಸಲಮಾನ ದೊರೆ ಕೇಳ್ದು (ನಗರುಪಾ. ೦೫-೫೯). **ಮುಸಲುಮಾನ :** ಮುಂದೆ ಮುಸಲುಮಾನರುಗಳಿ (ಶಿಂಕನ. ೦೯೬೬, ಅಕ್ಕಿಶ್ವರ. ೯೭-೪ ; ?). **ಮುಸಲ್ಮಾನ್ :** ಹಿಂದೂ ಮುಸಲ್ಮಾನ್ ಸಮಸ್ಯೆಗಳು. . . ಪ್ರಗತಿಗೆ ಕಂಟಕವಾಗಿ ಕುಳಿತಿವೆ (ಶಿಕ್ಷದ. ೨೫). **ಮುಸಿಲ್ಲಮಾನ :** ಯಿಾ ಧರ್ಮ್ಮಾಂ ಅಳುಪಿದರೆ ಗೋಮಾಂಸಭಕ್ಷಣೆ ಮುಸಿಲ್ಲಮಾನರಿಗೆ ಹಂದಿಮಾಂಸಭಕ್ಷಣೆ (ಕೌಇದ. XX. ೩೩೭-೨೨; 1576). **ಮುಸುಲಮಾನ :** ಮುಸುಲಮಾನ ತಪ್ಪಿದರೆ ಮಕ್ಕೆದಲ್ಲಿ ಮುಸಾಪ ಬಿಸಾಟ ಪಾತಕೆ ಹೋಹರೂ (ಎಕ. IX, ೯೯-೬; ?). **ಮುಸುಲುಮಾನ :** ಯಿಾ ಧ(ಂ)ರ್ಮವನು ಆ × × ಮುಸುಲುಮಾನರಾದಡೆ ಅತಾ ಹೊಲೆಯ ಮಾದಿಗ ತುರುಕನಲ್ಲಾ (ಕೌಇದ. XX, ೩೯೪-೬; 15ನೆಯ ಶತ) : ಮುಸುಲು ಮಾನರಲ್ಲಿ ಯಾರು ಅಡ್ಡಿ ಮಾಡಿದರು ಮಕ್ಕಾದಲ್ಲಿ ಹಂದಿಬಕ್ಷಣೆ ಮಾಡಿದ ದೋಷಕ್ಕೆಹೋಗಲುಳ್ಳವರು (ಎಕ. IX, ನೆಲಮಂ. ೬-೦೬ ; 1763). **ಮುಸುಲ್ಮಾನ:** ಇತರ ದೇಶಗಳಲ್ಲಿ ಮುಸುಲ್ಮಾನ ಮೊದಲಾದವರ ಆಳ್ವಿಕೆಯಲ್ಲಿ ಈ ಧರ್ಮಕ್ಕೆ ಹೆಚ್ಚಿನ ಬಾಧೆಗಳು ಸಂಭವಿಸಿದರೂ ನಮ್ಮ ತುಳುನಾಡಿನಲ್ಲಿ ಅಂಥ ಅಪಾಯ ಗಳು ಸಂಭವಿಸಲಿಲ್ಲ (ತುಳುನಾ. ೨೬೯).

[← ಪಾರ. ಮುಸಲಮಾನ್, ಮುಸುಲ್ಮಾನ್ ; ಹಿಂ. ಮುಸಲಮಾನ್ : ಮರಾ. ಮುಸಲಮಾನ್, ಮುಸಲ್ಮಾನ್]

**ಮುಸಲ್ಮಾನಿ** (ಗು). ೧. ಮಹಮ್ಮದೀಯರಿಗೆ ಸಂಬಂಧಿಸಿದ. (ನಾ). ೨. ಮಹಮ್ಮದೀಯರ ಭಾಷೆ ; ಉರ್ದು : ಮುಸಲ್ಮಾನಿಯಲ್ಲಿ ಮಾಝಿ ಎಂದರೆ, ಅಂಬಿಗನಿಗೆ ಹೆಸರು (ಕಪಾಳಂ. ೪).

[ ← ಅರ. ಮರಾ. ಮುಸಲಮಾನೀ, ಮುಸಲ್ಮಾನೀ : ಪಾರ. ಮುಸುಲ್ಮಾನೀ ; ಹಿಂ. ಮುಸಲಮಾನೀ]

**ಮುಸಳ** ' ಮುಸಲ₁ ' ನೋ.

**ಮುಸಳಿಕೆ** ' ಮುಸಲಿಕೆ ' ನೋ.

**ಮುಸಾಂಬ್ರ** (ನಾ). ಒಂದು ಬಗೆಯ ಸಸ್ಯ ಮತ್ತು ಅದರಿಂದ ತಯಾರಿಸುವ ಔಷಧ ವಸ್ತು: "ಸೀಮೆಕತ್ತಾಳೆ, ಲೋಳೆಸರ, ಮುಸಾಂಬ್ರ . . . ನೋಣಸರ" (ಸಸ್ಯಶಿ. ೯) ; ಲೋಳೆಸರ, ಮುಸಾಂಬ್ರ (ಕೃಷಿಗಿ. ೩-೯೦). [ದೇ.॥ ತೆಲು. ಮುಸಾಂಬ್ರ, ಮುಸಾಂಬರ]

**ಮುಸಾಫರ್‌ಖಾನೆ** ' ಮುಸಾಫಿರ್‌ಖಾನೆ ' ನೋ.

**ಮುಸಾಫರ** ' ಮುಸಾಫಿರ ' ನೋ.

**ಮುಸಾಫರಖಾನೆ** ' ಮುಸಾಫಿರ್‌ಖಾನೆ ' ನೋ.

**ಮುಸಾಫಿರ್‌ಖಾನೆ,** ಮುಸಾಫರ್‌ಖಾನೆ, ಮುಸಾಫರಖಾನೆ. (ನಾ). ಪ್ರಯಾಣಿಕರು ಇಳಿದುಕೊಳ್ಳುವ ಸ್ಥಳ ; ಪ್ರವಾಸಿಬಂಗಲೆ : ಮಾತುಮಾತಾಡ್ತ ಬಂದೇ ಬಿಟ್ಟೆವಲ್ಲ ಮುಸಾಫಿರ್‌ಖಾನೆಗೆ (ಜಮಖ್ಕ. ೯೩) ; ಆಲಿಕಾದರನು . . . ಮುಸಾಫಿರ್‌ಖಾನೆಗೆ ಹೋಗಿ ಒಂದು ಕೋಣೆಯಲ್ಲಿ ಳಿದುಕೊಂಡು ಆಲೋಚಿಸಹತ್ತಿದನು (ಮಚಿಸ. ೩೯). **ಮುಸಾಫರ್‌ಖಾನೆ:** ಅಧಿಕಾರಿಗಳು ಇಳಿದುಕೊಂಡಿದ್ದ ಮುಸಾಫರ್‌ಖಾನೆ ಹಾವಿನ ಹುತ್ತವಾಗಿ ತೋರಿತು (ಜಿಸ್ತ್ಯ. ೦೦೯) ; ಈ ಕಟ್ಟಡಗಳೇ ಅಲ್ಲದೆ ಸಫವಿದೊರೆಗಳು ಹಲವು ಸರಾಯ್ ಅಥವಾ ಮುಸಾಫರ್‌ಖಾನೆಗಳನ್ನೂ . . . ನೆಲದಡಿ ಕಾಲುವೆಗಳನ್ನೂ ಕಟ್ಟಿಸಿದರು (ಇತ್ಯಾಂಸಂ. ೦೩೨). **ಮುಸಾಫರಖಾನೆ :** ತಮ್ಮ ಗ್ರಾಮದ ಸರಹದ್ದಿನಲ್ಲಿರತಕ್ಕ ಛತ್ರ, ದೇವಸ್ಥಾನ, ಮುಸಾಫರಖಾನೆ, ರಾಜಮಾರ್ಗಗಳು ಮುಂತಾದವುಗಳಲ್ಲಿ ಗಸ್ತು ಮಾಡುತ್ತಿರಬೇಕು (ಗ್ರಾಪಾಳ. ೩೦) ; ರಾಘುಚಂದ್ರನು ಪಾತಜ್ಜಿಯನ್ನು ಮನೆಗೆ ಬಿಟ್ಟು ಮುಸಾಫರಖಾನೆಗೆ ಬಂದನು (ಳಕಸು. ೦೦೯).

[← ಹಿಂ. ಮುಸಾಫಿರ್‌ಖಾನಾ ; ಮರಾ. ಮುಶಾಫರ್‌ಖಾನಾ]

**ಮುಸಾಫಿರ,** ಮುಸಾಫರ, ಮುಸಾಫಿರಿ (ನಾ). ಯಾತ್ರೆ ಮಾಡುವವನು ; ಯಾತ್ರಿಕ ; ಪಯಣಿಗ : ಹೊರಪ್ರಾಂಗಣದ ಚಾವಡಿಯಲ್ಲಿ ಯಾವಾಗಲೂ . . ಭಾವಜೀಗಳೂ, ಮುಸಾಫಿರರೂ . . . ಬೀಡು ಬಿಟ್ಟಿರುತ್ತಾರೆ (ಜಾರುದಾ. ೩೭) ; ತಾವು ಉತ್ತರಹಿಂದುಸ್ಥಾನಕ್ಕೆ ಬಂದ ಮುಸಾಫಿರರು ; ನೆಲೆಯಿಲ್ಲದ ಜನರು ಎಂದು ಅನಿಸುತ್ತದೆ (ಜಗುಳ. ೦೦). **ಮುಸಾಫರ :** ಆ ಮಾತಿಗೆ ನಾಚಿಕೆಪಟ್ಟ ಈ ಮುಸಾಫರರು ಹೊರಟು ಹೋದರು (ಕಥಾಮಂ. IV. ೬೨). **ಮುಸಾಫಿರಿ :** ಹೇಣ್ತಿ ಹ್ವಾದ ವ್ಯಾಗ ನಾವೂ ಮುಸಾಫಿರೀನ (ವ್ಯಶಿ. ೯೭).

[← ಅರ. ಹಿಂ. ಮುಸಾಫಿರ್ ; ಮರಾ. ಮುಸಾಫರ್, ಮುಶಾಫರ್]

**ಮುಸಾಫಿರಿ** ' ಮುಸಾಫಿರ ' ನೋ.

**ಮುಸಾಫಿರಿಬಂಗ್ಲೆ** (ನಾ). = ಮುಸಾಫಿರ್‌ಖಾನೆ : ಈಗ ಮುಸಾಫಿರಿ ಬಂಗ್ಲೇದಾಗ ಚೌಕೀದಾರ ಆದೀನ್ರಿ (ವ್ಯಶಿ. ೯೭).

[ ಮುಸಾಫಿರಿ (< ಮುಸಾಫಿರ) + ಬಂಗ್ಲೆ (< ಬಂಗಲೆ) ]

**ಮುಸಿ₁** (ನಾ). ಹುಸಿಯಾದುದು ; ಕೃತ್ರಿಮವಾದುದು : 'ಮುಸಿ ನಗು' ಪರಾ.

**ಮುಸಿಮುಸಿ ನಗು**=ಕೃತ್ರಿಮವಾಗಿ ನಗು ; ಹುಸಿನಗು : ಮಾಲಿ ಸುಮಾಲಿಗಳು . . . ಹರಿಯು ಪಕ್ಷದಲಿ ಪೊಗಿಸೆ ಕೂರಂಬುಗಳ ಮುಸಿಮುಸಿ ನಗುತ ಶಾರ್ಙ್ಗವ ಪಿಡಿದು ವಿವಿಧಾಶುಗವನೆಚ್ಚೊಡೆಗಡಿದನು (ಅಪಂರಾ. ೦-೭-೯೭) ; ವಿದ್ಯಾರ್ಥಿಗಳು ಸಿದ್ದಣ್ಣನತ್ತ ಮುಖ ತಿರುಗಿಸಿ ಮುಸಿಮುಸಿ ನಕ್ಕರು (ಒಡ್ಡಅ. ೩೩) ; ಅಂಬಿಗನು ಮುಸಿಮುಸಿ ನಗುತ್ತ . . . ಹಲಗೆಯ ಕಡೆ ಕೈ ತೋರಿಸಿದ (ಹಸುಹೂ. ೩೩೨). [← ತೆಲು. ಮುಸಿ]

**ಮುಸಿ₂** ' ಮೂಸೆ ' ನೋ.

**ಮುಸಿಕಟ್ಟು** (ಕ್ರಿ). ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸುವ ಸಾಧನವನ್ನು ಅಳವಡಿಸು ; ಮೂಸೆಯನ್ನು ಇಡು : ನಾಗಾರ್ಜುನನು ಪರ್ವತಕೆ ಮುಸಿಕಟ್ಟಿ ಬೆಳ್ಳಿಯ ರಸದ ಪ್ರಚಂಡವಾದ ಪ್ರವಾಹಗಳನ್ನು ಹರಿಬಿಟ್ಟಿರುವನೇನೋ (ಹುದುರಾ. ೨೭).

[ಮುಸಿ₂ (< ಮೂಸೆ) + ಕಟ್ಟು₁]

**ಮುಸಿಕೆ** (ನಾ). ಓಕಳಿಯಾಟದಲ್ಲಿ ನೀರನ್ನು ತೂರಲು ಬಳಸುವ ಬಟ್ಟೆಯಿಂದ ಮಾಡಿದ ಜಾಳಿಗೆಯಂತಹ ಸಾಧನ (?) : ಕುಸ್ತಿಯುಗಳುಗಳು ಹೊಂಡದ ನೀರನ್ನು ತಮ್ಮ ಧೋತ್ರದ ಚಾಳಿಯಲ್ಲಿ ತುಂಬಿಕೊಂಡು ಸೂಳೆಯರ ಮೇಲೆ ತೂರುವದು ಪ್ರಾರಂಭವಾಯಿತು. ಆ ನೀರಿನ ಮುಸಿಕೆಗಳ ಹೊಡೆತದಿಂದ ತಪ್ಪಿಸಿಕೊಳ್ಳಲು ಸೂಳೆಯರು ಪತ್ರಾವಳಿನ ಕಂಟಿಗಳನ್ನು ಉಪಯೋಗಿಸುತ್ತಿದ್ದರು (ಗ್ರಾಮಸಿಯ. ೨೩೯). [ ? ]

**ಮುಸಿಗಾರ** (ನಾ). ಲೋಹಾದಿಗಳನ್ನು ಮೂಸೆಯಲ್ಲಿಟ್ಟು ಕಾಯಿಸುವವನು : ಸಾಹಸಿಗಳಾದ ಮುಸಿಗಾರರು ಭೂಗರ್ಭವನ್ನು ಬಗೆದು ಬೆಳ್ಳಿ, ಭಂಗಾರ, ತಾಮ್ರ ಮುಂತಾದ ಧಾತುಗಳ ರಾಶಿಯನ್ನು ಒಟ್ಟುತ್ತಿದ್ದರು (ಶಿರಂಗ. ೦). [ ಮುಸಿ₂ (< ಮೂಸೆ) + — ಗಾರ (< — ಕಾರ) ]

**ಮುಸಿಗೆ** ' ಮುಷ್ಕಿ ' ನೋ.

**ಮುಸಿಗೆಬಿಗಿ** (ಕ್ರಿ). ೧. ಹಿಂಗಟ್ಟುಮುರಿ ಕಟ್ಟು ; ಹೆಡಮುರಿ ಹಾಕು : ಕೋಣೆಯ ಬಾಗಿಲು ತೆಗೆದು ಒಳಗಿನಿಂದ ಅದನ್ನು ಹಾಕಿ ನನ್ನನ್ನೂ ಮುಸಿಗೆಬಿಗಿದನು (ಮೇಲಿಮು. ೩೯). ೨. ಬಿಗಿಯಾಗಿ ಕಟ್ಟಲ್ಪಡು,–ಬಂಧಿಸಲ್ಪಡು: ಮರಕ್ಕೆ ಮುಸಿಗೆ ಬಿಗಿದಿದ್ದ ರಣದುಲ್ಲಾಖಾನನು ಆತನ ಕಣ್ಣಿಗೆ ಬಿದ್ದನು (ಧಾರ್ಮಿಕೀ. ೩೦). [ಮುಸಿಗೆ (<ಮುಷ್ಕಿ) + ಬಿಗಿ₁]

**ಮುಸಿನಗು** (ನಾ). ಹುಸಿನಗು ; ಕೃತ್ರಿಮವಾದ ನಗೆ : ಮುಸಿನಗುವಿನೊಳಗಿರಲಶಕ್ಯವೆ ಪಿಶಾಚಿಕೆಗೆ ? (ಮಂಕುತ. ೯೦೭). [ಮುಸಿ₁ + ನಗು₂]

**ಮುಸಿನಗೆ** (ನಾ). = ಮುಸಿನಗು : ಯಾಕೋ, ಈ ಮುಸಿನಗೆ ? ಗಟ್ಟಿಯಾಗಿ ನಗುವುದಕ್ಕೆ ಧೈರ್ಯವಿಲ್ಲವೆ ? (ಹಸುಹೂ. ೦೭೯).

**ಮುಸಿಮುಸಿನಗೆ** (ದ್ವಿರುಕ್ತಿ) : ದೆಸೆದೆಸೆಯ ಸಸಿವದನೆಯರ ಮುಸಿಮುಸಿನಗೆಯು ಗುಸುಗುಸುಗಳೆಸಗಿರಲು (ಅಪಂರಾ. ೦-೨೩-೯೭).

[ಮುಸಿ₁ + ನಗೆ]

**ಮುಸಿಮನೆ** (ನಾ). ೧. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸಲು ಬಳಸುವ ಸಾಧನವಿರುವ ಸ್ಥಳ. ೨. (ಅಲಂ) ಕಠಿಣವಾದ ಹಂತ,— ಮಜಲು : ಕವಿವಾಣಿ ಈ ನಾಲ್ಕು ಮುಸಿಮನೆಗಳಲ್ಲಿ ಹಾದು ಹದಗೊಂಡು ಪರಿಪಾಕಪೂರ್ತಿಯನ್ನು ಹೊಂದುವುದೆಂದು ಪಂಪನು ಹೇಳಿದ್ದಾನೆ (ತಪಾ. ೭೦). [ಮುಸಿ₂ (< ಮೂಸೆ) + ಮನೆ]

**ಮುಸಿಯು** ' ಮುಸು₂ ' ನೋ.

**ಮುಸಿಲ್ಲಮಾನ** ' ಮುಸಲ್ಮಾನ ' ನೋ.

**ಮುಸು₁** (ನಾ). ಒಂದು ಅನುಕರಣ ಶಬ್ದ : 'ಮುಸುಗುಟ್ಟು' ಪರಾ.

**ಮುಸುಮುಸು** (ದ್ವಿರುಕ್ತಿ) : ಮುದ್ದುಕೂಸಿನ ಹಾಗೆ ಮುಸುಮುಸುಮಾಡುತ್ತ ಕುಣಿದಾಸ (ಕೂರ್ಯದಾ. ೩೩-೩).

**ಮುಸು₂,** ಮುಜು, ಮುಸಿಯು, ಮುಸುವ, ಮುಸುವು, ಮೂಸು₂ (ನಾ). ಕರಿಯ ಮುಖವೂ ಉದ್ದಬಾಲವೂ ಉಳ್ಳ, ಒಂದು ಬಗೆಯ

ದೊಡ್ಡ ಗಾತ್ರದ ಕಪಿ ; ಗೋಲಾಂಗೂಲ : "ಗೋಲಾಂಗೂಲಃ, ಕೃಷ್ಣವಕ್ತ್ರಃ - ಈ ೨ ಮುಸು" (ಹಲಾಯು. ೪೯-೭೯) ; ಮುಸು ಮುತ್ತುಂತೆ ತೆರಳ್ದು ತನ್ನ ಮೊಗಮಂ ಕಂಡಳ್ಳನೋ (ಅಂತ. ೨-೪೩) ; ಮೊಸಳೆ ಮುಸುವಿಂದಂ ವಂಚಿಸಲ್ಪಟ್ಟು ಮನಂಗೆಟ್ಟು ಪೋಪುದುಂ (ಕಂತಕಂ. ೨೮೩-೦೮); ವಾನರ ಸಿಂಗಳೀಕ ಮುಸು ಕರಡಿಯ ಬಲಂ ಮುತ್ತಿದುದು (ಕೃ ಪಾ. ೨೦-೦೮). ಮುಜ್ಜು: 'ಅದು ಕರಡಿಯಲ್ಲ ಮುಜ್ಜು , ದೊಡ್ಡ ಕಪ್ಪು ಮುಗ' ಎಂದ (ಜಾಗಿ. ೯೩); ಮಾವಿನ ಗಿಡದ ಕಾಯಿಗಳು ಎಲ್ಲಾ 'ಮುಜ್ಜು' ತಿಂದು ಹಾಳಾಗಿ ಹೋಗುತ್ತಿವೆ (ಕಹಾವ. ೦೬೦). ಮುಸಿಯ: ಮೊಲ, ಮುಸಿಯ, ತುಲಿ, ಕರಡಿ, ಕುರ್ಕ ಮುಂತಾದ ಇತರ ಪ್ರಾಣಿವರ್ಗಕ್ಕೆ ಕಾಡಿನಲ್ಲಿ ಮಿತಿಯೇ ಇರಲಿಲ್ಲ (ಕಂಕಕಂ. ೨). ಮುಸುವ : ನರಿ ಹದ್ದು ಜಂಬುಕ ಮುಸುವ ಶರಭ ಶಾರ್ದೂಲ ಸಿಂಹವು (ಪದ್ಮಗ. ೦-೦೨೯); ಮರೆ ಹುಲ್ಲೆ ಸಿಂಗ ಮುಸುವನು . . . ಚಕೋರನ ಬಳಗವೊಪ್ಪಿತು ವನದೊಳು (ಗೋಪಾಕು. ೩-೦೦); ಬಸ್ಸು ನಿಂತಾಗ, ಬಸ್ಸಿನ ಬಳಿಗೆ ನೂರಾರು ಮುಸುವಗಳು ಬಂದು ತಿಂಡಿ ಬೇಡಿಕೊಂಡು ಹೋದುವು (ಅಖಂಪ. ೬). ಮುಸುವು : ಮರದ ಮಱಿಯಿಂ ಮಱೀಮುಸುವಾದ ಮುಸುಂಬು ಮುಸುವಿನ ಮುಸುಂಬಿನಂತೆ (ಅರ್ಗಸಿ. ೫-೦೦೩ ಪ); ಮುಸುವೆನೆ ತನ್ನ ಮುತ್ತುಮುಸುಡಿಂದಿರದೇಡಿವಳ್ (ರಾಜಶೇ. ೦೦-೦೬೩). ಮೂಸು₂: ಕೋತಿಗಳಲ್ಲಿ ಜಾತಿ : ಸಿಂಗಳೀಕ . . . ಕೋಡಗ, ಮೂಸು, ಮುಸುವ (ಪಶುಕು. ೨೬೯).

[ದೇ. ॥ ತಮಿ. ಮುಚು; ಮಲ. ಮೊಚ್ಚ; ತುಳು. ಮುಜ್ಜು, ಮುಜ್ಜಿ; ಕೊಡ. ಮುಚ್ಚೀ; ಕೋಲಾ. ಮುಯ್ ಮುಯಿಾ; ನಾಯ್ಕಿ. ಪರ್ಜಿ. ಮುಚುರ್; ಗೊಂಡಿ. ಮೂಜ್, ಮೂಂಚ್ ; ಕುೞ. ಮೂಸು ; ಕುವಿ. ಮೂಹ]

ಮುಸುಂಕಿಡು, ಮುಸುಕಿಡು, ಮುಸುಗಿಡು (ಕ್ರಿ). ೧. ಮುಚ್ಚು; ಮರೆಮಾಡು ; ಮುಸುಕುಹಾಕು : ನಯನೌಘಚ್ಛಲದಿಂದೆ ಕೈದಿಲೆಸಟಂ ಕಳ್ತಂ ಮುಸುಂಕಿಟ್ಟಂ (ಚಂದ್ರಕ. ೯-೩೬). ೨. (ಮುಖವನ್ನು) ಮರೆಮಾಡಿಕೊಳ್ಳು; ಮುಸುಕನ್ನು ಹಾಕಿಕೊಳ್ಳು : ಮೋಹದ ಮುನಿಸು ಮನದೊಳ್ ತೀವಿ ಪ್ರಣಯಕಲಹಂ ಬಲಿದು ಪ್ರಸಾದಮನೊಲ್ಲದೆ ಬಸವಂ ಮುಸುಂಕಿಟ್ಟು . . . ಪಟ್ಟಿರ್ದಿರೆ (ಬಸವ. ೯-೯೩); ಪಸುಗಳ್ ಮುಸುಂಕಿಟ್ಟೋಡೆ ಸರಸಿಜಭವಂ ಕಂಡು ಕಂಡು ಕಾಳಿಗಳ ಮುಂಕೊಂಡಸು (ಕಂಪ. ೪೦-೯೯). ಮುಸುಕಿಡು : ೧. ದೆಸೆಯೆಲ್ಲಂ ತೀವ್ರಬಾಣಾಳಿಯೊಳೆ ಮೆಡಱಿದಂತಂಬರಂ ಬಾಣದಿಂದಂ ಮುಸುಕಿಟ್ಟಂತಾಗೆ (ಕಂಕಲಾ. ೦೨-೨೦); ಕುಂಭದ್ವಯಕ್ಕೆ ಮುಸುಕಿಟ್ಟ ಬೆಳ್ಪಟ್ಟೆಯಂತಿರೆ ಗುರುಕುಚಂಗಳಂ ನೋಳ್ಪ ಕಾಮುಕನಿಕರದ ದಿಟ್ಟಿ ನಾಂಟದ ತೆಱದಿ ಮಱಿಮಾಡಿದಂದದಿಂ ಕಟ್ಟಾಣಿ ಮುತ್ತುಗಳ ಕೆತ್ತಿಸಿದ ಪೊಲೆಕಟ್ಟ ಕಟ್ಟಿದಳ್ (ಸೌಂದರ. ೭-೨೮). ೨. ಮುಸುಕಿಟ್ಟ ಪಟ್ಟಣಿಗೆಯುಂ ಪೊಱಪೊಣ್ಮುವ ಕಣ್ಣ ಬೆಳ್ಪುವೋಪರ ಮನದೊಳ್ ತೆಱಬೊಳೆವ ಪಾಳಿಗಳಂತಿರೆ . . . ಬಂದುದಂದೊಡನೆ ಸಪ್ತನವೆಂಡಿರ ತಂಡಂ (ಅಂತ. ೦೦-೯೬ ಅಂತಃ); ನಿಜೋತ್ತರೀಯ ವಸನಾಂಚಲದಿಂ ಮುಸುಕಿಟ್ಟು ಚಿಂತೆಯೊಳ್ . . . ಜಾನಿಸುತ್ತಿರಲು (ಶರಂಣ. ೪೬೩); ನಿಶೆಯೆಂಬ ವಧು ನೀಲಿಯ ವಸನವನುಟ್ಟು ಮುಸುಕಿಟ್ಟಳೆಂಬಂದದಲಿ ದಿಸೆ ಪದಿನಾಱಱೊಳೆಯ್ದ ಕತ್ತಲೆ ಮುತ್ತಿ ಮುಸುಕಿದುದು (ಅಂತ. ೫-೦೦೨). ೩. ಆವರಿಸು; ತುಂಬಿಕೊಳ್ಳು: ಭೂತಳದೊಳ್ ಹಿಮಮೊತ್ತರಿಸಿ ಭುವನಜನಮನುಱಿ ನಡುಗಿಸುತುಂ . . . ಮುಂದುಗೆಡಿಸುತ್ತು ಮುಸುಕುತುಂ (ಗಂಕ. ೭-೩೮); ಬಸಿಱೊಳ್ ಮೂಸೊತ್ತಿ ನೆತ್ತರ್ ಪಸರಿಸಿ ಕರುಳಂ ಸುತ್ತಿ ಮೂತ್ರಂ ಪುರೀಷಂ ಮುಸುಕಿಟ್ಟಿಲ್ಲಂಗದೊಳ್ ಕೆತ್ತಿರಲ್ (ಕಣ್ವಕ. ೩). ಮುಸುಗಿಡು: ೨. ತಾಯಿ ದೊಡ್ಡಮ್ಮಾ ಏನುಟ್ಟು ಮೆರೆದಾಳು ಕಾಗೊಟ್ಟು ಕರಿದಾ ಮುಸುಗಿಟ್ಟೂ . . . ಮೆರೆದಾಳೊ (ಜಾಬ್ರಹ. ೬೩).

[ಮುಸುಂಕು₂ + ಇಡು₁]

ಮುಸುಂಕು₁, ಮುಸುಕು₁, ಮುಸುಗು₁ (ಕ್ರಿ). ೧. (ಗವಸಣಿಗೆ ಮೊದಲಾದುವುಗಳಿಂದ) ಮುಚ್ಚು; ಮರೆಮಾಡು; ಆಚ್ಛಾದಿಸು;ಹೊದೆಸು : ದೆಸೆ ಪಸುರೇಱ ಪಚ್ಚೆಯೊಳೆ ಮುಚ್ಚಿ ಮುಸುಂಕಿದ ಮಾಟ್ಕೆಯಾದುದು . . . ಮೇಘಕಾಲದೊಳ್ (ಕಂಕರಾ. ೭-೨೨); ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರದ ಮಾಣೆ . . . ಕೋಡಗದ ಹುಲ್ಲಲ್ಲಿ ಮುಸುಂಕಿದಂತೆ [ಪಾಠಾಂ. ಮುಸುಕಿಟ್ಟಂತೆ] ಕೂಡಲಸಂಗಮದೇವ ನಿನ್ನ ಪರಿ (ಬಸವ. ೪. ೬೩೯); ಗಗನಲಕ್ಷ್ಮಿಯ ಪಯೋಧರಮಂ ಮುಸುಂಕಿದ ಚೀನಾಂಬರದ ಸೆಱಂಗಿನಂತೆ ತೊಳತೊಳವ ಪಳಯಿಗೆಯ ಪಟಲಗಳ್ಕಿರುತ್ತಿರೆ (ರಾಜಶೇ. ೦೩-೭೧ ಪ). ೨. ಮರೆಮಾಡಿಕೊಳ್ಳು; ಹೊದೆದುಕೊಳ್ಳು : ಆನಿಸೀಕ್ಷಿಸಲಾ ಲತಾಂಗಿ ಲಜ್ಜಿಸಿ ತನುವಂ ನಿಜಸ್ಮಿತಸಿತಾಂಶುಕಪಲ್ಲವದಿಂ ಮುಸುಂಕುವಳ್ (ಶರಂಣ. ೯೯); ಆ ವಧುವಿನ ಗೃಹಪೆಯ್ದಿ ಮುಸುಂಕಿದ ಧಾವಳ್ಯಾಂಬರವಂ ತೆಗೆದಂ ಸ್ಮರನಸಿಯೊಱದೆಗೆದಂತೆ (ಜಯುಗಾ. ೨-೯೨). ೩. ಮುತ್ತು; ಕವಿ; ಮುಸುರು : ಶ್ರವಣನತಪಾರಿಜಾತಸ್ತವಕೋದ್ಗತಮಧುಮಳಕ್ಕೆ ನಂದನಭೃಂಗೀನಿವಹಂ ಕವಿದನ್ನ ಮುಸುಂಕುವಿನಂ ಪೊಱಮಟ್ಟನಾಗಳತಿಸಂಭ್ರಮದಿಂ (ಶರಂಶು. ೯೯೦); ಸೊಟಿಗಳ್ಮುಸುಂಕಿ . . . ಮುನಿಪತಿಯನಗಲದೆ ಸುೞಿವವು ಜುಮ್ಮೆಂದು ಕಂಡವರ್ಮೆಸುವಿನಂ (ಧರ್ಮಾಮೃ. ೯-೬೬); ಅಬಲೆಯೊರ್ವಳಿರೆ ಮರುಳ್ದುಂಬಿಯೋದಲರ್ದ ಪೊಂದಾವರೆಯ ಸಿರಿಗೆತ್ತು ಮೊಗಕಱಗೆ, ಕಯ್ಯೆತ್ತಿ ಪೊಯ್ಯೆ ಕೆಂದಾವರೆಯರಲೆನುತ್ತದಂ ಭರದಿಂ ಮುಸುಂಕೆ (ಶಬ್ದಮ. ೯-೯೬). ೪. ಹರಡು ; ಹಬ್ಬು : ಆವರಿಸು; ವ್ಯಾಪಿಸು : ಭೋಗಾಂಗಮಾಗಿಯುಂ ಕೃಷ್ಣಾಗರುಧೂಪಂ ಮುಸುಂಕಿ ಕೊಂದಿಕ್ಕಿದುದಾ ಭೋಗಗಳನಿಂತು ಸಂಸ್ಕೃತಿಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್ (ಅಂತ. ೫-೨೩); ಕುಸುಮಶರನ ಪೊಸಜಸದ ಬೆಳರ್ಪು ಮುಸುಂಕಿದುದೋ ಎನಲು ಅಸಿತೋತ್ಪಲಲೋಚನೆಯಾನನದೊಳ್ ಪಸರಂಗೊಂಡು ವಿವರ್ಣಂ ಮಿಗೆ ರಂಜಿಸಿದುದು (ಜಯುಗಾ. ೯-೦೮). ೫. ದಟ್ಟವಾಗಿರು ; ನಿಬಿಡವಾಗಿರು; ಸಾಂದ್ರತೆಯಿಂದ ಕೂಡಿರು : ಪೊಸವೇಟಮೆಂಬ ಚೆಲ್ವಿಡಿದೆಳ ಮಾಮರಂ . . . ಅನುರಾಗಮೆಂಬ ತಳಿರಿಂದೆಸೆದಳ್ಕಱನಾಳ್ದ ನೋಟಮಂ ಬಿಡಿದಲರಿಂ ಮುಸುಂಕಿ ಸುಸಿಲೆಂಬ ಬಸಂತದೊಳೇಂ ಪೊದಱ್ದುವೋ (ಅಂತ. ೦೨-೨೮); ಎಯ್ದೆ ಮುಸುಂಕಿ ನೀದ ತಣ್ದಳಿರ್ಗಳನೊಪ್ಪೆ ತೋರ್ಪ ಜಲಮಂಟಪದಲ್ಲಿಗೆ ಬಂದನಾ ನೃಪಂ (ಶರಂಣ. ೯೫೮). ೬. ಒಟ್ಟಾಗು; ಸೇರು; ಕೂಡು : ಪೊಸಮುತ್ತಿನ ಲಂಬಣದೊಳ್ ಮುಸುಂಕಿದಂತಿಡಿಯೆ ಪೂತ ಸುರಯಿಯ ಮುಗುಳಂ . . . ಆಯ್ದಳ್ (ಅಂತ. ೧೦-೯೯). ೭. ತುಂಬಿರು; ಆವರಿಸಿರು : ವಿದ್ಯುಲ್ಲತಾಗರ್ಭೀಕೃತಶಾರದಾಭ್ರವಿಭ್ರಮದಂತೆ ಭಸಿತಂ ಮುಸುಂಕಿದ ಬಿಸುಗಣ್ಣಿಂ ಮೆಱವ ಲಲಾಟಪಟ್ಟದಿಂ (ಬಸವ. ೯-೦೯); ಮೊಸಳೆ ಮುಸುಂಕದಚ್ಚ ಪೊಸ ಬಾಂಬೊಲೆಯಿಂಬೊನಲೆಸೆವರ್ ಕೂನೊರ್ಣಾ ಮುಸುಜದ ಜೇನ ಪುಟ್ಟಿ (ಗಳಿ. ೬-೦೫೫). ಮುಸುಕು₁ : ೧. "ಮುಸುಕು—ಆವರಣೇ, ಭಾವೇ ಚ" (ಶಬ್ದಾ); ದುಕೂಲಾಂಬರಂ ನಿಜಾಂಗದೊಳಂ ಸಂದೆಸೆದಿರೆ ಬೆಳ್ಮುಗಿಲಿಂದಂ ಮುಸುಕಿದ ನೀಲಾದ್ರಿ ಬರ್ಪ ತೆಱದೊಳ್ ಬಂದಂ (ಕಂಕಲಾ. ೨-೩೮); ಮಹಾಸ್ತ್ರನೀರದೊಳೀತವನು ಮುಸುಕಿದನು ಶರಮಯವಾಯ್ತು ರಣಭೂಮಿ (ಕುಮಾವ್ಯ. ೨೦-೩೦); ಮುಸುಕಿದಳು ಮಾಯಾವಿಲಾಸದ ವಸನದಲಿ ಮಾಯಾನಿತಂಬಿನಿ ಮುಸುಕದಂತಿರೆ (ಕೋಶಿರಾ. ೨-೦-೯೦). ೩. ಧರ್ಮವೆಂಬಿಂದುಮಂಡಲಕ್ಕೆ ಮುಸುಕುವ ಕಾಳರಾಹುವಿನ ನಾಲಗೆಯೆನಿಪ ಸಿರಿಯಂ ಬಣ್ಣಿಪಂಗಾಂಪನಲ್ತೆ (ಶರಂಶು. ೫೩೨) : ಅಳಿನಿಕುರುಂಬಮಶೋಕೆಯ ತಳಿರಂ ಮುಸುಕುವವೊಲಂಘ್ರಿಪಲ್ಲವಮಂ ಕುಂತಳತತಿಗಳ್ಮುಸುಱ . . . ಪೊಡಮಟ್ಟಂ (ಧರ್ಮಾಮೃ. ೨-೦೯೬) ; ಮುಸುಕಿ ರ್ಘುಮ್ಮನೆ ತಗೆವುತೆಱಗುತಮಸಗಿ ನೆಗೆದೋಡುವ ನೊಣಂಗಳ ದೆಸೆದೆಸಗೆ ಪೇಸಿಕೆಯ ನಾತವಧಿಕ

ಭಯಂಕರವು ಪಸರಿಸಲು (ಬಸವು. ೪೭-೩೯) ; ಪರಶುವಿನಿಂದೆ ಮುಸುಕಿ ಮುದ್ಗರದಿಂದಲಸಿಯಿರೆದು . . . ದೆಸೆಗೆಡಿಸಿದರ್ ಸುರಪ್ರಸರಮಂ ದಾನವರ್ (ಶಾಂತಿ. ೪೪-೩೨). ೪. ಕುಸುಮಾಪಚಯವ್ಯಸನಾವಸಕ್ತ ಸುರಯುವತಿ ಪಾಣಿಪಲ್ಲವರಾಗಂ ಮುಸುಕಿದುದೆನಿಸಿದುದಸುಗೆಯ ಪೊಸದಳಿರ್ಗಳೊಳೆಸೆವ ಕೆಂಪು ನಂದನವನದೊಳ್ (ಆದಿಪು. ೭-೪೭) ; ಕೂಡೆ ಮೂಜಗವಂ ಮುಸುಕಿ ತೇಂಕಾಡಿಸುವ ಗಂಗೆಯನುಮೇಶನು ಸೂಡಿದನಲಾ (ಬಸವು. ೩೪-೭೩); ರವಿ ಪಶ್ಚಿಮಾದ್ರಿಯಂ ಮುಟ್ಟಿಗೊಳೆ ತಮಸ್ತೋಮಮಾವನಿಯಂ ಮುಸುಕಿತು (ಕೃಷ್ಣರಾ. ೯-೪೪). ೫. ಸನೆಯಿಂ ಮುಸುಕಿದ ತಳಿರಂ ಪೊಱಮಟ್ಟ ಪೊಸ ಮಾವುಗಳಿಂ ಬಸಂತಮೆಸೆದಪುದು (ಆದಿಪು. ೧೧-೯೩) : ಮಿಸುಪ ನದೀ ನಾರಿಯ ನಳಿತೋಳೆನಲೆಸೆವಿರ್ತಡಿಗಾಲುವೆಯಿಂದಮೆ ನೆಟ್ಟ ಮುಸುಕಿ ಬೆಳೆದ ಚೆಂದೆಂಗೊಳ್ವಾಳೆಯಡಕೆ ಪಸುರೆಳೆವಳ್ಳಿ . . . ಒಪ್ಪಿದುವು (ಜಯನೃ. ೧-೩೯). ೬. ಕೇಯೂರಕಟಕಸಮಿತಿಯೊಂಗಾಯತಬಾಹುಗಳಿನುಸ್ಮಿತಪ್ರತ್ನಪಟಚ್ಛಾಯೆಯೊಳೆ ಮುಸುಕಿ ದೇಹಚ್ಛಾಯೆಯುಮಂ ಪುದಿಯೆ ರತ್ನತರುವೆಸೆ ಪೋಲ್ತಂ (ಆದಿಪು. ೪-೪೦); ಅಲಘುವರ್ಣಕರೀತಿಯಿಂ ರಸಂ ಮುಸುಕಿಯುಜ್ವಳಿಪಂತೆ . . . ಬರೆಯಿಸುತೆ (ಶಬ್ದರಾ. ೧೨-೩೦). ೮. ಒದಗು ; ದೊರಕು ; ಉಂಟಾಗು : ರಸನೇಂದ್ರಿಯಂ ತೃಪ್ತಿವಡೆಯಲಿಹಪರಸೌಖ್ಯ ಮುಸುಕುವುದು (ಸೊಶಶ. ೧-೩). ೯. ಅಡಗಿರು; ಮರೆಯಾಗು : ಆ ವಿರಾಟನ ರಾಜಧಾನಿಯೊಳೀ ವಿಳಾಸದಿ ಮುಸುಕಿ ತಾವ್ ಪರಸೇವೆಯಲಿ ಪಾಂಡವರು ಕಳೆದರು ಹತ್ತುಮಾಸವನು (ಕುವ್ಯಾ.ವಿ. ೨-೨) ; ಖರಕಿರಣ ಮೇಘದೊಳು ಮುಸುಕಿರ್ದುರವಣಿಸಿ ಪೊಡಮಡುವ ತೆರದಿಂ (ಕೊಲ್ಲಾ.ಕ. ೩೭). ೧೦. ಮುಚ್ಚಿಡು; ರಹಸ್ಯವಾಗಿಡು ; ಅಡಗಿಸು : ಕುಂತೀನಂದನರು ಸುಕ್ಷಾತ್ರತೇಜೋವೃಂದವನು ಮುಸುಕಿದರು ವಿಮಲಬ್ರಹ್ಮರಶ್ಮಿಯಲಿ (ಕುವ್ಯಾ.ಆ. ೧೦-೨). ೧೧. ಸುತ್ತುಗಟ್ಟು; ಬಳಸು; ಸುತ್ತುವರಿ : ಶಿಖಿಯು ಸೆಕೆ ತಾಗೆ ಮಿಗೆ ಕುಂದುತುಂ ಪುದಿದ ಮಾಸು ಮುಸು[ಪಾಠಾಂ. ಮುಸುಂ]ಕಲುಬ್ಬಸದೊಳೊಂದುತುಂ (ಶಿಂಪೋರ. ಪ. ೩೦೦-೨೦) ; ಪೊಂಗೊಡಮೊಲೆವೆಂಗಳು ಮುಸುಕಿತು ವ್ಯಡತಪಧ್ವಂಸಿಯ ಚಿತನ (ವೋಹಶ. ೦೪-೩೦) ; ಅಸಿವರುಣಿಗಳಾ ಕಾಸಿಯ ಪುರವನು ಮುಸುಕಿ ಕಾದಿರುವಂದದಲಿ ಒಸೆದು ಪಟ್ಟಣವನು ವಾಹಿನಿಯೆರಡಾಗಿ ಪಸರಿಸಿ ರಕ್ಷಿಸುತಿಹಳು (ಕಂಪಾ. ೩-೪೩).

**ಮುಸುಗು₁** : ೩. ಇಸೆ ಮುತ್ತಿ ಮುಸುಗಿ[ಪಾಠಾಂ. ಸುಱಿ] ಪರಿಬಂಧಿಸಿದವು ನರರಥತುರಂಗಮಂಗಳಿಂ . . . ಅವನ ಸರಲ್ಗಳ್ (ಶಂಕಪು. ೧೨-೧೭೩); ಸುಕೊಗ್ಗರಲ್ವನಿಗೆ ಪಾರಾವತಾದಿ ವರಖಗತತಿ ಮುಸುಗಲು (ಸೌಂದರ. ೧೯-೨೩) ; ಸಗರನ ತನೂಜರಾಗುರುಬಿ ಶರವರ್ಷಮಂ ಸೈಗರೆಯಲವು ಸಕಲ ನಾಗಬಲವಂ ಮುಸುಗುತೆ (ಚಕು. ೪-೦೦-೩೯). ೭. ಮುಖವೆಲ್ಲ ಧೂಳು ಮುಸುಗಿದೆ (ವೇದಿಪು. ೦೯೦). ೧೦. ಸತ್ಯವನ್ನು ಮುಸುಗುವ ಶಕ್ತಿ ಕ್ಷುಲ್ಲಕವಾದ ಅಸತ್ಯಕ್ಕಿದೆಯೇ ? (ಚಿಕಂಬಾ. ೧೨೦). ೧೧. ಆ ಕುವರನನು . . . ರಾಕೇಂದುವಿನಂದದ ಮೊಗವವರ್ಗಳ್ ನಾಕಸತಿಯರೊ . . . ಎಸೆ ಮಿಗೆ ಮುಸುಗಿದರು (ಚಿತ್ರಾಕ್ಷಿ. ೧೦-೩೦). 'ಮುಚ್ಚು₁', 'ಮುಸುಂಬು₁' ಪರಾ.

**ಮುಸುಂಕು₂**, ಮುಸುಕ, ಮುಸುಕು₂, ಮುಸುಗು₂ (ನಾ). ೧. ಹೊದಿಕೆ; ಆಚ್ಛಾದನೆ : ಎಯ್ದೆ ವಂದೆಳಸಿ ಮತ್ಪರ್ಯಂಕಮಂ ಪೊರ್ದುವಂ ಪದೆದಾನೀಕ್ಷಿಸೆ ಪೋಪನೆಯ್ದೆ ಮುಸುಂಕಂ ಪೊಕ್ಕು ಮೆಯ್ಯುತ್ತವಂ (ಕುಸುಮಾವ. ೧೨-೧೩೦). **ಮುಸುಕ** : ೧. ತೆಗೆ ನಿನ್ನ ಮುಸುಕವ ನಗುತುಂಬೆ ಮೊಲೆಯನು ಜಗವನೆಲ್ಲವ ತಿರುಗಿ ಬಾಯಾಜಿ ಬಂದೆನು (ಪುರಂದ. ೧-೯ ಅನುಬಂಧ). ೨. ತೆರೆ ; ಜವನಿಕೆ ; ಪರದೆ : "ಜವನಿಕೆ ಮುಸುಕಂ" (ಕಾರಕ. ೧೩). **ಮುಸುಕು₂** : ೧. ಮುಸುಕಿರ್ದ ಭವಬಂಧನವ ತೆಗೆದು ಕಳೆವಂತೆ ಮುಸುಕಂ ತೆಗೆದಂ (ಕೀರಾ. ಪೀ. ೭೭-೦೪) ; ತಲೆಯ ಮುಸುಕಿನ ಕಂಗಳೊಜಿತೆಯ ಜಲದ ದುಗುಡದ ಮುಖದ ಜನಪತಿ ಫಲುಗುಣನನೆತ್ತಿದನು (ಕುವ್ಯಾ.ದ್ರೋ. ೯-೧೭) : ಆಗಳಸುತ . . . ಶಿಖಿಯು ಮೇಗೆ ಕವಿದ ಬಿಳು ಮುಗಿಲನೊತ್ತರಿಸುವಂತಾಗ ನೂಂಕಿದ ತನ್ನ ಮುಸುಕ (ಭರತ. ೧೦-೯೯). ೨. ಮುಸುಕು ಸರಿಯಲು ಮೋಡವೋಡಿದಿನಬಿಂಬದಂತೆಸೆವ ಮೊಯ್ಪೊಳಗೆದ್ದು ಬೀದಿವರಿದು (ಶಬ್ದರಾ. ೨-೩) ; ಪಸರಿಸಿದ ಪರಿವಾರಮಧ್ಯದೊಳಸಮಬಲ ಹೊಳಕಿದನು ಮೇಘದ ಮುಸುಕನುಗಿದಿನನಂತೆ ಮೈದೋಱಿದನು ಕಲಿಭೀಮ (ಕುವ್ಯಾ.ಅ. ೭-೩೨) ; ಸೌಗಂಧಿಕಾದೇವಿಯು ಸಮೀಪದಲ್ಲಿರುವ ಸಖೀಮುಖವಂ ನೋಡಿ ಕನ್ನಡಿಯ ಮುಸುಕಂ ಮರೆಮಾಡುವಂತೆ ಸನ್ನೆಯಂ ಮಾಡಿ (ಸೌಗಂಧಿ. ೩೯೦-೧೧). ೩. ಮುಖವನ್ನು ಮರೆಮಾಡಿಕೊಳ್ಳುವ ಬಟ್ಟೆ: ಅವಕುಂಠನ; ಬುರುಕಿ : ಮೆಳ್ಪಡೆ ನುಡಿದೆಯ್ದೆವಂದು ಮುಸುಕಂ ತೆಗೆದಾಗಡೆ ಮೇಲೆವಾಯ್ದು ಬಲ್ದಡಿಗನವಂಕೆ ಬಲ್ಬಡಿಗನಂ ಪಿಡಿದೊರ್ಮೆಯೆ ಮಲ್ಲಯುದ್ಧದೊಳ್ ಪೋರ್ದ (ಶಂಕಭಾ. ೯-೭೭) ; ಮುಸುಕುಗಳ ಮೇಲ್ಸೆಱಗುಗಳ ಪಚ್ಚೆಗಳ ಪುಳಿನಜನ ವಿರಾಜಿಸಿತ್ತು (ಕೊರವಾ. ೧-೩-೨೯). ೪. ಆವರಿಸುವಿಕೆ; ಕವಿಯುವಿಕೆ: ಮುಚ್ಚಿಕೊಳ್ಳುವಿಕೆ : ಎಮಗೆ ನಿಮಗೆಂದಾಯ್ತು ನಿದ್ರೆಯ ಮುಸುಕಿನಲಿ ಗೋಗ್ರಹಣದಲಿ ಜೀವಿಸಿದ ಜಾಣರು ನೀವು (ಕುವ್ಯಾ.ದ್ರೋ. ೭-೯). ೫. ಆವರಣ : ವ್ಯಾಪ್ತಿ : ಜಲಧಿಯ ಮುಸುಕನುಗಿದತಿಕರುಣೆಯೋ ಹೇಗುಚಿನ ಹರಿಬಕೆ ಕೃಪೆಯ ಮಾಡು (ಕುವ್ಯಾ.ಸ. ೦೪-೦೦೭) ; ರಸದ ಬಂಧದ ಬಿಗುಹು ವಹ್ನಿಯ ಮುಸುಕನುಗಿದುಳಿವುದೆ ಕುಮಾರನ ಮುಸುಡ ಮುಂದಕೆ ಬಿದ್ದು ಬದುಕುವರೇ ಮಹಾದೇವ (ಕುವ್ಯಾ.ದ್ರೋ. ೭-೨೭). ೬. ಅಡ್ಡಪಟ್ಟಿ; ಮರೆ : ಕಂಗಳಲಿ ಕಟ್ಟಿದ್ದ ಮುಸುಕನಭಂಗನಾಗ ತೆಗೆದು ಬಿಸುಟು ನಯನಂಗಳಂ ಬಲುಹಿಂದ ತೆಱೆದುಱೆ ನೋಡಲು (ಬಸವು. ೩೦-೯೦). ೭. ಮುಚ್ಚುವ ಸಾಧನ ; ಮುಚ್ಚುಳ : ಪೊನ್ನ ಕೊಪ್ಪರಿಗೆಗಳೊಳಗೆ ತೀವಿ . . . ಬಸವರಾಜನು ಮುನ್ನ ತಾಂ ಮುದ್ರಿಸಿದ ಮುಸುಕಂ ತೆಗೆಯಲೊಡನತಿನಿಸಿತ ಗರಳೋದ್ರೇಕವಹ್ನಿ ಪ್ರಸರವೆಡೆಗೆಡೆಗೆ . . . ನೆಗೆವುತಿರಲು (ಬಸವು. ೩೯-೩೯). ೮. ಒರೆ; ಕೋಶ : ಮುಸುಕಿನ ಸುರಗಿ ಕೆತ್ತವು ಮಂದಿ ದಳದುಳವಾಯ್ತು ನಿಮಿಷದಲಿ (ಕುವ್ಯಾ.ದ್ರೋ. ೭-೩). ೯. ಗುಟ್ಟು: ರಹಸ್ಯ: ಮುಚ್ಚುಮರೆ : ಗೌಪ್ಯ : ದುಗುಡದ ಭರದ ಗುಜುಗುಜುಗೋಷ್ಠಿಗಳ ಜನಜನದ ಮುಸುಕುಗಳ . . . ಪಾಳೆಯದಿರವು ಲೇಸಲ್ಲೆನುತ ಬಂದನು ರಾಜಮಂದಿರಕೆ (ಕುವ್ಯಾ.ಕ. ೦೭-೩); ಮಾರಿಹಿಂಡು ಮತ್ತೆ ಮುಸುಕಿನ ದಂಡು ಮೈಗೆ ಮುತ್ತಿದರೇನು ಮಾಧವನಾಥನ ವಸುದೇವಸುತನ ಸಾರುವಂಥ ಹರಿದಾಸರಿಗೆ (ಪುರಂದ. ೧-೦೭೯-೧); ಪೋಲ್ವೆಯಂ ತಿಳುಪೆಂದು ಮಗುಳೆ ಮಗುಳುಪಚರಿಸಿ ಮುಸುಕನಿಂ ಬೆಸಗೊಂಡರು (ಶರಶು. ೭-೨೪). ೧೦. ತೋರಿಕೆ ; ವೇಷ : ಸೋಗು : ಪುಸಿಯಾದ ಜಪ ಮಾಡುವವಗೆ ಮುಸುಕಿನ ಡಂಭವದೇಕೆ (ಪುರಂದ. ೧-೩೦-೩). ೧೧. ಮಂಕು : ಮಬ್ಬು : ಹಿಡಿದ ದುಗುಡದ ಕವಿದ ಮುಸುಕಿನ ಗಡಣದಲಿ ಗುರುಕೃಪಜಯದ್ರಥರೊಡನೊಡನೆ ಬರುತಿರ್ದ ವಿಲಮಹೀಶಪರಿವಾರ (ಕುವ್ಯಾ.ಶ. ೦೦-೦೭) ; ಗಂಡುಅಧ್ಯಾಪಕರಿಗೆಲ್ಲ ಒಂದು ಬಗೆಯ ನಿರುತ್ಸಾಹದ ಮುಸುಕು ಕವಿಯುತ್ತದೆ (ಹಸುಹೂ. ೩೨೭). ೧೨. ಪ್ರಕಟವಾಗದಿರುವಿಕೆ : ವ್ಯಕ್ತವಾಗದಿರುವಿಕೆ : ಮುಸುಕು ಪೆರ್ಚೆಸುತ್ತು ಹೊದಕೆಗಳನವ್ಯಶದೋಲವಿಕ ವಿಚಿತ್ರಪುಳಕವಿಲಾಸಪ್ರಸರಂ ಸನ್ನಾಹನವಿಂತೆಸೆವಾವೇಗಕ್ಕೆ ತರದಿನನೂ ಭಾವಂಗಳ್ (ಚಸರ. ೪-೧೧೨ ಸೂತ್ರ). **ಮುಸುಗು₂** : ೧. ಥಂಡಿಯ ಮುಸುಗಿನಲ್ಲು ಬೆಚ್ಚಗೆ ಕನಸು ಕಂಡಿಲ್ಲ ? (ವೇಪು. ೩೩-೧). ೩. ಅರಸೀ ದೊಡ್ಡಮ್ಮಾ ಮುಸುಗೀನಾ ಬಣ್ಣಾಕೆ ಎರಸವ್ರೆ ನೀಲೀಕುದುರೇಯಾ (ಹುಬ್ಬ. ೭೩) : ಮುಸುಗುಹಾಕಿಕೊಂಡರೆ ಏನು ನೋಡುವುದಕ್ಕಾಗುತ್ತೆ ಮಣ್ಣು! (ಕಾಹೇಶ್. ೩೪). ೮. ಇಂದು ಮುಸುಗಿನ ಮರೆಯ ಸುರಗಿಯುಂದದಿ ಬರ್ಪಂ (ನವನೋ. ೨೭-೩೪).

**ಮುಸುಕಿನ ಗುದ್ದು** = ೧. (ಆಲಂ) ಒಳಗೊಳಗೇ ಅನುಭವಿಸುವ ಹಿಂಸೆ ; ಹೊರಗೆ ಕಾಣದ ನೋವು : ಬಿಸಿ ಆಲುಗೆಡ್ಡೆಯ ಬಾಯೊಳಗಿಟ್ಟಂತೆ ಕಸಿಮಿಸಿಗೊಳುತಿದೆ ಜೀವ ಹುಸಿಯಲ್ಲವೊ ಹಾಳುಸಂಸಾರದೀ ಚಿಂತೆ ಮುಸುಕಿನ ಗುದ್ದಲ್ಲೊ ದೇವ (ಶಂತಾಶ. ೯೯-೯೪). ೨. ಕಣ್ಣಿಗೆ ಕಾಣದಂತೆ ಕೊಡುವ ಪೆಟ್ಟು ; ನೇರವಲ್ಲದ ಆಕ್ಷೇಪಣೆ : ಮುಸುಕಿನ ಗುದ್ದಿಗವಕಾಶವಿಲ್ಲದ ನಿಷ್ಕಾಪಟ್ಯ; ಕೃತ್ರಿಮಸ್ಥಾನಮಾನಗಳಿಗಳುಕದ ನಿರ್ಭಯ. . . ಇವು ಅವರ ವ್ಯಕ್ತಿತ್ವದ ಪ್ರಧಾನಗುಣಗಳು (ಶ್ರೀಕೃಕೃ. vi, ಮುಖಪ್ರು). **ಮುಸುಕಿನ ಜೋಳ** = ಒಂದರ ಮೇಲೊಂದು ಎಲೆಯ ಮುಸುಕುಗಳನ್ನು ಉಳ್ಳ ಒಂದು ಬಗೆಯ ಜೋಳ : ಮುಸುಕಿನ ಜೋಳದ ಹಿಟ್ಟಿನ ರೊಟ್ಟಿಯನ್ನು ತಿಂದು, ಹಾಲು ಕುಡಿಯುವರು (ಪಾಂಶ್ರ. II. ೯೦೬); ಮುಸುಕಿನ ಜೋಳವನ್ನು ಹೆಚ್ಚಾಗಿ ಬೆಳೆಯುವಂತೆ ಸರಕಾರ ನಮ್ಮ ದೇಶದಲ್ಲಿ ಪ್ರಚಾರ ಮಾಡಬೇಕು (ಕರಪ. ೩೪). **ಮುಸುಕಿನ ವಡೆ** = ಒಂದು ಬಗೆಯ ವಡೆ : ಉದ್ದಿನ ಬೇಳೆಯಂ ನುಣ್ಣೆಯಿಕ್ಕಿ ತೊಳೆದು ಒರಳೊಳಾಡಿಸಿ . . . ತುಪ್ಪದಲ್ಲಿ ಬೇಯಿಸುವುದು. ಅದರ ಹೆಸರು ಮುಸುಕಿನ ವಡೆ (ಸೂಶಾ. ೦-೬೬ ಅ೨೬). 'ಮುಸುಕೊಡೆ' ಪರಾ.

**ಮುಸುಕಿನೊಳಗಿನ ಗುದ್ದು** = ೧. ಮುಸುಕಿನ ಗುದ್ದು ೧ : ಈ ಮುಸುಕಿನೊಳಗಿನ ಗುದ್ದು ನನಗೆ ಸಹಿಸಲಸಾಧ್ಯವಾಗಿದೆ (ರೂಪ). ೨. = ಮುಸುಕಿನ ಗುದ್ದು ೨ : ಏನಿದ್ದರೂ ನೇರವಾಗಿ ಮಾತನಾಡು. ಈ ಮುಸುಕಿನೊಳಗಿನ ಗುದ್ದು ಸಾಕು (ರೂಪ). [< ಮುಸುಂಕು$_1$ /ತೆಲು. ಮುಸುಕು, ಮುಸುಗು, ಮುಸುಗುಡು, ಮುಸುವು]

**ಮುಸುಂಕುಗಳೆ** (ಕ್ರಿ). ಆವರಣವನ್ನು ನೀಗು,-ಸರಿಸು : ದಂತಂ ಮುಸುಂಕುಗಳೆಯಲ್ಕಾಂತಿವೆ ನಡು ತನುವನೆಳಸದಿದೆ. . . ಕಾಂತಿ ಶರೀರ ಮುಸುರ್ಚಲಿದೆ ಪಾರ್ವತಿಯಾ (ಗಿರಿಕ. ೪-೬). [ಮುಸುಂಕು$_2$ + ಕಳೆ$_1$]

**ಮುಸುಂಕುಗತ್ತಲೆ**, ಮುಸುಕುಗತ್ತಲೆ (ನಾ). ಆವರಿಸಿರುವ ಕತ್ತಲೆ: ಕವಿದಿರುವ ಅಂಧಕಾರ : ನಸುಗತ್ತಲೆಯರೆಗತ್ತಲೆ ಮುಸುಂಕುಗತ್ತಲೆ . . . ರಸೆಗತ್ತಲೆಯೆನಿಸಿ ಕೂಡೆ ತೀವಿತು ತಿಮಿರಂ (ಗಿರಿಕ. ೪-೬೩). **ಮುಸುಕುಗತ್ತಲೆ** : ಮುಸುಕುಗತ್ತಲೆಯಲ್ಲಿ ಇನ್ನೂ ಕಣ್ಮುಚ್ಚಿಕೊಂಡವರಿಗೆ ಈ ಚಳಿಚಳಿಪಾಡಿನ ಅರ್ಥವಾಗುತ್ತಿರಲಿಕ್ಕಿಲ್ಲ (ಸಾಹಿ. ೯೩).

[ಮುಸುಂಕು$_1$ + ಕತ್ತಲೆ (< ಕಚ್ಚಲೆ)]

**ಮುಸುಂಡಿ$_1$**, ಮುಚ್ಚುಂಡಿ, ಮುಸಂಡಿ, ಮೂಸಂಡಿ, ಮೂಸುಂಡಿ (ನಾ). ೧. ವಕ್ರಬುದ್ಧಿಯುಳ್ಳ ವ್ಯಕ್ತಿ : ಕೊಂಕುಸ್ವಭಾವದ ವ್ಯಕ್ತಿ : ಮೊನೆಗಾತಿ ಮುಗುದೆ ಮುಸುಂಡಿಯಾಗಲಿ ನೆರೆವನೆ ಗರತಿಯ ನೀಕರಿಸಿದೆ . . . ಆವರಿಸುವುದು (ಹಂಪ. ೪-೩೭). ೨. ಸಂಕೋಚಸ್ವಭಾವದ ವ್ಯಕ್ತಿ ; ಮುಖಹೇಡಿ ; ಅಂಜುಕುಳಿ : ಆ ಹುಡುಗ ಬಲು ಮುಸುಂಡಿ. ನಾಲ್ಕು ಜನರೊಂದಿಗೆ ಸೇರುವುದಕ್ಕೆ ಹಿಂಜರಿಯುತ್ತಾನೆ (ರೂಪ). (ಗು). ೩. ಹೇಡಿಯಾದ ; ಅಂಜುಕುಳಿಸ್ವಭಾವದ : ಎಲೋ ಲಕ್ಷ್ಮಣಾ, ನಿನ್ನನ್ನು ಈ ಮುಸುಂಡಿ ರಾಕ್ಷಸ ಕೊಂದು ಬಂದನೆ ? (ಮುಂಬಿಬು. ೬-೨೯೩). **ಮುಚ್ಚುಂಡಿ** : ೧. ಆ ತಿರುಜ್ಞಾನಸಂಬಂಧರ ಸಮರ್ಥಿಕೆಯಂ ಕಂಡುಬೆರ್ಚಿ ಕೊರ್ಬಿ . . . ಶಿವಭಕ್ತಜನವಚ್ಯುಲಿಪಾತಿಪ್ರ್ವದಂ ನೋಡಿ ಕಡುಗಾಯ್ದು ಮುಚ್ಚುಂಡಿಗಳಪ್ಪ ಭಂಡಸಮಣರಗ್ನಿಸ್ತಂಭಮೆಂದು ಮುಳಿದು ಮತ್ತಮಿಂತೆಂದರ್ (ತ್ರಿಪು. ೩೩-೩೯) ; "ಘಟಿಮಾರಿ" (ತ್ರಿಪು. ೯೩೭೫). **ಮುಸಂಡಿ** : ೧. ಆಗ ಪುರಂದರಕೋಟೆಯೊಳಗೆ ಆ ಮುಸಂಡಿಗಳು ಶ್ರೀಧರಸ್ವಾಮಿಗಳನ್ನು ಹಿಡಿದಿಟ್ಟಿದ್ದರು (ಕವಿಂ. ೪೯). ೨. ಅವನನ್ನು ಕೆಲವರು 'ಮುಸಂಡಿ' ಎಂದೂ ಕೆಲವರು 'ಸೀದೈಟು' (ಅರ್ಥಹುಚ್ಚು) ಎಂದೂ ಕರೆಯುವರು (ತ್ರೀಕ. ೧). **ಮೂಸಂಡಿ** : ೨. ಅವರ ರಕ್ತದಲ್ಲಿ ಬರಿಯ ಬಿಳಿಯ ಕಣಗಳೇ ಇರಬೇಕು. ಏನು ಸಪ್ಪೆ ಮುಖ . . . ಮೂಸಂಡಿಗಳು ! (ಅಂಹೂ. ೧೨೪). ೩. 'ಮೂಸಂಡಿದೊತ್ತು' ಪರಾ. **ಮೂಸುಂಡಿ** : ೩. ಕೊಂದು ಬಂದನೆ ನಿನ್ನನೀ ಮೂಸುಂಡಿ ರಕ್ಕಸನು (ತೊರರಾ. ೬-೪೨-೩೩). [ದೇ.॥ ತಮಿ. ಮುಚಣ್ಣರ್ = ಕೀಳು ದರ್ಜೆಯ ಜನ; ತುಳು. ಮುಸುಂಡಿ, ಮುಸುಡಿ = ನಾಚಿಕೆಗೆಟ್ಟ ಹೆಂಗಸು]

**ಮುಸುಂಡಿ$_2$**, ಮುಸುಂಡೆ, ಮುಸುಡ, ಮುಸುಡಿ$_2$ (ನಾ). ೧. ಒಂದು ಬಗೆಯ ಆಯುಧ : "ತೋಮರ . . . ಮುಸುಂಡಿ ಸ್ಫೋಟಗದೆ ಶಂಕುಯಷ್ಟಿಗಳ್ ಕೈದುಗಳ ಭೇದಮುಕ್ಕುಂ" (ಮುಂಗರಾ. ೯೮-೩೬); ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾವಿವಿಧಾಯುಧಂಗಳೊಳಿಟ್ಟುಂ. . . ಕಾದುವಾಗಳ್ (ಶಂಕಶಾ. ೦೨-೦೦೯ ವ); ಅಸಿಮುಸಲ ಕಣಾಯ ಕಂಪನ ಮುಸುಂಡಿ ಬಿಂಡಿವಾಳ. . . ಪಾಶಾಂಕುಶಾದಿ ಶಸ್ತ್ರಾಸ್ತ್ರಂಗಳೊಳೆಚ್ಚುಮಿಟ್ಟುಮಿಱಿದುಂ (ಶಂರಾಮಾ. ೦೩-೬೩ ವ): ಮುದ್ಗರ ಮುಸುಂಡಿ . . . ಸುರಗಿ ಮೊದಲಾಗಿರ್ದ ಕೈದುಗಳ ಪರಿವಿಡಿಯೊಳುರವಣಿಸಿ ಪೊಯ್ದುಂ (ಕೃಷ್ಣಾ. ೦೨-೨೪). **ಮುಸುಂಡೆ** : ೨. ಒಂದು ಬಗೆಯ ಸಸ್ಯ : 'ಪೆರ್ಮುಸುಂಡೆ' ಪರಾ. **ಮುಸುಡ** : ೧. ಮುದ್ಗರ ಕುಂತ ಮುಸುಡ ಭಲ್ಲೆಯ ಭಿಂಡಿವಾಳಂಗಳಂ ಕಳೆದು ಮುಸಕದಿಂದೈದಿದರ್ ಪಟುಭಟರ್ (ನೇಮಿ. ೨೩-೩೩). **ಮುಸುಡಿ$_2$** : ೧. ದಾಡವಲಗೆಯ ಮುಸುಡಿ ಮುದ್ಗ ಕಠಾರಿಯುಬ್ಬಣದ ಗಂಡುಗಲಿಗಳು ಕವಿದರು (ಕುಮಾರರಾ. ೩-೬೦). 'ಘುಸುಂಡಿ' ಪರಾ. [< ಪ್ರಾ. ಮುಸುಂಧಿ. ಮುಸಂಧಿ./ ಸಂ. ಮುಸುಂಠೀ./ತಮಿ. ಮುಚುಣ್ಡಿ: ತುಳು. ಮುಸುಂಡಿ, ಮುಸುಡಿ; ತೆಲು. ಮುಸುಂಡಿ]

**ಮುಸುಂಡಿತನ** (ನಾ). ಮುಖಹೇಡಿತನ ; ಸಂಕೋಚಸ್ವಭಾವ : ಅಲ್ಲಿ ಕೆಲಸ ಮಾಡಬೇಕಾದರೆ ನಿನ್ನ ಮುಸುಂಡಿತನವನ್ನು ಮೊದಲು ಬಿಡಬೇಕು (ರೂಪ). [ಮುಸುಂಡಿ$_1$ + — ತನ]

**ಮುಸುಂಡು**, ಮುಸಡಿ, ಮುಸುಡಿ$_1$, ಮುಸುಡು, ಮುಸುಡೆ, ಮುಸುಣೆ, ಮುಸುಳಿ (ನಾ). ೧. (ಪ್ರಾಣಿಗಳ) ಉದ್ದವಾಗಿರುವ ಮುಖ — ಮೂತಿ : ಜಲದೊಳಗೆ ಮುಸುಂಡನಿಟ್ಟು ನೀರಂ ಕುಡಿಗುಂ. . . ಚಿರಾಯುಷ್ಯಮಪ್ಪುದು ತುರಗಂ (ಅಶ್ವಶಾ. ೩-೨೬); ಹರಿಣಗಣಂ ಬಂದು ಮುಸುಂಡಂ ನೀಡಿ ಕಣ್ಮುಚ್ಚಿ ನೀರಂ ಕುಡಿದು ತಣಿದು ಮರಲ್ವುವು (ರಾಮಾಶ್ವ. ೩೦-೧೯). **ಮುಸಡಿ** : ೨. (ವಿಶೇಷವಾಗಿ ತಿರಸ್ಕಾರಾರ್ಥದಲ್ಲಿ ಮನುಷ್ಯರ) ಮುಖ ; ಮೋರೆ : ಅವನ ಮುಸಡಿ ಕಂಡರೆ ಹೇಸಿಗೆಯಾಗುತ್ತಿತ್ತು ನನಗ (ಮುಕ್ತಾಕ. ೦೮೬). **ಮುಸುಡಿ$_1$** : ೧. ಯಾವ ಅಶ್ವಕ್ಕೆ ಊರ್ಧ್ವಮುಖವಾಗಿ ಬಗ್ಗಿರುವ ಕೊನೆಯುಳ್ಳದ್ದಾಗಿ ವಾಮಭಾಗದಲ್ಲಿ ರೇಖೆಯು ಮುಸುಡಿಯಲ್ಲಿರುವದೊ ಆ ಅಶ್ವವನ್ನು ವ್ಯಾಗಜಂಭವೆಂಬ ರೋಗವು ಐದನೇ ವರ್ಷದಲ್ಲಿ ಕೊಲ್ಲುವುದು (ಶಾಗಂಧ. ೩೨೦-೦೩). ೨. ಪಾತಕರ ಮುಸುಡಿ ನೋಡಲಾಗದು (ಗಣಾ. ೦೩೯-೩) ; ಮುಸುಡಿ [ಪಾಠಾಂ. ಡು]ಗಳು ಕಂದಿದವು ಕುಂದಿದವೆಸೆವ ತನುಕಾಂತಿಗಳು (ತೊರರಾ. ೨-೪-೦೬) ; ಇಲ್ಲಿ ಕಳಸೀ ಅವನನ್ನು, ಅವನ ಮುಸುಡಿಯನ್ನಾದರೂ ನೋಡ್ತೇನೆ (ಮೂರುದಾ. ೦೭೬). **ಮುಸುಡು** : ೧. ಸೂಕರನಿಂ ಅಶುದ್ಧವ ತಿಂದು ಬಂದಜಿ ಮುಸುಡ ಒಂದು ಮೂಸಿ ನೋಡುವಂತೆ (ಮುಂಶೂ. ೬-೯) ; ವೃಷಭನು . . . ಕಿವಿಯನಲುಗಿಸುತ ಮುಸುಡೆತ್ತುತ್ತುಸಿರಿಡುತ . . . ಹತ್ತಿರಕೆ ಬಂದು (ಐಸಪು. ೩೨-೨೭); ನಾಯಿಗಳು ತಮ್ಮ ಮುಸುಡುಗಳನ್ನು ನಾಲಿಗೆಯಿಂದ ಒರೆಸಿಕೊಳ್ಳುತ್ತ . . . ಬಾಲವನ್ನು ಅಲ್ಲಾಡಿಸಿದುವು (ಊಕತ. ೬೯). ೨. "ಮುಸುಡನೆ ಮೊಗಂ" (ಶಬ್ದಮಂ. ೬೨) ; ಮುಸುಡೊಳಗೆ ಮೂಡಿತ್ತು ಕಾಂತಿಯಾತನ ಸತಿಗೆ (ಶಂಡೀರ. ದೇ. ೨೪೦-೦೨) ; ಭೀಮ ಕಷ್ಟವನೆಸಗಿದನು ಹಾಯೆಂದರಾದೊಡೆ ಮುಸುಡನಮರಾದ್ರಿಯಲಿ ತೀವೆನು ದೇವಸಂತತಿಯ (ಕುಮಾರವ. ೩-೬೯) ; ಉಸುರದಿಪ್ಪರಸಂಗೆ

ಘೂರ್ಮಿಸಿ ಮಸಿಯ ಮುಸುಡಿನ ಕೈಕೆಯೆಂದಳು ಬಿಸುಡು ನೀ ಸಿಂಗಾರ ವೆಲ್ಲವನಡವಿಗೈದುವರೆ (ಕೌಶಿಣ. ೩-೬೮); ರಕ್ಕಸರನಬರೆಲ್ಲರುಂ . . . ಕಕ್ಕಸದ ಮುಸುಡವರ್ಬಹಳ ಮಾಯಾವಿಗಳ್ (ಪ್ರೈಬಿಕಾ. ೦೬-೨೨). ೩. ಬಾಯಿ ; ವಕ್ತ್ರ : ಪಜಿಮೆಗಳು ಮುಸುಡಿಟ್ಟು ಹೀರ್ದ ಪುಷ್ಪಗಳನುಳಿದು ತನಿಗಂಪನೀವ ಸೊಂಪಿಂದಲರೆ ಬಿರಿದ ಚೆಲ್ವಿನ ಸೊಬಗಿನುಳ್ಳಲರ ಕಿಱಿದರಬಲೆಪ್ಪರು (ಶಾಕಸಂ. ೪-೨೬); ಬಸುಱ ಘೊಸೆದುಕೊಂಡು ಮುಸುಡ ಹೊಯಿದತ್ತಳುತೊಱಲಿ ದೆಸೆದೆಸೆಗಳಲ್ಲರಿಪರಿದು ನೋಡುತಲಾಗ ಅಸಮುಸದ್ದುಗ್ರುವಿನ ಶಿರವ (ಪನ್ನಹಾ. ೦೪-೨೩). ೪. ಪಕ್ಷಿಗಳ ಕೊಕ್ಕು.— ಚಂಚು : ವಾಯಸಂ ಸ್ವಭಾವಚಪಲನಪ್ಪುದಱಿಂ ಕೆಲದೊಳಿರ್ದ ಗುಂಡಿಗೆಯ ನೀರಂ ಕಂಡಲ್ಲಿ ಮುಸುಡಂ ನೀಡುವುದುಂ (ಪಂಚತಂ. ೨೯೯-೬) ; ಪಕ್ಕಿಗಳು ಪಕ್ಕಗಳ ಮುಸುಡಿಂ ಕುಕ್ಕುತಿಕ್ಕಿಲಬಲವನಾರೈದಕ್ಕರಿಂ ಸರಗೈದು ಸರಸರಸತರಿ ಮಾಮರನ (ಅಭಿಪಾ. ೩-೦೩). ೫. ಕುದುರೆಯ ಮೂಗು ಅಥವಾ ಮೂಗಿನ ಹೊಳ್ಳೆ : "ಪ್ರೋಥಃ ಘೋಣಾ—ಈ ೨ ಮುಸುಡು" (ಹಲಾಯು. ೬೨-೨೬೭) ; "ಮುಸುಡು ಘ್ರಾಣಂ ಪ್ರೋಥಮುಕ್ಕು" (ಮಂಗಲ. ೬೦-೦೩). ಮುಸುಡೆ : ೨. ನೀಲ . . . ಬಲಗೈಮುಷ್ಟಿಯಿಂದ ಫಾಪನ ಮುಸುಡೆಗೆ ಬಿಗಿದನು (ಬಂಗಾತಿ. ೬) ; ಹೋಗು, ಹೊರಟುಹೋಗು ಮೊದಲು ! . . . ನಿನ್ನ ಮುಸುಡೆ ಬೇಡ (ಕಥಾಸ. ೨೦೬). ಮುಸುಣೆ : ೨. ಮೂಗಿನದನು ಮುಸುಣೆಸಹಿತ (ಕುವಲಯಾ. ೬೯೯). ಮುಸುಳಿ : ೨. ನಾಸಿಂಘಾ ಚಿಂದ, ಚಿನ್ನಕ್ಕ ? ಕರಿಮುಸುಳಿ (ಮುಕಿಷು. ೬೩೬). 'ಮುಸುಂಬು₁' ಪರಾ. [ದೇ.‖ ತುಳು. ಮುಸುಂಡು, ಮುಸುಂಟು, ಮುಸುಂಡಿ, ಮುಸುಡಿ, ಮುಸುಡು; ಕೊಡ. ಮುಡಿ; ಕೋತ. ಮೊಂಡ್]

**ಮುಸುಂಡೆ** ' ಮುಸುಂಡಿ₂ ' ನೋ.

**ಮುಸುಂಬ** ' ಮುಸುಂಬು₁ ' ನೋ.

**ಮುಸುಂಬಿ** ' ಮೂಸಂಬಿ ' ನೋ.

**ಮುಸುಂಬಿಡು** (ಕ್ರಿ). ಮೂತಿಯನ್ನು ಚಾಚು : ಪಸಿವಿನೆಸಕದಿಂದೆಸಳ ಕುಸುಂಕಱಿಗೊಳ್ಳುಸುಂಬಿಟ್ಟು ಮಿಸುಪ ಪೊಸ ಬಂಡನುಂಡು ಓಡಗೊಂಡು ಮಂಡಳಿಸಿ ಕೆಲದ ಪುಂಡರೀಕದೊಳ್ಮಂಡಿಸಿದ ಮರಾಳ ಮಂಡಳಿಕ ಕಾಂಡಜಳದ ಮಂಡಳಿಗೆ ಶಂಕೆಯಂ ಭೋಂಕನಾಗಿಸಿ (ರಾಜಶೇ. ೨-೬೬ ವ). [ಮುಸುಂಬು₁ + ಇಡು₁]

**ಮುಸುಂಬಿಟಿಪು** (ಕ್ರಿ). ಮೂತಿಯನ್ನು ಇಳಿಸು.—ಇಡು : ತುಂಬಿಗೆ ಮುಸುಂಬಿಟಿಪಲ್ಕರಲೊಂದು ತಳ್ತುಗೊಂದಳಿಸದಿನಿತ್ತು ವೃಕ್ಷ ಲತಿಕಾಕ್ಷು ಪಜಾಳದೊಳೆಂದು ನೋಟಿಟ್ಟೊಡೇನಳವಿಗಳುಂಬಮಾಯ್ತೊ ಪೊಸದೇಸೆಯ ಸಾಂತ ವಿಳಾಸಿನೀಜನಂ (ಕಂಕೃಷು. ೬–೦೦೨). [ಮುಸುಂಬು₁ + ಇಱಿಪು]

**ಮುಸುಂಬು₁**, ಮುಸುಂಬ (ನಾ). ೧. (ಪ್ರಾಣಿಗಳ) ಉದ್ದವಾಗಿರುವ ಮೂತಿ : ಪೊಸತಲರ್ದಂಭೋರುಹದೊಳ್ ಮುಸುಂಬು ಮುಳುಗುವಿನ ಮೆಱಗಿ ಗಂಧಮನಾಘ್ರಾಣಿಸಿತುಮುಳವಳಿಸುವಳಿಗಳ ಮಸವೋಡಿದುದಿಲ್ಲ (ಅಕಪು. ೬-೬೬) ; ಮುಸುಂಬುಂ ಮುಳುಗುವಿನಮರ್ದಿ ಮಧುಕರ ಕುಳಮುಂಡುವು ತಮ್ಮ ಪೆಯ್ಗೆ ಮೆಚ್ಚಿದ [ಬಂಡಂ] (ಕರ್ಣಪಾ. ೦೦-೯೨); ಅಳಿ ಮುಸುಂಬನಿಕ್ಕದ ಕುಸುಮಮಂ ಬಳಸದ ನಿಧಿ ಬಹುಪುಣ್ಯದ ಫಲಮಾ ಪಥು ಸೇರೆ ಸಾರಮಲ್ತೆ ಸಂಸಾರಂ (ಕಶಾಸ್ತ್ರ. ೦-೦೦೬). ೨. ಮುಖಿ ; ಮೋರೆ: "ಮುಸುಂಬೆಂದು ಮುಸುಡು" (ಕಶಸಾ. ೬೬-೪೬೦); ಮುಯ್ಯು ಮುಷುಂಬು ಮೂಗು . . . ಕಣ್ ಇದಂತಿಪೆಂಬೆಡೆಯಿನೆ ಸಟ್ಟುವರ್ಚಿದುವು ನೇರ್ದುವು ಸೀಳ್ದುವು ಪಾರ್ಥಸಂಬುಗಳ್ (ಕಂಕಪಾ. ೦೦-೦೩೬): ಪೊಯ್ದು ಪೊಯ್ದುಂಗೈಯಿಂ ಮೊಗಮಂ ಮುಸುಂಬು ಬಿಱುಬಿದ್ದಂಬೋಗೆ ವೀರಂಗೆ ದೋರ್ಭಂಗಂ ಮಾಡಿದನೇನಲಂಘ್ಯಬಲನೋ ರಾಮಾನುಜಂ ಲಕ್ಷ್ಮಣಂ (ಕಂಕಪಾ. ೯-೨೯). ಮುಸುಂಬ : ೧. "ಮುಸುಡು ಮುಸುಂಬು ಮುಂದಕ್ಕುಂ" (ಕಚಕ. ೨೦೦). ' ಮುಸುಂಡು ' ಪರಾ. [ದೇ.‖ ಕುವಿ. ಮೂಂಬು, ಮೂಂಬೂ]

**ಮುಸುಂಬು₂** (ನಾ). ತೆರೆ ; ಆವರಣ ; ಆಚ್ಛಾದನೆ ; ಮುಸುಕು : "ಮುಸುಕಿಗೆ ಮುಸುಂಬಕ್ಕು" (ಕಸ್ಯಕ. ೫೬): ನಿತ್ಯಬಿಂದುಗೆ . . . ಹಸುಂಬೆ, ಮುಸುಂಬು [ತಾತಾಂ. ಜೆ] (ಕಪುರ. ೩೬ ಕೃ ಪುಟ) [<ಮುಸುಕು₂]

**ಮುಸುಕ** 'ಮುಸುಂಕು₂' ನೋ.

**ಮುಸುಕಿ** (ನಾ). ಎತ್ತು, ದನಕರುಗಳು ಹೊಲದ ಕೆಲಸ ಮಾಡುವಾಗ ಏನನ್ನೂ ತಿನ್ನದಂತೆ ಅವುಗಳ ಬಾಯಿಗೆ ಕಟ್ಟುವ ಬಿದಿರಿನ ಬುಟ್ಟಿ ಅಥವಾ ಹಗ್ಗದಿಂದ ಮಾಡಿದ ಜಾಲರಿಯಂತಹ ಸಾಧನ; ಬಾಯಿ ಕುಕ್ಕೆ : ಎತ್ತುಗಳಿಗೆ ಮುಸುಕಿ ಹಾಕು (ಲೂಪ). ' ಮುಸುಗುಕ್ಕೆ ' ಪರಾ. [ <ಮುಸುಕು₂. /ಹಿಂ. ಮುಸಕಾ; ಮರಾ. ಮುಸಕೀ, ಮುಸಕೀ, ಮುಸ್ಕೀ, ಮುಸಕ್ಯಾ ]

**ಮುಸುಕಿಕ್ಕು** (ಕ್ರಿ). ಮುಸುಕು ಹಾಕಿಕೊಳ್ಳು : ನೀರಿಸಲಿ ಪುಟ್ಟದುಸುಕಲೆಸಿ ಬರಿಯುತ ಮೂಗ ಬೇರಸ್ಸು ಹಿಡಿದು ಮುಸುಕಿ[ಕ್ಕಾಂ. ಗಿ]ಕ್ಕ ಲೇಸುಂಟು (ಪುರಂದ. ೧-೪೪-೦). [ಮುಸುಕು₂ ( < ಮುಸುಂಕು₂) + ಇಕ್ಕು]

**ಮುಸುಕಿಡು** ' ಮುಸುಂಕಿಡು ' ನೋ.

**ಮುಸುಕು₁** ' ಮುಸುಂಕು₁ ' ನೋ.

**ಮುಸುಕು₂** ' ಮುಸುಂಕು₂ ' ನೋ.

**ಮುಸುಕುಗತ್ತಲೆ** ' ಮುಸುಂಕುಗತ್ತಲೆ ' ನೋ.

**ಮುಸುಕುದಲೆ** (ನಾ). ಮರೆಮಾಡಿಕೊಂಡಿರುವ ತಲೆ; ಮುಸುಕುಹಾಕಿಕೊಂಡಿರುವ ತಲೆ : ನಾರಿಯರ ಕೈಹೊಯ್ಲು ನಗೆಯ ನಿಸ್ಸಾರ ವಿಡಿದುದು ಮುಸುಕುದಲೆಯ ಮಹೀರಮಣರೋಸರಿಸಿ ಸಿಂಹಾಸನವ ಸಾರಿದರು (ಕುಮಾವ್ಯ. ೦೯-೬). [ ಮುಸುಕು₂ ( < ಮುಸುಂಕು₂) + ತಲೆ₁ ]

**ಮುಸುಕುವಲೆ** (ನಾ). ಮೃಗ, ಪಕ್ಷಿಗಳ ಮೇಲೆ ಕವಿಯುವಂತೆ ಹಾಕುವ ಒಂದು ಬಗೆಯ ಬಲೆ : ಜವಿವಲೆ ಮುಸುಕುವಲೆ ಬಿತ್ತರದ ನೇಣ್ವಲೆ ಮೊಕರವಲೆ ಬೇಡರ ಸಿರದೊಳೊಪ್ಪಿದುದು (ಕುಸ್ಯಾಕಾ. ೩-೦೯). [ ಮುಸುಕು₁ (< ಮುಸುಂಕು₁ ) + ಬಲೆ₁ ]

**ಮುಸುಕಿಳಿ** ' ಮುಸುಂಕಿಟಿ ' ನೋ.

**ಮುಸುಕಿಟಿ**, ಮುಸುಕಿಳಿ (ಕ್ರಿ). ೧. ಹೊದೆಯಿಸು ; ಆಚ್ಛಾದಿಸು : ಅಱಲ ಪಱಯುಟ್ಟಿರುಳ್ ಪೊಗಸಿಂಗೆ ಮುಸುಕಿಟಿದು ಬರ್ಕಿಂದು . . . ಪಂಬಲಿಸುಪಯರ್ ನೀನ್ (ಬದ್ರಕೃ. ೨-೨೫). ಮುಸುಕಿಳಿ : ೨. ಹೊದೆದುಕೊಳ್ಳು : ಅವಳು ಚಳಿಯಿಂದ ಮುಸುಕಿಳಿದು ಮಲಗಿದಳು (ಲೂಪ).

[ಮುಸುಕು₂ (< ಮುಸುಂಕು₂) + ಏಟಿ₁]

**ಮುಸುಕೊಡೆ** (ನಾ). ಒಂದು ಬಗೆಯ ವಡೆ : ಸುಫೇಣಿ ಮುಸುಕೊಡೆ ಬೆಣ್ಣೆದಜಿಗು ಹಾಲುಂಡೆ . . . ಏನಿಪ್ಪವಂ . . . ಪರವೆ ಗಡಣಿಸಿದಳಾಗ (ತೇರಮ. ೦೦-೨೬). [ಮುಸುಕು₂ ( < ಮುಸುಂಕು₂ ) + ಒಡೆ₂ ( < ವಡೆ) ]

**ಮುಸುಗರೆ** (ಕ್ರಿ). ಆಯಾಸ, ಸಿಟ್ಟು ಮುಂತಾದುವುಗಳಿಂದ ಮುಸುಮುಸು ಎಂದು ಶಬ್ದಮಾಡು : ಕುತ್ತವದು ಬಂದು ಮುಸುಗರೆವ ಮನುಜಂಗೆ ಮತ್ತೆ ಕಿಚ್ಚೇಕೆ (ಸರ್ವಜ್ಞ. ೦೯೯೬) ; ಹೊಸದಾಗಿ ಹೂಡಿದ ಮೂಡಲ ಹೋರಿ ಮುಸುಗರೆದು ಅಡ್ಡಾದಿಡ್ಡಿ ಜಗ್ಗುತಿದೆ (ಬಿಂಷು. ೩೨-೩). [ ಮುಸು₁ + ಕರೆ₁ ]

**ಮುಸುಗಿಡು** ' ಮುಸುಂಕಿಡು ' ನೋ.

**ಮುಸುಗಿಸು** (ಕ್ರಿ). ಹೊದೆಯಿಸು; ಮುಚ್ಚು : ಧೌತಾಂಬರವ ವನಿತೆಯರು ನಿರಿಪಿಡಿದುಪುತ್ತಿ ಮೇಲುದನು ಕುರುಳಿಗೊಲೆಗೈದು ಭುಜವೊಲೆಗಳಾ

ವಿನಯದಿಂ ಮುಸುಗಿಸುತೆ (ಶಶಪೋ. ೨೩-೧೦).

[ಮುಸುಗು$_2$ (< ಮುಸುಂಕು$_2$) + — ಇಸು$_3$]

**ಮುಸುಗು$_1$** ' ಮುಸುಂಕು$_1$ ' ನೋ.

**ಮುಸುಗು$_2$** ' ಮುಸುಂಕು$_2$ ' ನೋ.

**ಮುಸುಗುಕ್ಕೆ** (ನಾ). =ಮುಸುಕಿ: ಎಣೆ ಬಿಟ್ಟಾದ ಮೇಲೆ ವನದ ಮುಸುಗುಕ್ಕೆ ಬಿಚ್ಚು (ಲೂಲ). [< ಮುಸುಕು$_2$ + ಕುಕ್ಕೆ$_1$]

**ಮುಸುಗುಗಟ್ಟು** (ಕ್ರಿ). ೧. =ಮುಸುಗರೆ: ಘನರೋಷಾಗ್ನಿಯ ಕೊರ್ವು ಪರ್ವೆ ಮುಸುಗುಗಟ್ಟುತ್ತುಂ . . . ಪಳಂಚಿದುವು ಕೋಣಂಗಳ್ (ಕಬಿತ. II, ೩೬೦ ಪಂಕದೀಕ್ಷಿತ ಕೃತಿಂದ) ; ಕಾಡ ಹಂದಿಗಳು ಮುಸುಗುಗಟ್ಟುತ್ತ ಮುಂದುವರಿದವು (ಕಕಪ್ಪ. ೭-೧೦೦೨). ೨. ಗೊಣಗುಟ್ಟು : ನಾದಿನಿ ಅತ್ತಿಗೆಯ ಕೂಡ ಹೊರಡಲಿಲ್ಲ. ಏನೋ ಮುಸುಗುಗಟ್ಟಿದಳು (ಶಿರಾಶ. ೪೪).

[ಮುಸು$_1$ + ಕಟ್ಟು$_1$]

**ಮುಸುಗುಡು** (ಕ್ರಿ). = ಮುಸುಗರೆ : ಗಾಳಿ ಜತಿಗೆ ನೀ ಗೂಗೆ ಹಾಂಗ . . . ಮುಸುಗುಡುತ ಹೊರಟಿ ಬಯಲಾಗ (ಕೃಶಕ. ೧೭-೧೩) ; ಕೆರಳಿದ ಸಿಂಹಿಣಿಯ ಹಾಗೆ ಆಕೆ 'ಮುಸುಗುಡುತ್ತ'ಲಿದ್ದಳು (ಶಿರಪ. ೯).

[ಮುಸು$_1$ + ಕುಡು$_1$ (< ಕೊಡು$_1$)]

**ಮುಸುಗುಬ್ಬಸ** (ನಾ). (ಆಲಂ) (ದುಃಖ, ರೋಷಗಳಿಂದ ಒಳಗೊಳಗೇ ಉಂಟಾಗುವ) ಸಂಕಟ ; ತಳಮಳ ; ಮೂಗುಬ್ಬಸ : ಸೂಳುನಗೆ ಬಿಳನಗೆಯಲಡಿಗಡಿಗಾಳಿ ಮುಸು[ಪಾಠಾಂ. ಳು]ಗುಬ್ಬಸದಲಿದ್ದು ಕರಾಳ ಮತಿ ಸಂತೈಸಿ ನೆಚಿ ತನ್ನವರಿಗಿಂತೆಂದ (ಕುಬ್ವಾಕ. ೨-೬೩). 'ಮೂಗುಬ್ಬಸ' ಪರಾ. [ಮುಸುಗು$_2$ (<ಮುಸುಂಕು$_2$) + ಉಬ್ಬಸ]

**ಮುಸುಟೆ** ' ಮುಷ್ಟಿ$_1$ ' ನೋ.

**ಮುಸುಡ** ' ಮುಸುಂಡಿ$_2$ ' ನೋ.

**ಮುಸುಡಿ$_1$** ' ಮುಸುಂಡು ' ನೋ.

**ಮುಸುಡಿ$_2$** ' ಮುಸುಂಡಿ$_2$ ' ನೋ.

**ಮುಸುಡಿಕ್ಕು** (ಕ್ರಿ). (ಪ್ರಾಣಿಗಳು ತಮ್ಮ ಉದ್ದವಾದ) ಮೂತಿಯನ್ನು ಚಾಚು, — ನೀಡು : ತುಂಬಿ ಮುಸುಡಿಕ್ಕದ ಮಾಲರ್ (ಶ್ರೀಪುಹಾ. ೨-೯೩); ಪಸಿದ ಪೆರ್ಬುಲಿವಾಯ್ಗೆ ಮೃಗಗಳ ಶಿಶುವು ಮುಸುಡಿಕ್ಕುವೊಲು ಭೂಚರ ರೆಸುವಂದ ಚೆನ್ನಾದುದು (ಪಾಗಕ. ೨೦-೬).

[ಮುಸುಡು (< ಮುಸುಂಡು) + ಇಕ್ಕು]

**ಮುಸುಡಿಡು** (ಕ್ರಿ). ೧. =ಮುಸುಡಿಕ್ಕು: ಪಜಿಮೊಗಳುಮುಸುಡಿಟ್ಟು ಪೀರ್ದ ಪುಷ್ಪಗಳನುಳಿದು . . . ಸೊಬಗಿನುಳ್ಳಲರ ತಿಜಿದರಬಲೆಯತು (ಪಾಪಕಂ. ೪-೨೭). ೨. ಮುಖವಿಡು ; ಮೊರೆಯಿಡು: ಮುಸುಡೊಳು ಮುಸುಡಿಟ್ಟು ನಾವೆ ಮುದ್ದಿಸುತಿರಲುಸುರದಿರ್ಪರೆ ಮಾನನಿಧಿಯೆ (ಕರ್ಣಕ. ೮-೨೫).

[ಮುಸುಡು (< ಮುಸುಂಡು) + ಇಡು$_1$]

**ಮುಸುಡು** 'ಮುಸುಂಡು' ನೋ.

**ಮುಸುಡುದೆಗೆ** (ಕ್ರಿ). ೧. ಮುಖವನ್ನು ತಿರುಗಿಸು. ೨. (ಆಲಂ) ತಿರಸ್ಕರಿಸು ; ಕಡೆಗಣಿಸು : ರಸಿಕನಲ್ಲದೆ ನರಪೂರ್ವಶಿಯನು ಕಂಡು ಮುಸುಡುದೆಗೆವನೆಯವಳೊಳು ಹಸನಾಗದು ರತಿಯೆಂದೊಂದು ನೆವದಿಂದ ಬಿಸುಟನಲ (ಕುರಾಶಾಂ. ೪೪-೯೬), [ಮುಸುಡು (< ಮುಸುಂಡು)+ತೆಗೆ$_1$]

**ಮುಸುಡುದೋಱು** (ಕ್ರಿ). ಮುಖವನ್ನು ತೋರಿಸು ; ಮೋರೆಯನ್ನು ಕಾಣಿಸು : ನಿಮ್ಮವರಯ್ಯೋದು ಬೇಗದಿ ಮುಸುಡುದೋಱಿದಡಿದ ನಾನು [ಪಾಠಾಂ. ಗಾಣಿಸದೊಡಿವನು] ಮಿಸಿಮಿಲಿಮಾಡಿ ಕಂಡರಿಸಿಕ್ಕಿ ಪೋಗುವೆನು (ಕುರಾಶಾಂ. ೯-೧೦೬). [ಮುಸುಡು (< ಮುಸುಂಡು)+ತೋಱು]

**ಮುಸುಡೆ** 'ಮುಸುಂಡು' ನೋ.

**ಮುಸುಡೊಣಗು** (ಕ್ರಿ). ಮೋರೆಯು ಬಾಡಿಹೋಗು ; ಮುಖವು ಕಳೆಗುಂದು : ತಗ್ಗಿತುಬ್ಬಾಳುಗಳು ಮುಸುಡೊಣಗಿ ತುಟಿಪೊಣಗಿ ವೀರರಸ ಹಾರಿದುದು (ತುರಂಗ. ೩೬-೪೦).

[ಮುಸುಡು (< ಮುಸುಂಡು) + ಒಣಗು$_1$]

**ಮುಸುಣೆ** ' ಮುಸುಂಡು' ನೋ.

**ಮುಸುದೆ** (ನಾ). ಒಂದು ಬಗೆಯ ಸಸ್ಯ : " ಭಜೀ – ಮುಸುದೆ " (ಬಿಕಾ. ೦೦೦). [ ? ]

**ಮುಸುಮೊಗ** (ನಾ). (ಮುಸುವಿನಂತಿರುವ) ಅಂದಗೆಟ್ಟ ಮೋರೆ : ವಿಕಾರವಾದ ಮುಖ : ಮುಸುಮೊಗಮಾಯ್ತು ಮೊಗಂ ಕಾಲ ಸತ್ತುಗಂ ಪೋಯ್ತು ಪಲ್ಗಳಳ್ಳಾಡಿದುವೇಡಿಸುವಂತಿರ್ದಪಿರಿನ್ನುಂ ಬಿಸುಡಿರೆ ನೀವಜ್ಞ ನಿಮ್ಮ ನಿರ್ಲಜ್ಜೆಕೆಯಂ (ಅಕಪು. ೨-೧೦೦) ; ಮೆಯ್ಯುವಿರಿಂದ ತುಱುಗಿದ ಮುಸುಮೊಗ ಪೆಣ್ಣ ತೆಱನಱಿಯದ ಕೂಡದೆಮ್ಮವನಿವನಿರೆ ಮಾಱಿವರೆ ಪೆಣ್ಣಳೆದಿರೊಳು (ಕುರಾಶಾಂ. ೪೪-೭). [ಮುಸು$_2$ + ಮೊಗ]

**ಮುಸುರ್** ' ಮುಸುಱು$_1$ ' ನೋ.

**ಮುಸುರಿಡು** (ಕ್ರಿ). ಬಳಸು ; ಸುತ್ತುಗಟ್ಟು : ನೀಡುಂ ಮೈ ಸುಬ್ಬರಾಯಾ ನಿನಗೆ . . . ಓಜಮುರ್ಬುಸುರಿಡೆಯೆಡೆಯೊಳ್ಬಾಗಿ ನಿಲ್ವರ್ಗಡ (ಮೈಶೂಪು. ೬-೨೨೦). [ಮುಸುರು$_1$ (< ಮುಸುಱು$_1$) + ಇಡು$_1$]

**ಮುಸುರು$_1$** ' ಮುಸುಱು$_1$ ' ನೋ.

**ಮುಸುರು$_2$** ' ಮುಸುಱು$_2$' ನೋ.

**ಮುಸುರು$_3$** (ನಾ). ಎಡೆಬಿಡದೆ ಸುರಿಯುವ ಮಳೆ : ಜಡಿಮಳೆ : ಸೋನೆ : ಇಂದ್ರಗೋಪದ ರುಚಿಯಿಂದೆಸೆವ ಮುಗಿಲಿಂದೆ ಜಗದೊಳ್ ಮುಸುರಲ್ಲದೆ ಓರಿಯ ಮುಟ್ಟಿಗಳಾಗವು (ಅಬ್ಬಿಪು. ೬-೦೪). 'ಮುಸುರ್ಪು$_1$' ಪರಾ. [ ದೇ. ॥ ತೆಲು. ಮುಸುರು]

**ಮುಸುರುಗಟ್ಟು** (ಕ್ರಿ). (ಕಣ್ಣು) ಗೀಜಿನಿಂದ ಆವರಿಸು : ಗೀಜು ಕಟ್ಟಿ ಕೊಳ್ಳು : ಮಗುವಿನ ಕಣ್ಣು ಮುಸುರುಗಟ್ಟಿದೆ (ರೂಢ).

[ಮುಸುರು$_2$ (< ಮುಸುಱು$_2$) + ಕಟ್ಟು$_1$]

**ಮುಸುರೆ** ' ಮುಸುಱೆ ' ನೋ.

**ಮುಸುರ್ಪು$_1$** (ನಾ). ಮಳೆ ಬರುವ ಸೂಚನೆಯುಳ್ಳ ಮುಗಿಲು : ಮೋಡ : ' ಮುಸುರ್ಪುಗಟ್ಟು' ಪರಾ. [< ಮುಸುರು$_3$]

**ಮುಸುರ್ಪು$_2$** (ನಾ). ( ? ) : "ಮುಸುರ್ಪೆನೆ ವಾರ್ಪೆನೆ ಕೈವಿಡಿದುದಕ್ಕುಂ" (ಕನ್ನಕಂ. ೧೨). [ ? ]

**ಮುಸುರ್ಪುಗಟ್ಟು** (ಕ್ರಿ). ಮಳೆಯು ಬರುವಂತೆ ಮೋಡವುಂಟಾಗು,— ಮೋಡವು ಮುಚ್ಚಿಕೊಳ್ಳು : ಸಂದಾಶ್ರಯುಜದ ಕಾಳದೊಳೊಂದಿದ ತೇರಸದ ಹಸ್ತದಿಂ ತೊಟ್ಟುತ್ತಲ್ ಮುಂದಣಸುರಾಧಿಪರೆಗಂ ಮುಂದೈಸಿ ಮುಸುರ್ಪುಗಟ್ಟೆ ಪೆರ್ಮುಟಿಯಕ್ಕುಂ (ಅಬ್ಬಿಪು. ೬-೦೭೨).

[ಮುಸುರ್ಪು$_1$ + ಕಟ್ಟು$_1$]

**ಮುಸುರ್ವ** ' ಮುಸುಱು$_1$ ' ಪರಾ.

**ಮುಸುಲಮಾನ** ' ಮುಸಲ್ಮಾನ ' ನೋ.

**ಮುಸುಲುಮ** ' ಮುಸ್ಲಿಂ ' ನೋ.

**ಮುಸುಲುಮಾನ** ' ಮುಸಲ್ಮಾನ ' ನೋ.

**ಮುಸುಲ್ಮಾನ** ' ಮುಸಲ್ಮಾನ ' ನೋ.

**ಮುಸುವ** ' ಮುಸು$_2$ ' ನೋ.

**ಮುಸುವನಭತ್ತ** (ನಾ). ಒಂದು ಬಗೆಯ ನೆಲ್ಲು : ಹೆಸರಕಟ್ಟು. ಗೋಧಿ. ಮುಸುವನ ಭತ್ತದ ಅಕ್ಕಿಯ ಅನ್ನ . . . ಜೇನುತುಪ್ಪ ಇಷ್ಟನು . . . ಪಥ್ಯವೆಂದು ದೊಡ್ಡ ಋಷೀಶ್ವರರು ಹೇಳುವರು (ವೈದ್ಯಸಾ. I, ೦೪೩); ಮುಸುವನೆಭತ್ತದ ಅಕ್ಕಿ, ಸಣ್ಣಕ್ಕಿ . . . ಜೇನುತುಪ್ಪ ಇವೆಲ್ಲ ಉಣುವುದು ಪಥ್ಯಂಗಳು (ಸಕವ್ಯ. ೨೦೩). [ ? + ಭತ್ತ$_1$ ( <ಬತ್ತ)]

**ಮುಸುವು** ' ಮುಸು$_2$ ' ನೋ.

**ಮುಸುಳಿ** ' ಮುಸುಂಡು ' ನೋ.

**ಮುಸುಱ್** ' ಮುಸುಱು$_1$ ' ನೋ.

**ಮುಸುಱು$_1$**, ಮುಸುರ್, ಮುಸುರು$_1$, ಮುಸುಱ್ (ಕ್ರಿ). ಮುಸುರ್ವ (ಪರ್ತಕ್ರಿ). ೧. ಮರೆಮಾಡು ; ಮುಚ್ಚು : ಮುಸುಕು : " ಮುಸುಱು_ಸಂಛನ್ನೇ " (ಶಮದ); ಮುಗಿಲಂ ಮುಸುಱಿದ ನೇಸಱಂ ಕಂಡುದಱಿಂ ಕೇಪಳಜ್ಞಾನಿಗಳಾಗರು (ಜಾಪುಂಕ. ೩೬). ೨. (ದುಂಬಿ, ನೊಣ ಮುಂತಾದುವುಗಳಂತೆ) ಹಿಂಡುಹಿಂಡಾಗಿ ಮುತ್ತು.–ಕವಿ : " ಮುಸುಱುವವಕ್ಕೆ ಮುಕ್ಕುಱಿಂದಕ್ಕು " (ಕಬ್ಬಿಕೈ. ೭೮); ನಡೆವ ಪರಿಶ್ರಮದಿಂದೊಗೆವ ಲತಾಂಗಿಯರ ಸುಯ್ಯ ಕಂಪಿಂಗಳಿಗಳ್ ಮೊಗಸಿ ಮುಸುಱಿದುವು (ಆದಿಪು ೧೦-೭೦); ಅಲರ್ದಲರ್ವಾಸುಗಳೊಳ್ ಪರಿಮಳಕ್ಕೆ ಪರಿತಂದು ಮುಸುಱುವಳಿಕುಲದಿಂದಾಕುಲತೆ ಪಿರಿದಾಗೆ . . . ಕಾಂತೆ ಪೊತ್ತಿ ಪೊಗೆವುತಿರ್ದಳ್ (ಕಾದಂಬ. ೩೩೭): ಪುರಾಣಸಾರಕರ್ . . . ಗೂಗೆಯುಂ ಕರಂ ಮುಸುಱುವ ಕಾಗೆಗಳಂತಿರೆ (ಅಸಂಕ. ೯-೩೦); ಜೇಂಗೊಡಮಂ ಮುಸುಱಿ ಮೊರೆವ ಮಱಿದುಂಬಿಗಳ ಗಾನದಂತೆ . . . ಪಾಡಿ ಪೊಗಟ್ಟೆ ಗಾಯಕಸಂದೋಹದಿಂ (ರಾಜಶೇ. ೨೩-೧೦). ೩. ಗುಂಪುಗೂಡು ; ಸಂದಣಿಸು; ಒಟ್ಟಾಗು: ಜಡಿ ಕೊಲ್ ಕಟ್ಟು ಱಿ . . . ಎಂದು ಮುಸುಱಿ ನಾರಕರಾಗಳ್ ಮತ್ತಂ ಕೊಂತಂಗಳಿಂದಂ . . . ಕುತ್ತುವುದುಂ (ಪಂಪರಾ. ೦೨೭-೦೨) ; ಮುಸುಱಿದ ಮುಗಿಲ್ಗಳಿಂದಣಮಸೆಯದೆ ನಿಂದರ್ಕ ಬಿಂಬಮಂ ಕಂಡುದಱಿಂ ಘೋಷಿಸಿ ದುಷ್ಷಮಾಕಾಲದೊಳಸದ್ಬೃಶಕ್ತೈವಲ್ಯ ಬೋಧ ದಿನಕರಬಿಂಬಂ (ಆದಿಪು. ೦೫-೩೩) ; ಮುಸುಱಿ ನೋಡುವ ನೋಟಕರು ಕಾಣಿಸದ ಕಾರ್ಯಕ್ಕೆ ಬೆಗಡುಗೊಂಡರು (ಕೃಶುಂಠೀ. ೭-೩೮). ೪. ಆವರಿಸು ; ಹರಡು : ಪಸರಿಸು : ನೆನೆಯಿಸುತಿರ್ದುದು ತುಂತುರ್ವನಿ ಮುಸುಕಿದ ದುಗ್ಧವಾರ್ಧಿಯಂ ತಾನೆನಸುಂ ತನಿವೆಳ್ದಿಂಗಳ್ ಮುಸುಱಿದ ವಿಸುಕಂದೊಪ್ಪುವ ನಭೋಂಗಣಂ ಧೃತಭಗಣಂ (ಕುಸುಮಾ. ೧೦-೦೩); ಬಟಸಾರ್ವ ದೊರೆಯುಸಮುದ್ವೇತ್ರಲುವರ್ ಮುಸುಱಿತ್ತು ಕೂರಬಲ ಮಬರ್ದನು (ಅಂತಗೊ. ೩೩-೧೦೨೯). **ಮುಸುರ್** : ೨. ಕಾಂತೆಯರ ಕಂಠಮಾಲೆಗಳ ಕಟ್ಟಾಣಿಮುತ್ತುಗಳ್ ಕಲಕ್ಕೆ ಸಿಡಿದುದುರಿ ಪುಷ್ಪ ಪರಿಮಳಂ ಪರಿಯೆ ಮಲ್ಲಿಗೆಯರಲ್ಗಳಿಂದು ಮುಸುರ್ವ ತುಂಬಿಗಳ ಬಂಬಲ್ಗಳಿಪ್ಪಂ (ರಣವ. ೨-೯ ವ) **ಮುಸುರು$_1$** : ೨. ನಾನಾಶೋಕ ಮೋಹಾದಿಗಳು ಮುಂಗುಡಿಪರಿದು ಮುಸುರಿಹ (ಅ೩ಜ. ೦-೩೩); ನೊಣಗಳು ಮುಸುರಿ ಕೊಂಡು ಮನೆಯ ಮುಂದಿನ ಕೊಳಕುಗುಂಡಿ ಕೊಳೆಯುತ್ತಿದ್ದರೂ . . . ಬೊಗಸೆ ಮಣ್ಣನ್ನು ಅದರ ಮೇಲೆ ಹಾಕಿ ಮೂಗನ್ನು ಕಾಪಾಡಿಕೊಳ್ಳುವ ಯೋಗ್ಯತೆ ನಮಗಿಲ್ಲದೆ ಹೋಗಿದೆ (ಸಾಹಿಶೀ. ೮೭). **ಮುಸುಱ್** : ೨. ಪೊಸ ಪೂಗಳಂ ನೋಡಿ ನಳಿತೋಳ್ಗಳಂ ನೀಡಿ ಮುಸುರ್ವಳಿಗೆ ಕಾಯ್ದುತ್ತಿತಂ ಕುಸುಮಮಂ ಕೊಯ್ವುತಂದೆಸೆದರ್ (ತೆಂಕು. ೪೩-೩೮); ಮೊಗದೊಳ್ ಮುಸುರ್ವ ಬಿಡುಗುರುಳ ಬೆನ್ನೊಳ್ ನಟ್ಟ ಸರಳ . . . ಪೊಯ್ವಳ್ಳಿಗಳ ಪೊತ್ತ ನಾಣ್ಚಿಕೆಯ ಸರ್ವವಿಕ್ರಲರೋಟಿಂಗಾಣಾತ ಜನಾಗ್ರಹಂಗಾಣ್ದನು (ತಂಕ. ೪೯-೨೪). ' ಮುಸುಂಕು$_1$ ' ಪರಾ.

[ದೇ.॥ ತೆಲು. ಮುಸುರು, ಮುಸರು]

**ಮುಸುಱು$_2$**, ಮುಸುರು$_2$ (ನಾ). ಆವರಣ ; ಮರೆ ; " ಕೊಪ್ಪರಿ " (ಕಶಬ್ದ. ೬. I, ೩೩). **ಮುಸುರು$_2$** : ' ಮುಸುರುಗಟ್ಟು ' ಪರಾ.

[ < ಮುಸುಱು$_1$]

**ಮುಸುಱುಹ** (ನಾ). ಮುತ್ತುವಿಕೆ : ಆವರಿಸುವಿಕೆ : " ಮುಕ್ಕುಱು ಮುಸುಱುಹನೊಳ್ " (ಕಬ್ಬಿಕೈ. ೪೦); " ಮುಕ್ಕುಱು ಮುಸುಱುಹಂ " (ಶಮದ. ಕಾ. ೨). [ಮುಸುಱು$_1$ + –ಹ$_2$ ( <–ಪ$_2$)]

**ಮುಸುಱೆ**, ಮುಸರೆ, ಮುಸುರೆ (ನಾ). ೧. ಪಾತ್ರೆಯಲ್ಲಿ ಅನ್ನ ಮುಂತಾದ ಆಹಾರಪದಾರ್ಥಗಳನ್ನು ಬೇಯಿಸಿದ್ದು, ಇನ್ನೂ ತೊಳೆಯದೆ ಇರುವುದರಿಂದ ಉಂಟಾಗಿರುವ ಅಶುಚಿ.– ಕೊಳೆ : ಮೃಗರಾಜಂ . . . ವನಮೃಗಮನುಗಿಬಗಿಮಾಡಿ ಬಿಡುವೆಡೆಯೊಳೊಡ ನೊಡನೆ ಪೊರೆದು ಮುಸುಕಿದ ಪೊಸನೆತ್ತರ ಮುಸುಱೆಯಿಂ ಪೊಳೆವ ಪೊಟೆಯದೊಱೆಯೊಳ್ ಕಿಱಿಪಿದ ಕೃತಾಂತನಂಕುಶಮಿದೆನಿಸಿಯುಂ (ವರ್ಧಪು. ೧೦-೩ ವ); ನೀವೆಲ್ಲ ಮುಸುಱಿದ ನೊಣಂ ಬಸವನೇ ಮುಸುಱೆಯಾ ಮಡಕೆ (ಶೀಕ್ರಶು. ೮-೨-೬೩); ನೊಣಗನು ಮತಿಗೆಟ್ಟು ಮುಸುಱೆಯ ಮಡಕೆಯೊಳಗೆ ಮೊಗವಿಟ್ಟು ದೆಸೆಗಾಣದೆ ಬಾಧೆಗೆ ತನುಗೊಟ್ಟು ಪೆಸರ್ಗೊಳಲಿದು ಸಂಸಾರದ ಗುಟ್ಟು (ಅವರೂ. ೨೦). **ಮುಸರೆ** : ೧. ನಾಯಿ ಮುಟ್ಟಿದ ಗಡಿಗೆ ಮುಸರೆಯಾದರೇನು ? ಮಡಿಯಾದರೇನು ? (ಗಾದೆ). ೨. ದನಕರುಗಳಿಗೆ ಕುಡಿಯಲು ಇಡುವ ಕಲಗಚ್ಚು : ಮುರು : ರಂಜಣಿಗಿಯಲ್ಲಿ ಮಹಿಷಿ ಮೊಗವದ್ದಿ ಗಂಜಿ ಮುಸರೆ . . . ಕುಡಿವಂತೆ (ಪೋಕ್ಷರ್ದೀ. ೪೯-೦); ಹಸುವಿಗೆ ಮುಸರೆ ಇಡು (ರೂಢಿ). ೩. ಅನ್ನ ಮೊದಲಾದ ಬೇಯಿಸಿದ ಪದಾರ್ಥಗಳು ಹಾಗೂ ಅವುಗಳನ್ನು ಬೇಯಿಸಲು ಬಳಸಿದ ಪಾತ್ರೆಗಳನ್ನು ಮುಟ್ಟುವುದರಿಂದುಂಟಾಗುವ ಅಶುಚಿ.– ಮೈಲಿಗೆ : ಮಾಸಿದ್ದಕ್ಕೆ ಹೆದರದವಳು ಮುಸರೆಗೆ ಹೆದರಿ ಯಾಳೇ ? (ಗಾದೆ). ೪. ಅನ್ನ ಮುಂತಾದ ಪದಾರ್ಥಗಳನ್ನು ಬೇಯಿಸಿದ್ದು, ತೊಳೆಯಬೇಕಾಗಿರುವ ಪಾತ್ರೆ: ಬೆಳಗ್ಗಿಯಿಂದ ಮುಸರೆ ತೊಳೆಯಲು ನನಗೆ ಬಿಡುವೇ ಆಗಲಿಲ್ಲ (ರೂಢಿ). ೫. ಅನ್ನ ಮುಂತಾದ ಬೇಯಿಸಿದ ಪದಾರ್ಥ : ಅದೇನ ಮುಸರೆ ಅಲ್ಲಾ ಮುರಲಿ ಅಲ್ಲಾ ತೊಕೋರಿ (ಜಾಬಂ. ೦೯). **ಮುಸುರೆ** : ೧. ಆಹಾರದ ಡಬ್ಬಿ ಅಲ್ಲಿಯೇ ಕುಳಿತು ಮುಸುರೆಯ ಕರೆದ ಜಾಯನ್ನು ತೋರಿಸಿತು (ಮುಕ್ತ್ಯದ. ೩೪); ಗಂಡುಹೆಣ್ಣಿಗೂ–ಎಂಜಲು ಮುಸುರೆಗೂ ಜೋಡಿಯಲ್ಲ (ಮೂಳಕ. ೨೩೮). ೨. ಉತ್ತಮಾನ್ನವ ನೀಡೆ ಮುಸುರೆ ಬಯಸುವಂತೆ (ಶಿದಾಕೃ. ೩೮-೩); ಅದಕ್ಕೆ ನಾನೇ ಮುಸುರೆ ಮಾರವು ತಿನ್ನಿಸುತ್ತಿದ್ದೆ (ಸುಪಸಂ. ೬೭). ೩. ಅನ್ನ ಮುಟ್ಟಿ ಕೈ ಮುಸುರೆಯಾಗಿದೆ, ತೊಳೆದುಕೊಂಡು ಬಾ (ರೂಢಿ).

ಮುಸುರೆ ತಿಕ್ಕು = ಅಡುಗೆ ಮಾಡಿದ ಪಾತ್ರೆಗಳನ್ನು ತೊಳೆ : ತಾಯಿ ವೆಂಕಮ್ಮ ಮುಸುರೆತಿಕ್ಕುವುದಕ್ಕೆಂದು ಕೆರೆಯ ಹಾದಿ ಹಿಡಿದಳು (ಮುಂಗಾಮು. ೨೬). [ದೇ.॥ ತಮಿ. ಮೂಚಿಟ್ಟೈ ; ತುಳು. ಮುಸರೆ, ಮುಸ್ರು]

**ಮುಸ್ತ** (ನಾ). ಹುಲ್ಲಿನ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ ಮತ್ತು ಅದರ ಗೆಡ್ಡೆ ; ಭದ್ರಮುಸ್ತೆ. [ಸಂ.]

**ಮುಸ್ತಕ** (ನಾ). = ಮುಸ್ತ : "ಮುಸ್ತಕಃ. ಕುರುವಿಂದಃ, ಭದ್ರಾ,ಜಳದಃ_ ಈ ೪ ಭದ್ರಮುಸ್ತೆ" (ಹಲಾಯು. ೧೦೨-೪೬೮). 'ಭದ್ರಮುಸ್ತಕ' ಪರಾ.

[ಸಂ.]

**ಮುಸ್ತಕಿ** (ನಾ). = ಮುಸ್ತ : ಮುಸ್ತಕಿಯ ಚೂರ್ಣ: _ ಭದ್ರಮುಸ್ತೆ, ಕೋಷ್ಠ . . . ಕುಂಬಳದ ಬೀಜ, ಇಷ್ಟು ಔಷಧಗಳನ್ನು ಸರಿಯಾಗಿ ಕೂಡ ಚೂರ್ಣವ ಮಾಡಿ . . . ಕೊಡುವುದು (ಖಗೇಂ. ೪೪). [< ಸಂ. ಮುಸ್ತಕ]

**ಮುಸ್ತಯಿದೆ** ' ಮುಸ್ತೈದೆ ' ನೋ.

**ಮುಸ್ತಾಕಂದ** (ನಾ). ಭದ್ರಮುಸ್ತೆಯ ಗೆಡ್ಡೆ ; ಕೊನ್ನಾರಿಗೆಡ್ಡೆ : ಮೆಲ್ಲ ಮುಸ್ತಾಕಂದಂಗಳ ತಿರುಳ್ ಪಱಿದೊಕ್ಕು ಕಂಪಿಡುತ್ತಿರೆ ಪೋದ ಕಾಡುಹಂದಿಗಳ ಗೊಂದಣವಜ್ಜೆಗಳುಮಂ . . . ಕಂಡು (ಕುಸುಮಾ. ೦೪-೨೯ ವ) ; ಮುಸ್ತಾಕಂದಮನೆತ್ತಿ ಬೇರ್ಗಳನಿತಂ ತಿಂದು (ದಶಕು. ೨-೦೦೬).

[ಸಂ.]

**ಮುಸ್ತಾದ** (ನಾ). ಗೇಕಿನ ಹುಲ್ಲು ತಿಂದು ಜೀವಿಸುವ ಒಂದು ಬಗೆಯ ಕಾಡುಹಂದಿ. [ಸಂ.]

**ಮುಸ್ತಾಭ** (ನಾ). ಒಂದು ಬಗೆಯ ಹುಲ್ಲು : 'ಮುಸ್ತಾಭಚೂರಣ' ಪರಾ. [ಸಂ.]

**ಮುಸ್ತಾಭಚೂರಣ** (ನಾ). ಮುಸ್ತಾಭದ ಬೇರಿನ ಚೂರುಗಳನ್ನು ತುಪ್ಪದಲ್ಲಿ ಹುರಿದು ಅಕ್ಕಿಹಿಟ್ಟು, ಸಕ್ಕರೆ ಮುಂತಾದುವುಗಳೊಂದಿಗೆ ಬೆರಸಿ, ವರಾಹಸ್ವಾಮಿಗೆ ನೈವೇದ್ಯಕ್ಕಿಡುವ ಒಂದು ಬಗೆಯ ಉಂಡೆ : (೬). [ಮುಸ್ತಾಭ + ಚೂರಣ]

**ಮುಸ್ತೆ** (ನಾ). = ಮುಸ್ತ : "ಆ ಮುಸ್ತಕಂ ಮುಸ್ತೆ ಭದ್ರಾತಕಂ ಗೇಕು" (ಚಾಂಗಣ. ೪೦-೩೩) ; ಇದು ಶೈತ್ಯಕಷಾಯಂ ಬಳ್ಳಿ ಮರುಚಿ ನೆಲಬೇವು ಮುಸ್ತೆ ಪರ್ಪಾಟಕದಿಂ ಕಾದಿದಿಳುಪಿ ಕಟುಕರೋಹಿಣಿಯುವಜಿಳೊಳಗಿರೆ (ಕಲ್ಯಾಣ. ೩-೩೨) ; ಇಂಗಿನೆಲೆ ಮುಸ್ತೆಯಳಲೆ ಲವಂಗಂ . . . ಮರಿಚ ಸೈಂಧವಲವಣಂ (ಅಕ್ಕಣ. ೭-೪೪). 'ಭದ್ರಮುಸ್ತೆ' ಪರಾ. [ < ಸಂ. ಮುಸ್ತಾ ]

**ಮುಸ್ತೈದು** 'ಮುಸ್ತೈದೆ' ನೋ.

**ಮುಸ್ತೈದೆ**, ಮುಸ್ತಯಿದೆ, ಮುಸ್ತೈದು (ನಾ). ೧. ಸಜ್ಜು ; ಅಣಿ ; ತಯಾರು : ಥಳಥಳಿಪ ಕೊಪ್ಪರಿಗೆ ಚರುವಿಗೆಯ ಬಿಂದಿಗೆಯ ದಳಪೇಜುತಂ ಹೇಜು ಮುಸ್ತೈದೆಯಾಗಲ್ಕೆ ಕಳೆಯೇಜುತಂ ಬಂದು (ಕ್ರಕುಶಿ. ೯-೨೨೪) ; ಮೂರನೆಯ ದಿನ ಸೂರ್ಯಾಸ್ತಮಯವಾಗುತ್ತಲೇ ಯಥಾಪೂರ್ವ ಸಕಲ ಮುಸ್ತೈದೆಯ ಮಾಡಿಕೊಂಡು ಅರಸು ಭೃತ್ಯಾಲಯಮಂ ಪೊಕ್ಕು (ಚಿಕದೇ. ೨೦) ; ಸಕಲ ಆಯುಧವನ್ನು ಮುಸ್ತೈದೆಮಾಡಿ ಬಂದು ದೊರೆಗೆ ತಾನು ಚಂದದಿಂ ಪೇಳ್ದ (ಹುಚಳ. ೧೩೩). ೨. ಸಾಮಗ್ರಿ ; ಸಲಕರಣೆ ; ಉಪಕರಣ : ಬಲದೇವಮಂತ್ರಿ ತನ್ನ ಬಾಲೆಯಳಗಿತ್ತ ಬಹು ತಳತ ಹೇಮದ ಮಂಚ ಲೇಪು ಮುಸ್ತೈದೆ (ಕಠಂ. ೧೪೩) ; ಮುಸ್ತೈದೆಗಳೊಳಪೊಗದಂತು ಕಂಡಿ ಕಣವೆ ಪಥಂಗಳಂ ಕಟ್ಟ (ಕೆಳಕ್ಕ. ೩-೪೪). **ಮುಸ್ತಯಿದೆ :** ೧. ಭೂಮಿಯ ರಥ . . . ದಾನ ದಂಡ ಸಾಮ ಭೇದಂಗಳೆ ಚಬುಕು ಇಂತು ರಥ ಮುಸ್ತಯಿದೆಯಾಗಲು (ಕೃರಸೂ. I, ೩೦). ೨. ತಮ್ಮ ಕನ್ನಗಳವಿನ ಮುಸ್ತಯಿದೆ ಸಹವಾಗಿ ಪೋಗುವಲ್ಲಿ (ಕೃರಸೂ. I, ೩೪೯). **ಮುಸ್ತೈದು :** ೨. ಸಾಸುವೆ, ಮೆಂಥ್ಯ, ಜೀರಿಗೆ, ಇಂಗು ಮುಂತಾದ ಒಗ್ಗರಣೆ ಮುಸ್ತೈದುಗಳಿಂದ ಪೂರಿತವಾಗಿ (ಕೃಪಾಶಿ. ೦೩).

ಮುಸ್ತೈದೆಯರು = ಸಾಮಗ್ರಿಗಳನ್ನು ಹೊಂದಿದವರು ; ಉಪಕರಣಗಳನ್ನು ಹಿಡಿದಿರುವವರು : ಕಸ್ತೂರಿಗಂಧಿಯರ್ ಬನದೊಳು ಬಹುಫಲವಸ್ತುಗಳನು ಸೇಂದಿಕೊಂಡು ಮುಸ್ತೈದೆಯರಾಗಿ ಬಂದರು ಪರಮ ಪದಸ್ಥ ಶ್ರೀಕೃಷ್ಣನಿರ್ದೆಡೆಗೆ (ಪೋಹಚ. ೪-೬೦). [← ಅರ. ಮುಸ್ತಅದ್, ಮುಸ್ತಇದ್ ; ಹಿಂ. ಮುಸ್ತೈದ್ ; ಮರಾ. ಮುಸ್ತೇದ್]

**ಮುಸ್ಲಮ** 'ಮುಸ್ಲಿಂ' ನೋ.

**ಮುಸ್ಲಿಂ**, ಮುಸುಲುಮ, ಮುಸ್ಲಮ, ಮುಸ್ಲಿಮ, ಮುಸ್ಲೀಮ(ಗು). ೧. ಇಸ್ಲಾಂಮತಕ್ಕೆ ಸೇರಿದ ; ಇಸ್ಲಾಂಧರ್ಮದ. (ನಾ). ೨. ಇಸ್ಲಾಂ ಮತಕ್ಕೆ ಸೇರಿದ ವ್ಯಕ್ತಿ ; ಮಹಮ್ಮದೀಯ : ಇಲ್ಲಿಯ ಮುಸ್ಲಿಂರು ಪಾಕೀಸ್ತಾನೀ ಮುಸಲ್ಮಾನರೊಡನೆ ಬೇಗತನ ಬೆಳೆಸುವುದು ಪರರಾಷ್ಟ್ರದೊಡನೆ ಸಂಬಂಧ ಮಾಡಿದಂತೆ ಎಂದು ಎಣಿಸಲೇಬೇಕಲ್ಲವೆ ? (ಮುಕ್ತಪ್ರ. ೦೬೨). **ಮುಸುಲುಮ :** ೨. ಸೇತು ಕೇತಾರದ ನಡುವೆ ಮುಸುಲುಮರ ಜಾತಿಯಲ್ಲದೆ ಹಿಂದುವರ ಜಾತಿಧರ್ಮ ಸ್ಥಿತಿಯುಂಟೆ (ಕಂಠಾಕಾಂ. ೩೩-೦೩೮). **ಮುಸ್ಲಮ :** ೧. ಧೀರ ಮುಸ್ಲಮಕುಳವನು — ಚಿಮ್ಮಿ, ಕೆರಳಿಸಿ, ಕಲೆತರು (ಹೊಂಗಳ. ೩-೨). **ಮುಸ್ಲಿಮ :** ೨. ಮುಸ್ಲಿಮರೂಪದ ರಾಕ್ಷಸರ ಶಕ್ತಿ ಹಿಂದೂಸಂಸ್ಕೃತಿಯ ನಾಶಕ್ಕೆ ಪಟ್ಟ ಪ್ರಯತ್ನ . . . ಇತಿಹಾಸಪ್ರಸಿದ್ಧ (ಜಿಬ್ಮಾರ. ೦೦೪ ಪೀಠಿಕೆ). **ಮುಸ್ಲೀಮ :** ೨. ಹಿಂದು ಜೈನ ಮುಸ್ಲೀಮ ಕ್ರೈಸ್ತರಿಂತೊಂದೇ ಬಾಂಧವರು (ಗೀಪಿಂ. ೪೬-೪) ; ಮುಸ್ಲೀಮರು . . . ಬಾಬಯ್ಯನ ಬೆಳ್ಳಿಯ ವಿಗ್ರಹಗಳನ್ನು ಸ್ಥಾಪಿಸಿ ಹೂವು, ಗಂಧ, ಚಂದನದಿಂದ ಪೂಜಿಸುತ್ತಿದ್ದರು (ಮಗತಾಂ. ೦).
[← ಅರ. ಮುಸಲಿಮ್, ಮುಸ್ಲಿಮ್ ; ಹಿಂ. ಮುಸಲಿಮ್, ಮುಸಲ್ಲಮ್ ; ಮರಾ. ಮುಸ್ಲಿಮ್, ಮುಸ್ಲೀಮ್]

**ಮುಸ್ಲಿಮ** 'ಮುಸ್ಲಿಂ' ನೋ.

**ಮುಸ್ಲೀಮ** 'ಮುಸ್ಲಿಂ' ನೋ.

**ಮುಸ್ಸಂಜೆ** 'ಮುತ್ಸಂಜೆ' ನೋ.

**ಮುಹಗ್ಗಳ ?** (ನಾ). ಮಲ್ಲಯುದ್ಧದ ಒಂದು ಪಟ್ಟು(?) ; ಪಿಸಿದ ಮುಹಗ್ಗ [ಪಾಠಾಂ. ಹುಗ್ಗ]ಳಂ ಕಡಕಿ ಕಕ್ಕವಡಂ ಮುಹುಡಂ ತುಳಾಡಿ . . . ಸಸಿಕುವೆನಿಪ್ಪ ಜಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) (ಶಂಪ್ರಕು. ೩-೬೮ ; ಶಾಸ್ತ್ರಸಾ. ೩೦೪ ನೋ). [?]

**ಮುಹಚಾಳೆಯ** (ನಾ). = ಮುಖಚಾಳೆಯ : ಕಳೆಯ ಮುಯಣಮಂ ನುಣ್ಪಾಗೆ ತಿರ್ದಿ ಪೊಂಬಿಸಿ ಹೊ[ಹೆ]ಲ್ಲಣೆಯ ಶುದ್ಧಮಾಗಿ ಮುಹಚಾಳೆಯುಮುಮಾಡಿ . . . ತೋರ್ಕೆಗೊಳಿಸುವುದುಂ (ಶಾಂತೀಕ್ಕ. ೭-೯೩ ಪ). [p ಇದು 'ಮುಖಚಾಳೆಯ' ಎಂಬುವರ ಅಪಲಿಖಿತವಿರಬಹುದು]

**ಮುಹಡ**, ಮುಹುಡ (ನಾ). ಮಲ್ಲಯುದ್ಧದ ಒಂದು ಪಟ್ಟು .— ವರಸೆ : ಕಕ್ಕವಡಂ ಮುಹಡಂ [ಪಾಠಾಂ. ಹುಳಂ] ತುಳಾಡಿ . . . ಸಸಿಕುವೆನಿಪ್ಪ ಜಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) (ಶಂಪ್ರಕು. ೩-೬೮); ಅಂ ಪಿಡಿದುದೆ . . . ಹತ್ತೆ ಡೊಕ್ಕರಂ ಚಡಿಕೆ ತುಳಾಡಿ ಪೊಚ್ಚಮುಡುಹು ಮುಹಡಂ ದಣುಪಟ್ಟಿ ಪಟ್ಟಿಸಂ (ಅಜಿಂಕು. ೨-೨೨). **ಮುಹುಡ :** ಕಮ್ಮರಿ ಮುಹುಡಂ ಜವತ್ತಪಡಿ ಪಾಸಗೆ . . . ಪಟ್ಟಿಕತ್ತರಿಗಳನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ಶ್ರೀಪುಶಿ. ೨೬-೦೩). [?]

**ಮುಹಪೋವುಡ** (ನಾ). = ಮುಹಡ (?) : ಸಸಿಕ್ಕು ಮುಹಪೋವುಡ ಚಲ್ಲಣ ವಟ್ಟಿ ಪಟ್ಟಿಕತ್ತರಿಗಳನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ಶ್ರೀಪುಶಿ. ೨೬-೦೩). [< ಮುಹಡ ?]

**ಮುಹಮ್ಮದೀಯ**, ಮಹಮ್ಮದೀಯ (ಗು). ೧. ಇಸ್ಲಾಂಧರ್ಮಕ್ಕೆ ಸೇರಿದ.— ಸಂಬಂಧಿಸಿದ. (ನಾ). ೨. ಮಹಮ್ಮದ್‌ಪೈಗಂಬರನ ಅನುಯಾಯಿ ; ಮುಸಲ್ಮಾನ : ಈ ಭಾಗದಲ್ಲಿ ಮುಹಮ್ಮದೀಯರ ೧೨ ತಿಂಗಳುಗಳ ಹಬ್ಬಗಳ ಸಾಮಾನ್ಯಕಲ್ಪನೆಯನ್ನು ಕೊಡಲಾಗಿದೆ (ಭಾಹಬ್ಬ. ೦೪೪). **ಮಹಮ್ಮದೀಯ :** ೧. ಕ್ರೈಸ್ತ ಮಹಮ್ಮದೀಯ ಮತಗಳಲ್ಲಿ ಮತಾಂತರಹೊಂದಿ ಮದುವೆಯಾಗಲು ಅವಕಾಶವಿದೆ (ದಾಂಕಪು. ೨೦೩). ೨. ಮಹಮ್ಮದೀಯರಂತೆ ನಾನೂ ಉಪವಾಸ ಮಾಡಿದೆ. (ಕೃವಾತ. II. ೦೬೨).
[← ಅರ. ಹಿಂ. ಮುಹಮ್ಮದೀ]

**ಮುಹರಿ** 'ಮೌರಿ$_1$' ನೋ.

**ಮುಹರ್ರಮ್** 'ಮೊಹರಂ' ನೋ.

**ಮುಹುಃ** (ಅ). ಪುನಃ ; ಮತ್ತೆ : ಮತ್ತಕೋಕಿಲೋಚ್ಚೈರ್ಧ್ವಾನಂ ಮುಹುರಾಕರ್ಣಿಸ ಪಡೆದತ್ತಹರ್ನಿಶಂ ಪೆರ್ಚನಂತರಂಗಕ್ಕೆನ್ನಾ (ಕಥಿಂ. ೦-೩೩); ಮುಹುಃ ಪಾರ್ಕಿ ಕ್ರೀಡೆಯನುಚಿಸಿದು ಕುಮಾರಕಚೂಡಾಮಣಿ ತಂದೆಯೆಂದುದರ್ಕೆರ್ದೆಗೊಂಡಂ (ಶಂಪ್ರಕು. ೨-೩೩).

**ಮುಹುರ್ಮುಹುಃ**, ಮುಹುರ್ಮುಹು (ದ್ವಿರುಕ್ತಿ) : ಮುಹುರ್ಮುಹುರುರಾಂದೋಳಿತಮುಸ್ತಕನುಂ ಉಮಂಚದ್ರೋಮಾಂಚಕಂಚುಕಿತನುಮಾಗಿ ನ್ನೋಡುತ್ತುಂ (ಆದಿಪು. ೦೦-೩೨ ಪ); ಮುಹುರ್ಮುಹುರಾಶೀರ್ವಾದಮುಖರ ಮುಖನಾದ ಕಾಮದೇವನಂ ಲಕ್ಷ್ಮಣ . . . ನುಡಿವುದುಂ (ಕಂಠಾಕಾ. ೯-೦೩೨ ಪ); ಚಕುಹುಚ್ಚಕುಹೂ ಸನ್ನೆಯೊಳು ಮುಹುರ್ಮುಹು

ಅರೆಚ್ಚರಕೀ ತುತ್ತುರಿ ಬಾಸೊಳು ಮೊಳಗುತಿದೆ? (ಗಡೀಶ. ೨೪-೨). **P** ಕನ್ನಡದಲ್ಲಿ 'ಮುಹುರ್' ಎಂಬ ರೂಪವನ್ನು ಪ್ರತ್ಯೇಕವಾಗಿ ಎಲ್ಲೂ ಪ್ರಯೋಗಿಸಿರುವುದು ಕಂಡುಬಂದಿಲ್ಲ. ಆದ್ದರಿಂದ ಇಲ್ಲಿ 'ಪುನಃ' ಎಂಬ ಶಬ್ದಸಾಮ್ಯದಿಂದ 'ಮುಹುಃ' ಎಂಬ ರೂಪವನ್ನು ಮಾಡಲಾಗಿದೆ. [ಸಂ. ಮುಹುರ್]

**ಮುಹುಡ** 'ಮುಹಡ' ನೋ.

**ಮುಹುರಿ** 'ಮೌರಿ₁' ನೋ.

**ಮುಹುರ್ದೃಷ್ಟ** (ನಾ). ಮತ್ತೆ ಮತ್ತೆ ಕಂಡುದು ; ಪುನಃಪುನಃ ನೋಡಿದುದು : "ಅವಗೀತಂ, ಮುಹುರ್ದೃಷ್ಟಂ, ಉಪಲಬ್ಧಂ – ಈ ೩ ಮಗುಳ್ಚಿ ಮಗುಳ್ಚಿ ಕಂಡುದು" (ಹಲಾಯು. ೧೨೪-೬೦). [ಸಂ.]

**ಮುಹುರ್ಭವಿಸು** (ಕ್ರಿ). ಪುನಃ ಹುಟ್ಟು ; ಮತ್ತೆ ಮೂಡು : ಮತ್ತೊಮ್ಮೆ ಮೆಯ್ಗೆನಗೆ ಗಲಿ. ಮುಹುರ್ಭವಿಸುವೊಡೆ, ನಿನ್ನ ರಕ್ಕಸಮೆಯ್ಯ ನೆತ್ತರಿಂ ತನಿಯೆರೆವೆನೆನ್ನ ಸಾಜನಾತ್ಮಕ್ಕೆ (ಶ್ರೀರಾಮಾ. ೩೪೦-೬೮೩).
[ಸಂ. ಮುಹುರ್ಭವ + — ಇಸು₃]

**ಮುಹುರ್ಭಾಷೆ** (ನಾ). ಹೇಳಿದುದನ್ನೇ ಮತ್ತೆಮತ್ತೆ ಹೇಳುವುದು : "ಅನುಲಾಪಃ. ಮುಹುರ್ಭಾಷಾ–ಈ ೨ ಅಡಿಗಡಿಗೆ ನುಡಿವ ನುಡಿ" (ಹಲಾಯು. ೨೪-೧೪೯). [ಸಂ. ಮುಹುರ್ಭಾಷಾ]

**ಮುಹೂರ್ತ₁** (ನಾ). ನೆಲಸುವುದು ; ಆಸೀನಗೊಳ್ಳುವುದು : ಚಿಕ್ಕರಸರ ಸನ್ನಿಧಾನವು ಸಜ್ಜೆಯಲ್ಲಿ ಮುಹೂರ್ತಮಾಡುವವರೆಗೆ ನೀವು ಕುಳ್ಳಿರದಿರಿ ! (ಚಿಕ್ಕಉ. ೩೫-೨೫) ; ಪೂರ್ಣಯ್ಯನವರು . . . ದೊರೆಗಳಿಗೆ ಮುಜರೆ ಮಾಡಿ. ಆವರಿಗೆ ಹಸ್ತಲಾಘವ ಕೊಟ್ಟು ಕರೆದೊಯ್ದು ಪಲ್ಲಕ್ಕಿಯಲ್ಲಿ ಮುಹೂರ್ತಮಾಡಿಸಿದರು (ಕೃಷ್ಣಶೂ. ೦೯೮). [<ಸಂ. ಮುೂರ್ತ]

**ಮುಹೂರ್ತ₂** (ನಾ). ೧. ಸ್ವಲ್ಪಹೊತ್ತು ; ಅಲ್ಪಸಮಯ : ಎಲೆ ಶಕುಂತಳೆ. ಇಲ್ಲಿಯೇ ಒಂದು ಮುಹೂರ್ತ ನಿಲ್ಲು (ಶಾಕುಂತ. ೯-೨೬) ; ಎಲೆ ಮಗಳೆ, ಒಂದು ಮುಹೂರ್ತ ಲಜ್ಜೆಪಡದಿರು (ಶಾಕುಂತ. ೬೬-೭). ೨. ದೈವಪ್ರತಿಷ್ಠಾಪನೆ, ದೀಕ್ಷಾಸ್ವೀಕಾರ, ಮದುವೆ, ಮುಂಜಿ ಮುಂತಾದ ಮಂಗಳಕಾರ್ಯಗಳಿಗಾಗಿ ಜ್ಯೋತಿಷ್ಕರು ನಿಶ್ಚಯಿಸುವ ಶುಭಗಳಿಗೆ ಮತ್ತು ಆ ಗಳಿಗೆಯಲ್ಲಿ ನಡೆಸುವ ಶುಭಕಾರ್ಯ : ಒಳ್ಳೆ ತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು (ವಡ್ಡಾರಾ. ೬-೨); ಮಹೋತ್ಕೃಷ್ಟಮಪ್ಪ ಮುಹೂರ್ತದಿಂ ಸನಾಥಮಾದ ನಿಶಾಮಧ್ಯಸಮಯದೊಳ್ . . . ಶಾಶ್ವತನವತರಿಸಿರ್ದಂ (ಜಗವ. ೨-೯೯ ವ); ಮಡುದಿವಸ ಮಂಗಳ ಮಯಮುಹೂರ್ತದ ಜೋಯಿಸರ ಜೋಡಿಯಲಿ ನಿರ್ಗಮನಿರತನಾದನು ಕೃಷ್ಣನು (ಕುಮಾ.ಉ. ೬-೪); ವಿಜಯದಶಮಿಯ ಸುಮುಹೂರ್ತದಲ್ಲಿ ವಿಜಯಯಾತ್ರೆ ಹೊರಡುವುದೆಂದು ನಿಶ್ಚಯವಾಯಿತು. ಆ ಮುಹೂರ್ತವೇ ಪ್ರಭುಗಳ ಜನ್ಮತಾರೆಗೆ ಚೆನ್ನಾಗಿ ಕೂಡಿ ಬಂದಿತ್ತು (ಶಾಂತಲಾ. ೦೪೭). ೩. ದಿನದ ಮೂವತ್ತನೆಯ ಒಂದು ಭಾಗ : ನಲವತ್ತೆಂಟುನಿಮಿಷಗಳ ಅವಧಿ : "ಕ್ಷಣಮಂದಾಜು ಘಟಿಗೆಯೆನಿಕ್ಕುಂ ಅಜಿರಡರಡಂ ಕೊಂಡೊಡೆ ಬವರಿಸುವ ಮುಹೂರ್ತಮಂತದೊಂದಕ್ಕುಂ" (ವಸ್ತುಕೋ. ೦೩-೪೩); ಅದು ಸಮಯಾವಲಿಕೋಚ್ಛ್ವಾಸಸ್ತೋಕನಿಮೇಷನಾಡಿಕಾಮುಹೂರ್ತದಿವಸಪಕ್ಷಮಾಸರ್ತ್ವಯನಸಂವತ್ಸರಾದಿ ಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು (ಆದಿಪು. ೬-೪೮ ವ): ತನ್ನಾಳ್ವಿಕಾಲಯುಗಂ ಮುಹೂರ್ತಮೆನೆ ವರ್ತಿಸುಗುಂ (ಶಂರಾಮಾ. ೦-೩೦) : ದಿನಕೆಂಟು ಜಾಮ ಬಂದುದು ಅಜುವತ್ತುಗಳಿಗೆ ಮುಹೂರ್ತಂಗಳು ಸಂದಿಸೆ (ಭಾಸ್ಕ.ಠ. ೩೨-೩); ಎರಡು ನಾಲೀಗಳಿಂದ ಮುಹೂರ್ತ, ಮೂವತ್ತು ಮುಹೂರ್ತಗಳಿಂದ ಒಂದು ಅಹೋರಾತ್ರ (ದಿವಸ)ವಾಗುತ್ತದೆ (ಕೈಪಿಪ. ೬೭೬). ೪. ಜ್ಯೋತಿಷ್ಕ ; ಜೋಯಿಸ.
**ಮುಹೂರ್ತಹಿಡಿ**=ಯಾವುದಾದರೊಂದು ಮಂಗಳಕಾರ್ಯಕ್ಕಾಗಿ ಶುಭಸಮಯವನ್ನು ಗೊತ್ತುಮಾಡು ; ಲಗ್ನವನ್ನು ನಿಶ್ಚಯಿಸು : ಲಗ್ನದ ಮುಹೂರ್ತಹಿಡಿಯಲು ಇನ್ನೆರಡು ತಿಂಗಳಿದ್ದಾವೆ ಎನ್ನುವಾಗ ಟೈಫಾಯ್ಡ್ ಆಗಿ ಹುಡುಗ ತೀರಿಕೊಂಡ (ಮೂರುದಾ. ೬೬). [ಸಂ.]

**ಮುಹೂರ್ತವೇದಿ** (ನಾ). ಮಂಗಳಕಾರ್ಯಕ್ಕಾಗಿ ಒಳ್ಳೆಯಘಳಿಗೆಯನ್ನು ನಿಶ್ಚಯಿಸುವವನು ; ಜೋಯಿಸ ; ಜನಪತಿ . . . ಸಿಂಹಪೀಠದೊಳ್ ಮನದೊಲವಿಂದೆ ಮೂಡ ಮೊಗದಿಂ ಮಿಗೆ ಕುಳ್ಳಿರೆ . . . ನುತ ಮುಹೂರ್ತವೇದಿನಿಚಯಂ ಬಲದಲ್ಲಿರವೇಳ್ಕುಂ (ರಾಸ್ಕರಂ. ೦-೩೪).
[ಸಂ. ಮುಹೂರ್ತವೇದಿನ್]

**ಮುಳ್**, ಮುಳು. ಮುಳ್ಳು (ನಾ). ೧. ಕಂಟಕ: ಪಾಟಿಸುವೆನೊಯ್ಯನೆ ಮುಳ್ಳೊಳೆ ಮುಳ್ಳಂ (ಶಂಶಭಾ. ೯-೬೬); ಮುಳ್ಳಿಲ್ಲದ ಬನ್ನಿಯ ಮಾರನುಳ್ಳೆಡೆಯೊಳಂ . . . ಒಂದು ಪುರುಷದೊಳ್ ನೀರಕ್ಕುಂ (ಲೋಕೋಪ. ೩-೦೦); ಅಡಿಯಲ್ಲಿ ಸಿಲ್ಕಿದ ಮುಳ್ಗಳಂ ನಿಲ್ಲದೊತ್ತಿ ಪುಳುಂಬಿನಿಂ ಕಳೆಯುತ್ತೆ ದೇಹಮನೊಡ್ಡುತುಂ ಮೆಲ್ಲೆಲರ್ಗಿರದಾಯೆನುತ್ತುಮರಣ್ಯಸಂಚರನೊಪ್ಪಿದಂ (ಉದ್ಯೋ. ೪-೦೨೦). ೨. ಕಂಟಕಗಳಿಂದ ಕೂಡಿದ ಗಿಡ, ಪೊದೆ ಮುಂತಾದುವು : ಬಳ್ಳಿಯೆಲ್ಲಂ ಲತೆ ಮುಳ್ಳೆಲ್ಲಂ ಕೇದಗೆ ಬೆಳೆಗಯ್ಯೆಲ್ಲಂ ಫಲಶಾಲಿಯೆಂದೊಡೇಪೊಗಟ್ಟುದೆದಂ (ಕಾವ್ಯಾವ. ೮೧). ೩. ಚೂಪಾದ ತುದಿ,–ಮೊನೆ : 'ಮುಳ್ಗಣೆ' ಪರಾ. ೪. ಚೇಳು ಮುಂತಾದುವುಗಳ ಕೊಂಡಿ : ಮಾಡಿದನೇಕೆಯೊ ಮೇಲಂ ನೋಡದೆ ಬಿದಿ . . . ರೂಢಿಸಿ ತೇಟಿಗೆ ಮುಳ್ಳಂ (ರವಾರ್ಣಾ. ೧-೬೨). ೫. ತಕ್ಕಡಿಯ ಏರುಪೇರನ್ನು ಸೂಚಿಸಲು ತಕ್ಕಡಿಯ ಕೋಲಿನ ನಡುವಿನಲ್ಲಿರುವ ಚೂಪಾದ ಸಲಕರಣೆ : (೬). ೬. ಕುದುರೆಯನ್ನು ದೌಡಾಯಿಸುವುದಕ್ಕಾಗಿ ಸವಾರನು ಹಿಮ್ಮಡಿಗೆ ತೊಡುವ ಲೋಹದ ಚೂಪಾದ ಸಾಧನ: (೬). ಮುಳು: ೧. ಎಡಪಿಯಮಂಗಾಲಮುಳು ನಡೆಯುಂ ತಾನೆಂತು ನೊಂದು ಮಜುಗುಮನತೆಲ್ಲೆಡೆಗಳೊಳಂ ಪ್ರಾಣಗಳು ಮಡಿಪದೆ ನೋಯಿಸದೆ ಕಾವುದೆಂಬಂ ಜೈನಂ (ಸಮಾಶ. ೬-೬); ಅಡವಿಯ ಮಾರ್ಗದಲಿ ಕಲುಮುಳುಗಳೊಳು ಕಾಪಥಕೆ ಕೋಮಲಚರಣಗಳ ಕೊಡುತ ತೊಳಲಿದರು (ಕುಮಾ.ಆ. ೮-೯೩). 'ಮುಳುಗಳ್ಳಿ' ಪರಾ. ಮುಳ್ಳು: ೧. "ಮುಳ್ಳು ಕಂಟಕಮುಳ್ಳು" (ಮಂಗರಾ. ೯೯-೯೩); ಮುಳ್ಳಿಗೆ ಮೊನೆಯ ಎಳ್ಳಿಗೆ ಎಣ್ಣೆಯ ತಂದಿರಿಸಿದವರುಂಟೆ ಅಯ್ಯಾ (ಅಜಾಪು. ೦೨೯-೯೨): ಮುಳ್ಳಂ ಕಳೆದು ದಸಿಯಂ ಸಿಕ್ಕಿದಂತಾಯಿತ್ತಲಾ (ಬಸವ. ೩೩-೪೪); ಒಳ್ಳೆಯನು ಇರದೂರು ಕಳ್ಳನೊಡನಾಟವು ಸುಳ್ಳನ ಮಾತು ಇವು ಮೂಜು ಕೆಸಟಿಳಗೆ ಮುಳ್ಳು ತುಳಿದಂತೆ (ಸರ್ವಜ್ಞ. ೦೦೮೬): ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು (ಗಾದೆ). ೭. ಕಾಡುಹಂದಿಯ ಮೈಮೇಲೆ ಚೂಪಾದ ಕಡ್ಡಿಯಂತಿರುವ ಬಿರುಗೂದಲು : "ಶಲಲಂ, ಶಲಂ–ಈ ೨ ಎಯ್ಯ ಮುಳ್ಳು" (ಹಲಾಯು. ೩೯-೮೦). ೮. ಧಾನ್ಯಗಳ ತೆನೆಯ ಮೇಲಿರುವ ಮೊನಚಾದ ವಸ್ತು: ಕೂಬು: "ಕಿಂಶಾರು, ಧಾನ್ಯಶೂಕ–ಧಾನ್ಯದ ತುದಿಯ ಮುಳ್ಳು" (ನಾಶಾ. ೬). ೯. ಗಡಿಯಾರದಲ್ಲಿ ವೇಳೆಯನ್ನು ಸೂಚಿಸಲು ಆಳವಡಿಸಿರುವ, ಸೂಜಿಯಂತೆ ಮೊನಚಾಗಿರುವ ಉಪಕರಣ: ಗಡಿಯಾರದ ತಗಡಿನ ನಡುವೆ ಸಣ್ಣದೊಂದೂ ದೊಡ್ಡದೊಂದೂ ಎರಡು ಮುಳ್ಳುಗಳು ಹಚ್ಚಿರುತ್ತವೆ (ಮುಂಬಯಿ. ೬. ೩-೮೭); ಕೀಲಿ ಕೊಟ್ಟಾಗ ಎಲ್ಲಾ ಗಡಿಯಾರಗಳ ಮುಳ್ಳುಗಳೂ ಬಲಕ್ಕೆ ತಿರುಗುತ್ತವೆ (ಜೀವಾಕ್ಕ. ೨೦೦). ೧೦. ಕಂಟಕಗಳಿಂದ ತುಂಬಿರುವ ಒಂದು ಬಗೆಯ ಸಸ್ಯ: "ಖಮುಖಾ-ಮುಳ್ಳು, ಹಿಡಹಿಡಕೆ" (ಔಷಧ. ೪೩). ೧೧. ಲೇಖನಿಯ ತುದಿಗೆ ಸಿಕ್ಕಿಸಿ ಶಾಯಿಯಿಂದ ಬರೆಯಲು ಉಪಯೋಗಿಸುವ ಲೋಹದ ಮೊನಚಾದ ಸಾಧನ: ನನ್ನ ಲೇಖನಿಯ ಮುಳ್ಳು ಸವೆದು ಹೋಗಿದೆ (ರೂಢಿ). ೧೨. (ಆಲಂ) ಹಿಂಸೆ ; ತೊಂದರೆ : ಅಗಲಾ

ವಿಕೆಯೆಂದರೆ ಜೀವಕ್ಕೆ ಮುಳ್ಳು (ಕನ್ನಹಾ. ೧೨೦). ೧೩. ದುಃಖ; ಚಿಂತೆ; ನೋವು: ನನ್ನ ಹೃದಯದಲ್ಲಿ ನೆಟ್ಟ ಮುಳ್ಳು ನೆಟ್ಟಂತೆಯೇ ಇದೆ (ಶಾಣಿ. ೬೬).

ಮುಳ್ಳ ಪಂದಿ, ಮುಳ್ಳ ಹಂದಿ = ಮೈಮೇಲೆ ಹರಿತವಾದ ಕಡ್ಡಿಗಳಂತಿರುವ ಗರಿಗಳುಳ್ಳ ಒಂದು ಬಗೆಯ ಕಾಡುಹಂದಿ: ವಿಚ್ಛಂಬುಗಳವು ರೋಮಮನುಚ್ಚಳಿಸಲ್ಕಾಜಿದಲ್ಲಿ ತೊಡರ್ದಿರೆ ಕೊಡಪುತ್ರಚ್ಛರಿಯು ಮುಳ್ಳ ಪಂದಿವೊಲಚ್ಚಿಗಮಂ ಮಾಡಿ ಮಡಿಬಿದತ್ತದು ಸುರರಾ (ಕರಶಂ. ೯-೧೬); ಮುಳ್ಳುಹಂದಿಯು ಮುಳ್ಳನ್ನು ಕೆಲವರು ಬೈತಲೆ ತೆಗೆದುಕೊಳ್ಳಲು ಬಳಸುತ್ತಾರೆ (ರೂಢಿ). ಮುಳ್ಳ ಹಾಸಿಗೆ = (ಆಲಂ) ಯಾತನೆಯನ್ನುಂಟು ಮಾಡುವ ಸ್ಥಳ: ಅವನ ಪತ್ರ ಬಾರದಾಗಲು ಸಮಸ್ತಜಗತ್ತೇ ಚಾರುಗೆ ಮುಳ್ಳುಹಾಸಿಗೆಯಾಗಿ ಭಾಸವಾಯ್ತು (ಇಕ್ಕ. ೨೮೯). ಮುಳ್ಳಾಗು = (ಆಲಂ) ಕಂಟಕಪ್ರಾಯವಾಗು; ಅಡ್ಡಿಯಾಗು: ಸಾವಿರದ ಮೇಲೇಳ್ನೂರು ಬಸದಿಗಳಿರಲವಕೆ ಮುಳ್ಳಾಗಿ ಪೊಂದಿರ್ದುದು ಶಿವಾಲಯವು ತಡೆಯದೀ ದೇಗುಲವನೀಗಳೆ ಕೆಡಿಸಬೇಕು (ಬಸವ. ೫೧-೬೬); ಅತೋಭ್ರಷ್ಟ, ತತೋಭ್ರಷ್ಟನಾಗಿ, ಮನೆಗೆ ಮುಳ್ಳಾಗಬೇಡ (ಹಂಗಿತ. ೯೩). ಮುಳ್ಳಾಡಿಸು = (ಆಲಂ) ಚುಚ್ಚಿ ಮರುಕಳಿಸುವಂತೆ ಮಾಡು; ಕೆರಳಿಸು: ನೆನಪು ಮುಳ್ಳಾಡಿಸಲು ಎದೆಯ ದನಿ ... ತಬಕದೊಳು ಮೈಮರೆವಿಸಲಿ ಭಾವ ತೋಡಲಾರೆ (ಜೀವಲಿ. ೬೦-೧೧). ಮುಳ್ಳಿನ ಮೇಲಿರು = (ಆಲಂ) ಮುಳ್ಳಿನ ಮೇಲಿದ್ದಂತೆ ಚಡಪಡಿಸು; ಬಲು ಆತಂಕಗೊಂಡಿರು: ದೂರದ ಶಾಲೆಯಿಂದ ಮಕ್ಕಳು ಮನೆಗೆ ಬರುವವರೆಗೂ ಆಕೆ ಮುಳ್ಳಿನ ಮೇಲಿದ್ದರು (ರೂಢಿ). ಮುಳ್ಳುಹಾಕಿಸು = ಬಟ್ಟೆ ಒಗೆಯುವ ಕಲ್ಲು, ಒರಳುಕಲ್ಲು, ಬೀಸುವ ಕಲ್ಲು ಮುಂತಾದುವುಗಳನ್ನು ಉಳಿಯಿಂದ ಹೊಡೆಯಿಸಿ ಒರಟಾಗಿಸು: ಬೀಸುವ ಕಲ್ಲು ತುಂಬಾ ನುಣುಪಾಗಿಬಿಟ್ಟಿದೆ, ಮುಳ್ಳು ಹಾಕಿಸಬೇಕು (ರೂಢಿ). ಮುಳ್ಳೇಳು = (ಆಲಂ) ರೋಮಾಂಚನಗೊಳ್ಳು; ಪುಲಕಿತಗೊಳ್ಳು; ನವಿರೇಳು: ಅವನ್ನು ನೆನೆದರೆ ಈಗಲೂ ನನ್ನ ಮೈ ಮುಳ್ಳೇಳುತ್ತದೆ (ಹಳ್ಳಹಾ. ೦೦೩); ಕೈಯೆತ್ತಿದಾಗ ಮಾಧವನ ಭುಜಕ್ಕೆ ಸೋಕಲು ಅವನಿಗೆ ಮೈಮೇಲೆ ಮುಳ್ಳೆದ್ದಿತು (ಶಿರಾಕ. ೫೮).

[ದೇ.॥ ತಮಿ. ಮಲ. ಕೋತ. ತೊದ. ಮುಳ್; ತುಳು. ಮುಳ್ಳು; ಕೊಡ. ಮುಳ್ಳೀ; ತೆಲು. ಮುಲು, ಮುಲ್ಲು; ಕುವಿ. ಮುಲ್ಲು]

**ಮುಳಕ** (ನಾ). (ಕರಾ) ಹಲಸಿನ ತೊಳೆ, ನೆನೆಸಿದ ಅಕ್ಕಿ ಮುಂತಾದುವನ್ನು ತಿರುವಿ, ಬೋಂಡದಂತೆ ತುಪ್ಪದಲ್ಲಿ ಕರಿದು ಮಾಡುವ ಒಂದು ಬಗೆಯ ತಿಂಡಿ: ಮೇಳದಲ್ಲೊಂದು ಪಾರ್ಟಿ ಸಿಕ್ಕಿದ ಮೇಲೆ ಬೊಜ್ಜದ ಊಟ, ಬೊಜ್ಜದ ಪಾಯಸ, ಹಲಸಿನ ಹಣ್ಣಿನ ಮುಳಕಕ್ಕೆಂದು ಬದುಕುವ ಬ್ರಾಹ್ಮಣರ ಕೊಂಪೆಯಿಂದ ಪಾರಾಗಬಹುದು (ಸಂಸ್ಕಾರ. ೩೯).

[ ? ]

**ಮುಳಗಳ್ಳಿ** 'ಮುಳುಗಳ್ಳಿ' ನೋ.

**ಮುಳಲು** (ನಾ). ಒಂದು ಬಗೆಯ ಸಸ್ಯ: "ಕ್ರಮುಕಪಾದಿ__ಮುಳಲು, ದಸಿ" (ಚಿತಧಿ. ೨೮). [?./ತಮಿ. ಮುಟಲ್ = ಗಜ್ಜುಗದ ಜಾತಿಯ ಗಿಡ]

**ಮುಳವು** 'ಮುಳುವು' ನೋ.

**ಮುಳಿ$_1$** (ಕ್ರಿ). ೧. ಕೆರಳು; ವ್ಯಗ್ರವಾಗು; ಕೋಪಗೊಳ್ಳು: "ಮುಳಿ– ಕೋಪೇ" (ಶಮ್ರ); ಸಿಮುಗೆಲ್ಲರಾಳು ಕುಜಿಕಾಲರಮನಾಳಿಯರ್ ರಣಾಲಿ ಅರಸರಲ್ಲಿನ್ನುಳಿದು ಬನ್ನ (ಎಕ. XVI, ಕುಮುಕೂ. ೯೭-೩; ಕು. 780); ತಣಿಯೆಯುಣಲಿಕ್ಕಿದನೆಂದೊಡೆ ಮುಳಿದು ಸಾಯೆ ಬಡಿದು ಮನೆಯಿಂ ಪೆಂಡತಿಯುನಟ್ಟಿ ಕಳೆದೊಡೆ (ವಡ್ಡಾರಾ. ೬೬-೧೫); ಮುಳಿದಿರೆ ಪಾದಪಂಕಜ ನುನಾಂತಲೆಯೊಳ್ ನಿಲೆ ಶಾಳ್ದ ನಲ್ಲಳೇ ತಿಳಿಯೆನೆ (ಆದಿಪು. ೯-೧೧); ವಿಧಿ ಮುಳಿಯುವಕಟಾ ಪಾಟಿಗಳಿಗೆ (ಕೊರಾ. ೨-೫-೨೩). ೨. ವಿರೋಧವಾಗು; ವಿಪರೀತವಾಗು: ಇನಿಯುವು ಮೊದಲೊಳ್ ನಂಜಿನ ಪನಿವೊಲ್ ಬಟಿಕೆಯ್ದಿ ಮುಳಿವು ಕೊಂದಿಕ್ಕುವುವಿಂತೆನೆಯೆನೆ ವಿಷಯವಿಷಾಸ್ವಾದನದೊಳ್ ಲಂಪಟರಿದೇಕೆಯೋ ನರಪಶುಗಳ್ (ಆದಿಪು. ೦೯-೦೨೫).

ಮುಳಿವರ್ = ಹಗೆಗಳು; ಶತ್ರುಗಳು: ಮುಳಿವರನಿಕ್ಕುವೆವೆಂದು ಪ್ಮುಳಿಸಿದರಿಬಿಯಲ್ಕೆ ನಕುಲಸಹದೇವರ್ಕಳ್ (ಗದಾಯು. ೬-೨೮); ಮುಳಿದರಂ ಜಂಕಿಸಿದವು ಬಿಡದಾರ್ದು ಕಾವನೆಚ್ಚಲರ್ಗಣೆಗಳ್ (ಶಬ್ದಮ. ೩೦೦). ಮುಳಿವರ ಭೀಮ = ಕೆರಳಿದವರಿಗೆ ಭೀಮನಂತಿರುವವನು; ಒಂದು ಬಿರುದು: ಕಾಯ್ದುರ ಭೀಮಂ ದುರದೆಡೆ ರಾಮಂ ಮುಳಿವರ ಭೀಮಂ (ಪ್ಕಲಂ. ೦೯೨೮, ೩೦-೦೫; 1056). ಮುಳಿವರಾದಿತ್ಯ = ಕೆರಳಿದವರಿಗೆ ತಾಪವನ್ನುಂಟುಮಾಡುವವನು; ಒಂದು ಬಿರುದು: ನುಡಿದನ್ತ ಗಣ್ಡಂ ಮುಳಿವರಾದಿತ್ಯಂ ಮನ್ನೆಯಮಲ್ಲಭಂ (ಶಾಇ. XX, ೨೦-೬೯; 1019). 'ಮುನಿ$_1$' ಪರಾ.

[ದೇ.॥ ತಮಿ. ಮುಳಿ = ಕುದಿ, ಸುಡು, ಒಣಗು, ಹಾಳಾಗು]

**ಮುಳಿ$_2$** (ನಾ). ಸಿಟ್ಟು; ಕೋಪ: 'ಮುಳಿಕೆಯ್', 'ಮುಳಿಯಿಸು' ಪರಾ. [<ಮುಳಿ$_1$./ಮಲ. ಮುಟಿ]

**ಮುಳಿ$_3$** (ನಾ). ಮನೆಯ ಛಾವಣಿಗೆ ಹೊದೆಸಲು ಬಳಸುವ ಒಂದು ಬಗೆಯ ಹುಲ್ಲು: ಈ ಸಾರಿ ಮುಳಿಹುಲ್ಲಿಗೂ ದರ ಏರಲಿಕ್ಕಿದೆ (ಮುಗಿಯು. ೩೬೩); ಗುಡ್ಡೆಯಲ್ಲಿ ಮುಳಿಹುಲ್ಲು ಹಸನಾಗಿ ಸೊಂಟದಷ್ಟು ಎತ್ತರ ಬೆಳೆಯುವ ಸಮಯ ಅದು (ರಕ್ತರೂ. ೩೯). [←ತುಳು. ಮುಳಿ, ಮುಲಿ]

**ಮುಳಿಕೆಯ್** (ಕ್ರಿ). ಕೋಪಗೊಳ್ಳು; ಸಿಟ್ಟಾಗು; ಕೆರಳು: ಎನ್ನ ಮನಕೊಡಂಬಡನೊಡಂಬಡುವೈ ಪಟಿಗೆಯ್ದುದೇವಮಂ ನೀನ್ನೆಗಟ್ಟಿದಲೆಂದು ಮುಳಿಕೆಯ್ದುಗಿದೊಪ್ಪದು ಸಮ್ಮತಾಪಸಾನನ್ನಳಿನಾನನೇ ಮುಳಿದದಂ ಬಿಸುಡೈ (ಶಾಂತಿಪು. ೬-೬೯). [ಮುಳಿ$_2$ + ಕೆಯ್$_1$]

**ಮುಳಿಯಿಸು** (ಕ್ರಿ). ಕೋಪ ಬರುವಂತೆ ಮಾಡು; ಸಿಟ್ಟಿಗೆಬ್ಬಿಸು; ಕೆರಳಿಸು: "ಮುಳಿಯಿಸು – ಕೋಪೇ" (ಶಮರಾ); ನಿಮ್ಮಂ ಮುಳಿಯಿಸಿದ ಸುರಾಸುರರುಮನೊಳರೆನಿಸೆಂ ಕರ್ಣನೆಂಬನೆನಗೇವಿರಿಯಂ (ಶಂಕಶಾ. ೦೨-೧೩೦); ಸಿಂಹಮಂ ಮುಳಿಯಿಸಿ ಪಲ್ಗಳಂ ಪಿಡಿದು ಕಿಟ್ಟುವರಾರ್ (ಗದಾಯು. ೯-೨೦); ಮುಳಿಯಿಸದೆನ್ನಂ ಮಗುಟ್ದಂ ಬಳೆದೊಟ್ಟೊಡೆ ಗೆಲ್ವೆಯುಂಬುದೊಟ್ಟೊಡೆ ಗೆಲ್ಲರ್ (ಕಾವ್ಯಾವ. ೬೬೯). [ಮುಳಿ$_2$ + – ಇಸು$_3$]

**ಮುಳಿವು** 'ಮುಳುವು' ನೋ.

**ಮುಳಿಸಾಱು** (ಕ್ರಿ). ಕೋಪವು ಶಾಂತವಾಗು; ಸಿಟ್ಟು ಇಳಿ: ಬಿರಬಿಯ ಬಿಟ್ಟು[ವೆ]ು ಮಿದಿದೊಡಲ್ಲದಣಾ ಮುಳಿಸಾಱದು (ಶಂಕರಾ. ೨-೦೩).

[ಮುಳಿಸು + ಆಱು$_1$]

**ಮುಳಿಸು** (ನಾ). ಕೋಪ; ಸಿಟ್ಟು; ಮುನಿಸು: "ಕಿಸುಗಣ್ಣು ... ಮುಳಿಸು, ಮುನಿಸು, ಒರಸೊರಸು, ಸೆಣಸು – ಈ ೮ ಕೋಪಂ" (ಕರಶಾ. ೬೫-೯೯೬); ಮೆಲ್ಲನೆಸಪ ಮಲಯಾನಿಲನುಂ ಮುಳಿಸಂ ಕಟಲ್ಚಿ ಕಳೆದುವು ... ಕಾಮಿಗಳಾ (ಕಪಿಂ. ೨-೬೦); ಸಿಗ್ಗನಾಟ್ ಮುಳಿಸಂ ನೀನೆಂದಿಂಗಂ ಬಿಸುಡು (ಆದಿಪು. ೦೯-೦೨೮); ಮುನಿ ... ಮುನ್ನಿನ ಪಗೆಯಂ ಕುಂಡಲಸಂ ನೆನೆದವಧಿಯಿನಳಪಿಗಟಿದ ಮುಳಿಸಂ ತಳೆದು (ಶಂಶಾಮ. ೯-೦೯); ಪೊಲ್ಲದರೊಲುಮೆಯೊಳ್ಳಿದರ ಮುಳಿಸು ನಿಲಬಲ್ಲುದೆ (ಕರಾಗಾಂ. ೦-೫೫). 'ಮುನಿಸು$_2$' ಪರಾ. [ಮುಳಿ$_1$ + – ಸು$_3$]

**ಮುಳಿಸುಗ** (ನಾ). ಕೋಪಿಸಿಕೊಳ್ಳುವವನು; "ಭಾಮುಕಃ, ಭಾಮಾನಃ– ಈ ೨ ಮುಳಿಸುಗಂ" (ಕಾಕಕ್ಕ. ೦೦೮). [ಮುಳಿಸು + – ಗ$_2$]

**ಮುಳು** 'ಮುಳ್' ನೋ.

**ಮುಳುಂಕಿಸು** 'ಮುಟುಂಗಿಸು' ನೋ.

**ಮುಳುಂಕು** 'ಮುಟುಂಗು' ನೋ.

**ಮುಳುಂಗಿಸು** 'ಮುಱುಂಗಿಸು' ನೋ.

**ಮುಳುಂಗು** 'ಮುಱುಂಗು' ನೋ.

**ಮುಳುಕ₁** 'ಮುಱುಕ' ನೋ.

**ಮುಳುಕ₂** (ನಾ). ಒಂದು ಬಗೆಯ ಸಸ್ಯ : ಮುಳುಕದ ಹಗಿನು. ಇಂಗುಳ ಮಂ ನೀರಲ್ಲಿ ಅರೆದು ನಂಗೆ ಮಾಱುದಿನಕ್ಕೆ ಬಂಜೆಗೆ ಗರ್ಭಮಕ್ಕುಂ (ಅಶ್ವ.ಶಾ. ೯೦). [←ತೆಲು. ಮುಲಕ, ಮುನಗ]

**ಮುಳುಕಿಸು** 'ಮುಱುಂಗಿಸು' ನೋ.

**ಮುಳುಕು₁** 'ಮುಱುಂಗು' ನೋ.

**ಮುಳುಕು₂** 'ಮುಱುಕು₂' ನೋ.

**ಮುಳುಕುನೀರ್** (ನಾ). ಮುಳುಗಿಸುವಷ್ಟು ನೀರು : ತನ್ನ ಮಾಯಾ ಲೇಶದಿಂ ಮೂಱುಂ ಜಗಮಂ ಮೋಸಂಗೊಳಿಪ ಮಾಕಂದಂಗೆ ಮೋಹ ರಸಮಂ ಮುಳುಕುನೀರೆನಿಪ ಮುಗುಳ್ನಗೆಯುಂ . . . ತಣಿಯದ ನೋಟಂ ಗಳುಂ ಪೆಣ್ಮಾಸಿದ ಸಾಜದಿಂದಮೆ ಆದೊಡಂ (ಕಕಪು. ೦೦೩-೦೭).

[ಮುಳುಕು₁ (<ಮುಱುಂಗು) + ನೀರ್]

**ಮುಳುಕೊಗರಿ**, ಮುಳ್ಳುಕೊಗರಿ (ನಾ). ಒಂದು ಬಗೆಯ ಗಿಡ ಮತ್ತು ಅದರ ಕಾಯಿ : ಮುಳುಕೊಗರಿಕಾಯಿ (ಪಾಚಕಾಯಿರಿ. ಗಜ ಪಿಂಪಳಿ) (ಮುಂಡಿಪ್ಪ. ೦೨೯). **ಮುಳ್ಳುಕೊಗರಿ** : ಪಾಚುಕಾಯಿರಿ (ನಸು ಗುನ್ನಕಾಯಿ, ಮುಳ್ಳುಕೊಗರಿಕಾಯಿ) (ಮುಂಡಿಪ್ಪ. ೦೩೦).

[ಮುಳು (<ಮುಳ್) + ಕೊಗರಿ]

**ಮುಳುಗ** 'ಮುಱುಕ' ನೋ.

**ಮುಳುಗಡೆ** (ನಾ). ನೀರಿನಲ್ಲಿ ಅಡಗಿಹೋಗುವುದು.— ಮುಳುಗಿ ಹೋಗುವುದು : ಅನೇಕ ಎಕರೆಗಳ ಅರಣ್ಯಪ್ರದೇಶವನ್ನೂ ಬಂಜರು ಜಮೀನನ್ನೂ ತಾತಾ ಅವರಿಗೆ ವಶಪಡಿಸಬೇಕಾಗಿದ್ದಿತು. ಅದರ ಪ್ರಯುಕ್ತ ವಾಗಿ ಕೆಲವು ವಾಸಸ್ಥಳಗಳು ನೀರಿನಲ್ಲಿ ಮುಳುಗಡೆಯಾಗುವ ಸಂಭವ ವಿದ್ದಿತು (ಜಾಗೃತಿ. ೭೮). [<ಮುಳುಗು₁ + ಕಡೆ₂]

**ಮುಳುಗತ್ತಿ** (ನಾ). ಮುಳ್ಳನ್ನು ಸವರಲು ಬಳಸುವ ಕತ್ತಿ : ಕುಱುಬ ನುಱ್ ಮುಳುಗತ್ತಿಯಿಂ ತಿಱಿಯುಱಮೆಗಳು ಬರೆಗುಡುಹುವುಡಗಿದ ಕುಱಿ ದೊವಲ ತಿದಿಯಸೆಯೆ . . . ನೋಡುತ್ತ (ಬಸವ. ೨೦-೬೨); ಆ ಕುರುಬ ಮುಳುಗತ್ತಿಯಿಂದ ಮಾದರಸ ಕುಳಿತಿದ್ದ ಬೊಬ್ಬುಲಿಮರದ ಕಾಯಿಸೊಪ್ಪು ಗಳನ್ನೇ ಕಡಿಕಡಿದು ಕುರಿಗಳಿಗೆ ಮೆಯ್ಯಿಸತೊಡಗುತ್ತಾನೆ (ಜಕ. ೨೬೬).

[ಮುಳು (<ಮುಳ್) + ಕತ್ತಿ./ತೆಲು. ಮುಲುಕತ್ತಿ]

**ಮುಳುಗಳ್ಳಿ**, ಮುಳಗಳ್ಳಿ, ಮುಳ್ಳುಗಳ್ಳಿ (ನಾ). ಮುಳ್ಳುಗಳಿರುವ ಒಂದು ಬಗೆಯ ಕಳ್ಳಿಗಿಡ : ಕಳ್ಳಿಯೊಳು ಹಾಲು ಮುಳುಗಳ್ಳಿಯೊಳು ಹೆಚ್ಚೇನು ಎಳ್ಳಿನೊಳಗೆಣ್ಣೆ ಹನಿದಿರಲು ಶಿವಲೀಲೆ ಸುಳ್ಳೆನ್ನಬಹುದೆ (ಸರ್ವಜ್ಞ. ೯೯೯). **ಮುಳಗಳ್ಳಿ** : ಬದರಕ್ಕಿ, ಲೋಳಸರ, ಮುಳಗಳ್ಳಿ ಮುಂತಾ ದವುಗಳು ಸುಖದ ಕಾಲದಲ್ಲಿ ನಿರುಪಯುಕ್ತಪದಾರ್ಥಗಳೆಂದು ಎಣಿಸಲ್ಪಡು ತ್ತವೆ (ಮುಂಡಿಯ. ೩-೨೩೯); ಬರಗಾಲದ ಆಹಾರ . . . ೧. ಬಾಳೇಕಾಯಿ. ಹೂವು, ೨. ತೊಂಡೇಕಾಯಿ. ೩. ಮುಳಗಳ್ಳೀಕಾಯಿ (ಕರ್ನಾಗೆ. ಶಂ. ೦೧). **ಮುಳ್ಳುಗಳ್ಳಿ** : ಈ ಬೈಲುಸೀಮೆಯ ಅಡವಿಯಲ್ಲಿ ಸಾಧಾರಣವಾಗಿ ಎಲ್ಲ ಕಡೆಯಲ್ಲಿಯೂ ಜಾಲಿ, ಈಚಲು, ಕಳ್ಳಿ, ಮುಳ್ಳುಗಳ್ಳಿ . . . ಬಣಮರಿ ಮುಂತಾದವುಗಳು ದೃಷ್ಟಿಗೆ ಬೀಳುತ್ತವೆ (ಕೆಜಿ. ೪೦).

[ಮುಳು (<ಮುಳ್) + ಕಳ್ಳಿ₂]

**ಮುಳುಗಿಡು** 'ಮುಳ್ಗಿಡು' ನೋ.

**ಮುಳುಗಿಸು** 'ಮುಱುಂಗಿಸು' ನೋ.

**ಮುಳುಗು₁** 'ಮುಱುಂಗು' ನೋ.

**ಮುಳುಗು₂** 'ಮುಱುಕು₂' ನೋ.

**ಮುಳುಗುಂದ** 'ಮುಳ್ಗುಂದ' ನೋ.

**ಮುಳುಗುಮಿಾಹ** (ನಾ). ನೀರಿನಲ್ಲಿ ತಲೆಯನ್ನು ಮುಳುಗಿಸಿ ಮಾಡುವ ಸ್ನಾನ : ಖಗಗಳಿಗೆ ಸುಖದಮಾದುದು ನದಿಯ ಮುಳುಗುಮಿಾಹಂ (ಶ್ರೀರಾಮ. ೨೨೬-೨೨). [ಮುಳುಗು₁ (<ಮುಱುಂಗು) + ಮಿಾಹ]

**ಮುಳುಗುಹಕ್ಕಿ** (ನಾ). ನೀರಿನ ಅಡಿಯಲ್ಲಿ ತಲೆಯನ್ನು ಮುಳುಗಿಸಿ ಮಿಾನು ಮುಂತಾದುವನ್ನು ಹಿಡಿಯುವ ಒಂದು ಬಗೆಯ ಪಕ್ಷಿ : ಮುಳುಗುಹಕ್ಕಿ, ಮುಳುಕ (Diver. ೩೦೯೩).

[ಮುಳುಗು₁ (<ಮುಱುಂಗು) + ಹಕ್ಕಿ (< ಪಕ್ಕಿ)]

**ಮುಳುಗೆದಱು** (ಕ್ರಿ). ಮುಳ್ಳುಗಳನ್ನು ಚೆದರಿಸು.— ಹರಡು : ತುಱು ಗಿದಂಬಿನಲೆಯ್ಯುವ್ಯಗ ವ್ಯೆಯುಱುಬೆಯಲಿ ಮುಳುಗೆದಱುವಂದದಲುಱುಬಿ [ಪಾಠಾಂ. ಮುಳುಗೈದಾಡುವಂತಿರೆವುಱುಬಿ] ರಘಾಡಿಸಿ ರಘುಡಿತೆಯಲಿ ಮೇಲ್ವಾಯ್ದು (ಕೊರಡಾ. ೩-೦೦-೦೮).

[ಮುಳು (< ಮುಳ್) + ಕೆದಱು₁ (< ಕೆದಱ್₁)]

**ಮುಳುಗೊಗ್ಗಿ**, ಮುಳ್ಳುಕೊಗ್ಗಿ, ಮುಳ್ಳುಕೊಗ್ಗೆ, ಮುಳ್ಳುಗೊಗ್ಗಿ (ನಾ). ಒಂದು ಬಗೆಯ ಔಷಧೀಸಸ್ಯ : ನೆಲ್ಲಿ . . . ಮುಳು ಗೊಗ್ಗಿಯೆಂಬಿನಿತ್ತಱ ಪುಡಿಯಂ ಚೆಲ್ಲನೆ ಮಾಗಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ (ಜಪಾದ. ೭-೩೩). **ಮುಳ್ಳು ಕೊಗ್ಗಿ** : "ಕಂಟಪುಂಖಃ — ಮುಳ್ಳುಕೊಗ್ಗಿ" (೬ಶಧಿ. ೨೩) ; ಮುಳ್ಳುಕೊಗ್ಗಿಯ ಬೇರಿನ ಕಷಾಯವ ಕೊಡಿಸಲು ಅಂಗುರವಿಷ ಹರವಹುದು (ವೈದ್ಯಶಾ. II, ೨೨೯). **ಮುಳ್ಳುಕೊಗ್ಗೆ** : "ಕಂಟಾಲುಕ— ಜಮಕುಸವುಗ್ರಾರೆ, ಮುಳ್ಳುಕೊಗ್ಗೆ" (೬ಶಧಿ. ೨೩); ಬೆಲ್ಲವತ್ತದ ಬೇರು, ಮುಳ್ಳು ಕೊಗ್ಗೆ ಬೇರು, ಈ ಎರಡು ಬಗೆ ಬೇರು ಪ್ರತ್ಯೇಕ ಮೂವತ್ತೆರಡು ಪಲಗಳ ನಾಗುಳ ನೀರಲ್ಲಿ ಕಷಾಯವೆತ್ತಿ (ವೈದ್ಯಶಾ. 1, ೪೪೬). **ಮುಳ್ಳುಗೊಗ್ಗಿ** : "ಕಾರುನೀಲಿ, ಮುಳ್ಳುಗೊಗ್ಗಿ, ಗೊಗ್ಗಿ" (ಶಬ್ದಶಿ. ೭೯).

[ಮುಳು (< ಮುಳ್) + ಕೊಗ್ಗಿ₁]

**ಮುಳುಗೋಲು**, ಮುಳ್ಳುಕೋಲು, ಮುಳ್ಳುಗೋಲು (ನಾ). ೧. ದನ, ಕರು, ಕುದುರೆ ಮುಂತಾದುವುಗಳನ್ನು ಚೋದಿಸಲು ಬಳಸುವ ಚೂಪಾದ ಕೋಲು ; ತಿವಿಗೋಲು : ಬಲವುಳ್ಳೆರಡೆತ್ತುಗಳಂ . . . ಮುಳುಗೋಲಂ ಸಂಪಾದಿಸಿ (ಕಲ್ಪಸ. ೩-೨-೩) ; ದೊರೆ ಮಾತಿನ ಮುಳು ಗೋಲಿಂದ ತಿವಿದಾಗ ಮಂತ್ರಿ ಸ್ಮರಣೆ ಕಳೆದುಕೊಳ್ಳದೆ . . . ಮಾತು ಕೊಡುತ್ತಾನೆ (ಸಂಕ್ರಾಂತಿ. ೮೩). **ಮುಳ್ಳುಕೋಲು** : ೧. ದೇವಕೀನಂದ ನನು . . .ರಥಾಶ್ವಗಳ ಹಗ್ಗಗಳನ್ನು ಬಿಟ್ಟು ಹಸ್ತಕಮಲಗಳಿಂದ ಮುಳ್ಳು ಕೋಲನ್ನು ಹಿಡಿದು . . . ಭೀಷ್ಮನ ಮೇಲೆ ನಡೆದನು (ಭೀಷ್ಮಪರ್ವ. ೧೬೬). **ಮುಳ್ಳುಗೋಲು** : ೧. "ಪ್ರಾಜನಂ, ತೋದನಂ, ತೋತ್ರಂ—೩ ತಿವಿ ಗೋಲು, ಮುಳ್ಳುಗೋಲು" (ಸಿದ್ಧಾಂತಿ. ೨೬೬). ೨. ಒಂದು ಬಗೆಯ ಈಟಿ : "ಶಲ್ಯಂ, ಶಂಕುಃ — ೨ ಸೆಲ್ಲೆಹದ ಕೋಲು, ತಿವಿಗೋಲು, ಮುಳ್ಳುಗೋಲು" (ಸಿದ್ಧಾಂತಿ. ೨೬೬).

[ಮುಳು (<ಮುಳ್) + ಕೋಲು₁ (< ಕೋಲ್₁)]

**ಮುಳುದೊಡಕು** (ನಾ). ಗೋಜುಗೋಜಾಗಿರುವ ಮುಳ್ಳು : ಮುಳು ದೊಡಕಿನೊಳು ಕೂದಲೊಂದೇ ಸಿಲುಕಿ ನಿಂದವು ಚಮರಿಮೃಗ (ಕುಮಾವ್ಯಾ. ೦೩-೨೯). [ಮುಳು (<ಮುಳ್) + ತೊಡಕು₃ (<ತೊಡಂಕು₃)]

**ಮುಳುಮುತ್ತ** 'ಮುಳ್ಮುಟ್ಟುಗ' ನೋ.

**ಮುಳುಮುತ್ತುಗ** 'ಮುಳ್ಮುಟ್ಟುಗ' ನೋ.

**ಮುಳುಮುಳು**(ನಾ). (ಸದ್ದಿಲ್ಲದೆ ಅಳುವುದನ್ನು ಸೂಚಿಸುವ) ಒಂದು ಅನುಕರಣಶಬ್ದ.

**ಮುಳುಮುಳು ಅಳು** = ಸದ್ದು ಮಾಡದೆ ಒಂದೇ ಸಮನೆ

ಅಳು : ಮುಳುಮುಳು ಅಳುತ್ತಾ ಶೀಲಿ ಅಲ್ಲೇ ಬಿದ್ದುಕೊಂಡಳು (ಕಣ್ಮ.ತ. ೩೦) ; ಸೀತಕ್ಕ ಮುಳುಮುಳು ಅತ್ತಳಂತೆ (ಮೂಕಜ್ಜಿ. ೧೬೬).

**ಮುಳುಮುಋ** 'ಮುಳ್ಮುಋ' ನೋ.

**ಮುಳುಮೆಟ್ಟು** (ನಾ). ಕಾಲಿಗೆ ಮುಳ್ಳು ಚುಚ್ಚದಿರಲು ಹಾಕಿಕೊಳ್ಳುವ ಮೆಟ್ಟು.-ಪಾದರಕ್ಷೆ : ಕಳಕಳವ ಕಣ್ಣಿವೆಗಳ ಮನಗಲಿತನದ ಮುಳು ಮೆಟ್ಟುಗಳ ವೆಗ್ಗಳಿಯುರಿದ್ದುದ್ದು ಭೀಮಸಾತ್ಯಕಿಸೃಂಜಯಾದಿಗಳು (ಕುಮ್ಮಾ.ಕ. ೨೦-೧೯). [ಮುಳು (<ಮುಳ್) + ಮೆಟ್ಟು$_2$]

**ಮುಳುಮೊನೆ** 'ಮುಳ್ಮೊನೆ' ನೋ.

**ಮುಳುಮಸೆ** 'ಮುಳ್ವಸೆ' ನೋ.

**ಮುಳುವು**, ಮುಳವು, ಮುಳಿವು (ನಾ). ೧. ಅಡ್ಡಿ ; ಕಂಟಕ : ವಿಘ್ನ : ನಮ್ಮ ಧರ್ಮ ನಮ್ಮ ಪ್ರಗತಿಗೆ ನೆರವಾಗಬೇಕೇ ಹೊರತು ಮುಳುವಾಗ ಬಾರದು (ಹೇಮುಕೂ. ೧೦೦). ೨. ಕೇಡು ; ನಾಶ : (ಕ). ೩. ಕೇಡಿಗೆ ಕಾರಣವಾದುದು ; ನಾಶಕರವಾದುದು : ನಿನ್ನ ಪಟವಮಾರಿತನವೇ ನಿನಗೆ ಮುಳುವು ಆಯಿತು (ಮುಂಜಾವು. ೬. ೨-೩೦) ; ಆ ಚಂಚಲತೆ ವಿಷ್ಣೂನ ಜೀವನಕ್ಕೆ ಮುಳುವಾಗಬಹುದೆಂದು ಅವನೆಂದೂ ತಿಳಿದಿರಲ್ಲಿಲ್ಲ (ಶರಪಂ. ೧೧೪೩) ; ನನ್ನ ಚೆಲುವೇ ನನಗೆ ಮುಳುವಾಗಿದೆ (ಕಮನ. ೧೨). ೪. (ಕೆಡುಕಿಗೆ) ಕಾರಣ ; ಮೂಲ : ತಾನು ತನ್ನ ಅಣ್ಣನ ಸಾವಿಗೆ ಮುಳುವಾದೆನೇನೊ ಎಂಬ ಎದೆಗುದಿಯು ಬೆನ್ನುಹತ್ತಿ ಅವಳು ಒಳಗೊಳಗೆ ನವೆಯುತ್ತಿದ್ದಳು (ಕಪಕ. ೩೮). ೫. ಹಿಂಸೆಯನ್ನುಂಟು ಮಾಡುವಂತ ಹುದು ; ವೇದನೆಪಡಿಸುವಂತಹದು : ಗಂಡಸರ ಕಾಟದಿಂದಾದ ಅವಳ ಮನಸ್ಸಿನ ನಿರುತ್ಸಾಹ ನೆಕ್ಲಡೋವನ ಮನಸ್ಸಿಗೆ ಮುಳುವಾಗಿತ್ತು (ಪುನರು. ೯೯೬). ೬. ವಿರೋಧಿಸುವ ವ್ಯಕ್ತಿ ; ಎದುರಿಸುವ ವ್ಯಕ್ತಿ : ಈ ಇಲಾಖೆಯೊಳಗೆ ರೂಪಚಂದನಿಗೆ ಅವಳೊಬ್ಬಳು ಮಾತ್ರ ಮುಳುವಾಗಿದ್ದಾಳೆ (ಜಲಪಾ. ೯೫). **ಮುಳವು** : ೨. ಸುಲಭಮಾರ್ಗವ ಬಿಟ್ಟು ವಿಜಯವಿಠಲ ರೇಯ ಕೆಲಕಾಲವು ತಿರುಗಿ ಮುಳವು ಮಾಡಿಕೊಂಡೆ (ಹರಿಕೀ. ೩೦-೨). **ಮುಳಿವು** : ೩. ದ್ವಿಜನಿಗಸಂತುಷ್ಟಿಯಿಂದ ವಿನಾಶವು ನೃಪನಿಗೆ ತುಷ್ಟಿಯೆ ಮುಳಿವು (ಜಂಜಾಶ. ೦೬೩-೨) ; ನನ್ನ ನಾಲಗೆಯೆ ನನಗೆ ಮುಳಿವಾಗಿದೆ (ಶ್ರೀಪುತ್ರ. ೮) ; ಗಂಡಸಿಗೆ ಸಾಲ ಮುಳಿವು, ಹೆಂಗಸಿಗೆ ಹಾದರ ಮುಳಿವು (ಗಾದೆ). 'ಮುಳ್' ಪರಾ.

**ಮುಳುವೇಲಿ**, ಮುಳ್ಳುಬೇಲಿ, ಮುಳ್ಳುವೇಲಿ (ನಾ). ೧. ಮುಳ್ಳು ಪೊದೆಗಳಿಂದ ರಚಿಸಿದ ಬೇಲಿ,—ಆವರಣ : ತವಗ ತಳಿ ಮುಳುವೇಲಿ ಬಾಗಿಲ ಜವಳಿಗದ ಬೀಯುಗದಲಿದ್ದುದು ದಿವಿಜವನವೃದ್ದಂಡಶರ ಪರಿಮಳದ ಪೂರದಲಿ (ಕುಮ್ಮಾ.ಕ. ೦೬-೨೬) ; ಮುಳುವೇಲಿ ಮೇರುವೆ ತಳಿ ಸುರಂಗ ಗಳಿಂದ ಬಳಸಿ ಬಂಧಿಸಲಾ ಪುರವ ಪೊಳಲೊಳಗೆಸೆವ ಜನರು ಭೀತಿಗೊಂಡಾಗ ಕಳವಳಿಸಿದರು (ಕಂಪಿಲ. ೬೩-೩೩). **ಮುಳ್ಳುಬೇಲಿ**: ೧. ಅದಕ್ಕೆ ಮುಳ್ಳು ಬೇಲಿ 'ಕುತ್ತ'ದಿದ್ದರೆ, ಒಳಗೆ ಹಸುರು ಉಳಿಯಲಿಕ್ಕಿಲ್ಲ (ಕುರಿಮ. ೦೦). ೨. (ಅಲಂ) ಅಭಿಪ್ರಾಯಭೇದ ; ಅಂತರ : ಮನಮನಗಳ ಮುಳ್ಳುಬೇಲಿ ಮಮತೆ ದೂರ ತಳ್ಳಿವೆ (ಕಂಜು. ೨೪-೦೧). **ಮುಳ್ಳುವೇಲಿ** : ೨. ಈ ಮಾತು ಪುರುಷಭಾಗ್ಯದ ಮುಳ್ಳುವೇಲಿ. ನೀನು ಒಂದಿಲ್ಲೊಂದು ದಿನ ಕಿತ್ತಿ ಮುಂದೆ ಸಾಗಬೇಕಾಗುವುದು (ಜಡುಂತ. ೭೯).

[ಮುಳು (<ಮುಳ್) + ಬೇಲಿ]

**ಮುಳುಪೊರಜೆ** (ನಾ). ಮುಳ್ಳುಮುಳ್ಳಾಗಿರುವ ಹಗ್ಗ : ಒರಟಾದ ಹಗ್ಗ : ಬಗಿದು ಪೊಪ್ಪುಳಗಳನು ಮೊಸಬಾಚಿಗಳ ಜೋಡಿಸಿ ಕಟ್ಟಿ ಮುಳುವರಜ [ ಪೊರಜೆ ] ಗಳ . . . ನಿಡುರುಳ್ಳಿಗಳ ಸಾಲುಗಳೆಸೆಯ ಸಿಂಗರಿಸಿದರು ಮುಗಜನ (ತಿಪ್ಪಟು ೩-೩೩).

[ಮುಳು (<ಮುಳ್) + ಪೊರಜೆ]

**ಮುಳುಸೌಂತೆ** 'ಮುಳುಸೌತೆ' ನೋ.

**ಮುಳುಸೌತೆ**, ಮುಳುಸೌಂತೆ, ಮುಳ್ಳುಸವುತೆ, ಮುಳ್ಳುಸೌತೆ (ನಾ). ಮುಳ್ಳುಗಳುಳ್ಳ ಒಂದು ಬಗೆಯ ಸೌತೆ : ಅಗಸೆ ಮುಳು ಸೌತೆ ತೊಂಡೆಯು ಪಲವು ಫಲಕದಗಳ ಶಾಖಾವಳಿಯ ಸವಿಯೊಪ್ಪುರಣೆ ಫಲ ಫಲಿಸಲಿಕೆ ಬಡಿಸಿದರು (ಅಪಂಪಾ. ೬-೨೩-೩೯). **ಮುಳುಸೌಂತೆ**: ಕಣ್ಗೊಳಿಸುವ ಮುಳುಸೌನ್ತೆ ಕುಂಬಳ (ಬೊಂಕಶಾ. ೦೯೯೩, ಬಂಗಾರರೆ. ೨೩-೩; 1076). **ಮುಳ್ಳುಸವುತೆ** : (ಕ). **ಮುಳ್ಳುಸೌತೆ** : "ರೋಮಶೀ–ಮುಳ್ಳು ಸೌತೆ" (ಓತಾ. ೦೯೦). [ಮುಳು (<ಮುಳ್) + ಸೌತೆ (<ಸವುತೆ)]

**ಮುಳುಹು**(ನಾ). ೧. ಮೊನೆಗೋಲಿನಿಂದ ಚುಚ್ಚುವಿಕೆ,–ಚೋದಿಸುವಿಕೆ: (ಕ). ೨. ಪ್ರಾಣಿಗಳನ್ನು ಚೋದಿಸಲು ಬಳಸುವ ಚುಚ್ಚು ಗೋಲು,— ಮೊನೆಗೋಲು : "ಪ್ರಾಜನಂ ಮುಳುಹು" (ಮಂಗರಾ. ೦೦೯-೨). [< ಮುಳ್]

**ಮುಳುಹುಗೋಲ್** (ನಾ). = ಮುಳುಹು ೨ : "ಪ್ರತೋದಃ ಪ್ರಾಜನಂ ತೋತ್ರಂ –ಈ ೩ ಮುಳುಹುಗೋಲ್" (ಹರಾಹು. ೯೪-೩೨೩).

[ಮುಳುಹು + ಕೋಲ್$_1$]

**ಮುಳ್ಗಣೆ** (ನಾ). ಮೊನಚಾದ ತುದಿಯುಳ್ಳ ಬಾಣ ; ಹರಿತವಾದ ಸರಳು : ಜಗವ ಸುಂಗಿದ ನಿಜದ ಮೋಹರ ವಿಗಡಸೂರ್ಯನ ಕಿರಣಗಳ ಬಲುಮುಳ್ಗಣೆಗಳು ತಾಗೆ (ರೇಜೀಮ. ೪-೩೯). [ಮುಳ್ + ಕಣೆ$_1$]

**ಮುಳ್ಗತ್ತಿಗೆ** (ನಾ). ಮುಳ್ಳುಮುಳ್ಳಾಗಿರುವ ಕತ್ತಿ: ಕರಾಗ್ರದಲ್ಲಿ ಮುಳ್ಗತ್ತಿಗೆಯುಂ ತಿರಿಯುಂ ಚಟಿಯುಂ ಘಟಮುಂ ಪರಶುವನಿರದಾಂತು (ಕೃಷ್ಣಪ. ೦೦-೩೦). [ಮುಳ್ + ಕತ್ತಿಗೆ]

**ಮುಳ್ಗಿಡು**, ಮುಳುಗಿಡು, ಮುಳ್ಳುಗಿಡ (ನಾ). (ಬೊಬ್ಬುಲಿ, ಜಾಲಿ, ಗುಲಾಬಿ ಮೊದಲಾದ) ಮುಳ್ಳುಗಳಿಂದ ತುಂಬಿರುವ ಗಿಡ : ಪಡೆಯದ ಬೇಟಮುಂ ಪಡೆದುದಂ ಕಿಡಿಸಲ್ ತೊಱೆಯೊಳ್ ಪೊದಟ್ಟ ಮುಳ್ಗಿಡುಗಡಿಸಟ್ಟುಗೆಕ್ಕೊನಲಿಗಂ ದೊರೆಯಪ್ಪರೆ ಕೀಳರಪ್ಪವರ್ (ಚಾಂಕೃ. ೬-೬೦); ಮುಳ್ಗಿಡುಗಳೊಳ್ ತೊಡರ್ದ ಮೆಯ್ಯುವಿರ್ ಪಱಿಗು ಮೆಂದು ಮಿಡುಕಲೊಲ್ಲದಲ್ಲಿಯೆ ನಿಂದು (ಕಂದ್ರಕೃ. ೩-೬೩ ೫). **ಮುಳುಗಿಡು**: ಮುಳುಗಿಡು ತಿವರ್ಗಳ್ ಕಿರಿದಾಗಿಯುಂ (ಕಂಶ್ಯಾ. ೨-೪). **ಮುಳ್ಳುಗಿಡ**: ದುರ್ಲಭಚಂದ್ರನು . . . ಕಾಡುಮುಳ್ಳುಗಿಡಗಳಲ್ಲಿ ನುಸಿದು . . . ಓಡುತ್ತಾನೆ (ದೇಜೀತಾ. ೪೦); ಗಂಡಕವು . . . ಮುಳ್ಳುಗಿಡ, ಕಬ್ಬು, ಧಾನ್ಯ, ತೃಣ ಮುಂತಾದ್ದನ್ನು ತಿನ್ನುತ್ತದೆ (ಕುಂಜಾಮ. ೪-೪೭).

[ ಮುಳ್ + ಗಿಡು ]

**ಮುಳ್ಗು** 'ಮೊಟ್ಗು$_1$' ನೋ.

**ಮುಳ್ಗುಂದ**, ಮುಲುಗುಂದ, ಮುಳುಗುಂದ, ಮುಳ್ಗುಂದು (ನಾ). ಒಂದು ಸ್ಥಳದ ಹೆಸರು ; ☞ ಇದು ಈಗಿನ ಗದಗ್‌ತಾಲ್ಲೂಕಿನಲ್ಲಿದೆ : ಮುಳ್ಗುನ್ದಾಪ್ಯನಗರೇ (ಎಇ. XIII, ೦೯೨-೪; 902) ; ಮುಳ್ಗುಂದ ದೊಳ್ಸನ್ನೆ ಸನ್ಯಸನಕ್ಕೆಯ್ದಿ ನಿವೃತ್ತಿಗೆಯ್ದು . . . ಮುಡಿಪಿ (ಶಾವುಂತ. ೩). **ಮುಲುಗುಂದ** : ಮುಲುಗುಂದೇಂದ್ರ ಕಿಂಮಪ್ಪ ಪುತ್ರ ಆತ್ರೇಯ ಗೋತ್ರಜಃ (ಎಕ. XII, ಕುಣಿಗಲ್ ೦-೨೦೩ ; 1571). **ಮುಳುಗುಂದ** : ಮುಳುಗುನ್ದವಿದ್ಯಾಧರಂ ನಾಮಾದಿಸಮಸ್ತಪ್ರಸಸ್ತಿಸಹಿತಂ ಶ್ರೀಮನ್ಮುಳು ಗುನ್ದಪ(ಂ)ನ್ನೆರಡಱ ಮನ್ನೆಯಂ ( ಕೌಇ. XI-i, ೪೭-೦೦ ; ೯೯೩ ) ; ಮುಳುಗುಂದದೊಳಿರ್ದ ಮಹೋಜ್ಜ್ವಳಧರ್ಮಾಮೃತಮನರ್ತಿಯಿಂದಂ ಭವ್ಯಾವಳಿಗಱುಪಿದಂ (ಧರ್ಮಾಮೃ. ೦೪-೦೬೬). **ಮುಳ್ಗುಂದು** : ಪರನ್ನಿ ಮುಳ್ಗುನ್ದು ಏತೇಷಾಂ ಮಧ್ಯಸ್ಥಿತೇ (ಇಇ. VII, ೨೨೦-೨೯ ; 658); ಮುಳ್ಗುನ್ದುಪನ್ನೆರಡುಮಂ ಮಾಯಿರ್ಮ್ಮನಾಳೆ (ಎಇ. XXVI, ೪-೦೦ ; ೯೦೬).

**ಮುಳುಗುಂದಗೊಂಡ ಗಂಡ** = ಮುಳುಗುಂದಪವೆಬ ಸ್ಥಳವನ್ನು

ಪಶಪಡಿಸಿಕೊಂಡ ವೀರ; ಒಂದು ಬಿರುದು : ಮುಳುಗುಂದಗೊಂಡ ಗಂಡ ವೀರಬಲ್ಲಾಳ ಪೃಥ್ವೀರಾಜ್ಯಂಗೆಯ್ಯುತಮಿರೆ (ಎಕ. XVI, ಶಿಕಾ. ೬೯-೨೩ : 1177). [ಮುಳ್ + ಕುಂದ$_3$]

**ಮುಳ್ಗುಂದಸಿಂದ** (ನಾ). ಒಂದು ವಂಶದ ಹೆಸರು : ಸ್ವಸ್ತಿಸಮಧಿಗತ ಪಂಚಮಹಾಶಬ್ದ ಮಹಾಸಾಮಂತಮುಳ್ಗುಂದಸಿಂದ ಶ್ರೀಮತ್‌ಜಾತರಸರ್ ಕದಂಬಳಿಗೆಸಾಯಿರಮುಮಂ ಉತ್ತರೋತ್ತರವಾಗೆ ಆಳುತ್ತಿರೆ (ಎಕ. XI. ದಾವ. ೦೦೯-೦೦; ೯೯೭). [ಮುಳ್ಗುಂದ + ಸಿಂದ$_1$]

**ಮುಳ್ಗುಂದು** 'ಮುಳ್ಗುಂದ' ನೋ.

**ಮುಳ್ತುಗ** 'ಮುಳ್ಮುಟ್ಟುಗ' ನೋ.

**ಮುಳ್ಪಂದಿ, ಮುಳ್ಳುಪಂದಿ, ಮುಳ್ಳುಹಂದಿ** (ನಾ). ಮೈಮೇಲೆ ಮುಳ್ಳಿನಂತೆ ಚೂಪಾದ ಗರಿಗಳುಳ್ಳ ಒಂದು ಬಗೆಯ ಕಾಡುಹಂದಿ : ಪುಳಿಂದರ್ . . . ಮುಳ್ಪಂದಿ ಪುಲ್ಲೆ ಕರಡಿಗಳಂ . . . ಖಡ್ಗಿಗಳನುಚ್ ಪಿಡಿದರ್ (ಪ್ರಭು.ಕ. ೯-೩೯). **ಮುಳ್ಳುಪಂದಿ :** "ಈಹಾಮೃಗ – ಮುಳ್ಳುಪಂದಿ" (ಚಿತ್ರ. ೦೩). **ಮುಳ್ಳುಹಂದಿ :** ಶಲಲೀ . . . ಮುಳ್ಳು ಹಂದಿಯ ಕೂದಲಿಗೆ ಹೆಸರು (ಸಿದ್ಧಾಂತ. ೦೩೯) : ಆ ಭೋಜಪತಿಯು ಮುಳ್ಳುಹಂದಿಯು ಹಾಗೆ ಶರಪೂರಿತಶರೀರನಾಗಿ ರಥದಿಂದ ಧುಮಿಕಿ ಶಕುನಿಯ ರಥಕ್ಕೆ ಹೋದನು (ಕೃಪಾರೀ. ೦೨೬).

[ಮುಳ್ + ಪಂದಿ. / ತಮಿ. ಮುಳ್ಳುಪ್ಪನ್ನಿ]

**ಮುಳ್ಪು** (ನಾ). ೧. ಕೆಂಪುಬಣ್ಣ; ಅರುಣವರ್ಣ : ಕೊಸಗಿನ ತುಱುಂಬು ಮುಳ್ಪಿನ ವಸಂ ಕುಂಕುಮನವಾಂಗರಾಗಂ ಪರಿರಂಜಿಸಿ ರಾಗದಿಂದಮುತ್ಪಾದಿಸಿದನಜಂ ಭುವನಜನಮನೆನಿಸಿದುದು ಜನಂ (ಶಾಂತಿ. ೬-೦೯೩). ೨. ಕೆಂಪುಬಣ್ಣದ ಬಟ್ಟೆ; ರಕ್ತವರ್ಣದ ವಸ್ತ್ರ : ತಳ್ತೊಯ್ಯನೆ ಸಂಜೆಗೆಂಪಿನ ತಳ್ಪಮರ್ದಿರೆ ಪೊರೆಯನೆತ್ತಿ ಪೊಲಿಸಿದ ತೆಜದಿಂ ಮುಳ್ಪಿನ ಪೊಸಟೊಪ್ಪರಮಿನಕಳ್ಪಂಗಾ ಜೋಗಿಗೆಸೆದುದಸದಳಮಾಗಲ್ (ಲೀಲಾ. ೯-೭೩); ಪೂತಲವಕ್ಕೆ ಪೌರವನಭೂರುಹಮೊಪ್ಪುವ ಮುಳ್ಪಿಗುಚ್ಛಳತ್ಕೇತನ ಚೀನಚೀಳವರುಣೋಪಲಭಿತ್ತಿಗೆ ಪೊನ್ನ ಕೋಂಟೆ . . . ದೊರೆಯಾಗಿ ತೋಱದತ್ತಾತನೋಳಾಂತು ಪೊಣ್ಮಿದಪ ಬೇಚರಸೇನೆಯ ರಕ್ತಸೇಕದಿಂ (ಶಾಂತೀಶ. ೬-೩೬).

**ಮುಳ್ಪೊಗು** (ಕ್ರಿ). ಮುಳ್ಳು ನಾಟು, – ಚುಚ್ಚು : ಮುಳ್ಪೊಕ್ಕವನಂತೆ ಕುಸಿಯುತ್ತುಂ (ರಾಜಶೇಖ. ೦-೦೯೯). [ಮುಳ್ + ಪೊಗು]

**ಮುಳ್ಮರ, ಮುಳ್ಳುಮರ** (ನಾ). ಮುಳ್ಳುಗಳಿರುವ ಮರ : ಮುಳ್ಮರದ ಕೆಟಗಿರ್ದ ಲತೆಯಂತೋಸರಿಸುತ್ತುಂ (ರಾಜಶೇಖ. ೩-೯೬); ಮುಳ್ಮರದ ಕೆಲದ ಮಾಲತಿಯೊಳ್ಪೋರ್ಬಿನ ಕೆಯ್ಕೆ ರತ್ನದೊಳ್ಸಮನೆನಿಸಿರ್ದಳ್ . . . ಶಬರಿ ಶಬರನ ಕೆಲದೊಳ್ (ಶಬರಶಂ. ೦೨-೬೭). **ಮುಳ್ಳುಮರ :** ಮುಳ್ಳುಮರದ ಬೇರೆಡಹುಗಲ್ಲುಗಳಿಂದ ನಿಲ್ಲದೊಪ್ಪಿದುದು ಕಾಂತಾರ (ಕಂಪ. ೦೬-೯೩). [ಮುಳ್ + ಮರ$_1$]

**ಮುಳ್ಮುಡಿ** (ನಾ). ಮುಳ್ಳುಗಳಿಂದ ಮಾಡಿದ ಕಿರೀಟ : ಮುಳ್ಮುಡಿಯ ಕ್ರಿಸ್ತಮೂರ್ತಿಯು ಗಾಜಿನ ಸಂಪುಟವೊಂದನ್ನು ಬಲಗಡೆಯ ಮೂಲೆಯಲ್ಲಿ ತಗುಲಿಹಾಕಿತ್ತು (ಪುಶಕು. ೩೦). [ಮುಳ್ + ಮುಡಿ$_2$]

**ಮುಳ್ಮುತ್ತ** 'ಮುಳ್ಮುಟ್ಟುಗ' ನೋ.

**ಮುಳ್ಮುತ್ತಕ** 'ಮುಳ್ಮುಟ್ಟುಗ' ನೋ.

**ಮುಳ್ಮುತ್ತಗ** 'ಮುಳ್ಮುಟ್ಟುಗ' ನೋ.

**ಮುಳ್ಮುತ್ತುಗ** 'ಮುಳ್ಮುಟ್ಟುಗ' ನೋ.

**ಮುಳ್ಮುಱಿ, ಮುಳುಮುಱಿ, ಮುಳ್ಳುಮುರಿ, ಮುಳ್ಳುಮುಱಿ** (ಕ್ರಿ). ೧. ಮುಳ್ಳು ಚುಚ್ಚು, – ನಾಟು : ಸರ್ಪನಾಶ್ರಯಿಪುದೆನುತಳ್ಕಿ ಮನೆಯಂ ಮಾಡದಿರ್ಪರೇ ಮುಳ್ಮುಱಿಗುಮೆಂದು ಪಯಣಂಪೋಗದಿರ್ಪರೇ (ಶಬ್ದಸಾ. ೦-೩೪). **ಮುಳುಮುಱಿ :** ೨. (ಅಲಂ) ಅಡ್ಡಿಯುಂಟಾಗು ; ತಡೆಯಾಗು : ಕೇಳಿದ್ದೆಯಲೆ ಕಂದ ತನ್ನಯ ನಾಲಗೆಗೆ ಮುಳುಮುಱಿದುದುತ್ತರವಾವುದೆನಗೆ (ತೊರವೆ. ೬-೪೩-೦೩). **ಮುಳ್ಳುಮುರಿ :** ೧. ನೀನು ಹೇಳಿದೆ, ಬೀದೂ ಮತ್ತೆ ಓಡಿಹೋಗಿದ್ದಾಳೆಂದು . . . ಕೇಳಿ ನನ್ನ ಎದೆಯೊಳಗೆ ಮುಳ್ಳುಮುರಿದಂತಾಯಿತು (ಇಶ್ರೀ. ೯೪೨). **ಮುಳ್ಳುಮುಱಿ :** ೧. ಮೃದುಪಾದಂಗಳಲಿ ಮುಳ್ಳುಮುಱಿಯಲೇ ನೆಂದೞಿಯುಳು (ಜೈಮಿನಿ. ೩-೦೯).

[ಮುಳ್ + ಮುಱಿ$_1$]

**ಮುಳ್ಮುಟ್ಟುಗ, ಮುಳುಮುತ್ತ, ಮುಳುಮುತ್ತುಗ, ಮುಳ್ಮುತ್ತ, ಮುಳ್ಮುತ್ತಕ, ಮುಳ್ಮುತ್ತಗ, ಮುಳ್ಮುತ್ತುಗ, ಮುಳ್ಳುಮುತ್ತಗ, ಮುಳ್ಳುಮುತ್ತಲ, ಮುಳ್ಳುಮುತ್ತುಕ, ಮುಳ್ಳುಮುತ್ತುಗ** (ನಾ). ಮುಳ್ಳುಗಳಿರುವ ಪಲಾಶವೃಕ್ಷ : ನಿನ್ನ ಮುಳಿಸಿನ ಬೆಂಕೆಯಿಂ ಪೊತ್ತಿ ಪೊಗೆದುರಿವ ಪಗೆವರ ಬೀಡಿನಂತೆ ಸುತ್ತಲುಂ ಪೂತ ಮುಳ್ಮುಟ್ಟುಗದ ಮರಂಗಳೊಳಂ . . . ಬಕುಳಂಗಳೊಳಂ ಬನದಕ್ಕೆ ಪಕ್ಕಾದ ಬನಮಂ ನೋಡಲ್ವೇಟ್ಪುದು (ಕಬ್ಬಿಗ. ೯೯). **ಮುಳುಮುತ್ತ :** "ಮುಳುಮುತ್ತಂ ಕಟು ತಿಕ್ತಮೆಂಬಿವು ಪಲಾಶಾಖ್ಯಂ" (ಶಾಸಾರ. ೦೯೬); ಮುಳುಮುತ್ತ ಹೂಶರದದಲಿ ಹುದುಗಿದ ನೆತ್ತರಿನ ನೆಣವಸೆಯಾಲೆಸೆದನು ರಣದೊಳಾ ಖಚರ (ಉತ್ತರಾ. ೦೯-೩೬). **ಮುಳುಮುತ್ತುಗ :** ಬೆತ್ತ ಬೇವಗ್ಗಾರಣಿಲೆ ಮುಳುಮುತ್ತುಗದ ತರು ಕರ್ಣಿಕಾರದ ಮೊತ್ತವಿದೆ ನೋಡಬಲೆ (ತೊರವೆ. ೩-೦-೨೭). **ಮುಳ್ಮುತ್ತ :** ಮುಳ್ಮುತ್ತಮಂಕೋಲೆ ಕಾಟಿಣಸಿಂಗಳಂ ಕೊಸಗು ಗೇರ್ ಕಕ್ಕೆ ಬಿದಿರ್ಕಮ್ಮರಂ (ಸುಕು. ೩-೨೩) : ಕರಿಕಕ್ಕೆ ಬಿಕ್ಕೆ ಮುಳ್ಮುತ್ತಮಶೋಕೆ ಮಾವು . . . ಗುಗ್ಗುಳಂ ಮತ್ತಮನೇಕವೃಕ್ಷತತಿಯಿಂದೆಸೆದಿರ್ದುದು ತದ್ವನಾಂತರಂ (ಪಳಶಂ. ೭೦). **ಮುಳ್ಮುತ್ತಕ :** ಬೆತ್ತ ಬಿದಿರು ಮುಳ್ಮುತ್ತಕ ಕಗ್ಗಲಿ . . . ಕುತ್ತುಱುವೆಳೆಗಳಿಂದಿರದಾ ಕಾನನವಿತ್ತುದಗುರ್ವನು (ಉದಾಹ. ೨೭-೫೬). **ಮುಳ್ಮುತ್ತಗ :** ತತ್ತಿಸಿದ ಕಣೆಗಳಂ ಮೆಯ್ಗಳೊಳಿಗದೊಲಿರೆ ನೆತ್ತರೊಜತೆಗಳಿಂದೆ ತಸುಗಳುಚ್ ಪೂತ ಮುಳ್ಮುತ್ತಗ [ಶಾಬಂ. ತ್ರ್ಯಕ]ದೊಲಿರೆ ತಂದೆ ಮಕ್ಕಳೆಚ್ಚಾಡಿದರ್ (ಕೃಷ್ಣಾ. ೨೩-೪೦). **ಮುಳ್ಮುತ್ತುಗ :** ಅಲ ಮುಳ್ಮುತ್ತುಗ ಕೊಡಸಿಗೆ ಬನ್ನಿಗಳೇಲಕಡರಿ ಮುಸುಕಿಪುವು (ಕಂಪ. ೦೬-೩೬) : ಇದಿರುಗಾಯದೆ ಪೂತ ಮುಳ್ಮುತ್ತುಗದಂತೆ ಕದನದೆ ನಂಜೇಂದ್ರ ಮೆಚ್ಚಿದ (ಕಂಪ. ೦೯-೮೦). **ಮುಳ್ಳುಮುತ್ತಗ :** "ಮುಳ್ಳುಮುತ್ತಗ –ಲೋಹಿ, ರೋಹಿತಕ, ಪ್ಲೀಹಶತ್ರು, ದಾಡಿಮಪುಷ್ಪಕ" (ಶಾಸಂ. ೪) : "ಚಕ್ರಶಾಲ್ಮಲೀ – ಮುಳ್ಳುಮುತ್ತಗ" (ಚಿತ್ರ. ೫೫). **ಮುಳ್ಳುಮುತ್ತಲ :** ಮುಳ್ಳುಮುತ್ತಲ, ತಕ್ತರೋಹಿತಕ, ಲೋಹಿತಕ (ಮೃಶಿಗ. ೬-೦೩೦) : ಮುಳ್ಳುಮುತ್ತಲ (ಪಾಂಗಾರಾ). . . ಇದರ ಮಿದುವಾದ ಕಟ್ಟಿಗೆಯಿಂದ ಪೆಟ್ಟಿಗೆ ಮುಂತಾದವುಗಳನ್ನು ಮಾಡುವರು (ಕಶಾಗ. ೯೭). **ಮುಳ್ಳುಮುತ್ತುಕ :** "ರೋಹೀ, ರೋಹಿತಕಃ, ಪ್ಲೀಹಶತ್ರುಃ, ದಾಡಿಮಪುಷ್ಪಕಃ– ನಾಲ್ಕು ಮುಳ್ಳುಮುತ್ತುಕದ ಹೆಸರುಗಳು" (ಸಿದ್ಧಾಂತ. ೦೨೩) ; ಮುಳ್ಳುಮುತ್ತುಕ ಮತ್ತಿ ಹೊನ್ನೆ . . . ಚಿಟ್ಟುದಾವರೆಗಳಿಂದಾ ವನಂ ಕಂಗೆಸೆದುದು (ಸಿತ್ರಾ. ೬-೦೭). **ಮುಳ್ಳುಮುತ್ತುಗ :** "ರೋಹೀ, ರೋಹಿತಕಃ, ಪ್ಲೀಹಶತ್ರುಃ, ದಾಡಿಮಪುಷ್ಪಕಃ— ಈ ೪ ರೋಹಿಣದ ಮರಂ, ಮುಳ್ಳುಮುತ್ತುಗವೆಂಬರು" (ಶಾಸಂ. ೦೦೭) ; ಮುಳ್ಳುಮುತ್ತುಗದ ಭಸ್ಮ, ಎಳ್ಳಿನ ಭಸ್ಮ, ಈ ಎರಡನು ಪಾವಡೆಯಲ್ಲಿ ಪೊಟ್ಟಣವ ಕಟ್ಟಿ ಕಷಾಯವ ಕಾಸಿ ಕೊಡಿಸಲು ರಕ್ತಗುಲ್ಮ ಹರ (ವೈದ್ಯಸಾ. I, ೩೦೯) : ಅಲರ್ದುದಡವಿಯ ಮುಳ್ಳುಮುತ್ತುಗಂ (ಋತು. ೮-೦೭).

[ಮುಳ್+ಮುಟ್ಟುಗ./ತೆಲು. ಮುಳುಮೋದುಗ]

**ಮುಳ್ಮೊನೆ,** ಮುಳುಮೊನೆ, ಮುಳ್ಳುಮೊನೆ (ನಾ). ಮುಳ್ಳಿನ ಚೂಪಾದ ತುದಿ : ಮುಳ್ಮೊನೆಯಂತೆ ಕ್ರೂರನಾಗಿ . . . ತೀಟಿನಂತೆಲ್ಲಾ ಪಟ್ಟಗಮೋಗಾದ್ಯ (ರವರ್ಮಪ್ಪ. ೨-೦೦೫). **ಮುಳುಮೊನೆ :** ಮುಳು ಮೊನೆಗಳಲಿ ಗೀಜ್ ನೆತ್ತರಗಳೆದು ಹುಡಿಯಲಿ ಹೊರಳಿ ತಾ ಬಂದಳುತ ಧೃತರಾಷ್ಟ್ರಂಗೆ ಭೀಷ್ಮಗೆ ದೂಜುವನು ಭೀಮ (ಕುವ್ಯಾಆ. ೬-೬). **ಮುಳ್ಳು ಮೊನೆ :** ನೀನು ತೊನಸೆಯ ಕೊಲೆಯ ಮಾಡದೆ ಮುಳ್ಳುಮೊನೆಯಲಿ (ಸಂಶಕ. ೦೯-೦೬) ; ಮುತ್ತಿ ಮುಸುಕಿತ್ತು ಕಗ್ಗತ್ತಲೆ ಧರಿತ್ರಿಯಂ ಮುಳ್ಳು [ಪಾಠಾಂ. ಳ್]ಮೊನೆ ಕೊಳ್ಳದಂತೆ (ಕೈಮಶಾ. ೨೬-೬) : ಮುಳ್ಳುಮೊನೆ ಯಷ್ಟು ಆಸ್ಪದ ಕೊಡವವನ ತಳ್ಳಿಗೆ ಹೋಗಬೇಡ (ಗಾದೆ).

[ಮುಳ್ + ಮೊನೆ]

**ಮುಳ್ವಟ್ಟೆ** (ನಾ). ಮುಳ್ಳುಗಳಿಂದ ತುಂಬಿರುವ ಹಾದಿ—ಮಾರ್ಗ : ಅಲ್ಲಲ್ಲಿಗೆ ಮುಳ್ವಟ್ಟೆಗಳಲ್ಲಲ್ಲಿಗೆ ಸುತ್ತಿ ಮುತ್ತಿ ತಿಂಬ ಕಡಂದುಜು (ರವರ್ಮಪ್ಪ. ೩-೬೩). [ಮುಳ್ + ಬಟ್ಟೆ$_1$]

**ಮುಳ್ವತ್ತರಿಗೆ,** ಮುಳ್ಳುಪತ್ತರಿಕೆ (ನಾ). ಒಂದು ಬಗೆಯ ಸಸ್ಯ : ಸೊರೆ ದಾಸಣನುಂ ಮುಳ್ವತ್ತರಿ[ಪಾಠಾಂ. ರ]ಗೆಯುಮಿಪ್ಪಿವಜ ಬೇರ್ಗ ಳೊಳ್ ಮೆಚ್ಚಿದುದಂ ಕೊರಲೊಳ್ ಕಟ್ಟುಗೆ ಬರ್ಕುಂ ನಿರುಪದ್ರವದಿಂದ ಮುಯ್ದ್ ಶಿಶುವಿನ ಪಲ್ಗಳ್ (ಲೋಕೋಪ. ೯-೦೮೫). **ಮುಳ್ಳುಹತ್ತರಿಕೆ :** ಪಾಲ್ಗುಂಬಳದ ಬೇರ್, ದಾಸವಣದ ಬೇರ್, ಮುಳ್ಳು ಹತ್ತರಿಕೆಯ ಬೇರ್, ಇವಱೊಳಗೆ ದೊರಕಿದುದೊಂದಜ ಬೇರಂ ಕೊಂಡುಬಂದು ಶಿಶುವಿನ ಕೊರ ಲೊಳ್ ಕಟ್ಟಲ್ ಉಪದ್ರವವಿಲ್ಲದೆ ಪಲ್ಗಳ್ ಬರ್ಪುವು (ಲೋಕೋಪ. ೯-೦೮೫ ಟೀಕು). [ಮುಳ್ + <ಹತ್ತರಿಕೆ]

**ಮುಳ್ವಸೆ,** ಮುಳುವಸೆ (ನಾ). ೧. ಮುಳ್ಳಿನ ಹಾಸುಗೆ : ನುಡಿಗಟ್ಟು ಗಳು . . . ನುಡಿವುರುಳ್. ಮುಳ್ವಸೆ, ಬಗೆಗುದುರೆ (ಕಾಲೂರ. ೨ ಮುನ್ನುಡಿ). **ಮುಳುವಸೆ :** ೨. ಚುಚ್ಚುವ ಹಾಸುಗೆ ; ಒರಟು ಹಾಸುಗೆ : ಅರಸನು . . . ಮೊಳೆಗಲ್ಲ ಮುಳುವಸೆಯ ಮೇಲೆ ಹಸಿದಳವಳಿದು ಹೊದೆ ಯಲಿಲ್ಲದೆ ಹೊಯ್ದು ಓಮುವನಿಂತಿರ್ದನೇವಣ್ಣಿಸುವೆನು (ಹವಕಾ. ೯-೪೦). [ಮುಳ್ + ಪಸೆ$_2$]

**ಮುಳ್ವಾಗಿಲ್** (ನಾ). ಮುಳ್ಳಿನಂತೆ ಚೂಪಾಗಿರುವ ಮೊಳೆಗಳುಳ್ಳ ಬಾಗಿಲು ; ಕಂಟಕದ್ವಾರ : ಎಸಳ್ವೆಳೆ. . .ಮುಳ್ವಾಗಿಲ್ (ಶಬ್ದಾಪ. ೬೩ ಪ್ರಯೋ). 'ನುಸುಳ್ವಾಗಿಲ್' ಪರಾ. [ಮುಳ್ + ಬಾಗಿಲ್]

**ಮುಳ್ವೆರಸು** (ಕ್ರಿ). ಮುಳ್ಳುಗಳಿಂದ ತುಂಬಿರು,—ಕೂಡಿರು : ಕುಱಿ ಯೆಂದು ಮುಳ್ವೆರಸಿದ ಗುಜುಜುಗೊಂಬು (ಕವಿಪ. ಪ. ೩೩ ವೃತ್ತಿ). [ಮುಳ್ + ಬೆರಸು$_1$ (<ಬೆರೆಯಿಸು)]

**ಮುಳ್ವೆಳೆ** (ನಾ). ಮುಳ್ಳಿನ ಪೊದೆ,—ಹೊದರು : ಇಳೆಯಾಣ್ಮನಾಜ್ಞೆ ಯಿಂದನುಚರರು ತಂದು ಮುಳ್ವೆಳೆಯಲ್ಲಿ ತೊಟ್ಟಿಲಿಂ ಸಿಕ್ಕಿ ಬರಲು (ಲಕ್ಷ್ಮೀಶ. ೬-೪-೫೨). [ಮುಳ್ + ಬೆಳೆ$_1$]

**ಮುಳ್ಸೀರೆ** (ನಾ). (?) : ಬೆಳ್ಸರಿ, ಬೆಳ್ಸರಿ : ಮುಳ್ಸೀರೆ. ಮುಳ್ಸೀರೆ (ಶಬ್ದಾಪ. ೯೩ ಪ್ರಯೋ). [ ? ]

**ಮುಳ್ಸೆಜಂಗು** (ನಾ). (?) : ಕಜ್ಜೋಲಂ, ಮುಳ್ಸೆಜಂಗು (ಶಬ್ದಾಪ. ೯೩ ಪ್ರಯೋ). [ ? ]

**ಮುಳ್ಸೆಜೆ** (ನಾ). (?) : ಮುಳ್ಸಿಜೆ. ಮುಳ್ಸೆಜೆ (ಶಬ್ದಾಪ. ೯೩ ಪ್ರಯೋ). [ ? ]

**ಮುಳ್ಳಂಕೋಲೆ,** ಮುಳ್ಳು ಅಂಕೋಲೆ (ನಾ). ಒಂದು ಬಗೆಯ ಮುಳ್ಳಿನ ಗಿಡ : ಅವರು ತಮ್ಮ ಕಾಂಪೌಂಡಿನ ಸುತ್ತಲೂ ಮುಳ್ಳಂಕೋಲೆಯನ್ನು ಬೆಳಸಿದ್ದಾರೆ (ರೂಢಿ). **ಮುಳ್ಳುಅಂಕೋಲೆ :** ನೀರುಪ್ಪಿಗಿಡ, ಮುಳ್ಳು ಅಂಕೋಲೆ. ಗೋರಿವಿಡಿ. ಕೊಳವಳಿಕೆ (ವೃಕ್ಷಶಿ. ೦೦-೦೯೬).

[ಮುಳ್ಳು (<ಮುಳ್) + ಅಂಕೋಲೆ./ತುಳು. ಮುಳ್ಳಂಕಲೆ, ಮುಳ್ಳಂಕೋಲೆ]

**ಮುಳ್ಳಂಬು** (ನಾ). ಮೈ ಮೇಲೆ ಮುಳ್ಳುಗಳಿರುವ ಒಂದು ಬಗೆಯ ಬಾಣ,—ಸರಳು : ಆತನ ಆಯುಧಗಳ ಗಣನೆ ಎಷ್ಟೆಂತೆಂದಡೆ ಮುಳ್ಳಂಬುಗಳು ಸಾವಿರದೇಳ್ನೂಱು ಒಂಬತ್ತುಸಾವಿರ ಮಿಟ್ಟೆಯಂಬುಗಳು ಸರಳಂಬು ಹನ್ನೆರಡುಸಾವಿರ (ಶೃಂಗಾರ. I, ೮೫).

[ಮುಳ್ಳು (<ಮುಳ್) + ಅಂಬು$_2$]

**ಮುಳ್ಳಕೀರೆ** 'ಮುಳ್ಳು ಕೀರೆ' ನೋ.

**ಮುಳ್ಳಭಟ್ಟಾರಕ** (ನಾ) ಒಬ್ಬಾತನ ಹೆಸರು : ಬಭೂವೋಗ್ರತಪೋ ಯುಕ್ತಃ ಮುಳ್ಳಭಟ್ಟಾರಕೋ ಗಣೀ ತಚ್ಛಿಷ್ಯೋ ಗುಣವಾನ್ಸೂರಿಃ ಗುಣ ಕೀರ್ತಿರ್ಮುನೀಶ್ವರಃ (ಶಾಸ. XX, ೦೩-೬ ; 875).

[ಮುಳ್$_{\text{ಂ}}$ + ಭಟ್ಟಾರಕ]

**ಮುಳ್ಳಮುಂಜ** (ನಾ). ಒಂದು ಬಗೆಯ ಹುಲ್ಲು : 'ಅಧೋಮುಖಿ— ಎತ್ತುನಾಲಿಗೆ. ಮುಳ್ಳಮುಂಜ" (೬೭೦. ೫). [<ಮುಳ್ + ಮುಂಜ$_2$]

**ಮುಳ್ಳಹೊಂಗೆ** 'ಮುಳ್ಳುಹೊಂಗೆ' ನೋ.

**ಮುಳ್ಳಾವಿಗೆ** (ನಾ). ಶಿವನ ಹಾಗೂ ವಿಷ್ಣುವಿನ ಭಕ್ತರು ಹರಕೆಗಾಗಿ ತೊಡುವ, ಕಬ್ಬಿಣದ ಚೂಪಾದ ಮೊಳೆಗಳನ್ನು ಒಳಭಾಗದಲ್ಲಿ ಮೆಟ್ಟಿರುವ ಮರದ ಹಾವುಗೆ : ಕಾಲು ಮುಳ್ಳಾವಿಗೆ ಕೈಯ ಡಮರುಗ ನುಡಿಸಿ ಉರಿಗಣ್ಣ ತಿಶೆವೂತ ಕಂಡರಂಜಿಕಿ ಬರುವ ರುದ್ರ ಬಂದಿದ್ದನ ಸಪನದಲಿ (ಲೋಕಗೀ. ೦೯೩). [ಮುಳ್ಳು(<ಮುಳ್) + ಹಾವಿಗೆ(<ಪಾವುಗೆ)]

**ಮುಳ್ಳಿ ?** (ನಾ). ನೀರಿನ ಪಾತ್ರೆ (?) : ಸ್ವರದ ಮುಳ್ಳಿಯ ಕೊಂಡು ತಟಾಕಕ್ಕೆ ಹೋಗಿ ಹಿರಿಯರು ಬೋನವ ಮಾಡುತ್ತಿಪ್ಪರು (ಕವಗೋ. ೨೬-೬೮). [ ? ]

**ಮುಳ್ಳಿಕಾದಂಟು** 'ಮುಳ್ಳುಕಾದಂಟು' ನೋ.

**ಮುಳ್ಳಿಚುಳ್ಳಿ** (ನಾ). ಒಂದು ಬಗೆಯ ಸಸ್ಯ : ಹೋಟಚುಳ್ಳಿ. ಮುಳ್ಳಿ ಚುಳ್ಳಿ. ಪರಿಕುಪ, ತುಡಿಚುಳ್ಳಿ (ವೃಕ್ಷಶಿ. ೨-೨೯). [ಮುಳ್$_{\text{ಂ}}$ + ಚುಳ್$_{\text{ಂ1}}$]

**ಮುಳ್ಳಿಡಿ** (ಕ್ರಿ). ಮುಳ್ಳುಗಳಿಂದ ತುಂಬಿರು ; ಕಂಟಕಮಯವಾಗಿರು : ನೀನೇಂದುಪಂ ಮಾಡೆನೆಂದಾ ಚಂಡಿ ಚಂಡಿಪೋರೆ ಮುಳ್ಳಿಡಿದ ಮರನೇಱ ದಂತಾದುದು (ಕೈಮಶಾ. ೦೦-೨೯). [ಮುಳ್ಳು (<ಮುಳ್)) + ಇಡಿ$_2$]

**ಮುಳ್ಳಿಡು** (ಕ್ರಿ). ಮೈಯ ಕೂದಲು ನೆಟ್ಟಗಾಗು ; ರೋಮಾಂಚನ ಗೊಳ್ಳು : ಅವನ ಮೆಯ್ ಮುಳ್ಳಿಟ್ಟು (ಮುಂಬರು. ೬. ೫-೬೦) : ಮೈಯು ಮುಳ್ಳಿಡಬಹುದು ಆದರು ಮನದೊಳಗೆ ಇದೆ ಧೈರ್ಯವು (ಅರಳು. ೫೯. ೦೩). [ಮುಳ್ಳು (<ಮುಳ್) + ಇಡು$_1$]

**ಮುಳ್ಳಿಬಳ್ಳಿ** (ನಾ). ಒಂದು ಬಗೆಯ ಸಸ್ಯ : (ವೃಕ್ಷಶಿ. ೯೬-೯೦೦). [ಮುಳ್$_{\text{ಂ}}$ + ಬಳ್ಳಿ]

**ಮುಳ್ಳಿಱ** (ಕ್ರಿ). ೧. ಮುಳ್ಳು ಚುಚ್ಚು,—ನಾಟು : ಮುಳ್ಳಿಱ ಯಲಿನಿತಾದಡಂ ತೆಱಹಿಲ್ಲದೇ ಸಂಕೀರ್ಣ ಪದದಿಂದೆಲ್ಲೆಡೆಯೊಳಂ ತಾನೆಯಾಗಿದ್ದಹನಲಾ ವಿಶ್ವವಲ್ಲಭಂ (ಬಸವ. ೫೦-೩೯). ೨. ಮುಳ್ಳಿ ನಿಂದ ಚುಚ್ಚಿ ರಂಧ್ರಮಾಡು,—ಕೊರೆ : ಹೋಳಾಗಿ ಬಾಳೆಯ ಕಾಯ ಸಂಬಳಿಸಿ . . . ಮುಳ್ಳಿಱಿದು ಸಂಭಾರಮಂ ತುಂಬಿ (ಸೂಪಶಾ. ೪-೬೨). [ಮುಳ್ + ಇಱಿ$_1$]

**ಮುಳ್ಳು** 'ಮುಳ್' ನೋ.

**ಮುಳ್ಳುಅಂಕೋಲೆ** 'ಮುಳ್ಳಂಕೋಲೆ' ನೋ.

**ಮುಳ್ಳುಅಬ್ಬೆ** (ನಾ). ಒಂದು ಬಗೆಯ ಸಸ್ಯ : "ಕರೀರಃ, ಕ್ರಕರಃ, ಗ್ರಂಥಿಲಃ—೩ ಮುಳ್ಳುಅಬ್ಬೆಯ ಹೆಸರು" (ಸಿದ್ಧಾಂತ. ೦೩೦).

[ಮುಳ್ಳು (<ಮುಳ್) + ಅಬ್ಬೆ$_4$]

**ಮುಳ್ಳುಂಗೊಳ್ಕೆ** (ನಾ). ಮುಳ್ಳುಗಳುಳ್ಳ ಕುಣಿಕೆ : ಇಂತು ಬಂದು ಬಂದಿವಿಡಿದುಂ ನೇಣಿಂ ಬಿಗಿದುಂ ಮುಳ್ಳುಂಗೊಳ್ಕೆಯನಿಟ್ಟುಮಣೆದು ಮಾರ್ದುಂ ಸಾರ್ದುಮೆಬ್ಬಿಸೆಯ್ದಾಗಳ್ (ರಾಮಚಂ. ೭೯-೩೯).
[ ಮುಳ್ಳು (<ಮುಳ್) + ಕೊಳ್ಕೆ (<ಕೊಲಿಕೆ) ]

**ಮುಳ್ಳುಕಂಟಿ** (ನಾ). ಮುಳ್ಳುಗಳಿರುವ ಪೊದೆ, –ಹೊದರು : ಇವುಗಳಲ್ಲಿ ಕವಳಿ, ಪರಗಿ, ಜಾಲಿ ಮುಂತಾದ ಮುಳ್ಳುಕಂಟಿಗಳು ಬೆಳೆಯುತ್ತವೆ (ಕಕಫ. ೬-೦೩). [ಮುಳ್ಳು (<ಮುಳ್) + ಕಂಟ್ಟಿ]

**ಮುಳ್ಳುಕಾದಂಟು, ಮುಳ್ಳಿಕಾದಂಟು** (ನಾ). ಒಂದು ಬಗೆಯ ಸಸ್ಯ : "ಮುಳ್ಳುಕಾದಂಟು, ಶಾರಿಕೆ" (ಸಸ್ಯ೩. ೯೭). **ಮುಳ್ಳಿಕಾದಂಟು** : ಮುಳ್ಳಿಕಾದಂಟು, ಶಾರಿಕೆ (ವೃ೩ಶಿ. ೩೨-೦೦೩೭). [?]

**ಮುಳ್ಳುಕಾರೆ** (ನಾ). ಮುಳ್ಳುಗಳುಳ್ಳ ಒಂದು ಬಗೆಯ ಕಾರೆಗಿಡ : ಮುಳ್ಳುಕಾರೆ (ಕಾಟಿಗೊತ್ತಿ). ಸಾಧಾರಣವಾದ ಸಣ್ಣಗಿಡ . . . ಕಾಯಿಗಳಿಂದ ಚರ್ಮಕ್ಕೆ ಕರಬಣ್ಣ ಕೊಡುವರು (ಕಪಾಗಿ. ೯.).
[ಮುಳ್ಳು (<ಮುಳ್) + ಕಾರೆ. / ತಮಿ. ಮುಳ್ಳುಕ್ಕಾರೈ]

**ಮುಳ್ಳುಕೀರೆ, ಮುಳ್ಳಿಕೀರೆ** (ನಾ). ಮುಳ್ಳುಗಳಿರುವ ಒಂದು ಬಗೆಯ ಕೀರೆಸೊಪ್ಪು : "ಮುಳ್ಳುಕೀರೆಸೊಪ್ಪು, ಮುಳ್ಳುಹರಿವೆಸೊಪ್ಪು . . . ಮುಳ್ಳುಗೊಡಕೊಚ್ಚು" (ಸಸ್ಯ೩. ೦೦). **ಮುಳ್ಳಿಕೀರೆ** : ಮುಳ್ಳಿಕೀರೆಸೊಪ್ಪು, ಮುಳ್ಳುಹರಿವೇಸೊಪ್ಪು (ವೃ೩ಶಿ. ೬-೯೩).
[ಮುಳ್ಳು (<ಮುಳ್) + ಕೀರೆ. / ತಮಿ. ಮುಳ್ಳಿಕ್ಕೀರೈ, ಮುಳ್ಳುಕ್ಕೀರೈ]

**ಮುಳ್ಳುಕುರ** (ನಾ). ಕುದುರೆಯನ್ನು ಹತೋಟಿಯಲ್ಲಿಡಲು ಬಳಸುವ, ಮುಳ್ಳುಗಳಿರುವ ಒಂದು ಬಗೆಯ ಸಾಧನ : . ಕುದುರೆಗಳಿಗೆ ಜೀನು ಹಾಕುವುದಿಲ್ಲ. ಕಡಿವಾಣಕ್ಕೆ ಬದಲು ಹದಮಾಡಿದ ಎತ್ತಿನ ಚರ್ಮದ ಮುಳ್ಳುಕುರ ಹಾಕುತ್ತಾರೆ. ಇದರ ಒಳಭಾಗದಲ್ಲಿ ಕಬ್ಬಿಣದ ಅಥವಾ ಹಿತ್ತಾಳೆಯ ಮುಳ್ಳುಗಳಿರುತ್ತವೆ. . . ಇದಕ್ಕೆ ಲಗಾಮನ್ನು ತಗುಲಿಸಿರುತ್ತಾರೆ. ಸವಾರನು ಲಗಾಮನ್ನು ಹಿಡಿದು ಎಳೆದಾಗ ಕವಲುಗೋಲು ಕುದುರೆಯನ್ನು ಹತೋಟಿಗೆ ತರುತ್ತದೆ (ಶ್ರವಾಡ I . ೯೦ ೧೦೩).
[ಮುಳ್ಳು (<ಮುಳ್) + ಕುರ]

**ಮುಳ್ಳುಕೂಗರಿ** 'ಮುಳುಕೂಗರಿ' ನೋ.

**ಮುಳ್ಳುಕೊಗ್ಗಿ** 'ಮುಳುಗೊಗ್ಗಿ' ನೋ.

**ಮುಳ್ಳುಕೊಗ್ಗೆ** 'ಮುಳುಗೊಗ್ಗಿ' ನೋ.

**ಮುಳ್ಳುಕೊಳಂಜಿ** (ನಾ). ಮುಳ್ಳುಗಳಿರುವ ಒಂದು ಬಗೆಯ ಸಸ್ಯ : (ವೃ೩ಶಿ. ೭೯-೦೩೦೬). [ಮುಳ್ಳು (<ಮುಳ್) + ಕೊಳಂಜಿ]

**ಮುಳ್ಳುಕೋಲು** 'ಮುಳುಗೋಲು' ನೋ.

**ಮುಳ್ಳುಗಳ್ಳಿ** 'ಮುಳುಗಳ್ಳಿ' ನೋ.

**ಮುಳ್ಳುಗಿಡ** 'ಮುಳ್ಗಿಡು' ನೋ.

**ಮುಳ್ಳುಗುಜುಚಿ** (ನಾ). ಮುಳ್ಳಿನ ಪೊದರು, –ಮೆಳೆ : ಬಿದಿರ್ವಿಂಡಲು ಮುಳ್ಳುಗುಜುಚಿ ಬಳ್ಳಿ ಮೆಳೆ . . . ಕಣಗಾಡಾ ಹಳುವಿನೊಳೊದವಿಹುದೆಲ್ಲಿ ನೋಡಿದರು (ಶ್ರೀಬಾಂ. ೭-೦೩).
[ ಮುಳ್ಳು (<ಮುಳ್) + ಕುಜುಚ್ಚಿ (<ಕುರುಚು) ]

**ಮುಳ್ಳುಗೆಣಸು** (ನಾ). ಒಂದು ಬಗೆಯ ಗೆಣಸು : (ವೃ೩ಶಿ. ೩೦-೩೯೦).
[ಮುಳ್ಳು (<ಮುಳ್) + ಗೆಣಸು (<ಗೆಳಸು) ]

**ಮುಳ್ಳುಗೆಜಿ**[3] (ನಾ). ಒಂದು ಸ್ಥಳದ ಹೆಸರು; P ಈಗಿನ ಶಿವಮೊಗ್ಗ ಜಿಲ್ಲೆಯ ಹೊಳೆಹೊನ್ನೂರುಹೋಬಳಿಯಲ್ಲಿರುವ ಒಂದು ಹಳ್ಳಿ : ಬೂತಯ್ಯನ ಮಾದಯ್ಯ ಸೀಗೆಯುರ ಮಾದಯ್ಯ ಗಾವುಣ್ಣಗೆಯ್ಯ ಮಣ್ಣಾಲೆಸಾಯಿರನಾಡ ತುಜುಗೋಲ್ ತೆರಳ್ದು ಸತ್ತಂ ಮುಳ್ಳುಗೆಜಿ × × × (ವೃ೩೦. ೦೯೩೩, ೩೩-೪ ; 939).
[ಮುಳ್ಳು (<ಮುಳ್) + ಕೆಜಿ[3]]

**ಮುಳ್ಳುಗೊಂಚಿ** (ನಾ). ಮುಳ್ಳನ್ನು ಒಟ್ಟಾಗಿ ಕಟ್ಟಿ ಮಾಡಿದ ಗೊಂಚಲು, __ಗುಚ್ಛ : ಎಂಟನೆಯ ಮಸು ಕಾಮಧೇನುವ ಮುಳ್ಳುಗೊಂಚಿಯಿಂ ಪೊಡದಾತನು ಪೊಡಕುಯಲಿ ಬಹುಕಾಲವಿರಲಿ ಅವಸಾನದೊಳ್ ಬಿಡದೆ ಸರಳಿನ ಮಂಚದಲಿ ಮರಣಿಸಲಿ (ತುರಂಗ. ೯-೩೭).
[ಮುಳ್ಳು (<ಮುಳ್) + ಗೊಂಚಿ (<ಗೊಂಚಿ) ]

**ಮುಳ್ಳುಗೊಗ್ಗಿ** 'ಮುಳುಗೊಗ್ಗಿ' ನೋ.

**ಮುಳ್ಳುಗೊರಟಿ** 'ಮುಳ್ಳುಗೋರಂಟಿ' ನೋ.

**ಮುಳ್ಳುಗೊರಟೆ** 'ಮುಳ್ಳುಗೋರಂಟಿ' ನೋ.

**ಮುಳ್ಳುಗೋರಂಟ** 'ಮುಳ್ಳುಗೋರಂಟಿ' ನೋ.

**ಮುಳ್ಳುಗೋರಂಟಿ** 'ಮುಳ್ಳುಗೋರಂಟಿ' ನೋ.

**ಮುಳ್ಳುಗೋರಂಟಿ**, ಮುಳ್ಳುಗೊರಟಿ, ಮುಳ್ಳುಗೊರಟೆ, ಮುಳ್ಳುಗೋರಂಟ, ಮುಳ್ಳುಗೋರಂಟಿ, ಮುಳ್ಳುಗೋರಟೆ (ನಾ). ೧. ಮುಳ್ಳುಗಳುಳ್ಳ ಹಳದಿಸ್ಫಟಿಕದ ಗಿಡ ಮತ್ತು ಅದರ ಹೂವು : "ಕುರಂಟಕ, ಸಹಚರಿ, ಪೀತರಿಞ್ಜಿಂಟಿ -- ಕೆಂಪಿನ ಮುಳ್ಳುಗೋರಂಟಿ (ಕುರವಕ) ; ಅರಿಸಿನಬಣ್ಣದ ಮುಳ್ಳುಗೋರಂಟಿ" (ನಾತರಾ. ೬) ; "ಕುರಂಟಿಕ . . . ಮುಳ್ಳುಗೋರಂಟಿ, ಮುಳಜಾಲಿ" (ಸಸ್ಯ೩. ೦೯). **ಮುಳ್ಳುಗೊರಟಿ** : ೨. ಒಂದು ಬಗೆಯ ಔಷಧೀಸಸ್ಯ : ಅಮೃತಬಳ್ಳಿ, ಕೊಡಸಿಗೆ . . . ಸಹಚರಿ (ಮುಳ್ಳುಗೊರಟಿ), ಸಬ್ಬಸಿಗೆ, ಕಳ್ಳನ ಗಿಡ ಇವನ್ನು ಹಸಿಯದಿರುವಾಗಲೇ ಉಪಯೋಗಿಸಬೇಕು (ಸಕಶ್ಮ. xii, ಪ್ರಸ್ತಾವನ). **ಮುಳ್ಳುಗೊರಟೆ** : ೨. ನೆಲಗುಳ್ಳದ ಬೇರು . . . ಮುಳ್ಳುಗೊರಟಿ, ಶುಂಠಿ ಇವುಗಳನ್ನು ಸಮನಾಗಿ ಕಷಾಯಮಿಟ್ಟು . . . ಕುಡಿಯೆ ಶ್ಲೇಷ್ಮಜ್ವರ ಗುಣವಾಗುವುದು (ಸಕಶ್ಮ. ೬೮). **ಮುಳ್ಳುಗೋರಂಟ** : ೧. "ಕುರುವಕಃ, ಅರುಣೇತಸ್ಮಿನ್ – ಕೆಂಪು ಹೂವುಳ್ಳ ಮುಳ್ಳುಗೋರಂಟದ ಹೆಸರುಗಳು" (ಸಿದ್ಧಾಂತ. ೦೨೯). **ಮುಳ್ಳುಗೋರಂಟಿ** : ೧. "ಸೈರೇಯಕಃ, ಝಿಂಟೀ – ಈ ೨ ಮುಳ್ಳುಗೋರಂಟಿ" (ನಾತರಾ. ೦೦೬). ೨. ನೆಲಗುಳ್ಳದ ಬೇರು . . . ಮುಳ್ಳುಗೋರಂಟಿ ಬೇರು, ಶುಂಠಿ ಸಹ ಕಷಾಯ ಕಾಯಿಸಿ ಸೇವಿಸಲು ಶ್ಲೇಷ್ಮಜ್ವರವು ನಾಶವಾಗುವುದು (ಸಕಶ್ಮ. ೬೮). **ಮುಳ್ಳುಗೋರಟೆ** : ೧. ಮುಳ್ಳುಗೋರಟೆಗಿಡದ ತುಂಬ ಹೂವು ಅರಳಿದ್ದುವು (ಕೂಂ).
[ ಮುಳ್ಳು ( < ಮುಳ್ ) + ಗೋರಂಟಿ. / ತೆಲು. ಮುಲು ಗೋರಂಟ ]

**ಮುಳ್ಳುಗೋರಟೆ** 'ಮುಳ್ಳುಗೋರಂಟಿ' ನೋ.

**ಮುಳ್ಳುಗೋಲು** 'ಮುಳುಗೋಲು' ನೋ.

**ಮುಳ್ಳುಚಮಚ, ಮುಳ್ಳುಚಮಚಿ** (ನಾ). ಗಟ್ಟಿಯಾದ ಆಹಾರ ಪದಾರ್ಥವನ್ನು ಚುಚ್ಚಿಹಿಡಿದು ತಿನ್ನಲು ಬಳಸುವ, ಚೂಪಾದ ಹಲ್ಲುಗಳುಳ್ಳ ಒಂದು ಬಗೆಯ ಚಮಚ : (ಭೋಜನ ಊಟ ಮಾಡುವಾಗ ಅಥವಾ ಅಡಿಗೆ ಮಾಡುವಾಗ ಉಪಯೋಗಿಸುವ) ಮುಳ್ಳುಚಮಚ (Fork. ೩೦೩೩). **ಮುಳ್ಳುಚಮಚಿ** : ಯಾರು . . . ಫಯಜೂಖಾನ ಸಾಹೇಬನು ಮಾಡಿದ ಪಾಕವನ್ನು, ಮುಳ್ಳುಚಮಚಿ ಹಿಡಿದು, ಸೇವಿಸುವುದನ್ನು ಕಲಿತಿರುವರೊ ಅವರು ಈ ಪೀಡೆಯಿಂದ ಮುಕ್ತರಾಗಿರುವರು (೯ಮಚ. ೦೬). [ ಮುಳ್ಳು ( < ಮುಳ್ ) + ಚಮಚ ]

**ಮುಳ್ಳುಚಮಚಿ** 'ಮುಳ್ಳುಚಮಚ' ನೋ.

**ಮುಳ್ಳುಜವೆ** (ನಾ). ಒಂದು ಬಗೆಯ ಯವಧಾನ್ಯ : ಮುಳ್ಳುಜವೆಯು . . . ತ್ವಕ್‌ರೋಗಗಳನ್ನು ಕಳೆಯುವುದು (ಔಷ್ಯಂಗ. ೦೦೪ ಅರ್ಥ);

ಗೋಪ್ಪುರದ ಭೂಮಿಯಾಗಿ ತಂಪು ಇರುವುದರಿಂದ . . . ಅವರಿಯಾದರೂ ಮುಳ್ಳುಜವೆಯಾದರೂ ಬಿತ್ತಿದರೆಯು ಬರುತ್ತದೆ (ಕೃಷಿಕ್ರ.೩೬).

[ ಮುಳ್ಳು ( < ಮುಳ್ ) + ಜವೆ₂ ]

**ಮುಳ್ಳುಜೀನಂಗಿ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಸಸ್ಯ : " ಪರಂಗಿಜಾಲಿಗಿಡ, ಮುಳ್ಳುಜೀನಂಗಿ " (ಸಸ್ಯಕಿ. ೦೦೨).

[ ಮುಳ್ಳು ( < ಮುಳ್ ) + ಜೀನಂಗಿ ]

**ಮುಳ್ಳುತಂತಿ** (ನಾ). ಮುಳ್ಳಿನಂತೆ ಚೂಪುತುದಿಗಳಿಂದ ಕೂಡಿದ ಲೋಹದ ಎಳೆ : ಬಿಟ್ಟರೋ ಕಾಡಲ್ಲಿ ಕಣ್ಣುಕಟ್ಟಿ ಸುತ್ತಲೂ ಬಿಗಿದಿಟ್ಟು ಮುಳ್ಳುತಂತಿ (ಸಣ್ಣಕೃ. ೯೭). [ ಮುಳ್ಳು ( < ಮುಳ್ ) + ತಂತಿ ]

**ಮುಳ್ಳುತಾರೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ತಾರೆಯ ಗಿಡ : ಕುಡವಲೆ, ಪೆತ್ತರಿಮುಳ್ಳು, ಮುಳ್ಳುತಾರೆ, ಗಜಬೀರ (ವೃಕಿಗಿ. ೭೭-೭೩೯). [ಮುಳ್ಳು (<ಮುಳ್)+ತಾರೆ₁ (<ತಾಚಿ)]

**ಮುಳ್ಳುನಿವಂದಿಗೆ** (ನಾ). ಒಂದು ಬಗೆಯ ಔಷಧೀಸಸ್ಯ : ಜೇಲದ ಬೀಜ . . . ಮುಳ್ಳುನಿವಂದಿಗೆಸೊಪ್ಪು ಇವು ಸಹ ಕೊಂಡು ರಸವ ಹಿಂಡಿಕೊಂಡು ಈ ರಸದಲ್ಲಿ ಏಳುದಿನ ತೆಗೆದುಕೊಳ್ಳೆ ಪಥ್ಯದೊಳಿರೆ ಸಕಲ ಮೇಹ ಗುಣ (ವೈದ್ಯಶಿ. ೦೨೦). [ಮುಳ್ಳು ( < ಮುಳ್ ) + ನಿವಂದಿಗೆ]

**ಮುಳ್ಳುನೆಗ್ಗಿಲು** (ನಾ). ಮುಳ್ಳುಗಳುಳ್ಳ ಒಂದು ಬಗೆಯ ನೆಗ್ಗಿಲು ಗಿಡ : ಬಳ್ಳಿದುಂಬುಚಿ ನೆಜಿ ಮುಳ್ಳುನೆಗ್ಗಿಲು . . . ಹುಲ್ಲುಗಳ್ ಬೆಳೆವಾಗ ದಾರಿ ಬಿಡದೆ ಜಾಜುಗಲ್ಲ ಮುಚಿಸಿಕೊಂಡಿಹುವು (ಕೆಂಪವಿ. ೦೮-೩೯).

[ ಮುಳು ( < ಮುಳ್ ) + ನೆಗ್ಗಿಲು (< ನೆರ್ಗಿಲ್ ) ]

**ಮುಳ್ಳುನೆಲ್ಲಿ** (ನಾ). ಒಂದು ಬಗೆಯ ಮುಳ್ಳಿನ ಗಿಡ : " ಕಕ್ಕುಚಂಡೆರೆ, ಮಣಿಕಣ್ಣು, ಮುಳ್ಳುನೆಲ್ಲಿ " (ಸಸ್ಯಕಿ. ೦೦೩).

[ ಮುಳ್ಳು (< ಮುಳ್ ) + ನೆಲ್ಲಿ ]

**ಮುಳ್ಳುಪಾರಿವಾಳ, ಮುಳ್ಳುಹಾಲಿವಾಣ** (ನಾ). ಮುಳ್ಳುಗಳುಳ್ಳ ಪಾಲಿವಾಣದ ಮರ : " ಕನಕಸ್ಥಾ–ಮುಳ್ಳುಪಾರಿವಾಳ " (ಓಪಂ. ೨೯). **ಮುಳ್ಳುಹಾಲಿವಾಣ** : ಮುಳ್ಳುಹಾಲಿವಾಣ, ಮುಳ್ಳುಮುತ್ತುಗ (ವೃಕಿಗಿ. ೩೩-೬೮೮). [ ಮುಳ್ಳು ( < ಮುಳ್ ) + ಪಾರಿವಾಳ₂ ]

**ಮುಳ್ಳುಬದನೆ** (ನಾ). ಮುಳ್ಳುಗಳಿರುವ ಒಂದು ಬಗೆಯ ಬದನೆ : " ಕಂಟಕವೃಂತಾಕಿ – ಮುಳ್ಳುಬದನೆ " (ಓಪಂ. ೨೬).

[ ಮುಳ್ಳು ( < ಮುಳ್ ) + ಬದನೆ ]

**ಮುಳ್ಳುಬೆಟ್ಟಮಾವು** (ನಾ). ಒಂದು ಬಗೆಯ ಮಾವು : ಮುಳ್ಳು ಬೆಟ್ಟಮಾವು, ಗಚ್ಚನ್ನೇಕಾಯಿ (ವೃಕಿಗಿ. ೨೯-೪೪೦).

[ ಮುಳ್ಳು ( < ಮುಳ್ ) + ಬೆಟ್ಟ + ಮಾವು ]

**ಮುಳ್ಳುಬೇಲಿ** ' ಮುಳುವೇಲಿ ' ನೋ.

**ಮುಳ್ಳುಮದರಂಗಿ** (ನಾ). ಒಂದು ಬಗೆಯ ಮುಳ್ಳಿನ ಗಿಡ : ಮುಳ್ಳು ಗೋರಂಟಿಗಿಡ : ಕುರಂಟಿಕೆ, ಮುಳ್ಳುಗೋರಂಟಿ, ಮುಳ್ಳುಮದರಂಗಿ (ವೃಕಿಗಿ. ೦೦-೦೯೯). [ ಮುಳ್ಳು ( < ಮುಳ್ ) + ಮದರಂಗಿ ]

**ಮುಳ್ಳುಮರ** ' ಮುಳ್ಮರ ' ನೋ.

**ಮುಳ್ಳುಮುಖ** (ನಾ). ೧. (ಸಿಡುಬು ಮುಂತಾದುವು ಎದ್ದು) ಗುಳ್ಳೆ . ಕಲೆಗಳಿಂದ ಕೂಡಿ ಒರಟಾದ ಮುಖ. – ಗಂಟುಗಂಟಾಗಿರುವ ಮುಖ : ಅವನದು ಮುಳ್ಳುಮುಖ (ರೂಢಿ). ೨. ಪರುತಗ್ಗಾದ ಮೇಲ್ಮೈ : ಒರಟಾದ ಹೊರಪ್ಮೈ : ಆ ಉಲ್ಕಗಳು ಕ್ರಮೇಣ ಬಿಟ್ಟು ಗೂಡಿ ಉಂಡೆಯಾಗಿ ಚಂದ್ರನಾಯಿತೆಂತಲೂ ಒಳಗೆ ಸೇರಿದ ಉಲ್ಕಗಳಿಂದ ಬಿದ್ದ ಪೆಟ್ಟುಗಳೇ ಚಂದ್ರನ ಮುಳ್ಳುಮುಖಕ್ಕೆ ಕಾರಣವೆಂತಲೂ . . . ಹೇಳುವರು (ಜ್ಯೋತಿರ್ವಿ. ೨೦೦). [ ಮುಳ್ಳು ( < ಮುಳ್ ) + ಮುಖ ]

**ಮುಳ್ಳುಮುತ್ತಗ** ' ಮುಳ್ಮುತ್ತುಗ ' ನೋ.

**ಮುಳ್ಳುಮುತ್ತಲ** ' ಮುಳ್ಮುತ್ತುಗ ' ನೋ.

**ಮುಳ್ಳುಮುತ್ತುಕ** ' ಮುಳ್ಮುತ್ತುಗ ' ನೋ.

**ಮುಳ್ಳುಮುತ್ತುಗ** ' ಮುಳ್ಮುತ್ತುಗ ' ನೋ.

**ಮುಳ್ಳುಮುರಿ** ' ಮುಳ್ಮುಜಿ ' ನೋ.

**ಮುಳ್ಳುಮುಜಿ** ' ಮುಳ್ಮುಜಿ ' ನೋ.

**ಮುಳ್ಳುಮೊನೆ** ' ಮುಳ್ಮೊನೆ ' ನೋ.

**ಮುಳ್ಳುಯಲಗ** (ನಾ). ಮುಳ್ಳುಗಳಿಂದ ಕೂಡಿದ ಎಲೆಗಳುಳ್ಳ ಒಂದು ಬಗೆಯ ಸಸ್ಯ : ಮುಳ್ಳುಯಲಗದ ಹೂವಿನಂತೆ ಹೆಮ್ಮರದ ಹೂವಿನಂತೆ ಕಾವ ಕಬ್ಬಿಣದಂತೆಯೂ ಇರುವ ಈ ಆರು ಬಗೆಯ ಹೊಳಪುವುಳ್ಳ ರತ್ನವು ವೈಶ್ಯಜಾತಿಯಾದ ಸೌಗಂಧಿಕವೆಂದು ತಿಳಿಯುವದು (ಸೌಗಂ೨. ೩೩೩-೦೭).

[ ಮುಳ್ಳು ( < ಮುಳ್ ) + ಎಲೆ₁ + . – ಗ₂ ]

**ಮುಳ್ಳುರಾಮಫಲ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಗಿಡ ಮತ್ತು ಅದರ ಹಣ್ಣು : (ವೃಕಿಗಿ. ೭-೦೨೦).

[ ಮುಳ್ಳು ( < ಮುಳ್ ) + ರಾಮಫಲ ]

**ಮುಳ್ಳುರ್ಚು** (ಕ್ರಿ). ಮುಳ್ಳು ಚುಚ್ಚು – ನಾಟು : ಪಳ್ಳದ ಕೇದಗೆಗೆ ಪಾಯ್ದು ಪತ್ತಿದ ಕೆಯ್ಯಂ ಮುಳ್ಳುರ್ಚೆ ತೆಜೆದು ಪಲ್ಲಂ ಪೊಳ್ಳನೆ ನಗಿಸಿದುದು ಕಟಕವಾ ಮರ್ಕಟಕಂ (ರಸರ. ೨-೯೯).

[ ಮುಳ್ + ಉರ್ಚು ]

**ಮುಳ್ಳುವಂದಿ** ' ಮುಳ್ಪಂದಿ ' ನೋ.

**ಮುಳ್ಳುವೇಲಿ** ' ಮುಳುವೇಲಿ ' ನೋ.

**ಮುಳ್ಳುವೊಂಗೆ, ಮುಳ್ಳುಹೊಂಗೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಹೊಂಗೆಮರ : " ಅಂಗಾರವಲ್ಲರಿ – ಮುಳ್ಳುವೊಂಗೆ " (ಅಕಾ. ೨-೦೦). **ಮುಳ್ಳುಹೊಂಗೆ** : " ಮರ್ಕಟೀ – ಅಜಮೋದ . . . ಮುಳ್ಳುಹೊಂಗೆ " (ಓಪಂ. ೦೧೩). [ಮುಳ್ಳು (<ಮುಳ್) + ಹೊಂಗೆ]

**ಮುಳ್ಳುವೊರೆ** (ಕ್ರಿ). ಮುಳ್ಳುಗಳಿಂದ ತುಂಬಿರು; ಕಂಟಕಮಯವಾಗಿರು: ಅರ್ಚಿಸುವರು ಮುಳ್ಳುವೊರೆದ ಲೋಹದಲವಮರದೊಳಕಟ (ಶಾಶಂತ. ೭-೯೦). [ಮುಳ್ಳು (<ಮುಳ್) + ಪೊರೆ₂]

**ಮುಳ್ಳುಸವುತೆ** ' ಮುಳುಸೌತೆ ' ನೋ.

**ಮುಳ್ಳುಸೀಗ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಸಸ್ಯ : " ಜನೀ, ಜತೂಕಾ . . . ಸಂಸ್ಪರ್ಶಾ – ಈ ೬ ಮುಳ್ಳುಸೀಗೆ " (ಶಾಶರಾ. ೦೦೨). [ಮುಳ್ಳು (<ಮುಳ್) + ಸೀಗೆ₁]

**ಮುಳ್ಳುಸುಂಡೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಸುಂಡೆಬಳ್ಳಿ : ಮುಳ್ಳುಸುಂಡೆಹೂವು ಎರಡು ಮಾನ ಒಂದು ಮಾನ ಹಸುವಿನ ಹಾಲಿನಲ್ಲಿ ಬೇಯಿಸಿ . . . ತೆಗೆದುಕೊಳ್ಳೆ ವೀರ್ಯವೃದ್ಧಿ (ಶಾಮಶಾ. ೨೩೪). [ಮುಳ್ಳು (<ಮುಳ್) + ಸುಂಡೆ₁]

**ಮುಳ್ಳುಸೇವಂತಿಗೆ** (ನಾ). ಬಿಳಿಯ ಬಣ್ಣದ ಹೂವುಗಳನ್ನು ಬಿಡುವ, ಮುಳ್ಳುಗಳುಳ್ಳ ಒಂದು ಬಗೆಯ ಸಸ್ಯ : ಇಂಗಳದ ಹಣ್ಣು, ಮುಳ್ಳುಸೇವಂತಿಗೆ ಬೇರು . . . ಬಿಲ್ವಪತ್ರೆಕಾಯಿಯ ತಿರುಳು ಇವುಗಳ ನೈಲ್ಲಾ ಕಷಾಯಮಿಟ್ಟು ಸೇವಿಸಲು ಎಂಥ ದೋಷಜ್ವರವಾದರೂ ಕೆಡುಗುಂ (ಸವೈ. ೭೦೬).

[ಮುಳ್ಳು (<ಮುಳ್) + ಸೇವಂತಿಗೆ. / ತುಳು. ಮುಳ್ಳುಸೇವಂತಿಗೆ]

**ಮುಳ್ಳುಸೌತೆ**. 'ಮುಳುಸೌತೆ' ನೋ.

**ಮುಳ್ಳುಹಂದಿ** 'ಮುಳ್ಪಂದಿ' ನೋ.

**ಮುಳ್ಳುಹಣ್ಣು** (ನಾ). ಮುಳ್ಳುಗಳಿಂದ ಕೂಡಿದ ಹಣ್ಣು ಬಿಡುವ ಒಂದು ಬಗೆಯ ಗಿಡ : ಪುರ್ವಾಲಿ, ಮುಳ್ಳುಹಣ್ಣು (ವೃಕಿಗಿ. ೭೯-೦೬೩೩) ; ಹುಡುಗಿಯರೆಲ್ಲ ಮುಳ್ಳುಹಣ್ಣುಗಳನ್ನು ತೆಗೆಯಲು

ಹೋಗಿದ್ದವು (ಮೂರುದಾ. ೨೯೩).

[ಮುಳ್ಳು (<ಮುಳ್) + ಹಣ್ಣು₃ (<ಪಣ್₃)]

**ಮುಳ್ಳುಹತ್ತರಿಕೆ** 'ಮುಳ್ಳತ್ತರಿಗೆ' ನೋ.

**ಮುಳ್ಳುಹರಿವೆ** (ನಾ). ಮುಳ್ಳುಗಳಿರುವ ಒಂದು ಬಗೆಯ ಹರಿವೆ ಸೊಪ್ಪು : ಮುಳ್ಳುಕೀರೇಸೊಪ್ಪು, ಮುಳ್ಳುಹರಿವೇಸೊಪ್ಪು (ವೃ.ಶಿ. ೬-೯೩). [ಮುಳ್ಳು (<ಮುಳ್) + ಹರಿವೆ (<ಪಱುಪೆ)]

**ಮುಳ್ಳುಹಲಸು** (ನಾ). ಮೈಮೇಲೆ ದೊಡ್ಡ ದೊಡ್ಡ ಮುಳ್ಳುಗಳಿರುವ ಒಂದು ಬಗೆಯ ಹಣ್ಣು ಮತ್ತು ಅದರ ಗಿಡ ; ಅನಾನಸು : 'ಅನಾನಸ್' ಎಂಬ ಹಣ್ಣು ಮತ್ತು ಗಿಡ ; ಮುಳ್ಳುಹಲಸು ; ಪರಂಗಿ ಹಲಸು ; ನೆಲಹಲಸು (Ananus. ಕಂಕೋ).

[ಮುಳ್ಳು (<ಮುಳ್) + ಹಲಸು (<ಪಲಸು)]

**ಮುಳ್ಳುಹಾಲಿವಾಣ** 'ಮುಳ್ಳುಪಾರಿವಾಳ' ನೋ.

**ಮುಳ್ಳುಹಾಸಿಗೆ** (ನಾ). (ಅಲಂ) ಯಾತನೆಯನ್ನುಂಟುಮಾಡುವಂತ ಹುದು ; ಕಷ್ಟಕರವಾದುದು : ಯಾರಿಗೂ ಬೇಡವಾಗಿದ್ದೇನೆ ಎಂಬ ಅರಿವು ಕೆಂಪುದೇವಯ್ಯನಿಗೆ ಕ್ಷಣಕ್ಷಣಕ್ಕೂ ಉಂಟಾಗಿ ಅರಸುತನವು ತನಗೆ ಮುಳ್ಳುಹಾಸಿಗೆಯಂತಾಗಬೇಕು (ಶರೇವ. ೧೯೭).

[ಮುಳ್ಳು (<ಮುಳ್) + ಹಾಸಿಗೆ (<ಪಾಸುಗೆ₁)]

**ಮುಳ್ಳುಹುಳ** (ನಾ). ಮುಳ್ಳಿನಂತಹ ಕೊಂಡಿಗಳಿರುವ ಒಂದು ಬಗೆಯ ಹುಳು ; ಚೇಳು : "ವೃಶ್ಚಿಕಃ – ೧ ಮುಳ್ಳುಹುಳಚೇಳು." (ಸಿದ್ಧಾಂತ. ೪೭೦). [ಮುಳ್ಳು (<ಮುಳ್) + ಹುಳ (<ಪುೞು)]

**ಮುಳ್ಳುಹೊನಗೊನ್ನೆ** (ನಾ). ಮುಳ್ಳುಗಳಿರುವ ಒಂದು ಬಗೆಯ ಸಸ್ಯ, – ಹೊನಗೊನ್ನೆ : (ವೃ.ಶಿ. ೫-೯೩).

[ಮುಳ್ಳು (<ಮುಳ್) + ಹೊನಗೊನ್ನೆ (<ಪೊನ್ನಗನ್ನೆ)]

**ಮುಳ್ಳುಹೊನ್ನೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಹೊನ್ನೆಮರ : ಮುಳ್ಳುಹೊನ್ನೆ . . . ಗಡುತರವಾಗಿ ಬೆಳೆಯುತ್ತದೆ. ಕಟ್ಟಿಗೆ ಗಟ್ಟಿ (ಕಶಾಗ. ೯೭).

[ಮುಳ್ಳು (<ಮುಳ್) + ಹೊನ್ನೆ (<ಪೊನ್ನೆ)]

**ಮುಳ್ಳೂರು** 'ಮುಳ್ಳೂಱು' ನೋ.

**ಮುಳ್ಳೂಱು, ಮುಳ್ಳೂರು** (ಕ್ರಿ). ಮುಳ್ಳನ್ನು ಚುಚ್ಚು, – ನೆಡು : ವಿಸರ್ಜಿಸಿ ಬಿಡುವಾಗ ಎಲ್ಲಿರ್ದನೊ ಮುಳ್ಳೂಱಿ ತೆಱಪಿಲ್ಲದಿಪ್ಪ ಅಖಂಡವಸ್ತು (ಚಶವ. ೪. ೦೨೦೩). ಮುಳ್ಳೂರು : ಅಂದಿನ ಸಭೆಯಲ್ಲಿ ಮುಳ್ಳೂರು ವಷ್ಟೂ ಸ್ಥಳವಿರಲಿಲ್ಲ (ಜೂ೨). [ಮುಳ್ಳು (<ಮುಳ್) + ಊಱು₁]

**ಮುಳ್ಳೆಳ್ಳು** (ನಾ). ಮೊನೆ ಮುರಿಯದ ಎಳ್ಳು ; ಚೂಪಾಗಿರುವ ಎಳ್ಳು : ಭೂಮಿಗೆ ವಿಚಿತ್ರವಾದುದು ಮಂಟಪಂ ನೋಡೆ ಹೋಮ ಕುಂಡಂ ಸುಡುವ ಮುಳ್ಳೆಳ್ಳುಗಳ್ಕೂಡೆ (ಶೀರರ. ಹ. ೯೬೩-೩).

[ಮುಳ್ಳು (<ಮುಳ್) + ಎಳ್ಳು (<ಎಳ್)]

**ಮುಳ್ಳೊತ್ತು** (ನಾ). ೧. ಕಾಲಿಗೆ ಮುಳ್ಳು ನಾಟದಿರಲು ಹಾಕಿ ಕೊಳ್ಳುವ ಚಪ್ಪಲಿ,– ಮೆಟ್ಟು : ಗುರುವೆ ಮುಳ್ಳೊತ್ತುಗಳ ಮಾಡಿ ಕಾಲು ಹಾಕುವೆನು (ಕನ್ನ. ೬೯); ಹಾಯೆ ಹರಿಗೋಲಾದೆ ; ರಾಯಭೇರಿಗೆ ಆದೆ ; ರಾಯರಾ ಕಾಲಿಗೆ ಮುಳ್ಳೊತ್ತುವಾದೆ (ಶೀಗಬ್ಬ. ೦೭೯). ೨. (ಅಲಂ) ಕಿರುಕುಳವನ್ನು ಕೊಡುವಂತಹುದು ; ಉಪದ್ರವಕಾರಿ ಯಾದುದು : ಕೃಷ್ಣದೇವರಾಯ ವಿಜಯಸಾಮ್ರಾಜ್ಯಕ್ಕೆ ಶತಮಾನ ಗಳಿಂದ ಮುಳ್ಳೊತ್ತಾಗಿದ್ದ ವಿಜಾಪುರರಾಜ್ಯವನ್ನೇ ಉಧ್ವಸ್ತಗೊಳಿಸುವ ಪ್ರಬಲಾಕಾಂಕ್ಷೆಯಿಂದ ಜೈತ್ರಯಾತ್ರೆಯನ್ನು ಮುಂದುವರಿಸಬಯಸಿದನು (ಅಳಿಕ. ೧೦೦). [ಮುಳ್ + ಒತ್ತು₂]

**ಮುಱಿ₁, ಮುರಿ₂** (ಕ್ರಿ). ೧. ತುಂಡುಮಾಡು ; ತುಂಡರಿಸು : "ಮುಱಿ–ಮೋಟನೇ, ಖಂಡೇ ಚ (ತುಂಡು)" (ಶಮ೨): ಕೈಟಂಬಱಿ ಮುಱಿ ನಿಟ್ಟೆಲ್ವನಿರಿದು (ವಡ್ಡಾರಾ. ೧೨೭-೨) ; ಪಗೆವರ ನಿಟ್ಟೆಲ್ವಂ ಮುಱಿ ಪೊಡೆನಗೆ ಪಟ್ಟಂಗಟ್ಟಾ (ಕಂಕಥಾ. ೧೦-೦೭) ; ಕುಳಿಕನ ದಾಡೆಯುಂ ಮುಱಿವ ದಿಗ್ಗಜಮುಂ ಪಡೆಪಾಯ್ವ . . . ಅಳವಂ ಸಮಂತು ತಳೆದಂ ರಣದೋಹಳನಾ ಕುಮಾರಕಂ (ಕಂದ್ರಕು. ೬-೨೮) ; ರಥವನು ನಾಕುಶರದಲಿ ಮುಱಿದು ಸೂತನ ತಲೆಯನೆರಡಱಿ ನೂಕಿ . . . ಐದಿದನು ದ್ರೋಣ (ಕುಮ್ಮಾದ್ರೋ. ೨-೪೨). ೨. ತುಂಡಾಗು ; ತುಂಡರಿಸಿ ಹೋಗು : ಮಾಗುಂ ಮುಱಿವನ್ನಂ ಮುಂದೆ ಮುಗ್ಗುತ್ತೆಡಬಲದೊಳಗಾಂ ಬೀಱುತುಂ ಪಕ್ಕ ಗೂಡಾಗೊಱಗುತ್ತಂ ಪೋಗಿ (ಕಾದಂಪೂ. ೦೯೦) ; ಕುಳಿಕನ ಪಲ್ಗಳಂ ಮುಱಿಯೆ ಪೋದಿದರಾರ್ (ಗರಾಅಭು. ೯-೨೦) ; ಚನ್ನಮಲ್ಲಿಕಾರ್ಜುನಯ್ಯ ನಿಱಿದಲಗು ಒಡಲಲ್ಲಿ ಮುಱಿದು ಹೊರಳುವೆನ್ನಳಲನು ನೀವೆತ್ತ ಬಲ್ಲಿರೆ (ಮಹಾದೇ. ೪. ೦೨೦-೨೯೦) ; ಗಿರಿಯ ಶಿರದಲಿ ಹೊತ ಕಕ್ಕಿಯ ಮರ ಮುಱಿದು ಬೀಳ್ವಂತೆ ವಿಮಳಾಭರಣಕಾಂತಿಯ ಕಡಲ ಕೋಮಲಕಾಯ ಭಗದತ್ತ ಉರುಳಿದನು (ಕುಮ್ಮಾದ್ರೋ. ೩-೭೬). ೩. ಕಡಿ ; ಕತ್ತರಿಸು ; ಛೇದಿಸು : ಅರಸಂ ಕಂಡು ಕಡುಮುಳಿದುದಱ ಗೋಣಂ ಮುಱಿದೊಡಾ ಗಿಳಿಯುಂ ಸತ್ತು (ವಡ್ಡಾರಾ. ೦೦೯-೧) ; ಬ್ರಹ್ಮಾಂಡಮಂ ಪೊಕ್ಕನ ಪೊಡೆಮಾ ಬ್ರಹ್ಮನ ಗಂಟಲಂ ಮುಱಿದಪೆಂ (ಕಂಕಥಾ. ೦೩-೭೬) ; ತಾಳತರುವನು ಮುಱಿದು ಸಮರಾಭೀಳದುಂದುಭಿಯಟ್ಟಿಯನು ತುದಿ ಗಾಲಲೊದೆದರಸಾದನಿನತೆಶಹಿಂಗೆ ರಘುನಾಥ (ತೊರರಾ. ೯-೨ ತೂಕಸ). ೪. ಕಡಿದುಹೋಗು ; ಕತ್ತರಿಸಲ್ಪಡು : ಮುತ್ತಿನ ಮುಱಿದ ಲಂಬಣಾ ಗಳ್ಪೆರಸೆಟಲ್ವ ಪಚ್ಚೆಯ ಸರವ ಹಾರದ ತೋರಣಂಗಳಂ ನುಗುಳುತ್ತುಂ ಬಂದು (ಅಂತ್ಕು. ೪-೨೩ ವ). ೫. ಕೀಳು ; ಕೊಯ್ಯು : ಪಾದಪಂಗಳ ಪುಷ್ಪಸ್ತಬಕಂಗಳಂ ಮುಱಿವುತುಂ ಪೋಗಲ್ ಮದೇಭಂಗಳ್ (ಕಾದಂಪೂ. ೬೩೦) ; ಸುರಹೊನ್ನೆದೊಂಗಲ ಮುಱಿದು ಪರಮವ್ರತಸ್ಥೆ ಮತ್ತೊರ್ವಳು ಪಾದರಿಯೆರಲ್ಗಳ ತಿಱಿದಿಕ್ಕಿದಳು (ಸೋಹಕ. ೨೯-೬೩). ೬. (ಬೆಲ್ಲಾಪಿಲ್ಲಿ ಯಾಗಿ) ಸೋತುಹೋಗು, – ಪರಾಜಯಹೊಂದು : ಅಂತು ಧನುರ್ವಲದ ಮೊನೆ ಮುಱಿವಂತೆ ಪಲವುಮುಱಿಕೆಯ ಬಿಲ್ಲನಾಯಕರ್ಕಳುಗ್ರ ಸಾಯಕದಿಂ ಸಾಱಿ (ಶಾಂತಿಪು. ೯-೦೦ ವ) ; ಘೋರರುದ್ರನ ದಳ ಮುಱಿಯಿತ್ತು (ಅವಕಂ. ೫೫-೨೩೫). ೭. ಪಾಲಾಗು ; ವಿಭಾಗವಾಗು : [ನಾ]ಗಘೋರನೆಂಬೋ ಬಟ್ಟೆಕೆಱಿಯ [ಧಾಟಿಗೆ] ಮುಱಿಯುವಡವ ಪೊಲನ ಕೊಳ್ವೆನೆನ್ದು ಜನ್ದೊಡ್ಡಿ ನಿನ್ದಾನೆಂಬ ಮಾತಂ ಕೇಳ್ದು (ಸಾಇಇ. XI-i, ೨೦-೬; ೬೯೩). ೮. ತೊಲಗು ; ಬಿಟ್ಟುಹೋಗು ; ಮರೆಯಾಗು : ಕೋಪ ವಡಗದೆ ತಾಪ ಮುಱಿಯದೆ ಬಱಿದೆ ಭಕ್ತರಾದೆವೆಂದು ಬೆಬ್ಬಬೆಱವವರ ಕಂಡು ಆನು ಮುಱುಗುವೆನಯ್ಯ (ಕ್ರಶುವ. ೫೬) ; ತ್ರಿಜಗಬೌಪಟಮಲ್ಲ ನೀನೆನಿಪ ಮಾನಗರ್ವವು ಮುಱಿಯದೇ ರಿಪುಸೇನೆ ನಗದೇ (ಕುಮ್ಮಾಶೀ. ೩-೫೩). ೯. ಸೋಲಿಸು ; ಪರಾಭವಗೊಳಿಸು : ಕಳಿಂಗನಂ ಮುಱಿದು ಭಂಗಿಸಿದಾತ್ಮಭುಜಪ್ರತಾಪಮಂ ಕೇಳೆ (ಎಕ. VII, ಶಿವಮೊ. ೬೯-೦೩ ; 1112); ಅವಂದಿರಂ ಮಲ್ಲಯುದ್ಧದಿಂ ಮುಱಿದು ಕೊಲಿಸುವೆಂ (ಜಗಂ. ೬-೩೭ ವ) ; ಕೊರಲೊತ್ತುತೆ ಮುಱಿವನವನ್ ಬಟಲದ ಮಲೆಗೂಳಿ ಯುಮುನ್ (ಅಂತಗೊ. ೦೭-೩೩೨). ೧೦. ನಾಶಮಾಡು; ಧ್ವಂಸಗೊಳಿಸು: ಎನ್ನ ಮಾಯದ ಮದವ ಮುಱಿಯಯ್ಯಾ (ಮಹಾದೇ. ೪. ೬-೯) ; ಮತ್ತೆ ಮುಱಿದನು ಹತ್ತುಸಾವಿರಮತ್ತಗಜವನು . . . ರಣಾಗ್ರದಲಿ (ಕುಮ್ಮಾಶೀ. ೮-೫೨). ೧೧. ಕೆಡಿಸು ; ಹಾಳುಮಾಡು : ಅಱುಹಿದರೆ ವಿದುರಂಗೆ ಕಾರ್ಯವ ಮುಱಿವನಾತನು (ಕುಮ್ಮಾಸ. ೦೨-೨೩). ೧೨. ಕೊಲ್ಲು ; ಸಾಯಿಸು : ಮುಱಿದಟ್ಟಿದುಯ್ಯೆ ನಿನ್ನನಿರದಂತಕನಾಂ ನಡೆ ನೋಡೆ ನೋಡೆ ನೀಂ ಕರಗಿದೆಯೆಂತುಂ (ಅಂತ್ಕು. ೩-೧೪) ; ಹಾವಿನ ಬಳಗ ಗರುಡನ

ಮಱಿಯು ಮುಱಿದವೊಲಾಯಿತಕಟ (ಕಾವ್ಯಾರ್ಣ. ೬-೬೩); ತರಣಿವಂಶಜರು . . . ರಜನೀಚರ ವಿರೋಧನ ಮುಱಿದು ಸಾರ್ದರು ಪಂಚವಟಿವನವ (ತೊರವೆ. ೩-೧ ಸೂತ್ರ) ; ಏಗಳುಂ, ನೀನ್, ನೋೞ್ಪೆನ್, ಅಱಗುಲಿಗಳನ್ ಮುಱಿವ ನೋಂಪಿಯನ್ ನೋಂತಿರ್ಪ (ಅಕ್ಕಾ. ೧-೨). ೧೩. ನಿಲ್ಲಿಸು ; ಭಂಗಗೊಳಿಸು : ಮುಱಿದು ನಿದ್ರೆಯ ಕಾಮಿನಿಯರ ತರುಣಿಯರು ಬಳಸಿದರು (ತೊರವೆ. ೫-೩-೨೯). ೧೪. ಕೆಡು ; ಹಾಳಾಗು : ಮುಱಿದ ಮನಮಂ ಮೆಚ್ಚಿಸಿದವನೊ (ಬಸವ. ೪೦-೪೦) ; ಮುಱಿದ ಭರತಾನ್ವಯದ ಬೆಸುಗೆಯು ತಿಱಿಸು ತೋೞೞೆ ಪುಣ್ಯವೆನುತೆಚ್ಚಱಿತು ನುಡಿದಳು (ಕುಮಾ. ೩-೩). ೧೫. ಮೀರು ; ದಾಟು ; ಉಲ್ಲಂಘಿಸು : ನುತ ಸಮ್ಯಕ್ತ್ವಮಣುವ್ರತಸ್ಥಿತಿ ಸಮತ್ವೀಭಾವನಂ ಪ್ರೋಷಧಬ್ರತಮೆಂದುಂ ಪಸಿಯೊಂದುಮಂ ಮು[ಪಾಠಾಂ. ಮ]ಱಿಯೆನೆಂಬೀ ಪೂಣ್ಕೆ ಮಾಡೆಂ (ಅದಿ. ೬-೧೦) ; ಏಳುಕಡಲಿನ ಮೇಲೆ ಮುಱಿವರು ಕೀಲ ಕಳೆವರು ರವಿಯ ಬಂಡಿಯ (ಸಂಶಕ. ೭-೧೬) ; ದಂಡೆಯು ಮುಱಿದಂತೆ ಬಳೆದಿರ್ದ ಕಮ್ರೋಸೆ ಖಂಡೇಂದುಭಾಳಕಸ್ತುರಿಯು . . . ಸುಪ್ರಚಂಡನ ಮೊಗವ ನೋಡಿದನು (ಮೋಹತ. ೩೫-೪೯). ೧೬. (ತುದಿಯು) ಮೊಂಡಾಗು ; ಮುಕ್ಕಾಗು : ಮಱಿದುವು ಗಱಿ ಚಂಚುಗಳುಂ ಮುಱಿದುವು ತಲೆನಡುಗುತಿರ್ದುವೆನ್ನದೆ ತರದಿಂ ಬಱಿಗೆಯ್ವುತಿರ್ದಮಾಯ್ದಱಗುಲಿ ಕರ್ವೇಡನಲ್ಲಿ ಮುದುಗಿಳಿಗಳುಮಂ (ಕಾದಂಬ. ೦೭೯). ೧೭. ಚುಚ್ಚು ; ನಾಟು : 'ಮುಳ್ಮುಱಿ' ನೋಡಿ. ೧೮. ಇಲ್ಲವಾಗು ; ನಾಶವಾಗು : ಪುಲ್ ಮುಱಿದುದು ಬೆಳಸುಡುಗಿ ಬಯಲ್ ಮಸಗಿದುದು (ಅಪಂಶ. ೦೦-೩೯). ಮುರಿ₂ : ೧. ಅವಳು ರೊಟ್ಟಿಯನ್ನು ಮುರಿದು ಮುರಿದು ನಾಯಿಗೆ ಹಾಕುತ್ತಿದ್ದಳು (ರೂಢಿ). ೨. ಭರದಿಂದ ಯಕ್ಕಲನ ಹೊಕ್ಕಿರಿದು ಕರಡಿ ಬಾಯ್ದೆರೆಯೆ ಮುಸುಡಂ ಮುರಿಯಲಿಕ್ಕಿ ಬಗ್ಗನ ಬಾಯೊಳಿರದೆ ಸೇರಿಸಿ ಕಠಾರಿ (ಸಸಮೋ. ೦೬-೨೩); ಜಾರಿಬಿದ್ದುದರಿಂದ ಅವನ ಕೈಮೂಳೆ ಮುರಿದಿದೆ (ರೂಢಿ). ೬. ಕೆಲವರು ಮಡಿದು ಹೋದರು, ಕೆಲವರು ಮುರಿದು ಓಡಿಹೋದರು (ಮುಂಬಯಿ. ೬. ೫-೪೯). ೯. ಬತ್ತಿಸಿ ನೃಪಾಲರಾಟೋಪಮಂ ಕೋಪದಿಂ, ನೀಲಧ್ವಜನ ಮುರಿದು (ಜೈಮಿನಿ. ೭೨-೦೯೬೯). ೧೦. ಅವರ ಸೊಕ್ಕು ಮುರೀಲಿಕ್ಕೆ ಒಂದೇ ಹಾದಿ (ದಾಸಹು. ೩೬); ವೈಭವಗಳ ನೂರ ನೀವನು ದೇವನು ಮುರಿಯುವೊಡಥಮಜೀವವನು (ಇಂತಾಶ. ೩೦-೪೩). ೧೧. ಚಿನ್ನರಿಹರೆಂಬಣಿಕೆ ಮುರಿಯೆ ಬಿಸುಸುಯ್ವಂ (ಕಾರಾಶ. ೩೬-೩೭); ಮನೆ ಮುರಿದರೆ ಕಟ್ಟಬಹುದು, ಮನ ಮುರಿದರೆ ಕಟ್ಟಲಾಸ (ಗಾದೆ). ೧೫. ಸಮಾಜದ ನೀತಿನಿಯಮಗಳನ್ನು ಮುರಿದುಬಿಡುವರು (ಶಿಕ್ಷದ. ೦೦೦). ೧೯. ಕಳೆ ; ವ್ಯಯವಾಗು : ಕೊಬ್ಬರಿಎಣ್ಣೆ ಡಬ್ಬಿಯೊಳಗಿಂದ ಬೇಡಿದ್ದಾದರೆ ಬಹಳ ಮೋಹನತ್ತು ಮತ್ತು ವೇಳೆ ಮುರಿಯುತ್ತದೆ (ಮುಂಬಯಾ. ೦೫೯). ೨೦. ತಡೆ ; ನಿರೋಧಿಸು ; ಅಡ್ಡಿಪಡಿಸು : "ಇಂದು ನಾಗಪಂಚಮಿ, ಉಪ್ಪರದ ಹೊತ್ತಿಗೆ ಹೋಗಬೇಡಿರಿ" ಎಂದು ನಾವು ಹೊರಟಾಗ ಬಹಳಷ್ಟು ಜನ ಮುರಿದು ಮಾತಾಡಿದ್ದರು (ಸ್ವ.ಜೀ. ೪೬೪). ೨೧. ಸಾಯು ; ಮರಣಹೊಂದು : ಯುದ್ಧ ಒದಗಿ ಮರಣ ಹೊಂದಿದರೆ ವೀರಸ್ವರ್ಗವನ್ನು ಪಡೆಯುತ್ತೇವೆ . . . ಕ್ಷತ್ರಿಯನು ಮುರಿದಾನೇ ಹೊರತು ಮಣಿಯುವುದಿಲ್ಲ (ವಕಶಾ. ೨೫೩). ೨೨. (ಇನ್ನೊಬ್ಬರಿಗೆ ಕೊಡಬೇಕಾದ ಹಣ ಮೊತ್ತಾದುವನ್ನು) ಮಜಾ ಮಾಡಿಕೊಳ್ಳು ; ಹಿಡಿದುಕೊಳ್ಳು ; ವಶದಲ್ಲಿಟ್ಟುಕೊಳ್ಳು : ಕಳುಹಿಸದೆ ಹೋದರೆ ನಮದಾ ಯಾವ ವರ್ತಕನಿಗೆ ಕೊಟ್ಟಿರುತ್ತದೆಯೋ ಅವನು ಮುರುಕೊಂಡರೆ ಮುರಿಯುವೆವು. ಇಲ್ಲದಿದ್ದರೆ ಮಾಲು ಖರೀದಿ ಮಾಡಿ ಕೊಟ್ಟೇವು (ಮುಂಬಯಾ. ೨೬೫). ೨೩. ಮಾರ್ಪಡು ; ಬದಲಾಗು ; ವಿನಿಮಯವಾಗು : ಮಾಯದೆಗಳನ್ನು ಹಾಕಿ ಮಾರುವ ಈ ಹುಂಡಿಗಳನ್ನು ಕೊಳ್ಳಲು ಉಪಯೋಗಿಸುತ್ತಾರೆ. ಪೇಟೆಯಲ್ಲಿ ಇವು ಧಾರಾಳವಾಗಿ ಸಂಚರಿಸುತ್ತವೆ, ನಗದಿಗೆ ಮುರಿಯುತ್ತವೆ (ಹಣಶ್ರ. ೨೦೯).

ಮುರಿದುಕೊಳ್ಳು = ೧. ತುಂಡಾಗು ; ಕತ್ತರಿಸಿ ಹೋಗು : ಸರಪಳಿಗೆ ತುಕ್ಕು ಹಿಡಿದಿದ್ದರಿಂದ ತನಗೆ ತಾನೇ ಮುರಿದುಕೊಂಡು ಹೋಯಿತು (ರೂಢಿ). ೨. (ಇನ್ನೊಬ್ಬರು ಕೊಡಬೇಕಾದ ಹಣ ಮೊಂತಾದುವನ್ನು) ಮಜಾಮಾಡಿಕೊಳ್ಳು ; ಹಿಡಿದಿಟ್ಟುಕೊಳ್ಳು ; ವಶಕ್ಕೆ ತೆಗೆದುಕೊಳ್ಳು : ನಾನು ನಿಮಗೆ ಕೊಡಬೇಕಾಗಿರುವ ದುಡ್ಡನ್ನು ಸಂಬಳದಲ್ಲೇ ಮುರಿದುಕೊಳ್ಳಿ (ರೂಢಿ). ೩. ಕೊಲ್ಲು ; ಸಾಯಿಸು ; ನುಂಗಿಹಾಕು : ಆಚಾರ್ರು ಗಾಳಿಯಾಗಿ ತನ್ನನ್ನು ಮುರಿದುಕೊಳ್ಳಬೇಕು ಎಂದು ಹೂಡಿದ್ದ ಹೂಟವನ್ನು ತೊದಲುತ್ತಾ ಹೇಳಿದ (ಸಮ್ಮಸ. ೨೦೨).

ಮುರಿದುಮುರಿದು ಮಾತಾಡು = (ಸಂಕೋಚ, ಅನುಮಾನಗಳಿಂದ) ತಡೆದುತಡೆದು ಮಾತನ್ನಾಡು : "ಹಾ! ನೀವು ಇಬ್ಬರೇ ಇಲ್ಲಿ ಯಾವಾಗ–" ಎಂದು ಮುರಿದು ಮುರಿದು ಮಾತಾಡಿದೆ (ಕಳ್ಳಕು. ೩೩).

[ದೇ.॥ ತಮಿ. ಮುಱಿ, ಮುರಿ; ಮಲ. ಮುಱಿ; ತೆಲು. ಮುಱಿಯು, ಮುರಿಯು]

**ಮುಱಿ₂** (ನಾ). ೧. ಚೂರು ; ತುಂಡು ; ತುಣುಕು : ಪಾಱಿದ್ದುದ ಭೃಂಕಪುಖರ ಖುರಧಾರಾಟಂಕಾಹತಿ ಮುಗಿಲ ಮುಱಿಗಳಂ ಕೆದಱಿದಿನಂ (ಶಾಂತಿಪು. ೦೦-೪೨); ವಿರಹಶಿಖಿಯುಳುರೆ ಜಳಶೀಕರನಿಕರಮೆ ಬಲಿತ ತೆಱದಿನ ಬಲೆಯ ಮೈಯೊಳ್ ಕರಮೆಸೆದಿರ್ದುವು ಸಖಿಯರ್ ಕರತಳದಿಂ ತಳೆಯೆ ತೊಳಪ ಮುತ್ತಿನ ಮುಱಿಗಳ್ (ಲೀಲಾವ. ೦೦-೩೦); ಅರೆಗಣ್ಗಳೆಸೆವ ಕೋಣನ ತಲೆಯ ಮುಱಿಗಳಿಂ . . . ಎಸೆವ ದುರ್ಗಾನಿಲಯಮುಂ ಮಹೋದ್ಯೋಗದಿಂ ವಸುಧಾಧಿಪಂ ಪೊಕ್ಕಂ (ರಸಕ. ೫-೫); ಒರ್ವ ಪುಳಿಂದನಿತಂಬಿನಿ . . . ಸುರಧನುವಿನ ಮುಱಿಯುಂ ಕೈವಿಡಿದು ಬಂದಂದ ದೊಳೊಂದರಗಿಳಿ ಸಹಿತಂ ನಿಂದಿರ್ದಪಳ್ (ಕಥುಕಾ. ೨-೨೦). ೨. ಸೋಲು ; ಅಪಜಯ : 'ಮುಱಿವಡೆ' ನೋಡಿ.

ಮುಱಿಮುಱಿಯಾಗು = ತುಂಡು ತುಂಡಾಗು ; ಅನೇಕ ಚೂರುಗಳಾಗು : ಸುಯ್ವ ಸುಯ್ಲ ಸುೞಿಗೆ ನೆಲೆಗೆಟ್ಟು ಮುಱಿಮುಱಿಯಾಗಿ ನಿಡುಗಂಬಂಗಳ್ ತೇಂಕೆ (ರಾಮಾಕ್ಕ. ೧೬೦-೨೯). [< ಮುಱಿ₁/. ತಮಿ. ಮುಱಿ, ಮುರಿ; ಮಲ. ಮುಱಿ; ತೆಲು. ಮುರ, ಮುರಿಯು]

**ಮುಱಿಕಾಯಿ** (ನಾ). ಔಷಧಿಗೆ ಉಪಯೋಗಿಸುವ ಒಂದು ಬಗೆಯ ಕಾಯಿ : ಮುಱಿಕಾಯಿ ನುಗ್ಗಿನಖಮುಂ . . . ವರದೇವದಾರು ಕಣ ಮೊಂದಿರೆ ಮಾಸಿಯೊಳರೆದು ಬೇದುಗಟ್ಟು ವಿಷಘ್ನಂ (ಕಪುಡ. ೦೬-೭೬).

[< ಮುಱುಕಿಲ್₂ + ಕಾಯಿ₄ (< ಕಾಯ್₄)]

**ಮುಱಿಕಿಸು** 'ಮುಱುಕಿಸು' ನೋ.

**ಮುಱಿಕು**, ಮುಕ್ಕು₄, ಮುರುಕು₃, ಮುಱುಕು₃ (ನಾ). ೧. ತುಂಡು ; ಚೂರು ; ತುಣುಕು : ದುಱುದುಱಿಪ ತಲೆಮಿದುಳ ದಂಡೆಯ ಹಱಿಗರುಳ ನೆಣಪಸೆಯ ಮೂಳೆಯ ಮುಱಿ[ಪಾಠಾಂ. ಱು]ಕುಗಳ ಕಡಿಖಂಡ ಮಯವಾಯ್ತಖಿಳ ಚತುರಂಗ (ಕುಮಾದ್ರೋ. ೧೯-೩೩). ಮುಕ್ಕು₄ : ೨. ಯಾವುದಾದರೊಂದು ವಸ್ತುವಿನ ಸ್ವಲ್ಪಭಾಗವು ಮುರಿದು ಹೋಗಿರುವುದು ಮತ್ತು ಹಾಗೆ ಭಾಗಶಃ ಮುರಿದುಹೋದ ವಸ್ತು : "ಖಾದನವಿಶೇಷ ಗರ್ವಂಗಳೊಳ್ ಬಗೆಯ ಭಾಂಡದೊಳಗಿ ಷತ್ಖಂಡನಮದಾಗೆ ಮುಕ್ಕು" (ಕಬ್ಬಿಷು. ೮೦); ಹಾಲು ಕಂದಲು ತುಪ್ಪದ ಮಡಕೆಯ ಬೋಕು ಮುಕ್ಕನಬೇಡ (ಬಸವ. ೪೦೬); ಚಂದ್ರನು ಬಡವಾಗುತ್ತ ಬಂದು ಪ್ರಕಾಶಬಿಂಬದ ಒಂದು ಕಡೆಯಲ್ಲಿ ಮುಕ್ಕು ಕಾಣಿಸಿಕೊಂಡು, ಅದು ದೊಡ್ಡದಾಗುತ್ತ . . . ಕೃಷ್ಣಪಕ್ಷದ ಅಷ್ಟಮಿಚಂದ್ರನಾಗಿ ಬೆಳಗುವನು (ಜ್ಯೋತಿರ್ವಿ. ೨೦೫). ೩. ರಂಧ್ರ ; ಪೊಟರೆ : ಮುರುಡಿನಿಂ

ಮುರಿಕ್ಕಿನಿಂ ತಗ್ಗಿನಿಂ ತೆವರಿನಿಂ . . . ಆ ಪಥಂ ವಿವರ್ಜಿಸುವುದು (ತಿರುಕ್ಕು. ೩೬-೨೩); ಮನೆಯಲ್ಲಿರುವ ಬಿರುಕು ಮತ್ತು ಮುಕ್ಕುಗಳನ್ನೆಲ್ಲ ಮುಚ್ಚಿಸಿ . . . ಸುಣ್ಣ ಅಥವಾ ಬಣ್ಣಗಳನ್ನು ಬಳಿಸಬೇಕು (ಗೃಹವಿ. ೨೬೦). ಮುರುಕು$_3$ : ೧. ಸಾಧಾರಣ ಕಾರ ಆರೆದು ಇರಿಸಿಕೊಂಡು ಒಟ್ಟಿನ ಮುರುಕನ್ನು ಅದಕ್ಕೆ ಸೋಕಿಸಿ (ಪಾಕಶಾ. ೧೭). ೨. ಸಾಮಾನುಗಳಲ್ಲಿ ತೋರುವ ಬಿರುಕುಗಳು ಅಥವಾ ಮುರುಕುಗಳನ್ನು ಸರಿಮಾಡಿಸಿ . . . ಪಾಲಿಷ್‌ಹಾಕಿಸಿದರೆ, ಇವು ಬಹಳ ಕಾಲ ಹೊಸದಾಗಿಯೇ ಇರುವುವು (ಗೃಹವಿ. ೧೭೩). ೪. ಭಿನ್ನತೆ ; ವ್ಯತ್ಯಾಸ : ಏನೋ, ಎಲ್ಲರೂ ಸೇರಿ ಇದ್ದ ಮುರುಕು ಸರಿಪಡಿಸಿಕೊಂಡು ಹೋಗುವುದಕ್ಕೆ ಸಹಾಯ ಮಾಡಬೇಕು (ಕಪುವಿ. ೩೬). ೫. (ಅಲಂ) ಮೂಲವಸ್ತುವಿನಂತೆಯೇ ಕಾಣುವ ವಸ್ತು ; ಪ್ರತಿರೂಪ : ಲೆಕ್ಕಿಗರರಸನಂತೆ ಇವನು . . . ಸತ್ಯವಂತ ಹರಿಶ್ಚಂದ್ರನ ಮುರುಕಂತೆ (ತುಂಗಭ. ೧೯); ಅಪ್ಪನ ವಂಶೋದ್ಧಾರಕನ ವಿಷಯ ಹೆಚ್ಚು ಹೇಳಬೇಕಾದ್ದಿಲ್ಲ. ಎಷ್ಟಾದರೂ ಅಪ್ಪನ ಮುರುಕು (ಹೋರಪು. ೯೩). (ಗು). ೬. ತುಂಡಾದ; ಮೋಟಾದ : ಮಾಣಿಕಲಾಲನು ತನ್ನ ಮುರುಕುಬೆರಳಿಗೆ ಒಂದು ಕೃತಕವಾದ ಬೆರಳನ್ನು ಮಾಡಿಸಿ ಸಿಕ್ಕಿಸಿಕೊಂಡು (ಬಂಕಿಮ. ೨೨೦). ೭. ಮುರಿದು ಹೋದ ; ಭಗ್ನವಾದ : ಮುರುಕುಗುಡಿಸಲು ಇರಲಿ ಚಾಟಿಗೆ. ಸಿರಿಯರಸ ಮತ್ತೇನ ಬೇಡೆನು (ಕಬಪು. ೧-೩); ನೆನೆನೆನೆದು ಮೈಮರೆತು ನಲಿಯುವೆನು . . . ಅಂದು ಬೆಟ್ಟದ ತುದಿಯ ಮುರುಕುದೇಗುಲದಲ್ಲಿ ತಂದು ವಿಧಿ ನನಗಿತ್ತ ಪ್ರೇಮನಿಧಿಯ (ಇಂಗೀತ. ೪೪-೭). ಮುರುಕು$_3$ : ೧. ಮೇಲಿನ ' ಮುಱಿಕು ' ಉಲ್ಲೇಖದಲ್ಲಿರುವ 'ಕುಮಾರವ್ಯಾಸ. ೧೮-೩೩ ' ಪ್ರಯೋಗದ ಪಾಠಾಂತರವನ್ನು ನೋಡಿ.

ಮುರುಕುಮುರುಕು, ಮುಕ್ಕುಮುಕ್ಕು, ಮುರುಮುರುಕು (ದ್ವಿರುಕ್ತಿ): ಯುವಮನೆಗೆ . . . ಮನಸ್ಸು ಮುರುಕುಮುರುಕಾಗಲು ಇದೊಂದು ದುರಂತವೇ ಸಾಕು ಎನಿಸಿತು (ಅಂಹಾ. ೦೦೪); ಮುಕ್ಕುಮುಕ್ಕಾದೀ ಮುಕ್ಕಾಲ್ವಾಡುಗಳ ನಿಲ್ಕೆ ಜೋಕೆಯಿಂ . . . ತುಂಬುಮಾಡಂ ಪಾಡಿಂ (ಶಕಾ. ೬-೦೩೪ ವ); ಮಾನವನ ಮುರುಮುರುಕು ಮನಸ್ಸಿನ ಹರಹರಕು ಕಣ್ಣಿಗೆ ಕಾಣುವದದೆಷ್ಟು ? (ಸಾಹಿವಿ. ೭). ಮುಕ್ಕಾಗು = ೧. ತುದಿಯು ಮುರಿದುಹೋಗು : ಮುಕ್ಕಾಗಿ ತೋರ್ಪೊಡಿನಬಿಂಬಂ ತಾಂ . . . ಮೂಱುಮೆರಡು ತಿಂಗಳನಟ್ಟಿಗುಂ (ಶಬಾರ. ೩೭೦); ಮುಕ್ಕಾದ ಕೈದುವ ತರಿಸಿ ಕಳುಹಿಸುತಿರ್ದನತಿರಭಸದಲಿ ಕಲಿದ್ರೋಣ (ಕುಮಾರವ್ಯಾಸ. ೦೩-೦೬). ೨. ಕಡಮೆಯಾಗು : ಊನವುಂಟಾಗು : ಒಕ್ಕೈಯವನಾದರೂ ತಿಮ್ಮಣ್ಣನಾಯಕನ ಪರಾಕ್ರಮ ಮುಕ್ಕಾಗಿರಲಿಲ್ಲ (ಕವೀರ. ೧೨೦); ಗೌಡರಿಗೆ ಮಾನ ಮುಕ್ಕಾದ್ದಾಗ ಆತು (ಅಮಸಿ. ೭). ೩. ತಪ್ಪಾಗು ; ದೋಷಪೂರ್ಣವಾಗು : ನಿಮ್ಮ ತರ್ಕ ಮುಕ್ಕಾಯಿತ್ತು (ಪತಶಾ. I. ೩೩೯-೦೩). ಮುಕ್ಕುಮಾಡು = (ಅಲಂ) ಹಾಳುಮಾಡು ; ನಾಶಮಾಡು: ಶಂಕರಭಟ್ಟರೊಬ್ಬರೇ ಮಾತ್ರ, ತಮ್ಮ ಮಗಳ ಸುಖದ ಮೊಗ್ಗೆ ಹೂವಾಗದೆಯೇ ಕಳಚಿಬಿದ್ದು, ಅವಳ ದೈವವನ್ನು ಮುಕ್ಕುಮಾಡಿದುದಕ್ಕೆ ಹಗಲಿರುಳು ಕೊರಗಹತ್ತಿದ್ದರು (ಗಂಗಾಸಾ. ೨೭).

[< ಮುಱಿ$_1$ / ತಮಿ. ಮುಱುಕ್ಕು = ತುಂಡುಮಾಡು]

Δ ಮುಱಿಕ್ಕು ' ಮುರಿಗೆ$_1$ ' ನೋ.

**ಮುಱಿಗಣ್** (ನಾ). ಗಿಡವಲ್ಲಿ ಹಣ್ಣು ಅಥವಾ ಎಲೆಯನ್ನು ಕಿತ್ತ ಜಾಗದಲ್ಲಿ ಕಾಣಿಸುವ ತಗ್ಗಾದ ಭಾಗ : ಅಡವಿಯಾನೆಗಳಡಿಗೊಂಬು ಗೊಂಡ ತದುಕಿನ ಮುಱಿಗಣ್ಣೊಳೊಗೆದ ಪಗಿನೊಳಗ್ಗಿವೆಗಡಿಂ ಕಾಲ್ಗೊಡರ್ದು ಮಿಡುಮಿಡುಕಿ ಕಳವಳಿಪ ಕಳವಿಂಕಸಂಕುಳಂಗಳುಂ . . . ಅಗುರ್ವುವಡೆಯ (ಶಂಪ್ರಕು. ೩-೩೩ ವ). [ಮುಱಿ$_1$ + ಕಣ್]

**ಮುಱಿಗೆ** (ನಾ). ತುಂಡು ; ಚೂರು : ' ಮುಱಿಗೆಗೆಯ್ ' ಪರಾ. [ಮುಱಿ$_1$ + — ಗೆ]

**ಮುಱಿಗೆಗೆಯ್** (ಕ್ರಿ). ತುಂಡುಮಾಡು : ಚೂರುಮಾಡು : ಇಂಧನಕ್ಕೆ ಪೃಷ್ಟಿಬಂಧನಮಾಗೆ ಮಸಂಗುಂದದೆ ಕಲಬಲದಾಲಯಂಗಳ ಮರಂಗಳ ಜಂತಿಗೆಯಂ ಪೊದಳ್ದ ಪೆರ್ದೊಲೆಗಳನೆಲ್ಲಮಂ ಮುಱಿಗೆಗೆಯ್ದು (ವೃಕಹ. ೦೪-೨೮). [ಮುಱಿಗೆ + ಕೆಯ್$_1$]

**ಮುಱಿಗೆಡೆ** (ಕ್ರಿ). ಸೋಲು ; ಪರಾಭವಗೊಳ್ಳು : ಕಲಿಭೀಮ ಮೃಗಯಾತುರದಲ್ಲೆದಿದನು . . . ಶಾರ್ದೂಲಕೇಸರಿಕರಿಕಳಭ ಮುಱಿಗೆಡೆದು ಪೋಡಿದುವಖಿಳದೆಸೆದೆಸೆಗೆ [ಪಾಠಾಂ. ಪೋಡಿದವು ದೆಸೆದೆಸೆಗೈದಿ ತಲ್ಲಣಿಸಿ] (ಕುಮಾರವ್ಯಾಸ. ೬೦೩. ೪-೯); ನೋಡಿ ಕಂಡನು ಸುರರ ಮುಱಿಗೆಡದೋಡಿಕೆಯ ಕಳಕಳವನು (ಕೊರಟಾ. ೩-೭-೨೩). [ಮುಱಿ$_1$ + ಕೆಡ$_1$]

**ಮುಱಿಗೆಯ್** (ಕ್ರಿ). ಹಾಳುಮಾಡು ; ನಾಶಮಾಡು : ಅಳಿಗಬ್ಬವಂ ಕಡಂದುಱು ಮುಱಿಗೆಯ್ದು ಮಾಳ್ಕೆಯೊಳೆ ದುಷ್ಕವಿ ನೀನದನೋದಿ ಮುಚ್ಚಿಸುತ್ತಱಿಕೆಯ ಗಾಂಪರಂ ಬಱಿದೆ ಬಿಱಿನೆ ಬೀಗುವೆ (ವೃಕಹ. ೦-೪೭). [ ಮುಱಿ$_2$ + ಕೆಯ್$_1$ ]

**ಮುಱಿಗೋಣ್**. (ನಾ). ಕತ್ತರಿಸಿದ ಕೊರಳು : ಮುಱಿಗೋಣ ಮಱಿಯ ಮರೆ . . . ಕರುಳೊಕ್ಕ ಕಟ್ಟಿ ಬೇಡರ ಬಗೆಗೆ ಬಂದುಂ ಬಾರದಾಯ್ತು (ರಾಮಾಶ್ವ. ೮೪-೦೭). [ ಮುಱಿ$_1$ + ಗೋಣ್ ]

**ಮುಱಿತ**, ಮುರಿತ$_2$ (ನಾ). ೧. ಸೋಲು ; ಅಪಜಯ : ಇಱಿತ ಮುಱಿತದೊಳಂತುಟಿರ್ಬಲದ ಸುಭಟರೊಳ್ ಕುಱಿದಱಿಯಲು (ತಿರುಕ್ಕು. ೨೭-೦೯); ಚಿಂತೆಯೇತಕ್ಕಿಱಿತ ಮುಱಿತಮಿವು ಸಮರದೊಳಗೆಂತಪ್ಪವರ್ಗಾದೊಡಂ ಬರ್ಪುವು (ತಿರುಕ್ಕು. ೩೦-೩). ಮುರಿತ$_2$ : ೧. ಅಳುಕು ಬಹುದೇಕನಗೆ, ಮತ್ತೆ ಭಯದರಿತ ? ಮತ್ತೆ ಮರಳದೊ, ನಮ್ಮ ದಳಕಿಹುದೊ ಮುರಿತ ? (ಶಾರಸಿ. ೭-೧೪೬). ೨. ಮುರಿದುದು ; ತುಂಡಾದುದು : " ತ್ರುಟಿಃ, ತ್ರೋಟನಂ. ತ್ರೋಟನೀಯಂ, ಈ ೩ ಮುರಿತಂ" (ಶಾಕಕ. ೨೨೬). [ ಮುಱಿ$_1$ + — ತ$_2$ ]

**ಮುಱಿದಲೆ** (ನಾ). ಕಡಿದ ತಲೆ; ಕತ್ತರಿಸಿದ ಶಿರಸ್ಸು : ಕುಱಿಯ ಮಾಂಸದ ಕೋಳಿ ಕೋಣನ ಮುಱಿದಲೆಯ . . . ಕೂಳ ಮುದ್ದೆಗಳ ಅರಿನೃಪಾಲರ ಪಾಳೆಯದೊಳಾಯ್ತಿರುಳು ಮನೆಮನೆಗಳಲಿ ಶಸ್ತ್ರೋತ್ಕರ ಸಮಾರಾಧನೆಯೊಳಿದ್ದುದು ಕೂಡೆ ನೃಪಕಟಕ (ಕುಮಾರವ್ಯಾಸ. ಶಂ. ೨೬೩); ಕುಱಿಯ ಪಣದದ ಕೋಳಿ ಕೋಣನ ಮುಱಿದಲೆಯ . . . ಹೊಱಗೆ ಬಡಿಸಿದ ಭೂತಬಲಿ ಬೊಬ್ಬಱಿತದೊಡನುಬ್ಬೇಳ್ವ ಲಗ್ಗೆಯ ಹಱೆಗಳಬ್ಬರ ವಾಯ್ತು (ಕುಮಾರವ್ಯಾಸ. ೬-೬). [ ಮುಱಿ$_1$ + ತಲೆ$_1$ ]

**ಮುಱಿನೂಕು** (ಕ್ರಿ). ಸಾಯುವಂತೆ ತಳ್ಳು : ಈಯೊಳ್ಳೆಗನನೆಡಕಿಕ್ಕಿ ಹಾಯಿಸು ಕಲ್ಲೆಯಲಿ ಮುಱಿನೂಕು (ಕುಮಾರವ್ಯಾಸ. ೨-೩೪). [ ಮುಱಿ$_1$ + ನೂಕು$_1$ ( < ನೂಂಕು$_1$) ]

**ಮುಱಿಯಿಸು**, ಮುರಿಸು$_1$, ಮುಱಿಸು (ಕ್ರಿ). ೧. ಕಡಿಸು ; ಕತ್ತರಿಸು : ಓರೊರ್ಮೆ ವಿರಹದ ತೊಡಿಗೆಗಳ್ಗೆಳ್ವ ಮೃಣಾಳಂಗಳೆಲ್ಲಮಂ ಮುಱಿಯಿಸದಿರೆಂದು ಕಯ್ಮುಗಿವಂತೆ ಮುಗಿವ ಬಿಯಲ್ದಾವರೆಗಳೊಳಿರ್ಪಳ್ (ಕಾದಂಬ. ೩೩೪). ಮುರಿಸು$_1$ : ೨. ಮುರಿಯುವಂತೆ ಮಾಡು ; ತುಂಡಾಗಿಸು : ನಾಜೂಕಾದ ಆಟಿಕೆಗಳನ್ನು ಮಗುವಿನ ಕೈಗೆ ಕೊಟ್ಟು ಮುರಿಸಬಾರದು (ರೂಢಿ). ೩. ನಾಶಮಾಡು ; ಹಾಳುಗೆಡವು : ಹನ್ನೆರಡುವರುಷಕ ಕೂಡಿಹಾಕಿದ ಬದುಕ ಮುರಿಸ್ಯಾರ ಮೂರಗಳಿಗ್ಯಾಗ (ಲೋಕಗೀ. ೦). ೪. ಹುಂಡಿ ಮೊದಲಾದುವನ್ನು ನಗದು ಹಣವನ್ನಾಗಿ ಮಾರ್ಪಡಿಸು,— ವಿನಿಮಯಮಾಡು : ಬ್ಯಾಂಕು . . . ಮುಚ್ಚುವುದರೊಳಗಾಗಿ ಚೆಕ್ಕು ಮುರಿಸಿ ಹಣ ತನ್ನಿ (ರಕ್ತಗೋ. ೩೭).

೫. ದೊಡ್ಡಮೊತ್ತದ ನೋಟಿಗೆ ಅಥವಾ ನಾಣ್ಯಕ್ಕೆ ಚಿಲ್ಲರೆಯನ್ನು ಮಾಡಿಸು : ಈ ನೂರರ ನೋಟನ್ನು ಮುರಿಸಬೇಕಾಗಿದೆ (ಆಡು). ೬. ಬಂಗಾರ, ಬೆಳ್ಳಿ ಮುಂತಾದ ಲೋಹದ ಒಡವೆಗಳನ್ನು ಕರಗಿಸು.– ಅಳಿಸು : ಒಂದು ಸಲ ಮಾಡಿಸಿದ ಆಭರಣವನ್ನು ಮತ್ತೆ ಮತ್ತೆ ಮುರಿಸುವುದರಿಂದ ತುಂಬಾ ನಷ್ಟವಾಗುತ್ತದೆ (ಆಡು). ೭. ಪದಾರ್ಥಗಳನ್ನು ಹಣಕ್ಕೆ ವಿನಿಮಯಮಾಡು ; ಮಾರು : ಅವನ ತಾಯಿ ತನ್ನ ಮೈಮೇಲಿನ ಚೂರುಚೂರು ವಸ್ತುಗಳನ್ನು ಮುರಿಸಿ, ಬಂದ ಹಣದಿಂದ ವರ್ಷ ಎರಡುವರ್ಷ ಬಡತನದಿಂದ ಕಾಲ ಕಳೆಯುತ್ತ (ಮುಂಬಯಿ. ೬. ೪-೫೦). ಮುಱಿಸು : ೮. ಕೊಲ್ಲಿಸು ; ಸಾಯಿಸು : ದೈತ್ಯಮಾಯುವ ಕೃಷ್ಣನಱಿಯಿಸೆಂದೆನಬೇಡವವನ ಮುಱಿಸಬೇಕಾ ಶಿಶುವಿನ ಕಯ್ಯೊಳದಱಿಂದೆ ಕಱುಬರಂದದಿ ನೋಡುತಿರ್ದ (ಮೋಹತ. ೧೧-೨೫). [ ಮುಱಿ$_{1}$ + — ಇಸು$_{3}$ ]

**ಮುಱಿಯಿಱಿ** (ಕ್ರಿ). ಸಾಯುವಂತೆ ತಿವಿ : ಮುಱಿಯಿಱಿದಲ್ಲದೆ ಪೊಱಿದೆಸೆಯದ ಪೆಸರಂ ತಳೆದ ಕೂರಾಳಿಂತೇದಂ (ಕಬ್ಬಿಗ. ೨೪೦). [ ಮುಱಿ$_{1}$ + ಇಱಿ$_{1}$ ]

**ಮುಱಿಯೆಸು** (ಕ್ರಿ). ನಾಶವಾಗುವಂತೆ ಬಾಣದಿಂದ ಹೊಡೆ.– ಪ್ರಹರಿಸು : ಶ್ರುತಾಯುಧಂ . . . ಮುಱಿಯೆಸುತ ಮುಂಕೊಂಡು ಪಾರ್ಥನ ತಱುಬಿದನು (ಕುಮಾ. ದ್ರೋ. ೧೧-೧೨) ; ಮೇಲೆಮೇಲೊದಗವಿವ ಸುಮರಥಜಾಲವನು ಮುಱಿಯೆಚ್ಚು ನಿಮಿಷಕೆ ಧೂಳಿಪಟ ಮಾಡಿದನು ಕರ್ಣನ ಮನ್ನಣೆಯ ಭಟರ (ಕುಮಾ. ಕ. ೦೩-೦೫). [ ಮುಱಿ$_{1}$ + ಎಸು$_{1}$ ]

**ಮುಱಿಯೊಡೆ** (ಕ್ರಿ). (ಆಲಂ) ಕ್ಷೋಭೆಗೊಳ್ಳು ; ಅಲ್ಲೋಲಕಲ್ಲೋಲವಾಗು : ಮಥನದಲಿ ಮುಱಿಯೊಡೆದ ಶೈಲವ್ಯಥಿತಸಾಗರದಂತೆ ಬಿರಿದವು ರಥನಿಕರ ಕಾಲಾಳು ಕುದುರೆಗಳೊಂದುನಿಮಿಷದಲಿ (ಕುಮಾ. ದ್ರೋ. ೪-೬೦). [ ಮುಱಿ$_{1}$ + ಒಡೆ$_{1}$ ]

**ಮುಱಿಯೊತ್ತು** (ಕ್ರಿ). ೧. ಧ್ವಂಸವಾಗುವಂತೆ ನೂಕು.– ಹಿಮ್ಮೆಟ್ಟಿಸು : ಆ ಖಗರಾಯನಾ ನಖಪಕ್ಷತುಂಡನಿಕಾಯದಲಿ ಮುಂಕೊಂಡು ಮುಱಿಯೊತ್ತಿ [ಪಾಠಾಂ. ದೌಕಿ]ದನು ಬಲುಗಜವ (ಶಿಭಾಗ. ೧೧-೬೦-೪೦) : ಮುತ್ತಿಗೆಯಿಕ್ಕಿದ ತುರುಕಬಲವ ಮುಱಿಯೊತ್ತಿಯೋಡಿಸುವೆನು (ಕಂಠೀ. ೧೨-೬೯). ೨. ಕುಗ್ಗಿಸು ; ಕುಸಿಯುವಂತೆ ಮಾಡು: ಮುಷ್ಟಿ ಮುಱಿಯೊತ್ತದ ಮುನ್ನ . . . ನಿಮ್ಮ ಪದಮಂ ನೆಱೆ ಪೂಜಿಸವೇಳ್ಕುಂ (ಕಂಕಶ. ೬-೧೪). [ ಮುಱಿ$_{1}$ + ಒತ್ತು$_{1}$ ]

**ಮುಱಿಯೊದೆ** (ಕ್ರಿ). (ಆಲಂ) ವಿಮುಖವಾಗಿಸು ; ದಿಕ್ಕುತಪ್ಪಿಸು ; ಹಿಮ್ಮೆಟ್ಟಿಸು : ಇದನು ಹೇಳುವ ಕೇಳುವಾ ಸದುಹೃದಯರುತಕನಾಸನವ ಮುಱಿಯೊದೆದು ಮುದದಿಂದೈದುವರು ನಿತ್ಯಾತ್ಮಶಿವಪದವ (ಶಿಭಾಗ. ೪-೪-೩೨). [ ಮುಱಿ$_{1}$ + ಒದೆ$_{1}$ ]

**ಮುಱಿವಡೆ** (ಕ್ರಿ). ೧. ಸೋಲನ್ನು ಹೊಂದು ; ಪರಾಭವಗೊಳ್ಳು : ನೆಯ್ದಿಲೆಗೆ ನೇಸಱಿನ ನೆಮ್ಮುಗೆಯಾದ ತೆಱನಲಿ ಮುಱಿವಡೆದ ಮಾಯಾಂಗನೆಯ ಮುಖಭಂಗವನೆ ಕಂಡು ಮಱುಗುತಿರ್ದರು ಕೂಡೆ ಕೆಳದಿಯರು (ಶ್ರೀಕೃ. ೬-೬೦) ; ಕಿರೀಟಿಸುತನುಱುಬಿದೊಡೆ ಮುಱಿವಡೆದುರಗಸೇನೆ ಶೇಷಾದ್ರಿಡಗೋಡಿತು (ಕೃಪಾ. ೨೪-೩೫). ೨. ದಿಕ್ಪಾಪಾಲಾಗು ; ಚೆದರು : ಗಿರಿಗೆ ಕಾಲಿಕ್ಕಿದೆಡೆ ಕಂಪಿಸಿತೆರಡುಮೈಯಲಿ ಶೈಲವದ ಕಂಡಿರದೆ ಹಾಯ್ದುವು ಮುಱಿವ[ಪಾಠಾಂ. ಗೆ]ಡೆದು ಮದಕರಿಗಳಗಲದಲಿ (ಕಿರಾತ. ೪-೧೨-೨೩). [ ಮುಱಿ$_{2}$ + ಪಡೆ$_{1}$ ]

**ಮುಱಿಸು** ' ಮುಱಿಯಿಸು ' ನೋ.

**ಮುಱುಂಕಿಸು** ' ಮು(ಱು)ಕಿಸು ' ನೋ.

**ಮುಱುಂಗು** ' ಮುಱುಕು$_{2}$ ' ನೋ.

**ಮುಱುಕ**$_{1}$ ' ಮುಱುಕು$_{2}$ ' ನೋ.

**ಮುಱುಕ**$_{2}$, ಮುರುಕ$_{1}$ (ಗು). ೧. ತುಂಡಾದ : ಚೂರಾದ : ಹಱಕುಹೋಳಿಗೆ ಲೇಸು ಮುಱುಕ ಹಪ್ಪಳ ಲೇಸು (ಸರ್ವಜ್ಞ. ೧೧೩೦). ಮುರುಕ$_{1}$ : ೨. ಮುರಿದುಹೋದ ; ಭಗ್ನವಾದ : ಆ ಮುರುಕ ಮನೆಯನ್ನು ದುರಸ್ತಿ ಮಾಡಬೇಕು (ಆಡು). (ನಾ). ೩. ಮುರಿಯುವವನು ; ನಾಶಮಾಡುವವನು : 'ಮನೆಮುರುಕ' ಪರಾ. [ಮುಱುಕು$_{3}$ (< ಮುಱಿಕು) + — ಅ$_{7}$]

**ಮುಱುಕಂಬೆಱು** (ಕ್ರಿ). ಚೆಲುವಾಗು; ಸೊಬಗಿನಿಂದ ಕೂಡಿರು : ಪದವಿನ್ಯಾಸಂ ಸಮಾಸಂಗಳಿಂ ಮುಱುಕಂಬೆತ್ತುದೆನಲ್ಕಳಂಕೃತಿಗಳಿಂ ತಳ್ತೊಪ್ಪುದು ಚಿತ್ರಾರ್ಥದೊಳ್ ಮೆಱೆದಿಂಪಂ ಪಡೆಯಲ್ಕೆ ಪೇಳ್ವಡೆ ವಲಂ ನಾಗಂ ಕಳಾವಲ್ಲಭಂ ನೆಱೆ ಬಲ್ಲಂ (ಕಾವ್ಯಾವ. ೧-೨೨). [ಮುಱುಕ$_{1}$ (< ಮುಱುಕು$_{2}$) + ಪೆಱು$_{1}$]

**ಮುಱುಕಗಾತಿ** (ನಾ). ಬೆಡಗಿ; ಒನಪುಗಾತಿ : ತನಗೆಱಗಿದ ಪೆಣ್ಣ ನೋಡಿ ಮೊನೆಗಾತಿ ಬಲುಪೋಡಿಗಾತಿ ಮುಱುಕಗಾತಿ ಗೊನೆಹಕಾತಿ ಮಮಾಯೆಂದಾ (ಶರಕ. ೯-೧೩೬). [ಮುಱುಕ$_{1}$ (< ಮುಱುಕು$_{2}$) + — ಕಾತಿ$_{5}$]

**ಮುಱುಕದೋಱು** (ಕ್ರಿ). ಬೆಡಗುಮಾಡು ; ಒನಪುದೋರು : ಲಲನೆ ಸುಳಿದಳು ಕುಚದ ಭರದಲಿ ಬಳುಕುತಡಿಗಡಿಗೊಲೆದೊಲೆದು ಮೈವಳಿಯ ವಳಿಯ ಮ[ ಮು ]ಱುಕದೋಱುತ ಘೀಮನಿದಿರಿನಲಿ (ಸಂಶಕ. ೨೨-೦೩). [ಮುಱುಕ$_{1}$(< ಮುಱುಕು$_{2}$) + ತೋಱು]

**ಮುಱುಕಲ್** (ನಾ). (?): ಮುಱುಕಲ್ಲಂ ಕಪಂಬ ತರಿಸಿ × × × (ಎಕ. II, ೪೪೩; ಸು. ೯೦೦). [ ? ]

**ಮುಱುಕಿಲ್**$_{1}$ (ನಾ). ಕೊಳಕು ; ಅಶುಚಿ : "ಪೊರಡಿಯಶುಚಿಗಳೊಳಂ ಮುಱು [ಪಾಠಾಂ. ಱ]ಕಿಲಕುಂ" (ಚಂದ್ರ. ೧೬). 'ಮುಗ್ಗಲು' ಪರಾ. [ದೇ.I ತಮಿ. ಮುಕ್ಕಲ್ = ಮುಗ್ಗುನಾತ; ತೆಲು. ಮುಱಿಕಿ]

**ಮುಱುಕಿಲ್**$_{2}$, ಮುರಕಲಿ, ಮುರಕಿಲ, ಮುರಿಕಿಲು, ಮುರುಕಿಲು, ಮುರ್ಕಲಿ, ಮುರ್ಗಲ್, ಮುರ್ಗಳ (ನಾ). ಒಂದು ಬಗೆಯ ಮರ: "ಭೃವಿ ಭೃವಿಯಿಪ್ಪಲು ಮುಱುಕಿಲ್" (ಶಬ್ದಮ. ೩೫-೧೪). **ಮುರಕಲಿ** : ಮರಗಳು : ಹಸಪ . . . ಅಂಕೋಲೆ, ಕಮರಕ, ಮುರಕಲಿ (ಪಮ್ಪ. ೨೨೬). **ಮುರಕಿಲ** : " ಮುರಕಿಲಂ ಮೊರಸಿ ದ್ರುಮಂ" (ಕಜ. ೪೦). **ಮುರಿಕಿಲು** : " ಗ್ರಂಥಿಫಲಃ — ಮಂಗಾರೆ. ಮುರಿಕಿಲು. ಬೇಳ" (೬ಶಾ. ೪೬). **ಮುರುಕಿಲು** : "ಚಿತ್ರಪೀಲುಕಃ — ಮುರುಕಿಲುಮರ" (೬ಶಾ. ೪೬). **ಮುರ್ಕಲಿ**: (ವೈಶಿ. ೦೪-೨೬೨). **ಮುರ್ಗಲ್** : ಮುರುವನ ಹುಳಿ. ಮುಗಲ್. ಮುರ್ಗಲ್, ಕೋಕಂಮರ (ವೈಶಿ. ೩೮-೬೩೫). **ಮುರ್ಗಳ** : ಮುರ್ಗಳ . . . ಆಕಾರ ಮಧ್ಯಮ; ಕಟ್ಟಿಗೆ ಲಿಂಬೀಬಣ್ಣದ್ದು (ಕಭಾಗ. ೪೬). 'ಮೊರಡ್ಡಿ$_{2}$' ಪರಾ.

**ಮುಱುಕಿಸು**, ಮುರಿಕಿಸು, ಮುಱಿಕಿಸು, ಮುಱುಂಕಿಸು (ಕ್ರಿ). ೧. ವಕ್ರಮಾಡು ; ಕೊಂಕಿಸು ; ಸೊಟ್ಟಮಾಡು : ಮನದೊಳಗೆ ನೊಂದಂತೆ ಮೋಱೆಯಂ ಮುಱುಕಿಸುತ ಬಂದು ದೂರದಿ ನಿಂದನು (ಸೋಮೇಶ. ೦-೩೬); ಅಳವಡಿಪ ಕಲಕೇತವೇಷಂದಳೆದು ಶಿವಭಕ್ತರ ನಿವಾಸಂಗಳಿಗೆ ಗಮಿಸಿ ತನ್ನ ಮೋಱೆಯನಂತು ಮುಱುಕಿಸುತ (ಬಸವ. ೨೯-೫); ಭಾರತಿಯ ಕಂಡು ಮೊಗವಂ ಮುಱುಕಿಸುತ್ತೆ . . . ನಗಿಸುತೊಪ್ಪಿರ್ದನಾ ಭೃಂಗಿ (ಸಿದ್ಧೇಶ. ೦-೪೫). ೨. ನುಲಿ ; ತಿರಿಚು ; ತಿರುಗಿಸು : ಕೊಂಕಿ ನಡೆದು ಕಯ್ಯಂ ಮುಱುಕಿಸುತಂ ಟೊಂಕಮನಱುಗಿಸಿ ನಿಂದೇಡಿಸುತಂ (ಶೃಂಗಾರ. ಪ. ೪೬೨-೨೬); ೧ ಪರುಷದ ಕೂಸಂ ನಂದಿನಿಯೆಂಬ ದೇವತೆ ಪಿಡಿದೊಡಾ ಕೂಸು ನೆಲದಲ್ಲಿ ಕವಿಚಿ ಬೀಳುಗುಂ ಕೈಯನೂಱುಗುಂ ಮುಱುಕಿಸುಗುಂ ಕಾಲ ನಾಡಿಸುಗುಂ (ಶಾಂತಿ. ೦೩೦-೪). ೩. ನುಣುಚಿಕೊಳ್ಳು; ತಪ್ಪಿಸಿಕೊಳ್ಳು:

ಬಿರುದನು ಬಿಸುಟು ಬಡಿಹೋರಿಗಳು ಪಾಂಡವರಂತೆ ಮೂಗುರ್ಚಿಗಳ ದಿನ್ನಾರುಂಟೆನುತ ಮುಳಿಗಿದಳು ನಳಿನಾಕ್ಷಿ (ಕುಮ್ಯಾ.ಭಾ. ೩-೬೦).

[ ಮೂಗು + ಉರ್ಚು + — ಇ$_3$ ]

**ಮೂಗುರ್ಚು** (ಕ್ರಿ). (ಎತ್ತು, ಎಮ್ಮೆ ಮೊದಲಾದುವುಗಳ) ಮೂಗು ದಾರವನ್ನು ಕಳಚು ; ಸ್ವೇಚ್ಛೆಯಾಗಿ ಬಿಡು : ಮೂಗುರ್ಚಿದಮ್ಮೆ ಪೋರಿಯುಂ ಪೆಜವೆಟ್ಟಿದ ತಗರುಂ ತಾಗುವಂತೆ ತಂತಮ್ಮೊಳಿರ್ದಾನೆಗಳಂ ನೂಂಕಿ . . . ಇಱಿವ ಪದದೊಳ್ (ಶಾಂತಿಪು. ೬-೮೨ ವ).

[ ಮೂಗು + ಉರ್ಚು ]

**ಮೂಗುವಡಿಸು** (ಕ್ರಿ). ಮಾತಿಲ್ಲದಂತೆ ಮಾಡು; ಮೌನವಾಗಿಸು; ಮೂಕನನ್ನಾಗಿ ಮಾಡು : ಮತ್ತಪರ ನುಡಿಯಲೀಯದೆ ಮೂಗುವಡಿಸಿ . . . ಕಾಡುತಲ್ಲಿಹುದೊಂದು ನಡ ಮೋಹರಾಜನ (ಶ್ರೀಕೃಸಾಂ. ೯-೯೮).

[ ಮೂಗುವಡು + — ಇಸು$_3$ ]

**ಮೂಗುವಡು** (ಕ್ರಿ). ಮಾತಿಲ್ಲದಂತಾಗು; ಮೌನವಾಗು; ಮೂಕವಾಗು: "ಮೂಗುವಡು (ಮೂಗು + ಪಡು) — ಮೌನೇ" (ಕಮಧಾ); ಮಿಡುಕದೆ ಭೀಷ್ಮ ನೋಡುತಿರು ಕುಂಭಜ ಸುರ್ಕಿರು ಕರ್ಣ ಮಿಕ್ಕು ಮಾರ್ನುಡಿಯದೆ ಮೂಗುವಟ್ಟಿರು (ಕುಂಕಥಾ. ೭-೩೩); ಗುರುಬಸವ ನಿನ್ನ ಕೋಡಿಂ ಸುರಭಿ ಕರಂ ಮೂಗುವಟ್ಟುದದು ಕಲ್ಲಾಯ್ತು ಪರುಪಂ (ಬಸರ. ೯-೨); ಬಗ್ಗಿ ಸೆಲೆ ಕೋಗಿಲೆ! ಏನೀ ಮಾಮರದ ಸೆಳೆಗೊಂಬಿನೊಳ್ ಮೂಗುವಟ್ಟಿರ್ಪಯ್ ? (ರಾಮಾಕ್ಷ್ಮ. ೨-೦).

[ ಮೂಗು + ಪಡು$_1$ ]

**ಮೂಗುಸನ್ನೆ** (ನಾ). ಮೌನವಾಗಿ ಸಂಜ್ಞೆ ಮಾಡುವುದು; ಮಾತನಾಡದೆ ಅಂಗಾಂಗಗಳ ಚಲನೆಯಿಂದ ತಿಳಿಯಪಡಿಸುವುದು : ಮೂಗುಸನ್ನೆ ಮಾತ್ರ ಕಾಣಿಸಿದಾಗಿನ ಅನುಭವ ಸನ್ನ ಶ್ರೋತೃಗಳಿಗೆ ಲಭಿಸಿರಬೇಕು (ಪಂಟಿರು. ೩೯).

[ ಮೂಗು + ಸನ್ನೆ$_2$ ]

**ಮೂಗುಸಿರ್** (ನಾ). = ಮೂಗುಜಾತಿ : ಎನ್ನೊಡೆಯ. ತಱಿಸಂದು ತುಱುಗಳನ್ ಕೊಲ್ವೆಯಾ? ಮೂಗುಸಿರ್ಗಳನ್ ತುಱುಬಿ, ಮಂದೆಗಳ ನಿಡಿದು . . . ಕಲಿಗಳೊಳೆ ಕಲಿ ಎಂದು ನೀನಿಂತು ನಿಲ್ವೆಯಾ (ಅಕ್ಕತ್ಸಾ. ೮-೦೫೬).

[ ಮೂಗು + ಉಸಿರ್$_2$ ]

**ಮೂಗುಸೆಕೆ** (ನಾ). (ಆಲಂ) ಅತಿಯಾದ ಸೆಕೆ; ಹೆಚ್ಚಾದ ತಾಪ; ಉಬ್ಬುಸೆಕೆ : ಭಾವಣೆಯ ಕೆಳಗೆ ತೇವದ ಹವ ಕವಿಯುತ್ತದೆ; ಕಂಬಗಳ ನಡುವಿನ ಕೈಸಾಲೆಗಳಲ್ಲಿ ಮೂಗುಸೆಕೆ ಹಬ್ಬುತ್ತದೆ (ಹಕುಹೂ. ೩೮೯).

[ ಮೂಗು + ಸೆಕೆ ]

**ಮೂಗುಹರುಕ** (ನಾ). ೧. ಮೂಗು ಹರಿದಿರುವುದು; ಮೂಗಿಲ್ಲದುದು: ಮೂಗುಹರುಕಾವೊಂದು ಹಳೆಯ ತಲೆಬುರುಡೆ ನಡು ಸಿಲುಬೆಯುಡಿಯು ಜಗವ ಬಾಯ್ಮಿಕಿಸಿದು ನಗುತಲಿದೆ (ಗೂಲ್ಕೊಂಛಾ. ೦೩–೩೬೦). ೨. ಮೂಗನ್ನು ಕೊಯ್ಸಿಕೊಂಡವನು; ಮೂಗು ಹರಿದಿರುವವನು : ಮೂಗು ಹರ[ರು]ಕ ಜೋಗಿ . . . ತಲೆಕೆದರಿದವರು . . . ಲವಣ ಇವುಗಳು ಎದುರಾಗಿ ಬಂದರೆ ಕಾರ್ಯಹಾನಿಯಾಗುವುದು (ಸ್ವಾಗಂಧಿ. ೩೪೫–೨೦).

[ ಮೂಗು + ಹರುಕ ( < ಪಱುಕ ) ]

**ಮೂಗುಳ** 'ಮೂಗೊಳ' ನೋ.

**ಮೂಗುಳಬುದ್ಧಿ** (ನಾ). (ಆಲಂ) ಅತಿಯಾದ ಬುದ್ಧಿ,—ತಿಳಿವಳಿಕೆ : ಮುದಿಯನೂರೊಳ್ಸ್ವಿಂಪಗ್ಗಳದ ಜಣಾಂಜಿಗನೆನೆ, ಮೂಗುಳಬುದ್ಧಿಯ ಕೀತಿಸೆಟ್ಟಿಯ ಪೊಗಳದಾರಾರ್ (ಕ್ಸ್ಂಇ. IX-i. ೨೯೬–೨೭; 1176).

[ ಮೂಗುಳ ( < ಮೂಗೊಳ ) + ಬುದ್ಧಿ ]

**ಮೂಗೆಯ್.** ಮೂಗಯ್ (ನಾ). ಮೂರುಮೊಳದ ಅಳತೆ : ಮೂಗಾವುದಂ, ಮೂಗೋಜು, ಮೂಗೆ[ಶಾಕಾಂ. ಗ]ಯ್ (ಕಮುದ. ೦೬೯, ಶ್ರಯೋ). **ಮೂಗಯ್** : ಶೀವಿರ್ದತ್ತು ಮೊನಲ್ಮೊದಲ್ಗೆ ಪಣಿಯುಂ ಮೂಗಯ್ಯ ಮೂಗಯ್ಯೆನಿತ್ತಾವಕ್ಕೆಯ್ದಿ ಕವಲ್ಕವಲ್ತು ಪಲವುಂ ಕೋಂಬಾದು ವೊಳ್ಕೊಂಬುಗಳ್ (ಆದಿಪು. ೦೦–೯೩); ಏಸೆವ ಮತ್ತಿಯ ಬಡಗ ಪುತ್ತಿರ್ದೊಡಂ ಪುತ್ತಿನಿಂ ಪಡುವ ಮೂಗಯ್ಯ ನೆಲನಂ ಬಿಸುಟು (ಆದ್ಯಪು. ೦೦–೦೦).

[ ಮೂ$_1$ ( < ಮೂಱು ) + ಕೆಯ್$_2$ ]

**ಮೂಗೆಱೆ** (ನಾ). ಮೂರು ಗೆರೆ : ವರ ಮುಂದ ಮಧ್ಯ ತಾರಸ್ವರ ಸೀಮಾರೇಖೆಯೆನಿಸೆ ಮೂಗೆಱೆ ಲಾವಣ್ಯರಸಾಬ್ಧಿಯೊಳಮರ್ದೆಸೆದುದು ಪರಿಕಲಿತ ಸುವರ್ಣಶಂಖವೆನೆ ಗಳಮವಳಾ (ವ್ರಹಪು. ೪-೦೦೦).

[ ಮೂ$_1$ ( < ಮೂಱು ) + ಗೆಱೆ$^3$ ]

**ಮೂಗೇಟು** (ನಾ). = ಮೂಗುಗಾಯ : ಇತರರೂ ಸಣ್ಣಪುಟ್ಟ ಗಾಯಗಳಿಂದಲೂ ಮೂಗೇಟುಗಳಿಂದಲೂ ನೊಂದು ರೇಗಿ ಒಬ್ಬರ ಮೇಲೊಬ್ಬರು ದೂರು ಹೇಳುತ್ತಾ ಕೂಗಾಡುತ್ತಿದ್ದರು (ಮುರಿಮ. ೯೩೯).

[ ಮೂಗು + ಏಟು$_1$ ]

**ಮೂಗೇಣ್,** ಮೂಗೇಣು (ನಾ). ಮೂರುಗೇಣು ಉದ್ದದ ಅಳತೆ : ಮೂಗೇಣ್, ಮೂಗಾವುದಂ, ಮೂವಣ್ಣಂ (ಶಾಶಾಶೂ. ೦೫೩ ಉದಾ): ಮೂಗೇಣ್, ಮೂಗಾವುದಂ (ಕಮುದ. ೦೬೯ ಶ್ರಯೋ). **ಮೂಗೇಣು** : ಮೂಗೇಣಗಲದ ಬಾವಿಗೆ ಆರುಗೇಣಗಲದ ಗಾತ್ರದ ಕುಂಭವ ಬಿಟ್ಟು ಹುರಿಗೂಡಿದ ಕಣ್ಣಿಯಲ್ಲಿ ಸೇದುತ್ತಿರಲಾಗಿ ನೀರು ನೆಲನ ಮುಟ್ಟದೆ ಕುಂಭವ ಬಿಟ್ಟು ಕಣ್ಣಿಯಲ್ಲಿ ತುಂಬಿ ಬಂದಿತ್ತು (ಮೋಳಿಮೂ. ೦೯೮–೬೪೯).

[ ಮೂ$_1$ ( < ಮೂಱು ) + ಗೇಣ್ ]

**ಮೂಗೇಣಿಡು** (ಕ್ರಿ). (ಆಲಂ) ಆಶ್ಚರ್ಯಪಡು : ಕಡುಗಲಿಯು ಪಡೆಬಿಟ್ಟುದಮಮಾ ಕಡೆಯು ಕಾಣದೆ ಹಲವು ಕಣ್ಣಲಿ ವಡಿಗ ರಾವಣ ನೋಡಿ ಮೂಗೇಣಿಟ್ಟು ಬೆಱಗಾದ (ಕೌಶಿರಾ. ೦೭–೦೫).

[ ಮೂ$_2$ ( < ಮೂಗು ) + ಗೇಣಿಡು ]

**ಮೂಗೇಣು** 'ಮೂಗೇಣ್' ನೋ.

**ಮೂಗೇರಿಸು** (ಕ್ರಿ). ೧. (ಆಲಂ) ಮೂಗನ್ನು ಅರಳಿಸು ; ಆಶ್ಚರ್ಯ ಪಡು : ಇದೇನು ಅಚ್ಚರಿಯ ವಿಷಯವೆಂದು ಯಾರಾದರೂ ಮೂಗೇರಿಸ ಬಹುದು (ಶ್ರೀರಂಗ. ೬೪). ೨. ಅಹಂಕಾರವನ್ನು ತೋರಿಸು; ಬಿಂಕ ಮಾಡು : ನಾನು ಹುಚ್ಚಿಯೇ ಸರಿ ಅವರೇ ಯೋಗ್ಯರು ಒಳ್ಳೆಯವರು ಅವರ ಮನೆಗೆಯೇ ಹೋಗಿರಿ ಎಂದು ಮೂಗೇರಿಸಹತ್ತಿದಳು (ಜಬಿಚಿತ್ರಾ. ೨೬); ನೋಡು ನೋಡು ಮಾತಿಗೆ ಮಾತುಕೊಡುವುದಕ್ಕೆ ಎಷ್ಟು ಚೆನ್ನಾಗಿ ಕಲಿತಿದ್ದಾಳೆ . . . ಮುದುಕ ಮೂಗೇರಿಸಿದ (ಮುಕಕೂ. ೩೦).

[ ಮೂಗು + ಏರಿಸು ( < ಏಱಿಸು ) ]

**ಮೂಗೊಂಕು,** ಮುಕ್ಕೊಂಗು (ನಾ). ಮೂರುಕಡೆಯ ಬಾಗು,— ವಕ್ರತೆ; ತ್ರಿಭಂಗಿ : ಅಂತ್ಯಲೋಪಕ್ಕೆ — ಮೂಗೊಂಕು, ಮೂವಿಟ್ಟೆ . . . ಮೊದಲೆ (ಕಮುದ. ೦೬೯ ಶ್ರಯೋ); ಓ ಓ ! ಒರ್ಪನೆಯ ಬಿಂಕಣಿಗಿವಿಯು ಮೂಗೊಂಕುದೂಗಿನ ಪೇರೊಡಲ ಇಲಿದೇರ ಬೆನಕ ! (ರಾಮಾಕ್ಷ್ಮ. ೯೯–೨೦). **ಮುಕ್ಕೊಂಗು** : ಆ ಗೋಪಾಲಕೃಷ್ಣಂ ನಲಿದು ಕೊಳಲನೂದುತ್ತಮಿರ್ದಂದದಿಂದಾನಂದಂ ಕೈಗಣ್ಮಲಾ ಶಕ್ಕಿಯ ಮರನನದಂ ನೆಮೆ ಮುಕ್ಕೊಂಗಿನಿಂದಂ ನಿಂದಿರ್ದೊಪ್ಪುತ್ತೆ (ಶ್ರೀಪುರಿ. ೦೫–೩೪).

[ಮೂ$_1$ (<ಮೂಱು) + ಕೊಂಕು$_2$]

**ಮೂಗೊಡೆ,** ಮುಕ್ಕೊಡೆ (ನಾ). ೧. ಮೂರುಕೊಡೆ : ಮುಗ್ಗುಡ್ಡೆ, ಮೂಗುಡ್ಡೆ; ಮುಕ್ಕೊಡೆ, ಮೂಗೊ[ಶಾಕಾಂ. ಕೊ]ಡೆ (ಶಬ್ದಾಪು. ೩೩೩ ಪ್ರಯೋ). **ಮುಕ್ಕೊಡೆ** : ೨. [ಜೈನ] ಜೈನದೇವಾಲಯಗಳಲ್ಲಿ ಜಿನಪ್ರತಿಮೆಯ ಹಿಂದೆ ಸಾಲಾಗಿ ಇರುವ ಚಕ್ರವರ್ತಿಲಾಂಛನದ ಮೂರು ಛತ್ರಿ : ಶ್ರೀಮದಶೋಕಂ ಮುಕ್ಕೊಡೆ ಚಾಮರತತಿ ದಿವ್ಯಭಾಷೆ ಸುರತೂರ್ಯರವಂ ಪೂಮಱೆ ಕೇಸರಿಪೀಠಂ ಭಾಮಂಡಳಮೆಸೆದೆ

ನೆಗಟ್ಟನೊಸೆದಾದಿಜಿನಂ (ಜಾಪುಂಶು. ೧) ; ದೇಹಾರದ ಮನೆಯಂ ಪೊಕ್ಕು . . . ದೇವರ ಮುಕ್ಕೊಡೆಯೊಳಿರ್ದ ವೈಡೂರ್ಯ ಮಾಣಿಕಮಂ ಕಾಣದೆ ಪೊಜಿಮಟ್ಟು (ಧರ್ಮಾಮೃ. ೬-೮೮) ; ಒಡಿಯೆನಿಪ್ಪುದು ಕರಿಣಿಯೊಳು ಮುಕ್ಕೊಡೆಯೆನಿಪ್ಪುದು ಜಿನಪತಿಯ ಮುಕ್ಕೊಡೆಯೊಳಲ್ಲದೆ ನೋಳ್ಪೊಡಿಲ್ಲಾ ಮೆಱೆವ ನಾಡೊಳಗೆ (ಶಾಸ್ತ್ರಶಾ. ೧-೬೦). ೩. ಜೈನದತ್ತಿಗಳ ಗಡಿ ಗಳನ್ನು ಸೂಚಿಸುವ ಮೂರು ಕೊಡೆಗಳ ಚಿತ್ರವಿರುವ ಮೇರೆಯ ಕಲ್ಲು : ನಾಲ್ಕು ದಿಕ್ಕಿಗು ನಾಲ್ಕು ಮುಕ್ಕೊಡೆ ಸಹ ನಾಲ್ಕು ನೆಟ್ಟ ಕಲ್ಲು (ಎಕ. XI, ಹೊಳಲ್ಕೆ. ೧-೨೩ ; 1154) ; ಆ ಕೆರುಕಟ್ಟದ ಪಡುವಣ ಕೋಡಿಯಲು ಹುಟ್ಟುಗುಂಡಿನಲಿ ಬರದ ಮುಕ್ಕೊಡೆ ಹಸುಬೆ ನೆಟ್ಟ . . . ದೇವಳಂಗೆಱೆಯ ತೆಂಣ ಕೋಡಿಯ ಗುಂಡಿನಲಿ ಬರದ ಮುಕ್ಕೊಡೆ ಹಸುಬೆ ನೆಟ್ಟ (ಎಕ. II, ೩೩೪-೨೯ ; 1282).

ಮುಕ್ಕೊಡೆಯ ಕಲ್ಲು =ಮುಕ್ಕೊಡೆ ೩ : ಶೈವದತ್ತಿಗಳ ಮತ್ತು ಜೈನದತ್ತಿಗಳ ಗಡಿಗಳನ್ನು ಹೇಳುವ ಕಲ್ಲುಗಳಿಗೆ 'ಲಿಂಗಮುದ್ರೆಯ ಕಲ್ಲು' 'ಮುಕ್ಕೊಡೆಯ ಕಲ್ಲು' ಎಂಬ ಹೆಸರುಗಳಿರುವ ಹಾಗೆ ಬೌದ್ಧದತ್ತಿಗಳ ಮೇರೆಯ ಕಲ್ಲುಗಳಿಗೆ 'ಶಾಕ್ಯಶಿಲಾ' ಎಂಬ ಹೆಸರಿತ್ತು (ಕಶಾಅ. ೧೧೩). ಮುಕ್ಕೊಡೆಯೊಡೆಯ=ಚಕ್ರವರ್ತಿಲಾಂಛನದ ಮೂರು ಛತ್ರಿಗಳನ್ನು ಉಳ್ಳ ಒಡೆಯ ; ಜಿನ ; ಅರ್ಹಂತ : ಅನೂನಭಕ್ತನೇರ್ಪಡೆ ಒಡಿಪುಲ್ಕೆ ಪೂರ್ಣಸಸಿಯಂ ನಗುವಂದದಿನೊಪ್ಪಿ ತೋರ್ಪ ಮುಕ್ಕೊಡೆ ಯೊಡೆಯಂಗೆ ಮಾಡುವುದು ಪೊಮ್ಮೆಯೆನೀ[ಯಿಾ]ಗುಮನಂತಸೌಖ್ಯಮಂ (ಸಮಪ. ೧-೧೩೦) ; ಮುಕ್ಕೊಡೆಯೊಡೆಯ ಜಿನೇಂದ್ರನನೊಲ್ದು ಪಾಡಿದರು (ಧರ್ಮ. ೧-೯೩). [ಮೂ$_1$ (<ಮೂಱು) + ಕೊಡೆ$_2$]

**ಮೂಗೊಲೆ** (ನಾ). ಉರಿಯು ಹೊರಗೆ ಕಾಣಿಸದಂತಿರುವ ಒಲೆ ; ಆವುಗೆ : ಮೆಯ್ದಿ ದಿ ನೀಳ್ದ ಸಂಯ್ತಿದಿಯಂಸಿರ್ವಿರಹಜ್ವರದೇೞ್ಗೆ ಕಿಚ್ಚು ಕೆಂಬಾಯ್ದೆಱೆ ಕೆಂಡದೊಬ್ಬಳಿಕೆ ಮೂಗೊಲೆ ಮೂಗೆನೆ ಪೂರ್ವನಿಶ್ಚಳಿಂ ಕಾಯ್ತಡವಾಗದಂತು ಒಡಿದುಗಜಕಾರುಕನಕ್ಷಿಬಾಣಮಂ ಸಯ್ತುಱೆ ಕಾಸಿ ಕಾಮಿನಿಯ ಬಾಷ್ಪದೊಳೊಯ್ಕನೆ ನೀರನೂಡಿದಂ (ಶೃಂಗಾರ. ೪-೩೪).

[ಮೂಗು + ಒಲೆ$_4$]

**ಮೂಗೊಳ**. ಮೂಗಳ, ಮೂಗುಳ (ನಾ). ಮೂರು ಕೊಳಗಗಳ ಒಂದು ಅಳತೆ : ಪುತ್ತೂರೊಳು ಕಣ್ಣಂಗೂಳರಸ ಕನಕಾರಿಗೆ ಮೂಗೊಳಂ ೯ಟನಿ ಭಗವತಿಗೆ ಕೊಟ್ಟುದು (ಎಕ. X, ಕೋಲಾರ. ೨೩೦-೯ ; ಸು. 750) ; ನೂಱಾಱು ಖಂಡುಗ ಮೂಗೊಳಮಾಗಿರೆ ಕಡಗೊಂಡು ತಿದ್ದ ಕೊಡುವಲಿ ಯಂದಂ ಬೇರರುಗಳಮಂ ತೂರಲು ಪಾರಿದರಜಮೆರಡುಬಳ್ಳ ಪೊಗಲಕ್ಕೇನೊ (ಶಾಸ್ತ್ರಿ. ೨೯-೨). ಮೂಗಳ : ಒಕ್ಕಳ ಕಾಣದವೈಸೂಱ ಇಕ್ಕಳ ಕಾಣದವು ಸೂಱು ಮೂಗಳ ಕಾಣಂ (ವ್ಯವಹಾ. ಕರಣಿನ ಸೂತ್ರ) ; ಸಿನ್ನಿಷ್ಟದ ಕರುಣಿಸುವೆ ಬೇಡೆನಲು ನವಣೆ ಮೂಗಳದೆಣಿಕೆ ವರಚಕ್ಷುಗಳನೀವುದೆಂದು ಕೊಂಡಾಡಲ್ (ಶ್ರೀಶೈಲ. ೨-೪೬) ; ಕಾಳಮ್ಮನೆಂಬವಳ್ ಕಗ್ಗಲ್ಲಿನಿಂ ಕರೆದ ಹಾಲನೀಶಂಗುಣಿಸಿದಳ್ ಕಣ್ಗಳಂ ಕೊಟ್ಟು ಕಾಳಿದಾಸಂ ಮಗುಳೆ ಮೂಗಳದ ಕಣ್ಣನುರೆ ಪಡೆದನೊಲವಿಂ (ಶಿಶು. ೩೩-೪೩ ಅ) ; ಉಪ್ಪಿಲ್ಲದೆ ಮೂಗಳ ಗಂಜಿ ಕುಡಿಯುವವಗೆ ಉಪ್ಪಿದ್ದರೆ ನಾಗಳವೂ ಸಾಲದು (ಗಾದೆ). **ಮೂಗುಳ** : ಪತ್ತುಕೊಳಗ ಭತ್ತಮುಂ ಒನ್ದು ಸಂತೆಯುಂ ಬಣ್ಣಿಗೆ ಮೂಗುಳಮುಂ ಕಪ್ಪಡಕ್ಕೆ ಪಟ್ಟೆಯುಂ ಬ್ರಹ್ಮಲಿಂಗಿಭಟಾರ್ಗೆ ಕೊಟ್ಟುದು (ಮೈಆರಿ. ೧೯೪೬, ೨೮-೧೯ ; 1032) ; ಅಂಡೆಯಲ್ಲಿ ಐಗಳ ಕರೆದು ಕಂದದಲ್ಲಿ ಸುರಿಯಲಾಗಿ ಮೂಗುಳವಾಯಿತ್ತು ಆ ಮೂಗುಳದ ಒಲೆಯ ದೆಸೆಯಲ್ಲಿ ಇರಿಸಲಿಕೆ ಕಾಸೂದಕ್ಕೆ ಮುನ್ನವೇ ನಾಶವಾಯಿತ್ತು (ಸರ್ವಪ. ೧೧೮-೩೭೮) ; ಮೆಂಕಟನಿಗೆ ೫ ಕೊಳಗದಲ್ಲಿ ಮೂಗುಳ ಕೊಟ್ಟ (ಎಕ. IX, ಹೊಸಕೋ. ೨೪-೧೧ ; 1745). [ಮೂ$_1$ (<ಮೂಱು) + ಕೊಳ$_1$]

**ಮೂಗೋರು** (ನಾ). (ಕ್ಷೌರಮಾಡಿದ) ಮೂರುಪಟ್ಟೆ : ಕಿಡೆ ಮೂಗೋಱಂ[ರಂ]ಬೋಟೆಸಿ ನಡುದಲೆಯೊಳ್ ಮೆಟ್ಟಸನೊಡೆದು ಪಣೆಯಂ (ಕಮದ. ೧೮೮ ಪ್ರಯೋ). [ಮೂ$_1$ (<ಮೂಱು) + ಗೋರು$_1$]

**ಮೂಚೋಟು**. ಮುಚ್ಚೋಟು (ನಾ). ಮೂರು ಚೋಟು : ಒಂದು ಅಳತೆ : ಮುಚ್ಚೋಟು. ಮೂಚೋಟು (ಶಬ್ದಾಮ. ೩೨೦ ಪ್ರಯೋ). **ಮುಚ್ಚೋಟು** : ಮುಚ್ಚೋಟು, ಮುಚ್ಚವಡಿ (ಕಮದ. ೧೮೮ ಪ್ರಯೋ); ಮುಚ್ಚವಡಿ. ಮುಚ್ಚೋಟು (ಶಬ್ದಾನು. ೬೮ ಪ್ರಯೋ).

[ಮೂ$_1$ (<ಮೂಱು) + ಚೋಟು]

**ಮೂಜಗ**. ಮುಜ್ಜಗ (ನಾ). ೧. ಸ್ವರ್ಗ, ಮರ್ತ್ಯ ಮತ್ತು ಪಾತಾಳ ಎಂಬ ಮೂರು ಲೋಕಗಳು ; ತ್ರಿಲೋಕ : ಮೂಜಗದಲ್ಲಿ ನಿರತರು ಕೂಡಲಸಂಗನ ಶರಣರು ತ್ರಿವಿಧವನಱಿಯರು (ಬಸವ. ೯೦೦) ; ಉಗ್ರ ತಪದೊಳ್ ನೆಲಸಿ ನಿಲೆ ತಪಸ್ತೇಜಂ ಮೂಜಗಮಂ ಪರ್ಬಿದಾಗಳ್ (ಗಿರಿಜಾ. ೯-೧೩ ವ) ; ಮೂಜಗವನೆ ಗೆಲ್ಲುವಾಸೆಯ ತೋರ್ಪರು ಎಲ್ಲ ಕಾಮಿನಿಯರು ಹೊರಗೆ (ಇಂತಾಶ. ೮೦-೪೦). **ಮುಜ್ಜಗ** : ೧. ವೀಣೆಯಂ ತಾಳವಂ ಮೇಳವಿಸಿ ಮುಜ್ಜಗಂಗಳು ಮೋಹಗೊಳಿಸುವಂತೆ (ಸೌಗಂಧಿ. ೧೯೦-೭). ೨. ಮೂರು ಲೋಕಗಳಿಗೆ ಒಡೆಯನಾದವನು; ಪರಮಾತ್ಮ. ೩. ವಿಷ್ಣು : ಮುಜ್ಜಗನ ಕೊಂಡಾಡೊ ಸಜ್ಜನರ ಕೂಡೊ (ಕಪಕ. ೨೦೦-೨). ೪. ಶಿವ.

ಮೂಜಗದೆಱೆಯ=ಮೂರು ಲೋಕಗಳಿಗೂ ಒಡೆಯನಾದವನು: ವಿಷ್ಣು : ಮೂಜಗದೆಱೆಯನ ಕಾಲ್ತೊಳೆದಳು ಹೊನ್ನಭಾಜನ ಗಂಧವಾರಿ ಯಲಿ (ಮೋಹತ. ೪-೨೯). **ಮೂಜಗದೊಡೆಯ**, **ಮುಜ್ಜಗದೊಡೆಯ** =೧. ಮೂರುಲೋಕಗಳಿಗೆ ಒಡೆಯನಾದವನು ; ಶಿವ : ಅಜಹರಿವಂದಿತ ಮೂಜಗದೊಡೆಯನು ಗಜಾಂಬರ ಹೊದಿಸೂ ಸಿದ್ಧಗೆ ಕರೆದು ಗಿರಿಜೆಗೆ ನಿನ ಕಂದನ ಕೊಳ್ಳೆಂದ (ಸಿದ್ಧಶು. ೩-೯೯). ೨. = ಮೂಜಗದೆಱೆಯ : ಒಳಗಣ್ಣಿನೊಳಗಿಂದ ನೋಡೋ ಮುಜ್ಜಗ ದೊಡೆಯನ (ಪುರಂದ. ೩-೩ ಅನುಪಲ್ಲವಿ).

[ಮೂ$_1$ (<ಮೂಱು) + ಜಗ]

**ಮೂಟೆ** 'ಮೂಡೆ' ನೋ.

**ಮೂಟೆಕಟ್ಟು** 'ಮೂಡೆಗಟ್ಟು$_1$' ನೋ.

**ಮೂಟೆಸುಂಕ** (ನಾ). ಹೊರೆಗಳ ಮೇಲೆ ಹಾಕುವ ತೆರಿಗೆ, – ಸುಂಕ : ಈ ಗ್ರಾಮಕೆ ಸಲುವ ಗೃಹಾರಾಮ ಕ್ಷೇತ್ರ ಗದ್ದೆ ಬೆದ್ದಲು ಕಾಡಾರಮ್ಬ ನೀರಾರಮ್ಬ ಹೊಗೆಹಣ ಮನೆವಣ ಮೂಟೆಸುಂಕ . . . ಚರಾದಾಯತೆರಿಗೆ ಮುಂತಾದಯೇನು ಉಂಟಾದರೂ ನಿಮಗೆ ಸಲುವುದು (ಮೈಆರಿ. ೧೯೪೦, ೪೭-೧೮ ; 1669). [ಮೂಟೆ (< ಮೂಡೆ) + ಸುಂಕ$_1$]

**ಮೂಡ** 'ಮೂಡು$_3$' ನೋ.

**ಮೂಡಗಡಲ್** (ನಾ). ಪೂರ್ವದಿಕ್ಕಿನ ಸಮುದ್ರ : ಅಣಿಯರವಾಡ ಮೂಡಗಡಲೊಳ್ ತೆರೆಮಾಲೆಯನೆತ್ತಿ . . . ಬಂದೆಸಗಿತ್ತತಿಶೈತ್ಯಕಾರಣಂ . . . ಇಂದ್ರದಿಶಾಸಮಿೀರಣಂ (ಜಗಂ. ೧೪-೪).

[ಮೂಡ (< ಮೂಡು$_3$) + ಕಡಲ್$_2$]

**ಮೂಡಗಡೆ** (ನಾ). ಪೂರ್ವದಿಕ್ಕು ; ಮೂಡಣ ದೆಸೆ : ನಡೆತಂದ ಚಂಗಳೆ ಸರಸರನೆ ಆ ಮೂಡಗಡೆ ಮೊದಲಾಗಿ ನಿಂದಿರ್ದ . . . ಸುತನಂ ಹಿರಿಯ ದನಿ ದೆಸೆಗೆಯ್ದೆ ಕಡೆಯಲು ತೊಡಗಿದಳು ಜನನಿ (ಬಸವು. ೨೪-೩೭) ; ಅತಿಹರುಷದೆ ಪೂರ್ವಚಂದ್ರನು ಮೂಡಗಡೆಯೊಳೊಪ್ಪಿದನರ್ತಿಯಿಂದ (ಕಂಪಿಲ. ೮-೪) ; ಪಾಳೆಯದೊಳಾ ಮೂಡಗಡೆಯೊಳು ಬಾಬದೊತ್ತಿನಲಿ ನಿಂದವನು ಪಾತಾಳಕೊಯ್ಕಲು ಪಥವ ಕಾಣದೆ ಕಂಡನೂಹೆಯಲಿ (ಉತ್ತರ. ೩೩-೩೮). [ಮೂಡ (< ಮೂಡು$_3$) + ಕಡೆ$_3$]

**ಮೂಡಗರೆ** (ನಾ). ಪೂರ್ವದ ದಡ ; ಮೂಡಣ ತೀರ : ಬಸದಿಯ ಪಡುವಣ ಎಳೆದೋಣ್ಬಮುಂ ಪಡುವಣ ತೋಟದ ಮೂಡಗರೆಯಂ ಪೊಸದೋಣ್ಬಮುಂ (ಎಕ. X, ಕೋಲಾರ. ೯೦-೯೬ ; 903).
[ಮೂಡ (<ಮೂಡು$_3$) + ಕರೆ$_4$]

**ಮೂಡಗೆ** ' ಮೂಡಿಗೆ ' ನೋ.

**ಮೂಡಗೆಂಪು** (ನಾ). ಪೂರ್ವದಿಕ್ಕಿನ ಕೆಂಪುಕಾಂತಿ : ತರೆ ಸರಳ್ವ ನಡುಗಡಲ ಹಡಗಿನೆಡೆ ಮೂಡಗೆಂಪೇರಿ ಮತ್ತೊಮ್ಮೆ ಮೇಲೆ ನೆಗೆವ ದೇವರುರಿಗಣ್ಣಂತೆ ತೋರಿ ನೆಗೆಯುತಿದೆ ಮತ್ತೊಮ್ಮೆ . . . ಓರಿಯ ಬೆಳಕೊಂದು ಸಿರಿಸಾರಿ (ಹೊಂಗಳು. ೩೩-೯). [ಮೂಡ (< ಮೂಡು$_3$) + ಕೆಂಪು$_1$]

**ಮೂಡಗೆಱೆ**[3] (ನಾ). ಒಂದು ಊರಿನ ಹೆಸರು : ಸೀಮಾನ್ತರಂ ಪಡುವಾಯ್ಕ್ಕಾಪೇರಿಯೆ . . . ಮೂಡಗೆಱೆವ ಬೊಜ್ಜಗೆಱೆಯ ಒಳಗೆಱೆವ ಕೂಡಿತ್ತು ಸೀಮೆ (ಎಕ. VI (R), ಶ್ರೀರಂಗ. ೬೬-೨೯ ; 800).
[ಮೂಡ (< ಮೂಡು$_3$) + ಕೆಱೆ[3]]

**ಮೂಡಣ್** ' ಮೂಡು$_3$ ' ಪರಾ.

**ಮೂಡಣ** ' ಮೂಡು$_3$ ' ಪರಾ.

**ಮೂಡಣಂ** ' ಮೂಡು$_3$ ' ಪರಾ.

**ಮೂಡದೇಶ** (ನಾ). ಪೂರ್ವದಿಕ್ಕಿನಲ್ಲಿರುವ ರಾಷ್ಟ್ರ,- ದೇಶ : ಪಾಪಕಲ್ಲ ಕುಲತಿಲಕಂ × [ಳ್ಳ]ಪಿನಾಥ ಮೂಡದೇಶರಕ್ಷಕಂ (ಸೌಇಇ. XI-i, ೪೦-೨೨ ; 969). [ಮೂಡ (< ಮೂಡು$_3$) + ದೇಶ]

**ಮೂಡಮುಖ** (ನಾ). ಪೂರ್ವದಿಕ್ಕು ; ಮೂಡಲು : ಮೂಡಮುಖಂ ಕೇರಿವುಮಂ ಬಸದಿಯಿಂ ಮೂಡಲು (ಇಅ. XVIII, ೩೦೦-೦೬ ; 11ನೆಯ ಶತ).
[ಮೂಡ (< ಮೂಡು$_3$) + ಮುಖ]

**ಮೂಡಮೊಗ** (ನಾ). = ಮೂಡಮುಖ : ಜಗುನೆಯಂ ಪಾಯ್ದು ಮೂಡಮೊಗದೆ ಪಯಣಂಬೋಗಿ ಮತ್ಸ್ಯದೇಶಮಂ ಪುಗುತಂದರ್ (ಪಂಪಭಾ. ೬-೩೦ ವ) ; ಕಡೆಕೊಳಂ ಖಾರವೂರು ತಣ್ಣೆಯದ ಮುಕ್ಕೂಡು ಮೂಡಮೊಗದೆ ಪೋಗಿ (ಪ್ಕಆ. ೦೯೩೪, ೩೮-೭ ; 11ನೆಯ ಶತ) ಮೂಡಮೊಗದಿಂ ತ್ರಿದಶಾರ್ಚಿತಪಾದಪಂಕಜಂ ನಿಂದಿರ್ದಂ (ವರ್ಧಪು. ೦೩-೬೦).
[ಮೂಡ (< ಮೂಡು$_3$) + ಮೊಗ]

**ಮೂಡಲ್** ' ಮೂಡು$_3$ ' ಪರಾ.

**ಮೂಡಲಿ** (ನಾ). ಒಂದು ಬಗೆಯ ಸಸ್ಯ : ನಾರೋಲಿ, ಮೂಢಮುತ, ಮೂಢ, ಮೂಡಲಿ, ಕನಕಚಂಪಕ (ವೈ ಶಿ. ೩೬-೦೦೪೦). [ ? ]

**ಮೂಡಲು** ' ಮೂಡು$_3$ ' ಪರಾ.

**ಮೂಡವೆಟ್ಟ** ' ಮೂಡುವೆಟ್ಟ ' ನೋ.

**ಮೂಡವೆಟ್ಟು** ' ಮೂಡುವೆಟ್ಟ ' ನೋ.

**ಮೂಡಾಯ್**, ಮೂಡೈ (ನಾ). ಪೂರ್ವದಿಕ್ಕು ; ಮೂಡಲು : ಅನ್ತೆ ಬನ್ದು ಮೂಡಾಯಿನ್ಬೀಟ್ಟಿನ್ದ ನೀರಿಟಿಪ ಅನ್ತೆ ಬನ್ದು ತೊಲ್ಕೊಱಡಿ ಪ (ಪ್ಕಆ. ೦೯೩೬, ೬೩-೨೬ ; 550) ; ತಸ್ಯ ಸೀಮೆ ಮೂಡಾಯ್ಬೆವ್ವಳ್ಳಮೆ . . . ಮೂಡಾಯ್ ನೋಡಿ ನಡದು ಇಬ್ಬಿಲ್ಗೊಲ್ಲಿಯೆ (ಎಕ. III (R), ಹೆಗ್ಗ. ೯೦-೬ ; 750) ; ವಿಜಯಾದಿತ್ಯನ್ ವೀರಚೂಳಾಮಣಿ ಪ್ರಭುಮೇರು ವಡುಗವಟಿ ಪನ್ನಿಚಾಶಿರಮುವರ್ ಮಣ್ಣೆಯಿನ್ಮೂಡಾಯುವರ್ ಪೃಥುವೀ ರಾಜ್ಯಂಗೆ[ಯ್] (ಸೌಇಇ. IX-i, ೩-೬ ; ಸು. ೮ನೆಯ ಶತ). **ಮೂಡೈ** : ಪ್ರಥಮಂ ದುಗ್ಗನ್ಕೆಱೆ ಮೂಡೈ ಕಡೆ ಗೋಡೆ ಪ (ಎಕ. X (S), ತಕ್ಕೊ. ೬೬-೦೬ ; 850). 'ತೆಂಕಾಯ್', ' ಪಡುವಾಯ್ ' ಪರಾ.
[ಮೂಡು$_3$ + — ಆಯ್$_2$./ತುಳು. ಮೂಡಾಯಿ, ಮುಡಯಿ. ಮುಡಾಯಿ]

**ಮೂಡಾಯಿ** ' ಮೂಡಾವಿ ' ನೋ.

**ಮೂಡಾವಿ**, ಮೂಡಾಯಿ, ಮೂಡಾವೆ (ನಾ). (ಮಲಗುವಾಗ ಅಥವಾ ಕುಳಿತುಕೊಳ್ಳುವಾಗ ಒರಗಿಕೊಳ್ಳುವ) ದಿಂಬು; ಒರಗು ; ಲೋಡು; ಮೆತ್ತೆ : "ಮೂಡಾವಿಯೆಂಮಂ ಕೌಳುಡೆಯೆಂದುಂ ಮಲಗು" (ಕಶಾ. ೬೦-೩೨೪) ; ಕಣ್ಗೊಳಿಸುವ ಮುಡುಹಿನ ಮೂಡಾವಿಗೆ ಕೈಯಿಟ್ಟ ಸುಗೀಶ್ವರನ ಲಲಿತಾಂಗದ ಮೇಲಾ ಸತಿಯಲರ್ಗಣ್ಣೆಳಗು ಪರಿದು ಮುಸುಕಲು (ಜಯುಕಾ. ೦೪-೬೩) ; ಸೆಳೆಗೊಂಬಿನ ಕೇರ್, ಪಣ್ಣಲೆಯ ಪೊದಕೆ, ಚೆಂದಳಿರ ಪಟ್ಕೆ, ಪೊಸಸುಟಿಯ ಮೂಡಾವಿ, ಅಲರ್ಜೊಂಪದ ಮೇಲ್ಕಟ್ಟು ಚೆಲ್ವಾಗೆ (ರಾಮೂಕ$_4$. ೦೪೯-೦೦) ; ಶಾಂತಲಾದೇವಿ . . . ಸೆಜ್ಜೆಯ ರೇಶಿಮೆಯ ಹೊನ್ನ ಜರಿಯ ಮೂಡಾವಿಗಳನ್ನು ಅನುಗೊಳಿಸಿದಳು (ಸವಿ. ೪೯). **ಮೂಡಾಯಿ** : ರಾಮಣೀಯಕ ತಾರಕಬ್ರಹ್ಮವುಂ ಮಲಗು ಸಾಮವೇದಾದಿ ನಿಗಮಾರ್ಥಗಳ್ಮೂಡಾಯಿ ನಾಮರೂಪಕ್ರಿಯಾಮೂರಮುಪಚಾರಾಂಗ (ಬಕೋಶ. ೨-೩೦). **ಮೂಡಾವೆ** : ಸುಖಾಸೀನದ ಮೂಡಾವೆಗಳಲ್ಲಿ ಸಿಂಗಾರಮ್ಮನು ನೀಳ್ಗೊರಗಿರುವಳು (ಚಟ್ಟಿಅ. ೧೦-೦). [< ಮೂಡೆ]

**ಮೂಡಾವೆ** ' ಮೂಡಾವಿ ' ನೋ.

**ಮೂಡಿ** (ನಾ). ಹುಟ್ಟುವುದು : ಉದಯ : "ಮೂಡಿ = ಉದಯಂ" (ಕಪುತ. ಕಂ. ೨) [< ಮೂಡು$_1$]

**ಮೂಡಿಕೆ** (ನಾ). ೧. ಭಾವನೆ ; ಅನಿಸಿಕೆ : ಸೌಂದರ್ಯಕ್ಕೆ ಸಂಬಂಧಿಸಿದಂತೆ ಕವಿಯ ಪ್ರತಿಭಾನವ್ಯಾಪಾರ ನಾಲ್ಕು ಘಟ್ಟಗಳಲ್ಲಿ ನಡೆಯುತ್ತದೆ: (೧) ಸುಂದರವಾದ ವಸ್ತುವನ್ನು ಕುರಿತು ಕಲಾವಿದನ ಅಂತರಂಗದಲ್ಲಿ ಆಗುವ ಮೂಡಿಕೆಗಳು (ಸೌಂದಶ. ೯೦). ೨. ಸ್ವರೂಪ : ಕರ್ಣಾಟಕಸಂಗೀತದ ಮಕುಟಮಣಿಗಳಾದ ಈ ತ್ರಿಮೂರ್ತಿಗಳು ಒಂದೇ ಕಡೆಯಲ್ಲಿ ನಡೆಸಿದ ಕಚೇರಿಯ ಅದ್ಭುತ ಮೂಡಿಕೆಯನ್ನು ಮಾತುಗಳಲ್ಲಿ ಅಳವಡಿಸಲು ಸಾಧ್ಯವೇ ಇಲ್ಲ (ಸಂಗೀತ. ೩೦). [ಮೂಡು$_1$ + — ಇಕೆ]

**ಮೂಡಿಗೆ**, ಮೂಡಗೆ (ನಾ). ೧. ಬಾಣಗಳ ಚೀಲ; ಬತ್ತಳಿಕೆ; ತೂಣೀರ: "ತೂಣೀರಂ ಉಪಾಸಂಗಃ, ತೂಣಂ, ತೂಣೀ, ನಿಷಂಗಃ, ಇಷುಧಿಃ. ಬಾಣಾಶ್ರಯಃ, ಕಳಾಪಃ — ಈ ೮ ಮೂಡಿಗೆ " (ಹಲಾಯು. ೬೬-೩೦೦) ; ತನು ಮೂಡಿಗೆಯಾಗಿರೆ ತಳೆದನಹಿತರೆಚ್ಚಂಬುಗಳಂ (ವರ್ಧಪು. ೩-೩೩); ನೀಡದೆ ಮೂಡಿಗೆಯಿಂ ಕೈಗೊಡಗುವಹೂಡದಮುನ್ನವೆ ತಿರುವಾಯ್ಗೀಱುವ . . . ಮಹಾದಿವ್ಯಶರಂ (ಜಯುಕಾ. ೭-೦೦). ೨. "ಮೂಡಿಗೆಗಳು ಎಂದರೆ, ಜೊಂಪ (ಚಪ್ಪರ) ಡೇರೆ ಮೊದಲಾದುವುಗಳಿಗೆ ಆಧಾರಗಳಾಗಿ ಮಧ್ಯದಲ್ಲಿ ಸಾಲಾಗಿ ನೆಲೆಗೊಳಿಸಿದ ನೀಳ್ಗಂಬಗಳು" (ಪಾಠಕೋಶ. ೩೦೩): ತೊವಲ್ವೆರಸು ನಟ್ಟಾಲಂಗಳುಮಸಮರೆ ಮಾಡಿದ ಬಿಟ್ಟುಳಿಯ ಕಕ್ಕುಂಬ ತೊಡಂಬೆಯ ಮೂಡಿಗೆಯ ಕದಳಿಕಯ ಕಾಂಡಪಟಂಗಳುಮಂ (ಪಂಪಭಾ. ೩-೪೬ ವ) ; P ' ಪಂಪಭಾರತ ದೀಪಿಕೆ 'ಯಲ್ಲಿ ಈ ಪ್ರಯೋಗಕ್ಕೆ ' ಬತ್ತಳಿಕೆ ' ಎಂದೇ ಅರ್ಥ ಹೇಳಿದೆ. **ಮೂಡಗೆ** : ೩. (?) : ಅಱು ಪರಿಯಾಪ್ತಿಗಳೊಳಂ ನೆಱೆದು ತೋಱಲಾಗಿ ಪೊಟ್ಟನೊಡೆದ ಮೂಡಗೆಯ ಗೊಟ್ಟೆಯಂತಿರೆ ಸಿಡಿಲ್ದುಚ್ಚಳಿಸಿ ಪೋಗಿ ಕೆಲಗೆ ನಟ್ಟಿರ್ದನೇಕವಿಧ ನಿಶಾತಾಯುಧಂಗಳ ಮೇಲೆ ನುಚ್ಚುನೂಱಾಗಿ ಪಟ್ಟುಬಿರ್ದು ಮೂರ್ಛೆವೋಗಿ ಪಮ್ಮೈಸಿ ಮೆಯ್ಮಱೆಯುದಿಪ್ಪುದುಂ (ವರ್ಧಮಾ. ೩-೨೬ ವ). [ ? ]

**ಮೂಡಿಸು** (ಕ್ರಿ). ೧. ಹುಟ್ಟಿಸು ; ಉಂಟುಮಾಡು : ಅದಾರ್ಗೆ ಜನ ಮುದ್ರೆ ಮೂಡಿಸದೊ ಮುದದೊದವಂ (ಚಂದ್ರಪು. ೬-೯); ತದ್ದನುಜನ ತ್ರಾಪ ೨ ಸೀಳ್ದು ಲೋಕಂಗಳಂ ನಿರ್ಭಿನ್ನಾನಂದಾಬ್ಧಿಯೊಳ್ ಮೂಡಿಸಿದಳ್ ಜಯ ಮನ್ಮಾತೆ ಪಂಪಾಭವಾನೀ (ಉದ್ಭಟ. ೩-೪೪) ; ಮನ್ಮಥ ಹೊನ್ನ ಹೊದೆಯಿಂಪಲೊಂದಂಬ ತೆಗೆದು ಎದೆಯ ಸಂಕುಲದಿ ಮೂಡಿಸಿ ತೋಱಿಸಿ ಬಿಲ್ಲ ಪೆದೆಯ ಕತ್ತರಿಸಲಿಕ್ಕಿದನು (ಮೋಹತ. ೩೮-೦೮). ೨. (ದೀಪವನ್ನು) ಹಚ್ಚು ; ಹೊತ್ತಿಸು : ಒಳಗೆ ಹೋಗಿ ಕಂದೀಲನ್ನು ಮೂಡಿಸಿ, ಅಡುಗೆಯ

ಮನೆಯ ಹೊಸತಿಲ ಮೇಲೆ ತಂದಿಟ್ಟಳು (ಗಂಗಾಚರಿ. ೯೦). ೩. ಅಚ್ಚು ಮಾಡು ; ಮುದ್ರಿಸು : ಉಗಿಯ ಯಂತ್ರದಿಂದ ಮೋಹರಗಳ ಮೇಲೆ ಅಕ್ಷರಗಳನ್ನು ಮೂಡಿಸುತ್ತಾರೆ (ಮುಂಬಯಿ. ೩-೨೯೯); ತನ್ನ ಹೆಸರನ್ನು ನಾನಃ ಮರೆಯಬಾರದೆಂದು ತನ್ನ ಕೊಡೆಯ ಮೇಲೆ ಮೂಡಿಸಿ ಇಟ್ಟಿದ್ದಾನೆ (ದೇಶಸ್ಥ. ೬೩). [ಮೂಡು₁ + — ಇಸು₃]

**ಮೂಡು₁** (ಕ್ರಿ). ೧. ಹುಟ್ಟು ; ಉತ್ಪತ್ತಿಯಾಗು ; ಉದಯಿಸು : "ಮೂಡು—ಉತ್ಪತ್ತೌ" (ಕಮೂಲ); ನೇಸಱ್ ಮೂಡಿದೊಡೆ ಭಟಾರರಲ್ಲಿಗೆ ನಂದಿಮಿತ್ರಂ ವಂದು ಬಂದಿಸಿ ಇಂತೆಂದಂ (ವಡ್ಡಾರಾ. ೯೨-೦೯) ; ನೇಸಱ್ ಮೂಡಿದುದು ಬಕಂಗೆ ಮಿಟ್ಟು ಮೂಡುವ ತೆಜದಿಂ (ಕಂಕಳಾ. ೩-೨೭) ; ಗಱಿ ಮೂಡಿದ ಬಟಿಕ ನೀನೆ ದಲ್ ಪೋದಪ್ಪೆ (ಕಾದಂಬ. ೬೯೩). ೨. ಉಂಟಾಗು ; ತಲೆದೋರು ; ಕಾಣಿಸಿಕೊಳ್ಳು : ಜತುಗೃಹಪಾಟಪುಟ ಸಂಧಿಗಳೊಳ್ ಸುರಂಗಮಂ ಗಂಗೆಯೊಳ್ ಮೂಡುವಂತಾಗೆ ಸಮೆದು (ಪಂಪಭಾ. ೩-೯ ವ); ಮೂಡಿಮುವುರದೊಳ್ ಮೊಲೆ (ಜಮಾ. ೩-೨೩); ವಿದ್ಯಾರಣ್ಯರ ಮನಸ್ಸಿನಲ್ಲಿ ಸ್ವರಾಜ್ಯಸ್ಥಾಪನೆಯ ಸಂಕಲ್ಪ ಮೂಡಿತು (ಶ್ರೀವಿದ್ಯಾ. ೦೩೯).

**ಮೂಡಿ ಮುಳುಂಗಾಡು, ಮೂಡಿ ಮುಳುಗಾಡು, ಮೂಡಿ ಮುಳು ಗಾಡು, ಮೂಡಿ ಮುಳ್ಕಾಡು** = ೧. ಕಾಣಿಸಿಕೊಂಡು ಪುನಃ ಕಾಣ ದಂತೆ ಮುಳುಗು,—ಮರೆಯಾಗು. ೨. (ಅಲಂ) ಮಗ್ನವಾಗು ; ತಲ್ಲೀನವಾಗು : ಸಮುನ್ನತಭಕ್ತಿರಸಸುಧಾವಾರ್ಧಿಯೊಳ್ಮೂಡಿ ಮುಳುಂ ಗಾಡುತ್ತುದ್ಯಟ್ಕಕ್ಷಿತೀಂದ್ರಚಂದ್ರಮಂ . . . ಬೆಸಗೊಂಡಂ (ಉತ್ತ.ಪು.೨-೨೨ ವ); ರುಚಿರಾಘವಾನಂದಲೀಲೆಯೊಳ್ಮೂಡಿ ಮುಳುಗಾಡುತ . . . ಪದ್ಮ ರಸಗುರುವಂ ನಿರೀಕ್ಷಿಸುತ್ತೆ (ಶಬ್ದಾ. ೬-೬೩); ಪರಮಾನಂದರಸದೊಳಗೆ ಮೂಡಿ ಮುಳುಗಾಡಿ . . . ಕೈ ನೀಡಿ ಕೊಟ್ಟಂ ನಂದಿಯುಂಡಿಗೆಯು ಪೊಸ ಹೊನ್ನ ಮೊಗಮೊಗೆದು ಶಿವ ನೇಬಿಗೆ (ಸೌಂದರ. ೩-೨೭); ರಾಗರಸದೊಳು ಮೂಡಿ ಮುಳುಗಾಡಿದಳು ಜಿನದತ್ತೆ (ಸಾಳ್ವಭಾ. ೩-೨೩); ಮನಮನುಜ ಸೆಱೆವಿಡಿದ ಸೀಯನಪ್ಪ ಗೇಯರಸಾಬ್ಧಿಪೂರದೊಳ್ ಮೂಡಿ ಮುಳು ಗಾಡುತ್ತುಂ (ಶಾಂತಿಪು. ೨-೨೨ ವ); ಅಂತಾ—ರಜನಿಯೊಳ್ ರಾಜೇಂದ್ರ ಚಂದ್ರಂ ಸುರತಸುಖಾಂಭೋಧಿಯೊಳ್ಮೂಡಿ ಮುಳುಗಾಡಿ (ಕಾದಂಬ. ೬೦೬); ಅಂತು ಪುರಮುಮಂತಃಪುರಮುಮಾದಿಪುರುಷಜನ್ಮೋತ್ಸವಸುಧಾಂಬು ರಾಶಿಯೊಳ್ ಕೂಡಿ ಮೂಡಿ ಮುಳ್ಕಾಡುವುದಂ ನೋಡಿ (ಆದಿಪು. ೭-೦೨೩ ವ); ಪೊನಲೊಳಗೆ ಮೂಡಿ ಮುಳ್ಕಾಡುವವೋಲ್ (ಪುಷ್ಪ. ೦೩-೯೭).

**ಮೂಡಿ ಮುಳುಂಗು, ಮೂಡಿ ಮುಳುಕು, ಮೂಡಿ ಮುಳುಗು, ಮೂಡಿ ಮುಳ್ಕು** = ಮೂಡಿ ಮುಳುಂಗಾಡು : ನಿಜೋತ್ತರೀಯವಸನಾಂಚಲ ದಿಂ ಮುಸುಕಿಟ್ಟು ಚಿಂತೆಯೊಳ್ ಮೂಡಿ ಮುಳುಂಗಿ ತನ್ನ ಮನದನ್ನ ರೊಳಂ ಮೊದಲಾಗಿ ಕನ್ನೆ ಮಾತಾಡದೆ ಜಾನಿಸುತ್ತಿರಲು (ಕಾದಂಬ. ೩೬೬); ನೋಡುವಳುಱೆ ಕಾತರಿಪಳು ಮೈಸೋಂಕಿ ಮೂಡಿ ಮುಳುಕಿ ಮೋಹರಸದ ಕೂಡಾಗ ಬಿಗಿಯುಪ್ಪಿ ಮೊಗಮೊಗವೆರಸಿ ಮುಂಡಾಡಿದಳು (ಕಂಪಿಲ. ೦೦-೩೦); ನೋಡಿ ಪುಳಕದೊಳ್ ಮೂಡಿ ಮುಳುಗುತ್ತೊಮ್ಮೆ ನೋಡಿಯುಮ್ಮಳಿಸುತಾ ನಂಬ್ಯಣ್ಣನಾ ವೃದ್ಧನಾ ಕೂಡೆ . . . ನುಡಿದು (ಸೌಂದರ. ೯-೭೯); ಲೀಲಾರಸದೊಳಗೆ ಮೂಡಿಮುಳ್ಕುವ . . . ಲೀಲಾಕೇಳಿಗಳೆ ವಿಲಾಸಕೇಳಿಗಳ್ ನೃಪಪಕತಿಯಾ (ಅತಪು. ೩-೯).

**ಮೂಡು₂** (ಕ್ರಿ). ತುಂಬಿಸು ; ಭರ್ತಿಮಾಡು : ಗಱಿಕೆಯ ತೊಳಚಿಯ ದಾಂಗುಡಿಯಂ ಚಿವುಂಟಿ ಬಾಚಿವಟ್ಟಿಯೊಳ್ ಮೂಡಿ ತರ್ಪ ಬಾಲವಟು ಗಳಂದೆಯುಂ . . . ಪುಣ್ಯಾಶ್ರಮಂ ಮನೋಹರಮಾಯ್ತು (ರಾಮಾಶ್ವ. ೯೩-೦೩). [ ? ]

**ಮೂಡು₃, ಮೂಡ** (ನಾ). ೧. ಸೂರ್ಯನು ಹುಟ್ಟುವ ದಿಕ್ಕು ; ಪೂರ್ವದಿಕ್ಕು : ಮೂಡ ದೆಸೆಯೊಳ್ಕೆಂಪು ದೊರೆಯೆ ತಾರಗೆ ಪರೆಯೆ ಕೂಡೆ ತಂಗಾಳಿ ಮುಂಬರಿಯೆ ಕಮಲಂ ಬಿರಿಯೆ . . . ಮೆಱೆದಂ ಪ್ರಭೆಯೊಳಾ ಸುತ್ಯನಾದಿತ್ಯನು (ಕೈವಲ್ಯ. ೨-೬೩); ಮುಂಗೋಳಿ ಕೂಗ್ಯಾವು ಮೂಡು ಕೆಂಪೇರ್ಯಾವು (ಹಳ್ಳಿ. ೦೯). **ಮೂಡ** : ಮೂಡ ಕಱೆಯ ಕಲ್ಲಡಿಗೆ ತೀರ್ತ್ಥವ ಕಲ್ಪಡುವ ಕಮ್ಮಾಱಕಲ್ ನೈರಿತಿಯೊಳಿ ಆ ವಡಕಲ್ ತೆಂಕ ಪೇರೂರ ಪಳ್ಳಂ (ಎಕ. XI, ಮೊಳಕಾ. ೨೭-೩ ; 962) ; ರತಿನಾಟಕಾಭಿ ನಯಮಂ ಕೃತಕೃತ್ಯಂ ಮಾಡಿ ರಯ್ಯಮ್ಮಾಗಿರೆ ದೀಪಪ್ರಭೃತಿ ಯುವತಿಯ ರೊಳ್ ನಿದ್ರಾಪಹಾರವಾದತ್ತು ಮೂಡವೆಳಗಪ್ಪಾಗಳ್ (ಶಿಗಂ. ೦೩-೦೩೭); ಮೂಡ ಕೆಂಪೊತ್ತಿದುದು ಕಮುತಣ್ಣನಾಗಲರ್ ತೀಡಿತು (ಶಬ್ದಾ. ೭-೩).

**ಮೂಡಣ್** = ಪೂರ್ವದಿಕ್ಕು : ನೀಲಗಿರಿ ಬಡಗಣ್ಗಾ ತಾರಂ ದ್ರಾವಣ ರಣವಕ್ಷಾರಂ ಮೂಡಣ್ಗೆ ತನಗೆ ಸೀಮೆಯೆನಿಕ್ಕುಂ (ಪುಲ್ಲಿಕೃ. ೨-೦೨); ಮೂಡಣಿಂ, ಮೂಡಣ್ಗೆ (ಭಾಷಾಭೂ. ೩೭ ಉದಾ). **ಮೂಡಣ** = ೧. ಪೂರ್ವದಿಕ್ಕಿನ : ನೆಯ್ಬಲ್ಲಿಜೆಯಾ ಏಱೆ ಮೂಡಣ್ಣಾಸೀಮೆ ಇಡೆ ವೆಟ್ಟದಾ ಪಡಗಣ್ಣಾ ನೀರಿಬಿಗೆ (ಎಪಿ. XXI, ೦೭೯-೦೩; ಸು. 8 ನೆಯ ಶತ); ಮೂಡಣ ದೆಸೆಯ ವ[ರಾಹ]ಕೆಱೆಯಂ ಮೂಡಣ ಪಳ್ಳ ಆದಱ ತೆಙ್ಕಣದೆಸೆ [ವಣ್ಣಗೆಱೆ]ಗೂಟ್ಟಂ (ಸೌ.ಇ. XI-i, ೯-೨೭; 862) ; ದೇವತೆ . . . ಕೋಗಳಿಯ ಮೂಡಣ ದೆಸೆಯ ಪರ್ವತದ ಕೊಳದ ತಡಿಯೊಳ್ ಲತಾ ಮಂಟಪದೊಳಿರಿಸಿ ಪೋದೊಡೆ (ವಡ್ಡಾರಾ. ೦೦೯-೯); ನಡೆದು ಬಂದುದು ಕೌರವೇಂದ್ರನ ಪಡೆ ಕುರುಕ್ಷೇತ್ರಕ್ಕೆ ಮೂಡಣ ಕಡೆಯಲಳವಡಿಸಿದರು ಬೀಡಾಯಿತು ವಹಿಲದಲಿ (ಕುಮಾ.ಭೀ. ೦-೩೦). ೨. ಪೂರ್ವದಿಕ್ಕು : ಪಡುವಣಕೆ ಸಂದ ರವಿ ಮೂಡಣದಿ ಎದ್ದ (ನಂಜು. ೩-೦೯); ಮೂಡಣದಲ್ಲಿ ತಂಗದಿರ ಮೂಡಿದಾಗ ಆ ನಾಲ್ವರು ಮನೆಯನ್ನು ತೊರೆದರು (ಹಾಕು. ೯೮). **ಮೂಡಣಂ** = ಪೂರ್ವದಿಕ್ಕಿನವನು : ಮೂಡಣಂ, ತೆಂಕಣಂ (ಶಮದ. ೦೦೦ ವೃ.ಯೋ). **ಮೂಡಲ್, ಮೂಡಲು, ಮೂಳ್ಲು** = ಪೂರ್ವದಿಕ್ಕು : "ಪ್ರಾಚಿಯೆನೆ ಪೂರ್ವಮೈಂದ್ರಿಯೆನೆ ಮೂಡಲೆನಿಕ್ಕು" (ಮಂಗರಾ. ೦೭-೦೯); ಮನೆಯುಂ ಪೆರ್ಚಿಸುಪೊಡೆ ಮುನ್ನಿನ ಮಾಟಿಕೆಯೊಳದ್ದು ಮೂಡ ೧ ಬಡಗಲ್ ಪೊತ್ತಿ ನಿಮಿರ್ಚುಗೆ (ಲೋಕೋಪ. ೩-೦೩); ಇದು ಪೂರ್ವಾಚಲದುಲ್ಲದಿನ್ನಿದು ಸುರೇಂದ್ರಾಶಾದಿ . . . ಒಪ್ಪುವ ಮೂಡ ಲ್ಲದಿದು ತಾಂ ಮೂಡಲ್ನೋರಾಣೆಂ (ರಸರತ್ನ. ೯-೦೩೯); ಬಸದಿಯಿಂ ಮೂಡಲು ದಾನಸಾಲೆಗೆ ಪನ್ನಿ[ರ್]ಕ್ಕಯನಿವೇಸಣಮುಮಂ . . . ಬಿಟ್ಟ (ಇಸಿ. XVIII, ೩೦೦-೦೩; ಸು. 11ನೆಯ ಶತ); ಮೂಡಲು ಮಗುಳೆ ಕೆಂಪೇಱೆ ಕದನಕೆ ಕಳನ ತುಂಬಿತು ಮತ್ತೆ ಕೌರವ ಪಾಂಡವರ ಸೇನೆ (ಕುಮಾ.ಭೀ. ೬-೩); ಸೂರ್ಯನು ಪಡುವಣದಲ್ಲಿರುವವರಿಗಿಂತ ಮೂಡಲಿನಲ್ಲಿರುವವರಿಗೆ ಮೊದಲು ಗೋಚರಿಸುತ್ತಾನೆ (ಮುಂಬಯಿ. ೯-೬೭); ಶೆಟ್ಟಿಹಳ್ಳಿಗ್ರಾಮಕ್ಕೆ ಮೂಳ್ಲು ಬಾಗ್ಗನಹಳ್ಳಿ ದಕ್ಷಿಣ (ಎಕ. XIV, ತಿರುಮ. ೦೩೩-೦೯; 1662); ಹಾಲೆ ಬೇಲೂರುಗ್ರಾಮಕ್ಕೆಯಲ್ಲ ಚತುಸ್ಸಿಮ ವಿವರ ಹೇಮಾವತಿಗೆ ಮೂಳ್ಲು ಮೊರಸಾಗರಹಳ್ಳಿಗೆ ಪಶ್ಚಿಮ (ಮೈ.ಆಂ. ೦೯೯೩, ೯೯-೦೭; 1666).

[ < ಮೂಡು₁ / ತುಳು. ಮೂಡು ]

**ಮೂಡುಗಟ್ಟನಗಿಡ** (ನಾ). ಒಂದು ಬಗೆಯ ಸಸ್ಯ : ಮೂಡುಗಟ್ಟನ ಗಿಡ, ಬೋಡುಕಡಲೆಸೊಪ್ಪು, ಕರಂಡೆ, ಮೂಡಿಗಿಡ (ಮೈ.ಶಿ. ೬೦-೦೯೬೦). [ ? + ಗಿಡ (< ಗಿಡು) ]

**ಮೂಡುನೇಸಱ್** (ನಾ). ಹುಟ್ಟುತ್ತಿರುವ ಸೂರ್ಯ; ಉದಯರವಿ: ಮೊದಲ್ ಮೂಡುನೇಸಱ ಕಡೆಗೆ ತಿರುಗು (ಐದ್ಯಶ್ರ. ೩೭-೯೦೯). [ ಮೂಡು₁ + ನೇಸಱ್ ]

**ಮೂಡುವೆಟ್ಟ, ಮೂಡವೆಟ್ಟ, ಮೂಡವೆಟ್ಟು, ಮೂಡುವೆಟ್ಟು** (ನಾ). ಪೂರ್ವದಿಕ್ಕಿನಲ್ಲಿರುವ ಪರ್ವತ ; ಉದಯಾಚಲ : ಓರ್ವ ಅಗ್ನಿ

ಹೋತ್ರಿಯು . . . ಎಳನೇಸರು ಮೂಡುವೆಟ್ಟವನ್ನೇರುವ ಸಂಭ್ರಮವನ್ನು ನೋಡುತ್ತಾ ಮೈ ಮರೆತಿದ್ದನು (ಮಚಿಸ. ೧). **ಮೂಡವೆಟ್ಟ**: ಮೂಡ ವೆಟ್ಟದ ನಡುನೆತ್ತಿಯೊಳಿರ್ದ ಭಾಸ್ಕರನ ಕಂಡೆ ನಾನು (ನಾಗಕು. ೫-೩೨); ಕ್ಷೋಣೀಯ್ಮತಾಮಸಂ ಪರಿಜು ದುಃಖಂ ಪೋಗೆ ಮೂಡೇವಮಯ ಮೂಡ ವೆಟ್ಟದುದಿಯನ್ನಡರಿ ನೋಡಿದಂ ಪ್ರೀತಿಯಿಂದೆ (ವಂಕಿಶಾ. ೨-೨೭-೧೨). **ಮೂಡವೆಟ್ಟು**: "ಮೂಡವೆಟ್ಟೆಂದು ಪೂರ್ವಾಚಲಂ" (ಕಶನಾ. ೪೯-೫೦); ದನಿಮಾಡೆ ಕುಕ್ಕುಟ ಪರಿದೋಡೆ ತಿಮಿರ ಪದ್ಮಿನಿಗತಿಸಂತಸಗೂಡೆ ಮನುಜರು ಭೂಪಾಳಿ ಧನ್ಯಾಸಿಗಳ ಪಾಡೆ ಇನ ಮೂಡವೆಟ್ಟನೊಳ್ಮೂಡೆ (ಹೇವಂಸಾಂ. ೦೬-೫೪); ಘನಸತ್ತ್ವಂ ವಿಷ್ಣುಪದಾರ್ಚನೆಗೆಯ್ಕಲ್ ಮೂಡವೆಟ್ಟು ಶಶಿಶಂಖದೆ ಪಾಲ್ಗೊನಲಿನಭಿಷೇಕಮಂ ಮಾಟ್ಪಿನಮೇಂ ಪಸರಿಸಿತೊ ಮುಸಗಿ ಪೊಸವೆಳ್ದಿಂಗಳ್ (ಶಕಶ. ೬-೨೪). **ಮೂಡುವೆಟ್ಟು**: ತಾನೆ ಭಾಸ್ಕರಂ ಬೇಗನುಪ್ಪವಡಿಸಿ ಮೂಡುವೆಟ್ಟಿನ ಕೋಡುಗಲ್ಲನೇಱಿ ನಿಟ್ಟಿಸುತಿರ್ದಂ (ರಾಮಾಶ್ವ. ೨೭-೧); ಹರಿಗೋಲು ಇರುಳೆಲ್ಲ ತೇಲಿ, ನೇಸರು ತನ್ನ ಪೊಂದೇರನ್ ಅಡರಿ ಮೂಡುವೆಟ್ಟಿನ ನೆತ್ತಿಗೈತಹ ಮುನ್ನ . . . ಬಂದು ಈ ದ್ವೀಪವನ್ನು ಸೇರಿದುದು (ಬಗಾ೪. ೨೩-೩). [ಮೂಡು೨ + ಬೆಟ್ಟ]

**ಮೂಡುವೆಟ್ಟು** 'ಮೂಡುವೆಟ್ಟ' ನೋ.

**ಮೂಡೆ**, ಮಟ್ಟೆ೭, ಮೂಟೆ, ಮೊಟ್ಟೆ೩ (ನಾ). ೧. ಹುಲ್ಲು, ನಾರು, ಬಟ್ಟೆ, ಮೊದಲಾದುವುಗಳಿಂದ ಕಟ್ಟಿದ ದೊಡ್ಡ ಗಂಟು,–ಕಟ್ಟು,–ಹೊರೆ: ನೂಱಿಪ್ಪತ್ತ(ನ್ನು)ಕೊಂಬೆ ಗಾರೊಡಂ ಪಡೆಯಂ ಮೆಣ್ಣ ಮೂಡೆ ಜವುಳಿ ಒನ್ದು (ಎಇ. XXI, ೧೩೧೦೬; ೩ನೆಯ ೫೩); ನೀರ ಮೂಡೆಯು ಕಟ್ಟ ಬಯಲಿಗೆ ಬಲೆಯ ಬೀಸಬಹುದೇ ಅಯ್ಯ (ಸಿದ್ದೇವ. ೬೪೪). ೨. ಧಾನ್ಯ ಮೊದಲಾದುವನ್ನು ತುಂಬಿಸಿ ಕಟ್ಟಿದ ದೊಡ್ಡ ಚೀಲ: ಪುರದ ವೀಥಿಯೊಳಿಡದು ನೆಲ್ಲ ಮೂಡೆಗಳಿರಲು (ಸಂಬರ. ೦೧-೦೦೨); ಬಳ್ಳ ಐವತ್ತರ ಲೆಕ್ಕದ ಅಕ್ಕಿ ಮೂಡೆ ೨೪ (ಎಇ. XX, ೯-೯೫; 1556); ಕಣ್ಣಾಮುಚ್ಚೆ ಕಾಡೇಗೂಡೆ ಉದ್ದಿನ ಮೂಡೆ ಉರುಳೇ ಹೋಯ್ತು (ಹುಬ್ಬಿ ಶ. ೦೩೪); ಮೂಢನಿಗೆ ಭಯವಿಲ್ಲ, ಮೂಡೆ ಭತ್ತಕ್ಕೆ ಕೇಡಿಲ್ಲ (ಗಾದೆ). ೩. ಚಿಕ್ಕಪೊಟ್ಟಣ,– ಗಂಟು: ತಳಿರ ಮೂಡೆಯೊಳೆ ಮಲ್ಲಿಗೆಯ ಮುಗುಳ್ಗಳನೊಟ್ಟೆ ಮಿಕ್ಕ ಮುಗುಳಂ ಮೇಲುದಿಂ ಮೊಟ್ಟೆಯಂ ಕಟ್ಟ (ಲೀಲಾವ. ೦೦-೦೦). ೪. ಒರಗಿಕೊಳ್ಳಲು ಉಪಯೋಗಿಸುವ ಉದ್ದವಾದ ದಿಂಬು; ಲೋಡು: ಪಾಡುವ ಗಾನವ ನಿಲಿಸಿ ಮತ್ತೊಱಗುವ ಮೂಡೆಯನೊಱಗಿ ಚಕ್ರೇಶ ನೋಡುತಿರ್ದನು (ಭರತ. ೩೪-೯೯). 'ಒಱಗುವಮೂಡೆ'. 'ಮಲಂಗುಮೂಡೆ' ಪರಾ. ೫. ಒಂದು ಅಳತೆ: ಶಾಸನಗಳಲ್ಲಿ ಬರುವ ನಾಣ್ಯಗಳೂ ಅಳತೆಗಳೂ . . . ಹಾನೆ, ಮೂಡೆ, ಮುಡಿ (ತುಳುಶಾ. ೨೭೦). **ಮಟ್ಟೆ೭**: ೧. ಮಾತೆಯಾ ತಲೆಗೊಂದು ಮಟ್ಟೆಯನ್ನಿರಿಸಿ ತಾಯಂ ಬಯ್ಯುತಂ ನಡೆದನಾ ಕಲ್ಕಿಯು (ತುರಂಗ. ೯೦-೬). **ಮೂಟೆ**: ೧. ಮಂದಿರದಿ ಮೊಟ್ಟೆಯನಿಟ್ಟು ಇಂದುಧರ ಜಂಗಮರ ಅಂದು ಪೂಜಿಸುವ (ಕರೀ. ೦೬೦-೭); ಲಲಿತಾ ಇನ್ನೊಂದು ಮೂಟೆಯನ್ನು ತೆಗೆದುಕೊಂಡು ಹಿಂದೆ ಹೊರಟಳು (ಲುಬ್ಬಿ.೩೩). ೨. ಹಾಗೂ ಹೀಗೂ ಉದ್ದಿನ ಮೂಟೆ ಕುಲುಕಿದ ಹಾಗೆ ಜನಗಳು ಸವರಿಸಿಕೊಂಡು ಎಲ್ಲರೂ ಕುಳಿತರು (ಠಾಮಾಪ. ೦೦೦). **ಮೊಟ್ಟೆ೩**: ೧. ಕುಡುವವನೇನನಿತ್ತಪನೊ ಕಟ್ಟ ಬುಧಾಳಿಗೆ ಪೊನ್ನ ಮೊಟ್ಟೆಯಂ ಕುಡುವೊಡೆ ಚಿಟ್ಟರಂ ಕುಡುವುದುಳ್ಳುದಂ (ಲೀಲಾವ. ೦-೩೩); ಮನ ಸೋಂಕಿದ ಸುಖವ ಮೊಟ್ಟೆಯ ಕಟ್ಟಬಹುದೆ (ಅವಕಂ. ೦೩೦-೫೯೯); ಕಂಬಳಿಯೊಳಾತನಂ ಮೊಟ್ಟೆಯಂ ಕಟ್ಟ ಪೊತ್ತು ತಂದು ಬೀದಿಯೊಳಗೀಡಾಡಿಪೋಗೆ (ಕುಮ್ಮಾಶ್ವ. ೯-೨೦ ಪ); ಅಟ್ಟಿಕ್ಕುವವನಿಗೆ ಹೆಂಡತಿಯಾಗಬೇಡ, ಮೊಟ್ಟೆ ಹೊರುವವನಿಗೆ ಆಳಾಗಬೇಡ (ಗಾದೆ). ೨. ಭತ್ತವನ್ನು ರಾತ್ರಿಕಾಲದಲ್ಲಿ ಹೊತ್ತುಕೊಂಡು ಹೋಗುವಾಗ್ಗೆ ಭತ್ತದ ಮೊಟ್ಟೆ ತೂತಾದ್ದರಿಂದ ದಾರೀಕಡೆಗೂ ಚೆಲ್ಲಿದ್ದರಿಂದ (ಮ್ಯಕಾ. ೦೯೩೯. ೦೬-೩೩; 1402). ೩. ಪೊಟ್ಟಣದಲ್ಲಿ ಕಟ್ಟಿದ ಆಹಾರ; ಬುತ್ತಿ: ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟದರೇನು ಹಸಿವು ಹೋಹುದೇ (ಅವಕಂ. ೪೨-೦೬೯). [ದೇ. ತಮಿ. ಮೂಟ್ಟೈ, ಮೂಟ್ಟೈ; ಮಲ. ಮೂಡ; ತುಳು. ಮೊಟ್ಟೆ; ತೆಲು. ಪರ್ಜಿ. ಮೂಟ; ಕುವಿ. ಮೂಂಟ; ಕುರುಖ್. ಮೋಠಾ. / ಸಂ. ಮೂಟ, ಮೂಟಕ, ಮೂಡಕ. / ಪ್ರಾ. ಮೂಡ. / ಮರಾ. ಮೂಡ್]

**ಮೂಡೆಗಟ್ಟು೧**, ಮಟ್ಟೆಗಟ್ಟು, ಮೂಟೆಕಟ್ಟು, ಮೊಟ್ಟೆಕಟ್ಟು, ಮೊಟ್ಟೆಗಟ್ಟು (ಕ್ರಿ). ೧. ಗಂಟುಕಟ್ಟು; ಹೊರೆಮಾಡು: ಪಾತಾಳದೊಳಗಿರ್ದ ಶೇಷನ ಕಿತ್ತು ಕೈಕಾಲ ಮುದುಡಿ ಮೂಡೆಗಟ್ಟಿ ಕಟ್ಟುತ್ತೆ (ಪಾಶ್ಚಕ. ೨-೦೨-೯೩); ಮೂಡೆಗಟ್ಟಿದ ಧಾನ್ಯ ನಿರುತಾಗಿ ಮೊಳೆವಂತೆ ಕೂಡೆ ರೋಮಾಳಿಗಳು ಗುಡಿಗಟ್ಟೆ (ಕೃಕುಪು. ೯-೦೪). ೨. ಗಂಟಾಗು; ಬಾವು ಬರು: ಅಂಜನಚೋರಂಗೆ ಮುಳಿದು . . . ಕಾಲೊಳಂ ಕೈಯೊಳಂ ಮೂಡೆಗಟ್ಟು ವಂತೆ ಮೋದಿ (ಧರ್ಮಾಮೃ. ೨-೦೨೦). **ಮಟ್ಟೆಗಟ್ಟು**: ೧. ತಯಿಬಿಲಿಗರ ಸಂಬಲಿಯಂ ಮಟ್ಟೆಗಟ್ಟುವರಂತೆ ಕೋಡಗಟ್ಟಂಗಟ್ಟಿ ಕಾಡುವಂ (ಧರ್ಮಾಮೃ. ೨-೬೭). **ಮೂಟೆಕಟ್ಟು**: ೧. ಅರ್ಜುನನನ್ನು ರಣಾಂಗಣದಲ್ಲಿ ಜಯಿಸುವುದಕ್ಕೆ ನಿಶ್ಚಯಿಸುವುದು ಘಾಳಿಯನ್ನು ಹಿಡಿದು ಮೂಟೆಕಟ್ಟುವುದಕ್ಕೂ . . . ಎಣಿಸಿದ ಹಾಗೆ (ಕೃಪಾಳ. ೬೨); ಆ ವೀರಭೂಮಿಯ ಸ್ವತಂತ್ರರಾಣಿಯನ್ನು ಬಲಾತ್ಕಾರದಿಂದ ತಂದರೆ, ಹಿಂದೂ ಪಾಳೆಯಗಾರರ ವಿರೋಧಾನಲವನ್ನು ಮೂಟೆಕಟ್ಟ ಪಟ್ಟಣಕ್ಕೆ ತಂದಂತೆಯೇ ಸರಿ (ಬೆಂಚ್. ೯೭). ೩. ಧಾನ್ಯ ಮುಂತಾದುವನ್ನು ಚೀಲದಲ್ಲಿ ತುಂಬಿಸಿ ಕಟ್ಟು: ಅವನು ಭತ್ತವನ್ನು ಮೂಟೆಕಟ್ಟಿ ಸಂತೆಗೆ ಮಾರಲು ತೆಗೆದುಕೊಂಡು ಹೋದನು (ಕಊ). ೪. ಒಟ್ಟುಗೂಡಿಸು; ಒಟ್ಟಾಗಿ ಬಂಧಿಸು: ಹೆಣ್ಣಿನ ತಂಟೆ ಇನ್ನು ಬೇಡವೆಂದು ರೋಷವನ್ನೆಲ್ಲಾ ಮೂಟೆಕಟ್ಟಿ ಇಟ್ಟಿದ್ದ ಭೀಮನೂ ಮತ್ತೆ ಕೆರಳಿದನು (ಕಾವ್ಯಸ. ೮೯); ಆ ಸೇಡನ್ನು ಅವನು ಮೂಟೆಕಟ್ಟಿ ಮನದ ಮೂಲೆಯಲ್ಲಿ ಬಚ್ಚಿಟ್ಟುಕೊಂಡನು (ಬ್ರಾಕಾ. ೯೦). **ಮೊಟ್ಟೆಕಟ್ಟು**: ೧. ನನ್ನ ಜುಬ್ಬವನ್ನು ತೆಗೆದು ಪಂಚೆಯನ್ನು ಎತ್ತಿ ಮೊಟ್ಟೆಕಟ್ಟ ಕೆರೆಯೊಳಗಿಳಿದೆ (ಕಂಗಾಳ್. ೩೩೩). ೪. ಮಂದಾ ಅವಸರದಿಂದ . . . ಒದ್ದಾಡುವ ಮನಸ್ಸನ್ನು ಒಟ್ಟುಗೂಡಿಸಿ ಮೊಟ್ಟೆಕಟ್ಟಿ ಅಂತೂ ಕುಳಿತುಕೊಂಡಳು (ಇಕ್ಕ. ೨೩೩). **ಮೊಟ್ಟೆಗಟ್ಟು**: ೧. ಪುದಿಗತ್ತುರಿಯೆಂದು ಓಡಿಕೆಯ್ಸಿ ಪೂಸಲುಂ ಪಾಸಿ ಮೊಟ್ಟೆಗಟ್ಟಲುಂ . . . ಅಪ್ಪ ಕಾಳದ ಕಟ್ಟಲೆಯೊಳ್ (ಅರ್ಜವೀ. ೫-೦೬೫); ತನ್ನ ಮನದಣಿವನಿತು ಪೊನ್ನಂ ತನ್ನ ವಸನದಿಂ ಮೊಟ್ಟೆಗಟ್ಟ ಸಡಗರಂ ಮಿಗೆ ಪೊತ್ತು (ವೃಕಾ. ೦೯-೦೬ ಪ); ಹುಟ್ಟುವಾಗಲೆ ಧನವ ಮೊಟ್ಟೆಗಟ್ಟದಿಹನೆ (ಸರ್ವಜ್ಞ. ೬೦೯). [ಮೂಡೆ + ಕಟ್ಟು೧]

**ಮೂಡೆಗಟ್ಟು೨** (ನಾ). ಮೂಡೆಗಳನ್ನು ಕಟ್ಟುವಂತೆ ಕಟ್ಟುವ ಒಂದು ಬಗೆಯ ಬಿಗಿಯಾದ ಬಂಧ, – ಕಟ್ಟು: ಈಗಳೊರ್ವಂ ಗಂಧರ್ವಂ . . . ಕುರುರಾಜನುಮಂ ಯುವರಾಜನುಮನೊಡನೆ ಮೂಡೆಗಟ್ಟುಗಟ್ಟಕೊಂಡು ಗಗನಮಂಡಳಕ್ಕೊಗೆದು ಪೋದಂ (ಪಂಭಾ. ೦೦-೭೦೫); ಮೂಡೆಗಟ್ಟಂ ಕಟ್ಟ ಹುಡುಕುನೀರೊಳ್ ಮೆಟ್ಟ ಕಾಡುತಿಹ ಪಾಮರರ ಕೈವಿಡಿತಗೊಳಗಾಗಿ (ರಾಜಶಂ. ೨.೬); ಮೂಡೆಗಟ್ಟಂ ಕಟ್ಟ ಹುಡುಕುನೀರೊಳಗದ್ದಿ ಕೂಡೆ ಮೂಗಂ ಕೊಯ್ದೊಡೆ (ಗುರುಚಾ. ೦-೩೩). [ಮೂಡೆ + ಕಟ್ಟು೨]

**ಮೂಡೈ** 'ಮೂಡಾಯ್' ನೋ.

**ಮೂಡೊಂಕು** (ನಾ). ಮೂರು ಕಡೆಗಳಲ್ಲಿ ಬಾಗಿರುವುದು, – ಡೊಂಕಾಗಿರುವುದು: ಮಲಹರನ ನಡುವೊಂದೆಸೆಗೆ ಒಲಿದೊಲಿದುಕೊಂಡಿದೆ . . . ಮೂಡೊಂಕಾಗಿ ಕಾಲೊಂದು ನೆಲನನೂಱಿತ್ತೊಡಲನ್ನಾಂತುದು ಉಳಿದ ಮೆಲ್ಲಡಿ (ಬಸವು. ೦೭-೨); ಜಡಿದ ಖಂಡೆಯದ ಮೂಡೊಂಕ ತಿದ್ದದ

ಮುನ್ನವಡಿಗೆಜಾದುದು ಕೇಶವನ ಪೊಡವಿ ತ್ರಿಖಂಡವೆ ಷೋಡಶರಾಯರು ಪಡೆದರು ಭೃತ್ಯಭಾವವನು (ವಠೇಶ. ೬-೩೦).

[ಮೂ$_1$ (< ಮೂಜು) + ಡೊಂಕು$_2$]

**ಮೂಢ** (ಗು). ೧. ತಿಳಿವಳಿಕೆಯಿಲ್ಲದ ; ಅವಿವೇಕದಿಂದ ಕೂಡಿದ : 'ಮೂಢನಂಬಿಕೆ', ' ಮೂಢಭಕ್ತಿ' ಪರಾ. (ನಾ). ೨. ತಿಳಿವಳಿಕೆಯಿಲ್ಲದವನು; ತಿಳಿಗೇಡಿ; ಅಜ್ಞ: "ವೈಧೇಯಃ . . . ಮೂಢಃ . . . ಮಾತ್ಯಶಾಸಿತಃ — ಈ ೧೧ ಅಱಿಯದವಂ" (ಶಬ್ದಮ. ೩೬-೦೬೦); ಮೂಢ ಬಲ್ಲನೆ ಜ್ಞಾನದೃಢ ಭಕುತಿಯ (ಕುಠಂಠ. ರಾ. ೩-೦೪೦ ಶ್ಲೋ); ಮೂಢ ಬಂದಿರುಗಿ ಪೋಗಿ ಸಲಹಿಕೊ ಶರೀರಮಂ (ಪಂಚಾಶ. ೩-೩-೦೦). ೩. ಪೆದ್ದ; ಮಂಕ : ಮೂಢಗೆ ಹೇಳಿದ ಬುದ್ಧಿ ಅಡಿಗೆ ಹಾಕಿದ ಮೇವು (ಗಾದೆ). ೪. ಆಲಸ್ಯ; ಸೋಮಾರಿತನ : ಮೂಢವೆಂದರೆ ತಮೋಗುಣದಿಂದ ನಿದ್ರೆಯಲ್ಲಿರುವ ಹಾಗೆ ಆಲಸ್ಯದಲ್ಲಿರುವುದು (ಹಿಂದಶಾ. ೦೦೨). ೫. = ಮೂಢತ್ರಯ : ಮೂಱುಮೂಢದಿನಾಱನಾಯತನಸೇವೆಯಿಂ . . . ಬಂಗಿದ ನಿರ್ಮಳಮಪ್ಪ ಸಮ್ಯಕ್ತ್ವರತ್ನಮಂ ಕೈಕೊಂಡು (ಸುಕುಮಾ. ೩-೩೪ ವ); ಬೆಸನಾವುದುಯೆನುತವೆ ಮೂಱುಮೂಢಗಳೊಳೆಸೆದು ಬಿನ್ನಹವ ಮಾಡುವರು (ತ್ರಿಕೃಸಾಂ. ೬-೬೦); ಮೂರು ಮೂಢಗಳೆಂಟುಮಲವಿನ್ನಾರನಾಯತವಷ್ಟಮದಗಳ ಬೇರುಪಡಿಸಲು ದರುಶನೀಕನುಯೆನಿಪನು (ಜರಾವಾ. ೩೮೯-೨೪). ' ಮೂಢತ್ರಯ ' ಪರಾ. [ಸಂ.]

**ಮೂಢತನ** (ನಾ). ತಿಳಿವಳಿಕೆಯಿಲ್ಲದಿರುವುದು ; ಮೂರ್ಖತನ : ರೂಢಿ ಮಾಡಿದ ಧರ್ಮಗತಿಯಲಿ ಗಾಢಮಾಡಿದ ಸರ್ವಜನಗಳ ಮೂಢತನ ಬಯಲಾಗಿ ಹೋಯಿತು (ಸಂಶಶ. ೪-೩೪). [ಮೂಢ + — ತನ]

**ಮೂಢತೆ** (ನಾ). ೧. = ಮೂಢತನ : ಮೂಢತೆಯಂ ಬಿಟ್ಟು ಪೆಱರ್ ಮಾಡುವ ಡೊಂಬಿಂಗೆ ಬೇಗಮೆಱಗದೆ ಮೂರ್ಖರ್ ಮಾಡುವುದಂ ಲೇಸೆನ್ನದೆ ಕೂಡುವುದಾರಯ್ದುಮೂಢದೃಷ್ಟಿಯೊಳಱಿವಂ (ಧರ್ಮಾಮ್ಮ. ೩-೩); ಬೀತುದು ಬಿಂಕಮೋಡಿದುದು ಮೂಢತೆ ಮೂಡಿದುದಶ್ರು ಕಣ್ಗಳೊಳ್ . . . ಬೆಳ್ಪಳಿಸಿ ಬೇವಸಮಂ ತಳೆದಂ ಧನಂಜಯಂ (ಕಡಕಂ. ೪-೦೦೩). ೨. ದಿಗ್ಭ್ರಮೆ; ಕಕ್ಕಾಬಿಕ್ಕಿ. [ಸಂ. ಮೂಢತಾ]

**ಮೂಢತ್ರಯ** (ನಾ). [ಜೈನ] ಲೋಕಮೂಢ, ದೇವತಾಮೂಢ ಮತ್ತು ಪಾಖಂಡಿಮೂಢ ಎಂಬ ಮೂರು ಬಗೆಯ ಮೂಢತನ.— ಮೌಢ್ಯ :"ದೇವಮೂಢ, ಲೋಕಮೂಢ, ಗುರುಮೂಢ ಇವು ಮೂಢತ್ರಯಗಳು. ದೇವಮೂಢ : — ಮಿಥ್ಯಾದೇವರ ಉಪಾಸನೆ. ಲೋಕಮೂಢ : —ನದಿಸ್ನಾನ, ಪರ್ವತದ ಮೇಲಿಂದ ಬೀಳುವುದು ಮುಂತಾದವುಗಳು ಪುಣ್ಯಕರವೆಂದು ಭಾವಿಸುವುದು. ಗುರುಮೂಢ : — ಆರಂಭಪರಿಗ್ರಹಗಳುಳ್ಳ ವಿಷಯವಾಸನೆಯಿಂದ ಕೂಡಿದ ಪಾಖಂಡಿಗಳನ್ನು ಮುನಿಗಳೆಂದು ಭಾವಿಸಿ ಪೂಜಿಸುವುದು. ಇದಕ್ಕೆ ಪಾಖಂಡಿಮೂಢವೆಂದು ಅನ್ನುತ್ತಾರೆ" (ಅದಿಪು. ಕೈಪಿಡಿಂಭಾಷಿಕ ಶಬ್ದಕೋಶ) : ಜೀವಾದಿ ನವಪದಾರ್ಥದೊಳಾವಗಮುಟ್ಟಿಯನೆ ಮಾಡು ಮೂಢತ್ರಯದೊಳ್ ಭಾವಮನೆ ಬಿಸುಡು (ಅದಿಪು. ೫-೩೬). [ಸಂ.]

**ಮೂಢತ್ವ** (ನಾ). = ಮೂಢತನ : ಏಡಿಪಟ್ಟರೂ ಮೂಢತ್ವ ಹೋದೀತೇ (ಗಾದೆ). [ಸಂ.]

**ಮೂಢನಂಬಿಕೆ** (ನಾ). ಹಿಂದಿನಿಂದ ಬಂದ ಸಂಪ್ರದಾಯಗಳನ್ನು ವಿವೇಚನೆಯಿಲ್ಲದೆ ನಂಬುವುದು ; ಕುರುಡುನಂಬಿಕೆ : ಇದರ ಮೂಲಕ ದೇಶದಲ್ಲಿ ಒಂದು ಹೊಸ ದೃಷ್ಟಿ ಸಂಚಾರವಾಯಿತು. ಹಲವು ಮೂಢನಂಬಿಕೆಗಳು ಜಾರಿಹೋದುವು (ಶಾರದ. ೩೨೦) ; ವಿಚಾರಶೂನ್ಯವಾದ ಅಂಧಶ್ರದ್ಧೆ ಬೆಳೆದು, ಅಜ್ಞಾನ ಮೂಢನಂಬಿಕೆಗಳಿಂದ ಉದ್ಭವಿಸುವ ಸಂಕುಚಿತಮನೋವೃತ್ತಿ (ಮುಕ್ಕಾರ. ೨೬ ಶಿಂಶಿ). [ಮೂಢ + ನಂಬಿಕೆ]

**ಮೂಢಭಕ್ತಿ** (ನಾ). ತಿಳಿವಳಿಕೆಯಿಲ್ಲದ ಭಕ್ತಿ ; ಅಂಧಶ್ರದ್ಧೆಯಿಂದ ಕೂಡಿದ ಭಕ್ತಿ : ದೇವಸ್ಥಾನಗಳಲ್ಲಿ ನಡೆಯುವ ಉತ್ಸವವಿಶೇಷಗಳು ಪಾಮರರಂಜನೆಯಿಂದ ಅಜ್ಞಜನರೂ ಮೂಢಭಕ್ತಿಯಿಂದ ಮುಕ್ತರಾಗಲು ಸಹಾಯಕಗಳಾದುವು (ಶಾರದ. ೬೦). [ಸಂ.]

**ಮೂಢಮತಿ** (ನಾ). ತಿಳಿವಳಿಕೆಯಿಲ್ಲದ ವ್ಯಕ್ತಿ ; ಮೂರ್ಖವ್ಯಕ್ತಿ : ಮೂಢಮತಿಗಳಿಗಮಲಬ್ರಹ್ಮದ ಗೂಢವೆಂತಳವಡುವುದು (ಗಗಶಾ. ೦೨-೪೬). [ಸಂ.]

**ಮೂಢಮರ** (ನಾ). ಒಂದು ಬಗೆಯ ಮರ : ನಾರೋಲಿ, ಮೂಢಮರ, ಮೂಢ, ಮೂಢಲಿ, ಕನಕಚಂಪಕ (ವೈಶಿಗ. ೩೬-೦೦೪೦).

[ಮೂಢ$_4$ + ಮರ$_1$]

**ಮೂಢಾತ್ಮ** (ನಾ). = ಮೂಢಮತಿ : ವಿತತಭಾಷಿತನಪ್ಪ ತನ್ನಂಗಿತವನವರಾಯತವನಱಿಯದ ಕ್ಷಿತಿಪನವ ಮೂಢಾತ್ಮನೈ (ಕುವ್ಯಾಉ. ೩-೪೬); ಎಲವೊ ಮೂಢಾತ್ಮ ನೀನೆನ್ನ ಕಟ್ಟಳೆಯನಱಿದು . . . ಪಟ್ಟಣದೊಳೇಕೆ ತಳುವಿದೆ (ಕೃವಿಶಾ. ೧೦-೨೮). [ಸಂ. ಮೂಢಾತ್ಮನ್]

**ಮೂಢೋಕ್ತಿ** (ನಾ). ತಿಳಿವಳಿಕೆಯಿಲ್ಲದ ಮಾತು ; ಮೂರ್ಖತನದ ನುಡಿ : ಪಾಳಾದ ದುಷ್ಕರ ಲಂಕಾಪುರಮಂ ನಭೋಗಪುರಮಂ . . . ಸುಸ್ಥಿರಹಮ್ಮಿರಪುರಕ್ಕೆ ತೋಡಿಸಲೊಡಂ ಮೂಢೋಕ್ತಿ ಮೂರೆಲೋಕದೊಳ್ (ಹಮ್ಮಿರ. ೧-೬೪). [ಸಂ.]

**ಮೂತಿ, ಮೋತಿ** (ನಾ). ೧. (ಸಾಮಾನ್ಯವಾಗಿ ಹೀನಾರ್ಥದಲ್ಲಿ ಹೇಳುವಾಗ ಮನುಷ್ಯರ) ಮುಖ ; ಮೋರೆ: ಜಾತಿಮರ್ಕಟ ಪಳದೊಡೇನಳಿವುದೆ ನಿಶಾಪತಿಯ ಮೂತಿಯೊಳಗಣ ಚೆಲುವು (ಪ್ರಭಾ.ಶ. ೬-೨೨) ; ಎಂಟುರೂಪಾಯಿ ಬಿಸಾಡುತಿದ್ದೆನಲ್ಲೇ ನಿನ್ನ ಮೂತಿಯ ಮೇಲೆ (ನಡೆದಾ. I, ೩೦೩) . ೨. ಹಂದಿ, ಹೆಗ್ಗಣ ಮುಂತಾದ ಪ್ರಾಣಿಗಳ ಉದ್ದವಾದ ಮುಖ ; ಮುಸುಡಿ : ಹಂದಿಯು . . . ಮುಂದಿರುವ ಬಲೆಯನ್ನು ಸೀಳಿಬಿಡಬೇಕೆಂದು ಮೂತಿಯನ್ನು ಮುಂದೂಡಿ ಬಲೆಯ ಕಣ್ಣಿನಲ್ಲಿ ಸಿಕ್ಕಿಕೊಂಡಿತು (ಹುಲ್ಲುಹ. ೨೦). ೩. ಬಾಯಿಯ ಕೊನೆ ; ಕಟಬಾಯಿ ; ಸೋಟೆ : ಆಕೆ ಆ ಹುಡುಗಿಯ ಮೂತಿಯನ್ನು ತಿವಿದು ದೂಡಿದಳು (ರೂಢಿ). ೪. ಮುಂಭಾಗ ; ತುದಿ : ದೋಣಿಯ ಅಥವಾ ಹಡಗಿನ ಮೂತಿ (Bow. ೨೦೪೩) ; ಕುಡುಗೋಲಿನ ಮೂತಿ ಮುರಿದು ಹೋಯಿತು (ರೂಢಿ). ಮೋತಿ : ೧. ಹಿಂಗ್ಯಾಕ ಮೋತಿ ಮಾಡಕೊಂಡ ಕುಂತದಿ ? (ಶಿವ್ಯಹಿಂ. ೬೦). ೨. "ಜಾತಿ ವರ್ಣದ ಹಯಕ್ಕಂಪ್ಪಿರ್ಪವಳಯಂ ಪಾಲ ಮೋತಿ [ಶಾಕಂ.ತು.ಟಿ] ಕಪ್ಪಾಗೆ ಸತ್ವಾಧಿಕಂ" (ಮಂಗರಾ. ೬೨-೦೬) ; ಕಚ್ಚಿದ ನಾಗರಹಾವನ್ನು ಮಂತ್ರಬಲದಿಂದ ಕರೆಯಿಸಿ ಆ ಹಾವೇ ತಾನು ಕಚ್ಚಿದ ಗಾಯಕ್ಕೆ ಮೋತಿಯಿಟ್ಟು ವಿಷ ಹೀರಿ . . . ಹೋಗುವಂತೆ ಮಾಡುತ್ತಿದ್ದನು ! (ಶಂಬಹು. ೪೨).

**ಮೂತಿತಿರುವು** = ಅಲಕ್ಷ್ಯದಿಂದ ಮುಖವನ್ನು ಬೇರೆಕಡೆಗೆ ತಿರುಗಿಸು; ವಿಮುಖವಾಗು : ನನ್ನನ್ನು ನೋಡಿ ಅವಳು ಮೂತಿತಿರುವಿಕೊಂಡು ಹೋದಳು (ರೂಢಿ). **ಮೂತಿ ತಿವಿ** = ೧. ಸೋಟೆಯನ್ನು ಚುಚ್ಚು.— ತಿವಿ : ಕೋಪದಿಂದ ಆತ ಆ ಹುಡುಗನ ಮೂತಿತಿವಿದ (ರೂಢಿ). ೨. (ಅಲಂ) ಅಪಹಾಸ್ಯಮಾಡು ; ಅವಮಾನಪಡಿಸು : ಅಂದಿನ ಸಭೆಯಲ್ಲಿ ಜನರು ಅವನಿಗೆ ಮೂತಿತಿವಿದು ಕಳಿಸಿದರು (ರೂಢಿ).

[ದೇ.॥ ತಮಿ. ಮುಞ್ಞಿ / ಮೂಞ್ಚಿ ; ಮಲ. ಮೂಚ್ಚ, ಮುಚ್ಚಿ, ಮುಞ್ಞಿ, ಮೂಞ್ಚಿ, ಮೊತ್ತಿ. ಮೋನ್ತ ; ತೆಲು. ಕೋಲಾ. ನಾಯ್ಕಿ. ಮೂತಿ ; ಕುವಿ. ಮೂಂಬು. ಮೂಂಬೂ ; ಕುರುಖ್. ಮೊಚ್ಚಾ ; ಕೋತ. ಮುಚಿ. ಮೋಂಗ್]

**ಮೂತೆರ** ' ಮೂದೆಱ ' ನೋ.

**ಮೂತ್ರ** (ನಾ). ಮನುಷ್ಯ, ಪ್ರಾಣಿ ಮುಂತಾದ ಜೀವಜಂತುಗಳ ಶರೀರದಿಂದ ಹೊರಬರುವ ಕಲ್ಮಷಜಲ : ಉಚ್ಚೆ ; ಗಂಜಲ : "ಪಸುಜಲಮೆನಲ್ಕೆ ಮೂತ್ರಮುಕ್ಕುಂ" (ಮಂಗರಾ. ೯೭-೧೪) ; ಪರಿಮೂತ್ರಂ ಭಿನ್ನಲಿಂಡಂ ಸುರಿಯೆ ಮದಜಳಂ ಮೆಯ್ಯೊಳ್ಕಾಡೆ (ಮಲ್ಲಿಕಾ. ೧೦-೯೨) ; ಕೈಯಲ್ಲಿ ಕುಱುಹು ಬಾಯಲ್ಲಿ ಅಱುಹು ನುಡಿವುತ್ತಿಪ್ಪ ಅಯ್ಯಗಳೆಲ್ಲರು ಇಱುಹಿನ ಮೂತ್ರದಲ್ಲಿ ಪ್ರಳಯವಾದರು ನೋಡಾ (ಸಿದ್ಧೇವ. ೦೦೯-೩೩೭) ; ಮೂತ್ರ ಬಹಳವಾಗಿ ಹೋಗುವುದಕ್ಕೆ ಚಿಕಿತ್ಸೆ : — ಅಳಲೇಕಾಯಿ ಚೂರ್ಣ ಗ ೩ ತೂಕವನ್ನು ಜೇನುತುಪ್ಪದಲ್ಲಿ ಕೊಡುವುದು (ಶಿವ್ಯ.ಪಿ. ೦೩೪). [ಸಂ.]

**ಮೂತ್ರಕಟ್ಟು** (ನಾ). ಮೂತ್ರವಿಸರ್ಜನೆಯಲ್ಲಿ ತಡೆಯುಂಟಾಗುವ ಒಂದು ಬಗೆಯ ರೋಗ : ಉಚ್ಚೆ ನಿಂತುಹೋಗುವುದು : ಮೂತ್ರಕಟ್ಟಿಗೆ : — ಗರಿಕೆಬೇರು, ಯಷ್ಟಿಮಧುಕ, ನೆಗ್ಗಿಲಬೇರು, ತ್ರಿಫಲೆಯ ರಸದಲ್ಲಿ ಅಟ್ಟು ಕರ್ಪೂರ, ಶಿಲಾಧಾತುವುಂ ಪ್ರತಿಪಾಕವಿಕ್ಕಿ ಕುಡಿಯೆ ಎಲ್ಲಾ ಮೂತ್ರಕೃಚ್ಛ್ರ ಮಾಣ್ಗುಂ (ಶಿವ್ಯ.ಪಿ. ೧೭೦) ; ಬೋಳ ದರಗದ ರಸವನ್ನು ಹಸುವಿನ ಹಾಲಿನಲ್ಲಿ ಕೂಡಿಸಿ ಜೀರಿಗೆ ಗ ೨ ತೂಕ. ಸಕ್ಕರೆ ಗದ್ಯಾಣ ೩ ತೂಕ ಸಹ ಹಾಕಿ ಕೊಡಲು ಮೂತ್ರಕಟ್ಟು ಹೋಗುವುದು (ಸಕವೈ. ಶಿ. ೪೯೪). [ಮೂತ್ರ + ಕಟ್ಟು₂]

**ಮೂತ್ರಕಲ್ಲು** (ನಾ). ಮೂತ್ರಕೋಶ ಅಥವಾ ಮೂತ್ರನಾಳದಲ್ಲಿ ಕಲ್ಲಿನಂತೆ ಗಟ್ಟಿಯಾದ ಗಂಟು ಉಂಟಾಗಿ ಮೂತ್ರ ವಿಸರ್ಜನೆಗೆ ತಡೆಯೊಡ್ಡುವ ಒಂದು ಬಗೆಯ ರೋಗ ; ಅಶ್ಮರಿ : ಮೂತ್ರಕಲ್ಲಿಗೆ ಗುಳಿಗೆಯ ಮಾಡುವ ಕ್ರಮ : — ಕೆಂಪಿನ ಅಂಕೋಲ ಬೇರು, ಹುಳಿ ಸೊಪ್ಪು . . . ಇವಕ್ಕೆ ಸಮ ಇಂಗು, ಅಂಬಿಲದಲ್ಲಿ ಅರೆದು ಮೂತ್ರಕಲ್ಲಿಗೆ ಗುರುಗುಂಜಿಯ ಪ್ರಮಾಣಕ್ಕೆ ಕೊಡುವುದು (ಶಿವ್ಯ.ಪಿ. ೧೨೪).

[ ಮೂತ್ರ + ಕಲ್ಲು (< ಕಲ್$_3$) ]

**ಮೂತ್ರಕುಂಡಲಕ** (ನಾ). ಹನ್ನೆರಡು ಬಗೆಯ ಮೂತ್ರಸಂಬಂಧವಾದ ರೋಗಗಳಲ್ಲಿ ಒಂದು : ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ — ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ, ಮೂತ್ರಾತೀತ, ಮೂತ್ರಶುಕ್ಲ, ಮೂತ್ರಕುಂಡಲಕ, ಮೂತ್ರವಿಡ್ಘಾತ, ಮೂತ್ರವಾತ, ಮೂತ್ರಪ್ಲೀಹ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದವೆಂದಿಂತು (ಸಕವೈ. ೩೭೦). [ಸಂ.]

**ಮೂತ್ರಕುಂಡಲಿಕೆ** (ನಾ). = ಮೂತ್ರಕುಂಡಲಕ : ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ, ಮೂತ್ರಾತಿಸಾರ, ಮೂತ್ರಶುಕ್ಲ, ಮೂತ್ರಕುಂಡಲಿಕೆ, ಮೂತ್ರವಿಡ್ಘಾತ, ಮೂತ್ರವಾತ, ಮೂತ್ರಾಷ್ಠೀಲ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I. ೨೩೪). [ಸಂ. ಮೂತ್ರಕುಂಡಲಿಕಾ]

**ಮೂತ್ರಕೂಪ** (ನಾ). ೧. ಉಚ್ಚೆಯು ಸಂಗ್ರಹವಾಗುವ ಗುಂಡಿ. ೨. ಒಂದು ನರಕದ ಹೆಸರು : ಪರ್ವತ ಯುಗಳಪರ್ವತ ಕ್ಷುರಧಾರೆ ಮೂತ್ರಕೂಪ ವಿಷ್ಠಾಕೂಪವೆಂಬೈಸು ಮುಂತಿನ ನರಕಂಗಳು (ವಿವೇಕ.೦೩೩). [ಸಂ.]

**ಮೂತ್ರಕೃಚ್ಛ್ರ** (ನಾ). ಉರಿ ಮತ್ತು ನೋವಿನಿಂದ ಕೂಡಿದ್ದು ಸರಾಗವಾಗಿ ವಿಸರ್ಜನೆಯಾಗದಿರುವ ಒಂದು ಬಗೆಯ ಮೂತ್ರರೋಗ : ಅಮರದವಳ್ಳಿ, ಬಿಲ್ವಪತ್ರೆಕಾಯಿ . . . ಕಷಾಯ ಕಾಯಿಸಿ, ಹಿಪ್ಪಲಿ ಪ್ರತಿಪಾಕಗೊಂಡು ಸೇವಿಸೆ . . . ಅಸ್ಥಿಗತಜ್ವರ, ಮೂತ್ರಕೃಚ್ಛ್ರ ಮೊದಲಾದ ರೋಗಗಳು ಗುಣವಾಗುವವು (ಸಕವೈ. ೯೦). [ಸಂ.]

**ಮೂತ್ರಕೃಚ್ಛ್ರೆ** (ನಾ). = ಮೂತ್ರಕೃಚ್ಛ್ರ : ಅಂತಪ್ಪ ರೇಖೆಗಳ್ ಕರ್ಪಂ ತಳೆದಾ ಪ್ರೋಥಮಧ್ಯದೊಳ್ ತೋರ್ಪೊಡೆ ಬಾಟ್ಗುಂ ತುರಗಂ ಪೋಡಷವರ್ಷಾಂತರವುಂ ಮೂತ್ರಕೃಚ್ಛ್ರೆಯಿಂದಂ ಮಡಿಗುಂ (ಅಶ್ವಶಾ. ೩-೨೦). [ಸಂ. ಮೂತ್ರಕೃಚ್ಛ್ರ]

**ಮೂತ್ರಕೋಶ** (ನಾ). ದೇಹದಲ್ಲಿ ಉಚ್ಚೆಯು ಶೇಖರವಾಗುವ ಚೀಲ : ಕಾಯಿಲೆ ತೀವ್ರಗತಿಯಲ್ಲಿರುವಾಗ ಕೆಲವು ವೇಳೆ ಮೂತ್ರಕೋಶ (urinary bladder) ಕ್ಕೆ ಲಕ್ವ ಹೊಡೆಯುತ್ತದೆ (ಕಿಂರೋ. ೪೩). [ಸಂ.]

**ಮೂತ್ರಕ್ಷಯ** (ನಾ). ಹನ್ನೆರಡು ಬಗೆಯ ಮೂತ್ರರೋಗಗಳಲ್ಲಿ ಒಂದು; ಸರಿಯಾದ ಪ್ರಮಾಣದಲ್ಲಿ ಮೂತ್ರೋತ್ಪತ್ತಿಯಾಗದಿರುವುದು : ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ . . . ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I. ೨೩೪) ; ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ . . . ಮೂತ್ರಸಾದವೆಂದಿತು (ಸಕವೈ. ೩೭೦). [ಸಂ.]

**ಮೂತ್ರಗ್ರಂಥಿ** (ನಾ). = ಮೂತ್ರಕಲ್ಲು : ಮೂತ್ರೋತ್ಸಂಗ, ಮೂತ್ರಗ್ರಂಥಿ . . . ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I, ೨೩೪) ; ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ, ಮೂತ್ರಗ್ರಂಥಿ . . . ಮೂತ್ರಸಾದವೆಂದಿಂತು (ಸಕವೈ. ೩೭೦). [ಸಂ.]

**ಮೂತ್ರಚೀಲ** (ನಾ). = ಮೂತ್ರಕೋಶ : ಬಹುಮೂತ್ರಕ್ಕೆ ಮೊದಲು ಹುಟ್ಟುವ ಉಪದ್ರವ ಮೂತ್ರಚೀಲವು ಗುದದ ಮೇಢ್ರದ ಮಧ್ಯದಲ್ಲಿ ಇಹುದು (ಶಿವ್ಯ.ಪಿ. ೦೩೭). [ಮೂತ್ರ + ಚೀಲ]

**ಮೂತ್ರಜನಕಾಂಗ** (ನಾ). ಶರೀರದ ಶುದ್ಧೀಕರಣಾಂಗಗಳಲ್ಲಿ ಒಂದು; ಮೂತ್ರೋತ್ಪತ್ತಿಯನ್ನು ಮಾಡುವ ಅಂಗ : "ಸಸ್ತನಿಗಳ, ಪಕ್ಷಿಗಳ, ಉರಗಮನಿಗಳ, ಉದರಕುಹರದಲ್ಲಿರುವ, ರಕ್ತದಲ್ಲಿಯ ಉಪಯೋಗ ಕಳೆದ ಸಸಾರಜನಕಪದಾರ್ಥವನ್ನು ಹೊರದೂಡುವುದಕ್ಕಾಗಿ ತನ್ನಲ್ಲಿ ಹರಿಯುವ ರಕ್ತದಿಂದ ಬೇರ್ಪಡಿಸಿ ಮೂತ್ರದ ಮೂಲಕ ಸಾಗಿಸುವ, ನಾಳಗುಚ್ಛಾಂಗಗಳೆರಡರಲ್ಲಿ ಒಂದು : ಮೂತ್ರಜನಕಾಂಗ ; ಮೂತ್ರಪಿಂಡ" (Kidney. ಇಂಕಪ). [ಸಂ.]

**ಮೂತ್ರತಡೆ** (ನಾ). = ಮೂತ್ರಕಟ್ಟು : ಪಟ್ಲುಪ್ಪು ಗ ೧ ತೂಕವನ್ನು ಪುಡಿ ಮಾಡಿ ನಿಂಬೆಹಣ್ಣಿನ ರಸದಲ್ಲಿ ಕಲಸಿ ಸಕ್ಕರೆ ಗ ೩ ತೂಕ ಹಾಕಿ ಕುಡಿಯಲು ಆ ಕ್ಷಣವೇ ಮೂತ್ರತಡೆ ಹೋಗುವುದು (ಸಕವೈ. ಶಿ. ೪೯೪).

[ಮೂತ್ರ + ತಡೆ₂]

**ಮೂತ್ರದೋಷ** (ನಾ). ಮೂತ್ರಸಂಬಂಧವಾದ ರೋಗ : ಈ ಲೇಹ್ಯಕ್ಕೆ ಚ್ಯವನಪ್ರಾಶವೆಂದು ಹೆಸರು . . . ಇದನ್ನು ಸೇವಿಸಲು . . . ಮೂತ್ರದೋಷ, ಶುಕ್ರದೋಷ, ಸ್ವರಭಂಗ ಇವೆಲ್ಲವೂ ಪರಿಹರವಹವು (ವೈದ್ಯಸಾ. II. ೨೩೬). [ಸಂ.]

**ಮೂತ್ರದ್ವಾರ** (ನಾ). ಮೂತ್ರಕೋಶದಲ್ಲಿ ಶೇಖರವಾದ ಮೂತ್ರವು ಹೊರಬರುವ ರಂಧ್ರ ; ಮೂತ್ರವಿಸರ್ಜನೆಯಾಗುವ ನಾಳ ; ಮೂತ್ರನಾಳ. [ಸಂ.]

**ಮೂತ್ರನಾಳ** (ನಾ). = ಮೂತ್ರದ್ವಾರ : ಲೊಕ್ಕಿಯ ಸೊಪ್ಪಿನ ರಸದಲ್ಲಿ ಪಚ್ಚೆಕರ್ಪೂರದ ಚೂರ್ಣವ ಹಾಕಿ ಸ್ವಲ್ಪ ಎಣ್ಣೆಯ ಬಿಟ್ಟು ಬಾರಿಸಿ ಸಮರಸಂಗೈದು ಹಿಂಡಿ ಸಣ್ಣ ಪಾವಡೆಬತ್ತಿಗೆ ಆ ರಸವ ಮಾಡಿ ಮೂತ್ರನಾಳದಲ್ಲಿ ಮೇಲಕ್ಕೆ ಏರಿಸಲು ಆ ಉತ್ತರಕ್ಷಣದಲ್ಲಿಯೇ ಮೂತ್ರ ಝಲ್ಲನೆ ಬಿಡುವುದು (ವೈದ್ಯಸಾ. I. ೨೩೬) ; ಅಳಲೆಕಾಯಿ, ನೆಗ್ಗಿಲುಬೇರು, ತಿಲಕಹಣ್ಣು . . . ಜೇನುತುಪ್ಪ ಪ್ರತಿಪಾಕವಿಕ್ಕಿ ತೆಗೆದುಕೊಳ್ಳಲು ಮೂತ್ರನಾಳದಲ್ಲಿ ಸಿಕ್ಕಿಕೊಂಡಿರುವ ಕಲ್ಲು ಕರಗಿ ಬೀಳುವುದು (ಸಕವೈ. ಶಿ. ೪೯೭).

[ಸಂ. ಮೂತ್ರನಾಲ]

**ಮೂತ್ರನಿರೋಧ** (ನಾ). = ಮೂತ್ರಕಟ್ಟು : ಸೌತೆಯ ಬೀಜವಂ ನೀರಲ್ಲಿ ಅರೆದು ಕುಡಿಯೆ ಮೂತ್ರನಿರೋಧ ಮಾಣ್ಗುಂ (ಶಿವ್ಯ.ಪಿ. ೭). [ಸಂ.]

**ಮೂತ್ರಪರೀಕ್ಷೆ** (ನಾ). (ರೋಗದ ಮೂಲವನ್ನು ಪತ್ತೆಹಚ್ಚಲು ರೋಗಿಯ) ಮೂತ್ರವನ್ನು ರಾಸಾಯನಿಕವಾಗಿ ವಿಭಜಿಸಿ ಪರಿಶೀಲಿಸುವಿಕೆ : ಅನೇಕ ರೋಗಗಳನ್ನು ಪತ್ತೆಹಚ್ಚಲು ಮೂತ್ರಪರೀಕ್ಷೆ ಸಹಾಯಕವಾಗುತ್ತದೆ (ಋ). [ಸಂ. ಮೂತ್ರಪರೀಕ್ಷಾ]

**ಮೂತ್ರಪಿಂಡ** (ನಾ). = ಮೂತ್ರಜನಕಾಂಗ : ಈ ವಿಷಾಣುಗಳು ಹೃದಯ, ಮೂತ್ರಪಿಂಡಗಳು, ಮಿದುಳು ಮತ್ತು ಮಿದುಳುಬಳ್ಳಿಯ ಅಣುಕೋಶಗಳ ಮೇಲೆ ಕೆಲಸ ಮಾಡಿ ಅಪಾಯವನ್ನು ತಂದೊಡ್ಡುತ್ತವೆ (ಕಂಠರೋ. ೨೦). [ಸಂ.]

**ಮೂತ್ರಪ್ಲೀಹ** (ನಾ). ಮೂತ್ರಸಂಬಂಧವಾದ ಒಂದು ಬಗೆಯ ರೋಗ : ಹನ್ನೆರಡುಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ ಮೂತ್ರೋತ್ಸಂಗ . . . ಮೂತ್ರಪ್ಲೀಹ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದವೆಂದಿಂತು (ಸಕವೈ. ೩೮೦).

[ಸಂ. ಮೂತ್ರಪ್ಲೀಹನ್]

**ಮೂತ್ರಬಂಧ** (ನಾ). = ಮೂತ್ರಕಟ್ಟು. [ಸಂ.]

**ಮೂತ್ರರಕ್ತ** (ನಾ). ಉಚ್ಚೆಯಲ್ಲಿ ನೆತ್ತರು ಹೋಗುವ ಒಂದು ಬಗೆಯ ರೋಗ : ಮೂತ್ರರಕ್ತಕ್ಕೆ :_ ಚತುರ್ಭಾಗ ಚವುಡಂಗಿರಸ, ಆವಿನ ನೊರೆವಾಲು ಕುದಿಸುವುದು. ಕಿಜುಕುಸಾಲೆರಸದಲ್ಲಿ ತ್ರಿವಾರು ಕೂಡಿ . . . ಗುಳಿಗೆ ಮಾಡಿ ಕೊಳ್ಳೆ ಮಾಣ್ಗುಂ (ಖಗೇಂ. ೦೨೪). [ಸಂ.]

**ಮೂತ್ರರೋಗ** (ನಾ). = ಮೂತ್ರದೋಷ : ಮೂತ್ರರೋಗಕ್ಕೆ :– ಏಲಕ್ಕಿ ೧ ತೂಕ, ತವಕ್ಷೀರ ೪ ತೂಕ . . . ಆಡಿನ ಹಾಲಲ್ಲಿ ಕದಡಿ ಕುಡಿಯಲು ಮೂತ್ರರೋಗ ಗುಣ (ಖಗೇಂ. ೦೦೪) ; ಮೂತ್ರರೋಗ, ಛರ್ದಿರೋಗ . . . ವಾತರೋಗ ಇವೇ ಮುಂತಾದ ರೋಗಗಳಿಂದ ಕೂಡಿದವರು ದಂತಧಾವನಕ್ಕೆ ಅನರ್ಹರೆಂದರಿವುದು (ಸಕವೈ. ೨೪). [ಸಂ.]

**ಮೂತ್ರವಸ್ತಿ** (ನಾ). ಮೂತ್ರಸಂಬಂಧವಾದ ಒಂದು ಬಗೆಯ ರೋಗ : ಹನ್ನೆರಡುಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ . . . ಮೂತ್ರವಸ್ತಿ . ಮೂತ್ರಸಾದವೆಂದಿಂತು (ಸಕವೈ. ೩೮೦). [ ಸಂ. ]

**ಮೂತ್ರವಾತ** (ನಾ). ಮೂತ್ರಸಂಬಂಧವಾದ ಒಂದು ಬಗೆಯ ರೋಗ : ಹನ್ನೆರಡುಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ. ಮೂತ್ರೋತ್ಸಂಗ . . . ಮೂತ್ರವಾತ . . . ಮೂತ್ರಸಾದವೆಂದಿಂತು (ಸಕವೈ. ೩೮೦). [ ಸಂ. ]

**ಮೂತ್ರವಿಡ್ಘಾತ** (ನಾ). ಒಂದು ಬಗೆಯ ಮೂತ್ರರೋಗ : ಮೂತ್ರೋತ್ಸಂಗ . . . ಮೂತ್ರವಿಡ್ಘಾತ . . . ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I, ೨೫೪). [ ಸಂ. ]

**ಮೂತ್ರವಿಸರ್ಜನೆ** (ನಾ.) ಮೂತ್ರವನ್ನು ಸುರಿಸುವಿಕೆ ; ಉಚ್ಚೆ ಹೊಯ್ಯುವಿಕೆ : ಕಾಯಿಲೆ ತೀವ್ರಗತಿಯಲ್ಲಿರುವಾಗ . . . ಮೂತ್ರ ವಿಸರ್ಜನೆ ರೋಗಿಯ ಸ್ವಾಧೀನ (control) ತಪ್ಪಿ ತನಗೆ ತಾನಾಗಿಯೇ ಮೂತ್ರ ಹನಿಹನಿಯಾಗಿ ಹೊರಬೀಳುತ್ತದೆ (ಕಂಠರೋ. ೪೫).

[ ಸಂ. ಮೂತ್ರವಿಸರ್ಜನ ]

**ಮೂತ್ರವ್ಯಾಧಿ** (ನಾ). = ಮೂತ್ರದೋಷ : ಮುಳ್ಳುಮುತ್ತುಗದ ಒಳನಾರಂ ಚೂರ್ಣಮಂ ಮಾಡಿ ಕರ್ಪೂರ, ಶಿಲಾಧಾತು ಬೆರಸಿ ಮಜ್ಜಿಗೆ, ಜೇನುತುಪ್ಪದಲ್ಲಿ ಕೊಳ್ಳೆ ಮೂತ್ರವ್ಯಾಧಿ ಮಾಣ್ಗುಂ (ಖಗೇಂ. ೬೭). [ಸಂ.]

**ಮೂತ್ರಶಂಕೆ** (ನಾ). ಮೂತ್ರಸಂಬಂಧವಾದ ಒಂದು ಬಗೆಯ ರೋಗ; ಉರಿಯಿಂದ ಕೂಡಿ ಆಗಾಗ ಮೂತ್ರವಿಸರ್ಜನೆ ಮಾಡಬೇಕೆನ್ನುವ ತೀವ್ರವಾದ ಅನಿಸಿಕೆ : ಮೇಲುಬ್ಬಸಮುಂಟಾಗಿ ಕಣ್ಣುಗಳಲ್ಲಿ ಡಾಳ ತಪ್ಪಿ . . . ಬಹಳವಾಗಿ ಮೂತ್ರಶಂಕೆಯು ಕಾಣಿಸುತ್ತಂ . . . ಇಂದ್ರಿಯಗಳು ಹೀನವಸ್ಥೆಯಿಂದ ವ್ರಣದಿಂ ಕೂಡಿಕೊಂಡಿದ್ದ ಕ್ಷಯರೋಗವು ಅಸಾಧ್ಯ (ಸಕವೈ. ೨೪೭). [ ಸಂ. ಮೂತ್ರಶಂಕಾ ]

**ಮೂತ್ರಶರ್ಕರೆ** (ನಾ). ಮೂತ್ರದೊಂದಿಗೆ ಸಕ್ಕರೆಯ ಅಂಶವು ಹೆಚ್ಚಾಗಿ ಹೋಗುವುದು : ದಾಳಿಂಬದ ಬೀಜ, ಏಲಕ್ಕಿ, ಪಾಷಾಣ ಭೇದಿ, ಶಿಲಾಧಾತು. ಪಿಪ್ಪಲಿ ಇವಂ ಚೂರ್ಣಂ ಮಾಡಿ ರಾಜಾನ್ನದ ಅಕ್ಕಿಗಚ್ಚಿನಲ್ಲಿ ಕುಡಿಯೆ ಮೂತ್ರಕೃಚ್ಛ್ರಂ, ಮೂತ್ರಶರ್ಕರೆಯುಂ ಕೆಡುಗುಂ (ಖಗೇಂ. ೨೦೭). [ ಸಂ. ಮೂತ್ರಶರ್ಕರಾ ]

**ಮೂತ್ರಶುಕ್ಲ** (ನಾ). ಮೂತ್ರದೊಂದಿಗೆ ರೇತಸ್ಸು ವಿಸರ್ಜನೆಯಾಗುವ ಒಂದು ಬಗೆಯ ರೋಗ : ಮೂತ್ರೋತ್ಸಂಗ, ಮೂತ್ರಗ್ರಂಥಿ . . . ಮೂತ್ರಶುಕ್ಲ, ಮೂತ್ರಕುಂಡಲಿಕೆ . . . ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I, ೨೫೪) ; ಹನ್ನೆರಡುಪ್ರಕಾರ ಮೂತ್ರ ಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ . . . ಮೂತ್ರಶುಕ್ಲ . . . ಮೂತ್ರಸಾದವೆಂದಿಂತು (ಸಕವೈ. ೩೮೦). [ ಸಂ. ]

**ಮೂತ್ರಶೂಲೆ** (ನಾ). ಮೂತ್ರವಿಸರ್ಜನೆಯ ಸಮಯದಲ್ಲಿ ನೋವುಂಟಾಗುವ ಒಂದು ಬಗೆಯ ರೋಗ : ಬಿಳಿದುರ್ಬಚಿ, ಅಣಲೇಕಾಯಿ, ಪಾಷಾಣಭೇದಿ, ನೆಲದಾಳ, ಕೊತ್ತುಂಬರಿ, ಕಕ್ಕೇಹಣ್ಣಿನ ತಿರುಳು ಇವ ಕಷಾಯವ ಕಾಸಿ ಸಕ್ಕರೆ ಹಾಕಿ ಪಾಕವಿಕ್ಕಿಕೊಳ್ಳಲು ಮೂತ್ರ ಕೃಛ್ರ, ಕಟಿಯ ಉರಿ, ಮೂತ್ರಶೂಲೆ ಮಾಣ್ಗುಂ (ಖಗೇಂ. ೦೬೩).

[ ಸಂ. ಮೂತ್ರಶೂಲ ]

**ಮೂತ್ರಸಾದ** (ನಾ). ಬಣ್ಣವು ವ್ಯತ್ಯಾಸಗೊಂಡು ನೋವಿನಿಂದ ವಿಸರ್ಜನೆಯಾಗುವ ಒಂದು ಬಗೆಯ ಮೂತ್ರರೋಗ : ಮೂತ್ರೋತ್ಸಂಗ . . . ಮೂತ್ರವಸ್ತಿ, ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I, ೨೫೪). [< ಸಂ. ಮೂತ್ರಾಸಾದ]

**ಮೂತ್ರಸಿಕ್ಕು** (ನಾ). = ಮೂತ್ರಕಟ್ಟು : ಸೂಲೆ ಸುಭಿಕ್ಷಾ(ಕ್ಷಂ) ರೂಕ್ಷಾಸೂಲೆಯ ಸಲೆ ಮೂತ್ರಸಿಕ್ಕು ರಕ್ತವಿಮೋಹಂ ಶೂ(ಲಾ)ವಿಷ್ಟಂಭ ಕೀಟಕ ಸೂಲಾಕ್ಷವಿ ಸಿಂಘ(ಹ)ಣದ್ವಯಂ ವಾತಾಂತ್ಯಂ (ಅಶ್ವಶಾ. ೦೦-೬೦); ಏಲಕ್ಕಿ, ಪಾಷಾಣಭೇದಿಯುಂ, ಕಲ್ಲ ಅಗಿಲು, ಪಿಪ್ಪಲಿ ಎಂಬಿವುಗಳ ಪುಡಿಗಳಂ . . . ಮೂತ್ರಸಿಕ್ಕು ಬಹುಮೂತ್ರ ಸಂಕಟದೊಳು ಲೇಹ್ಯವಂ ಮಾಡುಗೆ (ಖಗೇಂ. ೨೦) ; ಗಣಜಿಲಬೇರಂ ಸುಟ್ಟು ಬೂದಿಯಂ ಆಡಿನ ಹಾಲಿನಲ್ಲಿ ಕೂಡಿ ಕುಡಿಯೆ ಮೂತ್ರಸಿಕ್ಕು ಬಿಡುವುದು (ಸಕವೈ. ೩೬೩).

[ ಮೂತ್ರ + ಸಿಕ್ಕು$_3$. ]

**ಮೂತ್ರಾಘಾತ** (ನಾ). ಮೂತ್ರವಿಸರ್ಜನೆಯಲ್ಲಿ ತೊಡಕುಂಟಾಗುವ ಹನ್ನೆರಡು ಬಗೆಯ ವ್ಯಾಧಿ ; P ಇವುಗಳ ಸಂಖ್ಯೆಯಲ್ಲಿ ಭಿನ್ನಾಭಿಪ್ರಾಯಗಳಿವೆ : ಹನ್ನೆರಡುಪ್ರಕಾರವಾದ ಮೂತ್ರಾಘಾತಂ ಗಳುಂಟು (ವೈದ್ಯಸಾ. I, ೨೫೪) ; ವಾತಪಿತ್ತಶ್ಲೇಷ್ಮಂಗಳು ವಸ್ತಿಸ್ಥಾನವ ನೈದಿ ತಮ್ಮ ತಮ್ಮ ಕಾರಣಗಳಿಂ ಪ್ರಕೋಪಿಸಿ ಮೂತ್ರಾಘಾತವೆಂಬ ಮಹಾರೋಗಗಳನು ಪುಟ್ಟಿಸುತಮಿರ್ಪುದು (ಸಕವೈ. ೩೮೦). [ ಸಂ. ]

**ಮೂತ್ರಾತೀತ** (ನಾ). ತಡೆತಡೆದು ಹೋಗುವ ಒಂದು ಬಗೆಯ ಮೂತ್ರರೋಗ : ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ . . . ಮೂತ್ರಾತೀತ . . . ಮೂತ್ರ ಸಾದವೆಂದಿಂತು (ಸಕವೈ. ೩೮೦). [ ಸಂ. ]

**ಮೂತ್ರಾಶಯ** (ನಾ). = ಮೂತ್ರಕೋಶ. [ ಸಂ. ]

**ಮೂತ್ರಾಷ್ಠೀಲ** (ನಾ). =ಮೂತ್ರಕಲ್ಲು: ಮೂತ್ರೋತ್ಸಂಗ . . . ಮೂತ್ರ ವಾತ, ಮೂತ್ರಾಷ್ಠೀಲ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದ ಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I, ೨೫೪).

[ ಸಂ. ಮೂತ್ರಾಷ್ಠೀಲಾ ]

**ಮೂತ್ರಿ** (ನಾ). ರಸ್ತೆ, ಬಸ್‌ನಿಲ್ದಾಣ ಮುಂತಾದ ಸಾರ್ವಜನಿಕ ಸ್ಥಳಗಳಲ್ಲಿ ಮೂತ್ರವಿಸರ್ಜನೆಗೆ ಅನುಕೂಲವಾಗುವಂತೆ ಕಟ್ಟಿರುವ ಸ್ಥಳ : (ಖಾಸಗಿ ಅಥವಾ ಸಾರ್ವಜನಿಕ) ಮೂತ್ರಸ್ಥಳ, ಮೂತ್ರಿ (Urinal. ೩೦೫೩). [ < ಮೂತ್ರ ]

**ಮೂತ್ರಿಸು** (ಕ್ರಿ). ಉಚ್ಚೆಹೊಯ್ಯು : ಮೂತ್ರವಿಸರ್ಜನೆ ಮಾಡು: ನಡುವಟ್ಟೆಯೊಳ್ ಕೆಲಸಿ ಮೂತ್ರಿಸೆ ಪೇರಡಿ ತನ್ನನಟ್ಟಿಯಿಂ ನಲಿನಲಿದಾಡೆ ಪೋದ ಮನುಜಂ ಪಡೆಗುಂ ತನಗಿಷ್ಟಸಿದ್ಧಿಯಂ (ಲೋಕೋಪ. ೦೩-೨೩) ; ಸಗಣವನಿಕ್ಕುತಂ ಮೂತ್ರಿಸುತವಲರುತ ಕೆಲನ ನೋಡುತ ಚೆಲ್ಲವಾಡುತ್ತ . . . ವೃಷಭೇಶ್ವರನಿರಲು (ಬಸವ. ೩೩-೨೬) ; ಮಠದ ಹಿತ್ತಲಲ್ಲಿ ಅಯ್ಯ ಮೂತ್ರಿಸ್ತಾ ಕೂತಿದ್ದ (ರುದ್ರಿ ಮು. ೨೩).
[ ಮೂತ್ರ + - ಇಸು$_3$ ]

**ಮೂತ್ರೋತ್ಸಂಗ** (ನಾ). ನೋವಿನಿಂದ ಕೂಡಿದ್ದು ರಕ್ತಸಹಿತವಾಗಿ ಮೂತ್ರವಿಸರ್ಜನೆಯಾಗುವ ಒಂದು ಬಗೆಯ ರೋಗ : ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ, ಮೂತ್ರಗ್ರಂಥಿ . . . ಮೂತ್ರಸಾದವೆಂದಿಂತು (ಸಕವೈ. ೩೬೦). [ಸಂ.]

**ಮೂದಚ್ಚಾರಿ** (ನಾ). ಒಬ್ಬಾತನ ಹೆಸರು : ಶ್ರೀ ಅನನ್ದೂರ ಮೂದಚ್ಚಾರಿ ಮಾಡಿದನ್ (ಎಕ. X, ತಿಪ್ಪೂರು. ೩೩-೦೩ ; ಸು. 870 ?).
[ಮೂದ್ರ + ಆಚಾರಿ]

**ಮೂದಲಿಕೆ** (ನಾ). ಹಂಗಿಸುವಿಕೆ ; ಹೀಯಾಳಿಕೆ ; ಚುಚ್ಚುಮಾತು : ಕೆಳದಿಯರ ಸಂತೈಕೆ ಮೂದಲಿಕೆಯಂತಾಗೆ . . . ಮರುಗಿದಳಬಲೆ (ತತ್ವಾಂಗ. ೩೩-೦೩೨) ; ಒಂದು ವೇಳೆ ಹೋದರೆ ತನ್ನ ತಾಯಿಯಿಂದ ಏನಾದರೂ ಮೂದಲಿಕೆ ಬರಬಹುದು ಎಂಬ ಭಯ (ಮಹಾಗ. ೦೦).
[ಮೂದಲ್$_2$ + —ಇಕೆ./ತೆಲು. ಮೂದಲಿಕ = ನಿದರ್ಶನ]

**ಮೂದಲಿಸು** (ಕ್ರಿ). ಹಂಗಿಸು; ಹೀಯಾಳಿಸು; ಅವಹೇಳನ ಮಾಡು: ಈ ನುಡಿಯಂ ಮೆಚ್ಚಿಯುಲ್ಲೇಖೆಂದಿರ್ವರುಮೋರೋರ್ವರಂ ಮೂದಲಿಸಿ ಪ್ರತಿಜ್ಞೆಗೆಯ್ದು (ವಡ್ಡಾರಾ. ೦೨೧-೦೧) ; ಆ ಮಾತು ತನ್ನಂ ಮೂದಲಿಸಿದಂತಾಗೆ ವಿದ್ವಿಷ್ಟವಿದ್ರಾವಣನಿಂತೆಂದು (ಶಂಕರಾ. ೩-೭೨ ಪ) ; ಶಸ್ತ್ರವ್ರಣವಂ ನಿನ್ನಂತೆ ಮೆಚ್ಚುವುದಿಚ್ಛೆವ ಬೆಡಂಗಾ ಎಂದು ಮೂದಲಿಸಿ ನುಡಿಯೆ (ಗದಾಯು. ೨-೩ ಪ): ಪೂತು ಮಝಭುರೇ ಬಾಲ ಎಂದವನೀಶ ಮೂದಲಿಸಿದನು ತನ್ನವರ (ಕುಮಾರವ್ಯಾ. ೬-೨೪).
[ಮೂದಲ್$_2$ + — ಇಸು$_3$./ತೆಲು. ಮೂದಲಿಂಚು = ನಿರೂಪಿಸು]

**ಮೂದಲ್$_1$** (ನಾ). ಮೂರು ತಲೆ : ತಲೆ ಪಗೆವರ ಕೆಯ್ಕೊಳ್ ಸುರಲಲನೆಯು ತೋಳೊಳಗೆ ಪತಿಯು ಭಂಡಾರದೊಳಂ ನೆಲಸೆ ಸುಭಟರ್ಕಳೊಳ್ ಮೂದಲೆ ನೆಗೞ್ದುದು ಪೊನ್ನನನ್ನನಾವನೊ ಮೊನೆಯೊಳ್ (ಅಜಿತ. ೦-೬೭); P ಇಲ್ಲಿ 'ಮೂರುತಲೆ' ಮತ್ತು 'ಮೂದಲಿಕೆ' ಎಂಬ ಶ್ಲೇಷಾರ್ಥವಿದೆ : ಅಾತ್ಮಲೋಪಕ್ಕೆ . . . ಮೂಲೋಕ, ಮೂದಲ (ಕಪುವ. ೦೮೮ ಕ್ರಮೋ).

ಮೂದಲೆಯ = ಮೂರು ತಲೆಗಳುಳ್ಳವನು : ಮೂದಲೆಯಂ, ಮೂಱು ತಲೆಯಂ (ಕವ್ಯಾ. ಸು. ೩೩೨. ಕ್ರಮೋ).
[ಮೂ$_1$ (< ಮೂಱು) + ತಲೆ$_1$]

**ಮೂದಲ್$_2$** (ನಾ). =ಮೂದಲಿಕೆ: ತಲೆ ಪಗೆವರ ಕೆಯ್ಕೊಳ್ ಸುರಲಲನೆಯು ತೋಳೊಳಗೆ ಪತಿಯು ಭಂಡಾರದೊಳಂ ನೆಲಸೆ ಸುಭಟರ್ಕಳೊಳ್ ಮೂದಲೆ ನೆಗೞ್ದುದು ಪೊನ್ನನನ್ನನಾವನೊ ಮೊನೆಯೊಳ್ (ಅಜಿತ. ೦-೬೭) ; ಕೋಕಿಲಧ್ವನಿ ಮೂದಲೆಯುಲಿಯಾಗೆ ಬಂದುದಂದು ಬಸಂತಂ (ಲೀಲಾವ. ೦-೩೭) ; ಇರ್ವರುಂ . . . ಸೇನಸಿಂಗೆ ಸೊಸು ಮೂದಲೆಗೆ ಮೂದಲೆಗಳಂ ಹೆಣಗಿದರ್ (ಶಬ್ದ. ೪೯-೯೩).

[ದೇ. ॥ ತಮಿ. ಮೂತಲಿ, ಮೂತರಿ=ನಿರೂಪಿಸು; ತೆಲು. ಮೂದಲ=ಸಾಕ್ಷಿ]

**ಮೂದಲೆಮಾತು** (ನಾ). ತಿರಸ್ಕಾರದ ಮಾತು ; ಅವಹೇಳನದ ನುಡಿ : ಮೂದಲೆಮಾತುಗಳ್ ಗಡ ಮಹಾನಿಗಮೋಕ್ತಿಗತೀತನೊಳ್ ಜಯಾಹ್ಲಾದದ ರ್ಘಂಟಿಗಳ್ ಗಡ (ಶಬಶಂ. ೯-೦೩೧). [ಮೂದಲ್$_2$ + ಮಾತು$_1$]

**ಮೂದಲೆಸೊಲ್ಲು** (ನಾ) =ಮೂದಲೆಮಾತು : ಜಿಲ್ಲಿದ ಭಟರು ಭಾಷೆಯ ಮಾಡಿ ಮೂದಲೆ ಸೊಲ್ಲುಗಳಂ ತಱುಬಿದರು (ಸಂಪಡ. ೦೭-೩೨).
[ಮೂದಲ್$_2$ + ಸೊಲ್ಲು$_2$ (<ಸೊಲ್$_2$)]

**ಮೂದಲ್ಮೆ** (ನಾ) =ಮೂದಲಿಕೆ : ತಂತಮ್ಮ ಮನದ ಮಚ್ಚರದ ಮರ್ಚಿನ ಕಾದಲ್ಮೆ ಮೂದಲ್ಮೆಯಾಗಿ ಕೈಗೆಯ್ದು ಮೈಗೆಯ್ಯದೆ ಪರಿಚ್ಛೇದಿಸಿ (ಅನಂತ. ೦೨-೦೨ ಪ). [< ಮೂದಲ್$_2$ + - ಮೆ$_3$]

**ಮೂದಿಟ್ಟಿ** (ನಾ). ಮೂರುಕಣ್ಣು : ಮುನ್ನೀರ ಕಟ್ಟಳಾಱದನ ಸದನಾಗ್ರದೊಳ್ ನಿಂದ ಮೂದಿಟ್ಟಿಯುಳ್ಳತುಳರುದ್ರಂ (ಬಸೋಪು. ೦೩-೩೦).
[ಮೂ$_1$ (< ಮೂಱು) + ದಿಟ್ಟಿ]

**ಮೂದಿರಿಕ** (ನಾ). ಮೂರು ಕಡೆಗೆ ತಿರುಗುವಂತಹುದು : ಉಗುಱಿಪ ಮೂಗಂ ಮುಚ್ಚಿಪ ಮೊಗಮಂ ಮೂದಿರಿಕನಾಗಿಪುದ್ದಾರಮಾವಗ ಮೊಗೆಯಿಪ ಬೇಡರ ಪಳ್ಳಿಗಳಂ ಪತಿ ಪಾಯ್ದು ಪೋಗೆ (ಲೀಲಾವ. ೬-೩೬).
[ಮೂ$_1$ (< ಮೂಱು) + ತಿರಿಕ$_1$]

**ಮೂದಿವಸ** (ನಾ). ಮೂರು ದಿನ : ಅವರಿವರ ಸಕ್ಕಿಕೆ ನೆರೆದುದೇಕಾದಶ ಶತಕ್ಷೋಣಿ ತವಿಸುವರೆ ನನಗೊಂದುದಿನ ಮೂದಿವಸದಲಿ ಗುರುವೈದು ದಿವಸಕೆ ರವಿಜ (ಕುಮಾರವ್ಯಾ. ೬೧. ೨-೨೦). [ಮೂ$_1$ (< ಮೂಱು)+ದಿವಸ]

**ಮೂದೆಕಲ್** (ನಾ). ಒಂದು ಊರಿನ ಹೆಸರು (?) : ಮಾವಾಮುತ್ತರಸರಾ ಪೊಟಲಮ್ಮನಾ ಮೇಗೆಟ್ಟು ಮೂದೆಕಲ್ಲಾ ಕಾಳಿಗಮುಳ್ . . . ಅನಿವರುಮ್ ಆನ್ನಿಱಿದು ಸತ್ತರ್ (ಎಕ. X. ಶ್ರೀನಿವಾ. ೪೦-೨ ; ಸು. ೯೦೦).
[ಮೂದೆ + ಕಲ್$_3$]

**ಮೂದೆರ** 'ಮೂದೆಱ' ನೋ.

**ಮೂದೆಱ**, ಮುತ್ತೆಱ, ಮೂತೆರ, ಮೂದೆರ (ನಾ). ೧. ಮೂರು ಬಗೆ,—ರೀತಿ ; ತ್ರಿವಿಧ : ಮೂಲೋಕಂ, ಮೂದೆಱಂ (ಶಬ್ದಾನು. ೦೩೬ ಅಾ) ; ನಾಡೆಯುಂ ನಲವನಿಳಾಧಿಪಂಗೆ ನೆಲೆವೆರ್ಚಿಸಿದತ್ತು ಗೃಹಾಧಿದೇವತಾವಿಲಸದಪಾಂಗದೊಳ್ ನೆರೆದು ಮೂದೆಱದೊಪ್ಪುವ ಬಣ್ಣದಂದದಿಂ (ಶಂತ್ರ ಪು. ೩-೦೦೨) ; ದಿನದೊಳ್ ಮೂದೆಱನಾಯ್ತು ಭಾನುವಿನ ತೇಜಂ (ಕುಸುಮಾ. ೬-೬). **ಮುತ್ತೆಱ: ೨.** ಮೂರು ಭಾಗ : ಅವಂ . . . ಮುತ್ತೆಱನ ಮಾಡಿಯೊಂದಕ್ಕೆ ಹುಳಿಯೊಂದಕ್ಕೆಯುತ್ತಮದ ಸಿಪಿ ಹುರಿದ ಕಡಲೆಪುಡಿಯೊಂದಕ್ಕೆಯೊತ್ತರಿಸಿಯರಿಸಿ (ಸೂಪಶಾ. ೩-೨೦). **ಮೂತೆರ :** ೧. ಅಜ್ಞನಾಗಿರ್ಪವನಧಿಕಾರಿಯಾದಂದು ಮೂತೆರನಾದ ಕೇಡಹುದು ಅರ್ಥನಾಶನವಮಾದಪಕೀರ್ತಿಯುಪ್ಪುದು ನರಕಲೋಕದ ದುಃಖಮಹುದು (ಇಂತಾಶ. ೦೭೩-೫೨). **ಮೂದೆರ :** ೧. ಪ್ರಾಜ್ಞನಾಗಿರ್ಪವನಧಿಕಾರಿಯಾದಂದು ಮೂದೆರನಾದೊಳ್ಳಿತಹುದು ಯಶವಹುದಮಿತಧನಾಗಮವಪ್ಪುದು ನಾಕಲೋಕದ ಸುಖವಹುದು (ಇಂತಾಶ. ೦೭೩-೫೦).
[ಮೂ$_1$ (< ಮೂಱು) + ತೆಱ$_1$]

**ಮೂದೇವರ್**, ಮೂದೇವರು (ನಾ). ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ; ತ್ರಿಮೂರ್ತಿ: "ಮೂದೇವರ್ಕಳ್ ತ್ರಿಮೂರ್ತ್ಯರ್ಥದೊಳ್" (ಕರ್ಣಾಟ. ೫೦) ; ಮೂದೇವರುಂ ಪರಸಿ ನಿಜನಿವಾಸಂಗಳ್ಗೆ ಪೋದರ್ (ಶಂಕರಾ. ೩-೦೦೩ ಪ). **ಮೂದೇವರು :** ಮೂದೇವರ ದೇವನ ಗೃಹದೊಳು ಬಲುಭೇದದ ಧ್ವಜನಿಕರಗಳು ವಾದಿಸಿ ವಾಯುಪಥಿಕರೊಡನವರಿಗೆ ಹಾದಿಯ ಕೊಡದಿರುತಿಹವು (ತ್ರಿಪುರಾಂ. ೭-೭೮) ; ಅಗಣಿತಪರಮಋಷಿಗಳ ನಿವಹ . . . ನೆರೆದು ತಮ್ಮೊಳಗಾರು ಮೂದೇವರೊಳು ಮುಖ್ಯರೆನುತ್ತ

ಸಂಶಯಾಕಿರವ ತೆತ್ತರು ಮನವನು (ಶಿಶಾಗ. ೧೧-೯೨-೧).
[ಮೂ₁ ( < ಮೂಱು) + ದೇವರ್]

**ಮೂದೇವರು** ' ಮೂದೇವರ್' ನೋ.

**ಮೂದೇವಿ** (ನಾ). ೧. ಒಬ್ಬ ದೇವತೆಯ ಹೆಸರು ; ಜ್ಯೇಷ್ಠಾದೇವಿ ; ಅಲಕ್ಷ್ಮಿ ; ' ಜ್ಯೇಷ್ಠೆ ' ಹೋ. ೨. ಮಂಕುತನ ; ಜಡತ್ವ ; ಸೋಮಾರಿತನ : ಮದ್ದು ತಿಂದು ತಿಂದು ಮನೆಯೆಲ್ಲ ಬಱಿದಾಗಿ ಹೊದ್ದಿತು ಮೂದೇವಿ ಮೈದುನಗೆ (ಭರಂದ. ೨-೬೯-೨) ; ಹೋದೆಹವೆಂದರೆ ಹಾದಿಯು ಕಾಣವು ಮೂದೇವಿ ಬಂದಿತುಯೆಮಗೆ (ಪುರಂದಸಾ. ೨-೦೨೦). ೩. ಚಟುವಟಿಕೆಯಿಲ್ಲದ ವ್ಯಕ್ತಿ ; ಸೋಮಾರಿ : ಒಬ್ಬನೇ ಮಗನಿಗೆ ಈ ಮೂದೇವಿ ಎಲ್ಲಿಂದ ಗಂಟುಬಿದ್ದಳೋ ಏನೋ (ಮಸಳು. ೪೦).
[ಮೂ₁+ದೇವಿ./ತಮಿ. ಮೂತೇವಿ ; ಮಲ. ಕೊಡ ತೆಲು. ಮೂದೇವಿ]

**ಮೂಧ** (ನಾ). ಒಂದು ಬಗೆಯ ಸಸ್ಯ : ನಾರೋಲಿ, ಮೂಧಮರ, ಮೂಧ, ಮೂಡಲಿ, ಕನಕಚಂಪಕ (ಬೃಶಿಗ. ೫೭-೧೧೯೦). [ ? ]

**ಮೂನೂಱು**, ಮುನೂಱು, ಮುನ್ನೂರು, ಮುನ್ನೂಱು (ನಾ). ಒಂದು ಸಂಖ್ಯೆ ; ಮೂರುನೂರು : ಸ್ವಸ್ತಿಶ್ರೀ ಶ್ರೀಪುರುಷ ಮಾಹರಾಜರ್ ಪೃಥುವೀರಾಜ್ಯಂಗೆಯೆ ಸಿಯಗೆಲ್ಲರ್ ಮಱುಗರೆನಾಡುಮೂನೂಱೂಮಾಳೆ (ಎಕ. XVI. ತುಮಕೂ. ೮೭-೩;750); ಬೆಳ್ವೊಲಮೂನೂಱುಮನಾಳುತ್ತುಂ (ಎಇ. VIII. ೨೦೭-೦೬ ; 866); ನೂಱುರಥದಲಿ ಸರಳ ಹೊಡೆ ಮೂನೂಱು ಪರಿಚಾರರು ಸಹಿತ ಮೈದೋಱಿ ನಿಂದನು ಭೀಮನೊಬ್ಬನೆ ತಱುಬಿ ಕುರು ಬಲವ (ಕುಪ್ರಾಕ. ೦೩-೩). **ಮುನೂಱು** : ರಾಜ್ಯಾಭಿವೃದ್ಧಿಗೆ ಉತ್ತರೇಶ್ವರದ ಆದಿತ್ಯ ಗ್ರುಹಮುಮುಗುಳ ×ಮುನೂಱು ಪೊಕಲೊಳ × (ಕಇಅ. ೧೦೭-೯೩-೭; 792). **ಮುನ್ನೂರು** : ತಮ್ಮ ರಾಜ್ಯದಲ್ಲಿ ನಿಡುಂಬರೆ ಕಟ್ಟುವ ಕೆಲಸದಲ್ಲಿ ಮುನ್ನೂರು ಚೆಲುವಾನು ಆಳು ಉಂಟಷ್ಟೆ (ರಾಜೇಂದ್ರ. ೦೯೩) : ಮುನ್ನೂರುಮಂದಿ ಕೂಲಿಗಳು, ಕುಂಬಾರಗುಂಡಿಯಲ್ಲಿ ದುಡಿಯುತ್ತಿರುವ ಕಾಲದಲ್ಲಿಯೇ, ಅಲ್ಲಿನ ಜ್ವರದ ಸುಗ್ಗಿಯೂ ಬಲಿಯಿತು (ಶಾರುರಾ. ೦೫೩). **ಮುನ್ನೂಱು** : ನಿನ್ನ ಪ್ರಾಯದಲಿ ಹಣವ ಗಳಿಪೆನೆಂದು ಮುನ್ನೂಱು ಮಂಚವ ಮುಱಿದೆ (ಕಂಪಪಿ. ೬-೦೫೫).

**ಮೂನೂರ್ಬರ್**, **ಮೂನೂರ್ವರ್** = ಮೂರು ನೂರು ಜನ ; ಮುನ್ನೂರು ಮಂದಿ : ಎಟ್ಬದಿಂಬರುಂ ಮೂನೂರ್ಬ್ಬರುಂ ಜಕ್ಕಿಯ ಬ್ಬೆಯೊಳ್ ನುಡಿದವು ತವುರ್ಂ ಬಿಡಿಸಿದೋರ್ (ಎಕ. VII, ಶಿಕಾ೦. ೨೦೯_೦೯ ; 918) ; ಚಕ್ರವರ್ತ್ತಿ ಶ್ರೀವೀರವಾರಸಿಂಹ ದೇವರಸರಾಣಿ ಸೋವಲದೇವಿಯರಾಣಿ ಮೂನೂರ್ಬ್ಬರಿಗಂ ಮೂವತ್ತಿ ತ್ಸ್ಬ ಸಿ ರ ಕ ೦ (ಎಕ. VI, ತರೀಕೆ. ೫೩-೯; 1290); ಕೋಡಾಮರ್ ವೊಯ್ದು ಕೆಯಿ ಬಿಟ್ಟ ಮೂನೂರ್ವ್ವರುಂ (ಎಕ. VI, ಕೊಪ್ಪ. ೪೦-೭ ; ಸು. 1090).
[ಮೂ₁ ( < ಮೂಱು ) + ನೂಱು₂]

**ಮೂನೆಲ** (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳವೆಂಬ ಮೂರು ಲೋಕ ; ತ್ರಿಲೋಕ : ಆವೂರ ಮುಳ್ಪಸಿಯ ಮೂನೆಲಂ ತನಗೆಂಬ ಅವನಿರ್ಪನೊ ಕೊರಗು ಪುರುಳೀವ ಪೆಸರು (ಕಾರಾಕ. ೨೮-೨೦).
[ ಮೂ₁ ( < ಮೂಱು) + ನೆಲ]

**ಮೂನೆಲೆ** (ನಾ). ಮೂರು ಅಂತಸ್ತು: ಮೂಱುಲೋಕಮನೆ ಪೋಲ್ತುದು ಮೂನೆಲೆಯಿಂ ಸಯ್ತುಬರಂ (ಶಂಶಕಾ. ೩-೫೩); ಮೂನೆಲೆವೆತ್ತಾ ಸಭೆ ಮೂಱುಲೋಕವೊಡನೊಂದಿರ್ದತ್ತೆನಲ್ ರಂಜಿಸುಂ (ನೇಮಿಚಂ. ೯-೯೦).
[ಮೂ₁ ( < ಮೂಱು ) + ನೆಲೆ₁]

**ಮೂಬದಲು** ' ಮುಬಾದಲೆ ' ನೋ.

**ಮೂಬದಲೆ** ' ಮುಬಾದಲೆ ' ನೋ.

**ಮೂಮಡಿ** ' ಮೂಪಡಿ ' ನೋ.

**ಮೂಮಡಿವೀರ** (ನಾ). ಮೂರು ಪಟ್ಟು ಶೂರ ; ಮಹಾವೀರ : ಜ್ವಾಲಾಂಬಕನ ತಪೋಭ್ರಷ್ಟನ ಮಾಡಿದೋಲೆಯುಕಾಱನದಾರು ಮೂಲೋಕ ವಿಜಯ ಮೂಮಡಿವೀರ ಕಮ್ಮಲಗೊರ್ಳಲಸಲ್ಲವೆ ಪೇಳು ಜೀಯ (ವೋಹಕ. ೯_೦೩).
[ಮೂಮಡಿ ( < ಮೂಪಡಿ ) + ವೀರ]

**ಮೂಮರಿ** (ನಾ). (?) : ತೋಟ ತುಡಿಕೆ ಮಕ್ಕ ಹಕಲು ಮೂಮರಿ ಕೋಹು ಕಾಡಾರಂಭ ನಿಧಿನಿಕ್ಷೇಪ ಜಲಪಾಶಾಣ ಅಕ್ಷೀಣಿ ಆಗಾಮಿ ಸಿಧಸಾಧ್ಯ ಯಿಂತಿ ಅಷ್ಟ ಭೋಗ ತೇಜಸ್ವಾಂಮ್ಯ ಮುಂತಾಗಿ ಏನುಳಿದನು ನಿಮಗೆ . . . ಧಾರೆಯನೆಱದು ಕೊಟೆವಾಗಿ (ಎಕ. VIII, ತೀರ್ಥಹ. ೨೨-೨೦; 1405). [ ? ]

**ಮೂಮೆ**, ಮುಮ್ಮೆ, ಮುಯ್ಮೆ, ಮೂರ್ಮೆ, ಮೂವೆ (ನಾ). ಮೂರುಸಲ ; ಮೂರುಬಾರಿ : "ಮೂಮೆಯೆನೆ ಮೂಱುಂ ಸೂಟಿ" (ತಶಬ್ದ. ೯೯) ; ಅನಿವಾರಿತಾಚಾರಿಗೆ ಮೂಮೆ ಪಟ್ಟ್ಗಟ್ಟಿಪುಪಟ್ಟಮು ತ್ರಿಭುವನಾಚಾರಿಯೆನ್ದು ಪೆಸರಿತ್ತು (ಇಅ. X. ೦೬೯-೫; 7ನೆಯ ಶತ); ಇರ್ವರುಮಂ ಮೂಮೆ ಸುರೇಂದ್ರಕಾಂತೆ ಬಲಗೊಂಡುದ್ಯನ್ಮನಃಪ್ರೀತಿಯಿಂ ಎಱಗಿ (ಆದಿಪು. ೭-೪೪); ಮೂಮೆ ಕೈವಿಗೆ ಬಲವಂದು ಗಂಧ ಕುಟಿಯಂ (ಅನಂಪು. ೦೦-೩೬); ಸಮವಸರಣಮಂಡಪಮಂ ಹೊಕ್ಕಾ ರಮಣಿ ಸುಲೋಚನೆ ಸಹಿತ ಜನಪನಂ ಮೂಮೆ ತಿರಿದು ಬಂದು (ಜಯನೃ. ೦೬-೨೭). **ಮುಮ್ಮೆ** : ಮುಮ್ಮೆ, ಮೂಮೆ (ಶಬ್ದಾನು. ೩೫೪ ಪ್ರಯೋ). **ಮುಯ್ಮೆ** : ಮುಯ್ಮೆ, ಮುಯ್ವರ್ (ಶಬ್ದಾನು. ೩೬೦ ಪ್ರದೋ). **ಮೂರ್ಮೆ** : " ಮೂರ್ಮೆಯೆನಲ್ ತ್ರಿಕವಾರದಲ್ಲಿ" (ಕನ್ನಡಿ. ೬೫) ; ಪೇಟ್ವಾಗಳೊರ್ಮೆಯೊ ಮೇಣಿರ್ಮೆಯೊ ಮೂರ್ಮೆಯೋ ಕುರುಕುಳಪ್ರಾರಬ್ಧದುರ್ವೃತ್ತಕಂ (ಕಾವ್ಯಾವ. ೩೯೯) ; ಮೆ ಪ್ರತ್ಯಯಕ್ಕೆ . . . ಮೂರ್ಮೆ, ನಾಸಿರ್ಮೆ, ಪಲರ್ಮೆ (ಶಮದ. ೨೦೭ ಪ್ರಯೋ); ಬೀರಮಂಡಿಗವರೋಹಿಸಿ, ಮಣಿದು ಮೂರ್ಮೆ ನಮಸ್ಕರಿಸಿ (ಬಸ್ವಿಆ. ೦೦೯-೨೨). **ಮೂವೆ**: ದೇವದೇವನ ಬೆಸನ ಮಾಯಾದೇವಿ ತಲೆಯಲಿ ಧರಿಸಿ ಪದದಲಿ ಮೂವೆ ಬಲವಂದೆಱಗಿ ಹೋಗುವೆವೆನುತ ಬೀಳ್ಕೊಂಡು (ಶಿಶಾಗ. ೦೦-೨-೫೮).

**ಮೂಮೂರ್ಮೆ** (ದ್ವಿರುಕ್ತಿ) : ಖಿಡ್ಗದ ಕೂರ್ಮೊನೆಯನ್ನು ಮಹಾರಾಜನ ಮುಖದ ಸುತ್ತವೂ ಭುಜಕೀರ್ತಿಗಳನ್ನು ಬಳಸಿಯೂ ಮೂಮೂರ್ಮೆ ನಿವಳಿಸಿ (ಐರುಗಂ. ೩೨-೩).
[ಮೂ₁ (<ಮೂಱು) + – ಮೆ₂./ತಮಿ. ಮುಮ್ಮೆ; ಕೊಡ. ಮೂವು]

**ಮೂಮ್ಯೆ** (ನಾ). ಒಂದು ಬಗೆಯ ಸಸ್ಯ : " ಮಾರ್ಕಂಡೀಯಂ– ಮೂಮ್ಯೆ " (ಓಷಧಿ. ೦೨೫). [ ? ]

**ಮೂಮೊನೆ**, ಮುಮ್ಮೊನೆ₁ (ನಾ). ಯಾವುದಾದರೊಂದು ಆಯುಧದ ಚೂಪಾಗಿರುವ ಮೂರು ತುದಿ.– ಮೊನೆ : ' ಮೂಮೊನೆಗೈದು ' ಪರಾ. **ಮುಮ್ಮೊನೆ₁** : ಮುಮ್ಮೊನೆಯ ಬೋಳೆಯ ಸರಳನಲಿ ಸಾಧನ ಸಮಗ್ರರು ಶಿರುಪನೆಚ್ಚರು ದೆಸೆದೆಸೆಗೆ ಕವಿದು (ಕುಪ್ರಾದ್ರೋ. ೬-೦೦); ಪೊಳೆವ ತ್ರಿಶೂಲ ಮುಮ್ಮೊನೆಯಿಂದೆ ಕಂಗಿಡಿಗಳನುಗುಳ್ದು . . . ಪರಿಯುರಸ್ಥಲದಲ್ಲಿ ಬಂದು ಮೋಹಿಸಿತು (ಮೋಹಕ. ೪೦-೭೬).
[ಮೂ₁ ( < ಮೂಱು) + ಮೊನೆ]

**ಮೂಮೊನೆಗೈದು**, ಮುಮ್ಮೊನೆಗಯ್ದು, ಮುಮ್ಮೊನೆಗೈದು (ನಾ). ಮೂರು ಹರಿತವಾದ ಮೊನೆಗಳುಳ್ಳ ಆಯುಧ; ತ್ರಿಶೂಲ : " ಮೂಮೊನೆಗೈದು[ಶಾಕಾಂ. ಮುಮ್ಮೊನೆಗಯ್ದು]ವೆಂದುಂ, ತಿಸುಳ ವೆಂದುಂ, ಶಿವಂ ಪಿಡಿವ ತ್ರಿಶೂಲಂ " (ಕಶಸಾ. ೬೭-೨). **ಮುಮ್ಮೊನೆಗಯ್ದು**: ಮೇಲಿನ ' ಕಶಸಾ.' ಪ್ರಯೋಗದ ಪಾಠಾಂತರವನ್ನು ನೋಡಿ. **ಮುಮ್ಮೊನೆಗೈದು** : " ಮುಮ್ಮೊನೆಗೈದುವೆನಲ್ ತಿಸುಳಂ " (ಕಶಸಾ. ೬೦). [ಮೂಮೊನೆ + ಕೈದು₁ ( < ಕೆಯ್ದು)]

**ಮೂರ** (ನಾ). ತೊಗಟೆ ; ಸಿಪ್ಪೆ : " ಮೂರ " ಅಂದರೆ ತೊಗಟೆಯ ಸ್ವಲ್ಪಭಾಗವಿದ್ದು ಮೇಲಿನ ರೇಷೆಗಳು ಕೂದಲದಂತೆ ಶೀರವಾಗಿರಬೇಕು (ಮುಂಡಾ$_1$. ೩೦). [ ? ]

**ಮೂರದಿ** ' ಮೂಱಡಿ ' ನೋ.

**ಮೂರನ್ನ** (ನಾ). [ಜೈನ] ಮೋಕ್ಷವನ್ನು ಪಡೆಯಲು ಸಾಧಕವಾದ, ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ ಮತ್ತು ಸಮ್ಯಕ್‌ಚಾರಿತ್ರ ಎಂಬ ಮೂರು ಬಗೆಯ ರತ್ನ ; ರತ್ನತ್ರಯ : ಹೊದೆದು ಸುಜ್ಞಾನಾಂಬರವ ಮೂರನ್ನವ ಮುದದಿ ತೊಟ್ಟಪವರ್ಗವೆಂಬ ಸುದತಿಯಯೆದೆವನೆಯೊಳಗಿಪ್ಪ ಶಂಕರಪದಪದ್ಮಗಳಿಗೆ ನಮಿಸುವೆ (ಶೀಲಂಶಾ. ೦೩-೧); ವರತತ್ತ್ವಜಲವನು ಮಿಂದು ಸುಜ್ಞಾನಾಂಬರವ ಪೊದೆದು ಮೂರನ್ನವನು ಹರುಷದಿಂ ತೊಟ್ಟ ನಿರ್ಮಲಪುರುಷನಿಗಲ್ಲದರಸಿಯಹಳೇ ಮುಕ್ತಿರಮಣಿ (ಶೀಲಂಶಾ. ೦೪-೦೦).
[ಮೂ$_1$ (< ಮೂಱು ) + ರನ್ನ (< ರತುನ)]

**ಮೂರಾಬಟ್ಟೆ** (ನಾ). ಹಾಳು ; ನಾಶ ; ಕೇಡು : ನೋಡಲಿ ನೋಡಲಿ ನೋಡಲಿ ಅವರು ಮೂವರು ಕೂಡಿ, ರಚಿಸಿದ ಮೂರಾಬಟ್ಟೆಯ ನಾಟಕವ ! (ಗಂ. ೬೯-೦೩) ; ಈ ಮನೆಯ ಮೂರಾಬಟ್ಟೆ ಯಾರಿಂದ ಆಯಿತೆನ್ನುವದು ನನಗೆ ತಿಳಿದ ವಿಷಯವಾಗಿದೆ (ಶುಕ್ರಸು. ೩೬). [← ಮರಾ: ಮುರಾಬಟ್ಟೀ]

**ಮೂರಿ**. ಮುರಿ$_4$ (ನಾ). ೧. ಯಮನ ಭಯಂಕರವಾದ ಕೋಣ : ನಾಡರಸಂ ತಗುಳ್ದು ಕಡೆಗಾಲದ ಮಾರಿಯ ಮೂರಿಯಂತೆ ಕಣ್ಣಾಡದೆ ಬಾಲವೃದ್ಧವನಿತಾವಧೆಗೆಯ್ದು (ಶಂರಾಚಾ. ೪-೩೯), ಮಾರಿಯ ಮೂರಿಯಂತೆ ಬರ್ಪ ಸೊರ್ಕಿದಾನೆಯುಂ ಕಂಡು (ರಶರ್ಜುನ$_1$. ೦೩-೩೩); ಮಾರಿಯ ಮೂರಿ ಮೇಲೆಱಗುವಂದದೆ ಭೋಂಕನೆ ಮೇಲೆವಾಯ್ದು ಕಂಠೀರವಮಂ . . . ಕಡಿಕೆಯ್ದು (ಶರ್ಶ. ೩-೪೪); ಭೈರವನ ಜವನ ಮಾರಿಯ ಮೂರಿಯ ವೋಲ್‌ ನಿಂದ ಮಾರಿದತ್ತಂ (ಚುಕೋಶ. ೦-೩೯) . ೨. (ಭಯಂಕರವಾಗಿ ತೆರೆದ) ಬಾಯಿ : ಮಾರಿಯ ಮೂರಿ ರಕ್ಕಸನ ರೌದ್ರತೆ . . . ಸಾಹಣಿ ಮಲ್ಲನ ಬಾಹುವಿಕ್ರಮಂ (ಕೊಶಾ. ೦೬-೦೬; 1189). ' ಮೂರಿಗೊಳ್ ', ' ಮೂರಿವಿಡು ' ಪರಾ. ೩. (ಹೆದರಿಕೆಯನ್ನುಂಟುಮಾಡುವಂಥ) ಗುಂಪು ; ಸಮೂಹ : ತಾರಗೆಯೆನೆ ತೊನೆದೊಟ್ಟಿದ ಮೂರಿಯ ರೋಮಂಥ ಫೇನಮಂಜರಿನಿಕರಂ ಕಾರಿರುಳ ತಿರುಳಿದೆನೆ ಮದಸೈರಿಭಮಿರ್ಪುವು ಬೆಳತ್ತಮಾಳದ ನೆಳಲೊಳ್‌ (ಅರ್ಜಶೀ. ೩-೪೩) ; ಕಾಲಾಗ್ನಿಯ ಮಾಲೆಯಂತೆ ಮಾರಿಯ ಮೂರಿಯಂತೆ ಮೃತ್ಯುವಿನ ಕೊತ್ತಳಿಯಂತೆ . . . ಮುಂತಿರ್ದ ರಕ್ಕಸವಡೆಯ ನಡುವೆ ನಿಂದ ವೀರತಾರಕಾಸುರಂ (ಗಂಕ.೬-೩೩ವ); ಸಿಂಗದ ಸಂಗಮಂತಕನ ತಿಂತಿಣಿ ಮಾರಿಯ ಮೂರಿ ಕಾಲರುದ್ರಂಗನುಸಾರಿ ಭೈರವನ ಭಾರಣೆ . . . ಎನಲೊಪ್ಪುವವೋಲ್‌ ನೆರೆದಿರ್ದುದಾಕ್ಷಣಂ ಸಂಗರಮುಜ್ಜುಗಕ್ಕೆ ಚತುರಂಗಬಲಂ (ದಶಕು. ೬-೪೯). ೪. ಆಯಾಸ ಅಥವಾ ಜಡತೆಯನ್ನು ಹೋಗಲಾಡಿಸಲು ಮೈ ಮುರಿಯುವಿಕೆ : ' ಮೂರಿಯಿಡು ' ಪರಾ. ಮುರಿ$_4$ : ೫. ಎತ್ತು, ವೃಷಭ : "ಶರಾಭರಣ ವಕ್ರತೆ ಬಲೀವರ್ದ ಸಮಕಟ್ಟುಗಳೊಳಂ ಮುರಿಯಲಾ" (ಕಾ.ಶಂ. ೦೦೬). P ಈ ಶಬ್ದದ ಮತ್ತು ಇದರ ಸಮಾಸಪದಗಳ ಅನೇಕ ಪ್ರಯೋಗಗಳ ಅರ್ಥ, ಅದರ ಬೆಳವಣಿಗೆ ಮತ್ತು ನಿಷ್ಪತ್ತಿಯ ಬಗೆಗೆ ಭಿನ್ನಾಭಿಪ್ರಾಯಗಳಿಷ್ದು ವಿಚಾರಣೀಯವಾಗಿದೆ.
[ ದೇ.॥ ತಮಿ. ಮಲ. ತುಳು. ಮೂರಿ ]

**ಮೂರಿಗೊಳ್‌** (ಕ್ರಿ). ಒಟ್ಟಾಗಿ ಹಿಡಿ : ಅಡವಂ ಗೋಟ್ಮುಱಿಗೊಂಡು ದೋಟದಲೆಯಂ ಮುಂಗೆಯ್ಗಳಿಂ ಮೂರಿಗೊಂಡಿಡುವಟ ಕೂಂಕಿ ಕೊಡಂಕಿಯಂ ಮೊಱೆವಂ . . . ಮಿಂಡರ ಮೀಸೆಯಂ ಸೆಳೆದು ಮೂಗಿಟ್ಟೇಱುವಂ ಮಕ್ಕಳಟ್ಟೊಡೆ ಬಾಯ್ಬೊಯನೆ ಪೊಯ್ವನೇಂ ಸಿತಗನೋ ಶಾಳಾಹಿಕೋಳಾಹಳಂ (ಅರ್ಜಶೀ. ೬-೮೪). [ಮೂರಿ + ಕೊಳ್‌$_1$]

**ಮೂರಿಡು** ' ಮೂರಿಯಿಡು ' ನೋ.

**ಮೂರಿಯಿಡು**. ಮೂರಿಡು, ಮೂಲಿಯಿಡು (ಕ್ರಿ). ೧. ಆಯಾಸ ಅಥವಾ ಜಡತೆಯನ್ನು ಹೋಗಲಾಡಿಸಲು ಕೈಕಾಲುಗಳನ್ನು ನೀಡು; ಮೈಮುರಿ : ಮೂರಿಯಿಡುವೊಡಂ ಸುಱಿವೊಡಂ ಸಿಂಗರಂಗೆಯ್ವೊಡಂ ತಂಬುಲಂ ಮೆಲುವೊಡಂ ನೀರಂ ಕುಡಿವೊಡಂ ನುಡಿವೊಡಂ ಶೃಂಗಾರಂಗೆಯ್ವೊಡಂ . . . ಕಾಣಲೀಯಲಾಗದು ವಧುವಂ (ಶುದಶ. ೦೦-೩೦). **ಮೂರಿಡು** : ೨. ಭಯಂಕರವಾಗಿ ಬಾಯಿತೆರೆ: ನೊಣೆಯಲ್‌ ನುಂಗಲಿ ಕಾತಳಂ ಮುರಿದು ಮೂರಿಟ್ಟಂತೆ. . .ಲಗ್ಗಿಗಾರ್ದು ವಸುಷೇಣಂ ಸಾರ್ದು ಸೂಟಿಸಿದಂ (ಅಜಿಂತ. ೦೦-೮೬). P ಈ ಶಬ್ದದ ಸ್ವರೂಪವು ಸಂದಿಗ್ಧವಾಗಿದೆ. **ಮೂಲಿಯಿಡು** : ೧. ಅಸನಪ್ರಾಶಯ್ಯಾತಳದಿಂದಂ ಕಾಂತೆಯಿಟಾದೊಡಂ ಮೆಯ್ಯಂ ಕಮ್ಮಗೆ ಮೂಲಿಯಿಡುವೊಡಂ ಪಚ್ಚುವೊಡಂ ಇರವಂ ಭಯಸುವೊಡಂ ಪರಪುರುಷಸಮಕ್ಷದೊಳೆಪಲ್ಲವಸತೀಭಾವಂ (ಮದಶ. ೬-೪೪). [ಮೂರಿ + ಇಡು$_1$]

**ಮೂರಿವಿಡು** (ಕ್ರಿ). ೧. (ಭಯಂಕರವಾಗಿ) ಬಾಯಿಬಿಡು; ಬಾಯಿತೆರೆ: ಆಗಳ್‌ ದುರ್ಯೋಧನನಂ ಮುಂದಿಟ್ಟೊಡಗೊಂಡು ಧೃತರಾಷ್ಟ್ರಕರ್ಣಶಲ್ಯಶಕುನಿ ಸೈಂಧವಪ್ರಭೃತಿಗಳ್‌ ನೆಲಂ ಮೂರಿವಿಟ್ಟಂತೆ ಸಭಾಕ್ಷೋಭಮಾಗೆ ತಳರ್ದು . . . ಪೋದರ್‌ (ಪಂಪಭಾ. ೨-೮೬ ವ) ; ಭಮದೀಯವನಾಯುಜಹಯನಿವಹಂ ಕೇಳ್‌ ಮೂರಿವಿಟ್ಟು ನಿಶ್ವಾಸಂ ಸೈಂಧವಮಂ ಮಾಸಿಸೆ ಸೊಗಯಿಸಿತು ವಿನಿದ್ರ ದೇವ ದೀರ್ಘಪಟಮಂಡಪದೊಳ್‌ (ಶಾಂತಿಪು.೩-೯೨). ೨. ಗುಂಪುಗೂಡು ; ಒಟ್ಟಾಗು : ದ್ರುಪದಂ . . . ತನ್ನ ಮಗಂದಿರುಂ ತಮ್ಮಂದಿರುಂ ಬೆರಸು ನೆಲಂ ಮೂರಿವಿಟ್ಟಂತೆ ಬರೆ (ಪಂಪಭಾ. ೪-೬೪ ವ); ಸಿಡಿಲ ಬಳಗಕ್ಕೆ ಕುಳಿಕನ ಕುಡುತಡಾದಗೆ ಮೂರಿವಿಟ್ಟ ಮಾರಿಗೆ ಮಾಱುವಡುವಣ್ಣ (ಶಾಸ. XV, ೦೪೨-೦೪; 1184). ೩.=ಮೂರಿಯಿಡು ೧: ಮೂರಿವಿಡುತ್ತುಂ ನಿಂದು ಮೆಯ್ಯಂ ಬಿದಿರ್ದೆಳಸಿಮುದಶ್ವಾಳಿ ಮೇಹಿಂಗೆ (ಪರ್ಶು. ೯-೩೪). [ಮೂರಿ + ಬಿಡು$_1$]

**ಮೂರು** 'ಮೂಱು' ನೋ.

**ಮೂರುಕ** ' ಮುಕ್ಕ$_3$ ' ನೋ.

**ಮೂರುಕಾಸು** (ನಾ). ೧. ಹಿಂದೆ ಇದ್ದ ಆಣೆಯ ಹನ್ನೆರಡನೆಯ ಹಿಂದು($\frac{೧}{೧೨}$)ಭಾಗದ ಬೆಲೆಯ ಮೂರುನಾಣ್ಯಗಳು ಮತ್ತು ಆ ಮೂರು ನಾಣ್ಯಗಳ ಬೆಲೆಯ ಒಂದು ತಾಮ್ರದ ನಾಣ್ಯ: ಇಂದಿನ ರೂಪಾಯಿಗೆ ಹಿಂದಿನ ಮೂರುಕಾಸಿನ ಬೆಲೆಯೂ ಇಲ್ಲವಾಗಿದೆ (ಕಾ). ೨. (ಆಲಂ) ಗಣನೆಗೆ ತಕ್ಕುದಲ್ಲದ ಕಾಸು ; ಅಲ್ಪಹಣ : ಹತ್ತು ಬಂಗ್ಲೆ ಊಟಲ್ಲ, ಅದನ್ನು ಮೂರುಕಾಸಿಗೆ ಇಲ್ಲಿ ಕೊಡುವುದು ಯಾಕೆ, ನೀನೇ ಒಯ್ದು ಬಿಡು (ಹೊಸಕ್ಷ. ೪೯). ೩. ತುಚ್ಛ ; ಅಲ್ಪ : ನನ್ನ ಚಾರಿತ್ರ್ಯದ ಬಗ್ಗೆ ಮಾತನಾಡಿದಳೇ ಈ ಮೂರುಕಾಸಿನ ಬಜಾರಿ (ಮೂರುದಾ. ೦೪೩).

**ಮೂರುಕಾಸಿನವ** = ಲೆಕ್ಕಕ್ಕೆ ಇಲ್ಲದವನು; ಗಣನೆಗೆ ಬಾರದವನು; ಅಲ್ಪವ್ಯಕ್ತಿ : ಹಿಂತ ಮೂರುಕಾಸಿನವ! (ರಕ್ತರೂ.೮೮). **ಮೂರುಕಾಸಿನವಳು** = ಲೆಕ್ಕಕ್ಕೆ ಇಲ್ಲದವಳು ; ಗಣನೆಗೆ ಬಾರದವಳು; ಅಲ್ಪಳು : ನೀನು ತಡೆದದ್ದರಿಂದ—ಇಲ್ಲವಾದರೆ ಆ ಮೂರುಕಾಸಿನವಳಿಗೆ ತೋರಿಸುತ್ತಿದ್ದೆ ಯಾರ ಚಾರಿತ್ರ್ಯ ಏನು ಎಂದು (ಮೂರುದಾ. ೦೪೮).
[ಮೂರು (< ಮೂಱು) + ಕಾಸು$_2$]

**ಮೂರುತಗೊಳಿಸು** (ಕ್ರಿ). ಕುಳಿತುಕೊಳ್ಳುವಂತೆ ಮಾಡು ; ಕುಳ್ಳಿರಿಸು; ಸಕಲ ಶಿವಭಕ್ತರಂ ಬರಿಸಿ ಮೂರುತಿ[ತ]ಗೊಳಿಸಿಯುಕುಟಿಲಂ ಕಾಲೋಚಿತೋದ್ಯಸತ್ಕಾರವಂ ಪ್ರಕಟಿಸಿ (ಪದ್ಮರಾ. ೨-೬೦).
[< ಮೂರ್ತ$_2$ + ಕೊಳ್‌$_1$ + — ಇಸು$_3$]

**ಮೂರುತಿ** (ನಾ) ೧. ದೇವರು, ಮನುಷ್ಯ ಮುಂತಾದವರ ಪ್ರತಿಕೃತಿ; ವಿಗ್ರಹ; ಪ್ರತಿಮೆ : "ಮೂರುತಿ—ಮೂರ್ತಿ = ವಿಗ್ರಹ, ಆಕಾರ" (ಶಬ್ದಕೋ. ೩೬); ವ್ಯರ್ಥವಲ್ಲ ತವ ತಪಸ್ಸು, ಮರೆದವಿಸಿಯು ಮೂರುತಿ (ಅಕೀ. ೦೬–೯). ೨. ರೂಪು; ಆಕಾರ ; ಆಕೃತಿ: ತುಂಬಿದವು ನವಮಾಸ ಬಳಿಕ ನಿತಂಬಿನಿಯರಿಗೆ ನಿರ್ಮಳಪ್ರತಿಬಿಂಬ ಕಾಣಿಸಿತಾದಿನಾರಾಯಣನ ಮೂರುತಿಯು (ಕೊರಟಾ. ೦-೬-೯) ; ಮೂರುತಿಯನೆ ನಿಲ್ಲಿಸೋ ಮಾಧವ ನಿನ್ನ ಎನ್ನ ಹೃದಯಕಮಲದೊಳು ಒದಗಿ ನೆನೆಯುವಂತೆ ನಿನ್ನ (ಪುರಂದ. ೦-೦೭ ಕಲ್ಲಿ). 'ಮೂರುತಿಗೊಳ್ಳು' ಪರಾ. [< ಸಂ. ಮೂರ್ತಿ]

**ಮೂರುತಿಗೊಳ್ಳು** (ಕ್ರಿ). ಆಕಾರವನ್ನು ತಳೆ ; ರೂಪುಗೊಳ್ಳು: ನಿಮ್ಮ ವೇದಶಾಸ್ತ್ರಂಗಳು ಮೂರುತಿಗೊಂಡಲ್ಲಿ ಚತುರ್ವೇದಿಗಳಿಗೊಮ್ಮೆ ಅಕ್ಕಿತ್ತ ಅಯ್ಯಾ (ಬಸವ. ೩೬೭). [ ಮೂರುತಿ + ಕೊಳ್ಳು$_1$ (< ಕೊಳ್$_1$) ]

**ಮೂರುನಾಮ** ' ಮೂಱು ' ಪರಾ.

**ಮೂರುಸಂಜೆ** ' ಮೂಱುಸಂಜೆ ' ನೋ.

**ಮೂರೆಲೆ** ' ಮೂಱೆಲೆ ' ನೋ.

**ಮೂರೆಲೆಯಾಟ** (ನಾ). ಪ್ರತಿಯೊಬ್ಬ ಆಟಗಾರನೂ ಮೂರು ಮೂರು ಎಲೆಗಳನ್ನು ಹಾಕಿಕೊಂಡು, ಪಣವನ್ನಿಟ್ಟು ಆಡುವ ಒಂದು ಬಗೆಯ ಇಸ್ಪೀಟು ಆಟ ; ಪರೇಲ್ : ಈ ಪೈದಿಗಳು ಮೂರೆಲೆಯಾಟದ ಶಕುನಿಯೊಡನೆ ಆಟವಾಡಿ ಸೋತು ಅವನಿಂದಲೆ ಹಣ ಸಾಲವಾಗಿ ಪಡೆದಿದ್ದರು (ಕುಹೂ. ೩೧೬). [ಮೂರೆಲೆ (< ಮೂಱೆಲೆ) + ಆಟ]

**ಮೂರೆಲೆಹೊನ್ನೆ** ' ಮೂಱೆಲೆಹೊನ್ನೆ ' ನೋ.

**ಮೂರೆಲೆಹೊನ್ನೆ** ' ಮೂಱೆಲೆಹೊನ್ನೆ ' ನೋ.

**ಮೂರ್ಕ** ' ಮುಕ್ಕ$_3$ ' ನೋ.

**ಮೂರ್ಖ** (ನಾ). ತಿಳಿಗೇಡಿ ; ಅವಿವೇಕಿ : 'ವೈಧೇಯಃ. . .ಮೂರ್ಖಃ, ಮಾತೃಶಾಸಿತಃ— ಈ ೧೧ ಅಱಿಯದವರ್' (ಹಲಾಯು. ೩೬–೦೬೦) ; ರವಿ ... ಮಕರದೊಳಿರೆ ಮೂರ್ಖಂ ಖಳಂ ಲೋಭಿ ನೀಚವ್ಯವಹಾರಂ (ಜಾತಕ. ೦೭–೦೭); ಮೂರ್ಖನ ಕೆಯ್ಯ ರತ್ನದೊಳ್ಸಮವೆನಿಸಿರ್ದಳ್ ವನವಿಜಯಲಕ್ಷ್ಮಿಯ ಬಾಳ್ಗೊದಲೆ ನೇವಿಸಿ ಶಬರಿ ಶಬರನ ಕೆಲದೊಳ್ (ಜಾಕ್ಕರ್ತ. ೦೨–೬೭) ; ಮೂರ್ಖಂಗೆ ಬುದ್ಧಿಯನು ನೂರ್ಕಾಲ ಪೇಳಿದರೆ ಗೋರ್ಕಲ್ಲ ಮೇಲೆ ಮಳೆ ಹುಯಿದರಾ ಕಲ್ಲು ಹೀರ್ಕೊಯಿದುದುಂಟೆ (ಸರ್ವಜ್ಞ. ೦೦೩೧). [ಸಂ.]

**ಮೂರ್ಖತನ** (ನಾ). ತಿಳಿಗೇಡಿತನ ; ಅವಿವೇಕ : ಮನದಸ್ನ ಮದ್ವಾಕ್ಯವ ಕೇಳು ನೀ ಮೂರ್ಖತನದಿಂದ ಒಡಿದರೆ ನೀಚ ಘನಶಾಪವ ಕೊಟ್ಟುಯಿಕ್ಷಣ ಭೂವಿಭಾಜನವ ಮಾಳ್ಪೆಳು ಜೀಯ ನಿಮ್ಮ (ವೀರಹತ. ೦೦–೩೭); ಚೌಡಪ್ಪನವರ ಮೂರ್ಖತನಕ್ಕೋ ಅಥವಾ ಮರುಳುತನಕ್ಕೋ ಬಹಳ ಕೆಡುಕೆನಿಸುತ್ತದೆ (ಹಳ್ಳಿಜಾ. ೦೦೩) ; ಪರನಾರಿಯರೊಂದಿಗೆ ಬೆರೆಯುವುದು ಶುದ್ಧ ಮೂರ್ಖತನವಲ್ಲವೇ ? (ಅವೀರ. ೬). [ಮೂರ್ಖ + — ತನ]

**ಮೂರ್ಖತೆ** (ನಾ). = ಮೂರ್ಖತನ : ಧರೆಗೆಸೆದತ್ತು ತಾರಕನ ದುರ್ಗತಿ ತಾರಕನೇಳ್ಗೆ . . . ತಾರಕನ ಮೂರ್ಖತೆ ತಾರಕನುತ್ಪಥಕ್ರಮಂ (ಗಿರಿಜಾ. ೬-೦೦) ; ಮೂರ್ಖತೆ ಸಾಕು ರಾಜಕುಮಾರಗಿದು ತಾ ಯೋಗ್ಯವಲ್ಲ (ಕೊರಟಾ. ೯–೦೦–೦೨). [ಸಂ. ಮೂರ್ಖತಾ]

**ಮೂರ್ಖತ್ವ** (ನಾ). = ಮೂರ್ಖತನ. [ಸಂ.]

**ಮೂರ್ಖವೃತ್ತಿ** (ನಾ). = ಮೂರ್ಖತನ : ಅತಿವಯನಾಗಿ ಬಾಳವೃತಿಯಿಂದಟಿದಂದಿನ ಮೂರ್ಖವೃತ್ತಿ ಪಂಡಿತವೃತಿಯಿಂದಮಲ್ಲದೆಮ ನೀಗದು (ಶಾಂತಿಪು. ೭–೪೦) ; ಅನೆಯುನಿರುಳುಂ ಪಗಲುಂ ಜಾನಿಸಿ ತನು ಮೂರ್ಖವೃತ್ತಿ ಪೂರ್ವದಪೋಲಜ್ಞಾನಿ ನಯಾನಯಚಿಂತೆಯನೇನುಮಱಿಯನೆ ಮುಮುಕ್ಷುರ್ತ ತೆಱನಱಿದಪನೇ (ಶಂಭ್ರತ. ೦೦–೩೬). [ಸಂ.]

**ಮೂರ್ಖಿಸು** (ಕ್ರಿ). ಅರಿವನ್ನು ಕಳೆದುಕೊಳ್ಳು ; ದಡ್ಡತನದಿಂದಿರು : ಮುನಿದು ಮೂದಲಿಸಿ ಮೋಡಿಯೊಳಿದ್ದು ಮೂರ್ಖಿಪ ಮೊಸೆಗಾತಿಬಿಗಿ ಕೃತಿಗೇಳ್ ಇನಿಯನ ಮೊಗವ ನೋಡದ ಮುನ್ನ ಮೋಹಿಸಿ ಮನಗರಗುವಳು (ಹರಿಶ. ೦–೩೩). [ಮೂರ್ಖ + — ಇಸು$_3$]

**ಮೂರ್ಛಿಸು** (ಕ್ರಿ). ಮೈಮರೆ ; ಮೂರ್ಛೆಹೋಗು : ಈಶಾನುಭವಪರವಶದೊಳಾ ಸುತಂ ಮೂರ್ಛಿಸುವವೊಂತೆಂದು ಧರೆಗೇಷ್ಠದರ್ಥವಂ ನಟಿಸಿ ತೋರ್ಪಂತೆ ಚಂದ್ರಾಸನೆಗೆ ನಿದ್ರೆಯಾಯ್ತು (ಜಮಿಭಾ. ೨–೪೦) ; ದೇವದತ್ತಂ ನಿದ್ರಿಸಿದಂ, ಮೂರ್ಛಿಸಿದಂ, ಸತ್ತಂ (ಶಬ್ದಾನು. ೨೦೯ ವ್ಯಾಖ್ಯಾ). [ಮೂರ್ಛೆ + — ಇಸು$_3$]

**ಮೂರ್ಛೆ** (ನಾ). ಅರಿವು ತಪ್ಪುವುದು ; ಎಚ್ಚರ ತಪ್ಪುವುದು : ಅಱಿವು ಇದಿರೆಡೆಗೆಟ್ಟಲ್ಲಿ ಎಣ್ಣೆ ಬತ್ತಿ ತೀರಿದ ಮತ್ತೆ ಬೆಳಗೆಂಬುದು ನಷ್ಟ . . . ಅದು ಮೂರ್ಛೆ ಅಮೂರ್ಛೆ ಅದು ಅಱಿವಿನ ಮಱವೆ (ಶೂನ್ಯಸಂ. ೦೦೬–೪೬೩). [ಸಂ. ಮೂರ್ಛಾ]

**ಮೂರ್ಛೆತಿಳಿ** (ಕ್ರಿ). ಎಚ್ಚರಹೊಂದು ; ಪ್ರಜ್ಞೆಯನ್ನು ಪಡೆ : ಪರಿಜನಂ . . . ಕಪ್ಪುರದ ರಜಂಬೊರೆದ ಕರಕಾಂಬುವಂ ತಳಿದರವರನೆಬ್ಬಿಸೆ ಮೂರ್ಛೆತಿಳಿದು ಕುಮಾರಂ ಈ ಪಟಮನಿಲ್ಲಿಗಾರ್ ತಂದರೆಂಬನ್ನೆಗಂ (ಅದಿಪು. ೯–೦೬) ; ವಿಷಯುವೆಂಬ ರಸವ ಕುಡಿದು ಅಜ್ಞಾನವೆಂಬುದೊಂದೆ ಹಾಸಿಕೆಯಲ್ಲಿ ಮಲಗಿ ಮೂರ್ಛೆತಿಳಿಯದೆ ಇಪ್ಪುದ ಕಂಡು ನಾಚಿತ್ತಯ್ಯ ಎನ್ನ ಮನ (ಅಜಗ. ೦೩–೨೬). [ಮೂರ್ಛೆ + ತಿಳಿ$_1$]

**ಮೂರ್ಛೆವೋಗು** (ಕ್ರಿ). = ಮೂರ್ಛಿಸು : ಹಾ ಸ್ವಯಂಪ್ರಭೇ ಎಂದು ಮೂರ್ಛೆವೋಪುದುಂ (ಆದಿಪು. ೪–೦೬). [ ಮೂರ್ಛೆ + ಪೋಗು$_1$ (< ಪೋ$_1$) ]

**ಮೂರ್ಛನ** (ನಾ). ೧. ಅರಿವು ತಪ್ಪುವುದು : ಎಚ್ಚರ ತಪ್ಪುವುದು. ೨. [ಸಂಗೀತ] ಸಪ್ತಸ್ವರಗಳ ಆರೋಹಣ ಮತ್ತು (ಅದೇ ಕ್ರಮದ) ಅವರೋಹಣ : ಮೂರ್ಛನ— ಪ್ರತಿಸ್ವರದಿಂದಲೂ ಸ್ವರಸಪ್ತಕದ ಪೂರ್ವಕ (ಸಂಗೀತಂ. ೨೮). [ಸಂ. ಮೂರ್ಛನಾ]

**ಮೂರ್ಛನೆ** (ನಾ). = ಮೂರ್ಛನ : ಮೃದುಪವನಾಘಾತದಿಂದೆ ಗಾಂಧಾರ ಗ್ರಾಮದ ಮೂರ್ಛನೆಗಳನುಚ್ಚರಿಸಿದುವಮರರ ಹೆಗಲ ಬೀಣೆಗಳ್ ಮಿಡಿಯದೆಯುಂ (ಶಂಭ್ರತ. ೦೨–೬೯) ; ಆಹತ ಕಂಪಿತ ಮೂರ್ಛನಾಗಮಕಸ್ಥಾಯಿ ಸಂಚಾರಿ (ಹರಿದಾಸ. ೩-೦ ಪ) ; ಸಪ್ತಸ್ವರಗಳ ಆರೋಹಣ ಮತ್ತು ಅವರೋಹಣಕ್ರಮಗಳಿಗೆ ಪ್ರಾಚೀನಶಾಸ್ತ್ರಕಾರರು ಮೂರ್ಛನೆ ಎಂದು ಕರೆದಿದ್ದಾರೆ (ಸಂಗೀತಂ. ೦೯). [ಸಂ. ಮೂರ್ಛನಾ]

**ಮೂರ್ಛಿತ** (ಗು). ೧. ಅರಿವು ತಪ್ಪಿದ ; ಪ್ರಜ್ಞೆಯನ್ನು ಕಳೆದುಕೊಂಡ. (ನಾ). ೨. ಮೂರ್ಛೆ ಹೊಂದಿದವನು : ಪತಿಯೊಡನೆ ರಕ್ತಂ ಸುರಿವ ಕರಂ ಸರ್ಪನಂ ಕಂಡು ಆಗ ಹಾವಸೆ ಹಾಱಿ ಮೂರ್ಛಿತನಾಗಿ ಸತ್ತನು (ಬಸವಪು. ೯೬–೨೩) . ೩. ಗಟ್ಟಿಗೊಳಿಸಿದುದು ; ಗಡ್ಡೆ: ಸುರಸ ತೈಲಂಗಳಿಂ ಪಾಷಾಣಧೃತಿಗಳಿಂದಿರದೆ ಮರ್ದಿಸಿ ಮೂರ್ಛಿತಂ ಮಾಡಿ ಬಳಿಕ ರಸಮಂ ಕೊಂಡು ತದನಂತರಂ ಸಲೆ ಕಲ್ಕಮಂ ಮಾಡಿ (ಅರಾಶ. ೨–೦೩–೬). [ಸಂ.]

**ಮೂರ್ಛಿಸು** (ಕ್ರಿ). ಅರಿವಿಲ್ಲದಾಗು ; ಜ್ಞಾನತಪ್ಪು; ಎಚ್ಚರವನ್ನು ಕಳೆದುಕೊಳ್ಳು: ಕಣ್ಗಳಂ ಮುಚ್ಚಿ ಸೆರೆಬಿಗಿದು ದಡದಡಿಸಿ ದೊಪ್ಪನೆ ಬಿದ್ದು ಸಂಗ ಶರಣೆನುತ ಮೂರ್ಛಿಸೆ (ಬಸವ. ೨–೩೯); ಖೇದಾನಳನುರಿದೆರ್ದು ... ಹಾ ದೇವೀ ಎನುತುಮವನಿಪತಿ ಮೂರ್ಛಿಸಿದಂ (ಶಾಂತೀಶ. ೩–೦೬೨); ಗಾಯದಿಂ ಮೂರ್ಛಿಪರ್ ಚೇತರಿಪರು . . . ನಿಚ್ಚಟದ ಕಲಿಗಳೆಚ್ಚಾಡಿದರ್ ಹರಿ ಜಲಂಧರರ್ (ಶಿವಪು. ೨೩–೦೯). [ಮೂರ್ಛೆ + — ಇಸು$_3$]

**ಮೂರ್ಛೆ** (ನಾ). ೧. ಎಚ್ಚರವನ್ನು ಕಳೆದುಕೊಂಡಿರುವ ಸ್ಥಿತಿ : ಮೈಮರೆವು : ಆ ಪಡಿತಂ . . . ಮೂರ್ಛೆಯಿಂದೆಚ್ಚತ್ತಂತೆ

ಬೆಚ್ಚನೆ ಸುಯ್ವುದು (ಸುಕುಚ. ೩-೬ ಪ) ; ಪುದಿದಿರೆ ಮನಮಂ ಮೋಹತಮಂ ದೀಪಂ ವಾತಾಹತಿಯಿಂನಂದುವಂತೆ ಮೂರ್ಛೆಗೆ ಸಂದಂ (ಶಂಖಚ. ೯-೧೦೩) ; ಅರಸು ಮೂರ್ಛೆಗೆ ಸಲಲು ವಿಭೀಷಣ ಹಿರಿದು ತನ್ನೊಳಗಳಲುತಿರಲು (ಕೌಶಿರಾ. ೩೨-೬೪). ೨. ಪ್ರಜ್ಞೆತಪ್ಪಿ ಬೀಳುವ ಒಂದು ಬಗೆಯ ರೋಗ ; ಅಪಸ್ಮಾರ ; ಮಲರೋಗ : ಕಕ್ಕೆಹಣ್ಣು, ಅಮರವಳ್ಳಿ, ಪರ್ಪಾಟ್ಯಕ, ಭದ್ರಮುಸ್ತೆ, ಕಟುಕರೋಹಿಣಿ ಎಂಬಿವಂ ಕಷಾಯವಂ ಕಾಸಿ ಕಕ್ಕೆಯ ಹಣ್ಣಂ ಕಲಸಿ ಕುಡಿಸಲು ಚಳುಕು ಹರ, ಮೂರ್ಛೆ, ಮಚಿವೆ, ಭ್ರಾಂತಿ, ದಾಹ, ಶ್ಲೇಷ್ಮಜ್ವರ ಹರ (ಬಿಷ್ಟ. ೦೪). ೩. [ಕಾವ್ಯಶಾ] ವಿರಹದ ಹತ್ತು ಬಗೆಯ ಅವಸ್ಥೆಗಳಲ್ಲಿ ಒಂಬತ್ತನೆಯ ಅವಸ್ಥೆ ; ಮೋಹ ಪರವಶತೆಯಿಂದ ಪ್ರಜ್ಞೆಯನ್ನು ಕಳೆದುಕೊಂಡರುವ ಸ್ಥಿತಿ: ಅಭಿಲಾಷೆ ಚಿಂತೆ... ಮೌನ ಮೂರ್ಛೆ ಮರಣವೆಂಬ ದಶಾವಸ್ಥಾದಿ ವಿಚಾರಪರರಿಂ (ಬಿಳಿ೪. ೦೬೪). ೪. [ಯೋಗ] ಎಂಟು ಬಗೆಯ ಕುಂಭಕಗಳಲ್ಲಿ ಒಂದು : ಸೂರ್ಯಭೇದನ . . . ಮೂರ್ಛೆ ಕೇವಲಮೆಂಬಷ್ಟಕುಂಭಕಪ್ರಕಾರಂಗಳುಂ (೭ಶಚ. ೦೭೦). [ಸಂ. ಮೂರ್ಛಾ]

**ಮೂರ್ಛೆಗೊಳಿಸು** (ಕ್ರಿ). ಪ್ರಜ್ಞೆತಪ್ಪಿಸು ; ಮೈಮರೆಯುವಂತೆ ಮಾಡು : ಕುಡಿಯದಿಂ ಫಣಬಾಣಗಳ ಕಠೋರದಿಂದರಿಸೈನ್ಯವ ಮೂರ್ಛೆಗೊಳಿಸಿ ಪರಿತಂದು ಶೇಷಾವತಾರನ ದಿವ್ಯಚರಣಂಗಳೊಳ್ಕೆಕ್ಕವಾಯ್ತು (ಮೋಹತ. ೪೦-೩೬). [ಮೂರ್ಛೆ + ಕೊಳ್$_1$ + — ಇಸು$_3$]

**ಮೂರ್ಛೆತಿಳಿ** 'ಮೂರ್ಛೆದಿಳಿ' ನೋ.

**ಮೂರ್ಛೆದಿಳಿ, ಮೂರ್ಛೆತಿಳಿ** (ಕ್ರಿ). ಅರಿವನ್ನು ಪಡೆ; ಪ್ರಜ್ಞೆಯನ್ನು ಹೊಂದು; ಎಚ್ಚರಗೊಳ್ಳು : ವಬಾಗಿಯ ಕಣ್ಮಲರ್ಗಳ್ ನಸುಮುಚ್ಚಿ ಹೋಗಿ ತಣ್ಣೀಲರಲೆಪಿಂದೆ ಮೂರ್ಛೆದೀಳಿದಳ್ (ಶಂಖಚ. ೯-೧೦೦); ಚಿತ್ತಜನಾತ್ಮಸಂಭವ ಮೂರ್ಛೆದಿಳಿದೆಚ್ಚತ್ತನೊಂದರಿಗಳಿಗೆಯಲಿ (ಮೋಹತ. ೪೪-೩೩). **ಮೂರ್ಛೆತಿಳಿ** : ತೆರ್ಪತ್ತಂ= ಮೂರ್ಛೆತಿಳಿದಂ (ಶಬ್ದ. ಶಂ. ೨). [ಮೂರ್ಛೆ + ತಿಳಿ$_1$]

**ಮೂರ್ಛೆವೋಗು, ಮೂರ್ಛೆಹೋಗು** (ಕ್ರಿ). =ಮೂರ್ಛಿಸು: ಗಾಂಗೇಯನೊಳ್ ಪರಶುರಾಮಂ ಕಾದಿ ಬಸವಬಿದುಸಿರಲಪ್ಪೊಡಮಾಣಿದೆ ಮೂರ್ಛೆವೋಗಿರ್ದನಂ ಕಂಡು (ಕುಶಚ. ೦-೪೦ ಪ); ಆತ್ಮಾಸಕ್ತಿಯಿಂ ಮರವಟ್ಟರಂತೆಯುಂ ಚಿತ್ರಿಸಿದರಂತೆಯುಂ ಮೂರ್ಛೆವೋದರಂತೆಯುಂ . . . ಮಿಡುಕದೆ ನೋಡುತಿರ್ದ (ಆದಿಪು. ೬೪೬) ; ಕೆನ್ನೀರ್ ಭರದಿಂ ಬೆಚ್ಚನೆ ಪಾಯ್ವರೆ ಕಣ್ಣರೆಮುಚ್ಚುತ್ತುಂ ಮೂರ್ಛೆವೋದುದಲ್ಲಿ ವರಾಹಂ (ಕಬಕಂ. ೯-೨೨). **ಮೂರ್ಛೆಹೋಗು** : ನಿಮ್ಮ ಈ ನಡತೆಯನ್ನು ಕಂಡು ನಮ್ಮ ಸ್ವಾಮಿನಿಯು ಭಯೋದ್ರೇಕದಿಂದ ಮೂರ್ಛೆಹೋಗಿರುವಳು (ಶಾಕಿ. ೬೩); ದಶರಥನು ... ಮೂರ್ಛೆಹೋಗಿ ಕೂಡಲೆ ಎಚ್ಚತ್ತುಕೊಂಡನು (ಕೀಚಕಂ. I. ೦೪). [ಮೂರ್ಛೆ + ಪೋಗು$_1$ (<ಪೋ$_1$)]

**ಮೂರ್ಛೆಹೋಗು** 'ಮೂರ್ಛೆವೋಗು' ನೋ.

**ಮೂರ್ತ$_1$** (ನಾ). ದೇವಕಾರ್ಯ, ಮದುವೆ, ಮುಂಜಿ ಮುಂತಾದ ಮಂಗಳಕಾರ್ಯಗಳನ್ನು ನೆರವೇರಿಸಲು ಗೊತ್ತುಪಡಿಸುವ ಶುಭಗಳಿಗೆ ; ಮುಹೂರ್ತ : "ಮೂರ್ತ-ಮುಹೂರ್ತ=ಶುಭಗಳಿಗೆ" (ಕರ್ನಕೋ. ೩೬); ಈ ರಗಳೆ ಹಚ್ಚಿಕೊಂಡರೆ ಮೂರ್ತ ಮಿಾರಿ ಕೇರು ಹರೀಡೆ ಇದ್ದರೆ ಇಡೀ ನಾಥಾಗೇ ಕೇಡಲ್ಲ (ಕುಂಗಕ. ೦೪೯). [ಪ್ರಸಂ. ಮುಹೂರ್ತ]

**ಮೂರ್ತ$_2$** (ಗು). ೧. ನಿರ್ದಿಷ್ಟಆಕಾರವನ್ನು ಪಡೆದ,- ರೂಪವನ್ನು ಹೊಂದಿದ. (ನಾ). ೨. ಆಕಾರ ; ರೂಪ : ಮೂರ್ತ ಎಂದರೆ ಸಕಲ, ಸಾವಯವ; ಅಮೂರ್ತ ಎಂದರೆ ನಿಷ್ಕಲ, ನಿರವಯವ ಎಂದರ್ಥ (ಶಶೃ. ೨೩). ೩. ಆಕಾರವನ್ನು ಹೊಂದಿದವನು ; ಸ್ವರೂಪವನ್ನು ತಾಳಿದವನು : ಅಯ್ಯಾ ನಿಮ್ಮ ಶರಣನು ಮೂರ್ತನಲ್ಲ ಅಮೂರ್ತನಲ್ಲ ಲಿಂಗದಲ್ಲಿ ಪ್ರಾಣಸಂಚಿತ (ಶಸ್ವವ. ೪. ೦೨೬-೦೨೬೯). ೪. ಆಸೀನವಾಗಿರುವಿಕೆ; ಉಪಸ್ಥಿತಿ : ಅಲ್ಲಿಂದ ಕೈಲಾಸಕ್ಕೆ ನಡೆದಾರು ಅಲ್ಲಿ ತಳಿರುಚಪ್ಪರವಿಕ್ಕಿ ಮೂರ್ತವಂ ಮಾಡಾರು (ಶಂಸಂ. ೦೦). 'ಮೂರ್ತಂಗೆಯ್' ಪರಾ. **ಮೂರ್ತಮಾಡು**=ಕುಳಿತುಕೊಳ್ಳು : ಬಸವರಾಜನ ಗೃಹವ ಪೊಕ್ಕು ದಕವಂ ಕೊಂಡು ಸಸಿನೆಯಾರೋಗಣೆಗೆ ಮೂರ್ತಮಾಡಿರಲ್ (ಚೌರಶ. ೨-೦೭). [ಸಂ.]

**ಮೂರ್ತಂಗೆಯ್** (ಕ್ರಿ). ಕುಳಿತುಕೊಳ್ಳು : ಆಸೀನವಾಗು : ಚೆನ್ನಬಸವೇಶ್ವರದೇವರು, ಅನುಭವದ ಮಂಟಪದಲ್ಲಿ ಮೂರ್ತಂಗೆಯ್ದಿರ್ಪ ಸಮಯದಲ್ಲಿ . . . ಬಿನ್ನೈಸಿದ ಪ್ರಸ್ತಾವದ ವಚನ (ಮಹಾಕಾ. IV. ೦೦೩೦). [ಮೂರ್ತ$_2$ + ಕೆಯ್$_1$]

**ಮೂರ್ತಗೊಳ್** (ಕ್ರಿ). ೧. ರೂಪುದೋರು ; ಸಾಕಾರಗೊಳ್ಳು : ಹಡಪದಪ್ಪಣ್ಣನೆ ಎನ್ನ ಕರಸ್ಥಲಕ್ಕೆ ಲಿಂಗವಾಗಿ ಬಂದು ನೆಲೆಗೊಂಡನು ಚೆನ್ನಮಲ್ಲೇಶ್ವರನೆ ಎನ್ನ ಮನಸ್ಥಲಕ್ಕೆ ಪ್ರಾಣವಾಗಿ ಬಂದು ಮೂರ್ತಗೊಂಡನು (೦೦ಗಕ. ೭೦-೬೪). ೨. ಕುಳಿತುಕೊಳ್ಳು ; ಆಸೀನನಾಗು : ಆಹೀಂದ್ರಭೂಷಣಂ . . . ಸಭಾಮಂಟಪ ಮಧ್ಯಸ್ಥಿತ ಮಣಿಪೀಠಮನಲಂಕರಿಸಿ ಗಾಡಿಯಿಂ ಮೂರ್ತಿ[ರ್ತ]ಗೊಂಡು (ಕಶಕಂ. ೩-೩೩ ಪ); ಪಾರ್ವತಿಯಾಣ್ಮಂ . . . ಕಾಂಚೀನಗರಮಂ ಪೊಕ್ಕು ಭಕ್ತಗೃಹಬಹಿರ್ದೇಶದಾಚಮರ ಮೊದಲೊಳ್ ಬಗ್ಗದೊಪಲ ಪಾಸುಗೆಯಲ್ಲಿ ಸಲ್ಲೀಲೆಯಿಂ ಮೂರ್ತಿ[ರ್ತ]ಗೊಂಡಿರೆಯುರೆ (ವೃಷಬ. ೦೪-೪೦ ಪ). [ಮೂರ್ತ$_2$ + ಕೊಳ್$_1$]

**ಮೂರ್ತಗೊಳಿಸು** (ಕ್ರಿ). ಕುಳ್ಳಿರಿಸು ; ಕುಳಿತುಕೊಳ್ಳುವಂತೆ ಮಾಡು: ತಂಡತಂಡದ ಬಪ್ಪವರ್ಗದಿರ್ಗೊಂಡು ಪುರಜನವೆದ್ದು ಮನೆಗೊಡಗೊಂಡು ಬರುತಿರೆ ಮೂರ್ತಗೊಳಿಸಿ ಸುಖಾಸನಂಗಳಲಿ (ಶಶಪು. ೯-೩); ವರ ಚಿತ್ರಲೇಖೆ ಪ್ರದ್ಯುಮ್ನಸುತನಾ ವಳಕಡಗೆ ಬಳಿಗೊಂಡು ಬಂದು ತತ್ಪಯ್ಯಕದಲಿ ಮೂರ್ತಗೊಳಿಸಿ (ಪಶಪೂ. ೨೬-೩೫) ; ಮಾರಯ್ಯ . . . ಮನೆಗೆ ಬಂದ ಜಂಗಮಮೂರ್ತಿಗಳಿಗೆ ಶರಣೆಂದು ಭಕ್ತಿಯಿಂದ ಬಾಗಿ ಆನಂದದಿಂದ ಬೇಗಿ ಅವರನ್ನು ಮೂರ್ತಗೊಳಿಸಿದ (ಪೋಲಿಶಬಾ. ೬೨ ಶ್ರೀ ಶ್ರೀ ಪಶ). [ಮೂರ್ತಗೊಳ್ + — ಇಸು$_3$]

**ಮೂರ್ತತೆ** (ನಾ). ಆಕಾರಸಹಿತವಾದುದು ; ಸಾಕಾರತೆ : ವಿಚಾರ ಮಾಡಿದರೆ ಮೂರ್ತತೆ, ಸಾಕಾರತೆ, ಅದಕ್ಕೆ ರೂಪವಿಲ್ಲದೇ ಇಲ್ಲ (ಶಿಶಾಪುಂ. ೬೩). [ಮೂರ್ತ$_2$ + — ತೆ$_3$]

**ಮೂರ್ತಿ** (ನಾ). ೧. ಆಕಾರ ; ಸ್ವರೂಪ : ಶ್ರುತಮೂರ್ತಿಯಾಗಿಯುಂ ರುಚಿರತನು ಉರಂ ಬಿಳಿಯಳಾಗಿಯುಂ ಚತುರವಚೋನ್ವಿತೆ ಬಾಯ್ವಾಯೊಳ್ ನೆಲಸಿಯುಮಾತಿಶುಚಿ ವಾಗ್ದೇವಿ ಕೊರ್ತು ಮಾಳ್ಕೆಮಗೞವಂ (ಜಾತಕ. ೦-೨); ವಿಷ್ಣು ಮನುಗಳು ಸಂದ ಪಾರ್ಥಿವಲೋಕಪಾಲಕರೊಂದು ಮೂರ್ತಿಯದು (ಕುಮಾವ್ಯಾ. ೩-೬೬); ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು (ಗಾದೆ). ೨. ದೇಹ ; ಒಡಲು ; ಶರೀರ: "ತನುಃ . . . ಅಪರಘನಃ, ಮೂರ್ತಿಃ—ಈ ೧೭ ಶರೀರಂ" (ಕಣಾಯು. ೬೪-೩೩೬); ಅರಿರೌದ್ರಂ ಕರದೈರ್ಘ್ಯಮುಲ್ಲಸದಹೀನಾಲಂಕೃತಂ ಮೂರ್ತಿ . . . ದೇವಗಣಾಪಂ ರಕ್ಷಿಕ್ಕೆ ಭೂಚಕ್ರಮಂ (ಜಗಪು. ೦-೫). ೩. ಪ್ರತಿಮೆ ; ವಿಗ್ರಹ : ಕುಲಕ್ರಮದಿಂದ ಬಂದ ಇವೇ ಮೂರ್ತಿಗಳನ್ನು ಶ್ರೀರಾಮನೂ ಪೂಜಿಸಿದನಂತೆ! (ಕಥಾ. ೩೩೪); ಏಕಲವ್ಯನು ದ್ರೋಣಾಚಾರ್ಯರ ಮೂರ್ತಿಯನ್ನು ಮಾಡಿ, ಅದರ ಸಾನ್ನಿಧ್ಯದಲ್ಲಿ ಧನುರ್ವಿದ್ಯೆ ಕಲಿಯುತ್ತಿದ್ದುದು ಸರ್ವವಿದಿತ (ಭಾರದ. ೩೦೦). ೪. ಕಾಣಿಸಿಕೊಳ್ಳುವಿಕೆ ; ಸಾಕ್ಷಾತ್ಕಾರ. ೫. ಕಾಠಿಣ್ಯ; ದೃಢತೆ. ೬. ಸೌಂದರ್ಯ. ೭. ಕಾಗೆ ; ವಾಯಸ. ೮. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : ಹರನಯನ ಪಟ್ಟು ಪುರ ಶಿಖಿ ವರರತ್ನಂ

ಮೂರ್ತಿ ಲೋಕ ವಿಮಲತ್ರಿತಯಂ . . . ವರ್ಣತ್ರಯವುದು ಮೂಜಿಬ ನಾಮಂ (ಕೃಶಾ. ೯-೩). [ಸಂ.]

**ಮೂರ್ತಿಗೊಳ್**. ಮೂರ್ತಿಗೊಳ್ಳು (ಕ್ರಿ). ೧. ಆಕಾರವನ್ನು ಪಡೆ : ಸ್ವರೂಪವನ್ನು ತಾಳು : ಹರಹಾಸದ್ಯುತಿ ಮೂರ್ತಿಗೊಂಡುದೊ ವಿರಿಂಚ ಖ್ಯಾತಿ ಲೋಕಂಗಳೊಳ್ ಪರಿದಾಯಾಸದೆ ನಿಂದುದೋ . . . ಎಂಬಂತಿರೆ ದಿವ್ಯಸುಂದರಿ ಮನಕ್ಕಾನಂದವಂ ಮಾಡಿದಳ್ (ಕಾದಂಪೂ. ೬೬೩) ; ತಾಯ ತಂದೆಯ ಚಿತ್ತಕ್ಕಮರ್ದಿನ ಮಟಿಯಂ ಕಱಿದರೆ ಕುಮಾರಕರ್ ಮೂರ್ತಿಗೊಂಡ ಪುರುಷಾರ್ಥದವೋಲ್ (ಶಂರಾಮಾ. ೩-೦೯೯) ; ಪಶುಪತಿ ಬಸವನ ಮನವ ಮೊನೆಯೊಳೊಪ್ಪೆ ಮೂರ್ತಿಗೊಂಡು (ಬಸರ. ೪-೨೦). **ಮೂರ್ತಿಗೊಳ್ಳು** : ೨. ಸಾಕ್ಷಾತ್ಕಾರಗೊಳ್ಳು; ಗೋಚರಿಸು : ಪಂಚ ಸ್ಥಾನದಲ್ಲಿಪ್ಪ ಲಿಂಗವ ಕರಸ್ಥಲದಲ್ಲಿ ಮೂರ್ತಿಗೊಳ್ಳಲಿಕ್ಕಾಗಿ ಕಂಗಳು ತುಂಬಿ ಬಾಹ್ಯದೃಷ್ಟಿ ಅಜಿತು ಲಿಂಗದೃಷ್ಟಿ ಪರಿಪೂರ್ಣವಾದಲ್ಲಿ (ಷಟ್‌ಸ್ಥ. ೨೯೭-೬೭).
[ಮೂರ್ತಿ + ಕೊಳ್$_1$]

**ಮೂರ್ತಿಗೊಳ್ಳು** 'ಮೂರ್ತಿಗೊಳ್' ನೋ.

**ಮೂರ್ತಿತ್ರಯ** (ನಾ). ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ; ತ್ರಿಮೂರ್ತಿ : ಮಸದಿ ಮೂರ್ತಿತ್ರಯವು ಕೇಳ್ಕೆ (ಶ್ರಾಪಸಿಂ. ೧೯-೩೩). [ಸಂ.]

**ಮೂರ್ತಿಪೂಜೆ** (ನಾ). ವಿಗ್ರಹಾರಾಧನೆ : ಕೆಲವರು, ಕಾಡುಜನರ ಪದ್ಧತಿಯಾದ ಮೂರ್ತಿಪೂಜೆಯನ್ನು ಹಿಂದೂಗಳು ಇನ್ನೂ ಬಿಟ್ಟಿಲ್ಲವೆನ್ನುತ್ತಾರೆ (ಕಥಂ. ೩೩೬). [ಸಂ. ಮೂರ್ತಿಪೂಜಾ]

**ಮೂರ್ತಿಬಲ** (ನಾ). ಮೈಯ ಕಸುವು : ದೇಹದ ಬಲ : ದಮಿತಾರಿಯ ಬಲಂ ಚಂದ್ರಬಲಮಿಲ್ಲದಂಕಕಾಜಿನಂತೆ ಸೋಲ್ತು ಮೂರ್ತಿಬಲಮಿಲ್ಲದ ಮಲ್ಲನಂತಿಕ್ಕುಪಟ್ಟು (ಶಾಂತಿಪು. ೯-೩೦ ಪ). [ಸಂ.]

**ಮೂರ್ತಿಭಂಜಕತೆ** (ನಾ). ವಿಗ್ರಹವನ್ನು ಒಡೆಯುವಿಕೆ; ಪ್ರತಿಮೆಯನ್ನು ಭಂಗಮಾಡುವಿಕೆ : ಮಹಮ್ಮದೀಯರು ಮಾಡಿದ ಮೂರ್ತಿಭಂಜಕತೆಯಲ್ಲಿ ಹಿಂದುಗಳಿಗೆ ನೋವಾಯಿತು, ಅವಮಾನವಾಯಿತು (ಕರ್ನಾಟ. ೩೯). [ಸಂ. ಮೂರ್ತಿಭಂಜಕತಾ]

**ಮೂರ್ತಿಮಂತ** (ಗು). ಸ್ಪಷ್ಟವಾದ ಅಭಿವ್ಯಕ್ತಿಯನ್ನು ಹೊಂದಿದ .— ಆಕಾರವನ್ನು ತಳೆದ : ಸುಂದರಿಗೆ ಮಗಳ ಸ್ವಭಾವದ ಮೂರ್ತಿಮಂತ ಕಲ್ಪನೆಯಾಗಿತ್ತು (ಹಳ್ಳಿ. ೦೦೦): ಮೂರ್ತಿಮಂತ ದೈನ್ಯವೇ ಅವಳಾಗಿ ನಿಂತಿರುವುದನ್ನು ಕಂಡಾಗ ಎಂಥಾ ಮಿಥ್ಯಾಪವಾದ ಎಂದಿತು ಮನಸ್ಸು (ಹೊಸ್ತಿ. ೨೨). [ಸಂ. ಮೂರ್ತಿಮತ್]

**ಮೂರ್ತಿಮತಿ** (ಗು). ೧. ಆಕಾರವನ್ನು ಹೊಂದಿದ; ದೇಹವನ್ನು ತಾಳಿದ. ೨. ಗಟ್ಟಿಯಾದ ; ಕಠಿಣವಾದ. (ನಾ). ೩. ಆಕಾರವನ್ನು ಪಡೆದವಳು ; ರೂಪವನ್ನು ತಾಳಿದವಳು : ಆ ಮರುದೇವಿಮಹಾದೇವಿ . . . ನಾಭಿನರೇಂದ್ರನೆಯ್ದೆ ಸಂಗಳಿಸಿದ ಕೀರ್ತಿ ಮೂರ್ತಿಮತಿ ತದ್ವದನಾಬ್ಜವಿಲಾಸವಾಸದೊಳ್ ತಳರದೆ ನಿಂದ ವಾಗ್ವನಿತೆಯೆಂಬಭಿಶಂಕೆಯನುಂಟುಮಾಡಿದಳ್ (ಆದಿಪು. ೭-೨೭); ಆತನ ಕೀರ್ತಿಲಕ್ಷ್ಮಿಯೆ ಮೂರ್ತಿಮತಿಯಾದಂತಾತ್ಮೀಯಪ್ರಾಣೇಶ್ವರನ ಮನಕ್ಕೆ ಮರೆ ಸೂಟ್ಗೆ ವಂದು ಸುಪ್ರೆಯಾಗೆ (ಸುಕುಮಾ. ೯-೦೦೪ ಪ). [ಸಂ. ಮೂರ್ತಿಮತೀ]

**ಮೂರ್ತಿವೆರು** 'ಮೂರ್ತಿವೆಱು' ನೋ.

**ಮೂರ್ತಿವೆಱು**.[1] ಮೂರ್ತಿವೆರು (ಕ್ರಿ). = ಮೂರ್ತಿಗೊಳ್ ೧: ಸದ್ಧರ್ಮಮೇ ಮೂರ್ತಿವೆತ್ತು ಸಮದೃಷ್ಟಿಯೊಳ್ ನಿಂದ ವೃಷೇಂದ್ರನಿಂ . . . ಪಂಪನಾಳ್ದು ಪರಮನ ಸಭೆ ಕಣ್ಗೊಳಿಸಿದುರ್ದುದು (ಕಬ್ಬಂ. ೦-೬೯ ಪ). **ಮೂರ್ತಿವೆರು** : ಬೆದರಿದ ಹರಿಣಿಯಂತಿದ್ದ ಮುಖಭಾವ ; ದೈನ್ಯವೇ ಮೂರ್ತಿವೆತ್ತು ಬಂದಂತೆ (ಜಾನ್ಸಿ. ೬೩). [ಮೂರ್ತಿ + ವೆಱು$_1$]

**ಮೂರ್ತಿಶಿಲ್ಪ** (ನಾ). ಪ್ರತಿಮೆಯನ್ನು ಕಂಡರಿಸುವ ವಿದ್ಯೆ : ವಿಗ್ರಹದ ಕೆತ್ತನೆಯ ಕೆಲಸ : ಪ್ರಾಚೀನಭಾರತದಲ್ಲಾದರೋ ವೇದಗಳ ಕಾಲದಲ್ಲಿಯೇ (ಕ್ರಿ. ಪೂ. ೩೦೦೦ ?) ಮೂರ್ತಿಶಿಲ್ಪವು ತಲೆಯೆತ್ತಿದ್ದಿತು (ಭಾರತ. ೩೦೯); ಮೂರ್ತಿಶಿಲ್ಪದ ಸಾಲಿಗೇ ಸೇರಿಸಬಹುದಾದ ನೊಳಂಬರ ದೇವಾಲಯದ ಒಂದು ಭಾಗವೆಂದರೆ, ಅಲ್ಲಿಯ ಜಾಲಂಧ್ರಗಳು (ಹೊಳಂಬ. ೦೦೦). [ಸಂ.]

**ಮೂರ್ತಿಸು** (ಕ್ರಿ). ೧. ಆಕಾರವನ್ನು ಕೊಡು : ಸ್ವರೂಪವನ್ನು ನೀಡು ; ರೂಪಿಸು : ಪೊಗಳೆ ಮೂರ್ತ್ತಿಸಿದರಕ್ಕ ಸದರ್ತ್ಥಿವಲ್ಲಭ (ಎಕ. VII, ಶಿಮೊ. ೩-೨೨: 1218); ಸ್ವಾರಾಜ್ಯದೊಂದು ಘನಕನಸು ಕಂಡು ಕಟೆದಿಟ್ಟ ಆಗಿ ತ್ಯಾಗಿ, ಕಾರುಣ್ಯದಲ್ಲಿ ಮಾನವರ ಮರ್ಮ ಮೂರ್ತಿಸುವ ಶಿಲ್ಪಿಯಾಗಿ (ಸೂರ್ಯಕಾ. ೦೬-೦೨); ಕುಂಬಾರನಾಗಿದ್ದು ಅವನು ಮಣ್ಣಿಂದ ಮನುಷ್ಯನನ್ನು ಮೂರ್ತಿಸಿದ್ದ (ಬದ್ಧಶ್ರ. ii, ೩೬೦೪). ೨. ರೂಪವನ್ನು ತಾಳು ; ಆಕಾರವನ್ನು ಪಡೆ : ವಿಹಿತಾಪರಾಧಸ್ಮರಣೆ ಮನದಲಿ ಮೂರ್ತಿಸಲು ಸುರನಾಥನಂತೆಂದ (ಶಿಭಾಗ. ೦೦-೨೩-೨೨).
[ಮೂರ್ತಿ + – ಇಸು$_3$]

**ಮೂರ್ತೀಭವಿಸು** (ಕ್ರಿ). = ಮೂರ್ತಿಗೊಳ್ ೧ : ಸರ್ವಜನಮುಹಿಮೆಗಳುಂ ಮೂರ್ತೀಭವಿಸಿ ಗೋರೂಪಂಗಳಾಗಿರ್ಪಂ (ಶಿವೇಶ. ೨೯೯) ; ಅರಸನುರುಕೀರ್ತಿಪ್ರತಾಪ ವಿಶ್ವಾಕಾರವೆರಸಿ ಮೂರ್ತೀಭವಿಸಿದಂತೆ . . . ತೋರ್ದ ರಚ್ಚರಿಯ ಪರಿಯ (ಶಂಕಾರಾ. ೨-೩-೩೬); ಕಲಾಪಿದನ ಅಂತಸ್ಸತ್ತ್ವವೇ ಅಲ್ಲಿ ಮೂರ್ತೀಭವಿಸಿದಂತಿತ್ತು (ರಂಗರೂ. ೯೪). [< ಮೂರ್ತಿ + ಭವಿಸು]

**ಮೂರ್ತೆ** 'ಮುರ್ತೆ' ನೋ.

**ಮೂರ್ಧ** (ನಾ). ೧. ತಲೆಯ ಮುಂಭಾಗ ; ಮುಂದಲೆ ; ನೆತ್ತಿ. ೨. ತಲೆ ; ಶಿರಸ್ಸು : "ಮುಂಡಃ . . . ಶೀರ್ಷಃ, ಮೂರ್ಧಾಃ, ಕಂ _ ಈ ೯ ಮಂಡೆ" (ಶಬ್ದಮ. ೬೩-೩೬೪); ಧರೆಗಮರಾಧ್ವದಿಂ ಕಡೆವ ಚೈದ್ಯನ ಮೂರ್ಧವ ರತ್ನಭಾಃಪರಂಪರೆ ಕುಡಿಮಿಂಚಿನಂತೆಸೆಯೆ (ಜಗ. ೦೬-೩೮); ಮೂರ್ಧದ ಭಾಳನಯನದ ಭರಿತಪರಿಮಳದಂಗವಟ್ಟದ ಜಡಿದ ಕೆಂಜೆಡೆಯ . . . ಶಿವನನು ಕಂಡನಬುಜಭವ (ಶಿವಾಶ. ೬-೦೬). ೩. ಮುಂದೆ ಇರುವ ಪ್ರದೇಶ ; ಮುಂಭಾಗ. ೪. ಶಿಖರ ; ತುದಿ. ೫. ಮುಂದಾಳು ; ಮುಖಂಡ. ೬. [ವ್ಯಾಕ] ಎಂಟು ಉಚ್ಚಾರಣಾಸ್ಥಾನಗಳಲ್ಲಿ ಒಂದು ; ಅಂಗುಳು.

**ಮೂರ್ಧ್ನಿಘ್ರಾಣ** = ಪ್ರೀತಿ, ವಾತ್ಸಲ್ಯಗಳಿಂದ ನೆತ್ತಿಯನ್ನು ಮೂಸುವುದು ; ಪುತ್ರಪ್ರಾಣವೆ ಪೊನ್ನೆಱೆಯ ಪರುಷಮೇ ಮುಕ್ತಿಯ ನಿರ್ವಾಣವೆ ಎನುತುಂ ಮೂರ್ಧ್ನಿಘ್ರಾಣಂಬೆರಸಗಲದಪ್ಪಿದಂ ಗಿರಿರಾಜಂ (ಗಿರಿಜಾ. ೩-೦೦೦); ನಂಬಿಯನೆತ್ತಿ ತಕ್ಕೈಸಿ ಶಂಕರಂ ಸಾದರಂ ಮೂರ್ಧ್ನಿಘ್ರಾಣವಂ ಮಾಡುತೆ (ಸಂಶರ. ೭-೦೩೪). P ಸಂಸ್ಕೃತದಲ್ಲಿ ಇದು ಒಂದು ಪದವಲ್ಲ. [ಸಂ. ಮೂರ್ಧನ್]

**ಮೂರ್ಧನ್ಯ** (ಗು). ೧. ತಲೆಗೆ ಸಂಬಂಧಿಸಿದ. ೨. ಶ್ರೇಷ್ಠತೆಯಿಂದ ಕೂಡಿದ ; ಉತ್ತಮ : 'ಮೂರ್ಧನ್ಯ ಬ್ರಾಹ್ಮಣ' ಪರಾ. (ನಾ). ೩. ತಲೆಗೆ ಸಂಬಂಧಿಸಿದುದು. ೪. ಪ್ರಮುಖವಾದುದು. ೫. ಪ್ರಮುಖ ವ್ಯಕ್ತಿ ; ಮುಖಂಡ : ಕ್ರಿಸ್ತ ಶಕ ೧೨ ರಲ್ಲಿ ಉಂಟಾದ ವೀರಶೈವಕ್ರಾಂತಿಯ ಮೂರ್ಧನ್ಯರಾದ ಶ್ರೀ ಬಸವಣ್ಣನವರ ಪ್ರಭಾವವನ್ನು ಅನೇಕ ತೆಲುಗುಕವಿಗಳ ಮೇಲೆ ಕಾಣಬಹುದಾಗಿದೆ (ಶಾಶಾಶಾ. ೨೯೩). ೬. [ವ್ಯಾಕ] ಬಾಯಿಯ ಮೇಲುಭಾಗದಲ್ಲಿ (ಅಂಗುಳಿನಲ್ಲಿ) ಹುಟ್ಟುವ ಅಕ್ಷರ ; ಮೂರ್ಧಸ್ಥಾನದಲ್ಲಿ ಉಚ್ಚಾರಗೊಳ್ಳುವ ಅಕ್ಷರ : ರೇಫೆ ಮೂರ್ಧನ್ಯಂ (ಶಬ್ದಾನು. ೦೯ ವೃತ್ತಿ); ಮೂರ್ಧನ್ಯ ಋ. ೠ. ಟವರ್ಗ. ರ, ಷ, (ಜಿ. ಬಿ. ೪) (ಕೃಶಿ೨. ೩). [ಸಂ.]

**ಮೂರ್ಧನ್ಯಬ್ರಾಹ್ಮಣ** (ನಾ). ಶ್ರೇಷ್ಠನಾದ ಬ್ರಾಹ್ಮಣ : ಕಲಿಯುಗ ದಂದುಚ್ಚಂಗಿಯುಬ್ಬೆಯುಂಬಳ್ಳೊದಲಾಗಿ ಮೂರ್ಧನ್ಯಬ್ರಾಹ್ಮಣಕನ್ಯಕೆ (ಎಪಿಕ. VI, ೩೭೮-೦೮ ; 1070). [ಸಂ.]

**ಮೂರ್ಧಪಿಂಡ** (ನಾ). ಆನೆಯ ಕುಂಭಸ್ಥಳ : "ಮೂರ್ಧಪಿಂಡಃ, ಕುಂಭಃ — ಈ ೨ ಆನೆಯ ಕುಂಭಸ್ಥಳಂ" (ಹಲಾಯು. ೩೭-೬೩); ಬೆದಱಿ ಮನಂ ವನಸ್ಥಲದೊಳೊಂದಿಭಮಿರ್ದುದು ಮೂರ್ಧಪಿಂಡಮಸ್ಲೆದು ಶಿಖರಸ್ಥಲಂ (ಶಂರಾಪು. ೧೦-೦೩೯). [ಸಂ.]

**ಮೂರ್ಧವ್ಯಾಧಿ** (ನಾ). ತಲೆಶೂಲೆ ; ಶಿರೋವ್ಯಾಧಿ : ಕೆಂಪಿನ ಆಗಸೆ:- ಈ ಹೂವಿನ ರಸವನ್ನು ದಿನ ಬಿಟ್ಟು ದಿನ ಒತ್ತಿ ನೀರಸೆಱೆದರೆ ಮೂರ್ಧ ವ್ಯಾಧಿ, ನೇತ್ರರೋಗ ಗುಣ (ಪಶ್ಯ. ೪). [ಸಂ.]

**ಮೂರ್ಧಾಭಿಷಿಕ್ತ** (ನಾ). ರಾಜ್ಯಭಾರದ ಅಧಿಕಾರವನ್ನು ಪಡೆಯುವಾಗ ಶಾಸ್ತ್ರೋಕ್ತವಾಗಿ (ತಲೆಯ ಮೇಲೆ) ಅಭಿಷೇಕ ಮಾಡಿಸಿಕೊಂಡವನು; ಪಟ್ಟದ ಅರಸು; ರಾಜ : "ರಾಜಾ . . . ಮೂರ್ಧಾಭಿಷಿಕ್ತಃ . . . ಲೋಕಪಾಲಃ – ಈ ೧೨ ಅರಸು" (ಹಲಾಯು. ೩೯-೨೭೭); ವಿದಿತಂ ಮೂರ್ಧಾಭಿಷಿಕ್ತರ್ ಪಲಬರರಸುಗಳ್ ಪ್ರಾಜ್ಯಸಾಮ್ರಾಜ್ಯಲಕ್ಷ್ಮೀ ಪದಮಂ ಕೈಕೊಂಡು ತಮ್ಮಂ ಮಱೆದು (ಆದಿಪು. ೯-೩೬); ಮೂರ್ಧಾಭಿಷಿಕ್ತರಿರೆ ಗೋವರ್ಧನನಂ ಪೂಜಿಸೆಂದನಱಿಯದೆ ಭೀಷ್ಮಂ (ಜಗಪು. ೦೭-೦೯); ನೀನು ದುರ್ಯೋಧನನ ಮಕುಟಭಂಗ ಮಾಡಿದ್ದು ಅಕ್ಷಮ್ಯ. ಭೀಮ; ಆತನು ಮೂರ್ಧಾಭಿಷಿಕ್ತನಾಗಿದ್ದ (ಅಗ್ರಹ. ೨). [ಸಂ.]

**ಮೂರ್ಧಾಭಿಷೇಕ** (ನಾ). ರಾಜನಾಗುವ ವ್ಯಕ್ತಿಗೆ ರಾಜ್ಯಭಾರದ ಅಧಿಕಾರವನ್ನು ವಹಿಸಿಕೊಡುವಾಗ ಶಾಸ್ತ್ರೋಕ್ತವಾಗಿ (ತಲೆಯ ಮೇಲೆ) ಅಭಿಷೇಕ ಮಾಡುವುದು; ಪಟ್ಟ ಕಟ್ಟುವುದು : ನಿಜಕೂಟಾಗ್ರದೊಳ್ ಪಾಯ್ವ ಗಂಗಾಜಲದಿಂ ಮೂರ್ಧಾಭಿಷೇಕೋನ್ನತಿ ನಿಲೆ . . . ಚಕ್ರೇಶತ್ವಮಂ ತಾಳ್ದಿದುದಖಿಳಧರಾರಮ್ಯಹೈಮಾಚಳೇಂದ್ರಂ (ಶಂಶಧಾ. ೯-೦೯). [ಸಂ.]

**ಮೂರ್ಧಾಭಿಷೇಚನ** (ನಾ). = ಮೂರ್ಧಾಭಿಷೇಕ : ವರಪಾಂಚಾಲತನಯುಂಗೆಸಗಿದರು ಮೂರ್ಧಾಭಿಷೇಚನವ (ಕುವ್ಯಾಉ. ೦೦-೩೪). [ಸಂ.]

**ಮೂರ್ವಡಿ** 'ಮೂವಡಿ' ನೋ.

**ಮೂರ್ವಡಿಸು** 'ಮೂವಡಿಸು' ನೋ.

**ಮೂರ್ಮೆ** 'ಮೂಮೆ' ನೋ.

**ಮೂಲ, ಮೂಳ**[2] (ನಾ). ೧. ಮರ, ಗಿಡ ಮುಂತಾದುವುಗಳ ಭೂಮಿಯೊಳಗಿರುವ ಭಾಗ; ಬೇರು; ಪಾದ : "ಪಾದಂ, ಮೂಲಂ– ಈ ೨ ಮರದ ಬೇರ್" (ಹಲಾಯು. ೩೦-೨೯); ಮೂಲ ಸಟಾಳಿಯಿಂದ ಮುರಗಾಲಯುಮಂ ಬಹುಶಾಖೆಯಿಂದಮಿಂದ್ರಾಲಯುಮಂ ಪಳಂಚಿ (ಶಂರಾಪು. ೬-೦೨೭); ಇದೆ ಬಿಲ್ವಮೂಲದೊಳ್ ಪುಲಿಯ ನಖಚಿಹ್ನವಿಂತಿದೆ ಸರ್ವಮೃಗಪಕ್ಷಿಗಳ ಪಕ್ಕಯೆಂದು ಪರಿದೋಡಱಿವಾ ಪಡೆವೆರಸಿ ಬೇಂಟೆಯಾಡುತಿರ್ದಂ (ಧಾಪುಂ. ೩-೦೦) ; ಮೂಲ ತಿಳಿದವನಿಗೆ ಎಲೆ ತೋರಿಸ ಬೇಡ (ಗಾದೆ). ೨. ಗೆಡ್ಡೆ; ಗೆಣಸು; ಕಂದ : ಆಕೆಯು ಸಾವಿರ ವರ್ಷಗಳವರೆಗೆ ಫಲ — ಮೂಲಗಳನ್ನು ಭಕ್ಷಿಸಿದಳು (ಕುಳಸಿ. ೨೩). 'ಕಂದಮೂಲ' ಪರಾ. ೩. (ಮರ ಮುಂತಾದುವುಗಳ) ಬುಡ; ಕೆಳಭಾಗ : ಆತ್ಮೋದ್ಧವಮೂಲಚ್ಛೇದವೋಪಾಯುವನೆಣಿಸದು ಮದ್ಬುದ್ಧಿ (ಕಣ್ಣಕ. ೬೦೩) : ಮಲೆತು ನಿಮಿರಿರ್ದ ಗರುವ ತರುವರಕುಲಂ ಮೂಲಮಂ ತಿರಿಪಿ ವಿಸಾಟಿದವೋಲ್ ನೆಲಕ್ಕುರುಳಿದುವು (ಕಶ್ರಾಂಗ. ೪೬-೦೩೦೩); ಮೂಲ ಘಡಿದು ಅಲ್ಲಾಡಿಸಿದ ಬಳ್ಳಿಯಂತೆ ಬಳುಕಿತು ಜೀವ (ಹಾದುಶಾ. ೦೭-೬). ೪. ಹುಟ್ಟುವ ಸ್ಥಳ; ಉಗಮ : ದಯವೇ ಧರ್ಮದ ಮೂಲವಯ್ಯ (ಬಸವ. ೨೪೭); ಹಲವರು ಬ್ರಾಹ್ಮಿಲಿಪಿಯ ಮೂಲ ಹೊರದೇಶಗಳಲ್ಲಿ ಹುಡುಕಬೇಕೆಂದು ತಿಳಿಸಿದ್ದಾರೆ (ಬ್ರಾಲಿಪಿ. ೪೭). ೫. ಕಾರಣ : ಹೇತು : ಅವನ ಕಂಠದೊಳೊಂದುಸಾಲಗ್ರಾಮದುಪಲಂ ಪೊಸ್ನ ಮನೆ ಮಾಡಿಕೊಂಡೆಸೆಯುತಿಹುದಂತೆ ! ಆತನ ವಿಚಿತ್ರಕಥೆಗದೆ ಮೂಲವಂತೆ ! (ಶಂದ್ರಸ. ೩೦-೦೪). ೬. ಪ್ರಾರಂಭ; ಆದಿ; ಮೊದಲು. ೭. ಒಂದು ಗ್ರಂಥದ ಮೊಟ್ಟ ಮೊದಲನೆಯ ಪ್ರತಿ ; ಅನಂತರದ ಪಾಠಗಳಿಗೆ ಆಧಾರವಾದ ಪ್ರಾರಂಭದ ಗ್ರಂಥ : ಆಕರಗ್ರಂಥ : ಮೂಲದಲ್ಲಿದೆಯೆಂದು ತರ್ಜುಮೆಯಲ್ಲೂ ಉಳಿದು ಬಂದ ಒಂದೆರಡು ಪದಗಳನ್ನು ತೆಗೆದಿದ್ದರೆ ಇನ್ನೂ ಸುಂದರವಾಗುತ್ತಿತ್ತು (ಧಾರಶ. XIV. ಮುನ್ನುಡಿ). ೮. (ವ್ಯಾಪಾರ ಅಥವಾ ಉದ್ಯೋಗದಲ್ಲಿ ತೊಡಗಿಸುವ) ಪ್ರಾರಂಭದ ಧನ; ಅಸಲು; ಬಂಡವಾಳ : ದನಿಯರು ಮೂಲವಾಗಿ ಕೊಂಡ ಬಾಳಿನ ವಿವರ (ಎಕೆಪಿ. IX–ii, ೪೦೯-೦೩; 1365) ; ಏಳುವರ್ಷದ ಬಡ್ಡಿ ಮೂಲಸಹಿತವಾಗಿ ತಾಳುವನಲ್ಲೇಳೊ ತಿರುಕ ಮುಂಡಾಳಿ (ಹರಿಂದ. ೦-೦೦೯-೦); ಸಾಲ ಮೂಲವ ತಿಂತು . . . ಬರ ಬಂದು ದೇಶವ ತಿಂತು (೩೦ಶಾಶ. ೦೭೦-೪೮) ೯. ಹತ್ತಿರ ; ಸಮೀಪ. ೧೦. ಕೋಶ; ಭಂಡಾರ: ಊರನ್ನ ಅವಗೊಳಿರಾ. ಊರನ್ನ ಅಪಗೊಳಿರಾ ಲಾಡಾಯಿ ಮಾಡಾಕ ಹೋಗತೆಲ ಬರುತನಕ ಅರಮನಿ ಮೂಲ ಜತನಾವ (ಲೋಕಗೀ. ೨೨೨). ೧೧. ಹಕ್ಕು; ಅಧಿಕಾರ : ಯೆಕಪ್ಪನಾಯಕನು ಯಿಜಿದು ಯಿ[ಜಾಯಿ]ಸಿಕೊಂಡು] ಬೀಳಲಾಗಿ ನಿಂಮ ಸಂತತಿ ಪರಂಪರೆಯಾಗಿ ಹೆಂಣಿಗೆ ದಾನ ಗಂಡಿಗೆ ಮೂಲ ಆಚಂದ್ರಾರ್ಕಸ್ಥಾಯಿಯಾಗಿ ಬ[ಂ]ದು (ಕೆಪಿ. III-i, ೦೩-೬; 1542). ೧೨. ಬೀಳಲು. ೧೩. ಪೊದರು. ೧೪. ಆದಿ, ಅಂತ್ಯವಿಲ್ಲವವನು ; ಪರಬ್ರಹ್ಮ. ೧೫. [ವ್ಯಾಕ] ಯಾವ ಪ್ರತ್ಯಯವನ್ನೂ ಹಚ್ಚದ ಶಬ್ದದ ಅವಿಭಾಜ್ಯರೂಪ ; ಪ್ರಕೃತಿ ; ಧಾತು. ೧೬. [ಗಣಿತ] ಯಾವ ಒಂದು ಸಂಖ್ಯೆಯನ್ನು ಅದರಿಂದಲೇ ಒಂದು ಗೊತ್ತಾದಷ್ಟು ಸಲ ಗುಣಿಸಿದರೆ, ಒಂದು ನಿರ್ದಿಷ್ಟ ಸಂಖ್ಯೆ ಅಥವಾ ಮೊತ್ತ ಬರುತ್ತದೆಯೋ ಆ ಮೊದಲಿನ ಸಂಖ್ಯೆ : ಪ್ರಾಚೀನ ಚೀಣರು ವರ್ಗಸಮೀಕರಣಕ್ಕೆ ಒಂದೇ ಮೂಲವನ್ನು ಮಾತ್ರ ಕೊಟ್ಟಿದ್ದಾರೆ (ಗಣಿತ. ೦೬). 'ಘನಮೂಲ', 'ವರ್ಗಮೂಲ' ಪರಾ. ೧೭. [ಜ್ಯೋತಿ] ಒಂದು ನಕ್ಷತ್ರದ ಹೆಸರು: ಇಪ್ಪತ್ತೇಳು ನಕ್ಷತ್ರಗಳಲ್ಲಿ ಹತ್ತೊಂಬತ್ತನೆಯದು : "ಮೂಲವಾಶ್ಲೇಷೆ ಕೃತ್ತಿಗೆಯೊಳಾ ತಾರೆಯೆಂಟಹವು" (ಮುಂಗರಾ. ೦೯-೩); ಮೂಲಮಾಗಿರೆ ನಕ್ಷತ್ರಂ . . . ಪರಮಂ . . . ಬಂದು . . . ಆಶ್ರಯಿಸಿದಂ (ಶಕ್ರಪು. ೯-೦೦೩); ಆರ್ದ್ರೆ . . . ಮೂಲ . . . ಮುಖೆಯೆಂಬವೆ ಕ್ರಮದಿಂದ ಷಡ್ಜಾದಿ ಸ್ವರಂಗಳ ಜನ್ಮನಕ್ಷತ್ರಂಗಳು (ಪಿಪಿಳ. ೨೩೦). ೧೮. (ಆಲಂ) ಉಪದ್ರವಕಾರಿ : ಕಂಟಕ : ಅತ್ತೀಗೆ ಸೊಸಿ ಮೂಲ ಹಿತ್ತಲಾಗೆ ಕದ ಮೂಲ ಬಿತ್ತೀದ ಹೊಲಕೆ ಸದಿ ಮೂಲ ಊರಾಗೆ ಹಬ್ಬೀಗೆ ಮೂಲ ಬಡವಾಗೆ (ಗರಿಕಶ. ೨೨) ; "ಬಡವನ ಸಿಟ್ಟು ದವಡಿಗೆ ಮೂಲ" ಎನ್ನುವ ಹಾಗೆ ಬಡವನಾದ ಸಿದ್ದಣ್ಣನ ಸಿಟ್ಟು ಶ್ರೀಮಂತರಾದ ಬೆಳ್ಳೇಗೌಡರನ್ನು ಏನು ಮಾಡುವ ಹಾಗೆಯೂ ಇರಲಿಲ್ಲ (ಶಂಕಶಂ. ೩೨). **ಮೂಳ**[2] : ೧. ಮರಂ ಕಾಳಮಲ್ಲದ ಕಾಳದೋಳ್ ಫಲಪುಷ್ಪದೊಳ್ ನೆಱೆದಂದು ಮೇಣ್ ಮೂಳದಿಂದಮಕಾರಣಂ ಕಡೆದಂದು ದೇಶದ ಹಾನಿ (ಲೋಕೋಪ. ೪-೩೮).

**ಮೂಲಂಬರಂ** = ಬುಡದ ವರೆಗೆ ; ತಳದ ವರೆಗೆ : ಅಂತು ಪಾತಾಳಮೂಲಂಬರಂ ಮುಟಿಗಿ ದಿವಿಜದೀರ್ಘಿಕೆಯೊಳ್ ಮುಟಿಗಿ ನೆಗೆವ ಅಭ್ರಮೂಪತಿಯಂತೆ ನೆಗೆಯುತೊಡಂ (ಶಂರಾಪು. ೩-೪೩ ಪ). **ಮೂಲಚೂಲ** = ಆದಿ ಮತ್ತು ಅಂತ್ಯ : ಕೇವಲ ಆವರಣಗಳಿಗೆ ಪಡಿಮಿಡಿಯುವ ದೈಹಿಕವರ್ತನೆಗಳನ್ನೇ ಮಾನಸಿಕವ್ಯಾಪಾರದ ಮೂಲಚೂಲಗಳೆಂದು ಒಪ್ಪಲಾಗುವುದಿಲ್ಲ (ಸಾಂದಸ. ೬). [ಸಂ.]

**ಮೂಲಂಗಿ**, ಮುಲ್ಲಂಗಿ, ಮೂಲಗೆ (ನಾ). ತರಕಾರಿಯಾಗಿ ಬಳಸುವ ಒಂದು ಬಗೆಯ ಗೆಡ್ಡೆ : "ಮೂಲಕಂ ಮೂಲಂಗಿ" (ನಾತರಾ: ೧೦೨) ; ಪದದ ನೆಲದ ಮೂಲಂಗಿಯ ಕೀಳ್ವಂತೆಯುದಜಿ ಕೊಂಬನು ಕಿಳ್ತುಕೊಂಡು (ನೇಮಿಸಂ. ೦೭-೦೦೭) ; ಚಕ್ರವರ್ತದ ಸೊಪ್ಪು, ಮೂಲಂಗಿ, ಮಜ್ಜಿಗೆ . . . ಇವು ಪಥ್ಯವರ್ಗ (ವೈದ್ಯಶಾ. I. ೯೦೨) ; ಮೂಲಂಗಿಯಲ್ಲಿ ಎರಡು ವಿಧಗಳಿವೆ. ಬಿಳಿಯದು ಉದ್ದವಾಗಿರುತ್ತದೆ. ಕೆಂಪುಬಣ್ಣದ್ದು ದುಂಡಾಗಿರುವುದು (ತರಶ. ೩೦). **ಮುಲ್ಲಂಗಿ** : "ಮೂಲಕವೆಂಬ ಶಾಕ ಮುಲ್ಲಂಗಿಯೆನಿಸಿರ್ಕುಂ" (ಮಂಗರಾ. ೨೯-೩) ; ಮುಲ್ಲಂಗಿ, ಗಜ್ಜರಿಗಳಂಥ ಗಡ್ಡೆಗಳಲ್ಲದೆ ಇತರ ವನಸ್ಪತಿಗಳ ಬೇರುಗಳೂ ಕೂಡ ಇಲ್ಲಿ ಸಮಾವೇಶವಾಗುತ್ತವೆ (ಶ್ರಾವಣ. ೨೦೩-೨೨). **ಮೂಲಗೆ** : "ಮೂಲಕಾಯೆಂಬುದು ಮೂಲಗೆ (ಮೂಲಂಗಿಗೆಡ್ಡೆ)" (ಹಲಾಯು. ೨೭-೦೦) ; ಸವನಾಗಿ ನುಗ್ಗಿ ಬಜೆ ಸಾಸಿವೆ ಮೂಲಗೆ ಕರಿಯ ಬಸ್ನಿ ವಿಂಬಿವಿನತಜ ಬೀಜವನಾವ ತಕ್ರದಿಂದರೆದು ವಿಲೇಪಂಗೆಯ್ಯೆ ಕಳೆಗುಮವು ಗಂಟುಗಳಂ (ಲೋಕೋಪ. ೯-೦೨೭).

[ದೇ.॥ ತಮಿ. ಮಲ. ಮುಳ್ಳಂಗಿ ; ತುಳು. ಮುಲ್ಲಂಗಿ, ಮೂಲಂಗಿ, ಮೂಲೆಂಗಿ ; ತೆಲು. ಮುಲ್ಲಂಗಿ. / ಸಂ. ಮೂಲಕ]

**ಮೂಲಕ**[1] (ನಾ). = ಮೂಲಂಗಿ : "ಮೂಲಕವೆಂಬ ಶಾಕ ಮುಲ್ಲಂಗಿಯೆನಿಸಿರ್ಕುಂ" (ಮಂಗರಾ. ೨೯-೩) ; "ಮೂಲಗೆ (ಮೂಲಂಗಿ, ಮುಲ್ಲಂಗಿ) =ಮೂಲಕ" (ಕಥ್ಯಕೋ. ೩೭). [P ಸಂಸ್ಕೃತಕೋಶಗಳಲ್ಲಿರುವ 'ಮೂಲಕ' ಶಬ್ದವು ದೇಶೀಯಮೂಲದ್ದಾಗಿರಬಹುದು]

**ಮೂಲಕ**[2] (ಅ). ಮುಖಾಂತರ : ದ್ವಾರಾ : ಆ ಸಂಶೋಧನೆಗಳನ್ನು . . . ಹಲವಾರು ಲೇಖನಗಳ ಮೂಲಕ ಪ್ರಕಟಿಸಿದನು (ಸಸ್ಯಕ. ೭೦) ; ಆ ಕಾರ್ಯ ಮಾನವರ ಮೂಲಕವೇ ಆಗಬೇಕು ಎಂಬುದಕ್ಕೆ ಕಾರಣವೇನು ? (ಚಿಕಂಬಾ. ೮). [<ಸಂ. ಮೂಲ]

**ಮೂಲಕಂದ** (ನಾ). ಒಂದು ಬಗೆಯ ಸಸ್ಯ : "ಕಂದಲಶಾ — ಮೂಲಕಂದ, ನೆಲಗುಂಬಳ" (ಓಪಂ. ೨೩). [ಸಂ.]

**ಮೂಲಕೃತಿ** (ನಾ). = ಮೂಲ ೭ : ಒಂದು ಪಾಠಪರಂಪರೆಯ ಭಿನ್ನಶಾಖೆಗಳ ನಡುವೆಯಾಗಲೀ ಅಥವಾ ಮೂಲಕೃತಿಗೂ ಲಭ್ಯಕೃತಿಗಳಿಗೂ ಮಧ್ಯೆಯಾಗಲೀ ಎಷ್ಟು ಬಾರಿ ಪಾಠಲೇಖನಗಳು ಜರುಗಿರಬಹುದು ಎಂಬುದನ್ನು ಎಲ್ಲ ಸಲವೂ ಹೇಳುವುದು ಸಾಧ್ಯವಿಲ್ಲ (ಭಾರಶ. ೭೩). [ಸಂ.]

**ಮೂಲಗಂಟು** (ನಾ). ವ್ಯಾಪಾರ ಅಥವಾ ಉದ್ಯೋಗಕ್ಕಾಗಿ ಹೂಡಿದ ಹಣ : ಬಂಡವಾಳ : ಅಸಲು : (ಕ). [ಮೂಲ + ಗಂಟು]

**ಮೂಲಗಾರ** (ನಾ). ಜಮೀನಿನ ಪ್ರಾರಂಭದ ಒಡೆಯ,–ಮಾಲೀಕ : ಹೈಗನಾಡಿನೊಳಗಿನ ಭೂಮಿಯು ಪ್ರಜೆಗಳ ಆಸ್ತಿಯೆಂದೆಣಿಸಲ್ಪಡುತ್ತದೆ. ಭೂಮಿಯ ಬಾಧ್ಯಸ್ಥರೆಲ್ಲರು ಬಹುಶಃ ಬ್ರಾಹ್ಮಣರೇ. ಅವರಿಗೆ ವಾಡಿಕೆಯಾಗಿ ಮೂಲಗಾರರೆಂದೆನ್ನುವರು (ಮುಂಬಯಿ. ೩-೨೦೯) ; ಏಕಾಕಿಯಾದ ಒಬ್ಬ ಮೂಲಗಾರನು ಅನುಭವಿಸಿದಂತಾ ಒಂದು ವತನಿನ ಪರಾಧೀನವು ಆತನ ಮರಣದ ತರುವಾಯ ಅವನ ವಾರಿಸ್ದಾರನ ಅಭ್ಯಂತರಿಸಬಹುದು (ಶಾಕಾ.ಪಿ. ೯೪೭). [ ಮೂಲ + — ಗಾರ (<— ಕಾಜ) ]

**ಮೂಲಗಿಸು** (ಕ್ರಿ). ಕುಂಯ್ ಎಂದು ಸಣ್ಣದನಿಯಲ್ಲಿ ಶಬ್ದಮಾಡು ; ಕುಂಯಿಗುಡು : ತನ್ನ ಹೆಣ್ಣು ಗಂಡು ಶುನಕಪರಿವಾರ ಸಮೇತನಾಗಿ ಹುಲಿಯು ಅವನನ್ನು ಎದುರುಗೊಂಡಿತು. ಆದರೆ ಎಷ್ಟು ಬಾಲ ಅಲ್ಲಾಡಿಸಿದರೂ ಮೂಲಗಿಸಿದರೂ ಯಜಮಾನನಿಂದ ಯಾವ ವಿಶ್ವಾಸದ ಅಥವಾ ಮುದ್ದಿನ ಸೂಚನೆಯೂ ಹೊರಹೊಮ್ಮಲಿಲ್ಲ (ಮರಳಿಮ. ೦೬೬).

[ಮೂಲಗು (<ಮುಲುಕು[1]) + — ಇಸು[3]]

**ಮೂಲಗು** 'ಮುಲುಕು[1]' ನೋ.

**ಮೂಲಗುಂಡರ** (ನಾ). ಒಬ್ಬಾತನ ಹೆಸರು : ಮೂಲಗುಣ್ಡರರ ಮಗಪಾ (ಪ್ರವಾ. ೦೯೩೭, ೦೯೭-೮ ; ೪ನೆಯ ಶತ). [ ? ]

**ಮೂಲಗುಣ** (ನಾ). ೧. ಪ್ರಾರಂಭದಿಂದ ಇರುವ ಗುಣ : ಮೊದಲಿನಿಂದ ಇರುವ ಸ್ವಭಾವ. ೨. [ಜೈನ] ಮುನಿಗಳು ಆಚರಿಸಬೇಕಾದ ಇಪ್ಪತ್ತೆಂಟು ಬಗೆಯ ಆಚರಣೆಗಳು : ಇಪ್ಪತ್ತೆಂಟು ಮೂಲಗುಣಂಗಳೊಳಮುತ್ತರಗುಣಂಗಳೊಳಮುತ್ತರೋತ್ತರಂ ನೆಗಟ್ದು (ಆದಿಪು. ೭-೨೯ ವ) ; ಮೂಲಗುಣಮಾದಿ ಸಕಲಗುಣಾಳಿಯೊಳಂ ಕಿಡದೆ (ಧರ್ಮಾಮೃ. ೩-೬೭). [ಸಂ.]

**ಮೂಲಗುತ್ತಿಗೆ** (ನಾ). ಮೊದಲಿನಿಂದ ಪಡೆದಿರುವ ಗುತ್ತಿಗೆ : ನಾವು ಹಾರಿಕೆಯ ಬೊಮ್ಮಣ್ಣಹೆಗ್ಗಡೆಯಿಂದ ಮೂಲಗುತ್ತಿಗೆಯ . . . ಮಾಡಿದ ಅಗ್ರಹಾರದ ಮಹಾಜನಂಗಳ ವಿವರ (ಎಕ. VI, ಶೃಂಗೇರಿ. ೩೩-೨೪ ; 1417).

[ಮೂಲ + ಗುತ್ತಿಗೆ (<ಗುತ್ತಗೆ)]

**ಮೂಲಗೆ** 'ಮೂಲಂಗಿ' ನೋ.

**ಮೂಲಗೇಣಿ** (ನಾ). = ಮೂಲಗುತ್ತಿಗೆ : ಸೆಟ್ರು ಅವನಿಗೆ ಮೂಲಗೇಣಿಗೆ –ಮಾರಿ ತಿನ್ನುವ ಅಧಿಕಾರವಿರುವ ಶರ್ತದ ಮೂಲಗೇಣಿಗೆ ಒಂದು ಎಕ್ರೆಯಷ್ಟು ಸ್ಥಳವನ್ನು ಕೊಟ್ಟರು (ಒಡ್ಡಿಲು. ೩೦).

[ಮೂಲ + ಗೇಣಿ (<ಕೇಣಿ[3])./ತುಳು. ಮೂಲಗೇಣಿ]

**ಮೂಲಗ್ರಂಥ** (ನಾ). ಆಧಾರಗ್ರಂಥ ; ಆಕರಗ್ರಂಥ : ಅನ್ನೆಗಮವ್ಯಕ್ತ ಕಾಲದೊಳೋದಿ ಮಜೆದ ವಿಷಮಶಾಸ್ತ್ರದ ಮೂಲಗ್ರಂಥಕ್ಕೆ ವಿವರಣೆ ಬರ್ಪವೊಲಿರದವಧಿಮಿಜೋಧದೆ ಬರೆ ಮನಕ್ಕೆ ಬಗೆಯೊಳ್ ಕಂಡಂ (ಶಾಂತಿಪು. ೭-೧೯ ವ) ; ಪರಂಪರಾಗತವಾಗಿ ಬಂದಿರುವ ಲಭ್ಯ ಹಸ್ತಪ್ರತಿಗಳ ಆಧಾರದಿಂದ ಮೂಲಗ್ರಂಥದ ಎಂದರೆ ಕವಿಯ ಸ್ವಹಸ್ತಾಕ್ಷರಪ್ರತಿಯ ಸ್ವರೂಪ ವೇನಿರಬಹುದೆಂಬುದನ್ನು ನಿರ್ಣಯಿಸಿ ಪರಿಷ್ಕಾರ ಮಾಡುವ ಕೆಲಸ ಗ್ರಂಥ ಸಂಪಾದನೆ (ಭಾರಶ. vii, ಮುನ್ನುಡಿ). [ಸಂ.]

**ಮೂಲಚ್ಛೇದ** (ನಾ). ೧. (ಮರದ) ಬುಡವನ್ನು ಕತ್ತರಿಸುವುದು. ೨. (ಅಲಂ) ಪೂರ್ಣವಾಗಿ ನಾಶಮಾಡುವುದು : ಇವರ ಬಲುಹಂತಿರಲಿ ಸಾಕಿನ್ನವರ ಕರೆಸು ವಿರೋಧಬಂಧವ್ಯಪಹೃತಿಗೆ ಫಲವಿಲ್ಲ ಮೂಲಚ್ಛೇದ ಕರ್ಮವಿದು (ಕುಮಾವ್ಯಾ. ೦೭-೦೯). [ಸಂ.]

**ಮೂಲಣ್ಣ** (ನಾ). ಒಬ್ಬಾತನ ಹೆಸರು : ಜೋಕಣ್ಣಂ ಮೂಲಣ್ಣಂ× ×ನ್ ಅಭ್ಯಸ್ತರ ಸಿದ್ದಿ ಪಡೆದರ್ (ಎಕ. VIII, ಸೊರಬ. ೩೦೦-೮ ; 958).

[ಮೂಲ? + ಅಣ್ಣ[2]]

**ಮೂಲತಃ** (ಅ). ಮೊದಲಿನಲ್ಲಿ ; ಪ್ರಾರಂಭದಲ್ಲಿ : ಸಹಜವಾಗಿ ಅವರು (ದ್ರಾವಿಡರು) ಮೂಲತಃ ಆಡುತ್ತಿದ್ದ ಭಾಷೆಯು ಭಾರತಕ್ಕೆ ಬರುವ ಮುನ್ನ ಇದ್ದ ಪ್ರದೇಶದ ಇತರ ಪ್ರದೇಶಗಳೊಡನೆ ಕೆಲವು ರೂಪಸಾಮ್ಯಗಳನ್ನು ಪಡೆದಿದ್ದಿರಲೇಬೇಕು (ದ್ರಾವಿ. ೩೦). [ಸಂ. ಮೂಲತಸ್]

**ಮೂಲತತ್ತ್ವ** (ನಾ). ಆಧಾರಭೂತವಾದ ತತ್ತ್ವ ; ಮುಖ್ಯ ತತ್ತ್ವ : ಪತಿ – ಪಶು – ಪಾಶಗಳೆಂಬ ತತ್ತ್ವತ್ರಯಗಳೇ (ತ್ರಿಪದಾರ್ಥಗಳೇ) ಶೈವಾಗಮದ ಮೂಲತತ್ತ್ವಗಳು (ಭಾರಪ. ೭೩) ; ಸತ್ಯ, ಪ್ರೇಮ, ತ್ಯಾಗ, ಅಹಿಂಸೆ . . . ದಯೆ, ಮಮತೆ ಇವೇ ಮಾನವಧರ್ಮದ ಮೂಲತತ್ತ್ವಗಳು (ಧರ್ಮಸಾ. ೩). [ಸಂ.]

**ಮೂಲತ್ರಿಕೋಣ** (ನಾ). [ಜ್ಯೋತಿ] ಸೂರ್ಯ ಮೊದಲಾದ ಗ್ರಹಗಳ ರಾಶಿರೂಪವಾದ ಗೃಹ ; ರವಿಗೆ ಸಿಂಹ, ಚಂದ್ರನಿಗೆ ವೃಷಭ, ಕುಜನಿಗೆ ಮೇಷ, ಬುಧನಿಗೆ ಕನ್ಯಾ, ಗುರುವಿಗೆ ಧನುಸ್ಸು, ಶುಕ್ರನಿಗೆ ತುಲಾ ಮತ್ತು ಶನಿಗೆ ಕುಂಭ — ಇವು ಮೂಲ ತ್ರಿಕೋಣಗಳು : ದಿನಪಾದಿಗಳುಚ್ಚಕೇಟಿನೆಯ ಗೃಹಂ ನೀಚಮುವರ್ಗೆ ಹರಿ ವೃಷಮಜಮಂಗನೆ ಧನು ತೊಲೆ ಕುಂಭಮಿವಿಂತಿನಿತುಂ ಮೂಲತ್ರಿಕೋಣಮಕ್ಕುಂ ಕ್ರಮದಿಂ (ಜಾತಕ. ೦-೯೨) ; ಸೂರ್ಯಾದಿಗ್ರಹಗಳ ಉಚ್ಚರಾಶಿಗೆ ಏಳನೆಯದು ಆಯಾ

ಗ್ರಹಗಳಿಗೆ ನೀಚರಾಶಿ. ಸಿಂಹ ವೃಷಭ ಮೇಷ ಕನ್ಯಾ ಧನುಸ್ಸು ತುಲಾ ಕುಂಭ ಇವು ಕ್ರಮವಾಗಿ ಸೂರ್ಯಾದಿಗ್ರಹಗಳಿಗೆ ಮೂಲತ್ರಿಕೋಣರಾಶಿಗಳು (ಜಾತಕ. ೧-೪೨. ೮೩೬). [ಸಂ.]

**ಮೂಲದಂಡಿಗೆ** (ನಾ). ಹಿಂದೆ ಶಾಲೆಗಳಲ್ಲಿ ವಿದ್ಯಾರ್ಥಿಗಳನ್ನು ಶಿಕ್ಷಿಸಲು ಉಪಯೋಗಿಸುತ್ತಿದ್ದ ಒಂದು ಬಗೆಯ ಸಾಧನ ; ಕೋದಂಡ : ತೂಗುದಂಡಿಗೆ (ಉಕ) : ತಪ್ಪುಮಾಡಿದ ವಿದ್ಯಾರ್ಥಿಯನ್ನು ಶಿಕ್ಷಕರು ಚೆನ್ನಾಗಿ ದಂಡಿಸುತ್ತಿದ್ದರು. ಮೂಲದಂಡಿಗೆ ಹಾಕಿ ಜೋತುಬಿಡುತ್ತಿದ್ದರು (ರಂಗಕೋ. ೧೨೪). [ಮೂಲ, + ದಂಡಿಗೆ]

**ಮೂಲದಳ** (ನಾ). ಮುಖ್ಯಸೈನ್ಯ ; ಮೀಸಲುಪಡೆ : ಕೋವಿದಯರೆಯ್ದಂದರುತ್ಸವದಿಂದಲಾ ಪರವೆಯೊಡನೆ ಪಂಚಾಯುಧನ ಮೂಲದಳ ಮಾಡಿದಂತೆ (ಜಗಂದಪು. ೭-೫೫). 'ಮೂಲಬಲ' ಪರಾ. [ಸಂ. ಮೂಲದಲ]

**ಮೂಲದೇವರು** (ನಾ). ೧. ಯಾವುದಾದರೊಂದು ಮನೆತನಕ್ಕೆ ಆರಂಭದಿಂದಲೂ ಇರುವ ಅಭಿಮಾನಿದೇವತೆ : ಗೌಡಸಾರಸ್ವತರ . . . ಮೂಲದೇವರುಗಳು ಸ್ಮಾರ್ತಸಂಪ್ರದಾಯದ ದೇವತೆಗಳು (ತುಳುನಾ. ೧೧೦). ೨. ದೇವಸ್ಥಾನದಲ್ಲಿ ಅನೂಚಾನವಾಗಿ ಪೂಜಿಸುವ ದೇವರ ವಿಗ್ರಹ : ಈ ದೇವಾಲಯದ ಮೂಲದೇವರ ವಿಗ್ರಹ ತುಂಬ ಸುಂದರವಾಗಿದೆ (ರೂಢಿ). [ಮೂಲ+ದೇವರು (<ದೇವರ್)]

**ಮೂಲದ್ರವ್ಯ** (ನಾ). ೧. ವ್ಯಾಪಾರ ಮುಂತಾದುವಕ್ಕೆ ಮೊದಲ ಬಾರಿ ಹೂಡುವ ಹಣ ; ಬಂಡವಾಳ : ಸಂಪತ್ತಿಯನ್ನು ಹುಟ್ಟಿಸಲಿಕ್ಕೆ ಏನಾದರೂ ಮೂಲದ್ರವ್ಯ ಬೇಕು (ಮುಂಬಯು. ೫-೩೦). ೨. ಆಧಾರವಾದ ಮೊದಲನೆಯ ವಸ್ತು ; ಮೂಲವಸ್ತು : 'ಪಿಚ್‌ಬ್ಲೆಂಡ್' ಎಂಬ ಖನಿಜದಲ್ಲಿ ದೊರೆಯುವ ಒಂದು ಸ್ವಪ್ರಕಾಶ ಮೂಲದ್ರವ್ಯ (Actinium. ಇಂಕೋ). [ಸಂ.]

**ಮೂಲದ್ರಾವಿಡ** (ನಾ). ದ್ರಾವಿಡಭಾಷೆಗಳಿಗೆ ಮೂಲವಾಗಿ ಇದ್ದಿರಬಹುದಾದ ಪ್ರಾಚೀನ ಭಾಷಾರೂಪ ; ಪೂರ್ವದ್ರಾವಿಡ : ಮೂಲದ್ರಾವಿಡಭಾಷೆಯು ಕವಲೊಡೆದು ಅವುಗಳಲ್ಲಿ ಒಂದು ಕವಲು ಕನ್ನಡವೆಂಬ ಸ್ವತಂತ್ರಭಾಷೆಯಾಯಿತು (ಕೃಶಿಶಿ. ೩೦೯) ; ಮೂಲದ್ರಾವಿಡಭಾಷೆಯಲ್ಲಿ 'ಬ' ಈ ಧ್ವನಿಯಿತ್ತೇಂಬುದರಲ್ಲಿ ಸಂದೇಹವಿಲ್ಲ (ಸೋಕಂಶಿ. ೪). [ಸಂ.]

**ಮೂಲಧನ** (ನಾ). = ಮೂಲದ್ರವ್ಯ ೧ : ಲೀಲೆಯಿಂ ಲಿಂಗಕ್ಕೆ . . . ಚಂದನಮನರ್ಪಿಸುತಿರಲು ತನ್ನ ಮೂಲಧನವೇಸುಂಟದಲ್ಲವನೋಳಿಯಲಿ ಚಂದನಕೆ ಸವೆಯಲು (ಬಸಪು. ೭-೧) ; ಮೊದಲಿನದು ಕಾರ್ಖಾನೆಯ ಕಟ್ಟಡ, ಯಂತ್ರ, ಉಪಕರಣಗಳಿಗೆ ಬೇಕಾಗುವ ಮೂಲಧನ (ಜಾಂಶ್ರ. I. ೪೭೮). [ಸಂ.]

**ಮೂಲಧಾತು** (ನಾ). ೧. ಕೀವು ; ಲಸಿಕೆ. ೨. [ವಿಜ್ಞಾ] ರಾಸಾಯನಿಕವಾಗಿ ವಿಭಜಿಸಲು ಅಸಾಧ್ಯವಾದ ಘಟಕ — ದ್ರವ್ಯ : ಅಣುಬಾಂಬಿನಲ್ಲಿ ಯುರೇನಿಯಮ್ ಎಂಬ ಮೂಲಧಾತುವಿನ ಪರಮಾಣುವಿನ ಒಡೆಯುವಿಕೆಯಿಂದ ದೊರೆಯುವ ಸ್ಫೋಟನಶಕ್ತಿಯು ಅಡಕವಾಗಿದೆ (ವಿಜ್ಞಾಪಿ. ೯೩೬). [ಸಂ.]

**ಮೂಲನಕ್ಷತ್ರ** (ನಾ). [ಜ್ಯೋತಿ] ಒಂದು ನಕ್ಷತ್ರದ ಹೆಸರು : ಸಿತಪಕ್ಷದ ಪಂಚಮಿದಿನಪತಿವಾರಂ ಶುಭದ ಮೂಲನಕ್ಷತ್ರಮೊಳನ್ವಿತಮಾಗೆ ನೆಗಟ್ದುದೀ ಮತ್ಕೃತಿ ಜಗದೊಳ್ (ಲದಿಪು. ೧೬-೬೬) ; ದಿನದೊಳುತ್ಪನ್ನನಾದಂ ಮೂಲನಕ್ಷತ್ರದಿಂದರಿಪ್ಪಾಂಶದೊಳ್ ಸುಕುಮಾರನು (ಕೃಶಿಶಾ. ೨೮-೦೪). [ಸಂ.]

**ಮೂಲನಿವಾಸಿ** (ನಾ). ಒಂದು ಪ್ರದೇಶದಲ್ಲಿ ಬೇರೆ ಪ್ರದೇಶದ ಜನರು ಬಂದು ನೆಲಸುವುದಕ್ಕಿಂತ ಮೊದಲೇ ಅಲ್ಲಿದ್ದಿರಬಹುದಾದ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು ; ಆದಿವಾಸಿ : ಮೂಲನಿವಾಸಿಗಳಲ್ಲಿ ಒಬ್ಬನನ್ನು ಕುರಿತು ಬರೆದಿಟ್ಟ ಸಂಗತಿ (ಮುಂಬಯು. ೪-೧೧೬) ; ದ್ರಾವಿಡರೂ ಕೂಡ ಭಾರತದ ಮೂಲನಿವಾಸಿಗಳಲ್ಲ (ದ್ರಾಶಿಶಿ. ೨೯). [ಸಂ. ಮೂಲನಿವಾಸಿನ್]

**ಮೂಲಪತ್ರ** (ನಾ). (ನಕಲು ಪ್ರತಿಗಳಿಗೆ ಆಧಾರವಾದ) ಮೊದಲನೆಯ ಪ್ರತಿ : ಪಡಿಪತ್ರವಲ್ಲದ ಅಸಲುಪತ್ರ : ನಡೆ ನಿನ್ನ ಮೂಲಪತ್ರವನೆನಗೆ ತೋರು (ಪಂಬಶ. ೬-೯೬) : ಪೆಱದೊಡೇನಾಯ್ತು ಪತ್ರವನೆಮ್ಮ ಸತಿ ಮುನ್ನಲಱದಿರ್ದು ಮೂಲಪತ್ರಗಳನು ಪೊಱಗಣ ಶಿವಭವನದ ಪೈತಿಟ್ಟಳೆಂದಱಪೆ (ತ್ರಿಶುತಿ. ೧೧-೧೯). [ಸಂ.]

**ಮೂಲಪಾಠ** (ನಾ). ಕವಿಯೇ ರಚನೆಮಾಡಿದ ಕೃತಿಯ ಲಿಖಿತಭಾಗ ; ಗ್ರಂಥದ ಪ್ರತಿಗಳಲ್ಲಿ ದೊರಕುವ ಅತಿ ಪ್ರಾಚೀನವಾದ ಪಾಠ : ಕೆಲವು ಸಂದರ್ಭಗಳಲ್ಲಿ ಕವಿಯ ಮೂಲಪಾಠವೇನಿರಬಹುದೆಂಬುದನ್ನು ಊಹಿಸುವುದಕ್ಕೆ ಆಗದಂತೆ ಇರುತ್ತದೆ (ಕನ್ನಸಂ. ೨೨೬). [ಸಂ.]

**ಮೂಲಪುರುಷ** (ನಾ). (ವಂಶ ಅಥವಾ ಕುಲದ) ಮೊದಲನೆಯ ವ್ಯಕ್ತಿ ; ಮೊದಲಿಗ : ಸಂತತಿಯಿಲ್ಲದ ಕುಲಗಳ ಸಾಪತ್ತುಗಳು ಮೂಲಪುರುಷರ ಅವಸಾನದಲ್ಲಿ ಅನ್ಯರನ್ನು ಸೇರುವುವು (ಜಾಕುಂಶ. ೯೩-೨೭) ; ಕಳಲೆಯ ವಂಶಕ್ಕೆ ಇವನೇ ಮೂಲಪುರುಷನಾದನು (ಸಕಪ್ಪ. V. ಕೃಷ್ಣಾಪಪ). [ಸಂ.]

**ಮೂಲಪ್ರಕೃತಿ** (ನಾ). [ವೇದಾಂತ] ಜಗತ್ತಿನ ಸೃಷ್ಟಿಕಾರ್ಯಕ್ಕೆ ಮೂಲಕಾರಣವಾದ (ತ್ರಿಗುಣಾತ್ಮಕವಾದ) ಪ್ರಕೃತಿ : ಒಂದಕ್ಕೊಂದು ಹೆಚ್ಚು ಕಡಮೆಯಾಗದಂತೆ ಸಮಾನವಾದ ಸತ್ತ್ವರಜಸ್ತಮಸ್ಸೆಂಬ ಮೂರುಗುಣಗಳುಳ್ಳ ದ್ರವ್ಯವು ಮೂಲಪ್ರಕೃತಿಯೆನಿಸಿಕೊಳ್ಳುವುದು (ತತ್ತ್ವಕು. ೩) ; ಪ್ರಕೃತಿಯಲ್ಲಿ ವಿಶ್ರಾಂತಿಯಾದರೆ ಅದೇ ಮೂಲಪ್ರಕೃತಿ (ಶಿಂದಶಾ. ೫೭). [ಸಂ.]

**ಮೂಲಪ್ರತಿ** (ನಾ). ೧. ಕವಿಯು ಬರೆದ ಸ್ವಹಸ್ತಾಕ್ಷರ ಪ್ರತಿ. ೨. ನಕಲಿಗೆ ಆಧಾರವಾದ ಪ್ರತಿ ; ಅಸಲುಪ್ರತಿ - ಮಾತೃಕೆ : ಕಳಲೆ ರಂಗಸ್ವಾಮಿಅಯ್ಯಂಗಾರ್ಯರ ಮೂಲಪ್ರತಿಯಿಂದ ಈ ಗ್ರಂಥವು ಬರೆಯಲ್ಪಟ್ಟಿದೆ (ಸಕಪ್ಪ. V. ಕೃಷ್ಣಾಪಪ) ; ಈ ತಪ್ಪುಗಳಿಂದಾಗಿ ಮೂಲಪ್ರತಿಯ ಪಾಠ ನಕಲಿನಲ್ಲಿ ಹಲವು ಕಡೆ ಕೆಟ್ಟುಹೋಗುತ್ತದೆ (ಕನ್ನಸಂ. ೬೬). [ಸಂ]

**ಮೂಲಬಂಧ** (ನಾ). [ಯೋಗ] ಹಠಯೋಗದ ಮೂಲಬಂಧ, ಉಡ್ಯಾಣಬಂಧ ಮತ್ತು ಜಾಲಂಧರಬಂಧ ಎಂಬ ಮೂರು ಬಂಧಗಳಲ್ಲಿ ಒಂದು : ಅನಿಲ ನಿರೋಧನದಿಂದಾಧಾರವಾದಪಾನದಿನಪತಿಯನು ಹೃದಯದ ಶಶಿಯೆನಿಸುವ ಪ್ರಾಣದೊಡನೆ ಕೂಡಿ ನಡುನಾಡಿಗನುಗೂಡಲದೆ ಮೂಲಬಂಧವು (ಕೃಶಲ್ಯ. ೫-೦೫-೧) ; ಮೂಲಬಂಧ ಉಡ್ಯಾಣಬಂಧ ಜಾಲಂಧರಬಂಧವೆಂಬ ಬಂಧತ್ರಯಂಗಳುಂ (ಶಿವಶ. ೦೬೩). [ಸಂ.]

**ಮೂಲಬಲ** (ನಾ). ಯಾವುದಾದರೂ ತುರ್ತು ಸಂದರ್ಭಗಳಿಗಾಗಿ ಸದಾ ಸಜ್ಜುಗೊಳಿಸಿರುವ ಸೈನ್ಯ ; ಮೀಸಲುಪಡೆ : ಮುಖ್ಯಸೈನ್ಯ : ಮೂಲಬಲವಿಲ್ಲದ ತುಟಿಲಸದನಂತೆ ಬಿಲ್ಲೊಳ್ಳೊಟ್ಟನಾಗಿ (ಜಾಂಶಿಭ. ೪-೩೦ ಪ) ; ಕಾಳರಕ್ಕಸನ ಕವಿದು ಹಳಚಲು ಮೂಲಬಲ ಮುನ್ನೂಱು ಪದ್ಮವ ಭಾಳಲೋಚನನಂತೆ ಲಯಿಸಿದನಂದು ರಘುರಾಯ (ತೊರೆರಾ. ೩೭ ಕಲ್ಪ) ; ರಾವಣನ ಮೂಲಬಲ ಕಂಡು ಕಪಿಸೇನೆ ಆವಾಗಲೆ ಬೆದರಿ ಓಡಿದವು (ಪುರಂದ. ೪-೦೯೪-೧). [ಸಂ.]

**ಮೂಲಬೇರ** (ನಾ). ದೇವಸ್ಥಾನದ ಗರ್ಭಗುಡಿಯಲ್ಲಿ ಶಾಸ್ತ್ರೋಕ್ತವಾಗಿ ಪ್ರತಿಷ್ಠೆ ಮಾಡಿರುವ ಮೊದಲ ದೇವವಿಗ್ರಹ ; ಮೂಲಪ್ರತಿಮೆ : ಇದರ ಮಧ್ಯದಲ್ಲಿ ಪಿಂಡಿಕೆಯನ್ನಿಟ್ಟು ಅದರ ಮೇಲೆ ಪ್ರಭಾವಳಿ,

ಲತಾತೋರಣ, ಕೀರ್ತಿಮುಖಗಳ ಮಧ್ಯೆ ಮೂಲಬೇರವನ್ನು ಸ್ಥಾಪಿಸಿರುವರು (ಹೊಯ್ಸಶಾ. ೧೯). [ಮೂಲ+ಬೇರ₃. / ತಮಿ. ಮೂಲಪೇರವ್]

**ಮೂಲಭದ್ರಿಕೆ** (ನಾ). ಮೂಲಮಂತ್ರಾಕ್ಷರ ಮತ್ತು ಅವುಗಳನ್ನು ಒಳಗೊಂಡ ತಾಯಿತಿ : "ಷಮಹಕ್ಷರಳಮಿಮು ಕ್ರಮದಿಂದ ಪಲ್ಲಟಿಸೆ ಮೂಲಭದ್ರಿಕೆಯಕ್ಕು" (ಮಂಗರಾ. ೦೦೩-೩). [ಸಂ.]

**ಮೂಲಭಾಷೆ** (ನಾ). ಯಾವುದೇ ಭಾಷೆಯ ಮೂಲಸ್ವರೂಪವನ್ನು ಹೊಂದಿರುವ ಭಾಷೆ ; ಅತಿ ಪ್ರಾಚೀನ ರೂಪದ ಭಾಷೆ : ಕನ್ನಡ ತೆಲುಗು ತಮಿಳು . . . ಬಡಗ ಮೊದಲಾದ ಭಾಷೆಗಳಿಗೆ ಪರಸ್ಪರ ಇರುವ ಹೋಲಿಕೆಯನ್ನು ನೋಡಿದರೆ ಈ ಭಾಷೆಗಳೆಲ್ಲವೂ ಒಂದೇ ಮೂಲಭಾಷೆಯಿಂದ ಹುಟ್ಟಿರಬೇಕೆಂದು ಗೊತ್ತಾಗುತ್ತದೆ (ಕೃಬಿಐ. ೩೦೩) ; ಇದೇ ಕುಲಕ್ಕೆ ಆಧುನಿಕಕಾಲದಲ್ಲಿ ಇಂಗ್ಲೀಷ್ . . . ಗುಜರಾತಿ ಭಾಷೆಗಳು ಸೇರುತ್ತವೆ. ಇವುಗಳನ್ನು ಮೂಲಭಾಷೆಗಳೆಂದು ಕರೆಯಬಹುದು (ಶಾರದ. ೯೩೬).
[ಸಂ. ಮೂಲಭಾಷಾ]

**ಮೂಲಭೂತ** (ಗು). ಪ್ರಧಾನವಾದ ; ಮೊತ್ತಮೊದಲಿನ : ಜನತೆಯ ಮೂಲಭೂತ ಹಕ್ಕುಗಳಿಗಾಗಿ . . . ಹೊಡೆದಾಡಿದ ಆ ನಾಯಕರಿಗೆ ತಾವು ಎಷ್ಟು ಋಣಿಗಳೋ ಮುಂದಿನ ಪೀಳಿಗೆಯವರು ತಿಳಿದುಕೊಳ್ಳುವುದು ಒಳ್ಳೆಯದು (ಸಂಗೀಕ. ಅಹುಬ). [ಸಂ.]

**ಮೂಲಮಂತ್ರ** (ನಾ). ೧. 'ಓಂ' ಎಂಬ ಮಂತ್ರಾಕ್ಷರ ; ಪ್ರಣವ. ೨. ಬೇರೆ ಬೇರೆ ದರ್ಶನಗಳ ಬೆಳವಣಿಗೆಗೆ ಆಧಾರವಾದ ವೇದಮಂತ್ರ. ೩. ಮುಖ್ಯವಾದ ಮಂತ್ರ ; ಪ್ರಧಾನವಾದ ಮಂತ್ರ : ಹರನ ದಾನಾಭಯಕರಂಗಳ ಪರಿಯೊಳತಿದಾನಾಭಯಪ್ರದಭರಿತಮಾಗಿಯು ಮೂಲಮಂತ್ರಂಗಳ ವಿಭಾತಿಯಲಿ (ಬಸಪು. ೩೯-೯೩); ಪರಮೂಲಮಂತ್ರವನು ಗುರುವು ಬೋಧಿಸಲಾಗ ಹರುಷದಿಂ ಶಿಷ್ಯಂಗೆ ಜ್ಞಾನ ಪಲ್ಲವಿಸಲ್ಕೆ (ಶ್ರೀಶಂ. ೭.. ). [ಸಂ.]

**ಮೂಲಮಾನ** (ನಾ). ಮುಖ್ಯವಾದ ಅಳತೆಗೋಲು : ಆದರ್ಶಗಳನ್ನು, ಅವುಗಳ ಮಟ್ಟವನ್ನು ಸೂಚಿಸಬಲ್ಲ ಒಂದು ಮೂಲಮಾನ ಬೇಕು (ಶಿಕ್ಷರ. ೩೨೩): ಇದನ್ನು ಮೂಲಮಾನವನ್ನಾಗಿ ಮಾಡಿಕೊಂಡು ಕವಿಗಳನ್ನು, ಕಾವ್ಯಗಳನ್ನು ಪರಿಶೀಲಿಸಲು ಹೊರಟಿರುವುದರಿಂದ ಇದು ಎಷ್ಟರ ಮಟ್ಟಿಗೆ ಆಧುನಿಕ ವಿಮರ್ಶೆಯ ವಿಧಾನವಾಗಲು ಸಾಧ್ಯ (ಸೌಂದಸ. i. ಮೊದಲ ಮಾತು).
[ಸಂ.]

**ಮೂಲರಸ** (ನಾ). [ಕಾವ್ಯವಿಜ್ಞಾ] ನವರಸಗಳಲ್ಲಿ ಮುಖ್ಯವಾದ ರಸ : ಭರತನ ನಾಟ್ಯಶಾಸ್ತ್ರದಲ್ಲಿ (VI, ೩೯-೪೦) ಶೃಂಗಾರ, ರೌದ್ರ,ವೀರ, ಬೀಭತ್ಸ ಇವು ನಾಲ್ಕೂ ಮೂಲರಸಗಳೆಂದೂ . . . ಹೇಳಿದೆ (ಕೃಬಿಐ. ೨೦೦). [ಸಂ.]

**ಮೂಲರೋಗ** (ನಾ). ಗುದದ್ವಾರದ ರೋಗ ; ಮೊಳೆರೋಗ : ಆ ಕಷಾಯ . . . ಕೊಂಬುದು . . . ಅತಿಸಾರ, ಮೂಲರೋಗ, ಕಾಮಾಲೆ ತಿಮಿರ ಹರ (ಶಿವೈಬಿ. ೦೯೬); ಕೊಡಸಿನೆಲೆಯ ಗುಣ: — ಇದರಲ್ಲಿ ಊಟ ಮಾಡುವುದರಿಂದ . . . ಮೂಲರೋಗ, ಭಗಂದರರೋಗ ಇವೇ ಮುಖ್ಯವಾದವುಗಳನ್ನು ಹೋಗಲಾಡಿಸಿ . . . ಸಮಸ್ತ ತಿಮಿರಗಳನ್ನೂ ನಾಶಮಾಡುವುದು (ಸಕವೈ. ೪೬). [ಸಂ.]

**ಮೂಲವರ್ಣ** (ನಾ). ಇತರ ಬಣ್ಣಗಳಿಗೆ ಮೂಲಾಧಾರವಾದ ಬಣ್ಣ ; ಮುಖ್ಯ ಬಣ್ಣ : ಮುದ್ರಣ ಬಣ್ಣಗಳಲ್ಲಿ ಹಳದಿ, ಕೆಂಪು ಮತ್ತು ನೀಲಿ ಬಣ್ಣಗಳು ಮೂಲವರ್ಣ (primary)ಗಳು. ಈ ಮೂರನ್ನು ಸೇರಿಸಿದರೆ ಕಪ್ಪು (ಅಥವಾ ಕಂದು) ಬಣ್ಣವಾಗುತ್ತದೆ (ಮುದ್ರಕ. ೬೬). [ಸಂ.]

**ಮೂಲವಸ್ತು** (ನಾ). ೧. ಆದಿದ್ರವ್ಯರೂಪವಾದ ಪರಮಾತ್ಮತತ್ತ್ವ ; ಮೂಲತತ್ತ್ವ: ಸ್ವಯಂಭುವಳಿದು ಶೂನ್ಯಮಾಯಿತ್ತು ಮೂಲವಸ್ತುವೆಂದು ಬೇಜುಂಬೇ ತಾನಲ್ಲದೆ (ಸಿದ್ಧೇವ. ೦೯೯-೩೬೬). ೨. = ಮೂಲಧಾತು ೨: ಪ್ರತಿಯೊಂದು ಮೂಲವಸ್ತು (Element)ವೂ ಅತಿಶಾಖವೇರಿರುವಾಗ ತನ್ನ ವಿಶೇಷವಾದ ಕಿರಣಗಳನ್ನು ಬೀರುತ್ತದೆ (ಕೆಮಿಸ್ಟ್ರಿ. ೦೯, ೫೩೬); ಬೇರೆ ಬೇರೆ ಮೂಲವಸ್ತು(Elements)ಗಳ ರೋಹಿತಗಳ ಪಟ್ಟಿಗಳನ್ನು ಹೋಲಿಸಿ ನೋಡಿದರೆ ಒಂದೊಂದೂ ಬೇರೆಯಾಗಿರುವುದು ಕಂಡುಬರುವುದು (ಭೌತವಿ. ೨೦೬). [ಸಂ.]

**ಮೂಲವಿಗ್ರಹ** (ನಾ). = ಮೂಲಬೇರ : "ಅಚಲ" ಪ್ರತಿಮೆಗಳಿಗೆ "ಮೂಲವಿಗ್ರಹ"ವೆಂದೂ ಹೆಸರು (ಶಾರದ. ೦೩೨). [ಸಂ.]

**ಮೂಲವೀಸ** 'ಮೂಲೆವೀಸ' ನೋ.

**ಮೂಲವ್ಯಾಧಿ** (ನಾ). = ಮೂಲರೋಗ : "ಅರ್ಶಃ, ಗುದಕೀಲಕಃ— ಈ ೨ ಮೂಲವ್ಯಾಧಿ" (ಹಲಾಯು. ೯೯-೯೩೦) : ಪೆಡೆತಲೆ ಮಿಗೆ ನೋಗುಂ . . . ಮೂಲವ್ಯಾಧಿಯುಮುಡಸುಗುಮಿಂತಿನಿತೆ ಜೂದಿನಿಂದಪ್ಪ ಫಲಂ (ಸಮುಶ. ೬-೩೦); ಎತ್ತುನಾಲಿಗೆ :— ಈ ಸೊಪ್ಪಂ ಅಕ್ಕಿಯಲ್ಲಿ ಹಿಟ್ಟುಕುಟ್ಟಿ ಸಪ್ಪೆರೊಟ್ಟಿ ತಟ್ಟಿ ತುಪ್ಪದಿಂದ ಮೆಲ್ಲಲು ಮೂಲವ್ಯಾಧಿ ಮಾಣ್ಗುಂ (ಶಿವೈಬಿ. ೩). [ಸಂ.]

**ಮೂಲಶಬ್ದ** (ನಾ). [ವ್ಯಾಕ] ಪ್ರತ್ಯಯ ಮೊದಲಾದುವು ಇನ್ನೂ ಸೇರದಿರುವ ಶಬ್ದ : ದೇಶ್ಯಶಬ್ದಗಳನ್ನು ಮೂಲಶಬ್ದಗಳು, ನಿಷ್ಪನ್ನ (Derivative) ಶಬ್ದಗಳು, ಸಮಾಸಶಬ್ದಗಳು ಎಂದು ಮೂರು ಪಂಗಡಗಳಾಗಿ ವಿಭಾಗಿಸಬಹುದು (ಕೃಬಿಐ. ೧೪). [ಸಂ.]

**ಮೂಲಶಿಕ್ಷಣ** (ನಾ). ಮುಂದಿನ ವಿದ್ಯಾಭ್ಯಾಸಕ್ಕೆ ಅತ್ಯಗತ್ಯವಾಗಿ ಬೇಕಾಗುವ ಆರಂಭದ ಶಿಕ್ಷಣ ; ಮೂಲಾಧಾರವಾದ ವಿದ್ಯಾಭ್ಯಾಸ: ಮಕ್ಕಳು ಜನ್ಮತಃ ಪಡೆದುಕೊಂಡು ಬಂದಿರುವ ವಿಧಾಯಕಶಕ್ತಿಗಳು ಅವರೇ ಕಥೆಯನ್ನು ಹೇಳುವಾಗ ಪ್ರಕಟವಾಗುವುವು. ಮೂಲಶಿಕ್ಷಣದಲ್ಲಿ ಇದಕ್ಕೆ ಆತ್ಮಪ್ರಕಾಶನವೆಂದು ಹೇಳುವುದುಂಟು (ಕಥೆ. ೯೬) ; ಪಾಕಶಾಸ್ತ್ರವನ್ನು ಮೂಲಶಿಕ್ಷಣದಲ್ಲಿ ಸೇರಿಸಬಹುದು (ಹೇಮಾಶೀ. ೬೩). ☞ ಇದು ಇಂಗ್ಲಿಷಿನ 'Basic Education' ಎಂಬುದರ ಅನುವಾದ. [ಸಂ.]

**ಮೂಲಸಂಘ** (ನಾ). [ಜೈನ] ದಿಗಂಬರಪಂಥದ ಪ್ರಾಚೀನವಾದ ಒಂದು ಸಂಘದ ಹೆಸರು : ಸ್ವಸ್ತಿಶ್ರೀ ಮೂಲಸಂಘದೇಶಿಯಗಣ ಪೊಸ್ತಕಗಚ್ಛದ ಕೊಣ್ಡಕುನ್ದಾನ್ವಯ ಕೊಲ್ಲಾಪುರದ . . . ಪ್ರತಿಬದ್ಧದ ಶ್ರೀಮಾಘನಂದಿ ಸಿದ್ಧಾಂತದೇವರ ಶಿಷ್ಯರು (ಎಕ. II (R), ೩೨೬-೦ ; 13ನೆಯ ಶಕ).
[ಸಂ.]

**ಮೂಲಸ್ತಂಭ** (ನಾ). ಪ್ರಮುಖವಾದ ಅವಲಂಬನೆ ; ಆಧಾರಸ್ತಂಭ : ಬಲದೇವ ವಾಸುದೇವರ್ . . . ಶೌರ್ಯಮೂಲಸ್ತಂಭದಂತೆಯುಂ ಸಾಹಸದ್ರವಿಣಸಾಧನದಂತೆಯುಂ . . . ಸುಖಮಿರ್ಪನ್ನೆಗಂ (ಶಾಂತಿಪು. ೦-೮೦ ವ).
[ಸಂ.]

**ಮೂಲಸ್ಥ** (ನಾ). ಪರಂಪರೆಯಿಂದ ಬಂದ ಯಾವುದಾದರೂ ಅಧಿಕಾರಸ್ಥಾನದಲ್ಲಿರುವ ವ್ಯಕ್ತಿ : ಶ್ರೀಮತು ಮಾಣಿಕ್ಯಪೊಳಲ ಮೂಲಸ್ಥ ಚನ್ದಕಕೋಜನ ಸುಪುತ್ರಂ ಪರವಾದಿಮಲ್ಲೋಜಂ (ಎಕ. VI (R), ಕೃಕ್ಷರಾ. ೦೦೬-೦೨ ; 1165 ?). [ಸಂ.]

**ಮೂಲಸ್ಥಾನ** (ನಾ). ೧. ಹುಟ್ಟುವ ನೆಲೆ ; ಉತ್ಪತ್ತಿಸ್ಥಾನ ; ಉಗಮಸ್ಥಳ : ವಿಭವದ ಮೂಲಸ್ಥಾನಮೆನಿಸಲಿದು ಕಾಮದೇವನಾಸ್ಥಾನಮೆನಿಸಲ್ . . . ಸಮೆದತ್ತು ವಿವಾಹ ಗೇಹಂ (ಆದಿಪು. ೪-೪೦ ರಗಳೆ). ೨. ದೇವಾಲಯದಲ್ಲಿ ಮೂಲವಿಗ್ರಹವನ್ನು ಇಟ್ಟಿರುವ ಒಳಭಾಗ ; ಗರ್ಭಗುಡಿ ; ಗರ್ಭಗೃಹ : ತಾವು ಮಾಡಿಸಿದ ಶಿವಾಲಯದ ಮೂಲಸ್ಥಾನದ ಶ್ರೀಸೋಮೇಶ್ವರದೇವರ್ಗ್ಗೆ ತಮ್ಮ ಪ್ರಭುತ್ವದ ದೋಣೆಯಿಂ . . . ತಮ್ಮಂ [ಶ]ಕ್ಕೆ ಬಂದ ಮಾತ್ಸರಯ್ಯುತ್ತೇಳಜುಳಗೊ (ಸೌಇಇ. XX, ೬೯-೯೩;1107); ದೇವತಾಮೂರ್ತಿಗಳು ಮೂಲಸ್ಥಾನದಲ್ಲಿ (ಗರ್ಭಗೃಹದಲ್ಲಿ) ಶಿಲಾಮೂರ್ತಿ

ಗಳಾಗಿ ಉಪಾಸನೆಯ ಪ್ರಯೋಗ ವಿಧಾನಗಳಿಂದ ದೇವತಾ ಶಕ್ತಿಸಂಪಾದನೆ ಹಾಗೂ ಸಂರಕ್ಷಣೆಯ ಕೇಂದ್ರವಾಗಿದೆ (ಶಾಕ್ತ. ೬೦). ೩. ಮುಖ್ಯವಾದ ಸ್ಥಳ ; ಕೇಂದ್ರ ; ಪ್ರಮುಖಕ್ಷೇತ್ರ : ಕೃತಯುಗದ ಕೇ[ದಾ]ರವೆಂಬ ಮೂಲಸ್ಥಾನ ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ ದ್ವಾಪರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ (ಬಸವ. ೩೯೯). ೪. ಹುಟ್ಟೂರು : ಜನ್ಮಸ್ಥಳ : ಸ್ಥಾನಿಕರು ಶೃಂಗೇರಿಯುತದ ಶಿಷ್ಯರೆಂದೂ ಸುಬ್ರಹ್ಮಣ್ಯವು ಇವರ ಮೂಲಸ್ಥಾನವೆಂದೂ ಖಚಿತವಾಗುತ್ತದೆ (ತುಳುವಾ. ೦೦೬). ೫. ತಳಹದಿ ; ಬುನಾದಿ ; ಆಧಾರ. ೬. ಪರತತ್ತ್ವ ; ಪರಬ್ರಹ್ಮ. ೭. ಗಾಳಿ ; ವಾಯು. [ಸಂ.]

**ಮೂಲಸ್ಥಾಪಕ** (ನಾ). ಸಂಘ, ಸಂಸ್ಥೆ, ಮತ, ಸಿದ್ಧಾಂತ ಮೊದಲಾದುವುಗಳನ್ನು ಸ್ಥಾಪನೆಮಾಡಿದವನು : ಆದ್ಯಪ್ರವರ್ತಕ : ಈ ಅನಾಥಾಶ್ರಮದ ಮೂಲಸ್ಥಾಪಕರು ಬಹಳ ಉದಾರಿಗಳು (ಶಬ್ದ). [ಸಂ.]

**ಮೂಲಜ್ಞಾನ** (ನಾ). [ವೇದಾಂತ] ಪ್ರಪಂಚದ ಪೂರ್ವಸ್ಥಿತಿ ; ಪ್ರಕೃತಿ : ಪ್ರಕೃತಿಯೆಂದರೆ ಮೂಲಾಜ್ಞಾನ, ಮಾಯೆ, ಅವಿದ್ಯೆ ಮೊದಲಾದ ಶಬ್ದಗಳಿಂದ ಹೇಳಲ್ಪಡುವ ಪ್ರಪಂಚದ ಪೂರ್ವಸ್ಥಿತಿ (ಒಂದಣಾ. ೦೯೯). [ಸಂ.]

**ಮೂಲಾಣು** (ನಾ). ಗುಪ್ತಪುಷ್ಪೀಯ ಸಸ್ಯಗಳಲ್ಲಿ ಪ್ರತ್ಯೇಕ ಹೊಂದಿ, ಸ್ವತಂತ್ರವಾಗಿ ಬೆಳೆಯಬಲ್ಲ ಒಂದು ಕಣ ; ಬೀಜಕಣ : ನಿರ್ಲಿಂಗ ರೀತಿಯ ವಂಶಾಭಿವೃದ್ಧಿಯಲ್ಲಿ ನೈಪುಣ್ಯ ಪಡೆದ ಜೀವಕಣಗಳು ಉತ್ಪತ್ತಿಯಾಗುತ್ತವೆ. ಇವುಗಳನ್ನು ಮೂಲಾಣು ಅಥವಾ ಬೀಜಕಣ (spores) ಎಂದು ಕರೆಯುತ್ತಾರೆ (ಸಸ್ಯಶಾ. ೬೩) ; ಮೂಲಾಣು (spores)ಗಳು ಚದುರಿ ಮೊಳೆತು ಕಾಲಂಗುಲಕ್ಕೆ ಮೀರದ ಹಸುರುಬಣ್ಣದ ಹೃದಯಾಕಾರದ ಪೊರೆಗಳಾಗುತ್ತವೆ (ಹಸುಹೂ. ೦೧೦). [ಸಂ.]

**ಮೂಲಾಧಾರ** (ನಾ). ೧. ಮುಖ್ಯವಾದ ಅವಲಂಬನೆ, — ಆಸರೆ. ೨. ಪ್ರಮುಖವಾದ ಅಸ್ತಿವಾರ. ೩. ಹೊಕ್ಕುಳು ; ನಾಭಿ. ೪. [ಯೋಗ] ದೇಹದ ಸಕಲನಾಡಿಗಳಿಗೂ ಮೂಲಸ್ಥಾನವೆಂದು ಭಾವಿಸಲಾದ ಗುಹ್ಯಸ್ಥಾನ ಮತ್ತು ಜನನೇಂದ್ರಿಯಗಳ ಮಧ್ಯದ ಎರಡು ಅಂಗುಲಗಳ ಪ್ರದೇಶ, — ನಾಡೀಚಕ್ರ ; ಷಟ್ಚಕ್ರಗಳಲ್ಲಿ ಒಂದು : ಮೂಲಾಧಾರ [ಶಾಕಾಂ. ಮತ್ತಮಾಧಾರ] ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಗ್ನೇಯವೆಂಬ ಷಟ್ಚಕ್ರಂಗಳುಂ (ವಿವೇಚ. ೦೩೯); ಮೂಲಾಧಾರದ ಚಕ್ರದಲ್ಲಿ ಲಿಂಗರೂಪದಿಂದಿರುವ ಪರಬ್ರಹ್ಮನನ್ನು ಶಕ್ತಿಯು ಸರ್ಪರೂಪದಿಂದ ಕುಂಡಲಿನಿಯೆಂಬ ಹೆಸರಿನಲ್ಲಿ ಸುತ್ತಿಮಲಗಿರುವಳೆಂದೂ . . . ಶಕ್ತಿಪಂಥ ಪ್ರತಿಪಾದಿಸುತ್ತದೆ (ಶಾಕ್ತ. ೩೦೬). [ಸಂ.]

**ಮೂಲಾನಕ್ಷತ್ರ** (ನಾ). = ಮೂಲನಕ್ಷತ್ರ : ಮೂಲ . . . ಮೂಲಾನಕ್ಷತ್ರಕೆ ಪೆಸರು (ಛಾಸ್ಕರ. ೬೩೦) ; ಸಾವಿತ್ರಮ್ಮನವರು ಮೂಲಾನಕ್ಷತ್ರದ ಹುಡುಗಿ ಆಗುವುದಿಲ್ಲವೆಂದೇ ಸಾಧಿಸಿಬಿಟ್ಟರು (ಮೂಕಜಾಸ. ೦೬).

[ ☞ ಇದು ' ಮೂಲನಕ್ಷತ್ರ ' ಎಂಬ ಶಬ್ದದ ತಪ್ಪುಬಳಕೆ ]

**ಮೂಲಾರ್ಥ** (ನಾ). ಶಬ್ದದ ಮೊದಲನೆಯ ಅರ್ಥ : ಅನೇಕ ವೇಳೆ ಶಬ್ದಗಳಿಗೆ ಇರುವ ಮೂಲಾರ್ಥವೇ ಇಲ್ಲದೆ ಹೋಗಿ ಬೇರೆ ಅರ್ಥ ಪ್ರಾಪ್ತವಾಗಬಹುದು (ಶಬ್ದ). [ಸಂ.]

**ಮೂಲಿ**$_1$ (ಗು). ೧. ಬೇರಿನಿಂದ ಬೆಳೆಯುವ. ೨. ಕಾಯಂ ಹಕ್ಕಿರುವ: ಭೂಮಿ ಮನೆಗಳನು ಸಸಿ ಬಳಿ ಬಾಳೆ ನೆಡಿಸಿ ಗ್ರೈಸಿ ರೂಪ ಮಾಡಿಸಿ ಮೂಲಿ ವಕಲಗಳ ಕ್ರಿಯ ಕಾಲಕಾಲಂಪ್ರತಿಯಲು ತೆರಸಿಕೊಂಡು ಬಹಿರಿ (ಪ್ರಶಾಂ. ೦೯೫೯, ೯೩–೩೦ ; 1667). (ನಾ). ೩. ಕಾಯಂ ಹಕ್ಕಿರುವ ಸಾಗುವಳಿ ಭೂಮಿ, – ಜಮೀನು : (ಕನ್ನಂಗ್ಯಾ. ೦೩೬). ೪. (?) : ಆರು[ವ]ಬ್ಬರು ಮೂಲಿ ಮಾಡಿದಡೆ (ಶಾಸಾಂ. ೦೯೫೯, ತುಂಗಳಕಾರು. ೪೬೦-೦೯ ; 1297).

[ ಸಂ. ಮೂಲಿನ್. / ತುಳು. ಮೂಲಿ ]

**ಮೂಲಿ**$_2$ (ನಾ). ಒಂದು ಬಗೆಯ ಸಸ್ಯ : '' ಮೂಲಿಯೆನೆ ಹಣ್ಣ '' (ಕುಂಗಣಾ. ೮೩–೯೬). ' ಅಣ್ಣೆ ' ಹೋ. [ ? ]

**ಮೂಲಿಕ** (ಗು). ೧. ಮೂಲದ ; ಮೊತ್ತಮೊದಲಿನ. ೨. ಮುಖ್ಯವಾದ ; ಪ್ರಮುಖವಾದ. ೩. ಬೇರು, ಗೆಡ್ಡೆ ಇತ್ಯಾದಿಗಳನ್ನು ಆಹಾರವನ್ನಾಗಿ ಸೇವಿಸುವ. (ನಾ). ೪. ಋಷಿ ; ಮುನಿ. [ಸಂ.]

**ಮೂಲಿಕಾಸಿದ್ಧಿ** (ನಾ). ಅರುವತ್ತುನಾಲ್ಕು ಕುಶಲವಿದ್ಯೆಗಳಲ್ಲಿ ಒಂದು; ವನಸ್ಪತಿಯ ಉಪಯೋಗದ ಬಗೆಗೆ ಇರುವ ನಿಪುಣತೆ : ಅಕ್ಷರ ಲೆಕ್ಕ . . . ಮೂಲಿಕಾಸಿದ್ಧಿ . . . ಮಂತ್ರತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ ಚೌಷಷ್ಟಿವಿದ್ಯಾಕಳಾವಿದನೆನಿಸಿಕೊಂಬನಲ್ಲದೆ ಲಿಂಗವಂತನೆನಿಸಿಕೊಂಬುದಿಲ್ಲ (ಮಡಿವಾ. ೪೩–೬೦). [ಸಂ.].

**ಮೂಲಿಕೆ** (ನಾ). ೧. ಬೇರು ; ಮೂಲ. ೨. ಔಷಧವಾಗಿ ಉಪಯೋಗಿಸುವ ಬೇರು ; ವನಸ್ಪತಿ : ನಿಮಿತ್ತ ಲಗ್ನ . . . ಮೂಲಿಕೆಯಿಂದ ಕಡೆಯಿ ನಿನ್ನ ಇರವು (ಮೋಕ್ಷಸಾ. ೨೬೯–೩೭) ; ಕೆಲವು ಮೂಲಿಕೆಗಳ ರಸವನ್ನು ಹಿಂಡಿ, ಗಾಯಕ್ಕರೆದು ಬಟ್ಟೆಯನ್ನು ಸುತ್ತಿ (ಕುಕ್ಕಿತ. ೦೬). ೩. ಸತ್ತವರನ್ನು ಬದುಕಿಸುವುದೆಂದು ಭಾವಿಸಲಾದ ಒಂದು ಬಗೆಯ ವನಸ್ಪತಿ : ವಾತಜನ ಮೂಲಿಕೆಗೆ ಕಪಿಬಲ ಚೀತರಿಸಿದುದು (ಕಾಶಿಪ್ರ. ೩೬–೨೦). ೪. ಲೋಹದಿಂದ ಚಿನ್ನವನ್ನು ತಯಾರಿಸಲು ಉಪಯೋಗಿಸುವರೆಂದು ಭಾವಿಸಲಾದ ಒಂದು ಬಗೆಯ ವನಸ್ಪತಿ : ಕಿಸುವಂ ಮೂಲಿಕೆಯುಂ ಪೊರ್ದಿಸೆ ನಗೆಯೋಳ್ ಹೇಮಮುಪ್ಪ ತೆಱದಿಂದಂ ಸಂಕಿಸದೆ ವರಧರ್ಮದೊಳ್ , ಕೂರ್ತಿಸಗುವ ನರನುಂ ವಿಶೇಷಸುಖಿಯಾಗಿರ್ಕುಂ (ಧರ್ಮಾಮೃ. ೯–೩೯). [ ಸಂ. ಮೂಲಿಕಾ ]

**ಮೂಲಿಗ** (ನಾ). ೧. ಔಷಧೀಸಸ್ಯಗಳ ಬೇರುಗಳಲ್ಲಿ ವ್ಯವಹರಿಸುವವನು ; ಮೂಲಿಕೆಗಳನ್ನು ಮಾರುವವನು ; ಗಂದಿಗ : (೬). ೨. ಮೂಲಕಾರಣನಾದ ವ್ಯಕ್ತಿ ; ಪ್ರವರ್ತಕ ; ಮೊದಲಿಗ : ಜೂದನೆವಮಾಗಿರೆ ಮೂಲಿಗನಾದನಾನೆ ಪೂಣ್ದಿಡುಮಗೆಗೆನ್ನೊಳಾವ ಕಿಸುರೆನ್ನೊಡವೋಪುದಿದೊಳ್ಳಿತು (ಕಂಕಣಾ. ೦೩–೦೬) ; ಮೂವತ್ತೊಂದುಸ್ಥಲದ ಮೂಲಿಗ ತಾನಯ್ಯಾ (ಚನ್ನಬ. ೪. ೬೯೩–೦೯೯೯) ; ಮೂಲದಲ್ಲಿ — ಮೂಲಿಗಂ (ಮೊದಲಿಗಂ) (ಕರ್ಣಾಟ. ಶು. ೦೬೦ ವೃತ್ತಿ). ೩. ಪರಂಪರೆಯಾಗಿ (ಯಾವುದಾದರೂ) ಅಧಿಕಾರವನ್ನು ಹೊಂದಿರುವ ವ್ಯಕ್ತಿ : ದೊರವಡಿಯಪ್ಪತ್ತಱ ಪ್ರಭುಗಾವುಂಡಗಳುಂ ಮೂಲಿಗರುವೆಂಟುಹಿಟ್ಟುಗಳು ಸಹಿತ . . . ಭೀವರಾಶಿಪಂಡಿತರ ಪಾದಪ್ರಕ್ಷಾಳನಂಗೆಯ್ದು ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಶಾಇಇ. IX–i, ೨೫೩–೩೯ ; 1149); ಅಲ್ಲಿಯ ಮೂಲಿಗಮುಖ್ಯವಟುಗ್ಗಾಗವುಂಡುಗಳಿಗೆ ಪಾದಪೂಜ[ಯೆ]ಯುಂ ಕೊಟ್ಟು . . . ಪೂಜಿಗೌಂಡು ಬಿಟ್ಟ ಎರೆಯ ಮತ್ತರು ನಾಲ್ಕು (ಕೊಡ್ಯಾಶಾ. ೦೩–೩೯; 1186). ೪. ಬಂಡವಾಳಗಾರ ; ವರ್ತಕ. [ಮೂಲ + –ಇಗ]

**ಮೂಲಿಗಗೆಯಿ** (ನಾ). ಪರಂಪರೆಯಾಗಿ (ಯಾವುದಾದರೂ) ಅಧಿಕಾರವನ್ನು ಹೊಂದಿರುವ ವ್ಯಕ್ತಿಗೆ ಕೊಟ್ಟ ಜಮೀನು, – ಉಂಬಳಿ : ಮಾನಸಬ್ರಾಹ್ಮಣರ್ಗೆ ಮೂಲಿಗಗೆಯಿಯಾಗಿ ಕೊಟ್ಟ ನೂಱುಮತ್ತರ್ಕೈಯ್ಯುಮಸನ್ನೂಱುಗದ್ಯಾಣಪೊನ್ನಂ ಕೊಟ್ಟು ಕೊಂಡ ಮತ್ತರ್ನೂಱುಂ (ಶಾಇಇ. XX. ೯೩–೩೯; ?). [ಮೂಲಿಗ + ಕೆಯಿ ( < ಕೆಯ್$_4$ ) ]

**ಮೂಲಿಗಮಾನ್ಯ** (ನಾ). = ಮೂಲಿಗಗೆಯಿ : ×× ಬಮ್ಮಿಮಯ್ಯತಮ್ಮ ಮೂಲಿಗಮಾನ್ಯದ ಮೂಡಣ ಕೆಯಲು ಬಿಟ್ಟ ಕೆಯಿ ಮತ್ತರು ೬ (ಶಾಇಇ. IX–i, ೦೦೫–೭೨; 1107). [ಮೂಲಿಗ + ಮಾನ್ಯ]

**ಮೂಲಿಗವನೆ** (ನಾ). ಪರಂಪರೆಯಾಗಿ (ಯಾವುದಾದರೂ) ಅಧಿಕಾರವನ್ನು ಹೊಂದಿರುವ ವ್ಯಕ್ತಿಯ ನಿವಾಸ : ಕರಡಿಯ ಮಲಯನ ಮಂಠದಿಂ ಬಡಗ ಕ್ಕೆ ೩೪ ಪಡುವ ಮೂಲಿಗವನೆಯ ಹೆ[ದ್ದಾ]ರಿ ಮೂಡಬಡಗ ಮುಖ ಬಂದ ಕ್ಕೆ ೪೮ (ಶಾಇ. XI-i, ೬೯-೩೩; 1033). [ಮೂಲಿಗ + ಮನೆ]

**ಮೂಲಿಗೆ** (ನಾ). ಔಷಧದಂತೆ ಉಪಯೋಗಿಸುವ ಬೇರು ; ವನಸ್ಪತಿ: ಮೂಲಿಕೆ : ' ಮೂಲಿಗೆಮರ್ದು ' ಪರಾ. [< ಸಂ. ಮೂಲಿಕಾ./ತುಳು. ಮೂಲಿಗೆ]

**ಮೂಲಿಗೆಮುದ್ದು** ' ಮೂಲಿಗೆಮರ್ದು ' ನೋ.

**ಮೂಲಿಗೆಮರ್ದು.** ಮೂಲಿಗೆಮುದ್ದು (ನಾ). = ಮೂಲಿಗೆ : ಮಡದಿ ಬಾನ್ನೀಱಿಯೊರ್ವಳ್ ಚಂಚಲದೃಷ್ಟಿಯನತ್ತಮಿತ್ತಂ ನೋಟ್ಟಳ ಮೂಲಿಗೆಮರ್ದಂ ಕೊಂಡುಯ್ವೊಡಕ್ಕುಂ (ರಾಮಾಕ. ೦-೩). ಮೂಲಿಗೆ ಮುದ್ದು : ಅಗಸ್ತ್ಯೋಪದಿಷ್ಟವಾದ ಮೂಲಿಗೆಮುದ್ದಿನಂತಿರುವ ಅಶ್ವಮೇಧಯಾಗವನ್ನು ಜರುಗಿಸಲಿಕ್ಕಾಗಿ (ಕನ್ನಇ. ೯೬). [ಮೂಲಿಗೆ + ಮರ್ದು]

**ಮೂಲಿತಿ ?** (ನಾ). ಒಂದು ಸಂಖ್ಯೆ ; ಐದು (?) : ಪೇಳುವೊಡೆ ಕೇಮಿ ಆರಯ ಮುದ್ದಣಂ ಪದುಣ ಮೂಲಿತಿ ಪರಯ ಮಾರಯ ಕಾಳ ತಿಮ್ಮ ಸಗಾಳ ಮೇಲೊಂದಱಿಂ ಹತ್ತು ದಶ ಕಂಸ ಕಾರತಯ ನಗರೆಯಾಗಿ ತೇಯಾಂ (ತುಂಗರಾ. ೦೦೨-೪). [ ? ]

**ಮೂಲಿಯಿಡು** ' ಮೂರಿಯಿಡು ' ನೋ.

**ಮೂಲಿವರ್ಗ** (ನಾ). ೧. ಜಮೀನಿನ ಒಡೆತನದ ಹಕ್ಕು ; ಹಿಡುವಳಿ : ಕನ್ನಡ ಜಿಲ್ಲೆಯ ಹೆಚ್ಚಿನ ದೇವಾಲಯಗಳು ಸ್ಥಾನಿಕರ ಮೂಲಿವರ್ಗದಲ್ಲೇ ಇದ್ದುದು ಕಂಡುಬರುತ್ತದೆ (ತುಳುನಾ. ೦೦೭). ೨. (ವರ್ಗದಾರರು ಕಂದಾಯ ಸಲ್ಲಿಸುವ) ಭೂಮಾಲೀಕ : ಜಮೀನುದಾರ : (ಕಸಂಗ್ರಾ. ೧೩೭). [ಮೂಲಿ$_1$ + ವರ್ಗ./ ತುಳು. ಮೂಲಿವರ್ಗ]

**ಮೂಲುಗು** ' ಮುಲುಕು$_1$ ' ನೋ.

**ಮೂಲೆ$_1$** (ನಾ). ೧. ಎರಡು ದಿಕ್ಕುಗಳ ನಡುವಿನ ದಿಕ್ಕು ; ವಿದಿಕ್ಕು : ಬೊಬ್ಬೆಯುಲಿ ದಿಕ್ಕಿನ ಮೂಲೆ ಬಿರಿದುದು ಜಱಿದವದ್ರಿಗಳು (ಕುಮಾವ್ಯಾ. ೩-೩೩). ೨. ಕೊನೆ : ಅಂಚು : ನಡುಹೊಳೆಯ ಹಱಿಗೋಲ ಮೂಲೆಯ ಕಡಿದಿರಾದರೆ ನಮ್ಮ ಪುಣ್ಯದ ಬಿಡುಗಡೆಯ ಕಾಲವು ಶಿವಾ (ಕುಮಾವ್ಯಾ.ಶ. ೯-೩); ಭೂಮಿಗೆ ನಾಲ್ಕು ಮೂಲೆಗೆ ಕಲ್ಲ ನೆಟ್ಟಿದ್ದು (ಎಕ. VII, ಶಿಕಾ. ೯೨-೨೮; ?). ೩. ಪಾಗು ; ತಿರುವು : ಹೆಳವನ ಕಾಲುವೆ ಮುಂದೆ ಬಡಗಲು ಹರಿದ ಮೂಲೆ (ಎಕ. VII, ಶಿಕಾ. ೯೩-೧೦೨; 1527). ೪. ಕಟ್ಟಡಗಳ ರಚನೆಯಲ್ಲಿ ಎರಡು ಗೋಡೆಗಳು ಸೇರುವ ಜಾಗ : ಮೂಲೆಯಲ್ಲಿದ್ದ ಎರಡು ಮಣ ತೂಕದ ಬಂದೂಕವನ್ನು ಹೊತ್ತುಕೊಂಡು ಹೊರಗೆ ಬಂದೆ (ರಾಧುಕ. ೦೯). ೫. ಅಪ್ರಸಿದ್ಧವಾದ ಜಾಗ : ಯಾರೂ ಹೋಗದ ದೂರದ ಸ್ಥಳ : ತನ್ನ ಗುರುವಿನ ತತ್ತ್ವ ಸಂದೇಶವನ್ನು ದೇಶದ, ವಿಶ್ವದ ಮೂಲೆಮೂಲೆಯಲ್ಲಿ ಪಸರಿಸುವ ಪಣವನ್ನು ತೊಟ್ಟ ಧೀರ ನರೇಂದ್ರ (ರಮಣ. ೪೭). ೬. [ರೇಖಾಗ] ಒಂದೇ ಸಮರೇಖೆಯಲ್ಲಿರದ ಎರಡು ರೇಖೆಗಳು ಅಥವಾ ಎರಡು ಸಮ ಕ್ಷೇತ್ರಗಳು ಸಂಧಿಸುವ ಸ್ಥಳ : ಕೋನ : ಪ್ರತಿಯೊಂದು ಮೂಲೆ ಅಥವಾ ಶೃಂಗ (vertex)ದಲ್ಲಿಯೂ ಇವುಗಳಿಗೆ ಕ್ರಮವಾಗಿ ೩, ೩, ೪, ೩, ೫, ಮುಖಗಳು ಸೇರುತ್ತವೆ (ಗಣಶಾ. ೨೮).

ಮೂಲೆಗಳವರು = ಆಗ್ನೇಯ, ನೈಋತ್ಯ, ವಾಯವ್ಯ ಮತ್ತು ಈಶಾನ್ಯವೆಂಬ ಉಪದಿಕ್ಕುಗಳ ಅಧಿಪತಿಗಳು : ದೆಸೆಯವರು ಮೂಲೆಗಳ[ವಾ.ಗೆಳ]ವರು ಮನ್ನಿಸುವರೇ ಸುರಲೋಕಸುಖವನು ವ್ಯಸನಭರಭಂಗಿಸದಲೇ ಪೇಳು (ಕುಮಾವ್ಯಾ. ೧೧-೨೬). ಮೂಲೆಗೆ ಕೂರು = (ಆಲಂ) ಅಧಿಕಾರವನ್ನು ಕಳೆದುಕೊಂಡು ಯಾರಿಗೂ ಕಾಣದಂತೆ ಒಂದು ಬದಿಗೆ ಹೊರಟು ಹೋಗು ; ನಿಷ್ಪ್ರಯೋಜಕವಾಗು : ಮಂತ್ರಿಗಳೆಲ್ಲ ಮೂಲೆಗೆ ಕೂತರು (ಬಜ.ಕ. ೬ ಪ್ರ೦೬೪). ಮೂಲೆಗೆ ನೂಂಕು, ಮೂಲೆಗೆ ನೂಕು = (ಆಲಂ) ಅಧಿಕಾರವನ್ನು ಕಿತ್ತುಕೊಂಡು ಒಂದು ಬದಿಗೆ ತಳ್ಳು : ದುಷ್ಟಬುದ್ಧಿ ಎಂಬೊನ್ ಮಂತ್ರಿ. ವೃದ್ಧನಾಗಿಹ ದೊರೆಯನವನು ಮೂಲೆಗೆ ನೂಂಕಿ . . . ಧೂರ್ತನಾಗಿಹನು (ಕಂದ್ರಕ. ೩೪-೦೦); ಹಣವನ್ನೆಲ್ಲಾ ಕಳೆದುಕೊಂಡ ಅವನನ್ನು ಅವನ ಮಕ್ಕಳೇ ಮೂಲೆಗೆ ನೂಕಿದರು (ರೂಢಿ). ಮೂಲೆಗೊತ್ತು = ಪಕ್ಕಕ್ಕೆಹಾಕು; ಬದಿಗೆ ತಳ್ಳು : ಆಮದು ಮಾಡಿಕೊಂಡ ಬದನೆ ಬಗೆಗಳು . . . ನಮ್ಮ ನಾಡಿನದಾದ ಬಗೆಯನ್ನು ಮೂಲೆಗೊತ್ತಿವೆ (ತರಕಾ. ೩೬). ಮೂಲೆಪಾಲಾಗು = (ಆಲಂ) ಅಧಿಕಾರ, ಹಣ ಮುಂತಾದುವನ್ನು ಕಳೆದುಕೊಳ್ಳು : ನಿರುಪಯುಕ್ತವಾಗು : ಮೂಲೆಗುಂಪಾಗು : ವೈದಿಕದೇವತೆಗಳಲ್ಲಿ ಅನೇಕರು ಅಷ್ಟರೊಳಗಾಗಿ ಮೂಲೆಪಾಲಾಗಿದ್ದರು (ಅಳಿ. ೦೦೦). ಮೂಲೆಮುಡುಕು = ಸಂದು ; ಗೊಂದಿ: ಕಳ್ಳರು ಈ ಕೋಟೆಯ ಮೂಲೆಮುಡುಕುಗಳನ್ನೆಲ್ಲಾ ಹುಡುಕಾಡಿ ನೋಡಿದರು (ಚಾರು. ೭೩); ಯಾವುದೋ ಒಂದು ಸಣ್ಣ ಹಳ್ಳಿಯ ಮೂಲೆಮುಡುಕುಗಳಲ್ಲಿ ವಾಸವಾಗಿದ್ದವರು ಎಂದೂ ಕಾಣದ ದೊಡ್ಡಪಟ್ಟಣಕ್ಕೆ ಬಂದರೆ . . . ದಿಗ್ಭ್ರಮೆ ಹಿಡಿಯುತ್ತದೆ (ಕಾಗ್ಗ. ೩). ಮೂಲೆಯವದಿರು = ಮೂಲೆಗಳವರು : ಮೂಲೆಯವದಿರು ಮಿಱಿದರಲಾಯೆನುತ ಸುರಪತಿ ತರಿಸಿದನು ಗಜವ (ಸಂಕಥ. ೨೦-೩೭).

[ದೇ.೨ ತಮಿ. ತೊದ. ಮೂಲೈ ; ಮಲ. ತೆಲು. ಪರ್ಜಿ. ಕುವಿ. ಮೂಲ ; ತುಳು. ಕೊಡ. ಮೂಲೆ ; ಕೋಲಾ. ಮೂಲಾ; ಕುಇ. ಮುಜು; ಕೋತ. ಮೂಲ್]

**ಮೂಲೆ$_2$** (ನಾ). ಉಂಬಳಿ : ಮಾನ್ಯ (?) : ' ಮೂಲೆವತ್ತ ', ' ಮೂಲೆಸುಂಕ ', ' ಮೂಲೆಹೇರು ' ಪರಾ. [< ಮೂಲ್ಯ]

**ಮೂಲೆಗ** (ನಾ). (ಆಲಂ) ಶ್ಮಶಾನದಲ್ಲಿರುವವನು ; ಶ್ಮಶಾನವಾಸಿ ; ಶಿವ : ಕಂದುಗೊರಳನ ಮೂಲೆಗನ ಸೌಂದರ್ಯಶಾಲಿಯ ರಂಗಗೆ ಸಾಟಿಯೆಂಬ ಮಂದಭಾಗ್ಯರ ಮಾತು ನಿಜವೆ (ಕಕಾಂ. ೬-೪೨). [ಮೂಲೆ$_1$ + — ಗ$_2$]

**ಮೂಲೆಗಂಬ** (ನಾ). ಕಟ್ಟಡದ ಯಾವುದಾದರೂ ಗೋಡೆಗಳುಂ ಸೇರುವ ಜಾಗದಲ್ಲಿರುವ ಸ್ತಂಭ: ಇತ್ತಲಿದೆ ಮೂಲೆಗಂಬ [ಪಾಠಾಂ. ಭ]ವ ನೆತ್ತಲ್ ತಳದಲ್ಲಿ ಬಾಗಿಲಿರ್ದಪುದು (ರಕಳು. ೯-೦೨೭). [ಮೂಲೆ$_1$ + ಕಂಬ$_1$ (< ಕಂಭ) ]

**ಮೂಲೆಗದ್ದೆ** (ನಾ). ಗದ್ದೆಯ ಅಂಚು, ಮೂಲೆ : ಮಯೂರಮಿಥುನಂ . . . ಬೆಳೆದ ಗದ್ದೆಯ ಹಳದಿಗಿಳಿತಂದು ಮೆಲ್ಲನೆಯ ಮೂಲೆಗದ್ದೆಯಲಿ ಮೆಲ್ಲುತೆ ನೆಲ್ಲನು (ತಶಾಂಗ. ೩೩-೦೯೬೨). [ಮೂಲೆ$_1$ + ಗದ್ದೆ (<ಗಬ್ದೆ)]

**ಮೂಲೆಗಲ್ಲು** (ನಾ). ಕಟ್ಟಡವನ್ನು ಪ್ರಾರಂಭಿಸುವಾಗ ಇಡುವ ಕಲ್ಲು : ಆಧಾರಶಿಲೆ : ಒಂದಾನೊಂದು ಕಾಲಕ್ಕೆ ನಮ್ಮ ಊರಿನಲ್ಲಿ ಗೌಂಡಿಗಳೆಂದು ದುಡಿದ ಶ್ರೀಎಲ್ಲಪ್ಪನವರಿಂದ ಮೂಲೆಗಲ್ಲು ಕೊಡಿಸಲ್ಪಡಲಿದೆ (ಅಕಪಾ. ೧೭೭). [ಮೂಲೆ$_1$ + ಕಲ್ಲು (<ಕಲ್$_3$)]

**ಮೂಲೆಗಾಸು** (ನಾ). ಒಂದು ಬಗೆಯ ತೆರಿಗೆ (?) : ಉಭಯನಾನಾದೇಶ ಅಯ್ಯಾವಳೆ ಮುಖ್ಯವಾದಂತಾ ಸಮಸ್ತರು ಸೊರ್ಕುಂಟೆಯ ಸಾತ್ತದೇವರಿಗೆ ಕೊಟ ಮೂಲೆಗಾಸಿನ ಧಂರ್ಮಶಾಸನದ ಕ್ರಮವೆಂತೆಂದರೆ (ಎಕ.IX (8), ಹೊಸಕೋ. ೯೦-೩; 1630). [ಮೂಲೆ$_2$ + ಕಾಸು$_2$]

**ಮೂಲೆಗುಂಪು** (ನಾ). (ಆಲಂ) ವ್ಯರ್ಥ ; ಹಾಳು.

ಮೂಲೆಗುಂಪಾಗು = ನಿರುಪಯುಕ್ತವಾಗು ; ಪ್ರಯೋಜನಕ್ಕೆ

**ಬಾರದಾಗು** : ಅದಷ್ಟೇ ಕಾರಣಕ್ಕೆ ನಿರಾಪರಾಧಿಯಾದ ಹೆಣ್ಣಿನ ಜೀವನ ಮೂಲೆಗುಂಪಾಗಿತ್ತು (ಮರೀ. ೯೩); ಗದ್ಯವು ಅನಾಮಧೇಯ ಪರಿಸ್ಥಿತಿಯಲ್ಲಿ ಮೂಲೆಗುಂಪಾಗಿದ್ದಿತೆಂದು ಹೇಳಿದರೂ ಸಲ್ಲುತ್ತದೆ (ಉದುಗಾ. ೪೦).

[ಮೂಲೆ$_1$ + ಗುಂಪು$_1$ (< ಗುಣ್ಪು$_1$)]

**ಮೂಲೆಗೊಂಗಡಿ** (ನಾ). ಮೂಲೆಯಾಕಾರದ ಗೊಪ್ಪೆ : ನಿಲುವಂಗಿ ಮುಂಡಾಸು ಮೂಲೆಗೊಂಗಡಿ . . . ಪಾದದೊಳ್ರನ್ನದಾವುಗೆ ಮೆಟ್ಟಿ ಕಂಗೆಸೆದನಾ ಸಿದ್ಧನು (ಸಿದ್ಧಾ. ೦೦-೦೩). [ಮೂಲೆ$_1$ + ಗೊಂಗಡಿ]

**ಮೂಲೆಮಟ್ಟ** (ನಾ). (ಕಟ್ಟಡಗಳ ನಿರ್ಮಾಣಕಾಲದಲ್ಲಿ) ಸಮಕೋನಗಳನ್ನು ನಿರ್ಮಿಸಲು ಅಥವಾ ಪರೀಕ್ಷಿಸಲು ಬಳಸುವ ಸಲಕರಣೆ : ಎರಡು ಕರಣೆಗಳು, ಒಂದು ತೂಕದ ಗುಂಡು, ಒಂದು ರಸಮಟ್ಟ, ಒಂದು ಸಣ್ಣ ಮೂಲೆಮಟ್ಟ (ಶ್ಲಾಕಶ. ೦೪೪).

[ಮೂಲೆ$_1$ + ಮಟ್ಟ$_1$. / ತಮಿ. ಮೂಲೈಮಟ್ಟಮ್ : ತೆಲು. ಮೂಲಮಟ್ಟಮು]

**ಮೂಲೆವತ್ತ**, ಮೂಲೆವರ್ತ (ನಾ). ಒಂದು ಬಗೆಯ ತೆರಿಗೆ (?) : ಪೊನ್ನಲು ಧಾನ್ಯ ಬಳ್ಳ ೧ ಮೂಲೆವತ್ತಂ ಮಾನ ೧ (ಕಇಅ. ೪೦-೩೮-೨೨ ; 1087) ; ಮೂಲೆವತ್ತಂ ಹೇಱಂಗೆ ಹಿರಿಯ ಸೊಳಸ ೨ ಸೊಂಟಿಗೆಯಕ್ಕಿ (ಸೌಇಇ. IX-i, ೦೬೨-೩೦ ; 1106) ; ಹೇಱನಳು ಮೂಲೆವತ್ತ ಮಾನ ೧ (ಪಾಂಡೇಶ್. ೩೯-೨೬ ; 12ನೆಯ ಶತ). **ಮೂಲೆವರ್ತ** : ತನ್ನಂತರಾಳಿಕೆಯ ಮೂಲೆವರ್ತ ಮುಖ್ಯವಾಗಿ ಪೆಜುಂಕದಧಿಕಾರಿ ಚಾವುಣ್ಣರಾಯನುಂ (ಪ್ಯಾಅ. ೦೯೨೯, ೩೨-೦೦ ; 1319). ' ಮೂಲ್ಯವತ್ತ ' ಪರಾ.

[ಮೂಲೆ$_2$ + < ವಟ್ಟ]

**ಮೂಲೆವರ್ತ** ' ಮೂಲೆವತ್ತ ' ನೋ.

**ಮೂಲೆವೀಸ**, ಮೂಲವೀಸ (ನಾ). ಒಂದು ಬಗೆಯ ತೆರಿಗೆ (?) : ದುಮ್ಮಿಯ ಪುರವರಾಧೀಶ್ವರ ಶ್ರೀವೀರಭದ್ರದೇವರ ಅಮೃತಪಡಿಗಾಗಿ ದುಮ್ಮಿಯ ನಿರಾಶ್ರಯಮಠದ ಕೆಞ್ಚವೀರಣ್ಣೊಡೆಯರು ಕೊಟ್ಟಂಥ ಮೂಲೆವೀಸದ ವಿವರ (ಎಕ. XI. ಹೊಳಲ್ಕೆ. ೦೩-೦೩ ; ಸು. 1525). **ಮೂಲವೀಸ** : ಚೆಂನಾಪುರೆಯುವರೂ ಬರಸಿ ಕೊಟ್ಟ ಮೂಲವೀಸದ ಧರ್ಮಶಾಸನದ ಕ್ರಮವೆಂತೆಂದರೆ (ಎಕ. VIII. ತೀರ್ಥಹ. ೪೩-೦೪ ; 1694). ' ಮೂಲ್ಯ ' ಪರಾ. [ಮೂಲೆ$_2$ + ವೀಸ]

**ಮೂಲೆಸುಂಕ** (ನಾ). ಒಂದು ಬಗೆಯ ತೆರಿಗೆ : ಒಕ್ಕಲುದೆಱೆ ಮೂಲೆ ಸುಂಕಂ . . . ಸರ್ವಬಾಧಪರಿಹಾರವಾಗಿ ಬಿಟ್ಟರು (ಎಕ. VIII, ಸೊರಬ. ೩೨೯-೩೩ ; 1159). [ಮೂಲೆ$_2$ + ಸುಂಕ$_1$]

**ಮೂಲೆಹೇರು** (ನಾ). (ಕೊಡುಗೆಯಾಗಿ ನೀಡಿದ ಜಮೀನಿನಲ್ಲಿ ಬೆಳೆದ ಯಾವುದಾದರೂ) ಸರಕಿನ ಹೆಸರು : ಯಡದೊರೆ ಕೋಟೆಮಾರ್ಗದಲ್ಲಿ ಮೂಲೆಹೇರ್ರಿಗೆ ಕಾಸು ೧ (ಎಕ. III (R). ನಂಜನ. ೨೩೭-೦೦ ; 1771).

[ಮೂಲೆ$_2$ + ಹೇರು$_2$ (< ಪೇಱು$_2$)]

**ಮೂಲೋಕ**, ಮುಲ್ಲೋಕ (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳವೆಂಬ ಮೂರುಲೋಕ : ತ್ರಿಲೋಕ : ಮೂಲೋಕಕೆ ಪೆಂಪಿಂದಗುಂದಲೆಯಾಗಿರ್ದುದು ದೇವದಂಪತಿರತಶ್ರೀಸುಂದರಂ ಮಂದರಂ (ಅಜಿಪು. ೬-೩೦) ; ಮೂಲೋಕದೊಳುದಯಿಸುವ ಬಾಲಿಕೆಗೆಣೆಯಿಲ್ಲವೆಂದೆ ಕಂಗೊಳಿಪ ವಧೂಜಾಲದೊಳೆಂದಿರದಱಿಪುವ ಪೋಲಡಗಿದುವವಳ ತ್ರಿವಳಿಗಳ್ (ಅಮೃತ. ೬-೪೬); ಅಱಿಪಿಸೊಳ್ ಮೂಲೋಕಮಂ ಕಾಣ್ಬ . . . ಅರುಹಂತಂ ಸಲ್ಲೆಯಿಂ ಮಾಡಿಕ್ಕೆ ಬೇಡಿದುದಂ ತನ್ನಱಿವಟ್ಟೆಗರ್ಗೆ (ಕಬ್ಬಿಗ. ೩೯೬). **ಮುಲ್ಲೋಕ** : ಮುಲ್ಲೋಕದಲ್ಲಗಜೆ ಶ್ರೀರಾಮನಾಮ ಸರ್ವೋತ್ಕೃಷ್ಟವು (ಪಂಚಾರಾ. ೨-೨೨-೬).

ಮುಲ್ಲೋಕದಲ್ಲಣ = ಮೂರುಲೋಕಗಳಿಗೂ ತಲ್ಲಣವನ್ನುಂಟು ಮಾಡುವವನು : ಮುಲ್ಲೋ[ಪಾಠಾ. ಮೂಲೋ]ಕದಲ್ಲಣ ರಾವಣಾಸುರ ಮುಖ್ಯರಾಕ್ಷಸರ ನುಡಿದನು ಯುಮಷರಿಗೆ ರಣದೊಳಗೇಕಪತ್ನೀವ್ರತನು (ತೊರರಾ. ೬-೫೨-೪). [ಮೂ$_1$ (< ಮೂಱು) + ಲೋಕ]

**ಮೂಲೋತ್ಪಾಟ** (ನಾ). ೧. ಗಿಡ - ಮರಗಳನ್ನು ಬೇರುಸಮೇತ ಕೀಳುವುದು. ೨. (ಅಲಂ) ಸಂಪೂರ್ಣವಾದ ನಾಶ ; ನಿರ್ಮೂಲ : ಮಲೆಪರ ಮೇಲೆ ಯುದ್ಧಕ್ಕೆ ಹೋಗಿದ್ದ ಬೊಪ್ಪಣ ಅವರ ಮೂಲೋತ್ಪಾಟ ಮಾಡಿ, ದಂಡಿನೊಡನೆ ಹಿಂದಿನ ರಾತ್ರಿಯ . . . ಬಂದು ಸೇರಿದ್ದ (ಶಾಂತಲಾ. ೧೬೯). [ಸಂ.]

**ಮೂಲೋತ್ಪಾಟನ** (ನಾ). ೧. = ಮೂಲೋತ್ಪಾಟ ೧. ೨. = ಮೂಲೋತ್ಪಾಟ ೨ : ವರ್ಣಭೇದವನ್ನು ಮೂಲೋತ್ಪಾಟನ ಮಾಡಿದ ಅಪೂರ್ವಪುಣ್ಯವು ಸರ್ ಜೆ. ಸಿ. ಬೋಸರಿಗೆ ಲಭಿಸಿತು (ಜಗಕಂ. ೨). [ಸಂ.]

**ಮೂಲೋತ್ಪಾಟನೆ** (ನಾ). = ಮೂಲೋತ್ಪಾಟ ೨ : ಸಂಪ್ರದಾಯ ಪರಿಸ್ಥಿತಿಯ ಮೂಲೋತ್ಪಾಟನೆಗೆ ಆಜನ್ಮವಿಮುಖರಾಗಿರಲೆಂದೂ ಅವನು ಆಶಿಸಿದನು (ಪುವರು. ೫೦೩) ; ಈಶ್ವರ ಜಗತ್ತನ್ನು ಲಯಗೊಳಿಸುತ್ತಾನೆ, ಅಧರ್ಮವನ್ನು ಮೂಲೋತ್ಪಾಟನೆ ಮಾಡುತ್ತಾನೆ (ತತ್ವಶಾ. ೩೩೦).

[ಸಂ. ಮೂಲೋತ್ಪಾಟನ]

**ಮೂಲ್ಯ** (ಗು). ೧. ಆರಂಭದ ; ಮೂಲದ. ೨. ಬೆಲೆ ಕೊಟ್ಟು ತರಬಹುದಾದ : ಕೊಂಡುಕೊಳ್ಳಬಹುದಾದ. ೩. ಬುಡಸಹಿತ ಕೀಳಲು ಯೋಗ್ಯವಾದ ; ಮೂಲೋತ್ಪಾಟನ ಮಾಡಬಹುದಾದ. (ನಾ). ೪. ಬೆಲೆ ; ದರ; ಧಾರಣೆ. ೫. ವೇತನ ; ಪಗಾರ ; ಸಂಬಳ: "ಭೃತಿ . . . ಮೂಲ್ಯಂ, ವೇತನಂ ಈ ೬ ಬೆಲೆ" (ಹಲಾಯು. ೦೨೦-೪೩). ೬. ಉಪಯುಕ್ತವಾದುದು ; ಬೆಲೆಯುಳ್ಳುದು : ಸಿನ್ನೊಳಭೇದಮಾದ ಕೊಂಡಾಟದನಂತಸೌಖ್ಯಮನೆ ಮಱೆದ ಮಱುಗೆಯೊಳ್ ತೊಡರ್ದ ಮಾಱಾಟದಿನೆನ್ನ ದರ್ಶನವಿಶುದ್ಧಿಯ ಮೂಲ್ಯಮೆನಲ್ ಜಿನೇಶ್ವರಾ (ಜಿನಾಕ್ಷಮಾ. ೫-೦೦). ೭. ಆದರ್ಶ : ತತ್ತ್ವ ; ಮೌಲ್ಯ : ತನ್ನವೇ ವೈಯಕ್ತಿಕ ಹಾಗೂ ಸಾಮಾಜಿಕ ಮೂಲ್ಯಗಳನ್ನು ಹುಡುಕುವ ಹವ್ಯಾಸಕ್ಕೆ ಬಿದ್ದ (ಮುಕ್ತಿ. ೨೦) ; ಸಾಹಿತ್ಯದ ಕೆಲವು ಮೂಲ್ಯಗಳ ಬಗೆಗೂ ಅವರು ಚರ್ಚಿಸಿದರು (ದೂರಕ. ೦೬). ೮. ಅಸಲು ; ಬಂಡವಾಳ : ಅವರ ಶ್ರಮಶಕ್ತಿಯನ್ನು ಅದರ ಶುದ್ಧಮೂಲ್ಯಕ್ಕೆ ಕೊಳ್ಳದೇ ಅದನ್ನು ಜೀವಂತವಿಡುವ ವೆಚ್ಚಕ್ಕೆ ನಾನು ಕೊಳ್ಳುತ್ತೇನೆ. ಆ ಮೂಲ್ಯಕ್ಕಿಂತ ಈ ವೆಚ್ಚ ಎಷ್ಟೋ ಕಡಿಮೆ ಇರುತ್ತದೆ (ಮಾಣಾದ. ೦೨೨). ೯. ಗಳಿಕೆ ; ಲಾಭ. ೧೦. ಬೆಲೆಕೊಟ್ಟು ಕೊಂಡ ವಸ್ತು ; ಕೊಂಡುಕೊಂಡ ಪದಾರ್ಥ. ೧೧. ಉಂಬಳಿ; ಮಾನ್ಯ ; ಕೊಡುಗೆ : ' ಮೂಲ್ಯವತ್ತ ' ಪರಾ.

[ಸಂ.]

**ಮೂಲ್ಯಮಾಪನ** (ನಾ). ವಸ್ತು, ಕಲಾಕೃತಿ ಮುಂತಾದುವುಗಳ ಯೋಗ್ಯತೆಯನ್ನು ಕುರಿತಂತೆ ಮಾಡುವ ನಿರ್ಣಯ : ಈ ಅರಿವು ಭಾವ ಲೇಖಕರಿಗೆ ಸಾಧಿಸಿದರೆ ಸಂಸಾರದಲ್ಲಿ ಘಟಿಸಿದ ಘಟನೆಗಳ ಮೂಲ್ಯ ಮಾಪನವನ್ನು ಲೇಖಕ ಸರಿಯಾಗಿ ಗುರುತಿಸಲು ಸಮರ್ಥನಾಗುತ್ತಾನೆ (ಕೃತಿತಃ. ೩). ' ಮೌಲ್ಯಮಾಪನ ' ಪರಾ. [ಸಂ.]

**ಮೂಲ್ಯವತ್ತ** (ನಾ). ಒಂದು ಬಗೆಯ ತೆರಿಗೆ : ಅಮ್ಮಣಯ್ಯದಂಡನಾಯಕರು ಪ್ರಮುಖಕರಣಂಗಳು ತಮ್ಮಾಯದ ಹೇಱಂಗೊಬ್ಬಳ ಮೂಲ್ಯವತ್ತಮಂ ಬಿಟ್ಟರು (ಎಕ. V, ೨೩-೨೪ ; 1165). ' ಮೂಲೆವತ್ತ ' ಪರಾ. [ಮೂಲ್ಯ + < ವಟ್ಟ]

**ಮೂವಂಕ** (ನಾ). ಮೂರುಕಡೆಗಳಲ್ಲಿ ಬಾಗಿರುವುದು, – ಕೊಂಕಿರುವುದು : ಅವರ ಮೂವಂಕದ ಕೊಂಬುಗಾಳೆಯ ದನಿಗೇಳ್ವುದುಂ . . . ಬೆಚ್ಚ್ (ಶಿವತಂ. ೪೦೩). [ಮೂ$_1$ (< ಮೂಱು) + ವಂಕ$_1$]

**ಮೂವಚ್ಚಿ**, ಮುಯ್ಯಚ್ಚಿ (ನಾ). ಮೂರು ಕಣ್ಣು : ಮೂವಚ್ಚಿಯ್ಯ ಮೊಗದ ಶಿವ ಸುಮ್ಮಾನದಿಂ ಸಲಹುಗೆ (ಸಂಐಸಾ. ೨೦-೩೪). **ಮುಯ್ಯಚ್ಚಿ**: 'ಮುಯ್ಯಚ್ಚಿಗ' ಪರಾ. [ಮೂ$_1$ (< ಮೂಱು) + ಅಚ್ಚಿ$_5$]

**ಮೂವಚ್ಚೆ** (ನಾ). ಮೂರು ಗುರುತು,—ಚಿಹ್ನೆ : ಗುರುಕುಚಜಘನಂಗಳ ತೂಗವೇಳ್ಕೆಂದು ಸರಸಿಜಭವ ನಡು ಒಡಿದೆತ್ತಿ ಬೆರಲ ಮೂವಚ್ಚೆಗಳ ಮೃದು ರಂಜಿಸುವಂತೆ ತರಳೆಯ ತಿವಳಿಗಳಿಸೆದವು (ತ್ರಿಕುಶ. ೨೦-೪೪).

[ಮೂ$_1$ (< ಮೂಱು) + ಪಚ್ಚೆ]

**ಮೂವಟ್ಟಲ್**, ಮೂವಟ್ಟಲು (ನಾ). ಪುಣ್ಯಾಹ ಮೊದಲಾದ ಶುಭ ಕಾರ್ಯಗಳಲ್ಲಿ ಮೂರುಪಾತ್ರೆಗಳನ್ನಿಟ್ಟು ಮಾಡುವ ಒಂದು ಧಾರ್ಮಿಕವಿಧಿ : ಮೂವಟ್ಟಲ್ ಬಲಿಮುಖ ನಾನಾವಿಧಲೌಕಿಕಶುಭಂಗಳಂ ವಿರಚಿಸಿ ಮೇಣಾವರಿಸಿದ ಮುದದಿಂ ತದ್ಭಾವರನೆಸೆದಿರ್ದ್ದಂ (ಅಂದ್ಕಪ್ರೆ. ೬-೩೪). **ಮೂವಟ್ಟಲು** : ಈಜುಲು ಮೂವಟ್ಟಲು ಹಸೆಹದರ ತೊಂಡಿಲು ಬಾಸಿಂಗ ಹಣೆಯಕ್ಕಿ ಹೆಣನ ಸಿಂಗಾರ ಶ್ರಾದ್ಧ ಕೂಳು ಈ ಪರಿಯ ಮಾಡುವನೆ ಶಿವಭಕ್ತ (ತತ್ವಕ. ೪. ೦೦೬-೨೩೬) ; ಪಟ್ಟಣದೊಳು ಸಂಭ್ರಮವೆಡೆಪಡದೆ ಮೂವಟ್ಟಲ ಮಾಡಿದರೊಲಿದು (ಕೋಹಕ. ೦೭-೪೦).

[ಮೂ$_1$ (<ಮೂಱು) + ಬಟ್ಟಲ್]

**ಮೂವಟ್ಟಲು** 'ಮೂವಟ್ಟಲ್' ನೋ.

**ಮೂವಟ್ಟೆ** (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳ ; ಮೂರು ಲೋಕಗಳು; ತ್ರಿಪಥ : ಜಾನಕಿಯ ಕಣ್ಗೆ ತೋಱಿತು ಮುಂದೆ ಸನ್ನುತ ರಘೂದ್ವಹನ ಕೀರ್ತಿಯನೆ ಮೂವಟ್ಟೆಯನ್ನಡೆದು ಮುಕ್ಕಣ್ಣನಂ ಸಾರ್ದು . . . ಪೆಂಪೊಡವಿ ಪಾವ ಬೆಳ್ಪೊನಲ್ದಿ ವಿಜನದಿಯ (ಕೃಷಿಕಾ. ೦೪-೪).

[ಮೂ$_1$ (< ಮೂಱು) + ಬಟ್ಟೆ$_1$]

**ಮೂವಡಿ**, ಮುಮ್ಮಡಿ$_1$, ಮೂಮಡಿ, ಮೂರ್ಮಡಿ (ನಾ). ೧. ಮೂರು ಪಟ್ಟು ; ಮೂರರಷ್ಟು : ಜನನಪ್ರಸ್ತುತಕಾಲದೊಳ್ . . . ತ್ರಿಗುಣಮಂ ತಾನೀಗುಮಾ ಮೇಗೆ ಪೆತ್ತನಿತಂ ಮೂವಡಿ ಮಾಟ್ಪುದೊಮ್ಮೆಯ ವಲಂ ದ್ವಿತ್ರ್ಯಾಹತಂ ಬಂದೊಡಂ (ಜಾತಕ. ೬-೩) ; ಧರೆಯೊಳ್ ಬೀರದ ಪೆಂಪಿಂ ನರಸಿಂದಿರ್ಮಡಿ ಬಹಾರಿಯಿಂ ಮೂವಡಿ ಭಾಸ್ಕರಸುತನಿಂ ನಾಲ್ಮಡಿ (ಆಪ್ತ್ಯಾಕ. ೬೦) ; ಮೂಮಡಿ ನಾಲ್ಮಡಿಯ್ಯಿವಡಿ ಸಂತಸದಿಂದೆ ತಂದೆ ಮಗಳಂ ಕರೆದಂ (ಗಿರಿ. ೩-೦೦೪). (ಗು). ೨. ಮೂರನೆಯ : ಶ್ರೀಮನ್ಮೂವಡಿ ಚಲ್ಲುಕದೇವರ್ . . . ಬಿತ್ತುವಟ್ಟದ ಕಳದೊಳೆ ಕುಡುವರ್ (ಎಕ. IX. ತತ್ವಕ. ೪೪-೬ ; 901 ?). **ಮುಮ್ಮಡಿ$_1$** : ೧. ಜೈನಭಕ್ತಿಯೊಳ್ ವರವಧುವಪ್ಪ ರೋಹಿಣಿಗೆ ಮುಮ್ಮಡಿ (ಧರ್ಮಾಕ್ಮ. ೪-೦೪) ; ಅಂತಾಗದದೆ ಕೊಳ್ಳಿದಱ ಬೆರೆಯಂ ಹೇಳಿಯದಱಿಂದ ಆಗದದೆ ಇಮ್ಮಡಿಯು ಮುಮ್ಮಡಿಯಹಿ ಕೊಟ್ಟಹೆನು (ಐತಿಹ. ೨೮-೪೦). ೨. ಮೂರಿಯ ಮೂರಿಯಾನ್ತರಿಗೆ ಮುಮ್ಮಡಿ ಚೋಳನ ಗನ್ಧವಾರಣಂ (ಎಕ. III. ತ್ರಿಕೂಟ. ೧೪೦-೦೭ ; 1012) ; ಮಣ್ಣೆನಾಡ ಬಸಳೆವಾಡಿಯ ಮುಮ್ಮಡಿ ಚೋಳ ಗಾವುಣ್ಡನುಂ ಸಾಕ್ಷಿ (ಎಕ. IX. ಕಂಪುಂ. ೦-೨೦ ; 1020). ೩. ಮೂರರಷ್ಟು ಇರುವ ; ಮೂರುಪಟ್ಟು ಅತಿಶಯವಾಗಿರುವ : ಬಣಗರ ತೊಲಗ ಪೇಳಿನುತ ಮುಮ್ಮಡಿ ರಾವಣನಂತೆ ನಿಂದು ಗರ್ಜಿಸಿದ (ಕೋಹಕ. ೦೨-೪೪). **ಮೂಮಡಿ** : ೧. 'ಮೂಮಡಿವೀರ' ಪರಾ. **ಮೂರ್ಮಡಿ** : ೧. ಮಡದಲಿ ನೂಂಕೆ ವಾಜಿ ಗರುಡಂಗಮದಿರ್ಮಡಿ ವಾಯುವಿಂಗೆ ಮೂರ್ಮಡಿಯೆನಿಪ್ಪೊಂದು ತನ್ನ ಜವದಿಂ ಪರಿಯಲ್ಕೆ (ಅಂಕೂ. ೬೨೦) ; ವಸುಧೆಯೊಳತ್ಯಧಿಕಪಾಪಂ ಪುಸಿವುದದಱಿಂ ಕೇಳೆರಡು ಮಡಿ ಪಸುವ ಕೊಲ್ಲುವುದದಱ ಮೂರ್ಮಡಿಯಾದ ಪಾತಕವು ಸಿಸುವ ಕೊಲ್ಲುವುದು (ಹಕಾ. ೦೦-೨೨).

**ಮೂವಡಿಗಂಡ** = (ಶತ್ರುಗಳಿಗಿಂತ) ಮೂರುಪಟ್ಟು ಪರಾಕ್ರಮಿಯಾದವನು ; ಮಹಾವೀರ ; ಒಂದು ಬಿರುದು : ಸಮಧಿಗತ ಪಂಚಮಹಾಶಬ್ದಮಹಾಮಣ್ಡಲೇಶ್ವರಂ . . . ಮೂವಡಿಗಣ್ಡಂ (ಎಕ. XII. ೨೧೪-೭ ; 1040). **ಮೂವಡಿಜೂಜು** = ಶತ್ರುಗಳ ಪಾಲಿಗೆ ಬಹಳ ಭೀಕರನಾದವನು ; ಒಂದು ಬಿರುದು : ಮೂವಡಿಜೂಜು ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಕೊಂಕಣ. ೦೪೩೬. ಶಾಸಗ. ೬೩-೦೩; 975); ಮೂವಡಿಜೂಜು ನಾಮಾದಿ ಸಮಸ್ತಪ್ರಸಸ್ತಿ ಸಹಿತಂ ಶ್ರೀಮನ್ಮಹಾಮಣ್ಡಳೇಶ್ವರಂ ಕೀರ್ತ್ತಿವರ್ಮ್ಮದೇವರ ಬೆಸದೆ . . . ಬಿಟ್ಟ ಉಪ್ಪಿನ ಹೇಱು ಅಯ್ವತ್ತು (ಶಾಇಇ. XX. ೩೪-೦೩ ; 1053).

[ಮೂ$_1$ (< ಮೂಱು) + ಮಡಿ$_1$]

**ಮೂವಡಿಗೂಡು** (ಕ್ರಿ). ಮೂರರಷ್ಟು ಬೆರಸು ; ಮೂರುಪಾಲು ಸೇರಿಸು : ಜಳದಂ . . . ಕಟುಕಂ ಭಿನ್ನೇಜಮೆಂಬಿಂತಿವಂ ಜಳದೊಳ್ ಮೂವಡಿಗೂಡಿ ಕಾಸಿ ಮಧುಮಿಶ್ರಂ ಪೊಯ್ಗೆ (ಕೋಕಕೋಕ. ೯-೨೩೩).

[ಮೂವಡಿ + ಕೂಡು$_1$]

**ಮೂವಡಿನಾಡು** (ನಾ). ಮೂರುಲೋಕ ; ತ್ರಿಲೋಕ : ಭಾವಿಸಿ ಭಜಿಸುವ ಭಕ್ತರ ಠಾವಿನೊಳಿರ್ಪೊಂದು ಹರ್ಷಮಿಲ್ಲಿಯುಮಿಲ್ಲಾ ಮೂವಡಿನಾಡೊಳಮಿಲ್ಲೆನೆಯೇವಣ್ಣಿಪೆನೆನ್ನ ಮನದ ನನ್ನಿಯ ನೆಲೆಯಂ (ಶಕಾ. ೩-೯೬). [ಮೂವಡಿ + ನಾಡು]

**ಮೂವಡಿಸು**, ಮುಮ್ಮಡಿಸು, ಮೂಮಡಿಸು, ಮೂವಳಿಸು (ಕ್ರಿ). ೧. ಮೂರರಷ್ಟಾಗು ; ಮೂರುಪಟ್ಟಾಗು : ವಿರಹವಿಮ್ಮಡಿಸೆ ಸುಯ್ ಮೂವಡಿಸೆ ಮೈಬಿಸುರ್ಪೇರದೆ ನಾಲ್ವಡಿಸೆ (ಕಂಪ್ರ. ೪೬-೦೦). ೨. (ಅಲಂ) ಅಧಿಕಗೊಳಿಸು ; ಹೆಚ್ಚುಮಾಡು : ನೃಪನ ದಕ್ಷಿಣಪಾರ್ಶ್ವದೊಳೊಪ್ಪಿ ತೋರ್ಪ ತತ್ತರುಣಿಯ ಕೈಯ ಖಡ್ಗಲತೆ ಮೂವಡಿ[ಪಾಠಾಂ. ೪]ಸಿತ್ತು ಮನಕ್ಕೆ ಮೂರ್ಛೆಯಂ (ಪುಶ್ಚ. ೬-೦೦೬) ; ಕಣ್ಣ ಬೆಳಗಂ ಮುಖದ ಕಾಂತಿಯುಂ ಮಿಗೆ ಸೊಗಸಂ ಮೂವಡಿಸೆ (ಗಿರಿ. ೬-೦೦ ಪ); ಇಮ್ಮಡಿಸಿ ಮೂವ[ಪಾಠಾಂ. ಮುಮ್ಮ]ಡಿಸಿ ಸಾಧುಗಳತ್ತ ಹರಕೆಗಳಿಂದಲೇನಹುದು (ಐತಿಹ. ೨೩-೩೭). **ಮುಮ್ಮಡಿಸು** : ೧. ನನ್ನ ದುಃಖ ಇಮ್ಮಡಿಸಿ ಮುಮ್ಮಡಿಸಿ, ಉಕ್ಕಿ ಹೊರಚೆಲ್ಲಿ ಹೋಯಿತು (ಕೃಶಿ. ೦೭೩) ; ತಿಂಗಳಿನ ವೆಚ್ಚಗಳು ಕುಳಿತಲ್ಲಿಯೇ ಮುಮ್ಮಡಿಸಿದವು (ಮುಂಗಿಯು. ೩೬೬). **ಮೂರ್ಮಡಿಸು** : ೧. ಇರ್ಮಡಿಸಿ ಮೂರ್ಮಡಿಸಿ ನೂರ್ಮಡಿಸಿದುದು ವೈರುಪಚ್ಚೆ (ಕಂದ್ಪ್ರಸ. ೩೪-೨೩). **ಮೂವಳಿಸು** : ೧. ಗಿಂಗಳ ಓಡ್ಡನಿನ್ನೆಸೆವ ಕೆಯ್ಮೊಲದಿಂ ಮುಗಿಲಂದ್ದವಾಗಿ ಮೂವಳಿಸಿದ ಕೋಟೆಯಿಂ . . . ಊರ್ಗ್ಗಳೊಪ್ಪುಗು (ಶಾಇಇ. IX-i. ೨೧೭-೦೦ ; 1177).

[ ಮೂವಡಿ + — ಇಸು$_3$ ]

**ಮೂವಣ್ಣ**, ಮುಬ್ಬಣ್ಣ (ನಾ). ಮೂರುಬಣ್ಣ ; ತ್ರಿವರ್ಣ : ಮೂಗಾವುದಂ, ಮೂವಣ್ಣಂ, ಮೂವಳಸು (ಶಬ್ದಮ. ೦೩೩ ವೃತ್ತಿ) ; ಅಂದಂಬಡೆದ ಮೊದಲ ಮೂವಣ್ಣಮದೊಂದೊಂದಱೊಳೊಂದಿದ ಬಗೆ . . . ಕರಂ ಮನಸಂದುದು (ಐಮುಳಾ. ೩-೩) ; ಮೂವಣ್ಣಕ್ಕೀಡಪ್ಪಂ ತಾವರೆವಾಗೆಯೊಂದೆದಿನದೊಳೆನುತದನಿಳ್ಕೆದಾ ವನಿತೆಯ ನುಣ್ಗದಪದು ಭಾವಿಪೆ ಶಾಶ್ವತನಿಜಪ್ರಕಾಶದಿನೆಸೆಗುಂ (ಕೃಷಿ. ೪-೦೦೩). **ಮುಬ್ಬಣ್ಣ** : ಕರಿ— ಬಿಳಿ ಫೋಟೋಗಳನ್ನೂ ತೆಗೆದವು. ಮುಬ್ಬಣ್ಣದ ಫೋಟೋಗಳನ್ನೂ ತೆಗೆದವು (ಹಸುಹ. ೨೦೭).

**ಮೂವಣ್ಣದಣ್ಣ** = (?) : ಮೂವಣ್ಣದಣ್ಣಗಳನು ಹೆ[ಪಾಠಾಂ. ಮೊ]ಣ್ಣ ಮಾಡಿಯೆ ಹಿಡಿತಹೆನು (ತ್ರಿಕೂಷಾ. ೦೨-೦೪೦). **ಮೂವಣ್ಣದಾಬೆ** = ಪರಾಶಕ್ತಿ ; ಆದಿಪ್ರಕೃತಿ ; ಮೂಲಶಕ್ತಿ : ಹರಿಹಿನಲಿ ಬೇಟದಲಿ ಮೂವಣ್ಣದಾಬೆಯ ಕೂಟದಲಿ ಕುಱುಹಾಗಿ ಮಿಗೆ ನಿರ್ಲೋಟಿಸುವ ನಿಜ ದಿಟ್ಟ ಬೊಮ್ಮವಿದು (ಕುಪ್ಪಾಕ. ೯-೦೭). [ಮೂ$_1$ ( < ಮೂಱು ) + ಬಣ್ಣ]

**ಮೂವಣ್ಣಂಗೊಳ್**, ಮೂವಣ್ಣಗೊಳು (ಕ್ರಿ). ೧. ಮೂರುಬಣ್ಣಗಳಿಂದ ಕೂಡಿರು ; ತ್ರಿವರ್ಣವಾಗು. ೨. (ಆಲಂ) ಮೂರು ಬೇರೆ ಬೇರೆ ರೂಪಗಳಾಗು : ಮೂವರುಮವರ ತನೂಜರ್ ಮೂವಣ್ಣಂಗೊಂಡು ತೆಲುಗ ಕನ್ನಡ ತಿಗುಳರ್ ತೀವಿದ ನಾಡುಗಳಂ ಕಾವೋವಲ್ಕೆಂದಡರ್ದರಂದು ಮೂಱುಂ ಪೊಟಲಂ (ಕಕಿಪ. ೨-೩೦). **ಮೂವಣ್ಣಗೊಳು** : ೩. ವಿವರ್ಣವಾಗು ; ಪೇಲವವಾಗು: ಬಿಳಿವಣ್ಣಗಳ್ ಕಾದಲರ್ ತೊಲಗೆ ಹೊಲಬಳಿದು ಮೂವಣ್ಣಗೊಳುತಿರ್ದರಂದು (ಉದ್ಭಟೀ. ೯-೪೦). [ ಮೂವಣ್ಣ + ಕೊಳ್$_1$ ]

**ಮೂವಣ್ಣಂಬರ್** (ಕ್ರಿ): ೧. ಮೂರುಬಣ್ಣಗಳಲ್ಲಿ ಹಾದುಬರು ; ಮೂರುರಂಗುಗಳನ್ನು ಹೊಂದು : ಕಂದಿದಳುಟೆದೊಡೆ ಬೆಳ್ಪನೊಳೊಂದಿದಳೊಂದದೊಡೆ ಬಂದೊಡತಿರಾಗಕ್ಕಂ ಸಂದಳಿವಳ್ ಮೂವಣ್ಣಂಬಂದಳ್ ನಿಷ್ಕರುಣ ತರುಣಿ ನಿಷ್ಕಾರಣದಿಂ (ಕಂದ್ರಕೌ. ೬-೭೪). ೨. (ಬಾಲ್ಯ, ಯೌವನ ಮತ್ತು ಮುಪ್ಪು ಎಂಬ) ಮೂರು ಅವಸ್ಥೆಗಳನ್ನು ಹಾದು ಬರು; ಅವರಿಸೆ ಕೂಸುತನಮುಂ ಜೌವನಮುಂ ಮುಪ್ಪುಮಂತೀಯೆಡಿಸ್ಸಿವರಂ ಮೂವಣ್ಣಂಬರೆ ರೂಪಪರಾವರ್ತನವಿಧಿಯಿನವರ್ಗೆ ವಿಧಿ ವಿಧಿಯಿಸುಗುಂ (ಅಣ್ಣ. ೨-೯೩). ೩. (ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಎಂಬ) ಮೂರು ಬೇರೆಬೇರೆ ಸ್ವರೂಪವನ್ನು ಪಡೆ : ಆವಾವ ತೆಱದೊಳೆಂತುಂ ಭಾವಿಪ್ಪೊಡನೇಕರೂಪನಾಗಿರ್ಪವರಂ ದೇವರವರೆಂದು ನಂಬದೆ ಮೂವಣ್ಣಂಬಂದ ದೇವರಂ ನಂಬುವುದೇ (ಸಬುಶ. ೦-೦೨೩).
[ ಮೂವಣ್ಣ + ಬರ್ ( < ವರ್) ]

**ಮೂವಣ್ಣಂಬರಿಸು** (ಕ್ರಿ). ೧. ಮೂರುಬಣ್ಣಗಳು ಬರುವಂತೆ ಮಾಡು ; ತ್ರಿವರ್ಣವಾಗಿಸು. ೨. (ಬಾಲ್ಯ, ಯೌವನ ಮತ್ತು ಮುಪ್ಪು ಎಂಬ) ಮೂರು ಅವಸ್ಥೆಗಳನ್ನು ಉಂಟುಮಾಡು : ಸಾವನ್ನವರಂ ಸೈತಿರದಾವನೊಳಂ ಶೈಶವಂ ಯುವತ್ವಂ ಮುಪ್ಪೆಂಬೀ ವಿಧ ವಡೆದಿರ್ದಲ್ಲಿಯ ಮೂವಣ್ಣಂಬರಿಪ ದೇಹದೊಳ್ ಮೋಹಿಪುದೇ (ಧರ್ಮಾ. ೩-೯೩). ೨. (ಆಲಂ) ವಿವರ್ಣಗೊಳಿಸು ; ಪೇಲವವಾಗಿಸು : ಅಣ್ಣ ಮೊಱೆಗೊಳಿಸಿ ಜೋಳಕರಣ್ಣಲೆಯುಂ ತಳರನುಡಿಸಿ ನನ್ನಗೆಯುಂ ಮೂವಣ್ಣಂಬರಿಸಿದನುರ್ವರೆ ಬಣ್ಣಿಸಲೆಱೆಯಂಗನೃಪತಿಚಕ್ರಿಯ ಬೆಸದಿಂ (ಎಕ. V. ಅರಸೀ. ೦೦೨-೦೪ ; 1110 ? ).
[ ಮೂವಣ್ಣ + ಬರಿಸು ( < ವರಿಸು$_1$ )]

**ಮೂವಣ್ಣಗೊಳು** ' ಮೂವಣ್ಣಂಗೊಳ್ ' ನೋ.

**ಮೂವಣ್ಣವಡೆ** (ಕ್ರಿ). = ಮೂವಣ್ಣಂಬರ್ ೨ : ಹಸುಳೆತನದೊಳೊಂದು ಹೊಸಹರೆಯದೊಳೊಂದು ಹಸಗೆಟ್ಟ ಮುಪ್ಪಿನೊಳೊಂದು ಮುಸುಕಿದ ಮೂವಣ್ಣವಡೆದು ಕಡೆದು ಮತ್ತೆ ಮಸಿವಣ್ಣಹುದೀ ಒಡಲು (ತ್ರಿಕಾಂ. ೦೪-೪೦). [ ಮೂವಣ್ಣ + ಪಡೆ$_1$ ]

**ಮೂವತ್ತು**, ಮುಪ್ಪತ್ತು, ಮುವ್ವತ್ತು (ನಾ). ಒಂದು ಸಂಖ್ಯೆ ; ಮೂರು ಹತ್ತು ; ತ್ರಿದಶ : ನಾಲ್ವತ್ತು ಸಾಂಬಿನೊಳೊನ್ದು ಮೂವತ್ತಱ ಕೆಟಗುಂ ಇನ್ನೂಱ ಮೇಲುಂ ಅರೆಸಾಂಪು (ಎತ. VI. ೦೩೩-೭; ೭೯೩) ; ಕೂಟಾ ತೊಱದು ಮೂವತ್ತುಗಾವುದ × × × ದಿವಸದೊಳೆಯ್ದಿ (ಕೌಪ್ತ. XI-i. ೦೦-೦೭ ; ೮೬೬) ; ವೃಷಸೇನ ಸೌಬಲರ ಸರಳು ಮೂವತ್ತಱಲಿ . . . ಮುಱಿಯೆಚ್ಚು ವಿಮುಖರ ಮಾಡಿದನು ಭೀಮ (ಕುಮ್ಮಾ.ಕ. ೦೩-೩೪). **ಮುಪ್ಪತ್ತು, ಮುವ್ವತ್ತು** : ಈಗ ಮುವ್ವತ್ತು ವರುಷಗಳ ಹಿಂದಲ ನಮ್ಮ ಊರ ನರಸಿಂಹಸ್ವಾಮಿಯ ವೈಭವವನ್ನು ಜ್ಞಾಪಿಸಿಕೊಂಡರೆ ದೇವರಿಗಿಂತ ಕಾಲವೇ ಪ್ರಬಲವಾದುದೆಂದು ತೋರುತ್ತದೆ (ಹೇಮೂಶೀ. ೯೩).

**ಮುವ್ವತ್ತೆರಡು ಕಲೆ** = [ವೀಶೈ] ಸದಾಚಾರ, ಸದ್ಭಕ್ತಿ ಇತ್ಯಾದಿ ಮೂವತ್ತೆರಡು ಬಗೆಯ ಕಲೆಗಳು; ಬತ್ತೀಸ ಕಲೆ : ಇಂತೀ ಮುವ್ವತ್ತೆರಡು ಕಲೆಗಳ ಸದ್ಗುರುಮುಖದಿಂದಱೆದ ಬಸವ ಮೊದಲಾದ ಸಮಸ್ತ ಪ್ರಮಥಗಣಂಗಳೆಲ್ಲ ವಿರಾಧಾರಿ ವೀರಶೈವಸನ್ಮಾರ್ಗವಿಡಿದಾಚರಿಸಿದರು ನೋಡಾ (ಮಹಾದೇ. ೩. ೯೦-೨೦೩). **ಮೂವತ್ತಾಱುಂ ಗುಣ** = [ಜೈನ] ಆಚಾರ್ಯನಿಗೆ ಅಗತ್ಯವಾದ ಮೂವತ್ತಾರು ಬಗೆಯ ಗುಣಗಳು : ಅನಶನಾದಿ ಹನ್ನೆರಡು ತಪಗಳು, ಸಾಮಾಯಿಕ ಪ್ರತಿಕ್ರಮಣಾದಿ ಆರು ಆವಶ್ಯಕಗಳು, ಉತ್ತಮಕ್ಷಮಾದಿ ಹತ್ತು ಧರ್ಮಗಳು, ಜ್ಞಾನಾಚಾರಾದಿ ಐದು ಆಚಾರಗಳು ಮತ್ತು ಮನೋಗುಪ್ತ್ಯಾದಿ ಮೂರು ಗುಪ್ತಿಗಳು : ಮೂವತ್ತಾಱುಂ ಗುಣಂಗಳ್ ತಮಗಮರ್ದಿರೆ ಸಂದ್ಯೆದುಮಾಚಾರದೊಳ್ಸದ್ಭಾವಂ ಕೈಗಣ್ . . . ಆಚಾರ್ಯರಿನ್ನೆಮ್ಮನೇನೋದಾವಂ ತಳ್ತಟ್ಟದಂತೋಸರಿಸಿ ಕಳೆಗೆ ಸಂಸಾರಕಾಂತಾರದಿಂದಂ (ಅಂಕ. ೦-೩); ಮೂವತ್ತಾಱುಂ ಗುಣದಿಂ ಭಾವಜನಂ ಕಟ್ಟಿ ಮೆಟ್ಟಿವೆಟದರ್ ವೃಷದಿಂ ಭಾವಿಪೊಡೆ ಮೇಘಚಂದ್ರತ್ರೈವಿದ್ಯರದೆಂತೊ ಶಾಂತರಸಮಂ ತಳೆದರ್ (ಶಂಶಾಮೂ. ೦-೦೯). **ಮೂವತ್ತಿರ್ವರ್, ಮುವ್ವತ್ತಿರ್ವರ್, ಮೂವತ್ತಿಬ್ಬರ್, ಮೂವದಿಂಬರ್** = ಮೂವತ್ತೆರಡು ಮಂದಿ; ಮೂವತ್ತೆರಡು ಜನ : ಆಯಿರ್ವರ್ಗಂ ಮಕ್ಕಳ್ ಶ್ರೀವರ್ಧನಂ ವಿಜಯಂಧರಂ ವೀರಬಾಹು ಮೊದಲಾಗಿ ಮೂವತ್ತಿರ್ವರ್ ಕುಮಾರರುಂ (ಪಮ್ಮಾರಾ. ೯೩-೦೯) ; ಮುವ್ವತ್ತಿರ್ವರ್ಪಂಡಿರುಮಂ ಬಂಧುಜನಮುಮಂ ಜ್ಯೇಷ್ಠಪುತ್ರನುಮಂ ಕರೆದು (ಧರ್ಮಾಮೃ. ೦-೦೦೦) ; ಮೂವತ್ತಿಬ್ಬರುಂ ನಲ್ಗಳ ಕಟನ ಕೊಟ್ಟರ್ (ಎಕ. X. ಬೌಂಗ. ೪೨-೩; ಸು. ೯೭೦) ; ಪೊನ್ನೆಱಮುಂ ಚೋಲಮಹಾರಾಜನುಂ ಮೂವದಿಂಬಪ್ಪಾರ್ವರಾನ್ ಕೊಂದಾ × (ಎಕ. XVI. ಮಧ್ಯಗಿ. ೦೦೬-೪ ; ೪ನೆಯ ೪೪). **ಮೂವತ್ತುಮುಕ್ಕೋಟಿ, ಮೂವತ್ತುಮೂರು ಕೋಟಿ, ಮೂವತ್ತುಮೂಕೋಟಿ** = (ಸಾಮಾನ್ಯವಾಗಿ ದೇವತೆಗಳ ಎಣಿಕೆಯನ್ನು ಸೂಚಿಸುವ) ಒಂದು ಸಂಖ್ಯೆ : ಮೂವತ್ತುಮುಕ್ಕೋಟಿ ದೇವೇಶ್ವರಯೋಗಿಹೃದ್ಧ್ಯಾನಗಮ್ಯ ಪರಮಪುರುಷ ಪುರುಷೋತ್ತಮ (ವೋಹಶ. ೩೭-೦೦) ; ಮಕ್ಕಳಿವರೇನಮ್ಮ ? ಮೂವತ್ತುಮೂರುಕೋಟಿ ! ನಾ ಹಡೆದ ಮೂವತ್ತುಮೂರುಕೋಟಿ (ಗಂ. ೩೦-೩) ; ಜಾನಕಿಯ ಕಣ್ಗೆ ತೋಱಿತು ಮುಂದೆ . . . ಮೂವತ್ತುಮೂಕೋಟಿ ವಿಬುಧರಂ ತನ್ನೊಳ್ಕೊಳುಗಿದರಣಿಕೆಪ ಮೆಪ್ಪೊದವಿ ಪರಿವ ಬೆಳ್ಳೊನಲ್ದಿವಿಜನದಿಯ (ಕೈಶಿಭಾ. ೦೯-೪). **ಮೂವತ್ತುಮೂದೇವರ್** = ಹನ್ನೆರಡು ಆದಿತ್ಯರು, ಎಂಟು ವಸುಗಳು, ಹನ್ನೊಂದು ರುದ್ರರು, ಇಬ್ಬರು ಅಶ್ವಿನಿಗಳು ಎಂಬುದಾಗಿ ಮೂವತ್ತುಮೂರು ದೇವತೆಗಳು; ತ್ರಿದಶರು : ಏಕಾದಶರುದ್ರರುಂ ದ್ವಾದಶಾದಿತ್ಯರುಮಷ್ಟವಸುಗಳುಮಶ್ವಿನೀದೇವರುಂ ಮೊದಲಾಗೆ ಮೂವತ್ತ[ತ್ತು]ಮೂದೇವರುಂ . . . ನೆರೆದು (ಶಂಕರಾ. ೦-೦೯೭ ಪ). **ಮೂವತ್ತುಮೂವರ್** = ಮೂವತ್ತುಮೂದೇವರ್ : ಮೂನೂಱಯ್ವತ್ತು ಸಮೀಚೀನವಿಮಾನಂಗಳುಂ ಮೂವತ್ತುಮೂವರ್ ದಿವಿಜರುಂ . . . ಅಱುವತ್ತುಮೂವರ್ ವಲ್ಲಭೆಯರುಂ ತನಗೆ ಪ್ರಸಿದ್ಧಮಾಗೆ (ಶಾಂತಿಪು. ೪-೦೦೦ ಪ) ; ಮೂವತ್ತುಮೂವರಾದರ್ ದೇವರ್ (ಕಬುಕ. ೯೯ ಕ್ರಯೋ). **ಮೂವತ್ತುಮೂಱು, ಮುಪ್ಪತ್ತುಮೂರು, ಮೂವತ್ಮೂಱು** = ಒಂದು ಸಂಖ್ಯೆ ; ಮೂವತ್ತು ಮತ್ತು ಮೂರು : ಮೂವತ್ತುಮೂಱು ಸಾಗರೋಪಮಂಬರೆಗಮಾಯುಷ್ಯಮನೊಡೆಯರಾಗಿ (ಪಮ್ಮಾರಾ. ೯೮-೦೩) ; ಸ್ವಸ್ತಿಶ್ರೀ ಸೀಯವಲ್ಲವರಸರ್ . . . ಮುಪ್ಪತ್ತುಮೂರು ಪರಿಹಾರ ಕೊಟ್ಟರ್ (ಎಕ. IX. ಹೊಸಕೋ. ೨೨-೯; ಸು. 750) ; ಸುರಮೆನಲು ಮೂವತ್ಮೂಱುನಕ್ಷತ್ರವಿಪ್ಪತ್ತ್ರೇಟನಿಕಂ (ಶುಂಗರಾ. ೦೦೪-೯). **ಮೂವತ್ತೆರಡಾಯುಧ** = ಮೂವತ್ತೆರಡು ಬಗೆಯ ಅಸ್ತ್ರಗಳು; ಬತ್ತೀಸಾಯುಧ : ಕಟ್ಟಿದ ಪಟಯಿಗಗಳುಮೊಟ್ಟಿದ ಮೂವತ್ತೆರ

ಡಾಯುಧಂಗಳ್ಗಂ ಬೆರಸಿ . . . ಪಡೆವೆರ್ಕರ್ಗಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೊಡ್ಡಿ ನಿಂದಾಗಳ್ (ಕಂಕಚಾ. ೧೦-೫೧ ವ) ; ಪರಶು ಬಿಲು . . . ಶೂಲಂ ಸುರಗಿ ಮೊದಲಾಗೆ ಮೂವತ್ತೆರಡಾಯುಧವಂ ಮಹೋತ್ಸವಂ ಬೆರಸಿನಿತಂ ನಿಲಿಪಿ ಪೂಜಿಸಿ (ಧರ್ಮಾಮೃ. ೨-೧೨೮). ಮೂವತ್ತೆರಟ್ಬಾಡು, ಮೂವತ್ತೆರಡುನಾಡು = [ಜೈನ] "ವಿದೇಹಕ್ಷೇತ್ರದಲ್ಲಿ ಸೀತಾ, ಸಿತೋದಾ, ವಕ್ಷಾರಗಿರಿ ಮತ್ತು ವಿಭಂಗನದಿಗಳ ಮೂಲಕವಾಗಿ ಮೂವತ್ತೆರಡು ದೇಶಗಳಾಗಿವೆ" (ಅಂಪು. ಕನ್ನಡ ಜೈನ ಪಾರಿಭಾಷಿಕ ಕೋಶ) : ಒಂದಜೆರ್ಚೊಳ್ ಪದಿನಾಜಾಗಿ ನಿರಂತರಂ ಪೊಗರುಱಂ ಮೂವತ್ತೆರಟ್ಬಾಡುಗಳ್ (ಆದಿಪು. ೨-೩೦) : ಉದಯಿಸಿರ್ಪುದು ನೋಡೆ ಮೂವತ್ತೆರಡುನಾಡುಗಳು (ಶಾಸ್ತ್ರಸಾ. ೦-೩೩). [ಮೂ$_1$ (< ಮೂಱು) + ಪತ್ತು$_3$/ತಮಿ. ಮುಪ್ಪತು; ಮಲ. ಮುಪ್ಪತು, ನುಪ್ಪತ್ತು; ತುಳು. ಮುಪ್ಪ; ಕೊಡ. ನುಪ್ಪದೀ; ತೆಲು. ಮುಪ್ಪದಿ, ಮುಪ್ಪೈ; ಕೋತ. ಮುಱತ್]

**ಮೂವಳಸು$_1$** (ಕ್ರಿ). ಮೂರು ಸುತ್ತು ಆವರಿಸು; ತ್ರಿಪ್ರದಕ್ಷಿಣೆ ಹಾಕು: ಜಳರುಹನಾಭಂ ಕಣ್ಣೊಳ್ ಪೊಳೆದುಳ್ಳುವ ಸೂರ್ಯಹಾಸಮಂ ಕುಡೆ ಕೈಯೊಳ್ ಹಳಧರನ ದೇಹರುಚಿ ಮೂವಳಸುವುದುಂ ಚಂದ್ರಹಾಸಮೆಸೆ ಸಿತ್ತಾಗಳ್ (ಕಂಕಚಾ. ೯-೨೬) ; ಮೂಱುಲೋಕಮಂ ಮೂವಳಸೆ ನಿಜಯಶಂ (ಕುಲ್ಪಪು. ೪-೧೩೨) ; ನೃಪಾಲಕರು . . . ಭರದಿಂದೆಯ್ತಂದೆಡೆಯಿಲ್ಲದಂತಾ ಪುರವ ಮುತ್ತಿದರು ಮೂವಳಸಿ (ನೇಮಿಸಂ. ೦೨-೬೧).

[ಮೂ$_1$ (< ಮೂಱು) + ಬಳಸು$_1$]

**ಮೂವಳಸು$_2$** (ನಾ). ಮೂರು ಸುತ್ತು ; ಮೂರು ಆವರ್ತ : ಪಜ್ಜಾತಗಿರಿಯನೆಯ್ದಿಯಲ್ಲಿಯೆ ರಾತ್ರಿ ಪ್ರತಿಮೆ ನಿಂದೊರನ್ನೆಗಂ ಕಾಟ್ಟಿಚ್ಚು ಮೂವಳಸಂ ಬಳಸಿಯುಂ ತಗುಳ್ದು ತಮ್ಮಂ ಸುಡೆ (ವಡ್ಡಾರಾ. ೦೬೪-೬) ; ಮೂವಳಸಾಗಿ ಸುತ್ತಿ ಮುತ್ತಿ ಕಾದುತ್ತಿರ್ದ ವಿದ್ಯುದ್ದಂಷ್ಟ್ರನುಮಂ ಸುದಂಷ್ಟ್ರನುಮಂ ಕಂಡು (ಶಾಂತಿಪು. ೪-೬೦ ವ) ; ಅಪಾರಾವತೀಪುರಮಂ ಮೂವಳಸಾಗೆ ಮುತ್ತಿಕೊಳ್ವುದುಂ (ಧರ್ಮಾಮೃ. ೯-೩೨೪).

[ಮೂ$_1$ (< ಮೂಱು) + ಬಳಸು$_3$]

**ಮೂವಳಸು** 'ಮೂವಡಿಸು' ನೋ.

**ಮೂವಾಯಿಲರು** (ನಾ). ತಮಿಳುನಾಡಿನ ಚಿದಂಬರಕ್ಷೇತ್ರದಲ್ಲಿ ನೆಲಸಿ, ಶಿವನ ಮಹಾಭಕ್ತರೆಂದು ಪರಿಗಣಿತರಾಗಿದ್ದ ಮೂರುಸಾವಿರ ಬ್ರಾಹ್ಮಣರ ಒಂದು ವರ್ಗ : ಇಂತೊಪ್ಪುವಲ್ಲಿ ಮೂವಾಯಿಲರು ಕುಳ್ಳಿರಲು ಸಂತತಂ ಮೆಱೆವ ಪೊನ್ನಂಬಲದೊಳೆಸೆದಿರಲು (ತಿರುಚ. ದೀ. ೦೩-೬).  [ ← ತಮಿ. ಮೂವಾಯಿರವರ್]

**ಮೂವಾಳ್** (ನಾ). ಮೂರುಸಾವಿರ ಉಳುಂಗಿಸೆ : ಇವರ್ಗಳ್ ಮೂವಾಳ್ಕೈಕೆರ್ದುರ್ವವರೆಯೊಳ್ ಬೆಳಗೆ ಸಾರೆ ಕೊಳೆ ಪವಪಟಿಗರ್ಗಳ್ ಕರ್ಪಿನ ಮಂಡಲಂತೆ ಕವಲ್ಮುರ್ವಿದ ಕೆಯ್ಮೊಲಗಳೆಸೆಗುಮೋರೊಂದೆಡೆಯೊಳ್ (ಅಜ್ಞಾವ. ೩೦೭). [ಮೂ$_1$ (< ಮೂಱು) + ಬಾಳ್$_3$]

**ಮೂವಿಟ್ಟಿ** (ನಾ). ಸಂಬಳವಿಲ್ಲದೆ ಮಾಡುವ ಮೂರು ಬಗೆಯ ಕೆಲಸ : ಮೂರುಬಗೆಯ ಬಿಟ್ಟಿಕೆಲಸ : P "ಬಿಟ್ಟಿಯು ಮೂರು ತೆರನಾದುದು (ಇದೇ ಶಾಸನಗಳಲ್ಲಿ ಬರುವ ಮೂವಿಟ್ಟಿ) : (೧) ಶೋಧನ ಕರ್ಮ—ಮಾರ್ಗ ಮಧ್ಯದ ರಸ್ತೆಯನ್ನು ಸರಿಪಡಿಸುವುದು; ಸೇತುವೆ, ನದಿ, ಬಾವಿ ಇತ್ಯಾದಿಗಳನ್ನು ಪರೀಕ್ಷಿಸುವುದು. (೨) ವಹನಕರ್ಮ+ಆಯುಧ, ಕವಚ, ಧಾನ್ಯ ಮುಂತಾದುವನ್ನು ಹೊರುವುದು. (೩) ಅಪನಯನ ಕರ್ಮ—ಪೆಟ್ಟು ತಿಂದು ಕೆಳಕ್ಕೆ ಬಿದ್ದ ಸೈನಿಕರನ್ನು ಅವರ ಆಯುಧಗಳ ಸಮೇತ ಹೊರುವುದು" (ಕಶಾಲಿ. ೨೩೬) ; ಕೆಯ್ಸೆಜೆಯುಂ ಕೊಟ್ಟಳಪಟ್ಟ ಸಾಧನಮಂ ಮೂವಿಟ್ಟಿಗಂ ಪೂಣ್ದು ಕಾಲ್ಗೆಱಗಿತ್ತಂತರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ (ಕಂಕಚಾ. ೬-೩೦) : ಕೊಟ್ಟೆಯೆದ್ದ ಕಪ್ಪವಂ ಮುಗುಟಿದ್ದಟ್ಟಿದ ಬಟೀಗೊಲ್ದು ಪೆಟ್ಟು ತಾಣಕ್ಕೆ ನೃಪರ್ ಬಿಟ್ಟು ಭುಜಗರ್ವಮಂ ಮೂವಿಟ್ಟಿಗೆ ಬರೆ ನೆಗಟ್ದ ನಿಳಿಯೊಳರವಿಂದನೃಪಂ (ಶಾರ್ಕ್ರಪು. ೨-೫) ; ವೀರಾರಿನೃಪಾಳರಂ ಬರಿಸಿದಂ ಮೂವಿಟ್ಟಿಗಂ ಬಿಟ್ಟಿಗಂ (ಎಕ. XI, ದಾವಣ. ೨೫-೩೪; 1224) ; ಶೋಧನ ಕರ್ಮ, ವಹನಕರ್ಮ, ಅಪನಯನಕರ್ಮ ಎಂಬ ಮೂರು ಬಗೆಯಾದ ವಿಟ್ಟಿಗಳನ್ನು ಕನ್ನಡಕವಿಗಳು 'ಮೂವಿಟ್ಟಿ' ಎಂಬ ಪದದಿಂದ ನಿರ್ದೇಶಿಸಿರುವ ಹಾಗೆ ಕಾಣುತ್ತದೆ. ಸೋತ ರಾಜನು ಗೆದ್ದ ರಾಜನಿಗೆ ಈ ವಿಟ್ಟಿ ಕರ್ಮಗಳನ್ನು ಮಾಡುವ ದೈನ್ಯಾವಸ್ಥೆಗೆ ಗುರಿಯಾಗುತ್ತಿದ್ದರು . . . ಪಂಪ ಪೊನ್ನ ಪಾರ್ಶ್ವರ ಪದ್ಯಗಳಲ್ಲಿ 'ಮೂವಿಟ್ಟಿ'ಗೆ ಇರುವ ಆನುಪೂರ್ವಿ ಹೆಚ್ಚು ಕಡಮೆ ಒಂದೇ ರೀತಿಯಾಗಿರುವುದು ಸೋಜಿಗದ ವಿಷಯ (ಸಂಶಾಸ. ೨೨೪).

[ಮೂ$_2$ (<ಮೂಱು) + ಬಿಟ್ಟಿ$_1$]

**ಮೂವಿಟ್ಟಿಗೆಯ್** (ಕ್ರಿ). ಮೂರು ಬಗೆಯ ಬಿಟ್ಟಿಕೆಲಸಗಳನ್ನು ಮಾಡು : ಭಕ್ತಿಯಿಂದಮೆ ಮಾನಂಗೊಂಡಿರ್ಪ್ಪ ಕಂದಿಪ್ಪ ಕಾಲ್ಗೆಱಗಿಪ್ಪಾ × × ಗೆಯ್ವುತ್ತಿರೆ × × × ಮೂವಿಟ್ಟಿಗೆಯ್ದಿರ್ಪ್ಪ ಪೊಡರಂ × × × (ಎಕ. IX-i, ೦೬೦-೦೨; 1091). [ಮೂವಿಟ್ಟಿ + ಕೆಯ್$_1$]

**ಮೂವಿಧಿ** (ನಾ). ೧. ಮೂರು ಬಗೆಯ ತೊಂದರೆ : ತಾಪತ್ರಯ : 'ಮೂವಿಧಿಗಾಣ್' ಪರಾ. ೨. (?) : ಅಡಸು ಪರಿ ವಿಧಿಗಳಂ ಬಡಸು ಮೂವಿಧಿಗಳಂ ಸುಡಿಸು ಕೈಲಾಸಮಂ (ಚೆಂಪು. ೪೬-೨೨).

[ಮೂ$_1$ (<ಮೂಱು) + ವಿಧಿ]

**ಮೂವಿಧಿಗಾಣ್** (ಕ್ರಿ). ತೊಂದರೆಗೊಳಗಾಗು: ತಾಪತ್ರಯ ಪಡು : ಹೊತ್ತ ನಿಜವನಜಾಯುದತ್ತಲಿತ್ತ ಸುತ್ತಿ ಬಳಸುವನಂತೆ ಹಿಡಿದಿರ್ದ ಲಿಂಗವ ಕಾಣದೆ ಮೂವಿಧಿಗಾಣ್ಬರನೇನೆಂಬೆನಯ್ಯ (ಅರವ. ಮು. ೬೫-೦೦೪).

[ಮೂವಿಧಿ + ಕಾಣ್]

**ಮೂವಿಧಿಬಡು** (ಕ್ರಿ). = ಮೂವಿಧಿಗಾಣ್ : ಮುಟ್ಟರೊಂದುವನು ಮೂವಿಧಿಬಟ್ಟರೂ (ಬಸವ. ೫೮೩). [ಮೂವಿಧಿ + ಪಡು$_1$]

**ಮೂವೀದಿವಡಿಸು** (ಕ್ರಿ). ೧. ಮೂರುಬೀದಿಗಳನ್ನು ತಿರುಗಿಸು. ೨. (ಆಲಂ) ಅಲೆಯುವಂತೆ ಮಾಡು; ಸುತ್ತಾಡಿಸು : ಪೀತಾಂಶುಕ ನೆಂದು ಪಾವಕನು ಮೂವೀದಿವಡಿಸಿಯುಂ (ಜಗಂ. ೯-೫೩ ವ).

[ಮೂ$_1$ (< ಮೂಱು) + ಬೀದಿ + ಪಡಿಸು]

**ಮೂವೀಧಿಗೊಳ್** (ಕ್ರಿ). ಮೂರು ದಾರಿ ಹಿಡಿ; ಮೂರುಸೀಳಾಗು : ಮೂವೀಧಿಗೊಂಡು ಮುನ್ನೀರ ಬೀಳುತ ಚಂದ್ರಗಾವಿಯ ವಸನವ ತಳೆದು ಸಾವಿರಕ್ಕೆಯಿಂದೆ ಪೊಡೆವಟ್ಟನೆಂಬಂತೆ ಶೀವಿತು ಕಡುಸಂಜೆಗೆಂಪು (ಸೋಹಚ. ೦೦-೦೬). [ಮೂ$_1$ (<ಮೂಱು) + ವೀಧಿ + ಕೊಳ್$_1$]

**ಮೂವೆ** 'ಮೂಮೆ' ನೋ.

**ಮೂವೆರಟಿ** (ನಾ). [ಸಂಗೀತ] ಒಂದು ಬಗೆಯ ಲಯ : ದೇಸಿಯ ತಾಳದೊಳಗೆ ಒತ್ತರಟಿ ಮೂವೆರಟಿ ಮೊದಲಾದ ಲಯದಿಂ . . . ಪಾಡುವ ಬಂಧವ್ಯಾಪ್ತಿಗಳಂ ಪೊಯ್ದೋಜಿಸಿ (ಚಕೂಮಾ. ೬೬). [?]

**ಮೂವೆರಲ್, ಮೂವೆರಲು, ಮೂವೆರಳು** (ನಾ). ೧. ಮೂರುಬೆರಳು. ೨. ಮೂರುಬೆರಳುಗಳ ಒಂದು ಅಳತೆ : ಎರಡೂರ್ಧ್ವರೇಖೆಗಳ್ ಮೂವೆರಲಶ್ವ(ಳಪ್ಪ)ಪ್ರೋಥ ಮಧ್ಯದೊಳ್ ತೋಱೆ ಮಹಾಜ್ವರಪರಿತಾಪದೊಳಪ್ಪುಪುಪರಿಸಕ್ಕಾ ವಾಜಿಗೆಯ್ದುಗುಂ ಮರಣಭಯಂ (ಅಶ್ವಶಾ. ೫-೦೦). **ಮೂವೆರಲು** : ೧. ಪುರನರ ನಾಗಲೋಕದಿ ನರ್ತಿಸುವ ಸೌಂದರವೆಣ್ಣು ಬಾಣಸಂದಣೆಯ ಸರಿಯಿಲ್ಲವೆಂದು ಮೂವೆರಲಿಂದೆ ರತಿರಾಜ ಬರೆದಂತೆ ತಿವಳಿ ರಾಜಿಸಿತು (ಸೋಹಚ. ೨೩-೨೦). **ಮೂವೆರಳು** : ೨. ನಾಲ್ವೆರಳು ಹಸ್ತಿನಿಗೆ ಮೂವೆರಳು ಚಿತ್ತಿನಿಗೆ ಇರ್ವೆರಳು ಕುಚಮಧ್ಯ ಶಂಖಿನಿಗೆ (ಸರ್ವಜ್ಞ. ೦೬೩೩); ಲೊಕ್ಕಿಬೇರಿನ ತೊಕ್ಕನ್ನು ತೆಗೆದು ಒಣಗಿಸಿ ಚೂರ್ಣವ ಮೂವೆರಳಿನಷ್ಟನ್ನು

ಹಸುವಿನ ತುಪ್ಪದಲ್ಲಿ ಒಂದು ಮಂಡಲ ಸೇವಿಸೆ ಕ್ಷಯ ಖಾಸಂ ಗುಣಮಕ್ಕುಂ (ಸಸ್ತ್ಯ. ೨೦೬). [ಮೂ$_1$ (<ಮೂಱು) + ಬೆರಲ್]

**ಮೂವೆರಲು** ಮೂವೆರಲ್ ' ನೋ.

**ಮೂವೆರಳ್** (ನಾ). ಮೂರು ಎರಡು; ಆರು: ' ಮೂವೆರಳ್ಮೊಗ ' ಪರಾ. [ಮೂ$_1$ (< ಮೂಱು) + ಎರಳ್ (< ಎರಡು)]

**ಮೂವೆರಳು** ' ಮೂವೆರಲ್ ' ನೋ.

**ಮೂವೆರಳ್ಮೊಗ** (ನಾ). ಆರುಮುಖ : ಸಾವಿರಭುಜದ ಶರಭ ಶತಮುಖದ ಶಾರ್ದೂಲ ಮೂವೆರಳ್ಮೊಗದೆರಲೆ . . . ಅನಿತುಮಂ ಕುವರಂಗೆ ತೋಱಿಸಿದನ್ (ಶೀಶಂ. ೦೨–೦೬). [ಮೂವೆರಳ್ + ಮೊಗ]

**ಮೂವೇಳೆ** (ನಾ). ಮೂರುಹೊತ್ತು; ತ್ರಿಕಾಲ : ಒಲಿದು ಮಜ್ಜನ ಮಾಡಿ ಧೌತವಸ್ತ್ರವನುಟ್ಟು ಸುಲಭಸದ್ಭಕ್ತಿಯೊಳ್ಕೂಡಿ ಬಲಗೊಂಡು ಮೂವೇಳೆ ಜಿನಭವನವ ಪೊಕ್ಕು ನಲಿದು ನಮಿಸಿದ ದೇವನಿಗೆ (ಶೀಮಂಶಾಂ. ೪೯–೬); ಸುರಮುನಿಪಜಾಲಕ್ಕೆ ಮೂವೇಳೆ ಭಸ್ಮವಂ ತಳೆದು ಪ್ರಾಣವನಿತ್ತ ವಿಶ್ವೇಶ್ವರಂ (ಗುರುಶಾ. ೩–೪೭).

[ಮೂ$_1$ (< ಮೂಱು) + ವೇಳೆ (= ವೇಲೆ)]

**ಮೂಶೆ** ' ಮೂಸೆ ' ನೋ.

**ಮೂಷಕ** (ನಾ). ೧. ಒಂದು ಬಗೆಯ ಪ್ರಾಣಿ; ಇಲಿ : "ಆಖುಃ, ವೃಷಃ, ಮೂಷಕಃ — ಈ ೩ ಇಲಿ" (ಹಲಾಯು. ೩೯–೬೨); ಮುಂಗುರಿ ಮೂಷಕಂ . . . ನಿಜವೈರಮಂ ಮಱೆದಿಪ್ಪುವೆನೆ ಮುನಿಯ ಮಹಿಮೆಯಂ ಪೊಗಳ್ವರಾರು (ಹಕಶಾ. ೩–೨೭). ೨. ಕಳ್ಳ; ಚೋರ. [ ಸಂ. ]

**ಮೂಷಕಪರ್ಣಿ** (ನಾ). ಒಂದು ಬಗೆಯ ಸಸ್ಯ; ಇಲಿಕಿವಿ ಗಿಡ : "ಚಿತ್ರಾ, ಉಪಚಿತ್ರಾ. . . ಮೂಷಕಪರ್ಣೀ—೧೦ ಎಲೆಯಾಲದ ಮರಕ್ಕೆ ಹೆಸರು, ಇಲಿಕಿವಿಗಿಡ" (ಸಿದ್ಧಾಂತಿ. ೦೩೨). [ಸಂ. ಮೂಷಕಪರ್ಣೀ]

**ಮೂಷಕವಿಷ** (ನಾ). ಇಲಿಯು ಕಡಿತದಿಂದ ಉಂಟಾಗುವ ನಂಜು : ತುಂಬುವುದುದಕಮುಮಂ ತಾನಿಂಬಿನೊಳಂ ಕೈಪೆಸೊರೆಯ ಗುಂಡಿಗೆಯೊಳ್ ಮೂಷಾಕಿಂಬ ದಿನಂಬರಮಿರಿಸಿದುದಂ ಬಿತದಭಿಮಂತ್ರಿಸುವುದು ಸೂಟ್ಕೊಬಿವರಂ ಕುಡಿಸಲ್ಕಂತಾ ಜಳಮಂ ಕಿಡುಗುಂ ಮೂಷಕವಿಷಂಗಳಾಕ್ಷಣದಿಂದಂ (ಖಚುದ. ೦೨–೬); ಕಿಱುನೆಲ್ಲಿ, ಕಿಱುಗಡಸಿಗೆ, ಸುರುಸುರುಕೆ, ಇವು ೩ ಸಮಾನಂಗೊಂಡು ಅರೆದು ಆಡಿನ ಹಾಲಲ್ಲಿ ಅರೆದು ಕುಡಿದು ಪೂಸುವುದು. ಮೂಷಕವಿಷ ಮಾಣ್ಗುಂ (ಖಸ್ವ.ಬಿ. ೦೪೮). [ಸಂ.]

**ಮೂಷಿಕ** (ನಾ). ಇಲಿ ; ಮೂಷಕ : ಈ ಮೂಷಿಕಂ ಸಾಮಾನ್ಯನಲ್ಲಂ (ಘಂಶಕಂ. ೨೩೦–೯). 'ಮೂಷಿಕವಾಹನ' ಪರಾ. [ಸಂ.]

**ಮೂಷಿಕಪರ್ಣಿ** (ನಾ). = ಮೂಷಕಪರ್ಣಿ : "ಮೂಷಿಕಾಹ್ವಯಂ— ಮೂಷಿಕಪರ್ಣಿ" (೬ಕಧಿ. ೦೨೭). [ಸಂ. ಮೂಷಿಕಪರ್ಣೀ]

**ಮೂಷಿಕವಾಹನ** (ನಾ). ಇಲಿಯನ್ನು ವಾಹನವಾಗಿ ಉಳ್ಳವನು; ಗಣೇಶ : ಪಾಶಾಂಕುಶಧರ ಪರಮಪವಿತ್ರ ಮೂಷಿಕವಾಹನ ಮುನಿಜನಪ್ರೇಮ (ಪುರಂದ. ೦–೬–೧); ಪ್ರಕಟಮಪ್ರತೆಯಲಿ ಮೂಷಿಕವಾಹನನೆ ತಾನು (ಶುಖ. ೩೪–೯). [ಸಂ.]

**ಮೂಷಿಕೆ** (ನಾ). ೧. ಹೆಣ್ಣುಇಲಿ : ದಿವ್ಯಜ್ಞಾನದಿಂದಾಕೆ ಮೂಷಿಕೆಯಪ್ಪುದನಱಿದಿಂತೆಂದಂ (ಶಂಶಕಂ. ೨೩೯–೪). ೨. ಹೆಗ್ಗಣ : "ದೀರ್ಘದೇಹಿ ಮೂಷಿಕಾ—೨ ಹೆಗ್ಗಣ" (ಸಿದ್ಧಾಂತಿ. ೦೩೭). ೩. ಜೇಡರ ಹುಳು. ೪. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸುವ ಪಾತ್ರೆ; ಮೂಸೆ : ಭಸಿತವೇ ಘುಟಿಕೆ ರುದ್ರಾಕ್ಷಿ ಮೂಲಿಕೆ ಸಿದ್ಧರಸ ಮೂಲಮಂತ್ರ ನಿಜಹಸ್ತ ಮೂಷಿಕೆ ನಿಯಾಮಿಸುವಾಜ್ಞೆಯಿಂಧನಂ ಜ್ಞಾನಾಗ್ನಿಯಗ್ನಿ (ಸಿದ್ಧರಾ. ೦–೧೬). [ಸಂ. ಮೂಷಿಕಾ]

**ಮೂಷಿತ** (ಗು). ೧. ಕದ್ದ; ಅಪಹರಿಸಿದ. (ನಾ). ೨. ಕಳುವಾದುದು ; ಕದಿಯಲ್ಪಟ್ಟುದು : "ಮೂಷಿತಂ, ಮುಷಿತಂ–೨ ಕದಿಯಲ್ಪಟ್ಟದ್ದು" (ಸಿದ್ಧಾಂತಿ. ೩೪೭). [ ಸಂ. ]

**ಮೂಷೆ** (ನಾ). ೧. ಹೆಣ್ಣುಇಲಿ. ೨. = ಮೂಷಿಕೆ ೪ : ವಾಸವದಿಕ್ತಟಂ ಸಮೆದ ಮೂಷೆ. . . ಪಟಂಗಾಸಿನ ಪೊನ್ನ ಗಂಟೆಯವೊಲೊಪ್ಪಿದುದುದ್ಗತಭಾನುಮಂಡಲಂ (ಅಜಿತ. ೬–೬೦); ಕುಕ್ಕುಟಿಗುದಿವ ವಜ್ರದ ಮೂಷೆಯೊಳಿಕ್ಕಿ ಕರಗಿಸುವುದುಂ (ಸುಕುಮಾ. ೦೦–೪೭ ವ); ಲೋಹದ ಸೂಕಳತ್ವಮಂ ಮೂಷೆಯೊಳಿಟ್ಟೆಱದಂತೆ ದುಷ್ಟತನದ ಪಟ್ಟವನಾಂತಿಪ್ಪುದು (ಧರ್ಮಾಮೃ. ೬–೩೦ ವ). [ಸಂ. ಮೂಷಾ]

**ಮೂಷೆಯಿಡು** (ಕ್ರಿ). ಚಿನ್ನ, ಬೆಳ್ಳಿ ಮೊದಲಾದ ಲೋಹಗಳನ್ನು ಕರಗಿಸಲು ಮೂಸೆಯನ್ನು ಸಜ್ಜುಮಾಡು.–ಕೋವೆಯನ್ನು ಅಣಿಗೊಳಿಸು : ಕೋಟಿಹೋಮಮುಮಂ ಬ್ರಾಹ್ಮಣಭೋಜನಮುಮಂ ಸೌಮ್ಯಗಿರಿಗುಹಾಗೇಹಂಗಳೊಳ್ ಮಂತ್ರಿ ಮಾಡಿದಪಂ . . . ಎಂದು ಡಂಗುರಮಂ ಪೊಯ್ಸಿ ಬಾಯ ಸವಿಗೆ ಪಾರ್ವರೆಲ್ಲಂ ಪರ್ವತಕ್ಕೆ ಮೂಷೆ[ಶಾಶಾಂ. ಶೆ. ಸೆ]ಯಿಡುವಂತೆ ಸುತ್ತಿ ಮುತ್ತಿ ಬೇಳ್ವೆಯುಮನಡುಗೆಯುಮಂ ಎಡೆಯುಡುಗದೊಡರಿಸೆ (ಅರ್ಥಶೀ. ೬–೨೦ ವ). [ಮೂಷೆ + ಇಡು$_1$]

**ಮೂಸಂಜೆ** (ನಾ). ದಿನದ ಮೂರು ಸಂಧಿಕಾಲಗಳು ; ಬೆಳಗು, ಮಧ್ಯಾಹ್ನ ಮತ್ತು ಸಂಜೆ ; ತ್ರಿಸಂಧ್ಯೆ: "ಮೂಸಂಜೆಯೆಸೆವುದು ತ್ರಿಸಂಧ್ಯೆಯೊಳ್" (ಶಶಂ. ೯೨). ಮೂಱುಸಂಜೆ ' ಪರಾ.

[ಮೂ$_1$ (< ಮೂಱು) + ಸಂಜೆ]

**ಮೂಸಂಡಿ** 'ಮುಸುಂಡಿ$_1$' ನೋ.

**ಮೂಸಂಡಿದೊತ್ತು** (ನಾ). ಹೇಡಿಯಾದ ಸೇವಕಿ; ಮುಸುಂಡಿಯಾದ ದಾಸಿ : ಕೊಬ್ಬಿದಳು ಮೂಸಂಡಿದೊ[ಶಾಶಾಂ. ತೊ]ತ್ತಿವಳು (ಬಸಪು. ೩೩–೨೯); ಕರೆಯುವಳ ಮೂಸಂಡಿದೊತ್ತಿನ ಮಱುಕ ಕರಲೇಸೆನಲವಳ ಹತ್ತಿರಕೆ ತಂದರು ಕೆಳದಿಯರು (ಕೋರಣ. ೨–೦–೩೦).

[ಮೂಸಂಡಿ (< ಮುಸುಂಡಿ$_1$) + ತೊತ್ತು (< ತೊಱ್ಱು)]

**ಮೂಸಂಬಿ, ಮುಸಂಬಿ, ಮುಸುಂಬಿ, ಮೋಸಂಬಿ** (ನಾ). ಈಳೆ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು : ನಿಂಬೆ. . . ಮೂಸಂಬಿ, ಟೊಮ್ಯಾಟೊ. ನೆಲ್ಲಿಕಾಯಿ. ಕಿರುನೆಲ್ಲಿಕಾಯಿ ಈ ಗುಂಪಿಗೆ ಸೇರಿವೆ (ಗೃಹಶಿ. ೪೩). ಮುಸಂಬಿ : ನಿಂಬೆಹಣ್ಣು. . . ಮುಸಂಬಿ . . . ಲೆಟ್ಯೂಸ್ ಇವುಗಳಲ್ಲಿ ವಿಟಮಿನ್ 'ಸಿ' ಇದೆ (ಗೃಹಶಿ. ೪೦). ಮುಸುಂಬಿ: "ಮುಸುಂಬಿ–ಸಿಹಿನಿಂಬೆ, ಒಂದು ಬಗೆ ಕಿತ್ತಳೆ" (ಸಿಂಕೋ. ೬೮). ಮೋಸಂಬಿ : ರಮಾ ನಿಧಾನವಾಗಿ ಮೋಸಂಬಿಯನ್ನು ಸುಲಿಯ ತೊಡಗಿದಳು (ಹೂಹಣ್ಣು. ೬೮). [←ಹಿಂ. ಮುಸಂಬೀ; ಮರಾ. ಮುಸಂಬೇ, ಮೊಸಂಬೇ]

**ಮೂಸಕ** (ನಾ). ೧. ಕಳ್ಳ : "ಮೂಸಕ—ಮೂಷಕ=ಇಲಿ, ಕಳ್ಳ" (ಶಬ್ದಕೋ. ೩೭). ೨. ಇಲಿ : ಮೂಷಕ : ಅಳಿಗಂಧಭುಂಜನೆ ಮಧು ಮಕ್ಷಿಕದ ಘೃತಗೊಡ ಮೂಸಕದ ದ್ವಾರಭೇದ (ಸರಸ. ೦೩೪–೬೮೩); ಮೂಸಕನ ಮೀಸೆಯು ಬಿಂದು ಮೂಱುಲೋಕವನು ಮುಳುಗಿತ್ತು (ಕಲ್ಯಾಶಾಂ. ೯–೦೦೪). [< ಸಂ. ಮೂಷಕ]

**ಮೂಸಕದೇರ** (ನಾ). = ಮೂಷಿಕವಾಹನ: "ಬಿಜ್ಜವಳಂ . . . ಮೂಸಕದೇರನೆನೆ ವಿನಾಯಕನ ನಾಮಂ" (ಅಭಿ. ೩).

[ಮೂಸಕ + ತೇರ್$_2$ + – ಅ$_7$]

**ಮೂಸಜಿ** (ನಾ). ಒಂದು ಊರಿನ ಹೆಸರು : ಕಲ್ಲಮನೊಗ್ಗಾರ್ಮು [ಣ್ನುಗೆ]ಯ್ಕೆ [ಮೂ]ಸಜಿಬ ಕಳ್ಳವಳ್ಳ ಪೆದ್ದಮನಾಳುತ್ತುಮಿಬ್ದು (ಶಶಾ. I, ೦೪–೬; ಸಂ. ೩೬೬). [ ? ]

**ಮೂಸು$_1$** (ಕ್ರಿ). ವಾಸನೆ ನೋಡು: ಆಘ್ರಾಣಿಸು: "ಮೂಸು–ಆಘ್ರಾಣೇ" (ಶಮುರಾ); ಆ ದೇವರ ಮುಂದೆಳ ನಂದಿಯ ನೋಡಾ . . . ಅದು ಬಂದು

ಒಂದು ಪರಿವಾರದೇವತೆಗಳ ಮೂಸಿ ನೋಡಿತ್ತು ನೋಡಾ (ಸರ್ವಶ. ೨೫-೧೦೦೦); ಅರುಟ್ಟು ಕಳೆದ ಹೂ ನಿನ್ನ ಬಾಯದು ಕೇತಿವಾರಿಯೇ ಮೂಸಿ ಕೊಳು . . ಎಂದು ಕುಡಿದ ಮೂಳೆಯರು ನಗಿಸಿದರು ಬೀದಿಯ ಜನವನು (ಹಕಶಾ. ೯-೯೬). [ದೇ. ತಮಿ. ಮೂಚು ; ಮಲ. ಮುಕ ; ತುಳು. ಮೂಸು ; ಕೊಡ. ಪರ್ಜಿ. ಮೂಸ್ ; ತೆಲು. ಮೂಚುಚು: ಗೊಂಡಿ. ಮುಸ್ಕಾನಾ ; ಕುೞ. ಮೂಂಜ; ಕೋತ. ತೊದ. ಮೂಶ್ ]

**ಮೂಸು$_2$** ' ಮುಸು$_2$ ' ನೋ.

**ಮೂಸುಂಡಿ** 'ಮುಸುಂಡಿ$_1$' ನೋ.

**ಮೂಸುಕೊಳವೆ** (ನಾ). ಮೂಗಿನ ಸೊಳ್ಳೆಗಳ ಮೂಲಕ ಗಾಳಿಯನ್ನು ಎಳೆದುಕೊಳ್ಳಲು ಅನುಕೂಲವಾಗುವಂತೆ ನಾಳವಿರುವ ಒಂದು ಬಗೆಯ ಸಲಕರಣೆ : ಆ ಮೂಸುಕೊಳವೆಯನ್ನು ಇಲ್ಲಿ ಕೊಡಿ (ಹಸುಹೊ. ೩೯). [ಮೂಸು$_1$ + ಕೊಳವೆ (< ಕೊಟವಿ) ]

**ಮೂಸೆ, ಮುಶಿ, ಮುಸ್ಕಿ, ಮೂಶೆ** (ನಾ). ೧. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸಲು ಬಳಸುವ ಸಾಧನ; ಕೋವೆ : "ಮೂಸೆ (ಮೂಸಿ, ಮುಸಿ) ಮೂಷಾ–ಬಂಗಾರ ಮೊದಲಾದುವನ್ನು ಕರಗಿಸುವ ಕೋವೆ" (ಶಬ್ದಕೋ. ೩೮); ಬಳವೈರಿಯೆಂಬ ಸಾಧಕನಿಳೆಯಂ ಪೊಸಮೂಸೆ ಮಾಡಿ ಶಶಿಮಂಡಲಮಂ ಗುಳಿಗೆಯೆಂದೆ ತಿಮಿರಕಾಳಿಕ ತಿಳಿದಂತೆ ಜಲಕ್ಕನಾಯ್ತು ಪೊಸವೆಳ್ದಿಂಗಳ್ (ಅನಂಪು. ೭-೬೩); ಗ್ರಾಫೈಟ್ ಮೂಸೆಗಳಲ್ಲಿ ಪುಡಿ ಮಾಡಿದ ಈ ಅದಿರನ್ನು . . . ಪಡೆಯಬಹುದು (ಖನಿಶಾ. ೫, ೬೩೯). **ಮುಶಿ :** ೧. ಟಂಕಸಾಲೆಯಲ್ಲಿ ೧೨೫೦ ರೂಪಾಯಿ ತೂಕ ಬೆಳ್ಳಿಯನ್ನು ತನ್ನದಂಥಾದ್ದೊಂದು ಮುಶಿಯೊಳಗೆಯೆರಡು ಕಿದಿಗಳನ್ನು ಊದಿ ಕರಗಿಸುವರು (ಕಭಾಗ. ೨೬೨): ಈ ಕಬ್ಬಿಣದ ರಸವನ್ನು ಉಸುಬಿನ ಮುಶಿಗಳಲ್ಲಿ ಹೊಯ್ದು ನಳದ ಕೋಳವೆ . . . ಗುದ್ದಿಗೆ ಮುಂತಾದ ಪದಾರ್ಥಗಳನ್ನು ಮಾಡುವರು (ಮುಂಬಯಿ. ೬-೦೯). **ಮುಸ್ಕಿ:** ೧. ಪಾರಜ ಚಿನ್ನಗಳ ಮಿಶ್ರಣವನ್ನು ಮುಸಿಯೊಳಗಿಟ್ಟು ಕಾಸಿದರೆ ಪಾರಜವು ಉಗಿಯಾಗಿ ಹೋಗುವುದು (ಮುಂಬಯಿ. ೯-೧೦೨). ೨. ತಂಬಾಕನ್ನು ತುಂಬಿ ಸೇದಲು ಸಿದ್ಧಪಡಿಸಿದ ಮೂಸೆಯಾಕಾರದ ಹೊಗೆಕೊಳವೆ, – ಹೊಗೆಬತ್ತಿ: ಅಲ್ಲಿ 'ಮುಸಿ' ಸೇದುತ್ತ ಅಕೆಯ ಪತಿ ಬಸಪ್ಪ ಕುಳಿತಿದ್ದ (ಏಕಶಾ. ೧೬) ; 'ಏಕ್ಕಎಲೆ'ಯ 'ಮುಸಿ'ಯಲ್ಲಿ ತಂಬಾಕನ್ನು ತುಂಬಿ ಅದನ್ನು ಸೇದುವುದಕ್ಕೆ ಸಿದ್ಧಪಡಿಸಿಕೊಂಡು ಅವನು ಇನ್ನೂ ಆಕೆಯನ್ನು ನೆಟ್ಟ ಕಣ್ಣುಗಳಿಂದ ನೋಡುತ್ತಲಿದ್ದ (ಏಕಸಿ. ೩). **ಮೂಶೆ :** ೧. ಗಂಧಕ ಅಲದ ಹಾಲಿನಲ್ಲಿ ಅರದು ಮೂಶೆಯಲ್ಲಿ ಅರ್ಧ ಮಡಗಿ ಮೇಲಂಗಂಧಕ ಮಡಗಿ(ಗಂಧಕ್ರ. ೨-೨): ಭರತಖಂಡ ಕುಲುಮೆಯ ಮೇಲಿನ ಮೂಶೆಯಂತೆ ಇತ್ತು (ಕಾಕದ. ೩೨೨).

[ಸಂ. ಮೂಷಾ./ತುಳು. ಮೂಸೆ, ಮೂಜಿ ]

**ಮೂಹರಿ** (ನಾ). ೧. ಮೂರು ಭಗೆ ; ಮೂರು ರೀತಿ : ಮೂಹರಿಯ ಮೂರ್ತಿಗಳು ಸಹಿತಾನೆಂದಡಂಜುವರು (ಶಿಭಾಗ. ೭-೭-೬). ೨. (?) : ಭಾಗ್ಯದ ಮೂಹರಿಯ ಕಾಲದಲಿ ಖಗವರವಾಹನಾಂಘ್ರಿಯ ಭಕ್ತಿ ಕ್ರಾನೆಂತಂ ದಳಾ ದೇವಿ (ಶಿಭಾಗ. ೬-೦೩-೯೩). [ಮೂ$_1$ (< ಮೂಜು) + ಪರಿ$_3$ ]

**ಮೂಹೊಜಿಡು, ಮುಪ್ಪೊಜಿಡು** (ನಾ). ಬೆನ್ನು, ಸೊಂಟ ಮತ್ತು ಮಂಡಿ– ಈ ಮೂರುಕಡೆಗಳಲ್ಲಿ ಉಂಟಾಗಿರುವ ಮೂರುಡೊಂಕು : ಮಾಣಿಸಿದಷ್ಟು ದಿಟ ಘಟ್ಟಿವಾಳ್ತಿಯ ಬ್ಯೆಯ ಮೂಹೊಜಿಡ (ಕುಪ್ಪಾ. ಕ. ೦೦-೦೭). **ಮುಪ್ಪೊಜಿಡು :** ಈ ತೇಜವೀ ರೂಪು ತಕ್ಕುದೈ ಮುಪ್ಪೊಜಿಡು [ಶಾಶಾಂ. ವೃಜುಗು] ವಿಧಿಕೃತವಕ್ಕು (ಶಿಭಾಗ. ೦೦-೩೭-೩೦).

[ಮೂ$_1$ ( < ಮೂಜು) + ಪೊಜಿಡು$_2$ (< ಪೊಜಿಂಪು$_2$)]

**ಮೂಹೊಜಿಡೆ** (ನಾ). ದೇಹದ ಮೂರುಕಡೆಗಳಲ್ಲಿ ಡೊಂಕನ್ನು ಹೊಂದಿರುವವಳು ; ಕುಬ್ಜೆ: ಚಂದನವಿತ್ತ ಮೂಹೊಜಿಡೆಯ ತನುವ ನೇರೆಂದವ ಮಾಡಿ ತೋಜಿಸಿದ ವೃಂದಾವನತಾತ್ಪರ್ಯನ ಕಾರುಣ್ಯದಿಂದೆ ಮೇಲ್ಗತಿಯ ವಿಸ್ತರಿಸು (ಮೋಹಕ. ೯೦-೦). [ಮೂಹೊಜಿಡು + – ಎ$_2$]

**ಮೂಳ$_1$** ' ಮೂಟ ' ನೋ.

**ಮೂಳ$_2$** ' ಮೂಲ ' ನೋ.

**ಮೂಳಕಿವಿ** ' ಮೂಟಗಿವಿ ' ನೋ.

**ಮೂಳನಾಯಿ** (ನಾ). ಅಂಗವಿಕಲವಾದ ನಾಯಿ : ಸೂಳೆಯರ ಅವ್ವ ಮುದಿನಾಯಿ ಅವರಪ್ಪ ಮೂಳನಾಯಿ (ಸರ್ವಜ್ಞ. ೧೯೬೦); ಹೆಂಡತಿ ಹೆಗ್ಗಡಿತಿ ಯಾದರೆ ಗಂಡ ಮೂಳನಾಯಿಗಿಂತ ಕಡೆ (ಗಾದೆ).

[ಮೂಳ$_1$ ( < ಮೂಟ) + ನಾಯಿ (< ನಾಯ್)]

**ಮೂಳಪ್ರತಿಷ್ಠೆ** (ನಾ). ಒಣಜಂಬ ; ಬಡಿವಾರ : ಆ ಜೋಯಿಸನು . . . ಎರಡನೇ ವರವಾದಾಗ್ಯೂ . . . ಮೂಳಪ್ರತಿಷ್ಠೆಯನ್ನು ಬಿಟ್ಟು ಮಗಳನ್ನು ಕೊಟ್ಟು ಮದುವೆ ಮಾಡುತೇನೆಂದು ನಿಶ್ಚೈಸಿಕೊಂಡಿದ್ದನು (ಮಾಮುಕಾ. ೬).

[ಮೂಳ$_1$ ( < ಮೂಟ) + ಪ್ರತಿಷ್ಠೆ]

**ಮೂಳವಾಸನೆ** (ನಾ). ಅಲ್ಪವಾದ ಆಸೆ ; ಕೀಳುಬಯಕೆ : ಮನದೊಳಿದ್ದ ಕೀಳುಬುದ್ಧಿಯುಪರಾಧವ ಮೂಳವಾಸನೆಯ ಮೂಲವ ವೇದಾಂತಸಮ್ಮೇಳನದಿಂದ ಬಾಹ ಸುಖವ ಪೇಳುತ್ತ (ಶಕ್ಶ. ೦೨೫-೨).

[ಮೂಳ$_1$ ( < ಮೂಟ) + ವಾಸನೆ]

**ಮೂಳಿ** ' ಮೂಟಿ$_1$ ' ನೋ.

**ಮೂಳು** (ನಾ). ೧ ಕಿವಿಯಿಲ್ಲದಿರುವುದರಿಂದ ದೇಹದಲ್ಲುಂಟಾದ ಊನ,– ಅಂಗವಿಕಲತೆ : " ಮೂಳುಃ = ಕರ್ಣಹೀನತ್ವಂ " (ಶಾಶಬ್ಧ. ೨೬೨); ಈ ವಿಪಿನಾಂತ್ತರದ ಪರ್ಣಾಲಯದೊಳಿರುತಿಹರು ದಶರಥರಾಜ ನಂದನರು ಲೀಲೆಯಲಿ ತಾಂ ಚರಿಸುತಿರೆ ಕಟ್ಟಾಳುತನದಿಂ ಪಿಡಿದು ಮೋಸದಿ ಮೂಳು ಮಾಡಿದರು (ಅನಂರಾ. ೩-೯-೨). (ಗು). ೨. ಹರಿದುಹೋದ : 'ಮೂಳುಕಿವಿ' ಪರಾ. ೩. ಸಾಧಾರಣವಾದ ; ಒಂಡಾಡಿ : 'ಮೂಳು ನಾಯಿ' ಪರಾ. [ಮೂಳ$_1$ ( < ಮೂಟ) + — ಉ$_4$]

**ಮೂಳುಕಿವಿ** (ನಾ). ಹರಿದುಹೋದ ಹಾಲೆಗಳುಳ್ಳ ಕಿವಿ; ಹರಕುಕಿವಿ : ಮೂಳುಕಿವಿಯ ಮುದ್ದಿ ಮುಸಿದ ಗಂಡನ ಬಿಟ್ಟು ಕೇಳೂರೊಳೊಬ್ಬನ ಮೇಳಾದೊಳಿಹಳು (ಕರಶ. ೯೬-೫) [ಮೂಳು + ಕಿವಿ]

**ಮೂಳುನಾಯಿ** (ನಾ). ನಾಡಾಡಿ ನಾಯಿ ; ಸಾಧಾರಣವಾದ ನಾಯಿ ; ಬೀದಿನಾಯಿ : ಬೂದಿಗುಡ್ಡೆಯಲ್ಲಿಯೊ ಕಸದ ರಾಶಿಯಲ್ಲಿಯೊ ಮುದುರಿ ಮಲಗಿದ್ದ ಮೂಳುನಾಯಿಗಳು ಕಣ್ಣು ಬಿಡಲೂ ಮನಸ್ಸಿಲ್ಲದೆ ಮಲಗಿದ್ದುವು (ಮಲೆಮ. ೨೬೯). [ಮೂಳು + ನಾಯಿ (< ನಾಯ್) ]

**ಮೂಳೆ$_1$** (ನಾ). (ದೇಹದಲ್ಲಿರುವ) ಎಲುಬು ; ಅಸ್ಥಿ : "ಮೂಳೆ ಯೆಸಲ್ಕೆಲುಗಳು" (ಶಾರಾ. ೯೦) : ಮೂಳೆಯಂ ದಬ್ಬುಕದಿಂದೆ ನುಗ್ಗು ನುಱು ಯಪ್ಪನೆಗಂ ಬಿತ ಬೀಸಿ ಪೊಯ್ದು (ಸುಕುಮಾ. ೭-೬) ; ಪೊಲೆಗೇರಿಯಂತೆ ಮೂಳೆಯ ಮಯಮಪ್ಪುದು (ಧರ್ಮಾಮೃ. ೯-೦೭೩) ; ಮೂಳೆಗಳ ತುಪ್ಪವಂ ತಲೆಯೋಡಿನೊಳು ಹೊಯ್ದು (ವೀರಶ. ಹ. ೪೯೬–೦೦).

ಮೂಳೆಚಕ್ಕಳವಾಗು, ಮೂಳೆಚಕ್ಕಳ ಆಗು=ದೇಹದಲ್ಲಿ ಎಲುಬು, ಚರ್ಮ ಎದ್ದು ಕಾಣುವಂತೆ ಆಗು; ಬಹಳ ಬಡವಾಗು : ಈ ಪ್ರಕೃತಿಯ ಕನಿಷ್ಠವರ್ಗಕ್ಕೆ ಸೇರಿದವರು ಹೆಚ್ಚು ರಕ್ತಮಾಂಸಗಳಿಲ್ಲದೆ ತೀರ ಮೂಳೆ ಚಕ್ಕಳವಾಗಿರುತ್ತಾರೆ (ಕಲಿಕಾ. ೧, ೯೦) ; ಒಂದು ಗರಿ ಹುಲ್ಲು ಸಿಕ್ಕೀತೇ ಎಂದು ದನಗಳು ಬೆಳಗಿನಿಂದ ಸಂಜೆಯವರೆಗೂ ಅಲೆಅಲೆದು ಮೂಳೆಚಕ್ಕಳ ಆಗಿದ್ದುವು (ದೇಶಾಂಕ. ೦). ಮೂಳೆ ಬಿಟ್ಟುಕೊಳ್ಳು=ದೇಹದಲ್ಲಿ ರಕ್ತ ಮಾಂಸವಿಲ್ಲದಾಗು ; ಮೂಳೆಗಳು ಎದ್ದುಕಾಣು : ಸಾಯುವುದಕ್ಕೆ ಮುಂಚೆ ಕೆಲವು ದಿನಗಳ ಹಿಂದೆ ಅವಳು ಹೇಗೆ ಮೂಳೆಬಿಟ್ಟುಕೊಂಡು ವರ್ಣವಿಕಾರವಾಗಿದ್ದ ಬೆರಳುಗಳಿಂದ ತನ್ನ ಕೈಯನ್ನು ಅದುಮಿದ್ದಳೆಂಬು

ದನ್ನೂ . . . ಅವನು ಜ್ಞಾಪಿಸಿಕೊಂಡನು (ಛಪಕು. ೦೩೦).

[ದೇ. ತಮಿ. ಮೂಳ್ಳೈ=ಮಜ್ಜೆ ; ಮಲ. ಮೂಳ=ಮಜ್ಜೆ ; ಕೊಡ. ಮೂಳೆ ; ತೆಲು. ಮೂಲಗ, ಮೂಲುಗು, ಮೂಲ್ಗ=ಮಜ್ಜೆ ]

**ಮೂಳೆ$_2$** (ನಾ). ತಿಳಿಗೇಡಿಯಾದ ಹೆಣ್ಣು; ಮೂಢಸ್ವಭಾವದ ಹೆಂಗಸು: ಮೂಳೆಯುರರಗುಲಿಗಳ್ ಪೆಣ್ಗಳ್ ಕಿಡುನಡೆಯರ್ (ಶೌಸಂದ. ೮-೩೩).

[ಮೂಳೆ$_1$ (< ಮೂಱು) + – ಎ$_2$]

**ಮೂಳೆದುಪ್ಪ** (ನಾ). ಎಲುಬಿನ ಮಧ್ಯದಲ್ಲಿರುವ ಮಾಂಸಸಾರ ; ಮಜ್ಜೆ : ಮೂಳೆದುಪ್ಪವನೆತ್ತಿ ತವಕದಿಂ ಕುಡಿಕುಡಿದು ಕಾಳಿಜದ ಖಂಡಮಂ ಸವಿಸವಿದು (ಶೀರರ. ಹ. ೪೪೬-೦೮). [ಮೂಳೆ$_1$ + ತುಪ್ಪ]

**ಮೂಳೆರೋಗ** (ನಾ). ದೇಹದ ಮೂಳೆಗಳು ಶಿಥಿಲವಾಗುವ ಒಂದು ಬಗೆಯ ರೋಗ ; ಹಕ್ಕಿರೋಗ : 'ವಿಟಮಿನ್ ಡಿ' . . . ದೇಹಕ್ಕೆ ಹಕ್ಕಿರೋಗ ಎಂಬ ಮೂಳೆರೋಗಗಳು ಬರದಂತೆ ಅವನ್ನು ರಕ್ಷಿಸುತ್ತದೆ (ಗೃಹವಿ. ೩೦). [ಮೂಳೆ$_1$ + ರೋಗ]

**ಮೂಳ್ನು** ' ಮೂಡು$_3$ ' ಪರಾ.

**ಮೂಱಂಟೆ** (ನಾ). (?) : ದೇವಗ್ಗ್ಗಲ್ಲಂ ಮೂಱಣ್ಟೆಯುಂ ಸೊಡರುಂ ಎರಡು ಪೊಟ್ಟುಂ ಸಂಕ × × × ಗೆಯ್ದು ಕಾಸಿಯುನುಟ್ಟು (ಎಕ. X. ಶ್ರೀನಿವಾಸ. ೩೪-೩, 955). [ ? ]

**ಮೂಱಚ್ಚಿ** (ನಾ). ಮೂರುಕಣ್ಣುಗಳು : ಮೂಱಚ್ಚಿಯುಳ್ಳನ ಮಸ್ತಕಂ ಗಂಡು ಬಹೆನೆಂದು ಭಾಷೆಯುಂ ಕೊಟ್ಟು ಬಂದೆ (ತಂಶ್ರೀ. ೦೬-೪೭). ' ಮೂವಚ್ಚಿ ' ಪರಾ. [ಮೂಱು + ಅಚ್ಚಿ$_3$]

**ಮೂಱಡಿ**. ಮೂರಡಿ (ನಾ). ೧. ಮೂರುಹೆಜ್ಜೆ ; ಮೂರುಪಾದ. ೨. ಮೂರುಕಾಲು : ನಡೆವುದಾದಿಯುಗಂಗಳೊಳು ನಾಲ್ಕಡಿಯೊಳುನ್ನತಧರ್ಮವಾ ಮೂಱ[ಕಾಕಿಂ. ವ]ಡಿಯೆ ನಡೆವುದು ಧರ್ಮವಾ ತ್ರೇತಾಯುಗಂಗಳಲಿ (ಬಸಪು. ೨-೩). ೩. ಮೂರುಹೆಜ್ಜೆಗಳಷ್ಟು ; ಮೂರು ಹೆಜ್ಜೆಗಳ ಪ್ರಮಾಣ : ಧರೆಗೊಡೆಯಂ ಚಕ್ರೇಶಂ ತಿಂವನೆ ಬಲಿಯಲ್ಲಿ ಬೇಡಿ ಮೂಱಡಿನೆಲನಂ (ಸುಕುಸ. ೮-೦೪೪). ೪. ಮೂರುಅಡಿಗಳ ಒಂದು ಅಳತೆ ; ಮೂವತ್ತಾರು ಅಂಗುಲ : ಒಂದು ಕಾಲವರನೊಂದು ಕಣ್ಣವರ ಮೂಱಡಿಗಳವರ . . . ಕುದುರೆಮೊಗದವರ ದೇಶಂಗಳಂ ಕಂಡನಾ ಕಲಿಪಾರ್ಥನು (ಕೈಮಿಭಾ. ೦೬-೨೦). ೫. ಬೆಂಕಿಯ ಅಧಿದೇವತೆ ; ಅಗ್ನಿ : "ಅಗನಿ . . . ಇಂಗಳ ಕರ್ಬಟ್ಟೆಗ ತಾಂ ಮರಗೂಟನಿರದೆ ಮೂಱಡಿಯೆಂಬಂ" (ಶಬಶಂ. ೩೪). P ಇದು ಸಂಸ್ಕೃತದ 'ತ್ರಿಪಾದ' ಎನ್ನುವುದರಿಂದ ಆಗಿದೆ. ೬. ತನ್ನ ಮೂರು ಹೆಜ್ಜೆಗಳಿಂದ ಮೂರುಲೋಕಗಳನ್ನೂ ವ್ಯಾಪಿಸಿದವನು; ತ್ರಿವಿಕ್ರಮ. ಮೂರಡಿ : ೪. ಒಂದೊಂದೂ ಮೂರಡಿ ಎತ್ತರವಿತ್ತು (ಗಂಶ್ರ. ೪೬).

**ಮೂಱಡಿ ಮಾಡು**=ಮೂರುಹೆಜ್ಜೆಗಳಲ್ಲಿ ಅಳೆ ; ಮೂರುಹೆಜ್ಜೆಗಳ ಅಳತೆಗೆ ಹೊಂದಿಸು : ಮೂಱಡಿ ಮಾಡಿದಂದು ನೆಲನೆಲ್ಲಮನಾ ಬಲಿಗಾದ ರೂಪಮಂ ತೋಱಿದಂ . . . ಮುರಾಂತಕಂ (ಹಂಪಶಾ. ೯-೬೦).

[ಮೂಱು + ಅಡಿ$_1$]

**ಮೂಱಡಿಗ** (ನಾ)=ಮೂಱಡಿ ೫ : "ಮರಗೂಟಂ . . . ಅಗನಿ ಮೂಱಡಿಗಂ . . . ಎಲರ್ಗೆಳೆಯಂ–ಈ ೧೩ ಅಗ್ನಿ" (ಕಶಾ. ೪೯-೩೩).

[ಮೂಱಡಿ + – ಗ$_2$]

**ಮೂಱಿರವು** (ನಾ). ನೀರು ಕುಡಿಯುವ ಜಾಗ, ಶತ್ರುವಿನ ಜಾಗ, ತನ್ನ ಮರಿ ಇರುವ ಜಾಗ–ಎಂಬ ಮೂರುಬಗೆಯ ಪ್ರಾಣಿಗಳ ನೆಲೆ: ಮೃಗದ ಮೂಱಿರವುಮನಾಱಿಾರಯ್ಯೆಯುಮಂ ಗಾಳಿಯು[ಮನೆ]ಱಿಂಕೆಯುಮಂ ಬಲ್ಲನಾಗಿ (ಹಂಪಶಾ. ೫-೪೩ ವ). [ಮೂಱು + ಇರವು$_1$(<ಇರಂ)]

**ಮೂಱು**, ಮೂರು (ನಾ). ೧. ಒಂದು ಸಂಖ್ಯೆ : "ಪುರವಹ್ನಿತ್ರಯ ಮೂಱು" (ಮಂಗರಾ. ೦೦೩-೮) ; ಮೂಱುಮನ್ನೆಪ್ಪ ಒಸಗೆ ಉತ್ಸಾಹಂಗಳ್ ಒಂದೊಕ್ಕಲೊನ್ದು ಪುಟ್ಟಿಗೆ (ಎಕ. XIV. ೦೯೦-೦೬; 795); ಪಗರಣದೊಳು ಬಿರಿದ ಮೂಱುಂ ನಗಿಸುಗುಮಪ್ಪುದಱನಲ್ಲಿಗಂತವದೋಷಂ (ಕಾಶಾ. ೦-೩೮); ನಡೆ ನೋಟಱೊಪ್ಪಡಮಂತುಮಿಂತು ಮೂಱಸಿಯುವು ಮೂಱು ದೊಡ್ಡಿದುವು ಮೂಱಿಡೆ ತೆಳ್ಳಿದುವಂಬುಜಾಕ್ಷಿಯಾ (ಹಂಪಶಾ. ೯-೬೨). ೨. ಮಕ್ಕಳು, ಹೆಂಡತಿ ಮತ್ತು ಹಣ ಎಂಬ ಮೂರರ ಮೇಲೆ ಮನುಷ್ಯನಿಗಿರುವ ಮೋಹ ; ಈಷಣತ್ರಯ : ಪ್ರಚುರಂ ಪುತ್ರೋತ್ಸಗಾಗೆ . . . ಮೂಱ ನಂಬದೆರಡಂ ಬಟ್ಟೊಂದಱೊಳ್ ನಿಲ್ಲದಾ ವಚನಬ್ರಹ್ಮದೆ ಮುಕ್ತಿಯೇ (ಶೋಮೇಶ. ೦೦೦). ೩. ಸತ್ತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಮೂರುಗುಣಗಳು: ತ್ರಿಗುಣ : ಮೂಱಱಿಂದಲಿ ಹೊಱಗೆ ತೋಱಿರುವದನು ಗುರು ಆಱಱಿಂದಱೊಳಗೆ ತೋಱದಡೆ ಶಿಷ್ಯ ತಾನಾಱಡಿಗೊಂಬ (ಸರ್ವಜ್ಞ. ೬೦). ೪. [ವೀರಶೈ] ಇಷ್ಟ, ಪ್ರಾಣ ಮತ್ತು ಭಾವ ಎಂಬ ಮೂರು ಲಿಂಗಗಳು : ಆಱಕ್ಕೆ ಆಱ ನೆಲೆ ಮಾಡಿ ಮೂಱಕ್ಕೆ ಮೂಱ ಸಂಬಂಧಿಸಿ ಐದಕ್ಕೆ ಇನ್ನು ಪ್ರತಿಯಿಲ್ಲವೆಂದು ಅಱಿದ ವಿರಕ್ತರು ಪುರಾತನರಂತೆ ಸಮ್ಯಜ್ಞಾನಕ್ರೀಯಿಂದಲೆ ಆಚರಿಸುವುದು (ಶಿಪಪ. ೨೯-೨೩). ಮೂರು: ೧. ಅಂತೂ ಮೂರಕಂ ಗ ೭೨ (ಜ್ಯೋತಿ. ೦೯೪೩, ೪೬-೪೬; 1407); ಅವನಿಗೆ ಮುಗಿಲು ಮೂರೇ ಗೇಣು ಉಳಿದಂತೆ ಭಾಸವಾಯಿತು (ಸ್ಮೃತಿ. ೩೬೦).

**ಮೂರುನಾಮ**=ಶ್ರೀವೈಷ್ಣವರು ಹಣೆಯ ಮೇಲೆ ಉದ್ದುದ್ದವಾಗಿ ಧರಿಸುವ (ಎರಡು ಬಿಳಿ ಮತ್ತು ಮಧ್ಯೆ ಒಂದು ಕೆಂಪುಬಣ್ಣದ) ಮೂರು ಗೆರೆ. –ನಾಮ : ಮೂರುನಾಮದವ ಸ್ವರ್ಗಕ್ಕೆ ಹೋದರೆ ಹನ್ನೆರಡು ನಾಮದವ ಎಲ್ಲಿ ಹೋದಾನು ? (ಗಾದೆ). ಮೂರುನಾಮ ಹಾಕು= (ಆಲಂ) ನಂಬಿಸಿ ಮೋಸಮಾಡು, – ವಂಚಿಸು : ಅವನು ಕೆಲಸ ಕೊಡಿಸುತ್ತೇನೆಂದು ಹಣ ತೆಗೆದುಕೊಂಡು ಎಲ್ಲರಿಗೂ ಮೂರುನಾಮ ಹಾಕಿ ಹೊರಟುಹೋದ (ರೂಢಿ). **ಮೂವರ್**, ಮೂವರ್, ಮುವ್ವರು, ಮೂವರು= ಮೂರುಜನ ; ಮೂರುಮಂದಿ : ತನ್ನ ತಮ್ಮಂ ವಿಚಿತ್ರವೀರ್ಯಂಗಾ ಮೂವರ್ ಕನ್ನೆಯರಂ ಪಾಣಿಗ್ರಹಣಂಗೆಯ್ವಾಗಳ್ (ಹಂಪಶಾ. ೦-೬೪ ವ) ; ಆನುಂ ದುಶ್ಶಾಸನನುಂ ನೀನುಂ ಮೂವರೆ ದಲಾತನುಂ ಕಱಿದ ಬೞಿಕ್ಕಾನುಂ ನೀನೆ ದಲ್ (ಗದಾಯು. ೩-೦೦); ನಗರಲ ಪನ್ನಿರ್ವ್ವರು ಮಹಾಪರಿಶೆಯು ಎಡೆಕೊಡ ಮುವನ್ನಾರ್ಟ್ಟ್ರಮಣ್ಣುಗಳುಂ ಸಕ್ಕಿ (ಎಕ. III, ಶಿಂಶ ೦೩೩-೯; ಸು. 970); ಅತ್ತೆ ಮಾಯೆ ಮಾವ ಸಂಸಾರಿ ಮುವ್ವರು ಮೈದುನರು ಹುಲಿಯಂಥಾ ಆವದಿರು (ಪುಹಾದೇ. ೨. ೦೪೩-೩೨೮); ಹಗೆಗಳುಳಿದರಿ ಮೂವರೆಂದನು ಭಾನುಸುತ ಮುಳಿದು (ಕುವ್ಯಾ.ಕ. ೯-೦೬); ಮಡದಿಯರು ಮೂವರಿಗೆ . . . ವಿಂಗಡಿಸಿ ಕೊಟ್ಟನು ನೃಪತಿ ಪರಮೋದನವನುಚಿತದಲಿ (ಕೊರಾ. ೦-೭-೩೭). **ಮೂಱುಕೊಡೆ ಅಣ್ಣಿಯರ್**=ಒಬ್ಬಾತನ ಹೆಸರು : ಸಿಯಗೆಲ್ಲರ್ ಮಱುಗೆರೆನಾಡುಮೂನೂಱುವನಾಳೆ ಮೂಱುಕೊಡೆ ಅಣ್ಣಿಯರ್ ಪಿಣ್ಣನೂರಾ ಏಱಿನುಳ್ಳೆಱಿದು ಬಿಟ್ಟಾರ್ (ಎಕ. XVI, ಕುಮುಕ. ೫೬-೩; 750). **ಮೂಱುಬಟ್ಟೆ** = ೧. ಹುಟ್ಟು, ಬೆಳವಣಿಗೆ ಮತ್ತು ಸಾವುಗಳೆಂಬ ಮೂರು ಪಥ : ಮೂಱುಬಟ್ಟೆಯನಳಿದ ಬಟ್ಟಬಯಲೇ ದಿಟ್ಟಿದಿಟ್ಟಿಯಿಟ್ಟಿಪ್ಪ ನಿಜಲಿಂಗದೊಳಗೆಱಕಗೊಳೆ (ಅಪಶಂ. ೨೮೦-೦೨೯೧). ೨. ಮೂರು ದಿಕ್ಕು. – ಹಾದಿ : ನಟ್ಟನಡುವಿನ ಬದುಕಿಗೇಕೆ ಚಿಂತಿಸುತ್ತಿರುವೆ ಕಟ್ಟಕಡೆಯಲಿ ಮೂಱುಬಟ್ಟೆ ಕಾನಲ್ಲವೆ (ಪುರಂದ. ದಾ. ೨-೭೯-೦). **ಮೂಱುರಾಯಕಲಿಕಾವರ**=ಒಂದು ಬಿರುದು : ಶರಣಾಗತವಜ್ರಪ್ರಾಕಾರಂ ಮೂಱುರಾಯಕಲಿಕಾವರ . . . ಸೋಮೇಶ್ವರದೇವ (ಕಶಾ. ೩೦-೪೨-೦೬; 1124). **ಮೂಱುರಾಯರ ಗಂಡ**=ಒಂದು ಬಿರುದು : ಮೂಱುರಾಯರ ಗಂಡಾಂಕಃ ಪರರಾಯಭಯಂಕರಃ ಹಿಂದುರಾಯ ಸುರತ್ರಾಣಯ (ಇ)ತ್ಯಾದಿ ಬಿರಿ(ರು)ದೋ(ದೋ)ನ್ನತಃ ತಸ್ಮಿಂನಚ್ಯುತಭೂಪಾಲೀ ಪಾಲಯತ್ಯ

ಖಿಲಾಂ ಮಹೀಂ (ಇಕ. IV. ೩೩೦-೦೦ ; 1538). ಮೂಱುರಾಯಾಸ್ಥಾನಕಲಿ=ಒಂದು ಬಿರುದು : ಬನವಾಸಿಪುರವರೇಶ್ವರಂ ಗಣ್ಡರ ಗಣ್ಡ ಗಣ್ಡಭೇರುಣ್ಡಂ ಮೂಱುರಾಯಾಸ್ಥಾನಕಲಿ . . . ನಾಮಾದಿ ಸಮಸ್ತ ಪ್ರಸಸ್ತಿ ಸಹಿತಂ (ಕಇ. IV, ೪೦-೬; 1046).

[ದೇ.॥ ತಮಿ. ಮೂನ್ಱು, ಮೂಣ್ಱು; ಮಲ. ಮೂನ್ನು; ತುಳು. ಕೊಡ. ಮೂಂದ್; ಮೂಜಿ; ತೆಲು. ಮೂಡು; ಗದಬ. ಮೂಂಡ್; ಗೊಂಡಿ. ಮೂಂಡ್, ಮೂಂದ್, ಮುಂಡ್, ಮುಡು; ಕುಇ. ಮೂ, ಮುಂಜಿ]

**ಮೂಱುಂಕೇರಿ** (ನಾ). ಮೂರುಕೇರಿ, — ಬೀದಿ : ಪುರಿಗೆಱೆಯಾ ಮೂಱುಜಿಕ್ಕೇರಿಯಾ ಪಟ್ಟಗಾಱರ ಸೇಣೇ(ಣಿ)ಯನಿತ್ತ ಧರ್ಮ್ಮ ನಾಲ್ವತ್ತು (ಎಇ. VI, ೦೬೬-೯; 783). ☞ "ಒಂದು ನಿರ್ದಿಷ್ಟಪಂಗಡದ ವಿಭಾಗ, ಒಂದು ವರ್ಗಕ್ಕೆ ಮೀಸಲಾದ ವಸತಿ, — ಕೇರಿ; ಒಂದು ಊರಿನ ವಿಭಾಗ" (ಎಇ. VI, ೦೬೩ ೦೩೪). [ಮೂಱು + ಕೇರಿ]

**ಮೂಱುಗೆಯ್** (ಕ್ರಿ). ಮೂರುಭಾಗಗಳನ್ನಾಗಿ ಮಾಡು; —ವಿಂಗಡಿಸು: ಅಂತು ಮೂಱುಗೆಯ್ದು ಋತುಗಳಂ ಪಡೆವ ಪೃಥ್ವಿಯಂತೆ ಋತುಮತಿಯಾಗಿ ದೇವಕಿ ಪೆತ್ತ ಮಕ್ಕಳನತ್ತ ನೈಗಮದೇವನೆತ್ತಿಕೊಂಡುಯ್ವಂ (ಅರ್ಗಪು. ೬-೩೯ ವ). [ಮೂಱು + ಕೆಯ್₁]

**ಮೂಱುಜಾತ್ರೆ** (ನಾ). (ವರ್ಷದಲ್ಲಿ ನಡೆಯುವ) ಮೂರು ಉತ್ಸವ,— ಪರ್ವ : ಅಲ್ಲಿ ಸೌಧರ್ಮೇಂದ್ರಪ್ರಮುಖಸುರಾಸುರಸಮಿತಿ ವರ್ಷಂಪ್ರತಿ ಮೂಱುಜಾತ್ರೆಯೊಳಪ್ಪಾಷ್ಟಿಕಮೆಂಬ ಮಹಾಮಹಿಮೆಯು ಮಾಳ್ಕಂ (ಚಾಸ್ತಪು. ೨೩-೩). [ಮೂಱು + ಜಾತ್ರೆ]

**ಮೂಱುಸಂಜೆ**, ಮೂರುಸಂಜೆ (ನಾ). ೧. ದಿನದ ಮೂರು ಸಂಧಿ ಕಾಲಗಳು ; ಬೆಳಗು, ಮಧ್ಯಾಹ್ನ ಮತ್ತು ಸಂಜೆ ; ತ್ರಿಸಂಧ್ಯೆ : ಮೂಱುಸಂಜೆ [ಪಾಠಾಂ. ಧ್ಯೆ]ಯೊಳಸುನಯಂ ಮಿಗೆ ತನ್ನ ಗುರುಪದ ವನಜರಜಮೋ ರಂತೆ ತನಗವತಂಸಮಾಗಿರಲು ಸ್ತುತಿಸುತಂ (ಬಸಪು. ೩೯-೯). ೨. ಸಾಯಂಕಾಲ ; ಮುಚ್ಚಂಜೆ : ಒಂದು ಯೋಜನಪರ್ಯ್ಯಂತಂ ಮೂಱುಸಂಜೆಯೊಳಲ್ಲದುಳಿದ ಪೊತ್ತಜೆಱೊಳು . . . ಸುಡಿಗುಂ (ಚಾಸ್ತಪು. ೦೩-೯). **ಮೂರುಸಂಜೆ** : ೨. ಮೂರುಸಂಜೆಯ ಹೊತ್ತಿನೊಳಗೆ ಬಲುಸನ್ನಾಹದಿಂ ಸೇನೆಯಂ ನೆರಹಿ ಉಳುಕಲಿನ ಭಟರ್ಗಂ ಕರಸಿ ಕರ್ಪೂರವೀಳ್ಯವನ್ನಿತ್ತು ಗುರು ಸುಡಿದನು (ಕುಕಂಗ. ೩೩-೪೩) ; ಒಂದು ದಿನ ಮೂರುಸಂಜೆಯಲ್ಲಿ ಕೆಲವರು ತಮ್ಮ ತಮ್ಮ ಕೊಡಗಳನ್ನು ತಕ್ಕೊಂಡು ಹೊಳೆಯ ನೀರಿಗೆ ಹೊರಟರು (ಕದ್ವ. ೩೬). [ಮೂಱು + ಸಂಜೆ]

**ಮೂಱೂರ್** (ನಾ). ಒಂದು ಊರಿನ ಹೆಸರು : ಆನ್ತೆ ಬನ್ದ ತಾಯೂರ ಇಗ್ಗಲಿಯ ಅರಿಷ್ಠರ ಮೂಱೂರ ಸನ್ನಿನಲ್ಲಿ ಕಣ್ಣಾಲಿಗಾಲ ಮೂಡಣ ಪೇರೊಟ್ಟಿಯಿಂ (ಎಕ. III, ಕಂಪಸ. ೦೩೯-೦೯; 916 ?) ; ಮೂಱೂರ ಗ್ರಾಮದೊಳಗೆ ತಮ್ಮ ಹರವರಿಯ ಭೂಮಿಯ ಕಾರಗದ್ದೆ ಯೊಳಗೆ . . . ಗದ್ದೆ ಮೂಡೆ ೧೦ (ಎಇ. XXVII. ೦೩೦-೪೦; 1256). [ಮೂಱ್ + ಊರ್]

**ಮೂಱೆಲೆ**, ಮೂರೆಲೆ (ನಾ). ೧. ಮೂರುಎಲೆ ; ಮೂರುದಳ : 'ಮೂಱೆಲೆಗನ್ನೆ', 'ಮೂಱೆಲೆಹೊನ್ನೆ' ಪರಾ. **ಮೂರೆಲೆ** : ೨. ಇಸ್ಪೀಟಾಟದಲ್ಲಿ ಮೂರು ಮೂರು ಎಲೆಗಳನ್ನಿಟ್ಟುಕೊಂಡು ಆಡುವ ಒಂದು ಬಗೆಯ ಆಟ ; ಫರೇಲ್ : 'ಮೂರೆಲೆಯಾಟ' ಪರಾ. [ಮೂಱು + ಎಲೆ₁]

**ಮೂಱೆಲೆಗನ್ನೆ** (ನಾ). ಒಂದು ಬಗೆಯ ಸಸ್ಯ : "ಮೂಱೆಲೆಗನ್ನೆ— ವಿದಾರಿಗಂಧ, ಸಾಲಪರ್ಣಿ, ಅಂಶುಮತಿ, ಸ್ಥಿರೆ, ಧ್ರುವೆ" (ಶಾಶಾ. ೬). [ಮೂಱೆಲೆ + ಕನ್ನೆ₁]

**ಮೂಱೆಲೆಹೊನ್ನೆ**, ಮೂರೆಲೆವೊನ್ನೆ, ಮೂರೆಲೆಹೊನ್ನೆ (ನಾ). = ಮೂಱೆಲೆಗನ್ನೆ : "ಶಾರಿಬಾ__ಮೂಱೆಲೆಹೊನ್ನೆ" (ಜಾಶಟೀ. ೨-೨-೩೦) : "ಅಂಶುಮತಿ— ಒಂ(ಹೊಂ)ದೆಲಗ, ಮೂಱೆಲೆಹೊನ್ನೆ, ೯೧೭" (೬ಶಧಿ. ೫) ; ಕಳ್ಳಂಗಡಲೆಯ ಬೇರು . . . ಮೂಱೆಲೆಹೊನ್ನೆ, ಇವ ಅಪ್ಪಾವಶೇಷವಾಗಿ ಕಾಸಿ ಕೊಡಿಸಲು ವಾತಶೋಣಿತ ಶಮನವಹುದು (ವೈದ್ಯಸಾ. I, ೪೩೯). **ಮೂರೆಲೆವೊನ್ನೆ** : "ಗಳಃ – ಮರದೇರಣ, ತದುಕು, ಮೂರೆಲೆವೊನ್ನೆ" (೬ಶಂ. ೯೯). **ಮೂರೆಲೆಹೊನ್ನೆ**: "ದಾವನಃ – ಚಿತ್ರಮೂಲ, ಮೂರೆಲೆಹೊನ್ನೆ" (೬ಶಂ. ೬೫) ; ನೆಲಬೇವು . . . ಮೂರೆಲೆಹೊನ್ನೆ, ಶುಂಠಿ ಇವುಗಳ ಕಷಾಯವಿಕ್ಕಿ ಸೇವಿಸಿದರೆ ವಾತಜ್ವರಂ ಕೆಡುಗುಂ (ಸಕವೈ. ೬೫). [ಮೂಱೆಲೆ + ಪೊನ್ನೆ]

**ಮೊಟ**, ಮೊಳ₁ (ನಾ). ೧. ಕಿವಿಯು ಹರಿದುಹೋದವನು ; ಕಿವಿಯಿಲ್ಲದವನು : "ಕಿವಿಯಿಲ್ಲದಂ ಮೊಳ[ಟ]ನಕ್ಕುಂ" (ಶಬ್ದಮಣಿ. ೦೦೫-೬). ೨. ಬುದ್ಧಿಯಿಲ್ಲದವನು ; ತಿಳಿಗೇಡಿ ; ಮೂಢ : ಗಾಳಗಣ್ಣರಿಮವಾಸೆಯ ಮಸಗೆಯಂತೆ ಬೇಡಳೊಂದೊತ್ತೆಯನಿಲ್ಲ ಪೆಣ್ಣನಕ ಪಾವುಗೆಯಂ ಗಡಿಗಟ್ಟಿ ರೇವಗಳ್ ಪತ್ತಿದುವಾದೊಡಂ ಬಱಿಯ ಸೋಲಮೆ ನೋಡಿರೆ ಮೊಳ[ಟ] [ಪಾಠಾಂ. ಲ]ನಾಟವಂ (ಅಪುಜ್ಞ. ೬-೦೫ ; ಸೂಕ್ತಿ.ಸು.೬-೯೩೦ ನೋ). 'ಕುನ್ನಿಮೊಟ' ಪರಾ. (ಗು). ೩. ಹರಿದು ಹೋದ ; ಭಂಗಹೊಂದಿದ ; 'ಮೊಟಗಿವಿ' ಪರಾ. **ಮೊಳ₁** : ೧. "ಮೊಳಃ__ಕರ್ಣಹೀನಂ" (ಕಾಕೈ. ೨೬೨). ೨. ತುತ್ತಿನಾಸೆಗೆ ಲಿಂಗವ ಕೊಟ್ಟುಹೋಗುವ ವ್ಯರ್ಥಮೊಳ ನಿನಗೆ ಗುರುವಾದನಲ್ಲದೆ (ಶಶಸಂ. ೩೬೨-೦೯೦) : ಚಂಡಿತನವಲ್ಲೀಸಃದಿನ ಕದ್ದಿಂದ ಮೊಳನನೇನ ಮಾಡುವ ಮೆದನು (ಸಂಶಕ. ೧೯-೦೦೯). 'ಕಾಳುಮೊಳ' ಪರಾ. ೪. ಯಾವುದಾದರೂ ಅಂಗದ ನ್ಯೂನತೆಯುಳ್ಳವನು ; ಅಂಗಹೀನ : "ಮೊಳ_ ಮುಕ್ಕ, ಅಂಗಹೀನ" (ಶಾಶಕೋ. ೩೯). ೫. ಬರಿದಾದ ಸ್ಥಿತಿ ; ಖಾಲಿಯಾಗಿರುವಿಕೆ ; ರಿಕ್ತತೆ : (ಕ). ೬. ಅಲ್ಪನಾದವನು ; ಕ್ಷುದ್ರ : ಖೂಳರು ಮೊಳರು ಕಾಳರು ಇದು ನಾಚಿಕೆಗೇಡು (ಅರಕು. ೩೯೩-೦೯). ೭. ಅಲ್ಪವಾದ : ಸ್ತ್ರೀಪುರನೆಚ್ಚು ಜಯಿಸಿದೊಂದು ಮೊಳವಿದಾಯ ಮೇತಕೆ ಪಂಚಶರಗೆ (ಶರಶ. ೬-೮೦).

ಮೊಳಮಾಳುವ = ಅಲ್ಪನಾದವನು ; ಕ್ಷುದ್ರ : ಆವನೊ ಆ ಚಿಕ್ಕಂದಿನ – ಬಿಡದ ಜಗಳ . . . ಮೊಳ ಮಾಡುವ ! (ಕುಂತ್ರಕ. ೦೦೬-೯). 'ಮೂಢ' ಹೋ. ☞ ಈ ಶಬ್ದದಲ್ಲಿ 'ಟ' ದ ಅಸ್ತಿತ್ವ ವಿಚಾರಣೀಯವಾಗಿದೆ. [ದೇ.॥ ತಮಿ. ಮಲ. ಮೊ಴]

**ಮೊಟಗಿವಿ**, ಮೊಳಕಿವಿ (ನಾ). ಹರಿದಿರುವ ಹಾಲೆಗಳುಳ್ಳ ಕಿವಿ ; ಹರುಕುಕಿವಿ : ಮತ್ತಂ ಮೊಳ[ಟ]ಗಿವಿಯುಂ ಪೊಱಿವಾಯ್ದು ಪಲ್ಲುಂ . . . ತೊಟ್ಟ ಕಾಸಿಯುಂ ಬೆರಸು [ಹಂಸೆಯೊಳಗೆ ಹೊಱಸು ಬಂದಿರ್ಪಂತೆ ಬರ್ಪುದುಂ] (ವಡ್ಡಾರಾ. ೬-೨೨೫). **ಮೊಳಕಿವಿ** : ಮುಂಡೆಗೆ ಗಂಡ ಬಾಳನು, ಮೊಳಕಿವಿಗೆ ಓಲೆ ಬಾಳದು (ಗಾದೆ). [ಮೊಟ + ಕಿವಿ₁]

**ಮೊಟೆ₁**, ಮೊಳೆ (ನಾ). ೧. ಕಿವಿಯಿಲ್ಲದವಳು ; ಕಿವಿಹರುಕಿ : "ಮೊಟೆ = ಕಿವಿಯಿಲ್ಲದವಳ್, ಕರಗದ ನಾಳೆ (ಜೂಳೆ ?)" (ಕಸುರ. ಕಂ. ೦). ೨. ಕೆಟ್ಟವಳು ; ದುಷ್ಟೆ : "ಕುಕನ್ನೆಯೊಳ್ ಜೂಳೆಯೊಳ್ ಮೊಟೆಯಾಳ್ಕ್ಕಂ" (ಸಂಜೀಶ. ೦೫); ಕೇಡೆನಿಸಿರ್ದ ಮೊಟೆ ನಿಮ್ಮಭ್ಯುದಯಮಂ ನೋಟ್ಪಳೇ (ಶ್ರೀಚಾಶ. ೫-೦೦). **ಮೊಳೆ** : ೧. ಬಂದವರಿವರಾರು ಅಂದಗೇಡಿಯ ಮೊಳೆಯ ಮಕ್ಕಳು (ಸಕಶ. II, ೩೩೬-೦೮೬) ; ಇವ್ವರಲ್ಲಿ ಸಹಸ್ರಸಂಖ್ಯೆಯ ಮದ್ದುಕಟಲದ ದೂಮುಕಾತಿಯರಿದ್ದೆಸೆಯ ಕಿವಿಗೊಯ್ಕಿಯರು ಮೊಳೆಯರು ಮೂಕ್ಕಿಯರು (ಕೊಶಚಾ. ೫-೨-೩೯) ; ಅಸುರೆಪಡೆ ಮುಡಿದರಿದೀ ಪರಿಯೊಳೀ

ಮೋಲೆಯಿಂದೀ ಮುಪ್ಪದಿ (ವಂಕಾರಾ. ೬-೯೭-೬). ೨. ಕದವ ಮುಚ್ಚಿದ ೪ಕೋ ಗಮ್ಯಾಳ ಮೂಳಿ (ಕುಠಂದ. ೨-೯೬ ಶಲ್ಯ) : ದುಷ್ಟಮೂಳಿ ಪೊಗಲೀಯಳು . . . ಎಂದು ಪತಿಕಾರ್ಯವುಂ ನೆನೆದು ಚಿಂತಿಸಿದ ಮರುತಭವನು (ವಂಕಾರಾ. ೫-೩-೦೫). ೩. ಬರಿದಾಗಿರುವಿಕೆ ; ಬೋಳಾಗಿರುವಿಕೆ : 'ಕತ್ತುಮೂಳಿ', 'ಕಾಲುಮೂಳಿ' ಪರಾ. ೪. ಕಿವಿಯಲ್ಲಿ ಯಾವ ಆಭರಣವೂ ಇಲ್ಲದವಳು ; ಬೋಳುಕಿವಿಯವಳು : (?). ೫. ಗಂಡನಿಲ್ಲದವಳು : ವಿಧವೆ : ನನ್ನ ಮಸ್ತ್ರವನ್ನು ಕಳೆದುಕೊಂಡು ತಲೆಗೆ ಮುಸುಕೆಳೆದುಕೊಂಡು ಮೂಳ್ನಾನೊಬ್ಬಳು ನಿನ್ನ ಪ್ರಾಣಕ್ಕೆ ತಗುಲಿ ಬಿದ್ದಿದ್ದೇನೆ (ಕುಹಾಗ. ೨). ೬. (?) : ಹೋನು ೧೫ ಮೂಳಿ ತೆಬಿ ಕೊಟರು (ಕೆಇಜು. ೦೯೨೯. ಉಡುಬಿ. ೪೯೦-೦೪ ; 1201).

[ ಮೋಟ + – ಇ₂./ ತಮಿ. ಮಲ. ಮೂಳಿ ]

**ಮೋಟೆ₂** (ನಾ). (ಮುಚ್ಚುಳವನ್ನುಳ್ಳ) ಪಾತ್ರೆಯ ಅಥವಾ ಗಿಂಡಿಯ ಸೊಂಡಿಲಿನಾಕಾರದ ಕೊಳವೆ ; ನಳಿಕೆ : "ಮೋಟೆಯೆಂದು ಕಿವಿಯಲ್ಲದಳಂ ಕರಗದ ಜೋಳಿಮುಮಾಕ್ಕ" (ಕಮುದ. ಪ. ೩೩ ಶ್ರಯೋ) ; "ಕುಕನ್ಯೆಯೊಳ್ ಜೋಳಿಯೊಳ್ ಮೋಟೆಯುಕ್ಕ" (ಸಂಕೇಪ. ೦೫).

[ ದೇ.? ತಮಿ. ಮೂಟ್ಟೆ ]

**ಮೋಟೆವಳ್ಳಿ** (ನಾ). ಒಂದು ಊರಿನ ಹೆಸರು : ಅರಸನ್ಗೆ ಬಾಳ್ಗಚ್ಚು ಪಲ್ಮಡಿಉಂ ಮೋಟೆವಳ್ಳಿಉಂ ಕೊಟ್ಟಾರ್ (ಪ್ರಾಇಒ. ೦೯೩೬, ೦೬-೦೨ ; 450).

[ ? + ಪಳ್ಳಿ₁ ]

**ಮೋಟ್ಯಾಡು** (ನಾ). (?) : ಕಸವಯ್ಯ ಆಳ್ದೋನ ಬೆಸದೊಳ್ಮಿಱು ವಕ್ಕದ ಮೋಟ್ಯಾಡಿನೊಳ್ಕಾದಿ ಇನ್ನರಂ ಕೊಂದು ತಾನುಂ ಸಗ್ಗಯಾದನ್ (ಎಕ. X, ಶ್ರೀನಿ. ೨೨೯-೬ ; ೯೦೦).

[ ? + ಕಾಡು₂ ]

**ಮೋಟಿಸ್ಗಡಿ** (ನಾ). (?) : ಪನ್ನೆರಡುಗದ್ಯಾಣದಿಂದೊಳಗಾದ ದಣ್ಡವುಂ ಮೋಟಿಸ್ಗಡಿ ಒಳ್ದೆಣ್ಣೆಯ×ಯುಮ ಬಿಟ್ಟಂ (ಎಕ. XI, ದಾವಿ. ೦೫೨-೩೯ ; ೨೮೦).

[ ? ]

**ಮೋಟ್ಟಿಅರಸ** (ನಾ). ಒಬ್ಬಾತನ ಹೆಸರು : ಸಿಯುಕೆಲ್ಲ ಕೆಸುವಣ್ಣ ನಾಡಾಳೆ ಮೋಟ್ಟಿಅರಸರಾಳ್ ವಾರಿದಾಸಕರಿಯು ತಮ್ಮನ್ (ಎಕ. XVI, ತುಮಕೂ. ೯೫-೩ ; 780).

[ ? + ಅರಸ₁ ]

**ಮೃಗ** (ನಾ). ೧. ಚತುಷ್ಪಾದಿ ; ಪ್ರಾಣಿ ; ಪಶು : "ಮೃಗದಸ್ಲೆಯುಂ ರೂಪಮೆಂಬುದು" (ಹಲಾಯು. ೦೩೬-೩೦) : ಮೃಗ ಪಶು ಶಕುನಿಗಣಂಗಳೊಳಗಣಿತನಿಜಜಾತಿಜನಿತಭಾಷೆಗಳಿಂದಂ ನೆಗಬ್ದಂತಿರೆ (ಕವಿರಾ. ೦-೬) : ಮೃಗಮೆಲ್ಲಂ ಕೃಷ್ಣಮೃಗಂ ಖಗಮೆಲ್ಲಂ ಕೋಗಿಲೆ . . . ಎನಿಸಿದುದಾಗಳ್ (ವರ್ಧ. ೬-೩೦). ೨. (ಕಾಡಿನಲ್ಲಿರುವ) ದುಷ್ಟಜಂತು ; ಹಿಂಸ್ರ ಪ್ರಾಣಿ : ನೆಲಸಂ[ಗಾ]ಳಿಯುಂ ಕಮ್ಮಂ ಮೃಗವುಮನಱಿದು ಕಾಲಾಳೊಳಂ ಕುದುರೆಯೊಳಮೊಳಗಂ ಬರಲಾನೆ ಬಲ್ಲಂ (ಕಂಪಾ. ೫-೯೩ ವ). ೩. ಜಿಂಕೆ ; ಎರಳೆ : "ಏಣಃ, ಕುರಂಗಃ, ಹರಿಣಃ, ಮೃಗಃ — ಈ ೪ ಹುಲ್ಲೆ" (ಹಲಾಯು. ೩೯-೬೬) ; ಮೃಗಪುಂ ಪವನಂ . . . ವೃಷಭನಂ ಪರಸೇಜ್ ಸಭಕ್ಕೆ ಸಲ್ವುದುಂ (ಜಗು. ೦-೩೬) ; ಹೊರಳುತ್ತ್ರತ್ರಳು ಆತನ ಮಾತೆ ಸರಳುಚೇದ ಮೃಗದೊಲು ವಿಖ್ಯಾತೆ (ಜೈಶಾ. ೦೨-೩೦ ರಗಳೆ). ೪. (ಹೊಟ್ಟೆಯ ಗ್ರಂಥಿಯೊಂದರಲ್ಲಿ ಸುಗಂಧದ್ರವ್ಯವನ್ನು ಉತ್ಪತ್ತಿ ಮಾಡುವ) ಕೊಂಬಿಲ್ಲದ ಒಂದು ಜಾತಿಯ ಜಿಂಕೆ ; ಕಸ್ತೂರಿಮೃಗ: ಮೃಗನ ನಾಭಿ ಸೊಸಲಿಗೊಪ್ಪುವ ಮೃಗಕಲಾನನೆ ದೇವಿಯು (ಶಿವಾಕ್ಯ. ೬೩-೨). ೫. ಕಸ್ತೂರಿಮೃಗದಿಂದ ಉತ್ಪತ್ತಿಯಾಗುವ ಒಂದು ಬಗೆಯ ಸುಗಂಧದ್ರವ್ಯ ; ಕಸ್ತೂರಿ ; ಮೃಗಮದ : ಮೃಗದಂತಿರೆ ಮಗಮಗಿಸುವ ಸುಗಂಧ ವರತ್ಕಲಕ್ಷಣದ ಮೋಚನ ಸೊಡರ್ವಕ್ಕುಗಳಿಂದೆ ಬೊಟ್ಟನಿಟ್ಟಳ್ ಮೊಗದೊಳ್ಕತ್ತುರಿಯ ತಿಲಕದಂತಿರೆ ಹರಿಯಾ (ಅರ್ಧಕಿ. ೬-೫೬). ೬. (ದೇಹದ ಮೇಲೆ ವಿಶಿಷ್ಟವಾದ ಗುರುತುಗಳುಳ್ಳ) ಒಂದು ಬಗೆಯ ಆನೆ : "ಭದ್ರಃ, ಮಂದಃ, ಮೃಗಃ– ಎಂದಿಂತು ಆನೆಗಳ್ ಮೂಱುತೆಱನಕ್ಕುಂ" (ಹಲಾಯು. ೩೬-೬೨) ; ನಯನಿಪುಣಸೂತ್ರಧಾರರ್ ನಿಯಮಿಸುವರ್ ಭದ್ರಮಂದಮೃಗಸಂಕೀರ್ಣಾನ್ವಯದ ನೃಪಕರಿಗಳಂ (ಕುಶ್ಚಕು. ೨-೫೬). ೭. ಚಂದ್ರಬಿಂಬದಲ್ಲಿರುವ ಜಿಂಕೆಯನ್ನು ಹೋಲುವ ಗುರುತು : "ಮೃಗಃ, ಅಂಕಃ . . . ಕಳಂಕಃ . . . ಈ ೮ ಚಂದ್ರಮಂಡಲದ ನಡುವಣ ಕರ್ಪು" (ಹಲಾಯು. ೯-೪೫). ೮. ಹುಡುಕುವಿಕೆ ; ಅನ್ವೇಷಣೆ : "ಅನ್ವೀಕ್ಷಣಂ, ವಿಚಯನಂ, ಮಾರ್ಗಣಂ, ಮೃಗಣಾ, ಮೃಗಃ – ಈ ೫ ಹುಡುಕಿ ನೋಡುವಿಕೆ" (ಸಿದ್ಧಾಂತಿ. ೩೬೬). ೯. ಬೇಟೆ ; ಶಿಕಾರಿ : 'ಮೃಗವ್ಯಸನ' ಪರಾ. ೧೦. ಯಾಚನೆ ; ಬೇಡಿಕೆ. ೧೧. ಮಾರ್ಗಶೀರ್ಷಮಾಸ. ೧೨. ಒಂದು ಬಗೆಯ ಸಸ್ಯ : "ಮೃಗಃ – ಮೃಗ, ಹುಳಿಮಾವು" (ಶಿಶಂ. ೦೨೬). ೧೩. [ಜ್ಯೋತಿ] ಒಂದು ನಕ್ಷತ್ರದ ಹೆಸರು ; ಮೃಗಶೀರ್ಷ ನಕ್ಷತ್ರ : "ಮೃಗಶಿರೆಯುಂ ಮೃಗವೆನಿಕ್ಕುಂ" (ಶುಂಗರಾ. ೦೨-೬). ೧೪. ಒಂದು ರಾಶಿಯ ಹೆಸರು ; ಮಕರರಾಶಿ : ಶನಿ ಘಟ ಮೃಗಕ್ಕೆ ಗುರು ಝಷ ಧನುಗೆ . . . ತಮಂಶಕಕ್ಕುಮಧೀಶರ್ (ಜಾತಕ. ೦-೨೫). 'ಮೃಗಗೃಹ' ಪರಾ.

[ ಸಂ. ]

**ಮೃಗಗೃಹ** (ನಾ). [ಜ್ಯೋತಿ] ಒಂದು ರಾಶಿಯ ಹೆಸರು ; ಮಕರರಾಶಿ : ಬಹುತನಯುಂ ಬಹುವಿತ್ತಂ ಮಹೀಶ್ವರಂ ಮೇಣ್ ಮಹೀಶ್ವರಾಧೀಶ ಸಮಂ ಮಹಿತನಯುಂ ನೆಲಸಿರೆ ಮೃಗಗೃಹದೊಳ್ ತನ್ನನುಜನೆನಿಸುಗುಂ (ಜಾತಕ. ೦೬-೨೧).

[ ಸಂ. ]

**ಮೃಗಜಲ** (ನಾ). ೧. (ವಿಶೇಷವಾಗಿ ಮರಳುಗಾಡಿನ ಪಥದಲ್ಲಿ) ನೀರಿಲ್ಲದಿದ್ದರೂ ದೂರದಲ್ಲಿ ನೀರಿನ ಹರವಿನಂತೆ ಕಾಣುವ ಒಂದು ಭ್ರಮೆಯ ನೋಟ. ೨. (ಅಲಂ) ಬಿಸಿಲುಗುದುರೆ ; ಭ್ರಮೆ : ಇಂದು ಅವೆಲ್ಲವೂ ಮೃಗಜಲದಂತೆ ಮಾಯವಾದವು (ಕಂಪ. ೩) ; ಅವರು ಧಾವಿಸುತ್ತಿದ್ದುದು ಈ 'ಮೃಗಜಲ'ದ ಬೆನ್ನ ಮೇಲೇರಿ (ಕುಂಗಕು. ೬೬). 'ಮೃಗತೃಷ್ಣೆ' ನೋ.

[ ಸಂ. ]

**ಮೃಗಜಾಲಿಕ** (ನಾ). (ಬೇಟೆಯಲ್ಲಿ) ಪ್ರಾಣಿಗಳನ್ನು ಹಿಡಿಯಲು ಬೀಸುವ ಬಲೆ : "ಮೃಗಜಾಲಿಕಂ ವಾಗುರಂ ಬೆಳ್ಳಾರವೆನಿಸಿಕ್ಕು" (ಶುಂಗರಾ. ೦೦೨-೫).

[ ಸಂ. ಮೃಗಜಾಲಿಕಾ ]

**ಮೃಗಜಾಲಿಕೆ, ಮೃಗಜಾಳಿಕೆ** (ನಾ). = ಮೃಗಜಾಲಿಕ. **ಮೃಗಜಾಳಿಕೆ:** "ಪಾಶಃ, ಬಂಧನಗ್ರಂಥಿಃ, ವಾಗುರಾ, ಮೃಗಜಾಳಿಕಾ — ಈ ೪ ಬೆಳ್ಳಾರಂ" (ಹಲಾಯು. ೯೮-೪೪೩).

[ಸಂ. ಮೃಗಜಾಲಿಕಾ]

**ಮೃಗಜಾಳಿಕೆ** 'ಮೃಗಜಾಲಿಕೆ' ನೋ.

**ಮೃಗಣೆ** (ನಾ). ಹುಡುಕುವುದು ; ಅನ್ವೇಷಣೆ : "ಅನ್ವೀಕ್ಷಣಂ . . . ಮೃಗಣಾ, ಮೃಗಃ — ೫ ಹುಡುಕಿ ನೋಡುವಿಕೆ" (ಸಿದ್ಧಾಂತಿ. ೩೬೬).

[ ಸಂ. ಮೃಗಣಾ ]

**ಮೃಗತತಿ** (ನಾ). ಪ್ರಾಣಿಗಳ ಗುಂಪು; ಪ್ರಾಣಿವರ್ಗ: ಮೃಗತತಿ ಸುಳಿಯವು . . . ಗಗನದ ಖೇಚರರ್ಾ ಬಟ್ಟೆಗೆ ಸಾರರ್ ನಗಜೆಯುತುಳಕಪದಾತಪದೊಳ್ (ಗಿರಿಜಾ. ೯-೦೪) ; ಮೃಗತತಿ ಪೊದಟ್ಟು ಮೃಗತೃಷ್ಣೆಗಳಂ ಜಲಮೆಂದು ಪರಿದುಮೋರಂತೊಡಲೊಳ್ ನೆಗೆದ ಕಡುತಾಪದಿಂ ಪೊಗೆ ಮೊಗದಿಂ ಸೂಸಿದುರ್ದಾ ನಿದಾಘದೊಳೆತ್ತಂ (ಕುಸುಮಶಾ. ೬-೦೨೫).

[ಸಂ.]

**ಮೃಗತೃಷ್ಣಿಕೆ** (ನಾ). = ಮೃಗಜಲ ೧ : ವಿಂಗೆ ತೃಷ್ಣೆ ಪುಟ್ಟಲಿಂದ್ರಿಯ ಮೃಗಂಗಳಂ ಭೋಗವೆಂಬ ಮೃಗತೃಷ್ಣಿಕೆ ಮೆಯ್ದುಗೆಯಲ್ಕೆ ಬಾರದಂತಿರೆ ತೆಗೆದೊಡಗೊಂಡೊಯ್ಯುದೆಂಬುದೊಂದಚ್ಚರಿಯ (ಕಾದಂಪೂ. ೫೩೬) ; ದೇಸಗೆಯ ಬಿಸಿಲೊಳಾ ಕೈಲಾಸನಗಂ ನೆಱೆಯೆ ಕರಗಿ ಕಣ್ಗಟ್ಟು ಕರಂ ಸೂಸಿ

ಪರಿವಪುದು ದೆಸೆಗೆಸೆ ಪಾಸರವಾಗಿರ್ದುಪೊಣೆವ ಮೃಗತೃಷ್ಣಿಕೆಗಳ್ (ಶಂಧ್ರಪ. ೯-೭೦) ; ಈ ಹೆಸರು ಮಾತ್ರ ಮೃಗತೃಷ್ಣಿಕೆಯಂತೆ ನನಗೆ ವಿಷಾದ ವನ್ನುಂಟುಮಾಡುವುದು (ಶಾಕುಂತ. ೧೦೭-೦೬).
[ಸಂ. ಮೃಗತೃಷ್ಣಿಕಾ]

**ಮೃಗತೃಷ್ಣೆ** (ನಾ). = ಮೃಗಜಲ ೧ : ಮೃಗತತಿ ಪೊದಳ್ದು ಮೃಗತೃಷ್ಣೆ ಗಳಂ ಜಲವೆಂದು ಪರಿದುಮೋರಂತೊಡಲೊಳ್ ನೆಗೆದ ಕಡುತಾಪದಿಂ ಪೊಗೆ ಪೊಗದಿಂ ಸೂಸಿದುರ್ದುದು ನಿದಾಘದೋಳೆತ್ತಂ (ಕೇಶವಚಾ. ೬-೦೨೫) ; ಹುಸಿವಚನಪೌರುಷ್ಯಲಲನಾದಿವಿಷಯಮೃಗತೃಷ್ಣಾಪಿಪಾಸಾಪ್ಯಸು ಬಲ್ಲನೆ ಧರ್ಮತತ್ತ್ವರಹಸ್ಯನಿಶ್ಚಯವ (ಕುವ್ಯಾಸ. ೦೪-೯೬). [ಸಂ. ಮೃಗತೃಷ್ಣಾ]

**ಮೃಗದಂಶ** (ನಾ). ನಾಯಿ ; ಶುನಕ : "ಕೌಲೇಯಕಃ, ಸಾರಮೇಯಃ, ಶುನಕಃ . . . ಮೃಗದಂಶಃ, ಶಾಲಾವೃಕಃ— ಈ ೮ ನಾಯ್(ಯಿ)" (ಹಲಾಯು. ೪೭-೦೨೬). [ಸಂ.]

**ಮೃಗದಂಶಕ** (ನಾ). = ಮೃಗದಂಶ : ಕೌಲೇಯಕಃ . . . ಮೃಗದಂಶಕಃ, ಶುನಕಃ , ಭಷಕಃ , ಶ್ವಾನ್ – ೭ ನಾಯಿಯ ಪೆಸರು" (ಸಿದ್ಧಾಂತ. ೩೦೩).
[ಸಂ.]

**ಮೃಗಧರ** (ನಾ). ೧. ಜಿಂಕೆಯ ಗುರುತನ್ನು ಹೊಂದಿರುವವನು ; ಚಂದ್ರ : ಸುಜಯಂ . . . ಕುರುಕುಳಗಗನಮೃಗಧರಂ ಬಂದನೆಂದು ಬಿನ್ನಪಂಗೆಯ್ವುದುಂ (ಪಂಪಭಾ. ೦೩-೬೩ ವ); ಮೃಗಧರನಂಶುಮಾಲೆ ನಸು ಮುಟ್ಟುವುದುಂ ಜಲಚಂದ್ರ ಬಿಂದುಗಳ್ ನೆಗೆದಪುವು (ಮಲ್ಲಿಪು. ೯-೨೯). ೨. ಜಿಂಕೆಯನ್ನು ಕೈಯಲ್ಲಿ ಧರಿಸಿರುವವನು ; ಶಿವ: (೩). ೩. ಪ್ರಾಣಿ ಗಳಿಂದ ಕೂಡಿದುದು. ೧ . ೩ : ಕಲಾನಿಧಿಯಂತೆ ಮೃಗಧರಂ ಸಭದಂತೆ ಕುಜಯುತಂ . . . ದಿನಕರಪ್ರಭೆಯಂತೆ ಪುಂಡರೀಕೋಲ್ಲಾಸನವಮಾಗಿ ತಚ್ಛೈಲಮೆಸೆದಿರ್ದುದು (ಕೈವಲ್ಯ. ೦೦-೫). ೪. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : ಯುಗ ಋತು ಗಜ ನಾಗಾಂಬರ ಮೃಗಧರ ನಗಪಟ್ಟಮೆನಿಪ ವೃತ್ತದ ಲೆಕ್ಕಂ ಸೊಗಯಿಸಿ ತೋರ್ಕುಂ (ಛಂದೋಂಬು. ೨-೨೦೦). [ಸಂ.]

**ಮೃಗಧರಧರ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದನು ; ಶಿವ: ಮೃಗಧರಧರಂ ನಗುತೆ ನುಡಿದಂ (ಜಗನ್ನಾ. ೯-೪೯). [ಸಂ.]

**ಮೃಗಧೂರ್ತ** (ನಾ). ಪ್ರಾಣಿವರ್ಗದಲ್ಲಿ ಅತ್ಯಂತ ಮೋಸಮಾಡುವ ಪ್ರವೃತ್ತಿಯುಳ್ಳುದೆಂದು ಭಾವಿಸಲಾದ ಪ್ರಾಣಿ ; ನರಿ : ಕಂಡಂ ಮೃಗಗಣಪತಿಯಂ ಮೃಗಧೂರ್ತನಧ್ವಜಕ್ಷೀರಾರ್ತಂ (ಪಂಚತಂ. ೪೫-೦೦).
[ಸಂ.]

**ಮೃಗಧೂರ್ತಿಕ** (ನಾ). = ಮೃಗಧೂರ್ತ : "ಜಂಬುಕಃ, ಶಿವಾ . . . ಮೃಗಧೂರ್ತಕಃ — ಈ ೮ ನರಿ" (ಹಲಾಯು. ೩೮-೬೬): [ಸಂ.]

**ಮೃಗನಯನೆ** (ನಾ). ಜಿಂಕೆಯ ಕಣ್ಣುಗಳಂತೆ ಕಣ್ಣುಗಳುಳ್ಳವಳು ; ಸುಂದರಿ : ಮೃಗನಯನೆಯರೊದೆಯೆ ಯುವಪಾಕೆಗಳುದ್ಯಾನದನಮದ್ಯಮಂ ಮುಕ್ಕುಳಿಸಿರ್ದುಗುಟಿಯುಮಶೋಕೆ ವಕುಳದ ಮುಗುಳಲರ್ವುವು ರಮಣ ವದನಮುಲರ್ವಂತೆತ್ತಂ (ಶಾಂತಿಪು. ೭-೦೩೫) ; ಕೋಟಿದೀನಾರಮನಾ ಮೃಗ ನಯನೆ ಕೊಟ್ಟು ಕೊಂಡಳ್ ನೆಗಟ್ಟಿವೆತ್ತಿರ್ದ ರತ್ನಮಯಕಂಬಳಮಂ (ಸುಕುಮಾ. ೦೦-೦೦೯). [ಸಂ. ಮೃಗನಯನಾ]

**ಮೃಗನಾಭಿ** (ನಾ). ೧. ಕಸ್ತೂರಿಯೆಂಬ ಸುಗಂಧದ್ರವ್ಯವನ್ನು ತನ್ನ ಹೊಕ್ಕುಳಲ್ಲಿ ಉತ್ಪತ್ತಿಮಾಡುವ ಒಂದು ಜಾತಿಯ ಪ್ರಾಣಿ ; ಕಸ್ತೂರಿಮೃಗ : ಅಧಿಕಕಸ್ತೂರಿಯನಿ ಕೊಡುವ ಮೃಗನಾಭಿ ತಾನಾವ ಲೇಸು (ಹರಿಶ. ೭-೦೩). ೨. ಕಸ್ತೂರಿಮೃಗದ ಹೊಕ್ಕುಳಲ್ಲಿ ಉತ್ಪತ್ತಿಯಾಗುವ ಒಂದು ಬಗೆಯ ಸುಗಂಧದ್ರವ್ಯ ; ಕಸ್ತೂರಿ : "ಮೃಗನಾಭಿಃ, ಮೃಗಮದಃ, ಕಸ್ತೂರಿಕಾ — ಈ ೩ ಕಸ್ತೂರಿ" (ಹಲಾಯು. ೯೯-೩೯೦) ; ಮೃಗನಾಭಿಯನಾನೆಯ ಕೊಂಬುಗಳಂ ಪೆರ್ವಿದಿ ತೋರಮುತ್ತಂ ಕಣ್ಬೇಲಿಗಳಂ ಮುಂದಿಟ್ಟೊರ್ವಂ ಪುಗುತಂದಂ ರಾಜಭವನ ದೊಳಗಂ ಶಬರಂ (ಕಂದರಾಜ. ೪-೦೦೬); ಗಂಧಪರಿಮಳದ್ರವ್ಯಮೃಗನಾಭಿ ಮೊದಲಾದ ಚಂದದಿಂದೀರ್ವರ್ಗಂಗಕೆ ಲೇಪನವ ಮಾಡಿ (ಚೆನ್ನಬಸ. ೬-೨೯).
[ಸಂ.]

**ಮೃಗನಾಭಿಜ** (ನಾ). = ಮೃಗನಾಭಿ ೨ : ಬೊಟ್ಟಿಡುವೊಡೆ ಭಾಳದಲ್ಲಿ ಮೃಗನಾಭಿಜಮಿಂದ್ರಮಣೀವಿಭೂಷಣಂ ತೊಡುವೊಡೆ ಜೋಡಿಸುಗ್ಗೆ ಪಿರಿದಾದುದು ಪರ್ಬಿದ ಮರ್ಬು ಲೋಕದೊಳ್ (ರಾಜಶೇ. ೧೦-೨೨).
[ಸಂ. ಮೃಗನಾಭಿಜಾ ]

**ಮೃಗನಾರಿ** (ನಾ). ಒಂದು ಬಗೆಯ ಔಷಧೀಸಸ್ಯ : ವಿಡಂಗ : "ಮೃಗನಾರಿಯೆಂದೆನೆ ವಿಳಂಗಮೆನಿಕ್ಕುಂ" (ಮಂಗರಾ. ೪೩-೪೮). 'ಮೃಗಾರಿ' ಹೋ.
[ ? ]

**ಮೃಗನೇತ್ರ** (ನಾ). [ಛಂದ] ಪ್ರತಿಪಾದದಲ್ಲಿಯೂ ನಾಲ್ಕುಅಕ್ಷರಗಳ ನ್ನುಳ್ಳ 'ಪ್ರತಿಷ್ಠೆ' ಎಂಬ ಛಂದಸ್ಸಿನ ಒಂದು ವೃತ್ತ : ಲಗಯುಗ್ಮಂ ನೆಗಟ್ದಾಗಳ್ ಮೃಗನೇತ್ರಂ; ಮೃಗನೇತ್ರಂ (ಛಂದೋಂಬು. ೨-೬೪). [ಸಂ.]

**ಮೃಗನೇತ್ರೆ** (ನಾ). = ಮೃಗನಯನೆ : ಮೃಗನೇತ್ರೆಯ ತೊಳಗುವ ಕಾಲುಂಗುರ್ಗಳ ನೂಪುರದ ಪೊಳೆವ ಪಜ್ರಂಗಳ ಕಾಂತಿಗಳೆಡರೆ ಪರ್ವಿ ಪಚ್ಚೆಯ ಜಗಲಿಯೊಳೊಪ್ಪಿದುವು ರಂಗವಲಿಯನಿಕ್ಕಿದವೋಲ್ (ಮಲ್ಲಿಪು.೩-೯೫); ಮಗನೆ ಕೋಪಿಸಲೇಕೆ ಹೋಗಿ ಬಂದಪೆವಯ್ಯ ಮೃಗನೇತ್ರೆ ಪದವೆಯಂ ಬೇಡಿಕೊಂಡಪೆವಯ್ಯ (ಪಂಪರ. ೦೫-೦೩೮). [ಸಂ. ಮೃಗನೇತ್ರಾ]

**ಮೃಗಪಂಚಕ** (ನಾ). [ಜ್ಯೋತಿ] ಮೃಗಶಿರಾನಕ್ಷತ್ರದಿಂದ ಆರಂಭ ವಾಗುವ ಮೃಗಶಿರೆ, ಆರಿದ್ರೆ, ಪುನರ್ವಸು, ಪುಷ್ಯ ಮತ್ತು ಆಶ್ಲೇಷೆ ಎಂಬ ಐದು ಮಳೆಯ ನಕ್ಷತ್ರಗಳು : ಮೃಗಪಂಚಕದಿಂದ ಮಳೆ ಬರುತ್ತದೆ (ಲೋಕ). [ಸಂ.]

**ಮೃಗಪತಿ** (ನಾ). ೧. ಪ್ರಾಣಿಗಳ ಒಡೆಯ ; ಸಿಂಹ : "ಹರಿಃ, ಮೃಗಪತಿಃ . . . ಕಂಠೀರವಃ—ಈ ೯ ಸಿಂಹದ ಪೆಸರ್" (ಹಲಾಯು. ೩೬-೭೦); ಮೃಗಪತಿ ಪೊಜಗಾದ ಕಿಶೋರಕೇಸರಿವಿಧಿಯಿಂದಂ . . . ತನ್ನನ್ವಯ ರಾಜಧಾನಿಯನನುಜಸಮೇತನಪರಾಜಿತನೆಯ್ದೆ ವಂದು (ಶಾಂತಿಪು. ೦-೯೩ ವ). ೨. ಹುಲಿ ; ವ್ಯಾಘ್ರ. ೩. ಗಂಡುಜಿಂಕೆ. ೪. [ಜ್ಯೋತಿ] ಒಂದು ರಾಶಿಯ ಹೆಸರು; ಸಿಂಹರಾಶಿ : ಭೃಗುಜನಿರೆ ಕರ್ಕಿಯೊಳ್ ಮೇಷ ಮೃಗಪತಿಯೊಳ್ ದ್ವಾಪರಾರಿನಿಧನಸ್ಥಿತನೌ ಮೃಗಣಂ ವೀಕ್ಷಿಸುವೊಡೆ ಪೊಂದುಗುಮಾ ಲಗ್ನೋದ್ಯಮ ಷಡಷ್ಟಾಂತರದೊಳ್ (ಜಾತಕ. ೭-೨೫).
[ ಸಂ.]

**ಮೃಗಪೋತ** (ನಾ). ಜಿಂಕೆಯ ಮರಿ : "ಕೊಣಸನೆ ಮೃಗಪೋತ" (ಕವಿಲಂ. ೩೯) ; ಮೃಗಪೋತನನು ಹಜಿಹೊಯ್ವುದುಚಿತವೆ (ಕುವ್ಯಾದ್ರೋ. ೬-೦೪).
[ಸಂ.]

**ಮೃಗಪೋತಕ** (ನಾ). = ಮೃಗಪೋತ : ವಾನರನ ಹಯಕುಂಜರನ ಪಂಚಾನನನ ಮೃಗಪೋತಕನ ಗುಣವಾ ನರೇಂದ್ರನೊಳಿರಲುಬೇಹುದು (ಕುವ್ಯಾಉ. ೩-೦೦೯). [ಸಂ.]

**ಮೃಗಪ್ಲುತ** (ನಾ). [ನಾಟ್ಯ] ಮಾರ್ಗಆಕಾಶಚಾರಿಯ ಹದಿನಾರು ಪ್ರಭೇದಗಳಲ್ಲಿ ಒಂದು; ₽ "ಒಂದು ಕಾಲನ್ನು ಕುಂಚಿತಮಾಡಿ ಎತ್ತಿ ನೆಗೆದು ನೆಲದ ಮೇಲಿರಿಸಿ ಇನ್ನೊಂದು ಕಾಲನ್ನು ಅಂಚಿತಮಾಡಿ ಕಣಕಾಲನ್ನು ಮೊದಲ ಕಾಲಿನ ಮುಂದೆ ಇರಿಸುವುದು" (ಅಭಿನಯ. ೩೦೬ ಗದ್ಯಾನುವಾದ) : ಚರಣಮನೊಂದಂ ಕುಂಚಿತದಿರವಂಬೆತ್ತೆತ್ತಿ ನೆಗೆದು ನೆಲದೊಳ್ ನಿಲಿಸುತ್ತಿರದಂಚಿತಪದಜಂಘೆಯನಿರಿಸಲ್ಕಾ ಪದದೆಸೆಗೆ ಮೃಗ ಪ್ಲುತಮೆನಿಕುಂ (ಅಭಿನಯ. ೯-೪೩). [ಸಂ. ಮೃಗಪ್ಲುತಾ]

**ಮೃಗಬಂಧಿನಿ** (ನಾ). ಪ್ರಾಣಿಗಳನ್ನು ಹಿಡಿಯಲು ಬಳಸುವ ಬಲೆ: "ವಾಗುರಾ, ಮೃಗಬಂಧಿನೀ—ಮೃಗಗಳ ಹಿಡಿಯುವ ಬಲೆಯ ಪೆಸರುಗಳು" (ಸಿದ್ಧಾಂತಿ. ೩೦೪). [ಸಂ. ಮೃಗಬಂಧಿನೀ]

**ಮೃಗಭೂ** (ನಾ). = ಮೃಗನಾಭಿ ೨: ಮೃಗಭೂಯುದ್ಧವಿಲಾಸಿನೀ ಕಬರಿಕಾಬಂಧಂಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು . . . ಪಳಂಚಿ ಸುಚಿದತ್ತೇದೊಂದು ಮಂದಾನಿಳಂ (ಶಂಕರಾ. ೯-೮೦); "ಚೌರಿ" (ಶಂಕರಾ. ೬೦೬); ಮೃಗಭೂಕುಂಕುಮಚಂದನದ್ರವ ವಿಲೇಪಂ ನೂತನಾನರ್ಘ್ಯರತ್ನಗ್ರಾಣಾಲಂಕರಣಂ ವಿಚಿತ್ರವಸನಂ ಚೆಲ್ವಾಗೆ (ಜಗ. ೬-೯೩). [ಸಂ.]

**ಮೃಗಮದ** (ನಾ). ಕಸ್ತೂರಿಮೃಗದಿಂದ ಉತ್ಪನ್ನವಾಗುವ ಸುಗಂಧ ದ್ರವ್ಯ; ಕಸ್ತೂರಿ: "ಮೃಗನಾಭಿಃ, ಮೃಗಮದಃ, ಕಸ್ತೂರಿಕಾ—ಈ ೩ ಕಸ್ತೂರಿ" (ಹಲಾಯು. ೬೯-೩೭೦): ಮೃಗಮದಪತ್ರರೇಖೆಗಳನೇಕಗೆ ತಾಳ್ದಿರ[ದಾದು]ವೀ ಕದಂಪುಗಳ್ (ಶಂಕರಾ. ೪-೬೨); ಸುದತಿಗೆ ಮೃಗಮದದ ಪತ್ರಲೇಖೆಗಳೆಸೆಗುಂ (ಜಗ. ೧೦-೦೩೬). [ಸಂ.]

**ಮೃಗಮದಾಮೋದ** (ನಾ). ೧. ಕಸ್ತೂರಿಯ ಕಂಪು,—ಸುವಾಸನೆ: ಮೃಗಮದಾಮೋದಾಸ್ಯ ನಿಶ್ವಾಸೆಯುಂ ತಳಿರೇ ತಾವರೆಯೇ ಮದಾಳಿ ಕುಲವೇ . . . ಕಂಡಿರೆ (ಶಂಕರಾ. ೯-೧೦೪). ೨. ಕಸ್ತೂರಿಯೆಂಬ ಸುಗಂಧದ್ರವ್ಯದಲ್ಲಿ ಆಸಕ್ತನಾದವನು; ಒಂದು ಬಿರುದು: ಮೃಗಮದಾಮೋದಶ್ರೀಮತ್ತ್ರಿಭುವನಮಲ್ಲದೇವಪಾದಾರಾಧಕಂ ಪರಬಳ ಸಾಧಕಂ ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಕ.ಇ. ೪೦-೫೬-೦೨; 1087); ವಾಸಂತಿಕಾದೇವೀಲಬ್ಧವರಪ್ರಸಾದ ಮೃಗಮದಾಮೋದ ಶ್ರೀಮನ್ಮಹಾ ಮಂಡಳೇಶ್ವರಂ (ಎ.ಕ. V (R), ತರೀ. ೫೭೦-೦೬; 1180). [ಸಂ.]

**ಮೃಗಯಾವ್ಯಸನ** (ನಾ). ಪ್ರಾಣಿಗಳನ್ನು ಬೇಟೆಯಾಡುವ ಹವ್ಯಾಸ: ನಿಮಗೆ ಮೃಗಯಾವ್ಯಸನವ್ಯಾಪಾರಮಾದುದಕ್ಕುಮಲ್ಲದಾಗಳದು ನಿಮ್ಮ ದುಷ್ಕರ್ಮದ ಫಲಂ (ಶಂತಶಂ. ೦೪೭-೪); ದ್ಯೂತ ಮೃಗಯಾವ್ಯಸನವಿವೃ ನೃಪಜಾತಿಗಾದ ವಿನೋದ (ಕುಮ್ಮಾ.ಗ. ೫-೦೨). [ಸಂ.]

**ಮೃಗಯು** (ನಾ). ಬೇಟೆಯಾಡುವವನು; ಬೇಟೆಗಾರ: "ಮೃಗಯುಃ, ಲುಬ್ಧಕಃ, ವ್ಯಾಧಃ, ವಾಗುರಿಕಃ—ಈ ೪ ಮಾವುಲಿಗಂ" (ಹಲಾಯು. ೯೬-೪೧೨); ಭೂಮಿಕಂಪಮಾಗೆ ಪರಿವ ಮೃಗಯುಗಳಚರಣಘಾತಶಬ್ದಂಗಳೊಳಂ (ಕಾದಂಪೂ. ೦೬೦). [ಸಂ.]

**ಮೃಗಯೆ** (ನಾ). ಪ್ರಾಣಿಗಳ ಬೇಟೆ: ಮೃಗವ್ಯಸನ: "ಆಚ್ಛೋಟನಂ, ಮೃಗಯಾ, ಮೃಗವ್ಯಂ, ಪಾಪರ್ಧಿಃ, ಆಖೇಟಕಃ—ಈ ೫ ಬೇಂಟೆ" (ಹಲಾಯು. ೬೦-೨೬೦); ಮೃಗಯಾವ್ಯಾಜದಿನೊರ್ವೆ ಶಂತನು ತೊಲಲ್ತರ್ಪಂ ಪಳಂಚಲ್ಕೆ (ಶಂಕರಾ. ೦-೬೦). [ಸಂ. ಮೃಗಯಾ]

**ಮೃಗರಾಜ** (ನಾ). ೧. = ಮೃಗಪತಿ ೧: ಮೃಗವ್ರಜದೊಳ್ವೇಂ ಮೃಗರಾಜನಂ ನಜಿಸುದೇ ತಾಂಗಲ್ಕೆ ನಮ್ಮಾ ಬೃಹದ್ವ್ರಜನೀಸಂಕುಳಮಾ ಜಗೀಷುವನಿದೇಂ ಸಂಗ್ರಾಮದೊಳ್ ಗೆಲ್ಗುವೇ (ಆದಿಪು. ೦೩-೫೬); ದೊಲ ಕೊಡ್ಡಿದ ಬಲೆಯೊಳ್ ಮೃಗರಾಜಂ ತೊಡರ್ಗುವೆ (ಶಾಂತಿಪು. ೩-೯೩ ಪ). ೨. = ಮೃಗಪತಿ ೨. ೩. ಚಂದ್ರ. ೪. = ಮೃಗಪತಿ ೪. [ಸಂ.]

**ಮೃಗರಾಜವಿಷ್ಟರ** (ನಾ). ಸಿಂಹಾಸನ: ಶ್ರೀಮಂಟಪಮಂ ವಿರಚಿಸಿ ಮೃಗರಾಜವಿಷ್ಟರದೊಳ್ ಬಾಲಕನಂ ಪೂರ್ವಾಭಿಮುಖನಿವಿಷ್ಟನಂ ಮಾಡಿ (ಆದಿಪು. ೭-೬೬ ಪ): ಭವ್ಯರತ್ನಾಕರನಂ . . . ಮೃಗರಾಜವಿಷ್ಟರ ದೋಳಿರಿಸಿ (ಅಕ್ಕನ. ೪-೮೨ ಪ). [ಸಂ.]

**ಮೃಗರಿಪು** (ನಾ): ಸಿಂಹ: "ಹರಿಃ . . . ಮೃಗರಿಪುಃ, ಸಿಂಹಃ, ಕಂಠೀರವಃ—ಈ ೯ ಸಿಂಹದ ಪೆಸರ್" (ಹಲಾಯು. ೩೬-೬೦); ಮೃಗರಿಪುವಂ ಮೃಗಾಪತಿಯು ನಂದನನೊರ್ವನೆ ನೀಂ ಕೊಂದು (ಶರಕೃ. ೩-೯೬). [ಸಂ.]

**ಮೃಗಲಕ್ಷ್ಮ** (ನಾ). ಜಿಂಕೆಯ ಗುರುತನ್ನು ಉಳ್ಳವನು: ಚಂದ್ರ: ಮೃಗಲಕ್ಷ್ಮಂ ನಯನೇಷು ವಹ್ನಿನಿಧಿಶೈಲಸ್ಥಾನಂಗಳೊಳ್ ಕ್ರೂರರಯ್ದು ಗುಣೇಶರ್ತುಗಳೊಳ್ ಶುಭಗ್ರಹಗಣಂ (ಲೋಕೋಪ. ೨-೩೨). [ಸಂ. ಮೃಗಲಕ್ಷ್ಮನ್]

**ಮೃಗಲಾಂಛನ** (ನಾ). ೧. ಚಂದ್ರಬಿಂಬದಲ್ಲಿರುವ, ಜಿಂಕೆಯನ್ನು ಹೋಲುವ ಗುರುತು: ನಿನ್ನೀ ಪೆಜಿಸೊಸಲೊಲ್ಟ ಮೃಗಮದತಿಲಕ ಮದೆಡೆಗಿಡುವಿನಂ ಮೃಗಲಾಂಛನಮೆನಲ್ಕೆಸೆದುಮೆನ್ನ ಮನಕ್ಕೊಂದು ಲಾಂಛನಮುನಾಗಿಪುದಿದೇತಜ ಪರಿ ರಮಣಿ? (ರಾಮಾಶ್ವ. ೩೦-೨). ೨. = ಮೃಗಲಕ್ಷ್ಮ: ಮೃಗಲಾಂಛನಮಂಡಳದೊಳ್ ಮೃಗತನು ಮಿಸುಪಂತೆ ನಿನ್ನ ಕುಚಮಂಡಳದೊಳ್ ಮೃಗಮದಮವಿಚಿತ್ರಪತ್ರಂ ಮೃಗಲೋಚನೆ ಬರೆಯ ದಿರ್ದುದಿಂದಿನ ತೆಜನೇಂ (ಕಾದಂಪೂ. ೩೩೫); ಜಗಕೆಲ್ಲ ತಂಪನೆಸಗುವ ಮೃಗಲಾಂಛನನಕಟ ತನ್ನ ಹಿಮರಶ್ಮಿಗಳಿಂ . . . ಎನ್ನ ಸುಡುವನೇಗೈದಪ ನಾಂ (ಕಾಕುಂತ. ೩೨ ಅಡಿ). [ಸಂ.]

**ಮೃಗಲಿಪಿ** (ನಾ). ಒಂದು ಬಗೆಯ ಲಿಪಿ: ದರ್ಪಣಲಿಪಿ ಮೃಗಲಿಪಿ ಪ್ರಬಂಧಲಿಪಿ . . . ನಂದಿಲಿಪಿ ಈ ಅಗಣಿತ ಲಿಪಿಗಳ ನೋಡಲಚ್ಚುಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತ್ತಿರ್ದರು ವಿದ್ವಾಂಸರುಗಳೆಲ್ಲ (ಬಾಸ್ಕರ. ೬೬-೭). [ಸಂ.]

**ಮೃಗಲೋಚನ** (ನಾ). ೧. ಜಿಂಕೆಯ ಕಣ್ಣಿನಂತೆ ಸುಂದರವಾದ ಕಣ್ಣು: ಮೃಗಲೋಚನಂಗಳಿರ್ದುವು ಮೃಗಮಿಲ್ಲದಿರ್ದುವುದು ಮೃಷಲಂ ಮಟಮಿಲ್ಲೀ ಪಗಲುಮೆಸವಿಂದುವೆತ್ತಣಿನೊಗೆದುದೊ ಪೇಟಿಂಪು ನೋಡಿದಂ ನಗೆ ಮೊಗಮಂ (ಶಂಕರಾ. ೯-೬೮). ೨. ಚಂದ್ರ. [ಸಂ.]

**ಮೃಗಲೋಚನೆ** (ನಾ). ಜಿಂಕೆಯ ಕಣ್ಣಿನಂತೆ ಕಣ್ಣುಗಳುಳ್ಳವಳು; ಸುಂದರಿ: ಸುಘೋಷರಥಂಗಂ ಮೃಗಲೋಚನೆ ತತ್ಪ್ರಿಯೆ ಚಿತ್ರಗಂ ಮಗಂ ನಂದಿವರ್ಧನಂ ಪುಟ್ಟುವುದುಂ (ಶಾಂತಿಪು. ೯-೫೬); ಮೃಗಲೋಚನೆಯೊ ರ್ವಳ್ ಸಂಪಗೆಯೊಳ್ಮುಗುಳಾಯ್ದು ಮಗುಟ್ ಚಳಕೇಶರಕಾಂತಿಗಳಂ ಪೂಣ್ದಳ್ ಮುಯ್ಯಂ ಮುಗುಳಂ ಕೊಂಡಲರನೀವವೋಲ್ ಮಲ್ಲಿಗೆಯಂ (ಲೀಲಾವ. ೦೩-೬೮). [ಸಂ. ಮೃಗಲೋಚನಾ]

**ಮೃಗವಧಾಜೀವ** (ನಾ). ಪ್ರಾಣಿಗಳನ್ನು ಕೊಂದು ಜೀವಿಸುವವನು; ಬೇಟೆಗಾರ: "ವ್ಯಾಧಃ, ಮೃಗವಧಾಜೀವಃ, ಮೃಗಯುಃ, ಲುಬ್ಧಕಃ—ಈ ೪ ಬೇಡರವನ ಪೆಸರು" (ಸಿದ್ಧಾಂತಿ. ೩೦೩). [ಸಂ.]

**ಮೃಗವಧೆ** (ನಾ). ಪ್ರಾಣಿಗಳನ್ನು ಕೊಲ್ಲುವುದು: ವನಚರನು ತನ್ನಯ ಕುಟುಂಬವನನುದಿನವು ಮೃಗವಧೆಯಲೀ ಸಲಹಿದನು (ಕುಮ್ಮಾ.ಕ. ೦೩-೦೩). [ಸಂ. ಮೃಗವಧ]

**ಮೃಗವಾಹನ** (ನಾ). ಜಿಂಕೆಯನ್ನು ವಾಹನವಾಗಿ ಉಳ್ಳವನು; ವಾಯು. [ಸಂ.]

**ಮೃಗವಿಂಡು** (ನಾ). = ಮೃಗತತಿ: ಸಿಲುಕಿದವು ಮೃಗವಿಂಡು ನಾನಾ ಬಲೆಗಳಲಿ (ಕೊರಣ. ೩-೩-೦೬). [ಮೃಗ + ಪಿಂಡು]

**ಮೃಗವ್ಯ** (ನಾ). ಬೇಟೆ; ಮೃಗಯೆ: "ಆಚ್ಛೋಟನಂ, ಮೃಗಯಾ, ಮೃಗವ್ಯಂ, ಪಾಪರ್ಧಿಃ, ಆಖೇಟಃ—ಈ ೫ ಬೇಂಟೆ" (ಹಲಾಯು. ೬೦-೨೬೦); ಅಂತು ನರನಾರಾಯಣರಿರ್ವರುಂ . . . ಮೃಗವ್ಯ ವ್ಯಾಪಾರದಿಂ ಬಟಲ್ದು (ಶಂಕರಾ. ೫-೩೦ ಪ). [ಸಂ.]

**ಮೃಗವ್ಯಸನ** (ನಾ). = ಮೃಗಯಾವ್ಯಸನ: ಅರಸನಾರೋಗಣೆ ವಿಹಾರದೊಳಿರಲು ಹಗಲು ಮೃಗವ್ಯಸನದೆಚ್ಚಿಜನೊಳಹುದೆಂದನಿಬರನು ಬೀಳ್ಕೊಟ್ಟನಸುರಾರಿ (ಕುಮ್ಮಾ.ಶ. ೦-೦೦). [ಸಂ.]

**ಮೃಗಶಾಬ** (ನಾ). ಜಿಂಕೆಯ ಮರಿ: ಮೃಗಶಾಬಂ ಮಿಗೆ ಶಾರ್ದೂಲಗರ್ಜಿತ ಕ್ಕಂಜುವಂತೆ ತದ್ರಾತ್ರಿಯೊಳಾ ಮೃಗಶಾಬನೇತ್ರೆ ಬೆರ್ಚಿದಳಗಣಿತಪುರ

ರಕ್ಷಕರ್ಕಳ್ಬ್ಬರಕಾಗಳ್ (ಐಶಳ. ೬-೦೦೩); ಶಾಂತಲೆ ಬೆದರಿದ ಮೃಗಶಾಬದಂತೆ ಕಣ್ತೆರೆದು ಸುತ್ತಲೂ ನೋಡಿದಾಗ . . . ಕಂಡಳು (ಶಾಂತಲಾ. ೦೩). [ಸಂ.]

**ಮೃಗಶಾಬಾಕ್ಷಿ** (ನಾ). ಜಿಂಕೆಯ ಮರಿಯ ಕಣ್ಣುಗಳಂತೆ ಕಣ್ಣುಗಳುಳ್ಳವಳು: ಸುಂದರಿ: ಮೃಗಯಾವ್ಯಾಜದಿನೊಮ್ಮೆ ಶಂತನು ತೊಟಲ್ಪರ್ಪಂ ಪಳಂಚಲ್ಕೆ ತನ್ಮೃಗಶಾಬಾಕ್ಷಿಯು ಕಂಪು ತಟ್ಟೆ ಮಧುಪಂ ಬೋಲ್ ಸೋಲ್ತು (ಕಂಕಥಾ. ೦-೭೦); ಪಸ್ತತಳವಂ ಸತ್ಪಲ್ಲವಂಗಿತ್ತು ತನ್ಮೃಗಶಾಬಾಕ್ಷಿಯುನಿಂತು ಮನ್ಮಥವಶರ್ರೀಗೆತ್ತು (ಸುಕುಮಾ. ೯-೯೦). [ಸಂ. ಮೃಗಶಾಬಾಕ್ಷೀ]

**ಮೃಗಶಿರ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಐದನೆಯದು: ಮೃಗಶೀರ್ಷ: ಮೃಗಶೀರ್ಷಂ. ಮೃಗಂ. ಚಾಂದ್ರಂ. ಐಂದವಂ. ಹಿಮದೀಧಿತಿ—ಯಾ ೫ ಮೃಗಶಿರ ನಕ್ಷತ್ರಕ್ಕೆ ಹೆಸರು (ಶಾಸ್ತ್ರ. ೬೨-೭). [ಸಂ.]

**ಮೃಗಶಿರೆ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಐದನೆಯದು ಮತ್ತು ಈ ನಕ್ಷತ್ರದಲ್ಲಿ ಬರುವ ಮಳೆ: "ಮೃಗಶಿರೆಯುಂ ಮೃಗಮೆನಿಕ್ಕುಂ" (ಮಂಗರಾ. ೦೨-೭); ಮೃಗಶಿರೆ ಶೀಘ್ರಸ್ಥಿರ ಋಕ್ಷಗಳುದಿತೋದಿತ[ಮು]ವಾಗೆ ಕರ್ತೃಗೆ ವಸು ವಾರ್ಧಿಗೆ ದಿನಪತಿರಹಿತ ರಾಶಿಗಳುದಯಿಸೆ ಮಾಟ್ಟುದ್ಯೆ ಸಮಾವರ್ತನೆಯುಂ (ಲೋಕೋಪ. ೨-೩೫); ಅಶ್ವಿನಿ ಭರಣಿ . . . ಮೃಗಶಿರೆ . . . ರೇವತಿಯೆಂಬವಿಪ್ಪತ್ತೇಳು ನಕ್ಷತ್ರಂಗಳುಂ ತಮ್ಮ ತಮ್ಮ ಅಧಿಕಾರಮಂ ಘಟಾಯಿತ್ತಿರ್ಪವು (ವಿವೇಕ. ೨೦೦): ಮೃಗಶಿರೆಗೆ ಮಿಕ್ಕ ಎಳ್ಳು ಚೆಲ್ಲು (ಗಾದೆ). [ಸಂ. ಮೃಗಶಿರಾ]

**ಮೃಗಶೀರ್ಷ** (ನಾ). ೧. = ಮೃಗಶಿರ: ಮೃಗಶೀರ್ಷಂ ಮೂಲಮುಂ ಪೂರ್ವೆಗಳಶ್ವಿನಿಯಾರ್ದ್ರೆ ಚಿತ್ರೆ ಮೂಲಂ ರೇವತಿಯಾಗುರೇ ಪತ್ತುಂ ತಾರೆಗಳೊಳ್ ಮಾಡುವುದು ಸಕಲವಿದ್ಯಾಗಮಮಂ (ಲೋಕೋಪ. ೧-೦೩). ೨. [ನಾಟ್ಯ] ಅಸಂಯುತ ಹಸ್ತಮುದ್ರೆಗಳಲ್ಲಿ ಒಂದು: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ ಪತಾಕ . . . ಮೃಗಶೀರ್ಷ (ಅಭಾಸ್ಯ. ೯೯). [ಸಂ.]

**ಮೃಗಶೃಂಗ** (ನಾ). ೧. ಜಿಂಕೆಯ ಕೋಡು: 'ಮೃಗಶೃಂಗಧರ' ಪರಾ. ೨. ಬಲಮುರಿ ಎಂಬ ಸಸ್ಯದ ಕಾಯಿ: ಸುಮಾರು ಒಂದು ಒಂದೂವರೆ ಅಂಗುಲ ಉದ್ದವಿದ್ದು ಮೊನೆ ಚೂಪಾಗಿರುತ್ತದೆ: ಇದೇ ಕಾರಣದಿಂದ ಸಂಸ್ಕೃತದಲ್ಲಿ ಮೃಗಶೃಂಗ ಎನ್ನುತ್ತಾರೆ (ಹಸುಹೂ. ೬೦). [ಸಂ.]

**ಮೃಗಶೃಂಗಧರ** (ನಾ). ಜಿಂಕೆಯ ಕೋಡುಗಳನ್ನು ಧರಿಸಿದವನು: ಯಜ್ಞದೀಕ್ಷಿತನಾದವನು: ಉದಾರ ಸೌಖ್ಯದೊಳ್ ಧರ್ಮಜಂ ಮೃಗಶೃಂಗಧರನಾಗಿ ಯಾಜಮಾನ್ಯದೊಳೆಸೆದನು (ಜೈಮಿಭಾ. ೩೩-೯೦). [ಸಂ.]

**ಮೃಗಾಂಕ** (ನಾ). ೧. ಜಿಂಕೆಯ ಗುರುತುಳ್ಳವನು: ಚಂದ್ರ: "ಇಂದುಃ, ಚಂದ್ರಃ . . . ಮೃಗಾಂಕಃ. ವಿಧುಃ, ದಾಕ್ಷಾಯಣೀರಮಣಃ_ಈ ೨೧ ಚಂದ್ರನ ಪೆಸರ್" (ಶಬ್ದಮ. ೫-೯೩); ಶಾಂತಿನಾಥವಿಸುತ ಪ್ರತಾಪಮುಂ ತದ್ವಸುಧೇಶನ ಕಾಂತಿಯುಮೆಂದು ಮೃಗಾಂಕನ ಕಾಂತಿಯುಮೇಂ ದಿಗ್ಗತಮಂ ಪರ್ವಿದುದೋ (ಶಾಂತಿಪು. ೦೦-೦೩೯). ೨. ಕರ್ಪೂರ. ೩. ಗಾಳಿ. [ಸಂ.]

**ಮೃಗಾಕ್ಷಿ** (ನಾ). ಜಿಂಕೆಯ ಕಣ್ಣುಗಳಂತೆ ಕಣ್ಣುಗಳುಳ್ಳವಳು: ಸುಂದರಿ: ಸೂಸಿ ಕಣ್ಣ ನೀರೊಡನೊಡನುಣ್ಮೆ ಕುಂಕುಮದೊಳರ್ದಿದ ಬಾಳೆಗಳನ್ನವಾಗಿ ಕೆಂಪಡರ್ವಲರ್ಗಣ್ಗಳಿಂದುಗುಟ್ಟು ನೋಡಿದುದಂ ನೆನೆವೆಂ ಮೃಗಾಕ್ಷಿಯಾ (ಆದಿಪು. ೦೨-೨೯); ಎಲೆ ಮೃಗಾಕ್ಷಿ ಪೇಳ್ವೆಕೆ ಕರ್ಣಪೂರದ ನೈದಿಲ್ ಕಾಂದಿರುಳೊಳಮರ್ದ ತಾರಗೆಗೋರಗೆಯೆನಿಸಿರ್ದುದಿಲ್ಲ (ರಾಜಶೇ. ೩-೬೩). [ಸಂ. ಮೃಗಾಕ್ಷೀ]

**ಮೃಗಾಜಿನ** (ನಾ). ಜಿಂಕೆಯ ತೊಗಲು: ಮೃಗಾಜಿನಮಂ ಪೊಲುತಿರ್ಪ ಮುಂಜಮೇಖಲೆಗಳನೊಪ್ಪವಡುವ . . . ವ್ಯವಸಾಯಮೆತ್ತಲುಂ (ಕಾದಂಪೂ. ೨೨೨); ಇಟ್ಟ ವಿಭೂತಿಯ ತೊಟ್ಟ ರುದ್ರಾಕ್ಷಿಯುಟ್ಟ ಮೃಗಾಜಿನದ . . . ಕಟ್ಟಣಕದ ಕಡು ಮಹಿಮೆಯಾಂತ ತಪೋಧನರಿರ್ಪ ತಾಣದಲ್ಲಿ (ರಾಜಶೇ. ೦-೦೨೫ ವ). [ಸಂ.]

**ಮೃಗಾದನ** (ನಾ). ನಾಯಿಯ ಜಾತಿಗೆ ಸೇರಿದ ಒಂದು ಬಗೆಯ ಮಾಂಸಾಹಾರಿಪ್ರಾಣಿ; ಕತ್ತೆಕಿರುಬ: ಶಿವಂಗಿ: "ತರಕ್ಷುಃ, ಮೃಗಾದನಃ—೨ ಶಿವಂಗಿ ಹೆಸರುಗಳು" (ಸಿದ್ಧಾಂಶಿ. ೦೫೩). [ಸಂ.]

**ಮೃಗಾಧಿಪ** (ನಾ) = ಮೃಗಪತಿ ೧: ಮೃಗಾಧಿಪನಿನೆಂತುಗ್ರದ್ವಿಪಂ . . . ತೆರಳ್ವ ತೆಱದಿಂ ಮಿಥ್ಯಾರಜಂ ತೂಳ್ದು ಪಾಱುವಿನಂ ನಿರ್ಮಳಧರ್ಮಮೊಂದಿನಿಲೆ ಪೇಟ್ದಿಂ ಪಂಪನತ್ಯಂತಸೌಷ್ಠವದಿ[ದಾದಿ]ಪುರಾಣಮಂ (ಸುಕುಮಾ. ೧-೩೭); ಮೃಗಾಧಿಪನುಗಿದು ಬಗಿದು ತೋಡಿದ ಜಾಣದ . . . ಕಡವೆ ತುಳಿದ ಹೆಜ್ಜೆಗಳ ಚಿಹ್ನದ ಬೇಡನಾಯಕರು ನೆರೆದರು (ಪತಕಾ. ೫-೫). [ಸಂ.]

**ಮೃಗಾರಾತಿ** (ನಾ). ೧. ಸಿಂಹ: "ಹರಿ ಮೃಗೇಂದ್ರಂ . . . ಮೃಗಾರಾತಿ ಕಂಠೀರವಂ ಕರಿವೈರಿ ಕೇಸರಿಯೆನಲ್ ಸಿಂಹಮೆನಿಸಿಕ್ಕುಂ" (ಮಂಗರಾ. ೯೭-೭). ೨. ನಾಯಿ. ೩. ಹುಲಿ. [ಸಂ.]

**ಮೃಗಾರಿ** (ನಾ). ೧. ಸಿಂಹ: 'ಮೃಗಾರಿಪೀಠ' ಪರಾ. ೨. ಹುಲಿ; ವ್ಯಾಘ್ರ: "ವ್ಯಾಘ್ರಃ . . . ಮೃಗಾರಿಃ_ಈ ೭ ಹುಲಿ" (ಶಬ್ದಮ. ೩೯-೭೩). ೩. ನಾಯಿ. ೪. ಒಂದು ಬಗೆಯ ಮರ. [ಸಂ.]

**ಮೃಗಾರಿಪೀಠ** (ನಾ). ಸಿಂಹಾಸನ: ನಗಪತಿಗಿದೆ ಪೆಱನೊಸಲೆನೆ ಸೊಗಯಿಪ ಪಾಂಡುಕಶಿಲಾಶಿಲೆಯೊಳದೇಂ ದಿಟ್ಟಿಗೆವಂದುದೊ ಮಾಣಿಕ್ಯದ ಮೃಗಾರಿಪೀಠಂ ಬಲ್ಲಾಮಮೆನೆ ಕುಂಕುಮದಾ (ಚಂದ್ರಪು. ೦೨-೦೦೦). [ಸಂ.]

**ಮೃಗಾಲಯ** (ನಾ). ಸಾರ್ವಜನಿಕರ ನೋಟಕ್ಕಾಗಿ ವಿಸ್ತಾರವಾದ ಪ್ರದೇಶದಲ್ಲಿ ಕಾಡುಮೃಗಗಳನ್ನೂ ವಿಶೇಷವಾದ ಜಲಚರಪ್ರಾಣಿ, ಪಕ್ಷಿ, ಸರ್ಪ ಮುಂತಾದುವುಗಳನ್ನೂ ಕೂಡಿಟ್ಟಿರುವ ಸ್ಥಳ: ಪ್ರಾಣಿಸಂಗ್ರಹಾಲಯ: ಇಲ್ಲಿ ಬಗೆಬಗೆಯ ಮೃಗಪಕ್ಷಿಗಳುಳ್ಳ ಮೃಗಾಲಯವಿದೆ (ಕಕಪು. ೫-೯೯). [ಸಂ.]

**ಮೃಗಾಸನ** (ನಾ). [ಯೋಗ] (ಜಿಂಕೆಯಂತೆ ದೇಹವನ್ನು ಬಗ್ಗಿಸುವ) ಒಂದು ಬಗೆಯ ಆಸನ: ಸಿದ್ಧಾಸನ . . ಮೃಗಾಸನ . . . ಅರ್ಧಾಸನಾದಿ ಎಂಭತ್ತುನಾಲ್ಕು ಆಸನಭೇದಂಗಳು (ವಿವೇಕ. ೦೩೦). [ಸಂ.]

**ಮೃಗಿ** (ನಾ). ಹೆಣ್ಣುಜಿಂಕೆ: ಮೃಗಕಂತಮಾದ ತತ್ಸಾಯಕಮುರ್ಚಿ ಪೋಗದೆ ಮೃಗೀಯುಗಳಂ ಮಡಿಪಂತೆ ಸತ್ತರ್ (ಶಾಂತಿಪು. ೭-೯೯); ಬಾಹತ್ರಣಂಗಳಿಂದೆಳಸುಗುಂ ಪಸುರ್ಗಲ್ಲ್ಗಳ ಕಾಂತಿಯುಂ ಮೃಗೀಜಾಳಕಂ (ಶಂರಾಚಾ. ೦ ೦೨೭). [ಸಂ. ಮೃಗೀ]

**ಮೃಗಿತ** (ಗು). ೧. ಬೇಟೆಯಾಡಿದ. ೨. ಹುಡುಕಿದ. (ನಾ). ೩. ಹುಡುಕಿದುದು: "ಅನ್ವೇಷಿತಂ . . . ಮೃಗಿತಂ — ೫ ಹುಡುಕಲ್ಪಟ್ಟಿರುವುದು" (ಸಿದ್ಧಾಂಶಿ. ೩೩೦). [ಸಂ.]

**ಮೃಗೇಂದ್ರ** (ನಾ). ೧. ಸಿಂಹ: "ಹರಿ ಮೃಗೇಂದ್ರಂ . . . ಕರಿವೈರಿ ಕೇಸರಿಯೆನಲ್ ಸಿಂಹಮೆನಿಸಿಕ್ಕು" (ಮಂಗರಾ. ೯೭-೭); ಇಂದ್ರಂ ಮೃಗೇಂದ್ರನಂತೆ ಗರ್ಜಿಸಿ ಚತುರಂಗಬಲಸಮೇತಂ ಪೊಱಮಟ್ಟು . . . ಬಂದು ತಾಗುವುದುಂ (ಶಾಂತಿಪು. ೭-೮೦ ವ); ಮೃಮಣಿಗೆ ಕಟ್ಟಲೆ ಶರಭಕ್ಕೆ ಮೃಗೇಂದ್ರಂ ಸೆಡೆವ ಮಾಟಕ್ಕಯಿಂ ಸೆಡೆವನಿವಂ ನಿಮಗೆ (ಶಂರಾಚಾ. ೭-೦೦೯). ೨. ಹುಲಿ: ವ್ಯಾಘ್ರ. ೩. [ಜ್ಯೋತಿ] ಸಿಂಹರಾಶಿ. [ಸಂ.]

**ಮೃಗೇಂದ್ರವಿಷ್ಟರ** (ನಾ). ಸಿಂಹಾಸನ: ಪುರುದೇವಂ ಮೃಗೇಂದ್ರವಿಷ್ಟರದೊಳಿರೆ (ಆದಿಪು. ೮-೭೦ ವ); ಅಶೇಷವಿದ್ವಜ್ಜನಸಭಾಭ್ಯಂತರ ಮೃಗೇಂದ್ರವಿಷ್ಟರಾರೂಢನಾಗಿರ್ಪುದುಂ (ಸುಕುಮಾ. ೨-೧೯ ವ). [ಸಂ.]

**ಮೃಗೇಕ್ಷಣ** (ನಾ). (ಜಿಂಕೆಯ ದೃಷ್ಟಿಯಂತೆ) ಚಂಚಲವಾದ ನೋಟ : ಮಿಾನಲೋಚನೆ ಮೃಗೇಕ್ಷಣದೆ ಸಗರನೃಪನನಭಿವೀಕ್ಷಿಸಿದಳ್ (ಅಜಿತಪು. ೯-೩೭). [ಸಂ.]

**ಮೃಗೋತ್ಥ** (ನಾ). ಕಸ್ತೂರಿಮೃಗದಿಂದ ಉತ್ಪತ್ತಿಯಾದುದು ; ಕಸ್ತೂರಿಯೆಂಬ ಸುಗಂಧದ್ರವ್ಯ : ಮೃಗಮದ : ಮೃಗೋತ್ಥ ವಾಸಿತ ಧಾರಾಪರಿಕಲಿತ ಪರಾವೃತಪಿಂಛ ಹರಿಹಸ್ತಾತ್ಕೃಷ್ಟಕೇಶಹಸ್ತೆವೊಲೆಸೆದಳ್ (ಜಗಾ. ೦೯-೦೦೭) ; ಪಂಚರತ್ನದ ಘನಸಾರವಾರಿಯ ಮೃಗೋತ್ಥ ಕುಳತ್ಥದ ಬಾಯಿನಂಗಳಂ ಮುದದೊದವಿಂದಮಿತ್ತು ಮೆಚ್ಚಿದರ್ (ಚಂದ್ರಪು. ೭-೯೦). [ಸಂ.]

**ಮೃಗೋದ್ಭವ** (ನಾ). = ಮೃಗೋತ್ಥ : ಅಡರೆ ಕವಲ್ತುದೊಂದೆಡೆ ಮೃಗೋದ್ಭವದಿಂ . . . ಸರಸೀವಿಭಾಗದೊಳ್ (ಶಾಂತಿಪು. ೯-೨೯) ; ಶೀತಳಕರ್ಪೂರಮೃಗೋದ್ಭವಾಗುರು ಕುಮುಸ್ತಾಗ್ರಂಥಿಗಂಧಂಗಳಂ ತಳೆದೇಂ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಳಂ (ಅರ್ಧನೇ. ೫-೯೭). [ಸಂ.]

**ಮೃಗ್ಯ** (ಗು). ೧. ಹುಡುಕುವ. ೨. ಹುಡುಕಲು ಯೋಗ್ಯವಾದ. (ನಾ). ೩. ಹುಡುಕಬೇಕಾದುದು ; ಶೋಧಿಸಬೇಕಾದುದು : ರಾಮ ಕಾರ್ಮುಕ, ಕೃಷ್ಣಯುಕ್ತಿ, ಗೌತಮಕರುಣೆ ಭೂಮಿಭಾರವನಿಳುಪೆ ಸಾಲದಾಗಿರಲು ಸಾಮಾನ್ಯರೆನಿತು ತಾಂ ಪೆಣಗಿದೊಡಮೇನಹುದು ? ಕ್ಷೇಮಮೆಂದುಂ ಮೃಗ್ಯ (ಮಂಕುತಿ. ೬೩೭). [ಸಂ.]

**ಮೃಚ್ಚೂರ್ಣ** (ನಾ). ಮಣ್ಣಿನ ಪುಡಿ ; ಧೂಳು : ಅನುನಯದಿ ಸರ್ವಗತನೆಂಬಂತೆ ಮೃಚ್ಚೂರ್ಣವನು ಹೊದ್ದದಿರ್ಪ ವಾಯುವಿನಂತೆ (ಏಕಶ್ರು. ೯-೭-೩೯). [ಸಂ.]

**ಮೃಜೆ** (ನಾ). ೧. ತೊಳೆಯುವಿಕೆ : ಶುದ್ಧಿಮಾಡುವುದು : "ಮಾರ್ಷ್ಟಿಃ. ಮಾರ್ಜನಾ, ಮೃಜಾ – ೩ ಶ್ರೀಗಂಧ, ಕುಂಕುಮಕೇಸರಿ ಮುಂತಾದ ದ್ರವ್ಯಗಳನ್ನು ಮೈಗೆ ಹಾಕಿ ಉಜ್ಜಿ ತೊಳಕೊಂಡು ಕೊಳೆ ಹೋಗಲಾಡಿಸುವವಕ್ಕೆ ಹೆಸರುಗಳು" (ಸಿದ್ಧಾಂತಿ. ೨೦೫). ೨. ಶುಚಿ ; ನೈರ್ಮಲ್ಯ. [ ಸಂ. ಮೃಜಾ ]

**ಮೃಡ** (ನಾ). ಈಶ್ವರ : ಶಿವ : "ಈಶಾನಃ . . . ಮೃಡಃ . . . ನೀಲಲೋಹಿತಃ – ಈ ೪೫ ಮಹಾದೇವರ ಪೆಸರ್" (ಹಲಾಯು. ೯-೦೩); ಮೃಡನೊಳ್ ಪಾಶುಪತಾಸ್ತ್ರಂಬಡೆದಂ . . . ನಾರಾಯಣನೊಳ್ ಪಡೆದಂ ಗಾಂಡಿವಿ ಸುಭದ್ರೆಯಂ ಭದ್ರಮನಂ (ಗದಾಯು. ೨-೩೮); ಮನವಿದು ವಿಷಯಕ್ಕೆ ಹರಿವುದು ಮೃಡ ನಿಮ್ಮನನುದಿನ ನೆನೆಯಲೀಯದು. (ಬಸವ. ೩೯). [ ಸಂ. ]

**ಮೃಡರಿಪು** (ನಾ). ಈಶ್ವರನ ಶತ್ರು; ಮನ್ಮಥ : ಬೆರಲಂ ಮಿಡಿಯುತ್ತ ರುಕ್ಮಿಣಿ. ಜಗಮಂ ಮೃಡರಿಪು ಬೆರಲೆತ್ತಿ ನಿಲ್ವಿನಂ ಬಗೆಗೊಂಡಳ್ (ಜಗಾ. ೧೦-೧೦೯). [ ಸಂ. ]

**ಮೃಡಸುತ** (ನಾ). ೧. ಈಶ್ವರನ ಮಗ : ಗಣಪತಿ : ಮೃಡಸುತನಂತೆ ದಂತಹತಿ ಪೊರ್ದದೆ ಶೂದ್ರಕನಂತೆ ಶಕ್ತಿಯಂ ಕಿಡಿಸದೆ (ಮಲ್ಲಿಪು. ೦೩-೯೯). ೨. ಸ್ಕಂದ ; ಷಣ್ಮುಖ. [ ಸಂ. ]

**ಮೃಡಾದ್ರಿ** (ನಾ). ಈಶ್ವರನ ವಾಸಸ್ಥಾನವಾದ ಕೈಲಾಸಪರ್ವತ : ದನುಸುತಂ ಕಿಟಿ ತನ್ನನಾ ಮುಳಿಸಿಂ ಮೃಡಾದ್ರಿಯಿ ಸಿಂಹವಾಹಿನಿಯ ರೂಪಿನೊಳಾಹವಕ್ಕೆ ಸಹಾಯಮಾಯ್ತು ರಘೂದ್ವಹಂಗೆನಿಸಿ (ಕಂಠಾಭರ. ೦೯-೫). [ ಸಂ. ]

**ಮೃಡಾನಿ** (ನಾ). ಈಶ್ವರನ ಪತ್ನಿ ; ಪಾರ್ವತಿ : "ರುದ್ರಾಣೀ . . . ಮೃಡಾನೀ, ಹೈಮವತೀ . . . . ಮೇನಕಾತ್ಮಜಾ — ಈ ೨೦ ಗೌರೀದೇವಿಯ ಪೆಸರ್" (ಹಲಾಯು. ೯-೦೯); ಅವಳ ನೊಸಲೊಳಗಿನ ಗೋರೋಚನದ ಬೊಟ್ಟು ಬೇಡತಿಯಾದ ಮೃಡಾನಿಯ ಹಣೆಗಣ್ಣಿನಂತೆ ಶೋಭಿಸುತ್ತಿರುವುದು (ಮುಂಬಯಿ. ೫-೩೦೦). [ ಸಂ. ಮೃಡಾನೀ ]

**ಮೃಡಾಲಯ** (ನಾ). ಈಶ್ವರನ ನಿವಾಸ ; ಶಿವಾಲಯ : ಒಡಗೂಡಿರ್ಪ ಲಿಂಗವನಜಿಯದೆ . . . ಅಡವಿಗಿಡುಗಳಲ್ಲಿಪ್ಪ ಮೃಡಾಲಯಮಂ ಕಂಡು ಹೊಕ್ಕು ಸಡಗರಿಸಿಕೊಂಡು ವರವ ಹಡೆವೆನೆಂದು ಅಚ್ಚುಗಬಡುತ್ತಿದ್ದೇನೆ (ಪೋಲ್ವಮಾ. ೨೦-೯೩). [ ಸಂ. ]

**ಮೃಣಾಲ, ಮೃಣಾಳ** (ನಾ). ತಾವರೆಯ ದಂಟು. – ದಿಂಡು : "ಮೃಣಾಲಂ, ಬಿಸಂ – ೨ ತಾವರೇ ಕಾವಿನ ಹೆಸರುಗಳು. ಇವೇ ತಾವರೆ ಬಳ್ಳಿಯ ಕೊಳವಿಗಳು" (ಸಿದ್ಧಾಂತಿ. ೯೦). ಮೃಣಾಳ : "ಮೃಣಾಳಂ, ಬಿಸಂ – ಈ ೨ ನಾಳಂ" (ಹಲಾಯು. ೦೦೨-೭೦); ಕಣ್ಗಗುರ್ವಿಸುವಿನಮೊಕ್ಕು ನೇಲ್ವ ಕರುಳೋಳಿಯೆ ಬಾಳಮೃಣಾಳವಾಗೆ (ಕಂಕಣ. ೦-೭); ತರುಣ ಮೃಣಾಳವುಂ ತೆಗೆದು ಪೂಗೊಳದಿಂ ಪೊಱಗಿಕ್ಕಿದಂದದಿಂ (ಮಲ್ಲಿಪು. ೩-೨೮). [ ಸಂ. ]

**ಮೃಣಾಳ** 'ಮೃಣಾಲ' ನೋ.

**ಮೃಣಾಳಗುಣ** (ನಾ). ತಾವರೆಯ ದಂಟಿನ ನೂಲು.– ನಾರು : ಬಳಸಿರೆ ಮೃಣಾಳಗುಣಮಗ್ಗಳಿಸಿರೆ ಮಣಿದರ್ಪಣಂ ಮಹೌಷಧಿಗಳ್ಕಂಗೊಳಿಸಿರೆ ಪಲ್ಲವತತಿ ಸಂಗಳಿಸಿರೆ ಮಣಿಪೂರ್ಣಕುಂಭಮೊಪ್ಪಿದುದದಱೊಳ್ (ಲೀಲಾವ. ೯-೦೦). ಸಂ. ಮೃಣಾಲಗುಣ ]

**ಮೃಣಾಳನಾಳ** (ನಾ). ತಾವರೆಯ ದಂಟು ; ಕಮಲದ ನಾಳ : ಶಶಿಕಳೆಗಳಂ ಮೆಲ್ವ ಸೈಂಹಿಕೇಯನಂತೆ ಮೃಣಾಳನಾಳಗಳಂ ಮೆಲ್ದು (ಕಾದಂಬ. ೦೭೯). [ ಸಂ. ಮೃಣಾಲನಾಲ ]

**ಮೃಣಾಳನಾಳಿಕೆ** (ನಾ). = ಮೃಣಾಳನಾಳ : ಮೃಣಾಳನಾಳಿಕೆಗೆ ಚಂದನದಣ್ಣೆಗೆ ತಣ್ಪುಳಿಲ್ಗೆ ತಣ್ಗರಗದ ಸೂಸುನೀರ್ಗೆ ಕೊಳವೇರ್ಗೊಡಲಂ ಗುಜೀಯಾಗೆ ಮಾಡುವರ್ (ಮಲ್ಲಿಪು. ೩-೨೮). [ಸಂ. ಮೃಣಾಲನಾಲಿಕಾ]

**ಮೃಣಾಳಿಕೆ** (ನಾ). ತಾವರೆಯ ದಂಟಿನ ನಾರು ; ಬಿಸತಂತು : ಗರ್ಭಿಣಿಗೆ ತತ್ಸಮಯೋಚಿತ ಮಂಗಳಪ್ರಸಾಧನಮೆಸೆದತ್ತು . . . ಮುತ್ತಿನ ತಿಸರಂ ಮೃಣಾಳಿಕೆಯ ಮುದ್ರಿಕೆ ಪೂವಿನ ಪಿಂಡುಗಂಕಣಂ (ಕಂಠಾಭರ. ೩-೦೦೭). [ ಸಂ. ಮೃಣಾಲಿಕಾ ]

**ಮೃತ** (ಗು). ೧. ಸತ್ತುಹೋದ ; ಮರಣ ಹೊಂದಿದ. (ನಾ). ೨. ಸಾವು ; ಮರಣ. ೩. ಸಾಯುವವನು ; ಮರಣ ಹೊಂದುವವನು : ಜೀವನುಂ ಮೃತ ದುಃಖಿ ಅಮೃತಂ. ದೇವನಾ ಜೀವನುವು ಶುದ್ಧನು ದೇವನತಿಶುದ್ಧನು (ಬಸಪು. ೫೦-೨೯) ; ಕಂದುಕಲೆ ತನಗೆತ್ತಣದು ನಿರ್ದ್ವಂದ್ವಕನು ಮೃತಜಾತ ತಾನಲ್ಲೆಂದು ಕಂಡರವಂಗೆ ಪಾಪ ವಿಲೇಪವಿಲ್ಲೆಂದ (ಕುವ್ಯಾಲೀ. ೩-೯೯). ೪. ಜೀವವಿಲ್ಲದುದು; ನಿರ್ಜೀವವಾದುದು : ಸರ್ವಸೌಂದರ್ಯಾಮೃತಂ ಮೃತವಂತಿಹುದು ನನಗೆ ನೀರಸಂ (ಶ್ರೀರಾಮಾ. ೯-೨೨೭). ೫. ಸತ್ತುಹೋದವನು ; ಮರಣವನ್ನು ಹೊಂದಿದವನು : "ಪರಾಸುಃ, ಉಪಸಂಪನ್ನಃ, ಪ್ರಮೀತಃ, ಸಂಸ್ಥಿತಃ, ಮೃತಃ – ಈ ೫ ಸತ್ತಾತಂ" (ಹಲಾಯು. ೦೦೯-೭) ; ಸ್ವಾಮಿಗಳು – 'ಮೃತನೆಲ್ಲಿ ತೋರಿಸಿ' ಎಂದರು (ಕಥಾ. ೩೯೫). ೬. ಯಾಚನೆಯಿಂದ ಪಡೆದ ಆಹಾರ ; ಭಿಕ್ಷೆ. [ ಸಂ. ]

**ಮೃತಕ** (ನಾ). ೧. ಸತ್ತ ವ್ಯಕ್ತಿ; ಮರಣ ಹೊಂದಿದ ವ್ಯಕ್ತಿ. ೨. ಜೀವವಿಲ್ಲದುದು ; ಹೆಣ : ಪ್ರತಿಕೂಲನಾಗಿ ನಿಲೆ ವಿಧಿ ಮತ್ತ ನಯಮನುಕೂಲಮಾಗಿ ನಿಲೆಯುಂ ಕಾರ್ಯಸ್ಥಿತಿಯಂ ಸಾಧಿಸಲಾಗದು ಮೃತಕ ಕೃತೋಪಕೃತಿಯುವೊಲನರ್ಥಾಯಾಸಂ (ಲೀಲಾ. ೩-೦೯೫); ಮೃತಕಮಂ ಕಂಡನಿಬರುಂ ಮೂರ್ಛೆವೋಗಿ ನೀಡಱಿಂದೆಚ್ಚತ್ತರ್ (ಶಬ್ದಾಲಂ. ೩೦-೭); ಈ ಮೃತಕಮಂ ನಿಷ್ಪ್ರಯೋಜನಮಿಂತೇಕೆ ಪೊತ್ತು ತೊಟಲ್ದಪೆಯನೆ

(ಶಂಅರಶಾ. ೧೬-೩೩ ವ). ೩. ಸಾವು ; ಮರಣ. ೪. ಮರಣಸೂತಕ; ಮೃತಾಶೌಚ. [ಸಂ.]

**ಮೃತಕದುಂದುಭಿ** (ನಾ). ವ್ಯಕ್ತಿಯು ಸತ್ತ ಮೇಲೆ ಕೆಲವರಲ್ಲಿ ಒಂದು ವಿಧಿಯಾಗಿ ಬಾರಿಸುವ ತಮಟೆ : ಗಡಗಡನೆ ಪೊಡವಿ ನಡುಗಿತು. ದುಃಖವಾರ್ತೆಯಂ ಜಗಕೆಲ್ಲ ಕೇಳಿಸುವ ಮೃತಕದುಂದುಭಿಯಂತೆ (ಗೊರೊ್ಮ ಶಾ. ೦೩-೩೯೩). [ಸಂ.]

**ಮೃತಕಲ್ಪ** (ಗು). ೧. ಸತ್ತಂತಿರುವ; ಮೈಮರೆತಿರುವ. (ನಾ). ೨. ಹೆಣಕ್ಕೆ ಸಮನಾದುದು; ಸತ್ತಂತೆ ಇರುವುದು : ಕಾಳರಕ್ಕಸ ಲೋಕವೆಲ್ಲವ ಗೋಳುಗುಟ್ಟಿಸೆ ಅಜನು ಶಪಿಸಿದ ಬೀಳು ನೀ ಮೃತಕಲ್ಪನಾಗೆನೆ ನಿದ್ದೆಗೈದಿಹನು (ಕೌಶಿರಾ. ೨೩-೬). [ಸಂ.]

**ಮೃತಕಸೆಜ್ಜೆ** (ನಾ). [ಜೈನ] ತಪಸ್ಸಿನ ಒಂದು ಭಂಗಿ : ಶವಾಸನ(?) : ಪ್ರಾಯೋಪಗಮನವಿಧಾನದಿಂ ಪ್ರಚ್ಛನ್ನಮಪ್ಪೆಡೆಯೊಳ್ ಮೃತಕಸೆಜ್ಜೆಯೊಳಿರ್ದು ಸಂನ್ಯಸನಂಗೆಯ್ದು ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಧ್ಯಾನಿಸುತ್ತಿರ್ಪನ್ನೆಗಂ (ವಡ್ಡಾರಾ. ೨೯-೦). [ ಮೃತಕ + ಸೆಜ್ಜೆ$_2$ ]

**ಮೃತಪಟಹ** (ನಾ). = ಮೃತಕದುಂದುಭಿ : ಮೃತಪಟಹಂ ಜಯಪಟಹಂ ಚಿತಾಗ್ನಿಧೂಮಂ ಜಯಧ್ವಜಂ ಜನಕರುಣಾರುತಿ ಜಯಮಂಗಳರುತಿಯೆನೆ ಕೃತಾಂತರಾಜಂಗೆ ರಾಜ್ಯಚಿಹ್ನವಿಂದಲ್ತೆ (ಅಜಿತ.೦೦-೨೯). [ಸಂ.]

**ಮೃತಪತ್ರ** (ನಾ). ವ್ಯಕ್ತಿಯು, ತಾನು ಸತ್ತ ತರುವಾಯ ತನ್ನ ಆಸ್ತಿಯು ಯಾರಿಗೆ ಸೇರಬೇಕೆಂಬ ಹಕ್ಕನ್ನು ಮತ್ತು ತನಗೆ ಸಂಬಂಧಿಸಿದ ಅಂತಿಮ ಇಚ್ಛೆಗಳನ್ನು ಬರೆದಿರುವ ಪತ್ರ; ಉಯಿಲು; ಮರಣಶಾಸನ : ಆ ಮುದುಕರು ಮೃತಪತ್ರ ಬರೆದಿಟ್ಟಿದ್ದಾರೆ (ರೂಢಿ). [ಸಂ.]

**ಮೃತಭಾಷೆ** (ನಾ). ಬಳಕೆಯಲ್ಲಿ ಇಲ್ಲದೆ ಕೇವಲ ಗ್ರಂಥಸ್ಥವಾಗಿರುವ ಭಾಷೆ : ಈಗ ವ್ಯವಹಾರದಲ್ಲಿಲ್ಲದೆ ಗ್ರಂಥಗಳಲ್ಲಿ ಮಾತ್ರ ದೊರೆಯುವ ಭಾಷೆಯನ್ನು ಮೃತಭಾಷೆಯೆಂದು ಕರೆಯುತ್ತಾರೆ (ಕೃಶಿವಿ. ೨೯೩).
[ಸಂ. ಮೃತಭಾಷಾ]

**ಮೃತಸಂಜೀವಕ** (ನಾ). ಸತ್ತವರನ್ನು ಬದುಕಿಸುವ ಔಷಧಿ, ರತ್ನ, ಮಂತ್ರ ಇತ್ಯಾದಿ : ತನ್ನ ರಮಣಂ ಬರ್ದುಕಿಪುದರ್ಕೆ ಮೃತಸಂಜೀವಕದ ಮಣಿಯನೀವುದು (ಕೃಪುರಾ. ೨೯-೪). [ಸಂ.]

**ಮೃತಸಂಜೀವನ** (ಗು). ೧. ಸತ್ತವರನ್ನು ಮತ್ತೆ ಬದುಕಿಸುವ. (ನಾ). ೨. ಸತ್ತವರು ಪುನಃ ಬದುಕಿಕೊಳ್ಳುವುದು. ೩. ಸತ್ತವರನ್ನು ಬದುಕಿಸುವುದೆಂದು ಭಾವಿಸಲಾದ ಒಂದು ಮಂತ್ರ; ಮೃತಸಂಜೀವನ ಎಂಬ ಸಂಜೀವನತ್ರಯಮಂತ್ರಂಗಳಂ (ಚಿವೇಕ. ೬೦). [ಸಂ.]

**ಮೃತಸಂಜೀವನೀವಿದ್ಯೆ** (ನಾ). (ಮಂತ್ರ ಮಣಿ. ಔಷಧಿ ಮುಂತಾದುವುಗಳಿಂದ) ಸತ್ತವರನ್ನು ಪುನಃ ಬದುಕಿಸುವ ವಿದ್ಯೆ : ಅಸುರರ ಪುರೋಹಿತನಾದ ಶುಕ್ರಾಚಾರ್ಯನಿಗೆ ಸತ್ತವರನ್ನು ಬದುಕಿಸುವ ಮೃತಸಂಜೀವನೀವಿದ್ಯೆ ಗೊತ್ತಿತ್ತು (ಪಜರಾ. ೩೯೯).
[ಸಂ. ಮೃತಸಂಜೀವನೀವಿದ್ಯಾ]

**ಮೃತಸಂಜೀವಿನಿ** (ನಾ). ಸತ್ತವರನ್ನು ಪುನಃ ಬದುಕಿಸುವ ಮಂತ್ರ, ಮಣಿ, ಔಷಧಿ ಮುಂತಾದ ಸಾಧನ ಮತ್ತು ವಿದ್ಯೆ : ಮೃತಸಂಜೀವಿನಿಯ ಬಲುಪಿರಲು ಬಹಳ ವ್ಯಾಧಿ ಮಾಡುವ ದುರುಳತನ ತಾನೇನು (ಶುಜ್ಞಾರತ್ನಾ. ೦೦-೯೯); ದೇವರಾಪನ ಕಟಕ ಮೃತಸಂಜೀವಿನಿಬಲಸುಮತ್ತದ ಬಳಿಕ ವಿಭಾವರಿಯೊಳಂದಣ್ಣಯ್ದು ಲಂಕಾಪುರ ಪುನರ್ದಹನ (ಕೊರರಾ. ೬-೬೭ ಸೂತನ). [ಸಂ. ಮೃತಸಂಜೀವಿನೀ]

**ಮೃತಸ್ನಾತ** (ನಾ). ಶವಸಂಸ್ಕಾರವನ್ನು ಮಾಡಿದ ಮೇಲೆ ಸ್ನಾನ ಮಾಡಿದವನು : ಅಂತ್ಯಕ್ರಿಯೆಯ ನಂತರ ಸ್ನಾನಮಾಡಿದವನು. [ಸಂ.]

**ಮೃತಸ್ನಾನ** (ನಾ). ಶವಸಂಸ್ಕಾರ ಮಾಡಿದ ಮೇಲೆ ಮಾಡುವ ಸ್ನಾನ : ಅಂತ್ಯಕ್ರಿಯೆಯ ನಂತರ ಮಾಡುವ ಸ್ನಾನ : "ಅಪಸ್ನಾನಂ ಮೃತಸ್ನಾನಂ — ಈ ೨ ನೀರಿಳಿಹು" (ಹಲಾಯು. ೦೦೫-೦೭) ; "ಅಪಸ್ನಾನಮೆನೆ ಮೃತಸ್ನಾನಕ್ಕೆ ಪೆಸರೆನಿಕ್ಕುಂ" (ಮಂಗರಾ. ೦೦೭-೩). [ಸಂ.]

**ಮೃತಾಲಕ** (ನಾ). ೧. ಒಂದು ಬಗೆಯ ಜೇಡಿಮಣ್ಣು. ೨. ಸುವಾಸನೆಯುಳ್ಳ ಒಂದು ಬಗೆಯ ಮಣ್ಣು : "ಆಢಕೀ. ಕಾಕ್ಷೀ. ಮೃತ್ಸ್ನಾ, ತುವರಿಕಾ, ಮೃತಾಲಕಂ, ಸುರಾಷ್ಟ್ರಜಂ — ಈ ೬ ಪಟುವಣ್ಣೆಂಬ ಗಂಧದ್ರವ್ಯ" (ನಾಚಿರಾ. ೦೦೦). [ಸಂ.]

**ಮೃತಾಶೌಚ** (ನಾ). ಒಬ್ಬ ವ್ಯಕ್ತಿಯ ಮರಣದಿಂದ ಆ ವ್ಯಕ್ತಿಯ ವಂಶಸ್ಥರಿಗೆ ಬರುವ ಮೈಲಿಗೆ ; ಮರಣಸೂತಕ : ವಂಶದಲ್ಲಿ, ಕೆಲವು ತಲೆಮಾರೊಳಗೆ, ಯಾರಾದರೂ ಜನಿಸಿದರೂ ಮೃತರಾದರೂ ನಿಯಮವಾದ ಕಾಲಪರ್ಯಂತವಾಗಿರುವ ಕರ್ಮಕ್ಕೆ ಅಧಿಕಾರವಿಲ್ಲದ ಅವಸ್ಥೆ — ಇದನ್ನು ಜಾತಾಶೌಚ, ಮೃತಾಶೌಚವೆನ್ನುತ್ತಾರೆ (ಅರ್ಥಶ. ೯೩). [ಸಂ.]

**ಮೃತಿ** (ನಾ). ಸಾವು ; ಮರಣ : ಮೃತಿಗನಿಸಪ್ಪೊಡಂ ಸೆಡೆಯದೀ ಭವದೊಳ್ ದೊರೆಕೊಂಡುದಿಲ್ಲ ದುಷ್ಕೃತದೊಳವಿಂ ಮನಃಪ್ರಿಯಕರಗ್ರಹಣಂ (ಶಂಅರಪು. ೬-೬) ; ಮತಿ ನಿರ್ವೇದ . . . ಮೋಹಾಮಯ ಮೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೩) : ಆ ಪರಾನ್ನಮೆ ಮೃತಿಗುದ್ದೀಪನ ಪಿಂಡದವೊಲಾಗೆ . . . ವಿಂಧ್ಯದೊಳೊಗೆದಂ (ಹುಕೋಶ. ೩-೩೯).
[ಸಂ.]

**ಮೃತಿಸು** (ಕ್ರಿ). ಸಾಯು; ಮರಣಹೊಂದು: ತನುಪತಿ ಚಂಚಲಿಸದಿರುತಿರಲು ಜನಿಸುತ ಸುತರು ಮೃತಿಸುವರು (ಕೀರಶ್ಯ. ೬-೨೭). [ಮೃತಿ + -ಸು$_2$]

**ಮೃತ್ತಿಕೆ$_1$** (ನಾ). ೧. ಮಣ್ಣು : "ಮೃತ್, ಮೃತ್ತಿಕಾ—ಈ ೨ ಮಣ್" (ಹಲಾಯು. ೨೭-೪) ; ವಿವಾಹಗೇಹಮಂ ಸಮೆಯಿಸಿಯದಱ ನಡುವಣಾರ್ದ್ರಮೃತ್ತಿಕಾವಿರಚಿತಮಪ್ಪ ಚತುರಂತರದೊಳ್ . . . ಗುಣಾರ್ಣವನನಾದ್ರುಪದಜೆಯನೊಡನೆ ಕುಳ್ಳಿರಿಸಿ (ಪಂಪಭಾ. ೩-೭೯ ವ). ೨. ಪವಿತ್ರವಾದ ಮಣ್ಣು : ಅಗುಟ್ದು ತುದಿಗೊಂಬಿನೊಳ್ ಮೆಲ್ಲಗೆ ಪೊತ್ತಭಿಷೇಕಮೃತ್ತಿಕೆಯನೊಡಸಂದತ್ತಗಲದನಿಸಂ ತಪೋವನಪ್ಪುಗಮಾ ಮುನಿವರನೊಳಾವ ಪರಿಚಯದಿಂದಂ (ಕಾದಂಪೂ. ೨೦೬) ; ರಾಜರು . . . ಕೈಯಲ್ಲಿದ್ದ ಮೃತ್ತಿಕೆಯನ್ನು ಕೊಟ್ಟು, ಇದನ್ನು ಲೇಪಿಸಿಕೋ ! ನಿನ್ನ ವ್ಯಾಧಿ ಪರಿಹಾರವಾಗುವುದೆಂದರು (ಕರಂ. ೦೯೬) : ನಮಿಸಿದನು ಮುಟ್ಟಿ ಮೃತ್ತಿಕೆಯನಾ ರಾಮಚರಣಸ್ಪರ್ಶಪೂಜ್ಯಮಂ (ಶ್ರೀರಾಮಪಾ. ೦೬೨-೨೬೬). ೩. ಜೇಡಿ ಮಣ್ಣು. ೪. ಒಂದು ಬಗೆಯ ಸುವಾಸನೆಯ ಮಣ್ಣು. ೫. ಒಂದು ನರಕದ ಹೆಸರು : ಪೂತಿವಕ್ತ್ರ ರಕ್ತಪೂತಿ ಮೃತ್ತಿಕೆ ಕಣಧೂಮವೆಂಬೈದು ಮಂತ್ರಿನರಕಂಗಳಿಂ ಬೆಱಿದು ಭೀಮವೆಂಬರಸುನರಕವಿಹುದು (ಚಿವೇಕ. ೦೫೩)'

ಮೃತ್ತಿಕೆಯ ಲವಣ = ಭೂಮಿಯಲ್ಲಿ ಘನರೂಪದಲ್ಲಿ ದೊರೆಯುವ ಉಪ್ಪು ; ಕಲ್ಲುಪ್ಪು : ಮೃತ್ತಿಕೆಯ ಲವಣ ಸ್ವಯಂಪಾಕ ಮಿಶ್ರದ ಲವಣ ಅಪ್ಪುಭೇದ (ಸ್ವಕೃತಿ. ೬.I.೩೯೯-೦೬೩೩). [ಸಂ. ಮೃತ್ತಿಕಾ]

**ಮೃತ್ತಿಕೆ$_2$** (ನಾ). [ಅಶ್ವಶಾ] ಕುದುರೆಯ ಶರೀರದ ಒಂದು ಭಾಗ ; ಗುದದ ಎರಡು ಪಕ್ಕ : ಬಾಲದ ಕೆಳಗುಂ ಗುದಮುಂ ಲೀಲೆಯ ಗುದದೆರಡು ಕೆಲನ ಮೃತ್ತಿಕೆಯೆಂಬರ್ ತಾಳುವ ಮೃತ್ತಿಗೆ ಕೆಳಗುಂ ಪೀಠಾ ರೋಮಸ್ವಮೆಂಬ ಪೆಸರಂತಪ್ಪುದು (ಅಶ್ವಶಾ. ೯-೯೬) ; ಬಾಲದ ಕೆಳಗಂ ಗುದವೆಂಬರು ಆ ಗುದದ ಎರಡು ಕೆಲಸಂ ಮೃತ್ತಿಕೆಯೆಂಬರು (ಅಶ್ವಟೀ. ೯-೯೬). [ ? ]

**ಮೃತ್ತಿಗೆ** (ನಾ). ೧. ಮಣ್ಣು : ಮೃತ್ತಿಗೆಯಲ್ಲಿ ಗಂಧಶಕ್ತಿಯಾಗಿಯು ಜಲದಲ್ಲಿ ರಸಶಕ್ತಿಯಾಗಿಯು . . . ಇವುಗಳೆಲ್ಲ ಆದಿಯಾಗಿ

ಇರುವದೆ ಪಾಪವು (ತತ್ವತಿಂ. ೧೨-೧೦). ೨. ಪವಿತ್ರವಾದ ಮಣ್ಣು. – ಮೃತ್ತಿಕೆ : ನಾನು ಅಪ್ಪಾಜಿಯ ಹತ್ತಿರವಿದ್ದ ತಟ್ಟಿ ಗಿಂಡಿ ವಿಭೂತಿ ಮೃತ್ತಿಗೆ ಹೂವಿನ ಬುಟ್ಟಿಯೆಲ್ಲವನ್ನು ಅವರ ಹತ್ತಿರವಿಟ್ಟೆ (ಶಿಂಗಾಳ್ಯ. ೦೨). [<ಸಂ. ಮೃತ್ತಿಕಾ]

**ಮೃತ್ತಿಸು** (ಕ್ರಿ). ಮಣ್ಣನ್ನು ಮೆತ್ತು, – ಲೇಪಿಸು : ಕಾಯ್ದು ಕಾಯ್ಗೊಂಡ ದೆಣ್ಣೆಯೊಳರ್ದಿ ಬರ್ದಿಸುತ್ತಮಾಪಾದಮಸ್ತಕಂಬರಂ ಮೃತ್ತಿಸಿ ಪತ್ತಿ ತಿದಿ ಯೂಗಿಯುಂತ್ರ (ಅಜಿತ. ೧೦-೧೦ ವ). [ಮೃತ್ತು + – ಇಸ್ಸು]

**ಮೃತ್ತು** (ನಾ). ಮಣ್ಣು : ಮೃತ್ತಿಕೆ : ಮೃತ್ತುವಿನಿಂದಾದ ಮಡಕೆ ಮರಳಿ ಮಣ್ಣಪ್ಪುದೆ (ವಚನಂ. ೩೯೭-೬೨). ' ಮೃತ್ತಿಸು ' ಪರಾ. [<ಸಂ. ಮೃದ್]

**ಮೃತ್ಪಾತ್ರ** (ನಾ). ಮಣ್ಣಿನ ಪಾತ್ರೆ ; ಮಡಕೆ : ತಪೋವನಕ್ಕೆ ಪೋಪ ಭಾರ್ಗವಂ ದ್ರವ್ಯಾರ್ಥಿಯಾಗಿ ಬಂದ ಕುಂಭಸಂಭವನಂ ಕಂಡು ಕನಕ ಪಾತ್ರಕ್ಕುಪಾಯಮಿಲ್ಲವು ದಜ್ಞಂ ಮೃತ್ಪಾತ್ರದೊಳರ್ಘ್ಯಮೆತ್ತಿ ಪೂಜಿಸಿ (ಸಂಶಕಾ. ೨-೯೩ ವ). [ಸಂ.]

**ಮೃತ್ಪಿಂಡ** (ನಾ). ೧. ಮಣ್ಣಿನ ಮುದ್ದೆ, – ಉಂಡೆ : ಮೃತ್ಪಿಂಡದ ಹದನ ಚಕ್ರಿಯ ಚಿತ್ತದ ಕರದಂತೆ ಚಿತ್ರಜ್ಞನ ಚಿತ್ತದ ಲೆಕ್ಕಣಿಕೆಯ ಒಪ್ಪ ದಂತೆ (ಪೋ೯ವಚ. ೧೯೯-೬೯೩) ; ವಿಶ್ವವಿಶ್ವಂಭರೆಯಂ ಮೃತ್ಪಿಂಡಮಾತ್ರಾ ಕೃತಿಯೆನೆ ಬಗೆದಂ (ಚಂದ್ರಪು. ೧೦-೦೩೬). ೨. (ಅಲಂ) ದೇಹ ; ಶರೀರ : " ಮನುಷ್ಯಶರೀರ, ಪಾರ್ಥಿವದೇಹ. ಮೃತ್ಪಿಂಡ " (slime. ೩೦೯೩). [ಸಂ.]

**ಮೃತ್ಯು** (ನಾ). ೧. ಸಾವು ; ಮರಣ : " ನಿಧನಂ, ನಾಶಃ, ಮೃತ್ಯುಃ . . . ದೀರ್ಘನಿದ್ರಾ – ಈ ೧೨ ಸಾವು " (ಶಬ್ದಾಭಿ. ೦೦೪-೬) ; ಮೃತ್ಯು ಮುಟ್ಟದ ಮುನ್ನ ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೦೬೦) ; ಅರಣ್ಯದೊಳಿರುವ ಅರಳಿಯ ಮರನ ಸ್ವಕರದ್ವಯಂಗಳಿಂ ಮುಟ್ಟಿ ಸ್ಮರಿಸಿ ದೊಡ ನೂರೆಂಟು ವೇಳೆಯು ಪರಿದು ಪೋಪುದು ಮೃತ್ಯು (ಗಗಚಾ. ೪-೬೬). ೨. ಸಾವಿನ ಅಧಿದೇವತೆ ; ಯಮ : " ಪ್ರೇತಪತಿ ಸಮವರ್ತಿ ಮೃತ್ಯು ಕಾಳಿಂದಿ . . . ಕೃತಾಂತನಕ್ಕುಂ " (ಮಂಗರಾ. ೦೩-೦೦) ; ಮೃತ್ಯು ವಿನ ಬಾಯಿಗೆ ತುತ್ತಾಗಲೇಕೆ (ಬಸವ. ೦೩೯). ೩. ಸಾವಿನ ದೇವತೆ ; ಮೃತ್ಯುದೇವತೆ : ಬ್ರಹ್ಮನ ಕಿತ್ತಡದ ಕೋಪದಲಿ ಜನಿಸಿದ ರುದ್ರನಿಂ ಬಳಿಕ ಮೃತ್ಯುವೆಂದವಳಾದಳಾ ಸತಿಯುತ್ತ ಕಂಬನಿ ರುಜೆಗಳಾದವು ತತ್ತಿಗರು ಷಡುವರ್ಗ ಕಾಮ ಕ್ರೋಧ ಮೊದಲಾಗಿ (ಕುಮಾವ್ಯಾದ್ರೋ. ೬-೩೪). ' ಮೃತ್ಯು ದೇವಿ ' ಪರಾ. [ಸಂ.]

**ಮೃತ್ಯುಂಜಯ** (ನಾ). ೧. ಯಮನನ್ನು ಜಯಿಸಿದವನು ; ಶಿವ : ತ್ರಾಹಿ ಮೃತ್ಯುಂಜಯ ಪಿನಾಕಿ ತ್ರಾಹಿ ಲೋಕೇಶ (ಕುಮಾವ್ಯಾ. ೬-೪೩) ; ಮೃತ್ಯುಂಜಯನನಜಿಯದೆ ಸಂಸಾರವೆಂಬ ಮೃತ್ಯುವಿನ ಬಾಯ ತುತ್ತಾಗಿ ಉತ್ಪತ್ತಿ ಸ್ಥಿತಿ ಪ್ರಳಯಕ್ಕೊಳಗಾದಿರಲ್ಲಾ (ಸಿದ್ಧೇವ. ೩೦-೦೪೦). ೨. (ಸಾವನ್ನು ತಪ್ಪಿಸುವುದೆಂದು ನಂಬಿ ಜಪಿಸುವ) ಒಂದು ಮಂತ್ರ : ಗಾಯತ್ರಿ ಮೃತ್ಯುಂಜಯ . . . ಭೈರವಾದಿ ಮಹಾಮಂತ್ರಂಗಳಂ . . . ಬೇಜಿ ಬೇಜಿ ವಿವೇಕಿಸಿ ನೋಡಿ (ವಿವೇಕ. ೬೩). ' ಮೃತ್ಯುಂಜಯ ಮಂತ್ರ ' ಪರಾ. ೩. [ಜೈನ] ಜಿನ ; ಅರ್ಹಂತ. [ಸಂ.]

**ಮೃತ್ಯುಂಜಯತೆ** (ನಾ). ಸಾವನ್ನು ಗೆಲ್ಲುವ ಶಕ್ತಿ ; ಮರಣವನ್ನು ಜಯಿಸುವ ಬಲ : ಬಿದ್ದುದನು ನಿಲ್ಲಿಪ್ಪುದೆ ನರನ ಮೃತ್ಯುಂಜಯತೆ (ಮಂಕುತಿ. ೯೬೪). [ಸಂ. ಮೃತ್ಯುಂಜಯತಾ]

**ಮೃತ್ಯುಂಜಯಮಂತ್ರ** (ನಾ). = ಮೃತ್ಯುಂಜಯ ೨ : ಶಾನುಮುರಿಸಿಯುಂ ತನ್ನ ನೀಶ್ವರದಿವ್ಯಪಿಚನಮೃತ್ಯುಂಜಯಮಂತ್ರಸಾಮರ್ಥ್ಯಸಂಧಾರ್ಯಮಾ ಣಜೀವಿತರಾಗಿರ್ದರ್ (ಚಂದ್ರಪು. ೩-೩೬ ವ). [ಸಂ.]

**ಮೃತ್ಯುಂಜಯರಸ** (ನಾ). [ವೈದ್ಯಶಾ] ಒಂದು ಬಗೆಯ ಔಷಧಿ : ಮೃತ್ಯುಂಜಯ ರಸ : – (ಸನ್ನಿಗೆ) – ವತ್ಸನಾಭಿ ಗ ೧ ತೂಕ, ನಾಗಭಸ್ಮ ಗ ೧ ತೂಕ, ರಸ ಗ ೨ ತೂಕ, ಇವಂ ಅರ್ಕಕ್ಷೀರದಲ್ಲಿ ಚೆನ್ನಾಗಿ ಮರ್ದಿಸಿ . . . ತೇದು ಹಚ್ಚುವುದು (ವೈದ್ಯವಿ. ೪೪). [ಸಂ.]

**ಮೃತ್ಯುದೇವತೆ** (ನಾ). ಮರಣದ ಅಧಿದೇವತೆ ; ಸಾವಿನ ದೇವತೆ : ಮರ್ತ್ಯಲೋಕದ ಉದರದೊಳಗೆ ಮೃತ್ಯುದೇವತೆ ಕತ್ತೆ ಕುದುರೆಯ ಹಡೆದು ಪುತ್ರೋತ್ಸಾಹವ ಮಾಡುವದ ಕಂಡು . . . ಬೆಸಗೊಳಲು (ಸಿದ್ಧೇವ. ೦೯೬-೪೬೭) ; ಸ್ವತಃ ಮೃತ್ಯುದೇವತೆ ಬಾಗಿಲೆದುರು ಬಂದರೂ ಕವಿ ಅವ ಳನ್ನು ಸ್ವಾಗತಿಸುತ್ತಾನೆ (ರವೀಂಕಾ. ೮೬). [ಸಂ. ಮೃತ್ಯುದೇವತಾ]

**ಮೃತ್ಯುದೇವಿ** (ನಾ). = ಮೃತ್ಯುದೇವತೆ : ಕಡಿದ ತಲೆಯ ನಿವಾಳಿ ಯೆತ್ತುವರುಡಿದ ಕೈಗಳ ಮೃತ್ಯುದೇವಿಗೆ ಕೊಡುವ ಹರಕೆಯ ಕಂಡು ರಾವಣ ನೋಡಿ ಮೆಚ್ಚಿರ್ದ (ತೊರೆರಾ. ೨೦-೦೨). [ಸಂ. ಮೃತ್ಯುದೇವೀ]

**ಮೃತ್ಯುಪತ್ರ** (ನಾ). = ಮೃತಪತ್ರ : ಮೃತ್ಯುಪತ್ರವನೀಗಲೇ ನಾನೇಕೆ ಬರೆದೆನೊ ತಿಳಿಯದು (ವಿಲಾಪು. ೩೨-೩) ; ರಾತ್ರಿ ಎದ್ದು ಕುಳಿತು ಟಿಳಕರು ತಮ್ಮ ಮೃತ್ಯುಪತ್ರ ಸಿದ್ಧಪಡಿಸಿದರು (ಸ್ವಕಿತ. ೪೪೪). [ಸಂ.]

**ಮೃತ್ಯುಮುಖ** (ನಾ). (ಅಲಂ) ಮರಣದ ಸಾಮಿಪ್ಯ : ಚಕ್ರವರ್ತಿಯು ಮೃತ್ಯುಮುಖದಿಂದ ಪಾರಾದುದು ಇಡೀರಾಜ್ಯವನ್ನೇ ಆನಂದದಿಂದ ತುಂಬಿಸಿತು (ಮತಿಕ. ೨೦) ; ಹದಿನೈದುದಿವಸ ಮೃತ್ಯುಮುಖದಲ್ಲಿ ಪ್ರವೇಶಿಸಿದ ಮೆಹಬೂಬ ಒಂದು ದಿನ . . . ಜ್ವರದಿಂದ ಪಾರಾದಳು (ಗಂಪಶಾಯ. ೨೦೦). [ಸಂ.]

**ಮೃತ್ಯುರಾಜ** (ನಾ). ಸಾವಿನ ಅಧಿಪತಿ ; ಯಮ : ಅಘವೈರಿಯಲ್ಲ ದುಟಿದಿಂ ಗೆಲಲಾರ್ಕುಮೆ ಮೃತ್ಯುರಾಜನಂ (ಅದಿಪು. ೩-೬). [ಸಂ. ಮೃತ್ಯುರಾಜ್]

**ಮೃತ್ಯುಲೋಕ** (ನಾ). ಯಮಲೋಕ : ಉತ್ತರಲೋಕದಲ್ಲಿ ಸತ್ಯಜ್ಞಾನಾ ನಂದವೆಂಬ ಅಂಗನೆ ಮೃತ್ಯುಲೋಕವನೆಯ್ದಲು (ಸಿದ್ಧೇವ. ೨೦೪-೬೩೦). [ಸಂ.]

**ಮೃತ್ಯುಶಿಲೆ** (ನಾ). ಮರಣ ಹೊಂದಿದವನ ಸಮಾಧಿಯ ಮೇಲೆ ನೆಡುವ ಕಲ್ಲು : ಅಲ್ಲಿ ಒಂದು ಮೃತ್ಯುಶಿಲೆ(ಕಬರ)ಯನ್ನು ನಿಲ್ಲಿಸ ಬೇಕೆಂದು ನನ್ನ ಆಪ್ತಮಿತ್ರರು ಇಚ್ಛಿಸುವುದಾದರೆ . . . ನನ್ನ ಕವಿತೆಯ ಸಾಲನ್ನು ಕೆತ್ತಿಸಬೇಕು (ಸ್ವಕಿತ. ೪೪೩). [ಸಂ. ಮೃತ್ಯುಶಿಲಾ]

**ಮೃತ್ಯುಸೂತಕ** (ನಾ) = ಮೃತಾಶೌಚ : ಮೃತ್ಯುಸೂತಕವು ಹನ್ನೆರಡು ದಿನವು (ಕುರಂಧ. ರಾ. ೨-೨೦-೩) ; ಹೆತ್ತ ಸೂತಕ ಹತ್ತು ದಿನಗಳಿಗೆ ಪರಿಹಾರ ಮೃತ್ಯುಸೂತಕವು ಹನ್ನೊಂದು ದಿನಕೆ (ಕುಶ್ರು. ೩೬-೪). [ಸಂ.]

**ಮೃತ್ಯುಹರ** (ನಾ). = ಮೃತ್ಯುಂಜಯ ೧ : ಆ ನರನೆಚ್ಚ ಗಱಿಗಳ ಗಳಾವರಿಸಿ ಕರಂ ಮುತ್ತೆ ಮೃತ್ಯುಹರನಜುವನೇ (ಶಶಿಕಂ. ೪-೯೩). [ಸಂ.]

**ಮೃತ್ಸೆ** (ನಾ). ೧. ಮಣ್ಣು ; ಮೃತ್ತಿಕೆ. ೨. ಫಲವತ್ತಾದ ಮಣ್ಣು ; ಉತ್ತಮವಾದ ಮಣ್ಣು : " ಮೃತ್ಸಾ, ಮೃತ್ಸ್ನಾ – ಈ ೨ ಒಳ್ಳೆಹ ಮಣ್‌ " (ಶಬ್ದಾಭಿ. ೨೬-೪) ; " ಮೃತ್ಸೆಯೆನಲು ಒಳ್ಳಿತಹ ಮಣ್ಣು " (ಮಂಗರಾ. ೨೮-೨). ೩. ಒಂದು ಬಗೆಯ ಸುವಾಸನೆಯ ಮಣ್ಣು. ೪. ಒಂದು ಬಗೆಯ ಸಸ್ಯ ; ತೊಗರಿಗಿಡ. [ಸಂ. ಮೃತ್ಸಾ]

**ಮೃತ್ಸ್ನಾಘಟ** (ನಾ). ಉತ್ತಮವಾದ ಮಣ್ಣಿನಿಂದ ಮಾಡಿದ ಪಾತ್ರೆ : ಶಿರಿಪುತ್ರಂ ಜವದಿಂ ಮುಕುಂದನಿತ್ತ ವಿದ್ಯುದ್ವೀಕರಂ ವೈರಿಕಂಧರಮಂ ಕೊಂಡು ತದುತ್ತಮಾಂಗದೊಡನುದ್ದಂ ಪಾಱ ಮೃತ್ಸ್ನಾಘಟಂಬೆರಸುದ್ಯ ಮೃಜದಂಡವರ್ತನದಿನುಗ್ರಾಡಂಬರಂ ಪೋಗೆ ಕೋಪರಚಕ್ರಂ ಶಿರಿವಂದದಿಂ ತಿಳಿದುದಾ ಚಕ್ರಂ ವಿಯಚ್ಚಕ್ರದೊಳ್ (ಶಾಂತಿಪು. ೪-೩೪). [ಸಂ.]

**ಮೃತ್ಸ್ನ** (ನಾ). ೧. = ಮೃತ್ಸೆ ೧. ೨. = ಮೃತ್ಸೆ ೨: "ಮೃತ್ಸಾ ಮೃತ್ಸ್ನಾ —ಈ ೨ ಒಳ್ಳೆಹ ಮಣ್" (ಶಬ್ದಮ. ೫೬-೪) ; ಸುರರಾಜಾಸ್ಥಾನದ ಪೊಣ್ ಸುರಮದಗಜಕೋಡಮಣ್ಣುಮುಖಮಂ ನಾಗರಮನೆಯ ಮೃತ್ತಿಕೆಯುಮೂ ನರನಾಥಾಲಯದ ಮೃತ್ಸ್ನೆಯುಂ ಹೃಲ್ಲೇಪಂ (ಅಕ್ಕಾ. ೯-೦೯). ೩. = ಮೃತ್ಸೆ ೩: "ಅಥಕೀ, ಕಾಕ್ಷೀ, ಮೃತ್ಸ್ನಾ . . . ಸುರಾಷ್ಟ್ರಜಂ – ೬ ಪಲಟಮಣ್ಣೆಂಬ ಗಂಧದ್ರವ್ಯ" (ಜಾಕಾ. ೦೦೦). ೪. = ಮೃತ್ಸೆ ೪. [ಸಂ. ಮೃತ್ಸ್ನಾ]

**ಮೃದಂಗ** (ನಾ). ೧. ಒಂದು ಬಗೆಯ ಚರ್ಮವಾದ್ಯ : "ಮೃದಂಗಃ, ಮುರಜಃ—ಈ ೨ ಮದ್ದಳೆ" (ಶಬ್ದಮ. ೦೭-೯೭) ; ಉದಿತ ಮೃದಂಗ ಧ್ವಾನನೃತ್ಯನ್ಮಯೂರಾಂಚಿತಮೆಸೆವುದು ಕಾಂತಂ ದೇವಪೂಜಾನಿಶಾಂತಂ (ಚಂದ್ರಪ್ರ. ೦-೦೫೦) ; ಆಗವ ಪಟಹ ಮೃದಂಗ ಕಹಳಾದಿಗಳ ಕಳಕಳರಭಸ ದಶದಿಕ್ಕುಗಳ ಮಾತಾಡಿಸೆ ಮಹಾಬಲ ತೆರಳಿತಿಭಪುರಿಯ (ಜೈಮಿನಿ. ೦-೯೭). ೨. ಶಬ್ದ ; ಘೋಷ. ೩. ಬಿದಿರಿನ ಜಲ್ಲೆ. [ಸಂ.]

**ಮೃದಂಗಫಲಿನಿ** (ನಾ). ಒಂದು ಬಗೆಯ ಸಸ್ಯ : "ಪೀರೆ ಮೃದಂಗ [ಶಾಖಾ. ಡಂಗಿ] ಫಲಿನಿ ಜಾಳಿನಿಯಕ್ಕು" (ಮಂಗರಾ. ೪೪-೪೪). [ಸಂ. ಮೃದಂಗಫಲಿನೀ]

**ಮೃದಂಗಯತಿ** (ನಾ). [ಸಂಗೀತ] ಆರು ಬಗೆಯ ಯತಿಗಳಲ್ಲಿ ಒಂದು: ಯತಿಯಲ್ಲಿ ಆರು ವಿಧ. ಕ್ರಮವಾಗಿ ಅವು – (೧) ಸಮಯತಿ (೨) ಗೋಪುಚ್ಛಯತಿ (೩) ಶ್ರೋತೋವಾಹಯತಿ (೪) ಡಮರುಯತಿ (೫) ಮೃದಂಗಯತಿ ಮತ್ತು (೬) ವಿಷಮಯತಿ (ಸಂಗೀತಂ. ೫೭). [ಸಂ.]

**ಮೃದಂಗವಾದಕ** (ನಾ). ಮೃದಂಗವನ್ನು ಬಾರಿಸುವವನು : ಭಾರತ ಸಂಗೀತದಲ್ಲಿ ಮೃದಂಗವಾದಕರು ಸಂಗೀತಗಾರರಿಗೆ ನೀಡುವ ಲಯವಿನ್ಯಾಸದ ನೆರವು . . . ಪಾಶ್ಚಾತ್ಯಸಂಗೀತದಲ್ಲಿ ಕಾಣಬಾಗದಂತಹುದು (ಸಂಗೀತ. ೦೦೬). [ಸಂ.]

**ಮೃದು** (ಗು). ೧. ಮೆದುವಾದ ; ಮೆತ್ತಗಿರುವ : 'ಮೃದುಗೂಳ್', 'ಮೃದುತಲ್ಪ' ಪರಾ. ೨. ಕೋಮಲವಾದ ; ಸುಕುಮಾರವಾದ ; ನಾಜೂಕಾದ : ಮೃದುತರಕಪೋಲಫಲಕಂ . . . ಮುದವಂ ಪಡೆದತ್ತು (ಶಬರಾ. ೬-೦೭) ; ಮೃದುಕುಟಿಲಶಿರೋರುಹಂ ಸರಸೀರುಹವದನಂ (ಅಂಕ. ೦-೩೯) ; ಮೃದುಕನಕಪದ್ಮಕೋಶಾಗ್ರದೊಳೆಜಗಿದ ತುಂಬಿ ಯೆಸೆದುದು (ಚಂದ್ರಪ್ರ. ೭-೬೦). ೩. ನಿಧಾನವಾದ ; ಮಂದವಾದ ; ಮೆಲು : ಮಂಡಲದ ತುಡುಗೆಯುಂ ಕೆಯ್ಯೊಂಡುಂ ಬಗೆಯುಱದು ತುಡುಕಿಯುಂ ಮದವಶ್ವೇತಂಡಮೃದುಗತಿಗೆ ಮಾಣಿಕಭಂಡಾರದ ಬೆಸನಮಱಿಯರ್ ನಡೆಯಿಸುವರ್ (ಶಾಂತಿಪು. ೯-೦೫೩) ; ಮೃದುಗತಿವಿಲೋಲಹಾರರ್ ಪ್ರದಕ್ಷಿಣಂ ಬಂದು . . . ಪೂಜಿಸಿದರ್ (ಜಗ. ೦೦-೦೩೩). 'ಮೃದುಯಾನ' ಪರಾ. ೪. ಇಂಪಾದ ; ಮಧುರವಾದ : ಮೃದುಕಳಕಂಠವಾದ್ಯನಿನದಂ ಪೊಣಿಸ್ಪೊಣ್ಕೆ ಪೊದಟ್ಟ ಭೃಂಗಸಂಘದ ಮೃದುಗೇಯ ನಿಸ್ವನಮದುಣ್ಕೆ (ಕುಸುಮಾ. ೯-೨೪). 'ಮೃದುವಚನ' ಪರಾ. ೫. ಶಾಂತವಾದ ; ಸೌಮ್ಯವಾದ. ೬. ಅಶಕ್ತವಾದ ; ದುರ್ಬಲವಾದ. ೭. ಮೊಂಡಾದ ; ಹರಿತವಲ್ಲದ. (ನಾ). ೮. ಮಿದುವು ; ಮೆತುವು : ಎನಿಸು ಕಾಲ ಕಲ್ಲು ನೀರೊಳಗಿರ್ದರೇನು ನೆನೆದು ಮೃದುವಾಗಬಲ್ಲುದೆ (ಜಿಪ. ೯೪). ೯. ಕೋಮಲವಾಗಿರುವಿಕೆ ; ಸುಕುಮಾರತೆ : "ನಯಃ —ಮೃದುವೆಂ, ಧರ್ಮವುಂ, ನ್ಯಾಯವುಂ" (ಅಕ್ಕ. ೦೫೦) ; ತುಳು ಎಂಬ ಪದಕ್ಕೆ ಮೃದು ಎಂಬ ಅರ್ಥವೊಂದು ಹೇಳುತ್ತಾರೆ (ದ್ರಾ.ಪಿ. ೦೪೨). ೧೦. ಒಂದು ಗ್ರಹದ ಹೆಸರು ; ಶನಿಗ್ರಹ. [ಸಂ.]

**ಮೃದುಗಂಧಿ** (ನಾ). ಒಂದು ಬಗೆಯ ಸಸ್ಯ : "ಬಹುಪತ್ರಃ– ಮೃದುಗಂಧಿ" (೬೩ಧ. ೦೪೬). [ಸಂ. ಮೃದುಗಂಧೀ]

**ಮೃದುಗನ್ನಡ** (ನಾ). ಸುಕುಮಾರವಾದ ಕನ್ನಡಭಾಷೆ : ಸಂದರ್ಭಂ ಮೃದುಗನ್ನಡಂ . . . ಬಹುಭೇದ ಕನ್ನಡಗಳಂ ಬಲ್ಲಂ ಕವೀಶಂ ದಿಟಂ (ಶಬರಾ. ೯-೩). [ಮೃದು + ಕನ್ನಡ₁]

**ಮೃದುಗೂಳ್** (ನಾ). ಮೆದುವಾದ ಅನ್ನ ; ಮೆತ್ತಗಿರುವ ಅನ್ನ : ನೆಲ್ಲನಟ್ಟು ಮೃದುಗೂಳನಜಿಸುವ . . . ಕಟ್ಟಿಗ್ಗನಂ ಪೋಲ್ಪುಂ (ರಮಾಕು. ೦೨-೨೪ ಪ). [ಮೃದು + ಕೂಳ್₁]

**ಮೃದುಜಲ** (ನಾ). ಗಡುಸಲ್ಲದ ನೀರು ; ಕಠಿನವಲ್ಲದ ನೀರು : ನೀರೊಳಗೆ ಕ್ಷಾರಾಂಶವು ಕಡಿಮೆ ಇದ್ದರೆ ಅದಕ್ಕೆ ಮೃದುಜಲವೆನ್ನುವರು (ಮುಂಬಯಿ. ೬-೩೬). [ಸಂ.]

**ಮೃದುತಲ್ಪ**, ಮೃದುತಳ್ಪ (ನಾ). ಮಿದುವಾದ ಹಾಸಿಗೆ : ಮೆತ್ತನೆಯ ಶಯ್ಯೆ : ಪೊಳೆವ ಪಚ್ಚದೊಳೆ ಸೊಗಯಿಸುವ ಮೃದುತಲ್ಪದೊಳ್ . . . ಭಾವಿಜಿನಜನನಿ ಸತಿ ಪವಡಿಸಿ ನಿಶಾಂತದೊಳ್ (ಅಂಕ. ೭-೨೭ ರಗಳೆ). **ಮೃದುತಳ್ಪ** : ನಿಪ್ಪೊಸತೆನೆ ಸೊಗಯಿಪ ಮೃದುತಳ್ಪದೊಳಾತಂ ವಿಲಾಸದಿಂ ಪವಡಿಸುವಂ (ಸುಕುಮಾ. ೦೦-೦೦೩). [ಸಂ.]

**ಮೃದುತಳ್ಪ** 'ಮೃದುತಲ್ಪ' ನೋ.

**ಮೃದುತ್ವ** (ನಾ). ಕೋಮಲತೆ ; ನಾಜೂಕು ; ಸುಕುಮಾರತೆ : ಒಂದು ರೇಖೆ ಮೃದುತ್ವ ಅಥವಾ ಗಡುಸುತನವನ್ನಷ್ಟೇ ಅಲ್ಲ ಮಾನವ ಮನೋಕಾಮನೆಗಳ ಸಮಗ್ರಸಾರವನ್ನೇ ವ್ಯಕ್ತಪಡಿಸಬಲ್ಲದು (ಕಾರಡ. ೫೫೦). [ಸಂ.]

**ಮೃದುಪದ** (ನಾ). ೧. ಮೃದುವಾದ ಶಬ್ದ, –ಪದ : ಇಲ್ಲಿಗಿದು ತಕ್ಕುದು ಇಲ್ಲಿಗೆ ಪೊಲ್ಲದಿದೆಂದಱದು ಸಮಱ ಬಲ್ಲಂತೆಲ್ಲಂ ಸೆಲ್ಲಂ ಮೊಸರುಂ ಗುಡಿದಂತಲ್ಲದೆ ತಲ್ಲಣಿಸದಲಸದಿಡು ಮೃದುಪದವಮಂ (ಶಬರಾ. ೨-೪). ೨. ಕೋಮಲವಾದ ಪಾದ : ಸುರಾಸುರೇಂದ್ರವೃಂದವಂದಿತಪಾದಂಗೆ ಮೃದುಪದಂಗಳೊಳ್ ಕಳರವರಣಿತಮಣಿನೂಪುರಂಗಳಂ ತುಡಿಸಿ (ಅಂಕ. ೭-೦೦೬ ವ) ; ಮೃದುಪದಪಂಕಜಂ ನಡೆದು ಕೆಂಪು ಮರಲ್ದು ನಿಜಾರುಣಾಂಶು ಪಾಸಿದ ದುಗುಲಕ್ಕೆ ಬಾಸರದ ಮಾಸರಮಂ ಕುಡೆ (ಅಪಂಕ. ೯-೦೩). ೧, ೨ : ವಿಳಸಿತಮಪ್ಪಳಂಕರಣಶಾಸ್ತ್ರದವೊಲ್ಪೆಸೆಗಳ್ ಪ್ರಸನ್ನಮಂ ತಳೆದು . . . ಮೃದುಪದನ್ಯಸನೋಚಿತಮಾಯ್ತಿಳಾತಳಂ (ಶಾಂತೀಶ. ೦೨-೬೩). [ಸಂ.]

**ಮೃದುಪದಗತಿ** (ನಾ). ೧. (ನರ್ತನದಲ್ಲಿ) ಕೋಮಲವಾದ ಪಾದಗಳ ಗಮನ, – ಚಲನೆ : ಮೃದುಪದಗತಿಯಿಲ್ಲದ ಲಾಸ್ಯಮಿಂತದೇಂ ಮೆಱೆದಪುದೇ (ಚಂದ್ರಪ್ರ. ೩-೯೩). ೨. [ವ್ಯಾಕ] ಉಚ್ಚರಿಸಲು ಸುಲಭವಾದ, ಕೋಮಲವಾದ ಅಕ್ಷರಗಳಿಂದ ಕೂಡಿರುವುದು. ೧, ೨ : ಮೃದುಪದಗತಿಯಿಂ ರಸಭಾವದ ಪೆರ್ಚಿಂ ಪುಣ್ಯವನಿತೆವೊಲ್ ಕೃತಿ ಸೌಂದರ್ಯದ ಚಾತುರ್ಯದ ಕಣಿಮೆನೆ ವಿದಗ್ಧಬುಧಜನದ ಮನದೊಳೆ ಯಲೆವೇಡಾ (ಅಪ. ೦-೦೭). [ಸಂ.]

**ಮೃದುಪಾಕ** (ನಾ). [ವೈದ್ಯ] ಮೃದು, ಮಧ್ಯ (ಚಿಕ್ಕಣ), ಖರಗಳೆಂಬ ಮೂರು ಬಗೆಯ ಪಾಕಗಳಲ್ಲಿ ಒಂದು ; (ಔಷಧವಸ್ತುಗಳನ್ನು ತುಪ್ಪ, ಎಣ್ಣೆಗಳಲ್ಲಿ ಕಾಯಿಸಿ ಇಳಿಸುವ) ಎಳೆಯ ಪಾಕದ ಹದ : ಮೃದುಪಾಕಕ್ಕೆ ಕಿಟ್ಟವ ತೆಗೆದು ನೋಡಲು ಬೆರಳ ಹತ್ತದೆ ಇಹುದು (ವೈದ್ಯಸಾ. I. ೬೨೦) ; ನಸ್ಯ ಮಾಡುವುದಕ್ಕೆ ತೈಲವನ್ನಾಗಲೀ ಘೃತವನ್ನಾಗಲೀ ಮೃದುಪಾಕದಲ್ಲಿ ಇಳಿಸಬೇಕು (ಸಕಶ್ಲ. XIII, ಶ್ಲೋಕ೩೩). 'ಖರಪಾಕ', 'ಚಿಕ್ಕಣಪಾಕ' ಪರಾ. [ಸಂ.]

**ಮೃದುಬಂಧ** (ನಾ). ಕೋಮಲವಾದ ಶಬ್ದಗಳ ಜೋಡಣೆ, – ರಚನೆ : ಮೃದುತರವರ್ಣಾನುಗಮಾಸ್ಪದವಿರಚನೆಯೊಳಗೆ ತೋರ್ಪುದದು ಮೃದುಬಂಧಂ (ಶಬರಾ. ೨-೫೭) ; ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದು

ವುದೊಂದಿ ದೇಸಿಯೊಳ್ ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊಪ್ಪುಗುಂ (ಶಬ್ದಮ. ೧-೪). [ಸಂ.]

**ಮೃದುಬಂಧನ** (ನಾ). = ಮೃದುಬಂಧ: ಶಾಂತಿಪುರಾಣಮೇಂ ಕರಂ ನವರಸಮೇಂ ಸಮರ್ಥಯುತಮೇಂ ಮೃದುಬಂಧನಮೇಂ ಪ್ರಸನ್ನಮೋ (ಶಾಂತಿಪು. ೧-೩೭). [ಸಂ.]

**ಮೃದುಯಾನ** (ನಾ). ನಿಧಾನವಾದ ನಡಗೆ; ಮಂದಗಮನ: ಸೋಗೆನವಿಲ್ಪಟಲ್ಮಡಿಗೆ ಭೃಂಗಂ ಕುಂತಲಕ್ಕಂಚೆಗಳ್ ಮೃದುಯಾನಕ್ಕೆ ಪಿಕಂ ರವಕ್ಕೆಳಸೆ ತಂತಮ್ಮ ಸ್ವಜಾತೀಯ ಸಂಮದದಿಂ ಪಾಮರಿಯರ್ ಜಿತಾಮರಿಯರಿರ್ಪರ್ಕಾದು ಕೇದಾರಮಂ (ಮಲ್ಲಿಪು. ೨-೨೦); ಮೃದುಯಾನದಿಂ ಪತಿಯುಮಾ ಸತಿಯುಂ ಬರೆ (ತಂಪ್ರಕೃ. ೭-೧೧೪); ಮೃದುಯಾನಂ ಗಜಯಾನಮಂ ಜಜಿಸಿಯೆ . . . ರತ್ನಕಳಶಾದರ್ಶಂಗಳಂ ತಾಳ್ದು ತಾನಿದಿರ್ವಂದತ್ಯುರುಭೂಷಣದ್ಯುತಿಯುತಾಂಗಂ ಶ್ರೈಪಕಾಂತಾಜನಂ (ವೃಷಭ. ೫-೦೫). [ಸಂ.]

**ಮೃದುರೇಖೆ** (ನಾ). ತೆಳುವಾಗಿ ಎಳೆದಿರುವ ಗೆರೆ; ಸೂಕ್ಷ್ಮರೇಖೆ: ಲಾಕ್ಷಾರಸರೇಖಾಶುದ್ಧಿಯುಮಂ ನೇತ್ರಕ್ಕಂ ಸೂತ್ರಕ್ಕಮಳವಡಿಸಿದ ದೇಶೀಯ ಮುಮಪ್ಪ ಭಂಗಿಯುಮಂ ಮೃದುರೇಖಾವಿಳಾಸಮುಮಂ ಪರಿಭಾವಿಸಿ ನೋಡಿ (ಮಲ್ಲಿಪು. ೫-೪೨). [ಸಂ. ಮೃದುರೇಖಾ]

**ಮೃದುಲ, ಮೃದುಳ** (ಗು). ೧. ಮೆದುವಾದ; ಕೋಮಲವಾದ: ಅವನ ಕೈಯು ಟೇಬಲ್ಲಿನ ಕೆಳಗಿನಿಂದ ಹಾಯ್ದು ಪ್ಯಾಲಿಸಳ ಕರದ ಮೃದುಲಸ್ಪರ್ಶವನ್ನು ಪಡೆದಿತ್ತು (ಸಮಾಜ. ೪೦೫). ೨. ಇಂಪಾದ; ಮಧುರವಾದ: ಮೃದುಲವಚಶ್ಶೋಭಿತೆ ತಳ್ವದೆ ತಚ್ಛಿವಭದ್ರನಿಂತು ನುಡಿಯೆರ್ದೆಗೊಳಲಾ ಪುದಿವಸುಗೆಯ ಪೊಸಬನಮಾ ಪಡಿದದಿಂ ಪೊಱಮಟ್ಟು ಪೋದಳ್ (ಅನ್ನಲ. ೭-೨೭). (ನಾ). ೩. ಕೋಮಲವಾದುದು: ಕಾಣುತಿಹುದದೊ ನೀಲದೂರಕ್ಕೆ ಮೃದುಲಮೆನೆ ತೋರ್ಪ ಶಿಖರೇಶ್ವರಂ (ಶ್ರೀರಾಮಾ. ೧೪೭-೦೨೨); ಸುಜನರ ಚಿತ್ತವು ಸುಖದೊಳು ಮೃದುಲವು ಕಷ್ಟದೊಳ ತುಳಕರ್ಕಶವು (ಇಂಶಾಶ. ೨೦೬-೭೭). ಮೃದುಳ: ೧. ಪಜ್ಜಳಿಪ ಬಜ್ಜರದಸೆಜ್ಜೆವನೆಯ ಸಿರಿಮಂಚದ ಸಿರಿಸಮೃದುಳತಳ್ಪಸ್ಥಳದಲ್ಲಿ (ರಾಜಶೇ. ೧೧-೦೨೫ ವ). [ಸಂ.]

**ಮೃದುಲತೆ₁** (ನಾ). ಕೋಮಲವಾದ ಬಳ್ಳಿ: ಮೃದುಲತೆಯಿಂ ಬಿಸಕಾಂಡದ ಮೃದುಲತೆಯುಂ ಜಯಿಸುವಮಳಬಾಹಾಲತೆಯೊಳ್ ಪುದಿದೆಳೆದಳಿರಂ ಪೋಲ್ತಿಪ್ಪುದಿದೆನೆ ಕರಮೆಸೆದುದವಳ ಕರಸರಸಿರುಹಂ (ರಾಜಶೇ. ೭-೪೨). [ಸಂ. ಮೃದುಲತಾ (ಮೃದು + ಲತಾ)]

**ಮೃದುಲತೆ₂** (ನಾ). ಮಾರ್ದವತೆ; ಕೋಮಲತೆ; ಮೃದುತ್ವ: ಮೃದುಲತೆಯಿಂ ಬಿಸಕಾಂಡದ ಮೃದುಲತೆಯಂ ಜಯಿಸುವಮಳಬಾಹಾಲತೆಯೊಳ್ ಪುದಿದೆಳೆದಳಿರಂ ಪೋಲ್ತಿಪ್ಪುದಿದೆನೆ ಕರಮೆಸೆದುದವಳ ಕರಸರಸಿರುಹಂ (ರಾಜಶೇ. ೭-೪೨); ಕೂರ್ಪಗೆ ಮಣಿವ ಮೃದುಲತೆಯಿರ್ಪುದವನೆರ್ದೆಯ ಕಬ್ಬಿನಕೆ (ಶ್ರೀರಾಮಾ. ೭೦೬-೨೫೫). [ಸಂ. ಮೃದುಲತಾ]

**ಮೃದುವಚನ** (ನಾ). ಮಧುರವಾದ ಮಾತು; ಸವಿನುಡಿ: ಹಿತಮಿತ ಮೃದುವಚನಂ ಲಲಿತಮಧುರಸುಂದರವೇಷಂ (ಆದಿಪು. ೧-೨೪); ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ ಮೃದುವಚನವೇ ಸಕಲಜಪಂಗಳಯ್ಯಾ (ಬಸವ. ೨೪೪). [ಸಂ.]

**ಮೃದುವಪು** (ನಾ). ೧. ಕೋಮಲವಾದ ಶರೀರ, _ ದೇಹ. ೨. ಕೋಮಲವಾದ ಶರೀರವುಳ್ಳವನು: ಇರೆ ಲಗ್ನಕ್ಕೆ ಚತುರ್ಥದೊಳ್ ಹಿಮಕರಂ ಸತ್ಪುತ್ರವಿತ್ತಾಢ್ಯಂ . . . ಅರಾತಿಸ್ಥಾನದೊಳ್ ಕೂಡೆ ನಿಷ್ಠುರ ನಾಲಸ್ಯಸಮನ್ವಿತಂ ಮೃದುವಪುಃಕಾಮಾಗ್ನಿ ನಾನಾರಿ (ಜಾತಿ. ೧೬-೭). [ಸಂ. ಮೃದುವಪುಸ್]

**ಮೃದುವಾಕ್ಯ** (ನಾ). ೧. = ಮೃದುವಚನ. ೨. ಮಧುರವಾಗಿ ಮಾತನಾಡುವವನು; ಸವಿಮಾತಿನವನು: ಮೃದುವಾಕ್ಯಂ ಸುಭಗಂ ಚಪಳದೃಷ್ಟಿ ಪೆಂಪೊಡೆಯನತಿಧನಾಢ್ಯಂ . . . ಉದಕಚ್ಛಾಯನಕ್ಕು [ಮೊಪ್ಪುವ] ಪುರುಷಂ (ಲೋಕೋಪ. ೧೧-೪೦). [ಸಂ.]

**ಮೃದುವಾತು** (ನಾ). = ಮೃದುವಚನ: ಗಿಳಿಯ ಮೃದುವಾ[ಪಾಠಾಂ. ಮಾ]ತುಗಳ ಮಱಿಗೋಗಿಲೆಯ ಮಧುರಧ್ವನಿಯ . . . ವನವನದ ಸಿರಿ ಬಗೆಗೊಳಿಸಿತ್ತೆ ಪೂರ್ವಾಭಿಭಾಷಣದಲಿ ಧನಂಜಯನ (ಭಾರತ. ೪-೩೭). [ಮೃದು + ಮಾತು₁]

**ಮೃದುವಾಸು** (ನಾ). ಮೆತ್ತಗಿರುವ ಹಾಸಿಗೆ; ಕೋಮಲವಾದ ಶಯ್ಯೆ: ಓರಣಿಸಿದ ಗೋಪುರಮಧ್ಯದ ಚಂದ್ರಪಾರಾವತಶಯ್ಯೆಯೊಳಗೆ ತೋರ ಮಾಣಿಕಮಂಚಮೃದುವಾಸೊಳೊಱಗಿದ ನಾರಾಯಣನ ನೋಡಿದಳು (ಮೋಹನ. ೨೪-೪೦). [ಮೃದು + ಪಾಸು₂]

**ಮೃದುವೆಱು** (ಕ್ರಿ). ಕೋಮಲವಾಗಿರು; ಮೃದುತ್ವವನ್ನು ಹೊಂದಿರು: ಲಾಲಿತ ಚಿಂಬಾವುಗೆ ಮೆಟ್ಟಿ ಮೃದುವೆತ್ತ ಸಾಲಿಯ ದುಪ್ಪಟದಾಳ್ದ ಸೋಲಿಸಿ ತೊಲಗಿ ಪೋದವನ ನಿಟ್ಟಿಸುವ ಸಲೀಲೆಯಿಂದೆದ್ದಳಾ ಕುವರಿ (ಮೋಹನ. ೨೮-೭). [ಮೃದು + ಪೆಱು₁]

**ಮೃದುಸಂದರ್ಭ** (ನಾ). ಕೋಮಲವಾದ ಸನ್ನಿವೇಶಗಳಿಂದ ಕೂಡಿದುದು; ಸೂಕ್ತವಾದ ವಸ್ತುವಿನ್ಯಾಸವನ್ನುಳ್ಳುದು: ಸುಂದರಂ ಸೂಕ್ತಿಗರ್ಭಂ ಮೃದುಸಂದರ್ಭಂ ವಿಚಿತ್ರರಕ್ಷಮಂ . . . ಕಾವ್ಯಮೆಂದನ್ವಿತಸುಕವಿಜನಂ ಮೆಚ್ಚೆ (ಆದಿಪು. ೧-೨೭). [ಸಂ.]

**ಮೃದುಸಿಂಜ** (ನಾ). (ಕಾಲಂದುಗೆ ಮೊದಲಾದುವುಗಳ) ಇಂಪಾದ ಶಬ್ದ: ಮಂಜೀರಕ ಮಂಜುಳ ಮೃದುಸಿಂಜಪರಿಸ್ಫುರಿತಮೆಸೆಯೆ ಭರತದ ಪಲವುಂ ಪಂಜಿಕೆಗಳಂತದೇಂ ಸುರಲಂಜಿಕೆಯರ್ ವಿಷಮಮಂ ಸಮಂ ಮಾಡಿದರೋ (ಶಾಂತಿಪು. ೭-೩೩). [ಸಂ. ಮೃದುಸಿಂಜಾ]

**ಮೃದುಸ್ಮಿತ** (ನಾ). ಮೆಲುನಗೆ; ಮಂದಹಾಸ: ಚಂಡಕೋದಂಡ ಮನೆತ್ತಿ ಪೊಯ್ದು ನವನೀಶನ ಪೇರುರಮಂ ಕಪರ್ದಿ ಮುಂಕೊಂಡು ಮೃದುಸ್ಮಿತಂ ಮಿಸುಗೆ ತದ್ಧನುಮಂ ಸೆಳೆದಂ ಕರಾಗ್ರದಿಂ (ಕಾಶಂ. ೪-೫೪). [ಸಂ.]

**ಮೃದುಹೃದಯ** (ನಾ). ಕೋಮಲವಾದ ಮನಸ್ಸು; ಮೃದುವಾದ ಮನಸ್ಸು: ಮೃದುಹೃದಯದ ನಲ್ಲರನೆಂದುದನೆನಿಸಲೆ ನಾಡ ಸುಭಗೆಯರ್ ಸುರತದೊಳುಣ್ಮಿದ ತಮ್ಮಿಂಚರದಿಂದೆಂದುದನೆನಿಪರ್ ಕೃತಕಶೈಲಮಂ ಕಲ್ಲೆರ್ದೆಯಂ (ಮಲ್ಲಿಪು. ೨-೨೪). [ಸಂ.]

**ಮೃದುಳ** 'ಮೃದುಲ' ನೋ.

**ಮೃದೂಕ್ತಿ** (ನಾ). = ಮೃದುವಚನ: ಅತಿಗಂಭೀರಮೃದೂಕ್ತಿ ವಕ್ತ್ರದೊಳೊಡಂಬಟ್ಟೊಪ್ಪೆ (ಶಾಂತಿಪು. ೧-೪); ಕಿವಿಗಳ್ ನಿನ್ನ ಮೃದೂಕ್ತಿಯಂ ಬಯಸಿ ಕೇಳುತ್ತಿರ್ಕೆ (ಸುಕುಮಾ. ೮-೭೭). [ಸಂ.]

**ಮೃದೂಚ್ಚಾರಣೆ** (ನಾ). ಕೋಮಲವಾದ ಉಚ್ಚಾರಣೆ: ಉದಾರತಮಾ ಕರುಣಾರಸಂ ಮೃದೂಚ್ಚಾರಣೆಯಿಂದಂ . . . ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತ[ದ]ಂ (ಕಂಠಾ. ೨-೪೪). [ಸಂ. ಮೃದೂಚ್ಚಾರಣ]

**ಮೃದ್ಭಾಜನ** (ನಾ). ಮಡಕೆ ಮುಂತಾದ ಮಣ್ಣಿನ ಪಾತ್ರೆ: ಪೃಥಿವ್ಯಾದಿತತ್ತ್ವಚತುಷ್ಟಯಸನ್ನಿಪಾತಮೆ ಚೈತನ್ಯಮಂ ಪುಟ್ಟಿಸುಗುಮಪ್ಪೊಡೊಲೆಯ ಕಿಚ್ಚಿನಮೃದ್ಭಾಜನದೆಸಟ ನೀರಬಾಣಸಿಗರುರಿಪುವ ಗಾಳಿಯ ಸಂಯೋಗದೊಳ್ ಚೈತನ್ಯಮದೇಕೆ ಪುಟ್ಟದು (ಶಾಂತಿಪು. ೬-೦೩೭ ವ). [ಸಂ.]

**ಮೃದ್ವಂಗಿ₁** (ನಾ). ಕೋಮಲವಾದ ಶರೀರವನ್ನು ಉಳ್ಳವಳು; ಕೋಮಲಾಂಗಿ: ಮೃದ್ವಂಗಿಯೆಂತಂತು ನುಣ್ಪುವಡೆದುಂ, ಗಾಡಿಯಿಂ ನಡೆವ ಕೃಶೋದರಿಯೆಂತಂತು ಬಳ್ಕಿಯುಂ . . . ಪೂವಳ್ಳಿ ಮಡಲ್ತೆಸೆಗುಂ (ರಾಮಾಶ್ವ. ೫೭-೨೭). [ಸಂ. ಮೃದ್ವಂಗೀ]

**ಮೃದ್ವಂಗಿ₂** (ನಾ). ೧. ಮೆದುವಾದ ಅವಯವದಿಂದ ಕೂಡಿದ ಹುಳು: ಬಸವನ ಹುಳು ಮೊದಲಾದ ಜಂತು: ಬಾರ್ನಕಲ್ (Barnacle) ಎಂಬ ಕಠಿಣಚರ್ಮಿಯನ್ನು ಲಿನಿಯಸ್ ಮೊದಲಾದ ವೈಜ್ಞಾನಿಕರು ಬಸವನ ಹುಳ, ಕಪ್ಪೆಚಿಪ್ಪು ನೀರಿನ ಗುಳ್ಳೆಗಳನ್ನು ಒಳಗೊಂಡ ಮೃದ್ವಂಗಿಗಳ (Mollusca) ಗುಂಪಿಗೆ ಸೇರಿಸಿದ್ದರು (ಪ್ರಾಣಿಶಾ. ೦೦); ಕೆಲವು ಪ್ರಾಣಿಗಳು . . . ಮೃದ್ವಂಗಿಗಳನ್ನು ಅಥವಾ ಮೀನುಗಳನ್ನು ಹಿಡಿದು ತಿನ್ನುವುವು (ಕನಿಕೋ. I. ೭೬೬). ೨. ಒಂದು ಬಗೆಯ ಮೆದುಶರೀರದ ಹಕ್ಕಿ: ಕೆಲವು ಪಕ್ಷಿ ಜಾತಿ. ಚಿಪ್ಪುಳ್ಳ ಒಂದು ಜಾತಿಯ ಮೃದ್ವಂಗಿ (Gaper. ೩೦೬೩). [ಸಂ. ಮೃದ್ವಂಗಿನ್]

**ಮೃದ್ವಗ್ನಿ** (ನಾ). ಸಣ್ಣ ಉರಿ: ಮಂದವಾದ ಅಗ್ನಿ: ತೈಲ ಮತ್ತು ಘೃತಗಳನ್ನು ಮಾಡಬೇಕಾದರೆ ಸಾಮಾನ್ಯವಾಗಿ . . . ನಾಲ್ಕನೆಯ ಒಂದು ಭಾಗ ಕಲ್ಕವನ್ನು ಹಾಕಿ ಮೃದ್ವಗ್ನಿಯ ಮೇಲೆ ಕಾಯಿಸಿ ಶೋಧಿಸಬೇಕು (ಸಕಕ. XIII. ಶ್ರಾ ಪವ). [ಸಂ.]

**ಮೃದ್ವಸ್ಥಿ** (ನಾ). ಮೆದುವಾದ ಮೂಳೆ; ಮೃದುವಾದ ಎಲುಬು: ಮೃದ್ವಸ್ಥಿಯಲ್ಲಿ ರಕ್ತನಾಳಗಳಿರುವುದಿಲ್ಲ (ಪ್ರಾಣಿಶಾ. ೯೦). [ಸಂ.]

**ಮೃದ್ವೀಕೆ** (ನಾ). ದ್ರಾಕ್ಷೆ: "ಮೃದ್ವೀಕಾ, ಗೋಸ್ತನೀ, ದ್ರಾಕ್ಷಾ, ಹಾರಹೂರಾ – ಈ ೪ ದ್ರಾಕ್ಷೆ" (ಕರಾಚು. ೩೨-೯೦); ರತಿಯ ಮದನನ ಮದುವೆಯೊಳ್ ಪೊಸಯಿಸಿದ ಪಸುರ್ವಂದರಂತೆ ಮಿಸುಪ ಮೃದ್ವೀಕಾಲತೆ (ಕಂದ್ರಕ. ೦-೦೦೬ ಪ). [ಸಂ. ಮೃದ್ವೀಕಾ]

**ಮೃಧ** (ನಾ). ಕಾಳಗ: ಯುದ್ಧ: "ಯುದ್ಧಂ . . . ಮೃಧಂ . . . ಯುದ್ಧಕ್ಕೆ ಹೆಸರುಗಳು" (ಸಿದ್ಧಾಂತಿ. ೨೬೯). [ಸಂ.]

**ಮೃಲ್ಲಿಂಗ** (ನಾ). ಮಣ್ಣಿನಿಂದ ಮಾಡಿದ ಶಿವಲಿಂಗ: ವಿಚಾರಶರ್ಮರು ಆ ಕೊಡಗಳ ಹಾಲನ್ನು ಆ ಮೃಲ್ಲಿಂಗಕ್ಕೆ ಅಭಿಷೇಕಮಾಡಿಸಿ (ಕುರಾಬ.೦೦೯). [ಸಂ.]

**ಮೃಷ** (ನಾ). ಸುಳ್ಳು; ಹುಸಿ; ಮಿಥ್ಯೆ: "ಕಪಟಂ ನಿಭಂ ಕೈತವಂ ಮೃಷಂ . . . ವ್ಯಾಜಮಕ್ಕುಂ" (ಮಂಗರಾ. ೦೩೬-೦೦). [ಸಂ. ಮೃಷಾ]

**ಮೃಷಾನಂದ** (ನಾ). [ಜೈನ] ಹಿಂಸಾನಂದ, ಮೃಷಾನಂದ, ಸ್ತೇಯಾನಂದ ಮತ್ತು ಪರಿಗ್ರಹಾನಂದ ಎಂಬ ರೌದ್ರಧ್ಯಾನದ ನಾಲ್ಕು ಪ್ರಕಾರಗಳಲ್ಲಿ ಒಂದು; "ಸುಳ್ಳು ಮಾತನಾಡುವುದರಲ್ಲಿ ಆನಂದ ಪಡುವುದು" (ಕೈ ಪಕೋ. ೨೦೦): ಸ್ವಸಂವೇದ್ಯಮಪ್ಪ ಆಧ್ಯಾತ್ಮಿಕಮುಂ ಹಿಂಸಾನಂದ ಮೃಷಾನಂದ ಸ್ತೇಯಾನಂದ ಸಂರಕ್ಷಣಾನಂದಮೆಂದುಂ ಚತುರ್ವಿಧಮಕ್ಕುಂ . . . ಸ್ವಮತಿವಿಕಲ್ಪಿತಮಾತುಗಳಿಂ ಪಿಜಿರ್ ನಂಬುವ ರೆಂದವರಂ ಬಂಚಿಸಲೆಂದು ನುಡಿವ ಮೃಷಾವಚನದೊಳಪ್ಪ ಸಂಕಲ್ಪಾಧ್ಯವಸಾನಂ ಮೃಷಾನಂದಮೆಂಬುದಕ್ಕುಂ (ಅಕಪು. ೬-೨೬ ಪ). [ಸಂ.]

**ಮೃಷಾಪಾತಕ** (ನಾ). ಸುಳ್ಳಾಡಿದುದರಿಂದ ಬರುವ ದೋಷ,—ಪಾಪ: ಗುರುವಂ ಬ್ರಾಹ್ಮಣನಂ ತೊಡಲ್ನುಡಿದು ಕೊಂದಾಗಳ್ ಮೃಷಾಪಾತಕಂ ಪರಮೆಂಬೀ ನುಡಿಯಿಂ ಪೃಥಾಪ್ರಿಯಸುತಂ ಪಾಪಕ್ಕೆ ಪಕ್ಕಾಗನೇ (ಗದಾಯು. ೩-೨೩). [ಸಂ.]

**ಮೃಷಾರೋಪ** (ನಾ). ಸುಳ್ಳಾರೋಪ,—ಕೋಪ: ಮೃಷಾರೋಪದಿಂ ಮಂದಹಾಸದಿಂ ಬಾಬಾ ಒಡನಾಡೆನ್ನುವ ಸನ್ನೆಗೆ ಅಸ್ತು ಎನ್ನುತಾ ಹಿಮಾದ್ರಿಕನ್ನೆಗೆ ಮಾನಟರಾಜಂ ಪೀಠವನುಳಿದಂ (ಗಡೀಕ. ೦೬-೯೭೨). [ಸಂ.]

**ಮೃಷೆ** (ನಾ). ೧. ಸುಳ್ಳು; ಹುಸಿ; ಮಿಥ್ಯೆ: "ಅಲೀಕಂ, ವಿತಥಂ, ಮಿಥ್ಯಾ, ಮೃಷಾ-ಅನೃತಂ-ಈ ೫ ಅಸತ್ಯದ ಪೆಸರ್" (ಕರಾಚು. ೨೩-೦೯೩); ಮುಳಿಸು ಹೊಲೆ ಮೃಷೆ ರೌದ್ರಮವು ದುರ್ಬಲವೆ ಜೀವನ್ಮೃತವು (ಜಾವಂಶ. ೩-೭೦); ಲಿಂಗಾಭಿಮಾನಿತ್ವವರ್ತನಮಿಮಾತ್ಮಸಮರ್ಪಣಂ ಮೃಷೆ ಬಳಿಕ್ಕೆಲ್ಲಂ ಶಿವಾವಲ್ಲಭಾ (ಚಚಚ. ೯೩). ೨. ವ್ಯರ್ಥವಾದುದು: ನಿಷ್ಪ್ರಯೋಜಕವಾದುದು: ಕುಸುಮಕೋಮಲಗಾತ್ರ ಶೂರ್ಪಣಖಿಗಿರದಾಯ್ತೆ ? ವಿಷದ ಪೂತನಿ ನಯನಪಕ್ಷ್ಮದೊಳಗಿರಳೆ ? ಮಹಿಸಿನಗುವಿನೊಳಗಿರಲಶಕ್ಯವೆ ಪಿಶಾಚಿಕೆಗೆ ? ಮೃಷೆಯೊ ಮೈಬೆಡಗೆಲ್ಲ (ಮಂಕುಳ. ೯೦೬). [ಸಂ. ಮೃಷಾ]

**ಮೃಷ್ಟ** (ಗು). ೧. ಉಜ್ಜಿಹಾಕಿದ; ತೊಡೆದು ಹಾಕಿದ; ಅಳಿಸಿದ. ೨. ಬಳಿದ; ಲೇಪಿಸಿದ. ೩. ತೊಳೆದ; ಬೆಳಗಿದ; ಶುದ್ಧಗೊಳಿಸಿದ. ೪. ರುಚಿಕರವಾದ; ರಸವತ್ತಾದ: 'ಮೃಷ್ಟಭೋಜನ', 'ಮೃಷ್ಟಾನ್ನ' ಪರಾ. (ನಾ). ೫. ಶುದ್ಧಗೊಳಿಸಿದುದು; ಶುಭ್ರವಾದುದು: "ನಿರ್ಣಿಕ್ತಂ, ಶೋಧಿತಂ, ಮೃಷ್ಟಂ . . . ಕಲ್ಮಷವಿಲ್ಲದ ಹಾಗೆ ಶುದ್ಧಗೊಳಿಸಲ್ಪಟ್ಟದ್ದು" (ಸಿದ್ಧಾಂತಿ. ೩೩೬). ೬. ಮೆಣಸು. [ಸಂ.]

**ಮೃಷ್ಟಭೋಜನ** (ನಾ). ರುಚಿಕರವಾದ ಊಟ; ರಸವತ್ತಾದ ಭೋಜನ: ಮೃಷ್ಟಭೋಜನದಿಂದ ನಾವ್ ಸಂತುಷ್ಟರಾಗೊಲಿದುದನು ಬೇಡನೆ ದುಷ್ಟ ಕೌರವ ನಮ್ಮನಟ್ಟಿದ ಧೂರ್ತವಿದ್ಯೆಯಲಿ (ಕುಭಾ ೪. ೦೬-೯೯). [ಸಂ.]

**ಮೃಷ್ಟಾನ್ನ** (ನಾ). ರುಚಿಕರವಾದ ಆಹಾರ; ರಸವತ್ತಾದ ಊಟ; ರಸಗವಳ: "ಮೃಷ್ಟಾನ್ನಂ ಪರಮಾನ್ನಂ" (ಕಾಕ್ಕ. ೨೯೦); ಒಬ್ಬನೇ ಉಣಬಾರದ್ಯೆ ಮೃಷ್ಟಾನ್ನ ಫಲಗಳನು (ಕೆಶಿರಾ. ೯-೨೪): ಬಿಡದೆ ಕಳವಿಂದೆ ಲೋಗರ ಮನೆಗಳಂ ಪೊಕ್ಕು ತುಡುಕುತಿಂದವನ ಭೋಜನಕ್ಕೆ ಮೃಷ್ಟಾನ್ನ ಮಾದೊಡೆ ಕಿಲಬಲಂಗಳಂ ನೋಡುವನೆ (ಕೈಬಿರಾ. ೬-೩೩); ರಾಜಕುಮಾರಿ . . . ಮೃಷ್ಟಾನ್ನವನ್ನು ಭೋಜನಕ್ಕಿಟ್ಟಳು (ಕಂಕಕ. ೦೭೪). [ಸಂ.]

**–ಮೆ₁** (ಪ್ರ). ಒಂದು ಕೃದಂತಭಾವನಾಮಪ್ರತ್ಯಯ: ಚೇತನವಿಷಯೇ . . . ಮೆ, ತನ ಇತ್ಯೇತೇ ಪ್ರತ್ಯಯಾ ಭವಂತಿ (ಶಾಶಾಭೂ. ೦೭೬ ವೃತ್ತಿ); ಮೆಕಾರಕ್ಕೆ–ಒಲ್ಮೆ, ಬಲ್ಮೆ (ಶಮದ. ೨೦೦ ಪ್ರಯೋ); ಮೆ – ಕೂರ್, ಒಲ್ – ಕೂರ್ಮೆ, ಒಲ್ಮೆ (ಕೈಬಿ. ೦೭).

**–ಮೆ₂** (ಪ್ರ). ಆವೃತ್ತಿ ಎಂಬ ಅರ್ಥದಲ್ಲಿ ಸಂಖ್ಯಾವಾಚಿಗಳಿಗೆ ಹತ್ತುವ ಪ್ರತ್ಯಯ: ಸಂಖ್ಯಾವಾಚಿನಾಂ ವಾರಾರ್ಥೇ ಮೆ ಪ್ರತ್ಯಯೋ ವಾ ಭವತಿ (ಶಾಶಾಭೂ. ೦೭೬); ಮೆ ಯೆಂಬುದಕ್ಕುಮೆಣಿಸುವ ಸೂಚಿಗೋಳ್ . . . ಒರ್ಮೆ, ಇರ್ಮೆ, ಸಾಸಿರ್ಮೆ (ಶಮದ. ೨೦೬); ಒಂದು ಮೊದಲಾದ ಸಂಖ್ಯಾವಾಚಿಗಳಿಗೆ ಆವೃತ್ತಿ ಎಂದರ್ಥದಲ್ಲಿ ಮೆ ಸೇರುವುದು–ಒರ್ಮೆ, ಇರ್ಮೆ (ಕೈಬಿ. ೩೨).

**–ಮೆ₃** (ಪ್ರ). ಒಂದು ತದ್ಧಿತಭಾವನಾಮಪ್ರತ್ಯಯ: 'ಜಾಣ್ಮೆ', 'ಪಲುಮೆ', 'ಪೆರ್ಮೆ' ಪರಾ.

**ಮೆಂಚಿಗೆ** ಮಂಚಿಗೆ ನೋ.

**ಮೆಂಟಿಕೆ**, ಮಂಟಿಕೆ, ಮಂಟಿಗೆ, ಮಂಟಿಕೆ, ಮಂಟಿಗೆ, ಮಿಂಟಿಗೆ, ಮೆಂಟಿಗೆ (ನಾ). (ಹೆಂಗಸರು) ಕಾಲುಬೆರಳಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ; ಕಾಲುಂಗುರ: ವೀರಮುದ್ರೆಯ ಮೆಂಟಿಕೆಯ ವಿಸ್ತಾರದಂಗುಲಿಯುಂಗುರಂಗಳ . . . ನಾರಿಯರು ನಡೆತಂದರಾ ಮಾಯಾಂಗನೆಯ ಕೂಡೆ (ಪ್ರಭುಲೀ. ೯-೭೦); ಸರಪಣಿ ಪಿಲ್ಲಿ ಮೆಂಟಿಕೆ ಪಾದಸರ . . . ಮುಂತಾದ ಪರಿಪರಿಯಾಭರಣಂಗಳ ಬಿಸುಟರು (ಚಕ. ೭೭-೦೨೦); ಅಳವಡಿಸಿ ತೋಳ ಬಾಪುರಿ . . . ಅಂದಿಗೆ ಪಿಲ್ಲೆ ಮೆಂಟಿಕೆಗಳ (ಪಪಕೋ. ೦೦-೨೩). **ಮಂಟಿಕೆ:** ಸ್ತ್ರೀಯರುಗಳು ಕಾಲುಬೆರಳುಗಳಲ್ಲಿ ಉಂಗುರಗಳು, ಪಿಲ್ಲಿ, ಮಂಟಿಕೆ ಮುಂತಾದವುಗಳನ್ನು ಧರಿಸಿದಲ್ಲಿ ಹೆಚ್ಚಾದ ಮಂಗಳವೂ . . . ಸದಾ ಆನಂದವೂ ಆಗುವುವು (ಸಕಕ. ೯೦); ವೀರಮುದ್ರಿಕೆ ರತ್ನ ಮಂಟಿಕೆ ಪೇರಣೆಯ ವೈಡೂರ್ಯದಂದುಗೆಯೋರಣದ ಕಿರಿಗೆಜ್ಜೆ ಸೊಬಗಿಂದೆಸೆದರನುವಾಗಿ (ಕಂಬಿರಾ. ೯೩-೩೩). **ಮಂಟಿಗೆ:** ಅಂದುಗೆಯ ಮಂಟಿಗೆಯ ಕಂಕಣದ ರಘಣರವದ ಗೊಂದಳಿಪ ಬಳೆಯ ಕಿಂಕಿಣಿಯ ಗೆಜ್ಜೆಯ . . .

ಕಾಂತೆ ಮಾಳಿಗೆಯ ಭದ್ರದ ಬಯಲೊಳಾಡಿದಳು ಹೊಡೆಸೆಂಡನು (ಹಕಾ. ೯-೧೨). **ಮೆಂಟಿಕೆ** : ಬಾಲೆಯ ಪದದೊಳ್ ಮೆಱೆವವು ಕಾಲುಂಗುರ ವೀರಮುದ್ರೆ ಕಿಱುಮೆಂಟಿಕೆಗಳ್ (ನಳಚಂ. ೩೦೫) ; ಮುತ್ತಿನ ಮೆಂಟಿಕೆ ಕಾಲಪೆಂಡೆಯ ಮುದವೆತ್ತ ನೂಪುರ ಹೊನ್ನ ದಾರ ಉತ್ತಮ ಮಿಸುನಿಯ ಗಂಟಿಸರಗಳಿಂದ ಮತ್ತೇಭಯಾನೆಯೊಪ್ಪಿದಳು (ಕಂಪಿ. ೯-೭೦). **ಮೆಂಟಿಗೆ**: ಹೊಗಳಿವುಂಗುಟದೆಳೆಗಳಂ ಮೆಂಟಿಗೆಗಳಂ ಪಿಲ್ಲಿಗಳನಿಟ್ಟಂದುಗೆಗಳಂ ಮಣಿ ಪಾಯಪಟ್ಟಂಗಳನಮರ್ಚುವರು (ಬಸಪು. ೯-೩೬) ; ಅಸುಗೆಯುರಲುಂಗುರ ಮನುತ್ತಳದ ಮೆಂಟಿಗೆಯುಜ್ವಳಿಪ ಗೊಜ್ಜುಗೆಯ ಸಜ್ಜುಕದ ಚಳಕಿಗೆಯು . . . ಎಸಗಿ (ರಾಜಶೇ. ೧೦-೫೬ ರಗಳೆ). **ಮಿಂಟಿಗೆ** : ಸರಪಣಿ ಪಿಲ್ಲಿ ಮಿಂಟಿಗೆ ಪಾದಸರ . . . ಮುಂತಾದ ಪರಿಪರಿಯಾಭರಣಂಗಳ ಬಿಸುಟರು (ಶರಕ. ೬೭-೦೩೦): ಉದ್ದಾಮವಹ ವೀರಮುದ್ರಿಕೆ ಮಿಂಟಿಗೆಯ ಪಿಲ್ಲಿಗಳುಮೊಪ್ಪಿಹವೆಂದೊಡೆ (ಕೃಭಾಷ. ೯-೬೮). **ಮೆಂಟಿಗೆ** : ಪದಕ ಮೆಂಟಿಗೆ ಪಿಲ್ಲಿ ಅಣಿಮೆಟ್ಟೊದವಿದುಂಗುರ ಗೆಜ್ಜೆ ಸರಪಣಿಯಿಂದ ಸಿಂಗರಿಸಿ (ಜವಹಾ. ೦೬-೩೭). 'ಮೆಟ್ಟು₂' ಪರಾ. [ದೇ.॥ ತಮಿ. ಮೆಟ್ಟಿ, ಮೆಟ್ಟು ; ತೆಲು. ಮಟ್ಟೆಯ, ಮಟ್ಟೆ, ಮೆಟ್ಟೆಯ, ಮೆಟ್ಟೆ, ಮೆಂಡಿಯ, ಮೆಂಡೆ, ಮೆಂಡೆಯ = ತೋರುಬೆರಳು ಅಥವಾ ತರ್ಜನಿಗೆ ತೊಡುವ ಉಂಗುರ ; ತುಳು. ಮೋಂಟಿಗೆ; ನಾಯ್ಕಿ. ಮಟ್ಟೆ; ಪರ್ಜಿ. ಮಟ್ಟ]

**ಮೆಂಟಿಗೆ** 'ಮೆಂಟಿಕೆ' ನೋ.

**ಮೆಂಟಿ** 'ಮೇಂಟಿ' ನೋ.

**ಮೆಂಡಿ** (ನಾ). ಒಂದು ಸ್ಥಳದ ಹೆಸರು : 'ಉತ್ತಮಮೆಂಡಿ', 'ಮೆಂಡಿಮಂಗಲ' ಪರಾ. [ ? ]

**ಮೆಂಡಿಮಂಗಲ** (ನಾ). ಒಂದು ಊರಿನ ಹೆಸರು : ನಾಗಯ್ಯನು ಕೊಣ್ಣಯ್ಯನು ಶ್ರೀ ಮೆಣ್ಡಿಮಂಗಲದ ಮಹಾಜನಙ್ಗೆ ಪದಿನಾಱುಗದ್ಯಾಣ ಪೊಱಕ್ಕೊಟ್ಟು ಕೊಂಡ ಧರ್ಮ್ಮ (ಎಕ. X, ಕೋಲಾರ. ೯-೬; 925). [ಮೆಂಡಿ + ಮಂಗಲ]

**ಮೆಂಡಿಮುದುಳಗಾವುಂಡ** (ನಾ). ಒಬ್ಬಾತನ ಹೆಸರು : ಮಣಿಘಟ್ಟಿಯ ಮಾಣಿಕಾ ಮೆಣ್ಡಿಮುದುಳಗಾಮುಣ್ಡರ ಮಗಂ ಕಸವಯ್ಯ . . . ಕಾದಿ ಇನ್ದರಂ ಕೊಂದು ತಾನು ಸಗ್ಗಯಾದಂ (ಎಕ. X, ಮುಳಬಾ. ೨೨೯-೯: 909). 'ಮೆಂಡೆಗಾವುಂಡ' ಪರಾ. [ಮೆಂಡಿ + ಮುದುಳ₂ + ಗಾಮುಂಡ]

**ಮೆಂಡು** (ನಾ). ಹೆಚ್ಚಳ ; ಆಧಿಕ್ಯ ; ಅತಿಶಯ : ಹಿಂಡು ಗೋವು ಹರಿಯ ಕೃತಿಯ ಕಂಡು ಧ್ಯಾನದಲ್ಲಿ ತಂದು ತಂಡ ನೆಗಹಿ ಬಾಲವೆತ್ತಿಕೊಂಡು ನಿಂತವು ತುಡತೆಂಡ ಒಪ್ಪಿದವು ಹಂಡೆ ಹವಳೆ ಹುಲುಗಚ್ಚಿಕೊಂಡು ನಿಂತ ವಲ್ಲಿಗಲ್ಲಿ ಮೆಂಡಲಿದ್ದವೆ (ಕೃಕಬಾ. ೯೯-೬); ಮದ್ದಾನೆಗಳ ಗಂಡಭಾಗಂಗಳಿಂದ ಪೆಂಡಾಗಿ ಸುರಿಯುವ ಮದಧಾರೆಗಳಿಂದ ಕೆಸರಾಗುವಂತೆ ಮಾಡಿ ವಿತರಣ ಗುಣವಲ್ಲಿ ಕಲ್ಪವೃಕ್ಷಮಂ ಮರಮೆಂದು ಕಾಮಧೇನುವಂ ಪಶುವೆಂದು . . . ತಿರಸ್ಕಾರಮಂಗೈದು (ಕೌಗಂರಿ. ೩೨೬-೯). [ದೇ.॥ ತೆಲು. ಮೆಂಡು]

**ಮೆಂಡೆಗಾವುಂಡ** (ನಾ) . ಒಬ್ಬಾತನ ಹೆಸರು : ಬಾಗೆಯೂರ ಕಮ್ಮಾಱ ಗಾವುಣ್ಡನು ಸವುಳಙ್ಗದ ಮೆಣ್ಡೆಗಾವುಣ್ಡನು (ಎಕ. V, ಚನ್ನರಾ. ೨೩೦-೦೩ ; 925). [ಮೆಂಡೆ₁ + ಗಾವುಂಡ ( < ಗಾಮುಂಡ ) ]

**ಮೆಂಡೆಯತನ** (ನಾ). ಬಲಾತ್ಕಾರ ; ಬಲವಂತ ; ಜುಲುಮೆ : ಚಿದ್ದಯನು ಜಕ್ಕಯ್ಯನುಮೆಂಬ ಪಾರುವರು . . . ಎಡೆಯಾಯ್ದುತನದಿಂ ರಾಜಗಾಮಿತಂಗೆಯ್ದು ಮೆಣ್ಡೆಯತನದಲೂರಸೆನ್ನದೆಸ್ದು ಮಾಱುಪರಿಪ ದುಣ್ಬಳಿಯ ಪೊಗ ತೊಟ್ಟುಣುತಮಿರ್ಪುದು ಕಣ್ಡು (ಕೌಇ.IX-i, ೦೨೩-೦೭: 1059). [ ? + — ತನ]

**ಮೆಂಡೆಹ** (ನಾ). (?) : ಪಡುವನಾಡ ಕೊಟ್ಟಬಾವಿಯ ಮೆಂಡೆಹ [ಪಾಠಾಂ. ಯ]ವ ಕಾಯಕದ ಚೌಡು ಬಟ್ಟಕೆಱೆಯಾಲಿ ಬಸವನಳವಿಂಡ್ಯ ಮರುಳಯ್ಯ ಕಟ್ಟಧಿಕರಿಸುವ ಪ್ರಮಥಗಣನಾಯಕರ ಚರಣಾಂಬುಜಕ್ಕೆ ಶರಣು (ರಶಿಜಿಂ. ೩೯-೦೩೫). [ ? ]

**ಮೆಂತಯ** 'ಮೆಂತೆಯ' ನೋ.

**ಮೆಂತೆ** 'ಮೆಂತೆಯ' ನೋ.

**ಮೆಂತೆಯ**, ಮೆಂತಯ, ಮೆಂತೆ, ಮೆಂತ್ಯ, ಮೆಂಥಿಯ, ಮೆಂಥೆಯ₂ (ನಾ). ಒಂದು ಬಗೆಯ ಧಾನ್ಯ ಮತ್ತು ತರಕಾರಿಯಾಗಿ ಬಳಸುವ ಅದರ ಸೊಪ್ಪು : ಜೀರಿಗೆ ಮೆಂತೆಯಂ ಶುಂಠಿ ನೀರುಳ್ಳಿಯಿಕ್ಕಿಯಿನಿಸಱ ಎಣ್ಣೆಯಿಂಗಿಕ್ಕಿಯೊಗ್ಗರಿಸಿ (ಸೂಶಾ. ೩-೨೦) ; ಮೆಂತೆಯ ತೂಕ ೧ ಓಪ್ಪಲಿ ತೂಕ ೯ . . . ಇಷ್ಟನ್ನೂ ಕಲಸಿ ಅಟ್ಟು ತಾರೇಕಾಯುಷ್ಟು ಮೆಲ್ಲಲು ಗೂದೆ ಮಾಣುವುದು (ಪಶ್ವಿ. ೮೭) ; ಸಾಸಿವೆ ಮೆಂತೆಯ ನೀರುಳ್ಳಿ ಬೆಳ್ಳುಳ್ಳಿ ಅರಿಸಿನ ಶುಂಠಿ ಮುಂತಾದ ಜಿನಸನು (ಎಕ. VIII, ತೀರ್ಥಹ. ೭೨-೨೦ ; 1711). **ಮೆಂತಯ** : ಜೀರಗೆ ಮೆಂತಯ ಯಿಂಗು ಸಾಸವೆ ಉಪ್ಪು ನಿಂಬೆಯ ಹಣ್ಣು ಸಹ ಕ್ರಮ ವರಹ ಗ ೧ (ಎಕ. XV, ಬೇಲೂರು. ೭೦-೩೭ ; 1484). **ಮೆಂತೆ** : "ಮೆಂತೆ — ಮೇಥಿಕಾ (ಮಂಥಾ) = ಒಂದು ಜೀನಸು" (ಕದ್ಯಕೋ. ೩೬) ; ಸ್ವಾತಿಮಳೆಯಲ್ಲಿ . . . ಮೆಂತೆ ಬಿತ್ತಬೇಕು (ಕೃಶಿಶ್ರ. ೭೨) ; ಮೆಂತೆ ತಿಂದಾಕ್ಷಣ ಕುಂತೀ ಮಗನಾದಾನೇ ? (ಗಾದೆ). **ಮೆಂತ್ಯ** : ಅಜಮೋದ, ಮೊತ್ತ, ಯಷ್ಟಿ ಮಧುಕ, ಜಟಾಮಾಂಸಿ ಇವುಗಳನ್ನು ಪ್ರತ್ಯೇಕ ಒಂದೊಂದು ಪಲವಂ ಚೂರ್ಣಿಸಿ ಹಾಕಿ . . . ಸೇವಿಸಲು ಶೀತಜ್ವರಂ ಶಮನಮಕ್ಕುಂ (ಸಕಪ್ಪ. ೭೨) ; ನೆಲ್ಲಿಕಾಯಿ ಮೆತ್ತಗಾದಾಗ . . . ಓಮಕಾಳು ಮತ್ತು ಮೆಂತ್ಯ ಇವುಗಳ ಒಗ್ಗರಣೆ ಹಾಕಿ, ಆಮೇಲೆ ಭರಣಿಯಲ್ಲಿ ಹಾಕಿ ಮುಚ್ಚಳವಿಕ್ಕಿ ಬಾಯಿಗೆ ವಸ್ತ್ರದ ತುಂಡನ್ನು ಕಟ್ಟಿ ಇರಿಸುವುದು (ಅಡುಗೆ. ೦೦೬). **ಮೆಂಥಿಯ** : "ಮೆಂಥೀ — ಮೆಂಥಿಯ" (ಓಕಥಿ. ೦೨೯). **ಮೆಂಥೆಯ₁**: "ಪೀತಬೀಜ — ಮೆಂಥೆಯ" (ಓಕಂ. ೯೯) ; ಬೇವಿನೆಲೆ ಬಳಿಯ ಗಣಜಿಲ ಮಾವಿನ ಪಾಲಿಂದಮರೆದು ಶರ್ಕರೆಸಹಿತಂ ಸೇವಿಸೆ ಜೀರಗೆ ಮೆಂಥೆಯ ದೋಷದ ವಿಷಹರಮದಕ್ಕುಂ (ಕಪುರ. ೨-೭೬).

**ಮೆಂತ್ಯದ ಸೊಪ್ಪು, ಮೆಂತೆಸೊಪ್ಪು** = ಒಂದು ಬಗೆಯ ತರಕಾರಿ ಸೊಪ್ಪು : ಚಕ್ಕೊತ್ತಿಸೊಪ್ಪು, ಮೆಂತ್ಯದ ಸೊಪ್ಪುಗಳನ್ನು ಸಸಿಗಳಲ್ಲೇ ಕಿತ್ತು ಅಡಿಗೆ ಮಾಡಿದರೆ ಮೇಲು (ಕರಶಿ. ೦೬); ಮೆಂತೆಸೊಪ್ಪಿನ ಹುಳಿ ಬಹಳ ಚೆನ್ನಾಗಿರುತ್ತದೆ (ಲೋಕ).

[ದೇ.॥ ತಮಿ. ಮೆನ್ತಿಯಮ್, ಮೋತಿ, ಮೋನ್ತು, ವೆನ್ದಯಮ್, ವೆನ್ದಲ್, ವೆನ್ತಿಯಮ್; ಮಲ. ವೆಂತಯಮ್; ತುಳು. ಮೆಂತಿ, ಮೆಂತೆ, ಮೆತ್ತಲೆ, ಮೆತ್ತಿ, ಮೆತ್ತೆ; ತೆಲು. ಮೆಂತಿ, ಮೆಂತುಲು./ಸಂ. ಮಂಥಾ]

**ಮೆಂತ್ಯ** 'ಮೆಂತೆಯ' ನೋ.

**ಮೆಂಥಯ** 'ಮೆಂಥೆಯ₂' ನೋ.

**ಮೆಂಥಿಯ** 'ಮೆಂತೆಯ' ನೋ.

**ಮೆಂಥೆಯ₁** 'ಮೆಂತೆಯ' ನೋ.

**ಮೆಂಥೆಯ₂**, ಮೆಂಥಯ (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು ; ಮಾಧವಿ : "ಮೆಂಥೆಯುಮೆನೆ ವಸಂತದೂತಿಕೆಗೆ ಪೆಸರ್" (ಕಜಿ. ೯೨); "ಮುದನಿ-ಮೆಂಥೆಯ, ಅದಿರ್ಗಾಂತಿ, ಕಸ್ತೂರಿ" (ಓಕಂ. ೦೦೫). **ಮೆಂಥಯ** : "ಅದಿಮುರ್ಕ್ತೆ, ಮೆಂಥಯ [ಪಾಠಾಂ. ಮೆಂದೆ] ಅದಿರ್ಗಾಂತಿ — ಈ ೩ ಮಾಧವಿಲತೆ" (ಕಶಾ. ೫೯-೦೬೦). [ ? ]

**ಮೆಂದ** 'ಮಯಿಂದ' ನೋ.

**ಮೆಂದಣ್ಣ** (ನಾ). ಒಬ್ಬಾತನ ಹೆಸರು : ನೊಣಂಬಸೇನಮಾರನ ಮಗ ಮೆನ್ದಣ್ಣ (ಎಕ. IX, ಕಾಪಕಾ. ೫೨-೩: ೫೦೦). [ಮೆಂದ (< ಮಯಿಂದ) + ಅಣ್ಣ₁]

**ಮೆಂದಮ್ಮ** (ನಾ). ಒಬ್ಬಾತನ ಹೆಸರು : ಇ ಕೊಡಗಿಯ ಬಳಸಿದೋರ್ ನಾಬಯ್ಯಮಣ್ಣ ಬಿಯಳನುಂ ಒಲಿಯ ಮುಗುಳಿಯ ಕೋಮರಯ್ಯನುಂ ಪಲ್ಯಾಡಿಯ ಮೆನ್ದಮ್ಮ ಬೆಣ್ಣೆಯೂರ ದೇವಗಣನು (ಎಕ. VI, ತಕ್ಕಮ. ೩-೦೪; 899). [ಮೆಂದ (< ಮಯಿಂದ) + ಅಮ್ಮ$_1$]

**ಮೆಂದಯ್ಯ** (ನಾ). ಒಬ್ಬಾತನ ಹೆಸರು : ಸಡದೋರ್ಕ್ಕರಣಸಹಿತ ಮೆನ್ದಯ್ಯನುಂ ಪೆಂನ್ಚಬುವಿನ ಸೊಬಮ್ಮಗಾವುಣ್ಡನುಂ (ಎಕ. XII, ಶಿರಾ. ೨೬-೪೬; 943). [ಮೆಂದ (< ಮಯಿಂದ) + ಅಯ್ಯ$_1$]

**ಮೆಂದು** ' ಮೇ$_1$ ' ಪರಾ.

**ಮೆಂದೆ** (ನಾ). ಜಮೀನಿನ ಒಂದು ಅಳತೆ (?) : ಐನೂರ್ಬ್ಬರುಂ ಕೂಡಿ ಶ್ರೀ [ಪೊಜ್ಜೇ] ಶ್ವರದೇವರ್ಗ್ಗೆ ಬಿಟ್ಟ ಧಮ್ಮಮೆನ್ತೆಂದಡೆ . . ಹಂನೆರಡು ಮೆಂದೆಯ ಬಂಜರು ಸಮಸ್ತಂ ಕೂಡಿಯಾಳಲು ವೀಸವಂ ಕೊಟ್ಟರ್ (ಕಇಅ. ೩೫-೪೬-೪೦; 1143). [ ? ]

**ಮೆಂಬರು** (ನಾ). ಸಂಘ, ಸಮಿತಿ ಮುಂತಾದ ಘಟಕಗಳಲ್ಲಿ ಸಂವಿಧಾನ ಮೂಲಕವಾದ ಸಂಬಂಧವನ್ನು ಹೊಂದಿರುವವನು : ಸದಸ್ಯ : (೧)ನೆಯ ಉಪಪ್ರಕರಣದಲ್ಲಿ ಹೇಳಿರುವ ಪಟ್ಟಿಯಲ್ಲಿ ನಮೂದಿಸಿರುವ ಯಾವನೊಬ್ಬ ಮನುಷ್ಯನನ್ನಾದರೂ ಸದರಿಬೆಂಚಿನ ಮೆಂಬರಾಗಿ ನೇಮಿಸ ಬಹುದು (ಗ್ರಾಮೂಕ. ೦೬). [←ಇಂ. Member]

**ಮೆಕ್ಕಲು** (ನಾ). ೧. ಬೆಟ್ಟದ ಮೇಲಿನಿಂದ ಹರಿಯುವ ನದಿಗಳು ಮೇಲಿನಿಂದ ದೂಡಿಕೊಂಡು ಹೊತ್ತು ತರುವ ಮೇಲುಮಣ್ಣು ; ರೇವೆಮಣ್ಣು : ಫಲವತ್ತಾದ ಮೆಕ್ಕಲಿನ ಮೈದಾನಗಳಲ್ಲಿ ಇವು ಪ್ರವಹಿಸು ತ್ತವೆ (ಭೂವಿ. ೨೪೩). ೨. ಮೆಕ್ಕಲುಮಣ್ಣಿನಿಂದ ಕೂಡಿದ ಪ್ರದೇಶ,— ಸ್ಥಳ : ಇವು ದಕ್ಷಿಣ ಭಾರತದ ಪಶ್ಚಿಮ ಮತ್ತು ಪೂರ್ವತೀರಪ್ರದೇಶ ಗಳಲ್ಲಿ ಸಮುದ್ರ ಮತ್ತು ಬೆಟ್ಟಸಾಲುಗಳ ಮಧ್ಯೆ ಇರುವ ಇತ್ತೀಚಿನ ಮೆಕ್ಕಲುಗಳು (ಕವಿಕೋ. XII, ೬೩೪). [ ? ]

**ಮೆಕ್ಕಲುಮಣ್ಣು** (ನಾ). = ಮೆಕ್ಕಲು ೧ : ನದಿಗಳು . . . ಹರಿಯುವಾಗ ಬೆಟ್ಟದಿಂದ ಕಲ್ಲು, ಮಣ್ಣು, ಮರಳು ಮುಂತಾದವುಗಳನ್ನು ದೂಡಿಕೊಂಡು ಬರುತ್ತವೆ . . . ಇದೇ ಮೆಕ್ಕಲುಮಣ್ಣು (ಪಪ. ೨೩) ; ಮೆಕ್ಕಲುಮಣ್ಣು ಗಳಲ್ಲಿ . . .ತೀರಪ್ರದೇಶದ ಮಣ್ಣುಗಳು ಮತ್ತು ನದೀಮುಖಜ ಭೂಮಿಯ ಮೆಕ್ಕಲುಮಣ್ಣುಗಳು ಎಂದು ಎರಡುಭಾಗ ಮಾಡಬಹುದು (ಕವಿಕೋ. XII, ೬೩೪). [ಮೆಕ್ಕಲು + ಮಣ್ಣು (<ಮಣ್)]

**ಮೆಕ್ಕೆ$_1$** ' ಮಕ್ಕಿ$_1$ ' ನೋ.

**ಮೆಕ್ಕೆ$_2$** (ನಾ). ೧. ಒಂದು ಬಗೆಯ ಜೋಳ : 'ಮೆಕ್ಕೆಜೋಳ' ಪರಾ. ೨. ಮೆಕ್ಕೆಜೋಳದ ಹಿಟ್ಟು (?) : ಅಕ್ಕಿಯಿಂ ತೆಂಗು ಜಾನಕ್ಕಿಯಿಂ ಲಂಕೆಯು ಮೆ[ಪಾಠಾಂ. ಮ]ಕ್ಕೆಯಿಂ ಕಣಿಕ ಕೆಡುವಂತೆ ದುರ್ಬುದ್ಧಿ ಹೊಕ್ಕಲ್ಲಿ ಕೇಡು (ಸರ್ವಜ್ಞ. ೬೭೨). [?./ ಮರಾ. ಮಕ್ಕಾ, ಮಕಈ./ಇಂ. Maize= ಮುಸುಕಿನಜೋಳ]

**ಮೆಕ್ಕೆ$_3$**, ಮೇಕೆ$_2$ (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ : "ಉರ್ವಾರುವೆನೆ ಮೆಕ್ಕೆ" (ಪುಂಗರಾ. ೪೪-೪೬) ; ಮೆಕ್ಕೆಯ ಕಾಯ್ಗಳ್ ಮೊದಲೊಳ್ ಕೈಪೆಯುಪ್ಪುವು (ರವರ್ಣವು. ೬-೨೪೦) ; ಎಳೆಯ ಮಂಕಿಯೊ ಕಳಿತ ಮೆಕ್ಕೆಯೊ . . , ಠಕ್ಕನುಂಡೆಯೊ ಸವಿಯ ಚಿತ್ರಕವೊ (ಕುಮಾವ್ಯಾ. ೮-೭೬) ; ಎಂತು ಕಲ್ಪನನಾಗಿ ಮಾಲತಿಯುಂ ಮೆಕ್ಕೆಯಿಂ ಸಿಂಗರಿಸಿದರ್ (ರಾಮಾಶ್ವ. ೩೬-೨೪). ಮೇಕೆ$_2$ : "ಪೃಥುವಿಶಾಲ – ಮೇಕೆ" (ಚಿಕಂ. ೦೦೨). [?./ ಮರಾ. ಮೇಕೀ, ಮೇಕೇ]

**ಮೆಕ್ಕೆಜೋಳ** (ನಾ). = ಮೆಕ್ಕೆ$_2$ ೧ : (ಛತ್ರ) . . . (ಮೆಕ್ಕೆಜೋಳ) ಇವುಗಳ ಬೆಳೆಗೆ ಅವಶ್ಯಕವಾದ ಅನುಕೂಲಗಳಾವುವು (ಭೂವಿ. ೨೦೧). [ಮೆಕ್ಕೆ$_2$ + ಜೋಳ./ತಮಿ. ಮೊಕ್ಕೈಚ್ಚೋಳಮ್]

**ಮೆಚ್ಚವಣಿಗೆ** ' ಮೆಚ್ಚುವಣಿಗೆ ' ನೋ.

**ಮೆಚ್ಚಿ** . ಮಚ್ಚಿಕೆ (ನಾ). ೧. ಇಷ್ಟ : ಪ್ರೀತಿ : ನೀನು ತುಂಬ ಜೋರಿನ ಹುಡುಗಿ ಎಂದೇ ಅವರಿಗೆ ಅದು ಮೆಚ್ಚಿಕೆಯಂತೆ (ಕೀವೋಕ. ೦೦೦) ; ವೀರಣ್ಣನ ಮೇಲೆ ತೋರಿದ್ದ ಮುನಿಸು ಮೆಚ್ಚಿಕೆಯ ರೂಪ ತಾಳಿತು (ಹಾಹುತ. ೦೦೬). ೨. ಒಪ್ಪಿಗೆ ; ತೃಪ್ತಿ : ಈ ಅಂಶಗಳನ್ನು ನೀವು ಮನನ ಮಾಡಿಕೊಂಡರೆ ಕುಟುಂಬದವರಿಗೆ ಮೆಚ್ಚಿಕೆಯಾಗುವ ರೀತಿಯಲ್ಲಿ ಮತ್ತು ನಿಮ್ಮ ಹಣಕಾಸಿನ ಸ್ಥಿತಿಗೆ ತಕ್ಕಂತೆ ನಿತ್ಯದ ಅಡುಗೆಗಳನ್ನು ತಯಾರಿಸುವುದು ಕಷ್ಟವಾಗಲಾರದು (ಅಡುಗೆ. ೩೬) ; ಅವರಿಗೆ ಯಾವು ದೊಂದು ಮೆಚ್ಚಿಕೆಯಾಗುವುದಿಲ್ಲ (ಒಂಟಿದ. ೭). ೩. ಕೊಂಡಾಟ; ಹೊಗಳಿಕೆ: ಅವಳಿಗೆ ಏನಾದ್ರೂ ಒಂದು ಮೆಚ್ಚು ಕೊಡ್ಬೇಕು ಎಂದು ಮೆಚ್ಚಿಕೆಯ ದನಿಯಲ್ಲಿ ಹೇಳಿದ (ಹಾಹುತ. ೯೩). **ಮಚ್ಚಿಕೆ** : ೧. ಮನವನೀಯಲು ಬಹುದು ಮಚ್ಚಿಕೆಯನುವನಱಿದಾ ಪ್ರಾಣವಂ ಮತ್ತೆಂತು ಕೊಡಲಹುದು (ಐಕಥ. ೩೬-೫೩) ; ಸಟಿಸಿ ಪ್ರೇಮದಿ ತೃಪ್ತಿಯೊಂದಿಸುವ ಮಚ್ಚಿಕೆಯ ಗೋವಿನೊಲು (ಗಗಶಾ. ೧೦-೯). ೪. ಸಂತೋಷ ; ಹರ್ಷ: ಸಕಲದೇವ ದ್ರೋಹಿಗಳು . . . ವಿಕಟಮತಿಗಳು ಖಳಪತಿಯ ಚಿತ್ತಕೆ ವಿಕಾರವ ಪುಟ್ಟಿಸುತ ಮಚ್ಚಿಕೆಯೊಳಿಹರು ( ಅಪಂರಾ. ೧-೫-೯ ). ೫. (?) : ಫಲರಸ ವರ್ಣ ಕೊಂಡಂತಿರಬೇಕು . . . ದೃಷ್ಟಿಯ ಚಿತ್ರದಂತಿರಬೇಕು ಅಪ್ಪುವಿನ ಮಚ್ಚಿಕೆಯಂತಿರಬೇಕು (ವೋಕವೂ. ೦೦೦-೪೦೨). 'ಮೆಚ್ಚುಗೆ' ಪರಾ. [ಮೆಚ್ಚು$_1$ + —ಇಕೆ./ತೆಲು. ಮಚ್ಚಿಕ]

**ಮೆಚ್ಚಿಗೆ** ' ಮೆಚ್ಚುಗೆ ' ನೋ.

**ಮೆಚ್ಚಿತು**, ಮೆಚ್ಚಿದು (ನಾ). ಪ್ರಿಯವಾದುದು ; ಇಷ್ಟವಾದುದು : ಮೆಚ್ಚಿತು ಮಾಡಲ್ಕೆ ಸಮರ್ಥನಪ್ಪಡಪ್ಪುದು ಗರ್ವಂ (ಸಮುಶ. ೪-೦೦೫) ; ಮುಂದದಿನಂಗಳೆ ಬೇಡು ಮೆಚ್ಚಿತಂ (ಕುಮುರಾ. ೨-೬೩). **ಮೆಚ್ಚಿದು** : ನಿನ್ನ ಮೆಚ್ಚಿದುಗೆಯ್ ಎಂದು ಪರಿಚ್ಛೇದಿಸಿ ನುಡಿವುದುಂ (ಸುಕುಮಾ. ೬-೨೨ ವ).

ಮೆಚ್ಚಿತ = ಹೊಗಳಿಸಿಕೊಂಡವನು ; ಸ್ತುತ್ಯನಾದವನು : ಪುರಹರ ಮೆಚ್ಚಿತ ಪುರುಷೋತ್ತಮನುತ ಶರಣುಹೊಕ್ಕೆನು ಸಲಹೆನ್ನ (ಕಕಗಾಂ. ೬೫-೨೪). [<ಮೆಚ್ಚು$_1$]

**ಮೆಚ್ಚಿದು** ' ಮೆಚ್ಚಿತು ' ನೋ.

**ಮೆಚ್ಚಿಸು**, ಮಚ್ಚಿಸು, ಮರ್ಚಿಸು (ಕ್ರಿ). ೧. ಒಡಂಬಡಿಸು ; ಒಪ್ಪಿಸು : ಗಂಧಮಿತ್ರ(ಕ್ಷೀಣ)ನಂ ಮೆಚ್ಚಿಸಿ ಬುದ್ಧಿಸೇನೆಯಂ ನಿಗ್ರಹದಿಂ ತನಗೆ ವಶ್ಯಂಮಾಡಿಕೊಂಡು (ಕಾವುಂಪು. ೦೬೦) ; ಈಕೆಯನು ಮೆಚ್ಚಿಸದು ರಾಜಿಸಿ ನೀಕ (ಸಂಛಶ. ೩೦-೩೬) ; ಸಂಬುಗೆಯಿಲ್ಲದಿದ್ದರೂ ಅಮ್ಮಯ್ಯನ ಮನಸ್ಸು ಮೆಚ್ಚಿಸುವುದಕ್ಕೆ ಹಾಗೆ ಮಾಡಬೇಕಾಯ್ತು (ಜಂಗಾಳ. ೦೧೪). ೨. ಸಂತೋಷಗೊಳಿಸು ; ಹರ್ಷಗೊಳಿಸು : ಆ ವಿಮಾನಂ ಸಮಂತೆಚ್ಚು ಮೆಚ್ಚಿಸಿದಂ ದೇವರುಮಂ ಧನುರ್ಧರರುಮಂ (ಪಂಪಭಾ. ೩-೬೩) ; ಪರಿಣತ ರೆನಿಸುವ ನಿರ್ಮತ್ಸರರಂ ಮೆಚ್ಚಿಪುದು ಗಹನಮಲ್ಲದು (ರವರ್ಣವು. ೧-೪೩) ; ಹ್ಯಾಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ ನಾಗಶಯನನೆ (ಪುರಂದ. ೨-೬೯-೦). **ಮಚ್ಚಿಸು** : ೨. ಮಚ್ಚಿಸುತೆ ತೆಗೆದು ಮುಂಡಾಡುತ್ತ (ಹರಿಕ. ದೀ. ೫-೦೦) ; ಎನ್ನಯ ತನುವಿನಲಿ ನೀ ಸುಳಿದು ಮಚ್ಚಿಸಿ ಯಿನಿತು ಧಾವತಿ ಗೊಳಿಸಿ (ಶ್ರಭುಂ. ೭-೮೦) ; ಅಖಂಡೇಶ್ವರನ ಮಚ್ಚಿಸುವಾತನೇ ಮಹಾ ಸದ್ಭಕ್ತನು (ಅಖಂಡೇ. ೭೯-೬೩). **ಮರ್ಚಿಸು** : ೩. ಒಲಿಯುವಂತೆ ಮಾಡು ; ಅನುರಕ್ತಗೊಳಿಸು : ಮನೆಯನಿವಕ್ಕೆ ಮರ್ಚಿಸಿದ ಮರ್ಚಿಸಿ ಕೂರಿಸಿದೆಯ್ದೆ ಕೂರ್ತ ನಚ್ಚಿನ ರುಚಿ ಬೆರ್ಚ ಬಿಚ್ಚತಿಕೆಯಂ ಬಗೆ ಕೂಡಿದಕೆಯ್ಗೆ ಮಾಡಿದೋಪನನುಱಿದೊತ್ತಗಿರ್ದಡೆಯೊಳೊಂದೆನಗಿತ್ತಪುದು (ಶಾಂತಿಪು. ೬-೮೦). [ಮೆಚ್ಚು$_1$ + – ಇಸು$_3$]

**ಮೆಚ್ಚು$_1$**, ಮಚ್ಚು$_1$, ಮಚ್ಚರ್$_1$, ಮೆಚ್ಚರ್ (ಕ್ರಿ). ೧. ಒಲಿ ; ಪ್ರೀತಿಸು ; ಬಯಸು : ಸೋಂಬನಂ ಮೆಚ್ಚಿ ಬೇಜೂರ್ಗೆ ಪೋದ ಸೂಳೆಯಂತೆ (ಕಾವ್ಯಸಾ ೫೨೯ ಕೂಡ್ರ೪) : ಸ್ವಯಂಬರದೊಳ್ ಸುಮತಿಯಿಲ್ಲರಂ ನೋಡಿ ಯಾರುಮಂ ಮೆಚ್ಚದೆ ಸಿರಿದಿಣ್ಣಂಗೆ ಮಾಲೆ ಸೂಡಿದೊಡೆ (ವಡ್ಡಾರಾ. ೦೦೬-೨೦). ೨. ಇಷ್ಟವಾಗು ; ಸೇರು : ಒಂದು ಪೊತ್ತಗಲದೆ ಮೆಚ್ಚು ಮೆಚ್ಚಿದಂ ತೊಟ್ಟತಂ ಕಾದಂಬರಿಯೊಳ್ಳಿರದು (ಕಾದಂಬ. ೫೨೬). ೩. (ದೇವರು, ಋಷಿ ಮುಂತಾದವರು) ಅನುಗ್ರಹಿಸು : ಪ್ರಸನ್ನವಾಗು : ಸಹಜ ಕವಚರತ್ನಕುಂಡಲಂಗಳಂ . . . ಕೊಟ್ಟುದರ್ಕೆ ಮೆಚ್ಚಿ ದೇವೇಂದ್ರ ನಾತಂಗಮೋಘಶಕ್ತಿಯನಿತ್ತು (ಪಂಪಭಾ. ೯-೬೪ ವ) : ನೆಚ್ಚನಯ್ಯ ಹರಿ ಮೆಚ್ಚನಯ್ಯ (ಹರಿಂದ. ೨-೬೬೦). ೪. ಒಪ್ಪು : ಸಮ್ಮತಿಸು : "ಮೆಚ್ಚು — ಅಭ್ಯುಪಗಮೇ" (ಶಮದ) : ಪರಮಾರ್ತ್ಥಂ ಮೆಚ್ಚಿಸಾನೀ ಧರಣಿಯುಳಿರ ವಾಸೆನ್ನು ಸನ್ನ್ಯಾಸಂಗೆಯ್ದು (ಎಕ. II, ೮೮-೪ : ಸು. 700) ; ಇಜಿಯದು ಬಸವಂಟಿ[ಯದ] ಬೀಟಿಸ್ಸೊರನ್. ತೇಜ(ಜ)[ನ] ಮೆಚ್ಚದೊಂ (ಎಕ.XXIV. ೦೯೪-೦೨ : ೫೫೯) : ತಾಪಸಾಚರಣಂ ತಪೋರೂಪಮಾರ್ಗಮುಂ ಮೆಚ್ಚದೆ ಮಿಥ್ಯಾಂಧಕಾರಾವಕುಂಠಿತಸಮ್ಯಗ್ದರ್ಶನನಾಗೆ (ಶಾಂತಿಪು. ೭-೯೩ ವ). ೫. ಕೊಂಡಾಡು ; ಹೊಗಳು : ಶ್ಲಾಘಿಸು : ತೆತ್ತುತನಕ್ಕೆ ತೆತ್ತುತನಮಂ . . . ಪೊಣರ್ಚಿತ್ತು ಮುಂಪಿಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೫ ಕೂಡ್ರ೪) : ಗುಣಯುತನಪ್ಪನಂ . . . ಪರೋಪಕಾರಕಾರಣಪರನಪ್ಪನಂ ಮನದೆ ಮೆಚ್ಚದರಾರಭಿಮಾನಿಯಪ್ಪನಂ (ಕವಿರಾ. ೦-೦೨೩) : ವಿದ್ವಜ್ಜನಂ ಮೆಚ್ಚೆ ವಿದ್ಯಾವಷ್ಟಂಭವುನಪ್ಪುಕೆಯ್ದು (ಎಕ. II, ೬೪-೯೩ : 1163) ; ತಿಳಿಯ ಹೇಳುವೆ ಕೃಷ್ಣಕಥೆಯನು ಇಳೆಯ ಜಾಣರು ಮೆಚ್ಚುವಂತಿರೆ (ಕುಮಾವ್ಯ. ೦-೦೩). **ಮಚ್ಚು$_1$** : ೧. ತ್ವದಂಘ್ರಿಪದ್ಮಂಗಳ ನೈದೆ ಮಚ್ಚಿ ನೆಲಸಿರ್ದಪುವೀ ಪುಲಿ ಪಂದಿ ಕೋಡಗಂ ಮುಂಗುರಿ (ಆದಿಪು. ೫-೦೪) ; ರಿಪುರಾಜ್ಯಂಗಸೆ ವಿಜಯಕೆ ಮಚ್ಚಿ ಮನಂಗೊಳ್ವಂತೆ (ಶಾಂತಿಪು. ೦೧-೪೯) ; ಹಣವ ತಕೊಂಡು ಧಾಳಕರ ಕ್ಷಣದೊಳಿಟ್ಟು ಮಚ್ಚದಿರೆಂದು ಮಗಳಿಗೆ ಬಣಗು ವೃದ್ಧಾಪ್ಪೆ ಹೇಳಿದಳು (ಮೋಹತ. ೦೮-೭೩). ೩. ದಮಿತಾರಿಯು ಭುಜಬಲವಿಕ್ರಮದಳವಿಗೆ ಮಚ್ಚಿ ಮಚ್ಚುಗುಡಿಸುವವೋಲ್ (ಶಾಂತಿಪು. ೪-೫೮) : ಪಮುಸಿಂಹಚಕ್ರಿ ದಯೆಯಿಂ ಕೆಯ್ಕೊಂಡು ಸರ್ವಾಧಿಕಾರಮನಿತ್ತಟ್ಟೆಜಿಕೊಳಿಯೆ ಮಚ್ಚಿ ಪೊರೆದಂ ಶಾನೆಂದೊಡೆ . . . ಉನ್ನತಿಕ್ಕೆ ವಡೆದಂ ಚಾವುಂಡಸೇಂ ಧನ್ಯನೋ (ಲೋಕೋಪ. ೦-೦೩ ಪೀಠಿಕೆ) ; ಮಾಡಿದ ಪೂಜೆಯ ಕೊಂಡು ಮಚ್ಚಿ ತಲೆದೂಗಿ ಲಿಂಗಯ್ಯನ ಮನ ಕರಗಿ (ಮೋಹಮಾ. ೦೨೯ ಪ್ರಸ್ತಾವನೆ). ೪. ಎಂತು ಮಾಡುವೆನೀ ಮನವನ್ನು ಕೂಡಲಸಂಗಮ ದೇವನ ಶರಣರ ನಚ್ಚುವ ಮಚ್ಚದ ಬೆಂದ ಮನವನು (ಬಸವ. ೩೮) ; ನಚ್ಚುಗೆ ಮನ ನಿಮ್ಮಲ್ಲಿ ಮಚ್ಚುಗೆ ಮನ ನಿಮ್ಮಲ್ಲಿ (ಮಹಾದೇ. ವ. ೩೦-೬೬) : ವೀರಶೈವದಲಿ ಒಳ್ಳಿತೇನುಂಟೆಂದು ಮಚ್ಚಿದನಲ್ಲದುಸು ಹೇಳು (ಪ್ರಭುಲಿ. ೨೫-೦೦). ೫. ಕುಮಾರಿಯರ್ ಬೆಸಗೊಳೆ ದಿಕ್ಕುಮಾರಿಯರೆನಲ್ಪೊರೆ ಯಾದುದವರ್ಕೆ ಮಚ್ಚಿ ಬಣ್ಣಿಸಲಭಿಯೋಗಮಾಯ್ತನಗೆ (ಗದಾಯು. ೦-೫೩) ; ಮಚ್ಚದೊಸಿಲ್ಲ ನಿನ್ನಳವು (ಕಾವ್ಯಾವ. ೪೯೪). Δ **ಮಚ್ಚರ್$_1$** : ೧. "ಮಚ್ಚರ್- ಅತಿಪರಿಚಯೇ" (ಶಮದ) : ಕಳವನೆ ಮಚ್ಚರ್ ಮೆಚ್ಚರ್ ಬೆಸನಂ ಪೆಜರರ್ಥಮನೀಟ್ಟುಕೊಳ್ವ ತಕ್ಕಳವಿಗಳುಂಬವಾಗಿ ನಿಲೆ ಕನ್ನಮನಿಕ್ಕುವ . . . ನಿನ್ನ ಗೊಷ್ಠಮುಂ ತಿಳಿದವಧಾರಿಸು (ವರ್ಧಮಾ. ೫-೩೦) ; ಉನ್ನತ ಗುರುಪ್ರಿಯಾಪದಮುಂ ಮಚ್ಚರ್ ಬೆನ್ನನೆ ಪೋದಂತಿರೆ ಮೂರ್ಛೆಪೋದನದಂ ವ್ಯಾಮೋಹಮೇಗೆಯ್ದುದೋ (ಅರ್ಜಪು. ೨-೯೮). ೪. ಜನಂ ತನ ಗೊಪ್ಪುತೆ ಮಚ್ಚರ್ ನಚ್ಚಿ ಮೋಹದೆ ಪೆದುವಾಳ್ವಪೋಲ್ ವಿಧಿಸುಷ್ಪ ಬಿಸವಂದಮೆ ಶೋಕಶಾಸನಂ (ಸಂಶಪ. ೩೯-೦೦). **ಮೆಚ್ಚರ್** : ೫. ದೇವನಿಕಾಯಂ ನೆಲೆವೆಚ್ಚರ್ ಮೆಚ್ಚರ್ ಜಯಮಂ ಕೈಕೊಂಡೆ (ಶಾಂತೀಶ್ವ. ೫-೩೦) ; ಮೆಚ್ಚರ್ ಒಡಿದಿರ್ಪವೆಸೆ . . . ಸಲ್ಲಕ್ಷಣಂ (ಜನಮು. ೩-೫೯).

[ ದೇ. II ತಮಿ. ಮೆಚ್ಚು, ಮೆಯ್ಚ್ಚು : ತುಳು. ಮೆಚ್ಚು ; ತೆಲು. ಮಚ್ಚು, ಮೆಚ್ಚು ; ಕೊಡ. ಮೆಚ್ಚ್ ; ಕೋತ. ಮೆಚ್ ]

**ಮೆಚ್ಚು$_2$**, ಮಚ್ಚು$_2$, ಮಚ್ಚರ್$_2$ (ನಾ). ೧. ಪ್ರೀತಿ ; ಇಷ್ಟ ; ಒಲುಮೆ : ಮದನನ ಕಾಯ್ದು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ (ಪಂಪಭಾ. ೫-೦೮) ; ಮೆಚ್ಚಿದಂತಿರುತಿಹಳು ಮೆಚ್ಚು ಮತ್ತೊಬ್ಬನೊಳು (ಸರ್ವಜ್ಞ. ೦೯೪೦). ೨. ಪ್ರಿಯವಾದುದು ; ಇಷ್ಟವಾದುದು : ಈ ಪುಣ್ಯಕಥೆ ಪುಣ್ಯಜೀವಿಗಳಿಗೆ ಮೆಚ್ಚು ಕಾಪುರುಷರಿಗೆ ಮೆಚ್ಚಲ್ಲ (ಭರತ. ೦-೧೭). ೩. ಇಷ್ಟಪಟ್ಟು ಕೊಡುವ ಕಾಣಿಕೆ : ಬಹುಮಾನ : ತನ್ನ ನಲ್ಲಂಬುಗಳಿಂದೆಚ್ಚೆಚ್ಚು ಮೆಚ್ಚಂ ಸಲಿಸುವಂ (ಪಂಪಭಾ. ೪-೨೩) : ಅರಸುಮಕ್ಕಳ ಮುಂದೋದಿ ಮೆಚ್ಚಂ ಕೊಳ್ವಕ್ಕರಿಗರಬ್ಬರದೊಳಂ (ಕಬ್ಬಿಗ. ೪೪): ಅರಮನೆಯೊಳ್ ರನ್ನಗಡಗಮುಂ . . . ಮೆಚ್ಚನೀವರ್ (ರಾಮಾಶ್ವ. ೫-೦೭). ೪. ಒಪ್ಪಿಗೆ : ಸಮ್ಮತಿ : ಮೆಚ್ಚಿಲ್ಲದೆ ಜಡನಾಗಿ ದೇವಗುರುಗಳ ಪೊರ್ದದೆ (ರಮಾಮ. ೫-೦೩೭) ; ಹೆಚ್ಚದೆ ಹಿಗ್ಗದೆ ಇಪ್ಪರೆ ಲೋಕಕ್ಕೆ ಮೆಚ್ಚು ಕೇಳೆಚ್ಚರಿಕೆ (ಹರಿಂದ. ೨-೪೫ ಅನುಕಲ್ಪ). ೫. ಹೊಗಳಿಕೆ: ಪ್ರಶಂಸೆ: ಬಜಿವಲ್ತು ಮೆಚ್ಚು ಶೌಚ ಕಿಜಿದಲ್ತು . . . ಎನಿಸಿದುದು ನಿಜಗುಣಂ ಬೋಟಿಗನ (ಶಾಸ. XI-i. ೪೦-೨೪: 969). **ಮಚ್ಚು$_2$** : ೧. ಅರಸರ ಮಚ್ಚು ತಮ್ಮ ಮನದೊಳ್ ನಿಲೆ ಸ್ವೈರಿಸದಂತ ನಿತ್ಯಮಾ ನರರ ವಿಭೂತಿಯೆಂಬ ಬಗೆ ಬಂದಿರೆ ಮಾಣದೆ ತಮ್ಮತಮ್ಮ ಪುತ್ರರನಭಿಯೋಗದಿಂದತಿಬಲಂಗೆ ನಿಯೋಜಿಸಿ ಮಾಣ್ದರ್ (ಆದಿಪು. ೨-೫೦); ವಿಷಯಂಗಳೊಳಪ್ಪ ಮಚ್ಚಂ ಕೆಯ್ಕೊಂಡಂಗಾ ಮಚ್ಚು ಕಷಾಯಮಂ ಪುಟ್ಟಿಸುಗುಂ (ಚಾವುಸಂ. ೦೪೦-೦೦ ವ) : ಕಳವಿನೊಳ್ ನಡೆವುದೇ ಸುಖದ ಸುಗ್ಗಿ ತಲೆದೋಜುತಿರ್ಪುದೇ ಮಚ್ಚು ನಿನಗೆ (ಪಂಚ. ೦೦-೫೨). ೩. ಕೂರ್ತಿಚ್ಚೆ ಬೆಚ್ಚಂತಿರೆ ಮಚ್ಚಂ ಮೆಚ್ಚಿದಂದದೊಳೆ ಸಲಿಪ . . . ವಾರನಾರೀಕದಂಬಂ (ಸುಕುಮಾ. ೯-೭೩) ; ಬೀರಬಲ್ಲನಿಗೆ ಮಚ್ಚು (ಬಹುಮಾನ) ಕೊಡಿಸಬೇಕು (ವೀರಬ. ೭೦). Δ**ಮಚ್ಚರ್$_2$** : ೧. ಸಹಜಧಾತುವುಂ ಭಾವಮುಕ್ಕುಂ . . . ತಡೆ ನಡೆ ಬಿಸು ಮೆಚ್ಚರ್ ಮಚ್ಚರ್ (ಶಮದ. ೨೦೩ ಪ್ರಯೋ). ೬. ಅಲಂಕಾರ: ಶೃಂಗಾರ : 'ಮೆಯ್ಮಚ್ಚರ್' ಪರಾ.

[< ಮೆಚ್ಚು$_1$./ತಮಿ. ಮೆಚ್ಚು, ಮೆಯ್ಚ್ಚು: ತೆಲು. ಮೆಚ್ಚು ]

**ಮೆಚ್ಚುಕಾಜ** (ನಾ). ಪ್ರೀತಿಪಾತ್ರನಾದವನು : ಕಡುಚದುರರ ಮೆಚ್ಚುಕಾಜ (ಭರತ. ೬೫೧). [ಮೆಚ್ಚು$_2$ + — ಕಾಜ]

**ಮೆಚ್ಚುಕೆಯ್** (ಕ್ರಿ). ಬಯಸಿದಂತೆ ಮಾಡು : ಇಷ್ಟಬಂದ ಹಾಗೆ ಮಾಡು : ಪಟುವಿವಾದದಿಂದೊಳಗೆ ಕಳ್ಳನಸಾರಯ್ಯಲಾಜದಾಗಳ್ ದೇವರೆನ್ನಂ ಮೆಚ್ಚುಕೆಯ್ವುದು (ವಡ್ಡಾರಾ. ೦೨೩-೨೩) ; ನೀನಿನ್ನೆನ್ನಂ ಮೆಚ್ಚುಕೆಯಿವೆಂಬುದುಂ (ಸುಕುಮಾ. ೭-೨೪ ವ). [ಮೆಚ್ಚು$_2$ + ಕೆಯ್$_1$]

**ಮೆಚ್ಚುಗ** (ನಾ). ಇಷ್ಟ ಪಡುವವನು; ಬಯಸುವವನು : "ಸ್ತುತ್, ಸ್ತೋಚಃ, ಸ್ತೋಚಕಃ, ಸ್ತೋಚಮಾನಃ — ಈ ೪ ಮೆಚ್ಚುಗಂ" (ಕಾಕಕ. ೯೫) ; ಸಾಹಿತ್ಯರಚನೆಯ ಮೊದಲ ಮೆಚ್ಚುಗ ಸ್ವತಃ ಕೃತಿಕಾರನೇ ಆಗಿರುತ್ತಾನೆ (ಸಂಕೋಧ. ೦೯೭). [ಮೆಚ್ಚು$_1$ + — ಗ$_2$]

**ಮೆಚ್ಚುಗಾಣಿಕೆ** (ನಾ). ಇಷ್ಟಪಟ್ಟು ಕೊಡುವ ಬಹುಮಾನ : ತಮ್ಮ ಲೋಕೋತ್ತರವಾದ ಕಲಾವೈಭವಕ್ಕೆ ಬೆರಗಾಗಿ ಬೇಳಾಗಿ ನನ್ನ ನಾಟ್ಯಕಲೆಯ ಮೆಚ್ಚುಗಾಣಿಕೆಯಿತ್ತು ನನ್ನ ಸರ್ವಸ್ವವನ್ನೂ ತಮಗೆ ಎಡೆ ಮಾಡಲು ಬಂದಿದ್ದೇನೆ (ತುಂಗಭ. ೮೭). [ಮೆಚ್ಚು$_1$ + ಕಾಣಿಕೆ (< ಕಾಣ್ಕೆ)]

**ಮೆಚ್ಚುಗುಡು** 'ಮೆಚ್ಚುಗೊಡು' ನೋ.

**ಮೆಚ್ಚುಗೆ**, ಮಚ್ಚುಗೆ, ಮಚ್ಚರ್ಗೆ, ಮೆಚ್ಚಿಗೆ (ನಾ). ೧. ಪ್ರೀತಿ ; ವಿಶ್ವಾಸ : ಅಭಿಮಾನ : ಬಂಧುವರ್ಗದವರೆಲ್ಲಾ ತಮ್ಮನ್ನು ಮೆಚ್ಚುಗೆ

ಯಿಂದ ಕಾಣುತ್ತಾರೆ (ಲೂಹಿ). ೨. ತೃಪ್ತಿ; ಸಂತೋಷ : ತಮ್ಮ ಕರ್ಮವಶದಿಂ ಸಂಸಾರಿಜೀವಂಗಳಿಲ್ಲಿ ಪುಟ್ಟುಗುವಲ್ಲಿಯಲ್ಲಿಯುಟ್ಟಿಯುಂ ಮೆಚ್ಚುಗೆಯುಮಕ್ಕುಂ (ತತ್ತ್ವಾರ್ಥ. ೧೩೯-೨೦) ; ಸಹಜಸ್ಥಿತಿಯಲ್ಲಿ ಅವನು ಅತ್ಯಂತ ಚುರುಕಾಗಿರುತ್ತಾನೆ ಎಂದು ಮಾಸ್ಲೆನಿಕೊವ್ ಮೆಚ್ಚುಗೆ ಸೂಚಿಸಿದನು (ಕುಸು. ೨೫೦). ೩. ಹೊಗಳಿಕೆ : ಕೊಂಡಾಟ; ಪ್ರಶಂಸೆ : ಜಗದೀಶಚಂದ್ರರು . . . ಜನರ ಮೆಚ್ಚುಗೆಗೆ ಮತ್ತು ಕೃತಜ್ಞತೆಗೆ ಪಾತ್ರರಾದರು (ಸಸ್ಯ. ೦೦೫). **ಮುಚ್ಚುಗೆ :** ೩. ' ಮುಚ್ಚುಗೆವೆಱು' ಪರಾ. **ಮೆಚ್ಚುಗೆ :** ೧. ನಿಸ್ಸೀಳಭೇದವಾದ ಕೊಂಡಾಟದನಂತಸೌಖ್ಯಮನೆ ಮೆಚ್ಚದ ಮೆಚ್ಚುಗೆಯೊಳ್ ತೊಡರ್ಚು . . . ಜಿನೇಶ್ವರಾ (ಶಂಬಾಪು. ೫-೦೦). **ಮೆಚ್ಚಿಗೆ :** ೧. ಅವರು ತಮ್ಮ ಸರಸಸಜ್ಜನಿಕೆಗಳಿಂದ ಎಲ್ಲರ ಮೆಚ್ಚಿಗೆಯನ್ನೂ ಗಳಿಸಿದ್ದಾರೆ (ಲೂಹಿ). 'ಮೆಚ್ಚಿಕೆ' ಪರಾ.
[ಮೆಚ್ಚು$_1$ +— ಗೆ./ತುಳು. ಮೆಚ್ಚಿಗೆ ; ತೆಲು. ಮಚ್ಚಿಗ]

**ಮೆಚ್ಚುಗೊಡು,** ಮುಚ್ಚುಗುಡು, **ಮುಚ್ಚುಗೊಡು,** **ಮೆಚ್ಚುಗುಡು** (ಕ್ರಿ). ಬಹುಮಾನವನ್ನು ಕೊಡು ; ಉಡುಗೊರೆಯನ್ನು ನೀಡು: ಬಿನ್ನಪಂಗೆಯ್ದು ಬೇಂಟೆಯಾತಂಗೆ ವ್ಯಾಗ ವ್ಯಾಯಾಮ ಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು (ಶಂಶಬಾ. ೫-೯೭ ವ) ; ಎನ್ನ ಪೆಂಡತಿಯೇನಂ ಪಡೆವಳೆಂದು ಬೆಸಗೊಂಡೊಡೆ ಗಂಡುಗೂಸಂ ಪಡೆವಳೆಂದು ಪೇಟ್ದೊಡೆ ಕೇಳ್ದು ಭಟ್ಟಂಗೆ ಮೆಚ್ಚುಗೊಟ್ಟು (ಶಂಕಶಂ. ೦೭೭-೨೨) ; ಮನವೊಲಿದು ಬೇಡಿದುದ ಮೆಚ್ಚುಗೊಡುವೆ (ಸೌಂದರ್ಯ. ೫-೨೫). **ಮುಚ್ಚುಗುಡು :** 'ಮುಚ್ಚುಗುಡಿಸು' ಪರಾ. **ಮುಚ್ಚುಗೊಡು :** ಆಕೆಗಳಾಡಿದಾಟಮನಿಂದ್ರಂ ನೋಡಿ ಮಚ್ಚಿ ಮುಚ್ಚುಗೊಟ್ಟುಪಸಂಹರಿಸಿ (ಬಂತಿಶು. ೭-೩೯ ವ) ; ಒಸಗೆವಾತಂ ಪೇಳ್ದವಂಗೆ ಮುಚ್ಚುಗೊಟ್ಟು (ಕಾದಂಪೂ. ೯೨೬) ; ಮುಚ್ಚುಗೊಟ್ಟಪುದೆಂಬ ಮಾಳ್ಕೆಯಿಂ . . .ಕರ್ಣಪೂರಂ ಜಗುಳ್ದು ಬೀಳುತ್ತಿರೆ (ರಾಜಶೇ. ೭-೦೭ ವ). **ಮೆಚ್ಚುಗುಡು:** ನೆಗಟ್ದಿಂದಾದ್ಯಮರೌಘಮೋಲಗಕೆ ವಂದು . . . ಮೆಚ್ಚುಗುಡಲ್ಕೊಂಡು ಮಹಾಪ್ರಸಾದಮೆನುತಿರ್ಪ ವಿಶ್ವೇಶ್ವರಾಸ್ಥಾನದೊಳ್ (ಜಗಬಿ. ೧೦-೭೭); ವಿಷ್ಣು ಒಪ್ಪುವನು ಮೆಚ್ಚುಗುಡುವನು (ನತೆದಾ. 1, ೯೯೦). [ಮೆಚ್ಚು$_2$ + ಕೊಡು$_1$]

**ಮೆಚ್ಚುಗೊಳ್** (ಕ್ರಿ). ಬಹುಮಾನವನ್ನು ಪಡೆ; ಉಡುಗೊರೆಯನ್ನು ಹೊಂದು : ನಿಚ್ಚಂ ಮೆಚ್ಚುಗೊಳ್ವೆಂದ್ರನ ಕೈಯೊಳ್ (ಆದಿಪು. ೯-೦೮) ; ಬೇಗಂ ಪರಿದು ಪೋಗಿ ಪರಮೋತ್ಸವದಿಂದೆ ಬಿನ್ನವಿಪ ಜನಂ ಕಾದಂಬರಿಯುಂ ಮೆಚ್ಚುಗೊಳ್ಳದಿರ್ಕುಮೆ ಬಿರಿದುಂ (ಕಾದಂಬ. ೫೦೯).
[ಮೆಚ್ಚು$_2$ + ಕೊಳ್$_1$]

**ಮೆಚ್ಚುದೋಱು** (ಕ್ರಿ). ಪ್ರೀತಿಯನ್ನು ತೋರು : ಕಡೆಗಣ್ಣೊಳ್ ಮಾತಾಡುವುದೆಡೆನುಡಿಯೊಳ್ ಮೆ[ಶಾಕಾಂ: ಮು]ಚ್ಚುದೋರ್ಪುದು . . . ಇದುವೆ ವೇಶ್ಯಾಧರ್ಮಂ (ದಶಕು. ೮-೨೧). [ಮೆಚ್ಚು$_2$ + ತೋಱು]

**ಮೆಚ್ಚುಮದ್ದು,** ಮುಚ್ಚುಮದ್ದು (ನಾ). ಪ್ರೀತಿಯಿಲ್ಲದ ವ್ಯಕ್ತಿಯಲ್ಲಿ ಪ್ರೀತಿಯು ಹುಟ್ಟುವಂತೆ ಮಾಡುವುದೆಂದು ನಂಬಲಾದ ಔಷಧಿ : ವಶೀಕರಣದ ಮದ್ದು : ಇದೊಂದು ಮೆಚ್ಚುಮದ್ದು . . . ಇದಂ ನಿನ್ನ ಗಂಡನಿಗೆ ಊಟದಲ್ಲಿಯಿಕ್ಕು (ಶುಕಸ. ೦೨೫). **ಮುಚ್ಚುಮದ್ದು :** ಮೋಹದ ಮುಚ್ಚುಮದ್ದೊಡಲಿಟ್ಟುದೆನೆ ಸತಿ ಮೆಚ್ಚಿ (ಸಾಸ್ಯಶಾ. ೩೨-೩೦); ಮುಚ್ಚುಮದ್ದು ಎಂದು ಕೊಟ್ಟಿದ್ದು ಹುಚ್ಚುಮದ್ದಾಯಿತು (ಗಾದೆ).
[ ಮೆಚ್ಚು$_2$ + ಮದ್ದು ( < ಮರ್ದು ) ]

**ಮೆಚ್ಚುವಡು** (ಕ್ರಿ). ತೃಪ್ತಿಪಡು ; ಆನಂದಿಸು : ದುರ್ಗುಣದೊಳನುದಿನಂ ಮೆಚ್ಚುವಟ್ಟಿರ್ದನಂ ಮಾಣಿಸಲೆನ್ನಂ ಬಿರ್ಕುಮೋ ಸದ್ವಚನಶತದೊಳಂ (ಕಬಿಕ. II, ೦೦೨, ಅರ್ಧೇಂದು ಮಾಳೀಕಾರ). [ಮೆಚ್ಚು$_2$ + ಪಡು$_1$]

**ಮೆಚ್ಚುವಡೆ,** ಮುಚ್ಚುವಡೆ (ಕ್ರಿ). ೧. ಪ್ರೀತಿಯನ್ನು ಹೊಂದು ; ಮೆಚ್ಚಿಗೆ ಹೊಂದು : ಸಂಪಗೆಯಲರ್ ಸುರಹೊನ್ನೆಯ ಪೂಗಳೆಂಬಿವಂ ಮುರರಿಪುಗಿತ್ತು ಮೆಚ್ಚುವಡೆಮುತ್ಸವದಿಂ ನುಡಿದಂ ಪ್ರಿಯೋಕ್ತಿಯುಂ (ಜಗಬಿ. ೦೯-೯೯): ಕಿಚ್ಚುಗಣ್ಣನ ತಪವಳಿವುದು ಪೂಗೋಲೊಳೆಚ್ಚು ಮನ್ಮಥ ಪೀಡಿಸಲು ಮೆಚ್ಚುವಡೆದು ಪಾರ್ವತಿಯೊಳು ರಮಿಸಲು (ಪೋಹಕ. ೫-೦೮). ೨. ಬಹುಮಾನವನ್ನು ಪಡೆ, – ಹೊಂದು : ಕರಮೊಸೆದು ಬೇಡಿಕೊಳ್ಳೆಂದರಸಂ ದಯೆವೆರಸು ನುಡಿಯೆ ಬಲಿಯೆಂದಂ ಭಾಸುರತೇಜ ಮೆಚ್ಚುವಡೆದೆನದಿರಲಿಂ ಭಂಡಾರದೊಳ್ ಜಗತ್ಪ್ರಥಿತಯಶಾ (ಸೇಬುಕು. ೫-೦೧). ೩. ಕಾಣಿಕೆಯಾಗಿ ಪಡೆ ; ಬಹುಮಾನವಾಗಿ ಹೊಂದು : ತನ್ನ ಮನಮಂ ಮುನ್ನಮೆ ಮೆಚ್ಚುವಡೆದ ಬೇಚರಚರಂಗೆ ನಿಜಹೃದಯದಾನ ಪೌನರುಕ್ತ್ಯಮಂ ಮಾಡಲಿಚ್ಛೈಸಿ (ವರ್ಧಪು. ೪-೬೫ ವ). **ಮುಚ್ಚುವಡೆ** ೨. ಇಚ್ಚೆಗಾರ್ತಿ ಪಚ್ಚೆವಿಲ್ಲರಿಂ ಮುಚ್ಚುವಡೆದಚ್ಚರಿ ಮಿಗೆ ತಳರ್ದೊರ್ಚ್ಚೀರೆ ಗಣ್ಣ ಪೆರ್ಚಿನಚ್ಚರಿಯರಿಂ (ರಾಜಶೇ. ೦-೦೩೫ವ). [ಮೆಚ್ಚು$_2$ + ಪಡೆ$_1$]

**ಮೆಚ್ಚುವಣಿಗೆ,** ಮೆಚ್ಚವಣಿಗೆ (ನಾ). ಮೆಚ್ಚಿಗೆಯನ್ನು ಹೊಂದಿರುವುದು; ಪ್ರೀತಿಪಾತ್ರವಾಗುವುದು : "ಮೆಚ್ಚುವಣಿಗೆಯುಂ ಮೆಚ್ಚನುಳ್ಳುದಕ್ಕರ್ಥ" (ಶಬ್ದಮಂ. ೫೭) ; ಮುಳಿಸಿನ ಮೋಹಿನ ಗಂಡಮಚ್ಚರದ ಮೆಚ್ಚುವಣಿಗೆಯಂಕಕಾಱರ್ . . . ಒರ್ವರೊರ್ವರೊಳ್ ಕಾದೆ (ಶಂಶಬಾ. ೦೨-೭೭ ವ). **ಮೆಚ್ಚವಣಿಗೆ :** "ಮೆಚ್ಚವಣಿಗೆ = ಮೆಚ್ಚನುಳ್ಳುದು" (ಶಮರ. ಶಂ. ೨) ; ಓಲಗವುರುಡಿಲ್ಲ ಮೆಚ್ಚವಣಿಗಿಲ್ಲ ಕರಂ ಮುಳಿಸಿಲ್ಲ ಕಾಯ್ದು ಕೆಮ್ಮಗೆ ಬೞಿಸಂದು ಕೊಂದಪನಕಾರಣದಿಂ ಮೋಱಿಯೋ ಮನೋಭವಾ (ಆದಿಪು. ೦೨-೩೩) ; ಪೆಱವುಂ ಕಚ್ಚಕಳಿಗಳ ತೊಡರ್ಪಿನ ಮೆಚ್ಚವಣಿಗೆಯಂಕಮಂ ಮಹೀಶಂ ನೋೞ್ಪಂ (ಕಾವ್ಯಾವ. ೯೯೮) ; ಕೆಲರ್ ನುಡಿಪಳಿಗಳಂ ಪೊಗೞಿಸುತ್ತ[ಂ] ಮೆಚ್ಚವಣಿಗೆಯವರಂ ತೆಗೞಿಸುತ್ತಮಿರ್ದರ್ (ಬಂಹಂ. ೦೫-೮೦ ವ). [ ಮೆಚ್ಚು$_1$ + – ವಣಿಗೆ ]

**ಮೆಚ್ಚುವೆಣ್** (ನಾ). ಒಲಿದ ಹೆಣ್ಣು : ಮಚ್ಚರಮನತಿರೂಪಿನಿಂದ ರತಿಯೊಳ್ಮಾಳ್ಪ ಮೆಚ್ಚುವೆಂಗಳ ಮೋಹಮೇ ಮುಕ್ತಿಯಲ್ಲವೇ ಭಾವಿಸಲ್ (ಸಮ್ಯಕೌ. ೩-೭). [ ಮೆಚ್ಚು$_1$ + ಪೆಣ್ ]

**ಮೆಚ್ಚುವೇೞ್** (ಕ್ರಿ). ಇಷ್ಟವಾದುದನ್ನು ಹೇಳು ; ಬಯಸಿದುದನ್ನು ತಿಳಿಸು: ಮೆಚ್ಚುವೇೞಾಱಾನೀಯಾಶ್ವೋತ್ಕರಂ ಬಾೞ್ತಿಯೊ ಮಣಿನಿಚಯಂ ಬಾೞ್ತಿಯೋ ಪೇೞಿಮೆಂದಾ ದೀನಾನಾಥರ್ಗೆ . . . ಧರ್ಮಜಂ ಸೂಱೆಗೊಟ್ಟಂ (ಶಂಶಬಾ. ೭-೯೦). [ಮೆಚ್ಚು$_2$ + ಪೇೞ್]

**ಮೆಚ್ಚೋಲೆ** (ನಾ): ಹೊಗಳಿಕೆಯನ್ನು ವ್ಯಕ್ತಪಡಿಸಿದ ಪತ್ರ; ಪ್ರಶಸ್ತಿಪತ್ರ : ಕೊಟ್ಟುಕೋ ನಿನಗೆ ನೀ ನೂರು ಮೆಚ್ಚೋಲೆ (ಕಲ್ಯಾಣ. ೩೭-೯).
[ಮೆಚ್ಚು$_2$ + ಓಲೆ]

**ಮೆಟಕಿ** ' ಮುಡಕಿ ' ನೋ.

**ಮೆಟಗುಳಿಹಂಬು** (ನಾ). ಒಂದು ಬಗೆಯ ಬಳ್ಳಿ : (ಪ್ಯಕಿಗ. ೨೭-೪೮೫).
[ಮೆಟಗುಳಿ$_0$ + ಹಂಬು$_2$ (< ಪರಪು$_2$)]

**ಮೆಟರು,** ಮೆಟರೆ, ಮೆಟ್ಟರೆ, ಮೆಟ್ರೆ, ಮೆಡರು (ನಾ). ಕುತ್ತಿಗೆಯ ಮುಂಭಾಗ; ಗಂಟಲು : 'ಮೆಟರುಗಂಟು', 'ಮೆಟರುಗಟ್ಟು' ಪರಾ. **ಮೆಟರೆ :** ಮುಂಗತ್ತು. ಕೊರಲು. ಮುಂಗೊರಲು. ಮೆಟರೆ. ಗೋಣು. ಗೋನಾಳಿ (Throat. ೩೦೯೩). **ಮೆಟ್ಟರೆ :** ಅವನ ಜುಟ್ಟನ್ನು ಹಿಡಿದು ನೆಲದ ಮೇಲೆ ಕುಕ್ಕಿ ಹಾಕಿ, ಮೆಟ್ಟರೆ ಮಿಸುಕಿ. ಕತ್ತು, ಎದೆ. ಕಾಲು ಎಲ್ಲೆಂದರೆ ಅಲ್ಲಿ ಹೊಡೆದನು (ವತಶಾ. ೩೦೭). **ಮೆಟ್ರೆ :** ಮೊನ್ನೆ ಯಾರೋ ಅವನನ್ನು ಮೆಟ್ರೆ ಹಿಸುಕಿ ಸಾಯಿಸಿಬಿಟ್ಟರು (ಲೂಹಿ). 'ಮೆಟ್ರೆಗಟ್ಟು' ಪರಾ. **ಮೆಡರು :** ' ಮೆಡರುಗಟ್ಟು ' ಪರಾ. [ದೇ.॥ ತಮಿ. ಮಿಟರು, ಮಿಟಲ; ಮಲ. ಮಿಟಱು; ತೆಲು. ಮೆಡ = ಕುತ್ತಿಗೆ]

**ಮೆಟರುಗಂಟು** (ನಾ). ಒಂದು ಬಗೆಯ ಗಂಟಲುರೋಗ; ಗದ್ದಕಟ್ಟು : ಪಾಂದಾಗ್ನಿಯವರು. . . ಕುಷ್ಠರೋಗದವರು. ಮೆಟರುಗಂಟಿನ ರೋಗ

ದವರು. . . ಇವರಿಷ್ಟೂ ವಮನಯೋಗ್ಯರೆಂದರಿವುದು (ಸಳಕ್ಕ. ೨೫). 'ಮೆಟರುಗಟ್ಟು' ಪರಾ. [ಮೆಟರು + ಗಂಟು]

**ಮೆಟರುಗಟ್ಟು, ಮೆಟ್ರೆಕಟ್ಟು, ಮೆಟ್ರೆಗಟ್ಟು, ಮೆಡರುಗಟ್ಟು** (ನಾ). ಗಂಟಲಿನ ನಾಳಗಳು ಊದಿಕೊಳ್ಳುವ ಒಂದು ಬಗೆಯ ರೋಗ; ಗದ್ದಕಟ್ಟು : ಮಂಡೆಯ ನೋವು ಕಾಣಿಸಿ, ಮೆಟರುಗಟ್ಟು (?), ಮೈಯುರಿತವುಂಟಾಗಿ ಅಜ್ಞಾನವು, ಶರೀರದಲ್ಲಿ ಕಂಪನವು ಪುಟ್ಟಿ, ಜ್ವರವು . . . ತಾಪವು, ಕಳವಳವು ಉಂಟಾಗಿರ್ಪುದೆ ಕಂಠಕುಬ್ಜ ಸನ್ನಿಪಾತವೆಂದರಿವುದು (ಸಳಕ್ಕ. ೦೩೯). **ಮೆಟ್ರೆಕಟ್ಟು** : ನರಡೀರೋಗ, ಚಪ್ಪರೋಗ, ಮೆಟ್ರೆಕಟ್ಟು ಮುಂತಾದ ರೋಗಗಳು (ಗ್ರಾಮಶಾ. ೦೨೦). **ಮೆಟ್ರೆಗಟ್ಟು**: (೪). **ಮೆಡರುಗಟ್ಟು**: ಕುಷ್ಠರೋಗದಲ್ಲಿ, ಮೆಡರುಗಟ್ಟಿನಲ್ಲಿ. . . ವಮನಕ್ರಿಯೆ ಮಾಡಿಸುವುದು (ವೈದ್ಯಶಾ. I, ೩೦). 'ಮೆಟರುಗಂಟು' ಪರಾ. [ಮೆಟರು + ಕಟ್ಟು$_2$]

**ಮೆಟರೆ** ' ಮೆಟರು ' ನೋ.

**ಮೆಟ್ಟಕ್ಕಿ** (ನಾ). ಮದುವೆಯ ಸಮಯದಲ್ಲಿ ವಧೂವರರು ಮೆಟ್ಟಿ ನಿಲ್ಲಲು ಬಿದಿರಿನ ತಟ್ಟೆಯಲ್ಲಿರಿಸಿದ ಅಕ್ಕಿ : ಚಂದ್ರಕಾತಂಡುಲವೋ ಎನೆ ತೊಳಗಿ ತೋರ್ಪ ಮೆಟ್ಟಕ್ಕಿಗಳಂ (ಗಿರಿ. ೦೮-೯೫); ತರುಣಿ ಸಹಿತ ಕುಮಾರ ಮಣಿವಿಸ್ಫುರಿತ ಮೆಟ್ಟಕ್ಕಿಯನು ಮೆಟ್ಟಿಸೆ (ಕೀರ್ತಿಂಕ. ೯-೩೭) ; ಮೆಟ್ಟಕ್ಕಿಯ ಮೇಲೆ ನಿಲಿಸಿ ಶ್ರೇಷ್ಠರು ಮಂಗಳಾಷ್ಟಕದಿ ನಿರೀಕ್ಷಣೆಗೊಟ್ಟರು ದಂಪತಿಗಳಿಗೆ (ಮೋಹತ. ೩-೬೪) ; ಕಾಂಡಪಟದ ಮುಂದೆ ರಜತಫಲಕದ ಮೇಲೆ ಹರವಿದ್ದ ಮೆಟ್ಟಕ್ಕಿಯ ಮೇಲೆ ಬಂದು ನಿಂತರು (ಶಾಂತಲಾ. ೦೦೬).

[ ಮೆಟ್ಟು$_1$ + ಅಕ್ಕಿ$_1$ ]

**ಮೆಟ್ಟಡಿ** (ನಾ). ೧. ಎಕ್ಕಡ ; ಪಾದರಕ್ಷೆ : ಮೆಟ್ಟಡಿಯಂ ಕಳೆದು ಬಟ್ಟೆಯಂ ತೊಲಗಿ ಸಾಷ್ಟಾಂಗವೆಱಗಿ (ಮೋಕ್ಷಶಾ. ೩೦-೦೨೬) ; ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ (ಮಾಧೂಳ. ೯೬೫-೦೭೦೦) ; ಅಟ್ಟೆಯ ದುರ್ಗುಣ ಕೆಟ್ಟು ಮೆಟ್ಟಡಿಯುವರೆಗೆ ಮೆಟ್ಟಿಸ ಬಂದೆ (ಸರ್ವ. ೦೦೨-೫೫೯). ೨. ಪಾವಟಿಗೆ ; ಮೆಟ್ಟಲು : ತಟತಟನೆ ಪೊಳೆದು ಬಿತ್ತರಂಬಡೆದ ಬಿಡುಗಲ್ಲ ಸುತ್ತಣ ಮೆಟ್ಟಡಿಯಿಂ (ರಾಮಾಶ್ವ. ೫೨-೦೯) ; ಆ ಬೆಳ್ಳಿಯ ಮೆಟ್ಟಡಿಗಳನ್ನೇ ಕಳಚಿಕೊಂಡು ಹೋಗಿದ್ದಾರೆ (ಬಟ್ಟಿಂ. ೦೦೬-೨೫).

[ ಮೆಟ್ಟು$_2$ + ಅಡಿ$_1$ ]

**ಮೆಟ್ಟರೆ** ' ಮೆಟರು ' ನೋ.

**ಮೆಟ್ಟಲಿ** ' ಮಿಟಲಿ ' ನೋ.

**ಮೆಟ್ಟಲಿಗೆ** (ನಾ). ಪಾವಟಿಗೆ ; ಮೆಟ್ಟಲು ; ಸೋಪಾನ : ಹೆದರಿಸುವ ಹಿರಿದಾದ ಬಂಡೆಗಲ್ಲುಗಳ ಮೆಟ್ಟಲಿಗೆಗಳು (ಕಗದ್ಯ. ೮೬). [ < ಮೆಟ್ಟಲು ]

**ಮೆಟ್ಟಲು, ಮೆಟ್ಲು** (ನಾ). ೧. ಪಾವಟಿಗೆ ; ಸೋಪಾನ : ಐದಾರು ಮೆಟ್ಟಲುಗಳನ್ನು ಒಟ್ಟೊಟ್ಟಿಗೆ ಹಾರಿ ಮಹಡಿಯನ್ನು ಹತ್ತಿದೆ (ರಾಮಾವ. ೦೦೭) ; ಇಬ್ಬರೂ ಅಲ್ಲಿಯೇ ಇದ್ದ ಒಂದು ಮೆಟ್ಟಲಿನ ಮೇಲೆ ಕುಳಿತವು (ಅರಹೂ. ೯೩). ೨. ಹಂತ ; ಮಜಲು ; ಘಟ್ಟ : ಕರ್ಮಯೋಗವು ಜ್ಞಾನಯೋಗದಿಂದ ಪಡೆಯಬಹುದಾದ ಸಾಕ್ಷಾತ್ಕಾರಕ್ಕೆ ಒಂದು ಮೆಟ್ಟಲು ಮಾತ್ರ (ಕಕ್ಕಪ್ರಾ. ೩೩೫) ; ಕರ್ಮ ನಿನ್ನನು ಕಟ್ಟಿ ಕೆಡಹಲದನೇ ಮೆಟ್ಟಿ ಮುಂದೆ ಮೆಟ್ಟಲನೇರು ! (ಶಾಂತಿಕ. ೯೯-೩). **ಮೆಟ್ಲು** : ೧. ದೂರಕ್ಕೇ ಆ ಸೌಧದ ಮೆಟ್ಲುಗಳು ಸಾಲಾಗಿ ಕಾಣುತ್ತವೆ (ಮೂಡ). ' ಮೆಟ್ಟಿಲು ' ಪರಾ. [ ಮೆಟ್ಟು$_1$ + — ಅಲು ( < — ಅಲ್$_2$ ) ]

**ಮೆಟ್ಟಾಡು** (ಕ್ರಿ). (ಪ್ರಾಣಿ, ಪಕ್ಷಿ ಮೊದಲಾದುವು) ಸಂಭೋಗಿಸು : ಹೆಣ್ಣುಹಂಸೆಯು ಮೆಟ್ಟಾಡುವ ರಾಜಹಂಸೆಯರ ರತಿಕ್ರೀಡೆಯಂ ನೋಡೆಂದು ತೋರಿ (ಸೌಗಂಧಿ. ೫೩೦-೫). [ ಮೆಟ್ಟು$_1$ + ಆಡು$_1$ ]

**ಮೆಟ್ಟುಗಾಲು** ' ಮೆಟ್ಟುಗಾಲು ' ನೋ.

**ಮೆಟ್ಟಿಕೆ** (ನಾ). ಮೆಟ್ಟಿಲು ; ಸೋಪಾನ : ಕಟ್ಟಿಯ ಕಟ್ಟದರು ಭವ ಸಾಗರಕೆ . . . ಮೆಟ್ಟಿಕೆಯಿಂದಲಿ ದಾಟಿ ಪೋದರು (ಶಿವಾಕ್ಯ. ೦೯೯-೦) : ಹಾವುಗೆಯಂ ಮೆಟ್ಟಿ ಮೆಟ್ಟಿಕೆಗಳನೇರಿ ಬರುವಾಗ (ಸೌಗಂಧಿ. ೩೯೦-೫).

[ಮೆಟ್ಟು$_1$ + — ಇಕೆ ]

**ಮೆಟ್ಟಿಗೆ** ' ಮೆಟ್ಟುಗೆ ' ನೋ.

**ಮೆಟ್ಟಿಲು** (ನಾ). ೧. ಪಾವಟಿಗೆ; ಸೋಪಾನ : ಬೆಟ್ಟದ ಮೆಟ್ಟಿಲುಂಗಳಂ ಮೆಟ್ಟಿ ಮುನ್ನಡಿಯಿಟ್ಟು ಮಾಂಗಿರೀಶನ ನೆನೆದು ಕರಯುಗವ ಮುಡಿಯ ಮೇಲ್ಮುಗಿದಿಟ್ಟ ಭರತನಂ ಶ್ರೀರಾಮನತಿದೂರದೊಳ್ ಕಂಡನು (ಚರಿತ. ೯-೦೨೬). ೨. ಹಂತ ; ಘಟ್ಟ: ಆದರೂ ಅಂಕಗಳೇನು? ಅವುಗಳೊಂದು ಸಾಧನವಷ್ಟೆ! ಮೇಲೆ ಮೇಲೆ ಹೋಗಲು ಮೆಟ್ಟಿಲುಗಳು (ಕೊಳಲ. ೭). 'ಮೆಟ್ಟಲು' ಪರಾ.

**ಮೆಟ್ಟಿಲ ಮಂಚ**= ಪಾವಟಿಗೆಗಳಿರುವ ಎತ್ತರವಾದ ಮಂಚ : ಆ ಮೆಟ್ಟಿಲಮಂಚಕ್ಕೆ ಇಲ್ಲಿಯ ಉಪಸ್ಕರ ಅಲಂಕಾರಗಳಿಗೆ (ಮಂತ್ರಕ. ೨೫-೦೦).

[ಮೆಟ್ಟು$_1$ + — ಇಲು$_2$ (< — ಇಲ್$_3$)]

**ಮೆಟ್ಟಿಸು** (ಕ್ರಿ). ೧. ಕಾಲಿನಿಂದ ತುಳಿಯುವಂತೆ ಮಾಡು ; ತುಳಿಸು: ಪಸರಿಸಿ ಪಂದಲೆಯಂ ಮೆಟ್ಟಿಸಿ ವೈರಿಯ ಫಲ್ಲ ಪಣೆಗೆಯಿಂ ಬಾರ್ಚಿ . . . ಅವನ ಕರುಳ್ಗಳೆ ಪೊಸವಾಸಿಗವಾಗೆ ಕೃಷ್ಣನಂ ಮುಡಿಯಿಸಿದಂ (ಹಂಪಿಶಾ. ೦೨-೦೫೫); ಕರಿಘಟೆಯಿಂದಿಕ್ಕಿ ಮೆಟ್ಟಿಸವಸರ್ದೆಯಂ (ಚಕೋರವ್ಯ. ೬-೦೯೩); ಆ ಹುಲ್ಲ ಒಕ್ಕಿ ಮೆಟ್ಟಿಸಿ ತೂರುವಾಗ ಹೊಟ್ಟು ಕಳೆದು ಭತ್ತ ನಿಂದು ಹುಲ್ಲು ಹೋರೆಗಟ್ಟಿತ್ತು (ಮೋಕ್ಷವಾ. ೦೯೫-೫೫೩); ಅರಗಂ . . . ಗುಗ್ಗುಲವುಂ ಖುರಮಂ ಪೂಸುಗೆ ಬಟೀಕಾ ಖುರಮಂ ಮೆಟ್ಟಿಸುಗೆ ಕಾಸಿ ತಂದಿಟ್ಟಿಗೆಯಂ (ಅಶ್ವಶಾ. ೦೫-೩). ೨. (ನರ್ತನದಲ್ಲಿ) ಹೆಜ್ಜೆ ಇಡುವಂತೆ ಮಾಡು; ಹೆಜ್ಜೆಯಿಡಿಸು: ಅಮರರಾಜನೊಡನೆ ಮಹೋತ್ಸವದಿಂ ತಾಳಲಯಕ್ರಮಕೆ ವಿಚಿತ್ರಂ ಮೆಟ್ಟಿಸುತ್ತುಂ (ಅಶ್ವ. ೫-೩೭). ೩. (ಪಾದರಕ್ಷೆಯನ್ನು) ಕಾಲಿಗೆ ತೊಡಿಸು; ಕಾಲಿನಲ್ಲಿ ಧರಿಸುವಂತೆ ಮಾಡು : ಅಟ್ಟೆಯ ದುರ್ಗುಣ ಕೆಟ್ಟು ಮೆಟ್ಟಡಿಯವರೆಗೆ ಮೆಟ್ಟಿಸ ಬಂದೆ ಮೆಟ್ಟಡಿಯು ತಪ್ಪಲ ಕಾಯದೆ ಮೆಟ್ಟಡಿಯ ಬಟ್ಟೆಯು ನೋಡಿಕೊಳ್ಳಿ (ಸರ್ವ. ೦೦೨-೫೫೯); ರತ್ನಮಯದ ಹಾವುಗೆಯ ಮೆಟ್ಟಿಸಿದರಚ್ಯುತಗೆ (ಮೋಹತ. ೯೨-೩೬).

[ಮೆಟ್ಟು$_1$ + — ಇಸು$_3$]

**ಮೆಟ್ಟು$_1$** (ಕ್ರಿ). ೧. ಹೆಜ್ಜೆ ಇಡು ; ನಡೆ : "ಮೆಟ್ಟು — ಪದವಿನ್ಯಾಸೇ, ಪಾದರಕ್ಷೇ ಚ" (ಶಮಂ); ದೇವಾಂಗದ ಸಕಳವಟ್ಟೆಗಳುಮಂ ಮೆಟ್ಟುವೆಡೆಗಳೊಳೆಲ್ಲ ಪಾಸಿ (ಅಂಶು. ೪-೩೯ ವ); ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯಾ (ಬಸವಾದಿ. ೭. ೦೦೨-೨೭೭); ಅಗಿದು ಮೆಟ್ಟಿದಡವನಿ ಪಡುವಲು ನೆಗೆದುದಡರಿದು ಮುಂದೆ ಮೆಟ್ಟಲು ಚಿಗಿದುದಿಳೆ ಮೂಡಲು ಮಹಾಗಜವೈದ ಶಾಹವವ (ಕುಮಾರವ್ಯಾ. ೩-೯). ೨. ಕಾಲಿನಿಂದ ತುಳಿ; ಪಾದದಿಂದ ಒತ್ತು —ಅದುಮು : ಬಳಿಯ ಪೇಱನಾನೆ ಮೆಟ್ಟಿದಂತೆ ನುಚ್ಚುನೂಱಪ್ಪಿನಮು ಮಂಕಿ (ಹಂಪಿಶಾ. ೮-೭೬ ವ); ಬಲಿಕುಸುಮಂಗಳೊಳ್ ನಲಿವ ಭೃಂಗಮನಂಗನೆ ನೋಯೆ ಮೆಟ್ಟುಗುಂ . . . ಪೇಟೆನೆ ನೂಪುರಂ ತಗುಳ್ದಲಿಯೆ ಲತಾಂಗಿ ಗರ್ಭಭರದಿಂ ಸುಟೀವಳ್ ನವರತ್ನರಂಗದೊಳ್ (ಶಿಶುಮು. ೯-೦೯); ಸಜ್ಜನೆ ಸೀಳ್ದಿಗ್ಗಜದ ಮಂಡೆಯಮೆಟ್ಟಿ (ಮೋಹತ. ೦೨-೦೦). ೩. ಪಾದರಕ್ಷೆಯನ್ನು ಕಾಲಿನಲ್ಲಿ ಧರಿಸಿಕೊಳ್ಳು, — ಹಾಕಿಕೊಳ್ಳು : ದುಕೂಲಾಂಬರಮನುಟ್ಟು ಪೊಸವಾವುಗೆಯಂ ಮೆಟ್ಟಿ (ಹಂಪಿಶಾ. ೦೨-೦೦೬ ವ); ಪಳುಕಿನೊಳ್ಪಾವುಗೆಗಳಂ ಮೆಟ್ಟಿ (ಶಬ್ದಶಾ. ೨-೫೨); ವ್ಯಾಪಾರ ನಮಗಾಯಿತು . . . ಪರಮಪಾಪಿ ಕಲಿ ಎಂಬೊ ಪಾಪಾಸು ಮೆಟ್ಟಿ ದುರಾತ್ಮರಾದವರ ಎದೆ ಮೇಲೆ ನಡೆವಂಥ (ಪುರಂದ. ೨-೦೫-೦). ೪. ಕುಂದಣಿಸು; ಕೆಚ್ಚು : ಚಿನ್ನದ ಬಳೆಗಳಿಗೆ ಕೆಂಪು ಹರಳು ಮೆಟ್ಟಿದೆ (ಮೂಡ). ೫. ಸಸಿಯನ್ನು ಹಾಕು,— ನಾಟು:

ನಿನ್ನ ಮೆಟ್ಟಿದ ನಾಟಿಯ ಮೊನ್ನೆ ಮೇಪದ ಕಂಡೆ (ಸರ್ವಜ. ೬-೨೦). ೬. (ಪಕ್ಷಿ, ಪ್ರಾಣಿ ಮೊದಲಾದವು) ನೆರೆ; ಸಂಭೋಗಿಸು: 'ಮೆಟ್ಟಾಡು' ಪರಾ. ೭. (ನೆಲದ ಮೇಲೆ) ಕುಟ್ಟು: ಶಕುನಿ ಮುನ್ನೆ ತನ್ನ ಮಾಡಿದ ನಾಟ ಪಾಸಗೆಗಳನರಸಾಳಂತೆ ಕಣ್ಣಜಿಂದು ಮೆಟ್ಟಿ ಮಟ್ಟಮಜುಿದಿಕ್ಕುವಾಗಳ್ (ಕಂಕಶಾ. ೬-೭೦ ವ). ೮. (ಪಿಶಾಚಿ, ದೆವ್ವ ಮೊದಲಾದುವು) ಅಮರಿಕೊಳ್ಳು, ಹಿಡಿ: ಬಹಳ ದಿನದಿಂದ ಮೆಟ್ಟಿದ್ದ ದೆವ್ವವನ್ನು ಆ ದೇವಸ್ಥಾನದಲ್ಲಿ ಬಿಡಿಸಿಬಿಟ್ಟರು (ರೂಢಿ). ೯. ಲಿಖಿತವಾಗು; ಬರೆದಿರು: ಪಟ್ಟಿ ಮಂಚ ತಿರುವಿಟ್ಟರೆ ಫಣೆಯೊಳು ಮೆಟ್ಟಿದ ಭ್ರಮಣೆಯು ಬಿಟ್ಟೀತೇ (ಪುರಂದ. ೦-೦೩೬-೨). ೧೦. ನರ್ತನದ ಹೆಜ್ಜೆಯನ್ನು ಹಾಕು: ಅಂತೆ ಮೆಟ್ಟುವಳ್ ನೋಡಿದರೆಲ್ಲರಂ ಓಡಿದು ಮೆಟ್ಟಿದಳಿಟ್ಟಳಮಾಯ್ತು ದೇಸಿ (ಕಂಕಶಾ. ೭-೯೦); ಚತುರಿಂದಂ ಮೆಟ್ಟಿ ತೋರ್ಪಳೋ (ಅಶಕ. ೨-೯೩); ಅಚ್ಚರಸಿ . . . ಭೂಮಿಯನ್ನು ಮೆಟ್ಟದೆ ಮೆಟ್ಟುತಿರೆ ಜತಿಗೆ (ಶಾಳ್ವಭಾ. ೩೨-೩೦). ೧೧. (ಆಲಂ) ಸೋಲಿಸು; ಮರುಳಾಗಿಸು: ಅಂತೆ ಮೆಟ್ಟುವಳ್ ನೋಡಿವರೆಲ್ಲರಂ ಓಡಿದು ಮೆಟ್ಟಿದಳಿಟ್ಟಳವಾಯ್ತು ದೇಸಿ (ಕಂಕಶಾ. ೭-೯೦). ೧೨. ನಾಶಮಾಡು; ಧ್ವಂಸಗೊಳಿಸು: ಪೋಟ್ಟುರ ಮಿಥ್ಯಾತ್ವಪ್ರಮೂಢಸ್ಥಿರತರ ನೃಪನಾನ್ಮೆಟ್ಟಿ ಗನ್ಧೇಭಮಯ್ದಾನ್ . . . ಚರಿತಶ್ರೀನಾಮಧೇಯಪ್ರಭು ಮುನಿಪ್ರತಗಳ್ನೋಸ್ತು ಸೌಖ್ಯಸ್ಥನಾಯ್ದಾನ್ (ಎಕ. II, ೦೨-೩; 700).

**ಮೆಟ್ಟಿಕೊಳ್ಳು** = (ಗಾಳಿ, ಪಿಶಾಚಿ, ಗ್ರಹಚಾರ ಮೊದಲಾದುವು) ಅಮರು; ಹಿಡಿ: ಅವನಿಗೂ ಮೆಟ್ಟಿಕೊಂಡಿತು ಗ್ರಹಚಾರ (ಶಾರಿಮ. ೩೩); ಹಣ ಕೈಗೆ ಸೇರಿತೆಂದರೆ ಕ್ರೋಧ ಲೋಭ . . . ಮೆಟ್ಟಿಕೊಳ್ಳುತ್ತದೆ (ವಕಶಾ. ೩೯೭); ಸ್ತ್ರೀಪುರುಷರಿಗೆ ಮೆಟ್ಟಿಕೊಳ್ಳುವ ಗಾಳಿಯನ್ನು ಬಿಡಿಸುತ್ತಾನೆ (ಜೋಳದ. ೫೭). **ಮೆಟ್ಟಿಕ್ಕು** = (ಆಲಂ) ನಾಶಮಾಡು; ಹತ್ತಿಕ್ಕು: ನಾನು . . . ಶತ್ರುಗಳ ತಲೆಯನ್ನು ಮೆಟ್ಟಿಕ್ಕಿವೆ (ವಕಶಾ. ೩೦೦). **ಮೆಟ್ಟನಿಲು, ಮೆಟ್ಟನಿಲ್ಲು** = (ಆಲಂ) ಹತ್ತಿಕ್ಕು; ನಿಯಂತ್ರಿಸು: ಕಾಲಕರ್ಮವ ಮೆಟ್ಟನಿಲೆ ಭಗವಂತನೆನಿಸುವೆ (ಶುಭ್ವಾಚ. ೯-೬); ಬುದ್ಧಿಶಕ್ತಿಯನ್ನು ಮೆಟ್ಟನಿಲ್ಲುವ ಬೇರೊಂದು ಬಗೆಯ ಮನೋವೃತ್ತಿ ಬೇಕಾಗಬಹುದು (ಜೋಳಪ್ರ. ೯೨). **ಮೆಟ್ಟಿ ಬೀಳು** = (ಆಲಂ) ಬೆಚ್ಚಿ ಬೀಳು: ನಾನು ಮೆಟ್ಟಿಬಿದ್ದೆ. ನನ್ನ ಮನಸ್ಸಿನ ಆಳವನ್ನು ತಿಳಿದುಕೊಂಡಳೇ ಅವಳು? (ದೀಕಪ. ೨೯); ಅವನು ಮೆಟ್ಟಿ ಬಿದ್ದು ಹಣೆಹಣೆ ಗಟ್ಟಿಸಿಕೊಂಡನು (ಇಕ್ವಕ. ೩೩೨). [ದೇ. ತ ತಮಿ. ತೆಲು. ಮೆಟ್ಟು]

**ಮೆಟ್ಟು₂** (ನಾ). ೧. ತುಳಿಯುವಿಕೆ: ತುಳಿತ: ಚಿತ್ರಮಿದು ಜಗದೊಳಿತ್ತ ಮೆಟ್ಟಿತ್ತ ಚಪ್ಪಟಿಯೆಂಬ ನಾಣ್ನುಡಿಯನಭಿನಯಿಸುವಂತಾದುದು (ಕಂಶ್ರ. ೩೭-೭೯). ೨. ಪಾದರಕ್ಷೆ; ಚಪ್ಪಲಿ; ಕೆರ: "ಕೆರ್ಬನೊಳ್ ಮೆಟ್ಟು" (ಶಬ್ದಮಂ. ೯೯); ಮೆಟ್ಟಿನ ಹೊಟಿಗೆ ಕಣ್ಣಿಟ್ಟು ಸಾಧುಗಳನ್ನು ದೃಷ್ಟಿಸಿ ನೋಡಲರೆಕ್ಷಣ ಬಿಡರಮ್ಮ (ಪುರಂದ. ೨-೯೩-೯); ಚುಕ್ಕೆಗಳನು ಮೆಟ್ಟು ಮಾಡಿ ಬರುತಲಿಹಳು ತಾಯಿಯು (ಅರಳು. ೯೯೯-೦೯). ೩. ಒಂದು ಹೆಜ್ಜೆಯಷ್ಟು ಅಳತೆ; ಒಂದು ಪಾದದ ಪ್ರಮಾಣ: ಅಲ್ಲಿ ಬೆಳೆ ನೆಲನೊಂದು ಮೆಟ್ಟನೆಡೆಯುಂ ಬಿಡಲಿಲ್ಲದನೇಕಧಾನ್ಯಸಂಕುಳಬಹುವರ್ಣಪೂರ್ಣಕಣಿಶಾವಳಿಯುಂ ನವರತ್ನರಾಶಿಯುಂ ಬೆಳೆವಪೊಲಿರ್ಪುದು (ಅಸಂಪು. ೦-೭೬); ಧರಣಿಯೊಳು ನಿನಗೊಂದು ಮೆಟ್ಟು ಬಾರದು ಸಾರು (ಕುರಂಗ. ೭೨-೦೩); ಇದು ಮಹಾಪತ್ರೆರಡುಮೆಟ್ಟಿನಲ್ಲಿ ಅಳಿದು ಬಂದ ಕಂಭವಕ್ಕುಂ (ಕ್ಷೇತ್ರಗ. ೩೩-೦೭;) ಮೆಟ್ಟು ಮಿಸುಕದು ಕಡವಿನಲ್ಲಿ ನನ್ನನಿಲ್ಲಿಗೆ ನಸುಕಿನಲ್ಲಿ ತಂದು ಮುಟ್ಟಿಸಿದಂಬಿ ಎಲ್ಲಿ? (ಗೀಪಿಂ. ೫೯-೦೭). ೪. ನರ್ತನದಲ್ಲಿ ಇಡುವ ಹೆಜ್ಜೆ; ಪಾದವಿಕ್ಷೇಪ: ಲಸನ್ನೇತ್ರಂಗಳಂ ಕೂಡೆ ಬಂಚಿಸುತುಂ ಮೆಟ್ಟುವ ಮೆಟ್ಟಿನೊಳ್ಪು ಜನತಾನೇತ್ರಂಗಳಂ ನಾಚೆ ಚೆಲ್ವೆಸೆದತ್ತು . . . ದೇವಾಂಗನಾನರ್ತನಂ (ಅರಿಕ. ೬-೦೨೩). ೫. ಪಾವಟಿಗೆ; ಮೆಟ್ಟಲು; ಸೋಪಾನ: ಮೋಕ್ಷನಿಶ್ರೇಣಿಗಿವು ಮೆಟ್ಟಿನಿಸಿರ್ಪಪ್ಪತ್ತೆಂಟು ಮೂಲಗುಣಂಗಳುಮಂ (ರರ್ಮಾಪು. ೦-೭೬); ಒಡಹುಟ್ಟಿದವರೇ ದೇಹವನೊಯ್ದು ಸುಡುಗಾಡೊಳಿಟ್ಟು ಬರುವರ ಮಡದಿ ಮನೆಯ ಮೆಟ್ಟಿಳಿಯುಳು (ನಾಗಕು. ೩೨-೯೬); ಇದ್ದಾಗ ದಾನ ಧರ್ಮಂಗಳ ಮಾಡೋದು ಕೈವಲ್ಯಕೆ ಮೆಟ್ಟು (ಜಿರಾಳ್ಕ. ೯-೨). ೬. ಸ್ಥಳ; ಜಾಗ: ಆ ಗಾಯದ ಮೆಟ್ಟಿಗೆ ನನ್ನ ಉಟ್ಟ ದುಕೂಲ ಹರಿದು ತೊಯಿಸಿ ಕಟ್ಟಿದೆನು (ಕತಶ. ೦೯೦). 'ಗಂಡುಮೆಟ್ಟು' ಪರಾ. ೭. ಜಾಡು: ಹಾದಿ; ದಾರಿ: ಅನುಭವಿಸುವವರಿಗೇ ಅದರ ಮೆಟ್ಟು ಗೊತ್ತು (ಮೇಲಹು. ೫೯); 'ನೀನಲ್ಲದೆನಗಿಲ್ಲ' ಎನ್ನುವವರ ಮೆಟ್ಟು ಬೇರೆ (ಶಾಪಿಪ. ೦೩೯). ೮. ಕಾಲಿನ ಬೆರಳಿಗೆ ತೊಡುವ ಆಭರಣ; ಕಾಲುಂಗುರ (೯). 'ಮೆಂಟಿಕೆ' ಪರಾ. ೯. "ರಾಶಿಯನ್ನು ಮಾಡುವಾಗ ಮೇದವನ್ನು ತೂರಲು ಉಪಯೋಗಿಸುವ ಎತ್ತರವಾದ 'ತ್ರಿಪುಟಿಗೆ' (stand)" (ಶಬ್ದಚಾ. ೩೩೨ ಅಡಿಟಿ): ಮೂರು ಕಾಲಿನ ಮೆಟ್ಟು, ಮೂರು ಲಿಂಗಗಳೇನೊ ತೂರುವನು ಜೀವಿ, ಚಿಕ್ಕಳಿಯು ವಚನಗಳು ತೂರಿದಾ ರಾಶಿ ಶಿವಮಹಿಕ (ಶಬ್ದಚಾ. ೦೩೨). ೧೦. ವೀಣೆ ಮುಂತಾದ ತಂತೀವಾದ್ಯಗಳಲ್ಲಿ ಸ್ವರಸ್ಥಾನವನ್ನು ಗುರುತಿಸಲು ಅಳವಡಿಸಿರುವ ಮನೆ, – ಹಂತ: ಎಡಗೈಯೊಳಮರಿಸಿ ವೀಣೆಯನಾಂತು ಮೇಗಡೆ ಮೆಟ್ಟನೊಳು ಬೆರಳಾಡೆ (ಘಟಕ. ೦೦-೩); ಮೆಟ್ಟುಗಳ ಸರಿ ತಿದ್ದಿ ವೀಣೆಯ ಮುಟ್ಟುವಳು (ದೇವೀಮ. ೫-೭೬). ೧೧. [ನಾಟ್ಯ] ಹತ್ತುಬಗೆಯ ಅಡವುಗಳಲ್ಲಿ ಒಂದು: ಪ್ರಸಿದ್ಧ ನಾಟ್ಯಚಾರ್ಯರು ಈ ಅಡವುಗಳನ್ನು ಹತ್ತುವಿಧವಾಗಿ ವಿಂಗಡಿಸಿದ್ದಾರೆ: (೧) ತಟ್ಟು, (೨) ಮೆಟ್ಟು . . . (೧೦) ಸಪ್ಪೆ (ಅಭಾಪ್ನ. ೩೨). [< ಮೆಟ್ಟು₁./ತಮಿ. ತೆಲು. ಮೆಟ್ಟು]

**ಮೆಟ್ಟುಂಗುಟ** (ನಾ). (ಶಬ್ದವಾಗದಂತೆ ನಡೆಯಲು ಅಥವಾ ಎತ್ತರದಿಂದ ನೋಡಲು) ಉಂಗುಷ್ಟದ ಮೇಲೆ ನಿಲ್ಲುವಿಕೆ: ಮೆಟ್ಟುಂಗುಟದ ಮೆಲ್ಲಿತ್ತಾದ ಮೃದುಳಯಾನದಿಂದ ಬಂದು, ಅರೆನೋಟದಿಂದ ರಣಧೀರನನ್ನು ಕಂಡು, ಜವನಿಕೆಯು ಹಿಂದಕ್ಕೆ ತೇಲ್ದು ಹೋಗಿ, ಹುದುಗಿ ನಿಲ್ಲುವಳು (ಮಂಕ್ರಶ. ೦೦೦-೭). [ಮೆಟ್ಟು₁ + ಉಂಗುಟ]

**ಮೆಟ್ಟುಂಗುಡ್ಡೆ** (ನಾ). ಒಂದು ಸ್ಥಳದ ಹೆಸರು: ಸೊಗಿಲ್ಲವಳ್ಳವೆ ಗುಡ್ಡೆ [ಬಡ]ಗಣ[ದು]ತ್ತ ಮೆಟ್ಟುಂ[ಗು]ಡ್ಡೆ [ಮೊಳ್ಗ]ಜಿಗುಡ್ಡೆ (ಶಾಶಾ. XI-i, ೯-೩೭; 802). [ಮೆಟ್ಟು₁ + ಗುಡ್ಡೆ₁ (< ಗುಡ್ಡ₂)]

**ಮೆಟ್ಟುಕತ್ತಿ** 'ಮೆಟ್ಟುಗತ್ತಿ' ನೋ.

**ಮೆಟ್ಟುಕಲ್ಲು** 'ಮೆಟ್ಟುಗಲ್ಲು' ನೋ.

**ಮೆಟ್ಟುಗಟ್ಟೆ** (ನಾ). ಮೆಟ್ಟಲುಗಳ ಕಟ್ಟೆ; ಸೋಪಾನಕಟ್ಟೆ: ಈ ಉಪ್ಪರಿಗೆಗಳಲ್ಲಿ ಹೋಗಲಿಕ್ಕೆ . . . ಸುತ್ತಿರುಗುವ ಮೆಟ್ಟುಗಟ್ಟೆಗಳಿವೆ (ಮುಂಬಯಿ. ೬-೦೦೬); ತಿರುಗಿ ದೇವಾಲಯದ ಕಡೆಗೆ ಹೊರಟು ಬಂದು ಮೆಟ್ಟುಗಟ್ಟೆಯ ಮೇಲೆ ನಿಂತು . . . ಪ್ರಾರ್ಥನೆಗೆ ಸುರುವು ಮಾಡಿದನು (ಮೊಐಚಾ. ೩೬). [ಮೆಟ್ಟು₂ + ಕಟ್ಟೆ₁]

**ಮೆಟ್ಟುಗತ್ತಿ, ಮೆಟ್ಟುಕತ್ತಿ** (ನಾ). ಮೆಟ್ಟಿಕೊಂಡು ಕುಳಿತು (ತರಕಾರಿ ಮೊದಲಾದುವನ್ನು) ಕತ್ತರಿಸುವಂತೆ ಮಣೆಗೆ ಅಳವಡಿಸಿರುವ ಕತ್ತಿ, – ಈಳಿಗೆ: ಸಾಕಿಷ್ಟು ಸುಲಿದುದು ಬಿಡು ಮೆಟ್ಟುಗತ್ತಿಯ (ಕಂಪ್ರಶೀ. ೦೨೬-೯); ಅಂಗಳದಲ್ಲಿ ಮೆಟ್ಟುಗತ್ತಿಯ ಮೇಲೆ ಕುಳಿತು ಒಂದೊಂದಾಗಿ ಅಡಿಕೆಗಳನ್ನು ಚುಚ್ಚಿ ಸುಲಿಯತೊಡಗಿದರು (ಕಬ್ಬಿಜ. ೦೨೦). **ಮೆಟ್ಟುಕತ್ತಿ**: ಎಳಚಿತ್ತಾಯರು ಮೆಟ್ಟುಕತ್ತಿಯ ಮೇಲೆ ಕುಳಿತಿದ್ದರು (ಜಗುಳ. ೬೩); ಮೆಟ್ಟುಕತ್ತಿಯೊಂದನ್ನು ತಂದು ಅರ್ಧಹಣ್ಣಾದ ಪೇರ್ಲೆಹಣ್ಣನ್ನು ಹೆಚ್ಚಿ (ಜಾಳ್ವ. ೦೭೩). [ಮೆಟ್ಟು₁ + ಕತ್ತಿ]

(ಅಣಾಶ. ೩-೬-೨೩). **ಮೆಣಸಿಕೆ :** ೨. ಒಂದು ಬಗೆಯ ಸಸ್ಯ ಮತ್ತು ಅದರ ಬೇರು : ಮೆಣಸಿಕೆ ಕೃಷ್ಣನೀಲಿ ಕುಟಜಂ ನಿ(ಗಿ)ಡುಗೊಂಡೆಯೆನಿಪ್ಪ ವೆಲ್ಲಮಂ ಗುಣನಿಧಿ ಸಾಧಿಸಿಟ್ಟಿಡದು (ಖಚುರ. ೧೬-೦೦೯). **ಮೆಣಸಿಗೆ :** ೨. "ಮರೀಚಿಕಾ-ನಾಯಿತೊಳಸಿ, ಮೆಣಸಿಗೆ" (೬೩೦. ೦೦೬) ; ಕ(ಕೊ)ಡಸಿಗೆ ಮೆಣಸಿಗೆ . . . ತೊಟ್ಟಿ (ಖಚುರ. ೦೬-೦೦೩). ೩. ಒಂದು ಬಗೆಯ ಬತ್ತ : ಶ್ರೀಶಾಲಿ . . . ರಾಜಾನ್ನಂ ನಾನಾಶಾಲಿ ಕಟವೆ ಮೆಣಸಿಗೆ ಕೇಸರಿವೇಸರಿಪ್ಪೆಗಟವೆ ಶಾಲಿವಿಶೇಷಂ (ವಳತಂ. ೬೨೩). [< ಮೆಣಸು]

**ಮೆಳಸು** ' ಮೆಣಿಸು ' ನೋ.

**ಮೆಳಿ ?** (ಕ್ರಿ). (?) : ಪುಸಿವಂಗಂ ಕಂಡಲ್ಲಿ ಸಿಡಿವಂಗಂ ಕಳ್ಳೊತ್ತೆಯಿಡುವಂಗಂ ಮೆಳಿವ[ ಪ್ಪ ]ಂಗಂ . . . ಕಿಸುಗುಳ್ಳ ಸಪ್ಪಂಗಂ ಸೂಳೆಸುಖಂ ಸಲ್ಲದಲ್ತೆ (ಮಡಹ. ೦೦-೭೭). [ ? ]

**ಮೆಳೆ$_1$** (ನಾ). ದಟ್ಟವಾಗಿ ಬೆಳೆದ ಗಿಡಗಳ ಗುಂಪು ; ಪೊದರು : "ನಿಕುಂಜಃ, ಕುಂಜಃ – ಈ ೨ ಬೆಟ್ಟದ ಮೆಳೆಯ ಪೆಸರು" (ಶಾಶಂಶಾ. ೦೦೩); ಪುಲಿವುಲಿ ಪರಿವರಿ. . . ತೂಲತೊಲಗೀ ಮೆಳೆಗೆ (ಕಂದಾ. ೨-೨೬); ಕಲದ ಲತೆಯ ಮೆಳೆಯೊಳ್ ಬಿಲ್ಲುಮಂಬುಮಂ ಸಾರ್ಚಿ ಕೊಳನಂ ಪೊಕ್ಕು (ಶಂಕಶಾ. ೬-೩೮ ಪ); ಧರಣಿಗೆ ಮೆಳೆ ಪಿಡಿದ ತಳಿಗಳಾದುವು ಮಳೆಯೊಳ್ (ಗಿರಿಶ. ೯-೩೭); ಎಳೆಯ ಬಾಳೆಯ ಸುಳಿಗೆ ಸೀಗೆಯ ಮೆಳೆಯೊಡನೆ ಸರಸವೆ (ಕುಮಾ.ರಾಮ. ೦೨-೨೯). [ದೇ.॥ ತಮಿ. ಮಿಳ್ಳೆ]

**ಮೆಳೆ$_2$** ' ಮಾಳ$_2$ ' ನೋ.

**ಮೆಳೆಗುತ್ತಿ** (ನಾ). ಪೊದರನ್ನು ಕತ್ತರಿಸಿದಾಗ ಉಳಿಯುವ ಕೂಳೆ : ಮೆಳೆಗುತ್ತಿಯ ನೈಷ್ಫುರ್ಯದ ಜೀವನವಿಲ್ಲಲ್ಲಿ; ತುಂಬಿದ ಬಾಳ್ವೆಯ ಸಂತಸ ಹೊರಹೊಮ್ಮಿದೆ ಇಲ್ಲಿ (ಅಕರ್. ೦೦೦-೦೩). [ಮೆಳೆ$_1$ + ಕುತ್ತಿ$_1$]

**ಮೆಳೆದಾಗುಡಿ** (ನಾ). ಒಂದು ಬಗೆಯ ಬಳ್ಳಿ : "ಪಾತಾಳಗರುಡಿ_ಮೆಳೆದಾಗುಡಿ" (೬೩೦. ೯೩). [ಮೆಳೆ$_1$ + ದಾಗುಡಿ]

**ಮೆಳೆವಕ್ಕ** (ನಾ). ಪೊದರಿನ ಆಶ್ರಯ, —ನೆಲೆ : ಮೆಳೆವಕ್ಕಯೊಳ್ ಮೃಗಮನಂದೊಡ್ಡಿ ಸುತ್ತಾರ್ಪಿನುಗ್ಗಡದಿಂ ಕೀಡಿಡುದೊಂದು ಘೋರಪವನಂ (ದಶಕು. ೩-೭೦). [ಮೆಳೆ$_1$ + ಪಕ್ಕ$_1$ (< ಪಟ್ಟಿ)]

**ಮೆಳೆವಱಿ** (ನಾ). ಪೊದರಿನ ಹಿಂಭಾಗ : ಕುತ್ತುಱು ಮೆಳೆವ[ಶಾಕಾಂ. ಮ] ಱಿಗಳೊಳು ತುತ್ತುಱುಬಾಗಿ ನಿಂದರು . . . ಕಾಲಪರು (ಕುಂಶಾಶಾಂ. ೩೯-೬). [ಮೆಳೆ$_1$ + ಮಱಿ$_2$]

**ಮೆಳ್ಪಡು** ' ಮೆಟ್ಪಿಡು$_1$ ' ನೋ.

**ಮೆಳ್ಪಡೆ** ' ಮೆಟ್ಪಿಡೆ ' ನೋ.

**ಮೆಳ್ಳ** ' ಮೆಳ್ಳೆ ' ನೋ.

**ಮೆಳ್ಳಗಣ್ಣ** ' ಮೆಳ್ಳೆಗಣ್ಣ ' ನೋ.

**ಮೆಳ್ಳಗಣ್ಣು** ' ಮೆಳ್ಳೆಗಣ್ ' ನೋ.

**ಮೆಳ್ಳಗವಾಸಗುರವ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಇನು ಜೂರಾ ಮೆಳ್ಳಗವಾಸಗುರವರ್ ಕಬ್ಬಪ್ಪಬೆಟ್ಟಮ್ಮೇಲ್ನಾಲಂಕೆಯ್ದಾರ್ (ಎಕ. II. ೨೮-೦ ; ಸು. 700). [ಮೆಳ್ಳೆಗವಾಸ$_1$ + < ಗುರು$_2$]

**ಮೆಳ್ಳಿ** (ನಾ). ಮಾಲುಗಣ್ಣಿನವಳು ; ಕೋಸುಗಣ್ಣಿ : ಆ ಹೆಣ್ಣು ಹಾಗೆಂದು ಈ ಪೆಣ್ಣು ಹೀಗೆಂದು ದೂಷಿಸಿ ಮರಳಿದ ನೀನು ಈ ಮೆಳ್ಳಿ ಮಳ್ಳಿಯನೊಪ್ಪಿದೆ ಹೇಗೆ (ಶಂದ್ರಶೀ. ೦೯೬-೮೨). [ಮೆಳ್ಳ (< ಮೆಳ್ಳೆ) + – ಇ$_2$]

**ಮೆಳ್ಳಿಸು** (ಕ್ರಿ). ಕಣ್ಣುಗುಡ್ಡೆಯನ್ನು ಹೊರಳಿಸು; ಕಣ್ಣನ್ನು ಸುತ್ತು ತಿರುಗಿಸು : ಅಳ್ಳೆಯನೆರಡುಕರದಿ ಬಿಱುಟುತ್ತಂ ಮೆಳ್ಳಿಸಿ ನೋಡುತ ಪರ್ಬಂಗಾ ಕಿತ್ತುತೆ (ಕೃಂಗೀರ. ೫. ೪೭೩-೬) ; ಕಂಗಳಂ ಮೆಳ್ಳಿಸುತೆ ಪಲ್ಗಿರಿದು . . ಭೃಂಗಿ ನಗಿಸುತ್ತೀಡಿಸುತ ಶಿವನದಿರೊಳಾಡುತ್ತ (ಬಸವ. ೦-೪೯) ; ನೋಡುತಂ ಕಣ್ಣ ಮೆಳ್ಳಿಸಿ ಕಿವಿಯನಲುಗಿಸುತ . . . ನಾಟ್ಯವಾಡುವ ಭೃಂಗಿಪನ ಕಂಡು ಪರಶಿವಂ ನಸುನಗುತಿರೆ (ಶ್ರೀಶು. ೨-೬೯). [ಮೆಳ್ಳು (< ಮೆಳ್ಳೆ) + – ಇಸು$_3$]

**ಮೆಳ್ಳು** ' ಮೆಳ್ಳೆ ' ನೋ.

**ಮೆಳ್ಳುಗಣ್ಣು** ' ಮೆಳ್ಳೆಗಣ್ ' ನೋ.

**ಮೆಳ್ಳೆ**, ಮೆಡ್ಡ, ಮೆಳ್ಳ, ಮೆಳ್ಳು (ನಾ). ೧. ಕಣ್ಣು ಓರೆಯಾಗಿರುವಿಕೆ.– ಮಾಲಿರುವಿಕೆ : ಕುರುಡಿಗಿಂತ ಮೆಳ್ಳೆ ವಾಸಿ (ಗಾದೆ). (ಗು). ೨. ಓರೆಯಾದ ; ಸೊಟ್ಟಗಿರುವ : ' ಮೆಳ್ಳೆಗಣ್ ' ಪರಾ. ಮೆಡ್ಡ : ೩. ಮಾಲುಗಣ್ಣಿರುವವನು ; ಕೋಸುಗಣ್ಣಿನವನು : ಹೆಡ್ಡನ ನೆರೆ ಹೀನ ಮೆಡ್ಡನ ಗುರಿ ಹೀನ (ಇಂಶಾಶ. ೯೬-೭೩). **ಮೆಳ್ಳ :** ೨. ' ಮೆಳ್ಳಗಣ್ಣು ' ಪರಾ. ೩. ಪ್ರಸಂಗಾವಧಾನವುಳ್ಳ, ಬಾವಪಹನು ಮೆಳ್ಳನಂತೆ ಕಣ್ಣು ಸೊಟ್ಟ ಮಾಡಿಕೊಂಡು ನಿಂತನು (ಅಕ್ಕರ. ೦೬೨) ; ಕುರುಡರೊಳಗೆ ಮೆಳ್ಳನೇ ಶ್ರೇಷ್ಠ (ಗಾದೆ). **ಮೆಳ್ಳು:** ೧. ಎಡದ ಕಣ್ಣು ಮೆಳ್ಳಾಗಲೂ ಪುರುಷನಂ ಧಿಕ್ಕರಿಸುವಳು (ಕಾಶೀಪು.೦೯೬-೩). [ದೇ.॥ ತೆಲು. ಮೆಲ್ಲ]

**ಮೆಳ್ಳೆಗಣ್**, ಮೆಡ್ಡಗಣ್ಣು, ಮೆಳ್ಳಗಣ್ಣು. ಮೆಳ್ಳುಗಣ್ಣು, ಮೆಳ್ಳೆಗಣ್ಣು (ನಾ). ಓರೆಯಾಗಿರುವ ಕಣ್ಣು; ಮಾಲುಗಣ್ಣು; ಕೋಸುಗಣ್ಣು: ತಱುಬಲೆಗಳ ಮೆಳ್ಳೆಗಂಗಳ ಬೆಱತ ಮೋಱಯ . . . ಕ್ಷಿಱುಕುಲರು ಬಂದರು (ದಶಕು. ೩೮-೪೪). **ಮೆಡ್ಡಗಣ್ಣು :** ಸೆರೆಮನೆವಾಸ ಅನುಭವಿಸುತ್ತಿದ್ದ ಮೆಡ್ಡಗಣ್ಣಿನ ಹೆಂಗಸೂ ಅವಳ ಚಿಕ್ಕಮಗಳೂ . . . ಬಂದರು (ಕೃಷರು. ೦೯೬). **ಮೆಳ್ಳಗಣ್ಣು :** ಮೂಗನ್ನೇ ನೋಡಿ ನೋಡಿ ಅವಳಿಗೆ ಮೆಳ್ಳಗಣ್ಣಾಗಿತ್ತು (ಕುಲಬಾ. ೬೯) ; ಮೆಳ್ಳಗಣ್ಣುಮಾಡುವುದು . . . ಕಾರಣವಿಲ್ಲದೆ ರೇಗುವುದು ಮುಂತಾದ ಚಿಹ್ನೆಗಳು ದೃಷ್ಟಿದೋಷವಿದ್ದಲ್ಲಿ ಕಾಣಿಸಿಕೊಳ್ಳುವುವು(ಶಿಮ್ಮದ್ರ. ೩೨). **ಮೆಳ್ಳುಗಣ್ಣು:** ಕುಂಟಕಾಲು ಬಚ್ಚು ಬಾಯಿ ಮೆಳ್ಳುಗಣ್ಣು ನಿಮ್ಮ ಸೇವೆ ಮಾಡಲಾರೆನು (ಕಶಸೋ. ೬೦-೬). **ಮೆಳ್ಳೆಗಣ್ಣು:** "ವಲಿರಃ, ಕೇಕರಃ_ ಮೆಳ್ಳೆಗಣ್ಣಿನವನು" (ನಾತರಾ. ೬); ಗಂಟುಮೂಗಿನ ಮೆಳ್ಳೆಗಣ್ಣಿನ ಅಂಟುಪುರ್ಬಿನ ಜೋಲುದುಟಿ (ಅಜಶ. ೨೨-೩); ಆ ಹುಡುಗಿಗೆ ಮೆಳ್ಳೆಗಣ್ಣು ಇತ್ತು (ಊರುಶ. ೦೯೨). [ಮೆಳ್ಳೆ + ಕಣ್]

**ಮೆಳ್ಳೆಗಣ್ಣ**, ಮೆಡ್ಡಗಣ್ಣ, ಮೆಳ್ಳಗಣ್ಣ (ನಾ). ಮಾಲುಗಣ್ಣಿರುವವನು; ಕೋಸುಗಣ್ಣಿನವನು : ಧರ್ಮಿಷ್ಠರಂ ಮುಳಿಪುತಜ್ಞಾನದಿಂ ನೋಡಿದರ್ ಮೆಳ್ಳೆಗಣ್ಣರಹರ್ (ಏಕ್ಕಶು. ೪-೨೨-೩೩). **ಮೆಡ್ಡಗಣ್ಣ:** ಶಸ್ತ್ರಚಿಕಿತ್ಸೆಯ ನಂತರ ಆ ಮೆಡ್ಡಗಣ್ಣನ ಕಣ್ಣುಗಳು ಸರಿಹೋಗಿವೆ (ಕೂಅ). **ಮೆಳ್ಳಗಣ್ಣ :** ಸರಿಯಾದ ವೈದ್ಯರ ಬಳಿಗೆ ಹೋದರೆ ಆ ಮೆಳ್ಳಗಣ್ಣನ ಕಣ್ಣುಗಳು ಸರಿಹೋಗುವುವು (ಕೂಅ). [ಮೆಳ್ಳೆಗಣ್ + – ಅ$_7$]

**ಮೆಳ್ಳೆಗಣ್ಣು** ' ಮೆಳ್ಳೆಗಣ್ ' ನೋ.

**ಮೆಱವಣೆ**, ಮೆರವಣೆ, ಮೆಱುವಣೆ, ಮೆಱೆವಣೆ (ನಾ). ೧. ಹೆಚ್ಚುಗಾರಿಕೆ ; ಅತಿಶಯ ; ಹೆಚ್ಚಳ : ನೈವೇದ್ಯವೇಳೆಯೊಳಮರ್ಚು ಮೆಱವಣೆಯಲಿ ಸುರಗಿಯಂ ಕಿತ್ತು ಹರಣಕ್ಕ ಅಪಮಮೃತ್ಯುರೆಯಂ ಕೊಯ್ವುಪೋಲುತ್ತ ಮನದಂ ಕೆಲದಲಿ ಮಡಗಿ (ಬಸವ. ೩೩-೦೦). **ಮೆರವಣೆ :** ೨. ದೇವರು. ಪೀಠಾಧಿಪತಿಗಳು. ವಧೂವರರು ಮುಂತಾದವರನ್ನು ಆಡಂಬರದಿಂದ ಊರಲ್ಲಿ ಸುತ್ತಾಡಿಸಿಕೊಂಡು ಬರುವುದು ; ಉತ್ಸವ : ಸಂದೀಧ್ವಜದ ಮೆರವಣೆ ಕಾಯಿಕಗಳೆಂಬ ಸಂಗವನು ಪರಿಹರಿಸಿ (ಬಿಶ್ವ. ೬೯-೦೦). **ಮೆಱುವಣೆ :** ೧. ಮೆಱುವಣೆಯ ನೆಱ ಬೇಂಟೆಕಾಱರುಗುಱು ಮೃಗಂಗಳನಸುಗಳೆವುದೇತಱ ಘನಂ (ಬಸವ. ೩೯-೭೬). **ಮೆಱೆವಣೆ :** ೧. ಪುರಹರಂ ಮೆಱೆಮಿಂಡದೇವನ ನಿರತಭಕ್ತಿಯ ಮೆಱೆವಣೆಗೆ ಕೂರ್ತು (ಬಸವ. ೨೬-೭೩). [< ಮೆಱ./ತಮಿ. ಘೆರುವಣ್ಕೈ; ತೆಲು. ಮೆಱವಡಿ, ಮೆಱಪಣ, ಮೆರವಡಿ, ಮೆರವಣಿ]

**ಮೆಱವಣಿಗೆ, ಮೆರವಣಿಗೆ, ಮೆರವಳಿಗೆ, ಮೆರೆವಣಿಗೆ** (ನಾ). ೧. ಮೇಲ್ಮೆ : ಹೆಚ್ಚಳ ; ಅತಿಶಯ : ವರಚರಿತಗಳನೆಯ್ದೆ ನಾದಸಭರಿತ ಮಾಗಿರೆ ಪಾಡುತೊಬ್ಬೊಬ್ಬರ ಮಹಾಭಕ್ತರ ಮೆಱವಣಿಗೆಗಳ ಶಿವನ ಮುಂದೆ ಪರಮಭಕ್ತನು ನಂಬಿ ಪೊಗಳುವ ಪರಿಯುಮೀ ಪರಿ ಕೇಳು ನೀನು (ಬಸಪು. ೨೭-೬೯). **ಮೆರವಣಿಗೆ :** ೨. = ಮೆಱವಣಿ ೨ : ರಾಜಮಾರ್ಗದಲ್ಲಿ ಒಂದು ದೊಡ್ಡ ಮೆರವಣಿಗೆ ಹೋಗುತ್ತಿತ್ತು (ಬಾಡಿಲ. ೦೨) : ನದಿಯಂತೆ ಪರಿದಿರ್ದ ನಾಗರಿಕನರನಾರಿಯರ ದಳದ ಮೆರವಣಿಗೆ ಚಲಿಸಿತು ಕಡಲ ತಡಿಗೆ (ತಪ್ತಾಂಗ. ೬೬-೨೪೪೦). **ಮೆರವಳಿಗೆ :** ೨. ಪಡುವಣ ಬಾಗಿಲು ಸ್ಥನಕ ಮಾಡಿದ ಮೇರೆಯೊಳಗೆ ಶುಭಶೋಭನ ಮೆರವಳಿಗೆ ಮಾಡಿಕೊಂಬುದು (ಎಕ. XI. ಹಿಂಯೂ. ೪೭-೦೩ ; 1732). **ಮೆರೆವಣಿಗೆ :** ೨. ಈ ಪ್ರಕಾರ ನಿರ್ಮಾಣವ ಸ್ವಾಮಿಗಳು ಮೆರೆವಣಿಗೆಯಿಂದ ಅರಮನೆಗೆ ದಯಮಾಡಿಸ ಬೇಕೆಂತ ಗೊತ್ತಾಯಿತು (ಮುಸುಗ. ೩೯) ; ಒಂದರ ಹಿಂದೆ ಒಂದರಂತೆ ವ್ಯವಸ್ಥಿತವಾದ ಸಾಲಿನಲ್ಲಿ ಜನರ (ಅಥವಾ ದೋಣಿ, ಮೊ. ಗಳ) ತಂಡ ಮುಂದುವರಿಯು(ತ್ತಿರು)ವುದು. . . ಮೆರೆವಣಿಗೆ (Procession. ಇಂಕಪ).

[ಮೆಱವಣಿ + – ಗೆ./ತುಳು.ಮೆರವಣಿಗೆ, ಮೆರಣಿಗೆ]

**ಮೆಱವಣೆ** ' ಮೆಱವಣಿ ' ನೋ.

**ಮೆಱಸು** ' ಮೆಱೆ[3]ಯಿಸು ' ನೋ.

**ಮೆಱಹು, ಮೆಱೆ[3]ಹು** (ನಾ). ೧. ಕಾಂತಿ ; ಪ್ರಕಾಶ : ಪೊಱಮಟ್ಟುದ ಖಳಪುರಜನವ್ಯೆದೆ ಸಿಂಗರದ ಮೆಱಹುಗಳ ಮಾಳಯಿಂ ಮೇಳವದ ರಚನೆಗಳ ತರತರದ ವಿದ್ಯಾವಿನೋದದಿಂ (ಕೃಖಶಾ. ೩೩-೦೯). **ಮೆಱೆ[3]ಹು :** ೨. ಶೋಭಿಸುವಂಥದು : ಬರೆದೋಲೆಯಟ್ಟದೆ ಸಖನನಟ್ಟದೆನದು ಮೆಱೆ[3]ಹಾದುದಿಲ್ಲೆಂದು ನೊಂದ (ಛಶ. ೪೯-೩೭).

[ಮೆಱೆ[3] + – ಹು[2]( < – ಪು)]

**ನೆಱೆ[3], ಮೆರೆ** (ಕ್ರಿ). ೧. ಹೊಳೆ ; ಪ್ರಕಾಶಿಸು : ಅಖಿಳರಾಯರ ಮೌಳಿ ಮಾಣಿಕ್ಯಮಣಿಪುಂಜಖಚಿತವಾಳಿಯುಲಿ ನೆಱೆ[3] ಮೆಱೆ[3]ವುದಾತನ ಪಾದಪದ್ಮಯುಗ (ಕುವ್ಯಾಪಿ. ೦-೨೦) ; ಮಿಗೆ ಹುರುಡಿಸುತ ಪೂರ್ವದಿಶಾನಿತಂಬಿನಿ ಸಿತಕೋಪವ ಕಿಡಿಯುಗುಳಿದಳೆನಲು ರವಿ ಮೆಱೆ[3]ದ (ಕುವ್ಯಾದ್ರೋ. ೨-೦೩). ೨.ಎದ್ದು ತೋರು : ವ್ಯಕ್ತವಾಗು ; ಸ್ಪಷ್ಟವಾಗಿ ಕಾಣಿಸಿಕೊಳ್ಳು : ಕುಱೆ[3]ತಂತೆ ಪೇೞ್ದ ಪದದೊಳ್ ಮೆಱೆ[3]ಯದೊಡಲ್ಲಂ ವಿವಕ್ಷಿತಾರ್ಥಮಶೇಷಂ (ಕವಿರಾ. ೦-೧೦೦) ; ನಿನ್ನಿಂದ ತನ್ನಯ ಕೀರ್ತಿ ಮೆಱೆ[3]ವುದು ಮೂಱು ಲೋಕದಲಿ (ಕುವ್ಯಾದ್ರೋ. ೯-೩೦). ೩. ಒಪ್ಪು : ಶೋಭಿಸು : ತಮ್ಮಯ್ಯರುಮೊಡನೆ ಮೆಱೆ[3]ದು ಪರಮಾನುರಾಗದಿಂ ಬಂದು ಪೊಕ್ಕರಂದರ ಮನೆಯುಂ (ಶಂಶಛಾ. ೩-೨೩); ಇಂತೀ ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆಱೆ[3]ವ ನಮ್ಮ ಬಸವಣ್ಣನು (ಮಹಾದೇ. ಬ. ೬೩-೨೦೬); ಜಯಸಿರಿಯ್ಯದೆತನ ನಿನ್ನಿಂದ ಮೆಱೆ[3]ವುದು (ಕುವ್ಯಾದ್ರೋ. ೪-೪೪) ; ಪರಮತೇಜೋಮಯನು ಮೆಱೆ[3]ದನು ಪಂಚವಕ್ತ್ರದಲಿ (ಕೊರಣಾ. ೦-೨-೨). ೪. ಪ್ರಸಿದ್ಧವಾಗು : ಪ್ರಖ್ಯಾತವಾಗು : ಕಾನಿಱೆವಂ ಪೆಱರ್ಗಿಱೆವಂ ತನಗಿಱೆವಂ ಮೇಣ್ ಮೆಱೆ[3]ವನೀವನಿಱೆವ ಬೆಡಂಗಂ (ಗದಾಯು. ೦-೩೯): ಬಾಗೆವಾಡಿಯೊಳಗೆ . . . ಕಮ್ಮೆಕುಲದಿಂದೆ ಮೆಱೆ[3]ದಿರ್ಪ ವಿಪ್ರನಿರ್ಪಂ (ಬಸರ. ೦-೯೮): ವರಮಹಾಭಾರತವಿದೊಂದೇ . . . ಪರಮಶ್ರುತಿಯೆಂದೆನಿಸಿ ಮೆಱೆ[3]ವುದೀರೇಳು ಲೋಕದಲಿ (ಸಂಪಶ. ೨ ೦೩). ೫. ತೋರಿಸು: ಪ್ರದರ್ಶಿಸು : "ಮೆಱೆ[3] ಪಿಡಂಬೇ" (ಶಮುಛಾ); ಅರಸಂ ತನ್ನ ಬಿನ್ನಣಮಂ ನೆರೆದ ನೆರವಿಗೆ ಮೆಱೆ[3]ಯಲ್ವೇಡಿ ಗೆಂಟಱೆಂ ಚಕ್ರದಿಂ ನಾಲ್ಕುಕಾಲುಮ ನೊಮ್ಮೊದಲೆ ಪಱಿಯಿಟ್ಟೊಡೆ (ವಡ್ಡಾರಾ. ೦೨೦-೦೬) ; ಮಣಿಕನಕಂ ವಸ್ತ್ರವಿಭೂಷಣಂಗಳಂ ಕೊಟ್ಟು ಪೆಂಡಿರೊಲ್ವರೆ ಗಂಡರ್ ಗುಣಮನೆ ಮೆಱೆ[3]ವುದು (ಗದಾಯು. ೨-೩) : ನಿಮ್ಮ ಱೆವುದು ನಿನ್ನ ಭಕ್ತಿಯುಂ ಶಕ್ತಿಯುಂ ಮಂ (ಸುಕುಮಾ. ೦೨-೪); ಭಕ್ತಾಧೀನ ನೀನೆಂಬ ಬಿರುದು ಮೆಱೆ[3]ವುದು ಜೀಯ (ಕೊರಣಾ. ೦-೬-೭೦). ೬. ಅಲಂಕರಿಸು; ಸಿಂಗರಿಸು : ಸೂಳೆಯಂತೆ ಚೆನ್ನಂ ಮೆಱೆ[3]ಯದೆ ಬಾಲಕನಂತೆ ಪೊಲ್ಲಮಂ ಪಿಡಿಯದೆ (ರರ್ಮಾವ್ಯ. ೩-೯೯); ಬಲಗೈಯೊಳೊಪ್ಪಿರೆ ವನಜವೆಡಗೆಯ್ಯ ಮೆಱದಿರೆ ಮಾತುಳಂಗಫಲ (ಶಾಕ್ಷ್ಯಶಾ. ೦-೯). ೭. ಅಹಂಕರಿಸು: ಬೀಗು : ಪೆಱರಂ ನುಡಿಯದೆ ತನಗೊಂದಱೆ[3]ತಮೆನಲ್ ತನ್ನ ಮೊಗದೊಳೊಂದಕ್ಕರಮಂ ಪೊಱಮಡಿ ಸಲಱಿಯದಱಿ[3]ತಮನಱಿಯದರೊಳ್ ಮೆಱೆ[3]ವ ಸಾಸಿಗಂಗಿದಿರುಂಟೇ (ಮಲ್ಲಪು. ೦-೩೩); ಮೆಱದಿದಿರಾಗಿ ಕಾಗಿದ ಗಜಾಸುರನಂ ಪಿಡಿದೆತ್ತಿ ಚಮ್ಮವಂ ಸಱಸಱೆ[3]ಸಱನೆ ಸೀಳ್ದು (ಎಕ. XVI. ಶಕ್ಯಶಾ. ೭೦-೨೩; 1235). **ಮೆರೆ:** ೧. ಕಗ್ಗತ್ತಲೆಯ ರಾತ್ರಿ ನಕ್ಷತ್ರಮಾಲೆಯಿಂ ಮೆರೆವಂತೆ . . .ಮೆರೆದಳಾ ಪಾರ್ಥಿವ ಕುಮಾರಿ (ತಪ್ತಾಂಗ. ೦೯-೫೦೦). ೩. ಪುಷ್ಪೋಪಹಾರದಿಂ ಮೆರೆವ ಮಂಗಲ ಚಂದ್ರಶಾಳೆಗೆ ಮಣಿದು (ತಪ್ತಾಂಗ. ೫೦-೦೩೭೭). ೪. ಆ ತರುಣಿಯ ನಾಣಿಂ ಮದನಂ ನೆರೆ ಮರೆಯೆನಿಸಿಲ್ಲಮಂತೆ ಮೆರೆದನು ಮಲ್ಲಂ (ಶಾಕುಂತ. ೨೫-೪೭). ೫. ದಿವ್ಯತರಶಕ್ತಿಯಂ ಮೆರೆದೆಮ್ಮ ಸಲಹಿದಮ್ಮ (ಕಬಸೋ. ೦೬-೪): ಮುಕ್ತಾಯಕ್ಕ . . . ದೊಡ್ಡತನವನ್ನೇ ಮೆರೆದಿದ್ದಾಳೆ (ಕೂಪ್ಯಕು. ೦೦೩). ೭. ಮೆರೆಯದೆಯೆ ಹಡೆದ ಮಾತೆಯ ಸೇವೆಯನು ಮಾಡಿ ಮೌನದಿಂ ಮಡಿದವನು ಧನ್ಯ ಸತ್ಯಾಗ್ರಹಿ! (ಕಾಂತಶ. ೨೦-೧೯); ನಾಳೆ ಆ ಸೀರೆಯ ನೀನುಟ್ಟು ಮೆರೆದಂತೆ ಕನಸನು ಕಾಣೆನ್ನ ಚನ್ನೆ (ಇಂಪಾಕ. ೯೦-೪೩).

[ದೇ.II ತುಳು. ಮೆರೆ; ತೆಲು. ಮೆಱಚು, ಮೆಱಯು, ಮೆಱುಂಗು: ಕೋಲಾ. ನಾಯ್ಕಿ. ಮೆರ್ಪ್]

**ಮೆಱೆ[3]ಕೋಲು** ' ಮೆಱೆ[3]ಗೋಲು ' ನೋ.

**ಮೆಱೆ[3]ಗಾಱ** (ನಾ). ಕಾಳಗದಲ್ಲಿ ವಿಜೃಂಭಿಸುವವನು : ವೀರ : ವಾಮಶಕ್ತಿದೇವರ ಬಂದಿಯು ಹಿಡಿದಲ್ಲಿ ತೊಣವತ್ತಿಯ ಮೆಱೆ[3]ಗಾಱ ಬಾಚೆಯ ನಾಯಕ ಕಾದಿ ಸ್ವರ್ಗಸ್ಥನಾದಲ್ಲಿ (ಎಕ. VII. ಶಿಕಾ. ೦೩೯-೪: 1160).

[ಮೆಱೆ[3] + – ಕಾಱ]

**ಮೆಱೆ[3]ಗೋಲು, ಮೆರೆಕೋಲು, ಮೆರೆಗೋಲು, ಮೆಱೆ[3]ಕೋಲು** (ನಾ). ಹೊಲಗದ್ದೆಗಳಲ್ಲಿ ಚೆಲ್ಲಾಡಿದ ಹುಲ್ಲನ್ನು ಒಟ್ಟುಗೂಡಿಸಲು ಬಳಸುವ ಕೊಕ್ಕೆಕೋಲು : "ಉತ್ಕಲಿಯೆನಲು ಮೆಱೆ[3]ಗೋಲು" (ಮಂಗರಾ. ೦೦೯-೩). **ಮೆರೆಕೋಲು :** ಮೆರೆಕೋಲು ಹಿಡಿದು, ಕಣದಲ್ಲಿ ಹರಡಿರುವ ಹುಲ್ಲು ಸೊಪ್ಪನ್ನು ಕೆದರುತ್ತಿದ್ದರೆ ಅವನ ಮನಸ್ಸೂ ಕೆದರಿಕೊಳ್ಳುವುದು (ಕಳುವು. ೦೯೦). **ಮೆರೆಗೋಲು :** ಆತ ಮೆರೆಗೋಲಿನಿಂದ ಹುಲ್ಲನ್ನು ಒಟ್ಟುಗೂಡಿಸಿದನು (ಕೂಎ). **ಮೆಱೆ[3]ಕೋಲು :** ವೃಷಭನವಯವದಿಂ ನೋಡಿಕೊಣ್ಡು ಕಡುಮೂರ್ಖತೆಯಿಂ ಮೆಱೆ[3]ಕೋಲ ಕಱೆ[3]ದುಕೊಳ್ಳುತ ಬಱಸಿಡಿಲ್ ಎಱಪನ್ತೆ ಬನ್ದು ವಾಮನಭಟ್ಟಂ ಕಱುಪಿನ್ದಮೆಯ್ದೆ ಪೊಯ್ಯಲು (ವ್ಯಆಂ. ೦೯೨೭, ೩೪-೨; 11ನೆಯ ಶತ).

[ಮೆಱೆ[3], ( P ← ಕೋತ. ಮಾರ್ = ಕಬ್ಬಿಣದ ಕೊಕ್ಕೆಯುಳ್ಳ ಉದ್ದ ಮರದ ಹಿಡಿಕೆಯುಳ್ಳ ಸಾಧನ) + ಕೋಲು[1] ( < ಕೋಲ್[1])]

**ಮೆಱೆ[3]ಯಿಸು, ಮೆರಸು, ಮೆರೆಯಿಸು, ಮೆರೆಸು, ಮೆಱಸು, ಮೆಱೆ[3]ಸು** (ಕ್ರಿ). ೧. (ವಿಜೃಂಭಣೆಯಿಂದ) ಮಾಡಿಸಿಕೊಳ್ಳು ; ನೆರವೇರಿಸಿಕೊಳ್ಳು : ಬಿಪಿಜರಾಜನಿಂದೆನಗೆ ರಾಜರಾಜಾಭಿಷೇಕಮಂ ಮೆಱೆ[3]ಯಿಸುವೆಂ (ಜಗಪಿ. ೭-೭೬ ವ). **ಮೆರಸು :** ೨. ಪ್ರಕಾಶಗೊಳಿಸು; ಹೊಳೆಯುವಂತೆ ಮಾಡು : ಕಣ್ಣಿಗಳವಡುವೆಲ್ಲ ವಸ್ತುಗಳು ಮೆರಸುವೊಲು ತಮ್ಮ ಹೊಳೆಸುವ ರವಿಯ ತೇಜದಲೆಯ ಗವಿಯುಳದ ಹೊನಲಿನಂತಿವರೆನಗೆ ಹೊಳೆಸುವರು ಗುಡಿಯೆಲ್ಲೆಯನು ಕಳೆದ ದೇವಕಳೆಯ (ಮುರದೀ. ೪೪-೫). **ಮೆರೆಯಿಸು:** ೩. ಪ್ರದರ್ಶಿಸು : ತೋರಿಸು : ನೀನು ಭುಜಬಲವನ್ನೂ ಚಾತುರ್ಯವನ್ನೂ ಮೆರೆಯಿಸುತ ಭೀಮಸೇನನೊಡನೆ ಮಹಾಯುದ್ಧಕ್ಕೆ ಉದ್ಯೋಗಿಸು

(ಕೃವಾ. ೬೬). **ಮೆರೆಸು** : ೪. ಪ್ರಕಟಗೊಳಿಸು; ವ್ಯಕ್ತವಾಗುವಂತೆ ಮಾಡು : ವರುಷ ಮಾಸಗಳುರುಳಿ ಉರಿಸಿ ಕಾಯಕ ಬತ್ತಿ ಮೆರೆಸುದಕೆ ಬಂತು ಚಳಿಗಾಲ (ಕನ್ನಡಾ. ೨೦೯). ೫. ಮೆರವಣಿಗೆ ಮಾಡು : ಅಣ್ಣಾಸ್ತ್ರಗಳ ಹಿಡಿದು ಹೊರಟವರ ತಲೆಯ ಸುಣ್ಣಗೆ ಮಾಡಿ . . . ವಿಶ್ವಸಂಸ್ಥೆಯ ಮುಂದೆ ಮೆರೆಸೋಣ (ಸೀವ. ೦೬-೯). ೬. ಶೋಭಿಸುವಂತೆ ಮಾಡು; ರಾರಾಜಿಸುವಂತೆ ಮಾಡು : ಇನ್ನು ಉಷಸ್ . . . ಸುಮಾರು ೨೦ ಸೂಕ್ತಗಳಲ್ಲಿ ಅವಳನ್ನು ಮೆರೆಸಿದ್ದಾರೆ (ಭಾರಧ. ೨೨). **ಮೆಱಿಸು** : ೫. ವಿಹಾರ್ಯ— ಎಲ್ಲಾ ಎಡೆಯೊಳಂ ಮೆಱಿಸಿ, ಆರೋಹಯೇತ್— ಧ್ವಜ ದಂಡದ ಮೇಲೆ ಏರಿಸುವುದು (ಕ್ರತುಶಾ. ೦೬-೯). **ಮೆಱಿಸು** : ೩. ಮಾಣಿಕ ವೆಸದ ಹೊನ್ನಂದಣದೊಳು ಕಂತುರಾಣಿಯು ಮುಟ್ಟಿ ಬೈತಿಟ್ಟು ಓಣಿಯೊಳ್ ಮೆಱಿಸುತ ಕರಕೊಂಡು ಬಂದಾಗ ಕಾಣಿಸಿದರು ಶಂಬರಗೆ (ಮೋಹತ. ೦೦-೦೦). ೭. ಆಚರಿಸುವಂತೆ ಮಾಡು : ಮತ್ತಾನುಂ ಬ್ರತ ಮೆಱಿಸಿ ವೃತ್ತಿಗರಂ ಕಿಡಿಸಲಾಗದು (ಶಾಶ್ವ. IX-i. ೦೦೭-೬೯; 1055). [ಮೆಱಿ³ + — ಇಸು₃]

**ಮೆಱಿವಣ** ' ಮೆಱಿವಣಿ ' ನೋ.

**ಮೆಱಿಸು** ' ಮೆಱಿಯಿಸು ' ನೋ.

**ಮೆಱಿಹು** ' ಮೆಱಿಹು ' ನೋ

**ಮೆಟ್**, ಮೆಳ್ (ನಾ). ೧. ಮರುಳು; ಮೋಹ : 'ಮೆಟ್ಟಿಡಿಸು' ಪರಾ. ೨. ತಬ್ಬಿಬ್ಬು : ದಿಗ್ಭ್ರಮೆ ; ಭ್ರಾಂತಿ : ' ಮೆಟ್ಟಿಡು₁ ' ಪರಾ. ೩. ಮೋಸ; ವಂಚನೆ : 'ಮೆಟ್ಟಿಡಿಸು' ಪರಾ. **ಮೆಳ್** : ೨. 'ಮೆಳ್ಪಡೆ' ಪರಾ. P 'ಮೆಟ್ಟಿಡಿಸು', 'ಮೆಟ್ಟಿಡು' ಮುಂತಾದ ಶಬ್ದಗಳನ್ನು ವ್ಯಾಪಕವಾಗಿ ಕವಿಗಳು ಬಳಸಿದ್ದಾರೆ. ಇಲ್ಲಿ 'ಪಡಿಸು', 'ಪಡು' ಮುಂತಾದುವು ಸೇರಿರುವುದರಿಂದ ಇವುಗಳ ಮೂಲಶಬ್ದ 'ಮೆಟ್' ಇದ್ದಿರಬೇಕೆಂದು ಊಹಿಸಲಾಗಿದೆ. ಇದಕ್ಕೆ ಪ್ರತ್ಯೇಕವಾಗಿ ಕಾವ್ಯಪ್ರಯೋಗಗಳು ದೊರಕಿಲ್ಲ.

**ಮೆಟಿಪಯ್ಯ** (ನಾ). ಒಬ್ಬಾತನ ಹೆಸರು : ಮೆಟಿಪಯ್ಯ (ಎಕ. II, ೯೩೦; 1000). [ ? + ಅಯ್ಯ₆₁ ]

**ಮೆಟಸು**, ಮೆಣಸು, ಮೆಳಸು, ವೆಳಸು (ನಾ). ೧. ಒಂದು ಬಗೆಯ ಬಳ್ಳಿ ಮತ್ತು ಸಂಭಾರಕ್ಕೆ ಉಪಯೋಗವಾಗುವ, ಕಾರವಾದ ಅದರ ಕಪ್ಪು ಕಾಳು : ಶಬ್ದಮೊಂದನದಿರ್ದೊಡೆ ಮುತ್ತುಂ ಮೆಟಸುಂ ಕೋದಂ ತಕ್ಕುಂ (ಶಬ್ದ. ೨-೩) ; ಬೂದಿಜಿಡೆ . . . ಶರಾಸನಂ ಕಪಚಮಿ ವೆಂತಾದುವೊ ಮುತ್ತುಂ ಮೆಟಸುಂ ಕೋದಂತುಟೆ ನಿನ್ನ ಪಾಂಗೆಂತು ಗಡಾ (ಶಂಕರಾ. ೭-೯೨) : ಸುಂಟಿ ಪಿಪ್ಪಲಿ ಮೆಟಸೆಂಬೀ ಮೂಱನಾತ್ಮಜಲದಿಂ . . . ನಸ್ಯಂಗೆಯ್ವೊಂ (ಬಕಾ. ೯-೦೦೦). **ಮೆಣಸು** : ೧. ಮೆಣಸು ಸುಂಟಿ ಪೊಸ ಸುಣ್ಣ ಮಿಲಂ ಚಪ್ಪರಿಸಿ (ಧರ್ಮಾಮೃ. ೭-೩೦): ಮೆಣಸು ಹುಳಿತಡೆ ಜೋಳದಿಂ ಕುಂದೆ (ಶಕಾ. ೦೦-೦೯) ; ಉಪ್ಪು ಮೆಣಸುಗಳ ಹಿರಿಯ ಮೂಗಿನ ಹೋರು ತುಂಬಲು (ಕೌಶಿರಾ. ೨೯-೩) : ಮೆಣಸಿನ ಬಳ್ಳಿಯು ಎಲೆಯು ಬಳ್ಳಿಯ ಹಾಗೆ ಇರುತ್ತದೆ (ಕೃಷಿಕ. ೦೯೩). ೨. ಒಂದು ಬಗೆಯ ಗಿಡ ಮತ್ತು ಹಸಿಯಾಗಿಯೂ ಒಣಗಿಸಿಯೂ ಅಡುಗೆಗೆ ಬಳಸುವ, ಕಾರವಾಗಿರುವ ಅದರ ಕಾಯಿ : ನೀರುಳ್ಳಿ, ಬೇವುಸೊಪ್ಪು ಮತ್ತು ಮೆಣಸನ್ನು ಸಣ್ಣದಾಗಿ ಕೊಚ್ಚಿ. ಅನಂತರ ಎಲ್ಲ ಪದಾರ್ಥಗಳನ್ನು ಮಿಶ್ರ ಮಾಡಿ ಸ್ವಲ್ಪ ನೀರು ಹಾಕಿ ಕಲಸುವುದು (ಅಡುಗೆ. ೦೦೦). **ಮೆಳಸು** : ೧. ಮೆಳಸಿವು ಪೆರ್ಬ್ಬೆಳಸಡವಿಯು ಬೆಳಸು ಪಿರಿದು (ಎಕ. VIII, ಸಾಗರ. ೦೦೯-೯೬: 1042) ; ಕಾರಡಕೆ ಮೆಳಸಿನ ಪೇಱಂಗೆ ಅರೆಪೇಸೆ (ಶಾಶ್ವ. IX-i. ೨೨೩-೯೯: 1127); ಕಬ್ಬು ಜೇನು ಮೆಳಸು ಎಲ್ಲೆಲ್ಲು ಎಲ್ಲವೂ ತಿರುಳಿಟ್ಟು ಹೊರವಾಗುತಿರಲಿ (ಅವತಂ. ೨೯-೯). **ವೆಳಸು** : ೧. ವೆಳಸಿನ ಪೇಱಂಗೆ ಪದಿನ (ನಾ) ಱಪಲಂ (ಎಪ. IX, ೨೨-೯; 800).

ಮೆಣಸಿನಪುಡಿ. ಮೆಣಸಿನಹುಡಿ=೧. ಒಣಗಿದ ಮೆಣಸಿನಕಾಯನ್ನು ಕುಟ್ಟಿ ಮಾಡಿದ ಪುಡಿ : ಪದಾರ್ಥಗಳು . . . ೬ ಚಮಚ ಮೆಣಸಿನ ಪುಡಿ, ೧ ಚಮಚ ಸಾಸಿವೆ (ಅಡುಗೆ. ೦೦೬); ನೆಲ್ಲಿಕಾಯಿ ಮೆತ್ತಗಾದಾಗ . . . ಸಾಸಿವೆ ಪುಡಿ ಮತ್ತು ಮೆಣಸಿನ ಹುಡಿಯನ್ನು ಸೇರಿಸುವುದು (ಅಡುಗೆ. ೦೦೬). ೨. ಒಣಮೆಣಸಿನ ಕಾಯಿ, ಧನಿಯ, ಕರಿಮೆಣಸು, ಜೀರಿಗೆ ಮುಂತಾದುವನ್ನು ಹುರಿದು ಮಾಡಿದ ಪುಡಿ : ಸಾರಿನ ಪುಡಿಯನ್ನು ಮೆಣಸಿನ ಪುಡಿಯೆಂದೂ ಹೇಳುತ್ತಾರೆ (ರೂಢಿ). ಮೆಟಸಿನಕರೆ. ಮೆಣಸಿನಕರೆ = ಕರಿಮೆಣಸಿನ ಗೊಂಚಲು.—ಗುತ್ತಿ : ಎಳಮಾವಿನ ಮಿಡಿ ಮಾಗುಳಿ ಮೆಟಸಿನ ಕರೆ . . . ಈಳೆಯ ಗೊರೆಯಿಂದಳವಟ್ಟಿರೆ ಲಾವಣಕಂಗಳನಿಕ್ಕಿದರಾಗಳ್ (ಸುಕುಮಾ. ೦೦-೩೦); ನಳನಳಿಸುವ ಮೆಣಸಿನ ಕರೆ . . . ಕಬವೆಯ ಕಾಯ್ ಬೇಱವೇಱ ಸವಿವಡದಿರವೇ (ನರಶಂ. ೯೬೩).

[ದೇ.॥ ತಮಿ. ಮಿಳಕು; ಮಲ. ಮಿಳಕು, ಮುಳಕು; ತುಳು. ಮೆಣಂಚಿ, ಮಣ್ಚ ; ಕೊಡ. ಮಳು./ಸಂ. ಮರಿಚ]

**ಮೆಟುವಿಡು** (ನಾ). ಒಂದು ಸ್ಥಳದ ಹೆಸರು; P ಈಗಿನ ಧಾರವಾಡ ಜಿಲ್ಲೆಯ ಮೇವುಂಡಿ : ಸುಖದಿಂ ನಿಜರಾಜರಾಜಧಾನಿ ಮೆಟುವಿಡು ನೊಳಿನ್ದು ವಿವಾನಸಮಾನಮಪ್ಪ [ದೇಗು]ಲಮಂ ಮಾಡಿ (ಶಾಶ್ವ. XI-i. ೨೨-೯; 897). [ ? + < ಬೀಡು ]

**ಮೆಟ್ಕಿಸು** (ಕ್ರಿ). ಗಂಧ ಮೊದಲಾದುವನ್ನು ಬಳಿ; ಲೇಪಿಸು; ಹಚ್ಚು : ಕಲ್ಲೊತ್ತಿಗರ್ಕದುಗ್ಧದ ಮೆಳ್ಕಿ[ಟ್ಕಿ]ಸಿಯೊಲೆಗಲ್ಲ ಸೇಕಗೆಯ್ಯಲ್ ಮಾಣ್ಬುಂ (ಲೋಕೋಪ. ೯-೦೬೩). [ಮೆಟ್ಕು + — ಇಸು₃]

**ಮೆಟ್ಕು**, ಮೇಕು₁ (ಕ್ರಿ). ೧. (ಗಂಧ ಮೊದಲಾದುವನ್ನು) ಬಳಿ ; ಹಚ್ಚು; ಲೇಪಿಸು : ' ಮೆಟ್ಕಿಸು ' ಪರಾ. ೨. (ಆಲಂ) ನಾಶಗೊಳ್ಳು ; ನಿರ್ನಾಮವಾಗು : ಇಂದ್ರಂ ತನ್ನ ಬಲಮೆಲ್ಲಮುಟ್ಕೊ ಮುಟ್ಕಿದಂತಾದುದೆಂಬುದಂ ಕೇಳ್ದು (ಶಂಕರಾ. ೩-೦೦೦ ವ) : "ಅಟ್ಕೊ ಮೆಟ್ಕಿದಂತಾದುದು—ನಾಶವಾಗಿ ಸಾರಿಸಿದಂತಾಗಲು" (ಶಂಕರಟೀ. ೨೦೨) : ಬಾಂಧವಜನಮುಂ ಪ್ರಿಯಾನುಜಾತ್ಮಜಪ್ರಕರಮುಮುಟ್ಕಿ ಮೆಟ್ಕಿದಂತಾಗೆ ಶೋಕರಸಮುಂ ಕೋಪರಸಮುಮೊಡನೊಡನೊದವಿ ಬಳೆಯೆ . . . ಮಿಳಿರ್ದು ಮಿಳ್ಳಿಗೊಂಡು (ವರ್ಧಮಾ. ೯-೯೦ ವ). **ಮೇಕು₁** : ೩. (ಗಂಧ ಮೊದಲಾದುವನ್ನು) ಬಳಿದುಕೊಳ್ಳು : ಹಚ್ಚಿಕೊಳ್ಳು : ತಲೆವೆಱದು ಟ್ಟುದಂ ಬಿಸುಟು ಮಿಯಿಯದೆ ಮೇಕದೆ ದಂತಪಂತಿಯಂ ಸುಲಿಯದೆ . . . ಉಪಾಸಕವಾಸದೊಳೇಕಭುಕ್ತಮಂ ಸಲಿಸುವ ಘೋರವೀರತಪಮಾ ತಪಮಾತಪದಿಂದಮಗ್ಗಳಂ (ಸುಕುಮಾ. ೩-೨೯).

[ದೇ.॥ ತಮಿ. ಮಲ. ಮೆಟುಕು; ತೆಲು. ಮೇಂಗು, ಮೇಗು, ಮ್ರೇಗು; ಕೋತ. ಮೆಕ್ = ಸಾರಿಸು; ಕೋಲಾ. ಮೇಗ್ ; ನಾಯ್ಕಿ. ಮೇಘ್]

**ಮೆಟ್ಟಿಡಿತು** (ನಾ). ಮೋಸ : ವಂಚನೆ : ಭೀಮಸೇನಂ ಧರ್ಮಪುತ್ರಂ ಗೆಂದನುಪ್ಪಿಕ್ಕಿದೊಡೆ ತುಪ್ಪದ ಮೆಟ್ಟಿಡಿತೆಂಬಂತೆ ನಮ್ಮ ಕಮ್ಮನಿರ್ಪ ವಿವೇಕಾರಣಂ (ಶಂಕರಾ. ೭-೦೬ ವ). [ < ಮೆಟ್ಟಿಡು₁ ]

**ಮೆಟ್ಟಿಡಿಸು** (ಕ್ರಿ). ೧. ಮರುಳುಮಾಡು : ವಶಪಡಿಸಿಕೊಳ್ಳು : ಒಡಮೆಂಕುನೀಯದಿತ್ತೆನೆನಿಸಲ್ ಕಿಱದಂ ಪಿರಿದಾಗೆ ಕೊಟ್ಟು ಮೆಟ್ಟಿಡಿಸಲ್ (ಶಾಂತಿಪು. ೮-೯೦); ಆತನಂ ಮದನರಾಗೋಪೇತನಪ್ಪಂತು ಮೆಟ್ಟಿಡಿಸು (ನೇಮಿಪು. ೯-೯೯ ವ). ೨. ಮೋಸ್ಯಮಾಡು ; ವಂಚಿಸು : ಪಾಸಂಗೆಯಂ ಪೊರಳ್ಚಿ ಮುನ್ನಂ ನೆತ್ತಮನಱಿಯನಂತವರ ದಾಯಮನಾಡೆ ಮಡಿಮಡಿಗು ಱವುದು ಮೊಂದು ಪತ್ತೆಂಟು ಪಲಗೆಯಂ ಮೆಟ್ಟಿಡಿಸಲೆಂದು ಸೋಲ್ವು (ಶಂಕರಾ. ೬-೭೦ ವ). [ಮೆಟ್ + ಪಡಿಸು]

**ಮೆಟ್ಟಿಡು₁**, ಮೆಳ್ಪಡು (ಕ್ರಿ). ೧. ಮರುಳಾಗು ; ಮೋಹಗೊಳ್ಳು : ತಡೆಯದೆ ನಿನಗಪ್ಪುದನೀಗಡೆ ಒಗೆ ಮೆಟ್ಟಿಡದಿರ್ (ಆದಿಪು. ೩-೭೨); ಇಂದ್ರ

ಜಾಲದ ಸಿರಿಗೇಕೆ ಮೆಚ್ಚಿಡುವಿರಿ (ಗದಾಯು. ೧-೩೫); ನುಡಿಗೆ ಮೆಚ್ಚಿಟ್ಟು ನೋಟಕ್ಕೆ ಬಸವಾಗಿ ಮಡದಿಯೊಡವಟ್ಟಿನೆಂದನೊರ್ವಂ (ಸುಕುಮಾ. ೭-೧೫). ೨. ತಬ್ಬಿಬ್ಬಾಗು ; ದಿಗ್ಭ್ರಮೆಹೊಂದು: ಎಡೆವೆತ್ತೊರ್ಮೆಯೆ ಮುಪ್ಪು ಕುತ್ತದೊಳೊಡಂಬಟ್ಟೊತ್ತೆ ಮತ್ತಲ್ಲಿ ಮೆಚ್ಚಿಡದಾರ್ತರ್ಣ್ಮೆ ತಪಕ್ಕೆ ಪೋಪ ಪದದೊಳ್ (ಆದಿಪು. ೨-೩೯). ಮೆಳ್ಪಡು : ೩. ಮಿತಿಮೀರು; ವಿಕೋಪಕ್ಕೆ ಹೋಗು : ಮೆಳ್ಪಟ್ಟು ಕುಳಿರಿರುಳ್ ಬಾಳ್ಗಳಂ ಚುರ್ಚುತಿದೆ (ಶಾಂತಿ. ೭೭-೧೭೨). [ಮೆಟ್ಟ್ + ಪಡು₁]

**ಮೆಚ್ಚಿಡು₂** (ನಾ). ೧. ಮೋಹ ; ವ್ಯಾಮೋಹ : ತೊಡರ್ದೀ ಪುತ್ರಕಲತ್ರಮೋಹದೊಳಿದೇಕಟ್ಟಿರ್ದಪೈ ನಿನ್ನ ಮೆಚ್ಚಿಡಿದೇ ಕಾರಣಂ (ಆದಿಪು. ೦-೭೯). ೨. ಭ್ರಾಂತಿ; ಭ್ರಮೆ : ಎಮಗ್ಗಾರ್ ಶರಣೆಲ್ಲಿಗೆ ಪೋಪೆವೆಂದು ಮೆಚ್ಚಿಡಿನಸಿಪತ್ರನಂದನಮನೊಯ್ಯನೆ ಸಾರ್ವುದುಂ (ಆದಿಪು. ೫-೯೪) ; ನೋಟ್ಟಂಗೆ ಮೆಚ್ಚಿಡಂ ಪಡೆದು ತೋಱುವಸಿಪತ್ರವನಮಂ . . . ಎಯ್ದಿವಂದು ಸಾರ್ವುದುಂ (ಪರ್ವಪಾ. ೫-೩೬ ವ). [< ಮೆಚ್ಚಿಡು₁]

**ಮೆಚ್ಚಿಡೆ, ಮೆಳ್ಪಡೆ** (ನಾ). ಭ್ರಮೆ ; ಭ್ರಾಂತಿ : "ಮೆಚ್ಚಿಡೆಯೆಂದು ಮರುಳ್ತನಮೆರ್ಪುದು" (ಕರ್ಣಾಟ. ೩೬). **ಮೆಳ್ಪಡೆ** : ಮೊಡವಿಯೊಳವಸಂಸೀಂ ಪೆಸರ್ವಿಡಿವರೆ ಕೇಳ್ಕುನಿಯೆ ನಿನಗೆ ಮೆಳ್ಪಡೆಯುಂಟೇ (ಶಿರವ. ೦೦-೦೭). [< ಮೆಚ್ಚಿಡು₁]

**ಮೇ₁, ಮೆಯ್₁, ಮೆಯ್ಯು, ಮೇಯು** (ಕ್ರಿ). ಮೇದ₁(ಭೂತಕೃ). ಮೆಂದು, ಮೇದು₂ (ಭೂತನ್ಯೂ). ೧. ದನ ಮುಂತಾದ ಪ್ರಾಣಿಗಳು ಹುಲ್ಲು ಮುಂತಾದ ಆಹಾರಪದಾರ್ಥಗಳನ್ನು ತಿನ್ನು; ಸೇವಿಸು : "ಮೇ–ತಿರ್ಯಕ್ಖಾದನೇ (ಮೇಯು)" (ಶಮಧಾ) ; ಬೇಲಿ ಹೊಲನೆಲ್ಲಂ ಮೇದೊಡಂ . . . ಹರ ಕೊಲ್ಲಲ್ ಪರಕಾಯ್ವನೇ (ಸೋಮೇಶ. ೨೯) ; ಅನಿತುಂ ಗಿರಿಗಳು ಖಾಂಡವವನಮಂ ಹಸಿವೋಗೆ ಮೇದು ಮೆಲ್ಲೊಕ್ತುತಿರಲ್ ವನಪಾಲಕನೀಕ್ಷಿಸಿ . . . ಪುಯ್ಯಲನಿಟ್ಟಂ (ಧರ್ಮಾಶ. ೩-೩೩) ; ಗೋವ್ಗಳೆಲ್ಲ . . . ದಟ್ಟೈಸಿದಾ ಸಸಿಗಳೆಡೆಯೊಳು ಮುಟ್ಟಿ ಮೇದವು ಹುಲ್ಲನು (ಗೋಹಾಡು. ೯-೯೯). **ಮೆಯ್₁** : ೧. ಹಸಲೆಗಳೊಳಿಸಿದು ಮೆಯ್ವೆಳಕಟುಗಳ್ ಕಡೆವಾಯಿಸೊಱೆವ ನೀರ್ವರಸುಗುತೆ ಪೋದ ಹರಿಣಹರಿಣೀವೃಂದದ ಮಂದವಜ್ಜೆಗಳುಮಂ ಕಂಡು (ಸುಕುಮಾ. ೦೯-೨೯ ವ) ; ಹಿಂಗದೆಡೆಗೆಡೆಗಾಕಳುಗಳುದರಂಗಳಗಳು ತುಂಬ ಮೆಯ್ದುದಕಂಗಳಂ ಕುಡಿವುತ್ತೆ (ವಿಕಪು. ೭೦-೩೪) ; ಅಲಸದೆ ಓರಿದುಂ ಮೆಯ್ಸುಂ . . . ತುರಗಂ (ಅಕ್ರೂರಾ. ೫-೨೭). **ಮೆಯ್ಯು** : ೧. ದುರ್ಗದ ದನಗಳು ತನ್ನ ಸೀಮೆಯ ಸರಹದ್ದಿನಲ್ಲಿ ಬಂದು ಮೆಯ್ಯುತಾ ಇವೆ (ಶತ್ರು ಶಾ. ೬೨). ೨. (ಆಲಂ) ಕಷ್ಟಪಡದೆ ಹೊಟ್ಟೆ ತುಂಬಿಸಿಕೊಳ್ಳು : ಬಸಗೋಂಡನ ಹೆಂಡತಿ, ಬಸವಂತಿ ಕೂತು ಮೆಯ್ಕಲಿಕ್ಕೆ-ಬಂದವಳೆಂದು ಚುಚ್ಚುತ್ತಿದ್ದಳು (ತೀಕಶ. II, ೦೯೧). **ಮೇಯು** : ೧. ಮೃಗಸಂತತಿ ಗಹ್ವರದಿಂ ಪೊಱಮಟ್ಟು ಮೇಯುತಿವೆ ಮೊಳೆವುಲ್ಲಂ (೧೧೦೯. ೯-೬೩) ; ಆ ಕುದುರೆಯು ಒಂದು ಹುಲ್ಲುಗದ್ದೆಯಲ್ಲಿ ಮೇಯುತ್ತ ನಿಂತಿರುವುದು ಅವನ ದೃಷ್ಟಿಗೆ ಬಿತ್ತು (ಮುಂಗಾಯಿ. ೯-೭೯) ; ಹೊಲದಲ್ಲಿ ಚೆನ್ನಾಗಿ ಮೇದು ಬಂದ ಎತ್ತುಗಳು ಆನಂದದಿಂದ ಬಾಲವನ್ನಾಡಿಸುತ್ತಾ ತಮ್ಮ ಮೈಮೇಲೆ ಕುಳಿತ ನೊಣವನ್ನೋಡಿಸುವ ಕಾರ್ಯದಲ್ಲಿ ತೊಡಗಿದ್ದುವು (ಶತಶ. ೧). ೩. ನಾಶಮಾಡು ; ಧ್ವಂಸಗೊಳಿಸು : ದೇಶದುದ್ಧಾರಕ್ಕೆ ದೇಹವನು ತೇಯಬಲ್ಲ ; ಮಂದಿ ಹೊಲಗಳ ನುಗ್ಗಿ ಮೇಯಬಲ್ಲ (ನಲಮು. ೨೯-೦). ೪. ಆವರಿಸು ; ಆಕ್ರಮಿಸು : ಚಿಮಣಾಳ ಆಸಕ್ತಿ . . . ಅವನ ಹೃದಯವನ್ನೇ ಮೇಯ ಹತ್ತಿತು (ಗ್ರಾಮಾಯ. ೩೬೬).

[ದೇ.॥ ತಮಿ. ಮಲ. ಕೊಡ. ಕೋತ. ಪರ್ಜಿ. ಮೇಯ್ ; ತುಳು. ಮೇಯುನು, ಮೇಪು ; ತೆಲು. ಮೇಯು ; ನಾಯ್ಕಿ. ಮೀಯ್ ; ಕುವಿ. ಮೆಯಲಿ ; ಕುರುಖ್, ಮೆನ್ನಾ ; ಮಾಲ್ತೊ. ಮಿನೆ]

**ಮೇ₂** ' ಮೇಂ ' ನೋ.

**ಮೇ₃** (ನಾ). ಕುರಿ, ಮೇಕೆ ಮುಂತಾದುವುಗಳ ಕೂಗನ್ನು ಅನುಕರಿಸುವ ಒಂದು ಶಬ್ದ : ಮಗುವಿನ ಧ್ವನಿಯಂತೆ 'ಮೇ' ಎನ್ನುವ ಧ್ವನಿಯೂ ಕೇಳಿಸಿತು . . . ಹುಲಿ ಅವನ ದನವನ್ನು ಕೆಡಹಿ ಹಿಡಿದಿತ್ತು (ಶಾಂತರ. ಕಥಾಸಾರ. ೬).

**ಮೇಂ, ಮೇ₂** (ಸಪೂರೂ) ' ಮೇಲ್ ' ಎಂಬ ನಾಮಪದಕ್ಕೆ, ಸಮಾಸ ಪದಗಳಲ್ಲಿ ಬರುವ ಆದೇಶರೂಪ : 'ಮೇಂಗಾಲ್', 'ಮೇಂಗೆಯ್' ಪರಾ. ಮೇ₂ : 'ಮೇಗರೆ', 'ಮೇಗಾಲ್' ಪರಾ. [< ಮೇಲ್₁]

**ಮೇಂಗಣ್ಣು** (ನಾ). ಹಣೆಯ ಮೇಲುಭಾಗದಲ್ಲಿರುವ ಕಣ್ಣು : ಹಣೆಗಣ್ಣು : ಅಂತ್ಯವರು ವಿಕ್ರಮಶಾಲಿಗಳು . . . ಕೇಂಗಣ್ಣಸಗುತ ನಗನಂದನೆಯ ಕಾಂತನ ಪಂಚಮುಖದ ಮೇಂಗಣ್ಣುರಿಯಿಂತೀಯಂದಮನನುಕರಿಸಿದು ವೇಬಂತಿರೆಯುಗ್ರತೆಯಿಂ ಸಂಹರಿಸಿದರಸುಹೃದ್ವಾಹಿನಿಯ (ಜಯಶಾ. ೬-೫೦). [ಮೇಂ (< ಮೇಲ್₁) + ಕಣ್ಣು (< ಕಣ್)]

**ಮೇಂಗಯ್** ' ಮೇಂಗೆಯ್ ' ನೋ.

**ಮೇಂಗಾಲ್, ಮೇಗಾಲ್, ಮೇಗಾಲು** (ನಾ). ಕಾಲಿನ ಮೇಲುಭಾಗ : ಕಾಮನ ಶಿಲೀಗೊಳವೆನಿಪ ನಿಕಾಮನಖದ್ಯುತಿಜಲಪ್ರವಾಹದೊಳೆಸೆವಾ ವಾಮೆಯ ಮೇಂಗಾಲ್ ಸೊಗಯಿಸುವಾಮೆಯನನುಕರಿಸಿ ಮನಮನಿಟ್ಟುಳಿಗೊಳ್ಗುಂ (ಜಗಪ. ೦೦-೨೦) ; ಪಡೆದುವೆ ನಮ್ಮುನ್ನತಿಯಂ . . . ಇಂತೀ ಪುಡಮುಂ ಬೆರಲ್ಗಳುಂ ಕಿತ್ತಡಿಯುಮೆಸುತ್ತುರ್ವಿದಂತೆ ಮೇಂಗಾಲೆಸೆಗುಂ (ಕೃಷ್ಣಪು. ೩-೨೯) ; ಅಂಗಯ್ಯ, ಅಂಗಾಲ್ ; ಮೇಂಗಯ್ಯ, ಮೇಂಗಾಲ್, (ಶಮದ. ೦೬೫ ಕೃಯೋ). **ಮೇಗಾಲ್** : ಕಿಟ್ಟಿಬ್ಬೊಡೆ ಮೇಗಾಲ್ ಮೆರಲಂ ಗುಟಂಬರಿ ಸೊಸಲ್ ನಿಟ್ಟೆಲ್ವು ಗೋಣಾಟ್ ಬೆನ್ . . . ಕಾಲಡಿಯಂದಿಂ ತಿವನುರ್ಚಿ ಪೋದುವಿಸೆ ತತ್ಪ್ರಜನ್ಯಕಂದಾಂಕುರಂ (ಶಾಂತಿಪು. ೯-೦೭); ನದೀಲತಾಂಗಿಯ ಮೇಗಾಲ್ಗಳೆನಿಪ್ಪ ಪರಿಕಾಲ್ಗಳುಂ . . .ಅನೂನಶೋಭೆಯಂ ಪಡೆಯೆ (ಕೃಷ್ಣಪು. ೯-೨೨ ವ) ; ಜನನುತಮಪ್ಪುತ್ತಮಗತಿಯಂ ಪಡೆದನಿಶಂ ತನಗೆ ವಿರಕ್ತರನೆಱಗಿಪ ವನಿತೆಯ ಮೇಗಾಲ್ಗಳ ಪಾಸಟಿಯಂ ನಾಮೆಯ್ದುವೆವೆಂದು ಮನದೊಳ್ ಭಾವಿಸಿ (ಜಯಶಾ. ೩-೨೮). **ಮೇಗಾಲು** : "ಪದಾಶ್ರಂ. ಪ್ರಪದಂ ಈ ೨ ಮೇಗಾಲು" (ನಾಚರಾ. ೧೨೦) ; ಶಿವೆ ಬ್ರಾಹ್ಮಣ ನಯನ ಕ್ಷತ್ರಿಯ . . . ಮೇಗಾಲು ಮುಚ್ಚಿಗ (ಸರ್ವಶ. ೦೬೨-೭೭೭) ; ಹೆಬ್ಬೆಟ್ಟುಗಳು, ಪದತಳಗಳು, ಮೇಗಾಲು, ಹರಡು . . . ಕಣ್ಣುಗಳು, ಶಿರಸ್ಸು ಮುಂತಾದ ಸ್ಥಾನಗಳೇ ಸ್ತ್ರೀಯರುಗಳಿಗೆ ಕಳಾಸ್ಥಾನಗಳೆನಿಸಿಕೊಂಬುವು (ಸಕಪ್ಪ. ೭೦) : ಕೀಳ ಕೆಣಕಬೇಡ ಮೇಗಾಲು ತುರಿಸಬೇಡ (ಗಾದೆ). [ಮೇಂ (< ಮೇಲ್₁) + ಕಾಲ್₁]

**ಮೇಂಗೆಯ್, ಮೇಂಗಯ್, ಮೇಂಗೈ, ಮೇಗೆಯ್, ಮೇಗೈ** (ನಾ). ೧. ಮಣಿಕಟ್ಟಿನಿಂದ ಹಿಡಿದು ಕಿರುಬೆರಳಿನ ವರೆಗಿನ ಭಾಗ ; ಕೈಯ ಮೇಲುಭಾಗ : ಕಿಟ್ಟಿಬ್ಬೊಡೆ, ಮೇಂಗೆಯ್, ಮೇಂಗಾಲ್ (ಶಾಶಾಶೂ ೦೨೯ ಉದಾ). **ಮೇಂಗಯ್** : ೧. ಅಂಗಯ್ ; ಮೇಂಗಾಲ್, ಮೇಂಗಯ್ (ಶಮದ. ೦೬೫ ಕೃಯೋ) ; ಕಯ್ಯ ಮೇಗು ಮೇಂಗಯ್ (ಶಬ್ದಾ ಮ. ೩೯೬ ಕೃಯೋ). **ಮೇಂಗೈ** : ೨. (ಆಲಂ) ಜಯ ; ಗೆಲುವು ; ಮೇಲುಗೈ : ಬೆಂಗಯ್ಯುಗ್ಗಳ ಸಾಸಿರಂಗಳೆಮಗುಂಟೇಡೆಂಬ ಗರ್ವಂಗಳಿಂ ಮೇಂಗೈಯಪ್ಪೆವೆನುತ್ತೆ ಬಂದಿರಿಂ (ಶಿರಶ. ೦೦-೯೪). **ಮೇಗೆಯ್** : ೧. "ಕರೋರ್ಧ್ವ ಮೆನಲ್ಕೆ ಮೇಗೆಯ್ಗೆ ನಾಮಮಕ್ಕುಂ" (ಮಂಗರಾ. ೯೩-೮). **ಮೇಗೈ** : ೧. ಮೊಳಕೈ ಮುಂಗೈಗಳನಾಡಿಸುತಂ ಮೊಳಕಾಲಿಕ್ಕುತೆಬಗುತೆ ನಿಲುತಂ ಅಂಗೈ ಮೇಗೈಗಳನಾಡಿಸುತಂ [ಶಾಕಾಂ. ಕಾಲುಂ ಕಯ್ಯುಂ] ಬೆಂಗೊಂಡಾಗಿರೆ (ಶೃಂಗಾರ. ಹ. ೯೭೩.೨). [ಮೇಂ (< ಮೇಲ್₁) + ಕಯ್₂]

**ಮೇಂಗ್ಯೆ** 'ಮೇಂಗೆವರ್' ನೋ.

**ಮೇಂಟಿ**, ಮೆಂಟೆ, ಮೇಂಟೆ, ಮೇಟಿ, ಮೇಟೆ, ಮೇಣೆ, ಮೇಳಿ, ಮೇಟು$_1$ (ನಾ). ೧. (ಶೌರ್ಯದ ಅಥವಾ ಗೆಲುವಿನ ನೆನಪಿಗಾಗಿ ನೆಡುವ) ಕಂಬ ; ಸ್ತಂಭ : ಬೆಳೆ ಮತರು ಕೊಟು ನಿ[ಂ]ತಾ ಮೇಂಟಿಯನಃ (ಶಾಇ. XVIII. ೩೦೧-೯ ; ಸು. ೫ನೆಯ ಶತ) ; ಧರಣೀಮಧ್ಯದೊಳೊಪ್ಪೆ ಮೇಂ[ಟಿ]ಯವೊಲಿರ್ಕ್ಕುಂ ಮೇರು[ವಾ] ಮೇರುಮಂದಿರದಿಂ ದಕ್ಷಿಣಭಾಗದಲ್ಲಿ ಭರತಕ್ಷೇತ್ರಂ (ಕಇ. IV, ೧೧-೨ : 1121) ; ಆದ್ಯಕ್ಷರದ ಬಿಂದುವಿಂಗೆ . . . ಮರ್ಕಟ – ಮಂಕಡ, ಮಕ್ಕಡ ; ಮೇಥಿ– ಮೇಂಟಿ (ಶಮದ. ೨೮೫ ಕ್ರ ಯೋ). ೨. ಕಟಾವಿನ ಕಾಲದಲ್ಲಿ ಧಾನ್ಯವನ್ನು ಒಕ್ಕಲು ಕಣದಲ್ಲಿ ನೆಡುವ ಕಂಬ : ಮೇಟಿಗಂಬ : ಮೇಂಟಿ (ಮೇಟಿ) – ಮೇಠಿ (ಮೇಥಿ) = ಒಕ್ಕುವ ಕಂಬ · ಕೃಷಿ" (ತದ್ಭಕೋ. ೩೬). ೩. ಬೇಸಾಯ : ಉಳುಮೆ : ಕೃಷಿ : ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. ೪. (ಗ್ರಾಮದ ಮುಖ್ಯಸ್ಥನಿಗೆ ಕೊಟ್ಟ) ಮಾನ್ಯದ ಭೂಮಿ : ವೈಸಕ × × [ಗಾ]ಮುಣ್ಡಗಂ[ಬೀರ] ಗಾಮುಣ್ಡಗಂ . . . ನಾಲ್ಕು ಬರಿಸ ಪರಿಯಾರವು ಐದಾನೆ ವರಿಸ ಪಡುವಾರವುಂ ಮೇಣ್ಟಿಯು ಸಕ್ತಗವು ಇನಿತ್ತುವಾ[ನ್]ಪ್ರಸಾದಂಗೆಯ್ದಾರ್ (ಶಾಇ. IX–i, ೩೦–೧೬ : ೧೦ನೆಯ ಶತ); ಸ್ವಸ್ತಿ ಸಮಸ್ತಗುಣಸಂಪನ್ನರಪ್ಪ ಬಿವತ್ತೊಕ್ಕಲುಮಿರ್ದು ಬಿಟ್ಟ ಧರ್ಮ್ಮವಾವುದೆಂದಡೆ ಮೇಂಟಿಯಲು ಪಣ ೧ ತೋಂಟದಲು ಪಣ ೧ (ಶಾಇ. XI–ii, ೧೩೮-೧೯ ; 1109). **ಮೆಂಟೆ** : ೧. ಆತನನೀಗಳೆ ಅಜನರಮನೆಯಂಗಣಕ್ಕೆ ಮೆಂಟೆಯನಾಗಿಸುವೆನು (ರಾವಶ. ೧೧೧-೧೨). **ಮೇಂಟೆ** : ೫. ಒಂದು ಬಗೆಯ ತೆರಿಗೆ : ಆ ನಾಂಡು ಅರಸು ಮಾಡಿಕೊಟ್ಟ ಮಾನ್ಯ × × × ಪಾಳು ಮೇಂಟೆ ಸೇಸೆ ಸಿದಾಯ ಹೊದಕೆ ಹದಿಕೆ × × × ಬೇಡು ಬಿಟ್ಟು . . . ಮೊ[ದ]ಲಾಗಿ ಆವುದೊಂದುಯಿಲ್ಲದೆ × × × ಸರ್ವ್ವಬಾಧೆ ಪರಿಹಾರ (ಶಾಇ. IX–ii, ೪೧೯-೩೦; 1364). ೬. ಒಂದು ಪ್ರದೇಶದ ಹೆಸರು : ಅಣಿಲಾಪುರದ ಪೆರ್ವ್ವಟ್ಟೆ ತೆಂಕಣ ಸೀಮೆ ಮೇಣ್ಟಿಯ ಪೆರ್ವ್ವಟ್ಟೆ ಪಡುವಣಸೀಮೆ ಮತ್ತಮಾ ಸಮಣ್ಗೆಬಿರೆಯೋಜಿಯ ಬಡಗಣ ಕೋಡಿಯಿ ಪಡುವಲ್ಪಾಳಕಟ್ಟಿನ ಮೋ[ಗ] ಳೆಯ ಬರುಹು ತೋಂಟಿಯಾಗಿ ಪಡುವಣಭಾಗದೊಳ್ ಮೇಣ್ಟಿಯ ಬಟ್ಟೆಯುಂ ಮುಟ್ಟೆ ಬಡಗಣ ಸೀಮೆ (ಶಾಇ. XI–i, ೬೯–೫೦; 1045). **ಮೇಟಿ**: ೧. ದ್ರವಿಳಾಳೀಪತಿಯೆಂಬ ಚೋಳಿಕರ ರಾಜ್ಯಾಪಕ್ರಮಶ್ರೀಗೆ ಕಾಂಚಿ ಪೊಲಿರ್ದ್ದೊರ್ಪ್ಪುವ ಕಂಚಿ ಸಂಚಳಿಸೆ ತೆಂಕಲ್ ಘಟ್ಟಮಂ ದಾಂಟಿ ಸಾಸಾವಿನೊಳ್ ರಾಜಿಗನೊಕ್ಕಲಿಂ ಬಡಿದು ತಂದೊಕ್ಕಲ್ ಜವಂ ನಟ್ಟ ಮೇಟಿವೊಲಾದತ್ತನೆ ನೆಟ್ಟನೊಟ್ಟಜಿಕೆಯಿಂ ತಂಬಿಂ ಜಯಸ್ತಂಭಮಂ (ಪ್ಯಆಂ. ೦೯೩೦, ೭೭–೨೭ : 1080) : ಇಳಾತಳಮೆಂಬ ಕಳದೊಳು ಓತು ವಿಲಯಕರ್ತ್ರ ನಿಲಿಸಿದ ಮೇಟಿಯು ರೀತಿಯಾಯ್ತಾ ಮೇರುಶಿಖರಿ (ನೇಮಿಸಂ. ೧–೫೦); ಆ ಸ್ವರ್ಲೋಕ ವೈಭವವನಾರು ಬಣ್ಣಿಪರಲ್ಲಿಯಾ ಧೃವಂ ಮಿಸುಪ ನೀಲದ ಲಿಂಗಮಂ ಶ್ರೀಭಕ್ತಿಯಿಂ ಭಜಿಸಿ ಬುಧಿಗೆ ಮೇಟಿಯವೋಲು ಮಹಾಭಾಸದಿಂದಿಹಂ (ಏಕ್ನ ಕೃ. ೪–೦೫–೬). ೩. ಮೇಟಿಯಿಂ ಜಾಟಿ ನಡೆದುದಲ್ಲದೆ ದೇಶದಾಟವೆ ಕಡುಗು (ಸರ್ವಜ್ಞ. ೦೩೫೭); ಮೇಟಿ ಬಲವಿದ್ದರೆ ಕೋಟೆ ಗೆಲಬಹುದು (ಗಾದೆ). ೭. ಶ್ರೇಷ್ಠವಾದುದು ; ಉತ್ತಮವಾದುದು : ಮೇಟಿ ಪುರುವಳ್ಳಿ ಎಲೆಯುತ್ತಾಟಿಸುಗುಂ ನಸ್ಯಕರ್ಮದೊಳ್ ವಿಷಮನದಂ ಪಾಟಿಸಿ ಮರಿಚದೋಳೀಯಲ್ ಕೋಟಿಲತಾಕುಲಮದೇವುದಿಂತಿದಜಿದಿರೊಳ್ (ಕಮದ. ೭–೮೯). ೮. ಶ್ರೇಷ್ಠ ವ್ಯಕ್ತಿ : ಸವಿನಯಂಗಳ ಮೇಟಿ ದಾಸೋಹವನಲಬರ್ಪ ಚೇಟ . . . ದಯಾಳುಶಂಕರನೊಲುಮೆಯುಳ್ಳಾಳು (ಬಸಪು. ೬–೧೧). ಮಾರನೃಪತಿಯ ತೇಜಿ ಭೂರಿಮೋಹನರಾಜಿ . . . ತೋರ ಮುಡಿಯ ವಧೂಟಿ ನಾರಿಯರೊಳುಂ ಮೇಟಿ (ವೆಂಕಾರಾ. ೫–೬–೫೭): ತಾವು ಎಷ್ಟು ಶಾಸ್ತ್ರವನೋದಿ ತಪಗಳನು ಗೆಯ್ದರೂ ಸಿದ್ಧಿಯಲಿ ಕಸಕಣ್ಣ ನಿಜದಿ ತಮಗೊ ಮೇಟಿ (ನವರಾ. IV, ೬೯). ೯. ಮುಂದಾಳು ; ಮುಖಂಡ ; ನಾಯಕ : ಸೀತಾರಾಮು ಮತ್ತು ರಾಮಚಂದ್ರ ಇಬ್ಬರೂ ಮೇಟಿಗಳಾಗಿ ಒಂದು ಕಲ್ಲುಬಂಡೆಯ ಮೇಲೆ ಕುಳಿತಿದ್ದರು (ಕಳಹು. ೦೪). ಬಾರಾ, ಓ ಬಾನ್ ಮಿಾನ್ಗಳ ಮೇಟೀ . . . ಬಾರಾ, ನಲ್ಲಿರುಳುಲಿಗಳ್ಗೊಡೆಯಾ ! (ಅಂತಿಗೊ. ೫೧–೦೧೬೮). ೧೦. ಮುಖ್ಯ ಸೇವಕ : ಮೇಟಿಯ ಉಸ್ತುವಾರಿಯಲ್ಲಿ ಕೆಲಸಗಾರರು ಅಚ್ಚುಕಟ್ಟಾಗಿ ಕೆಲಸವನ್ನು ಪೂರೈಸಿದರು (ರೂಢಿ). ೧೧. ನಡುವಿನ ಭಾಗ ; ಕೇಂದ್ರ : ಮೇಟಿ ಶೀಲವ್ರತಶಿವೈಕ್ಯರ ಪಾಟಿಯೆಸೆವುಪ್ಪರಗುಡಿಗಳಿಂ ಮಾಟಕೂಟದ ಮಹಮನೆಗಳೆನಿಸಿದವು (ಬಸಪು. ೩೫–೫೫). **ಮೇಟೆ** : ೨. ಹೊಟ್ಟು ಕಳೆದು ಭತ್ತನಿಂದು ಹುಲ್ಲು ಹೊಜೆಗಟ್ಟಿತ್ತು ಒಕ್ಕದ ಮೇಟೆ ಕಿತ್ತಿತ್ತು ಹುಲ್ಲು ಮೆದೆಗೆ ಹೋಯಿತ್ತು (ವೋಳಪಾ. ೦೪೫–೫೫೩); ಕಳನ ಕೆತ್ತುವ ಮೇಟಿಯಂ ನೆಡುವ ಕುಡುಗೋಲನುಳಿಯದೇ ಮಸಯಿಸುವ ಗೊಂದಣಂ ಕುಡಿಯರುಗಳೊಳಗೊಪ್ಪಮಂ ಪಡೆದುದು (ಸಪ್ತಕಾ. ೦–೨೪); ಹೂದಂಡೆಯನ್ನು ಮೇಟಿಗೆ ಕಟ್ಟಿ, ಉಳಿದ ಉಪಕರಣಗಳಿಗೆ ಸಾಲುಶರಣರೆಂದು ಹೂಮಾಲೆಗಳನ್ನು ಹಾಕಿ ಪೂಜೆ ಮಾಡುವರು (ಕನ್ನಜಾ. ೦೩೪). **ಮೇಣೆ** : ೧೨. ನೇಗಿಲು ; ರೆಂಟೆ : ಪೂಜಿಸಿ ಪೊಡವಟ್ಟೊಪ್ಪೆ ವಿರಾಜಿಸಿ(ಬೆ)ದೆಯನಜಿದು ಪರಿಪುಮರ್ದಾಂಟದೆ ನೀನೋಜೆಯ ಬಲ್ಲೆಬ್ಬುಗಳಂ ಯೋಜಿಸಿ ಸಲೆ ಪಿಡಿದು ಮೇಳೆ(ಣೆ)ಯುಂ ತತ್ಕ್ರಮದಿಂ (ಅಬ್ಬಮ. ೯–೨೯); ಆರು ಕಟ್ಟಿ ಉಳುತ್ತಿದ್ದ ಆ ಮನೆಯ ಮುದುಕಯಜಮಾನ ಗಾಡಿಯನ್ನು ಗುರುತಿಸಿ, ಮೇಣೆಯನ್ನು ಬೇರೆಯವರ ಕೈಗೆ ಕೊಟ್ಟು, ಓಡಿ ಬಂದು (ಪುಲಿಮ. ೪೯೪). ೧೩. ನೇಗಿಲಿನ ಹಿಡಿ.—ಗೂಟ : ಏಟೋದಿದ್ರೇನು ಮೇಣೆ ಮೇಲೆ ಕೈಮಡ್ಗೋದು ತಪ್ಪ (ಹುಟ್ಟಿಹ. ೦೬೪); ನೇಗಿಲಿನ ಮೇಣೆಯನ್ನು ಮಾತ್ರ ಕೈಯಲ್ಲಿ ಹಿಡುಕೊಂಡ ರಾಮಯ್ಯನು ಮೇಲಿನ ಗದ್ದೆಯಲ್ಲಿಯೆ ನಿಂತಿದ್ದನು (ಕಾನೂರು. ೨೧೧). **ಮೇಳಿ** : ೧೨. ಉತ್ತಪೆನೆಂದು ಮೇಳಿಯ ಹಿಡಿದಾಯೆರಡೆತ್ತದಾಯೆದು ನಡೆಸಲು (ಛನ್ನಸ. ೦೬೮); ಎತ್ತು ಜತ್ತಗಿ ನುಂಗಿ ಭತ್ತ ಬಾನವ ನುಂಗಿ ಮುಕ್ಕಟತಿರುವೊ ಅಣ್ಣನ ಮೇಳಿ ನುಂಗಿತ (ಕಂಠ. ೨೯–೪). ೧೩. ಪೂರ್ವಕ್ಕೆ ತಾಳಾಗಿ ಉತ್ತರಕ್ಕೆ ತಲಹಾಗಿ ಬಿದ್ದ ಮರನ ತಂದು ನಿಬದ್ಧಿಯ ಕಾರುಕನ ಕೈಯಲ್ಲಿ ಸುಬದ್ಧಿಸಿ ಶುದ್ಧೈಸಿ ಅನಾದಿಯೆಂಬ ಹುಗಿಲುದೆಗೆದು . . . ಇಷ್ಟವೆಂಬ ವಿಶ್ವಾಸದ ಮೇಳಿಯುಂ ಬೆಟ್ಟೆ (ಸಶವ. III, ೪೭–೯೮). **ಮೇಟು**$_1$ : ೧೨. ಧನ್ಯಕುಮಾರಂ ಉಬ್ಬು ನೋಟ್ಪೆನೆಂದು ಮೇಟುಯುಂ ಪಿಡಿದು ಪಿಡಿದೊತ್ತಿ ಪೊಡೆಯೆ ನೇಗಿಲ್ ನಡೆಪೊನೆಯೊಳ್ ನೆಗೆದ ಕಳಶಮಂ ಕಂಡು (ವ್ವೀವಸಂ. ೦೯೯–೩೪ ವ).

ಮೇಣೆಮುರುಕ = ಭೂಮಿಯ ಮೇಲೆ ನೇಗಿಲನ್ನು ತಿರುಗಿಸಿ ವ್ಯವಸಾಯ ಮಾಡುವವನು ; ಕೃಷಿಕ ; ಒಕ್ಕಲಿಗ : ಸಾಕುಯೆಲೊ ಮೇಣೆಮುರುಕ ಒಕ್ಕಲಿಗನೆ ಭರದಿ ಸೀಳುಕ್ಕಿಯುತ್ತುತ್ತು (ಜ್ಞಾನಪ. ೦೩–೬) ; ಇಷ್ಟೊಂದು ಓದಿ ಮತ್ತೂ ಮನೆಗೆ ಬಂದು 'ಮೇಣೆಮುರುಕ'ನಾಗಬೇಕು ಅನ್ನು (ಶಳುಮ. ೨೨೮). [ದೇ.॥ ತಮಿ. ಮೇಟ್ಟಿ, ಮೇಟು; ಮಲ. ಮೇಟು ; ತುಳು. ಮೇಟಿ; ತೆಲು. ಮೇಟರಿ, ಮೇಟಿ, ಮೇಡಿ ; ಕೋತ. ಮೇಯರ್ ; ಕುವಿ. ಮೇರಿ./ಸಂ. ಮೇಠೀ, ಮೇಢೀ, ಮೇಥಿ]

**ಮೇಂಟಿಖಂಡುಗ** 'ಮೇಂಟಿಗಂಡುಗ' ನೋ.

**ಮೇಂಟಿಗಂಡುಗ**, ಮೇಂಟಿಖಂಡುಗ, ಮೇಟಿಗಂಡುಗ (ನಾ). ೧. ಒಂದು ಬಗೆಯ ತೆರಿಗೆ ; "ಧಾನ್ಯದ ರಾಶಿಗೆ ಹಾಕುತ್ತಿದ್ದ ತೆರಿಗೆ " (ಕಶಾಂ. ೪೧೧) : ಧನಬಳಂ ಕಾಳಗೊಲ್ಲು ಮೇಂಟಿಗಂಡುಗ (ಓಂಕೇಶಾ. ೦೯೩೭, ಅಕ್ಷೇಕರ. ೨೯–೩೩; ೪೪೮) ; ಅಲ್ಲಿ ಮನ್ನೆಯ ನಿಬನ್ದ ಕಿಜುದೆರೆಗಳವಾವು

ವೆನ್ನಡೆ ಮನೆಪಣಂ ಓರಿಯುರವಣಂ ಧನಬಳಂ ಕಾಳೆಗೊಲ್ಲು ಮೇಂಟಿಗಣ್ಣುಗವಂಗಡಿಯ ತಿಂಗಳನ ಬೇಳೆಯೊನ್ದು (ಶಾಇ. XX. ೪೭-೩೭; 1074).
**ಮೇಂಟಿಖಂಡುಗ :** ೨. ಒಂದು ಬಗೆಯ ಅಳತೆ : ಮೇಂಟಿಖಂಡುಗ ದೇವರ್ಗ್ಗ ಇನ್ನೀ ಧರ್ಮಮಂ ಪ್ರತಿಪಾಳಿಸಿದವರ್ ವಾರಣಾಸಿ ಕುರುಕ್ಷೇತ್ರ ಪ್ರಯಾಗಾರ್ಘ್ಯತೀರ್ತ್ಥಂಗಳೊಳ್ ಪತ್ತು[ಸಾ]ಸಿರಕಪಿಳೆಯಂ ದಾನಂಗೊಟ್ಟ ಫಳಮಕ್ಕುಂ (ಶಾಇ. XI-i, ೨೩-೪೦ : 897). **ಮೇಂಟಿಗಂಡುಗ :** ಮೇಂಟಿಗುಂಡುಗಮುಮಂ ಹನ್ನ ರಹಣಮುಮಂ ಬಿಟ್ಟರು (ಶಾ. IV. ೩೯-೨೭; 1111). [ ಮೇಂಟಿ + ಕಂಡುಗ (< ಖಂಡುಗ) ]
**ಮೇಂಟಿ** ' ಮೇಂಟಿ ' ನೋ.
**ಮೇಂಡ** (ನಾ). ಟಗರು ; ಕುರಿ : "ಅವಿಃ. ಊರ್ಣಾಯುಃ . . . ಮೇಷಃ, ಮೇಂಡಃ—ಈ ೮ ಕುರಿ" (ಹಲಾಯು. ೪೭-೧೨೪). [ಸಂ. ಮೇಂಢ]
**ಮೇಂದು** (ನಾ). ೧. ಮಿದುಳು : ' ಮೇಂದುಜ್ವರ ' ಪರಾ. ೨. ಬುದ್ಧಿ : ಮಲಗಿಕೊಂಡಲ್ಲಿಯೇ ವಿಷ್ಣು 'ಕಮ್ಯುನಿಜಂ'ದ ಭಕ್ತನಾದ. ಮಂದವಾದ ಅವನ ಮೇಂದೆ ಈ ವಿಚಾರಪ್ರವಾಹವನ್ನು ತಡೆಯಲಸಮರ್ಥವಾಯಿತು (ಸವುಜೀ. ೦೦೦೦). [← ಮರಾ. ಮೇಂದೂ]
**ಮೇಂದುಜ್ವರ** (ನಾ). ಮಿದುಳಿಗೆ ಬರುವ ಜ್ವರ : ಊರ ಜನರನೆಲ್ಲ ಉರಿದಾಡಿಸುವ ನಿಮಗೆ ಹುಚ್ಚು ಹಿಡಿದಿಲ್ಲವಷ್ಟೆ ? ಮೇಂದುಜ್ವರ ಬಂದಿಲ್ಲವಷ್ಟೆ ? (ಶವನಾ. ೬೯). [ಮೇಂದು + ಜ್ವರ]
**ಮೇಂಬೊಲ, ಮೇಬೊಲ** (ನಾ). ಪ್ರಾಣಿ, ಪಕ್ಷಿಗಳು ಆಹಾರವನ್ನು ಹುಡುಕಿ ಮೇಯುವ ಭೂಮಿ.—ಸ್ಥಳ : ಆ ಧೀವರಂ ನಲಿಯುತೊಂದುದಿನದುದಯದೊಳಗಾ ಹಕ್ಕಿ ದೆಸೆದೆಸೆಗೆ ಮೇಂ[ಪಾಠಾಂ. ಮೇ]ಬೊಲಕೆ ಹವವು ಮಿಗೆ ಹಾಱಿ ಪೋದುದನಱಿತು (ಸಮ್ಯಕ್ತ್ವ. ೨-೩೨) ; ಎಳಗಱುಮಿಗಳ್ಗೆ ಮೊಲೆಯಂ ಕೊಟ್ಟು ಮೇಂ[ಪಾಠಾಂ. ಮೇ]ಬೊಲಕೆ ತಳರಿದವು ಬಹುವಿಧಂಬಡೆದ ಮೃಗನಿಕುರುಂಬ (ಸಮ್ಯಕ್ತ್ವ. ೦೦-೩೮). **ಮೇಬೊಲ :** ಮೇಲಿನ ಪ್ರಯೋಗಗಳ ಪಾಠಾಂತರವನ್ನು ನೋಡಿ. [ಮೇ$_1$ + ಪೊಲ]
**ಮೇಕು$_1$** ' ಮೇಟ್ಕು ' ನೋ.
**ಮೇಕು$_2$** ' ಮೇಗು ' ನೋ.
**ಮೇಕು$_3$** ' ಮೇಖು ' ನೋ.
**ಮೇಕುದೋಱು** ' ಮೇಗುದೋಱು ' ನೋ.
**ಮೇಕುದೋಱು** ' ಮೇಗುದೋಱು ' ನೋ.
**ಮೇಕೆ$_1$** (ನಾ). ಆಡು : ಕರಿಯ ಮೇಕೆ [ಪಾಠಾಂ. ಮೆಕ್ಕೆ]ಯ ಕಾಳಸರ್ಪನ ತರಿಸಿ ತಾಱಿಯ ಸಮಿತೆಗಳ ಸಂವರಿಸಿ ದೀಕ್ಷಿತನಾದನಾ ಖಳ ಮಾರಣಾಧ್ವರಕೆ (ಕೊರರಾ. ೭-೪೨-೭) ; ಜವಾನನು ಒಂದು ಮೇಕೆಯನ್ನು ಹಿಡಿದುಕೊಂಡು ಬಂದ (ರಾಯುಕ. ೧೯) ; ನೂಕಿಸಿಕೊಂಡು ಹೋಗುವುದಕ್ಕಿಂತ ಮೇಕೆ ಕಾಯೋದು ಲೇಸು (ಗಾದೆ).
[< ಸಂ. ಮೇಕ./ **ತೆಲು.** ಮೇಂಕ, ಮೇಕ; **ಕೋಲಾ. ನಾಯ್ಕಿ.** ಮೇಕೆ; **ಪರ್ಜಿ.** ಮೇವ ; **ಗದಬ.** ಮೇಗೆ ; **ಗೊಂಡಿ.** ಮೇಕಾ]
**ಮೇಕೆ$_2$** ' ಮೆಕ್ಕೆ$_3$ ' ನೋ.
**ಮೇಕೆಕೊಂಬುಬಳ್ಳಿ** (ನಾ). ಹೋತದ ಕೊಂಬಿನಂತೆ ಕಾಣುವ ಕಾಯಿಗಳನ್ನು ಬಿಡುವ ಒಂದು ಬಗೆಯ ಬಳ್ಳಿ : ಮಾಧೀಫಲ, ಮಾಗ್ಧಿಕ. ಮೇಕೆಕೊಂಬುಬಳ್ಳಿ (ವೃಕ್ಷನಿ. ೩೯-೦೦೭೮). ' ಮೇಷಶೃಂಗಿ ' ಪರಾ. [ಮೇಕೆ$_1$ + ಕೊಂಬು$_1$ + ಬಳ್ಳಿ]
**ಮೇಖಲೆ, ಮೇಖಳೆ** (ನಾ). ೧. ಹೆಂಗಸರು ಸೊಂಟದಲ್ಲಿ ಧರಿಸುವ ಒಂದು ಬಗೆಯ ಒಡವೆ; ಒಡ್ಯಾಣ ; ಡಾಬು: ಆ ಖರಾರಿಗೆ ವಿಜಯವಿಭವವು ಲೇಖವಾದುದುಘೆಂದು ಸಿಂಧುಸಮೇಖಲಾಲಂಕೃತೆಯ ಸುತೆಕೊಂಡಾಡಿದಳು ಕಪಿಯ (ತೊರರಾ. ೭-೫೨-೭) ; ಸುಲಲಿತ ಜಘನಸ್ಥಳ ಮೇಖಲೆಯಗ್ರದೊಳೆಸೆವ ಮಂಜುಮಣಿದೀಪದ ಕಜ್ಜಲರೇಖೆ ನೆಗೆದುದೆನೆ ಕಣ್ಗೊಲವಿತ್ತುದು ರೋಮರಾಜಿ ರಾಜಾನನೆಯಾ (ರಾಜಶೇ. ೭-೩೪). ೨. ಗಂಡಸರು ಧರಿಸುವ, ಮುಂಜತೃಣದಿಂದ ಮಾಡಿದ ಉಡಿದಾರ : "ರಸನೆ ಮೇಖಲೆ ಕಾಂಚಿ ಸಪ್ತಕಿ ಕಳಾಪಿ ಸಾರಸನವೆನಲುಡಿದಾರಮಕ್ಕು" (ಮಂಗರಾ. ೦-೩೦); ಜಲರುಹಬೀಜರಾಜಿಗಳನಾಱಿಪ . . . ಮುಂಜಮೇಖಲೆಗಳನೊಪ್ಪಮಾಡುವ ಸಮಿತ್ಕುಶಮಂ ತರಪೋಪ . . . ವ್ಯವಸಾಯಮೆತ್ತಲುಂ(ಕಾದಂಪೂ. ೨೨೨). ೩. ಕತ್ತಿ ಮುಂತಾದುವನ್ನು ಸಿಕ್ಕಿಸುವ ಸೊಂಟದ ಪಟ್ಟಿ ; ನಡುಕಟ್ಟು : "ಮೇಖಲಾ . . . ಆಯುಧವು ಜಾರಿ ಹೋಗದ ಹಾಗೆ ಕಟ್ಟಿದ ಕಟ್ಟು" (ಸಿದ್ಧಾಂತಿ. ೨೭೩). ೪. ನಡುವಿನ ಭಾಗ ; ಮಧ್ಯಭಾಗ : ಮಲಯಮೇಖಲೆಯಂತೆ ಚಂದನಪಲ್ಲವಾವತಂಸೆಯುಂ . . . ಯಕ್ಷಾಧಿಪಲಕ್ಷ್ಮಿಯಂತಳಕೋದ್ಭಾಸಿ[ಯುಂ ಪಾ]ನಿಸಿದೇಱುಂಜವ್ವನೆಯ ರೂಪಾತಿಶಯಮನೆವೆಯಿಕ್ಕದೆ ನೋಡುತ್ತಂ (ಕಾದಂಪೂ. ೪೯). ೫. ಸೊಂಟದ ಹಿಂದಿನ ಕೆಳಭಾಗ ; ಜಘನ ; ನಿತಂಬ : "ತಿಗದಲ್ಲಿ ಮೇಖಲೆಯೆನಿಪ್ಪುದು" (ಮಂಗರಾ. ೦೪೨-೦೯). ೬. ಪರ್ವತದ ಸಾನು,—ತಪ್ಪಲು. ೭. ಪರ್ವತದ ಅಗ್ರಭಾಗ ; ಶಿಖರ ; "ಕಾಂಚಿಯುಂ ವಸ್ತ್ರಂ ಪರ್ವತದಗ್ರಮುಂ ಜಘನಮಿಂತುಂ ಮೇಖಲಾ ವಾಚಕಂ" (ನಾನಾರ. ೦೦೯). ೮. [ಅಶ್ವಶಾ] ಕುದುರೆಯ ಒಂದು ಅವಯವ : ರಂಧ್ರದ ನಾಭಿಯೆಡೆಗೆ ಉಪರಂಧ್ರಮೆಂಬ ಪೆಸರಕ್ಕು ರಂಧ್ರದ ಉಪರಂಧ್ರದ ನಡುವೆ ಮೇಖಲೆಯೆಂಬ ಪೆಸರಕ್ಕುಂ (ಅಶ್ವಶಾ. ಪುಟ. ೬೯). **ಮೇಖಳೆ :** ೧. ಮತ್ತೊತ್ತವರ್ಣಾತಿಸಂಘಮತ್ಸರಿತದಿಂ ಮೇಖಳಾ ಕಳತನಚಿರ ಲಾಳಿತಾಧರಪಲ್ಲವೆ ನೋಟ್ಟ ದಂಡುಗಳೊಳಂಡುಗೊಂಡು ಸೊರ್ಕಿದಾನೆ ಬರ್ಪಂತೆ ಬಂದು (ಶಂಕಪಾ. ೪-೩೭ ವ) ; ಮೇಖಳೆ ಘನಾಗಮಲಕ್ಷ್ಮಿಗೆ ದೀಪಮಾಲೆ ಜಾರಾಗಮನಕ್ಕೆ . . . ಎನಲ್ ನಭೋಭಾಗದೊಳಂದು ಬಿತ್ತರಿಸಿದತ್ತು ತಟಿಲ್ಲತೆ (ಪುಷ್ಪ. ೮-೬೯) ; ನಕ್ಷತ್ರ ಖಚಿತಮೇಖಳೆಯಾದುದಯರ್ ಪೇಳೆ ಕೃಷ್ಣಾಂಬರಾನಿಶಿ ಚತುರ್ದಶಿಗೆ (ಶ್ರೀರಾಮಪಾ. ೭೭೭-೦). ೨. ಸಲೆ ಭೈಕ್ಷವಶನಮಜಿನಂ ಪಲಾಶದಂಡಂ ಜಟಾಳಿ ಕೌಪೀನಂ ಮೇಖಳೆಯೆಂಬಿಂತಿವೆ ಪೇಟ್ದಾತ್ಮಲಿಂಗದೊಳ್ ಬ್ರಹ್ಮಚಾರಿವರ್ಣಿಯೆನಿಕ್ಕುಂ (ವಸ್ತುಕೋ. ೩೭-೩೦). ೬. ಮಂದರಮಹೀಧರದ ನಂದನಮೆಂಬ ಮೇಖಳೆಯಿಂ ಸಾಸಿರದ ನೂಱಿಪ್ಪತ್ತೊಂದು ಯೋಜನಮಗಲದಿಂ ತಾರಾಗಣವಿಮಾನಂಗಳಿರ್ಪಂ (ಸುಕುಮಾ. ೧೦-೫೯ ವ); ಶ್ರೀಜಿನಭವನಚತುಷ್ಟಯರಾಜಿತಮೊಂದೊಂದೆನಿಪ್ಪ ಮೇಖಳೆ ನಾಲ್ಕುಂ ರಾಜಿಸೆ ಮಂದರಮೆಂತಾರಾಜಿಸಿದುದು ಲಕ್ಷಯೋಜನೋನ್ನತಿಯಿಂದಂ (ಪುಷ್ಪ. ೨-೦). ೮. ರಂಧ್ರದ ನಾಭಿಯೆಡೆಯೊಳುಪರಂಧ್ರಮೆನಿಕ್ಕುಂ ಸರಂಧ್ರದುಪರಂಧ್ರದ ನಡುವಂದಕ್ಕುಂ ಮೇಖಳೆಯುಂ (ಅಶ್ವಶಾ. ೯-೪೨). [ಸಂ. ಮೇಖಲಾ]
**ಮೇಖಳೆ** ' ಮೇಖಲೆ ' ನೋ.
**ಮೇಖು, ಮೇಕು$_3$** (ನಾ). ೧. ಕೋಲು ; ಬೆತ್ತ : ಸಕಲಪಣಕಟ್ಟುಗಳ ಅಧಿಕಾರಿಗಳನ್ನು ಹಿಡಿತರಿಸಿ ನಯದಿಂದಲೂ ಮೊಂಡರಿಗೆ ಮೇಖು ಛಡಾಯಿಸಿ ಕೊರಡೆಗಳಿಂದಲೂ ಸಹ ಗರಮಾಗರಮಿ ಮಾಡಿ ಜನರಿಂದ ನಜರಾನೆ ತೆಗೆದು (ಕೃದರ. ೩೯). **ಮೇಕು$_3$ :** ೨. ಗೂಟ ; ಬೆಣೆ ; ದಸಿ : "ಸ್ಥಾಣುಃ, ಧ್ರುವಃ, ಶಂಕುಃ – ೩ ಮೋಟಿನ ಹೆಸರು, ಗೂಟ, ಮೇಕು" (ಸಿದ್ಧಾಂತಿ. ೦೦೦) ; ಬಲುವೆಯ ಕಾಲ ಪೆಂಡೆವುಹು ಮಾಸ್ಗರಿ ಭಾರಿ ನಗಾರಿ ಮೇಕು ಮಂಗುಲಿಪ ಸುರಾಂತ ಸತ್ತಿಗೆ ನಿಶಾನೆಯು ಮಾಯ್ಕುರುತಾಪು ಸಿಂಹನಿಂದುಲಿವ ಸುಡಕ್ಕೆ ವೀರ್ಜಡೆಯು ಶಂಖ ಸುಚಕ್ರವು ರಾಜರಾಜನಿಂದಲಿ ಪಡೆದಾತ ಘಂಟೆಯ ನರೇಶ್ವರ ಭೀಕರ ಶತ್ರುಸಂಹರಾ (ದೀಕಪಂ. ೦-೦೫೭). ೩. " ಮಾಂಸವನ್ನು ಬೇಯಿಸುವಾಗ ಅದನ್ನು ಸರಿಯಾಗಿ ಹಿಡಿದಿಟ್ಟು

ಕೊಳ್ಳುವ ಮರದ ಅಥವಾ ಲೋಹದ ಕೋಲು. ಕಂಬಿ, ಸಲಾಕಿ. ಮೇಕು" (skewer. ೩೦೬೩). [← ಪಾರ. ಹಿಂ. ಮರಾ. ಮೇಖ್]

**ಮೇಗ** (ನಾ). ಮೋಡ : ಮುಗಿಲು : "ಮೇಗಂ ಮುಗಿಲೆಂದು ನೀರ ತೇರೆಂದು ಘನಂ" (ಶಂಶಂ. ೯೬); "ಮೇಗ – ಮೇಘ = ಮೋಡ" (ತದ್ಭಶಿಜ. ೩೬). 'ಮೇಗವಣ್ಣಿಗೆ' ಪರಾ. [< ಸಂ. ಮೇಘ]

**ಮೇಗಡೆ** (ನಾ). ೧. ಮೇಲುಭಾಗ : ಉಪರಿ : ವ್ಯಗ್ರವಾನೆಯ ಸೊಂಡಿಲಂ ಹಸ್ತಾಗ್ರದಿಂ ಪಿಡಿದೊತ್ತಿ ಬರಸೆಳೆದಾಗ್ರಹಿಸಿ ಹಿಂದಕ್ಕೆ ತೆಗೆದಾ ಮೇಗ [ಪಾಠಾಂ. ಮೇಲ್ವಡೆ]ಗೆ ಪಾಯ್ದು (ಚಕ್ರಪು. ೨೨–೦೫) : ಗಗನದ ನಡುವ ಪಿರಿದುಂ ಬಳಸಿದಾ ತ್ರಿತಯದೊಳರ್ದಮುದ್ದಳೆಯಾ ತಳೆಯ ಮೇಗಡೆ ನಿರಿಸಿದಿಡಿಮುದ್ದಳೆಯೆಸಲದಸ್ತಿರ್ಯಗೂರ್ಧ್ವೋಜ್ವಳವಿಭೇದದಿ ಮೂಜಗಂ ಷಡ್ದ್ರವ್ಯ ಭರಿತವದು (ಶಾಶ್ವತಾ. ೧–೫೦): ಅಂಬುಪೂರಿತೋದರಮೆನಿಪಂಬು ದಾವಳಿಯ ಮೇಗಡೆಯೈತರುತಿರ್ಪ ಪಾಂಗ ಶೀಕರದೊಳೆ ನಾಂದ ನೇಮಿ ಗಳನಾಂತ ಭವದ್ರಥಮಿಲ್ಲ ಸೂಚಕಂ (ಶಾಕುಂತ. ೦೦೦–೦೭೦). ೨. ಬಹಿರಂಗ; ಬಾಹ್ಯ : ಬಚ್ಚಿದ ಬೋಳ್ಳೆಸದಿರು ಕಾರ್ಯದ ಹೊಚ್ಚಿಗೆಯೇನದ ಹೇಳು ಮೇಗಡೆ ಮೆಚ್ಚಿಪವರು ನಾವಲ್ಲ (ಶುಭ್ರಾಶ. ೫–೦೬).

[ಮೇ$_2$ (< ಮೇಲ್$_1$) + ಕಡೆ$_3$]

**ಮೇಗಣ್** 'ಮೇಗು' ಪರಾ.

**ಮೇಗಣ** 'ಮೇಗು' ಪರಾ.

**ಮೇಗರೆ** (ನಾ). ೧. ಮೇಲಿನ ತುದಿ : ಮೇಲುಭಾಗ : ಅವನಾಗವೋಕ್ತದಿ ಮತ್ತೆ ಲಿಂಗದ ಮೇಗರೆಯ ನಿರ್ಮಾಲ್ಯವನು ಬೇಚಿರಿಸಿ ಭಕ್ತಿಯಲಿ . . . ನಮಃಶಿವಾಯೆನುತಿತ್ತ ಮುಂದಾದ (ಶುಭ್ರಾಅ. ೬–೯೯) ; ಸುರಿದುದತಿವಳಿ ಯೆಂದು ಕುಲಗಿರಿ ಕರಗುವುದೆ ಮೇಗರೆಯ ಶಿಲೆಯುಬ್ಬೆರಳು ನೆನೆವುದೆ (ಶುಭ್ರಾಶ. ೯–೨೨). ೨. ಮೇಲುಮೇಲಿನದು ; ತೋರಿಕೆ ; ಬಾಹ್ಯ : ಮೇಗರೆಯ[ಪಾಠಾಂ. ಯ] ಮಾತಲ್ಲ ಬಾಲಕನಾಗುಹೋಗಿನ ಕೊಚಿತ ನಿನ್ನನು ತಾಗುವುದು ನೀ ಸೈರಿಸು (ಶುಭ್ರಾಸ. ೦೦–೩೫) ; ನಿಜಬಂಧುಜನದನುರಾಗ ಮುನ್ನಿನ ಪರಿಯಳಿದದಸ್ವದ್ವಿರೋಧದಲಿ ತಾಗಿ ಬಾಗಲದೇಕೆ ದೇಹಪ್ಕಾಗ ಪರಿಯುಂತಹುದವಜ್ಜಿಗೆ ಮೇಗರೆಯ ಮಾತಲ್ಲವೆಲೆ ನಳಿನಾಕ್ಷಿ (ಶಿಭಾಗ. ೯–೦–೩೦): ಚಾರುಣ ಹೃದಯಕ್ಕೆ ಗಭೀರತೆ ಎಂಬುದೇ ಇಲ್ಲವೇ ? ಕೇವಲ ಅವಳು ಮೇಗರೆಯ ಚೆಲ್ಲಾಟವನ್ನಷ್ಟೇ ಬಲ್ಲಳೇ ? (ಇಶ್ವಶ. ೨೭೭).

[ಮೇಗು + ಕರೆ$_4$./ತುಳು. ಮೇಗರೆ. ಮೇಗಲೆ, ಮೇಗಳ = ಆರೋಪ]

**ಮೇಗವಣ್ಣಿಗೆ** (ನಾ). ೧. ಮೋಡದ ಬಣ್ಣ : ಮೇಘವರ್ಣ : ಚಂದ್ರಿಕೆ ತಾಂಬೂಲಾದಿ ಮೇಘವಣ್ಣಗೆಸೀರೆ . . . ಕಂದವಾದರ ಸೀರೆ ಕೈಬರಹದ ಬಣ್ಣವಂಡವನೇಸ ಬಣ್ಣಿಸುವೆ (ಅಮುಣಾಂ. ೯–೯). ೨. ಮೇಘವರ್ಣದ ರೇಷ್ಮೆ ಬಟ್ಟೆ : ಮೇಗವಣ್ಣಿಗೆಯ ಪೊದಕೆಯ ಪೊದೆದು ಪರಮಾನುರಾಗ ದಿಂದಬಿಳಿಶಿವಭಕ್ತಜನಮಂ ಪೊರೆಯುಂತ . . . ಇರ್ಪ ಚರಮೂರ್ತಿಯಾದಿ (ಸಿದ್ಧೇಶ್ವ. ೦೫–೯೫). [ಮೇಗ + ಬಣ್ಣಿಗೆ$_1$]

**ಮೇಗಳ** 'ಮೇಗು' ಪರಾ.

**ಮೇಗಾಚು** (ಕ್ರಿ). ೧. ಒಳ್ಳೆಯದನ್ನು ಗ್ರಹಿಸು : ಹಿತವನ್ನು ಮನಗಾಣು : ಮೇಗಚುಯವಬಳೆಯರ್ ಗತರಾಗಿಗಳಾಗಿಸಿದ ಕೃತ್ರಿಮಂ ಗಳ್ ಕಿಡುಗುಂ (ಐಮದ. ೦೯–೩೯). ೨. ಮುಂದೆ ಆಗುವುದನ್ನು ತಿಳಿ –ಗ್ರಹಿಸು : ಮೇಗರೆ[ಚು]ಯದುಬ್ಬಿನಲಿ ನಕ್ಕರೆ ಹೋಗಿಬಿಡುವೆನೆ ನೋಲಿಸದೆ ಹೊಚಿಸಾಗುವನೆಯೆನ್ನೊಡನೆ ಸೆಣಸು (ಶುಭ್ರಾವಿ. ೬೦೨. ೯–೫೭). [ಮೇಗು + ಅಚು]

**ಮೇಗಾಲ್** 'ಮೇಂಗಾಲ್' ನೋ.

**ಮೇಗಾಲು** 'ಮೇಂಗಾಲ್' ನೋ.

**ಮೇಗಾಲ್ತುಡಿಗೆ** (ನಾ). ಕಾಲಿಗೆ ತೊಡುವ ಆಭರಣ ; ಕಾಲಿನ ಸರ : ಉಡೆನೂಲ್ ಸಡಿಲ್ದು ಮೇಗಾಲ್ತುಡಿಗೆಯ ಕುಸುರಿಯೊಳೆ ತೊಡರೆ ಕಾಮಿನಿ ಮಿಡುಕಲ್ (ಅರುಂಜ. ೦೩೯).

[ಮೇಗಾಲ್ (< ಮೇಂಗಾಲ್) + ತುಡಿಗೆ (< ತೊಡುಗೆ)]

**ಮೇಗಾವಲು** (ನಾ). ಮೇಲ್ವಿಚಾರಣೆ ; ಉಸ್ತುವಾರಿ : ಜಲದ ಮುಂಗುಡಿ ನೀಲನದು ಪಿಂಗಲಿಯ ಕಾಹು ಸುಷೇಣನದು . . . ವೀರ ಕಳ್ವೇಜುಗಳ ಮೇ [ಪಾಠಾಂ. ಮ್ಯೆ] ಗಾವಲು ವಿಭೀಷಣದೇವನದು (ತೊರಾ. ೬–೬–೯). [ಮೇ$_2$ (< ಮೇಲ್$_1$) + ಕಾವಲು (< ಕಾವಲ್$_1$)]

**ಮೇಗಾಹು** (ನಾ). ಮಿಗಿಲಾದ ಕಾವಲು ; ಭದ್ರವಾದ ರಕ್ಷಣೆ : ಬಟ್ಟೆದೇವನ ಮೇಗಾಹಿನ ಲೆಂಕ . . . ನಿಲಿಸಿದ ಕಲ್ಲು (ಪ್ರಕಂ. ೦೯೯೦, ೦೦.೫ ; 1194). [ಮೇ$_2$ (< ಮೇಲ್$_1$) + ಕಾಹು$_1$ (< ಕಾಪು)]

**ಮೇಗಾಳಿ** (ನಾ). ಮೇಲುಗಡೆಯ ದಿಕ್ಕಿನಿಂದ ಬೀಸುವ ಗಾಳಿ : ಬೇಟೆ ಯಾಡುವ ಮೃಗ ಅಥವಾ ಬೇಟೆಗಾರನಿರುವ ದಿಕ್ಕಿನಿಂದ ಬೇಟೆಗೆ ಗುರಿಯಾಗುವ ಪ್ರಾಣಿಯ ಕಡೆಗೆ ಬೀಸುವ ಗಾಳಿ : ಗೋರಿಪೆಂಟೆಯು ನಾಡಿ ಭೂಪರಂ ತಿರುಗಿ ಕಾಂತಾರದೊಳು ಮೃಗದ ನೆಲೆಗೋಳಿಸಿ ಮೇಗಾಳಿಯಿಂ ದೂರದಿಂ ತೋಚಿತ್ತನೊಡ್ಡಿ ಕಿಗ್ಗಾಳಿಯಿಂ ಬಂಡಿಯಿಂ ದಿಳುಹಿ ಹುಲಿಯ (ಹಕಶಾ. ೫–೩೦) : ಹಿಡಿಂಬನೆಂಬವನು . . . ಮುಂರಿ ಮುರಿದು ಮೇಗಾಳಿಯಲಿ ಮಾಗರಳ ಮಾನವಗಂಧವಿದು ಗೋಚರಿಸಿತ್ತ ತ್ತಣದೋ ಮಹಾದೇವಎನುತ ಬೆಜಗಾದ (ಶುಭ್ರಾಅ. ೯–೦೦) ; ಬೇಟೆಯಾಡುವ ಮೃಗದ ಮೇಲಿಂದ ಬೇಟೆಗೆ ಗುರಿಯಾದ ಪ್ರಾಣಿಯ ಕಡೆಗೆ ಬೀಸುವ ಗಾಳಿಗೆ ಮೇಗಾಳಿಯೆಂದೂ ಪ್ರಾಣಿಯ ಕಡೆಯಿಂದ ಆ ಮೃಗದ ಕಡೆ ಬೀಸುವ ಗಾಳಿಗೆ ಕಿಗ್ಗಾಳಿಯೆಂದೂ ಹೆಸರು (ಸಂಪಾನ. ೨೦೫). 'ಕಿಗ್ಗಾಳಿ' ಪರಾ.

[ಮೇ$_2$ (< ಮೇಲ್$_1$) + ಗಾಳಿ$_1$]

**ಮೇಗು**, **ಮೇಕು**$_2$ (ನಾ). ೧. ಮೇಲುಭಾಗ ; ಮೇಲುಗಡೆ : ಆ ನಾಗಶರ್ಮಂ ರಾಗಿಸಿ ಮೇಗಂ ನೋಡಿ ತನ್ನೊಡನೆಯ ಬಡಪಾರ್ವಂಗಿಂತೆಂದಂ (ವಂತಕಂ. ೦೬೬–೩) ; ಉರಗಂ ಕೊಂಡಲ್ಲಿಂ ನಾಲ್ವೆರಲನಿತಂ ಕಳೆದು ಕಟ್ಟಿ ಮೇಗಂ ಬೇಗಂ ಸೆಲಿವಿಡುಗೆ ಸುಡುಗೆ . . . ನಿರ್ವಿಷಮಕ್ಕುಂ (ಕಾವ್ಯಾವ. ೨೬೮) ; ನೆರವಿಗರ್ಬಳಿಕ ಸುಮ್ಮಾನದೆ ಮೇಗ ನಿಟ್ಟಿಸುತ ಮಾನಿನಿಯಾ ಸ್ಯೇಂದುಮಂಡಲವನು ಕಂಡಾನಂದವಿಡಿದು ನುಡಿದರು (ಶಂಶಶಿ. ೯–೮೯). ೨. ಮಿಗಿಲು : ಮೇಲು : ಉತ್ತಮ : ಜಗತ್ತ್ರಿತಯ ಗಳೊಳ್ ಜಸಕ್ಕಾಗರಮಾದ ಬದ್ದೆಗನಾ ನರಸಿಂಹನಿನತ್ತ ನಾಲ್ವೆರಲ್ ಮೇಗು ಪೊದಟ್ಟ ಚಾಗದೊಳಮೊಂದಿದ ಬೀರದೊಳಂ ಗುಣಾರ್ಣವಂ (ವಂಶಕಾ. ೦–೫೦) ; ಸಿರಿಯ ಸಾರ್ಕೆಗಮಾಯುಕಿಯರ್ಕೆಗಂ ಪೆಜರ್ ಮೇಗೆನಲಿಲ್ಲದಂತು ನೆಗಟಿರ್ದುದಜಿಂ (ಪಾಂಶಿಕ್ಕು. ೦–೬೮) ; ಇದೆ ದಿವ್ಯಶ್ರೀ ವಿಲಾಸಾಲಯಮಿದೆ ಸುರಭೋಗೋಪಭೋಗಾಸ್ಪದಂ ಮತ್ತಿದಜಿಂ ಮೇಗಿಲ್ಲ ಕಲ್ಪಂ (ಸುಕುಮಾ. ೯–೨೭). ೩. ಘನತೆ : ಹಿರಿಮೆ : ಗೌರವ : ದ್ರುಪದಂ ರಾಜ್ಯಮದಿ ರಾಮದೋನ್ಮತ್ತನುಂ ಗರ್ವಗ್ರಹವ್ಯಗ್ರಚಿತ್ತನುಮಾಗಿ ಮೇಗಿಲ್ಲದೆ . . . ನುಡಿದಂ (ವಂಶಕಾ. ೨–೯೭ವ). ೪. ಒಳ್ಳೆಯದು : ಹಿತವಾದುದು : ಮೇಗಂ ಬಗೆವೊಡೆ ವಧೆ ಹಿತಮಾಗದು ಮರ್ತ್ಯಂಗೆ (ಜಂಶೋಶ. ೩–೦೫) ; ಜ್ಞಾನವಿಹ್ನಿಯ ಬಾಗು ಸಾರಾನೂನಭಕ್ತಿತ್ರಯದಾಗು ಸುಮಾನಸದ ಬ್ರತಿಗಳಿಗೆ ಲಾಗುವದನ್ನರಿಗೆ ಮೇಗು (ಬಸಪು. ೬–೯). ೫. ಆಡಂಬರ : ಡೌಲು ; ಒಣಜಂಭ : 'ಮೇಗುದೋಚು' ಪರಾ. ೬. ಮುಂದೆ ಆಗುವುದು. –ನಡೆಯುವುದು : 'ಮೇಗುಗಾಣ್' ಪರಾ. ೭. (?) : ದೀವದ ಬೇಂಟೆಯುಂ ಬಿನ್ನಪಂಗೆಯ್ವೊಡೆ ಗಾಳಿಯುಂ ಕಟುವುಮುಚಿವುಂ ಕಾಪುಂ ಮೇಪುಂ ತೋಡುಂ ಬೀಡುಂ ದೆಸೆಯುಂ ಕೊಸೆಯುಂ ಮೆಚ್ಚುಂ ಬೆಚ್ಚುಂ ಪೋಗುಂ ಮೇಗುಂ ಬೆದಜುಂ [ಕದಟುಂ] ಪೆರ್ಚುಂ ಕುಂದುಮುನ ಜಿದು (ವಂಶಕಾ. ೫–೯೩ ವ). **ಮೇಕು**$_2$ : ೮. ಒನಪು ; ಬೆಡಗು ;

ಒಯ್ಯಾರ : ಅರಲಂಬನಂಗಡಿ ರತಿಯ ರಾಗದೋವರಿ ಪದಿರ ಪಾಳಯಂ ಮೇಕಿನಾಟೆ ಗಾಡಿಯ ಗಡಿ ಕುವರಿಯುಪರಿಯೆನಿಪುದಂಗಜನ ಘಾರಾಘಾರಿ ರಾಜಿಸುವ ಸೂಳೆಗೇರಿ (ಶಬ್ದಸಾ. ೯-೯೭). ೯. ಮೇಲಾಟ ; ಹುರುಡು ; ಪ್ರತಿಸ್ಪರ್ಧೆ : ಇವು ಇವನ ಹಿರಿಮೆಗೆ ತಕ್ಕುದಲ್ಲ. ಇದೆಲ್ಲ ಮಕ್ಕಳಾಟ, ಮಕ್ಕಳ ಮೇಕಿನಾಟ (ಶಂಗಭ. ೦೦೩). ೧೧. ದ್ವೇಷ ; ಸೇಡು : ಆ ರೇವಕ್ಕನ ಮೇಕಿನ ಮೇಲೆ, ಆ ಮಾದನ ಮೇಕಿನ ಮೇಲೆ ಮದುವೆ ಮಾಡಿಕೋತೇನೆ (ಶಳಬು. ೦೦೭).

ಮೇಮೇಗು, ಮೇಗುಮೇಗು (ದ್ವಿರುಕ್ತಿ) : ಮೇಮೇಗು, ಮೂಮೂಗು (ಶಬ್ದಾ ಮ. ೩೯೩ ವೃತ್ತಿ) ; ಮೇಗು ಮೇಗು—ಮೇಮೇಗು (ಕ್ಷಬಿ. ೬೦). ಮೇಕುಡಾಕು = ಡೌಲು ; ಆಡಂಬರ : ಆಟವಾಸಿಯು ಮಾಗಿ ಬರುವ ಸಮನಂತರದಿ ಕೂಟಸಾಕ್ಷಿಯಲಿ ನೆತ್ತಗಳನಲ್ಲೆಂಬರತಿ ಮಿಚಾದ ಮೇಕುಡಾಕುಗಳ ತೋರ್ದನಾಗಿಪರು (ದ್ವಿ. ಸಾ. ೨-೩-೪೯). ಮೇಗಂ ತೋಱು = ಹೆಚ್ಚೆಂದು ತೋರ್ಪಡಿಸು ; ಮೇಲೆನಿಸು : ಮೇಗಂ ತೋಱದೆ ನಲ್ಮೆಯನಾಗಳುಮೊಲಿದಂತೆಮಾಡಿ ಸುರತೋತ್ಸವದೊಳು ರಾಗವಮನೆ ಪಡೆದು ಗೆಯ್ದುದು ಬೇಗಂ . . . ಚದುರವಿಟಂ (ಮದತಿ. ೯-೧೧). ಮೇಗಣ್ = ಮೇಲಿನ ದಿಕ್ಕು ; ಮೇಲುಗಡೆ ; ಮೇಲುಭಾಗ : ಅನ್ತೆ ಬನ್ದು ಭಾಣಗಗೆಱೆಯ ಏರಿಯ ಮೇಗಣಂ (ಎಕ. IV, ಹಂಹಶ. ೦೪೯—೩೨ : ೫೩೬?) ; ಅಡಿಯಂ ಮೇಗಣ್ಗೆತ್ತುವ ಕತುಗಾಳಿಯ ಪೊಯ್ಲೊಳದಱ ನೀರೊಗೆದವುದು (ಆದಿಪು. ೦೪-೩೨) ; ಕಾಗೆ ಮರದ ಮೇಗಣ್ಗೆ ಪೋದುದು (ಶಂಶಶಂ. ೩೦೯-೭). ಮೇಗಣ, ಮೇಗಳ = ೧. ಮೇಲಿರುವ ; ಮೇಲಿನ : ಕರುಗೋಷ್ಠಿಯ ಪೊಲ ಮೇಲೆ ವಾಯವ್ಯದ ಮಿಡಿಯ ಮೇಗಣ . . . ಪುಣುಸೆಯಿನ್ದ ನಕ್ಕಿಕೊಣ್ಬೆಯಿನ್ದೆ (ಎಕ. X (8), ತಕ್ಕ ೨. ೦೦೬-೬೮ ; 850) ; ಮೇಗಣ ನಾಲ್ಕಱಿಕೊಳ್ಳದಱ ಮೇಗಣ ಭಾಗದೊಳಗುರ್ವ ಘರ್ಮಂ ಓವುದಿಂದಾಗಳೆ ಮುರುಂಟುವರ್ (ಆದಿಪು. ೩-೩೨) ; ಮುತ್ತು ಮಾಣಿಕ ನವರತ್ನ ತೆತ್ತಿಸಿದಂತಿಹ ಉಪ್ಪರಿಗೆ ಮೇಗಳ ಶಿವಾಲಯವ ಕಂಡು . . . ನಿಜಮುಕ್ತಳಾದೆನಯ್ಯ (ಶಂಗವ. ೪. ೭೭-೮೦) ; ಕಿಱಿಯಯುಗಳದಲಿ ಬಾಳರತ್ನವನೀಂಟುವ ಜಗುಳೆಯೊಲಿರ್ಪ ತೋಳ ಮೇಗಳ ಸೀಳ್ಗ ಳೇನೇ (ವಾಜಿಶ. ೦೮-೭೭). ೨. ಹೊರಗಿನ ; ಬಾಹ್ಯದ : ರಾಗಿಸಿ ಸಮಯಿಗಳಂ ಕಂಡಾಗಳೆ ಸಂತಚ್ಛಿ ಮಾಟ್ಟರಲ್ಲದೆ ಕೊರಲಿಂ ಮೇಗಣ ಮಾತಂ ನುಡಿಯುರದೇಗೆಯ್ದುಂ (ಸಮಶ. ೪-೬೩). ಮೇಗಳ್ಪಣ = ತೆರಿಗೆಯ ಮೇಲೆ ಕೊಡಬೇಕೆಂದು ಕೇಳುವ ಹೆಚ್ಚಿನ ಪಣ : ಅರ ಸರ್ಗ್ಗೆ ಸೇಸೆಯೆನ್ದರಸರ ಕಾಣಿಕೆಗಾಯ ಧರ್ಮಮುಪ್ಪಾದೆಱೆಯೆಂದರುವಣ ಮೇಗಳ್ಪಣಮೆನ್ದರೆಗಾಣಿಯನಕ್ಕಿ ಕೊಣ್ಡ ಮರ್ಚಿಣ್ಪಾರ್ಳರ್ (ಕ್ಶಾಇ. XI–ii, ೦೬೩–೬೦ : 1113). [ ದೇ. ಶ ತಮಿ. ಮೇಕ್ಕು : ತುಳು. ಮೇಕ್ ]

ಮೇಗುಗಾಣ್ (ಕ್ರಿ). ಮುಂದಾಗುವುದನ್ನು ಕಾಣು ; ಭವಿಷ್ಯವನ್ನು ತಿಳಿ : ಅರಸನೀತನ ಭಕ್ತಿಗಂ ವ್ಯವಸಾಯಕ್ಕಂ ಮೆಚ್ಚಿ ತನ್ನ ತಂದೆರ್ಮೆ ಗಳೊಳೊಂದುಮಂ ಕೊಳ್ಳದೆ ನೀನೆ ಕೊಳ್ಳೆಂದು ಕೊಟ್ಟೊಡಾ ದಯೆಗೆ ನಯಂ ಬಡೆದೆನೆಂದು ತಲೆಕೆಟಗಾಗಿ ಮೇಗುಗಾಣದೆ . . . ಚಂದ್ರಮತೀಮಹಾ ದೇವಿಯ ಕೀಲಾರದ ಧೇನುಗಳಂ ಸೂಱೆಗೊಳ್ವಂತೆ ಕೊಂಡುಪೋದೊಡೆ (ಸುಕುಮಚ. ೭-೩೩ ವ). [ ಮೇಗು + ಕಾಣ್ ]

ಮೇಗುತಿ (ನಾ). ಜೈನರ ಒಂದು ಬಸದಿಯ ಹೆಸರು : ಮೇಗುತಿ ಎಂಬ ಜೈನದೇವಾಲಯವು ಎರಡನೆ ಪುಲಿಕೇಶಿಯ ಕಾಲದಲ್ಲಿ (ಕ್ರಿ.ಶ. ೬೩೪) ನಿರ್ಮಿತವಾಯಿತು (ಭಾಕರ. ೫೦೩) ; ಗ್ರಾಮದ ಪೂರ್ವಕ್ಕೆ ಸ್ವಲ್ಪ ಮೇಲ್ಭಾಗದಲ್ಲಿ ಮೇಗುತಿ ದೇವಾಲಯವಿದೆ. ಮೇಗುತಿ ಎನ್ನುವುದು ಮೇಗುಡಿ (ಮೇಲಿನ ಗುಡಿ) ಎಂಬುದರ ಅಪಭ್ರಂಶವೆಂದು ಹೇಳುತ್ತಾರೆ (ವೈ ವಾಸ್ತು. ೬೯). [ ? ]

ಮೇಗುದೋಱ್ ' ಮೇಗುದೋಱು ' ನೋ.

ಮೇಗುದೋಱು, ಮೇಕುದೋಱ್, ಮೇಕುದೋಱು, ಮೇಗು ದೋಱ್ (ಕ್ರಿ). ೧. ಮೇಲಾಗಿ ಕಾಣುವಂತೆ ಮಾಡು ; ಹೆಚ್ಚೆಂದು ತೋರ್ಪಡಿಸು ; ಮೇಲೆನಿಸು : ರಾಜ್ಯಲಕ್ಷ್ಮಿಯಂ . . . ದುಸ್ಸಹ ಮಹಾಕಲುಷಕಲುಷಿತಸ್ವಭಾವೆಯೆಂದು ಪರಪುರುಷಕಂಠಗ್ರಹಾನುರಕ್ತಭಾವ ರಸಿಕೆಯೆಂದು ಮನದೊಳೆಳೆವಯಿಸಿ ಪುರುಡು ಪುಟ್ಟೆ ಮೇಗುದೋಱಿ ಸವತಿ ಮಾಡುವಂತೆ . . . ಚಂದ್ರಿಕಾದೇವಿಗೆ . . . ಇತ್ತನಗ್ರಮಹಿಷೀಪದವಂ (ಧರ್ಮಾಮೃ. ೦೪-೭ ವ). ೨. ಆಡಂಬರವನ್ನು ತೋರಿಸು ; ಡೌಲನ್ನು ಪ್ರದರ್ಶಿಸು : ಮೇಗುದೋಱುವಳ್ವಳ್ತು ಪಣಂ ನೊಯ್ವರ್ಮೆಳ್ವಡಂ ನುಡಿವರ್ಥಿದ್ರವ್ಯಮನೆ ಪಾರ್ವರ್ (ಮದತಿ. ೧೦-೭೩). ಮೇಕುದೋಱ್ : ೩. ಬೀಗು ; ಗರ್ವಿಸು : ಡಾಳನಂ ಸೆಗವು ಟಕ್ಕಿಪನಂ ತುಱು ಮೇಕು [ಶಾಶಿಲಂ. ಗು]ದೋರ್ಪನಂ ಮಾಳಬೆಗಿಕ್ಕು (ಲೀಲಾವ. ೨-೦೭೮). ೪. ಒಯ್ಯಾರವನ್ನು ಮಾಡು ; ಬಿಂಕವಮಾಡು : ಕಾಡುವ ಜೇಡುವ ಮೇಕುದೋರ್ಪ . . . ಮನಂಗುಂಡದಿರ್ಪ ಕೈತವಂಗಳೊಳಿರುತಾಗಳುಂ ಹರೆಯಮಿಲ್ಲದೆಯುಂ ನೆಱೆದಿರ್ದಳೋ ಇವಳ್ (ಶೃಂಗಾರ. ೩-೯೬). ಮೇಕುದೋಱು : ೨. ಅನೃತವಾದಿಯೊಳು ಮಾತಿನೊಳ್ಮೇಕುದೋಱುವ ನೋಳಾಡುವುದದು ನೀತಿಯಲ್ಲಱ ಬೆಲೆವೆಣ್ಗ (ಶಂಶಾಶಂ. ೨೦-೬೪) ; ಬೆಲೆವೆಣ್ಣೋ [ಣ್ಗೋ] ಯುದ ಮೇಕುದೋಱುವವನಂ . . ಅವಗಂ ಒಲಿಯರ್ (ವೀರಶಿ. ೬-೦೦೯). ೪. ನೀಱರೊಡನೆ ಮೇಕುದೋಱಿ ಬೇಕಾದ ಭಂಗಾರ ಪಡೆವುದದೇಗೆಯ್ತು (ನಾಗಳು. ೩೦-೦೩೦). ೫. ಸ್ಪರ್ಧಿಸು ; ಪೈಪೋಟಿ ನಡೆಸು : ಮೇಕುದೋಱಿ ಒರೊರ್ವರ ಗುಣಕ್ಕೆ ಮಚ್ಚರಿಸಿ ತೋಱು ತ್ತಿರ್ಪರೀ ಕಾಲದರಸುಗಳ್ (ಶಂಶಶಂ. ೫೦-೦೩). ಮೇಗುದೋಱ್ : ೬. ಮೋಸಮಾಡು ; ವಂಚಿಸು : ಬೆಸವರಿಗೆಯ್ದು ಬೇಸ[ಱು]ಸುವಿತ್ತುದ ನೆತ್ತುವ ಮೇಗುದೋರ್ಪ ಕಂಟಿಸುವ ಕನಲ್ದ ಕಡ್ಡಯಿಸುವೇಱದನಂ ತಿಳಿಪಲ್ ಮನಂಗೊಳಲ್ (ಶಾಂತಿಪು. ೯-೦೦೩). [ಮೇಗು + ತೋಱು]

ಮೇಗುವೇಟ್ (ಕ್ರಿ). ಮೋಸದ ಮಾತನ್ನಾಡು : ಎನಗಂ ಮೇಗು ವೇಟ್ಟಪ್ಪೆಯಿಲ್ಲಾಪ್ಪೊಡೆ ನಿನ್ನಂ ಕಾವ ಗಂಧರ್ವನ ಬಡಿಸುಗೆ ಪೋಗು (ಶಂಶಶಂ. ೮-೭೦). [ಮೇಗು + ಪೇಟ್]

ಮೇಗುಸಿರ್ (ನಾ). ಏದುಬ್ಬಸ ; ಮೇಲುಸಿರು : ' ಮೇಗುಸಿರಿಡು ', ' ಮೇಗುಸಿರ್ಗೊಳ್ ' ಪರಾ. [ಮೇಗು + ಉಸಿರ್$_2$]

ಮೇಗುಸಿರಿಡು (ಕ್ರಿ). ಮೇಲುಸಿರು ಬಿಡು ; ತೇಕು : ಮೇಗುಸಿರಿಡುಗುಂ ತಲೆಯಂ ಬಾಗುಗುಮಂಘ್ರಿಗಳು ನಡುಗಳುಂ ಕಂಪಿಸುಗುಂ (ಅಕ್ಕಸಾ. ೦೦-೦೬) ; ಮೇಗುಸಿರಿಡುಗುಂ ತಲೆಯಂ ಬಾಗಿರ್ಕುಂ ಮೇಯದಿರ್ಕುಂ (ಅಕ್ಕಸಾ. ೦೦-೩೩). [ಮೇಗುಸಿರ್ + ಇಡು$_1$]

ಮೇಗುಸಿರ್ಗೊಳ್ (ಕ್ರಿ). = ಮೇಗುಸಿರಿಡು : ಬೇಗಮುಸಿರ್ ಮುಟ್ಟಿಗೆ ವರೆ ಮೇಗುಸಿರ್ಗೊಳೊರ್ಮೆಗೊರ್ಮೆಗಗಿಮೊಟ್ಟದೆ ಬಂದಾಗಳೆಗಿರ್ದ ನಂದು ನಭೋಗತಿಯೊರ್ವಂ ನೃಪೇಂದ್ರಪದಸರಸಿಜದೊಳ್ (ಶಾಂತಿಪು. ೯-೬೩). [ಮೇಗುಸಿರ್ + ಕೊಳ್$_1$]

ಮೇಗುಸಿರ್ವಡು (ಕ್ರಿ). = ಮೇಗುಸಿರಿಡು : ಮೇಗುಸಿರ್ವಟ್ಟ ಸುಯ್ಯುಂ . . . ಬೇಕಾಳನ ಬಸಿಱಂತೆ ಬೆನ್ನಂ ಪತ್ತಿದ ಬಸಿಱುಂಬೆರಸು ಬರ್ಪ ವೃದ್ಧ ತಾಪಸನಂ ಕಂಡು (ಶಂಶಶಂ. ೭೩-೭). [ಮೇಗುಸಿರ್ + ಪಡು$_1$]

ಮೇಗುಸಿರ್ವಿಡು (ಕ್ರಿ). = ಮೇಗುಸಿರಿಡು : ಪಂದೆಯಂ ಪಾವಡರ್ದಂತೆ ಮೇಗುಸಿರ್ವಿಟ್ಟು ಹಮ್ಮುದಂಬೋಗಿ (ಶಂಶಶಂ. ೯೭-೦೬). [ಮೇಗುಸಿರ್ + ಬಿಡು$_1$]

ಮೇಗೆ (ಅ). ೧. ಮೇಲಕ್ಕೆ ; ಮೇಲೆ : ನೆಲಕ್ಕೆ ವರುತಿರ್ದ ವಿಮಾನಂ ಬಾರದೆಡೆಯಿಂದ ಮೇಗೆ ಮಗುಟ್ಟಿದುದುಮಂ . . . ಕಂಡೆನೆಂದು (ವಡ್ಡಾರಾ.

೮೩-೨೪) ; ನಿಜಪಾದಾಂಬುರುಹಕ್ಕೆ ಪಾದ್ಯವಿಧಿಯುಂ ನೇತ್ರಾಂಬುವಿಂ ಮೂಡುವಗ್ರಜನತ್ಯುನ್ನತಮಪ್ಪ ಮಸ್ತಕದ ಮೇಗೋರಂತೆ ಪಾಯ್ವಾತ್ತ ಬಾಷ್ಪಜಲೌಘಂಗಳಿಂ (ಆದಿಪು. ೦೪-೦೩೩) ; ಆ ಗಿರಿಯ ಮೇಗೆ ರಂಜಿಪುದತುಳವೀರಶ್ರೈವಾಗಮದ ಕೋಂಟೆಯಿಂದಮೃತದಗಳಿಂದೆ . . . ಪುಣ್ಯಂಗಳ ನಿವಾಸಮಘನಾಶಮಾ ಕೈಲಾಸವಾಸಂ (ಶಿವಪು. ೨-೦೨). ೨. ಮತ್ತು ; ಅದರೊಂದಿಗೆ : ಇನ್ನು : ಮಡಗಿನ ಮಣ್ಣ ಮೇಗೆ ಒಸ್ಬು ಕೊಲಿಮೆಗೆ ಒರ್ಕಣ್ಣುಗ ಮಣ್ಣು (ಶಾಶಾ. IX-i, ೦೮-೦೬ ; 883). ೩. ಮುಂದಕ್ಕೆ; ಮುಂದೆ : ನಿಯಮಿತಕಾಲದುಪರಿತನ ಕಾಲದೊಳೆ ಸೋಕಮರ್ಪಾ ಹಾರಮುಂಟಪ್ಪುದಱಿಂದಂ ಹಾರತಂಗಳುಮಕ್ಕುಮಲ್ಲಿಂ ಮೇಗೆ ಯಥಾಗತಿ ಪರಿಣತ್ಯನುಸಾರಿಯಾಗಿ ಯೋಜಿಸಿಕೊಂಬುದು (ಪಸಾರ. ೦೦೩೭) ; ಪುರದಿಂ ಪಡುವಲು ತೊಱೆಯ ಕೂಡಿದ ಹಳ್ಳ ನೀರುವರಿವ ಮೇರೆಯಾಗಿ ಮೇಗೆ ಕಲುಕಟಗಗೆಱೆ ಬಸವಗೋಡಿ ಬಡಗಲು ಮೊಸರಗುತ್ತಿಎ ರಾರವಿಡ[ದು] ಮೂಡಲು ಜಂಭಿಗಲ್ಲ ಕಣಿ ಕುಚ್ಚಗೋಡಿಯಿಂ ಬಂದ ಹಳ್ಳ ನೀರುವರಿವ (ಎಇ. XXI, ೦೪-೭೮; 1260). ೪. ಬಳಿಕ; ಆಮೇಲೆ; ನಂತರ : ಮದುವೆ ಮಾಡಿದಾ ಮೇಗಾ ಸಂಡಗೆಯ ನೀಡಲಾಗದೆಂಬಮರ್ಯಾದ್ಧರ್ (ಸಮುಕ. ೦೨-೭೯); ಸ್ವಸ್ತಿಶ್ರೀ ಶಕಾಬ್ದ ೧೩೫೫ ಱ ಮೇಗೆ ಸಲುವ ಪ್ರಮಾದೀಚ ಸಂವತ್ಸರದ ವಯಿಶಾಖ ಶು ೧೩ (ಎಕ. IX (S). ಹೊಸಕೋ. ೦೪೪-೨ ; 1433); ಈತ ವೈರೋದ್ಯೋಗಗತಿಗೊಡರಿಸಿದನಾದೊಡೆ ಕಾಗೆ ಹದ್ದಿಗೆ ಹರಹುವೆನು ಕಡಿದೀ ಚತುರ್ಬಲವ ಮೇಗೆ ಬರಲಪಕೀರ್ತಿಯದಕೇನೀಗಲೆಣಿಕೆ (ತೊರರಾ. ೨-೭-೦೯). ೫. ಎದುರಾಗಿ; ವಿರುದ್ಧವಾಗಿ : ವಿಘೀಷಣನ ಮೇಗಾಕ್ಷೇಪದಿಂ ಪೋಗಿ ವಸ್ತುಗಳಂ ಕಪ್ಪಮನಲ್ಲಿ ಕೊಣ್ಡು (ಎಕ. VII, ಶಿಕಾ. ೦೨೬-೩; 1036). [ < ಮೇಗು ]

**ಮೇಗೆಯ್** 'ಮೇಂಗೆಯ್' ನೋ.

**ಮೇಗೆರೆ** (ನಾ). ಮೇಲೆ ಎಳೆದ ಗೆರೆ,—ರೇಖೆ : ಮೂರ್ತಿಯು ಕಣ್ಮರೆಗಾದರು ಕೀರ್ತಿಯು ಕಣ್ಮರೆಯೋ ? ನೆನವಿನ ಹಿಮಗಿರಿ ಕೊರೆದಿದೆ ಒಲವಿನ ಮೇಗೆರೆಯೋ? (ಅರಳು. ೩೯೦-೨೦).

[ ಮೇ$_2$ ( < ಮೇಲ್$_1$ ) + ಗೆರೆ ( < ಗೆಱೆ$^3$ ) ]

**ಮೇಗ್ಯೆ** 'ಮೇಂಗೆಯ್' ನೋ.

**ಮೇಗೊಗೆ** (ಕ್ರಿ). ಮೇಲಕ್ಕೆ ನೆಗೆ, – ಹಾರು : ನಿಮ್ನನಾಭಿಮಂಡಳಮನೊಳಪೊಕ್ಕು . . . ಮೇಗೊಗೆದು ಬಟ್ಟಮೊಲೆಯುಚ್ಚೆಡೆಯೊಳ್ ಬಟ್ಟೆಗಾಣದೆ ಬಳಸಿ ಸುಳಿದಾಡಿಯುಂ ಸಾಯಂತನಸಮಯಸಮೀರಣಂ ಸೌಖ್ಯಸಾರಸರ್ವಸ್ವಮೆನಿಸಿದಾಗಳ್ (ಚಂದ್ರಪ್ರ. ೮-೪೩) ; ಬೆಳೆದನಾ ವೈಕುರ್ವಣದಲರೆಗಳಿಗೆಯೊಳು ಮುಗಿಲುಚ್ಚಳಿಸಿ ಮೀಂಗಳೆ ತನಗೆ ಕಣ್ಕಾಲ ಗೆಜ್ಜೆಗಳೆನಿಸಿ ಮೇಗೊಗೆದು (ಜೈಭಾ. ೦೮-೨೮). [ ಮೇಗೆ + ಒಗೆ$_1$ ]

**ಮೇಗೋಲ್** (ನಾ). (ಕಬ್ಬಿನ) ಜಲ್ಲೆಯ ಮೇಲುಭಾಗ : ಆಗರದೊಳು ರಸದಾಳಿ ತೆಂಗಾಳಿಯಿಂ ತಾಗಲೊಂದಱೊಳೊಂದು ಹಳಚಿ ಮೇಗೋಲ್ಗಳೊಡೆದಿನಿರಸದ ಪರಿಯೊಳಿಕ್ಷುಸಾಗರ ತುಂಬಿದಂತಾಯ್ತು (ಮೋಹತ. ೨-೪೮).

[ ಮೇ$_2$ ( < ಮೇಲ್$_1$ ) + ಕೋಲ್$_1$ ]

**ಮೇಘ** (ನಾ). ೧. ಮೋಡ ; ಮುಗಿಲು: "ವಾರಿಧರಮಬ್ದಮಭ್ರಂ . . . ಜೀಮೂತಮೆನಲು ಮೇಘಕ್ಕೆ ಪಾಮಂ" (ಮಂಗರಾ, ೧೩-೩); ಮೇಘ ಮುಖರೆನಿಸಿ ಸಂದುರಘೌಘದಿನಂದೋಘಮೇಘಮನೊಡೆ ಮುಱೆ ಶೌರ್ಯಾಘಾತಂ ನೆಗೞೆ ಬಲವ್ಯಾಘಾತಂ ನಿನ್ನ ಪತಿಗಾದುದು ಪೇಸಿಯೇ (ಆದಿಪು. ೦೪-೭೧); ಆಲದಮರದವೊಲೊಗೆದು ವಿಶಾಲತೆಯಿಂ ವರ್ತಿಪ್ಪ ಮೇಘದಿಂ ಮುಱಿಯುಕ್ಕುಂ (ಅಭಿಪು. ೬-೨೦); ಬೆಟ್ಟದ ಬುಡದಲ್ಲಿ ತರೆತರೆಯಾಗಿ ಹೊಯ್ದಾಡುತ್ತಿದ್ದ ಮೇಘಗಳು ಕ್ಷಣಕ್ಷಣಕ್ಕೂ ಹೆಚ್ಚು ಹೆಚ್ಚು ಕಪ್ಪಾಗುತ್ತಿದ್ದುವು (ಮುರಿದಾ. ೩೦). ೨. ಗುಂಪು : ರಾಶಿ : ಮೊತ್ತ. ೩. ಪರಿಮಳಯುಕ್ತವಾದ ಒಂದು ಬಗೆಯ ಹುಲ್ಲು ; ಕೊನ್ನಾರಿ. ೪. ಒಂದು ಬಗೆಯ ಔಷಧದ್ರವ್ಯ; ಅಜಾಜಿ : "ಅಜಾಜಿ :-ಎಲೆಗಳ್ಳಿ, ಜೀರಿಗೆ, ಮೇಘ, ಓಮ" (೭ಸಂ. ೨). ೫. ಕಾಗೆಬಂಗಾರ ; ಅಭ್ರಕ. ೬. [ಸಂಗೀತ] ಒಂದು ರಾಗದ ಹೆಸರು : ತಾನು ಮೊದಲವು ಮುನ್ನವಪಱೊಳು ಗಾನವೊಪ್ಪುವ ದಂಡಿಗೆಯನವಧಾನಿಸುತ ಮಿಗೆ ಮೇಘ ಚಾಳವನೊಡನೆಯೌತಾಣ . . . ಪೊಟ್ಟವಣ ಸಾರಣಮುಲರ್ದಿರಲು (ಐಸಪು. ೦೯-೬). [ ಸಂ. ]

**ಮೇಘಕಾಲ** (ನಾ). ಮೋಡಗಳು ಮಳೆಯನ್ನು ಸುರಿಸುವ ಸಮಯ; ಮಳೆಗಾಲ ; ಇದಮೋಘಂ ಮೇಘಕಾಲಂ ಬರೆ ಗಗನಗೃಹದ್ವಾರದೊಳ್ ತೋರಣಂ ಕಟ್ಟಿದುದೋ . . . ಎಂಬಿನಂ ಕಣ್ಗೆಸೆದುದು ಶಬಲಚ್ಛಾಯೆಯಿಂ ಶಕ್ರಚಾಪಂ (ಸಂರಾಮಾ. ೭-೦೪೩). [ ಸಂ. ]

**ಮೇಘಕುಸುಮ** (ನಾ). ಮೋಡದಿಂದ ಹುಟ್ಟುವಂಥದು ; ನೀರು : "ಅಂಭಸಮಂಬು ತೋಯಂ ಜಲಂ ಜೀವನಂ ಮೇಘಕುಸುಮಮುದಕಂ" (ಮಂಗರಾ. ೦೦೯-೦). [ ಸಂ. ]

**ಮೇಘಘಟೆ** (ನಾ). ಮೋಡಗಳ ಗುಂಪು,— ಸಮೂಹ : ಮರನಂ ಮುಟ್ಟಿದನಿಲ್ಲ ಮೇಘಘಟೆಯೊಳ್ಕಾಲೂಱಿದನಿಲ್ಲಿಲ್ಲ ಭೂಧರಮಂ ದಾಂಟಿದನಿಲ್ಲ (ಅರ್ಜನಿ. ೭-೨೭). [ ಸಂ. ಮೇಘಘಟಾ ]

**ಮೇಘಚುಂಬಿ** (ಗು). ಗಗನವನ್ನು ತಾಕುವ; ಮುಗಿಲು ಮುಟ್ಟುವ : ರಾಯನಡಿದಾವರೆಗೆ ತನ್ನ ಹಣೆಮಣಿಯೊಡ್ಡಿ ತಲೆ ನಿಮಿರ್ದುದಾ ಮೇಘಚುಂಬಿಶೃಂಗೋತ್ತಮಂ (ಶ್ರೀರಾಮಾ. ೩೩೩-೩೪೪). [ ಸಂ. ಮೇಘಚುಂಬಿನ್ ]

**ಮೇಘಜ್ಯೋತಿ** (ನಾ). ಮುಗಿಲುಗಳ ಪರಸ್ಪರ ಘರ್ಷಣೆಯಿಂದುಂಟಾಗುವ ಬೆಳಕು ; ಮಿಂಚು ; ವಿದ್ಯುತ್ತು : "ಮೇಘಜ್ಯೋತಿಃ, ಇರಮ್ಮದಃ — ೨ ಮೇಘದೊಳಗಿರುವ ತೇಜಸ್ಸಿನ ಹೆಸರುಗಳು" (ಸಿದ್ಧಾಂತಿ. ೨೮). [ ಸಂ. ಮೇಘಜ್ಯೋತಿಸ್ ]

**ಮೇಘಡಂಬರ** (ನಾ). ೧. ಮೋಡಗಳ ಸಮೂಹ,– ಗುಂಪು. ೨. ಮೋಡಗಳ ಪರಸ್ಪರ ಘರ್ಷಣೆಯಿಂದುಂಟಾಗುವ ಧ್ವನಿ; ಗುಡುಗು : ಗಭೀರದುಂದುಭಿರವಂ ಪೊಱಗಂ ಮಿಗೆ ಮೇಘಡಂಬರಂ ಘಟಿಯಿಸೆ ಮೇಘಡಂಬರಮನೇಂ ಕಱೆದತ್ತೊ ವಿಭೀಷಿಯೆಂಬ ಪರ್ಯಟಿಯುಂ (ಚಂದ್ರಪ್ರ. ೦೦-೨೭). ೩. ಆತಪತ್ರ; ಕೊಡೆ; ಛತ್ರಿ : "ತಱೆ, ಕೊಡೆ, ಮೇಘಡಂಬರಂ — ಈ ೩ ಆತಪತ್ರಂ" (ಕಪಾ. ೭೦-೩೨೭); ತಲೆವಱಿದಾನೆ ಸುತ್ತಿ ಮಲವುಂ ಬರೆ ತಳ್ತಿರೆ ಮೇಘಡಂಬರಂ . . . ಬರ್ಪಲಘುಪರಾಕ್ರಮಂ ದಶರಥಂ (ಸಂರಾಮಾ. ೫-೦೦೬); ಎತ್ತಿದ ಓಲಿಯ ಸತ್ತಿಗೆ ಮುತ್ತಿನ ಕೊಡೆ ಮೇಘಡಂಬರಂ ಗೆಲೆ . . . ಬರುತ್ತಿರ್ದುದು ಜನಕೆ ಪೆಂಡವಾಸದ ತಂಡಂ (ಜಗಾ. ೦೪-೫೨); ಎಳೆಮುತ್ತಿನ ಮೇಘಡಂಬರಂ ಬಗೆಗೊಳಿಕುಂ (ರಾಜಶೇ. ೭-೦೫). [ ಸಂ. ]

**ಮೇಘದ್ವಾರ** (ನಾ). ೧. ಆಕಾಶ; ಗಗನ : "ವಿಹಾಯಸಃ, ನಾಕಃ . . . ಮೇಘದ್ವಾರಂ, ಮಹಾಬಿಲಂ—೭ ಆಕಾಶದ ಹೆಸರುಗಳು" (ಸಿದ್ಧಾಂತಿ. ೨೭). ೨. ಸ್ವರ್ಗ. [ ಸಂ. ]

**ಮೇಘನಂದಿ** (ನಾ). ಒಬ್ಬ ಜೈನಯತಿಯ ಹೆಸರು : ಶ್ರೀ ಮೇಘನನ್ದಿ ಮುನಿ ಶಾನ್ನಮಿಲೂರ್ಬ್ಬರಸಂಘದಾ × × × ತೀರ್ಥದಿ ಸಿದ್ಧಿಯಾನ್ (ಎಕ. II, ೦೦೯-೦; ಕು. 700). [ ಸಂ. ಮೇಘನಂದಿನ್ ]

**ಮೇಘನಾದ** (ನಾ). ೧. = ಮೇಘಡಂಬರ ೨. ೨. ವರುಣನ ಹೆಸರುಗಳಲ್ಲಿ ಒಂದು. ೩. ರಾವಣನ ಮಗ ; ಇಂದ್ರಜಿತು. ೪. ಘಟೋತ್ಕಚನ ಮಗ : ಈ ಘಟೋತ್ಕಚನ ತನುಸಂಭವಂ ಬಡವನೇ ಮೇಘನಾದಂ (ಜೈಭಾ. ೦೨-೩೮). ೫. ಮುತ್ತುಗದ ಮರ ; ಪಲಾಶ : ಸುರೂಪೆಯ ಪಾರ್ಶ್ವದ ಮೇಘನಾದ

ದಿಂದಿರೆಯು . . . ಕೇಡದಬ್ಜಿನೀವರನಭಿಧಾನವಂ ತಳೆದ ಘೂರುಹಮೊ ಪ್ಪುಗುಂ (ರಾಜಶೇ. ೩-೩೬). ೬. ಒಂದು ಬಗೆಯ ಸಸ್ಯ. [ಸಂ.]

**ಮೇಘನಾದಿ** (ನಾ). ಒಂದು ಬಗೆಯ ಸೊಪ್ಪು ; ಕಿರುಕುಸಾಲೆ : "ಕಿರುಕುಸಾಲೆಯುಂ ಮದಕ್ಕಂ ನಿರುತಂ ತಾಂ ಮೇಘನಾದಿ" (ಕರಿಕಂ. ೭೦). [ಸಂ. ಮೇಘನಾದಿನ್]

**ಮೇಘನಿನದ** (ನಾ). ೧. = ಮೇಘಡಂಬರ ೨ : ಹಂಗೋಪಾಲಪದಕ್ಕೆ ತೂರ್ಯಪಟುಘೋಷಂ . . . ಕಳಹಂಸಯೂಥಗಮನೋದ್ಯೋಗಕ್ಕೆ ಭೇರೀಗಭೀರರವಂ ತಾನೆನೆ ಸನ್ನ ಮೇಘನಿನದಂ ಪೊಣ್ಮುತ್ತು ರೋದೋಂತ ದೊಳ್ (ಚಿಸಾ. ೪-೬). ೨. ಒಂದು ಬಗೆಯ ಸೊಪ್ಪು ; ಕಿರು ಕುಸಾಲೆ : (೬). [ಸಂ.]

**ಮೇಘನಿರ್ಘೋಷ** (ನಾ). = ಮೇಘಡಂಬರ ೨. [ಸಂ.]

**ಮೇಘನಿಸ್ವನ** (ನಾ). = ಮೇಘಡಂಬರ ೨ : ಪರೆವ ಕಚಂ ಮುಗಿಲ್ ಕರತಳಾಹತಿಯಿಂ ಪಱಿದೊಕ್ಕ ಮುಕ್ತಿಕಾಭರಣದ ಮುತ್ತುಮಾಲೆವರಲಾ ಸುಗಳಧ್ವನಿ ಮೇಘನಿಸ್ವನಂ (ಸುಕುಸು. ೧೦-೨೦೩). [ಸಂ.]

**ಮೇಘಪರ್ವತ** (ನಾ). ಕುಲಪರ್ವತಗಳಲ್ಲಿ ಒಂದು : ಶಂಖಕೂಟ . . . ಮೇಘಪರ್ವತ ಹೇಮಪುಷ್ಪಾ ಪರಾಹಗಿರಿ ಮಯೂರನಗ ಚಾರುಧಿಶ್ಯಲೇಂದ್ರ ವೆಂಬ ಹದಿನೇಳು ಕುಲಗೋತ್ರಂಗಳೇ ಪೂರ್ವೋಕ್ತ ಸುಪಾರ್ಶ್ವವೆಂಬ ಕೀಲಕ ಪರ್ವತಕ್ಕೆ ಬಡಗಣದಿಕ್ಕಿನಲಿಹವು (ವಿವೇಕ. ೧೭೩). [ಸಂ.]

**ಮೇಘಪಾಷಾಣ** (ನಾ). [ಜೈನ] ಮುನಿಗಳ ಒಂದು ವರ್ಗ : ಗಚ್ಛ ಗಳು : ಪೊಗಿರಿ, ಪುಸ್ತಕ, ತಗರಿಗಲ್, ಸರಸ್ವತಿ . . . ಮೇಘಪಾಷಾಣ (ಕಶಾಲ. ೯೭). [ ? ]

**ಮೇಘಪುಷ್ಪ** (ನಾ). ೧. = ಮೇಘಕುಸುಮ : "ಅಪಃ (ಪ್), ತೋಯಂ, ಘನರಸಂ, ಪಯಃ, ಪುಷ್ಕರಂ, ಮೇಘಪುಷ್ಪಂ . . . ಜೀವ ನೀಯಂ—ಈ ೨೬ ನೀರ್" (ಹಲಾಯು. ೦೦೬-೨೬) ; ಹರಿಸದಿ ಮೇಘ ರಂಜಿಗೆ ಮೇಘಪುಷ್ಪವ ತೋರಿದ ಮೇಘದ ತೇಜನಾಯ್ತು (ತ್ರಿಃಶಾಂ. ೩-೯೬). ೨. ವಿಷ್ಣುವಿನ ನಾಲ್ಕು ಕುದುರೆಗಳಲ್ಲಿ ಒಂದು : ಎಡಗಡ ಯಲ್ಲಿ ಕಟ್ಟಿರುವುದು ವೇಗದಲ್ಲಿ ಮೇಘಪುಷ್ಪವೆಂಬ ಕುದುರೆಗೆ ಸದೃಶ ವಾದದ್ದು (ವಕಲಾ. ೨೦೬). [ಸಂ.]

**ಮೇಘಮಲ್ಲಾರ** 'ಮೇಘಮಲ್ಹಾರ' ನೋ.

**ಮೇಘಮಲ್ಲಾರ್** 'ಮೇಘಮಲ್ಹಾರ' ನೋ.

**ಮೇಘಮಲ್ಹಾರ**. ಮೇಘಮಲ್ಲಾರ. ಮೇಘಮಲ್ಹಾರ್ (ನಾ). [ಸಂಗೀತ] ಒಂದು ರಾಗದ ಹೆಸರು : P ಈ ರಾಗವನ್ನು ಹಾಡಿದರೆ ಮಳೆ ಸುರಿಯುವುದೆಂಬ ನಂಬಿಕೆಯಿದೆ : ನಮ್ಮಲ್ಲಿ . . . ಅಮೃತ ವರ್ಷಿಣಿ ಮತ್ತು ಮೇಘಮಲ್ಹಾರ ರಾಗಗಳು ಮಳೆ ಬರಿಸುವುದು ಮುಂತಾದ ಭಾವನೆಗಳೂ ಅದರ ಕಥೆಗಳೂ ಇವೆ (ಭಾರಶ. ೩೯೯). **ಮೇಘಮಲ್ಲಾರ** : ಮೇಘಮಲ್ಲಾರದಲ್ಲಿ ಜಗತ್ತಿನ ಎಲ್ಲ ಮಳೆಯ ಅಶ್ರು ಪಾತಧ್ವನಿ ಸೇರಿ ಅದೇ ಒಂದು ನವತರ ಭಾಷೆಯಾಗುತ್ತದೆ (ಚಿಂರ. I, ೨೬೦). **ಮೇಘಮಲ್ಹಾರ್** : ಮೇಘಮಲ್ಹಾರ್ ಹಾಡಿ ಮಳೆ ಬರುವಂತೆ . . . ಮಾಡಿದ ತಾನಸೇನರ ಕಥೆಗಳನ್ನು ಕೇಳದವರಿಲ್ಲ (ಸಂಗೀತಂ. ೨೦೩) ; ಮೇಘಮಲ್ಹಾರ್ ಅಂತ ಹಿಂದೂಸ್ಥಾನಿಯವರು ಹೇಳುವ ಒಂದು ರಾಗ ವನ್ನು ಕೆಲವು ದಿನದ ಹಿಂದೆ ನಾನು ಕೇಳಿದ್ದೇನೆ (ರೂಲಕ. ೩೪). [←ಮರಾ. ಮೇಘಮಲ್ಹಾರ್. / ಸಂ. ಮೇಘಮಲ್ಹಾರಿಕಾ]

**ಮೇಘಮಾರ್ಗ** (ನಾ). ಆಕಾಶ : ನಾಕಜರನರ್ಕಲಂಬಿಡದದೇಂ ನಡೆ ಗೊಂಡರೊ ಮೇಘಮಾರ್ಗದೊಳ್ (ಜಗಬಿ. ೦-೯೦). [ಸಂ.]

**ಮೇಘರಂಜಿ** (ನಾ). [ಸಂಗೀತ] ಒಂದು ರಾಗದ ಹೆಸರು ; ಸರಸ ಪಿಕಾಲಾಪಿಯು ಸವಿವಾಡುಗೇಳ್ವರಲೇಜಿಮದು ನವಮೇರು ಹರಿಸದಿ ಮೇಘ ರಂಜಿ[ಶಾಶಾಂ. ಫಿ]ಗೆ ಮೇಘಪುಷ್ಪವ ತೋರಿದ ಮೇಘದ ತೇಜನಾಯ್ತು (ತ್ರಿಃಶಾಂ. ೩-೯೬) : ಮೇಘರಂಜಿಯನೊರ್ವ ನಾಲಾಪಿಸಿದರೆ ನಿದಾಘ ಕಾಲದೊಳು ತತ್‌ಕ್ಷಣವೆ ಮೇಘ ಕವಿದು ಮಳೆಗಱೆವುತಿರಲು ಕಂಡು ಮೇಘರಂಜಿಯ ನಿಲಿಸಿದನು (ಭರತ. ೬೮-೬). [ಸಂ. ಮೇಘರಂಜೀ]

**ಮೇಘರಂಜನಿ** (ನಾ). = ಮೇಘರಂಜಿ : ಕೌಶಿಕಿ ಪೇಳಾವಳಿ . . . ಮೇಘ ರಂಜನಿ [ ಶಾಶಾಂ. ಮೇಘರಂಜಿ ] . . . ಎಂಬ ಮೂವತ್ತುನಾಲ್ಕು ಭಾಷಾಂಗದಿಂದಾದ ರಾಗಂಗಳು (ವಿವೇಕ. ೦೮೮). [ಸಂ. ಮೇಘರಂಜನೀ]

**ಮೇಘಲೋಕ** (ನಾ). ಆಕಾಶ ; ಗಗನತಳ : ಸಂಧ್ಯಾಶಿಲ್ಪಿಯು ಸುವರ್ಣ ಯಕ್ಷಿಣಿ ಮೇಘಲೋಕಕೆ ಓಕುಳಿಯೆರಚಿದೆ (ಕಕ್ಷಿಕಾ. ೬೬-೨). [ಸಂ.]

**ಮೇಘವರ್ಣಿಗೆ** (ನಾ). ೧. = ಮೇಗವರ್ಣಿಗೆ ೧. ೨. ಆಕಾಶಬಣ್ಣದ ಒಂದು ಬಗೆಯ ರೇಷ್ಮೆಬಟ್ಟೆ : ಅಲ್ಲಲ್ಲಿ ಕಟ್ಟಿದ ಪುಲ್ಲಿಯ ಪಟ್ಟೆಗಳ ಮೇಲೆ ಬಳಸಿದ ಮೇಘವರ್ಣಿಗೆಯ ಚೌಕದ ವಿಳಾಸದ ಕಥಾಯಿಯ ಸುಚ್ಚ ಮಯನೀವ ಪಟ್ಟೆಯ ಪಟ್ಟೆಗಳ (ಗಂಕ. ೦೦-೨೮ ವ) ; ಪಳಿ ಪಟ್ಟೆ, ಪುಲ್ಲಿ ಚೀನಾಂಬರ ದಸರಿಗಬ್ಬುಳಗಂಡಿ ಮೇಘವರ್ಣಿಗೆಯ ತಲೆಯ ಮೇಲೆಲ್ಲರ್ಗೆ ಕಱೆದರು ವಸ್ತ್ರದ ಮಳೆ ತಾನೆ ಕಱೆದುದೆಂಬಂತೆ (ಭರತ. ೬೩-೦೦೩) ; ವಿಶಾಲವಾದ ಸ್ತಂಭಗಳ ನಡುವೆ ಮೇಘವರ್ಣಿಗೆಯ ಮೇಲುಕಟ್ಟು, ಚೌಕ ವಿಲಾಸದ ಕಡೆಗಟ್ಟು . . . ನೇತ್ರಾವಳಿ, ರತ್ನಾವಳಿಗಳಿಂದ ಮಂಟಪ ಸುಂದರವಾಗಿ ರಾರಾಜಿಸುತ್ತಿತ್ತು (ಗಂಸ. ೦೨೩). [ಮೇಘ + ಬಣ್ಣಿಗೆ$_1$. / ತೆಲು. ಮೇಘವನ್ನೆ]

**ಮೇಘವರ್ಣ** (ನಾ). ಮುಗಿಲಿನ ಬಣ್ಣ ; ಬೂದುಬಣ್ಣ. [ಸಂ.]

**ಮೇಘವಹ್ನಿ** (ನಾ). ಮುಗಿಲುಗಳ ಪರಸ್ಪರ ಘರ್ಷಣೆಯಿಂದ ಭೂಮಿಗೆ ಇಳಿಯುವ ವಿದ್ಯುತ್ಪ್ರವಾಹ ; ಸಿಡಿಲು ; ಅಶನಿ : "ಮೇಘವಹ್ನಿಃ, ಇರಮ್ಮದಃ—ಈ ೨ ಮುಗಿಲ ಕಿಚ್ಚು" (ಹಲಾಯು. ೦೩-೭೦) ; ಮೇಘ ವಹ್ನಿ ಧರೆಗೆಱಗುತ್ತ ಲೋಕವ ಬೆಸಗೊಂಡಿತ್ತೆ (ಅವತಂ. ೨೪೭-೦೦೨೩). [ಸಂ.]

**ಮೇಘವಾಹನ** (ನಾ). ೧. ಮುಗಿಲನ್ನು ವಾಹನವಾಗಿ ಉಳ್ಳವನು : ಇಂದ್ರ : "ಇಂದ್ರಃ . . . ಮರುತ್ವಾನ್, ಮೇಘವಾಹನಃ—ಈ ೩೯ ದೇವೇಂದ್ರನ ಪೆಸರ್" (ಹಲಾಯು. ೦೦-೩೨) ; ಸ್ವಸ್ತಿಸಮಸ್ತಜಗದ್ವಿನಮಿತ ವೀರ್ಯ್ಯರುಂ ಭೂದೇವಿಲಬ್ಧವರಪ್ರಸಾದರುಂ ಮೇಘವಾಹನಪ್ರಸಾದ ಜನಿತಜೀವನರು . . . ಎಂಭತ್ತನಾಲ್ಕುಲಕ್ಷ್ಯೋನಿಮುಖಜೀವಕ್ಕಾದ ರರುಂ ಎಲ್ಲಾ ಸಮಯಕ್ಕುತ್ತವರ್ಮನೆಯಿನಿಪರುಂ (ಎಕ. IV (R), ಕಾಮರಾ. ೨೪೬-೦೦ ; 1289). ೨. ಶಿವ ; ಈಶ್ವರ. [ಸಂ.]

**ಮೇಘವಿಸ್ಫೂರ್ಜಿತ** (ನಾ). ೧. = ಮೇಘಡಂಬರ ೨. ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸು ಗಳಲ್ಲಿ ಹತ್ತೊಂಬತ್ತನೆಯದಾದ, ಅತಿಧೃತಿಯೆಂಬ ಛಂದಸ್ಸಿನ ಒಂದು ವೃತ್ತ : ವಸಕ್ಷ್ಮಾನಾಕೇಂದ್ರಂ ಹುತವಹಸಮಂ ವಹ್ನಿಯುಗ್ಮಂ . . . ಜನಖ್ಯಾತಂ ನೂತ್ನಂ ಬುಧಜನಹಿತಂ ಮೇಘವಿಸ್ಫೂರ್ಜಿತಾಖ್ಯಂ (ಛಂದೋಂಬು. ೨-೦೬೨). [ಸಂ.]

**ಮೇಘಶಿಖಾವಹ** (ನಾ). = ಮೇಘವಹ್ನಿ : ಗಜದಜಿನಂ ಮುಗಿಲ್ ಗಜಱ ಗರ್ಜಿಪ ರುಂಡಕದಂಬ ಘೋಷಂ . . . ಫಾಲಶಿಖಿ ಮೇಘಶಿಖಾವಹನಾಗೆ ನರ್ತಿಪಂ ಗಜಱಿಪವೊಲ್ ಘನಾಗಮಮುಮದೇಂ ಬಗೆಗೊಂಡುದೊ ನೋಟಕ ರ್ಗಳ (ರಾಜಶೇ. ೬-೦೦೭). [ಸಂ.]

**ಮೇಘಶ್ಯಾಮಳ** (ಗು). ಮೋಡದಂತೆ ನೀಲಮಿಶ್ರಿತ ಕಪ್ಪಾಗಿರುವ ; ಶ್ಯಾಮವರ್ಣದ : ಮೇಘಶ್ಯಾಮಳಾಂಗಂ ತ್ರಿಭಂಗದಿನಿಂಬಾಗಿರೆ . . . ತಾನಾಗಳಾಡಿದಲ್ . . . ಕನ್ನೆ ರೋದೋಂತರದೊಳ್ (ಜಗಬಿ. ೩-೦೭). [ಸಂ. ಮೇಘಶ್ಯಾಮಲ]

**ಮೇಘಾಗಮ** (ನಾ). ಮೋಡಗಳು ಮಳೆಯನ್ನು ಸುರಿಸುವ ಕಾಲ ; ಮಳೆಗಾಲ : ಉದ್ದಾಮನಿದಾಘಮಂ ಬಿದಱಿ ಬೆಂಕೊಂಡತ್ತು ಮೇಘಾಗಮಂ (ಕಾದಂಊ. ೩೪೦); ನಿದಾಘಘೂಪನ ಓಡಿದು ಪೆಕ್ಕಳಿಸಿದನು ಮೇಘಾಗಮಮಹೀಪಾಲ (ತೊರವ. ೯-೬-೯). [ಸಂ.]

**ಮೇಘಾಧ್ವ** (ನಾ). ಆಕಾಶಮಾರ್ಗ ; ಗಗನ : ಮೇಘಾಧ್ವದೆ ಪರಬಲ ಶಬಲೌಘದ ಘಟಕೋಟಿ ಕಱಿವ ಶಸ್ತ್ರಾಸ್ತ್ರಚಯಂ ಜ್ಯಾಘಾತಜಾತ ಪವನ ವ್ಯಾಘಾತದೆ ಮಸುಳಲಸುರಪರನಿಸುತಿರ್ದಂ (ಜಗಂ. ೦೬-೬೯).

[ಸಂ. ಮೇಘಾಧ್ವನ್]

**ಮೇಘೇಶ್ವರ** (ನಾ). ಮುಗಿಲುಗಳ ಒಡೆಯ ; ಇಂದ್ರ : ಜಯನ ಭುಜ ವಿಜಯಸೂಚಕವಾಗಿ ಮೇಘನಾದಸಮಾನಮಾದ ಸಿಂಹನಾದಕ್ಕೆ ಚಕ್ರವರ್ತಿ ಮೆಚ್ಚಿ ಮೇಘೇಶ್ವರ [ಪಾಠಾಂ. ಮೇಘಸ್ವರ]ನಾಮಮಂ ವೀರಾಗ್ರಗಣ್ಯ ಪದವಿಯುಂ ದಯಗೆಯ್ದು (ಆದಿಪು. ೦೩-೬೭ ವ). [ಸಂ.]

**ಮೇಚಕ** (ಗು). ೧. ಕಡುನೀಲಿ ಬಣ್ಣದ ; ದಟ್ಟನೀಲಿಯ ಬಣ್ಣದ. ೨. ಕಪ್ಪು ಬಣ್ಣದ ; ಕರಿಯ : ಆ ವಿಕಚ ಮೇಚಕೋತ್ಪಲಲೋಚನೆಯರೊಳಾ ವಿಮುಕುಲಕಮಲದಲವಿಲೋಲ ಲೋಚನಂ . . . ನೆರೆದಿರೆ (ಆದಿಪು. ೬-೨೩ ವ); ಭೃಂಗಚಯಕ್ಕೆ ಮೇಚಕೋದಂಚಿತ ದರ್ಪಮುಬ್ಬರಿಸದಿರ್ಕೆ (ಚಂದ್ರಪು. ೬-೬೬); ಮುರಿದ ಮಿಸೆಯ ಮೇಚಕಾದ್ರಿಯ ಸರಿಸದವನವನೀಗ ಮುಂಡೋದರಿಯ ಮಗನು (ತೊರವ. ೬-೯-೬). (ನಾ). ೩. ಕಡುನೀಲಿಬಣ್ಣ ; ದಟ್ಟವಾದ ನೀಲವರ್ಣ : ನಾಚಿ ನೇಱಿಲಫಲ ಮೇಚಕವಾಗಲು (ಕರಪಾ. ೩-೨೯). ೪. ಕಪ್ಪುಬಣ್ಣ : "ಅಸಿತಂ, ಶಿತಿಃ, ಕೃಷ್ಣಂ, ಕಾಳಂ, ನೀಳಂ, ಮೇಚಕಂ_ಈ ೬ ಕರಿದು" (ಕಬಾಯು. ೦೨೦-೯೯); ಘೋರಾಂಧಕಾರಕ್ಕೆ ಮಾಡಿದ ಕೂಪಂ . . . ತಾನೆ ದಲೆಂಬಂತಿರೆ ಕಾಚಮೇಚಕಚಯಚ್ಛಾಯಾಂಬುವಿಂ ಗುಣ್ಪಿನಿಂ ಪುದಿದಿರ್ದತ್ತು ಸರೋವರಂ (ಶಂಕರಾ. ೦೩-೬೨); ತೊಲಗೆ ರಜಂ ತಮ ಮಿದು ಪೊಱತೊಲಗುವಂತೆಸೆಯೆ ಮೇಚಕಂ ಚೂಚಕಂ (ರಾಜಶೇ. ೯-೩೩). ೫. ದಟ್ಟವಾದ ಹಸುರುಬಣ್ಣ : ಮಂಗಳಮಾಗಳ್ಂ ನೆಲಸಿದಾ ಜಿನ ಗೇಹದ ಪಂಚರತ್ನಕೂಟಂಗಳ ತಳ್ತ ಮೇಚಕಮರೀಚಿಲತಾಳಿಯ ಪರ್ವಿನಿಂ ನಭೋರಂಗಮದೊಪ್ಪಿ ತೋಱಿದುದು (ಲೀಲಾವ. ೮-೬೭). ೬. ನವಿಲ್ಲು ಗರಿಯಲ್ಲಿರುವ ಕಣ್ಣು ; ಚಂದ್ರಕ : "ಚಂದ್ರಕಃ, ಮೇಚಕಃ _ಈ ೨ ಹೀಲಿಯ ಕಣ್ಣು" (ಕಬಾಯು. ೧೦-೬೯); ಆ ಪುರುಷಕೇಕಿ ಬರ್ಹಿಣಿಯ ಸಮ್ಮುಖದಿ ಬಿರ್ಚಿತ ಕಲಾಪಮೇಚಕಸಹಸ್ರಂಗಳಂ ರಚಿಸಲಸುಗೆಯ್ದುಪುದು ಪ್ರಣಯಮಯನರ್ತನದಿ ದೇವಾಪ್ಸರಾಲಾಸ್ಯಮಯನಂದನೋದ್ಯಾನವಂ (ಶಶ್ರಾಂಗ. ೩೯-೦೯೬೭). ೭. ಮೋಡ ; ಮುಗಿಲು. ೮. ಕತ್ತಲೆ ; ಅಂಧಕಾರ. ೯. ಕೃಷ್ಣಪಕ್ಷ : ಮೇಚಕಚತುರ್ದಶಿಯ ರಾತ್ರಿಯಲಿ ಮತ್ತಮಾ ಮೇಚಕಾಪ್ಷಮಿಯ ರಾತ್ರಿಯಲಾರ್ದ್ರೆಯಲ್ಲಿ ಬಿಡದಾಚರಿಸಿಯುಕ್ಷತೆಯನರ್ಚಿಸಲ್ಕಧಿಕ ಫಲಂ (ಚಕುಪು. ೬-೯-೪೯). [ಸಂ.]

**ಮೇಚಕತೆ** (ನಾ). ಕಪ್ಪುಬಣ್ಣ : ತದ್ವನಿತೆಯ ಹೃದಯದ ಕಾಳಿಕೆಯೆನೆ ಸೊಗಯಿಸಿದತ್ತು ಮೇಚಕತೆ ಚೂಚುಕದೊಳ್ (ಚಂದ್ರಪು. ೩-೬೭). [ಸಂ.]

**ಮೇಚಕಿತ** (ಗು). ೧. ಕಡುನೀಲಿಯ ಬಣ್ಣದ ; ದಟ್ಟವಾದ ನೀಲವರ್ಣದಿಂದ ಕೂಡಿದ : ಉತ್ತುಂಗಮಣಿವಿಭೂಷಣಮರೀಚಿಮೇಚಕಿತ ದೇವಾಂಗನಾಸಿಕಾಮುಸಮೇತಸೀಶಾನ ಕಲ್ಪದಕೃತ್ರಿಮಚೈತ್ಯಾಲಯಂಗಳಂ ಅರ್ಚಿಸಿ (ಆದಿಪು. ೨-೬೯ ವ); ಬಿಸ್ಸಟ್ಟದೋ ಮುಗಿಲೆನೆ ದಂತಿದಾನರಸಮೇಚಕಿತಾಂಬುಸರಂ ವಿರಾಜಿಕುಂ (ಪಾಶಂ. ೨-೫೦). (ನಾ). ೨. ಕಪ್ಪು ಮಿಶ್ರಿತವಾದ ನೀಲಿಯ ಬಣ್ಣ : ಪಕ್ಷಸ್ಥಿತೋಭಯಕುಲಶುದ್ಧನೃಪತಿಮಣಿ ಮಕುಟಮರೀಚಿಮೇಚಕಿತಮಮಪ್ಪ ಸಂಗ್ರಾಮಭೂಮಿಯ ನಡುವೆ (ಶಂಕರಾ. ೦೩-೩೩ ವ). [ಸಂ.]

**ಮೇಚಣಿಗೆ** (ನಾ). (ಕರಾ) ಗರ್ಭಿಣಿಯಾದ ಹೆಂಗಸಿಗೆ ಆರಂಭದಲ್ಲಿ ಬೆಳಗಿನ ಹೊತ್ತು ಉಂಟಾಗುವ ಓಕರಿಕೆ, ಅರುಚಿ ಮುಂತಾದುವು.

[ ? ]

**ಮೇಚು** (ನಾ). ಒಂದು ಬಗೆಯ ತಂತಿ (?) : ನಾರ ಸೀರೆಯನುಟ್ಟು ನಲಿದು ಕಿನ್ನರಿಗಳ ತೋರಮೊಲೆಗಳ ಮೇಲಿಟ್ಟು ಸೇರಿಸಿ ತಂತ್ರಿಯ ಸಂಚಿನಿಂ ಮೇಚನು ಬಾರಿಸುತಸೆಯೆ ಭಾವೆಯರು (ಶಿವಸಂಶಾಂ. ೨೦-೦೩). [ ? ]

**ಮೇಜ** ' ಮೇಜು ' ನೋ.

**ಮೇಜರ್** ' ಮೇಜರು ' ನೋ.

**ಮೇಜರು, ಮೇಜರ್** (ನಾ). ೧. ಸೈನ್ಯದಲ್ಲಿ ಕ್ಯಾಪ್ಟನ್ ಹುದ್ದೆಗೆ ಮೇಲ್ಪಟ್ಟ ಮತ್ತು ಲೆಫ್ಟಿನೆಂಟ್ ಕರ್ನಲ್ ಹುದ್ದೆಗೆ ಕೆಳಗಿನ ಹುದ್ದೆಯಲ್ಲಿರುವ ಒಬ್ಬ ದೊಡ್ಡ ಅಧಿಕಾರಿ : ಸಾಮಾನ್ಯ ಯೋಧನಾಗಿದ್ದ ಅವನು ಇಂದು ಮೇಜರು ಹುದ್ದೆಗೆ ಬಂದಿದ್ದಾನೆ (ರೂಢಿ). **ಮೇಜರ್** : ೧. ನೀನು ಕುಡಿದು ಕುಡಿದು, ಇನ್ನೂ ಯೋಧನಾಗೇ ಉಳಿದಿದ್ದೀಯೆ ನೋಡು. ನಾನಾಗಲೇ ಮೇಜರ್ ಆಗಿದ್ದೇನೆ (ಪಾಡಿಗೇ. ೧೦). ೨. ಕಾನೂನಿನ ಗಣನೆಗೆ ಬರುವ ವಯಸ್ಸಿನ (ಹದಿನೆಂಟು ವರ್ಷಗಳಿಗೆ ಮೇಲ್ಪಟ್ಟ) ವ್ಯಕ್ತಿ : ಅವರ ಮಗ ಮೇಜರ್ ಆಗಿರುವುದರಿಂದ ಅವನ ಒಪ್ಪಿಗೆಯಿಲ್ಲದೆ ಪಿತ್ರಾರ್ಜಿತ ಆಸ್ತಿಯನ್ನು ಮಾರುವಂತಿಲ್ಲ (ರೂಢಿ). [←ಇಂ. Major]

**ಮೇಜವಾಣಿ** ' ಮೇಜವಾನಿ ' ನೋ.

**ಮೇಜವಾನಿ, ಮೇಜವಾಣಿ, ಮೇಜುವಾನಿ** (ನಾ). ಸತ್ಕಾರ ; ಆತಿಥ್ಯ ; ಔತಣಕೂಟ : ಒಂದು ದಿನ ಆ ಗೃಹಸ್ಥನು ತನ್ನ ಸ್ನೇಹಿತನಲ್ಲಿ ಮೇಜವಾನಿಗೆ ಹೋದಾಗ . . . ಪ್ರಬಲವಾದ ಅಜೀರ್ಣವಿಕಾರವಾಯಿತು (ಮುಂಬಯಿ. ೯-೦೦೬); ಎರಡು ಮೂರು ದಿವಸ ತನಕ ಮೇಜವಾನೀ ಸಮಾರಂಭವು ನಡೆಯಿತು (ಮುಂಜು. ೯೬). **ಮೇಜವಾಣಿ** : ಸಂತೇಮರಹಳ್ಳಿಯಲ್ಲಿ ಚಾಮರಾಜನಗರ ಜಮಾಬಂದಿ ಮುಗಿಸಿದ ಮೇಜವಾಣಿಯಾದ್ದಕ್ಕೆ . . . ನಾನೂ ಹೋಗಿದ್ದೆ (ಕಲಿನ. ೩೩೭). **ಮೇಜುವಾನಿ** : ಕುಶೀರದ ದನಕರುಗಳಿಗೂ ಅಕ್ಕೀ ಸಕ್ಕರೆಯ ಮೇಜುವಾನಿ ಮಾಡುವಂತೆ ಸಾಹೇಬರು ಅನುಗ್ರಹಿಸಿದರಲ್ಲಾ ಎಂದು ಒಂದು ಕಡೆ . . . ಸಂತಸವಾದರೆ ಇನ್ನೊಂದು ಕಡೆ ತಡೆಯಲಾರದ ನಗು (ಶಶಿ. ೯೬); ದೊಡ್ಡ ಬೆಟ್ಟದ ಚಹವೋ ? . . . ಬಿದ್ದಣ ? ಮೇಜುವಾನಿ ? (ಶಂಕವ. ೬೯-೦೨).

[←ಪಾರ. ಮೇಜಬಾನೀ, ಮೇಝ್ಬಾನೀ; ಹಿಂ. ಮೇಜಬಾನೀ ; ಮರಾ. ಮೇಜಬಾನೀ, ಮೇಜವಾನೀ]

**ಮೇಜಿಟ್ಟಿಗೆ** (ನಾ). ಆಕಾರವನ್ನು ನಿಷ್ಕೃಷ್ಟವಾಗಿಡಲು ಮೇಜಿನ ಮೇಲಿಟ್ಟು ತಯಾರಿಸುವ ಇಟ್ಟಿಗೆ : ಒಳ್ಳೆಯ ಇಟ್ಟಿಗೆಗಳನ್ನು ಮೇಜಿನ ಮೇಲೆ ತಯಾರಿಸುತ್ತಾರೆ . . . ಮೇಜಿಟ್ಟಿಗೆಗಳನ್ನು ಚೌಕಟ್ಟುಗಳ ಮೇಲೆ ಬಿಸಿಲಿನಲ್ಲಿ ಒಣಗಿಸುತ್ತಾರೆ (ಶಿಲ್ಪ ಪಾ. ೨೬೦).

[ ಮೇಜು + ಇಟ್ಟಿಗೆ (< ಇಟ್ಟಿಗೆ₁) ]

**ಮೇಜು, ಮೇಜ** (ನಾ). ೧. ನಾಲ್ಕುಕಾಲುಗಳು ಮತ್ತು ಮೇಲೆ ಚಪ್ಪಟೆಯಾದ ಹಲಗೆ ಇದ್ದು, ಓದುವುದು, ಬರೆಯುವುದು ಮುಂತಾದ ಕೆಲಸಗಳಿಗೆ ಉಪಯೋಗಿಸುವ ಮರ, ಲೋಹ ಮುಂತಾದವುಗಳಿಂದ ಮಾಡಿದ ಉಪಕರಣ : ಮಂಚ ಖುರ್ಚಿ ಮೇಜು ಪೆಟ್ಟಿಗೆ ಮೊದಲಾದ ಸಾಮಾನುಗಳನ್ನು ನೋಡಿರಿ (ಶೃಶಿಶ್ರ. ೨೬೩) ; ಸಂಜೆಯಾದ ಬಳಿಕ ಮೇಜಿನ ಬಳಿ ಕುಳಿತು ಕೆಲಸಮಾಡುವುದು ಅಶಕ್ಯವಾಗುತ್ತದೆ (ಪಂಟರು. ೯೩). ೨. ಇಸ್ಪೀಟು, ಜೂಜು ಮೊದಲಾದುವುಗಳಲ್ಲಿ ಮೇಜಿನ ಮೇಲೆ ಪಂದ್ಯವಾಗಡುವ ಹಣ ; ಒಡ್ಡು ; ಪಣ : ಅವನು ದಿನದಿನಕ್ಕೆ ಮೇಜು ಹೆಚ್ಚಿಸುತ್ತ ಹೋಗುತ್ತಾನೆ (ಹಾಯಿಕ. ೧೦). **ಮೇಜ** : ೧. ನಾವು ಸಾಮಾನ್ಯಜ್ಞಾನದಿಂದ ಮೇಜ

ಒಂದು ವಸ್ತು, ಮರ ಒಂದು ಪದಾರ್ಥ ಎಂದು ಅವುಗಳು ಅನೇಕ ಭಾಗದಿಂದ ಆಗಿದ್ದಾಗ್ಗೂ ಹೇಳಬಹುದು (ತತ್ವಪ್ರ. ೦೯೬); ಆಚಾರ್ಯರ ಸೂಚನೆಯಂತೆ ತಿನಸುಗಳ ತಟ್ಟೆಗಳೂ, ಕಾಫಿಯ ಕಪ್ಪುಗಳೂ ಬಂದು ನಮ್ಮ ಮುಂದಿನ ಮೇಜವನ್ನು ಅಲಂಕರಿಸಿದುವು (ಕಾಲಿದಾ. ೦೦).

[ ←ಪಾರ. ಹಿಂ. ಮರಾ. ಮೇಜ್ ]

**ಮೇಜುಕಟ್ಟು₁** (ಕ್ರಿ). ಜೂಜಿನ ಮೇಜಿನ ಮೇಲೆ ಪಣವಾಗಿ ಹಣವನ್ನು ಒಡ್ಡು ; ಪಂದ್ಯಕಟ್ಟು : (+). [ ಮೇಜು + ಕಟ್ಟು₁ ]

**ಮೇಜುಕಟ್ಟು₂** (ನಾ). ಗೋಡೆಯ ಕೆಳಭಾಗದಲ್ಲಿ ಮೇಲುಗೋಡೆಗಿಂತ ಸ್ವಲ್ಪ ಉಬ್ಬಿರುವಂತೆ ಕಟ್ಟಿರುವ ಭಾಗ : "ಗೋಡೆಯ ತಳದಿಂದ ಸ್ವಲ್ಪ ಎತ್ತರದವರೆಗೂ ಹಲಗೆ ಸೇರುವೆಯಿಂದಲೊ, ಮೇಲ್ಭಾಗದಂತಲ್ಲದೆ ಬೇರೆ ಬಣ್ಣ ಹಾಕಿರುವುದರಿಂದಲೊ, ಆಳವಡಿಸಿರುವ ಗೋಡೆಯ ಅಡಿಭಾಗ ಮೇಜುಕಟ್ಟು" (Dado. ೩೦೯೬). [ ಮೇಜು + ಕಟ್ಟು₂ ]

**ಮೇಜುವಾನಿ** 'ಮೇಜವಾನಿ' ನೋ.

**ಮೇಟ** 'ಮೇಂಟಿ' ನೋ.

**ಮೇಟಕಂಬ** 'ಮೇಟಿಕಂಭ' ನೋ.

**ಮೇಟಕಂಭ, ಮೇಟಿಕಂಬ** (ನಾ). ಧಾನ್ಯವನ್ನು ಒಕ್ಕುವ ಅಂಗಳದ ಅಥವಾ ಕಣದ ನಡುವೆ ಎತ್ತುಗಳನ್ನು ಕಟ್ಟಿ ತುಳಿಸಲು ಅನುಕೂಲವಾಗುವಂತೆ ನಟ್ಟ ಕಂಬ : ಮೇಟಿಕಂಭದ ಹತ್ತಿರದ ಮಂಚದ ಮೇಲೆ ಶೀನಪ್ಪ ಒರಗಿಕೊಂಡು ಆಕಾಶವನ್ನೇ ನೋಡುತ್ತಿದ್ದ (ಅನಾಥ. ೨೪೦). **ಮೇಟಿಕಂಬ :** ಹನ್ನೆರಡೆತ್ತಿನ ಬಾರಿ ಹೊನ್ನ ಮೇಟಿಕಂಬ ಬಾಸಿಂಗ್ದ ಬಲ್ಗೆಯ ಕೊಳಗಾದಿ ಕಂದಯ್ಯ ರಾಶಿ ಅಳಿಯೋದೆ ಬೆಳಗಾಯ್ತು (ಹಳ್ಳಿಹಾ. ೯). [ ಮೇಟಿ (<ಮೇಂಟಿ) + ಕಂಭ ]

**ಮೇಟಕೊಳವೆ** (ನಾ). ಕಿವಿಗೆ ತೊಡುವ ಮೇಟಿಯ ಆಕಾರದ, ಒಂದು ಬಗೆಯ ಆಭರಣ : ಕೊಪ್ಪು : ಹೆಂಗಸರ ಒಡವೆಗಳನ್ನು ಹೀಗೆ ಪಟ್ಟಿ ಮಾಡಬಹುದು . . . ಕಿವಿಗೆ : ೧. ಮೇಲಂಕಿವಿಗೆ ಬುಗಡಿ, ಸಿಂಪಿನ ಮೊಟ್ಟೆದ ಮುರುವು ; (ಮುತ್ತಾಕಿದ ಮುರುವು, ಹಲಸಿನಕಾಯಿ ಮುರುವು, ಕಪ್ಪಾಕಿದ ಮುರುವು) ; ತಟ್ಟುಬಾಬುಲು, ಮೇಟಿಕೊಳವೆ, ಇತ್ಯಾದಿ (ಜನಪದ. I, ೬೨೪). [ ಮೇಟಿ (<ಮೇಂಟಿ) + ಕೊಳವೆ (<ಕೊಟವಿ) ]

**ಮೇಟಗಂಡುಗ** 'ಮೇಂಟಿಗಂಡುಗ' ನೋ.

**ಮೇಟಗೂಟ** (ನಾ). = ಮೇಟಿಕಂಭ : ಕಲ್ಲಪ್ಪನನ್ನೂ ದರದರನೆ ಎಳದುಕೊಂಡು ಹೋಗಿ ಕಣದ ಮಧ್ಯದ ಮೇಟಿಗೂಟಕ್ಕೆ ಅಲುಗಾಡದಂತೆ ಬಿಗಿದರು (ದಿವಾ. ೩). [ ಮೇಟಿ (<ಮೇಂಟಿ) + ಗೂಟ (<ಗೂಂಟ) ]

**ಮೇಟಗೊಳಗ, ಮೇಟುಕೊಳಗ, ಮೇಟಿಗೊಳಗ** (ನಾ). ಧಾನ್ಯಗಳನ್ನು ಅಳೆಯುವ ಒಂದು ಪ್ರಮಾಣ : ಶ್ರೀಕಾರ್ಯ ನಡೆವಂತಾಗಿ ಕೊಟ್ಟ ಮೇಟಿಗೊಳಗವೊಂದು (ಮುಂಶಾಸ. ೨೯೯-೭೮ ; 1219). **ಮೇಟುಕೊಳಗ :** ಆನುಪು ಕೊಡವೀಸ ಹಂಪರಹಣ ಹರವಿಗೂಳು ಮೇಟುಕೊಳಗ . . . ಮುಂದೆ ಹುಟ್ಟುವ ಪೂರ್ವಾದಾಯ ಸಹವಾಗಿ ಸರ್ವಬಾಧೆ ಪರಿಹಾರಕ್ಕೆ ಗದ್ಯಾಣ ಗ ॥ (ಪ್ರಾಕಿಂ. ೦೯೩೪, ೨೭-೨೨ ; 1430). **ಮೇಟಿಗೊಳಗ :** ಮತ್ತಮಾ ಹಂನಿರ್ವ್ವರ್ ಗಾವುಂಡುಗಳ್ ಮುಖ್ಯಸಮಸ್ತಪ್ರಜೆಗಳುಂ ದೇವರ ನಿತ್ಯೋಪಹಾರಕ್ಕೆಂದು ಚಂದ್ರಾರ್ಕಸ್ಥಾಯಿಯಾಗಿ ಮೇಟಿಗೊಳಗವ ಕೊಟ್ಟರ್ (ಎಪಿಕ. XX, ೨೪೮-೬೮ ; 1228).

[ ಮೇಟಿ (<ಮೇಂಟಿ) + ಕೊಳಗ₁ ]

**ಮೇಟಪಾಲು, ಮೇಣಿಪಾಲು** (ನಾ). ವ್ಯವಸಾಯ ಮಾಡಲು ನೆರವು ನೀಡಿದವನಿಗೆ ಹೊಲದ ಒಡೆಯನು ಕೊಡಬೇಕಾದ ಫಸಲಿನ ಭಾಗ : (+). **ಮೇಣಿಪಾಲು :** (+).

[ ಮೇಟಿ (<ಮೇಂಟಿ) + ಪಾಲು₂ (<ಪಾಲ್₂) ]

**ಮೇಟವಿದ್ಯ** (ನಾ). ವ್ಯವಸಾಯ ಮಾಡುವ ತಿಳಿವಳಿಕೆ ; ಕೃಷಿಯ ಅರಿವು : ಕೋಟಿ ವಿದ್ಯೆಗಳಲ್ಲಿ ಮೇಟಿವಿದ್ಯವೆ ಮೇಲು ಮೇಟಿಯಿಂ ರಾಟಿ ನಡೆದುದಲ್ಲದೆ ದೇಶದಾಟವೆ ಕೆಡುಗು (ಸರ್ವಜ್ಞ. ೧೩೩೭).

[ ಮೇಟಿ (<ಮೇಂಟಿ) + ವಿದ್ಯ ]

**ಮೇಟಹುರುಳಿ, ಮೇಟುಹುರುಳಿ** (ನಾ). ಒಂದು ಬಗೆಯ ಔಷಧೀ ಸಸ್ಯ : ಮೇಟಿಹುರುಳಿಯ ಬೇರ ತಂದು ಮೇಗಣ ತಿಗಡ ತೆಕ್ಕೊಂಡು ಸಣ್ಣನೆ ಅರೆದು ಅವರೆಪ್ರಮಾಣ ಗುಳಿಗೆಯಂ ಮಾಡಿ ಒಂದು ಗುಳಿಗೆ ಅಕ್ಕಿಗಚ್ಚಿನಲ್ಲಿ ಕೊಂಬುದು (ವೈದ್ಯಶಿ. ೦೬೭). **ಮೇಟುಹುರುಳಿ :** ತೂಲಫಲಾ—ಎಲವ, ಎಕ್ಕೆ, ಮೇಟುಹುರುಳಿ (೭೩೦. ೭೨). [ ? ]

**ಮೇಟುಕೊಳಗ** 'ಮೇಟಿಗೊಳಗ' ನೋ.

**ಮೇಟುಹುರುಳಿ** 'ಮೇಟಿಹುರುಳಿ' ನೋ.

**ಮೇಟೆ** 'ಮೇಂಟಿ' ನೋ.

**ಮೇಟೆಗೊಳಗ** 'ಮೇಟಿಗೊಳಗ' ನೋ.

**ಮೇಢಿ** (ನಾ). ೧. ಸ್ತಂಭ ; ಕಂಬ. ೨. = ಮೇಟಿಕಂಭ. ೩. ಪಶುಗಳನ್ನು ಕಟ್ಟುವ ಗೂಟ. ೪. ಬಂಡಿಯ ಮೂಕಿಗೆ ಆಧಾರವಾಗಿರುವ ಆನಿಕೆ. [ ಸಂ. ]

**ಮೇಡ₁** (ನಾ). (ಕರಾ) ಮರದ ಚಿಲಕ.—ಅಗಳಿ : ನಾನು ಬರಲು ತಡವಾದರೆ ಕದದ ಮೇಡ ಹಾಕಿಕೊಂಡು ಮಲಗಿಕೊ (ರೂಢಿ).

[ ←ತುಳು. ಮೇಡೆ ]

**ಮೇಡ₂** (ನಾ). [ಸಂಗೀತ] ವೀಣೆ ಮುಂತಾದ ವಾದ್ಯಗಳಲ್ಲಿ ಬೇರೆ ಬೇರೆ ಸ್ವರಸ್ಥಾನಗಳನ್ನು ನಿರ್ದೇಶಿಸುವ (ಅರಗಿನ) ರಚನೆ.—ಕಟ್ಟಣೆ.—ಮೆಟ್ಟಿಲು : ಅರಗಿನ ಮೇಡವನ್ನು ಮಾಡಿಸಿದರೆ ಅದು ದಂಡಿಯ ಸುಲಭವಾದ ಸ್ಪಂದನವನ್ನು ತಡೆಯುತ್ತದೆ (ಸಂಗೀತ. ೬೯). [ < ಮೇಳ ]

**ಮೇಡಂ, ಮಡ್ಡಮ್ಮ, ಮೇಡಮ್, ಮೇಡಮ್ಮ** (ನಾ). ಹೆಂಗುಸನ್ನು ಕುರಿತ ಗೌರವಸೂಚಕವಾದ ಸಂಬೋಧನೆ : P ಈ ಶಬ್ದವು ಉಪಾಧ್ಯಾಯಿನಿ, ಆಂಗ್ಲಸ್ತ್ರೀ, ಶ್ರೀಮಂತ ಹೆಂಗಸು, ಯಜಮಾನಿ ಮುಂತಾದ ವಿವಿಧಾರ್ಥಗಳಲ್ಲಿ ಇಂದು ಬಳಕೆಯಾಗುತ್ತಿದೆ : ಕ್ಷಮಿಸಿ ಮೇಡಂ ಈ ದಿನ ವಠಾರದಲ್ಲಿ ಒಂದು ಮದುವೆ. ಅದ್ದರಿಂದ ತಡ ಆಯ್ತು (ಶಿಂದಿನ. ೪) ; ಮೇಡಂಗಳನ್ನು ಕಟ್ಟಿಕೊಂಡು ತೊಲಗು (ಅಗಸ್ತ್ಯ. ೬೮). **ಮಡ್ಡಮ್ಮ :** ಸಂಬಳವಾದ ಮರುದಿನ ಸಾಹೇಬರ ಮಡ್ಡಮ್ಮರು . . . ಲೆಕ್ಕ ಚುಕ್ತಾಮಾಡಿಬಿಡುತ್ತಿದ್ದರು (ದೀಕಷ. I, ೬೪): ನನ್ನ ಹಿಂದೆ ಮನೆಯ ಮಕ್ಕಳು . . . ಎದುರಿಗೆ ಟೆಳಕರು ಮತ್ತು ಆ ಮಡ್ಡಮ್ಮ (ಸ್ವತಃಶಿಕ. ೨೨೦). **ಮೇಡಮ್ :** ಮೇಡಮ್ . . . ಮಿಸ್ ವೇದವಲ್ಲಿ ! (ಶಿಂದಿನ. ೪). **ಮೇಡಮ್ಮ :** ಆಕೆ ನಮ್ಮ ಹುಡುಗರ ಅಚ್ಚುಮೆಚ್ಚಿನ ಮೇಡಮ್ಮ (ರೂಢಿ).

[← ಇಂ. Madam]

**ಮೇಡಮ್** 'ಮೇಡಂ' ನೋ.

**ಮೇಡಮ್ಮ** 'ಮೇಡಂ' ನೋ.

**ಮೇಡಿ** (ನಾ). ಒಂದು ಬಗೆಯ ಮರ; ಅತ್ತಿ ; ಉದುಂಬರ : (+).

[ದೇ.॥ ತಮಿ. ಮೇಡಿ]

**ಮೇಡು** (ನಾ). ೧. ಎತ್ತರವಾದ ನೆಲ; ದಿಣ್ಣೆ ; ದಿಬ್ಬ: ಕಾಡುವೊಂದು ಮೇಡುವೈದು ಓಡುವೊಂದು ಒಲಿಯು ಮೂಜು ನಾಡನಾಯ ಕೂಡಿಕೊಂಡು . . . ಜೋಡುಮುಖದ ಕಪಿಯನೆಚ್ಚು ಓಡಿನಲ್ಲಿ ತಿಂದು ತನ್ನ ನೀಗಲಾಡಿದ (ಅಪಕಂ. ೨೯೯-೦೩೦೪); ತೆಂಕಣ ಕೋಟೆಯ ಮೇಡಿನ ಕೇರಿಯ ಮನೆಯನು ಹದಿಮೂಜು ನಿವೇಶನವನು ಮಾಡಿ (ಎಕ. XIV, ಶ್ರೀರಂಗ. ೬೭-೪೦; 1471); ನಾಡು ಮೇಡು ಕಾಡೊಳೆಲ್ಲು ಸೊಗವು ಮೂಡಿ ಬರುತಿದೆ (ಮನುಂಜ. ೯-೭). ೨. (ಪಶುಗಳ) ಹಿಣಿಲು; ಡುಬ್ಬ: ಅಗ್ಗದ

ನಿಡುಗೋಡು ಮೇಡುಮುಮುರುತ್ತುಮಿಜುಂಕಿದ ಕೆಚ್ಚಲಿತ್ತುಮೆತ್ತಿದ ಕುಡಿವಾಲಮುಂದೆಸೆಯೆ ಕರ್ಬಸುಗಳ್ ಪರಿಗೊಂಡುಮಾಜಿಯೊಳ್ (ಕಂಕಶಾ. ೯-೦೦೪). 'ಮಿಟ್ಟೆ' ಪರಾ. [ದೇ.॥ ತಮಿ. ಮೇಟು, ಮುಟ್ಟು, ಮೆಟ್ಟು; ಮಲ. ಮೇಟು. ಮಾಟು: ತೆಲು. ಮಿಟ್ಟ, ಮೆಂಡು, ಮೆಟ್ಟ, ಮೆಟ್ಟು; ಕೋಲಾ. ಮೆಟ್, ಮೆಟ್ಟಾ, ಮೆಟ್ಟ್; ನಾಯ್ಕಿ. ಮೆಟ್ಟ್; ಗೊಂಡಿ. ಮಟ್ಟಾ, ಮೆಟಾ, ಮೆಟ್ಟೆ]

**ಮೇಡುಗದ್ದೆ** (ನಾ). ಎತ್ತರದಲ್ಲಿರುವ ಗದ್ದೆ : ಅಣಹಳ್ಳಿ ತೋಪಿನಲ್ಲಿ ನೂತನವಾಗಿ ಮಂಠ ಕಟ್ಟಲಾಗಿ . . . ಕೆಲಉ ಭೂಮಿ ತೆಗೆದುಕೊಂಡ ಬದಲಿಗೆ ಹಾಗಲವಾಡಿ ಕೆರೆ ತುಂಬಿ ಜೇರಿಗೆ ಮೇಡುಗದ್ದೆಗ್ಯೆಯ್ವಲ್ಲಿ ಸಿಸ್ತ ಹಳ್ಳಿಭೂಮಿಯಲ್ಲಿ ಮಂಮ ಖಂಡುಗ ಗದ್ದೆಗೆ ನೀರ ಅಪ್ಪಣೆ ಪಾಲಿಸಿಯಿರ್ಧೇವೆ (ಎಕ. XII, ತಿಪ್ಟೂ. ೩೮-೩೯: 1669). [ಮೇಡು + ಗದ್ದೆ (< ಗಬಿ$^3$)]

**ಮೇಥಿ** (ನಾ). ೧. ಸ್ತಂಭ ; ಕಂಬ. ೨. = ಮೇಟಿಕಂಭ. ೩. ಪಶುಗಳನ್ನು ಕಟ್ಟುವ ಗೂಟ. ೪. ಬಂಡಿಯ ಮೂಕಿಗೆ ಆಧಾರವಾಗಿರುವ ಆನಿಕೆ. [ಸಂ. ಮೇಥೀ]

**ಮೇಢ್ರ** (ನಾ). ೧. ಟಗರು; ಗಂಡುಕುರಿ. ೨. ಪುರುಷನ ಜನನೇಂದ್ರಿಯ; ಶಿಶ್ನ : "ಶಿಶ್ನಃ, ಶೇಫಃ, ಮೇಢ್ರಃ . . . ಶೇಫಸ್-ಈ ೬ ಶೇಫಂ" (ಹಲಾಯು. ೬೩-೩೭೦); ಖರ ಮೇಢ್ರ ಪುಷ್ಕವಾಲಧಿ ಶಿರದೊಳೆ ಕರಿದಾಗಿ ತೋರ್ಪುದಂತದು ಕಷ್ಟಂ (ಅಕ್ಷಶಾ. ೨-೪೨) ; ತಿಂಗಳ್ ನಾಲ್ಕಕಕ್ಷಿನಾಸಾಪುಟಂ ಶ್ರವಣ ಗುದ ಮೇಢ್ರ ರೋಮಂಗಳಪ್ಪುವು (ಕಂಶ್ರು. ೩೬-೬); ಮೇಢ್ರದಲ್ಲಿಯೂ ತೊಡೆಸಂದಿನಲ್ಲಿಯೂ ಬಹಳವಾದ ವೇದನೆಯುಂಟಾಗಿರ್ಪುದು (ಸಕವೈ. ೩೭೦). [ಸಂ.]

**ಮೇಣ್**. ಮೇಣು (ಅ). ೧. ಇನ್ನು; ಮತ್ತು ; ಜೊತೆಗೆ; ಹಾಗೂ ; ಅಲ್ಲದೆ : ಕಟ್ಟಿದ ಸಿಂಘಮಾನ್ ಕೆಟ್ಟೊಡೇನೆಮಗೇದು ಬಿಟ್ಟವೊಲ್ ಕಲಿಗೆ ವಿ[ಪ]ರೀತಂಗಹಿತರ್ಕ್ಕಳ್ ಕಟ್ಟಿಮೆರ್ಮ್ಮೆಣ್ ಸತ್ತರ ವಿಚಾರಿರವು (ಇಅ. X, ೬೦-೦೦; ಸು. 700); ಒಡನೆ ಸುರಾಸುರರ್ ಕನಕಪರ್ವತಮಂ ಕಡೆಗೋಲ ಮಾಡಿ ಮೇಣ್ ಪೆಡೆ ಪಲವಪ್ಪ ವಾಸುಕಿ ಮಹೋರಗನಂ ಕಡೆಗಣ್ಣೆ ಮಾಡಿ ಪಾಲ್ಗಡಲನುಪಾಯದಿಂ ಕಡೆಬು (ಕಾವ್ಯಸಾ. ೯೩೮ ಕೂರ್ರ೪); ಎಲ್ಲಿ ಮೇಣಾವ ಸ್ವರೂಪದಿಂ ಬಂದಿರಿದನೆನಗೆ ತಿಳಿಯೆ ಪೇಳ್ವೆಂ (ವಡ್ಡಾರಾ. ೩೬-೦): ಕಾವಡೆನ್ನಳವಲ್ಲ ಮೇಣ್ ಗಾಂಡೀವಿ ಕೊಲುವವನಲ್ಲ (ಕುವ್ಯಾದ್ರೋ. ೯-೬೦). ೨. ಅಥವಾ ; ಇಲ್ಲವೆ : ಏನಾಗಿಯುಂಮೇಣೋ ತೀರ್ದಪುದೆ ತೀರದೊಡಂ ಮುಱಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್ (ಕಂಕಶಾ. ೪-೨೯):ಲಿಂಗಜಂಗಮವೊ ಮೇಣ್‌ಜಂಗಮವೆ ಲಿಂಗವೋ (ಬಸರ. ೩-೦೩೩); ಮರ್ತ್ಯಂಗೆ ನಿಟ್ಟೆಯೋ ಮಾನಸವಾಟೀಗಳೊ ಮೇಣಾಗಳೊ ಮೇಣ್ ಸಾಗುದುರೆಗೆ ಪುಲ್ಲನಡಕಿ ಕೆಡುವನೆ ಚದುರಂ (ಯುಕೋಕ. ೩-೦೩); ನಿನ್ನ ಮಕ್ಕಳ ಸಲಹು ಮೇಣ್ ಕೊಲ್ಲೆನುತ ನುಡಿದನು ವಿನಯದಲಿ ಪಾರ್ಥ (ಕುವ್ಯಾದ್ರೋ. ೯-೪೮). ೩. ಖಂಡಿತವಾಗಿಯೂ ; ನಿಶ್ಚಯವಾಗಿಯೂ : ಮಗನಂ ಪಡೆವಂತಿರೆ ಬಂಜೆಗೆ ಮರ್ದಂ ಮಾಟ್ಪೆನೆಂಬ ನಾಸಿಗನೇಂ ತಾಂ ಪುಗಿಸುವನೆ ಜೀವವಂತದುವೆ ಗರ್ಭದೊಳು ಮರ್ದಿ ಮೇಣದಕ್ಕುಮೆ ಜೀವಂ (ಸವುಹ. ೧೨-೩೩); ಕುಡುವಿಲ್ಲನೆಚ್ಚ ಸರಲುಂನಡದು ದಲಂದೊರ್ವನೆರ್ದೆಯನೊಳ್ಗೂಬ್ಬಮುವೊಳ್ನುಡಿಯುಂ ಗೇಯಮುಮುರ್ಚದ ಕಡುಗಲ್ಲೆರ್ದೆಜರ್ದೆಯಸಂಬ್ನು ಮೇಣುರ್ಚುಗುಮೇ (ಕಾವ್ಯಾವ. ೨೦೯). **ಮೇಣು**: ೨. ವೈರಿನಾಯಕರು ಕೊಂದರೆಂಬೆನೊ ಮೇಣು ನಾನೇ ಕೊಂದೆನೆಂಬೆನೊ (ಕುವ್ಯಾದ್ರೋ.೭-೦೦) : ಜವನ ಜನನಿಯೊ ಮೇಣು ಲಯಭೈರವನ ಭಗಿನಿಯೊ . . ಎಂಬವೊಲು ನಡೆತಂದಳಿದಿರಿನಲಿ (ತೊರರಾ. ೦-೦೦-೭): ಕಾಮವಶ್ಯದ ಘುಟಿಕೆಯ ರಾಶಿಯೊ ಮೇಣು ಕಾಮನ ಹಾಜುಗುಪ್ಪೆಗಳೊ (ವರ್ಧಕ. ೦-೦೦೪) ; ಅಸಮುಸದ್ಗುರು ವರದಯಾಮೃತರಸಸರೋವರಮಧ್ಯದಲಿ ಪದಬಿಸರುಹಂಗಳು ಮೇಣು ವಿಕಸನವಾದವು (ಬಸಪು. ೩೯-೩೭). ☞ ಈ ಶಬ್ದವು ಅನೇಕ ವೇಳೆ ಪಾದಪೂರಣಾರ್ಥವಾಗಿ ಉಪಯೋಗವಾಗುತ್ತದೆ. 'ಮೇಗು' ಪರಾ.

**ಮೇಣ** 'ಮಯಣ' ನೋ.

**ಮೇಣಗಟ್ಟು** (ಕ್ರಿ). ಜಿಡ್ಡುಗಟ್ಟಿ ಕೊಳೆಯಾಗಿರು : ಅವಳ ತೊಡೆಯ ಮೇಲೆ ಒಂದು ವರ್ಷದ ಕೂಸೊಂದು. ಅದರ ತಲೆಗೆ ಒಂದು ಮೇಣಗಟ್ಟಿದ ಕುಲಾವಿ (ರಾಪೂಸ. ೦೦೦). [ಮೇಣ (<ಮಯಣ) + ಕಟ್ಟು$_1$]

**ಮೇಣಗಪಟ** 'ಮೇಣಗಪ್ಪಡ' ನೋ.

**ಮೇಣಗಪ್ಪಟ** 'ಮೇಣಗಪ್ಪಡ' ನೋ.

**ಮೇಣಗಪ್ಪಡ**. ಮೇಣಗಪಟ, ಮೇಣಗಪ್ಪಟ. ಮ್ಯಾಣಗಪ್ಪಟ (ನಾ). ಎಣ್ಣೆ. ಮೇಣ ಮೊದಲಾದುವುಗಳಿಂದ ಪರಿಷ್ಕರಿಸಿ ನೀರಿಳಿಯದಂತೆ ಮಾಡಿದ ಬಟ್ಟೆ : ಕೊಡೆ ಮೇಣಗಪ್ಪಡ ಗೊಂಗಡಿ ಬಹುರಮ್ಯವಡೆದಿರ್ದ ಸಕಲಾತಿದಳೆದು . . . ನೀರ್ಮನುಜರಂತೆಡೆಯಾಡುತಿರ್ದರೂರುಗರು (ಬೋಹಕ. ೪-೪೦) ; ಆಪಾದಮಸ್ತಕ ಮೇಣಗಪ್ಪಡದ ನಿಲುವಂಗಿ ಹೊದ್ದು ಅಡ್ಡಾಡಲು ಹೊರಬಿದ್ದೆ (ಇಕ್ಕಳ. ೦೮೦). **ಮೇಣಗಪಟ** : "ಎಣ್ಣೆಯಿಂದ ಪರಿಷ್ಕರಿಸಿ ನೀರಿಳಿಯದಂತೆ ಮಾಡಿದ ಬಟ್ಟೆ ; ಮೇಣಗಪಟ ; ತೈಲಪಟ" (oilcloth. ೩೦೪೩). **ಮೇಣಗಪ್ಪಟ** : ಮಗುವಿಗೆ ನ್ಯಾಪ್‌ಕಿನ್ . . . ಮೇಣಗಪ್ಪಟ, ಬ್ಲಾಂಕೆಟ್ . . . ಹತ್ತಿಯ ಸುರಳಿ, ಇವುಗಳನ್ನು ಸಿದ್ಧ ಮಾಡಿಕೊಳ್ಳಬೇಕು (ಗೃಹವಿ. ೦೦೨). **ಮ್ಯಾಣಗಪ್ಪಟ** : ಗಾಡಿಗೆ ಮ್ಯಾಣಗಪ್ಪಟದ ಗೌಸು (ಎಕ. XIV, ಸಂಹನ. ೨೯೨ ; 1847). [ಮೇಣ (<ಮಯಣ) + ಕಪ್ಪಡ]

**ಮೇಣದಬತ್ತಿಮರ** (ನಾ). ಅಂಟುದ್ರವವನ್ನು ಸ್ರವಿಸುವ ಒಂದು ಬಗೆಯ ಮರ : (ವೃಶಿಗ. ೬೮-೦೩೯೩). [<ಮೇಣ + ಬತ್ತಿ + ಮರ$_1$]

**ಮೇಣಬತ್ತಿ** (ನಾ). ಮೇಣದಿಂದ ಮಾಡಿದ ಬತ್ತಿ; ಮೋಂಬತ್ತಿ: ಮೇಣಬತ್ತಿಯ ಪೆಟ್ಟಿಗೆಯಲ್ಲಿ ೩೦ ಪುಡಿಗಳಿರುತ್ತವೆ . . . ಎಲ್ಲಾ ಕೂಡಿ ೧೮೦ ಮೇಣಬತ್ತಿಗಳು ಒಂದು ಪೆಟ್ಟಿಗೆಯಲ್ಲಿರುತ್ತವೆ (ಮುಂಬವ್ಯಾ. ೦೩೭). [ಮೇಣ (< ಮಯಣ) + ಬತ್ತಿ]

**ಮೇಣಾ** 'ಮೇನಾ' ನೋ.

**ಮೇಣಿ** 'ಮೇಂಟಿ' ನೋ.

**ಮೇಣಿಪಾಲು** 'ಮೇಟಿಪಾಲು' ನೋ.

**ಮೇಣು** 'ಮೇಣ್' ನೋ.

**ಮೇಣುಹುಣ್ಣು** (ನಾ). ಒಂದು ಬಗೆಯ ಹುಣ್ಣು : ಸರ್ವವ್ರಣಗಳಿಗೆ . . . ಜೇನುತುಪ್ಪದಲ್ಲಿ ಒಂದು ಗುಳಿಗೆಯಂ ನುಂಗುವುದು . . . ಮೇಣುಹುಣ್ಣು. ಗಂಡುಹುಣ್ಣು. ಸರ್ವವ್ರಣಗಳು ಗುಣ (ಬಿವೈಪಿ. ೩೯). [ಮೇಣು$_2$ + ಹುಣ್ಣು (< ಪುಣ್)]

**ಮೇಣೆ** 'ಮೇನಾ' ನೋ.

**ಮೇತ** (ನಾ). ಮೇಯುವಿಕೆ ; ಮೇಯುವುದು : ಸುಟಿಯದು ಗಾಳಿ ಮೃಗಂ ಕೆಯ್ವಟಿಗಳ ಮೇತದೊಳ್ ತಣಿದಪುವು (ಕಂಕಶಾ. ೩-೩೯) ; ಹದನಂ ಹಸ್ತಾಗ್ರದಿಂ ಘ್ರಾಣಿಸಿ ಬೆರೆವಿಡಿಯಂ ಮೆಚ್ಚಿ ಮೇತಕ್ಕೆ ಮೆಯ್ವಾಱದೆ ನೀಡುಂ ನಿದ್ದೆಯಂ ತೀನುಮನಱಿಯದೆ . . . ಇರ್ದುದು ಗಿಡಗಿಡಿಜಂತ್ರಂಬೊಲಂ ದೊಂದಿಭೇಂದ್ರಂ (ಅಆಪು. ೯-೩). [ಮೇ$_1$ + -ತ$_2$]

**ಮೇಥಿಕೆ** (ನಾ). ಮೆಂತ್ಯ. [ಸಂ. ಮೇಥಿಕಾ]

**ಮೇಥಿನಿ** (ನಾ). = ಮೇಥಿಕೆ. [ಸಂ. ಮೇಥಿನೀ]

**ಮೇದ$_1$** 'ಮೇ$_1$' ಪರಾ.

**ಮೇದ$_2$**, ಮೇದರ. ಮೇದಾರ (ನಾ). ಬಿದಿರಿನಿಂದ ಬುಟ್ಟಿ, ಚಾಪೆ. ಮೊರ ಮೊದಲಾದುವನ್ನು ಹೆಣೆದು ಮಾರಿ ಜೀವಿಸುವ ವೃತ್ತಿಯ

ವರನ್ನುಳ್ಳ ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ: "ವಂಶಚ್ಛೇದಿ ಚಪಕಾರಕಂ ಮೇದಂ" (ಮಂಗರಾ. ೦೦೦-೨) ; ಕಮ್ಮಾರಸಂತೆ ಕಾಸಿ ಬಡಿವರ್ ಮೇದನಂತೆ ಸೀಳ್ವರ್ (ರಶರ್ಮಶ್ಮ. ೩-೭೩) : ಮೇದರೊಳಲ್ಲದೆ ವಂಶಚ್ಛೇದಂ ಗಾರುಡದೊಳಲ್ಲ (ಸುಕ್ತಿಸು. ೪-೦೯) ; ಮೇದನ ಕೈಗತ್ತಿಕೇದಗೆ ರಾಜವಾಣೀಧವರುಗಳಂತಲ್ಲ (ಶೃರಪೀ. ೩-೯೭). **ಮೇದರ** : ಶರಣ ಮೇದರ ಕೇತಿದೇವನ ಹರಣವುಂ ಬಸವಣ್ಣನಸುವಂ ಹರನ ಕೈಯಲ್ಲಿ ಮಂರಳಿ ಪಡದನು ಮಾಚಿದೇವಯ್ಯ (ಬಸಪು. ೩೭ ಸೂತನೆ) ; ಇನ್ನು ಅಂಬಿಗ ಚವುಡ ಮೇದರಗ[ನ]ನ್ನು ಕೇತನು ಚನ್ನ ಮಾದಿಗ[ನ]ನ್ನು ನುಲಿಚಂದ್ಯೆಯ್ಯ ಕೂಗಿನ ಮಾರನೆನ್ನುವನು (ಶೂನ್ಯಶು. ೪೭-೪೩). **ಮೇದಾರ** : ಈತನೇ ಮೇದಾರ ಕೇತಯ್ಯನೆಂಬಾತನೀತನೇ ಡೋಹಾರ ಕಕ್ಕಯ್ಯನೆಂಬಾತನು (ತಿಂಪು. ೩೭-೩೭); ಮೇದಾರರು ಇಲ್ಲವೆ ಬುರುಡರು—ಇವರು ದೊಡ್ಡಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ವಾಸಿಸುತ್ತಾರೆ (ಕರಾಗ. ೧೩೪).

[ದೇ.॥ ತಮಿ. ಮೇತರ್. ಮೇತರವರ್. ಮೇತವರ್: ತೆಲು. ಮೇದರ. ಮೇದರಿ./ಸಂ. ಮೇದ = ಒಂದು ಮಿಶ್ರಜಾತಿ]

**ಮೇದ₃** (ನಾ). ಕೊಬ್ಬು ; ಮೇದಸ್ಸು: "ವಸ ಮೇದಂ ವಪೆ" (ವಸ್ತುಕೋ. ೬೨-೨೪). [ಸಂ. ಮೇದ. ಮೇದಸ್]

**ಮೇದಕ** (ನಾ). ಭಟ್ಟಿಯಿಳಿಸಲು ಉಪಯೋಗಿಸುವ ದ್ರವ,—ಮದ್ಯ : "ಮೇದಕಃ. ಜಗಲಃ— ೨ ಮದ್ಯ ಮಾಡುವುದಕ್ಕೆ ನಾನಾದ್ರವ್ಯಗಳೂ ಕೂಡಿಸಿದ ಮುದ್ದೆಯ ಹೆಸರು" (ಶಬ್ದಾಂತಿ. ೩೦೯). [ಸಂ.]

**ಮೇದದೆಜು** (ನಾ). ಮೇದರು ತೆರಬೇಕಾದ ತೆರಿಗೆ,—ಸುಂಕ : ಪೊಡ್ಡದೆಜು ಮೇದದೆಜು ಸಾದದೆಜು ಉಡುವಲುದೆಜು. . .ಇನ್ತಿನಿಸಜ ತೆಜುಯನು ಧಾರಾಪೂರ್ವ್ವಕಂ ಮಾಡಿಬಿಟ್ಟರು (ಎಕ. IV (R). ಹುಣಸೂ. ೨೪-೪೦ ; 1843). [ ಮೇದ₂ + ತೆಜು₃ ]

**ಮೇದನಾಗಿಡ** (ನಾ). ಒಂದು ಬಗೆಯ ಸಸ್ಯ : ಮದನಬುಡಮೆ ಗಿಡ, ಮೇದನಾಗಿಡ. ಮದನಗಂಟಿ (ವೃಕಿಗ. ೦೩-೨೩೫).[? + ಗಿಡ (<ಗಿಡು)]

**ಮೇದಯ್ಯ** (ನಾ). ಒಬ್ಬಾತನ ಹೆಸರು : ಪೊಕ್ಕುಂದದ ತುಗೋಳೆ ಕೊಜ್ಜ ಮಂಗಲದ ಮೇದಯ್ಯ ಕಾದಿ ಸತ್ತು ಸ್ವರ್ಗ್ಗಯ್ದದ (ಎಕ. X. ಚಾಂಗ್. ೪೦-೪ ; ಸು. 950). [ಮೇದ₂ + ಅಯ್ಯ₁]

**ಮೇದರ** ' ಮೇದ₂ ' ನೋ.

**ಮೇದಸ್ಸು** (ನಾ). ೧. ದೇಹದ ರಕ್ತ. ಮಾಂಸ. ಚರ್ಮ. ಮೇದಸ್ಸು. ಸ್ನಾಯು. ಅಸ್ಥಿ.ಮಜ್ಜೆಗಳೆಂಬ ಸಪ್ತಧಾತುಗಳಲ್ಲಿ ಒಂದು; ಕೊಬ್ಬು, ನೆಣ: ಹರಿ. . .ದಾನವರ ಸೀಳಿ ಬಿಸುಟನು. ಖಳರ ಮೇದಸ್ಸಾಳಿ ಮುಳುಗಿತು ಜಲದೊಳಗದುಂ ಮೇಲುಸರಾಯ್ತುಳಿಗೆ ಮೇದಿನಿಯೆಂಬ ನಾಮದಲಿ (ಕಬ್ಬಾಸ. ೯-೨೯) : ಪರಿಕಿಸಲ್ ಪಿತ್ತಮುಂ ಶ್ಲೇಷ್ಮಮುಂ ತಿಳಿಯಲೊಂದೆರಡು ಬಳ್ಳಂ ಮಾಂಸ ಬಸೆ ರಕ್ತ ಮೇದಸ್ಸು . . . ನಿರುತ ಮುಸ್ಸೂಜಿಜು ವತಸ್ಥಿಗಳಿ ಸೇರಿರ್ಪುವು (ಕಂಪು. ೩೬-೧೨) ; ಪಂಡಿತನೆ ಪಂಡ ಅಥವಾ ಪೂಂತ ಪಶುಕಲಿಯ ಖಂಡದಲಿ ಮೇಧಸ್ಸು ; ಮೇದಸ್ಸು (ವಪ್ಪರ್ಕ. ೦೩-೦೨). ೨. ಬೊಜ್ಜು : ಮೇದಶ್ಛೇದನದಿಂದೆ ಕೃಶೋದರಮೆಂದೆನಿಸಿದೊಡಲಿ ದುತ್ಸಾಹಕ್ಕಿಂಬಾದಪುದು (ಶಾಕುಂತ. ೨೨-೩೯). ೩. [ವಿಜ್ಞಾ] ದೇಹಕ್ಕೆ ಬೇಕಾಗುವ ಜೀವಸತ್ವಗಳಲ್ಲೊಂದಾದ ಜಿಡ್ಡಿನ ಅಂಶ : ಭೇದಿ ಮಾಡದೆ ಸಾರಜನಕ ವಸ್ತುಗಳು . . . ಹೆಚ್ಚಾಗಿರುವ ಮತ್ತು ಮೇದಸ್ಸು (Fat) ಕಡಮೆಯಾಗಿರುವ ಆಹಾರವಸ್ತುಗಳನ್ನು ಕೊಡಬೇಕು (ಕರೊಉ. ೬೨) : ಮೇದಸ್ಸು. ಇಂಗಾಲ, ಜಲಜನಕ ಮತ್ತು ಆಮ್ಲಜನಕ ಇವುಗಳ ಸಂಯುಕ್ತವಸ್ತು (ಗೃಹಶಾ. ೦೪) ; ಕೀಟಗಳು ಶರ್ಕರಪಿಷ್ಟಗಳಿಂದ ಅಥವಾ ಸಸಾರಜನಕದಿಂದ ಮೇದಸ್ಸುಗಳನ್ನು ಸಂಯೋಜಿಸುತ್ತವೆ (ಕೀಟಶಿ. ೩೦).

[ಸಂ. ಮೇದಸ್]

**ಮೇದಾರ** ' ಮೇದ₂ ' ನೋ.

**ಮೇದಿನಿ** (ನಾ). ೧. ಭೂಮಿ : ಇಳೆ ; ಪೃಥ್ವಿ : "ಸ್ಥಿರೆ ಧರಣಿ ಧಾತ್ರಿ ಮೇದಿನಿ ಧರಿತ್ರಿ ಧರೆಯವನಿ . . . ಭೂಮಿ ಭೂ ಗೋತ್ರ ನೆಲಂ" (ವಸ್ತುಕೋ. ೨೭-೦) : ಜಲ ಕೂರ್ಮ ನಾಗ ಮೇದಿನಿ ಸಪ್ತಸಾಗರ ಅಜಾಂಡ ಭಾಂಡ ಹರಿವಿರಿಂಚಿಗಳು ನಿಮ್ಮ ಉದರದ ಕೊನೆಯ ಪ್ರಾಣಿಗಳಯ್ಯ (ಬಸವ. ೩೩೫) ; ಮಂಗಳಂ ಮೇದಿನಿಗೆ ಸುರರಿಗೆ ಮಂಗಳಂ ಕೇಳ್ದರಿಗೆ ಪೇಳ್ದಗೆ ಮಂಗಳಂ (ಕೌಶಿರಾ. ೪೪-೩೪). ೨. ದೇಶ ; ರಾಜ್ಯ : ಮೇದಿನಿಯಂ ಕೆಯ್ಕೊಳ್ ಪದನಾದುದು ಜಿನದೀಕ್ಷೇಗೆನಗೆ ಮಗನೇ (ಶಾಂತಿಪು. ೭-೩೬) ; ತನಗುಳ್ಳ ಸರ್ವರಾಜ್ಯವನು ವಿಶ್ವಾಮಿತ್ರಮುನಿಗೆ ಧಾರೆಯನೆಜದನವನೀಶನೆಂದು ಮೇದಿನಿಯೊಳೆಲ್ಲಂ ಸಾಜು (ಹಶಿರಾ. ೬-೩೩).

**ಮೇದಿನೀಮಿಸೆಯರ ಗಂಡ.** **ಮೇದಿನೀಮಿಸರಗಂಡ**=ಜಗತ್ತಿನಲ್ಲೇ ಶೂರರೆನಿಸಿಕೊಂಡವರನ್ನು ಸೋಲಿಸುವಂತಹ ವೀರ ; ಒಂದು ಬಿರುದು: ಶ್ರೀಮನ್ಮ ಮಹಾ ಮೇದಿನೀಮಿಸೆಯರ ಗಂಡ ಕಠಾರಿಸಾಳುವ ನರಸಿಂಗರಾಯ . . . ಸುಖದಿಂ ರಾಜ್ಯವನಾಳುತ್ತುಮಿರ್ದ್ದು (ಎಕ.III(R). ಹೆಗ್ಗಡ.೦೪೩-೬ ; 1497) ; ಶ್ರೀಮನ್ಮಹಾಮಂಡಳೇಶ್ವರ ಮೇದಿನೀಮಿಸರ ಗಂಡ ಕಠಾರಿಸಾಳ್ವ . . . ಶ್ರೀ ನರಸಿಂಗರಾಯ ಮಹಾರಾಯರು ಪ್ರಿಥ್ವೀರಾಜ್ಯಂಗೆಯಿಉತ್ತಿರಲು (ಎಕ. IX. ಬೆಂಗಳೂ. ೧೨೩-೩: 1495).

[ಸಂ. ಮೇದಿನೀ]

**ಮೇದಿನಿಪ** (ನಾ). ಭೂಮಿಯ ಒಡೆಯ : ದೊರೆ ; ರಾಜ : ಬೂದಿಗುಂಟಳದ ಕಾಯಂಗಡಿಯೊಳಿಟ್ಟಿರಲು ಮೇದಿನಿಪ ಕಂಡು . . . ಪೇಳೆ (ಗುರುಚಾ. ೮-೨೯). [ಮೇದಿನಿ + – ಪ₃]

**ಮೇದಿನೀಧರ** (ನಾ). ಭೂಧರ ; ಬೆಟ್ಟ: ಪರ್ವತ : ನಾಲುಕುಭೇದ ದೌಷಧಿಯುಂಟು . . . ಆ ದ್ವಿಜಗಿರಿಯಿಂದ ಮುಂದಣ ಹಾದಿಯಲಿ ಹರಿದಶ್ವನಾಮದ ಮೇದಿನೀಧರವಮಲಚಂದ್ರುದಳಿಣನಾಮಕದ (ಕೂರಾ. ೬-೦೬-೨೬).

**ಮೇದಿನೀಧರರಾಜ** = ಪರ್ವತರಾಜ: ಮೇದಿನೀಧರರಾಜಮೇನೆಯರ್ ಬಹಳ ಹರುಷೋದಧಿಯೊಳಾಳ್ದವರ್ಗಂಗಚಿತ್ರವನಿತ್ತಿದಿರ್ಗೊಳಲ್ ಪೂಜಿಮಟ್ಟರು (ತಿಂಪು. ೩೩-೦೬). [ಸಂ.]

**ಮೇದಿನೀಪತಿ** (ನಾ). = ಮೇದಿನಿಪ : ಮೇದಿನೀಪತಿ ಪಾಂಡು ಸೋಮಕ ರಾದಿಯಾದನ್ವಯವನಗಣಿತ ಬಂಧುಬಳಗವನು ಅಪರಿಸಿದನು (ಕುವ್ಯಾಶಿ. ೦೦-೮೦) ; ಒಂದು ಜೋದ್ಯವ ನೋಡು ಬಾರೆಂದು ಮೇದಿನೀಪತಿಯ ಕೈವಿಡಿದು . . . ಆದಿದೇವನ ಎಡೆಗೈದಿ (ಹಂಪಾಂ. ೦೪-೯೦). [ಸಂ.]

**ಮೇದಿನೀಪಾಲ** (ನಾ). ಭೂಮಿಯನ್ನು ರಕ್ಷಿಸುವವನು ; ದೊರೆ ; ರಾಜ : ಮೂಲೋಕದೊಳ್ಸನಗೆ ಸಮರಾದ ಮೇದಿನೀಪಾಲರಂ ಸುಭಟರಂ ಕಾಣೆನು (ಕೈಬಿಪಾ. ೪-೩೦). [ಸಂ.]

**ಮೇದಿನೀಸುತೆ** (ನಾ). ಭೂಮಿಯ ಮಗಳು ; ಸೀತೆ : ಮೇದಿನೀಸುತೆ ಬಸುಟಿ ಬಿಡದಳುವಂತೆ ಮಾಡುವೆನು (ಕೌಶಿರಾ. ೨೬-೪).

[ಸಂ. ಮೇದಿನೀಸುತಾ]

**ಮೇದಿನೀಸುರ** (ನಾ). ಭೂಸುರ ; ಬ್ರಾಹ್ಮಣ : ವಾದಿಸದೆ ಬಸವಣ್ಣ ಕೇಳಾ ಮೇದಿನೀಸುರ ಮಾರ್ಗದಿರವಂ (ಬಸಪು. ೩-೫೨) ; ಅಂದಿನ ಜಾತಕರ್ಮದಿ ಮೇದಿನೀಸುರವರ್ಗ ವಣೆಮುದು ಗೋಧನ . . . ಹಿರಣ್ಯದಾನದಲಿ (ಕೌಶಿರಾ. ೦-೬೭). [ಸಂ.]

**ಮೇದಿಸು** (ಕ್ರಿ). ೧. ನೆನೆಯುವಂತೆ ಮಾಡು; ಅದ್ದು ; ತೋಯಿಸು : ಮೊಮ್ಮನ ಹಣೆಯ ಮೇಲೊಗಿಸಿದನು ಪನ್ನೀರಿನಲಿ ಮೇದಿಸಿದ ಕಣಲಿಗೆಯ ಕುಸುಮಂಗಳನು (ಕೂರಾ. ೬-೩೦-೪೩). ೨. ಲೇಪನಮಾಡು ; ಬಳಿ ; ಲೇಪಿಸು : ರಾಯ ಮದರಘನಸುಮಿಸಿಂಚಿತಕಾಯವನು ನವತಪ್ತತೈಲದ

ಲಾಮಸಂಬಡಿಸಿದರು ಮೇದಿಸಿದರು ಸುಗಂಧವಳಿ (ಕೋರಣ. ೨-೬-೧). ೩. ಸಿಂಪಡಿಸು ; ತಳಿ : ಜಾದಿಮುತ್ತಲ್ಗೆ ಜವಾದಿಯನೊಲಿಸಿಂ ಮೇದಿದವರಲ್ಲದೆ ಕಾಬ್ರುಜುಜೆಗದಂ ಮೇದಿಪರೇ ನಿಜಕಾಂತೆಯರೊಲವಂ ಸಾಧಿಸುವರು ಸಕಲಕ್ಕಳಸುವರೇ (ಅಸುಮು. ೬-೩೯) ; ಬೀದಿಬೀದಿಗಳೊಳಗೆ ಕತ್ತುರಿ ಸಾದುಗಳ ಸಾರಣೆಯು ಪರಿಮಳ ಮೇದಿಸಿದ ಪನ್ನೀರ ಚಳೆಯದ ಪಡಿಸಣಗೈದ ಧೂಪದ ಧೂಮಪವನನಲೆಸೆದುದಾ ನಗರ (ಕೋರಣ. ೨-೧-೨೬).

[ಮೇದು₁ + – ಇಸು₂. / ತೆಲು. ಮೇದಿಂಚು]

**ಮೇದು₁** (ಕ್ರಿ). ೧. ನೆನೆಯಿಸು ; ಅದ್ದು : ತೋಯಿಸು. ೨. ಬಳಿ : ಲೇಪಿಸು. ೩. ಸಿಂಪಡಿಸು; ತಳಿ : 'ಮೇದಿಸು' ಪರಾ.

[ದೇ.॥ ತೆಲು. ಮೇದು]

**ಮೇದು₂** 'ಮೇ₁' ಪರಾ.

**ಮೇದುರ** (ಗು). ೧. ನುಣುಪಾದ ; ಮೃದುವಾದ : ಪ್ರತಿಲೇಖಿನದೊಳನಾಲೋಕಿತಮನುಚಿತಮೆಂದು ಪಲವು ಕಣ್ಬಡೆದವೊಲಾ ಯತಿಪತಿಯು ದಯಾಧ್ವಜಮೇನತಿಶಯಮಾದತ್ತೊ ಮೇದುರಂ ಮಾಯೂರಂ (ಧರ್ಮಪ್ರ. ೧೦-೧೩೫). ೨. ದಟ್ಟವಾದ ; ಸಾಂದ್ರವಾದ ; ಒತ್ತಾಗಿರುವ : ಮೇದುರನೀಲಾಶ್ಮಮನಂಭೋದಭ್ರಾಂತಿಯೊಳೆ ನೋಡಿ ಕುಣಿದುವು ಶಿಖಿಗಳ್ (ಜಗಂ. ೧೬-೩೩). ೩. ಸ್ಥೂಲವಾದ ; ತೋರವಾದ : ನೆಲಸಿರೆ ಮೇದುರೋದರದೊಳೆಂದು ಜಿನಾರ್ಭಕನಂತರಂಗದೊಳ್ ನೆಲಸಿದುದೆಯ್ದೆ ಸಂತಸದ ಸಂತತಿ (ಶಂಪ್ರಕೆ. ೦೨-೨೨). ೪. ಅತಿಶಯ ; ಆಧಿಕ್ಯ : ಹೆಚ್ಚಳ : ದ್ವಿಜತತಿಗೆ ಮೇದುರವ ದುಮ್ಮಾನಮೆನಿಸೆ (ಪಂಕಾರಾ. ೫-೨-೨೭). (ನಾ). ೫. ಶ್ರೇಷ್ಠನಾದವನು; ಉತ್ಕೃಷ್ಟವ್ಯಕ್ತಿ: ಭರದೆ ನಟಿಪೆಡೆಯೊಳಂತಸ್ವೈರಸಂಪನ್ನನುರುಪರಮಗಗನಮಧ್ಯಸ್ಥಂ ಪರಾನಂದತರಮೇದುರಂ ಮಹಾವಿಮಲಬೋಧಸುಧಾರಸಮಪಾರಮತುಲವಿಭವಂ (ಶಬ್ದ್ರಾ. ೧೦-೨೦೩).

[ಸಂ.]

**ಮೇದೆ** (ನಾ). ಔಷಧಕ್ಕೆ ಬಳಕೆಯಾಗುವ ಎಂಟು ವಿಧವಾದ ಮೂಲಿಕೆಗಳಲ್ಲಿ ಒಂದು; ಶುಂಠಿಯನ್ನು ಹೋಲುವ ಒಂದು ಬಗೆಯ ಬೇರು : ಕಾಕೋಳಿ, ಮೇದೆ, ಮಹಾಮೇದೆ . . . ಕಾಡಹೆಸರು ಇವಿಷ್ಟನ್ನೂ ಪ್ರತ್ಯೇಕ ನಾಲ್ಕು ವರಹ ತೂಕವನು ಸಣ್ಣನಾಗಿ ಚೂರ್ಣಿಸಿ ಹಾಕಿ (ವೈದ್ಯಗಾ. II, ೩೪) ; ಶ್ರೀಗಂಧ, ಮುಂಡಿವಾಳ . . . ಮೇದೆ, ಮಹಾಮೇಧೆ . . . ಕಾಯಿಸಿ ಪಾಕದಲ್ಲೆಳಹಿ ಶರೀರಕ್ಕೆ ಲೇಪಿಸೆ ಪಿತ್ತಜ್ವರ, ಉನ್ಮಾದ. ಮೂರ್ಛೆಸಹ ಮಾಣುವುವು (ಸಚವೈ. ೬೫) ; ಮೇದೆ ಅತಿಮೇಧಿ ಕಾಕೊಳ ಕ್ಷೀರ ಕಾಕೊಳ ಚಂಗಲಕೋಷ್ಠ . . . ಇವು ಪ್ರತ್ಯೇಕ ನಾಲ್ಕು ತೂಕ ಚೂರ್ಣಿಸಿ ಹಾಕಿ ಕಾಸಿ ಹದವಲ್ಲಿ ಇಳುಹಿ (ಬ್ರಾಕ್ಷಾಹು. ೩-೧). 'ಅಷ್ಟವರ್ಗ' ಪರಾ.

[ಸಂ. ಮೇದಾ]

**ಮೇದೋಜೀರಕ** (ನಾ). [ವೈದ್ಯ] ಆಹಾರವನ್ನು ಪಚನಗೊಳಿಸುವುದರಲ್ಲಿ ಸಹಾಯಕವಾಗುವ ರಸಗಳಲ್ಲಿ ಒಂದು : ಈ ಮೇದೋಜೀರಕವು ಸೇರಲು ಆಹಾರದಲ್ಲಿನ ಪಿಷ್ಟ, ಪ್ರೋಟೀನಪದಾರ್ಥಗಳು ಚೆನ್ನಾಗಿ ರೂಪಾಂತರವಾಗುವುವು (ಶಾಂಕ್ರ. I, ೨೫೦). [ಸಂ.]

**ಮೇದೋಜೀರಕಗ್ರಂಥಿ** (ನಾ). ಜಠರದ ಸಮೀಪದಲ್ಲಿ ಇರುವ, ಮೇದೋಜೀರಕರಸವನ್ನು ಸ್ರವಿಸುವ ಒಂದು ಗ್ರಂಥಿ : ಆಹಾರದ ಪಚನಕ್ರಿಯೆಗೆ ಸಹಾಯಕವಾಗುವ, ಮುಖ್ಯವಾದ ಗ್ರಂಥಿಗಳಲ್ಲಿ ಒಂದು : ಪಿಷ್ಟ ಪದಾರ್ಥಗಳ ಜೀರ್ಣತೆಗೆ ದೇಹದಲ್ಲಿರುವ ಮೇದೋಜೀರಕಗ್ರಂಥಿಯು ಬಹಳ ಮುಖ್ಯವಾದ ಅವಯವವಾಗಿರುತ್ತದೆ (ಪಮ್ಮೈ. ೦೦೯). [ಸಂ.]

**ಮೇದೋಧಾತು** (ನಾ). ದೇಹದ ಸಪ್ತಧಾತುಗಳಲ್ಲಿ ಒಂದು; ಮೇದಸ್ಸು : ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು, ಮೇದೋಧಾತು, ಅಸ್ಥಿಧಾತು, ಮಜ್ಜಧಾತು, ಶುಕ್ಲಧಾತು ಎಂದು ಏಳು ತರನಾಗಿವೆ (ಸಚವೈ. ೯೮). [ಸಂ.]

**ಮೇಧ** (ನಾ). ಯಜ್ಞ ; ಯಾಗ : ಮೇಧಾದಿ ಕರ್ಮಗಳು ಮಾಡಿದರೇನು ಬ್ರಹ್ಮವಾದಿಗಳ ಸಂಗವಿಲ್ಲದನಕ (ಪಿಶಾಸು. ೬೨-೧). [ಸಂ.]

**ಮೇಧಾಯುಕ್ತ** (ನಾ). ಬುದ್ಧಿಶಕ್ತಿಯುಳ್ಳವನು ; ಬುದ್ಧಿವಂತ : ದಿನನಾಥಂ ಸಿಂಹದೊಳ್ ಕೂಡೆ . . . ಅತಿ ಮೇಧಾಯುಕ್ತನಕ್ಕುಂ ನರಂ (ಜಾತಕ. ೦೭-೦೫). [ಸಂ.]

**ಮೇಧಾವಂತ** (ನಾ). = ಮೇಧಾಯುಕ್ತ. [ಸಂ. ಮೇಧಾವತ್]

**ಮೇಧಾವಿ** (ನಾ). ೧. ಬುದ್ಧಿಶಕ್ತಿಯು ಬಲವಾಗಿರುವವನು: ಬುದ್ಧಿವಂತ : ಕನ್ನೆಯೊಳ್ ಚಂದ್ರ ಕೂಡಿರೆ ಮೇಧಾವಿ ಮಹಾಗುಣಾಂಬುನಿಧಿ . . . ವಿತರಣವ್ಯಾಪಾರಶೂರಂ ನರಂ (ಜಾತಕ. ೦೭-೨೩) ; ಮೇಧಾವಿಗಳಾದ ಯಜ್ಞಕರ್ತರು ಉದಕದ ಸ್ಥಾನವನ್ನು ರಕ್ಷಿಸುತ್ತಾರೆ (ಋಗ್ವೇ. ೩೭). ಇದೀ ಕಾಲೇಜಿಗೆ 'ಮೇಧಾವಿ' ಎಂದು ಅರಿಸಲ್ಪಟ್ಟನು (ಸಸ್ಯಕ. ೦). ೨. ವಿದ್ವಾಂಸ; ಪಂಡಿತ : "ಸೂರಿ ಮೇಧಾವಿ . . . ಎನಲ್ಕೆ ವಿದ್ವಾಂಸನೆನಿಸಿಕ್ಕು" (ಮಂಗರಾ. ೬೭-೨) ; ತಾವು ನಿಜವಾಗೂ ಮೇಧಾವಿಗಳು (ದಾನಶಂ. ೭೦). ೩. ಗಿಳಿ; ಶುಕ. ೪. ಅಗ್ನಿಕಾರ್ಯ ಮೊದಲಾದುವುಗಳನ್ನು ಮಾಡಿದ ಮೇಲೆ ಅಗ್ನಿಕುಂಡದ ಅವಶೇಷದಿಂದ ಹಣೆಯ ಮೇಲೆ ಇಟ್ಟುಕೊಳ್ಳುವ ಬೊಟ್ಟು. —ರಕ್ಷೆ : ಪಿಡಿವ ಪಾತ್ರೆ ಪಿತಾಮಹನ ತಲೆ . . . ಇಡುವ ಮೇಧಾವಿಯೆ ಭಸಿತವೆಡಬಿಡದೆಸೆವ ಚಂಡಿಕೆಗಳ್ಳದುಂ ಜಡೆ ಕೊರಳ ಕೃಷ್ಣಾಜಿನವೆ ಕಲಿಯುಜಿನವಾಗಿರಲು (ಬಸಪು. ೬-೫೪).

[ಸಂ. ಮೇಧಾವಿನ್]

**ಮೇಧಾವಿತನ** (ನಾ). ಬುದ್ಧಿವಂತಿಕೆ : ಮಗನ ಮೇಧಾವಿತನವನ್ನು ಬೇಸರದಿಂದಲೇ ಹೇಳಿದ ವರದಪ್ಪನಾಯಕ (ಹೀಮೂಳು. ೯). [ಮೇಧಾವಿ + – ತನ]

**ಮೇಧಾವಿಳ** (ನಾ). ಬುದ್ಧಿವಂತ ; ಮೇಧಾವಿ : ಮೇಧಾವಿಳನೆನಿಸಿದುರ್ಮೇಧಾವಿಳಮತಿಗಿದೆಲ್ಲ ತಕ್ಕುದೆ (ಕುಸುಮಾ. ೧೦-೩೯). [ಸಂ. ಮೇಧಾವಿಲ?]

**ಮೇಧಾಶಕ್ತಿ** (ನಾ). ಬುದ್ಧಿಶಕ್ತಿ : ಅಪ್ಸರೆಯರಿಗೆ ವಿಚಿತ್ರವಾದ ಒಂದು ಮೇಧಾಶಕ್ತಿಯಿರುವುದು (ಮಹಾದ. ೦೬೨); ಧನ ವ್ಯಯವಾದೀತೆಂದು ಈ ಕಾರ್ಯ ಸಾಧಿಸಲು ಹಿಂಜರಿಯುವುದಾದರೆ ನಾಡಿನ ಮೇಧಾಶಕ್ತಿ ಉಚಿತ ಮಾರ್ಗದಲ್ಲಿ ಪ್ರವಹಿಸಲಾರದೆ ಬಹುವಾಗಿ ಅಡ್ಡದಾರಿ ಹಿಡಿದು ವ್ಯರ್ಥವಾದೀತು (ಶಿಕ್ಷಣ. ೦೭೪). [ಸಂ.]

**ಮೇಧೆ** (ನಾ). ೧. ಬುದ್ಧಿಶಕ್ತಿ ; ಪ್ರತಿಭೆ : "ಪ್ರತಿಭಾ ಸಂವಿತ್ಪ್ರಜ್ಞಾಮತಿ ಮೇಧಾ ಬುದ್ಧಿ" (ವಸ್ತುಕೋ. ೯೬-೩); ವಿರತಿ . . . ಮೇಧಾ . . . ನಿಶ್ಚಯ ಮೊದಲಾದ ಸಾತ್ವಿಕಗುಣಗಳಿಂ (೭ವೀಕ. ೨೪೭); ಶೇಷಣ್ಣನವರು ರಸಿಕರು, ಸುಕುಮಾರರು, ಬಹಳ ಚುರುಕಾದ, ಕದಡಿಲ್ಲದ ಮಿದುಳು, ಮರವರಿಯದ ಮೇಧೆ (ಗಾಪಕ. ೪೦). ೨. ಮನಸ್ಸಿನ ಷೋಡಶವಿಕಾರಗಳಲ್ಲಿ ಒಂದು : ಐತರೇಯೋಪನಿಷತ್ತಿನಲ್ಲಿ ಸಂಜ್ಞಾನ (ಚೇತನಭಾವ), ಆಜ್ಞಾನ (ಈಶ್ವರಭಾವ), ವಿಜ್ಞಾನ (ಕಲಾದಿಪರಿಜ್ಞಾನ), ಪ್ರಜ್ಞಾನ, ಮೇಧಾ, ದೃಷ್ಟಿ, ಧೃತಿ . . . ಸಂಕಲ್ಪ, ಕ್ರತು, ಅಸು, ಕಾಮ, ವಶ ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವವು (ಅಮ್ಮಕ. ೬-೨೭ ೫೯೪).

**ಮೇಧಾದಕ್ಷಿಣಾಮೂರ್ತಿ** = ೧. ಶಿವ. ೨. ಅಪೂರ್ವವಿದ್ವತ್ತು ಗಳಿಸಿದ ಹಿರಿಯರನ್ನು ಗೌರವಸೂಚಕವಾಗಿ ಸಂಬೋಧಿಸುವ ಶಬ್ದ : ಈ ಶತಮಾನದ ಪ್ರಾರಂಭದಲ್ಲಿ ಅಪೂರ್ವವಿದ್ವತ್ತು ಗಳಿಸಿದ ಹಿರಿಯರನ್ನು 'ಮೇಧಾದಕ್ಷಿಣಾಮೂರ್ತಿ' ಎಂದು ಸಂಬೋಧಿಸುತ್ತಿದ್ದರು (ಕೂಶಿ).

[ಸಂ. ಮೇಧಾ]

**ಮೇಧ್ಯ** (ಗು). ೧. ಯಜ್ಞ, ಯಾಗಗಳಿಗೆ ಯೋಗ್ಯವಾದ. ೨. ನಿರ್ಮಲವಾದ : ಶುಚಿಯಾದ. ೩. ತಿನ್ನಲು ಯೋಗ್ಯವಾದ ;

ಸೇವಿಸಲು ಅರ್ಹವಾದ. (ನಾ). ೪. ಶುಚಿಯಾದುದು ; ಪವಿತ್ರವಾದುದು : "ಶುಚಿ, ಮೇಧ್ಯಂ, ಪವಿತ್ರಂ, ಪುಣ್ಯಂ, ಪಾವನಂ–ಈ ೫ ಶುದ್ಧಮಪ್ಪ ವಸ್ತು" (ಹಲಾಯು. ೨೨–೦೩೨); "ಪಾವನಂ ಶುಚಿ ಮೇಧ್ಯ ವೆಸಿಪ ಪವಿತ್ರಮುದಕ್ಕುಂ" (ಮಂಗರಾ. ೬–೨೪). ೫. ಶುಚಿಯಾಗಿದ್ದು, ತಿನ್ನಲು ಯೋಗ್ಯವಾದುದು : ಬೇಂಟೆಯಾಡಿದರಲ್ಲಿ ಮೇಧ್ಯಂಗಳಂ ಮೃಗಗಳಂ (ಪ್ರಿರಾವಾ. ೧೩೯-೩೯೩). ೬. ಆಡು ; ಮೇಕೆ. ೭. ಮುಂಜ ಹುಲ್ಲು. ೮. ಕಗ್ಗಲಿಮರ. [ಸಂ.]

**ಮೇನ** ' ಮೇನಾ ' ನೋ.

**ಮೇನಕಾತ್ಮಜೆ** (ನಾ). ಮೇನಕೆಯ ಮಗಳು ; ಪಾರ್ವತಿ : "ರುದ್ರಾಣೀ, ಶರ್ವಾಣೀ. . . ಗಿರಿಜಾ, ಮೇನಕಾತ್ಮಜಾ–ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪-೦೬). [ಸಂ. ಮೇನಕಾತ್ಮಜಾ]

**ಮೇನಕೆ** (ನಾ). ೧. ಅಪ್ಸರಸ್ತ್ರೀಯರಲ್ಲಿ ಒಬ್ಬಳು ; ದುಷ್ಯಂತನ ಪತ್ನಿಯಾದ ಶಕುಂತಲೆಯ ತಾಯಿ : "ಘೃತಾಚೀ, ಮೇನಕಾ, ರಂಭಾ, ಊರ್ವಶೀ, ತಿಲೋತ್ತಮಾ, ಸುಕೇಶೀ, ಮಂಜುಘೋಷಾ–ಇವರು ಮೊದಲಾದವರ್ ಅಚ್ಚರಸಿಯರ್" (ಹಲಾಯು. ೦೫-೮೮) ; ದನಿಯಿಂಪು ಬೀಣೆಯಂ ಮಿಡಿದವೊಲಾಗೆ ಗಾನದೊಳೊಡಂಬಡೆ ಮೇನಕೆ ಮುಂದೆ ಪಾಡಿದಳ್ (ಶಂಶಖಾ. ೭-೮೯); ಮೇನಕೆ ರಂಭೆ. . . ಮಂಜುಘೋಷೆಯೆಂಬೀ ನೆಗಟ್ಟಗ್ಗದಚ್ಚರಿಯರಚ್ಚರಿಯಪ್ಪ ವಿಳಾಸಮಂ ಘಜಭ್ರೂನಟನೈಕದೇಶಮೆ ತಱುಂಬಿದುದು (ಪುಶ್ನಪು. ೨-೭೬). ೨. ಪರ್ವತರಾಜನ ಪತ್ನಿ ; ಪಾರ್ವತಿಯ ತಾಯಿ : ಮಿಗೆ ಬಾಸೆ ಬಣ್ಣವೇಱಿತು . . . ಬಳಲ್ಕೆಯ ನೊಗೆದುವು ನವನವಮನೋರಥಂ ಮೇನಕೆ [ಪಾಠಾಂ. ಮೇನೆ]ಯಾ (ಗಿರಿಕ. ೩-೩೯). [ ಸಂ. ಮೇನಕಾ ]

**ಮೇನತ್ತು** ' ಮೆಹನತ್ತು ' ನೋ.

**ಮೇನಾ, ಮೇಣಾ, ಮೇಣೆ, ಮೇನ, ಮೇನೆ$_2$, ಮ್ಯಾನಾ** (ನಾ). ಹಿಂದೆ ಸಿರಿವಂತರು ಉಪಯೋಗಿಸುತ್ತಿದ್ದ ಸಾಮಾನ್ಯವಾಗಿ ಬೋಯಿಗಳು ಹೊರುತ್ತಿದ್ದ, ಬಾಗಿಲುಗಳುಳ್ಳ ಪಲ್ಲಕ್ಕಿಯಂತಹ ಒಂದು ವಾಹನ : ಇವರಲ್ಲಿ ಕೆಲವರು. . . ಡೋಲಿ ಮತ್ತು ಮೇನಾಗಳನ್ನು ಸಾಗಿಸುವುದಕ್ಕೂ ನೇಮಕವಾಗಿದ್ದರು (ಮುಹಾಮಂ. II, ೨೦); ಮಧ್ಯೆ ಮಧ್ಯೆ ಗಲ್ಲಿಯಿಂದ ಮೇನಾ ಹೊರುವವರ ಹಾಂ ಹೂಂ ಎಂಬ ಕೂಗೂ . . . ಕಿವಿಗೆ ಬೀಳುತ್ತಿತ್ತು (ಶಿಬಿಂಧ. II, ೩). **ಮೇಣಾ** : "ಶಿಬಿಕಾ, ಯಾಪ್ಯಯಾನಂ, ೨ ಅಂದಣದ ಹೆಸರು, ಮೇಣಾ, ಡೋಲಿ, ಪಾಲಕಿ" (ಸಿದ್ಧಾಂತಿ. ೨೫೨). **ಮೇಣೆ** : ಕೂಡಲೆ ಅವರು ಅವಳನ್ನು ಹೊರಗಿದ್ದ ಮೇಣೆಯಲ್ಲಿ ಕೂಡ್ರಿಸಿಕೊಂಡು ನಡೆದರು (ಅಂಬಿಕ. ೬೮); ಆ ಕೋಣೆಯಿಂದ ಕೆಳಗಿಳಿದು ಬಂದು ಈ ಮೇಣೆಯಲ್ಲಿ ಕುಳಿತು. . . ಬೆಳಗಿನಲಿ ಶಾಂತವಾಯ್ತು (ನಲಮು. ೩೭–೧). **ಮೇನ** : ಇಂದಿರೆಯು ಮಹೇಶಪುರದ ಊರ ಹೊರಗೇ ಮೇನವನ್ನು ನಿಲ್ಲಿಸಿ ತಂದೆಯ ಮನೆಗೆ ನಡೆದು ಹೋದಳು (ಬಂಕಮು. ೦೨೨). **ಮೇನೆ$_2$** : ಮೇನೆಯು ಆ ಗುಡ್ಡಗಾಡಿನ ಕಾಲುದಾರಿಯಲ್ಲಿ ಸಾಗಿಬರುತ್ತಿತ್ತು (ಕಳಪ. ೦೫): ಶಾಂತಲಾದೇವಿಯೂ . . . ಮೇನೆಯಲ್ಲಿ ಕುಳಿತು ಅಂತಃಪುರವನ್ನು ಸೇರಿದಳು (ಸಶಾ. ೬). **ಮ್ಯಾನಾ** : ಬೆಳ್ಳಿ ಪಾಲಿಕಿ ೧ ಸಾದಾ ಪಾಲಿಕಿ ೧ ಮ್ಯಾನಾ ೨ ರಥಗಳು ೪ (ಗುರುರ. ೧೦); ಶ್ರೀದೇವಿಯನ್ನು ಎತ್ತಿ ಮ್ಯಾನಾದಲ್ಲಿ ಮಲಗಿಸಬೇಕೆಂದು ಸಂಕಲ್ಪ ಮಾಡಿದನು (ಶ್ರೀರಾಯು. ೦೭೨). [ ←ಪಾರ. ಮಿಯಾನಾ, ಮ್ಯಾನ್; ಹಿಂ. ಮಿಯಾನಾ ಮೇನ; ಮರಾ. ಮೇಣಾ, ಮೇನಾ ]

**ಮೇನಾಗಿಡ** (ನಾ). ಒಂದು ಬಗೆಯ ಸಸ್ಯ : (ವೈಶಿಗಿ. ೩೮-೭೫೧).

[ ಮೇನಾ$_?$ + ಗಿಡ ( < ಗಿಡು) ]

**ಮೇನಾತ್ಮಜೆ** (ನಾ). = ಮೇನಕಾತ್ಮಜೆ : " ಉಮೆ ಪಾರ್ವತಿ ಕಾತ್ಯಾಯನಿ ಹಿಮವತ್ಸುತೆ ಚಂಡಿ ದುರ್ಗೆ ಮೇನಾತ್ಮಜೆ . . . ಎಂಬಿವಂಬಿಕೆಯ ಪೆಸರ್ " (ಪಸ್ತುಕೋ. ೩-೦೬) ; ಮೇನಾತ್ಮಜಾನಾಥ ಕೋಪಿಸಲು ಕೊಲ್ಲುವನು ತಾನು ಒಲಿದಡೆ ಕಾಯ್ವನು (ಪಪಶೋ. ೬-೬೨). [ಸಂ. ಮೇನಾತ್ಮಜಾ]

**ಮೇನಿಯ** (ನಾ). (ಕರಾ) ಎಣ್ಣೆ ತೆಗೆಯುವವನು; ಗಾಣಿಗ : ಮಳೆಗೆ ಮುಂಚೆಯೇ ಆ ಕಾಯಿಗಳನ್ನು ಒಡೆದು ಬಿಸಿಲಿಗೆ ಹಾಕಿದ್ದರೆ, ಮೇನಿಯನಿಗೆ ಕೊಡಬಹುದಿತ್ತು (ಮರಮ. ೨೫) ; ಆದರೆ ತಿಮ್ಮಪ್ಪ ಈಗಲೂ ಮುದುಕನಾಗಿ ಮೂರುವರೆ ಹಲ್ಲು ಮಾತ್ರ ಉಳಿದರೂ ಎಣ್ಣೆಮೇನಿಯನಾಗಿಯೇ ಇದ್ದಾನೆ (ಹಹಸ. ೬೩). [ ? ]

**ಮೇನೆ$_1$** (ನಾ). = ಮೇನಕೆ ೨ : ಮೇನೆಯ ನಿನ್ನ ತಪಕ್ಕತಿ ಮಾನಿ ಮಹಾದೇವಿ ಕರುಣದಿಂ ನಿನ್ನುದರಸ್ಥಾನದೊಳಂ ಜನಿಯಿಸೆ ಸುಜ್ಞಾನಿಯನೆಲೆ ಪುತ್ರಿಯೆಂಬರೇ ಧಾರಿಣಿಯೊಳ್ (ಗಿರಿಕ. ೮-೫೦); ಮೇದಿನೀಧರರಾಜಮೇನೆಯರ್ ಬಹಳ ಹರುಷೋದಧಿಯೊಳಾಳ್ದು . . . ಪೊಱಮಟ್ಟರು (ಶಿಬಶು. ೩೭-೦೬). [ಸಂ. ಮೇನಾ]

**ಮೇನೆ$_2$** ' ಮೇನಾ ' ನೋ.

**ಮೇಪು, ಮೇಹು** (ನಾ). ೧. ಜಾನುವಾರುಗಳು, ಹುಲ್ಲು ಮೊದಲಾದ ಆಹಾರವನ್ನು ಮೇಯುವಿಕೆ : ದೀವದ ಬೇಂಟೆಯಂ ಬಿನ್ನವಣಿಗೆಯ್ವೊಡೆ ಗಾಳಿಯುಂ ಕಟ್ಟುಮುಟ್ಟುಂ ಕಾಪುಂ ಮೇಪುಂ ತೋಡುಂ ಬೀಡುಂ. . . ಪೆರ್ಚುಗುಂ ಕುಂದುಮನಱಿದು (ಶಂಶಖಾ. ೫-೪೩ ವ). ೨. ಜಾನುವಾರುಗಳು ತಿನ್ನುವ ಆಹಾರ ; ಜಾನುವಾರುಗಳಿಗೆ ಹಾಕುವ ಆಹಾರ : ದನಿಯ ಪೊಗರ್ ಮನೋಭವನ ಜಾಳ್ಗೊಗರಂತಿರೆ ಚಿತ್ರಮಿತ್ತು ಮೇಪನೆ ಮೆಱೆದಾಲಿಸುತ್ತಿಸವ ಪುಲ್ಲೆಯುಂ (ಲೀಲಾವ. ೮-೩೨); ಮೇಪಿಂ ಪುಲ್ಮಿಗಮುಂ ಬೆಳ್ಮಿಗಮುಂ ಪಲ್ಮಿಗಮುಂ ತಣಿದುವು (ಅಜಿಪು. ೦೦-೩೯); ಆನೆ ಕುದುರೆಗಳ ಮೇಪುಗಳ್ಗಂ ಜೋದರಾವುತಪಾಯದಳದ ಜೀವಿತಂಗಳ್ಗಂ . . . ದಂಡುಗಂಗೊಂಬುದೆನಿತಾನುಮುಂಟು (ಜಳಪಂ. ೯೫-೦೨). ೩. ಜಾನುವಾರುಗಳನ್ನು ಮೇಯಿಸುವುದು : ಮೇಪಿನ ಮಂಜ ಹಳೆ ಅಳಿಯ ಬಯಲಾಟಕ್ಕೆ ಹೋದವನು ಬೆಳಗಿನ ಜಾವ ವಾಪಸು ಬರುವಾಗ ಕತ್ತಲೇ ಆವರಿಸಿತ್ತು (ದೀಪಹಂ. ೫೫); ದನಕರುಗಳು ಹಾಯಾಗಿ ಮೇಯುತ್ತಿದ್ದವಲ್ಲಿ ; ಮೇಪಿನ ಹುಡುಗರು ತಾಳ ಹಾಕುತ್ತ ಹಾಡತೊಡಗಿದರು (ನಡವ. I, ೯೯೨). ೪. ಜಾನುವಾರುಗಳು ಮೇಯುವ ಸ್ಥಳ,– ಪ್ರದೇಶ ; ಹುಲ್ಲುಗಾವಲು : ಮೇಪಿನ ದಾರಿಯಲ್ಲಿದ್ದ ಹುಣಸೆಮರದಲ್ಲಿ ಈ ಬೊಬ್ಬರ್ಯ ಇತ್ತಂತೆ (ದೀಪಹಂ. ೫೭). **ಮೇಹು** : ೨. ಮೇಹನಿಕ್ಕಿ ಮೈಯನೊರಸಿದಡೆ ಪಶುಗಳೆ ಮೆಚ್ಚುವವು ಅನ್ನವನಿಕ್ಕಿ ಹಿರಣ್ಯವ ಕೊಟ್ಟಡೆ ಜಗವೆ ಪೊಗಳುವುದು (ಸವಚಾವ. ೪. ೬೦೨-೮೩); ತುರಗಾನೀಕದ ಮೆಯ್ಯನೊತ್ತಿಸುವ ನಿಚ್ಚಂ ಮೇಹನಾರೈವ . . . ಚಿಂತೆಯಿಂ ನೇಮಿಸಿದಂ ಸೌಹಾರ್ದದಿಂ ಬಾಹುಕಂ (ನಳಚಂ. ೬೪೮) ; ಪೊರೆವ ದೀಹದ ಮಿಗಂಗಳ್ಗೆ ಮೇಹಂ ನೀಡಿ ಕರೆದು ಬೇಂಟೆಗಳನುಱೆ ಕಲಿಸುತಂ (ಶಬಶು. ೫೩-೨೦).

[ ಮೇ$_1$ + – ಪು$_2$ /ತುಳು. ಮೇಪು ]

**ಮೇಪುಗಾಡು, ಮೇಹುಗಾಡು** (ನಾ). ೧. ಜಾನುವಾರುಗಳು ಆಹಾರವನ್ನು ಹುಡುಕಿ ತಿನ್ನುವ ಸ್ಥಳ,– ಮೇಯುವ ಸ್ಥಳ : ಹುಲ್ಲುಗಾವಲು : ಗೋಮಾಳ : ಮೇಪುಗಾಡಿಂ ಹಕ್ಕದಲೆಗೆ ಹರಿಯಿಡುವ ಹರಿಣೀಗಣದ ಕಡೆವಾಯೊಳರೆಮೆಲ್ದುಟಿದೆಳೆಗಱುಂಕೆಯುಸಟ್ಟಳಂ ಸೆಳೆದು ತಂದಾ ಬಯಲೊಳ್ ಬಳ್ಳಿವಸಲೆಯುಂ ಪೊಸಯಿಸಿಯುಂ (ಚಂದ್ರಪು. ೮-೪ ವ); ಹುಲ್ಲೆಯ ಹಿಂಡು ಮಲ್ಲಣಿಸಿ ತಲ್ಲಣಗೊಂಡವು ಬೊಬ್ಬೆಯುಬ್ಬರ ಕೊಳ್ಳದೆ ಮೇಪುಗಾಡೊಳರದೋಡಿತು ಪೆರ್ಮರೆ . . . ಮೃಗಂಗಳಂ ಮಿಡುಕಗೆಟ್ಟಿರುತಿರ್ದುದು ಕೂಡೆ ಬೇಂಟೆಯೊಳ್ (ಸೂಕ್ತಿಸು. ೩-೧೦೬). **ಮೇಹುಗಾಡು** : ೧. ಮೇಹುಗಾಡಿನೊಳವರ ಮೈ ಮಿಗೆ ನೋಡಿದರೆ

ಪುವ್ವಳೆಯು ಪುಲ್ಲುಲಿಯಾಹವವದಲ್ಲೇ ತೋಳ ತೆಕ್ಕೆಯ ತೋಟಿ ತೇಗುವರೆ (ಕುವ್ಯಾಳಿ. ೦೩-೦೭) ; ತುರುವುಂದೆ ಮೇಹುಗಾಡಿಂದ ಝಣಝಣಿಸಿ ಮನೆ ಮರಳುತಿರೆ (ವ್ಯಕಾಖ. ೬೯-೨೬೪). ೨. ಹುಲಿ ಮುಂತಾದ ಪ್ರಾಣಿಗಳು ತಮ್ಮ ಆಹಾರವನ್ನು ಹುಡುಕಿ, ಬೇಟೆಯಾಡಿ ತಿನ್ನುವ ಸ್ಥಳ : ಮರೆ ಉಲಿವಾಯ ವ್ಯಾಪ್ತು . . . ಕರಿಕಳಭ ಮಿಡ್ಗಿಪ್ರತಾನದ ಮೇಹುಗಾಡಿನಲಿ ಪರಿದು ಬೆರಸಿತು ಬೇಡಪಡೆ (ಕೂರಂ. ೩-೩-೦೩). ೩. (ಆಲಂ) (ಅಗ್ನಿಗೆ) ಆಹಾರವಾಗುವ ಸ್ಥಳ ; ಗ್ರಾಸವಾಗುವ ಪ್ರದೇಶ : ಊಹೆದೆಗಟಿನ ಕಂಬನಿಯ ತನಿಮೋಹರದ ಘನಶೋಕವಹ್ನಿಯ ಮೇಹುಗಾಡಿನ ಮನದ ಕೌರವನಿತ್ತನೋಲಗವ (ಕುವ್ಯಾಭ್ಯೋ. ೯೦-೧೨). [ಮೇಪು + ಕಾಡು₂]

**ಮೇಪುಗೊಳ್**, ಮೇಹುಗೊಳ್ (ಕ್ರಿ). ಮೇವನ್ನು ತೆಗೆದುಕೊಳ್ಳು ; ಮೇಯು : ಮೃಗಾಳಿ . . . ಮೊಬಗುಗೇಳ್ದು ಜಗದ್ವಿಪರಾಂತಮಪ್ಪ ರಾವಣನ ಘನಚಾಪದಂಡರವಮಂ ಸೆನೆದೆತ್ತಲುವಿಕ್ಷಿಸುತ್ತ ಕಂಬಿಸಿಗಳಸಿಕ್ಕಿ ಮೇಪುಗೊಳಲೊಲ್ಲವು ರೂಢಿಯ ಶಾದ್ವಲಂಗಳೊಳ್ (ಕಾರಂಪು. ೦೦೧); ನಿಶ್ಶೇಷೈದಿಂ ಮೇಪುಗೊಳ್ಳದೆ ಕಣ್ಮುಚ್ಚಿ ಪಿಮಾಸಿಯಿಂ ಸಡುಗುತಿರ್ಪಾ ಪುಲ್ಲೆಯುಂ ಕಿಡಿಸಲ್ ಪವನಿಂದೇಟಲೊಡರ್ಚಿಯುಂ . . . ಪಟ್ಟರ್ದುದು ಕೂಡೆ ಬೇಡಪಡೆ (ಜಗಪು. ೦೪-೦೯) ; ತೊಡಿಗೆಗಡಿಳಿದು ಪರಿದವು ಪಂಸೆಕೊಳ ಕೊಳನ ಸಾರಿದವು ಪಶುಮೃಗಂ ಮೇಪುಗೊಂಡು (ಸಂಪಿವಾ. ೨೨-೩೪). **ಮೇಹುಗೊಳ್**: ಚರಣಮಾನಾಪಗಂ ಬಡಿಯೆ ಜೀವಘನಂ ತನುಪೀಡೆ . . . ನಿರುಜನಮರ್ತ ಮೇಹುಗೊಳುತುಂ ಒಡವಷ್ಟೊಡೆ ಹಾನಿ ರಾತ್ರಿಯೊಳ್ ಕಚಿಯೆ ಸೀಕುಳಂ ಬಚಿಡು ತತ್ಪತಿಗಾಗಳೆ ಕೇಡ ಮಾಡುಗುಂ (ಲೋಕೋಪ. ೪-೬೯); ಮೇಹುಗೊಳ್ಳದು . . . ಜ್ವರವಿಕಾರಮಾದೊಡೆ (ಹಯುಕಂ) ತುರಗಂ (ಅಶ್ವಶಾ. ೦೩-೧). [ಮೇಪು + ಕೊಳ್₁]

**ಮೇಪುದೊಱೆ** (ಕ್ರಿ). ಮೇಯುವುದನ್ನು ಬಿಡು ; ಆಹಾರವನ್ನು ತೊರೆ : ಪುಲಿ ಬಿರಿತೋಡೆ ಋಕ್ಷವವನೀಜಪನೇಱೆ ರುರುವ್ರಜಂ ಮುಹಾಕುಲತೆಯನೆಯ್ದೆ ಮೇಪು[ಹಾಹಂ. ವು]ದೊಱೆದೇಣ[ಣ]ಗಳೊಗ್ಗೊಡ ದೆಯ್ದು . . . . ಬೇಂಟೆವಱೆಯುಬ್ಬರಮುಣ್ಮೆ ತಾ ತದ್ವನಾಂತದೊಳ್ (ತ್ರಿಪುಪು. ೨೭-೯೪). [ಮೇಪು + ತೊಱೆ₁]

**ಮೇಪುವಿಡು** (ಕ್ರಿ). = ಮೇಪುದೊಱೆ : ಕತ್ತರಿಸಿರೆ ಮೇಪುವಿಟ್ಟು ಕಪಿಯಿಂ ಹಯಸಂತತಿ ಕರ್ಣತಾಳವಿಸ್ಫುರಿತಮನೊಕ್ಕು ಕೇಳೆ ಗಜರಾಜಿ ಲಯಾಂತಕಘೋಷಭೀಷಣಂ ಪುರದೊಳಗುಣ್ಮೆದತ್ತು ಭಯವಿಪ್ಲವಪೌರಕೃತಂ ಮಹಾರುತಂ (ಪಂಪ್ರಶು. ೯-೪೪). [ಮೇಪು + ಬಿಡು₁]

**ಮೇಬಳ್ಳಿ** (ನಾ). (ಕರಾ) (ಮೇಯಲು ಬಿಟ್ಟಾಗ ಓಡಿಹೋಗಲು ಸಾಧ್ಯವಾಗದಂತೆ) ದನಗಳ ಒಂದು ಕಾಲನ್ನು ಕುತ್ತಿಗೆಗೆ ಅಥವಾ ಮೂಗುದಾರಕ್ಕೆ ಸೇರಿಸಿ ಕಟ್ಟುವ ಬಳ್ಳಿ, –ಹಗ್ಗ : ಅಯ್ಯೋ ಮಮವೆಂದರೆ ಮೇಬಳ್ಳಿ ಹಾಕಿದ ಪಶುವಿನ ಹಾಗಾಯಿತು. ಇದೇನಿಲ್ಲ, ಗೋ ಬಿಟ್ಟ ಬಸವನಂತೆ ತಿರುಗಬಹುದಲ್ಲ (ಸರಸ. ೨೬). [ಮೇ₁ + ಬಳ್ಳಿ]

**ಮೇಬೊಲ** 'ಮೇಂಬೊಲ' ನೋ.

**ಮೇಯ** (ಗು). ೧. ಅಳತೆಗೆ ಸಿಗುವ ; ಅಳೆಯಬಹುದಾದ : ಹಾಲಿನೊಳು ಬೆಣ್ಣೆಕಡಲೊಳಗೆ ನಿರ್ಗಲ್ಲಫೊಲು ತೇಲುವುದಮೇಯಸತ್ತ್ವದಲಿ ಮೇಯ ಜಗಮೂಲವರೆಯೊಳಗೊಂದು. ಮಾಪನದ ಬಗೆಗೆರಡು ಗಾಳಿಮುಸಿರುಗಳಂತೆ (ಮಂಕುತಿ. ೦೦೦). ೨. ತಿಳಿಯಬಹುದಾದ : ಅರಿಯಲು ಶಕ್ಯವಾದ. (ನಾ). ೩. ಅಳತೆಗೆ ಸಿಗುವಂಥದು ; ಅಳೆಯಬಹುದಾದುದು. ೪. ತಿಳಿಯಲಾಗುವಂಥದು; ಅರಿಯಲು ಶಕ್ಯವಾದುದು : ಮೇಯವಲ್ಲದ ಮಹಿಮೆ ಛಾಯೆಯಾ ಬ್ರಹ್ಮನದು ತಾಯವಳು ನೀಂ ಮಗುವು (ಮಂಕುತಿ. ೦೯೩). [ಸಂ.]

**ಮೇಯರ್** 'ಮೇಯರು' ನೋ.

**ಮೇಯರು**, **ಮೇಯರ್** (ನಾ). ಪುರಸಭೆಯ ಅಧ್ಯಕ್ಷ ; ಮಹಾಪೌರ : ಹಿಂದೆ ನಮ್ಮ ಚಿಕ್ಕಪ್ಪ ಈ ಊರಿನ ಮೇಯರು ಆಗಿದ್ದರು (ರೂಢಿ). **ಮೇಯರ್** : ಇಂದು ನಾಗರಿಕಸೌಲಭ್ಯಗಳ ವಿಸ್ತರಣೆಯ ಬಗೆಗೆ ಮೇಯರ್‌ರವರು ಮಾತನಾಡಿದರು (ರೂಢಿ). [ ← ಇಂ. Mayor]

**ಮೇಯಿಸು**, ಮೇಸು (ಕ್ರಿ). ೧. ದನಕರುಗಳು, ಪಕ್ಷಿ ಮುಂತಾದುವು ಹುಲ್ಲು, ಆಹಾರಗಳನ್ನು ತಿನ್ನುವಂತೆ ಮಾಡು; ಮೇವನ್ನು ನೀಡು : ವಿಷಯರಹಿತನ ಮಾಡಿ ಭಕ್ತಿರಸದ ದಣಿಯೆ ಮೇಯಿಸಿ . . . ಸಲಹಯ್ಯಾ (ಏಕಪ. ೫೦); ಗೋಕದಂಬಮುಂ ಕರೆದು ಮುರಾರಿ ಮೆಯ್ವೊಡೆದು ಮೇಯಿಸಿ ಯುಂ ತಿಳಿನೀರನೂಡಿಯುಂ . . . ಮೆಱೆದಂ ನಿಜಗೋಪಲೀಲೆಯಂ (ಜಗಪು. ೩-೯೨); ಸರುಣಾ ಮಿಗೆಯೊಳ್ಗುಡುಕುಗಳಂ ಮುಂಬರುಹಿ ವಿನೋದದಿ ಮೇಯಿಸಿ ಬಳಿಕುಱೆ ಹರಿಸದಿನಾ ಪೆಣ್ಬಕ್ಕಿಯನುಡನಿಜಾವಱೆಯೊಳಡಂಗಿಸುತ (ಜಮುಶಾ. ೦೨-೯೦). ೨. (ಆಲಂ) ಲಂಚವನ್ನು ಸ್ವೀಕರಿಸುವಂತೆ ಮಾಡು ; ಲಂಚವನ್ನು ಕೊಡು : ಅವನಿಂದ ಏನಾದರೂ ಕೆಲಸವಾಗ ಬೇಕಾದರೆ ಮೊದಲು ಅವನಿಗೆ ಚೆನ್ನಾಗಿ ಮೇಯಿಸಬೇಕು (ರೂಢಿ). **ಮೇಸು** : ೧. ಹರುಷದಿ ಎಲ್ಲರು ಹರಿಯ ಗುಣಂಗಳ ಸ್ಮರಿಸುತ ಗೋಗಳ ಮೇಸಿದರು (ಕೃಕಥಾ. ೨೭-೬); ಕೂಡಿ ತುರುಗಳ ಮೇಸುತಿರೆ ಕೈಸೀಡಿ ಸನ್ನೆಯದೋರಿ (ಜನಶಾ. ೭೮-೨೩) ; ಒಬ್ಬ ಕುರುಬಹುಡುಗನು ಕುರಿಗಳನ್ನು ಮೇಸುವುದಕ್ಕೆ ದಿನಾಲು ಅಡವಿಗೆ ಹೋಗುತ್ತಿದ್ದನು (ಮುಂಬಯಿ. ೨-೩೪). [ಮೇ₁ + — ಇಸು₁]

**ಮೇಯು** 'ಮೇ₁' ನೋ.

**ಮೇರಯ** (ನಾ). ಒಂದು ಬಗೆಯ ಮಾದಕಪಾನೀಯ. – ಸುರೆ : ಸುರಾ ಮೇರಯ ಮದ್ಯಗಳನ್ನು ಸೇವಿಸುವುದರಿಂದ ಆಗುವ ಕೇಡು ಆರು (ಬುದ್ಧಕ. ೧೬೯). [ < ಸಂ. ಮೈರೇಯ]

**ಮೇರು₁** (ನಾ). ೧. ಪುರಾಣೋಕ್ತವಾದ ಒಂದು ಪರ್ವತದ ಹೆಸರು ; ಹೇಮಾದ್ರಿ ; ಕನಕಾದ್ರಿ ; ☞ ೮೪,೦೦೦ ಯೋಜನಗಳ ಎತ್ತರದ ಈ ಪರ್ವತವು ಜಂಬೂದ್ವೀಪದ ನಡುವೆ ಇದ್ದಿತೆಂದೂ ಚಿನ್ನ ಮತ್ತು ಮುತ್ತುರತ್ನಗಳನ್ನು ಒಳಗೊಂಡ ಇದು ಬ್ರಹ್ಮನ ವಾಸಸ್ಥಳವೆಂದೂ ಪುರಾಣಗಳಲ್ಲಿ ವರ್ಣಿತವಾಗಿದೆ : "ಮೇರುಃ, ಸುರಪರ್ವತಃ, ಸುಮೇರುಃ – ಈ ಮೂಱು ಮೇರುಪರ್ವತಂ" (ಶಬ್ದಮ. ೨೨-೦೩೪); ಮೇರುಗುಣವನಱಿವುದೆ ಕಾಗೆಯಲ್ಲಿ (ಬಸವ. ೬೭) ; ಕೈಲಾಸಮಹಕ ಹುರುಡಿಸುತಲಿರ್ಪುದು ನೋಡ ಮೇಲೆನಿಪ ಮೇರು ಸೆಣಸುತ್ತಿರ್ಪುದು ನೋಡ (ತಿರುಕ. ದೀ. ೩-೨೦). ೨. ಜಪಸರದ ನಡುವೆ ಇರುವ ದೊಡ್ಡ ಮಣಿ, – ನಾಯಕಮಣಿ : ಜಪವ ಮಾಡುತ ನುಡಿದಿರೋ . . . ಜಪಸರದಿ ಮೇರುವಿಗೆ ಬಾರದೆಯರ್ಧಮಣಿಯೊಳಗೆ ಜಪವ ಬಿಟ್ಟರೊ (ಪಂಕಿದಾ. ೬-೦೩). ೩. ಶ್ರೇಷ್ಠವಾದುದು ; ಮಿಗಿಲಾದುದು ; ಉತ್ತಮವಾದುದು : ಕಳೆಗಳೊಳು ನಾಸಿಕಮ್ಮಿಗಿಲುಯಾಭರಣಂಗಳೊಳು ಮೇರು ಮೂಗುತಿಯು (ಪಾಮೋ. ೦೦-೨೫). ೪. ನಡುವೆ ಇರುವಂಥ ವ್ಯಕ್ತಿ, ಕೇಂದ್ರವ್ಯಕ್ತಿ ; ಅಗ್ರೇಸರ : ಕಟ್ಟಾಯದ ಕಣೆ ಪೆಂಪಿನ ಕಟ್ಟಳೆ ಚೌವಟದ ಮೇರು ಸನ್ನಿಯ ತವರೂರ್ ನೆಟ್ಟನೆನಿಸಿದ ಜಸಂ ನೇರ್ವಟ್ಟರೆ ನಿಟ್ಟಾಯುವಕ್ಕೆ ದುಟ್ಟತಳಕ್ಕಂ (ಕಾವ್ಯಾವ. ೨೨೯). [ಸಂ.]

**ಮೇರು₂** (ನಾ). ಎಲ್ಲೆ ; ಗಡಿ ; ಸೀಮೆ : ಜಾಲೆಪುರದ ಬೇಗೂರ ಮಧ್ಯದ ಹಳಸಾಗರ ಮೇರುವಾಗಿ ಸಲುವುದು (ಎಕ. XIV, ಗುಂಡ್ಲುಪೇ. ೦೨೭-೨೧೧?). [ ☞ ಇದು 'ಮೇರೆ' ಎಂಬುದರ ಅಪಲಿಖಿತವಿರಬಹುದು ]

**ಮೇರುಕೃತಿ** (ನಾ). ಅತ್ಯಂತ ಶ್ರೇಷ್ಠವಾದ ಕೃತಿ ; ಅತ್ಯುತ್ತಮವಾದ ಗ್ರಂಥ: ಶ್ರೀ ಕುವೆಂಪುವ ಸೃಜಿಸಿದೀ ಮಹಾಛಂದಸಿನ ಮೇರುಕೃತಿ. ಮೇಣ್ ಜಗದ್ಭವ್ಯ ರಾಮಾಯಣಂ! (ಶ್ರೀರಾದ. iv. ೨೭ ಮುನ್ನುಡಿ): ಷೆಲ್ಲಿ

ಪ್ರಮಿಾತ್ಯೂಸ್ ಕತೆಯನ್ನು . . . ತನ್ನ ಪ್ರತಿಭೆಯ ಪ್ರಭಾವದಿಂದ ಬೌದ್ಧಿಕ ತಾತ್ತ್ವಿಕ ನೈತಿಕಮೂಲಗಳನ್ನುಳ್ಳ ಮೇರುಕೃತಿಯಾಗಿ ಮಾರ್ಪಡಿಸಿದನು (ಐಸ್ಕ್ರ. LXXi, ೩೬೯೪) ; ಸಮಾರಂಭಗಳಲ್ಲಿ ಪಂಪರನ್ನರ ಮೇರು ಕೃತಿಗಳ ಬಗ್ಗೆ . . . ಉಪನ್ಯಾಸಗಳನ್ನೇರ್ಪಡಿಸುವುದುಂಟು (ಕಥೆ. ೩). [ಸಂ.]

**ಮೇರುದಂಡ** (ನಾ). [ಯೋಗ] ಮೆದುಳುಬಳ್ಳಿ ; ಬೆನ್ನುಹುರಿ : ಮೇರುದಂಡವು ಚಿಗಿತು ಹೊತ ಹಾಗೆ ಹೃದಯವಾಕೂತಿಗಿದೆ ಕಣ್ಣು ಮೇಗೆ (ಕೂರ್ಡರ್ಚಾ. ೦-೦೨). [ಸಂ.]

**ಮೇರುದಂಡೆ** (ನಾ). = ಮೇರುದಂಡ : ಬೆನ್ನಿನ ಮೇರುದಂಡೆಯ ಎರಡೂ ಪಕ್ಕಗಳಲ್ಲಿ ವಿದ್ಯುಚ್ಛಕ್ತಿಯು ಹರಿದಂತಾಗಿ . . . ಸ್ಫೋಟಿಸುತ್ತದೆ (ವಾಕೋಪಂ. ೩೦೦). [ಸಂ. ಮೇರುದಂಡ]

**ಮೇರುನಗ** (ನಾ). ಪುರಾಣೋಕ್ತವಾದ ಒಂದು ಪರ್ವತದ ಹೆಸರು; ಮೇರುಪರ್ವತ : "ಸುರಗಿರಿ ಮೇರುನಗಂ ಮಂದರಾದ್ರಿ ಕನಕಾಚಳಂ ಸುಮೇರುಮಹೀಧ್ರಂ" (ವಸ್ತುಕೋ. ೦೦-೫೭) ; ಮೇರುನಗಾಗ್ರದಿಂ ಧರೆಗುರುಳ್ವವೆನೋ . . . ನಾರಕದುಃಖಮಂ ಸೆಱೆಯೊಳೂಡುವೆನೋ ಪಲಕಾಲಮಾತನಂ (ಚಂದ್ರಪ್ರ. ೫-೬೭) [ಸಂ.]

**ಮೇರುಪರ್ವತ** (ನಾ). = ಮೇರುನಗ : ಈ ಶಾಸ್ತ್ರದ ಪ್ರಚಾರ ಮೇರು ಪರ್ವತದ ಮೇಲೆ ಆಯಿತು (ಚಾರಿತ. ೨೬೩). [ಸಂ.]

**ಮೇರುಪ್ರಸ್ತಾರ** (ನಾ). [ಛಂದ] ಎಂಟು ಬಗೆಯ ಪ್ರಸ್ತಾರಗಳಲ್ಲಿ ಒಂದು ; ಒಂದು ಛಂದಸ್ಸಿನ ಪ್ರಸ್ತಾರದ ಎಲ್ಲ ಪ್ರಕಾರಗಳನ್ನೂ ತಿಳಿಸುವ ಚಿತ್ರರೂಪವಾದ ಪ್ರಸ್ತಾರ : "ಒಂದುದಿಯಿಂದಿಪ್ಪತ್ತಾಱು ಛಂದಂಬರಂ ಮೇರುಪ್ರಸ್ತಾರಮಕ್ಕುಂ" (ಛಂಗರಾ. ೦೦೬-೨೩). [ಸಂ.]

**ಮೇರುಮಂದರ** (ನಾ). [ಜೈನ] ಬಾಹುಬಲಿವಿಗ್ರಹದ ಮುಂದಿರುವ ಮಂದರವೆಂಬ ತೇರಿನ ಭೇದಗಳಲ್ಲೊಂದು : ಬಾಹುಬಲಿವಿಗ್ರಹ . . . ಇದರ ಮುಂದಿರುವ 'ತೇರಿ'ಗೆ ಮಂದರವೆಂದು ಹೆಸರು. ಮಂದರಗಳಲ್ಲಿ ನಂದೀಶ್ವರ ಮತ್ತು ಮೇರು ಎಂಬ ಭೇದಗಳಿವೆ ಎಂದೂ ಇದು ಮೇರುಮಂದರವೆಂದೂ ಹೇಳಲಾಗಿದೆ (ಕೊಡ್ನುವಾ. ೨೦೭). 'ನಂದೀಶ್ವರ' ಪರಾ. [ಸಂ.]

**ಮೇರುಮಾನಿ** 'ಮೆಹರ್ಬಾನ್$_2$' ನೋ.

**ಮೇರುವೆ** (ನಾ). ೧. ಶತ್ರುಗಳ ಕೋಟೆಯನ್ನು ಕೆಡವಲು ಕೋಟೆಗಿಂತ ಎತ್ತರವಾಗಿರುವಂತೆ ಕಟ್ಟುವ ಪ್ರತಿಕೋಟೆ : ಇದು ಕೋಟೆಯ ಫಿರಂಗಿಪುಲಿಯಗಳ ಹೂಳು ಬಿಡದೆಬ್ಬಿಸು ಮೇರುವೆಯ (ಕಂಪಿ. ೦೩-೪೫) ; ಆಗಸವನು ತುಡುಕುವ ಮೇರುವೆಗಳ ಮೇಗೇಱಿ ಖಾನನ ಭಟರು ಬೇಗದೆ ಪಟಲಗುಂಡುಗಳ ಮಳೆಯನು ಸರಾಗದೊಳುಬ್ಬಿ ಕಱೆದರು (ಕಂಪಿ. ೦೪-೦೩). ೨. ಕೋಟೆಗಳ ಮೇಲೆ ಮಾಡಿರುವ ಅಲಂಕಾರಸಾಧನ : ತಳಿರ ಗುಡಿತೋರಣದ ಸಾಲ್ಗಳಿಂದೆಡೆಗೆಡೆಗೆ ತೊಳಪ ಮುಕುಳದ ಮಕರ ತೋರಣಗಳಿಂದೆ ಪೂಗಳ ಕುರುಜು ದೊಡ್ಡ ಮೇರುವೆಗಳಿಂದ . . . ಚೆಲ್ವದುದಾ ಬಸಂ (ಚಂಪ್ರ. ೪೫-೨೭); ಬಳಸಿದ ತಳಿಯ ಮುರಿದು ಕೋಟೆಯ ಮೇರುವೆಗಳಿಗೆ ಕಿಚ್ಚನ್ನಿಕ್ಕಿದರು (ಕವೀರ. ೦೦೩). 'ಮೇರು$_1$' ಪರಾ. [ ? ]

**ಮೇರೆ$_1$** (ನಾ). ೧. ಎಲ್ಲೆ ; ಗಡಿ ; ಸೀಮೆ ; ಸರಹದ್ದು : ಪರಿಹಾರ ಸಮಾನ್ವಿತಪುಂದಕಪೂರ್ವನ್ಗತ್ತ ಪೊಲ ಮೇರೆ (ಎಕ. X (8), ಮುಳಬಾ. ೩೨೬-೪೪; 650); ಎಮ್ಮಾಳ್ವ ಪಟ್ಟಂಡಕಿಂತಿದಱಿಂದಿತ್ತೆಯೆ ಮೇರೆ ನೋಡಿಮೆಮಗೀ ಶೈಳೇಂದ್ರಮೆಂದೆಂದು ತೋಱಿದಂ . . . ಹೈಮಾದ್ರಿಯಂ (ಆದಿಪು. ೦೩-೬೪): ಮೂಡಲು ಸುಗ್ಗಾವೆಯ ಪೊಲ ಮೇರೆ ಬಡಗಲು ಬಟ್ಟೆ ತೆಂಕಲು [ಫಲವದ] ಮೇರೆ (ಪಾಂಡೇಇ. ೩-೩೫; 1065); ಪಿಶಾಚಿದ ಜಕ್ಕ ಮನ್ನೆಯನ ಮೇರೆಯಿಲ್ಲದ ಬಲವಾರಿಧಿಯನು ನೋಡಿದಾರುಭಟೆಯನೇ ವೇಳ್ವೆ (ಕಂಪಿ. ೩-೭೪). ೨. ಮಿತಿ : ಸಹನಶಕ್ತಿಗೂ ಒಂದು ಮೇರೆಯಿದೆ (ಹಾಹುತ್. ೪೯). ೩. ಆಶ್ರಯ ; ನೆಲೆ ; ಬೀಡು : "ಇಕ್ಕೆ, ಇಂಬು, ಗೊತ್ತು, ನೆಲೆ, ತಾಣಂ, ತಾಯ್ಮನೆ, ಮೇರೆ . . . ಆಗರಂ — ಈ ೧೫ ಆಶ್ರಯಕ್ಕೆ ಪೆಸರ್" (ಕಚಾ. ೫೯-೨೯೦). ೪. ಅಭಿಪ್ರಾಯ : ಅರ್ಥ ವ್ಯಾಪ್ತಿ : ಈ ಶಾಸನದ ಮೇರೆಯೊಳ್ ಸ್ವಯಂಬುದೇವರ್ಗೆ ಬಿಟ್ಟ ಧರ್ಮ್ಮಮಂ ರಕ್ಷಿಸಿದಾತಂ . . . ಕೃತುಶತಮಂ ಯ × ಕೊಟ್ಟ ಫಲಮನೆಯ್ದುಗುಂ (ಕ್ಲಾಇಇ. XI-i, ೪೬-೨೭; 1002).

[ದೇ.೫ ತಮಿ. ಮೇರೈ; ಮಲ. ತೆಲು. ಮೇರ ; ತುಳು. ಮೆಯರೆ. ಮೇರೆ. / ಸಂ. ಮರ್ಯಾ]

**ಮೇರೆ$_2$** (ಅ). ಪ್ರಕಾರವಾಗಿ ; ರೀತಿಯಲ್ಲಿ : ಈ ಮೇರೆ ತಿಳಿಯತಕ್ಕದ್ದು (ಸಿದ್ಧಾಂತಿ. ೨೫೩) ; ಈ ಮೇರೆ ಊಹಿಸತಕ್ಕದ್ದು (ಸಿದ್ಧಾಂತಿ. ೩೫೪). 'ಮೇರೆಗೆ' ಪರಾ. [< ಮೇರೆ$_1$]

**ಮೇರೆಗಟ್ಟು** (ಕ್ರಿ). (ಅಲಂ) ಅಧಿಕಾರದ ಪರಿಮಿತಿಯನ್ನು ನಿಶ್ಚಯಿಸು : ಆ ವೇಂಕಟಪತಿರಾಯನು ಈ ಶಾಸನದಲ್ಲಿ ಈ ಪಟ್ಟಣದ ರಾಜ್ಯಶ್ರೀಯ ಅರಸುತನವನ್ನು . . . ರಾಜಒಡೆಯನಿಗೆ ವಹಿಸಿಕೊಟ್ಟು . . . ಮಾಣ್ಡಲಿಕ ಎಂದು ಮೇರೆಗಟ್ಟಿ ಮುದ್ರಿಸಿದ್ದರೆ ? (ಮಂತ್ರಕ. ೦೨-೯). [ಮೇರೆ$_1$ + ಕಟ್ಟು$_1$]

**ಮೇರೆಗಲ್ಲು** (ನಾ). ಗಡಿಯನ್ನು ಸೂಚಿಸಲು ಗುರುತಾಗಿ ನೆಡುವ ಕಲ್ಲು ; ಗಡಿಕಲ್ಲು ; ಬಾಂದುಕಲ್ಲು : ವೈಷ್ಣವದಾನವಾಗಿದ್ದರೆ ಗರುಡನ ಕೆತ್ತನೆಯುಳ್ಳ ಮೇರೆಗಲ್ಲುಗಳನ್ನೂ ನಿಲ್ಲಿಸಬೇಕು (ಶಾಸಗ. ೫) ; ಕಾಲಪಥದಲ್ಲಿ ನನ್ನ ಪ್ರೇಯಸಿಯ ಮರಣವು ನೆಟ್ಟ ಮೇರೆಗಲ್ಲನ್ನು ದಾಟಿ . . . ಬರೆಯಲು ಹೊರಟರೆ (ಹೋರಪ್ರ. ೪೭). [ಮೇರೆ$_1$ + ಕಲ್ಲು (< ಕಲ್$_3$)]

**ಮೇರೆಗಳೆ** (ಕ್ರಿ). ೧. ಗಡಿಯನ್ನು ಮಿಾರು ; ಎಲ್ಲೆಯನ್ನು ದಾಟು ; ಅತಿಕ್ರಮಿಸು : ಮಾರಯ್ಯನ ಪರಮಾನಂದ ಮೇರೆಗಳೆದ ಮಹಾಸಾಗರದಂತೆ ಹರಿಯಿತು (ಮೋಳಿಗೆ. ೭೪ ಪ್ರಸ್ತಾವನೆ). ೨. (ಕವಿವರ್ಣನೆಯಲ್ಲಿ) ಲೋಕ ಸ್ಥಿತಿಯ ಎಲ್ಲೆಯನ್ನು ಮಿಾರು : ಮೇರೆಗಳೆದಿರೆ ವಿಶೇಷವಿಚಾರಮನಧಿ ಕೋಕ್ತಿಯೊಳ್ ತಗುಳ್ಚುವುದಕ್ಕುಂ (ಕವಿರಾ. ೩-೯೦). [ಮೇರೆ$_1$ + ಕಳೆ$_1$]

**ಮೇರೆಗಿಡು** 'ಮೇರೆಗೆಡು' ನೋ.

**ಮೇರೆಗೆ** (ಅ). ರೀತಿಯಲ್ಲಿ; ಪ್ರಕಾರವಾಗಿ ; ಅನುಗುಣವಾಗಿ : ಇವಳ ಪ್ರಾರ್ಥನೆ ಮೇರೆಗೆ ರಾಯನು ಅಲ್ಲಿ ಒಂದು ದೊಡ್ಡಕೆರೆಯನ್ನು ಕಟ್ಟಿಸಿದನು (ಕೃದೇವ. ೦೪); ನಿನಗಿಂತ ಹಿರಿಯರಾದವರು ಹೇಳಿದ ಮೇರೆಗೆ ನಡೆ (ಮುಂಬಯಿ. ೪-೩೯); ವಿಶ್ವದ ಚಟುವಟಿಕೆಗಳೆಲ್ಲ ಪ್ರಕೃತಿಯ ಆಜ್ಞೆಯ ಮೇರೆಗೆ ಸಾಗುತ್ತವೆ (ಧರ್ಮಸಾ. ೦೩೨). 'ಮೇರೆ$_2$' ಪರಾ. [< ಮೇರೆ$_1$]

**ಮೇರೆಗೆಡಿಸು** (ಕ್ರಿ). (ಅಲಂ) ಅಸ್ತಿತ್ವವಿಲ್ಲದಂತೆ ಮಾಡು ; ಲಯ ಗೊಳಿಸು ; ಪ್ರಳಯಮಾಡು : ಆ ರಜೋಗುಣದಿಂದ ನೀನೇ ಘೋರಿ ಜಗವನು ಮಾಳ್ಪೆ ಸಲಹುವೆ ಸಾರಸತ್ವಗುಣಾವಲಂಬನದಿಂದ ಮತ್ತಿದನು ಮೇರೆಗೆ[ಪಾಠಾಂ. ಗ]ಡಿಸುವೆ . . . ಎಂದನಕ್ರೂರ (ಭಾಗ. ೦೦-೪೫-೨೩). [ಮೇರೆ$_1$ + ಕೆಡಿಸು$_1$]

**ಮೇರೆಗೆಡು, ಮೇರೆಗಿಡು** (ಕ್ರಿ). ಮಿತಿಮಿಾರು ; ಅಳವಿಗೆ ಸಿಗದಿರು : ಮೇರೆಗೆಟ್ಟ ಕೋಟಲೆಗಳನುಣ್ಣ ನೆಂಬಲ ಸೈರಣೆಯೋ (ಕಾರಂತ. ೯೨೦) ; ಮೂದಲಿಸಿ ಹಾಡುತಂ ಮುದ್ದಿಸುತೆ ಹಾಡುತಂ ಆದರಿಸಿ ಹಾಡುತಂ ಮೇರೆ ಗೆಡೆ ಹಾಡುತಂ (ಬಸವ. ೯-೦೯೬). **ಮೇರೆಗಿಡು** : ಬಾರಾ ಉಮೇ ನಮ್ಮ ಭಕ್ತನಂ ನೋಡುವಂ ಮೇರೆಗಿಡೆ ಜೀವಪರಿಯಂತರಂ ಕಾಡುವಂ (ಅರ. ದೇ. ೦೭೫-೦೦). [ಮೇರೆ$_1$ + ಕೆಡು$_1$]

**ಮೇರೆಗೊಳ್** (ಕ್ರಿ). ಎಲ್ಲೆಯನ್ನು ಅನುಸರಿಸು: ಮೂಡಲು ಹಳ್ಳಸಾಗರ ಮೇರೆಗೊಂಡು ಬಂದು ಪಟ್ಟದರಸೀ ಆಲದ ತಾಳ್ಳಿನಲ್ಲಿ ದೇವರಾಯಪುರದ ಕಲ್ಲುವತ್ತಿನಲ್ಲಿ ನೆಟ್ಟ ಕಲ್ಲು ೧ (ಎಕ. XIV. ಮೈಸೂರು. ೧೧೬-೬೬; 1664). [ ಮೇರೆ$_1$ + ಕೊಳ್$_1$ ]

**ಮೇರೆದಪ್ಪು** (ಕ್ರಿ). ೧. ಗಡಿ ಅಥವಾ ದಡವನ್ನು ಮೀರು ; ಎಲ್ಲೆಯನ್ನು ದಾಟು : ಅತಿಕ್ರಮಿಸು :. ಪ್ರಳಯಕಾಲದ ಸಮುದ್ರಂ ಮೇರೆದಪ್ಪಿದಂತೆ ಚಾತುರ್ದಂತಬಲಂಬೆರಸು ಬಂದು ಪೊಟಲಂ ಮುತ್ತಿದೊಡೆ (ವಡ್ಡಾರಾ. ೧೯೯-೩) ; ವಿಳಯಕಾಲಜಳನಿಧಿಗಳಂತೆ ಮೇರೆದಪ್ಪಲ್ ಬಗೆದ ತನ್ನ ನಾಲ್ವರ್ ತಮ್ಮಂದಿರ ಮುನಿದ ಮೊಗಮಂ ಕಂಡು (ಪಂಪಭಾ. ೭-೯ ವ) ; ಈ ಟಿಟ್ಟಿಭನ ತತ್ತಿಗಳಂ ವಾರಿಧಿ ಮೇರೆದಪ್ಪಿ ಕೊಂಡುಪೋದಡೆ ಪುಯ್ಯಲಿಡಲ್ಬಂದವು (ಪಂಚತಂ. ೦೬೩-೭) ; ಅಂಭೋನಿಧಿ ಮೇರೆದಪ್ಪಿದ ತೆಱಂ ಬಂದತ್ತನೀಕಾರ್ಣವಂ (ಕಾವ್ಯಸಾ. ೯೬೩). ೨. ಅಧಿಕವಾಗು; ಅತಿಶಯಿಸು : ಸತತಂ ಪೊರೆವಾಳ್ದನೆ ಬಾರ ಮೇರೆದಪ್ಪಿದ ಕರುಣಾಬ್ಧಿ ಬಾರ (ಪಂಪಶ. ೦೬) ; ಮೇರೆದಪ್ಪಿತು ಕೌರವನ ಪರಿವಾರದಲಿ ಜೇಹವರು ಮಕುಟದ ಭಾರಿಯಾಳುಗಳಾಂತುಕೊಂಡರು ಪಾರ್ಥನಂದನನ (ಕುಮಾ.ದ್ರೋ. ೬-೦). [ಮೇರೆ$_1$ + ತಪ್ಪು$_1$]

**ಮೇರೆಮೀರು** 'ಮೇರೆಮೀಱು' ನೋ.

**ಮೇರೆಮೀಱು**. ಮೇರೆಮೀರು (ಕ್ರಿ). ೧. (ಯಾವುದೇ ವಿಷಯದಲ್ಲಿ) ಪರಿಮಿತಿಯನ್ನು ಮೀರು : ಅತಿಕ್ರಮಿಸು ; ಉಲ್ಲಂಘನೆ ಮಾಡು : ಮೇಳಗೋಳುವುದವನೊಳು ಮೇರೆಮೀಱದೆ (ಹರಿ. ೩-೯೯). **ಮೇರೆ ಮೀರು** : ೨. ಅತಿಶಯವಾಗು : ಅಧಿಕವಾಗು : ಮೇರೆಮೀರಿದ ವಾತ್ಸಲ್ಯ ಕಕ್ಕುಲತೆಯು ಇದಕ್ಕೆ ಕಾರಣವಾಗಿರುತ್ತವೆ (ಮುಕ್ತಶ್ರ. ೦೭೩). [ಮೇರೆ$_1$ + ಮೀಱು]

**ಮೇರೆಯಱಿ** (ಕ್ರಿ). (ನಡವಳಿಕೆಯ) ಪರಿಮಿತಿಯನ್ನು ತಿಳಿ ; ಇತಿಮಿತಿಯನ್ನು ಅರಿತುಕೊಳ್ಳು : ನಾನಿ ಕೇಳ್ನಿನ್ನ ಮನೋರಥ ನೆಱೆ ಕೈಸಾರಿತು ಚಲುವರೆಱೆಯನ ಮೇರೆಯಱಿತು ನಡಿಸು (ಕಂಪವಿ. ೦೦-೩೬). [ಮೇರೆ$_1$ + ಅಱಿ]

**ಮೇರೆವರಿ** (ಕ್ರಿ). ಎಲ್ಲೆ ಅಥವಾ ದಡವನ್ನು ಮೀರಿ ಮುನ್ನುಗ್ಗು : ಅಂತಾಗಸಮಿಾಂದಂತೆಯುಮೊಳೆ ಬೆಸಲಾದಂತೆಯುಂ ಮುನ್ನೀರ್ ಮೇರೆವರಿದಂತೆಯುಂ ನಡೆದು . . . ನಿಲಲೊಡನೆ (ಕಬ್ಬಿಗಾ. ೨೩೬) ; ಶ್ರೀವಧುವಿನಂಬಕಚಕೋರಕಂ ಪೊರೆಯೆ ಭಕ್ತಾವಳಿಯ ಪ್ರತ್ಯುಮುದಕೋರಕಂ ಬಿರಿಯೆ ಜಗತೀವಲಯದಮಲಸೌಭಾಗ್ಯರತ್ನಾಕರಂ ಪೆರ್ಚೆನಿಂ ಮೇರೆವರಿಯೆ (ಕೃವಿಭಾ. ೦-೦). [ಮೇರೆ$_1$ + ಪರಿ$_2$]

**ಮೇರೆವಿಡಿ** (ಕ್ರಿ). = ಮೇರೆಗೊಳ್ : ಮೇರೆವಿಡಿದು ವೃತ್ತಾಕಾರದಿಂದಾಗ ಸೂರಮಂಡಲವ ತುಡುಕುತ ಚಾರುತರದ ದಿವ್ಯನವರತ್ನದ ಕೋಟೆ ತೋಱಿತು ಕಣ್ಗೆ ಕೌತುಕವ (ಕಂಪವಿ. ೨-೩೯). [ಮೇರೆ$_1$ + ಪಿಡಿ$_1$]

**ಮೇರೆಸಾಲು** (ನಾ). ಗಡಿಯನ್ನು ಸೂಚಿಸಲು ನೆಟ್ಟ ಕಲ್ಲುಗಳ ಸಾಲು. -ಶ್ರೇಣಿ : ಮುಂದಣ ಕೆಱೆಯ ಒಂದೆ ಗದ್ದೆ ಕೊ ೧೦ ಹಿರಿಯತಿಲಮಾಳ ಕೆಯಿ ಬೊಮ್ಮಸಮುದ್ರದ ಹಿಂದಣ ಪರಳ ಕೆಯಿ ಇವೆಲ್ಲ ತೋಱುಮಣ್ಣು ಚಿತುಸೀಮೆಗೆ ನಟ್ಟ ಕಲ್ಲ ಮೇರೆಸಾಲು (ಎಕ. XVI, ತಿಪ್ಟೂ. ೩೮-೨೯; 1260). [ ಮೇರೆ$_1$ + ಸಾಲು$_2$ ( < ಸಾಲ್$_3$) ]

**ಮೇರ್ತಲೆ** (ನಾ). (ಅಲಂ) ಶ್ರೇಷ್ಠವ್ಯಕ್ತಿ : ಮೇರ್ತ್ತಲೆಯೆನಿಸಿದೊಂ ಕಲಿ ತೋಱುತ್ತಿಳಿದುದಿಕ್ಕೆ ಪರೆಯ ಭಾನೂದಯದೊಳ್ಕರ್ತಲೆಯನ್ನಿರೆ ರಿಪುಗಳ್ಕರ್ತ್ತಲೆವೆಸರಾದುದಾತನೊಕ್ಕಲ್ವೆಸರುಂ (ಸೌಇಇ. XI-i. ೯೩-೯ ; 980). [ < ಮೇಲ್$_1$ + ತಲೆ$_1$. / p ಇದು ಪ್ರಾಸಕ್ಕಾಗಿ ಮಾಡಿಕೊಂಡ ರೂಪವಿರಬಹುದು].

**ಮೇಲ್$_1$**, ಮೇಲು$_1$ (ನಾ). ೧. ತುದಿ ; ಅಗ್ರಭಾಗ ; ಉಪರಿಭಾಗ : ಅದ್ರಿ ಮೇಲಶನಾದಿವಿಟ್ಟ ಪುನರ್ಭವಕ್ಕೆಱೆ ಆಗಿ (ಎಕ. II. ೩೦-೯: ಸು. 650); ಕಾಲ್ಗಳಂ ನೀಡಿ ಬರಿಯಂ ಬೆರಂಟಿ ಬಿಸಿಲ್ಗಾಯುದ್ದ ಪಸಿವೆತ್ತಿ ಮೇಲಂ ನೋಡಿ (ಗಂಕ. ೦-೦೨೮ ವ); ಶಾಖಾಗ್ರದೊಳಪರ್ದಲುಗಲ್ಪೊಸೆ ಮೇಲ್ಕೈಕಲೆತ್ತಂ ಸಾಳೀಜಂಘಂ ಕರಂ ಪಲ್ದೆಱೆದು ನಡುಗಿ ಪಱಿಂದು ಪುರ್ಬಿಕ್ಕಿತಾಗಳ್ (ರಾಜಶೇ. ೯-೨೯). ೨. ದೇಹ, ವಸ್ತು ಮುಂತಾದುವುಗಳ ಹೊರಭಾಗ,- ಮೇಲ್ಮೈ : ಪಂದೆಯ ಮೇಲ್ಪಾವಡರ್ದಂತಿರೆ ದೇಹಂ ಮರವಡೆ ಕಣ್ಣೀರ್ಸುರಿಯೆ ತಳದಿನದನೊತ್ತುತ್ತುಂ (ಧರ್ಮಾಮೃ. ೦-೦೪೨). ೩. ಹೆಚ್ಚಿನದು; ಅತಿಶಯವಾದುದು ; ಅಧಿಕವಾದುದು : ಮೇಲೆಟ್ಟಿ ಬಲಂ ಕೋಟೆಗೆ ಮೇಲಪ್ಪೊಡಮನ್ಯವನಿತೆ ನೆಗೆಱೆಪ್ಪರ್ವಶಿಗಂ ಮೇಲಪ್ಪೊಡಮಕ್ಕೆ (ಪಂಪಭಾ. ೧-೯೭); ಪರಹಾಸಕ್ಕೊಂದೆ ರಟಿರ್ . . . ಕೈಲಾಸಧಾತ್ರೀಧರಕೆಂಟೊಂಬತ್ತು ಮೇಲಾಗಿರೆ [ಗೀಕಾಂ. ಪತ್ತೊಂದೆನೆ] ಪಸರಿಸಿದಂ ಕೀರ್ತಿಯಂ ನಾಗವರ್ಮಂ (ಛಂದೋಂಬು. ೦-೨೩). ೪. ಶ್ರೇಷ್ಠವಾದುದು : ಉತ್ತಮವಾದುದು : ದಿವದೊಳ್ ಮೇಲಪ್ಪ ರತ್ನಂಗಳೆಂತಸಿತಂ ಮಱಿಂ ಮಣಿಮಾಳಿಗಿತ್ತಂ (ಅದಿಪು. ೨-೦೮); ಸೊಗಯಿಪ ಭೋಗಾವತಿಗಂ ಮಿಗಿಲಮರಾವತಿಗಮಿಂದುವೆ ಮೇಲೆನಿಸುವುದೀ ಜಗದೊಳ್ . . . ಉಜ್ಜೇನಿಪುರಂ (ಸುಕುಮಾ. ೯-೬೬); ಆಳಿಗೊಳುತಂ ಬಡಿವರಲ್ಲದೆ ಲಾಲಿಸುವರೇ ಸುಕವಿಯೊಂದಡೆ ಮೇಲಪುದು ಕೃತಿ ಕುಕವಿಯೊಂದಡದೇಸ ಹುದು ಕಡೆಗೆ (ಬಸವ. ೦-೨೦). ೫. ಶ್ರೇಷ್ಠನಾದ ವ್ಯಕ್ತಿ ; ಉತ್ತಮನಾದ ಮನುಷ್ಯ: ಮೇಲಾದ ಪಾಂಡುಸುತರನುಪಾಲಂಭಂಗೆಯ್ಯುತಿರ್ಪ ದುರ್ಯೋಧನನಂ ಲೀಲೆಯೆ ನುಂಗುವ ಮೃತ್ಯುವ ನಾಲಗೆಯೆನೆ ನೆಗೆದುವುರಿಯ ನಾಲಗೆ ಪಲವುಂ (ಪಂಪಭಾ. ೩-೬) ; ಜಗದೊಳ್ ನೀವಿರೆ ಮೇಲೆನಿಸುವರಾರೊ ಕುಲದೊಳಂ ಶೀಲದೊಳಂ (ಧರ್ಮಾಮೃ. ೧-೦೨೯) ; ಕೀಳಾರು ಮೇಲಾರು ಹದುಳಿಪ್ಪ ನಾನು ಚಾಂಡಾಳನೋ ಹುಸಿಯ ಹೋಯ್ಯಂ ಹೊಱುವ ನೀನು ಚಾಂಡಾಳನೋ (ಹರಿಶ್ಚ. ೧೦-೨೦). ೬. ಒಳ್ಳೆಯದು; ಶುಭ; ಮಂಗಳ: ನಿನಗೆ ಮೇಲಕ್ಕೆ ! ಮೇಣ್ ಪಯಣಾ ಸೊಗಮಕ್ಕೆ ! (ರಾಮಾಶ್ವ. ೩೮-೨೬). ೭. ಪಶ್ಚಿಮದಿಕ್ಕು; ಪಡುವಣ ದೆಸೆ: ಬಡಗ್ಯ ನಿಟ್ಟುರುಳಿವ ಕರಡಿಗುಱುಕೆ ಮೇಲ ಕೋಡುಱುಗ್ಗಲ್ ಮೂಡ್ಯ ನೋಡಿ ನಡದು (ಎಕ. X (S), ಚಿಕ್ಕ. ೬೬-೨೦; 850). ೮. ಉಚಿತವಾದುದು ; ಯುಕ್ತವಾದುದು ; ಲೇಸು : 'ಮೇಲಱಿ' ಪರಾ. ೯. ಏಳಿಗೆ ; ಅಭಿವೃದ್ಧಿ : 'ಮೇಲ್ಪೋಗು' ಪರಾ. ೧೦. ಮುಂದಾಗುವುದು ; ಅನಂತರದ ಪರಿಣಾಮ : ಮೇಲಸಱಿಯದೆ ಮಿಕ್ಕು ನುಡಿದಪೆ (ಬಸವ. ೨೦-೨೩). (ಗು). ೧೧. ಮೇಲ್ಭಾಗದ ; ಮೇಲಿನ : 'ಮೇಲಂತಸ್ತು', 'ಮೇಲ್ಪೊರೆ' ಪರಾ. ೧೨. ಎತ್ತರವಾದ : ಎತ್ತರದ: 'ಮೇಲ್ನಾಡು', 'ಮೇಲ್ಮಕ್ಕಿ' ಪರಾ. ೧೩. ಹೆಚ್ಚಾದ : ಮಿಗಿಲಾದ ; ಅತಿಶಯವಾದ : 'ಮೇಲೊಡ್ಡ' ಪರಾ. ೧೪. ಮುಂದಿನ ; ಅನಂತರದ : 'ಮೇಲ್ಗತೆ' ಪರಾ. ೧೫. ಉತ್ತಮವಾದ; ಶ್ರೇಷ್ಠವಾದ: 'ಮೇಲಕ್ಕಿ', 'ಮೇಲ್ಪರ' ಪರಾ. ೧೬. ಹೊರಭಾಗದ ; ಸ್ಥೂಲ : 'ಮೇಲ್ನೋರಿಕೆ', 'ಮೇಲ್ನೋಟ' ಪರಾ. ಮೇಲು$_1$ : ೧. " ಅಯ್ಯೋ ಮುಳುಗಿದೆನು ಯಾರಾದರೂ ಬಂದು ಮೇಲಕ್ಕೆ ತೆಗೆಯಿರೋ " ಎಂದು ದೀನಸ್ವರದಿಂದ ಕೂಗಹತ್ತಿದನು (ಮುಂಬರು. ೯-೩೮). ೪. ಖೂಳನನು ಹಿಡಿತಂದು ಧರಣೀಪಾಲಕಲಿ ಸರಿ ಮಾಡಿ ರಾಜ್ಯದ ಮೇಲೆ ನಿಲಿಸಿದೆ . . . ಕೀಳು ಮೇಲಿನ ಸೀಮೆ ನಿನ್ನಲಿ ಬೀಳುಕೊಂಡುದು (ಕುಮಾ.ಕ. ೩-೨೩). ೫. ಕಾಲಿಲ್ಲದಲೆ ಪರಿಗು ತೋಳಿಲ್ಲದಲೆ ಹೊಱುಗು ನಾಲಿಗಿಲ್ಲದಲೆ ಉಲಿವುದು ಕವಿಕುಲದ ಮೇಲುಗಳು ಪೇಳಿ (ಸರ್ವಜ್ಞ. ೨೦೨೯) ; ಅವರೆಲ್ಲರಲಿ ಅರ್ಜುನನೆ ಮೇಲುಗಳ ಮೇಲು (ಹರ್ಸ್ಕರ. ೬-೦೧); ಬಲದಲ್ಲಿ ವಾಲಿ ಮೇಲು. ಛಲದಲ್ಲಿ ರಾಮ ಮೇಲು (ಗಾದೆ).

೮. ನೀನು ಈ ಸಂದರ್ಭದಲ್ಲಿ ಸುಮ್ಮನೆ ಇರುವುದೇ ಮೇಲು (ಆಡು). 'ಮೇಲುಗಾಣು' ಪರಾ. ೯. 'ಮೇಲೇರು' ಪರಾ. ೧೦. ಮರುಳೇಳಿಗೆಯಲುಬ್ಬಿದ್ದು ಕರ್ಣನ ಸದೆದ ಗರ್ವದಲಿ ಮೇಲಸಱೆಯು (ಕುಮಾರವ್ಯಾ. ೫-೩೦) ; ಮೇಲಸಱೆಯುದೆ ಬೆಟ್ಟದ ಚಾಮೇಂದ್ರಭೂಪಾಲನ ಕಣಕಿ ದುಷ್ಕೀರ್ತಿಬಾಲೆಗೆ ಪತಿಯ್ಹಾದೆನು (ಕಂಸವ. ೩-೯೯). 'ಮೇಗು' ಪರಾ. ೧೧. 'ಮೇಲಟ್ಟ', 'ಮೇಲುಮಚ್ಚು' ಪರಾ. ೧೨. 'ಮೇಲುಗುಡಿ' ಪರಾ. ೧೩. 'ಮೇಲಧಿಕಾರ' ಪರಾ. ೧೪. 'ಮೇಲುಜಾತಿ' ಪರಾ. ೧೫. 'ಮೇಲುನೋಟ' ಪರಾ. ೧೬. ದೊಡದಲಿನ ; ಅಗ್ರ : 'ಮೇಲುಪಂಕ್ತಿ', 'ಮೇಲುಸಾಲು' ಪರಾ. ೧೭. ಬೇರೆಯ ; ಮತ್ತೊಂದು : 'ಮೇಲುವೆಸರು' ಪರಾ.

**ಮೇಲ್ಮೇಲ್, ಮೇಲುಮೇಲು** (ದ್ವಿರುಕ್ತಿ) : "ಎಕ್ಕೆಕ್ಕೆ ತೇನತೇನಮಿದಕ್ಕುಂ ಮೇಲ್ಮೇಲೆನಿಪ್ಪುದು" (ಶಬ್ದ. ೬೫): ಆಳುವ ನೃಪರಿಗೆಲ್ಲ ಕಾಂಚನದಾಸ ಮೇಲುಮೇಲಾಯಿತಲ್ಲ (ಕುರಂಡ. ೧-೧೬೦-೪). **ಮೇಲಣ**= ೧. ಅಗ್ರಭಾಗದ : ಉಪರಿಭಾಗದ ; ಊರ್ಧ್ವಭಾಗದಲ್ಲಿರುವ : ಚಿಕ್ಕಪಾಲನಲ್ಲದೆ ಮೇಲಣ ಬಡಿಯಂ ಕಾಣದಂಬಂತಿಲ್ಲಿಯು ಸುಖಮನೆ ಬಗೆದೆಯಲ್ಲದೆ ಮುಱುಭವದೊಳಾದ ಮಹಾದುಃಖಮಂ ಬಗೆದೆಯಿಲ್ಲಂ (ರಾಮಾಯಣ. ೬-೧೨೮) : ಧರೆಯ ಮೇಲಣ ವೈರಿನೃಪರ ದಂಡಿಸಿ ತಂದ ವರವಸ್ತುಚಯ ವೆಸೆದಿರಲು (ಕಂಸವ. ೨-೩೬). ೨. (ಮುಂಭಾಗದಲ್ಲಿ) ಎತ್ತರದಲ್ಲಿರುವ : ಗದೆಯ ಮೇಲಣ ತೋಟ ಮನೆ ಮಕ್ಕ ಅರವೆ ಸಹಿತವಾಗಿ ಪೋಟೂರ . . . [ವಿ]ಷ್ಣುಭಟ್ಟೋಪಾಧ್ಯಾಯರಿಗೆ ಕೊನಿಗಾರ ಗದ್ದೆಯೊ[ಳಗೆ] ಪಡಿಗ ಮೂಡೆ ೩ (ಎಇ. XXVII. ೦೬೦-೪೨; 1256) ; ಮಾದನ ಘಳಯ ಪಡುವಣ ಮಾರಗಳುಡನ ಕಟ್ಟೇ ಮೇಲಣ ಗಂಡಭೇರುಂಡನೆಂಬ ಮಾವಿನ ಮರನನೂ (ಎಕ. X (8). ಮುಳಬಾ. ೩-೬ : 1430). ೩. ಅನಂತರದ ; ತರುವಾಯದ ; ಮುಂದಿನ : ಕೇಳು ಜನಮೇಜಯಧರಿತ್ರೀಪಾಲ ದಿನ ಮೂಱಾಯ್ತು ಭೀಷ್ಮನ ಕಾಳೆಗದೊಳಗ್ಗಿಂದ ಮೇಲಣ ಕದನಕೌತುಕವ (ಕುಮಾರವ್ಯಾ.ಭೀ. ೭-೧) ; ತಿಂಗಳೇಳಲು ಗರ್ಭದಲಿ ರಘುಪುಂಗವನನಗಲಿದಳು ಮೇಲಣ ತಿಂಗಳೆರಡಕೆ ಪೂರ್ಣವಾಯಿತು ಗರ್ಭವವನಿಜೆಯ (ತೊರರಾ. ೦-೩-೮). ೪. ಕುರಿತ ; ಸಂಬಂಧಿಸಿದ ; ಬಗೆಗಿನ : ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು (ಮುಂದು. ಬ. ೨೫-೪೮) ; ತಂದೆ ನೀನೆನ್ನ ಮೇಲಣ ಮಮಕಾರದಿ ಬಂದೆ ಒದಗಿದೆನು ಜೀಯ (ಮೋಹತ. ೧೨-೫) ; ನಿಮ್ಮ ಮೇಲಣ ತನಿವೆ ಇದು ಎಂದು ಭಾವಿಸಲಾಗದು (ಸಚಿ. ೪೬). **ಮೇಲುದಾಗು, ಮೇಲುತಾಗು** ಒಳ್ಳಿತು ಮತ್ತು ಕೆಡುಕು : ನೀನುಟ್ ಮೇಲುಂದಾ [ಜಾಕಾಂ. ತಾ] ಗಱಿಯದ ಪೆಣ್ಣಳಂತೆ ಪೂಗಣೆಯಗೆ ಮೆಯ್ಯಾಱಿ ಬಿಲ್ಲಿಂಬಱಿಗಾಗಿ ನಿಂದಿಪರೆ ನೀನಂತು (ಜಗನ್ನಾ. ೨೫-೩೦) ; ಮೇಲುತಾಗಂ ನೋಡದುಕ್ಕು ಸೊಕ್ಕಿಂ ಬೆಳೆದು ಜವ್ವನಂಬಡೆದು ಜೂದುಂಗಾಱನಾದೆಯಲ್ಲ (ಕಮ್ಮ. ೧೧-೮) : ಮೇಲುತಾಗೆಂಬುದನೇನೆಂದಱಿಯರು ಕಾಲೋಚಿತವ ಭಾವಿಸರು . . . ಲೋಲಾಕ್ಷಿಯರಿಳೆಯೊಳಗೆ (ಪಾವನಾ. ೧೨ ೫೬). [ದೇ.॥ ತಮಿ. ಮಲ. ಮೇಲ್; ತುಳು. ತೆಲು. ಮೇಲು ; ತೊದ. ಮೆಲ್]

**ಮೇಲ್$_2$.** ಮೇಲು$_2$ (ಅ). ೧. ಮೇಲ್ಭಾಗದಲ್ಲಿ ; ಅಗ್ರಭಾಗದಲ್ಲಿ : ಮೇಲೆ : 'ಮೇಲಾಡು'. 'ಮೇಲಿಕ್ಕು' ಪರಾ. ೨. ಮೇಲ್ಭಾಗಕ್ಕೆ ; ಮೇಲಕ್ಕೆ : 'ಮೇಲೆತ್ತು'. 'ಮೇಲೇಱು' ಪರಾ. ಮೇಲು$_2$ : ೧. 'ಮೇಲಿಡು', 'ಮೇಲುಕ್ಕು' ಪರಾ. ೩. ಮತ್ತೆಮತ್ತೆ : ಮೇಲೆ ಮೇಲೆ ; ವೇಗವಾಗಿ : 'ಮೇಲುಬ್ಬಸ', 'ಮೇಲುಸಿರ್' ಪರಾ. ೪. ಪುನಃ : ಮತ್ತೊಮ್ಮೆ : 'ಮೇಲ್ಮನಿಹೆ' ಪರಾ. [< ಮೇಲ್$_1$]

**ಮೇಲ.** ಮೇಳ (ನಾ). ೧. ಸೇರುವಿಕೆ : ಕೂಡುವಿಕೆ : ಕೂಟ. ೨. ಹೊಂದಾಣಿಕೆ ; ಹೊಂದಿಕೆ. ೩. ಗುಂಪು ; ಸಂದಣಿ. ೪. ಸಭೆ ; ಗೋಷ್ಠಿ ; ಸಮ್ಮೇಳನ. ೫. ವಿನೋದ ; ಕೇಳಿ. ೬. ಜಾತ್ರೆ ; ಸಂತೆ. ೭. ಸಂಗೀತಗಾರ, ವಾದ್ಯಗಾರ ಅಥವಾ ನರ್ತಕರ ಗುಂಪು ಮತ್ತು ಇವರು ಸಾಮೂಹಿಕವಾಗಿ ಮಾಡುವ ಕಲಾಪ್ರದರ್ಶನ. ಮೇಳ : ೧. ಪೊಗಳಲ್ಕೆ ಬೇಡವಂತಿರಲಿ ಮದೀಯವಲ್ಲಭೆಯ ಮೇಳಮುಮಾಕೆಯ ರೂಪುಮಾ ತಳೋದರಿಯ ವಿಳಾಸಭಾವಮುಂ . . . ಅಡಂಗಿದುದೆನ್ನ ಚಿತ್ತದೊಳ್ (ಶೃಂಗಾರ. ೩-೩೪) ; ಕೇಳಿ ಕಿವಿ ಮುಚ್ಚಿದಳು ತನ್ನಯ ಮೇಳದೈವರ ನೆನೆದು (ಕುಮಾರವ್ಯಾ.ವಿ. ೨-೨೪). ೨. ಅಸಾರ ಮಾನವಿಯರಿಗೆ ಮೇಳವೆ ಪತಿಯೆ ಬಿಡು ಸತಿಯ (ಕೌಶಿರಾ. ೩೮-೧೧) ; ಮೂಳಗೆಯ ಮನೆಯಾಗಿ ಮೇಳದ ಸತಿಯಾಗಿ ಹೋಳಿಗೆ ತುಪ್ಪ ಉಣಲಾಗಿ ಇಂದ್ರಿಯವ ತಾಳದವ ಯೋಗಿ (ಸರ್ವಜ್ಞ. ೪೯೬) : ಮೇಳ ಕೂಡಿಸದೆ ತಾಳ ಬಡಿದ ಹಾಗೆ (ಗಾದೆ). ೩. "ಮೇಳಮಸಿ ಸಮೂಹಂ" (ಶಶಿ. ೯೩) ; ತರುಣಿಯರ ಮೇಳದಲಿ ಬಂದಳು ಧರಣಿಸುತೆ ನವಪುಷ್ಪದಾಮವ ಹರಿಯ ಕಂಠದಲಿಕ್ಕೆ (ಕೌಶಿರಾ. ೨-೪೯) ; ಹೊಳಲು ಹೊಸರೀತಿಯಲಿ ಮಿಗೆ ಕಂಗೊಳಿಸುತಿರ್ದುದು . . . ಗಳಹುವರಗಿಳಿವಿಂಡಿನಲಿ ಹೆಕ್ಕಳಿಪ ಕೋಗಿಲೆಗಳಲಿ ಮೊರೆವಳಿಕುಳದ ಮೇಳದಲಿ (ತೊರರಾ. ೦-೯-೧೧) ; ಈ ಪರಿ ಭೂಲೋಕದ ವಿವಿಧ ಯಾತ್ರಿಕರ ಮೇಳವನ್ನು ನೋಡಿದರೆ . . . ಅದು ನಾನಾತರಹದ ಗಣಂಗಳಿಂದ ಕೂಡಿದ ಶಿವಪಾರ್ವತಿಯರ ಮೆರವಣಿಗೆಯಂತಿದೆ (ಹಿಮಾತ್ರಿ. ೬೬). ೪. ಉನ್ನತವಾದ ಮೇಳದೆಡೆಯೊಳ್ ಶಾಂತಂಗೆ ತನ್ನ ನೃತ್ಯಮಂ ಬಿಡದಾನಂದದಿನಂದು ತೋಱಿಸುವ ತತ್ತದ್ಭಾಕ್ಷಿಯಂ ಕಂಡು ತನ್ನೊಡಲಂ ಮುಳ್ಳಿಣಗಿತ್ತಂ (ಉದ್ಭಟ. ೧೨-೪೨) ; ಮೇಳದಲಿ ಮಂಡಳಿಸಿ ನೃಪಜಾಲವಲಿಯುಮಸೂನುವಾದನು ಮೇಲೆ ಭೀಮಾರ್ಜುನರ ವಿವರಿಸಿ ತೋಱಬೇಕೆಂದ (ಕುಮಾರವ್ಯಾ.ಭೀ. ೨-೬). ೭. ಇಂದುಕಿರಣಕ್ಕಮೃತವಾರಿನಿಧಿ ಪರ್ಚಿ ಭೋರೆಂದುಲಿವನ್ನೊಲು ಮುನ್ನ ಮೇಳವೊಡ್ಡಿ ಸಿರಲ್ಪೊಂದೆರೆಯ ಪೊರೆಯ ಮಱಿವಿಡಿದು ಸವಿಯುರುವೆರಸಿ ನಿಂದಳು ವಿಲಾಸದಿಂದ (ಸೌಂದರ್ಯ. ೮-೨); ಮತ್ತೊಂದೆಡೆ ಪಾತರದ ಮೇಳವು ಕುಣಿಯಬೇಕು (ಕವ್ಯತಾ. ೨); ನನ್ನ ಮುಂದರ್ತಿ ಮೇಳ ಬಂದಿತ್ತು (ಗಂಪಾ. ೫). ೮. ಜೊತೆ ; ಸಹವಾಸ ; ಸಂಪರ್ಕ ; ಸಖ್ಯ : ಒಡನಾಡಿ ಬಳೆದ ಮೇಳದ ಕೆಳದಿಯರುಂ (ಅಬ್ಧಿ. ೩-೨೩ ವ) ; ಮೇಳದ ಕೆಳದಿ ಮೆಲ್ಲನಿಂತೆಂದಳ್ (ಕಬ್ಬಿಗಾ. ೬೬) ; ಕಮಲಾನನೆಯರನು ಕಂಡನು ಸುದೇಷ್ಣೆಯ ಮೇಳದಬಲೆಯರ (ಕುಮಾರವ್ಯಾ.ವಿ. ೨-೪). ೯. ಸಂಬಂಧ ; ನಂಟು : ಇನಿವಿರಿದೊಂದು ಮೇಳಮುಮೊಡರ್ಬಡು ವಟ್ಕಱುಮೆನ್ನ ನಿನ್ನ ಮುನ್ನಿನ ಭವದೊಂದು ಕೂರ್ಮೆಯೊಳೆ ಕೂಡಿದುದು (ಅಬ್ಧಿ. ೪-೫೨) ; ಸುತನೆಂಬ ಮೇಳದಿಂ ನಿನಗತರ್ಕ್ಯಬೋಧಂಗೆ ಯುಕ್ತಿಯಂ ತೋಱಿ ಜಗನ್ನುತ ನೋಡ ನನ್ನಿಯಾದುದು ಸುತಂಗೆ ಕಥೆವೇಟ್ಟರೆಂಬ ನಾಟ್ನುಡಿ ಜಗದೊಳ್ (ಅಬ್ಧಿ. ೬-೦೪). ೧೦. ಸಮವಾದುದು ; ಸಾಟಿ; ಸಮಜೋಡಿ : ಅಲಿಸಲವೆಲವೊ ಮತ್ಸ್ಯರಪುದೇಂ ದಕ್ಷಮುಖಶಾಲಿಯೋ ನಿನ್ನ ಸಾಮರ್ಥ್ಯಕಿಮ್ಮಿಯ ರಣಂ ಘೋಳವಿದೆ ಕೊಳ್ಳಾದೊಡೆನುತೆ ಮೂವತ್ತೊಂಟುಬಾಣದಿಂ ಖಳನೆಸೆಯಲು (ತೆಂಕ. ೪೩-೪೬) : ತಪಸ್ವಿ ಎಂಬುದಕ್ಕೆ ಕನ್ನಡಿಯಲ್ಲಿ 'ಕಿತ್ತಡಿ' ಎಂಬ ಮೇಳದ ಮಾತಿದೆ (ಡುಕ್ಷಕ್ರ. ೧೪೮). ೧೧. ಸ್ಪರ್ಧೆ : ಸೆಣಸಾಟ : ಘಡ ಕುಮಾರಕ ದೊಡ್ಡಗರ ಸದೆಬಡಿದ ಗರ್ವಿತತನವೇಕೆ ನಮ್ಮೊಡನೆಯೇ ನೋಡಿಲ್ಲಿ ಮೇಳವೆ ಸಾರು ಸಾರೆನುತ ಒಡನೊಡನೆ ನಾರಾಚನಿಚಯವ ಗಡಣಿಸಿದರು (ಕುಮಾರವ್ಯಾ.ದ್ರೋ. ೫-೬೬) : ನಿಲ್ಲು ಗುರುಸುತ . . . ಹುಲುಜೀವರಿಗೆ ಜವನಲ್ಲಿ ಮೇಳವೆ ಉಗುಳು ಪಂಚದಿವ್ಯಪದೀಸುತರ (ಕುಮಾರವ್ಯಾ.ಗ. ೧೧-೦೬). ೧೨. (ಆಲಂ) ಅಳು; ರೋದನ: ಆಟವಾಡುತ್ತಿದ್ದರೆ ಇಷ್ಟು ಚೆನ್ನಾಗಿ ಆಡುತ್ತಿರುತ್ತಾಳೆ, ಮೇಳ ಶುರುವಾದರೆ ಮಾತ್ರ ನಿಲ್ಲಿಸೋದು ಕಷ್ಟ (ರೂಢಿ). ೧೩. [ಸಂಗೀತ]

ಸ್ವರಗಳ ಹೊಂದಾಣಿಕೆ : ಸ್ವರಗ್ರಾಮ : ಸ್ವರಮೈತ್ರಿ : ತಾಳದಿಂ ಮೇಳದೆ ಪಾಡುವರ್ ಪದೆದು ಪಾಡುವರಟ್ಟಿಗೆ ನೆತ್ತವಾಡುವರ್ (ಶಬ್ದ. ೩-೯೩) : ಪ್ರಾಚೀನಸಂಗೀತಶಾಸ್ತ್ರಕಾರರು ಏರಿಕೆಯ ಮತ್ತು ಇಳುವರಿಯ ಕ್ರಮದಲ್ಲಿ ಕೆಲವು ಸ್ವರಗಳನ್ನು ಜೋಡಿಸಿ, ಮತ್ತಾವ ನಿಬಂಧನೆಗೂ ಒಳ ಪಡಿಸದೆ. ಆ ಸ್ವರಜೋಡಣೆಯನ್ನು 'ಮೇಳ' ಎಂದು ಕರೆದರು (ಸಂಗೀತಶಾ. ೪೩) ; ಆದ್ದರಿಂದ ಪೂರ್ವಾಪೂರ್ವಾಳವಗಳೆಳವ ಎರಡೆರಡು ಶ್ರುತಿಗಳ ಮೇಳ ದಿಂದ . . . ಆರಂಭಿಸುವುದು ಸುಲಭ (ಪೀಟಿಕೋ. ೧೦೩). ೧೪. = ಮೇಡ್ಸ್ : 'ಮೇಳಕಟ್ಟು' ಪರಾ.

ಮೇಳದವರು = (ಶುಭಸಂದರ್ಭಗಳಲ್ಲಿ) ಓಲಗವನ್ನು ಊದುವ ವರು ; ವಾದ್ಯದವರು : ಮೇಳದವರು ಬರುವವರೆಗೆ ಮದುವೆಮನೆ ಯಲ್ಲಿ ಯಾವ ಕೆಲಸವೂ ಪ್ರಾರಂಭವಾಗುವಂತಿಲ್ಲ (ರೂಢಿ). ಮೇಳಮಾಡು= ೧. ಜೊತೆಗೂಳಿಸು ; ಸೇರಿಸು : ನೃಪತುಂಗನ ವಿಷಯಕವಾದ ಆದರ ವನ್ನೂ, ಪದ್ಯರಚನೆಯ ಅಗತ್ಯವನ್ನೂ ಮೇಳ ಮಾಡಿ ಇಂಥಲ್ಲಿ ಗ್ರಂಥಕಾರನು . . . ಹೇಳಿದ್ದಾನೆ ಎನ್ನಲು ಅಡ್ಡಿಯಿಲ್ಲ (ಕಸಾತ. ೩೩). ೨. ಓಲಗವನ್ನು ಊದು : ಇನ್ನು ಶಾಸ್ತ್ರಗಳನ್ನು ಮಾಡಲು ಶುರು ಮಾಡಬೇಕು ಮೇಳ ಮಾಡಲು ಹೇಳಿ (ರೂಢಿ). ೩. ಜೋರಾಗಿ ಅಳು : ರೋದಿಸು : ಬಸ್ಸಿನಲ್ಲಿ ಒಂದು ಮಗು ಮೇಳ ಮಾಡತೊಡಗಿತು (ರೂಢಿ). ಮೇಳವಾಗು= ದ್ವಂದ್ವಯುದ್ಧವಾಗು : ತೋಳುವಲಕಿದಿರಿಲ್ಲ ಜಿನುಗುನೃಪಾಲನೆಲವೋ ಕರ್ಣ ಘಡಘಡ ಮೇಳವಾದರೆ ಮೊಗೆವೆನರುಣಾಂಬುವನು ನಿನ್ನೊಡಲ (ಕುಮಾ.ದ್ರೋ. ೧೩-೨೩). [ಸಂ.]

ಮೇಲಂಕ 'ಮೇಲಂಕಣ$_1$' ನೋ.

ಮೇಲಂಕಣ$_1$, ಮೇಲಂಕ, ಮೇಲಕ್ಕ(ನಾ). ಕೆರೆಯ ಮೇಲ್ಭಾಗದ ತೂಬು: ಕಪ್ಪವದ ಕೊಳವ ಕೆಱೆಯ ಮೇಲಂಕಣಕ್ಕ ನಗರಿಯ 'ಜೋಗಿನ ಹಳ್ಳದಿಂ ಪಡುಗಡಿಕ್ಕ ಗುಡಿಯಿಂ ತೆಂಕ ಕಂಬ ೨೦೦ . . . ಕೆಯ್ಯನು ಆಚಂದ್ರಾರ್ಕ್ಕ ತಾರಂಬರಂ ಮಹಾಜನಂಗಳು ಪ್ರತಿಪಾಳಿಸುವರು (ಎಕ. VI, ಕಡೂರು. ೩೬-೨; 1225 ?) ; ಆ ಕೆಱೆಗಳ ಮೇಲಂಕಣ ಮೊದಲಾದ ಎಲ್ಲಾ ಕೆಲಸಂ ಗಳಿಗವೂ . . . ಹದಿಕೆಯ ಬಿಟ್ಟು ಕೆಡಿಸುವರು (ಎಕ. XII, ತಿಪ್ಪಟೂ. ೨-೬೬; 1261) ; ಮೇಲಕ್ಕವೆಂದರೆ ಕೆರೆಯ ತೂಬು. ಇದನ್ನೆ ಮೇಲಂಕವೆಂದೂ ಮೇಲಂಕಣವೆಂದೂ ಶಾಸನಗಳಲ್ಲಿ ಕರೆದಿರುವರು (ಸಂಶಾಪ. ೨೦೦). ಮೇಲಂಕ : ಮಾಕಗವುಡನು ತಾನು ಕಟ್ಟಿಸಿದ ಕೆಱೆಯ ಮೇಲಂಕಕ್ಕೆ ಪರ್ವಂಪ್ರತಿ . . . ಕಪ್ಪ ೧೩೦ನು ಆಚಂದ್ರಾರ್ಕ್ಕತಾರಂಬರಂ ನಡವಂತಾಗಿ ಕುರುಣ್ಯಂಗೆಯ್ದು ಕೊಟ್ಟರು (ಎಕ. VI, ಕಡೂರು. ೬೪-೨ ; 1225 ?). ಮೇಲಕ್ಕ : ಮೊದಲಿಂದಿಕ್ಕಿಸಿದನೆಸೆವಿನಂ ಮೇಲಕ್ಕಮನೀ ಕೆಱೆಗೆ ರಾಜ ಮಾಂಧಾತನೃಪಂ ಬಿತ್ತುವಟ್ಟಮಂ ಮೇಲಕ್ಕಕ್ಕೆ ಬಿಟ್ಟಂ (ಪ್ರೈಅಂ. ೦೯೨೯, ೦೨-೬: 1062) ; ಮೇಲಕ್ಕ :— ಮೇಲಕ್ಕವೆಂದರೆ ಕೆರೆಯ ತೂಬು (ಸಂಶಾಪ. ೨೦೦). [ಮೇಲ್$_1$ +ಅಂಕಣ$_0$ (P ← ತಮಿ. ಅಜ್ಞಣಮ್= ಕೊಳಾಯಿ, ತೂಬು) ]

ಮೇಲಂಕಣ$_2$ (ನಾ). ಸ್ಪರ್ಧೆಯಿಂದ ನಡೆಯುವ ಯುದ್ಧ : ಗಣನೆ ಯಿಲ್ಲದು ಮತ್ತೆ ಮೇಲಂಕಣದ ಭಾರಣೆ ನೂಕಿತೆಲವೋ ರಣದ ವಾರ್ತೆಯ ದೇನೆನುತ ಜನವೆಲ್ಲ ಗಜಬಜಿಸೆ (ಕುಮಾ.ವಿ. ೩-೩) : ಕದನವಿಜಯದ ಭಂಗಿ ತಲೆಗೇಱದಿಂದೂ ಮೇಲಂಕಣವಲೊಡವುಟ್ಟಿದನ ನೆತ್ತರುಗುಡಿಹಿ ನಿನ್ನೊಡ ನೆನಗೆ ಮಾತೇನು (ಕುಮಾ.ಗ. ೧೧-೬೩).

[ಮೇಲು$_1$ (< ಮೇಲ್$_1$) + ಅಂಕ$_2$ + ಅಣ$_1$ (< ಕಳ$_3$ ) ]

ಮೇಲಂಕವಣೆ (ನಾ). ಕುದುರೆಯ ಮೇಲೆ ಹತ್ತಲು ಅನುಕೂಲಿಸುವಂತೆ ಅದರ ಜೀನಿಗೆ ಅಳವಡಿಸುವ ಉತ್ತಮವಾದ ಬಳೆ : ಶ್ರೇಷ್ಠವಾದ ರಿಕಾಪು : ಪಂಸೆರಳ್ ಸಾಸಿಂದಪ್ರಶ್ರೇಣಿ ಮೇಲಂಕವಣೆಯ ಮಣಿಯ ಪರ್ಯ್ಯಾಣದಿಂ ತೋರ್ಕ್ಕೆವೆತ್ತಿಯ್ಯುರೆ (ಎಕ. XI. ದಾವಣ. ೨೫-೪೨: 1224).

[ಮೇಲ್$_1$ + ಅಂಕವಣೆ$_1$]

ಮೇಲಂಗಿ (ನಾ). ಒಳಅಂಗಿಯ ಮೇಲೆ ಧರಿಸುವ ಮತ್ತೊಂದು ಅಂಗಿ : ಬೆಳ್ಳಿಯ ನಡುಕಟ್ಟು — ನೀಲಿಯ ಮೇಲಂಗಿ . . . ಹಿಂದು ಧರಿಕೆಯು ನಡುವಿನಲ್ಲಿ ನೇತಾಡುತ್ತಿದೆ (ಅರ್ಹುಗ. ೧) ; ನನ್ನ ಬಳಿ ಮೇಲಂಗಿಯು ಇದ್ದಿರಲಿಲ್ಲ (ಮಹಾಕಾಶ್ಯ. ೪೯).

[ಮೇಲು$_2$ (< ಮೇಲ್$_2$) + ಅಂಗಿ$_2$]

ಮೇಲಂತಸ್ತು (ನಾ). ಮೇಲಿನ ಉಪ್ಪರಿಗೆ ; ಮಹಡಿ : ಮಂದಿರದ ಮೇಲಂತಸ್ತಿನೊಳ್ ನಿಂತಿದ್ದ ಕುಸುಮಲತೆಯು ಯಾ ಪುರುಷನೆ ತನ್ನ ಮಂದಿರಕ್ಕೆ ಬರುವನು (ಕೌಗಂಧಿ. ೩೪೦-೬); ಸ್ವಲ್ಪ ಸಮಯದಲ್ಲೇ ಗೋಪುರವನ್ನೂ ಏರಿ ಮೇಲಂತಸ್ತಿನ ಕಟಕಿಯ ಹತ್ತಿರ ನಿಂತನು (ಮುಡಿಕ ೪೬). [ಮೇಲು$_1$ (< ಮೇಲ್$_1$) + ಅಂತಸ್ತು$_1$]

ಮೇಲಕ, ಮೇಳಕ (ನಾ). ೧. ಸೇರುವಿಕೆ : ಕೂಡುವಿಕೆ : ಕೂಟ. ೨. ಸಭೆ ; ಸಮಿತಿ. ಮೇಳಕ : ೧. "ಸಂಸರ್ಗಂ ಮೇಳಕಂ" (ಪಶ್ಯಕೋ. ೦೦೩-೦೭) ; "ಮೇಳಕಃ, ಸಂಗಃ, ಸಂಗಮಃ— ೩ ಕೂಡಿಕೆ. ಸೇರಿಕೆ" (ಸಿದ್ಧಾಂತ. ೩೬೬). [ಸಂ.]

ಮೇಲಕ್ಕ 'ಮೇಲಂಕಣ$_1$' ನೋ.

ಮೇಲಕ್ಕಿ (ನಾ). ಉತ್ತಮವಾದ ಅಕ್ಕಿ : ಶ್ರೇಷ್ಠವರ್ಜೆಯ ಅಕ್ಕಿ : ತುಪ್ಪಮುಂ ಸೊಲ್ಲಗೆಯುಂ ಎಂದಿಂಗಮಿಲ್ಲ ಕುಳ್ಗೀಳಿಬ್ಬಳ್ಳ ಮೇಲಕ್ಕಿ (ಎಕ. IV, ಶಾಮರಾ. ೯೩-೧೦ ; ಶ. ೯೦೦ ?). [ಮೇಲ್$_1$ + ಅಕ್ಕಿ$_1$]

ಮೇಲಚ್ಚು$_1$ (ನಾ). ಒಟ್ಟಾಗಿ ಮುದ್ರಿತವಾದ ಲೇಖನ ಮಂಚಾದುವು ಗಳನ್ನು ಪ್ರತ್ಯೇಕವಾಗಿ ಪುನರ್ಮುದ್ರಣಮಾಡಿದ ಭಾಗ : ನನ್ನ ಲೇಖನದ ಇಪ್ಪತ್ತು ಮೇಲಚ್ಚುಗಳನ್ನು ಕಳುಹಿಸಿಕೊಡಿ (ರೂಢಿ).

[ಮೇಲು$_1$ (< ಮೇಲ್$_1$) + ಅಚ್ಚು$_3$]

ಮೇಲಚ್ಚು$_2$ (ನಾ). ಗಾಡಿ ಅಥವಾ ರಥದ ಶ್ರೇಷ್ಠವಾದ ಅಚ್ಚು. – ಇರಚಿ : ಉರಗನಾಳದ ಹೊರಜೆ ನವನಾವಿರದ ಕುಱಗುಣಿಯಾಸುಗಳು ತಾವೆರಡು ಮಡಿ ತೊಂಬತ್ತುವೊಂದು ಸಹಸ್ರದರ್ಧವದು ಪರಿಯ ನೊಗನ ದಜನಿತು ಸಂಖ್ಯೆಗೆ ಸರಿಯೆನಿಪ ಮೇಲಚ್ಚು ಮಂಗಳತರವೆನಿಪ ನವರತ್ನ ರಚನೆಯ ಚಿತ್ರರಥವೆಂದ (ಕುಮಾ.ಅ. ೬-೬೪). [ಮೇಲ್$_1$ + ಅಚ್ಚು$_7$]

ಮೇಲಟ್ಟ (ನಾ). ೧. (ಅಲಮಾರಿನ) ಮೇಲ್ಭಾಗದ ಹಲಗೆ ಅಥವಾ ಬಡು : (ಕಸಂಗ್ರ. ೫೦). ೨. ಮೇಲುಮಾಳಿಗೆ ; ಉಪ್ಪರಿಗೆ ; ಮಹಡಿ : ಮೂರುಮನೆ ಮೇಲಟ್ಟದಲ್ಲಿ ಮೆರವಣಿಗನ[ಯ]ನ್ನೆ ಮಾಡಿಸಿದೆ (ಶದಾವ. ೭೩-೧೨) ; ಮೇಲಟ್ಟದ ಮನೆಗೆ ಹೋಗಿ ದೀಪ ಹಚ್ಚಿ ಇಬ್ಬರೂ ಕುಳಿತರು (ಇಕ್ಷೃಕ. ೩೦೪). [ಮೇಲು$_1$ (< ಮೇಲ್$_1$)+ಅಟ್ಟ$_1$]

ಮೇಲಣ 'ಮೇಲ್$_1$' ಪರಾ.

ಮೇಲಧಿಕಾರ (ನಾ). ಹೆಚ್ಚಿನ ಅಧಿಕಾರ ; ವಿಶೇಷವಾದ ಅಧಿಕಾರ : ಸೆಂಟ್ರಲ್‌ಬ್ಯಾಂಕಿನ ಮೇಲಧಿಕಾರಕ್ಕೆ ಒಳಪಟ್ಟಿಲ್ಲದೆ ಪೇಟೆಗೆ ಅನೇಕವೇಳೆ ಕೆಲಸ ನಡೆಯುವಾಗುವುದು (ಹಣಶ್ರ. ೦೬೦).

[ಮೇಲು$_1$ (< ಮೇಲ್$_1$) + ಅಧಿಕಾರ]

ಮೇಲಧಿಕಾರಿ (ನಾ). ಮೇಲ್ಮಟ್ಟದ ಹುದ್ದೆಯಲ್ಲಿರುವ ವ್ಯಕ್ತಿ : ಅವರ ಮೇಲಧಿಕಾರಿಯಾಗಿ ಇರುವ ಆಫೀಸರಲ್ಲೇ ದುಡಿಯುವ ಪ್ರಸಂಗ (ವಾತ್ಸ್ಯ. ೦೪೪) ; ಮೊದಲು ಮೇಲಧಿಕಾರಿ ಸಲೆ ತಿದ್ದಿಕೊಳುವುದು ತನ್ನ ಚಾರಿತ್ರ್ಯವನಂತೆ (ಸಂಶಾಕ. ೨೦೪-೬).

[ಮೇಲು$_1$ (< ಮೇಲ್$_1$) + ಅಧಿಕಾರಿ$_1$]

ಮೇಲನ, ಮೇಳನ (ನಾ). ಒಟ್ಟಾಗಿ ಸೇರುವಿಕೆ : ಕಲೆಯುವಿಕೆ. ಮೇಳನ : ಹೊಂದಿದವರ ಮೇಣೆರಡುವಸ್ತುಗಳಂದವರ ಗುಣಮೇಳನ

ಬಳಿಸಂದಿರಲ್ಕೀಗಾಯ್ತುವಕೆ ಗುಣಾಂತರವ್ಯಾಪ್ತಿ (ವಿವೇಕ. ೩-೨೦) ; ವೈರಾಗ್ಯ ಕಾರುಣ್ಯಮೇಳನವೆ ಧೀರತರ ಹೋರುದಾತ್ತತೆಯಿಂದ (ವಾಂಕುಕ. ೩೭೪). [ಸಂ.]

**ಮೇಲರ್ಜಿ** (ನಾ). ಕೆಳಗಿನ ಅಧಿಕಾರಿ ಅಥವಾ ನ್ಯಾಯಾಸ್ಥಾನವು ನೀಡಿದ ತೀರ್ಪಿನ ಪುನಃಪರಿಶೀಲನೆಗಾಗಿ ಮೇಲಿನ ಅಧಿಕಾರಿ ಅಥವಾ ನ್ಯಾಯಾಸ್ಥಾನಕ್ಕೆ ಸಲ್ಲಿಸುವ ಮನವಿಪತ್ರ,– ಅಪೀಲು : ಮೇಲರ್ಜಿ ಹಾಕಿಕೊಳ್ಳುವ ವಿಷಯದಲ್ಲಿ ವಕೀಲರು ಏನು ಹೇಳುತ್ತಾರೆ, ತಿಳಿಸು (ಪುಸರು. ೧೦೬). [ಮೇಲು$_1$ (< ಮೇಲ್$_1$) + ಅರ್ಜಿ]

**ಮೇಲಱ** (ಕ್ರಿ). ೧. ಒಳ್ಳೆಯದನ್ನು ತಿಳಿ ; ಶುಭವಾದುದನ್ನು ಅರಿ : ಮೇಲಱಿಯದೀ ಮಗಂಗೀ ಬಾಲೆಯನೀವುದೆ (ವರ್ಧಪು. ೭-೩೬). ೨. ಸರಿಯಾದುದನ್ನು ಗ್ರಹಿಸು ; ಔಚಿತ್ಯವನ್ನು ಅರಿ : ಬಾಲ್ಕದೊಳ್ ಮೇಲಱಿಯದೆ ಮಲದಿಂ ಮೂತ್ರದಿಂ ಶ್ಲೇಷ್ಮದಿಂ ತೊಯ್ದಾನಾರೆಂದೇಸುವಂ ಭಾವಿಸದೆ . . . ಜರಿಸಿದೆನು (ರಕ್ಷಾಕ. ೪) ; ಆ ಲಲಿತಾಂಗಿಯ ನಡುವದ ನೇಕಜ ಮೇಲಱುಯದೆ ಪುಟ್ಟಿಸಿದನೊ (ಕುರಾಶಾಂ. ೭-೨೧) ; ಮೇಲಱಿಯದ ಧೀಕರೊಳು ಕಾಳಗವ ತೊಡಗಿದರೆ ಬಾಳುವೆಮು ಕಟ್ಟು ಬಡಪಕ್ಕು ಬೆಸಲಾದ ಬೇಳಿಸಂತಕ್ಕು (ಸರ್ವಜ್ಞ. ೭೪೦). [ಮೇಲ್$_1$ + ಅಱಿ]

**ಮೇಲಱಿಕೆ** (ನಾ). ಹೆಚ್ಚಿನ ಪ್ರಸಿದ್ಧಿ : ಆಗಳವರೊಳೊರ್ವಂ ಮೇಲಱಿಕೆಯ ಕೈದುಕಾಱರ ಬೀರಂ ಪುಷ್ಕಲಂ . . . ರಕ್ಕಸವಡೆಯನಿರ್ಚಿ ಬಾರಿಸದೆ ಬೆಂಗೊಟ್ಟಿನಾದೊಡೆ ಪಟುವಾತಂ ಪಟುವ ಕೂಟನೊಂದು ಗತಿ ತನ್ನೊಳಕ್ಕೆ ಎಂದು ಪೂಣ್ದಂ (ರಾಮಾಶ್ವ. ೧೧೧-೨೩). [ಮೇಲ್$_1$ + ಅಱಿಕೆ]

**ಮೇಲಾಟ** (ನಾ). ೧. ಸ್ಪರ್ಧೆ : ಹುರುಡು ; ಪೈಪೋಟಿ : ಪರೀಕ್ಷೆಯು ಇನ್ನೊಂದು ತಿಂಗಳು ಮುಂದಿದೆಯೆನ್ನುವಷ್ಟರಲ್ಲಿ ಕಾಲೇಜಿನ ಚರ್ಚಾಸಂಘದ ಮೇಲಾಟಗಳು ಬಂದವು (ಸವುಹೀ. ೦೩೪) ; ಹೊಟ್ಟೆಗಾಗಿ, ಬದುಕುಳಿಯಬೇಕೆಂಬ ಬಯಕೆಯು ಬೇಗೆಯಲ್ಲಿ ಬಡವರು ತಮ್ಮ ಶ್ರಮವನ್ನು ಮಾರಲು ಮೇಲಾಟ ನಡೆಯುತ್ತಿರುವಲ್ಲಿ (ವೂಶಾದ. ೦೨೨). ೨. ಹವ್ಯಾಸ ; ಉಪವೃತ್ತಿ : ರಂಗಪ್ಪನಿಗೆ ಬೇರೆ ವಿಧವಾದ ಆದಾಯವೂ ಇದ್ದುದರಿಂದ ಅವನಿಗೆ ಕಂಟ್ರಾಕ್ಟು ಕೇವಲ ಒಂದು ಮೇಲಾಟವಾಗಿತ್ತೇ ಹೊರತು ಜೀವನೋಪಾಯ ಆಗಿರಲಿಲ್ಲ (ಬೀಮುಕಾ. ೯೯).

[ಮೇಲು$_1$ (< ಮೇಲ್$_1$) + ಆಟ]

**ಮೇಲಾಟಗಾರ** (ನಾ). ಸ್ಪರ್ಧಿಸುವವನು ; ಸ್ಪರ್ಧೆಗಾರ : ಇವರಿಂದ ಉತ್ಸಾಹವನ್ನು ಕುಗ್ಗಿಸಬೇಕು ಅಥವಾ ಇತರ ಮೇಲಾಟಗಾರರನ್ನು ತಗ್ಗಿಸಬೇಕು (ವೂಶಾದ. ೦೬೦). [ಮೇಲಾಟ + –ಗಾರ (< –ಕಾಱ)]

**ಮೇಲಾಡು** (ಕ್ರಿ). ೧. ಅಗ್ರಭಾಗದಲ್ಲಿ ಹಾರಾಡು, – ಸುತ್ತು, – ತಿರುಗು : ಮೇಲಾಡುವ ತುಂಬಿಗಳೆಂಚರಮಂ ಲಾಲಿಸುತ್ತಲರ್ಗೆಱೆವಳಿಸಂಚರಮಂ ಬಿಡಿಸುತ್ತುಂ ಚಾಂಪೇಯದ ಮುಗುಳ್ಗಂ ಪಿಡಿದಾಡುತ್ತುಂ (ಉದ್ಭಟ. ೦-೫೨). ೨. ಸ್ಪರ್ಧಿಸು ; ಪೈಪೋಟಿ ನಡೆಸು ; ಹುರುಡಿಸು : ಕೂಗಿ, ನಾಡೆಲ್ಲಾ, ಬೀಗಿ, ಬೀಡೆಲ್ಲಾ ಓಲಾಡಿ ಊರೆಲ್ಲ ಮೇಲಾಡಿ ಹಳ್ಳಿಗಾಡೆಲ್ಲಾ, ಸೋಲು ನಮಗಿನ್ನಿಲ್ಲ, ಗೆಲವೆ ಇನ್ನೆಲ್ಲಾ ! (ಹೊಂಗಳು. ೩೩-೦೭) ; ಭಾರತದ ಸರಕುಗಳನ್ನು ತರಿಸಿಕೊಳ್ಳಲು ಆ ವಿದೇಶಗಳವರು ಮೇಲಾಡುತ್ತಿದ್ದರು (ಭಾರಿತ. ೩೭೯) ; ಎನ್ನ ಮೇಲಾಡಿ ಶ್ರೀಗಂಗೀನ ತಂದಿ ಎನ್ನ ತಪ್ಪೇನು ಕಂಡಿ (ಮಳ್ಳಗೆ. ೨೦). [ಮೇಲ್$_2$ + ಆಡು$_1$]

**ಮೇಲಾಪ, ಮೇಳಾಪ** (ನಾ). ೧. ಜೊತೆಯಾಗಿ ಹೊಂದಿಕೊಂಡಿರುವುದು : ಜೋಡಣೆ ; ಹೊಂದಾಣಿಕೆ : ಇದು ಮಹಾಸಭೆಯಲ್ಲಿ ಮೇಲಾ [ಪಾಠಾಂ. ಳಾ]ಪದಲಿ ಕುರುಪಾಂಡವರು ಸದ್ಮೂತದಲಿ ರಮಿಸುವ ಲೇಸು ಹೊಲ್ಲೆಹವೆಂದನಂಘ್ರಿನೃಪ (ಕುವ್ಯಾಸ. ೦೨-೭೬); ಆ ತರುಣಿರ್ವರುಂ ಮಧುರವೀಣೆಗಳ ಮೇಲಾ[ಪಾಠಾಂ. ಳಾ]ಪದಾಲಾಪಂಗಳ ಗೀತದೊಳ್ . . . ಪಾಡುವರ್ದೇವನಗರೀನಿಕೇತನ ಶ್ರೀಪತಿಯ ಚಾರಿತ್ರಮಪ್ಪ ಧಾವಾಯಣವನನುದಿನದೊಳು (ಕೃವಿಜಾ. ೦೯-೫೩). ೨. ಮಿಲನ ; ಕೂಟ ; ಸಂಭೋಗ : ಸ್ತ್ರೀಪುಂಸರತಿಸಮುತ್ಥವ್ಯಾಪಾರಂ ತಾನವಲ್ತೆ ಶೃಂಗಾರಂ ಮೇಲಾ [ಪಾಠಾಂ. ಳಾ] ಪದಿನಗಲ್ಕೆಯಿಂ ಸುನಿರೂಪಿತಸಂಭೋಗವಿಪ್ರಲಂಭ ಸಮಾಖ್ಯಂ (ಕಾವ್ಯಾವ. ೭೬೯). ೩. ಗುಂಪು ; ಸಮೂಹ : ಸಕಳದಳ ಮೇಲಾ[ಪಾಠಾಂ. ಳಾ]ಪದಲಿ . . . ಕುರುಪರಿಷುಂತ ರಾಜಪ್ರಕರ ನೆರೆದುದು (ಕುವ್ಯಾಸ. ೭-೪). **ಮೇಳಾಪ** : ೧. ಜಂಗಮದ ನಾಡಿಗಡಣದ ಮೇಳಾಪವದೆಂತಿರಬೇಕೆಯ್ಯ ಎಂದೊಡೆ ಪ್ರಚ್ಛನ್ನವಾಗಿ ಲೋಕಕ್ಕೆ ತೋಱುಲೋಕಕ್ಕೆ ಅದೃಶ್ಯನಾಗಿರಬೇಕು (ತನ್ನವ. ೫೩-೦೧). ೨. ಪತಿಸಹಿತ ಸಂಕಲ್ಪಸಾಧನಗತಿಯ ಮೇಳಾಪದಲಿ ನಿಜ ನಿಶ್ಚಿತವ ಮಾಡಿ ಮನಸ್ಸಿನೇಕೋಭಾವನಿಷ್ಠೆಯಲಿ . . . ಸುಜ್ಞಾನಿ ನಿರಹಂಕಾರರೊಪ್ಪಿದರು (ಶ್ರಕುಂ. ೭-೦೭). ೩. ಯುಧಿಷ್ಠಿರಾದಿಗಳಾಳ ಮೇಳಾಪದಲಿ ಹೊಕ್ಕರು ಕಾಳೆಗದ ಕಳನ (ಕುವ್ಯಾದ್ರೋ. ೯-೨೯). ೪. ಸಹವಾಸ ; ಸಖ್ಯ ; ಸ್ನೇಹ : ಒಂದಜ ಮೋಜಿಯನೊಂದು ಮೂಸಿ ನೋಡಿ ಮತ್ತೊಚ್ಚಿ ಹೊತ್ತಿಗೆ ಕಚ್ಚಿಯಾಡಿ ಹೋದಂತಾಯಿತ್ತು ನೋಡಿರೇ ಕಲಿಯುಗದೊಳಗಣ ಮೇಳಾಪವ (ಅವಶಂ. ೭೩-೩೦೬) ; ಗೋಪುರ ವಂಗಡದ ಮೇಳಾಪದಲಿ ಮೂಜಗವ ಮೋಹಿಸುತ . . . ನಿಂದಿರೆ (ಸಿಶಾಗ. ೧೦-೩೩-೯೬); ಭವಿವ್ರಜದ ಮೇಳಾಪಕ್ಕೆ ಪಕ್ಕಾದೆನೊ (ವೃಸರು. ೩೦-೨೪). ೫. ಸಭೆ ; ನೆರವಿ ; ಸಮಿತಿ : ಸಮಸ್ತ ಮೇಳಾಪದ ಜಚ್ಚಗೋಷ್ಠಿಯ ಭಂಡರೆಲ್ಲರು ಬಲ್ಲರೆ ಹೇಳರೆ (ಅವಶಂ. ೭೯-೩೨೯). ೬. ಸಂಬಂಧ ; ನಂಟು : ನರನ ಮಾರಂಕದ ಮಹೇಂದ್ರಗೆ ಚರಣಮುಗ ಬೆನ್ನಲಿ ಬವರದೊಳರಿದಲ್ಲೆ ಭೀಷ್ಮಾದಿಗಳಿಗೀ ರಣದ ಮೇಳಾಪ (ಕುವ್ಯಾಶ. ೨೦-೩೩). [ಸಂ. ]

**ಮೇಲಾಪಕ, ಮೇಳಾಪಕ** (ನಾ). ೧. = ಮೇಲಾಪ ೧ : ಅದಱ ಚಾಪಚ್ಛದಚ್ಛಾಯಾನುಕಾರಿಯಪ್ಪ ಮಸೃಣವರ್ಣಪ್ರಸರಮೇಲಾಪಕ[ಪಾಠಾಂ. ಮೇಳಾಪ] ವೈಚಿತ್ರ್ಯಮುಂ ಚಿತ್ರಕಳಾವಿಶಾರದಮಂ ಪಂಭಾವಿಸುತ್ತುಂ (ಚಂಪ್ರಪು. ೪-೫೦ ವ). ೨. [ಸಂಗೀತ] ಗೀತಪ್ರಾರಂಭ ಮತ್ತು ಗೀತದೇಹಗಳನ್ನು ಅಥವಾ ಗೀತಪ್ರಾರಂಭ ಮತ್ತು ಪದೇಪದೇ ಪುನರುಕ್ತವಾಗುವ ಭಾಗವನ್ನು ಒಟ್ಟುಗೂಡಿಸುವ ಹಾಡಿನ ಭಾಗ : ಉದ್ಗ್ರಾಹ ಧ್ರುವಗಳೆರಡನ್ನೂ ಪರಸ್ಪರವಾಗಿ ಒಟ್ಟುಗೂಡಿಸುವ ಕಾರಣದಿಂದ ಪ್ರಬಂಧದ ಎರಡನೆಯ ಭಾಗವು ಮೇಲಾಪಕವೆಂದು ಹೇಳಿದೆ (ತತುಕ್ರ. ೮೦). ೩. ಮೃದಂಗ ಮೊದಲಾದ ಅವನದ್ಧವಾದ್ಯಗಳಿಗಾಗಿ ಏರ್ಪಟ್ಟ ಒಂದು ವಾದ್ಯಪ್ರಬಂಧ. **ಮೇಳಾಪಕ** : ೧. ಸುವತೀರತ್ನ ಕರೀಂದ್ರರತ್ನಹಯರತ್ನಾನೀಕ ರತ್ನಾದಿರತ್ನದ ಮೇಳಾಪಕದಿಂದ . . . ಆ ನಗರಿ . . . ರತ್ನಾಕರಲಕ್ಷ್ಮಿ ಪೋಲ್ ನೃಪವರಂ ಬರ್ಪಾಗಳೇನೊಪ್ಪಿತೋ (ಕಾದಂಪೂ. ೪೭೭) ; ಈ ನೃಪರತ್ನವಾಕೆಗನುರೂಪಂ ರತ್ನಮೇಳಾಪಕಂ ದೊರೆವೆತ್ತಿರ್ಕುಂ (ಶಂಶಾವಿಷ. ೪-೯೭). ೨. ಮೇಳಾಪಕಮನೊಡನೆ ದೇಶಾವೃಪದ್ಧತಿಯನಾಳಾಪಚಾರಿಣಿಯನಾಕುರವ ವೈಖರಿಯ ಲೀಲೆಯಂ . . . ಕೊಟವಮಾನಮನೆಸವ ಬೈಸಿಗೆಯನೆತ್ತಿ ಬಾಜಿಸುವ ಮದ್ದಳಿಗನಂ ಮನ್ನಿಸುತ್ತುಂ (ಕರ್ಣಾ. ೩-೭೦). ೪. = ಮೇಲಾಪ ೩ : ಪರಿಜನಮುಂ ತಿಂತಿಣಿಯಾಗಿರೆ ಸಭೆ ಪೊಲ್ತುತ್ತು ರತ್ನಮೇಳಾಪಕಮಂ (ಶಂಶಾವಿಷ. ೭-೭೫). ೫. = ಮೇಲಾಪ ೫ : ಆಸ್ಥಾನಮಂಟಪದೊಳೋಲಗಂಗೊಟ್ಟು ವೀರಸೊಳಂಬಂ ವೀರಮೇಳಾಪಕದೊಳಿರ್ದು (ಕಶಿಇ. XX. ೯೯-೨೩ ; 1076). [ಸಂ. ]

**ಮೇಲಾಪಿಸು, ಮೇಳಾಪಿಸು** (ಕ್ರಿ). ೧. ಕೂಡಿಸು ; ಜೋಡಿಸು ; ಹೊಂದಿಸು : (*). ೨. ಸಜ್ಜುಗೊಳಿಸು; ಅಣಿಮಾಡು : (*).

**ಮೇಳಾಪಿಸು :** ೨. ವಿಷಮಮಿೀರನು ರಥವ ಮೇಳಾಪಿಸದ ಮುನ್ನವೆ ಹರಿವನೆನೆ ಸೈರಿಸಿದ ಬಳಿಕೀ ಕರ್ಣ ಕೈಕೊಂಬನೆ ತ್ರಿಯಂಬಕನ (ಕುಮಾ.ಭ. ೨೬-೦೯); ರಥವ ಮೇಳಾಪಿಸೆನಲು ಪ್ರೇರಿಸಿದರು ಸಾರಥಿಗಳು ರಥವಾಜಿಗಳನು (ಕಂಠೀರಾ. ೨೦-೦೬೦). [ ಮೇಳಾಪ + — ಇಸು$_3$ ]

**ಮೇಲಾಯ$_1$** (ನಾ). (ಶರೀರದ) ಮೇಲ್ಭಾಗ : ಎದೆಯ ಕಡೆ ಅಗಲವಾಗಿ ಕೆಳಕ್ಕೆ ಸೊಂಟದವರೆಗೂ ಸಣ್ಣವಾಗುತ್ತಾ ಬಂದಿರುವ ಮೇಲಾಯ (ಅಮೂಟ. ೭೭). [ ಮೇಲು$_1$ ( < ಮೇಲ್$_1$ ) + ಆಯ$_1$ ]

**ಮೇಲಾಯ$_2$,** ಮೆಲ್ಲಾಯ (ನಾ). ೧. ಹೆಚ್ಚಿನ ಆದಾಯ,-ಸಂಪಾದನೆ: ಮೂ[ದೆ]ಡಿ ಮೇಲಾಯದಿಂದ ಕಾಣಿಕೆ ಹೊಂನು ಸಹವಾಗಿ (ತೌಳು. ಉಡುಪಿ. ೩೦೩-೧೮; 1397). ೨. = ಮೇಲ್ತೆರಿಗೆ : ಖರಸಂವತ್ಸರದ ವೈಶಾಖ ಶು ೫ಲು ಮೇಲಾಯದ ಅಧಿಕಾರಿಗಳು ಪುರದ ಬಸವಪ (ಎಕ. V (R), ತಿರುಮ. ೨೯೯-೩ ; ಸು. 17ನೆಯ ಶತ). **ಮೆಲ್ಲಾಯ :** ೨. ಮೆಲ್ಲಾಯದಿಂದ ಕಾಟಿ ಗ ೧ (ಮೈ.ಆ. ೧೯೩೪, ೨೩-೨೩; 1394).

[ ಮೇಲ್$_1$ + ಆಯ$_7$ ]

**ಮೇಲಾರಯ್ಕೆ,** ಮೇಲಾರ್ಯಕೆ (ನಾ). ಮೇಲ್ವಿಚಾರಣೆ : ಬೇಖರೇಖೆ : ತರುಣ ಕೇಳೈ ತುರಗಮೇಧಾಧ್ವರದ ಮೇಲಾರಯ್ಕೆ [ಪಾಠಾಂ. ಮೇಲಾರ್ಯಕೆ] ನಡೆಮದು (ಕೊರಾ. ೦-೭-೨೪); ನಿನ್ನಂ ಕಳುಹು ವಂದು ಹುಮದ ಮೇಲಾರಯ್ಕೆ [ಪಾಠಾಂ. ರ್ಯಕೆ]ಗೆನ್ನನಟ್ಟಿದನಲಾ ಪಿತನು (ಕೈ.ಮಿಶಾ. ೦೨-೦೦). **ಮೇಲಾರ್ಯಕೆ :** ಬೀಳುವಾಯುಧವನು ನಿವಾರಿಪ ಕೋಲದೊಂದು ಪದಾತಿ ಹಯ ಶುಂಡಾಲ ರಥಕೊಂದೊಂದು ಮೇಲಾರ್ಯಕೆಗೊಂದಂಬು (ಕೊರಾ. ೩-೬-೦೦) ; ಅವರ ಮೇಲಾರ್ಯಕೆಗಾ ವಿಷ್ಣುವಿನ ಪಾರ್ಶ್ವದರಾಡುತಿಹರೀ ಭುವನವಲಿ (ಶಿಭಾಗ. ೬-೩-೪೪) ; ದಾಪೂವನು . . . ಪ್ರತಾಪಸಿಂಗನ ಮೇಲಾರ್ಯಕೆಯಲ್ಲಿದ್ದ ರಾಜಪುತ್ರುವಳಿವ ಬಳಿಗೆ ಹೋಗಿ ಅದನ್ನು ಸುತ್ತಿಕೊಂಡನು (ಶಾರಶೀ. ೬೧).

[ ಮೇಲು$_1$ ( < ಮೇಲ್$_1$ ) + ಆರಯ್ಕೆ ]

**ಮೇಲಾರ್ಯಕೆ** ' ಮೇಲಾರಯ್ಕೆ ' ನೋ.

**ಮೇಲಾಳ್,** ಮೇಲಾಳು (ನಾ). ೧. ಕುದುರೆ, ಆನೆ, ರಥ ಮುಂತಾದುವುಗಳ ಮೇಲೆ ಕುಳಿತು ಯುದ್ಧ ಮಾಡುವವನು : ಕೆನ್ದರ ಕೇತನುಂ ಎಱೆವಿಟ್ಟನುಂ ತಂಬದ ಕೇತನುಂ ಪರಿಚ್ಚೇ[ಚ್ಛೇ]ದಂಗೆಯ್ದು ಮೂವರುಂ ಮೇಲಾಳುಂ ಕುದುರೆಯುಮ[ಂ] ಕೊನ್ದು ಮೋಕ್ಷಕ್ಕೆ ಸನ್ದರ್ (ಎ೩.XVIII, ೦೭೨-೪; 985); ವರಪಿಶ್ವತ್ಯವಿಷಯರ್ಜ ಗಾಯಕ ಪುರಾಣಜ್ಞರ್ . . . ಕಾಲಾಳು ಮೇಲಾಳಿರಲ್ ದೊರೆಯೊಡ್ಡೋಲಗ ಪೊಪ್ಪುಗುಂ (ಸೋಮೇಶ. ೩೯); ಕುದುರೆಯನೇಱುತಾನೆಯನೇಱು ತೇರೇಱು ಯಿದಿರಾಗಿ ಬಂದು ಬಾಸೆಡೆಗೆ ವದನವನೆತ್ತಿ ಕೈಮುಗಿವುತ ಜಯಯೆಂದು ಚದುರ ಮೇಲಾಳ್ಗಳೊಪ್ಪಿದರು (ಭರತ. ೪೭-೨೩). **ಮೇಲಾಳು :** ೧. ಘೂತು ಮರ್ಣು ಮೇಲಾಳು ಬಂದುದೆ ಅಕಟಿನುತ ಹಲುಮೊರೆದನಾ ದ್ರೋಣ (ಕುಮಾ.ದ್ರೋ. ೦-೬೪); ಕಾಲಾಳ ಮೇಲಾಳ ಸಂದಣಿಯ ಸನ್ನಾಹದ . . . ಸಂಭ್ರಮಂ ಕಣ್ಗೆಸೆವುದು (ತಂಜಿ. ೨೭-೯): ಕಾಲಾಳು ಮೇಲಾಳು ವೊಂಟಿಗಾಜಿರ ಜಾಲ ಬರುದಿನ ನಾಯಕರ ಸಾಲುಸಾಲೆಸೆದಿರೆ (ಕಂಪಿ. ೦೩-೪೩). ೨. ಅಗ್ರಗಣ್ಯ ; ಮುಖಂಡ : ನಾಯಕ : ಮಾಧವ ಸೋಮಯಾಜಿ ಆ ಅಗ್ರಹಾರಗಳಿಗೆಲ್ಲ ಮೇಲಾಳು. ಅಲ್ಲದೆ ಗುರಿಕಾರನು (ನಾಮೋಜ. ೬೪). [ ಮೇಲ್$_1$ + ಆಳ್$_3$ ]

**ಮೇಲಾಳಿಕೆ** ' ಮೇಲಾಳ್ಕೆ ' ನೋ.

**ಮೇಲಾಳು** ' ಮೇಲಾಳ್ ' ನೋ.

**ಮೇಲಾಳ್ಕೆ,** ಮೇಲಾಳಿಕೆ (ನಾ). ೧. ಮೇಲುಸ್ತುವಾರಿಯ ಅಧಿಕಾರ; ಮೇಲ್ವಿಚಾರಣೆಯ ಕಾರ್ಯ : ಅವರಾಳ್ವ ಬಾಡಂಗಳೊಳೆಲ್ಲಂ ಮೇಲಾಳ್ಕೆಯುಂ ಕಿಱುದೆಱೆಯುಮಿಲ್ಲ (ಎಕ. XI, ಚಿತ್ರದು. ೭೪-೨೬; 968); ಶ್ರೀಮನ್ಮಹಾ [ ಸಾಮನ್ತಂ ] ಮೂಕರಸಪ್ಪರ್ಗರಿಟೆನಾಡ ಮೇಲಾಳ್ಕೆಯುಂ ದುಷ್ಟನಿಗ್ರಹ ಶಿಷ್ಟಪ್ರತಿಪಾಳನದಿನ್ದವಾಳುತ್ತಿರೆ (ತೌಳು. XX, ೨೬-೭; 1040); ಬಂಧುರತರ ಬನವಾಸಿದೇಶಮುಂ ಮೇಲಾಳ್ಕೆ ನಿರಂತರವಾಗಲ್ ಆಳ್ದನ್ . . . ದಣ್ಡನಾಥ ಮಹಾದೇವರಸಂ (ಎಕ. XVI, ೪೦-೫೦; 1152). ೨. (ಮೂಲಆಸ್ತಿಗೆ ಚ್ಯುತಿಬರದಂತೆ ಇರುವ) ಫಲಾನುಭವದ ಹಕ್ಕು : ಕಲ[ಲ್ಲ]ಪಣದ ಮೇ[ಲಾ]ಳ್ಕೆ ಮನ್ನೆಯಂ ಕಾಣಿಕೆಯಾಮವಾಯ ಕಿಱುಕುಳಸಹಿತಂ ಸರ್ವ್ವಾಯಶುದ್ಧಿಯಾಗಿ . . . ಬಿಟ್ಟ (ಎಕ. XVI, ೪೦-೬೦; 1152). **ಮೇಲಾಳಿಕೆ :** ೧. ಶ್ರೀಮನ್ಮಹಾಮಣ್ಡಳೇಶ್ವರಂ ಕುಮಾರತೈಲಪದೇವ[ರ್ಗ]ಮ ಮೇಲಾಳಿಕೆಯ ಭಾಗಿಯಬ್ಬರಸಿಯುಂ (ಎಕ. XXVII, ೭೩-೩೭; 1114); ಪೂರೊಡೆಯ ಮಹಾದೇವಣ್ಣನು ಬನವಸೆ ಪನ್ನಿಚ್ಛಾಸಿರದ ಮೇಲಾಳಿಕೆಯ ದಣ್ಣಾಯಕ ಬೊಮ್ಮಯ್ಯ ಪ್ರ[ಮು]ಖ ಕರಣಂಗಳ್ಗಂ ಈಶ್ವರದೇವಗಂ ಬಿನ್ನಪಂಗೆಯ್ದು (ಕ೩. IV, ೦೩-೬೭; 1165). ೩. ಅಧಿನಾಯಕತ್ವ; ಅಧಿರಾಜತ್ವ : ಈ ಹೊಸ ವಿಜಯನಗರದ ದೊರೆಗಳ ಮೇಲಾಳಿಕೆಯನ್ನು ಒಪ್ಪಿಕೊಂಡ ಅಳುಪರಲ್ಲಿ ವೀರಕುಲಶೇಖರದೇವನೇ ಮೊದಲಿಗನು (ತುಳುನಾ. ೭೭).

[ ಮೇಲ್$_1$ + ಆಳ್ಕೆ ]

**ಮೇಲಿಕ್ಕು** (ಕ್ರಿ). ೧. ಮೇಲ್ಭಾಗದಲ್ಲಿ ಇಡು. – ಇರಿಸು. ೨. ಅಗ್ರಭಾಗದಲ್ಲಿ ಧರಿಸು : ಗಂಗೆಯಂ ಹೊತ್ತ ಹರನೊಳ್ ಪುರುಡಿಸಿ ಶಿರೋಮಧ್ಯದೊಳಿರಿಸಿದ ಕುಂತಳಕಾಳಿಂದೀನದಿ ಹೊಱಸೂಸುಗುಮೆಂದು ಮೇಲಿಕ್ಕಿದ ರುದ್ರಾಕ್ಷಿಯ ಶಿರೋಮಾಲೆಯೆಂಬ ಸುತ್ತೇರಿಯಿಂದೊಪರ್ದ ಕಾಳಿಮಜಲಕಣಂಗಳಂತೆ ನೊಸಲೊಳು ಕುಣಿವ ನೀಳಾಳಕಂಗಳ (ಬಸವ. ೨-೨೦). ೩. ಉನ್ನತಸ್ಥಾನದಲ್ಲಿ ಇರಿಸು : ಎತ್ತಿಹಿಡಿ ; ಎತ್ತಿಕಟ್ಟು: ಧಿಕ್ಕರಿಸಿ ತೊತ್ತಿನ ಮಗಳ ಮೇಲಿಕ್ಕಿ ನೀವಿಂತೆಮ್ಮನಱವಱ ದೆಕ್ಕಸಕ್ಕವನಾಡಿ ಮೊದಲಿಗೆ ಕೊಂಡೆ ಗುದ್ದಲಿಯ (ಬಸವ. ೫೩-೪೪). ೪. ಮೇಲೆಬೀಳು ; ಮೇಲೆರಗು ; ಮುತ್ತು : ಹಿರಿದು ಆಗ್ರಹದಿಂದೆ ನೀನೆನ್ನ ಮೇಲಿಕ್ಕಿ ಒಲ್ಲೆ ಸಾರೆಂದರೆ ಹೋಹೆ ಕಾಣಾ ಅಯ್ಯ (ಕೂಸಸಂ. ೪೭-೫೦ ; ಸಿದ್ಧವ. ೪.೦೬೪-೫೫೦ ನೋ); ಈತನಳವಿಯ ಕೆಡಿಸಿ ಮೇಲಿಕ್ಕಿದರು ಭೂಪನ ಮೊನೆಯ ನಾಯಕರು (ಕುಮಾ.ದ್ರೋ. ೬-೩೯) ; ಕೊಕ್ಕರಿಸುತುಗುವ ತನಿಗೆಂಡದಿಂಡೆಗಳ ಸಲೆ ಮುಕ್ಕುಳಿಸಿ ಮೊಗೆವ ಪೆರ್ಗಿಚ್ಚುಗಳ ವೆಂಕೆ ಮೇಲಿಕ್ಕಿದುವು (ಕೈ.ಮಿಶಾ. ೦೩-೦೨). ೫. ಮುಂದುವರಿದು ಮೇಲೇರಿ ಬರು : ಕುಮಾರರಾಮಗೆ ರತ್ನಿ ಬೇಳಿದಳಾ ರಾಮನವಳ ಮೇಲಿಕ್ಕುವಂತಾಗಬೇಕಿದೆನ್ನಿಷ್ಟವೆಂದಾ ಲಲಿತಾಂಗಿ ಪೇಳಿದಳು (ಕುಂರಾಸಾಂ. ೨೬-೦೩) : ಪುರುಷರ ನುಡಿ ಹೊಱಡದ ಮುನ್ನ ಸ್ತ್ರೀಯರು ಹವಿಸದೆ ಮೇಲಿಕ್ಕುವರು (ಮೋಹತ. ೦೦-೦೩) ; ಮೇಲಿಕ್ಕುವ ಹೆಣ್ಣು ಹಾಗವಡೆಯ ಳೆಂಬಾಳುವದ ಗಾದೆಯಱಿತು ತೂಳಿಸಿ ಮೋಹವ ಕಾಣಿಸುವುದು ಪ್ರೌಢಲೋಲಾಕ್ಷಿಯರ ಘತವಲ್ಲ (ಕಂನಪಿ. ೯-೦೫೭). ೬. ಅಪವಾದ, ನಿಂದೆ ಇತ್ಯಾದಿಗಳನ್ನು ಹೊರಿಸು ; ದೋಷಾರೋಪಣೆ ಮಾಡು : ಮಿಥ್ಯಾಭಿಶಂಸನ = ಇಲ್ಲದ ಹೊಲ್ಲಹಂ. ಮೇಲಿಕ್ಕಿ ನುಡಿಹ (ಪ್ರಾಶಬ್ದ. ೪).

[ ಮೇಲ್$_2$ + ಇಕ್ಕು ]

**ಮೇಲಿಡು** (ಕ್ರಿ). ೧. = ಮೇಲಿಕ್ಕು ೧ : ಚಿಕ್ಕಮಕ್ಕಳು ಪುಸ್ತಕ, ಪದಾರ್ಥಗಳನ್ನು ಹಾಳುಮಾಡದಂತೆ ಮೇಲಿಡಬೇಕು (ಕೂ). ೨. = ಮೇಲಿಕ್ಕು ೩ : ಒಂದು ಕಾಲಕ್ಕೆ ಮೇಲಿಟ್ಟು ಪೂಜಿಸಿದ ಜನವೇ ಒಂದು ಕ್ಷಣದಲ್ಲಿ ಕಳೆದೂಡಲು ಹಿಂದೆ ಮುಂದೆ ನೋಡುವುದಿಲ್ಲ (ರೂ). ೩. = ಮೇಲಿಕ್ಕು ೬ : ಮಕ್ಕಳೊಳಗೆ ಪುಂಡ ಮನೆಮನೆಗಳ ಹೊಕ್ಕು ಸಕ್ಕರೆ ನೊರೆಹಾಲು ಸವಿಸವಿದು ಬೆಕ್ಕಿನ ಮೇಲಿಟ್ಟು. ಬೆಣ್ಣೆಯ ತಾ ಮೆದ್ದು ಸಿಕ್ಕದೆ

ಜಗದೋಡಿ ಪೋಗುವ ಕಳ್ಳನ (ಕುರಂದ. ೨-೭೭-೪).
[ ಮೇಲು$_2$ (<ಮೇಲ್$_2$) + ಇಡು$_1$ ]

**ಮೇಲು$_1$** 'ಮೇಲ್$_1$' ನೋ.

**ಮೇಲು$_2$** 'ಮೇಲ್$_2$' ನೋ.

**ಮೇಲುಕಟ್ಟು** 'ಮೇಲ್ಗಟ್ಟು$_2$' ನೋ.

**ಮೇಲುಕಾಲುವೆ** 'ಮೇಲುಗಾಲುವೆ' ನೋ.

**ಮೇಲುಕೋಟೆ** 'ಮೇಲುಗೋಟೆ' ನೋ.

**ಮೇಲುಕ್ಕು** (ಕ್ರಿ). ಅಗ್ರಭಾಗಕ್ಕೆ ಸೂಸಿ ಬರು ; ಮೇಲ್ಭಾಗಕ್ಕೆ ಹೊಮ್ಮಿಬರು : ಆ ದಿವಿಯ ಮೇಲುಕ್ಕಿದುದು ಶಿವಪಾದಭಕ್ತಮಹತ್ವಮಂ ಸರ್ವೋದದಿಂ ಸುರಗಂಗೆಯುಂ ಕೆಳಗೆ ಬಂದಂತೆ (ಬಸವ. ೩೨-೩೫) ; ಎಷ್ಟೊಂದು ಆಳದೊಳಿಲ್ಲಡಗಿದ್ದರು ನ್ಯಾಯವು ಬರುವುದು ಮೇಲೆ ತೈಲದ ಬಾವಿಯ ತಳದಿಂದಲಾದರು ಮೇಲುಕ್ಕುವೆಣ್ಣೆಯವ್ವೋಲ್ (ಇಂಕಾಕ. ೨೦೩-೭೯). [ ಮೇಲು$_2$ (<ಮೇಲ್$_2$) + ಉಕ್ಕು$_1$ (<ಉರ್ಕು$_1$) ]

**ಮೇಲುಖಡ್ಗ** (ನಾ). ಮೇಲಕ್ಕೆ ಎತ್ತಿದ ಖಡ್ಗ : ಅಹಹ ಕೈತಪ್ಪಾಯ್ತು ಹಾಹಾರವವಿದೇನೇನೆನುತ ರಾಯನ ಮಹಿಳೆ ಬಿದ್ದಳು ಮೇಲುಖಡ್ಗಕೆ ತನ್ನ ನಡೆಯೊಡ್ಡಿ (ಕುಮಾ.ಕ. ೦೭-೩). [ಮೇಲು$_2$ (<ಮೇಲ್$_2$)+ಖಡ್ಗ]

**ಮೇಲುಖರ್ಚು** (ನಾ). ಸಂಸಾರ ಮುಂತಾದುವನ್ನು ಸಾಗಿಸಲು ಬೇಕಾಗುವ ಮುಖ್ಯವಾದ ವೆಚ್ಚವನ್ನು ಬಿಟ್ಟು ಆಗಿಂದಾಗ ಬರಬಹುದಾದ ಹೆಚ್ಚಿನ ವೆಚ್ಚ : ಹೇಗಿದ್ದರೂ ವರ್ಷಕ್ಕೆ ನಾಲ್ಕು ಕಾಳು ಭತ್ತ ಬರುತ್ತದೆ. ಬರುವ ಮನೆಬಾಡಿಗೆ ಮೇಲುಖರ್ಚಿಗೆ (ಬಾಡಿಬ. ೦೦). 'ಚಿಲ್ಲರೆಕರ್ಚು' ಪರಾ.
[ ಮೇಲು$_1$ (<ಮೇಲ್$_1$)+ಖರ್ಚು (<ಕರ್ಚು$_4$) ]

**ಮೇಲುಗಟ್ಟು$_1$** 'ಮೇಲ್ಗಟ್ಟು' ನೋ.

**ಮೇಲುಗಟ್ಟು$_2$** 'ಮೇಲ್ಗಟ್ಟು$_2$' ನೋ.

**ಮೇಲುಗಡೆ** 'ಮೇಲ್ಗಡೆ' ನೋ.

**ಮೇಲುಗಣ್ಣು** (ನಾ). ೧. ಮೇಲುನೋಟ ; ಸ್ಥೂಲದೃಷ್ಟಿ : ಮೇಲುಗಣ್ಣಿಗೆ ಹಳೆಯ ಉತ್ಸಾಹ, ರತಿ, ಶೋಕ, ಕ್ರೋಧ, ವಿಸ್ಮಯಗಳೇ ಹೊಸಸಾಹಿತ್ಯದಲ್ಲಿ ಕಂಡರೂ ಹೊಸಬಗೆಯ ವ್ಯಷ್ಟಿಭಾವಗಳು ಸಮಷ್ಟಿಭಾವಗಳೂ ರಸಸಿದ್ಧಿಗಾಗಿ ಹೆಣಗಾಡುತ್ತಲಿವೆ (ಕಾವ್ಯ. ೯೭). ೨. ಆಯಾಸ ಮುಂತಾದುವುಗಳಿಂದ ಸ್ಥಿರತೆ ತಪ್ಪಿದ ಕಣ್ಣು, – ದೃಷ್ಟಿ : 'ತೇಲುಗಣ್ಣು' ಪರಾ. [ ಮೇಲು$_1$ (<ಮೇಲ್$_1$) + ಕಣ್ಣು (<ಕಣ್) ]

**ಮೇಲುಗವಚ** (ನಾ). ಯೋಧನು ಅಂಗರಕ್ಷಣೆಗಾಗಿ ಧರಿಸುವ ಹೊರ ಕವಚ, – ಲೋಹದ ರಕ್ಷಾಕವಚ : ಮೇಲುಗವಚವ ನಂಬಿ ನಮ್ಮೊಳು ಕಾಳಗವ ನೀ ಬಯಸಿ ಬಂದೆ (ಕುಮಾ.ದ್ರೋ. ೦೦-೩೦).
[ ಮೇಲು$_1$ (< ಮೇಲ್$_1$) + ಕವಚ ]

**ಮೇಲುಗವಿ** (ಕ್ರಿ). ಮೇಲೆಬಿದ್ದು ಆಕ್ರಮಣಮಾಡು ; ಮುತ್ತು : ಮೇಲುಗವಿವನು ಜಲಧಿಯಾಗಿ ನೃಪಾಲನಿಕರದೊಳುರುಳಿವನು ಗಿರಿಜಾಳವಾಗಿ ಘಟೋತ್ಕಚನು (ಕುಮಾ.ದ್ರೋ. ೦೭-೯).
[ ಮೇಲು$_2$ (<ಮೇಲ್$_2$) + ಕವಿ$_1$ ]

**ಮೇಲುಗಾಣು** 'ಮೇಲ್ಗಾಣ್' ನೋ.

**ಮೇಲುಗಾಲುವೆ**, ಮೇಲುಕಾಲುವೆ (ನಾ). (ಹಿಂದೆ ಹಂಪೆ ಮುಂತಾದ ನಗರಗಳಲ್ಲಿ) ನೀರನ್ನು ಸರಬರಾಜು ಮಾಡುವುದಕ್ಕಾಗಿ (ಕಲ್ಲಿನಿಂದ) ಎತ್ತರದಲ್ಲಿ ರಚಿಸುತ್ತಿದ್ದ ಕಾಲುವೆ : ಮೇಲುಗಾಲುವೆಗಳನ್ನು ಕಲ್ಲುಗಾರೆಯ ಅರ್ಧವರ್ತುಳಾಕಾರದ ಕಮಾನುಗಳ ಮೇಲೆ ಸೇತುವೆಗಳನ್ನು ಕಟ್ಟಿದ ಹಾಗೆ ಕಟ್ಟುತ್ತಿದ್ದರು (ಶಿಲ್ಪನಾ. ೭೭) ; ನಗರಗಳಿಗೆ ಕುಡಿಯುವ ನೀರನ್ನು ಮೇಲುಗಾಲುವೆಗಳಲ್ಲಿ (Acqueducts) ಎಷ್ಟು ದೂರ ಬೇಕಾದರೂ ಸಾಗಿಸುತ್ತಿದ್ದರು (ಶಿಲ್ಪನಾ. ೯೦). **ಮೇಲುಕಾಲುವೆ** : "ನೀರನ್ನು ಸಾಗಿಸುವುದಕ್ಕಾಗಿ ಕಲ್ಲಿನಿಂದ ಎತ್ತರದಲ್ಲಿ ಮಾಡಿದ ಕಾಲುವೆ : ಮೇಲುಕಾಲುವೆ" (Acqueduct. ಇಂಕಾ).
[ ಮೇಲು$_2$ (<ಮೇಲ್$_2$) + ಕಾಲುವೆ (<ಕಾಲ್ವಾಯ್) ]

**ಮೇಲುಗಾವಲು** 'ಮೇಲ್ಗಾವಲು' ನೋ.

**ಮೇಲುಗಾಹು** 'ಮೇಲ್ಗಾಪು' ನೋ.

**ಮೇಲುಗಾಳಗ** 'ಮೇಲುಗಾಳೆಗ' ನೋ.

**ಮೇಲುಗಾಳೆಗ**, **ಮೇಲುಗಾಳಗ** (ನಾ). ಸ್ಪರ್ಧಾತ್ಮಕವಾದ ಯುದ್ಧ, – ಕದನ : ಮಂಜಿನ ಮೇಲುಗಾಳೆಗವೆಂಟೆ ಬಲುಬೇಸಗೆಯ ಬಿಸಿಲೊಳಗೆ (ಕುಮಾ.ದ್ರೋ. ೪-೪೦) ; ಸುರರೊಡನೆ ಮೇಲುಗಾಳೆಗವಾದುದದನೇನೆಂಬೆನು (ಜೈಗ. ೭-೬-೩೨). **ಮೇಲುಗಾಳಗ** : ಅವರಿರ್ವರ ಮೇಲುಗಾಳಗವನೇನೆಂಬೆ (ಕುರಾಸಾಂ. ೦೦-೩೮). [ ಮೇಲು$_1$ (<ಮೇಲ್$_1$) + ಕಾಳೆಗ ]

**ಮೇಲುಗುಡಿ** (ನಾ). ಎತ್ತರವಾದ ಗುಡಾರ : ಮೇಲುಗುಡಿಗಳ ಭದ್ರದುಪ್ಪರಶಾಲೆಗಳ ಮಂಡವಿಗೆಗಳ . . . ಹೊಗೆಲಸದಲಿ ರಾಜಾಲಯವನನುಕರಿಸಿದರು ಕುಂತೀಕುಮಾರರಿಗೆ (ಕುಮಾ.ಆ. ೦೦-೪೪).
[ ಮೇಲು$_1$ (<ಮೇಲ್$_1$) + ಗುಡಿ$_3$ ]

**ಮೇಲುಗುದುರೆ** (ನಾ). ಶ್ರೇಷ್ಠವಾದ ಕುದುರೆ: ಮೇಲುಗುದುರೆಗಳೊವಗಿದವು ಭೂಪಾಲಕರು ತಲೆಗೆದಜು ಹುಯ್ಯಲನಾಲಿಸುತ ಹೊಜಿವಂಟು ತಳಕೆಳಕಾಯ್ತು ನೃಪಕಟಕ (ಕುಮಾ.ದ್ರೋ. ೬-೪೪) ; ಮೇಲುಗುದುರೆಯ ಸಾವಿರವ ಲೀಲೆಯಿಂ ಪಿಡಿದಾ ಸುರುತಾಳಬಲವನು ಕಾಲನೆಡೆಗೆ ಕಳುಹಿದರು (ಕುರಾಸಾಂ. ೦೯-೦೦೨). [ ಮೇಲು$_1$ (<ಮೇಲ್$_1$) + ಕುದುರೆ ]

**ಮೇಲುಗೆಯ್** 'ಮೇಲ್ಗೆಯ್' ನೋ.

**ಮೇಲುಗೆಲಸ** (ನಾ). ೧. ಮೇಲುಸ್ತುವಾರಿಯ ಕೆಲಸ ; ಮೇಲ್ವಿಚಾರಣೆಯ ಕಾರ್ಯ : ಗಾಣದ ತೆಜಿಯುನ್ನು ಶ್ರೀರಾಮನಾಥದೇವರ ಕಲ್ಲ ಕೆಲಸಕ್ಕಂ ಸ್ವತೆಯ ಮೇಲುಗೆಲಸಕ್ಕಂ ಬಿಟ್ಟರು (ಎಕ. VIII, ತೀರ್ಥ. ೩೦೩-೦೪ ; 1197). ೨. (ಮುಖ್ಯವಲ್ಲದ) ಹೊರಗಿನ ಕೆಲಸ ; ಸುತ್ತುಗೆಲಸ : ಅವರ ಮನೆಯಲ್ಲಿ ಮೇಲುಗೆಲಸಕ್ಕೆ ಒಬ್ಬ ಚಿಕ್ಕ ಹುಡುಗನನ್ನು ನೇಮಿಸಿಕೊಂಡಿದ್ದಾರೆ (ರೂಢಿ).
[ ಮೇಲು$_1$ ( < ಮೇಲ್$_1$ ) + ಕೆಲಸ ]

**ಮೇಲುಗೈ$_1$** (ಕ್ರಿ). ಶ್ರೇಷ್ಠನೆನಿಸುವಂತೆ ಮಾಡು ; ಮೇಲಾಗಿಸು : ಶಬರನಾಗಿ ಮರಹನಟ್ಟುವ ನೆವದಿ ಸೆಣಸಿ ಸೋತವನಂತೆ ಮರಕಿರೀಟಿಯ ಮೇಲುಗೈದು ಧರೆಯೊಳ್ ಬಿದ್ದು (ಪಪಪೋ. ೨೫-೨).
[ ಮೇಲು$_1$ (<ಮೇಲ್$_1$) + ಗೈ (<ಕೆಯ್$_1$) ]

**ಮೇಲುಗೈ$_2$** 'ಮೇಲ್ಗೆಯ್' ನೋ.

**ಮೇಲುಗೊಂಬು** (ನಾ). ಉತ್ತಮವಾದ, ಕಹಳೆಯಂತಹ ಒಂದು ಊದುವ ವಾದ್ಯ, – ಕೊಂಬು: ಸಿಡಿಮಲೆಯ ಮಿಡಿಮಲೆಯ ಕಾಲುಗಣ್ಣಿಯ ಹೆಬ್ಬಲೆಯ . . . ಮೇಲುಗೊಂ [ಪಾಠಾಂ. ಕೊಂ]ಬಿನ ಬೇಟೆಗಾಜರು ಬಳಸಿದರು ಶಿವನ (ಕುಮಾ.ಅ. ೫-೩೩).
[ಮೇಲು$_1$ (<ಮೇಲ್$_1$) + ಕೊಂಬು$_1$]

**ಮೇಲುಗೋಟೆ**, ಮೇಲುಕೋಟೆ (ನಾ). ೧. (ಬೆಟ್ಟದ) ಮೇಲ್ಭಾಗದಲ್ಲಿ ಕಟ್ಟಿರುವ ಕೋಟೆ, – ದುರ್ಗ. ೨. ಕರ್ನಾಟಕದ ಶ್ರೀರಂಗಪಟ್ಟಣದ ಸಮೀಪದಲ್ಲಿರುವ, ಚೆಲುವರಾಯಸ್ವಾಮಿಯ ದೇವಾಲಯವಿರುವ ಶ್ರೀವೈಷ್ಣವರ ಒಂದು ಯಾತ್ರಾಸ್ಥಳ : ಮೇಲುಗೋಟೆ ಜಾತ್ರೆಯಲ್ಲಿ ನನ್ನ ಬೋಳದಾಸಯ್ಯನ ಕಂಡೆಯಾ ? (ಗಾದೆ). **ಮೇಲುಕೋಟೆ** : ೧. ಕೀಳುಕೋಟೆಯೊಳೊಬ್ಬ ಅಗಸಾಲ ಸತ್ತರೆ ಮೇಲುಕೋಟೆಯೊಳೊಬ್ಬ ಅಗಸತಿ ಅಳುವಳು (ಕುರಂದ. ೨-೦೨-೩). ೨. ಶ್ರೀಪತಿಯೆ ನೀ ಸಲಹೋ

ಕರುಣದಿಂ ಈ ಪರಿಯಲಿ ಮೇಲುಕೋಟೆ ಇಂದಿರೆವರ ಆಪದ್ಬಂಧುವೆ ಭಕ್ತರಘುಹರನೆ (ಹರಿಕಂ. ೨–೯–೩).

**ಮೇಲುಗೋಟೆನಾಮ** = ಮೇಲುಕೋಟೆಯ ಸುತ್ತಮುತ್ತ ಸಿಗುವ, ಶ್ರೀವೈಷ್ಣವರು ಹಣೆಯಲ್ಲಿ ಧರಿಸುವ ಬಿಳಿಯ ಮಣ್ಣಿನ ನಾಮ.

**ಮೇಲುಗೋಟೆನಾಮ ಹಾಕು** = (ಆಲಂ) ಮೋಸಮಾಡು ; ವಂಚನೆ ಮಾಡು; ಪಂಗನಾಮಹಾಕು : ಅವರು ಇಲ್ಲಿಯವರೆಗೂ ನಂಬಿಸಿ ಮೇಲು ಗೋಟೆನಾಮ ಹಾಕುತ್ತಾರೆಂದುಕೊಂಡಿರಲಿಲ್ಲ ನಾನು (ರೂಢಿ).
[ಮೇಲು$_2$ (< ಮೇಲ್$_2$) + ಕೋಟೆ$_1$ (< ಕೋಂಟೆ)]

**ಮೇಲುಗೋಪ** (ನಾ). ಹೆಚ್ಚಾದ ಕೋಪ ; ಅತಿಶಯವಾದ ಕ್ರೋಧ: ಅಲಿ ಕಿಡಿಬಿಡೆ ಕುಣಿವ ಮೀಸೆ ಕರಾಳವದನದ ಬಿಗಿದ ಹುಬ್ಬಿನ ಮೇಲು ಗೋಪದ ಭೀಮ ಬಂದನು ಬಿಟ್ಟ ಸೂಠಿಯಲಿ (ಕುಮ್ಮಾ.ಗ.೨–೩೭).
[ಮೇಲು$_1$ (< ಮೇಲ್$_1$) + ಕೋಪ]

**ಮೇಲುಚೀಟಿ** ' ಮೇಲ್ಚೀಟಿ ' ನೋ.

**ಮೇಲುಜಗ** (ನಾ). ಮೇಲಿನ ಲೋಕ ; ದೇವಲೋಕ : ಉದ್ದಂಡ ಕೋದಂಡವನು ಜೇವೊಡೆಯೆ ಮೇಲುಜಗವಲ್ಲಾಡಿದವು ಕೊರಳೊಳ್ ಕಿವಚಿತು ಕುಸಿದನಹಿ ಪಾತಾಳಗೂಳಿಯ ತೆಗೆಯಲಿಳ್ಳಿರಿಯಿತ್ತು ಬಿಲಂರಭಸ (ಕುಮ್ಮಾ.ದ್ರೋ. ೪–೩೭). [ಮೇಲು$_1$ (< ಮೇಲ್$_1$) + ಜಗ]

**ಮೇಲುಜಾತಿ** (ನಾ). ಶ್ರೇಷ್ಠವಾದ ಜಾತಿ; ಉತ್ತಮವಾದ ಕುಲ : ಇಂದಿನ ಸಮಾಜದಲ್ಲಿ ಮೇಲುಜಾತಿ- ಕೀಳುಜಾತಿ ಎಂದು ವರ್ಣಭೇದ ಮಾಡುವುದು ಸರಿಯಲ್ಲ (ರೂಢಿ). 'ಕೀಳ್ಜಾತಿ' ಪರಾ.
[ಮೇಲು$_1$ (< ಮೇಲ್$_1$) + ಜಾತಿ]

**ಮೇಲುಜೂಜು** (ನಾ). ಕುದುರೆ, ಕೋಳಿ ಮುಂತಾದುವುಗಳ ಜೂಜು ಗಳಲ್ಲಿ ಪ್ರೇಕ್ಷಕರು ತಮಗೆ ತೋರಿದ ಯಾವುದಾದರೂ ಒಂದು ಪಕ್ಷದ ಮೇಲೆ ಇಂತಹುದೇ ಗೆಲ್ಲುತ್ತದೆಂದು ತಮ್ಮತಮ್ಮೊಳಗೆ ಕಟ್ಟಿ ಕೊಳ್ಳುವ ಪಂದ್ಯ : ಕುದುರೆಯ ಜೂಜಿನಲ್ಲಿ ನೆರೆದ ನೋಟಕರು 'ಆ ಕುದುರೆ ಗೆಲ್ಲುತ್ತದೆ' - 'ಈ ಕುದುರೆ ಗೆಲ್ಲುತ್ತದೆ'ಎಂದು ತಮ್ಮತಮ್ಮಲ್ಲಿಯೆ ಪೂಜುಕಟ್ಟುವಂತೆ 'ಮೇಲುಜೂಜು' ಕಟ್ಟಲು ಬಂದಿದ್ದರು (ಕಾನೂರು. ೩೦೬).
[ಮೇಲು$_2$ (< ಮೇಲ್$_2$) + ಜೂಜು$_1$ (< ಜೂದು)]

**ಮೇಲುಡಿ** (ನಾ). (?) : ನುಡಿಮನದಗಿನು ಕೋಕಿಲನ ಗಾರುಡಿಸು ವಿಷಮ ವಿಷಾಹಿಯನು ಮೇಲುಡಿಯ ಹಾಯ ಹತ್ತನೆಯವಸ್ಥಾಂತರದ ದಳವಳಕೆ (ತೊರೆರಾ. ೩–೪–೦೬); ಬೀಳುತೊದಲಿಸಿದ ಬೆಳ್ಳುದನಿ ರಘುಪತಿಯ ದನಿಯಂತೆ ಮೇಲುಡಿಯ ಬಿದ್ದುದು ವಿದೇಹನೃಪಾಲಕನ ಕನ್ನಿಕೆಯ ಕರ್ಣದೊಳೋಲ ಗಿಸಿದುದು ಮನವನಪಗತರಾಘವಾಳಾಪ (ತೊರೆರಾ. ೩–೯–೦) ; ಆಲಿಸಿದನಬ್ಬ ರವನೊಯ್ಯನೆ ತೋಳುಗಳ ಪಸರಿಸುತ ಮುಂದಕೆ ಮೇಲುಡಿಯ ಬಿದ್ದಿಳ ಲುಲಾಯ ಕುರಂಗ ಕರಡಿಗಳ (ತೊರೆರಾ. ೩–೦೨–೦೭). [ ? ]

**ಮೇಲುಡುಪು** (ನಾ). ಶರೀರದ ಮೇಲ್ಭಾಗದಲ್ಲಿ ಧರಿಸುವ ವಸ್ತ್ರ : ಗುಪ್ತರ ಕಾಲ ವಿಗ್ರಹಶಿಲ್ಪಕ್ಕೆ ಅತ್ಯಂತ ಹೆಸರುವಾಸಿಯಾದುದು. . . ಕಂಚಿನ ಬುದ್ಧನ ವಿಗ್ರಹಗಳು ಸುಂದರವಾಗಿ ಮಾಡಲ್ಪಟ್ಟಿವೆ. ಅವುಗಳ ಮೇಲುಡುಪು ಅಂಗಸೌಷ್ಠವವನ್ನು ಮರೆ ಮಾಡಿಲ್ಲ (ಭಾರತ. ೪೯೭) ; ಮೇಲು ಡುಪನ್ನು ಸರಿಮಾಡಿಕೊಂಡು ಕುಳಿತಳು (ದಾಳಿತ್. ೦೯೭).
[ಮೇಲು$_2$ (< ಮೇಲ್$_2$) + ಉಡುಪು]

**ಮೇಲುಡೆ** (ನಾ). = ಮೇಲುಡುಪು : ಮೃಗಮದದಂಗರಾಗಮುಸಿತೋತ್ಪಲ ಮಾಲೆಯು ಚೋಲ್ಲೆಯುಂ ಮನಂಬುಗುವ ತವಮಾಲಪಲ್ಲವದ ಮೇಲುಡೆ . . . ಸೊಗಯಿಸೆ ದೇವಿಯರ್ಬಳಿಸಿ ನಿಂದೆಸೆದಿರ್ದರಗೇಂದ್ರಪುತ್ರಿಯಾ (ಶಬಶಂ. ೩–೦೦). [ಮೇಲ್$_2$ + ಉಡೆ$_2$]

**ಮೇಲುತನ** (ನಾ). ಹೆಚ್ಚುಗಾರಿಕೆ ; ಅತಿಶಯತೆ: ಹಿರಿಮೆ : 'ಸೂಜಿಯ ಕಣ್ಣೊಳಗಿಂದ ಒಂಟೆ ಹಾಯ್ದುಹೋಗಬಹುದು ; ಆದರೆ ಸ್ವರ್ಗದ ಹೆಬ್ಬಾಗಿಲೊಳಗಿಂದ ಸಿರಿವಂತನು ಹಾಯ್ದುಹೋಗಲಾರನು' ಎಂದುಸುರಿದ ಮಾತಿನಲ್ಲಿ ಮೂಡಿದ್ದು ಬಡತನದ ಮೇಲುತನವಲ್ಲ : ಸಿರಿವಂತಿಕೆಯ ಕೀಳುತನ (ಸಾಹಿಂ. 111). 'ಕೀಳ್ತನ' ಪರಾ.
[ಮೇಲು$_1$ (< ಮೇಲ್$_1$) + – ತನ]

**ಮೇಲುತರ** ' ಮೇಲ್ತರ ' ನೋ.

**ಮೇಲುತೆರಿಗೆ** ' ಮೇಲ್ತೆರಿಗೆ ' ನೋ.

**ಮೇಲುತ್ತರ** (ನಾ). ಒಳ್ಳೆಯ ಜವಾಬು ; ಶ್ರೇಷ್ಠವಾದ ಪ್ರತಿಮಾತು : ಎನ್ನ ಕಾವ್ಯಾರ್ಥಮುಂ ಕಿವಿಯ ಸೆಜಿಗುಗಳಲಿ ತಳೆದ ಕವಿಗಳ ಗಮಕಿಗಳ ವಾದಿಗಳ ವಾಗ್ಮಿಗಳ ರಸಾವೇಶಿಗಳ ತಲೆದೂಗಿಸುವೆಂದೆಡುಳಿದ ದುರ್ಜನರು ಮೆಚ್ಚದೊಡೆಂತೆನಲ್ಕದಕೆ ಕೇಳು ಮೇಲುತ್ತರವನು (ಹರಿಶ್ಚ. ೦–೨೬). [ಮೇಲು$_1$ (< ಮೇಲ್$_1$) + ಉತ್ತರ]

**ಮೇಲುದ** ' ಮೇಲುದು ' ನೋ.

**ಮೇಲುದಾಯ** ' ಮೇಲ್ದಾಯ ' ನೋ.

**ಮೇಲುದು, ಮೇಲುದ, ಮೇಲುದೆ, ಮೈದಿಲು** (ನಾ). ೧. ಮೈಮೇಲೆ ಹೊದ್ದುಕೊಳ್ಳುವ ವಸ್ತ್ರ; ಉತ್ತರೀಯ : ಶಲ್ಯ : "ಪ್ರಾವರಣಂ, ಸಂವ್ಯಾನಂ ಪ್ರಚ್ಛಾದನಂ ಉತ್ತರೀಯಂ —ಈ ೪ ಮೇಲುದು" (ಶಬ್ದಮ. ೪೦–೪೯೨); ಒಳಗಜಿಯುವೆ ಕೌರವಬಳಜಳನಿಧಿ ಬೊಬ್ಬಿಜಿದು ಮೇಲುವಂ ಬೀಸಿದೊಡೆ (ಶಂಕಶಾ. ೧೨–೨೦೨); ಗುರುನಂದನಂ ವಿಪ್ರಳಾಪಂಗೆಯ್ದು ತನ್ನ ಮೇಲುದದ ಸೆಜಿಂಗಿಂದಾತನ ತಲೆಯು ಮೇಲೆ ಕಿವಜಿರ್ದ ಭೀಮಸೇನನ ಚರಣರಜಮಂ ತೊಡೆದು ಕಳೆದು (ಗದಾಯು. ೯–೨೨ ವ) ; ಜರತಾರಿಯ ಮೇಲುದುಗಳನ್ನು ಬಹುಮಾನವಾಗಿ ಕೊಟ್ಟರು (ದಾಳಿತ್. ೨೨೦). ೨. ಹೆಂಗಸರು ಹೊದೆಯುವ ವಸ್ತ್ರ— ಸೆರಗು : ನೊಸಲೊ ತೊಂಗಲ್ಗುರುಳ್ ಮೇಲುದನೊಗೆವ ಕುಚಂ . . . ಉರದುಂ ಸಂಚಳತ್ಸಾರ ಹಾರಂ ಪಸರಂಬೆತ್ತೆತ್ತಮೋರಂತಲೆಯೆ ಭರಶನಂ ನೋಡಲ್ಕೆತಂದಲೊರ್ವಳ್ (ಅದಿಪು. ೦೦–೦೭); ಎಲರಲೆಪದಿಂದೆ ಮೇಲುದು ತೊಲಗಲ್ ಸಂಭ್ರಮಿಸಿ ಭುಜಲತಾಯುಗದಿಂ ಪೆರ್ಮೊಲೆಯುಂ ಮುಚ್ಚುತಂ (ಶಬ್ದಮಣಿ. ೦೩೦) ; ಮೊಲೆಯ ಮೇಲುದು ಜಾಜಿ (ಕುಮ್ಮಾ.ಅ.೦–೨೫). **ಮೇಲುದ** : ೨. "ಕುಚದ ಸೆರಗು ಮೇಲುದಪಾಕ್ಕು" (ಶಶರ.೯೩); ರಾಜವದನೆಯರು ಬೆಡಗಾಗಿ ನೋಲುದ ಜಾಜಿ ಮುಡಿ ಬಿಚ್ಚಿದರೀವಿಲ್ಲದೆ . . . ನಸೆಗಣಕೆಗೆ ಗುಜಿಯಾಗಿರೆ (ಶ್ರೀಕೃಷ್ಣ.೦೯–೩೦); ಸಾಧಾರಣ ಜರಿಯಂಚಿನ ರೇಶಿಮೆಯನ್ನು ಉಟ್ಟು ಮೇಲು ದವನ್ನು ತಲೆಯ ಸುತ್ತ ಬಳಸಿ . . . . ಓಡಿಯಂತೆ ನಡೆದುಬಂದಳು (ಸಹಜ. ೦೪). **ಮೇಲುದೆ** : ೨. ನಡುವಿಗೆ ಬಿಳಿಯ ಸೀರೆ ಸುತ್ತಿ, ಕೊರಳ ಸರಕ್ಕೆ ಮೇಲುದೆ ಸಿಕ್ಕಿಸಿ . . . ಆಚೀಚೆ ಸರಿದಳೆಂದರೆ ಕೇರಿಯ ಹತ್ತೆಂಟು ಗಂಡು ಗಳಲ್ಲಿ ಆಸೆ ಕೆರಳುತ್ತದೆ (ಕುಬಿಕ್ತಾ. ೨೭). **ಮೈದಿಲು** : ೨. ಸುರತಾಂತದ ಶ್ರಮವಳಿದೊಡೆ ಮೈದಿಲ ಸೆಜಿಗ ಜಾಜಿಸಲಂಗನೆಯ ಮಿಜುಗುವ ಬಡಬಾಸೆ ಯೊಪ್ಪಿತು (ಕಂಶಪ. ೬–೦೨೯) ; ಪೀತಾಂಬರ ಮೈದಿಲ ಸೆಜಿಗಿನೊಳೊರ್ವ ಜಾತಿನಾಯಕಿ ಹರುಷದಲಿ ಪ್ರೀತಿಯಿಂ ಸಿರಿಮುಡಿ ಭದ್ರಕಾಯುವ ಬಲು ರೀತಿಯೊಳೊಲಿದೊರಸಿದಳು (ಕಂಶಪ. ೨೨–೩೬).
[ದೇ. ೫ ತಮಿ. ಮೇಲಾಟ್ಟೆ ; ತುಳು. ಮೇದಲೆ]

**ಮೇಲುದುಗುಡ** (ನಾ). ಅಧಿಕವಾದ ದುಃಖ ; ಅತಿಯಾದ ಶೋಕ : ಮೇಲುದುಗುಡದ ಮೊಗದಲವನೀಪಾಲ ಕರ್ಣ ಕೃಪಾದಿ ಭಟರಿಗೆ ಹೇಳಿದನು ಮಗನಳಿದನಸ್ವತ್ಥಾಗ ತನಗೆಂದು (ಕುಮ್ಮಾ.ದ್ರೋ. ೦೮–೬೭).
[ಮೇಲು$_1$ (< ಮೇಲ್$_1$) + ದುಗುಡ]

**ಮೇಲುದುಟಿ** ' ಮೇಲ್ದುಟಿ ' ನೋ.

**ಮೇಲುದುಪ್ಪಟ** ' ಮೇಲುದುಪ್ಪಟ ' ನೋ.

**ಮೇಲುದುವ್ವಟ, ಮೇಲುದುಪ್ಪಟ** (ನಾ). (ಪ್ರ್ಯ)ಮೇಲೆ ಹೊದೆದು ಕೊಳ್ಳುವ ವಸ್ತ್ರ ; ಉತ್ತರೀಯ : ಮೇಲುದುವ್ವಟ ಪೈರಣೆ ಮಂಡಲಿಕರ ಜಾಲವೈತಂದುದುಬ್ಬಿನಲಿ (ಕಂಪಿ. ೨೩-೯೩). **ಮೇಲುದುಪ್ಪಟ** : ಮೈಯಲ್ಲಿ 'ಪೈರಣೆ'ಗಳನ್ನು ತೊಡುತ್ತಿದ್ದರು. ಭುಜದ ಮೇಲೆ 'ಮೇಲು ದುಪ್ಪಟ'ವಿರುತ್ತಿತ್ತು (ಕರ್ನಾಟ. ೦೭೦).

[ಮೇಲು$_2$ (<ಮೇಲ್$_2$) + ದುವ್ವಟ (<ದುಪ್ಪಟ)]

**ಮೇಲುದೆ** ' ಮೇಲುದು ' ನೋ.

**ಮೇಲುದೋಱು** (ಕ್ರಿ). (ಒಬ್ಬರಿಗಿಂತ ಇನ್ನೊಬ್ಬರು) ಶ್ರೇಷ್ಠವೆಂದು ಕಾಣಿಸು ; ಉತ್ತಮವೆಂದು ತೋರಿಸು : ಇನಿಯನ ಪೆಱಗಣ ಕೇರಿ ನೊಳನಿಬರ ರೂಪುಗಳನೊರ್ವ ಕಾಮಿನಿ ಕಂಡೊಯ್ಯನೆ ನಕ್ಕು ನಲ್ಲನನಗೀ ಯನಿಬರುಮಂ ಮೇಲುದೋಱೆ ಕಾಡಿಪನಱಿದೆಂ (ಧರ್ಮಾಮೃ. ೬-೨೦೫).

[ಮೇಲು$_1$ (<ಮೇಲ್$_1$) + ತೋಱು]

**ಮೇಲುನಾಡು** ' ಮೇಲ್ನಾಡು ' ನೋ.

**ಮೇಲುನೆಲ** ' ಮೇಲ್ನೆಲ ' ನೋ.

**ಮೇಲುನೋಟ** ' ಮೇಲ್ನೋಟ ' ನೋ.

**ಮೇಲುಪಂಕ್ತಿ** ' ಮೇಲ್ಪಂಕ್ತಿ ' ನೋ.

**ಮೇಲುಪಚ್ಚಳ** (ನಾ). (ಪ್ರ್ಯ)ಮೇಲೆ ಹೊದೆಯುವ ವಸ್ತ್ರ : ಬಾಲ ಸೂರ್ಯನ ಪ್ರಭೆಯನು ಸೋಲಿಸುವ ರತ್ನಜಾಲದುಭಯುತರಕಸದ ಮೇಲು ಪಚ್ಚಳದರಳೆಲೆಯ ತುರಂಗವು ಸಾಲುಗೊಂಡೈತಂದುವಾಗ (ಕಂಪಿ. ೨೩-೯೨). [ಮೇಲು$_2$ (<ಮೇಲ್$_2$) + ಪಚ್ಚಳ$_1$ (<ಪಚ್ಚಡ)]

**ಮೇಲುಪಾರಪತ್ಯ** (ನಾ). ಮೇಲುಸ್ತುವಾರಿ ; ಮೇಲ್ವಿಚಾರಣೆ : ಯಿಾ ಸತ್ರಕ್ಕೆ ನಿಂಮುಡಿಗಳು ನಡಸುವ ಕಟ್ಟಳೆ ಉಂಬ ಮಂದಿಯ ಬ್ರಾಹ್ಮರ ಜನ ೮ ಅಡಿಗೆಯ ಮಾಡುವ ಬ್ರಾಹ್ಮರ ಜನ ೨ ಉಡಿಗೆಯ ಕೊಡುವ ಬ್ರಾಹ್ಮರ ಜನ ೧ ಮೇಲುಪಾರಪತ್ಯವ ಮಾಡುವ ಯತಿಗಳ ಜನ ೧ (ಎಕ. VI, ಕೊಪ್ಪ. ೩೨-೦೯ ; 1448).

[ಮೇಲು$_1$ (<ಮೇಲ್$_1$) + ಪಾರಪತ್ಯ (<ಪಾರುಪತ್ಯ)]

**ಮೇಲುಪೈರು** (ನಾ). ಬೇರುಬಿಡುವ ಭಾಗವನ್ನು ಬಿಟ್ಟು ಭೂಮಿಯ ಮೇಲ್ಭಾಗದಲ್ಲಿ ಫಲವನ್ನು ನೀಡುವ ಬೆಳೆ : ರೈತರು ನೆಲಗಡಲೆ, ಗೆಣಸು, ಈರುಳ್ಳಿ, ಬೆಳ್ಳುಳ್ಳಿ ಮುಂತಾದ ಕೀಳುಪೈರನ್ನು ಹಾಕಿ ಭರತನ ಬಳಿಗೆ ಬಂದು 'ಸ್ವಾಮಿಾ ಈ ಸಲ ಮೇಲುಪೈರು ಫಲವನ್ನು ಕೊಡಲಿಲ್ಲ . . . ಈ ಸಾಲು ರಾಜಾದಾಯವನ್ನು ತೆಗೆದುಕೊಳ್ಳಕೂಡದು ; ನಾವು ಬಡವರು' ಎಂದರು (ತುಳುನಾ. ೦೬೨). 'ಕೀಳುಪೈರು' ಪರಾ.

[ಮೇಲು$_2$ (<ಮೇಲ್$_2$) + ಪೈರು (<ಪಯಿರ್)]

**ಮೇಲುಪೋಗು** ' ಮೇಲ್ಪೋಗು' ನೋ.

**ಮೇಲುಪ್ಪರ** (ಗು). ೧. ಅತಿ ಎತ್ತರವಾದ : ಚಪ್ಪರಮಂಚ ಗುಜ್ಜರಿ ಗಾಲಮಂಚ ಮೇಲುಪ್ಪರಮಂಚ ಹೂಮಂಚ . . . ಒಪ್ಪವಾಂತಸೆದುವಲ್ಲಲ್ಲಿ (ಭರತ. ೦೩-೨೬). ೨. ಅತ್ಯಂತ ಶ್ರೇಷ್ಠನಾದ,-ಉತ್ತಮನಾದ : ಮೇಲುಪ್ಪರ ಮಹಾರಾಯ ರಾಯಪರಮೇಶ ಜಯ ಜೀಯಯೆಂದುಲಿಯೆ ಕಂಚುಕಿಗಳಲ್ಲಿ (ರಾಜಶೇ. ೬-೩). [ಮೇಲು$_1$ (<ಮೇಲ್$_1$) + ಉಪ್ಪರ$_2$]

**ಮೇಲುಪ್ಪರಿಗೆ** (ನಾ). ಮೇಲಿನ ಅಂತಸ್ತು ; ಮಹಡಿ : ಮೇಲು ಮಾಳಿಗೆ : "ಚಂದ್ರಶಾಲೆ=ಮೇಲುಪ್ಪರಿಗೆ" (ಗಂಗಾಮು. ೦೨೬) ; ನೀನೆನ್ನ ಹುಟ್ಟಿಸಿದ ಕೇಳಿ ಕರುಣದಿಂದ ಘೋರನೆ ಬಂದರೆ . . . ಕಂಬಳಿಯಲ್ಲಿ ಪೀಠ ವನೊಲ್ಲದೆ ಹೃದಯಪೀಠವನಿಕ್ಕಿ ಮೇಲುಪ್ಪರಿಗೆಯ ಪೊರತೆಯ ತಂದು ಪಾದಾರ್ಚನೆಯ ಮಾಡಿ . . . ಪಾದೋದಕ ಕೊಂಡೆ (ಸಿದ್ಧವ. ೩೮-೨೦೫) ; ಸಾಲ ಮುತ್ತಿನ ಕುಚ್ಚಿನ ಪೊಸರತ್ನದ ಮೇಲುಪ್ಪರಿಗೆಗೆನ್ನನೊಯ್ದು (ಕಂಪಿ. ೯-೦೯೦). [ಮೇಲು$_1$ (<ಮೇಲ್$_1$) + ಉಪ್ಪರಿಗೆ]

**ಮೇಲುಬಟ್ಟೆ** ' ಮೇಲ್ಬಟ್ಟೆ ' ನೋ.

**ಮೇಲುಬೀಯ** (ನಾ). = ಮೇಲುಖರ್ಚು : ಮೇಲುಬೀಯ ತಿಂಗಳಿಂಗೆ ವೀಸವಯ್ದು (ಕೊಲ್ಹಾಶಾ. ೩-೯೦ : 1076).

[ಮೇಲು$_1$ (<ಮೇಲ್$_1$) + ಬೀಯ$_3$ (<ಬಿಯ)]

**ಮೇಲುಬ್ಬಸ** (ನಾ). ಮತ್ತೆ ಮತ್ತೆ ಬರುವ ಉಬ್ಬಸ,-ಏದುಸಿರು : ಸಾಸಿವೆಯುಂ ಮಜ್ಜಿಗೆಯಲ್ಲರೆದು ಕುಡಿಯೆ ಮೇಲುಬ್ಬಸ ನಾಶನ (ಸಕವೈ. ೨೨೯) ; ಭಯದ ಮೇಲುಬ್ಬಸದ ಜೊತೆಗೆ ಅವಳ ಮುಖವಿಡೀ ಬೆವರೊಡೆಯಿತು (ಒಡ್ಡುಉ. ೩). [ಮೇಲು$_2$ (<ಮೇಲ್$_2$) + ಉಬ್ಬಸ]

**ಮೇಲುಭಾಗ** ' ಮೇಲ್ಭಾಗ ' ನೋ.

**ಮೇಲುಮುಕ್ಕಿ** ' ಮೇಲ್ಮುಕ್ಕಿ' ನೋ.

**ಮೇಲುಮುಚ್ಚು** ' ಮೇಲ್ಮುಚ್ಚು ' ನೋ.

**ಮೇಲುಮುಟ್ಟು** ' ಮೇಲ್ಮುಟ್ಟು' ನೋ.

**ಮೇಲುಮದ** (ನಾ). ೧. ಅತ್ಯಂತ ಹೆಚ್ಚಾದ ಹೆಮ್ಮೆ : ಅಧಿಕವಾದ ಗರ್ವ : ಕುರುಭೂಪಾಲನಲ್ಲಿಗೆ ಬಂದರುಬ್ಬಿನ ಮೇಲುಮದದ ಜಯ ಪ್ರಚಂಡರು ಕಂಡರವನಿಪನ (ಕುಮಾ.ಗ. ೧೦-೦). ೨. ಆನೆಯ ಗಂಡಸ್ಥಳ ದಿಂದ ಉಕ್ಕುತ್ತಿರುವ ದಾನಜಲ,-ಮದೋದಕ : ಕೀಳ್ಮದ ಮೇಲು ಮದಗಳನೊಗೆದ ಪಿಂಗಲನೇತ್ರಯನಡು ಬಂದುದೊಂದೆಡೆಗೆ (ಶಾಕ್ತಶಾ. ೦೬-೦೦). [ಮೇಲು$_1$ (<ಮೇಲ್$_1$) + ಮದ]

**ಮೇಲುಮಾಡು** (ನಾ). = ಮೇಲುಪ್ಪರಿಗೆ : (ಕ).

[ಮೇಲು$_1$ (<ಮೇಲ್$_1$) + ಮಾಡು$_2$ (<ಮಾಡ$_1$)]

**ಮೇಲುಮಾಳಿಗೆ** ' ಮೇಲ್ಮಾಳಿಗೆ ' ನೋ.

**ಮೇಲುಮುಚುಳಿ** ' ಮೇಲ್ಮುಚ್ಚಳ ' ನೋ.

**ಮೇಲುಮುಚ್ಚಳ** ' ಮೇಲ್ಮುಚ್ಚಳ ' ನೋ.

**ಮೇಲುಮುತ್ತಿಗೆ** (ನಾ). ಒಂದು ಆಕ್ರಮಣದ ಮೇಲೆ ಮಾಡುವ ಮತ್ತೊಂದು ಆಕ್ರಮಣ : ಮೇಲುಮುತ್ತಿಗೆಯಾಯ್ತು ಯವನರ ಧಾಳಿ ಗಂಧರ್ವಾವಳಿಯ ಮುಂಧಾಳಿಗುರಗಾಧಿಪತಿಯೊಬ್ಬನೆ ನಿಂದನದಿರಾಗಿ (ಶಿಭಾಗ. ೪-೦೯-೦೬). [ಮೇಲು$_2$ (<ಮೇಲ್$_2$) + ಮುತ್ತಿಗೆ]

**ಮೇಲುಮುದ್ದೆ** ' ಮೇಲ್ಮುದ್ದೆ ' ನೋ.

**ಮೇಲುಮುನಿದನಹುಂಬು** (ನಾ). ಒಂದು ಬಗೆಯ ಔಷಧೀಸಸ್ಯ : ಅಂಡವಾತಕ್ಕೆ :-ಬಿಳಿಯ ಹಿಡಿಹಿಡಿಕೆ ಮೇಲುಮುನಿದನ ಹುಂಬು ಸಮೂಲ . . . ಇವುಗಳ ರಸವಂ ತೆಗೆದುಕೊಂಡು ಎಳ್ಳೆಣ್ಣೆ ಸಹ ೩ ದಿನ ಕೊಂಬುದು (ಐವೈಶಿ. ೦೯೬). [? + ಹುಂಬು$_2$ (<ಪರಪ್ಪು$_2$)]

**ಮೇಲುಮುಸುಕು** ' ಮೇಲ್ಮುಸುಕು' ನೋ.

**ಮೇಲುಮೊಗ** (ನಾ). ಮುಖದ ಮೇಲ್ಭಾಗ ; ಹಣೆ ; ನೊಸಲು : ಬಾಲಕೆ ಕಡಿವಾಣವನಿಕ್ಕಿ ಕುದುರೆಯ ಮೇಲುಮೊಗಕೆ ಹಲ್ಲಣವ ಮೇಳಲಳವ ಕಟ್ಟಿ ಕಂಗೆಟ್ಟು ತುರುಕರ ಜಾಲವೈದಿತು ದೆಸೆದೆಸೆಗೆ (ಕಂಪಿ. ೦೩-೯೩).

[ಮೇಲು$_1$ (<ಮೇಲ್$_1$) + ಮೊಗ]

**ಮೇಲುವಚ್ಚಲ್** (ನಾ). ಮೇಲ್ಭಾಗದ ಕಾಲುವೆ : ಎತ್ತರದಲ್ಲಿರುವ ಕಾಲುವೆ : ತೆಂಕಣಸೀಮೆ ಅಜಿಕಜಿಯ ತೆಂಕಣ ಕೋಡಿಯಿಂ ಪಡುವ ಮುಂದಾಗಿ ಹರಿವ ಪಳ್ಳದ ಮೇರೆ . . . ಬಡಗಲಾ ಹೊಲಕೆ ಹರಿವ ಮೇಲುವಚ್ಚಲ್ ಮೇರೆ (ಎಕ. VII, ಶಿಕಾರಿ. ೩೨೩-೨೪; 1046).

[ ಮೇಲು$_1$ ( < ಮೇಲ್$_1$ ) + ಬಚ್ಚಲ್ ]

**ಮೇಲುವಣ** (ನಾ). ತೆರಿಗೆಯ ಮೇಲೆ ಕೊಡಬೇಕೆಂದು ಕೇಳುವ ಹೆಚ್ಚಿನ ಹಣ : ಭತ್ತ ಸ ೨ ಮೇಲುವಣದಿಂದ ಕ ೨ ಹೊಂನಿನ ಮಚ ಗಂಧಕ ೨ . . . ದೇವಾಲ್ಯದ ಕೆಲಸಕೆ ದೇವರ ಆಧಾರವಾಗಿ ಪ್ರತಿ ವರುಷದಲೂ ಮಿಕ್ಕು ಬಹದು (ಎಕ. VI, ಶೃಂಗೇರಿ. ೩೦-೨೦ ; 1458) ;

ನೀಉ ಮಾಡಿದ ಘಳಿಯಗಳು ಖಿಲವಾಗಿ ಮುಂಚಿದು ಹೋದವೆನ್ನು ಕೇಳಿ ಕಾಣಿಕೆ ನೇಲುವಣ ಕಬ್ಬಿನ ಸುಂಕವನೂ ಬಿಟ್ಟೆಉ (ಎಕ. XI. ದಾವಣ. ೦೦೭-೦೬; 1528). [ ಮೇಲು$_1$ (< ಮೇಲ್$_1$ ) + ಪಣ್ಣ$_3$]

**ಮೇಲುವತ್ತಿಗೆ** (ನಾ). ಗಾಲಿಯ ಹೊರಭಾಗದ ಸುತ್ತು ; ಚಕ್ರದ ಪರಿಧಿ : " ಪ್ರಧಿ ನೇಮಿ ಮೇಲುವತ್ತಿಗೆಯಕ್ಕು" (ಪಂಗಲಾ. ೬೪-೨೪). [ ಮೇಲು$_1$ ( < ಮೇಲ್$_1$ ) + ಪತ್ತಿಗೆ$_1$ ( < ಪತ್ತುಗೆ ) ]

**ಮೇಲುವರಿ$_1$** ' ಮೇಲ್ವರಿ ' ನೋ.

**ಮೇಲುವರಿ$_2$** (ನಾ). ಹೆಚ್ಚಾಗಿರುವುದು ; ಹೆಚ್ಚುವರಿ : ವಿದೇಶೀ ಜನರು ಅದನ್ನು ಹೊತ್ತುಕೊಂಡು ಹೋಗಲು ಬಿಟ್ಟರೆ, ನಮಗೆ ಉಳಿಯುವುದು ಕೊಂಚ ಮೇಲುವರಿ ಹಣ ಮಾತ್ರ ಮತ್ತು ಜನರಿಗೆ ಕೂಲಿ ಮಾತ್ರ (ದಾರಾತ. ೦೪೭). ' ಇಳಿವರಿ ' ಪರಾ. [ ಮೇಲು$_1$ ( < ಮೇಲ್$_1$) + - ವರಿ$_2$ ]

**ಮೇಲುವಲಗೆ** ' ಮೇಲ್ವಲಗೆ ' ನೋ.

**ಮೇಲುವಾಯ್** ' ಮೇಲ್ವಾಯ್ ' ನೋ.

**ಮೇಲುವಾಸಿ** (ನಾ). ೧. ಒಳ್ಳೆಯ ಪರಿಣಾಮವನ್ನು ಕೊಡುವಂಥದು; ಮಂಗಳಕರವಾದುದು : ಒಮ್ಮೆ ಮುಟಿವುದು ವೈರಿದಳ ಮತ್ತೊಮ್ಮೆ ಮುಟಿವುದು ನಮ್ಮ ದಳ . . . ಪಮ್ಮ ದೆಸೆ ಬಲುದೊರೆಗಳಳವಿ ಸೊಳೊಮ್ಮೆ ಹೋಯಿತು ಹೊತ್ತು ರಣದಲಿ ನಮ್ಮ ವಿಳಸಕೆ ಮೇಲುವಾಸಿ ನೃಪಾಲ ಕೇಳೆಂದ (ಕುವ್ಯಾ.ಕ. ೩೩-೪೦). ೨. ಬೆಲೆಯಲ್ಲಿ ವ್ಯತ್ಯಾಸವುಳ್ಳ ಮಾಲುಗಳನ್ನು ಬದಲಾಯಿಸಿಕೊಳ್ಳುವಾಗ ಎರಡನೆಯವನಿಗೆ ಕೊಡುವ ಅಥವಾ ಅವನಿಂದ ಪಡೆದುಕೊಳ್ಳುವ ವ್ಯತ್ಯಾಸದ ಮೊಬಲಗಿನ ಮೊತ್ತ : ಈಗ ನನ್ನಲ್ಲಿ ೧೫೦ ರೂಪಾಯಿ ಬೆಲೆಯ ಹಾರ್ಮೋನಿಯಮ್ ಇದೆ. ನಿಮ್ಮಲ್ಲಿ ೧೭೫ ರೂಪಾಯಿ ಬೆಲೆಯ ರೇಶ್ಮೆಯಿದೆ. ನಾವು ನಮ್ಮಲ್ಲಿ ಈ ಮಾಲುಗಳನ್ನು ಬದಲಿಸುತ್ತೇವೆ. ನಿಮಗೆ ನನ್ನ ವಸ್ತುವನ್ನು ಕೊಟ್ಟು ೨೫ ರೂಪಾಯಿ ಮೇಲುವಾಸಿಯನ್ನು ಕೊಟ್ಟು ಬಿಟ್ಟರೆ ನಮ್ಮ ಲೆಕ್ಕವು ಮುಗಿಯಿತು (ದಾಂಶ್ರ. II. ೬೬೬). ' ಕೀಳುವಾಸಿ ' ಪರಾ. [ ಮೇಲು$_1$ ( < ಮೇಲ್$_1$ ) + ವಾಸಿ$_1$ ]

**ಮೇಲುವಾಸು** ' ಮೇಲ್ವಾಸು ' ನೋ.

**ಮೇಲುವೀಸ** (ನಾ) ತೆರಿಗೆಯ ಮೇಲೆ ಕೊಡಬೇಕಾದ ಹೆಚ್ಚಿನ ನಾಣ್ಯ (?) : ಕಟ್ಟಲೆಗಳ ಪ್ರಹರಪ್ರಮಾಣವಿಚಾರ ಮೇಲುವೀಸ ಕೊಡವೀಸ ಸಹ ವರ್ತಕರಿಗೆ ಸಲುವ ಮಾನ್ಯಮರ್ಯಾದೆಗಳನ್ನು ನಡೆಸಿಕೊಟ್ಟು (ಎಕ. VIII. ಸೊರಬ. ೨೬೫-೨೬ ; 1627 ?). 'ಕೊಡವೀಸ' ಪರಾ. [ ಮೇಲು$_1$ ( < ಮೇಲ್$_1$ ) + ವೀಸ ]

**ಮೇಲುವೆಚ್ಚ** (ನಾ). = ಮೇಲುಖರ್ಚು : ಪ್ರತಿದಿನದಲ್ಲಿ ಒಬ್ಬ ಬ್ರಾಹ್ಮಣನ ಭೋಜನಕ್ಕೆ ಅವನ ಮೇಲುವೆಚ್ಚ ವೀಳೆಯಕ್ಕೆ ದೇವರ ಹಾನೆಯಲ್ಲಿ ಯಿದಕ್ಕೆ ಅಕ್ಕಿಯ ಮರ್ಯಾದೆಯಲಿ ಪ್ರತಿವರ್ಷವಲಿ ೩ ಳ ಮೂಡೆಯೂ (ಸೌಇಇ. IX-ii, ೪೨೬-೪೦ ; 1402) ; ತಮಗೂ ತರವ ಕಟ್ಟ ಸಹ[ವಾಸವಾಗಿಹ ಹಿ]ರಿಯರುಗಳಿಗೂ ನೈವೇದ್ಯ ಮೇಲುವೆ[ಚ್ಚ]ಗಳಿಗೆ ಮೂಡಣಕೋಟೆಯ ಸೀಮೆಯಲ್ಲಿ ತಮ[ಗೆ] ಲಿಂಗಮುದ್ರೆ ಶಿಲಾಶಾಸನ ಪೂರ್ವ್ವಕ[ವಾಗಿ ಕೊಟ್ಟು]ಯಿಹ ಬೊಪ್ಪನಹಳಿಯ ಗ್ರಾಮ (ಶ್ವ್ರಕಂ. ೦೪೨೭. ೬೪-೦೨ ; 1514). [ಮೇಲು$_1$ ( < ಮೇಲ್$_1$ ) + ವೆಚ್ಚ]

**ಮೇಲುವೆಚ್ಚು ?** (?). (?) : ಚೋಳಂ ಮುತ್ತಿದ ಹನ್ನೆರಡುವರ್ಷಕೆ ಪೊನ್ನೆದಾಳಾಪಂ ಬೆರಸಾದೊಡೊನ್ದು ಮೊಳನಂ ಮೇಲುವೆಚ್ಚುವುಚ್ಚಂಗಿಯ ಹೇಳಸಾಧ್ಯವಾದುದೆನ್ದು ಧವಿಜಂ ಭೋದ್ಯಂಬಡುತ್ತಮಿ ಬಲ್ಲಾಳಂ ಗಿರಿದುರ್ಗಮಲ್ಲಮಶರಂ ಬಲ್ಲಾಳಭೂಪಾಳಕಂ (ಎಕ. XVI, ಶಿಕ್ಕನಾ. ೭೦-೪ ; 1286). [ ? ]

**ಮೇಲುವೆಸರು** (ನಾ). ಬೇರೆಯ ಹೆಸರು ; ಮತ್ತೊಂದು ಹೆಸರು ; ಉಪನಾಮ : ದಾನವರ ಸೀಳಿ ಬಿಸುಟನು ಖಳರ ಮೇದಸ್ಸಾಳಿ ಮುಳುಗಿತು ಜಲದೊಳವಜಿಂ ಮೇಲುವೆಸರಾಯ್ತಿಳೆಗೆ ಮೇದಿನಿಯೆಂಬ ನಾಮದಲಿ (ಕುವ್ಯಾ.ಶ. ೯-೨೯). [ ಮೇಲು$_1$ ( < ಮೇಲ್$_1$) + ಪೆಸರ್$_1$ ( < ಪೆಸರ್ ) ]

**ಮೇಲುವೊದಕೆ** ' ಮೇಲ್ವೊದಕೆ ' ನೋ.

**ಮೇಲುವೊನ್ನು**, ಮೇಲುಹೊನ್ನು (ನಾ). ದಾನವಾಗಿ ನೀಡುವ ದವಸ, ಧಾನ್ಯ ಮುಂತಾದುವುಗಳ ಜೊತೆಯಲ್ಲಿ ನೀಡುವ ಹೆಚ್ಚಿನ ನಗದು ಹಣ ; ದಕ್ಷಿಣೆ : ಗಿಳಿಕಲ್ಲು ಇಕ್ಕುವ ಭತ್ತ ಸ ೪೪೦ ಮೇಲುವೊನ್ನು ಗ ೪ ಬೋಳೂರು ಇಕ್ಕುವ ಭ × × ದಿಸ ೧೧೦ ಮೇಲುವೊನ್ನು ಗ ೨ (ಶ್ವ್ರಕಂ. ೦೪೩೩, ೨-೦೨ ; 1356). **ಮೇಲುಹೊನ್ನು** : ಆ ಬಾಳಿಂದಲೂ ಬಹ ಮೇಲುಹೊಂನು ಕಾಟಗದ್ಯಾಣ ಸಂ × × × ಯಿದು ಹೊಂನು (ಸೌಇಇ. IX-ii. ೪೦೭-೦೭ ; 1377). [ ಮೇಲು$_1$ ( < ಮೇಲ್$_1$ ) + ಪೊನ್ನು ( < ಪೊನ್ ) ]

**ಮೇಲುಶೋಧನೆ** (ನಾ). ವಾಂತಿ ; ವಮನ : ಭದ್ರಮುಸ್ತೆ, ಬಿಳಿಯ ಹಜುಪೆ, ತ್ರಿಫಳೆ, ದೇವದಾರು, ನುಗ್ಗೆಯ ಬೇರು, ಎಂಬಿವಂ ಸಮಾನಂಗೊಂಡು ಮರಳಿಸಿದ ನೀರುಂ ಹಿಪ್ಪಲಿ ಬೆರಸಿ ಆವಿಯೊಳಗೆ ಪುಡಿಮಾಡಿ ಪ್ರತಿಪಾಕವಿಕ್ಕಿ ಕುಡಿಯಲು ಕೀಳುಶೋಧನೆ. ಮೇಲುಶೋಧನೆ, ಪಲವು ಕಾಲ ನಡೆದಂತಹ ರೋಗಗಳು ಕ್ರಿಮಿಗಳು ಎಲ್ಲವನ್ನೂ ಕೆಡಿಸುವುದು (ಖಿವೈವಿ. ೦೯). [ ಮೇಲು$_1$ ( < ಮೇಲ್$_1$ ) + ಶೋಧನೆ ]

**ಮೇಲುಸಂಪಾದನೆ** (ನಾ). ವೇತನ ಅಥವಾ ಸಂಬಳವಲ್ಲದೆ ದೊರಕುವ ಹೆಚ್ಚಿನ ಆದಾಯ ; ಲಂಚ ; P ಸಾಮಾನ್ಯವಾಗಿ ನ್ಯಾಯ ವಿರುದ್ಧವಾದ ಕೆಲಸವನ್ನು ಮಾಡಿಕೊಡಲು ಬೇರೆಯವರಿಂದ ಒತ್ತಾಯಪೂರ್ವಕವಾಗಿ ಪಡೆಯುವ ಹಣ : ನಿಮ್ಮ ಯಜಮಾನ್ರಿಗೆ ಕೈತುಂಬಾ ಸಂಬಳ ಬರುತ್ತಿಲ್ಲವೆ ? ಮೇಲುಸಂಪಾದನೆಯೂ ಇರಬೇಕು (ಕುಕುಸಂ. ೩೦). [ ಮೇಲು$_1$ ( < ಮೇಲ್$_1$ ) + ಸಂಪಾದನೆ ]

**ಮೇಲುಸಾಲು** (ನಾ). ೧. ಮೊದಲಿನ ಸಾಲು, — ಪಂಕ್ತಿ ; ಅಗ್ರಶ್ರೇಣಿ : ವೈದಿಕರು ಮೇಲುಸಾಲಿನಲ್ಲಿ ಊಟಕ್ಕೆ ಕುಳಿತಿದ್ದಾರೆ (ಕುಖ). ೨. ಮೇಲುಪಂಕ್ತಿ ; ಮಾದರಿ : ಏನೇ ಇರಲಿ, ಏನೆ ಇರಲಿ, ಹಮ್ಮುಹೆಮ್ಮೆಗಳೇನೆ ಇರಲಿ. ತಿರುಳನರಿವು, ಹಿರಿಯ ನಡತೆ, ಮೇಲುಸಾಲು, ಏನೆ ಇರಲಿ (ತಂಗಿಣಕ. ೩೬-೬). [ಮೇಲು$_1$ ( < ಮೇಲ್$_1$ ) + ಸಾಲು$_2$ ( < ಸಾಲ್$_3$) ]

**ಮೇಲುಸಿರ್**, ಮೇಲುಸಿರು, ಮೇಲುಸುರು (ನಾ). ಮತ್ತೆ ಮತ್ತೆ ವೇಗವಾಗಿ ಬರುವ ಉಸಿರು ; ಏದುಸಿರು : ಎಳೆವ ಬಾಳ್ದಲೆಯೊಸಲ್ ಮೇಲುಸಿರ್ ನೆಗೆಯುತಿರಲಳಲ ತಾಳದೆ ಕೊರಗು ಮರುಗುಪಂ ಗೋಳು (ಶಾಂತಿಕ. ೦೭೨-೩೬೩). **ಮೇಲುಸಿರು** : ಪಣ್ಯಾಣಿಯ ಕೋಮಲೆಯು ಮೇಲುಸಿರು ಸೂಸುತ್ತ ಶಕ್ತಿಯಿಂದು ಕುಂದುತ್ತ ಬಾಯಾರಿ ಸೊರಗಿಹಳು (ಕಕಕೋ. ೭೭-೨೨); ವೇಗವಾಗಿ ನಡೆದು ಬಂದದ್ದರಿಂದ ಅವರಿಗೆ ಮೇಲುಸಿರು ಹತ್ತಿತ್ತು (ಮುಕಿರುದಾ. ೭೫). **ಮೇಲುಸುರು** : ದೈತ್ಯಬಲವುಳಿದಡಿ ಯಿಡಲು ಮೇಲುಸುರು ಮಸಗಿತು ಫಣಿಪ ಕಮಠರಿಗೆ (ಕುವ್ಯಾದ್ರೋ. ೦೫-೪೬). [ ಮೇಲು$_2$ ( < ಮೇಲ್$_2$) + ಉಸಿರ್$_2$ ]

**ಮೇಲುಸಿರಿಡು**, ಮೇಲುಸುರಿಡು (ಕ್ರಿ). ಮತ್ತೆ ಮತ್ತೆ ವೇಗವಾಗಿ ಉಸಿರಾಡು ; ಏದುಸಿರು ಬಿಡು : ಬಿರಿದಪ್ಪ ಶ್ರಮದಿಳಿ ನಿತ್ತರಿಸದೆ ತಲೆ ತಿರುಗಿ ಮಜುಗಿ ಮೇಲುಸಿರಿಟ್ಟುರ್ವರೆಗೆ ಕೆಡೆದುರುಳ್ದ ಮುನಿಪನಸರಸಂ ತಾಳ್ದಿರ್ದನೊಂದುಜಾವಂಬರೆಗಂ (ರಚರ್ಣಾಪ್ಕು. ೪-೦೭೦)

**ಮೇಲುಸುರಿಡು** : ಎರಡು ದಿನದ ಕೂಸಂ ಕುಂಭಿನಿಯೆಂಬ ದೇವತೆ ಪಿಡಿದಡಾ ಕೂಸು ವಿಕಾರವೆರಸಿಕ್ಕುಂ ಕಣ್ಣ ತೆರೆಯದುಂ ಮೇಲುಸುರಿ ಡುಗುಂ (ಬಾಲಗ. ೦೨೪) . [ಮೇಲುಸಿರ್ + ಇಡು₁]

**ಮೇಲುಸಿರು** ' ಮೇಲುಸಿರ್ ' ನೋ.

**ಮೇಲುಸುರಿಡು** ' ಮೇಲುಸಿರಿಡು ' ನೋ.

**ಮೇಲುಸುರು** ' ಮೇಲುಸಿರ್ ' ನೋ.

**ಮೇಲುಸೆಱಗು** ' ಮೇಲ್ಸೆಱಗು ' ನೋ.

**ಮೇಲುಸ್ತುವಾರಿ** (ನಾ). ಮೇಲ್ವಿಚಾರಣೆ : ಸಿಂಹನ ಅರಸಿಯು ಕಂಚಿಯಲ್ಲಿ ಕೈಲಾಸನಾಥದೇವಾಲಯ ಕಟ್ಟಡ ಕೆಲಸದ ಮೇಲುಸ್ತುವಾರಿಯನ್ನು ನೋಡಿ ಕೊಳ್ಳುತ್ತಿದ್ದಳು (ದಕಾ ೩. ೦೨೬).

[ಮೇಲು₁ (< ಮೇಲ್₁) + ಉಸ್ತುವಾರಿ]

**ಮೇಲುಹವಿ** (ನಾ). ಅಗ್ನಿಗೆ ಉಪರಿಭಾಗದಿಂದ ಬೀಳುವ ಹವಿಸ್ಸು : ಬೀಳುವಾಹುತಿಗಳನ್ನು ಸವಿದುರಿನಾಲಗೆಗಳುಬ್ಬೆದ್ದು ಕುಣಿದವು ಮೇಲುಹವಿ ಗವ್ವಳಿಸಿ ಪರಹಿನಲಗ್ನಿಕುಂಡವಲಿ (ಕೊರಂ. ೦.೭-೪೮).

[ಮೇಲು₁ (< ಮೇಲ್₁) + ಹವಿ₁]

**ಮೇಲುಹಾಸಿಗೆ** (ನಾ). ಹಾಸಿಗೆಯ ಮೇಲೆ ಹಾಸುವ ಬಟ್ಟೆ; ಮಗ್ಗುಲು ಹಾಸಿಗೆ ; ದುಪಟಿ : "ನಿಚೋಳಃ, ಪ್ರಚ್ಛದಪಟಃ -- ೨ ಮೇಲುಹಾಸಿಗೆ, ಹಾಸಿಗೆ ಮೇಲೆ ಹಾಸುವ ನೌರುಬಟ್ಟೆ" (ಸಿದ್ಧಾಂತ. ೨೦೪).

[ಮೇಲು₂ (< ಮೇಲ್₂) + ಹಾಸಿಗೆ (< ಹಾಸು₁)]

**ಮೇಲುಹೊದಕೆ** ' ಮೇಲ್ಹೊದಕೆ ' ನೋ.

**ಮೇಲುಹೊದಿಕೆ** ' ಮೇಲ್ಹೊದಕೆ ' ನೋ.

**ಮೇಲುಹೊನ್ನು** ' ಮೇಲುಪೊನ್ ' ನೋ.

**ಮೇಲುಹೊಳೆ** (ನಾ). ನದಿಗಳಲ್ಲಿ ಅಧಿಕಪ್ರವಾಹದಿಂದ ನೀರಿನ ಮಟ್ಟವು ದಡವನ್ನು ಮೀರಿ ಹರಿಯುವುದು : ಜಲೋಚ್ಛ್ವಾಸಾಃ, ಪರೀವಾಹಾಃ— ೨ ನೀರು ಕಡಬಿ ತುಳುಕಿ ಮೇಲ್ವಾಯ್ದು ಬರುವ ತೆರೆಗಳ ಹೆಸರು. ಮೇಲುಹೊಳೇ ಅಥವಾ ನೀರು ಅಲ್ಲಾಡಿ ತುಳುಕಾಡುವಿಕೆ (ಸಿದ್ಧಾಂತ. ೭೬). [ಮೇಲು₁ (< ಮೇಲ್₁) + ಹೊಳೆ₃ (< ಪೊಟಿ³)]

**ಮೇಲೂರ್** (ನಾ). ೧. ಮೇಲೆ ಇರುವ ಊರು : ಸ್ವರ್ಗಲೋಕದ ಪಟ್ಟಣ: ಗರಗರಿಕೆವಡೆದೆಳವೆಂಡಿರ ತಂಡದಿಂ ನೆಗೞ್ತೆವಡೆದು ಮೇಲೂರ್ಗಳ ಮುಂದಾಡುವಂತಾಗಸಕೆ ನೆಗೆದ ಬೀದಿವಾಡಂಗಳ . . . ಚೆಲ್ವನೊಳಕೊಂಡಿ ರ್ಪುದು (ಕಬ್ಬಿಗ. ೦೪). ೨. ಒಂದು ಊರಿನ ಹೆಸರು : ಮೇಲೂರಾ ಕೆಱೆ ಕೆಱೆ ಪಡಿ ಕಣ್ಣು ಗಮ್ ವ್ರೀಹಿ ಭೂಮಿಮ್ (ಎಕ. IX, ಹೊಸ್ಕ. ೭೭-೦೪; 469): ಶ್ರೀರಾಮ[ನಾ]ಥದೇವರಿಗೆ [ಮೇ] ಲೂರ ಕಾಟ [ದೇ] ವನ ಮಗ ... ಇ[ಕ್ಕಿದ] ಗಾಣ ಶ್ರೀ [ರಾಮ] ದೇವ (ಎಕ. IV (R), ಹಾಸನ. ೨೯೬ ೩; ಸು. 14ನೆಯ ಶತ). [ಮೇಲ್₂ + ಊರ್]

**ಮೇಲೆ₁** (ಅ). ೧. ತುದಿಯಲ್ಲಿ: ಅಗ್ರಭಾಗದಲ್ಲಿ: ಉಪರಿಭಾಗದಲ್ಲಿ : ತುಂಗಗಿರಿಶಿಖರದಿಂದು ಲಂಗಿಸಿ ಶೂದ್ರಕನ ಪೊಳೆವ ಸುಂಗಿಯ ಮೊನೆಯೊಳ್ ಪೊಂಗಿ ಸೊಡರ್ಗುಡಿಯ ಮೇಲೆ ಪತಂಗಂಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾವ್ಯಸಾ. ೦೦೦೪ ಶೂದ್ರ.೪); ಒಂದು ದಿವಸಂ ತನ್ನ ತೊಡೆಯ ಮೇಲೆ ತಲೆಯನಿಟ್ಟು ಪರಶುರಾಮಂ ಪವಡಿಸೊಱಗಿದಾ ಪ್ರಸ್ತಾವದೊಳ್ (ಕಂಕಾ. ೦-೦೦೪ ವ): ಉಭಯರಾಯರ ನಿಟ್ಟಿಟಕಿ ಮುಗ್ಧು ಪೂತುರೇದುಂದು ಮೇಲೆ ಸುರಕಟಕ (ಕುವ್ಯಾ.೪. ೪-೩೩). ೨. ಹೊರ ಮೈಯಲ್ಲಿ: ಮೇಲ್ಭಾಗದಲ್ಲಿ: ಮೊರಪದರದಲ್ಲಿ : ಎಣ್ಣೆಯು ನೀರಿನ ಮೇಲೆ ತೇಲುತ್ತದೆ (ರೂಢಿ). ೩. ಮುಂದೆ; ಮುಂಭಾಗದಲ್ಲಿ; ಮುಂದಕ್ಕೆ: ನಿನ್ನ ಮುಂದಿರದ ಮೇಲಿರಡು ಯೋಜನದೊಳೆನ್ನಯ ಕೀರ್ತಿಪುರ ಹೇಮಪಿರಚಿತದೊಳಿರಬೇಹುದು (ಶಶಿಸ. ೦೪-೦೩). ೪. ಹೊರತು : ವಿನಾ ; ಉಳಿದು : ನಾನು ಇಷ್ಟರ ಮೇಲೆ ಇನ್ನೇನೂ ಹೇಳಲಾರೆ (ರೂಢಿ). ೫. ಅನಂತರ; ಆ ಬಳಿಕ : ಮೂಲಧನ ವೇಸುಂಟದೆಲ್ಲವನೋಳಿಯಲಿ ಚಂದನಕೆ ಸವೆಯಲು ಮೇಲೆ ಕಡುಬಡತನವಡ ಸಿರಲು (ಬಸವ. ೨೭-೧); ಭಾಳನೇತ್ರನ ವರದ ಗರುಡಿಯ ಹಾಳಿಯೆನಿಸುತುಂಟ ನಿತನಿವರಲಿ ಮೇಳವಿಸಿದನು ಮೇಲೆ ತಿಂಗಳು ದಿವಸಕಾ ಮುನಿಪ (ಕುವರಂ. ೦-೦೨-೦); ದುಃಖದ ಮೇಲೆ ಸುಖ ಸುಖದ ಮೇಲೆ ದುಃಖ (ಗಾದೆ). ೬. ಮತ್ತೂ; ಜೊತೆಗೆ: ಇನ್ನೂ : ನಾಲ್ಕು ಲಕ್ಷದ ಮೇಲೆ ತೊಂಬ ತ್ತಾಱು ಸಾವಿರ (ಬಸವ. ೨೨-೩೨); ಸೀಳಿದನು . . . ಅಗ್ಗದ ರವಿಸುತನ ಮಂತ್ರಿಗಳೊಳ್ಳೆವರನು ಮೇಲೆ ಕೇರಳರೊಳಗೆ ಹತ್ತು ನೃಪಾಲರನು (ಕುವ್ಯಾದ್ರೋ. ೬-೪೭). ೭. ಕುರಿತು : ಸಂಬಂಧದಲ್ಲಿ : ವಿಚಾರದಲ್ಲಿ : ಇನ್ನಪ್ಪೊಡನ್ನ ಮೇಲೆ ದೋಷಮಿಲ್ಲ (ಸಂಕಶಂ. ೦೩೦-೩): ಹುಯಿಲಿದ ಮನುಜರ ಮೇಲೆ ಮುನಿದೇಗುಂವರು ಕೆಲಬರು (ಕುವ್ಯಾದ್ರೋ. ೦-೨೯): ಸಾವಿರಸಂತಾನವಡೆದಳೆ ಮಮಕಾರದ ತೀವಿಹುದಬಲನ ಮೇಲೆ (ಪಂಚಕ.೦-೦೦). ೮. ಸಮೀಪವರ್ತಿಯಾಗಿ ; ಹತ್ತಿರವಾಗಿ : ಅದರ ಬಣ್ಣ ಎಂಥಾದು ? ಅದು ಕಪ್ಪಿನ ಮೇಲೆ ಅದೆ (ಮುಂಬಯಿ. ೦-೨೪). ೯. ಆಧಾರದಿಂದ ; ಹೊಣೆಯಿಂದ : ಅವನ ಮಾತಿನ ಮೇಲೆ ನಾನು ಇವನಿಗೆ ಸಾವಿರ ರೂಪಾಯಿ ಸಾಲ ಕೊಟ್ಟಿದ್ದೇನೆ (ರೂಢಿ). ೧೦. ಉದ್ದೇಶದಿಂದ; ಕಾರಣ ದಿಂದ; ಉದ್ದೇಶಕ್ಕಾಗಿ : ಅವನು ವ್ಯಾಪಾರದ ಮೇಲೆ ಆ ಊರಿಗೆ ಹೋಗಿದ್ದಾನೆ (ರೂಢಿ). ೧೧. ವಿರುದ್ಧವಾಗಿ : ಪ್ರತಿಯಾಗಿ : ಪಾರ್ಷ್ಣಿ ಗ್ರಾಹ — ತಾನು ಹಗೆಯ ಮೇಲೆ (ದಂಡನ್) ಎತ್ತಿ ಹೋಪಲ್ಲಿ ಹಿಂದೆ ರಾಜ್ಯವನುಪದ್ರವ ಮಾಡುವವನು (ನಾಕರಾ. ೪). ೧೨. ಉತ್ತಮ ಮಟ್ಟಕ್ಕೆ; ಅಭಿವೃದ್ಧಿಗೆ : ಮನುಷ್ಯನು ಮೇಲೆ ಹೋದಷ್ಟೂ ವಿನಯ ವಂತನಾಗಬೇಕು (ರೂಢಿ). ೧೩. ದೂರದಲ್ಲಿ ; ಅಂತರದಲ್ಲಿ : ಆ ಪಟ್ಟಣ ದಿಂದ ಕೆಲವು ಹರದಾರಿಗಳ ಮೇಲೆ ಒಂದು ಸಣ್ಣ ಹಳ್ಳಿ ಅದೆ (ಮುಂಬಯಿ. ೪-೩೦); ಇಲ್ಲಿಂದ ಅಯ್ದು ಹರದಾರಿಯ ಮೇಲೆ ಇರುವ ರಾಮಪುರವೆಂಬ ಊರಿಗೆ ಹೋಗು (ಮುಂಬಯಿ. ೪-೦೬೪). ೧೪. ಅನುಸರಿಸಿ : ಸಂಬಂಧಿಸಿ ದಂತೆ : ಉಪಯೋಗದ ಮೇಲೆ ಪದಾರ್ಥಗಳ ಬೆಲೆಯು ಹೆಚ್ಚು ಕಡಿಮೆ ಇರುವದಿಲ್ಲ (ಮುಂಬಯಿ. ೩-೭೪). ೧೫. ಹೊರಗಡೆಯಲ್ಲಿ : ಸ್ಥೂಲ ವಾಗಿ : ಮೇಲೆ ನೋಡಿದಾಗ ಅವರ ವಿಚಾರದಲ್ಲಿ ತಪ್ಪು ಭಾವನೆ ಹೊಂದು ವವರೇ ಹೆಚ್ಚು (ರೂಢಿ).

**ಮೇಲೆಮೇಲೆ** (ದ್ವಿರುಕ್ತಿ) : ೧. ತುಂಬ ಮೇಲಕ್ಕೆ : ಅತಿ ಎತ್ತರಕ್ಕೆ : ವಿಮಾನವು ಮೇಲೆಮೇಲೆ ಹೋದಷ್ಟೂ ಕಣ್ಣಿಗೆ ಚಿಕ್ಕದಾಗಿ ಕಾಣಿಸುತ್ತದೆ (ರೂಢಿ). ೨. ಒಂದರ ನಂತರ ಮತ್ತೊಂದರಂತೆ; ಸಾಲಾಗಿ: ನಿರಂತರವಾಗಿ : ಸುತ್ತಲುಂ ಸೊಗಯಿಸಿ ಮೇಲೆಮೇಲೆ ಕವಿತಂದುವು ಭೋಂಕನೆ ಪೂವಿನಂಬುಗಳ್ (ಕವ್ಯಾಕಾ. ೩೦೬). ೩. ವೇಗವಾಗಿ ; ರಭಸ ವಾಗಿ : ಮೇಲೆಮೇಲೀತನ ತಪೋಗ್ನಿಜ್ವಾಲೆ ಜಡಿದುದು (ಕುವ್ಯಾಕಾ. ೩-೦೦); ಮುಪ್ಪುರದ ಜನಂ . . . ಮೇಲೆಮೇಲೈತಂದು ಕೋಂಟೆಯಂ ಪತ್ತಿ ಪೊಱಪಾಳೆಯವನೀಕ್ಷಿಸುತ್ತಿರ್ಪನಂ (ಕಥಾ. ೪೨-೦೩). ೪. ಮತ್ತೆ ಮತ್ತೆ; ಪುನಃಪುನಃ : ನೀವು ಹೀಗೆ ಮೇಲೆಮೇಲೆ ಹೋಗುವುದರಿಂದ ಅವರಿಗೆ ತೊಂದರೆಯಾಗಬಹುದು (ರೂಢಿ). **ಮೇಲಿಂದ ಮೇಲೆ** = ಪುನಃ ಪುನಃ : ನೀವು ಮೇಲಿಂದ ಮೇಲೆ ಅವರನ್ನು ಕಂಡು ಹೇಳದಿದ್ದರೆ ಯಾವ ಕೆಲಸವೂ ಆಗುವುದಿಲ್ಲ (ರೂಢಿ). **ಮೇಲೆ ಹಾಕಿಕೊಳ್ಳು** = ವಿರೋಧವನ್ನು ಕಟ್ಟಿಕೊಳ್ಳು : ತಾತ ಭೀಷ್ಮ ತಾನೆ ಆಮೇಲೆ ಏನು ಮಾಡಬಲ್ಲ ? ಕೌರವರ ಮೇಲೆ ಕೋಪಿಸಿಕೊಳ್ಳಬಹುದು; ಕೋಪಿಸಿಕೊಂಡು ಅವರನ್ನು ಏಕೆ ಮೇಲೆ ಹಾಕಿಕೊಳ್ಳುತ್ತಾನೆ ? (ವಕಥಾ. ೩೨). [< ಮೇಲ್₂]

**ಮೇಲೆ₂** (ನಾ). ೧. ಬರೆಯಲು ಬಳಸುವ ಕಪ್ಪುಬಣ್ಣದ ದ್ರವಪದಾರ್ಥ; ಶಾಯಿ ; ಮಸಿ : ' ಮೇಲೆನೆಲ್ಲಿ ' ಪರಾ.

೨. ಒಂದು ಬಗೆಯ ಗಿಡ; ನೀಲಿ. ೩. [ಸಂಗೀತ] ಸ್ವರಶ್ರೇಣಿ; ಸ್ವರಗ್ರಾಮ. [ಸಂ. ಮೇಲಾ]

**ಮೇಲೆಣಿಕೆ** (ನಾ). ಉತ್ತಮವಾದ ಆಲೋಚನೆ : ಹಳೆಯ ಹಂದರ ಬಾನು ಅರಿಲರಲ ಕಿರುಸೊಡರ್ ಮೇಲೆಣಿಕೆ ನಡೆವಳಿಯ ನೊಡೊಳೇಂ ಪಸೆಯ (ಕಾಬೂರ. ೬೬-೦೦೪). [ಮೇಲು$_1$ (< ಮೇಲ್$_1$) + ಎಣಿಕೆ]

**ಮೇಲೆತ್ತು** (ಕ್ರಿ). ೧. ಕೆಳಗಿರುವ ವಸ್ತುವನ್ನು ಮೇಲುಭಾಗಕ್ಕೆ ಎತ್ತು, ಊರ್ಧ್ವಭಾಗಕ್ಕೆ ತರು : ಕೆಳಗೆ ಬಿದ್ದಿದ್ದ ಪುಸ್ತಕವನ್ನು ಮೇಲೆತ್ತಿ ಮೇಜಿನ ಮೇಲೆ ಇಟ್ಟನು (ರೂಢಿ). ೨. (ಸಸ್ಯ, ಪೈರು ಮೊದಲಾದುವನ್ನು ಬೆಳೆದು) ಎತ್ತರಕ್ಕೆ ಬರುವಂತೆ ಮಾಡು : ಕಸ ಕಳೆಗಳ ಕಿತ್ತು ಪಯಿರನು ಮೇಲೆತ್ತು ಬರುವ ಭಾಗ್ಯವ ಲೆಕ್ಕ ಹಾಕು (ಇಂಕಾಶ. ೦೯೭-೭೪). ೩. ಮೇಲಕ್ಕೆ ಒತ್ತಿಕೊಂಡು ಬರು : ಕೆಮ್ಮುಳ್ಳಂತೆ ಮೇಲೆತ್ತುವ ಶ್ವಾಸವೂ (ರಶೋಮ್ನ. ೪-೭೩). ೪. (ಮುಸುಕು ಮೊದಲಾದುವನ್ನು) ತೆಗೆ ; ಅನಾವರಣ ಮಾಡು : ದಿವದ ಬೆಳಕಿನ ಬೆರಳು ಬಂದು ಈ ಲೋಕದ ಮೇಲೆ ಕವಿದ ಕಪ್ಪು ಹೊದಿಕೆಯನ್ನು ಮೇಲೆತ್ತುತ್ತದೆ (ಸೌಂದರ. ೦). ೫. ದಂಡೆತ್ತಿ ಹೋಗು; ದಾಳಿಮಾಡು : ಎನಗಾಬಳ್ಳಿ ದರೆಂದು ವಂಗವಿಷಯಾಧೀಶಂ ಭರಂಗೆಯ್ದು ಭೋಂಕನೆ ಮೇಲೆತ್ತಿ ಕಟುತ್ತು ಮಾಣದೆನಸುಂ ವಜ್ರಾಯುಧಂ ಚಂದ್ರವಾಹನನೊಳ್ ಕಾದಲೊಡರ್ಚಿ ಬಂದು (ಸುಕುಮಾ. ೭-೩) ; ಮೇಲೆತ್ತಿ ಮಹಾಪದ್ಮನೃಪಾಲಕನೆಟ್ಟಿದನೆಂದೊಡಗಿದೋಡಿದವನಾಲೋಲಬಲಂ (ಧನ್ಯಕು. ೬-೪೬). ೬. ಉದ್ಧರಿಸು; ಕಾಪಾಡು ; ರಕ್ಷಿಸು : ಹೆಂಡತಿಯನ್ನು ಅಧರ್ಮದಿಂದ ಮೇಲೆತ್ತಬೇಕೆಂಬ ಗಂಡನ ಕರ್ತವ್ಯಪಾಲನೆಗಾಗಿ . . . ನನ್ನನ್ನು ಕೊಲ್ಲಲೇಬೇಕು (ಶಕಲು. ೨೩೬); ಕಲೆ ಶಾಸ್ತ್ರ ಮಾತ್ರವಾದರೆ ಸಪ್ಪೆಯಾಗಿಹೋಯಿತು; ಆದರ್ಶವಾಗಿದ್ದರೆ ಮಾತ್ರ ನಮ್ಮನ್ನು ಮೇಲೆತ್ತೀತು (ಸೌಂದರ. ೬೯).

**ಮೇಲೆತ್ತಿ ಬರ್** = ದಂಡೆತ್ತಿ ಬರು; ದಾಳಿಮಾಡು : ಕಚ್ಛರಾಜನ ರಾಜ್ಯಂ ಕಳಕುಳಮಾಗಿರ್ದುದನಾತನ ದಾಯಾದಂ ಸಿಂಹಬಳನೆಂಬನು ಮೇಲೆತ್ತಿ ಬರೆ (ಶಂತಕಂ. ೨೯-೦೭). **ಮೇಲೆತ್ತಿ ಬರಿಸು** = ದಂಡೆತ್ತಿ ಬರಲು ಪ್ರೇರಿಸು; ದಾಳಿಗೆ ಬರುವಂತೆ ಮಾಡು : ಪೋಗೆಲವೊ ದೂತ - ಕೃಷ್ಣನನೀಗಳೆ ಮೇಲೆತ್ತಿ ಬರಿಸು (ಜಗವ. ೮-೬೮). [ಮೇಲ್$_2$ + ಎತ್ತು$_1$]

**ಮೇಲೆನೆಲ್ಲಿ** (ನಾ). (ಶಾಯಿಯನ್ನು ತಯಾರಿಸಲು ಬಳಸುವ) ಒಂದು ಬಗೆಯ ನೆಲ್ಲಿ,- ಆಮಲಕ : ಮೇಲೆನೆಲ್ಲಿ, ಮದರಾಸ್‌ನೆಲ್ಲಿ (ವೃ.ಕಿ. ೬೦-೦೨೩೭). [ಮೇಲ್$_2$ + ನೆಲ್ಲಿ]

**ಮೇಲೆಬರು** 'ಮೇಲೆವರ್' ನೋ.

**ಮೇಲೆಬೀಳ್** 'ಮೇಲೆವೀಟು' ನೋ.

**ಮೇಲೆಬೀಳು** 'ಮೇಲೆವೀಟು' ನೋ.

**ಮೇಲೆಬೀಟು** 'ಮೇಲೆವೀಟು' ನೋ.

**ಮೇಲೆವರ್**, ಮೇಲೆಬರು (ಕ್ರಿ). ೧. (ಯುದ್ಧಕ್ಕೆ) ದಂಡೆತ್ತಿ ಬರು ; ಆಕ್ರಮಿಸು; ದಾಳಿಮಾಡು : ಪ್ರತಿವಾಸುದೇವಂ. . . ಸಂದರ್ಶನ ಪುರುಷ ಸಿಂಹರ ಪೆರ್ಚಂ ಸೈರಿಸದೆ ಕಪ್ಪಮಂ ಬೇಡೆಯಟ್ಟಿ ಪಡೆಯದೆ ಮುಳಿದು ಮೇಲೆವಂದು ಕಾದಿ ತನ್ನ ಚಕ್ರದೊಳಿಕ್ಕೊಡೆ (ಚಾವುಂಪು. ೦೭೬); ರಘುವಂಶಜಾತಂ ಸೇತುವಂ ಬಂಧನಂಗೆಯ್ದು ಮೇಲೆವರಲಿರ್ಪುದಂ ರಾವಣಂ ಕೇಳ್ದು (ಶಂತಕಂ. ೦೬೩-೦) ; ಅಂತು ಮೇಲೆವಂದು ಬೂತಟ್ಟಿದ ವಜ್ರಾಯುಧನ ಮೇಲೆ ಹಸ್ತ್ಯಶ್ವರಥಪದಾತಿಚಾತುರ್ವಳಸಹಿತಂ ಬಳನೆಂಬ ದಂಡಾಧಿನಾಥನನೀತನಟ್ಟಿದೊಡೆ (ಸುಕುಮಾ. ೭-೩ ವ). **ಮೇಲೆಬರು** : ೨. ಅಭಿವೃದ್ಧಿಯನ್ನು ಹೊಂದು; ಏಳಿಗೆಯನ್ನು ಪಡೆ : ತನ್ನ ಸ್ವಂತ ಪ್ರಯತ್ನದಿಂದ ಅವನು ಮೇಲೆಬಂದನು (ರೂಢಿ). [ಮೇಲ್$_1$ + ವರ್]

**ಮೇಲೆವರಿ** (ಕ್ರಿ). = ಮೇಲೆವರ್ ೧ : ಎಲೆ ಚಂದ್ರಹತಕ ಮದನನ ಬಲದಿಂದಂ ಮೇಲೆವರಿದು ಕೊಂದಿಂತೆನ್ನಂ ನಿಲಲೀಯೆಯ್ (ಕಾದಂಬ. ೬೦೦); ಹೊಲಮೇರೆಯ ಸೀಮಕ್ಕೆ ಕಟಕದಆಚಂದ್ರದಂಡನಾಯಕನ ಕುದುರೆ ಮೇಲೆವರಿದಡೆ ಹಜಿತೆಗೆಯದೆ ಎರಡ್ಮುದುರಿಅ ನೆಚ್ಚಿ ಕಟ್ಟಿನಲಗಿನಲು . . . ಕೊಂದು (ಶಾಇಸಂ. IX-i. ೨೬೪-೬; ೧). 'ಮೇಲ್ವರಿ' ಪರಾ. [ಮೇಲ್$_1$ + ಪರ್$_2$]

**ಮೇಲೆವಾಯ್** (ಕ್ರಿ). ೧. = ಮೇಲೆವರ್ ೧ : ಎಯ್ದೆವಂದು ಮುಷ್ಟಿಕಂ ತೆಗೆದಾಗಡೆ ಮೇಲೆಮಯ್ದು ಬಲ್ದಡಿಗನವೊಂಕಿ ಬಲ್ದಡಿಗನಂ ಓಡಿದೊರ್ವೆಯ ಮಲ್ಲಯುದ್ಧದೊಳ್ ಪೋರ್ದು (ಶಂಶಕಾ. ೬-೭೬); ಮೇಲೆವಾಯ್ದು ಮಹಿಷಾಸುರನಂ ತವೆ ಕೊಂದಳಾವಳಾ ಭಗವತಿ ಕೂರ್ತು ಬೀರಸಿರಿಯಾಗೆ ಭುಜಾಸಿಗೆ ನಾಗವರ್ಮನಾ (ಛಂದೋಂಬು. ೧-೪); ಅಂತಫಳಾಢ್ಯವ ಸಾಯನಾದುದರ್ಕೆವೈಸಿ ಮಸಕದಿಂದಸಿಧೇನುವಂ ಕಿಟ್ಟಿ ಮೇಲೆವಾಯ್ದು ಜೀಯಲಡಹಡಿಸಿ ಬರ್ಪಲ್ಲಿ (ಚಂದ್ರಪ್ರ. ೬-೩೯ ವ). ೨. ಮೇಲೆ ಕೆಡೆ, -ಬೀಳು : ಒಡಿದಮರ್ದಪ್ಪಲೆಂದು ನಿಮಿರುತ್ತಿರೆ ದೋರ್ಲತೆ ಮೇಲೆವಾಯಲೆಂದೊಡರಿಸೆ ದೇಹವಿನ್ನೆಗವದೇಕೆಯೊ ನಲ್ಲನೆ ರೂಪುದೋಳಿಕೆ (ಜಗವ. ೦೭-೦೨೦). 'ಮೇಲ್ವಾಯ್' ಪರಾ. [ಮೇಲ್$_2$ + ಪಾಯ್$_1$]

**ಮೇಲೆವೀಟು**, ಮೇಲೆಬೀಳ್, ಮೇಲೆಬೀಳು, ಮೇಲೆಬೀಟು (ಕ್ರಿ). ೧. ಮೇಲೆರಗು; ಆಕ್ರಮಿಸು ; ಕವಿ; ಮುತ್ತು. ೨. ಒತ್ತಾಯಮಾಡು; ಬಲಾತ್ಕರಿಸು : ಬಡವಸನಾದರದಿಂ ಬಂದಡೆ ಸಿರಿವಂತಂಗೆ ಮೇಲೆವಿ[ದಾಂ. ಬಿ]ದೊಲ್ಲದೊಡಂ ಕಾಡುಗುಂ ವಾತ್ಸಲ್ಯದಿನೆಂದೊಡೆ ಮತ್ಸ್ಯನಲ್ಲಿ ಪುರುಳಿಯಸುವುದೆ (ನಪುಶ. ೪-೩೩). **ಮೇಲೆಬೀಳ್** : ಮೇಲೆ ಬೀಳ್ವ ಕಠೋರಶಸ್ತ್ರವ್ರಜವ ನೂಕಿದನಡ್ಡವರಿಗೆಯುಲಿ (ಕುಮ್ಯಾಭ. ೨೦-೩). **ಮೇಲೆಬೀಳು** : ೧. ಮುಂಷಕಂ ಮೇಲೆಬಿದ್ದು ಕಾಡುವುವು ಮಾರ್ಜಾಲಮಂ (ಕೈಬರಾ. ೦೩-೦೯). ೩. ಜಗಳ ತೆಗೆ : ಆ ದುಷ್ಟ ಮಾತು ಮಾತಿಗೂ ಮೇಲೆ ಬೀಳುತ್ತಾನೆ (ರೂಢಿ). ೪. ತಾನಾಗಿ ಮುಂದುವರಿ : ಮೇಲೆಬಿದ್ದ ಸೂಳೆ ಮೂರು ಕಾಸಿಗೂ ಬೇಡ (ಗಾದೆ) ; ಮೇಲೆಬಿದ್ದ ಸೂಳೆಗೆ ಹಾಗದ ಕಾಸು ಕೊಡುತ್ತೇನೆ ಅಂದ ಹಾಗೆ (ಗಾದೆ). **ಮೇಲೆಬೀಟು** : ೪. ಬರ್ಪೆ ನಾನೆಂಬುದು ಚಪಲತೆ ತಾಂ ಬರ್ಪುದೆಂದುದು ಸೌಭಾಗ್ಯದ ಗರ್ವಂ ಮೇಲೆ ಬಿಟ್ಟಾನೆಳಸಿದಪೆನೆನಲ್ ಬಂಧಕೀಧಾರ್ಷ್ಟ್ಯಮಲ್ತೇ (ಕಾದಂಬ. ೪೦೬). 'ಮೇಲ್ವೀಟು' ಪರಾ.

**ಮೇಲೆಬಿದ್ದು ಸಾಯು** = (ಅಲಂ) ಹೆಚ್ಚು ಇಷ್ಟಪಡು,- ಬಯಸು; ಮುಗಿಬೀಳು : ಹುಡುಗರು . . . ಆ ಹೊಸ ಮಾಸ್ತರಂದರ ಮೇಲೆಬಿದ್ದು ಸಾಯುತಾರ (ಪಟ್ಟಿಹೊ. ೪೦). [ಮೇಲ್$_1$ + ಬೀಟು$_1$]

**ಮೇಲೇರು** (ಕ್ರಿ). ೧. ಮೇಲುಭಾಗಕ್ಕೆ ಹತ್ತು,- ಹೋಗು ; ಉಪರಿಭಾಗವನ್ನು ತಲುಪು : ರಭಸದಿಂದ ಅವನು ಮೇಲೇರಿ ಹೋದನು (ಇಶಶ. ೩೬೪). ೨. ಅಭಿವೃದ್ಧಿಯನ್ನು ಹೊಂದು; ಏಳಿಗೆಯನ್ನು ಪಡೆ : ಮನುಷ್ಯನು ಮೇಲೇರಿದಷ್ಟೂ ವಿನಯವಂತನಾಗಬೇಕು (ರೂಢಿ). [ಮೇಲು$_2$ (< ಮೇಲ್$_2$) + ಏರು$_1$ (< ಏಟು$_1$)]

**ಮೇಲೇಳು** 'ಮೇಲೇಟು' ನೋ.

**ಮೇಲೇಟು**, ಮೇಲೇಳು (ಕ್ರಿ). ೧. ಮೇಲಕ್ಕೆ ಏಳು : ಎದ್ದುನಿಲ್ಲು. ೨. ಮುತ್ತು ; ಕವಿ ; ಆಕ್ರಮಿಸು ; ದಾಳಿಮಾಡು : ಏರ್ದೆಯೊಳ್ ಕೋಪಾಗ್ನಿ ಕೈಗಣ್ಮೆ ಬಂದಿನಿತಂ ರಾಜಕುಲಂ ಸಮಸ್ತಭರದಿಂ ಮೇಲೆಟ್ಟಿಮ (ಶಂಶಕಾ. ೩-೬೯); ದೂತನನಟ್ಟಿದೊಡಾತಂಗೆ ಕುಡಲೊಲ್ಲದಿರ್ದೊಡೆ ಮುಳಿದು ಮೇಲೆರ್ದು ಚತುರಂಗಬಲಂಬೆರಸು ಕಾದುವುದುಂ (ಚಾವುಂಪು. ೦೪೬). **ಮೇಲೇಳು** : ೧. ಶಿಂಗಳಾರಕ ಮರಳಿ ಬಹನೆಂಬ ಭಾವೆಯುಂ ಭಾವಿಸುತೆ, ಭಾಮಿನಿ ಸಮಾಧಾನಬುದ್ಧಿಯಿಂ ಮೇಲೇಳುತಲ್ಲಿಂ ನಡೆದು ಶಿವಾಯತನಕ್ಕೆ (ಶತ್ಯಾಗ. ೩೭-೦೩೩). ೩. ಹೊರಹೊಮ್ಮು ; ಹರಡು ;

ವ್ಯಾಪಿಸು : ಶೋಕಘೋರರವಂ . . . ಮೃದುವಾದ್ಯ ಸುಸ್ವನಂ ವೈದಿಕ ಪುರೋಹಿತರ ಮಂತ್ರಘೋಷಂಬೆರಸಿ ಮೇಲೆದ್ದುದೊಯ್ಯನೊಯ್ಯನೆ ಜನರ ರೋದನದ ಕೂಡೆ (ಶಬ್ದಾಂಗ. ೬೬–೨೯೩೪). ೪. ಹುಟ್ಟಿಕೊಳ್ಳು : ಉದ್ಭವವಾಗು : ಈ ಕಾಲದಲ್ಲಿ ವೇದವಿಧಿಯನ್ನು ಸ್ಥಾಪಿಸಲು ಮೀಮಾಂಸಾಕಾರರೂ ಅವರ ದರ್ಶನವೂ ಮೇಲೆದ್ದುವು (ಭಾರತ. ೧೨೯). ೫. ಎಚ್ಚೆತ್ತುಕೊಳ್ಳು ; ಜಾಗೃತವಾಗು : ಎಲ್ಲ ಮರೆತು ಮೇಲೆದ್ದಿದೆ ಭಾರತ ಬಿಡುಗಡೆ ಕಾಯ್ದಿವೆ ವೀರಪಡೆ (ಕಲಮು. ೪೩-೨೦). [ಮೇಲ್$_2$ + ಏಳ್$_1$]

**ಮೇಲೊಡ್ಡ** (ನಾ). ಮಿಗಿಲಾದ ಪಣ ; ಅತಿಶಯವಾದ ಒಡ್ಡು : ಕಬ್ಬಿನ ಹಣಿದವನಾಡುವರಲ್ಲದೆ ಕಾಜುವ ಹಣಿದವನಾಡುವರೆ ಮೇಲೊಡ್ಡ ವಾಯಿತ್ತೆಂದು . . . ನೀನಿಕ್ಕಿದ ಜೂಜಿಂಗೆ ಹೋಯಿತು ಗೆದ್ದ ಸಿರಿಯಾಳ (ಬಸವ. ೬೭೯). [ಮೇಲ್$_1$ + ಒಡ್ಡ$_3$]

**ಮೇಲೋಗರ** (ನಾ). ೧. ಅನ್ನದ ಜೊತೆಗೆ ಬಡಿಸುವ ಸಾರು, ಹುಳಿ, ಕೂಟು ಮುಂತಾದ ವ್ಯಂಜನಪದಾರ್ಥ : ಗುರುವೆ ಬೋನ ಶಿಷ್ಯನೆ ಮೇಲೋಗರ ಲಿಂಗಕ್ಕೆ ಪದಾರ್ಥವರ್ಪಿತವಯ್ಯಾ (ಕನ್ನವ. ೩. ೩೯೨-೬೩೦); ಪಲವುಂ ತೆಱದ ಭಕ್ಷ್ಯಮಂ ಪಾಯಸಂಗಳುಮಂ ಓಗರಮಂ ಪರಿಪರಿಯ ಮೇಲೋಗರಮುಮಂ ಪಾನಪಳಿದ್ಯಮಂ ಮಾಡಿಯಿರುತ್ತಿರಲ್ (ಧರ್ಮಾಶ. ೨-೯೬ ವ); ಓಗರವ ತಾ ತ್ರೋಯೆಯುಸಿಕ್ಕು ಹಸನಾಯ್ತು ಮೇಲೋಗರವ ಬಡಿಸು . . . ಎನುತುವಾರೋಗಣೆಯನಾ ಹೊಟ್ಟೆಯೊಡೆವ ಮರ್ಯಾದೆ ಯೊಳಗುಂಡು ತೇಂಕುತ್ತಿರ್ದರು (ಸವ್ಯಶಾ. ೭-೨೬). ೨. ತರಕಾರಿ ; ಕಾಯಿಪಲ್ಲೆ : ಅಕ್ಕಿಗಳ ರಾಸಿ ಮೇಲೋಗರದ ಪರ್ವತಂ ಮಿಕ್ಕ ವಸ್ತು ಗಳೆಣಿಸಲಳವಲ್ಲದುನ್ನತಂ (ಹೊಮ್ಮರ. ೦೬೩-೩೦); ನಾರಿವಣದ ಕಾಯ ಪೇಱೊಂದಕ್ಕಂ ಹಾಗ ಕಾಯಿ ಮೇಲೋಗರದ ಬಂಡಿ ಒಂದಕ್ಕಂ ಹಾಗ (ಎಕ. V. ಬೇಲೂರು. ೬೫-೦೦೯; 1382); ಕೂಲಿಗೆ ನೀರೆನಟ್ಟುವ ಕೊಳನಿಕ್ಕುವ ಹಾಲು ಮೊಸರು ಪಲತೆಱದ ಮೇಲೋಗರವ ಮಾಱುವ ಹಸರಂಗಳ ಸಾಲೊಪ್ಪಿತು (ಶ್ರೀಶಾಂ. ೦೩-೦೦೮). [ಮೇಲ್$_2$ + ಓಗರ]

**ಮೇಲ್ಕಟ್ಟು** ' ಮೇಲ್ಗಟ್ಟು$_2$ ' ನೋ.

**ಮೇಲ್ಕಡೆ** ' ಮೇಲ್ಗಡೆ ' ನೋ.

**ಮೇಲ್ಕೊಳ್** (ಕ್ರಿ). ೧. ಮೇಲುಭಾಗದಲ್ಲಿ ಹೊದೆದುಕೊಳ್ಳು,– ಧರಿಸು : ಗಂಧಿಲವಿಷಯದ ನಡುವೆ ತನ್ನಹೀವಿಲಾಸಿನಿಯ ಮೇಲ್ಕೊಂಡ ದುಕೂಲಮುಮಂ . . . ಅನುಕರಿಸಿ (ಅಂಥ. ೧-೬೩ ವ); ಮುಡಿವ ನೆವ ದಿಂದೆ ತನ್ನಯ ಮುಡಿಯುಂ ಮೇಲ್ಕೊಳ್ವ ನೆವದೆ ಮೊಲೆಯುಂ ಪೆಱರೊಳ್ ನುಡಿವ ನೆವದಿಂದೆ ಪಲ್ಗಳ ಬೆಡಂಗನೊರ್ವಳ್ ವಿಲಾಸದಿಂದೆ ಮೆಱೆದಳ್ (ಸುಕುಮಾ. ೦೦-೮); ವಸುಧಾಂಗನೆ ಮೇಲ್ಕೊಂಡಳೊ ಪೊಸಪಸುರ್ವಟ್ಟೆಯ ವಿಳಾಸದಿಂದೆಸೆವ ದುಕೂಲಸಿಚಯಕಮನೆನೆ ತನ್ನದಿಯೆಸೆದುದದೊಂದುಭಯ ತಟವನಾಚ್ಛಾಯಿಬುಗಳಿಂ (ಜಗವಿ. ೬-೯). ೨. ಮೇಲಕ್ಕೆ ಎಳೆದುಕೊಳ್ಳು : ನಲಿವೊಲೆಯಿಂದಂ ಮೇಲುದು ತೊಲಗಲ್ ಹಾರಾಂಶುಪಂ ಸಿತಾಂಶುಕ ವೆಂದಂದಲಘುಕಚೆ ಮೇಲ್ಕೊಳುತ್ತಾಕುಲತೆಯಿನೆಯ್ದಂದು ನೋಡಿದಳ್ ನೃಪವರನಂ (ಕಾದಂಪೂ. ೪೭೯). [ಮೇಲ್$_2$ + ಕೊಳ್$_1$]

**ಮೇಲ್ಗಂಬ** (ನಾ). ಕಂಬದ ಮೇಲುಭಾಗ,–ತುದಿ ; ತುದಿಗಂಬ : ಕಾಯ್ಪುರಿಯೊಳು ಕರ್ಬುನದ ಮೇಲ್ಗಂಬದಿ ಸಾಧನೆಗೆಯ್ದು ಪುಲ್ಸರದಿ ಐದದ ದಾರಿ ತಾ ನಾಲುತೆಱದೆ ತಾನಾದುದು ಬಾಂದ ದೈತ್ಯರಿಗೆ (ಪೋತಶ. ೦೨-೩೯). [ಮೇಲ್$_1$ + ಕಂಬ$_1$ (< ಕಂಭ)]

**ಮೇಲ್ಗಟ್ಟು$_1$**, ಮೇಲುಗಟ್ಟು$_1$ (ಕ್ರಿ). ಎತ್ತಿಹಿಡಿ ; ಸಮರ್ಥಿಸು ; ಪುಷ್ಟೀಕರಿಸು ; ಬೆಂಬಲಿಸು : ಅವ್ವ ಅಕ್ಕನನ್ನೇ ಮೇಲ್ಗಟ್ಟಿಕೊಂಡಳು (ವೈಕಿ. ೦೪೦). **ಮೇಲುಗಟ್ಟು$_1$** : ನೀನಾದರೂ ನಿನ್ನ ಪ್ರಭುವನ್ನು ಮೇಲುಗಟ್ಟಿ ಯಾಕೆ ಮಾತಾಡಲಿಕ್ಕಿಲ್ಲ ? (ಕುಳಸಿ. ೩೦೪) ; ಮೊಮ್ಮಗನನ್ನು ಮೇಲುಗಟ್ಟಿಕೊಂಡು ರಾವಜೀ ಕಾಕಾ ತನ್ನ ಯಜಮಾನರ ಬಗ್ಗೆ ಆಡಿದ ಮಾತು ಸೋಮನಾತಾಯಿಗೆ ಅರ್ಥಾತ್ ರುಚಿಸಲಿಲ್ಲವೆಂದು ಬೇರೆ ಹೇಳ ಬೇಕಾಗಿಲ್ಲ (ದೀಪಹ. I, ೩೩). [ಮೇಲ್$_2$ + ಕಟ್ಟು$_1$]

**ಮೇಲ್ಗಟ್ಟು$_2$**, ಮೇಲುಕಟ್ಟು, ಮೇಲುಗಟ್ಟು$_2$, ಮೇಲ್ಕಟ್ಟು (ನಾ). ಸಿಂಹಾಸನ ಮಂಟಪ ಮೊದಲಾದುವುಗಳ ಮೇಲುಭಾಗದಲ್ಲಿ ಅಲಂ ಕಾರಕ್ಕಾಗಿ ಕಟ್ಟುವ ಬಟ್ಟೆ ; ವಿತಾನ : ಮೇಲ್ಗಟ್ಟಿನ ಪಸುರ್ವಟ್ಟೆಯ ಪೊಲ್ಗಿಳಿಗಳ್ಸುಟಿಯೆ ಗಗನದೊಳ್ (ಪಂಪಭಾ. ೨-೦೬); ಅಮರೆ ತಾವರೆಯ ನೂಲಿಂ ಕೀಲಿಸಿದೆಳವಾಳೆಯ ಸುಱಿಯೆಲೆಯ ತಳತಳಿಪ ಮೇಲ್ಗ [ಪಾಠಾಂ. ಲ್ಕ]ಟ್ಟಿನೊಳಂ (ಚಂದ್ರಪ್ರ. ೭-೬೫ ವ); ಕಾಮಾಸ್ತ್ರನಿಳಯದ ಬಹಳ ಪಚ್ಚೆಯ ಮಿಂಟ ಧಾಮದ ಮೇಲ್ಗಟ್ಟಿನಂತೆ ರಾಮಣೀಯತೆವೆತ್ತ ಚೆಂದಳಿರ್ ಮಿಡಿಯಿಂದೆ ಮಾಮರ ಮನಗೊಳಿಸಿದುವು (ಪೋತಶ. ೨೪-೬೪). **ಮೇಲುಕಟ್ಟು** : ಪಚ್ಚೆಯ ನೆಲಗಟ್ಟು ಕನಕದ ತೋರಣ ವಜ್ರದ ಕಂಬ ಪವಳದ ಚಪ್ಪರವಿಕ್ಕಿ ಮುತ್ತುಮಾಣಿಕದ ಮೇಲುಕಟ್ಟು ಕಟ್ಟಿ ಮದುವೆಯ ಮಾಡಿದರು (ಮಹಾದೇ. ೩. ೨೦-೩೦); ಮೇಲುಕಟ್ಟಿನ ಝಲ್ಲಿಗಳು ನೆಲಕಟ್ಟಿನ ನೀಲರತ್ನದೊಳು ಮಾರ್ಪೊಳೆಯೆ (ಭರತ. ೦೨-೦೬) ; ಮಹಾದ್ವಾರವು ತೋರಣದಿಂದ ಅಲಂಕೃತವಾಗಿತ್ತು; ಒಳಗೆ ಎಲ್ಲೆಡೆಯಲ್ಲಿಯೂ ಚಿತ್ರದ ಮೇಲುಕಟ್ಟುಗಳನ್ನು ಕಟ್ಟಿತ್ತು (ಪಕಥಾ. ೫೦). **ಮೇಲುಗಟ್ಟು$_2$** : ತಳಿತ ಪಲ್ಲವಸತ್ತಿಗೆಯ ಹೊಂಗಳಸಗಳ ಹೊದಱಿದ್ದ ಝಲ್ಲರಿಗಳ ವಿಚಿತ್ರಾಂಬರದ ಮುತ್ತಿನ ಮೇಲುಗ[ಪಾಠಾಂ. ಕ]ಟ್ಟುಗಳ . . . ಲಹರಿಯಲಿ ರಂಜಿಸಿದುದ ನವರತ (ಕೊರವಾ. ೦-೭-೦೯); ದಿವಿಜಲೋಕದಲಾರು ಮೆಲ್ಲನೆ ತದಕದಲಿ ನೆರೆದಿರಲೊಡನೆ ಗಗನವು ವಿಚಿತ್ರಿತ ಮೇಲುಗಟ್ಟೆನಿಸಿತು ವಸುಂಧರೆಗೆ (ಸಾಳ್ವಭಾ. ೩೩-೦೬). **ಮೇಲ್ಕಟ್ಟು** : " ಉಲ್ಲೋಚಂ ಚಂದ್ರೋದಯಂ ವಿತಾನಾ[ಪ್ತ್ಯಯ]ಮೆ(ನಲದು) ಮೇಲ್ಕಟ್ಟುಂ " (ವಸ್ತುಕೋ. ೪೯-೨೨); ನಾಂದ ನಾರಂಗಪಟ್ಟೆಯ ಮೇಲ್ಕಟ್ಟನಂಬರದೊಳ್ಕಟ್ಟಿದಳೆಂಬಂತೆ ಸಂಜೆ ಸಂಜಾತ ಸ್ವರಾಗಪಟಲಮಂ ಪಸರಿಸೆ (ಕಾದಂಬ. ೩೭೩); ರಾತ್ರೀಪಥು ತಾಂ ಕಟ್ಟಿದ ಬಹುರತ್ನದ ಮೇಲ್ಕಟ್ಟೆನಿಸಿದುದುಂಬರಂ ಸುತಾರಾಗಣದಿಂ (ಗಿಅ. ೪-೬೨); ಪವಳವಣೆಯ ಮೇಲ್ಕಟ್ಟಿನ ಸೊಬಗಿಂದ ಭುವನೇಶ್ವರಿಯೊಪ್ಪಿ ದುದು (ಕಂಪವಿ. ೭-೩೩). [ಮೇಲ್$_2$ + ಕಟ್ಟು$_2$]

**ಮೇಲ್ಗಡೆ**, ಮೇಲುಗಡೆ, ಮೇಲ್ಕಡೆ (ನಾ). ಮೇಲಿನ ಭಾಗ ; ಉಪರಿಭಾಗ : "ಸಿಗಾಳೇ_ ೧. ಗಳೊದ್ದೇಶೇ–ಕುದುರೆಗಳ ಕೊರಗೆ ಹೆಸರು ಕುದುರೆಯ ಕೊರಳು ಮೇಲ್ಗಡೆಗೆ ಹೆಸರು" (ಸಿದ್ಧಾಂತಿ. ೨೫೦). **ಮೇಲುಗಡೆ** : (೯). **ಮೇಲ್ಕಡೆ** : "ವಿತಾನಂ, ಉಲ್ಲೋಚಃ . . . ೨ ಮೇಲ್ಕಟ್ಟು – ವಸ್ತ್ರಾದಿನೀವಸ್ತ್ರ – ಮನೇ ಮೇಲ್ಕಡೆಗೆ ಕಟ್ಟುವ ಚಿತ್ರದ ಬಟ್ಟೆ" (ಸಿದ್ಧಾಂತಿ. ೨೦೩). ' ಕೆಳಗಡೆ ' ಪರಾ. [ಮೇಲ್$_1$ + ಕಡೆ$_3$]

**ಮೇಲ್ಗತೆ** (ನಾ). ಮುಂದಿನ ಕಥೆ, – ವೃತ್ತಾಂತ : ನಿನ್ನ ಮೆಲ್ನುಡಿಗಳ್ಗೆ ಕಿವಿಗುಡದವರಾರು ಮನ್ನಾಥ ಪೇಳು ಮೇಲ್ಗತೆಯ (ಪೋತಶ. ೬-೦); ಕೇಳು ಮೇಲ್ಗತೆಯ ದಂಬೋಳಿಗ್ಮೆಯನ ಪುರಿಗೋಳಿಯಿಂ (ಮುದ್ದಣ. IV. ೦೦೫೪ ತೋರರಾಜ ಸಾಂಗತ್ಯ). [ಮೇಲ್$_1$ + ಕತೆ]

**ಮೇಲ್ಗಥೆ** (ನಾ). = ಮೇಲ್ಗತೆ : ಸತ್ಕಳಾಧರನ ಒಲವಾಂತು ಮೇಲ್ಗಥೆ ವೇಳು ಲಾಲಿಸುವೆ ಲೀಲೆ ಮಿಗಲು (ಪದಮೋ. ೨-೨). [ಮೇಲ್$_1$ + ಕಥೆ]

**ಮೇಲ್ಗಾಣ್**, ಮೇಲುಗಾಣು (ಕ್ರಿ). ಉಚಿತತೆಯನ್ನು ತಿಳಿದುಕೊಳ್ಳು; ಯೋಗ್ಯವಾದುದನ್ನು ಅರಿತುಕೊಳ್ಳು. **ಮೇಲುಗಾಣು** : ಭೂಪಾಲ ನಿನ್ನವರೆನ್ನ ಮಾತನು ಕೇಳಿ ಮನ್ನಿಸದೆ ಮೇಲುಗಾಣದೆ ನೀರು ಕುಡಿದು ವಿತಾಳಿಸಿದರು (ಕುಮಾರ. ೨೩-೩೭).

ಮೇಲ್ಗಂಡುಗೆಯ್ = (ದೇವಸ್ಥಾನದ) ಮೇಲ್ವಿಚಾರಕನಾಗಿರು,–

ಸೂತ್ರಧಾರಿಯಾಗಿರು : ಸ್ವಸ್ತಿಶ್ರೀ ಸಕಲೇಸಿಪಾದಿಗಳ ಪಾದಧೂಳಿ ಲೋಕೇಶ್ವರದ ಮೇಲ್ಗಣ್ಣುಗೆಯ್ದೊನ್ ಆದಿತ್ಯ ಶ್ರೀಹಡದೇವಪುತ್ರಂ (ಶಾಶಾ. X, ೦೬೭–೩ ; ೨೨೮೮ ೬೩). [ಮೇಲ್$_1$ + ಕಾಣ್]

**ಮೇಲ್ಗಾಪು.** ಮೇಲುಗಾಪು (ನಾ). (ವ್ಯಕ್ತಿಗೆ ಅಪಾಯವಾಗದ ಹಾಗೆ ಅಥವಾ ಆ ವ್ಯಕ್ತಿಯು ತಪ್ಪಿಸಿಕೊಂಡು ಹೋಗದ ಹಾಗೆ ಮಾಡುವ) ಮೇಲಿನ ಕಾವಲು, – ಪಹರೆ : ತನ್ನಯ ಮೇಲ್ಗಾ[ಪಾಠಾಂ. ಮೆಯ್ಗಾ]ಪಿನ ಭಟರುನ್ನತವಿಕ್ರಾಂತನಿಳಿಯುರೆಯ್ದಿಂದಾಗಳ್ (ಕೃಷ್ಣಾ.ಸ್ಮ. ೩–೨೧) ; ತೆರಕಣಾಂಬಿಯ ಜೇಹಾರಿ, ರಣಧೀರನ ಮೇಲ್ಗಾಪಿಗೆ ಬಂದಿರುವ ವೀರ (ಪಟ್ಟಿ. ೭–೬). **ಮೇಲುಗಾಪು :** ಮೇಲುಗಾಪಿಗೆ ಜಟಿ ತ್ರಿಜಟೆಯರು . . . ಕಾಳರಕ್ಕಸಿಯರ ಸಮೂಹದ ಸೂಳು ಪ್ರಹರಿಗಳುಲುಹುಗಳ ಕರವಾಳು ಕೈದುಗಳಾಂತು ಕಾದಿಹರಯುತರನು ದಿನವು (ಉತ್ತ.ಕ. ೧೦–೨೨). [ಮೇಲ್$_1$ + ಕಾಪು]

**ಮೇಲ್ಗಾವಲು,** ಮೇಲುಗಾವಲು (ನಾ). ಮೇಲ್ವಿಚಾರಣೆ; ಉಸ್ತುವಾರಿ (೧). **ಮೇಲುಗಾವಲು :** ಭಕ್ಷಿ ಜಲಾಲುದ್ದೀನರೇ ಮೇಲುಗಾವಲನ್ನು ನೋಡಿಕೊಳ್ಳಬೇಕೆಂದು ಹುಕ್ಕುಂ ಆಯಿತು (ಬಾಂಕ್. ೯೯). [ಮೇಲ್$_1$ + ಕಾವಲು (< ಕಾವಲ್$_1$)]

**ಮೇಲ್ಗಾಳಿ** (ನಾ). ಆಕಾಶದ ಎತ್ತರದಲ್ಲಿ ಬೀಸುವ ಗಾಳಿ : ಸಲ್ಗೆಯೊಳಲ್ಲಿಯ ಕೋಡುಂಗಲ್ಗಳಿ ಪೇಚರತೆಪಡದು ಪಾಜುವ ತೆಬಿದಿಂ ಮೇ[ಪಾಠಾಂ. ಮೆ]ಲ್ಗಾಳಿಯುಲಿಯೆ ಬಿಳಿಯ ಮುಗಿಲ್ಗಳ್ ಪಾಜುವುವು ಖಚರಗಿರಿ ವನತಟದೊಳ್ (ಆರ್ದಿಪ. ೨–೭೩). [ಮೇಲ್$_2$ + ಗಾಳಿ$_1$]

**ಮೇಲ್ಗುಡಿ** (ನಾ). ಮೇಲಕ್ಕೆ ಎತ್ತಿ ಹಿಡಿದಿರುವ ಬಾವುಟ, –ಧ್ವಜ : ನವೀನಚೀನದಿಂ ಬಿತ್ತರವೆತ್ತ ಮೇಲ್ಗುಡಿ ನಿವಿರ್ಚಿದ ಬಜ್ಜರಗೇಹಂ . . . ವಿರಾಜಿತಮಾಯ್ತು ವಿವಾಹಗೇಹದೊಳ್ (ರಾಜಶೇ. ೬–೨). 'ಮೇಲ್ಗುಡಿಗಟ್ಟು' ಪರಾ. [ಮೇಲ್$_2$ + ಗುಡಿ$_2$]

**ಮೇಲ್ಗುಡಿಗಟ್ಟು** (ಕ್ರಿ). (ಸೊಂಡಿಲನ್ನು) ಧ್ವಜದಂತೆ ಮೇಲೆತ್ತಿ ಹಿಡಿ : ನಂಬಿಯಣ್ಣನಲ್ಲಿಗೆ ಸೊಕ್ಕಿದಾನೆ ಮಿಕ್ಕು ವಿಾಜಿ ಬಂದು ಮುಂದೆ ನಿಂದು . . . ಬಂಡಿಯಿಂ ಬಲವಂದು ಕಾಲ್ಗೆಜಗಿ ಮೇಲ್ಗುಡಿಗಟ್ಟಿ ಹಜಿಮೆಟ್ಟಿ ಸಜಿನೆ ತಿರುಗಲ್ (ಸಂಪರ. ೨–೨೯). [ಮೇಲ್ಗುಡಿ + ಕಟ್ಟು$_1$]

**ಮೇಲ್ಗೆಯ್,** ಮೇಲುಗೆಯ್, ಮೇಲುಗೈ, ಮೇಲ್ಗೈ (ನಾ). ೧. ಮೇಲಕ್ಕೆ ಎತ್ತಿದ ಕೈ; ಮೇಲೆತ್ತಿ ಹಿಡಿದ ಹಸ್ತ : ಕೋಲ್ಗಜಿಯಲಾನೆಗಳ ಸುಂಡಿಲ್ಗಳಿಂ . . . ಮೇಲ್ಗೆಯ್ಯ [ಪಾಠಾಂ. ಲ್ಗೈಯ] ರಥಿಕರ ಧನುರ್ದಂಡಮುಂ . . . ಸಾತ್ಗೊಂಡುದ್ದಲ್ದುವು (ಕೈಬಿಹ. ೨೦–೦೯). **ಮೇಲುಗೆಯ್ :** ೧. ಕಾಳೆಗಕ್ಕನುವಾಗಿ ರಥ ತುರಗಾಳಿ ಕರಿ ಕಾಲಾಳು ದೊರೆಗಳ ಮೇಲುಗೆಯ್[ಪಾಠಾಂ. ಗೈ] ಚವುರಿಗಳನೀಕ್ಷಿಸುತ್ತಿದ್ದುದುಭಯಬಲ (ಶಲ್ಯಾಪ. ೨–೧). **ಮೇಲುಗೈ :** ೨. (ಅಲಂ) ಮಿಗಿಲು; ಹೆಚ್ಚುಗಾರಿಕೆ; ಹಿರಿಮೆ : ಬುದ್ಧಿಯ ಸೆಣಸಾಟ ಮೇಲುಗೈ ಆಗ ವಾಸ್ತವಿಕ ನಿಲುವಿನಿಂದ ದೂರಸರಿಯುವರು (ದ್ಯಾವಿಪ. ೭೮); ಇವರಲ್ಲಿ ಆಕರ್ಷಣವೇ ಕ್ರಮೇಣ ಹೆಚ್ಚುಹೆಚ್ಚಾಗಿ ಮೇಲುಗೈ ಪಡೆಯುತ್ತಿದೆ (ಕೂಹುಟ್ಟು. ೩೦) ; ಅಭ್ಯಾಸದಲ್ಲಿ ಯಾವಾಗಲೂ ಅವನದೇ ಮೇಲುಗೈ (ರಂಗರೂ. ೯೯). ೩. ಮಿಗಿಲಾದ ವ್ಯಕ್ತಿ : ಮೇಲುಗೈ ನೀನಾದೆ ಕುಸಿದರು ಪಾಂಡುನಂದನರು (ಶಲ್ಯಾಗ. ೦೩–೩೦). **ಮೇಲ್ಗೈ :** ೨. ಮುಂದೆ ನನ್ನನ್ನು ವಿಾರಿಸಿ ನನಗೆ ಮೇಲ್ಗೈಯಾದಾಳು (ಪತಪ. ೦೯). [ಮೇಲ್$_2$ + ಕೆಯ್$_2$]

**ಮೇಲ್ಗೈ** 'ಮೇಲ್ಗೆಯ್' ನೋ.

**ಮೇಲ್ಗೊಳಗ** (ನಾ). ಗೇಣಿದಾರನು ಮಾಲೀಕನಿಗೆ ತನ್ನ ಗೇಣಿಯನ್ನು ಕೊಡುವಾಗ ಅದರ ಜೊತೆಗೆ ಗೌರವಕ್ಕೆಂದು ಉಚಿತವಾಗಿ ಕೊಳಗದಲ್ಲಿ ಅಳೆದು ಕೊಡುವ ಹೆಚ್ಚಿನ ಧಾನ್ಯ : ಗೇಣಿದಾರರು ಗೇಣಿಯನ್ನು ಕೊಡುವುದರ ಜೊತೆಗೆ ತರಕಾರಿ, ತರಪಡಿ, ತಳರಾಶಿ, ಮೇಲ್ಗೊಳಗ, ಲಾಭಸೆರೆ ಮುಂತಾದ ಮರ್ಯಾದೆಗಳನ್ನು ಭೂಮಾಲೀಕರಿಗೆ ಕೊಡಬೇಕಾಗಿತ್ತು (ಕಂಜಪಂ. ೧೦). 'ಮೇಲ್ಗೂಳಕ' ಪರಾ. [ಮೇಲ್$_1$ + ಕೊಳಗ$_1$]

**ಮೇಲ್ಚಾವಣಿ** 'ಮೇಲ್ಛಾವಣಿ' ನೋ.

**ಮೇಲ್ಚೀಟು,** ಮೇಲುಚೀಟಿ (ನಾ). ಅಡವು, ಹಕ್ಕು ಮೊದಲಾದುವುಗಳಿಗೆ ಸಂಬಂಧಿಸಿದಂತೆ ಕೋರ್ಟಿನಲ್ಲಿ ವ್ಯವಹಾರನಡೆಸಲು ಒಬ್ಬನು ಮತ್ತೊಬ್ಬನಿಗೆ ಅಧಿಕಾರವನ್ನು ವಹಿಸಿ ಕೊಡುವ ಪತ್ರ, –ಅಧಿಕಾರ ಪತ್ರ : ನರಸಿಂಹಭಟ್ಟರು ತಮ್ಮ ಹೆಸರಲ್ಲಿರುವ ಸೆಟ್ಟರ ಆಸ್ತಿಯ ಅಡವಿನ ಮೇಲ್ಚೀಟನ್ನು ಕೃಷ್ಣಭಟ್ಟರಿಗಿಟ್ಟರು (ಪುಣ್ಯಸಂ. ೬೨). **ಮೇಲುಚೀಟಿ :** ನಾಗರಾಜ ಕೊಡುವ ಹಣಕ್ಕೆ ಠೋಕರ ಕೊಟ್ಟಾಯಿತು . . . ಈಗ ಅದನ್ನು ಪೇಟೆಯ ಸಾಹುಕಾರರಿಗೆ ಮೇಲುಚೀಟಿಗೆ ಕೊಟ್ಟಿದ್ದಾನೆಂದೂ ಕೇಳಿದೆ (ಕುಂಗಿಯು. ೨೩೯). [ಮೇಲ್$_1$ + ಚೀಟು]

**ಮೇಲ್ಛಾವಣಿ,** ಮೇಲ್ಚಾವಣಿ (ನಾ). ಮನೆಯ ಮೇಲುಭಾಗದ ಸೂರು; ಮಾಡು : ಇದರ ಎತ್ತರ ಸಾಮಾನ್ಯವಾಗಿ ನೆಲದಿಂದ ಮೇಲ್ಛಾವಣಿಯವರೆಗೂ ಇರುತ್ತದೆ (ಪ್ರಕೋ. I. ೨೨೨); ಆಳವಾಗಿ ನೆಟ್ಟ ಸ್ತಂಭವು ಮನೆಯ ಮೇಲ್ಛಾವಣಿಯನ್ನು ಭದ್ರವಾಗಿ ಹಿಡಿದಿರುವಂತೆ ಸೀಸವು (ದೇಪಮಾನವಾದಿಗಳಿಗೆಲ್ಲ) ಅವಲಂಬನವನ್ನು ಕೊಟ್ಟು ನಿಲ್ಲಿಸಿದ್ದೀಯೆ (ಪುಣ್ಯಾಕ. ೦). **ಮೇಲ್ಚಾವಣಿ :** ಮೇಲ್ಚಾವಣಿಯ ಮೇಲೆ ಪಾರಿವಾಳ ಗೂಡು ಕಟ್ಟದೆ (ಕೂಪ). [ಮೇಲ್$_1$ + ಛಾವಣಿ]

**ಮೇಲ್ತನಿಖೆ** (ನಾ). ಪುನಃ ಪರೀಕ್ಷಿಸುವುದು ; ಮತ್ತೊಮ್ಮೆ ಮಾಡುವ ವಿಚಾರಣೆ : ಮೇಲ್ಕಂಡ ತೀರ್ಪನ್ನು ರದ್ದುಗೊಳಿಸಬೇಕೆಂದೂ ಮೇಲ್ತನಿಖೆಗಾಗಿ ಈ ಮೊಕದ್ದಮೆಯನ್ನು ಅದೇ ಕೋರ್ಟಿನ ಮತ್ತೊಂದು ಶಾಖೆಗೆ ವರ್ಗಾಯಿಸಬೇಕೆಂದೂ ಮನವಿ ಮಾಡಿಕೊಳ್ಳುತ್ತೇನೆ (ಪುನರು. ೨೦೩). [ಮೇಲ್$_2$ + ತನಿಖೆ (< ತನಕಿ)]

**ಮೇಲ್ತರ** ಮೇಲುತರ (ನಾ). ೧. ಉತ್ತಮ ಮಟ್ಟ ; ಶ್ರೇಷ್ಠ ದರ್ಜೆ. ೨. ಜೀವವಿಕಾಸದ ಮೇಲಿನ ಮಟ್ಟ, –ಹೆಚ್ಚಿನ ಸ್ತರ : ಎಲ್ಲಕ್ಕಿಂತಲೂ ಉತ್ತಮವಾದುವು ಐದು ಇಂದ್ರಿಯಗಳನ್ನು ಪಡೆದಿರುವ ಪಂಚೇಂದ್ರಿಯ ಜೀವಗಳು. ಇವಕ್ಕೆ ಮೇಲಿನ ನಾಲ್ಕು ಇಂದ್ರಿಯಗಳಲ್ಲದೆ ಶ್ರವಣೇಂದ್ರಿಯವೂ ಇದೆ. ಮೇಲ್ತರದ ಪ್ರಾಣಿಗಳೆಲ್ಲ ಈ ವರ್ಗಕ್ಕೆ ಸೇರಿವೆ (ಕನ್ನಕ್ರಾ. ೦೯೬). **ಮೇಲುತರ :** ೧. ಮೇಲುತರದ ಪಟ್ಟೆ ವರಸೂಪು ಸಕಲಾತಿ ಜೂಲುಗಳಿಂದ ರಂಜಿಸುವ ಕಾಲುವೇಗದ ಕುನಿವಿಡಿದ ಕಿರಾತರು ಸಾಲಿಟ್ಟು ನಡೆದರೊಗ್ಗಿನಲಿ (ಮೋಹತ. ೧೯–೭೦). [ಮೇಲ್$_1$ + ತರ$_3$]

**ಮೇಲ್ತರಗತಿ** (ನಾ). = ಮೇಲ್ತರ.೧ : ೧೧ನೆಯ ಶತಮಾನದ ಶಾಸನ ಸಾಹಿತ್ಯವು ಹಿಂದಿನ ಶತಮಾನಗಳಿಗಿಂತ ಮೇಲ್ತರಗತಿಯದಾಗಿದೆ (ಶಾಹಿಕ. ೯); ಮೇಲ್ತರಗತಿಯ ರಾಗಾಲಾಪವನ್ನು ತಾಳವಿಶಿಷ್ಟವಾಗಿ ಮಾಡಲು . . . ಹೊಸಮಾದರಿಯ ಸಾಹಿತ್ಯವನ್ನು ಕನ್ನಡಿಗರು ಪ್ರಚಾರದಲ್ಲಿ ತಂದರು (ಜನಗಾ. ೬೩). [ಮೇಲ್$_1$ + ತರಗತಿ]

**ಮೇಲ್ತಾಟಿ** 'ಮೇಲ್ದಾಟಿ' ನೋ.

**ಮೇಲ್ತೂಕ** (ನಾ). ವ್ಯಾಪಾರದಲ್ಲಿ ತೂಕಕ್ಕಿಂತ ಮತ್ತಷ್ಟು ಕೊಡುವ ಹೆಚ್ಚಿನ ಪದಾರ್ಥ ; ಕೊಸರು : "(ವ್ಯಾಪಾರ) ಕೆಲವು ಸರಕುಗಳ ಮಾರಾಟದಲ್ಲಿ ಕೊಂಡುಕೊಂಡ ಪ್ರತಿ ೧೦೪ ಪೌಂಡು ತೂಕಕ್ಕೆ ಕೊಸರಾಗಿ ಕೊಡುತ್ತಿದ್ದ ೪ ಪೌಂಡು ತೂಕ ; ಮೇಲ್ತೂಕ, ಕೊಸರು" (Tret. ೩೦೬೩). [ಮೇಲ್$_1$ + ತೂಕ]

**ಮೇಲ್ತೆರಿಗೆ,** ಮೇಲುತೆರಿಗೆ (ನಾ). ಒಂದು ಗೊತ್ತಾದ ಮೊತ್ತವನ್ನು ವಿಾರಿದ ಆದಾಯದ ಮೇಲೆ, ಸಾಧಾರಣ ಆದಾಯತೆರಿಗೆಯ ಜೊತೆಗೆ ಹಾಕುವ ಹೆಚ್ಚಿನ ತೆರಿಗೆ : "ಮೇಲ್ತೆರಿಗೆ, ಸೂಪರ್‌ಟ್ಯಾಕ್ಸ್"

(Super-tax. ಶಬ್ದಾ. ೬೯). **ಮೇಲುತೆರಿಗೆ :** "(ಒಂದು ಗೊತ್ತಾದ ಮೊತ್ತಕ್ಕೆ ಮೇಲ್ಪಟ್ಟ ಆದಾಯದ ಮೇಲೆ, ಸಾಧಾರಣ ಆದಾಯ ತೆರಿಗೆಯ ಜೊತೆಗೆ ಹಾಕುವ) ಮೇಲುತೆರಿಗೆ" (Super-tax. ಇಂಕಶ).
[ಮೇಲ್$_1$ + ತೆರಿಗೆ (< ತೆಱಗೆ)]

**ಮೇಲ್ತೋರಿಕೆ** (ನಾ). ಹೊರನೋಟ : ಸ್ಥೂಲದೃಷ್ಟಿ : ಮಾನವ ಸಮಾಜದಲ್ಲಿ ಕಂಡುಬರುವ ಅಜ್ಞಾನ, ಅಸಮಗ್ರಜ್ಞಾನ, ಮೇಲ್ತೋರಿಕೆಗೆ ದುಷ್ಟ ಎಂದೆನಿಸತಕ್ಕ ಪ್ರವೃತ್ತಿಗಳು . . . ಪರಮಾತ್ಮನ ಲೀಲೆಯ ಅಭಿವ್ಯಂಜನೆಗಳೆಂದು ಭಾವಿಸಲ್ಪಟ್ಟಾಗ ಅವುಗಳ ಬಣ್ಣವೇ ಬದಲಾಯಿಸುತ್ತದೆ (ಕನ್ನಪ್ರಾ. ೦೫೬). [ಮೇಲ್$_1$ + ತೋರಿಕೆ (< ತೋಱಿಕೆ)]

**ಮೇಲ್ದಂಡೆ** (ನಾ). ಮೇಲುಭಾಗದ ತೀರ : ಕೃಷ್ಣಾನದಿಯ ಮೇಲ್ದಂಡೆಯ ಕಾಲುವೆಯಲ್ಲಿ ಈಗ ಹೆಚ್ಚಾಗಿ ನೀರು ಹರಿಯುತ್ತಿದೆ (ಕಂಶ).
[ಮೇಲ್$_1$ + ದಂಡೆ$_2$]

**ಮೇಲ್ದರ್ಜೆ** (ನಾ). ಉತ್ತಮಮಟ್ಟ : ಶ್ರೇಷ್ಠ ದರ್ಜೆ : "ಧನಿಕರು ಮತ್ತು ವಿದ್ಯಾವಂತರು ; ಮೇಲ್ದರ್ಜೆಯವರು" (The classes. ಶಬ್ದಾ. ೦೬). [ಮೇಲ್$_1$ + ದರ್ಜೆ]

**ಮೇಲ್ದಾಯ**, ಮೇಲುದಾಯ (ನಾ). ೧. ಪಗಡೆಯಾಟದಲ್ಲಿ ಬೀಳುವ ಉತ್ತಮವಾದ ಗರ, – ಸಂಖ್ಯೆ : ಶಕುನಿಯೊಡನಂಧಕಾವನಿಪಕುಮಾರ [ನುಮಾ]ಡೆ ನೆತ್ತಮಂ ಧರ್ಮಜನಾ ಶಕುನಿಗೆ ಮೇಲ್ದಾಯಮನಱೆ ಕುಡುತ್ತಿರೆ (ಮಹಾನೇ. ೦೦-೯ ವ). ೨. ಚದುರಂಗದಾಟದ ಒಂದು ಉತ್ತಮವಾದ ನಡೆ : ಒಡಿಯಾನೆಗಳ ನಾಳೊತ್ತು ರಥಕೆ ಕೈನುಡುಕು ಮಂತ್ರಿಯ ಮೇಲಕೇಱು ಕಡುಗುದುರೆಯ ಸೊಕ್ಕ ಮುಱಿಯೆಂದು ಚದುರಂಗದಡಿಯ ಮೇಲ್ದಾಯ ಪೇಳ್ವವಳು (ಕಂಸವಿ. ೬-೦೨೦). **ಮೇಲುದಾಯ :** ೩. ಒಳ್ಳೆಯ ಯುಕ್ತಿ ; ಉತ್ತಮವಾದ ಹಂಚಿಕೆ : ಹೇಳರೇ ಭೀಷ್ಮಾದಿ ಹಿರಿಯರು ಮೇಲುದಾಯವ ಬಲ್ಲವರು ಹೆಚ್ಚಾಳು ತನವಲಿ ಹಿಗ್ಗಿ ಕಡಿರೆ ಜಯದ ಜಾಱುಗಳ (ಕುವ್ಯಾಕ. ೦-೦). ೪. ಅತಿಶಯವಾದ ಶಕ್ತಿ, –ಸಾಮರ್ಥ್ಯ : ಲಲಿತ ಹೇಷಾಧ್ವನಿಯ ಹಯ ಮಂಡಲದ ಮಹೋಳಿಯ ಮೇಲುದಾಯದ ಉಲಿಯ ಚಿತ್ರಕ್ಕೆ ತಿರವದ . . . ರಥದೊಳಗೆ ನಿಂದಾ ಶಸ್ತ್ರಸಾರಥಿ ನುಡಿಸಿದನು ನರನ (ಕುವ್ಯಾಕ. ೬-೦೯).
[ಮೇಲ್$_1$ + ದಾಯ$_1$]

**ಮೇಲ್ದುಟಿ**, ಮೇಲುದುಟಿ, ಮೇಲ್ತುಟಿ (ನಾ). ಮೇಲಿನ ತುಟಿ, –ಓಷ್ಠ : ಮೇಲ್ದುಟಿಯೊಳ್ ಸುಳಿಯುತ್ತಕ್ಕಾಲ್ದಿರಲಾ ತುರಗಂ ತಾಂ ಕೊಳ್ದುವುದಾಳ್ವನ ತಾಯಂ ಬಲ್ದಿಟವಿಂತಿದು (ಹಾಲಾಕ್ಕ. ೯-೦೦-೯೧). **ಮೇಲುದುಟಿ :** (?). **ಮೇಲ್ತುಟಿ :** Labrum ಮೇಲ್ತುಟಿ (ಕೀಟಶ. ೦೧).
[ಮೇಲ್$_1$ + ತುಟಿ]

**ಮೇಲ್ದುಡುಗೆ** (ನಾ). ದೇಹದ ಮೇಲುಭಾಗಕ್ಕೆ ತೊಡುವ ವಸ್ತ್ರ, ಆಭರಣ ಮುಂತಾದುವು : ತಕಾರದ ತೃತೀಯತ್ವಕ್ಕೆ – ಕಣ್ಗೆ ಬವು ; ಮೇಲ್ದುಡು [ಕಾಣಂ. ಡಿ]ಗೆ (ಶಮದ. ೬೩ ಶ್ರಯೋ).
[ಮೇಲ್$_2$ + ತುಡುಗೆ (< ತೊಡುಗೆ)]

**ಮೇಲ್ದೆಸೆ** (ನಾ). ಮೇಲಿನ ದಿಶೆ ; ಊರ್ಧ್ವದಿಕ್ಕು : ಥಳಥಳಿಸಿ ಬೆಳುಪೊವಗಿ ಬೆಣ್ಣಿಯ ಬಳ್ಳಿಗಳ ಛಂದದಿ ಬೆಳೆದು ಮೇಲ್ದೆಸೆಗೆ ಪಸರಿಸಿ ಸಲೆ ಬೆಳಗುತಿರಲು (ಬಸವು. ೩೯-೩). [ಮೇಲ್$_1$ + ದೆಸೆ$_2$]

**ಮೇಲ್ದೊಟಿ** (ನಾ). ಹೊರಭಾಗದ ತೊಗಟೆ, –ಸಿಪ್ಪೆ : ಜಾಗ್ರತೆಯಿಂದ ಮೇಲ್ದೊಟಿಗೆ ಚೂರಿಯಿಂದ ಕಚ್ಚು ಹಾಕುವರು (ಮುಂಬಯು. ೯-೩೯). [ಮೇಲ್$_1$ + ತೋಟೆ$_1$ (< ತೊಗಟು)]

**ಮೇಲ್ನಾಡು**, ಮೇಲುನಾಡು (ನಾ). ೧. ಎತ್ತರವಾದ ಪ್ರದೇಶದ ನಾಡು ; ಪ್ರಸ್ಥಭೂಮಿ : "ಮಲೆನಾಡು ; ಮೇಲ್ನಾಡು ; ಪ್ರಸ್ಥಭೂಮಿ" (Highlands. ಇಂಕಶ). ೨. ಮೇಲಿನ ನಾಡು ; ದೇವಲೋಕ ; ಸ್ವರ್ಗ : ನಡುನಾಡು ಮೇಲ್ನಾಡು ಕೀಳುನಾಡೆಂಬ ಮುಪ್ಪೊಡವಿಯೊಡೆಯನ ಹೆಮ್ಮಗನೆ ತಡೆಯುಂಟೆ (ಶರಶ. ೪೪-೬೬). **ಮೇಲುನಾಡು :** ೨. ನೋಡುತ ಸುಮ್ಮನಿಪ್ಪುದು ಲೇಸೆ ಬಾ ಮೇಲುನಾಡಿನರಸ ಸ್ವಾಮಿಗುಸುರು (ಶರಶ. ೬೦-೩೬).
[ಮೇಲ್$_1$ + ನಾಡು]

**ಮೇಲ್ನೀರು** (ನಾ). ೧. ಪ್ರವಾಹದ ಮೇಲುಭಾಗದ ನೀರು : "ನೆಲ, ಮೊಗಳ ಮೇಲ್ಮೈಯಲ್ಲಿ ಸೇರಿ ಹರಿದು ಹೋಗುವ ನೀರು : ಮೇಲ್ನೀರು" (Surface-water. ಇಂಕಶ) ; ನದಿಯ ಮೇಲ್ನೀರಿನಲ್ಲಿದ್ದ ದೋಣಿ ಪ್ರವಾಹದ ವೇಗದಿಂದ ಬಹುಬೇಗನೆ ದಡ ಸೇರಿತು (ಭುಶರು. ೩೩೬). ೨. ಸ್ನಾನಾನಂತರ ಅಥವಾ ಪಾತ್ರೆ, ಪರಡಿ, ಬಟ್ಟೆ ಇತ್ಯಾದಿಗಳನ್ನು ಸ್ವಚ್ಛಗೊಳಿಸಿದ ನಂತರ (ಮಡಿಯ ಕಾರಣಕ್ಕಾಗಿ) ಹಾಕಲಾಗುವ ನೀರು. [ಮೇಲ್$_1$ + ನೀರು$_1$ (< ನೀರ್)]

**ಮೇಲ್ನೆಲ**, ಮೇಲುನೆಲ (ನಾ). ೧. ಊರ್ಧ್ವಲೋಕ ; ಸ್ವರ್ಗಲೋಕ : ಮೇಲ್ನೆಲವನೀ ನೆಲಕೆ ಹೊಸೆದ ತೆರನಾಯ್ತು (ಕಾಂಅರಿ. ೩೦-೨೬). **ಮೇಲುನೆಲ :** ೨. ಎತ್ತರವಾದ ಸ್ಥಳ, –ಪ್ರದೇಶ : ದಿನಕರನುದಯದಲಿ ಮುಂಗಾಳಿಗದ ಗಾಢಾಭಿಲಾಷರು ಬಂದು ಕಣನೊಳಗೆ ಮೇಲುನೆಲನಱದಬಲಿಕರುಭೂಪಾಲವರೊಡ್ಡಿದರು (ಕುವ್ಯಾಶ. ೬-೦).
[ಮೇಲ್$_1$ + ನೆಲ]

**ಮೇಲ್ನೆಲೆ** (ನಾ). ೧. ಮೇಲಿನ ಮಹಡಿ, –ಅಂತಸ್ತು : ಪೊನ್ನ ಕರುಮಾಡದ ಮೇಲ್ನೆಲೆಯುಲ್ಲಿ ಗಾಡಿಯುಂಬೆನೆ ನೆರೆದೋಲಗಂ ನಲವು ಕೈಮಿಗೆ ತನ್ನನೆ ನೋಡುತ್ತಿರ್ದನಂ (ಕಬ್ಬಿಕಾ. ೮೨) ; ಮೇಲ್ನೆಲೆಯ ಕನಕ ಪರ್ಯಂಕಪೀಠದೊಳ್ಗಡಿಯಿಂ ಕುಳ್ಳಿರ್ದು (ರಾಜಶೇ. ೮-೦೨೩ ವ). ೨. ಮೇಲಿನ ತುದಿ, –ಅಗ್ರಭಾಗ : ಗಿರಿಯನಡರಿ ಮೇಲ್ನೆಲೆಯನೆಯ್ದುವ ಭೂವರನುದಯಾದ್ರಿಯಗ್ರದೊಳು . . . ತರಣಿಯಂದದವೊಲೊಪ್ಪಿದನು (ಶ್ರೀಚಾಂ. ೯-೬೭). ೩. ಉತ್ತಮವಾದ ಮಟ್ಟ ; ಶ್ರೇಷ್ಠವಾದ ಸ್ಥಿತಿ : ಹಾರೂನ್ ಮತ್ತು ಮಾಮೂನ್ ಅವರ ಆಳಿಕೆಯಲ್ಲಿ ಮುಸ್ಲಿಂ ಸಂಗೀತಕಲೆ ತನ್ನ ಮೇಲ್ನೆಲೆಯನ್ನು ಮುಟ್ಟಿತು (ಇಪ್ರಾಂಸಂ. ೦೪೦).
[ಮೇಲ್$_1$ + ನೆಲೆ$_1$]

**ಮೇಲ್ನೋಟ**, ಮೇಲುನೋಟ (ನಾ). ೧. ಹೊರನೋಟ ; ಸ್ಥೂಲದೃಷ್ಟಿ : ಮೇಲ್ನೋಟಕ್ಕೆ ಪರಸ್ಪರ ವಿರುದ್ಧಗಳಾಗಿ ಕಾಣುವ ಈ ಎರಡು ದರ್ಶನಗಳನ್ನು ಸಮನ್ವಯಗೊಳಿಸಿ ಎರಡರ ಆತ್ಯಂತಿಕಗುರಿ ಒಂದೇ ಎಂಬುದನ್ನು . . . ಮನಗಾಣಬಹುದು (ಚಾರಿಡ. ೦೫೬). ೨. (ಆಲಂ) ಮೇಲ್ವಿಚಾರಣೆ ; ಮೇಲ್ವನಿಶೆ ; ಉಸ್ತುವಾರಿ : ನನ್ನ ಮೇಲ್ನೋಟದಲ್ಲಿಯೇ ನಡೆಯುವ ಸಮ್ಮೇಳನದ ಚಾವಡಿಯಲ್ಲಿ ಕರಣಿಕನಾಗಿ ಸೇರಿಕೊಂಡಿರಬೇಕು (ಕುಂಗಳ. ೮). **ಮೇಲುನೋಟ :** ೧. ಮೇಲುನೋಟಕ್ಕೆ ನಿನ್ನ ಈ ತೀರ್ಮಾನ . . . ನಿರ್ದೋಷವಾಗಿ ಕಾಣುತ್ತೆ (ಹಿರಯೋ. ೯೭) ; ವಾಸ್ತವಿಕತೆಯ ಗುರಿ ಗ್ರಾಹ್ಯವೆಂದೇ ಮೇಲುನೋಟಕ್ಕೆ ತೋರುತ್ತದೆ (ಕವನಾಲೋ. ೦೦೨) ; ಇದು ನಾಟಕದ ಮೇಲುನೋಟದ ಮುಖ್ಯಾಯದ ಸ್ವರೂಪ (ಐದ್ವಶ್ರ. XXXIV, ಹೀಂಕ). ೨. ಆಲಿಕಲುಗಳ ಕಡಿವಡುಕ್ಕಿನ ಚೀಲಣದ ಹಂಗೇಕೆ ನಿಮ್ಮಡಿ ಮೇಲುನೋಟವ ನೋಡೆ ರಥಪರಿಯಂತ ಕಾಳೆಗವೆ (ಕುವ್ಯಾದ್ರೋ. ೦೦-೪೦). ೩. ಶುಭ ; ಮಂಗಳ : ಕಾಲ ಕೈಗೂಡಿದರೆ ಬ್ರಾಹ್ಮರು ಲೋಲರೇ ದೊರಕುವರು ಪುಣ್ಯದಲೇಳಿಗೆಯ ಹರಿ ಮೇಲುನೋಟವ ನೋಡಿಸುವನೆಂದ (ಕಂಭಕ. ೨೬-೦೯). [ಮೇಲ್$_1$ + ನೋಟ]

**ಮೇಲ್ಪಂಕ್ತಿ**, ಮೇಲುಪಂಕ್ತಿ (ನಾ). ೧. (ಅನುಕರಿಸಲು ಯೋಗ್ಯವಾದ) ಉತ್ತಮವಾದ ಮಾದರಿ ; ಉಚಿತವಾದ ಆದರ್ಶ ; ಆ ರಚನೆಗಳೇ

ಅವರಿಗೆ ಮೇಲ್ಪಂಕ್ತಿ (ಧಾರದ. ೫೬೭) ; ಪಂಪನು ಒಂದು ಆಗಮಿಕಕಾವ್ಯವನ್ನೂ ಇನ್ನೊಂದು ಲೌಕಿಕಕಾವ್ಯವನ್ನೂ ಬರೆದು ಕವಿಕುಲಕ್ಕೇ ಮೇಲ್ಪಂಕ್ತಿಯಾದನು (ಸಾಹಿತ. ೨೨). **ಮೇಲುಪಂಕ್ತಿ :** ೧. ನಿನ್ನ ಕೈಕಾಲ್ ಬೆರಳುಗಳ ಮಾಟವ ನೋಡಿ ಹೊಳೆಯುವುದು —ಕೈವಾಡದವರ ಕೈಚಳಕದ ಕುಸುರಿನ ಮೇಲುಪಂಕ್ತಿ (ಕಾಡ್ಮಾರಿ. ೯೭-೦೫) ; ಇವು ಬಹುಮಟ್ಟಿಗೆ ಪಾಶ್ಚಾತ್ಯವಿಮರ್ಶೆ ಪ್ರಬಂಧಗಳ ಸತ್ವವನ್ನು ಹೀರಿ ಆ ಮೇಲುಪಂಕ್ತಿಯಲ್ಲಿ ಬಂದವು (ಬಂಕಿಮ. ೯. ಮುನ್ನುಡಿ). ೨. ಮೊದಲ ಸಾಲು ; ಮುಂದಿನ ಸಾಲು ; ಅಗ್ರಪಂಕ್ತಿ : ನೀವು ಬಂದೀ ಮೇಲುಪಂಕ್ತಿ[ಯಾ]ಯು ಠಾವಿನಲಿ ಕುಳ್ಳಿರೆ ಎನುತ . . . ವಿಗೆ ನಯವೋವಿ ಮಾತಾಡಿಸುತ (ಚಿತ್ರ. ೫೯-೯). [ಮೇಲ್$_1$ + ಪಂಕ್ತಿ]

**ಮೇಲ್ಪಂಗ್ತಿ** 'ಮೇಲ್ಪಂತಿ' ನೋ.

**ಮೇಲ್ಪಂತಿ,** ಮೇಲ್ಪಂಗ್ತಿ (ನಾ). = ಮೇಲ್ಪಂಕ್ತಿ ೧ : ಮದನು ತ್ರಿಜಗದ ಚೆಲ್ವಿಂಗಿದೆ ತಾಂ ಮೇಲ್ಪಂತಿಯೆಂದಳಕಫಲಕದೊಳುನ್ಮದದಿಂ ಬರೆದಂಜನವರ್ಣದ ಸಾಲೆನೆ ಕುಂತಳಾಳಿಯೊಪ್ಪಿದುವವಳಾ (ಉತ್ತ. ೬-೦೦೨); ಇನ್ನಪ್ಪ ಸತಿಯರಿಗೆ ಮೇಲ್ಪಂತಿಯೆನೆ ಸಂಪನ್ನೆ ಪೆಸರು ಪಡೆದಿಹಳು (ಶ್ರೀಚಾಂ. ೨-೯). **ಮೇಲ್ಪಂಗ್ತಿ** ಹಿಂದಿನವರ ಆದರ್ಶಗಳು ಬರುವ ಪೀಳಿಗೆಗೆ ಮೇಲ್ಪಂಗ್ತಿಯಾಗುತ್ತವೆ (ಹಿತ್ತಲ. ೪೨೦). [ಮೇಲ್$_1$ + ಪಂತಿ]

**ಮೇಲ್ಪಹರಿ,** ಮೇಲ್ಪಾರಿ (ನಾ). (ಕೋಟೆಯ) ಮೇಲ್ವಿಚಾರಣೆಯ ಕಾವಲು : ಒಡನೊಡನೆ ಸುಳಿವ ಮೇಲ್ಪಹರಿಯಾಳ್ಗಳ್ ಚೀಖಾತಿಹ ಕಹಳೆಗಳ್ . . . ಎಸೆದುದಾಗಳಾ ತ್ರಿಪುರದಾಳ್ವೇರಿಯೆಡೆಯೆಡೆಯೊಳತಿ ನಿಬಿಡವಾಗಿ (ತಿಪ್ಪೆ. ೯೨-೦೦). **ಮೇಲ್ಪಾರಿ :** ಚೆಂಗಣಗಿಲ ದಿವ್ಯಪರಿಮಳ ಕೆಣಗುವ ಭೃಂಗವಿಂಡುಗಳ ಝೇಂಕಾರ ಅಂಗಜವನದುರ್ಗಕಟ್ಟ ಮೇಲ್ಪಾ[ಲ್ಪಾ]ರಿಯ ಪೊಂಗಿದಾಳ್ದನಿಗಳಂತಿಹುವು (ಕಂಪಾ. ೫-೦೦೨). [ಮೇಲ್$_1$ + ಪಹರಿ]

**ಮೇಲ್ಪಾಟ** (ನಾ). ಒಂದು ಊರಿನ ಹೆಸರು: ಚೋಳ ಚೇರ ಪಾಣ್ಡ್ಯಾದೌ ನಿರ್ಜಿತೇ ವಿಜಯಸ್ಕನ್ಧಾವರೇ ಮೇಲ್ಪಾಟ್ಯಾಂ ಸ್ಥಿರಾಸೀಷ್ಣುತೇ (ಪ್ಯಾಆ. ೦೯೬೫, ೪೦-೪೬ ; 951). [ಮೇಲ್$_1$ + < ಪಾಡಿ$_2$ ]

**ಮೇಲ್ಪಾಟು** 'ಮೇಲ್ಪಾಡು' ನೋ.

**ಮೇಲ್ಪಾಡು,** ಮೇಲ್ಪಾಟು (ನಾ). ಉತ್ತಮರೀತಿಯ ಸ್ಥಿತಿ ; ಪ್ರಗತಿ ; ಸುಧಾರಣೆ : ಹೊಸ ಬಂದರುಗಳನ್ನು ಕಟ್ಟಿ ಹಳೆಯ ಬಂದರುಗಳನ್ನು ಮೇಲ್ಪಾಡು ಮಾಡಿದರು (ಶಿಲ್ಪಿನಾ. ೬೬) ; ಪರಿಹಾರದ್ರವ್ಯವನ್ನು ಕೊಡುವ ಘನವಾದ ಮೇಲ್ಪಾಡನ್ನುಂಟುಮಾಡಿದರು (ಭಾಗ್ಯಶಿ. ೨೩). **ಮೇಲ್ಪಾಟು:** ಸರ್ವತೋಮುಖವಾದ ಭಾರತೀಯಸಾಮಾಜಿಕಜೀವನದ ಮೇಲ್ಪಾಟುಗಳು ನಡೆದು . . . ಮಹಾತ್ಮಾಗಾಂಧಿಯವರು ಹೇಳಿರುವ ಭವಿಷ್ಯವಾಣಿಯು ದಿಟವಾಗಲೆಂಬುದೇ ದೇಶಭಕ್ತರೆಲ್ಲರ ಹಾರೈಕೆ (ಧಾರದ. ೫೯೩) ; ಆರ್ಥಿಕ ಸ್ಥಿತಿಯಲ್ಲಿ ಮೇಲ್ಪಾಟು ತಂದು . . . ನಾಡನ್ನು ಕಟ್ಟಬಯಸಿ ದುಡಿಯುವವರಿಗೆ ಮೊದಲು ಗ್ರಹಿಸಿಕೊಂಡಿರಬೇಕಾದ ಅಗತ್ಯದ ಆಧಾರಗಳೆಲ್ಲ (Data) ಇಲ್ಲಿ ಸಿಕ್ಕುತ್ತವೆ (ಕೃಷಿ. ೦೯೫). [ಮೇಲ್$_1$ + ಪಾಡು$_3$ ]

**ಮೇಲ್ಪಾಯ** (ನಾ). (ಮೇಲಿನ ಕಟ್ಟಡದ ಭದ್ರತೆಗಾಗಿ ಹಾಕುವ) ಅಡಿಪಾಯದ ಮೇಲಿನ ಮತ್ತು ಕಟ್ಟಬೇಕಾಗಿರುವ ಗೋಡೆಯ ಕೆಳಗಿನ ಭಾಗ ; ಅಡಿಪಾಯ ಮತ್ತು ಮೇಲಿನ ಗೋಡೆಯ ನಡುವಿನ ಭಾಗ: ನೆಲಮಟ್ಟದ ಕೆಳಗಿರುವ ಗೋಡೆಯ ಭಾಗವನ್ನು ಮೇಲ್ಪಾಯ (ಬೇಸ್ ಮೆಂಟ್) ಎನ್ನುತ್ತಾರೆ (ಕಟ್ಟೋ. I, ೨೦೮). 'ತಳಪಾಯ' ಹೋ.
[ಮೇಲ್$_1$ + ಪಾಯ$_2$ ]

**ಮೇಲ್ಪಾರಿ** 'ಮೇಲ್ಪಹರಿ' ನೋ.

**ಮೇಲ್ಪಾಳ್** (ನಾ). ಒಂದು ಊರಿನ ಹೆಸರು : ಪೃಥಿವೀಕೊಙ್ಗಣಿಮುತ್ತರಸರನುಮುತದೊಳು ಪಲ್ಲವೇಳಾರಸರ್ಪೋಯ್ಯಾರ್ ಕೊಕಂದಿಯುಂ ಮಯಿಲಾರಗಯುಂ ಮೇಲ್ಪಾಳುಂ ಪಾದಿಗಾಲು ಕೊಲಿಗನ್ಕೆಚಿಕ್ಕಾಲು ಒನ್ತುತೋಟ್ಟಮುಂ (ಪ್ಯಾಆ. ೦೯೨೫, ೦೦೬-೦೯ ; ೫೪೦ಯ ೫೫).
[ಮೇಲ್$_1$ + ಪಾಳ್ ( < ಪಾಟು )]

**ಮೇಲ್ಪೊರೆ** (ನಾ). ಮೇಲ್ಭಾಗದ ಆವರಣ : ಭೂಮಿಯ ಮೇಲ್ಪೊರೆಯಲ್ಲಿ ಅತಿ ಹೇರಳವಾಗಿ ದೊರೆಯುವ ಮೂಲಧಾತು ಅಲ್ಯೂಮಿನಿಯಂ (ಶಿಲ್ಪಿನಾ. ೦೬೯). [ಮೇಲ್$_1$ + ಪೊರೆ]

**ಮೇಲ್ಪೊಟ್ಟು** (ನಾ). ಉತ್ಕೃಷ್ಟವಾದ ಮುಹೂರ್ತ: ಶುಭಸಮಯ : ಓಹೋ ಹರಿ ಗೆಲ್ದನೀ ಗಜಮನೆಂದಿಂದ್ರಾದಿಗಳ್ ಕೀರ್ತಿಸುತ್ತಿರೆ ಮೇಲ್ಪೊಟ್ಟಿನೊಳಂದು ತೋಟಿ ಮೆಚ್ಚಿದಂ ಕೃಷ್ಣಂ ಬಲಾಟೋಪಮಂ (ಜಗನ್ನಾ. ೬-೫೪). [ಮೇಲ್$_1$ + ಪೊಟ್ಟು]

**ಮೇಲ್ಪೋಗು,** ಮೇಲುಪೋಗು (ನಾ). ೧. ಏಳಿಗೆಯ ಅಳಿವು — ನಾಶ : ತಾಗಿ ಮುಚ್ಚಿದನೆ ಭೀಮನೀ ಮೇಲ್ಪೋಗಿನಾಪದವೇನು ರಾಯನ ತಾಗುಧಪ್ಪೇನಾಯ್ತು ಸಂಜಯ ತಿಳಿಯಹೇಳೆಂದ (ಕುಮಾ.ಗ. ೯-೨೦). **ಮೇಲುಪೋಗು :** ೧. ಕೆಂಗಣ್ಣಗೋಲ ಮಂಚದ ಮಹಿಮಾನಿರವನು ಮೇಲುಪೋಗಿನ ಕಥೆಯನವಧಾನದಲಿ ಕೇಳೆಂದ (ಕುಮಾ.ದ್ರೋ. ೦-೦). ೨. ಊರ್ಧ್ವಲೋಕಕ್ಕೆ ಹೋಗುವುದು ; ಸಾವು ; ಮರಣ : ಕಾಲವಶದಲಿ ಕೌಶಿಕನಾ ಕಾಲದೂತರು ತಂದರಾತನ ಮೇಲುಪೋಗಿನ ಸುಕೃತ ದುಷ್ಕೃತವನು ವಿಚಾರಿಸಲು (ಕುಮಾ.ಶ. ೦೭-೦೬). [ಮೇಲ್$_1$ + ಪೋಗು$_2$]

**ಮೇಲ್ಪೋಟಿ** (ನಾ). ಮೇಲಾಟ ; ಸ್ಪರ್ಧೆ ; ಪೈಪೋಟಿ : ಅವರ ಮೇಲ್ಪೋಟಿಯಲ್ಲಿ ಆತ್ಮಪ್ರಶಂಸೆಯೂ ಪರದೂಷಣೆಯೂ ಮಿತಿಯಿಲ್ಲದ ಹರಿದುಬರುತ್ತವೆ (ಸಾಹಿತ. ೦೫). [ಮೇಲ್$_1$ + ಪೋಟಿ$_1$ ]

**ಮೇಲ್ಪಂದಿ** (ನಾ). ಸೀರೆ (?) : ಅಂದವಾದಾ ಹಸುರು ಮೇಲ್ಪಂದಿಯ ನುಟ್ಟಳು ದೂತಿ ಕೆಂದಾವರೆ ಮಗ್ಗಿಯ ಕುಪ್ಪಸವ ತೊಟ್ಟಳು (ಶ್ರೀಕೃಷಾ. ೦೬).
[ ? ]

**ಮೇಲ್ಬಟ್ಟೆ,** ಮೇಲುಬಟ್ಟೆ (ನಾ). ೧. ಮೈಮೇಲೆ ಹೊದೆಯುವ ವಸ್ತ್ರ —ಬಟ್ಟೆ; ಉತ್ತರೀಯ: ತನ್ನ ಮೇಲ್ಬಟ್ಟೆಯನ್ನು ನೀರಿನಲ್ಲಿ ನೆನಸಿಯೂ ತಾವರೆಎಲೆಗಳಿಂದ ದೊನ್ನೆಗಳನ್ನು ಮಾಡಿಯೂ ತಣ್ಣೀರು ತಗೆದುಕೊಂಡು ಬಂದು ಕುಂತೀದೇವಿಗೂ ಸಹೋದರರಿಗೂ ಕೊಟ್ಟನು (ವ್ಯಾಸಕ. ೬೬). **ಮೇಲುಬಟ್ಟೆ :** ೨. ಉತ್ತಮವಾದ ಬಟ್ಟೆ ; ಶ್ರೇಷ್ಠವಾದ ವಸ್ತ್ರ : "ಸುಚೇಲಕಃ, ಪಟಃ — ೨ ಒಳ್ಳೆಸೀರೆ . . . ಮೇಲುಧೋತ್ರ, ಮೇಲುಬಟ್ಟೆ, ಉತ್ತಮ ವಸ್ತ್ರ" (ಸಿದ್ಧಾಂತಿ. ೨೦೯). [ಮೇಲ್$_1$ + ಬಟ್ಟೆ$_2$ ]

**ಮೇಲ್ಭಾಗ,** ಮೇಲುಭಾಗ (ನಾ). ಎತ್ತರದ ಭಾಗ ; ಉಪರಿಭಾಗ : ಹುಬ್ಬುಗಳ ಮೇಲ್ಭಾಗದಲ್ಲಿ ಹಣೆ ಇರುತ್ತದೆ (ಮುಂಬಯಿ. ೯-೯೩). **ಮೇಲುಭಾಗ :** ಗಗನವೀತನ ನಾಭಿ ದಶದಿಕ್ಕುಗಳು ಕಿವಿ ಫಣಿಲೋಕ ವಿಮಲಾಂಘ್ರಿಗಳು ಧ್ರುವನಿಂ ಮೇಲುಭಾಗ ಪುರಾಂತಕನ ಮುಕುಟ (ಕುಮಾ.ಶ. ೯-೨೩).
[ಮೇಲ್$_2$ + ಭಾಗ]

**ಮೇಲ್ಮಕ್ಕಿ,** ಮೇಲುಮಕ್ಕಿ (ನಾ). ಎತ್ತರದಲ್ಲಿರುವ ನೀರಾವರಿ ಪ್ರದೇಶ, —ಜಮೀನು : ತಮ್ಮ ಉಂಬಳಿಯ ಮೇಲ್ಮಕ್ಕಿಯ ಗದ್ದೆಯನು ತತ್ಕಾಲೋಚಿತ ಕ್ರಯವಾಗಿ . . . ಕೊಟ್ಟರು (ಎಕ. VI. ಕಡೂರು-೦೨-೩೩ ; 1233). **ಮೇಲುಮಕ್ಕಿ :** ಮೇಲುಮಕ್ಕಿಯ ಗಡಿಯ ತೋಟಗಟ್ಟು ಕಮ್ಮ ೪೦೦ (ಸೌಇಇ. IX—i, ೯೫-೫೦; 1041) ; ಶ್ರೀರಾಮೇಶ್ವರದೇವರ್ಗೆ . . . ಬ್ರಹ್ಮಗಟ್ಟದ ಕೆಱೆಯ ಕೆಳಗಣ ಕೆಯನುಂ ಮೇಲುಮಕ್ಕಿಯುಂ ಸಲಗೆ (ಎಕ. VI, ಕಡೂರು, ೨-೦೮ ; ಸು. 1110). [ಮೇಲ್$_1$ + ಮಕ್ಕಿ$_1$ ]

**ಮೇಲ್ಮಚ್ಚು,** ಮೇಲುಮಚ್ಚು (ನಾ). ಮೇಲಿನ ಉಪ್ಪರಿಗೆ,— ಮಾಳಿಗೆ: ಮಾಳಿಗೆಮನೆಯ ಮೇಲ್ಮಚ್ಚುಚಪ್ಪರದಲಿ . . . ಮುದ್ದುಪೆಣ್ಣುಗಳ್ನರಸ

ಭೂಪಾಲನ ನೋಡುತೊಪ್ಪಿದರು (ಕಂಪಿ. ೨೩-೦೯) ; ನಾನು ದಾನವರಿಗೆ . . . ಕೋಟೆಕೊತ್ತಲ ಮೇಲ್ಮುಚ್ಚು ಗೋಪುರಗಳುಳ್ಳಂತಹ ಪಟ್ಟಣಗಳನ್ನೂ . . . ನಿರ್ಮಿಸಿದಂತಹವನು (ಕೃಪಾಕ. ೨) . ಮೇಲುಮುಚ್ಚು : ಪುರ ವೀಧಿಯೊಳ್ ಪುರಿಚಿತ್ರದಿಂ ಮೆರೆವ ಧ್ವಜಕಲಶಗಳ್ ಮೇಲುಮುಚ್ಚುಗಳನು ನೋಡುತ . . . ಬರುತಿರ್ದ ರಾಯನು (ಶೌಗಂಧಿ. ೩೦-೩); ನಾರಿಯ ರೆಲ್ಲರು ಮೇಲುಮುಚ್ಚುಗಳ ಸೇರಿದರಾಕ್ಷಣದಲ್ಲಿ (ಶೌಗಂಕ. ೬-೨).

[ಮೇಲ್$_1$ + ಮುಚ್ಚು$_4$]

**ಮೇಲ್ಮಟ್ಟ**. ಮೇಲುಮಟ್ಟ (ನಾ). ೧. ಮೇಲಿನ ಸ್ತರ : ಸಮುದ್ರದ ಮೇಲ್ಮಟ್ಟವು ಬಾಗಿರುವುದನ್ನು ತೋರಿಸುವ ಚಿತ್ರ (ಭೂವಿ. ೩). ೨. ಎತ್ತರದ ಮಟ್ಟ : ಹೆಚ್ಚಿನ ಮಟ್ಟ : ಮತ್ತಂ ಮೇಲ್ಮಟ್ಟ [ಶಾಕಾಂ. ಮೇಲುಮಟ್ಟ]ದಾ ಸರಮಂ ಕೇಳ್ದು ಆ ಪಡೆ ಪಯಣಮಸಂದುಂ ಮಾಣ್ಬುದುಂ (ಶಂಕಕಂ. ೧೨೭-೫). ೩. ಉತ್ತಮವಾದ ಸ್ಥಿತಿ : ಊರ್ಜಿತಾವಸ್ಥೆ : ನಮ್ಮ ದೇಶವನ್ನು ಮೇಲ್ಮಟ್ಟಕ್ಕೆ ತರುವುದು ಬೇಡವೆ? (ಕ್ರತಾಕ. ೯೯) ; ಅವರು ಅನುಭಾವಿಗಳಾಗುವ ಮೊದಲು ಅವರಿಗೆ ಕೆಲವು ಗುಣಗಳಿರಬೇಕು. ಅವರು ಹಲವು ಹಂತಗಳನ್ನು ಹತ್ತಿ ಈ ಮೇಲ್ಮಟ್ಟವನ್ನು ಮುಟ್ಟಬೇಕು (ಜಗದಾ. ೩). ೪. ಶ್ರೇಷ್ಠ ದರ್ಜೆ ; ಉತ್ತಮ ದರ್ಜೆ : ಅವನ 'ಸುಂದರವಿಲಾಸ' . . . ಸಾಹಿತ್ಯದೃಷ್ಟಿಯಿಂದಲೂ ಮೇಲ್ಮಟ್ಟದ ಕಾವ್ಯ (ಶಾರದ. ೪೩೯). ಮೇಲುಮಟ್ಟ : ೫. ಮೇಲಿನ ಹಂತ ; ತುಟ್ಟ ತುದಿ : "೧. ಒಳಮಾಳಿಗೆ. ೨. ಮೇಲುಮಟ್ಟ, ಪರಮಾವಧಿ" (ceiling. ಕಕ್ರಿ.ಕ. ೧೩).

[ಮೇಲ್$_1$ + ಮಟ್ಟ$_1$]

**ಮೇಲ್ಮನವಿ** (ನಾ). ಪುನಃಪರಿಶೀಲನೆಗಾಗಿ (ಮೇಲಿನ ನ್ಯಾಯಾಲಯಕ್ಕೆ) ಕೊಡುವ ಅರ್ಜಿ, – ಅಪೀಲು : ಸೆಸೆಟ್ಟಿನಲ್ಲಿ ಮೇಲ್ಮನವಿ ತಿರಸ್ಕೃತವಾದರೆ ಚಕ್ರವರ್ತಿಗೆ ಕ್ಷಮಾಯಾಚನೆಯ ಅರ್ಜಿ ಸಲ್ಲಿಸಬೇಕೆಂದೂ ನೆಕ್ಲುದೋವ್ ನಿಶ್ಚಯಿಸಿಕೊಂಡಿದ್ದನು (ಪುನರು. ೨೬೦). [ಮೇಲ್$_1$ + ಮನವಿ]

**ಮೇಲ್ಮನೆ** (ನಾ). ೧. ಮೇಲಿನ ಮನೆ ; ಉಪ್ಪರಿಗೆ : ಮೇಲ್ಮಾಳಿಗೆ : ಅವನೀಶನಾ ನಳಿನಾಕ್ಷಿಯರು ಸಹವಾಗಿ ನಿಲೆಮಾಡವೇಜಾ ಮೇಲ್ಮನೆಯೊಳು ಕುಳಿತು ಪೆಂಗಳಗಂಬುನಿಧಿಯ ತೋಜಿದನು (ಧರತ. ೨೩-೯೨); ಯಾವಾಗಲೂ ಮೇಲ್ಮನೆಯಲ್ಲೇ ಮುಖ ಮರೆಸಿಕೊಂಡು ಇರತೊಡಗಿದರು (ಮರಳಿ. ೧೬೨). ೨. ರಾಜ್ಯದ ವಿಧಾನಪರಿಷತ್ತು ಅಥವಾ ಕೇಂದ್ರದ ರಾಜ್ಯಸಭೆ : ಈ ದಿನ ಮೇಲ್ಮನೆಯಲ್ಲಿ ಬಹುಮುಖ್ಯವಾದ ಮಸೂದೆ ಅಂಗೀಕಾರವಾಯಿತು (ರೂಢಿ). P ಇದು ಇಂಗ್ಲಿಷಿನ 'Upper house' ಎಂಬುದರ ಅನುವಾದ. [ಮೇಲ್$_1$ + ಮನೆ]

**ಮೇಲ್ಮರ** (ನಾ). ಉತ್ತಮ ಜಾತಿಯ ಮರ : ಪರಭೃತ ಭೃಂಗ ಕೀರ ಕಳಹಂಸೆಗಳಲ್ಲದೆ ಕಾಕ ಘೂಕ ಭೇಕರಖಗಮಿಲ್ಲ ಮೇಲ್ಮರಗಳಲ್ಲದ ಕೀಟ್ಮರನಿಲ್ಲ (ಅರ್ಜನೇ. ೦-೩೮). [ಮೇಲ್$_1$ + ಮರ$_1$]

**ಮೇಲ್ಮಲೆಯು** (ಕ್ರಿ). ೧. ತೋರಿಕೆಗಾಗಿ ಪ್ರತಿಭಟಿಸು; ಮನಃಪೂರ್ವಕವಲ್ಲದ ಕಾಳಗವನ್ನು ಮಾಡು : ಕುರುಪತಿಗಿಲ್ಲ ದೈವಬಲವಾಜಿಗೆ ಮೇಲ್ಮಲೆಗುವುರಾಗಳುಂ ಗುರು ಗುರುಪುತ್ರ ಸಿಂಧುಸುತರ್ (ಶಂಕಭಾ. ೯-೭೦). ೨. ಬಾಹ್ಯದಲ್ಲಿ ವಿರೋಧಿಸು, – ಕೆರಳು : ಅಜಿಯದಂದದಿ ನುಜಿ ಸಿಜಿಗೆಯ್ದು ಪೆಜರ ಮಾರ್ಗದೊಳಿರ್ದಪಲ್ಲದೆ ತಜುಸಂದು ನೆಗಬರೆಂದು ಮೇಲ್ಮಲೆಗಿಯ್ಯದೆ ಬಲ್ಮೊಗಂ ಮಾಡಿ ತನ್ನಳಿಯಂದಿರ ಮೊಗಮಂ ನೋಡಿ (ಸುಕುಸುಕಾ. ೨-೫೨ ವ). [ಮೇಲ್$_2$ + ಮಲೆ$_1$ + ಕೆಯ್$_1$]

**ಮೇಲ್ಮಾಳಿಗೆ**, ಮೇಲುಮಾಳಿಗೆ (ನಾ). ಮೇಲಿನ ಅಂತಸ್ತು, – ಮಹಡಿ ; ಮೇಲುಪ್ಪರಿಗೆ : (೬). ಮೇಲುಮಾಳಿಗೆ : (೬).

[ಮೇಲ್$_1$ + ಮಾಳಿಗೆ$_1$]

**ಮೇಲ್ಮಾಳಿಗೆಹುಲ್ಲು** (ನಾ). ಒಂದು ಬಗೆಯ ಹುಲ್ಲು : ಮೇಲ್ಮಾಳಿಗೆ ಹುಲ್ಲು, ಕೌಬಿನ ಹುಲ್ಲು (ವ್ಯಶಿಗ. ೨೦-೩೭೦).

[ಮೇಲ್ಮಾಳಿಗೆ$_1$ + ಹುಲ್ಲು (< ಪುಲ್)]

**ಮೇಲ್ಮಿತಿ** (ನಾ). ಅತಿ ಹೆಚ್ಚಿನ ಅಥವಾ ಪರಮಾವಧಿಯ ಒಂದು ಮಿತಿ, – ಎಲ್ಲೆ : ಅಂತಹ ರಾಷ್ಟ್ರಗಳಿಗೆ ನೀಡಬಹುದಾದ ಹಣದ ಮೊಬಲಗಿಗೆ ಒಂದು ಮೇಲ್ಮಿತಿಯನ್ನು ವಿಧಿಸಬೇಕಾಗಿ ಬರಬಹುದು (ಅಂಕಸಂ. ೦೩೦). [ಮೇಲ್$_1$ + ಮಿತಿ]

**ಮೇಲ್ಮುಚ್ಚಳ**, ಮೇಲುಮುಚುಳಿ, ಮೇಲುಮುಚ್ಚಳ (ನಾ). ೧. (ಮನೆಯ) ಮೇಲಿನ ಛಾವಣಿ ; ಸೂರು : "ವಲೀಕಂ, ನೀವ್ರಂ, ಪಟಲಪ್ರಾಂತಂ – ೩ ಪಪ್ಪಾರದ ಜೂರು, ಲೋವೆಜೂರು, ಮನೆಯ ಚುಂಚು, ಹೊದಿಕೆಜೂರು. ಮನೆಯ ಮೇಲ್ಮುಚ್ಚಳದ ಅಂಚು. ಇದನ್ನು ಸೂರೆಂತಲೂ ಅನ್ನುವರು" (ನಿಘಂಟು. ೦೦೩). ಮೇಲುಮುಚುಳಿ : ೧. × × × ರವನು ತಿದ್ದಿಸಿ ಮೇಲುಮುಚುಳಿಯನ್ನು ಮುಚ್ಚಿಸಿದನು (ಎಕ. III. ಮಂಡ್ಯ ೩೩-೬: 1221 ?). ಮೇಲುಮುಚ್ಚಳ : ೧. "ಪಟಲಂ ಛದಿಃ – ೨ ಮನೆಯ ಮೇಲುಹೊದಿಕೆಯ ಹೆಸರು. ಮನೆಯ ಮೇಲುಮುಚ್ಚಳ" (ನಿಘಂಟು. ೦೦೩). ೨. ಭರಣಿ ಅಥವಾ ಸಂಪುಟದ ಮೇಲ್ಭಾಗವನ್ನು ಮುಚ್ಚುವ ಸಾಧನ ; ಭರಣಿಯ ಮೇಲಿನ ಮುಚ್ಚಳ : ಮೇಲೆ ಭೂಮಂಡಲಮಸಂತರದ ಭರಣಿಗಳ ಮೇಲುಮುಚ್ಚಳ ಪಾಂಗಿನಿಂ ತೋರ್ಪುತಿಪುದು (ಚಿದಕೃ. ೦೩-೯) ; ಒಂದು ಉಪಾಯನ್ನು ನನ್ನ ಕೈ ಬಳಿಗೆ ಉರುಳಿಸಿದರು. ಮೇಲುಮುಚ್ಚಳವನ್ನು ತೆಗೆದರು (ಗಂಶ್ರಿ. ೬).

[ಮೇಲ್$_1$ + ಮುಚ್ಚಳ (< ಮುಚ್ಚಣ)]

**ಮೇಲ್ಮುದ್ದೆ**, ಮೇಲುಮುದ್ದೆ (ನಾ). ಮಾಳಿಗೆಯ ಮೇಲೆ ಹಾಕುವ ಕಲಸಿದ ಮಣ್ಣಿನ ಮೆತ್ತಿಗೆ, – ಮುದ್ದೆ : ಬೇಸಿಗೆಯಲ್ಲಿ ಮಳೆ ಕಡಿಮೆಯಾದ್ದರಿಂದ ಮೇಲ್ಮುದ್ದೆಯ ನಾಳಿಗೆಯ ಮನೆಗಳೇ ವಿಶೇಷವಾಗಿರುವುವು (ಕರ್ನಾಟ. ೬). ಮೇಲುಮುದ್ದೆ : ಹಲಕೆಲವು ಮೇಲುಮುದ್ದೆಯ ಮಾಳಿಗೆಗಳನ್ನು ನೋಡಬಹುದು (ಕಥಾಗಿ. ೩). [ಮೇಲ್$_2$ + ಮುದ್ದೆ$_1$]

**ಮೇಲ್ಮುಸುಕು**, ಮೇಲುಮುಸುಕು, ಮೇಲ್ಮುಸುಗು (ನಾ). ೧. ಮೈ ಮೇಲೆ ಹೊದೆಯುವ ವಸ್ತ್ರ, – ಹೊದಿಕೆ; ಉತ್ತರೀಯ : "ಝಳಂಬ ಪೊಂದು ಮೇಲ್ಮುಸುಕು" (ಕಜ್ಜ. ೨೦-೪೯೬). ೨. ಅವಕುಂಠನ, ಮುಖಕ್ಕೆ ಹಾಕಿಕೊಳ್ಳುವ ಮುಸುಕು : ಅಗಣಿತಮಾನ ಕುದುರೆಗಳ ಮೇಲೆ ಮೇಲ್ಮುಸುಕಿನಿಂ ಕೆಲಕೆಲಬರು ಬಳಕ್ಯನಲಿತ್ತ . . . ಬಂದತ್ತು ವಾರಾಂಗನಾನಿವಹಂ (ಚಿದಕೃ. ೯೭-೩೯). ಮೇಲುಮುಸುಕು : ೧. "ಪ್ರಾವಾರಃ, ಉತ್ತರಾಸಂಗಃ, ಬೃಹತಿಕಾ, ಸಂವ್ಯಾನಂ, ಉತ್ತರೀಯಂ–೫ ಉತ್ತರೀಯದ ಹೆಸರು. ಮೈಮೇಲೆ ಹೊದ್ದಿರುವ ವಸ್ತ್ರ . . . ಮೇಲುಹೊದಿಕೆ, ಮೇಲುಮುಸುಕು" (ನಿಘಂಟು. ೨೦೯) ; ಮೇಲುಮುಸುಕಿನ ಹೊತ್ತ ದುಗುಡದ . . . ನೃಪಾಲ ಹೊಕ್ಕನು ನಡುವಿರುಳು ನಿಜರಾಜ ಮಂದಿರವ (ಕುಭಾ. ೦೨.೦) : ಮೇಲುಮುಸುಕಿನ ಮನದ ಮಜುಕದ ಜಾಳಿಸುವ ಕಂಬನಿಯ ಸುಯಿಲಿನ ಸೂಳುಗಳ ಸಂತಾಪದಲಿ ತಿರುಗಿದನು ಪಟ್ಟಣಕೆ (ತೊರಿರಾ. ೨-೫-೦). ೨. ನಮ್ಮ ಪಟ್ಟಣದಲ್ಲಿರುವ ಕನ್ನೆಯರು ಮೇಲುಮುಸುಕಿಲ್ಲದೆ ಕೃಷ್ಣನನ್ನು ನೋಡುವುದಕ್ಕೆ ಹೋಗಲಿ (ಕೃಪಾಕ. ೦೯೯) ; ಎಲೆ ಮಗಳೆ, ಒಂದು ಮುಹೂರ್ತ ಲಜ್ಜೆಪಡದಿರು ; ನಿನ್ನ ಮೇಲುಮುಸುಕನ್ನು ತೆಗೆಯುವೆನು (ಶಾಕುಂತ. ೬೭-೭). ೩. (ಅಲಂ) ತೋರಿಕೆ ; ಠಕ್ಕು : ಕಾಲ ಮಹಿಬವ ಕಲಿಸಲೋಸುಗ ಕೋಲಗುರು ಜಾಜಿದನು ಶಲ್ಯನ ಮೇಲುಮುಸುಕನುಮಾಯ್ತು ಬಿರುದೇನಾಯ್ತು ಗುರುಸುತನ (ಕುಭಾದ್ರೋ. ೬-೨೪). ಮೇಲ್ಮುಸುಗು : ೪. ಪುಸ್ತಕದ ಹೊರಭಾಗಕ್ಕೆ ಹಾಕುವ ಹೊದಿಕೆ ; ರಟ್ಟು : ಇದು ಪುಸ್ತಕದ ಮೇಲ್ಮುಸುಗು (ಸುಪಸಂ. ೪). [ಮೇಲ್$_2$ + ಮುಸುಕು$_2$ (<ಮುಸುಂಕು$_2$)]

**ಮೇಲ್ಮುಸುಗು** 'ಮೇಲ್ಮುಸುಕು' ನೋ.

**ಮೇಲ್ಮುಳಿ** (ನಾ) ಮಲ್ಲಯುದ್ಧದ ಒಂದು ಪಟ್ಟು : ಕಳಗುವೋಲೆಡಬಲನ ತಿರುಹಿನ ಸುಳವುಗಳ ಕಳವುಗಳ ಮೇಲ್ಮುಳಿ ಮೊಳಗುಗಳ ಮಂಡಿಗಳ . . . ಲಗ್ಗೆಗಳ ಬೊಬ್ಬೆಗಳಳೆಯೊಳವರಿರ್ವರಿಗೆ ಸಮಜೋಳಿಗಳದಾರೆಂದ (ಕೃಷ್ಣ. ಕಾ. ೨೦-೯). [ ? ]

**ಮೇಲ್ಮೆ** (ನಾ). ಉನ್ನತಿ ; ಶ್ರೇಷ್ಠತೆ ; ಹಿರಿಮೆ : ಇಲ್ಲಿಯವರೆಗೆ ಉಪಲಬ್ಧವಾಗಿರುವ ಗ್ರಂಥ ಮತ್ತು ಲೇಖನಸಂಪತ್ತನ್ನು ಸೂರೆಗೊಂಡಿರುವ ವಿಷಯವೈಪುಲ್ಯ ಈ ಗ್ರಂಥದ ಮೇಲ್ಮೆಗೆ ಕಾರಣವಾಗಿದೆ (ದ್ರಾವಿ. v. ಮುನ್ನುಡಿ) ; ಗುರುದೇವನ ಕಾವ್ಯಗಳಲ್ಲಿರುವ ಒಂದು ಹೆಚ್ಚಿನ ಮೇಲ್ಮೆ ಅವನ ನಾಟಕ. ಕಾದಂಬರಿ. ಕಥೆಗಳಲ್ಲಿ ಕಾಣಬರುವುದಿಲ್ಲವೆಂಬ ಮಾತು ನಿರ್ವಿವಾದ (ರವೀಂದ್ರ. ೬೦) ; ತಪಶ್ಚರ್ಯೆಯ ಮೇಲ್ಮೆ ವರ್ಣಿತವಾಗಿದೆ (ಕನ್ನ. ಕ್ರಾ. ೬೬). [ಮೇಲ್$_1$ + — ಮೆ$_3$]

**ಮೇಲ್ಮೈ** (ನಾ). ಹೊರಭಾಗ ; ಮೇಲ್ಭಾಗ ; ಹೊರ ಆವರಣ : ಸೂರ್ಯನ ಮೇಲ್ಮೈ ಮಿಂಚುವ ಅನಿಲಹಬೆಗಳಿಂದ ರಚಿತವಾಗಿದೆ (ಆಕಾಶ. ೯) ; ಭೂಮಿಯು ಒಳ್ಳೆಯ ಉಷ್ಣವಾಹಕವಸ್ತುವಾಗಿಲ್ಲದಿರುವುದರಿಂದ, ಭೂಮಿಯ ಒಳಭಾಗದಿಂದ ಅದರ ಮೇಲ್ಮೈಗೆ ಬರುವ ಉಷ್ಣ ಪ್ರಸಾರವು ಸೂರ್ಯನಿಂದ ಬರುವುದಕ್ಕಿಂತಲೂ ೫,೦೦೦ ದಷ್ಟು ಕಡಿಮೆಯಾಗಿರುತ್ತದೆ (ಭೂಕುಟ್ಮ. ೮೭); ಕನ್ನಡಿಯಂತೆ ಸ್ವಚ್ಛವಾದ ನದಿಯ ಮೇಲ್ಮೈಯಲ್ಲಿ ಒಂದೊಂದು ಕೆಂಪುಮೋಡದ ಪ್ರತಿಬಿಂಬ (ಯೋರಪು. ೭೯).
[ ಮೇಲ್$_1$ + ಮೈ$_1$ (< ಮೆಯ್$_2$) ]

**ಮೇಲ್ಪಟ್ಟ** (ನಾ). ಮೇಲುಕಟ್ಟು; ವಿತಾನ : "ವಿಹಾರದೊಳು ಮೇಲ್ಪಟ್ಟದೊಳವಧಿಯೊಳು ಶೂನ್ಯದೊಳ್ಕಡುದೊಳು ವಿತಾನಮಕ್ಕುಂ" (ಶಬ್ದಮ. ೦೪೩-೨೯). [ ಮೇಲ್$_1$ + ಪಟ್ಟ$_3$ ]

**ಮೇಲ್ಪಟ್ಟ** (ನಾ). ಒಂದು ಸ್ಥಳದ ಹೆಸರು (?) : ಇನ್ತುದಯಾದಿತ್ಯ ದಣ್ಡಾಧಿಪತಿ ಬನವಾಸೆ ಪನ್ನಿಚ್ಛಾಸಿರಮುಮಂ . . . ಮೇಲ್ಪಟ್ಟದ ವಡ್ಡರಾವುಳದ ಸುಂಕಮುಮಂ ಸುಖಸಂಕಥಾವಿನೋದದಿಂದಾಳ್ದು ರಾಜ್ಯಂಗೆಯ್ಯುತ್ತಮಿರೆ (ಎಕ. VIII, ಸೊರಬ. ೨೯೯-೦೮; 1074); ಶ್ರೀಮದ್ವಣ್ಣನಾಯಕಂ ಶ್ರೀರಿದರಯ್ಯಂಗಳುಂ ದಣ್ಡನಾಯಕಂ ಆಸೆಪಯ್ಯಂಗಳುಂ ಮೇಲ್ಪಟ್ಟ ವಡ್ಡರಾವುಳವೆರಡುಂ ಬಿಲ್ಕೊಡೆಯ ಸುಂಕನಾಳುತ್ತಮಿರೆ (ಕ್ಷೇತ್ರ. XX, ೬೦-೯; 1088). 'ಕೀಳ್ವಟ್ಟೆ' ಪರಾ. [ಮೇಲ್$_1$+ಪಟ್ಟ$_1$./ ☛ ಇದು 'ಮೇಲ್ಪಟ್ಟೆ' ಎಂಬುದರ ಅಪಲಿಖಿತವಿರಬಹುದು ]

**ಮೇಲ್ಪಡೆ** (ಕ್ರಿ). ಶುಭವನ್ನು ಪಡೆ : ಮೇಲ್ಪಡೆವೆನೆಂದು ಕುಂದಿಸಿ ಪೆರ್ಚಿಸಿ ಸನ್ನೆಗೆಯ್ಯುತ್ತಿರ್ಪಂ (ರಪರಾಭ್ಯು. ೩-೦೩೬). [ಮೇಲ್$_1$ + ಪಡೆ$_1$]

**ಮೇಲ್ಪಣೆ** (ನಾ). ಮೇಲಿನ ದಂಡೆಯ ಕೃಷಿಭೂಮಿ : ನೊಸಪಳ್ಳ ಆಗ್ನೇಯಾಂ ದಿಶಿ ಗಡಿಗನ ಮಲೆಯ ಪಡುವಣಭಾಗೆ ನಾಲೆಗೋಡಲಪ್ಪುಡಣಭಾಗೆ ದಕ್ಷಿಣಾಂದಿಶಿ ಕೊಡೆ ನಡಿಕಿನ ಮೇಲ್ಪಣೆ ಮುನ್ದೆ ನಡೆದು ಎಳತುಮಟ್ಟಿನ ಹೆಬ್ಬಟೆ ಮುನ್ದೆ . . . ಆ ಕಟ್ಟೆಯ ತೆಂಕಣ ಕಡೆಗೋಡಿ ಏರಿಯ ಮೇಲೆ ಬನ್ದು (ಎಕ. XIV, ಎಳಂದೂರು. ೦೬೦-೦೦; ಸು. 12ನೆಯ ಶತ).
[ ಮೇಲ್$_1$ + ಪಣೆ$_2$ ]

**ಮೇಲ್ವಣ್ಣ** (ನಾ). ಶ್ರೇಷ್ಠವಾದ ಬಣ್ಣ : ಮೇಲ್ವಣ್ಣಂ. ಮೇಲ್ವಾತು, ಸೂಳ್ವಾತು (ಶಬ್ದಾ. ಶು. ೯೩ ವೃತ್ತಿ). [ ಮೇಲ್$_1$+ಬಣ್ಣ ]

**ಮೇಲ್ವರಿ.** ಮೇಲುವರಿ$_1$ (ಕ್ರಿ). ೧. ತುಂಬಿ ಹೊರಸೂಸು,–ಪ್ರವಹಿಸು: ಹರುಷ ಮಿಗೆ ಶೈಲಾದಿ ಕರುಣರಸವೊಸರಿ ಮೇಲ್ವರಿವಂತೆ ನೋಡಿ (ಶಾಪಂಚ. ೦-೬೦); ವೀರಭಕ್ತನ ಪದನಿಹತಿಗೆ ಶಿರೋರು ಗಂಗಾವಾರಿ ತುಳುಕಿಯುಪಾರಪಾದೋದಕವೆನಿಸಿ ಮೇಲ್ವರಿದು ಪೂರಿಸಲು (ಬಸವ. ೦೬-೯೮); ಉಪ್ಪವಡಮಂ ಪಾಡುವ ರಾಗಾಧರೆಯರ ರಾಗರಸಪೂರಂ ಮೇರೆದಪ್ಪಿ ಮೇಲ್ವರಿಯೆ (ರಾಜಶೇ. ೦೩-೯೩ ವ). ೨. ಮೇಲೆಬೀಳು; ಎರಗು : ಪೊಸ ಪಾವಿನಂತೆ ಮೇಲ್ವರಿವರ್ ಕೆರಳ್ದ ತಗರಂತೆ ತಾಗುವರ್ (ಶಂಕ. ೯೬-೩೯); ಪುಲಿ ಗರ್ಜಿಸುತ ಬರಲ್ಬಿಳ್ಕೋಲದಳೆವನಿತಜ್ಜೆಯೊಳಗೆ ಸೊಕ್ಕಾನೆ ಮೇಲ್ವರಿಯೆ (ರಾಜಶೇ. ೦೩-೭೦). **ಮೇಲುವರಿ$_1$** : ೨. ಕೊಬ್ಬಿ ಕೂಗುವ ಕುಹಕ ಸತ್ಕಥೆಗುಬ್ಬಿ ಸಂತಸವಟ್ಟು ಕೇಳ್ವನೆ ಅಬ್ಬರಿಪ ತಲೆಗೊಡಹಿ ತುಡುಗುಣಿ ಮೇಲುವರಿವಂತೆ (ಚಾಗಣ. ೦-೩೯). ೩. ಅತಿಶಯವಾಗು; ವಿಜೃಂಭಿಸು: ಮೇಲುವರಿವ ಜಲ್ಲಿ ಪಚ್ಚೆಯ ಮೇಲ್ಕಟ್ಟು ಸಾಲುಗೊಂಡೆಸೆವ ಪೂಮಾಲೆ (ಕಂಪಂ. ೨೨-೬೨). ೪. ಮುಂದುವರಿ ; ಮುನ್ನುಗ್ಗು : ಅತಿಭೀತಿಯಿಂದನುಗೆಟ್ಟು ಪಿಂತೆಗೆಯದೆ ಮಿತಿ ಮೀಱಿ ಮೇಲುವರಿಯದೆ . . . ಪತಿಸೇವೆಗೈದು ಬಾಳುವುದು (ಹರಿ. ೩-೩೦). [ ಮೇಲ್$_2$ + ಪರಿ$_2$ ]

**ಮೇಲ್ವಲಗೆ.** ಮೇಲುವಲಗೆ(ನಾ). ೧.(ಚಾವಣಿಗೆ ಸೇರಿಸಿದ ಹಾಗಿರುವ) ಮೇಲ್ಭಾಗದ ಹಲಗೆ : ಸುರುಚಿರ ರತ್ನದ ತೊಟ್ಟಿಲ ಪೂಜಿಸಿ ತರಳನ ತುಂಬಿ ಸದ್ವಿಧಿಯಿಂ ಪರಮೋದಿರದ ಮೇಲ್ವಲಗೆಯ ಕೊಂಡಿಗೆ ಸರಪಳಿಯನು ತೊಡಚಿದರ್ಧು (ಪೋಹಕ. ೦೬-೯೯) ; ಕಡುಚೆಲ್ವ ಮೇಲ್ವಲಗೆ ನೆಲಗಟ್ಟು ಗೋಡೆಗಳ ಗಡಣಮಂ ಧವಳಿಸಲು ನೃಪಕೀರ್ತಿ ದಶದಿಕ್ಕಿನೆಡೆಗೆ ತೀವಿದ ತೆಱದೊಳೆಸೆಯೆ (ಶಾಕಶಂ. ೩-೨೩). **ಮೇಲುವಲಗೆ** : ೧. ರನ್ನದ ತೊಲೆ ಪಚ್ಚೆಯ ಮೇಲುವಲಗೆ ರಂಜಿಸಿದುದು (ಶ್ರೀಶು. ೩-೩೦). ೨. ಗುರಾಣಿಯ ಮೇಲುಭಾಗ ; ಹರಿಗೆಯ ಮೇಲುಭಾಗ : ಮೇಲುವಲಗೆಯಲಿಕ್ಕಿದು ಹಾಯ್ದನು ಬಾಲಕನು ಛಾಯವನು ನಸುನಗುತೇಳಿಸುತ ದಂಡೆಯಲಿ ಕಳೆದನು ತಿವಿದನವನುರವ (ಕುಮಾರರಾ. ೬-೩೯). [ ಮೇಲ್$_1$ + ಪಲಗೆ ]

**ಮೇಲ್ವಾಯ್,** ಮೇಲುವಾಯ್ (ಕ್ರಿ). ೧. ಮೇಲೆ ಹಾಯ್ದು ಬರು,– ಬೀಸು : ವಸುಂಧರೆ ನಾಡೆಯುಂ ಕಣ್ಗಸದಳಮಾಯ್ತುವುರಕರವೆಚ್ಚುತ ಮೆತ್ತಂ ಪೊಸಸ್ಪೂವಿನ ಸರಿ ಪಿರಿದಾಯ್ತುಸದಳಮೆನಿಪಲರದೊಂದು ಮೇಲ್ವಾಯ್ದಾಗಳ್ (ಅಜಪು. ೦೦-೨). ೨. ಮೇಲಕ್ಕೆ ಹಾರು,–ನೆಗೆ : ಸೀಯಿ ತಲೆ ಬೇಯೆ ಮೆಯ್ ಮೇಲ್ವಾಯೆ ಕರು ಪಿಸಿದ ಪುಲ್ಮರುಳ್ ಪಿಱಿಕಿನಿಗಳ್ ಬೇಯುತ್ತುಮಿರ್ದ ಪೆಣನಂ ನಾಯುಗಿವಂತುಗಿದು ತಿಂದು ಪೋರೆಂದೆಡೆಯೊಳ್ (ಕಾವ್ಯಸಾ. ೩೪೬ ಕಾವ್ಯ೪) ; ಮೆಲ್ಲಡೆದೋರ್ಪ ವ್ಯನ್ನರಾಳಾವಳಿಯಿನೊಳಗೆ ಮೇಲ್ವಾಯ್ವ ಮತ್ಸ್ಯಂಗಳಿಂ ಪೆಂಪಿಡಿದೊಪ್ಪಿತ್ತಲ್ಲಿ ಫೇನಸ್ಮಿತೆಯೆನಿಸುವ ಪೊಚ್ಚಂ ಪೊದಳ್ದೊಪ್ಪದಿಂದಂ (ರಾಜಶೇ. ೬-೨೩). ೩. ಉದುರು ; ಚೆಲ್ಲು : ನಿಱಿಗನ ನಿಱಿದಳಿರ ಗೊಂಚಲ್ಗಳುಮಾತನ ಮೇಲ್ವಾಯೆ ರಾಗಿಸಿ ರೋಮಾಂಕುರಮೊಗೆದಂತೊಗೆದ ಕಳಿಕಾಂಕುರಂಗಳುಂ (ಶಂಕರ. ೨-೧೨ ವ). ೪. ಮುನ್ನುಗ್ಗು ; ಧಾವಿಸು : ತಾನಾಱಿದೊಯ್ಯನೆ ಕಣ್ಣಲರ್ವಲರೆ ನೃಪನಂ ಭೋಂಕಲ್ ಮೇಲ್ವಾಯ್ದು ತಳ್ತರದಪ್ಪಿದಳ್ (ಶಾರಂಅ. ೭೬೬) ; ಲಜ್ಜೆಗೆಟ್ಟ ಪೆಣ್ಗಳಂತೆ ಮೇಲ್ವಾಯ್ದು ಪೆರ್ಬುಲಿವಿಂದಿಂ (ರಪರಾಭ್ಯು. ೩-೩೩). ೫. ಧಾಳಿಮಾಡು ; ಎರಗು; ಮೇಲೆಬೀಳು : "ಅವ್ವಳಿಸುವುದೆನಲ್ಕೆ ಮೇಲ್ವಾಯ್ವುದು" (ಶಬ್ದಮ. ೨೩೦) ; ಅಡವಿಯೊಳ್ ಕಳ್ಳರ್ ಬಟ್ಟೆಗಟ್ಟಿ ಮೇಲ್ವಾಯ್ದುಱಿದೊಡೆ (ಪಂಪಭಾ. ೬೬-೦೩); ವಿರಥರತಿರಥರಲೆಬರ್ ಮೇಲ್ವಾಯ್ದು ರಥಿಗಳಂ ಸುರಿಗಿಱಿದರ್(ಶಂಕರ. ೦೦-೩೩). ೬. ಸಿಟ್ಟುಗೊಳ್ಳು; ಕೋಪಗೊಳ್ಳು: (೬). **ಮೇಲುವಾಯ್:** ೪. ಹೇಳಲಱಿಯೆನು ಹರುಷದುದಯವನಾಲಿ ಹೂಳಿದವಶ್ರುಜಲದಲಿ ಮೇಲುವಾಯ್ದಪ್ಪಿದನು ದೇವನ ಪಾದಪಂಕಜವ (ಕುಮಾರರಾ. ೦೩-೦). ೫. ಆನೆಕಲುಗಳು ಸಿಡಿಲ ಮಱಿಗಳ ಮೇಲುವಾಯ್ದವು ಗಡ (ಕುಮಾ. ೪. ೦೦-೨೬). [ ಮೇಲ್$_2$ + ಪಾಯ್$_1$ ]

**ಮೇಲ್ವಾಸು.** ಮೇಲುವಾಸು (ನಾ). ಹಾಸಿಗೆ, ಹಸೆಮಣೆ ಮುಂತಾದುವುಗಳ ಮೇಲೆ ಹಾಸುವ ಬಟ್ಟೆ : ಗಿಂಡಿ ಮಡಗ ಮೇಲ್ವಾಸು ಮಂಚಗಳ ಗಡಣವೆಯ್ದಿತು (ಕುರಾಸಾಂ. ೨೭-೯೬) ; ಬಾಳೆಯ ಕಂಬ ತಳಿರುತೋರಣ

ಜಾವುರು ಮೇಲ್ವಾಸುಗಳಿಂದ ಆ ಭಾಗವೆಲ್ಲ ಅಲಂಕೃತವಾಗಿದ್ದಿತು (ಜಂಂ. ೦೪) ; ಹೊಸಬರಿಗಾದರೂ ವಾದುವೆಯಾದ ಮೇಲಲ್ಲವೆ ಮೇಲ್ವಾಸು ? (ಐಕಕಂ. ೫೯). **ಮೇಲುವಾಸು** : ಈ ಎರಡೂ ಮನೆಗಳಿಗೆ ಮೇಲುವಾಸಿಲ್ಲಿ ? (ಐಕಕಂ. ೫೯). [ ಮೇಲ್$_2$ + ವಾಸು$_2$ ]

**ಮೇಲ್ವಿಚಾರಕ** (ನಾ). ಮೇಲುಸ್ತುವಾರಿ ಮಾಡುವವನು : ಜಮೀನಿನ ಮೇಲ್ವಿಚಾರಕ ವಾಸವಾಗಿದ್ದ ಕಟ್ಟಡ ಅಡುಗೆಮನೆ . . . ಕುಸಿದುಬೀಳುವ ಸ್ಥಿತಿಯಲ್ಲಿದ್ದುವು (ಕೃಕರು. ೨೬೩) ; ನೀವು ಒಳ್ಳೆಯ ಪುಸ್ತಕಾಲಯದ ಮೇಲ್ವಿಚಾರಕರಾಗಲು ಕಲಿಯಬೇಕು (ಶಾರೆಕು. ೨೦೦).

[ ಮೇಲ್$_1$ + ವಿಚಾರಕ ]

**ಮೇಲ್ವಿಚಾರಕಿ** (ನಾ). ಮೇಲುಸ್ತುವಾರಿ ನೋಡಿಕೊಳ್ಳುವವಳು : ಕಟ್ಟು ಗರತಿಯರಾದ ನತದೃಷ್ಟೆಯರಿಗೊಂದು ಅನಾಥಾಶ್ರಮವಿದೆ. ಅಲ್ಲಿನ್ ಅದರ ಮೇಲ್ವಿಚಾರಕಿ (ಕೃಕರು. ೩೬೮). [ಮೇಲ್ವಿಚಾರಕ + –ಇ$_2$]

**ಮೇಲ್ವಿಚಾರಣೆ** (ನಾ). ಮೇಲ್ನಿಗಾ ; ಮೇಲುಸ್ತುವಾರಿ: ಕಾಫಿ ಕಷಾಯವನ್ನು ರಾಯರ ಮೇಲ್ವಿಚಾರಣೆಯಲ್ಲಿ ಕಲಕಿದೆ (ಕಾಹುಕ. ೦೦೯) ; ನನಗೆ ಪ್ರೌಢವಯಸ್ಸು ಬರುವವರೆಗೂ ನನ್ನ ಮಾವನವರನ್ನು ಆ ಗ್ರಾಮದ ಮೇಲ್ವಿಚಾರಣೆಗೆ ನೇಮಿಸಿದರು (ಶ್ರಶಾಕೃ. ೯೯). [ಮೇಲ್$_1$ + ವಿಚಾರಣೆ]

**ಮೇಲ್ವೀಟು** (ಕ್ರಿ). ಮೇಲೆ ಎರಗು ; ದಾಳಿ ಮಾಡು : ಬಡಿಯಲಿಱಿಯಲ್ ಪೊಯ್ಯಲ್ ಮೇಲ್ವೀಟ್ವ ರಾಕ್ಷಸತಂಡದಿಂ . . . ಇವು ಮೊದಲಾದ ನೇಕೋಪಸರ್ಗಂಗಳಂ ಮಾಡಿಯುಂ (ಧರ್ಮಾಮೃ. ೨-೨೪೦) ; ಮೇಲ್ವಿಟ್ಟು ತುಱುಗಳನ್ ತಱಿದನ್ (ಅಕ್ಕಶ. ೩-೪೩). [ ಮೇಲ್$_2$ + ಬೀಟು$_1$ ]

**ಮೇಲ್ವೊದಕೆ**, **ಮೇಲುವೊದಕೆ**, **ಮೇಲುಹೊದಕೆ**, **ಮೇಲುಹೊದಿಕೆ**, **ಮೇಲ್ವೊದಿಕೆ** (ನಾ). ೧. ಮನೆ, ಚಪ್ಪರ ಮುಂತಾದುವುಗಳ ಮೇಲ್ಭಾಗಕ್ಕೆ ಹಾಕುವ ಹೊದಿಕೆ. — ಪ್ರಚ್ಛಾದನ : ಉಟ್ಟುಡಿಗೆ ಬಳಸಿದ ನೆರಕೆ ತೊಡೆಯ ಕಂಬವಳವಟ್ಟು ಕಟ್ಟು ಸಡಿಲ್ಚಿ ಮೆಱೆವ ಮುಡಿ ಮೇಲ್ವೊದಕೆ . . . ಆಗಲ್ . . . ಅತನುವಚಿವಟ್ಟಿಗೆಯೊಯೆಂಬವೊಲ್ ಪ್ರವಾಕಾಂತಾಜನಂ (ಶಶ್ಮಶಾ. ೬-೧೧) ; ಚಂದನರಸಂಗಳಿಂ ತೊಯ್ದೋಳೆಯ ದವನದ ಮೇಲ್ವೊದಕೆಯಿಂದೊಳಗೆ ಬಾಳೆಲೆಯ ಪಲಗೆಗಳ ಪರಿಸರದೊಳೊಂದಿಸಂದುವಿಡದಂತೆ ತರಂಗೋಳಿಸಿ (ರಾಶಕೆ. ೦೦-೩೦ ಪ). ೨. ಮುಚ್ಚಲು ಬಳಸುವ ಸಾಧನ ; ಮುಸುಕು: ' ಮೇಲ್ವೊದಕೆದೆಗೆ ' ಪರಾ. **ಮೇಲುವೊದಕೆ** : ೧. ಬಿಸುಜಂತೆ ಜವ್ವಳಿಗಂಭ ಲೇಸಾಯಿತ್ತು ಮನೆ ಲೇಸಾಯಿತ್ತು ಮೇಲುವೊದ[ಪಾಠಾಂ. ದಿ]ಕೆ (ಅವಸಂ. ೨೪-೯೯) ; ಮೇಲುವೊದ [ಪಾಠಾಂ. ದಿ]ಕೆಯು ಕರ್ಪೂರದ ಹೊಂಬಾಳೆಗಳ ಮಲಯಜದ ಕಂಬದ ಸಾಲುಗಳೆಲೊಪ್ಪಿದುದು ಚಪ್ಪರವೆರಡು ಯೋಜನದ (ಕುವ್ಯಾಕೃ. ೦೨-೦೦). **ಮೇಲುಹೊದಕೆ** : ೧. ಜಾಲಿ ಜೇನೊಡವಿಪ್ಪ ಒಪ್ಪಲ ಮಾಲೆಯುವ ನೋಡಬಲೆ ಲತೆಗಳ ಮೇಲುಹೊದಕೆಯ ಬಂದಣಿಕೆಗಳ ಭಾರಿ ವೂಲೆಗಳಲಿ (ಕೂಕರಾ. ೩-೦-೨೬). **ಮೇಲುಹೊದಿಕೆ**: ೧. "ಪಟಲಂ, ಛದಿಃ — ೨ ಮನೆಯ ಮೇಲುಹೊದಿಕೆಯ ಪೆಸರು. ಮನೆಯ ಮೇಲು ಮುಚ್ಚಳ" (ಸಿದ್ಧಾಂತಿ. ೦೦೩). ೩. ಮೈಮೇಲೆ ಹೊದೆಯುವ ಬಟ್ಟೆ ; ಉತ್ತರೀಯ : ಪ್ರಾವಾರಃ, ಉತ್ತರಾಸಂಗಃ, ಬೃಹತಿಕಾ, ಸಂವ್ಯಾನಂ, ಉತ್ತರೀಯಂ — ೫ ಉತ್ತರೀಯದ ಹೆಸರು. ಮೈಮೇಲೆ ಹೊದ್ದಿರುವ ವಸ್ತ್ರ . . . ಮೇಲುಹೊದಿಕೆ, ಮೇಲುಮುಸುಕು" (ಸಿದ್ಧಾಂತಿ. ೨೦೯). **ಮೇಲ್ವೊದಿಕೆ** : ೩. ತಕ್ಕನಿಂ ಮಿಕ್ಕುಪೋರ್ದಾನೆ ರಕ್ಕಸನ ಸಮ್ಮುದ ಮೇಲ್ವೊದಿಕೆಯೊಳಂ ಚೆಲ್ವನಾಂತು (ಕೌಕಾ. ೦೬೭); ಲೇಸಿಗುಬ್ಬುತ ಮೇಲ್ವೊದಿಕೆಯಂ ಹಾಸಿಯಗಲಕೆ ಮಿಸುಪ ಪೂಗಳ ರಾಶಿಯಂ ತೆಗೆತೆಗೆದು ಭಕ್ತ ಮೊಟ್ಟೆಯಂ ಕಟ್ಟಿ (ಐಸಕೃ. ೨೯-೦೨).

[ಮೇಲ್$_2$ + ಪೊದಕೆ$_1$ ]

**ಮೇಲ್ವೊದಕೆದೆಗೆ** (ಕ್ರಿ). ಮೇಲೆ ಹೊದಿಸಿದ ಮುಸುಕನ್ನು ತೆಗೆ; ಆಚ್ಛಾದನೆಯನ್ನು ಓಸರಿಸು : ಓಡಿರ್ಕೆ ಕಲ್ಪಾಂತವಹನಂ ಮೂಡಿ ಬರುತಿದೆ ಎನುತ ಕೋಪಿಸಿ ಜೂಧಿಸಿದ ಸಿದ್ಧಪ್ರಸಾದದ ಮೇಲ್ವೊ [ಪಾಠಾಂ. ಲ್ಹೊ]ದಕೆದೆಗೆದು (ಐಸಕೃ. ೫೬-೩೦). [ ಮೇಲ್ವೊದಕೆ + ತೆಗೆ$_1$ ]

**ಮೇಲ್ವೊದಿಕೆ** ' ಮೇಲ್ವೊದಕೆ ' ನೋ.

**ಮೇಲ್ಸಕ್ಕರೆ** (ನಾ). ೧. ಉತ್ತಮವಾದ ಸಕ್ಕರೆ. ೨. (ಆಲಂ) ಉಪ್ಪು. ಮೇಲ್ಸಕ್ಕರೆಯವರು = ಉಪ್ಪನ್ನು ತಯಾರಿಸುವ ಜಾತಿಯವರು; ಉಪ್ಪಾರರು: (ಎಕವ್ಯ. XXI. ೦). [ ಮೇಲ್$_1$ + ಸಕ್ಕರೆ ]

**ಮೇಲ್ಸೀಮೆ** (ನಾ). ಎತ್ತರದ ಭೂಮಿ ; ಘಟ್ಟದ ಪ್ರದೇಶ : (*).

[ ಮೇಲ್$_1$ + ಸೀಮೆ ]

**ಮೇಲ್ಸೆಱಗು**, **ಮೇಲುಸೆಱಗು** (ನಾ). ೧. ಸೀರೆಯ ಮೇಲ್ಭಾಗದ ಅಂಚು: ಕಂದನಂ ನೋಡುತ್ತ ಕೌಂಕುಳಿಯಿಂದವಪ್ಪುತ ತಾಯಿ ಮೇಲ್ಸೆಱಗಿಂದ ಹೊದಿಸುತ ತೆಱೆವುತಂ ಹೊದಿಸುತ್ತ ತೆಱೆವುತ್ತ . . . ಬಾಯ್ಬಿಟ್ಟೊಱಲುವಳು (ಐಸಕೃ. ೦೫-೨೦). **ಮೇಲುಸೆಱಗು** : ೨. ಉತ್ತರೀಯದ ತುದಿ : ಸುಯಿಧಾನ ಸವೆಯದ ಆರೋಗಣೆಯ ಮಾಡಿ ಉಂಡು ಬಾಯ್ದೊಳೆದರೆ ಸಂದೇಹವಾದುದೆಂದು ಮೇಲುಸೆಱಗಿನೊಳು ತೊಡೆದುಕೊಂಡ (ಸಿದ್ಧಪ. ೪. ೩೦೬-೦೦೩೬). [ಮೇಲ್$_1$ + ಸೆಱಗು (< ಸೆಱಂಗು) ]

**ಮೇಲ್ಶ್ವಾಸ** (ನಾ). ಮೇಲಿನ ಶ್ವಾಸ ; ಮೇಲುಸಿರು; ಉಚ್ಛ್ವಾಸ : ಮೇಲ್ಶ್ವಾಸ [ಪಾಠಾಂ. ಲ್ವಾಸ]ಮೆತ್ತ ಸೆಡೆದಳ್ಕಿ ಬಲಂ ಪಱಿವಡೆ ಜೊಮ್ಮನೆ ಜೋಲ್ದು ಂ ಕೆಱಂಕೆ. ಪಾರ್ದಿರದೆ ತಡೆಯದೊರ್ವರ್ಯೆ ಮುನಿಪಂ . . . ಓವೆಂದೋಕರಿಸಿ ಸುರೇಶ್ವರನ ಮೇಲೆ ಕಾಱಿದನಾಗಳ್ (ಧರ್ಮಾಮೃ. ೪-೦೬೨).

[ಮೇಲ್$_1$ + ಸ್ವಾಸ]

**ಮೇವಳಿ** (ನಾ). ಮೇಯುವ ಸ್ಥಾನ, – ಎಡೆ : ಸೋವಳಿ ಮೇವಳಿ ಬಿಸುವಳಿಯಂ ಬಲವಮಂ ಶಕುನವಮನೊಳ್ಕೃತ್ತುಪಾಯವುಮಂ ಪಿಡಿವಂದೀತನೆ ವಂದಿ ಕುರುಱು ಕುಂಟೆಂದಲಸದಱಿದಿಂತು . . . ನಿಱಿಸುವೆಂ ಪಂದಿಯುಂ ನೀಂ ಮೆಚ್ಚಲುಂ(ಶಂಶಕಾ. ೫-೯೬); ವಟಿನವಿರಲ್ಲಂ ಮೆಯ್ಯಂ ಕಟಿದುಂ (?) [ಪಾಠಾಂ. ತಟಿದುಂ] ಬೆಳ್ಳಿಗಗಳಾಗಿ ತಿಳಿದಿರ್ದುವು ಮೇ [ಪಾಠಾಂ. ಮೆಯ್] ವಟಿ[ ೪ ]ಗಳೊಳಾಡುತ್ತುಂ ಪಿಂಡಟಿಯಿದೆಯಾ ಬೆಳ್ಳಿಗಂಗಳುಂ ಪಂದಿಗಳುಂ (ಸೂಕ್ತಿಸು. ೩-೩೯). [ಮೇ$_1$ + – ವಳಿ$_3$]

**ಮೇವು** (ನಾ). (ಜಾನುವಾರುಗಳ) ಆಹಾರ; ದನಕರುಗಳಿಗೆ ಹಾಕುವ ಹುಲ್ಲು, ದಂಟು ಇತ್ಯಾದಿ : ತಿಳಿನೀರನೀಂಟಿ ನೆಳಲೊಳ್ ಪಟ್ಟಿರ್ದು ಬೆಂಡೇಳ್ವ ಲೋಳೆ ಹಿಂಡಿಲ್ಗಟ್ಟಿ ಮೇವಂ ಮಗುಳ್ಚಿ (ಗಂಂಕ. ೦-೦೨೬ ಪ); ಹಸುವಿಂಗೆ ಮೇವು ಶಿಶುವಿಂಗೆ ನವನೀತವಂ . . . ಬೆಸಗೊಂಬು ದಕ್ಕಿದೇ ಕುಱುಹೆಂದು . . . ಮೆಱೆವ ಮಿಸುನಿಗಳ ಗಂಟೆಯಿಂದೆಸೆವ ಚೆಲುವಿಕೆಯನವನೀಶ ನೋಡುತ ಬಂದನು (ಶಶಕಾ. ೪-೪೦); ನಮ್ಮ ದನಕರುಗಳನ್ನು ಮೇವಿಗೆ ಬಿಟ್ಟದ್ದೆವು (ಆಹುಕ. ೦೦).

**ಮೇವುವಿಂಡಟಿ** (ಉಕ)=ದನಕರುಗಳಿಗೆ ಹಾಕುವ ಆಹಾರ, ಹುಲ್ಲು ಮುಂತಾದುವು ಎಂಬ ಅರ್ಥವನ್ನು ಸೂಚಿಸುವ ಒಂದು ನುಡಿಗಟ್ಟು: ಮೇವುವಿಂಡಟಿ ಹೊಟ್ಟು ಹುಲ್ಲು ಯಾವುದೂ ಉಳಿಯಲಿಲ್ಲ (ಕೆಳಕಾ. ೩); ನನಗೂ ಮೇವುವಿಂಡಟಿ ಇಡಾಕ ತಾವಂ ಬೇಕಲ್ಲಾ (ಪಾಂಪಾಂ. ೬).

[ಮೇ$_1$ + – ವು]

**ಮೇಷ** (ನಾ). ೧. ಕುರಿಜಾತಿಯಲ್ಲಿ ಗಂಡು; ಟಗರು : "ಅವಿಃ . . . ಮೇಷಃ, ಮೇಂಡಃ — ಈ ೮ ಕುಱಿ" (ಹಲಾಯು. ೯೭-೦೨೯); ಕರಿಮಹಿಷ ಮೇಷಮಲ್ಲಸ್ವರೂಪದಿಂ ತಮಗೆ ತಾಮೆ ಪೋಱಿ (ಅಶಪು. ೫-೬೦); ಅಂಚೆಯ ನಜಂ ಗಜಮಂ ಬಳಪ್ಪಿರಿ ಮೇಷಮುಂ ಮಾರುತಬಂಧು . . . ವೃಷಭನಂ ಹರನೇಱಿ ನಭಕ್ಕೆ ಸಲ್ವುದುಂ (ಜಗಪಿ. ೦-೩೬). ೨. ಒಂದು ನರಕದ

ಹೆಸರು : ನಾದಪ್ರವಾಹ ರುಕ್ಷಸುಪ್ರವಾಹ ಮೇಷವೆಂಬೈದು ಮಂತ್ರಿ ನರಕಂಗಳ ಮಧ್ಯದಲ್ಲಿ ಚಂಡವೆಂಬರಸುನರಕವಿಹುದು (ಏವೀಳ. ೦೩೨). ೩. [ಜ್ಯೋತಿ] ದ್ವಾದಶರಾಶಿಗಳಲ್ಲಿ ಮೊದಲನೆಯದು ; ಹನ್ನೆರಡು ರಾಶಿಗಳಲ್ಲಿ ಒಂದು : ಕನಕಂ ವೃಶ್ಚಿಕ ಮೇಷದೊಳ್ ನಿಲೆ ಚಮರೂನಾಥಂ . . . ಎನಿಕ್ಕುಂ (ಜಾತಕ. ೦೭-೦೪); ಮೇಷ ವೃಷಭ . . . ಮೀನವೆಂಬ ಹನ್ನೆರಡು ರಾಶಿಗಳುಂ (ಏವೀಳ. ೨೦೦). 'ದ್ವಾದಶರಾಶಿ' ಪರಾ. ೧, ೩: ಸಿಂಗದ ಮುಂದಣ ಕನ್ನೆಯದೇಂ ಗಡ ಮೇಷಕ್ಕೆ ಸಾಟಿಯೆನಿಕುಮೇ (ಚಂದ್ರಕೇ. ೬-೨೩). ೪. ಒಂದು ಬಗೆಯ ಸಸ್ಯ. [ಸಂ.]

**ಮೇಷಕಂಬಲ**, **ಮೇಷಕಂಬಳ** (ನಾ). ಉಣ್ಣೆಯಿಂದ ತಯಾರಿಸಿದ ಕಂಬಳಿ; ಉಣ್ಣೆಯ ಕಂಬಳಿ. **ಮೇಷಕಂಬಳ** : "ಊರ್ಣಾಯು ಮೇಷ ಕಂಬಳಮಕ್ಕುಂ " (ವಸ್ತುಕೋ. ೭೯-೦೪). [ಸಂ.]

**ಮೇಷಕಂಬಳ** 'ಮೇಷಕಂಬಲ' ನೋ.

**ಮೇಷಜ** (ನಾ). [ಜ್ಯೋತಿ]ಮೇಷರಾಶಿಯಲ್ಲಿ ಹುಟ್ಟಿದವನು: ಚಲವಿತ್ತಂ . . . ಮಾನಾನ್ವಿತಂ ಮೇಷಜಂ (ಜಾತಕ. ೦೭-೦). [ಸಂ.]

**ಮೇಷಪಂಥ** (ನಾ). ಟಗರುಗಳನ್ನು ಹುರಿದುಂಬಿಸಿ ಹೋರಾಟ ಮಾಡಿಸುವ ಒಂದು ಬಗೆಯ ಪಂದ್ಯ. — ಜೂಜು,— ಸ್ಪರ್ಧೆ : ಸಂತಸದೊಳೊಂದು ದಿನ ದಂತಿ ಮಹಿಷವು ಮೇಷಪಂಥದಾ ಮಲ್ಲ ಚರಣಾ ಯುಧವು ಲಾವುಗೆಯು ಮುಂತಾದ ಯುದ್ಧಗಳ ನೋಡಿ (ಕೃಶಂಕಾ.೯-೩೩). [ಸಂ.]

**ಮೇಷಮಾಸ** (ನಾ). [ಜ್ಯೋತಿ] ಸೂರ್ಯನು ಮೇಷರಾಶಿಯಲ್ಲಿ ಇರುವ ಒಂದು ತಿಂಗಳ ಅವಧಿ : ವಸಂತಕಾಲಾರಂಭದಿಂದ್ರ ನಡೆಯುವ ಒಂದು ತಿಂಗಳು — ಈಗಿನ ಮಾರ್ಚ್, ೨೧ ರಿಂದ ಏಪ್ರಿಲ್ ೨೧ — ಈಜಿಪ್ಟಿನ ಕುರಿಗಳು ಹೆಚ್ಚಾಗಿ ಮರಿಗಳನ್ನು ಹಾಕುವ ಕಾಲ. ಇದನ್ನು ಸೂಚಿಸುವುದಕ್ಕಾಗಿ ಆ ತಿಂಗಳನ್ನು ಮೇಷಮಾಸವೆಂದು ಕರೆದು ಆ ತಿಂಗಳಲ್ಲಿ ಸೂರ್ಯನು ತಾಳಿಯುವ ಖಗೋಳಪ್ರದೇಶವನ್ನು . . . ಮೇಷರಾಶಿ ಎಂದು ಕರೆದರು (ನಕ್ಷತ್ರ. ೯೪). [ಸಂ.]

**ಮೇಷಯುದ್ಧ** (ನಾ). = ಮೇಷಪಂಥ : ಬೆಸಸುವೊಡೇಳೇಳಲಿ ಸುಕುಮಾರ . . . ಮಲ್ಲಮೇಷಯುದ್ಧವ[ಪಾಠಾಂ. ಯಜ್ಞವ]ನೋಡೇಳಾ (ಶಕಕಾ. ೦೨-೩೦ ರಗಳೆ). [ಸಂ.]

**ಮೇಷಶೃಂಗಿ** (ನಾ). ಹೋತದ ಕೊಂಬಿನಂತೆ ಕಾಣುವ ಕಾಯಿಗಳನ್ನು ಬಿಡುವ ಒಂದು ಬಗೆಯ ಸಸ್ಯ : ಮೇಷಶೃಂಗಿಯ ಮರದ ತಿಗುಡು, ಕೇಬಲ್ಲಿಯ ತಿಗಡೆ . . . ಇಷ್ಟು ಔಷಧಿ ಸಮನಾಗಿ ಕೂಡಿ, ಗ ೧೨ ತೂಕ ವನ್ನು ೧೪ ಸಲ ನೀರೊಳಗೆ ಹಾಕಿ . . . ಕೊಡುವುದು (ವೈ. ೦೩೩). 'ಅಜಶೃಂಗಿ' ಹೋ. [ಸಂ. ಮೇಷಶೃಂಗೀ]

**ಮೇಷಸಂಕ್ರಮಣ** (ನಾ). [ಜ್ಯೋತಿ] ಸೂರ್ಯನು ಮೇಷರಾಶಿಯನ್ನು ಸೇರುವ ಕಾಲ : ಸೂರ್ಯನು ರೇವತೀತಾರೆಯನ್ನು ಸೇರಿದ ಕ್ಷಣವೇ ಮೇಷಸಂಕ್ರಮಣ (ನಕ್ಷತ್ರ. ೯೪). [ಸಂ.]

**ಮೇಷಿ** (ನಾ). ಹೆಣ್ಣುಕುರಿ. [ಸಂ. ಮೇಷೀ]

**ಮೇಷ್ಟರು** 'ಮಾಸ್ಟರು' ನೋ.

**ಮೇಷ್ಟ್ರು** 'ಮಾಸ್ಟರು' ನೋ.

**ಮೇಸ** (ನಾ). = ಮೇಷ ೧ : ಮೇಷ — ಮೇಸ ; ರೋಷ — ರೋಸ (ಶಮದ. ೨೩೩ ಕೃಪೋ). [< ಪ್ರಾ. ಮೇಸ./ಸಂ. ಮೇಷ]

**ಮೇಸು** 'ಮೇಯಿಸು' ನೋ.

**ಮೇಸ್ತ್ರಿ** (ನಾ). ಕೆಲಸಗಾರರ ಕೆಲಸದ ಮೇಲ್ವಿಚಾರಣೆ ಮಾಡುವವನು; ಕೆಲಸಗಾರರ ಮುಖಂಡ, – ಮುಖ್ಯಸ್ಥ : ಉಪಾಧ್ಯಾಯನು ಬೋಧ ಕನೂ ಅಲ್ಲ ಅಥವಾ ದುಡಿಸುವ ಮೇಸ್ತ್ರಿಯೂ ಅಲ್ಲ (ಕ್ರಿಯಾಕಿ. ೦೩೭) ; ಅನೇಕ ಮನೆಗಳನ್ನು ದಾಟಿ ಒಬ್ಬ ಬಂಗಾಲಿ ಮೇಸ್ತ್ರಿಯ ಮನೆಯನ್ನು ಹೊಕ್ಕರು (ಜಾರಕಿ. ೬೬); ಅದು ಮೇಸ್ತ್ರಿ ಕಟ್ಟಿದ ಈ ಕಲ್ಲುಗೋಡೆಯಿಂದ ಸಿದ್ಧವಾದ್ದಲ್ಲ (ಕಿಶಿಂಧ. I. ೨೧೩). [←ಪೋರ್ಚ್. ಮೇಸ್ಟರ್, ಮೇಸ್ತ್ರ./ ಹಿಂ. ಮಿಸ್ತ್ರೀ, ಮಿಸ್ತರೀ = ಕೈಕೆಲಸಗಳಲ್ಲಿ ಕುಶಲನಾದವನು; ಚತುರ ಶಿಲ್ಪಕಾರ; ಮರಾ. ಮೇಸ್ತ್ರ, ಮೇಸ್ತರೀ, ಮೇಸ್ತ್ರೀ]

**ಮೇಹ** (ನಾ). ೧. ಮೂತ್ರ. ೨. ಮೂತ್ರಸಂಬಂಧವಾದ ರೋಗ ; ಸಕ್ಕರೆಖಾಯಿಲೆ. ೩. ಜನನೇಂದ್ರಿಯ ಸಂಬಂಧವಾದ ರೋಗ: ಗುಹ್ಯರೋಗ : "ಜ್ವರ ಕುಷ್ಠ ಭಗಂದರ ಮೇಹ ರಾಜಯಕ್ಷ್ಮಾದಿ ಭೇದಭಿನ್ನಂ ರೋಗಂ" (ವಸ್ತುಕೋ. ೬೨-೩೩). ೪. ಟಗರು; ಮೇಷ.[ಸಂ].

**ಮೇಹನ** (ನಾ). ೧. ಮೂತ್ರವಿಸರ್ಜನೆ. ೨. ಮೂತ್ರ. ೩. ಪುರುಷನ ಜನನೇಂದ್ರಿಯ; ಶಿಶ್ನ: "ಶಿಶ್ನಃ, ಶೇಫಃ, ಮೇಢ್ರಃ, ಲಿಂಗಂ, ಮೇಹನಂ, ಶೇಫಸ್ — ಈ ೬ ಶೇಫಂ" (ಹಲಾಯು. ೬೩-೩೬೦); ತಲೆ ಮೇಷಂ ವಕ್ತ್ರಮುಂ ಕಂಠಮುಮೆನಿಪೆರಡುಂ ಸ್ಥಾನಮುಕ್ಷಂ . . . ವೃಶ್ಚಿಕವಸತಿ ಗುದಂ ಮೇಹನಂ . . . ಮೀನೋದಯಂ ಬಾಲಮಕ್ಕುಂ (ಜಾತಕ. ೩-೩). ೪. ಕೂಟ ; ಸಂಭೋಗ. [ಸಂ.]

**ಮೇಹನತ್** 'ಮೆಹನತ್ತು' ನೋ.

**ಮೇಹನತ್ತು** 'ಮೆಹನತ್ತು' ನೋ.

**ಮೇಹನದ್ವಾರ** (ನಾ). ಮೂತ್ರದ್ವಾರ ; ಜನನೇಂದ್ರಿಯದ ನಾಳ : ಭಾರ್ಗವನು ನುಂಗಿದನು ರೋಷದಿ ಭರ್ಗನಾ ಸಮಯದಲಿ ಕವಿಯಾ ದುರ್ಗಿಯಧಿಪನ ಜಠರಮಧ್ಯದಿ ತೊಳಲಿ ಮಿಗೆ ಬಳಲಿ ನಿರ್ಗಮಿಸುವರೆ ಬೇಜ್ ಕಾಣದೆ ಮಾರ್ಗವನು ಪುರಹರನ ಗರ್ಭದೊಳೊರ್ಗುಡಿಸಿ ತನು ಮೇಹನ ದ್ವಾರದಲಿ ಪೊಱಮಟ್ಟು (ಕುಮಾ. ೬-೪) ; ಮುದದಲತಿತೇಜಸ್ವಿ ಯನು ಮಾಡಿದನು ತನ್ನಯ ಮೇಹನದ್ವಾರದಲಿ ಸಂಜನಿಸಿದುದರಿಂದಾ ದೈತ್ಯ ಸಚಿವನನು (ಕುಮಾ. ೬-೬). [ಸಂ.]

**ಮೇಹರೋಗ** (ನಾ). = ಮೇಹ ೩: ಮೇಹರೋಗ, ಊರುಸ್ತಂಭ, ಕುಷ್ಠ . . . ನೇತ್ರರೋಗಗಳಿಂದ ಪೀಡಿತರಾದವರು, ಅತಿಸ್ನಿಗ್ಧರು–ಲಂಘನಚಿಕಿತ್ಸೆಗೆ ಅರ್ಹರು (ಕಶಕೋ. I. ೬೩೨). [ಸಂ.]

**ಮೇಹಬಾನಗಿ** 'ಮೆಹಬಾನಗಿ' ನೋ.

**ಮೇಹು** 'ಮೇವು' ನೋ.

**ಮೇಹುಗಾಡು** 'ಮೇವುಗಾಡು' ನೋ.

**ಮೇಹುಗಾಱ** (ನಾ). (ಆಲು) ಜಾನುವಾರುಗಳಂತೆ ಕಂದಮೂಲಾದಿ ಗಳನ್ನು ತಿನ್ನುವವನು; ಸಾಹುಕಗಳಲ್ಲಿಲ್ಲ ಹರಿ ತುಱುಗಾಹಿ ಪಾಂಡವರೈವರ ಡವಿಯ ಮೇಹುಗಾಱರು ಬಂದ ಭೂಭುಜರೆಲ್ಲ ತಾ ನೆರವಿ (ಕುಪಾ. ೪೮. ೦-೦೦). [ ಮೇಹು (< ಮೇವು) + – ಕಾಱ ]

**ಮೇಹುಗೊಳ್** 'ಮೇವುಗೊಳ್' ನೋ.

**ಮೇಳ** 'ಮೇಲ' ನೋ.

**ಮೇಳಂಗೆಯ್** (ಕ್ರಿ). ಶ್ರುತಿಯನ್ನು ಮಾಡು; ಶ್ರುತಿ ಕೂಡಿಸು : ಚಿನ್ನಕಿನ್ನರಿಯುಂ ತೆಗೆದು ಮೇಳಂಗೆಯ್ದಾ [ಪಾಠಾಂ. ಗೈದಾ]ಳಾಪಿಸಿ (ರಾಜಶೇ. ೦-೦೩೩ ವ); ಮೇಳಂಗೆಯ್ದು[ಪಾಠಾಂ. ಗೈದು]ವಿನ್ಯಸುತ್ತ ಶ್ರುತಿಯುಂ ವೀಣೆಯುಂ ವಕ್ಷದೊಳ್ ಮೇಣ್ ತಾಳುತ್ತಂ (ರಾಜಶೇ. ೦೦-೯೭).

[ ಮೇಳ (=ಮೇಲ) + ಕೆಯ್₁ ]

**ಮೇಳಂಗೊಳ್**, ಮೇಳಗೊಳು, ಮೇಳಗೊಳ್ಳು (ಕ್ರಿ). ಸೇರಿಕೊಳ್ಳು; ಹೊಂದಿಕೊಳ್ಳು : ಓರೆಂಜಲ್ಗೊರ್ಬನಂತಿಗೆ ಮಾರವ ಏಳರೊಡನೆ ಬೆರಸಿ ಮೇಳಂಗೊಂಡಂದಾರುಂ ಲಘುವಪ್ಪರ್ ಪ್ರಸ್ತಾರದೊಳಮರ್ದುಂಬ "ಶಿಥಿಲ ಸಂಯೋಗದವೊಲ್" (ಛಂದೋ. ೨೩೯) ; ಮೇಳಂಗೊಂಡ ಕುಂಭಸ್ಥಲದ ಸಾಂದ್ರಸಿಂದೂರರೇಣುಪ್ರಸರಮುಂ (ಜಗಂ. ೬-೩೩ ವ). **ಮೇಳಗೊಳು** :

ಮೋಳಗೊಳುವುದವನೊಳು ಪೋರೆ ಮಿಾಜಿದೆ (ಹರಿ. ೩–೪೯) **ಮೋಳಗೊಳ್ಳು**: ಅವರ ಶಾರೀರಿಕ ಮಾನಸಿಕ ಬಯಕೆಗಳೂ ಮೇಳಗೊಳ್ಳಬೇಕು (ಪುಪುರಾ. ೦೦೭). [ ಮೋಳ (= ಮೇಲ) + ಕೊಳ್₁ ]

**ಮೋಳಂಬ** (ನಾ). ದುಂಬಿ ; ಭ್ರಮರ : "ಮೋಳಂಬ=ತುಂಬಿ" (ಕಮುದ. ಶಂ. ೨); "ವಲ್ಲಳಿ ಪಚಿವ . . . ಮೋಳಂಬವಲರುಣಿ ಬಂಡು ಣೆಯ ಚಿತ್ರವಿಹಗವಾಕ್ಯಂ" (ಕಪ್ಕೃ. ೦೩); ಅಡಿಗಡಿಗೆ ಜಗ್ಗಿಪ ಮೋಳಂಬದ ಮೊರೆಯ ಗುಡುಗುವ ಬಲ್ದನಿಯಾಗೆ (ರಾಮಾಶ್ವ. ೫೯-೦೩).

[ ?./ ತೆಲು. ಮೊಗರಯು ]

**ಮೋಳಕ** ' ಮೋಲಕ ' ನೋ.

**ಮೋಳಕಟ್ಟು** ' ಮೋಳಗಟ್ಟು ' ನೋ.

**ಮೋಳಗಟ್ಟು**, ಮೋಳಕಟ್ಟು (ಕ್ರಿ). ೧. ಜೊತೆ ಸೇರು; ಸಹವಾಸ ಮಾಡು : ಉಡಾಳರ ಮೇಳಗಟ್ಟಿ ಇಸ್ಪೀಟು ಆಡುವುದರಲ್ಲಿ ವೇಳೆಗಳೆ ಯುತ್ತಾನೆ (ಗಂಪಾಡು. ೧೫೭). **ಮೋಳಕಟ್ಟು** : ೨. ಯಕ್ಷಗಾನ, ನೃತ್ಯ ಮುಂತಾದುವುಗಳ ಪ್ರಸಂಗವನ್ನು ಏರ್ಪಡಿಸು : ಇವತ್ತು ಪಕ್ಕದ ಊರಿನಲ್ಲಿ ಮೇಳಕಟ್ಟುತ್ತಾರಂತೆ (ರೂಢಿ). ೩. ವೀಣೆ ಮುಂತಾದ ವಾದ್ಯಗಳಲ್ಲಿ ಬೇರೆಬೇರೆ ಸ್ವರಸ್ಥಾನಗಳನ್ನು ನಿರ್ದೇಶಿಸುವ ಮೆಟ್ಟಿಲನ್ನು ಕಟ್ಟು.– ರಚಿಸು : ಅವರು ಹಳೆಯದಾಗಿದ್ದ ವೀಣೆಯನ್ನು ಮೇಳ ಕಟ್ಟಿ ಸರಿ ಮಾಡಿದರು (ರೂಢಿ). [ಮೋಳ (= ಮೇಲ) + ಕಟ್ಟು₁]

**ಮೋಳಗಾನ** (ನಾ). ೧. (ನಾಟ್ಯಕ್ಕೆ) ಹೊಂದಾಣಿಕೆಯಾಗುವ ಗಾಯನ : ಮೇಳಗಾನಧ್ಯಾನದಿನಿದನು ಕೇಳಿ ಸಿಕ್ಕದರಾರು (ಶ್ರೀಕುಂ. ೪-೭೦). ೨. ಸಾಮೂಹಿಕವಾಗಿ ಹಾಡುವುದು ; ಸಮೂಹಗಾಯನ : ಸಂಜೆಯ ವೇಳೆ ಮೇಳಗಾನ ನಡೆಸಬಹುದಿತ್ತು (ಕುಸರು. ೫೦೨). [ಸಂ. ಮೇಲಗಾನ]

**ಮೋಳಗಾರ** ' ಮೋಳಗಾಜ ' ನೋ.

**ಮೋಳಗಾರ್ತಿ** (ನಾ). ಜೊತೆಗಾತಿ ; ಒಡನಾಡಿ : "ಸಬ್ಬವಕಾರ್ತಿಯ ಘಟಿಸಲನೆ ತಾಂ ಮೋಳಗಾರ್ತಿ[ಪಾಠಾಂ. ದಾಕೆ]ಯೆನಿಪಳ್" (ಕವಿಕಂ. ೧೭೦).

[ಮೋಳಗಾಜ + – ತಿ₁ (< – ಇತ್ತಿ)]

**ಮೋಳಗಾಳೆಗ** (ನಾ). ತೋರಿಕೆಯ ಹೋರಾಟ ; ಕ್ರೀಡಾಯುದ್ಧ : ಕಾದುವ ಮಾಟಿಕೆಯಲ್ಲವಿದು ಕವ್ಮನೆ ನಣ್ಪನೆ ಮೋಳಗಾಳೆಗಂಗಾದುವ ನಾಟಿಕೆ (ಶಂರಶಾ. ೦೩-೪೩). ' ಮೇಲುಗಾಳೆಗ ' ಹೋ.

[ಮೋಳ (= ಮೇಲ) + ಕಾಳೆಗ]

**ಮೋಳಗಾಜ**, ಮೇಳಗಾರ (ನಾ). ೧. ಜೊತೆಗಾರ ; ಒಡನಾಡಿ : 'ಮೇಳಗಾರ್ತಿ' ಪರಾ. ೨. (ಹಿನ್ನೆಲೆಯಲ್ಲಿ) ವಾದ್ಯ ಬಾರಿಸುವವನು ಅಥವಾ ಗಾಯನ ಮಾಡುವವನು : ನೆಗಟ್ಟಿಯ ಮಿಂಡರ ಮೇಳಗಾಜರಕ್ಕರಿಗರ ಸಂದ ಕಬ್ಬಿಗರ . . . ಬಾಜಪ ಬೀಣೆಗಾಜರಾಗರಮನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಕಬ್ಬಿಕಾ. ೪೨); ಭರತಜ್ಞ ಮೇಳಗಾಜರಿಗೆ ಭೂಷಣಗಳ ಸುರುಚಿರ ವಸನಕರ್ಪೂರದ ಪರಿಮಳ ವೆರೆದ ವೀಳಯಂಗಳನಿತ್ತಾಗ ನರಸರಾಜೇಂದ್ರ ಮನ್ನಿಸಿದ (ಕಂಪವಿ. ೬–೬೯). **ಮೋಳಗಾರ** : ೨.ಗುಡುಗಿನ ದನಿಯಂ ಕೇಳಿದ ಕೂಡಲೇ ಆ ಮೇಳಗಾರರು ತಮ್ಮ ವಾದ್ಯಗಳನ್ನು ಗಟ್ಟಿಯಾಗಿ ಬಾರಿಸಬೇಕೆಂದು ಅವನ ಅಪ್ಪಣೆ ಯಾಯಿತು (ಮಡಿಸ. ೫೪). [ಮೋಳ (= ಮೇಲ) + – ಕಾಜ]

**ಮೋಳಗೀತ** (ನಾ). ಸಾಮೂಹಿಕವಾಗಿ ಹಾಡುವ ಹಾಡು : ಇದರಲ್ಲಿ ಎರಡು ಪ್ರಕಾರಗಳಿದ್ದುವು. ಒಬ್ಬನೇ ಹಾಡುವಂತಹ ಏಕಗಾಯಕಗೀತ, ಮತ್ತು ಸಮೂಹದಲ್ಲಿ ಹಾಡುವ ಮೇಳಗೀತ (ಶಿಂಕಾ. ೨೦೯). ☞ ಇದು ಇಂಗ್ಲಿಷಿನ ' Chorus ' ಎಂಬ ಶಬ್ದದ ಅನುವಾದರೂಪ.

[ಸಂ. ಮೇಲಗೀತ]

**ಮೋಳಗೀತೆ** (ನಾ). = ಮೇಳಗೀತ : ರಂಗವಾಚಿಗೆ ಹೀಗೆ ಒಯ್ಯಲ್ಪಟ್ಟ ಮೇಳದವರು . . . ಮುನ್ನೆಲೆಯ ಮೇಳರಂಗದಲ್ಲಿ ಬಂದಿದ್ದು ತಮ್ಮ ಮೇಳಗೀತೆಯನ್ನು ಹಾಡಿರಬಹುದು (ಶಿದ್ಕೃತ್ರ. LVi, ನಾಟಕದ ಸಮುಸ್ಯ).

[ಸಂ. ಮೇಲಗೀತಾ]

**ಮೋಳಗೂಡು** (ಕ್ರಿ). ಒಟ್ಟಿಗೆ ಸೇರು; ಒಟ್ಟುಗೂಡು : ಆ ತೆರೆಯ ಹಿಂದೆ ಮೇಳಗೂಡಿ ಚಿಕ್ಕಗಳೆಲ್ಲ ಸೌಂದರ್ಯಶಕ್ತಿಯನ್ನು ಕುರಿತು ಇಂತು ಹಾಡಿದುವು (ಕೃಶಾಕು. ೨-೬). [ಮೋಳ (= ಮೇಲ) + ಕೂಡು₁]

**ಮೋಳಗೊಳು** ' ಮೇಳಂಗೊಳ್ ' ನೋ.

**ಮೋಳಗೊಳ್ಳು** ' ಮೇಳಂಗೊಳ್ ' ನೋ.

**ಮೋಳಣೆ** (ನಾ). ಕೂಡುವಿಕೆ : ಸೇರುವಿಕೆ; ಹೊಂದಾಣಿಕೆ : "ಮೋಳಣೆ— ಮೇಲನ = ಕೂಡುವಿಕೆ, ಬೆರಕೆ" (ಶಬ್ದಕೋ. ೩೭). ' ಮೋಳಣೆವಡೆ ' ಪರಾ. [ಮೋಳ (= ಮೇಲ) + – ಅಣೆ₄]

**ಮೋಳಣೆವಡೆ** (ಕ್ರಿ). ಹೊಂದಿಕೊಳ್ಳು; ಸೇರಿಕೊಳ್ಳು : ಸುರವಾದಕರ ವಾದ್ಯಪ್ರಹರಣಪದ್ಧತಿಯೊಳ್ ಪವಣ್ಪಡೆದ ತಾಳದೊಳ್ ಮೇಳಣೆ ವಡೆದು . . . ನಾನಾಪ್ರಬಂಧಾದಿ ನಿಬದ್ಧಗೀತಂಗಳ ಮಧುರಧ್ವಾನ ಮಾನಂದವಮಂ ಪುಟ್ಟಿಸೆ (ಪುಹಾವೇ. ೦೯–೫೬ ವ). [ಮೋಳಣೆ + ಪಡೆ₁]

**ಮೋಳನ** ' ಮೇಲನ ' ನೋ.

**ಮೋಳಯು**, ಮೋಳವ, ಮೋಳೆಯು (ನಾ). ೧. ಕೂಟ ; ಸೇರಿಕೆ : ಹೊಂದಿಕೆ : ಸಾಮರಸ್ಯ. ೨. ಗುಂಪು; ಸಮೂಹ : ಕೋಲ ಕೋಳಾಹಳಕೆ ತೇರಿನ ಗಾಲಿಗಳನೊಡ್ಡಿದರು ಹರಿಗೆಯ ಹೇಳಿದರು ಹಮ್ಮುಗೆಯ ಕೊಯ್ದೊಡ್ಡಿದರು ಜಿಂಜಿಗಳ ಮೇಳ[ಪಾಠಾಂ. ಳೆ]ಯವ ಮೋಹಿದರು (ಕುವ್ಯಾಕ. ೨೯-೦೯) ; ಕೋಳಿ ತಗರು ಕಾಡಕೋಣ ಕೂರಾನೆ ಮಾಸಾಳು ಮಲ್ಲರು ಮೊದಲಾದ ಮೇಳಯದಲ್ಲಿ[ಪಾಠಾಂ. ಮೇಳದಲ್ಲಿ, ಮೇಳಯದರ್ತಿ] ಗಾಳಿಗದೊಳಗಾ ನೃಪಬಾಲಕ ದಿನವ ನೂಕುವನು (ಶ್ರೀಕಾಂ. ೨-೬೯). **ಮೋಳವ** : ೧. ಪಯುದಳದ ಸುಭಟರ ಸಿಂಹಗರ್ಜನೆಯ ಮೇಳವದ ಲೆನ್ನಾನೆಗಳ ಬರಹೇಳು (ಕುವ್ಯಾದ್ರೋ. ೪-೨೦) : ಆಶೆ ಬೀತುದು ನಮಗೆ ರಾಜ್ಯಶ್ರೀಸತಿಯ ಮೇಳಣ ಮನಕ್ಕಫಲಾಷೆಯಾದುದು ಮುಕ್ತಿವನಿತೆಯ ಕೇಳಿಮೇಳದ (ತೊರಣ. ೨-೦-೦೨). ೨. ಶಾಲಿಗೆಜಿಗಿದ ಗಿಳಿಯನಬಲೆಯ ರಾಶಿವರಲಿಂದಿಡಲು ತಪ್ಪಿ ಪಿಶಾಲಪುಂಡ್ರೇಕ್ಷುಗಳ ಕೊಳೆ ಗಂಟೊಡೆದು ರಸವಿಳಿಯೆ ಮೇಳವದಿ ಪಥಿಕರ್ಕಳೆಂಟಿ (ಶೀವಂಶ. ೨-೦೦) ; ಮೇಳವದ ರೆಷೀಂಕೃತಿಯ . . . ಕೈರವಸಂಚಯದ ಸೌರಭ್ಯಪವನನಿನೆಸೆವುದಾ ಸರಸಿ (ತೊರಣ. ೨-೪-೨೦). ೩. ಸಭೆ; ಸಮಿತಿ; ಗೋಷ್ಠಿ : ಅಂಧಾಸುರನ ರಾಜ್ಯದ ಮೇಳವನ[ವ]ನೇನೆಂಬೆ . . . ಏಳುವರೆಯೋಜನದಲೋಲಗಶಾಲೆ ತುಂಬಿತು ಸುಭಟಸಮುದಯದೋಳಿಯಲಿ (ಶಂಭಶ. ೫-೬೮). ೪. ಗಾನ್ಯವಾದ್ಯಗಳಿಂದ ಕೂಡಿದ ನೃತ್ಯ : ಗೀತ ಜತಿಗಳ ಮೇಳವಕೆ ಕೆಲರೋತು ಕುಣಿವರು ಚಪ್ಪಳಿಕ್ಕ ಪುರಾತನರ ತತ್ತ್ವಾರ್ಥವಂ ವಿಸ್ತರಿಸುವರು ಕೆಲವರು (ಬಸವು. ೪-೬) ; ಸರಸತರಸಂಗೀತನರ್ತನದ ಮೇಳವದ ನೆರೆ ನೆರೆದ ಚತುರಂಗದೊಡ್ಡುಗಳ ಸಂದಣಿಯ ದೊರೆದೊರೆಗಳೈತಂದರುತ್ಸವ ದೊಳರಸನು ಕಾಣಲಚ್ಯುತನ ಕೂಡೆ (ಕೈಬಶಾ. ೩೩-೨೭). **ಮೋಳೆಯು** : ೧. ನಿನ್ನಾಳ ಜಯಸಿರಿ ಸರ್ಪಬಾಣದ ಮೇಳೆಯದ ಸೀಮೆಯಲಿ ನಿಂದುದು (ಕುವ್ಯಾಕ. ೨೬-೧). ೨. ಒದವಿ ಪೊದಟ್ಟಿ ಮೇಳೆಯದ ಕೇತನಮಾಳಿಕೆ ವೀರಲಕ್ಷ್ಮಿ ದೂರದ ಭಟರಂ ನಿಜೋಚ್ಚಲಿ ಪಟಾಂಚಲದಿಂ ಕರೆವಂತುಟಾಗೆ (ಕುಕೃಕು. ೨-೭೦) ; ಕೋಲುಗಳನಾ ಹರಿಗೆ ಹಲಗೆಯ ಮೇಳೆ[ಪಾಠಾಂ. ಳ] ಯವನಾ ಮಣಿಯುಲುಗಿದೆಸುವಾಳನೊಂದಂಬಿನಲಿ ಸಂದಣಿಗೆಡಹಿದನು ಪಾರ್ಥ (ಕುವ್ಯಾಕ. ೨೦-೨೩) : ತಳಿಯ ಮೇಳೆಯದ ಸಂಚರಿಪ ಪತಾಕಾಕುಳ ದಿಂದುರುವೀರಲಕ್ಷ್ಮಿ ಕಲಿಗಳ ಕೈವೀಸಿ ಕರೆವಂತಿಹವಲ್ಲಿ (ಕುಶಾಕಾಂ. ೪-೬೪):

[ < ಪ್ರಾ. ಮೇಲಯು, ಮೇಲವ. / ಸಂ. ಮೇಲಕ]

**ಮೇಳಯಿಸು** ' ಮೇಳಿಸು ' ನೋ.

**ಮೇಳಯ್ಸು** ' ಮೇಳಿಸು ' ನೋ.

**ಮೇಳರಂಗ** (ನಾ). (ಪುರಾತನ ಗ್ರೀಕ್‌ನಾಟಕಶಾಲೆಗಳಲ್ಲಿ ಬಳಕೆಯಿದ್ದ) ರಂಗದ ಮುಂಭಾಗದಲ್ಲಿ ಮೇಳದವರು ಹಾಡಲು ಮತ್ತು ಕುಣಿಯಲು ರಚಿಸುತ್ತಿದ್ದ ಅರ್ಧವೃತ್ತಾಕಾರವಾದ ವೇದಿಕೆ.— ಜಗಲಿ: ರಂಗದಾಚೆಗೆ ಹೀಗೆ ಬಿಡಲ್ಪಟ್ಟ ಮೇಳದವರು ತಾತ್ಕಾಲಿಕವಾಗಿ ಒಂದೆಡೆಯಿದ್ದು ಅಥವಾ ಮುನ್ನೆಲೆಯ ಮೇಳರಂಗದಲ್ಲಿ ಬಂದಿದ್ದು, ಮೇಳಗೀತೆಯನ್ನು ಹಾಡಿರಬಹುದು (ಐದ್ಕೃ. lvi. ನಾಟಕದ ಸಮಸ್ಯೆ) : (ಪುರಾತನ ಗ್ರೀಕ್‌ನಾಟಕಶಾಲೆಗಳಲ್ಲಿ ರಂಗದ ಮುಂಭಾಗದಲ್ಲಿ ಮೇಳದವರು ಹಾಡುತ್ತ ಕುಣಿಯುತ್ತಿದ್ದ ಅರ್ಧವೃತ್ತಾಕಾರದ) ಮೇಳರಂಗ (Orchestra. ಇಂಗ್ಲಿ). [ಸಂ. ಮೇಲರಂಗ]

**ಮೇಳವ** ' ಮೇಳಯ ' ನೋ.

**ಮೇಳವಡೆ** (ಕ್ರಿ). ಜೊತೆ ಸೇರು; ಒಟ್ಟುಸೇರು : ತಾಳಧಾರಿಗ ನಟುವಿಗ ಗಾಯಕರು ನಿಜ ಮೇಳವಡೆದ ವಾದ್ಯದವರು ಸೂಳೆಯರುಗಳು ಸುವರ್ಣಾನಿಗಳ್ ಪಣ್ಯಲಜಾಲದ ವಣಿದರಾಕ್ಷಣದೆ (ಕಂಪಂ. ೨೬-೨೭).

[ಮೇಳ (= ಮೇಲ) + ಪಡೆ$_1$]

**ಮೇಳವಣೆ** (ನಾ). ೧. ಕೂಟ ; ಹೊಂದಿಕೆ ; ಸಾಮರಸ್ಯ : ಧರ್ಮದ ಮೇಳವಣೆಯಿಲ್ಲದೊಡೆ ಕೊಲುವರೆ ಪಾಲಕನ (ಶಿಶಾಗ. ೬-೨-೦) : ಮೇಳವಣೆಯನು ನೆನದು ಲೋಕದಿ ಕೋಳುಹೋದನು ಹಿಂದೆ ತನಗಾಳಾಗಿ ಬಳಲಿದ ವಾನರರ ನೆನನೆನದು ಮರುಕೊಳಿಸಿ (ಮುಶಿರಾ. ೬-೦). ೨. ಗುಂಪು; ನೆರವಿ: ಸಮೂಹ: ಗಾಳುಗಜಜ್ಜೆನ ಕಹಳೆಗಳ ಕಳಕಳದ ಬೊಗ್ಗುಗಳ ಮೇಳವಣೆ ಭುಗಿಲಿಡಲು . . . ಎರಡುಬಲ ಹೊಯ್ದಾಡಿತೂಡಗಲಿಸಿ (ಕುವ್ಯಾಶಿ. ೬-೯). ೩.ಗಾನವಾದ್ಯಗಳಿಂದ ಕೂಡಿದ ನರ್ತನ : ತಾಳಧರರೊಂದೆಸೆಗೆ ಅವುಜಗರೊಂದೆಸೆಗೆ ಮೇಳವಣೆಯೊಂದೆಸೆಗೆ (ರಾಜೊಮ್ಮ. ೦೪೦-೨೯) ; ತಾಳಂ ನರ್ತನಮುಂ ಕರೆವುತ್ತಿರೆ ಮೇಳವಣೆಗೆ ಶಬ್ದಂ ಕೊಡುತ್ತಿರೆ (ಶೃಂಗಾರ. ಹ. ೪೬೬-೧೬) ; ಸೊಗಸಿನ ಮೇಳವಣೆಗಳ ಜೇಂಟೆಯಾಯಿತು ಮುಪದಪುರಿಯೊಳಗೆ (ಸಂಕ್ಷಕ. ೨೮-೨೨). 'ಮೇಳಣೆ' ಪರಾ.

[ಮೇಳವ (<ಮೇಳಯ) + — ಅಣೆ$_4$]

**ಮೇಳವಾಡು** (ಕ್ರಿ). ೧. ಜೊತೆ ಸೇರು ; ಒಡಗೂಡು : ಮಲ್ಲೀಲಾಮೆಯುಂ ಮೇಳವಾಡಿ ವನೇಜಾತಿನಿಯುಂ ಎಡಂಬಿಸಿ ವಿನೋದಂಬೆತ್ತು ಬಂದತ್ತು . . . ಮಾರುತಂ (ಜಗಶಿ. ೦೬-೧೧೦) ; ಹೇಳುಹೇಳನ್ನೇನು ಮಾರಿಯ ಮೇಳವಾಡಿದನೇ ಜಯದ್ರಥನಾಳುತನವನು ಬವರದಲಿ ತನ್ನೊಡನೆ ತೋರಿದನೆ (ಕುವ್ಯಾದ್ರೊ. ೬-೪೪). ೨. ವಿನೋದವಾಡು ; ಕ್ರೀಡಿಸು : ಕೂಡಲಸಂಗಮದೇವಾ ನಿಮ್ಮ ಹೇಳಿದ ಹೇಳಿಕೆಯಿಂದ ಪಿಂಬೇರ ಮ್ಯಾಲಿಗೆ ಮೇಳವಾಡುತ್ತಿದ್ದ ಕಾಣಾ ತ್ರೈಜಗದೊಳಗೆ (ಬಸವ. ೫೬೭).

[ಮೇಳ (=ಮೇಲ) + ಆಡು$_1$]

**ಮೇಳವಿಕೆ** (ನಾ). ಹೊಂದಾಣಿಕೆ : ಸಂಯೋಜನೆ : ಪಾತ್ರಗಳ ದಿವ್ಯ ಮಾನವಅಂಶಗಳ ಮೇಳವಿಕೆಯಲ್ಲಿ ಹೊಂದಿಕೆ ಕಡಿಮೆಯಾಗಿದೆ (ಕಸಾಕ. ೦೭೪).

[ಮೇಳವ (< ಮೇಳಯ) + — ಇಕೆ]

**ಮೇಳವಿಡಿ** (ಕ್ರಿ). ಜೊತೆಯಲ್ಲಿ ಸೇರು ; ಹೊಂದಿಕೊಳ್ಳು : ನೀಲದ ತನುರಸದೊಳಗೊಂಡು ಕಗ್ಗಳ ಮೇಳವಿಡಿದು ಕಳೆಗೊಂಡು ಶೂಲಿಯರ್ಧಾಂಗಿಪೊಪ್ಪಿರ್ದಳು ನಿರ್ಮಲಕಾಳಿಕಾಂಬಿಕೆ ಸಲಹೆನ್ನ (ಅಶ್ವರಾ. ೦-೫).

[ಮೇಳ (=ಮೇಲ) + ಪಿಡಿ$_1$]

**ಮೇಳವಿಸು** ' ಮೇಳಿಸು ' ನೋ.

**ಮೇಳವೆಣ್ಣು** (ನಾ). ಮೇಳದವಳು ; ನರ್ತಕಿ : ದೊರೆರಾಯನ ನಾರಿಯ ಮೇಳವೆಣ್ಣುಗಳುಜ ನಾಲ್ಕುದೆಸೆಯ ದೇಸಗಳ ಬಿರುದಿನ ಗಣಿಕೆಯರ್ಪುರವರನಾರಿಯರಿರದೆ ಸಿಂಗರಿಸಿಯ್ಕೈದಿವರು (ಕೆಂಪಶಿ. ೨೦-೬೪).

[ಮೇಳ (=ಮೇಲ) + ಪೆಣ್ಣು (<ಪೆಣ್)]

**ಮೇಳಾಪ** ' ಮೇಲಾಪ ' ನೋ.

**ಮೇಳಾಪಕ** ' ಮೇಲಾಪಕ ' ನೋ.

**ಮೇಳಾಪಿಸು** ' ಮೇಲಾಪಿಸು ' ನೋ.

**ಮೇಳಾವ** (ನಾ). ಕೂಟ ; ಸೇರಿಕೆ : ಹೊಂದಿಕೆ : ಆವರಿಸಿದುದು ಮತ್ತೆ ಹೊಸಮೇಳಾವದಲಿ ಕುರುಸೇನೆ (ಕುವ್ಯಾಕ. ೦೪-೨೮).

[< ಪ್ರಾ. ಮೇಲಾವ./ಸಂ. ಮೇಲಾಪ]

**ಮೇಳಿ** ' ಮೇಂಟಿ ' ನೋ.

**ಮೇಳಿಸು**, ಮೇಳಯಿಸು, ಮೇಳಯ್ಸು, ಮೇಳವಿಸು, ಮೇಳೈಸು (ಕ್ರಿ). ೧. ಸೇರು ; ಜೊತೆಯಾಗು : ಜೊತೆಗೂಡು : "ಮೇಳಿಸು – ಸಂಯೋಗೇ" (ಶಮದ ) ; ಪಾಂಡವರೊಳ್ ನೀಂ ಮೇಳಿಸಿ ನಣ್ಪನೆ ಬಗೆದಿರ್ ಜೋಳದ ಪಾಟಿಯುಮನಿನಿಸು ಬಗೆಯಿಂ ನಿಮ್ಮೊಳ್ (ಪಂಭಾ. ೦೦-೦೫) : ನೆನೆಯಿಸಿದಳಬಳೆ ಮಧುಲಕ್ಷ್ಮಿ ಮೇಳಿಸಿರ್ದಳಲತೆಯಂ (ವರ್ಧಶ. ೫-೪೫) ; ಶ್ರೀಮದಮಳಮಹಿಮ ಕ್ಷೀರಾಂಬುಧಿಸೋಮನುದಗ್ರಬಲೋದ್ಧಟದೇವಂ ವಾಮೆಯೊಡನೆ ಮೇಳಿಸುತರ್ವಿಯನುರ್ವಿಂ ಪಾಲಿಸುತಿರ್ದಂ (ಉದ್ಧರೆ. ೨ ಸೂಕ್ತ). ೨. ಕೂಡು : ಸಂಭೋಗಿಸು : ನಯದೊಳೆ ನೋಡಿ ನೋಟದೊಳೆ ಮೇಳಿಸಿ ಮೇಳದೊಳಪ್ಪುಕೆಯ್ದು (ಪಂಪಭಾ. ೪-೯೪) ; ಮಾಣಿಕದ ಕಂಬೊಳಪಂ ಬಿಸಿಲೆಂದು ನಟ್ಟಿರುಳ್ ಮೇಳಿಸುಗುಂ ರಥಾಂಗು (ಕಾರಾಮಾ. ೦-೦೨೭). ೩. ಹತ್ತಿರ ಬರು ; ಸಮೀಪಿಸು : ರೂಕ್ಷಾಳಕಂಗಳನೋಸರಿಸುತ್ತುಂ ಮೆಲ್ಲನೆ ಮೇಳಿಸಿ ಕನ್ನೆಯಂ ನುಡಿವಳ್ (ಅದಿಪು. ೩-೩೦) : ಮೆಲ್ಲನೆ ಮೇಳಿಸಿ ಪರ್ಬುವ ಲಲ್ಲೆಯಿಸುವ . . . ಮುನಿಯಲ್ಲಿ ಜಿನೋಕ್ತಿಯನೆ ಕೇಳಲಾಗದು ಚತುರಂ (ರಮಣಿಮ್ನ. ೬-೨೦೨). ೪. ಕೂಡಿಸು ; ಸೇರಿಸು : ಹೊಂದಿಸು : ಅಳವಡಿಸು : ಕೆಂಗಣಿಯಂ ಸರಂಗಳೊಳ್ ಮೇಳಿಸಿ ಸುತ್ತುಮಿರ್ಪ ಶಬರರ್ಕಳಿನೊಪ್ಪಿದುದೊಂದು ಪಕ್ಕಣಂ (ಕಾಸುಮಾ. ೧೦-೦೪೮) ; ಕರ್ಮವು ಮೇಳಿಸಿದ ಬೇಳಂಬವಲ್ಲದೆ ಬೇಟ ಪೆಜತಲ್ಲ (ಸಾಕ್ಷಾ. ೦೬-೩೪). ೫. ಆಕರ್ಷಿಸು ; ಸೆಳೆ : ಬಾಳದಿನೇಶಬಿಂಬದ ನೆಬಿಲ್ ಜಲದೊಳ್ ನೆಲಸಿತ್ತೊ ಮೇಣ್ ಘನೇಂದ್ರಾಳಯದಿಂದಮುರ್ಚಿದ ಘಣಾಮಣಿಮಂಗಳಶ್ರೀಯೋ ಕರಂ ಮೇಳಿಸಿದಪುದೆನ್ನೆರ್ದೆಯನೆಂದು ಬೊದಿಲ್ಲನೆ ಪಾಯ್ದು ನೀರೊಳಾ ಬಾಳನನಾದಮಾದರದೆ ಕಂಡೊಸೆದಂ ನಿಧಿಗಂಡನಂತೆವೋಲ್ (ಪಂಪಭಾ. ೦-೯೭). ೬. ಒಟ್ಟುಗೂಡು; ಗುಂಪುಸೇರು ; ಒಟ್ಟಾಗು : ತಾಳದ ಲಯಮಂ ನಿಜ ನೀಳಾಳಕ ಹಾರದ ಪೊದಟ್ದ ಮುತ್ತೆಂಬಿವು ಮುಮ್ಮೇಳಿಸಿ ಕೈಕೊಂಡುವು ಲಾಳಿತಾಳಕೆ ಕೈಕೊಂಡಳೆಂಬುದೊಂದಚ್ಚರಿಯೋ (ಅಂಪು. ೯-೨೪) ; ಬಾಳನ ನಾಸಾಪುಟದೊಳ್ ಮೇಳಿಸಿ ದುಗ್ಧೋದಬಿಂದುಸಂದೋಹಂಗಳ್ (ಅಜಪು. ೪-೬೫) ; ಜಸಮಂ ತೊಡೆವಂತೆ ವೈಜಯಂತಿಗಳೆಡೆವರಿಯದೆ ಮುಂದೆ ಮಿಳ್ದಿರ್ಮೇಳಿಸಿ ತೋರ್ಕುಂ (ಕಾದಂಪೂ. ೫೫೭). ೭. ಒಟ್ಟುಗೂಡುವಂತೆ ಮಾಡು; ಒಟ್ಟುಗೂಡಿಸು : ಮೇಳಿಸಿ ಜೇವಾವಳಿಗಳ ತಾಳಿಸುವರನಚ್ಚಗೆಂಡದೊಳ್ ಕಾವಲಿಯೊಳ್ ತಾಳಿಸುವರ್ (ಸುಕುಮಾ. ೦೦-೪೭) ; ಅತಿಭೀಮರೆನಿಪ್ಪ ಸಮಸ್ತಮಲ್ಲರಂ ಮೇಳಿಸಿ ಕೃಷ್ಣನು ಕೊಲಲೊಡರ್ಚಿದಂ (ನೇಮಿಪು. ೭-೦೩೨). ೮. (ಕೃತ್ರಿಮವಾಗಿ) ಪ್ರೀತಿ, ಸ್ನೇಹಗಳನ್ನು ವ್ಯಕ್ತಪಡಿಸು : ಅರಸನ ಮೊದಲೆ ಮನದೊಳಗಿರೆ ಮೇಳಿಸಿಕೊಂಡು ಬಂದು ಪಾತಕಿ ಕೊಂದಳ್ ಗರದಿಂ ಗಂಡನನು (ಯಶೋಚ. ೩-೩೬), ೯. ಉಂಟಾಗು : ಒದಗು : ಸ್ಮರವಹ್ನಿಜ್ವಾಲೆ ಮೆಯ್ಯೊಂದೊಗೆದು ಪೊಗೆಯನುಳ್ಕೊತ್ತೆಯುಂ ಪುಷ್ಪಶಯ್ಯಾಂತರದೊಳ್ ಸುಯ್ವೆಂಕೆಸಾಲ್ ಮೇಳಿಸೆಯುಂ . . . ಕೋಮಲೆ ರಣರಣಕಾವಸ್ಥೆಯಿಂದಿರ್ದಳ್ (ಕಾಸುಮಾ. ೦೩-೦೭೭) ; ದೇವಕಿಯ ಮನ

ದೊಳು ಮೇಳಿಸಿತು ನಿಜಪುತ್ರಸನು ಕಾಣ್ಬೆಂದು ಕಾತರವು (ಶಾಶ್ವ.ಶಾ. ೨೨-೦). ೧೦. ಉಂಟುಮಾಡು ; ದೊರಕಿಸು ; ಒದಗಿಸು : ವಾಸರಚತುಷ್ಕ ಕಮಾತ್ರದೊಳಾವುಪಾಯದಿಂ ಮೇಳಿಸಿ ತಾದುಕೊಂಡು ಕಾಡುವೆಂ ನಿನಗರ್ಥಮನೆಂದು ಲೋಲನೀಲಾಳಕಿ ಪೂಣ್ದು ತಂದೆಯು ಮನಃಕ್ಷತಮಂ ಮನದಿಂದಗಲ್ಚಿದಳ್ (ಸುಕುಮಾ. ೭-೯). ೧೧. ಸಿದ್ಧಪಡಿಸು ; ಅಣಿಗೊಳಿಸು ; ಸಜ್ಜುಗೊಳಿಸು : ಮೇಳಿಸಿದ ಸೆಜ್ಜರದಿನೇಟಿಲುಜ್ಜುಗಂಗೆಯ್ದು ವಿಜಯಕುಂಜರದ ಮಂಜೀರಸಿಂಜಿತಕ್ಕೆ ಪಕ್ಕಾಗಿಯುಂ (ಪುಷ್ಪ.ಪು. ೬-೦೯ ವ). **ಮೇಳಯಿಸು :** ೧. ಪೂರ್ವದೇಶಗಳಿಂದ ಮುಸ್ಲಿಮರು ಕ್ರಮೇಣ ಬರುವುದಕ್ಕೆ ಆರಂಭಿಸಿ ಎರಡು ಪದ್ಧತಿಗಳೂ ಮೇಳಯಿಸಿದುವು (ತತ್ತ್ವಸಂ. ೦೯೨). ೪. ಸರ್ವಾಂಗಮಂ ಪ್ರತ್ಯಂಗದೊಳ್ ಮೇಳಯಿಸಿ ಕುಸುಮಾಯುಧಸುಖತರಂಗಿಣಿಯ ಸುಳಿಯೊಳ್ ಮನಂ ಮುಳುಂಗಿರ್ದ ಸುಖಿಸಮಯದೊಳ್ (ಗಿರಿ. ೨-೦೦೫ ವ) : ಅಗಿಲು ಸಾದು ಜವಾದಿ ಚಂದನ ಮೃಗಮದಂ ಘನಸಾರ ಗಂಧಾದಿಗಳನೆಲ್ಲಂ ತೆಗೆದು ಪನ್ನೀರಿಂದ ಮೇಳಯಿಸಿ (ಬಸವ. ೪-೫೫). ೭. ರಾಗಬಂದವರಿಗೆ ಅಭಿಮತ ವಿತ್ತು ಮೇಳಯಿಸಿದನು ಬಲವನು (ಕುಮಾ.ರಾ. ೭-೫). ೧೧. ಮೇಳಯಿಸಿ [ಪಾಠಾಂ. ಳೈಸಿ] ನಿಲಿಸಿದಂ ನಿಜಬಲದ ಪೌಜುಗಳನರ್ಧಚಂದ್ರಾಕೃತಿಯೊಳು (ಕೃಷ್ಣಕಾ. ೨೫-೦೦). ೧೨. (ಆಭರಣವನ್ನು) ತೊಡಿಸು : ಬಾಳಸ್ಥಳದೊಳ್ ಕಣ್‌ಗಡ ಕೂಳಿಗೆ ಪಾರ್ವತಿಗೆ ಕೊರಲೊಳೊಗೆದುದು ನಯನಂ ಕೇಳೆಂಬಾಳಾಪಂ ವಿಗೆ ಮೇಳಯಿಸಿದ [ಪಾಠಾಂ. ಯ್ಸಿದ]ರ್ಶೈರದಾಳಿಯುಂ ಬಾಳಕಿಯುರ್ (ಗಿರಿ. ೦೦-೩೬). **ಮೇಳಯ್ಸು :** ೨. ಕ್ಷಣವಗಲಿದಡೆ ಮೇಲೆ ಬಿದ್ದುರವಣಿಸಿ ಪಿಡಿದಡೆ ಸುಕ್ಕಿ ಹೊಯ್ದಡೆ ಮಣಿದೊಡಲನಾಂತೊಂದಿದಡೆ ನೆರೆದೊಂದಿ ಮೇಳಯ್ಸಿ[ಪಾಠಾಂ. ಳೈಸಿ] (ಬಸವ. ೯೨-೦೪) ; ಸೂಳೆ ಸೂತ್ರದ ನೇಣು ಗಾಳವಾಕೆಯ ಮೊಗವು ಮೇಳಯ್ಸಿಪವಳು ಸರಿ ಬೆಂಡು ಮಿಂಡ ತಾ ಬಾಳೆಮೀನೆಂದ (ಸರ್ವಜ್ಞ. ೦೯೪೪). **ಮೇಳವಿಸು :** ೧. ಕೀಳು ಜಾತಿಗೆ ತಕ್ಕ ನುಡಿಗಳು ಮೇಳವಿಸಿದುವು ಕುಲವ ನಾಲಿಗೆ ಹೇಳಿತೆಂಬುದು ತಪ್ಪದಾಯಿತು (ಕುಮಾ.ರಾ. ೭-೦೫); ತಾರ್ಕ್ಷ್ಯನ ಕೂಡೆ ಕಾರ್ಕೋಟಕ ಮೇಳವಿಪುದೆ (ಸೋಮಶ. ೦-೩). ೪. ಹುಲ್ಲು ಹೊಲನೆಲ್ಲವಂ ಪೊಗಳ ಸುಧೆಯೊಳಗೆ ನಂಜಿಡುವಂತೆ ಮೇಳವಿಸಿ ಪೇಳಿ ನಾನು (ಸಿದ್ಧರಾ. ೦-೫) : ಮುಹೂರಗಳಲಿ ಮೇಳವಿಸಿದುಡದಾರವಂ ಬಂಧಿಸಿ . . . ರುದ್ರಾಕ್ಷಿಯುಂ ಸ್ಫಟಿಕಂಗಳಂ ಕಟ್ಟಿ (ಬಸವ. ೩೬-೦೪); ಹೋಳಿಸಿರ್ದಡಕೆಗಳ ಭಾಗವ ಮೇಳವಿಸಿ ಕರ್ಪೂರದ . . . ವೀಳೆಯವನಿತ್ತು (ಕ್ರಿಶುಂಠಿ. ೪-೪೭). ೬. ಪೋಳವಿಸಿದ ತನ್ನ ಸಕಲಗುಣಂಗಳ ಎಣಿಕೆಯು ಗುಣಿತಕ್ಕೆ ಅಗಣಿತನಾದನು (ಶಿವಗೀ. ೫೨-೨೫೦); ಚೇಳುಗಳು ತಾವೆಂಟುಸಾವಿರ ಮೇಳವಿಸಿ ಬಂದೂಡಿದಂದದಿ ಮೇಲುನೋವಹುದೆಂದು ಶಾಪವ ಕೊಟ್ಟನೊಬ್ಬಂಗೆ (ಸಂಛತ. ೦೨-೦೪). ೭. ಇಲಿಯನೂ ಬೆಕ್ಕನೂ ಹುಲಿಯನೂ ಹುಲ್ಲೆಯನೂ ಮೇಳವಿ[ಪಾಠಾಂ. ಮೇಳೈ]ಸುವಂತೆ ಮೇಳವಿಲ್ಲದವನ ಒಗತನ ಅಳಿಯ ಬಾಳುವೆ (ಅಪಸಂ. ೦೩೩-೬೦೭); ಕರಿತುರಗರಥವನು ಮೇಳವಿಸುವೆನು ಕಾದಿ ಗೆಲುವೆನು ರಾಘವೇಶ್ವರನ (ಶಿವರಾ. ೩೩-೨). ೯. ಕೇಳಿವಳು ಗಾಂಧಾರಿ ಕುಂತಿಗೆ ಬಾಲಕೇಳಿವಿನೋದವೆಂಬುದು ಮೇಳವಿಸಿತಾ ಮುನ್ನ ಮಾಡಿದ ತಪದ ಫಲವೆನುತ [ಪಾಠಾಂ. ವಿನೋದವೇಕೈ ಮೇಳವಿಸಿತೇ ಮುನ್ನ ಹಾ ತಪ್ಪೇನು ತಪ್ಪೇನು] (ಕುಮಾ.ಆ. ೪-೪೦); ಹೇಳುಹೇಳೀ ನಾಸಿಕಚ್ಯುತಿಯಾರ ದೆಸೆಯಿಂದೆ ಮೇಳವಿಸಿದುದಿಸು (ತೊರವೆ. ೩-೫-೪); ಯಾವುದೋ ಕೆಲಸಕ್ಕಾಗಿ ಅಪ್ಪರ ಮನೆಗೆ ಬಂದಾಗ, ಈ ಉತ್ಸವವು ಅವನಿಗೆ ಮೇಳವಿಸಿತು (ಚಿತ್ರಹೊ. ೦೪). ೧೧. ಬಡಿಕೋಲುಗಳನಿಕ್ಕಡವನಿತುಂಬಾರಿಯಿಂದಕುಪ್ಪಸವ ಮೇಳವಿಸಿ ಹೊಜವಂಟನವಸೀಪಾಲ ಬೇಂಟೆಗೆ (ಕುಮಾ.ಆ. ೨೩-೬); ಮೇಳವಿಸಿ ನೇಣುಗಳನೆನುತ ನೃಪಾಲನವದಿರು ಗುಬಜಿಸುವುದನಾಲಿಸುತ ಸಾತ್ಯಕಿಯೊಡನೆ ಕೃತವರ್ಮನಜುಹಿದನು (ಕುಮಾ.ಅ. ೯-೪೨). ೧೩. ವಟ್ಟವಾಗು ; ದಟ್ಟೈಸು : ಅಲ್ಲಿ ಕೆನೆ ಮೇಳವಿಸೆ ಯೂಪವಮಲ್ಲಗಾಯಿತು ಶ್ವೇತದೀಪವದಲ್ಲಿ ತಾ ದಧಿಯಾಯ್ತು ಮಂಗಳವೃಂದ ಮೇಳವಿಸೆ (ಸಂಛತ. ೬-೦೦). ೧೪. ಮಾಡು; ಆಚರಿಸು: ಕಾಲಕಾಲದ ನಿತ್ಯಕರ್ಮವ ಮೇಳವಿಸಿ ಬಳಿಕಾ ಕ್ಷುಧಾಗ್ನಿ ಜ್ವಾಲೆಯಾಹುತಿಗಾಗಿ ಬಹ ಭಿಕ್ಷುಕಮುನೀಶ್ವರರ ವೇಳೆಯುಜಿದಂಚಿತದಲಿ ಸಂಫಲದಾಳಿಗಳನೊಲಿದೀವ ತರುಲತೆಯೋಳಿ ವನದಲಿ ಮೆಜೆವುತಿರ್ದುವು (ಕ್ರಿಶುಂಠಿ. ೨೦-೦೬). ೧೫. ಮೇಲಾಗು ; ಅಧಿಕವಾಗು : ಕೇಡುಗರ ಕೈ ಮೇಳವಿಸಿದುದು ದೈವಗತಿಯಿಂದ (ಪಳಕ. ೪-೩೦). **ಮೇಳೈಸು:** ೧. ದಿವಿಜಸ್ತ್ರೀಯೊರ್ವಳ್ . . . ತಾಂಡವಾಡಂಬರಮನೊಡರಿಸಲ್ ಚಾರುಮಾಣಿಕ್ಯಭೂಷಾರವಮುಂ ನಾನಾಸುತಾಳಧ್ವನಿಯುಂಮೊಡನೆ ಮೇಳೈಸಿ . . . . ಚೆಲ್ವಾಗೆ ದೇಹಪ್ರಭೆಯೊಡನೆ ದಲಾಡುತ್ತುಮಿರ್ದಳ್ ವಿಚಿತ್ರಂ (ಬಾಹುಬ. ೬-೯೦) ; ಖಳನೊಡನೆ ಮೇಳೈಸುತಸುರತತಿ ಕಿರವ ಬಿಲ್ವೆದೆಯಂ ಚಡಾಳೈಸುತಾಗ ಶತಮಾಯನಿಂದ್ರನ ಸರಿಸದೊಳ್ ನಿಂದು ನಿನ್ನ ಕೊಂದು ಪಾಳೈಸುವೆಂ . . . ಎನುತಾ ಖಳಂ ಕೋಲ್ಗಳಿದನು (ತಂಬು. ೪೯-೨೦). ೪. ಭಸಿತದೊಳು ಬೆರಸಿದ ಕತ್ತುರಿಯು ಸಾರವುಂ ನೊಸಲೊಳು ಮೇಳೈಸಿ ಪರಿಮಳದಲರ್ಗಳಂ ಸಿರಿಮುಡಿಗೆ ಸಿಂಗರಿಸಿ (ಬಸವ. ೬-೦೫); ಲಸದ್ಭ್ರಮರಿಯಿಂ ಮೇಳಾಪದೊಳ್ಪಿಂ ತ್ರಿಭಂಗದ ಸೊಂಪಿಂ ಸಲೆ ರಾಗಮಂಜರಿ ಕರಂ ಮೇಳೈಸಿದಳ್ ಲಾಸ್ಯಮಂ (ದಕಕು. ೬-೦೫೬) ; ಕೀಲಚ್ಚುಗಳ್ ಮೇಳೈಸಿದರು ಬಲುನಂಬುಗೆಯ ಬದ್ದರದೊಳಗೆ ತುಂಬಿಪರಸ್ತ್ರಶಸ್ತ್ರಗಳ (ಕುಮಾ.ಭೀ. ೪-೯೦). ೬. ರಾಜಮಂದಿರಾಂತಬಹಿರ್ಭಾಗಭೂಮಿತಳಪ್ರದೇಶದೊಳ್ ಮೇಳೈಸಿ ಬಂದು ನಿಂದ ಸೈನಿಕಪ್ರಧಾನರ್ಕಳ್ (ಶಾಂತಿಪು. ೩-೦೦೦ ವ); ವೀಳಯಂಗುಡತೆಂದು ಮೇಳೈಸುವ ತಾಂಬೂಲಕರಂಡವಾಹಿನಿಯರಂ ಪೈರ್ವಿನಂ ಜರ್ವಿಯುಂ (ಜಗನ್ನಾ. ೦೦-೭ ವ); ತಗ್ಗಿ ಕ್ರಾಂಚು ಕಳಕಳ ವಿಷಾದದ ಸುಗ್ಗಿ ಬೀತುದು ರಾಯರೀಚೆಯು ಮುಗ್ಗುಲಲಿ ಮೇಳೈಸಿ ಮೆಜೆದರು (ಕುಮಾ.ಸ. ೧೦-೭೯). ೭. ವಿಪ್ರನಿಕಾಯವೆಲ್ಲವ ನಿಳಯದಲೆ ಮೇಳೈಸಿ ಧಾರೆಯ ನಳಿನಸಂಭವ ಮೆಚ್ಚಲೆಜೆದನು ಸೀಲವಿಪ್ರರಿಗೆ (ಸಂಛತ. ೨೬-೩೯). ೧೧. ರಥವ ಮೇಳೈಸಿದನು ಹೊಸಸಾರಥಿಯು ಕರಸಿದನು (ಕುಮಾ.ದ್ರೋ. ೦೩-೪೦); ಘೃತಪಾತ್ರಾದಿ ಮುಖಪರಿಕರವ ಮೇಳೈಸಿದರು ತತ್ಕ್ರತುಕುಂಡವಳಯದಲಿ (ತೊರವೆ. ೦-೭-೩೪). ೧೪. ಕೇಳಲೆ ಕುಮಾರಕನೆ ದಕ್ಷನೆಂಬವನೆಮ್ಮನೋಲಗಿಪ ಹರಿಯುಪೇಂದ್ರಗರ್ಡಿಯಾಗವುಂ ಮೇಳೈಸಲಾ ಕಥಾಂತರದೊಳೀಶ್ವರಿಯುಳಿದಳು (ಕಂಬ. ೩೦-೦೩). ೧೬. ಈಡೇರಿಸು ; ನೆರವೇರಿಸು ; ಪೂರ್ಣಮಾಡು : ಹೇಳುವದು ಕೇಳುವದು ಆಳ್ವ ಭೂಪನೆ ಉಂಟು ಮೇಳೈಸು ನಮ್ಮ ಕೋರಿಕೆಯ (ಕಪ್ಪಶಾ. ೨೪೭). ೧೭. ಹೆಚ್ಚಿಸು ; ಅಧಿಕಗೊಳಿಸು : ಜನಿಸಿದ ದನುಜವೀರ್ಯನು ಕುಮತಿಯುಲಿ ನವಮಾಸ ತೀರಲಿಕಮಿತಪೌರುಷದಿಂದ ಸೇನೆಯ ಬಲುಹ ಮೇಳೈಸಿ . . . ಕೊಂದನು ಮನ್ನೆಯಾದಿಗಳ (ಸಂಛತ. ೨೬-೦೦೦).

[ಮೇಳನ (=ಮೇಲನ) + — ಇಸು₃]

**ಮೇಳು** (ನಾ). ಜೊತೆ ; ಒಡನಾಟ : 'ಮೇಳುಗೂಡು' ಪರಾ.

[ < ಸಂ. ಮೇಲ ]

**ಮೇಳುಗೂಡು** (ಕ್ರಿ). ಜೊತೆ ಸೇರು ; ಒಡಗೂಡು : ಮಳೆಯು ಕಾಲದ ಜಲದ ಮುಂಬಿಗೆ ಕಳೆಯ ತಾಳಿರಲದಕೆ ಶಕ್ರನ ಚೆಲುವ ಚಾಪದ ಮೇಳುಗೂಡಲು ಚಂದ ಕಾಣ್ಬಂತೆ (ಕಥಾಸಂ. ೦೦-೬೦). [ಮೇಳು + ಕೂಡು₁]

**ಮೇಳಿ₁** (ನಾ). ಗಂಟಲುಮಣಿ ; ಗೋನಾಳಿ : ಕರೆಯದೆ ಕಾಡಿ ಕಂಟಿಸುವ ಕೂಂಟಣಿಯುಂ ನೊಣೆಗಬ್ಬೆ ತಿಂಗೆ ಬೆಂಗುರುಟಿ ಬಳಾರಿ ಬಾಡಿಸುಗೆ . . . ಮೇಳಿಯುಂ ಮುಂಬಿಗೆ ಮೂಳಬೆಗಿಂದು ಮೊಗಾರಮೆತ್ತುವೆಂ (ಲೀಲಾವ. ೨-೦೦೬); ಮುಜಹನಿಕ್ಕಿಯೆ ಕೊರಳ ಮೇಳಿಯ ಮುಂಬಿದ ಪರಿ ಶಿಶುವಿಂಗೆ ವಿಷವನುಯೆಜೆದವೋಲು (ಶಿವರಾ. ೪-೦೨) ; ದಡಿಗರೂಪಿನಿಂದಿಹ ಹರಿಯ ಮೇಳಿಯಂ ಪಿಡಿದೊತ್ತಿಯೊಡೆದೆಲುವ ನೆಗ್ಗಲು (ಲೀಕೃ.ಕ. ೩-೦೪-೩೦).

**ಮೇಳೈ$_2$** (ನಾ). ಮೆಳೆ ; ಪೊದರು : ಪಾರ್ತ್ಥದ ಮೇಳೆಯಲ್ಲಿ ನಿಜಿಂಗಲ್ಲು (ಎಇ. XV. ೬೮-೨೨; 1074). [ᵖ ಇದು 'ಮೆಳೆ' ಎಂಬುದರ ಅಪಲಿಖಿತ]

**ಮೇಳೆಯ** ' ಮೇಳಯ ' ನೋ.

**ಮೇಳೈಸು** ' ಮೇಳಿಸು ' ನೋ.

**ಮೇಟಿ$_1$** ' ಮೇಂಟಿ ' ನೋ.

**ಮೇಟಿ$_2$** (ನಾ). ಒಬ್ಬಾತನ ಹೆಸರು : ಕಕ್ಕರ ಮಡಲೂರೆಱಿದು ತೊಱು ಗೊಣ್ಡೊಡೆ ತಿಂಗಣಿಮಾರ ಶ್ರೀಮೇಟಿ ತಿಂಗಣಿಯೂರಾಳ್ಗಿ ಪಲರನ್. . . ಎಱಿದು ಸಗಮೇೞಿದನ್ (ಎಕ. X, ೬ಶ್ಗಳ. ೩೨-೪: ಸು. 870 ?). [ ? ]

**ಮೇಟಿಮಡು** (ನಾ). ಒಂದು ಊರಿನ ಹೆಸರು : ಶ್ರೀಮತ್ಕುಪ್ಪೆಯರಸರ × × × ಮಗನಣ್ಣಿಗ ರಟ್ಟಿಯ[ಣ್ಣ] × × × [ಸಂ] ಜೆಳಾ[ವ]ಡಿಚ ಮೇಟಿಮಡುವಿ × × ಟ್ಟ (ಸೌಇಇ. XI-i, ೦೦-೦೫: 865). [ ? ]

**ಮೈ$_1$** ' ಮೆಯ್$_2$ ' ನೋ.

**ಮೈ$_2$** (ನಾ). ೧. ಕಪ್ಪು : ಕರಿದು : 'ಮೈಗುಂಜಿ' ಪರಾ. ೨. ಕಾಡಿಗೆ : 'ಮೈಗಣ್$_2$' ಪರಾ. [ದೇ.॥ ತಮಿ. ಮಲ. ಮೈ; ತುಳು. ಮೈಯಿ]

**ಮೈಂದವಾಟಿ** ' ಮಯಿಂದವಾಳೆ ' ನೋ.

**ಮೈಕ** ' ಮಯಕ ' ನೋ.

**ಮೈಕಟ್ಟು** ' ಮೈಗಟ್ಟು ' ನೋ.

**ಮೈಕದಿ** (ಕ್ರಿ). (ಕೆಲಸ, ಜವಾಬ್ದಾರಿ ಇತ್ಯಾದಿಗಳಿಂದ) ತಪ್ಪಿಸಿಕೊಳ್ಳು; ಮೈಗಳ್ಳನಾಗು : ವಸಂತನಿಗೆ ಆಶ್ಚರ್ಯ, ರಘುಪ್ಪ ಹೀಗೇಕೆ ಮೈಕದಿಯ ತೊಡಗಿದ್ದಾನೆ, ಎಂದು (ಗಂವಾಹಾ. ೨೯೬).

[ ಮೈ$_1$ ( < ಮೆಯ್$_2$) + ಕದಿ$_1$ ]

**ಮೈಕಳೆ** (ಕ್ರಿ). ೧. ಗರ್ಭಸ್ರಾವವಾಗು : ಮೈ ಇಳಿ : ನಿನ್ನೆ ತಾನೇ ಮೈ ಕಳೆದ ಗೌರಿ. ನನ್ನ ಹಣೆಯಲ್ಲಿ ಬರೆದುದೇ ಹಾಗೆ ಎಂದು ಹೇಳಿ ತೆಪ್ಪಗಾಗು ವಷ್ಟು ಎದೆಗಾರ್ತಿಯಲ್ಲ (ಮುಂಗಾಮ. ೨೩). ೨. ಹೆರಿಗೆಯಾಗು : ಪ್ರಸವವಾಗು : ಇದೊಂದು ಸಾರಿಗೆ ಸುಲಭವಾಗಿ ಮೈಕಳೆದರೆ ಸಾಕು (ರೂಢಿ). [ ಮೈ$_1$ ( < ಮೆಯ್$_2$ ) + ಕಳೆ$_1$ ]

**ಮೈಕಾಂತಿ** (ನಾ). ದೇಹದ ತೇಜಸ್ಸು, - ಪ್ರಕಾಶ, - ಶೋಭೆ : ಬಿಲು ರವದ ಮೊಳಗಿನಲಿ ಕೃಷ್ಣನ ಮೈಕಾಂತಿ ಮೇಘಾವಳಿಗಳಲಿ . . . ನಿಲುವ ಹಂಸವ್ಯೂಹವೆಲ್ಲಿಯದೆಲೆ ಮಹೀಪತಿ (ಕುವ್ಯಾದ್ರೋ. ೩೦-೨೦).

[ ಮೈ$_1$ ( < ಮೆಯ್$_2$) + ಕಾಂತಿ ]

**ಮೈಕು** (ನಾ). ಧ್ವನಿವರ್ಧಕ ಯಂತ್ರ : ಮೈಕಿನ ಗಲಾಟೆಯೂ ಇರಲಿಲ್ಲ ? (ಹಕಜ. ೦೬): ಮೈಕಿನಲಿ ಕೊಕ್ಕೊಕ್ಕೋ ಕೂಗಿ. ತುರಾಯಿ ಕುಣಿಸಿ ಬೆಳ ಗಾಯಿತೆಂದು ಭ್ರಮಿಸಿದ್ದೇವೆ (ಹಿಂಮ. ೩೨-೦). [ᵖ ಇದು ಇಂಗ್ಲಿಷಿನ Microphone ಎಂಬ ಶಬ್ದದ ಸಂಕ್ಷಿಪ್ತರೂಪ]

**ಮೈಕುತ್ತಿ** (ನಾ). ಶರೀರವನ್ನು ಇರಿಯುವವನು : ಮಹಾಸಾಮನ್ತ ಬರುವರ ಜಿಟ್ಟು ಬಿರುದರ ಮೈಕುತ್ತಿ ಶ್ರೀಮಾತ್ ಬಿಜ್ಜ ಕೋಗಟೂ ಯಿಯಪ್ಪಾಟು (ಸೌಇಇ. IX-i. ೩೬-೭ ; 922).

[ ಮೈ$_1$ ( < ಮೆಯ್$_2$) + ಕುತ್ತು$_1$ + - ಇ$_3$ ]

**ಮೈಕೆಬೇರು** (ನಾ). ಔಷಧಕ್ಕೆ ಬಳಸುವ ಒಂದು ಬಗೆಯ ಮೂಲಿಕೆ : ಚಿಕ್ಕಮಾರುಳು, ಮೈಕೆಬೇರು, ಗಂಡರಸಿನವೆಲ್ಲ ನಿಂಬೇಕಾಯಿಷ್ಟು ಕುಡಿಯೆ ಜಾಣಂತಿರೋಗ ಬಿಸುಟೇಳವನು ಮಾಣ್ಪಂ (ವಿವೈ. ೬೦).

[ ಮೈಕೆ$_1$ + ಬೇರು ( < ಬೇರ್$_1$) ]

**ಮೈಕೊಡವು** ' ಮೆಯ್ಗೊಡವು ' ನೋ.

**ಮೈಕ್ರೋಸ್ಕೋಪ್** (ನಾ). [ವಿಜ್ಞಾ] ಬರಿಯ ಕಣ್ಣಿಗೆ ಕಾಣದ ವಿವರ ಗಳನ್ನು ಅಥವಾ ಆಕೃತಿಗಳನ್ನು ಲೆನ್ಸುಗಳ ಮೂಲಕ ವಿಸ್ತರಿಸಿ ತೋರುವ ಒಂದು ಸಲಕರಣೆ : ಸೂಕ್ಷ್ಮದರ್ಶಕ : ಇಂಥ ಕೆಲವು ಕನ್ನಡಿಗಳನ್ನು ಜತೆಗೂಳಿಸಿ. ಒಂದು ನಳಿಗೆಯಲ್ಲಿಟ್ಟು. 'ಮೈಕ್ರೋಸ್ಕೋಪ್' ಎಂಬ ಉಪಕರಣಗಳನ್ನು ಮಾಡುತ್ತಾರೆ (ಬಾಂಕ್ರಿ. II, ೯೩೬).

[ ←ಇಂ. Microscope ]

**ಮೈಗಂಡಿ** (ನಾ). (ಬಾಣ ಮುಂತಾದ ಶಸ್ತ್ರಗಳ ಆಘಾತದಿಂದ) ಶರೀರ ದಲ್ಲಿ ಉಂಟಾಗುವ ತೂತು,—ರಂಧ್ರ : ಅದ ಮೈಗಂಡಿಯೊಳು ರಕುತವ ಶೋಧಿಸುತ ಹಳಮಪ್ಪವನು ತೊಡೆದಾವರಿಸಿದುದು ವೈದ್ಯಸಂತತಿ ವೀರಭಟರುಗಳ (ಕುವ್ಯಾಭೀ. ೫-೪೦).

[ ಮೈ$_1$ ( < ಮೆಯ್$_2$) + ಕಂಡಿ$_1$ ]

**ಮೈಗಂದೆ** (ನಾ). ಮೈಮೇಲೆ ಏಳುವ (ನವೆಯನ್ನುಂಟುಮಾಡುವ) ಗುಳ್ಳೆ : ಶಿವಜ್ಞಾನೋದಯವಾದ ಲಿಂಗಾಂಗಿಗಳಿಗೆ ಎನ್ನ ನುಡಿ ಮೈಗಂದೆಯಂ [ಪಾಠಾಂ. ಮಸದ ಗಂದೆಯು] ತುಱಿಸಿದಂತೆ ಹಾಲುಸಕ್ಕರೆಯು ನುಂಡಂತೆ ಸವಿದೋಱುತ್ತದೆ (ಶಸವ. ೩೦-೨೩).

[ ಮೈ$_1$ ( < ಮೆಯ್$_2$) + ಗಂದೆ ]

**ಮೈಗಂಪು** ' ಮೆಯ್ಗಂಪು ' ನೋ.

**ಮೈಗಟ್ಟು**, **ಮೈಕಟ್ಟು** (ನಾ). ದೇಹದ ರಚನೆ ; ಅಂಗಸೌಷ್ಠವ : ಅವನು ಏಳಿಯ ವಯಸ್ಸಿನವನೆಂದು ಅವನ ಮೈಗಟ್ಟು ಸೂಚಿಸುತ್ತಿತ್ತು (ಮಜಿಕ. ೬೦). **ಮೈಕಟ್ಟು** : ಮೈಕಟ್ಟು ತಂದೆಯಂತೆಯೇ ಇದ್ದರೂ ಮುಖ ದೊಡ್ಡಮ್ಮನ ಮುಖವನ್ನೇ ಹೋಲುತ್ತಿತ್ತು (ವಾತ್ಸ್ರ. ೦೬): ಜನರೂ ಪುಷ್ಟಿಕರವಾಗಿ ಬೆಳೆದು ಬಲವಾದ ಮೈಕಟ್ಟುಳ್ಳವರಾಗಿಯೂ ಆರೋಗ್ಯ ವಂತರಾಗಿಯೂ ಇರುವರು (ಗ್ರಹವ. ೦).

[ ಮೈ$_1$ ( < ಮೆಯ್$_2$ ) + ಕಟ್ಟು$_2$ ]

**ಮೈಗಡ** (ನಾ). ಒತ್ತೆ, ಆಧಾರಗಳೇನೂ ಇಲ್ಲದೆ ವ್ಯಕ್ತಿಯ ಮೇಲಿನ ನಂಬಿಕೆಯ ಆಧಾರದ ಮೇಲೆ ಕೊಡುವ ಸಾಲ ; ಮೈಸಾಲ : " ಮೈಗಡ_ಕೈಗಡ " (ಜಾಪಕೋ. ೩೭).

[ ಮೈ$_1$ ( < ಮೆಯ್$_2$) + ಕಡ$_1$ ]

**ಮೈಗಣ್$_1$** ' ಮೆಯ್ಗಣ್ ' ನೋ.

**ಮೈಗಣ್$_2$** (ನಾ). ಕಾಡಿಗೆ ಹಚ್ಚಿದ ಕಣ್ಣು : ಓ ! ಎನ್ನ ಎಚ್ಚ ಮೈಗಣ್ಣ ಪೆಣ್ಣೆ ! (ವಾಮಾಕ. ೩೦-೦೦). [ ಮೈ$_2$ + ಕಣ್ ]

**ಮೈಗಣ್ಣ** ' ಮೆಯ್ಗಣ್ಣ ' ನೋ.

**ಮೈಗಣ್ಣು** ' ಮೆಯ್ಗಣ್ ' ನೋ.

**ಮೈಗತ್ತಲೆ** (ನಾ). ದೇಹದ ನೆರಳು : ಮುಳುಗಿಸಿದುದಾ ವಿಳನ ಮೈಗತ್ತಲೆ ದಿವಾಕರಬಿಂಬವನು (ಕೃಕರಾ. ೩-೦-೬).

[ ಮೈ$_1$ ( < ಮೆಯ್$_2$) + ಕತ್ತಲೆ$_1$ ( < ಕಟ್ತಲೆ ) ]

**ಮೈಗಪ್ಪು** ' ಮೆಯ್ಗಪ್ಪು ' ನೋ.

**ಮೈಗರೆ** ' ಮೆಯ್ಗರೆ ' ನೋ.

**ಮೈಗರ್ಚು** ' ಮೆಯ್ಗರ್ಚು ' ನೋ.

**ಮೈಗಲಿ** ' ಮೆಯ್ಗಲಿ ' ನೋ.

**ಮೈಗಲಿತನ** ' ಮೆಯ್ಗಲಿತನ ' ನೋ.

**ಮೈಗಳ್ಳ** (ನಾ). ಕೆಲಸಮಾಡುವುದಕ್ಕೆ ತಪ್ಪಿಸಿಕೊಳ್ಳುವವನು ; ಸೋಮಾರಿ : ಕಳ್ಳ ಕೈಗಳ್ಳ ಮೈಗಳ್ಳನೊಮ್ಮೆ ತಾ ಕೊಳ್ಳಗಾಣುವನು (ಸರ್ವಜ್ಞ. ೦೦೬೩) : ಮೈಗಳ್ಳರಾಗಿ ದರಿದ್ರರಾಗಬಾರದು (ಕೃಷಿಪ್ರ. ೦೬) ; ಈ ಮೈಗಳ್ಳನಿಗೆ ತಪ್ಪಿಸಿಕೊಳ್ಳಲು ಒಂದು ನೆವ (ಹೊಸಕ್ಷ. ೩೦).

[ ಮೈ$_1$ ( < ಮೆಯ್$_2$ ) + ಕಳ್ಳ$_1$ ]

**ಮೈಗಳ್ಳತನ** (ನಾ). ಕೆಲಸ ಮಾಡುವುದಕ್ಕೆ ತಪ್ಪಿಸಿಕೊಳ್ಳುವಿಕೆ ; ಸೋಮಾರಿತನ : ಮೈಗಳ್ಳತನಕ್ಕೆ ಅಲ್ಲಿ ಆಶ್ರಯವಿಲ್ಲ ಎಂಬುದನ್ನು ಶರಣರು ಸಂತರು ಸ್ಪಷ್ಟಪಡಿಸಿದರು (ಕಜಾಕ. ೩೬); ಅವುಗಳನ್ನು ಮೈಗಳ್ಳ

ತನವ ಮಾಂಸಗಳನ್ನಾಗಿ ಮಾರ್ಪಡಿಸಿದ್ದೇವೆ (ಅಶನಾ. ೨೨೦).
[ ಮೈಗಳ್ಳ + — ತನ ]

**ಮೈಗಾ** (ಕ್ರಿ). ಮೈಗಾವಲಾಗಿರು; ಅಂಗರಕ್ಷಣೆ ಮಾಡು : ಆವ ಶರವಿದ್ದೇ ಗುವುದು ಮೈಗಾವನಸುರಾಂತಕನಲ್ಲೆ (ಕುಮಾರವ್ಯಾ. ೦೯-೯೯).
[ ಮೈ$_1$ ( < ಮೆಯ್$_2$ ) + ಕಾ$_1$ ]

**ಮೈಗಾಣ್** ' ಮೆಯ್ಗಾಣ್ ' ನೋ.

**ಮೈಗಾಣಿಸು** ' ಮೆಯ್ಗಾಣಿಸು ' ನೋ.

**ಮೈಗಾಪು** ' ಮೆಯ್ಗಾಪು ' ನೋ.

**ಮೈಗಾಯ** (ನಾ). ಶರೀರದ ಮೇಲೆ ಆದ ಗಾಯ : ಕಾಲೊಳು ಮೂಡಿದ ವಸಿಮುಳ್ಳುಗಳು ತಾಕಿ ಸೀಳಿದ ಮೈಗಾಯದಿಂದ ಜೋರಿ ಸುರಿವ ಬಿಸು ರಕ್ತದಿಂದಾ ಜನಜಾಲವೈದಿತು ದೆಸೆದೆಸೆಗೆ (ಕಂಪ. ೦೦-೩೦).
[ಮೈ$_1$ (< ಮೆಯ್$_2$) + ಗಾಯ]

**ಮೈಗಾವಲು** ' ಮೆಯ್ಗಾವಲು ' ನೋ.

**ಮೈಗಾವಲೂಳಿಗ** (ನಾ). ಅಂಗರಕ್ಷಣೆ ಮಾಡುವ ವೃತ್ತಿ.–ಉದ್ಯೋಗ : ಚಿನ್ನದ ಹರಡ . . . ಹೊನ್ನ ಭೂಷಣದ ಮೈಗಾವಲೂಳಿಗದರ ಸನ್ನಾಹ ವೈತಂದುದಾಗ (ಕಂಪ. ೨೪-೮೮).
[ಮೈಗಾವಲು (< ಮೆಯ್ಗಾವಲು) + ಊಳಿಗ (< ಊಳಿಗ)]

**ಮೈಗಾಹು** ' ಮೆಯ್ಗಾಪು ' ನೋ.

**ಮೈಗುಂಜಿ** (ನಾ). ಕಪ್ಪು ಚುಕ್ಕೆಯನ್ನು ಹೊಂದಿರುವ ಗುರುಗುಂಜಿ : ತಲೆಯು ನವಿರು, ಕೈಕಾಲುಗುರು, ಓಲಿ ಮೈಗುಂಜಿಯುಂ ಧೂಪವಿಕ್ಕು ವುದು (ಶಾಂತಿ. ೦೨೯-೦೩). [ಮೈ$_2$ + ಗುಂಜಿ]

**ಮೈಗುಂದು** ' ಮೆಯ್ಗುಂದು ' ನೋ.

**ಮೈಗುಡು** ' ಮೈಯ್ಗೊಡು ' ನೋ.

**ಮೈಗುಣ** (ನಾ). ಶರೀರದ ಸ್ವಾಭಾವಿಕಸ್ಥಿತಿ ; ದೇಹಪ್ರಕೃತಿ : ವ್ಯವಸ್ಥೆ, ರಚನೆ . . . (ಆರೋಗ್ಯ, ದಾರ್ಢ್ಯ, ಮೊ.ಗಳ ವಿಷಯದಲ್ಲಿ) ದೇಹಸ್ಥಿತಿ, ಪ್ರಕೃತಿ ; ದೇಹಪ್ರಕೃತಿ ; ಮೈಗುಣ (Constitution. ಇಂಕನ). [ಮೈ$_1$ ( < ಮೆಯ್$_2$ ) + ಗುಣ]

**ಮೈಗುತ್ತ** (ನಾ). ದೇಹದ ಅನಾರೋಗ್ಯ ; ರೋಗ : ಮೈಗುತ್ತದಿಂ ಬಾಡಿಹಂ (ವ್ಯಕೃವು. ೯-೯೨). [ಮೈ$_1$ (< ಮೆಯ್$_2$) + ಕುತ್ತ]

**ಮೈಗುಜುಹು** ' ಮೆಯ್ಗುಜುಹು ' ನೋ.

**ಮೈಗೂಡಿಸು** (ಕ್ರಿ). ೧. ಮೈತುಂಬಿಕೊಳ್ಳುವಂತೆ ಮಾಡು : ಶಕ್ತಿ ಹೆಚ್ಚುವಂತೆ ಮಾಡು : ನಿಶ್ಶಕ್ತವಾಗಿದ್ದ ನಿನ್ನ ದೇಹಕೋಸ್ಕರ ಸೀಸೆಗಟ್ಟಲೆ ಬಲವರ್ಧಕಗಳನ್ನು ತಂದು ಕುಡಿಸಿ ಮೈಗೂಡಿಸಿದೆ (ವಿಕಾ. ೨೩೭). ೨. ತನ್ನದಾಗಿ ಮಾಡಿಕೊಳ್ಳು : ಹೊಂದಿಸಿಕೊಳ್ಳು : ಇವರು . . . ದ್ರಾವಿಡದೇಶದ ವಾಸ್ತುಶಿಲ್ಪಶೈಲಿಯನ್ನು ಮೈಗೂಡಿಸಿಕೊಂಡು ತಮ್ಮದೇ ಆದ ವಿಶಿಷ್ಟಶೈಲಿಯನ್ನು ಪ್ರತಿಪಾದಿಸಿದರು (ಹೊಕಂವ. ೦೦೩); ಭಾರತೀಯ ವಿಚಾರ ಮತ್ತು ಸಂಸ್ಕೃತಿಗಳ ಸಾರವನ್ನು ರಜಪೂತಕಲೆ ಮೈಗೂಡಿಸಿ ಕೊಂಡಿತು (ವಾರವ. ೫೨೯).
[ ಮೈಗೂಡು ( < ಮೆಯ್ಗೂಡು) + — ಇಸು$_3$) ]

**ಮೈಗೂಡು** ' ಮೆಯ್ಗೂಡು ' ನೋ.

**ಮೈಗೂಡಲು** ' ಮೆಯ್ಗೂಡಲ್ ' ನೋ.

**ಮೈಗೆಡು** ' ಮೆಯ್ಗೆಡು ' ನೋ.

**ಮೈಗೆಲಸ** ' ಮೆಯ್ಗೆಲಸ ' ನೋ.

**ಮೈಗೊಡಹು** ' ಮೆಯ್ಗೊಡಪು ' ನೋ.

**ಮೈಗೊಡು** ' ಮೆಯ್ಗೊಡು ' ನೋ.

**ಮೈಗೊಳ್** ' ಮೆಯ್ಗೊಳ್ ' ನೋ.

**ಮೈಗೊಳಿಸು** ' ಮೆಯ್ಗೊಳಿಸು ' ನೋ.

**ಮೈಗೊಳ್ಳು** ' ಮೆಯ್ಗೊಳ್ ' ನೋ.

**ಮೈಚಳಿ, ಮೈಛಳಿ** (ನಾ). (ಆಲಂ) ಸಂಕೋಚ : ದಾಕ್ಷಿಣ್ಯ: ಭಿಡೆ. **ಮೈಛಳಿ** : ಆಥೀನಿನಲ್ಲಿ ಕೂಡ ಮೊದಲಿದ್ದ ಮೈಛಳಿ ಈಗ ಮಾಯವಾಗ ತೊಡಗಿತ್ತು (ವಾತ್ಸಲ್ಯ. ೦೮೪).

**ಮೈಚಳಿಬಿಡು, ಮೈಛಳಿಬಿಡು** = ಭಯ ಸಂಕೋಚಗಳನ್ನು ಬಿಡು : ನಿಸ್ಸಂಕೋಚವಾಗಿ ವ್ಯವಹರಿಸು : ಸುಶೀಲೆಯೂ ಆಕೆಯೊಡನೆ ಈಗ ಮೈಚಳಿಬಿಟ್ಟು ಮಾತನಾಡಿದಳು (ಸನಜ. ೯೮೬) ; ಉನ್ನೀಸಳು . . . ಮೈಚಳಿಬಿಟ್ಟು ಕುಳಿತಿದ್ದಾಳೆ (ಹೂರಿಷ. ೦೨); ಅಲ್ಲಿ ಮೈಚಳಿಬಿಟ್ಟು ಹಾಡಿದಂತೆ ಬೇರೆಲ್ಲಿಯೂ ನೀವು ಹಾಡಲಾರಿರಿ (ಗಾನಕ. ೩೯) ; ಮೈಛಳಿಬಿಟ್ಟು ಮಾತ ನಾಡುವುದು ಮಾತ್ರ ನನ್ನಿಂದಾಗಲೇ ಇಲ್ಲ (ವ್ಯಕಿ. ೫೬).
[ ಮೈ$_1$ ( < ಮೆಯ್$_2$ ) + ಚಳಿ$_2$]

**ಮೈಚಾಚು** ' ಮೆಯ್ಚಾಚು ' ನೋ.

**ಮೈಛಳಿ** ' ಮೈಚಳಿ ' ನೋ.

**ಮೈಜಂಗಳ** (ನಾ). ಮೈಯಿಂದ ಉಂಟಾಗುವ ಸ್ರಾವ.– ಸುರಿತ : ಹಿಂಗಿವಸುವಿನ ದುಂದುಭಿಯ ಮೈಜಂಗಳದ ಜರಿದರುಣಜಲ ಮುನಿಯಂಗ ಲತೆಯಲಿ ಸಿಡಿಯೆ (ಕೂರಿಣ. ೯-೨-೩೮).
[ಮೈ$_1$ ( < ಮೆಯ್$_2$ ) + ಜಂಗಳ]

**ಮೈಜೋಡು** ' ಮೆಯ್ಜೋಡು ' ನೋ.

**ಮೈಝುಳ** ' ಮೆಯ್ಝುಳ ' ನೋ.

**ಮೈತ** (ನಾ). ತೀರಿಕೊಂಡವನು ; ಸತ್ತವನು : ಭೀಮರಾಯರು ಮೈತ ಆದದ್ದು ೧೩-೮-೧೯೮೮ ರೊಳಗ (ಗ್ರಾಮಾಹು. ೦೫೯); ಬಹಳ ಮಾಡಿ ಮೈತನು ನನ್ನ ಕಕ್ಕನೇ ಆಗಿರಬಹುದು (ಮಸಿಬಿ. ೮೯).
[ ← ಅರ. ಮಯುತ್ ; ಮರಾ. ಮಯತ್, ಮೈಯತ್, ಮೈತ್. / ಸಂ. ಮೃತ]

**ಮೈತಳೆ** ' ಮೈದಳೆ ' ನೋ.

**ಮೈತಾಳು** ' ಮೈದಾಳು ' ನೋ.

**ಮೈತಿಮಿರ್, ಮೈದಿಗುರು** (ನಾ). ಮೈಗೆ ಲೇಪಿಸುವ ಸುಗಂಧ ವಸ್ತು.– ಪರಿಮಳದ್ರವ್ಯ : ಉಮೆಯು ಮೈತಿಮಿರ ವೃತ್ತಿಯ ಮಾಡಿ ಜೀವನವಿತ್ತಳೆಂದುಸುರ್ವರು (ಪ್ರಭುಶಾ. ೦-೬). **ಮೈದಿಗುರು** : ನಿಡಿಗಣ್ಣ ಬೆಳ್ದೊಗರು ಕಂತುವಿನ ಮೈದಿಗುರು . . . ಎನೆ ನಿಳಾಸನಿಯರುಗಳೊಳ್ವರೆಯ ದೆಸಕದಿಂ ಬಂದರ್ (ಅದ್ಭರಾ. ೫-೨೪); ಗಿರಿಸುತೆಯ ಮೈದಿಗುರಿನಿಂದಾದ ನಂದನಂ ಹರನ ತಡೆಯಲ್ ಖಡ್ಗದಿಂದೆ ತಲೆಯುರಿದು ನಭಕಟ್ಟು ಶಿವನೊಳ ಪೊಕ್ಕನು (ಚಂಪು. ೨೮-೩೯). [ಮೈ$_1$ (< ಮೆಯ್$_2$) + ತಿಮಿರ್$_2$]

**ಮೈತಿಮಿರ** (ನಾ). ೧. ದೇಹದ ನವೆ.– ಕಡಿತ : ಮೈತಿಮಿರ, ಮದ, ಬಾಯಾರಿಕೆ, ಈ ಲಕ್ಷಣಂಗಳು ಕೃಷ್ಣಜಿಹ್ವಕವೆನಿಸಿಕೊಂಬ ಸನ್ನಿದೋಷ ಜ್ವರದಲ್ಲಿ ಉಂಟಾಗಿಹವು (ವೈದ್ಯಸಾ. I, ೦೦೬). ೨. (ಆಲಂ) ಕೊಬ್ಬು : ಪೊಗರು ; ಸೊಕ್ಕು : ಅವನಿಗೆ ಮೈತಿಮಿರ ಹೆಚ್ಚಾಗಿದೆ (ರೂಢಿ).
[ಮೈ$_1$ ( < ಮೆಯ್$_2$ ) + ತಿಮಿರ$_1$]

**ಮೈತ್ರ** (ಗು). ೧. ಮಿತ್ರನಿಗೆ ಸಂಬಂಧಿಸಿದ ; ಗೆಳೆಯನ. (ನಾ). ೨. ಗೆಳೆತನ : ಸ್ನೇಹ : "ಪ್ರೀತಿ ಸಖ್ಯಂ ಸ್ನೇಹಮೆನಲು ಮೈತ್ರಕ್ಕೆ ನಾಮಂ" (ಮಂಗರಾ. ೦೨೮-೮) ; ತ್ರಿನೇತ್ರನ ನೇತ್ರಮಂ ಪೋಧಿಸುವ ನಾಸಚಿದೆ ಮೈತ್ರದಿಂ ಕೈವೆರಲೋಳ್ (ಬಸವು. ೦೯-೩೯). ೩. ಗೆಳೆಯ ; ಸ್ನೇಹಿತ : ಕಾಂಬೆನೆಂದು ಬಂದ ಮೈತ್ರನ್ನವಲಕ್ಕಿ ತಿಂದ ವದನ (ಕೀರ್ತನು. ೦೬೦-೫) ; ದೈತ್ರದಲ್ಲಿ ಮೈತ್ರನಾದರೂ ಮೈತಗಲಿಸಕೂಡದು (ಗಾದೆ). ೪. [ಜೈನ] ಅರವತ್ತು ಮೂರು ಇಂದ್ರಕಗಳಲ್ಲಿ ಒಂದು :

೧. ಋತು ೨. ವಿಮಳಂ . . . ೩೦. ಮೈತ್ರಂ . . . ೬೩. ಸರ್ವಾರ್ಥಸಿದ್ಧಿ ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್ (ಶಬ್ದಸ್ಮೃ. ೨೦೩). [ಸಂ.]

**ಮೈತ್ರಾಯಣೀಯ** (ನಾ). ಶತೋಪನಿಷತ್ತುಗಳಲ್ಲಿ ಒಂದು : ಶ್ರೀರುದ್ರ ಬೃಹದಾರಣ್ಯಕ . . . ಮೈತ್ರಾಯಣೀಯ . . . ಮಾಂಡಕವೆಂಬಿವು ಮೊದಲಾದವೇ ಶತೋಪನಿಷತ್ತುಗಳು (ಬಿವೇಕ. ೩). [ಸಂ.]

**ಮೈತ್ರಾವರುಣ** (ಗು). ೧. ಮಿತ್ರ ಮತ್ತು ವರುಣದೇವತೆಗಳಿಗೆ ಸಂಬಂಧಿಸಿದ. (ನಾ). ೨. ವಾಲ್ಮೀಕಿಋಷಿ : " ಪ್ರಾಚೇತಸಃ ವಾಲ್ಮೀಕಿಃ, ಮೈತ್ರಾವರುಣಃ—(ಈ ೩) ವಾಲ್ಮೀಕಿ" (ಹಲಾಯು. ೬೮-೨೩೮). ೩. ಅಗಸ್ತ್ಯಋಷಿ. ೪. ವಸಿಷ್ಠಋಷಿ : ಅಗ್ನೀಂದ್ರ . . . ಮೈತ್ರಾವರುಣ . . . ವೇಷ್ಟರೆಂಬವರ್ಮೊದಲಾದ ಪದಿನೈದು ಋತ್ವಿಕ್ಕುಗಳೊಡಗೂಡಿ (ಬಿವೇಕ. ೧೨೦). [ಸಂ.]

**ಮೈತ್ರಾವರುಣಿ** (ನಾ). ಅಗಸ್ತ್ಯಋಷಿ : ನಿರುಪಮಚರಿತ್ರದಿಂ ಮಿಕ್ಕರುಂಧತಿ ವಸಿಷ್ಠನಂಗನೆ ತಾಂ ಮೈತ್ರಾವರುಣಿಯಗಸ್ತ್ಯನ ಸಾಧ್ವಿ[ಯೆ ವರ] ಲೋಪಾಮುದ್ರೆ ತನ್ನುನೀಶ್ವರವಧುಗಳ್ (ವಸ್ತುಕೋ. ೦೪-೬೭) ; ಇರಲು ತಿಂಗಳ ಮೇಲೆ ಮೈತ್ರಾವರುಣಿಯನು ಬೀಳ್ಕೊಂಡು ಬರೆ (ಕೊರಟಾ. ೩-೭-೮೮) ; ಮೈತ್ರಾವರುಣಿ ಶಿಷ್ಯಂಗೂಡಿ ಬರುತ್ತುಮಿರ್ಪುದಂ ಕಟ್ಟೆದಿರೊಳ್ ಕಂಡು (ರಾಜಾಕ್ಯ. ೧೦-೨೩). [ಸಂ.]

**ಮೈತ್ರಾಸನ** (ನಾ). [ರಾಜನೀ] ಮಿತ್ರನಾಗಿದ್ದೂ ಉದಾಸೀನನಾಗಿರುವ ಸ್ಥಿತಿ : ಮತ್ತಮಲ್ಲಿ ಕೆಲರಂ ಮೈತ್ರಾಸನವೃತ್ತಿಯೊಳ್ ನಿಜಿಸಿ ಕೆಲರನು ದ್ಧತಾಪ್ರತಿಮಹಿತವರ್ಮಾಡಿ ಕೆಲರನುಚ್ಚಾಟಿಸಿ ಸರ್ವಹರಣಂಗೆಯ್ದು (ಕಂಕಥಾ. ೬-೩೦ ವ). 'ಆಸನಸ್ಥಾನ' ಪರಾ.. p "ಇಲ್ಲಿ ' ಮೈತ್ರಾಸನವೃತ್ತಿ' ಎಂಬುದು 'ಮೈತ್ರೀವೃತ್ತಿ' ಎಂದಿರಬಹುದು" (ಕಂಕಟೀ. ೨೨೪). [ಸಂ.]

**ಮೈತ್ರಿ** (ನಾ). ಸ್ನೇಹ ; ಗೆಳೆತನ ; ಪ್ರೀತಿ : "ಸ್ನೇಹಮುಜರ್ಯಂ ಸಖ್ಯಂ ಸೌಹಾರ್ದಂ ಪ್ರೀತಿ ಮೈತ್ರಿ . . . ಸೌಹೃದಮುಂ" (ವಸ್ತುಕೋ. ೧೧೧-೪) ; ಅವಿನಯರೊಳ್ ಮೈತ್ರೀಪ್ರಮೋದಕಾರುಣ್ಯಮಾಧ್ಯಸ್ಥವೃತ್ತಿಯುಂ ಭಾವಿಸುತ್ತುಂ (ಸುಕುಮಾ. ೪-೨೧ ವ) ; ವಿಶ್ವದ ಮೈತ್ರಿಯಲಿ ಮನಸಂದು ಪಾತ್ರಾಪಾತ್ರವೆನ್ನದೆ ಬೆರಸಿ ಬದುಕುವುದಧಿಕಗುಣವೆಂದ (ಕುಮ್ಯಾ.ಕಾ. ೪-೭). [ಸಂ. ಮೈತ್ರೀ]

**ಮೈತ್ರಿಣಿ** (ನಾ). ಗೆಳತಿ ; ಸ್ನೇಹಿತೆ : ಶಾವು ಒಮ್ಮೆ ತಮ್ಮ ಮೈತ್ರಿಣಿಯೊಬ್ಬರನ್ನು ಕಾಣಲಿಕ್ಕೆಂದು ಹೋದಾಗ ಹತ್ತು ನಿಮಿಷ ಮೊದಲೇ ಹೋದುದಕ್ಕಾಗಿ ಅವರ ದ್ವಾರವನ್ನು ಹತ್ತು ನಿಮಿಷ ಕಾಯ್ದರಂತೆ ! (ಹುಂಗಾಕ್ಕ. ೭೪) ; ಅವೊತ್ತು ನಿಮ್ಮ ಮೈತ್ರಿಣೀ ನಿಮ್ಮನ್ನು ಕೂಗಿದಾಗಲೇ ಗೊತ್ತು (ಕೃ.ಪಿ. ೪೨೪). [← ಮರಾ. ಮೈತ್ರಿಣೀ, ಮೈತ್ರಣೀ, ಮೈತ್ರೀಣ]

**ಮೈತ್ರೇಯ** (ಗು). ೧. ಸ್ನೇಹಪೂರ್ಣವಾದ ; ಸ್ನೇಹದಿಂದ ಕೂಡಿದ. (ನಾ). ೨. ಒಬ್ಬ ಋಷಿಯ ಹೆಸರು. [ಸಂ.]

**ಮೈತ್ರ್ಯ** (ನಾ). ಸ್ನೇಹ ; ಗೆಳೆತನ : ಪ್ರವಹಿಸಲಿ ವಾತ್ಸಲ್ಯ ಮೈತ್ರ್ಯಗಳ ನೆನೆಕೆಯಿಂ ನೆನೆದೆನ್ನ ಮನವಾ ಕರುಣೆ ತವರಿನೆಡೆಗೆ (ಹುಲಿವೇ. ೨೦-೦೩). [ಸಂ.]

**ಮೈಥುನ** (ನಾ). ೧. ಸ್ತ್ರೀಪುರುಷರ ಕೂಟ ; ಸುರತ ; ಸಂಭೋಗ : "ನಿಧುವನ ರತ ಯಾಭಗ್ರಾಮ್ಯಧರ್ಮನಾಮಂ ವ್ಯವಾಯಮುದು ಮೈಥುನಮುಂ" (ವಸ್ತುಕೋ. ೩೪-೦೨) ; ನೆಗಬುದ್ಧಾಹಾರಂ ಭಯಮೊಳ್ಪುಗೆಟ್ಟ ಮೈಥುನ ಪರಿಗ್ರಹಂಗಳ್ ಸಂಸಾರಿಗಳೊಳ್ ಸಾಮಾನ್ಯದಿನೆಯ್ದುಗುಂ (ಸುಕುಮಾ. ೬-೭) ; ಮೈಥುನದಲಾಹಾರದಲಿ ಬಳಸಂದು ಕೈತವದ ಉದ್ಯೋಗದಲಿ ದುರ್ನೀತಿಯಲಿ ಪರಸತಿಯರಲಿ ಸಂಪ್ರೀತಿ ಬಲಿವುದು ಬೆದಕ ಬೆದಕಲು (ಕುಮ್ಯಾ.ಕಾ. ೪-೯೫). ೨. ಮದುವೆ ; ವಿವಾಹ. ೩. ಸಂಪರ್ಕ : [ಸಂ.]

**ಮೈದ** ' ಮೆಯ್ದುನ ' ನೋ.

**ಮೈದಡವು** ' ಮೆಯ್ದಡವು ' ನೋ.

**ಮೈದಡಹು** ' ಮೆಯ್ದಡವು ' ನೋ.

**ಮೈದಣಿ** (ಕ್ರಿ). ೧. ದೇಹವು ಆಯಾಸಗೊಳ್ಳು, — ಬಳಲು : ಮೈದಣಿಯೆ ರಿಪುಭಟನ ಹೊಯ್ಲಲಿ ಛಾಯವನು ಪಡೆದು (ಕುಮ್ಯಾ.ಕ. ೬-೪೦). ೨. ಶರೀರವು ತೃಪ್ತಿಗೊಳ್ಳು,— ಸಮಾಧಾನ ಹೊಂದು : ಅರುಣಾಬ್ಜಭಾಸುರ ಪದದ್ವಂದ್ವದಿದಿರಲ್ಲಿ ಸಾಷ್ಟಾಂಗಪ್ರಣಾಮಮಂ ಮೈದಣಿವಿನಂ ಎಱಗಿ . . . ಪಾಡಿದಂ ಭಕ್ತಿಯಿಂದಲಾ ನಂದಿಯಾಗ (ಸಂದಿಷಾ. ೦೩-೩೪).
[ ಮೈ$_1$ (< ಮೆಯ್$_2$) + ದಣಿ$_1$ (< ತಣಿ$_1$) ]

**ಮೈದಳೆ, ಮೈತಳೆ** (ಕ್ರಿ). ಆಕಾರವನ್ನು ಹೊಂದು ; ಸಾಕಾರವಾಗು : ಪೆಳಱುವ ರೌದ್ರೋತ್ಕಟದ ಮೈದಳೆದು ಜವ್ವನದೊಡೆಗಳೋಯೆನೆ ಹೋಳವ ಪಲ್ಗಳ ಪತಡಗುರುವಿಸಿ × × × ಶಾರ್ದೂಲ (ಶಾಕ್ಯಶಾ. ೩-೩೦). **ಮೈತಳೆ** : ಮುಗ್ಧತೆ ಮೈತಳೆದಂತೆಪ್ಪೋಲಿರುವರು ಪರಿಶುದ್ಧಚೇತನರುವರು (ಇಃಶಾಶ. ೩೭-೬೮) ; ಸ್ವಲ್ಪ ಸ್ವಲ್ಪವಾಗಿ ಮೈತಳೆದು . . . ಕಾಲಕ್ರಮದಲ್ಲಿ ಪೂರ್ಣತೆಯನ್ನು ಪಡೆದಿದೆ (ಶಾಸಗ. ೩೦). [ಮೈ$_1$ (< ಮೆಯ್$_2$) + ತಳೆ$_1$]

**ಮೈದಾ** (ನಾ). (ಪೂರಿ ಮುಂತಾದ ಖಾದ್ಯಗಳನ್ನು ತಯಾರಿಸಲು ಬಳಸುವ) ಒಂದು ಬಗೆಯ ನಯವಾದ ಹಿಟ್ಟು : ಮೈದಾಹಿಟ್ಟನ್ನು ಸ್ವಲ್ಪಸ್ವಲ್ಪವಾಗಿ ಸೇರಿಸಿ ಮಿಶ್ರಣವು ನಯವಾದ ಅಂಟನಂತಾಗುವಂತೆ ಕಲಸುವುದು (ಅಡುಗೆ. ೯೭). [← ಪಾರ. ಮೈದಹ್ ; ಹಿಂ. ಮರಾ. ಮೈದಾ]

**ಮೈದಾನ, ಮೈದಾನು** (ನಾ). ಸಮತಟ್ಟಾದ ವಿಸ್ತಾರವಾದ ಭೂಮಿ ; ಬಯಲು : ತಿಳಿವೆ ನಾನದನೆಲ್ಲಾ ಗದೆಗಳೊಳೊಲವರೀ ಮೈದಾನದೊಳು ನಿಲುತೊಲೆವುದೆಂದನು ಭೀಮ ಕೌರವರೊಡನೆ ಗುರುದ್ರೋಣ (ಕಪಾ. ೯-೩೦) ; ಪಟ್ಟಣದ ಮಧ್ಯಭಾಗದಲ್ಲಿ ಹತ್ತು ಗಜ ವಿಸ್ತೀರ್ಣವುಳ್ಳ ಮೈದಾನವಿದೆ (ಕ್ರವಾಇ. II. ೦೩೩). **ಮೈದಾನು** : " ಮೈದಾನು = ಪಟಾಂಗಣ " (ಶಾಪಕೋ. ೩೭) ; ಒಂದು ಕಡೆಯಲಿ – ನೆಲವು ಮೈದಾನುಭೂಮಿಯಂತೆ ಬಲುದೂರದ ತನಕ ಹರಡಿಕೊಂಡಿರುವುದು (ಶಾಂಕ್ರ. I. ೨೦).
[← ಪಾರ. ಅರ. ಹಿಂ. ಮರಾ. ಮೈದಾನ್]

**ಮೈದಾನು** ' ಮೈದಾನ ' ನೋ.

**ಮೈದಾಳು, ಮೈತಾಳು** (ಕ್ರಿ). ಆಕಾರವನ್ನು ಪಡೆ ; ಸಾಕಾರವಾಗು : ಶ್ರೀಗುರು ಕುವೆಂಪು ಅವರ ಕಣ್‌ಬೆಳಕಿನ ನಿರ್ದೇಶನದಲ್ಲಿ . . . ಮೈದಾಳಿದ್ದ ಸೌಂದರ್ಯಸಮೀಕ್ಷೆ ಎಂಬ ಈ ಒಂದು ಕೃತಿ (ಸೌಂದಸ. i. ಮೊದಲ ಮಾತು). **ಮೈತಾಳು** : ಉಳಿದ ತ್ರಿಷಷ್ಟಿಕಲೆಗಳೇ ಈ ತ್ರಿಷಷ್ಟಿಯಲ್ಲಿ ಮೈತಾಳಿದಂತಿವೆ (ಮುಂಗಾಕ್ಕ. ೪) ; ಯುಗಯುಗಕೂ ಉರುಳುತಿಹುದು ಜಗದ ರಥದ ಗಾಲಿ ಹಗಲು ಇರುಳು ಮರಳಿ ಮುಸೆದು ಸಾಹಸ ಮೈತಾಳಿ (ಕಂಪು. ೨೪-೪). [ಮೈ$_1$ (< ಮೆಯ್$_2$) + ತಾಳು$_1$ (< ತಾಳ್$_1$)]

**ಮೈದಿಗುರು** ' ಮೈತಿಮಿರ್ ' ನೋ.

**ಮೈದಿಲು** ' ಮೇಲುದು ' ನೋ.

**ಮೈದುಂಬು** ' ಮೆಯ್ದುಂಬು ' ನೋ.

**ಮೈದುನ** ' ಮೆಯ್ದುನ ' ನೋ.

**ಮೈದುನತನ** ' ಮಯ್ದುನತನ ' ನೋ.

**ಮೈದೆಗಹು** (ನಾ). ಶರೀರದ ಸೊಬಗು,— ಆಕರ್ಷಣೆ : ಸೋಲವಂದು ಮೈದೆಗಹಿನೊಳ್ ಕಲಕಲಬರಂ ಮರುಳ್ಮಾಡುತೀಶ್ವರನಡಿಯಿಡುತಿರ್ದನು (ಶಿಲಪು. ೦೪-೩೫). [ಮೈ$_1$ (< ಮೆಯ್$_2$) + ತೆಗಹು]

**ಮೈದೆಗೆ** ' ಮೆಯ್ದೆಗೆ ' ನೋ.

**ಮೈದೆರೆ** (ಕ್ರಿ). ಮೈಯನ್ನು ಒಡ್ಡು : ಶಕ್ತಿಕಂದ ಶಿವನಂದನ ಶಿಖಿಸ್ಯಂದನ ಕರವೆ ವಾಹನವಾಗಲು ಅರ್ಪಿಸಿ ಅವನಲಿ ಮೈದೆರೆವೆ (ಅಕಳು. ೪೦೩-೨).
[ಮೈ$_1$ (< ಮೆಯ್$_2$) + ತೆರೆ$_1$ (< ತೆಱ್$_1$) ]

**ಮೈದೆಱೆ$^{3}$** 'ಮೆಯ್ದೆಱೆ$^{3}$' ನೋ.

**ಮೈದೊಗಲ್** 'ಮೆಯ್ದೊಗಲ್' ನೋ.

**ಮೈದೊಡವು** 'ಮೆಯ್ದೊಡವು' ನೋ.

**ಮೈದೊಡಿಗೆ** 'ಮೆಯ್ದೊಡಿಗೆ' ನೋ.

**ಮೈದೊಡುಗೆ** 'ಮೆಯ್ದೊಡಿಗೆ' ನೋ.

**ಮೈದೊಡೆ** (ಕ್ರಿ). ಮೈಯನ್ನು ತಡವು,— ನೇವರಿಸು : ಹಿಡಿದೆತ್ತಿ ಕುಳ್ಳಿರಿಸಿ ನೆಳಲೊಳಗೆ ಬೀಸಿ ಮೈದೊಡೆದು (ಸಿದ್ಧರಾ. ೨-೯೨).
[ಮೈ$_{1}$ (< ಮೆಯ್$_{2}$) + ತೊಡೆ$_{1}$]

**ಮೈದೊರೆ** (ಕ್ರಿ). ದೇಹವನ್ನು ತ್ಯಜಿಸು : ಶರೀರವನ್ನು ತ್ಯಾಗಮಾಡು: ಅವನು ಕೇವಲಿಯಾಗಿ ಮೈದೊರೆವವರೆಗಿನ ವಿಷಯಗಳನ್ನು ಚಿತ್ರಿಸುವ ಅಂಶವೇ ಕಡೆಯದು (ನಾತೋಜ. ೩೩೬).
[ಮೈ$_{1}$ (< ಮೆಯ್$_{2}$) + ತೊರೆ$_{1}$ (< ತೊಱೆ$^{3}_{1}$)]

**ಮೈದೊಳೆ** 'ಮೆಯ್ದೊಳೆ' ನೋ.

**ಮೈದೋರು** 'ಮೆಯ್ದೋಱು' ನೋ.

**ಮೈದೋಱಿಕೆ** (ನಾ). ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳುವಿಕೆ : ತೋಱುವೀ ಸಚರಾಚರದ ಮೈದೋಱಿಕೆಯು ಮಹಿಮನು ಕಣಾ (ಕೊರಣಾ. ೬-೩-೨೬).
[ಮೈದೋಱು (< ಮೆಯ್ದೋಱು) + — ಇಕೆ]

**ಮೈದೋಱು** 'ಮೆಯ್ದೋಱು' ನೋ.

**ಮೈನ** (ನಾ). ಕಿತ್ತಳೆಯ ಬಣ್ಣ ಅಥವಾ ಹಳದಿಯ ಬಣ್ಣದ ಕೊಕ್ಕನ್ನುಳ್ಳ, ಗೊರವಂಕದ ಜಾತಿಗೆ ಸೇರಿದ ಒಂದು ಬಗೆಯ ಕಪ್ಪುಬಣ್ಣದ ಪಕ್ಷಿ : ಮೈನಂ ಎರಳೆ ನವಿಲ್ಗಾಗೆ ಪೆಟ್ಟೆ ಪೋದಗೆಕರಭಂ ಶಶನಮಿವು ಪೋಗೆ ಶಾರುಂಬರೆ ಪಡಕೆಯಂ ಮೂರೊಳಿದಳ್ಪುಮಚಳಿತವಚನ (ಲೀಲಾ. ೦೨-೦೬); ಮೈನಹಕ್ಕಿ ; ಗೊರವಂಕ (Mina. ೪೦೯೦).
[← ಹಿಂ. ಮರಾ. ಮೈನಾ./ಪ್ರಾ. ಮಯಣಾ./ಸಂ. ಮದನ]

**ಮೈನಂಬಿಗೆ** (ನಾ). ಸಾಲ ಕೊಡುವಾಗ ಒತ್ತೆ, ಅಡವುಗಳಿಲ್ಲದೆ ವ್ಯಕ್ತಿಯ ನಂಬಿಕೆಯೇ ಆಧಾರವಾಗಿರುವಿಕೆ : ಮೈನಂಬಿಗೆಯ ಸಾಲಕ್ಕೆ ಬಡ್ಡಿ ಹೆಚ್ಚು ಪೊತ್ತಿಯಸಾಲಕ್ಕೆ ಕಡಿಮೆ (ಕಥಾಗ. ೨೮೯).
[ಮೈ$_{1}$ (< ಮೆಯ್$_{2}$) + ನಂಬಿಗೆ (< ನಂಬುಗೆ)]

**ಮೈನಡುಕ** 'ಮೆಯ್ನಡುಕ' ನೋ.

**ಮೈನಡುಗು** 'ಮೆಯ್ನಡುಗು' ನೋ.

**ಮೈನವಿರ್** 'ಮೆಯ್ನವಿರ್' ನೋ.

**ಮೈನವಿರು** 'ಮೆಯ್ನವಿರ್' ನೋ.

**ಮೈನವಿರೇಳು** (ಕ್ರಿ). ಮೈಮೇಲಿನ ಕೂದಲು ನೆಟ್ಟಗೆ ನಿಲ್ಲು; ರೋಮಾಂಚವಾಗು : ಕಾಳಿಂಗವೂ ಅದೇ ವೇಗದಲ್ಲಿ ಓಡಿ ಬರುತ್ತಿತ್ತು. ನನಗೆ ಮೈನವಿರೆದ್ದಿತು (ಹಸುಹೊ. ೬೯): ಲಕ್ಷ್ಮಿಯು ಮಾಡಿದ ಕೆಲಸ ಕೇಳಿದಾಗ ಅವನಿಗೂ ಮೈನವಿರೆದ್ದಿತು (ಕುಸುಸಂ. ೧೩೦).
[ಮೈನವಿರು (< ಮೆಯ್ನವಿರ್) + ಏಳು$_{1}$ (< ಏೞ್$_{1}$)]

**ಮೈನಾರು** 'ಮೆಯ್ನೆಱೆ$^{3}$' ನೋ.

**ಮೈನಿಗ್ಗು** (ನಾ). (ಅಲಂ) ಮೈಮೇಲೆ ಧರಿಸಿರುವ ಆಭರಣಸಮೂಹ : ಚಕಚಕಿಸುವ ಮೈನಿಗ್ಗುಗಳಿಂ ದಿಕ್ಕುಗಳಂ ಬೆಳಗಿಸುವಳೋ ಅಂತಿರ್ಪ ಚಿತ್ರಿಣೀ ಜಾತಿ ಮಿಥಾರಿಯನ್ನುಉತ್ತಮಳೆಂದು ಪೇಳುವರು (ಶೃಂಗಾ. ೯೬೯–೦೦).
[ಮೈ$_{1}$ (< ಮೆಯ್$_{2}$) + ನಿಗ್ಗು]

**ಮೈನಿಡಿ** (ಕ್ರಿ). ದೇಹವನ್ನು ನಿಮಿರಿಸು : ಎಳಚಿತ್ತಾಯರು . . . ಮೈನಿಡಿದು ನಿಂತರು (ಶಗುಳ. ೭೩). [ಮೈ$_{1}$ (< ಮೆಯ್$_{2}$) + ನಿಡಿ$_{0}$]

**ಮೈನೀರು** 'ಮೆಯ್ನೀರ್' ನೋ.

**ಮೈನೀಳ** (ನಾ). ಆಕೃತಿಯು ದೀರ್ಘವಾಗಿ ಚಾಚಿರುವುದು : ನೀಲಗಿರಿ ಯಿಕ್ಕೆಲಕೆ ವಾರಿಧಿ ಮೇಲೆ ನಿಷ್ಪತ್ತಿಶೃಂಗವಿವ ಮೈನೀಳದಲಿ ಪೂರ್ವಾಪರದ ಜಲನಿಧಿಯ ಮುಟ್ಟಿಹವು (ಕುವ್ಯಾ. ೭-೯೬).
[ಮೈ$_{1}$ (< ಮೆಯ್$_{2}$) + ನೀಳ$_{1}$]

**ಮೈನುಸುಳು** (ನಾ). ಮೈ ತೂರಿಕೊಳ್ಳುವ ಅವಕಾಶ,—ಜಾಗ; ಎಡೆ: ಏನ ಹೇಳುವೆನರಸ ದಿವಿಜರ ಸೇನೆಯಲ್ಲಾ ಛತ್ರ ಚಮರ ವಿತಾನದಲಿ ನಭವಿಲ್ಲ ನೆಗಹಿದ ಸಬಳ ಶಲ್ಲೆಹಕೆ ಮೈನುಸುಳ ಕಾಣೆನು (ಕುವ್ಯಾ. ೦೯–೬).
[ಮೈ$_{1}$ (< ಮೆಯ್$_{2}$) + ನುಸುಳು$_{2}$ (< ನುಸುಳ್$_{2}$)]

**ಮೈನೆರೆ** 'ಮೆಯ್ನೆಱೆ$^{3}$' ನೋ.

**ಮೈನೆಱೆ$^{3}$** 'ಮೆಯ್ನೆಱೆ$^{3}$' ನೋ.

**ಮೈನೋಟ** 'ಮೆಯ್ನೋಟ' ನೋ.

**ಮೈನೋವು** (ನಾ). ದೇಹದ ನೋವು,— ಬಾಧೆ: ದಶಾನನನು ಮನಸಿಜನ ಶರಸಂಧಾನದೆಸುಗೆಯ ಮಸೆಯ ಮೈನೋವಿನಲಿ ಕಳವಳಿಸಿ (ತೊರಾ. ೩-೩-೩೦). [ಮೈ$_{1}$ (< ಮೆಯ್$_{2}$) + ನೋವು]

**ಮೈಪರಚು** (ಕ್ರಿ). ಮೈಯನ್ನು ಉಗುರಿನಿಂದ ಗೀರು,— ಕೆರೆ.

**ಮೈಪರಚಿಕೊಳ್ಳು** = (ಜುಗುಪ್ಸೆ, ಕೋಪ, ಬೇಜಾರು ಮೊದಲಾದ ಭಾವನೆಗಳಿಂದ) ಮೈಯನ್ನು ಗೀರಿಕೊಳ್ಳು : ನನ್ನ ಮೇಲೆ ಕೋಪ ಬಂದು ಮೈ ಪರಚಿಕೊಂಡುಬಿಡುವ ಹಾಗಾಗುತ್ತದೆ (ದೂಶಿಲ್ಪ. ೦೩೨) ; ನನ್ನ ವಿಷಯ ಹೇಳಿಕೊಳ್ಳುವ ಸಂಭ್ರಮದಲ್ಲಿ ಯಮುನೆಯ ಸಂಗೀತದ ವಿಷಯ ಯಾಕೆ ಹೇಳಿದನೋ ಎಂದು ನನಗೆ ಮೈಪರಚಿಕೊಳ್ಳುವ ಹಾಗಾಯಿತು (ಅಂಹೂ. ೭೩): ಕೈಲಾಗದವ ಮೈಪರಚಿಕೊಂಡ (ಗಾದೆ).
[ಮೈ$_{1}$ (< ಮೆಯ್$_{2}$) + ಪರಚು]

**ಮೈಪು** (ನಾ). ದೇಹವನ್ನು ಹೊಂದಿರುವ ಸ್ಥಿತಿ: ಐಪಡಗಿದಷ್ಟಾಂಗಯೋಗ ಶಿವಕಜ್ಜದಿಂ ಮೈಪಳಿದ ಪೂಗೋಲ ಮಥನಪ್ರಸಂಗದಿಂ ಸ್ಮೈಪಡೆದ ಸದಮಲ ಜ್ಞಾನಪ್ರಮಥರೆಸೆವರೇಂ ಪೊಗಳ್ದಪೆಂ ಶರಣರ (ಲಿಂಗಪು. ೩-೦೬).
[ಮೈ$_{1}$ (< ಮೆಯ್$_{2}$) + — ಪು$_{2}$]

**ಮೈಬಣ್ಣ** 'ಮೆಯ್ವಣ್ಣ' ನೋ.

**ಮೈಬಲ** (ನಾ). ದೇಹದ ಬಲ : ಶಾರೀರಿಕ ಶಕ್ತಿ : ಉದ್ಯಮ ಸಾಹಸ ಬುದ್ಧಿ ಪರಾಕ್ರಮ ಧೈರ್ಯವು ಮತ್ತೆ ಮೈಬಲವು (ಇಂತಾಶ. ೦೬೯-೬).
[ಮೈ$_{1}$ (< ಮೆಯ್$_{2}$) + ಬಲ$_{3}$]

**ಮೈಬಲ್ಮೆ** (ನಾ). ಶರೀರದ ಶಕ್ತಿ : ದೇಹದ ಸಾಮರ್ಥ್ಯ,—ಬಲ : ನನ್ನ ಮೈನವಿರನೊಂದಾದಡಂ ಕೀಳಲಾರದು ನಿಮ್ಮ ಮೈಬಲ್ಮೆ (ಪಗಾಳ. ೬೦); ನೆಲದ ಸಿರಿ, ಬಿಲ್ಬಿಜ್ಜೆ, ಮೈಬಲ್ಮೆ, ರಣಕೀರ್ತಿ ಮೇಣ್ ಅರಸುಕುವರಿಯ ತನು ತೃಣವಾಗಿ ಋಣವಾಗಿ ಕಾಣಿಸಿದುವು (ಶ್ರಾಂಗ. ೨೩-೬೯೧).
[ಮೈ$_{1}$ (< ಮೆಯ್$_{2}$) + ಬಲ್ಮೆ]

**ಮೈಬಳಲಿಕೆ** 'ಮೆಯ್ವಳಲ್ಕೆ' ನೋ.

**ಮೈಬಳಸು** (ಕ್ರಿ). ಶರೀರವನ್ನು ಸುತ್ತಿಕೊಳ್ಳು; ದೇಹವನ್ನು ಆವರಿಸು : ಮಲೆತು ಧಾಳಾಧೂಳಿಯಲಿ ಬಲಸುಳಿ ಮಸಗಿಯೆನ್ನೊಬ್ಬನನು ಮೈಬಳಸಿ ಕಾದಿತು ವೀರಕರ್ಣನ ಕೂಡೆ ತಲೆಯೊತ್ತಿ (ಕುವ್ಯಾ. ೦೬-೨೬).
[ಮೈ$_{1}$ (< ಮೆಯ್$_{2}$) + ಬಳಸು$_{1}$]

**ಮೈಬಾಯು** (ಕ್ರಿ). (ಅಲಂ) ಉಬ್ಬು : ಹಿಗ್ಗು: ತೆರೆಯ ಮಱೆಯೊಳಿದ್ದ ನಮಿವಿನಮಿಗಳ ಪೆಂಡಿರು ಸಿಂಧು ಗಂಗಾಸತಿಯರು ಭರತೇಶ ತಂಗಿಯರೆನೆ ಕೇಳ್ದು ಚಿತ್ರದೊಳರಳಿ ಮೈಬಾತರಾ ಕ್ಷಣದೆ (ಭರತೇ. ೯೨-೦೨೯).
[ಮೈ$_{1}$ (< ಮೆಯ್$_{2}$) + ಬಾಯು (< ಬಾ$_{1}$)]

**ಮೈಬಾವು** (ನಾ). ಶರೀರದ ಊತ : ಅರಿದಾಳದ ಸುಟ್ಟು, ಸೈಂಧವ, ಗಂಜಿ, ಗಂಧಕ, ಇವು ಎಣ್ಣೆಯೊಳು ಪೂಸೆ ಮೈಬಾವು ಮಾಣ್ಗುಂ (ಅಶ್ವಶಾ. ೬೬). [ಮೈ$_{1}$ (< ಮೆಯ್$_{2}$) + ಬಾವು]

**ಮೈಬಿಡು** ' ಮೆಯ್ವಿಡು ' ನೋ.

Δ **ಮೈಬಿಸುಪ್ಪು** ' ಮೆಯ್ಬಿಸುಪ್ಪು ' ನೋ.

**ಮೈಬೇನೆ** (ನಾ). ಶರೀರಕ್ಕೆ ಉಂಟಾಗುವ ಬೇನೆ; ಮೈನೋವು: ಕೆಮ್ಮು, ಮಂದಾಗ್ನಿ, ಮೂಲವ್ಯಾಧಿ, ಹೊಟ್ಟೆ ಮೈಬೇನೆಗಳೆಂಬಿವು ಪರಿಹಾರವಾಗುವುವು (ಐಶ್ವ.ಚಿ. ೩೬). [ಮೈ$_{1}$ (<ಮೆಯ್$_{2}$) + ಬೇನೆ]

**ಮೈಭುಲ್ಲಣೆ** (ನಾ). (ಮನಸ್ಸಿನಲ್ಲಾದ ಸಂತೋಷ, ಸಂಭ್ರಮ, ಹೆಮ್ಮೆಗಳಿಂದ) ದೇಹವು ಬೀಗುವಿಕೆ: ಬಿಲ್ಲ ಕೊಪ್ಪಿನ ಮೇಲೆ ಚಾಚಿದ ಗಲ್ಲದುಪಹಾಸದ ನುಡಿಯ ಮೈಭುಲ್ಲಣೆಯ ರೋಮಾಂಚನದ . . . ನಗೆಯ ಚೌಪಟಮಲ್ಲನಿದ್ದನು ರಿಪುಬಲವ ಲೆಕ್ಕಿಸದೆ (ಕುಮಾ.ದ್ರೋ. ೧೭-೩೩). [ಮೈ$_{1}$ (<ಮೆಯ್$_{2}$) + ಭುಲ್ಲಣೆ (<ಬುಲ್ಲವಣೆ)]

**ಮೈಭೋಗ, ಮಯಿಭೋಗ** (ನಾ). ೧. ವಸ್ತ್ರ, ಭೂಷಣ ಇತ್ಯಾದಿಗಳಿಂದ ಶರೀರಕ್ಕೆ ಒದಗುವ ಸುಖ: ಉಡುಗೊರೆಗಳ ವಸನದ ಮೈಭೋಗದ ಮಡಿಯ ನಾನಾದೊರೆಗಳಿಗೆ ಕೊಡುವ ಬಂಗಾರದ ಪೆಟ್ಟಿಗೆಗಳ ಬಲುಂಗಡಣ ಸಾಗಿದುದವರೊಡನೆ (ರಾಮಾ.ಚ. ೭-೧೪); ಪಟ್ಟೆಚೀನಾಂಬರಗಳನು ಸೃಷ್ಟೀಶನ ಮೈಭೋಗಕೆ ತಂದೀವ ಸೆಟ್ಟಿಗಳು (ಕಂಥಾ. ೨೫-೧೧೧). ೨. ದೇವರ ವಿಗ್ರಹಕ್ಕೆ ವಸ್ತ್ರ,ಭೂಷಣ ಇತ್ಯಾದಿಗಳನ್ನು ಅರ್ಪಿಸುವ ಸೇವೆ; ಅಂಗಭೋಗ: ಸೋಮಂಣವೊಡೆಯರ ಅಂಮ್ಮ ಸಾಯಿಂಮ್ಮನವರ ಮೈಭೋಗಕ್ಕೆ ಕೊಟ್ಟಹ ದಕ್ಷಿಣಾವಾರಣಾಸಿಯಾದ ಕಾವೇರಿಯ ದಕ್ಷಿಣಭಾಗದ . . . ಕೆರಿಯ ಸೀಮೆಯಲು (ಎಕ. XIV, ತಿರುಮ. ೨೨೨-೬; 1482). **ಮಯಿಭೋಗ:** ೨. ಮಯಿಭೋಗದ ಜವಳಿ ೧೦ಕ್ಕೆ ಗ ೧೫ (ಎಕ. VI (R), ಶ್ರೀರಂಗ. ೨೫೬-೧೧ : 1544). 'ಮೆಯ್ಬೋಗ' ಪರಾ. [ಮೈ$_{1}$ (<ಮೆಯ್$_{2}$) + ಭೋಗ]

**ಮೈಮ** (ನಾ). ಮಹಿಮಾಶಾಲಿ; ಮಹಾತ್ಮ: ಒಪ್ಪಿರ್ಪ ಮೈಮಂ ವಿಶ್ವನಾಥಂ (ಕುಸುಮಾ. ೧-೧); ಒಡವರೊಡವೆಗಂಡಂತೆ ಮೈಗಣ್ಣನ ಮಡದಿ ಮೈಮನನೆತ್ತಿಕೊಂಡು (ಶೀಲಸಂ. ೨೨-೧೨೫). 'ಮಯ್ಮೆ$_{2}$' ಪರಾ. [<ಸಂ. ಮಹಿಮನ್]

**ಮೈಮಗುಚು** (ಕ್ರಿ). ದೇಹವನ್ನು ಹೊರಳಿಸು,–ತಿರುಗಿಸು: ಕೈ ಮಗುಚಿ ಶತ್ರುಘ್ನ ಬಾಣವ ಮೈಮಗುಚಿ ದಾನವನ ಮಾರ್ಗಣ ವೈಭವದ ನೆರೆ ಕೈಚಳಕವನು ಕಂಡು ಮೆರವುತಿರೆ (ತೊರವೆ. ೩-೪೨). [ಮೈ$_{1}$ (<ಮೆಯ್$_{2}$) + ಮಗುಚು (<ಮಗುಟ್ಚು)]

**ಮೈಮರವು**, ಮೈಮರೆವು (ನಾ). ೧. ಶರೀರದ ಮೇಲೆ ಎಚ್ಚರವಿಲ್ಲದಿರುವುದು; ಮೂರ್ಛೆ: ಮರದರಿಸಿನ, ಕೊಡನಾರಿಗೆಡ್ಡೆ . . . ಕಷಾಯ ವಿಕ್ಕೆ ಕೊಡಲು ಭಗ್ನನೇತ್ರಸನ್ನಿಯಿಂದುಂಟಾದ ಮೈಮರವು ಗುಣವಾಗಿ ಜ್ಞಾನವಕ್ಕುಂ (ಚಿಕಿತ್ಸೆ. ೦೬೨). **ಮೈಮರೆವು:** ೨. ಲಕ್ಷ್ಯವಿಲ್ಲದಿರುವುದು; ಪರಿವೆಯಿಲ್ಲದಿರುವುದು: ಆ ನಿಮಿಷದಲ್ಲಿ ಏನೋ ಒಂದು ಬಗೆಯ ಮೈಮರವು. ಆ ಮೈಮರೆವಿನ ಶಾಂತಿಯಲ್ಲಿ ಒಂದೆರಡು ಅಲೆಗಳು ಮೆಲ್ಲನೆದ್ದು ಅಲುಗಿಸುತ್ತಿದ್ದುವು (ಅಂತಃಪು. ೯೩). [ಮೈ$_{1}$ (<ಮೆಯ್$_{2}$) + ಮರವು (<ಮಱವು)]

**ಮೈಮರೆ$_{1}$** ' ಮೆಯ್ಮಱೆ 'ನೋ.

**ಮೈಮರೆ$_{2}$** ' ಮೈಮಱೆ$_{2}$ ' ನೋ.

**ಮೈಮರೆತ** (ನಾ). ತಲ್ಲೀನತೆ; ಪರವಶತೆ: ಅವನ್ನು ಮಾಡುವ ತನಕ ಅವರ ಮೈಮರೆತ ಹೋಗಲಿಲ್ಲ (ಮುಕ್ತಿಪ. ೧೧೭); ನಾಟಕ ಬರೆಯುವಾಗ ಹಿಂದೆ ಎಂದೂ ಇಲ್ಲದ ಮೈಮರೆತ ನನ್ನ ಮೇಲಿತ್ತು (ಅಮೃ. ೯ ಹಿನ್ನೆಲೆ). [ಮೈಮರೆ$_{1}$ (<ಮೆಯ್ಮಱೆ) + –ತ$_{2}$]

**ಮೈಮರೆವು** ' ಮೈಮರವು ' ನೋ.

**ಮೈಮರೆಹು** ' ಮೆಯ್ಮಱೆಪು ' ನೋ.

**ಮೈಮಸಕ** (ನಾ). ಶಾರೀರಕಬಲ,–ಸಾಮರ್ಥ್ಯ: ಆವ ಸಾಧನೆಯೋ ಪಿಘಾತಿಯ ರಾವಣೆಗೆಗದ್ರಿಗಳು ಬಿಡಾದವು ಮೈವಳಿಯಲುಕ್ಕಿದುದು ಕಡುಹಿನ ಏತಿಯ ಮೈ [ಪಾಠಾಂ. ಕೈ]ಮಸಕ (ಕುಮಾ.ಕ. ೨-೧೧೯); ಉಸಿರಿಡುವ ಹೆಣವಾಗಿ ಬಾಳುವೆನೆ? ಚಲದ ಮೈಮಸಕವಂ ಮೆರೆಯದೆಯೆ ಹಿಂದೆ ಜರುಗಿ! (ಶಾರಂಗ. ೭-೨೪). [ಮೈ$_{1}$ (<ಮೆಯ್$_{2}$) + ಮಸಕ$_{1}$]

**ಮೈಮಱಸು** (ಕ್ರಿ). ಮೈಮರೆಯುವಂತೆ ಮಾಡು: ಆ ಮಹೀಪತಿಯಂಗನೆಯನುದ್ದಾಮಬಲ ದಶಕಂಠ ಬನದಲಿ ಮೈಮಱ[ಪಾಠಾಂ. ಱ]ಸಿಕೊಂಡೊಯ್ದು ಗಡ (ತೊರವೆ. ೫-೪-೧೭); ಮಾಯವನನುಗೊಳಿಸದೆ ಮೈಮಱಸದೆ . . . ಆಯಸದಿಂದಳವಳಿಯದೆ ಪತಿಯನುಪಾಯದಿಂದುಪಚರಿಸುವುದು (ಹರಿಬ. ೩-೯). [ಮೈಮಱೆ$_{1}$ (<ಮೆಯ್ಮಱೆ) + –ಸು$_{1}$]

**ಮೈಮಱುಕ** ' ಮೆಯ್ಮಱುಕ ' ನೋ.

**ಮೈಮಱುಗು** ' ಮೆಯ್ಮಱುಗು ' ನೋ.

**ಮೈಮಱೆ$_{1}$** ' ಮೆಯ್ಮಱೆ ' ನೋ.

**ಮೈಮಱೆ$_{2}$**, ಮೈಮರೆ$_{2}$ (ನಾ). ೧. ಉದಾಸೀನತೆ; ಮೈಮರೆವು: ಸತಿಯ ಹೋಗಾಡಿದೆವು ಮಾನಸ್ಥಿತಿಗೆ ಮೈಮಱೆಯಾಯ್ತು ಬಂದೆವು ಗತಿವಿಡಿದು ದಶಶಿರನ ಮೇಲಣ ವೈರಬುದ್ಧಿಯಲಿ (ತೊರವೆ. ೪-೧-೧೩). **ಮೈಮರೆ$_{2}$:** ೨. ದೇಹವನ್ನು ಮರೆ ಮಾಡುವ ಅಥವಾ ಮುಚ್ಚುವ ಸಾಧನ; ದೇಹರಕ್ಷಣೆಯನ್ನು ಮಾಡುವ ಕವಚ: ಇನ್ನು ಮೈಮರೆಯನ್ನು ಆಸೆಪಡುವುದು ನನಗೊಪ್ಪುವುದಿಲ್ಲ ಎಂದುಕೊಂಡು ಅದಟನಾದ ಆ ರಾಧೇಯನು ಕವಚವನ್ನು ತೊಡಲೇ ಇಲ್ಲ (ಕಾದಂಬಿ. ೨೩). [ಮೈ$_{1}$ (<ಮೆಯ್$_{2}$) + ಮಱೆ$_{2}$]

**ಮೈಮಱೆಪು** ' ಮೆಯ್ಮಱೆಪು ' ನೋ.

**ಮೈಮಱೆಹು** ' ಮೆಯ್ಮಱೆಪು ' ನೋ.

**ಮೈಮಾಟ** (ನಾ). ದೇಹರಚನೆ; ಮೈಕಟ್ಟು: ಮಗು ದೊಡ್ಡದಾದ ಹಾಗೆ ಬಿಂದಣ್ಣನ ಮೈಮಾಟವನ್ನೇ ಅನುಕರಿಸಿ ಬೆಳೆಯತೊಡಗಿದನು (ವೃ.ಚಿ. ೦೬೯); ಅವಳು ಬುದ್ಧಿವಂತೆ. ಒಳ್ಳೆಯ ಮೈಮಾಟ (ಸ್ಮೃತಿತ. ೯೪). [ಮೈ$_{1}$ (<ಮೆಯ್$_{2}$) + ಮಾಟ$_{1}$]

**ಮೈಮಿನುಗು** (ನಾ). (ಬಾಣದ) ಕಾಂತಿ,–ಹೊಳಪು: ದನುಜಹರ ಮಂತ್ರವನು ಮನದಲಿ ನೆನೆದು ಕೈನೀಡಿದನು. . . ಕನಕರಸರೇಖಾವಳಿಯ ಮೈಮಿನುಗುಗಳ ಹೊಂಗರಿಯ ನಾರಾಯಣಮಹಾಶರಕೆ (ಕುಮಾ.ದ್ರೋ. ೦೯-೦೪). [ಮೈ$_{1}$ (< ಮೆಯ್$_{2}$) + ಮಿನುಗು$_{3}$ (<ಮಿನುಕು$_{3}$)]

**ಮೈಮುಟ್ಟು** ' ಮೆಯ್ಮುಟ್ಟು ' ನೋ.

**ಮೈಮುದುಡು** (ಕ್ರಿ). ದೇಹವನ್ನು ಮುದುರಿಕೊಳ್ಳು; ಶರೀರವನ್ನು ಸಂಕುಚಿತಗೊಳಿಸು: ಪುಟ್ಟ ರಾಧಾ ಈಗಲೂ ತಾಯಿಯ ಜತೆಯಲ್ಲೇ ಮೈಮುದುಡಿಕೊಂಡು ಮಲಗುತ್ತಿದ್ದಳು (ರಂಗವ. ೨೭). [ಮೈ$_{1}$ (< ಮೆಯ್$_{2}$) + ಮುದುಡು$_{1}$ (< ಮುದಿರ್)]

**ಮೈಮುರಿ** ' ಮೆಯ್ಮುರಿ ' ನೋ.

**ಮೈಮುರುವು**, ಮೈಮುರುಹು (ನಾ). ದೇಹವನ್ನು ತಿರುಗಿಸುವಿಕೆ; ಮೈಮುರಿಯುವಿಕೆ: ವಾಮಕರ ದಂಡೆಗಳ ದಂಡೆಯ ಮೈಮುರುವಿ [ಪಾಠಾಂ. ಹಿ]ನುಪ್ಪರದ ಮುಷ್ಟಿಯ . . . ತಪಕಿಗರು ತಿವಿದಾಡಿದರು ತೀವ್ರದಲಿ (ತೊರವೆ. ೬-೧೭-೩೮). **ಮೈಮುರುಹು:** ಮೈಭಾರ, ದೈನ್ಯೋಕ್ತಿ, ಮೈಮುರುಹು . . . ದಾಹ ಇವು ರಸಗತಜ್ವರದಲ್ಲಿ ಉಂಟಾಗಿಹವು (ವೈದ್ಯಸಾ. I, ೪೫). [ಮೈ$_{1}$ (< ಮೆಯ್$_{2}$) + ಮುರುವು$_{1}$ (< ಮುರಿವು)]

**ಮೈಮುರುಹು** ' ಮೈಮುರುವು ' ನೋ.

**ಮೈಮೆ** ' ಮಯ್ಮೆ$_{1}$ ' ನೋ.

**ಮೈಮೆಗಾಱ** (ನಾ). ಮಹಿಮೆಯುಳ್ಳವನು; ಮಹಿಮಾವಂತ : ಆಃ ! ನೀನುಂ ಬಲ್ಮೈಮೆಗಾಱಂ (ರಾಮಾಶ್ವ. ೦೦೬-೨೭).

[ ಮೈಮೆ (< ಮಯ್ಮೆ$_1$) + — ಕಾಱ ]

**ಮೈಮೆಟ್ಟ** (ನಾ). ಒಂದು ಮನೆತನದ ಹೆಸರು (?) : ಇವರೊಳಗಾದ ಸಮಸ್ತಪ್ರಜೆಗಳು ಮೇಲಾಳಿಕೆ ಮೈಮೆಟ್ಟ ಜಲ್ಲೆಯ ಮೈಮೆಟ್ಟ ಕೇಶವ ಮೈಮೆಟ್ಟ ಹರಿಯಣ ಇಂತಿನಿಬರುಂ (ಪ್ರಕಂ. ೦೬೨೮, ೦೩-೦೯; 1200).

[ ? ]

**ಮೈಮೆದಳೆ** (ಕ್ರಿ). ಘನತೆಯನ್ನು ಹೊಂದು ; ಗೌರವವನ್ನು ತಳೆ : ಅಶ್ವತ್ಥಾಮನಂ ಸಂಗ್ರಾಮದಂ ತೊಱೆದು ಪೋಪಂತು . . . ಕೈಮಿಕ್ಕು ಮೈಮೆದಳೆಯಲುಂ (ಜಗಪು. ೦೩-೫ ವ).

[ ಮೈಮೆ (< ಮಯ್ಮೆ$_1$) + ತಳೆ$_1$ ]

**ಮೈಮೆವಡೆ** (ಕ್ರಿ). ಮಹತ್ತ್ವವನ್ನು ಪಡೆ ; ಘನತೆಯನ್ನು ಹೊಂದು : ಅಂತು ಮೈಮೆವಡೆದ ಗಟ್ಟದ ಮೇಲೆ ಕೈಯೆತ್ತಿ (ಶಬ್ದಮಣಿ. ೨೨೬) ; ಅಂತು ಮನೋನುರಾಗದಿಂ ಮೈಮೆವಡೆದು (ದಶಕು. ೨-೨ ವ); ಮೈಮೆವಡೆದ ಜಿನಸೇನಸ್ವಾಮಿಯ ನಿರ್ಮಲತರ ಪೂಜ್ಯಪದಸ್ವಾಮಿಯ ಪದವಂ ನೆನೆದು (ಶಮು. ೦-೬). [ ಮೈಮೆ (< ಮಯ್ಮೆ$_1$) + ಪಡೆ$_1$ ]

**ಮೈಮೆವೆಱು** (ಕ್ರಿ). = ಮೈಮೆವಡೆ : ಮುಖರೋಗವಮಾದವೋಲಿನಿತಾನುಂ ಬಸವಲ್ಲದುಸಿರ್ವರೆಂದುಂ ಪೊಸಸುರಿಯಿಂ ಮೈಮೆವೆತ್ತ ಮಾಯ್ದು ಮನುಷ್ಯರ್ (ಕಾದಂಪೂ. ೩೬೨) ; ಮೈಮೆವೆತ್ತೋಲಗದ ನಡುವೆಯಾರ ಮನೋಸರಿಸದ ಬಗೆದ ಪಾಸಮಿದೆಂಬಂತೆ ನೀಳ್ದ ಕೆಂಜೆಡೆಗಳೊಳಂ (ಶಬ್ದಮಣಿ. ೦೬೭); ಮೈಮೆವೆತ್ತಸುಪರ್ವಮೋಹಶೃಲಪವಿ (ಶಬಶಂ. ೨-೬).

[ ಮೈಮೆ (< ಮಯ್ಮೆ$_1$) + ಪೆಱು$_1$ ]

**ಮೈಮೇಟ** ' ಮಯ್ಮೇಟ ' ನೋ.

**ಮೈಮೇಳ** ' ಮಯ್ಮೇಳ ' ನೋ.

**ಮೈಯಂತಿ**(ನಾ)·(ಕರಾ) ಒಂದು ಹೆಣ್ಣು ಭೂತ್ಸ[— ತುಳು, ಮಯೆಂತಿ]

**ಮೈಯರಿ** ' ಮಯ್ಯರಿ ' ನೋ.

**ಮೈಯಲಸು** ' ಮಯ್ಯಲಸು ' ನೋ.

**ಮೈಯಾಟ** ' ಮಯ್ಯಾಟ ' ನೋ.

**ಮೈಯಾನ್** ' ಮಯ್ಯಾನ್ ' ನೋ.

**ಮೈಯಿಕ್ಕು** ' ಮಯ್ಯಿಕ್ಕು ' ನೋ.

**ಮೈಯಿಡು** ' ಮಯ್ಯಿಡು ' ನೋ.

**ಮೈಯಿಳಿ** (ಕ್ರಿ). ಗರ್ಭಸ್ರಾವವಾಗು : ನಾಗವಲ್ಲಿ . . . ಮೈಯಿಳಿದು ತೀರಿಕೊಂಡಳು (ಮುಕುಟು. ೦೦೯).

[ ಮೈ$_1$ (< ಮೆಯ್$_2$) + ಇೞಿ$_1$ (<ಇೞಿ) ]

**ಮೈಯಿಳಿತ** (ನಾ). "ಗರ್ಭಪಾತ : ಗರ್ಭಸ್ರಾವ ಮಾಡಿಸುವುದು" (Abortion. ೩೦೯೬). [ ಮೈಯಿಳಿ + — ತ$_2$ ]

**ಮೈಯಿಱ** (ಕ್ರಿ). ದೇಹವನ್ನು ಒರಗಿಸು : ಮಾನಿನಿಯು ಮರಕೆ ಮೈಯಿತ್ತು ಕುಳ್ಳಿರ್ದುದುಂ (ಸವಪೂ. ೬-೯೨).

[ ಮೈ$_1$ ( < ಮೆಯ್$_2$ ) + ಈ$_2$ ]

**ಮೈಯುಕ್ಕು** (ಕ್ರಿ). (ಸಂತೋಷದಿಂದ) ದೇಹವು ಉಬ್ಬು : ಕಱೆಕಂಠಂ ಬಂದನೆಂಬ ಭಾವಕ್ಕೆ ಮೈಯು[ಶಾಶಾ. ವು]ಕ್ಕಿ ನಿಂದ ನಂಬಿಯಲ್ಲಿಗೆ ನಡೆತಂದು (ಸಂಶರ. ೦೩-೯೨).

[ ಮೈ$_1$ (<ಮೆಯ್$_2$) + ಉಕ್ಕು$_1$ (<ಉಕ್ಕ್$_1$) ]

**ಮೈಯುಡುಗು** ' ಮೆಯ್ಯುಡುಗು ' ನೋ.

**ಮೈಯುಣ್**, ಮೈಯುಣ್ಣು (ಕ್ರಿ). (ಅಲಂ) ಅಭ್ಯಾಸವಾಗು ; ರೂಢಿಯಾಗು : ಸಂಯೋಗದ ಸುಖ ಮೈಯುಂಡವಂಗೆ ಲೋಕದ ನಚ್ಚುಮಚ್ಚಿನ ಬಲೆದೊಡಕು ತಪ್ಪದು (ಮೋಕ್ಷಪಾ. ೨೯೬-೬೮).

**ಮೈಯುಣ್ಣು** : ಪ್ರತ್ಯಕ್ಷದಲ್ಲಿ ಮೈಯುಂಡ ಅವಮಾನದ ಕಹಿಯನ್ನು ಕಲ್ಪನೆಯ ಲೋಕದಲ್ಲಿ ತನ್ಮಯನಾಗಿ ಮರೆತು ವಿಹರಿಸುತ್ತಾನೆ ಸಿದ್ಧಣ್ಣ (೬೩ಣಾ. ೩೬); ಈ ಕೆಲಸ ನಮ್ಮ ವಂಶಗತವಷ್ಟೆ ಆದ್ದರಿಂದ ಮೈಯುಂಡಿದೆ (ಕುಂಬಂ. ೦೯೩). [ ಮೈ$_1$ (< ಮೆಯ್$_2$) + ಉಣ್ ]

**ಮೈಯುಣ್ಣು** ' ಮೈಯುಣ್ ' ನೋ.

**ಮೈಯುಬ್ಬು** ' ಮೆಯ್ಯುರ್ಬು ' ನೋ.

**ಮೈಯುರಿ** (ನಾ). ೧. ದೇಹದಲ್ಲಿ ಉಂಟಾಗುವ ತಾಪ,_ ಉರಿ : ನಾಲ್ಕು ದಿನಗಳಿಂದ ನಾನು ಕಣ್ಣುರಿ, ಮೈಯುರಿಗಳಿಂದ ನರಳುತ್ತಿದ್ದೇನೆ (ರೂಢಿ). ೨. (ಅಲಂ) ಸಿಟ್ಟು; ಅಸಹನೆ : ಅವಳನ್ನು ಕಂಡರೆ ಇವನಿಗೆ ಎಲ್ಲಿಲ್ಲದ ಮೈಯುರಿ ಉಂಟಾಗುತ್ತದೆ (ರೂಢಿ).

[ ಮೈ$_1$ (< ಮೆಯ್$_2$) + ಉರಿ$_2$ ]

**ಮೈಯೊಡ್ಡು** ' ಮಯ್ಯೊಡ್ಡು ' ನೋ.

**ಮೈಯೊಲವು** ' ಮೆಯ್ಯೊಲಪು ' ನೋ.

**ಮೈರೇಖೆ** (ನಾ). ಮೈಮಾಟ ; ಶರೀರದ ರಚನೆ : ಬಲು ಸರಳವಾಗಿಯೂ ನೈಸರ್ಗಿಕವಾಗಿಯೂ ಜೀವಿಸುವುದರಿಂದ ಅವರ ಮೈರೇಖೆಯಲ್ಲಿ ಒಂದು ಸೊಬಗಿದೆ (ದಾಂಶ್ಕ. II, ೦೦೩೦).

[ ಮೈ$_1$ (< ಮೆಯ್$_2$) + ರೇಖೆ ]

**ಮೈರೇಯ** (ನಾ). ಒಂದು ಬಗೆಯ ಮಾದಕಪಾನೀಯ : "ಮಧು, ಆಸವಃ . . . ಮೈರೇಯಂ, ಕಾಪಿಶಾಯನಂ, ಮಾಧ್ವೀಕಂ, ಆಸವಃ, ಪರಿ(ಸ್ರು)ಶ್ರುತ್, ವಾರುಣೀ, ಮಧು — ಈ ೨೪ ಕಳ್ಳು" (ಶಬ್ದಾಮು. ೩೩-೦೭೩); ವಿಪಾರಿ ಮೈರೇಯಮಂ ಓರಿ ಬಹುಮಾತ್ರ ಮಾಪವೇರಿ . . . ತತ್ತಂದರು (ಕೇಶರಾ. ೦೯-೨೩). [ಸಂ.]

**ಮೈರೊಳೆ** (ನಾ). ಒಂದು ಬಗೆಯ ಸಸ್ಯ : ನವಿಲಾದಿ, ಮೈರೊಳೆ, ಭರಣಿಗೆ (ಪ್ರಶಿಗಿ. ೭೬-೦೫೯೬). [ ? ]

**ಮೈರೋಚಿ** (ನಾ). ದೇಹದ ಕಾಂತಿ ; ಶರೀರದ ಹೊಳಪು : ಚೇಚರಿಯರು . . . ಬಂದು ಮೈರೋಚಿ ಬೆಳಗಿಂ ಕೋಂಟೆ ಸುತ್ತುವಳಯದಿ ಕುಳಿತ ತೆರದಿ ಪೊಂದಿನೆಗಳೆಸೆಯೆ (ಸವಪೂ. ೨-೨೩).

[ ಮೈ$_1$ (< ಮೆಯ್$_2$) + ರೋಚಿ ]

**ಮೈಲ** ' ಮೈಲಿ$_1$ ' ನೋ.

**ಮೈಲಗೆ** ' ಮೈಲಿಗೆ ' ನೋ.

**ಮೈಲಗೆವೆಳ್ದಿಂಗಳ್** (ನಾ). ವಿಪಾಸಲಳಿದ ಬೆಳುದಿಂಗಳು ; ಉಪಯೋಗ ಹೊಂದಿದ ಬೆಳುದಿಂಗಳು : ನಗರೀನಾಯಕನಾಯಿಕಾವದನವೃತದಿಂ ಸುತ್ತಿ ಸೊಪ್ಪಾದ ಮೈಲಗೆವೆಳ್ದಿಂಗಳ ಸೊಂಪಂ ಸ್ವೈರಿಸದಪೊಲ್ ಭೋಂಕಲ್ ಮರಳ್ದಂದು (ಅನಂಪು. ೬-೬೦); ಇರುಳು ಚಕೋರಿಗಳೆಲ್ಲ ನೆರೆದು ಚಂದ್ರನುರದ ಸಾರವನೆಲ್ಲ ಕೊಳಲು ಹರುಷವಜತು ಮೈಲಗೆವೆಳ್ದಿಂಗಳೊಳ್ವೆರಸಿರ್ದ ನಸ್ಸಾದ್ರಿಯೋಱೆ (ಅನಂತ. ೦೦-೦೯೬).

[ ಮೈಲಗೆ (< ಮೈಲಿಗೆ) + ಬೆಳ್ದಿಂಗಳ್ ]

**ಮೈಲತುತ್ತ**, ಮಯಿಲತುತ್ತ, ಮೈಲುತುತ್ತ, ಮೈಲುತುತ್ತು, ಮೈಲುತುತ್ಥ (ನಾ). ತಾಮ್ರ ಮತ್ತು ಗಂಧಕಗಳ ಸಂಯೋಗದಿಂದಾಗುವ ಒಂದು ಬಗೆಯ ಖನಿಜಲವಣ : ಕ್ಷಾರ ವಿಷಗ್ನಾರ್ದೀ — ಕ್ಷಾರ ಮೈಲತುತ್ತ ಮೊದಲಾದವು (ಶಾಹಟೀ..೨-೯-೬೦). **ಮಯಿಲತುತ್ತ** : ಇದಕ್ಕೆ ಬಹುಶಃ ಮಯಿಲತುತ್ತವನ್ನು (copper sulphate) ಸ್ವಲ್ಪ ಬೆರಕೆ ಮಾಡುತ್ತಿದ್ದಿರಬಹುದು (ಕನ್ನಸಂ. ೪೪). **ಮೈಲುತುತ್ತ** : ಮೈಲುತುತ್ತದ ಒಂದು ಹರಳನ್ನು ಅದೇ ವಸ್ತುವಿನ ಪರ್ಯಾಪ್ತದ್ರಾವಣ (Saturated solution) ದಲ್ಲಿಟ್ಟರೆ, ಹರಳು ಕ್ರಮವಾಗಿ ದೊಡ್ಡದಾಗು

ತ್ರದೆ (ಪ್ರಾಶಶಾ. ೩). **ಮೈಲುತುತ್ತು** : ದೊಡ್ಡ ದೊಡ್ಡ ಟಾಂಕಿಗಳಲ್ಲಿ ಮೈಲುತುತ್ತಿನ (ಇದು ತಾಮ್ರದ ಒಂದು ಲವಣ) ಪಾನಕವನ್ನು ತುಂಬಿ ಅದಕ್ಕೆ ಸ್ವಲ್ಪ ಗಂಧಕದ ದ್ರಾವಕವನ್ನು ಹಾಕುವರು (ಶಾಲಶ್ರ. 11. ೬೬೬). **ಮೈಲುತುತ್ಥ** : "ದಾರ್ವಿಕಾ, ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ— ೬ ರಸಾಂಜನದ ಹೆಸರುಗಳು . . . ಮೈಲುತುತ್ಥದ ಹೆಸರುಗಳೆಂದು ಕೆಲವರನ್ನುವರು" (ಸಿದ್ಧ ೯೬. ೩೦೩); ರಸರತ್ನಸಮುಚ್ಚಯವು ಖನಿಜಪ್ರಪಂಚವನ್ನು ಹೀಗೆ ವರ್ಗೀಕರಣ ಮಾಡಿದೆ. ೧. ಅಷ್ಟರಸಗಳು . . . ಮೈಲುತುತ್ಥ (ಕನ್ನಪ್ರಾ. ೩೮೬).

[ < ಸಂ. ಮಯೂರತುತ್ಥ ]

**ಮೈಲರಾ** 'ಮೈಲಾರ್ಕ' ನೋ.

**ಮೈಲವಣಿ, ಮೈಲವಣೆ** (ನಾ). ಮಲ್ಲಯುದ್ಧದ ಒಂದು ವರಸೆ : ಮೇಣದ ಪುತ್ಥಳಿಗಳೊ ಉಕ್ಕಿನ ಬಲು ಚೆಣವೊ ಸಿಡಿಲ ಕುಡುಹುಗಳೊ ಹೂಣೆ ಮೈಲವಣೆ ತಿರುವು ಚದುರಿಂದ ಬಿನ್ನಾಣಿಗರೊದಗಿ ಹೆಣಗಿದರು (ಸೊಬಗಿನೋ. ೭–೯೩). **ಮೈಲವಣೆ** : ಹೊಯ್ಲು ಹೊದರೆದ್ದವು ವಿಘಾತದ ಕಯ್ಲುಳಿಯ ಕಡುಘಾಯ ಘಾಯಕೆ ಮೈಲವಣೆ [ಪಾಠಾಂ. ಮೆಯ್ಲವಣೆ] ಲಂಬಿಸಿತು . . . ಮುಷ್ಟಾಮುಷ್ಟಿ ಗತಿಯ ದೃಢಾಯ್ಲರಪ್ಪಳಿಸಿದರು (ಕುವ್ಯಾ ಸ. ೨–೦೦೮). [ ಮೈ$_1$ (<ಮೆಯ್$_2$) + ಲವಣಿ$_2$ ]

**ಮೈಲವಣೆ** 'ಮೈಲವಣಿ' ನೋ.

**ಮೈಲಾಗು** (ನಾ). ದೇಹದ ಚುರುಕುತನ,— ಚಳಕ : ತೂಗಿ ನೋಡಿ ನ್ನೊಮ್ಮೆನುತ ಮೈಲಾಗಿನಲಿ ಹೊಳೆಹೊಳೆದು ಕೈದುವ ತೂಗಿ ತುಡುಕಿ ದನರಸನನು ಬೊಬ್ಬಿರಿದು ಕಲಿಭೀಮ (ಕುವ್ಯಾ ಗ. ೬–೦೩); ಆದಿಜಿನನ ಕೈಲೇಸಿನಿಂದ ದೀಕ್ಷೆಯ ಕೊಂ[ಬೆ]ವೆನುತಾಗ ಮೈಲಾಗಿನಿಂದೆದ್ದರವರು (ಭರತ. ೩೩–೯೯). [ ಮೈ$_1$ (<ಮೆಯ್$_2$) + ಲಾಗು$_2$ ]

**ಮೈಲಾಪ** (ನಾ). [ಜೈನ] ಜೈನಮುನಿಗಳ ಒಂದು ಶಾಖೆ,— ಅನ್ವಯ : ವಿದಿತಾಶೇಷಶಾಸ್ತ್ರರುಮಪ್ಪ ಮೈಲಾಪಾನ್ವಯಮ್ . . . ಅಪ್ಪ ದೇವಕೀರ್ತಿ ಪಂಡಿತದೇವರ ಕಾಲಪರ್ಚ್ಚಿ (ಇಎ. XVIII. ೩೦೦–೦೩; ಸು. 11ನೆಯ ಶತ).

[ ? ]

**ಮೈಲಾರ$_1$** (ನಾ). ೧. ಒಬ್ಬ ಕ್ಷುದ್ರದೇವತೆಯ ಹೆಸರು : ಪರವೀಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮಸ ಸಿಸಿಯೆನಿಪ್ಪ ಕೊಂಡೆಯ್ಯಂಗಳ್ (ಸಮುಶ. ೯–೧೨೮); ವಾಂತಿಯ ಪೆಸರ್ ಮೈಲಾರವೆಂಬುತ ಪೊಲೆಯರಾಡಿನ ಪೆಸರ್ ಮಾಣಿಕದೇವಿಯೆಂಬಂತೆ (ರರ್ವಾಕ್ಯ. ೯–೧೭೭); ರಕ್ತಾಂಬು ಮಜ್ಜನಮಂ ಮಾಡಿಸಿ ಮಸ್ತಕಾಂಬುರುಹದಿಂದಂ ಪೂಜಿಗೆಯ್ವಾಂತೊಡಾತನ ಕೂರ್ವಾಳ್ಕರವಾಳ್ದಲಂತು ಮರವಾಳ್ಪಾಟೂರ ಮೈಲಾರನಾ (ಅನಂತ. ೦೨–೨೭). ೨. ಮೈಲಾರಲಿಂಗನ ದೇವಾಲಯವಿರುವ ಬಳ್ಳಾರಿ ಜಿಲ್ಲೆಯ ಒಂದು ಊರಿನ ಹೆಸರು : ಒಡ್ಡಿದ ಶೂಲವ ಹಾಯ್ದು ಮೈಲಾರದ ದೊಡ್ಡಿಯ ದೇವರೀಂದವನ ಅಡ್ಡಾಕ್ಕಿಲ್ಲದೆ ತರಿಸಿ ನಿನ್ನಯ ಕಾಲಿಗಡ್ಡಗೆಡಹುವೆನು (ಕುರಾಸಾಂ. ೨೪–೩೭); ಕೊಂಕಣಾ ಸುತ್ತಿ ಮೈಲಾರಕ್ಕೆ ಹೋದ ಹಾಗೆ (ಗಾದೆ). [ದೇ.೩ ತಮಿ. ಮೈಲಾರು = ಒಬ್ಬ ಹೆಣ್ಣುದೇವತೆ : ತೆಲು. ಮೈಲಾರು. ಮಯಿಲಾರು ]

**ಮೈಲಾರ್ಕ, ಮೈಲರಾ** (ನಾ). ನಾನಾ ವಿಧವಾದ ಬಣ್ಣಗಳಿಂದ ಕೂಡಿದ ಕಂಬಳಿ ; ಚಿತ್ರಕಂಬಲ : ಚಂದ್ರಾಪೀಡನು . . . ಸೂರ್ಯಪುಟದ ಸುಪ್ಪತ್ತಿಗೆಯಲ್ಲಿ ಒರಗಿನ ಮೇಲೆ ಒರಗಿಕೊಂಡು ಮೈಲಾರತೊಡೆಯ ಮೇಲೆ ಕಾಲ ನೀಡಿಕೊಂಡು . . . ಚಿಂತಿಸಿದನು (ಭಕಕಾ. ೬೪). **ಮೈಲರಾ** : ಕಲಾಬತ್ತಿನ ಕೆಲಸದ ಆನೆಜೀನು ಮೈಲರಾ ಜಲ್ಲಿ ಆನೆ ಕಾಣಿಕೆರಿ ಕಲಾಬತ್ತು ಕೆಲಸದ್ದು (ಎಕ. XIV. ಶಂಜಿಸ. ೨೯೩–ಶುಕಿ. ೦೯೨; 1847). [ ? ]

**ಮೈಲಿ$_1$, ಮಯ್ಲಿ, ಮೈಲ, ಮೈಲು$_3$, ಮೈಲೆ$_2$** (ನಾ). ೧. ಒಂದು ಬಗೆಯ ಸಾಂಕ್ರಾಮಿಕರೋಗ ; ಸಿಡುಬು : ಅವಳ ಮೈಮೇಲೆ ಕೆಂಪಕೆಂಪಗೆ ಏನೋ ಎದ್ದವು . . . ನೀವು ಅಂದುಬಿಟ್ಟಿರಿ ಮೈಲಿ ಎಂದು (ಅಕ್ಕ ೯. ೯೩೯); ದನದ ಮೈಲಿಯನ್ನು ಜನರಲ್ಲಿ ಹಬ್ಬಿಸಿದರೆ ಸಿಡುಬಿನ ಗಂಡಾಂತರದಿಂದ ಅವರನ್ನು ಪಾರಾಗಿಸಬಹುದು (ಜೂಸಸಾ. ೩); ಮುಖದ ಮೇಲೆರಡು ಮೈಲಿಯ ಕಲೆಗಳು (ಶ್ರೀರಾಂಕ. I. ೩). **ಮಯ್ಲಿ** : ೧. 'ಮಯ್ಲಿತೆಗೆ' ಪರಾ. **ಮೈಲ** : ೨. ಕಾಂತಿಹೀನತೆ : ಮಸುಕು ; ಮಬ್ಬು : ಕಣ್ಣುಗಳು ಖಿರಕಠಿನವಾಗಿ, ಧೂಸರಾಣ— ಮೈಲಾಗಿರುವಂಥಾವು (ಪಾಕಜೀ. ೨–೩–೯೯ ವ). ೩. (ಕೆಂಪು, ಬಿಳಿ, ಹಸಿರು, ಕಪ್ಪು ಇತ್ಯಾದಿಗಳ) ಮಿಶ್ರವರ್ಣ : 'ಮೈಲ್ಹೋರಿ' ಪರಾ. **ಮೈಲು$_3$** : ೪. ಕೊಳಕು ; ಕಶ್ಮಲ : ಇಲ್ಲಿ ಹುಟ್ಟುವ ಉಪ್ಪು ಬೆಳ್ಳಗಿರುತ್ತದೆ. ಅದರಲ್ಲಿ ಮೈಲು ಇರುವುದಿಲ್ಲ (ಕಡಾಸ. ೨೯). 'ಮೈಲುತೆಗೆ' ಪರಾ. **ಮೈಲೆ$_2$** : ೧. ಬೇಸಿಗೆಯಲ್ಲಿ ಮೈಲೆಯು ಪಿಡುಗು ವಾಡಿಕೆಯಾಗಿ ಬರುತ್ತದೆ (೪ಕಾಗೆ. ೯೦೩); ಕೆಲವು ವೇಳೆ ದೇಹದ ಮೇಲೆಲ್ಲಾ ಮೈಲೆಗಳೇಳುವುದುಂಟು (೪೦೮ಕೋ. ೦೦). 'ಮೈಲೆ ರೋಗ' ಪರಾ.

[ <ಪ್ರಾ. ಮಇಲ./ಸಂ. ಮಲ./ ಹಿಂ. ಮರಾ. ಮೈಲ್ ]

**ಮೈಲಿ$_2$** 'ಮೈಲು$_3$' ನೋ.

**ಮೈಲಿಕಲ್ಲು** 'ಮೈಲಿಗಲ್ಲು' ನೋ.

**ಮೈಲಿಕಾರಕೂನ** (ನಾ). ಸಿಡುಬನ್ನು ತಡೆಗಟ್ಟುವ ಚುಚ್ಚುಮದ್ದನ್ನು ಕೊಡುವವನು ; ದೇವಿ ಹಾಕುವವನು : ಮೈಲಿಕಾರಕೂನರ ಆಗಮನ ವಾಗುತ್ತದೆ (ಗಾಂಗು. ೯). [ ಮೈಲಿ$_1$ + ಕಾರಕೂನ ]

**ಮೈಲಿಗಲ್ಲು, ಮೈಲಿಕಲ್ಲು** (ನಾ). ೧. ಒಂದು ಊರಿನಿಂದ ಇನ್ನೊಂದು ಊರಿಗೆ ಇರುವ ದೂರದ ಅಂತರವನ್ನು ಸೂಚಿಸಲು ದಾರಿಯ ಪಕ್ಕದಲ್ಲಿ ನೆಟ್ಟಿರುವ ಕಲ್ಲು : ಮೈಲಿಗಲ್ಲಿನ ಮೇಲೆ ಸೂಚಿಸಿದ್ದ ಸಂಖ್ಯೆ ಹಳೆಯದಾಗಿ ಮಾಸಿ ಸ್ಪಷ್ಟವಾಗಿ ಕಾಣಲಿಲ್ಲ (ರೂಢಿ). ೨. (ಅಲಂ) ಮುಖ್ಯವಾದ ಘಟ್ಟ,— ಹಂತ,— ಮಜಲು : ದ್ರಾವಿಡಭಾಷಾ ಜ್ಞಾತಿಕೋಶ ಈ ಕ್ಷೇತ್ರದಲ್ಲಿ ಒಂದು ಮಹತ್ತರವಾದ ಮೈಲಿಗಲ್ಲು (ದ್ರಾಶಿಶಿ. ೨ ಹಿನ್ನುಡಿ); ಈ ದಿಕ್ಕಿನಲ್ಲಿ ಮಾಡುತ್ತಿರುವ ಪ್ರಯಾಣದ ಮೊದಲ ಮೈಲಿಗಲ್ಲು, ವಿಶ್ವವಿದ್ಯಾನಿಲಯ ಪ್ರಕಟಿಸುತ್ತಿರುವ ಈ ಪತ್ರಪುಸ್ತಕಮಾಲೆ (ಗ್ರಹಶಿ. iii, ಮುನ್ನುಡಿ). **ಮೈಲಿಕಲ್ಲು** : ೧. " ಮೈಲಿಕಲ್ಲಿಲ್ಲದ ಹಾದಿಯಲ್ಲಿ ನಡೆಯುವವರು ಮತಿಹೀನರು " ಎಂದು ನಾವೆಲ್ಲರೂ ತೀರ್ಮಾನಿಸಿದೆವು (ಮೈಲಿಪಾ. ೦೦). ೨. ಅಂದೇ ಪಾಕಿಸ್ಥಾನದ ಬೇರು ಭಾರತಭೂಮಿಯಲ್ಲಿ ಊರಿತು. ಅದೊಂದು ಮೈಲಿಕಲ್ಲು (ಭಾರಿರ. ೯೦೯).

[ ಮೈಲಿ$_2$ (<ಮೈಲು$_3$) + ಕಲ್ಲು (<ಕಲ್$_3$) ]

**ಮೈಲಿಗೆ, ಮೈಲಗೆ** (ನಾ). ೧. ಮಲಿನತೆ ; ಅಪವಿತ್ರತೆ : ಸೂತ್ರಧಾರಿಯ ಮನದ ಮೈಲಿಗೆಯ ಕಳೆಯ ಬಂದನಯ್ಯ ಮಡಿವಾಳನು (ಬಾಸ್ವಸಂ. ೦೭೭–೦೯); ಮತ್ಸರಮತಿಯ ಮೈಲಿಗೆ ಬಿದ್ದುದಾತ್ಮಜ್ಞಾನ ದೃಷ್ಟಿಯಲಿ . . . ಈತನ ತಪದ ತೇಜದ ಹೊಪಳಿ ಹೊಯ್ಲಿನಲಿ (ಕುವ್ಯಾ ಆ. ೬೨೩. ೭–೦೩); ಮಡಿಯೂ ನೀನೆ ಮೈಲಿಗೆ ನೀನೆ ಸುಡಲಿ ನಿನ್ನ ಮಡಿ ಬಿಕನಾಸಿ (ಶುಕಂಠ. ೦–೦೦೩ ಅಸುಕಲ್ಪೂವ). ೨. ಕೊಳೆ ; ಹೊಲಸು : ಮೈಲಿಗೆಯ ಸೀರೆಯನ್ನುಟ್ಟು ತನು ಕಳೆತೆಗೆಯೆ ಕೈಗಲ್ಲದಲಿ ನಿಂದಿಹ ಸತಿಯನೀಕ್ಷಿಸಿದ (ವಕಶ. ೬–೨೪). ೩. ವಿಧವೆಯರು ಕೇಶಮುಂಡನ ಮಾಡಿಸಿಕೊಳ್ಳುವಿಕೆ,—ತಲೆಗೂದಲನ್ನು ತೆಗೆಸಿಕೊಳ್ಳುವಿಕೆ : ಹಾಂಗಾರ ನಮ್ಮ ಗಂಗತ್ಯಾ ತಿಂಗಳಿಗೊಮ್ಮೆ ಮೈಲಿಗ್ಯಾಗಲಿಕ್ಕಿಲ್ಲೇ ಬರ್ತಾಳ ಕಾಣಿಸ್ತದವ್ವಾ (ಜೂಬಿ. ೯). ೪. ಸಿಡುಬು : 'ಮೈಲಿಗೆಗಣ್ಣು' ಪರಾ. ೫. ತೊಟ್ಟು ಬಿಟ್ಟಿದ ಬಟ್ಟೆ : ಉಟ್ಟು ಹೊಲಸಾದ ಬಟ್ಟೆ ;

ಮಲಿನವಸ್ತ್ರ: ಬಳಿಕವರ್ . . . ಉಟ್ಟು ಕಳೆದ ಮೈಲಿಗೆ ಸವಿದೊಗಡಿಸಿದ ಕೊಳ್ಗೆ ಕೈಯಾಂತವಂ ಬೇಚಿ ಸಂದೆಗವಿಲ್ಲ (ಪಕಶಾ. ೦-೨೮) ; ಕುದಿಸಿ ಉದಕ ದೊಳಲುಬಿ ಬೀಸುತ್ತೊಗೆದು ಪರಡಿ ತೆಗೆತೆಗೆದು ಫಳಿಗೆಯನೊವಗಿಪುದು ಮೈಲಿಗೆ [ತಾಕಾಂ. ಮಯ್ಲಿಗೆ] ಮಡಿಗಳಹುದಕ್ಕಲಾ ಮುನಿದೆ (ಐಶಪು. ೩೩-೪೭). ಮೈಲಗೆ: ಉಟ್ಟು ಪುಟ್ಟಗೆಗಳವಂತ ಮೈಲ[ತಾಕಾಂ. ಲಿ]ಗೆ ಗಳಪ್ಪುವು (ಅತಪು. ೨-೩೦) ; ಪಾತಕಜೀವಂಗಳ್ ಎಳ್ಳಿನಂತೆ ಗಾಣಕ್ಕೆ ವಂದು . . . ಮೈಲಗೆಯುಂತೊಗೆಪಕ್ಕೆ ವಂದು (ಧರ್ಮಾಚ್ಯು. ೩-೭೭ ವ); ವಡಿವಳನ ಮುಂದಣ ಮಡಿಯುಮಂ ತನ್ನೊಡನೆಪು ಗೋವಳಿಗರುಟ್ಟ ಮೈಲಗೆ ಯುವುಂ ಮಧುಸೂದನಂ ಕಂಡು (ಅರ್ಜನೇ. ೬-೭೩ ವ). ೬. (ಸಿಡುಬಿ ನಿಂದಾದ) ಒಂದು ಬಗೆಯ ಕಣ್ಣಿನ ದೋಷ : ಅಲಿ ನೊಂದುದೊ ಕಣ್ಣ ಬೇನೆಯೊ ಮೈಲ[ತಾಕಾಂ. ಲಿ]ಗೆಯೊ ಹೂ ಹುಟ್ಟಿದುದೊ (ಐಶಪು. ೦೮-೩೩).

ಮೈಲಿಗೆ ಕಲಸು = ಮಲಿನತೆಯನ್ನು ಬೆರಸು ; ಅಶುದ್ಧವಾಗು : ಹೊಸಾ ಕಲ್ಗಡಗೀ ಒಡೆದು ಹೋತು ಮೈಲಿಗಿ ಕಲಸಿವಕ್ಕ (ಹೊಸಂಶಾ. ೭೪).

ಮೈಲಿಗೆಯಾಗು = ಮೈಲಿಗೆ ಕಲಸು : ದೊಡ್ಡವರ ಹೆಸರು ಹೇಳಬಾರದಂತೆ ಕಣೊ. ಅವರಿಗೆ ಮೈಲಿಗೆಯಾಗುತ್ತದಂತೆ (ಕಂಪ್ರಸ. ೩.-೨೩).

[ಮೈಲಿ$_1$ + -ಗೆ]

**ಮೈಲಿಗೆಗಣ್ಣು** (ನಾ). ಸಿಡುಬು ಹತ್ತಿದ ಕಣ್ಣು : ಅಳಿಗಣ್ಣೊ ಪರೆ ಗಣ್ಣೊ ಪೊಸ ನೀಲಿಗಣ್ಣೊ ಮೈಲಿಗೆಗಣ್ಣೊ (ಕುಮಾರಾ. ೪-೨೯೨).

[ಮೈಲಿಗೆ + ಕಣ್ಣು (<ಕಣ್)]

**ಮೈಲಿಗೆಸಂತೆ** (ನಾ). ಮೀನು, ಮಾಂಸಗಳನ್ನು ಮಾರಲಾಗುವ ಸಂತೆ: ಜೂದಿನ ಕಟ್ಟೆ ಮೈಲಿಗೆಸಂತೆಯುಂಗಡಬೀದಿ ಚವುವಟ್ಟಿಗಳೊಳಗೆ ಬ್ರಾಹ್ಮರ ನವರ ಕಾಣದೆ ಬಾಡಂರ ನೋಡಿ ಹೋದನೆಂದೆಚಿದರಲ್ಲಿ (ಕುರಾತಾಂ. ೦೮-೦೨೮). [←ತೆಲು. ಮೈಲಸಂತ]

**ಮೈಲಿತೆಗೆ**, ಮಯ್ಲಿತೆಗೆ, ಮೈಲುತೆಗೆ (ಕ್ರಿ). ೧. ಸಿಡುಬನ್ನು ತಡೆ ಗಟ್ಟಲು ದೇವಿ ಹಾಕು ; ಹಳ್ಳಿಹಳ್ಳಿಗೆ ಹೋಗಿ ಮೈಲಿತೆಗೆಯಲಿಕ್ಕೆ ವ್ಯಾಕ್ಸಿ ನೇಟರರೆಂಬ ಅಧಿಕಾರಸ್ಥರು ಇರುವರು (ಕಾಕವಾ. ೭೯) ; ಮೈಲಿ ತೆಗೆಯುವ ಯುಕ್ತಿಯನ್ನು ಇಂಗ್ಲೆಂಡದೇಶದೊಳಗಿನ ಒಬ್ಬ ಬುದ್ಧಿವಂತನಾದ ಶಸ್ತ್ರ ವೈದ್ಯನು . . . ಮೊದಲು ಹುಡುಕಿ ತೆಗೆದನು (ಶುಂಂಕಿಸಿಯ. ೪-೨೦೬).

ಮಯ್ಲಿತೆಗೆ : ೧. ತಮ್ಮ ಮಕ್ಕಳಿಗೆ ಮಯ್ಲಿ ತೆಗೆಯಗೊಡುವುದಿಲ್ಲ (ಶುಂಂಕಿಸಿಯ. ೪-೨೨೩). ಮೈಲುತೆಗೆ : ೨. ಶುದ್ಧಗೊಳಿಸು : ಶುಚಿ ಮಾಡು : ಪಿತ್ತಕೋಶದೊಳಗೆ ಸಬ್ಬಕಾರದಂತೆ ಮೈಲುತೆಗೆಯುವ ಗುಣ ವಿರುತ್ತದೆ (ಶುಂಂಕಿಸಿಯ. ೬-೩೦೦). [ಮೈಲಿ$_1$ + ತೆಗೆ$_1$]

**ಮೈಲು$_1$** 'ಮಯ್ಲು' ನೋ.

**ಮೈಲು$_2$** 'ಮೈಲಿ$_1$' ನೋ.

**ಮೈಲು$_3$**, ಮೈಲಿ$_2$ (ನಾ). ದೂರವನ್ನು ಅಳೆಯುವ ಒಂದು ಮಾನ ; ಎಂಟು ಫರ್ಲಾಂಗುಗಳಷ್ಟು ದೂರ : ಉದ್ದಳತೆ ಸುಮಾರು ೨೧೦ ಮೈಲು ; ಪರಮಾವಧಿ ಅಗಲಳತೆ ಸುಮಾರು ೧೬೭ ಮೈಲು (ಕಶಾಗೆ. ೦) ; ಈ ಬಿಸಿಲಲ್ಲಿ ಎರಡುಮೈಲು ನಡೆವರೆ ನಮಗೇ ಪ್ರಾಣಕ್ಕೆ ಬರುತ್ತದೆ (ತಸುತ. ೦೬೩) : ಶ್ರೀ ಗಣೇಶ ಹೆಗ್ಗಡೆಯವರು ನನಗಾಗಿಯೇ ಹತ್ತಿಪ್ಪತ್ತು ಮೈಲು ದೂರ ನಡೆದಾಡಿದುದೂ ಉಂಟು (ಯಕ್ಷಶಿ. v. ಶುಮ್ಮು). ಮೈಲಿ$_2$ : "ಉದ್ದಳತೆಯ ಮಾನ: ಮೈಲಿ" (ಇಂಗ್ಲೆಂಡು ಮೊ.ದೇಶಗಳಲ್ಲಿ ಈಗ ೧.೭೬೦ ಗಜಗಳು)" (Mile. ೩೪೭೩) ; ಸುಮಾರು ಮೂವತ್ತು ಮೈಲಿಗಳಷ್ಟು ದೂರ ಶತ್ರುಸೀಮೆಯಲ್ಲಿ ನುಗ್ಗಿ ಹೋಗಿ ದಾರಿಯಲ್ಲಿ ಸಿಕ್ಕಿದ ದನಕರುಗಳನ್ನೂ . . . ಜಾನುವಾರುಗಳನ್ನೂ ಲೂಟಿ ಮಾಡಿದರು (ಕೈದೇಶ. ೨೩). [←ಇಂ. Mile]

**ಮೈಲುತುತ್ತ** 'ಮೈಲತ್ತುತ್ತ' ನೋ.

**ಮೈಲುತುತ್ತು** 'ಮೈಲತುತ್ತ' ನೋ.

**ಮೈಲುತುತ್ಥ** 'ಮೈಲತುತ್ತ' ನೋ.

**ಮೈಲುತೆಗೆ** 'ಮೈಲಿತೆಗೆ' ನೋ.

**ಮೈಲುವಾಹನ** (ನಾ). ನವಿಲನ್ನು ವಾಹನವನ್ನಾಗಿ ಉಳ್ಳವನು ; ಷಣ್ಮುಖ.

ಮೈಲುವಾಹನಪಿತ = ಷಣ್ಮುಖನ ತಂದೆ ; ಶಿವ : ಕೈಲಾಸ ವೆಂಬೋದು ಕಣ್ಣಲಿ ಕಾಣೆ ಮೈಲುವಾಹನಪಿತ ಎತ್ತ ಪೋದನೊ ಕಾಣೆ (ಕುರಂದ. ೩.೦೪-೦). [ಮೈಲು$_1$ (<ಮಯ್ಲು) + ವಾಹನ]

**ಮೈಲುಳಿ** (ನಾ). ಶರೀರದ ಚುರುಕುತನ ; ದೇಹದ ಲಾಘವ : ಇತ್ತಲೀ ಮಹದೇವಿ ವಿಂಗೆ ಬಳೆವುತ್ತಲಿರ್ದ್ದಳು . . . ಉತ್ತಮದ ಮೈಲುಳಿಯ ಕಾಂತಿಯ ಮತ್ತಗಜಗಮನದ ವಿಳಾಸದ . . . ಜಾತಿಭಾವದಲಿ (ಕ್ರಶುಂ. ೦೦-೨) ; ಸುತ್ತಿದ ಕುಡಿನೊರೆಯ ಕಟವಾಯ ಲೋಳೆಯ ನಿಮಿರ್ದ ಮೈಲುಳಿಯ . . . ರಥ ತುರಗ ಮಿಕ್ಕವು (ಕುವ್ಯಾಕ್ರೊ. ೦೦-೨೪) ; ಮಯ ಪಾಡು ಮುರಿಪು ಮೈಲುಳಿ ಲಾಗು ಲವಣಿ ಲಕ್ಷ್ಯಂಗಳಿಂ ಧುರದೊಳೇಚಿಂ ತೋಜಿ ಮಿಾಜಿತ (ಕರಿಕು.೩೮-೪೮). [ಮೈ$_1$ (<ಮೆಯ್$_2$) + ಉಳಿ$_1$]

**ಮೈಲೆ$_1$** 'ಮಯ್ಲು' ನೋ.

**ಮೈಲೆ$_2$** 'ಮೈಲಿ$_1$' ನೋ.

**ಮೈಲೆರೋಗ** (ನಾ). ಸಿಡುಬಿನ ಬೇನೆ : ಈ ಎಲೆಯಂ ನೀರಲ್ಲಿ ಅರೆದು ಕುಡಿಯ ಮೈಲೆರೋಗ ಗುಣ (ಐವೈಶಿ. ೩).

[ಮೈಲೆ$_2$ (<ಮೈಲಿ$_1$) + ರೋಗ]

**ಮೈಲ್ಪೋರಿ** (ನಾ). ಮಿಶ್ರವರ್ಣದ ಹೋರಿ : ಬೆಚ್ಚುವ ಬೆಳ್ಳ ಬೆದಜು ಸುವ ಚೆಲುವ ಮೈಲ್ಪೋರಿ ಘಟನೆಗೆವ ಕೆಂದನು ಪಜೀವ ಕಾರಿ ಮೊದ ಲಾದವಜೆಗಳು . . . ಪಲವುಪರಿಯೆತ್ತು ತೊಂಭತ್ತಾಜುಲಕ್ಷ ಮೇಳೈಸಿ ಒಡೆಮವು ಗಲ್ಲಕೆ (ಸಿಂಹಾ. ೩೩-೭). [<ಮೈಲ + ಹೋರಿ (<ಪೋರಿ$_2$)]

**ಮೈವಚ್ಚು** 'ಮೆಯ್ವಚ್ಚು' ನೋ.

**ಮೈವಡೆ** 'ಮೆಯ್ವಡೆ' ನೋ.

**ಮೈವಣ್ಣು** (ನಾ). ದೇಹದ ಮೇಲಿನ ಬೆವರಿನಿಂದಾದ ಕೊಳೆ : ಕಲ್ಮಷ : ಗಿರಿಜೆ ಮೈವಣ್ಣಿಂದಲೊರ್ವ ಸುತನಂ ಪಡೆದು ಬಾಗಿಲೊಳ್ ಕಾಪಿಟ್ಟಿರೆ (ಗುರುಚಾ. ೪-೩೦). 'ಮೈತಿಮಿರ್' ಪಠಾ.

[ಮೈ$_1$ (<ಮೆಯ್) + ಮಣ್ಣು (<ಮಣ್)]

**ಮೈವಶ** (ನಾ). ಅಧೀನತೆ : ಹತೋಟಿ : ಮೈವಶವ ಮಾಡಿದರಲ್ಲೆ ಬಲುದೈವವನು ಕುರುಕುಲದ ಜೇರನು ಕೊಯ್ದನೀ ಹರಿ (ಕುವ್ಯಾ. ೬೦೨. ೦೭-೪೪) ; ಈ ಬಲದ ಮೈವಶವವರ ಕೈವಶವೇನು ಹೊಸತೆಂದ (ಕುವ್ಯಾಕ್ರೊ. ೦೦-೨೦). [ಮೈ$_1$ (<ಮೆಯ್$_2$) + ವಶ$_2$]

**ಮೈವಸ** 'ಮೆಯ್ವಸ' ನೋ.

**ಮೈವಸೆ** 'ಮೆಯ್ವಸೆ' ನೋ.

**ಮೈವಳಯ** (ನಾ). ಹೊರವಳಯ ; ಆವರಣ : ಗಿರಿಯ ಮೈವಳಯ ದಲಿ ವಿದ್ಯಾಧರರು ಖೇಚರಗುಹ್ಯಕರು ಇಳಿವರಿದ ಜಡೆಗಳ ಘೋರತಪಸಿನ ಪೂರ್ವದೇಹಿಗಳು (ಕಂಂಶಾ. ೨-೬).

[ಮೈ$_1$ (<ಮೆಯ್$_2$) + ವಳಯ(=ವಲಯ)]

**ಮೈವಳಿ** 'ಮೆಯ್ವಳಿ' ನೋ.

**ಮೈವಳಿಸು** (ಕ್ರಿ). ಹೊಂದಿಸು ; ಜೋಡಿಸು ; ಅಳವಡಿಸು : ಹಿಳುಕ ಮಂತ್ರಿಸಿ ಬಿಲ್ಲೆದೆಗೆ ಮೈವಳಿಸಿವನಿತಕೆ ಶರ ಮುಖಾಗ್ನಿಯ ಝಳದ ಸೆಗಳಿಕೆ ಧಾತುಗಿಡಿಸಿತು ಸಕಲಲೋಕಗಳ (ಉತರಾ. ೦೩-೪೩).

[ಮೈವಳಿ (<ಮೆಯ್ವಳಿ) + -ಸು$_2$]

**ಮೈವಟಿ** 'ಮೆಯ್ವಟಿ' ನೋ.

**ಮೈವಿಡಿ** 'ಮೆಯ್ವಿಡಿ' ನೋ.

**ಮೈವಿಡು** 'ಮೆಯ್ವಿಡು' ನೋ.

**ಮೈವೆರ್ಚು** 'ಮೆಯ್ವೆರ್ಚು$_1$' ನೋ.

**ಮೈವೆಱು** 'ಮೆಯ್ವೆಱು' ನೋ.

**ಮೈವೆರ್ಚು** 'ಮೆಯ್ವೆರ್ಚು$_1$' ನೋ.

**ಮೈವೆಳಗು** 'ಮೆಯ್ವೆಳಗು' ನೋ.

**ಮೈವೆಱು** 'ಮೆಯ್ವೆಱು' ನೋ.

**ಮೈವೇದನೆ** (ನಾ). ಶರೀರಕ್ಕೆ ಉಂಟಾಗುವ ನೋವು. – ಬೇನೆ ; ಮೈ ನೋವು : ಕೆಡದು ಮೈವೇದನೆಗೆ ನರಳುವ ನಿಡುಸರದ ಬಿಗ ಜಂಬುಕೌಘವ ನಿಡುವ ಕೈಗಲ್ಲುಗಳ ನೃಪತಿಯು ಕಂಡರಿವರೆಂದು (ಕುಮಾ.ಗ. ೯-೩೭).
[ಮೈ$_1$ (<ಮೆಯ್$_2$) + ವೇದನೆ]

**ಮೈವೊಗರ್** 'ಮೆಯ್ವೊಗರ್' ನೋ.

**ಮೈವೊತ್ತುಗೊಡು** (ಕ್ರಿ). ಶರೀರವನ್ನು ಆಸರೆಯಾಗಿ ಕೊಡು : ಹತ್ತು ದೆಸೆಗಳು ವಿಮಲತೆಗೆ ಮೈವೊತ್ತುಗೊಟ್ಟವು ಸಕಲಜೀವರ ಚಿತ್ತ ನಿರ್ಮಳ ವಾಯ್ತು (ಸಿಶಾಗ. ೬-೨೦-೩೭). [ಮೈ$_1$ (<ಮೆಯ್$_2$) + ಒತ್ತುಗೊಡು]

**ಮೈವೊಯ್** (ಕ್ರಿ). ಶರೀರದ ಮೇಲೆ ಎರಗು : ಮೈವೊಡ್ಡಬಹುದು ಮೃತ್ಯುವಿನಿಜಿತಕ್ಕೆ ಮೈವೊಯ್ದು ಹರನಾರಿಗಣ್ಣೆ ಮೈವೊಡ್ಡಬಹುದು ಬಂಧಕಿ ಯರ ಕೂಟಕ್ಕೆ ಮೈವೊಡ್ಡುವುದಘಟಿತವು (ಕೃಶಂಶ. ೩-೬೨).
[ಮೈ$_1$ (<ಮೆಯ್$_2$) + ಪೊಯ್$_1$]

**ಮೈಸನ್ನೆ** 'ಮೆಯ್ಸನ್ನೆ' ನೋ.

**ಮೈಸರಸ** (ನಾ). (ಆಲಂ) ಮಲ್ಲಯುದ್ಧ ; ಗುದ್ದಾಟ : ಮೈದುನನ ಮೈಸರಸಕೀ ಹುಲುಗೈದು ಸಾಲದೆ ತಂಗಿ ದುಸ್ಸಳೆಯೈದೆತನ ಬಯಲಾಯ್ತು ನುತ ಬೆಂಬತ್ತಿದರು ಖಳನ (ಕುಮಾ.ಕ. ೨೨-೨೩).
[ಮೈ$_1$(<ಮೆಯ್$_2$) + ಸರಸ]

**ಮೈಸಲ್** 'ಮೆಯ್ಸಲ್' ನೋ.

**ಮೈಸಲಿಗೆ** (ನಾ). ದೇಹದ ಸಂಗ, –ಸಹವಾಸ : ನೀನು ದೊಡ್ಡವಳಾದೆ ಮೈಸಲಿಗೆ ಬೆಳೆಸಿದೆ ಏಕಾಂತಕೆಳಸಿದೆ ಎಲೆ ಕೆಳದಿಯೆ (ಸಂಗೀ. ೯-೩೩).
[ಮೈ$_1$ (<ಮೆಯ್$_2$) + ಸಲಿಗೆ$_1$ (<ಸಲ್ಗೆ)]

**ಮೈಸಾರ್** 'ಮೆಯ್ಸಾರ್' ನೋ.

**ಮೈಸಾರ್ಚು** 'ಮೆಯ್ಸಾರ್ಚು' ನೋ.

**ಮೈಸಾಲ**, ಮಯಿಸಾಲ (ನಾ). ೧. ಒತ್ತೆ, ಆಧಾರಗಳೇನೂ ಇಲ್ಲದೆ ವ್ಯಕ್ತಿಯು ಮೇಲಿನ ನಂಬಿಕೆಯ ಆಧಾರದ ಮೇಲೆ ಕೊಡುವ ಸಾಲ : ಅಡವು ಮೈಸಾಲದ ಪತ್ರಗಳು . . . ಸಿಕ್ಕಿ ಇರಲಾಗಿ (ಎಕ. VI. ಕೊಪ್ಪ. ೩-೯; 1569). ೨. (ಅಲಂ) ಸೇಡು ; ಮಯ್ಯಿ : ಸೋಲವಿದು ಕಾಲಾಂತಕನ ಮೈಸಾಲ (ಕುಮಾ.ಸ. ೦೩-೭೦); ಕಳಸೊಳಗೆ ಸರಳ ಮೊನೆ ಯಿಂದಲೊಂದಕೆ ನೂರ ಬೆಳಸಿ . . . ತಿದ್ದುವರು ಮೈಸಾಲವ (ತುರಂಗ. ೨೯-೦೭). ಮಯಿಸಾಲ : ೧. ಸಮುಸ್ತರಿಗೆ ಮಯಿಸಾಲವಾಗಿ ಕೊಟ್ಟ ದೊಡ್ಡ ವರಹ ಗ ೮೨ (ಕೌಇ. IX-ii. ೪೭೦-೨೯; 1482). 'ಕೈಸಾಲ' ಪರಾ. [ಮೈ$_1$(<ಮೆಯ್$_2$) + ಸಾಲ]

**ಮೈಸಾಲಪತ್ರ** (ನಾ). ಆಧಾರ, ಭೋಗ್ಯಗಳೇನೂ ಇಲ್ಲದೆ ಬರೆದು ಕೊಡುವ ಸಾಲಪತ್ರ : ಸಾಹುಕಾರರು ದೀಡು ಭೋಗ್ಯ, ಮೈಸಾಲ ಪತ್ರಗಳ ಮೇಲೆ ಸಾಲಕೊಡುವುದನ್ನು ಕಡಮೆಮಾಡಿದ್ದರು (ಗಂಗಾಳ. ೯೦); ಆಂಡಿಮ್ಯಾಂಡ್, 'ಮೈಸಾಲ ಪತ್ರ, ಹಣ ಸಂದ ರಸೀದಿ . . . ಶಿಥ ಕಾಗದ – ಇವನ್ನೆಲ್ಲ ಬರೆಯುವುದಕ್ಕೆ ಆಚಾರ್ರೇ ಗತಿ (ನಮ್ಮೂರು. ೦೮೦).
[ಮೈಸಾಲ + ಪತ್ರ]

**ಮೈಸಾಲೆ** (ನಾ). ಒಂದು ಬಗೆಯ ಸಸ್ಯ : "ಹರಿಯಾಗೆ, ಮಾಹೋದಲೆ, ಮೈಸಾಲೆ, ತಗಡಕ, ತಗಡರೆ, ಮಾಯಿಸಲೆ" (ಸಸ್ಯಕೋ. ೯೩); ತಗಡತಿ, ಹರಿಯಾಗೆ, ಮೈಸಾಲೆ (ವೃಕ್ಷಶಿ. ೩೦-೧೦೦೦). [ ? ]

**ಮೈಸಿ** (ನಾ). ಎಮ್ಮೆ ; ಮಹಿಷಿ : ಅಶ್ವಕೈತ್ವಂ – ಮಹಿಷವು – ತೆತ್ವವೆ ; ಮಹಿಷಿ – ಮೈಸಿ (ಶಮದ. ೨೬೩ ಪ್ರಯೋ); ಮಹಿಷಿ, ಮೈಸಿ ; ಪತ್ತನ, ಪಟ್ಟಣ (ಶಬಾಸು. ೦೬೦ ವ್ಯಾಖ್ಯಾ). [< ಸಂ. ಮಹಿಷೀ]

**ಮೈಸಿರಿ** 'ಮೆಯ್ಸಿರಿ' ನೋ.

**ಮೈಸುಖ** 'ಮೆಯ್ಸುಖ' ನೋ.

**ಮೈಸುಡು** 'ಮೆಯ್ಸುಡು' ನೋ.

**ಮೈಸುನಾಡು** 'ಮಯ್ಸೂರ್ನಾಡು' ನೋ.

**ಮೈಸೂರ್‌ಪಾಕ್** 'ಮೈಸೂರುಪಾಕು' ನೋ.

**ಮೈಸೂರು** 'ಮಯ್ಸೂರ್' ನೋ.

**ಮೈಸೂರುಪಾಕು**, ಮೈಸೂರ್‌ಪಾಕ್ (ನಾ). ಕಡಲೆಹಿಟ್ಟು, ತುಪ್ಪ, ಸಕ್ಕರೆಗಳಿಂದ ತಯಾರಿಸುವ ಒಂದು ಬಗೆಯ ಸಿಹಿತಿಂಡಿ : ಮೈಸೂರುಪಾಕು : ಪದಾರ್ಥಗಳು : ಒಂದು ಕಪ್ಪು ಕಡಲೆಹಿಟ್ಟು; ೨ ಕಪ್ಪು ಸಕ್ಕರೆ . . . ೩ ಕಪ್ಪು ಡಾಲ್ಡ (ಅಡುಗೆ. ೦೦೦). **ಮೈಸೂರ್ ಪಾಕ್** : ಮೈಸೂರ್‌ಪಾಕ್ ನಾಲ್ಕು ಪ್ಲೇಟು ಬಂತು (ನಮ್ಮೂರು. ೨೬೦).
[ಮೈಸೂರು$_0$ (p← ಸಂ. ಮಸೂರ) + ಪಾಕು$_0$ (p← ಸಂ. ಪಾಕ)]

**ಮೈಸೆ** (ನಾ). ಒಂದು ಊರಿನ ಹೆಸರು : ಭತ್ತಗಾವೆ ಹಾದಿಗೂಳ ಕಡ ಗೋಡ ಮೈಸೆ ಪನ್ನೆರಡುಮನೆಲಿವಯುಂ (ಮೈಅಂ. ೧೯೩೦, ೬೯-೦೦೯; 1053?). [ ? ]

**ಮೈಸೆಕೆ** (ನಾ). ಶರೀರದ ಕಾವು, – ಶಾಖ ; ಜ್ವರ : ಗೋಣಿಕಾಯಿ ಚುಜ್ಜಲಬೆಕ್ಕೆ ಇವುಗಳ ರಸವನ್ನು ತೆಗೆದು ಸಕ್ಕರೆ ಹಾಕಿ ಕುಡಿಯಲು ಮೈಸೆಕೆ ಬಿಡುವುದು (ಕಳವ್ಯ. ಶಂ ೯೦೦). [ಮೈ$_1$ (<ಮೆಯ್$_2$) + ಸೆಕೆ]

**ಮೈಸೊಕ್ಕು** (ನಾ). ದೇಹದ ಕೊಬ್ಬಿನಿಂದುಂಟಾದ ಮದ, – ಗರ್ವ, – ಅಹಂಕಾರ : ತಮ್ಮ ಮೈಸೊಕ್ಕಿನ ಫಲವನ್ನು ಉಣ್ಣುತ್ತಾರೆ (ಹ್ಮೂಂಐ. ೦೬೭); ಇರಬೇಕು ಎಲ್ಲೋ ಯಾರಿಗೋ ಮೈಸೊಕ್ಕು (ಸಂಕು. ೦೯-೦೭).
[ಮೈ$_1$ (<ಮೈಯ್$_2$) + ಸೊಕ್ಕು$_3$ (<ಸೊರ್ಕು$_2$)]

**ಮೈಸೊಬಗು** 'ಮೆಯ್ಸೊಬಗು' ನೋ.

**ಮೈಸೋಂಕು** 'ಮೆಯ್ಸೋಂಕು$_1$' ನೋ.

**ಮೈಸೋಂಬತನ** (ನಾ). ಮೈಗಳ್ಳತನ ; ಸೋಮಾರಿತನ : ಕಾಯಕ ಕಾಜದೆ ಮೈಸೋಂಬತನದಿಂದ ಬೇಜಿಕ ಕೂಳ ಗಳಿಸಲಾಬಿದೆ ಹಸಿದಿಪ್ಪರಯ್ಯ (ವಚನ. II. ೪೦೯). [ಮೈ$_1$(<ಮೆಯ್$_2$) + ಸೋಂಬತನ]

**ಮೈಸೋಕು** 'ಮೆಯ್ಸೋಂಕು' ನೋ.

**ಮೈಸೋಲು$_1$** (ಕ್ರಿ). ದೇಹವು ಆಯಾಸಗೊಳ್ಳು, – ದಣಿ, – ಬಳಲು : ದಯ ಬಾರದೆ ಈ ಎನ್ನ ದೀನದೆಸೆಯ ನೋಡಿ ? ಸಾಕಿನ್ನು, ಬೇಸತ್ತ ಮೈಸೋತೆ (ಅಂತರಾ. ೦೦).
[ಮೈ$_1$ (<ಮೆಯ್$_2$) + ಸೋಲು$_1$ (<ಸೋಲ್)]

**ಮೈಸೋಲು$_2$** (ನಾ). ದೇಹದ ಬಳಲಿಕೆ, – ಆಯಾಸ, – ದಣಿವು : ವಾತ, ಶ್ಲೇಷ್ಮ, ಮೈಸೋಲು, ಎದೆಸೋಲು, ಗುಲ್ಮ, ಸರ್ವವಾತ ಹರ (ಐವ್ಯಕೋ. ೯೯).
[ಮೈ$_1$ (<ಮೆಯ್$_2$) + ಸೋಲು$_2$ (<ಸೋಲ$_1$)]

**ಮೈಹಸ** (ನಾ). ದೇಹದ ಕೆಚ್ಚು, – ಸಾಮರ್ಥ್ಯ (?) : ಬೆಸುವುದಂ ವುದು ಬಾಚುವುದು ಜಾಳಿಸುವುದೊತ್ತಂಬರಿಸುವುದು ಕೈಹಸದ ಮೈಹಸ ದುಬ್ಬರದ ಸಮರಂಗದುಬ್ಬರದ ರಸವನೇವೊಗಳುವೆನು (ತುರಂಗ. ೬-೦೩-೪೬). 'ಕೈಹಸ' ಪರಾ. [ಮೈ$_1$ (<ಮೆಯ್$_2$) + ಹಸ$_4$]

**ಮೈಹಳುವಾಯಿ** (ನಾ). ೧. ಮೈ ಹಗುರವಾಗಿರುವುದು; ದೇಹಲಾಘವ. ೨. ದೇಹದ ನಿತ್ರಾಣ,-ದೌರ್ಬಲ್ಯ : ಬಾಯ ಲೋಳಿಗಳೆಳಿಯೆ ಮೈಹಳುವಾಯಿ ಮಿಗೆ ತುದಿಬೆರವನೂಟಿ ನವಾಯಿ ಮಿಗಲು . . . ವಾನಾಯುಜದ ಸಾಲೆಸೆದುವು (ಕುಮ್ಮಾರ್ಕ್ರೊ. ೦೭-೯). [ಮೈ$_1$ (<ಮೆಯ್$_2$) + ಹಳುವಾಯಿ]

**ಮೈಹಿರ** (ನಾ). ೧. ಸೂರ್ಯ : ಮೂಲೋಕದೆಜೆಯ ಮೇರುಸದನ ಮೈಹಿರನ ಘನತೇಜಃಪ್ರಭ ಮೋಕ್ಷಪ್ರದ ವ್ರತಾಲಿನಿಯುಕ್ತಸುಧಾಕರ ಮಂಗಲವರ್ಧನ ವರ್ಣಿತ ಸಮವರ್ತಿ ಸಲಹು ನಲಪಿಂ ಶ್ರೀಶಾಂತೇಶಂ (ಅಧ್ಯಟೀ. ೧-೨೯). ೨. ಸೂರ್ಯನ ಕಾಂತಿ : ತಾಳ್ದತ್ತು ಮೈಹಿರವಂ ಕೇಳಿರಸಾರ್ಥವಿಶ್ರಮಿತ ನಾನಾದ್ಯವತಂ ರೈವತಂ (ಜಗಂ. ೦೭-೩೩). [<ಸಂ. ಮಿಹಿರ]

**ಮೈಹುಳಿ** (ಕ್ರಿ). ೧. ದೇಹವು ಹುಳಿತು ಹೋಗು. ೨. (ಆಲಂ) ಬಹಳ ಘಾಯವಾಗು,-ಹುಣ್ಣಾಗು : ತೊಲಗು, ಇಲ್ಲವಾದಲೆ ಬೆತ್ತದಿಂದ ಮೈಹುಳಿಯುವಂತೆ ಥಳಿಸುವೆ (ಕೃಶಕಾ. ೪೯); ನೋಡುತ್ತೇನು ನಿಂತಿ, ಪೆದ್ದನಂತೆ! ಮೈಹುಳಿಯ ಜಡ, ಅಂದರೆ ಎಚ್ಚರಾಗುತ್ತಾನೆ (ಹುಕ್ಕಾಟಿ. ೬೦). [ಮೈ$_1$ (<ಮೆಯ್$_2$) + ಹುಳಿ$_1$ (<ಪುಳಿ)]

**ಮೈಹೊರೆ** (ಕ್ರಿ). ಶರೀರವನ್ನು ತಾಳು; ಮೈದಳೆ : ಅಲರುತಿದ ಮೂರುಲೋಕದ ಮೋಹ ಕರೆವಂತೆ ದುಗ್ಧಧವಳಿಮಮುಗ್ಧತೆಯೆ ಮೈಹೊರೆಯುವಂತೆ (ಅಜಿತ. ೨೩-೪). [ಮೈ$_1$ (<ಮೆಯ್$_2$) + ಹೊರೆ$_3$ (<ಪೊರೆ)]

**ಮೈಳಲದೇವಿ** (ನಾ). ಒಬ್ಬಾಕೆಯ ಹೆಸರು: ಜನಕನುರ್ವೀಜಾತೆ ಪ್ರತ್ಯಕ್ಷಗೋಮಿನಿ ತಾಯಿ ಮೈಳಲದೇವಿ (ಶಾಶ್ವ. XX. ೩೦-೨೯; ೩೦. 10ಶತ ೫೫). [ಮೈಳಲ್$_0$ (ಪ ← ತಮಿ. ತೆಲು. ಮೈಲಾರು= ಒಂದು ಕ್ಷುದ್ರ ದೇವತೆ) + ದೇವಿ]

**ಮೈಳಾಪತೀರ್ಥ** (ನಾ). ಒಂದು ಸ್ಥಳದ ಹೆಸರು: ಶ್ರೀಮನ್ಮೈಳಾಪ ತೀರ್ತ್ಥಸ್ಯ ಗಣೇಶಾರೇಯನಾಮನಿ ಬಭೂವೋಗ್ರತಪೋಯುಕ್ತಃ ಮುಳ್ಳ ಭಟ್ಟಾರಕೋ (ಶಾಶ್ವ. XX. ೦೭-೬; 876). [ಮೈಳಾಪ$_0$ + ತೀರ್ಥ]

**ಮೊಂಗರವಳ್ಳಿ** 'ಮುಂಗುಬಿವಳ್ಳಿ' ನೋ.

**ಮೊಂಗುರಿ** 'ಮುಂಗುರಿ' ನೋ.

**ಮೊಂಟು$_1$** (ಕ್ರಿ). ತಿವಿ; ಚುಚ್ಚು (?): ತನ್ನ ಗವಂಗವಂ ಕಡಿದು ಖಂಡವಂ ತೆಗೆದು ಸೋದಿಸಿ ಕಿಚ್ಚೊಳಿಕ್ಕಿ ತಾಂ ಮಿಗೆ ಮೊಂಟಿ ಪೊರಳ್ಚಿ ಸುಂಟಗೆಯಿಂದೆ ಪಚಿಸಿ (ಶುಮಾಪು. ೯-೨೨೩). [<ಮೊಟ್ಟು$_1$ ?]

**ಮೊಂಟು$_2$** 'ಮುಂಡು$_2$' ನೋ.

**ಮೊಂಡ** 'ಮುಂಡು$_2$' ನೋ.

**ಮೊಂಡಕ್ಕಿ** 'ಮುಂಡಕ್ಕಿ' ನೋ.

**ಮೊಂಡಗತ್ತಿ**, ಮುಂಡಕತ್ತಿ, ಮೋಂಡುಕತ್ತಿ (ನಾ). ಹರಿತವಾಗಿರದ ಖಡ್ಗ; ಮೊಂಡಾಗಿರುವ ಕತ್ತಿ: (ಕ). **ಮುಂಡಕತ್ತಿ** : ಮುಸುಕುಬಂದೂಕು ಮತ್ತು ಮುಂಡಕತ್ತಿಗಳನ್ನೇ ಎತ್ತಿಕೊಂಡು . . . ಸಿದ್ಧರಾದರು (ಇಶ್ವ. ೦೪೯). **ಮೋಂಡುಕತ್ತಿ** : (ಕತ್ತಿವರಸೆಯಲ್ಲಿ ಉಪಯೋಗಿಸುವ ತುದಿಗೆ ಗುಂಡಿ ಹಾಕಿದ) ಮೊಂಡುಗತ್ತಿ (Foil. ೩೦೪೩). [ಮೊಂಡ (<ಮುಂಡು$_2$) + ಕತ್ತಿ]

**ಮೊಂಡಗಳ್ಳಿ** 'ಮುಂಡಗಳ್ಳಿ' ನೋ.

**ಮೊಂಡತನ** 'ಮೊಂಡುತನ' ನೋ.

**ಮೊಂಡರಳು** 'ಮುಂಡರಳು' ನೋ.

**ಮೊಂಡಾಟ** (ನಾ). ಹಟಮಾರಿತನ: ಪಟ್ಟುಹಿಡಿಯುವಿಕೆ; ಆಗ್ರಹ: ಈ ಮೊಂಡಾಟದಲ್ಲಿ ಯಾರೂ ಸೋಲುವಂತೆಯೂ ಇರಲಿಲ್ಲ, ಗೆಲ್ಲುವಂತೆಯೂ ಇರಲಿಲ್ಲ (ಅಲಸ. ೩೬); ದೀವಿಗೆಗಳಿಗೆ ಎಣ್ಣೆ ಬಿಡಿಸಿಕೊಂಡು ಮೊಂಡಾಟ ಮಾಡಿ ಕಾಸು 'ವಸೂಲು' ಮಾಡಿಕೊಂಡು ಮುಂದಿನ ಮನೆಗೆ ಹೋಗುವರು (ಸುವಸಂ. ೩೩) : ಮಕ್ಕಳ ಸ್ವಾಭಾವಿಕಆಸಕ್ತಿಗಳಿಗೆ ಅಡ್ಡಿಬಂದು ಮೊಂಡಾಟ ಮಾಡುವುದು, ತುಂಟಾಟ ಮಾಡುವುದು ಮೊದಲಾದುವು ಆರಂಭವಾಗುತ್ತವೆ (ಶಿಕ್ಷಶ. ೬೩೬). [ಮೊಂಡ (<ಮುಂಡು$_2$) + ಆಟ]

**ಮೊಂಡಿ**, ಮುಂಡ್ಕಿ, ಮೊಣ್ಣೆ (ನಾ). ೧. ಮೊಂಡುತನ ಮಾಡುವವಳು; ಹಟಮಾರಿ: ಆ ಮೊಂಡಿಯನ್ನು ಈ ಕೆಲಸಕ್ಕೆ ಒಪ್ಪಿಸುವಷ್ಟರಲ್ಲಿ ಸಾಕಾಗಿ ಹೋಯಿತು (ರೂಢಿ). **ಮುಂಡ್ಕಿ** : ೧. ಅದ್ಯೇ ಹೇಳಾದು, ನೀನು 'ಮುಂಡಿ' ಅಂತಾ (ಕುಲಿಷು. ೬೮೦). **ಮೊಣ್ಣೆ** : ೨. ಅಂಗಹೀನಳಾದವಳು; ಅಂಗವಿಕಲೆ: ಬಲಗೈಬೆರಳೊರ್ವಳಿನಿಗಿತ್ತ ಮೊಣ್ಣೆಯೆಂದು ಲಿದು ಭಂಗಿಸರೆ ಕಂಡಪರು (ಕಂವಾ. ೬-೦೬೪). [ಮೊಂಡು (<ಮುಂಡು$_2$) + — ಇ$_2$]

**ಮೊಂಡು** 'ಮುಂಡು$_2$' ನೋ.

**ಮೊಂಡುಕತ್ತಿ** 'ಮೊಂಡಗತ್ತಿ' ನೋ.

**ಮೊಂಡುಗರೆ** (ಕ್ರಿ). ಮೊಂಡುತನಮಾಡು; ಪಟ್ಟುಹಿಡಿ; ಹಟ ಹಿಡಿ : ಪ್ರಮಿಲ ಎಳೆಯ ಮಗುವಿನಂತೆ ಮೊಂಡುಗರೆಯುತ್ತಾ . . . ಗೋಗರೆದಳು (ಮುಕೀ. ೦೪೯). [ಮೊಂಡು (<ಮುಂಡು$_2$) + ಕರೆ$_1$]

**ಮೊಂಡುಗಳ್ಳಿ** 'ಮುಂಡಗಳ್ಳಿ' ನೋ.

**ಮೊಂಡುತನ**, ಮೊಂಡತನ (ನಾ). ಹಟಮಾರಿತನ; ಹಿಡಿದ ಪಟ್ಟು ಬಿಡದಿರುವಿಕೆ; ಆಗ್ರಹ: ಗಂಡ ಮಾಡಿದ ಪ್ರಯತ್ನಗಳೆಲ್ಲ ಅವಳ ಮೊಂಡುತನದ ಕಲ್ಲುಗೋಡೆಗೆ ಬಡಿದು ನುಚ್ಚುನೂರಾದವು (ಕೃಷು. ೩೭೦). **ಮೊಂಡತನ** : ನಾವು ರಾಯರೆಂದು ಮೋಡತನದಿಂದ ಉಳಿತುಯಿರುವವು (ಶಾಗಂಧಿ. ೨೦೩-೦೦) : ಅವಳು ಮೊದಲು ಬಹಿಷ್ಕೃತ ಹುಡುಗಿಯನ್ನು ಮನೆಯಲ್ಲಿಟ್ಟುಕೊಳ್ಳಲು ಸಿದ್ಧಳಾಗಿದ್ದಳು; ಗಂಡನ ಮೊಂಡತನದಿಂದ ಅದು ಸಾಧ್ಯವಾಗಲಿಲ್ಲ, ಅಷ್ಟೇ (೭೦೬ಕು. ೨೯೨); ಹಾಗೂ ಹೀಗೂ ಮೂರು ನಾಲ್ಕು ನಿಮಿಷ ಮೊಂಡತನದಿಂದ ಮಾತಾಡಿದೆ (ಕಂಟಿರು. ೩೯). [ಮೊಂಡು (<ಮುಂಡು$_2$) + — ತನ]

**ಮೊಂಡುವಾದ** (ನಾ). ಹಟಹಿಡಿದು ಮಾಡುವ ವಾದ; ಹಟದಿಂದ ಕೂಡಿದ ಮಾತಿನ ಸರಣಿ: ಇದಕ್ಕೆ ನಾವು ಮೊಂಡುವಾದವೆಂದು ಹೇಳುತ್ತೇವೆ (ದೂಕಟ್ಟ. ೦೦೩); ಫಾದರ್ ಕೊಸ್ಟೆನ ಮೊಂಡುವಾದವನ್ನು . . . ನಿಜವೆಂದು ಹೇಳಲು ಸಾಧ್ಯವಿಲ್ಲ (ಪ್ರಾಶಿಶಿ. ೨೬). [ಮೊಂಡು (<ಮುಂಡು$_2$) + ವಾದ$_2$]

**ಮೊಂಬತ್ತಿ** 'ಮೋಂಬತ್ತಿ' ನೋ.

**ಮೊಕ** 'ಮೊಗ' ನೋ.

**ಮೊಕಚಿಟ್ಟು** (ನಾ). ಯಾವುದಾದರೊಂದು ಬಗೆಯ ಆಹಾರದ ಅತಿಸೇವನೆಯಿಂದ ಬಾಯಿರುಚಿ ಕೆಟ್ಟು ಜುಗುಪ್ಸೆಯುಂಟಾಗುವುದು : ಮೊಕಚಿಟ್ಟುಯಾದೊಡ ಹುಳಿದಾಳಲುಗಳ ನಿಕರವ ಸವಿವರೇನೆಂಬೆ (ಪ್ರಾಪಶ. ೩೯-೦೨೬). 'ಮುಖಚಿಟ್ಟು' ಪರಾ. [ಮೊಕ (<ಮೊಗ) + ಚಿಟ್ಟು$_2$]

**ಮೊಕತ** 'ಮೊಖ್ತಾ' ನೋ.

**ಮೊಕದ್ದಮೆ**, ಮುಕದಮಿ, ಮೊಖದ್ದಮೆ (ನಾ). ಎರಡು ಪಕ್ಷಗಳ ನಡುವಿನ ಧನ, ಅಧಿಕಾರ ಇತ್ಯಾದಿಗಳಿಗೆ ಸಂಬಂಧಿಸಿದ ಯಾವುದಾದರೂ ಜಗಳ ಅಥವಾ ಮತ್ತಾವುದಾದರೂ ಅಪರಾಧದ ವಿಷಯವಾಗಿ ನ್ಯಾಯಾಲಯದಲ್ಲಿ ಹೂಡುವ ವ್ಯಾಜ್ಯ,-ಖಟ್ಲೆ : ಇಡೀ ಮೊಕದ್ದಮೆಯೇ ಮುರಿದು ಬೀಳುವ ಪರಿಸ್ಥಿತಿ ಒದಗಿತ್ತು (ಅತ್ಮಾಕಶ. ೦೪೦); ದರಬಾರಿನಲ್ಲಿ ಮೊಕದ್ದಮೆಗಳಾವವೂ ವಿಚಾರಣೆಯಾಗ

ತಕ್ಕುದಲ್ಲ (ದೇಖೀತಿ. ೦೦೩). **ಮುಕದಮಿ** : ಮುಕದಮಿಯು ಕಾಗದ ತಕ್ಕೊಂಡು ಓರ್ವ ಸ್ತ್ರೀಯು ಅವರ ಕಡೆಗೆ ಬಂದಳು (ಶ್ರಿಕೃಷ್ಣ. ೬೨).
**ಮೊಖದ್ದಮೆ** : ದಸ್ತಾವೇಜು, ಮೊಖದ್ದಮೆ (ಭಾಶಾಶಾ. ೦೬೬).

**ಮೊಕದ್ದಮೆ ಹೂಡು, ಮೊಖದ್ದಮೆ ಹೂಡು** = ವ್ಯಾಜ್ಯವನ್ನು ನ್ಯಾಯಾಲಯದ ವಿಚಾರಣೆಗೆ ಒಳಪಡಿಸು, – ಕೋರ್ಟಿಗೆ ಹಾಕು : ಮುಂಬಯಿಯ ಆಸಾಮಿಯ ಮೇಲೂ ಮೊಕದ್ದಮೆ ಹೂಡಲಾಯಿತು (ನಾಘೋೞ. ೦೯೩) ; ಚೌರ್ಯಗೋಪನಕ್ಕಾಗಿ ಅವಳ ಮೇಲೆ ಮೊಕದ್ದಮೆ ಹೂಡಲಾಗಿತ್ತು (ಕೃಷರು. ೦೯೨) ; ಅಪರಾಧಕ್ಕಾಗಿ ಮೊಖದ್ದಮೆ ಹೂಡಿದರು (ತಂದತೋ. ೨೮೪). [ ← ಅರ. ಮುಕದ್ದಮಹ್, ಮುಕದ್ದಮಾ ; ಹಿಂ. ಮರಾ. ಮುಕದಮಾ, ಮುಕದ್ದಮಾ. ಮೊಕದಮಾ ]

**ಮೊಕರ** 'ಮೊಗ್ಗರ' ನೋ.
**ಮೊಕರಂಬ** 'ಮೊಗರಂಬ' ನೋ.
**ಮೊಕರಂಬೆ** 'ಮೊಗರಂಬ' ನೋ.
**ಮೊಕರರ** 'ಮೊಕರರು' ನೋ.
**ಮೊಕರರು**, ಮೊಕರರ, ಮೊಕರಾರು, ಮೊಕರೂರು (ನಾ). ೧. ನಿಶ್ಚಯ ; ನಿರ್ಧಾರ : ವೀರರಾಜೇಂದ್ರವಡೆಯರ ಹುಡುಕುವ ಬಗ್ಗೆ ಮೊಕರರು ಮಾಡಿ ಕಳುಹಿಸಿದ್ದರಿಂದ (ರಾಜೇಂದ್ರ. ೦೮). **ಮೊಕರರ** : ೧. ಐದು ಹಣಾ ಮೊಕರರ ಮಾಡಿ ಅಂಗಿರಸದವರಿಗೆ . . . ನೇಮಕಾ ಮಾಡಿ (ಮೈಶಾಂ. ೦೯೭೬, ೯೯-೦೩ ; 1813). **ಮೊಕರಾರು** : ೧. ಇಲಾಖೆಯ ಸಿಬ್ಬಂದಿಗಳಲ್ಲಿ ಕಾಲಾನುಗುಣವಾಗಿಯೂ ಆಯಾ ಅಧಿಕಾರಿಗಳ ಮರ್ಯಾದೆಗನುಸಾರವಾಗಿಯೂ ಅವರವರಿಗೆ ತಲಬು ಮೊಕರಾರಾಗು ತ್ತಿತ್ತು (ಮುಶಾವಂ. II. ೩೩). **ಮೊಕರೂರು** : ೨. ನೇಮಕ ಮಾಡು ವಿಕೆ ; ನಿಯೋಜಿತಗೊಳಿಸುವುದು ; ನಿಯೋಜನೆ : ಹೈದರಸಾಬರು ದೈವಾಧೀನವಾದ್ದರಿಂದಾ ಆ ರಿಸಾಲೆ ಬಿಜಮತ್ತು ಶಾಬಾಸಾಬರು ಹೆಸ್ರಿಗೆ ಮೊಕರೂರಾಗಿಯಿರುತ್ತಾ ಇದ್ದರು (ಕೃದರ. ೨೩) ; ಧವುಪ್ಪನಾಯಕನ ಮಗನಿಗೆ ರಾಜ್ಯಾಧಿಕಾರಕ್ಕೆ ಮೊಕರೂರು ಮಾಡಬೇಕುಯೆಂಬುದಾಗಿ (೪೪ವಂ. ೩೨-೬). [ ← ಅರ. ಹಿಂ. ಮುಕರ್‍ರರ್ : ಮರಾ. ಮುಕರರ್, ಮುಕರ್‍ರ್, ಮುಕ್ರರ್]

**ಮೊಕರವಲೆ** (ನಾ). ಒಂದು ಬಗೆಯ ಬಲೆ : ಕರಿಯ ಜಮಿಲೆ ಮುಸುಕು ವಲೆ ಬಿತ್ತರದ ನೇಣ್ವಲೆ ಮೊಕರವಲೆ ಬೇಡರ ಸಿರದೊಳೊಪ್ಪಿದುದು (ಸಾಳ್ವಭಾ. ೩-೦೯). [ ಮೊಕರ, + ಬಲೆ, ]
**ಮೊಕರಾರು** 'ಮೊಕರರು' ನೋ.
**ಮೊಕರೂರಾತಿ** (ನಾ). ನೇಮಕಾತಿ : ಗ್ರಾಮಮುನಸಿಫರ ಮೊಕರೂ ರಾತಿಗೆ ಕೊಡುವ ಹುಕುಮುಗಳೆಲ್ಲವೂ ಸರ್ಕಾರದವರ ಪುನರ್ವಿಮರ್ಶೆಗೆ ಒಳಪಟ್ಟಿರತಕ್ಕದ್ದು (ಗ್ರಾವಹಕ. ೦೦). 'ಮಂಜೂರಾತಿ' ಹೋ. [ < ಮೊಕರೂರು ]
**ಮೊಕರೂರು** 'ಮೊಕರರು' ನೋ.
**ಮೊಕವಾಡ** 'ಮೊಗವಡ' ನೋ.
**ಮೊಕಸ್ತ** (ನಾ). ಮುಖ್ಯಸ್ಥ : ಯಿ ನಾಡುತಕ್ಕ ಮೊಕಸ್ತರೂ ಆದಿಯಾಗಿ (ಎಕ. IX, ಕೊಡಗು. ೨೯-೩ ; 1867). [ < ಮುಖ್ಯಸ್ಥ ]
**ಮೊಕಾಂ** 'ಮುಕ್ಕಾಂ' ನೋ.
**ಮೊಕಾಬಲಾ** 'ಮೊಕಾಬಿಲೆ' ನೋ.
**ಮೊಕಾಬಿಲೆ**, ಮುಕಾಬಲಿ, ಮುಖಬಿಲೆ, ಮುಖಾಬಿಲೆ, ಮೊಕಾಬಲಾ, ಮೊಖಾಬಿಲೆ (ನಾ). ೧. ಎದುರು ; ಅಭಿಮುಖ ; ಸಮ್ಮುಖ : ಯಾವತ್ತು ಗೈರವಾಜಬೀ ಲೆಕ್ಕಾಚಾರ ಸಾಕ್ಷಿ ರುಜು ಮೊಕಾಬಿಲೆಯಿಂದ ಕೂಲಂಕಷ ದರಿಯಾಫ್ತು ಮಾಡಿ (ಮುಶಾವಂ. II. ೩೯). **ಮುಕಾಬಲಿ** : ೨. ಎದುರೆದುರು ಮಾಡುವ ಕಲಹ : ಪ್ರತ್ಯಕ್ಷವಾಗಿ ಮಾಡುವ ಕಾಳಗ : ನಾವು ಸುಮ್ಮನ ಕೂತರೂ ಅವ ನಮಗ ಕಾಡತಾನ ಅಂದ ಮ್ಯಾಲ ಮುಕಾಬಲಿ ಆಗೇಹೋಗಲಿ ನೋಡೋಣಾ (ಗಂಪೂಮು. ೨೨೭). **ಮುಖಬಿಲೆ** : ೩. ಭೇಟಿ ; ಸಂದರ್ಶನ : ತಕ್ಷಣವೇ ನನ್ನನ್ನು ಸಿನಿವಾ ಮಾಲೀಕರ ಹತ್ತಿರ ಕರೆದುಕೊಂಡುಹೋಗಿ ಮುಖಬಿಲೆ ಮಾಡಿಸಿ ಮಧ್ಯಾಹ್ನದ ಮೋಟಾರಿಗೇ ಮೇಷ್ಟರು ಹಿಂತಿರುಗಿದರು (ದರ್ಪಣಶ್ರೀ. ೪೦). **ಮುಖಾಬಿಲೆ** : ೩. 'ಹುತ' ಕಾಗೆಗೆ ಬಿತ್ತು ಎಂತಾದರೆ ಅವರವರ ಮುಖಾಬಿಲೆ ಮುಂದಿನ ಶ್ರಾದ್ಧಕ್ಕೇ ಸರಿ (ಜಹಕ. ೨). ೪. ಸಮ್ಮುಖದಲ್ಲಿ ಆಗುವ ತೀರ್ಮಾನ : ಈಗ ನಮ್ಮ ಲೆಕ್ಕದ ಮುಖಾಬಿಲೆಯಾಗಲಿ ! (ಬಾಲಕೃ. II. ೬೪೯). **ಮೊಕಾಬಲಾ** : ೩. ನಿಮಗೆ ಅವಳಿಗೆ ಮೊಕಾಬಲಾ ಮಾಡಿಸುವೆನು (ರಕ್ತಕ್ಷ. ೨೦೪). **ಮೊಖಾಬಿಲೆ** : ೧. ಮೊಖಾಬಿಲೆ ಯಾಗಿ ಶಾನುಭೋಗರುಗಳು ಆ ರಸೀತಿಗಳಿಗೆ ಪಟೇಲನ ಜೊತೆಯಲ್ಲಿದ್ದು ರುಜುಮಾಡಬೇಕು (ಗ್ರಾಪಾಕ. ೬೮). ೩. ನೀವು ಒಪ್ಪಿದರೆ ಆತನನ್ನು ನಿಮಗೆ ಮೊಖಾಬಿಲೆ ಮಾಡಿಸುತ್ತೇನೆ (ರಘುಶಾಹಿ. ೦೩೭).

[ ← ಅರ. ಮುಕಾಬಲಹ್ ; ಹಿಂ. ಮುಕಾಬಲಾ : ಮರಾ. ಮುಕಾಬಲಾ, ಮುಕಾಬಿಲಾ, ಮೊಕಾಬಲಾ ]

**ಮೊಕ್ಕ**, ಮೊಕ್ಕೆ, ಮೋಕ$_1$ (ನಾ). ಒಂದು ಬಗೆಯ ಮರ : "ಮೋಕ್ಷಃ– ಮೊಕ್ಕ" (ಚಿತಧಿ. ೦೪೦) ; ಮೊಕ್ಕದ ಮರ, ಚಿತ್ರಮೂಲದ ಕಣೆಕೆ, ಕಳ್ಳಿ – ಇವಂ ಸಮೂಲಗಳಂ ತಂದು ಸರಿಗೂಡಿ ಸುಟ್ಟು (ವಿಶ್ವಿಧಿ. ೯). **ಮೊಕ್ಕೆ** : "ಗೋಲೀಢಃ . . . ಮೋಕ್ಷಃ ಮುಷ್ಕಕಃ – ಓ ಮೊಕ್ಕೇ ಮರದ ಹೆಸರು" (ಸಿದ್ಧಾಂತಿ. ೧೨೦). **ಮೋಕ$_1$** : ಮೋಕ – ಮಧ್ಯಮ ಆಕಾರದ್ದು, ಕಟ್ಟಿಗೆ ಬಿರುಸು (ಕಶಾಗ. ೯೭). [ದೇ.॥ ತೆಲು. ಮೊಕ್ಕ, ಮುಕ್ಕಿಡಿ ; ಕುಇ. ಮೊಕೊ. / ಸಂ. ಮೋಕ್ಷ ]
**ಮೊಕ್ಕನೆ** (ಅ). ಒಂದು ಅನುಕರಣಾವ್ಯಯ : ತಲೆಯಂ ಮೊಕ್ಕನೆ ಪೊಗೆಚ್ಚಂ (ವಡ್ಡಾರಾ. ೬೨-೦೩) ; ಸಿಡಿದು ಸಾಜಿ ತಲೆಗಳ್ ಬಟ್ಟವು ಸಂಧಿಸಂಧಿಗಳ್ ಮೊಕ್ಕನೆ ಕೋದವು (ಪರ್ವಪೂ. ೪-೬೨) ; ಮೇಘರಥನೆಯ್ದೆವಂದು ಮೊಕ್ಕನೆಪೋಗಿ ನೆಲಕ್ಕೆ ಬಿಟ್ಟ ಬಿನಿರ ಪೊಡಜಿಯುಮಂ . . . ಕಂಡು (ಶಾಂತೀಶ. ೧೦-೩೬ ವ). [ ಮೊಕ್ಕು$_2$ + – ಅನೆ$_1$ ]
**ಮೊಕ್ಕಳ**, ಮೊಗ್ಗಳ (ನಾ). ೧. ಹೆಚ್ಚಳ ; ಆಧಿಕ್ಯ ; ಅತಿಶಯ : ಮೇಗಾಳಿಕಿಗ್ಗಾಳಿಯ ಮೊಕ್ಕಳದ ತಿಳಿದು (ಸೌಂದರಪು. ೦೮-೪೩) ; ತನ್ನಂಗಿಯನುರು ಮುದದಿಂ ಕಂಚುಕಿಯೊರ್ವಳ್ ತನ್ನ ಪರದಟನ ಪೆಂಪಂ ಸಿರಿಯಗ್ಗಳಮಂ ಸೊಬಗಿನ ಮೊಕ್ಕಳಮಂ ವಿದಿತಾನ್ವಯಶುದ್ಧದ ಹೆಚ್ಚುಗೆಯಂ . . . ಕೋಟುತ್ತುಂ ಪೇಳುತ್ತುಂ ಮೆಲ್ಲನೆ ನಡೆಸಿದಳು (ಜಯಂಕಾ. ೩-೪೭). ೨. ಮೊತ್ತ ; ಗುಂಪು ; ಸಮೂಹ : "ಬಂಬಲ್ . . . ಮೊಕ್ಕಳಂ . . . ಗೊಂದಣ (ಉಂದಲ್) – ಈ ೧೦ ಸಮೂಹಂ" (ಕಶಸಾ. ೩೬-೨೨೨) ; ಎಲ್ಲಾ ಕಳೆಗಳ ಬರ್ದಿನ ಮೊಕ್ಕಳದಿಂ ನುಡಿವೆಣ್ಣಂ ಗೆಲ್ವಳಂ . . . ಅಳವೇ ಬಣ್ಣಪೊಡೆ (ಉದ್ಭಟ. ೨-೪೬) ; ತಿಳಿಗೊಳನುಂಟು ತಾವರೆಯುಂಟು . . . ಅಂಚೆ ಕೊಂಚೆಗಳೊಕ್ಕಲರ್ವಕ್ಕಿಗಳು ಮೊಕ್ಕಳವು (ನಾಗಕು. ೨೦-೪೪) ; ಅರ ಮಕ್ಕಳ ಮೊಕ್ಕಳಕಿಂತು ಪೆರ್ಕಳಂ (ಚಳಧಿ. ೩-೬೦). ೩. ಬಾಧೆ ; ತೊಂದರೆ ; ಪೀಡೆ. **ಮೊಗ್ಗಳ** : ೪. ಶೌರ್ಯ ; ಪರಾಕ್ರಮ : ಹೆಗ್ಗಡೆ ಬಲ್ಲಾಳರ್ಕಳ ಮೊಗ್ಗಳಮಂ ಮುರಿದುಕೊಂಡು ತದ್ಭೂತಳಮಂ ಬಗ್ಗದ ಮನ್ನೆಯರದಟಂ ಮುಗ್ಗಿಸಿ ತತ್ತದ್ಧರಿತ್ರಿಯಂ ವಶಗೈದಂ (ಕಳಸ್ವ. ೩-೬೨).

**ಮೊಕ್ಕಳಕೊಳಗು ಮಾಡು** = ತೊಂದರೆಗೆ ಗುರಿಪಡಿಸು ; ಹಿಂಸೆಗೆ ಈಡು ಮಾಡು : ಸೊಕ್ಕಾನೆ ನಡೆವೆತ್ತ ಸೊಬಗಿಯರ್ . . . ಮದನನ ಮೊಕ್ಕಳಕೊಳಗು ಮಾಡಿದರು (ವೀರೇಶಚ. ೨೯-೦೩). **ಮೊಕ್ಕಳಕ್ಕಿಕ್ಕು** = ಮೊಕ್ಕಳಕೊಳಗು ಮಾಡು: ಎಮ್ಮಾ ಸಂಕೇತವೃತ್ತಾಂತಮಂ ದೇವಿ ತಿಳಿದು

ಬಂದ್ರುಲೇಖೆಯುಂ ಮೊಕ್ಕಳಕ್ಕಿಕ್ಕಿದಳ್ (ಐತ್ರಗೊ. ೪೬). **ಮೊಕ್ಕಳವನಿಕ್ಕು**= ಮೊಕ್ಕಳಕೊಳಗುಮಾಡು : ವಿಳಸದಧ್ವರದಕ್ಷಿಣೆಗೆ ಮೊ[ಶಾಶಾಂ. ಹೆ] ಕ್ಕಳವನಿಕ್ಕಿದನೊಬ್ಬ (ಕೊರಣಾ. ೩-೨-೨೮). [ದೇ.॥ ತೆಲು. ಮೊಕ್ಕರ, ಮೊಕ್ಕಲ]

**ಮೊಕ್ಕಳಂ** (ಅ). ಅತಿಶಯವಾಗಿ ; ವಿಶೇಷವಾಗಿ ; ಚೆನ್ನಾಗಿ ; ಕೊಲಲ್ಕೆ ಮೊಕ್ಕಳಂ ನೆಚಿದುವದಱಿಂದೆ . . . ಪ್ರೋಲ್ಸ್ಪಮ ಮಹಾನದಿ ರುಂದ್ರ ಫಣೀಂದ್ರರಾಜನಂ (ಕಾವ್ಯಸಾ. ೭೪೭ ಕೂದ್ರಕ) ; ಮೊಕ್ಕಳಂ ಕವಿದುಪೊಗ್ರ ಲಯಾಗ್ನಿಗಳಂತೆ ಬೆಟ್ಟುಗಳ್ (ಶಂಖಶಾ. ೨-೬೬) ; ಮಜಿಸಿಂಗನ ಬಾಲಕ್ಕೆ ಗಂಟೆಕ್ಕುವ, ಗಂಟಿಕ್ಕಿ ಸಗುವ, ನಕ್ಕು ಮೊಕ್ಕಳಂ ನಲಿವ . . . ಚಿಣ್ಣರಾಟಂ ಮಾತೆಸೀತೆಯ ತೆರವುಸಕದ ಸಂತಸಗಡಲನಿರ್ಮಡಿಯುಬ್ಬಿಸಿದತ್ತು (ರಾಮಾಕ್. ೦೩೦-೩). [< ಮೊಕ್ಕಳ]

**ಮೊಕ್ಕಾಂ** ' ಮುಕ್ಕಾಂ ' ನೋ.

**ಮೊಕ್ಕಾಮ** ' ಮುಕ್ಕಾಂ ' ನೋ.

**ಮೊಕ್ಕಾಮು** ' ಮುಕ್ಕಾಂ ' ನೋ.

**ಮೊಕ್ಕು**$_1$ ' ಮೊಟ್ಟು$_1$ ' ನೋ.

**ಮೊಕ್ಕು**$_2$ (ನಾ). ಒಂದು ಅನುಕರಣ ಪದ : 'ಮೊಕ್ಕನೆ' ಪರಾ.

**ಮೊಕ್ಕುಮೊಕ್ಕು** (ದ್ವಿರುಕ್ತಿ) : ನಿಶಾತಶರಾಳಿಗಳೆಯ್ದೆ ಚಕ್ಕುಚಕ್ಕನೆ ಕೊಳೆ ಮೊಕ್ಕುಮೊಕ್ಕನೆ ಶಿರಂಗಳುರುಳ್ವುವು ವೈರಿಭೂಪರಾ (ಶಂಕರಾ. ೦೨-೦೦೯).

**ಮೊಕ್ಕೆ** ' ಮೊಕ್ಕ ' ನೋ.

**ಮೊಕ್ತ** ' ಮೊಖ್ತಾ ' ನೋ.

**ಮೊಕ್ತಾ** ' ಮೊಖ್ತಾ ' ನೋ.

**ಮೊಕ್ತಿಯಾರಿ** (ನಾ). ಮತ್ತೊಬ್ಬರು ಕೊಟ್ಟ ಸಂಪೂರ್ಣಅಧಿಕಾರ ; ಪ್ರತಿನಿಧಿತ್ವ : ಪ್ರಾತಿನಿಧ್ಯ : (*). [← ಪಾರ. ಹಿಂ. ಮುಖತಾರೀ, ಮುಖ್ತಾರೀ ; ಮರಾ. ಮುಖತ್ಯಾರೀ, ಮುಖ್ತಾರೀ]

**ಮೊಕ್ತೇಸರ್** ' ಮೊಖ್ತೇಸರ್ ' ನೋ.

**ಮೊಕ್ತೇಸರಿಕೆ** (ನಾ). ಮುಖ್ಯಾಧಿಕಾರಿಯ ಸ್ಥಾನ, – ಪದವಿ : ಹತ್ತು ವರುಷಗಳ ತನಕ ಈ ಮೊಕ್ತೇಸರಿಕೆಗೆ ನನ್ನ ಆಯ್ಕೆಯು ವರುಷಂಪ್ರತಿ ನೆರವೇರುತ್ತ ಬಂದಿತ್ತು (ಬಂಜನ್. ೦೯೩).

[ಮೊಕ್ತೇಸರ್ (< ಮೊಖ್ತೇಸರ್) + – ಇಕೆ]

**ಮೊಖದ್ದಮೆ** ' ಮೊಕದ್ದಮೆ ' ನೋ.

**ಮೊಖಮಂಟಪ** (ನಾ). ದೇವಾಲಯಗಳಲ್ಲಿ ನವರಂಗದ ಮುಂಭಾಗದಲ್ಲಿ ಇರುವ ಮಂಟಪ : ದೇವರ ಮೊಖಮಂಟಪ ತಗ್ಗಿದಲ್ಲಿ . . . ದಂಗಂಮನು ಉನ್ನತವಾಗಿ ಕಟಿಸ್ತ ಸೆವೆ (ಮೈಆ. ೦೯೩೪, ೫೪_೨; 1753). ' ಮೊಗಮಂಟಪ ' ಪರಾ.

[P ಇದು 'ಮುಖಮಂಟಪ' ಎಂಬುದರ ಅಪಲಿಖಿತವಿರಬಹುದು]

**ಮೊಖರಿ** (ಗು). ೧. ಅನುರಣನಗೊಳ್ಳುವ ; ಪ್ರತಿಧ್ವನಿಸುವ. (ನಾ). ೨. (ದೇವಾಲಯದಲ್ಲಿ) ಅನುರಣನಗೊಳ್ಳುವಂತೆ ಹಾಡನ್ನು ಹಾಡುವ ವ್ಯಕ್ತಿ : ಹಾಡುವ ಮೊಖರಿಗಂ ಬಿಹಳಯಿವ್ರ್ಗರ್ಗಂ ಎರೆವಾತ್ತ ೧೬ (ಸೌಇಇ. XX. ೩೦೦-೬ : 12ನೆಯ ಶತ) ; ಆ ನಾಯಕಂಗೆ ಗ ೬ ರಂಗಭೋಗದ ನಾಗವಾಸದ ಮೊಖರಿಗೆ ಗ ೩೦ (ಎಕ. III, ತಿರುಪು. ೧೦೦-೯೬ ; 1276). [< ಸಂ. ಮುಖರ]

**ಮೊಖರಿಗಾಳೆ** (ನಾ). (ಯಾವುದಾದರೂ ಉತ್ಸವದಲ್ಲಿ) ಅನುರಣನಗೊಳ್ಳುವಂತೆ ಊದುವ ಕಹಳೆ, – ಕಾಳೆ : ಮೊಖರಿಗಾಳೆಯ ವಾಸಿಕಾಋ ಬಸವ ಮಂಡಳಿಗೆಲ್ಲಿ ಕಸಪಸಿದ ಅ[ವು]ಜಗ ಬೀಜ ಇತವಂಲ್ಲ ಇಂತಿವರು ಬಿಟ್ಟ (ಸೌಇಇ. XVIII, ೨೦೬-೫ ; 1227).

[ಮೊಖರಿ + ಕಾಳೆ (< ಕಹಳೆ)]

**ಮೊಖಾಂತರ** (ಅ). ಮುಖಾಂತರ ; ಮೂಲಕ: ಬಾಲೂರ ವೀರೈಯಗೌಡರ ಹೊಕಣದ ದೇವ ಪು × × × ಮೊಖಾಂತರ ಆತನ ಬವಸೆ ಸನ್ನಿಧಾನದಲು ಕರಿಸಿ ಕೇಳಿದಲ್ಲಿ (ಎಕ. VIII, ಸೊರಬ. ೨೬೬-೦೬ ; 1629). [< ಮುಖಾಂತರ]

**ಮೊಖಾಬಿಲೆ** ' ಮೊಕಾಬಿಲೆ ' ನೋ.

**ಮೊಖಾಮು** ' ಮುಕ್ಕಾಂ ' ನೋ.

**ಮೊಖಾಸ**, ಮುಖಾಸಿ. ಮುಖಾಸೆ. ಮೊಖಾಸಿ (ನಾ). ೧. ತಾನು ಮಾಡಿದ ಸೇವೆಗೆ ಪ್ರತಿಯಾಗಿ ರಾಜನಿಂದ ಪಡೆದ ಭೂಮಿ. ಗ್ರಾಮ ಇತ್ಯಾದಿ ; ಉಂಬಳಿ : ಕೊಡುಗೆ : ಚಿಂತಗೋಪಿನಾಯಕನು ಪಿರೆಮುರಾಳದ ಮೊಖಾಸವನ್ನು ಹೊಂದಿದ್ದನು (ಪ್ರಂಸ. ೦೯೩೦, ೨೪ ; ?). ೨. ಚೌಥಾಯಿಯಲ್ಲಿ ರಾಜನ ಪಾಲನ್ನು ಕೊಟ್ಟ ಮೇಲೆ ಉಳಿದ ಹಣ. **ಮುಖಾಸಿ** : ೧. ಪಟಣದ ಹೋಬಳಿಸೀಮೆ ವಿಚಾರದ ಚಾವಡಿವಳಿತದ ತುರುವೆಕೆರೆಸ್ಥಳದ ಮುಖಾಸಿ ಚಿಕ್ಕ ಡೊಂಕಿ ಹಳಿಗ್ರಾಮಕೆರೆ ೧ ಆಣೆ ೧ (ಎಕ. XIV. ನಂಜನ. ೨೯೮-೦೦ : 1761) ; ತಳಕಾಡು ನಂಜರಾಜಯ್ಯನು ಪೂರ್ವದಲ್ಲಿ ವಿಠಣ್ಣನಿಗೆ ಮುಖಾಸಿಯಾಗಿ ಕೊಟ್ಟಿದ್ದ ಮದ್ದೂರು (ಮಹಾಶಂ. I. ೩೦). **ಮುಖಾಸೆ** : ೧. ಶ್ರೀವೀರಪ್ರತಾಪ ಕೃಷ್ಣರಾಯ ಮಹಾರಾಯರು ನಮಗೆ ಮುಖಾಸೆ ಕುದುರೆಗೆ ಪಾಲಿಸಿದ ಯಳಪೆಯ ಗ್ರಾಮದಲು ಬಂದಂಥಾ ಬ್ರಾ(೦)ಹ್ಮರಿಗೆ ದಿನವೊಂದಕ್ಕಂ ಹನ್ನೆರಡು[ಮಂ]ದಿ ಬ್ರಾ(೦)ಹ್ಮರಿಗೆ ಅ(೦)ನ್ನದಾನ ತಿಂಗಳುವೊಂದಕ್ಕೆ ಘಟ್ಟ ವರಹ ಗ ೩ರ ಲೆಖದಲು . . . ಧಾರೆಯನೆರದು ಕೊಟ್ಟೆಉ (ಸೌಇಇ. IX-ii. ೫೨೯-೬ ; 1530). **ಮೊಖಾಸಿ** : ೧. ಭದ್ರಾಪುರದ ಹಳೆಮೊಖಾಸಿಯು ಆ ಗ್ರಾಮದ ಒಕ್ಕಲುಮಕ್ಕಳ ಕೈಯ ದಂಡವ ಕೊಂಡ ಸಂಮ[೦]ಧ ಯಲ್ಲಾ ಬಿಟ್ಟು ಹೋಗಿ ಊರು ಹಳಾಗಿಯಿರಲಾಗಿ (ಸೌಇಇ. XVIII, ೯೩೪-೪ ; 1643). ೩. ಉಂಬಳಿಯನ್ನು ಪಡೆದವನು ; ಇನಾಂದಾರ : ಆ ಗ್ರಾಮದ ಮೊಖಾಸಿಗಳು (ಇಐ. ೦೯೪೬, ರಾಜೆಪತ್ರ್ಯರ್. ೨೪೮-೦ ; ?) : ಕೂಸನೂರ ಮೊಖಾಸಿ ಕೊಂಡಪ್ಪ (ಇಐ. ೦೯೪೬. ರಾಜೆಪತ್ರ್ಯರ್. ೨೪೮-೩ ; ?).

[← ಅರ. ಮುಕಾಸಾ ; ಮರಾ. ಮೊಕಾಸ್, ಮೊಕಾಸಾ. ಮೊಕಾಶೀ. ಮೊಕಾಸೀ]

**ಮೊಖಾಸಿ** ' ಮೊಖಾಸ ' ನೋ.

**ಮೊಖಾಳ** ' ಮಕಾಳ ' ನೋ.

**ಮೊಖೂಫು** ' ಮೋಕೂಫ್ ' ನೋ.

**ಮೊಖ್ತಿ** ' ಮೊಖ್ತಾ ' ನೋ.

**ಮೊಖ್ತಾ**, ಮೊಕತ. ಮೊಕ್ತ. ಮೊಕ್ತಾ. ಮೊಖ್ತಿ (ಅ). ಎದುರಿನಲ್ಲಿ ; ಸನ್ನಿಧಿಯಲ್ಲಿ ; ಸಮಕ್ಷಮವಾಗಿ : ದರಶನಾ ತೆಗೆದುಕೊಂಡು ಖಾವಂದರು ಆಜ್ಞೆ ಮಾಡಿದ್ದು ಮೊಖ್ತಾ ವಿನಂತಿ ಮಾಡುತ್ತ (ಮದಕ. ೩-೦); ಪಂಚಾಯಿತರ ಮೊಖ್ತಾ ಮಹಜರು ಮಾಡಿಸಿ (ಗ್ರಾಪಾಳ. ೬೬) ; ನಮ್ಮ ಯಜಮಾನರೂ ದಿವಾನ್ ಸಾಹೇಬರನ್ನು ಮೊಖ್ತಾ ಕಂಡು ಹೇಳಿಕೊಂಡರು (ಇರದು. ೮೧). **ಮೊಕತ** : ಮೊಕತ ಶಕ್ತಿಯ ಪರಿಯ ತೋರುವುದೀಗ (ತಪಶಾ. ೦೨-೨೦). **ಮೊಕ್ತ** : ನಮ್ಮ ಮೊಕ್ತ ನೀನು ಬನ್ದು ನಮ್ಮ ಸ್ಥಳದಲ್ಲಿ ಅಜಿಕಿಮಾಡಿಕೊಂಡು (ಎಕ. XI. ಹಿರಿಯೂ. ೩೬-೦೯; 1533 ?). **ಮೊಕ್ತಾ** : ಅವರ ತಂದೆ ಎಷ್ಟೋ ಸಲ ಲಿಖಿತ ಮೂಲಕವಾಗಿಯೂ ಮತ್ತು ಮೊಕ್ತಾ ಮನೆಗೆ ವಾಪಸು ಕರಕೊಂಡು ಹೋಗಬೇಕೆಂದು ಪ್ರಾರ್ಥನೆ ಮಾಡಿದಾಗ್ಯೂ ನೀವು ಎಲ್ಲವನ್ನೂ ನಿರಾಕರಿಸಿದ್ದೂ ಸರಿಯಷ್ಟೆ ? (ಬಕಾಂಗಿ. ೦೯೬) ; ತಾನೇ ಮೊಕ್ತಾ ಕಂಡು ಮಾತನಾಡಿಯೂ ಹೆಣ್ಣು ನಿಶ್ಚಯಪಡಿಸಿಕೊಂಡು . . . ಕುರುಡುಮಗನಿಗೆ ಮದುವೆಮಾಡಿದನು (ಕಥಾಮಂ. IV. ೨೪). **ಮೊಖ್ತಿ** : ಏನಿದ್ದರೂ ಆಂಗ್ಲೇಯದಲ್ಲಿ ಮೊಖ್ತಿ ಹೇಳಬಡಿ (ಧೂರಾಜ. ೦೦೬).

[< ಸಂ. ಮುಖತಸ್./ತುಳು. ಮೊಕತಾ]

**ಮೊಖ್ತಿಯಾರ್**, ಮುಖ್ತ್ಯಾರ್, ಮೊಖ್ತ್ಯಾರ (ನಾ). (ನ್ಯಾಯ ಸಂಬಂಧವಾದ ವ್ಯವಹಾರಗಳಲ್ಲಿ) ಮತ್ತೊಬ್ಬನಿಗಾಗಿ ಕಾರ್ಯ ನಿರ್ವಹಿಸಲು ನೇಮಕನಾದ ಅಧಿಕಾರಿ ; ಪ್ರತಿನಿಧಿ : ದಂಡಾಜ್ಞೆ ಅವರ ಕೈಸೇರುವ ತನಕ ಭೇಟಿಯು ಪರವಾನಿಗೆ ಮೊಖ್ತಿಯಾರ್ ಸಂಪೂರ್ಣ ಜವಾಬ್ದಾರನೆಂದೂ ದೌವಾರಿಕ ಸ್ಪಷ್ಟಪಡಿಸಿದನು (ಕೃಸರು. ೦೩೭). **ಮುಖ್ತ್ಯಾರ್** : (Attorney. ಶಾಂಶಿ. ೭). **ಮೊಖ್ತ್ಯಾರ** : ಮೊಗಲ ಚಕ್ರವರ್ತಿಗಳು . . . ಆ ಬಗ್ಗೆ ಮೊಖ್ತ್ಯಾರರನ್ನು ನಿಯಮಿಸಿದ್ದರು (ಹಿಂದುಇ. ೨೬೦). [← ಅರ. ಮುಖ್ತಾರ್; ಹಿಂ. ಮುಖತಾರ್, ಮುಖ್ತಾರ್; ಮರಾ. ಮುಖತ್ಯಾರ್, ಮುಖ್ತ್ಯಾರ್. ಮುಖ್ತಾರ್]

**ಮೊಖ್ತಿಯಾರ್‌ನಾಮ**, ಮುಖ್ತ್ಯಾರನಾಮೆ, ಮೊಖ್ತ್ಯಾರ್‌ನಾಮೆ (ನಾ). ಮತ್ತೊಬ್ಬನಿಗಾಗಿ ಕೆಲಸ ನಿರ್ವಹಿಸಲು ಕೊಟ್ಟ ಅಧಿಕಾರ; ವಕಾಲತ್ತು: (ಮೈಗೆಜ. IV, ೭೭೯). **ಮುಖ್ತ್ಯಾರನಾಮೆ** : (power of attorney. ಶಾಂಶಿ. ೭). **ಮೊಖ್ತ್ಯಾರ್‌ನಾಮೆ**: (Letter of administration. ಶಾಂಶಿ. ೩). [←ಅರ. ಪಾರ. ಮುಖತಾರ್‌ನಾಮಹ್; ಹಿಂ. ಮುಖತಾರ್‌ನಾಮಾ ; ಮರಾ. ಮುಖತ್ಯಾರ್‌ನಾಮಾ]

**ಮೊಖ್ತೇಸರ್**, ಮುಕ್ತೇಸರ, ಮೊಕ್ತೇಸರ್, ಮೊಖ್ತೇಸರ (ನಾ). ಮುಖ್ಯಾಧಿಕಾರಿ ; ಪ್ರಧಾನ ಅಧಿಕಾರಿ : ವಿದ್ಯಾಭ್ಯಾಸದ ಇಲಾಖೆಯ ಮೊಖ್ತೇಸರ್ ಅಧಿಕಾರಿಗಳಾಗಿದ್ದ . . . ಎಂ. ಶಾಮರಾವ್ ಎಂ. ಎ. ಯವರಿಗೆ ನನ್ನ ಕೃತಜ್ಞತೆಯನ್ನು ಇಲ್ಲಿ ನಮೂದಿಸದೆ ಬಿಟ್ಟಲ್ಲಿ (ಜಕ್ರಶಾ. ೬ ೨೧೬೪). **ಮುಕ್ತೇಸರ** : ಅದಳಿತೆಯನ್ನು ಸರ್ಕಾರ ವಹಿಸಿಕೊಂಡು ೧೪೩೯ರ ವರೆಗೆ ಇವರನ್ನೇ ಅದಳಿತೆ ಮುಕ್ತೇಸರರನ್ನಾಗಿ (Trustee) ಮಾಡಿತ್ತು (ಕುಳುವಾ. ೦೦೫). **ಮೊಕ್ತೇಸರ್**: 'ಮೊಕ್ತೇಸರಿಕೆ' ಪರಾ. **ಮೊಖ್ತೇಸರ**: ಗೂಳಿಯು ಸರ್ ಮೊಖ್ತೇಸರನ ಹಾಗೆ ಅರಮನೆಯಲ್ಲಿ ಎಲ್ಲಿ ಬೇಕಾದರೂ ಅಲೆದುಕೊಂಡಿರಲಿ ಎಂದು ಅರಸನು ಬಿಟ್ಟಿದ್ದನು (ದೇಶಾಂಕ. ೩೭); ಕೋರ್ಟಿನಲ್ಲಿ ಮೊಖ್ತೇಸರರಾಗಿದ್ದ ಸೋಮೇಶ್ವರಯ್ಯರ್ ಮಾಧವರಾಯ, ಜವರೇಗೌಡರು ಇಬ್ಬರಿಗೂ ಬೇಕಾದವನಾಗಿದ್ದ (ಗೃಹಂ. ೨೨೩).
[←ಅರ. ಪಾರ. ಹಿಂ. ಮೊಖ್ತೇಸರ್]

**ಮೊಖ್ತೇಸರ** ' ಮೊಖ್ತೇಸರ್ ' ನೋ.

**ಮೊಖ್ತ್ಯಾರ್‌ನಾಮೆ** ' ಮೊಖ್ತಿಯಾರ್‌ನಾಮ ' ನೋ.

**ಮೊಖ್ತ್ಯಾರ** ' ಮೊಖ್ತಿಯಾರ್ ' ನೋ.

**ಮೊಗ**, ಮಕ, ಮುಕ, ಮೊಕ (ನಾ). ೧. ಮುಖ ; ಮೋರೆ : "ವದನ ಮಾನನಮಾಸ್ಯಂ . . . ವಕ್ತ್ರಂ ಮೊಗಕ್ಕೆ ನಾಮಂ" (ಪಶು ಕೋ. ೬೯-೦೫); ಮೊಗಮೆಂಬಂಬುಜದಲರು . . . ಎನೆ ಸುಯುಕ್ತರೂಪಕಮಕ್ಕುಂ (ಕಾವ್ಯಾ. ೩-೨೫) : ಮೊಗಮಂ ತಾವರೆ ಕಣ್ಣನುತ್ಪಲದಳಂ ಧಮ್ಮಿಲ್ಲಮಂ ಸೋಗೆ . . . ಆರಾಧಿಸಿ ಪೋಲ್ತುವು (ಅರಿಕೃ. ೬-೯೫); ಯಮರಾಜನ ಕುಮಾರನ ಮೊಗವ ನೋಡಿದನು (ಕುಮಾರರಾ. ೮-೦೭). ೨. ಬಾಯಿ: ಮೊಗದೊಳ್ ವಾಗ್ವಧು ಸಂತತಮಗಲದೆ ನಿಲೆ . . . ತಪಮುಜ್ವಳ ಮೆಂತುಟೋ ಮೇಘಚಂದ್ರಮುನಿಪುಂಗವರಾ (ಶಶಾಶ. ೧-೨೦) ; ತನ್ನ ಮೊಗದೊಳೊಂದಕ್ಕರಮಂ ಪೊಣಮಡಿಸಲಣಿಯದಜಿತಮನಣಿಯದರೊಳ್ ಪೊಣೆಪ ಸಾಸಿಗಂದಿರುಂಟೇ (ಮಲ್ಲಿಪು. ೦-೩೩); ವಿಮಾನಂಗಳ ಪೇರಣಿ ಪೋಲ್ತುದು ತೆಜೆದ ಮೊಗದ ಪೇಟೆಗಳಿರವಂ (ಶಂಕರ ಕೃ. ೬-೩೯). ೩. ದಿಕ್ಕು; ದೆಸೆ : ಪಡುವಮೊಗವಾಗಿ ರೋಮಂಗಡ ತಲೆಯಂ ಪೆಕ್ಕಲೊಡನೆ ಓರಿಯುಂ ಪೋದಂತೊಡನಾರು ನುಡಿವರುಮಿಲ್ಲ (ಶಶಾಶ. ಅಶಸಂಶ. I,೩೯೩-೯೭): ಶುಭದಿನದೊಳ್ಪೊಣಮಟ್ಟು ಪಡುವಮೊಗದೆ ಪಯಣಂಬೋಗಿ (ಶಂಹಂ. ೭-೩ ಪ); ಎನಗಾವ ಮೊಗಮೊ! ಸುಡು ಸೀತೆಯಿಲ್ಲದೀ ನಾಡಂ! (ರಾಮಾಶ್ವ. ೯೭-೦೨). ೪. ಎದುರು ; ಸಮ್ಮುಖ : ಅವರಿರ್ವರುಮೆನ್ನ ಮೊಗದೊಳ್ ನಿಲ್ಲದೆ ಪೋದೊಡೆ (ಕಾವ್ಯಂಕ. ೦೪). ೫. (ಅಲಂ) (ಮುಖವನ್ನು ತೋರಿಸುವ) ಧೈರ್ಯ; ಆತ್ಮವಿಶ್ವಾಸ : ಅಂಧನರೇಂದ್ರನ ಮೊಗಮಂ ಗಾಂಧಾರಿಯ ಮೊಗಮನಾವ ಮೊಗದೊಳೆ ನೋಟ್ಪೆಂ (ಗದಾಯು. ೩-೭೦); ಆಗಳವರ್ ತಾಯ ಮೊಗಮನಾವ ಮೊಗದೊಳು ನೋಡುವವೆಂದು ನಾಣ್ಚಿ (ಸುಕುಮಾ. ೨-೩೨ ಪ). ೬. ಮೊದಲು; ಆರಂಭ: 'ಮೊಗಗಳ್ಳಲೆ' ಪರಾ. ೭. ಮುಂಭಾಗ; ಅಗ್ರಭಾಗ: 'ಮೊಗಸೂನಿಗೆ' ಪರಾ. **ಮಕ** : ೧. ನಾಯಿಲ್ಲಿ ಮಾತಾಡ್ತಿಸ್ನೀ. ಅಲ್ಲಿ ನೀವು ಒಬ್ಬರೊಬ್ಬರ ಮಕ ನೋಡ್ತಾ ನಿಂತೀರಲ್ಲ? (ಕಪ್ಪುಬಿ. ೬); ನಿಮ್ಮ ಮಕಾ ನೋಡಿದರ ಏನೋ ಚಿಂತಿ ಹಿಡಿದ್ಹಂಗ ಕಾಣತೇತಿ (ಗ್ರಾಪತಿಯು. ೦೪೦). **ಮುಕ** : ೧. ಖಕಾರಕ್ಕೆ ಕಕಾರಂ . . . ಮುಖ–ಮುಕ. ಶಂಖ–ಸಂಕ (ಶಪ:ದ. ೨೫೫ ವೃತ್ತಿ); ಯಾಕೆ ಗೌರಿ, ಬೆಳಗ್ನಿಂದ ಮುಕ ಗಡಿಗೆಗಾತ್ರ ಮಾಡ್ಕೊಂಡು ಕುಂತಿದೀಯ? (ಅಪ್ಪಾಜಿ. ೯೦). ೬. 'ಕಾಮರ್ಮುಕ₁' ಪರಾ. **ಮೊಕ** : ೧. ನಾವು ಟೀಪುಸುಲ್ತಾನರಿಂದ ಸ್ನೇಹದ ಮೊಕ ತಿರಿಗಿಸಿ ಇಂಗ್ರೇಜ್ ಸರಕಾರದ ದೋಸ್ತಿ ಮಾಡಗಿ (ರಾತೇಂದ್ರ. ೯೪); ಮೊಕಾ ನೋಡಿ ಮಣೆ ಹಾಕುತ್ತಾರೆ (ಹುಟ್ಟಿಹ. ೦೯೫); ಕೆಂಪಿ ಬಂದು ಮೊಕ ನೋಡಿದಳು (ಮಲ್ಲಿ. ೦೨). ೩. ಅಲ್ಲಿ ಮೂಡಣ ಮೊಕಂದಿಳಿದು ಬರಲು (ಎಕ. XII. ಶಿಕ್ಕವಾ. ೯೨-೬೭; 1226).

**ಮುಕಾಡಿ**, **ಮುಕಾಡೆ**, **ಮುಖಾಡೆ** = ಮುಖಕೆಳಗಾಗಿ ; ಬೋರಲಾಗಿ: ಮಗು ಮುಕಾಡಿ ಬಿತ್ತು (ರೂಪಿ); ಮಂಚದ ಹಾಸಿಗೆ ಹಂಚ್ಯಾಡಿ ಹೋಗಿತ್ತು ಮೈಜಾಚಿ ಮುಕಾಡೆ ಮಲಗ್ಯಾಳೆ (ಗ್ರಾರಕ. ೨); ಅವನ ಮುತ್ತಾತ . . . ಹೂತಿಟ್ಟ ಗೊಂಬೆಗಳು 'ಥಕ್ಕಥೈ' ಎಂದು ಕುಣಿಯುವುದನ್ನು ನೋಡಿ ಅವನ್ನು ಎಕ್ಕಡದ ಕಾಲಿನಲ್ಲಿ ಒದ್ದು ಮುಕಾಡೆ ಮಾಡಿ ಬರೋಸಂತೆ (ನವ್ಯರು. ೦೭೭); ಪಟ್ಟೆಮಂಚದ ಮೇಲೆ ಮುಖಾಡೆ ಮಲಗ್ಯಾಳೆ (ಜಾಕರ. ೦೬೩). **ಮುಖಾಡೆಯಾಗಿ**, **ಮುಖಾಡಿಯಾಗಿ**, **ಮೊಕಾಡೆಯಾಗಿ**, **ಮೊಕ್ಕಡೆಯಾಗಿ** = ಮುಖಕೆಳಗಾಗಿ; ಬೋರಲಾಗಿ: ಮುದುಕನು ಪುನಃ . . . ಕಣ್ಣು ಮುಚ್ಚಿಕೊಂಡು ಮುಖಾಡೆಯಾಗಿ ಮಲಗಿಬಿಟ್ಟನು (ಶ್ರೀಕಥ. ೦೦೨); ಈ ಶಂಕೆಯಿಂದ ಅರ್ಧಕುಳಿತಿದ್ದ ನಾನು ಹಾಗೇ ಮುಖಾಡಿಯಾಗಿ ಕೆಳಕ್ಕೆ ಮಲಗಿದೆ (ಕಂಹಿ. ೦೭೭); ಮೊಕಾಡೆಯಾಗಿ ಬಿದ್ದರೂ ಮಿಸೆ ಮಣ್ಣಾಗಲಿಲ್ಲ ಅಂದನಂತೆ (ಗಾದೆ); ಚಿಂತಾಕುಲನಾಗಿ ಮಂಚದ ಮೇಲೆ ಮೊಕ್ಕಡೆಯಾಗಿ ಮಲಗಲು (ಹುಟ್ಟಿಹ. ೭೩). **ಮೊಕ ಕಟ್ಟಿಕೊಳ್ಳು** = ವಿರೋಧ ಕಟ್ಟಿಕೊಳ್ಳು; ಮುಖ ಕೆಡಿಸಿಕೊಳ್ಳು: ಸಿನ್ನಂತವರ ಸಂಗಡ 'ಮೊಕ ಕಟ್ಟಿಕೊಂಡ' (ಚೀಲಪು. ೦೭೦). **ಮೊಗಮಾಡು** = ಎದುರಿಗೆ ನಿಲ್ಲುವಂತೆ ಮಾಡು; ಎದುರಾಗಿಸು: ತೆಗೆದು ಹಿಮ್ಮೆಟ್ಟುವ ಬಲವ ನಿಲಿಸಿಕೊಂಡು ಮೊಗಮಾಡಿ ಮತ್ತೆ ಮೋಹರವ ಧಿಗಿಲನೆ ಬಂದಪ್ಪ ಲಾವಸು (ಕುಂದಾನಾಂ. ೦೩-೯೨). [<ಸಂ. ಮುಖ./ ತಮಿ. ಮುಕ, ಮೊಕ್ಕೈ; ಮಲ. ಮುಕ; ತುಳು. ಮೊಗ, ಮುಗನು; ತೆಲು. ಮೊಗ; ಕೋಲಾ. ನಾಯ್ಕಿ. ಮೊಕವ್; ಪರ್ಜಿ. ಮೊಕೊವ್]

**ಮೊಗಂ** 'ಮೋಘವ್' ನೋ.

**ಮೊಗಂಗಿಡಿಸು**, ಮೊಗಗೆಡಿಸು (ಕ್ರಿ). ೧. (ಅಲಂ) ಅವಮಾನಮಾಡು: ಪಡಿದಟವಾಂತು ಬಂದ ಸಿಂಗಳರಾಯನಂ ಮೊಗಂಗಿಡಿಸಿ ಜಸಂ ಬೆಸಂಬಡೆಯೆ ಒಲ್ಲಿಗನೀ ಪರಿ ಚಲ್ಲವಾಡಿದಂ (ಅಕಶಂ.೨-೬೮). **ಮೊಗಗೆಡಿಸು**: ೧. ಲೋಕದಲ್ಲಿ ಗುಣವಂತರ್ಗೆ ಯಾವನಾನೊರ್ವಂ ತಪ್ಪಿದೊಡೆ ಮೊಗಗೆಡಿಸುವುದು ಧರ್ಮವೇ (ಸಮ್ಯಕ್ತ್ವ. ೦೦-೩೯). ೨. ದಿಕ್ಕೆಡುವಂತೆ ಮಾಡು; ದಿಗ್ಭ್ರಮೆಗೊಳಿಸು : ಕರಿತುರಗ ಕಾಲಾಳ ಮೋಹರ ಮೊಗಗೆಡಿಸಿ ಲೋಕವನು (ಕುಂದಾನಾಂ. ೦೬-೦೦೭); ಸರಸಿಜೋದ್ಭವನ ಮೊಗಗೆಡಿಸಿ ಮಿಗಿಹಿದಳು (ಸರ್ವಜ್ಞ. ೦೬೫೦). [ಮೊಗ + ಕಿಡಿಸು (< ಕೆಡಿಸು₁)]

**ಮೊಗಂಗಿಡು** (ಕ್ರಿ). ೧. ಮುಖವು ವಿಕಾರವಾಗು; ಮುಖವು ಬಾಡು. ೨. (ಆಲಂ) ಆಹಾರ ಮುಂತಾದುವುಗಳ ಅತಿಸೇವನೆಯಿಂದ ಅಸಹ್ಯಪಡು : ಬರಿದೊಂದು ಮುಗುಳ ಕಂಪಿನೊಳೆ ಮೊಗಂಗಿಡುವುವು ತುಂಬಿಗಳ್ (ಶಂಶಬ. ೧-೫೬). [ಮೊಗ + ಕಿಡು (< ಕೆಡು$_1$)]

**ಮೊಗಂಗುಡು** ' ಮೊಗಂಗೊಡು ' ನೋ.

**ಮೊಗಂಗೊಡು**, ಮೊಗಂಗುಡು, ಮೊಗಗುಡು, ಮೊಗಗೊಡು (ಕ್ರಿ). ಮುಖವನ್ನು ತೋರಿಸು: ಎದುರಾಗು : ಹೊರೆಗಾಣದಿಹ ನೇಹಗಲ ಹದೆ ಮೊಗಂಗೊಡದ ಗಿರಿಸುತೆಯು ಬೇಗಡೆಗೆ ಸೊಪ್ಪುಳಾಗದ ತೆಱದೊಳಿರದೆ ಬಳಿಸಂದು (ಶಂಪು. ೩೮-೧). **ಮೊಗಂಗುಡು** : ನುಡಿಯದೆ ಕೆಮ್ಮನಿರ್ಪರ ಪಿದಾವುದು ಕಾರಣಮಾವುದೀ ಮೊಗಂಗುಡದಿರವು (ಶಂಶಬ. ೮-೭೬); ಎಡೆಗುಡೆ ಸಾರ್ದು . . . ತಾಂ ಮೊಗಂಗುಡೆ ಪದವೆತ್ತು ಚುಂಬಿಸಿ (ಶಂಪ್ರಕೃ. ೬-೮೨). **ಮೊಗಗುಡು** : ಬೊಮ್ಮರಸ :– (ಮೊಗಗುಡದೆ) ಇರಬೇಕು, ಇರಬೇಕು . . . ನನಗೆ ಸರಿಯಾಗಿ ನೆನಪಿಲ್ಲ (ಚಟ್ಟಿಅ. ೧೫-೯). **ಮೊಗಗೊಡು** : ತವಕದನುವಱಿದಪ್ಪಿ ಮೊಗಗೊಡೆ ಪವಣಱಿದು ಚುಂಬಿಸುತೆ ಇಂದುಟಿ ಸುಧೆಯನೊಸೆದೀಂಟಿ (ಸಾಕ್ಷಬ. ೪-೧೧).

[ಮೊಗ + ಕೊಡು$_1$]

**ಮೊಗಂಚಿತ** (ನಾ). ಮುಖದಲ್ಲಿರುವುದು : ಪಂಚಲಪನಪಂಚಪಂಚಾಕ್ಷರಗಳೆ ಮೊಗಂಚಿತವಾಗಿರಲಪಕೆ ನಾಂ ಚೆಲ್ವ ಕಾಣ್ಕೆಯೆಂದುಂ ಚಮೂಪನ ಶಿರಕಾಂತಿಗಂ ಪಡಿಯುಪ್ಪಿಸೆಂದು (ಶೃರಪೇ. ೧-೨೬೪).

[< ಸಂ. ಮುಖಾಂಚಿತ]

**ಮೊಗಂದಿರಿ** (ಕ್ರಿ). ಮುಖವನ್ನು ತಿರುಗಿಸು ; ವಿಮುಖವಾಗು : ಉಱದರಸುಮಕ್ಕಳೆಲ್ಲಂ ಕರ್ಣ ಶಲ್ಯರ್ ಮೊಗಂದಿರಿದುದಂ ಕಂಡು ಮನಂಗೆಟ್ಟು (೭ಂಶಬ. ೩-೭೦ ವ); ಮಾರ್ಮಲೆದಿಸಲ್ಕೆ ಮೊಗಂದಿರಿದಂದವಂದಿರುಂ ತುಱುಗಿರೆ ಬೆನ್ನೊಳಂಬುಗಳುಮಂಬನೆ ಕಾಱುತುಮೋಡೆ ಭೀತಿಯಿಂ (ಶೀಬಾಪು. ೧೨-೨೬೦). [ಮೊಗ + ತಿರಿ$_1$]

**ಮೊಗಂದಿರಿಪು**, ಮೊಗಂದಿರುಪು, ಮೊಗಂದಿರುವು, ಮೊಗಂದಿರುಹು, ಮೊಗದಿರುಹು (ಕ್ರಿ). ೧. = ಮೊಗಂದಿರಿ : ಅಂತತಿಬಪಿತಕಿಶೋರಕೇಸರಿಯಂತೆ ಪರಾಕ್ರಮೈಕಸಹಾಯನಾಗಿ ಮದಾಂಧಗಂಧಸಿಂಧುರಘಟೆಯಂ ಮೇಗಣ ನಿಷಾದಿಯೋಧಾಗ್ರಗಣ್ಯರುಮಂ ಮೊಗಂದಿರದೆ ಮೊಗಂದಿರಿಸು[ಪ್ಪು]ವ ಬೆಸದೊಳ್ ತೊಡರ್ದು (ಶಾಂತಿಪು. ೪-೨೦ ವ); ಬಲ್ವಗೆಯುಂ ಕಂಡಂತೆ ಮೊಗಂದಿರಿಪುತ್ತುಂ (ರವರ್ಮವ್ಯ. ೪-೬೬). **ಮೊಗಂದಿರುಪು** : ೧. ಜವನಧಿಕಾರಂ ಮಿಱುವ ಜವಕೆ ಮೊಗಂದಿರುಪಿ ಕೊಲ್ವ ಮೆಯ್ಸಿರಿ ನೆಲಸಿತ್ತುಪನೋದು ಗದೆಯೊಳೆಸಲ್ (ಜಗಪ. ೯-೫೫). **ಮೊಗಂದಿರುವು** : ೧. ಸಂಪಗೆಯು ಕಂಪಿಂಗೆ ಕಂಪಿಸಿ ಮಲ್ಲಿಗೆಗೊಂಡೊಲ್ಲದೆ ಮೊಗಂದಿರುವಿ ಪರಿತಂದು ಸಾದರದಿಂ ಪೂದೋಂಟದ ಪ್ರಸೂನಕುಲ ಮನಂಡಲೆದು ಬಂಡುಣ್ಬಲ್ಲಿ (೧೦ಳ. ೨-೭೦ ವ). **ಮೊಗಂದಿರುಹು** : ೨. ಮುಖವನ್ನು ಹೊರಳಿಸು: ಅಭಿಮುಖವಾಗು : ರಾಜಕಾರ್ಯಮಂ ಬೆಸವೇಳ್ವುದೆನುತೆ ಭೀಮನ ಕಡೆಗೆ ಮೊಗಂದಿರುಹಿದರಸಂಗೆ ನಳಿನಾಕ್ಷ ನಿಂತೆಂದನು (ಶ್ರೀಬಾಶ. ೨-೫೩). **ಮೊಗದಿರುಹು** : ೧. ಮಳೆಗೆ ಮೊಗದಿರುಹುವುದೆ ಬಡಬಾನಳನು (ಕುಮಾರವ್ಯಾ. ೫-೫೬); ಹೊಂದಿಕೆಯು ಹೊಲಬಲ್ಲವೀ ನುಡಿಯೆಂದು ಸತಿ ಮೊಗದಿರುಹಲೊಡನಿಂತೆಂದನಾ ಹನುಮಂತ (ತೊರರಾ. ೫-೩-೭೫). [ಮೊಗ + ತಿರಿಪು$_1$]

**ಮೊಗಂದಿರುಪು** ' ಮೊಗಂದಿರಿಪು ' ನೋ.

**ಮೊಗಂದಿರುವು** ' ಮೊಗಂದಿರಿಪು ' ನೋ.

**ಮೊಗಂದಿರುಹು** ' ಮೊಗಂದಿರಿಪು ' ನೋ.

**ಮೊಗಂದೋಱು**, ಮೊಗದೋರು, ಮೊಗದೋಱು$_1$ (ಕ್ರಿ). ಮುಖವನ್ನು ತೋರಿಸು: ಕಾಣಿಸಿಕೊಳ್ಳು; ಗೋಚರಿಸು; ಪ್ರತ್ಯಕ್ಷವಾಗು : ಏನಸ್ಸಂತಾನಮೆಂಟುಂ ಕಿಡೆ ನಿಜಗುಣಮೆಂಟುಂ ಮೊಗಂದೋಱೆ (ಶಂರಾಮಾ. ೧-೨); ಶರತ್ಕಾಲಮತಿಕ್ರಮಿಸಿ ಮೇಲೆತ್ತಿ ಬಂದು ಮೊಗಂದೋಱೆ ವರ್ಷಾಕಾಲಮಂ ಪಲಾಯನಮನೆಯ್ದಿಸುವುದುಂ (ಶಾರಕೃ. ೪-೬೪ ವ). **ಮೊಗದೋರು** : ಬಾಲಭಾಸ್ಕರನು ಮೊಗದೋರೆ ಸರಸಿಜ ಮರಳ್ದುವಾನಂದಿಪಂತೆ (ನಪಪೋ. ೧೩-೨೨); ಆಗ ಹೋದವ ತಿರುಗಿ ಈಗ ಮೊಗದೋರಿಪನು (ವಿಸೀಗೀ. ೨೬-೧೩); ಹತ್ತೂರ ಕೊಡತಿನಿ ಮೊಗದೋರು (ಲೋಕಗೀ. ೨೩೦). **ಮೊಗದೋಱು$_1$** : ಬಾ ಮಗನೆ ಮೊಗದೋಱಿಸುತ ಹಲುಬಿದನು ಕಲಿಪಾರ್ಥ (ಕುಮಾರವ್ಯಾ. ೮ ಸೂಚನೆ); ಕಾನನದೊಳಗೆ ನಂಬಿದ ನಾರಿಯನು ಬಿಸುಡುವರೆ ತನಗಿನ್ನಾರು ಗತಿ ಮೊಗದೋಱಿಸುತ ಹಲುಬಿದಳು (ಜಳಶ. ೫-೨೨). [ಮೊಗ + ತೋಱು]

**ಮೊಗಂನೋಡು** (ಕ್ರಿ). (ವಸ್ತುವಿನ ಬೆಲೆ ಇತ್ಯಾದಿಗಳ ಕಡೆ) ಗಮನಿಸು; ಲಕ್ಷಿಸು : ಬಣ್ಣವಣ್ಣಗೆಯು ಜವಳಿಗಳನೆ ಮೊಗಂನೋಡದೆ ಸೂಸಿದಾಗಳ್ (ಆದಿಪು. ೪-೩೪ ವ). [ಮೊಗ + ನೋಡು]

**ಮೊಗಂಬಡೆ** (ಕ್ರಿ). ೧. ರೂಪು ತಳೆ ; ಆಕಾರ ತಾಳು; ಮೂರ್ತಿವತ್ತಾಗು : ತುಂಬಿ ತುಳ್ಕುವ ಮೊಗದ ಮೊಗಂಬಡೆದ ಸೊಬಗು ಪದ್ಮಸದ್ಮನ ಮೊಗಸಿರಿಯನೆಡವುತೆಡಂ ಮಾಡೆ (ರಾಮಾಶ್ವ. ೧೩೯-೧೧). ೨. ನಯವಾದ ಮಾತುಗಳಿಂದ ಮನವೊಲಿಸು; ಸರಸಸಲ್ಲಾಪವಾಡು : ಅನುನಯಿಸು : " ಮೊಗಂಬಡೆ–ಅನುನಯನೇ " (ಶಮರಾ. ವ); ಕಲಭಾಷಿತಸುಧಾಜಲದಿಂ ಸರಸ್ವತಿಯ ಕಲಾವಲೇಪಮುಂ ಕರ್ಚೆ ಕಳೆವಂತೆ ಮೊಗಂಬಡೆದು (ಶಂರಾಮಾ. ೩-೯ ವ). [ಮೊಗ + ಪಡೆ$_1$]

**ಮೊಗಂಬುಗಿಸು** (ಕ್ರಿ). ಮುಖಾಮುಖಿಯಾಗಿಸು; ಸಮ್ಮುಖವಾಗಿಸು : ಅಂತಾ ದಂತಿಘಟೆಗಳನಾರೋಹಕರ್ ತೋಱಿ ಕೊಟ್ಟೊಂದೊಂದರ್ಕೆ ಮೊಗಂಬುಗಿಸಿದಾಗಳ್ (ಶಂಶಬ. ೧೧-೯೩ ವ).

[ಮೊಗಂಬುಗು (< ಮೊಗಂಬೊಗು) + – ಇಸು$_3$]

**ಮೊಗಂಬುಗು** ' ಮೊಗಂಬೊಗು ' ನೋ.

**ಮೊಗಂಬುಗುತರ್** (ಕ್ರಿ). ಮುಖಾಮುಖಿಯಾಗಿ ತಾಗು: ಎದುರಿಸು : ಅಗದೊಳಗಂ ಮೊಗಂಬುಗುವವೋಲ್ಮದದಾನೆಗಳಾನೆಯೊಳ್ಮೊಗಂಬುಗುತರೆ (ಶಂರಾಮಾ. ೧೩-೮೦). [ಮೊಗ + ಪುಗುತರ್ (< ಪೊಗುತರ್)]

**ಮೊಗಂಬೊಗು**, ಮೊಗಂಬುಗು (ಕ್ರಿ). ೧. ಮುಖಾಮುಖಿಯಾಗಿ ಮೇಲೆ ಬೀಳು : ಮೊಗಂಬೊಕ್ಕದು ಭೀಮಂ ದೇವ ದುಶ್ಶಾಸನರುಧಿರಮುಮಂ ಪೀರ್ದ ತಾಣಂ (ಗದಾಯು. ೫-೨); ಪತ್ತುವ ಲಗ್ಗೆಗೆ ಮಾರಿಯೊಳ್ ಮೊಗಂಬೊಕ್ಕವೊಲಾಗೆ ಬೆರ್ಚಿದನವಂ (ಶಂಪ್ರಕೃ. ೫-೮೦). **ಮೊಗಂಬುಗು** : ೧. ದಿಗಿಭಂ ದಿಗಿಭಕ್ಕೆ ಮೊಗಂಬುಗುವಂತಿರೆ ಸಂಚಿವಾರದಿಂ ಧನದೀಡಂ ಮಿಗಿಲುದ್ದಾನಿಯ ದಾನಂ (ಶಾಂತಿಪು. ೧-೩೦); ಅಗದೊಳಗಂ ಮೊಗಂಬುಗುವವೋಲ್ಮದದಾನೆಗಳಾನೆಯೊಳ್ಮೊಗಂಬುಗುತರೆ (ಶಂರಾಮಾ. ೧೩-೮೦). ೨. ಮುಖವನ್ನು ಮುತ್ತು,—ಕವಿ : ನಗೆಮೊಗಮಂ ಪೊದಳ್ದಲರ್ದ ತಾವರೆಯೆಂಬ ವಿಮೋಹದಿಂ ಮೊಗಂಬುಗಲೊಡಂ (ಶಂಶಬ. ೫-೧೧). ೩. ಎದುರಿಗೆ ಕಾಣಿಸಿಕೊಳ್ಳು : ದೆಸೆದೆಸೆಯೊಳಂ ತಳಪೆಳಗಾಗಿ ಪರಿತಂದು ನಾಣ್ಚಿ ಮೊಗಂಬುಗದೋರೊರ್ವರ ಪೆಱಗಡಂಗಿ ಗೆಂಟೆನೊಳೆ ಮೆಲ್ಲಮೆಲ್ಲನೆಱಗುವ ರಾಜಪುತ್ರಸಹಸ್ರಂಗಳ ಮೊಗಮಂ ನೋಡಿ (ಕಾದಂಬ. ೪೩೬). [ಮೊಗ + ಪೊಗು]

**ಮೊಗಂಮುರಿ**, ಮೊಗಮುರಿ (ಕ್ರಿ). ೧. (ನೋವು, ಬೇಸರ, ಜುಗುಪ್ಸೆಗಳಿಂದ) ಮುಖವನ್ನು ವಿಕಾರ ಮಾಡು : ಅಣಂ ಮೊಗಂಮುರಿಯುವಳ್ಕದೆ ಬೇನೆಗಳೊಳ್ ಮೊಗಂಗಳಂ ಬಿನ್ನಗೆ ಮಾಡದಿರ್ದರಳವಚ್ಚರಿಯಾಗೆ ಕೆಲರ್ ಮಹಾರಥರ್ (ಶಂಶಬ. ೧೧-೩); ಚಿಂತಿಸುತ್ತಮಿಹ ಮೊಗಂ

ಮುರಿದೀವ . . . ಗುಣಂ ಗುಣದಂಕಕಾರ್ತಿಯಾ (ಅಜಿ. ೦೨-೦೭); ಇಂತಪ್ಪವವಸಾನಮಾದುದೆಂದು ಮೊಗಂಮುರಿಯೆಯುಂ (ಶಗಶಿ. ೦೩-೭೭ ಪ); ಅಮಂಗಳವನೀಕ್ಷಿಸಿದಂತೆ ಮೊಗಂಮುರಿದು ಮಾತು ನಿಲ್ಲಿಸಿದರ್ (ಶ್ರೀಣಾಪಶ. ೨೦-೫೪೨). ೨. ಮುಖವನ್ನು ಬೇರೆಕಡೆಗೆ ತಿರುಗಿಸು; ಪರಾಙ್ಮುಖನಾಗು; ವಿಮುಖನಾಗು : ಮದ್ರರಾಜನಳಿಯನ ಪರಾಕ್ರಮಕ್ಕೊಸೆದು ಮೊಗಂಮುರಿಯದೆ ಪೆಱತುಂ ರಥ[ಮಂ ಶರಿಸಿ ಕನಲ್ದುಡರ್ದು ಕದನಕಾಗಳೆ ನೆಱೆದ] (ಶಂಶಶಾ. ೦೦-೦೦೭). ಮೊಗಮುರಿ : ೨. ಸುಯೋಧನನ ಮೊಗಮುರಿಯಲೆಚ್ಚು . . . ಪಾರ್ಥನು ಮತ್ತೆ ಸೈವರಿದು (ಶುಪ್ರಾ.ಕ. ೦೫-೨೭). [ಮೊಗ + ಮುರಿ$_1$]

**ಮೊಗಂಸಾರ್ಚು** (ಕ್ರಿ). ಮುಖವನ್ನು ಹತ್ತಿರ ತರು : ಮೊಗಂಸಾರ್ಚಿ ನಾನಾರಸಂ ಕಣ್ಗೊಳಿಪನ್ನಂ ಮೂರ್ತಿನಾರಾಯಣನ್ನಪನವಳ್ ಮೆಚ್ಚಿ ನೋಡುತ್ತಮಿರ್ದಳ್ (ಕಾದಂಶಾ. ೦೩೭). [ಮೊಗ + ಸಾರ್ಚು$_1$]

**ಮೊಗಗತ್ತಲೆ** ' ಮೊಗಗಳ್ತಲೆ ' ನೋ.

**ಮೊಗಗನ್ನಡಿ** (ನಾ). (ಆನೆ. ಕುದುರೆಗಳಿಗೆ) ಮುಖದ ಮೇಲೆ ತೊಡಿಸುವ, ಕನ್ನಡಿಗಳನ್ನು ಅಳವಡಿಸಿರುವ ಒಂದು ಬಗೆಯ ಅಲಂಕಾರ ಸಾಧನ : ಮಿಸುನಿಯ ನಿಗಳದ ಮೊಗಗನ್ನಡಿ ಕಾಂತಿವಿಸರದ ಚೆನ್ನ ಹಕ್ಕರಿಕೆ ಪೊಸಸಮಕಟ್ಟಿನ ಝಲ್ಲಿಗಳಿಂದ ರಾಜಿಸುವ ದಿವ್ಯಾಶ್ವವೃದಿದುವು (ಕಂಶಶಿ. ೨೩-೯೦). [ಮೊಗ + ಕನ್ನಡಿ$_1$]

**ಮೊಗಗಳ್ತಲೆ, ಮೊಗಗತ್ತಲೆ** (ನಾ). ಕತ್ತಲೆಯ ಮೊದಲು ; ರಾತ್ರಿಯ ಆರಂಭ ; ಪ್ರದೋಷಸಮಯ : ಪಗಲಣ್ಣನೆಯ್ದಿದನಸ್ತಗಿರಿಯ ಬಂದು ಮೊಗಗಳ್ತಲೆ ಮೊಗದೋಱೆ (ಕುಶಾಶಾಂ. ೩೩-೬೯). ಮೊಗಗತ್ತಲೆ : ಮೊಗಗತ್ತಲೆಯೊಳಿಂದುವಿನುದಯರಾಗ ಸೊಗಸಿದುದಿಂದ್ರದಿಕ್ಕನೊಳು (ಶ್ರೀಶಾಂ. ೬-೦೭) ; ಆಮೇಲೆ ಮೊಗಗತ್ತಲೆಯಾಗಲಾಗ ಕಾದಂಬರಿ ಉಪ್ಪರಿಗೆಯಿಂದಿಳಿದಳು (ಶತಶಾ. ೬೦).

[ ಮೊಗ + ಕಳ್ತಲೆ (< ಕಟ್ತಲೆ) ]

**ಮೊಗಗುಡು** ' ಮೊಗಂಗೊಡು ' ನೋ.

**ಮೊಗಗೆಡಿಸು** ' ಮೊಗಂಗಿಡಿಸು ' ನೋ.

**ಮೊಗಗೊಡು** ' ಮೊಗಂಗೊಡು ' ನೋ.

**ಮೊಗಚು** ' ಮಗುಚ್ಚು ' ನೋ.

**ಮೊಗಡು** (ನಾ). ಎತ್ತರವಾದ ಪ್ರದೇಶ ; ದಿಣ್ಣೆ : ಊರ ಮುಂದಣ ಬಸವನ ಗುಡಿಗೆ ಮೂಡಲ ಮೊಗಡಿನಲ್ಲು ಮೂಡಮುಖವಾಗಿ (ಎಕ. III. ಶಿರುಶು. ೬೬-೦೦೬೩ ; 1748). 'ಮುಗುಟ್$_2$', 'ಮೋಟೆ' ಪರಾ.

[ ದೇ.॥ ತಮಿ. ಮುಕಟು ; ಮಲ. ಮುಗಡು ; ತೆಲು. ಮೊಗಡು ]

**ಮೊಗತುತಿ** (ನಾ). ಎದುರಿಗೇ (ಅಕಾರಣವಾಗಿ) ಹೊಗಳುವುದು ; ಮುಖಸ್ತುತಿ : ಅರಸಂಗೆ ಧನಿಕರಿಗೆ ಮೊಗತುತಿಯಿ ರಸವು (ಕರುಶ್ರಾ. ೦೦-೦೩) ; ನಿಷ್ಠುರವಾದಿ ಹೇಗೆ ತಾನೇ ಮೊಗತುತಿ ಮಾಡಬಹುದು (ಶಶಶಿಶಾ. ೬೨). [ಮೊಗ + ತುತಿ]

**ಮೊಗದಿರುಹು** ' ಮೊಗಂದಿರಿಪು ' ನೋ.

**ಮೊಗದುಂಸಕ್ಕರೆ** ' ಮುಗದುಮ್ಮಿಸಕ್ಕರೆ ' ನೋ.

**ಮೊಗದುಗುಲ** (ನಾ). ಮುಖದ ಮೇಲಿನ ಮುಸುಕು ; ಅವಗುಂಠನ : ತಣ್ಗಿರಗ ಮೊಗದುಗುಲ ಕೈಪಿಡಿ ಡವಕೆ ಬೀಣೆ . . . ಕರ್ಪುರದ ನಾಳಿಗಳ ಪಿಡಿದೊಡನೆ ನಡೆವರೊಲಿದು (ಶಶ್ಯಶಾ. ೬-೭). [ಮೊಗ + ದುಗುಲ$_1$]

**ಮೊಗದುಮ್ಮಾನ** (ನಾ). ಮುಖದಲ್ಲಿ ಎದ್ದು ಕಾಣುವ ಚಿಂತೆ. — ದುಗುಡ : ಏನು ಹೇಳುವೆನವರ ರಣಸುಮ್ಮಾನವನು ನಮ್ಮ ಪರ ಮೊಗದುಮ್ಮಾನವನು (ಕುಶ್ಚಾ.ದ್ರೋ. ೦೫-೩೨). [ಮೊಗ + ದುಮ್ಮಾನ]

**ಮೊಗದೆಗೆ** (ಕ್ರಿ). ಬೇರೆಯ ಕಡೆಗೆ ಮುಖಮಾಡು.—ಮುಖವನ್ನು ತಿರುಗಿಸು : ಹೆಣ್ಣು ಕೊಡೆನೆಂದು ನಮ್ಮಯ ತಂಗಿಯಿಂದಿಟ್ಟುವುದುಚಿತವಹುದು ಎಂದು ಮೊಗದೆಗೆಯಲ್ಕವರು (ಶಾಶ್ವಶಾ. ೬೦-೦೦). [ಮೊಗ + ತೆಗೆ$_1$]

**ಮೊಗದೆರೆ** (ನಾ). ಮುಖದ ಮೇಲಿನ ಮುಸುಕು ; ಅವಗುಂಠನ : ಎಳೆವೆಂಡಿರತ್ತತ್ತು ಮೊಗದೆರೆಯ ಕೀಳ್ವರ್ (ಶಾರಶಿ. ೨೦-೩).

[ಮೊಗ + ತೆರೆ$_4$]

**ಮೊಗದೆಱೆ** (ಕ್ರಿ). ಬಾಯಿ ತೆಗೆ ; ಬಾಯಿಬಿಡು : ಮೊಗದೆಱೆದ ಹುತವಹನ [ಶಾಶಂ. ಹೊಗೆದೆಗೆದ ಹೆಬ್ಬುಲಿಯು]ವೊಲು ಝಗಝಗಿಪ ತೇಜದ . . . ಜವಗಿವಗಳ ಲೆಕ್ಕಿಸವದಟನು (ಶೂರಶಾ. ೬-೯-೭). [ಮೊಗ + ತೆಱೆ$_1$]

**ಮೊಗದೊಳೆ** (ಕ್ರಿ). ನೀರಿನಿಂದ ಮುಖದ ಮಲಿನತೆಯನ್ನು ತೊಳೆ ; ಮುಖಮಾರ್ಜನ ಮಾಡು : ಮುನ್ನೇಸಱ ಕಾಣುತ ಮೊಗದೊಳೆದು (ಕೃಶಂತ. ೦-೬೮) : ನಿದ್ರೆಯಂ ತ್ಯಜಿಸಿ ಮೊಗದೊಳೆಸು ಮುಕ್ಕುಳಿಸಿ ಕಪ್ಪುರವೀಳೆಯಂಗೊಂಡು (ಕೈಶಿಶಾ. ೬೦-೯೨). [ಮೊಗ + ತೊಳೆ$_1$]

**ಮೊಗದೋರು** ' ಮೊಗಂದೋಱು ' ನೋ.

**ಮೊಗದೋಱು$_1$** ' ಮೊಗಂದೋಱು ' ನೋ.

**ಮೊಗದೋಱು$_2$** (ನಾ). ಮುಖದಲ್ಲಿ (ಗಾಯದಿಂದ) ಉಂಟಾದ ತೂತು. — ಡೊಗರು : ಮೊಗದೋಱುಗಳ ಪೂರಾಯಘಾಯದ ಶಾಱು ಥಟ್ಟಿನ ಹೆಣನ ಮೆದೆ ಹೇರಾಳ ರಂಜಿಸಿತು (ಕುಶ್ಚಾ.ದ್ರೋ. ೦೦-೬).

[ ಮೊಗ + ದೋಱು (< ಡೊಂಗಱು) ]

**ಮೊಗನಹಱುವೆ** (ನಾ). ಒಂದು ಬಗೆಯ ಔಷಧೀಸಸ್ಯ : ನಾಂಗಲಿಕ. ಮೊಗನಹಱುವೆ . . . ಕಲಸಿ ಗುದದಲ್ಲಿ ಪೂಸೆ ಎಲ್ಲಾ ಮೂಲವ್ಯಾಧಿ ಕೆಡುಗುಂ (ಅಶ್ವಶಿ. ೦೬೭). [ ? + ಹಱುವೆ (< ಹಱುಹೆ) ]

**ಮೊಗನಾಯಕ** (ನಾ). ಸೈನ್ಯದ ಅಗ್ರನಾಯಕ ; ಸೇನಾಪತಿ : ಮರುತಸುತ . . . ಮುರಿದು ಮೊಗನಾಯಕರ ಹರಣಮಂ ಕೊಂಡು . . . ಕುಪ್ಪಳಿಸಿ ಕುಣಿದಾಡಿದಂ (ಕುರಂಗ. ೬೬-೦೨). [ಮೊಗ + ನಾಯಕ]

**ಮೊಗನೆಗಹು** (ಕ್ರಿ). ಮುಖವನ್ನು ಮೇಲಕ್ಕೆತ್ತು : ಮೊಗನೆಗಹಿ ಭೀಮನ ಮನಾಯನಾಳಿಪುದು . . . ಬಲುಕಣೆಯ ಹಿಡಿಹಿಂಗೆ ಶಾಗಿಸು ತಿರ್ದಡಾ ಮಂತಿ (ಕುಶ್ಚಾ.ದ್ರೋ. ೩-೩೭).

[ ಮೊಗ + ನೆಗಹು$_1$ (< ನೆಗಪು$_1$) ]

**ಮೊಗಪಟ** (ನಾ). ಹಡಗಿನ ಮುಂಭಾಗದ ಹಾಯಿಯ ಬಟ್ಟೆ : ಹಾಯಿಪಟ : "(ಹಡಗಿನ) ಮುಂಗ್‌ಕೂವೆಯ ಮೇಲಿನ ಮುಖ್ಯಪಟ: ಮೊಗಪಟ ಮುಂಪಟ" (Foresail. ಇಂಕಶ). [ಮೊಗ + ಪಟ]

**ಮೊಗಪಾವಡ** ' ಮೊಗಪಾವುಡ ' ನೋ.

**ಮೊಗಪು, ಮೋಪ್ಪು$_3$** (ನಾ). ೧. ಮುಂಭಾಗ ; ತುದಿ ; ಮುಖ : ಕಾಳಿಯ ಮೊಗಪಿನಲ್ಲಿ ಒಂದು ಜೀಜುಂಡೆ ಹುಟ್ಟಿ ಅದು ಅರ ಮಾತನೂ ಕೇಳಲೀಸದು (ಸಕಪ. ಕ. II. ೬೩೬-೩೩); ಹೊಂಗರಗಿಗೆಡದು ಕರ್ಪುಣಿಯ ಬಿರುಡೆಯ ಬಿಗಿದಿಟ್ಟನೆಂಬಂತೆ ಬಲ್ಮೊಲೆಯಿರಡಱ ಮೊಗಪು ತೋಱಿದುವು (ವೊ.ಇಕ. ೨೩-೨೩). ಮೋಪ್ಪು$_3$ : ೨. ಸರ, ಡಾಬು ಮುಂತಾದುವುಗಳಲ್ಲಿರುವ ಚೌಕಾಕೃತಿಯ ಬಿಲ್ಲೆ : ಈಗಿನ ಕಾಲದಲ್ಲಿ ಮೋಪ್ಪು ಇರುವ ಸರಗಳನ್ನು ಹೆಚ್ಚಾಗಿ ಯಾರೂ ಹಾಕುವುದಿಲ್ಲ (ಕೂ).

[ದೇ.॥ ತಮಿ. ಮಲ. ಮುಕಪ್ಪು ; ತುಳು. ತೆಲು. ಮೊಗಪು]

**ಮೊಗಪೆ** (ನಾ). ೧. (ದ್ರವಪದಾರ್ಥಗಳನ್ನು ಮೊಗೆಯಲು ಬಳಸುವ) ಸಣ್ಣ ಪಾತ್ರೆ : ಮೊಗೆ : ಪ್ರತಿದಿನಕ್ಕೊಂದು ಮಲ್ಲಲ ಕೊಟುಮನೋದು ಮೊಗಪೆ ನೀರುಮಂ ನೆಲಮನೆಯೊಳಗಣ್ಗೆ ನೀಡಿದೊಡ ನಿಱುರಂ ಪಱ್ಚುಗೊಂಡುಣ್ಬರ್ (ವಶ್ಯಾ.ಶಾ. ೦೬೨-೦೦) : ಈ ಮಳಸಂಸ್ಕೃತಿ ಯೆಂಬುದೊಂದು ಜಾಟಣದೊಳಗಮ್ಮ ನೀಂ ಮೊಗಪೆಯಾಗದೆ ತಾಳ್ದಪ

ವರ್ಗವರ್ಗವಾಂ (ಆದಿಪು. ೩-೭೦) : ಕುಂಬಾರನ ಚಕ್ರದಂತೆ ಮಕ್ಕಳಿಟ್ಟ ಬವರಿಯಂತೆ ಊಟಣದ ಮೊಗವೆಯಂತೆ (ಧರ್ಮಾಮೃ. ೯-೨೩). ೨. ಒಂದು ಊರಿನ ಹೆಸರು : ಬೂತರಸ ತೊಱೆಕಾರಟ್ಟಿಯಿಂ ಪಡಿಯ ಳೆಯು ನೆಲೆಗೂಱು ಮೊಗವೆ ಅಳಿಯುವು ಬಿಟ್ಟೆ (ಎಕ. IV, ಗುಂಡ್ಲು ಪೇ. ೯೪-೩ :890). [< ಮೊಗೆ₂]

**ಮೊಗಬೀಣೆ**, ಮೊಗವೀಣೆ (ನಾ). ಬಾಯಿಂದ ಊದುವ (ಕೊಳಲಿನಂತಹ) ಒಂದು ಬಗೆಯ ವಾದ್ಯ ; ಮುಖವೀಣೆ : ದೀವಪಕ್ಕಿಗಳಿಂಚರದ ಕೊಳಲ್. ಮೊಗಬೀಣೆಗಳಿಂದರೆವಱದೂರ್ವಂದಿಗಳ್ ಚೀಱುವ ದನಿಯ ಬುರುಗುಗಳಿಂ (ಚಳವಂ. ೬-೩). **ಮೊಗವೀಣೆ** : ವೇಣುವ ನುಡಿಯಿಸುತ ಕಿನ್ನರಿಯ ಕೌಶಲವಿಡಿದು ನಾದಿಸುತೆಸೆವ ಮೊಗವೀಣೆಯನು ಕೇಳಿಸುತ . . . ಸತಿಯರೆಯ್ದಿದರು (ಸನತ್ಕು. ೦೩-೫೯).
[< ಸಂ. ಮುಖವೀಣಾ]

**ಮೊಗಬೀರಚೆಟ್ಟು** (ನಾ). ಒಂದು ಬಗೆಯ ಸಸ್ಯ : ಗಂಡುಬೀರನ ಗಿಡ. ಗಂಡುಕರೀತುಂಬೆ, ಮೊಗಬೀರಚೆಟ್ಟು (ವೃ ಶಿಗ. ೭-೧೦೭).
[ ← ತೆಲು. ಮೊಗಬೀಱಚೆಟ್ಟು ]

**ಮೊಗಮಂಟಪ** (ನಾ). ದೇವಾಲಯ, ಅರಮನೆ ಮುಂತಾದುವುಗಳ ಮುಂಭಾಗದಲ್ಲಿರುವ ಮಂಟಪ ,– ಹಜಾರ : ಮುಖಮಂಟಪ : ಮಣಿಸತ್ತಿಗೆಯ ಮೊಗಮಂಟಪದ ಬಣ್ಣವಟ್ಟಿಗೆಯ . . . ಮದನಗೃಯ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡಮಾಗಿ ರಂಜಿಸುಂ (ರಾಮಾಶ್ವ. ೫೪-೨೪). [ < ಸಂ. ಮುಖಮಂಡಪ]

**ಮೊಗಮಜ್ಜನ** (ನಾ). ನೀರಿನಿಂದ ಮುಖವನ್ನು ತೊಳೆಯುವುದು ; ಮುಖಮಾರ್ಜನ : ಮೊಗಮಜ್ಜನಮಂ ನೆಱೆ ಮಾಡಿ ದೇವಿಯರ್ ನಡೆಗೊಳಲಿರ್ದಪರ್ ಮನೆಗೆ (ಶಾಂತೀಪು. ೭೭೨); ಪಗಲಾಣ್ಮನ ಕಾಂತಿ ಪಸರಿಸಲಿರ್ದರು ಮೊಗಮಜ್ಜನವ ಮಾಡಿದರು (ವೀರೇಶ. ೩೦-೩).
[ < ಸಂ. ಮುಖಮಾರ್ಜನ]

**ಮೊಗಮರಸು** (ಕ್ರಿ). ಮುಖವನ್ನು ಮರೆಮಾಡಿಕೊಳ್ಳು; ಮುಖವನ್ನು ಮುಚ್ಚಿಕೊಳ್ಳು : ಚಿತೆಯಿಂದಿನನಂದು ಮುಗಿಲ ಮುಸುಕಂ ತೊಟ್ಟು ಮೊಗಮರಸಿ (ಗೊಮ್ಮಟ. ೧-೦೨). [ಮೊಗ+ಮರಸು₁ (< ಮಱೆಯಿಸು)]

**ಮೊಗಮರೆ** (ನಾ). ಗುರುತು ಸಿಕ್ಕದಂತೆ ಮುಖವನ್ನು ಮರೆಸುವ ಸಾಧನ : ಏನೋ ಒಂದು ಧೂರ್ತತೆಯ ಮೊಗಮರೆಯ ಗುರುತೋ (ಕಾದಂಬ. ೩). [ಮೊಗ + ಮರೆ₂ ( <ಮಱೆ₂ ) ]

**ಮೊಗಮಿಕ್ಕು**, ಮೊಗವಿಕ್ಕು (ಕ್ರಿ). ೧. ಎದುರಾಗು; ಅಭಿಮುಖವಾಗು: ರಾಘವನ ಜನ್ನದ ಬಣ್ಣಗುದುರೆ ತೆಂಕಲ್ಗೆ ಮೊಗಮಿಕ್ಕಿ ನಡೆಯುತು ಮಿರ್ಪುದುಂ (ರಾಮಾಶ್ವ. ೯೩-೦೯). ೨. ಎದುರುಬೀಳು ; ಎದುರಿಸು : ಪ್ರತಿಭಟಿಸು : ಅಂತು ದಂತಿಘಟೆ ದಂತಿಘಟೆಯೊಳಾಂತು ಮೊಗಮಿಕ್ಕೆಯುಂ (ಶಂರಾಮಾ. ೦೩-೭೭ ವ). ೩. ಮುಖವಿಡು; ಮುಖಹಾಕು : ನಗೆ ಮೊಗದೊಳ್ ತೆಱೆಂಬೊಳೆವ ನುಣ್ದುಟಿಯೊಳ್ ಮೊಗಮಿಕ್ಕಿ . . . ಕಾಲುಗುರ್ಗಳೊಳ್ಪಿದೆ ಮಾರ್ಪೊಳೆದು (ಕಬ್ಬಿಗ. ೩೩೦); ಪುತ್ತಿನೆಡೆಯೊಳ್ ಮೊಗಮಿಕ್ಕು ತಿಱುಂಪೆಗೊಂದು ಮತ್ತೆಡೆವಿಡದೂದುತಿರ್ಪನಮದೊಂದು ಮಹೋರಗಮಾನನಾಗ್ರಮಂ ಓಡಿವಡರ್ದಲ್ಲಿ ನೇಲುತಿರೆ ಸುಂಡಿಲವೋಲ್ . . . ಎಸೆದತ್ತು ಬಳ್ಳಿರಡಿ ಕಾನನದೊಳ್ ಕರಿಪೋತಮಂತೆವೋಲ್ (ರಾಜಶೇ. ೩-೭೯). ೪. ತೊಡಗು: ಎಡೆಯಱದು ತೊಳಗುವಂತಿರೆ ಸಿ [ ಸ ] ಡಿಲ್ವು ಪೊ [ ಪೋ ] ಯ್ತುಟ್ಟುದಾಗಳಂಗಜಕಲೆಯೊಳ್ ನಡೆ ಮೊಗಮಿಕ್ಕಿ ಲಯಂಗಿಡದೊಡನುಲಿದುವು ಬೆರಲ ಕೊರಲ ನಾಲಗೆಯುಲಿಗಳ್ (ಕಾವ್ಯಸಾ. ೭೩೬ ಶೂದ್ರಕ). **ಮೊಗವಿಕ್ಕು**: ೫. ಮುಖವನ್ನು ತಿರುಗಿಸು,–ಹೊರಳಿಸು: ಮೊಗವಿಕ್ಕಿದತ್ತಲು ಮೊಱೆವ ಹೆಣಮಯುಮೇನನುಸುರುವೆನು (ಕುಮಾರರಾ. ೦೭-೨೭); ಕೈ ಮಾಡಿದತ್ತಲು ಕರುಳ ಮಯ ಮೊಗವಿಕ್ಕಿದತ್ತಲು ಮೊಱೆವ ಹೆಣನ ಮಯ (ಚೇಮಂತ. ೪-೯೪). [ ಮೊಗ + ಇಕ್ಕು]

**ಮೊಗಮಿಡು**. ಮೊಗವಿಡು (ಕ್ರಿ). = ಮೊಗಮಿಕ್ಕು ೩: ಕುರಂಗಸಂಕುಳ ಘಿಲ್ಲರ ಬಿಲ್ಲ ಮೇಲೆ ಮೊಗಮಿಟ್ಟು . . . ನೋಡುತಿರ್ಪುವು ನಗೇಂದ್ರ ಮುನೀಂದ್ರರ ಶಾಂತಮೂರ್ತಿಯಂ (ಗಿರಿಜಾ. ೦-೭೯); ಗರುಡೋದ್ಗಾರದ ಪಚ್ಚೆಯಕಿರಣದೊಳಿಳ್ವುಲ್ಲ ಶಂಕೆಯಿಂ ಸ್ಫಟಿಕಾಂಶೂತ್ಕರದೊಳ್ ಜಳಶಂಕೆಯಿನಾದರದಿಂ ಮೊಗಮಿಡುವವಲ್ಲಿ ಮೃಗಶಾಬಂಗಳ್ (ಪಾರಶ್ವ. ೧-೦೭೦); ಅಧರದಿನದಂ ಬೆರಸುವಂತೆ ಮೊಗಮಿಟ್ಟು ಪೊಂಬಟ್ಟಲೊಳ್ಸವಿದು ಮಿಕ್ಕಮಧುವಂ (ಕೃಷ್ಣ ಬಾ. ೦೩-೪೩). **ಮೊಗವಿಡು**: ಅಧ್ವಶ್ರಮದ ಘಗೆ ಪರಿಹರಿಸೆ ನೀರೊಳು ಮೊಗಿಸಿದನು ಹರಿ ಹಯಚತುಷ್ಟಯವ ಸರಸಿಯಲಿ ಮೊಗವಿಟ್ಟು. ಮೊಗೆದವು ವರಜಲವನು (ಕುಮಾರರಾ. ೧೦-೩೪); ಅಂಬುರುಹಾನನದೊಳ್ಮೊಗವಿಟ್ಟು ತಿಘರದಿ ನವೀನಲತಾಂಗಮನಮರ್ದಪ್ಪಿ (ಜಯಶಾ. ೪-೪೨): ನೀಱಿನ ಮೊಗದೊಳು ಮೊಗವಿಟ್ಟು ಮುಂಡಾಡಿ (ಶಂನವಿ. ೯-೦೦೯).
[ಮೊಗ + ಇಡು₁]

**ಮೊಗಮಿಱು** (ಕ್ರಿ). ಮುಖವನ್ನು ತಿವಿ,–ಚುಚ್ಚು: ಸೊಪ್ಪು ಸೊವಡಾಗದೆ ಸಟಿಸಟ್ಟಿಪ್ಪಡೆ ಮೊಗಮಿಱಿದು ಕಾದರ್ ಚಪ್ಪಲರ್ವಿನೆಗಂ ಸಿಪ್ಪಿಟ್ಟು ಕಲೆದು ಕೊಂಡುವು ಸಪ್ಪದಮುಪ್ಪಳದಿನೊಱೆವ ನಱುಮಂಡುಗಳಂ (ಲೀಲಾವ. ೯-೬೭).. [ಮೊಗ + ಇಱು₁]

**ಮೊಗಮಿೞ** (ಕ್ರಿ). ಮುಖವನ್ನು ತಿರುಗಿಸು ; ಅಭಿಮುಖವಾಗು ದಶರಥನೃಪಂ ಮುನೀಶ್ವರರಿರ್ದಾ ದೆಸೆಗೆ ಮೊಗಮಿತ್ತು ತನ್ನಿರ್ದ ಸಿಂಹವಿಷ್ಟರದಿನೆಟ್ಟು ವಿನಮಿತನಾದಂ (ಶಂರಾಮಾ. ೬-೨೭). [ಮೊಗ + ಈ₂]

**ಮೊಗಮೀಸೆ** (ನಾ). (ಹೊಸಹರೆಯದ ಗುರುತಾಗಿ) ಮುಖದ ಮೇಲೆ ಮೂಡುವ ಮೀಸೆ : ಮೊಗಮೀಸೆ ಬಾರದಿರ್ದುಂ ಸೊಗಯಿಪ ತನ್ನನಿಕುಮಾರವದನಾಬ್ಜಂ ದಿಟ್ಟಿಗೆ ಚೆಲ್ವುವೆತ್ತು ಮಱದುಂಬಿಗಳೆಱಗದ ಸಸಕಮಲಮಂ ನೆನೆಯಿಸುಗುಂ (ಶಾಂತೀಪು. ೭೩೪). [ಮೊಗ + ಮೀಸೆ]

**ಮೊಗಮುಟ್ಟು** (ನಾ). (ಆನೆ, ಕುದುರೆ ಮುಂತಾದುವುಗಳ) ಮುಖಕ್ಕೆ ತೊಡಿಸುವ ಒಂದು ಬಗೆಯ ಅಲಂಕಾರಸಾಧನ: ಮೊಗಮುಟ್ಟನಾಂತ ಮೊಗಮಾಗಿರೆ ತಾರ್ಕ್ಷ್ಯನನೇಱುವಂ ಕದಕ್ಕದಿಸೆ ನಿರರ್ಗಳಂ ಪೊಳೆದು ಪಾಱುವಿನಂ ವಸುದೇವವಲ್ಲಭಂ (?) (ಅರ್ಜನೇ. ೪-೦೩೪); ಮಿಸುನಿಯ ಟಂಕೆ ಸೇರಿದ ಮೊಗಮುಟ್ಟಿನ ಮಿಸಿಕಿಯನಾ ವಾಹಕರು ಒಸೆದು ಸೇರಿಸಿದರು . . . ಆ ಜಾತಿತುರಗಕೆ (ಕುರಾಶಾ. ೯-೬೭) ; ಮೊಗಮುಟ್ಟು ಮುಂತಾದ ಸಂಜೋಗಕಿಕ್ಕಿರ್ದ ಕೇಗೆಗಳೊಳೆಡೆವಿಡದೆ ಕೀಲಿಸಿದ ಮುಕ್ಕಣ್ಣರುದ್ರಾಕ್ಷಿಯಿಂ . . . ರಾಜಾಶ್ವವಾಶೀತಿಸಾಹಸ್ರವಿಕ್ಕಿಲದ ಹೇಮಾರಮಂಗಳಿಂದಂದು ಗಗನಕ್ಕೆ ಕಾಲಿಡುತಿರ್ದವು (ಜೀರವು. ೦೦-೪೩).
[ಮೊಗ + ಮುಟ್ಟು₂. / ತೆಲು. ಮೊಗಮುಟ್ಟು]

**ಮೊಗಮುರಿ** ' ಮೊಗಂಮುರಿ ' ನೋ.

**ಮೊಗಮೋಟ** (ನಾ). (ಆಲಂ) ಭಂಗಿತನಾದವನು ; ಅವಮಾನಗೊಂಡವನು : ಮರುಳಾಗಿ ಮಂದಮತಿಯಾಗಿ . . . ಮೊಗಮೋಟ [ಪಾಠಾಂ. ಮಟ್ಟ]ನಾಗಿ ಎಂದುವರೆ ಕಾಡಿದವೆ ತಂದೆ (ಸೋಮಶ. ೩-೭೭).
[ಮೊಗ + ಮೋಟ₂]

**ಮೊಗರಂಬ**, ಮುಖರಂಬ, ಮೊಕರಂಬ, ಮೊಕರಂಬೆ (ನಾ). ಆನೆ, ಕುದುರೆ ಮುಂತಾದುವುಗಳ ಮುಖಕ್ಕೆ ಹಾಕುವ ಒಂದು ಬಗೆಯ ಅಲಂಕಾರದ ಸಾಧನ : ಭಾಳದ ಚಂದ್ರದ ಚಿತ್ರದ ಮೊಗರಂಬದ ಕೈದಾಳಿನ ಕಾಲ್ಗಾಪಿಂ ಹಡೆಯಿಂ ಪಣ್ಣಿದ ಕರಿಘಟೆ ನೆರೆದುವು ಬಲದೊಳಗೆ (ವೀರೇಶ. ೨-೨೮); ರನ್ನದ ಮೊಗರಂಬಂ ಪಡೆಯನ್ನೆಟ್ಟನೆ ಪೋಲೆ (ಧರ್ಮಾಮೃ. ೪-೦೯); ಇಳುಹಿದನು ಬಲುಗುಳವ ಬಿಂಡಿಸಿ ಕಳಚಿದನು ಮೊಗರಂಬವನು

(ಶಬ್ದಮಣಿ. ೩-೫೨); ಮೊಗರಂಬ ಲೋಹಪಕ್ಕರಿಕೆಯು ಹಯಂಗಳು . . . ಬಂದುವು (ನಾಗಕು. ೧೪-೬೯). **ಮುಖರಂಬ:** ಬಂದ ಬೇಗದಿ ಹರನ ವಾಹನ ಬಸವಣ್ಣ ಚಿನ್ನದ ಹಕ್ಕರಿಕೆಯು ಮುಖರಂಬವು . . . ಸರಗೆಜ್ಜೆ ಉಲಿಯಲು ಚೆನ್ನಮಾದೇಶನೋಲಗಕೆ (ಪಾರ್ವತೀಶಾಂ. ೨-೧೪೩). **ಮೊಕರಂಬ :** ರಂಗಾನ ತೇಜೀಗೆ ಹೊಂಬಾಳೆವಲ್ಯಾಣ ದುಂಡುಮಲ್ಲೀಗೆ ಮೊಕರಂಬ (ಹಳ್ಳಿ.ಪ. ೩೨): ಮಾನವ . . . ಮೊಕರಂಬಗಳನ್ನು ಹಾಕಿ ಹೋರಿಗಳ ಬೆಡಗನ್ನು ನೋಡುತ್ತಾನೆ (ಕಬಕೋ. I. ೬೨೩). **ಮೊಕರಂಬೆ :** ಸಾವಿರ ಎತ್ತಿನ ಮುಂದೆ ಹೋಗೋದು ನಮ್ಮೆತ್ತು ಪಾದಕ್ಕೆ ಜಂಗು ಮೊಕರಂಬೆ (ಹಳ್ಳಿಹಾ. ೩೯); ಗಾಣಿಗರ ಕುಂಟೆತ್ತಿಗೆ ಯಾಕೆ ಮೊಕರಂಬೆ (ಕಜನಾ. ೧೩). [?]

**ಮೊಗರಸ** (ನಾ). ಮುಖದ ಕಾಂತಿ. – ತೇಜಸ್ಸು : ಘುಗುಘುಗನುರ್ಚಿ ಪಾಯ್ದು ಸಲೆ ದೇಹರಸಂ ಬಿಡುತೋಡಿತೆಲ್ಲಿಯುಂ ಮೊಗರಸಮೋಡಿತಿಲ್ಲ (ಸುಕುಮಾ. ೧೨-೯೦) ; ವೀರರಸ ಬಿಡದೊಸರ್ವ ಮೊಗರಸದ ಸ್ಮರವಿಕಾರದ ಮನದ ನೋಟದ ಗರುವಿಕೆಯುಲೀ ಮಾತ ನುಡಿದನು (ತೊರವೆ. ೩-೯-೩೬): ಬಿಡದೆಸೆದವು ವೀರಭಟರ ತಲೆಗಳಾ ಎಡೆಯೊಳು ಮೊಗರಸದಿಂದ (ಶಬರಶಾಂ. ೩೬-೬೦). [< ಸಂ. ಮುಖರಸ]

**ಮೊಗರಾಗ** (ನಾ). ಮುಖದ ಬಣ್ಣ,– ರಂಗು : ವನಜಮುಖಿ ಪಿರಿದು ಮನುರಾಗದಿಂದಡಿಗಡಿಗೆ ಸೊಗಯಿಸಿದಳಾಗ ಮೊಗರಾಗದಿಂ (ಅಜಿತ. ೬-೨೬ ಠಗೆ೪) ; ಬೇಗು ಜಿನಚಂದ್ರನ ಮೊಗರಾಗಂ ಬೇಸಗೆಯ ಬಿಸಿಲೊಳಟಿದ ಹರಿದ್ರಾರಾಗದ ತೆಜದಿಂ ಕಂದಿ ಕುಂದಿದಾಗಳ್ (ಶಾಂತಿಪು. ೬-೯೦) ; ಗತದೋಷಗೆ ಕೃತದೋಷಗೆ ಹಿತಹಿತಮಾಟ್ಟಲ್ಲಿ ಸರಿಯೆ ಮೊಗರಾಗಂ ಭೂಪತಿಗೇತನೆ ಪಾಲ್ ದೋಷೋದ್ಧತರಂ ಕೊಲ್ವಲ್ಲಿ ತನ್ನ ಮೆಯ್ಗಂದಿ ದುದೇ (ಕಾವ್ಯಸಾ. ೯೨೧). [<ಸಂ. ಮುಖರಾಗ]

**ಮೊಗರಾಗಂಗಿಡು** (ಕ್ರಿ). ಮುಖದ ಬಣ್ಣವು ಕೆಡು,– ಕಾಂತಿಹೀನವಾಗು : ಘನಸಮಯಮತಿಕ್ರಮಿಸೆ . . . ಗಿರಿಮಲ್ಲಿಗೆ ಬೀತು ಬಿನ್ನನಾಗೆಯುಂ ಕಡವು ಮೊಗರಾಗಂಗಿಡೆಯುಂ (ಶಂರಾವಿಜ. ೬-೧೬೩ ವ).

[ಮೊಗರಾಗ + ಕಿಡು (< ಕಡು$_1$)]

**ಮೊಗರು$_1$** (ನಾ). ೧. ಎಳೆಗಾಯಿ ; ಮಿಡಿ ; ಹೀಚು : ಕಲ್ಪಲತೆಯ ದಾಂಗುಡಿಯ ಮೊಗರಂತೆಸೆವ ನಾಸಾವಂಶಮುಮಂ (ಪಶುಪ. ೬೮-೧೯) ; ತಳಿರಿಂದ ಮೊಗರಿಂದ ಕಾಯಿ ಪಣ್ಣಿಂದ ಚೆಲುವೆಸೆವ ಪುಷ್ಪಗಂಧದ ಪರಿಮಳಗಳಿಂದ ಪುಷ್ಪದಿಂದಲಿ ಶಿವನ ಪೂಜಿಸುವ ನಾರಿ (೭ರಲೀ. ೨-೧೪). (ಗು). ೨. ಎಳೆಯದಾದ : ಹೀಚಾದ : ಆ ಹುಡುಗಿ ಎಳೆಮೊಗರು ಬದನೇಕಾಯಿ ಕೊಂಡುಕೊಳ್ಳುತ್ತ ಇದ್ದಳು (ಹೊಸತ್ತ. ೧೬೩). [ದೇ.॥ ತುಳು. ಮುಗುರು]

**ಮೊಗರು$_2$** (ನಾ). ಒಂದು ಬಗೆಯ ಭೂಮಿ (?) : ಬಿಜಮೊಗರಿಂ ವೂ ೩೧ ಕಾಗ ೧೮೨ (ಶಾಇ. ೧೯೨೯, ಅಡಂಬು. ೯೯೬-೨೩; 1310); ಭೂಮಿಯಲ್ಲಿ ನೀರು ಜಾಸ್ತಿ ನಿಂತ ಮೊಗರುಭೂಮಿ (ಕೃಪಾಸಿ. ೧೨೬).

[?·/ ತುಳು. ಮೊಗರ್ = ಮರಳಿನಿಂದ ಕೂಡಿದ]

**ಮೊಗಲ, ಮೊಘಲ್** (ನಾ). ೧. ಒಂದು ಜನಾಂಗದ ಹೆಸರು : ಮಧ್ಯ ಏಷ್ಯಾದಿಂದ ಭಾರತಕ್ಕೆ ಬಂದು ನೆಲಸಿದ ಒಂದು ಮುಸಲ್ಮಾನ್ ಪಂಗಡ : ಕಾಂಭೋಜ ಕೊಂಕಣ ಮೊಗಲ ದ್ರಾವಿಡ ಗೌಡ ಗುರ್ಜರ . . . ಮಹಾರಾಷ್ಟ್ರಗಳ ನೃಪರೇಳ್ತಂದರು (ಮರೇಪು. ೪-೧೪) : ಈ ಕುಪಟೂರ ಸೀಮೆಗೆ ಮೊಗಲರ ಬಗೆ ಹಣ (ಎಕ. VIII, ಸೊರಬ. ೨೬೬-೦೪ ; 1629 ,); ಅರಬರು, ಬೆಲುಚಿಯರು, ಚೀನೀಯರು, ಮೊಗಲರು (ತುಕಾರಾ. ೦೬೪). **ಮೊಘಲ್:** (ಗು). ೨. ಮೊಗಲರಿಗೆ ಸಂಬಂಧಿಸಿದ: ಮೊಘಲ್ವಾಸ್ತುಶಿಲ್ಪವು ಭಾರತೀಯವಾಸ್ತುಶಿಲ್ಪದಲ್ಲಿ ಮುಖ್ಯವಾದದ್ದು (ಶಾರದ. ೩೦೯)

[←ಪಾರ. ಮುಘೋಲ್; ಹಿಂ. ಮುಗಲ್ ; ಮರಾ. ಮೊಗಲ್. ಮೋಗಲ್]

**ಮೊಗಲಾಯ್**, ಮೊಗಲಾಯಿ (ಗು). ೧. ಹಳೆಯ ಹೈದರಾಬಾದಿಗೆ ಸೇರಿದ. ೨. ಬಹಳ ಹಳೆಯದಾದ. (ನಾ). ೩. ಮೊಗಲರಿಗೆ ಸಂಬಂಧಪಟ್ಟದು : ಮೊಗಲಾಯ್‌ಸಾಮ್ರಾಜ್ಯದ ಪತನಕ್ಕೆ ಅವರ ದರ್ಪ ಕಾರಣವೆನ್ನುತ್ತಾರೆ (ರಜಂ). **ಮೊಗಲಾಯಿ :** ೩. ಆ ಕಾಲದಲ್ಲಿ ಮೊಗಲಾಯಿ ಚಕ್ರವರ್ತಿಯ ಪ್ರಭುತ್ವವು ಹಿಂದುಸ್ಥಾನದ ಅನೇಕ ಪ್ರದೇಶಗಳಲ್ಲಿ ಹಬ್ಬಿದ್ದಿತು (ಹಿಂಕಿರು. ೯೩).

**ಮೊಗಲಾಯ್‌ದೌಲತ್ತು** = (ಆಲು) ಸರ್ವಾಧಿಕಾರದ ದರ್ಪ.– ಠೀವಿ : ಆಕೆಯ ಮೇಲೆ ಮೊಗಲಾಯ್‌ದೌಲತ್ತು ನಡೆಸಿದೆಯಲ್ಲ ! (ಮಹಾಗ. ೮೬).

[← ಹಿಂ. ಮುಗಲಈ. ಮುಗಲಾಈ ; ಮರಾ. ಮೋಗಲಾಈ ]

**ಮೊಗಲಾಯಿ** 'ಮೊಗಲಾಯ್' ನೋ.

**ಮೊಗಲಿಂಗಮರ** (ನಾ). ಒಂದು ಬಗೆಯ ಸಸ್ಯ : ಮೊಗಲಿಂಗಮರ. ಕಲ್ಗೊಂಟೆ. ಕಲಗಂಟೆ, ಗಂಟೆ (ವ್ಯಶಿಗ. ೬೮-೦೩೯೬).

[ಮೊಗಲಿಂಗ? + ಮರ$_1$./ತೆಲು. ಮೊಗಲಿಂಗ]

**ಮೊಗಲೂರ್** (ನಾ). ಒಂದು ಊರಿನ ಹೆಸರು : P ಮುತ್ತಗಿ ಅಥವಾ ಮುಳ್ತಗಿ ಎಂಬ ಗ್ರಾಮವಿರುವ ಈಗಿನ ಬಳ್ಳಾರಿಜಿಲ್ಲೆ : ಮೊಗಲೂರ್ವಿಷಯೇ ಕಿಜುಪಾಸಾಣನಾಮಧೇಯಗ್ರಾಮಸ್ಯ ಪೂರ್ವ್ವದಿಗ್ಭಾಗೆ ಮುಟ್ಟಗಿನಾಮಧೇಯ ಪ[ಲ್ಲೀ]ಮ್ಮಟ್ಯಾಸಹಿತಾಂ . . . ಸರ್ವ್ವಪರಿಹೃತಪರಿಹಾರಂಸಂಪ್ರ[ದತ್ತ][ವಾನ್] (ಎಇ. VIII. ೦೪೯-೬; ೯ನೆಯ ೩೩). [ ? + ಊರ್ ]

**ಮೊಗವಚ್ಚ** (ನಾ). ಮುಖದಲ್ಲಿ ಧರಿಸುವ ಓಲೆ, ಮೂಗುಬಟ್ಟು ಮುಂತಾದ ಒಡವೆ : ನಿಜದಿಗ್ವಿಜಯೋದ್ಗತಿವಿಕ್ರಮಪ್ರಭಾವಂ ತನಗೆಂಪು ಸೊಂಪೆಸೆವ ಸೆಂದುರದಂಗವಾದಾಗೆ ನೋಡ ಭೂಕಾಂತೆಗೆ ಮೆಚ್ಚುವೆತ್ತ ಮೊಗವಚ್ಚಮನಾಗಿಸಿದಾ ಚಳುಕ್ಯರೋಳ್ (ಶಾಇ. XVIII, ೨೯೬-೧೨;1188); ನಾಗಾರಿ ಧಮ್ಮಿಲ್ಲ ನಾಗಾರಿ ಮೊಗವಚ್ಚ . . . ನಾಗಾರಿ ಪಗೆಯಂತಿರೊಪ್ಪೆ ಕುಚಕುಟ್ಮಳಂ . . . ನಾಗಮೋಹಿನಿಯೆಸೆದಳು (ರಂಗಪ. ೨೫-೩೯).

[ ಮೊಗ + ವಚ್ಚ$_2$ ]

**ಮೊಗವಟ್ಟ** (ನಾ). ಆನೆ, ಕುದುರೆ ಮುಂತಾದ ಪ್ರಾಣಿಗಳ ಮುಖಕ್ಕೆ ಹಾಕುವ ಒಂದು ಬಗೆಯ ಅಲಂಕಾರಸಾಧನ : "ಮೊಗವಡಮಶ್ವೇಭಂಗಳ ಮೊಗವಟ್ಟಂ" (ಕರ್ಣಾಟ. ೩೯). 'ಮುಖಪಟ್ಟೆ'. 'ಮೊಗವಡ' ಪರಾ. [ < ಸಂ. ಮುಖಪಟ್ಟ ]

**ಮೊಗವಟ್ಟವ** (ನಾ). ಸಮ್ಮುಖ; ಎದುರು : ಶ್ರೀಪೃಥುವಿಗಂಗನ ಸೂಳೆ ಬೀರಕ್ಕನ ಮಗಂ ಎಜಿಕಳಿಂಗಂ ಪೃಥುವಿಗಂಗ ಮೊಗವಟ್ಟವದೊಳೆ ತಲೆಗಳಿಯಿಸಿ ಸತ್ತಂ (ವ್ಯಅ. ೦೯೪೪, ೦೦-೨ ; ಸು. ೯ನೆಯ ೮೩).

[ ಮೊಗ + ? ]

**ಮೊಗವಡ**, ಮುಕಾಡು, ಮುಖವಾಡ, ಮುಖಾಡ. ಮೊಕವಾಡ. ಮೊಗವಾಡ. ಮೊಗಾರ (ನಾ). ೧. ಮೇಲುಮುಸುಕು; ಅವಗುಂಠನ: ಮೊಗವಡಂಗವಿದಿರ್ದ ಕೂಸು ಭಟ್ಟಮಿತ್ರಂಗೆ ಕುಡಿವೆಂದು ಕೀಜು ಚಲಾತ ಪುತ್ರಂ ಬೇಡಿದೊಡಂ ಕುಡದಿರ್ದೊಡೆ (ವಡ್ಡಾರಾ. ೦೬೬-೩). ೨. ಆನೆ, ಕುದುರೆ. ಎತ್ತು ಮೊದಲಾದುವುಗಳ ಮುಖಕ್ಕೆ ಹಾಕುವ ಒಂದು ಬಗೆಯ ಅಲಂಕಾರಸಾಧನ: ಇಕ್ಕಿದ ಲೋಹವಕ್ಕರಿಕೆಗಳುಮುರ್ಚಿದ ಮೊಗವಡಂಗಳುಂ . . . ಬೆರಸೆಱಂಕೆವೆರಸಿದ ಕುಲಗಿರಿಗಳೆ ತಳರ್ವಂತೆ ತಳರ್ವ ಮದಾಂಧಗಂಧಸಿಂಧುರಂಗಳುಮಂ (ಶಂಕಥಾ. ೦೦-೫೦ ವ): ಮದನಮದ ಗಜಕ್ಕೆ ಪಿಡಿದ ಮೊಗವಡಮೆನಿಸಿ (ವರ್ಧಕ. ೬-೦೨ ವ); ಪೊರ್ಕುಳ ಗಂಟೆಯ ಮೋಹಿಸುವ ಮೊಗವಡದ ರೂಹಿಸುವ ನೊಸಲ ಕನ್ನಡಿಯ ಕಡುಚೆಲ್ವ ಕೊಡಂಕೆಯ ಲಂಬಿಸುವ ಚಮರದ ಚಾರುತರಭೂಷಣಂ ಭೀಷಣಮಾಗ

(೧೦೪·೬–೫೫ ವ). ೩. (ಆಲಂ) ಮುಖಭಾವ; ಮುಖಮುದ್ರೆ: ಭೂಪಾಲಕನ ಮೊಗವಡದ ದುಗುಡವನುಗಿವೆ ನಾನೆಂದ (ಕುವ್ಯಾಕ. ೨೦–೨). ಮುಕಾಡು: ೪. ಪ್ರಾಣಿಗಳ ಬಾಯಿಗೆ ಕಟ್ಟುವ (ಹಗ್ಗದ) ಕುಕ್ಕೆ : ಒಂದು ಗಟ್ಟಿಯಾದ ಮುಕಾಡು ಕೊಡುವೆ; ಬಿಗಿದುಕೊಂಡು ಹೋಗು (ಹೊಂಪು. ೩೨). ಮುಖವಾಡ : ೩. ಸಮಾಧಾನದ ಮುಖವಾಡವನ್ನು ತಾಳಿ ಕುಳಿತಿದ್ದಳು ಶಾಂತಲೆ (ಶಾಂತಲಾ. ೨೬೬). ೫. ಮುಖಕ್ಕೆ ಹಾಕಿಕೊಳ್ಳುವ ಬೇರೆ ವ್ಯಕ್ತಿ, ಪ್ರಾಣಿ ಇತ್ಯಾದಿಗಳ (ಕೃತಕವಾದ) ಮುಖಾಕೃತಿ : ಈ ಭೂತಾರಾಧನೆಯಲ್ಲಿ ಹಂದಿಯ ಮುಖವಾಡವನ್ನು ಅದರ ಪಾತ್ರಿಯು ಧರಿಸಿ ಕುಣಿಯುವುದು ವಾಡಿಕೆಯಾಗಿದೆ (ಜಾನಗೀ. ೬೦); ಕಂಡೆ ನನ್ನ ಅಂತರ್ಯಾದಮರಪುರುಷನನು ತೆರೆಯಲಿಹನ ಮನದ ಮುಖವಾಡ ತೊಟ್ಟುಕೊಂಡ ಭದ್ರಾಕಾರ ಘನನ (ಅರಳು. ೦೬೯–೨); ಎಲ್ಲರೂ ಸೀನುಗಳ ಬೊಬ್ಬೆಯನ್ನೇ ಎಬ್ಬಿಸಿದ್ದರೂ ನಾನು ಮಾತ್ರ ಶೀತನಿರೋಧಕ ಮುಖವಾಡವನ್ನು ಧರಿಸಿದಂತೆ ಪ್ರಶಾಂತನಾಗಿದ್ದೆ (ಪಂಚಿರು. ೩೬).. ೬. (ದೇವರಿಗೆ ತೊಡಿಸುವ) ಚಿನ್ನ, ಬೆಳ್ಳಿ ಮುಂತಾದ ಲೋಹಗಳಿಂದ ತಯಾರಿಸಿದ ಮುಖದ ಆಕೃತಿ : ಇಂದೂ ಮಾನ್ವಿಯಲ್ಲಿ. . . ಅವರು ಸಾಮಾನ್ಯವಾಗಿ ಕೂಡುತ್ತಿದ್ದ ಸ್ಥಳ ಮತ್ತು ನಿರ್ಯಾಣ ಹೊಂದಿದ ಕಾಲದಲ್ಲಿ ಒರಗಿಕೊಂಡು ಕುಳಿತಿದ್ದ ಕಂಬಕ್ಕೇ ಮುಖವಾಡವನ್ನಿಟ್ಟು ಪೂಜಿಸುವ ಸಂಪ್ರದಾಯವನ್ನು ನೋಡಬಹುದು (ಜಗದಾ. ೦೬೬) ; ಮಾರುತಿಯ ಮುಖಕ್ಕೆ ಬೆಳ್ಳಿಯ ಮುಖವಾಡದ ಗಂಭೀರತೆ ಭವ್ಯತೆಯನ್ನೇ ತಂದುಕೊಟ್ಟಿತ್ತು (ಹಬ್ಬಬ. ೫). ೭. (ಆಲಂ) ಸೋಗು; ನಟನೆ : ದೇಶಸೇವೆ ನಿಖಿಲನಂತಹ ಉದಾತ್ತರಿಂದ ಆಗುತ್ತದೆಯೋ ? ಅಥವಾ ದೇಶಸೇವೆಯ ಮುಖವಾಡವನ್ನು ಧರಿಸಿದ ಸಂದೀಪನಿಂದಲೋ ? (ಧರ್ಮಸಾ. ೬೩) ; ಸಭ್ಯತೆ ಒಂದು ಸಾಮಾಜಿಕ ಮುಖವಾಡ (ಪಾತ್ರಗ. ೨೯೦). ಮುಖಾಡ : ೫. ಹೊಗರೊಗುವ ಬಚ್ಚಳೆಯ ನಂದಿಯ ಮೊಗದ ಮಾಳ್ಕೆಯೊಳಿಹ ಮುಖಾಡವ ನಗುತ ಶಂಕರದಾಸಿಮಯ್ಯನ ಮುಖಿಕೆ ಸೇರಿಸಿದ (ಶಂಕದಾ. ೬–೫). ಮೊಕವಾಡ : (೪). ಮೊಗವಾಡ : ೧. ಒಚಿತೆಯಗ್ಗಣಿಯನತಿಭಕ್ತಿಯ ಕರದೊಳು ಚಿಚ್ಚರದೆ ಮೊಗವಾಡದಾ ಕೇಶಿರಾಜಯ್ಯಂಗೆ ತರಿಸುತಿರೆ (ಶಾಸೋತ್ರ. ೩–೨೫). ೫. ನಿಮ್ಮ ಶರಣರ ಸಂಗದಿಂದೆ ಎನ್ನ ನಂದಿಯ ಮೊಗವಾಡ ನೊಸಲ ಕಣ್ಣಿಂಬ ಅಹಂಕಾರವ ಮುಂದುಗೊಂಡಿದ್ದೆನಯ್ಯ (ಶೂನ್ಯಸಂ. ೩೬೫–೧೬೬) ; ಆನೆಯ ಮೊಗವಾಡವ ಧರಿಸಿದವನೇ (ಗಣೇಶ. ೦–೦೧). ೮. ಮುಖಮಂಟಪ ; ಮೊಗಸಾಲೆ : ಕಿಱುವಱಿಯನೆಱಂಕೆಯೊಳ್ ಪುದುಗಿಗೂಡಿನ ಮೊಗವಾಡದೊಳಿರೆಯಿರೆ . . . ಜೋಡಿಗನ ಬರವನೆ ಪಾರ್ವ ಪೆಣ್ಬಕ್ಕಿಗಳ ತಂಡದಿಂದೆಯುಂ (ರಾಮಾಶ್ವ. ೪–೦): "ಉದಿರ್ದ ಪೂವುಡಿ ಬನರಾಣಿಯ ಮೊಗವಾಡದ ಪಳಿಕಿನ ಪೊಸಂತಿಲೊಳ್ ಬರೆದ ರಂಗವಲ್ಲಿ"ಯಂತಿದ್ದಿತು (ಹಸುಹೂ. ೨೩೪); ಮಂದಾಕಿನಿ ಉಪ್ಪರಿಗೆಯ ಮೊಗವಾಡದಿಂದ ಕೂಗಿ ಕೇಳಿದಳು (ಇತ್ಯಕ. ೨೩೦). ಮೊಗಾರ : ೮. ಕರೆಯದೆ ಕಾಡಿ ಕಂಟಿಸುವ ಕೊಂಟಣಿಯುಂ ನೊಣಗಜ್ಜಿ ತಿಂಗೆ . . . ಕಾಳಿ ಕೊಳ್ಗೞಿಯುಮಂ ಮುಱಿದಿಕ್ಕಿಗೆ ಮಾರಿ ಭೈರವಂ ಹರಹುಗೆ ಮೇಳೆಯುಂ ಮುಱಿಗೆ ಮಾಳಬಿಗಿಂಪು ಮೊಗಾರಮೆತ್ತುವೆಂ (ಅಣಾವ. ೨–೦೦೬; ಸೂಕ್ತಿಸು. ೮–೩೬೯ ನೋ). 'ಮುಖಾರ' ಪರಾ. [< ಸಂ. ಮುಖಪಟ್ಟ./ತಮಿ. ಮುಕಪಟ್ಟು, ಮುಕ್ಕಾಟು ; ಮಲ. ಮುಕವಟ್ಟು, ಮುಕ್ಕಾಡು ; ತೆಲು ಮೊಗವಡ, ಮೊಗವಾಡ, ಮೊಗವಾಳ. / ಮರಾ. ಮುಖವಟ, ಮುಖವಟಾ, ಮುಖವಟೀ, ಮುಖೋಟಾ]

**ಮೊಗವಡಂಗಳೆ** (ಕ್ರಿ). ಆನೆ, ಕುದುರೆ ಮುಂತಾದುವುಗಳ ಮುಖಕ್ಕೆ ಹಾಕಿರುವ ಅಲಂಕಾರಸಾಧನವನ್ನು ಕಳಚು, –ತೆಗೆ : ಅಗಳಾಕೆಯು ಮೇಲುದೋಸರಿಸೆ ಮೊಗವಡಂಗಳೆದ ಮದಸಮಾತಂಗಕುಂಭಯುಗಳದಂತಿರ್ದ ನೆಲಿಮೊಲೆಯುಂ ಕಂಡು (ಅಸಂಪ. ೬–೯ ವ): ಪರಿಚಾರಕಿಯರ್ ಬರುತಿರ್ದರೊಡ್ಡಿಸುತ್ತವರನೆ ಕಯ್ಯದಿಂ ಮೊಗವಡಂಗಳೆದಂಗಜಕುಂಭಯೆಂಬಿನಂ (ಪಾರ್ಶ್ವಪು. ೬–೯೪). [ ಮೊಗವಡ + ಕಳೆ$_1$ ]

**ಮೊಗವಡದೆಱೆ$^3$** (ಕ್ರಿ). ಮುಖದ ತೆರೆಯನ್ನು ಸರಿಸು ; ಮೇಲುಮುಸುಕನ್ನು ತೆಗೆ : ಮಾರಿ ಮೊಗವಡದೆಱೆವವೊಲು ಜಚಾಗಿರಮಾಸಾಳುಗಳು ನಿಜದಾತಾರನವಸರಕೊದಗಿ ಹಣವಿನ ಋಣನ ನೀಗಿದರು (ಕುವ್ಯಾದ್ರೋ. ೦–೫೦). [ ಮೊಗವಡ + ತೆಱೆ$^3_1$ ]

**ಮೊಗವರಿಕೆ** 'ಮೊಗವಱಿಕೆ' ನೋ.

**ಮೊಗವರಿಗೆ** (ನಾ). (ಆನೆಗಳ) ಮುಖಕ್ಕೆ ಹಾಕುವ ಗುರಾಣಿಯಾಕಾರದ ರಕ್ಷಣೆಯ ಸಾಧನ : ಗುಳ ಬಿಗಿದ ಱಂಚೆಯುಂ ಮೊಗವರಿಗೆ ಕವಳಿಕೆಯುಗಳೆ ನಿಂದ ಸಬಳಿಗರು ಜೋದಸಂಕುಳ . . . ವೀರಡಾಡೆಗಳುವೆರಸಿ ನಿಂದವು ಕರಿಗಳು (ಸೋಮಕು. ೫–೩೦) ; ಕರಿಗಳ ಕೊರಳ ಮುಱಿಯೆಸು ಪೋರಣದ ಮೊಗವರಿಗೆಗಳ ಖಂಡಿಸುವ . . . ಜೋದರ ಧುರಚಮತ್ಕೃತಿ ಬೆಱಗನಿತ್ತುದು ದೇವಸಂತತಿಗೆ (ಕುವ್ಯಾಶೀ. ೪–೯೬). [ ಮೊಗ + ಪರಿಗೆ ]

**ಮೊಗವಱಿಕೆ**, ಮೊಗವರಿಕೆ (ನಾ). ಮುಖಪರಿಚಯ ; ಗುರುತು : "ಪರಿಚಯಂ ಸಂಸ್ತವಮೆನಲ್ಕೆ ಮೊಗವಱಿಕೆ [ಶಾಶಾಂ. ತ]" (ಮಂಗರಾ. ೦೩೪–೩೨). ಮೊಗವರಿಕೆ : ಈ ಮುಖದ ಮೊಗವರಿಕೆಯು ನನಗಿಲ್ಲದಿದ್ದಿರಬಹುದು (ಮಂತ್ರಕ. ೯೦–೦೫). [ ಮೊಗ + ಅಱಿಕೆ ]

**ಮೊಗವಱಿತ** (ನಾ). = ಮೊಗವಱಿಕೆ: "ಸಂಸ್ತವಃ, ಪರಿಚಯಃ– ಈ ೨ ಮೊಗವಱಿತಂ" (ಹಲಾಯು. ೦೨೬–೪೮); ಮಮಮೆಯ ತುಪ್ಪಮಂ ಬಡಿಸಿ ಮೊಗವಱಿತವಂ [ಶಾಕಾಂ. ಮುಖದಱಿತವಂ, ಮುಖವನಱಿತವ] ಮಾಡಿಕೊಂಬೆನು (ಸೋಮಕು. ೩–೩೬). [ ಮೊಗ + ಅಱಿತ ]

**ಮೊಗವಾಡ** 'ಮೊಗವಡ' ನೋ.

**ಮೊಗವಾಡನಾಟಕ** (ನಾ). ಮುಖವಾಡವನ್ನು ಹಾಕಿಕೊಂಡು ಆಡುವ ನಾಟಕ: "(ಕಲಾವಿನೋದಿಗಳು ಮೊಗವಾಡ ಧರಿಸಿ ಆದಿಯಲ್ಲಿ ಮೂಕನಾಟಕವಾಗಿ ಆಡುತ್ತಿದ್ದ, ಅನಂತರ ಸಂವಾದ, ಸಂಭಾಷಣೆ, ಸಂಗೀತ, ಮೊ.ನ್ನೊಳಕೊಂಡಿದ್ದ) ನಾಟಕವಿನೋದ ; ಮೊಗವಾಡನಾಟಕ" (Masque· ಇಂಗ್ಲಿ). [ ಮೊಗವಾಡ ( < ಮೊಗವಡ ) + ನಾಟಕ ]

**ಮೊಗವಾವುಡ**· ಮೊಗಪಾವಡ (ನಾ). ೧. ಮುಖದ ಮೇಲೆ ಹಾಕಿಕೊಳ್ಳುವ ಮುಸುಕು : ಅವಗುಂಠನ : ಸಂಜಳಿಗೆಯು ಸಂಚಿ ಮೊಗವಾವುಡ ರನ್ನಗಂಬಳಿ ಹೊನ್ನ ಹಾವುಗೆಯು ಹೊಂಬಣ್ಣ ಮೆಯ್ಯ ಮಾನಿನಿಯರಾ ಕುವರಿಯ ಬೆಂಬಳಿವಿಡಿದೆಯ್ದಿದರು (ಮೋಹತ. ೨೪–೬). ೨. ಮುಖವನ್ನು ಒರೆಸಿಕೊಳ್ಳುವ ಬಟ್ಟೆ: ಬಿಡದೆ ಚುಂಬಿಸಿದಧರವನು ತೊಡೆದಲ್ಲದೆ ಯೋಗ್ಯವಲ್ಲೆಂದು ಮೊಗವಾವುಡವಿಡಿದಿರ್ದಳೊತ್ತಿನಲಿ (ಮೋಹತ. ೪–೬). **ಮೊಗಪಾವಡ** : ೧. ಮುನ್ನೆ ಶಿವಮುಗ್ಧ ದೇವರೆಂದುಂ ನಾಡೆ ಮೊಗಪಾವಡವ ಮಾಡಿಕೊಂಡಿರ್ದದೊರ್ಪಿಂ ನೆಲದೊಳ್ಬೀಳೆ ತನ್ನ ಮುಖಪದ್ಮವನದಂ ಭವಿ ಕಂಡನೆಂದಸುವ ಬಿಟ್ಟು (ಶಾಸೋತ್ರ. ೦೦–೪೬).

[ ಮೊಗ + ಪಾವುಡ$_1$ ]

**ಮೊಗವಾಸ** (ನಾ). ಬಾಯಿಯನ್ನು ಸುವಾಸನೆಗೊಳಿಸಲು ಬಳಸುವ ಒಂದು ಬಗೆಯ ಸುಗಂಧದ್ರವ್ಯ ; ಮುಖವಾಸ: ಸುಖಿಸುವರೊಂದು ತಿಂಗಳುತ್ತಮ ಸುಗಂಧಾನುಲೇಪನದಿಂದೆ ಮೊಗವಾಸದಮಲತಾಂಬೂಲದಿಂ ಮಧುರ ಮಧುಪಾನದಿಂದೆಸೆವ ಸಂಯೋಗದಿಂದೆ (ಕೈವಲ್ಯ. ೦೫–೪೪).

[ < ಸಂ. ಮುಖವಾಸ ]

**ಮೊಗವಾಳೆ** (ನಾ). ೧. ಒಂದು ಬಗೆಯ ಬಾಳೆ : ಕಳೆದುರುಳಿದ ಗಜದಂತೆ ಕೈಕಾಲ್ಬಾಲಗಳಿನಾ ನೆಲನೊಪ್ಪಿದುದು ಕಳಲೆ ಕದಳಿ ಮೊಗವಾಳೆ ಬಲ್ಗಿಸಿಕಿಲ ಹಳುವ ಕುಪ್ಪರಿಗಡಿದಂತೆ (ಪೀಟಿಸಂ. ೨೬–೬೦). ೨. ಪರಿಮಳದಿಂದ

ಕೂಡಿದ ಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ (?) : ಸುರಗಿ ಮೊಗವಾಳೆ ಬಂದುಗೆ ಪರಿಪರಿಯ ಸುಗಂಧಕುಸುಮ ದಳಕುಳವಿರ್ಕುಂ (ಹರಿಶ್ಚ. ೬-೪೭). [ ಮೊಗ $_?$ + ಬಾಳೆ$_1$ (< ಬಾಟಿ$^3$) ]

**ಮೊಗವಿಕ್ಕು** ' ಮೊಗಮಿಕ್ಕು ' ನೋ.

**ಮೊಗವಿಡು** ' ಮೊಗಮಿಡು ' ನೋ.

**ಮೊಗವೀಣೆ** ' ಮೊಗಬೀಣೆ ' ನೋ.

**ಮೊಗವೀರ** ' ಮೊಗೇರ ' ನೋ.

**ಮೊಗವೂಱು** (ಕ್ರಿ). ಮುಖವನ್ನು ಊರು.—ತಿವಿ,– ಚುಚ್ಚು : ತೋರಿದು ವಾದ ಮಲ್ಲಿಗೆಯ ಮೊಗ್ಗೆಗಳೊಳ್ ಮೊಗವೂಱಿ ಬಿದ್ದು ಘೋರ್ಘೋರೆನೆ ಪಾಯ್ದು . . . ಕಾಱ ಕಡಲಿಟ್ಟುವು ಮತ್ತಮಧುವ್ರತಾಳಿಗಳ್ (ಲೀಲಾವ. ೯-೦೦೬). [ ಮೊಗ + ಊಱು$_1$ ]

**ಮೊಗವೆಱು ?** (ಕ್ರಿ). ಕಾಣಿಸಿಕೊಳ್ಳು (?) : ಅಗಣಿತ ಬುದ್ಬುದ ತೆರೆ ನೊರೆ ಸುಳಿ ನಾಭಿ ಮೊಗವೆತ್ತು ಜಂತು ಮೇಲಕ್ಕೆ ನೆಗೆವ ನೀರ್ವಾನಿಗಳು ಮುತ್ತಿನಂದದಿ ಕಣ್ಗೆ ಸೊಗಯಿಸಿತಾ ಪುಣ್ಯಗಂಗೆ (ಮೋಹತ. ೬-೩೩). [ ಮೊಗ + ಪೆಱು$_1$ ? ]

**ಮೊಗಶಾಲೆ** ' ಮೊಗಸಾಲೆ ' ನೋ.

**ಮೊಗಸಂದಿಸು** (ಕ್ರಿ). ಅಭಿಮುಖವಾಗು ; ಎದುರಾಗು: ಮೊಗಸಂದಿಸಿದಮರಂಗಭವಗ್ರಹವಡರ್ವಂದದಿ ನೋಡಿದರು . . . ಪೂರ್ಣೇಂದುವದನೆ ನಡೆತರ್ಪಾಗಳ್ (ಜಯಾಶಾ. ೩-೩೩). [ ಮೊಗ + ಸಂದಿಸು ]

**ಮೊಗಸನ್ನೆ** (ನಾ). ಮುಖಭಾವದಿಂದ ತಿಳಿಸುವ ಸೂಚನೆ ; ಮುಖದ ಮೂಲಕ ಮಾಡುವ ಸಂಜ್ಞೆ : ಬಂದ ನೃಪಾಲಕರ ಮೊಗಸನ್ನೆಯೊಳು ಕಳುಹಿದನು ಮನೆಗಳಿಗೆ (ಕುವ್ಯಾಅ. ೯-೦); ಅರಸಿ ನಿನ್ನನುಮತವೆಯೆನೆ ನುಡಿಯದೆ ಭರತೇಶ ಮೊಗಸನ್ನೆಗೊಟ್ಟ (ಭರತೇ. ೫೯-೪೦) ; ಅಸುರಮರ್ದನನುಜೆ ಮೊಗಸನ್ನೆಯಲಿ ಬೀಳ್ಕೊಳುತ (ಕೋಗಯು. ೦೩-೯೩). [ ಮೊಗ + ಸನ್ನೆ$_2$ ]

**ಮೊಗಸಾಲೆ**, ಮುಖಸಾಲೆ, ಮೊಗಶಾಲೆ (ನಾ). ದೇವಸ್ಥಾನ, ಅರಮನೆ, ಭವನ ಇತ್ಯಾದಿಗಳ ಮುಂಭಾಗದ ಹಜಾರ ; ಪಡಸಾಲೆ ; ಮುಖಮಂಟಪ : " ಪ್ರಘಣಃ, ಪ್ರಘಾಣಃ, ಅಳಿಂದಕಃ – ಈ ೩ ಮೊಗಸಾಲೆ " (ಹಲಾಯು. ೩೦-೧೪೪); ಸಪ್ತತಾಳೋತ್ತುಂಗರಮ್ಯಹರ್ಮ್ಯದರಡನೆಯ ಮೊಗಸಾಲೆಯೊಳಿಟ್ಟ ಪೊನ್ನ ಪಡಿಗಂಗಳೊಳಂ (ಶಂಕಭಾ. ೪-೪೩ ವ); ರಾಜಧಾನಿ ಬನವಾಸಪುರದ ಜಯಂತೀ ಮಧುಕೇಶ್ವರದ ಮೊಗಸಾಲೆಯುಮಂ (ಕ್ಷೇಇ. XI-i. ೦೦೩-೨೫ ; 11ನೆಯ ಶತ) : ನೆರಮನೆಯ ಮೊಗಸಾಲೆಯನ್ನು ಪ್ರವೇಶಿಸಿದನು (ಪುನರು. ೩). **ಮುಖಸಾಲೆ** : ಮುಂದಣ ಸೋಭನ × ಮಂಟಪಮಂ ಪುರಮಂ ಮುಖಸಾಲೆಮಾಡಮುಂ ಮಾಡಿಸಿ ಚಿಕ್ರಯಿಪೊಳ್ಪಡೆದು ಶಾಸನಮಂ (ಕ್ಷೇಇ. XI-i. ೬೪-೦೪; 1028). **ಮೊಗಶಾಲೆ** : ಬಂದನು ಮೊಗಶಾಲೆಗೆ ಕೋಪಾಟೋಪದಿಂದ ಮೆಯ್ಮೆ ಱಿದು ಕಂಪಿಲನು (ಕುರಾಕಾಂ. ೩೪-೦೫೫); ಭದ್ರಮಂಟಪದ ಮುಂದಣ ಮುತ್ತಿನ ಮೊಗಶಾ[ಪಾಠಾಂ. ಸಾ]ಲೆಯೊಳ್ . . . ಓಲಗಂಗೊಟ್ಟು (ರಾಜಶೇ. ೦೩-೬೦ ವ): ಆಕೆ ನೇರವಾಗಿ ಮೊಗಶಾಲೆಗೆ ಬಂದಳು (ಜರಪಾ. ೦೭). [< ಸಂ. ಮುಖಶಾಲಾ./ತುಳು. ಮೊಕಸಾಲೆ, ಮೊಗಸಲೆ, ಮೊಗಸಾಲೆ; ತೆಲು. ಮೊಗಸಾಲ, ಮೊಗಸಲ]

**ಮೊಗಸಿಂಡರಿಸು** (ಕ್ರಿ). ತಿರಸ್ಕಾರ, ಜುಗುಪ್ಸೆ, ಕೋಪ ಮೊದಲಾದ ಭಾವಗಳನ್ನು ವ್ಯಕ್ತಪಡಿಸಲು ಮುಖವನ್ನು ಗಂಟುಹಾಕಿಕೊಳ್ಳು: "ಮೊಗಸಿಂಡರಿಸು—ಮೋರೆಯ ಗಂಟಿಕ್ಕು" (ಪಾವಕೋ. ೩೭). [ಮೊಗ + ಸಿಂಡರಿಸು]

**ಮೊಗಸಿರಿ**, ಮುಖಸಿರಿ (ನಾ). ೧. ಮುಖದ ಚೆಲುವು. ತೇಜಸ್ಸು,– ಕಾಂತಿ : ಕೋಡಗದ ಮೊಗಸಿರಿಗೆ ಕಾವಲಿಯೋಡು ಕನ್ನಡಿಯಾಯ್ತು (ಕುವ್ಯಾಭೀ. ೯-೦೫); ಬಿಂಬಾಧರದ ಕೆಂಬೆಳಗಿನೊಡನೆ ಸುಲಿಪಲ್ಲ ನುಣ್ಬೆಳಗು ಮೊಗಸಿರಿಯ ಮೈಸಿರಿಯುಂ ಪಸರಿಸೆ (ರಾಜಶೇ. ೦-೦೩೫ ವ). **ಮುಖಸಿರಿ** : ೨. ಮುಖಭಾವ; ಮುಖಮುದ್ರೆ : ತಿರಿವ ಗೊರವಾಗಿ ಕಂಡಕಂಡವರೆಲ್ಲ ನಗುತಿರೆ ಮುಂಡೆಯರ ಮುಖಸಿರಿಯ ತಾಳಿದುಕೊಂಡು ಬಂದುದು ಭಂಗವಲ್ಲವೆ ಪತಿಯೆ ಬಿಡು ಸತಿಯ (ಕ್ಷೇರಾ. ೬೯-೦೪). ೩. (ಕರಾ) ವಿಗ್ರಹಗಳಿಗೆ ತೊಡಿಸುವ ಚಿನ್ನ ಅಥವಾ ಬೆಳ್ಳಿಯ ಮುಖವಾಡ. [< ಸಂ. ಮುಖಶ್ರೀ]

**ಮೊಗಸು₁**. ಮೊಗೆಸು (ಕ್ರಿ). ೧. ತೊಡಗು ; ಉಪಕ್ರಮಿಸು ; ಆರಂಭಿಸು : "ಮೊಗಸು–ಉದ್ಯೋಗಾರಂಭೇ" (ಶಮದ) ; ಮನೆಗೆಲಸಕ್ಕೆ ಸಯ್ತು ಮೊಗಸಲ್ಕಣವಾಜದೆ ನೋಡಿ ಹೂಂಕೃತಧ್ವನಿ ವಿಗಲಿತ್ತಲಾಗುಳಿಸಿ (ಸಮಶ. ೯-೦೦೯); ಮಂತ್ರಿಪುತ್ರರುಮಂ ಕೂಡಿಕೊಂಡು ನವಕ್ರೀಡೆಗೆ ವಿನೋದಜಳಕೇಳಿಗಳಂ ಮೊಗಸಲೊಡನೆ (ಅರ್ಜನೇ. ೪-೦೩೨ವ): ಪ್ರೊಗಸಿನೊಳ್ ಮೊಗಸಿ ಬೈಗುವರೆಗಂ ಬೇಟೆವೆಸದಿನಸುವರೆಯಾಗಿ (ತಂತ್ರಪು. ೯-೪ ವ). ೨. ಎದುರಿಸು; ಪ್ರತಿಭಟಿಸು; ಹೋರಾಡು : ಕಾಲನಳವಿಗೆ ಮೊಗಸಿನಿಂದ ಕಪಾಲಿಗಿಮ್ಮೆಗಿಲೆನಬಹುದು (ತೊರರಾ. ೬-೨೦-೯೦): ಇವನ ಭೇದಿಪೊಡವನೆಡೆ ಗುಣನವನ ತಾನಿವನು ಭೇದಿಪೊಡೆಡೆಯಿಲ್ಲ ಅವಿರಣದಂತೆ ಮೊಗಸಿ ಬಾಣ ಬಾಣಗಳ್ ತವೆಮುರುಳಿದವಂತರದಲಿ (ವರ್ಧಶ. ೭-೦೪); ತುಡುಕು ಮೊಗಸಡಗು ಮರಕಡರೊಡರ್ಚುರ್ (ಕೃಬಾಲ. ೨೯-೪೫). ೩. ಸುತ್ತುವರಿ; ಆಕ್ರಮಿಸು; ಆವರಿಸು : ಕಳ್ಳ ಗಂಧಕ್ಕೆ ಮೊಗಸಿದ ನೊಣಂಗಳೆಲ್ಲಂ ಸಾವುದಂ ಕಂಡು (ಧರ್ಮಾವ್ಯ. ೦೨-೦೪೬). ೪. ಧಾಳಿಮಾಡು; ಎರಗು : ಲತಾಂಗಿಯರ ಸುಯ್ಯ ಕಂಪಿಂಗಳಿಗಳ್ ಮೊಗಸಿ ಮುಸುಱಿದುವು (ಅಂಕ. ೦೦-೭೦); ತಳರ್ದು ಕುರುಕ್ಷೇತ್ರಕ್ಕೆ ಮೊಗಸಿದಾಗಳ್ (ಶಂಕಭಾ. ೧೦-೨೭ ವ); ಗಿಳಿವಿಂಡ್ಗ ಗಿಡಿಗನು ಮೊಗಸಿದಂತೆ (ಲಕ್ಷ್ಮೀಶಾ. ೭-೩-೩). ೫. ಇಚ್ಛಿಸು; ಬಯಸು; ಅಪೇಕ್ಷಿಸು : ವಸುಷೇಣಂ ಲಗ್ಗೆಮಾಡಲ್ಮೊಗಸಿ ಪೊಗಿಸಿ ದುರ್ಗಕ್ಕೆಭವ್ಯಾತ್ರಮಂ (ಅನಂಪು. ೦೨-೨೦); ವಿಮಲಾಂಗಿಯುನ್ನತದ ರೂಪನೀಕ್ಷಿಸಿ ಮೊಗಸಿ (ಪಾಸೋಕ್ಷಿ. ೦೦-೫೦); ನೀರ್ವಕ್ಕಿಗಳ್ ಜಳಕೇಳಿಗೆ ಮೊಗಸಿದುವು (ರಾಮಾಕ್ಷ. ೩೦-೨೪). ೬. (ಪ್ರಯಾಣಕ್ಕೆ) ಹೊರಡು; ಸಾಗು: ಅಟ್ಟಿಱಿ ನೊಳಯೋಧ್ಯೆಗೆ ಮೊಗಸಿದ್ದನಱಿಕೆಯ ಪೞಿ ಪಲವುಮೆಸೆಯೆ ಭರತಮಹೀಶಂ (ಆದಿಪು. ೧೪-೨); ಕಳದ ಪೆಣಸೊಟ್ಟಲಲಿ ಮೊಗಸುಪ್ಪೊಡಳುಕಿಹರು (ಕುವ್ಯಾವಿ. ೫-೦). ೭. ಮೂಡಿಸು; ಪ್ರಕಟಿಸು : ಸೊಕ್ಕುಜವ್ವನೆ ತರುಣಪರಹಾಸವುಂ ಮೊಗಸೆ ಕೆಂಬಲ್ಲಿನುರು ರಶ್ಮಿ ಪರಪಿಕೊಂಡುದು (ಶರಶು. ೭-೨೩). **ಮೊಗೆಸು** : ೮. ತುಂಬಿ ಹೊರಸೂಸುವಂತೆ ಮಾಡು : ಹಾಲುಹೊಳೆ ಮೊಗೆಸಿದನು (ವಚನಾ. 1,೪೬೦). ೯. (?): ಯಿದಕೆ ಅವವ ಅಳುಪಿದವರಿಗೆ ವಾರಣಾಸಿ ಆ ಗಂಗೆಯ ತಡಿಯಲಿ ಯೇಳುನೂರು[ಕ]ಪಿಲೆ ತಂಮ ತಂದೆ ತಾಯಿಯನು ಕೊಂದವರು ಮೊಗೆಸುಗೆ (ಎಕ. VIII (R), ಹಾಸನ. ೦೨೫-೨೦ ; 1458).

ಮೊಗಮೊಗಸು (ದ್ವಿರುಕ್ತಿ) : ಮೊಗಮೊಗಸಿ ಮುಂಬರಿವ ಕುದುರೆ ಸಾರಥಿಗಳಂ. . . ತಱಿವವನ ಬಿಲ್ಲನಿಕ್ಕಡಿಗೈದು ಬೊಬ್ಬಿಱಿದು (ಕೃಪಾಶಾ. ೦೨-೨೨). [ಮೊಗೆ$_1$ + – ಸು$_1$./ತಮಿ. ಮುಯಲ್; ತೆಲು. ಮೊಗಿಯು]

**ಮೊಗಸು₂** (ನಾ). ೧. ತೊಡಗುವಿಕೆ: ಪ್ರಾರಂಭಿಸುವಿಕೆ : ಮೊಗಸಂ ಮೆಲ್ಲನೆ ಪರಿಪೂರ್ಣತೆಗೊಳ್ದೇರುವಾರ್ಪನವರ ತನಿವ ಗೆಲ್ಲವ ಕವಿ ಸಿರವಿಪಂ (ಸಂಸಶ. ೦೫-೮). ೨. ಬಯಕೆ; ಅಪೇಕ್ಷೆ: "ಬಾಕುಳಿ, ಮೊಗಸು, ಪಸಂ, ಇಚ್ಛೆ – ಈ ೪ ಇಚ್ಛೆ" (ಶಶಾ. ೫೭-೨೩೩); "ಇಚ್ಛೆಯುಂ ಮೊಗ[ಪಾಠಾಂ. ಮುಗು]ಸಂದೆನಿಕ್ಕು" (ಶಬ್ದಕೃ. ೭೨); ಬೊಬ್ಬುಲನ್ನೀಯೆ ಸನಿಹಿಸಿದ ಶಾಪಿಮ್ಮೊಗಸಂ (ಗೀಶಂ. ೨೭-೦೪). [< ಮೊಗಸು$_1$./ ತುಳು. ಮೊಗಸ್]

**ಮೊಗಸುತ್ತು** (ನಾ). ೧. ತಲೆಗೆ ಸುತ್ತುವ ವಸ್ತ್ರ: ಪಾಗು : ಅಂತು ಬಂದು ಮೊಗಸಾಲೆಯೊಳ್ಮೆಯ್ಯಿಕ್ಕಿ ಮೊಗಸುತ್ತಿನ ದುಗುಲದ ಬಿನ್ನಪದ ಸೆಜಗನಧರಪಲ್ಲವಕ್ಕೆ ತೆಗೆದು . . . ಉದಯಸುಂದರಕುಮಾರನರಮನೆಯ ಬಾಗಿಲೊಳ್ಬಂದು ನಿಂದಿರ್ದಪನೆಂದು ಬಿನ್ನವಿಸೆ (ಶಂಠಾಪು. ೨-೨೪). ೨. ದಿಗ್ಭ್ರಮೆ: ಕಕ್ಕಾಬಿಕ್ಕಿ: ಗೊಂದಲ : ಅವರು ಮೊಗಸುತ್ತಿನ ನಿರಾಶೆಯ ದುರ್ಮಸದಿಂದ ಅವುದಾದರೂ ಅನಾಹುತಕ್ಕೆರಗಿ ದಾರಿಗಿಡದಂತೆ ನೀನು ನೋಡಿಕೊಳ್ಳುತ್ತಿರಬೇಕು (ಬೆಟ್ಟಿ. ೩೯-೨೨). 'ಮುಖಸುತ್ತು' ಪರಾ. [ಮೊಗ + ಸುತ್ತು$_2$]

**ಮೊಗಸೂನಿಗೆ** (ನಾ). (ರಥದ) ಮುಂಭಾಗದಲ್ಲಿ ಸಿಕ್ಕಿಸಿರುವ ಕಠಾರಿ : ಜೋರಿಸುವ ಮೊಗಸೂನಿ[ಪಾಠಾಂ. ರಿ]ಗೆಯ ಕೊಲ್ಲಾರಿಗಳ ಶರಬಂಡಿಗಳ ಹೊಂದೇರು ಕವಿದವು (ಕುಮಾ.ಭಾ. ೨-೪೪).

[ಮೊಗ + ಸೂನಿಗೆ (< ಸೂಲಿಗೆ)]

**ಮೊಗಳು. ಮುಗುಟು** (ನಾ). ೧. ಎಳನೀರಿನ ಮೇಲುಭಾಗದ (ಕೆತ್ತಿ ತೆಗೆಯುವ) ಸಿಪ್ಪೆಯ ಭಾಗ : ಎಳನೀರ ಕುಯಿದಿಳುವಿ ತಣ್ಣಸವಾದ ತಾಣದೊಳಗಿರಿಸಿ ಮಜ್ಜಿಂದಿನ ಮೊಗಳ ಕಳೆದು ನಿಂಬೆಯ ಹಣ್ಣಿನ ಹೊಸ ಹುಳಿಯ ಹಿಳಿದು (ಸೂಶಾ. ೨-೩೦); ಎಳನೀರಂ ಮೊಗಳ ತೆಗೆದು ಅದರಲ್ಲಿ ೧೮ತೂಕ ಅಳಲೆಕಾಯಿ ಚೂರ್ಣವ ಹಾಕಿ ತಕ್ಷಣವೆ ಕುಡಿಯಲು ರಕ್ತಾತಿಸಾರಂ ಕೆಡುಗುಂ (ಸಳವೈ. ೩೦೦); ಹನ್ನೆರಡು ಎಳನೀರುಗಳನ್ನು ಕಿತ್ತು, ಕೆತ್ತಿ ಮೊಗಳು ತೆಗೆದುಕೊಟ್ಟನು (ತೆಂಗಾಳ್ವ. ೩೦೯). ಮುಗುಟು : ೨. (ಕರಾ) ತೆಂಗಿನಕಾಯಿಯ ತೊಟ್ಟು. ೩. (ಕರಾ) ಗಡ್ಡೆಗಳ ಮೊಳಕೆ.

[ದೇ.॥ ತಮಿ. ಮುಕಿಟು; ತುಳು. ಮುಗಡ್. ಮುಗಡ, ಮುಗಡೆ]

**ಮೊಗಾರ** 'ಮೊಗವಡ' ನೋ.

**ಮೊಗುಂ** 'ಮೋಘಮ್' ನೋ.

**ಮೊಗುಚು** 'ಮಗುಚ್ಚು' ನೋ.

**ಮೊಗೆ$_1$** (ಕ್ರಿ). ೧. ದ್ರವಪದಾರ್ಥವನ್ನು ಬೊಗಸೆ ಅಥವಾ ಪಾತ್ರೆಯ ಮೂಲಕ ತೋಡು, – ತುಂಬಿಕೊಳ್ಳು : "ಮೊಗೆ – ಜಲಾಕರ್ಷಣೇ, ಭೂಭೇದೇ ಚ, ಘಟಭೇದೇ ಚ" (ಕವುಧಾ); ಮಹಾಂಬುಧಿಯೆ ಗೆತ್ತು ಮುಗಿಲ್ಪುಟಿಗಿ ನೀರ ಮೊಗೆವವೋಲ್ . . . ನೀರಾಡುತ್ತಿರ್ದುವು ಸುತ್ತಮಲ್ಲಿ ವನಕರಿನಿವಹಂ (ಆದಿಪು. ೦೦೬); ಬೆಲಗಸೆ ಕೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು . . . ಬಗೆದುದಂದು ಜನಂಘ ನಚಂದ್ರಿಕಾಂಬುಮಂ (ಅಜಿತ| ೬-೧೫); ತಲೆಗಳ ಬಟ್ಟಲಿಂ ಮೊಗೆದು ನೆತ್ತರಸಾಗಳೆ ಈಂಟಿಯಿಂಟಿ . . . ಕೈಪಟಿಯೊಳಾಡುವ ರಕ್ಕಸಿಯರ್ಕಳೊಪ್ಪಿದರ್ (ಕಬ್ಬಿಗ. ೨೯೫); ಜಲವಸಂಜುಳಿಯಿಂದ ಮೊಗೆದೀಂಟಲು (ಕುಮಾ.ರಾ. ೨೩-೦೯). ೨. ಬಾಚು ; ಗೋರು : ಸಹಕಾರದಾಡಿಮಫಲವ್ರಾತಂಗಳಿಂದಾಗಳುಂ ತನಿಗಂಪು ಮೊಗೆದತ್ತಿ (ಅರ್ಜನೀ. ೨-೭೦) ; ಸಿಂಹಪೀಠದ ಸಿಂಗರದ ಶಿಶುವ ಮೊಗೆದಪ್ಪಿ ತೆಗೆದಪ್ಪಿ (೧೦ಳ. ೩-೦೦೯ ವ); ಸೂಸುವ ಮಿಂದುಳ ಮೊಗೆದೆಸ್ವೆಸಗೆ ಸಾಲಿಡುವ ಅಪಗಸಾಯಿದು ಕಿದಟ ರಕುತವ ತುಡುಕಿ ಚೆಲ್ಲುವ ಕರಿಯ ಬರಿಕೈ ಬಿಡಿಸಿದವು ಹುಟ್ಟಾಗಿ ಯುವರಾಜನ ಪರಿಗ್ರಹಕೆ (ಕುಮಾ.ಭೀ. ೪-೮೨). ೩. ಕುಡಿ: ಈಂಟು : ಅಮೃತವೃಷ್ಟಿಗಳಂ ಕಟ್ವಿಮಂತು ಪೇಟ್ಟ ತಿರ್ದಿದ ಕೃತಿಯುಂ ಬುಧರ್ ಕಿವಿಗಳಿಂ ಮೊಗೆವರ್ (ಚಮುದ.೦-೫೪); ಸರಸಿಯುಲಿ ಮೊಗಪಿಟ್ಟು ಮೊಗೆದವು ಪರಜಲವನೆರಡಳ್ಕಿ ಹಿಗ್ಗಲು (ಕುಮಾ.ದ್ರೋ. ೦೦-೩೪). ೪. ಹೊರಹೊಮ್ಮಿಸು; ಹೊರಹಾಕು : ತರುಣಿ ವೀಣೆಯ ಮಿಡಿವಳು . . . ಮಧುರಗೀತದ ನುಡಿಯೊಳು ತನ್ನೆದೆಯ ಭಾವವ ಮೊಗೆವಳು (ಪಾಂಚಜ. ೩೨-೬): ಪ್ರತಿಕ್ಷಣಕ್ಕೂ ಮಾಡಿದ ಪಾಪವೆಲ್ಲ ಇತಿಹಾಸವಾಗಿ ಅವಳ ದುಃಖವನ್ನು ಮೊಗೆಯುತ್ತಿತ್ತು (ಗ್ರಾಮಾಯ. ೨೫೪). ೫. (ತುಂಬಿ) ಹೊರಸೂಸು : ತುಳುಕು : ಸುರರಳ್ಕಿ ದಿಗಿಭಂಗಳ್ ಬಳ್ಕೆ . . . ಬೆಟ್ಟುಗಳ್ ಜರಿಯೆ ಕಡಲ್ ಮೊಗೆಯೆ ಔತ್ಪಾತಕಮೊಗೆಯೆ ಸಪ್ತಸಪ್ತರಂ ಕಡಿದಾಯ್ತು (ರಾಮಾಶ್ವ. ೦೩೦-೨೭); ಇವಳ ರಸದೆದೆಯ ಮುನ್ನೀರು ಮೊಗೆದೆದ್ದು ನೊರೆಯ ಚಿಮ್ಮಿತ್ತು (ನವಿರಾ. I, ೪೫೪). ೬. ಎರೆ; ಸುರಿ : ತರಕಾರಿ ಗಿಡಗಳಿಗೆ ಏತದ ನೀರು ಮೊಗೆಯಲು . . . ಉದಾಸೀನಪಟ್ಟುದಿಲ್ಲ (ಬ್ರಾಂತಿಸು. ೩). ೭. ಧಾಳಿಯಿಡು ; ಆಕ್ರಮಿಸು : ಏನ ಹೇಳುವೆನದನು ನೃಪ ತವಸೂನುವಿನ, ಮೋಹರದೊಳಿಳ್ಳಿಜೀವಾನೆಗಳನುಪ್ಪರಿಸಿ ಗಗನವ ಮೊಗೆವ ಕುದುರೆಗಳ (ಕುಮಾ.ದ್ರೋ. ೪-೨೦) ; ಹಾಯಿತುರಿ ಹೊದೆಚಿದ್ದ ಕೊಡಲಿಯ ಬಾಯ ಧಾರೆಯುಲಬಿಳಜಗ ಜರಿದಾಯೆನಲು ಸೀವರಿಸಿ ಶಿಖಿ ಮೊಗೆದುದು ಮರುತ್ಪಥವ (ತೊರಾ. ೦-೦೭-೦೦). ೮. (ಅಲಂ) ಸೆರೆ ಹಿಡಿ : ಉತ್ತರಗೋಗ್ರಹಂ ಪರಿದುಮಾಗ್ರಹಮಂ ಮನದೊಳ್ ತಗುಳ್ಚಿ . . . ಬಂದು ಮುತ್ತಿ ಮೊಗೆದಂ ವಿಭು ಗೋಕುಲಮಂ ವಿರಾಟನಾ (ಶಂಕರಾ. ೬-೯೨). ೯. ನುಂಗು : ಕಬಳಿಸು : ಅಡವಿಯಂ ಮೊಗೆದು ನುಡುಮಗ್ನ ಗಾಪೋಶನದ ಗೊಡವೆಯೇವುದು (ಹತಾ. ೬-೪೫); ಭುಗಿಲು ಭುಗಿ ಭುಗಿ . . . ಎಂದೊಗೆದು ದಳ್ಳುರಿಯುಗಳಲಿಂಬರಕುಗಿದು ಜಗಿದುದು ಮತ್ತೆ ಹರಿದುದು ಲೋಕ ಬೆದಜ್ಜುತಿರೆ ಮೊಗೆದು ಮುಕ್ಕಿತು ಕೊರಳ ಕಡಿಯಲು ನೆಗೆದು ಹಾಜೀತು ರುಂಡ ಶೋಣಿತವೊಗುತ (ಕೌಶಿರಾ. ೩೭-೭೪).

**ಮೊಗೆಮೊಗೆ** (ದ್ವಿರುಕ್ತಿ) : ಮೊಗೆಮೊಗೆದು ನೆತ್ತರಂ ಪವನಸುತಂ ನೆತ್ತಿಯೊಳೆಜಿದೆಜಿದಿನಿಸಜಿಯೊತ್ತಿ . . . ಕೇಶಮನೆತ್ತಂ ಪಸರಿಸಿದಂ (ಶಂಕರಾ. ೧೨-೦೫೩); ಶಂಭುಯೋಗಸುಖಾಮೃತವನೆಯ್ದೆ ಮೊಗೆಮೊಗೆದು ಪೀರ್ದ (ಕವ್ಯಕಾ. ೨-೭೬); ಒಡೆದು ಬೊಮ್ಮನಜಾಂಡವೊಂದೆಡೆ ಕಡಲ ಮೊಗೆಮೊಗೆವಲ್ಲಿ ತುಂಬುವೆ (ಕೌಶಿರಾ. ೦೫-೪೩).

[ದೇ.॥ ತಮಿ. ಮುಕ; ತುಳು. ಮುಗವು. ಮೊಗವು; ಕೋತ. ಮುಪ್]

**ಮೊಗೆ$_2$. ಮಗೆ$_1$. ಮೊಘೆ** (ನಾ). (ನೀರು ಮುಂತಾದ ದ್ರವಪದಾರ್ಥವನ್ನು ತುಂಬಿಕೊಳ್ಳಲು ಬಳಸುವ) ಮಣ್ಣಿನ ಪಾತ್ರೆ : ಎಮ್ಮಾಕೆಯ ಕೈಯ ಮೊಗೆಯು ನೀರಿನಲ್ಲಿ ನಾಮುವ ತೇಯಲಾಗಿ ನಾಮುವುಳಿದು ನೀರಳಿಯಿತ್ತು (ಸಳವ. ೪. II. ೨೦೬-೫೫೦); ಒಂದು ಮೊಗೆಯಕ್ಕಿಗಚ್ಚೊಂದು ಮೊಗೆ ಮಜ್ಜಿಗೆಯನೊಂದಾಗಿ ಬೆರಸಿ (ಸೂಶಾ. ೨-೪೯); ಪೊಸಮೊಗೆಯೊಳುಂ ಸುಣ್ಣ ತುಂಬಿರಿಸಿರೆ (ಗುರುಜಾ. ೦೫-೭೫). ಮಗೆ$_1$ : ಇಪ್ಪತ್ತು ಮಗೆ ನೀರು ಹೊಯ್ದು (ಸಳವೈ. ೨೨೩). ಮೊಘೆ : ಅರವಟ್ಟಿಗೆಗೆ ಗುಡಾಣ ಬಿಂದಿಗೆ ಕರಗ ಮೊಘೆಗಳ ಕ್ರಯಕ್ಕೆ (ಕಶಾಇ. IX-i. ೪೩೭-೨೪; 1412).

[< ಮೊಗೆ$_1$. /ತಮಿ. ಮುಕ್ಕೆ; ತುಳು. ಮುಗಯಿ. ಮುಗೆ. ಮುಗ್ಗೆ]

**ಮೊಗೆ$_3$** (ನಾ). ಒಂದು ಬಗೆಯ ಭೂಮಿ; ಹಳದಿಬಣ್ಣದಿಂದ ಕೂಡಿದ ಫಲವತ್ತಾದ ಭೂಮಿ : ಸರ್ವನಮಸ್ಯ ಮೊಗೆ ಮತ್ತರಾಜಕಂ (ಕಶಾಇ. XI-ii. ೦೦೯-೫೨; 948); ದೇವರ್ಗ್ಗೆ ಬಿಟ್ಟ ಬೆದ್ದಲು ಮೊಗೆ ಮತ್ತ ೬ (ಕಶಾಇ. IX-i. ೯೭-೦೫; 1050 ?); ಶ್ರೀಮಾನ್ಯವಾಗಿ ಬಿಟ್ಟ ಕೆಯಿ ಹಗರದಿಂ ಪಡುವಲು ಮೊಗೆ ಮತ್ತರು ೪ (ಕಶಾಇ. IX-i, ೩೦೭-೩೭; 1223). 'ಮೊಗರು$_2$' ಪರಾ. [ ? ]

**ಮೊಗೆತರ್** (ಕ್ರಿ). ತುಂಬಿಕೊಂಡು ತರು : ಛಂದೋಂಬುರಾಶಿಯೊಳ್ ಮೊಗೆತಂದವನಾತ್ಮೀಯಸತಿಗೆ ನಾಕಿಗನುಸಿರ್ದಂ (ಛಂದೋಂಬು. ೦-೩೦).

[ಮೊಗೆ$_1$ + ತರ್]

**ಮೊಗೆಬಲೆ** 'ಮೊಗೆವಲೆ' ನೋ.

**ಮೊಗೆವಲೆ. ಮೊಗೆಬಲೆ** (ನಾ). ಮೀನನ್ನು ಹಿಡಿಯಲು ಬೆಸ್ತರು ಉಪಯೋಗಿಸುವ ಒಂದು ಬಗೆಯ ಬಲೆ : ಆವ ಹಂಜರಕೂಳಿ ಮೊಗ[ಗೆ]ವಲೆ ಯಾವ ಗಾಣವು ಬೀಸುವಲೆಯುಟಿ ತೀವಿದುದಕದ ಮಡುವೆಯಿದು ಸಂಗ್ರಾಮಭೂಮಿ ಟಣಾ (ಕುಮಾ.ಕ. ೨೨-೨೬). ಮೊಗೆಬಲೆ : "ದೊಡ್ಡ

ಬಲೆಯಲ್ಲಿ ಮೀನು ಹೆಚ್ಚಾಗಿ, ಆ ಬಲೆಯನ್ನು ದಡಕ್ಕೆ ಎಳೆಯಲಾಗದೆ ಹೋದಾಗ, ಕೆಲವು ಮೀನುಗಳನ್ನು ತೆಗೆದುಬಿಡುವುದಕ್ಕಾಗಿ ಅದರೊಳಕ್ಕೆ ಹಾಕುವ ಬೇರೆ ಸಣ್ಣ ಬಲೆ: ಮೊಗೆಬಲೆ" (spiller. ೩೦೪೩).

[ಮೊಗೆ$_1$ + ಬಲೆ$_1$]

**ಮೊಗೆವಾಲು** (ನಾ). ಮಡಕೆಯ ತುಂಬ ಇರುವ ಹಾಲು : ಶುನಕಿ ಮೊಗೆವಾಲಂ ಕುಡಿದು ಪೋಗೆ (ಬಸವ. ೧-೨೦).

[ಮೊಗೆ$_2$ + ಪಾಲು$_1$ (< ಪಾಲ್$_1$)]

**ಮೊಗೆಸು** 'ಮೊಗಸು$_1$' ನೋ.

**ಮೊಗೇರ,** ಮೊಗವೀರ (ನಾ). (ಕರಾ) ಮೀನುಹಿಡಿಯುವವನು ; ಬೆಸ್ತ ; ಮೀನುಗಾರ : ಘಡ ಮೊಗೇರರ ಮಗನೆ (ಕುಮುದಾ. ೩೬) ; ಎಲೆ ಮೊಗೇರನ ಮಗನೆ ಗಳಹದಿರು (ಕರ್ಣಾಟ. ೭) : ಕನ್ನಡ – ತುಳು ನಾಡುಗಳಲ್ಲಿ ಸ್ವಭಾವತಃ ಅತಿಶೂರರೂ ಧರ್ಮಶ್ರದ್ಧಾಳುಗಳೂ ಆದ ಮೊಗೇರರೆಂಬ ಅಂಬಿಗರಿರುತ್ತಾರೆ (ಕನ್ನ೩. ೯೩). **ಮೊಗವೀರ :** ಕಡಲಲ್ಲಿ ತಮ್ಮ ಭಾಗ್ಯವನ್ನು ಅರಸಲು ಹೋದ ಮೊಗವೀರರ ದೋಣಿಗಳು ಪುಟ್ಟ ಬಾತುಕೋಳಿಗಳಂತೆ ಕಾಣುತ್ತಿದ್ದುವು (ಕಡಲು. ೭-೫೩) ; ತರುವಾಯ ಮೊಗವೀರ ಹುಡುಗಿಯರನ್ನು ಬ್ರಾಹ್ಮಣಕನ್ಯೆಯರನ್ನಾಗಿ ಪರಿವರ್ತಿಸಿ . . . ಮದುವೆ ಮಾಡಿಕೊಂಡರು (ದೀಪಹೊ. ೪೪). [← ತುಳು. ಮೊಗೇರೆ]

**ಮೊಗೇರತಿ** (ನಾ). ಬೆಸ್ತರವಳು ; ಮೀನುಗಾತಿ : ಯಾರೋ ತನ್ನೇತೆಯೇ ತಡ ಮಾಡಿ ಹೊರಟ ಮೊಗೇರತಿ ಇರಬೇಕು (ಹೊಸಕ್ಷ. ೫೦).

[ಮೊಗೇರ + – ತಿ$_1$ (< – ಇತ್ತಿ)]

**ಮೊಗ್ಗಂಬ** (ನಾ). ಮೊಗ್ಗುಗಳನ್ನೇ ತನ್ನ ಬಾಣಗಳಾಗಿ ಉಳ್ಳವನು ; ಮನ್ಮಥ : (ಶಶುಂ. ೩. II. ೯೫).

[ಮೊಗ್ಗು$_3$ (< ಮೊಗ್ಗೆ) + ಅಂಬು$_2$ + – ಅ$_7$]

**ಮೊಗ್ಗರ,** ಮೊಕರ (ನಾ). ೧. ಮೊತ್ತ ; ರಾಶಿ : "ಮೊತ್ತಮೊಬ್ಬುಳಿಯು ಮೊಗ್ಗರಂ" (ಶಬ್ದಾಂ. ೧೦೭) ; ಅಬಲೆಯ ಕಣ್ಣ ಬೆಳಗಿಂಗೆ ಬೆದಱಿ ಕಬ್ಬುಲೆಯ ಮೊಗ್ಗರಂ ಮುಗುಳ್ದು ಮೂದಲಿಸಿ ಕವಿವಂತೆ (ಅರ್ಜನೀ. ೪-೫೦ ವ) ; ಕೋರಕದ ಕುಟ್ಮಲದ ಮೊಗ್ಗೆಯ ಮೊಗ್ಗರ ಗಳನಾಯ್ದು ಕೊಯ್ದು (ಅನಂಪು. ೭-೧೪ ವ). ೨. ಗುಂಪು ; ತಂಡ ; ಸಮೂಹ : ಕರಿಗಳ ಮೊಗ್ಗರವ ಮೆದೆಗೆಡಹಿದನು (ಕುಮಾ.ಭೀ. ೬-೪೭) : ಹೆಗ್ಗರಡಿಯ ಹಿಂಡಿದೆ ಕಾಳ್ಕೋಣನ ಮೊಗ್ಗರವಿದೆ (ಕುಮಾರಾಂ. ೨೭-೬೦) ; ಮುಗ್ಗಿಯನು ಗುಣಿಸುವ ಮೊಗ್ಗರದ ಜೋಯಿಸರು ಅಗ್ಗವನು ಮಳೆಯನಱಿಯರು (ಸರ್ವಜ್ಞ. ೧೭೦೪). ೩. ದಂಡು ; ಸೈನ್ಯ : ಬಲ : "ಮೊಗ್ಗರಮೆನೆ ಬಲಂ" (ಶಾರ. ೧೭) ; ಬಿಲ್ಲನೀಟ್ದುಕೊಂಡೆತ್ತುತೆ ಮೊಗ್ಗರಂ ಕೆಡೆವಿನಂ ಬಿಡದೆಚ್ಚ (ಚಂದ್ರಪು. ೫-೧೦೧) : ಮೊಗ್ಗರವ ಕೆದಱಿದರು ಹೊಯ್ದರೆ ನುಗ್ಗಿದರು (ಕುಮಾ.ದ್ರೋ. ೪-೯) ; ಲಗ್ಗೆ ಮಸಗಿತು ಕೂಡೆ ರಕ್ಕಸ ಮೊಗ್ಗರದ ಮುಂಬಿನಲಿ (ತೊರರಾ. ೭-೨೦-೫೦). **ಮೊಕರ :** ೪. (ಸೈನಿಕರ) ಪಂಕ್ತಿ ; ಸಾಲು : ಎಟ್ಟಿದಿಸ್ವರು ನರಮೊಕರಮನೊಡೆದೊಡಪ್ಪಡೆತ್ತದು ಫಣಿ ಸೂಪ್ರ್ಬಲ ನೆಲ್ಲುಪಾಣ್ಣಿಯುವಳೆವದು (ಮೈಶಿಂ. ೧೯೩೦. ೩೭-೭ ; ಸಂ. ಹಸೆದು ೪೪). [ದೇ.॥ ತೆಲು. ಮೊಗ್ಗರ, ಮೊಗರ]

**ಮೊಗ್ಗರಂಬಾಯ್,** ಮೊಗ್ಗರವಾಯ್ (ಕ್ರಿ). ಒಟ್ಟಾಗಿ ನುಗ್ಗು : ಗುಂಪಾಗಿ ಮೇಲೆ ಬೀಳು : ಮುಂ ಗುಡಿಗೆದಱಿ ಮೊಗ್ಗರಂಬಾ[ಶಾಶಾಂ. ಬೊ. ಪಾ. ಬ]ಯ್ದು (ಪಂಬಿರ. ೧೬-೩೫). **ಮೊಗ್ಗರವಾಯ್ :** ಮಾರಿ ಕನಲ್ದು ಸಂಗರಕೆ ಮೊಗ್ಗರವಾಯ್ದುವೊಲ್ (ದಶಕು. ೭-೭೫) ; ಉಲಿದು ಘೂರ್ಮಿಸಿ ಕೆರಳಿ ಮೊಗ್ಗರವಾಯ್ದುದೆ ಬಱಿದೆ (ಪ್ರಭುಲೀ. ೦೩-೧೧).

[ಮೊಗ್ಗರ + ಪಾಯ್$_1$]

**ಮೊಗ್ಗರಂಬೊಯ್** (ಕ್ರಿ). ಗುಂಪಾಗಿ ನುಗ್ಗಿ ಹೊಡೆ, – ಧಾಳಿಮಾಡು : ಮಸಗಿ ಬೊಬ್ಬಿಟ್ಟು ಪೆಸೆಸೆಗೆ ಪರಿದು ಮೂದಲಿಸಿ ಮುಂಗುಡಿಗೆದಱಿ ಮೊಗ್ಗರಂಬೊಯ್ದು (ಗಂಕ. ೬-೭೭ ವ). [ ಮೊಗ್ಗರ + ಪೊಯ್$_1$ ]

**ಮೊಗ್ಗರಣೆ** (ನಾ). ಒಂದು ಬಗೆಯ ಆಯುಧ : ಗದೆ ಚಂದ್ರಹಾಸ ಪಿಚಂಡಿ ಮೊಗ್ಗರಣೆ ಕೃಪಾಣ ದಂಡರತ್ನಾಯುಧಾವಳಿಗಳಿದ್ದುವು ಸರ್ಪಮಂಡಲವೆನೆ ಭುಗಿಲಿಡುತ (ಭರತ. ೨೦-೦೩೩). [ ? ]

**ಮೊಗ್ಗರವಾಯ್** 'ಮೊಗ್ಗರಂಬಾಯ್' ನೋ.

**ಮೊಗ್ಗರಿಸು** (ಕ್ರಿ). ಒಟ್ಟಾಗು ; ಸೇರು ; ಗುಂಪುಗೂಡು : ಬಗ್ಗಿಸಿ ಮೊಗ್ಗರಿಸುತ್ತೊಗ್ಗುಗೆಡದೆ ನಡೆಗೋಂಟೆಯಂತೆ ನೆಲೆವೆರ್ಚೆ ನಿಂದು (ಗಂಕ. ೬-೫೫ ವ); ಆರ್ವ ಪೋರ್ವ ಮೊಗ್ಗರಿಪ ತೊಡಂಕುಪಗ್ಗಲಿಪ ಬನ್ನಣಮೊಪ್ಪೆ ಕಡಂಗಿ ಕಾದಿದರು (ರಾಜಶೇ. ೬-೫೩) : ಮೊಗ್ಗರಿಸಿ ಮೊರೆ ಮುಗಿಲೆ! ಮಿನುಗು ಮೊನೆಮಿಂಚೇ! (ಗೀಬಿಂ. ೪೮-೨).

[ ಮೊಗ್ಗರ + – ಇಸು$_3$ ]

**ಮೊಗ್ಗಳ** 'ಮೊಕ್ಕಳ' ನೋ.

**ಮೊಗ್ಗಿಸು$_1$** 'ಮೊಟ್ಟಿಗಿಸು' ನೋ.

**ಮೊಗ್ಗಿಸು$_2$** (ಕ್ರಿ). ಬಗುಳು : ಗಗನದೊಳಗೆ ಹುಣ್ಣಿಮೆ ಹೋದ ಮಱುದಿನ ಪಗಲೆಸೆದಿರಲಾತನೊಡಲ ಮೃಗ ಮೊಲಗಂಡು ಮೊಗ್ಗಿಸು ಪೊಂದಂದದಿ ಮೊಗವೆತ್ತಿ ಗಳಹುತೆಯ್ದಿದುವು (ಮೋಹತ. ೦೯-೦೫).

[ ಮೊಗ್ಗು? + – ಇಸು$_3$ ]

**ಮೊಗ್ಗು$_1$** 'ಮೊಟ್ಟು$_1$' ನೋ.

**ಮೊಗ್ಗು$_2$** 'ಮೊಟ್ಟು$_2$' ನೋ.

**ಮೊಗ್ಗು$_3$** 'ಮೊಗ್ಗೆ' ನೋ.

**ಮೊಗ್ಗೆ,** ಮುಗ್ಗು$_2$, ಮುಗ್ಗೆ$_1$, ಮೊಗ್ಗು$_3$ (ನಾ). ೧. ಪೂರ್ತಿಯಾಗಿ ಅರಳದೆ ಇರುವ ಹೂವು ; ಮುಗುಳು ; ಕುಟ್ಮಲ : "ಸಜ್ಜಕಮುಂ ಮುಗುಳು ಮೊಗ್ಗೆ ಕುಟ್ಮಳಮದು ತಾ" (ಶಬ್ದಾಂ. ೬೪): ಜಳಜದ ಮೊಗ್ಗೆಯಂತೆ ಮುಗುಳಂತೆ . . . ಕೆಂಪನಾಳ್ವ ಕೋಮಳಶುಕಶಾಬಕ ಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ (ಕಾದಂಪೂ. ೦೭೯) ; ಪೊಕ್ಕತ್ತು ತುಂಡಾಗ್ರದಿಂದೊಡೆದಂಭೋಜದ ಮೊಗ್ಗೆಯಂ ಮಧುಕರಂ (ಅರ್ಜನೀ. ೨-೫೭) ; ಕುಸುಮದ ಮೊಗ್ಗೆಯಲಿ ರಚಿಸಿದರು ಸಿರಿಮುಡಿಯ (ಕುಮಾ.ಆ. ೯-೨) ; ಮಲ್ಲಿಗೆಯ ಮೊಗ್ಗೆಗಳನಮಲೋತ್ಪಲ್ಲಕುಂದಪ್ರಸವದೂರ್ವ . . . ಸಲ್ಲಲಿತ ಪುಷ್ಪಂಗಳಲಿ ಭೂವಲ್ಲಭನು ಪೂಜಿಸಿದನು ಜಗದೇಕವಲ್ಲಭನ (ಜಭಾಗ. ೫-೫-೦೨). **ಮುಗ್ಗು$_2$ :** ೧. ಅವು ತದ್ದಶನನಿಕರಮಲ್ಲೆಳ ಮೊಲ್ಲೆ ಮುಗ್ಗಲ್ಲ (ಶರಸು. ೬-೭) ; ಮಾವನ ಮಗಾ ಮುಗ್ಗಾಗಿ ಬಾರೊ, ತುರುಬಿಗೆ (ಹುಟ್ಟಹ. ೯೭). **ಮುಗ್ಗೆ$_1$ :** ೧. ಚೆಲ್ಲಿದುವು ಸಹದೇವ ಶಿರದಲಿ ಮಲ್ಲಿಗೆಯ ಮು[ಶಾಶಾಂ. ಮೊ]ಗ್ಗೆಗಳು (ಕುಮಾ.ಸ. ೯-೬೫). ೨. (ಬಟ್ಟೆಯ ಮೇಲೆ ಮೂಡಿಸಿದ) ಮೊಗ್ಗಿನಾಕಾರದ ಚಿತ್ರ,— ಮಾದರಿ : ಕೆಂಪಾವರೆಮುಗ್ಗೆಯ ಕುಪ್ಪಸವ ತೊಟ್ಟಳು (ಶ್ರೀಕೃಪಾ. ೦೭). **ಮೊಗ್ಗು$_3$ :** ೧. ನನೆ ಮೊಗ್ಗು ಅರಳು ಮೊದಲಾದವರಲ್ಲಿಯು ಗಂಧವ ನಱಿವುದು (ಅದವ. ೫-೦೨) ; ಗಿಡದ ಕೈಮುಗಿಹ ಮೊಗ್ಗಾಗಿ ಮೈದೋರು ತಿದೆ (ಅಶೀ. ೨೨-೨) ; ಅಜ್ಞನ ಬುದ್ಧಿ ಮೊಗ್ಗಿನ ಹಾಗೆ, ಪ್ರಾಜ್ಞನ ಬುದ್ಧಿ ಫಲದ ಹಾಗೆ (ಗಾದೆ).

[ದೇ.॥ ತಮಿ. ಮುಕ್ಕೈ, ಮೊಕ್ಕು ; ಮಲ. ಮೊಟ್ಟು ; ತುಳು. ಮುಗ್ಗೆ, ಮೊಗ್ಗೆ ; ಕೊಡ. ಮೊಗ್ಗ್ ; ತೆಲು. ಮೊಗ್ಗ, ಮೊಗಡ; ಕುಇ. ಮೊಕೊ]

**ಮೊಗ್ಗೆಗೋಲ** (ನಾ). ಹೂವಿನ ಮುಗುಳುಗಳನ್ನೇ ಬಾಣವಾಗಿ ಉಳ್ಳವನು ; ಪುಷ್ಪಾಸ್ತ್ರ ; ಮನ್ಮಥ : ಅಗ್ಗದ ದೊರೆಯ ಕೆಳೆಯನೆಂಬ ಗರ್ವವೋ ಮೊಗ್ಗೆಗೋಲನ ಸಭೆಗಿನಿಸು ತಗ್ಗಿ ಬಾ (ಭರತ. ೪೭-೬೦).

[ ಮೊಗ್ಗೆ + ಕೋಲ್$_1$ + – ಅ$_7$ ]

**ಮೊಗ್ಗೊಡೆ** (ಕ್ರಿ). ಮೊಗ್ಗು ಅರಳು ; ಹೂವಾಗು : ಜಲಜಾಪ್ತ ಮಂಡಲಂ ಕಡುರ್ಕೈಯವಾಗೊಪ್ಪಿಡುತ್ತ ಚಿತ್ತರದೊಳೆಡೆನೊಡೆಯಲ್ ಚಕೋರಿ ಸುಖವಡೆಯಲು ರಥಾಂಗ ಮೊಗ್ಗೊಡೆಯಲಾ ಮಲ್ಲಿಗೆಗಳು (ಸಂಐಷಾ. ೨೨-೯೭). [ ಮೊಗ್ಗು$_3$ ( <ಮೊಗ್ಗೆ) + ಒಡೆ$_1$ ]

**ಮೊಘಲ್** 'ಮೊಗಲ' ನೋ.

**ಮೊಘೆ** 'ಮೊಗ್ಗೆ$_2$' ನೋ.

**ಮೊಚ್ಚಿಗ**, ಮುಚ್ಚಿಗ್ಗ$_2$ (ನಾ). ಚಪ್ಪಲಿಯನ್ನು ಹೊಲಿಯುವವನು ; ಮೋಚಿ : ದೊರೆಗಳ ಮನಮೆಚ್ಚಿನ ಮೊಚ್ಚಿಗ [ಶಾಶಾಂ. ಮುಚ್ಚಿಗ] ರಿಪರೊಂದೆಸೆಯ (ಅಕ್ಕಾಲಿ. ೩-೯೦). **ಮುಚ್ಚಿಗ$_2$** : ಎಲುವ ನಾಯಿಗ ಹೊಲೆಯಗಂ ಮಾಂಸವನು ಮು[ಶಾಣಾಂ. ಮು]ಚ್ಚಿಗಗೆ ಬಳಿಕ ತೊಪಲೆಂಬಂತೆ (ಬಸಪು. ೨೦-೪೪) ; ಗಾಣಿಗರ್ ಚಿಪ್ಪಿಗರ್ ಮುಂಚ್ಚಿಗರ್ . . . ಜೂಜು ಗಾಜರ್ ಮುಖ್ಯರೊದಗಿ ಬರುತಿರ್ಪರ್ವರು(ಚಿಐಪು. ೧೬-೯೦) ; ಮುಚ್ಚಿಗರ ಕೇರಿಯಲ್ಲಿ ಬಹಳ ಜನಗಳು ಉಳಿದಿರಲಿಲ್ಲ (ಶೀಕೃಶ್ರೀ. ೧೯೩).

[ ಮೊಚ್ಚಿ (<ಮೊಚ್ಚೆಯ) + -ಇಗ ]

**ಮೊಚ್ಚೆ** 'ಮೊಚ್ಚೆಯ' ನೋ.

**ಮೊಚ್ಚೆಗಾರ** 'ಮೊಚ್ಚೆಗಾಜಿ' ನೋ.

**ಮೊಚ್ಚೆಗಾಜಿ**, ಮೊಚ್ಚೆಗಾರ (ನಾ). ಜೋಡುಗಳನ್ನು ಹೊಲಿಯುವವನು : ಮೋಚಿ : ಮೊಚ್ಚೆಗಾಜಿ ಸಕಲಾತ್ಮೇನು ಏಲ್ಲ (ಕೆರಂಠ. ೨-೩೬-೯). **ಮೊಚ್ಚೆಗಾರ** : ಎಣ್ಣೆ ಹಂಚುವವರು ಮೊಚ್ಚೆಗಾರರು, ಕೊರವರು, ಮಾದಿಗರೇ ಮೊದಲಾದ ಜಾತಿಯ ಹೆಂಗಸರ ಮೈಸೋಕು ವುದೆಂದು ಅಜಿ ದೂರದಿಂದ ಎಣ್ಣೆ ಕೊಡುತ್ತಿದ್ದರು (ಐಐಂಠ. I, ೪೯) : ಇವನು ಮೊಚ್ಚೆಗಾರನ ಮಗನೆಂದು ಹೇಳುತ್ತಾರೆ (ಇಂಗ್ಲ್ಕಾ. ೨೦).

[ ಮೊಚ್ಚೆ (<ಮೊಚ್ಚೆಯ) + -ಕಾಜಿ ]

**ಮೊಚ್ಚೆಯ**, ಮುಚ್ಚೆ$_3$, ಮೊಚ್ಚೆ, ಮೋಜ, ಮೋಜಾ, ಮೋಜು$_1$ (ನಾ). ೧. ಮುಂಭಾಗದಲ್ಲಿ ಒಳಮುಖಕ್ಕೆ ಬಾಗಿರುವ, ಅಲಂಕಾರ ಯುಕ್ತವಾದ ಒಂದು ಬಗೆಯ ಮೆಟ್ಟು,—ಪಾದರಕ್ಷೆ,—ಜೋಡು : ಚಿನ್ನದ ಸವಂಗಮಪೂರ್ವದ ಮೊಚ್ಚೆಯಂ ಪವಣ್ಬಡೆದ ಸುವರ್ಣಪಾರಿವದ ಕುಪ್ಪಸಮೊಪ್ಪೆ ಬೆಡಂಗನಾಳ್ದು (ಶಂಶಪಾ. ೯-೦೦೩) : ಗುಡಿ ನೇಣ್ ಕಂಟಣೆ ಗೋಣಿ ದಂಡಿಗೆ ಸವಂಗಂ ಮೊಚ್ಚೆಯಂ ಹಲ್ಲಣಂ . . . ಎಂಬಿವಿನಿತುಂ ದಂಡಿಂಗೆ ಸಾಮಗ್ರಿಗಳ್ (ಜಿತ್ಕಿಸು. ೦೮-೨೩) ; ಶಿರದೊಳಾಂತರು ಮೊಚ್ಚೆಯವನಾ ಚರಣದಲಿ ಸೀಸಕವ . . . ಬತ್ತಳಿಕೆಯನು ಬಲುದಿರುವಿನಲಿ ಮೋಹಿದರು (ಕುಮಾರಭ್ರಾ. ೮-೯೩). **ಮುಚ್ಚೆ$_3$** : ೧. ನಿಚ್ಚಳಗೆಲಸ ರೇಶಿಮೆಚಿತ್ರಗೆಲಸದ ಹೆಚ್ಚಿನ ಜರತಾರ ಕೆಲಸ ಮೆಚ್ಚುವಂದದಿ ಮುಚ್ಚಿ ತರತರ ಮಾಡುವ ಮುಚ್ಚಿಗಾಜಿರ ಕೇರಿಯೆಸೆಯೆ (ಅಪ್ಪಲಿ. ೩-೯೦) ; ಬಾಗಿಲ ಬಳಿಯಲ್ಲಿ ವಿಜಾಪುರದ ಮುಚ್ಚೆಯ ಜೋಡುಗಳು (ಶಿತುಗು. ೩೦) ; ಮಾದಿಗರಿಂದ ಮುಚ್ಚೆಯನ್ನು, ಪುರೋಹಿತರಿಂದ ಮಂತ್ರವನ್ನೂ . . . ಪಡೆಯಬೇಕಾಗುತ್ತದೆ (ಪತಿಪಾದ. ೦೦೯). **ಮೊಚ್ಚೆ** : ೧. ಕಿಚ್ಚಿಗೆ ತಣವಿಲ್ಲ ಮೊಚ್ಚೆಗೆ ಹೊಲೆಯಿಲ್ಲ (ಸರ್ವಜ್ಞ. ೯೬೯) ; ಮದುವೆಯಲ್ಲಿ ವರನಿಗೆ ಕೊಡುವುದು ಕಾಲ್ಮರೆಯಲ್ಲ ; ಮೊಚ್ಚೆ (ಕರ್ನಾಟಪು. ೧೯೭) ; ಕಾಲಲ್ಲಿ ಪುಣೆಯ ಮೊಚ್ಚೆಗಳಿದ್ದು ಕೈಯಲ್ಲಿ ಬೆತ್ತದ ಛಡಿಯಿತ್ತು (ದೇವಶಿ. ೮). **ಮೋಜ** : ೧. " ಹರಡಿನ ಮೇಲಕ್ಕೆ ಒಂದು ಪಾದವನ್ನೆಲ್ಲಾ ಮುಚ್ಚುವ, ಪೂರ್ತಿಯಾಗಿ ಅಥವಾ ಬಹುಭಾಗ ಚರ್ಮದಿಂದ ಮಾಡಿದ, ಪಾದರಕ್ಷೆ ; ಮೋಜ ; ಬೂಟು" (Boot. ೩೦೪೬) ; ಅವರು ಹೊಸ ಚಕ್ಕಳದ ಮೋಜಗಳನ್ನು ಹಾಕಿಕೊಂಡು (ಬಾಳಕ. ೭). **ಮೋಜಾ** : ೧. ಕಾಲಿಗೆ ಬೆಲೆಯುಳ್ಳ ಮೋಜಾ ಧರಿಸಿ ಸುಬ್ಬಣ್ಣನವರು ಸಭೆಗೆ ದಯಮಾಡಿಸುತ್ತಿದ್ದುದೇ ಒಂದು ವೈಖರಿ (ಸಂಗೀತಂ. ೨೬೩). **ಮೋಜು$_1$** : ೨. ಪಾದತಳದಿಂದ ಹಿಡಿದು ಮಂಡಿಯವರೆಗೂ ಬರುವಂತಹ, ಚಿನ್ನದ ಗಿಲೀಟು ಹಾಗೂ ಸರಿಗೆಗಳಿಂದ ಕೂಡಿದ ಒಂದು ಬಗೆಯ ಕಾಲುಚೀಲ : ಮಂಡಿಯವರೆಗೆ ಬರುವಂಥ ಬಹು ಲಕ್ಷಣವಾದ ಮೋಜುಗಳನ್ನು ಹಾಕಿಕೊಳ್ಳುತ್ತಾರೆ. ಈ ಮೋಜುಗಳಿಗೆ ಚಿನ್ನದ ಗಿಲೀಟು ಮತ್ತು ಸರಿಗೆ ಹಾಕಿರುತ್ತಾರೆ (ಕೃಐಇ. II, ೨೬೬).

[ < ಪ್ರಾ. ಮೋಚಅ. / ಸಂ. ಮೋಚಕ. / ಪಾರ. ಮೂಜಾ, ಮೋಜಹ್ ; ಹಿಂ. ಮೋಜಾ ; ಮರಾ. ಮೋಚಾ, ಮೋಜಾ ]

**ಮೊಟಕಿಸು** (ಕ್ರಿ). ೧. ಕುಗ್ಗಿಸು ; ಕಡಮೆಮಾಡು : ನನ್ನ ಪ್ರಶ್ನಾವಳಿಯನ್ನು ಇಲ್ಲಿಗೆ ಮೊಟಕಿಸಿದೆ (ಹಸುಹೊ. ೨೬೯). ೨. ಬಗ್ಗಿಸು ; ಬಾಗಿಸು: ಆತ ಕಾಲು ಮೊಟಕಿಸಿಕೊಂಡು, ಮೇಲಕ್ಕೆದ್ದು ನಿಂತ (ಕಾಂತಕೊ. ೭೬).

[ ಮೊಟಕು$_2$ + -ಇಸು$_3$ ]

**ಮೊಟಕು$_1$**, ಮಟಕು$_1$ (ಕ್ರಿ). ತಲೆಯನ್ನು ಮುಷ್ಟಿಯಿಂದ ಗುದ್ದು,—ತಿವಿ : ಮೊಟ್ಟು : ಪಾಠದ ಕಡೆಗೆ ನಿಗವಿಲ್ಲದೆ ಕಿಟಕಿಯಾಚೆಗೆ ನೋಡುತ್ತಿದ್ದ ಹುಡುಗನ ತಲೆಗೆ ಮಾಸ್ತರು ಮೊಟಕಿದರು (ಕೂಇ). **ಮಟಕು$_1$** : ಲೆಕ್ಕ ಸರಿಯಾಗಿ ಮಾಡಲಿಲ್ಲವೆಂದು ಅವನು ತಂಗಿಯ ತಲೆಗೆ ಮಟಕಿದ (ಕೂಇ).

[ < ಮೊಟ್ಟು$_1$ ]

**ಮೊಟಕು$_2$**, ಮಟಕು$_2$ (ನಾ). ೧. ಮೋಂಡಾದುದು ; ಮೋಟು ; ಚಿಕ್ಕದು : (ಕ). (ಗು). ೨. ಮೊಂಡಾದ ; ಮೋಟಾದ ; ಚಿಕ್ಕದಾದ : ಮೊಟಕು ಮೂಗು, ಅಗಲ್ಬಾಯಿ (ಶ್ರೀರಾಕ. ೭೭). **ಮಟಕು$_2$** : ೩. ಹ್ರಸ್ವವಾದುದು ; ದೀರ್ಘವಲ್ಲದುದು.

ಮಟಕುಮಟಕಾಗಿ = ಹ್ರಸ್ವವಾಗಿ ; ದೀರ್ಘವಾಗಿಲ್ಲದೆ : ಯಾವ ಅಶ್ವಗಳು ಮಟಕುಮಟಕಾಗಿ ಸೂಕ್ಷ್ಮವಾಗಿ ಗದ್ಗದವಾಗಿ . . . ವರಾಹ ಉಷ್ಟ್ರ ಮೊದಲಾದ್ದಕ್ಕೆ ಸಮಾನವಾಗಿಯಿರುವ ಧ್ವನಿಯುಳ್ಳವೊ ಆ ಕುದುರೆಗಳು ಶುಭಕರಗಳಲ್ಲ (ಶ್ರೀಗಂ೦. ೩೦೩-೦). **ಮೊಟಕಾಗು** = ಕುಗ್ಗು ; ಕಡಮೆಯಾಗು ; ಚಿಕ್ಕದಾಗು : ಮಾನನಷ್ಟದ ಆಪಾದನೆಯಿಂದ ಪತ್ರಿಕಾ ಸ್ವಾತಂತ್ರ್ಯ ಮೊಟಕಾಗುವಂತಿತ್ತು (ಕೃಐಸರು. ೩೬೩) : 'ಮತ್ತೆ ಭೆಟ್ಟಿಯಾಗೋಣ' ಎಂದಿಷ್ಟೇ ಮೊಟಕಾಗಿ ನುಡಿದು . . . ಮುಖವನ್ನು ಹೊರಳಿಸಿದಳು (ಹೊಸಕ್ಕಿ. ೦೯೯). **ಮೊಟಕುಮಾಡು** = ಕುಗ್ಗಿಸು ; ಕಡಮೆ ಮಾಡು : ತಮ್ಮ ಅತ್ಯಂತ ತನದ ದರ್ಪವನ್ನು ಮೊಟಕುಮಾಡಿದರು (ಕದ್ಗಸ. ೦೭) ; ಹಕ್ಕಿಗಳು ಚಿಲಿಪಿಲಿಯನ್ನು ಮೊಟಕುಮಾಡಿ . . . ಉಳಿತವು (ಹಸುಹೊ.೩೦೦): ಅವರ ಆಸೆಗಳನ್ನು ಮೊಟಕು ಮಾಡಬಾರದು (ಶಿಕ್ಷದ. ೦೪೯).

[ < ಮಟ್ಟು$_1$ / ನಾಯ್ಕ. ಮೊಟ್ಟುಕ್ ]

**ಮೊಟಲೆ** (ನಾ). ಒಂದು ಬಗೆಯ ಸಸ್ಯ : ವನಸಂಪಿಗೆ, ಮೊಟಲ, ಕಿರಿಮೊಟಲೆ . . . ಲತೆಗಳಿಂದಲು (ಶೃವಾಶ. ೫೦). [ ? ]

**ಮೊಟವಣ** (ನಾ). ಒಂದು ಬಗೆಯ ತೆರಿಗೆ : ತೆರುವ ಸಿದ್ಧಾಯ ಗ ೨೩೨ ಪ ೮ ಹೊದಕೆ ಗ ೨೦ ತೂಕದ ಕುನ್ನ ಮೊಟವಣ ಗ ೩ ನೆರೆಯ ಕಾಣಿಕೆ ಗ ೧ (ಎಕ. XV, ಬೇಲೂರು, ೨೯೮-೩೦; 1278). [ ? + ಪಣ$_3$ ]

**ಮೊಟ್ಟ** 'ಮಟ್ಟ$_1$' ನೋ.

**ಮೊಟ್ಟನೆ** (ಅ). ಒಂದು ಅನುಕರಣಾವ್ಯಯ : ಮೊಟ್ಟನೆ ಮುಜೀದ ಲುಗಳುಂ ಸಿಡಿಲ್ದು ಪಾಱುವ ಸಿರ್ಂಗಳುಂ . . . ಮಹಾಭಯಂಕರ ಮಾಗೆ (ಪಂಹಾಸೇ. ೦೨-೩೪ ವ). [ ಮೊಟ್ಟು$_?$ + -ಅನೆ$_1$ ]

**ಮೊಟ್ಟಯಿಕ್** 'ಮಟ್ಟಯಿಕ್' ನೋ.

**ಮೊಟ್ಟಿತ** (ನಾ). [ನಾಟ್ಯ] ಆಯತ, ಅವಹಿತ್ಥ, ಅಶ್ವಕ್ರಾಂತ, ಗತಾಗತ, ವಲಿತ, ಮೊಟ್ಟಿತ, ವಿನಿವರ್ತಿತಗಳೆಂಬ ಏಳು ಬಗೆಯ ಸ್ತ್ರೀಸ್ಥಾನಕಗಳಲ್ಲಿ ಒಂದು; P "ಒಂದು ಕಾಲನ್ನು ಸ್ವಭಾವವಾಗಿರಿಸಿ ಇನ್ನೊಂದು ಕಾಲನ್ನು ಅರ್ಧ ಕುಂಚಿತ ಮಾಡಿ, ಮುಂದುಗಡೆ

ಕೈಗಳನ್ನು ಮೇಲಕ್ಕೆತ್ತುವುದು : ಕಾಮಾವಸ್ಥೆಯನ್ನು ತೋರಿಸುವಾಗ ಇದನ್ನು ವಿನಿಯೋಗಿಸಬೇಕು '' (ಅಸ್ಕರ೦. ಗದ್ಯ,ಸಂವಾದ. ೩೪೯) : ಒಂದು ಪದಂ ಸಮದಿಂ ಮತ್ತೊಂದು ಪದಂ ಕುಂಚಿತಾರ್ಥತಲದಿಂ ಮತ್ತಂ ಮುಂದಿರೆ ಕೈಗಳ್ ನಲವಿಂ ಚಂದದೆ ಮೇಲಕ್ಕೆ ನೆಗೆಯೆ ಮೊಟ್ಟಿತ ಮೆನಿಕುಂ (ಅಸ್ಕರ೦. ೭-೩೦). [ < ಸಂ. ಮೋಟಿತ ]

**ಮೊಟ್ಟು₁** 'ಮೊತ್ತ' ನೋ.

**ಮೊಟ್ಟು₂** (ನಾ). ಮುಷ್ಟಿಯಿಂದ ಕೊಡುವ ಹೊಡೆತ. — ಮಟು : ಕಾದಾಟದಲ್ಲಿ ಅವನಿಗೆ ನಾಲ್ಕು ಮೊಟ್ಟು ಬಿತ್ತು (ರೂಢಿ). [< ಮೊಟ್ಟು₁]

**ಮೊಟ್ಟು₃** 'ಮಟ್ಟೆ₂' ನೋ.

**ಮೊಟ್ಟೆ₁** 'ಮಟ್ಟೆ₁' ನೋ.

**ಮೊಟ್ಟೆ₂** (ನಾ). ತತ್ತಿ ; ಅಂಡ : '' ಪೇಶೀ, ಕೋಶಃ. ಅಂಡಂ — ಈ ೩ ಮೊಟ್ಟೆ'' (ಕರ್ನಾಟಕ. ೪೦-೯೭) ; ಮೊಟ್ಟೆಗಳನು ಮಾಱುವ ಬೇಹಾರಿಗಳೆಟ್ಟಣಿಸುತಲ್ಲೈದಿದರು (೪೦ನಪಿ. ೦೦-೪೦) ; ಹಕ್ಕಿಯ ಗೂಡಿನ ಮುತ್ತಿನ ಮೊಟ್ಟೆಯೋ (೪೫೮೬. ೩೦-೩) ; ಕೇಡುಗಾಲಕ್ಕೆ ನಾಯಿಮರಿ ಮೊಟ್ಟೆ ಇಕ್ಕಿತು (ಗಾದೆ). [ದೇ.॥ ತಮಿ. ಮುಟ್ಟೈ ; ಮಲ. ಮುಟ್ಟ, ಮೊಟ್ಟ : ಕೊಡ. ಮುಟ್ಟೆ ; ಕೋತ. ಮೊಟ್ : ತುಳು. ಮೊಟ್ಟೆ]

**ಮೊಟ್ಟೆ₃** 'ಮೂಡೆ' ನೋ.

**ಮೊಟ್ಟೆ₄** 'ಮಟ್ಟೆ₁' ನೋ.

**ಮೊಟ್ಟೆ₅** (ನಾ). (ಎತ್ತುಗಳನ್ನು ಹೂಡಿ) ಬಾವಿಯಿಂದ ನೀರನ್ನು ಎತ್ತಲು ಬಳಸುವ ಒಂದು ಸಾಧನ, —ಚರ್ಮದ ಚೀಲ; ಕಪಿಲೆ : '' ಸಮುದ್ರದ ತಿತ್ತಿಯಂಡಂಗಳೊಳ್ಮೊಟ್ಟೆ'' (ಶ್ರೀವಸಂ. ೯೦); ಹಳ್ಳದ ನೀರು, ಹೊಳೆಯ ನೀರು, ಭಾವಿಯ ಮೊಟ್ಟೆಯ ನೀರು (ಕೃಷಿಶ್ರ. ೩೪); ಮೊಟ್ಟೆಯ ಹಗ್ಗವನ್ನೆಳೆದುಕೊಂಡು ಮುಂದೆ ಹೋಗುವುದು. . . ಮತ್ತ ನಿಧಾನವಾಗಿ ಹಿಂದೆ ಹಿಂದೆ ಬರುವುದು (ನ್ಯಾಕಂಕ್ಕ. ೬೪).

**ಮೊಟ್ಟೆಹೊಡೆ** = ಕಪಿಲೆಯ ಮೂಲಕ ಬಾವಿಯ ನೀರನ್ನೆತ್ತು; ಕಪಿಲೆಹೊಡೆ : ಆಮೇಲೆ ಹತ್ತಿರದಲ್ಲಿರುವ ಒರತೆ, ಹಳ್ಳಗಳೊಳಗಿಂದ ಮೊಟ್ಟೆಹೊಡೆದು ನೀರು ಕೊಡುವರು (ಮುಂಬಯಿ. ೩-೨೦೭): ಕಟ್ಟು ಬೇಲಿಯ ಭದ್ರ ಮೊಟ್ಟೆಹೊಡೆ ದಿನದಿನವು (ನಂಮು. ೨೨-೨೦); ಮೊಟ್ಟೆ ಹೊಡೆಯುವ ಸಪ್ಪಳ. . . ಪಾರ್ಶ್ವಸಂಗೀತವಾದಂತಿತ್ತು (ಗ್ರಕ್ಕಶ. ೦೨೭).

[← ಮರಾ. ಮೋಟ್]

**ಮೊಟ್ಟೆಕಟ್ಟು** 'ಮೂಡೆಗಟ್ಟು₁' ನೋ.

**ಮೊಟ್ಟೆಕಾಱ**, ಮೊಟ್ಟೆಗಾರ (ನಾ). ಗಂಟು, ಮೂಟೆ ಹೊರುವವನು : ಮೊಟ್ಟೆಕಾಱರು ತಂದು ಮಾಱಿದ ಭತ್ತ,ಧಾನ್ಯವೊಳಗಾಗಿ ಹೊಂಗೆ ಮಾನವೊಂದು (ಕ್ಕ. II, ೨೦-೨೨; 1147). **ಮೊಟ್ಟೆಗಾರ :** ಬೀದಿಯ ಮೊಟ್ಟೆಗಾರರು, ಕೂಲಿಯ ಆಳುಗಳು ಕೂಡ ನಿಶ್ಚಿಂತೆಯಿಂದ ಓಡಾಡುತ್ತಾರೆ (ಇಕ್ಕ೪. ೨೬೩). [ಮೊಟ್ಟೆ₃ (< ಮೂಡೆ) + — ಕಾಱ]

**ಮೊಟ್ಟೆಕೋಳಿ** (ನಾ). ಮೊಟ್ಟೆ ಇಡುವ ಕೋಳಿ ; ಗಬ್ಬದ ಕೋಳಿ : ಸಾಯಂಕಾಲ ಮೊಟ್ಟೆಕೋಳಿ ಕೊಯ್ಸಿಸಿ, ಹಸುವಿನ ತುಪ್ಪ ಹಾಕಿ ಅಡುಗೆ ಮಾಡಿಸಿ, ಕಟ್ರಿ ಆಗುವಂತೆ ತಿನ್ನಿಸಿದರು (ನಪ್ನೂರು. ೨೭); ನೀನು ಹೊಟ್ಟೆ ಕಿಚ್ಚಿನ ಮೊಟ್ಟೆಕೋಳಿಯಾಗಿದ್ದೆ (ಹಾಪುತ. ೪).

[ಮೊಟ್ಟೆ₂ + ಕೋಳಿ₁ (<ಕೋೞಿ₁)]

**ಮೊಟ್ಟೆಗಟ್ಟು** 'ಮೂಡೆಗಟ್ಟು₁' ನೋ.

**ಮೊಟ್ಟೆಗಾರ** 'ಮೊಟ್ಟೆಕಾಱ' ನೋ.

**ಮೊಟ್ಟೆಗೂಳ್** (ನಾ). ಪೊಟ್ಟಣ ಕಟ್ಟಿದ ಆಹಾರ ; ಬುತ್ತಿ : ಕಾಡ ಮುಳು ನಟ್ಟು ಕುಂಟುವ ಪದಂ ಬೆನ್ನ ಬಿಗುಹಳಿದೆಲ್ಲ ಮೊಟ್ಟೆಗೂಳಿಡಹಿ ಕೆಡೆದೊಡೆದ ಮೊಳಕಾಲ್ ತೇಕುವಳ್ಳೆಗಳುವೆರಸೊಱಲುತ ಕಟ್ಟೋಡುತಿರಲು (ಪಕಶಾ. ೭-೧೭). [ಮೊಟ್ಟೆ₃ (< ಮೂಡೆ) + ಕೂಳ್ (<ಕೂೞ್₁)]

**ಮೊಟ್ಟೇರು** (ನಾ). ಪೆಟ್ಟು ಬಿದ್ದಾಗ ರಕ್ತ ಸುರಿಯದೆ ಉಂಟಾಗುವ ಊತ : ಮೂಗೇಟು : ಕೈಗೆ ಬರಿಯ ಮೊಟ್ಟೇರಾಯಿತು, ರಕ್ತ ಹೊರ ಬರಲಿಲ್ಲ (ರೂಢಿ). [ಮೊಟ್ಟು₁ (< ಮೊತ್ತು) + ಏರು₀ (< ಏಱ್₄)]

**ಮೊಡಕು** 'ಮುಡುಕು₂' ನೋ.

**ಮೊಡಗು** 'ಮಡಗು' ನೋ.

**ಮೊಡಮೆ** 'ಮೊಡವಿ' ನೋ.

**ಮೊಡವಿ**, ಮಡಿಮೆ, ಮಡುವೆ, ಮೊಡಮೆ, ಮೊಡವು, ಮೊಡವೆ (ನಾ). ಪ್ರಾಯಕ್ಕೆ ಬಂದಾಗ ಮುಖದ ಮೇಲೆ ಏಳುವ ಬೊಕ್ಕೆ ; ಹರೆಯದ ಬೊಕ್ಕೆ : ಕೌಂಕುಳನೆತ್ತಿ ಕಂಪನಾರಯ್ಯುತುಮೊತ್ತುತುಂ ಮೊಡವಿಯುಂ ಮೊಗಮುಂ ಮೃಗನೇತ್ರೆ ದರ್ಪಣಕ್ಕುಯ್ವುದುಂ (೦೬ಲಾವ. ೭-೩೦) ; ಮೊಡವಿ ಮೂಡಿದ ಮೊಗಂ ಸೊಗಡುಗಂಪೊಗೆದ ಮೈ (ಕೃಮಿಚಾ. ೦೬-೨೩) ; ಮೊಡವಿಗಳಂತೆ ಮೂಡೆ ಪೊಸ ಮೊಗ್ಗೆಗಳಾ ಮಧುದೂತಿಯಲ್ಲಿ (ರಾಜಶೇ. ೯-೪೬). **ಮಡಿಮೆ :** ಅಪಚೂರ್ಣಗಳನ್ನು ಉಜ್ಜುವುದರಿಂದ . . . ಮಡಿಮೆ, ಬಂಗು ಮುಂತಾದುವು ಉಂಟಾಗುವುದಿಲ್ಲ (ಕವಕೋ. I. ೩೭). **ಮಡುವೆ :** ಪ್ರಾಯ ಬಂದ ಗಿಡಕ್ಕೆ ಮಡುವೆಗಳೆದ್ದ ಹಾಗೆ ಮಲ್ಲಿಗೆ ಮೊಗ್ಗುಗಳು ಗಿಡದಲ್ಲಿ ಮೂಡಿದ್ದವು (ಅವತಂ. ೬) ; ಮುಖದ ಮೇಲೆಲ್ಲಾ ಮಡುವೆಗಳು ಹರಡಿಕೊಂಡಿದ್ದವು (೪೦ಕಡ. ೦೪೬); ಮುಖದ ಮೇಲಿನದೊಂದು ಮಡುವೆಯನ್ನು ಮರೆಮಾಡಿಕೊಳ್ಳುತ್ತಿದ್ದನು (ನಾಲ್ಕು. ೬೬). **ಮೊಡಮೆ :** ಯಾವ ಮದ್ದು ಹಾಕಿದರೂ ಮುಖದ ಮೇಲಿನ ಮೊಡಮೆ ಕಡಿಮೆಯಾಗಲೇ ಇಲ್ಲ (ರೂಢಿ). **ಮೊಡವು :** ಸಿರಿಸ ಬೀಜವಂ ಗೋಮೂತ್ರದಲ್ಲರೆದು ಪೂಸೆ ಮೊಡವು ಮಾಣ್ಗುಂ (ಖಿಪ್ನಿ. ೬೩). **ಮೊಡವೆ :** ನನೆಗಳಿಂಬಿನಂ ಮುದ್ದುಮೊಗದಿ ಮೊಡವೆ ತೋಱಿ (ನಾಗಕು. ೩-೨). [ ದೇ.॥ ಮಲ. ಮುತುಕ್ಕ; ತೆಲು. ಮೊಟಿಮ ]

**ಮೊಡವು** 'ಮೊಡವಿ' ನೋ.

**ಮೊಡವೆ** 'ಮೊಡವಿ' ನೋ.

**ಮೊಡೆ** (ನಾ). ದುರ್ನಾತ : ಕೊಳಕುನಾತ : 'ಮೊಡೆನಾತ' ಪರಾ. [ ದೇ.॥ ತಮಿ. ಮುಟೈ ; ಮಲ. ಮುಡ, ಮುಡಯು ]

**ಮೊಡೆನಾತ** (ನಾ). ಕೆಟ್ಟವಾಸನೆ ; ದುರ್ಗಂಧ : ಪೆಣಮೆಂಬ ಪೆಸರಾಗಿ . . . ಮೊಡೆನಾತಕಡೆಯಾಗಿ (೩೬ವಸಂ. ೦೬೪-೩೨). [ಮೊಡೆ + ನಾತ]

**ಮೊಡೆನಾಱು** (ಕ್ರಿ). ಕೆಟ್ಟ ವಾಸನೆ ಬರು ; ದುರ್ಗಂಧ ಬೀರು : ರಸದ ಬಾವಿಯುಂ ಮೊಡೆನಾರ್ಪುದಂ ಕಂಡು (ವಡ್ಡಾರಾ. ೦೬೭-೬); ನಾಲ್ಕು ತಿಂಗಳ ಕೂಸಂ ಪಿಂಗಳಾಕ್ಷಿ ಎಂಬ ದೇವತೆ ಪಿಡಿದೊಡೆ ಆಗುಳಿಸುಗುಂ ಬಾಯಾಱುಗುಂ ಮೈ ಮೊಡೆನಾಱುಗುಂ (ಬಾಲಚ. ೦೨೬-೭). [ಮೊಡೆ + ನಾಱು₁]

**ಮೊಡೆವೆಣ** (ನಾ). ಕೊಳೆತ ವಾಸನೆ ಬರುತ್ತಿರುವ ಹೆಣ : ಬುಡಬುಡಿಸು ವೇೞಿಸಲಿ ದುರ್ವರ್ಣದೊಡನೆ ಸೂಸುವ ಬಸೆಯ ನಾಱುವ ಮೊಡೆವೆಣನ . . . ಕಂಡು (ಕೆಸರಾ. ೩-೯-೪). [ ಮೊಡೆ + ಪೆಣ ]

**ಮೊಣ** 'ಮೊಟ' ನೋ.

**ಮೊಣಕಾಲ್** 'ಮೊಟಕಾಲ್' ನೋ.

**ಮೊಣಕಾಲು** 'ಮೊಟಕಾಲ್' ನೋ.

**ಮೊಣಕೆಯ್** 'ಮೊಟಕೆಯ್' ನೋ.

**ಮೊಣಕ್ಕೈ** 'ಮೊಟಕೆಯ್' ನೋ.

**ಮೋಣಗಂಟು** (ನಾ). ಕಾಲಿನ ನಡುಗಂಟು ; ಮಂಡಿ : ಜಗಿತದಲ್ಲೂ ಪಾಪಗಳು ಸಮೀಪ ಬಂದು ಮೊಣಗಂಟುಗಳು ಅಗಲಿಸಿ ಕಾಲು ಮಡಿಕೆಗೊಳ್ಳಬಹುದು (ಯುಕ್ಕಾ. ೦೨೬); ಮೊಣಗಂಟಿಗೆ ನಿರಿಗೆ ಬರುವ ಕರಿಯ ಸೀರೆಯನ್ನು ಧರಿಸಿ (೬೦ಬಿದ. ೩೩). [ ಮೊಣ (< ಮೊಟ) + ಗಂಟು₁ ]

**ಮೊಣಸಂದು** ' ಮೊಳಸಂದು ' ನೋ.

**ಮೊಣ್ಣ** ' ಮುಂಡು₂ ' ನೋ.

**ಮೊಣ್ಣಮಂಡಲ** (ನಾ). ಒಂದು ಬಗೆಯ ಮಂಡಲದ ಹಾವು : ಮೊಸಳೆಯ ಹಿಡಿದ ಮೊಣ್ಣ (ಮಣ್ಣ ?) ಮಂಡಲದ ವಿಷ ಹತ್ತಿ ಜಗವೆಲ್ಲಾ ಮಸಳಿಸಿ ಮುಚ್ಚಿದೊಜಿಗಿದುದ ಕಂಡೆನಯ್ಯಾ (ಸಿದ್ಧೇಶ. ೧೨೪-೩೭೩).

[ ಮೊಣ್ಣ₂ + ಮಂಡಲ ]

**ಮೊಣ್ಣೆ** ' ಮೊಂಡಿ ' ನೋ.

**ಮೊಣ್ಣು** ' ಮುಂಡು₂ ' ನೋ.

**ಮೊತ್ತ** (ನಾ). ೧. ರಾಶಿ ; ಒಟ್ಟಿಲು : " ಮೊತ್ತಮೊಬ್ಬಳಿಯು ಮೊಗ್ಗರಂ" (ಕವಿಕಂ. ೦೦೭); ಮೊತ್ತದ ಮಾಮರನುಲಿಯಿತ್ತ ಕಂಡೆ (ಅವಹಂ. ೯೬-೪೩೯); ತಂತಮ್ಮ ಬೇರ್ಗಳ ಮೊತ್ತಕ್ಕಮೃತಾಂಬುಪೂರಮನೊಡರ್ಚುತ್ತಿರ್ಪುದೆಂಬಂತೆ. . .ಒಪ್ಪಿರ್ಪುವಿಮ್ಮಾವುಗಳ್ (ಸುಕುಮಾ. ೧-೯೩); ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೊರಬಾ. ೩-೦-೨೭). ೨. ಕೂಡಿದುದು ; ಒಟ್ಟಾದುದು : ವ್ಯಕ್ತಿತ್ವದಲ್ಲಿ. . . ಅಂಗರಚನೆ; ಅಂಗವ್ಯಾಪಾರ, ಮಾನಸಿಕಸ್ವರೂಪ ಇತ್ಯಾದಿಗಳೆಲ್ಲವೂ ಸೇರಿವೆ. ಆದರೂ ವ್ಯಕ್ತಿತ್ವ ಇವುಗಳ ಮೊತ್ತವೆಂದು ಭಾವಿಸಬೇಕು (ಶಿಕ್ಷದ. ೬೨೪); ಊರ ಜನರು ತಮ್ಮಿಬ್ಬರ ಬಗ್ಗೆ ತೋರುತ್ತಿದ್ದ ಅನಾದರದ ಬಗ್ಗೆ ತೀವ್ರವಾದ ತಿರಸ್ಕಾರ. ನೋವು ಆ ಮಾತುಗಳಲ್ಲಿ ಮೊತ್ತವಾಗಿ ಮೂಡಿದ್ದುವು (ಅಬೋಲಿ. ೭೩). ೩. ಸಮೂಹ ; ತಂಡ : "ವೃಂದಂ, ನಿಕುರುಂಬಂ, ಕದಂಬಂ–ಈ ೩ ಮೊತ್ತದ ಪೆಸರು" (ನಾಚಿರಾ. ೦೦೩); ಕೋಣೆಯ ಗಂಗನ ಮೊತ್ತಮೆಲ್ಲಮಂ ಬೆದಱಿಸಿ ವಿನಂ ತೆರಳ್ದೆ (ಎಕ. II, ೦೩೬-೦೦; 940); ಪತ್ತಿಸಾರ್ದ ಮರುಳ ಮೊತ್ತಮಂ ಬುಸ್ಸೆಂದು ಬೆದಱಿಸುವ ಹಾವಿನ ತೊಡವುಗಳೊಳಂ (ಕಬ್ಬಿಗ. ೦೬೭) ; ಮುನಿಗಳ ಮೊತ್ತದಲಿ ಹರಿಕಥೆಯ ಕೇಳುತ್ತ ಪರಮಹರುಷದಲಿ . . . ವತ್ಸರ ಹತ್ತ ನೂಕಿದಳು (ಸಂಭಪ. ೦೬-೩೩). ೪. ಒಟ್ಟು ಹಣ ; ಮೊಬಲಗು : ಅರಮನೆಯರ [ಮೊತ್ತವನೂ] ತಪ್ಪದೆ ತೆಱುವೆಉ (ಸೌಇಇ. IX-ii, ೪೩೩-೪೯; 1408); ನಾಲ್ಕೈದರಷ್ಟು ಮೊತ್ತಕ್ಕೆ ಅವನ್ನು ಹರಾಜು ಮಾಡಿ (ಕೃಮುಹ. ೦೨೨).

**ಮೊತ್ತಮೊತ್ತ** (ದ್ವಿರುಕ್ತಿ) : ಬಂದು ಪೋಪರು ಮೊತ್ತಮೊತ್ತದೆ (ಗಿರಿಬಂ. ೫೪-೩). [ ದೇ.॥ ತಮಿ. ಮಲ. ತೆಲು. ಮೊತ್ತ ]

**ಮೊತ್ತಂಗಟ್ಟು**, ಮೊತ್ತಗಟ್ಟು (ಕ್ರಿ). ೧. ಒಟ್ಟಾಗು; ಗುಂಪಾಗು : ನವಿಮರ್ಗಡಿಸುಗಂಪ ಘ್ರಾಣಿಸುವ ಷಟ್ಚರಣಾಳಿ ಪಾರ್ದಂತರಾಳದೊಳು ಸುತ್ತ ಮೊತ್ತಂಗಟ್ಟಿಯುಗಲದಿರ್ದು (ನವಮೋ. ೨೪-೯೩). ೨. ಒಟ್ಟುಗೂಡಿಸು; ಸಂಗ್ರಹಿಸು; ಸೇರಿಸು : ಅಮೃತಪಯೋಧಿಯುಂ ಮೊಗೆದು ಮೊತ್ತಂಗಟ್ಟಿ ತಂದೊತ್ತರಿಸಿ ನೀಡುವುದುಂ (ಮುಹಾಸೇ. ೬-೦೨೩ ವ). **ಮೊತ್ತಗಟ್ಟು**: ೧. ಮೊತ್ತಗಟ್ಟಿದ ರಥದ ಮುಱಿದಸು ಮೂಱುಸಾವಿರವ (ಕೌರಾ. ೩೭-೨೬); ರೋಲಂಬನಿಚಯ ಜೇಂಕರಿಸುತ್ತಲಾವರಿಸೆ. . .ಪಾದರ್ಗಂಟೊಡೆಯದೆ ಮೊತ್ತಗಟ್ಟಿ ಮೇಲೆ ಮೆರೆದವು (ನವಮೋ. ೦೦-೭೪).

[ ಮೊತ್ತ + ಕಟ್ಟು₁ ]

**ಮೊತ್ತಂಗೊಳ್** (ಕ್ರಿ). = ಮೊತ್ತಂಗಟ್ಟು ೧ : ಬ್ರಹ್ಮರ್ಷಿಗಳುಂ ದೇವರ್ಷಿಗಳುಂ ವಿಪ್ರೋತ್ತಮರುಂ . . . ಮೊತ್ತಂಗೊಂಡು ಸಾರ್ತಂದು ಧರ್ಮರಾಯನಂ ಕಂಡು (ಭಾರಸಾಂ. ೦-೨). [ ಮೊತ್ತ + ಕೊಳ್₁ ]

**ಮೊತ್ತಂಬೆಱು** (ಕ್ರಿ). = ಮೊತ್ತಂಗಟ್ಟು ೧ : ನಲಿದೇಳುತಿರೆ ಶರಣಸಮೂಹಂ ಮುತ್ತಿನ ಸತ್ತಿಗ ಮೊತ್ತಂ[ಪಾಠಾಂ. ಪೊತ್ತಂ]ಬೆತ್ತಿರೆ (ಪ್ರಭುಲಿ. ೩-೨೨ ರಗಳೆ). [ ಮೊತ್ತ + ಪೆಱು₁ ]

**ಮೊತ್ತಕಾಱ** (ನಾ). ಗುಂಪಿನ ಮುಖ್ಯಸ್ಥ,—ನಾಯಕ : ಮತ್ತಂ ಪನ್ನಪಣದ ದಾಸಿಸೆಟ್ಟಿಯುಂ ನಗರಮುಂ ಮೊತ್ತಕಾಱ ರೇವಿಸೆಟ್ಟಿಯುಂ. . . ಈ ಧರ್ಮಕ್ಕನುಕೂಲರಾಗಿ (ಸೌಇಇ. XVIII, ೭೬-೨೪; 1072); ದೇವರುಪಹಾರಕ್ಕೆ ಮೊತ್ತಕಾಱ ಬಮ್ಮಣಂ ಮುಖ್ಯವಾಗಿ (ಸೌಇಇ. XI-ii, ೦೩೨-೪೦; 1103); ಕೆಱೆಯು ಸತೆಯ ಮಹದೇವ ಗ ೧ ಮೊತ್ತಕಾಱ ಸಾಕಿ ಪ ೫ (ಎಕ. XV, ಅರಸೀ. ೨೦೭-೯; 1221).

[ ಮೊತ್ತ + –ಕಾಱ. / ತೆಲು. ಮೊತ್ತಗಾಡು ]

**ಮೊತ್ತಗಟ್ಟು** ' ಮೊತ್ತಂಗಟ್ಟು ' ನೋ.

**ಮೊತ್ತಗೊಳಿಸು** (ಕ್ರಿ). ಒಟ್ಟಿಗೆ ಸೇರಿಸು ; ಕಲೆಹಾಕು : ತನ್ನ ನಿಳಯಕ್ಕೆ ತಂದು ಮೊತ್ತಗೊಳಿಸಲು ಮುನ್ನ ಕೈಕೊಂಡುಹೋದುದಿಪ್ಪತ್ತು ಬಳಿಕುಂಬ ಹೊತ್ತಿಗೆ ಹರಿತಂದುದ್ಯೆವತ್ತಾಗೆ (ಕೋವಾಕ. ೨-೯೩).

[ಮೊತ್ತ + ಕೊಳ್₁ + – ಇಸು₃]

**ಮೊತ್ತಮೊದಲ್** ' ಮೊದಲ್₁ ' ಪರಾ.

**ಮೊತ್ತಮೊದಲಿಗ** ' ಮೊದಲ್₁ ' ಪರಾ.

**ಮೊತ್ತಮೊದಲು** ' ಮೊದಲ್₁ ' ಪರಾ.

**ಮೊತ್ತವೆತ್ತಿಸು** (ಕ್ರಿ). ಒಟ್ಟಾಗಿ ಮೇಲಕ್ಕೆ ಹಿಡಿ ; ಗುಂಪಾಗಿ ಎತ್ತಿ ಹಿಡಿ : ಪಲತೆಱದ ಸತ್ತಿಗೆಯುಮನಭವಂಗೆ ಮೊತ್ತವೆತ್ತಿಸಿ (ಸೌಭ್ರಾ. ೩೩-೩೭).

[ಮೊತ್ತ + ಎತ್ತಿಸು]

**ಮೊತ್ತವೆಱು** (ಕ್ರಿ). ಒಟ್ಟಾಗು ; ಗುಂಪಾಗು : ಎತ್ತಿ ಚೆಲ್ಲಿದ ಮಳಲು ಬೀಳದ ಮೊತ್ತವೆತ್ತಿಟ್ಟಡವಿಯಲಿ ನಮವೆತ್ತು ಬೆಳೆದಿಟ್ಟಯ ಮರಂಗಳು ಓರಿದು ಫಲವಾಗಿ . . . ಪೊಳೆಯಲು (ಬಸವ. ೬೨-೬). [ಮೊತ್ತ + ಪೆಱು₁]

**ಮೊತ್ತವೇಂಟೆ** (ನಾ). ಗುಂಪಾಗಿ ಆಡುವ ಬೇಟೆ : ಪರ್ಮರೆಯ ಬೇಂಟೆ ವಿಹಂಗದ ಮೊತ್ತವೇಂಟೆ . . . ಸಿಂಹಶರಭಂಗಳ ಬೇಂಟೆಗಳಾದಿಯಾದ ಭೀಕರಮೃಗಸಂಘಸಂತನನಸಮುಚ್ಛ್ರಿತು ಪರ್ವದರಣ್ಯಮಧ್ಯದೊಳ್ (ಗಿರಿ. ೦-೬೦). [ಮೊತ್ತ + ಬೇಂಟೆ]

**ಮೊತ್ತು**, ಮುಟ್ಟು₁, ಮೊಟ್ಟು₁ (ಕ್ರಿ). ೧. ಹೊಡೆ : ಮೋದು : ಒತ್ತುತೆ ಮೊತ್ತುವ ತೆಱದಿಂದತ್ತಿತ್ತಲ್ ಮಿಡುಕಬಾರದವಗುದ್ದತೆಯುಂ (ಧರ್ಮಾಮೃ. ೬-೯೦). ಮುಟ್ಟು₁ : ೨. ತಲೆಯನ್ನು ಮುಷ್ಟಿಯಿಂದ ಗುದ್ದು,— ತಿವಿ : ಹುಟ್ಟಾರಭ್ಯವಾಗಿ ಮಂದನಾಗಿದ್ದವಗೆ ಮುಟ್ಟಿದಲ್ಲದೆ ಬುದ್ಧಿ ಬರುವದೆಂತೊ (ಎಡಾಕ. ೦೪೪-೦). ಮೊಟ್ಟು₁ : ೨. ಘಾತಿಸಿದನೋರೋರ್ವರಿಂದಿಟ್ಟು ಗುದ್ದಿ ತಿವಿದಾ ತಳದೊಳೆರಹಿದಂ ಮೊಟ್ಟುಗ್ರಮಸ್ತಕವ ಭೂತಸತ್ತ್ವೋಪೇತನಟ್ಟುಳಿಗೆ ಬಳಲಿ (ಜವಮು. ೯-೦೬); ಹೇಳದೆ ಹೋದರೆ ತಲೆಯ ಮೇಲೆ ಮೊಟ್ಟಿ ಬೆನ್ನಿನ ಮೇಲೆ ಧಪ್ಪೆಂದು ಗುದ್ದುತ್ತಿದ್ದರು (ನಾಹೇಜ್. ೬೯); ತಲೇ ಮೇಲೆ ಮೊಟ್ಟದಿದ್ದರೆ ಇವರಿಗೆ ಭಯ ಇಲ್ಲ (ಶಕರಾ. ೦೬೬). ' ಮೋದು₁ ' ಪರಾ.

[ದೇ.॥ ತಮಿ. ಮುಟ್ಟು, ಮೊತ್ತು ; ಮಲ. ಮುಟ್ಟು ; ಕೊಡ. ಪರ್ಜಿ. ಮುಟ್ ; ತೆಲು. ಮೊಟ್ಟು, ಮೊತ್ತು]

**ಮೊದಭಾಗೆ** (ನಾ). ಒಂದು ಊರಿನ ಹೆಸರು : ಬೆಳ್ಗಱೆಯೊಡೆಯರುಂ ಮೊದಭಾಗೆವಿಟ್ಟಿದಿಪ್ಪರುಂ . . . ಸಾಕ್ಷಿಯಾಗೆ ಕೊಟ್ಟತ್ತು (ಎಕ. XII, ಗುಬ್ಬಿ. ೬೦-೯೬; 812). [ ? ]

**ಮೊದಯರ್ಸ** (ನಾ). ಒಬ್ಬಾತನ ಹೆಸರು : ಪೆರಮೆಣ್ಡ ಮಗಂ ಮೊದಯರ್ಸನೆಮಲದ ತೊರೆಗೊಳಂಳ್ಳಿಱಿದು ಸ್ವರ್ಗಾಲ (ಎಕ. X, ಶಂಕಾಮು. ೦೦೯-೧೨; ಸು. 1000). [ ? + <ಅರಸ₁]

**ಮೊದಲ್₁**, ಮುದಲ್, ಮುದ್ದಲು, ಮೊದಲು₁ (ನಾ). ೧. ಆರಂಭ; ಆದಿ ; ಪ್ರಥಮ: ಮೊದಲಿನನಿತ್ತೋರಾನಿತ್ತನ್ನೆ ಬಿಟ್ಟ (ಎಕ. VI, ಕೊಪ್ಪ. ೩೬-೭ ; ಸು.675 ?); ಇನಿಯವು ಮೊದಲೊಳ್ ಸಂಜೆನ ಪನಿಪೋಲ್ ಬಱಿಕೆಯ್ದೆ ಮುಳಿದು ಕೊಂದಿಕ್ಕುವುವು (ಆದಿಪು. ೦೪-೧೨೩); ವಿಸ್ತಾರದ ಜೈನಧರ್ಮದ ಮೊದಲ್ ಪರಮೇಶ್ವರರೆಂಬಿಸಂ ಸದಾಚಾರಸಮೇತರಾದ

ರೆಮಗೀಗೆ ಶಿವಾಸ್ಪದ ಮುಖ್ಯಸೌಖ್ಯಮಂ (ಶಾಂತಿಪು. ೧-೩): ಅಭಿಮಾನದ ಜನ್ಮಭೂಮಿ ಮಾನ್ಯನದ ಮೊದಲ್ (ಸೌಇಇ. XI-i; ೩೩-೩೯; 1028). ೨. ಪಕ್ಕ ; ಬದಿ ; ಪಾರ್ಶ್ವ : ರಾಮೇಶ್ವರ ಎಮ್ಬ ತೀರ್ತ್ಥದಾ ಮೊದಲೊಳ್ ಮೆಪ್ಪಿಕ್ಕಿ ಪೊರದ ಪನ್ನಿಗಳನಿಱಿಯಲ್ ಬನ್ದಲ್ಲಿ(ಲ್ಲಿ) (ಎಇ. XXX. III, ೩೪೦-೯; 804). ೩. ಬೇರು ; ಬುಡ ; ಮೂಲ : ಮೊದಲಿಂ ತಗುಳ್ದು ತುದಿವರಂ . . . ಇದಱ ವಿಧಿಯಿಂತುಟು ಮಂತ್ರಪೂರ್ವಕಂ ನೆಗೞ್ವುದು (ಅಂಪು. ೧೫-೧೭) ; ಮಣಿದೀಪದ ಸರಮೊಪ್ಪಿದುದುಂದು ಪಾದಪೀಠದ ಮೊದಲೊಳ್ (ಅಜಿಪು. ೬-೫); ಎಕ್ಕೆಯ ಮಾದಲಂಗಳ ಮೊದಲ್ಗಳ ನೊಂದೊಂದಱೊಳ್ . . . ಪಲ್ಲಟಿಸಿ (ಖಮುದ. ೦೭-೦೬೦). ೪. ಆಧಾರ ; ಆಶ್ರಯ : 'ಮೊದಲ್ಗೆಡಿಸು' ಪರಾ. ೫. ತುದಿ : ಅಗ್ರಭಾಗ : ಕಱಿಯಲರಾದ ಸಂಪಗೆಯ ಬಣ್ಣದವೋಲೆ ಬೆಳರ್ತ ಬಣ್ಣದೊಳ್ ಗಱಿಯಿಸೆ ಕೆಂಪು ಕಣ್ಗಳ ಮೊದಲ್ಗಳೊಳೊಯ್ಯನೆ ತೋ[ಱ$^3$] ಬಾಡಿ ಪಾಡಱಿದು ಬಱಲ್ದು . . . ತಾಮೆ ಕನ್ನಡಿಸಿದಪ್ಪುವು ಕನ್ನೆಯ ಕನ್ನೆವೇಟವಮಂ (ಶಃಶಣ. ೪-೭೦) ; ಮಸಮಿರೆ ಪುರ್ವಿನ ಮೊದಲೊಳ್ . . . ಯೋಗೀಂದ್ರನಾತ್ಮಚಿಂತೆಯೊಳಿರ್ದಂ (ಅವಂತಿ. ೯-೧೦೪). ೬. ಮುಖ್ಯವಾದುದು ; ಪ್ರಧಾನವಾದುದು ; ಶ್ರೇಷ್ಠವಾದುದು: ಅದೆ ಕಂದರ್ಪಂಗೆ ದೋರ್ದರ್ಪದ ಮೊದಲ್ (ಅಜಿಪು. ೨-೪೭) ; ಬಳೆಯೇ ಸರ್ವವಿಭೂಷಣಕ್ಕೆ ಮೊದಲ್ಗೆ (ಸೂವೇಶ. ೧೪). ೭. ಮೂಲಧನ ; ಬಂಡವಾಳ ; ಅಸಲು : ಇನ್ತಿನಿತುಮಂ ಮೊದಲಂ ಕಿಡಲೀಯದೆ ವೃದ್ಧಿಯೊಳೆ ಧರ್ಮ್ಮಮಂ ತಮ್ಮ ಸನ್ತತಿಯವರ್ನ್ನಡೆಯಿಸುವರ್ (ಸೌಇಇ. XI-i, ೭೪-೬೦ : 1028) : ಒಂದು ಪಣವಿನ ಮೊದಲ್ಗೊಂಡಂದಿನ ದಿನದೊಳೆ ಸಹಸ್ರಪಣಮಂ ಪಡೆವಂ (ಶೀವಸಂ. ೨೦೫-೪೮) ; ಆಚನ್ದ್ರಾರ್ಕತಾರಂಬರಂ ಸಲುವನ್ನಾಗಿ ಹಣವೊಂದಱ ಮೊದಲಿಂಗೆ ಎಂಟು ಹಣವಂ ತೆತ್ತು (ಎಕ. II, ೩೩೩-೦೭ ; 1206?). **ಮುದಲ್** : ೭. ಒಪಮಾನೂಟ್ಟುವೊದು ಮುದಲೂರ್ಕಂಡುಗ ಭಕ್ತ ಪೊಲಿಯೆ ಕೊಂಡುಟ್ಟುವೊದು(ಎಕ. X' ಕೋಲಾರ. ೬-೮ ; 753). **ಮುದ್ದಲು** : ೭. ಮುದ್ದಲು ಇಮ್ಮಡಿಸಿದರೆ ಬಡ್ಡಿಯು ಬೆಳೆಯುವಂತಿದ್ದಿಲ್ಲ . . . ಇಂಥ ಮುದ್ದಲು ಆರೇಳು ಪಟ್ಟು ಹೆಚ್ಚಾದರೆ ಬಡ್ಡಿಯು ಬೆಳೆಯುವಂತಿದ್ದಿಲ್ಲ (ಶ್ರೀಹಿಂ. ೯೦). **ಮೊದಲು$_1$** : ೧. ಮಡಕೆಯ ಮಾಡುವರೆ ಮಣ್ಣೇ ಮೊದಲು (ಬಸವ. ೭೦) ; ಮೊದಲಲಿದ್ದುದು ಜೀವಕಳೆ ಹೃದಯದಲಿ (ಕುವ್ಯಾಕ. ೧-೪) ; ಮೊದಲ ಬೊಬ್ಬೆಗೆ ಬಿಸಜಸಂಭವ ಬೆದಱಿ ಬಿದ್ದನು (ಕೊರರಾ. ೪-೦೨-೨೮). ೩. ತುದಿ ಮೊದಲಿಲ್ಲದ ಪರದಿಂದ ನೊಂದೆ (ಪುರುದ. ೨-೩೫-೧) ; ನಿಡುದೋಳುಗಳ ಮೊದಲೊಳು ಮುಗಮುಗಿಸಿದುದದೊಂದು ಪೊಸಗಂಪು (ಸಾಶ್ರಾ. ೩-೩). ೫. ಸುರಗಿರಿಯ ಮೊದಲಲ್ಲಿ ಕೀಲಕಗಿರಿಯು (ಕುವ್ಯಾಆ. ೭-೩೭). ೭. ಮೊದಲಿಗೆ ಮೋಸವಾದಲ್ಲಿ ಲಾಭವನಱಿವರುಂಟೆ (ಮೋಸವಾ. ೪೫-೦೯೭). 'ಮೊದಲುಗೆಡು' ಪರಾ.

ಮುಮ್ಮೊದಲ್, ಮೊಮ್ಮೊದಲು = ಪ್ರಪ್ರಥಮವಾಗಿ : ತಪ್ಪದೇನ್ ಬಂದಪುದು ಎಂಬುದನ್ ನಿರ್ಣ್ನೈಸೆ ನಾನೆ ಮುಮ್ಮೊದಲ್ ಕಲಿಸಿದೆನ್ (ಐದ್ಯಕ್ರ. ೨೭-೫೫೦) : ಮಹಾಭಾರತ ಮೊಮ್ಮೊದಲು ಇಲ್ಲಿ ನಡೆವ ಮಹಾ ಯುದ್ಧದ ಕಥೆ (ಶಾರದ. ೦೩೯). **ಮೊಟ್ಟಮೊದಲಿಗ, ಮೊತ್ತಮೊದಲಿಗ** = ಆರಂಭಿಗ : ಆದಿಪುರುಷ : ಪಂಚಮಹಾಪಾತಕಕ್ಕೆ ಮೊಟ್ಟಮೊದಲಿಗರೆಂಬಂತೆ (ವಾಗೀಶ. ದೀ. ೨೭೭-೨) ; ಶ್ರೀಗಂ ವಿಜಯಕ್ಕಂ ಮೊತ್ತಮೊದಲಿಗನಾಗಿಯೆ ಸಮಸ್ತರಾಜಕಮನೆಱಗಿಸಿ (ಶಾಂತಿಪು. ೫-೭೩ ವ) ; ರವಿನಂದನ ನನ್ನಿ ಚಾಗಮಣ್ಣೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾದೈ (ಗದಾಯು. ೫-೦೭) ; ಮತ್ತೊರ್ವಂ ಖೇಚರಭೂಚರಪತಿಪ್ರತಾನದ ಮೊತ್ತಮೊದಲಿಗಂ ಮುಂಗೆಯ್ಯ ಕಂಕಣಮಂ ತಿರಿಂಪಿ (ಅವಂಪು. ೦೩- ೯೭ ವ). **ಮೊಟ್ಟಮೊದಲು**

**ಮೊತ್ತಮೊದಲ್, ಮೊತ್ತಮೊದಲು, ಮೊದಮೊದಲು** = ತೀರ ಮೊದಲು ; ಪ್ರಪ್ರಥಮ : ಮೊಟ್ಟಮೊದಲು ಜನರಿಗೆ ಧಾತುಗಳು ಹ್ಯಾಗೆ ಗೊತ್ತಾದವು (ಮುಂಬಯು. ೪-೯೦) ; ಸಿದ್ಧರಾಮ ಮೊಟ್ಟಮೊದಲಿನ ಮಾತು ಆಡಿದನು (ಸಿದ್ಧಪು. ೩-೬೮) ; ನಿರಂತರಂ ಸುಖವ್ಯಾಪ್ತಿಗೆ ನೀನೆ ಮೊತ್ತಮೊದಲಾಗರಿಕೇಸರಿ ಲೋಕಮುಳ್ಳನಂ (ಶಃಶಣ. ೧-೦೪೯) ; ಸಿದ್ಧಮಾತೃಕಾಪದವಿಗೆ ತಾನೆ ಮೊತ್ತಮೊದಲಾದುದು (ಅಜಪು. ೧-೨) ; ಸುದತಿಯ ತೊಳಗುವ ತೋಳ ಮೊದಲ್ಗಳ್ ಮದನವಿಲಾಸದ ಮೊತ್ತಮೊದಲ್ಗಳ್ (ಸುಕುಮಾ. ೫-೫೦) ; ಈ ಬಗೆಯ ಆನಂದವನ್ನು ಪಡೆಯುತ್ತಿರುವುದು ನನ್ನ ಜೀವಮಾನದಲ್ಲಿಯೇ ಮೊತ್ತಮೊದಲನೆಯ ಸಲ (ಕ್ರಶಾಶ. ೦೯) ; ಹಿಂದಿನ ಕಾಲದಲ್ಲಿ ಮೊದಮೊದಲು ಅವರು ಈ ಗ್ರಹನಕ್ಷತ್ರಗಳನ್ನು ಬರೀ ಕಣ್ಣಿನಿಂದ ನೋಡುತ್ತಿದ್ದರು (ಅಕಾಶ. ೫) ; ಮೊದಮೊದಲಿನ ವಿಗ್ರಹಗಳ ಅಳತೆಗೆ 'ಅಂಗುಲ'ವನ್ನೂ . . . ಮೂಲಪ್ರಮಾಣವಾಗಿಟ್ಟುಕೊಂಡು ವ್ಯವಹರಿಸುತ್ತಿದ್ದರು (ಶಾರದ. ೫೦೭). **ಮೊದಲ ಬಾಡ** = ಮುಖ್ಯಪಟ್ಟಣ ; ರಾಜಧಾನಿ : ಪರ್ವ್ವನಿಮಿತ್ತದಿಂದಲಂದೆಸಾಸಿರವ ಮೊದಲ ಬಾಡವಲಂ[ದಾ]ಪುರದ [ಸ್ವಯಂ]ಭು (ಎಇ. XXVIII, ೩೫-೩೫ ; 1082). **ಮೊದಲಾಗಿ, ಮೊದಲಾಗೆ** = ೧. ಮುಂತಾಗಿ ; ಇತ್ಯಾದಿಯಾಗಿ : ಸ್ಥೂಲಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ . . . ಅರ್ಧಗಪ್ಪಡದ ತೀರ್ಥಮಂ ನೆಗೞ್ದರ್ (ವಡ್ಡಾರಾ. ೯೩-೧) ; ರುದ್ರಭಟೋಪಾಧ್ಯಾಯರುಮೀಶ್ವರದಣ್ಣನಾಯಕಮ್ಮೊದಲಾಗಿ (ಸೌಇಇ. XX. ೪೭-೬೦; 1072); ನಾಡೆ ರುಚಿವೆರಸಿದ ಲಡ್ಡುಗೆ ಚಕ್ಕುಲಿ ಗಾರಿಗೆ ಪೂರಿಗೆ ಮೊದಲಾಗಿರ್ದ ಭಕ್ಷ್ಯಮನಾಗಳ್ ಆಜ್ಯಯುತಮಪ್ಪುವಂ ಮೆಲ್ದು (ಧರ್ಮಾಮೃ. ೦-೦೪೭) ; ಲಕ್ಕಣಂ ಮೊದಲಾಗೆ ಸೂರ್ವರ್ ಮಕ್ಕಳುಮಂ ಮುಂತಿರಿಸಿ (ಶಂಶಣ. ೯-೨೮ ವ) ; ಮರೀಚಿಯುಂ ಮೊದಲಾಗೆ ನಾಲ್ಸಾಸಿರ್ವರರಸುಮಕ್ಕಳ್ ಪೋಗಲೊಲ್ಲದೆ (ಶಾಪುಂಪು. ೩೮). ೨. ಪ್ರಾರಂಭಿಸಿ ; ಮೊದಲ್ಗೊಂಡು : ಪೆಂಡಿರೆಂಬರೊಳ್ ಕೂಡುವನಲ್ಲೆನಿಂದು ಮೊದಲಾಗಿರೆ ನಿಕ್ಕುವಂ (ಶಂಶಣ. ೦-೭೩) ; ನಾಳೆ ಮೊದಲಾಗ ಜರ್ಮನಸ ನಾವ್ ಕಾಳೆಗಕೆ ಬರಲೀಯೆವು (ಕುವ್ಯಾದ್ರೋ. ೨-೫); ಚಿಕ್ಕಂದು ಮೊದಲಾಗೆ ನೀನಲ್ಲದೂರ್ವರ ಲೆಕ್ಕಿಸಿದೆವಳು ತಾನಲ್ಲ (ಕಂನಪಿ. ೨-೧೦೫). **ಮೊದಲಾಗು** = ಆರಂಭವಾಗು: ಮರ ಗಿಡಂ ಬಾನ್ನೆಲಂ ತೂನೆದಾಡಿ ನಡುಗಿದುದು ಮೊದಲಾಯ್ತು ಮಳೆಗೆ (ಕಾಂಚೂರ. ೪೫-೬೦) ; ಕುಣಿತ ಮೊದಲಾಯಿತು! (ಸವಿ. ೩). **ಮೊದಲಾದ** = ಮುಂತಾದ : ಇತ್ಯಾದಿಯಾದ : ಹರಿ ಬ್ರಹ್ಮಾದಿಗಳು ಮೊದಲಾದ ತೆತ್ತೀಸಾದಿದೇವರ್ಕಳು ಉಘೆ ಉಘೆ ಎನುತಿರಲು (ಬಸವ. ೬೪೪); ಸಹದೇವ ನಕುಳರ ತಿವಿದು ಧೃಷ್ಟದ್ಯುಮ್ನ ಮೊದಲಾದಗಣಿತರ ಗೆಲಿದ (ಕುವ್ಯಾದ್ರೋ. ೫-೬೫); ಹಳ್ಳಿ ಹಿರಿಯೂರು ಪುರಗಳು ಮೊದಲಾದ ಪ್ರತ್ಯೇಕಗ್ರಾಮಗಳಂದ (ಎಕ. XIV. ಗುಂಡ್ಲುಪೇ. ೬-೦೦; 1520).

[ದೇ.॥ ತಮಿ. ಮುತಲ್ ; ಮಲ. ಮುದಲ್ ; ತುಳು. ಮುದೆಲು ; ತೆಲು. ಮೊದಲು]

**ಮೊದಲ್$_2$, ಮೊದಲು$_2$** (ಅ). ೧. ಪ್ರಾರಂಭ ಮಾಡಿ ; ಮೊದಲ್ಗೊಂಡು : ಆ ಅಂದಮನಿಂದುಮೊದಲ್ ಪತ್ತುವಿಟ್ಟು ನಡೆವೆನೆಂಬುದುಂ (ಶಂಶಂ. ೦೩೫-೦೪). **ಮೊದಲು$_2$**: ೧. ಇಂದುಮೊದಲಿಕ್ಕೆಯಿಂ ತಾಪತ್ರಯಂ ಪಿಂಗಿದವೆನಲು ವಳಿತ್ರಯುವಡಂಗಿದವು (ಸಿದ್ಧರಾ. ೦-೪೯); ಇಳೆ ಮೊದಲು ಹದಿನಾಲ್ಕು ಲೋಕದ ಬಳೆಯಿಕೆವರಿಂದಾಯ್ತು (ಸಂಧಿಶ. ೫-೩೮) ; ನಿನ್ನೆ ಮೊದಲು ನಿನ್ನಾಣೆ ನಿನ್ನನು ಕಾಣದನ್ನಪಾನಂಗಳಳಿಯದೆ ಬಿನ್ನದೊಳಾಳಿದೆ (ಕಂನಪಿ. ೨-೦೦೪). ೨. ಮುಂಚೆ ; ಹಿಂದೆ ; ಪೂರ್ವದಲ್ಲಿ : ಪುಣ್ಯಪಾಪಂಗಳನಱಿಯದ ಮೊದಲು ಅನೇಕ ಭವಂಗಳಲ್ಲಿ ಬಂದೆನಯ್ಯಾ (ಮಹಾದೇ. ಬ. ೦೫-೦೯). [< ಮೊದಲ್$_1$]

**ಮೊದಲಗಿತ್ತಿ**, ಮದಲಗಿತ್ತಿ (ನಾ). ಮದುವಣಗಿತ್ತಿ; ಮದುಮಗಳು; ನವವಧು : ಮೊದಲದಿನದ ಮೊದಲಗಿತ್ತಿಗೆ ಮುನ್ನೂರು ಮುತ್ತಿನ ಸರ ಮಾಲೆ (ತುಂಗಳ. ೦೦೦); ಮೂರು ಮಕ್ಕಳ ತಾಯಿ ಮೊದಲಗಿತ್ತಿಯಂತೆ ಕುಣಿಯಲು ಹೇಗೆ ಸಾಧ್ಯವಾದೀತು (ಮಕ್ಕವು. ೯೨); ಭೂಮಿತಾಯಿಯಂತೆ ನೀನು ಒಬ್ಬ ಚಿರಂತನ ಮೊದಲಗಿತ್ತಿ (ಗಾ೯ಶ. ೦೮೨). **ಮದಲಗಿತ್ತಿ** : ಸೌಂದರದ ಮೇರುಮಿಂತೊಳಗೆ ಮದಲಗಿತ್ತಿಯ ಮದಕರಿಯು ಕೊಂದು (ಶಿರಾಗೋ. ೦೦-೯೦) ; ಆಗ ಆ ಮದಲಗಿತ್ತಿಯು ಮನೆಯ ಗೋಡಿಯಲ್ಲಿ (ಕಥಾಪುಂ. IV. ೦೬). [< ಮದುವಳಗ + - ಇತ್ತಿ]

**ಮೊದಲಚ್ಚು** (ನಾ). ಮೂಲಆಕೃತಿ; ಮೂಲರೂಪ : ಆ ಮೂರ್ತಿಗಳೆಲ್ಲ ಮೊದಲಚ್ಚು, ನಾವು ಪಡಿಯಚ್ಚು (ಸಾಹಿಶಿ. ೩೫). [ಮೊದಲ್$_1$ + ಅಚ್ಚು$_3$]

**ಮೊದಲಾಣ್ಮ** (ನಾ). ಮೊದಲನೆಯ ಗಂಡ : ಮೊದಲಾಣ್ಮನೊಲ್ಲಂ ದೊರ್ವ ಬಲವಂತನಂ ಬಯಸಿ ಬಾಳ್ವೊಗಲ್ ಬಡಿವ ಗಂಡಂ ದೊರಕಿದಂತೆ (ಶಬ್ದ. ೩೩-೬). [ಮೊದಲ್$_1$ + ಅಣ್ಮ (< ಆಳ್ಮ)]

**ಮೊದಲಾರಿ** (ನಾ). ಮುಖಂಡ ; ನಾಯಕ; ಪ್ರಧಾನವ್ಯಕ್ತಿ : ಇರುತಿರೆ ಸಾಂಬಳ್ಳಿಯ ಮೊದಲಾರಿಯ ಹಿರಿಯ ತನುಜ ಪಟ್ಟದಯ್ಯ ಪಿರಿದು ಗರ್ವಿಸಿ . . . ಧುರವನೆಸಗಿದ (ಕಂಸಶಿ. ೦೬-೨). [← ತಮಿ. ಮುತಲಾಳಿ]

**ಮೊದಲಿ**, ಮುದಲಿ (ನಾ). ೧. ಮೊದಲಿಗ ; ಪ್ರಮುಖನಾದವನು : ಕಸವನು ಗುಡಿಸುತ ಕಸವೇ ಆಗಿ, ಕಸಕೂ ಕಡಮೆ. ಅಧಮರ ಮೊದಲಿ (ಸುಶೀತ. ೨). **ಮುದಲಿ** : ೨. ತಮಿಳು ಭಾಷೆಯನ್ನಾಡುವ ಒಂದು ಜನಾಂಗ ಮತ್ತು ಆ ವರ್ಗಕ್ಕೆ ಸೇರಿದ ಜನರ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ : ಯಾವ ತಪ್ಪಿಗಾಗಿ ನಮ್ಮ ಪ್ರತಾಪಮುದಲಿಯನ್ನು ಬಂಧಿಸಬೇಕೆಂದು ಹೇಳುವಿರಿ ? (ಶ್ರೀತಾಶ. ೩೬). 'ಮುದಲಿಯಾರ್' ಪರಾ. [ದೇ.॥ ತಮಿ. ಮುತಲಿ; ತೆಲು. ಮೊದಲಿ]

**ಮೊದಲಿಕ್ಕು** (ಕ್ರಿ). ಪ್ರಾರಂಭಿಸು ; ತೊಡಗು : ಭಯಮಂ ಚಿತ್ತಕ್ಕೊದಮಿಸಿ ಬಲಗಣ್ಕೆತ್ತಲ್ಮೊದಲಿಕ್ಕಿತು (ಕಾದಂಪೂ. ೬೬೬); ನೆರೆವೆಂಡಿರ ಸುಖಗೋಷ್ಠಿಗಳ್ ನಾರಿಯರೊಳ್ ಮೊದಲಿಕ್ಕುಗುಂ (ರಾಮಾಶ್ವ. ೦೭-೨೮). [ಮೊದಲ್$_1$ + ಇಕ್ಕು]

**ಮೊದಲಿಗ** (ನಾ). ಪ್ರಥಮಸ್ಥಾನದಲ್ಲಿರುವವನು : ಪ್ರಮುಖನಾದವನು : ಚಾಳುಕ್ಯಾರ್ಜುನಂ ಚಲಕೆ ಮೊದಲಿಗಮ್ (ಎಕ. XIV. ಮೈಸೂರು. ೦೨೭-೯; ೯೦೦); ಕಡುಪೆಂಪಿನ ಪೊಜೆಗೆ ನೀವು ಮೊದಲಿಗರಾದಿರ್ (ಶಂಕಭಾ. ೬-೦೨); ಪದುಳವಿಡುವವರಿಲ್ಲ ಸೇನೆಯ ಮೊದಲಿಗರು (ಕುವ್ಯಾರಾ. ೯-೨೭); ವಿಜ್ಞಾನವನ್ನು ಬೆಳೆಸಿದವರಲ್ಲಿ ಗ್ರೀಕರು ಮೊದಲಿಗರು (ಜುಶ್ಯಾರ ೭ ೩೬೪೯). [ಮೊದಲ್$_1$ + - ಇಗ]

**ಮೊದಲಿಡು** (ಕ್ರಿ). = ಮೊದಲಿಕ್ಕು : ಮೊದಲಿಟ್ಟಂ ಕೊಲಲೆಂದು ಕೌರವರಂ (ಶಂಕಭಾ. ೧೦-೧೦); ಮಾಗಿ ಬರಲ್ ಮೊದಲಿಟ್ಟಿತು (ಹಸಿ. ೦೯-೬); ಸಂಭ್ರಮಂ ಮೊದಲಿಡು[ಶಾಕಾಂ. ವೊದವಿಸು]ತಿರ್ದುದಾ ನೃಪನ ದೇಶದೊಳಂ ತಿರುನಾವಲೂರೊಳಂ (ಶಂಚರ. ೫ ೫೨೫). [ಮೊದಲ್$_1$+ ಇಡು$_1$]

**ಮೊದಲಿಯಾರ್**, ಮುದಲಿಯಾರ್, ಮುದ್ಲಿಯಾರ್ (ನಾ). = ಮೊದಲಿ ೨. P ಕನ್ನಡನಾಡಿನಲ್ಲಿ ಈ ಶಬ್ದರೂಪವೇ ಹೆಚ್ಚು ಪ್ರಚಾರದಲ್ಲಿದೆ. **ಮುದಲಿಯಾರ್** : ಇವರ ಮುಖಲಕ್ಷಣಗಳು ಮುದಲಿಯಾರರಂತೆ ಇರುತ್ತವೆ (ಕಭಾಗ. ೦೦೦); ತೊಂಡಮಂಡಲ ಮುದಲಿಯಾರರ ವಂಶದಲ್ಲಿ ನಾನು ಜನಿಸಿದೆ (ಶ್ರೀತಾಶ. ೧). **ಮುದ್ಲಿಯಾರ್** : ವಿಜಾಪುರಜಿಲ್ಲೆಯ ಮುದ್ಲಿಯಾರರು ವ್ಯಾಪಾರದ ಹೊರ್ತು ಬೇರೆ ಹೋರೆಯನ್ನು ಬಹುತರ ಮಾಡುವುದಿಲ್ಲ (ಕಭಾಗ. ೯೦).
[ದೇ.॥ ತಮಿ. ಮಲ. ಮುತಲಿಯಾರ್ ; ತೆಲು. ಮೊದಲಾರಿ]

**ಮೊದಲಿಸು** (ಕ್ರಿ). = ಮೊದಲಿಕ್ಕು : ರಾಜುವೇ ಯಾವುದಾದರೂ ವಿಷಯವನ್ನೆತ್ತಿಕೊಂಡು ಮಾತಿಗೆ ಮೊದಲಿಸುವನು (ಜೀವಶ. ೨೦); ನನಗೆ ಫಿಲಾಸಫಿ ಕಂಡರೆ ಆಗುವುದಿಲ್ಲ. ನೀವು ಅದನ್ನೇ ಹೆಚ್ಚಾಗಿ ಓದಲು ಮೊದಲಿಸಿದರೆ ಮುಂದೆ ನಿಮ್ಮನ್ನು ಕಂಡರೂ ಆಗದೇ ಹೋದೀತು (ದೂರಕ. ೩೬). [ಮೊದಲು$_1$ (<ಮೊದಲ್$_1$) + - ಇಸು$_3$]

**ಮೊದಲು$_1$** 'ಮೊದಲ್$_1$' ನೋ.

**ಮೊದಲು$_2$** 'ಮೊದಲ್$_2$' ನೋ.

**ಮೊದಲುಗಣ್** (ನಾ). ಕಣ್ಣಿನ ಬುಡ ; ಮೂಗಿನ ಮೇಲ್ಭಾಗದ ಕಣ್ಣಿನ ಭಾಗ : ಅಕ್ಷಿಮೂಲಂ ಪೂರ್ವನೇತ್ರಮೆನೆ ಮೊದಲು [ಶಾಕಾಂ. ಲ] ಗಣ್ " (ಮಂಗರಾ. ೯೯-೩). [ಮೊದಲು$_1$ (< ಮೊದಲ್$_1$ ) + ಕಣ್]

**ಮೊದಲುಗೆಡು** 'ಮೊದಲ್ಗೆಡು' ನೋ.

**ಮೊದಲುಗೊಂಬು** (ನಾ). ಆನೆಯ ಕೋರೆಹಲ್ಲಗಳ ಬುಡ; ದಂತಮೂಲ : " ಕರೀರಂ, ದಂತಮೂಲಂ ಈ ೨ ಮೊದಲುಗೊಂಬು " (ಶಬ್ದಾಯು. ೩೭-೭೦). [ಮೊದಲು$_1$ (<ಮೊದಲ್$_1$) + ಕೊಂಬು$_1$]

**ಮೊದಲುಗೊಳ್** 'ಮೊದಲ್ಗೊಳ್' ನೋ.

**ಮೊದಲುಜುಬು** (ನಾ). ಆರಂಭದ ರಭಸ,–ಆವೇಗ : ಕಾರ್ಮುಗಿಲ ಬಿರುಗಾಳಿ ಮೊದಲುಜುಬು ಸಯ್ತು (ಅಕ್ಕತಾ. ೦೦-೨೨೫). [ಮೊದಲ್$_1$ + ಉಜುಬು$_0$ (<ಉಜುಂಬು$_2$)]

**ಮೊದಲೇರಿ**, ಮೊದಲೇಱಿ (ನಾ). ಕೆರೆಯ ಕೋಡಿಯಿಂದ ಹರಿಯುವ ನೀರಿನ ಮೊದಲ ಪರಿಸರ, –ಭಾಗ : ಮೊದಲೇರಿಯೊಳ್ಸಾಯಿರ ಬಳ್ಳಿಯ ತೋಣ್ಟಮುಂ ಅಯ್ವತ್ತೆಣ್ಟಗ್ರಹಾರಮುಮಱಿಯೆ ಸರ್ಬ್ಬಬಾದ ಪರಿಹಾರನ್ ದೇವಭೋಗಂ ಮಾಡಿಕೊಟ್ಟರ್(ಎಕ.XI, ಹೊಳಲ್ಕೆ. ೨೩-೩೦;968); ಅಂಕಲಿಗೆಱೆಯ ತುಂಬಿನ ಮೊದಲೇರಿಯ ಕೆಳಗೆ ದೇವರ್ಗ್ಗೆ ಕೊಟ್ಟ ಗದ್ದೆ ಕಮ್ಮ ೫೦ (ಸೌಇಇ. XX, ೯೯-೯೨; 1123); ಹಿರಿಯ ಕೆಱೆಯ ಹಿಂದಣ ಮೊದಲೇರಿ ಅಡಕೆದೋಟ . . . ಮೇರೆಯಾಗಿ (ಎಕ. VI, ಕಡೂರು. ೦೨೯-೯೬; 1272 ?). **ಮೊದಲೇಱಿ** : ಮೊದಲೇಱಿಯೊಳ್ ಇರ್ಬ್ಬಿಂಡುಗ ವೆದೆಗಟ್ಟಿದ್ದ . . . ಅಯ್ನೂಱು ಬಳ್ಳಿಯತೋಣ್ಟಲುಕೆಱೆ ಇವನಾವನೊರ್ವ್ವ ನಡೆಯಿಸಿದನಾತನದೆ ಧರ್ಮ (ಎಕ. XI, ದಾವಣ. ೦೬-೦೩; 889). [ಮೊದಲ್$_1$ + ಏರಿ$_1$]

**ಮೊದಲೇಱಿ** 'ಮೊದಲೇರಿ' ನೋ.

**ಮೊದಲ್ಗಾಲ್** (ನಾ). ಕೆರೆಯ ತೂಬಿನಿಂದ ಹೊರಟ ಕಾಲುವೆಯ ಪ್ರಾರಂಭದ ಭಾಗ : ಆ ಸಿರಿವೊಳಲ ಕೆರೆಯ ಕೆಳಗೆ ಮೊದಲ್ಗಾಲ ಗರ್ದ್ದೆಯ ಹಂನೆರಡು ಖಂಡುಗದ ಬಯಲು (ಎಕ. XI, ಹಳ್ಳಿ. ೨೦-೨೨ ; 1087). [ಮೊದಲ್$_1$ + ಕಾಲ್$_2$]

**ಮೊದಲ್ಗಿಡು** 'ಮೊದಲ್ಗೆಡು' ನೋ.

**ಮೊದಲ್ಗೆಡಿಸು** (ಕ್ರಿ). ಆಧಾರವಿಲ್ಲದಂತೆ ಮಾಡು ; ನಾಶಗೊಳಿಸು : ನೀಱರ ಸೊಬಗಂ ಮೊದಲ್ಗೆಡಿಸಿ ತೋಳ ಮೊದಲ್ಮನೆವೊಱವನೆತ್ತುವಂತಿರೆ ನನೆಯಂಬುಗಳ್ಗೆ ಬೆರಲೆತ್ತುವರಲ್ಲಿಯ ಮಾಲೆಗಾರ್ತಿಯರ್ (ಮಲ್ಲಿಪು. ೨-೫೯). [ಮೊದಲ್ಗೆಡು + - ಇಸು$_3$]

**ಮೊದಲ್ಗೆಡು**, ಮೊದಲುಗೆಡು, ಮೊದಲ್ಗಿಡು (ಕ್ರಿ). ೧. ಬೇರುಸಹಿತ ನಾಶವಾಗು ; ನಿರ್ಮೂಲವಾಗು ; ಸಂಪೂರ್ಣವಾಗಿ ಅಳಿಸಿಹೋಗು: ವಿಂಧ್ಯವಿತಾನಪ್ರಾಂತದೊಳ್ ತಿಱನೆ ತಿರುಗಿ ಮೊದಲ್‌ಗೆಟ್ಟು ಬೆಂಬಳ್ದ (ರಪ್ಳಾಶ. ೦೯). ೨.(ವ್ಯಾಪಾರದಲ್ಲಿ) ಮೂಲಧನವನ್ನು ಕಳೆದುಕೊಳ್ಳು; ನಷ್ಟ ಹೊಂದು : ಮೊದಲ್ಗೆಟ್ಟ ಪರದನಂತೆ ಘಳಿಗೆಗೊಂದಂ ನೆನೆಯದೆ (ರವರ್ಣಮು. ೦೯-೬೯). **ಮೊದಲುಗೆಡು** : ೨. ಮೊದಲುಗೆಟ್ಟು ಲಾಭದ ನಟಿಸುವ ಪರಿ ಇನ್ನೆಂತೋ (ಮೋಕ್ಷಮಾ. ೬೯-೨೬೦); ಮೊದಲುಗೆಡವ

ಹರದೆನಗಾದುದಮ್ಮ ಮೊದಲುಗೆಡದ ಹರವು (ಶಿವಗೀ. ೯೪-೪೦೨).

**ಮೊದಲ್ಗಿಡು** : ೧. ಕ್ಷಿತಿಯೊಳಗುಳ್ಳ ಭೂಭುಜರ ಬಿತ್ತು ಮೊದಲ್ಗಿಡೆ ಮುನ್ನಮೇಕವಿಂಶತಿ ಪರಿಸಂಖ್ಯೆಯಿಂ ತವಿಸಿ (ಕಂಕಥಾ. ೨-೯೫); ಮತಿಯಿಂ ಮೊದಲ್ಗಿಡಲೀಯದೆ ಮದನವಿಕಾರಮಂ ಸೊದವಲೀಯದೆ (ಲೀಲಾವ. ೪-೬೬ ವ); ಏಳಗದ ಶಿರಭೂರುಹಮನೆಯ್ದೆ ಮೊದಲ್ಗಿಡೆ ಕೀಳ್ವ . . . ಏಳಗದರಂ ತಡಂಗಿಡಿಪ ನಮ್ಮರನುರ್ವಿಪ ರಾಜಲೀಲೆ ಕಣ್ಬೆಟಿದುದು (ಪುಣ್ಯಶ್ರ. ೦೩-೬).
[ ಮೊದಲ್$_1$ + ಕೆಡು$_1$ ]

**ಮೊದಲ್ಗೆಯ್** (ಕ್ರಿ). ಆರಂಭಿಸು; ಮೊದಲು ಮಾಡು; ಉಪಕ್ರಮಿಸು: ಅರಣ್ಯಕನಿಂತು ಕತೆಗೆ ಮೊದಲ್ಗೆಯ್ದಂ (ರಾಮಾಶ್ವ. ೦೦೯-೬).
[ ಮೊದಲ್$_1$ + ಕೆಯ್$_1$ ]

**ಮೊದಲ್ಗೊಳ್**, ಮೊದಲುಗೊಳ್, ಮೊದಲ್ಗೊಳು (ಕ್ರಿ). ೧. ಆರಂಭವಾಗು; ಮೊದಲಾಗು : ಪುಟ್ಟಿದಂದು ಮೊದಲ್ಗೊಂಡಗಲದ ಚಂದ್ರಾಪೀಡನನಗಲ್ದಿರಲ್ಕೀನದೆಂತು ಪೇಟ್ಟಗೆದಂದಪರ್ (ಕಾದಂಬ. ೪೭೦); ಅವಳ ಮೆಲ್ಲಡಿ ಮೊದಲ್ಗೊಂಡು ಮೆಲ್ಲಮೆಲ್ಲನೆ ಮೇಗಪರ್ದ ನೀಳ್ದ ಕಣ್ಗಳುಂ ಸೆಳೆನಡುವಿನಲ್ಲಾಟಮಂ ಕಂಡು ಪೊಜಮಾಱಿಂದೇಱಲಾರ್ತುವಿಲ್ಲ (ಕನ್ನಕಾ. ೬೮). ೨. ಬಂಡವಾಳವನ್ನು ಪಡೆದುಕೊಳ್ಳು; ಮೂಲಧನವನ್ನು ತೆಗೆದುಕೊಳ್ಳು : ಕನಕರಾಶಿಯಂ ಬಸನಕ್ಕೆ ತವಿಸಿ ಬಿಯಂ ನಡೆಯದಿರೆ . . . ಸೋದರಮಾವಂ ಭದ್ರಮಿತ್ರನಲ್ಲಿ ಮೊದಲ್ಗೊಂಡು ಸ್ಥಳಯಾತ್ರೆಗೆ ಪೋಗಿ ಸಂಖ್ಯಾತೀತಸಾರಧನಮಂ ಪಡೆದು ಬರ್ಪೆಡೆಯೊಳ್ (ಶಾಂತಿಪು. ೯-೯೦ ವ). **ಮೊದಲುಗೊಳ್** : ೧. ಈ ಹೊತ್ತು ಮೊದಲುಗೊಂಡು ಯುದ್ಧವಿಲ್ಲದ ರೀತಿಗೆ ಮಾಡುತಲಿಪ್ಪೆನೆ (ಕೃಷ್ಣಾರ್ಜು. ೯೯); ಪ್ರಕಾಂಡಃ . . . ಬೇರು ಮೊದಲುಗೊಂಡು ಕೊಂಬೆಗಳವರೆಗೂ ಗಿಡದ ಮಧ್ಯಭಾಗದ ಹೆಸರುಗಳು (ಸಿದ್ಧಾಂತ.೦೦೨). **ಮೊದಲ್ಗೊಳು**: ೧. 'ಮೊದಲ್ಗೊಳುಹ' ಪರಾ. [ ಮೊದಲ್$_1$ + ಕೊಳ್$_1$ ]

**ಮೊದಲ್ಗೊಳು** ' ಮೊದಲ್ಗೊಳ್ ' ನೋ.

**ಮೊದಲ್ಗೊಳುಹ** (ನಾ). ಆರಂಭ ; ಪ್ರಾರಂಭ : " ಉಪಜ್ಞಃ, ಉಪಕ್ರಮಃ, ಆರಂಭಃ– ಈ ೩ ಮೊದಲ್ಗೊಳುಹ " (ಶಬ್ದಮ. ೦೦೬-೨೨).
[ಮೊದಲ್ಗೊಳು (< ಮೊದಲ್ಗೊಳ್) + –ಹ$_2$ ( < –ಪ$_2$ )]

**ಮೊದಳೆ**, ಮೊಸಳೆ (ನಾ). ಒಂದು ಬಗೆಯ ಜಲಚರಪ್ರಾಣಿ; ನಕ್ರ : 'ಮೊದಳೆಮಡು' ಪರಾ. **ಮೊಸಳೆ** : "ಕುಂಭೀರಃ, ನಕ್ರಃ – ಈ ೨ ಮೊಸಳೆ" (ಶಬ್ದಮ. ೦೦೩-೩೪); ಮೀನುಂ ಮೊಸಳೆಯುಂ ನೆಗಟು ಮಾಮೆಯುಂ . . . ಮೊದಲಾಗೊಡೆಯ ಜಲಚರಂಗಳುಂ (ಪಶುಪ್ರಾಣ. ೯೬-೭); ಮೊಸಳೆಯಂ ಪಿಡಿವಂತಿರೆ ನೀರೊಳೊತ್ತಿ ಭೀಮಸನತಿಗರ್ವದಿಂ ಪಿಡಿಯೆ (ಕಂಕಥಾ. ೦-೨೬); ಆ ಪಣ್ಗಳಂ ಕ್ರಕಚನೆಂಬುದೊಂದು ಮೊಸಳೆ ಪ್ರತಿದಿನಮೊಲ್ದು ಮೆಲ್ದು (ಶುಕಸಂ. ೨೬೬-೨೦); ಉಷ್ಣಪ್ರದೇಶಗಳೊಳಗಿನ ನದಿಗಳಲ್ಲಿಯೂ ಸರೋವರಗಳಲ್ಲಿಯೂ ಮೊಸಳೆಗಳುಂಟು (ಮಂಗಳ. ೪-೨೬).

**ಮೊಸಳೆಕಣ್ಣೀರು** = (ಆಲಂ) ಮೋಸಗೊಳಿಸಲು ಸುರಿಸುವ ಕಂಬನಿ ; ಕಪಟದ ಕಣ್ಣೀರು : ಅವರ ಆಶ್ವಾಸನೆಗಳೆಲ್ಲ ಸುಳ್ಳೇ ಸುಳ್ಳು! ಅದು ದೊಡ್ಡವರ ಮೊಸಳೆಕಣ್ಣೀರು ! (ಕೃಷ್ಣಲಿ. ೭೪). **ಮೊಸಳೆತುಪ್ಪ** = (ಔಷಧಿಯಂತೆ ಬಳಸುವ) ಮೊಸಳೆಯ ಕೊಬ್ಬು : ಉಳುಕಿದಾಗ ಮೊಸಳೆತುಪ್ಪ ಸವರಿ ತಿಕ್ಕುತ್ತಾರೆ (ರೂಢಿ).

[ದೇ.॥ ತಮಿ. ಮುತಲೈ, ಮುತಳೈ, ಮುಚಲಿ ; ಮಲ. ಮುತಲ ; ತುಳು. ಮುದಲೆ, ಮುದಳೆ, ಮೊಸಳೆ ; ಕೊಡ. ಮೊಸಲೆ ; ತೆಲು. ಮೊದಲಿ, ಮೊಸಡಿ, ಮೊಸಲಿ ; ಕೋತ. ಮೊಚಳ್ ; ಕೋಲಾ. ಮೊಸೆಲಿ; ಪರ್ಜಿ. ಮೋಚ./ಸಂ. ಮುಸಲೀ]

**ಮೊದಳೆಮಡು**, ಮೊಸಳೆಮಡು (ನಾ). ೧. ಮೊಸಳೆಗಳು ವಾಸಮಾಡುವ ನದಿ, ಹೊಳೆ ಮುಂತಾದುವುಗಳ ಆಳವಾದ ಭಾಗ : ತೆನ್ನಾಯ್ತ್ಸಲೆಮೊಜಿಡೆ ಬೆದಿಕಿರೆವ ಮೊದಳೆಮಡುವ ಪಡುವಾಯ್ಮೆಲ್ಗೊಳೆ ಕಾಲುವೆಪದುಂ ಒಳಗಾಗಿ (ಮೈ ಆರ್. ೦೯೨೬, ೦೦೪-೯೭ ; ೩ನೆಯ ೩೩). **ಮೊಸಳೆಮಡು** : ೧. ಅದು ಮೊಸಳೆಮಡುವಾದುದರಿಂದ ಅಲ್ಲಿ ಈಜಲು ಹೋಗಬಾರದೆಂದು ಎಚ್ಚರಿಕೆ ನೀಡಿದ್ದಾರೆ (ರೂಢಿ). ೨. ಒಂದು ಸ್ಥಳದ ಹೆಸರು : ಶ್ರೀಮತ್ತುಂಗರುದೇವಕ್ಕೊರ್ಗಳಿಯರಯ್ಯಾಜಿಯೊಳಗಣಮೊಸಳೆ ಮಡುವನಾಳುತ್ತವಿರ್ದು (ಕನ್ಡಇ. IX-i, ೯೦-೦೦; 1036).
[ಮೊದಳೆ + ಮಡು$_2$]

**ಮೊದಿರಕಣ್ಣಿ** (ನಾ). ಒಂದು ಬಗೆಯ ಸಸ್ಯ : ಮುಳ್ಳುಅಂಕೋಲೆ, ಮೊದಿರಕಣ್ಣಿಗಿಡ (ಮೈವೈನಿ. ೪೪-೬೭೭). [ ? ]

**ಮೊದೀಖಾನೆ** ' ಮೋದೀಖಾನೆ ' ನೋ.

**ಮೊದೆ** (ನಾ). ೧. ಒಂದು ಬಗೆಯ ಹುಲ್ಲು; ಮುಂಜ; ನೊದೆಹುಲ್ಲು : " ಶರಃ, ಮುಂಜಃ—ಇವೆರಡುಂ ಮೊದೆ" (ಶಬ್ದಮ. ೩೨-೩೮) ; ಮದನಂ ಬೆಳ್ಮುಗುಳಂಬಿನಿಂದಿಸೆ ಜಗಿಲ್ತಿರ್ದಂಬುಗಳ್ ಚಿತ್ರದೊಳ್ ಮೊದೆಯುಂ ಬೈತವೊಲಾಗೆ (ಕಾವ್ಯಸಾ. ೩೪೮ ಕೂಪ್ರ೪) : ಅಬಳಾಸ್ತನಜಳದೊಳ್ ಮೊ(ಮ)ದೆಯ ಬೂದಿಯಂ ಕಲಸಿ . . . ಬಜಿಕ್ಕದನೆಜ್ಜಗೆ ಕಣ್ಣ ಬೇನೆ ಮಾಣ್ಗುಂ (ಲೋಕೋಪ. ೯-೬೯) ; ಕ್ಕೀವಚ್ಚೆ ಮೊದೆ ಬೆಳೆದಿದ್ದ ತವರೇ ಮೇರೆಯಾಗಿ (ಎಕ. III, ಶ್ರೀರಂಗ. ೦೩೩-೯೯; 1458). ೨. (?) : ತಜಿಕಾಪ ಪೆಜಿಜ್ಜಿಡಿಯ ಮೊದೆಯ ಕಲಾಪಕದ ಗುರವಡಿಗಳ್ (ಎಕ. II, ೩೩-೩; ಸು. 700).

[ದೇ.॥ ತೆಲು. ಪೊದಯು; ಕೊಡ. ಮೊದೆ = ಹುಲ್ಲುಗಿಡದ ಪೊದರು]

**ಮೊದೆಕರನಿ** (ನಾ). (?) : ಕೌಣ್ಡಿನ್ಯ ಸಗೋತ್ರಾಯ . . . ದೇವಶರ್ಮಣೇ ಮೊದೆಕರನಿನಾಮಹಲಮ್ ರಾಜಮಾನೇನ ದ್ವಿಂಶತಿನಿವರ್ತನಮ್ ಕೇದಾರಂ ದ[ತ್ತ]ವಾನ್ (ಎಇ. VI, ೦೪-೦೦; ಸು. 400). 'ಮೆದಕಟಿನಿ' ಪರಾ. [?]

**ಮೊದ್ದ** (ನಾ). ತಿಳಿವಳಿಕೆಯಿಲ್ಲದವನು ; ದಡ್ಡ; ಪೆದ್ದ : ಇವನು ತುಂಬಾ ಮೊದ್ದ (ರೂಢಿ). [ಮೊದ್ದು + –ಅ$_6$]

**ಮೊದ್ದಿ** (ನಾ). ತಿಳಿಗೇಡಿ ಹೆಣ್ಣು; ಮಂದಬುದ್ಧಿಯುಳ್ಳವಳು ; ದಡ್ಡಿ: ಈ ಮೊದ್ದಿ ಏನು ಹೇಳಿಕೊಟ್ಟರೂ ಕಲಿಯುವ ಹಾಗಿಲ್ಲ (ರೂಢಿ).
[ ಮೊದ್ದು + –ಇ$_2$ ]

**ಮೊದ್ದು** (ನಾ). ೧. ತಿಳಿಗೇಡಿವ್ಯಕ್ತಿ; ಮಂದಬುದ್ಧಿಯ ವ್ಯಕ್ತಿ : ನಿನಗೇನೂ ತಿಳಿಯದು, ನೀನೊಂದು ಮೊದ್ದು (ತ್ಯಾಗಮ. ೨೬); ಪಾಪ ! ಅವನು ಮೊದ್ದು (ಬಿಡುಗಡೆ. ೦೩೦); ನಮ್ಮ ಹುಡುಗ ಮೊದ್ದು (ಉಡುಗೊ. ೪೦). (ಗು). ೨. ತಿಳಿಗೇಡಿಯಾದ ; ದಡ್ಡನಾದ : ಹಿಂದೆ ಅವನು ಎಷ್ಟು ಚುರುಕು ವಿದ್ಯಾರ್ಥಿಯಾಗಿದ್ದನೋ ಈಗ ಅಷ್ಟೇ ಮೊದ್ದುಹುಡುಗನಾಗಿದ್ದಾನೆ (ದೂರಕ. ೨೩೦); ಎಷ್ಟು ಹೇಳಿದರೂ ನಿನ್ನ ಮೊದ್ದುಬುದ್ಧಿ ಎಲ್ಲಿ ನೆಟ್ಟಗಾದೀತು? (ಸಮ್ಮಿಶ್ರ. ೪); ಗೋಬೆಯಂತಿರುವ ಮೊದ್ದು ಹುಡುಗಿಯನ್ನು ಕೈಹಿಡಿದು ಬರುವ ಭಾಗ್ಯವಾದರೂ ಏನು ? (ಕೆಲೋಕ. ೦೦೦).

**ಮೊದ್ದುಮಣಿ** = (ಹಿರಿಯರ ಮುದ್ದು ಹೆಚ್ಚಾಗಿ) ದಡ್ಡನಾದವನು ; ಅವಿವೇಕಿ ; ತಿಳಿಗೇಡಿ : ಅಮ್ಮನಿಗೆ ಮಾತ್ರ ಬೇಕಾಗಿದ್ದ ಮೊದ್ದುಮಣಿ ನಾನಾಗಿದ್ದೆ (ಕಥ್ಯಕ. ೨೦೭).
[ ದೇ.॥ ತಮಿ. ಮೊತ್ತು: ತೆಲು. ಮೊದ್ದು ]

**ಮೊದ್ದುಗಳಹು** (ಕ್ರಿ). ಪೆದ್ದುಪೆದ್ದಾಗಿ ಹರಟು ; ತಿಳಿಗೇಡಿಯಾಗಿ ಮಾತಾಡು : ನೀ ಮೊದ್ದುಗಳಹುವುದನರಿಕಿದ್ದನೇ (ಪುರಾತನಸಂ. ೦೦೨-೪೯೭).
[ ಮೊದ್ದು + ಗಳಹು (< ಗಳಪು) ]

**ಮೊನಗು** ' ಮಿನುಕು₂ ' ನೋ.

**ಮೊನಚು** (ನಾ). ೧. ಚೂಪಾಗಿರುವಿಕೆ : ಹರಿತವಾಗಿರುವಿಕೆ : ಮೊನಚುಳ್ಳ ಕತ್ತಿಯನ್ನು ಹಿಡಿದು . . . ಮೆರೆಯಲು (ಕೃಪಾಕೀ. ೧೨೩); ಇರ್ಕಡೆಯೊಳು ಸೂಜಿ ಮೊನಚಾದುದಾದರೆ ಹೊಲಿಯಬಹುದೇನನು ನೀನು (೨೦ಜಾಕ. ೭೩-೭೪). (ಗು). ೨. ಚೂಪಾದ; ಹರಿತವಾದ: ನಡನಡುಗಿ ಮುಂದಕಡಿಯಿಡುತಿರಲು ಮತ್ತೆ ತಲೆಯೆತ್ತಿ ಕಾಲ್ಗಡಿವಪ್ಪುದು ಮೊನಚು ಮುಳ್ಳು ! (ಕವಿಕಾ. ೩೭-೨). [ಮೊನೆ + —ಚು₂]

**ಮೊನಚುಗಣ್ಣು** (ನಾ.) ಹರಿತವಾದ ನೋಟ ; ತೀಕ್ಷ್ಣವಾದ ದೃಷ್ಟಿ : ಮೊನಚುಗಣ್ಣುಗಳನ್ನು ಮಾಡಿಕೊಂಡು, ಜಾತಕವನ್ನೆ ನೋಡಿದರು (ತಗುಕ. ೭೭). [ಮೊನಚು + ಕಣ್ಣು (< ಕಣ್)]

**ಮೊನಚುಗೊಳಿಸು** (ಕ್ರಿ). ಚೂಪಾಗುವಂತೆ ಮಾಡು ; ಹರಿತ ಮಾಡು : ಕಲ್ಲುಮುಳ್ಳುಗಳನು ಮೊನಚುಗೊಳಿಸುವರ್‍ಯಾರು (೨೦ಜಾಕ. ೭೦-೧೨). [ಮೊನಚು + ಕೊಳ್₁ + — ಇಸು₃]

**ಮೊನಚುಗೊಳ್ಳು** (ಕ್ರಿ). ಹರಿತಗೊಳ್ಳು ; ತೀವ್ರವಾಗು ; ತೀಕ್ಷ್ಣವಾಗು : ಹೇಗೆ ಮುಡಿ ಬರವಣಿಗೆಗಳಿಯುವಷ್ಟು ಮೊನಚುಗೊಂಡಿತೋ ಕಾಣೆ (ರಾವೂನ. ೦೩). [ಮೊನಚು + ಕೊಳ್ಳು₁ (< ಕೊಳ್₁)]

**ಮೊನಸು** (ಕ್ರಿ). ೧. ಮೂಡು ; ಅಂಕುರಿಸು : ಮೊನಸಿದ ಮೆಯ್ಯ್ನವಿರಿಂದಾನನಾಬ್ಜ ವಿಕಸನವಿಶೇಷದಿಂದ . . . ಪೇಟ್ಟಿಳು (೦೬ಲಾವ. ೦೦-೫೦); ನನೆಯುಂ ಪೆತ್ತುದು ಮಾಧವಿ ಮೊನ[ಪಾಠಾಂ. ನೆ]ಸಿದುದಂಕುರಿಪ ತೃಣವಿಮ್ಯಾವುಗಳೊಳ್ (೧೦೯. ೭-೩೭) ; ತುಱುಬುಂ ತಿರ್ದುತ್ತುಂ ಮೊನಸಿದ ಪಳಿತಮನೆ ಕಂಡು (ಪುಣ್ಯಾಸ್ರ. ೧೧-೨೦). ೨. ಮೊಳಕೆ ಪಳು : ಪದಿನಾಲ್ಕು ದಿನಕೆ ನೆತ್ತರ ಘಟ್ಟಿಯೆನಿಪವಂ ಪಡೆದು ಮೊಳೆ ಮೊನಸಿದಿಪ್ಪತ್ತೈದು ದಿನವವಂ (ಸಾಪಂತ. ೯-೩೦). [ಮೊನೆ + — ಸು₂]

**ಮೊನೆ** (ನಾ). ೧. ತುದಿ ; ಕೊನೆ : ಸೈನ್ಯಮೆಲ್ಲಮುಂಬಿನ ಮೊನೆಯೊಳ್ ಪಡಲ್ವಡೆ (ಪಂಪಭಾ. ೩.೧೧೯) : ಎಸಟಿ ಮೊನೆ ಕೂರಿತಡಿಗೆಂಬ ಸಂಕೆಯಿಂ ಮೆಟ್ಟದಂತೆ ಮುಟ್ಟದೆ ಕುಣಿದಾಗಪೆಂಬ ರಂಗದೊಳ್ (ಶಾಂತಿಪು. ೧೦-೧೭); ಮೊದಲೊಳ್ ಮುಳ್ಳಿನ ಮೊನೆಗಳ್ ಮೃದುವಪ್ಪುವು (ಧರ್ಮಾಮೃ. ೬-೧೧೭). ೨. ಹರಿತವಾದುದು : ಚೂಪಾದ ತುದಿಯುಳ್ಳುದು : ಮೊನೆ ತಪ್ಪಿದ ಬಳಿಕ ಅಲಗೇನ ಮಾಡುವುದು (ಬಸವ. ೬೬೯) ; ಗಗನಧ್ವನಿಯೊಳಾದುದು ವಾರ್ತೆ ಚಿತ್ರಕೆ ಮೊನೆಯು ಸರಳಿನೆ (ಕುಮಾವ್ಯಾದ್ರೋ. ೫-೭) ; ಹುಲಿಯ . . . ಮೊನೆಯಾದ ಕೋರೇಹಲ್ಲುಗಳೂ ಬಲು ಭಯಂಕರವಾಗಿ ತೋರುವುವು (ಮುಂಬಾಯಿ. ೪-೩೩). ೩. ಮುಳ್ಳು : ತಾ ನಡೆಯಲಱಿಯದೆ ಮೊನೆಯ ಮೆಟ್ಟಿ ಬಯ್ಯುವನಂತೆ (ಮೋಕ್ಷಮಾ. ೩೩-೦೩೬). ೪. ಆಯುಧಗಳ ಹರಿತವಾದ ಬಾಯಿ ; ಧಾರೆ ; ಅಲುಗು : ದುಶ್ಶಾಸನನ ಮಗನಿದಿರಾಗಿ ಖಡುಗದ ಮೊನೆಯ ಚೂರಿಸಿ . . . ಅರ್ಜುನಕುಮಾರನ ಕರೆದು ಹಳಚಿದನು (ಕುಮಾವ್ಯಾದ್ರೋ. ೬-೫೭). ೫. ತೀಕ್ಷ್ಣತೆ ; ಚುರುಕು : ಅವಳ ಆಸೆಗಳು ಹೆಚ್ಚು ಮೊನೆಯಾದುವು (ಮುನಿವಾ. ೯೭) ; ಆಕೆಯು ಮಾತಿನಲ್ಲಿ ಮೊನೆ ಇರುತ್ತಿತ್ತು (ಗಂಪೂಜಾ. ೦೦) ; ಭಕ್ತಿಭಾವಕೊಂದು ಮೊನೆಯನಿಟ್ಟನು (ಕವಿರಾ. ೯೩-೦೭). ೬. ಶೌರ್ಯ ; ಕೆಚ್ಚು ; ಕಲಿತನ : ' ಮೊನೆದೋಱು ' ಪರಾ. ೭. (ಸೈನ್ಯದ) ಮುಂಭಾಗ ; ಅಗ್ರಭಾಗ: ತನ್ನೊಡ್ಡಿದ ಮಕರವ್ಯೂಹದ ಮೊನೆಯೊಳ್ ಸುತ್ತಿಱಿದೆತ್ತಿದ ಪೊನ್ನ ಪಟಿಯಿಗೆಗಳಂ (ಪಂಪಭಾ. ೧೦-೩೨ ವ). ೮. ದಳ ; ಬಲ ; ಪಡೆ : ಇತ್ತ ತ್ರಿಪೃಷ್ಟನುಂ ವಿಜಯನುಮರ್ಕಕೀರ್ತಿಯುಂ ಜ್ವಳನಜಟಿಯುಂ ಸರಿಸಿ ಸಮಕಟ್ಟಿ ಮೂಱು ಮೊನೆಯಾಗೊಡ್ಡಿ (ಶಾಂತಿಪು. ೩-೩೦ ವ) ; ವಿಶ್ವಾವಸು ಮಹಾರಾಜನುಂ ರುಗ್ಮಿಣಕುಮಾರನುಮೊಂದು ಮೊನೆಯಾಗಿ ಬಂದೊಡ್ಡಿದರ್ (ನೇಮಿಪು. ೭-೩೮ ವ) ; ಈತನಳವಿಯ ಕೆಡಿಸಿ ತಲೆಯೊತ್ತಿದರು ಭೂಪನ ಮೊನೆಯ ನಾಯಕರು (ಕುಮಾವ್ಯಾದ್ರೋ. ೬-೩೯). ೯. ಜಗಳ ; ಕಲಹ : ಮುಳಿಸು ಬೇಸಱು ಮೋಡಿಯಲಸಿಕೆ ಮೊನೆ ಮನದಳಲಂಜಿಕೆ ದುಗುಡದೊಳು ತಿಳಿತಿಳಿದಿನಿಯನಿಂಗಿತಭೇದಂಗಳನಳುಕಿಯಳುಕಿ ಅನುಸರಿಸು (ಹರಿಬ. ೩-೩೮). ೧೦. ಕಾಳಗ ; ಯುದ್ಧ : " ಮೊನೆ=ಕಾಳಗಂ " (ಶಮದ. ಶಂ. ೨) ; ಕಲಿಯೆನೆ ನೆಗಟ್ದಿಳ್ ಕಸವರಗಲಿಯೆನೆ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್ (ಅಜಿತ. ೧-೬೩); ಮೊನೆಯೊಳು ಮತ್ಕರವಿಳ್ಗಂ ಮನೆಯೊಳು ಮನುಮಂತ್ರಸಿದ್ಧಿ ಸಂಕಟದೊಳು ಮಿತ್ರನು ಮೆನಿಪ ಪತಿಹಿತಂ (ಸೌಇಇ. IX-i, ೩೯೩-೧೦ ; 1226) ; ನಿನ್ನಾಳ್ದನೆಮ್ಮಂ ಮೊನೆಯೊಳ್ಬಂದಾಂತು ಕೈಮಾಡಿದೊಡೆ (ಅಸಂಪು. ೦೩-೩೦). ೧೧. ಶಕ್ತಿ : ಬಲ : ' ಮೊನೆಮಱು ' ಪರಾ. ೧೨. (ಅಲಂ) ಅಡ್ಡಿ ; ವಿರೋಧ: ' ಮೊನೆದೋಱು ' ಪರಾ. (ಗು). ೧೩. ಚೂಪಾದ : ಹರಿತವಾದ : ತೀಕ್ಷ್ಣವಾದ : ' ಮೊನೆಗಣೆ ' ಪರಾ.

**ಮೊನೆಮಸೆ** = ತೀಕ್ಷ್ಣವಾಗು; ಅಧಿಕವಾಗು; ಹೆಚ್ಚಾಗು: ಮೊನೆ ಮಸೆವಕ್ಕಱು ಬಾಯ್ದೆ ಱಿಗೆಡೆವಿಡದೆಡೆಯಾಡುವ ನಱುದುಂಬುಲ . . . ನೆಱೆ ಸೊಗಯಿಸಿದುವು ನವಸುರತಕ್ರೀಡೆಯೊಳಾ ದಂಪತಿಗೆ (ಜಯುಕಾ. ೮-೩೩). **ಮೊನೆಮಾಡು** = ೧. ಚೂಪಾಗಿ ಮಾಡು : ಹರಿತಗೊಳಿಸು : ಮೊನೆಮಾಡಿದ ಪೆನ್ಸಿಲ್‌ನಿಂದ ರೇಖಾಚಿತ್ರ ಬಿಡಿಸಬೇಕು (ರೂಢಿ). ೨. ಏಕಾಗ್ರಗೊಳಿಸು : ಮನಸ್ಸನ್ನು ಒಂದಂಶದ ಮೇಲೆ ಮೊನೆಮಾಡಿದರೆ ವಿಷಯ ಚೆನ್ನಾಗಿ ಗೊತ್ತಾಗುತ್ತದೆ (ಶಿಕ್ಷದ. ೯೭೩). **ಮೊನೆಮುಟ್ಟಿಗಂಡ** = ಯುದ್ಧಕ್ಕೆ ನಿಂತರೆ ಸೋಲದ ವೀರ.— ಪರಾಕ್ರಮಿ ; ಒಂದು ಬಿರುದು : ಕವಿಜನವಿನುತಂ ಮೊನೆಮುಟ್ಟಿಗಣ್ಡನಾಹವಸೌಣ್ಡ (ಎಕ. II. ೦೩೯-೭೭ ; 982) ; ಮೊನೆಮುಟ್ಟಿಗಣ್ಡಂ ಶ್ರೀಮನ್ಮಹಾಮಣ್ಡಳೇಶ್ವರಂ (ಸೌಇಇ. IX-i, ೨೮೭-೨೦ ; 1200 ?).

[ದೇ.II ತಮಿ. ಮುನೈ ; ಮಲ. ಮುನ ; ತುಳು. ಮುನೆ, ಮೊಣೆ, ಮೊನೆ ; ಕೊಡ. ಮೊನೆ ; ತೆಲು. ಪರ್ಜ. ಮೊನ ]

**ಮೊನೆಕಟ್ಟು** (ನಾ). ಆಯುಧಗಳ ತುದಿಯು ನಿಷ್ಪ್ರಯೋಜಕವಾಗುವಂತೆ ಮಾಡುವ ಒಂದು ಬಗೆಯ ತಂತ್ರವಿದ್ಯೆ: ಮಂತ್ರ. ತಂತ್ರ . . . ದಾರೆಕಟ್ಟು. ಮೊನೆಕಟ್ಟೆಂಬ ಕುವಿದ್ಯದಿಂ ಗೆಲುವೆನು (ಭೈರಕೂ. I. ೩೭೭). [ ಮೊನೆ + ಕಟ್ಟು₂ ]

**ಮೊನೆಕಾಱ** ' ಮೊನೆಗಾಱ ' ನೋ.

**ಮೊನೆಗಣೆ** (ನಾ). ಹರಿತವಾದ ಬಾಣ : ಆತನ ನನೆಯಂಬಿನ ಮೊನೆಗಣೆಗಳೆಂಬಿನಂ ಮೆಯ್ನವಿರ್ನಿಮಿರ್ದುವು (ಕಾದಂಬ. ೭೭೮); ಕೈಚಳಕದಲಿ ಮುಸುಕಿದನು ಮೊನೆಗಣೆಯಿಂದ ರಿಪುಭಟನ (ಕುಮಾ.ಕ. ೯-೧೨); ತಿರುವಿಗೆ ತೊಡಿಸಿ ಸೆಳೆದನು ಮೊನೆಗಣೆಯನು (ಏಕಾಗ. ೯-೨೩-೭). [ಮೊನೆ + ಕಣೆ₁]

**ಮೊನೆಗಯ್ಯ** (ನಾ). ಕತ್ತಿವರಸೆಯ ಒಂದು ಪಟ್ಟು : ಇಬ್ಬರಿಂದ ಗತಿಮಧ್ಯದಲ್ಲಿ ಇಬ್ಬರ ಹಸ್ತಗಳಿಂದ ಅನ್ಯೋನ್ಯವಾಗಿ ತಾಗುವದು ಆವದು ಅದು ಮೊನೆಗಯ್ಯಯೆಂದು ಸಮ್ಮತವು (ಏಕ್ಕಟೀ. ೪-೯೭). [ ಮೊನೆ + ಕಯ್ಯ (<ಕೆಯ್₂) ]

**ಮೊನೆಗಲ್ಲು** (ನಾ). ಚೂಪಾದ ಕಲ್ಲು ; ಮೊನಚಾಗಿರುವ ಕಲ್ಲು : ಮೊನೆಗಲ್ಲು ಗುಂಡುಗಲ್ಲುಗಳರೆಗಲ್ಲುಗಳ್ . . . ಪಸುಮಾರ್ಗವ ತುಂಬಿಹುವು (ಕಂನಪಿ. ೦೮-೯೯). [ ಮೊನೆ + ಕಲ್ಲು (<ಕಲ್₃)]

**ಮೊನೆಗಾಣಿಸು** (ಕ್ರಿ). ೧. ಆಯುಧದ ತುದಿ ಕಾಣುವಂತೆ ಹಿಡಿದುಕೊಳ್ಳು : ಹೊಂಗತಾರಿಯ ಕೋಲುಮಿಡಿದು . . . ಮುಂಗೈದಂಡೆಗೊಡುತಂ ಜಾಳಿಬಱಿಯಿಡುತ ರಂಗಸುತ ಮೊನೆಗಾಣಿಸುತ್ತಂ (ಬಸವ. ೨೭-೦೨). ೨. ಆಯುಧದ ತುದಿ ಕಾಣಿಸಿಕೊಳ್ಳು; ಅಲಗು ಕಾಣಿಸಿಕೊಳ್ಳು. –ಮೂಡು : ನೀನಡವುರ್ದೀ ಶೂಲಮನೆನಲ್ಸಿತ್ತದೊಸಗ

ಯಿಂದೇಜಲಾತನ ಶಿರದೊಳದಱ ಮೊನೆಗಾಣಿಸಲ್ಬಡ್ಡಗೊಳದೆ ಎಸೆದಿರಲ್ (ಜಾತಿಸಂಪು. ೬-೯೨). [ ಮೊನೆ + ಕಾಣಿಸು ]

**ಮೊನೆಗಾತಿ** (ನಾ). ೧. ಜಗಳವಾಡುವ ಸ್ವಭಾವದವಳು; ಜಗಳಗಂಟಿ: ಮುನಿದು ಮೂದಲಿಸಿ ಮೋಡಿಯೊಳಿದ್ದು ಮೂರ್ಖಿಪ ಮೊನೆಗಾತಿಯಿ ಕೃತಿಗೇಳೆ ಇನಿಯನ ಮೊಗವ ನೋಡದ ಮುನ್ನ ಮೋಹಿಸಿ ಮನಗರಗುವಳು (ಹರಿಚ. ೧-೩೩). ೨. ಸರಸದಿಂದ ಜಗಳವನ್ನಾಡುವವಳು; ಪ್ರೇಮ ಕಲಹವನ್ನಾಡುವವಳು : ತನಗೆಱಗಿದ ಪೆಣ್ಣ ನೋಡಿ ಮೊನೆಗಾತಿ ಬಲುಮೋಡಿಗಾತಿ ಮುಱುಗಾತಿ ಮಮ್ಮಾಯೆಂದ (ಶರಕ. ೯-೧೩೬).
[ಮೊನೆ + — ಕಾತಿ]

**ಮೊನೆಗಾಯ** (ನಾ). ಆಯುಧಗಳ ಚೂಪಾದ ತುದಿಯಿಂದ ಉಂಟಾದ ಗಾಯ ; ಶಸ್ತ್ರಾಘಾತ : ಅರಿಗಳ ಕೈಯ್ಯ ಕೂರಸಿಧಾರೆ ಮೊನೆಗಾಯ ಶರೀರದೊಳಗೆ ಸಂಧಿಸಲು (ಮೋಹತ. ೩೩-೩೯). [ಮೊನೆ + ಗಾಯ]

**ಮೊನೆಗಾರ** ' ಮೊನೆಗಾಱ ' ನೋ.

**ಮೊನೆಗಾರತನ** ' ಮೊನೆಗಾಱತನ ' ನೋ.

**ಮೊನೆಗಾರು** (ನಾ). ಲೋಹದ ತಂತಿಯನ್ನು ಪಡೆಯಲು ಉಪಯೋಗಿಸುವ ಒಂದು ಬಗೆಯ ಚಿಮುಟ : (+). [ ? ]

**ಮೊನೆಗಾಲ್**, ಮೊನೆಗಾಲು (ನಾ). ೧. [ನಾಟ್ಯ] ಒಂದು ಬಗೆಯ ಪಾದವಿನ್ಯಾಸ : ಚಂದು ಜಕ್ಕಡಿ ಕೋಲಚಾರಿಗಳ್ ಮೊನೆಗಾಲ್ ಕಳಾಸ ಕೈಮುಱಿ ತಿವುಡೆ ಮುಡುಹುಮುಳ್ಳನಿತು ಭೇದಂಗಳಿಂ ನರ್ತಿಸುವ ನೃತ್ಯದಬಲಾಜನಂ ಕಣ್ಗೆಸೆದುದು (ಕಿರಾಪು. ೨-೨೯). **ಮೊನೆಗಾಲು**: ೨. ಕತ್ತಿವರಸೆಯಲ್ಲಿನ ಒಂದು ಪಟ್ಟು : ಸಮಪಾದದಿಂದ ನಿಂತು ತುದಿಗಾಲ್ಗಳಿಂದ ಭೂಮಿಯನ್ನು ಮುಟ್ಟಬೇಕು . . . ಅದರ ಹೆಸರು ಮೊನೆಗಾಲು ಯೆಂಬುದು (ಖಡ್ಗಬೀ. ೯-೯೩). [ಮೊನೆ + ಕಾಲ್$_1$]

**ಮೊನೆಗಾಲು** ' ಮೊನೆಗಾಲ್ ' ನೋ.

**ಮೊನೆಗಾಱ**, ಮೊನೆಕಾಱ, ಮೊನೆಗಾರ (ನಾ). ೧. ಯುದ್ಧಮಾಡುವವನು : ಯೋಧ ; ವೀರ : ಅರಸಿಯರನಣುಗರಂ ಬೇಟ್ಪರುಮಂ ಮೊನೆ [ಪಾಠಾಂ. ಪೊಣೆ] ಗಾಱರುಂ ಪ್ರಗೀತರನಿಂಬಾಗಿರೆ ಚೌಪಳಿಗೆಗಳೊಳ್ ಕುಳ್ಳಿರಿಸಿದರ್ (ಶಂಕರಾ. ೨-೬೭) ; ಮೊನೆಗಾಱ ನೀನೋ ನಮ್ಮರಸನೊ (ಶರಕ. ೩೮-೭೮) ; ಆತನ ದಾಯಿಗ ಮೊನೆಗಾಱ ಸೋಮಪ್ರಭನು (ನಾಗಕು. ೧೯-೦೩) ; ಪಗೆಗಾಱರ ಮೊನೆಗಾಱರ ಬೀರ ! (ರಾಮಪಾತ್ಯ. ೮೦-೩). **ಮೊನೆಕಾಱ** : ೧. ದಿಂಡುಕಾಱಂ, ಬಿಲ್ಕಾಱಂ, ಮೊನೆಕಾಱಂ (ಭಾಷಾಭೂ. ೦೬೧ ಉದಾ). **ಮೊನೆಗಾರ** : ೧. ಪ್ರತಿಜ್ಞೆಯಂ ಮಾಡಿದ ಮೊನೆಗಾರನು ಯಿಾ ಆಯುಧವನೆತ್ತಲಾರನೇ (ಸೌಗಂಧಿ. ೨೩೩-೮) ; ಮೊನೆಗಾರರು ಅರಿಬಲದ ಮೊನೆ ಮುರಿದರು (ಕಲಿಕ. ೦೨೯). ೨. ಮೈಸೂರು ಅರಸರಿಗಿದ್ದ ಒಂದು ಬಿರುದು : ಜನಪ ಮೊನೆಗಾರನೆಂಬ ಬಿರುದಂ ಪಡೆದಂ (ಮುರಾಹ. ೦-೪೦) ; ' ಮೊನೆಗಾರ ' ಎಂಬ ಬಿರುದೂ ಶ್ರೀಮನ್ಮಹೀಶೂರ ಮಹಾರಾಜವಂಶವನ್ನು ಸಿಕ್ಕಿ ಒಂದು ಕೃತಾರ್ಥವಾಯಿತು (ಬಿರುಗಂ. ೩೨-೨೦).
[ಮೊನೆ + — ಕಾಱ]

**ಮೊನೆಗಾಱತನ**, ಮೊನೆಗಾರತನ (ನಾ). ಯುದ್ಧಕೌಶಲ : ಎಟ್ಟಿರಂ ಬೆತ್ತ ಶಕ್ತಿಯನೆ ಕೊತ್ತಳಮುಮಂ . . . ಮೊನೆಗಾಱತನಮನೆ ಮುಗಿಲಟ್ಟಳೆಗಳುಮಂ ಗೆಯ್ದು ಕಾದುತ್ತೆ (ಶಶಪ. ೩೯-೯). **ಮೊನೆಗಾರತನ** : ಕೋಟೆಗಳಂ ನೋಟದಿಂದಲೆ ಮಿಾಟುವ ಮೊನೆಗಾರತನದಿಂ (ಸೌಗಂಧಿ. ೦೩೦-೦). [ಮೊನೆಗಾಱ + — ತನ]

**ಮೊನೆಗಾಱಿಕೆ** (ನಾ). ಜಗಳ ; ಕಲಹ : ಸರಸಮೋಹಕೆ ಮೊನೆಗಾಱಿಕೆ ಸಲ್ಲದೆಂದೊರೆದು ನಿಲಿಸಿದನಾ ವಿಟನು (ಶರಕ. ೩೮-೦೫).
[ಮೊನೆಗಾಱ + — ಇಕೆ]

**ಮೊನೆಗುತ್ತು** (ನಾ). = ಮೊನೆಗಾಯ : ಪಿರಿದು ಮೊನೆಗುತ್ತಿನಲಿ ನೆತ್ತರು ಸುರಿದುದಡಹೊಯ್ಲಿನಲಿ ಖಂಡದ ಹೊರಳಿ ತಳಿತುದು (ಕುಮಾ. ಭಾ. ೯-೦೬).
[ಮೊನೆ + ಕುತ್ತು$_2$]

**ಮೊನೆಗೂಡು** (ಕ್ರಿ). ತುದಿಯನ್ನು ಮುಟ್ಟು: ಹೂಂಗಳಸ ಮಿರುಗುವೆತ್ತ ಮೊನೆಗೂಡುವಾಗಸದ . . . ಮಂದಿರದಿ ಸಂಘಟಿಸಿತಪ್ಪಧಾಭಿನ್ನಮಾದೀಶ್ವರ ಪ್ರಕೃತಿರೂಪಂ (ಮಲೆದೇ. ೩೪-೦). [ಮೊನೆ + ಕೂಡು$_1$]

**ಮೊನೆಗೈ** (ಕ್ರಿ). ಹರಿತಗೊಳಿಸು ; ಚೂಪುಮಾಡು : ಮಾರನಂಬಿನ ಮೊನೆಯ ಮಗುಳೆ ಮೊನೆಗೈಯುತಿಪ ವಾರನಾರೀವಾರ (ಪಂಪಾರಾ. ೦-೬-೨೯). [ ಮೊನೆ + ಕೈ$_1$ (<ಕೆಯ್$_1$) ]

**ಮೊನೆಗೊಡು** (ಕ್ರಿ). (ಮುಖಾಮುಖಿಯಾಗಿ) ಯುದ್ಧಕ್ಕೆ ತೊಡಗು ; ಹೋರಾಡು : ನಿಟ್ಟಿಸಿ ಹಣುಗಿ ಮೊನೆಗೊಡೆ ದಂಡೆಯೊಳು ಖಣಖಣಿಲು ರವವೆಸೆಯಲ್ಕೆ ಕಾದಿತು ಸುರಗಿಯತಿಬಲರು (ಕುಮಾ. ಭಾ. ೯-೨೩) ; ನುಗ್ಗಿಸಲೆಡೆಗುಡದೆ ನಿಂದು ಮೊನೆಗೊಡಿರನುಮಿಂ ಹಿಗ್ಗಿ ಪೆಜಸಾರದಿರಿ (ಹಮ್ಮೀರ. ೩-೩೯). [ಮೊನೆ + ಕೊಡು$_1$]

**ಮೊನೆಗೊಳ್ಳು** (ಕ್ರಿ). ತೀಕ್ಷ್ಣತೆಯನ್ನು ತಳೆ : ತೀವ್ರವಾಗು : ಅಹಿತ ಸಂತತಿಜಾಲ ಮೊನೆಗೊಂಡು ಮುಸುಕಿರಲು ಮಹಿಯ ಮಂಗಳವೆಳಸಿ ಮರುಗುವಾತ್ಮವನು (ಏಕೀಗೀ. ೦೭-೯).
[ಮೊನೆ + ಕೊಳ್ಳು$_1$ (<ಕೊಳ್$_1$)]

**ಮೊನೆಗೋಲು** (ನಾ). (ಅಂಕುಶದಂತೆ) ಚೂಪಾದ ತುದಿಯುಳ್ಳ ಕೋಲು : "(ದನಗಳನ್ನು ಚುರುಕುಮಾಡುವ) ಮೊನೆಯುಳ್ಳ ಕೋಲು ; ಮೊನೆಗೋಲು, ಚುಚ್ಚುಗೋಲು" (Goad. ೩೦೪೩).
[ ಮೊನೆ + ಕೋಲು$_1$ (< ಕೋಲ್$_1$) ]

**ಮೊನೆದಿವಿಗುಳು** (ನಾ). ಚೂಪಾದ ಆಯುಧದ ತಿವಿತ,–ಇರಿತ : ಮೇಲ್ಮೇಲ್ಪೊಯಿಲ್ಮೊನೆದಿವಿಗುಳಿಂದೆ ಮೆಯ್ಗಳ ತುಂಡುಗಳ್ ಬೀಳೆ (ಕಿರಾಪು. ೪೮-೫೦). [ಮೊನೆ + ತಿವಿಗುಳು]

**ಮೊನೆದುಱುಗಲ್** (ನಾ). ಚೂಪಾದ ಮೊನೆಗಳ ಗುಂಪು : ಪಲಸಿನ ಪಣ್ಣನಸುಕರಿಪ ಮೊನೆದುಱುಗಲ ವಜ್ರದ ಶಿಲೆಯೊಳಪ್ಪಳಿಸಿ (ವರ್ಧಪು. ೦೦-೦೫ ವ). [ಮೊನೆ + ತುಱುಗಲ್ (<ತುಱುಂಗಲ್)]

**ಮೊನೆದೋಱಿಸ್** ' ಮೊನೆದೋಱು ' ನೋ.

**ಮೊನೆದೋಱು**, ಮೊನೆದೋಱಿಸ್ (ಕ್ರಿ). ೧. ಆಯುಧದ ಚೂಪಾದ ತುದಿಯನ್ನು ತೋರಿಸು : ಉಱುಬಿದರೆ ವಡಬಾನಲನ ಮುಖದಿರವು ಮೊನೆದೋಱಿದರೆ ಭುಜಗನ ಬಿಱುಬು (ಕುಮಾ. ಭಾ. ೯-೩೪). ೨. ಮೊಳಕೆದೋರು ; ಕಾಣಿಸಿಕೊಳ್ಳು : ಅಂತು ಬೆಡಂಗನಾಂತ ಕಳಿಕಾನಿವಹಂ ಮೊನೆದೋಱಿದನ್ನಂ . . . ತಲೆದೋಱಿದತ್ತು ವಾಸಂತಿ (ಜಗನ. ೦೯-೨೦). ೩. ಶೌರ್ಯವನ್ನು ತೋರು : ಬಲವೆರಸಿ ತಾನೊಡ್ಡಿ ನಿಲಲೀ ಇಳೆಯ ನಡುಗಿಸಿ ಸಮರಭೇರಿಯು ಮೊಳಗೆ ಯಾದವಬಲವು ಮೊನೆದೋಱಿಪುದು ಚೋಣಿಯಲಿ (ಸಾಳ್ವಭಾ. ೦೯-೦೨) ; ಮೊನೆದೋಱಿ ಹೆಣ್ಣ ಭೋಗಿಸುವುದು ಸೊಗಸಲ್ಲ ವಿನಯದೊಲುಮೆ ಸೊಗಸು (ಶರಕ. ೦೦-೦೭). ೪. (ಅಲಂ) ಅಡ್ಡಿಯನ್ನುಂಟುಮಾಡು ; ವಿರೋಧವನ್ನು ವ್ಯಕ್ತಪಡಿಸು : ಯತಿಗಳಿಗೆ ಮೊನೆದೋಱಿ ತಣಿಸದು [ಪಾಠಾಂ. ಜಿವಣಿಸನು] ವ್ರತಿಗಳಿಗೆ ಬೀಱುತ ಸಮಾಧಿಸ್ಥಿತರ ಮೂಗಿನ ಮೇಲಡಾಯುಧಧಾರೆಗಳನೆಳೆದು . . . ನಡೆದುದು ಯುವತಿಜನಕಟಕ (ಕುಮಾ. ಆ. ೦೩-೩೭) ; ಕೇಳ್ದು ಮಾನಿನಿ ನನೆಗೋಲನರ್ಥಾಂಗನೆಗೆ ಮೊನೆದೋಱಿ ಮೃದುವಾಕ್ಯದಿಂದಡಿಗೆಯ ಮನೆಗೆಲಸಕೆ ಸಾರ್ಚಿದಳು (ಮೋಹತ. ೦೦-೪೦). **ಮೊನೆದೋಱಿಸ್** : ೫. ಜಗಳವನ್ನು ಆರಂಭಿಸು : ಮೊನೆದೋಱ್ಪಕಲಿಸಾರ್ವರುಮಪ್ಪಿಪರ್ (ಶಶಪ. ೬-೯೭). [ಮೊನೆ + ತೋಱು]

**ಮೊನೆನಗೆ** (ನಾ). ಮುಗುಳುನಗೆ ; ಮಂದಹಾಸ : ಮೊನೆನಗೆಯ ಸಿರಿ ಮೊಗದ ನೆಗಪಿದ ಜನದಭಯಹಸ್ತಾಂಬುಜದ ಹರಿ ವಿನುತಸಿಂಹಾಸನವ ನಿಳಿದಾ ಧುರಕೆ ಹೊಱಮಟ (ಕುಮಾ.ಸ. ೧೧-೬೧); ಮೊನೆನಗೆಯಿಂದ ಆಡಿದ ಮಂದಿಮಾತನು ಮನ್ನಿಸಿ (ಕಂಕೃ. ೧೯-೨೦). [ಮೊನೆ + ನಗೆ]

**ಮೊನೆನೋಟ** (ನಾ). ಕಡೆಗಣ್ಣಿನ ನೋಟ; ಕುಡಿನೋಟ : ಅಪಾಂಗ ದೃಷ್ಟಿ : ಮೊನೆನೋಟದಿಂ ಚುಚ್ಚಿ ಬೆಳ್ಳಿ ನೋಡುವಳೊವನೆ (ಕಾಂಶ. ೯೨-೩೯). [ಮೊನೆ + ನೋಟ]

**ಮೊನೆಪಾಡು** (ನಾ). ಕಾಳಗದ ಸ್ಥಿತಿ,-ಇರವು : ಅನುವರದೊಳಗೆಚ್ಚಬಿಲಿ ಪಾನ ಮುಲುಕರ ಮೊನೆಪಾಡ ಮುಱಿದೆಬ್ಬಿಸೆಂದ (ಕಂಸಾ. ೦೯-೪೮). [ಮೊನೆ + ಪಾಡು$_3$]

**ಮೊನೆಮಗುಚು** (ಕ್ರಿ). (ಖಡ್ಗದ) ತುದಿಯನ್ನು ಒರೆಯೊಳಗೆ ನೂಕು: ಮಿಗಿದ ಗಂಡುಡಿಗೆಯಲಿ ಹೊನ್ನಾಯುಗದ ಹೊಳೆವ ಕಠಾರಿಯನು ಮೊನೆ ಮಗುಚಿ . . . ಆಹವಕ್ಕನುವಾದನಭಿಮನ್ಯು (ಕುಮಾ.ದ್ರೋ. ೯-೯೯). [ಮೊನೆ + ಮಗುಚು (< ಮಗುಬ್ಚು)]

**ಮೊನೆಮಲ್ಲಿಗೆ** (ನಾ). ಚೂಪಾದ ತುದಿಯುಳ್ಳ ಒಂದು ಬಗೆಯ ಮಲ್ಲಿಗೆ ಮತ್ತು ಅದರ ಗಿಡ ; ಸೂಜಿಮಲ್ಲಿಗೆ : ಎಳನನೆ ತೀವಿ ತೋರ್ಪ ಮೊನೆಮಲ್ಲಿಗೆ ತಾವರೆ ತೀವಿ ತೋರ್ಪ ತಂಗೊಳಂ (ರಾಜಶೇ. ೨-೪೭).

[ಮೊನೆ + ಮಲ್ಲಿಗೆ]

**ಮೊನೆಮಾತು** 'ಮೊನೆವಾತು' ನೋ.

**ಮೊನೆಮಿಂಚು** (ನಾ). (ಕಣ್ಣನ್ನು ಕೋರೈಸುವ) ತೀಕ್ಷ್ಣವಾದ ಮಿಂಚು: ಮೊಗ್ಗರಿಸಿ ಮೊರೆ ಮುಗಿಲೆ! ಮಿನುಗು ಮೊನೆಮಿಂಚೇ ! (ಗೀಶಿಂ. ೯೬-೨). [ಮೊನೆ + ಮಿಂಚು$_2$]

**ಮೊನೆಮುಗುಳು** (ನಾ). ಚೂಪಾದ ತುದಿಯುಳ್ಳ ಮೊಗ್ಗು : ಮೊನೆ ಮುಗುಳ ಶಸ್ತ್ರಂಗಳಂ ಪಾಯ್ದು ಮಾಮಿಡಿಯ ಜೊಂಪದ ವಜ್ರಮುಷ್ಟಿಯುಂ ಜಡಿದು (ಕೈಪಿಂಶಾ. ೪-೪೨). [ಮೊನೆ + ಮುಗುಳು$_2$ (<ಮುಗುಳ್$_2$)]

**ಮೊನೆಮುಳ್ಳು** (ನಾ). ಚೂಪಾದ ಮುಳ್ಳು : ಸಲೆ ಪಚ್ಚೆಯನಿಡೆ ನಾಂಟುವ ಮೊನೆಮುಳ್ಳಿನಿಂದೊಳುಗಾಡಸೆದುದೇಸೆಂಬೆ (ಕಂಸಾ. ೦೬-೯೭). [ಮೊನೆ + ಮುಳ್ಳು (<ಮುಳ್$_2$)]

**ಮೊನೆಮುಱಿ** (ಕ್ರಿ). ಶಕ್ತಿಗುಂದಿಸು ; ನಿರ್ವೀರ್ಯಗೊಳಿಸು : ಚನರಾಯಪಟ್ಟಣದ ಭಟರು ಬರುತಿಹ ಘನವಾದ ತುರುಕರ ಬಲವ ಮೊನೆಮುಱಿದು . . . ಮನಹರುಷದೊಳ್ಳಿದಿದರು (ಕಂಸಾ. ೦೪-೬೦). [ಮೊನೆ + ಮುಱಿ$_1$]

**ಮೊನೆಮೊಳೆ** (ನಾ). ಚೂಪಾದ ತುದಿ ; ಹರಿತವಾದ ಕೊನೆ : ಹೊನ್ನಿನ ಹೊಳೆವ ಕಠಾರಿಯ ಮೊನೆಮೊಳೆ ಬೆನ್ನೊಳು ತಲೆದೋಱಿಸಲು (ಮೋಹತ. ೦೨-೬೮). [ಮೊನೆ + ಮೊಳೆ$_2$]

**ಮೊನೆಯಂಬು** (ನಾ). ಹರಿತವಾದ ಬಾಣ ; ಕೂರ್ಗಣೆ : ಕಾಸಿದ ಮೊನೆಯಂಬುಳ್ಳವನ[ವ]ಱಿಂ ಮೆಯ್ಯನನೇಕಶರಸಂಘಾತಂಗಳಿಂದಮೆಚ್ಚೊಡೆ (ಪಂಪಾರಾ. ೦೭೪-೦೫) ; ವಿದ್ವಿಷ್ಟವಿದ್ರಾವಣನ ಮೊನೆಯಂಬಿನಂಬೇಱಿಂಗಳ್ಕಿ ಹತವಿಹಿತಕೋಳಾಹಳರಾಗಿ (ಚಂಶಾ. ೫-೮೮ ವ) ; ಅದೇನನುಕರಿಸಿದುಸದೊ ಮನ್ಮಥನ ನನೆಯ ಮೊನೆಯಂಬಿದೆಂಬ ಮಾತಮರ್ಪಿನೆಗಂ (ಸುಕುಮಾ. ೦೦-೨೧) ; ಪೋದಪದಸುಮೀಗಳೆ ಮದನನಿಸುವ ಪೊಸಕೆಂದಳಿರ್ಗಳ ಕೆಂಗಱಿಯ ನನೆಯ ಮೊನೆಯಂಬುಗಳಿಂ (ಜಗವಿ. ೦೦-೦೪). [ಮೊನೆ + ಅಂಬು$_2$]

**ಮೊನೆಯಲಗು** (ನಾ). ೧. (ಆಯುಧ, ಬಾಣ ಇತ್ಯಾದಿಗಳ) ಹರಿತವಾದ ಅಲಗು ; ಚೂಪಾದ ತುದಿ : ಮೊನೆಯಲಗಿನಂಬುಗಳ ಬಿಱುಸರಿಗನಿಬರಂಗವ ತೆತ್ತುವಾಶಾಯನಿತವಿಗ್ರಹವಾಯ್ತು ನಿಗ್ರಹದತಿ ಮಹಾರಥರು (ಕುಮಾ.ದ್ರೋ. ೦೨-೨೨). ೨. ಹರಿತವಾದ ಬಾಣ ; ಕೂರ್ಗಣೆ : ಮದನನ ಮೊನೆಯಲಗಿನಲಿ ಬಳಲ್ದ ಸತಿಯನು ಕಂಡು (ಪಳಶ. ೨-೨೯). [ಮೊನೆ + ಅಲಗು$_2$]

**ಮೊನೆಯಾಳ್**, –ಮೊನೆಯಾಳು (ನಾ). ಯುದ್ಧ ಮಾಡುವವನು ; ಯೋಧ ; ಸೈನಿಕ : ಕುಸುಮಾಸ್ತ್ರ ತನ್ನಯ ಮೊನೆಯಾಳ್ಗಳಿದಿರಲಿ ಮಿಸುಗುವರಿಲ್ಲೆಂದು ನಗುತ (ಕಂಸಾ. ೭-೯೫). **ಮೊನೆಯಾಳು** : ಸಾಹಸಿಕರಳುಕಿದರು ಕೌರವಮೋಹರದ ಮೊನೆಯಾಳುಗಳು (ಕುಮಾ.ದ್ರೋ. ೦೬-೯೭) ; ಸೇವಕ ವಜೀರ ಮೊನೆಯಾಳು ಮಾಡಿಸ್ತ ಸ್ತಂಭ ಘಂಟೆ (ಎಕ. XV, ಅರಕ. ೦೪೭-೩ ; 1559) ; ಕೋಪದಲಿ ಜನನಾಥ ಕಂಠೀರವೇಂದ್ರನ ದಳಪತಿ ಮೊನೆಯಾಳು ಸಹಿತುಱುಬಿದನು (ಕಂಸಾ. ೦೮-೦೦೩). [ಮೊನೆ + ಆಳ್$_3$]

**ಮೊನೆಯಾಳು** 'ಮೊನೆಯಾಳ್' ನೋ.

**ಮೊನೆಯಿಟ್ಟಿ**, ಮೊನೆಯಿಟಿ (ನಾ). ಚೂಪಾದ ಈಟಿ ; ಹರಿತವಾದ ಭರ್ಜಿ : ಜಕ್ಕಿಯನಾಯಕಂ ಮೊನೆಯಿಟ್ಟಿಗೊಂಡ ನಾಯಕರ ಮೇಲೆ ಪಾಯ್ದುಲು ತಳಿಯ ಮಱಿವಿಡಿದು (ಮೈಅ. ೧೯೪೦೬ ೯೨-೦ ; 13ನೆಯ ಶಿಶ). **ಮೊನೆಯಿಟಿ** : ಕುಣಿಕುಣಿದು ಮಣಿದು ಮೊನೆಯಿಟಿಗಳ ಸೂಚರ್ಯತ್ರ (ಪಪತೋ. ೨೪-೫೮). [ಮೊನೆ + ಇಟ್ಟಿ$_2$]

**ಮೊನೆಯಿಡು** (ಕ್ರಿ). ಚೂಪಾದ ತುದಿಯಿಂದ ತಿವಿ, — ಚುಚ್ಚು : ಒರ್ಮೆಯೆ ಮುಟ್ಟೆವಂದುದು ಬೆಱೀಟುತ್ತುಂ ಪಾಹೀರಂಗವಂ ಕೆಲೆದುರ್ಬೇಟಿಸುತಂಗವಂ ಮೊನೆಯಿಡುತ್ತುಂ ಶೃಂಗವಂ ಪೂಂಗವಂ (ಜಗವಿ. ೫-೪೭). [ಮೊನೆ + ಇಡು$_1$]

**ಮೊನೆಯಿಸು** (ಕ್ರಿ). ತೀಕ್ಷ್ಣತೆಯನ್ನು ನೀಡು ; ಮೊನೆಗೊಳಿಸು : ಸುಭ್ರೂ ಕಟಾಕ್ಷಕ್ಕೆ ಮೊನೆಯಿಸುವ ಬಲವೇ (ಮುಲಿದೇ. ೨೫-೯). [ಮೊನೆ + ಈ$_2$]

**ಮೊನೆಯಿಟಿ** 'ಮೊನೆಯಿಟ್ಟಿ' ನೋ.

**ಮೊನೆಯೇಡು** (ನಾ). ಅದೇ ತಾನೆ ಕಳೆದುಹೋದ ಕಾಲ; ಭೂತಕಾಲ: ಸವಸಂದ ಕಾಲವಾಚಕಮಿವು ನಾಡಿದು ನಾಳೆ ನಿನ್ನೆ ಮೊನ್ನೆಗಳಾದಂ ವಿವರಿಪುವೀವಱು ಮೊನೆಯೇಡವು ಕಿಂಚಿದ್ಭೂತಭೂತಕಾಲದ್ವಯದೊಳ್ (ಶಮದ. ೪೨೨); ಮೊನೆಯೇಡಿನ ನೆರೆವಾಳ್ವೆದಿನಿವಂ ಕವಿ ಬಸುಟು ಲೋಕ ಮಂತ್ರಿರವೇಳ್ಕುಂ (ಸಂಶಕ. ೬-೦). 'ಇಯಾಂಡು', 'ಯಾಂಡು' ಪರಾ. [ಮೊನೆ$_1$ + ಏಡು$_1$]

**ಮೊನೆಯೇಱು** (ಕ್ರಿ). ಕಾಳಗಕ್ಕೆ ತೊಡಗು : ಕೈದು ಮೊನೆಯೇಱುವುದಕ್ಕೆ ಮೊದಲೇ ಕಟ್ಟಬಲ್ಲಡೆ ಕೈದೇನ ಮಾಡುವುದು (ಸರ್ವಪ. ೪೨-೨೦೭). [ಮೊನೆ + ಏಱು$_1$ (< ಏಱ್$_1$)]

**ಮೊನೆವಲ್ಲು** (ನಾ). ಚೂಪಾದ ಹಲ್ಲು; ಮೊನಚಾದ ಹಲ್ಲು : ಕುಲಿಶದ ಪಂತಿವಲ್ಲ ಕಂಗೊಳಿಪ ಮೊನೆವಲ್ಲುಗಳ ನಾರಿಯರ್ ಶೃಂಗಾರಹಾರಿಯರ್ ಬರುತಿರ್ದರು (ಶಬಿಕೃ. ೪೭-೯೫): ಸೊಗಯಿಸುವ ಗೋಣ್ಕೊಳಗಿನಿಂಚರಂಗಳನೆಸಗಿ ಮೊನೆವಲ್ಲ ಕರ್ದುಕನುಗುರೊತ್ತುಗಳನು . . . ..ಕೈಗೊಳಿಸಿ (ಕೈಪಿಂಶಾ. ೦೦-೨೨). [ಮೊನೆ + ಪಲ್ಲು (< ಪಲ್)]

**ಮೊನೆವಾತು**, ಮೊನೆಮಾತು (ನಾ). ತೀಕ್ಷ್ಣವಾದ ನುಡಿ: ಚುಚ್ಚುಮಾತು; ವ್ಯಂಗ್ಯೋಕ್ತಿ : ಮೊನೆವಾತಿನೊಳಿಂತು ಜಡಿದು ನುಡಿದಳ್ (ಗೀತಗೋ. ೨೭-೯೭); ಮುನಿದಿನಿಯನ ಕಡುಮೊನೆವಾತಿಗೆ ನೊಂದು ಕನಲದೆ (ಹರಿ. ೪-೨೪). **ಮೊನೆಮಾತು** : ಆ ಮೊನೆಮಾತುಗಳಿಂದ ತಂದೆಯ ಬಗ್ಗೆ ಜುಗುಪ್ಸೆಯುಂಟಾಯಿತು (ಪ್ರತಿಬಿಂ. ೦೭). [ಮೊನೆ + ಮಾತು$_1$]

**ಮೊನೆವೆಳಗು** (ನಾ). ತೀಕ್ಷ್ಣವಾದ ಬೆಳಕು : ಜಾರುಗೆನ್ನೆಯ ಕಡೆಗೆ ಸುಳಿವಾಸೆದಿಟ್ಟಿಗಳ ದಟ್ಟಿಸುತ ಓಲಿಮಣಿ ಮೊನೆವೆಳಗನೆಸೆಯೆ (ಮುಲಿದೇ. ೪೦-೨). [ಮೊನೆ + ಬೆಳಗು$_2$ (< ಬೆಳಕು$_2$)]

**ಮೊನೆಸರಳು** (ನಾ). = **ಮೊನೆಗಣೆ** : ಮೊನೆಸರಳು ಮಾನ್ಮರನರಿವವೇ ನೀವೇಕೆ ರಣವೇಕೆ (ಕುವ್ಯಾ.ಕ. ೪-೩೦). [ಮೊನೆ + ಸರಳು$_1$ (< ಸರಲ್)]

**ಮೊನೆಸುರಗಿ** (ನಾ). ಹರಿತವಾದ ಕಠಾರಿ ; ಚೂಪಾದ ಕಿರುಗತ್ತಿ : ಕೂರಂಬಿನಲಿ ಮೊನೆಸುರಗಿಯನು ಖಂಡಿಸಿದನು (ಕುವ್ಯಾದ್ರೋ. ಕಂ. ೨೬೬-೨೦). [ಮೊನೆ + ಸುರಗಿ$_2$ (< ಸುರಿಗೆ$_2$)]

**ಮೊನೆಹಾರೆ** (ನಾ). ಚೂಪಾದ ತುದಿಯುಳ್ಳ ಹಾರೆ : ಗುದ್ದಲಿ ಮೊನೆ ಹಾರೆಗಳ್ ಪಿಡಿದ ಕರದ ಕುಡುಗೋಲು . . . ಷಹ ಬಹ ಕಾವಾಟದ ಬಿತುಮಂದಿಗೆ ಲೆಕ್ಕವಿಲ್ಲ (ಕಂಸಪ. ೦೦-೪೦). [ಮೊನೆ + ಹಾರೆ (< ಪಾರೆ$_1$)]

**ಮೊನ್ನೆ**$_1$ (ನಾ). ನಿನ್ನೆಯ ಹಿಂದಿನ ದಿನ : ವನಜಮುಖಿ ಕೇಳ ನೀಂ ಮೊನ್ನಿನ ಶೂನ್ಯವಚನಮಂ ನುಡಿಯದೆ ನೆಟ್ಟನೆ ಬರ್ಪುದು (ರವರ್ಣಮ್ಮ. ೫-೨೨೬); ಸವಸಂದ ಕಾಲವಾಚಕಮಿವು ನಾಡಿದು ನಾಳೆ ನಿನ್ನೆ ಮೊನ್ನೆಗಳ್ (ಶಪುತ. ೩೨೨); ನಿನ್ನವೊಲು ಸಿದ್ಧಾರ್ಥನೆಂಬವ ಮೊನ್ನೆ ಬಂದನು (ಸಾಕ್ಷ್ಯ. ೦೭-೯೬). [ದೇ.॥ ತಮಿ. ಮುನ್ನಾನ್ನಾಳ್, ಮುನ್ನೈನಾಳ್; ಮಲ. ಮುನಿ ನಾನ್ನು; ತುಳು. ಮೊರಣೆ, ಮೊರಾನಿ; ತೆಲು. ಮೊನ್ನ]

**ಮೊನ್ನೆ**$_2$ (ಅ). ಇತ್ತೀಚೆಗೆ ; ಕೆಲ ಸಮಯದ ಹಿಂದೆ : ಮೊನ್ನೆ ಮದಿವ್ಯಾದೆನ್ನೆ ಕಟಿವೆಡೊಂದೆರಡಮ್ಮೆ (ಪುರಂದ. ೨-೬೩-೫); ಬಲರಾಮರ್ ಮೊನ್ನೆ ಮಾಡುಗುಂ ಬಲಿವಧಮಂ (ಕವ್ಯಾಕು. ೪೬೩ ವೃದೂ); ಮೊನ್ನೆ ತದಡಿಯಿಂದ ಮಗಳೂ ಬಂದಾಳಂತಲ್ಲ (ಮೂರುದಾ. ೦೯೨).

**ಮೊನ್ನೆಮೊನ್ನೆ** (ದ್ವಿರುಕ್ತಿ) : ಮೊನ್ನೆಮೊನ್ನೆ ತನಕ ಸಕ್ಕರೆ ಮುಕ್ತ ಮಾರ್ಕೆಟ್‌ನಲ್ಲಿ ಸಿಗುತ್ತಿತ್ತು (ರೂಢಿ). [< ಮೊನ್ನೆ$_1$]

**ಮೊಬಲಗು** (ನಾ). ಹಲವು ಅಂಶಗಳನ್ನು ಕೂಡಿದಾಗ ಬರುವ ಒಟ್ಟು ಹಣ ; ರಕಮು : ಅವರು ಸಂದಾಯ ಮಾಡಬೇಕಾದ ಮೊಬಲಗನ್ನು ಪಾವತಿ ಮಾಡುವವರೆಗೂ ಸೆರೆಯಲ್ಲಿಟ್ಟು ಅವರಿಗೆ ಎದುರುಕಕ್ಷಿಗಾರರಿಂದ . . . ಭತ್ಯ ಕೊಡಿಸುತ್ತಿದ್ದರು (ಮಹಾಪಂ. II. ೪೬) : ಅವರಿಗೆ ಸಲ್ಲಬೇಕಾಗಿದ್ದ ಬಾಕಿಯ ಮೊಬಲಗನ್ನು ಒಟ್ಟಿಗೆ ಸಲ್ಲಿಸತಕ್ಕದು (ಜಗಕಂ. ೨೦).
[ ← ಅರ. ಮುಬ್ಲಘ : ಹಿಂ. ಮುಬಲಗ್ ; ಮರಾ. ಮುಬಲಕ, ಮುಬ್ಲಗ ]

**ಮೊಬ್ಬು** 'ಮಬ್ಬು$_2$' ನೋ.

**ಮೊಮುಜಾಮೆ** (ನಾ). ಎಣ್ಣೆ, ಮೇಣ ಮುಂತಾದುವುಗಳಿಂದ ಪರಿಷ್ಕರಿಸಿ ಒದ್ದೆಯಾಗದಂತೆ ತಯಾರಿಸಿದ ಬಟ್ಟೆ ; ಮೇಣಗಪ್ಪಟ : ಚವಲೀಜೋಡಿ ೨ ಬುರಕೀಕಾವ್ ೧ ಮೊಮುಜಾಮೆದು ೧ ಸಪ (ಎಕ. XIV, ನಂಜನ. ೨೬೯-ಪುಟ ೪೦೦; 1847).
[ ←ಹಿಂ. ಮರಾ. ಮೋಮ್‌ಜಾಮಾ ]

**ಮೊಮ್ಮ** 'ಮರ್ಮ$_1$' ನೋ.

**ಮೊಮ್ಮಕ್ಕಳು** 'ಮೊಮ್ಮಗು' ಪರಾ.

**ಮೊಮ್ಮಗ**, ಮಮ್ಮಗ (ನಾ). ಮಗನ ಅಥವಾ ಮಗಳ ಮಗ ; ಪೌತ್ರ : ನಿಮ್ಮ ಮಗಳುಂ ನಿಮ್ಮ ಮೊಮ್ಮಗನುಂ ಪಿಂದೆ ಬರ್ಪುದು (ಪುವ್ಯಾಸ್ತ್ರ. ೩-೨೩ ವ); ಗೌಡರ ಮೊಂಮ್ಮಗ ಮಲ್ಲಿಗೌಡರಿಗೆ (ಎಕ. VIII, ಸಾಗರ. ೩-೬ ; 1460 ?) ; ಬೆಸಗೊಂಡಳಂಗನೆ ಪೊಡೆಯಲರನ ಮೊಮ್ಮಗನ (ಪೋಪಕ. ೩೦-೦೭) ; ಮೊಮ್ಮಗನನ್ನು ನೋಡಬೇಕೆಂಬ ಹಂಬಲ (ಕರಕು. ೮).
**ಮಮ್ಮಗ** : ಅವರಿಗೆ ಮಮ್ಮಗನನ್ನು ಕಂಡರೆ ತುಂಬ ಪ್ರೀತಿ (ರೂಢಿ).
[ ಮೊಮ್ಮ (< ಮರ್ಮ$_1$) + ಮಗ ]

**ಮೊಮ್ಮಗಳು**, ಮಮ್ಮಗಳು (ನಾ). ಮಗನ ಅಥವಾ ಮಗಳ ಮಗಳು; ಪೌತ್ರಿ : ಒಳಕಿನಲ್ಲಿ ತಾಯಿ ಹುಟ್ಟಿದಳು ಮಧ್ಯದಲ್ಲಿ ಮಗಳು ಹುಟ್ಟಿದಳು ಮೊನೆಯಲ್ಲಿ ಮೊಮ್ಮಗಳು ಹುಟ್ಟಿ ಹೆತ್ತೆಯ ಕಿಂದು ತಾಯಿಗೆ ಎಸರನೆತ್ತು ತ್ತೈದಾಳೆ (ಕಕಪ. ೪. I. ೦೪೦-೦೩೫) ; ನಂಮ ಮೊಂಮಗಳು ಹೊಂನ್ನಮ ಸೆಟ್ಟಿತಿಗೆ (ಸೌಇಂ. ೦೯೩೦, ಕುಂದಾಪುರ. ೫೬೩-೮ ; 1498). **ಮಮ್ಮಗಳು** : ಮಮ್ಮಗಳ ಸಂಗಡ ಜಗಳವಾಡುತ್ತಿದ್ದ ಅಜ್ಜಿಯೂ ಸಮಾಚಾರವನ್ನು ಕೇಳಿದೊಡನೆ . . . ಮಮ್ಮಗಳ ಕೈಯನ್ನು ಹಿಡಿದುಕೊಂಡು ಕೊಳದವರೆಗೆ ಬಂದಳು (ದೇವೀತ್. ೦೭೬). [ ಮೊಮ್ಮಗ + – ಅಳ್$_5$ ]

**ಮೊಮ್ಮಗು**, ಮಮ್ಮಗು (ನಾ). ಮಗನ ಅಥವಾ ಮಗಳ ಮಗು : ನಾಳೆ ನಮ್ಮ ಮೊಮ್ಮಗುವಿನ ಹುಟ್ಟುಹಬ್ಬ (ರೂಢಿ). **ಮಮ್ಮಗು** : ಅವರ ಮಮ್ಮಗು ಮುದ್ದಾಗಿದೆ (ರೂಢಿ).

**ಮೊಮ್ಮಕ್ಕಳು**, ಮಮ್ಮಕ್ಕಳು (ಬಹುವ) : ಎಂತು ಕಾದುವ ನೆನ್ನೆಯ ಮಕ್ಕಳೊಳುಮೆನ್ನ ಮೊಮ್ಮಕ್ಕಳೊಳಂ (ಕಂಶಭಾ. ೦೦-೦೨) ; ಬೈಜವೆಗ್ಗಡೆಯ ಮೊಮ್ಮಕ್ಕಳು (ಜೊಂಕಶಾ. ೦೯೩೩, ಪಾವೇಂ.೦೭೦-೭ ; 1334); ನಾಗಮಯ್ಯನ ಮೊಮ್ಮಕ್ಕಳು ನನಗೂ ಮೊಮ್ಮಕ್ಕಳೇ ! (ದಾಪಶಂ. ೩೩) ; ಯಿಾ ಧರ್ಮ್ಮವನಿವರ ಮಕ್ಕಳ ಮ(೦)ಮ್ಮಕ್ಕಳು ಥನಕವಾಚಂದ್ರಾರ್ಕ್ಕತಾರಂಬರಂ ಸಲಿಸುವರು (ಸೌಇ. IX-i, ೨೭೬-೫೦ ; 1183) ; ಆದಿತ್ಯದೇವಗಳ ಮಮ್ಮಕ್ಕಳು ದೇವಯ್ಯ ಓವಪಪೋಬಯರವರು . . . ಮಾಡಿದ ವಿವರ (ಎಕ. XII, ಪಾವುಗ. ೬೯-೬೪ ; 1447). [ < ಮೊಮ್ಮಗ ]

**ಮೊಮ್ಮು** 'ಮಮ್ಮು' ನೋ.

**ಮೊರ** 'ಮೊಜ' ನೋ.

**ಮೊರಂಟೆ** (ನಾ). ಒಂದು ಬಗೆಯ ಮೀನು : ಚಕ್ರಕ್ಕೆ ಮೊರಂಟೆಯಾದರೆ ಆರು, ಬೈಗೆಯಾದರೆ ನಾಲ್ಕು (ಹೊಸಕ್ಕೆ. ೪೯). [ ← ತುಳು. ಮೊರಂಟೆ ]

**ಮೊರಗಿವಿ** 'ಮೊಜಗಿವಿ' ನೋ.

**ಮೊರಗುಟ್ಟು** (ಕ್ರಿ). ಮೊರೆ ; ಅಬ್ಬರಿಸು ; ಆರ್ಭಟಿಸು : (*).
[ ಮೊರೆ$_2$ (< ಮೊಜೆ$^3{}_1$) + ಕುಟ್ಟು$_{11}$ ]

**ಮೊರಟ** 'ಮುರುಡ$_1$' ನೋ.

**ಮೊರಟ**$_1$ 'ಮೊರಡು$_2$' ನೋ.

**ಮೊರಟ**$_2$ 'ಮೊರಟೆ' ನೋ.

**ಮೊರಟು** (ನಾ). ಮುರುಟಿದುದು ; ಸುರುಂಟಿದುದು : ಅವರ ಆದರ್ಶ ಆಕಾಂಕ್ಷೆಗಳು ಸ್ವಲ್ಪ ದೂರ ಬೆಳೆದು ಮೊರಟಾಗಿ ನಿಂತುಬಿಡುತ್ತವೆ (ಶಂಕಪ. ೦೩೦). [< ಮುರುಂಟು$_2$]

**ಮೊರಟುತನ** 'ಮೊರಡುತನ' ನೋ.

**ಮೊರಟೆ**, ಮೊರಟ$_2$ (ನಾ). ಒಂದು ಬಗೆಯ ಸಸ್ಯ ; ಪ್ರಿಯಾಲ : ಈ ಮೊದಲು ತಂದ ಪತ್ರ ಪುಷ್ಪ ಉಪಕವೆ ದೇವರೋ ಈ ಹರಡಿಕೊಂಡಿರುವ ಸೊರಟೆ ಮೊರಟೆಗಳೆ ದೇವರೋ (ವತಕಂ. ೦೯೩-೩೬). **ಮೊರಟ**$_2$ : "ರಾಜಾದನಂ, ಪ್ರಿಯಾಲಃ, ಸನ್ನದ್ರುಃ, ಧನುಃಪಟಃ — ೪ . . . ಮೊರಟೇಗಿಡ" (ಸಿದ್ಧಾಂಕ. ೦೨೦). 'ಮೊರಲೆ' ಹೋ.
[←ತೆಲು. ಮೋರಟಿ /ಸಂ. ಮೋರಟ=ಕುರುಟಗೆ ಸಸ್ಯ]

**ಮೊರಡ** 'ಮುರುಡ$_1$' ನೋ.

**ಮೊರಡಿ**$_1$ 'ಮೊರಡು$_2$' ನೋ.

**ಮೊರಡಿ**$_2$, ಮುರಡಿ$_2$ (ನಾ). ೧. ಒಂದು ಬಗೆಯ ಮರ : "ಮೊರಡಿಯೆಂದೆನೆ ಕುಜವಿಶೇಷದಭಿಧಾನ " (ಕಶಂ. ೯೩); ಕಗ್ಗಲೀ ಉತ್ತರಾಣೀ ಚೆಳ್ಳೆ ಮೊರಡೀ ಗುಳ್ಳಾ ಹೇರುಳೆ ಹಾಲುಳ್ಳ ಮರಗಳಲ್ಲಿ ದಂತಕಾಷ್ಠವಂ ಗ್ರಹಿಸಿ (ಆಶೀವು. ೦೬೯-೪). ೨. ಒಂದು ಬಗೆಯ ಸಸ್ಯ ಮತ್ತು ಅದರ ಎಲೆ : ಕರಿಯನು ಸೇವಿಪ ಸಿಂಹಕೆ ಮೊರಡಿಯ ಸೇವಿಪ ಮೊಲಂ ಪಲಂ ಪಾಸಟಿಯೇ (ವೃಕಪ. ೩-೩೭). **ಮುರಡಿ**$_2$ : ಎಮ್ಮೆಮುರಕಲುಗಿಡ, ಮುರಡಗಿಡ, ಮೊರಪೆ, ಶಾರಪಪ್ಪು (ವೃಶಿಗಿ. ೦೯-೨೬೦). [ ? ]

**ಮೊರಡಿದಾವುರೆ** (ನಾ). ಗುಡ್ಡದ ಮೇಲೆ ಬೆಳೆಯುವ ತಾವರೆ ; ಬೆಟ್ಟದಾವರೆ : ತರಣಿ ತೆರಳಲಾ ಕಡಗೆಯುಲವೋಗದಿರಿವ ಮೊರಡಿದಾಮರೆಯ

ಬನಂಬೊಲ್. . . ಅರಮಗನೇಕಡೆಗೆಯ್ದಲ್ಕಾ ಕಡೆಗೆ. . . ನಾರಿಯರೊಪ್ಪ ವಡೆದರು (ಜಯಂಕಾ. ೧೧-೫೮). [ಮೊರಡಿ$_1$ (<ಮೊರಡು$_2$) + ತಾವರೆ]

**ಮೊರಡು$_1$** 'ಮುರುಡು$_3$' ನೋ.

**ಮೊರಡು$_2$,** ಮಂಟೆ, ಮಡ್ಡಿ$_3$, ಮರಡಿ, ಮೊರಟೆ$_1$, ಮೊರಡಿ$_1$, ಮೊರಡೆ, ಮೊಱಡಿ (ನಾ). ದಿಣ್ಣೆ; ತೆವರು ; ಗುಡ್ಡ : ಎಱಗುವ ಮಾಟ³ ಕದಡಿ ಬರ್ಪ ತೊಱೆ³ ಬೆಟ್ಟು ತೆವರ್ ಮೊರಡುಪಜಲಧಿಗಳೆಸೆ ಜನ ಮಱೆಯಱೆಯೆ ದಲ್ಲುದ್ದಬಿದ್ದ ಪಾಯ್ಸುವನಿತಳಂ (ಆದಿಪು. ೬-೬೨); ದರಿಯುಮಂ ಕುಮ್ಮರಿಯುಮಂ ಮೊರಡುಮಂ ಕೊರಡುಮಂ . . . ಕಳೆದುಪೋಗಿ (ಲೀಲಾವ.೬-೧೬ ವ); ಚತುಸ್ಸೀಮೆಗಳೊಳಗಾದ ಮೊರಡು ಸಹ ಕಟ್ಟಿದ ಗುತ್ತಗೆ ಖ ರ (ಎಕ. VIII, ಸಾಗರ. ೬೦-೭೦ ; 1472). **ಮಂಟೆ** : ಮಂಟೆಯಲ್ಲಿ ಮನೆ ಮಾಡಿದ ನಮ್ಮ ಶಿವ (ಶರಂದ. ೧-೧೯೬-೨). **ಮಡ್ಡಿ$_3$** : ಮಾದಿಗರ ಮಡ್ಡಿಯ ಮೇಲಿದ್ದ ಹತ್ತಿಪ್ಪತ್ತು ಗುಡಿಸಲು (ಮಲ್ಲವ್ವ. ೩) ; ದಿನ್ನಿ ಮಡ್ಡಿ ಗುಡ್ಡ ಅದರ್ಯಾವ ಅದನ ತಾ ಕಂಡು ನೊಂದಾಳೊ (ಸಖೀಗೀ. ೧೧೧-೧೬). **ಮರಡಿ** : ಕೂಚಣ್ಣನ ಮರಡಿಯು ದೇವಪ್ಪನವರ ಕೈಯಲು ತತ್ಕಾಲೋಚಿತಕ್ರಯದ್ರವ್ಯವನು . . . ಕೊಟ್ಟು (ಎಕ. V (R), ತಿರುಮ. ೨೩-೪೧೬ ; 1290) : ಮೂಡಲು ಬಡಗಲು ಬಾಚನ ಮರಡಿ (ಎಕ. X (S), ಮುಳಬಾ. ೦೯೬-೧೧ ; 1498) ; ಆ ಮರಡಿಯ ಸುತ್ತಮುತ್ತಲಿನ ಗಿಡಗಂಟೆಗಳನ್ನೂ ಮುಳ್ಳುಕಲ್ಲುಗಳನ್ನೂ ನೋಡಿದರೆ, ಇಲ್ಲಿ ಮನುಷ್ಯರು ಇರಬಹುದೆಂದು ಯಾರಿಗೂ ತೋರುವ ಹಾಗಿದ್ದಿಲ್ಲ (ರಾಜೇಕಿ. ೨೨೬). **ಮೊರಟೆ$_1$** : ಯಿಾ ಕೆರೆಗೆ ದಕ್ಷಿಣಪಾರ್ಶ್ವದಲ್ಲಿ ಕೊತ್ತಿಗನ ಮೊರಟೆಯ ಪಡುವಬಾರಿಕಿಬ್ಬೆಯಲ್ಲಿ ದಕ್ಷಿಣಮುಖವಾಗಿ ನಟ್ಟ ಕಲ್ಲು (ಎಕ. III, ಶ್ರೀರಂಗ. ೦೯.೦೩೨; 1686). **ಮೊರಡಿ$_1$**: ಮೂಳೆಯ ಮೊರಡಿಗಳನೇಱಿ ನೋಡಿಯುಂ . . .ದುರ್ಯೋಧನನನಱಿಸಿ ಕಾಣದೆ ವಿಸ್ಮಯಂಬಟ್ಟು (ಗದಾಯು. ೬-೨೮ ವ) ; ದೇಹಪಿಂದಂ ನೆಟ್ಟನೆ ಪೊತ್ತು ಸುಖಮನಱಸುವ ಮನುಜಂ ಮೊರಡಿಯೊಳೆ ಮಾದು ಪಟುಮಱಸದಿರಂ (ಚಿಕೋಶ. ೧-೫೦) ; ನರ ವೃಕೋದರ ನಕುಲ ಮೊದಲಾದರು ಕುತೂಹಲವಿ[ದಿ]ವರ ಸುತ್ತಣ ಮೊರಡಿಗಳ ಮೇಲಿಪ್ಪು ನೋಡಿದರೀ ಮಹಾಹವವ (ಕುಮಾಭಾ. ೦೯-೫೭) ; ಮಲೆನಾಡ ಭಾಗದಲ್ಲಿ ಮೊರಡಿ, ಕೆಂಪುನೆಲ ಬಹಳ (ಮುಂಬಯಿ.೫-೧೯೮). **ಮೊರಡೆ** : ಮೊರಡೆಯ ಮೇಲಾಗಲಿ ಗುಡ್ಡದ ಮೇಲಾಗಲಿ ಹುಲ್ಲು ತಿಂದು ಉಲ್ಲಾಸದಿಂದ ಜಿಗಿದಾಡುವ ಕುರಿ ಮರಿಗಳನ್ನು ನೋಡುತ್ತೇವೆ (ಮುಂಬಯಿ. ೬. ೩-೯೦). **ಮೊಱಡಿ** : ಪೂರ್ಬ್ಬಸ್ಯಂದಿಸಿ ಕೆಂಜಿಗೆ ಮೊಱಡಿವ (ಎಕ. I, ೧-೨೨ ; 466 ಕ್ರಿಶ) ;ಪೂರ್ವ್ವಸ್ಯಾಂದಿಶಿ ನೊಲಿ ಬೆಳದಾ ಬೆಳ್ಗಲ್ಮೊಱಡಿ (ಎಕ. VII (R), ನಾಗಮಂ. ೧೯೯-೬೦: 776); ಮೊಱಡಿಯ ಮೇಲೆ ಮಾದುಫಲಮಾದಪೊಲಾದುದು (ಎಕ. VI, ಕಂಟೆ. ೯೫-೬೨ ; 1196). 'ಮೊರಬು' ಪರಾ.

ಮೊರಡಿಯಣುಗಿ = ಪರ್ವತರಾಜನ ಮಗಳು ; ಗಿರಿಜೆ : ವೃಷನಂ ಮೊರಡಿಯಣುಗಿ ನಾಲ್ಮೊಗನಂ ನುಡಿವೆಣ್ಣಂಬುರುಹೋದರನಂ ಸಿರಿಗಡಲ ಕುವರಿ . . . ಕಬ್ಬಿಡಿವಂದದಿ (ಜಯಂಕಾ. ೨-೧೧).

**ಮೊರಡುಕಲ್ಲು** 'ಮುರುಡುಗಲ್ಲು' ನೋ.

**ಮೊರಡುಗೋಡು** (ನಾ). ಗುಡ್ಡದ ಶಿಖರ,— ಕೋಡುಗಲ್ಲು : ಹೊತ್ತರೆಯ ಬೆಟ್ಟನೆತ್ತಿಯ ಕಲ್ಲರೆಯ ಮೊರಡುಗೋಡಂತೆ ಭೀಮಂತನು (ಶ್ರೀರಾಮಾ. ೬೯೨-೦೩). [ಮೊರಡು$_2$ + ಕೋಡು$_5$]

**ಮೊರಡುತನ,** ಮೊರಟುತನ (ನಾ). ನಯವಿಲ್ಲದಿರುವಿಕೆ; ಒರಟುತನ: ಅಜ್ಞತೆ ಅನನುಭವ ಮೊರಡುತನಗಳು ಸೇರಿದರೆ ಅನಾಹುತವಾಗುತ್ತದೆ (ದಂಕಿಮ. ೩೩೪). **ಮೊರಟುತನ** : ಪತಿಯ ಮೇಲೆ ಹರಿದ ನನ್ನ ಪ್ರೇಮವು ಅವರ ಮೊರಟುತನದಿಂದ ಮತ್ತೆ ನನ್ನ ಹೃದಯದೊಳಗೇ ಹುದುಗಿ ಹೋಯಿತು (ಶಶಿ. ೩೮). [ಮೊರಡು$_1$ (< ಮುರುಡು$_3$) + — ತನ]

**ಮೊರಡುಬೀಳು** (ಕ್ರಿ). (ಆಲಂ) ಜಡ್ಡುಗಟ್ಟು; ಜಡವಾಗು : ಹತ್ತುದಿವಸ ಒಂದೇ ತೆರನಾಗಿದ್ದು ಬಿಡಿ, ಮೊರಡುಬೀಳುತ್ತೆ ಮನಸ್ಸು (ಕೆಂಗೂಲಿ. ೬೬). [ಮೊರಡು$_1$ (<ಮುರುಡು$_3$) + ಬೀಳು$_1$(<ಬೀೞ್$_1$)]

**ಮೊರಡೆ** 'ಮೊರಡು$_2$' ನೋ.

**ಮೊರಬಿಡು** (ಕ್ರಿ). (?) : ಪಾರ್ವನ ಮಣ್ಗಲ್ಲೆ ಕೊಡಿತೆ ಕಾಯ ಬಿಟ್ಟಣ್ಣುಂ ಅರಸಣ್ಣಂ ಅಯ್ದೊನ್ದಿ ಒತ್ತೆಮಣ್ಣೆತ್ತು ಪಾದಂತ್ತೆತ್ತುನ್ಮೊರಬಿಟ್ಟಂ ಪರಿಹಾರವಾಸ್ಕೆಡಿಸಿದೊನ್ಪಞ್ಚಮಹಾಪಾತಕನಕ್ಕ (ಎಕ. XIV, ತಿರುಮ. ೨೫೩-೮ ; 800). [ ? ]

**ಮೊರಬು** (ನಾ). ೧. ಕಲ್ಲು : "ಶರ್ಕರಿಲಃ, ಶಾರ್ಕರಃ – ಈ ೨ ಮೊರಬನುಳ್ಳ ಭೂಮಿಯ ಪೆಸರು" (ಪಾಶಂಕಾ. ೧೧೨). ೨. ರತ್ನದ ಒಂದು ದೋಷ (?) : ಅಕ್ಕರಿಂ ಧರಿಸಿದವರಿಗೆ ಫಲವ ಪೇಳುವೆ ಕರ್ಕರಕೆ ಛಿನ್ನಪೆಂದೊಡದು ಛುಟ್ಟಿದುದೆಂದು ಅಸ್ಸಜದ ಮೊರಬು ಲುಳಿಯಾಣ ನಸುನಗಳೆಂದು ಪುಟದೋಷವೆಂದಿರ್ಪುದು (ರತ್ನಶಾ. ೯-೫).

[ದೇ.॥ ತಮಿ. ಮುರಮ್ಪು ; ತುಳು. ಮೊರ, ಮುರ=ಕಲ್ಲುಕಲ್ಲಾದ ; ತೆಲು. ಮೊರಪ=ಕಲ್ಲುಗಳಿಂದ ಕೂಡಿದ]

**ಮೊರಬ್ಬ** 'ಮುರಬ್ಬ' ನೋ.

**ಮೊರಲೆ** (ನಾ). ಒಂದು ಬಗೆಯ ಸಸ್ಯ ; ಪ್ರಿಯಾಲ : "ರಾಜಾದನಃ, ಪ್ರಿಯಾಳಃ, ಸನ್ನಕದ್ರುಃ, ಧನುಃಪಟಃ_ಈ ೪ ಮೊರಲೆ" (ಪಾಶಂಕಾ. ೧೧೬); "ಪಟಃ—ಮೊರಲೆ" (ಓಷಧಿ. ೯೦). 'ಮೊರಟೆ' ಹೋ. [ದೇ.॥ ಮಲ. ಮುಱಳ್, ಮುರಳ್ ; ತೆಲು. ಮೊರಲಿ, ಮೊರಳಿ, ಮೋರಲಿ ]

**ಮೊರವು** 'ಮೊಱವು' ನೋ.

**ಮೊರವೆ** (ನಾ). ಒಂದು ಬಗೆಯ ಸಸ್ಯ : ಎಮ್ಮೆಮುರುಕಲುಗಿಡ, ಮುರಡಿಗಿಡ, ಮೊರವೆ, ಶಾರಪಪ್ಪು (ಮೃಶಿಗ. ೦೯-೨೬೦). [ ? ]

**ಮೊರಸು$_1$** (ಕ್ರಿ). ಆರ್ಭಟಿಸುವಂತೆ ಮಾಡು ; ಗರ್ಜಿಸುವಂತೆ ಮಾಡು: ಮಿಂಚಿನ ಮರಿ ಮುಂಚಿ ಮೊರಸೆ ಹೃದಯಶಿಖಿಯ ಹೊನ್ನ, ಗುಡುಗಿನ ಮಗು ಮುಡುಗಿ ಮೊರಸೆ ಕಿನ್ನರಿಗಿರಿಯನ್ನ (ಗೆಳೆಯಂ. ೯೯-೧೧).

[ಮೊರೆ$_2$ (<ಮೊಱೆ$_1$) + —ಇಸು$_3$]

**ಮೊರಸು$_2$** (ನಾ). ಒಂದು ಪ್ರದೇಶದ ಹೆಸರು : ಶ್ರೀಪೆರ್ಮ್ಮಾನಡಿ ಪ್ರಿಥಿವೀರಾಜ್ಯಂಗೆಯೆ ನೊಳಂಬಶಿವಮಾರಂ ಮೊರಸುನಾಡನಾಳುತ್ತಿರೆ (ಎಕ. IX, ದೇಂಗಳೂ. ೯೦-೪ ; 820) ; ಮಣಲಿನಾಡ ಮೊರಸು ಹಂನೆರಡು ನೆಕ್ಕುನಾಡ ಬೆಡಗೆಱೆ (ಎಕ. V, ಬೇಲೂರು. ೭೦-೨೩೯ ; 1117); ಪುಂಗನೂರ್ ಮಾಗಡಿ ಬೆಂಗಳೂರ್ ಮೊದಲಾದ ಮೊರಸುನಾಡ ಮೋಹರದೊಳ್ (ಚಿಕವಂ. ೨೨-೪). [ ? ]

**ಮೊರಹ** (ನಾ). ಸದ್ದು ; ಧ್ವನಿ : "ಗಾವರಮೆಂದೆನೆ ಮೊರಹವೆನಿಪ್ಪರ್ಥಮಪ್ಪುದು" (ಕಕುಚಿ. ೩೩). [ಮೊರೆ$_1$ + – ಹ$_2$ (< –ಪ$_2$)]

**ಮೊರಹತ್ತು** (ಕ್ರಿ). (?) : ಹೆರಳೆಯ ಹಣ್ಣಿನ ಕುಸುರಿಯ ತೆಗೆದು ಮೊರಹತ್ತಿ ಕೊಚ್ಚಿದ ರಾಗಿಹಿಟ್ಟನೂ ಕಲಸಿ ಉಂಡೆಮಾಡಿ ಮೆಲ್ಲಲು ಅಜೀರ್ಣಂ ಮಾಣ್ಗುಂ (ಸಕವೈ. ೩೬೫). [ ? ]

**ಮೊರಹು** (ನಾ). ದುಂಬಿಯ ಧ್ವನಿ ; ಝೇಂಕಾರ : ಅಳಿಕುಳದ ಮೊರಹು ನಿಂತಿತು (ಬಸವ. ೧೧-೯೭) ; ಅಳಿಗಳ ಮೊರಹಿನಾ ಕೋಲಾಹಲಕೆ ಮುಡಿಯುಸಲುಗಿದೊಡೆ ಮೊಳಗಮರ್ದ ಕಾಲಮೇಘಂ ತೋಱುತಿದೆ (ಶಮ್ಯರಾ. ೮-೯೫). [ಮೊರೆ$_1$ + — ಹು$_2$ (<—ಪು$_2$)]

**ಮೊರೆ$_1$** (ಕ್ರಿ). ೧. ದುಂಬಿಯಂತೆ ಧ್ವನಿಮಾಡು,—ಝೇಂಕರಿಸು : "ಮೊರೆ (ಮುರೆ) — ಭ್ರಮರಾದಿನಿನದೇ, ಕಿನ್ನರಿಕ್ರಿಯಾಯಾಂ" (ಕಮಧಾ) ; ತೊಳಪೆಳವೆಱೆಯುಂ ಮೊರೆವಳಿಕುಳಂಗಳುಂ ಮೆಲ್ಲನೆಸೆವ ಮಳಯಾನಿಳನುಂ ಮುಳಿಸುಂ ಕಲ್ಪಿ ಕಳೆದುವು (ಕಬಿರಾ. ೨-೭೦) ; ಮದಗಜ

ಗಂಡಸ್ಥಳಂಗಳೊಳೆಱಗಿ ಮೊರೆವ ತುಂಬಿಯ ಬಂಬಲ್ಗಳೆ ವಿಮುಖೀಭೂತಂಗಳಾದುವು (ಶಂಪುರಾ. ೪-೯೯ವ) ; ಬಂದನುಂಡು ನಗೆಗೊಂಬುಗಳಂ ಮೊರೆದೇಱ್ವ ಭೃಂಗಝಂಕಾರಮೆ ಮಾಱ್ಪ ದಾರ ಬಗೆಗಂ ಮದನೋತ್ಸವ ಹರ್ಷಭಾರಮಂ (ಶಂಬಾವಾ. ೦-೦೦೬). ೨. ಸಣ್ಣದನಿಯಲ್ಲಿ ಶಬ್ದ ಮಾಡು ; ಕಿರುಗುಟ್ಟು : ಕುರುಬಲಕ್ಕಿ ಮಿಟ್ಟಿ ಪಲ್ಮೊರೆವಂತೆ ಮೊರೆದು ಪರಿವ ತನ್ನ ಕಿಸುವೊನ್ನ ರಥಮುಂ ಭಯಂಕರಾಕಾರಮಾಗೆ (ಶಂಪುರಾ. ೧೦-೯೭ ವ); ತರತರದಿಂ ತೆರಳೆ ರಸಂ . . . ಮೊರೆವುವು ಗಾಣಂಗಳಿಕ್ಷುವಾಟಾಂತರದೊಳ್ (ಸುಕುಮಾ. ೯-೫೭); ಕೊರೆದುಂ ಸುಯ್ದುಂ ಸೀಂತುಂ ಮೊರೆದುಂ ನಿದ್ರೆಯನೆ ಕೆಡಿಪ ಮುದುಪೊರಸಂ ಮತ್ತೆರಡಿಲ್ಲದೊಲ್ಲೆನೆಂದೊಡೆ (ರಟ್ಟಮ. ೨-೫೪); ಮೊರೆವ ಸಮ್ಮಾವುಗೆಯ ಮುಱುಕದಿಂ ತೆಗೆದುಟ್ಟ ಪರದುಕೂಲದ ಮುಂಜೆಱಗಿನಿಂ . . . ಸಿಂಗರಕ್ಕಿಟ್ಟ ತಿಟ್ಟಮೊಱೆದೆನಿಸಿ (ಶಬ್ದಾ. ೫-೪೨). ೩. ವಾದ್ಯದಂತೆ ಶಬ್ದಮಾಡು,- ಧ್ವನಿಸು : ಮೊರೆವ ಪಟಹ ಮೃದಂಗ ಘನಜರ್ಜರಿತ ವಹ ನಿಸ್ಸಾಳಚಯಂದಬ್ಬರಣೆ ಗಬ್ಬರಿಸಿದುದು ಕಮಲಭವಾಂಡವಿವರವ (ಕುಮಾವ್ಯಾ. ೪-೨೯); ತಮ್ಮಟೆಗಳು ಕಿವಿಚಿಟ್ಟಾಗುವಂತೆ ಮೊರೆದವು (ಶಾಂತಲಾ. ೦೪೮). 'ಮೊಱೆ$^3_1$' ಪರ್ಯಾ.

[ದೇ.॥ ತಮಿ. ಮುರಜ್ಜು ; ಮಲ. ಮೊರವ್ಪು ; ತುಳು. ಮುರೆಸು, ಮೊರೆಸು ; ಕೊಡ. ಮೊರಡ್ ; ತೆಲು. ಮೊರೆಯು ; ಕೋಲಾ. ನಾಯ್ಕಿ. ಮೊರಯ್ ; ಪರ್ಜಿ. ಮುರ್ ; ಕುರುಖ್. ಮುರ್ನಾ ; ಮಾಲ್ತೊ. ಮುರೆ]

**ಮೊರೆ$_2$** 'ಮೊಱೆ$^3_1$' ನೋ.

**ಮೊರೆ$_3$** (ನಾ). ದುಂಬಿಯ ಧ್ವನಿ : ಝೇಂಕಾರ : 'ಪರಮೆಮೊರೆ' ಪರಾ. [<ಮೊರೆ$_1$./ತುಳು. ಮುರಿಯು]

**ಮೊರೆ$_4$** 'ಮೊಱೆ$^3_2$' ನೋ.

**ಮೊರೆ$_5$** 'ಮಱೆ$^3_2$' ನೋ.

**ಮೊರೆ$_6$**(ನಾ). (?) : ಅಶ್ವರತ್ನದ ಆಭರಣದ ಲೆಕ್ಕ . . . ೨ ಸಿಂಹ ೧೬ ಮೊರೆ ೧೦ ಕಟಕಟಿತುಂಡು (ಎಕ. XIV, ಸಂಖ್ಯೆ. ೨೯೩-೯ನೆಯ ಕಂ೦; 1847). [ ? ]

**ಮೊರೆಗೇಳು** 'ಮೊಱೆ$^3$ಗೇಳು' ನೋ.

**ಮೊರೆಜ್ವರ** (ನಾ). ಬಿಟ್ಟು ಬಿಟ್ಟು ಬರುವ ಒಂದು ಬಗೆಯ ಜ್ವರ : ಜವುಗುಪ್ರದೇಶವಾಸಿಗಳಲ್ಲಿ ಕಂಡುಬರುವ, ಮೊರೆಜ್ವರವೂ ಗುಲ್ಮ ಶೋಫೆಯೂ ಲಕ್ಷಣಗಳಾಗುಳ್ಳ ಒಂದು ರೋಗಸ್ಥಿತಿ (Impaludism. ಇಂಕೋ). [ಮೊರೆ$_4$ (<ಮೊಱೆ$^3_2$) + ಜ್ವರ]

**ಮೊರೆತ$_1$** (ನಾ). ಝೇಂಕಾರ : ಸೊಳ್ಳೆಗಳು ಮುತ್ತಿಗೆ ಹಾಕಿ ಝೇಂಕಾರ ಮಾಡುತ್ತಿರುತ್ತವೆ : ಅವುಗಳ ಮೊರೆತವೇ ಮಲಗಿದವನಿಗೆ ಜೋಗುಳವಾಗ ಬೇಕು (ನಂಟರು. ೪೩). [ಮೊರೆ$_1$ + — ತ$_2$]

**ಮೊರೆತ$_2$** (ನಾ). ಅಬ್ಬರ ; ಆರ್ಭಟ : ಕಾವ್ಯದಲ್ಲಿರಬೇಕಾದ ಗುಣವಿಶೇಷಗಳೂ ಭಾವಾವೇಶದ ಮೊರೆತಗಳೂ . . . ಬಸವಣ್ಣನವರ ವಚನಗಳಿಗೆ ವಿಾಸಲು (ಭಾವಗೀ. ೦೬೭); ಸಮುದ್ರದ ಮೊರೆತ ಮನೆಯವರೆಗೂ ಕೇಳಿಸುತ್ತಿತ್ತು (ರೂಢಿ). [ಮೊರೆ$_2$ (<ಮೊಱೆ$^3_1$) + — ತ$_2$]

**ಮೊರೆಪ** (ನಾ). =ಮೊರೆತ$_1$ : ಅಲರ್ವಂಡನುಂಡು ಸೊಕ್ಕಿ ಮೊರೆವ ಮೊರೆಪದಿಂ ತುಂಬಿಗಳುಂ ಪಲ್ಪಱೆ$^3$ಗುಟ್ಟಿದಪುವೆಂಬಂತೆಯುಂ (ಕಾದಂಬ. ೨೦೯); ತುಂಬಿಗಳ ಪಲ್ಮೊರೆಪದಿಂ . . . ಮೆಱೆ$^3$ದುದಾ ವನಂ (ಶಬ್ದಾ. ೬-೨೫). [ಮೊರೆ$_1$ + - ಪ$_2$]

**ಮೊರೆಯಿಡು** 'ಮೊಱೆ$^3$ಯಿಡು' ನೋ.

**ಮೊರೆಹೊಗು** 'ಮಱೆ$^3$ವೊಗು' ನೋ.

**ಮೊರೆಹೋಗು** 'ಮಱೆವೋಗು' ನೋ.

**ಮೊರ್ಸೈಡಿವಾಡಿ** (ನಾ). ಒಂದು ಊರಿನ ಹೆಸರು : ಪೂಲಿಕೆಱೆ$^3$ ಕಾಡವ್ ಕಣ್ ಮೊರ್ಸೈಡಿವಾಡಿ ಕೊಪುರಮಂಗಲಕೆಱೆ$^3$ಪಳ್ಳವ್ (ಪ್ಯಾಆ. ೧೯೨೪. ೪೦-೦೨೦; 799). [? + ವಾಡಿ$_2$]

**ಮೊರೊಪ್ಪೂರ್** (ನಾ). ಒಂದು ಊರಿನ ಹೆಸರು : ಗಂಗಱುಸಾಸಿರ ಮುಮು ಆಳೆ ಮೊರೊಪ್ಪೂರಾ ಗವುಣ್ಡನ್ ಅಱಕೆಱೆ$^3$ ಹುಯಿ(ಲೊ)ಳು ಸತ್ತನ್ (ಪ್ಯಾಆ. ೦೯೨೬. ೯೦-೩; 10ನೆಯ ಶತ). [ ? + ಊರ್]

**ಮೊರ್ಕು** 'ಮುಱುಕು$_1$' ನೋ.

**ಮೊಲ** (ನಾ). ಉದ್ದ ಕಿವಿಗಳು, ಮೊಂಡುಬಾಲ ಹಾಗೂ ಸೀಳಿದ ತುಟಿಯೂ ಉಳ್ಳ ಒಂದು ಬಗೆಯ ಸಸ್ಯಾಹಾರಿ ಪ್ರಾಣಿ ; ಶಶ : "ಮೊಲಂ ಶಶಮೆನಿಕ್ಕುಂ" (ಮಂಗರಾ. ೪೬-೮); ಒಂದು ಮೊಲಂ ಕಿಚ್ಚಿನಿಂದಂ ಬೆಂದುರಿಯ ಬಣ್ಣವಾಗಿ ಪರಿತಂದು ತನ್ನ ಕಾಲ ಕೆಱಗೆ ಪೊಕ್ಕೊಡೆ (ವರ್ಧಮಾ. ೦೫೭-೩); ಆ ಪಡೆಯೊಳ್ ಗಂಡನುಮಾ ಮೊಲಂ ದ್ರುಪದನುಂ ಪೇರೊಟ್ಟೆಯಾ ಮತ್ಸ್ಯನುಂ (ಶಂಪುರಾ. ೦೦-೪); ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಲಿವರಯ್ಯ (ಬಸವ. ೦೫೮); ಮೊಲನ ಬಲೆಯಲಿ ವನದ ಮದಕರಿ ಸಿಲುಕಲರಿವುದೆ (ಕುಮಾವ್ಯಾ. ೦೦-೩); ಆ ಕಾಡಿನಲ್ಲಿದ್ದ ಮೊಲಗಳೆಲ್ಲಾ ತಂಪಾಗಿದ್ದ ಈ ಸ್ಥಳಕ್ಕೆ ಬಂದು ಸೇರಿಕೊಂಡವು (ಪಂಚತಂ. II, ೨೨).

**ಮೊಲದ ಕೋಡು** = (ಅಲಂ) ಪಡೆಯಲು ಅಸಾಧ್ಯವಾದುದು; ಅಸಂಭವವಾದುದು : ಮುದಿಗೂನಿ ಮಂಥರೆಗೆ ಮೊಲದ ಕೋಡಾದುದು ಸೊಗಂ (ಶ್ರೀರಾಮಾ. ೨೪-೭೯೨).

[ದೇ.॥ ತಮಿ. ಮುಯಲ್, ಮುಚಲ್ ; ಮಲ. ಮುಯಲ್ ; ತುಳು. ಮೊಲ ; ಕೊಡ. ಮೊಸ ; ಗೊಂಡಿ. ಮಲೋಲ್, ಮೊಲೊರ್ ; ಕೊಂಡ. ಮೊರೊಲ್ ; ಕುವಿ. ಪ್ರಾಲೂ ; ಕುರುಖ್. ಮುನ್ಯಾ ; ಬ್ರಾಹುಈ. ಮುರೂ]

**ಮೊಲಕಿವಿ** 'ಮೊಲಗಿವಿ' ನೋ.

**ಮೊಲಗತ್ತಲೆ** 'ಮೊಲಗಟ್ಟಲೆ' ನೋ.

**ಮೊಲಗರ್ತಲೆ** 'ಮೊಲಗಟ್ಟಲೆ' ನೋ.

**ಮೊಲಗಳೆಯ** (ನಾ). ಮೊಲದ ಗುರುತುಳ್ಳವನು ; ಶಶಾಂಕ ; ಚಂದ್ರ : ಒಂದು ಕಂತುಕವ ತಳೆದ ಕಾಂತೆಯ ಕರತಳ ಕಣ್ಗೆ ಕಡುರಮ್ಯವಾಯ್ತು ಮೊಲಗಳೆಯನನಮರ್ದಪ್ಪಿದ ತಾವರೆಯಲರ ಚೆಲ್ವಿಕೆಯನೇಳಿಸುತ (ಸುರಾಗಾಂ. ೩೨-೪). [ಮೊಲ + ಕಳೆ$_6$ ( = ಕಲೆ$_3$) + - ಅ$_7$]

**ಮೊಲಗಳ್ತಲೆ** 'ಮೊಲಗಟ್ಟಲೆ' ನೋ.

**ಮೊಲಗಟ್ಟಲೆ, ಮೊಲಗತ್ತಲೆ, ಮೊಲಗರ್ತಲೆ, ಮೊಲಗಳ್ತಲೆ** (ನಾ). ೧. ದಟ್ಟವಾದ ಕತ್ತಲೆ ; ಗಾಢಾಂಧಕಾರ : ಕಣ್ಬೊಲದೊಳಮಿರುಳೊಳ್ ಮೊಲಗಟ್ಟಲೆ ಚಂದ್ರದ್ಯುತಿಗೆ ಕಾಳತಾಳೀವನದೊಳ್ (ಶಾಂತಿಪು. ೫-೦೦೩) ; ಮೊಲಗಟ್ಟಲೆಯುಂ ಕಾಮಿಗೆ ಪುಟ್ಟಿಸುವ ಮೊಲಂ ಕಾಮಾಗ್ರಹದಾಲಮೆನಿಸಿ ತಿಂದುಕಳಂಕಂ (ಮಲ್ಲಿಪು. ೭-೩೭) ; ಲಲಿತ ಹರಿನೀಲಹರ್ಮ್ಯಾಗ್ರಶಿಖರೋಚ್ಚಲಿತರುಚಿಗಳಿರುಳೊದವಿ ಸಭಸ್ಥಲದೊಳೊಡರ್ಚುವುದಿಂದುವ ಮೊಲಕ್ಕೆ ಕಟ್ಟಲೆಯೆಂದೆನಿಪ ಮೊಲಗಟ್ಟಲೆಯುಂ (ಚಂದ್ರಪ್ರ. ೦೧-೭೭). ೨. (ಅಲಂ) ಅಜ್ಞಾನ ; ಮೌಢ್ಯ : ಅಱಸಂ ತಗುಳ್ವೆಂತಾಗಿಯುಮೆಂಬ ನಿನ್ನ ಮೊಲಗಟ್ಟಲೆಗಾಂ ಬೆಱಗಾದೆಂ (ಅಂಚೆಪು. ೩-೭೩). **ಮೊಲಗತ್ತಲೆ** : ೧. ಜಲಜಲಿಸುವ ಬೆಳ್ದಿಂಗಳ್ ತೊಲಗಲೊಡಂ ಮುಂದುಗೆಟ್ಟು ಶಶಿಮಂಡಲದೊಳ್ ಮೊಲನೆಡಪೆ ಹರಿಣನಡಿಗೆಡೆ ಮೊಲಗತ್ತಲೆಯಾಯ್ತು ಯಾಮಿನೀ ವಿರಸನದೊಳ್ (ಅನಂಪು. ೬-೭೪). **ಮೊಲಗರ್ತಲೆ** : ೧. ನಾಣ ಪುತ್ತು ಮೊಲಗರ್ತಲೆಯಾ ವಟವಿಪ್ಪರ್ಥ ಭಂಗಿ (ಸೌಇಇ. XVIII, ೨೯೭-೦೫; 1188). ೨. ಚದುರೆಕ್ಕಸೆಕ್ಕಮಱೆ$^3$ತಂ ಮೊಲಗರ್ತಲೆಯಾಗಿ ಪತ್ತಿಪೀಗಡಿನವರಂ

ಪಳಂಚಲೆವುದುದ್ಗ್ರಗುಣಂ ರವಿದನ್ನಾಥನಂ(ನ) (ಎ.ಕ. XII, ೨೮೦-೦೬೩; 1077). **ಮೊಲಗಳ್ತಲೆ :** ೨. ದುರಭಿಪ್ರಾಯದ ಮೊಲಗಳ್ತಲೆಯಿಂದಜನಂ ಭಾವಿಸದಾ ಜೀವಂ ಆಯುಂ ತವೆ ತೀರ್ದು (ಶಬ್ದಾಳ. ೦೦–೨೦); ಅರಮನೆಗೆ ಪ್ರಜಾಲೋಕಕ್ಕೆ . . . ಮೊಲಗಳ್ತಲೆಯನ್ನು ಕವಿಯಿಸಿ (ಮುಂತ್ರಶ. ೦೩೯-೨೯). [ ಮೊಲ₂ + ಕಟ್ಟಲೆ ]

**ಮೊಲಗಿವಿ**, ಮೊಲಕಿವಿ (ನಾ). ಮೊಲದ ಕಿವಿಯ ಆಕಾರದ ಎಲೆಗಳುಳ್ಳ ಒಂದು ಬಗೆಯ ಔಷಧೀಸಸ್ಯ : ಏನುತಂ ಪೆರ್ಗುರುಟಿಗೆಯುಂಬಿನ ಮೊಲಗಿವಿಯೆಂಬಿವಲ್ತೆ ಸಸ್ಯದೊಳ್ ಪಿತಂ (ಖವುದ. ೭-೩೭). **ಮೊಲಕಿವಿ :** "ಶಶಕರ್ಣೀ—ಮೊಲಕಿವಿಗಿಡು" (ನಿಘಂ. ೦೩೯); ಮೊಲಕಿವಿಗೆಡ್ಡೆಯಂ ನೀರಿಂದ ಅರೆದು ಪಾನ, ಲೇಪನಂಗಳ ಮಾಡಿಸಲು ಮೊಲದ ವಿಷ ಪರಿಹರವಹುದು (ವೈದ್ಯಸಾ. II. ೨೦೯). [ ಮೊಲ + ಕಿವಿ₂ ]

**ಮೊಲಗಿವಿಗ** (ನಾ). = ಮೊಲಗಿವಿ : ಮೊಲಗಿವಿಗನ ಗೆಡ್ಡೆಯುಮಂ ಜಲದಿಂದರೆದದಱ ಪಾನ ಲೇಪಾದಿಗಳಿಂ ತೊಲಗುಗುಂಮಾಗಳೆ ತನುವಿಂ ಮೊಲನ ವಿಷಂ (ಖವುದ. ೦೩-೭೯). [ < ಮೊಲಗಿವಿ ]

**ಮೊಲನಾಗರ** ' ಮಲರೋಗ ' ನೋ.

**ಮೊಲನಾಗರು** ' ಮಲರೋಗ ' ನೋ.

**ಮೊಲಪಡಿ** (ನಾ). ಒಂದು ಸ್ಥಳದ ಹೆಸರು : ದಕ್ಷಿಣಂ ನೋಡಿ ವಟವೃಕ್ಷಮೆ ಮೊಲಪಡಿಎ(ಯೆ) ವಟವೃಕ್ಷಮೆ ಕಡಸಿಗೆಮೊಱಡಿಯ (ಎಕ. VIII, ೨೦೪-೩೯; 10ನೆಯ ಶತ). [ ? ]

**ಮೊಲೆ**₁ (ನಾ). ಹೆಂಗಸು ಅಥವಾ ಸಸ್ತನಿಪ್ರಾಣಿಯು ತನ್ನ ಮಗು ಅಥವಾ ಮರಿಗೆ ಹಾಲೂಡಿಸಲು ಉಪಯೋಗಿಸುವ ಅಂಗ; ಸ್ತನ : "ವಕ್ಷೋಜ ಕುಚ ಸ್ತನಮುಮಲ್ಲಿಕ್ಷಿಸೆ ಮೊಲೆ" (ಪದ್ಮನಿಘಂ. ೩೮-೬) ; ಮೊಲೆ ಪೊಣರ್ವೆಟ್ಟು ರೋಮಲತೆ ಬಟ್ಟೆ . . . ಮನ್ಮಥಾನಿಳಶಿಖಿ ಬೇಗೆಯಾಗೆ ಮದನಾಟವಿಯಂತೆವೊಲೊಪ್ಪ ತೋಱಿದಳ್ (ಕಾವ್ಯಸಾ. ೬೦೨, ಶೂದ್ರಕ) ; ಗಿರಿಸುತೆಯ ಮೊಲೆಗಳ್ಳಳ್ಳಿಱಿಂ ನೀರೇಱಿಸುತಿರೆ (ಕಂಶಿಪು. ೦೨-೦೩೯) ; ಮೊಲೆ ಮೂಡಿ ಬಂದರೆ ಹೆಣ್ಣಂಬರು (ದೇಜಾವ. ೬೩-೦೩೩).

**ಮೊಲೆಬಿಡಿಸು** = ಮಗುವಿಗೆ ಎದೆಹಾಲು ಕೊಡುವುದನ್ನು ನಿಲ್ಲಿಸು : ಅನೇಕ ಮಕ್ಕಳು ಮೊಲೆಬಿಡಿಸುವ ಸಮಯದಲ್ಲಿ ಚಂಡಿಮಾಡುತ್ತವೆ (ರೂಢಿ). **ಮೊಲೆಬೀಳು** = ಸ್ತನಗಳು ಜೋತುಬೀಳು: ಇದರಲ್ಲಿ . . . ಕೈಗಡಿಕೆಯರು ಮೊಲೆಬಿದ್ದವರು ಮುದುಗುಂಟಣಿಗಳು (ಕೂರಂ. ೩-೨-೩೯). [ದೇ. ■ ತಮಿ. ಮುಲೈ; ಮಲ. ಮುಲ; ತುಳು. ಮಿರೆ; ಕೊಡ. ಮೊಲೆ; ಕೋತ. ಮೊಲ್ ]

**ಮೊಲೆ**₂ (ನಾ). ಒಂದು ಬಗೆಯ ಸಸ್ಯ : "ಬಾಲಪುಷ್ಪಿಕಾ — ಮೊಲೆ, ರಸಾಂಜನ" (ನಿಘಂ. ೦೦೯). [ ?./ತೆಲು. ಮೊಗಲಿ, ಮೊಗಿಲಿ ]

**ಮೊಲೆಕಟ್ಟು** ' ಮೊಲೆಗಟ್ಟು ' ನೋ.

**ಮೊಲೆಕುಡಿ** (ಕ್ರಿ). ಎದೆಹಾಲನ್ನು ಕುಡಿ ; ಸ್ತನ್ಯಪಾನ ಮಾಡು : ಮೊಲೆಕುಡಿಯುವುದನ್ನು ಬಿಡುವಷ್ಟೇ ವಯಸ್ಸುಳ್ಳ ಅವಳಿಮಕ್ಕಳನ್ನು . . . ವಾಲ್ಮೀಕಿಮುನಿಗಳಿಗೆ ತಂದುಕೊಟ್ಟಳು (ಉಪಾತ. ೪೦).

[ ಮೊಲೆ₁ + ಕುಡಿ₁ ]

**ಮೊಲೆಕುಡಿಸು** (ಕ್ರಿ). ಎದೆಯ ಹಾಲನ್ನು ಕುಡಿಸು ; ಸ್ತನ್ಯಪಾನ ಮಾಡಿಸು : ತಾಯಿ ನಿನಗೆ ಮೊಲೆಕುಡಿಸುತ್ತಿದ್ದಳು (ಮುಂಬಯಿ. ೦-೨೯).

[ ಮೊಲೆಕುಡಿ + – ಇಸು₃ ]

**ಮೊಲೆಕೂಸು** ' ಮೊಲೆಗೂಸು ' ನೋ.

**ಮೊಲೆಕೊಡು** ' ಮೊಲೆಗೊಡು ' ನೋ.

**ಮೊಲೆಗಟ್ಟು**, ಮೊಲೆಕಟ್ಟು (ನಾ). ಹೆಂಗಸರು ಧರಿಸುವ ಒಳಕುಪ್ಪಸ : ಬೆಲೆಯಿಲ್ಲದ ಮುತ್ತುರತ್ನಂಗಳಡಸಿದ ಮೊಲೆಗಟ್ಟು ಕಾಸೆ ಕಾಲ್ಗೆಸೆವ ಸಲೆ ಶುದ್ಧ ಗೀತಚಾರಿಗೆ ಬಲುಬಿರುದಾಂತ ಕಲೆಯ ನರ್ತಕಿಯರೊಪ್ಪಿದರು (ಬೋಚಕ. ೨೦-೦೭); ಕಾಲ ಕುಪ್ಪಸ ಕಸೆ ಮೊಲೆಗಟ್ಟು ಜಡೆ ರತ್ನಕೀಲಣಿಗೆಲಸ ದೊಡ್ಡಾಣ (ಶಠಕ. ೩೦-೪೦). **ಮೊಲೆಕಟ್ಟು :** ಜಡೆ ಕಾಲ್ಕುಪ್ಪಸ ಮೊಲೆ ಕಟ್ಟು . . . ಪೇಟೆಯುವೆಸೆಯುಲಸುರನ ಮುಂಗಡೆಯೊಳೆಯ್ದಿದರಂಗನೆಯರು (ಕುಂತಾಸಾಂ. ೦೬-೦೭); ಮೈದಿಲ ಸೆಜಗಿನ ಮೊಲೆಕಟ್ಟು ದುಗುಲದೊಳ್ಳೆದಿದ ನಿಱಿಗಾಸೆಯಿಂದ ಐದುಂಬನ ಮುನದಾಸೆಗಳಂದದೊಳ್ಳೆದರ್ಜಲಕೇಳಿಗಾಗ (ಕಂಪಪಿ. ೨೩-೦೦೬). [ಮೊಲೆ₁ + ಕಟ್ಟು₂]

**ಮೊಲೆಗುಡಿ** (ನಾ). ಎದೆಯ ತುದಿ ; ಕುಚಾಗ್ರ : ಮೊಲೆಗುಡಿಯೊಡನೆ ಕಕ್ಷಪುಟವಸಿತಮಾಗೆ (ಸಿದ್ಧರಾ. ೦-೫೨). [ಮೊಲೆ₁ + ಕುಡಿ₂]

**ಮೊಲೆಗುಡು** ' ಮೊಲೆಗೊಡು' ನೋ.

**ಮೊಲೆಗೂಸು**, ಮೊಲೆಕೂಸು (ನಾ). ಎದೆಹಾಲು ಕುಡಿಯುವ ಮಗು ; ಹಸುಗೂಸು ; ಹಸುಳೆ : ಆ ಬಡಹೆಂಗಸು ಮೊಲೆಗೂಸನ್ನೂ ಬಿಟ್ಟು ಕೆಲಸಕ್ಕೆ ಬಂದಿದ್ದಾಳೆ (ರೂಢಿ). **ಮೊಲೆಕೂಸು :** ಮೊಲೆಕೂಸು ಮೊದಲು ದಾಡಿಕೊಂಡು ಹೆಂಗಸರೂ ಹುಡುಗರೂ . . . ನೋಡಿಯೇ ನೋಡಿವರು (ಚಿಟ್ಟಿಪೊ. ೫). [ಮೊಲೆ₁ + ಕೂಸು]

**ಮೊಲೆಗೆಲ** (ನಾ). ಎದೆಯ ಪಕ್ಕ ; ಸ್ತನಪಾರ್ಶ್ವ : ಕಸ್ತೂರಿಯಿಂದೆನ್ನಯ ಮೊಲೆಗೆಲದೊಳ್ ಪತ್ರಭಂಗಂಗಳಂ ಚಿತ್ರಿಸುವಂ (ಕಾದಂಬ. ೩೦೩); ಮೊಲೆಗೆಲದೊಳ್ ಕಸ್ತೂರಿಕಾಪತ್ರಭಂಗಮಂ ಚಿತ್ರಿಸಿಯುಂ (ಚಂದ್ರಪ್ರಭು. ೬-೬೩ ವ); ನೋಡಿದಳ್ ಕುಪರಿ ತನ್ನಯ ಮೊಲೆಗೆಲದಲ್ಲಿ ಮೂಡಿರ್ದ ಮೋಹನಗಚ್ಚೆಯು (ಬೋಚಕ. ೨೬-೦೦). [ಮೊಲೆ₁ + ಕೆಲ₁]

**ಮೊಲೆಗೊಟ್ಟು**(ನಾ). = ಮೊಲೆಗುಡಿ: ಬೆಳರ ಪೊಗಂ ಮೊಲೆಗೊಟ್ಟನೊಳೆಸೆದಿರೆ ಕರ್ಪು . . . ಬೆಳೆದುದೆ(ದು) ಗರ್ಭಂ (ಕಥಾ. 1, ೨೩-೩೦ ; 1180).

[ಮೊಲೆ₁ + ಕೊಟ್ಟು₁]

**ಮೊಲೆಗೊಡು**, ಮೊಲೆಕೊಡು, ಮೊಲೆಗುಡು (ಕ್ರಿ). ಎದೆಹಾಲನ್ನು ಕುಡಿಸು; ಸ್ತನ್ಯಪಾನ ಮಾಡಿಸು : ಇವನು ಗಡ ಚಿಕ್ಕಂದು ಮೊಲೆಗೊಟ್ಟವಳ ಹಿಂಡಿದ (ಶುಂಪ್ಯಾಕ. ೦೦-೦೩); ದಾದಿಯರಬಲಂಗೆ ಮೊಲೆಗೊಟ್ಟು (ಬೋಚಕ. ೦೭-೨೯). **ಮೊಲೆಕೊಡು :** ದಿಟ್ಟ ಶ್ರೀಪುರಂದರವಿಠಲಗೆ ಮೊಲೆಕೊಡು ಬಾರೆ ಗೋಪಮ್ಮ (ಪುರಂದ. ೨-೦೭೯-೬). **ಮೊಲೆಗುಡು :** ಪಾರ್ಥನನೆತ್ತಿ ಮೊಲೆಗುಡುತನುನಯದಿ (ಸಂಶಕ. ೦೫-೯೭) ; ಚಂದ್ರನುರ ಧೇನು ಕೂರ್ತು ಚಕೋರಪಸ್ಗೆ ಮೊಲೆಗುಡಲು (ಬೋಚಕ. ೦೭-೫೫).

[ಮೊಲೆ₁ + ಕೊಡು₁]

**ಮೊಲೆಗೊಳಿಸು** (ಕ್ರಿ). =ಮೊಲೆಗೊಡು: ಮೇಲುವ ಕೆಲಕಡೆಗೆ ಮುಚಿಮಾಡಿ ಮುದ್ದಿಸಿ ಮೊಲೆಗೊಳಿಸಿ ತೂಪಿಱಿದು (ಕೂರಂ. ೬-೯೩-೨೮); ಮಾಯೆಯುನೆ ಮೊಲೆಗೊಳಿಸಿ ಹಾಲ್ಕುಡಿಸಿ. ಈ ತಾಯಿ ಗಾಯತ್ರಿಮಂತ್ರಕ್ಕೆ ಭಾಷ್ಯ ಬರದವಳು (ಅರಳು. ೨೯-೪). [ಮೊಲೆ₁ + ಕೊಳ್₁ + – ಇಸು₃]

**ಮೊಲೆತುದಿ** ' ಮೊಲೆದುದಿ' ನೋ.

**ಮೊಲೆತೊಟ್ಟು** 'ಮೊಲೆದೊಟ್ಟು' ನೋ.

**ಮೊಲೆತೊರೆ** (ಕ್ರಿ). ಸ್ತನದಲ್ಲಿ ಹಾಲು ಚಿಮ್ಮಿಬರು : ತಾಯ್ಗಳುಮ್ಮಳಸಲಾಗದು ಕಱುಗಳಂ ಬಿಡಿರೆ ಬೇಗ ಮೊಲೆತೊರೆದು ಮಱುಗುವವು ಕಱುವಂ ಬಿಡಿರೆ (ಬಸವ. ೯-೦೦೬); ಅಳುವ ಕಂದನ ದನಿಯ ಕೇಳುತ ಮೊಲೆತೊರೆಯೆ (ಕಾಳ್ಗಿಚ. ೩-೦೩). [ಮೊಲೆ₁ + ತೊರೆ₂]

**ಮೊಲೆದಾಣ** (ನಾ). = ಮೊಲೆಗೆಲ : ನಿನ್ನೆಡೆಯೊಳಗೆಳ್ಳನಿತೂಣೆಯವಿಡದ ಕಾರ್ಯಗಳ ಕಾಣಿಸಿಕೊಂಡೆನಾದೊಡೆ ಕೇಳು ಮುಡಿ ಮೊಲೆದಾಣವ ನಿನಗಿತ್ತಳ್ಲ (ಕಂಸಪಿ. ೬-೦೩೬). [ಮೊಲೆ₁ + ತಾಣ]

**ಮೊಲೆದುದಿ**, ಮೊಲೆತುದಿ (ನಾ). = ಮೊಲೆಗುಡಿ : ತನ್ನೆಡಗೈಯ ಕೊನೆವೆರಳಿಂ ಬಲದ ಮೊಲೆದುದಿಯುಮುಂಕಿ ಕಡೆಗಣ್ಣಿಲಿ ಮೊಗವನಿರೆ ನೋಡ

. . . ನಲಿವ ಕಂದನನೆಂದು ಪಡೆದಪೆನೋ (ಶಾಶ್ವಶಾ. ೬-೦೩) : ಲಲನೆ. . . ಮೊಲೆದುದಿಯೊಳಗಿಜಿವವನೆದೆಧೈರ್ಯವ ತೊಲಗಿಸುತಿರ್ದಳೇನೆಂಬೆ (ಕಂಶವಿ. ೬-೮೬). **ಮೊಲೆತುದಿ :** (೬). [ಮೊಲೆ$_1$ + ತುದಿ]

**ಮೊಲೆದೊಟ್ಟು**, ಮೊಲೆತೊಟ್ಟು (ನಾ). = ಮೊಲೆಗುಡಿ : ಆ ಮಗುವಿನ ಬಾಯೊಳು ಮೊಲೆದೊಟ್ಟು ಕಿತ್ತುಹೋಹಂದದಿ ತುಯ್ದು (ನೇಬಸಂ. ೦೫-೬೬); ತೊರೆದ ನುಣ್ಮೊಲೆಯನ್ನೀಂಟುತೆ ಪೆಸರ್ಗಾಯದ ಬೆರಲೊಳು ಮೊಲೆದೊಟ್ಟ ಪಿಡಿದು ಮುರಳ್ದಾಣೆ (ಪೋಹತ. ೦೭-೬೬). **ಮೊಲೆತೊಟ್ಟು:** ಮಗು ಮೊಲೆಯುಣ್ಣುವಾಗ ಮೊಲೆತೊಟ್ಟಿನ ರಕ್ಷಣೆಗಾಗಿ ಹಾಕುವ ಕಾಪು (Nipple. ಇಂಕಣ). [ಮೊಲೆ$_1$ + ತೊಟ್ಟು$_1$]

**ಮೊಲೆನಾಗ** 'ಮಲರೋಗ' ನೋ.

**ಮೊಲೆನಾಗರ** 'ಮಲರೋಗ' ನೋ.

**ಮೊಲೆನಾಗರು** 'ಮಲರೋಗ' ನೋ.

**ಮೊಲೆನೀರು**, ಮಲನೀರು, ಮಲ್ನೀರು (ನಾ). ಮದುವೆಯ ದಿನವಂದು ವಧು ಮತ್ತು ವರ — ಇವರಿಗೆ ಬೇರೆಬೇರೆಯಾಗಿ, ಅವರವರ ತಾಯಿ, ಅಕ್ಕ, ತಂಗಿ ಮೊದಲಾದ ಸುಮಂಗಲಿಯ ರೊಂದಿಗೆ ಚಪ್ಪರದಲ್ಲಿ ಕೂರಿಸಿ, ಅರಿಸಿನ ಬೆರಸಿದ ನೀರಿನಲ್ಲಿ ಮಾಡಿಸುವ ಮಂಗಳಸ್ನಾನ : ಮೊಲೆನೀರ ಮಿಂದವರೆಲ್ಲರೂ ಹೆಂಡತಿಯ ರಾಗಬಲ್ಲರೆ (ಅವಶಂ. ೨೪೬-೧೦೨೪); ಜಲದುದಿಕೆಯ ತುಂಬಿ ಮೊಲೆನೀರ ಮಿಾವವರೆಲ್ಲರು ಅಮಲನ ಗುಣನೇಮವ ಮಾತಾಡಲೇಕೆ (ಕೋಲಶಾಂ. ೦೬-೨); ಮಗನ ಮದುವೆಯೊಳು ಮೊಲೆನೀರಿನೊಳು ಮೆಟ್ಟ ಮಿಗೆ ಹರುಷದಿ ಮಾಯಬೇಕು (ನೇಬಸಂ. ೦೪-೨೦೦); ಸುದತಿ ಮೊಲೆನೀರ ಮಿಾವಳು ಮಗನ ಮದುವೆಯಲಿ (ಶಾಶ್ವಶಾ. ೨೭-೪). **ಮಲನೀರು :** (ಎಕಮ್ಮ. VIII, ೪). **ಮಲ್ನೀರು :** ಆ ಅಲೆಗುರುಳಿನ ರಾಶಿಯನ್ನು ಆ 'ಮಲ್ನೀರಿ'ನ ದಿನವೇ ನೋಡಿ ಆನಂದಪಟ್ಟಿರಲಿಲ್ಲವೆ? (ಶಾಕಹೊ. ೯೬). [ಮೊಲೆ$_1$ + ನೀರು$_1$ (<ನೀರ್). P ಈ ಶಬ್ದಕ್ಕೆ ಸಂಬಂಧಿಸಿದಂತೆ ತಮಿಳು, ಮಲಯಾಳಂ, ತೆಲುಗು ಭಾಷೆಗಳಲ್ಲಿ ಜ್ಞಾತಿಶಬ್ದಗಳಿಲ್ಲ. ಆದರೆ ತಮಿಳಿನ 'ಮಣ್ಣುನೀರ್' (= ಸ್ನಾನಯೋಗ್ಯವಾದ ನೀರು), 'ಮಣ್ಣುಜು' (= ಸ್ನಾನ ಮಾಡಿಸು) ಎಂಬ ಶಬ್ದಗಳನ್ನು ಇದರೊಂದಿಗೆ ಹೋಲಿಸಬಹುದು]

**ಮೊಲೆಬರ್**, ಮೊಲೆಬರು (ಕ್ರಿ). ಸ್ತನಗಳು ಮೂಡು : ರಜನಿ ಕೃತಾಂಜಲಿ ಕಳವಿಗೆ ಬಜೆ ಗಂಧಕ ಪೂಪಮೇಜಿವು ತವೆ ತಿಲತೈಲಜಳ್ಳಾನಿತ ಘೃತದಿಂದುಬುಜಾಕ್ಷಿಯರ್ಗೆಜಿಯೆ ನಸ್ಯಮಂ ಮೊಲೆಬರ್ಕುಂ (ಲೋಕೋಶ. ೯-೦೬೦). **ಮೊಲೆಬರು :** ಗಜಪಿಪ್ಪಲಿಯನು ಅರಗು, ಬಜೆ ಸಹ ಮೊಸರು ಎಣ್ಣೆಯಲ್ಲಿ ಪೂಸಲು ಮೊಲೆಬರುವುದು (ವೈಸಿ. ೦೦೭).

[ಮೊಲೆ$_1$ + ಬರ್ (<ವರ್)]

**ಮೊಲೆಬರು** 'ಮೊಲೆಬರ್' ನೋ.

**ಮೊಲೆಬಾವು** (ನಾ). ಮೊಲೆಹಾಲು ಹೆಚ್ಚಾಗಿ, ಮೊಲೆಯು ಬಿರುಸಾಗಿ ಊದಿಕೊಳ್ಳುವ ಒಂದು ಬಗೆಯ ಬಾಣಂತಿರೋಗ : ಮಗುವಿಗೆ ಹಾಲು ಕೊಡುವುದರಿಂದ ಅಥವಾ ಹಿಂಡಿ ತೆಗೆಯುವುದರಿಂದ ಮೊಲೆಬಾವನ್ನು ಶಮನವಾಡಬಹುದು (ಕೂಚಿ). [ಮೊಲೆ$_1$ + ಬಾವು]

**ಮೊಲೆಮರಿ** (ನಾ). ತಾಯಿಯು ಹಾಲುಕುಡಿಯುವ ಮರಿ; ಎಳೆಯ ಮರಿ : ಈದಿಹ ಕೇಸರಿಯಾ ಹಲ ಮೊಲೆಮರಿಯಾ ಎಳತರುತವನಾಂ ಪಳಗಿಸುವೆ! (ಹಶ್ಯರ. ೦-೨). [ಮೊಲೆ$_1$ + ಮರಿ (< ಮಱಿ)]

**ಮೊಲೆಯುಣ್**, ಮೊಲೆಯುಣು, ಮೊಲೆಯುಣ್ಣು (ಕ್ರಿ). ಎದೆ ಹಾಲನ್ನು ಕುಡಿ ; ಸ್ತನ್ಯಪಾನ ಮಾಡು : ಬೆಸಕೆಯ್ವ ಪೆಂಡಿರ ಮೊಲೆಗಳಂ ಸೀರೆಯಿಂ ಕಟ್ಟಿಸಿ ಕೂಸುಗಳಂ ಮೊಲೆಯುಣಲೀಯದೆ ಬೆಸಕೆಯ್ಯಿಸುಗುಂ (ವಡ್ಡಾರಾ. ೦೬೦ – ೦೨) ; ಮೊಲೆಯುಂಬ ಭಾವ ತಪ್ಪಿ ಅಪ್ಪಿದವರ ತಲೆಯ ಕೊಂಬ ಕೂಡಲ ಸಂಗಮದೇವ (ಬಕವ. ೬೪೦); ಸಿಂಗದ ಮೊಲೆಯುಂಬ ಮಱಿಯಾನೆ . . . ಮುಂಗುಲಿಯೊಡನಾಡುವೆಳ ನಾಗನ ಕಂಡಂಗಜ ವಿಸ್ಮಿತನಾದ (ಪೋಹತ. ೬-೫೩). **ಮೊಲೆಯುಣು :** ಬಿಸದದಿಂ ಮೊಲೆಯುಣುವ ತಾಯಾನನವ ಕಿಗ್ಗಣ್ಣಿಂದ ನೋಡುತ (ಶಾಶ್ವಶಾ. ೨೭-೪೭). **ಮೊಲೆಯುಣ್ಣು :** ಘನನಿತ್ಯತೃಪ್ತನಂ ಮೊಲೆಯುಣ್ಣ ನೆಂದು . . . ಆಳುವರಾ ಮಾತೆಪಿತರು (ಸಿದ್ಧರಾ. ೨-೦೦).

[ಮೊಲೆ$_1$ + ಉಣ್]

**ಮೊಲೆಯುಣಿಸು** (ಕ್ರಿ). ಮಗುವಿಗೆ ಎದೆಹಾಲು ಕುಡಿಸು. — ಸ್ತನ್ಯಪಾನ ಮಾಡಿಸು : ಒಮ್ಮೆ ಕಳುಹಿ ಕೊಡು; ದುರಳುವೆನು ಮೊಲೆಯುಣಿಸಿ ಕಿರುಬಾಲನಾಣೆ (ಕಂಕೃ. ೩೩-೯); ಮೊಲೆಯುಣಿಸಿದ ನಂತರ ಈ ಭಾಗವನ್ನು ಚೊಕ್ಕಟವಾಗಿ ತೊಳೆದು ಒರಸಲು ಅಸಡ್ಡೆ ಮಾಡಿದುದರಿಂದ ಹೀಗಾಗುವುದು (ತಾಶಿಮ. ೭೬). [ಮೊಲೆ$_1$ + ಉಣಿಸು$_1$]

**ಮೊಲೆಯುಣು** 'ಮೊಲೆಯುಣ್' ನೋ.

**ಮೊಲೆಯುಣ್ಣು** 'ಮೊಲೆಯುಣ್' ನೋ.

**ಮೊಲೆಯೂಡು** (ಕ್ರಿ). = ಮೊಲೆಯುಣಿಸು : ಸುಕೌಸಳಸ್ವಾಮಿಯಂ ಮೊಲೆಯೂಡುವ ದಾದಿ ಸುಬ್ರತೆಯೆಂಬೊಳ್ (ವಡ್ಡಾರಾ. ೪೩.-೦೨); ಆ ಗೃಹಸ್ಥನ ಹಂಡತಿ ಸೆಜಂಗನಿಕ್ಕಿಕೊಂಡು ಮಗಂಗೆ ಮೊಲೆಯೂಡುವುದಂ ಕಂಡು (ಕಂಕಶಂ. ೨೪೯-೩); ಈ ಮನೋಹರಕ್ರೀಡನನೆತ್ತಿಕೊಂಡು ಮೊಲೆ ಯೂಡಿದ . . . ಈ ಭವತ್ಸತಿ ಯಶೋದೆ ಕುಲಕ್ಕೆ ಯಶೋದೆಯಲ್ಲಳೆ (ಜಗಂ. ೩-೬೪). [ಮೊಲೆ$_1$ + ಊಡು$_1$]

**ಮೊಲೆವಾಲ್**, ಮೊಲೆವಾಲು, ಮೊಲೆಹಾಲು (ನಾ). ಮಾನವಸ್ತ್ರೀ ಮತ್ತು ಸಸ್ತನಿಸ್ತ್ರೀಪ್ರಾಣಿಗಳ ಎದೆಯಲ್ಲಿ ಉತ್ಪತ್ತಿಯಾಗುವ ಹಾಲು ; ಎದೆಹಾಲು ; ಸ್ತನ್ಯ : ಮದಂ ಮದಮುನಾಳ್ದವಿವೇಕತೆಯಿಂದಮಲ್ತೆ ತೊಟ್ಟಿನ ಮೊಲೆವಾಲನುಂಡ ಗುಣಮಿಂತಿವನಾರ್ ಕಿಡಿಪರ್ ನರೇಂದ್ರ ರೊಳ್ (ಕಂಪಭಾ. ೦೨-೬೩); ಉಂಡ ಮೊಲೆವಾಲ ಪವಣಂ ಕೊಂಡು ಬಿಸುಟ್ಟೊಡಲ ಪವಣನಿದು ಪವಣೆಂದು (ಕಂಬಶಾ. ೬-೮) ; ಪಾದವೆ ತೊಟ್ಟಿಲ್ ರೇಣುವೆ ಬಾಯ್ವೆಣ್ಣೆ ಸವಿರುಚಿಯೆ ಮೊಲೆವಾಲ್ (ಚಸರ. ೬-೬). **ಮೊಲೆವಾಲು :** ಕಜುವನಗಲಿಸಿ ತಾಯ ಮಜುಗಿಸಿ ಮೊಲೆವಾಲ ಕಜೆದುಣ ಬೇಡವೊ (ಬಕವ. ೯೯೯) ; ನಿಮ್ಮವ್ವೆಯಾ ಮೊಲೆವಾಲ ಬಲುಹಿನಲಿ ರಾಯನೀ ಕ್ಷತ್ರಿಯನು (ಕುವ್ಯಾಕ. ೦-೩೩); ಹಸಿದತ್ತು ಮೊಲೆವಾಲಿಂಗೆ ಮೊಗಸುವಡಿದು ವಿಚಿತ್ರವಲ (ಕೂರರಾ. ೦-೮-೬೪). **ಮೊಲೆಹಾಲು :** ಅಂಕೋಲೆಯ ಬೇರಂ ಮೊಲೆಹಾಲಲ್ಲಿ ತೇದು ಹಚ್ಚಲು ಕಣ್ಣುಹೂವು ಮಾಣ್ಗುಂ (ವೈಸಿ. ೦) ; ಸಾರಗದ ಕೊಂಬನ್ನು ಮೊಲೆಹಾಲಿನಲ್ಲಿ ತೇದು ಕದಡಿ ಸೇವಿಸಿದರೆ ದಾಹಜ್ವರ ಗುಣಮಕ್ಕುಂ (ಸಶವೈ. ೭೮). [ಮೊಲೆ$_1$ + ಪಾಲ್$_1$]

**ಮೊಲೆವಾಲು** 'ಮೊಲೆವಾಲ್' ನೋ.

**ಮೊಲೆವಿಡಿ** (ನಾ). ಮೊಲೆತೊಟ್ಟು ಒಳಗೆ ಸೇರಿಕೊಳ್ಳುವ ಒಂದು ಬಗೆಯ ಸ್ತನರೋಗ : ಕೊಗ್ಗಿಯಂ ತಂದು . . . ಇಕ್ಕಿ ಹಿಮ್ಮಡಗಲು ಮೊಲೆವಿಡಿ ಮಾಣ್ಗುಂ (ವೈಸಿ. ೦೯೮). [ಮೊಲೆ$_1$ + ಪಿಡಿ$_2$ ?]

**ಮೊಲೆವೆಱು** (ಕ್ರಿ). ಮೊಲೆಯನ್ನು ಹೊಂದಿರು ; ಹೆಣ್ಣುತನವನ್ನು ಪಡೆದಿರು ; ಹೆಣ್ಣಾಗಿರು : ನಿನ್ನಂ ಪೆತ್ತಳ್ ಮೊಲೆವೆತ್ತಳೆ ವೀರಜನನಿ ಪೆಸರಂ ಪೆತ್ತಳ್ (ಗದಾಯು. ೪-೩೩). [ಮೊಲೆ$_1$ + ಪೆಱು$_1$]

**ಮೊಲೆವೊಱು** (ಕ್ರಿ). = ಮೊಲೆವೆಱು: ಮೊಲೆವೊತ್ತ ತೈಲಜನನಿಯ ಕೆಲದೊಳ್ ರಂಜಪರೆ ಮಿಾಸೆವೊತ್ತಣ್ಣಂಗಳ್ (ಅಶಕೃ. ೦-೬೫); ತಂಗಿಸಕಾಯ ತೋರದ ಮೊಲೆವೊತ್ತ ಲತಾಂಗಿಯ ಬಂದುಗೆವಾಯ ರಂಗಿಪ ಬೆಂದುಟಿ (ಪೋಹತ. ೦-೩೭). [ಮೊಲೆ$_1$ + ಪೊಱು]

**ಮೊಲೆಹಾಲು** ' ಮೊಲೆವಾಲ್ ' ನೋ.

**ಮೊಲ್ಲಾಗರ** ' ಮಲರೋಗ ' ನೋ.

**ಮೊಲ್ಲೆ**, ಮಲ್ಲೆ (ನಾ). ಮಲ್ಲಿಗೆಯ ಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು : "ಮಲ್ಲಿಕಾ, ಕುಂದಃ — ಈ ೨ ಮೊಲ್ಲೆ" (ನಾತಶಾ. ೧೦೬) ; ಪುಲ್ಲಶರಂಗಿಸುವೆಡೆಗಿದೆ ನಲ್ಲಂಬುಗಳೆನಿಸಿ ತುಱುಗಿ ಮಲರ್ದಲರ್ದಸೆವೀ ಮೊಲ್ಲೆಯುಮೊಲಿಸಿದ ನಲ್ಲರ ಲಲ್ಲೆಯುಮಾರಾರ ಮನಮುಮಂ ಸೋಲಿಸದೇ (ಆದಿಪು. ೧೦-೧೦೦) ; ಸರಸಿರುಹಂ ಸುರಗಿ ಮೊಲ್ಲೆ ಪೊಸಸಂಪಗೆಯಾ ಅರಲಿಂ . . . ಜಿನೇಶ್ವರನ ಪಾದಮಂ ಪೂಜಿಸಿದಂ (ರರ್ತನಾವ್ಯ. ೫-೩೭) ; ಇರವಂತಿಯ ಕಂಪು ಮೊಲ್ಲೆಯೊಂದುರವಣೆಗೊಂಪು ಮಲ್ಲಿಗೆಯ ಕಂಪು (ಗಿರಿ. ೨-೬೦). **ಮಲ್ಲೆ**: ಪರಿಮಳವಾಂತ ಮಲ್ಲೆಯ ಮುಗುಳ್ಗಳೊಪ್ಪಿದುವು (ಕಂಸಿ. ೫-೯೩).

[ದೇ. ॥ ತಮಿ. ಮುಲ್ಲೈ ; ಮಲ. ಮುಲ್ಲ ; ತೆಲು. ಮೊಲ್ಲ]

**ಮೊಲ್ಲೆಗ** (ನಾ). ದಿಕ್ಕಿಲ್ಲದವನು ; ನಿರ್ಗತಿಕ : ಮಲ್ಲಿಗೆಯ ಹೇಳವಧಿಯಂ ನಿಮ್ಮಲ್ಲಿಗೆಯ್ಯಂದಿದ್ದೆ ನಲ್ಲಾ ಮೊಲ್ಲೆಯೇ ಹೇಳಿವಕೆ ಮೊಲ್ಲೆಗನಾದನೇಗುವೆನು (ಬಸಪು. ೯೫-೪೦). [ಮೊಲ್ಲೆ + —ಗ]

**ಮೊಲ್ಲೆಯ** (ನಾ). (?) : "ಮೊಲ್ಲೆಯಂ ನಿಷ್ಪೂರವು" (ಕಶರ. ೦೨೯).

[ ? ]

**ಮೊಸರ್**, ಮೊಸರು, ಮೋರ್ (ನಾ). ನಸುಬಿಸಿಯಾದ ಹಾಲಿಗೆ ಹೆಪ್ಪುಹಾಕಿದ ನಂತರ ಉಂಟಾಗುವ ಗಟ್ಟಿಗೊಂಡ ಪದಾರ್ಥ ; ದಧಿ : ನೆಲ್ಲಂ ಮೊಸರುಂಗುಡಿದಂತಲ್ಲದೆ ತಲ್ಲಣಿಸಲಸದಿತು ಮೃದುಪದವಂ (ಕಬಿರಾ. ೨-೪) ; ಪೆಸರ್ ನಿನಗೆ ಕೇಳ್ ಮೊಸರ್ (ಆದಿಪು. ೩-೬೦); ಹೆಪ್ಪಿಟ್ಟೊಡೆ ಪಾಲ್ ಮೊಸರಾಗಿಪ್ಪಂತಿರೆ ನಿರ್ಗಳಾಗಲರಿಗುಮೆ (ರರ್ತನಾವ್ಯ. ೧೦-೦೩೭). **ಮೊಸರು** : ಚಂದದೋಗರದೊಳಗೆ ಚಂದ್ರಿಕೆಯ ಹೊಸಹಳುಕಿನಂದದೆಮ್ಮೆಯ ಮೊಸರು. . . ಎಲ್ಲವನಿರಿಸಿ ಕಟ್ಟಿಕೊಟ್ಟಳು (ಸಿದ್ಧರಾ. ೨-೩೩) ; ಮೊಸರ ಮಾಜಲು ಪೋದರೆ ನಿನ್ನಯ ಕಂದ ಹೊಸರ್ನೆಂದೆಲೆ ಕೇಳಿದ (ಕುರಂಡ. ೦-೯೦-೨) : ಯಾವಾಗಲೂ ಮಜ್ಜಿಗೆ ಅಥವಾ ಮೊಸರು ಸೇವಿಸಲು ಮರೆಯದಿರಿ (ಆರುಶಾ. ೬೯) ; ಒಲ್ಲದ ಗುಂಡನಿಗೆ ಮೊಸರಲ್ಲಿ ಕಲ್ಲು (ಗಾದೆ). **ಮೋರ್** : ಸಾರತರೋಕ್ತಿಗೆ ನೆಲ್ಲಂ ಮೋರುಂಗೋದಂತೆ ಸೇರಿ ಕಲ್ಪಾರ್ಪರವರ್ಗೋರೆ ನಿಬಂಧನಟೀಕಾಕಾರಂಗಲ್ಲದೆ ಪೆಜಂಗೆ ಕೋ[ಳ್ಳೋ]ದಪುದೇ (ಶಾಂತಿಪು. ೦೦-೦೬೨). [ದೇ. ॥ ತಮಿ. ಮುಚರ್, ಮೋರ್; ಮಲ. ತೊದ. ಮೋರ್ ; ತುಳು. ಮೊಸರು ; ಕೊಡ. ಮೋರೀ ; ಕೋತ. ಮೊಚ್]

**ಮೊಸರಣ್ಕೆ** (ನಾ). (ಶುಭಕಾರ್ಯದಲ್ಲಿ ಬಳಸುವ ಮಂಗಳದ್ರವ್ಯಗಳಲ್ಲೊಂದಾದ) ಮೊಸರಿನ ಲೇಪನ : ರನ್ನದ ಕನ್ನಡಿವೆರಸು ಸರ್ವಧಾನ್ಯದ ನಡುವಿರೆ ಮೊಸರಣ್ಕೆವೆರಸಿದೆಳದಳಿರ್ಗಳಸಂ (ಆದಿಪು. ೪-೩೩) : ಸಿರಿಗನ್ನಡಿ ಮೊಸರಣ್ಕೆವೆರಸಿದೆಳದಳಿರ್ಗಳಸಂಗಳ ಲೀಲೆವೆರಸಿ ದಂಪತಿಯಂ ಪೋ ಬರವೇಟಿಂಬ ತೆಱದಿಂ ಸೊಗಯಿಸಿದುದು (ಸುಕುಮಾ. ೦೦-೬೭ ಠಗಳ) ; ಸರ್ವಧಾನ್ಯಂ ಮೊಸರಣ್ಕೆ ಕಱುಂಕೆ . . . ಕಣ್ಗೊಳಿಸುತಿರ್ದುವು (ಕೃಷ್ಣಪು. ೪-೭೯).

[ಮೊಸರ್ + ಅಣ್ಕೆ]

**ಮೊಸರನ್ನ** (ನಾ). ೧. ಮೊಸರಿನಲ್ಲಿ ಕಲಸಿದ ಅನ್ನ : ಸುನಂದ ಬರೀ ಮೊಸರನ್ನ ತಿಂದು ಹೊರಗೋಡಿ ಬಂದಿದ್ದಳು (ದೂಬೆಟ್ಟ. ೬) ; ಕತ್ತೆ ಮೊಸರನ್ನದ ರುಚಿ ಬಲ್ಲುದೆ ? (ಗಾದೆ). ೨. ಮೊಸರಿಗೆ ಉಪ್ಪು, ಹಸಿಮೆಣಸು, ಒಗ್ಗರಣೆ ಮುಂತಾದುವನ್ನು ಹಾಕಿ ಕಲಸಿದ ಅನ್ನ : ಪ್ರಯಾಣಕಾಲದಲ್ಲಿ ತಿನ್ನಲು ಮೊಸರನ್ನ ಮತ್ತು ಪುಳಿಯೋಗರೆಯನ್ನು ಮಾಡಿಕೊಂಡು ಬಂದಿದ್ದೇನೆ (ರೂಢಿ).

[ಮೊಸರು (< ಮೊಸರ್) + ಅನ್ನ]

**ಮೊಸರವಲಕ್ಕಿ** (ನಾ). ಹಸಿಮೆಣಸಿನಕಾಯಿ, ಕೊತ್ತಂಬರಿಸೊಪ್ಪು, ಉಪ್ಪು ಮತ್ತು ಒಗ್ಗರಣೆಯೊಂದಿಗೆ ಮೊಸರಿನಲ್ಲಿ ಕಲಸಿದ ಅವಲಕ್ಕಿ : ಅಡಕೆಹಾಳೆಯ ಪೊಟ್ಟಣಗಳಿಂದ ಮೊಸರವಲಕ್ಕಿ . . . ಮೊದಲಾದ ತಿಂಡಿಗಳನ್ನು ರಾಮಚಂದ್ರನಿಗೆ ಕೊಟ್ಟರು (ಕಳಹು. ೫).

[ಮೊಸರು (< ಮೊಸರ್) + ಅವಲಕ್ಕಿ]

**ಮೊಸರು** ' ಮೊಸರ್ ' ನೋ.

**ಮೊಸರುತನ** (ನಾ). ಹಾಲು ಹೆಪ್ಪಾಗುವಿಕೆ,— ಗಟ್ಟಿಯಾಗುವಿಕೆ : ಹುಳುಕುರೆಯ ಚೂರ್ಣವನು ನೀರಿಲ್ಲದೆ ಕಡೆದ ಮಜ್ಜಿಗೆಯಲ್ಲಿ . . . ಇಕ್ಕಿ . . . ನೆನೆದ ಮಳಲಿನಲ್ಲಿ ಹೂಳುವುದು . . . ಹೊತ್ತಿನಿಂದ ಮೊಸರುತನವನೆಯ್ದುವುದು (ಸೂಪಶಾ. ೭). [ಮೊಸರು (<ಮೊಸರ್) + — ತನ]

**ಮೊಸರುಭೋಜನ** (ನಾ). = ಮೊಸರನ್ನ ೧ : ರಾಮೇಶಲಿಂಗ × × ಉದಯದ ಕಾಲದಲ್ಲಿ ಮೊಸರುಭೋಜನದ ನೈವೇದ್ಯ . . . ಕೊಟ್ಟ ಮಾನ್ಯ (ಎಕ. XI. ಹೊಳಲ್ಕೆ. ೭೩–೦೦; 1518).

[ಮೊಸರು ( < ಮೊಸರ್) + ಭೋಜನ]

**ಮೊಸರುವಡೆ**, ಮೊಸರೊಡೆ (ನಾ). ಮೊಸರಿನಲ್ಲಿ ನೆನೆಸಿದ ವಡೆ ; ತೈರುವಡೆ : ಮಧ್ಯಾಹ್ನದ ತಿಂಡಿಗೆ ಮೊಸರುವಡೆ, ಜಾಮೂನು ಮಾಡಿದ್ದ (ರೂಢಿ). **ಮೊಸರೊಡೆ** : ತಿಳಿದುಪ್ಪದಿಂದ ಬೆಂದೊಡೆಯು . . . ಮೊಸರಿನೊಳಗಿಕ್ಕೆ ಮೊಸರೊಡೆಯೆಂಬ ಹೆಸರಾಯ್ತು (ಸೂಪಶಾ. ೦-೬೦); ಶಿವಪೂಜೆಯಲ್ಲಿ ಮೊಸರೊಡೆ ಕೊಂಡು ಹೊಟ್ಟೆತುಂಬ ತಿಂದ (ಕುಂಚಿ. ೬೩).

[ಮೊಸರು (< ಮೊಸರ್) + ವಡೆ]

**ಮೊಸರೊಡೆ** ' ಮೊಸರುವಡೆ ' ನೋ.

**ಮೊಸರೋಗರ** (ನಾ). =ಮೊಸರನ್ನ ೧ : ಪಸಿವನ್ನೆ . . . ಮೊಸರೋಗರವ ಸಾಲ್ವುದೆಮ್ಮ ದೇವಂಗೆ (ಬಸರ. ೭–೦೩೪); ಬಿಳಿಯ ಅಕಿ ಮೊಸರೋಗರ (ಶಾಇ. IX-i. ೭೬೬-೯; 1276). [ಮೊಸರ್ + ಓಗರ]

**ಮೊಸಗರ್ಬಟ್** (ನಾ). = ಮೊಸರನ್ನ ೧ : ಮೊಸಗರ್ಬಟಂ ವಿಧಿಯಿಂದೆ ಸೂಸೆ ಭರದಿಂ ಬೀಟ್ಟಾಲಿಕಲ್ಲಂ ನಿವಾರಿಸುಗುಂ (ಲೋಕೋಪ. ೬-೦೦).

[ಮೊಸರ್ + ಕೂಬಟ್$_1$]

**ಮೊಸರ್ಪೊಟ್ಟು** (ನಾ). ಮೊಸರಿನ ಹನಿ : ದೂರ್ವೆಯುಂದಮೆ ಮೊಸರ್ಪೊಟ್ಟನಿಟ್ಟು (ಪಾರ್ಶ್ವಪು. ೩-೦೯). [ಮೊಸರ್ + ಬೊಟ್ಟು$_2$]

**ಮೊಸಳೆ** ' ಮೊದಳೆ ' ನೋ.

**ಮೊಸಳೆಮಡು** ' ಮೊದಳೆಮಡು ' ನೋ.

**ಮೊಸಳೆಯರಸ** (ನಾ). ಒಬ್ಬಾತನ ಹೆಸರು : ಜಗಳ[ವು]ಗದ ಮೊಸಳೆಯರಸರ ಪ × × × (ಶಾಇ. IX-i. ೩೦-೫ ; 966). [ಮೊಸಳೆ+ಅರಸ$_1$]

**ಮೊಹತರ್ಫ** (ನಾ). ಅಂಗಡಿ, ಎಣ್ಣೆಗಿರಣಿ, ಮಗ್ಗ, ಮನೆ ಮುಂತಾದುವುಗಳ ಮೇಲೆ ಹಾಕುವ ಒಂದು ಬಗೆಯ ತೆರಿಗೆ : (ಕೃಸಗ. II. ೫೫೬) ; (ಮ್ಯಗೆಶಿ. IV. ೭೭೯).

[←ಪಾರ. ಮುಹತರಿಫಾ ; ಮರಾ. ಮೋಹತರಫಾ, ಮೋಹತರ್ಫಾ]

**ಮೊಹಬತ್** ' ಮೊಹಬತ್ತು ' ನೋ.

**ಮೊಹಬತ್ತು**, ಮೊಹಬತ್ (ನಾ). ಪ್ರೀತಿ ; ಅಕ್ಕರೆ : ಮೊಹಬತ್ತಿನಿಂದ ಬರದು ಇದ್ದ ಕಾಗದ ಬಂದು ತಲಪಿ ಬಂದ ವಿವರ ಖುಷಿಯಿಂದಾ ತಿಳಿದು ಬಂದು (ರಾತೇಂದ್ರ. ೦೪೪). **ಮೊಹಬತ್** : ತಾವು ನನ್ನನ್ನು ಒಂದು ವಸ್ತಾ ಅಂತ ಮೊಹಬತ್‌ನಿಂದ ಕಾಪಾಡಿದ್ರಿ (ಮುಲ್ಕಿ. ೨೬೬).

[←ಅರ. ಹಿಂ. ಮುಹಬ್ಬತ್ ; ಮರಾ. ಮೋಹಬತ]

**ಮೊಹರ** ' ಮೊಹರು ' ನೋ.

**ಮೊಹರಂ**, ಮುಹರ್ರಮ್ (ನಾ). ಮಹಮ್ಮದೀಯವರ್ಷದ ಮೊದಲನೆಯ ತಿಂಗಳು ಮತ್ತು ಹಸನ್, ಹುಸೇನ್ ಎಂಬಿಬ್ಬರು ನಾಯಕರ ಸಾವಿನ ಪವಿತ್ರಸಂದರ್ಭದ ನೆನಪಿನಲ್ಲಿ, ಆ

ತಿಂಗಳಿನಲ್ಲಿ ಆಚರಿಸುವ ಹಬ್ಬ: ಅಲಾಬಿಹಬ್ಬ; ಬಾಬಯ್ಯನ ಹಬ್ಬ : ಒಂದು ಮಸೀದಿ ಇದೆ. ಹಾಗೇದ ಮೇಲೆ 'ಮೊಹರಂ' ಇರಬೇಡವೆ ? (ಶಾರುದಾ. ೯೦). ಮುಹರ್‌ರಮ್ : 'ಮುಹರ್‌ರಮ್' ಎಂಬುದು ಮುಸ್ಲಿಂ ವರ್ಷದ ಮೊದಲನೇ ತಿಂಗಳಿನ ಹೆಸರು. ಅರಬ್ಬೀ ಭಾಷೆಯಲ್ಲಿ 'ಮುಹರ್‌ರಮ್' ಎಂದರೆ 'ಪವಿತ್ರ' ಎಂದು ಅರ್ಥವಾಗುತ್ತದೆ (ರಾಮಂಗಾ. ೬೨). [← ಅರ. ಹಿಂ. ಮುಹರ್‌ರಮ್; ಮರಾ. ಮೋಹರಮ್]

**ಮೊಹರಿ₁** 'ಮೌರಿ₁' ನೋ.

**ಮೊಹರಿ₂** 'ಮೊಹರು' ನೋ.

**ಮೊಹರಿ₃** 'ಮೋರಿ₂' ನೋ.

**ಮೊಹರು**, ಮೊಹರ, ಮೊಹರ್ರಿ₂, ಮೊಹರೆ, ಮೋಹರ್₂, ಮೋಹರ್ರಿ₂ (ನಾ). ೧. ಒಂದು ಬಗೆಯ ಚಿನ್ನದ ನಾಣ್ಯ : ಪಾಂಡವರಿಗೆ . . . ದಿವ್ಯಭೂಷಣಗಳನ್ನೂ ಒಂದೊಂದು ಲಕ್ಷ ಮೊಹರುಗಳನ್ನೂ ಒಬ್ಬೊಬ್ಬರಿಗೂ ಪ್ರೀತಿಪೂರ್ವಕವಾಗಿ ಕೊಟ್ಟನು (ಕೃವಾಕೆ. ೩೩೫); ಇತರ ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು. ಯಾವವೆಂದರೆ :– ೧ ಗಬರು . . . ೧ ಮೊಹರು, ೧ ಪುತಲಿ (ಪತ್ರಶಾ. ೦೦೪). ೨. ದಾಖಲೆ, ಪತ್ರ ಮುಂತಾದುವುಗಳ ಮೇಲೆ ಮುದ್ರಿಸಲು ಬಳಸುವ ಯಾವುದಾದರೂ ಲಾಂಛನವಿರುವ ಸಾಧನ, ಉಂಗುರ ಮುಂತಾದುವು ಮತ್ತು ಅವುಗಳಿಂದ ಒತ್ತುವ ಮುದ್ರೆ; ಉಂಡಿಗೆ ; ಶಿಕ್ಕಾ : ದಸಕತು ಮೊಹರಾ ಶ್ರೀಚಾಮರಾಜವಡೇರ ತನುಜ ಕೃಷ್ಣರಾಜವಡೇರು ಯೆಂಬುದಾಗಿ (ಎಕ. VI. ಕೊಪ್ಪ. ೯೬. ೩೭; 1811); ಬರೆದುಂ ವಿಸ್ತರ ಪತ್ರಮಂ . . . ದುರುಳಂ ಮಡಿಚಿಕ್ಕಿ ಮುದ್ರೆಗೆಯ್ದುಂ ಮೊಹರಿಂ (ಹಂಪ್ರಕ್ಯ. ೦೩-೦೦೨); ಇವರ ತಾಮ್ರಪಟ್ಟಿಕೆಗಳ ಮೊಹರುಗಳ ಮೇಲೆ ಸಿಂಹಲಾಂಛನ ವಿರುತ್ತದೆ (ಕರ್ನಾಅ. ೬). **ಮೊಹರ** : ೧. ರಾಧೆಯು ಚಿನ್ನದ ಮೊಹರವನ್ನು ಧೀವರನ ಕೈಗೆ ಕೊಡುವುದಕ್ಕೆ ಹೋದಳು (ದಾಂತಿ. ೩); ರಾಜ ಒಡೆಯನು ಒಂದು ಮೊಹರವನ್ನು ತೆಗೆದು ಅಂಬಿಗನ ಕೈಗಿಟ್ಟು (ಶ್ರೀರಾಯ. ೯೩). ೨. ಕರಾರುನಾಮಾ ದಸ್ತಕತು ಮೊಹರದಿಂದ ಬರವರಲ್ಲಿ (ರಾಕೇಂಪ್ರ. ೬); ರಾಕ್ಷಸನ ಮುದ್ರೆಯುಂಗುರದಲ್ಲಿ ಮೊಹರಮಂ ಮಾಡಿಸಿ ಕಳಿಸುವೆನು (ಕಗದ್ಯ. II. ೬). **ಮೊಹರ್ರಿ₂** : ೧. ತಿಂಗಳ ಬಡ್ಡಿ ಎಂಬುದಾಗಿ ಹದಿನೈದುರೂಪಾಯಿ ಮೊಹರಿಯನ್ನು ಕೊಟ್ಟು (ಕಥಾಮಂ. IV. ೪); ವಾಗೀಶರವರು ಕೊಡುವ ಮೊಹರೀ ಚಿಟ್ಟೆಯಿಲ್ಲದೇ ಮಾರುತ್ತದೆ (ಕುರಾಅ. ೦೬೨). **ಮೊಹರೆ** : ೧. ಸಹಸ್ರಚಿನ್ನದ ಮೊಹರೆಗಳನ್ನು ಕೊಡುವುದಾಗಿ ಡಂಗೂರ ಹೊಡೆಸಿದನು (ಶ್ರೀರಾಯ. ೦೩೨). **ಮೋಹರ್₂** : ೧. ಹನ್ನೆರಡುಲಕ್ಷ ಮೋಹರವನ್ನು ಛತ್ರಭಟಾದಿಸೇನಾನಾಯಕರಿಗೆ ಕೊಡುವಂತೆ . . . . ಹುಂಡೀಕಾಗದವಂ ಬರೆಸಿ (ಮುದ್ರಾಮಂ. ೨೯೦). ೨. ಸಿದ್ಧಾರ್ಥಕನು ಆ ಕಾಗದದಲ್ಲಿ ಒತ್ತಿರುವ ಮೋಹರದ ಪ್ರಕಾರ ಸುವರ್ಣಾದಿ ಮುದ್ರೆಯ ಮಾಡಿಸಿ (ಮುದ್ರಾಮಂ. ೨೯೩). **ಮೋಹರ್ರಿ₂** : ೧. ಬೊಕ್ಕಸಗಳು ಹಣಗಳು ವರಹಗಳು ಮೋಹರಿಗಳು ನವರತ್ನಗಳು (ಶಿವರ. ೦೦೩-೪).

**ಮೊಹರುಮಾಡು**, **ಮೋಹರುಮಾಡು** = ಲಕೋಟೆ, ಭರಣಿ, ಬಾಗಿಲು ಮುಂತಾದುವನ್ನು ತೆರೆದು ನೋಡದಂತೆ ಅರಗು ಅಂಟಿಸಿ ಅದರ ಮೇಲೆ ಮುದ್ರಿಕೆಯನ್ನು ಒತ್ತು : ಬರೆದಂಥ ಕಾಗದವ ಮೊಹರುಮಾಡ್ಯಾರೆ (ಶಾಶರ. ೦೬೬) : ಬರೆದು ಮೊಹರುಮಾಡಿ ಕುಮುಂದಿನಿಯ ಕೈಲಿ ಕೊಟ್ಟುಹೋಗುತ್ತೇನೆ (ಬಂಕಿಮ. ೦೨೨): ಈ ಮುಂಜೂಷವಂ ಮೋಹರುಮಾಡು (ಮುದ್ರಾಮಂ. ೩೦೭).

[← ಪಾರ. ಮುಹರ್; ಹಿಂ. ಮೋಹರ್ ; ಮರಾ. ಮೋಹರ್, ಮೋಹೋರ್]

**ಮೊಹರೆ** 'ಮೊಹರು' ನೋ.

**ಮೊಹರೆಯಕೊಳ** (ನಾ). ಒಂದು ಕೊಳದ ಹೆಸರು : ಉತ್ತರಸ್ಯನ್ದಿಶಿ ರಜಪನ್ತ ಅನ್ತೆ ಬನ್ದು ಮೊಹರೆಯಕೊಳ (ಎಕ. XVI. ತಿಕಟೂ. ೦೯೦-೬೦ ; 900). [ಮೊಹರೆ, + ಕೊಳ್ಳ]

**ಮೊಹರ್ಚು** 'ಮೋರ್ಚೆ' ನೋ.

**ಮೊಹರ್ಚೆ** 'ಮೋರ್ಚೆ' ನೋ.

**ಮೊಹಲ್ಲ** 'ಮೊಹಲ್ಲಾ' ನೋ.

**ಮೊಹಲ್ಲಾ**, ಮೊಹಲ್ಲ, ಮೊಹಲ್ಲೆ (ನಾ). ಊರಿನ ಒಂದು ಭಾಗ : ಬಡಾವಣೆ ; ಹರಮ : ಪಟ್ಟಣವನ್ನು ಮೊಹಲ್ಲಾಗಳಾಗಿ ಭಾಗಮಾಡಿ . . . ಅಧಿಕಾರಿಯನ್ನು ನೇಮಿಸಿದ್ದರು (ಇತ್ಯಾಂಸಂ. ೯೦); ನರಸಿಂಹರಾಯು ಠೋರಿಯನೂ ಕೂಡ ದಾಕ್ಷಿಣೀಯರ ಮೊಹಲ್ಲಾದಲ್ಲಿ ಒಂದು ಅಖಾಡವನ್ನು ತೆರೆದನು (ಘಾರಾತಿ. ೧೬೦). **ಮೊಹಲ್ಲ** : ಒಂದೊಂದು ಜಾತಿಗೂ ಪ್ರತ್ಯೇಕ ಅಗ್ರಹಾರಗಳೂ ಮೊಹಲ್ಲಗಳೂ ಏರ್ಪಟ್ಟಿರುವುದನ್ನು ಇಂದಿಗೂ ನೋಡಬಹುದು (ಶಿಕ್ಷಇ. ೬೨). **ಮೊಹಲ್ಲೆ** : ನಮ್ಮ ಮೊಹಲ್ಲೆಯಲ್ಲಿ ಒಂದು ಕಡೆ ಇವತ್ತು ಆಟವಾಡುತ್ತಾರೆ ಎಂತ ಕೇಳಿದೆ (ಕಮಕ. ೦೬೦).

[← ಅರ. ಮಹಲ್ಲಾ; ಹಿಂ. ಮುಹಲ್ಲಾ; ಮರಾ. ಮೊಹಲ್ಲಾ]

**ಮೊಹಲ್ಲೆ** 'ಮೊಹಲ್ಲಾ' ನೋ.

**ಮೊಹಸಲೆ**, ಮೋಹಸಲೆ (ನಾ). ಒಬ್ಬ ವ್ಯಕ್ತಿಯು ತಪ್ಪಿಸಿಕೊಂಡು ಹೋಗದಂತೆ ಹಾಕುವ ನಿರ್ಬಂಧ ಅಥವಾ ಒಬ್ಬ ವ್ಯಕ್ತಿಯು ಕೊಡಬೇಕಾದ ಹಣದ ವಸೂಲಿಗಾಗಿ ಅವನ ಮೇಲೆ ವಿಧಿಸಲಾಗುವ ನಿರ್ಬಂಧ: (*). **ಮೋಹಸಲೆ** : ಸಾಗುವಳಿ ಸಹ ಮಾಡತಕ್ಕದ್ದಕ್ಕೆ ಶೇಕದಾರ ಗೌಡ ಶ್ಯಾನುಭೋಗರಿಗೆ ಸಹ ಮೋಹಸಲೆ ಮಾಡಿ (ಮಹಾಮಂ. II. ೬೪). 'ಮಹಸೂಲು' ಪರಾ.

[ ← ಅರ. ಮುಹಸ್ಸಿಲ್ = ಕಂದಾಯ ವಸೂಲುಮಾಡುವವನು ; ಹಿಂ. ಮುಹಸಿಲ್ = ಕಂದಾಯ ವಸೂಲುಮಾಡುವವನು]

**ಮೊಹಿಮ್ಮು**, ಮೋಹಿಂ, ಮೋಹಿಮು, ಮೋಹೀಮ್ (ನಾ). ದಾಳಿ ; ಮುತ್ತಿಗೆ ; ಆಕ್ರಮಣ : ತರುವಾಯಾ ಯಿಾ ಮೊಹಿಮ್ಮು ಮೂರುವರುಷ ಪಟ್ಟಣದ ಖಜಾನೆಹಣವೆಲ್ಲಾ ವೆಚ್ಚವಾಗಿ (ಕೃಪರ. ೩೩). **ಮೋಹಿಂ** : ಹನುಮಂತರಾವ್‌ರಣಸವರೆ ಎಂಬ ಒಬ್ಬ ಸವಾರನು . . . ಅನೇಕ ಮೋಹಿಂಗಳ ಸಂಗಡ ಹೋಗಿ ಒಂದೊಂದರಲ್ಲಿಯೂ ಖಾಡಾಖಾಡಿ ಲಡಾಯಿ ಮಾಡಿ . . . ತುಕಡಿದಾರ ಪದವಿಗೆ ಬಂದಿದ್ದನು (ಮುಸುಗ. ೦೩): ಈ ಜನರು ಈ ಬಗೆಯಾದ ಮೋಹಿಂ ಹೊರಡುವುದಕ್ಕೆ ಕೆಲವು ದಿವಸ ಮುಂಚೆ ಇನ್ನೊಂದು ಕೆಲಸವನ್ನು ಮಾಡುತ್ತಿದ್ದರು (ಪತಮುಂ. ೯೬). **ಮೋಹಿಮು** : ಮೂರುಮಂದಿ ಪಾದುಷಹರ ಸೈನ್ಯವೂ ಕರ್ನಾಟಕರಾಜ್ಯದ ಮೇಲೆ ಮೋಹಿಮು ಹೊರಡಲಿರುವ ಸಮಾಚಾರವನ್ನು . . . ಬರೆಸಿ ಕಳುಹಿಸಿದನು (ಬಿಕ್ಕರು. ೬). **ಮೋಹೀಮ್** : ಜ್ಯೇಷ್ಠಮಾಸದಲ್ಲಿ ಮೋಹೀಮ್ ಹೊರಡುವ ವೇಳೆಯಲ್ಲಿ ಶ್ರೀರಂಗಪಟ್ಟಣದಲ್ಲಿ ಗಣನೆಮಾಡಿದ ಒಟ್ಟು ಫೌಜಿನ ಜನಗಳು ೨,೨೬,೦೦೦ ಕ್ಕೆ ವಿವರ (ಮಹಾಮಂ. I. ೨೨೬).

[← ಅರ. ಹಿಂ. ಮುಹಿಮ್; ಮರಾ. ಮೋಹಿಮ್, ಮೋಹೀಮ್]

**ಮೊಳ** 'ಮೊಟಿ' ನೋ.

**ಮೊಳಕಯ್** 'ಮೊಟಿಕೆಯ್' ನೋ.

**ಮೊಳಕಾಲ್** 'ಮೊಟಿಕಾಲ್' ನೋ.

**ಮೊಳಕಾಲು** 'ಮೊಟಿಕಾಲ್' ನೋ.

**ಮೊಳಕೆ** (ನಾ). ೧. ಬೀಜದಿಂದ ಹೊರಬರುವ ಗಿಡದ ಮೊದಲನೆಯ ಸುಳಿ ; ಅಂಕುರ : ಕುಡಿ : "ಮೊಳಕೆಯೆನಲ್ಕಂಕುರ" (ಶಾರಶಿ. ೩೭) ; ಪಾಂಚಾಲಕನ ಭೀತಿಯ ಮೊಳಕೆಯುರಿದುದು (ಕುವ್ಯಾಉ. ೦೬-೪) ;

ಮೊಳಕೆ ಮೂಡದ ಬೀಜ, ಜ್ವಾಲೆ ಏರಿದ ತೇಜ (ಅರಳು. ೧೫೨-೧೦). ೨. (ಅಲಂ) ಪ್ರಾರಂಭ : ಕ್ರಾಂತಿಯ ಮೊಳಕೆಯು ತುಳಿಯಲೇಬೇಕು (ಕಾಂತೋ. ೧೩-೯).

**ಮೊಳಕೆಕಟ್ಟಿದ ಕಾಳು** = ಹೆಸರು ಮುಂತಾದ ಕಾಳುಗಳನ್ನು ನೆನೆಸಿ, ನಂತರ ಬಟ್ಟೆಯಲ್ಲಿ ಕಟ್ಟಿ ಮೊಳಕೆ ಬರಿಸಿರುವ ಕಾಳು : ಮೊಳಕೆಕಟ್ಟಿದ ಕಾಳಿನಲ್ಲಿ ಮಾಡಿದ ಪದಾರ್ಥಗಳು ದೇಹಕ್ಕೆ ಪುಷ್ಟಿಕರ (ಕಾಂ).

[ಮೊಳೆ$_1$ + — ಕೆ./ ತುಳು. ಮೊಳಿಕೆ ; ತೆಲು. ಮೊಲಕ, ಮೊಲ್ಕ, ಮೊಕ್ಕ]

**ಮೊಳಕೆಗಾಣು** (ಕ್ರಿ). ಅಂಕುರಿಸು ; ಕುಡಿಯೊಡೆ : ಅಜ್ಜ ಬಿತ್ತಿದ ಬೀಜ ಮೊಳಕೆಗಂಡಿವೆ ಈಗ (ನಂಪು. ೨೨-೧೩). [ಮೊಳಕೆ + ಕಾಣು (< ಕಾಣ್)]

**ಮೊಳಕ್ಕೆ** 'ಮೊಟಕೆಯುರ್' ನೋ.

**ಮೊಳಗಾಡು** (ಕ್ರಿ). ಧ್ವನಿಯು ಹೊಮ್ಮು : ದೇವಕುವರಂ ಮುರಳಿ ಬಹನೆಂಬ ಗೆಲುಪಿಂದ ದೇವದೂತರೆ ಬಾರಿಸುವರೊ ಮಂಗಲವಾದ್ಯವೆನಲು ಮುಂಬಕ್ಕಿಗಳ ಮೇಳವಂ ಮೊಳಗಾಡೆ (ಗೂರ್ಜ್ಯ. ೧-೯).

[ಮೊಳಗು$_2$ (< ಮೊಟಗು$_2$) + ಆಡು$_1$]

**ಮೊಳಗಿಸು** 'ಮೊಟಗಿಸು' ನೋ.

**ಮೊಳಗು$_1$** 'ಮೊಟಗು$_1$' ನೋ.

**ಮೊಳಗು$_2$** 'ಮೊಟಗು$_2$' ನೋ.

**ಮೊಳಗು$_3$** 'ಮೊಟಗು$_3$' ನೋ.

**ಮೊಳವು** (ನಾ). ಒಂದು ಬಗೆಯ ಬೆಲೆಬಾಳುವ ಹರಳು (?) : ಮಾರಿದಡಂ ಹೊಂಗೆ ಹಾಗ ಮೊಳವಿನ ಕಲ್ಲಿಗೆ ವೀಸವೊಂದು ಉಪ್ಪಿನ ಹೆಡಗೆಗೆ ವೊಂದುಸವುಪ್ಪು (ಶಾಸ. XV, ೨೦೦-೯೬ ; 1196). [?]

**ಮೊಳಸಂದು, ಮೊಣಸಂದು** (ನಾ). ಮೊಳಕ್ಕೆ : ಅಗಲವಾದ ಬಿಚು ಹಣೆಯ ಮನುಷ್ಯನೊಬ್ಬ ಮಂಡಿಯ ಮೇಲೆ ಮೊಳಸಂದೂರಿಕೊಂಡು ಕುಳಿತಿದ್ದನು (ಕೃಪರು. ೨೩೦). **ಮೊಣಸಂದು** : ಎಡಗೈ ಮೇಲೆ ಬಲದೋಳ ಮೊಣಸಂದನ್ನೂರಿಕೊಂಡು, ಬಲಗೈ ಮೇಲೆ ಕೆನ್ನೆಯೂರಗಿಸಿಕೊಂಡು ಮುಂದುಕಿ ಅವನೆದುರಿಗೆ ಸಿಂತುಕೊಂಡಳು (ಕೃಪರು. ೨೮೩)

[ಮೊಳ (< ಮೊಟ) + ಸಂದು$_2$]

**ಮೊಳಸು$_1$** (ನಾ). ೧. ಮೊಳಕೆಯೊಡೆಯುವಿಕೆ; ಅಂಕುರಿಸುವಿಕೆ : (ಕ). ೨. ಗಂಟಲಿನಲ್ಲಿ ಏಳುವ, ಮುಳ್ಳಿನಂತೆ ಚೂಪಾಗಿರುವ ಗುಳ್ಳೆ : ಅಂತಕಗಾಯ್ತುಪಥ್ಯವು ಅರಗಲಾಜದೆ ಮೃತ್ಯುದೇವಿಗೆ ಮೊಳಸುಗಳು ಮೊಳೆಯೆ . . . ಅಡಗುಬೋನದಿ ಮರುಳುಪಡೆಗಳು ಉಂಡು ಹರಸಿದವೆಂದು ರಾಘವನ (ಕೌಶಲ. ೨೨-೯೯). [ಮೊಳೆ$_1$ + — ಸು$_3$]

**ಮೊಳಸು$_2$** (ನಾ). ೧. ಒಂದು ಬಗೆಯ ವಾದ್ಯ (?) : ಪಟಿವದ ತಿವಳಿಸು ಜುಂಕದ ಮೊಳಸಿನ ಜೇಕಿರದ ಸಿಪಿಜಿ ಸಿಪ್ಪಿನ ಲಯದಿಂದೆ ಬಲದೆ ಕುಣಿವರ್ ಕೆಲಬರ್ (ಅತಿಪು. ೩-೩೦). ೨. ಮಲ್ಲಯುದ್ಧದ ಒಂದು ಚಲನೆ (?) : ಮೇಲ್ಮುಳಿ ಮೊಳಸು [ಪಾಠಾಂ. ಗು, ಹು]ಗಳ ಮಂಡಿಗಳ . . . ಜೋಬ್ಬೆಗಳೆಯೊಳವರಿರ್ವರಿಗೆ ಸಮಜೋಳಿಗಳದಾರೆಂದ (ಕೃಷ್ಣಾ.ಕಾ. ೨೦-೬). [?]

**ಮೊಳಿಯನೂರ್** (ನಾ). ಒಂದು ಸ್ಥಳದ ಹೆಸರು : ಮೊಳಿಯನೂರ ದೇವಯ್ಯನುಂ ಪಂಪಯ್ಯನುಂ . . . ಧರ್ಮ್ಮರಾಶಿಭಟ್ಟಾರರ ಕಾಲಂ ಕರ್ಚ್ಚಿ ಕೊಟ್ಟ ಸ್ಥಿತಿ ಯಾವುದೆನ್ನೊಡೆ (ಎಕ. XI, ಚಿತ್ರದು. ೭೬-೨೦ ; 937).

[ ? + ಊರ್]

**ಮೊಳೆ$_1$** (ಕ್ರಿ). ೧. ಚಿಗುರು ; ಕೊನರು ; ಅಂಕುರಿಸು : ಮೊಳೆ—ಪ್ರರೋಹಕ್ರಿಯಾಯಾಂ (ಅಂಕುರಿಸು), ಅಂಕುರೇ ಚ" (ಶಮದ) ; ಪೊಸತೆ ಮೊಳೆತ ಧಾನ್ಯಂಗಳನಾ ಧರಣೀರಂ ಕೆವಚಿಸಿದಂ (ಆದಿಪು. ೦೩-೬) ; ಬೀಜವಿಲ್ಲದೆ ಮೊಳೆತ ಸಸಿಯುನಾವಂ ಬಲ್ಲಂ (ಸಿದ್ಧರಾ. ೦-೯೭) ; ಹುರಿದು ಬಿತ್ತಿದ ಬೀಜ ಮೊಳೆವುದೆ (ಶರತ. ೨-೩೩). ೨. (ಉಗುರು, ಕೂದಲು ಮುಂತಾದುವು) ಮೂಡು; ಹುಟ್ಟು; ಕಾಣಿಸಿಕೊಳ್ಳು : ಪೊಳೆವಿಂದುಗಳ್ಕೆ ಬೆಂಗುಡೆ ಮೊಳೆದುವು ಬೆನ್ನಿಂದಮೆರ್ದೆಗೆ ಕದಿರ್ದುಸಿಜುಗಲ್ ತೊಳಗಿದುವು ಮದನಶಿಖಿವಿಹ್ವಳಹೃದಯವ್ಯಸ್ತಹಸ್ತನಖದೀಧಿತಿಗಳ್ (ಜಾದಂಪು. ೯೦೬); ಸತ್ಯಹರಿಶ್ಚಂದ್ರರಾಯನ ವಾಕ್ಯದೊಳು ಹುಸಿಗಳು ಮೊಳೆಯುವು (ಹರಿಶ. ೨-೧೯); ಬೆಗಡು ಮೊಳೆತುದು ಭೀಷ್ಮ ವಿದುರಾದಿಗಳ ಮನದಲಿ (ಕುಂಭಕ. ೦೮-೩೯); ಅವನಿಗೆ ಮೀಸೆ ಕೂಡ ಮೊಳೆತಿಲ್ಲ (ಆಂಹೂ. ೨೦).

[ದೇ.II ತಮಿ. ಮುಳೈ; ಮಲ. ಮುಳೆ; ತುಳು. ಮುಳಿ, ಮುಳೆ, ಮೊಳಿ, ಮೊಳೆ; ತೆಲು. ಮೊಲುಚು, ಮೊಲುಚು, ಮೊಲ್ಚು]

**ಮೊಳೆ$_2$** (ನಾ). ೧. ಕುಡಿ; ಮೊಳಕೆ : "ಅಗೆಯೆಂದುಂ ಮೊಳೆಯೆಂದುಂ ಅಂಕುರಂ" (ಶಬ್ದಸಾ. ೩೩-೦೯೩); ಶುದ್ಧಗರ್ಭಗೃಹದೊಳ್ ತೇಜೋನಿಲಯಂ ಬೆಳಗಿದನಜೀವಿನ ಬೆಳಗಿನ ಮೊಳೆ ಮೊಳೆತು ಬೆಳೆವುದೊಂದಚ್ಚರಿಯೆ! (ಆದಿಪು. ೭-೩೩); ವಿರಕ್ತಿ ಬೀಡಾಗಿ ಭಕ್ತಿ ಮೊಳೆಯಾಗಿ . . . ನಿಮ್ಮ ಭಕ್ತನ ಮನೆಯಂಗಳ ವಾರಣಾಸಿಯಿಂದಧಿಕ ನೋಡಾ (ಬಸವದೇ. ೩, ೭೦-೦೭೩); ಬಿಲ್ಲಿನ ಮೋಗು ಕೆನ್ನೀರ್ಜಲ ಪೆಣ ಬಿತ್ತು ನೆಣ ಮೊಳೆಯಾಗೆ ರಣಭೂಮಿ. . . ಮೊಳೆತಿದುದು (ಕುಮಾರರಾಂ. ೧೨-೭೩); ಬೆಳೆಯು ಗುಣ ಮೊಳೆಯಲ್ಲಿ ಕಾಣುವುದು (ವಚನಸಾ. ೩೯). ೨. ಮೂಲವ್ಯಾಧಿಯಲ್ಲಿ ಗುದಪ್ರದೇಶದಲ್ಲಿ ಮೊಳಕೆಯಾಕಾರದಲ್ಲಿ ಕಾಣಿಸಿಕೊಳ್ಳುವ ದುರ್ಮಾಂಸ : ಚಿತ್ರಕವುಂ ಗೋಜಲದೊಳ್ ಕುಡಿದಳೆಗೂಟಾಣೆ ಕೆಲವು ದಿವಸಕ್ಕೆ ಕಿಡುಗುಮರುಸೆಯ ಮೊಳೆಗಳ್ (ಕರ್ಣಾಟಕ. ೯-೦೯೩); ಮೂಲವ್ಯಾಧಿಗೆ :—ಭೂಚಕ್ರಗೆಡ್ಡೆ . . . ಹೊಗೆಯನ್ನು ಆಸನಕ್ಕೆ ಹಿಡಿದರೆ ಮೊಳೆ ಕರಗಿ ಹೋಗುವುದು (ಬಿವೃತ. ೦೭೭). ೩. ಮೊಡವೆ ಮೊದಲಾದ ಗುಳ್ಳೆಗಳ ತುದಿ : ಮೊಡವೆಯ ಮೊಳೆಯನೊತ್ತುತ ಕಕ್ಷಸೋಸಿಮರ್ದನ ಸೊಗಡ ವಾಸಿಸುತ . . . ಪುಷ್ಟಿಣಿಯರೊಪ್ಪಿದರು (ಮೋಹನ. ೧೬-೩೨). ೪. (ಪಟ ಮುಂತಾದುವುಗಳನ್ನು ನೇತುಹಾಕಲು ಬಳಸುವ) ಒಂದು ತುದಿ ಅಗಲವಾಗಿಯೂ ಮತ್ತೊಂದು ತುದಿ ಚೂಪಾಗಿಯೂ ಇರುವ ಲೋಹದ ಉಪಕರಣ; ಆಣಿ : ನಡುವಮೊಳೆಯುಂ (ಸಮಚ. ೧೨-೩೪); ಬೆಟ್ಟದ ಬೆಳ್ಳಿಯ ಮೊಳೆಗಳೆನಲು ತೊಳಗಿ ಬೆಳಗಿದುವು ತಾರಗೆಗಳ್ (ಜಗಂ. ೦೭-೯೯); ಮಿಳಿ ನೊಗನು ಕೀಲಚ್ಚು ಕೂಬರ ಬಳೆ ಮೊಳೆಯನಾರ್ಬ್ಬದು ಹರೆಯನು ಬಳಿದು ಹೂಡಿದರು (ಕೂರಂಬ. ೩-೭-೩). ೫. ಗಾಡಿಯ ಚಕ್ರಕ್ಕೆ ಸಿಕ್ಕಿಸುವ ಗೂಟ; ಕಡಾಣಿ : ಹರಿಯ ಗಾಲಿಯು ನಾಭಿ ಮೂಜಿಪ್ಪರಿಯ ಚಾತುರ್ಮಾಸಗಳು . . . ವಿದ್ವತ್ಸರವು ವತ್ಸರವೆನಿಪ ಮೊಳೆಯಾಯ್ತು (ಕುಮಾರ. ೭-೭೩). ೬. ನಾಣ್ಯ ಮುಂತಾದ ಲೋಹವಸ್ತುಗಳ ಮೇಲೆ ಅಕ್ಷರಗಳನ್ನು ಕೊರೆಯುವ ಚೂಪಾದ ಸಾಧನ : ಪೃಥ್ವಿಯೊಂಬುದು ಕರ್ತಾರನ ಕಮ್ಮಟ ಅಚ್ಚಿನ ಮೊಳೆ ಬಾಣಸದ ಮನೆ (ಅವಕಂ. ೨೨೯-೦೦೦೩); ಚಿನ್ನಗೆಯ್ಯದ ಸವಿರಂಗಳುಂ ಕೂಡಿ ಅಚ್ಚಿನ ಮೊಳೆಯಲ್ಲಿ ಕೊಟ್ಟು ದಳಕ್ಕೆ ಪೀಸ ೨ ಕಾಣ ೨ (ಎಕ. XIV, ೨೭೩-೩೦; 1173). ೭. ಮುದ್ರಣ ಕಾರ್ಯದಲ್ಲಿ ಉಪಯೋಗಿಸುವ ಅಕ್ಷರಗಳ ಗುರುತಿರುವ ಸಾಧನ; ಟೈಪು : ಮುದ್ರಣಾಕ್ಷರಯೋಜಕನು ಮೊದಲು. . . ಅಕ್ಷರದ ಮೊಳೆಗಳು ಯಾವ ಯಾವ ಅಂಕಣಗಳಲ್ಲಿವೆ ಎಂಬುದನ್ನು ಮನದಟ್ಟು ಮಾಡಿಕೊಳ್ಳಬೇಕು (ಮುದ್ರಣ. ೨೩). ೮. (ಅಲಂ) ಅಭಿವ್ಯಕ್ತಿ; ತೋರಿಕೆ : ಕೊಡುಪಬಿದು ವರವಲ್ಲದಿದ್ದರೆ ನುಡಿಗೆ ಮೊಳೆ ಹೊಮ್ಮುವರೆ ನಿಮ್ಮಾಯ ತೊಡಕನೊಲುವವನಲ್ಲ (ಕುಮಾರದ್ರೋ. ೯. ೦-೯೦).

[< ಮೊಳೆ$_1$./ ತಮಿ. ಮುಳೈ; ಮಲ. ಮುಳ; ತುಳು. ಮುಳೆ, ಮೊಳೆ; ತೆಲು. ಮೊಲ, ಮೊಲಚು]

**ಮೊಳೆಗತ್ತಿ** (ನಾ). ಮೊಳೆಯಾಕಾರದ ಒಂದು ಬಗೆಯ ಖಡ್ಗ : ಮೊಳೆಗತ್ತಿ ಕೋಲ್ಗತ್ತಿ ಕೊಂಕಣ ಬಿಡೆಗತ್ತಿ ಸೆಳೆಗತ್ತಿ (ರೇವಾಂಕೃ. ೩-೨೦೦). [ಮೊಳ್$_2$ + ಕತ್ತಿ]

**ಮೊಳೆಗದ** (ನಾ). ಲೋಹದ ಚೂಪುಗೂಟಗಳನ್ನು ಆಳವಡಿಸಿರುವ ಕದ ; ಗುಬ್ಬಿಕದ : ಕಾರ್ಯಕುಶಲದಿಂ ಕೋಟೆ ಕೊತ್ತಳ . . . ದಿಡ್ಡಿ ಮೊಳೆಗದಂಗಳ್ನಿರ್ಮಿತಮಾಗಲೊಡನೆ (ಹಾಲಾಸ್ಯ. ೦-೯-೬೩ ಪ). [ಮೊಳ್$_2$ + ಕದ (<ಕದವು$_1$)]

**ಮೊಳೆಗಱಿಕೆ** (ನಾ). ಆಗ ತಾನೆ ಮೂಡುತ್ತಿರುವ ಹುಲ್ಲು; ಎಳೆ ಕರಿಕೆ: ಸುಳಿವಾಳೆಲೆಯ ಬಣ್ಣ ಮೊಳೆಗಱಿಕೆವಣ್ಣ ಪೊಂಬಣ್ಣ ಮೆಯ್ಯಾಬಲೆಯರ್ ಸುಳಿಯೆ (ಚಂದ್ರ. ೩೬-೪೭). [ಮೊಳ್$_2$ + ಕಱಿಕೆ$_1$ (< ಕಱುಂಕೆ)]

**ಮೊಳೆಗಾಣಿಸು** (ಕ್ರಿ). (ಅಲಂ) ವ್ಯಕ್ತಪಡಿಸು ; ಪ್ರಕಟಿಸು : ಕೆಳದಿಯರ ನುಡಿಗೆ ನಸುನಗುತ ನಿಜಭಾವಮಂ ಮೊಳೆಗಾಣಿಸದೆ ಪುಸಿಗೆ ಸರಸವಾಡುತ . . . ತಿರುಗಿದಳ್ಳನದಿಂದೆ ಮನೆಗೆ ಚಂಪಕಮಾಲಿನಿ (ಕೃ.ಜಿ.ಚಾ. ೩೦-೩೨). [ಮೊಳ್$_2$ + ಕಾಣಿಸು]

**ಮೊಳೆಗೊಂಬು** (ನಾ). ಆಗ ತಾನೆ ಹೊಮ್ಮಿದ ಕೊಂಬೆ ; ಎಳೆಯ ರೆಂಬೆ : ಸುರಕುಜದ ಮೊಳೆಗೊಂಬುಗಳಿಗೆ ಚಿಂತಾರತ್ನಪರಿಖಚಿತವಾದ ಮಿಸುನಿಯ ಕಟ್ಟನಿಡುವೊಂದು ಪರಿಯಿಂದ ರಂಗುವಡೆದಿರ್ದ ಮಾಣಿಕ ದುಂಗುರಂಗಳಂ ಬೆರಲೊಳಿಟ್ಟು (ಸೌಂದರ್ಯ. ೪-೨೪). [ಮೊಳ್$_1$ + ಕೊಂಬು$_1$]

**ಮೊಳೆಗೊಳ್ಳು** (ಕ್ರಿ). ನಿಮಿರು ; ನೆಟ್ಟಗಾಗು : ಮೋಹದಿನಿಯರ ಮೆಯ್ಯ ಸೋಂಕಿನಿಂ ಮೊಳೆಗೊಂಡ ಪುಳಕಾಳಿ (ಮಲ್ಲಿ.ಶಿ. ೪-೦೨). [ಮೊಳ್$_2$ + ಕೊಳ್ಳು$_1$ (< ಕೊಳ್$_1$)]

**ಮೊಳೆಗೋಲು** (ನಾ). ಚಾವಟಿ ; ಸೆಳೆಗೋಲು (?) : ಮಣಿರಥಂಗಳನು ಶೃಂಗರಿಸಿ ದಿವ್ಯಾಶ್ವಂಗಳನು ಪೂಡಿ ಮೊಳೆಗೋಲನಾಂತು ವಾಗೆಯ ಪಿಡಿದು (ಪವಮೋ. ೩೦-೬). [ಮೊಳ್$_1$ + ಕೋಲು$_1$ (< ಕೋಲ್$_1$)]

**ಮೊಳೆಜವ್ವನ** (ನಾ). ಅಂಕುರಿಸುತ್ತಿರುವ ಪ್ರಾಯ ; ಎಳೆಪ್ರಾಯ : ಗೊಜ್ಜಿಗೆಗೆಳಜವ್ವನಂ, ಮಲ್ಲಿಗೆಗೆ ಮೊಳೆಜವ್ವನಂ, ಸುರಯಿಗೆ ನೆರೆಜವ್ವನಂ . . . ಒದವಿತ್ತು (ರಾಜಶೇಖ. ೦೦೪-೬೯). [ಮೊಳ್$_1$ + ಜವ್ವನ]

**ಮೊಳೆದೊಡಕು** (ನಾ). ಒಂದು ಬಗೆಯ ಬಾಣ : ಒಳಿಕು ಕವಲಂಬು ಬೋಳೆವಿದಿರಲೆ ಮಿಟ್ಟೆಯಾ ಮೊಳೆದೊಡಕು ನಾರಾಚ ಕಣೆಗೆಲೆಲೆ ಸಿಲುಕುಬಳೆ . . . ಸವಿವಾಯನೆಂಬ ನಾನಾಸರಳನು ಸೆಳೆದು (ಸೋಮಶೇ. ೩-೨೬). [ ? ]

**ಮೊಳೆದೋರು** 'ಮೊಳೆದೋಱು' ನೋ.

**ಮೊಳೆದೋಱಿಸು** (ಕ್ರಿ). (ಅಲಂ) ವ್ಯಕ್ತಪಡಿಸು ; ತೋರಿಸು : ಮುನ್ನೊಂದು ಹಳೆಯಾನೆಯ ಮೆಟ್ಟಿ ಸೀಳಿ ತೊಳೆಯದೆ ತೊವಲ ವಸ್ತ್ರ ವನುಟ್ಟು ಧೈರ್ಯವ ಮೊಳೆದೋಱಿಸು (ಸೋಮಶೇ. ೩೯-೩೦). [ಮೊಳೆದೋಱು + — ಇಸು$_3$]

**ಮೊಳೆದೋಱು, ಮೊಳೆದೋರು** (ಕ್ರಿ). ೧. ಮೊಳಕೆಯೊಡೆ ; ಅಂಕುರಿಸು : ಸಂಗದಿಂದಲ್ಲದೆ ಬೀಜ ಮೊಳೆದೋಱದು (ಬಸವಾದಿ. ವ. ೬೯-೦೭) ; ಮೊಳೆದೋಱಿ ಮುಗ್ಗದ ಮುನ್ನ . . . ಬಳಸುವುದಖಿಳವಸ್ತುವನು (ಹರಿಹ. ೬-೦೩). ೨. ಕಾಣಿಸಿಕೊಳ್ಳು ; ಮೂಡು ; ತೋರು : ಆದಿ ಅನಾದಿ ಇಲ್ಲದಂದು ನಾದ ಬಿಂದು ಕಳೆ ಮೊಳೆದೋಱದಂದು . . . ಸೌರಾಷ್ಟ್ರಸೋಮೇಶ್ವರಲಿಂಗವದೆ ಕಂಡಾ (ಆದಯ. ೦-೨) ; ಮೊಳೆದೋಱುತ ಪುಟ್ಟುತಿಹೆಳೆಮಿಸೆಗಳ ಕಟ್ಟಿಱಕವ ಚೆಲುವನ ಕಂಡು ಮೈ ಜುಮ್ಮು ವಟ್ಟಿತು (ಕಂಸವ. ೯-೦೦೩). **ಮೊಳೆದೋರು** : ೨. ಹೊಸಗನಸನು ಮೊಳೆದೋರುತ್ತ ಪಾವನಪವನನು ಬರುತಿಹನು (ಚಾಂಕಿಶ. ೨೩-೦೬). [ಮೊಳ್$_2$ + ತೋಱು]

**ಮೊಳೆನಗೆ** (ನಾ). ಮುಗುಳುನಗೆ ; ಮಂದಹಾಸ : ಮೊಳೆನಗೆಯಿಂದ ಹರಸಿದಳವನಿಜೇಶ್ವರನ (ಕೂರಿಶಾ. ೨-೩-೯೩) ; ಸಖಿ . . . ಮೊಳೆನಗೆ ಮಿನುಗೆ ಹಾಸ್ಯವ ನುಡಿದಾಕೆಯ ತಲೆಗುತ್ತಿಸಿದಳು (ಕಂಸವ. ೬-೦೬೦) ; ಕುಡಿನೋಟ ಬೀರುತ ಮೊಳೆನಗೆ ತೋರುತ ಬಳಿನಿಂದು ಮನಸೆಳೆದವಳು (ಇಂಚಾಶ. ೦೬೬-೨೭). [ಮೊಳ್$_1$ + ನಗೆ]

**ಮೊಳೆನುಡಿ** (ನಾ). ಚಮತ್ಕಾರದ ಮಾತು ; ಹದಿರು : ಸ್ಮೇರಾಸ್ಯಂ ಮೊಳೆನುಡಿ ಗತಸೌರಂಭಂ ಸುರತಸಂಭ್ರಮಂ ಜಾರೆಯರಾ (ಗಂಕ. ೯-೬೯). [ಮೊಳ್$_1$ + ನುಡಿ$_2$]

**ಮೊಳೆವೊಲೆ** (ನಾ). ಆಗ ತಾನೆ ಮೂಡುತ್ತಿರುವ ಸ್ತನ : ಮೊಳೆ ಮೊಲೆಯರು . . . ನಳಿನಮೊಗ್ಗೆಯ ಮೊಲೆಯವರು (ಅಂಬಿಕ. ೩-೦೦೨) : ಮೊಳೆವೊಲೆಯೊಳೆಸೆವ ಸಸಿವದನದೊಳ್ . . . ಒಪ್ಪಿರ್ದರೆಳವೆಣ್ಗಳ್ (ಕೃ.ಜಿ.ಚಾ. ೬-೨೭). [ಮೊಳ್$_1$ + ಮೊಲೆ$_1$]

**ಮೊಳೆಯಲ್ಲ** (ನಾ). ಎಳೆಯ ಶುಂಠಿ : ಮೊಳೆಯಲ್ಲಮನುಪ್ಪಿನೊಳಂ ಪುಳಿಯೊಳಮಲೆದಿಟ್ಟು (ಲೋಕೋಪ. ೬-೦೬); ಬೆಟಸು ಮಾಗುಳವೇರ್ಮೊಳೆಯಲ್ಲವೇಲೆ . . . ಆದಿಪಮಾದುಪ್ಪಿನ ಕಾಯ್ಗಳಂ ಮಂಗವಾಗಿಪ್ಪವನಿಕ್ಕಿದ ಸಬ್ಬಿ ಪತ್ರದೊಳ್ (ಲೀಲಾವ. ೩-೬೩). [ಮೊಳ್$_2$ + ಅಲ್ಲ$_1$]

**ಮೊಳೆಯಿಸು, ಮೊಳೆಸು** (ಕ್ರಿ). ೧. ಕುಡಿಯಿಡುವಂತೆ ಮಾಡು ; ಅಂಕುರಿಸುವಂತೆ ಮಾಡು. ೨. ಉಂಟುಮಾಡು ; ಹುಟ್ಟಿಸು : ಆಲೋಚನೆಯೊಂದನ್ನು ಮೊಳೆಯಿಸಿದನು (ಕವಿಕ. ೪೬). **ಮೊಳೆಸು** : ೧. ಕ್ಲೇಶಬೀಜವ ಬಿತ್ತಿ ಮೊಳೆಸಿದ ಘಾಸಿಯಾಗದ ಕಪಿಗಳಿಲ್ಲವನಿಪನ ಪಡೆಯೊಳಗೆ (ಕಾಶಿಂರಾ. ೨೯-೬೨) ; ನೀರು ಬಿದ್ದು ಹದವಾದ ನೆಲವು ತನ್ನಲ್ಲಿ ಬಿದ್ದ ಬೀಜವನ್ನು ಮೊಳೆಸುವಂತೆ ಕರ್ಮವು ಮನುಷ್ಯನ ಪುನರ್ಜನ್ಮವು ಮೊಳೆಯುವಂತೆ ಮಾಡುತ್ತದೆ (ಪತಚಾ. ೩೩೨). [ಮೊಳ್$_1$ + — ಇಸು$_3$]

**ಮೊಳೆರೋಗ** (ನಾ). ಗುದಪ್ರದೇಶದಲ್ಲಿ ಮೊಳಕೆಯಾಕಾರದ ದುರ್ಮಾಂಸ ಬೆಳೆಯುವ ರೋಗ ; ಮೂಲವ್ಯಾಧಿ : ಮೂಲ ವ್ಯಾಧಿ_ಮೊಳೆರೋಗ_ಇದರಲ್ಲಿ ಎರಡು ವಿಧಗಳುಂಟು (ಬಿಶಿ. ೪೦). [ಮೊಳ್$_2$ + ರೋಗ]

**ಮೊಳೆವಣೆ** (ನಾ). ಆನೆಯ ಹಣೆಗೆ ತೊಡಿಸುವ ಒಂದು ಬಗೆಯ ಅಲಂಕಾರಸಾಧನ : ಆರೆಗಟ್ಟಿಗೆ ಮೊಳೆವಣೆ ಕೂರಂಕುಶ ಸೇರಿ ಬಾಜಿಸುವ ಡೌಡೆಗಳ ಕೂರಾನೆಗಳನೇಱಿ ಮಾವಟಿಗರು ಬಂದರು (ಕುಂಬಾ. ೦೦-೨೭). [ಮೊಳ್$_2$ + ಪಣೆ$_1$]

**ಮೊಳೆವರೆಯ** (ನಾ). = ಮೊಳೆಜವ್ವನ : ನನ್ನ ಮಗಳಿಗೆ ಮೊಳೆವರೆಯದಲಿ ವಿಧವತೆಯನಿತ್ತವನು ಭೂಮಿಯಲಿ ಉಳಿಯಬಲ್ಲನೆ (ಸಾಳ್ವಭಾ. ೨೩-೦೬). [ಮೊಳ್$_1$ + ಪರೆಯ$_2$ (<ಪರಯ)]

**ಮೊಳೆವಲ್, ಮೊಳೆವಲ್ಲು** (ನಾ). ಆಗ ತಾನೆ ಹುಟ್ಟುತ್ತಿರುವ ಹಲ್ಲು ; ಪನೆ: ಎಳೆಯಾನ ಪುಟ್ಟಬಾಯೊಳು ಮೆಲ್ಲಮೆಲ್ಲನೆ ಮೊಳೆವಲ್ಗಳೊಡೆದು ಮೂಡಿದವು (ಮೋಹಶ. ೦೬-೭೦) ; ಮೊಳೆವಲ್ಲುಗಳು ಜೊಲ್ಲು ದಟ್ಟಿತಡಿ ತೊದಲನುಡಿ (ಕೃ.ಜಿ.ಚಾ. ೨೯-೦೬) ; ಮೊಳೆವಲ್ ಶೋಭಿಸೆ ನಿರ್ನಿಮಿತ್ತಹಸಿತಂ ಚೆಲ್ವಾಗೆ (ಚಾರುಂತ. ೦೦೩-೦೭೦). **ಮೊಳೆವಲ್ಲು** ; ಜೀವಂಧರಂ . . . ಕೆಂಬಾಯ ಮೊಳೆವಲ್ಲು ಮಿನುಗೆ ನಗುವ ತೊದಲಿಂಬು ವಡೆಯಲೊಪ್ಪಿದನು (ಜೀವಂಧರ. ೭-೯) ; ಚೆನ್ನಬಸವ . . . ಮೊಳೆವಲ್ಲು ಜೊಲ್ಲುಂ ಪೊಳೆಯೆ ನಸುನಗುತ್ತುಂ ಬಾಲಲೀಲೆಯಂ ತೋಱಿಸಿದನು (ಚಂದ್ರ. ೩-೪೦). [ಮೊಳ್$_1$ + ಪಲ್]

**ಮೊಳೆವಲ್ಲು** 'ಮೊಳೆವಲ್' ನೋ.

**ಮೊಳೆವಿತ್ತು** (ನಾ). ಮೊಳಕೆಯೊಡೆದ ಬೀಜ : ಮೊನ್ನೆ ಬಿತ್ತಿರ್ದ ಮೊಳೆವಿತ್ತನೆತ್ತಿಯೆ ತಂದು ಪನ್ನಗಾಭರಣನ ಮಸಿವನಾಱಿಸುವುದು (ಇಳೆ. ದೇ. ೩೩-೨೦). [ಮೊಳ್$_1$ + ಬಿತ್ತು$_2$ (<ಬಿಟ್ಟು)]

**ಮೊಳೆವುಲ್** (ನಾ). ಅದೇ ತಾನೇ ಚಿಗುರಿದ ಹುಲ್ಲು ; ಎಳೆಯ ಹುಲ್ಲು: ಮೊಳೆವುಲ್ಗಳಿನೀ ಧರಣೀವಿಭಾಗವೊಪ್ಪಿರೆ (ಶಂಶಪಾ. ೬-೨೩) ; ಜಳದ ಗ್ರೀಷ್ಮಹಿಮಂಗಳಲ್ಲಿ ಮೊಳೆವುಲ್ಗಳ್ಕೆಂಗುಳಂಗಳ್ವೆರಂ ಬಳೆಗುಂ (ಶಾಂತಿಪು. ೬-೧೦೨) : ಮೃಗಸಂತತಿ ಗಹ್ವರದಿಂ ಪೊಱಮಟ್ಟು ಮೇಯುತಿವೆ ಮೊಳೆವುಲ್ಲಂ (ಗಂಇ. ೯-೭೩). [ ಮೊಳೆ₁ + ಪುಲ್ ]

**ಮೊಳೆವೊಯ್** (ಕ್ರಿ). ಮೊಳಕೆಯಾಗು ; ಅಂಕುರಿಸು : ಮೊಳೆವೊಯ್ದು [ಪಾಠಾಂ. ಕೊನೆವಾಯ್ದು] ಕಂಗಳವಟ್ಟು ಬೆಳೆದೆಳೆಯ ದರ್ಭೆಯಂ ಕಂಡು (ಪಶಕಾ. ೦೨-೮). [ ಮೊಳೆ₂ + ಪೊಯ್₂ ]

**ಮೊಳೆವೋಗು** (ಕ್ರಿ). ೧. ಚಿಗುರುಬಿಡು : ಕೊನರು ; ಕುಡಿಯಿಡು : ದಾಂಗುಡಿಯಿಟ್ಟುದಿಂಗಡಲ ಬೆಳ್ಪು ಕರಂ ಮೊಳೆವೋದುದಿಂದುಕಾಂತಂಗಳ ಬೆಳ್ಪು ಮೂಡಿದುದು ನೆಯ್ದಿಲ ಬೆಳ್ಪು (ಲೀಲಾವ. ೨-೨೦) ; ಕಂದಿದುದಂ ಮೊಳೆವೋದುದನೆಂದುಂ ಕಟ್ಟಲ್ವೇಡ ಖಾದ್ಯಾದಿಗಳಂ (ಅಕ್ಕ್ರಶಾ. ೭-೩೮) ; ಮೊಳೆವೋದತ್ತಬ್ಜಕಂದಂ ಕೊಳದೊಳೆ (ರಾಜಶೇ. ೬-೨). ೨. ಮೂಡು : ಹುಟ್ಟು ; ಹೊಮ್ಮು : ಆ ದೇವಿಯ ಜಾತ್ರೆಗೆ ಮೊಳೆವೋದೆಳವೆಱೆ . . . ಕೈವೋದಸುಕೆ ಕೋಕಿಲಧ್ವನಿ ಮೂಡವೆಲೆಯುಲಿಯಾಗೆ ಬಂದುದಂದು ಬಸಂತಂ (ಧುಶೋತ. ೦-೩೬). [ ಮೊಳೆ₂ + ಪೋಗು₁ ( < ಪೋ₁ ) ]

**ಮೊಳೆಸು** 'ಮೊಳೆಯಿಸು' ನೋ.

**ಮೊಳೇಟ್ಬೂರ್** (ನಾ). ಒಂದು ಊರಿನ ಹೆಸರು : ಶ್ರೀ × × ಶ್ರೈವರ್ಮನಡಿಗಳು × × ಮೊಳೇಟ್ಬೂರ ಮಹಾ × × ನಕ್ಕೆ ಬಿಟ್ಟ ಸ್ಥಿತಿ (ಎಕ. IV (R), ಕಾಪುರಾ. ೪೦೮-೫ ; ಸು. ೨ ನೆಯ ಶ). [ ? + ಊರ್ ]

**ಮೊಳ್ಗ** 'ಮೊಟ್ಟಿಗ₁' ನೋ.

**ಮೊಳ್ಳೆ** (ನಾ). ೧. ಉಬ್ಬಿಕೊಂಡುದು : ಹೀಗಲ್ಲದೆ ಮೊಳ್ಳೆಯಾಗಿ ದಪ್ಪನಾಗಿ ಕೀವು ರಕ್ತ ಉಳ್ಳದಾಗಿಯಿದ್ದರೆ ಅಂಪು (ಶಾಗಂ೦. ೬೩೦-೦೪). ೨. ಉಬ್ಬಿದ ಹೊಕ್ಕಳು,— ನಾಭಿ : (೬). [ ? ]

**ಮೊಱ**, ಮರ್ಕ, ಮಱ, ಮೊರ (ನಾ). (ಮುಖ್ಯವಾಗಿ) ಕಾಳನ್ನು ಕೇರಿ, ಕೊಟ್ಟಿ ಹಸನುಮಾಡಲು ಬಳಸುವ ಬಿದಿರಿನ ಸಾಧನ ; ಶೂರ್ಪ: ಮೂಱು ಮೊಱ [ಪಾಠಾಂ. ಕಂಚು] ಕೀವಿಡಮೇಧ್ಯಮಂ ಭಕ್ಷಣಂಗೆಯ್ದಿ (ಶಾಪುಂಶಿ. ೦೫೬) ; ಪಱುಗೋಲೊಳ್ ಪಾಯ್ವಂತಿರೆ ತೊಱೆಯಂ ಮೊಱದಿಂದೆ ಪಾಮುಲೇಂ ಬಂದಪುವೇ (ಸಪುಶ. ೦೫-೩೦) ; ಮುತ್ತನೊಗು ವರೆ ಮೊಱನ ತೌಡಿಗೆ (ಕೌಶಿರಾ. ೨೩-೩೦). **ಮರ್ಕ** : ಭಂಗಾರಿಯು . . . ಜೋಳವನ್ನು ಮರದಲ್ಲಿ ಹಾಕಿಕೊಂಡು . . . ಬೀಸುತ್ತಿದ್ದಳು (ತಂಪ್ರಕಾ. ೦). **ಮಱ** : ಸುರಿದು ನೆನೆಗಡಲೆಗಳ ರಾಶಿಯಂ ಮಱನ ಬಿಚ್ಚೋಲೆಗಳ ಬಣ್ಣದ ಹೊಸ್ನ ಸೂಳುಗಳ ಗಿಲಿಗಳೇ ಫಲವಾದುವಾಸ್ಸರ ಕಲಿಯ ನೋಂಪಿಯ ದಾನಕೆ (ಸಂಶಶ. ೨೦-೨೦). **ಮೊರ** : ಜಾಣರಂಗೈಗೆ ಕೊಳಲಾದೆ ಸಿರಿಬಿದಿರೆ ಮುತ್ತು ಕೇರೋಕೆ ಮೊರನಾದೆ (ಹಳ್ಳಿಶಾ. ೦೪) ; ಇಲಿಗಳು . . . ಹತ್ತು ಇಪ್ಪತ್ತು ಮೊರಗಳ ತುಂಬ ಬೀಳಲು ಪ್ರಾರಂಭವಾಯಿತು (ಶಿವರಾ. ೦೯).

[ ದೇ.॥ ತಮಿ. ಮಲ. ಮುಱಮ್ : ಕೊಡ. ಮೊರ ; ತೆಲು. ಮೊರಿಟೆ ; ಕೋತ. ಮೊರ್ರ್ ; ತೊದ. ಮುರ್ರ್ ]

**ಮೊಱಕು₁** 'ಮುಱುಕು₁' ನೋ.

**ಮೊಱಕು₂** 'ಮುಱುಕು₂' ನೋ.

**ಮೊಱಗಿವಿ**, ಮೊರಗಿವಿ (ನಾ). ಮೊರದಂತೆ ಅಗಲವಾದ ಕಿವಿ : ಕವಿ ಮಧುರನ ಮಾತುಗಳೇಂ ಸವಿಯೋ . . . ತನ್ನರು ಮೊಱಗಿವಿಯಿಂ ಮೊಗೆಮೊಗೆದು ಸುಮುಖನಾಸ್ವಾದಿಸುವಂ (ಕಿರ್ಮಾಜಾ. ೦-೭೪) ; ಕಾಂತೆ ಮರ ಮೊಗದಲಿ ವಿಸಾಸೆ ಸುಂಡಿಲನು ಮೊಱಗಿವಿಯ ಪೆರ್ವೊಲೆಯ ಬೆನ್ನಲಿ ಪಿರಚಿಸಲು ಗಂಡರು ಬೆಱಗುಗೊಳೆ (ಶಾಳ್ವಭಾ. ೩೦-೩೭). **ಮೊರಗಿವಿ** : ಮೊರಗಿವಿಗಳಂ ಬೀಸಿ, ಘೀಳಿಟ್ಟೊಡನೆ ಮುನ್ನುಗ್ಗಿ ಹೋರಾಡಲನುವಾದುದಾ ಹೋರಿಹೇರಾನೆ (ಶ್ರೀರಾಮಾ. ೯೩೮-೩೩೮). [ಮೊಱ + ಕಿವಿ₂]

**ಮೊಱಡಿ** 'ಮೊರಡ್ಡು₂' ನೋ.

**ಮೊಱವು**, ಮೊರವು (ನಾ). ೧. ಸಮುದ್ರ ಮುಂತಾದುವುಗಳ ಅಬ್ಬರ,— ಮೊರೆತ : ಮೊಱವುದೋಱದೆ ತೆರೆಮುಸಗದಿಳೆಗೆ ಕ್ಷೀರಶರಧಿಯಿ ಕವಿತಂದುದು (ನಾಗಕು. ೩೦-೭೮). **ಮೊರವು** : ೨. ದೊಡ್ಡಧ್ವನಿ : ಆರ್ಭಟ : ಮೆರಸಿ ನಂದೀಧ್ವಜವ ಕರಡಿಯ ಮೊರವಿನೊಳಗೀ ಲಿಂಗವೀರರ ನೆರವಿಯೊಳಗೆ (ಬಿಜ್ಜಪು. ೯೨-೫); ಮುಂದಡಿಯ ಬಿಟ್ಟು ಮೊರವಂ ಬಿಟ್ಟು ಮಧ್ಯದೊಳ್ನಿಂದಿರ್ಪ ಬಾಣವಾಂ ಕಂಡು (ವಂಶಾರಾ. ೫-೦೭-೩೩).

[ಮೊಱೆ³₁ + — ವು]

**ಮೊಱಹಾರ** (ನಾ). (?) : ಮೊ[ಪಾಠಾಂ. ತೊ]ಱಹಾರ ನೀಡಿದಡೆ ತೆಱಹಾರ ಕೈಕೊಳ್ಳುತ್ತೈದಾನೆ (ಬಸವ. ೪. ೫೩೮-೦೩೪೦). [ ? ]

**ಮೊಱಹು** 'ಮೊಱೆಪು' ನೋ.

**ಮೊಱಹುಗುಂದು** (ಕ್ರಿ). ಆರ್ಭಟವು ಕುಗ್ಗು : ಅಬ್ಬರವು ಕಡಮೆಯಾಗು : ಖಗನೇನೆ ಮೊಱಹುಗುಂದಿದ ಕಡಲಂತೆ ಮೋಸದೊಳು ಬಂದಿರದಿಳಿದುದು ಹಜಾರದೊಳು (ನಾಗಕು. ೨೦-೮).

[ಮೊಱಹು (< ಮೊಱೆಪು) + ಕುಂದು₁]

**ಮೊಱುಕ** (ನಾ). ಒಂದು ಜನಾಂಗದ ಹೆಸರು ( ? ) : ಶ್ರೀಮಾಸೂಲಿ ಪಯ್ಯ ಪೃಥಿವೀರಾಜ್ಯಂಗೆಯ್ಯೆ ಬಲ್ಲದ ಪಱುವ ಮೊಱುಕರ್ಕೊಳೆ ಬಣ್ಣಾರ ಮಾಣಕ ಕಾದಿ ಇಕ್ಕಿಸಿ ಸತ್ತು ಸಗ್ಗಸ್ತನಾದಂ (ಎಕ. X (ಸ), ಮುಳಬಾ. ೩೦೭-೨; 950). [ ? ]

**ಮೊಱೆ³₁**, ಮೊರೆ₂ (ಕ್ರಿ). ೧. ಸಮುದ್ರ, ಸಿಂಹ ಮೊದಲಾದುವು ಆರ್ಭಟಿಸು.— ಗರ್ಜಿಸು,—ಅಬ್ಬರಿಸು : ಬೇತಾಳಂಗಳ್ ಮೊಱೆದು ತೆಱೆದು ಬಾಯ್ಗಳನಾ ಪಾತಾಳಬಿಲಂಗಳವೋಲ್ . . . ಕುಣಿಯೆ ಭಯಮಯನಾದೇ (ಕಲಾ. ೩-೦೪೪); ಆ ಗುಪೆಯನಾಂ ಪುಗಲೊಡನೊಂದು ರೂಪು ಮೊಱೆದು ಪರಿತಂದು ಮೇಲ್ವಾಯಲೊಡಂ (ಸಂಶಕಂ. ೨೮೪-೦): ಸಿಡಿಲು ಮೊಱೆದರೆ ಸರ್ಪಸಂಜುವುದಗುವನೆ ಗರುಡನು (ಕುಮ್ಯಾದ್ರೋ. ೦೫-೭೭) ; ಈಶ್ವರಸಖನೂರ್ಗಂ ದಾಳಿಯುನಿರದೆಯ್ದುವ ತೆಱವೊಳಬ್ಬಿ ಮೊಱೆದುದು ಪೆಂಪಿಂ (ಜಟ್ಟಿರ. ೦-೩೪) ; ೨. ಬುಸ್ಸೆನ್ನು ; ಬುಸುಗುಡು : ಅದಂ ಹರಿವ ನೀರ್ ಮೊಱೆವ ಹಾವುರಿವ ಕಿಚ್ಚಿನ ಹೊರೆಯೊಳಿರಿಸಲು (ಭಾವಶಾ. ೬-೦). ೩. ಸಂಕಟದಿಂದ ಕೂಗಿಕೊಳ್ಳು ; ಚೀರು ; ಆರ್ತನಾದಮಾಡು : ಅರಸ . . . ಮೊಗವಿಕ್ಕಿದತ್ತಲು ಮೊಱೆವ ಪೆಣನ ಮಯ (ಜೀವಂಶ. ೪-೯೪); ತೊರೆಯುತ ಪೊಱೆಯುತ ಸುರಿಯುತ ರಕ್ತವ ಕರಚರಣಗಳಾಡಿಸುತ ಅರಿಪೆಣಗಳು . . . ಒಪ್ಪಿದುವು (ಕಂಪರಾ. ೦೫ ೬೦): ಹುಲಿಯ ಬಾಯಲಿ ಸಿಕ್ಕ ಹುಲ್ಲೆಯಂದದಿ ಮೊಱೆವ (ಸರ್ವಜ್ಞ. ೦೦೩). ೪. ಕೆರಳು ; ವ್ಯಗ್ರವಾಗು : ಇಳಾಮಂಡಲದ ರಾಯರು . . . ಇವನೊಳಗೆ ಮಾತೇಕೆನುತ ಮಿಗೆ ಮೊಱೆದಿದ್ದರಲ್ಲಲ್ಲಿ (ಕೊರಾರಾ. ೦-೦೫-೨೯).

**ಮೊರೆ₂** : ೧. ಮೊರೆದು ಸೊರೆಗರೆದು ಮಿರುಮಿರುಗಿ ಶಿಲೆಯಿಂ ಶಿಲೆಗೆ ಚಿಮ್ಮಿ ನೆಗೆಯುವ ತೊರೆಯ ಲೀಲೆಯ ಮನೋಹರತೆ (ಶಿಕ್ಷಾಂಗ. ೨೯-೮೦೩). ೩. ತೆತ್ತ ಹಣ, ಸತ್ತ ಹೆಣ ಹೋಯ್ತೆಂದು ಮೊರೆಯದಿರು ! (ಬಾಂತಜ. ೫-೦೬). [ದೇ.॥ ತುಳು. ಮೊರೆಪುನಿ ; ತೆಲು. ಮೊಱಗು. ಮೊಱವು ; ಕೋತ. ಮುರ್ಗ್, ಮೊರ್ಗ್]

**ಮೊಱೆ³₂**, ಮೊರೆ₄ (ನಾ). ೧. ಗೋಳಾಟ : ಆರ್ತಧ್ವನಿ ; ಹುಯ್ಯಲು : ಏಕೆನ್ನ ಮೊಱೆಯ ಕೇಳೆ ನೋಡೆಯೆನ್ನ ದುಃಖವ ಚೆನ್ನಮಲ್ಲಿಕಾರ್ಜುನಯ್ಯ (ಮಹಾದೇ. ೩. ೩೮-೬೦); ಮೊಱೆಯ ಬಾಯ್ಗಳ . . . ತರದ ಬೈಗಳ ಕಳಕಳವ ಕೇಳದನು ಕಲಿಪಾರ್ಥ (ಸಂಶಕ. ೩೬-೨); ತರಳನ

ಆರ್ಭಟಿ : ಸುರಬಲದ ನಿಸ್ಸಾಳಕೋಟಿಯ ಮೊಱಹು ಮೊಳಗಿತು (ಶಬ್ದಾ.ಶ. ೭-೦೪) ; ತಂಬಟದ ಮೊಱಹು ಕೋಟಾಕೋಟಿ ಪಟಲರ್ವ್ವ ದಶದಿಕ್ಕುಭರಿತದಿ ಘರ್ಮ್ನೆಸಲಾಯ್ತು (ಶರಶ. ೯೦-೯) ; ಮೃಗಗಳ ಮೊಱಹು ಮುಸುಕಲು (ಅಶ್ವ.ಶ. ೯೬-೩). ೩. (ಅಲಂ) ಸಿಟ್ಟು ; "ಕೋಪ" (ತತುಂ. ೩ I, ೬೨) : ಸಿಡಿಲುಗಳ ಗರ್ಜನೆಯ ಗಗನವ ತುಡುಕುವಾಗುಳಿಕೆಗಳ ಮೊಱಹಿನ ಮಿಡುಕುಗಳ ನಾಯ್ ನೂಕಿದವು ಹಾಸದ ವಿಳಾಸದಲಿ (ಶಬ್ದಾ.ಶ. ೦೩-೨೦). [ಮೊಱೆ$_1$ + — ಪು$_2$ . / ತಮಿ. ಮುಱುಪ್ಪು, ಮುಱುಕ್ಕೆಪ್ಪು : ತೆಲು. ಮುಱಿಪಮು, ಮುಱಿಪೆಮು]

**ಮೊಱೆಮುಗಿಲು** (ನಾ). ಗರ್ಜಿಸುವ ಮೇಘ ; ಗುಡುಗುವ ಮೋಡ : ಮೊಱೆಮುಗಿಲ ಮದವದಂದದಲಿ ಮೊಳಗುವ ವಾದ್ಯರಭಸದಲಿ . . . ಮೋಹರ ತೆಗೆದುದೀಚೆಯಲಿ (ಶಬ್ದಾ.ಶ. ೦-೭).

[ಮೊಱೆ$_1$ + ಮುಗಿಲು (< ಮುಗಿಲ್) ]

**ಮೊಱೆಯಟಿ** (ಕ್ರಿ). ೧. ಕಟ್ಟುಪಾಡುಯಿಲ್ಲದಾಗಿಸು ; ಧರ್ಮವನ್ನು ನಾಶಮಾಡು : ಮೊಱೆಯಟಿವ ಮದ್ಯಪಾನಮುನಜನಂಮುಂ ಮಧುಪನೀಂಟೆ (ಶರ್ಶಕೆ. ೦೦-೨೦). ೨. ನೀತಿಮಾರ್ಗವನ್ನು ಬಿಡು; ಶಿಷ್ಟಾಚಾರವಿಲ್ಲದಾಗು : ಅರಸಂ ತನ್ನ ಮಗಳಂ ತಾನೆ ಕೊಂಡು ಮೊಱೆಯಟಿದಂ (ವಡ್ಡಾರಾ. ೦೦೬-೨೫). [ಮೊಱೆ$_2$ + ಅಱ$_1$]

**ಮೊಱೆಯಿಕ್ಕು** (ಕ್ರಿ). ಆರ್ತನಾದ ಮಾಡು : ಮೊಱೆಯಿಕ್ಕುತಿರ್ದನೋಹಿಲದೇವಂ (ಅಶ್ವಟಿ. ೧೨-೩೯). [ಮೊಱೆ$_2$ + ಇಕ್ಕು]

**ಮೊಱೆಯಿಡಿಸು** (ಕ್ರಿ). ಸಂಕಟದಿಂದ ಕೂಗಿಕೊಳ್ಳುವಂತೆ ಮಾಡು ; ಗೋಳುಗುಟ್ಟಿಸು : ಮೊಱೆಯಿಡಿಸಿತಿತಿವರನೆನ್ನ ಮಹಿಮೆಯ ಭಕ್ತಿ (ತಿರು. ದೇ. ೨೦-೦೬) ; ಓರಿದು ಮಾರ್ಜಲಗೂಡಿ ಬಂದು . . . ಮೊಱೆಯಿಡಿಸಿದ ವೈರಿಭಟರ (ಕಂಪು. ೩-೩೭). [ಮೊಱೆಯಿಡು + — ಇಸು$_3$]

**ಮೊಱೆಯಿಡು, ಮೊರೆಯಿಡು** (ಕ್ರಿ). ೧. ಆರ್ತನಾದ ಮಾಡು ; ಗೋಳಾಡು; ಆಕ್ರಂದಿಸು : ರೌದ್ರುಶರದ ದೋಣೆಗೆ ಕಯ್ಯಂ ನೀಡಿದಾಗಳ್ . . . ಸುರರ್ ಮೊಱೆಯಿಟ್ಟರ್ (ಪಂಪಭಾ. ೧೩-೦೯೨); ಉಱಿ ಕಾವ ಸೂರ್ಯರಶ್ಮಿಗೆ ಮೊಱೆಯಿಡಲೆಂದೆತ್ತಿ ಪಿಡಿದ ತೊವಲೆಂಬಿನೆಗಂ ತುಱುಗಿರ್ದಾವರೆಗೊಂಬಂ ಮುಱಿದು ನೆಟಿಲಾಡಿಕೊಂಡು ನಡೆವರ್ ಪಥಿಕರ್ (ಜಗು. ೦೭-೬೦); ಅರಸಿಯರು ಸಚಿವರು ಕುಮಾರರು ಮೊಱೆಯಿಡಲು ಘಲುಗುಣನ ಬಡಿಸಿದ ಪರಿಯ . . . ಮಱೆಪರೆ (ಶಬ್ದಾ.ಶ. ೯-೯); ದೂರದಿ ನಿಂತು ಮೊಱೆಯಿಟ್ಟು ಕೂಗಲು ಜೋರಗೆ ದಯವು ಪುಟ್ಟಿತೆ (ಪುರಂದ. ೦-೦೫೭-೦). ೨. ದೂರು ; ಅಹವಾಲು ಹೇಳು : ಕಳವಳಿಸಿದುದು ಮೊಱೆಯಿಟ್ಟು ವಿಭವನ ಮುಂದೆ ಭುವನಜನ (ಶಬ್ದಾ.ಶ. ೭-೯೩). ೩. ಬೇಡಿಕೊಳ್ಳು ; ಪ್ರಾರ್ಥಿಸು : ಕಜ್ಜದಿರಿಮೆಂದು ಭಯದಿಂ ನಿಚ್ಚಂ ಮೊಱೆಯಿಟ್ಟು ಪುತ್ತನರ್ಚಿಸುತಿರೆಯುಂ (ಶಮಶ. ೯-೬೦). **ಮೊರೆಯಿಡು** : ೧. ಪಟ್ಟಣದ ಬಾಗಿಲೊಳ್ ಕುಳಿತು ಮೊರೆಯಿಡುವ ಪರಿಯೇನು (ಸೌಗಂಧಿ. ೪೫೭-೦೩) ; ನೀನು ಅರಸಾಗಿ ನಮ್ಮನ್ನು ರಕ್ಷಿಸೆಂದು ಮೊರೆಯಿಟ್ಟರು (ಕೃಪಾಶಾ. ೨೩೩); 'ಯಾಕೆ ಈ ದಾಸ್ಯ?' ಎಂದು ಒಮ್ಮೊಮ್ಮೆ ಹೃದಯ ಮೊರೆಯಿಡುತ್ತಿತ್ತು (ಕವಿಶ. ೨೦೦). ೩. ದೇವರು ದಯಪಾಲಿಸುತ್ತಾನೆ, ಆದುದರಿಂದ ಅವನಿಗೆ ಮೊರೆಯಿಡು (ಕುಂಬಾಡು. ೯-೦೯೦). [ಮೊಱೆ$_2$ + ಇಡು$_1$]

**ಮೊಱೆಯೊಗು** ' ಮಱೆವೊಗು ' ನೋ.

**ಮೊಱೆಯೋಗು** ' ಮಱೆವೊಗು ' ನೋ.

**ಮೊಱೆವುಗು** ' ಮಱೆವೊಗು ' ನೋ.

**ಮೊಱೆವೆಱು** (ಕ್ರಿ). ತಕ್ಕುದಾಗಿರು ; ಹೊಂದಾಣಿಕೆಯಿಂದಿರು (?) : ಮೊಱೆವೆತ್ತ ಲಲ್ಲೆವಾತುಗಳಪ್ಪುಗೆಯಿಂದೆ ನೆಱೆ ಮೂರ್ಛಿತೆಯನೆಯ್ದಿದರು (ಪೊಱೆಹ. ೩೨-೦೬). [ಮೊಱೆ$_2$ + ಪೆಱು$_1$]

**ಮೊಱೆವೇಳ್** (ಕ್ರಿ). ಆರ್ತನಾದ ಮಾಡು ; ಮೊರೆಯಿಡು : ಮೊಱೆವೇಳ್ವ ದೂತರಂ ಗರ್ಜಿಸುತೆ . . . ಭರತಂ ನುಡಿದನು (ಕೃಪಾ. ೨೦-೯).

[ಮೊಱೆ$_2$ + ಪೇಳ್ (< ಪೇೞ್)]

**ಮೊಱೆವೇಡು** (ಕ್ರಿ). ಸಹಾಯವನ್ನು ಕೇಳು; ಆಶ್ರಯವನ್ನು ಬೇಡು: ಮಹಾಪದ್ಮನೃಪನುಂ ಬಲಕ್ಷಾಮುಂ ಮಾಮುಂ ನಿಮಗೆ ಮೊಱೆವೇಡ್ದಟ್ಟಿದ[ನಿದ]ಱ (ಕುಶ್ವಕ. ೭-೬೦). [ಮೊಱೆ$_3$ (< ಮಱೆ$_2$) + ಪೇಡು]

**ಮೊಱೆಸರ** (ನಾ). ಆರ್ತನಾದ; ಚೀರಾಟ : ಅಕ್ಕಟಕ್ಕಟದೇನೊ ಮೊಱೆಸರ ತಮ್ಮನೊಂದೊಕ್ಕಲೊಳಗೆ ಕೇಳಲಾಯ್ತು (ವರ್ಧಕ. ೯-೩೦).

[ಮೊಱೆ$_2$ + ಸರ$_1$]

**ಮೊಱೆಹೊಗು** ' ಮಱೆವೊಗು ' ನೋ.

**ಮೊಟ, ಮೊಣ, ಮೊಳ** (ನಾ). ೧. ಮೊಳಕೈಯಿಂದ ಹಸ್ತದ ತುದಿಯವರೆಗಿನ ಅಳತೆ ; ಎರಡು ಗೇಣು ; ಅರತ್ನಿ: "ಅರತ್ನಿನಾಮಂ ಸಕನಿಷ್ಠಕಂ ಮೊಟಂ" (ವಸ್ತು ಕೋ. ೬೯-೦೪) ; ಏಱ ಧನು ಮೂಱು ಮೊಟನಿಂ ಪೇಱ ಪಡಂಗುಲಮೆ ಮೊದಲ ನಾರಕರೊಡಲಂತೇಱುವರಂ ತದ್ವಿಗುಣಮೆ ಸೂಱೊಳ್ ನಾರಕರ ಕಠಿನದೇಹೋತ್ಸೇಧಂ (ಅಂಕಿ. ೫-೯೨) ; ಮೊಟ ಮೂಱಳತೆಯ ತನುರುಚಿ ಕಂಪಿನ ಪೊಳೆಪಿನ ಕೌಮುದಿಯನೇಂ ಕಡಲ್ಗಿಡಿಯಿಂಪುದೋ (ಅಪಂಕ್ತಿ. ೯-೯೬). **ಮೊಣ** : ೨. ಮೊಳಕೈ ಹಾಗೂ ಮೊಳಕಾಲುಗಳಲ್ಲಿರುವ ಮೂಲೆಯ ಸಂದು : "ಮೊಣ (ಮೊಳ), ಜಾನು, ಮೊಣಗಂಟು" (ಸಿಂಕೋ. ೪೪೨). 'ಮೊಣಗಂಟು' ಪರಾ. **ಮೊಳ** : ೧. ಮತ್ತಲ್ಲದೇವರ ಹವಣನಾರೆಣಿಸುವರು . . . ಅವನಿಪತಿ ಕೇಳ್ ವೇದವಾಕ್ಯಕೆ ಹತ್ತುಮೊಳ ಮಿಗಿಲು (ಸಂಶಕ. ೯-೨೬) ; ಕಪಿಯ ಬಾಲವು . . . ಮುಂದೆ ಗೇಣರೆಗೇಣು ಮೊಳ ತೋಳನಿತು ಬೆಳೆವುತಿರೆ (ಕೌಶಿಂ. ೦೨-೪) ; ಮೊಳನನಿಕ್ಕಲು ಸೂಡಿಲಂ ಗುಹಂ (ಜೀಶ್ವಕು. ೨-೩-೦) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಓತ್ತಲಿಗೆ ಹೋಗಿ ಮೊಳ ಹಾಕಿದ (ಗಾದೆ).

[ದೇ.೫ ತಮಿ. ಮಲ. ಮುಟಪ್ಪ್ ; ತುಳು. ಮೊಳ, ಮೊರ, ಮುರ ; ಕೊಡ. ಮೊಳ ; ತೆಲು. ಕೋಲಾ. ಪರ್ಜಿ. ಮೂರ]

**ಮೊಟಂಗಾಲ್** ' ಮೊಟಕಾಲ್ ' ನೋ.

**ಮೊಟಂಗು$_1$** ' ಮೊಟಗು$_1$ ' ನೋ.

**ಮೊಟಂಗು$_2$** ' ಮೊಟಗು$_2$ ' ನೋ.

**ಮೊಟಕಯ್** ' ಮೊಟಕೆಯ್ ' ನೋ.

**ಮೊಟಕಲಿಸು** (ಕ್ರಿ). (?) : ಪಾಯ್ದಂಬನಂಬಟ್ಟುವವೊಲ್ ಪುಂಖಾನು ಪುಂಖಂ ಮೊಟಕಲಿಸೆ ಮನೋವೇಗದಿಂ ಬೇಗಮೆಚ್ಚಂ (ಅರ್ಜನೀ. ೩-೪೦) ; ಮುಱಿದಂಗಂ ನೀಳ್ದ ಗಾತ್ರಂ ಮೊಟಕಲಿಸಿ ಕರಂ ದಂಡೆಯಂ ನೀಡಿದಂದು (ಅರ್ಜನೀ. ೬-೬೩). [? + — ಇಸು$_3$]

**ಮೊಟಕಾಲ್, ಮಣಕಾಲು, ಮಣಿಕಾಲ್, ಮಣಿಕಾಲು, ಮೊಣಕಾಲ್, ಮೊಣಕಾಲು, ಮೊಳಕಾಲ್, ಮೊಳಕಾಲು, ಮೊಟಂಗಾಲ್** (ನಾ). ಕಾಲು ಮತ್ತು ತೊಡೆ ಸೇರುವ ಭಾಗ ; ಮೊಳಸಂದು ; ಜಾನು : ನರಿಗಳ್ ಬಂದು . . . ಎರಡುಂ ಕಾಲ್ಗಳಂ ಮೊಟಕಾಲ್ವರೆಗಮೊಂದು ದಿವಸಂ ತಿಂದತ್ತು (ವಡ್ಡಾರಾ. ೨೯-೦೩) ; ಅಂತು ಬಿಟ್ಟು ಸುಲಿದ ಮೊಟಕಾಲ್ಗಳುಂ . . . ಉಡಿದ ಕೈಗಳುಮಾಗಿ ಬೆರಸಟುತ್ತುಂ ಬಂದು (ಕಂಪಕಾ. ೨-೩೦ ವ) ; ಸಾವಂಗೆ ಸಮುದ್ರಂ ಮೊಟಕಾಲುದ್ದಂ (ಪಂಚತಂ. ೬೯-೪). **ಮಣಕಾಲು** : "ಜಂಘಾ_ಮಣಕಾಲು" (ಅಕಾ. ೦೦-೨೬). **ಮಣಿಕಾಲ್** : ನೋಡಿ ಗುಱಿಯಂ ಮಣಿಕಾಲ್ ಮಣಿಯೆ ಭುಜವೊಗೆಯೆ . . . ಧನುರ್ಧರರ್ಕಳದಟಂದೆಚ್ಚರ್ (ರಾಜಶೇ. ೬-೯೩) ; ಎಳ್ತರದ ಕುರುಳ್ಗಳಂ ಪರೆಪಿ ಜಲ್ಲಿಮಿಗಕ್ಕೆ ವರಾಹಯೂಥಮೇಳ್ತರೆ ಮಣಿಕಾಲ್ಗಳಂ ಮಡಿದು ತೋಱದರೊಯ್ಯನೆ ಸನ್ನೆವೇಂಟೆಯೊಳ್ (ಶಬಶಂ. ೩-೯೭). **ಮಣಿಕಾಲು** :

ಮಣಿಕಾಲು ಈಡಿಗ ಕಣಕಾಲು ಸಪ್ಪುಗಾಜಿ . . . ಅಂಗಾಲು ಶುದ್ಧಮಾದಿಗ ಕಾಣಿರೋ (ಸರ್ವ. ೦೬೨-೭೭೭). ಮೊಣಕಾಲ್: ಸಿರಿ ಬರೆ ಮೊಣಕಾಲನಾಂಪ ಗಾಂಪರುಮೊಳರೇ (ಧರ್ಮಾಮೃ. ೧೦-೦೭); ಬಟ್ಟಲು ಕಬಲ್ದ ಮೊಣಕಾಲ್ಗಳುಂ ಮೊಟ್ಟನೆ ಮುಱಿದ ನಿಟ್ಟೆಲುಗಳುಂ . . . ಮಹಾಭಯಂಕರಮಾಗೆ (ಮಹಾಪು. ೦೨-೩೪ ವ). ಮೊಣಕಾಲು: "ಜಾನು:, ಊರುಪರ್ವ:, ಅಸ್ಥಿಪರ್ವ: — ಈ ೩ ಮೊಣಕಾಲು" (ನಾಕರಾ. ೦೨೦); ಮೊಣಕಾಲೊಳಸಂಮಗಳು ಬಾತುಕೊಂಡು . . . ಕ್ರೋಷ್ಟುಶೀರ್ಷವೆನಿಸಿಕೊಂಬುದು (ವೈದ್ಯಸಾ. I, ೪೦೭); ಕಣಕಾಲ ಕುಣಿಸುವಳು ಮೊಣಕಾಲ ಮಣಿಸುವಳು (ಸರ್ವಜ್ಞ. ೦೬೪೩); ತಲೆ ಇರುವಾಗ ಮೊಣಕಾಲಿಗೆ ಪಟ್ಟ ದೊರೆಯಲಾರದು (ಕಂಬಹು. ೦). ಮೊಳಕಾಲ್: ಪಱಿದ ಮೂಳೆಯುಂ ಮೊಳಕಾಲಂ ಕಾರ್ವ್ವ (ಎಕ. VIII, ಸಾಗರ. ೦೦೯-೦೯; 1042); ಕಣಕಾಲ್ ಮೊಳಕಾಲ್ಮುಖಂ ಘುಜೆಂ (ಎಕ. VIII, ಸೊರಬ. ೦೭೩-೧೨ : 1156); ಮೊಳಕಾಲ್ಗಳಲಿ ಘಾಯುವ ನೋಡಿರೈ ನೀವು (ಸಂಕಶ. ೧೭-೭). ಮೊಳಕಾಲು: "ಜಾನು:, ಊರುಪರ್ವನ್, ಅಷ್ಠೀವತ್ — ೩ ಮೊಳಕಾಲಿನ ಹೆಸರುಗಳು" (ಸಿದ್ಧಾಂತ. ೦೯೦); ಬೊಬ್ಬಿಱಿದು ಮೊಳಕಾಲನೂಱಿದರು (ಕುಮಾ.ರಾ. ೪-೦೨); ರಸ್ಯಸರಾಯನೆತ್ತಿದನೊಡನೆ ಬೊಬ್ಬಿಱಿದವುಕಿದನು ಮೊಳಕಾಲಲಾಧನುವ (ಕೊರವಂ. ೧-೦೩-೨೦). ಮೊಟಂಗಾಲ್: ಪನಿತು ಮೊಟಂಗಾಲೊಳ್ ಕಾಲ್ವರಿವ ನೊರೆಯು . . . ಕಾರೊಡಲ ಪೇರಾನೆಗಳ (ರಾಮಾಶ್ವ. ೯೪-೪).
[ದೇ.॥ ತಮಿ. ಮಲ. ಮುಟಙ್ಙಾಲ್; ತುಳು. ಮೊರಂಪು, ಮೊಲಂಕು; ತೆಲು. ಮೋಕಾಲು; ಕುರುಖ್. ಮೂಕಾ; ಮಲ್ತೊ. ಮುಕೆ ]

**ಮೊಟಿಕೆಯ್, ಮೊಣಕೆಯ್, ಮೊಣಕೈ, ಮೊಳಕಯ್, ಮೊಳಕೈ, ಮೊಟಿಕಯ್, ಮೊಟಕೈ** (ನಾ). ಕೈಯ ನಡುಗಂಟು; ಕಣಕೈ ಮತ್ತು ತೋಳುಗಳ ನಡುವಿನ ಭಾಗ: "ಕಫೋಣಿ:, ಕೂರ್ಪರ: — ಈ ೨ ಮೊ(ಟ)ಣಕೆಯ್" (ಶಬ್ದಮ. ೯೬-೩೭೯); "ಮೊಟಕೆಯ್ಯ ಕೆಳಭಾಗವು ಪ್ರಕೋಷ್ಠ, ಮುಂಗೆಯ್" (ನಾಕರ್ಾ. ೪). ಮೊಣಕೆಯ್: "ಪ್ರಕಾಂಡ ಮೆಂಬುದು ಮೊ(ಟ)ಣಕೆಯ್ಯಿಂದ ಮೇಗಣ ಭಾಗ" (ಶಬ್ದಮ. ೯೬-೩೭೯). ಮೊಣ್ಣಕೈ: ತೋಳುಗಳನ್ನು ಮೊಣಕೈಯವರೆಗೆ ಮಡಿಸಿಕೊಂಡಿದ್ದರಿಂದ ಹೊರದೋರುವ . . . ರೋಮತುಂಬಿದ ಕಪ್ಪುಕೈಗಳು (ಅಕೊರೋ. ೦೩೦). ಮೊಳಕಯ್: ಚಂದನಕ್ಕುವ್ಮುಳಿಸಲೇಕೆ ನೀನೆಲೆ ಮಗನೆ ಚಂದನಂ ನಿನ್ನ ಮೊಳಕಯ್ಯೊಳದೆ ಎಲೆ ಮಗನೆ (೭೦೮. ದೇ. ೪೯೦-೭). ಮೊಳಕೈ: ಮೊಳಕೈ ಮುಂಗೈಗಳನಾಡಿಸುತಂ (ಶೃಂಗಾರ. ಪ. ೪೭೨-೨೯); ತೊಡೆಗಳಂ ಮೊಳಕೈಯೊಳೂಱುತ (ಬಸವ. ೪-೧೨); ಮೊಳಕೈಯೊಳಗೆ ಯಿಱುಕಿದ್ದರದು ಹಸ್ತಂಗಳಲ್ಲಿ ಚಾಪದ ಕಿರುವನೇಱಿಸಿ ಶರವ ತೊಡಚಿವನು (ಸಂಕಶ. ೦೯-೨೭); ನಿನ್ನ ಮೊಳಕೈಯಲ್ಲೇನು ಗಾಯ ಶಾರದ? (ತ್ರಿಕ. ೩೪). ಮೊಟಿಕಯ್: ಒಳಕಯ್, ಮೊಟಕಯ್, ಪೊಱಕಯ್ (ಕಸ್ತು.ಮ. ೦೦೦ ಕ್ರಿಯೋ). ಮೊಟಕೈ: "ಕಫೋಣಿ, ಕೂರ್ಪರ: — ಈ ೨ ಮೊಟಕೈ" (ನಾಕರಾ. ೦೨೦); ಮೊಟಕೈಯುಂ ಕೊಂತದಿಂ ಕುತ್ತಿ (ಧರ್ಮಾಮೃ. ೭-೨೦೩). [ದೇ.॥ ತಮಿ. ಮಲ. ಮುಟಙ್ಙೈ; ತುಳು. ಮೊರಂಗೆ; ಕೊಡ. ಮೊಳಕಯ್; ತೆಲು. ಮೋಚೆಯ್ಯಿ]

**ಮೊಟಕೈ** 'ಮೊಟಿಕೆಯ್' ನೋ.

**ಮೊಟಗಿಸು, ಮೊಳಗಿಸು** (ಕ್ರಿ). ಧ್ವನಿಯುಂಟಾಗುವಂತೆ ಮಾಡು; ಶಬ್ದಮಾಡಿಸು: ಸುಭುಜಂ . . . ಮಿಕ್ಕಿನ ಸೇನೆ ನಡೆದು ಬಪಣಂತು ರಣದುಂದುಭಿಯಂ ಮೊಟಗಿಸಿದಂ (ರಾಮಾಶ್ವ. ೯೭-೨೯). ಮೊಳಗಿಸು: ಜನವಱಿಯೆ ಹಱೆಯ ಮೊಳಗಿಸುತ (ಹಕಳ. ೦೦-೩೭).
[ ಮೊಟಗು$_1$ + — ಇಸು$_3$ ]

**ಮೊಟಗು$_1$, ಮೊಳಗು$_1$, ಮೊಟಂಗು$_1$** (ಕ್ರಿ). ೧. (ವಾದ್ಯಗಳು) ಧ್ವನಿಮಾಡು; ಶಬ್ದಮಾಡು: "ಮೊಟಗು — ವಾದನಕ್ರಿಯಾಯಾಂ ಸ್ತನಿತೇ ಚ (ಗುಡುಗು), ವೃಕ್ಷಭೇದೇ ಚ" (ಕವಿಜಿ): ಆಗಳ್ ಕುಂಭಸಂಭವನುಲಿವ ಜನರ ಕಳಕಳರವಮುಮಂ ಮೊಟಗುವ ಪಱೆಗಳುಮಂ ಬಾರಿಸಿ (ಪಂಕಲಾ. ೨-೭೪ ವ); ಮೊಟಗುವ ಪಱೆಯುಮನಾನೆಯ ಪಟಯಿಗೆಯುಮನಾಂತ ಬಲಮುಮಂ ಕಂಡು (ಎಕ. XV, ಅರಸೀ. ೨೩೭-೯; 971). ೨. (ಮೋಡಗಳು ಒಂದಕ್ಕೊಂದು ತಗುಲಿ) ಗುಡುಗುಡು ಎಂಬ ಶಬ್ದವುಂಟಾಗು; ಗುಡುಗು: ಕೆಳರ್ದ ವಿಳಯಕಾಳಮೇಘದಂತೆ ಮೊಟಗಿ ಮಹಾಪ್ರಳಯಭೈರವನಂತೆ ಮಸಗಿ (ಹುಕಲಾ. ೦೦-೪೦ ವ); ಉರಿದುದು ನಭಂ ನೆಲಂ ಮೊಟಗಿದುದು (ಶಾಂತಿಪು. ೩-೦೦೩); ನೆಲಂ ಮೊಟಗಿದಂತಪ್ಪದೊಂದು ಭಯಂಕರಧ್ವಾನಮಾಗಲ್ (ಪಂಕಶಂ. ೪೦-೧೦). ೩. ಆರ್ಭಟಿಸು; ಗರ್ಜಿಸು: ದೆಸೆಗಳ್ಗೆ ಕಿವ್ಮನೆ ಮೊಟಗುವಿರೇಂ ಮೊಟಗಿದಂತೆ ಕೊಳ್ವವೆ ಮಟಿಗಳ್ (ಕಾವ್ಯಸಾ. ೪೩೭ ಸೂಕ್ತ ೪). ಮೊಳಗು$_1$: ೧. ರಾಯರಥಿಕರು ಚಟುಳಚರಣಚಡಾಯುಮಾನಿತರಿಳಿದುದಾ ಖಳರಾಯದುರ್ಗವ ಮೊಳಗುವಗಣಿತವಾದ್ಯಘೋಷದಲಿ (ಕೊರವಂ. ೭-೦೯-೪); ಸನ್ನಾಹಭೇರಿಗಳ್ಮೊಳಗಲು ಖಾನ ಬಪ್ಪನ್ನತಗಳನೇವೇಳ್ವ (ಕಂಪಾ. ೦೦-೩೯); ಮಂಗಳವಾದ್ಯಗಳು ಮೊಳಗಿದವು (ಅಕ್ಕಾ. ೦೯೦). ೨. ಹಲಬಾರಿ ಕೇಳಿಹೆನು; ಮೋಡಗಳ ಮಧ್ಯದಿಂ ಮೊಳಗಿ ಮಾರ್ದನಿಗುಡುವ ನಿನ್ನ ದನಿಯ (ಅಸೀರ. ೨೨-೦೦). ೪. ಶಬ್ದಮಾಡಿಸು; ಮೊಳಗಿಸು: ನಳಿನನಾಭನು ಪಾಂಚಜನ್ಯವ ಮೊಳಗಿದನು (ಕುಮಾ.ದ್ರೋ. ೯-೪೦). ೫. ಮೆರೆ; ವಿಜೃಂಭಿಸು: ಹಳೆವಿದಿರ ಮಳೆಯಲಿ ಮೊಳಗಿದುರಿಯುವೊಲುರುಹಿದನು ದ್ರೋಣ (ಕುಮಾ.ದ್ರೋ. ೦೭-೨೩); ವೈರಿಸೇನೆಯ ಕುತ್ತಿ ತೀಗುವ ಮನದ ಮಾರುತಿ ಮೊಳಗಿದನು ಮುಂದೆ (ಕುಮಾ.ಶ. ೦೨-೨೦). ಮೊಟಂಗು$_1$: ೧. ಊರೇ ಮೊಟಂಗದೇ ಗೋಳಾಟವಿಟ್ಟು! (ಅಕ್ಕಾ. ೩೪-೭೭೩).
[ದೇ.॥ ತಮಿ. ಮುಟಙ್ಕು; ಮುಟಕ್ಕು; ಮಲ. ಮುಟಙ್ಙು, ಮುಟಕ್ಕು; ತೆಲು. ಮ್ರೋಗು, ಮ್ರೋಯು, ಮ್ರೋವು]

**ಮೊಟಗು$_2$, ಮೊಳಗು$_2$, ಮೊಟಂಗು$_2$** (ನಾ). ೧. (ವಾದ್ಯದ) ಧ್ವನಿ; ಸದ್ದು; ಘೋಷ: "ಮೊಟಗು = ಮುಗಿಲ ದನಿ, ಒಂದು ಮರದ ಪೆಸರ್, ವಾದನವಿಧಿ, ವಾದ್ಯಂ" (ಕವಿಜಿ. ಪು. ೦). ೨. (ಮೋಡಗಳ ಘರ್ಷಣೆಯಿಂದುಂಟಾಗುವ) ಗುಡುಗುಡು ಎಂಬ ಶಬ್ದ: "ಮೊಟಗೆಂದು ಸಿಡಿಲ್" (ಕರ್ಣಾಟ. ೩೦); ವಿಳಯಕಾಳಾಂಬುದದಂತೆ ಮೊಟಗುಮಂ ಸಿಡಿಲ ಬಳಗಮನೊಳಕೊಂಡ. . . ಮುಗಿಲ್ಗಳಂ ಬೆಸಸಿದಾಗಳ್ (ಪಂಕಲಾ. ೫-೯೫ ವ); ಕಾರ ಮೊಟಗಂ ಕೇಳ್ದ ನವಿಲಂತೆ ನಲಿದು (ಅರ್ಜುನ. ೦-೭೯ ವ); ಗುಡುಗುಡಿಪ ಮೊಟಗಂ ಕಡುಕಾಯ್ಪೇಱಿದ ಸಿಂಗದ ದನಿಗೆತ್ತು (ರಾಮಾಶ್ವ. ೩-೦೮). ಮೊಳಗು$_2$: ೧. ಬಹುವಿಧದ ವಾದ್ಯದ ಮೊಳಗುಗಳ ತುದಿ ತುಡುಕಿತಾ ಬ್ರಹ್ಮಾಂಡಮಂಡಲವ (ಕುಮಾ.ಶ. ೨-೪೦); ಪನ್ನೆರಡು ಭೇರಿಗಳ ಕಟ್ಟಿದರಾಗಳೆ ಜಗವೆಲ್ಲ ಮೊಳಗಿನ ಮೊಟ್ಟೆಯು ಕಟ್ಟಿದಂತಾಯ್ತು (ಶರಶ. ೨೩-೭); ಒದಗಿರ್ಪ ಪರೆ ಕೊಂಬು ಮುರಿಕೊಂಬುಗಳ ಮೊಳಗು (ಸಾಂಗ್ರ. ೧೪೭-೩೦೮). ೨. ಆಕಾಶದ ವಿದ್ಯುಲ್ಲತೆಯ ಘರ್ಜನೆಯ ಮೊಳಗಿನಂತೆ (ಮೋಹನಾ. ೦೦-೪೦): ಘಳಘಡಘುಡಿಲೆಂದು ಮೊಳಗು ಮೊಳಗಿತು (೧೨೪. ೯-೪೦); ಮೊಳಗಂ ಕೇಳ್ದರಸಂಚೆಯು ತಱಿದಿ ಆವರಿಸಿದವಸ್ಥೆಯೊಳಿರದೆಯ್ದುಂದು (ಜಯಲಾ. ೨-೪೨). ಮೊಟಂಗು$_2$: ೩. ಅಬ್ಬರ; ಆರ್ಭಟೆ: ಓವೋ ಕನ್ನಡದ ನಾಡೇ, ಮುನ್ನೀರ್ ಮೊಟಂಗು ಕರೆನಾಡೇ (ಅಕ್ಕಾ. ೦೭-೩೫೨). [<ಮೊಟಗು$_1$. /ತಮಿ. ಮುಟಕ್ಕು, ಮುಟಕ್ಕಮ್; ಮಲ. ಮುಟಕ್ಕಮ್; ತೆಲು. ಮ್ರೋಗುಡು, ಮ್ರೋತ]

**ಮೊಟಗು$_3$, ಮೊಳಗು$_3$** (ನಾ). ಒಂದು ಬಗೆಯ ಮರ: "ಮೊಟಗೆಂಬರೀ ವಾದ್ಯಮುಮನಿಜಭೇದದಲ್ಲಿಯುಂ ಗುಡುಗಿನೊಳ್ ಮೊಟಗೆನಿಕ್ಕುಂ"

(ಸಂಜೀವ. ೩) ; ಮೊಳಗಿನ ಕಾಯೋ ನೆಲ್ಲಿಯ ಕಾಯ್ ಉಬೆಯ ಕಾಯ್ ಬೇಱುವೇಱು ಸವಿವಡೆದಿರವೆ (ವಳಸಂ. ೪೬೩). **ಮೊಳಗು$_3$ :** ಮುತ್ತಿ ಮೊಳಗರಸೆಲ್ಲಿ ಮಾಡಲ . . . ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೂರಿಂಗ. ೩-೦-೨೬) ; ತಮಾಲಂ ಮೊಳಗಾಱಂ ನೆಲ್ಲಿ ನೇಱಲ್ ತದುಕು ವನೆಗಳೊಪ್ಪಿರ್ಕುವಮಾ ಕಾಡೊಳೆತ್ತಂ (ಶಬಶಂ. ೩-೩೨).

[ದೇ.॥ ತೆಲು. ಮೊಲುಗು, ಮೊಲ್ಗು, ಮೋಲುಗು, ಮೋಲ್ಗು]

**ಮೊಳಗುಗೇಳ್** (ಕ್ರಿ). ಗುಡುಗಿನ ಧ್ವನಿಯನ್ನು ಕೇಳು; ಮೇಘಧ್ವನಿಯನ್ನು ಆಲಿಸು : ಮ್ರುಗಾಳಿ ಘೋಂಕನೆ ಮುಱಿಗಾಲದೊಳ್ ಮೊಳಗುಗೇಳ್ದು . . . ರಾಮನ ಘನಚಾಪದಂಡರವಮಂ ನೆನೆದು . . . ಮೇಘಗೊಳಲೊಲ್ಲವು (ಕಾದಂಪೂ. ೦೧೦). [ಮೊಳಗು$_2$ + ಕೇಳ್]

**ಮೊಳವೆಱಿಯಾರ್ಮ** (ನಾ). ಒಬ್ಬಾತನ ಹೆಸರು : ಚೋೞಗ ಮೊಳವೆಱಿಯಾರ್ಮರ್ಜ್ಗೆ ಕಱಿಗೊಡಗೆಯು ರಾಜಮಾನಂ ಮೂಗಂಡುಗ ಗಱ್ದ . . . ಸಲ್ವುದು (ಎಕ. XII, ಮಧುಗಿ. ೦೦೨-೦೪; ಸು. ೯೦೦ ?). [ ? ]

**ಮೊಟ್ಗಿಸು**, ಮುಗ್ಗಿಸು, ಮೊಗ್ಗಿಸು$_1$ (ಕ್ರಿ). ೧. ತಗ್ಗಿಸು ; ಶಮನಗೊಳಿಸು ; ಕುಗ್ಗಿಸು : ಹಿಮಲವಳಾಜಳೆಮುಂ ಮದೇಭಮದಮೊತ್ತಾಸಾರಮುಂ ರೇಣುಸಂಚಯಮುಮಂ ಮೊಟ್ಗಿ [ಪಾಠಾಂ. ತರ್ಗಿ]ಸಿ (ಭಕ್ತ್ಯ. ೩-೪೩). **ಮುಗ್ಗಿಸು :** ೨. ನಮಸ್ಕರಿಸು ; -ಬಾಗು : ಉಲ್ಲಾಸದಿಂ ನಡೆತಂದು ತಮ್ಮಣ್ಣನಾ ಮೆಲ್ಲಡಿಯೊಳು ಮುಗ್ಗಿಸಿದನು (ಪ್ರಭುಲಿ. ೨-೨೩). ೩. ಮುಗ್ಗರಿಸು ; ಎಡವು : ಫಗ್ಗೆಳಪ ನೀರಾಜನ ಪ್ರಭೆ ಕುಗ್ಗಿ ಮಸುಳಿಸಿತೋ ಮಱಿಯ ನೀ ಮುಗ್ಗಿಸಿದೊ ಏಕಾರತಿಯನಯ್ಯಂಗೆ ಕೊಡುವಾಗ (ಬಸವ. ೪೬-೦೬). ೪. ನಾಶಮಾಡು ; ಧ್ವಂಸಗೊಳಿಸು : ನೀನಿಟ್ಟ ಸೂತ್ರದಿಂ ಚಲಿಪವು ಕೈಕಾಲುಗಳು ನೀನೆ ಮುಗ್ಗಿಸಲು ಮುಗ್ಗುವ ದೇಹದವನು (ಭುರಂದ. ೨-೯೮-೦); ಚಿಂತಿಸಬೇಡ ತಾಯೆ ನಾ ಮುಗ್ಗಿಸುವೆ ಸವತಿಮಕ್ಕಳನೆಲ್ಲ ನುಂಗಿ ನಾ ಬಗ್ಗಿಸುವೆನವ್ವ ಸಂಶಯ ಬೇಡ (ತುರಂಗ. ೩-೩೨); ಟೊಪ್ಪಿಗೆಯ ಉದ್ಯೋಗವನ್ನು ಮುಗ್ಗಿಸಿ ಕೆಲಸಿಗನ ಕೈಮೇಲಾಯಿತೆಂದು ನಾನು ಹೇಳುವುದಿಲ್ಲ (ಗಾಳಿ. ೦೩೫). ೫. ವಶಪಡಿಸಿಕೊಳ್ಳು ; ಅಧೀನಗೊಳಿಸು : ಸುಗ್ಗಿಯು ಸೂಳೆಯರಿಹರಲ್ಲಿ ನೋಟದಿಂ ಮುಗ್ಗಿಸಿಕೊಳುತ ಮನಿಗಳ (ಕುರಾಸಾಂ. ೪-೦೦೩). **ಮೊಗ್ಗಿಸು$_1$ :** ೬. ಬಾಗಿಸು ; ಬಗ್ಗಿಸು : ಕೂರ್ಗಣೆಗಳಂ ತೆಗೆದು ಧನುವಿಗಂ ಮೊಗ್ಗಿಸುತ ಕರ್ಣಪೂರಂತೆಳೆದು ತಾಳಿಕೊಳೆರೆಂದೆನುತ ತೆಗೆದೆಚ್ಚನು (ತುರಂಗ. ೫೨-೮೩). 'ಮುಟ್ಗಿಸು' ಪರಾ. [ಮೊಟ್ಗು$_1$ + — ಇಸು$_3$]

**ಮೊಟ್ಗು$_1$**, ಮುಗ್ಗು$_1$, ಮುಗ್ಗು, ಮುಳ್ಗು, ಮುಟ್ಗು$_2$, ಮೊಕ್ಕು$_1$, ಮೊಗ್ಗು$_1$, ಮೊಳ್ಗು (ಕ್ರಿ). ೧. ಬಾಗು ; ಮಣಿ ; ಬಗ್ಗು : ಕನಕಶಾಂತಿಮುನೀಂದ್ರಕೇವಳಿಗಳ ಪೊಱಅಡಿಗಳೊಳಂ ಮಣಿಮಯ ಮಕುಟಮಾಲೆಯಿ ಮೊಟ್ಗಿ ಪೊಡೆವಟ್ಟು (ಶಾಂತಿಪು. ೬-೨೩ ವ) ; ಪೋಗಿ ತನ್ನ ಓಲಂದೋಪಕಂಠದೊಳ್ಮೊಟ್ಗಿ ಪೊಡೆವಟ್ಟು (ಸುಕುಮಾ. ೪-೩೮ ವ) ; ಮೇಗಣಧಿಕಾರಕಂತಪ್ಪ ರೌದ್ರಮುಂ ಶಕ್ತಿಯುಂ ಮೊಟ್ಗುವುದು (ಅಕ್ಕಶ್ರಾ. ೨೬-೫೩೦). ೨. ನಮಸ್ಕಾರ ಮಾಡು ; ವಂದಿಸು ; ಎರಗು : "ಮೊಟ್ಗು-ನಮನೇ" (ಶಮಾಧಾ) ; ನಿಜಾನುಜನ್ಮನ ಕಳೇವರದ ಕಾಲ ಮೊದಲೊಳ್ ಮೊಟ್ಗಿ (ವರ್ಧಪು. ೯-೬೦ ವ) ; ಶಿರಿಯರ್ಗೆ ಮೊಟ್ಗು ಜಸಮಂ ಕೈಕೊಳ್ (ಶಕಬ. ೩-೦೨೦). ೩. ಕುಗ್ಗು ; ಅಡಗು : ಕುಸಿ : ಪವನಾತ್ಮಜಂ ಗದೆಯನೆಲ್ವಡಗಾಗಿರೆ ಮೋದೆ ಮೊಟ್ಗಿ ಬಿಟ್ಟುವು ಮದವಾರಣಂಗಳ್ (ಶಂಕರಾ. ೦೩-೫೩) ; ಆ ಸಂಗ್ರಾಮದೊಳ್ ತನ್ನನುಜ ತನುಜ ಜಾಮಾತೃವರ್ಗಂ ಮಡಲ್ವಟ್ಟಂತಾಗಳ್ ಮೊಟ್ಗಿ ತಟ್ಗಿರ್ಪುದಂ (ಶಾಂತಿಪು. ೫-೫೮). **ಮುಗ್ಗು$_1$ :** ೧. ಗುರುಪಾದಾಂ[ಬುರುಹಕ್ಕೆ] ಮುಗ್ಗಿ ಪೊಡೆವಟ್ಟು (ಗವಾಯು. ೮-೬೩). ೨. ಭೂಪರೆಲ್ಲರು ಭಯಭಕ್ತಿಯಿಂ ನೇಮಿಯ ಶ್ರೀಪಾದಕೆ ಮುಗ್ಗುತಿರಲು (ನೇಮಿಸಂ. ೩೨-೨) ; ಪರಿದರ್ಶಕೇಶ್ವರಾದಿ ರಾಜರು ಕಣ್ಣೀರು ಸುರಿವುತ ಮುಂದಡ್ಡಗಟ್ಟಿ ಚರಣಾಬ್ಜದೊಳು ಮುಗ್ಗಿ ಕೆಡೆದರು (ಭರತ. ೬೬-೬೬). ೩. ರಿಪುಭಟನ ಪೊಯ್ಮುಗ್ಗಳ ಧರಧುರಕೆ ಕಲಿ ಸಾತ್ಯಕಿಯ ತರಹರಣೆ ತಗ್ಗಿತು ಮಹಿಮೆ ಮುಗ್ಗಿತು (ಕುಮಾರವ್ಯಾ. ೦೪-೦೦). ೪. ಎಡವು ; ಮುಗ್ಗರಿಸು : "ಮುಗ್ಗು — ಜೀರ್ಣಾವಗಂಧೇ, ಗತಿಭಂಗೇ ಚ (ಮುಗ್ಗರಿಸು)" (ಶಮಾಧಾ) ; ಮುಂದೆ ಮುಗ್ಗುತ್ತ ಡಬಲದೊಳಗಾಂ ಬೀಬುತಂ ಪಕ್ಕಗೂಡಾಗೊಱಗುತ್ತಂ ಪೋಗಿ (ಕಾದಂಪೂ. ೦೯೦) ; ಕರ್ಣನ ಕುದುರೆಗಳು ಮುಗ್ಗಿದವು (ಕುಮಾರವ್ಯಾ. ೬-೨೬). ೫. ಕೆಡು ; ನಾಶವಾಗು : ಓಗ್ಗುವೆ ಯಾಕೋ . . . ಮುಗ್ಗುವ ಕುಗ್ಗುವ ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ (ಪುರಂದ. ೦-೦೨೨ ಅನುಬಂಧ) ; ಪಡೆ ಕಡಲೊಳದ್ದಿ ಜೀಮೂತಾದಿಗಳ್ ನೀರ ಕುಡಿಕುಡಿದು ಮುಗ್ಗತೇವೊಗಳ್ವಂ (ಸಿಂಗರಾ. ೩-೨೦). ೬. ಕವಿ ; ಮೇಲೆ ಬೀಳು ; ಆವರಿಸು : ಮುಗ್ಗಿ ಬೀಳುವ ಪಾಯದಳವನು ನುಗ್ಗುನುಸಿ ಮಾಡಿದನು (ಕುಮಾರವ್ಯಾ. ೬-೪೬); ಲಗ್ಗೆಯೊಡೆದು ದಾನೆಯ ಮೋಹರ ಮೇಲೆ ಮುಗ್ಗುವ ಕುದುರೆಯ ಪೌಜು ಒಗ್ಗೊಡೆಯಿತು (ಕುರಾಸಾಂ. ೦೩-೦೨೫) ; ನಲೆ ಮುಗ್ಗಿದರ್ಮಗಿಲ ಮೊಗ್ಗರದಂತೆ (ಕೈವಲ್ಯ. ೬-೩೨). ೭. ಜಗಳವಾಡು ; ಕಾದಾಡು : ಮುಳಿದವರೊಳು ಮೊಗವಂಟ ಮುಗ್ಗದೆಯಾಡಿ ಪಳಿಪವರೊಳು ಪೋರುಗೊಳದೆ . . . ಒಳುವೆಂಡಿರೊಳ್ಪಡವುದು (ಹದಿಬ. ೪-೪೦). ೮. ಕೊನೆಗಾಣು ; ಮುಗಿ ; ನಿಲ್ಲು : ಈ ವೃಷಕೇತುವಿನಲ್ಲಿಯೆ ನನ್ನ ಸಂತತಿ ಇಂದಿಗೆ ಮುಗ್ಗಿ ಹೋಯಿತು (ಬದುಕಿ. ೦೮೩). **ಮುಗ್ಗು :** ೧. ಕಡುವಿರಿಯವು ಪೊಱ ಗಳನೆಡೆಮಡಗದೆ ಮೇಲೊಟ್ಟಿ ಮತ್ತೆ ಮೆಲ್ಪರಮುಮನಾಗಡೆ ಕಟ್ಟಿ ಕುಸಿದು ಕುಸಿದಡಿ ವಿಘುಕದೆ ಸುಗಿದಗಿದು ಮುಗ್ಗಿ ತರ್ಗುವ ಪದದೊಳ್ (ಸುಕುಮಾ. ೫-೦೪). **ಮುಳ್ಗು :** ೩. ಜವದೊಳಿಱದಾಡಿದರ್ ಮುಳ್ಗಿದರ್ ತಳ್ಗಿದರ್ ಸಂಗರಾವೇಶದಿಂದೆ (ಕವಿಪು. ೨೬-೦೮); ಇರದಿಱಿಯೆ ಕಣ್ಗೆಟ್ಟು ತಳ್ಗುವರ್ ಮುಳ್ಗುವರ್ (ಕವಿಪು. ೨೮-೨೬). ೪. ಜನ್ನಗುದುರೆ . . . ಪೊದರಂ ಪಾಯ್ದು ಮುಳ್ಗಿ ನಡೆಗೆಟ್ಟು ತಡೆವಟ್ಟು ಕೊಳಗಂ ಪಟಗದ ನೆರೆಯ ಮಱ ಯಱಿಯೊಳ್ ತಾಂಟಿದತ್ತು (ರಾಮಾಶ್ವ. ೦೩೫-೨೩); ಮುಳ್ಗಿ ಕೆಡದುದು ಭದ್ರಹಸ್ತಿಯು ಖಿಳ್ಗಮೊರ್ವನ ಕರದಿ ಬಿರ್ದುದು (ನಾಗಕ. ೦೮-೫೪). **ಮುಟ್ಗು$_2$ :** ೨. ಆಕೆ ವಿನಯದಿಂ ತನ್ನ ಪದಾಬ್ಜದ ಮೇಲೆ ಮುಟ್ಗಲೊದವಿದ ಪದಪು ತೆಗೆದೆತ್ತಿ ನೃಪಸುತಂ ಮನ್ನಿಸಿದಂ (ಕಾದಂಬ. ೦೦೮); ಎಯ್ದೆ ವಂದು ಕಾಲ ಮೇಲೆ ಮುಟ್ಗಿದ ವಿನಯಾಭಿರಾಮನಂ ತೆಗೆದು ತಬ್ಬಿಕ್ಕೈಸಿ (ಕಾದಂಬ. ೨೬೫). ೩. "ಮುಟ್ಗು – ಪತನೇ" (ಶಮಾಧಾ). **ಮೊಕ್ಕು$_1$ :** ೨. ಮೊಕ್ಕಿದೆನು ಒಡತಿಯರೇ (ಸವಚ. ೦೨): ಅನೇಕ ದೇವರಿಗೆ ಮೊಕ್ಕಿದಳು (ಪದ್ಮಕೊ. ೨೫). **ಮೊಗ್ಗು$_1$:** ೩. ಅಳ್ಳಾಡಿದನಿಂದ್ರಂ ಮೊಗ್ಗಿದಂ ಪಾವಕನದಿಱಿದನುಗ್ರಾಂತಕಂ (ಎಕ. VII, ಶಿಕಾ. ೦೬೦-೮; 1066). ೫. ನಿನ್ನ ಸೂತ್ರವು ತಪ್ಪಿದರೆ ಮೊ[ಪಾಠಾಂ. ಮು]ಗ್ಗುವವು ಹೂಹೆಗಳು (ಹಂಪಾ. ೬೯). ೬. ಭೂಸುರವ್ಯಂದವೈರಿಯು ಪರಶುರಾಮನ ಚಂದವಱಿಯದೆ ಬಂದು ಹಳಚಿದನಾ ಪತಂಗಗಳ ಗೊಂದಣವುರಿಯೊಳಗೆ ಮೊಗ್ಗುವ ಚಂದದಲಿ (ಸಂಭಶ. ೨೬-೮೫). ೯. ಬಾಡು ; ಒಣಗು : ಮಾಯದ ಪುಷ್ಪಗಳು ಮೊಗ್ಗಿ ಕಂದಿದವು (ಸುವಸಂ. ೨೨). **ಮೊಳ್ಗು :** ೧. ಒಂಟಿ ಸಲಗ . . . ಸೊಂಡಿಲನ್ನೆತ್ತಿ ಮೊಳ್ಗಿ ಮುಂಗಾಲ ಮೊಣಕಾಲ ಮೇಲೆ ಕುಳಿತುಕೊಳ್ಳುತ್ತದೆ (ಸವಚ. ೦೬೮). ೨. ಸತ್ಯೇಂದ್ರಚೋಳೇಂದ್ರಸತ್ವದ ಪದ್ಮಕ್ಕೆ . . . ಮೊಳ್ಗಿದಂ (ರಾಜಶೇ. ೪-೦೦೩); ನಾರಾಯಣನ ಪದಕೆ ಮೊಳ್ಗುವೆನೀಗಳ್ (ಬಿಷ್ಣುಪು. ೦-೨-೦೫೩). ೬. ಅರಿಭಟರ ಮಿಗೆ ಬೀಳಲಿಱ ಯೆಂಬ ಪಾಸರಬ್ಬರವಾಗ ಗಗನಮಂಡಲವ ಮೊಳ್ಗಿದುದು (ಕಂಪಿಲಿ. ೦-೪೮). 'ಮುಟ್ಗು' ಪರಾ.

[ದೇ.॥ ತೆಲು. ಮೊಕ್ಕು, ಮ್ರೊಕ್ಕು, ಮೊಗ್ಗು, ಮ್ರೊಗ್ಗು ; ನಾಯ್ಕಿ. ಮೊಕ್ಕ ; ಪರ್ಜಿ. ಮೊರ್ಕ್ : ಗಡಬ. ಮುಂಲ್ಕ್ ; ಕುಇ. ಮ್ರೋಂಗ ; ಮಾಲ್ತೊ. ಮುರ್ಗ್ರ]

**ಮೊಟ್ಟು₂, ಮೊಗ್ಗು₂** (ನಾ). ೧. ನಮಸ್ಕಾರ ; ವಂದನೆ : "ತುಟಿಲಿ ಬಿಗು ಮೊಟ್ಟು ಮಣಿ ಕುಂಬಿ ಪೊಡವಡಿಕೆಯು ನಮಸ್ಕಾರಕೆ ತಪೆ ಸಂದ ನಾಮ" (ಕರ್ಣಾಮಂ. ೩೩). ೨. ಅಧೀನ ; ವಶ : 'ಮೊಟ್ಟಿಗೆಸು' ಪರಾ. **ಮೊಗ್ಗು₂** : ೧. "ಮೊಗ್ಗು [ಪಾಠಾಂ. ಟ್ಟು] ತುಟಿಲಿಗೆಯ್ಯೆನ್ನಲ್ ಬಿಡದದುವೆ ವಂದನಾರ್ಥದಿ ತೊಡರ್ಗುಂ" (ಕವಿಕಂ. ೦೮೯). ೨. "ಮೊಗ್ಗೆನೆ ವಶದೊಳ್ (ಕರ್ಣಾಟಶ. ೪೭); "ಮೊಗ್ಗೆನೆ ವಶವೆಂದು" (ಕಶಬ್ದ. ೯೭). ೩. ಕೊಳ್ಳೆ ; ಸೂರೆ: "ಮೊಗ್ಗೆನೆ ತಾಂ ಸೂಱೆಯೆಂಬ ತೆಱನದು" (ಕತುಂ. ೮೩೦); ಗೆಲ್ದ ಜಯವಗ್ಗದ ಸುಗ್ಗಿಯ ಮೊಟ್ಟೆದೆಂದು ಬಂದಿರದೆ ಪೊಣರ್ಚೆ (ಪುಷ್ಪ. ೧-೦೨). ೪. ಸುಲಭಸಾಧ್ಯವಾದುದು : ಆ ಬೇಳುವುಡಿಗೇಳ್ದು ಕೆಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ (ಶಂಕರ. ೭-೨೪); ನರೇಂದ್ರಸೇನ ಮುನೀಂದ್ರಂಗೇಕಾಕ್ಷರಂ ಪೆಜರಿಗಿವು ಮೊಗ್ಗೇ (ಎಕ. XVI. ೩೩-೨೩ ; 1053); ನೀನಲ್ಲದಂಗನೆಗೆ ಕಾಣ್ಬುದು ಮೊಗ್ಗೇ (ಪುಷ್ಪ. ೯-೦೦೦). ೫. ಸಾಮರ್ಥ್ಯ ; ಶಕ್ತಿ : ಗುಗ್ಗುರಿಯಂ ತಿಂಬ ಮೊಗ್ಗು ಸುಣ್ಣದೊಳುಂಟೇ (ರವರ್ಣಕಸ್ಥ. ೭-೦೭೦); ಅತ್ತಲಿತ್ತಲು ಹರನ ಬಿಟ್ಟವ ಕಿತ್ತ ಮೊಗ್ಗಲ್ಲ (ಕೌಶರಾ. ೨೧-೪೩). ೬. (?): ಬಗ್ಗಿಸಿದವೊ ಕೋಗಿಲೆಗಳ್ ಮೊಗ್ಗಪ್ಪ ವಿಯೋಗಿಯಂ ಪುಗಲ್ ಪುಗಲೆನುತಂ (ಕಾವ್ಯಾಕ. ೬೯೨). [< ಮೊಟ್ಟು₁]

**ಮೋಂಕು** 'ಮೋಕು' ನೋ.

**ಮೋಂಬತ್ತಿ, ಮೊಂಬತ್ತಿ** (ನಾ). ಮೇಣದಿಂದ ತಯಾರಿಸಿದ ಬತ್ತಿ ; ಮೇಣದ ಬತ್ತಿ : ಸಮಯಕ್ಕೆ ಅಂತ ಮೋಂಬತ್ತಿ ಬೆಂಕಿಪೊಟ್ಟಣ ಎರಡನ್ನೂ ಇರಿಸಿರುವರು (ಶಂಗೂಲಿ. ೦೪೦); ಬಾಗಿಲಿಗೆದುರಾಗಿ ಮೋಂಬತ್ತಿ ಅಂಟಿಕೊಂಡಿದ್ದ ಕಪ್ಪುಬಣ್ಣದ ವಿಗ್ರಹವೊಂದನ್ನು ತೂಗುಹಾಕಿತ್ತು (ಭೃಸಕು. ೦೪೦). **ಮೊಂಬತ್ತಿ** : ಹಳೆಯ ಲಾಂದ್ರಗಳನ್ನೂ ಮೊಂಬತ್ತಿಗಳನ್ನೂ ಹಣತೆಗಳನ್ನೂ ಹುಡುಕಿ . . . ಇಟ್ಟಿದ್ದಾಯಿತು (ಮಹಾಗ. ೨೨೩). [← ಹಿಂ. ಮರಾ. ಮೋಮ್‌ಬತ್ತೀ]

**ಮೋಂಬತ್ತಿಬೀಜ** (ನಾ). ಒಂದು ಬಗೆಯ ಸಸ್ಯ : ಓಂಡಿ. ಮೋಂಬತ್ತಿ ಬೀಜ (ವೃಕಿನಿ. ೪೦-೬೦೪). [ಮೋಂಬತ್ತಿ + ಬೀಜ]

**ಮೋಕ₁** 'ಮೊಕ್ಕ' ನೋ.

**ಮೋಕ₂** (ನಾ). ೧. ಯಾವುದಾದರೂ ಪ್ರಾಣಿಯ ಕಳಚಿದ ಚರ್ಮ. ೨. ಚತುಷ್ಪಾದಪ್ರಾಣಿ. ೩. ವಿದ್ಯಾರ್ಥಿ. [ಸಂ.]

**ಮೋಕಳೀಕ, ಮೋಕಳೀಕು** (ನಾ). ೧. ಬಂಧನವಿಲ್ಲದಿರುವುದು ; ಸ್ವತಂತ್ರವಾದುದು ; ತೆರವಾದುದು : ನಿನಗ ಎರಡ ದಾರಿ ಮೋಕಳೀಕ ಅವ (ಬೀಕಬಿ. ೦೩೨). ೨. ಸ್ವತಂತ್ರನಾದವನು : ಆಮೇವರ ಪುಣ್ಯದಿಂದ ಮೋಕಳೀಕ ಆಗೀನಿ (ಗ್ರಾಮಾಯು. ೪೪೩); ಗೌಡರು . . . ನಿರಾಯಾಸವಾಗಿ, ನಿಃಶಂಕವಾಗಿ ಅಲೆದಾಡಲು ಮೋಕಳೀಕರಾದರು (ಬೀಕಹ. II. ೪೩). ೩. ವಿವಾಹವಿಚ್ಛೇದನ ; ಸೋಡಚೀಟಿ : ನಮ್ಮ ಅಂತೂನಕಿಂತ ಎರಡ ವರ್ಷ ದೊಡ್ಡಾಕಿ, ಮೋಕಳೀಕ ಹ್ಯಾಂಗ ಮಾಡಿರ ? (ಬಿಸರ್ಗ. ೦೯೩). **ಮೋಕಳೀಕು** : ೪. ಹಕ್ಕು ; ಸ್ವಾಮ್ಯ : ಮಾಲ ಕೊಡುವ ಮೋಕಳೀಕು ನಮಗೆ ಕೊಟ್ಟಿದ್ದಾದರೆ ವಿಕ್ರಿ ಮಾಡುವದಕ್ಕೆ ಅಡಚಣೆ ಬೀಳಲಿಕ್ಕಿಲ್ಲ (ಮುಂಬಮ್ಯಾ. ೩೩). [← ಮರಾ. ಮೋಕಳೀಕ್]

**ಮೋಕಳೀಕು** 'ಮೋಕಳೀಕ' ನೋ.

**ಮೋಕು, ಮೋಂಕು** (ನಾ). ತುದಿ; ಅಗ್ರಭಾಗ; ಮೇಲುಭಾಗ: ಮುಂಡದ ಮೋ[ಪಾಠಾಂ. ಮೂ]ಕಿನಲಿ ಬಗಿದೊಗುವ ನೆತ್ತರು ನಾಕವನು ನಾದಿತ್ತನಲು ಸವಱಿವನು ಪರಬಲವ (ಕುವ್ಯಾದ್ರೋ. ವಾ ೭-೪೩); ಒಯೆಂತೂ ಸುಯ್ಯನೆ ಒಂದು ಮೋಕಿಗೆ ಅಪ್ಪಳಿಸಿ ಪುಟಿದು ಬೀಳುತ್ತಿತ್ತು (ಮುಂಗಾರಿ. ೬೦); ಅವಳು ಮುಂದಿದ್ದ ಹೊರಸಿನ ಕಾಲಿನ ಮೋಕಿಗೆ ರಪರಪನೆ ಜೋರಾಗಿ ಹಣೆ ಹಾಯಿಸಿ ಅಳತೊಡಗಿದಳು (ಅಗೆಕ. ೬೨). **ಮೋಂಕು** : ಅಲ್ಲಿಂ ಮುಂದೆ ಕೆಂದರಿಯ ಮೋಂಕಿನೊಳ್ ನಟ್ಟ ಕಲ್ಲ್ (ಎಕ. XIII. ೩೦-೪೨; 1204). [ದೇ.॥ ತೊದ. ಮುಕ್, ಮೊಕ್ ; ಕೊಂಡ. ಮುಸ್ಕು]

**ಮೋಕೂಫ್, ಮುವಕುಫ್, ಮುಕೋಪು, ಮೊಖೂಫು, ಮೋಖೂಫ್, ಮೌಕೂಫ್** (ನಾ). ೧. ತೆಗೆದುಹಾಕುವಿಕೆ ; ವಜಾ ; ರದ್ದು : ಅವರ ಕಡೆಯ ಜನಗಳ ಅಧಿಕಾರವನ್ನು ತೆಗೆದು, ಪ್ರಧಾನರೆಂಬ ಹೆಸರನ್ನು ತಪ್ಪಿಸಿ ಆ ಅಧಿಕಾರವನ್ನು ಮೋಕೂಫ್ ಮಾಡಿಸಿದರು (ಮಹಾಕ. I. ೨೨೪). **ಮುವಕುಫ್**: ೧. ನಾಲ್ಕು ಹಣ ಅಡುಬ್ಯಾಳಿಯನ್ನು ಚತ್ರದ ತಸದೀಕಿನ ಐವಜಿನಲ್ಲಿ ಶ್ರೀಮಠಕ್ಕೆ ಸಲ್ಲುತಾಯಿದದನ್ನು ಮುವಕುಫ್ ಮಾಡ್ಸಿ (ಮ್ಯಅಂ. ೦೯೩೯-೨೭-೯; 1830). **ಮುಕೋಪು**: ೨. (ಕೋರ್ಟು, ಕಚೇರಿ ಮುಂತಾದುವನ್ನು) ಮುಚ್ಚಿರುವುದು ; ಬಂದುಗೊಳಿಸಿರುವುದು ; ಸ್ಥಗಿತಗೊಳಿಸಿರುವುದು : ರಜಾಸಮಯವಾದುದರಿಂದ ಕೋರ್ಟು ಮುಕೋಪು ಆಗಿ ಐತಾಳರ ಆಪ್ತರಲ್ಲಿ ಒಬ್ಬರಾದ ವಕೀಲ ನಾಗಪ್ಪಯ್ಯನವರೂ ಅಲ್ಲಿಗೆ ಚಿತ್ತೈಸಿದ್ದರು (ಮರಳು. ೦೯೭). **ಮೊಖೂಫು** : ೧. ಹೆಚ್ಚಿಗೆ ಹಣ ಬೇಕಾದರೆ ಕೊಡುವೆವೆಂದು ಹೇಳಿ ಪಾರ್ಲಿಮೆಂಟನ್ನು ಮೊಖೂಫು ಮಾಡಿದರು (ಇಂಗ್ಲಂಡ. ೧೩೭). **ಮೋಖೂಫ್**: ೧. ಕುದುರೆರಿಜಮೆಂಟನ್ನು ಮೋಖೂಫ್ ಮಾಡಿ . . . ದಾಖಲೆಗಳನ್ನು ನೋಡಬೇಕೆಂಬ ಅಭಿಪ್ರಾಯದಿಂದ ಜಪ್ತಿಮಾಡಿದರು (ಮಹಾವಂ. II. ೧೦೦). **ಮೌಕೂಫ್** : ೧. ಗ್ರಾಮದ ಅಥವಾ ಗ್ರಾಮಗಳ ಭಾಗಗಳಲ್ಲಿನ ಯಾವುದಾದರೂ ಗ್ರಾಮ ನೌಕರಿಯು ಮೌಕೂಫ್ ಆಗತಕ್ಕದ್ದು (ಗ್ರಾಮಾಕ. ೬೭).

[←ಅರ. ಮುವಕುಫ್. ಮೌಕೂಫ್ ; ಹಿಂ. ಮೌಕೂಫ್; ಮರಾ. ಮೋಕೂಫ್. ಮೋಕೂಬ್. ಮೋಹಕೂಬ್./ತುಳು. ಮುಕೂಬ್]

**ಮೋಕ್ಕಕ** (ನಾ). ಒಂದು ಬಗೆಯ ಸಸ್ಯ : "ಮೋಕ್ಕಕಃ – ಮೊಟಗಿನ ಮರ" (೭ಕಂ. ೧೩೦). [?]

**ಮೋಕ್ಷ** (ನಾ). ೧. ಬಿಟ್ಟುಕೊಡುವುದು. ೨. (ಬಂಧನ, ದಾಸ್ಯ ಮುಂತಾದುವುಗಳಿಂದಾಗುವ) ಬಿಡುಗಡೆ ; ವಿಮೋಚನೆ : ನಿನ್ನ ಬಂಧನಮೋಕ್ಷಮಂ ಮಾಡಿ ರಾಜ್ಯಮಂ ಪೊಗಿಸಿ ಮುನ್ನಿನ ಪರಿಯಲಿರಿಸುವೆಂ (ಹಕಾ. ೦೩-೦೭). ೩. ಬಿಚ್ಚುವುದು ; ಕಳಚುವುದು. ೪. (ಬಾಣದ) ಎಸೆತ. ೫. ಋಣದ ನಿವಾರಣೆ, –ಪರಿಹಾರ. ೬. ಮನುಷ್ಯನ ಚತುರ್ವಿಧಪುರುಷಾರ್ಥಗಳಲ್ಲಿ ಕೊನೆಯದು; ಆತ್ಮವು ಜನನಮರಣಗಳಿಂದ ದೂರವಾಗುವುದು ; ಮುಕ್ತಿ : "ಅಪವರ್ಗಂ . . . ಮೋಕ್ಷಂ . . . ನಿರಾಮಯಂ ನಿರ್ವಾಣಂ" (ಪಾತ್ರಕೋ. ೨೦-೦೯); ಮೋಕ್ಷ ಪ್ರಾಸಾದಾಧಿರೋಹಣನಿಶ್ರೇಣೀಭೂತ ಕ್ಷಪಕಶ್ರೇಣಿಪ್ರಾಯೋಗ್ಯಾಧಃಪ್ರವೃತ್ತಿಕರಣ ಪರಿಣಾಮನಪೂರ್ವಕರಣಕ್ಷಪಕ ಪ್ರಥಮಶುಕ್ಲಧ್ಯಾನಪರಿಣತನಾಗಿರ್ದು (ಆದಿಪು. ೦೦-೦೪ ವ); ಕ್ರಮದಿಂ ಪೂಜಿಸುವಂ ಶತಕ್ರತುವೆ . . . ಪೂಜಾಲಬ್ಧಮುಕ್ಷೂಣಮೋಕ್ಷಮೆ (ಪುಷ್ಪ. ೦೦-೩೭); ಧರ್ಮಅರ್ಥಕಾಮಮೋಕ್ಷವೆಂಬ ಚತುರ್ವಿಧ ಫಲ ಪದಂಗಳ ನಾನೊಲ್ಲೆನಯ್ಯಾ (ಅಬಂದೇ. ೦೭೦-೨೨). ೭. ಸುರಿಸುವುದು ; ಹರಿಸುವುದು : ಕಾಮಗ್ರಹಗೃಹೀತಯಾಗಿರೆ . . . ವ್ಯಾಮೋಹ ಗದ್ಗದಾಶ್ರುಮೋಕ್ಷಮೂರ್ಛಾದಿ ನಾನಾವಿಕಾರಂಗಳನೊಡನೊಡನೆ ತೋಱು ವುದುಂ (ಶಂಕರ. ೪-೩೯ ವ). ೮. ತ್ಯಾಗ ; ವಿಸರ್ಜನೆ : ಘಟೋತ್ಕಚ ವಧೆ ದ್ರೋಣಚಾಪಮೋಕ್ಷಂ ದ್ರೋಣವಧೆ . . . ಪೆಱವುಮುಪಾಖ್ಯಾನ ಕಥೆಗಳೊಳೊಂದುಂ ಕುಂದಲೀಯದೆ ಪೇಟ್ದಿಂ (ಶಂಕರ. ೦೪-೩೨ ವ). ೯. ಒಂದು ಬಗೆಯ ಮರ ; ಪಾಟಲಿ : "ಮೊಕ್ಕದ ಮರ – ಗೋಲೀಥ,

ರಘಾಟಲ, ಘಂಟಾ, ಪಾಟಲಿ, ಮೋಕ್ಷ, ಮುಷ್ಕಕ" (ನಾತರಾ. ೯). ೧೦. ಒಂದು ಬಗೆಯ ಸಸ್ಯ : ಜಟಾಮಾಂಸಿ : "ಮೋಕ್ಷಾ — ಜಟಾಮಾಂಸಿ" (ಓಷಧಿ. ೦೩೦). ೧೧. ನಿಧನ ; ಸಾವು ; ಮರಣ. ೧೨. [ಜ್ಯೋತಿ] ಸೂರ್ಯ ಅಥವಾ ಚಂದ್ರಗ್ರಹಣಕಾಲದಲ್ಲಿ ಗ್ರಹಣದ ನಂತರ ಉಂಟಾಗುವ ಬಿಡುಗಡೆ : ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು ಇನ್ನೆಂದಿಗೆ ಮೋಕ್ಷವಹುದೋ ಕೂಡಲಸಂಗಮದೇವಾ (ಬಸವ. ೯). ೧೩. [ತತ್ತ್ವಶಾ] ಎಂಟು ಬಗೆಯ ಅವಸ್ಥೆಗಳಲ್ಲಿ ಒಂದು : ಸೃಷ್ಟಿಪ್ರಕರಣದಲ್ಲಿ ಪ್ರವೃತ್ತವಾದ ವೇದವಾಕ್ಯಗಳ ದೃಷ್ಟಿಯಿಂದ ಪ್ರಪಂಚವಸ್ತುಗಳಿಗೆ ಒಟ್ಟಿನಲ್ಲಿ ಸಂಭವಿಸುವ ಅವಸ್ಥೆಗಳು ಎಂಟು—ಉತ್ಪತ್ತಿ ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷ ಎಂದು (ಭಾರತ. ೯೮೭). ೧೪. [ಜೈನ] ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ ಮತ್ತು ಮೋಕ್ಷ ಎಂಬ ಏಳು ತತ್ತ್ವಗಳಲ್ಲಿ ಒಂದು ; ಬಂಧನಕ್ಕೆ ಕಾರಣವಾದ ಸರ್ವಕರ್ಮಗಳಿಂದಲೂ ಬಿಡುಗಡೆ ಹೊಂದಿ ಆತ್ಮದ ಶುದ್ಧಸ್ವಭಾವವನ್ನು ಗಳಿಸಿಕೊಳ್ಳುವಿಕೆ : ಜೀವಾಜೀವಾಸ್ರವ ಬಂಧಸಂವರನಿರ್ಜರಾಮೋಕ್ಷ ಭೇದದಿಂ ಸಪ್ತವಿಧಂ. . . ಮೂಲೋತ್ತರಾದಿಭೇದಭಿನ್ನಕರ್ಮಪ್ರಕೃತಿಗಳ ನಿರ್ಮೂಳೋಚ್ಛಿತ್ತಿ ಮೋಕ್ಷಮೆಂಬುದು (ಆದಿಪು. ೦೦–೬೩ ವ); ಆತ್ಮನ ವಿಮಲಾಚಿತ್ಕ ಸ್ವಾಭಾವಿಕ ಜ್ಞಾನಾದಿ ಗುಣಗಣಾವ್ಯಾಬಾಧಸುಖಸಂಯುಕ್ತಾತ್ಯಂತಿಕಾವಸ್ಥಾಂತರಂ ಮೋಕ್ಷಂ (ತತ್ತ್ವಸೂ. ೨). ೧೫. ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ ಮತ್ತು ಮೋಕ್ಷಗಳೆಂಬ ಒಂಬತ್ತು ತತ್ತ್ವಗಳಲ್ಲಿ ಒಂದು ; ನವಪದಾರ್ಥಗಳಲ್ಲಿ ಒಂದು : ಜೀವಾಜೀವಪುಣ್ಯಪಾಪಾಸ್ರವಸಂವರ ನಿರ್ಜರಬಂಧಮೋಕ್ಷಮೆಂದಿಂತು ನವಪದಾರ್ಥಂಗಳುಂ ಪಂಚಾಸ್ತಿಕಾಯಷಡ್ದ್ರವ್ಯಂಗಳುಮೆಂಬಿವಜಿೂಳ್ಪವ ಮಾನುಮಚಿತಮುಂ . . . ಗುಣಾಂಗಳುಮನಜಿದು (ಪಂಪ ರಾ. ೬-೦೬). [ಸಂ.]

**ಮೋಕ್ಷಕ** (ನಾ). ೧. ಬಿಡುಗಡೆ ಮಾಡುವುದು. ೨. ಮುಕ್ತಿ ; ವಿಮೋಚನೆ. ೩. ವಿಮೋಚನೆ ಮಾಡುವವನು ; ಮುಕ್ತಿಯನ್ನು ಕೊಡುವವನು. [ಸಂ.]

**ಮೋಕ್ಷಕಾಲ** (ನಾ). ಗ್ರಹಣವು ಬಿಡುವ ಸಮಯ : ಖಗೋಳಶಾಸ್ತ್ರಜ್ಞರು . . . ಗ್ರಹಣಗಳ ಸ್ಪರ್ಶ ಮತ್ತು ಮೋಕ್ಷಕಾಲಗಳು, ಮಧ್ಯಗ್ರಹಣಕಾಲ ಮುಂತಾದ ಎಲ್ಲ ವಿವರಗಳನ್ನು ಕೊಡುತ್ತಾರೆ (ಶಾಕೋ. VI. ೬೪೯). [ಸಂ.]

**ಮೋಕ್ಷಗತಿ** (ನಾ). ಬಿಡುಗಡೆ ; ಮುಕ್ತಿ : ವೀತರಾಗತ್ವಮಂಬುರುಹ ಶ್ರೇಣಿಗುದಾತ್ತ ಮೋಕ್ಷಗತಿ ಪೌಷ್ಯಕ್ಕಾದುದಾಹಿದಂ ದಿಗಂಬರಸಾಂಗತ್ಯತಪಃ ಪ್ರಭಾವಮೆನಸುಂ ಮೆಯ್ವೆತ್ತೊ ಪೇನಾಗದೋ (ಧರ್ಮಪು. ೬-೩೩). [ಸಂ.]

**ಮೋಕ್ಷಗಾಮಿ** (ನಾ). ಕೈವಲ್ಯಕ್ಕೆ ಹೋಗುವವನು ; ಮುಕ್ತಿಯೋಗ್ಯನಾದವನು : ಸಗರಸುತರೆಲ್ಲರುಂ ಮೋಕ್ಷಗಾಮಿಗಳ್ (ಅಜಿತಪು. ೦೨-೨೯) ; ಭೂಮಿಯೊಳಾಕಾಶವನು ತಂದು ಹೂಳಿದಂತೀ ಮೈಯೊಳಾತ್ಮತುಂಬಿಹುದು ಭೂಮಿಗಚ್ಚರಿಯಲ್ಲವೆಯೆಂದರಾ ಮೋಕ್ಷಗಾಮಿಗಳಧ್ಯಾತ್ಮ ಮಜಿದು (ಭರತೇ. ೬೯-೬೬). [ಸಂ. ಮೋಕ್ಷಗಾಮಿನ್]

**ಮೋಕ್ಷಣ** (ನಾ). ೧. ಬಿಡುಗಡೆ ಮಾಡುವುದು ; ವಿಮೋಚನೆಗೊಳಿಸುವುದು. ೨. (ಬಾಣವನ್ನು) ಎಸೆಯುವುದು. ೩. [ನಾಟ್ಯ] ಇಪ್ಪತ್ತು ಬಗೆಯ ಕರಕರ್ಮಭೇದಗಳಲ್ಲಿ ಒಂದು : ಧೂನನ, ಶ್ಲೇಷ, ವಿಶ್ಲೇಷ, ಕ್ಷೇಪ, ರಕ್ಷಣ, ಮೋಕ್ಷಣ . . . ತರ್ಜನ ಈ ಇಪ್ಪತ್ತು ಕರಕರ್ಮಭೇದಂಗಳ್ (ಮಾನಸೋ. ೯-೦೩ ವ). [ಸಂ.]

**ಮೋಕ್ಷದಾಯಕ** (ನಾ). ೧. ಕೈವಲ್ಯವನ್ನು ಕೊಡುವಿಕೆ. ೨. ಕೈವಲ್ಯವನ್ನು ಕೊಡುವವನು : ಪರಮಾತ್ಮ. [ಸಂ.]

**ಮೋಕ್ಷದಾಯಕಿ** (ನಾ). ಮುಕ್ತಿಯನ್ನು ಕೊಡುವ ದೇವತೆ : ಮೋಕ್ಷದಾಯಕಿ ಸಕಲಮಂತ್ರನಾಯಕಿ ಮಾಯೆ ಸಾಕ್ಷಾಜ್ಜಗನ್ಮಾತೆ (ಕೈಬಾ. ೦೩-೨೩). [ಮೋಕ್ಷದಾಯಕ + — ಇ₂]

**ಮೋಕ್ಷಪದ** (ನಾ). ೧. ಕೈವಲ್ಯದ ಪದವಿ ; ಮುಕ್ತಿ : ಸತತಮೋಕ್ಷಪದೇಚ್ಛುಮಹಾತಪಸ್ವಿ . . . ಸೈದ್ಧಾಂತಿಕಚಕ್ರವರ್ತಿ ಮುನಿಚಂದ್ರಮುನೀಂದ್ರನೆ ವಂದ್ಯನುರ್ವಿಯೊಳ್ (ಶಂಪ್ರಶ. ೦-೨೭). ೨. ಮುಕ್ತಿದಾಯಕನಾದವನು : ಮೋಕ್ಷಪದರ್ ಸದೇಷ್ಯಗಳಕ್ಷಯಮುನಿಗಳ ಸುವಾಕ್ಯದೊಳಮೆಣಿಸಲ್ ಪ್ರತ್ಯಕ್ಷಪ್ರಮಾಣವಚನಮನಕ್ಷಮ ಮೂಢಾತ್ಮನೀನದಂ ತಿಳಿದಿರ್ಪೆ (ಚಾರುದತ್ತ. ೧೧-೬೮). [ಸಂ.]

**ಮೋಖೂಫ್** ' ಮೋಕೂಫ್ ' ನೋ.

**ಮೋಗ** (ನಾ). (?) : ಬಾಗಿಸೆ ಶಿರವ ಕೂರ್ಮಗಳ ಗ್ರೈವ ಮೇಗಾಲುಗಳ ಸೊಗಸುಗಳ ನವ್ಯಮೋಗದಂತಪ ಹರಡುಗಳ ಬಂದು (ಕುಶೇಲೋ. ೩೯-೯). [ಸಂ.]

**ಮೋಗಮ್** ' ಮೋಘಮ್ ' ನೋ.

**ಮೋಗುಮ** ' ಮೋಘಮ್ ' ನೋ.

**ಮೋಘ** (ಗು). ೧. ಇಲ್ಲದಿರುವ ; ವಿಹೀನವಾದ. ೨. ಬಿಟ್ಟ ; ತ್ಯಜಿಸಿದ. ೩. ವ್ಯರ್ಥವಾದ ; ಫಲವಿಲ್ಲದ : ಮಚ್ಚರಮುಂ ಮೋಘಮೊಡಂಬಡುಂ ಕಲುಷಮುಂ ಮುನ್ನುಳ್ಳುದು (ಶಂಪ್ರಶ. ೭-೩೩). ೪. ಉದ್ದೇಶರಹಿತವಾದ ; ಗುರಿಯಿಲ್ಲದ. (ನಾ). ೫. ವ್ಯರ್ಥವಾದುದು ; ನಿಷ್ಪ್ರಯೋಜಕವಾದುದು : "ವೃಥೆ ಮೋಘಂ" (ಶಬ್ದಕೋ. ೦೨-೦೦); ಮೋಘಮನಖಿಲಪರಿಗ್ರಹದಾಘಮನೀ ಕೈಕೆ ಬೇಡೆ ಧರೆಯುಂ ತೃಣದಿಂ ಲಾಘವಮೆನೆ ಬಗೆದೀಗಂ ರಾಘವನೌದಾರ್ಯತುಂಗನೀಯದುದುಂಟೇ (ಶಂರಾಮ. ೬-೦೦೯); ಲೋಕ ಶಾಶ್ವತ, ಇದೇ ಸತ್ಯ, ಮಿಕ್ಕುದು ಮೋಘ (ಬುದ್ಧಚ. ೧೭). [ಸಂ.]

**ಮೋಘತೆ** (ನಾ). ಅಪ್ರಯೋಜಕವಾದುದು ; ನಿರರ್ಥಕವಾದುದು : "ಮೋಘತೆ ತಾಂ ವೈಯರ್ಥ್ಯಂ" (ಶಬ್ದಕೋ. ೦೦೩-೨೯). [ಸಂ. ಮೋಘತಾ]

**ಮೋಘಮ್**, ಮಗುಂ, ಮೊಗಂ, ಮೊಗುಂ, ಮೋಗಮ್, ಮೋಗುಮ, ಮೋಘಮ (ಗು). ೧. ಅನಿಶ್ಚಿತವಾದ ; ಅಸ್ಪಷ್ಟವಾದ ; ನಿರ್ದಿಷ್ಟವಲ್ಲದ : ಕೊಟ್ಟ ಮನೀಗೆ ಹೋಗ್ರೀನಿ ಅಂಬೋ ಮೋಘಮ್ ಮಾತು ಏನುಪಯೋಗ ? (ಭಾಗ್ಯಶ್ರೀ. ೪); ಕೇಶವರಾಯ ಮೋಘಮ್ ಮಾತಾಡಿ ಕೈಬಿಟ್ಟ (ಗ್ರಾಮಾಯ. ೧೦೬). **ಮಗುಂ** : (ನಾ). ೨. ಅಸ್ಪಷ್ಟ ; ಅನಿಶ್ಚಯ : ಆಫೀಸಿನಲ್ಲಿ ಇರುವ ಇತರರಿಗೆ ವಿಷಯ ತಿಳಿಯದಂತೆ ಮಗುಂ ಆಗಿ ಉತ್ತರ ಕೊಡುವುದು ಮತ್ತೂ ಕಷ್ಟ (ಅಶಮ. ೦೦೬). **ಮೊಗಂ** : ೨. ಸುಂಕೆ ಅಲ್ಲಮಾತಂತ ಅಂಗೆಲ್ಲ ಮೊಗಂ ಆಗಂದ್ರೆ ನಡೀತದ ರತ್ನ ? (ಕಲಾರ. ೧೬೨). **ಮೊಗುಂ** : ೧. ಉಭಯತ್ರರಿಗೂ ಅನುಕೂಲವಾಗುವಂತೆ ಮೊಗುಂ ಕರಾರು ಮಾಡಿಸಿದೆ (ಕಲಿಪ. ೩೦೪); ಮಹಲಿಂಗಯ್ಯ ಮೊಗುಮ್ಮಾಗಿ . . . ಅಂಗಲಾಚಿದ (ಮಾಮಾಚ. ೩೦). **ಮೋಗಮ್** : ೧. ಹೊಸ ಎಸ್. ಈ. ಯ ನೇಮಣೂಕೀ ಆಜ್ಞೆಗಳು ಹಿಂಬಾಲಿಸಲಿವೆ ಎಂಬ ಮೋಗಮ್ ವಾಕ್ಯವಿತ್ತು (ದೀಕಕ. II. ೩೭೪). ೨. ಅರ್ಜೀ ಒಳಗ ಎಲ್ಲಾ ಮೋಗಮ್‌ನ ಅವ (ದೀಕಕ. II. ೩೨೦); ಹಿಂಗ ಮೋಗಮ್ ಬ್ಯಾಡಪ. ಬಿಡಬಿಡಿಸಿ ಹೇಳನ್ನು ಮಾರಾಜರಿಗೆ (ನಾರಾ. ೯೬). **ಮೋಗುಮ** : ೧. ಖರೇದಿ ಬರಿಯುವಾಗ್ಗೆ ಉತ್ತಮ, ಮಧ್ಯಮ, ಸಾಮಾರ ಈ ಪ್ರಕಾರದ ಮೋಗುಮ ವರ್ಣನೆಯು ಬರಿಯದೆ, ಯಾವ ಪ್ರಕಾರದ ಮಾಲು ಬೇಕಾಗುತ್ತದೆಯೋ ಅದರ ಅಜಮಾಸದಿಂದ ಭಾವವು ಸಹಾ ಬರಿಯಬೇಕು (ಮುಂಬಿವ್ಯಾ. ೬೮). **ಮೋಘಮ** : ೧. ಏನೋ ವಿಚಾರಿಸಿದಂತೆ ಮಾಡಿ . . . ಮೋಘಮ

ಮಾತಾಡಿ ಬಿಟ್ಟ (ಗ್ರಾಮೂಹು. ೨೬೯). [ ← ಅರ. ಮುಗ್ಹವ್ ; ಹಿಂ. ಮುಗ್ಧಮ್; ಮರಾ. ಮೋಘವ್, ಮೋಹಗವ್ ]

**ಮೋಘವು** ' ಮೋಘವ್ ' ನೋ.

**ಮೋಘೆ** (ನಾ). ೧. ಒಂದು ಬಗೆಯ ಸಸ್ಯ; ಪಾದರಿಗಿಡ. ೨. ಕ್ರಿಮಿ ನಾಶಕಬೀಜವನ್ನು ಹೊಂದಿರುವ ಒಂದು ಬಗೆಯ ಸಸ್ಯ ; "ವಾಯಿ ವಿಡಂಗ" (ಗಂಗಾಹು. ೬). [ಸಂ. ಮೋಘಾ]

**ಮೋಚ** (ನಾ). ೧. ಮರದ ತೊಗಟೆಯಿಂದ ಸುರಿಯುವ ರಸ; ಹಗಿನ. ೨. ಬಾಳೆಯ ಗಿಡ ಮತ್ತು ಅದರ ಹಣ್ಣು; ಕದಳಿ : "ಕದಳೀರಂಭಾಫಿಖ್ಯಮಂತದಕ್ಕುಂ ಮೋಚಂ" (ಪಸ್ತುಕೋ. ೩೪-೬); ಉನ್ನತಚಂಪಕಚೋಚಮೋಚಪಾಟಳಪನಸಾಂಬ್ರ ಪೂಗವನನಾಗಲತಾಳಿಯಿಂ ... ಒಪ್ಪುವುದು (ಶಾಇ. IX–1, ೦೦೬–೨೩; 1057); ಮಣಿಕನಕರಜತಪಾತ್ರಂ ಗಳೊಳ್ ... ದ್ರಾಕ್ಷಾಚೋಚಮೋಚಾದಿ ಫಳಕುಳಂಗಳುಂ ಸೊಗಯಿಪುವು (ಚಂದ್ರಪು. ೬-೩೪ ವ). ೩. ಒಂದು ಬಗೆಯ ಮರ ಮತ್ತು ಅದರ ಕಾಯಿ ; ನುಗ್ಗೆ : ಪೊಸತವರೆ ತೊಂಡೆ ಪಡಲಂ ಮೋಚಂ ಕೂಗರಿ ಬದನೆಯೆನಿಪ ಮೇಲೋಗರಮಂ ಪಲವನಿಕ್ಕಿದರ್ ಶಶಿಮುಖಿಯರ್ (ಶ್ರೀಪು. ೦೦-೩೨). ೪. ಬೂರುಗದ ಮರ; ಶಾಲ್ಮಲಿವೃಕ್ಷ: "ಸ್ಥಿರಜೀವಿ ಮೋಚ ಶಾಲ್ಮಲಿಯೆಲವವಕ್ಕು" (ಮಂಗರಾ. ೩೬-೦೬). [ಸಂ.]

**ಮೋಚಕ** (ನಾ). ೧. ಬಿಡುಗಡೆ ಮಾಡುವುದು ; ವಿಮೋಚನೆ ಮಾಡುವುದು. ೨. ಬಿಡುಗಡೆ ; ಮುಕ್ತಿ : ಬಲುಕರ್ಮಬಂಧಗಳು ಮೋಚಕವಾಗುವಲಿ (ಶಿದಾಕೃ. ೦೪-೩). ೩. ಮುಕ್ತಿದಾಯಕವಾದುದು : ಆಸಕ್ತಿಯಿಂದ ಮಾಡಿದ್ದು ಹೇಯ, ಬಂಧಕ, ಕಹಿ ; ಅನಾಸಕ್ತಿಯಿಂದ ಮಾಡಿದ್ದು ಶ್ರೇಯ, ಮೋಚಕ, ಸಿಹಿ (ಅಂಕರಾ. ೦೨). ೪. (ಐಹಿಕ ಬಂಧನದಿಂದ) ಬಿಡುಗಡೆ ಹೊಂದಿದವನು ; ಮುಕ್ತ : ತ್ರಿವಿಧ ತಾಪಗಳಿಂದ ತಪಿಸುತ್ತ ಮೋಚಕರಾಗಲು ಯಾಚಕರಾಗಿ ಬಂದ ಜನಕೋಟಿ ಯನ್ನು ನೋಡಿ ಅನಂತ ಅಚ್ಚರಿಗೊಂಡ (ಜನಾಪ. ೦೦೩). ೫. ವಿರಕ್ತ; ಯತಿ. ೬. ಅನಾಸಕ್ತಿ; ವೈರಾಗ್ಯ. ೭. ಬಾಳೆಯ ಗಿಡ ಮತ್ತು ಅದರ ಹಣ್ಣು; ಕದಳಿ : "ಮೋಚಕಂ – ಬಾಟೆಯ ಹಣ್ಣು" (೬ಶಧ. ೦೩೦); ಮೋಚಕಂ ಬಳುಕಿದುವು ನುಣ್ದೊಡೆಗೆ (ಪಂಕಾದಾ. ೩-೯-೩). ೮. ನುಗ್ಗೆಯ ಮರ ಮತ್ತು ಅದರ ಕಾಯಿ : "ಶೋಭಾಂಜನಃ, ಶಿಗ್ರುಃ, ತೀಕ್ಷ್ಣಗಂಧಕಃ, ಅಕ್ಷೀಬಃ, ಮೋಚಕಃ – ಐ ನುಗ್ಗೆಮರದ ಹೆಸರು" (ಶಿದ್ಯಾಂಶಿ. ೦೦೬). ೯. ಶಾಲ್ಮಲಿ ; ಬೂರುಗದ ಮರ. ೧೦. ಮರ; ವೃಕ್ಷ : ಬಾಟೆಯೊಳು ನುಗ್ಗೆಯೊಳು ಭೂರುಹದೊಳು ಸ್ಥಿರಾಯುವಿನೊಳು ವಿರಾಗದೊಳು ಮುಕ್ತಿಯೊಳು ಮೋಚಕಾಖ್ಯಂ" (ಮಂಗರಾ. ೦೪೯-೪೬). [ಸಂ.]

**ಮೋಚಕರಿ** (ನಾ). ಒಂದು ಬಗೆಯ ಸಸ್ಯ : "ಮೋಚಕರೀ – ಮಾದವೃಕ್ಷ (ಮಾಚಡ ವೃಕ್ಷ)" (೬ಶಧ. ೦೩೦). [ ? ]

**ಮೋಚಜ** (ನಾ). ಬೂರುಗದ ಮೇಣ : ಎಲವದ ಹಗಿನು : "ಮೋಚಜಃ – ಎಲವದ ಹಗಿನು" (೬ಶಧ. ೦೩೦). [ಸಂ.]

**ಮೋಚನ** (ನಾ). ೧. ಬಂಧನದಿಂದ ಬಿಡುಗಡೆ ಮಾಡುವುದು.— ಬಿಡಿಸುವುದು. ೨. ಬಿಡುಗಡೆ ; ವಿಮೋಚನೆ ; ಮುಕ್ತಿ : ಎಲ್ಲಿ ಚೇತನವೆಸುವುದಲ್ಲಿಯೆ ಪ್ರಾಣಪದವೆಲ್ಲಿ ಪ್ರಾಣಂ ಬಲಿವುದಲ್ಲಿಯೆ ಮೋಚನಂ (ಅಂಗಪು. ೦೩-೨೯). ೩. ಬಿಡಿಸುವಿಕೆ ; ಕಳೆಯುವಿಕೆ ; ನಿವಾರಣೆ. ೪. ನಿವಾರಣೆ ಮಾಡುವವನು : ನಿರ್ಭರಾಶಾಪಾಶಮೋಚನ ಕರ್ಮ ಕರ್ಮಠನು (ಬಸಪು. ೩೩-೩); ಶೋಕಮೋಚನನೆಂದು ವೇದಗಳೂ ಕೂಡ ಆತನ ಯಶಸ್ಸನ ಗಾಯನ ಮಾಡುವವು (ಹುಳಸೀ. ೦೬). ೫. ಎಸೆಯು ವುದು. ೬. ಗರ್ವ. ೭. ಮೋಸ ; ವಂಚನೆ. [ಸಂ.]

**ಮೋಚನಿರ್ಯಾಸ** (ನಾ). = ಮೋಚಜ : "ಮೋಚನಿರ್ಯಾಸಃ– ಎಲವದ ಹಗಿನು" (೬ಶಧ. ೦೩೦). [ಸಂ.]

**ಮೋಚಶ್ರಾವ** (ನಾ). = ಮೋಚಜ : "ಮೋಚಶ್ರಾವಃ, ಮೋಚ ಸಾರಃ – ಈಯೆರಡುಂ ಎಲವದ ಹಗಿನು" (೬ಶಧ. ೦೩೦). [ಸಂ.]

**ಮೋಚಸಾರ** (ನಾ). = ಮೋಚಜ : "ಮೋಚಶ್ರಾವಃ, ಮೋಚ ಸಾರಃ – ಈಯೆರಡುಂ ಎಲವದ ಹಗಿನು "(೬ಶಧ. ೦೩೦). [ಸಂ.]

**ಮೋಚಾಶ್ರು** (ನಾ). = ಮೋಚಜ : "ಮೋಚಾಶ್ರುಃ _ ಎಲವದ ಹಗಿನು" (೬ಶಧ. ೦೩೦). [ ಸಂ. ]

**ಮೋಚಿ$_1$** (ನಾ). ಬಾಳೆ; ಕದಳಿ : "ಮೋಚೀ–ಬಾಟೆ[3]" (೬ಶಧ. ೦೩೦). [ ಸಂ. ಮೋಚೀ ]

**ಮೋಚಿ$_2$** (ನಾ). ಚಪ್ಪಲಿ ಮುಂತಾದ ಚರ್ಮದ ಕೆಲಸ ಮಾಡುವವನು; ಚಮ್ಮಾರ : ಜೋಡನು ಹೊಲಿಯಲು ಬಾರದ ಪಂಡಿತ ಮೋಚಿಯು ತಾನಲ್ಲ (ಅರಿರೋ. ೨೩).
[ ← ಹಿಂ. ಮರಾ. ಮೋಚೀ; ಬಂಗಾಲಿ. ಮುಚಿ. / ಸಂ. ಮೋಚಿಕ ]

**ಮೋಚಿಕೆ** (ನಾ). ಕತ್ತರಿಸಿರುವ ಸ್ಥಿತಿ : ಇತ್ತ ಮೂಗಿನ ಮೋಚಿಕೆಯ ಭಟ ಖತಿಯ ಭರದಲಿ ಬಂದನಾಹವಕೆ (ಕೊರಶಾ. ೬-೨೯-೪).
[ ಮೋಚು$_1$ + – ಇಕೆ ]

**ಮೋಚಿಗ** (ನಾ). ಮೊಚ್ಚೆಯನ್ನು ಹೊಲಿಯುವವನು : ಕವಲೆಯವು ನಳದೋಂ [ಮೋ]ಚಿಗನುಂ . . . ಧರ್ಮ್ಮವಂ ಬಿಟ್ಟೋನ್ (ಇಇ. ೦೪೪೬, ಹಾಪಗಂ. ೨೦೬–೦೦; 781).
[ ☞ ಇದು ' ಮೊಚ್ಚಿಗ ' ಎಂಬುದರ ಅಪಲಿಖಿತವಿರಬಹುದು ]

**ಮೋಚು$_1$**, **ಮೋಸು$_1$** (ಕ್ರಿ). ೧. ಕತ್ತರಿಸು ; ತುಂಡುಮಾಡು : 'ಮೋಚಿಕೆ' ಪರಾ. ೨. ವೈಧವ್ಯಸೂಚಕವಾಗಿ ತಲೆಯನ್ನು ಬೋಳಿಸಿಕೊಳ್ಳು : "ಮೋಚು—ವೈಧವ್ಯೇ" (ಕಮಾರಾ) ; ಈಚಲಮರ ಹೀನ ನೀಚರ ನೆರೆ ಹೀನ ಮೋಚಿದ ಹೆಣ್ಣು ತರ ಹೀನ (ಸರ್ವಜ್ಞ. ೦೬೩೬). ೩. ವೈಧವ್ಯಸೂಚಕವಾಗಿ ತಲೆಯಮೇಲೆ ಸೆರಗು ಹಾಕಿಕೊಳ್ಳು– ಮುಸುಕು ಹಾಕಿಕೊಳ್ಳು: (೬). ೪. (ಆಲಂ) ಹಾಳುಮಾಡು ; ನಾಶಗೊಳಿಸು : ನಾಚಿ ಪುಷ್ಕರ ಸಿಂಹಪೀಠವ ಮೋಚಿದವನಂ ತಿಳಿದು ನಿಳಯಕೆ ಕೋಚಿಯಿಂದೈದಿದನು ನಳನೃಪ ನಿಜನಿಕೇತನಕೆ (ಅಂಬಶಾ. ೪೯-೬೪). **ಮೋಸು$_1$** : ೪. ಮಾಂಡವ್ಯಪುರವರಾಧೀಶನತಿಕೋಪಮಾನಸ ನಾಗಿ ಜಂಗಮವ ಮೋಸಿ ಬಾ ಕದ್ದೊಯ್ದ ಚರಚೋರ ಕಳವುರವ . . . ಎನುತಲಿ ಯತಿಯ ರೋಷದಿಂ ಕಿಡಿಕಿಡಿಯನುಗುಳುತಿರೆ (ಕೋರಶಾ. ೩-೨).
ಮೋಚಿಕೊಳ್ಳು = ವೈಧವ್ಯಸೂಚಕವಾಗಿ ತಲೆಯನ್ನು ಮುಂಡನ ಮಾಡಿಸಿಕೊಳ್ಳು : ನಿನ್ನ ಅಪ್ಪ ಅಂತೀಯಲ್ಲ, ಅವರು ಸತ್ತಾಗ ನಾನು ಮೋಚಿಕೊಂಡೆ (ಸಣ್ಣ ಕ. ೯-೩೬).. ' ಲೋಚು ' ಪರಾ.
[ ದೇ.॥ ತೆಲು. ಮೋಯು ]

**ಮೋಚು$_2$** (ನಾ). ಬೋಳಿಸುವಿಕೆ ; ಮುಂಡನ : ಓಡಾಂತು ಕಯ್ಯಲ್ಲಿ ಮೋಚಾಂತು ತಲೆಯಲ್ಲಿ . . . ಪರಿಜು ಸೊಡರಂತವಂ ಬಿಕ್ಕ ನಿಕ್ಕುವಮಲ್ಲು (ಶಾಪಂದ. ೭-೪೯). [ <ಮೋಚು$_1$ ]

**ಮೋಚೆ** (ನಾ). ೧. ಬಾಳೆ ; ಕದಳಿ : "ರಂಭಾ, ಕದಲೀ, ಮೋಚಾ— ಈ ೩ ಬಾಟೆ[3]" (ಹಲಾಯು. ೩೨-೩೯). ೨. ಹತ್ತಿಯ ಗಿಡ. ೩. ನೀಲಿ ಗಿಡ : "ಮೋಚಾ—ಬಾಟೆ[3], ನೀಲಿ, ಎಲವ, ತದುಕು" (೬ಶಧ. ೦೩೦). ೪. ಶಾಲ್ಮಲಿ ವೃಕ್ಷ; ಬೂರುಗದ ಮರ: "ಪಿಚ್ಛಿಲಾ, ಪೂರಣೀ, ಮೋಚಾ, ಚಿರಾಯುಃ, ಶಾಲ್ಮಲಿಃ —ಐ ಬೂರುಗದ ಗಿಡ" (ಶಿದ್ಯಾಂಶಿ. ೦೨೨).
[ ಸಂ. ಮೋಚಾ ]

**ಮೋಜ** ' ಮೊಚ್ಚೆಯ ' ನೋ.

**ಮೋಜಣಿ** (ನಾ). ಭೂಮಿಯನ್ನು ಅಳತೆ ಮಾಡುವಿಕೆ ; ಭೂಮಿಯ ಮಾಪನ : ಮೋಜಣೀ ಎಂಬುವದು ಅಳತೆಯನ್ನೂ ಮೋಜಣೀದಾರ್ ಎಂಬುವದು ಅಳತೆ ಮಾಡುವವನನ್ನೂ ತಿಳಿಸುವದು (ಭೂಮಿಅ. ೧) ; ನೆಲವನ್ನೆಲ್ಲ ಅಳೆದು ವಿಂಗಡಿಸಿ ಕಂದಾಯ ಗೊತ್ತುಮಾಡುವ 'ಮೋಜಣಿಯವರ' ಕಾರ್ಯರೀತಿಯನ್ನು ಇದು ವಿಮರ್ಶಿಸುತ್ತದೆ (ಹಾಕಚ. ೦೩೩). [ ←ಮರಾ. ಮೋಜಣೀ ]

**ಮೋಜಣಿದಾರ** 'ಮೋಜಣೀದಾರ' ನೋ.

**ಮೋಜಣೀಖಾತೆ** (ನಾ). ಭೂಮಿಯ ಅಳತೆ, ಪರಿಶೀಲನೆ ಮೊದಲಾದ ಕಾರ್ಯವನ್ನು ಮಾಡುವ ಇಲಾಖೆ : ಮೋಜಣೀಖಾತೆಯಲ್ಲಿ ಅವನಿಗೊಂದು ಕೆಲಸವಿತ್ತು (ರಂಗಲೋ. ೯೯). [ ಮೋಜಣಿ + ಖಾತೆ₂ ]

**ಮೋಜಣೀದಾರ**, ಮೋಜಣಿದಾರ, ಮೋಜಿನಿದಾರ, ಮೋಜಿನೀದಾರ (ನಾ). ಭೂಮಿಯನ್ನು ಅಳತೆ ಮಾಡುವವನು : ಕೆಲವು ವೇಳೆ ಮೋಜಣೀದಾರನು ಅಳತೆಯ ಕೆಲಸದಲ್ಲಿರುವಾಗ ನಿಶಾನಿ ಹಿಡಿಯುವವನು ನಿಶಾನಿ ಕೆಳಗಿಟ್ಟು ನಿದ್ದೆ ಮಾಡುವುದುಂಟು (ಭೂಶಿಶಿ. ೦೩). **ಮೋಜಣಿದಾರ** : "ಮೋಜಣಿದಾರ, ಪೈಮಾಷಿದಾರ" (Surveyor. ೩೦೯೩). **ಮೋಜಿನಿದಾರ** : ಮೋಜಿನಿದಾರನ ದಿಗ್ದರ್ಶಕ (Compass. ಶಾಶಶಿ. ೦೮). **ಮೋಜಿನೀದಾರ**: ತಮ್ಮ ಜಮೀನನ್ನು ಪಕ್ಕದ ಜಮೀನಿನವನು ಒತ್ತುವರಿ ಮಾಡಿಕೊಂಡಿದ್ದಾನೆಂದು ಮೋಜಿನೀದಾರರನ್ನು ಕರೆಸಿ, ಅಳತೆ ಮಾಡಿಸಿ, ಸರಿಯಾದ ಸ್ಥಳಕ್ಕೆ ಬಾಂದುಕಲ್ಲು ನೆಡಿಸಿದ್ದವನು (ಅಣಾಖಾ. ೩೩). [← ಮರಾ. ಮೋಜಣೀದಾರ್]

**ಮೋಜನ** (ನಾ). ವಿಮೋಚನೆ ; ಬಿಡುಗಡೆ : 'ಮೋಜನ — ಮೋಚನ = ಬಿಡುಗಡೆ" (ಕಬ್ಬಿಗರ. ೩೭) ; ಮೋಚನ, ಮೋಜನ (ಕರ್ನಾ. ಸು. ೧೯೩ ಕ್ರಯೋ). [ <ಸಂ. ಮೋಚನ]

**ಮೋಜನಿ** (ನಾ). ಮಾವಿನ ಮರ : "ಮೋಜನಿ — ಮಾವು" (ಬಿಶಿ೦. ೦೩೦). [ ? ]

**ಮೋಜಾ** 'ಮೊಚ್ಚೆಯ' ನೋ.

**ಮೋಜಿನಿದಾರ** 'ಮೋಜಣೀದಾರ' ನೋ.

**ಮೋಜಿನೀದಾರ** 'ಮೋಜಣೀದಾರ' ನೋ.

**ಮೋಜು₁** 'ಮೊಚ್ಚೆಯ' ನೋ.

**ಮೋಜು₂**, ಮೌಜು (ನಾ). ೧. ವಿನೋದ; ತಮಾಷೆ : ಈ ಸನ್ನಿವೇಶವು ಬಲು ಮೋಜಿನದಾಗಿದೆ (ಹಾಚಿಶ. ೦೪೯) ; ಫಕೀರನೊಬ್ಬನು ಬಂದು ಅಮಲನಿಗೆ ಮೋಜಿನ ಕತೆಗಳನ್ನು ಹೇಳುತ್ತಾನೆ (ರರ್ವಶಾ. ೬೯) ; ಆಗಾಗ ಮೋಜಿಗೆಂದು ಮುಕ್ಕಾ ಹಣ್ಣುಗಳನ್ನು ತನ್ನ ತುಟಿಗಳ ಮಧ್ಯೆ ಇರಿಸಿಕೊಳ್ಳುವಳು (ಅಕ್ರಮ. ೬೩). ೨. ವಿಲಾಸ : ಮನೋರಂಜನೆ ; ಸುಖಭೋಗ : ಗಾಜು ನೋಟಕೆ ಲೇಸು ಮೋಜು ಇರುಳಲಿ ಲೇಸು (ನವಗ್ರ. ೦೦೩೩) ; ಕೆಲವೊಂದು ಸಲ ಮೋಜಿಗಾಗಿ ಕುದುರೆಸವಾರಿ ಮಾಡುತ್ತಿದ್ದುದುಂಟು (ಸಸ್ಯಶ. ೯೯). ೩. ಶೋಕಿ ; ಮಜ : ನಮ್ಮ ಕ್ರಿಶ್ಚನ್ನರಿಗೆ ಸ್ವಲ್ಪಿಲ್ಲ ಸ್ವಲ್ಪ ಮೋಜಿದೆ ಜೀವನದಲ್ಲಿ-ನಿಮಗೆ? (ಹೊಸಕ್ರಿ. ೧೩೯); ಗೊಂಬೇ ಮದಿವಿ ಮಾಡಿ ಮಾಡಿ ಸಾಕಾಯ್ತು. ಪೋಡಿ-ಅವರೊಳಗೆ ಮೋಜೇ ಇಲ್ಲ (ಮುಕ್ಕೃ. ೩೦). ೪. ಸಂತೋಷ ; ಆನಂದ : "ತುಷ್ಟಿ = ಮೋಜು" (ಶಾಚ್. ೩೬). ೫. ಸಂಭ್ರಮ ; ಸಡಗರ : ಗೌಜಲಹಕ್ಕಿಯ ಕಾಳಗವನು ಬಲು ಮೋಜಿನಿಂದಲಿ ಮಾಡಿಸುವರು (ಕಂಪಶಿ. ೭-೦೯) ; ರಾಜರಾಜರು . . . ಮೋಜಿನಿ ಮುಂದೆ ಹಿಂದೆ ಪಾಸಗಿ ಬರುತಿರಲು (ಸೌಗಂಧ. ೧೩೨-೨) ; ಇಬ್ಬರೂ ಮೋಜಿನಿಂದ ಜಾತ್ರೆ ಪವಾಡಿ ತೃಪ್ತಿ ಹೊಂದುತ್ತಾರೆ (೯೩ನ್ನಶಾ. ೦೦೬). ೬. ಸೊಗಸು ; ಅಂದ : ಮುಂಗಾರುಮಳೆಯ ಮೋಜನ್ನು ದಿಟ್ಟಿಸುತ್ತ . . . ಕುಳಿತುಕೊಂಡಿದ್ದ (ವಾಕ್ಷೀಲ ೯).

**ಮೌಜು** : ೧. ಮಾಯಿಯನು ಮುರಿದೆತ್ತಿ ಮೌಜಲಿ (ಕಂಠ. ೦೦). ೩. ಗೆಳೆಯರೂ ಬಂದುವರಿಂದ ಅವನಿಗೆ ಒಳ್ಳೇ ಮೌಜಿನಿಂದ ಕಾಲ ಕಳೆಯಲಿಕ್ಕೆ ಅನುಕೂಲವಾಗಿತ್ತು (ಅಪರಕ. ೪). ೭. ಲಹರಿ ; ಗುಂಗು : ನಾನೀಗ ಒಳ್ಳೆಯ ಮೌಜಿನಲ್ಲಿದ್ದೇನೆ ! (ಅರಗಿ. ೧೩೦). ೮. ಉತ್ಸವ ; ಸಮಾರಂಭ : ಜಾತ್ರೆ ಮೌಜುಗಳಲ್ಲಿ . . . ಭಾಗವಹಿಸಿ ಜನತೆಯನು ಭಕ್ತಿರಸದತ್ತ ಆಕರ್ಷಿಸುತ್ತಿದ್ದರು (ಕಂಠ. ೫೭).

**ಮೋಜಿನ ವೇಷ** = ಮನೋರಂಜನೆಗಾಗಿ ಧರಿಸುವ ವಿಚಿತ್ರವೇಷ : ಮೋಜಿನ ವೇಷ ಹಾಕಿದವರಿಗೆ . . . ಬಹುಮಾನಗಳನ್ನು ಹಂಚಿದರು (೯ಕಪ್ರ. ೩-೪೦). **ಮೋಜಿನಾಟ** = ತಮಾಷೆಯ ಪ್ರಸಂಗ : ಅವರಿಗೆ ಹೆವರಿಕೆಯೆಲ್ಲ ಹೋಗಿ ಇದೊಂದು ಮೋಜಿನಾಟವೆಂದು ಕಾಣತೊಡಗಿತ್ತು (ಮುಂಗಾಮು. ೫). [←ಅರ. ಹಿಂ. ಮರಾ. ಮೌಜ್]

**ಮೋಜುಗಾರ** 'ಮೋಜುಗಾಟಿ' ನೋ.

**ಮೋಜುಗಾರಿಕೆ** (ನಾ). ವಿಲಾಸ ; ಸುಖೋಪಭೋಗ : ಆ ಹಣ ವ್ಯಾನೇಜರನ ಮೋಜುಗಾರಿಕೆಗೆ ದುರ್ವ್ಯಯವಾಗಿತ್ತು (ಐಮುಕ್ರ. ೯೩) ; ನಿನ್ನ ಕಕ್ಷಿಗಾರಳ ಮೋಜುಗಾರಿಕೆಯ ರಭಸದಿಂದ ಪತಿಯ ಪ್ರಾಣವನ್ನು ಹೋಗಲಾಡಿಸಿಕೊಂಡಳೆಂದು ಹೇಳಲಿಲ್ಲವೆಯಾ ? (ವಾಗ್ದೇಶಿ. ೨೨೦). [ಮೋಜುಗಾರ (<ಮೋಜುಗಾಟಿ) + — ಇಕೆ]

**ಮೋಜುಗಾಟಿ**, ಮೋಜುಗಾರ (ನಾ). ೧. ವಿಲಾಸಿ ; ರಸಿಕ ; ಗುರುಭಕ್ತಿಯೆಂಬೋದೆ ಕೊಳವಿಯಾಕಾರ ಸಿರಿನಾರಾಯಣನೆಂಬೊ ನೀರ ಅವನಜೀತು ತುಂಬಿಕೊಳ್ಳೊ ಎಲ ಮೋಜುಗಾಟಿ (ಕೃಕಂದ. ೩-೯೭-೨). **ಮೋಜುಗಾರ** : ೧. ರಾಜಬೀದಿಗಳಲ್ಲಿ ತಿರುಗುವ ಮೋಜುಗಾರರ ಬಳಿಯ ಬಟ್ಟೆಗಳೊಳ್ ಪೋಕಳಗಳನಿಟ್ಟಂತೆ (ಸೌಗಂಧ. ೦೯೩-೦೨). ೨. ತಮಾಷೆ ಮಾಡುವವನು ; ಹಾಸ್ಯಗಾರ : ಒಳ್ಳೆಯ ಮೋಜುಗಾರರು ! ಉದ್ದ ಪಾದ ಲಂಗಗಳನ್ನು ತೊಟ್ಟು ಮೇಳದವರು (ಕುಲಿಶಾ. ೭೯). [ಮೋಜು₂ + — ಕಾಟಿ]

**ಮೋಟ₁** (ನಾ). ದಡ್ಡತನ ; ಅಜ್ಞಾನ : 'ಮೋಟವಾದ' ಪರಾ. [ದೇ. ॥ ತಮಿ. ಮೋಟು ; ತೆಲು. ಮೋಟ ; ಬ್ರಾಹುಈ. ಮೋಟ್ = ತಿಳಿಗೇಡಿಯಾದ]

**ಮೋಟ₂** (ನಾ). ೧. ಕೈ, ಕಾಲು ಮುಂತಾದ ಅವಯವಗಳಿಲ್ಲದವನು ; ಅಂಗಹೀನ : ಕೈಯಿಲ್ಲದ ಮೋಟನಂತು ಕಾಲಿಲ್ಲದ ಪಿಂಟನಂತು ಶುಭಕಾರ್ಯಕ್ಕಂ ರಾಜಸಭೆಗಂ . . . ಒಳ್ಳಿಂಗಂ ಸಲ್ಲಂ (ರಚರ್ಚಾ. ೯-೩) ; ಖೂಳನಂ ಮೂಳನಂ ಮೋಟನಂ ಮುಕ್ಕನಂ . . . ಬೇಳ ಬೆಳೆಯಿತ್ತೊಡವನಂ ಕಾಮನೆಂಬ ದುಶ್ಶೀಲೆಯರು ಕಣ್ಗೆಸೆದರು (ಹರಿಶ. ೯-೯೯) ; ಮೋಟಂಗೆ ಕೈಗಳು ಮೊಳೆತವಂಗುಳಿಸಹಿತವಾ ದಸರಯ್ಯನ ಭಾವದಲಿ (ಬಸವಪು. ೪೮ ಸಂಧಿ) ; ಲೀಲೆಯಿಂ ಬಸವನಾ ಮೋಟಂಗೆ ಕೊಡನೆ ಕೈಕಾಲ (ಬಸಪು. ೩೭-೮೨). (ಗು). ೨. ಕೈಕಾಲಿಲ್ಲದ ; ಅಂಗಹೀನನಾದ : ಮೋಟ ಗಂಡನ ಮೂಕೊಜಿತೆ ಹೆಂಡತಿ ಬೇಟವ ಮಾಡಿದಂತಾಯಿತ್ತು ಕಾಣಾ (ವಚನ. ೩೦೩-೭೦). ೩. ಬೋಳಾದ ; ಬರಿದಾದ : ಸಾಕ್ಷಾತ ವಡಬಾಗ್ನಿಯ ವಿಗ್ರಹವೆನಿಸಿ ತಪವಂ ಮಾಳ್ಪುದೊಯ್ಯಂಬ ಹಾಗೆಯು ಮೋಟ ಮರದಂತೆ ಕವಲದೆಯಿಪ್ಪಂಥಾ (ಕಾಶೀಖ. ೦೭-೯). ೪. ಚಿಕ್ಕದಾದ ; ಗಿಡ್ಡ : 'ಮೋಟಗೆಯ್' ಪರಾ. [ < ಮೋಟು + — ಅ₇. / ತಮಿ. ಮೊಣ್ಣ ; ತೆಲು. ಮೊಂಡಿ, ಮೊಂಡೆಮು ; ಕೋತ. ಮೊಂಡ್ಯ ; ತೊದ. ಮುಡ್ಯ]

**ಮೋಟ₃** (ನಾ). ಒಂದು ಬಗೆಯ ಸಸ್ಯ : "ವಿಪ್ರಾ — ಮೋಟ, ಬೋಟತಟಿ" (ಬಿಶಿ. ೦೫೨). [ಸಂ. ಮೋಟಾ]

**ಮೋಟಕೆಯ್** 'ಮೋಟಗೆಯ್' ನೋ.

**ಮೋಟಗಯ್ಯಿ** 'ಮೋಟಗೆಯ್' ನೋ.

**ಮೋಟಗೆಯ್, ಮೋಟಕೆಯ್, ಮೋಟಗಯ್ಯಿ** (ನಾ). ಪೂರ್ಣವಾಗಿ ಬೆಳೆಯದೆ ಗಿಡ್ಡಾಗಿರುವ ಕೈ ; ಮೊಂಡುಕೈ : ಹೋಗಿ ದಸರಯ್ಯಗಳ ಮಂಡೆಯನೀಗ ನಿನ್ನಯ ಮೋಟಗೆಯ್ಯಲಿ [ಪಾಠಾಂ. ಕೈಯಲಿ] ಬೇಗದಲಿ ತಿವಿ (ಬಸವ. ೩೭-೦೬). **ಮೋಟಕೆಯ್** : ಭಂಡನೀತನು ಕಪಟವೇಷದ ತೊಂಡು ಕಾಜಿನ ಮೋಟಕೆಯ್ [ಪಾಠಾಂ. ಕೈ] ಗಳ ಮುಂಡನೆನ್ನದೆ ತನ್ನ ಭಾವಕೆ ಜಂಗಮಾಕೃತಿಯ ಕಂಡು (ಬಸವ. ೩೭-೩೩). **ಮೋಟಗಯ್ಯಿ** : ಅಂಗ ಜೋದ್ರೇಕದಿಂದವಗಡಿಸಿ ಮೋಟನೊಡನಿರಲವಂ ಕಳ್ಗುಡಿದು ತಿವಿಯೆ ತನ್ನಯ ಮೋಟಗಯ್ಯಿಂದೆ (ಕೊಟ್ಟೂರು. ೪-೨೭). [ಮೋಟ₂ + ಕೆಯ್₂]

**ಮೋಟನ** (ನಾ). ೧. ನಾಶಮಾಡುವುದು. ೨. [ನಾಟ್ಯ] ಇಪ್ಪತ್ತು ಬಗೆಯ ಕರಕರ್ಮಭೇದಗಳಲ್ಲಿ ಒಂದು : ಧೂನನ, ಶ್ಲೇಷ . . . ಮೋಟನ, ವಿಸರ್ಜನ, ಆಹ್ವಾನ, ತರ್ಜನ–ಈ ಇಪ್ಪತ್ತು ಕರಕರ್ಮಭೇದಂಗಳ್ (ಅಭಿನಯ. ೪–೦೩ ಪ). [ಸಂ.]

**ಮೋಟರು** 'ಮೋಟಾರು' ನೋ.

**ಮೋಟವಾದ** (ನಾ). ಅಜ್ಞಾನದಿಂದ ಕೂಡಿದ ಚರ್ಚೆ ; ಹುರುಳಿಲ್ಲದ ಮಾತು : ಪೂರ್ವಕರ್ಮಶುಭಾಶುಭವೆನಿಪ್ಪ ಮೋಟವಾದಂ ಸಲ್ಲದು (ಬಸವ. ೩೪-೦೭). [ಮೋಟ₁ + ವಾದ₂]

**ಮೋಟಾರ್** 'ಮೋಟಾರು' ನೋ.

**ಮೋಟಾರು, ಮೋಟರು, ಮೋಟಾರ್** (ನಾ). ೧. ಯಾಂತ್ರಿಕ ಚಲನೆಯನ್ನು ಉತ್ಪಾದಿಸುವ ಯಂತ್ರ ; ಚಾಲಕಯಂತ್ರ : ಈ ಮುದ್ದಲೆಯನ್ನೂ ಸ್ಪರ್ಶಕಾರಿಯನ್ನೂ (ಕಾಂಟೆಕ್ಟ್ ಮೇಕರ್) ಒಂದು ಸಣ್ಣ ಸಮಕಾಲಿಕ ಮೋಟಾರು ಓಡಿಸುತ್ತದೆ (ಕಲಿಕೆ. I, ೬೩೪). ೨. ಚಾಲಕ ಯಂತ್ರದಿಂದ ನಡೆಯುವ ಕಾರು, ಬಸ್ಸು ಮುಂತಾದ ವಾಹನ : ಈ ಕೋಲಾಹಲವನ್ನು ಕೇಳಿ ಮೋಟಾರಿನೊಳಗಿನ ಜನರು ಸುತ್ತಲಿನ ಪರದೆ ಎತ್ತಿ ಹೊರಗಿನವರನ್ನು ನೋಡುತ್ತಲಿದ್ದಾರೆ (ಶ್ರಿಬಸ. ೬೬) : ಅವನು ಕೋಪದಿಂದ ಎಸೆದ ಆಟದ ಮೋಟರು ತಳಮೇಲಾಗಿ ಬಿದ್ದು ಕಾಲಿಗೆ ಸಿಕ್ಕುತ್ತದೆ (ಅರಬು. ೩೪). **ಮೋಟರು** : ೨. ನಮ್ಮ ದೇಶದಲ್ಲಿ ನೂರಾರು ಮೋಟರುಗಳು ಬಳಕೆಯಲ್ಲಿವೆ (ಪಾಂಶ್ರ. I. ೪೦೩) ; ಉಳಿದ ಪಯಣಿಗರಿಗೆ ಮೋಟರು, ಟಾಂಗ ಮೊದಲಾದ ವಾಹನಸೌಕರ್ಯಗಳು ಸಿಗುತ್ತವೆ (ಅಳಿ. ೨). **ಮೋಟಾರ್** : ೨. ಬೈಸಿಕಲುಗಳ್ ಮೋಟಾರ್‌ಗಳಿದ್ದು . . . ಮೊತ್ತಮಾನಿಪಂ ಬಣ್ಣಿಪ್ಪನಂ ಕಾಣೆನಾ (ಮೈಸೂರು. ೩-೦೦೭). [← ಇಂ. Motor ]

**ಮೋಟಾಳು** (ನಾ). ಕುಳ್ಳ ; ಗಿಡ್ಡ : ಆಟಾಳಗೊಂದು ಮೋಟಾಳೇ ? (ಗಾದೆ). [ ಮೋಟು + ಆಳು₃ ( < ಆಳ್₃ ) ]

**ಮೋಟಿ** (ನಾ). ೧. ಮುಂಗೈ ಇಲ್ಲದವಳು. ೨. ಕುಳ್ಳಗಿರುವವಳು: (ಆ). [ ಮೋಟ₂ + — ಇ₂. / ತುಳು. ಮೋಟಿ, ಮೋಂಟಿ ]

**ಮೋಟು** (ನಾ). ೧. ತುದಿ ಮುರಿದುದು : ಮೊನಚಾಗಿಲ್ಲದುದು ; ಮೊಂಡು : ಹಾರೆ ಮೋಟು, ಗುದ್ದಲಿ ಬೊಪ್ಪು, ಗೈಯುವವನಿಗೆ ಒಕ್ಕೆ (ಗಾದೆ). ೨. ತುಂಡಾದ ಕೈ ; ಮೊಂಡುಕೈ : ಕೇಶವನ ಬೇಟವಳಿವಾಸುರದ ಮೋಟುಳಿನು ವ್ಯಾಸನಚ್ಯುತ ಕೃಣಪಿದೇವುದೆಂದು ಹೇಸಿಯುವನು ಬಿಸುಟುಯಿಪಾಲಿಂ ಭ್ರಪಿಡಿದುಳಿದ ವೋಸಿಯುಂ ಕಾಳಿಕಾಪಿಂಡದಲ್ಲಿ (ಶಾಪಂಶ. ೨-೩೦) ; ದಂಡಿಸರದ ವಸಂತದೋಕುಳಿಯಂಡೆಯೇನೆ ಮೋಟಿರಡಜಲಿ ತೊಜಪೀದುವರುಣಜಲೌಘ ಹೊಜೆದುದು ದಿಕ್ತಟಾವಳಿಯು (ಕೊರಲ. ೬-೨೬-೪೪). ೩. ಕೊಂಬೆ, ರೆಂಬೆಗಳಿಲ್ಲದ ಮರದ ಭಾಗ ; ಬೊಡ್ಡೆ: "ಸ್ಥಾಣುः, ಧ್ರುವः, ಶಂಕುः – ಈ ೩ ಮೋಟಿನ ಹೆಸರು" (ಸಿದ್ಧಾಂತ. ೦೦೦). ೪. ಕೊಯ್ಲಾದ ಮೇಲೆ ಉಳಿಯುವ ಪೈರು : ಕೂಳೆ : ಪೋದ ಮೋಟು ಕಾಣದು, ಹೋದ ಹೆಜ್ಜೆ ಕಾಣದು (ಗಾದೆ). ೫. ಊನ; ನ್ಯೂನತೆ : ನಮಗೆ ಅನುಕೂಲವಾಗಿದ್ದರೆ . . . ಬೇಕಾದದ್ದು ಮಾಡುತ್ತಿದ್ದೆವು ಎಂಬ ಅಹಂಭಾವಕ್ಕೆ ಒಳಗಾಗಿ ನಮ್ಮ ಮೋಟು ಮೇಲೆ ಮಾಡಲಿಕ್ಕೆ ಹವಣಿಸುವೆವು (ಕುಟುಂಬ. ೨೪). (ಗು). ೬. ಕುಳ್ಳಾದ ; ಗಿಡ್ಡವಾದ : ಮೋಟುಗೋಡೆಯನ್ನು ಹಾರುವುದು ಇವನೊಬ್ಬನಿಗೇ ಸಾಧ್ಯ ! (ಜಾಂಗೀ. ೩೮) ; ಮೋಟುಗೋಡೆಯ ಮೇಲೆ ಕುಳಿತು ತಲೆ ಕೊಂಕಿಸಿ ನಗು ಬೀರುತ್ತಿರುವಾಗ ಶೇಖರ ಒಂದು ಫೋಟೋ ತೆಗೆದ (ದೂಪಟ್ಟಿ. ೩೭). [ ದೇ.॥ ತಮಿ. ಮೊಟ್ಟೈ, ಮೊಣ್ಣೈ ; ಮಲ. ಮೊಟ್ಟ ; ತುಳು. ಮೋಂಟು, ಮೋಂಟ್, ಮೋಂಟ ; ಕೊಡ. ಮೋಟ್; ತೆಲು. ಮೋಟು, ಮೋಡು]

**ಮೋಟುಕೈ** 'ಮೋಟುಗೆಯ್' ನೋ.

**ಮೋಟುಗೆಯ್, ಮೋಟುಕೈ** (ನಾ). ೧. ಕತ್ತರಿಸಿದ ಕೈ; ತುಂಡುಗೈ : (ಆ). **ಮೋಟುಕೈ** : ೨. ಗಿಡ್ಡವಾಗಿರುವ ಕೈ : ಮೋಟುಕೈಗಳನ್ನು ತಿರುವುತ್ತ, ಕಂಬಗಳಂತಿದ್ದ ಆ ಕಾಲುಗಳಿಗೆ ಕಿರುಗೆಜ್ಜೆಗಳ ಸರಗಳನ್ನು ಕಟ್ಟಿಕೊಂಡು ನಾಟ್ಯರಂಗವೇರಿದ ಗಣಪತಿ (ಶಾಂಕಲಾ. ೨೩೪). [ಮೋಟು + ಕೆಯ್₂]

**ಮೋಟೆ** (ನಾ). ದಿಣ್ಣೆ : ಗುಡ್ಡ : ಗದ್ದೆಗೆ ಸೀಮೆ ಯಾವುದೆನೆ . . . ಬಡಗಣದ ಮೋಟೆಯ ದಣ್ಣೆಯ ಸಸಿನಕ್ಕೆ ನಟ್ಟ ಕಲ್ಲು (ಎಪಿಕ. XI–ii, ೧೭೭-೮೯; 1125); ಭಾಗಮಂಡಲದ ಕೋಟೆಗೆ ಹೋಗಿ, ಮುತ್ತಿಗೆ ಹಾಕಿ, ಕುಂಬಾರತ್ತು ಎಂಬ ಮೋಟೆಯಲ್ಲಿ ಫಿರಂಗಿ ಮಡಗಿ . . . ಕೋಟೆಗೆ ಇಡುತ್ತಿದ್ದರು (ರಾಜೇಂದ್ರ. ೪೯). 'ಮುಗುಳಿ₂', 'ಮೊಗಡು' ಪರಾ. [ದೇ.॥ ತಮಿ. ಮೋಟು]

**ಮೋಟ್ಟಾಯಿತ** (ನಾ). [ಕಾವ್ಯಮೀ] ಹತ್ತುವಿಧವಾದ ಶೃಂಗಾರ ಚೇಷ್ಟೆಗಳಲ್ಲಿ ಒಂದು ; ಪ್ರಿಯಕರನ ವಾರ್ತೆಯನ್ನು ಕೇಳಿದಾಗ ಇಲ್ಲವೆ ಆತನನ್ನು ನೆನೆದಾಗ ಸ್ತ್ರೀಯ ಸ್ವಾಭಾವಿಕವಾದ ಅಂಗಚೇಷ್ಟೆಗಳ ಮೂಲಕ ಸೂಚಿತವಾಗುವ ಪ್ರೀತಿಯ ಅಭಿವ್ಯಕ್ತಿ : ಬಿಬ್ಬೋಕ ಮೋಟ್ಟಾಯಿತ . . . ಕುಟ್ಟಿಮಗಳೆಂಬ ದಶವಿಧಕೇಳೀಭಾವಂಗಳುಳ್ಳ ವಿಲಾಸಿನಿಯರಿಂ (ಅಜಿತ. ೨೨೯). [ಸಂ.]

**ಮೋಡ₁** (ನಾ). ೧. ಮುಗಿಲು ; ಮೇಘ : "ನೀರ್ದೇಮುಗಿಲ್ ಮೋಡ ಮೇಘದ ನಾಮ" (ಕಬ್ಬಿಗ. ೦೩); ತೊಲಗದ ಮೋಡವೊಡೆದುದು . . . ಶರತ್ಪ್ರಥಮಪ್ರವೇಶದೊಳ್ (ಜಗ. ೪-೩೭); ಮೋಡವ ಗಲ್ದು ಚಂಡಕರನಂತೆ . . . ಮನೋಹರಾಕೃತಿಯೊಳಿರ್ದನತಿದ್ಯುತಿಯಿಂದಿಳಾಧಿಪಂ (ಪಳಕು. ೭೨೭); ಆಕಾಶದಲ್ಲಿ ಮೋಡಗಳು ಮುಚ್ಚಿಕೊಳ್ಳುತ್ತಿದ್ದುವು (ರಾಜ. ೨೩). ೨. ಮೋಡ ಕವಿದ ವಾತಾವರಣ ; ಮಬ್ಬು : "ದುರ್ದಿನಮಭ್ರತಿಮಿರಮೆನೆ ಮೋಡಮೊಂದನಿಸಿರ್ಕ್ಕು" (ಶಬ್ದಮ. ೦೩-೪). ೩. (ಅಲಂ) ಚಿಂತೆಯ ನೆರಳು : ಅವನ ಮೊಗದಲ್ಲಿ ಕಿರು ಮೋಡ ಸುಳಿಯಿತು (ಹಾಸುತ. ೬೩). ೪. ಅಜ್ಞಾನ ; ಮೌಢ್ಯ : ಮೋಡಮುಟ್ಟಿಯೆ ಕಿಳಿದ ಕಳೆಗಳಿಂ ಬೆಳಗುವ ಚಂದ್ರಮನಂತೆ ಮೋಡ ಮುಟ್ಟಿಯೆ ಕಿಳಿದ ಕಳೆಗಳಿಂ ಬೆಳಗಿದರ್ ಯಮಳರ್ (ರಾಮಾಶ್ವ. ೦೩೦-೦೬).

**ಮೋಡ ಕವಿ** = ೧. ಮುಗಿಲು ಮುಚ್ಚಿಕೊಂಡು ಮಬ್ಬಾಗು : ದೂರ ಪಶ್ಚಿಮದಿಗಂತದತ್ತ ಮೋಡ ಕವಿದು ಮಿಂಚುತ್ತಿತ್ತು (ಮರಳು. ೪೭೭). ೨. (ಅಲಂ) ಚಿಂತೆ ಆವರಿಸು : ಮೋಡ ಕವಿದಾ ಮೊಗದಿ ನಿನ್ನ ದೆಸೆಯಿಂದಂ ಮೂಡಿತೇ ಅರೆಗಳಿಗೆಯಾದೊಡಾನಂದಂ ? (ಕುಸು. ೩೭-೨). **ಮೋಡಮುಚ್ಚಿಕೊಳ್ಳು** = ಮೋಡಕವಿ ೧ : ಒಂದೇ ಒಂದು ಕ್ಷಣದಲ್ಲಿ ಮೋಡಮುಚ್ಚಿಕೊಂಡು ಮಳೆ ಬರುವ ಹಾಗಾಯಿತು (ಆಡು). **ಮೋಡ ಹಾಕಿಕೊಳು** = ಮೋಡ ಕವಿ ೧ : ಮೋಡ

ಹಾಕಿಕೊಂಡಿದೆ. ಹೊರಗೆ ಹೊರಡಬೇಡ (ರಾಜ). **ಮೋಡ ಹಾಕು** = ಮೋಡ ಕವಿ ೧ :- ಮೋಡ ಹಾಕಿದರೆ ಶೀತ, ನೆಗಡಿ (ರಂಗಣ್ಣ. ೯೩). [ದೇ.॥ ತಮಿ. ಮೋಟಮ್, ಮೂಟಮ್, ಮೂಟ್ಟಮ್ ; ಮಲ. ಮೂಟಲ್ ; ತುಳು. ಮೂಡ, ಮೋಡ, ಮೋಡು ; ಕೊಡ. ಮೋಡ ; ತೆಲು. ಮೋಡಮು ; ಕುಇ. ಮುಡಂಗಿ]

**ಮೋಡ$_2$** (ನಾ). ಹೆಡ್ಡ ; ತಿಳಿಗೇಡಿ : ಮೂಢ : "ಗಾಂಪನೊಳು ಮೋಘದೊಳು ಮೋಡಪದ" (ಕಬ್ಬಿಗ. ೯೬) ; ಊಕಾರಕ್ಕೆ ಓತ್ವಂ_ಕೂಟ–ಕೋಡು. ಮೂಢ–ಮೋಡ (ಶಮದ. ೨೬೦ ಪ್ರಯೋ) ; ಈ ರೀತಿ ನಮ್ಮ ಜನಗಳು ಮೋಡರು ಎನ್ನುತ್ತಿದ್ದರು. ಇದೇನೋ ನಿಜ. ಇದಕ್ಕೆಲ್ಲ ಅವಿದ್ಯೆಯೇ ಮೂಲಕಾರಣ (ಹುಚ್ಚ. ೬೦). [<ಸಂ. ಮೂಢ. / ತಮಿ. ಮೋಟನ್ ; ತೆಲು. ಮೋಡಿ ; ತುಳು. ಮೋಡ]

**ಮೋಡಂಗಪ್ಪು** (ನಾ). ಮೋಡ ಕವಿಯುವುದರಿಂದ ಉಂಟಾಗುವ ಮಬ್ಬು : ಶರದಾಗಮನಕೆಂತು ಮೋಡಂಗಪ್ಪು ತೊಲಗಿದಪುದಂತೆ ಮೂಡಿದುದು ರಾಮನ ಮನಕೆ ನಿಶ್ಶಂಕೆ (ಶ್ರೀರಾಮಾ. ೩೪೯-೨೩೬).

[ಮೋಡ$_1$ + ಕಪ್ಪು$_4$ (<ಕರ್ಪು$_1$)]

**ಮೋಡಕಾ** (ನಾ). ಹಳೆಯ ವಸ್ತು, -ಪದಾರ್ಥ.

**ಮೋಡಕಾ ಅಂಗಡಿ** = ಹಳೆಯ ಸಾಮಾನುಗಳನ್ನು ಮಾರುವ ಅಂಗಡಿ ; ಗುಜರಿ : ಒಂದು ಮೋಡಕಾ ಅಂಗಡಿಯ ಒಂದು ಮೂಲೆಯಲ್ಲಿ ತೂಗಾಡುತ್ತಿದ್ದ ಮೂಲಚಿತ್ರವು ನನ್ನ ದೃಷ್ಟಿಯನ್ನು ಆಕರ್ಷಿಸಿತು (ಹೇಮಂತ. ೯೦೦) ; ಅವನ ಮೋಡಕಾ ಅಂಗಡಿಯ ಮುಂದಿದ್ದ ಒಂದು ಪೆಟ್ಟಿಗೆಯ ಮೇಲೆ ಕುಳಿತುಕೊಂಡ (ಎಡಕ. ೬೮). [←ಮರಾ. ಮೋಡಕಾ]

**ಮೋಡಗತ್ತಲೆ** (ನಾ). = ಮೋಡಂಗಪ್ಪು : ದಳವೇರಿತೊತ್ತರಿಸಿ ಮೋಡಗತ್ತಲೆ ಗಾಳಿ ಹನಿ ಮೊಳಗು ಸಹಿತ (ಸಿದ್ಧರಾ. ೬-೩೭) ; ಕಾಡುಗತ್ತಲೆಗೆ ಮೋಡಗತ್ತಲೆಯೂ ಸೇರಿ ಮುಸಿಮುದ್ದೆಯಾಗಿ ಅಳಿಸಿ ಹೋಗಿಹುದೆಲ್ಲ (ಹಂಸ. ೦೦೦). [ಮೋಡ$_1$ + ಕತ್ತಲೆ$_1$ (<ಕಟ್ಟಲೆ)]

**ಮೋಡಾಮೋಡಿ** (ನಾ). ೧. ಸೊಗಸಾದ ರೀತಿ,–ಶೈಲಿ ; ಅಂದವಾದ ವೈಖರಿ : ಕೆಲಕೆಲಬರು ಮೋಡಾಮೋಡಿಗಳು ಕೆಲಕೆಲಬರು ಗುಂಥಾಗುಂಥಿಗಳಂ ಕೆಲಕೆಲಬರು ಧಾರಾಪಂಚಕವಂ ಮುಂದೆಯೆ ತೋರುತ್ತಂ ಜಲಧಿತರಂಗದ ತೆರದಿಂದಾ ಹಯಬಲವಿಘಟಂಗಳ್ ಕಾಲ್ಗಾಪಿನೊಳಿಕ್ಕೆಲದೊಳಮತಿಶಯಮಾಗಿರೆ ನಡೆದವು ಹಿಂದೆಮುಂದೆ ಸಂದಣಿಸಿ (ಕುಮುದ. ೯-೨೮) ; ಜಾಣುಗಳ ಘಾಯದ ಕಳವುಗಳ ಕೈಮೆಗಳ ಮೋಡಾಮೋಡಿಯ ಪ್ಪಣದ ಲಲಿತಚಿತ್ರದ ಚದುರಭಟರವ್ವಳಿಸಿ ಹೊಯ್ದಾಡಿದರು (ಕುವ್ಯಾ.ದ್ರೋ. ೦೪-೬) ; ಆಗಲಂಬರ ಧರಣಿತಳಮೆಲ್ಲ ತುಂಬಿ ಬರೆ ಚೈತ್ರನುರಿ ಸ್ಮರಗೆ ಪೇಳಿದ ತನ್ನ ಬಲದ ವೈಭವದ ಮೋಡಾಮೋಡಿಯಂ ಗಾಡಿಯಂ (ಕಕುಶ. ೩-೯-೬). ೨. ಚಾತುರ್ಯ; ಕೈಚಳಕ : ಲಾಲಿಯಲೊಯ್ಯಾರದಲಿ ಮೋಡಾಮೋಡಿಯಂದದಲಿ . . . ಶಸ್ತ್ರಾವಳಿಯ ಸಾಂಗೋಪಾಂಗಶ್ರಮವನು ತೋರಿಸಿದನು ಪಾರ್ಥ (ಕುವ್ಯಾ.ಆ. ೬-೪೦) ; ಹೊಗೆಮುದ್ದೆ ಹೆಚ್ಚಾಳುಗಳ ನಗೆಮೊಗವು ಮೋಡಾಮೋಡಿಯಲಿ ಕೈಮುಗುಚಿ ಕಳೆದನು ನಿಮಿಷದಲಿ ಹೇರಾಳ ರಾಶಿಗಳ (ಕುವ್ಯಾ.ದ್ರೋ. ೦೬-೩) ; ಬೆರಸಿ ಧಾಳಾಧೂಳಿಯಲಿ ಬೊಪ್ಪರಿಸಿ ಬಾಡಾಬಾಡಿಯಲಿ ಮೋಹರಿಸಿ ಮೋಡಾಮೋಡಿಯಲಿ ಮುಟ್ಟಿ ಪ್ರಹಾರದಲಿ . . . ಕಾದಿತು ಸೇನೆ ಸೇನೆಯಲಿ (ತೊರವೆ. ೬-೩೯-೩). ೩. ಬೆಡಗು ; ಬಿನ್ನಾಣ ; ವಿಲಾಸ : ಪರಿಮಿತದ ಮೋಡಾಮೋಡಿಯನುಭವದೊಳ್ ವಲ್ಲಭನ ಮನಂ ಪಲ್ಲಟಿಸುವ ಕಾಲಮನರಿದು (ಗಂಕ. ೨-೦೦೫ ೩) ; ಸುಳಿದುದು ಸವಿಸಾರಣಾ ಮಹಾದ್ರಿಯಲಿ . . . ಮೊರೆದೊಗುವ ಮರಿದುಂಬಿಗಳ ಮೋಹರದ ಮೋಡಾಮೋಡಿಯಲಿ ಡಾವರಿಸಿ ತೈದಿಂದ್ರಿಯದಲೊಂದಿರೆ ಸಕಲಮುನಿಜನವ (ಕುವ್ಯಾ.ಆ. ೦೦-೩). ೪. ಮೆರೆತ ; ಪ್ರದರ್ಶನ : ಅಖಿಳ ಪೃಥ್ವೀಶ್ವರರ ಬಹಳಾಸ್ಥಾನದಲಿ ಮೋಹರಿಸಿದರು ಮೋಹನದ ಮೋಡಾಮೋಡಿಯಬಲೆಯರು (ಕುವ್ಯಾ.ಆ. ೦೩-೪೪) ; ಭರಿತಾಧಿದೇವತೆಯಂತೆ ನಿಂದಳಾ ತಾಣದೊಳಗಾ ದಿವ್ಯವನಿತೆ ಮೋಹನದ ಮೋಡಾಮೋಡಿ ಮೋಹರಿಸಿ ನಿಂದುದದಿಂ (ಸೌಂದರ. ೬-೯). ೫. ರಭಸ ; ವೇಗ : ಕವಿದುವಿದು ಗರಿಗಟ್ಟಿ ಕೌರವನಿವಹ ಮೋಡಾಮೋಡಿಯಲಿ ರಣದವಕಿ ಕರ್ಣದ್ರೋಹಿಯಾವೆಡೆ ತೋರು ತೋರೆನುತ (ಕುವ್ಯಾ.ಕ. ೦೩-೯). ೬. [ಸಂಗೀತ] ಒಂದು ರಾಗದ ಹೆಸರು : ಶ್ರೀಯು ಮೋಡಾಮೋಡಿ ಸರಸೋಪಾಯ ಸದುಪಾಯಂ ಮೆರೆಯೆ . . . ಧರೆಯೊಳಿವು ಮೊದಲಾಗಿ ಸೊಗಸುವ ಒರಿಯ ರಾಗಂಗಳು (ಬಸವ. ೦೯-೦೫).

[< ಮೋಡಿ$_1$ / ತಮಿ. ಮೋಟಾಮೋಟಿ ; ತೆಲು. ಮೋಡಾಮೋಡಿ]

**ಮೋಡಿ$_1$** (ನಾ). ೧. (ನಡೆ, ನುಡಿ ಇತ್ಯಾದಿಗಳ) ರೀತಿ ; ವೈಖರಿ ; ಶೈಲಿ ; ವರಸೆ : ನೋಡಿದನು ಕುರುರಾಯನಲಿ ಹೊಯ್ದಾಡಿ ಬರಬೇಕೆಂಬ ಭೀಮನ ಮೋಡಿಯನು ನೃಪನರಿದು ಸಂತೈಸಿದನು ಸಾಮದಲಿ (ಕುವ್ಯಾ.ಆ. ೦೬-೨೦) ; ನಮ್ಮ ನಗರವನೊರೆಸಿ ಮೋದುವ ಮೋಡಿ ಮೋರಿಯೊಳವನಲದೆಯೆಂದ (ತೊರವೆ. ೬-೬-೩) ; ಪರಿಚರರೋಡಿದರು ದೆಸೆದೆಸೆಗೆ ದೈತ್ಯನ ಮೋಡಿಯೆಂತುಟೊ (ಅನಂತ. ೦-೫-೬೫). ೨. ಸ್ಥಿತಿ ; ವೃತ್ತಿ : ಪ್ರಿಯೆಯ ಮುಖವೆನ್ನೊಳಗೆ, ನಿನ್ನೊಳಗೆ ಚಂದಿರನು, ನಮ್ಮಿಬ್ಬರಾ ಮೋಡಿಯನಿತು ಸಮವು (ಶೃಂಗಾರರೋ. ೯೬). ೩. ಠೀವಿ ; ಗಾಂಭೀರ್ಯ; ಗತ್ತು : ಮೇಳವದ ಮೋಡಿ [ಪಾಠಾಂ. ರೂಢಿ, ವೇಢ]ಯಲಿ ರಥದುಮ್ಮಾಳಿಸಿತು (ಕುವ್ಯಾ.ಕ. ೩-೬೩) ; ಹನುಮನ ಮೊಗದ ಮೋಡಿಯ ಧೂರ್ತವಚನದ ಬಗೆಯ ಭಂಗಿಯನಾ ಪ್ರಹಸ್ತ ವಿವೇಕದಿಂದರಿದು . . . ಇವನ ನುಡಿಸಿದು ನೋಡಬೇಕೆಂದ (ತೊರವೆ. ೫-೬-೨೩); ಮೋಡಿಯೊಳೂರಿ ನಿಂದಡಿಯೊಳಿರ್ಕೆಲಕಂ ಮುರಿಗೊಂಬ ಮುದ್ದುಮೆಯ್ . . . ಕಳೆಗುಮೆಲ್ಲರ ದೃಷ್ಟಿ ಮನತ್ರಮಂಗಳಂ (ಶಬರ. ೪-೦೩೭) ; ನಿಲುವಿನ ಮೋಡಿಯಲ್ಲಿ ಉಡುಗೆಯ ಗಾಡಿಯಲ್ಲಿ . . . ವಿಲಾಸದ ಒಳ್ಪು ಸೇರಿಕೊಂಡಿತು (ಬೃ.ಉ. ೪೫). ೪. ಬಿಗುಮಾನ ; ಗರ್ವ : ಮುನಿವುದೆತ್ತಣದಿನ್ನು ಮೋಡಿಯೆತ್ತಣದು ಮನವ ಬೈತಿಟ್ಟು ಮಾರ್ಪರ್ಲೆವುದೆತ್ತಣದು (ಗೀತಗೋ. ೨೦) ಏನೆಂದಱಿಯದೆಳವೆಯೊಳಿನಿಯಳಭಿಮಾನಗೊಂಡಿರೆ ಮಚ್ಚರಿಸದೆ ಮೋನದೊಳಿರದೆ ಮೋಡಿಯ ಕಾಣಿಸದೆ ಸನ್ಮಾನದಿ ಮನಗರಗಿಪುದು (ಹರಿ. ೩-೦೩) ; ಪೆಣ್ಮಕ್ಕಳುಂ ಠಕ್ಕಿನಿಂದೊಲ್ಮೆಗರೊಳ್ ಮುನಿವರ್ ಮೋಡಿಯೊಳ್ ಪೆರ್ಚಿದಿಪರ್ (ಶಬರ. ೩-೯೬). ೫. ಬಿಂಕ ; ಬಿನ್ನಾಣ ; ಬೆಡಗು : ಹಿರಿಯಳಿರ್ದಂತವಳಿಗಿಷ್ಟೇಕುರವಣಿಯು ಯಿಾ ಗಾಡಿ ಮೋಡಿಯು (ಪಾಗಸ. ೪-೦೬) ; ಕಿರುನಗೆಯ ಮೋಡಿಯೊಳೊರ್ವೆ, ತಾಂ ಬಬಲ್ದಂ–ನಲ್ಲ ! ಬಟಲ್ದೆಯ ! ಕುಳ್ಳಿರ ಎಂದು ಪಾಸರಿಯಂ ತೋರಿ ತಾನುಮೊತ್ತಿನೊಳ್ ಮಂಡಿಸಿ (ರಾಜಶೇ. ೪೫-೨೩). ೬. ಸೊಗಸು ; ಅಂದ : ಅಗಡು ಮೋಡಿ [ಪಾಠಾಂ. ರೆ]ಯ ಹೊಗರಿ ಹೊಸಜವ್ವನದ ಭಟನಿಕರ ಜಗವರಸರಾಮಂಗೆ ಕೈಗಳ ಮುಗಿಮುಗಿದು ಕೆಲಸಾರುತಿರ್ದುದು (ತೊರವೆ. ೪-೬-೨); ಆಗಮವಧ್ಯಾತ್ಮವಳವಟ್ಟು ಶೃಂಗಾರತ್ಯಾಗಭೋಗದ ಮೋಡಿ ಮೆರೆಯೆ . . . ಸೊಲ್ಲಿಸುವೆನಾಲಿಸಿರೋ (ಭರತ. ೦-೦೪) ; ಮೋಡಿಯನೇವೇಳ್ವೆನೀ ಮನೋಮೋಹಕನಾ (ಹಸ್ತಿಮ. ೯-೬೪). ೭. ಆಕರ್ಷಣೆ ; ಸೆಳೆತ : ವಿನೋದದಾಗರಂ ಮೋಡಿಯ ಮಂಟಪಂ (ಹಸ್ತಿಮ. ೦-೨೪) : ಈ ನಲ್ಲೆ ಯಿಾ ಗಾಡಿ ಯಿಾ ಮೋಡಿ . . . ಅರಿಗಳವಡದು (ವಂಶರಾ. ೫-೯-೦೦) ; ಇವಳ ಮುಖದಲ್ಲಿ ಇನ್ನೂ ಆ ಮೋಡಿಯಿತ್ತು (ರಂಗಣ್ಣ. ೪೬). ೮. ವೈಶಿಷ್ಟ್ಯ ; ವಿಶೇಷತೆ : ಅರಲಂಬಗರಸನಿಮ್ಮಡಿ ಚೆಲ್ವನವನ್ಯದು ಸರಲನಾಂತೊಡೆ ಹತ್ತು ಸರಲಾ ದೊರೆ ಪಿಡಿವುದು ಮೋಡಿಯೆನೆ ಕರಗಳ ಹತ್ತು ಬೆರಳೆಸೆದುವು ಸರಲದೊಳು (ಭರತ. ೬-೫೮). ೯. ಕೈಚಳಕ :

ಚಾಕಚಕ್ಯತೆ ; ಚಾತುರ್ಯ : ಆಡಲೇನವನಿಂದ್ರಜಿತುವಿನ ಮೋಡಿ ಬೇಜ್ಕೋಸರಿಸಿ ದಿನದಿನಕೋಡಿ ಹಿಂಗಿದ ಜಯವಧುವ ತಿರುಹಿದನು ನಿಮಿಷದಲಿ (ಕುರಾ. ೬-೩೩-೪೮) ; ಘನಸಂಚುಗಾತ್ರ ಮೋಡಿಯುಲಿ ವಲ್ಲಕಿಗಳಂ ಬಿನದಮೆನೆ ಬಾಜಿಸುವ ವೈಣಿಕೋತ್ತಮರುಗಳ ಮನೆಗಳಂ. . . ಕಾಣುತಚ್ಚರಿಗೊಂಡನು (ವಂಶಾರಾ. ೩-೩-೨೬) ; ರೂಢಿಸಿದ ಭಟನೆಂಬುದಂ ಬಲ್ಲೆ ಕರ್ಣ ಕೇಳ್ ಮೋಡಿ ಬೆರಗಾಗಿಹುದು ಪವನಜಂಗಿಂದು ನೀ ನೋಡೆಲವೊ (ಕುರಂಗ. ೬೩-೮). ೧೦. (ಯಕ್ಷಿಣಿಗಾರನು ಯಾವುದಾದರೂ ವಸ್ತುವನ್ನು ಮಂತ್ರಪೂರ್ವಕವಾಗಿ ನೆಲದಲ್ಲಿ ಹೂಳಿ ಅದನ್ನು ತನ್ನ ಪ್ರತಿಸ್ಪರ್ಧಿಯು ತನ್ನ ಮಂತ್ರಬಲದಿಂದ ತೆಗೆಯಲು ಹೇಳುವ) ಯಕ್ಷಿಣಿ ; ಇಂದ್ರಜಾಲ ; ಮಾಟ : ಪರದೆ ಬಿದ್ದ ಮೇಲೂ ಕೆಲವು ಕ್ಷಣಗಳು ನಾಟಕಮಂದಿರ ಮೋಡಿಯಲ್ಲಿದ್ದಂತೆ ಮೌನವಾಗಿತ್ತು (ರಂಗವಾ. ೦೬೬) ; ಮೋಡಿಗೆ ಸಿಕ್ಕಿದಂತೆ ಅವಳ ದೃಷ್ಟಿ ಅಲ್ಲೆ ನೆಲಸಿತು (ರೂಕನ. ೩೩೦). ೧೧. ಮಾಯೆ ; ಗಾರುಡಿ : ಮತ್ಸ್ಯನೃಪ ನಗುತ . . . ನಿಮ್ಮಯ ಮೃದುವಚನ ಬಲು ಮೋಡಿ ಗಾಡಿಕಾರಿ ಸರಿಯೆಂದ (ಕುವ್ಯಾವಿ. ೬೦೩: ೪-೩೨) ; ಈವರೆಗೂ ಬಾಡಿ ಬತ್ತಿದೇತಿದ್ದ ನೀನು ಅದಾವ ಮೋಡಿಯಿಂದ ಅರಳುವಲ್ಲಿಗೆಬಾದಿ ? (ಕೇಪೋಹ. ೧೬). ೧೨. ಮಂತ್ರ ; ತಂತ್ರ : ತಮ್ಮ ಮಾತು ಕೇಳದರೆ, ನಮ್ಮ ಮೋಡಿಯನ್ನು ನಮ್ಮ ಮೇಲೆ ತಿರುಗಿಸುತ್ತಿರುವಂತಿದೆ (ಚಿಕಂಬಾ. ೪) ; ವಿಠಲರಾಯರು ಈ ಎದುರುಮೋಡಿ ಎದುರಿಸಲೇಬೇಕಾಯ್ತು (ವೃದ್ಯಾ. ೨೩). ೧೩. ಮೋಸ ; ವಂಚನೆ : ಕೃತಕಮಾರ್ಗದ ಮೋಡಿಯಲಿ ಪರಿಚಿತನು ನೀನಲ್ಲಕ್ಷವಿಮಲಕ್ರತುವಿಧಾನವನಕ್ಷದೀಕ್ಷಿತರಜೀವರಿದನೆಂದ (ಕುವ್ಯಾಸ. ೬೦೩. ೦೪-೬೬). ೧೪. ಹಠ ; ಮೊಂಡಾಟ : ನನಗೆ ಆಣತಿ ನೀಡಿ ಎಂದಂದೆ ಬೇಡಿದೆನು ಬೇಡವೆಂದರು, ಮೋಡಿ ಬೇಡೆಂದು ಬೇಡಿದರು (ಹುಕೋಶ. ೪). ೧೫. (ಬಣ್ಣದ) ಛಾಯೆ,— ಪ್ರಭಾವ,— ಛಾಪು : ಎಳೆಹರೆಯದ ಹುಡುಗಿ ಆಕೆ. ತುಸುಕೆಂಪು ಮೋಡಿಯ ಮೇಲಿದ್ದಳು (ಸಮಕ. ೨೪೬) ; ಎಳೆಬಿಸಿಲು ಶಿವಮೊಗ್ಗದ ಮೇಲೆ ಸುವರ್ಣಾಲಂಕಾರದ ಮೋಡಿಯನ್ನು ಹರಡಿತ್ತು (ಮುಹಾಗ. ೨೬೩). ೧೬. ಕುದುರೆಸವಾರಿಯಲ್ಲಿ ಒಂದು ಬಗೆ : ದಾಟು ದೀಟು ಹೊಳಹು ಹೊಮ್ಮುಚ್ಚುವೆಡೆ ಮೋಡಿ . . . ವರತರಹಮೆಂಬ ನವ[ಪಾಠಾಂ. ನವೀನ]ಗತಿಗಳೊಳು ತನ್ನ ಮನಮೆ ಹಯದ ತನುಗತಿಗಳಾದಂತೆ ವಾಹಕವಿನ್ನಾಣಂಗಳಂ ತೋರುತ (ಕುಮಾವ್ಯಾಸ. ೬-೩೦ ವ). ೧೭. ವೇಗದ ಬರವಣಿಗೆಗಾಗಿ ಅಕ್ಷರಗಳನ್ನು ಮೊಟಕು ಮಾಡಿ ಬರೆಯುವ ಲಿಪಿವಿನ್ಯಾಸ ; ಅಕ್ಷರಗಳನ್ನು ಒಂದಕ್ಕೊಂದು ಸೇರಿಸಿ ಬರೆಯುವ ಬರವಣಿಗೆ : ನೋಡಿದು ತಮ್ಮ ತಂದೆಯ ಸ್ವಹಸ್ತದ ಮೋಡಿಯ ಬರೆದ ಬರಹನು (ಕೆಂಪ್ರಹಾ. ೩-೩೦) ; ಉರ್ದುಮೋಡಿ ಬಳಕೆಯ ಮಟ್ಟಿಗೆ ರೂಢಿಯಿಂದ ಕಲಿತರು (ಕರೀಶ. ೩೬) ; ನಾನು ಆ ಪ್ರಕಾರ ಬರೆದು ಕೊಟ್ಟೆ. ಅದರ ಕೆಳಗೆ ಅವರು ಮೋಡಿಯಲ್ಲಿ ಸಹಿ ಹಾಕಿ . . . ಹೇಳಿದರು (ಶಾಕುಂತಲ. ೩೮). ೧೮. ಹಸನು ಮಾಡಿದ ಅಡಕೆಯಲ್ಲಿ ಒಂದು ಬಗೆ : ಬಹಳ ಎಳೆಯದ ಅಡಕೆಗಳನ್ನು ಸಣ್ಣಾಗಿ ಕೊರೆದು ಚೂರುಮಾಡಿ ಕುದಿಸುತ್ತಾರೆ. ಅದರಲ್ಲಿ ಚತುರ್ಭಾಗ ಕೊರಪ, ಲವಂಗ ಚೂರು, ಮೋಡಿ, ಅಣ್ಣಾವಾರ, ದೇಶಾವಾರ ಎಂದು ಬೇರೆಬೇರೆ ರಾಶಿಗಳನ್ನು ಮಾಡುತ್ತಾರೆ (ಕೃಷಿಶ. ೦೩೨). ೧೯. [ಸಂಗೀತ] ಮದ್ದಳೆಯನ್ನು ಬಾರಿಸುವ ಒಂದು ಬಗೆಯ ವೈಖರಿ,—ಗತ್ತು : ಆ ಸಮಯದೊಳ್ ಮದ್ದಳೆಗಂ ಮದ್ದಳೆಯಂ . . . ಲಾಗು ಮೋಡಿ ಚಮತ್ಕಾರ ತುಡುಕು ರಿಗ್ಗವಣೆ ಪಹರಣೆಗಳೆಂಬ ನಾನಾಶಬ್ದಂಗಳಂ ಬಾರಿಸೆ (ಧರ್ಮಾಕ. ೨-೨೩ ವ) ; ಬಾಜಿಸಿದನೊರ್ವನಮರ ಮದ್ದಳೆಯ ಲೀಲೆಯೊಳು ತುಡುಕುಪಹರಣೆ ರಿಗ್ಗವಣೆ ಮೋಡಿಗಳನು ನುಡಿಸೆ (ಗೋಮಾಂದೀ. ೬-೦೬).

**ಮೋಡಿತೆಗೆ** = (ಮಾಟದ ಪ್ರಭಾವವನ್ನು ಕಡಮೆ ಮಾಡಿ) ಮಾಟ ಮಾಡಿ ಹೂಳಿದ ವಸ್ತುವನ್ನು ಹೊರಗೆ ತೆಗೆ : (*). **ಮೋಡಿ ಮಾಡು** = ೧. ಮಾಟ ಮಾಡು; ಇಂದ್ರಜಾಲ ಮಾಡು : ಹಳ್ಳಿಗಳಲ್ಲೆಲ್ಲ ಮೋಡಿ ಮಾಡುತ್ತಾರಂತೆ. ಅದರಲ್ಲಿ ನಿಮಗೆ ವಿಶ್ವಾಸವಿದೆಯೇ ? (ನವಾ. ೬೦); ಯಾವ ಮೋಡಿ ಮಾಡಿ ಸುಬ್ರಾಯರನ್ನು ಒಳಗೆ ಹಾಕಿಕೊಂಡನೋ ಏನೋ ? (ಶಾಕ್ಯ. ೦೦೦); ಹಾವಾಡಿಗ ಮೋಡಿ ಮಾಡ್ದಂಗೆ ಮಾಡಿಬಿಟ್ಬ್ಟ ಈಗ ಹಿಂಗಾತೀಯಾ ? (ಶೀಮಹ. ೭೦೪). ೨. ಮಂತ್ರಮುಗ್ಧನನ್ನಾಗಿ ಮಾಡು ; ಸೆಳೆ : ಈ ಕುಣಿತಗಳಂತೂ ಜನತೆಗೆ ಮೋಡಿ ಮಾಡಿಯೇ ಬಿಡುವುವು (ಕನ್ನಹಾ. ೩೪). **ಮೋಡಿ ಹಾಕು** = ೧. ಮಂತ್ರಪೂರ್ವಕವಾಗಿ ಯಾವುದಾದರೂ ವಸ್ತುವನ್ನು ನೆಲದಲ್ಲಿ ಹೂಳು : (*). ೨. ಮಾಟ ಮಾಡು ; ಮಂತ್ರದ ಪ್ರಭಾವಕ್ಕೆ ಒಳಪಡಿಸು : ಮೋಡಿ ಹಾಕಿದಂತಾಗಿ ಅವನನ್ನೇ ದಿಟ್ಟಿಸಿ ನೋಡುವಂತಾಗುತ್ತಿತ್ತು (ಅಂಹೂ. ೦೦೬); ಜನರೆಲ್ಲರೂ ಮೋಡಿ ಹಾಕಿದ್ದಂತೆ ಎವೆಯಿಕ್ಕದೆ ಸಂಗೀತ ಕೇಳುತ್ತ ತಲ್ಲೀನರಾದರು (ಸಂಗೀತ. ೬೨). ೩. ಮಂತ್ರಮುಗ್ಧನನ್ನಾಗಿ ಮಾಡು ; ಸೆಳೆ ; ಮೋಡಿ ಮಾಡು : ಡಾ. ನರೋತ್ತಮರು ಮೋಡಿ ಹಾಕುವಂತಹ ಭಾಷಣಕಾರರು (ರೂರಸ. ೩೦೬); ಎರಡು ದಿನದಲ್ಲಿ ಅಂಥೋಣಿ ಸುಬ್ಬುವಿಗೆ ನಿಜವಾಗಿಯೂ 'ಮೋಡಿ' ಹಾಕಿದ್ದ (ಶೀಮಹ. ೨೯); ನಿಮಗೆ ಮೋಡಿ ಹಾಕೋ ವಿದ್ಯೆ ಬರಬಹುದು (ರೂಶಿಬ್ಬ. ೯೩).

[ದೇ.॥ ತಮಿ. ಮೋಟಿ ; ಮಲ. ತುಳು. ತೆಲು. ಮೋಡ. / ಹಿಂ. ಮರಾ. ಮೋಡೀ]

**ಮೋಡಿ$_2$** (ನಾ). ಒಂದು ಬಗೆಯ ಮೂಲಿಕೆ; ಹಿಪ್ಪಲೀಮೂಲ : "ಮೋಡಿ – ಶಿರ, ಹಿಪ್ಪಲೀಬೇರು" (ಗಂಗಾಮ. *); ಗಂಟು ಭಾರಂಗಿ, ಹಿಪ್ಪಲಿಮೂಲ (ಮೋಡಿ), ಚವ್ಯ, ಬೆಳ್ಳುಳ್ಳಿ, ಅಗರಧೂಮ ಇವುಗಳನ್ನು ನಾಲ್ಕು ನಾಲ್ಕು ತೂಕ ಚೂರ್ಣವ ಮಾಡಿ (ಸಳವೈ. ೬೩); ಕಾಡುಮೆಣಸಿನ ಬಳ್ಳಿಯ ಬೇರು ಮತ್ತು ಮೋಡಿಕಡ್ಡಿಗಳು ಗುಣದಲ್ಲಿ ಮೆಣಸಿನಂತೆ (ಅಶ್ವಂಗ. ೦೫೬-೦೬೩ ಅರ್ಥ). [ ದೇ.॥ ತಮಿ. ಮೋಟಿ ]

**ಮೋಡಿ$_3$** (ನಾ). ಬುದ್ಧಿಯಿಲ್ಲದವಳು ; ದಡ್ಡಿ : ಅಕಲಂಕಕುಲದೊಳ ವತರಿಸಿ ನಿಯಮಾಚಾರ ಸುಕುಮಾರತೆಯನರಿತಳಲ್ಲದೀ ಪ್ರಾಕೃತರ ಪಾಸಟಿಯ ಮೇಢಿ[ಮೋಡಿ]ಯಲ್ಲ (ವಂಶಾರಾ. ೨-೦೦-೮). 'ಮೋಡೆ' ಪಠಾ. [ ಮೋಡ$_2$ + – ಇ$_2$ ]

**ಮೋಡಿಕಾರ** 'ಮೋಡಿಗಾರ' ನೋ.

**ಮೋಡಿಕಾರ್ತಿ** (ನಾ). ಗಾರುಡಿ ಮಾಡುವವಳು ; ಮಾಟಗಾತಿ : ನೀನಾರು ? ನೀನು ಮೋಡಿಕಾರ್ತಿಯೋ? (ಶಾಂತಿ. ೩೮).

[ಮೋಡಿಕಾರ (< ಮೋಡಿಗಾರ) + – ತಿ$_1$ (< – ಇತ್ತಿ) ]

**ಮೋಡಿಗಾರ, ಮೋಡಿಕಾರ** (ನಾ). (ಹಣದ ಸಂಪಾದನೆಗಾಗಿ) ಇಂದ್ರಜಾಲ ಮಾಡುವವನು; ಯಕ್ಷಿಣಿ ಮಾಡುವವನು; ಮಾಟಗಾರ : ನಾಡು ಓಡುವಾಗ ಮೋಡಿಗಾರ ಬಂದ (ಗಾದೆ). **ಮೋಡಿಕಾರ**: ನರಿಯೇ ಮುಂತ್ಸದ್ದಿ, ಮೋಡಿಕಾರನೇ ತತ್ವಜ್ಞಾನಿ, ತೇವೆ ಅನುಕರಣಗಳೇ ಕಲೆ ಇರುವ ದೇಶಕ್ಕಾಗಿ ಕನಿಕರ ಪಡಿ (ಕೃವಾಕೋ. ೦೦); ನಿಜವಿದ್ದುದನ್ನು ಸುಳ್ಳು, ಸುಳ್ಳಿದ್ದುದನ್ನೂ ನಿಜವೆಂಬ ಮಾಟ ಮಾಡಿ ತೋರಿಸುವ ಬಾಯ್ಬಡಿಕ ಮೋಡಿಕಾರರ ಕುಲ, ಯಾವ ಕುಲ ? (ಯುಕ್ಷತ್ರ. ೦೩೯).

[ ಮೋಡಿ$_1$ + – ಕಾರ$_1$ (< – ಕಾಱ) ]

**ಮೋಡಿಗೊಳ್, ಮೋಡಿಗೊಳು** (ಕ್ರಿ). ೧. ಅಂದವಾಗು ; ಚೆಲುವಾಗು : ಮೋಡಿಗೊಂಡಿರ್ಪ ನಾಸಂ ತೊಳಪ ಮುಖವಿಳಾಸಂ

ತುಂಬಿಲಿಂ ಕಣ್ಗೆ ಲೇಸಂ (ಶಶಿ. ೩-೯೭). ಮೋಡಿಗೊಳು : ೨. ಪರ ಮಾಡು; ಮೋಡಾಟ ಮಾಡು : ಕೋಪವೆಸಗದೆ ಮೂಗುವಡದೆ ಮೋಡಿಗೊಳದೆ ಲೋಗರುಚಿತವೆನಲೊಯ್ಯನೊಯ್ಯನೆಯುಸುವಾಗಿ ನುಡಿವುದವರೊಡನೆ (ಹರಿ. ೪-೦೦). [ಮೋಡಿ$_1$ + ಕೊಳ್$_1$]

**ಮೋಡಿಗೊಳು** ' ಮೋಡಿಗೊಳ್ ' ನೋ.

**ಮೋಡಿಸು** (ಕ್ರಿ). ಆಕರ್ಷಿಸು ; ಸೆಳೆ ; ಮೋಡಿ ಮಾಡು : ಸ್ಮರನಿನ್ನಿನಿಲ್ಲದಂದೀ ಜನಮಂನೆಱೆಗಿಸಲ್ಕೋಡಿಸಲ್ ಮೋಡಿಸಲ್ ಮುಚ್ಚರದಿಂಪಲ್ಲಾಡಿಸಲ್ . . . ಅದೇನೊರ್ವನೆ ನೆಱೆವನೆ ಪೇಟಿಂದು ಲೋಕಕ್ಕೆ ಪೇಟ್ಟುಂತಿರೆ ಬಂದರ್ ಬಿಂಕದಿಂ ಸಂಕಿಸದೆ ಸಕಲವಿದ್ಯಾಧರಸ್ತ್ರೀಸಮೂಹಂ (ರವರ್ಣಿಪ್ಪ. ೬-೨೦೩). [ಮೋಡಿ$_1$ + — ಇಸು$_3$]

**ಮೋಡೆ** (ನಾ). ಬುದ್ಧಿ ಇಲ್ಲದವಳು ; ಮೂಢೆ : ಆನೇಂ ಮೋಡೆಯೆ ! ಪೋ ! ತನ್ನಾಣೆ, ಕಣ್ಣಾಣೆ, ಕೇಳ್ವಂ (ರಾಮಾಶ್ವ. ೦೦೬-೦೪). ' ಮೋಡಿ$_3$' ಪರಾ. [ಮೋಡ$_2$ + — ಎ$_2$]

**ಮೋಣ** (ನಾ). ಒಣಗಿದ ಹಣ್ಣು. [ಸಂ.]

**ಮೋತಾದಾರ** (ನಾ). ಕುದುರೆಗಳ ಆರೈಕೆ ಮಾಡುವವನು ; ಕುದುರೆಗಳ ಮೇಲ್ವಿಚಾರಕ ; ಕಾಸ್ತಾರ : (✝). [←ಮರಾ. ಮೋತಾದ್ದಾರ್, ಮೋತದ್ದಾರ್]

**ಮೋತಿ** ' ಮೂತಿ' ನೋ.

**ಮೋತಿಖಾನೆ** ' ಮೋದೀಖಾನೆ' ನೋ.

**ಮೋತಿಬಿಂದು** (ನಾ). ಕಣ್ಣಿನ ಗುಡ್ಡೆಯ ಮೇಲೆ ಬಿಳಿಯ ಚುಕ್ಕೆ ಅಥವಾ ಹೂ ಕಾಣಿಸಿಕೊಳ್ಳುವ ಒಂದು ಬಗೆಯ ಕಣ್ಣಿನ ರೋಗ : ದಿನಪತ್ರಿಕೆಗಳಲ್ಲಿ ಹೊರಬೀಳುವ ಗುಣಕಾರಿಗಳಲ್ಲದ "ಮೋತಿಬಿಂದುನಾಶಕ" ತೊಟ್ಟುಗಳನ್ನು ಉಪಯೋಗಿಸಲು ತವಕ ಪಡುವುದು ಸಹಜವೇ ಸರಿ (ಶಿಷ್ಯದ. ೦೭೦). [←ಮರಾ. ಮೋತಿಬಿಂದು, ಮೋತಿಬಿಂಬ, ಮೋತ್ಯಬಿಂದು, ಮೋತ್ಯಬಿಂಬ ; ಹಿಂ. ಮೋತಿಯಾಬಿಂದ್]

**ಮೋತೀಖಾನೆ** ' ಮೋದೀಖಾನೆ ' ನೋ.

**ಮೋತೀಚೂರು** (ನಾ). ೧. ದುಂಡಾದ ಸಣ್ಣ ಸಣ್ಣ ಕಾಳುಗಳಿಂದ ಕೂಡಿದ ಬೂಂದಿಯ ಲಾಡು ; ಗುಂಜಾಲಾಡು : ಮಾಮಾನೀಪ್ರಸ್ತಕ್ಕೇನು ಒಂದು ಮೋತೀಚೂರು, ಇಲ್ಲಾ ಮುಂಡಿಗಿ ಮಾಡ್ಸಿ ಬಿಡೂಣು (ಕತುಗು. ೩೪) ; ಹೆಣ್ಣಿನ ಕಡೆಯವರು ದಿಬ್ಬಣದ ಆಸೆಗೆ ತುಪ್ಪ ಮೋತೀಚೂರನ್ನು ತಿನ್ನಿಸಬೇಕೆಂಬ ಹವಣಿಕೆಯಲ್ಲಿದ್ದರು (ಶಿವಿವಾ. ೭) ; ಉತ್ತರಾದಿ ಮಠದ ಮೋತೀಚೂರಿನ ಸಮಾರಂಭಕ್ಕೆ . . . ಊಟಕ್ಕೆ ಹೋದ ಬ್ರಾಹ್ಮಣರುಂಟು (ಹುಕ್ಷತ್ರ. ೦೭೭). ೨. ದೋತ್ರದ ಅಲಂಕಾರಯುಕ್ತವಾದ ಜರಿ ಅಂಚು : (✝). [←ಹಿಂ. ಮರಾ. ಮೋತೀಚೂರ್]

**ಮೋತೆ** (ನಾ). ೧. ಬಾಳೆಯ ಗೊನೆಯ ತುದಿಯಲ್ಲಿ ಇರುವ ದೊಡ್ಡ ಆಕಾರದ ಹೂವು : ಬಹುಮೂತ್ರಕ್ಕೆ ಪಥ್ಯಾಪಥ್ಯಗಳು— ಹಳೆಅಕ್ಕಿಅನ್ನ. ಗೋಧಿ . . . ಬಾಳೆಯ ಮೋತೆ, ಕಾರೆಸೊಪ್ಪು (ಸಳವೈ. ೪೦೦) ; ಬಾಳೆಯ ಮೋತೆಯ ಗಾತ್ರದ ಕಿವಿಗಳ ಮೃಗವಿದಿಗೋ ಗುಡ್ಡೆಯ ಕಣ್ಣುಗಳ (ಶಾಕುಗೀ. ೪೪೭). ೨. (ಕೇದಗೆ ಮುಂತಾದುವುಗಳ) ತೆನೆ ; ಹೊಡೆ ; ಗುಚ್ಛ : ಚೂಡಾಲಾ, ಚಕ್ರಲಾ, ಉಚ್ಚಟಾ—ಇ ಮೂರು ಗಡ್ಡೆವಳಗೆ ಅನೇಕ ಮೋತೆಗಳುಳ್ಳ ಗಂಟುಮುಸ್ತೆಗಳು (ಸಿದ್ಧೌಷ. ೦೪೯) ಅಗಿದು ಪಣ್ಗಳನಡಸಿ ತೋರುವ ಮುಗುಳು ಮೋತೆಯ ಮುರಿವು ಕೆದರು : ಹಗರಣದ ಕಪಿಮೃಗವ ನೋಡುವ ತರುಶಿಖಾಗ್ರದಲಿ (ಕಂದಶಾ. ೩-೨೮) ; ದಾರಿಯಲ್ಲಿ ಬಿಪ್ಪಿ ಗೌಡ ನಾಲ್ಕು ಮೋತೆ ತಾಳೇಹೂವನ್ನೂ . . . ಇಟ್ಟುಕೊಂಡು ಯಾರಾದರೂ ಕೊಂಡುಕೊಳ್ಳುತ್ತಾರೆಯೋ—ಎಂದು ಕಾದು ಕೊಂಡಿದ್ದನು (ಆದು. ೦೧). [ದೇ.? ತಮಿ. ಮೋತ್ತೈ]

**ಮೋದ**$_1$ (ನಾ). ೧. ಸಂತೋಷ : ಹಿಗ್ಗು ; ಆನಂದ : ಇಹಗೆ ಮಾಡುವೆನಾದರದೊಳೆಂದೆನುತ ಮನದೊಳು ಮೋದವೆ [ಪಾಠಾಂ. ವ] ಯ್ದಲು (ಐಸಪು. ೩೭-೦೭) ; ಮೋದದಿಂದ ವಿದುರನ ಮನೆಗಯ್ದಿ ಆದರದಿ ಪಾಲ ಕುಡಿದುಳಿದುದ ನೀ ಮೇದಿನಿಗೀಸಿದೆಲ್ಲಿ ಕಲಿತ್ಯೋ ರಂಗ (ಪುರಂದ. ೪-೦೩೭-೯) ; ಲಕ್ಷ್ಮಣಂ ಲಜ್ಜಾವಿಷಾದಮಂ ತುಳಿದಿಕ್ಕಿ, ಮೋದದಿಂ ಕಣ್ಣಾದನತ್ತಣ್ಗೆ (ಶ್ರೀರಾಮಾ. ೦೩೯-೨೦೩). ೨. ಸುಗಂಧ ; ಸುವಾಸನೆ : ' ಮೋದೋಪಚಾರ ' ಪರಾ. ೩. ಮಾವು : " ಮೋದಾಖ್ಯಃ — ಮಾವು " (೬ಕರ. ೦೩೦); ಬಾಳೆ ಕಾಬಾಳೆ ಮೋದ ಸಕ್ಕರೆಮಾವು ನೇರಿಲವಣ್ಗಳ ಯಾವಪರಿತ್ರರಾಳ್ದನಿಗೆ (ಮೋಹತ. ೦೯-೩೩). ೪. ತೆಂಗು : " ಮೋದಃ — ತೆಂಗು " (೬ಕಧ. ೧೩೦). ೫. [ಜೈನ] ಐವತ್ತೂರು ಗರ್ಭಾನ್ವಯಕ್ರಿಯೆಗಳಲ್ಲಿ ಐದನೆಯದು ; P " ೯ನೇ ತಿಂಗಳ ಗರ್ಭವತಿಗೆ ಪೂರ್ವವತು ಮಂಗಳಸ್ನಾನಾದಿಗಳಂ ಬೆಳಯಿಸಿ ಅಲಂಕಾರವಂ ಮಾಡಿ ಹಸೆಯ ಮೇಲೆ ಕುಳ್ಳಿರಿಸಿ ಪತಿಯ ಹಸ್ತದಿಂ ರಕ್ಷಾಯಂತ್ರವಂ ಕಟ್ಟಿಸುವದೇ ಮೋದವೆಂಬ ಐದನೇ ಕರ್ಮವು " (ಪುರುಶ. ೧೪೪) : ಆದಾನ ಪ್ರೀತಿ ಸುಪ್ರೀತಿ ಧೃತಿ ಮೋದ . . . ಎಂಬಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೩-೦೩ ವ); ಆದಾನಮುಂ ಪ್ರೀತಿಯುಂ ಸುಪ್ರೀತಿಯುಂ ಧೃತಿಯುಂ ಮೋದಮುಂ . . . ಎಂದಾದಾನಾದಿನಿರ್ವಾಣಪರ್ಯಂತಮಪ್ಪಯ್ವತ್ತುಮೂಱುಂಗರ್ಭಾನ್ವಯಕ್ರಿಯೆಯೊಳ್ (ಶಾಪುಂಪು. ೨೦೨). ' ದೀಕ್ಷೆ ' ಪರಾ. [ಸಂ.]

**ಮೋದ**$_2$ (ನಾ). ಅಜವಾನ ; ಅಜಮೋದ ; ಓಮು : " ಮೋದ — ಅಜಮೋದ " (೬ಕರ. ೦೩೦); ಒಂದು ಬೆಸುಗೆಯಲ್ಲಿ ಕಾದ ಹಂಚನಿರಿಸಿ ಅಡಕೆಯಷ್ಟು ಮೋದವನಿಕ್ಕಿ ಮೇಲೊಂದು ಲೋಟ ಮುಚ್ಚಿ . . . ಏಲಕ್ಕಿಯ ಚೂರ್ಣವ ತಳಿದಲ್ಲಾಡಿಸುವುದು (ಶೀಮಸತ. ೩೦). ' ಮೋದೆ ' ಪರಾ. [ಸಂ. ಮೋದಾ]

**ಮೋದಂಡ** (ನಾ). ೧. ಅನಿಶ್ಚಿತತೆ ; ಸಂದೇಹ : (✝). ೨. ಸುಮ್ಮನಿರುವುದು ; ಮೌನ (?) : ಇಕ್ಷ್ವಾಕುಕುಲಮೌಳಿಮಣಿಗೆಯ್ದ ಪ್ರಾರ್ಥನೆಗೆ ಸಾಗರನು ಕಿವಿಗೊಡದೆ ಮೋದಂಡವಾಗಿರಲು ದಾಶರಥಿ ಇವನ ಅಭಿನಯಕೆ ತಗುವಂದದಲಿ (ಪವಾ. ೨-೬೪). [←ತುಳು. ಮೋದಂಡ]

**ಮೋದಂಬೆಱು** (ಕ್ರಿ). ಹರ್ಷವನ್ನು ಹೊಂದು ; ಸಂತೋಷವನ್ನು ತಾಳು : ಶಶಿಶೇಖರಂ ಗುರುವಿರೂಪಾಕ್ಷಂ ಭವಾನೀಪ್ರಿಯಂ ಮೋದಂಬೆತ್ತಿರೆ ತಾಳ್ದು ರಂಜಿಪುದು ಪಂಪಾಕ್ಷೇತ್ರಂ (ಉದ್ಭಟ. ೩-೬೩).
[ಮೋದ$_1$ + ಪೆಱು$_1$]

**ಮೋದಕ**$_1$ (ಗು). ೧. ಸಂತೋಷವನ್ನುಂಟುಮಾಡುವ ; ಉಲ್ಲಾಸಕರವಾದ : ಆನಂದದಾಯಕವಾದ : ಧರಣೀಭಾರಮನಾಂ ಬಿಸುಟೆಪ್ಪುಡದು ಚಿಃ ಲೋಕಕ್ಕೆ ಖಾತ್ವಾಸಮಿಾಕರಣಂ ಭೌತಿಕಮೋದಕವ್ಯತಿಕರಂ ತಾನೆಂಬುದಂ ಮಾಡದೇ (ಆದಿಪು. ೪-೮೧). (ನಾ), ೨. ಒಂದು ಬಗೆಯ ಸಿಹಿರುಚಿಯ ಖಾದ್ಯ ; ಕಡುಬು : ಓರೊರ್ವರೊಳ್ ವಿಷಯುಮಿಶ್ರಮೋದಕಾದಿ ಖಾದ್ಯಪ್ರವೇಶಮಂ ಮಾಡುತ್ತಮಿರ್ಪುದಂ ಕಂಡು (ಪುಣ್ಯಾಶ್ರ. ೩-೦೩೪ ವ); ಮೋದಕ ನೈವೇದ್ಯವನಣಿಗೈಯೆ ನೆವಮೇನಂ ಪೇಳಲಿ ನಾನರಿಯೆ (ಗಣೇಶ. ೩-೩೩); ಮನಸ್ಸಿನಲ್ಲಿ ಮೋದಕವನ್ನು ತಿಂದರೆ ಹಸಿವೆಯು ಶಾಂತವಾಗಲಾರದು (ತುಳಸೀ. ೬೩). [ಸಂ.]

**ಮೋದಕ**$_2$ (ನಾ). ಅಜಮೋದ ; ಓಮು : ಮೋದಕದಿಂ ಮಧುಪೀಲಿಯ ಬೂದಿ ಕಣಾಚೂರ್ಣಮೆಂಬಿವಂ ತಿನೆ ರುಜೆಯಿಂದಾದಿಕರ್ಬುಂ . . . ಕಂಠರೋಗಮುಂ ಪ್ರಶಮಿಸುಗುಂ (ಲೋಕೋಪಕಾ. ೪-೩೨).
[<ಮೋದ$_2$]

**ಮೋದಗೆ** (ನಾ). ಮೋದಕ ; ಕಡುಬು : ಆಕೆಗೆ ಗರ್ಭಮಾಗಿ ಮೋದಗೆ [ಪಾಠಾಂ. ಮೊಱಗೆ, ಮೊದಱಗೆ]ಯ ಮೇಗೆ ಬಯಕೆಯಾದೊಡೆ (ವಡ್ಡಾರಾ. ೧೬-೧೪). [<ಸಂ. ಮೋದಕ]

**ಮೋದನ** (ನಾ). ೧. ಸಂತೋಷ ; ಹರ್ಷ : "ಮುತ್, ಮುದಂ, ಪ್ರಮೋದಂ, ಮೋದನಂ, ಮುದಿತಪ್ಯಂ . . . ಮೋದ್ಯಂ ಈ ೧೨ ನಲಿವು" (ಅಭಿಧಾ. ೮೩) ; ಮೋ [ಪಾಠಾಂ. ಪೋ]ದನವಿಲ್ಲೆಂದುಱೆ ಪುಸಿಯುಂಜದೆ ಪಣಮಂ ನೆಱೆ ಕೊಳಲಱೆಯೆಂದು ಸುತ್ತಗೆ ಕಲಿಸಿದಳೊರ್ವಳ್ (ತ್ರಿಷಷ್ಟಿ. ೨೪-೧೪೪). ೨. ಸಂತೋಷಗೊಳಿಸುವುದು ; ಆನಂದವನ್ನುಂಟು ಮಾಡುವುದು. ೩. ಸಂತೋಷಗೊಳಿಸುವವನು ; ಆನಂದವನ್ನುಂಟು ಮಾಡುವವನು : ಯಾದವಯಿನ ಯಾಶಯುಕ್ತಿದಯೂಥಪಮೋದನ . . . ದಯೆದೋಱು (ಕಕಶಾಂ. ೭೭-೯೪). [ಸಂ.]

**ಮೋದನೀಯ** (ಗು). ೧. ಸಂತೋಷಿಸಬೇಕಾದ. ೨. ಸಂತೋಷವನ್ನುಂಟುಮಾಡುವ. (ನಾ). ೩. ಮಲ್ಲಿಗೆ : "ಮೋದನೀಯ – ಮಲ್ಲಿಗೆ" (೬ಶಬ್ದ. ೧೩೦). [ಸಂ.]

**ಮೋದವಿ** (ನಾ). ಒಂದು ಬಗೆಯ ಸಸ್ಯ : "ಮೋದವೀ – ಮಲ್ಲಿಗೆ, ಸೇವಂತಿಗೆ, ಮೊಸ್ಮಾಮರೆ". (೬ಶಬ್ದ. ೦೩೦). [ ? ]

**ಮೋದಿ** (ಗು). ೧. ಸಂತೋಷಪಡಿಸುವ. ೨. ಮಿಶ್ರಮಾಡುವ. (ನಾ). ೩. ನಲಿವನ್ನು ನೀಡುವವನು ; ಸಂತೋಷಗೊಳಿಸುವವನು: ಎನ್ನ ಪಾಲಿಸಿದುದವದಿ ಸಕಲಪ್ರಾಪನ್ನರ ಸಲಹೊ ಮೋದಿ (ಜಗದಾ. ೦೩೨). ೪. [ಸಂಗೀತ] ಒಂದು ರಾಗದ ಹೆಸರು : ಕೌಶಿಕಿ . . . ಮೋದಿ . . . ಶಮಸೋದರಿಯೆಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದವು (ಎನೀಳ. ೨೩೩). [ಸಂ. ಮೋದಿನ್]

**ಮೋದಿಕೆ** (ನಾ). ಹೊಡೆಯುವಿಕೆ ; ತಾಡನ : ಮೋದಿಕೆಗಳ್, ಮೋದುಗಳ್ (ಕರ್ನಾ.ಪ. ೩೬೯ ಪ್ರಯೋ). [ಮೋದು$_1$ + – ಇಕೆ]

**ಮೋದಿಖಾನೆ** ' ಮೋದೀಖಾನೆ ' ನೋ.

**ಮೋದಿತ** (ಗು). ೧. ಸಂತೋಷಗೊಂಡ ; ಆನಂದಿತನಾದ : ಮೋದಮಲರಲ್ ಸೋಮವಾರಮದಾದಿಯಾಡೊಂಭತ್ತುದಿವಸಂ ಮೋದಿತೋತ್ಸುಕ ಭಕ್ತಿ [ಪಾಠಾಂ. ವೇದಿತೋತ್ಸುಖವೃತ್ತಿ]ಯಿಂ ಸಲೆ ನೋಂತು (ಐಸಪು. ೨-೩೦). (ನಾ). ೨. ಸಂತೋಷ ; ಆನಂದ. [ಸಂ.]

**ಮೋದಿನಿ** (ನಾ). ಒಂದು ಬಗೆಯ ಸಸ್ಯ ; ಅಜಮೋದ : "ಮೋದಿನೀ – ಅಜಮೋದ, ಮದ್ಯ, ಉಗುನಿ, ಹಿಟ್ಟಳಿಕ" (೬ಶಬ್ದ. ೦೩೦). [ಸಂ. ಮೋದಿನೀ]

**ಮೋದಿರ, ಮೋಯಿರ** (ನಾ). ಉಂಗುರ : ಮೋದಿರ ನಿನಗೆಲ್ಲಿ ಸಿಕ್ಕಿತು ? (೧೦೬. ೨೩೪). 'ಪೊನ್ಮೋದಿರ' ಪರಾ. ಮೋಯಿರ : 'ಮೋಯಿರ ಮುಹೂರ್ತ' ಪರಾ. [ದೇ. ತಮಿ. ಮೋತಿರ ; ಮಲ. ಮೋದಿರ; ಕೊಡ. ಮೋದ್ರ./ಸಂ. ಮುದ್ರಾ]

**ಮೋದಿಸು$_1$** (ಕ್ರಿ). ೧. ಹೊಡೆಯುವಂತೆ ಮಾಡು ; ಬಡಿಯಿಸು : ಒರ್ವರಿಂದಮೊರ್ವರನಱೆಯಟ್ಟಿ ಮೋದಿಸುತಮಿಾ ತೆಱನಿಂ ನಗುತಿರ್ಪನಾವಗಂ (ಧರ್ಮಾಮೃ. ೨-೪೨). ೨. ಹೊಡೆ ; ಕುಟ್ಟು : ಪುಡಿನೆಲದಿ ಪೊರಳುವ ಮೋದಿಸುವ ತಲೆಗಳನು ಕಗ್ಗಲ್ಲುಗಳಿಗೆ . . . ಭರತಭಾರ್ಯೆಯರಾ ದಿನದ ದುಃಖವನು ಪೇಳುವೆಡೆನ್ನಳವೆ (ತಿಮ್ಮನ. ೩-೫೬). [ಮೋದು$_1$ + – ಇಸು$_3$]

**ಮೋದಿಸು$_2$** (ಕ್ರಿ). ೧. ಸಂತೋಷಪಡಿಸು ; ಆನಂದಗೊಳಿಸು : ಆದಿಮುಖದಿಂದಲಱೀದಾ ದ್ರವ್ಯಮಂ ರೂಪು ಮೋದಿಸುವ ಗಂಧರಸವಾಸ್ಪರ್ಶ ಶಬ್ದ ಲಿಂಗಾದರ ತೃಪ್ತಿಯಾಯಾಱು ರೂಪಾದಿ ಸದ್ರವ್ಯಂಗಳು (ಚೀಕ್ಕಿತ. ೬-೦೭-೦೭) ; ಗುಂಡಯ್ಯನೆದೆಯೊಳಗೆ ಮೋದಿಸಲು ಕುಣಿವ ತಲೆಮಾಗಿ (೪ಷ್ಟ್ರಶಾ. ೩೧೦). ೨. ಆನಂದವನ್ನು ಹೊಂದು : ಉಲ್ಲಾಸವನ್ನು ತಳೆ : ಬಸವಂತಿಯ ಮಾತು ನಗೆಯ ಪ್ರಕರಣವನ್ನು ಮೀಸಿ, ಮೋದಿಸಿಯೇ ಬಂದಂತಿತ್ತು (ದೀಕಪ. II, ೦೭೦). [ಮೋದ$_1$ + – ಇಸು$_3$]

**ಮೋದೀಖಾನೆ, ಮೊದೀಖಾನೆ, ಮೋತಿಖಾನೆ, ಮೋತೀಖಾನೆ, ಮೋದಿಖಾನೆ** (ನಾ). ಸೈನಿಕರಿಗೆ ಒದಗಿಸುವ ಆಹಾರ ಸಾಮಗ್ರಿ ಮುಂತಾದುವುಗಳನ್ನು ಸಂಗ್ರಹಿಸಿಡುವ ಸ್ಥಳ.- ಉಗ್ರಾಣ; ಗೋದಾಮು; P ಅಠಾರಖಾನೆಗಳಲ್ಲಿ ಒಂದು : ಅಕ್ಕಿಯನ್ನು ಕೂಡಿಗೆ ಮಾಡಿಸಿ, ಕಿಗ್ಗಟ್ಟನಾಡ ಮೋದೀಖಾನೆಯಲ್ಲಿ ಜೋಪಾನದಿಂದ ಮಡಗಿಸಿ . . . ಅಕ್ಕಿ ಕೇಳಿದರೆ ಅಳೆದು ಕೊಡುವಂತೆ ತಾಕೀದಿ ಮಾಡಿದ್ದೇವೆ (ರಾಜೇಂದ್ರ. ೭೭): ಹುಜೂರು ಮೋದೀಖಾನೆ ಸಾವಕಾರ ಬೆಟ್ಟದ ಪುರದ. ಮೇಗಳ ಮನೆ ಲಿಂಗಣ್ಣನ ಮಗ (ಎಕ. XIV, ಹುಣಸೂ. ೦೪೩-೩; 1867); ಕಚೇರಿಗಳು ೧. ದಿವಾನ್ ಕಚೇರಿ . . . ೧೦. ಮೋದೀಖಾನೆ. ೧೧. ಕಂದಾಚಾರ ಕಚೇರಿ (ಮೈಗಾಸಂ. II, ೩೬). **ಮೊದೀಖಾನೆ** : ಅರಮನೆ ಶಿರಸ್ತೆದಾರ ಹಿರಣ್ಣಯ್ಯನ ಮಗ ಮೊದೀಖಾನೆ ಶಿರಸ್ತೆದಾರ ನರಸೈಯ್ಯನು (ಎಕ. XIV, ಪಾಂಡ್ಯ. ೦೩೪-೭; 1865). **ಮೋತಿಖಾನೆ** : ಮೋತಿಖಾನೆ ಬಕ್ಷಿ ದೊಡಬಳಾಪುರದ ದೇಶಕುಲಕರಣಿ ನರಸಿಂಗರಾಯನ ಸೇವೆ (ಎಕ. V (R). ಮೈಸೂರು. ೬೩-೦; 19ನೆಯ ಶತ). **ಮೋತೀಖಾನೆ** : ರಾಜ್ಯಪ್ರಾಪ್ತಿಯಾದೊಡನೆ ಈ ಯುವಕರಾಜನು ಮೋತೀಖಾನೆಯ ಅಕ್ಕಿ ಬೇಳೆಗಳ ಲೆಖ್ಖಾಚಾರಕ್ಕೆ ಹೊರಟನು (೪ಥಾ. ೬೦೧). **ಮೋದಿಖಾನೆ** : ಮೋದಿಖಾನೆ ಶಿರಸ್ತೆದಾರ ಸುಬ್ಬೈಯನ ಸೇವಾರ್ಥ (ಎಕ. IV (R), ಹಾಸನ. ೪೭-೨; ೪). ' ಅಠಾರಖಾನೆ ' ಪರಾ. [←ಹಿಂ. ಮರಾ. ಮೋದೀಖಾನಾ]

**ಮೋದು$_1$** (ಕ್ರಿ). ೧. ಹೊಡೆ; ಬಡಿ ; ಅಪ್ಪಳಿಸು : "ಮೋದು_ತಾಡನೇ" (ಕಮಾ); ಮೋದಿದ ನೀಲಸರೋಜಮಾಲೆಯಿಂದುದಿರ್ದ ಮಂದಂಗದೊಳ್ ತೊಡರ್ದ ತೋರ್ಪ ದಳಂಗಳೊ ಮೇಚಮಾವುದೆಂಬುದನೆನೆ ಕಾದಿ ಮೋದಿದವಿನಾಣಮದಿಲ್ಲಿ ದಲಿಲ್ಲ ನಲ್ಲಳಾ (ಆದಿಪು. ೪-೧೦); ಅಸಿತೇಂದೀವರಲೋಲಲೋಚನೆಯನಂದಂತಾ ಸಭಾಮಧ್ಯದೊಳ್ ಪಸುವಂ ಮೋದುವವೋಲೆ ಮೋದೆಯುಂ (ಶಂಕರಾ. ೭-೩೬); ಕೆಲಂ ತೆಗಳ್ದಿಯ ಹೈ ಕರಂ ತೆಗಳ್ದಿಯೆಂದೆನೆ ಪುತ್ರಿಯನಟ್ಟಿ ಮೋದಿದಳ್ (೧೦೪. ೪-೦೩೩). ೨. ಹೊಡೆದುಕೊಳ್ಳು; ಬಡಿದುಕೊಳ್ಳು : ಇಱೆವ ಬಣಿಲ್ ತರಳ್ದೊಱೆವ ಕಣ್ಬನಿ ಮಾಣದೆ ಮೋದೆ ಶೋಕವಚ್ಚಱೆದವೊಲಿರ್ದ ಬಾಸುಱೆನೊಳಟ್ಟು ಕಸಲ್ದು ಬಟಲ್ದು ಜೋಲ್ದ ಮೆಯ್ (ಶಂಕರಾ. ೦೪-೩); ಜನಕಜೆ ಬಸಿಱಂ ಮೋದಿ ಪುಯ್ಯಲ್ಚಿ ಕೇಳ್ದ್ ನಾಮಕ್ಕಾನೆಯ್ದಿದೆಂ (ಶಂಹಕಾ. ೦೦-೩೬); ಆರ್ತಾವರಾರ್ತರಣಿಂದಾ ಕಳಕಂಠನಾದೆ ಬಸಿಱಂ ಬಾರೇಟ್ಟಿನಂ ಮೋದಿದಳ್ (ಅಸಂಪು. ೦೦-೪೭). ೩. ಎರಗು ; ಮೇಲೆ ಬೀಳು : ಹರಿಣವೈರಿಗಳು ಮೃಗವ ಹರಿದಟ್ಟಿ ಓಡಿದಡಸಿ ಮೋದಿ ಮುಱೆಯದೆ ನಿಂದು ಮಱೆವಟ್ಟ ಕಾರಣವನಱೆವ ಬೇಕೆಂದೆಯ್ದಿ (ಹಕಾ. ೩-೩೩); ಮೊಳಗಿ ಮೋದುವ ಸಿಡಿಲ್ಗಳಂಬಿನ ಮೊನೆಯೊಳುದಿಸಿದುದೊ (ಕುಮಾರ. ೪-೦೯). ೪. ಮುಟ್ಟು; ತಗಲು : ಸೋಕು : ಫಲವ್ರಾತದಿಂ ನೆಲನಂ ಮೋದುವ ಮಾತುಳುಂಗಮೊಸಗುಂ ವಿದ್ಯಾಧರೋದ್ಯಾನದೊಳ್ (ಆದಿಪು. ೦-೭೭) ; ಕದಪಂ ಮೋದುವ ಕುಂಡಲದ್ವಿತಯಮುಂ ಚೆಲ್ವಾಗೆ (ಜಗಪು. ೩-೧೩); ನೆಲನಂ ಸಲೆ ಮೋದುತಿರ್ಪ ಪೀವರ ಫಲಮಾತುಳಂಗತತಿ ಸಂತತಮೊಪ್ಪುವುದಾ ವನಾಂತದೊಳ್ (ಸುಕುಮಾ. ೨-೩೬); ಬೆನ್ನಂ ಮೋದೆ ಕೇಶಾಳಿ ಗಂಡಮನೋರಂತಿರೆ ಪೊಯ್ಯೆ ಕುಂಡಲಯುಗಂ (ಶಬ್ದಸಾ. ೬೫೭). ೫. ಒದೆ; ಪಾದದಿಂದ ಪ್ರಹಾರ ಮಾಡು : ಪಾರ್ವನ ಕಾಲ್ ಮೋದೆ ನಡುತಲೆಯುರ್ವಿರ್ದುದುಮಾದುದು ನಿಮಗೆಂದು ನುಡಿದು ಕಾಯ್ದಿನೊಳೊದೆದಂ (ಶಂಕರಾ. ೨-೬೪); ಅನಾಥೆಯುಂ ಮೋದಿದ ಕಾಲ್ಗಳನಾವ ಜನ್ಮ ಜನ್ಮಂಗಳೊಳಗಾಗಿಯುಃಮಕ್ಕೆ ಮುಂದೆ ಕೇಳ್ತಿನ್ನದಿರೆಂ

(ಸುಕುಮಾ. ೩-೬). ೬. ಜಜ್ಜು ; ಕುಟ್ಟು; (ಮುಷ್ಟಿಯಿಂದ) ಗುದ್ದು: ಎಲುವ ಮುಱಿ ಮೂಳೆಯುಂ ಮೋದು ಬಿಸಿನೆತ್ತರಂ ಕುಡಿಯೆಸುತ್ತ ನಾಲ್ದೆಸೆಗಳಿಂದುಲಿದೆಸುತ (ಹರಿಶ್ಚ. ೬-೦೪); ಒದೆದು ಕೆಲವನು ಮುಷ್ಟಿಯಲಿ ಮೋದಿದನು ಕೆಲವನು (ಕುಮಾವ್ಯಾ. ದ್ರೋ. ೨-೬೦); ಅಬ್ಬರಿಸಿ ಖಳ ಮೋದಿದನು ಮುರಹರನ ವಕ್ಷಸ್ಥಳವ ಮುಷ್ಟಿಯಲಿ (ಐರಾವ. ೩-೬-೨೦). ೭. ಸದೆಬಡಿ ; ಅಜಿಗಿಜಿಯಾಗುವಂತೆ ಮಾಡು : ರಿಪುರಾಯರಂ ಮೋದಿ ಮುಱಿದು ಮೆಲಲೆಂದು ದುರ್ಗ ಬಾಯ್ದೆಱೆದೆಸೆವ ದಂತವೋ ತಿಳಿಯಲರಿದೆನಲ್ . . . ರನ್ನದ ತೆನೆಯ ತೆಕ್ಕೆ ಮಿಕ್ಕೊಪ್ಪಿದವು ಮೇಘಮಂಡಲವ ಬಗಿದು (ಹರಿಶ್ಚ. ೦-೩೮); ಅಕಟ ಹಂಸೆಯ ಮಱಿಯ ಮೋದುವ ಬಕನ ತೆಗೆಸೈ (ಕುಮಾವ್ಯಾ. ಸ. ೧೪-೦೨೩) ; ವಿಘಾಱದ ಜಕ್ಕಮನ್ನೆಯನ ಮೇರೆಯಿಲ್ಲದ ಬಲವಾರಿಧಿಯನು ಮೋದಿದಾರಂಭಟೆಯನೇವೇಳ್ವೆ (ಕಂಠೀ. ೩-೭೪). ೮. ನಾಶಮಾಡು ; ಇಲ್ಲವಾಗಿಸು : ಲಕ್ಷ್ಮಣನೆಕ್ಕತುಳದಲಿ ಬಂದನಾ ಲಯಕಾಲದಲಿ ಜಗವ ಮುಕ್ಕಿ ಮೋದುವ ಮದನಹರನಪೋಲ್ (ತೊರವೆ. ೨-೩-೦೦) ; ವೇದಮಂತ್ರವ ಹೇಳಿ ಕಾದ ತುಪ್ಪದಿ ತೊಳೆಯೆ ಹಾದರದ ಪಾಪ ಹೋಯ್ತೆಂಬ ಹಾರುವನ ಮೋದದೆ ವಿಧಿಯು (ಸರ್ವಜ್ಞ. ೯೩೨); ಶ್ರೀದಿವ್ಯಾಪಾಂಗಂಗಳಿನಾ ದಿನದೊಳ್ ಕಲ್ತ ಪೊಳಲ ನೊವವಿಂ ತನುಸಂ ಮೋದಿ ನಿಗಮಂಗಳಂ ತಂದಾದಿಯ ಮಿನಾಳ್ದನಕ್ಕೆ ನರಪತಿಗನಿಶಂ (ಚಿಕದ. ೨-೧). ೯. ಮುಕ್ಕು ; ಕಬಳಿಸು : ವೇದಬಾಹ್ಯರ ಮೃತ್ಯುದೇವತೆ ಮುಱಿದು ಮೋವದೆ ಬಿಡುವಳೇ (ಕುಮಾವ್ಯಾ. ಅ. ೪-೦೦೧) ; ನಮ್ಮ ನಗರವನೊರೆಸಿ ಮೋದುವ ಮೋಡಿ ಮೋಱೆಯೊಳವನಲದೆ (ತೊರವೆ. ೬-೮-೩): ಪಾತಕರನಂತಕ ಮುಱಿದು ಮೋದುವನೆಂದು ಪೇದಂ ಘೂರ್ಮಿಸುತ್ತಿಹುದು (ಕಂಕರಾ. ೩-೧೦); ಹಣ್ಣುಗಳನ್ನು ಮೋದಿದನು . . . ಚಕ್ಕುಲಿಗಳನ್ನು ಕಟಕಿಸಿದನು (ಶೀತೆಶಂ. II, ೦೬). ೧೦. ಸವಿ ; ಆಸ್ವಾದಿಸು ; ತಿನ್ನು : ಓದದ ಬಾಯಮೃತಾನ್ನವ ಮೋದದ ಬಾಯ್ . . . ತಾಂ ಮೇದಿನಿಯೊಳ್ ಬಿಲದ ಬಾಯಿ (ಶೀಕಿಸಾ. ೨೦). ೧೧. (ಆಲು) ಹಿಡಿದುಕೊಳ್ಳು ; ಮೆಟ್ಟಿಕೊಳ್ಳು : ಕಾದುಕೊಂಡಿರ್ದ ದಂದುಗ ಮದುವೆಗೈತಂದು ಮೋದಿತೇಂ ನಿನ್ನ ಬಾಳ್ವೆಯನೆನ್ನ ಮಗಳ (ಕಾಂಚೀರ. ೦೭೬-೩೯೬). ೧೨. [ಗಣಿತ] ಗುಣಾಕಾರ ಮಾಡು ; ಗುಣಿಸು : ಬಡಿ, ಮೋದು, ಒತ್ತು . . . ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೦೦). [ದೇ.॥ ತಮಿ. ಮೋತು; ಮಲ. ಮೋದು : ತೆಲು. ಮೋಂದು]

**ಮೋದು$_2$** (ನಾ). ೧. ಏಟು ; ಹೊಡೆತ : ಓದುಗಳ್, ಮೋದುಗಳ್, ತಿರ್ದುಗಳ್ (ಶಬ್ದಾನು. ೩೪೪ ಪ್ರಯೋ). 'ಮೋದುವೆಱು' ಪರಾ. ೨. ಹೊಡೆತದಿಂದ ಉಂಟಾದ ಬಾವು; ಪೆಟ್ಟಿನಿಂದಾದ ಬಾಸುಂಡೆ : 'ಮೋದುಗಟ್ಟು' ಪರಾ. ೩. ಒಂದು ಬಗೆಯ ಗುಹ್ಯರೋಗ : (*) [< ಮೋದು$_1$./ ತಮಿ. ಮೋತು; ತೆಲು. ಮೋಂದು, ಮೋಂದ]

**ಮೋದುಗಟ್ಟು** (ಕ್ರಿ). ಪೆಟ್ಟಿನಿಂದ ಗಂಟುಕಟ್ಟು; ಹೊಡೆತದಿಂದ ಬಾಸುಂಡೆಯೇಳು : (*). [ಮೋದು$_2$ + ಕಟ್ಟು$_1$]

**ಮೋದುವೆಱು** (ಕ್ರಿ). ಏಟು ತಿನ್ನು ; ಹೊಡೆತವನ್ನು ಪಡೆ : ಏಕಾಂತದೊಳ್ ನೂಪುರರವವಿಳಸದ್ವಾಮಪಾದಪ್ರಹಾರಕ್ಕೆದಱೆಗೊಳ್ ಪಕ್ಕಾಗಿ ಗೋತ್ರಸ್ಖಲನೆ ನೆಗಱೆ ಪೂಮಾಲೆಯಿಂ ಮೋದುವೆತ್ತಂ (ಅದಿಪು. ೪-೯). [ಮೋದು$_2$ + ಪೆಱು$_1$]

**ಮೋದೆ** (ನಾ). ಅಜಮೋದ ; ಅಜವಾನ ; ಓಮು : (*). [ಸಂ. ಮೋದಾ]

**ಮೋದೋಪಚಾರ** (ನಾ). ಬಾಣಂತಿ ಹಾಗೂ ಎಳೆಯ ಮಕ್ಕಳಿಗೆ ಸ್ನಾನಾನಂತರ ಸುವಾಸನಾಯುಕ್ತವಾದ ಧೂಪದಿಂದ ಮಾಡುವ ಉಪಚಾರ : ಆ ಶಿಶುವಿಗೆ ಸಾದರದಿ ಪ್ರಕಾ[ಕ್ಷಾ]ಲನಂಗೈದುಪೊಲಿದು ಕೊಂಡೊಯ್ದು ತಜ್ಜನನಿವತ್ತಿಸಲಿ ಮಲಗಿಸಿ ಪುಷ್ಪ ಮೋದೋಪಚಾರವ ಮಾಡುತಿರಲು (ನವಮೋ. ೦೦-೨೧). [ಸಂ.]

**ಮೋನ** (ನಾ). ೧. ಮಾತನಾಡದಿರುವಿಕೆ ; ಮೌನ : ಗುರುಚರಣಂಗಳ್ಗೆಱಗದೆ ಪರಕೆಯನಾದರದಿನಾಂತುಕೊಳ್ಳದೆ ಮೋನಂಬೆರಸಿರ್ಪುದು ನಿನಗುಚಿತಮೆ (ಗದಾಯು. ೩-೮೦) ; ಸೊಬಗಿಯ ಗಾಂಪಿನಂತೆ ನುಡಿಜಾಣನ ಮೋನದಂತೆ (ರಮಾಪು. ೬-೯೪); ಮೋನವಿತ್ತಲು ರಭಸವತ್ತಲು ಹಾನಿಯಿತ್ತಲು ವೃದ್ಧಿಯತ್ತಲು (ಕುಮಾವ್ಯಾ. ದ್ರೋ. ೪-೧) ; ಶಿಶಿರಕಾಲದ ಕೋಗಿಲೆಯ ಪೊಲು ಉಸುರದತಿಮೋನದಲಿ ಜೀವಂಜಸೆಯುರಲು (ಶಾಕುಂತ. ೨೦-೦೩). ೨. ಮಾತನಾಡದಿರುವ ನಿಯಮ ; ಮೌನವ್ರತ : ಮನಸಿಜರಾ × × × ಗನಾ ಅಪಸಿ ಬೇನೆವತ್ತಿ ಮೋನಮುಜ್ಜವಿಸುವಲ್ಲಿ ಕೊಟ್ಟುದು (ಎಕ. II, ೩೫-೫, ಸು. ೪೦೦). ೩. [ಕಾವ್ಯಶಾ] ವಿರಹದ ಹತ್ತು ಅವಸ್ಥೆಗಳಲ್ಲಿ ಎಂಟನೆಯದು : ಎಱಗಿ ನೋಡುವುದೊಂದಱಲಿ . . . ಎಂಟಱಲಿ ಮೋನಂ ಬಱತುಸುರುಪೊಂಬತ್ತಱಲಿ ಮೋಹ್ ಹತ್ತಱಲಿ ಮರಣ ಇವು ದಶಾವಸ್ಥೆಗಳೆನಲು ಪೇಳ್ವವು ವಿರಹಿಜನರ್ಗೆ (ವಿಸತ್ತ. ೩೫-೩೨). **P** ಕೆಲವು ಗ್ರಂಥಗಳಲ್ಲಿ ಮಾತ್ರ ದಶಾವಸ್ಥೆಗಳಲ್ಲಿ ಮೌನದ ಉಲ್ಲೇಖವಿದೆ. [< ಪ್ರಾ. ಮೋಣ./ಸಂ. ಮೌನ]

**ಮೋನಂಗೆಡು** (ಕ್ರಿ). ಮೌನವು ಭಂಗವಾಗು : ಕೇಳಣ್ಣ ಕವಿಯ ಕೊಪ್ಪಂ ನೀಂ ಕೊಳ್ವೊಡೆ ನೋಯದಂತೆ ತೆಗೆಯೆಂದೊಡೆ ಮೋನಂಗೆಟ್ಟಳಿವಳೆ ಸೋಲ್ತವಳೆಂದು (ಧರ್ಮಾಶ. ೯-೨೦). [ಮೋನ + ಕೆಡು$_1$]

**ಮೋನಂಗೊಳ್**, ಮೋನಗೊಳ್, ಮೋನಗೊಳ್ಳು (ಕ್ರಿ). ೧. ಸುಮ್ಮನಿರು ; ಮೌನವಾಗಿರು : ಭಟ್ಟಾರರುಂ ಮೋನಂಗೊಂಡು ನುಡಿಯದೆ ಕೆಮ್ಮಗಿರ್ದೊಡೆ (ವಡ್ಡಾರಾ. ೩೯-೧೦) ; ದಿವ್ಯನಿನಾದಮನಾಲಿಸಿಯುಂ ಮಿಡುಕದಿನಿರದೆ ನುಡಿಯದೆ ಮೋನಂಗೊಂಡಿನಿಸಿರ್ದಧಿಪತಿಗೆ ನಿಚ್ಚಂ [ಮೆಚ್ಚಂ] ಪಡೆದು (ಶಾಂತಿಪು. ೦೦-೮೭) ; ಆನೇನಂ ಪೇೞ್ದೊಡಂ ನೀಂ ಮೋನಂಗೊಂಡಿರ್ದಪೆ (ಕಂಚಿಶಂ. ೦೨೦-೨೨). ೨. ಮೌನವಾಗಿರುವುದನ್ನು ಆಚರಣೆಯಲ್ಲಿ ತರು ; ಮೌನವ್ರತವನ್ನು ಪಾಲಿಸು : ಮೌನಾನುಷ್ಠಾನವನ್ನು ಮಾಡು : ನಿಮ್ಮಡಿ ನೀಮಿಾ ಚಾತುರ್ಮಾಸವಿಲ್ಲಿರ್ಪನ್ನೆಗಂ ಸ್ವಾಧ್ಯಾಯಾಧ್ಯಯನಾನುಷ್ಠಾನನಿಯಮದಿಂ ಮೋನಂಗೊಂಡಿರ್ಪುದು (ಸುಕುಮಾ. ೧೧-೩೮ ವ) ; ನಿಶ್ಚಲಮತಿಯಿಂ ಮೋನಂಗೊಂಡು ಪಂಚ ನಮಸ್ಕಾರಮಂ ಜಪಿಸುತ್ತುಮಿಸಿರದಿರ್ಪುದುಂ (ಧರ್ಮಾಮೃ. ೩-೯೮). ಮೋನಗೊಳ್ : ೧. ಚಿತ್ತದನುರಾಗವಿಲ್ಲದೆ ಮೋನಂಗೊಂಡಿರುಳ ಬಳಸಿಗೊಳಗಾಗಿರ್ದ ಸರಸಿರುಹದಂತೆ . . . ತಾಪಪಡೆದು (ಹರಿಶ್ಚ. ಶಂ. ೨೦೯). ಮೋನಗೊಳ್ಳು : ೧. ಜಯಂತನು ಮೋನಗೊಂಡು ಆಕೆಯ ಬೆನ್ನು ಹತ್ತಿ ನಡೆದನು (ಜಯಂತ. ೫೭). [ಮೋನ + ಕೊಳ್$_1$]

**ಮೋನಗೊಳ್** 'ಮೋನಂಗೊಳ್' ನೋ.

**ಮೋನಗೊಳ್ಳು** 'ಮೋನಂಗೊಳ್' ನೋ.

**ಮೋನದಳೆ** (ಕ್ರಿ). = ಮೋನಂಗೊಳ್ ೨: ಚಳಿಗಾಳಿ ಮಳೆ ಬಿಸಿಲಿನ ಱೆಯುದಚಲತ್ವದಿಂ ಮೋನದಳೆದು ಅನುದಿನ ತಪಂಗೈವ ಮುನಿವರ್ಗಮೆನೆ (ನಂದಿಪು. ೩-೨೦). [ಮೋನ + ತಳೆ$_1$]

**ಮೋನಾನುಷ್ಠಾನ**, ಮೋನಾನುಷ್ಠಾಣ, ಮೋನಾನುಷ್ಠಾನ (ನಾ). ಮೌನವಾಗಿರುವುದನ್ನು ಪಾಲಿಸುವಿಕೆ ; ಮೌನವ್ರತದ ಆಚರಣೆ : ಧ್ಯಾನಧಾರಣ ಮೋನಾನುಷ್ಠಾನ ಜಪಸಮಾಧಿಶೀಲಸಂಪನ್ನರಪ್ಪ . . . ಸಾಸಿರದ ಮೂನೂರ್ವ್ವರೆಂತೆಸೆ (ಎಕ. VII, ಶಿಕಾ. ೦೮-೦೮ ; ೩೩೫೮). ಮೋನಾನುಷ್ಠಾಣ : ಧ್ಯಾನಧಾರಣ ಮೋನಾನುಷ್ಠಾಣ ಸಮಾಧಿಸಮ್ಪನ್ನರಪ್ಪ ಶಕ್ತಿಪರ್ಸೆಯ ಲೋಕಾಭರಣಪಣ್ಡಿತರ [ಕಾ] ಲಂ ಕರ್ಚಿ

(ಶಾಇ.XX, ೩೮-೨೮ ; 1058). ಮೋನಾನುಷ್ಠಾನ : ಧ್ಯಾನಧಾರಣ ಮೋನಾನುಷ್ಠಾನ ಜಪಸಮಾಧಿಶೀಳಸಂಪನ್ನರ್ (ಶಾಇ. XX, ೪೩-೦೭ ; 1072) ; ಮೋನಾನುಷ್ಠಾನ ಜಪಸಮಾಧಿ ಶೀಲಗುಣ ಸಂಪನ್ನರ್ (ಶಾಇ. ೦೩-೪-೦೦೩ ; 1093). [< ಸಂ. ಮೌನಾನುಷ್ಠಾನ]

**ಮೋನಾನುಷ್ಠಾಣ** ' ಮೋನಾನುಷ್ಠಾನ ' ನೋ.

**ಮೋನಾನುಷ್ಠಾನ** ' ಮೋನಾನುಷ್ಠಾನ ' ನೋ.

**ಮೋನಿ** (ನಾ). ೧. ಮಾತನಾಡದಿರುವವನು ; ಮೌನವಾಗಿರುವವನು : ಆಂ ಪೇಳದಿರ್ದೊಡೆ ಮಹಾಕಷ್ಟಮಕ್ಕುಂ ಸೆಟ್ಟಿಯ ಭಕ್ತಿಯುಂ ಕಿಡುಗು ಮೆಂಬ ನೆವದಿಂ ಮೋನಿಯಾಗಿ (ಧರ್ಮಾಮೃ. ೬-೩೬). ೨. ಮೌನವ್ರತವನ್ನು ಪಾಲಿಸುತ್ತಿರುವ ಮುನಿ,—ತಪಸ್ವಿ : ಪೇನಿಗಳಂ ಪೊಗಟಿದಿರ್. . . ವಸುಮತಿಯೊಳ್ ದಾನಿಗಳನೂನಮಿಲ್ಲದ ಮೋನಿಗಳಂ ಪೋಗಿ ಪೊಗಟಿ ಕಲ್ಲಂಗೆಟಿಯೊಳ್ (ಎಕ. V, ಬೇಲೂರು. ೦೨೩-೨೪; 952); ಜಯಪಾಲನ ಅಸತ್ಯಸಂಗತಿಗಳಿಗೆ ಜಯಂತನು ಮೋನಿಯಾಗಿ ಅನುಮೋದಿಸಿದುದು ಉಪ ಕಾರವೆನಿಸಿ ಹೇಳುವುದನ್ನು ಕಡಿಮೆ ಮಾಡಿದನು (ಜಯಂತ. ೧೦೮).

[<ಪ್ರಾ. ಮೋಣಿ. / ಸಂ. ಮೌನಿನ್]

**ಮೋನಿಗುರವ** (ನಾ). = ಮೋನಿ ೨ : ಶ್ರೀಅಗಟಿಯ ಮೋನಿಗುರವರ ಶಿಷ್ಯ ಕೊಟ್ಟುರದ ಗುಣಸೇನಗುರವನ್ನೋರ್ನನ್ತು ಮುಡಿಪ್ಪಿದಾರ್ (ಎಕ. II, ೮೦ ; ಸು. 700) [< ಮೋನಿಗೊರವ]

**ಮೋನಿಗುರವಡಿ** (ನಾ). = ಮೋನಿ ೨ : ಅದೆಯಟ್ಟನಾಡ ಚಿತ್ತೂರ ಮೋನಿಗುರವಡಿಗಳ ಶಿಷಿತ್ತಿಯರ್ ನಾಗಮತಿಗನ್ತಿಯರ್ . . . ಮುಡಿಪ್ಪಿ ದರ್ (ಎಕ. II, ೨೦-೦; ಸು. 700). [ಮೋನಿ + ಗುರವಡಿ]

**ಮೋನಿಗೊರವ** (ನಾ). = ಮೋನಿ ೨ : ವೈಶಾಖಮಾಸದ ಪೌರ್ಣ್ಣಮಾಸೆ ಯುನೆಟ್ಟುಣಾಸೆಯು ನಾಲ್ವದಿವ್ಪುರ್ಮ್ಮಹಾಜನಮುಂ ಮೋನಿಗೊರವರುಂ . . . ಕೊಟ್ಟರ್ (ಕಇ. I, ೧೩-೮; 805). [ಮೋನಿ + ಗೊರವ]

**ಮೋನಿಭಟಾರ** (ನಾ). = ಮೋನಿ ೨ : ಇನ್ತು ಕೆಲ್ಲಙ್ಗೆಟಿಯಮ್ಪಲ ಪ್ಪೊಗಟ್ ಮೋನಿಭಟಾರರೆನುತ್ತು ಲೋಕಮೆಲ್ಲಙ್ಗೆಡೆಗೊಣ್ಡುಗೊಣ್ಡು ಕೊನೆದಪ್ಪುದು (ಎಕ. V, ಬೇಲೂರು. ೦೨೩-೩೬; 952). [ಮೋನಿ + ಭಟಾರ]

**ಮೋಪಳ್** (ಕ್ರಿ). ಬಯಕೆಯನ್ನು ಅರಿ,– ತಿಳಿ : ಪ್ರಸಾದಮುಂ ಮುಕ್ಕುಳಿಸಿ ಕುಕ್ಷಿಯುಂ ಅಕ್ಕುಳಿಸಿ ಕಣ್ಣೀಜಾದುದೆಂದು ಮೋಪಳಿದು ತೂಪಿಜಿದು ತೊಡೆಗಳಂ ತಟ್ಟಿ (ಕೃಲೀಲಾ. ೬-೨). [ಮೋಪು$_3$ + ಅಳ್]

**ಮೋಪು$_1$** (ನಾ). ೧. (ಕಟ್ಟಡಗಳ ಕಂಬ, ಬಾಗಿಲು ಮೊದಲಾದುವು ಗಳಿಗೆ ಬಳಸುವ) ಮರದ ದಿಮ್ಮಿ,–ತೊಲೆ ; ಮುಂಡಿಗೆ ; ನಾಟಾ : ಎರಡು ತಿಂಗಳು ಪರಿಯಂತವೀ ರೀತಿಯೊಳ್ಳರ ಮೋಪುಗಳ ತರಿಸಿದನು (ಗೋಪಬೀ. ೦೬-೬೬); ಮೋಪು. ಅಣಲೆ, ಸೀಗೆ_ಎಂದು ಯಾವತ್ತು ಸಾಮಾನು ಸರಂಜಾಮು ಅವರ ಮೂಲಕವಾಗಿ ಸಾಗಿ ಸರಿಯಬೇಕು (ಹಹಕ. ೦೮); ಬೆಟ್ಟದ ತುದಿಯಿಂದ ಬುಡದ ತನಕ ಮತ್ತಿ, ಜಂಬೆ, ನಂದಿ ಮೊದಲಾದ ಮೋಪಿಗೆ ಬರುವ ಮರಗಳಿವೆ (ಕುಂಕಲ. ೦೦೩). ೨. ಒಳ್ಳೆಯ ಅಂಗಸೌಷ್ಠವ : ರೂಪು ತಲೆದೂಗಿಸಿತು ಸತಿಯರ ಮೋಪು ಕೊಂಡಾಡಿಸಿತು ಮದನನ ಚಾಪಕಂಬೇರಿಸಿತು (ಅಂಬಿಕಾ. ೩೪-೭೬); ಆದರೂ ಕೆಂಪಿ ಒಳ್ಳೆ ಮೋಪಾದ ಹೆಂಗಸು : ಕಾವೇರಿತೀರದ ಹೆಣ್ಣುಗಳನ್ನು ನೋಡಿದ್ದವರಿಗೇ ಆ ಮೋಪು ಅನ್ನುವುದರ ಅರ್ಥವಾಗುವುದು (ಹುಲ್ಲು. ೪). ೩. ಭಾರ ; ಹೊರೆ : (೬). ೪. ಹೊರೆಯ ಒಜ್ಜೆ,–ತೂಕ : (೬). ೫. ಏಟಿನ ಅಥವಾ ಗಾಯದ ತೀವ್ರತೆ,– ತೀಕ್ಷ್ಣತೆ : (೬). ೬. ಹಿಡಿತದ ಬಿಗಿ : (೬). ೭. ಅನುಕೂಲವಾದ ಅವಕಾಶ,– ಆಸ್ಪದ ; ಸಕಾಲ : (೬).

[ದೇ.೩ ತುಳು. ಮೋಪು, ಮೂಪು; ತೆಲು. ಮೋಪು; ಕೊಡವ. ಮೋಪ್]

**ಮೋಪು$_2$** ' ಮೊಗಪು$_1$ ' ನೋ.

**ಮೋಪು$_3$** (ನಾ). ೧. ಆಸೆ; ಬಯಕೆ; ಬೇಟ : ಮತ್ತೊರ್ವ ಬೇಟಕಾತಿ ತಾಯ ಕಣ್ಣಂ ಬಂಚಿಸಿ . ತನ್ನ ಮೋಪಿನಾ [ಪಾಠಾಂ. ಪಿಪಾ]ಕೆಯ ಮನೆಗೆ ಪೋಪ ಬೇಟದಾಣ್ಮನಂ ಪಿಡಿದು (ಪಂಪಭಾ. ೪-೮೮ ವ); " ಪ್ರೇಮ, ಪ್ರೀತಿ " (ಶಂಪದೀ. ೦೭೩). ೨. ಶ್ರದ್ಧೆ ; ಆಸಕ್ತಿ : ಅಂತು ಮುಳಿಸಿನ ಮೋಪಿನ ಗಂಡವುಚ್ಚರದ ಮೆಚ್ಚುವಣಿಗೆಯುಂಕಕಾಜರೆಕ್ಕತುಳಕ್ಕೆಕ್ಕೆಯುಂ. . . ಕಾದೆ (ಪಂಪಭಾ. ೦೨-೭೬ ವ); ಈ ಪರಿಯ ಗಮಕದಿಂ ಕಾರ್ತವೀರ್ಯಾರ್ಜುನಂ ಮೋಪಿಂದರ್ಚಿಸಿದ ಹಯವು ನಡೆಯಲ್ಕೆ (ಜೈಕು. ೯-೨೬).

[ದೇ.೩ ತಮಿ. ಮೋಪ್ಪು]

**ಮೋಪುಗಾರಿಕೆ** (ನಾ). ಮರದ ದಿಮ್ಮಿಗಳನ್ನು ಕೊಯ್ಯುವ ಉದ್ಯಮ : ಸ್ವೀಡನಿನ ಮಧ್ಯಭಾಗವು ತುಂಬಾ ಕಾಡುಗಳಿಂದ ತುಂಬಿದೆ. ಆದರಿಂದ ದೇಶವು ಮೋಪುಗಾರಿಕೆಗೆ (Lumber Industry) ಹೆಸರುಗೊಂಡಿದೆ (ಬಾಲಕ್ರ. III. ೧೩೨೭).

[ಮೋಪು$_1$ +— ಗಾರೆ (<– ಕಾಜ) +– ಇಕೆ]

**ಮೋಬದಲಿ** ' ಮುಬಾದಲೆ ' ನೋ.

**ಮೋಬೆದ** (ನಾ). (ಪಾರಸಿಗಳ) ಧರ್ಮಾಧಿಕಾರಿ; ಪುರೋಹಿತ : ದಾದಾಭಾಯಿಯು ತನ್ನ ಆರಂಭಸಂಸ್ಕಾರವನ್ನು ಹೊಂದುವವರೆಗೆ ಅವನ ತಂದೆ ಬದುಕಿದ್ದಲ್ಲಿ ಮೋಬೆದನಾಗಿ ತನ್ನ ಜನದ ಮತಧರ್ಮಕಾರ್ಯಗಳಲ್ಲಿ ತೊಡಗುವಂತೆ ಅವನನ್ನು ಪ್ರಾಯಶಃ ಒತ್ತಾಯಪಡಿಸುತ್ತಿದ್ದನು (ದಾದಾನ. ೩). [← ಪಾರ. ಮೂಬಿದ್, ಮೂಬದ್, ಮೂಬಿಜ್, ಮೂಬಜ್, ಮೌಬದ್, ಮೌಬಜ್]

**ಮೋಯಿರ** ' ಮೋದಿರ ' ನೋ.

**ಮೋಯಿರಮುಹೂರ್ತ** (ನಾ). ಮದುವೆಯ ನಿಶ್ಚಿತಾರ್ಥದ ಸಂಕೇತ ವಾಗಿ ವರನು ವಧುವಿಗೆ ಉಂಗುರವನ್ನು ತೊಡಿಸುವ ಮುಹೂರ್ತ : ಅವರು ಮಾತಾಡಿ ಮೋಯಿರಮುಹೂರ್ತದ ದಿನವನ್ನು ನಿಶ್ಚಯಿಸಿಕೊಂಡು ಬಂದರು (ವಠರಾ. II, ೦೦೩೨). ' ಉಂಗುರವುಡಿಕೆ ' ಪರ್ಯಾ.

[ಮೋಯಿರ (< ಮೋದಿರ) + ಮುಹೂರ್ತ]

**ಮೋರ್** ' ಮೊಸರ್ ' ನೋ.

**ಮೋರ** (ನಾ). ನವಿಲು; ಮಯೂರ : " ಮೋರವೆಂದುಂ ಸೋಗೆಯೆಂದುಂ ನವಿಲ್ " (ಕಕಶಾ. ೩೦-೪೬); ಮದನನ ಮುಂಗಡೆ ಮೋರ ಹಗ್ಗಾಳೆ ಸಾಟಿದುದು (ವೋಹಕ. ೬-೦೩); ವರಬರ್ಹಂಗಳಿನೊಲ್ದು ಬೀಸುವುದು ಮೋರಂ ಹೋದುಸಪ್ತಾರ್ಚಿಯಂ (ಚಂದ್ರಶು. ೧-೧೩೭); ಉಜ್ವಳತರದ ನೃತ್ಯ ಮಾಡುತ್ತಿದ್ದುದೊಂದು ಮೋರಂ ಸುತಸಂದಾಳುತೆ (ಸಿದ್ಧೇಶ್ವ. ೦೭-೨೬).

[< ಸಂ. ಮಯೂರ./ಪ್ರಾ. ಮೋರ್./ಹಿಂ. ಮರಾ. ಮೋರ್]

**ಮೋರಚೂತ** (ನಾ). ಒಂದು ಬಗೆಯ ಖನಿಜಲವಣ; ಮೈಲುತುತ್ತ : " ಮಯೂರಕ – ಮೋರಚೂತ " (ಗಂಗಾವು. ೨೩೦).

[← ಮರಾ. ಮೋರಚೂತ್, ಮೋರಚೂದ್]

**ಮೋರಟ** (ನಾ). ೧. ಕಬ್ಬಿನ ಬೇರು : " ಮೋರಟಂ, ಐಕ್ಷವಮೂಲಂ– ಕಬ್ಬಿನ ಬೇರುಗಳಿಗೆ ಪೆಸರು" (ನಿಘಂಟು. ೩೦೭). ೨. ಒಂದು ಬಗೆಯ ಮರ : ಪೆಗ್ಗೋಳಿಯಾಲವು ಬೆಳಲು ಮೋರಟ. . . ಪಾದರಿಯ ಮರ ಮೊದಲಾದವುರ್ವಿಹವು (ಶಾಕ್ಯಶಾ. ೩-೩). ೩. ಒಂದು ಬಗೆಯ ಸಸ್ಯ; ಕುರಟಿಗೆ : " ಮೋರಟ–ಕುರುಟಿಗೆ, ಸಿಗುಡಿತೆ " (೬೩೦. ೦೩೦). ೪. ಅಂಕೋಲೆಯ ಹೂವು. ೫. ಕರು ಹಾಕಿದ ಏಳುದಿನಗಳ ನಂತರದ ಹಸುವಿನ ಹಾಲು. [ಸಂ.]

**ಮೋರಟೆ** (ನಾ). ೧. = ಮೋರಟ ೧ : " ಮೋರಟಾ_ಕಬ್ಬಿನ ಬೇರು " (೬೩೦. ೦೩೦). ೨. ಒಂದು ಬಗೆಯ ಸಸ್ಯ; ಕುರಟಿಗೆ : " ಮೂರ್ವಾ,

ದೇವೀ, ಮಧುರಸಾ, ಮೋರಟಾ. . . ಪೀಲುಪರ್ಣೀ–೧೦ ಹೆಗ್ಗುರುಟೆಕೆಯ ಹೆಸರುಗಳು" (ಸಿದ್ಧಾಂತ. ೦೩೦). [ ಸಂ. ಮೋರಟ ]

**ಮೋರಟೆಕ್ಕೆಯ** (ನಾ). ನವಿಲಿನ ಗುರುತು ಇರುವ ಬಾವುಟ; ಮಯೂರಧ್ವಜ : ಮುಟಿದುದು ಬಾಣನ ಮೋರಟೆಕ್ಕೆಯ ಮತ್ತೆ ಮುಟಿದುವು ಹಲವು ಹರ್ಮ್ಯಗಳು (ಸೋಹಶ. ೩೬–೩೬).

[ ಮೋರ + ಟೆಕ್ಕೆಯ (< ಟಕ್ಕೆಯ) ]

**ಮೋರಿ$_{1}$** 'ಮೌರಿ' ನೋ.

**ಮೋರಿ$_{2}$**, ಮೊಹರಿ$_{3}$ (ನಾ). ೧. (ಸಾಮಾನ್ಯವಾಗಿ ಕೊಳಕು ಅಥವಾ ಮೈಲಿಗೆ) ನೀರು ಹರಿಯಲು ಮಾಡಿರುವ ಸಣ್ಣ ಕಾಲುವೆ; ಚರಂಡಿ; ಗಟಾರ : ನರಸರದ ಮೋರಿಯಲಿ ಇಲಿ ಹೆಗ್ಗಣದ ಮೇಳ (ಶಂಕೆಪ. ೩–೦೨); ಎಡಬಲದ ಮೋರಿಗಳಲ್ಲಿ ಮಳೆಯ ನೀರು ಹರಿಯುತ್ತಿತ್ತು (ಶಿಶು. ೯–೦೭); ನಿಮ್ಮ ನಾಲಿಗೆಗೆ ಗುರುತು ಸಿಕ್ಕರ ತಿನ್ನರಿ. ಇಲ್ಲಾದಿರ ಬಚ್ಚಲ ಮೋರಿ ಐತೆಲ್ಲಾ (ಬಾಬಂ. ೩೬). ೨. ರಸ್ತೆಯ ಕೆಳಗೆ, ರಸ್ತೆಗಡ್ಡವಾಗಿ ನೀರನ್ನು ಸಾಗಿಸುವ ಕಾಲುವೆ : ಒಂದೆ ಕಮಾನಿನ ಚಿಕ್ಕ ಸೇತುವೆಗಳಿಗೆ "ಮೋರಿ" (Culvert) ಎನ್ನುವ ರೂಢಿಯಿದೆ (ಪಾಂಶ್ರ. I, ೨೬೬). **ಮೊಹರಿ$_{3}$** : ೧. ನಾಲಾಗಳ ಬಚ್ಚಲು ಮೊಹರಿ ಹಳ್ಳಕಟ್ಟೆಗಳು ಮುಂತಾದವುಗಳ ಸ್ವಾಧೀನಗಾರರು (ಗ್ರಾಪಾಶ. ೦೦೬); ಊರಿಗೆ ಅಗತ್ಯವಾದ ರಸ್ತೆ, ಚರಂಡಿ, ಕಲ್ವರ್ಟುಗಳು, ಮೊಹರಿ, ಭಾವಿ ಮುಂತಾದ ಕಾಂಗಾರಿಗಳಿಗೆ ಸರ್ಕಾರ. . . ವೆಚ್ಚವನ್ನು ವಹಿಸಿಕೊಳ್ಳುತ್ತೆ (ಪಮ್ಮಿ. ೯೩) ; ನನ್ನೂರಿಗೆ ಈಗ ಜಲ್ಲಿಕಲ್ಲಿನ, ಚರಂಡಿ ಮೊಹರಿಗಳ ರಸ್ತೆ ಆಗಿದೆ (ಪಪೂರು. ೩೦೩). ೨. ದಾರಿಯಲ್ಲಿದ್ದ ಒಂದು ಮೊಹರಿಯ ಮೇಲೆ ಕೂತುಕೊಂಡು ಅಳುತ್ತಿದ್ದನು (ಕಂಕಶ. ೨೦೨).

[← ಹಿಂ. ಮೋರೀ; ಮರಾ. ಘೋರೀ, ಮೋಹರೀ]

**ಮೋರಿಯ** 'ಮೋರ್ಯ' ನೋ.

**ಮೋರು** (ಕ್ರಿ). ಹೀರು ; ಸುರಿದುಕೊಳ್ಳು : ರಾಮಪ್ಪ. . . ಕಳ್ಳು ಮೋರುವುದಕ್ಕೆ ಆರಂಭಿಸಿ, ಅದರಲ್ಲೆ ಸುಖದ ಪರಾಕಾಷ್ಠೆಯನ್ನು ಕಾಣ ತೊಡಗಿದ (ಬತ್ತಉ. ೦೦೩). [ ? ]

**ಮೋರುಂಡೆ** (ನಾ). (ಮೊಸರನ್ನು ಪಯೋಗಿಸಿ ತಯಾರಿಸುವ) ಒಂದು ಬಗೆಯ ಉಂಡೆ,– ಭಕ್ಷ್ಯ : ನಜುಗಂಪೊಪ್ಪುವ ಮೋರುಂಡೆ ಮನ ಕೊಪ್ಪಿಸಿದುವು ಮಧುರರಸದ ಸುಧೆಯಂ ಬುಧರೊಳ್ (ಪಶಶಂ. ೯೯೩) ; ಪೂರಿಗೆ ಮಂಡಿಗೆ. . .ಮೋರುಂಡೆಗಳೆಂಬಿವನಾ ನಾರೀತತಿ ಮುನಿಜನಕ್ಕೆ ಬಡಿಸಿದುದಾಗಳ್ (ತ್ರಿಶಂ. ೦೦–೩೯); ಬಿಳಿಯ ಬೆಲ್ಲವು ಮೋರುಂಡೆ ಎಳ್ಳುಂಡೆಯು (ಪ್ರಾಪಶ. ೩೬–೦೦೩) ; ಮೂಱು ಮೋರುಂಡೆಯಿಂ ಚರುವನಿಡುವುದು (ಸೋಂಬಿಶ. ೨೬–೦೦).

[ ಮೋರ್ (< ಮೊಸರ್) + ಉಂಡೆ. /ತೆಲು. ಮೋರುಂಡ. /ಪ್ರಾ. ಮೋರಂಡ = ಕರಿದ ಕಡುಬು, ಕರಿಗಡುಬು ]

**ಮೋರೆ** 'ಮೋಱೆ$^{3}$' ನೋ.

**ಮೋರ್ಚಂಗ್**, ಮೋರ್ಸಿಂಗ್ (ನಾ). (ತಾಳವನ್ನು ಸೂಚಿಸುವ) ಒಂದು ಬಗೆಯ ಲೋಹದ ಮುಖವಾದ್ಯ : ಚಂದದಿಂ ಮುಖವೀಣೆ ಮೋರ್ಚಂಗ್ ಪಿಟೀಲುಗಳ ಹಿಂದೆ ನುಡಿ ಪಿಮ್ಮೇಳದವರೊಡನೆಯೊಲಪಿನಿಂ ನಿಂದು ಕುಣಿಯುತ್ತಿರುವ ವಾರಕಾಂತವೃಂದಮಂ ನೋಡು ರಮಣ ನೀನು (ಅಶಾಂಶ. ೨೬–೩೦); ಚಂದದಿಂ ಮುಖವೀಣೆ ಮೋರ್ಚಂಗ್ಪಿಟೀಲುಗಳ (ಪತಶ. ೩–೩೦). **ಮೋರ್ಸಿಂಗ್** : ಅಲಗನುಳ್ಳ ಕಂಚಿನ ವಾದ್ಯವೊಂದು. ಬಾಯಲ್ಲಿಟ್ಟು, ಅಲಗಿನ ತಾಡನದಿಂದ ಲಯವಾದ್ಯವಾಗಿ. ಉಪಯೋಗದಲ್ಲಿದೆ. ಇದಕ್ಕೆ 'ಮೋರ್ಸಿಂಗ್' ಎಂದು ಹೆಸರು (ಸಂಗೀಶಂ. ೦೨೨).

[ ← ಹಿಂ. ಮೋರ್ಚಂಗ್, ಮುರ್ಚಂಗ್; ಮರಾ. ಮೋರ್ಚಂಗ್, ಮೋರ್ಶಿಂಗ್ ]

**ಮೋರ್ಚಾಲ್** (ನಾ). (ದೇವರು, ದೊರೆಗಳು ಮತ್ತು ಪೂಜ್ಯರಾದವರ ಬಳಿ ಗೌರವದ ಚಿಹ್ನೆಯಾಗಿ ಹಿಡಿಯಲಾಗುವ) ನವಿಲುಗರಿಗಳಿಂದ ಮಾಡಿದ ಚಾಮರ : ರಥೋತ್ಸವ ಮುಂತಾದ ಉತ್ಸವಗಳಿಗೆ ಕಲಾಬತ್ತು ಪಲ್ಲಕ್ಕಿ, ಛತ್ರಿ, ಚೌರಿ, ಸೂರಿಪಾನೆ, ಮೋರ್ಚಾಲ್ . . . ಚಂದ್ರಮಂಡಲ ಮುಂತಾದ ನಾನಾವಿಧಗಳಾದ ವಾಹನಗಳನ್ನು ಒಪ್ಪಿಸಿದರು (ಮಹಾಶಂ. II, ೦೨೯) ; ರಾಜಬಿರುದುಗಳು— ನವಪತ್, ಮೋರ್ಚಾಲ್, ಸೂರ್ಯಪಾನ, ಮಕರತೋರಣ, ಹಗಲು ದೀವಟಿಗೆ, ಧವಳಶಂಖ (ಗುಡುದ. ೦೦).

[ ← ಹಿಂ. ಮೋರ್ಛಲ್; ಮರಾ. ಮೋರ್ಚಲ್, ಮೋರ್ಚೇಲ್ ]

**ಮೋರ್ಚೆ**, **ಮೊಹರ್ಚು**, **ಮೊಹರ್ಚೆ** (ನಾ). ೧. ಕೋಟೆಯ ಬತೇರಿಯ ಮೇಲೆ ತುಪಾಕಿಯನ್ನು ಇರಿಸುವ ಜಗಲಿ : ಇಂಗ್ರೇಜ ಬಹಾದ್ದರವರ ಫೌಜಿನವರು ಮುಂತಾಗಿ ಬತ್ತೇರಿಗಳ ಮೋರ್ಚೆ ಮೇಲೆ ಯೇರಿಸಿ ಇದ್ದ ಪಿರಂಗಿಗಳನ್ನು ಇಳಿಸಿದರು (ಠಾಕಂಚ್ರ. ೯೯). ೨. ಲಗ್ಗೆ; ಧಾಳಿ; ಮುತ್ತಿಗೆ : ಅತ್ತಲಾಗಿ ಟೀಪುಸುಲ್ತಾನರು ಮಹಾಕೋಪದಿಂದ ತಮ್ಮ ಯಾವತ್ತು ಫೌಜು ತೆಗೆದುಕೊಂಡು ಹೋಗಿ, ಬೆಟ್ಟಕೋಟೆಗೆ ಮೋರ್ಚೆಗಳ ಹಾಕಿ, ಲಡಾಯಿ ಮಾಡಿ . . . ಪಟ್ಟಣದ ಕಡೆ ಹೊರಟರು (ಠಾಕಂಚ್ರ. ೬೩) ; ಕರ್ನಾಡ ಕಚೇರಿಯ ಮೇಲೆ ನಮ್ಮ ಮೊದಲನೆಯ 'ಮೋರ್ಚೆ' ಹೋಯಿತು (ಕೃತಿಸ. ೬೦). **ಮೊಹರ್ಚು** : ೩. ಸೈನಿಕರು ನಿಲ್ಲುವ ಕೋಟೆಯ ಆಯಕಟ್ಟಿನ ಸ್ಥಳ : ನೂರಾರು ಜನ ಹೊರ ಹೊರಟು ಮೊಹರ್ಚು ಮ್ಯಾಲೆ ಬಿದ್ದು ಜನರ ಗಾಶಿಮಾಡುವುದನ್ನು ಶಾಬಾಸ್ಖಾನರು ಕಂಡು (ಹೈದರ. ೨೩). **ಮೊಹರ್ಚೆ** : ೧. ಅಗಸನ ಕಲ್ಲು ದಿಣ್ಣೆ . . . ರಂಗಯ್ಯನ ಬಾಗಿಲು ಎದುರಿಗೆ, ಬುದ್ಧಿವಂತನ ಮಾರಡಿ ಬಳಿಯಲ್ಲಿ ಈ ಕಡೆಗಳಲ್ಲಿ ಮೊಹರ್ಚೆ ಕಟ್ಟಿಸಿ ಫಿರಂಗಿಗಳನ್ನು ಹೂಡಿಸ ತಕ್ಕದ್ದು (ಕಕ್ರಾಶಾ. ೬೨).

[←ಹಿಂ. ಮೋರ್ಚಾ ; ಮರಾ. ಮೋರ್ಚಾ, ಮೋರಚಾ, ಮೋರಚಾಲ್, ಮೋರ್ಚಾಲ್ ; ಪಾರ. ಮೋರ್ಚಾಲ್ ]

**ಮೋರ್ಚೆಕಟ್ಟು** (ಕ್ರಿ). ಮುತ್ತಿಗೆ ಹಾಕು ; ದಾಳಿಮಾಡು ; ಲಗ್ಗೆ ಹಾಕು : ಬಹದ್ದರ್‌ಹೈದರಲ್ಲೀಖಾನನು ಸತ್ಯಮಂಗಲದ ಕೋಟೆಗೆ ಮೋರ್ಚೆಕಟ್ಟಿ ತೋಪುಗಳನ್ನು ಹೊಡೆಸಿ . . . ಶ್ರೀರಂಗಪಟ್ಟಣಕ್ಕೆ ಬಂದು ಸೇರಿದನು (ಮಹಾಶಂ. I, ೦೬೩).

[ ಮೋರ್ಚೆ + ಕಟ್ಟು$_{1}$ ]

**ಮೋರ್ತಬ್ಬ** (ನಾ). ಮುದ್ರೆ ; ಠಸ್ಸೆ : 'ಶಿಕ್ಕಾಮೋರ್ತಬ್ಬ' ಪರಾ.

[ ← ಮರಾ. ಮೋರ್ತಬ್, ಮೋರತಬ್ ]

**ಮೋರ್ಯ**, ಮೋರಿಯ (ನಾ). ಒಂದು ವಂಶದ ಹೆಸರು : ಅಲ್ಲಿಂದಂ ತೆಂಕಲು ಮೋರ್ಯ್ಯರ್ ಮಾಳಸಮೂಹಂ ಅಲ್ಲಿಂದ ತೆಂಕಲು ಬೆದಿರೂರ(ರ) ತೊಱೆ$^{3}$ (ಮೈಶಾಂ. ೦೯೨೩. ೦೦೩–೯೦ ; ೨೩೪). **ಮೋರಿಯ** : ಸರವಿಯ ಕೆಯ್ಗೆ ಪಣಮಾಱು ಮೋರಿಯರ ಕೆಯ್ಗೆ ಪಣಂ ಮೂಱು ಕಱಿಯೆತ್ತಿಂಗೆ ಗರುಡನ ಕಂಭದಿಂ ಮೂಡಲ್ ಮನೆವೊನ್ನು (ಕೌಶಾ. XVIII, ೦೦೦–೯೯ ; 1115). [ < ಪ್ರಾ. ಮೋರಿಯ = ಒಂದು ಕ್ಷತ್ರಿಯ ವಂಶ. /ಸಂ. ಮೋರೀ = ಒಂದು ವಂಶದ ಹೆಸರು. /ತಮಿ. ಮೋರಿಯ = ಮೌರ್ಯ]

**ಮೋರ್ಸಿಂಗ್** 'ಮೋರ್ಚಂಗ್' ನೋ.

**ಮೋಲು** (ನಾ). ಬೆಲೆ ; ಕಿಮ್ಮತ್ತು ; ಮೌಲ್ಯ : ಏನು ನಿಮ್ಮ ಮೋಲು—ಲೋಕದಾಗ ? ನಾವು — ಮರತೇವದನ ಹ್ಯಾಂಗೆ ? (ಕೃಹಾಕು. ೯೦–೦೦). [← ಮರಾ. ಹಿಂ. ಮೋಲ್. /ಸಂ. ಮೌಲ್ಯ ]

**ಮೋವೆ** (ನಾ). ಅಗ್ರಭಾಗ : ಮುಂಭಾಗ : ಅರಸ ಕೇಳಾಕ್ಷಣಕೆ ಸುಳಿದಳು ಸರಸಿರುಹಮುಖಿಯೊಬ್ಬಳಾ ಮೋಹರದ ಮೋವೆಯು ಮುಂದೆ ಮುಜುಕದ ಮಿಂಚಿನಂದದಲಿ (ಕಠಾಚ.೬-೯-೧೦). [ ← ತೆಲು. ಮೋವಿ ]

**ಮೋಷ** (ನಾ). ೧. ಕಳ್ಳತನ ; ಕಳವು. ೨. ಕೊಳ್ಳೆ ; ಸುಲಿಗೆ ; ಲೂಟಿ : ಅಸತ್ಯಮೋಷವಾಗ್ಯೋಗರಾಶಿಸಾಧಿಕಂ ದ್ವೀಂದ್ರಿಯಪರ್ಯಾಪ್ತಕಂಗಳ್ ಅಸಂಖ್ಯಾತಭಾಗಂ (ತತ್ತ್ವಸೂ. ೨೩). [ಸಂ.]

**ಮೋಷಕ** (ನಾ). ಕಳ್ಳ : "ಚೋರಃ, ಐಕಾಗಾರಿಕಃ, ಸ್ತೇನಃ, ದಸ್ಯುಃ, ತಸ್ಕರಃ, ಮೋಷಕಃ . . . ಮಲಿಮ್ಲುಚಃ – ೧೦ ಕಳ್ಳನ ಹೆಸರುಗಳು" (ಸಿದ್ಧಾಂಶ. ೩೦೪). [ಸಂ.]

**ಮೋಷ್ಟಿಕ** (ನಾ). ದಾನವಾಗಿ ಪಡೆದ ಮುಷ್ಟಿಧಾನ್ಯದಿಂದ ಜೀವನ ನಡೆಸುವವನು (?) : ತಿರುನಾರಾಯಣಪುರಮುಖ್ಯವಾದ ಸಕಳಾಚಾರ್ಯ್ಯರೂ ಸಕಳಸಮಯಿಗಳೂ ಸಕಳಸಾತ್ವಿಕರೂ ಮೋಷ್ಟಿಕರು . . . ಹದಿನೆಣ್ಟುನಾಡ ಶ್ರೀವೈಷ್ಣವರ ಕೈಯ್ಯಲು ಮಹಾರಾಯನು ಜೈನರ ಕೈವಿಡಿದು ಕೊಟ್ಟು (ಎಕ. II, ೩೪೪-೧೨ ; 1363). [ ? ]

**ಮೋಸ** (ನಾ). ೧. ಕಪಟ ; ವಂಚನೆ : ದುಷ್ಟ ಮೋಸದೊಳಿಱಿದನೆಂಬರು (ಕಾತಿರಾ. ೧೯-೩೯) ; ಮಱುಗಿದನು ಮನದೊಳಗೆ ಮೋಸದ ಮಱಿಯ ರಕ್ಕಸಗದನಕೆ (ಕೃರಾ. ೬-೩೬-೪) ; ಇಂತಾ ಮೋಸ ಎಲ್ಲಿ ಕಲಿತಿರಿ? (ರಾಯುಕ. ೬೨). ೨. ಅಪಾಯ ; ಆಪತ್ತು ; ಗಂಡಾಂತರ : ದೇಶಾಧಿಪ ಕೃಷ್ಣರಾಯಂಗೆ ಖಳರಿಂದ ಮೋಸವ ಬರಗುಡನೆಂದು ಶೇಷ ಮಂಡಳಿಸಿ ಪಂದದಿ ವಜ್ರದಾಳ್ವೇರಿ ಲೇಸಾದುದು (ಮೋಹತ. ೩-೬) ; ಇವರುತಬ್ಬು ಮಹೀಶೂರವರರದಟಪು ಬೇಱ ವಿಘಱ ಪೋಪುದು ಮೋಸಂ (ಕಕಂ. ೨-೧೦೦) ; ಅಪರ ಮಂತ್ರಬಲ ಸಾಲದಿದ್ದರೆ ಮಂತ್ರವಾದಿಗೆ ಮೋಸ (ಸರ್ಕ. ೬೩). ೩. ತಪ್ಪು ; ಅಪರಾಧ : (✝). ೪. ನಷ್ಟ ; ಹಾನಿ : (✝).

**ಮೋಸ ಮಾಡು** = ವಂಚಿಸು ; ಮೋಸಗೊಳಿಸು : ನನಗೆ ಅವರು ಮೋಸಮಾಡಬಹುದು (ಅಶಾ. ೩೩) ; ಇವರು ಮೂವ್ವರೂ ಸೇರಿ ನಿನಗೆ ಮೋಸಮಾಡಲು ಹೊಂಚುಹಾಕುತ್ತಿದ್ದಾರೆ (ಕೂಕಾ. ೫೬). **ಮೋಸವಾಗು** = ವಂಚನೆಯಾಗು : ವ್ಯಾಪಾರದ ವಹಿವಾಟಿನಲ್ಲಿ ಅವನಿಗೆ ಜೊತೆಗಾರನಿಂದ ಮೋಸವಾಗಿದೆ (ರೂಡಿ). **ಮೋಸಹೋಗು** = ವಂಚನೆಗೆ ಗುರಿಯಾಗು ; ಠಕ್ಕಿಗೆ ಒಳಗಾಗು : ಮೋಸಹೋಗುವನಲ್ಲಯ್ಯ . . . ನಮ್ಮ ವಾಸುದೇವ ತಿಮ್ಮಯ್ಯ (ಪುರಂದ. ೦-೬೭-೦೦) ; ದ್ರೋಣನು ನಿನ್ನ ಮಾತಿನಿಂದ ಮೋಸಹೋದನು (ಪೀಠಿಕಾ. IV, ೩೨).

[<ಪ್ರಾ. ಮೋಸ./ ಸಂ. ಮೋಷ]

**ಮೋಸಂಬಿ** 'ಮೂಸಂಬಿ' ನೋ.

**ಮೋಸಕಾಱ** 'ಮೋಸಗಾರ' ನೋ.

**ಮೋಸಕೂಪ** (ನಾ). ಕೃತಕವಾಗಿ ನಿರ್ಮಿಸಿದ ಬಾವಿ : ನಂಜಿನ ಮಡುಹು ಹೆಬ್ಬುಲಿ ಕರಗಸಂಗಳು ಅಡಿಯನೂಱಿದರೊಡನೆ ನುಂಗುವ ಮೋಸಕೂಪಗಳು (ಕಾತಿರಾ. ೦೬-೪೦). [ಮೋಸ + ಕೂಪ$_2$]

**ಮೋಸಗಾತಿ** (ನಾ). ವಂಚನೆ ಮಾಡುವವಳು ; ಮೋಸಗೊಳಿಸುವವಳು ; ವಂಚಕಿ : ಅರಸನು ಅತಿವ್ಯಗ್ರನಾಗಿ ಮೈಮರೆತು ಬಾಯಿಗೆ ಬಂದಂತೆಲ್ಲ ಮಂಗಳನ್ನು ಬಯ್ದು ಮೋಸಗಾತಿಯೆಂದೂ . . . ದೂಷಿಸಿದನು (ಕಬಕ. ೩೨). [ಮೋಸ + – ಕಾತಿ]

**ಮೋಸಗಾರ**, ಮೋಸಕಾಱ (ನಾ). ವಂಚನೆ ಮಾಡುವವನು ; ಮೋಸಗೊಳಿಸುವವನು : ಕಪಟಿ : "ಠಕ್ಕ, ಬೊಂದುಕ, ಚಲ್ಲವತ್ತ, ನಂಬಿಸಿ ಕಿಂಬಟ, ಮೋಸಗಾರ, ಕಾಕ, ದುರುಳ" (ಕಂಪುಹು. ೯೪) ; ಅವರು ತುಂಬಾ ಮೋಸಗಾರರೆಂದು ತಿಳಿಯತಕ್ಕದ್ದು (ಮುಂಬಯಿ. ೪-೦೦೩). **ಮೋಸಕಾಱ** : ಆಟಕಾಱಂ, ಮೋಸಕಾಱಂ (ಕಬ್ಬಿಸ. ೪೨೩ ಕೃದಿಯೋ).

[ ಮೋಸ + –ಗಾರ (< –ಕಾಱ) ]

**ಮೋಸಗಾರಿಕೆ** (ನಾ). ವಂಚನೆ ; ಕಪಟ ; ಠಕ್ಕು : ಇವರ ಮೋಸಗಾರಿಕೆ ನಮ್ಮ ಬಳಿ ನಡೆಯುವಂತಿಲ್ಲ (ಕುಸರು. ೨೯೩) ; ಈ ಪ್ರಕರಣದಲ್ಲಿ ಮೋಸಗಾರಿಕೆಯು ತುಂಬಿ ತುಳುಕುವಂತೆ ತೋರುವುದು (ಸೂರಿಬಿ. ೦೭೪).

[ಮೋಸಗಾರ + – ಇಕೆ]

**ಮೋಸಗಾರ್ತಿ** (ನಾ). = ಮೋಸಗಾತಿ : (✝).

[ ಮೋಸಗಾರ + – ತಿ$_1$ (< – ಇತ್ತಿ) ]

**ಮೋಸಗೊಳಿಸು** (ಕ್ರಿ). ವಂಚನೆ ಮಾಡು ; ಠಕ್ಕಿಸು : ಧೂರ್ತರು ತರತರದ ಹಂಚಿಕೆಗಳಿಂದ ಜನರನ್ನು ಮೋಸಗೊಳಿಸಲಿಕ್ಕೆ ಹವಣಿಸುತ್ತಾರೆ (ಮುಂಬಯಿ. ೪-೦೯) ; ಜನ ನಮ್ಮನ್ನು ಮೋಸಗೊಳಿಸಲು ಬಂದರೆ ನಾವು ಸತ್ಯವನ್ನೇ ನುಡಿಯುತ್ತಕ್ಕದ್ದು (ಧರ್ಮಸಾ. ೦೪೯). [ಮೋಸಗೊಳು + – ಇಸು$_3$]

**ಮೋಸಗೊಳು**, ಮೋಸಗೊಳ್ಳು (ಕ್ರಿ). ವಂಚನೆಗೆ ಒಳಗಾಗು; ಕಪಟಕ್ಕೆ ಗುರಿಯಾಗು : 'ಮೋಸಗೊಳಿಸು' ಪರಾ. **ಮೋಸಗೊಳ್ಳು** : ಬಹಳ ಸ್ನೇಹವಿರುವ ವ್ಯಕ್ತಿಯಿಂದಲೇ ಅವರು ಮೋಸಗೊಂಡರು (ರೂಡಿ).

[ ಮೋಸ + ಕೊಳು (< ಕೊಳ್$_1$) ]

**ಮೋಸಗೊಳ್ಳು** 'ಮೋಸಗೊಳು' ನೋ.

**ಮೋಸನಿಗೆ** (ನಾ). ಜಾರೆ ; ವೇಶ್ಯೆ ; ಸೂಳೆ (?) : ಮೋಸನಿಗೆಯರೊಳ್ಪರಿದಪ್ಪರ್ಥವ್ಯಯಮಿಲ್ಲದೆ ತನ್ನಿಚ್ಛೆ ಸಲ್ವುದೆಂಬುದು ತಾತ್ಪರ್ಯಂ (ಶೀಶಿವಾ. ೨೬-೪೦). [ ? ]

**ಮೋಸಮ್** 'ಮೋಸಮು' ನೋ.

**ಮೋಸಮು**, ಮೋಸಮ್, ಮೋಸಮ್ಮು, ಮೋಸುಂ (ನಾ). ೧. ಅನುಕೂಲವಾದ ಕಾಲ ; ಸಕಾಲ : "ಮೋಸಮು—ಯೋಗ್ಯಸಮಯ (ಶಾಸಕೋ. ೩೩). **ಮೋಸಮ್** : ೨. ಋತು ; ಕಾಲ : ಏನು ಮನೆ ತುಂಬ ಮಾಡಿಟ್ಟಿರುವ ಧನಕನಕವೋ? ಬರಲು ಪ್ರತಿ 'ಪೇ'ದ ಮೋಸಮ್? (ಶಂತವ. ೬೯-೦೦). **ಮೋಸಮ್ಮು** : ೧. ಆಟದ ಮೋಸಮ್ಮು ಇಲ್ಲದಾಗ ಊರಾಗ ಮುಕ್ಕಾಮು ಇರತಿತ್ರಿ (ದೀಶಹ. II, ೩೯೬). **ಮೋಸುಂ** : 'ಅವಲ್‌ಮೋಸುಂ' ಪರಾ.

[ ← ಅರ. ಮೌಸಿಮ್ ; ಹಿಂ. ಮೌಸಮ್, ಮೌಸಿಮ್ ; ಮರಾ. ಮೋಸಮ್ ]

**ಮೋಸಮ್ಮು** 'ಮೋಸಮು' ನೋ.

**ಮೋಸವಡೆ** (ಕ್ರಿ). ಮೋಸಗೊಳ್ಳು ; ವಂಚನೆಗೊಳಗಾಗು : ವ್ಯಾಸನಂದನನಿರ್ದ ಬಳಿಗೆ ರಂಭಾನಾರಿ ಮೋಸವಡೆದು ನಡೆತಂದು ಪೂಸರ ನಾಗಮುಕವನ ಕರೆದು ಪರಿಹಾಸಕಕೊಳಗಾದಳವಳು (ಕಂನವಿ. ೯-೦೪೪).

[ಮೋಸ + ಪಡೆ$_1$]

**ಮೋಸು$_1$** 'ಮೋಚು$_1$' ನೋ.

**ಮೋಸು$_2$** (ನಾ). ೧. ಕುಡಿ; ಚಿಗುರು ; ಮೊಳಕೆ : ಎನಿತೇ ಬೀತರು ಈ ಎಡೆ ಮತ್ತೂ ತಲೆಯಿಡುವುದು ಬಯಕೆಯ ಮೋಸು (ಪವರಾ. ೫-೩೦) ; ಕಲ್ಲುಗೋಡೆಯ ಮೇಲೆ ಸರಿವ ತುಂತುರು ಬಳ್ಳಿ, ಬೆಳ್ಳಿಯೆಲೆ, ಬೆಳ್ಳಿಮೋಸು (ಶಿರಾಂ. ೭೦-೦೨) ; ಈ ಜಾತಿಯ ಗಿಡಗಳು ಕಾಂಡವಿಲ್ಲದ, ಒಂದೇ ಸಸ್ಯದಿಂದ ಮೋಸುಗಳು ಹೊರಬಂದು ಗುಂಪಾಗಿ ಬೆಳೆಯುವ, ಸಕ್ಯೂಲೆಂಟ್ ಸಸ್ಯಗಳು (ಕವಿಕೋ. I, ೬೭೭). ೨. ಮೂಲ ; ಉಗಮಸ್ಥಾನ : ಕರೆಕರೆಯ ಮೋಸು ಸಂತಾಪದೊಬ್ಬುಳಿ . . . ಲಘುತ್ವದ ಗೆರಸೆಯಿಾ ದೇಹವು (ಕೃಕವ. ೧-೦೬-೦೦). [ ? ]

**ಮೋಸುಂ** 'ಮೋಸಮು' ನೋ.

**ಮೋಹ$_1$** (ನಾ). ೧. ಎಚ್ಚರತಪ್ಪುವಿಕೆ ; ಜ್ಞಾನಹೋಗುವಿಕೆ ; ಮೂರ್ಛೆ : "ಮೂರ್ಛಾ, ಕಶ್ಮಲಂ, ಮೋಹಃ – ೩ ಮೈಮರೆಯುವಿಕೆ,

ಮೂರ್ಛೆ " (ಸಿದ್ಧಾಂತಿ. ೨೭೦). ೨. ಭ್ರಾಂತಿ; ಭ್ರಮೆ : ವೈದೇಹೀ ವೈದೇಹಿಯೆಂದು ಪುದಿದಿರೆ ಮನಮಂ ಮೋಹತಮಂ ದೀಪಂ ವಾತಾಹತಿಯಿಂ ನಂದುವಂತೆ ಮೂರ್ಛೆಗೆ ಸಂದಂ (ಶಂಖಾಪುರಾ. ೯-೧೧೬) ; ಜಂತ್ರವಿಡಾಗಕೆ ಹರನು ತಂತ್ರಚಕ್ರಕೆ ಹರಿಯು ಮಂತ್ರಮೋಹಕ್ಕೆ ಬೊಮ್ಮನು ಜಗದಿ ಸ್ವತಂತ್ರನಾರುಂಟು (ಸರ್ವಜ್ಞ. ೨೦೦) ; ಇಂಥ ಹಲವು ಬಗೆಯ ಮೋಹ ಮೋಸಗಳಿಗೆ ಒಳಗಾಗಿ, ಅವನು ಅಲ್ಲಿ ಇರುವ ತನಕ ತುಂಬ ಅವಮಾನಪಟ್ಟು ತೊರಟನು (ವತಖ. ೯೭). ೩. ದಿಕ್ಕುತೋಚದಿರುವಿಕೆ ; ದಿಗ್ಭ್ರಮೆ; ಕಕ್ಕಾಬಿಕ್ಕಿ. ೪. ಮೂರ್ಖತನ; ಅವಿವೇಕ. ೫. ತಪ್ಪು ; ದೋಷ. ೬. ಅಭಿಮಾನ; ಪ್ರೀತಿ; ವಿಶ್ವಾಸ : " ಕೂರ್ಮೆಯೆಂಬಲ್ ಮೋಹ " (ತತ್ತ್ವಾ. ೬೦); ಈಕೆ ಸಾಮಾನ್ಯವನಿತೆಯಲ್ಲಿವಳ್ ಗಂಧರ್ವವನಿತೆಯೆನ್ನೊಳಾದ ಮೆಚ್ಚುಂ ಮೋಹಮುಂ ಕಾರಣವಾಗಿರ್ಪಳ್ (ಶಂಖಧಾ. ೬-೭೩ ವ) ; ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ (ಬಸವ. ೦೩) ; ಚಿಕ್ಕಮಾದಣ್ಣಗಳ ಮಹದೇವಿಯರ ಮೋಹದ ಕಂದನೋಯೆನುತ ಹಾಡುವನು (ಬಸವಪು. ೪೭-೩೮). ೭. ಮರುಳುಗೊಳಿಸುವಿಕೆ; ಆಕರ್ಷಣೆ; ಸೆಳೆತ : ಭವದೀಯ ರೂಪಲಂಪಟ ವಿಟರಂ ಮರುಳ್ಗೊಳಿಸಿತುತ್ಕಟಮೋಹತರಮಾಪಟಂ ಪಟಂ (ಅದಿಪು. ೩-೯೦) ; ಮೋಹದಿಂದಾ ಮೂರ್ಛೆವೋಗರು ಮೋಹದಿಂದಾ ಮರಣವಯಿದರು ಮೋಹದಿಂದಾರ್ಕೆಡರು (ಸಾಳ್ವಭಾ. ೩-೩೬) ; ಹಳ್ಳಿಯ ಹೆಂಗಸು ನನಗೆ ಜಿಹಾಸೆ ಹುಟ್ಟಿಸಲಿಲ್ಲ, ಅಯ್ಯರ ಹೆಂಡತಿ ಮೋಹವನ್ನೂ ಹುಟ್ಟಿಸಲಿಲ್ಲ (ಧಾವೂತ. ೦೦೩). ೮. ಮರೆತು ಹೋಗುವಿಕೆ; ಮರವು : ರಾಹು ತೊರೆದೊಡನೆ ಶಶಿಯುಂ ರೋಹಿಣಿ ಬಳಿವೊರ್ದಿದಂತೆ ನೆನೆಪಿಂದಿರದಾ ಮೋಹತಮಮಂ ಳಿಯೆ ಸುಕೃತದೆ ನೀಹಾರಕರಾಸ್ಯೆ ಸೇರ್ದೆಯೆನ್ನಯ ಬಳಿಯಂ (ಶಾಕುಂತ. ೦೬೩). ೯. (ಶತ್ರುವನ್ನು ದಿಗ್ಭ್ರಮೆಗೊಳಿಸಲು ಮಾಡುವ) ಇಂದ್ರಜಾಲ ; ಯಕ್ಷಿಣಿ. ೧೦. [ವೇದಾಂತ] ಅರಿಷಡ್ವರ್ಗಗಳಲ್ಲಿ ಒಂದು ; ಸತ್ಯವನ್ನು ತಿಳಿಯಲು ಅಡ್ಡಿ ಬರುವ ಮನಸ್ಸಿನ ಭ್ರಾಂತಿ; ಅಜ್ಞಾನ : ಮಾಯೆ ; ಅವಿದ್ಯೆ : ಇನ್ನಿಂದ್ರಿಯಶಕ್ತಿಯಂ ಜರೆ ಭರಂಗೆಯ್ದೊಯ್ದು ಬೆನ್ನಟ್ಟಿ ವಿಸ್ಫುಟವಿಲ್ಲಿಚ್ಚೆಯ ಮಚ್ಚು ಮೋಹ ಧನಮುಂ ಮುಂದಿಟ್ಟು ದಲ್ ತೃಷ್ಣೆ ಲಂಪಟೆ ಬೆನ್ನಿಂ ಬಿಡದೊಲ್ಲೆಮೊಲ್ಲೆ ಮೆನೆಯುಂ ದೂದಟ್ಟಿ ದುರ್ಬುದ್ಧಿಯಂ (ಶಾಂತಿಪು. ೭-೬೭) ; ಮೋಹ ಮನೊಕ್ಕು ಗೆಲ್ದು . . . ತಾಳ್ದಿ ಮಹಾವ್ರತಂಗಳಂ (ಜೀವಸಂ. ೦೫೯-೨೦). ೧೧. [ಕಾವ್ಯಮಿ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು ; ಮೈಮರೆಯುವಿಕೆ ; ಪರವಶತೆ : ಮತಿ ಲಜ್ಜೆ . . . ಮೋಹ . . . ಅಪಸ್ಮಾರವೆಂಬ ಮೂವತ್ತುಮೂರು ಸಂಚಾರೀಭಾವಂಗಳಂ ಪರಿವರ್ಧಿಸಿ (ಎವೇಕ. ೦೬೦) ; " ಚಿತ್ತಮೂಢತ್ವಂ ಮೋಹಂ ", ಎಂದರೆ, ಎಚ್ಚರತಪ್ಪುವುದು; ಇದು ಸುಖದ ಘಳಿಗೆಯಲ್ಲೂ ಉಂಟಾಗಬಹುದು (ಕಾರಚಿತ್ರ. ೩೯೭). ೧೨. [ತತ್ತ್ವಶಾ] ಅಜ್ಞಾನದ ಐದು ಬಗೆಗಳಲ್ಲಿ ಒಂದು : ಮತ್ತಂ ತಮಸ್ಸು ಮಾಯೆ ಮೋಹ ಅವಿದ್ಯೆ ಅನ್ಯತಾತ್ಮರೆಯೆಂಬಿವೇ ಮಾಯಾಪಂಚಕಂಗಳವಱಲ್ಲಿ . . . ಆ ತೋಱಿದ ಜಗತ್ತಿನಲ್ಲಿ ಶುಕ್ತಿರಜತಾದಿ ವಿಪರೀತಜ್ಞಾನಮಂ ಪುಟ್ಟಿಪುದಱಿಂ ಮೋಹವೆನಿಸುವುದು (ಏವೇಕ. ೩೦) ; ಪ್ರಾಣಗಳಲ್ಲಿ . . . ಪರಮಾತ್ಮನು ಇದ್ದು ತಾಮಸರ ಶಬ್ದಾದಿ ಮಾತ್ರಾಗುಣಗಳಿಗೆ ವಿಷಯೀಭೂತವಾದ ತಾಮಿಸ್ರ ಅಂಧತಾಮಿಸ್ರ ಮಹಾಮೋಹ ಮೋಹ ತಮಸ್ ಎಂಬ ಅಜ್ಞಾನವೃತ್ತಿಗಳಲ್ಲಿ ಪ್ರೇರಿಸುವನು (ಹಸಾರ. ೬-೦೨ ಟೀಕು) ; ಅಜ್ಞಾನವು ತಮಸ್ಸು. ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ ಎಂದು ಐದು ವಿಧ . . . ಮತ್ತೊಂದು ಪದಾರ್ಥವನ್ನು ತನ್ನದೆಂದು ತಿಳಿಯುವುದೇ ಮೋಹ (ಧಾತತ್ತ್ವ. ೩೨೮). ೧೩. [ದ್ವೈತ] ಜೀವನಿಗಿರುವ ಐದು ಬಗೆಯ ಅವಸ್ಥೆಗಳಲ್ಲಿ ಒಂದು : ಸಾಮಾನ್ಯವಾಗಿ ಜೀವಾತ್ಮನಿಗೆ ಜಾಗ್ರತೆ. ಸ್ವಪ್ನ, ಸುಷುಪ್ತಿ, ಮೋಹ, ತುರೀಯ ಎಂದು ಐದು ಅವಸ್ಥೆಗಳು ಇರುವುವು (ಹಿಂದಾ. ೨೯೬).

**ಮೋಹಪಡು** = ಮರುಳಾಗು ; ಮನ ಸೋಲು : ಸಕಲರೂ ಮೋಹಪಟ್ಟರು (ಅರ್ಜವಾ. ೩) ; ಶ್ರೀಪಾದಂಗಳವರು ನಿನ್ನ ಮೇಲೆಮೋಹ ಪಟ್ಟಿರುವರೆಂಬ ತಾತ್ಪರ್ಯ ನಿನಗೆ ಸೂಚಿಸಿದೆ (ವಾಗ್ಭೂಷಿ. ೦೪). **ಮೋಹ ಸಲ್** = ಬಯಕೆಯನ್ನು ಹೊಂದು ; ಅಪೇಕ್ಷೆ ಪಡು : ದೇವಾರಕ್ಕೆ ಕೊಟ್ಟ ಕೆಯ್ಗ ಅವುತವೂರ್ಗಂ ಕಾಲಾಂತ್ತರದೊಳ್ ಮೋಹಸನ್ದೊಂ ಪಞ್ಚಮಹಾಪಾತಕನಕ್ಕುಂ (ಎಕ. VII, ಶಿಕಾರಿ. ೨೦೯–೪೦; 918). [ಸಂ.]

**ಮೋಹ$_2$** (ನಾ). ಒಂದು ಬಗೆಯ ಮರ ; ಹಿಪ್ಪೆ ; ಮಧೂಕ : ಇಪ್ಪೆ(ಮೋಹ) . . . ಇದರ ಕಟ್ಟಿಗೆಯು ತಾಳಿಕೆಯುಳ್ಳದ್ದು (ಕಶಾಗ. ೩೭) ; ಮೋಹದ ಬೀಜಾ, (ಇಪ್ಪಿ ಬೀಜಾ) ಬಣ್ಣದಲ್ಲಿ ಕೆಂಪಾಗಿದ್ದು ಎಣ್ಣೆ ಉಳ್ಳದ್ದಿರ ತಕ್ಕದ್ದು (ಮುಂಬಾಪ್ರಾ. ೫೭). [← ಮರಾ. ಮೋಹ. ಮೋಹೋ./ಪ್ರಾ. ಮಹು, ಮಹುಅ./ಸಂ. ಮಧೂಕ]

**ಮೋಹಕ** (ಗು). ೧. ದಿಗ್ಭ್ರಮೆಗೊಳಿಸುವ ; ತಬ್ಬಿಬ್ಬುಮಾಡುವ. ೨. ಮರುಳುಗೊಳಿಸುವ ; ಮನೋಹರವಾದ ; ಅಂದವಾದ : ಶ್ರೀಕೃಷ್ಣಪರಮಾತ್ಮನು ಬಲಶಾಲಿ ಮತ್ತು ಮೋಹಕರೂಪುಳ್ಳವನು (ಹೇಮಂತ. ೦೦೨). (ನಾ). ೩. ಭ್ರಮೆ ; ಭ್ರಾಂತಿ : ಅಕ್ಕಿತೇ ದುಷ್ಕೀರ್ತಿ ತಮ್ಮನನಿಕ್ಕಿದೆನಲಾ ರಣಕೆ ಮಾಯೆಯ ಠಕ್ಕಿನಬಲೆಯ ಮೋಹಕ ದಲೆಂದರಸನಳವಳಿದ (ಕೊರವಾ. ೩-೯೭-೨೮) ; ಇನಿತೆಲ್ಲ ಮಾಯ ಮೋಹಕವೆಂಬ ಶರಧಿಯೊಳು ಅನುದಿನವು ಮುಳುಗಿ (ಪುರಂದ. ೧-೨೨೨-೩). ೪. ಆಕರ್ಷಿಸುವಂಥದು ; ಅಂದವಾದುದು : ಅವಳ ನಿಡಿದಾದ ಮೂಗೂ ಮಣಿದ ಹುಬ್ಬುಗಳೂ ದುಂಡುಮುಖವೂ ಒಳ್ಳೇ ಮೋಹಕವಾಗಿ ಕಂಡವು (ಮಾಧವು. ೦೦೬). [ಸಂ.]

**ಮೋಹಗೊಳಿಸು** (ಕ್ರಿ). ಮರುಳುಗೊಳಿಸು; ಮನಸ್ಸನ್ನು ಆಕರ್ಷಿಸು : ಭಾವಕ_ಮೋಹಗೊಳಿಸುವದಕ್ಕಾಗಿ ತೋರಿಸುವ ಹಸ್ತದ ಅಭಿನಯ (ಗಂಗಾಮ. ೨೯೨). [ಮೋಹ$_1$ + ಕೊಳ್$_1$ + – ಇಸು$_3$]

**ಮೋಹಗೊಳ್ಳು** (ಕ್ರಿ). ಮರುಳಾಗು ; ಆಕರ್ಷಣೆಗೆ ಒಳಗಾಗು : ಸರಿಯಾದ ಕಾಗುಣಿತ ವ್ಯಾಕರಣಾಂಶಗಳು ಇದ್ದಾಗ ಮೋಹಗೊಂಡು ಹೆಚ್ಚು ಅಂಕಗಳನ್ನು ಕೊಟ್ಟುಬಿಡಬಹುದು (ಶಿಕ್ಷಣ. ೩೯೩).
[ಮೋಹ$_1$ + ಕೊಳ್ಳು$_1$ (< ಕೊಳ್$_1$)]

**ಮೋಹತಮಾಮು** (ನಾ). ಪರೀಕ್ಷಾಧಿಕಾರಿ : ಹೈದರಾಬಾದಿನಲ್ಲಿ ಕರೋಡಗಿರಿಯ ಮೋಹತಮಾಮರಾದ ಸುಬ್ಬರಾಯರು ನಮ್ಮ ತಂದೆಯವರ ಬಾಲ್ಯಸ್ನೇಹಿತರು (ಕೊಳೆಮು. ೨೨೬). [←ಅರ. ಹಿಂ. ಮುಹತಮಿಮ್]

**ಮೋಹನ** (ಗು). ೧. ಮೂರ್ಛೆಗೊಳಿಸುವ ; ಜ್ಞಾನ ತಪ್ಪಿಸುವ. ೨. ತಬ್ಬಿಬ್ಬುಗೊಳಿಸುವ ; ಭ್ರಾಂತಿಗೊಳಿಸುವ ; ಭ್ರಮೆ ಹಿಡಿಸುವ : ಅದಾವ ಮೋಹನವಶ್ಯವಿದ್ಯೆಯ ಕಲಿತೆಯೋ ದಿಟಕೆ (ವೃಷೇಂ. ೩-೩೯). ೩. ಮರುಳುಗೊಳಿಸುವ ; ಆಕರ್ಷಿಸುವ : ಮೋಹನ ಮೊಲೆ ಮುದ್ದುಮೊಗದ ಭಾವಕಿಯರ ಲಲ್ಲೆನುಡಿಯೆಂಬ ನಯಗತ್ತಿ ಎಲ್ಲರ ಹೃದಯವ ಕೊಱೆವುತ್ತಿದೆ ನೋಡಾ (ವಚಸಂ. ೬೪–೯೦); ತ್ರಿಭುವನಮೋಹನ ದೀಪಪ್ರಭೆ . . . ಪುಟ್ಟಿದಳೆಸೆವ ಶಶಿಪ್ರಭೆ (ಚಂದ್ರಪು. ೬-೦೨); ಯಾವ ಮೋಹನ ಮುರಲಿ ಕರೆಯಿತು ದೂರತೀರಕೆ ನಿನ್ನನು ? (ಭಾವಗೀ. ೩೯೨). (ನಾ). ೪. ಮೂರ್ಛೆ ; ಮೈಮರೆವು : ತೇಟ್ಟ(ರುಗ)ಳುಜ್ವರದಿಂದಂ ಮಿಡಿವೆಂದು ಲೋಳೆ ಮುಱುಕು ಶೋಕಂ ಬೆಮರ್ ಮೋಹನಂ . . . ತಮುಗ್ರಜಾತಿವಿಷದಿಂ ಮರ್ತ್ಯರ್ಕಳೊಳ್ ತೋಱುಗುಂ (ಲೋಕೋಪ. ೦೦-೨೩). ೫. ಭ್ರಾಂತಿ ; ಭ್ರಮೆ : 'ಚಿತ್ತಮೋಹನ' ಪರಾ. ೬. ಆಕರ್ಷಣೆ ; ಸೆಳೆತ : ಬಂದ ಬಸಂತದ ಕಮ್ಮನಸ್ಪರ್ಶ ತಾಂ ಗುರುವಾಗೆ

ಕಲ್ಮದೊ ವಿಳಾಸವತೀನಯನತ್ರಿಭಾಗದೊಳ್ ಸಂಗಳಿಸಿತ್ತೊ, ಮೋಹನ, ಮನಗ್ಗಳ ನಿನ್ನಯ ವಾಕ್ಯಗುಂಭನಂ (ಚಂದ್ರ ಕೃ. ೧-೩೯); ಪನ್ನೀರು ಕರ್ಪೂರ ವೀಳೆಯ ಮೋಹನದನುಲೇಪನಾದಿ ವಸ್ತುಗಳ ಪನಿತೆಯು ಮುಡಿಮೊಲೆಯೆಡೆ ಬಾಯಿ ಕೊರಳೆಗಂಡದಸುಗೋಳಿಸಿದಸೇವೇಶ್ವೆ (ಶಂಪವಿ. ೧೦-೩೯). ೭. ಸೌಂದರ್ಯ ; ಮನೋಹರತೆ ; ಚೆಲುವು : ಕಿಬಿಸಗೆಯ ಕದಪುಗಳ ಕುಂಡಲದ ಚೆಲ್ವಿನಿಂ ಮೆಜಿಸಿವ ಸದ್ವದನಮಂ ಮೋಹನದ ಸದನನಂ . . . ಕಂಡನವನೀಪಾಲನು (ಕೈವಲ. ೨-೯೯); ತರುಣಿ ಮೋಹನದರಗಿಣಿ ಸೌಂದರ್ಯದ ಸರಣಿಯೊಪ್ಪಿದಳಾ ವೇಳೆ (ಶಂಪವಿ. ೯-೬೬). ೮. ಮನೋಹರವಾದ ರೂಪುಳ್ಳವನು ; ಕೃಷ್ಣ : ಕೊಳಲ ದನಿಯೊಡನಗೋ ಬಂದ ಮೋಹನ ಬಾಲಕೃಷ್ಣ ರಾಧೆಯಾ ಹೃದಯಾನಂದನಕ್ಕೆ (ಶಂಗಿಮ. ೩೭-೩); ಶ್ರೀ ಕೃಷ್ಣಪರಮಾತ್ಮನು ಬಲಶಾಲಿ ಮತ್ತು ಮೋಹಕರೂಪುಳ್ಳವನು. ಅವನಿಗೆ ಮೋಹನನೆಂದೂ ಕರೆಯುತ್ತಾರೆ (ಹೇಮಂತ. ೦೦೨). ೯. ಸಂಭೋಗ ; ಸುರತ : "ಸಂವೇಶನಂ . . . ಸುರತಂ, ಮೋಹನಂ—ಈ.೭ ಸುರತಂ (ಹಲಾಯು. ೯೩-೪೦೩); ಸಿರಿಗಂಧದೆಣ್ಣೆಗೆ ಪನ್ನೀರ್ ಚಿರಿದು ಬಯಸುತವ ರಿವರ್ತಿಸಿದರಾಗ ಸ್ಮರಮೋಹನದ ಸೊಕ್ಕೇಜಿ (ಶಂಪವಿ. ೧೦-೩೨); ಮೋಹನ ಮೆಂಬುದು ಮದನಯುದ್ಧಮೆಂಬುದು ಸುರತಕ್ಕೆ ಪೆಸರು (ಕಾಮಶಾ. ೨೯೦). ೧೦. ಮಂತ್ರಬಲದಿಂದ ಮೋಹಗೊಳ್ಳುವಂತೆ ಮಾಡುವ ತಂತ್ರ ; ಮಾಟ ; ಇಂದ್ರಜಾಲ : ಶತ್ರುಗಳ ಮೇಲೆ ಜಯ ಗಳಿಸುವುದಕ್ಕೆ ಅಭಿಚಾರಿಕಕರ್ಮಗಳೂ ಉಂಟು. ಮಾರಣ, ವಶೀಕರಣ, ಮೋಹನ, ಸ್ತಂಭನ, ಉಚ್ಚಾಟನ ಇತ್ಯಾದಿ (ಭಾರದ. ೨೮). ೧೧. ಮನ್ಮಥನ ಐದು ಬಾಣಗಳಲ್ಲಿ ಒಂದು : ಉನ್ಮದನ ಮದನ ಮೋಹನ ಸಂತಾಪನ ವಶೀಕರಣಮೆಂಬ ಪಂಚಬಾಣಪ್ರತಾಪಪ್ರವೀಣರಿಂ (ಅವೀಳ. ೦೬೯). 'ಮೋಹನಬಾಣ', 'ಮೋಹನಶರ' ನೋಡಿ. ೧೨. ಒಂದು ಬಗೆಯ ಸಸ್ಯ ; ದತ್ತೂರಿ ಗಿಡ : "ಮೋಹನಃ _ಉನ್ಮತ್ತ, ನೀರುಳ್ಳಿ, ಬೇಳ" (೬ಶ೦. ೦೩೦). ೧೩. [ಸಂಗೀತ] ಒಂದು ರಾಗದ ಹೆಸರ : ವರಮಲಲಿತಕುರಂಜಿ ಮಂಗಳ ಸರಸತರ ಮೋಹನದ ರಾಗಂಗಳಲಿ ಪಾಡಿದರು (ಯಾದವ. ೦೦-೪೯); ಮೋಹನಾನಂದಭೈರವಿ . . . ಮೋಹ ಸರ್ವಸ್ವಗಳ ರಾಗಾಬ್ಧಿಯೋ ಬ್ರಹ್ಮಗಾಪದರೊಳಗೆ ನೀಂ (ಮಾಂಕಾಳ. ೯೩೨) ; ಮೋಹನ – ಈ ರಾಗದ ಜನಕರಾಗದ ವಿಷಯದಲ್ಲಿ ಮತಭೇದವುಂಟು (ಸಂಗೀತಂ. ೦೯೦). [ಸಂ.]

**ಮೋಹನಗಾರ** (ನಾ). ಮರುಳುಗೊಳಿಸುವವನು ; ಆಕರ್ಷಿಸುವವನು ; ಚೆಲುವ : ಮೂಲೋಕಮೋಹನಗಾರನತುಳತಪಷ್ಪಗೋಲನಪ್ರತಿಮಸತ್ಪುತ್ರ (ನವಮೋ. ೦೩-೨೮). [ಮೋಹನ + –ಗಾರ (< –ಕಾಜ)]

**ಮೋಹನಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ಸೌರಾಷ್ಟ್ರ ಗೌಳ . . . ಮೋಹನಗೌಳವೆಂಬಷ್ಟಗೌಳಂಗಳೀ ಸಾಳಗದ ಮಿತ್ರರಾಗಂಗಳು (ಅವೀಳ. ೧೯೯). [ಸಂ. ಮೋಹನಗೌಲ]

**ಮೋಹನಚೂರ್ಣ** (ನಾ). ಮರುಳುಗೊಳಿಸುವ ಪುಡಿ ; ಮೆಚ್ಚು ಮದ್ದು ; ಮಂಕುಬೂದಿ : ಹುಬ್ಬಳ್ಳಿಯ ರಂಗಭೂಮಿಯ ಮೇಲೆ ಬಾಲಗಂಧರ್ವನು ಮೋಹನಚೂರ್ಣವನ್ನು ಎಸೆಯುತ್ತಿರುವ ಕಾಲದಲ್ಲಿಯ ವೆಂಕಣ್ಣನ ಸರಸಸಂಭ್ರಮದಿಂದ ಆರಂಭವಾಗುವ ಕಥೆ (ಸಾಗವಾ. ೦೬೮) ; ಆ ರೂಪು . . . ನಾಗಶ್ರೀಯ ವಿಚ್ಚರದ ಕಣ್ಣಿಗೆ ಮೋಹನಚೂರ್ಣವನ್ನೆರಚಿತು (ನಿರಾಳ. ೯೦). [ಸಂ.]

**ಮೋಹನಬಾಣ** (ನಾ). ಮನ್ಮಥನ ಪಂಚಬಾಣಗಳಲ್ಲಿ ಒಂದು : ಮೋಹನಬಾಣಮಂಚಿಟ್ಟೊಡೆ ಮಸ್ತಕಕಂಪನಮಾದುದೆಂಬಿನಂ ಸಾಹಸಿಕರ್ ಕುಮಾರವರರಾಕೆಯ ಚೆಲ್ವನಭೀಕ್ಷಿಸುತ್ತುಮಿರ್ದರ್ . . . ತಲೆದೂಗುತಿರ್ದರ್ (ಗಾರಳ. ೦೦-೯೯). [ಸಂ.]

**ಮೋಹನಮಾಲೆ** (ನಾ). ಚಿನ್ನದ ಗುಂಡುಗಳಿಂದ ಮಾಡಿದ, ಆಕರ್ಷಣೀಯವಾದ ಹಾರ : ಬಿಲ್ಲೆ ಮೋಹನಮಾಲೆ . . . ಮೊದಲಾದ ಪೊಸಮಿಸುನಿದೊಡವುಗಳಿಂ ತೊಂಡಿಲ್ಗಳಿಂದಲಂಕೃತೆಯಾದ . . . ಕನ್ನಿಕೆಯುಂ (ಹಾಲಾಸ್ಯ. ೪-೯-೬೪ ವ) ; ಕಂಠಭೂಷಣಗಳು–ತಾಳಿ, ಚಂದ್ರಹಾರ, ಮೋಹನಮಾಲೆ . . . ಮಾವಿನಕಾಯಿ ಸರ, ಮಲ್ಲಿಗೆ ಮೊಗ್ಗಿನ ಮಾಲೆ, ಪದಕ ಇತ್ಯಾದಿ (ಕವಿಕೋ. I, ೬೨೦) ; ಅಳಿಯಂದಿರಿಬ್ಬರಿಗೂ ಚಿನ್ನದ ಗಡಿಯಾಳ, ಮೋಹನಮಾಲೆಗಳನ್ನು ಕೊಟ್ಟರು (ಶ್ರೀಪಾಶ್ರ. ೨೩೩).
[ಸಂ. ಮೋಹನ ಮಾಲಾ. / ಹಿಂ. ಮೋಹನ್‌ಮಾಲಾ ; ಮರಾ. ಮೋಹನ್‌ಮಾಳ]

**ಮೋಹನವಡೆ** (ಕ್ರಿ). ಚೆಲುವನ್ನು ಪಡೆ ; ಸುಂದರವಾಗು : ಮೋಹನವಡೆದ ಪದಕ ಪೈಠಣಿಯ ಕಡುಸೊಬಗಿನ ಬಲ್ಪೇಟದ ಸುಕುಮಾರ ನಡೆದನು ಸಮಿರ ಮೇಳದಲಿ (ಶಂಪವಿ. ೧೦-೨೦). [ಮೋಹನ + ಪಡೆ$_1$]

**ಮೋಹನಶರ** (ನಾ). = ಮೋಹನಬಾಣ : ಕಾಮಂ ಹೂಡಿದನುಣ್ಮೆನುತ್ತೆ ಮೋಹನಶರಮಂ (ಗಿರಿ. ೯-೨೯). [ಸಂ.]

**ಮೋಹನಶಾಸ್ತ್ರ** (ನಾ). ಅವಿದ್ಯೆಯನ್ನುಂಟುಮಾಡುವ ಶಾಸ್ತ್ರ; ಅಜ್ಞಾನವನ್ನುಂಟುಮಾಡುವ ಶಾಸ್ತ್ರ : ಮಾಯಿಗಳ ಗೆಲಿದು ಮೋಹನಶಾಸ್ತ್ರಬಲೆಯನರಿದು . . . ವಿಷ್ಣು ಪರದೈವವೆಂದಜುಹಿದಾ ಅಲವಬೋಧರ ಭಜಿಸಿರೈ (ತುರಂಡ. ದಾ. ೦-೯೭-೩). [ಸಂ.]

**ಮೋಹನಾಂಗ** (ನಾ). ಮರುಳುಗೊಳಿಸುವ ರೂಪವುಳ್ಳವನು ; ಸುಂದರ ; ಚೆಲುವ : ಇದು ಏನಂಗ ಮೋಹನಾಂಗ ಮದನಜನಕ ತೊರವೆಯ ನರಸಿಂಹ (ತುರಂಡ. ೦-೯೯ ಕಲ್ಲ) ; ಸಂತೋಷದೊಳು ಮೋಹಿಸುತೆನ್ನನೊಡಗೂಡೊ ಕಂತುಸನ್ನಿಭ ಮೋಹನಾಂಗ (ಶಂಪವಿ. ೯-೧೯೦) ; ನೀ ತಾಯಿಯೆನಲೊ ನೀ ಮಾಯಿಯೆನಲೊ ಮೋಹಿನಿಯ ಮೋಹನಾಂಗ ? (ಸೂರ್ಯಕಾ. ೩೭-೯). [ಸಂ.]

**ಮೋಹನಾಂಗಿ** (ನಾ). ಮರುಳುಗೊಳಿಸುವ ರೂಪುವುಳ್ಳವಳು ; ಚೆಲುವೆ : ಅನಿಮಿಷಪತಿಸುತ ನರಲೋಕದ ಭೋಗದನುಮನೀಕ್ಷಿಸಬೇಕೆನುತ ಜನಿಸಿದ ನರರೂಪಿನೊಳಗೆಂಬೊಲು ತನ್ನ ಮನಕೆ ತೋಜಾದೆ ಮೋಹನಾಂಗಿ (ಶಂಪವಿ. ೯-೦೩೦) ; ಬೇರೆ ಯಾವ ಮಾರ್ಗವಿದೆ ಮೋಹನಾಂಗಿ? (ಮಾಮನಿ. ೨೬೦). [ಮೋಹನಾಂಗ + –ಇ$_2$]

**ಮೋಹನಾಸ್ತ್ರ** (ನಾ). ಪ್ರಜ್ಞೆ ತಪ್ಪಿಸುವ ಅಸ್ತ್ರ. [ಸಂ.]

**ಮೋಹನಿ** (ನಾ). ಒಂದು ಬಗೆಯ ಸಸ್ಯ : "ಮೋಹನೀ — ಚಿಬ್ಬಸಲೆ" (ಸಂ. ೦೩೦). [ಸಂ. ಮೋಹನೀ ?]

**ಮೋಹನಿದ್ರೆ** (ನಾ). ಕೃತಕವಾಗಿ ಉಂಟುಮಾಡುವ ನಿದ್ದೆ; ಮಾಯಾನಿದ್ರೆ : ಭಟರ್ ಕಾಪುಳಿದು ಮೋಹನಿದ್ರೆಗೆ ಸಂದರೆಂಬರ್ ! (ಶ್ರೀರಾಮಪ. ೩೨೩-೬೯೯). [ಸಂ. ಮೋಹನಿದ್ರಾ]

**ಮೋಹನೀಯ** (ಗು). ೧. ಭ್ರಮೆಗೊಳಿಸುವ ; ಕಕ್ಕಾಬಿಕ್ಕಿಮಾಡುವ. (ನಾ) ೨. ಅಜ್ಞಾನ ; ಮಾಯೆ : ಬಗೆಗಿಡಿಸೆ ಮೋಹನೀಯಂ ನಗಧರ ಶವಧಾರಿಯಾಗೆ ಷಣ್ಮಾಸಮದೇಂ ನೆಗಬ್ದುದೊ ಸಲೆ ಬಲದೇವನ ಪೆಗಲ ಪೆಣಂ ಕುಂದದೆಂಬ ನಾಣ್ನುಡಿ ಜಗದೊಳ್ (ಶಂರಾಪಾ. ೦೬-೩೩). ೩. [ಜೈನ] ಆತ್ಮನನ್ನು ಬಂಧಿಸುವ ಎಂಟು ಮೂಲಕರ್ಮಗಳಲ್ಲಿ ಒಂದು : ಮತ್ತಿರ್ಪತ್ತೆಂಟುತೆಜದ ಮೋಹನೀಯವೆಂಬ ಕರ್ಮದ ಕೇಡಿನಿಂ ಅನಂತಸುಖಿಗಳಾದರ್ (ಚಾವುಂ.ರಾ. ೦೩೯-೨೩); ಪಂಚೇಂದ್ರಿಯಂಗಳ್ . . . ಮೂಲಪ್ರಕೃತಿಭೇದದಿಂದೆಂಟುತೆಜನಕ್ಕುಂ ಅವಾವುವೆನೆ ಜ್ಞಾನಾವರಣೀಯಂ ದರ್ಶನಾವರಣೀಯಂ ವೇದನೀಯಂ ಮೋಹನೀಯಂ ಆಯುಷ್ಯಂ ನಾಮಗೋತ್ರಮಂತರಾಯಂ (ಶಾಂತಿಪು. ೦೨-೦೦ ವ) ; ದರ್ಶನ ಮೋಹನೀಯಮುಂ ಚಾರಿತ್ರಮೋಹನೀಯಮುಂ ಎಂದು ಮೋಹನೀಯಂ ದ್ವಿವಿಧಮಕ್ಕುಂ (ಕರ್ಣಾಪ್ರ. ೭೯). [ಸಂ.]

**ಮೋಹನೀಯಕರ್ಮ** (ನಾ). = ಮೋಹನೀಯ ೩ : ಬಱಯಂ ಮೋಹನೀಯಕರ್ಮೋಪಶಮದೊಳ್ ವಿಶುದ್ಧ್ಯತಿಶಯವಿಶೇಷದಿನುಪಶಮ ಶ್ರೇಣ್ಯಾರೋಹಣಂಗೆಯ್ದು (ಆದಿಪು. ೬-೩೩ ವ) ; ಅಂತತಿವ್ಯಾಮೋಹದಿಂ ಬಂದು ಸಕಲಲೋಕಾಧಿಪರಿಂ ಪರಿವೃತರಾಗಿರ್ದ ಸಕಲಭೂಷಣಕೇವಲಿಗಳ ಸಭೆಯನೆಯ್ದಲೊಡಂ ರಾಮನ ಮೋಹನೀಯಕರ್ಮಮುಪಶಮಕ್ಕೆ ಸಲ್ವು ದುಂ (ಕಂರಾಮಾ. ೦೬-೩೪ ವ) ; ಜೀವನ ಸಮ್ಯಕ್ತ್ವವನ್ನೂ ಚಾರಿತ್ರಗುಣ ವನ್ನೂ ಘಾತಿಸಿ ಜೀವನಿಗೆ ಆ ತತ್ವಗಳಲ್ಲಿ ಶ್ರದ್ಧೆಯನ್ನೂ ಲೋಭವನ್ನೂ ಉಂಟುಮಾಡುವುದು ಮೋಹನೀಯಕರ್ಮವು (ಕೈಪಿ. ೩).

[ ಸಂ. ಮೋಹನೀಯಕರ್ಮನ್ ]

**ಮೋಹನೆ** (ನಾ). ಮೋಹಕವಾಗಿರುವವಳು ; ಮರುಳುಗೊಳಿಸುವ ರೂಪವನ್ನು ಹೊಂದಿರುವವಳು ; ಸುಂದರಿ : ಬಾ ಬಾ ಮೋಹನೆ ಬೇಗ . . . ನಸುನಗುವ ಹುಸಿಮುಳಿವ ಬಿಸವಂದದ ಸುಂದರಿ ನೀ ಬೇಗ ಬಾ (ಗಕೀಕ. ೩೩-೦). [ ಸಂ. ಮೋಹನಾ ]

**ಮೋಹಪರವಶ** (ನಾ). ವ್ಯಾಮೋಹವನ್ನು ಹೊಂದಿದವನು ; ಮರುಳಾದವನು : ಆತನು . . . ಈ ಹುಡುಗಿಯನ್ನು ಕಂಡು ಅವಳ ರೂಪಲಾವಣ್ಯಾದಿಗಳಿಗೆ ಆಶ್ಚರ್ಯಪಟ್ಟು ಮೋಹಪರವಶನಾದನು (ಕಪಕ. ೯). [ಸಂ.]

**ಮೋಹಪಾಶ** (ನಾ). ಲೌಕಿಕ ವಿಷಯಗಳ ಬಂಧನ.– ಸೆಳೆತ; ಮಾಯಾಜಾಲ : ಅಪಗತದುರಿತಂ ತನ್ಮೋಹಪಾಶಮಂ ಪಱಿದ ತೆಱದೆ ತಲೆಯಂ ಪಱಿದಂ (ಶಾಂತಿಪು. ೯-೬೫) ; ದೇಹಸಂಬಂಧಿಗಳಾದವರ್ಕೈವರು ಮೋಹಪಾಶದಿ ಕಟ್ಟಿ ಬಗಿದಿಹರೈ (ಪುರಂದ. ದಾ. ೨-೧೨-೧). [ಸಂ.]

**ಮೋಹಭಾವ** (ನಾ). ಪ್ರೀತಿಯ ಭಾವನೆ ; ಅಕ್ಕರೆಯ ಭಾವನೆ : ಎನ್ನ ಮೇಲಣ ಮೋಹಭಾವದೊಳೆನ್ನುವ ಸಲಹಲ್ಕೆ ಬಂದಿರೊ (ಐಕಪು. ೦೮-೦೩) ; ಅವರಿಬ್ಬರಲ್ಲಿ ಪರಸ್ಪರ ಮೋಹಭಾವಗಳ ಐಕ್ಯತೆ ಒಡನೆ ಉಂಟಾಯಿತು (ವಾಗ್ಭೂ. ೮೯). [ಸಂ.]

**ಮೋಹರ$_1$** (ನಾ). ೧. ಸೈನ್ಯ; ದಂಡು; ಪಡೆ; ದಳ : '' ಮೋಹರಮೆನೆ ನೃಪಸೈನ್ಯಂ '' (ಶಾರದಾ. ೩೦); ಅರಗಿಳಿವಿಂಡು ಪಾರುವವ ಮೋಹರವಾಱಿದಿ ವಿಂಡು ಬಿಲ್ಲುಬೀರರ ಪಡೆ (ಕಬ್ಬಿಗಾ. ೨೨೦) ; ಕಲಿ ರಾಧೇಯನೇ ವಜ್ರಾಂಗಿಯಲ್ಲಾ ನಮ್ಮ ಮೋಹರಕೆ (ಕುವ್ಯಾಕ. ೧-೨೩) ; ಕರಡಿಯ ಮೋಹರವ ಜಾಂಬವರು ತೋಱಿದರೈದು ನಿರ್ಬುದವ (ತೊರರಾ. ೪-೬-೨೨). ೨. ಯುದ್ಧ; ಕದನ : ರಕ್ಕಸನಾಥ ಬೈವುದ ಕೇಳಿ ನೀಲನು ನಡೆದ ಮೋಹರಕೆ (ಕೌಶಿರಾ. ೩೪-೦೨) ; ಅಳಿಯನೀ ಮೋಹರದೊಳಲ್ಲದೆ ಫಲುಗುಣನ ಮಗನಿವನು ಬಲುಗೈಯುಳುಹಬಾರದು (ಕುವ್ಯಾದ್ರೋ. ೪-೨೭). ೩. (ಕಾಳಗದ) ಕಣ : (ರಣ)ರಂಗ : ಕಲಿಗೆ ಕಾಳಗದ ಮೋಹರದಂತೆ ಭಕ್ತಿಯ ಭಲಿಗೆ ಮುಕ್ತಿಯ ಬೀಡಿನಂತೆ . . . ಕಂಗೊಳಿಸುವುದು ಗೌರನ ಕಾವ್ಯ (ಮೋಹಪು. ೩-೨). ೪. ಗುಂಪು; ಸಮೂಹ : ''ಒಡ್ಡನೆ ಮೋಹರಂ ''(ಕರ್ಣಾಟ. ೧೮); ಮುಂಜಿನ ಮೋಹರ ರವಿಯ ಕಿರಣವ ಕೆಡಿಸಲಾಪುದೆ (ಕನ್ನಪ. ಕ. ೪೩೭-೯೨೯); ಗಗನದ ಮುಗಿಲ ಮೋಹರವ ದಾಳಿಯಲಿಯಱಿಯಟ್ಟಿ ಸುಂಟರುಗಾಳಿಯುರವಣೆ ನಿಂದವೊಲು (ಕುವ್ಯಾದ್ರೋ. ೬-೩೦); ಮತ್ತದಂತಿಗಳೊಗ್ಗು ವಿಡಿದು ಬಂದವು . . . ಕಾರ್ಮುಗಿಲ ಮೋಹರದಂದದಿಂ (ಸೌಂದಕ. ೦೮-೦೩). [ದೇ.॥ ತೆಲು. ಮೋಹರ]

**ಮೋಹರ$_2$** ' ಮೊಹರು ' ನೋ.

**ಮೋಹರ$_3$** (ನಾ). [ಸಂಗೀತ] ಮದ್ದಳೆಯನ್ನು ಬಾರಿಸುವ ಒಂದು ಬಗೆಯ ಗತ್ತು : ಬೊಟ್ಟು ಮೋಹರ ಅರಿದೆಂಬಿವಂತದಿರಾ ಎಂಬ ಕೂಟು ತಪ್ಪದೆ ಶುದ್ಧಭಾರಿ ಅವಣೆಯೆಂಬ ಮದ್ದಳೆಗಳಂ ಬಾರಿಸುವ ಮದ್ದಳೆಕಾಱರಿಂ (ದಶಾಪ. ೨-೧೧ ವ); ಪಿರಿದು ಬಾರಿಸಿ ತೋಱಿದರು ಮೋಹರಗಳನು ಮರ್ದಳೆಯವರು (ಕುಕಪಾ. ೨-೬೩). [ ? ]

**ಮೋಹರಂಬಡೆ** (ಕ್ರಿ). ಗುಂಪುಗೂಡು ; ಹಿಂಡುಗಟ್ಟು : ಅಂತೊಯ್ಯನೆ ಮುಂದೆ ಮೋಹರಂಬಡೆದು ತಳರ್ವ ಪುಸಿವಡೆಯಲ್ಲಿ (ಕಬ್ಬಿಗಾ. ೨೦೨).

[ಮೋಹರ$_1$ + ಪಡೆ$_1$]

**ಮೋಹರಂಬೆಱು** (ಕ್ರಿ). = ಮೋಹರಂಬಡೆ : ಸುರವ್ಯೂಹಮುಂಬರದಲ್ಲಿ ಹೂಮಳೆಗಳಂ ಹಿಡಿದು ಮೋಹರಂಬೆತ್ತು ನೋಡುತ್ತಿರಲು (ಹಕಕಾ. ೦೩-೦೩). [ಮೋಹರ$_1$ + ಪೆಱು$_1$]

**ಮೋಹರದೆಗೆ** (ಕ್ರಿ). ೧. ಸೈನ್ಯವನ್ನು ಒಡ್ಡು. — ಸಜ್ಜುಗೊಳಿಸು; ಯುದ್ಧಕ್ಕೆ ತೊಡಗು : ಧರ್ಮಜನೆಲ್ಲಿ ಮೋಹರದೆಗೆವನತ್ತಲೆ ರಥವ ಹರಿಸೆಂದ (ಕುವ್ಯಾದ್ರೋ. ೨-೩೦). ೨. ಗುಂಪುಗೂಡು; ಸಂದಣಿಸು: ಜಗದ ನಿಡುನಿದ್ರೆಯಲಿ ಮೋಹರದೆಗೆದ ಮುಗಿಲೋ . . . ಕೈಕಾಲ್ ಮೂಡಿತೋ ನಭಕೆ (ಕುವ್ಯಾದ್ರೋ. ೩-೯); ಜಗದ ವಿಜಯದ ಮುಗಿಲ ಮೋಹರದೆಗೆವ ವೊಲು ನಭವೈದೆ ಶಾಖಾಮೃಗದ ಮುಯುವಾಯ್ತೆಣಂಗ ಕೇಳುಬ್ಬರದ ಕಪಿಬಲವ (ತೊರರಾ. ೬-೬-೧೪). [ಮೋಹರ$_1$ + ತೆಗೆ$_1$]

**ಮೋಹರಮಲ್ಲ** (ನಾ). ಯುದ್ಧದಲ್ಲಿ ಶೂರನಾದವನು : ಕಲಿ : ಶಬ್ಯ ಭಾರದ್ವಾಜನಿದರ್ಶನೆವೊಳಲೊಡೆಯನೆನಿಪ ಮೋಹರಮಲ್ಲ ಕೃಷ್ಣಮನ್ಮಥ ಶೋಭೆಯಿಂದೆಮಗಳ ಲಲಿತ ಸೈನಿಕಮಲ್ಲ ಭೀಮವಿಜಯಾಸ್ಪದಂದಳೆದು . . . ಕಣ್ಗೆ ಮಂಗಳಮಾನಾಗಿಸಿದುದಾ ಗೋತ್ರಂ (ಹಂಪಿಮಾ. ೨-೪೦).

[ಮೋಹರ$_1$ + ಮಲ್ಲ]

**ಮೋಹರಸ** (ನಾ). ೧. ಅನುರಾಗ ; ಪ್ರೀತಿ : ಕೌತುಕಮೋಂ ಪೊಡರೊಳಂ ಭೀತಿರಸಂ ಮೋಹರಸಮುಸೊತ್ತರಿಸುಗುಮೋ (ಜಗಾ. ೩-೨೫). ೨. ಮದನ ಜಲ ; ಮದನದ್ರವ : ನಿಟ್ಟಿಸಿ ನೋಡಿದ ಪುರುಷಗೆ ಮೈ ಜುಮ್ಮುದಟ್ಟಿ ರೋಮಾಂಚನವೆಸಗಿ ಕಟ್ಟೆಱಕದೆ ಮೋಹರಸವುಬ್ಬಿ ನೆಱೆ ಪೊಱಮಟ್ಟು ಸೂಸುವುದಂಗದಿಂದ (ಕಂಸವಿ. ೦೦-೦೪). [ಸಂ.]

**ಮೋಹರಿ$_1$** ' ಮೌರಿ ' ನೋ.

**ಮೋಹರಿ$_2$** ' ಮೊಹರು ' ನೋ.

**ಮೋಹರಿಸು, ಮೋಹಳಿಸು** (ಕ್ರಿ). ೧. ಮುತ್ತಿಗೆ ಹಾಕು ; ಧಾಳಿ ಮಾಡು : ಮೋಹರಿಸಿದುದಾದೀಶನ ಚತುರಂಗವಾಹಿನಿಯುತಿರೋಷದಲಿ (ಪ್ರಭುಗಾಂ . ೦೮-೨೦೪) ; ತುಱುಗಿ ಗಂಧೋತ್ಕಟನ ನಿಜಮಂದಿರದ ದಳ ಮೋಹರಿಸೆ (ಜೀವಂತ. ೦೧-೪) ; ಸೈಂಧವ ಬಿಲುದುಡುಕೆ ಮೋಹರಿಸಿದರು ಭೂರಿಶ್ರವಾದಿಗಳು (ಕುವ್ಯಾದ್ರೋ. ೪-೦೯). ೨. ಎದುರಿಸು : ಪ್ರತಿಭಟಿಸು : ಇದುವೆ ನೀಂ ಮೋಹರಿಸಿ [ಪಾಠಾಂ. ಮೋಹಿಸಿ] ನಿಂದುದಕಿದು ಬಳಿಕೊಂದುತ್ತರ ಮಗುಳ್ದದಕಿದು ನಿನಗೆ ಕೊಳ್ಳೆಂದು ಮೂದಲಿಸುತ ರಘುಜನೆಚ್ಚಂ (ಕುಮುರಾ. ೨-೫೫) ; ಶಕುನಿ ಮೋಹರಿಸಿದನು ಸಮಸಪ್ತಕರು ಬೇಱೊಡ್ಡಿದರು (ಕುವ್ಯಾಕ. ೨-೯). ೩. ಮುತ್ತು ; ಆವರಿಸು ; ಕವಿ : ಸತ್ಯಲೋಕದ ಧಾಮವನು ಮೋಹರಿಸಿ ಮುಚ್ಚಿತು ತಮಸಿನೊಡ್ಡವಣೆ (ಸಂಭಕ. ೪-೦೨) ; ಪರಿದು ಕಾರ್ಮುಗಿಲು ಚಂದ್ರಗೆ ಕವಿದಂತೆ ಮೋಹರಿಸುವುದೊಡನಂಧಕಾರ (ಭರತ. ೦೮-೩೦) ; ಬಗೆಬಗೆಯ ಮುಗುಳು ಗೊಂಚಲಿನ ಹೂಜಲ್ಲಿಗಳ ಕಣಿಗೊಟ್ಟು ಮನವ ಮೋಹರಿಸುತ್ತಿದೆ (ಪಕ್ಕೈ. ೪೩-೦೪). ೪. (ಸೈನ್ಯವು) ಸಜ್ಜಾಗು ; ಅಣಿಯಾಗು : ಕಾಲಾಳು ಮುಂಕೊಳಿಸಿ ಅರಸನನುಜರುಸಹಿತ ಕೃಷ್ಣನ ಬೆರಳ ಸನ್ನೆಯೊಳೈದೆ ಬಿಡೆ ಮೋಹರಿಸಿ ನಿಂದುದು (ಕುವ್ಯಾದ್ರೋ. ೪-೨೨) ; ಮೋಹರಿಸಿ ಕಳದೊಳಗೆ ನಿಲೆ ಕಱುಗಾಹಿಯೆಳೆಗೊರಳನು ಮುಱಿಯ ಬಿಸುಟಾ ಹಡೆದ ತಾಯ್ಗಾವೆ ಶೋಕವನೆಂದ ಚಾಣೂರ (ಜಾಭಾ. ೨೨-೩೦) ; ಸರಕಾರದ ಪಡೆಯುವರೂ ಸತ್ಯಾಗ್ರಹಿಗಳೂ . . . ಎದುರಾಗಿ ಮೋಹರಿಸಿ ನಿಂತರು (ಕರಪೀ. ೦೮). ೫. ಯುದ್ಧಕ್ಕೆ ಸೈನ್ಯದ ವ್ಯೂಹವನ್ನು ರಚನೆಮಾಡು : ಸಾಹಸ ವಸಱಿವೆನಾಹವವನೊಡ್ಡುವೆ ತನಗೆ ಮೋಹರಿಪೆ[ಪಾಠಾಂ. ಸೆ] ಶಿವ [ಪಾಠಾಂ.

ಮೋಹರಿಸುವೆನು] ಸದಾಚಾರ ವೃಷಭ ತನಗೆ (ಲೀಲಾಶಿವ. ೨೦–೩೭೦) ; ತನ್ನ ಸಚಿವನೊಳು ಬಲವಂ ನೆರಪಿ ಮೋಹರಿಪುದೆಂದು ಬೆಸನನು ಕೊಡಲು (ಶಾಂಂದಪು. ೮–೩೩). ೬. ಸಜ್ಜುಗೊಳಿಸು ; ಅಣಿಮಾಡು : ಸಿದ್ಧಪಡಿಸು : ತಂದು ಮಣಿಮಯಸಾರಿವಲಗೆಯನಂದು ಮೋಹರಿಸಿದರು ಜೂಜಿಂಗೆ (ಕುಮ್ಮಾ.ಭ. ೦೬–೯೩). ೭. ಗುಂಪುಗೂಡು ; ಸಂದಣಿಸು ; ಒಟ್ಟಾಗು : ತರಣಿ ಶಶಿ ರುದ್ರಾದಿಗಳು ಮೋಹರಿಸಿದರು ಮುಂಗುಡಿಯಲಿಂದ್ರನ (ಸಂಶಕ. ೩೭–೩೬) ; ಧರಣಿಪನ ಕೈಸನ್ನೆಯಲಿ ಮೋಹರಿಸಿ ನಡೆದುದು ಸೇನೆ (ತೊರವೆ. ೯–೩–೨) ; ಮೋಹರಿಸಿ ಬಂದು ಮುತ್ತಿಗೆಯನಿಕ್ಕಿಕೊಂಡಿರ್ಪೆಳವಿಸಿಲ್ಗಳೆನಲು . . . ಪೊನ್ನ ಕೋಂಟೆಗಳ ಕಾಂತಿಗಳ್ಗೆದೆ ಮುಸುಕಿಕೊಂಡೆಸೆದಿರ್ದುವು (ಕ್ಕವಿಶಾ. ೦೭–೭) ; ಸಿಡಿಲ ಪಡೆಯಂತೆ ಮೋಹರಿಸಿ ಶರವರ್ಷಮಂ ಕಱೆವುತ್ತೆ ನಿಜಬಲುಂಬೆರಸು ಕಡಂಗಿ ಕವಿಯಲೊಡನೆ (ರಾಜಶೇ. ೬–೦೦೦ ವ). ೮. ಹೆಚ್ಚಾಗು ; ಅಧಿಕವಾಗು : ಜಿಷ್ವೆ ನಲಿದಾಡೆ ಸುಖಂ ಸುಳಿದಾಡೆ ಲೀಲೆ ಮೋಹರಿಸೆ ಗಳಂ ಚಮತ್ಕರಿಸೆ . . . ಕೂಡಿದರ್ (ಗಂಂಳ. ೩–೨೬); ಮೋಹನಂ ಮೋಹರಿಸೆ ಗಾಡಿ ಪರಿದಾಡೆ ಪೊಸ ದೇಶಿ ಸೂಸೆ . . . ಪಡೆದು ಕೃತಿಯಂ ಶಿವಾರ್ಪಿತವನೆಸಗುವ ನಿನ್ನ ಸ್ವೈರ್ಭಿಂಗೆ ಸಾಟಿಯುಂಟೇ (ಶದ್ಭರಾ. ೦–೩೦) ; ಮೋಹರಿಸಿದ ಮಮತೆಯೊಳೆಯ್ತರುತತಿ ಹಾಹಾಕ್ರಂದನಮಂ ಮಿಗೆ ಮಾಡುತ್ತ (ಜಯುಕಾ. ೯–೨೬). ೯. ಗುರುತಿಸು ; ಕಾಣಿಸು : ಶ್ರೀಹರಿಯಣುಗಿನಣುಗನತಿಮುದದಿಂ ತನ್ನೆಳವರೆಯಮೊಳು ಮೋಹರಿಸಿದ ಮೂರೇಪಿಯ ತೆಜಿನೆಸಲಾ ಹಣ್ಣಗಳ ರನ್ನಗೆ . . . ರಾಜಿಸಿದುವು ತಿವಳಿಗಳು (ಜಯುಕಾ. ೩–೩೩). ೧೦. ಸೇರು : ಜೊತೆಗೂಡು : ಏಕೆ ನಿಮಗೀ ಚಿಂತೆಯಿಂದೆರಡೌಕಿದವು ದುಷ್ಕಾರ್ಯಸಂಧಿ ವಿವೇಕನಿಕರದಲೊರೆದು ಮೋಹರಿಸೊಂದು ಬಾಹೆಯ.ಲಿ (ಕುಮ್ಮಾ.ಭ. ೦೨–೭೦); ನಳಭೂವರನು ನಿಜಸತಿಸಹಿತ ಹೊಕ್ಕನು ನಿಷಧಪಟ್ಟಣವ ಮೊಱೆವ ಶಂಖ ಮೃದಂಗ ಭೇರಿಗಳುಬ್ಬಿ ಧುಧುಣಿರೆನಲು ಮೋಹರಿಸಲಾ ನಿಸ್ಸಾಳತತಿ ಘನವಾದ್ಯ ಘೋಷಿಸಲು (ನಳಚ. ೩–೭೩). ೧೧. ಒಟ್ಟುಗೂಡಿಸು; ಸೇರಿಸು: ಸರಸಿಜಾಯುತದಂಡವನು ಮೋಹರಿಸಿ ಮುಂಚುವ ಪರಿಮಳವನಂದರಸಿ ಬೀಱುತ ಬಂದು ಹೊಕ್ಕಳು ರಾಜಮಂದಿರವ (ಕುಮ್ಮಾ.ವಿ.೦–೨೬). ೧೨. ತುಂಬಿಕೊಂಡಿರು ; ತುಂಬಿರು : ಮೋಹರಿಸಿ ಪೊದಟ್ಟ ಪೊಚ್ಚಪೊಸಜೇನ್ಗೊಡನಂ ಪಿಱಿಮಿದು ಸೋರ್ವ ಜೇಂಪರಿ . . . ದೊರೆವಡದೀ ಕುಮಾರ ಚಿಕದೇವನ ತಾಸದ ಪೋಡಶಾಂಶಮಂ (ಚಿಕಂ. ೯–೦೦೭). ಮೋಹಳಿಸು : ೧೧. ಉಳಿಯ ಲಹರಿಯ ಲಗ್ಗೆಗಳ ಮೋಹಳಿಸಿ ಬಿರುರ್ಘೋಂಕಾರರವದಿಂಮುಲಿಮವನು ಕಲಿಕರ್ಣನು (ಕುಮ್ಮಾ.ಭ. ೩–೩೭). P ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ.

[ಮೋಹರ$_1$ + —ಇಸು$_3$./ತೆಲು. ಮೋಹರಿಂಚು. ಮೊಹರಿಂಚು]

**ಮೋಹಲತೆ** (ನಾ). (ವಶೀಕರಣದ ಮದ್ದಿಗೆ ಬಳಸುವ) ಒಂದು ಬಗೆಯ ಬಳ್ಳಿ : ಮೋಹಲತೆಯುಂ ಧೂಮಕುಣಿಕೆಯುಂ ಗಿರಿಕರ್ಣಕೆಯುಂ ರುದಂತಿಯುಂ ಚಾರಿಕೆಯುಂ ಅಧೋಪುಷ್ಪಿ ಎಂದೀ ಸಪ್ತಸೀಗೆಬೀಜಮುಂ . . . ಕೂಡಿ ತಿಲಕವನಿಡಲು ತ್ರೈಲೋಕ್ಯವಶಮಪ್ಪುದು (ಕಾಮಣಿ. ೨೬೨).

[ಸಂ. ಮೋಹಲತಾ]

**ಮೋಹವೆಚ್ಚು** (ಕ್ರಿ). ಪ್ರೀತಿಯು ಹೆಚ್ಚಾಗು; ಅನುರಾಗವು ಅಧಿಕವಾಗು: ಒಚ್ಚೇರೆಗ್ಗೆಯೊಳು ನೀರ ಮೊಗೆದು ಮೋಹವೆಚ್ಚಿ ರಂಗನ ಮೇಲಿಡಲು (ಕಂಠಪ. ೨೩–೦೨೨). [ ಮೋಹ$_1$ + ಪೆಚ್ಚು$_{\text{11}}$ (<ಪೆರ್ಚು$_1$) ]

**ಮೋಹವೆಣ್** (ನಾ). ೧. ಮರುಳುಗೊಳಿಸುವ ಹೆಣ್ಣು; ಆಕರ್ಷಿಸುವ ಹೆಂಗಸು. ೨. ಜಾರೆ ; ವೇಶ್ಯೆ.

**ಮೋಹವೆಂಗಳು** (ಬಹುವ): ಮುದದಿಂದ ರಾಜಿಸುತಿಹ ಮೋಹವೆಂಗಳ ಸದನಪಂಕ್ತಿಯು ಲೋವೆಯೊಳಗೆ ಮದನವಿಲಾಸವ ತೋರ್ಪ ಪುತ್ತಳಿಗೆಳೊಪ್ಪಿದುವತಿಚಿಲುವಿಕೆಯಿಂದ (ಕಂಠಪ. ೬–೯೯). [ಮೋಹ$_1$ + ಪೆಣ್]

**ಮೋಹಶಾಸ್ತ್ರ** (ನಾ). ಅವಿದ್ಯೆಯನ್ನುಂಟುಮಾಡುವ ಶಾಸ್ತ್ರ ; ಅಜ್ಞಾನವನ್ನುಂಟುಮಾಡುವ ಶಾಸ್ತ್ರ: ಅವು ತಾಮಸಂಗಳುಂ ಮೋಹಶಾಸ್ತ್ರಂಗಳುಂ ಅಸಾಕ್ಷಿಕಂಗಳುಮಾಗಲಾಗಿ ಪ್ರಮಾಣಂಗಳಾಗಲರಿಯವು (ಶಾಸ್ತ್ರ.ಪಿ. ೯೯). [ಸಂ.]

**ಮೋಹಸಲೆ** 'ಮೊಹಸಲೆ' ನೋ.

**ಮೋಹಳ** (ನಾ). ಕತ್ತಿಯ ಹಿಡಿ ; ಕಠಾರಿಯ ಹಿಡಿಕೆ : "ಪಾಳೆ ಪರಂಜು ಪೆನಲು ಮೋಹಳಮುಕ್ಕು" (ಮಂಗರಾ. ೬೬–೩೭) : ಖಡ್ಗದ ಮೋಹಳ [ಪಾಠಾಂ. ರ]ಕೆ ಕೈದುಡುಕಿ . . . ತ್ರಿಪುರಾಂತಕಾ ಎನಲು (ಬಸವ. ೨೬–೩೪); ಕಠಾರಿಯ ಮೋಹಳದ ಮೇಲಿಟ್ಟ ಗಲ್ಲದ . . . ಘನಶೋಕವಹ್ನಿಯ ಮೇಹುಗಾಡಿನ ಮನದ ಕೌರವನಿತ್ತನೋಲಗವ (ಕುಮ್ಮಾ.ಗದಾ. ೦–೦೨) ; ಹೊನ್ನ ಮೋಹಳದ ಕಠಾರಿ ಕತ್ತರಿಬೊಟ್ಟು ಚಿನ್ನದ ಕಯ್ಯಂಬು ಮೆಱೆಯೆ (ಕುಂರಾಕಸಾಂ. ೯೦–೯೭). [←ತೆಲು. ಮೋಹಣ]

**ಮೋಹಳಿಸು** 'ಮೋಹರಿಸು' ನೋ.

**ಮೋಹಾಂಧ** (ನಾ). ವ್ಯಾಮೋಹದಿಂದ ಕುರುಡಾದವನು .-ಮುಂದುಗಾಣದವನು: ಕಪಟಪ್ರಪಂಚಜಾಳಾವೃತನೆಸಧಿಕಮೋಹಾಂಧನಂ (ಸುಕುಮಾ. ೩–೯೩); ಮಂತ್ರಿಪುತ್ರಮೋಹಾಂಧನಾಗಿ ಕುಬನಿಗರೆಯತೊಡಗಿದ (ಅಕ್ರಮ. ೭೦). [ಸಂ.]

**ಮೋಹಾತುರ** (ನಾ). ವ್ಯಾಮೋಹದಿಂದ ತವಕಿಸುವ ವ್ಯಕ್ತಿ: ಸುವಿವೇಕ ವುಂಟೆ ಮೋಹಾತುರರೊಳ್ (ಪುಲ್ಲಿಕಾ. ೩–೦೬೩). [ಸಂ.]

**ಮೋಹಾಪೋಹ** (ನಾ). [ಕಾವ್ಯಮೀ] ಅಪಹ್ನುತಿಅಲಂಕಾರದ ಒಂದು ಪ್ರಭೇದ ; P ಮೋಹಪರವಶತೆಯಿಂದಾಗಿ ವಸ್ತುವಿನಲ್ಲಿರುವ ಗುಣಗಳನ್ನು ಅಲ್ಲಗಳೆದು ಬೇರೆ ಗುಣಗಳನ್ನು ಆರೋಪಿಸಿ ವರ್ಣಿಸುವುದು : ಅಮೃತಮಯುಕಿರಣನೆಂಬುದುಮುಮರೆದು ಶಿಶಿರಾಂಶು ಮೆಂಬುದುಂ ಶಶಿಗೇದುಂ ಸಮನಿಸಿ ವಿಷಕಿರಣನುಮುನಲಮರೀಚಿಯುಮೆಂದೆ ನಲ್ಕೆ ಮೋಹಾಪೋಹಂ (ಕಲಾ. ೩–೦೮೩). [ಸಂ.]

**ಮೋಹಾಲಸ್ಯ** (ನಾ). ಎಚ್ಚರ ತಪ್ಪುವುದರಿಂದುಂಟಾಗುವ ಜಡತೆ : ನಿದ್ರಾಲಸ್ಯ ಹೆಚ್ಚಾಗಿರುತ್ತದೆ. ಕೆಲವೇಳೆ ಮೋಹಾಲಸ್ಯವುಂಟಾಗುತ್ತದೆ (ಕಲಿಕೊ. ೭೩). [ಸಂ.]

**ಮೋಹಿ** (ಗು). ೧. ತಬ್ಬಿಬ್ಬುಗೊಳಿಸುವ ; ದಿಗ್ಭ್ರಮೆ ಹಿಡಿಸುವ. ೨. ಮರುಳುಗೊಳಿಸುವ. ೩. ಮೋಹಕವಾದ; ಆಕರ್ಷಕವಾದ; ಸುಂದರವಾದ : 'ಮೋಹಿವೆಣ್' ಪರಾ. (ನಾ). ೪. ಅಂದ ; ಮನೋಹರತೆ. ೫. ಮೋಹಕ್ಕೊಳಗಾದವನು ; ಮೋಹಪರವಶನಾದವನು : 'ಮೋಹಿಯಲ್ಲದನ ನೋಡದಿರು ಮೋಹವ ಬಲ್ಲವನಲ್ಲವ ಬಲ್ಲನೆಂದಾ ಪಾದಿಯೊಳಗಾಡುತಿಪರು (ಭರತ. ೯೭–೨೯). [ಸಂ. ಮೋಹಿನ್]

**ಮೋಹಿಂ** 'ಮೊಹಿಮ್ಮು' ನೋ.

**ಮೋಹಿಚಕ** (ನಾ). ಒಂದು ಬಗೆಯ ಸಸ್ಯ; ಕಿಂಶುಕ : "ಮೋಹಿಚಕ [ಪಾಠಾಂ. ಹೀಚಕ, ಹಿತಚಕ]ಮಾ ತ್ರಿಪತ್ರಕಂ ಕಿಂಶುಕಾಖ್ಯಂ" (ಮಂಗರಾ. ೩೭–೨೦). [ ? ]

**ಮೋಹಿತ** (ಗು). ೧. ತಬ್ಬಿಬ್ಬಾದ ; ಭ್ರಮೆಗೊಂಡ. ೨. ಮರುಳಾದ; ಆಕರ್ಷಣೆಗೊಂಡ. (ನಾ). ೩. ಮರುಳಾದವನು ; ಆಕರ್ಷಣೆಗೊಂಡವನು ; ಮೋಹಗೊಂಡವನು : ಆನು ಘಳಿಸಿದ ಒಮ್ಮನಕ್ಕೆ ಅಗಲದೆ ಮೋಹಿತನಾದ (ಬಸವ. ೯೦೪); ಅಂಗರಕ್ಷೆಯ ಮಾಡಿ ಮೋಹಿತನಲ್ಲ ಮೂಜಗಕೆ . . . ಪರತರವಸ್ತು ನೋಡೀತ (ಕುಮ್ಮಾ.ಅ. ೯–೭೦); ದಾರುವನದಲ್ಲಿ ಮೋಹಿನಿ ನಾರಾಯಣಿ ಸುಳಿಯಲೊಡಂ ಮೋಹಿತರಾದರ್ ಧೀರಯತಿರಾಜರ್ (ಹರಿಶ್ಚ.ರ. ೩–೨೭). [ಸಂ.]

**ಮೋಹಿನಿ** (ನಾ). ೧. ಮೋಹಕವಾದ ರೂಪವುಳ್ಳವಳು ; ಚೆಲುವೆ : ಮೋಹಿನಿಯರ ಮೋಹಪಾಶ ಹೊಂಬಣ್ಣದ ರಾಹುಗಳಿಸೆ ವೈರಿಶಶಿಗೆ ರೂಪಿಸಿ ಶೃಂಗಾರವೀರದೊಳಾಜಾನುಬಾಹುಗಳೆಸೆದುವಾ ನೃಪನ (ಶಬರ. ೬-೫೬); ತನ್ನ ಮನಸ್ಸನ್ನು ಮರುಳುಮಾಡಿರುವ ಮೋಹಿನಿಯು ಕೈ ಹಿಡಿಯುವ ಹಾಗಿಲ್ಲ ! (ಪೂಹನ್ನು. ೧೯೫); ನೀ ತಾಯಿಯೆನಲೊ ನೀ ಮಾಯಿಯೆನಲೊ ಮೋಹಿನಿಯು ಮೋಹನಾಂಗ ? (ಸೂರ್ಯಾದ. ೫೬-೯). ೨. ಒಬ್ಬ ಅಪ್ಸರೆಯ ಹೆಸರು : ಧರೆಯ ನಾರೀಯರ ಚೆಲ್ವಿಕೆಯ ತೆಗೆದು ನೆರೆ ಸರಸಿಜಭವ ನಿರ್ಮಿಸಿದ ತರಳಾಕ್ಷಿ ಮೋಹಿನಿ ಯಾ ಚೆಲೆವೆಣ್ಣಿನ ಚರಣದುಂಗುಟಕೆಣೆಯಹಳೆ (ಕಂಪಬ. ೧೧-೧೪). ೩. ಸಮುದ್ರಮಥನದ ನಂತರ, ಅಮೃತವನ್ನು ಹಂಚುವ ಕಾಲದಲ್ಲಿ ರಾಕ್ಷಸರನ್ನು ವಂಚಿಸಲು ವಿಷ್ಣುವು ಧರಿಸಿದ ಸ್ತ್ರೀರೂಪ : ಮೋಹಿನಿ . . . ೪ ಚಾಮುಂಡಿ ೫ ಯಿಂದ್ರಾಣೀ (ಎಕ. V (ಸ), ತಿರುಮ. ೨೬೬-೨; ೧೯ನೆಯ ಶತ). ೪. ಸುಂದರಸ್ತ್ರೀಯ ರೂಪವನ್ನು ಧರಿಸುವ ಒಂದು ದುಷ್ಟಶಕ್ತಿ; ಹೆಣ್ಣುಪಿಶಾಚಿ : ಹೊನ್ನೆಮರದಲ್ಲಿ ಬೊಬ್ಬರ್ಯ . . . ತೆಂಕಿನ ಪಾವಟಿಗೆಯ ಎಡದ ನೆಲ್ಲಿಮರದಲ್ಲಿ ಮೋಹಿನಿದೆವ್ವ . . . ಇವುಗಳೆಲ್ಲಾ ಕೋಣದ ಸುತ್ತಲಿನ ಮರಗಳಲ್ಲಿವೆ (ಕನ್ನಸ. ೨೬). ೫. ಆಕರ್ಷಿಸುವವಳು; ವಶೀಕರಣ ಮಾಡುವವಳು : ಈಗಿನ ಹುಡುಗಿಯರೇನು, ಮಾಯಾವಿನಿಯರು, ಮೋಹಿನಿಯರು (ಸುಬ್ಬಣ್ಣ. ೧೨). ೬. ಒಂದು ಬಗೆಯ ಯಕ್ಷಿಣಿ,— ಇಂದ್ರಜಾಲ : ಮಣ್ಣಿನ ಮನೆಯ ಕಟ್ಟ ಮಾಯಾ ಮೋಹಿನಿಯೆಂಬ ಮಹೇಂದ್ರಜಾಲದೊಳಗಾಗಿ (ಮಹಾದೇ. ಬ. ೧೪೪-೩೦೨). ೭. ಮೂರ್ಛೆಬರಿಸುವ ಒಂದು ವಿದ್ಯೆ : ಜೃಂಭಿನಿ ಸ್ತಂಭಿನಿ ಮೋಹಿನಿ ಸರ್ಪಿ ತಾಳೋದ್ಘಾಟಿನಿ ವಿದ್ಯಾಮಂತ್ರಚೂರ್ಣ ಯೋಗಘುಟಿಕಾಂಜನ ಮೆಂದಿವು ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳಾದಮಾನುಂ ಕುಶಲನಂತಪ್ಪ ಕಳ್ಳಂ (ವಡ್ಡಾರಾ. ೧೨೨-೧೬). ೮. ಒಂದು ಬಗೆಯ ಸಸ್ಯ : "ಮೋಹಿನೀ—ಮೂರುಸಿಲೆಯುಮ್ಮತ್ತ, ಎಲಚಿ, ಆಲದೆಲೆ" (೬ಶಂ. ೧೪೦). [ಸಂ. ಮೋಹಿನೀ]

**ಮೋಹಿನಿಆಟ್ಟಂ** (ನಾ). (ಕೇರಳದಲ್ಲಿ ಪ್ರಚಾರದಲ್ಲಿರುವ) ಒಂದು ಬಗೆಯ ನಾಟ್ಯಪ್ರಭೇದ : ಕಥಕ್ಕಳಿಯಲ್ಲದೆ, ಕೇರಳದಲ್ಲಿ ಓಟ್ಟಂ ತುಳ್ಳಾಲ್, ಮೋಹಿನಿಆಟ್ಟಂ ಮುಂತಾದ ನಾಟ್ಯಪ್ರಭೇದಗಳು ಇವೆ (ಭಾರದ. ೫೬೬) : ಕಥಕಳಿಯ ಜೊತೆಗೆ ಕೇರಳದಲ್ಲಿ ಮೋಹಿನಿಆಟ್ಟಂ ಎಂಬ ಕಲೆಯೂ ಪ್ರಚಾರದಲ್ಲಿದೆ (ಅಭಾವ್ಯ. ೧೬) ; ಮೋಹಿನಿಆಟ್ಟಂ ಕೂಡಾ ಕೊಂಚಮಟ್ಟಿಗೆ ಶಾಸ್ತ್ರೀಯನೃತ್ಯವೆನಿಸಿದ್ದು ಪೂರ್ಣ ಜಾನಪದನೃತ್ಯವಲ್ಲ (ಭಾರತಾ. ೧೨೯). ' ಕಥಕ್ಕಳಿ ' ಪರಾ. [← ಮಲ. ಮೋಹಿನೀಯಾಟ್ಟಮ್]

**ಮೋಹಿನೀಗಜ** (ನಾ). ಶ್ರೀಶೈಲದಲ್ಲಿರುವ ಒಂದು ಕಲ್ಲಿನ ಆನೆ ; P "ಶ್ರೀಶೈಲದ ಬಿಲ್ವವನಕ್ಕೆ ಸೇರಿದ ಕಲ್ಲಾನೆ. ಅದರ ಮೇಲೆ ಸಾಧಕನು ಹತ್ತಿದರೆ ಅದು ಎತ್ತರಕ್ಕೆ ಎದ್ದು ನೆಲಕ್ಕೆ ಕುಗ್ಗಿ ಸಾಧಕನು ಬೀಳುವ ಹಾಗೆ ಮೈಕೊಡವಿ ಮೊರಳಿ ಹಾರಿ ಚಕ್ರದಂತೆ ಗಿರ್ರನೆ ತಿರುಗಿ ಘೀಳಿಟ್ಟು ಬೆದರಿಸುತ್ತದೆ. ಇದಕ್ಕೆಲ್ಲ ಸಾಧಕನು ಹೆದರದಿದ್ದರೆ ಆಗ ಅದು ಮೆಚ್ಚಿ ಇಷ್ಟಸಿದ್ಧಿಯನ್ನು ಕೊಡುತ್ತದೆ" (ಸಿದ್ಧರಾ. ಟಿಪ್ಪಣಿ. ೧೬೬) : ಮೋಹಿನೀಗಜವನದರುತ್ತಾ ಕುಮಾರಧಾರೆಯ ನಾನುತ . . . ನಡೆದು ಭಾವು ಸಿದ್ಧಕುಲಪತಿಯೊಂದು ಭೈರವಂ ಕೈಮುಗಿವನು (ಸಿದ್ಧರಾ. ೪-೮) ; ಮೋಹಿನೀಗಜವನಡರ್ದಿಳಿದು (ರೇವಣ. ೧೦೯-೨೨) ; ಅಲ್ಲಿಯುಜ್ಜ್ವಲವೆಸೆವ ಕಲ್ಲಾನೆ ಮೋಹಿನೀಗಜವೆಂಬ ಪೆಸರಿಂದ ಮೆಸೆದಿರ್ಪುದು . . . ಇಷ್ಟಸಿದ್ಧಿಯನೀವುದಾ ಮೋಹಿನೀಗಜಂ ಬಿಲ್ವವನದೆ (ಶಾಸೋಪ. ೩-೪೬). [ಸಂ.]

**ಮೋಹಿಮು** ' ಮೊಹಿಮ್ಮು ' ನೋ.

**ಮೋಹಿವೆಣ್**, **ಮೋಹಿವೆಣ್ಣು** (ನಾ). ೧. ಮೋಹಕವಾದ ರೂಪವುಳ್ಳವಳು ; ಚೆಲುವೆ : ಮೋಹ ರಾಗ ದ್ವೇಷ ಹಾಸ್ಯ . . . ಮೋಹಿವೆಣ್ಣಾಸೆಯಿಂತೀರೇಳ ಬಿಡಬೇಕು (ಭರತ. ೬೦-೮೦). ಮೋಹಿವೆಣ್ಣು : ೧. ಮುಡಿಯ ಕಟ್ಟುವರು ದಿವ್ಯಾಂಗಕಾಭರಣವ ತೊಡಿಸುವ ಮೋಹಿವೆಣ್ಣುಗಳು ಬಿಡದಾಗ ಪರಿಮಳವನು ತಿಗುರುವ ಹೆಂಗಳೊಡನೈತಂದರರ್ತಿಯಲಿ (ಕಂಪಬ. ೯-೬೯). ೨. ಮರುಳಾದವಳು ; ಮೋಹಕ್ಕೆ ಸಿಲುಕಿದವಳು : ಕಡುಕೂರ್ತ ನಲ್ಲರ . . . ಬಿಗಿಯಪ್ಪಿಕೊಳ್ಳದೆ ಬಿಡುವರೆ ಮೋಹಿವೆಣ್ಣುಗಳು (ಕುರಾಶಾಂ. ೩೨-೩).

ಮೋಹಿವೆಂಗಳು (ಬಹುವ) : ನಿಟ್ಟಿಪ ಮೋಹಿವೆಂಗಳ ದಿಟ್ಟಿ ಕದಪಿಗೆ ತೊಟ್ಟನೆ ತಾಕದಂದದಲಿ ಇಟ್ಟ ಕಸ್ತೂರಿರೇಖೆಯೊಲೆಪನ್ನ ಬದರಿಯ ಸೃಷ್ಟೀಶ ನಾರೆನಗುಸಿರೆ (ಕಂಪಬ. ೨೫-೩೮). [ಮೋಹಿ + ಪೆಣ್]

**ಮೋಹಿವೆಣ್ಣು** ' ಮೋಹಿವೆಣ್ ' ನೋ.

**ಮೋಹಿಸು₁** (ಕ್ರಿ). ೧. ಮೊಹಿಯುವಂತೆ ಮಾಡು : ಬಡಿಯುವಂತೆ ಮಾಡು ; ಅಪ್ಪಳಿಸುವಂತೆ ಮಾಡು : ಆತನ ನಿವಾಸದೊಳು ಬೆಟ್ಟವಂ ಕೈಯಿಕ್ಕಿ ಸೆಳೆದು ವಾರಾಸಿಗಡುಕುವ ಕರಿಗಳುಂಟವಂ ತಂದೀ ಕದಕ್ಕೆ ಮೋಹಿವೆವೆಂದರು (ಸೋಮಶ. ೪-೫೩). ೨. ಒಂದರೊಡನೊಂದು ಬಡಿದಾಡು ; ತಾಕಲಾಡು : ಅಲಗಲಗು ಮೋಹಿಸಿದಲ್ಲದೆ ಕಲಿತನವ ಕಾಣಬಾರದು (ರಸವ. ೬೬೬). ೩. ಮೇಲೆಬೀಳು ; ಮೇಲೆ ಎರಗು : ಅಪಸಿ ಬಾಚಿದ ಶೂಲಿಗೆಯ ರಥಗತಣೆಯಲಿ ಕರಿಘಟೆಗೆ ಜೋದರು ಕಡಿದು ನೂಕಿದರವರು ತೇಜಿಯ ನಿಲಿಸಿ ಮೋಹಿಸಿದ (ಕುಮಾದ್ರೋ. ಶಂ. ೨೬೩-೨). ೪. ಅಡ್ಡಗಟ್ಟಿ ನಿಲ್ಲು ; ಪ್ರತಿಭಟಿಸು : ಆ ಹಿರಣ್ಯಕನಸಮುದೃತ್ಯ ಕದಂಬದಲಿ ರೂಪಿಸಿದ ನರಕೇಸರಿಯು ರೌದ್ರಾಟೋಪದಂದದಲಿ ಮಸಗಿ ಮಾರ್ಜಾಲದಿದಿರಿನಲಿ ಮೋಹಿಸಿದನೈ (ಕುರರಾ. ೩-೬-೬). ೫. ತಿವಿ ; ಚುಚ್ಚು ; ಇರಿ : ಮಸೆದ ಸೂಲಗು ಸಹಸ್ರ ಮೋಹಿಸುವಂತೆ ರಸಘುಟಿಕೆಯೊಂದೆ ಮೊನೆಮೊನೆಗೆ ಬಂದಾನುವಂತೆ (ಕನ್ನರ. ಶ. ೬೦೩-೦೩೯೫); ಬಂದು ಸಾಷ್ಟಾಂಗಪ್ರಣಾಮದಿಂ ವಂದಿಸುತ್ತಿರೆ . . . ತನ್ನ ಕರವಾಳ ಮುಂದೆ ಕೊರಳಿಗೆ ಮೋಹಿಸಲು (ರಸಕು. ೨೬-೩೦); ಓಸರಿಸಿ ಕರವನವನಿಯೊಳ್ಪರ್ದಿ ಮಿಂಡೆಯುವನಾಸುರದಿ ಜಡಿದು ಹಡತಲೆಗೆ ಮೋಹಿಸುತ್ತಿರೆಯಾ ಸುಭಟನಾದರ್ನ ಸುಕುಮಾರಂಗೆ ಬಿನ್ನೈಸುತಿರ್ದನೇಂ ಬಣ್ಣಸುವೆನು (ಭಾವಶಂ. ೯-೨೨); ಪೇರುರಕೆ ಮೊನೆಗಣೆಗಳಂ ಮೋಹಿಸಿದನು (ಕೃಷ್ಣರಾ. ೦೨-೯೯). ೬. ಚುಚ್ಚಿಕೊಳ್ಳು ; ತಿವಿದುಕೊಳ್ಳು : ಈ ಶರೀರತ್ಯಾಗವೇ ಕೃತದೋಷಹರವೆನುತುಗಿದು ಸುರಗಿಯನಾ ಸುಮಿತ್ರಾಸೂನು ಮಿಗೆ ಮೋಹಿಸಿದ ನುದರದಲಿ (ಕುರರಾ. ೩-೩-೨೩). ೭. ಇಡು ; ಇರಿಸು ; ಹೊಂದಿಸು : ಉರುತರ ರುದ್ರಾಕ್ಷಿಗೆ ಇನಿತು ಫಲಂ . . . ಕರ್ಣದೊಳಿರಿಸಲು ದಶಕೋಟಿ ಫಲಂ ಮೋಹಿಸೆ ಗ್ರೀವಕೆ ಶತಕೋಟಿಫಲಂ (ದೀಕ್ಷಾಬೋ. ೬೦-೨೨೬); ನಿಜ ಯುಡಿಗೆಯಲಿ ಮಲ್ಲಗುಟಿನ ಸೆಜಿಗ ಮೋಹಿಸಿ ಬೆರಳ ದರ್ಭೆಯ ಹಚಿದು ಬಿಸುಟನು . . . ಕಲಿದ್ರೋಣ (ಕುಮಾದ್ರೋ. ೯-೦೫). ೮. (ಅಲಂ) ನಾಶಮಾಡು ; ಹಾಳುಮಾಡು : ಬಲು ಮಗಧಯವನೇಶ್ವರರ ಬಲಜಲಧಿಯನು ಬಹಳಾಸ್ತ್ರವಡಬಾನಲನ ಮುಖದಲಿ ಮೋಹಿಸಿದನು (ಸಭಾಗ. ೩-೨-೩೨). [ಮೋಹು₁ + — ಇಸು₃]

**ಮೋಹಿಸು₂** (ಕ್ರಿ). ೧. ಮೈಮರೆ; ಎಚ್ಚರ ತಪ್ಪು : ಜೋಲ್ದಂ ನೆಜಿಲ್ದಂ ಸಮಾಕುಲಿತರ್ ಮೋಹಿಸಿ ಮುಚ್ಚೆವೋಗೆ (ಶಾಂತಪು. ೬-೮೬) ; ಆ ಮಾತಂ ಕೇಳ್ದನಭ್ರವಜ್ರಾಭಿಘಾತಮಾದಂತೆ ಸಭಾಜನವೆಲ್ಲಂ ಮೋಹಿಸೆ (ಅಜಿತ. ೧೧-೩೩) ; ಮೆಯ್ಯ್ ರ್ನೋಂಪಿಸುವೊಡೆ ಬಾತೊಡೆ ಮಿಗೆ ಮೋಹಿಸುವೊಡೆ ರಾಸ್ನಾದಿತೋಯಮೂ ಕುಡೆ ತೀರ್ಗುಂ (ಲೋಕೋಪ. ೯-೨೩೯). ೨. ಎಚ್ಚರ ತಪ್ಪುವಂತೆ ಮಾಡು ; ಪ್ರಜ್ಞೆ ತಪ್ಪಿಸು : ಮುಸುಕಿದರೆ ಮಂತ್ರಾಸ್ತ್ರದಲಿ

ಮೋಹಿಸಿದ (ಕುಮಾ.ಕ. ೨೦-೩೪). ೩. ಮಾಯೆಗೆ ಸಿಲುಕು ; ಭ್ರಾಂತನಾಗು : ಬಗೆಯದೆ ತಡೆಯದೆ ಸುಟೀಯದೆ ಮೋಹಿಸದೆ ಎಲ್ಲಾ ವಸ್ತುಗಳನೊಪೊರ್ಣದಲಱಿವ ಕಾಣ್ಬನಂತಜ್ಞಾನಮುಮನಂತದರ್ಶನಮುಮ ನೊಡೆಯರಾದರ್ (ವಡ್ಡಾರಾ. ೧೩೪-೨೦): ಬೇಡಿಂತೀ ವಿಷಾದಂ ನಿರಸ್ತವಿವೇಕಂ ಬೊಲಿದೇಕೆ ಮೋಹಿಸಿದಪ್ಪೈ ನೀಂ (ಆದಿಪು. ೦೩-೫೯); ಮನೋಹರ ಯವ್ವನಮುದು ಮುಪ್ಪೀಂಗುರು ಕಾರಣಮೆಂದು ಬಲ್ಲೊಡಂ ಮೋಹಿಸುವರ್ (ಪಾರ್ಶ್ವ. ೫-೪೨). ೪. ಭ್ರಮೆಗೊಳಿಸು; ಭ್ರಾಂತಿಯನ್ನುಂಟುಮಾಡು: ಮೋಹಿಸಿತು ಘುಳುಘುಳುನಿನಾದ ಮರಾಹನಿಸ್ವನದಂತೆ ಮುನಿಯೆಂಬೂಹೆ ಕೊಳ್ಳದೆ ಕೊಂಡು ಹರಿದುದು ಚಿತ್ರವಧಪಥಕೆ (ತೊರಾ. ೨-೫-೧೦). ೫. ಪ್ರೀತಿಸು ; ಒಲುಮೆಯನ್ನು ತೋರು : ಮೋಹಿಸಿ ಮುದ್ದಿಸಿ ಮರುಳಾದೆನವ್ವ (ಮಹಾದೇ. ವ. ೪೩-೯೯); ನೀ ಮೋಹಿಸಿದೆ ನಿನ್ನಲ್ಲಿ ತಪ್ಪಿಲ್ಲ ಕೇಳಬಲೆ (ಕಂಸವ. ೯-೦೩೪); ಇನಿಯನ ಮೊಗವ ನೋಡದ ಮುನ್ನ ಮೋಹಿಸಿ ಮನಗರಗುವಳು (ಹರಿಶ್ಚ. ೦-೫೫). ೬. ಇಷ್ಟಪಡು; ಬಯಸು: ವಿಷವ ಮೋಹಿಸುವಂತೆ ಉಡುವುದೀತಂಗೆ (ಕೃಷ್ಣಾ. ೩೦-೨೬). ೭. ಆಕರ್ಷಿಸು ; ಮೋಹಗೊಳಿಸು ; ಮರುಳುಮಾಡು : ಶುಚಿಯೀ ನಿರೀಕ್ಷಿಸಿದವರ್ನ್ನಿರ್ಷ್ಟಿಗಳ್ ಚೆಲ್ವನೀ ಹರನು ಮೋಹಿಸಲೆಳಿತುಮಾಪ್ಪರ್ನ ಧಿಂ ಶ್ರೀವಿಷ್ಣುಭೂಪಾಳಕಂ (ಎಕ. V, ಹಾಸನ. ೫೩-೧೩ : 1170) : ಬಗೆ ಬಗೆ ಆಟಗಳಿಲ್ಲಿ ಕಲಿತೆಯ್ಯ ಜಗವ ಮೋಹಿಪನೆ (ಪುರಂದ. ೦-೯೬ ಪಲ್ಲವಿ); ಪುಷ್ಪಾಂಜಲಿಗೆವರ್ದು ಮೋಹಿಸಿ ನಿಂದು . . . ನರ್ತನೆಮಂ ಬಿತ್ತರಿಪ ರಂಭಾದಿ ದಿವ್ಯನರ್ತಕಿಯರಿಂ (ಶಬರಂ. ೧-೬೯ ವ). ೮. ಆಕರ್ಷಿತನಾಗು ; ಮರುಳಾಗು ; ಮನಸೋಲು : ಮುಂದೆ ಮೋಹಿಸಿ ನೆರೆದ ಭಕ್ತರ ಸಂದಣಿಗಳುಘೆ ಎನಲು (ತ್ರಿಪು. ೨೩-೬೦) ; ಮಾತನಱಿಯದ ಬಾಲ ನಿಮ್ಮನು ಕಂಡು ಸೋತು ಮೋಹಿಸಬಲ್ಲನೆ (ಪುರಂದ. ೩-೦೯೫-೨). ೯. ಕ್ರಂಗೊಳಿಸು : ರಂಜಿಸು ; ಶೋಭಿಸು : ಪೊರ್ಕುಳ ಗಂಟಿಯ ಮೋಹಿಸುವ ಮೊಗವಡವ . . . ಚಾರುತರಭೂಷಣಂ ಭೀಷಣಮಾಗೆ (೧೦ಕ. ೬-೫೫ ವ); ಕಾಮಂ ಕಿಱುಸೂಜಿಗೆ ಸೇರಿಸಿದ ಪೊಸ ಮುತ್ತುಗಳೋ ಎಂಬಂದದೊಳಾ ಅಸಿಯಳ ಮೆಯ್ಯೊಗ್ಗದಲ ಮೊದಲೊಳ್ಮೋಹಿಸಿದುವು ಸಣ್ಣ ಬೆಮರ ಬಿಂದುಗಳರಮ್ರಗನಂ ಕಾಣಾಂತರಮೆ (ಜಯನೃ. ೪-೦೬); ಹೊಂಬಣ್ಣ ಮೈಗೆ ಮೋಹಿಸುವ ಕಾಗಿನ ದಟ್ಟಿ . . . ಮುಂಜಾಯ ಕರ್ಪೂರ ವೀಳೆಯದಿಂದ ಕಣ್ಗಂಬಾದನಾ ಗಾಡಿಕಾಱ (ಭರತ. ೦-೩೫).

[ಮೋಹ$_1$ + — ಇಸು$_3$]

**ಮೋಹೀವರ್** ' ಮೊಹಿಮಮ್ಮ ' ನೋ.

**ಮೋಹು$_1$** (ಕ್ರಿ). ೧. ಗುರಿಯಿಡು ; ಈಡನ್ನು ಇಡು : ಖಡ್ಗವ ಸೆಳೆದು ಜಡಿದು ನೋಡಿ ಹೆಡತಲೆಗೆ ಮೋಹಿ ಕಯ್ಯೆತ್ತಿ ಕಂಧರ ಹಱಿಯಲನುವಾದೆನು (ಹಕಲ. ೦೩-೦೨); ಹೆಡತಲೆಗೆ ಮೋಹಿದ ಕೃತಾಂತನ ಖಡುಗವನು ಕಂಗಾಣದೇತಕೆ ... ಬಱಿದೆ ಕೆಡುವರಜ್ಞಾನದಲಿ (ಚಿಭಾಗ. ೨-೦-೬). ೨. (ತಲೆಯಿಂದ ತಲೆಯನ್ನು) ತಾಟಿಸು ; ಡಿಕ್ಕಿ ಹೊಡೆ : ಎನ್ನ ತಲೆಯಲಿ ತನ್ನ ತಲೆ ಮೋಹಿ ನಸುನಗುವನು (ಬಸವ. ೯೬-೩೦). ೩. ಮುಷ್ಟಿಯಿಂದ ಹೊಡೆ; ಗುದ್ದು : ಮೊಗಕೆ ಮೋಹುತಲೆದೆಯಲೂಱುವ ವಿಗಡಬಲದಲಿ ಮಸಗಿ ಸೂಳಗರಿರದೆ ಕಾದಿದರು (ತಿಮ್ಮಅ. ೬-೯೮). ೪. ಎರಗು ; ಮೇಲೆ ಬೀಳು : ಕನಲಿದಡೆ ಕಲ್ಪಾಂತರುದ್ರನ ಮೊನೆಗೆ ಮೋಹುವ ಮೋಹಿ ದೇತಕನನು ನಿತಾಂತಭುಜಪ್ರತಾಪದಲಸುವನಸಬಡಿವ ಘನಪರಾಕ್ರಮ ಚಕ್ರಿಗಳ . . . ತೋಱುವರು (ತೊರಾ. ೪-೬-೦೭); ಒಂದು ಕಡೆಯೊಳಿಭತತಿ ಮೋಹಿ ಒಂದು ದಿಕ್ಕಿನೊಳತಿರಥರೊತ್ತಿ ಸಾಹಸದಿಂದವನಿದಿರಾಗಿ ಕವಿದರು (ತ್ರಿಪುರ. ೦೮-೩೪); ಸಂದಣಿಸಿ ನಾಯಕರ ದಳ ನಡೆಯೆ . . . ದಂತಿಗಳ ವೃಂದಗಳು ಮೋಹಿದುವು (ಕುರಂಗ. ೫೨-೨). ೫. ಚುಚ್ಚು ; ತಿವಿ : ರಜನಿಯೆಂಬ ಮದೋತ್ಕಟದ ದಿಗ್ಗಜದ ಕುಂಭಸ್ಥಳಕೆ ಮೋಹಿದ ವಿಜಿತ ಬಲಸಂಕುಶದ ತಲೆಮಾಣಿಕವಿದೆಂಬಂತೆ ಗಜಗಲಿಸಿತಿನಬಿಂಬ (ತೊರಾ. ೦-೦೪-೨). ೬. ಚುಚ್ಚಿಕೊಳ್ಳು ; ನಾಟಿಕೊಳ್ಳು : ಬೆನ್ನಲಿ ಮೋಹಿದಲಗಿನ ಹೇರುರದ ಕಂಪನದ ಕಂಗಱಿಯ . . . ಹಾಹೆಯಪೊಲೆಸೆದಿರ್ದನಾಹವ ರಂಗಮಧ್ಯದಲಿ (ತೊರಾ. ೪-೪-೩೨). ೭. (ಬಾಗಿಲು ಮುಂತಾದುವನ್ನು) ರಭಸದಿಂದ ಮುಚ್ಚು : ಬಾಗಿಲ ಕದವನುಱೆ ಮೋಹಿ ಬೀಯಗವಿಕ್ಕಿ ಅನಿಬರು ಗಹಗಹಿಸಿ ನಗುತ (ಬಸವ. ೪೩-೪೬). ೮. ಮೃದುವಾಗಿ ಒತ್ತು.— ಅದುಮು : ವೈದ್ಯನು ತನ್ನ ಎಡದ ಕೈಯಲ್ಲಿ ರೋಗಿಯ ಬಲದ ಕೈಯ ಹೆಬ್ಬೆಟ್ಟಿನ ಮೂಲದಲ್ಲಿ ಮೂರು ಬೆರಳನ್ನೂ ಅಂಕುಶಾಕಾರವಾಗಿ ಒತ್ತಿ ಹಿಡಿದು ಆ ಮೂರು ಬೆರಳ ತುದಿಗಳಿಂದ ಮೋಹಿ ನೋಡಲಾಗಿ ಸಣ್ಣನಾಗಿ ಆಡುವ ನಾಡಿಯು . . . ಮಧ್ಯಸ್ಥಿಗೆ ತಿಳಿವುದು (ಸಳವ. ೦೧). ೯. ಜೋಡಿಸು ; ಹೂಡು : ಶಿರದೊಳಾಂತರು ಮೊಚ್ಚಿಯುವನು . . . ಸುರಗಿಗಳನೀಡಾಡಿ ತಿರುಹಿದರೊರೆಗಳನು ಬತ್ತಳಿಕೆಯನು ಬಿಲುದಿರುವಿನಲಿ ಮೋಹಿದರು (ಕುಮಾರರಾ. ೮-೪೬). ೧೦. ವ್ಯೂಹವನ್ನು ರಚಿಸು : ವ್ಯೂಹರಚನೆ ಮಾಡು : ಗರುಡನಾಕಾರದಲಿ ಬಲವನು ಸರಿಸ ಮಿಗೆ ಮೋಹಿದನು (ಕುಮಾರರಾ. ೨-೨೦). ೧೧. ಇಡು ; ಇರಿಸು : ಈ ಹರಣವಿನ್ನೇಕೆನುತ ಕಾಳಾಹಿಯಾ ಬಾಯೊಳಗೆ ಕೈಯನು ಮೋಹಿ ವಿಷಮುಷ್ಟೀಗದಿನ್ನುಳಿದಳು ತನ್ನ ಕಾರೊಡಲ (ಸಾಳ್ವಭಾ. ೫-೫೬). ೧೨. ಬಳಿ ; ಲೇಪಿಸು : ಬಾಲಕರಲೇ ಖಡ್ಗಧಾರೆಯ ಮೇಲೆ ಮೋಹಿದ ಮಧುವ ಸವಿಯಲಿ ನಾಲಗೆಯಲಿವರೊಲ್ಲರೆಂದನು ನಗುತ ಕಲಿದ್ರೋಣ (ಕುಮಾರರಾ. ೦೮-೩೨). ೧೩. ಒಡ್ಡು ; ಚಾಚು ; ನೀಡು : ಬೀದಿಗಳೊಳಗೆ ಬರಬರೆ ಮುಂದೆ ಮೋಹಿದ ತಳಿಗೆ ದಂಬುಲ ವೀರಸೇಸೆಯ . . . ಮನ್ನಿಸಿಕೊಳುತ ಪಾಳೆಯದಿಂದ ಹೊಱವಂಟ (ಕುಮಾ.ಕ. ೦೯-೦೪). ೧೪. (ಗೌರವಸೂಚಕವಾಗಿ) ಬೀಸು; ಗಾಳಿಹಾಕು : ಸೀಗುರಿ ಮೊಗವ ಮೋಹಿಪವು . . . ಚೌರಿಗಳ ಡೊಂಕಣಿ ತುಱುಗಿದವು ಮೌಳಿಗಳ ಮಸ್ತಕದವರು ನೆಲನುಗ್ಗಡಿಸಲೈತಂದ (ಕುಮಾರರಾ. ೮-೫೫). ೧೫. ಆವರಿಸು ; ವ್ಯಾಪಿಸು : ಚಡ್ಡಣೆಯ ಚಪಳಕ್ರೋಧಶಿಖಿ ಮೋಹಿದುದು ಮೋಱೆಯಲಿ (ಕುಮಾ.ಕ. ೨೦-೯). 'ಮೋದು$_1$' ಪರಾ.

**ಮೋಹು$_2$** (ಕ್ರಿ). ೧. ಸಿಲುಕು ; ಒಳಗಾಗು : ಹಾಹ ಮಾನಿನಿಯೆನುತ ಭೀತಿಗೆ ಮೋಹಿ ಮೌಳಿಯನಣೆದು ಗೇಹದ ದೇಹಳಿಯಲಪ್ಪಳಿಸಿ ಬಿದ್ದನು ರಾಮ ಮೂರ್ಛೆಯಲಿ (ತೊರಾ. ೩-೦೦-೦೮). ೨. ಒಲಿ ; ಅನುಗ್ರಹಿಸು: ಬೇಹ ವರವನು ಬೇಡಿಕೊಳ್ಳೆನಲೆಱಗಿ ಕೈಮುಗಿದು ದೇಹಿಯೆಂದೆನು ನಾಗ ಪಾಶವ ಮೋಹಿ ಕೊಡು ಕೋದಂಡ ಕವಚವ ದ್ರೋಹಿಕಪಿಗಳ ಪಡೆಯ ಗೆಲಲಿನ್ನುಳಿದವರ ಬೇಡ (ಕೌಶಿರಾ. ೦೯-೩೮). [< ಮೋಹ$_1$ ?]

**ಮೋಹೋಪಮಿತ** (ನಾ). [ಕಾವ್ಯಮೀ] ಉಪಮಾಲಂಕಾರದ ಒಂದು ಪ್ರಭೇದ ; ಈ ಎರಡು ವಸ್ತುಗಳಲ್ಲಿರುವ ಹೋಲಿಕೆಯು ಒಂದು ಮತ್ತೊಂದೆಯೆ ಎಂಬ ಭ್ರಮೆಯನ್ನು ಉಂಟುಮಾಡುತ್ತದೆ ಎಂದು ವರ್ಣಿಸುವುದು : ಕಮಳವಿಮೋಹದಿನೀ ನಿನ್ನ ಮೊಗಕ್ಕೆಱಗುವುದು ತೊಱೆವುದಾ ಸರಸಿಜಮಂ ಭ್ರಮರಂ ವದನಮಿದಲ್ತೆಂದು ಮೋಹದಿಂದೆಂಬುದಿದುವೆ ಮೋಹೋಪಮಿತಂ (ಕವಿರಾ. ೩-೬೯). [ಸಂ.]

**ಮೋಳ$_1$** ' ಮಾಳ$_1$ ' ನೋ.

**ಮೋಳ$_2$** (ನಾ). (?) : ಅರಮನೆಯರ [ಮೊತ್ತವನೂ] ತಪ್ಪದೆ ತೆಱುವೆವು ಅರಮನೆಯಿಂದ ಬಾಣಧಾನ್ಯ ಯೆತ್ತು ತುಪ್ಪ ಸಬರ ಮಾಟ್ಟದಳ ಮೋಳ ಮುಂತಾದ ವೆಚ್ಚ ವಿರಾಡವನು ಕುಳ ಸರದಿಯಲಿ ತೆಱುವೆವೂ (ಸೌಇಇ. IX-ii, ೪೩೩-೫೦ : 1408). [ ? ]

**ಮೋಳಬೆಕ್ಕು** ' ಮಾಳಬೆಕ್ಕು ' ನೋ.

**ಮೋಳಿಗೆ** (ನಾ). ೧. ಸೌದೆಯ ಕಟ್ಟು : ಕಟ್ಟಿಗೆಯ ಹೊರೆ : ಅಷ್ಟಮದವೆಂಬ ಬಳ್ಳಿಯ ಸೀಳಿ ಪಳು ಕಟ್ಟಿನ ಮೋಳಿಗೆಯನೆ ಹೊತ್ತು ನಡೆದನಯ್ಯಾ (ಶಪ್ರವ. ೪. ೦೦೯–೨೬೬) : ಶಾಳಕಾಯ ಮೋಳಿಗೆಯೊಂದಂದದ ಮುರುಡ ನಪ್ಪವಕ್ರಂ (ಯಶೋಚ. ೨–೪೦) ; ಮಾರಯ್ಯ ಮನೆಗೆ ಬಂದು ಮೋಳಿಗೆಯನ್ನು ಬಾಗಿಲ ಮುಂದಿಳುಹಿದ (ಮೋಳಿಮಾ. ೭೦ ಶ್ರಸ್ತಾವನೆ). ೨. ಕಟ್ಟು ; ಹೊರೆ : ಪೂಗೊಂಚಲಂ ಮುಡಿದು ಮೋಳಿಗೆಗಳಂ ಬಿಗಿದು ತುಱುಗಿ ಕೇದಗೆಪೂವನವಱ ನಡುವಂ ಬಿಗಿದು . . . ಬಂದರತಿವೇಗದಿಂ (೦೬ರಾವ. ೦೦–೦೦) ; ಹಸಿಯ ಮುತ್ತುಗಳ ಮೂಡೆ ಮೋಳಿಗೆಯ ದಂತಂ ಕಯ್ಯ ಮೊಲ . . . ಹೆಬ್ಬುಲಿಯ ಬಂಡಿಗಳನೇಱಿದ ಕೋಣವೆರಸಿ ತಿರುಗಿದ ಬೇಡರಂ ಕಂಡು ಬೆಱಗಾದನು (ಸೋಮಚ. ೩–೦೮).

**ಮೋಳಿಗೆಯ ಕಾಯಕ** = ಕಟ್ಟಿಗೆಯ ಹೊರೆಗಳನ್ನು ಮಾರುವ ವೃತ್ತಿ ; ಸೌದೆಯ ಹೊರೆಯನ್ನು ಮಾರುವ ಕಾಯಕ : ಸತಿಪತಿಗಳೀರ್ವರು ಕಲ್ಯಾಣಕ್ಕೆ ಬಂದು ಮೋಳಿಗೆಯ ಕಾಯಕವಂ ಮಾಡಿಕೊಂಡು ಜಂಗಮಾರ್ಚನೆಯ ಮಾಡುತ್ತಿರೆ (ಶೂನ್ಯಸಂ. ೨೩೩–೦೨).

[< ಸಂ. ಮೌಲಿಕಾ./ಮರಾ. ಮೋಳೀ = ಕಟ್ಟಿಗೆಯ ಹೊರೆ ; ಮೋಳವಿಕ್ಯಾ, ಮೋಳಕ್ಯಾ = ಕಟ್ಟಿಗೆ ಮಾರುವವನು]

**ಮೋಳಿಡು** (ಕ್ರಿ). "ಉದ್ದಕ್ಕೆ ಒಂದೇ ಸಮನೆ ಕೂಗು" (ಮುಂಕಬ. ೪೦೮) : ಕತ್ತಲೆಯೊಳೇನನೋ ಕಂಡು ಬೆದರಿದ ನಾಯಿ . . . ಕತ್ತೆತ್ತಿ ಮೋಳಿಡುತ ಬೊಗಳಿ ಹಾರಾಡುವುದು (ಮುಂಕಬ. ೪೬೪). 'ಊಳಿಡು' ಪರಾ. [ ? + ಇಡು$_1$]

**ಮೋಳೆ$_1$** (ನಾ). ೧. ಬತ್ತದ ಗದ್ದೆಯ ಬದುವಿನಲ್ಲಿ ಅಥವಾ ಕೆರೆಯ ಒಡ್ಡುಗಳಲ್ಲಿ (ಏಡಿ ಮುಂತಾದುವುಗಳು) ಮಾಡುವ ತೂತು,–ರಂಧ್ರ,–ಸೀಳು : "ಬತ್ತದ ಗದ್ದೆಯಲ್ಲಿಯ ನೀರಿನ ಒಡಕು" (ಜಾನಕೋ. ೩೮) : ಮೋಳೆಯಿಂ ಕೆರೆ ಕೆಡುಗು ಆಳು ಇಲ್ಲದನ ಹೊಲ ಕೆಡುಗು (ಸರ್ವಜ್ಞ. ೦೯೩೩) ; ಕೆರೆಯು ತುಂಬುತ್ತದೆ ನೀರು ನಿಲ್ಲುವುದಿಲ್ಲ. ಮೋಳೆಯು ಗೊತ್ತಾಗುವುದಿಲ್ಲ (ಹುಬ್ಬಹ. ೦೮೮). ೨. ಹಳ್ಳ : ಎರಸುಂ ಮುತ್ತುಮೊಂದಿವಲ್ಲಿ ಪಡುವಲ್ ಮೂಗಿಯ್ಕರಲ್ ತೋಡಲೊಪ್ಪುರುಷಂ ಪೋಪುದು ಮೋಳೆಯಕ್ಕುಂ (ಅಬ್ಬಿಮ. ೦೦–೭). [ದೇ.॥ ತಮಿ. ಮೋಟ್ಟೈ]

**ಮೋಳೆ$_2$** ' ಮಾಳ$_2$ ' ನೋ.

**ಮೋಳೆಯೋಗು** (ಕ್ರಿ). ತೂತಾಗು ; ರಂಧ್ರವಾಗು : ಮೋಳೆಯೋಗುತ್ತಿರ್ದೊಡೇರಿ ಬಿರಿದಿರ್ದೊಡನುಕೂಲಬದ್ಧೋಪಲಂಗಳ್ ಸಡಿಲ್ದಿರ್ದೊಡೆ. . . ಅಂಭೋವಾಟಮಾ ಪ್ಪೆಸರಮುಮುದಕಸೂತ್ರಕ್ಕೆ ಹರಿಯಾದೊಡೆ (ಶಬ್ದರಾ. ೬–೪೦). [ಮೋಳೆ$_1$ + ಪೋಗು$_1$ (< ಪೋ$_1$)]

**ಮೋಱ್**. ಮೋರೆ (ನಾ). ೧. ಮುಖ ; ಆನನ : "ವದನಂ ಮುಖಂ . . . ಆಸ್ಯಂ ಮೋಱ್" (ಮಂಗರಾ. ೯೩–೮); ಕೊರಲಂ ಕುಸಿಯುತ್ತು ಮುತ್ತರಿಸಿದ ಕುದುರೆಯಂತೆ ಮೋಱಿಯುಂ ನೆಗಪುತ್ತುಂ (ರವಶಾಸ್ತ್ರ. ೩–೦೩೬) ; ಹಸ್ತಿನಪುರಿಗೆ ಧಾಳಿಯನಿಡುವೆನವುರರ ಮೋಱಿಗಳ ತಿವಿದು (ಕುವ್ಯಾಪಿ. ೦–೦೩). ಮೋರೆ : ೧. ಮುಹಿಳೆಯ ಸುತರೆಂದು ನಂಬುವನಾ ಮೋರೆಯನುಗುಳೋನ (ಶರಾವ. ೦೪–೬೦೪); ನರಿಯ ಮೋರೆಯ ನೋಡಿ ಪರಿತೋಷದಲಿ ನಡೆಯುತಿರೆ (ಸುರಾವು. ೨–೦೩) ; ತೆಂಗಿನಕಾಯ ತಿಳಿನೀರ ತಕೊಂಡು ಬಂಗಾರಮೋರೆ ತೊಳೆದೇನು (ಜಾಪಗೀ. ೨೦೪). ೨. ಸಮ್ಮುಖ; ಮುಂಭಾಗ ; ಇದಿರು : ಕೋತಿಯ ಮೋರೆಯುರಿ ನಿಲಲಂಜಿ ಮೋಸದಿ ಕೊಂದ ಭಟನೆಂದ (ತೊರೆಗಯು. ೨೨–೩೬).

**ಮೋರೆಗೆ ಮಂಗಳಾರತಿಯಾಗು** = ಮುಖಕ್ಕೆ ಮಂಗಳಾರತಿಯಾಗು; ಅವಮಾನವಾಗು; ಮುಖಭಂಗವಾಗು : ಹೀಗೆ ಮೋರೆಗೆ ಮಂಗಳಾರತಿಯಾಗಿ ಹಿಂದಿರುಗಿದ ತನ್ನ ಪರಿವಾರವನ್ನು ಕಂಡು (ಕೆಂಪುಹು. ೨೨೩).

**ಮೋರೆ ತಪ್ಪಿಸು** = ಮುಖ ತಪ್ಪಿಸು; ಮರೆಯಾಗು : ಅವರ ಮೋರೆ ತಪ್ಪಿಸಬೇಕೆಂದು ಮೌನವ್ರತವು ಚಡಪಡಿಸತೊಡಗಿತು (ಕವಕ. ೦೦೨).

**ಮೋರೆ ಮಾರುದ್ದವಾಗು** = (ಕೋಪ, ಬೇಸರ ಇತ್ಯಾದಿಗಳನ್ನು ಸೂಚಿಸಲು) ನೀಳಮುಖವಾಗು : 'ಅವನ ಮೋರೆ ಕೋಡಾಗಿದೆ ; ಅವನ ಮೋರೆ ಮಾರುದ್ದವಾಗಿದೆ' ಎಂಬ ಮಾತು ನಮ್ಮಿತ್ತಣ ಕನ್ನಡದಲ್ಲಿ ರೂಢವಾಗಿದೆ (ನಾಡೋಜ. ೪೫). **ಮೋಱಿಯಂ ಮುರಿ, ಮೋರೆಮುರಿ, ಮೋಱಿಯ ಮುರಿ** = ೧. ಮುಖವನ್ನು ತಿರುಗಿಸು,–ಹೊರಳಿಸು : ಒತ್ತರಿಸುತಂ ಮೋಱಿಯಂ ಮುರಿವುತ್ತ ನಕ್ಕುತ. . . ಚವುಡರಾಯನ ಹತ್ತಿರಕೆ ಬಂದೀಕ್ಷಿಸುತ (ಬಸಪು. ೩೨–೨೮). ೨. (ಬೇಸರ, ತಿರಸ್ಕಾರ ಇತ್ಯಾದಿಗಳನ್ನು ಸೂಚಿಸುವಂತೆ) ಮುಖವನ್ನು ಗಂಟುಹಾಕಿಕೊಳ್ಳು; ಮುಖವನ್ನು ಸಿಂಡರಿಸು : ಕಕ್ಕಿ ಮೋರೆಮುರಿದು ಉತ್ತರವಿತ್ತಳು (ಶ್ರೀಮಾತ್ರ. ೨೨). ೩. ಪರಾಙ್ಮುಖವಾಗು; ವಿಮುಖವಾಗು : ಗುರು ಪಿತಾಮಹರಿಂದ ಮೋಱಿಯ ಮುರಿದ ವಿಜಯವಧೂಕಟಾಕ್ಷವ ತಿರುಹಿ ಹಾಯ್ಕುವ ಗಂಡನಾವನು ನೀವು ತಪ್ಪಿಡಡೆ (ಕುವ್ಯಾಕ. ೩–೩೩).

[ದೇ.॥ ತಮಿ. ಮೋಱೈ, ಮೋರೈ; ಮಲ. ಮೋರ್; ತುಳು. ಮೋರೆ, ಮೋನೆ; ತೆಲು. ಮೋರ]

**ಮೌಂಜ** (ಗು). ಮುಂಜಹುಲ್ಲಿನಿಂದ ಮಾಡಿದ ; ನೊದೆಹುಲ್ಲಿನಿಂದ ತಯಾರಿಸಿದ. [ಸಂ.]

**ಮೌಂಜಿ** (ನಾ). ಮುಂಜಹುಲ್ಲಿನಿಂದ ಮಾಡಿದ ದಾರ,–ಹುರಿ ; P ಬ್ರಹ್ಮಚಾರಿಯು ಧರಿಸುವ ಮುಂಜಹುಲ್ಲಿನ ದಾರದ ಉಡಿದಾರ,–ಕಟಿಸೂತ್ರ : ಜಿನರೂಪಮಂ ಬಿಸುಟ್ಟು ಮೌಂಜಿವಲ್ಕಲಕೌಪೀನದಂಡಧರನಾಗಿ ಪರಿವ್ರಾಜಕವೇಷಮುಂ ಕೆಯ್ಕೊಂಡು (ಪೂರ್ವಪು. ೬–೧೦ ವ) ; ಪೋತಿನ ಗಂಟಲಂ ಬಿಗಿವಂತಿರ್ದ ಮೌಂಜಿಯಂ ಪಱಿದು ಬಿಸುಟು (ಬಸರ. ೨–೪೩) ; ಹಣೆಗೆ ಗೋಪೀಚಂದನವನ್ನಿಟ್ಟು ನಡುವಿಗೆ ಮೌಂಜಿಯನ್ನು ಕಟ್ಟಿ . . . ಶ್ರೀನಿವಾಸ ಶ್ರೋತ್ರಿ ಎಂಬ ತನ್ನ ಅಭಿಧಾನದೊಡನೆ ಪ್ರವರವನ್ನು ಹೇಳಿದ (ವಂಕವ್ಯ. ೩೨೦). [ಸಂ. ಮೌಂಜೀ]

**ಮೌಂಜೀಧಾರಣ** (ನಾ). ಮುಂಜದ ಹುರಿಯ ಕಟಿಸೂತ್ರವನ್ನು ಕಟ್ಟುವ ಸಂಸ್ಕಾರ ,– ವಿಧಿ : ಮುಹಿಳೆಯರಿಗೆ ಮೌಂಜೀಧಾರಣ ಮತ್ತು ಉಪನಯನಸಂಸ್ಕಾರಗಳು ನಡೆಯುತ್ತಿದ್ದುವು (ಕಾರಿವ. ೩೯೦). [ಸಂ.]

**ಮೌಂಜೀಬಂಧ** (ನಾ). = ಮೌಂಜೀಧಾರಣ : ವಟುವಿಗೆ ಮೌಂಜೀಬಂಧ, ಯಜ್ಞೋಪವೀತಧಾರಣ, ಬ್ರಹ್ಮೋಪದೇಶಗಳು ನಡೆದವು (ಶಾಂಕರಾ. ೩೬). [ಸಂ.]

**ಮೌಂಜೀಬಂಧನ** (ನಾ). = ಮೌಂಜೀಧಾರಣ : ಯಥಾವಿಧಿಯಾಗಿ ಅತಿ ವಿಜೃಂಭಣೆಯಿಂದ ಮೌಂಜೀಬಂಧನವನ್ನು ಮಾಡಿದನು (ಕೃವಸು. ೨೩೮); ದ್ವಿಜರ ಮುಖ್ಯಸಂಸ್ಕಾರವಾದ ಮೌಂಜೀಬಂಧನವೂ ಅವರಲ್ಲಿ ಶಾಸ್ತ್ರೋಕ್ತ ನಡೆದ ಹಾಗಾಯಿತು (ಮೂರವ. II, ೨೩). [ಸಂ.]

**ಮೌಕೂಫ್** ' ಮೋಕೂಫ್ ' ನೋ.

**ಮೌಕ್ತಿಕ** (ನಾ). ನವರತ್ನಗಳಲ್ಲಿ ಒಂದು ; ಮುಕ್ತಾಫಲ; ಮುತ್ತು : "ಮುಕ್ತಾ, ಮೌಕ್ತಿಕಂ, ಶೌಕ್ತಿಕೇಯಂ – ಈ ೩ ಮುತ್ತು" (ಹಲಾಯು. ೦೦೯–೪೦) : ಜಗವಿಂದು ಮೌಕ್ತಿಕದಿಂದಂ ತೆಗೆದುದೊ ದಂತದೊಳೆ ಸಮೆದುದೊ ಪಾಲ್ಗಡಲಿಂದೊಗೆದುದೊ ಪೇಟ್ಂಬಿನೆಗಂ ಸೊಗಯಿಸಿದುದು ಸಾಂದ್ರಚಂದ್ರಿಕಾವಿಸ್ತಾರಂ (ಕಾದಂಬ. ೦೪೩) ; ರತ್ನ ಮೌಕ್ತಿಕದಚ್ಚು ಕೂಡಲಸಂಗಮದೇವಾ ನಿಮ್ಮ ಶರಣರು (ಬಸವ. ೪೯೦) ; ಹಾರ ಹಱಿದುದು ಕರ್ಣಪೂರದ ಚಾರುಮೌಕ್ತಿಕನಿಕರ ಸಿಡಿದವು (ಕುವ್ಯಾಗ. ೭–೩೨).

[ಸಂ.]

**ಮೌಕ್ತಿಕಕ್ಷಾರ** (ನಾ). ಮುತ್ತಿನ ಬೂದಿ : ಮೌಕ್ತಿಕದ ಭಸ್ಮ (?) : ೨೦೦ ಭಾಗ ಸಿಂದೂರ ೧೦೦ ಭಾಗ ಮೌಕ್ತಿಕಕ್ಷಾರ (ಪುಂಪಚಾ. ೪-೩೯). [ಸಂ.]

**ಮೌಕ್ತಿಕಶಿಲಾಲಿಂಗ** (ನಾ). (ಮುತ್ತಿನ ಬಣ್ಣದ) ಚಂದ್ರಕಾಂತಶಿಲೆಯಿಂದ ನಿರ್ಮಿಸಿದ ಲಿಂಗ : ನಿರ್ಮಲದಿವ್ಯಮೌಕ್ತಿಕಶಿಲಾಲಿಂಗಂ ಚತುರ್ವರ್ಣಸುಂದರಮಲ್ಲಿರ್ದುದು ರತ್ನಪೀಠಘಟಿತಂ ದೇದೀಪ್ಯಮಾನಪ್ರದಂ (ಪ್ರಾದಂಪು. ೬೩೭). [ಸಂ.]

**ಮೌಖರ್ಯ** (ನಾ). ೧. ಬಹಳ ಮಾತನಾಡುವಿಕೆ ; ವಾಚಾಳತ್ವ. ೨. [ಜೈನ] ಐದು ಬಗೆಯ ಅನರ್ಥದಂಡವಿರತಿವ್ರತಾತಿಚಾರಗಳಲ್ಲಿ ಒಂದು : ಪುದಿದ ಸಮೀಕ್ಷ್ಯಾಧಿಕರಣಮುದಯಿಪ ಕಂದರ್ಪಮಂತೆ ಕೌತ್ಕುಚ್ಯಂ ಪೆರ್ಚಿದ ಮೌಖರ್ಯಮನರ್ಥ್ಯಕ್ಯದೊಳ್ ವ್ಯತಿಕ್ರಮಮತಿಪ್ರಸಾ[ಧ]ನ ಸಹಿತಂ (ಸುಕುಮಾ. ೬-೨೦) ; ಮೌಖರ್ಯ — ಧಾಷ್ಟ್ಯದಿಂ ಬಹು ವಕ್ರಪ್ರಲಾಪಮಂ ಮಾಟ್ಪ ಮೌಖರ್ಯಮುಂ (ಶಕ್ತ್ಯಶ್ರ. ೨೮೩). [ಸಂ.]

**ಮೌಖಿಕ** (ಗು). ಮಾತಿನ ; ವಾಚಿಕವಾದ : 'ಮೌಖಿಕಪರೀಕ್ಷೆ' ಪರಾ. [ಸಂ.]

**ಮೌಖಿಕಪರೀಕ್ಷೆ** (ನಾ). ಮಾತಿನ ಮೂಲಕ ನಡೆಸುವ ಪರೀಕ್ಷೆ ; ವಾಚಿಕಪರೀಕ್ಷೆ : ತೋಂಡಿಪರೀಕ್ಷೆ : ಬರೆಯತೊಡಗಿದರೆ ಶಬ್ದಗಳೇ ಹೊರಡವು — ಮೌಖಿಕಪರೀಕ್ಷೆಯಲ್ಲಿ ಪರೀಕ್ಷಕರೆದುರಿಗೆ ಬಾಯಿಯಿಂದ ಶ್ವಾಸ ಕೂಡಾ ಹೊರಡದಿರುವಂತೆ ! (ರೂಪಕಸಂ. ೪೦). [ಸಂ. ಮೌಖಿಕಪರೀಕ್ಷಾ]

**ಮೌಗ್ಧ್ಯ** (ನಾ). ೧. ಏನೂ ಅರಿಯದಿರುವಿಕೆ ; ಮುಗ್ಧತನ : ಶಬರಬಾಲಕಿಯರ್ ವಿಧುಬಿಂಬದಲ್ಲಿ ತಮ್ಮಾನನಮಂ ನಿರೀಕ್ಷಿಸಿ ಮದಾಂಬುಲಲಾಮಮನುಯ್ದು ಬಿಂಬಮಧ್ಯಾನನದಲ್ಲಿ ಬಿತ್ತರಿಸೆ ಮೌಗ್ಧ್ಯದೊಳಾಯ್ತು ತದಂಕಮೆಂಬೆಂ (ಶಂಪ್ರಶ. ೧೦-೩೨). ೨. ಲಾವಣ್ಯ ; ಸೊಬಗು. [ಸಂ.]

**ಮೌಜು** 'ಮೋಜು₂' ನೋ.

**ಮೌಜೆ, ಮವುಜೆ** (ನಾ). ಸಣ್ಣಹಳ್ಳಿ ; ಸಣ್ಣಗ್ರಾಮ ; ಕಸಬಾ : ನನ್ನ ಅಣ್ಣಂದಿರಾದ ಸದರಿ ರಾಘವೇಂದ್ರವಾಮನಬಿಂದಗೋಳ ಅವರೇ ನಮ್ಮ ಬಿಂದಗೋಳ ಮೌಜೆಯಲ್ಲಿ ಇರುವ ಏಕತ್ರಆಸ್ತಿಯ ವಹಿವಾಟು ಮಾಡುತ್ತ ಬಂದಿರುತ್ತಾರೆ (ಗಂಪಚಾಯ. ೨೦೦). **ಮವುಜೆ** : ಶ್ರೀಕೃಷ್ಣಾನಂದಸ್ವಾಮಿಗಳವರಿಗೆ ಮವುಜೆ ಮಜಕೂರಿನಲ್ಲೂ ಪ್ರಾಕುರೇಪೆ ಭೂಮಿವೃತ್ತಾರಯಿದ್ದದ್ದು . . . ಹಾಲಿಯಿನಾಮತ್ತಿಯಲ್ಲು ಜಾರಿಯಿರುವುದು (ಪ್ರಾಲಂ. ೧೯೩೪, ೩೨-೭; 1812). [←ಅರ. ಮೌರ್ಜಾ ; ಹಿಂ. ಮೌಜಾ ; ಮರಾ. ಮೌಜಾ, ಮೌಜೇ]

**ಮೌಢ್ಯ** (ನಾ). ದಡ್ಡತನ ; ಮೂಢತನ : ಅಹಿಮಕರಕುಲ ತನ್ನ ಮೌಢ್ಯದಿ ಬಹಳಶೋಕದಲಿರಲು (ಕೌಶಿಂ. ೦-೩೨); ಓದಿರುವಾತಗೆ ಮೌಢ್ಯ ಮೆಂಬುದಿಲ್ಲ (ಇಂಶಾಶ. ೬೦-೯೦); ತನ್ನ ಜಾಡ್ಯ ಮೌಢ್ಯ ದೊಳಗೆ ಸಾಧಿಸಿಹುದು —ಗೊತ್ತು ನನಗೆ (ಪಾಂಡೇ. ೪೦-೫). [ಸಂ.]

**ಮೌದ್ಗ** (ನಾ). ಹೆಸರುಕಾಳನ್ನು ಬೆಳೆಯುವ ಹೊಲ : ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗ[ಪಾಠಾಂ. ದ್ಯ] ಮಾಷ್ಯಂ ಶಾಲೇಯಂ ವ್ರೈಹೇಯಂ (ಶಂಪ್ರಶ. ೦-೯೦). [ಸಂ.]

**ಮೌದ್ಗೀನ** (ನಾ). = ಮೌದ್ಗ : "ಪೆಸರ ಕೆಯ್ ಮೌದ್ಗೀನಮೆಂಬುದು" (ಶಲಾಯು. ೨೭-೭); ಏನೆಸೆವುವೊ . . . ತೈಳೀನದ ಮಾಷೀಣದ ಮೌದ್ಗೀನದ ಬಹುಸಾರಸಸ್ಯಸಕಳಫಳಂಗಳ್ (ಪುಶ್ರಶ. ೨-೦೨). [ಸಂ.]

**ಮೌನ** (ನಾ). ೧. ಮಾತನಾಡದಿರುವಿಕೆ ; ಸುಮ್ಮನಿರುವುದು: ಮೌನಂ ಸರ್ವಾರ್ಥಸಾಧನಂ (ಗದಾಯು.೩-೫೬ ವ); ಮೌ[ಪಾಠಾಂ. ಮೋ]ನದಲುಂಬುದು ಆಚಾರವಲ್ಲ ಲಿಂಗಾರ್ಪಿತವ ಮಾಡಿದ ಬಳಿಕ ತುತ್ತಿಗೊಮ್ಮೆ ಶಿವಶರಣೆನ್ನುತ್ತಿರಬೇಕು (ಬಸವ. ೭೬೬); ಬಯಕೆಯೊಳು ಬಜಮುಮಂ ಮೌನದೊಳು ನುಡಿಯುಮಂ . . . ಬೈತಿಡುತೆ (ಶಿರುಶ. ದೀ. ೭-೯); ಮುಖಸರಸಿರುಹ ಜಾಡಿದವು ಮುಸುಕಿತು ಮೌನಮಯಜಲಧಿ (ಕುವ್ಯಾಸ. ೦೪-೫೦). ೨. ಮಾತನಾಡದೆ ಇರುವ ಸಮಯ : 'ಮೌನವ್ರತ' ಪರಾ. ೩. ಸದ್ದಿಲ್ಲದೆ ಇರುವುದು ; ನೀರವತೆ : ಸುತ್ತಲು ಮೌನ ! ಶ್ಮಶಾನ ಮೌನ ! (ಶಾಂಕಜ. ೬೬-೨೦). ೪. [ಕಾಮಶಾ] ವಿರಹದ ಹತ್ತು ಅವಸ್ಥೆಗಳಲ್ಲಿ ಒಂದು : ಅಭಿಲಾಷೆ ಚಿಂತೆ ಸ್ಮೃತಿ ವಿಧುಗುಣನುತಿ ಸಂತಾಪನ ಕ್ರಿಯಾದ್ವೇಷ ವಿಕಳ ಮೌನ ಮೂರ್ಛೆ ಮರಣವೆಂಬ ದಶಾವಸ್ಥಾದಿ ವಿಚಾರಪರರಿಂ (ಏವೇಶ. ೦೬೪). [ಸಂ.]

**ಮೌನಂಗೊಳ್, ಮೌನಗೊಳ್** (ಕ್ರಿ). ೧. ಮಾತನಾಡದಿರು ; ಸುಮ್ಮನಿರು : ಮಜುಮಾತುಗುಡಲಜಿಯದೆ ಧರ್ಮಪುತ್ರಂ ಮೌನಂಗೊಂಡುಸಿರದಿರೆ (ಶಂಶಭಾ. ೬-೨೪ ವ). **ಮೌನಗೊಳ್** : ೧. ಏನೂ ಅಱಿಯೆನೆಂದು ಮೌ[ಪಾಠಾಂ. ಮೋ]ನಗೊಂಡಿರಬೇಡ (ಬಸವ. ೧೬೬); ಬಂದಿಹ ಮಹಂತರು ಮೌನಗೊಂಡಿದ್ದಿಹರು (ಬಸಪು. ೩೭-೯). ೨. ಸದ್ದು ಮಾಡದಿರು : ಮೌನಗೊಂಡುವು ಭೇರಿನಿಸ್ಸಳವೇನ ಹೇಳುವೆ ದನುಜರುಬ್ಬಟೆ ಹಾನಿಯಾದುದು (ಕೌಶಿರಾ. ೨೦-೩೫). [ಮೌನ + ಕೊಳ್₁]

**ಮೌನಕಲಹ** (ನಾ). ಮಾತಿಲ್ಲದ ಜಗಳ ; ಮೌನವಾದ ಕಲಹ : ತಮ್ಮ ಈ ಕೆಲದಿನಗಳ ಮೌನಕಲಹವನ್ನು ಇಂದು ಬಗೆಹರಿಸಿಬಿಡಲೇಬೇಕು (ಇಶ್ವಶ. ೨೭೨). [ಸಂ.]

**ಮೌನಗೊಳ್** 'ಮೌನಂಗೊಳ್' ನೋ.

**ಮೌನಮುದ್ರೆ** (ನಾ). ಸುಮ್ಮನೆ ಇರುವುದು : ಏನು ಸಿದ್ಧಿಯಿದಕ್ಕೆ ಮೋಹಿದ ಮೌನಮುದ್ರೆಯ ಬಿಸುಟು ಹೇಳು (ಕುವ್ಯಾಶ. ೨೦-೨೭); ಇನ್ನು ನಮಗೆ ಗುಡಗಜ್ಜನ ಬಾಧೆ ತಟ್ಟದು ಎಂದು ಹೇಳಿ ಮೌನಮುದ್ರೆಯನ್ನು ತಾಳಿದರು (ಮುಪಸ. ೫೭). [ಸಂ. ಮೌನಮುದ್ರಾ]

**ಮೌನವಡು** (ಕ್ರಿ). ಮಾತನಾಡದಿರು; ಸುಮ್ಮನಿರು : ಗಾನವಿದ್ಯಾಲೋಲರಾದರು ನೀನೆ ಗುರು ಮೂಲೋಕಕೆನ್ನುತ ಮೌನವಟ್ಟುದು ಸರ್ವನೃಪಜನ (ಜಾಗಸ. ೦೨-೭೩). [ಮೌನ + ಪಡು₁]

**ಮೌನವ್ರತ** (ನಾ). ಮಾತನಾಡದೆ ಇರುವ ವ್ರತ; ಮೌನದ ಆಚರಣೆ : ಇತ್ತ ವೃಷಭನಾಥನುಂ ಮೌನವ್ರತದಿಂ ಯೋಗಯೋಗ್ಯಪ್ರದೇಶದೊಳು ಅವಹಿತಧ್ಯಾನನಾಗಿ ವಿಹಾರಿಸಿ (ಜಾವುಂಪು. ೪೦); ಮೌನವ್ರತಕ್ಕೆ ದೀಕ್ಷಿತರಾಗಿ ಮೌನರಂಗದಲಿ ಇಳಿದಿಹರು (ಪುಂಶ್ವಶಂ. ೪೯-೦೨). [ಸಂ.]

**ಮೌನಾಧ್ಯಯನವೃತ್ತಿ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು; ಉಪವಾಸಾನಂತರದ ಪಾರಣೆಯ ಸಮಯದಲ್ಲಿ ವಾಙ್ನಿಯಮವನ್ನು ತಾಳುವುದು ಹಾಗೂ ಶಾಸ್ತ್ರಾಭ್ಯಾಸವನ್ನು ಮೌನವಾಗಿ ಮಾಡುವುದು : ಮೌನಾಧ್ಯಯನವೃತ್ತಿಯುಂ ತೀರ್ಥಕರತ್ವಭಾವನೆಯುಂ . . . ಅಪ್ಪುಯ್ವತ್ತುಮೂಱುಗರ್ಭಾನ್ವಯಕ್ರಿಯೆಯೊಳು (ಜಾವುಂಪು. ೨೦೨). [ಸಂ.]

**ಮೌನಿ** (ನಾ). ೧. ಮಾತನಾಡದೆ ಸುಮ್ಮನಿರುವವನು : ಮೌನಿಯಾದನು ರಾಮ (ಶ್ರೀರಾಪಟಾ. ೦೫೯-೨೦೪); ಮೌನಿಯಾದವನಿಗೆ ಕಲಹವೆಂಬುವುದಿಲ್ಲ (ಇಂಶಾಶ. ೬೦-೯೦); ಹಾಗೆ ನೋಡಿದರೆ ರಾಯರು ದೊಡ್ಡ ಮೌನಿ ! (ಕಂಬಸು. ೧೨೦). ೨. ಮುನಿ ; ತಪಸ್ವಿ ; ಋಷಿ : ಮಾನಿಗಳು ಮೌನಿಗಳು ಸ್ವಚ್ಛ ಶಿವಾನುಭಾವೇಚ್ಛಾತ್ಮಸುಖಿಗಳು (ಬಸಪು. ೬-೧೭). [ಸಂ. ಮೌನಿನ್]

**ಮೌರಜಿಕ** (ನಾ). ಮದ್ದಲೆಯನ್ನು ಬಾರಿಸುವವನು : "ಮಾರ್ದಂಗಿಕಃ, ಮೌರಜಿಕಃ – ೨ ಮದ್ದಲೆ ಬಡಿಯುವವನ ಪೆಸರು, ಮದ್ದಳಿಗ" (ಸಿದ್ಧಾಂತ. ೩೦೦). [ಸಂ.]

**ಮೌರಜಿಗ** (ನಾ). = ಮೌರಜಿಕ : "ಮೌರಜಿಗ – ಮೌರಜಿಕ=ತಮಟೆ ಬಾರಿಸುವವ" (ಕರ್ನಾಕೋ. ೩೭) ; ಸುರಪುರದ ಮೌರಜಿಗನಾಮೆಡೆ ಕುರುಬಲದ

ಗಜಬಜದ ಗರುವನ ತೋರಿಸುತ ತೋಳನು ಕಲಿಪಾರ್ಥ (ಕುವ್ಯಾ.ಕ. ೨೦-೨೩).
[< ಸಂ. ಮೌರಜಿಕ]

**ಮೌರವಪಾಶ** (ನಾ). ಮುರು ಎಂಬ ಕಬ್ಬಿಣದಿಂದ ಮಾಡುವ ಒಂದು ಬಗೆಯ ಸರಪಣಿ.- ಸಂಕೋಲೆ : ಖಚರಕಿನ್ನರವಿದ್ಯಾಧರರಂ ಕಡುಬಿಂಡ ವಾಗೆ ಕತ್ತರಿಸಿ ಕೊಲ್ವ ಮೌರವಪಾಶಮಿರ್ಪುದು (ಜಗವಿ. ೧೦-೬೯ ವ); ನರಸೇನೆಗೆರೆದು ಲಂಕಾಪುರದ ಬಹಿರ್ಜಲಧಿ ದಾಂಟಲಿಂತಿದು ದೇವಾಸುರರ್ಗ ಮರಿದೆನಿಸಿ ನರಕನ ಪುರಮಂ ಬಳಸಿರ್ದುದೊಂದು ಮೌರವಪಾಶಂ (ಜಗವಿ. ೦೨-೩). [< ಸಂ. ಮೌರ್ವಪಾಶ]

**ಮೌರಿ₁**. ಮವುರಿ, ಮಹುರಿ, ಮಾವುರಿ, ಮುಹರಿ, ಮುಹುರಿ, ಮೊಹರಿ₁, ಮೋರಿ₁, ಮೋಹರಿ₁, ಮೌವರಿ (ನಾ). ಒಂದು ಬಗೆಯ ಊದುವ ವಾದ್ಯ : ವೇಣು ವೀಣೆ ಮೌರಿ ವಾದ್ಯಂಗಳಲ್ಲಿ ವಾಯು ಅಂಗುಲಿಯ ಭೇದದಿಂದ ರಚನೆಗಳ ತೋರುವಂತೆ (ಶೃಶೋಗ. ೪. ೩೦೩-೬೯) ; ಕುಂಬಿಡುವ ಕೊಂಬುಗಳ ರಣದಿತ್ತಿರಿಯ ಮೌರಿ ಹಲಹಲವು ರೀತಿರೀತಿಯ ಚಿನ್ನದಾ ತಂಬಟದ ನಾನಾವಿಧದ . . . ನಿಸ್ಸಾಳಕುಳವಳ್ಳಿಬಾಜಿಸುದು (ಸೋಮಚ. ೩-೯೩); ತಿತ್ತಿರಿ ಮೌರಿ ತಾಳ ದುಡಿಗೆ ಮದ್ದಲೆ ಉತ್ತಮದ ಶಂಖಶಿಪ್ಪುನಾದಗಳಿಂದ. . . ಕುಣಿಸುವರು (ಕುರಂದ. ೪-೦೭೬-೨).
**ಮವುರಿ** : (೬). **ಮಹುರಿ** : ಕೊಳಲು ಮಹುರಿ ರಣಮವುರಿ ದವಳಸಂಕ (ದೇವಾಂಕ. ೩-೨೦೦). **ಮಾವುರಿ** : ಬಾಯಿಂದೆ ಕೊಂಬು ಮಾವುರಿ ಕಹಳೆಗಳನೂದಿ ಬಾಯಿಂದೆ ಕರಡೆಯಂ ಬಾರಿಸುತೆ ಕೊಳಲೂದಿ (ಕನ್ನರ. ದೇ. ೦೩೯-೩). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪವಿರಬಹುದು. **ಮುಹರಿ** : ಮುಹರಿಯ ಮಧುರತೆಯುಳ್ಳ ಬೀಣೆಯ ಬಹುಲಿಕೆಯುಂ ಎಸೆಯೆ (ವರ್ಧಕ. ೯-೯೩ ವ). **ಮುಹುರಿ** : ವೇಣು ಮುಹುರಿಗಳಲ್ಲಿ ಮೂವತ್ತೆರಡುರಾಗಮಿತ್ರಂಗಳ ಅಜುವತ್ತುನಾಲ್ಕುಟಲ್ಲಿ ಕೂಡಿ ನುಡಿವುದು ಒಂದೋ ಎರಡೋ (ಪೋಲಾಪು. ೦೨೭-೯೯೩) ; ಮುಹುರಿಶೃಂಗವಂಶ ಕಹಳಾಶಂಖಪಾವವ್ರಭೃತಿಸುಷಿರವಾದ್ಯಚಯಮಂ . . . ತಾಳಾನುಗತವಾಗಿ ಬಾಜಿಸುತ್ತ ತತ್‌ಕುಶಲಗತಿಯಿಂ (ಶದ್ವಿಗಾ. ೩-೩೩); ಭೇರಿ ನಿಸ್ಸಾಳಗಳು ಮಾಣದತಿಸ್ವರಗಿಯ್ಯ ಮುಹುರಿ ವೀರಣವಾದ್ಯ ವಿದ್ವಜ್ಜನಾನಿಕರವು . . . ಎಸಕದಿಂ ರಾಜಿಸಲು (ಶೃಶುಕ. ೯-೩೩).
**ಮೊಹರಿ₁** : ಹೊನ್ನಿನ ಕಹಳೆಗಳಂ ಪೊಸರನ್ನದ ವಾಸಂಗಳಂ ಸುಶಂಖಂ ಗಳುಮಂ ಚೆನ್ನಿನ ಮೊಹರಿ[ಪಾಠಾಂ. ಮೌರಿ]ಗಳಂ ಸುರಚ್ಚೆಯರೊರ್ಮೊ ರ್ವರಿರೂದಿದರ್ ಕಡುನಲವಿಂ (ಶಾರಕ. ೭-೯೧) ; ಕಿವಿಗೆ ಇಂಪಾದ ಮೊಹರಿ ಶ್ರುತಿಗಳ ನಾದವೂ ಕೇಳಿ ಬಂತು (ಕೆಂಗಾಳ್ಕ. ೩೦೭). **ಮೋರಿ₁** : ಮದುವೆಯ ನಾಲ್ಕುದಿನ, ಮೋರಿ ಹಿಡಿದ ಕೊರಗನಿಗೇನೆ ಅವನ ವಾದ್ಯ ಕೇಳಿಸಿತೋ ಇಲ್ಲವೋ (ಮುಕಪು. ೨); ಶಿವಗುಡಿಯಲ್ಲಿ ಮೋರಿ ಬಾರಿಸುತ್ತಿದ್ದೆ (ಶದ್ವಿಸ. ೦೯೧). **ಮೋಹರಿ₁** : ಅಲರ್ದಿಂಡಿಗೆಜಗಿ ರ್ಘೋರಿಪಳಿ ಶಿಶುಗಳನ್ನೊಲೆವ ನೈದಿಲ ನಿಡಿದಂಟು ಜಲದೇವಿಯರಂಗಜವೀರವನೋದು ತೊಲೆವ ಮೋಹರಿಯಂತಾಯ್ತು (ಶ್ರೀವಾಾ. ೦೨-೨೩) ; ನೀರದಗಳಂತೆ ನಭದೊಳುಲಿದವಾಗ ಕಹಳೆಗಳು ಮೋಹರಿಗಳು (ಮಲ್ಲಾಂ. ೬-೩೬). **ಮೌವರಿ** : ಪಟಹ ಭೇರಿ . . . ಕಹಳೆ ಡಿಂಡಿಮರವದಿ ಸಂಘಟಿಸಿದುಜು ಚೀರಣದ ಬೊಂಬುಳಿ ಡೋಳು ಮೌವರಿಯ ಪಟುತರ ಧ್ವನಿ ತೀವಿದುದು ದಿಕ್ತಟಗಳನು (ಸನತ್ಕು. ೦೨-೬೪). [ ದೇ.॥ ತೆಲು. ಮೌರಿ, ಮವುರಿ ]

**ಮೌರಿ₂** (ನಾ). [ಸಂಗೀತ] ಒಂದು ರಾಗದ ಹೆಸರು : ಮೋದದಿಂದ ಗಾಯಕರು ಮೌರಿ ಪಾಡಲು (ಪಾಂಡೀ. ೧೦-೬). [< ಸಂ. ಮಾಹುರೀ]

**ಮೌರ್ಖ್ಯ** (ನಾ). ದಡ್ಡತನ ; ಅವಿವೇಕ ; ಮೂರ್ಖತನ : ಕ್ಷಿತಿಯೊಳೀ ದೇಹಿಗಳು ಪಶುಗಳಂದದಿ ತಿಳಿಯದತಿಶಯದ ಸುಖಗಳನು ಹಾರೈಪರನುದಿನದಿ ಮೌರ್ಖ್ಯದಿಂದೀ ಪುಸಿಯನು (ವೆಂಕಾರಾ. ೨-೯-೨೨). [ಸಂ.]

**ಮೌರ್ವ** (ಗು). ೧. ಮುರು ಎಂಬ ಕಬ್ಬಿಣದಿಂದ ಮಾಡಿದ. (ನಾ). ೨. ಕೆಂದುಬಣ್ಣದ ಕುದುರೆ : "ತುರಗವರ್ಣಂ . . . ಮಾಸರವಾಗೆ ಮೌರ್ವನಕ್ಕು" (ಮಂಗರಾ. ೬೦-೦೯). [ಸಂ.]

**ಮೌರ್ವಿ** (ನಾ). ಬಿಲ್ಲಿನ ಹೆದೆ ; ನಾರಿ ; ಸಿಂಜಿನಿ : "ಮೌರ್ವೀ, ಜ್ಯಾ, ಶಿಂಜಿನೀ, ಗುಣಃ, ಜೀವಾ—ಈ ೫ ಬಿಲ್ಲ ತಿರು" (ಹಲಾಯು. ೭೬-೨೦೦) ; ಲಲಿತಭ್ರೂಕಾರ್ಮುಕಂ ಕೇಕರರುಚಿ ನನೆಗೋಲ್ ಕುಂತಳಂ ಮೌರ್ವಿ ಮಂಜೀರಲಸದ್ಧ್ವಾನಂ ಧನುಃಪ್ರಂಕೃತಮೆನೆ . . . ಎಸೆಗುಂ ವಾರನಾರೀಕದಂಬಂ (ಜಗವಿ. ೨-೩೩) ; ಧನುವಿಗೆ ಮೌರ್ವಿಯ ತೊಡಿಸಿ ಗುಣಿಯನೆಚ್ಚ ಘನಮಹಿಮನಿಗೆ ಸೂಡೆಂದು ತನುಜೆಯ ಕೈಯಲಿ ಮಂದಾರಮಾಲೆಯ ಘನತರರಾಗದಿಂದಿತ್ತು (ಶಿವಂಶಾಂ. ೦೭-೪೩). [ಸಂ. ಮೌರ್ವೀ]

**ಮೌರ್ವೀನಾದ** (ನಾ). ಬಿಲ್ಲಿನ ಹೆದೆಯ ಠೇಂಕಾರ ; ಜ್ಯಾನಾದ : ಸಂಸ್ಫಾಳಿತೋದ್ವೃತ ಚಪಳಚಾಪಕರಾಳಮೌರ್ವೀನಾದಭೀಷಣನಾದನಾ ಭೀಮ (ಕುವ್ಯಾಕ. ೦೨-೦೩). [ಸಂ.]

**ಮೌಲ** (ಗು). ೧. ಬಹಳ ಹಿಂದಿನ ; ಪ್ರಾಚೀನವಾದ, ೨. ಮುಖ್ಯವಾದ ; ಮೂಲಭೂತವಾದ. (ನಾ). ೩. ಗೃಹ, ಕ್ಷೇತ್ರ ಮುಂತಾದುವುಗಳ ಹಿಂದಿನ ಸ್ಥಿತಿಗತಿಗಳನ್ನು ತಿಳಿದು ವಂಶಪರಂಪರೆಯಾಗಿ ಅಧಿಕಾರ ನಿರ್ವಹಿಸುವ ಮಂತ್ರಿ ಮೊದಲಾದ ರಾಜಸೇವಕ : ಮೌ[ಲ]ಭೃ[ತ್ಯ]ಸುಹೃತ್ ಶ್ರೇಣಿಮಿತ್ರಾಟವಿಕತಂತ್ರಂಗಳ್ ಪಣ್ಣಿದ ಜಂತ್ರಂಗಳಂತೆ ಕಟಕುಟುಮಾದುವು (ಶಂಶಕಾ. ೦೩-೨೦ ವ). [ಸಂ.]

**ಮೌಲಬಲ** (ನಾ). ಪ್ರಧಾನವಾದ ಸೈನ್ಯ ; ಮೂಲಬಲ : ನಿಜರೂಥ ವ್ಯಾಳಶುಂಡಾಲವುಂ ಬಳಸಿ ನಿಂದ ಮೌಲ[ಪಾಠಾಂ. ೪]ಬಲಮನರನೆಲೆಗೆ ನೂಂಕಲ್‌ವೇಟ್ಟು (ಚಂದ್ರಪು. ೧೦-೯೯ ವ). [ಸಂ.]

**ಮೌಲಿ**, **ಮೌಳಿ** (ನಾ). ೧. ತುದಿ ; ಶಿಖರ ; ಅಗ್ರಭಾಗ : ಫಣಿ ಗರುಡ ಗಜ ಮಕರ . . . ಚಿಹ್ನಂಗಳ್ ಯಥಾಕ್ರಮದಿಂ ತನ್ಮೌಲಿಗಳೊಳ ಪ್ಪುವು (ಶಶ್ಚಶೃ. ೧೮೭). ೨. ತಲೆ : 'ಚಂದ್ರಮೌಲಿ' ಪರಾ. ೩. ಕಿರೀಟ ; ಮಕುಟ : ಆ ಸತ್ಕೇಂದ್ರಚೋಳೇಂದ್ರಸತ್ತದಪದ್ಮಕ್ಕೆ ಮರಂದಮಂ ಪಡೆದು ಮೌಲಿದ್ಯೋತಿಯಿಂ ಪೊಳ್ಗದಂ (ಡಾಶಕ. ೪-೦೦೩). ೪. ಜಡೆ ; ಮುಡಿ. **ಮೌಳಿ** : ೨. "ಮುಂಡಃ, ಉತ್ತಮಾಂಗಃ, ಮಸ್ತಕಃ, ಮೌಳಿಃ, ಶಿರಃ, ಶೀರ್ಷಃ, ಮೂರ್ಧಾ, – ಈ ೮ ಮಂಡೆ" (ಹಲಾಯು. ೬೩-೩೬೩). ೩. "ಮೌಳಿಂ ನಲ್ ಮಕುಟ [ಪಾಠಾಂ. ಮುಕುರ, ಮಕುರ]" (ರಾಠಾ. ೭) ; ಮೋಟನ ಮೌಳಿ ಮೂಕೊಜಿತಿಯ ಶೃಂಗಾರ ಬೇಟ ಕುರುಡಂಗೆ ನಗೆಗೆಡೆಯಾಯಿತ್ತು (ಶಶಪ. ೩೩೦). ೫. (ಆಲಂ) ಮುಂದಾಳು ; ನಾಯಕ : ಒಲಗದೊಳರ್ದಖಿಳಮೂರ್ಖರ ಮೌಳಿಯನು ಕಂಡಪಥಿಸು ಸಿರಿಲೋಲು ಬಿಜಯಂಗೈಯಲವಸರವುಂಟೆ ಹೇಳೆನಲು (ಕುವ್ಯಾಕಾ. ೯-೨೭). ೬. ಮುಖದ ಸೌಂದರ್ಯ (?) : ಎಜದಲೋ ಸುರರಿಂಗೆ ಸತಿ ಕೈದೊಜದಲೋ ದನುಜರಿಗೆ ಮೌಳಿಯ ಬೆಜದಲೋ ಅಸುರರಿಗೆ ಸುರರಿಗೆ ಸುರದಲೋ ಸುಧೆಯ . . . ಎನೆ ಮುನಿನಿಕರ ಸಲಹಿದಳು ಸುರಕುಲವ (ಏಜಾಗ. ೬-೯-೩೨). [ಸಂ.]

**ಮೌಲಿಕ** (ಗು). ೧. ಮೂಲರೂಪದ ; ಮೂಲಭೂತವಾದ : ಗೀತಾ ರಹಸ್ಯದಲ್ಲಿ ವ್ಯಕ್ತವಾದ ಟಿಳಕರ ಮೌಲಿಕ (original) ವಿಚಾರಗಳನ್ನು ಸ್ಪಷ್ಟಪಡಿಸುವುದು ಕ್ರಮಪ್ರಾಪ್ತ (ರವೀಗಾ. ೦೯೯) ; ಅವು ಮೌಲಿಕ ಬಾಲಬೋಧಪದ್ಧತಿಯವಾಗಿದ್ದು ಗೀತೆಯ ತತ್ತ್ವಜ್ಞಾನ ಹೇಳುವಂಥವಾಗಿರುವುದನ್ನು ಕಂಡು ಮತ್ತೊಂದು ಬಗೆಯ ಕೌತುಕವೆನ್ನಿಸುವುದು (ಸ್ವಚಿತಿ. ೧). (ನಾ). ೨. ಪ್ರಾಚೀನವಾದುದು ; ಮೂಲಭೂತವಾದುದು. ೩. ಮುಖ್ಯವಾದುದು ; ಮಹತ್ವವಾದುದು : ಈ ಪುಸ್ತಕವು ಸ್ವತಂತ್ರವೆ ?

ಮೌಲಿಕವೆ ? (ಮೂಚಿರ. ೩) ; ಈ ಪಂಥದಲ್ಲಿ ಐವರ ಅಧಿಕಾರವು ಮೌಲಿಕವಾಗಿದೆ (ಮಸಾಹಿ. ೧೦) ; ಮೌಲಿಕವಾಗಿ ನೋಡಿದರೆ ಸಾಹಿತ್ಯವೆಂಬುದೂ ಒಂದು ಮೌಲ್ಯವೇ (ವಂಶವೃ. ೧೧. ಹಿಮ್ಮುಖ). ೪. ಒಂದು ಬಗೆಯ ತೆರಿಗೆ: ತ್ರಿಭೋಗಾಭ್ಯಂತರಮಷ್ಟಭೋಗತೇಜಃಸ್ವಾಮ್ಯಯುಕ್ತ (ಕ್ತಂ) ಶುಲ್ಕ ದಂಡ ಸಾದಕಾರುಕಕರಮೌಲಿಕಾರ್ಹಣಾದಿ ಸಕಲದ್ರವ್ಯಾಪಾರ್ಜನೋಪೇತಂ (ಎಇ. IV, ೨೬೬–೬೯ ; 1253). [ಸಂ.]

**ಮೌಲಿಕತೆ** (ನಾ). ಬಹಳ ಹಿಂದಿನಿಂದಲೂ ಉಳಿದುಬಂದಿರುವ ಗುಣ, – ಸ್ವಭಾವ : ಈಗ ಅವರ ಮೌಲಿಕತೆ ತಿಳಿದು ಬಂತು (ಸ್ವ.ತಿ. ೯೩).
[ ಸಂ. ಮೌಲಿಕತಾ ]

**ಮೌಲ್ಯ** (ನಾ). ೧. ಬೆಲೆ ; ದರ ; ಧಾರಣೆ : "ವೃತ್ತಿಕ್ಲಿಪ್ತಂ ಭೃತಿ ವೇತನಂ ಮೌಲ್ಯಮೆನೆ ಹೊತ್ತ ಬೆಲೆ" (ಪಂಗಣಾ. ೧೦೨–೨) ; ಎರಡು ತರ ಮೌಲ್ಯಂಗಳೆಲ್ಲಕಂ ಲೋಕದಲಿ ಪರಮಾರ್ಥಕೊಂದು, ಸಾಂಪ್ರತದರ್ಥಕೊಂದು (ಮುಂಕುಳ. ೬೬೩). ೨. ಉಪಯುಕ್ತವಾದುದು ; ಬೆಲೆಯುಳ್ಳುದು : ಅನಘರತ್ನಾಲ್ಯವಕ್ಷಯಮೌಲ್ಯ [ಪಾಠಾಂ. ಮೂಲ್ಯ]ವಭವ ಸ್ಥಾಲ್ಯವಹ ಕೈವಲ್ಯವೀ ನಿರ್ಮಾಲ್ಯ (ಸಸಕೃ. ೯೬–೬೬). ೩. ಜೀವನದಲ್ಲಿ ಬೆಲೆಯುಳ್ಳದ್ದೆಂದು ಭಾವಿಸುವ ಅಂಶ ; ಆದರ್ಶ : ಜೀವನದ ಮೂಲಭೂತಕ್ರಿಯೆಗಳ ಗುರಿಯಾಗಿ ನಿಂತು ಜೈವಿಕ ಚಟುವಟಿಕೆಗಳಿಗೆ ಮಾರ್ಗದರ್ಶನ ಮಾಡುವ ಆದರ್ಶಗಳಿಗೆ ಮೌಲ್ಯಗಳೆನ್ನಬಹುದು (ವಂಶವೃ. ೮ ಹಿಮ್ಮುಖ); ನವ್ಯಕಾವ್ಯದಲ್ಲಿ ಈ ವ್ಯಕ್ತ್ಯತೀತಮೌಲ್ಯಗಳಿಗೇ ಪ್ರಧಾನತೆಯುಂಟಾಗುವುದೆಂದು ತೋರುತ್ತದೆ (ನವ್ಯಕಾ. ೯೯). [ಸಂ.]

**ಮೌಲ್ಯಧನ** (ನಾ). ಒಂದು ವಸ್ತುವನ್ನು ಮಾರಿದಾಗ ಅದರ ಬೆಲೆಯಾಗಿ ಬರುವ ಹಣ ; ಬೆಲೆಯ ಹಣ : ಈ ಆಭರಣಂಗಳಂ . . . ಕ್ರಯಕ್ಕೆ ಹೊಂದಿಸಿ ಅದರ ಮೌಲ್ಯಧನವನ್ನು ನೀವೇ ಯಾಗಾರ್ಥವಾಗಿ ತೆಗೆದುಕೊಳ್ಳುವರಾಗಿ (ಮುದ್ರಾಮಂ. ೨೯೬). [ಸಂ.]

**ಮೌಲ್ಯನಿರ್ಣಯ** (ನಾ). ಯಾವುದಾದರೊಂದು ವಸ್ತು, ಕಲಾಕೃತಿ ಇತ್ಯಾದಿಗಳ ಬೆಲೆ ಅಥವಾ ಉಪಯುಕ್ತತೆಯನ್ನು ನಿಗದಿಪಡಿಸುವುದು, – ಗೊತ್ತುಮಾಡುವುದು : ಸಾಹಿತ್ಯದ ಮೌಲ್ಯನಿರ್ಣಯದ ಸಮಸ್ಯೆಯೊಡನೆ ಸ್ವತಃ ಸಂಬಂಧಿಸಿದಂತೆ, ಆಚರಣೆಯ ತತ್ತ್ವವೊಂದು ಪ್ರಾರಂಭದಲ್ಲಿ ನಮಗೆ ಇದ್ದೇ ಇದೆ (ಸಾಹಿತ್ಯ. ೩೦೬). [ಸಂ.]

**ಮೌಲ್ಯಮಾಪನ** (ನಾ). ಯಾವುದಾದರೊಂದು ವಸ್ತು, ಕಲಾಕೃತಿ, ಗ್ರಂಥ, ಲೇಖನ ಇತ್ಯಾದಿಗಳ ಬೆಲೆಯನ್ನು ಅಳೆಯುವಿಕೆ, – ಅರ್ಹತೆಯನ್ನು ಗುರುತಿಸುವಿಕೆ, – ಯೋಗ್ಯತೆಯನ್ನು ನಿರ್ಣಯಮಾಡುವಿಕೆ : ನರನಾರಿವೃಂದವು . . . ತಮ್ಮ ಆತ್ಮಪರಿತೋಷದಿಂದ ಪ್ರಯೋಗದ ಸಿದ್ಧಿಯ ಮೌಲ್ಯಮಾಪನವನ್ನು ಮಾಡಬೇಕು (ಕ್ರಾಂರಂ. ೩೪) ; ಸಾಹಿತ್ಯದ ಮೌಲ್ಯಮಾಪನವನ್ನು . . . ವಿವೇಚಿಸುವುದು ನಮಗೀಗ ಉಳಿದಿದೆ (ಸಾಹಿತ್ಯ. ೨೯೬). [ಸಂ.]

**ಮೌಲ್ವಿ** (ನಾ). ಮುಸಲ್ಮಾನರ ಧರ್ಮಗುರು : ಅವನ ಬೋಧನೆಯನ್ನನುಸರಿಸಿ ಮೌಲ್ವಿಗಳೂ ಉಲಮಾಗಳೂ ದೇಶದೇಶಗಳಿಗೂ ಹೋಗಿ . . . ಗ್ರಂಥರಚನೆ ಮಾಡಿ (ಕೃಗಂಶಿ. ೦೬೩) ; ಅಲ್ಲಿಯ ಮೌಲ್ವಿಯೇ ಅವನಿಗೆ ಒಂದು ಕಂಬಳಿಯನ್ನು ಕೊಟ್ಟಿದ್ದರು (ದೂರಕ. ೦೨೮) ; ದೊಡ್ಡ ದೊಡ್ಡ ಅಧಿಕಾರಿಗಳೂ, ಮೌಲ್ವಿಗಳೂ . . . ರಾಜಾಗಮನಕ್ಕೆ ಪೂರ್ವಭಾವಿಯಾಗಿ ಸಿದ್ಧರಾಗಿ ಕಾದಿದ್ದರು (ಕಶಂ. ೩೯೦).
[ ←ಅರ. ಮವ್‌ಲ್ವೀ; ಪಾರ. ಮರಾ. ಹಿಂ. ಮೌಲವೀ ]

**ಮೌವರಿ** ' ಮೌರಿ₁ ' ನೋ.

**ಮೌಸಿ** ' ಮಾವಸಿ ' ನೋ.

**ಮೌಸೂಫ** (ಗು). ೧. ಮೇಲೆ ಹೇಳಿದ ; ಹಿಂದೆ ಹೇಳಿರುವ. (ನಾ). ೨. (ಹಿಂದೆ) ಸೂಚಿಸಲಾದ ವ್ಯಕ್ತಿ : ನಿಮ್ಮ ಋಣಾನುಬಂಧ ಪೂರ್ವದಿಂದ ಸರಿಯಾಗಿ ನಡೆದು ಬರುತಿರಲಿಕ್ಕೆ ನಿಮ್ಮಿಂದಾ ಇಂಥಾದ್ದು ಬರಲಿಕ್ಕೆ ಇಲ್ಲ, ಸಾಹೇಬ ಮೌಸೂಫರಿಗೆ ಬಿಟ್ಟು ಕಳುಹಿಸುವಂತೆ ಮಾಡಬೇಕು (ಐಪ್ರಪಾ. ೬೮). [← ಅರ. ಮವ್‌ಸೂಫ್; ಹಿಂ. ಮೌಸೂಫ್; ಮರಾ. ಮೌಸುಫ್, ಮೌಸೂಫ್]

**ಮೌಹಳಿಗ** (ನಾ). ಒಂದು ಬಗೆಯ ಕುದುರೆ : ಜನ್ನನಂ ನೀಲನನಳಗನಂ ತನ್ನ ಕತ್ತಳ ಮೌಹಳಿಗನಂ ತನ್ನಿ . . . ವಾಹಕರಿರಾ ನೀವು (ಚಕೃ. ೬೦–೪೦).
[ ? ]

**ಮೌಹೂರ್ತ** (ನಾ). ಮುಹೂರ್ತಜ್ಞಾನವನ್ನು ಬಲ್ಲವನು; ಜೋಯಿಸ: "ಸಾಂವತ್ಸರಃ . . . ಮೌಹೂರ್ತಃ, ಜ್ಞಾನಿನ್, ಕಾರ್ತಾಂತಿಕಃ – ರ ಜ್ಯೋತಿಷ್ಯನ ಹೆಸರುಗಳು, ಜೋಯಿಸನು" (ಸಿದ್ಧಾಂತಿ. ೨೩೮). [ಸಂ.]

**ಮೌಹೂರ್ತಿಕ** (ಗು). ೧. ಕ್ಷಣಿಕವಾದ ; ಕ್ಷಣದ. ೨. ಮುಹೂರ್ತಕ್ಕೆ ಸಂಬಂಧಿಸಿದ, – ಸೇರಿದ. (ನಾ). ೩. = ಮೌಹೂರ್ತ : "ಸಾಂವತ್ಸರಃ, ಜ್ಯೋತಿಷಿಕಃ, ಜ್ಞಾನೀ, ಮೌಹೂರ್ತಿಕಃ . . . ಗಣಕಃ – ಈ ೮ ಜೋಯಿಸಿಗಂ" (ಕಠಾಭು. ೬೬–೨೯೯); ಆತ್ಮೀಯಪುತ್ರೀವಿವಾಹೋತ್ಸವಕ್ಕೆ ಮೌಹೂರ್ತಿಕರಂ ಕರೆದು ದಿವಸಮಂ ಬೆಸಗೊಳ್ವುದುಂ (ಶಬ್ದಪು. ೯–೩೦ ವ) ; ನೆಚ್ಚಿಯೆ ಕಯ್ಗೆಯ್ದು ವಧೂವರರಂ ಮೌಹೂರ್ತಿಕ ನಿರೂಪಿತ ಶುಭಮುಹೂರ್ತದೊಳ್ . . . ಪಾಣಿಗ್ರಹಣಾಂಗೆಯ್ಸಿದಾಗಳ್ (ಸಂಕುಮಾ. ೧೦–೧೦೦ ವ). [ಸಂ.]

**ಮೌಳಿ** ' ಮೌಲಿ ' ನೋ.

**ಮೌಳಿಕಾಱ** (ನಾ). (ಅಲಂ) ನಾಯಕ; ಮುಖಂಡ: ' ಮೌಳಿಕಾಱತನ ' ಪರಾ. [ಮೌಳಿ (=ಮೌಲಿ) + – ಕಾಱ]

**ಮೌಳಿಕಾಱತನ** (ನಾ). (ಅಲಂ) ನಾಯಕನಾಗಿರುವಿಕೆ ; ಮುಖಂಡನಾಗಿರುವಿಕೆ : ಮೌಳಿಕಾಱತನದಿಂದೊಮ್ಮೊಮ್ಮೆ ತನ್ನ ಭುಜಾದಂಡಮಂ ತಿರುಗಿ ನೋಡುತುಂ (ಸಂಶಿ. ೪–೯೬). [ಮೌಳಿಕಾಱ + – ತನ] .

**ಮೌಳಿಮಣಿ** (ನಾ). ಕಿರೀಟದ ರತ್ನ ; ಮಕುಟ ಮಣಿ : ಪೃಥಿತಪೃಥಿವೀಪಾಲೌಘಾನಮ್ರಮೌಳಿಮಣಿ ಪ್ರಭಾಗ್ರಥಿತಪದಪೀಠಾಗ್ರಂ ಕೇಯೂರವಂ ತಳೆವಂದದಿಂ ಪೃಥುಳಭುಜದಿಂ ಪೃಥ್ವೀಶಂ ತಾಳ್ದಿದಂ ನೆಲನೆಲ್ಲಮಂ (ಕಾದಂಪೂ. ೦೬) ; ಯಾದವಮಹೀಭುಜಮೌಳಿಮಣಿಬ್ರಜಪ್ರಭಾಲಿಂಗಿತಪಾದಪೀಠಂ (ಶಾಇ. XX, ೯೬–೬ ; 1074) ; ಓಲಗಿಸುವುದು ಮಿತ್ರರಾಯರ ಮೌಳಿಮಣಿ ಪಾಂಡುವಿನ ಚರಣನಖಾಳಿಯನು ಸೆಣಸುವ ಮಹೇಶ್ವರ ಮೌಳಿಮಣಿಕಿರಣ ಓಲಗಿಸಿತು ಪ್ರಣಯದಮರೀ ಬಾಲೆಯರ ಪದನಖವನು (ಕುಮಾರ. ೪–೬). [ಸಂ. ಮೌಲಿಮಣಿ]

**ಮ್ಯಾಚು** (ನಾ). ೧. ಸರಿಹೊಂದುವುದು ; ಜೋಡಿ : ಇದಕ್ಕೆ ಮ್ಯಾಚು ಆಗೋ ಬ್ಲೌಸುಪೀಸು ತಂದುಕೊಡಿ (ಅಪ್ಪಾಕ. ೬೦). ೨. (ಆಟಗಾರರು) ಪರಸ್ಪರ ಪ್ರತಿಸ್ಪರ್ಧಿಗಳಾಗಿ ನಿಂತು ಆಡುವ ಆಟ ; ಪಂದ್ಯ : ಅಂದು ಅವರ ಶಾಲೆಯಲ್ಲಿ ಹಾಕಿ 'ಹಾಕಿ' ಮ್ಯಾಚು ಬೇರೆ ಇತ್ತಂತೆ (ಕಂದುಬಿ. ೦೩) ; ಅದು ಹೋಗಲಿ ಬಿಡು, ಮ್ಯಾಚನಲ್ಲಿ ಏನಾಯಿತು ? (ಪುಹಾಗ. ೦೬). [←ಇಂ. Match]

**ಮ್ಯಾಜಿಸ್ಟ್ರೇಟ್** (ನಾ). ರಾಜ್ಯಸಂಸ್ಥೆಯ ಶಾಖೆಯ ದಂಡಾಧಿಕಾರಿ : ನ್ಯಾಯಾಧಿಪತಿ ; ನ್ಯಾಯಾಧಿಕಾರಿ : ಪೋಲಿಸ್ ಮತ್ತು ಮ್ಯಾಜಿಸ್ಟ್ರೇಟ್ ಅದಾಲತಗಳು (ಗ್ರಾಮೂ. ೯೩) ; ನಿಮ್ಮ ರೆಸಿಡೆಂಟ್ ಮ್ಯಾಜಿಸ್ಟ್ರೇಟರು ಕೂಡ (ಪುತ್ರಿಕೆ. ೬೭). [←ಇಂ. Magistrate]

**ಮ್ಯಾಣ** ' ಮಯಣ ' ನೋ.

**ಮ್ಯಾಣಗಪ್ಪಟ** ' ಮೇಣಗಪ್ಪಡ ' ನೋ.

**ಮ್ಯಾನಾ** ' ಮೇನಾ ' ನೋ.

**ಮ್ಯಾನೇಜರಿಕೆ** (ನಾ). ವ್ಯವಸ್ಥಾಪಕನ ಅಧಿಕಾರ, -ಹುದ್ದೆ : ಅವನ ಮ್ಯಾನೇಜರಿಕೆಯನ್ನು ನೋಡಿ ನನಗೂ ಆಶ್ಚರ್ಯವೆನ್ನಿಸಿತು (ರಂಗರೂ. ೦೯೬). [ಮ್ಯಾನೇಜರು + -ಇಕೆ]

**ಮ್ಯಾನೇಜರು** (ನಾ). (ವ್ಯಾಪಾರ, ಸಂಸ್ಥೆ ಮೊದಲಾದವುಗಳ) ಕಾರ್ಯನಿರ್ವಾಹಕ ; ವ್ಯವಸ್ಥಾಪಕ : ಅವನಿಗೆ ಬುದ್ಧಿ ಹೇಳಬಾರದೆ ಎಂದೆ. ಮ್ಯಾನೇಜರವರು ಒಳಕ್ಕೆ ಧಾವಿಸಿದರು (ನಾಡಿಗೇ. ೨೦೦). [←ಇಂ. Manager]

**ಮ್ಯುಜಿಯಂ** 'ಮ್ಯೂಸಿಯಂ' ನೋ.

**ಮ್ಯುಝಿಯಮ್ಮು** 'ಮ್ಯೂಸಿಯಂ' ನೋ.

**ಮ್ಯೂಸಿಯಂ**, ಮ್ಯುಜಿಯಂ, ಮ್ಯುಝಿಯಮ್ಮು (ನಾ). ಪುರಾತನ ಅವಶೇಷಗಳನ್ನು ಸಂಗ್ರಹಿಸಿ ಪ್ರದರ್ಶಿಸುವ ಮಂದಿರ ; ವಸ್ತು ಸಂಗ್ರಹಾಲಯ : ವಸ್ತುಸಂಗ್ರಹಾಲಯಗಳು (ಮ್ಯೂಸಿಯಂ) ಜನತೆಯ ಶಿಕ್ಷಣಕ್ಕೆ ನೆರವಾಗುತ್ತವೆ (ಶಿಕ್ಷದ. ೫೮). **ಮ್ಯುಜಿಯಂ :** ಅಲ್ಲಿಯೇ ಸಮೀಪದಲ್ಲಿದ್ದ . . . 'ಮ್ಯುಜಿಯಮ್' ಬಳಿ ಬಂದ (ಎಡಹ. ೭೮). **ಮ್ಯುಝಿಯಮ್ಮು :** ವಿಜಾಪುರ ಮ್ಯುಝಿಯಮ್ಮಿನಲ್ಲಿರುವ ವಿಕ್ರಮನ ಕಾಲದ ಒಂದು ಮಹಾಶಾಸನವನ್ನೋದಿ (ಸಾಹಿಸಂ. ೭). [← ಇಂ. Museum]

**ಮ್ರಿತ್ಯು** 'ಮೃತ್ಯು' ನೋ.

**ಮ್ಲಾನ** (ಗು). ೧. ಮುದುಡಿದ ; ಬಾಡಿದ ; ಮಸುಕಾದ : ಮ್ಲಾನ ಮುಖಚಂದ್ರಂ ನರೇಂದ್ರನವಳೆಡೆಗೋಡಿದನ್ (ಶ್ರೀರಾಪಟ್ಟಾ. ೭೭-೭೭೨). ೨. ದಣಿದ ; ಬಳಲಿದ ; ಜಡವಾದ : ಮ್ಲಾನ, ಶೂನ್ಯ . . . ಖುಜು ದಿಗಂತದಿ ಗಗನಕೆದುರು ನಿಂತಿದೆ ತರು (ಅರಳೀ. ೦೪-೦). ೩. ದುಃಖ ದಿಂದ ಕೂಡಿದ ; ಜುಗುಪ್ಸೆಗೊಂಡ. ೪. ಕೊಳಕಾದ : ಹೊಲಸಾದ ; ಮಾಸಿದ. ೫. ಕಪ್ಪಾದ ; ಕಪ್ಪುಬಣ್ಣದಿಂದ ಕೂಡಿದ. (ನಾ). ೬. ಬಾಡಿದುದು ; ಕಳೆಗುಂದಿದುದು : ವಿರಹಪರವಶಾಂಗಂ ತ್ಯಕ್ತ ಜಾಯಾನುಷಂಗಂ . . . ದರವಿಚಳದಪಾಂಗಂ ಮ್ಲಾನಮಾಯ್ತಾ ರಥಾಂಗಂ (ಚಂದ್ರಚ. ೬-೫). ೭. ಕೊಳಕಾದುದು ; ಮಾಸಿದುದು ; ಮಲಿನವಾದುದು : "ಕಿಲ್ಬಿಷಂ, ಮಲಿನಂ, ಮ್ಲಾನಂ, ಮಲೀಮಸಂ— ಈ ೪ ಮಾಸಿದುದು" (ಕರಾಯು. ೦೨೦-೯೨). ೮. ಹೀನವಾದುದು ; ಕೀಳಾದುದು : ಅವರ ಸಾಹಸ ಎಷ್ಟು ಮ್ಲಾನವಾದ್ದು (ಶಿವಂಧ. 1, ೭೦). [ಸಂ.]

**ಮ್ಲಾನತೆ** (ನಾ). ೧. ಕಾಂತಿಹೀನತೆ : ಮಾನವಕನ್ಯೆಯಂ ಬಯಸಿ ನಂದನ ನಿನ್ನ ಮನಕ್ಕೆ ಚಿಂತೆಯಂ ಮ್ಲಾನತೆಯಂ ಮುಖಕ್ಕೆ ತರವೇಟ್ಟುದೆ (ಶಂರಾಪಟ್ಟಾ. ೯-೯೮). ೨. ದಣಿವು; ಬಳಲಿಕೆ : ಮಾಸ್ಲೆನಿಕೋವನ ಮುಖ ಚರ್ಯೆಯಲ್ಲಿ ನಿರುತ್ಸಾಹ ಮ್ಲಾನತೆಗಳು ತಲೆದೋರಿದುವು (ಪುನರು. ೨೫೦). ೩. ದುಃಖ : ಒರೆದುಂ ಬಿದಿ ನಿಜಜನ್ಮಾಕರಮೆನಿಸಿದ ಪದ್ಮಜಾತಿಗಂ ಮ್ಲಾನತೆಯಂ ದೊರೆಕೊಳಿಸಿದನೆನೆ ಮಿತ್ರತರರೊಳಾದಂ ಮಾಟ್ಟ ಕೃಪೆ ವಿಪುಷ್ಪವಂದಲ್ತೇ (ಚಂದ್ರಚ. ೮-೦೯). [ಸಂ. ಮ್ಲಾನತಾ]

**ಮ್ಲಾನೆ** (ನಾ). ಕಳೆಗುಂದಿದವಳು ; ಸೊರಗಿದವಳು : ಕುಡಿ ಮುರುಟಿ ಸೊರಗುವಾ ಲತೆಯಂತಿರೆ ಮ್ಲಾನೆಯುಂ . . . ಕೌಸಲ್ಯೆಯುಂ ಕಂಡನ್ (ಶ್ರೀರಾಪಟ್ಟಾ. ೦೦೫-೦೦೬). [ಸಂ. ಮ್ಲಾನಾ]

**ಮ್ಲೇಂಛ** (ನಾ). ಸುಸಂಸ್ಕೃತನಲ್ಲದವನು ; ಅನಾಗರಿಕ ; ಅನಾರ್ಯ ದೇಶದವನು ; ಯವನ : "ಮ್ಲೇಂಛ-ಮ್ಲೇಚ್ಛ, ಕಿರಾತ, ಅನಾರ್ಯ" (ಕಥೆಕೋ. ೬೭); ರಾಧಕ್ಕನು. . . ಈ ಮ್ಲೇಂಛನ ಮನೆಯಲ್ಲಿ ವಾಸವಾಗಿದ್ದಳು (ಶಿಯಂತ. ೯೬೭) ; ಸಾಲ್ವದೊರೆ ಒಬ್ಬ ಮ್ಲೇಂಛ ಎಂದಿದೆಯೇ ಹೊರತು, ರಾಕ್ಷಸ ಎಂದಿಲ್ಲ (ಸ್ವಕೃಹೊ. ೩೦೦). [< ಸಂ. ಮ್ಲೇಚ್ಛ]

**ಮ್ಲೇಂಛಖಂಡ** (ನಾ). ಐವತ್ತಾರು ದೇಶಗಳಲ್ಲಿ ಒಂದು; ಅನಾರ್ಯರು ವಾಸಿಸುತ್ತಿದ್ದ ದೇಶ ; ಯವನದೇಶ : ದಕ್ಷಿಣಭರತದ ನರರಂ ವಿದ್ಯಾಧರರನಡಿಗೆಜಗಿಸಿ ಬಟಿಯಂ ಮ್ಲೇಂಛಖಂಡಮಂ ಬಾಯ್ಕೇಳಿಸಿ ಚಕ್ರ ಪೂಜೆಗೆಯ್ದು (ಅಜಪು. ೯-೩೯ ವ). [< ಸಂ. ಮ್ಲೇಚ್ಛಖಂಡ]

**ಮ್ಲೇಚ್ಛ** (ನಾ). ೧. = ಮ್ಲೇಂಛಖಂಡ : ಮತ್ತಮಾ ಭಾರತವರ್ಷ ದಲ್ಲಿಯೇ ಅಂಗ. . . ಮ್ಲೇಚ್ಛ [ಪಾಠಾಂ. ಮ್ಲೇಂಛ] ದ್ರಾವಿಡ ಕರ್ನಾಟಕ ಮೆಂಬೈವತ್ತಾಱು ದೇಶಂಗಳಕ್ಕುಂ (ವಿವೇಕ. ೦೯೫). ೨. ಅನಾರ್ಯ ದೇಶದವನು; ಯವನ : ಮ್ಲೇಚ್ಛರೆಂದರೆ ನಿಮಗೆ ಬಹಳ ಅಸಹ್ಯ (ಭಾರತಿ. ೩೯). ೩. ಕೆಟ್ಟವನು; ನೀಚ : ಪೆಱಶೇನೆಂದು ಪೊಗಟಲಱಿಯಂ ಮ್ಲೇಚ್ಛಂ (ಜನಾರ. ೭). ೪. ಕೀಳುಜಾತಿಯವನು : "ಕಿರಾತಃ, ಶಬರಃ, ಮ್ಲೇಚ್ಛಃ – . . . ಈ ೮ ಬೇಡಮೊದಲಾಗುಳ್ಳಂತ್ಯಜಾತಿಗಳ್" (ಕರಾಯು. ೯೩-೯೯೫); ಆ ಪಕ್ಕಿಯಂ ಕ್ರೂರರುಂ ಮ್ಲೇಚ್ಛರುಮಪ್ಪ ಬೇಡರ್ ಕೊಂದು ಪೋದರ್ (ಶಂಕಶಂ. ೦೨೦-೦೦). [ಸಂ.]

**ಮ್ಲೇಚ್ಛಖಂಡ** (ನಾ). = ಮ್ಲೇಂಛಖಂಡ : ತೆಱೆವ ತೆಱನಿಂತುಟೆಂತೀ ತೆಱದಿಂದೆ ತಮಿಸ್ರಗುಹೆಯ ವಜ್ರದ ಪಡಿಯಂ ತೆಱೆದದಱ ಬೆಂಕೆ ಪೋಪಿನ ಮೆಱಗಿನು ನೀಂ ಮ್ಲೇಚ್ಛಖಂಡಮಂ ಪಡುವಣದಂ (ಆದಿಪು. ೦೩-೩೩); ಮೂಡಣ ಮ್ಲೇಚ್ಛಖಂಡಮಂ ದಂಡನಾಯಕಂ ಬಾಯ್ಕೇಳಿಸಿ (ಶಾಂತಿಪು. ೦೦-೭೭ ವ). [ಸಂ.]

**ಮ್ಲೇಚ್ಛದೇಶ** (ನಾ). = ಮ್ಲೇಂಛಖಂಡ : "ಮ್ಲೇಚ್ಛದೇಶಃ. . . ಭಾರತವರುಷದ ತುದಿಯಲ್ಲಿರುವ ಕಾಮರೂಪಾದಿ ದೇಶದ ಹೆಸರು. ಅಂದರೆ ಅರಬ್ಬಿಸ್ತಾನ್. . . ಮುಂತಾದ ಸಮುದ್ರ ಬೆಟ್ಟ ಇವುಗಳ ಹೊರಗಿನ ದೇಶಗಳು" (ಸಿದ್ಧಾಂತಿ. ೯೪). [ಸಂ.]

**ಮ್ಲೇಚ್ಛಭಾಷೆ** (ನಾ). ಮ್ಲೇಚ್ಛದೇಶದವರ ಭಾಷೆ ; ಅನಾರ್ಯರ ಭಾಷೆ. [ಸಂ. ಮ್ಲೇಚ್ಛಭಾಷಾ]

**ಮ್ಲೇಚ್ಛಮುಖ** (ನಾ). ಕೆಂಪುಬಣ್ಣದ ಒಂದು ಬಗೆಯ ಲೋಹ : ತಾಮ್ರ : "ತಾಮ್ರಕಂ, ಶುಲ್ಬಂ, ಮ್ಲೇಚ್ಛಮುಖಂ . . . ತಾಮ್ರದ ಹೆಸರುಗಳು" (ಸಿದ್ಧಾಂತಿ. ೩೦೯). [ಸಂ.]

**ಮ್ಲೇಚ್ಛರಾಜ** (ನಾ). ಅನಾರ್ಯದೇಶದ ರಾಜ; ವಿದೇಶದ ರಾಜ; ಯವನ ರಾಜ : ವಸ್ತುವಾಹನಪುರಸ್ಸರಂ ಮ್ಲೇಚ್ಛರಾಜರಂ ಲಲಾಟ ಘೃಷ್ಟಭೂತಳರಂ ಮಾಡಿ (ಆದಿಪು. ೧೩-೪೦ ವ); ಮೂಡಣ ಮ್ಲೇಚ್ಛಖಂಡಮಂ ದಂಡನಾಯಕಂ ಬಾಯ್ಕೇಳಿಸಿ ತಂದಾ ಮ್ಲೇಚ್ಛರಾಜರಂ ಕಾಣಿಸಿಯುಂ. (ಶಾಂತಿಪು. ೦೦-೭೭ ವ). [ಸಂ. ಮ್ಲೇಚ್ಛರಾಜನ್]

*

# ಯ



**ಯ** (ನಾ). ೧. ಕನ್ನಡವರ್ಣಮಾಲೆಯಲ್ಲಿ ನಲವತ್ತಾರನೆಯ ಅಕ್ಷರ. ೨. [ಛಂದ] ಅಕ್ಷರಗಣಗಳಲ್ಲಿ ಒಂದು ; ಆದಿಯಲ್ಲಿ ಒಂದು ಲಘು, ಮುಂದೆ ಎರಡು ಗುರುಗಳಿರುವ ಗಣ ; ಯಗಣ ( – –) : "ಮಯರಸತಜಭನಂ ಲಗವೆನಿಪ್ಪಕ್ಷರಂ ಗಣಾಕ್ಷರಂಗಳಕ್ಕುಂ" (ಛಂಗಣ. ೦೦೭-೦೯). ೩. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : "ನಿರುತದಿಂ ಕಟಪಯಮೆನಲ್ಕೊಂದು" (ಛಂಗಣ. ೦೦೯-೧೦).

**ಯಂತರ** 'ಜಂತ್ರ' ನೋ.

**ಯಂತೃ** (ಗು). ೧. ನಿಗ್ರಹಿಸುವ ; ನಿಯಂತ್ರಿಸುವ. ೨. ನಡೆಸಿಕೊಂಡು ಹೋಗುವ ; ಮಾರ್ಗದರ್ಶಕವಾದ. (ನಾ). ೩. ನಿಯಂತ್ರಿಸುವವನು ; ನಿಯಾಮಕ. ೪. ಬಂಡಿಹೊಡೆಯುವವನು ; ಸಾರಥಿ : "ರಥಚೋದಕನಕ್ಕುಂ ಸಾರಥಿ ಸೂತಂ ಕ್ಷತ್ತೃ ಯಂತೃ ಸವ್ಯೇಷ್ಟ[ಕನುಂ]" (ಶಶ. ಕೋ. ೬೭-೫೦). ೫. ಆನೆಸವಾರಿ ಮಾಡುವವನು ; ಆನೆಸವಾರ. [ಸಂ.]

**ಯಂತ್ರ** (ನಾ). ೧. ಏನನ್ನಾದರೂ ಕಟ್ಟುವ, ಹಿಡಿಯುವ ಹಾಗೂ ನಿಯಂತ್ರಿಸುವ ಸಾಧನ, – ಉಪಕರಣ : 'ಯಂತ್ರಪ್ರಯೋಗ' ಪರಾ. ೨. (ಗಾಲಿ, ಕೀಲುಗಳ ಜೋಡಣೆಯಿಂದ) ಕೆಲಸ ಮಾಡಲು ಸಹಾಯಕವಾಗುವ ಉಪಕರಣ,—ಸಾಧನ; ಇಂಜಿನ್ನು : ಉಗಿಯಿಂದ . . . ಯಂತ್ರಗಳು ನಡೆಯುತ್ತವೆ (ಮುಂಬಯ ೯೯-೯೯). ೩. ತಾಂತ್ರಿಕಪೂಜೆಗಾಗಿ, ಕೆಲವು ಮಂತ್ರಾಕ್ಷರಗಳೊಂದಿಗೆ ಸಾಮಾನ್ಯವಾಗಿ ತಾಮ್ರದ ತಗಡಿನ ಮೇಲೆ ಬರೆದಿಡುವ ಆಕೃತಿ ; ಶ್ರೀಚಕ್ರ : ಯಂತ್ರಂಗಳುಮಮಿತಮಹಾಮಂತ್ರಂಗಳುಮನುಪಮಾನೆ ಮೆನಿಸಿದ ಪಲವುಂ ತಂತ್ರಗಳುಮೇಂ ಕಾವುವೆ ಸಂತ್ರಾಸಕರೋಗ್ರ ಮೃತ್ಯು ರಾಜನ ಬರವಂ (ಜೀವಸಂ. ೫೦-೩) : ಯಂತ್ರದ ತಾಯಿತಿಗಳಂ ಮಡಗಿ (ಸೌಗಂಧಿ. ೧೬೬-೦೦) : 'ಚಿತಿ' ಎಂದರೆ ಯಜ್ಞವೇದಿಕೆ ಕುಂಡ. ಇವು ಅನುಭಾವಪೂರ್ಣವಾದ ರೇಖಾಕೃತಿಗಳಿಂದ ರಚಿತವಾಗಿ ಕ್ರಮೇಣ ಚಕ್ರ, ಯಂತ್ರ ಎಂಬ ರೂಪಗಳಾದುವು (ಸೌಂದರ. ೦೨೦). ೪. ರೋಗ ನಿವಾರಣೆ ಅಥವಾ ಭೂತಪಿಶಾಚಿಗಳ ಬಾಧೆ, ಅಂಜಿಕೆ ಮುಂತಾದುವುಗಳ ಪರಿಹಾರಕ್ಕೆಂದು ಕಟ್ಟುವ ತಾಯಿತಿ : ತುರುಕರ ಗಾಳಿ ಹಿಡಿದದೆ ನಿನಗೆ. ಭಾರಿ ಯಂತ್ರವ ಕಟ್ಟಿಸಲುಬೇಕು (ಹೆಗ್ಗಡ. ೯೨).

ಯಂತ್ರಕಟ್ಟು = ತಾಯಿತಿಯನ್ನು ಕಟ್ಟು : ಬಾಲಗ್ರಹವೆಂದು ಮಗುವಿಗೆ ಯಂತ್ರಕಟ್ಟಿದ್ದಾರೆ (ರೂಢಿ). [ಸಂ.]

**ಯಂತ್ರಕರ್ಮಿ** (ನಾ). ಯಂತ್ರದಿಂದ ಕೆಲಸಮಾಡುವವನು ; ಯಂತ್ರದ ಕೆಲಸ ಬಲ್ಲವನು ; ಯಂತ್ರಕಾರ : "ಯಂತ್ರಶಿಲ್ಪಿ, ಯಂತ್ರಕರ್ಮಿ, ಯಂತ್ರಿಗ" (Mechanic. ೩೦೪೩). [ಸಂ. ಯಂತ್ರಕರ್ಮಿನ್]

**ಯಂತ್ರಕಲೆ** (ನಾ). ಯಂತ್ರಗಳನ್ನು ನಡೆಸುವ ವಿದ್ಯೆ, – ಜಾಣ್ಮೆ : (+). [ಸಂ. ಯಂತ್ರಕಲಾ]

**ಯಂತ್ರಕಾರ** (ನಾ). = ಯಂತ್ರಕರ್ಮಿ : ಆಯುಧಂಗಳಂ ಧರಿಸಿದ ವಡ್ಡರು ಯಂತ್ರಕಾರರು . . . ಗಾರೆಕೆಲಸದವರು ವೃಕ್ಷಗಳಂ ಕಡಿಯುವರು ಭಾವಿಗಳಂ ತೆಗೆಯುವರು (ಸೌಗಂಧಿ. ೦೫೩-೦೩). [ಸಂ.]

**ಯಂತ್ರಚಾಲಕ** (ನಾ). ಯಂತ್ರನಡಸುವವನು : ಯಂತ್ರಚಾಲಕನು ಯಂತ್ರದ ಕೈಮಣೆಯ ಮುಂದೆ ಕುಳಿತು ಬೇಕಾದ ಅಕ್ಷರದ ಗುಂಡಿಯನ್ನು ಬೆರಳಿನಿಂದ ತುಸು ಒತ್ತುವನು (ಮುದ್ರಣ. ೯೯). [ಸಂ.]



**ಯಂತ್ರಚಾಲಿತ** (ನಾ). ಯಂತ್ರದಿಂದ ನಡೆಯುವಂತಹುದು ; ಯಂತ್ರ ಸಹಾಯದಿಂದ ಕೆಲಸಮಾಡುವಂತಹುದು : ಯಂತ್ರಚಾಲಿತವಾದ ಕೈಗಾರಿಕೆಗಳಲ್ಲಿ ಹೇಗೆ ದೊಡ್ಡ ಪ್ರಮಾಣದಲ್ಲಿ ಕಾರ್ಯವ್ಯವಸ್ಥೆ ಮಾಡಬಹುದೋ ಹಾಗೆ ಮಾಡಲು ಸಾಧ್ಯವಾಗದು (ಹಣಕ್ರ. ೦೩೩). [ಸಂ.]

**ಯಂತ್ರಣ** (ನಾ). ಹತೋಟಿ ; ಅಂಕೆ ; ನಿಗ್ರಹ. [ಸಂ.]

**ಯಂತ್ರಧಾರಾಗಾರ** (ನಾ). ನೀರನ್ನು ಮಳೆಯಂತೆ ಧಾರಾಕಾರವಾಗಿ ಸಿಂಪಡಿಸುವ ಯಂತ್ರವನ್ನು ಅಳವಡಿಸಿದ ಸ್ನಾನಗೃಹ : ಸುಖದ ದೋಣಿ ಸುಖದ ದೀರ್ಘಿಕೆ ಸುಖದ ಕೊಳಂ ಸುಖದ ಯಂತ್ರಧಾರಾಗಾರಂ (ಶ್ರೀಕಠಾ. ೬೭). [ಸಂ.]

**ಯಂತ್ರಧಾರಾಗೃಹ** (ನಾ). = ಯಂತ್ರಧಾರಾಗಾರ : ಮತ್ತಮಾ ರಾಜಭವನಂ . . . ಅನಿಯಂತ್ರ ಯಂತ್ರಧಾರಾಗೃಹಂಗಳಿಂ ಸವರ್ಷಾಸಮಯದಂತೆಯುಂ . . . ಎಸೆವುದು (ಚಂದ್ರಪ್ರ. ೦೦-೭೯ ವ). [ಸಂ.]

**ಯಂತ್ರನಾಗರಿಕತೆ** (ನಾ). ಮಾನವಶಕ್ತಿಯನ್ನು ಬಿಟ್ಟು ಯಂತ್ರಗಳಿಗೆ ಪ್ರಾಧಾನ್ಯನೀಡುವ ವಿಧಾನದ ನಾಗರಿಕಜೀವನ : ಯಂತ್ರನಾಗರಿಕತೆಯ ವಿಜ್ಞಾನಬುದ್ಧಿ ತಾನಲ್ಲಿ ಪಡೆದಿತ್ತು ಪರಮಸಿದ್ಧಿ (ಕೋಗಿಲೆ. ೨-೨೯). [ಸಂ. ಯಂತ್ರನಾಗರಿಕತಾ]

**ಯಂತ್ರಪ್ರಯೋಗ** (ನಾ). ಯಂತ್ರಗಳನ್ನು ನಡೆಸುವಿಕೆ : ಸ್ಮರಮಂತ್ರಂ ಬಹುಭಾಷಾಪರಿಚಿತಿ ಯಂತ್ರಪ್ರಯೋಗಮುಖಿಲವ್ಯೂಹೋತ್ಕರಮೆಂಬಿನಿತ ಜಿಸೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪದ. ೯-೩೦). 'ಚೌಷಷ್ಟಿಕಲೆ' ಪರಾ. [ಸಂ.]

**ಯಂತ್ರಮುಕ್ತ** (ನಾ). ಯಾಂತ್ರಿಕಸಾಧನದ ಸಹಾಯದಿಂದ ಪ್ರಯೋಗಿಸುವ ಬಿಲ್ಲು ಮೊದಲಾದ ಆಯುಧ, –ಅಸ್ತ್ರ: "ಆ ಕಯ್ದುಮುಕ್ತಾಮುಕ್ತಂ, ಅಮುಕ್ತಂ, ಕರಮುಕ್ತಂ, ಯಂತ್ರಮುಕ್ತಮೆಂ(ದು)ಬುದು ನಾಲ್ಕು ತೆಱನಕ್ಕುಂ . . . ಅಂಬು ಮೊದಲಾದುದು ಯಂತ್ರಮುಕ್ತಮೆಂಬುದು" (ಚಾಮುಂ. ೭೬-೫೦೯) ; ಅಗ್ನಿಪುರಾಣವು ಆಯುಧಗಳನ್ನು ಅಸ್ತ್ರ ಮತ್ತು ಶಸ್ತ್ರಗಳೆಂದು ಎರಡುಭಾಗಗಳಾಗಿ ವಿಂಗಡಿಸುತ್ತದೆ. ಇವುಗಳಲ್ಲಿ ಮೊದಲನೆಯದನ್ನು (೧) ಯಂತ್ರಮುಕ್ತ, (೨) ಪಾಣಿಮುಕ್ತ, (೩) ಮಂತ್ರಮುಕ್ತ, (೪) ಮುಕ್ತಸಂಧಾರಿತ (ಬಿಟ್ಟು ಹಿಂದಕ್ಕೆ ಪಡೆದದ್ದು) ಎಂದು ನಾಲ್ಕಾಗಿ ವಿಭಾಗಿಸುತ್ತದೆ (ಕಶಾಂ. ೨೭೨). [ಸಂ.]

**ಯಂತ್ರಯುಗ** (ನಾ). ಯಂತ್ರನಾಗರಿಕತೆಯ ಅಭಿವೃದ್ಧಿಯ ಕಾಲ ; ಇಂಗ್ಲೆಂಡಿನಲ್ಲಿ Industrial revolution ಎಂಬ ಹೆಸರಿನ ಕ್ರಾಂತಿ ನಡೆದ ಕಾಲದ ಪರಿಣಾಮವಾಗಿ ಈ ಶಬ್ದ ಪ್ರಯೋಗವಾಗುತ್ತಿದೆ : ಹದಿನೆಂಟನೆಯ ಶತಮಾನದಲ್ಲಿ ಯೂರೋಪಿನಲ್ಲಿ . . . ಯಂತ್ರಯುಗವು ಹುಟ್ಟಿ ಸಕಲಆರ್ಥಿಕಉದ್ಯೋಗಗಳೂ ಯಂತ್ರೋಪಕರಣಗಳ ದ್ವಾರಾ ನಡೆಯಲಾರಂಭಿಸಿತು (ಭಾರದ. ೫೩೭). [ಸಂ.]

**ಯಂತ್ರವಾಹಕ** (ನಾ). ೧. ಯಂತ್ರವನ್ನು ನಡೆಸುವವನು ; ಯಂತ್ರ ಚಾಲಕ. ೨. (ಆಲಂ) ಸೂತ್ರಧಾರ : ನೆಲದ ಬೊಂಬೆಯ ಮಾಡಿ ಜಲದ ಬಣ್ಣವನುಡಿಸಿ . . . ಆಡಿಸುವ ಯಂತ್ರವಾಹಕನಾರೋ (ಅಶಕು. ೩-೦೬) ; ಯಂತ್ರವಾಹಕ ನೀನೆ ಒಳಗಿದ್ದು ಎನ್ನ ಸ್ವತಂತ್ರನೆಂದೆನಿಸಿ ಕೊಲಿಸುವರೆ

ಹೇಳೊ (ಪುರಂವ. ೨-೯೯-೩) ; ಚಿಂತೆ ಮಾಡಿದರೆಯೆನ್ನಾಣೆ ತಾಯೆ ಯಂತ್ರವಾಹಕ ಶಿವನಾಣೆ (ಚಿಕಸಾಂ. ೬-೯೭). [ಸಂ.]

**ಯಂತ್ರಶಾಸ್ತ್ರ** (ನಾ). ೧. ಯಂತ್ರಗಳ ರಚನೆ, ಕಾರ್ಯ ಮೊದಲಾದುವುಗಳನ್ನು ವಿವರಿಸುವ ಶಾಸ್ತ್ರ : ಯಂತ್ರಶಾಸ್ತ್ರದ (Theoretical Mechanics) ಪ್ರತಿಪಾದಕರಲ್ಲಿ ಮೊದಲಿಗನು ಆರ್ಕೈಟಸ್ (ಶಿಲ್ಪಶಾ. ೯೭). ೨. (ಹವನ, ಹೋಮಾದಿ ಕರ್ಮಗಳಿಗಾಗಿ) ಶ್ರೀಚಕ್ರ ಮುಂತಾದ ಯಂತ್ರಗಳನ್ನು ರಚಿಸುವ ಶಾಸ್ತ್ರ : ಯಂತ್ರಶಾಸ್ತ್ರಜಾಲಲೋಲರಾಗಮಜ್ಞರಲ್ಲಸತ್ತಂತ್ರಸಾರಸಾರ್ವಭೌಮರ್ . . . ಮಂತ್ರಶೂರರೊಪ್ಪಿದರ್ ತದೀಯ ಯಾಗಶಾಲೆಯೊಳ್ (ಉದ್ಭಟ. ೪-೩೨). [ಸಂ.]

**ಯಂತ್ರಶಿಲ್ಪ** (ನಾ). ಯಂತ್ರಗಳನ್ನು ರಚಿಸುವಿಕೆ : "ಯಂತ್ರಶಿಲ್ಪಿತನ. ಯಂತ್ರಶಿಲ್ಪ" (Engineering. ಇಂಕಂ). [ಸಂ.]

**ಯಂತ್ರಶಿಲ್ಪಜ್ಞ** (ನಾ). ಯಂತ್ರಗಳನ್ನು ರಚಿಸುವವನು ; ಯಂತ್ರಶಿಲ್ಪವನ್ನು ಬಲ್ಲವನು ; ಎಂಜಿನಿಯರು : ಅನೇಕ ಪೋರ್ಚುಗೀಸ್ ಯಂತ್ರಶಿಲ್ಪಜ್ಞರಿಗೆ ಉದ್ಯೋಗಗಳನ್ನು ಕಲ್ಪಿಸಿ, ಅವರ ಸಹಾಯದಿಂದ ಭವ್ಯವಾದ ದೇವಸ್ಥಾನಗಳನ್ನೂ ಕಟ್ಟಡಗಳನ್ನೂ ನಿರ್ಮಿಸಿದನು (ಕೃದೇವ. ೦೯). [ಸಂ.]

**ಯಂತ್ರಶಿಲ್ಪಿ** (ನಾ). ೧. =ಯಂತ್ರಶಿಲ್ಪಜ್ಞ : "ಎಂಜಿನ್ನುಗಳನ್ನು ರಚಿಸುವವನು : ಯಂತ್ರಶಿಲ್ಪಿ" (Engineer. ಇಂಕಂ); ಯಂತ್ರಶಿಲ್ಪಿಯು ಉದ್ದೇಶಿಸಿದ ಎಂಜಿನ್ ಕೆಲಸ ಮಾಡಬೇಕು (ಶಿಲ್ಪಶಾ. ೯೦). ೨. ಯಂತ್ರವನ್ನು ನಡೆಸುವವನು : ಯಂತ್ರಚಾಲಕ : "ಯಂತ್ರಮಾಡುವವನು : ಯಂತ್ರಶಿಲ್ಪಿ ; ಯಂತ್ರ ನಡಸುವವನು" (Machinist. ಇಂಕಂ). [ಸಂ. ಯಂತ್ರಶಿಲ್ಪಿನ್]

**ಯಂತ್ರಾಗಾರ** (ನಾ). ಯಂತ್ರವಿರುವ ಸ್ಥಳ ; ಕಾರ್ಖಾನೆ : ಈ ಕಡೆ ಬನ್ನಿರಿ ಕಾವಲುಗಾರ ಬಿಡುವನು ಒಳಗಡೆ ಯಂತ್ರಾಗಾರ (ಕಪಕ. ೯-೦೦೯). [ಸಂ.]

**ಯಂತ್ರಾಪೀಡೆ** (ನಾ). ಸೆಳವು ರೋಗ ; ಎಳವು : ನೆಲಗುಮ್ಮುಡಿಬೇರ್ತಂದು ಒಣಗಿಸಿ ಚೂರ್ಣವ ಮಾಡಿ ವಸ್ತ್ರಗಾಳಿತ ಮಾಡಿ . . . ಅಡಿಗೆ ಮಾಡಿಕೊಡುವುದು. ಯಂತ್ರಾಪೀಡೆ ಮಾಣ್ಗುಂ (ಅಶ್ವವೈ. ೦೭೦). [ಸಂ. ಯಂತ್ರಾಪೀಡ]

**ಯಂತ್ರೋದ್ಧರಣ** (ನಾ). ಯಂತ್ರವನ್ನು ಬರೆಯುವುದು ; ಯಂತ್ರರಚನೆ : ಅಲ್ಲಿಂ ಪೊರಗೆ ಹ್ರೀಂಕಾರದಿಂ ತ್ರಿಧಾವೇಷ್ಟನಂ ಮಾಳ್ಪುದು ಇದು ಯಂತ್ರೋದ್ಧರಣಕ್ರಮಂ (ಶ್ರೀಶಾ. ೦೦-೦೨). [ಸಂ.]

**ಯಂತ್ರೋನ್ಮುಕ್ತ** (ನಾ). = ಯಂತ್ರಮುಕ್ತ : "ಶಕ್ತಿ ಮೊದಲಾಗೆ ಬಾಣವಿಮುಕ್ತಂ . . . ಯಂತ್ರೋನ್ಮುಕ್ತಂ ಶರಾದಿ" (ವಸ್ತುಕೋ. ೯೯-೦೯). [ಸಂ.]

**ಯಂತ್ರೋಪಕರಣ** (ನಾ). ಯಂತ್ರಸಾಮಗ್ರಿ ; ಯಂತ್ರದಿಂದ ಮಾಡಿದ ಉಪಕರಣ, —ಸಾಧನ : ನಾವು ಈಗ ಇಲ್ಲಿ ಇದರ ವಿಕಸಿತ ಭಿನ್ನಭಿನ್ನ ಅವಸ್ಥಾವಿಶೇಷಗಳನ್ನು ಯಂತ್ರೋಪಕರಣಗಳ ಮೂಲಕ ನೋಡಲು ಸಾಧ್ಯ (ಜೀವಾತ್ಮ. ೦೭೦); ವಿಜ್ಞಾನಿಗಳು ಈ ಕೆಲಸ ಸಾಧಿಸುವ ದಕ್ಕೆ ಗಡಿಯಾರದ ಚಲನೆಯಂಥ ಯಂತ್ರೋಪಕರಣ (Clockwise Mechauisms) ಮಾಡಿಕೊಂಡಿದ್ದಾರೆ (ಅಣುಶ. ೭). [ಸಂ.]

**ಯಃಕಶ್ಚಿತ್** (ಗು). ತೀರಕ್ಷುಲ್ಲಕವಾದ ; ಗಣನೆಗೆ ಬಾರದ ; ಸಾಮಾನ್ಯವಾದ : ಅಂತಹ ಬ್ರಹ್ಮಜ್ಞಾನಿಯಿಂದು ಪುತ್ರಶೋಕದಿಂದ ಹತನಾಗಿ ಯಃಕಶ್ಚಿತ್ ಪಾಮರನಂತೆ ಆತ್ಮಹತ್ಯವನ್ನು ಮಾಡಿಕೊಳ್ಳಲು ಯತ್ನಿಸುತ್ತಿರುವನು (ಮಹಾಬ. ೦೨೦); ನಾಟಕ ನೋಡಲು ಯಃಕಶ್ಚಿತ್ ಸಿಪಾಯಿಯ ಅಪ್ಪಣೆಯೆ ! (ಮಾಘೋಲೀ. ೦೭೨). [ಸಂ.]

**ಯಃಕಶ್ಚಿತ** (ನಾ). ೧. ತೀರಕ್ಷುಲ್ಲಕನಾದವನು : ಗಣನೆಗೆ ಬಾರದ ವ್ಯಕ್ತಿ : ಕ್ಷುದ್ರವ್ಯಕ್ತಿ : ಯಃಕಶ್ಚಿತನಾದ ಈ ರಾಜಕಿಶೋರನು ಜೀವದಿಂದಿರುವುದನ್ನು ನಾನು ನೋಡುತ್ತಿರುವೆನು (ಕುಳಸೀ. ೯೭). ೨. ತೀರ ಅಲ್ಪವಾದುದು : ಯಃಕಶ್ಚಿತ ಈ ಇಪ್ಪತ್ತು ರೂಪಾಯಿಗಾಗಿ ಇಷ್ಟು ಶ್ರಮಪಟ್ಟು ದುಡಿಯುವುದೇಕೆ ? (ಜಾಗಪ. ೨೯). [<ಸಂ. ಯಃಕಶ್ಚಿತ್]

**ಯಃಖ್ತ್ಯಾರಿ** (ನಾ). ಅಧಿಕಾರಿ : ಯಃಖ್ತ್ಯಾರಿಯ ಪ್ರದೇಶವೂ ಸಹ ಒಂದು ಗ್ರಾಮದ ಭಾಗವಾಗಿರುವ ಸಂದರ್ಭದಲ್ಲಿ, ಬಾಕಿ ವಿಷಯದಲ್ಲಿ ಅರ್ಹತೆ ಇದ್ದರೆ, ಪಟೇಲನನ್ನು . . . ಕೋರ್ಟಿನ ಚಾರ್ಜಿಗೆ ನೇಮಿಸತಕ್ಕದ್ದು (ಗ್ರಾಪಕಾ. ೦೦). [←ಅರ. ಹಿಂ. ಇಖ್ತಿಯಾರ್ = ಅಧಿಕಾರ]

**ಯಕಾರ** (ನಾ). ಯ ಎಂಬ ಅಕ್ಷರ : ಯಕಾರಕ್ಕೆ – ಕಯ್, ಮೆಯ್, ನೆಯ್ (ಶಮದ. ೯೯ ಶ್ರಯೋ). [ಸಂ.]

**ಯಕೃತ್ತು** (ನಾ). ಪಿತ್ತಜನಕಾಂಗ ; ಪಿತ್ತಕೋಶ ; ಈರಿ : "ಯಕೃತ್ ಎಂಬುದು ಕರ್ಗಡ ? [ಕಾಳಜ]" (ಹಲಾಯು. ೦೦೯-೦೩); ಆ ನಾಳವು ಯಕೃತ್ತಿ (Liver)ಗೆ ಹೋಗಿ ತನ್ನ ಸಕ್ಕರೆಯ ಭಾಗವನ್ನು ಒಪ್ಪಿಸಿ, ಮುಂದೆ ಸಾಗುವುದು (ಜಾಂಶ್ರ. I, ೩೦೭) : ಶಾರೀರಿಕಶಿಕ್ಷಣದ ಹೊಸ ಪದ್ಧತಿಯಂತೆ ಈ ಆಟದಿಂದ ಹೆಣ್ಣುಮಕ್ಕಳಿಗೆ. ಕಿಪ್ಪೊಟ್ಟೆ, ಯಕೃತ್ತು, ಬೆನ್ನುಹುರಿ ಮೊದಲಾದ ಅಂಗಗಳಿಗೆ ಸಾಕಷ್ಟು ವ್ಯಾಯಾಮ ದೊರೆಯುವುದು (ಕನ್ನಶಾ. ೩೯). [ಸಂ. ಯಕೃತ್]

**ಯಕ್ಷ** (ನಾ). ೧. ದೇವತೆಗಳಲ್ಲಿ ಒಂದು ವರ್ಗ : "ಕಿನ್ನರರು ಗಂಧರ್ವರಪ್ಸರರು ವಿದ್ಯಾಧರರುನ್ನಿಶಾಟರು ಪಿಶಾಚರು ಗುಹ್ಯಕರು ಸಿದ್ಧರುಂ . . . ಯಕ್ಷರು ಭೂತನಾಮಿಗಳು ದೇವಯೋನಿಗಳೆನಿಕ್ಕುಂ" (ಶುಂಗರಾ. ೦೭-೦೭); ಅಷ್ಟಮೂರ್ತಿಗಳಷ್ಟವಸುಗಳು ನವಬ್ರಹ್ಮರು ಸುರರು ಮುನಿವರರು ಖೇಚರರು ಯಕ್ಷರು . . . ಎಯ್ದೆ ನೆರೆಯಿತು ತಮ್ಮ ಪರಿವಾರಸಹಿತಲಾಗ (ಕಪಶಾ. ೧೯-೦) ; ಒಬ್ಬ ಯಕ್ಷ ತನ್ನೊಡೆಯನಿಂದ ನಲ್ಲೆಯನು ಅಗಲಿ ಬೆಂದು . . . ವಸತಿನಿಂದನೋ ರಾಮಗಿರಿಯ ಪುಣ್ಯಾಶ್ರಮಂಗಳಲ್ಲಿ (ಮೇಘದೂ. ೦-೦). ೨. ಆ ವರ್ಗದ ಅಧಿಪತಿ ; ಕುಬೇರ : "ಧನಪತಿ ಯಕ್ಷಂ . . . ಕುಬೇರನಳಕಾದಿ ನಾಯಕಂ ಗುಹ್ಯಕೇಶ್ವರಂ ವೈಶ್ರವಣಂ" (ವಸ್ತುಕೋ. ೬-೯೭). ೩. ಪಿಶಾಚಿ ; ಭೂತ : 'ಯಕ್ಷಗ್ರಹ' ಪರಾ. ೪. [ಜೈನ] ವ್ಯಂತರ ದೇವತೆಗಳ ಒಂದು ವರ್ಗ : ಆನೀ ವಟವೃಕ್ಷನಿವಾಸಿಯೆನ್ ಮನೋಹರನೆಂಬ ಯಕ್ಷನೆನ್ (ಪಮ್ಮರಾ. ೩೭-೦೭); ಕಲ್ಪಪಾದಪದ ತಣ್ಣೆಲಲ್ಲಿ ವಸಂತಲಕ್ಷ್ಮಿಪೋಲ್ ನೆಲಸಿದ ಯಕ್ಷಿ ಯಕ್ಷರೆಮಗೀಗೊಲವಿಂದೆ ದಯಾವಲೋಕಮಂ (ಅರ್ಥಶೇ. ೦-೯). ೫. ಇಪ್ಪತ್ತುನಾಲ್ಕು ಜಿನ ತೀರ್ಥಂಕರರಲ್ಲಿ ಪ್ರತಿಯೊಬ್ಬ ತೀರ್ಥಂಕರನ ಬಳಿಯಲ್ಲಿಯೂ ಇರುವ ಒಬ್ಬೊಬ್ಬ ಶಾಸನದೇವತೆ. [ಸಂ.]

**ಯಕ್ಷಕರ್ದಮ** (ನಾ). ಕರ್ಪೂರ. ಅಗರು, ಕಸ್ತೂರಿ, ತಕ್ಕೋಲ ಮೊದಲಾದ ಸುಗಂಧದ್ರವ್ಯಗಳನ್ನು ಸಮಪ್ರಮಾಣದಲ್ಲಿ ಬೆರಸಿ ತಯಾರಿಸುವ ಒಂದು ಬಗೆಯ ಸುಗಂಧಲೇಪ : "ಅಗುರು ಹಿಮಂ ತಕ್ಕೋಲಂ ಮೃಗಮದಮಿವು ಕೂಡೆ ಯಕ್ಷಕರ್ದಮಮಕ್ಕುಂ" (ವಸ್ತುಕೋ. ೭೭-೦೨) ; ಯಕ್ಷಕರ್ದಮದ ಕೆಯ್ಗಟ್ಟೆಯೊಳ್ ಕೆಯ್ಯಂ ತಿಮಿರ್ದು ತಂಬುಲಮಂ ಕೊಂಡು (ಶಂಕಪ್ರಾ. ೩-೭೯ ವ) ; ರಾವುತರಿಗಾರೋಹಕರಿಗೆ ಭಟಾವಳಿಗೆ ರಥಿಕರಿಗೆ ಚೆಲ್ಲಿದನಾ ವಿವಿಧಸೌಗಂಧಭಾವಿತಯಕ್ಷಕರ್ದಮವ (ಕುಮಾವ್ಯ. ೬-೨೦). [ಸಂ.]

**ಯಕ್ಷಗಾನ** (ನಾ). ೧. ಒಂದು ಬಗೆಯ ಜಾನಪದ ನೃತ್ಯನಾಟಕ : ಯಕ್ಷಗಾನದಲ್ಲಿ ಬಹು ಹೆಚ್ಚಿನ ಸೌಂದರ್ಯಸಿದ್ಧಿಯನ್ನು ಹೊಂದಿದ ಭಾಗವೆಂದರೆ, ಅದರ ವೇಷಭೂಷಣಗಳು (ಯಕ್ಷಬ. ೦೩೩); ಆಗಾಗ ಯಕ್ಷಗಾನ

**ಯಮಾನುಜೆ** (ನಾ). ಯಮುನಾ ನದಿಯ ಹೆಸರು: "ಯಮಾನುಜೆಯೆನಲು ಯಮುನೆಯುಕ್ಕುಂ" (ಮಂಗರಾ. ೦೨೨-೦೦).
[ಸಂ. ಯಮಾನುಜಾ]

**ಯಮಾಸೆ** (ನಾ). ಯಮನ ದಿಕ್ಕು; ದಕ್ಷಿಣದಿಕ್ಕು: ಅಮರಾಸೆಯುನಜಹರಿ ಧನು ಯಮಾಸೆಯುಂ ವೃಷಭ ಕನ್ಯಕಾಮಕರಂ . . . ಆಗ್ನೀಂ (ಜಾತಕ. ೦-೨೪). [ಯಮ + ಆಸೆ]

**ಯಮಿ₁** (ನಾ). ಇಂದ್ರಿಯನಿಗ್ರಹ ಮಾಡಿದವನು; ಸಂಯಮಿ; ತಪಸ್ವಿ: ಯಮಿಗಳುಮಂ ಮೋಹಿಪ ವಿಷ್ಣುಮಾಯೆ ಮೋಹಿಸದೆ ಗೋಪರಂ (ಜಗಂ. ೩-೭೩); ಯಮಿಗಳ್ ವಿಶಾಖದತ್ತಪ್ರಮುಖರ್ . . . ತೆಂಕಳಗಿಸರ್ (ವರ್ಧಕ. ೦೩-೮೮); ಯಮಿಗಳ ಅಂಗಳಕಸಮಂ ಸಮಯಂದಪ್ಪದೆ ತೊಡೆವುವು ಚಮರೀಮೃಗಂ (ಮಲ್ಲಿ. ೩ ೮೮). [ಸಂ. ಯಮಿನ್]

**ಯಮಿ₂** (ನಾ). ಯಮುನಾ ನದಿ. [ಸಂ. ಯಮೀ]

**ಯಮುನಾನದಿ** (ನಾ). ೧. ಭಾರತದ ಪವಿತ್ರವಾದ ಒಂದು ನದಿಯ ಹೆಸರು: ಯಮುನಾನದೀತರಂಗಮಸಮಂಕಿ ವನಲತೆಯ ಮನೆಗಳಂ ಸೋಂಕಿ ವನ ಭ್ರಮಣಪರಿಶ್ರಮಮಂ ಮುನ್ನಮೆ ಕಳೆದುದು ಬಂದದೋದು ಮಂದಶ್ವಸನಂ (ಶಂಶಕಾ. ೩-೩೩); ಯಮುನಾನದಿಯೊಳ್ಮಾರ್ಪೊಳಿವಮೃತಾಂಶು ಮರೀಚಿಜಾಳಮೆಂಬಿನೆಗಂ ತದ್ರುಮಣಿಯ ಕಚಮಂ ಪಿಕ್ಕಿದಳಮಳಿನ ನಖನಿಕರದಿಂ ವಧೂಮಣಿಯೊರ್ವಳ್ (ಅದ್ಭುರಿ. ೬-೨೩). ೨. ಈಡಾ ಎಂಬ ನಾಡಿಯ ಹೆಸರು; ಚಂದ್ರನಾಡಿ: ವಾಮಭಾಗದ ಈಡಾನಾಡಿಯೇ ಚಂದ್ರನಾಡಿಯೆಂದು ಯಮುನಾನದಿ [ಜಾತಾಂ. ಯಮುನ ನಾಡಿ] ಎಂದು ಪೇಳಲ್ಪಡುವುದು (ಅಂಗಕ. ೨೨೬-೩೮). [ಸಂ. ಯಮುನಾನದೀ]

**ಯಮುನೆ** (ನಾ). ೧. = ಯಮುನಾನದಿ ೧: ಕಾಳಿಂದಿ ದಿನಕರಾತ್ಮಜೆ ಯಮಾನುಜೆಯೆನಲು ಯಮುನೆಯುಕ್ಕುಂ" (ಮಂಗರಾ. ೦೨೨-೦೦); ಯಮುನೆಯ ಮಧ್ಯದಲಿ . . . ಸರಸತಿಯ ಸಂಗಮದಲಿ ಮೆರೆಯುವ ತ್ರಿವೇಣಿಯೆನಿಸುವ ತೀರದಲ್ಲಿ ವಟತರುಛಾಯೆಯಲ್ಲಿಹುದು ದೇವಋಷಿ ಮೌನಿಗಣ (ತುರಂಗ. ರಾ. ೩-೪೪-೩). ೨. = ಯಮುನಾನದಿ ೨: ಈಡೆಯೆ ಯಮುನೆ ಪಿಂಗಳೆಯೆ ಗಂಗೆಯು (ಕೈವ. ೪-೪-೦). ೩. ದುರ್ಗೆಯ ಒಂದು ಹೆಸರು. [ಸಂ. ಯಮುನಾ]

**ಯಮೆ** (ನಾ). ಒಂದು ಬಗೆಯ ಬಳ್ಳಿ: "ಅಶ್ಮವಿಟ—ಕೊಸರಿ, ಯಮೆ" (೬ಕಧಿ. ೩). [ ? ]

**ಯಯು** (ನಾ). ೧. ಕುದುರೆ: "ಅರ್ವಾ . . . ತುರಂಗಃ, ಯಯುಃ, ಘೋಟಕಃ, ಹಯಃ, ವಾಹಃ — ಈ ೧೪ ಕುದಿರೆ" (ಅಭಿಧಾ. ೭೨-೨೬೨). ೨. ಅಶ್ವಮೇಧಯಾಗಕ್ಕೆ ಅರ್ಹವಾದ ಕುದುರೆ; ಯಜ್ಞಾಶ್ವ: "ಯಯುವೆಂಬುದಶ್ವಮೇಧದ ಹಯಮುಂ ಸಾಮಾನ್ಯ ಹಯಮುಮಕ್ಕುಂ" (ವಸ್ತುಕೋ. ೧೪೦-೧೩೧). [ಸಂ.]

**ಯಲ್ಲಕ** (ನಾ). ಆತುರ; ಕಾತರ; ಉತ್ಕಂಠೆ: ಯಲ್ಲಕಂ ಜಗುಬಿಲ್ಕು ಮಾರಿಕೆಯೆಟ್ಟು ಪೀಣ್ಪಶಿಲೀಮಿಯಂ ಮೆಲ್ಲಸಂಚಿತ ಲಜ್ಜೆಯಿಂ ನಡೆನೋಡಲ್ (ಅದ್ಭುರಿ. ೭-೭೩). [< ಸಂ. ಆಯಲ್ಲಕ]

**ಯವ** (ನಾ). ೧. ಒಂದು ಬಗೆಯ ಗೋದಿ; ಜವೆಗೋದಿ: ಮೃಣಾಳನಾಳದೆಸಳ್ ಸಮೆದ ಸರಿಗೆಗಂಕಣಂಗಳುಮಂ ಯವಕಳಿಕೆಗಳೊಳ್ ಸಮೆದ ಕಟಿಸೂತ್ರಮುಮಂ . . . ತೊಟ್ಟು (ಶಂಶಕಾ. ೩-೬೫). ೨. ಉದ್ದವನ್ನು ಅಳೆಯುವ ಒಂದು ಪ್ರಮಾಣ: ಅಂಗುಲದ ಎಂಟನೆಯ ಒಂದು ಭಾಗ: ಯೂಕಮೆಂಟಾಗಲೊಂದು ಯವವೆನಿಸುವುದು, ಆ ಯವವೆಂಟಾಗಲೊಂದುತ್ತಮ ಮಾನಾಂಗುಳಮೆನಿಸುವುದು (ಬಿಶೇಶ. ೩೨೦); ಎಂಟು ಜೂಗಳಿಂದ ಒಂದು ಯವ (ಯವ— ಮಧ್ಯ) ಎಂಟು ಯವಗಳಿಂದ ಒಂದು ಅಂಗುಲವಾಗುತ್ತದೆ (ಕೈಶಿ. ೩೦೬). ೩. ಒಂದು ದೇಶದ ಹೆಸರು: ಲಾಳ ಚೋಳ ವರಾಳ ಯವ ಬಂಗಾಳ . . . ವಿದರ್ಭಧರಣೀಪಾಲತತಿ ಸಂದಣಿಸಿಮುದು ಸಾಕೇತನಗರಿಯಲಿ (ಕೂರರಾ. ೦-೭ ೧೬). ೪. [ಭೌತವಿ] ಮಧ್ಯದಲ್ಲಿ ದಪ್ಪಗಾಗಿರುವ ಗಾಜಿನ ಬಿಲ್ಲೆ; ಅಂತರ್ವಕ್ರ, ಬಹಿರ್ವಕ್ರ ಅಥವಾ ಪೀನಮಧ್ಯವಾದ ಗಾಜು; ಲೆನ್ಸು: ಗಾಜಿನ ಕೆಲಸ ಮಾಡುವವರು ಯವಗಳನ್ನು (lenses) ಜೋಡಿಸಿ, ಪದಾರ್ಥಗಳು ದೊಡ್ಡದಾಗಿ ಕಾಣುವ ಒಂದು ಉಪಾಯವನ್ನರಿತರು (ಗಣಿತ. ೦೦೨). ೫. [ಸಾಮುದ್ರಿ] ಅಂಗೈ ಮೇಲೆ ಜವೆಗೋದಿಯಾಕಾರದಲ್ಲಿ ಇರುವ ಸುದೈವಸೂಚಕವಾದ ಚಿಹ್ನೆ. ೬. [ಜ್ಯೋತಿ] "ಆಕೃತಿಯೋಗಗಳಲ್ಲಿ ಒಂದು [ಲಗ್ನ ಮತ್ತು ಏಳನೆಯ ಸ್ಥಾನಗಳಲ್ಲಿ ಪಾಪಗ್ರಹಗಳೂ ನಾಲ್ಕು ಮತ್ತು ಹತ್ತನೆಯ ಸ್ಥಾನಗಳಲ್ಲಿ ಶುಭಗ್ರಹಗಳೂ ಇರುವುದು]" (ಜಾತಕ. ಸಂ. ೩-೩೪೪): ಉದಯದೊಳಸ್ತದೊಳ್ ನಿಲೆ ಶುಭಗ್ರಹಮುಗ್ರಗಣಂ ಚತುರ್ಥಕರ್ಮದೋಳಿರೆ ವಜ್ರಯೋಗಮದು ತದ್ವಿಪರೀತತೆಯಿಂ ಯವಂ (ಜಾತಕ. ೦೩-೭). 'ಯವಯೋಗ' ಪರಾ. [ಸಂ.]

**ಯವಕ** (ನಾ). ೧. = ಯವ ೧: (೬). ೨. (ಜವೆಗೋದಿಯ ಬೂದಿಯಿಂದ ಸಿದ್ಧಪಡಿಸುವ) ಒಂದು ಬಗೆಯ ಔಷಧಿದ್ರವ್ಯ: ಪೆಟ್ಲುಪ್ಪು: "ಯವಜಃ, ಯವಕಃ, ಯವಾಹ್ವಾ ... ಈ ಮೂರುಂ ಯವಕ್ಷಾರ" (೬ಕಧಿ. ೦೩೦). [ಸಂ.]

**ಯವಕಾರ** (ನಾ). ಒಂದು ಬಗೆಯ ಸಸ್ಯ (?): "ಕಾಸಹಾ — ತಾಳೀಸಪತ್ರ, ಯವಕಾರ, ಎಲಹುಂ" (೬ಕಧಿ. ೨೯). [ ? ]

**ಯವಕೆ** (ನಾ). = ಯವ ೧: "ಯವ್ಯಂ ಯವಕ್ಯಂ, ಷಷ್ಟಿಕ್ಯಂ— ಇನ್ನು ಕ್ರಮವಾಗಿ . . . ಯಾವ ಭೂಮಿ ಯವೆಗಳು, ಯವಕೆಗಳು, ಷಷ್ಟಿಕೆಗಳು ಬೆಳೆಯುವ ಕ್ಷೇತ್ರವಾಗಿದೆಯೋ ಅದರ ಪೆಸರುಗಳು" (ಸಿದ್ಧಾಂತಿ. ೨೭೩). [ಸಂ. ಯವೀ]

**ಯವಕ್ಷಾರ** (ನಾ). (ಜವೆಗೋದಿಯ ಬೂದಿಯಿಂದ ಸಿದ್ಧಪಡಿಸುವ) ಒಂದು ಬಗೆಯ ಔಷಧಿದ್ರವ್ಯ; ಪೆಟ್ಲುಪ್ಪು: "ಯವಭಸ್ಮೋದ್ಭವಂ. ಯವಕ್ಷಾರ" (೬ಕಧಿ. ೦೩೦); ಹಿಪ್ಪಲ್ಯಾದಿಗಣದ ಕಷಾಯವನ್ನು ಯವಕ್ಷಾರ ಬೆರಸಿ ಸೇವಿಸೆ ಶ್ಲೇಷ್ಮಜ್ವರ ಪರಿಹಾರವಾಗುವುದು (ಕಲ್ಯ. ೬೪). [ಸಂ.]

**ಯವಜ** (ನಾ). = ಯವಕ್ಷಾರ: "ಯವಜಃ, ಯವಕಃ, ಯವಾಹ್ವಾ— ಈ ಮೂರುಂ ಯವಕ್ಷಾರ" (೬ಕಧಿ. ೦೩೦). [ಸಂ.]

**ಯವನ** (ನಾ). ೧. ವೇಗ; ಶೀಘ್ರತೆ. ೨. ವೇಗವಾಗಿ ಓಡುವ ಕುದುರೆ. ೩. ವಿದೇಶೀಯನಾದ ವ್ಯಕ್ತಿ; ಪರಂಗಿಯವನು: "ಯವನಃ = ಪರಂಗಿ" (ಶಾಲ್ಕೃ. ೦೩೩). ೪. ಗ್ರೀಸ್ ದೇಶದವನು; ಗ್ರೀಕ: ಇದರಲ್ಲಿ ಯವನರು, ಕಾಂಭೋಜರು, ಪಲ್ಲವರು . . . ಆಂಧ್ರರ (X ೪೮) ಹೆಸರು ಬರುವುದರಿಂದ ಇದು ಕ್ರಿ. ಪೂ. ೩ನೆಯ ಶತಮಾನದ ಒಂದೆ ರಚಿತವಾಗಿರಬೇಕೆಂದು . . . ಅಭಿಪ್ರಾಯಪಡುತ್ತಾನೆ (ಭಾರತ. ೩೨). ೫. ತುರುಕ; ಮುಸಲ್ಮಾನ: "ತುರುಕಂ ತುರುಷ್ಕಂ ಯವನ [ಜಾತಾಂ. ಯಾವ]ನೆನೆ ಜೋನೆಗಂ" (ಮಂಗರಾ. ೦೦೨ ೭); ಈ ವೀರ ಯುವಕನನ್ನು ಯವನ ಯುದ್ಧಕ್ಕೆ ಕರೆದುಕೊಂಡು ಹೋಗುವೆನು (ಕೋಹಿಮ. ೧೦). ೬. ಒಂದು ಬಗೆಯ ಧೂಪದ್ರವ್ಯ: "ಯವನಃ— ಸಜ್ಜರಸ, ಬವ" (೬ಕಧಿ. ೦೩೦). ೭. (ಅಲಂ) ಅರ್ಥಹೀನ: ಕ್ರಿಯೆಯಿಲ್ಲದ ವೃಷಾದಿ ಯವನ (ಕವ್ಯವ. ೪. ೦೦೩-೨೩೭). [ಸಂ.]

**ಯವನಕ** (ನಾ). ವಿದೇಶೀಯನಾದ ವ್ಯಕ್ತಿ; ಯವನ: ಸಾಗಲವೆಂಬ ಹೆಸರಿನ ಯವನಕರ ನಗರವುಂಟು (ಶಾಂದ್ರಕ. ಶಾಂಲಂತ. ೦೬). [ಸಂ.]

**ಯವನಾನಿ** (ನಾ). ೧. ಯವನರ ಲಿಪಿ. ೨. ಪರಂಗಿ ಹೆಂಗಸು; ಯವನ ಸ್ತ್ರೀ: "ಯವನಾನೀ = ಪರಂಗಿತಿ" (ಶಾಲ್ಕೃ. ೦೩೩).
[ಸಂ. ಯವನಾನೀ]

**ಯವನಾಲ**, ಯುವನಾಳ (ನಾ). ೧. ಒಂದು ಬಗೆಯ ತೃಣಧಾನ್ಯ; (?). ೨. ಜೋಳ. **ಯವನಾಳ** : ೨. "ಯವನಾಳವುಮ ಕಳಕಮೆನೆ ಜೋಳಮಕ್ಕುಂ" (ಶಬ್ದಮ. ೧೦೦-೩). [ಸಂ.]

**ಯವನಾಳ** 'ಯವನಾಲ' ನೋ.

**ಯವನಿ** (ನಾ). ೧. ಯವನರ ಹೆಂಗಸು : ಯವನೀಮುಖಾಬ್ಜಮಧುಪಾಟಪವಂ ಸೇನಾನಿ ಕಳೆದಂ (ಶಾಂತಿ. ೧೧-೨೨) ; ರಘುರದ ರ್ಘಲ್ಲರಿಯ ಜವನಿಕೆಯೊಂತು ನರ್ತಿಸುವ ಯೌವನಾಯುವನಿಯ ಕರದ ಪೂಜುರಿಗೆಯಂತೆ ಸುಮನೋಜ್ಞಪವಾಮದಾ . . . ಮುಂಗಾರ್ ಮೊದಲ್ (ಶ್ರೀರಾಮ. ೩೪೦ ೩೬). ೨. ಪರದೆ ; ಜವನಿಕೆ ; ತೆರೆ. [ಸಂ. ಯವನೀ]

**ಯವನಿಕೆ** (ನಾ). ೧. = ಯವನಿ ೧. ೨. ಪರದೆ ; ತೆರೆ ; ಜವನಿಕೆ : "ಅಪಟೀ . . . ಯವನಿಕಾ ತಿರಸ್ಕರಿಣೀ– ಈ (೫) ತೆರೆ" (ಶಬ್ದಮ. ೩೨-೦೩೪) ; ನವಮೇಘಧ್ವನಿ ಪುಷ್ಕರಧ್ವನಿ ಲಸತ್ತಾರಾಳಿ ಪುಷ್ಪೋಪಹಾರವಿಲಾಸಂ ರುಚಿರಾಂಬುದಂ ಯವನಿಕಾವಿನ್ಯಾಸಂ (ಅಂಕ್ಷ. ೩-೬೨) ; ಗಗನಗಂಗಾತಟೋದ್ವೃತ್ತವಸಾಳೀವನದೋ ವಿದ್ಯುತ್ಸ್ಫಟಿಕರ್ಬುರಯ[ಶಾಂತಿ. ೫]ವನಿಕೆಯೋ . . . ಎನೆ ನೆಗದುವಲಿಶ್ಯಾಮಾಳಂ ಮೇಘಮಾಳೆ (ಚಂದ್ರಶೇ. ೪-೩೦). [ಸಂ. ಯವನಿಕಾ]

**ಯವಫಲ** (ನಾ). ೧. ಬಿದಿರು : "ವಂಶಃ . . . ಯವಫಲಃ, ವೇಣುಃ, ಮಸ್ಕರಃ, ತೇಜನಃ—೧೧ ಬಿದುರು ಹೆಸರುಗಳು" (ಸಿದ್ಧಾಂತಿ. ೦೪೯). ೨. ಕೊಡಸಿಗೆ ; ಕುಟಜ ವೃಕ್ಷ. ೩. ಪ್ಲಕ್ಷವೃಕ್ಷ. ೪. ಈರುಳ್ಳಿ. [ಸಂ.]

**ಯವಯೋಗ** (ನಾ). [ಜ್ಯೋತಿ] "ಲಗ್ನ ಮತ್ತು ಸಪ್ತಮ ಸ್ಥಾನಗಳಲ್ಲಿ ಪಾಪಗ್ರಹಗಳೂ ಚತುರ್ಥ ಮತ್ತು ದಶಮ ಸ್ಥಾನಗಳಲ್ಲಿ ಶುಭಗ್ರಹಗಳೂ ಇದ್ದರೆ ಯವಯೋಗ" (ಜಾತಕ. ೦೬-೬ ಅವತ). 'ಯವಯೋಗಜ' ಪರಾ. [ಸಂ.]

**ಯವಯೋಗಜ** (ನಾ). [ಜ್ಯೋತಿ] ಯವಯೋಗದಲ್ಲಿ ಹುಟ್ಟಿದವನು : ಮನುಜಂ . . . ಯವಯೋಗಜಂ ಶಿಶುತೆಯೊಳ್ ವೃದ್ಧತ್ವದೊಳ್ ದುಃಖಭಾಜನನಕ್ಕುಂ (ಜಾತಕ. ೦೩-೦೬). [ಸಂ.]

**ಯವಸ** (ನಾ). ಮೇವು ; ಹುಲ್ಲು : "ಘಾಸಃ, ಯವಸಃ—ಈ ೨ ದಮಸಂ" (ಶಬ್ದಮ. ೩೨-೩೭) ; ವನದಲಿ ಪುಲಿಯಿರಲು ಗೋಧನ ಕುಲಕೆ ಯವಸಾಂಬುಗೋಚರವೆ (ಕುಮಾರ. ೩-೯). [ಸಂ.]

**ಯವಹಿತ್ರ** (ನಾ). ಒಂದು ಬಗೆಯ ಔಷಧೀದ್ರವ್ಯ : ಯವಹಿತ್ರ, ಜೀರಿಗೆ ಈ ಎರಡನ್ನು ಜೇನುತುಪ್ಪದಲ್ಲಿ ಹಚ್ಚಲು ಇರುಳುಗಣ್ಣು ಮಾಣ್ಗುಂ (ವೈದ್ಯ. ೩೩). [?]

**ಯವಾಗು** (ನಾ). ಬಾರ್ಲಿ ಮುಂತಾದ ಧಾನ್ಯದ ಅಥವಾ ಅನ್ನದ ಗಂಜಿ : "ಗಂಜಿ ಯವಾಗು" (ಕನ್ನಡಕೋ. ೯೨-೯) ; "ಯವಾಗುವೆನೆ ಗಂಜಿ" (ಶಬ್ದಮ. ೩೩-೦). [ಸಂ. ಯವಾಗೂ]

**ಯವಾಗ್ರಜ** (ನಾ). = ಯವಕ್ಷಾರ : "ಯವಕ್ಷಾರಃ, ಯವಾಗ್ರಜಃ, ಪಾಕ್ಯಃ – ೩ ಯವಕ್ಷಾರದ ಪೆಸರುಗಳು" (ಸಿದ್ಧಾಂತಿ. ೩೦೬). [ಸಂ.]

**ಯವಾನಿ** (ನಾ). ೧. ಅಜವಾನ ; ಓಮ : "ಜೋಪಾರನಾಮುಂ ಯವಾನಿಯೆನಲ್" (ಶಬ್ದಮ. ೪೦-೩೪) ; "ಯವಾನೀ–ಓವ. ರಸದಾಳಿ. ಅಜಮೋದ" (೬೫೦. ೦೩೦). ೨. ತುರುಕರ ಹೆಣ್ಣು ; ಯವನ ಸ್ತ್ರೀ : "ಯವಾನೀ–ತುರುಕಿತಿ" (ಶಾಕಕ. ೦೩೩). [ಸಂ. ಯವಾನೀ]

**ಯವಾನಿಕೆ** (ನಾ). = ಯವಾನಿ ೧ : "ಅಜಮೋದಾ, ಉಗ್ರಗಂಧಾ, ಬ್ರಹ್ಮದರ್ಭಾ, ಯವಾನಿಕಾ–೪ ಅಜಮೋದದ ಹೆಸರುಗಳು. ಓಮು ಕಾಳು" (ಸಿದ್ಧಾಂತಿ. ೦೯೩). [ಸಂ. ಯವಾನಿಕಾ]

**ಯವಾಸ** (ನಾ). ೧. ಒಂದು ಬಗೆಯ ಸಸ್ಯ : ನಸುಗುನ್ನಿ ; "ಯಾಸಃ, ಯವಾಸಃ . . . ದುರಾಲಭಾ – ೧೧ ತೀಟಿಕಸೊಪ್ಪಿ ಹೆಸರುಗಳು" (ಸಿದ್ಧಾಂತಿ. ೦೩೩). ೨. ಒಂದು ಬಗೆಯ ಖದಿರವೃಕ್ಷ. ೩. ಬೇವಿನ ಮರ : "ಯವಾಸಃ – ಬೇವು" (೬೫೦. ೦೩೦). [ಸಂ.]

**ಯವಿಷ್ಠ** (ನಾ). (ಅಣ್ಣತಮ್ಮಂದಿರಲ್ಲಿ) ಎಲ್ಲರಿಗಿಂತ ಕಿರಿಯವನು ; ಕಿರಿಯ ಸಹೋದರ. [ಸಂ.]

**ಯವೀಯಾಂಸ** (ನಾ). = ಯವಿಷ್ಠ : ಯವೀಯಸ್–ಯವೀಯಾಂಸನು. ಯವೀಯಸ್ಸು, ಯವೀಯನು (ಹೊಸಗ. ೧೦೭). [< ಸಂ. ಯವೀಯಸ್]

**ಯವೆ**[1] (ನಾ). ಜವೆಗೋದಿಯನ್ನು ಬೆಳೆಯುವ ಭೂಮಿ : "ಜವೆಯ ಕೆಯ್ ಯವೆಯಕ್ಕು" (ಶಬ್ದಮ. ೨೬-೩). [< ಸಂ. ಯವ್ಯ]

**ಯವೆ**[2] (ನಾ). ೧. ಒಂದು ಬಗೆಯ ಗೋದಿ ; ಜವೆಗೋದಿ : "ಯವೆ ಯೆನಲು ಜವೆ" (ಶಬ್ದಮ. ೧೧೦-೩) ; ಅಕ್ಕಳಗೆವ್ಮೆಯಂ ಯ [ಶಾಂತಿ. ೫]ವೆಗೆ ಗೋದುವೆಯುಂ ತುರಗಕ್ಕೆ ಕತ್ತೆಯುಂ . . . ಪ್ರತಿ ಮಾಡಿದನೋರ್ವ ಜೀಮನೆಂದೇಕೆಂಪೊ ಮೂಢರೋಳ್ ತ್ತರ್ (ಸಮಸ. ೧೧ ೦೨೦) ; ಯ[ಶಾಂತಿ. ೫]ವೆ ದಿವ್ಯೌಷಧಿ ಪಾರಿಜಾತಕುಸುಮಂ ಸಿದ್ಧಾರ್ಥಸಮಾರ್ದ್ರಾಕ್ಷತಂ . . . ಎಂಬಿವಜಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುದು (ಜಗ. ೧೧-೯೬) ; ಯವೆಯನ್ನು ಚಳಿಸಿ ಅಕ್ಕಿ ಮಾಡಿ ಕುದುರೆಗೆ ತಿನ್ನಿಸುವುದು (ಅಶ್ವಶಾ. ೩೨-೦). ೨. ಉದ್ದವನ್ನು ಅಳೆಯುವ ಒಂದು ಪ್ರಮಾಣ ; ಅಂಗುಲದ ಎಂಟನೆಯ ಒಂದು ಭಾಗ : ಮೂಜುತಿಲಕೊಂದು ಯವೆ . . . ಆ ಯವೆ ಮೂಜ ಸೇರಿಸೆ ತದಂಗುಲವ ನಾಲ್ಕು ಕೂಡಲು ಮುಷ್ಟಿ (ಭಾಸ್ಕರ. ೩೨-೯) ; ಆ ಯೂಕವೆಂಟಾದರೆ ಒಂದು ಯವೆ ಯೆನಿಸಿಕೊಂಬುದು (ಚಕಲ. ೬೮-೪). ೩. ಒಂದು (ಗೋದಿ ಕಾಳಿನಷ್ಟು) ತೂಕದ ಪ್ರಮಾಣ : ಯವೆ ನಾಲ್ಕು ಐದಾರು ಸವಸಿಸಿದ ಗಾತ್ರದೀಂದವ ತವಕ ತೂಕ ತಂಡಿಲ ಪ್ರಮಾಣದೊಳಿರಲು ತವೆ ಮೌಲ್ಯ ಪನ್ನೆರಡು ಪದಿನಾರು ವಿಂಶತಿಯೊಳಸುವರ್ಣಿ ಪೇಳ್ವುದದನು (ರತ್ನಶಾ. ೩-೦೬). [ಸಂ. ಯವ]

**ಯವ್ಯ** (ಗು). ೧. ಜವೆಗೋದಿಯನ್ನು ಬೆಳೆಯಲು ಯೋಗ್ಯವಾದ.– ಹಿತವಾದ. ೨. ಜವೆಗೋದಿಯನ್ನು ಬಿತ್ತಿದ. (ನಾ). ೩. ಜವೆಗೋದಿಯನ್ನು ಬೆಳೆಯುವ ಭೂಮಿ : "ಜವೆಯ ಕೆಯ್ ಯವ್ಯವೆಂಬುದು" (ಶಬ್ದಮ. ೨೬-೩) ; ಲೀಲೆಯಿಸದಿಬ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗಂ ಮಾಷ್ಯಂ ಶಾಲೇಯಂ ವ್ರೈಹೇಯಂ ತೈಲೀನಂ ಕೌದ್ರವೀಣ ಮೌಮ್ಯಂ ಯವ್ಯಂ (ಚಂದ್ರಶೇ. ೦-೯೧). [ಸಂ.]

**ಯವ್ವನ** (ನಾ). ಹರೆಯ ; ಪ್ರಾಯ ; ತಾರುಣ್ಯ : ನಿಮ್ಮ ರೂಪು ಯವ್ವನಮುಮಂ ಲಾವಣ್ಯಮುಮಂ ಕಂಡು (ವಡ್ಡಾರಾ. ೩೩-೧೧) ; ಆ ಯವ್ವನದೊಳವರ ಚರಿತಂ ಕರಂ ಪೊಸತು (ಶಬರ. ದೇ. ೪-೩). 'ಜವ್ವನ' ಪರಾ. [< ಸಂ. ಯೌವನ]

**ಯವ್ವನಶಾಲಿ** (ನಾ). ತರುಣ ; ಯುವಕ : ದೊಡ್ಡವಂಶದಲ್ಲಿ ಹುಟ್ಟಿ ಯವ್ವನಶಾಲಿಗಳಾಗಿರುವವರನೇಕರು . . . ಅಮಿತವ್ಯಯ ಮಾಡಿ ಅಪ್ರಕೀರ್ತಿಡಾಗುವವರಲ್ಲವೇ ? (ಕರ್ಣ. I. ೨). [< ಸಂ. ಯೌವನಶಾಲಿನ್]

**ಯವ್ವನಿಗ** 'ಜವ್ವನಿಗ' ನೋ.

**ಯವ್ವನಿಗತನ** (ನಾ). ಹರೆಯ ; ತಾರುಣ್ಯ : ಯವ್ವನಿಗತನದಲ್ಲಿಯೇ ಆ ಜಾತಿಗೆ ರಾಜಪದವೇದೇ ಅಭಿಧಾನವಹುದು (ಶಂಕ್ರಶ. ೦೦-೬). [ಯವ್ವನಿಗ (< ಜವ್ವನಿಗ) + –ತನ]

**ಯವ್ವನೆ** 'ಜವ್ವನೆ' ನೋ.

**ಯಶ** (ನಾ). ೧. ಖ್ಯಾತಿ ; ಕೀರ್ತಿ : ಪೊಲಲೊಳ್ ನೆಗಟ್ಟ ಪಂಡಿತರ್ಕಳೊಡನೆ ವಾದಂಗೆಯ್ದು ಗೆಲ್ದು ದಶದಿಶೆಗಳೊಳೆಲ್ಲಂ ತನ್ನ ಪಾಂಡಿತ್ಯದ ಯಶಮುಂ ಪಸರಿಸಿ (ವಡ್ಡಾರಾ. ೬೪-೨೦) ; ಕಾರ್ಯಕ್ಕೆ ಯಶವು

ಜೊತೆಗಾಗ ಸಂತೋಷಸಾಗರದಲ್ಲಿ ಮೀಯುವುದು . . . ಮಂಕು ಮಾನವ ಬುದ್ಧಿ (ತರ್ಜನ. ೦೦೬). ೨. ಗೆಲವು : ವಿಜಯ : ' ಯಶಂಬಡೆ ' ಪರಾ. [ಸಂ. ಯಶಸ್]

**ಯಶಂಬಡೆ** (ಕ್ರಿ). ಗೆಲವನ್ನು ಗಳಿಸು ; ವಿಜಯಿಯಾಗು : ಒತನೆಯುವ ರೊಂದೆ ಮಾರ್ಬ್ಬಲವಿಡೆಮುಡಗದೆ ಪೊಗಟೆ ತಾಗಿ ತಳ್ತಿಱಿದು ಯಶಂ ಬಡೆದಂ ಗೊಗ್ಗಿ (ಎಕ. XI, ಚಳ್ಳಕೆ. ೩-೩ : ಶು. 925). [ಯಶ + ಪಡೆ]

**ಯಶಃಪಟಹ** (ನಾ). ಒಂದು ಬಗೆಯ ವಾದ್ಯ ; ಢಕ್ಕೆ : ಮದನಯಶಃ ಪಟಹಧ್ವನಿ ಪುದಿಯೆ ವಿಯಚ್ಚರರ ಕರ್ಣಮಂ ಹೃದಯಕ್ಕೆಯ್ದುದುದಿಲ್ಲ ದಿವ್ಯವಚನಂ (ಶಂಬರನಾ. ೬-೯೯). ' ಯಶೋದುಂದುಭಿ ' ಹೋ. [ಸಂ.]

**ಯಶಃಪಿಂಡ** (ನಾ). ೧. ಕೀರ್ತಿಯ ಸಮೂಹ. ೨. ಅತಿಶಯವಾದ ಕೀರ್ತಿಯನ್ನು ಪಡೆದವನು : ವಿಪುಳಯಶಃಪಿಂಡಂ ಪುಣ್ಯಪುಂಜಮಾ ಕ್ಷತ್ರಧಾಮಧಾಮಂ ತಾನಾ ನೃಪಸುತಂ (ಆದಿಪು. ೮-೪೪). [ಸಂ.]

**ಯಶಸ್ಕರ** (ಗು). ೧. ಕೀರ್ತಿಯನ್ನು ತರುವಂತಹ ; ಶ್ರೇಯಸ್ಕರವಾದ. (ನಾ). ೨. ಶ್ರೇಯಸ್ಕರವಾದುದು : ಅಪವಾದವೆನಿಪುದು ಕಡುತಾಪ ವಾದರು ಅದು ನವಗತಿ ಯಶಸ್ಕರವು (ಇಂಕಾಶ. ೨೨೩-೦೩). [ಸಂ.]

**ಯಶಸ್ಕೀರ್ತಿ** (ನಾ). [ಜೈನ] ಎಪ್ಪತ್ತೆರಡು ನಾಮಪ್ರಕೃತಿಗಳಲ್ಲಿ ಒಂದು; ಜೀವನಿಗೆ ಲೋಕದಲ್ಲಿ ಕೀರ್ತಿ ಹಬ್ಬುವಂತೆ ಮಾಡುವ ಪ್ರಕೃತಿ : ಅನ್ಯತರ ವೇದನೀಯ . . . ಬಾದರಯಶಸ್ಕೀರ್ತಿರುಚ್ಚೈರ್ಗೋತ್ರ ತೀರ್ಥಕರ ನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಆದಿಪು. ೦೩-೯೯ ವ) ; ವೇದನೀಯ . . . ಯಶಸ್ಕೀರ್ತ್ಯಯಶಸ್ಕೀರ್ತಿ ನಿರ್ಮಾಣ ನೀಚೈರ್ಗೋತ್ರಂಗಳೆಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ (ಶಂಖಪು. ೦೩-೮೦ ವ). [ಸಂ.]

**ಯಶಸ್ತಂಭ** (ನಾ). ಗೆಲುವಿನ ಸ್ಮಾರಕವಾಗಿ ನಿಲ್ಲಿಸುವ ಕಂಬ ; ವಿಜಯಸ್ತಂಭ : ನೀಮುಂ . . . ಇಲ್ಲಿಯೆ ಬೀಡುವಿಟ್ಟು ನಿಱಿಸಲ್ವೇಳ್ಕುಂ ಯಶಸ್ತಂಭಮಂ (ಪಕ್ಕಿ.೩-೦೬). [ಸಂ.]

**ಯಶಸ್ವಿ** (ಗು). ೧. ಶ್ರೇಯಸ್ಸನ್ನು ಪಡೆದ ; ಹೆಸರುವಾಸಿಯಾದ. ೨. ಅತ್ಯುತ್ತಮವಾದ. (ನಾ). ೩. ಗೆಲುವನ್ನು ಪಡೆದುದು ; ಜಯಪ್ರದವಾದುದು : ನಮ್ಮ ಚಲಚಿತ್ರಗಳಲ್ಲಿ ಹತ್ತು ಹದಿನೈದಕ್ಕೆ ಕಡಿಮೆ ಹಾಡುಗಳಿಲ್ಲದಿದ್ದಲ್ಲಿ ಅವು ಯಶಸ್ವಿಯಾಗಲು ಸಾಧ್ಯವೇ ಇಲ್ಲ (ಶಾರದ. ೩೩೩). [ಸಂ. ಯಶಸ್ವಿನ್]

**ಯಶಸ್ಸು** (ನಾ). ಕೀರ್ತಿ ; ಖ್ಯಾತಿ : ಯಶ, ಯಶಸ್ಸು ; ತೇಜ, ತೇಜಸ್ಸು ; ವಯ, ವಯಸ್ಸು (ಕಮಜ. ೮೩ ಕೃ.ಯೋ.) ; ಕವಿಗಳು ಬೆಳಗಿದ ರಾಜರ ಯಶಸ್ಸು ಸ್ಥಿರವಾಗಿರುತ್ತದೆ (ಶಾರದ. ೪೯೩). [ಸಂ. ಯಶಸ್]

**ಯಶೋದುಂದುಭಿ** (ನಾ). ಯಶಸ್ಸನ್ನು ಸಾರುವ ವಾದ್ಯ ; ವಿಜಯ ದುಂದುಭಿ : ಪ್ರಕಟ ಯಶೋದುಂದುಭಿ ಸಿಂಹಾಸನಸುರದುಂದುಭಿ ಪತಿಚರಣಕಮಳಭೃಂಗಂ ಪಂಪಂ (ಆದಿಪು. ೦-೩೩). [ಸಂ.]

**ಯಶೋದೆ** (ನಾ). ೧. ಯಶಸ್ಸನ್ನು ಕೊಡುವವಳು. ೨. ಕೃಷ್ಣನ ಸಾಕುತಾಯಿ ; ನಂದಗೋಪನ ಹೆಂಡತಿ: ಮತ್ತೊಂದು ಸಮಯದೊಳ್ ಪಾಲ್ಗುಡಿಯಲೊಲ್ಲದಾಟಿಗುಟ್ಟುವ ದಾಮೋದರನಂ ಯಶೋದೆ ಕಂಡು (ಜಗಂ. ೩-೩೦ ವ) ; ಯಶೋದೆ ನಿನ್ನ ಕಂದಗೆ ವಿಶ್ವರೂಪವೆ (ಪುರಂದ. ೪-೦೦೮ ೩೭೩). ೧, ೨ : ಅಬ್ಧಿಶಯನಂ ಗಡ ನಂದನನೀ ಮನೋಹರ ಕ್ರೀಡನನೆತ್ತಿಕೊಂಡು ಮೊಲೆಯೂಡಿದ . . . ಭವತ್ಸತಿ ಯಶೋದೆ ಕುಲಕ್ಕೆ ಯಶೋದೆಯಲ್ಲಳೇ (ಜಗಂ. ೩-೯೯), [ಸಂ. ಯಶೋದಾ]

**ಯಶೋಧನ** (ನಾ). ಕೀರ್ತಿಯೇ ಧನವಾಗಿರುವವನು ; ಮಹಾಖ್ಯಾತಿ ವಂತ : ಬಱುವನನಾಜಿಶ್ರಾಂತನಂ ಯಶೋಧನನಿಱಿಯಂ (ಶಾಂತಿಪು. ೪-೩೦). [ಸಂ.]

**ಯಶೋಧರ** (ನಾ). ೧. ಕೀರ್ತಿಯನ್ನು ಹೊಂದಿರುವುದು. ೨. [ಜೈನ] ಅರುವತ್ತುನಾಲ್ಕು ಇಂದ್ರಕಗಳಲ್ಲಿ ಒಂದು : ೧. ಋತು. ೨. ವಿಮಳಂ . . . ೫೬. ಯಶೋಧರಂ . . . ಅಱುವತ್ತನಾಲ್ಕು ಇಂದ್ರಕಂಗಳ ಪೆಸರ್ಗಳ್ (ಕಕ್ಕಕೃ. ೨೦೩). [ಸಂ.]

**ಯಶೋಧಿಕ** (ನಾ). ಅಧಿಕವಾದ ಖ್ಯಾತಿಯನ್ನು ಪಡೆದವನು : ಕುಲಜ ನೀತನೆ ಪಂಡಿತನೀತನುಜ್ವಲಯಶೋಧಿಕನೀತನೆ (ಕಬಿರಾ. ೧-೦೩೮). [ಸಂ.]

**ಯಶೋನಿಧಿ** (ನಾ). ಕೀರ್ತಿಗೆ ನೆಲೆಯಾದವನು : ಮಲ್ಲಪಾರ್ಯನು ಮುದಾತ್ತಯಶೋನಿಧಿಪುನ್ನಮಾರ್ಯನುಂ ಸವಿ ತವದಂತು ಪೇೞಿಸಿದರ್ (ಶಾಂತಿಪು. ೦-೨೩) ; ಆ ಯಶೋನಿಧಿಗೆ ವಲ್ಲಭೆಯಾದಳ್ ವಾಯುವೇಗೆ (ವರ್ಧಪು. ೩-೦೩). [ಸಂ.]

**ಯಶೋನಿಳಯ** (ನಾ). ಯಶೋನಿಧಿ : ಪ್ರಕಟ ಯಶೋನಿಳಯರ್ ತಾರ್ಕಿಕಚೂಡಾಮಣಿಗಳ್ . . . ಅಕಳಂಕದೇವರ್ (ಸುಕುಮಚ. ೧-೩೯). [ಸಂ. ಯಶೋನಿಲಯ]

**ಯಶೋಭಾಗಿ** (ನಾ). ಕೀರ್ತಿಯುಳ್ಳವನು : ಆದಿ ರಾಜಸುತರೊಳ್ . . . ಏಂ ಭೀಷ್ಮಂ ಯಶೋಭಾಗಿಯೋ (ಕಂಕಶಾ. ೦.೬೯). [ಸಂ. ಯಶೋಭಾಗಿನ್]

**ಯಶೋರ್ಥಿ** (ನಾ). ಶ್ರೇಯಸ್ಸನ್ನು ಬಯಸುವವನು : ಧರ್ಮ ಪುತ್ರನಪ್ಪ ಯುಧಿಷ್ಠಿರಂ ಧರ್ಮಾರ್ಥಿಯುಂ ಯಶೋರ್ಥಿಯುಮಾಗಿ ರಾಜ ಸೂಯಯಾಗಂ ಮಾಡಲುದ್ಯೋಗಂಗೆಯ್ದು (ಕಂಕಶಂ. ೨೩೩-೨೦). [ಸಂ. ಯಶೋರ್ಥಿನ್]

**ಯಶೋವಂತ** (ನಾ). ಕೀರ್ತಿಶಾಲಿಯಾದವನು : ಯಶೋವಂತನಾಗು, ಅಪ್ರತಿಮ ವೀರನಾಗು, ಮಹಾತ್ಯಾಗಿಯಾಗು (ಕಾಂಕಶಾ. ೯೯). [ಸಂ. ಯಶೋವತ್]

**ಯಶೋವತಿ** (ನಾ). ಖ್ಯಾತಿಯಿಂದ ಕೂಡಿದುದು ; ಕೀರ್ತಿಯಿಂದ ಕೂಡಿದುದು : ದ್ವಾರವತಿಯು ಯಶೋವತಿಯಾದ ಮಹಾಪಟ್ಟಣ ವಾಯಿತು (ಕಾಂಕಶಾ. ೦೨೦). [ಸಂ. ಯಶೋವತೀ]

**ಯಷ್ಟಿ** (ನಾ). ೧. ಕೋಲು ; ಬಡಿಗೆ : ತ್ರಿಶೂಲಂ ಕೊಡೆಯ ಕಾವಾಗೆ ಖಟ್ವಾಂಗಂ ಯಷ್ಟಿಯಾಗೆ . . . ಮಹಾವೃದ್ಧನಾಗಿ (ಕಂಶರ. ೩-೦೬ ವ) ; ದರ್ಪದಿಂ ಮುಂದುಗಾಣದ ಗಾಂಪರೆನಿಪರ್ ಪಳಿವರೆಂದು ಸಮ್ಯಕ್‌ಕಾವ್ಯಮಂ ರಚಿಸಿದರ್ಪರೇ ದಿವ್ಯಮಂತ್ರಂ ಕೆರ್ವು ಯಷ್ಟಿ ವಾಗ್ಬಂಧನಂಗಳ್ ತವಗಿರೆ (ಕರ್ನಾ. ೦-೩೪). ' ಅಂಧಯಷ್ಟಿ ' ಪರಾ. ೨. ಕಂಬ ; ಸ್ತಂಭ. ೩. ಗದೆ : "ಯಷ್ಟಿಃ, ಪಟ್ಟಿಶಃ . . . ಗದಾದಂಡಃ, ಚಕ್ರಂ—ಇವು ಮೊದಲಾಗುಳ್ಳುವು ಕೆಯ್ದುಗಳ ಭೇದಂಗಳ್" (ಹಠಾಯು. ೭೩-೩೨೨) ; ಕುಮಾರನಂ ಯಷ್ಟಿ ಮುಷ್ಟಿ ಪ್ರಹಾರಾದಿಗಳಿಂ ಗೆಲ್ದಿದ್ರೋಣನೆತ್ತಿಕೊಂಡು (ಪಚ್ಚಾರಾ. ೫೩-೨೬). ೪. ಬಾವುಟದ ಕಂಬ ; ಧ್ವಜಸ್ತಂಭ. ೫. ಕಾಂಡ ; ದಂಟು. ೬. ಮರದ ಕೊಂಬೆ,—ರೆಂಬೆ. ೭. ಕತ್ತಿಯ ಹಿಡಿ. ೮. ದಾರ ; ಎಳೆ. ೯. ಮರಣ ಹೊಂದಿದವರ ಜ್ಞಾಪಕಾರ್ಥವಾಗಿ ನಿಲ್ಲಿಸುವ ಸ್ಮಾರಕಸ್ತಂಭ. ೧೦. ಮುತ್ತು ಮೊದ ಲಾದುವುಗಳ ಸರ,—ಹಾರ : "ದೇವಚ್ಛಂದಂ ಯಷ್ಟಿ ಶತಾವಚ್ಛಿನ್ನಂ" (ವಸ್ತುಕೋ. ೭೩-೩) ; ಕೈವಲ್ಯಬೋಧರಮಾ ಮೌಕ್ತಿಕಹಾರಯಷ್ಟಿ . . . ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೊಳ್ (ಕಂಚಾಕಾ. ೦-೩). ೧೧. ದೇವಪೂಜೆ ; ದೇವತಾರ್ಚನೆ : "ಇಷ್ಟಿಃ, ಯಷ್ಟಿಃ . . . ಯಾಜ್ಯಂ – ಈ ೧೦ ದೇವರ ಪೂಜೆ" (ಶಾಕಕ್ಕ. ೦೫೦). ೧೨. ತೆಳು ವಾದುದು ; ತೆಳ್ಳಗೆ ಇರುವುದು : 'ಅಂಗಯಷ್ಟಿ' ಪರಾ. ೧೩. ಒಂದು ಬಗೆಯ ಔಷಧೀಸಸ್ಯ ; ಅತಿಮಧುರ : " ಯಷ್ಟಿಃ – ಯಷ್ಟಿಮಧುಕ" (೬ಶಬ್ದಿ. ೧೫೦). [ಸಂ.]

**ಯಷ್ಟಿಕೆ** (ನಾ). ೧. ಕೋಲು ; ಬಡಿಗೆ. ೨. (ಒಂದೆಳೆಯ) ಮುತ್ತಿನ ಹಾರ : ' ಏಕಯಷ್ಟಿಕೆ ' ಪರಾ. [ಸಂ. ಯಷ್ಟಿಕಾ]

**ಯಷ್ಟಿಮಧು** (ನಾ). ಒಂದು ಬಗೆಯ ಔಷಧೀಸಸ್ಯ. [ಸಂ.]

**ಯಷ್ಟಿಮಧುಕ** (ನಾ). = ಯಷ್ಟಿಮಧು : "ಮಧೂಕಯಷ್ಟಿಃ, ಮಧುಯಷ್ಟಿಕಾ – ಈ ಯೆರಡುಂ ಯಷ್ಟಿಮಧುಕ" (ಓಷ. ೧೨೦); ದ್ರಾಕ್ಷೆ ಮಧು ಖಂಡಶರ್ಕರೆ ಗೋಕ್ಷೀರಂ ಯಷ್ಟಿಮಧುಕವಿವು ಪಿತ್ತಹರಂ (ಅಶ್ವಶಾ. ೬-೪೩). [ಸಂ. ಯಷ್ಟಿಮಧುಕಾ]

**ಯಷ್ಟೃ** (ನಾ). ಯಾಗ ಮಾಡುವವನು ; ಯಜ್ಞಕರ್ತ. [ಸಂ.]

**ಯಸ** (ನಾ). ಒಳ್ಳೆಯ ಹೆಸರು ; ಕೀರ್ತಿ : ಯಸಕ್ಕೆನಲ್ಲಾತಂ (ಎಪಿಕ. XI-i, ४३-४ ; 970). 'ಜಸ₁' ಪರಾ. [< ಸಂ. ಯಶಸ್]

**ಯಹೂದ್ಯ, ಯೆಹೂದಿ, ಯೆಹೂದ್ಯ** (ನಾ). ಪ್ಯಾಲಸ್ಟೈನ್ ಅಥವಾ ಇಸ್ರೈಲ್ ದೇಶದಲ್ಲಿ ವಾಸಿಸುವ ಒಂದು ಕುಲದ ಹೆಸರು ಮತ್ತು ಆ ಕುಲಕ್ಕೆ ಸೇರಿದ ವ್ಯಕ್ತಿ : ಪಶ್ಚಿಮದಲ್ಲಿ ಸುಮಾರು ಒಂದು ಲಕ್ಷ ಪಾರಿಸೀ ಜನರೂ ಕೆಲವುಂದಿ ಜೂಜನರೂ (ಯಹೂದ್ಯರೂ) ವಾಸವಾಗಿದ್ದಾರೆ (ಭೂಗೋಳ. ೬೦) ; ಮತ್ತೊಬ್ಬ ಯಹೂದ್ಯ ಕುಟುಂಬಕ್ಕೆ ಸೇರಿದವನು (ಕೃಪರು. ೨೩). **ಯೆಹೂದಿ:** ಯುನಾನಿಯರ ಮೂಗು ಒಂದು ತೆರನಾಗಿದ್ದಲ್ಲಿ ರೋಮನರ, ಯೆಹೂದಿಯರ, ನೀಗ್ರೋಗಳ ಮೂಗುಗಳು ಬೇರೆಬೇರೆ ಯಾಗಿರುತ್ತವೆ (ಜೀವಶಾ. ೨೨೦). **ಯೆಹೂದ್ಯ :** ಇದೊ ಯೆಹೂದ್ಯರೆ ಇವನೊಳೇನುಮಪರಾಧವಂ ಕಾಣೆ (ಗುರುದ್ಭಾ. ೩-೦೩೩) ; ಯೆಹೂದ್ಯರು, ಮುಸಲ್ಮಾನರು ಮತ್ತು ಕ್ರೈಸ್ತರು ಇವರ ವಿನಾ ಉಳಿದ ಎಲ್ಲಾ ಜನಾಂಗದವರಲ್ಲಿ ಈ ಸಿದ್ಧಾಂತ ಪ್ರಚಾರದಲ್ಲಿತ್ತು (ಜೀವಶಾ. ೦೬೪).
[←ಹೀಬ್ರು. ಯಹೂದೀ ; ಲ್ಯಾಟಿನ್. ಇಯೂದ್ಯುಸ್./ಇಂ. Jew]

**ಯಾ₁** ' ಯಾವುದು ' ಪರಾ.

**ಯಾ₂** (ಅ). ಅಥವಾ ; ಇಲ್ಲವೆ : ಅಂಥ ಪಾವತಿ ಯಾ ಸಮಾಧಾನವು ಗ್ರಾಮ ಮುನಸಿಫರಿಂದ . . ನಮೂದು ಮಾಡಲ್ಪಡಬೇಕು (ಗ್ರಾಮಾಶ. ೩೪).
[←ಪಾರ. ಹಿಂ. ಮರಾ. ಯಾ]

**ಯಾಂಡು** (ನಾ). ವರ್ಷ ; ಸಂವತ್ಸರ : ಶ್ರೀರಾಜೇನ್ದ್ರಚೋಟದೇವರ್ಗೆ ಯಾಣ್ಡು ೧೯ ಆವುದಾ ಸಕವರಿಷ ೯೫೩ನೆಯ . . . ಬ್ರಿಹಸ್ಪತಿವಾರದನ್ದು (ಪ್ರಿಇಂ. ೦೯೯೦, ೨೩-೬; 1030); ಶ್ರೀ ರಾಜೇನ್ದ್ರಚೋಳದೇವರ್ಗ್ಗೆ ಯಾಣ್ಡು ಇರ್ಪ್ಪತ್ತ ನಾಲ್ಕಾವುದು (ಎಕ.X, ಕೋಲಾರ.೦೪-೩; 1035). 'ಇಯಾಂಡು', ' ಎಡು ', ' ಮೊನೆಯೇಡು ' ಪರಾ.
[ದೇ.॥ ತಮಿ. ಯಾಣ್ಡು ; ಮಲ. ಆಣ್ಡು ; ತೆಲು. ಏಡು]

**ಯಾಂತ್ರಿಕ** (ಗು). ೧. ಯಂತ್ರಕ್ಕೆ ಸಂಬಂಧಿಸಿದ. ೨. ಯಂತ್ರದಿಂದ ತಯಾರಾದ ; ಯಂತ್ರಸಿದ್ಧವಾದ. (ನಾ). ೩. (ಭೂತ, ಪಿಶಾಚಿಗಳ ಪೀಡಾ ಪರಿಹಾರಕ್ಕಾಗಿ) ಯಂತ್ರ ಬರೆದು ಕಟ್ಟುವವನು : ಯಾಂತ್ರಿಕನ ಯಂತ್ರ ಮಂತ್ರ ಸಂಬಂಧದಿಂದ ಪಿಶಾಚಗ್ರಸ್ತನ ಪಿಶಾಚಿಯು ಪಲಾಯನ ಮಪ್ಪ ತೆಱನಂತೆ (ಕನ್ನಪ. ೪. ೦೯-೪೦). ೪. (ಆಲಂ) ಯಂತ್ರದಂತೆ ಕೆಲಸ ಮಾಡುವಿಕೆ ; ಯಾವ ವಿವೇಚನೆಯೂ ಇಲ್ಲದಿರುವಿಕೆ : ಮೌಢ್ಯ ರೀತಿಯಲ್ಲಿ ಯಾಂತ್ರಿಕವಾಗಿ ನಡೆಯುವುದು ಶ್ರೀಕೃಷ್ಣನ ಯೋಗಮತವಲ್ಲ (ಭಾರದ. ೦೦೯). [ಸಂ.]

**ಯಾಕೂತ** (ನಾ). ೧. ಕೆಂಬಣ್ಣದ ರತ್ನ ; ಮಾಣಿಕ್ಯ ; ಪದ್ಮರಾಗ. ೨. ಬೂದಿ ಬಣ್ಣದ ರತ್ನ : ಯಾಕೂತವೂ ಅಪೂರ್ಣ ಸ್ಫಟಿಕರೂಪವಾದ ಸಾಧಾರಣ ಖನಿಜವು ; ಇದಕ್ಕೆ ಬೂದಿ ಬಣ್ಣವಿರುವುದು (ಮುಂಜಾಯ. ೬-೪೬). ೩. ನೀಲವರ್ಣದ ಹರಳು : ಇದರೊಳಗೆ (Quartz) ನೀಲವರ್ಣವು ವಿಶ್ರವಾಗಿದ್ದರೆ ಯಾಕೂತವೆನ್ನುವರು (ಮುಂಜಾಯ. ೬-೩೪೯).
[←ಅರ. ಹಿಂ. ಮರಾ. ಯಾಕೂತ್ ; ಪಾರ, ಯಾಖೂತ್]

**ಯಾಕೆ** ' ಏನ್₁ ' ಪರಾ.

**ಯಾಗ** (ನಾ). ೧. ಯಜ್ಞ ; ಕ್ರತು : ದಿವಿಜಾಪಗೆ ನೋಡೆ ಕೂಡೆ ಕರ್ಪಡರ್ದಣೆಯಾದುದಾ ಯಮುನೆಗಗ್ಗದ ಯಾಗದ ಧೂಮದೇಟೆಗೆಯೊಳ್ (ಶಂಕಥಾ. ೬-೩೬) ; ವಿಗಡ ಯಾಗಕೆ ಸಕಲ ರಾಯರು ಹಗೆ (ಕುವ್ಯಾಸ. ೨-೩೪). ೨. ದೇವಪೂಜೆ ; ಭಗವದರ್ಚನೆ : "ಯಜ್ಞಃ, ಯಾಗಃ . . . ಯಾಜ್ಯಂ, ಈ ೧೦ ದೇವಪೂಜೆ" (ಅಶಕ್ಯ. ೦೬೪). [ಸಂ.]

**ಯಾಗಕುಂಡ** (ನಾ). ಹೋಮಕ್ಕಾಗಿ ರಚಿಸುವ ಅಗ್ನಿಯ ಕುಂಡ ; ಅಗ್ನಿಕುಂಡ ; ಯಜ್ಞಕುಂಡ : ಯಾಗಕುಂಡವನು ಬೇಗನೆ ಮಾಡಿ (ಕೋಗಿಲೆ. ೨೨-೪). [ಸಂ.]

**ಯಾಗಗೆಯ್** (ಕ್ರಿ). ಯಜ್ಞವನ್ನು ಮಾಡು : ಯಾಗಗೆಯ್ವಂ ಸ್ಥಪತಿ ಯಕ್ಕು (ಪಂಗರಾ. ೬೬-೦೪). [ಯಾಗ + ಕೆಯ್₁]

**ಯಾಗದೀಕ್ಷೆ** (ನಾ). ಯಜ್ಞ ಮಾಡುವುದಕ್ಕೆ ಮುಂಚೆ ಯಜಮಾನನಿಗೆ ಅಧಿಕಾರವನ್ನು ಕೊಡುವುದು ; ಯಜ್ಞದೀಕ್ಷೆ : ಯಾಗದೀಕ್ಷೆಯು ನೃಪಂ ಮಂತ್ರವಾರಿಸ್ನಾತನಾಗಿ ಬಳಿಕ . . . ಹಮುಮಂ ತರಿಸಿ (ಕೃಷ್ಣಾ. ೩೪-೦೨). [ಸಂ. ಯಾಗದೀಕ್ಷಾ]

**ಯಾಗದ್ವೇಷಿ** (ನಾ). ಯಜ್ಞಕ್ಕೆ ವೈರಿಯಾದವನು ; ಯಜ್ಞವಿರೋಧಿಯಾದವನು: ಈಸು ಘನವೇ ಕೃಷ್ಣ ಯಾಗದ್ವೇಷಿಗಳು ಪಿರಿದಾಗಲಿವಗಿನ್ನೆ ಸಲೇ ವರರಾಜಸೂಯಾಧ್ವರಕೆ ಸಂನ್ಯಾಸ (ಕುವ್ಯಾಸ. ೨-೨೩).
[ಸಂ. ಯಾಗದ್ವೇಷಿನ್]

**ಯಾಗಧ್ವಂಸಕ** (ನಾ). ಯಜ್ಞವನ್ನು ಹಾಳುಮಾಡುವವನು : ರಾಕ್ಷಸ ಇವ ನಿಸ್ಸಂಶಯನು ವಿಜಯವಲಿ ಯಾಗಧ್ವಂಸಕನ ನೆಱೆ ಮುರಿವುಪಾಯವ ಕಾಣೆ ನಾನು (ಕುವ್ಯಾಸ. ೨-೨೪). [ಸಂ.]

**ಯಾಗಪ್ಪ** (ನಾ). ಕಲ್ಲನ್ನು ಸೀಳಲು ಉಪಯೋಗಿಸುವ ಉಳಿ : (*).
[ ? ]

**ಯಾಗಮಂಟಪ** (ನಾ). ಯಜ್ಞಕಾರ್ಯಕ್ಕಾಗಿ ನಿರ್ಮಿಸಿದ ಚಪ್ಪರ : ಇಂದ್ರಪ್ರಸ್ಥಕ್ಕೆ ಉತ್ತರದಿಗ್ಭಾಗದೊಳ್ . . . ಯಾಗಮಂಟಪಮಂ ಸಮೆದು (ಶಂಕಥಾ. ೬-೩೩ ವ). [< ಸಂ. ಯಾಗಮಂಡಪ]

**ಯಾಗರಕ್ಷೆ** (ನಾ). ಯಜ್ಞಕಾರ್ಯವು ಸುಸೂತ್ರವಾಗಿ ನಡೆಯುವಂತೆ ಕಾಪಾಡುವುದು ; ಯಜ್ಞರಕ್ಷಣೆ: ವರಮುನೀಂದ್ರರ ಯಾಗರಕ್ಷೆ ಬಲವಳಿಯುತಿದೆ (ಹಕಣ. ೯-೦೦). [ಸಂ. ಯಾಗರಕ್ಷಾ]

**ಯಾಗವ್ರತ** (ನಾ). ಯಜ್ಞದ ಆಚರಣೆ ; ಯಾಗಕರ್ಮ : ಆಹಾ ಯಾಗವ್ರತಕೆ ಭಂಗವ ತಹುದೆ ಜೀಯ (ಕುವ್ಯಾಸ. ೨-೨೬). [ಸಂ.]

**ಯಾಗಶಾಲೆ** (ನಾ). ಯಜ್ಞಕಾರ್ಯ ನಡೆಯಲು ನಿರ್ಮಿಸುವ ಚಪ್ಪರ; ಯಜ್ಞಶಾಲೆ: ಪುರೋಹಿತಾನುಮತದಿಂ ನಾಲ್ಗಾವುದದಳತೆಯೊಳ್ ಯಾಗಶಾಲೆಯುಂ ನೇರ್ಪಡಿಸಿ . . . ಯಾಗಂಗಳಂ ನೆರೆಯಿಸುತಿರ್ದರ್ (ರಾಮಾಶ್ವ. ೧೬-೪). [ಸಂ. ಯಾಗಶಾಲಾ]

**ಯಾಚಕ** (ನಾ). ೧. ಬೇಡುವವನು ; ಪ್ರಾರ್ಥಿಸುವವನು : ಯಾಚಕ ವಾಚಕ . . . ಸಮಸ್ತಜನಕ್ಕಂ ಬೇಡಿದುದಂ ಕೊಟ್ಟು (ಸುಕುಮಾ. ೬-೨೩ ವ); ರತುನಭಂಡಾರವನು ತೆಗೆತೆಗಸಿ ಮನದಣಿಯೆ ಯಾಚಕರಿಗಿತ್ತುದನೆನಗೆ ಬಣ್ಣಿಸಲಳವೆ (ಕುವ್ಯಾಶ. ೬-೧೮). ೨. ತಿರುಕ ; ಭಿಕ್ಷುಕ : ಯಾಚಕ ನಡಿಸೆಂದು ಕನವರಿಸಿ ಯಾಚಿಸಲು ನಾಚಿಕೊಂಡಂತೆ (ಸರ್ವಜ್ಞ. ೩೪೬). [ಸಂ.]

**ಯಾಚಕತ್ವ** (ನಾ). ಬೇಡುವಿಕೆ ; ಯಾಚನೆ : ಸ್ಥಲಜ್ಞಾನ ಯಾಚಕತ್ವವು ಸ್ಥಲಭರಿತನ ಮುಟ್ಟಬಲ್ಲುದೆ (ಪೋಲವಾ. ೯-೩೨). [ಸಂ.]

**ಯಾಚನಕ** (ನಾ). =ಯಾಚಕ ೧ : " ವನೀಪಕಃ, ಯಾಚನಕಃ, ಮಾರ್ಗಣಃ, ಯಾಚಕಃ, ಅರ್ಥೀ – ೫ ಕೇಳುವವನ ಹೆಸರು ; ಬೇಡುವವನು " (ಅಭಿಧಾ. ೩೩೬). [ಸಂ.]

**ಯಾಚನೆ** (ನಾ). ಬೇಡುವಿಕೆ ; ಬೇಡಿಕೆ ; ಪ್ರಾರ್ಥನೆ : "ಅಧ್ಯೇಷಣಾ, ಏಷಣಾ, ಯಾಞ್ಞಾ, ಯಾಚನಾ, ಪ್ರಾರ್ಥನಾ, ಅರ್ಥನಾ—ಈ ೬ ಬೇಡುಹ" (ಹಲಾಯು: ೫೯-೨೦೫); ಪ್ರಯತ್ನದಿಂ ಯಾಚನೆಯಂ ಮಾಡಿ ಭಕ್ತಿಯಿಂದ ಬ್ರಾಹ್ಮಣರಿಗೆ ದಾನವ ಕೊಡು (ಕಕುಮಾ. ೯೯-೦೩). [ಸಂ. ಯಾಚನಾ]

**ಯಾಚಿತ** (ಗು). ೧. ಬೇಡಿದ ; ಕೇಳಿಕೊಂಡ ; ಪ್ರಾರ್ಥಿಸಿದ. (ನಾ). ೨. ಬೇಡಿ ಪಡೆದುದು ; ಭಿಕ್ಷೆ : ಮೃತಮೆನೆ ಪಡೆಗುಂ ತಾಂ ಯಾಚಿತಮುಂ ಮತ್ತಮೃತಶಬ್ದಮುಂ ಪಡೆಗುಮಯಾಚಿತಮುಂ (ವಸ್ತುಕೋ. ೦೩೯-೦೦೯). ೩. ತಿರುಪೆ ; ಭಿಕ್ಷಾವೃತ್ತಿ. [ಸಂ.]

**ಯಾಚಿತಕ** (ನಾ). ಬೇಡಿ ಸಂಪಾದಿಸಿದುದು ; ಕೇಳಿ ಪಡೆದುದು : "ಯಾಚಿತಕಂ, ಯಾಂಚಯಾ ಆಪ್ತಂ—೨ ಕೇಳುವುದರಿಂದ ಹೊಂದಲ್ಪಟ್ಟದ್ದು, ಎರವು ತಂದದ್ದಕ್ಕೂ ಹೆಸರು" (ಸಿದ್ಧಾಂತಿ. ೨೬೪). [ಸಂ.]

**ಯಾಚಿಸು** (ಕ್ರಿ). ಬೇಡಿಕೊಳ್ಳು ; ಯಾಚನೆ ಮಾಡು : ಅಲಸದೆ ಯಾಚಿಪುದಕ್ಕಂ . . . ಅರ್ಹರ್ ಪಾರ್ವರ್ (ಸಮಚ. ೧೦-೯೪); ನರರುಮಂ ಯಾಚಿಸದ ಭಾಷೆಯಿಂತರಜಸಕೆ ಕೈಮುಗಿಯದದು ನಿಬ್ಬರದ ಭಾಷೆ (ಬಸವ. ೩-೬) ; ಯಾಚಿಸಿದನಂಗಮಂ ಸುತನನಾಳುಹೆಂದೆನಗೆ ಸೂಚಿಸಿದನೀ ದ್ವಿಜಂ (ಕೈಬಿಭಾ. ೨೩-೪೯). [(ಸಂ. ಯಾಚನ) + — ಇಸು]

**ಯಾಜ** (ನಾ). ಯಜ್ಞ ಮಾಡುವವನು : ದ್ರೋಣಭಯದಲಿ ಸಕಲ ವಿಪ್ರಶ್ರೇಣಿಯಿರೆ ಯಾಜೋಪಯಾಜರು ಪ್ರಾಣನಿಸ್ಪೃಹರಾಗಿ ಮಾಡಿಸಿದರು ಮಹಾಕ್ರತುವ (ಕುವ್ಯಾಆ. ೭-೬೦). [ಸಂ.]

**ಯಾಜಕ** (ನಾ). ೧. ಯಜ್ಞವನ್ನು ಮಾಡುವವನು : ಯಾಗಕರ್ತ. ೨. ಯಜ್ಞವನ್ನು ಮಾಡಿಸುವವನು ; ಯಜ್ಞಪುರೋಹಿತ ; ಋತ್ವಿಕ್ಕು : ಯಾಜಕಂ ತಾನಪ್ಪೆನಧ್ವರಕೆ (ಕೈಬಿಭಾ. ೫-೩೫); ಈರೆಣ್ಬರ್ ಯಾಜಕರೋರೊಂದು ದೆಸೆಯೊಳ್ ಸಾಮಗಾನಮಂ ಪಾಡುತುಂ (ರಾಮಾಶ್ವ. ೦೩೩-೪): ೩. ಧರ್ಮಗುರು ; ಪೂಜಾರಿ : ನಿನ್ನ ಜನಪದವೆ ನಿನ್ನ ಯಾಜಕರೆನಗೆ ನಿನ್ನನೊಪ್ಪಿಸುವಂತೆ ನೀನೇನ ಗೆಯ್ದೆ ? (ಗೊರೊಕ್ಷಾ. ೫-೦೨೫). [ಸಂ.]

**ಯಾಜನ** (ನಾ). ೧. ಯಜ್ಞವನ್ನು ಮಾಡಿಸುವಿಕೆ : ಯಜ್ಞಕಾರ್ಯಕ್ಕೆ ತೊಡಗಿಸುವಿಕೆ ; ಬ್ರಾಹ್ಮಣನು ಆಚರಿಸಬೇಕಾದ ಷಟ್ಕರ್ಮಗಳಲ್ಲಿ ಒಂದು : ಭವಿಷ್ಯದ್ವಿಜನ್ಮವರ್ಣಕಧ್ಯಯನಾಧ್ಯಾಪನ ದಾನಪ್ರತಿಗ್ರಹ ಯಜನ ಯಾಜನ ವಿಶಿಷ್ಟವೃತ್ತಿಯುಮಂ . . . ನಿಜಾಸಿ (ಅಭಿ. ೯-೬೩ ವ) ; ಯಜ[ನಯಾ]ಜನಾಧ್ಯಯನಾಧ್ಯಾಪನ ದಾನ ಪ್ರತಿಗ್ರಹ ಷಟ್ಕರ್ಮನಿರತರುಂ . . . ಅಷ್ಟ ಶ್ರೀಮನ್ಮಹಾಗ್ರಹಾರಂ ಪೂಲಿಯೂರಡೆಯ ಪ್ರಮುಖಸಾಸಿರ್ವರ್ಮಹಾಜನಂಗಳ ದಿಬ್ಯಶ್ರೀಪಾದಂಗಳನಾರಾಧಿಸಿ (ಎಕ. V, ೯೪೯-೨೫ : 1097). ೨. ಅರ್ಚನೆ ; ದೇವಪೂಜೆ : " ಇಷ್ಟಂ . . . ಯಾಜನಂ . . . ಯಾಜ್ಯಂ—ಈ ೧೦ ದೇವಪೂಜೆ " (ನಾಕೋ. ೧೬೦). [ಸಂ.]

**ಯಾಜಮಾನ್ಯ** (ನಾ). ೧. ಯಜ್ಞಕರ್ತನಾಗಿರುವಿಕೆ : ಹುದಿದ ನವನೀತಾನುಲೇಪದ ಹೊದೆವ ಕೃಷ್ಣಾಜಿನದ ಹಸ್ತಾಗ್ರದಲೆಸೆವ ಸಾರಂಗಶೃಂಗದ ಯಾಜಮಾನ್ಯದಲಿ . . . ಅಂತರ್ವೇದಿಗೈತಂದನು ಮಹಿಪಾಲ (ಕುವ್ಯಾಸ. ೭-೨೯); ಯಾಜಮಾನ್ಯದೊಳೆಸೆವ ಭೂಪಾಲನಂ ಕಂಡು ವಾಜಿಗಳನೊಪ್ಪಿಸಿ ಪದಾಂಬುಜಕೆ ಪೊಡಮಟ್ಟೊಡೆ (ಕೈಬಿಭಾ. ೩೩-೨೯). ೨. ಒಡೆತನ ; ಯಜಮಾನಿಕೆ : ರಾಮಾಯಣದ ಕಾಲದಲ್ಲಿದ್ದ ರಾಜ್ಯಗಳೆಲ್ಲ ತಂದೆಯ ಯಾಜಮಾನ್ಯವನ್ನುಳ್ಳ ಕುಟುಂಬದ ಮಾದರಿಯಲ್ಲಿ ಇದ್ದಂಥವು (ಶಾರದ. ೯೫) ; ಈ ಮನೆಯ ಸ್ವಾಮಿತ್ವ, ಯಾಜಮಾನ್ಯವೆಲ್ಲ ತನ್ನ ಪಾಲಿನದು (ಪಾತ್ರರ. ೩೦೬); ತಾಯಿ ರೋಗದಿಂದ ಹಾಸಿಗೆ ಹತ್ತಿ ಮಲಗಿದ್ದಳು ; ಆದ್ದರಿಂದ ಅವಳದೇ ಯಾಜಮಾನ್ಯ (ಬಾಳಿಮ. ೦೯೦). [ಸಂ.]

**ಯಾಜಿ** (ನಾ). ೧. ಯಾಗ ಮಾಡಿಸುವವನು : ಯಜ್ಞ ಪುರೋಹಿತ : ಅರಿದ ಯಾಜಿಗೆ ಬಾಹ್ಯಯಜ್ಞದಲೇಸು ಫಲ (ಗಗತಾ. ೦೩-೪೦); ನಾನು ನಿನ್ನನ್ನಿಲ್ಲಿಗೆ ಕರೆತಂದುದು ಮುಖ್ಯವಾಗಿ ಇದು ಯಾಜಿಗಳ ಸ್ಥಳವೆಂದು (ದೇವಮೂ. ೦೫೪). ೨. ಪೂಜಿಸುವವನು ; ಅರ್ಚಕ : '' ಯಟ್, ಯಾಟ್, ಯಾಜೀ . . . ಯಾಯಜೂಕಃ — ಈ ೭ ಪೂಜಿಸುವಂ '' (ನಾಕೋ. ೦೬೦). ೩. ಯಜ್ಞ ; ಯಾಗ. ೪. = ಯಾಜಕ ೧. 'ಸೋಮಯಾಜಿ' ನೋ. [ಸಂ.]

**ಯಾಜ್ಞ** (ಗು). ಯಜ್ಞಕ್ಕೆ ಸಂಬಂಧಿಸಿದ : ಯಜ್ಞದ ಕಾರ್ಯಕ್ಕೆ ಸಂಬಂಧಪಟ್ಟ. [ಸಂ.]

**ಯಾಜ್ಞವಲ್ಕ್ಯಸ್ಮೃತಿ** (ನಾ). ಪ್ರಸಿದ್ಧವಾದ ಹತ್ತೊಂಬತ್ತು ಸ್ಮೃತಿಗಳಲ್ಲಿ ಒಂದು ; ಯಾಜ್ಞವಲ್ಕ್ಯ ಎಂಬ ಮುನಿಯಿಂದ ರಚಿತವಾದ ಸ್ಮೃತಿ : ಯಾಜ್ಞವಲ್ಕ್ಯಸ್ಮೃತಿಯು ವಿಷ್ಣುಸ್ಮೃತಿಗಿಂತ ಹಿಂದಿನದಲ್ಲ (ಶಾರದ. ೫೦). [ಸಂ.]

**ಯಾಜ್ಞಸೇನಿ** (ನಾ). ಯಜ್ಞಸೇನನೆಂಬ ನಾಮಾಂತರವನ್ನು ಹೊಂದಿದ್ದ ದ್ರುಪದರಾಜನ ಮಗಳು ; ದ್ರೌಪದಿ : ಯಜ್ಞವೇದೀಸಂಭವೆಯುಂ ಯಾಜ್ಞಸೇನಿಯುಂ . . . ಎನಿಸಿದ ಪಾಂಚಾಲರಾಜತನೂಜೆ ಪವಮಾನತನೂಜನಲ್ಲಿಗೆ ವಂದು . . . ನೊಂದು ನುಡಿಯೆ (ಗದಾಯು. ೦-೫೫ ವ). [ಸಂ. ಯಾಜ್ಞಸೇನೀ]

**ಯಾಜ್ಞಿಕ** (ಗು). ೧. ಯಜ್ಞಕ್ಕೆ ಸಂಬಂಧಪಟ್ಟ. (ನಾ). ೨. ಯಜ್ಞಕರ್ತ ; ಯಾಜಕ : ಯಜ್ಞರಿಪುಗಳು ನಿಪುಣರಿಗೆ ವರಯಾಜ್ಞಿಕರಿಗಾಚಾರ ಹೀನರು (ಕುವ್ಯಾಸ. ೦೦-೩೨). ೩. ಯಜ್ಞ ಮಾಡಿಸುವವನು ; ಯಜ್ಞಪುರೋಹಿತ. ೪. (ಯಜ್ಞಕಾರ್ಯದಲ್ಲಿ ಉಪಯೋಗಿಸಲಾಗುವ) ಅರಳಿ, ಮುತ್ತುಗ ಮೊದಲಾದ ಮರ : "ಯಾಜ್ಞಿಕಃ—ಅರಳಿ, ಮುತ್ತುಗ" (ಓಸಂ. ೦೩೨). [ಸಂ.]

**ಯಾಜ್ಞೀಯ** (ಗು). ಯಜ್ಞಕ್ಕೆ ಸಂಬಂಧಿಸಿದ ; ಯಜ್ಞಕ್ಕೆ ಸೇರಿದ : ಇದೀಗಳ್ ಸಮಯಂ ಯಾಜ್ಞೀಯಾಶ್ವಮಂ ಪೂಜಿಸಲ್ಕೆ (ರಾಮಾಶ್ವ. ೦೭-೯). [ಸಂ.]

**ಯಾಜ್ಯ** (ಗು). ೧. ಯಜ್ಞಕ್ಕೆ ಸಂಬಂಧಿಸಿದ. (ನಾ). ೨. ಯಾಗ ಮಾಡಲು ಅರ್ಹನಾದವನು ; ಯಜ್ಞಕರ್ತ ! ಯಾಜ್ಯ ಯಾಜನಕೆ ಪರಿಸುವೊಡಂಗಿರಸನ ಸುತಂ ಪೂಜ್ಯನೆವಿಪ್ರಾ ಕುಲದವರ್ಗೆ (ಕೈಬಿಭಾ. ೫-೨೪). ೩. ಇನ್ನೊಬ್ಬರಿಗಾಗಿ ಯಜ್ಞಮಾಡುವವನು. ೪. ಅರ್ಚನೆ ; ದೇವಪೂಜೆ : "ಇಷ್ಟಂ, ಇಷ್ಟಿಃ . . . ಯಾಜ್ಯಂ—ಈ ೧೦ ದೇವಪೂಜೆ (ನಾಕೋ. ೦೬೦). [ಸಂ.]

**ಯಾಣ** (ನಾ). ಯಾನ ; ಸಂಚಾರ : ಜಗಪ್ರವಾಸದ ಖಗಪ್ರಯಾಣ ಗುಹ್ಯಾತ್ ಗುಹ್ಯತರಂ ಈ ಯಾಣ (ಅರಳು. ೪೯೭-೦೫). [ < ಪ್ರಾ. ಯಾಣ./ಸಂ. ಯಾನ]

**ಯಾತ$_1$** ' ಏತ$_1$ ' ನೋ.

**ಯಾತ$_2$** (ಗು). ೧. ನಡೆದ ; ಮುಂದೆ ಚಲಿಸಿದ. (ನಾ). ೨. ಹೋಗುವಿಕೆ ; ಹೋಗುವುದು ; ಗಮನ : ' ಯಾತಾಯಾತ ' ಪರಾ. ೩. ಅಂಕುಶಪ್ರಯೋಗದಿಂದ ಆನೆಯನ್ನು ಮುಂದಕ್ಕೆ ನಡೆಸುವುದು : "ಅಂಕುಶ(ವಾ)ಚಾರಣಮಂ ಯಾತಮೆಂಬುದು" (ಹಲಾಯು. ೩೭-೩೯). ೪. ಕಾಲಾಳು : ಪದಾತಿ : "ಯಾತಂ ಪದಾತಿಕಂ ಪಾಯದಳ ಪತ್ತಿ ಪಾದಾತಂ ಪದಾಜಯ ಪದಿಕನೆನೆ ಕಾಲಾಳ್" (ಮಂಗರಾ. ೯೫-೨೬). [ಸಂ.]

**ಯಾತಕೆ** ' ಏನ್$_1$ ' ಪರಾ.

**ಯಾತಕ್ಕೆ** ' ಏನ್$_1$ ' ಪರಾ.

**ಯಾತನ** (ನಾ). ತೀವ್ರವಾದ ಹಿಂಸೆ; ಯಾತನೆ: "ಆ ಯಾತನಂ ಕಾರಣಂ ದಂಡಣೆ(ನೆ)ಯೆನಿಕ್ಕು" (ಪಂಗರಾ. ೧೧೬-೧); ಪುಣ್ಯದ ಹಾದಿಗಳ ಬಿಟ್ಟು ಅಂತಕನ್ನ ಯಾತನದಿ ನೀ ಕಷ್ಟಪಟ್ಟು (ಭರತೇಶ. ೪-೧೯-೩).
[ಸಂ. ಯಾತನಾ]

**ಯಾತನೆ** (ನಾ). ತೀವ್ರವಾದ ಹಿಂಸೆ,-ಬಾಧೆ: ಉತ್ಕಟವಾದ ದುಃಖ: "ಯಾತನೆ ಗುರುವೇದನೆ" (ವಸ್ತುಕೋ. ೨೦-೧೧); ನಮ್ಮ ಎರಡು ಕಣ್ಣುಗಳಲ್ಲಿ ಯಾವುದನ್ನು ಚುಚ್ಚಿದರೆ ತಾನೆ ಯಾತನೆಯಾಗುವು ದಿಲ್ಲ? (ಶಿಶಿರ. X. ೧೮); ಅವಳು ಅನುಭವಿಸಿದ ಮಾನಸಿಕಯಾತನೆ ಯನ್ನು ಮರೆಮಾಚಲೂ ಸಹ ಪ್ರಯತ್ನಿಸಲಿಲ್ಲ (ಶಾಂತಲ. ೧೧೯).
[ಸಂ. ಯಾತನಾ]

**ಯಾತನೆಗೊಳ್** (ಕ್ರಿ). ತೀವ್ರವಾದ ಬಾಧೆಗೊಳಗಾಗು,— ವೇದನೆ ಯನ್ನು ಅನುಭವಿಸು: ಮನೆಯೆಂದುಂ ಮಕ್ಕಳೆಂದುಂ . . . ತಾಪ ತ್ರಯದೊಳ್ ಕುದಿದೆಂ ಬತ್ತಿದೆಂ ಬಾಡಿದೆಂ ಯಾತನೆಗೊಂಡೆಂ ದೇವ (ರತ್ನಾಕ. ೨೨). [ಯಾತನೆ + ಕೊಳ್$_1$]

**ಯಾತಯಾಮ** (ಗು). ೧. ಒಂದು ರಾತ್ರಿಯಷ್ಟು ಹಳೆಯದಾದ: ತಂಗುಳಾದ. ೨. ಹಳಸಿದ; ಕೆಟ್ಟುಹೋದ; ನಿಷ್ಪ್ರಯೋಜಕ ವಾದ. ೩. ವಯಸ್ಸಾದ; ಜೀರ್ಣವಾದ; ಶಿಥಿಲವಾದ. (ನಾ). ೪. ಹಳಸಿಹೋದುದು: "ಯಾತಯಾಮಂ — ಹಳಸಿ ಹೋದದ್ದು, ಅನುಭವಿಸಿಯಾದ್ದು; ತಿಂದು ಜೀರ್ಣಿಸಿಹೋದದ್ದು" (ಸಿದ್ಧಾಂತ. ೪೧೮). ೫. ಮುದುಕ; ವೃದ್ಧ: "ಯಾತಯಾಮಂ ವೃದ್ಧಂ ಸ್ಥವಿರಂ ತಾಂ" (ವಸ್ತುಕೋ. ೫೬-೨೬). [ಸಂ.]

**ಯಾತವ್ಯ** (ನಾ). ಯುದ್ಧದಲ್ಲಿ ಎದುರಿಸಲು ಯೋಗ್ಯನಾದವನು; ಶತ್ರು: ಆತನಿನ್ನೆವರೆಗಂ (ವ್ಯಾನರು) ಯಾತವ್ಯರುಮಾಜ್ಞಾವಿಧಾನ ಸ್ಥಾನರುಮಪ್ಪ ನಮ್ಮೊಳಾದುದು ಸಯೋಪಾಯಂ ವ್ಯವಹಾರಸಮಾನನು ಮಮಾನನುಮಲ್ಲದಿರ್ಪನ್ನೆಗಳಲ್ಲಿಗೇ ವಿಧೇಯಂ ಮಾಟ್ಟುದೆಂದು . . . ನುಡಿದು (ಶಾಂತಿಪು. ೨-೩೫ ವ). [ಸಂ.]

**ಯಾತಾಯಾತ** (ನಾ). ಹೋಗುವುದು ಮತ್ತು ಬರುವುದು: ಸಂಚಾರ: ಓಡಾಟ: ಯಾತಾಯಾತ ಮಾಡುವುದನ್ನು ಚೆನ್ನಾಗಿ ಬಲ್ಲೆನು. ಎಲ್ಲಿಗೆ ಹೋಗೆಂದರೆ ಅಲ್ಲಿಗೆ ಹೋಗಬಲ್ಲೆನು (ದೇಶೀಕ. ೫೦); ಊರ ದಾರಿಗಳಲ್ಲಿ ಯಾತಾಯಾತ ಒಂದು ಬಗೆಯಾಗಿ ನಿಂತೇ ಹೋಗಿದೆ (ಇಕ್ಷು. ೪). [ಸಂ.]

**ಯಾತು** (ನಾ). ೧. ದಾರಿಗ; ಪ್ರಯಾಣಿಕ. ೨. ರಾಕ್ಷಸ. ೩. ಪಿಶಾಚಿ. ೪. ಮಾಟ; ಮಾಯಾವಿದ್ಯೆ. ೫. ನೈಋತ್ಯ ದಿಕ್ಕಿನ ಅಧಿಪತಿ; ನಿಋತಿ: "ಯಾತು, ಯಾತುಧಾನಃ, ಕ್ರವ್ಯಾತ್, ರಾಕ್ಷಸಃ, ರಕ್ಷಸ್ . . . ಕೈಕಸೇಯಃ — ಈ ೯ ನೈಋತಿಯ ಪೆಸರ್" (ಹಲಾಯು. ೧೩-೭೩). [ಸಂ.]

**ಯಾತುಧಾನ** (ನಾ). ೧. = ಯಾತು ೨: "ರಕ್ಷಃ ಕೋಣಪ ನೈಋತ ರಾಕ್ಷಸಪುಣ್ಯಜನ ಯಾತುಧಾನ ಕ್ರವ್ಯಾದ ಕ್ಷಣದಾಚರರೆಂದು ಸದ್ಯಕಾರ್ಥಂಗಳ್ ನಿಶಾಟ ಪರ್ಯಾಯಂಗಳ್" (ವಸ್ತುಕೋ. ೬-೪೨). ೨. = ಯಾತು ೩. ೩. = ಯಾತು ೫: "ಯಾತು, ಯಾತುಧಾನಃ, ಕ್ರವ್ಯಾತ್, ರಾಕ್ಷಸಃ, ರಕ್ಷಸ್ . . . ಕೈಕಸೇಯಃ — ಈ ೯ ನೈಋತಿಯ ಪೆಸರ್" (ಹಲಾಯು. ೧೩-೭೩); ಯಾತುಧಾನ ಕುಬೇರ ಕಿನ್ನರ ಮಾತೃಗಣ ಕರ್ಣನಲಿ ಸುಮ ನೋಜಾತ ಚಿತ್ರರಥಾದಿ ಗಂಧರ್ವರು ವಿಪಕ್ಷದಲಿ ಭೂತಗವೀಚಿಯಲಿ . . . ನಾರದಾದಿ ಮಹಾತಪಸ್ವಿಗಳತ್ತಲಾಯಿತು (ಕುಮಾ.ಭ. ೨೨-೮). [ಸಂ.]

**ಯಾತೃ** (ನಾ). ೧. = ಯಾತು ೧. ೨. ರಥವನ್ನು ನಡೆಸುವವನು; ಸಾರಥಿ. ೩. ನೆಗಣ್ಣೆ; ಓರಗಿತ್ತಿ: "ಯಾ(ತಾ)ತೃವೆಂಬುದು ನಗೆವೆಣ್ಣು" (ಹಲಾಯು. ೬೪-೩೫೪). [ಸಂ.]

**ಯಾತ್ಯ** (ಗು). ೧. ಚಿತ್ರಹಿಂಸೆಗೆ ಗುರಿಯಾಗುವ: ನರಕಯಾತನೆಗೆ ಗುರಿಯಾಗುವ. (ನಾ). ೨. ನರಕಯಾತನೆಗೆ ಈಡಾದ ಜೀವ: ಪ್ರೇತ: "ನಾರಕಾಃ, ಪ್ರೇತಾಃ, ಯಾತ್ಯಾಃ, ಅತಿಪಾಪಿಕಾಃ — ಈ ೪ ನಾರಕರ್" (ಹಲಾಯು. ೧೧೩-೩). [ಸಂ.]

**ಯಾತ್ರಾದಾನ** (ನಾ). ೧. (ರಾಜನು ತನ್ನ) ಪ್ರಯಾಣದ ಆರಂಭ ಕಾಲದಲ್ಲಿ ಮಾಡುವ (ನವಧಾನ್ಯಗಳ) ದಾನ: ಧರ್ಮರಾಯನು ಬ್ರಾಹ್ಮಣೋತ್ತಮರಿಗೆ ಅನೇಕ ಧನಗಳನ್ನು ಯಾತ್ರಾದಾನವಾಗಿ ಕೊಟ್ಟು . . . ಹಸ್ತಿನಾಪುರಕ್ಕೆ ಹೊರಟನು (ಕೃವಾಸ. ೧೨೬). ೨. ರಥೋತ್ಸವದ ಆರಂಭದಲ್ಲಿ ಪೂಜಾರಿಯು ಕೊಡುವ ದಾನ: (೬). [ಸಂ.]

**ಯಾತ್ರಾರ್ಥಿ** (ನಾ). ತೀರ್ಥಕ್ಷೇತ್ರಗಳ ದರ್ಶನಾರ್ಥವಾಗಿ ಹೊರಟ ವನು; ಯಾತ್ರಿಕ: ಅನಂತರ ಕೃಷ್ಣದೇವರಾಯನು ವಾನಪ್ರಸ್ಥಾಶ್ರಮ ಸ್ವೀಕಾರ ಮಾಡಿದವನಂತೆ ಯಾತ್ರಾರ್ಥಿಯಾದನು (ಕಥಲ. ೧೧೦).
[ಸಂ. ಯಾತ್ರಾರ್ಥಿನ್]

**ಯಾತ್ರಾಸ್ಥಳ** (ನಾ). ಪುಣ್ಯಕ್ಷೇತ್ರ; ಪವಿತ್ರಸ್ಥಳ: ತೀರ್ಥಕ್ಷೇತ್ರ: ಯಾತ್ರಾಸ್ಥಳಗಳಿಗೆ ಜನರು ಹೋಗಿ ಬರುವುದು ಹೆಚ್ಚಾಗಿರುವುದರಿಂದ ಅಲ್ಲಿಗೆ ರಸ್ತೆಗಳನ್ನು ಸಾಮಾನ್ಯವಾಗಿ ಹಾಕಿರುವರು (ಭೂವಿವ. ೩೧).
[ಸಂ. ಯಾತ್ರಾಸ್ಥಲ]

**ಯಾತ್ರಿಕ** (ನಾ). ೧. ಯಾತ್ರೆ ಮಾಡುವವನು; ದಾರಿಕಾರ; ಪ್ರವಾಸಿ: ಯಾತ್ರಿಕರು ಮೈಸೂರು ತುಂಬುವ ಕಾಲ ತಪ್ಪಿದರೆ, ಅಲ್ಲಿ ಹೆಚ್ಚಿಗೆ ವ್ಯಾಪಾರವಿಲ್ಲ (ಮರಮ. ೫೨೩). ೨. = ಯಾತ್ರಾರ್ಥಿ: ಮೂವರು ಯಾತ್ರಿಕರೂ ಒಬ್ಬರ ಮುಖವನ್ನೊಬ್ಬರು ನೋಡತೊಡಗಿದರು (ಶ್ರೀರಾಮ. ೩). [ಸಂ.]

**ಯಾತ್ರೆ** (ನಾ). ೧. ಪಯಣ; ಪ್ರಯಾಣ: "ಯಾತ್ರೆ ಪ್ರಸ್ಥಾನಮೆನೆ ಪಯಣಮದು" (ಪಂಗರಾ. ೬೫-೨೬); ಮಂದಹಾಸದಲಸುರರಿಪು ನಗುತೇದ ನೆಲ್ಲಿಗೆ ಯಾತ್ರೆ ಕೋಪಿಸುವಂದವಾರೊಡನೆನಲು (ಕಭಾಗ. ೧೧-೭೨-೩೧): ಅಜ್ಜನ ಮನೆಯ ಯಾತ್ರೆಯು ಇದಕ್ಕೆ ಅನುಕೂಲವಾಯಿತು (ಮರಮ. ೨೬೭). ೨. ಪುಣ್ಯಕ್ಷೇತ್ರಗಳ ದರ್ಶನಾರ್ಥವಾಗಿ ಮಾಡುವ ಪ್ರಯಾಣ: ಇಂದು ನಾಳೆಯೆನುತ್ತ ಯಾತ್ರೆಗೆ ಬಂದವರ ಬೀಳ್ಕೊಡದೆ ಪರಮಾನಂದವನು ನಿತ್ಯಾತ್ಮ ಕೃಷ್ಣನು ಸಲಿಸಿದನು ಜಗಕೆ (ಕಭಾಗ. ೧೧-೭೩-೪೫); ಯಾತ್ರೆಗೆ ಬರುವವರನ್ನು ಬೇಡವೆಂದಾರೆ? (ಶ್ರೀರಾಮ. ೨೧೮). 'ಕಾಶೀಯಾತ್ರೆ', 'ತೀರ್ಥಯಾತ್ರೆ' ಪರಾ. ೩. ಯುದ್ಧಕ್ಕಾಗಿ ಸೈನ್ಯ ಹೊರಡುವುದು; ಕಾಳಗ ಅಥವಾ ಧಾಳಿಗಾಗಿ ಶಿಸ್ತಿನಿಂದ ಹೊರಡುವ ದಂಡಯಾತ್ರೆ: ಪ್ರಸ್ಥಾನ: "ಯಾತ್ರಾ, ವ್ರಜ್ಯಾ, ಅಭಿನಿರ್ಯಾಣಂ, ಪ್ರಸ್ಥಾನಂ, ಗಮನಂ, ಗಮಃ — ೬ ಜಯಾರ್ಥವಾಗಿ ಹೊರಟ ಅರಸಿನ ಪ್ರಯಾಣಕ್ಕೆ ಹೆಸರುಗಳು" (ಸಿದ್ಧಾಂತ. ೨೬೭). ೩. (ಯಾವುದಾದರೂ ದೇವತೆಗೆ ವರ್ಷಕ್ಕೊಂದು ಸಲದಂತೆ ನಿಯತಕಾಲದಲ್ಲಿ ನಡೆಸುವ ತೇರಿನ) ಉತ್ಸವ: ಜಾತ್ರೆ. ೪. ಮೆರವಣಿಗೆ: ವಾದಿತ್ರಾರಾವಂ ವಂದಿವೃಂದಧ್ವನಿ ಜಯಜಯಕೋಲಾಹಲಂ ಮಂಗಲಾಲಂಕಾರಂ ಯಾತ್ರೋತ್ಸವ ಪ್ರಸ್ತುತಮೆನೆ ತಳರ್ದಂ ರಾಗದಿಂ ರಾಜರಾಜಂ (ಆದಿಪು. ೧೩-೪೩); ಉಣ್ಮಿದತ್ತು ಪೊಟಲೊಳ್ . . . ಬಂಧುರಂ ಮದನಾ ಯಾತ್ರೋತ್ಸಾಹನಿವೇದಕಂ ಕನಕಕೋಣಾಘಾತಭೇರೀರವಂ (ಚಂದ್ರಪ. ೨-೧೦೯). ೫. ಅನುಸರಣೆ; ಹಿಂಬಾಲಿಸುವುದು: "ಅನುಸರಿಸುವಲ್ಲಿಯುಂ ಯಾತ್ರಾ ಎಂಬುದು" (ಹಲಾಯು. ೧೬೬-೩೨). ೬. ಜೀವನಾಧಾರ; ಜೀವನೋಪಾಯ. ೭. ಪದ್ಧತಿ; ಸಂಪ್ರದಾಯ; ರೂಢಿ.
[ಸಂ. ಯಾತ್ರಾ]

**ಯಾಥಾತ್ಮ್ಯ** (ನಾ). ನಿಜಸ್ಥಿತಿ; ಸ್ವಭಾವ: ಸಂಶಯವಿಪರ್ಯಯಾನಧ್ಯವಸಾಯ ಸ್ವಭಾವರಹಿತಮಾಗಿ ಜೀವಾದಿಪದಾರ್ಥಯಾಥಾತ್ಮ್ಯ

ವಗಮುಂ ಸಮ್ಯಗ್ಜ್ಞಾನಂ (ಅಜಿತ. ೧೦-೬೩ ವ). [ಸಂ.]

**ಯಾಥಾರ್ಥ್ಯ** (ನಾ). ವಸ್ತುಸ್ಥಿತಿ ; ನಿಜಸ್ಥಿತಿ : ಯಾಥಾರ್ಥ್ಯವೆಂಬ ಪ್ರಾಮಾಣ್ಯವು ಸ್ವತಃಗ್ರಾಹ್ಯ (ಹಿಂದೂಶಾ. ೦೭೭). [ಸೆರಿ.]

**ಯಾದ₁** (ನಾ). (ಮರವನ್ನು ಹತ್ತುವ) ಒಂದು ಬಗೆಯ ಇಲಿ : ಎಳನೀರುಗಳನ್ನೆಲ್ಲಾ ಯಾದ ಕುಡಿದು ಉದುರಿಸಿದ್ದುವು (ಪಷ್ಮೂರು. ೨೭೦).

**ಯಾದ₂** (ನಾ). ಕ್ರೂರವಾದ ಜಲಚರಪ್ರಾಣಿ : "ಅಂಭಶ್ಚರೋಗ್ರಸತ್ತ್ವಂ ಯಾದಂ" (ಪಟ್ಟಕೋ. ೨೨-೪). [< ಸಂ. ಯಾದಸ್]

**ಯಾದ₃** (ನಾ). ನೆನಪು ; ಸ್ಮರಣೆ ; ಜ್ಞಾಪಕ : ಶರ್ಕಾ ಮತ್ತ ಯಾದ ಹಚ್ಚಿ ಶೋಧ ಮಾಡಿ ಕೇಳತೀನಿ ಒಂದ ಸೋಕಾ (ಹುಚ್ಚುಹ. ೪೨); ಒಂಧಿಷ್ಟು ಯಾದ ಇರಲಿ ಅವರ ಅನ್ನದ್ದು (೧೯ಶಹ. II, ೪೨೨). [← ಪಾರ. ಹಿಂ. ಮರಾ. ಯಾದ್]

**ಯಾದಃಪತಿ** (ನಾ). ೧. ಸಮುದ್ರ ; ಕಡಲು : "ಸಮುದ್ರಃ, ಅಬ್ಧಿಃ . . . ಯಾದಃಪತಿಃ, ಅಪಾಂಪತಿಃ — ೧೫ ಸಮುದ್ರದ ಹೆಸರುಗಳು, ಅಂದರೆ ಕಡಲು" (ಸಿದ್ಧಾಂತಿ. ೬೭). ೨. ಪಶ್ಚಿಮದಿಕ್ಪಾಲಕ : ವರುಣ : ದಂತವಕ್ತ್ರಂ . . . ವನಮಾಲಾಸ್ಪದನೆಂದು ಯಾದಃಪತಿಯುನದಿರ್ಪಿಯುಂ ಅದ್ರಿಧರನೆಂದು ಪವಮಾನನನವಮಾನಿಸಿಯುಂ (ಜಗಂ. ೯-೩೩ ವ). [ಸಂ.]

**ಯಾದಗಾರಿ** (ನಾ). ನೆನಪು ; ಸ್ಮೃತಿ : ಈ ಮಿತ್ರತ್ವ ಶಾಶ್ವತವಾಗಿ ನಡೆದು ಬರುವುದಕ್ಕೆ ಯಾದಗಾರಿ ಗುರ್ತಾ ದೋಸ್ತಿಮಾರ್ಗದಿಂದ ಕೇಳುತ್ತೇವೆ (ರಾಜೇಂದ್ರ. ೯೮). [← ಪಾರ. ಹಿಂ. ಮರಾ. ಯಾದ್‌ಗಾರೀ]

**ಯಾದವ** (ಗು). ೧. ಯದುವಿನಿಂದ ಬಂದ ; ಯದುಕುಲಕ್ಕೆ ಸೇರಿದ : ಯಾದವವಂಶದೊಳ್ ನೆಗಟ್ದ ಚಕ್ರಧರಂಗೆ ಮುರಾಂತಕಂಗೆ . . . ಸೇಸೆಯ ನಿಕ್ಕಿದರ್ (ಬಂಹರಿ. ೦೨-೬೨). (ನಾ). ೨. ಯದುವಂಶಕ್ಕೆ ಸೇರಿದವನು : ಧನ್ಯರೆಮ್ಮವೊಲದಾರ್ ಮುನ್ನಾದವರ್ ಯಾದವರ್ (ಜಗಂ. ೩-೫) ; ಯಾದವರು ಕೌರವರೊಳುಂಟೇ ಭೇದ (ಕುಮಾ.ಉ. ೦-೨೭). ೩. ಕೃಷ್ಣ : ಯಾದವ ನೀ ಬಾ ಯದುಕುಲನಂದನ (ಪುರಂದ. ೦-೦೩ ಪಲ್ಲವಿ). ೪. ಹೊಯ್ಸಳವಂಶ ಮತ್ತು ಆ ವಂಶಕ್ಕೆ ಸೇರಿದವನು : ಸಳನೆಂಬ ಯಾದವಂ ಪೊಯ್ಸಳನಾದಂ (ಎಕ. V, ಅರಸೀ. ೦೨೭-೦೦; 1185). 'ಯಾದವಕುಳ' ಪರಾ. ೫. ಸೇವುಣವಂಶದವನು : ಈ ಪ್ರಕಾರ ಯಾದವ ಅರಸರು ಕರ್ನಾಟಕದ ಉತ್ತರಭಾಗವನ್ನು ಕ್ರಿ.ಶ. ೧೩೧೧ನೇ ವರ್ಷದವರೆಗೆ ಆಳಿದರು (ಕರಾಗ. ೩೩೦).

ಯಾದವರೆಜೆಯ = ಯಾದವರ ಒಡೆಯ ; ಕೃಷ್ಣ : ಅವಧಾನ ಜೀಯ ನಮ್ಮಿ ಪೊಳಲ ಪೊರೆಗೆ ಯಾದವರೆಜೆಯುನಿದೆ ಬಂದನು (ಕೃಷಚರಿ. ೨-೯೭). [ಸಂ.]

**ಯಾದವಕಲಹ** (ನಾ). ೧. ಯಾದವರಲ್ಲಿಯೇ ಉಂಟಾದ ಜಗಳ,— ಹೊಡೆದಾಟ. ೨. (ಅಲಂ) ಅಂತಃಕಲಹ ; ಒಳಜಗಳ : ಈ ಯಾದವ ಕಲಹದಿಂದ ಅವರೆಲ್ಲರೂ ಹತರಾದರು (ಮಹಿಸ. ೬೫). [ಸಂ.]

**ಯಾದವಕುಲ**, ಯಾದವಕುಳ (ನಾ). ೧. ಯಾದವರ ವಂಶ ; ಯದುಕುಲ. ೨. = ಯಾದವ ೩ : ಯಾದವಕುಲನಿಸೆ ತಿಂತಿಣಿಯಾದವನೀಪಾಲಕುಲದ ಹಯಸಂತತಿಯುಂ ಸಾದಿಗಳಂ ರಣರಾದ್ರರಸಾದಿಗಳಂ ತುಬಿಱಗಿ ನಟ್ಟುವಸ್ತ್ರಾವಳಿಗಳ್ (ಜಗಂ. ೯-೩೪). **ಯಾದವಕುಳ** : ೩. = ಯಾದವ ೪ : ದ್ವಾರಾವತೀಪುರವರೇಶ್ವರಂ ಯಾದವಕುಳಾಂಬರದ್ಯುಮಣಿ . . . ವೀರ ವಿಷ್ಣುವರ್ಧನದೇವಂ (ಎಕ. V, ಚನ್ನರಾ. ೦೯೯-೨ ; 1120). [ಸಂ.]

**ಯಾದವಕುಳ** 'ಯಾದವಕುಲ' ನೋ.

**ಯಾದವಿ₁** (ಗು). ೧. ಯಾದವರಿಗೆ ಸಂಬಂಧಿಸಿದ. (ನಾ). ೨. (ಅಲಂ) ಅಂತಃಕಲಹ ; ಒಳಜಗಳ : ಅದೊಂದು ಯಾದವಿಯ ಪರಿಣಾಮ ಬಹೆನ್ (ಪೂರಿಹ. ೬೭). [< ಸಂ. ಯಾದವೀಯ]

**ಯಾದವಿ₂** (ನಾ). ೧. ಯದುವಂಶಕ್ಕೆ ಸೇರಿದವಳು. ೨. ವಸುದೇವನ ಸಹೋದರಿಯೂ ಶಿಶುಪಾಲನ ತಾಯಿಯೂ ಆದ ಸಾತ್ವತಿ : ದಿಗಿಲಿಟ್ಟು — ಬೇಟೆಗಳಿಂದ ಯಾದವಿಯಿಟ್ಟು ಕೃಷ್ಣನಿರಿದ ವರವನ್ನು ಕೇಳಿದಳು (ರಜಶಾ. ೯೪). ೩. ದುರ್ಗೆ; ಪಾರ್ವತಿ. ೪. ಕುಂತಿ. [ಸಂ. ಯಾದವೀ]

**ಯಾದವೀಕಲಹ** (ನಾ). (ಅಲಂ) ಒಳಜಗಳ ; ಅಂತಃಕಲಹ : ಹನ್ನೊಂದನೆಯ ಶತಮಾನದಿಂದಾಚೆ . . . ಯಾದವೀಕಲಹಗಳು ಎದ್ದು, ದೇಶ ನಾನಾ ರಾಜರ ಕೈಸೇರಿತು (ಶಾರದ. ೪೯೭). [ಸಂ.]

**ಯಾದಸ** (ನಾ). ೧. = ಯಾದ₂ : ಉದಧಿಯೊಳ್ಮಾಗಲೋರಂತೆ ಯಾದಸಗಳುಂಡು ಸುಖಿಸಲಿ (ವೆಂಕಟಾ. ೩-೩-೧೩). ೨. ನೀರು ; ಜಲ. [ಸಂ. ಯಾದಸ್]

**ಯಾದಸಾಂನಾಥ** (ನಾ). ಜಲಚರಗಳ ಅಧಿಪತಿ; ವರುಣ. [ಸಂ.]

**ಯಾದಸಾಂಪತಿ** (ನಾ). = ಯಾದಸಾಂನಾಥ : "ಪ್ರಚೇತಾ, ವರುಣಃ, ಪಾಶೀ, ಯಾದಸಾಂಪತಿಃ, ಅಪ್ಪತಿಃ — ೫ ವರುಣನ ಹೆಸರುಗಳು" (ಸಿದ್ಧಾಂತಿ. ೨೪). [ಸಂ.]

**ಯಾದಾಸ್ತ** 'ಯಾದಾಸ್ತು' ನೋ.

**ಯಾದಾಸ್ತು**, ಯಾದಾಸ್ತ (ನಾ). ೧. ನೆನಪಿಗೆ ಬರಲು ಸಹಾಯಕವಾದ ಟಿಪ್ಪಣಿಕಾಗದ,— ಸೂಚನಾಪತ್ರ ; ಜ್ಞಾಪಕಪತ್ರ : ಮುತ್ತುಭಟ್ಟನ ಕೈಯಲ್ಲಿ ಒಂದು ಯಾದಾಸ್ತು ಬರಕೊಟ್ಟು ಕಳುಹಿದಲ್ಲಿ (ರಾಜೇಂದ್ರ. ೫೪) : ಒಂದು ಯಾದಾಸ್ತು ತೋರಿಸಿದರು. ಅದು ಸಭೆಯ ನೋಟೀಸು (ಕರಹೀ. ೦೦೫). ೨. "ಸರಿಸಮಾನರಾದ ಅಧಿಕಾರಿಗಳಿಗೆ ಬರೆಯುವ ಸರ್ಕಾರಿ ಒಕ್ಕಣೆ" (ಪಷ್ಮೂರು. ೩೫೩ ಟಿಪ್ಪಣಿ) : ಇತ್ತಿಲ್ಲೇ ಅಂತ ಬರೆಯಬೇಕಾದಲ್ಲಿ ಯಾದಾಸ್ತು ಅಂತ ಬರೆಯುತ್ತಿದ್ದರು (ಪಷ್ಮೂರು. ೦೫೩). **ಯಾದಾಸ್ತ** : ೧. ಶ್ರೀ ಪರಕಾಲಸ್ವಾಮಿಗಳವರ ಮಠಕ್ಕೆ ಸಾಗ್ಸಿಕೊಂಡು ಬರುವ ಅಕ್ಕಿ ಗೋಣಿಗೆ ಮಠದ ಪಾರಪತ್ಯಗಾರ ಯಾದಾಸ್ತ ಮೈಸೂರಿಗೆ . . . ಸುಂಕದ ಬಗ್ಗೆ ತಡೆಯದೆ ಬಿಡುವುದು (ಮೈಆ. ೦೯೩೯, ೨೦-೩ ; 1816). [← ಪಾರ. ಹಿಂ. ಯಾದ್‌ದಾಶ್ತ್; ಮರಾ. ಯಾದ್‌ದಾಸ್ತ್]

**ಯಾದಿ** (ನಾ). ನೆನಪಿಗಾಗಿ ಬರೆದಿಟ್ಟುಕೊಂಡ ವಸ್ತುಗಳು, ವ್ಯಕ್ತಿಗಳ ಹೆಸರು ಮೊದಲಾದುವುಗಳ ಪಟ್ಟಿ : ಒಂದೇ ಸಾರಿಗೆ ಎಲ್ಲ ಸಾಮಾನುಗಳನ್ನು ತಂದುಬಿಡಬೇಕೆಂದು ಎಲ್ಲದರ ಯಾದಿ ಮಾಡಿಕೊಳ್ಳುತ್ತೇನೆ (ಸಂಬಿಗ. ೩); ಹೊಸಪುಸ್ತಕಗಳ ಯಾದಿಯನ್ನು . . . ನಿನಗೆ ತರಿಸಿಕೊಡುತ್ತೇನೆ (ಸತಜೀ. ೩೦೩) ; ನಾನು ಈಗಾಗಲೇ ಈ ಹಳ್ಳಿಯಲ್ಲಿ ಹೊಲವಿಲ್ಲದ ಜನರ ಯಾದಿಯನ್ನು ಸಿದ್ಧಪಡಿಸಿದ್ದೇನೆ (ಮುಕ್ತಿಮು. ೩೪೯). [← ಮರಾ. ಯಾದೀ]

**ಯಾದೃಚ್ಛಿಕ** (ಗು). ೧. ಸ್ವಚ್ಛಂದವಾದ ; ನಿಯಮಕ್ಕೆ ಒಳಪಡದ : ಒಂದು ಪರಿಮಾಣದ ಅಳತೆಯನ್ನು ಹತ್ತಾರು ಸಾರಿ ಮಾಡಿದಾಗ ಅವರ ಲೋಪ ಪ್ರತಿಸಾರಿಯೂ ಒಂದೊಂದು ಬೆಲೆಯುಳ್ಳದ್ದಾದರೆ ಅದನ್ನು ಯಾದೃಚ್ಛಿಕಲೋಪವೆನ್ನುತ್ತಾರೆ (ಅಭಿಕೋ. I, ೩೩೦). ೨. ಅನಿರೀಕ್ಷಿತವಾದ; ಆಕಸ್ಮಿಕವಾದ : ಕೇವಲ ಬಾಹ್ಯಸುಖಗಳಲ್ಲಿ ಆಸಕ್ತನಾಗಿರುವವನು ಕರ್ಮಪರಿಪಾಕದಿಂದಲೋ, ಯಾದೃಚ್ಛಿಕ ಸುಕೃತದಿಂದಲೋ ಅಧ್ಯಾತ್ಮವಿಷಯವನ್ನು ಅರಿಯುವನು (ಶಾರದ. ೨೬೩). [ಸಂ.]

**ಯಾದೃಚ್ಛಿಕಂ** (ಅ). ಮನ ಬಂದಂತೆ ; ಸ್ವಚ್ಛಂದವಾಗಿ ; ಬೇಕಾದ ಹಾಗೆ : ಪದ್ಮಣಾರ್ಯಂ . . . ಶಿವೈಕ್ಯಪ್ರಕರಸಹಿತನಾಗಿ ಲಿಂಗಾರ್ಚನಮುನಾ ಕೇಳಿಯೊಳುರುತರಾನಂದದಿಂ ಯಾದೃಚ್ಛಿಕಂ ರಚಿಸಿ ಹರ್ಷದಿಂ ಬಂದು ನಿಂದು (ಪದ್ಮರಾ. ೬-೯೩). [ಸಂ.]

**ಯಾದೃಚ್ಛಿಕವಾದ** (ನಾ). ಕಾರ್ಯಕಾರಣಭಾವವನ್ನು ಒಪ್ಪದೆ, ಎಲ್ಲವೂ ತನ್ನಿಂದ ತಾನೆ ಆಗುವುದೆಂದು ಹೇಳುವವರ ವಾದ ; ಸ್ವಭಾವವಾದ ; ನಿರಪೇಕ್ಷವಾದ : ಒಬ್ಬ ಪುರುಷನ ಬುದ್ಧಿಪೂರ್ವಕ

ಇಚ್ಛಾಸಂಕಲ್ಪ ಪ್ರಯತ್ನಗಳಿಂದ ಈ ಪರಿಣಾಮಪರಂಪರೆ ಉಂಟಾಗುವ ಹಾಗೆ ಕಂಡುಬರುವುದಿಲ್ಲ. ಇದಕ್ಕೆ ನಿಯತವಾದ ನಿಯಾಮಕವಿಲ್ಲದಿರುವುದರಿಂದ ಇದೇ ಯಾದೃಚ್ಛಿಕವಾದವು (ಹಿಂದಶಾ. ೧೫). [ಸಂ.]

**ಯಾದೃಶ** (ಗು). ಯಾವುದರಂತಹ ; ಯಾವ ಬಗೆಯ ;. ಯಾವ ರೀತಿಯ. [ಸಂ.]

**ಯಾದೋಜಾತಿ** (ನಾ). (ಉಗ್ರವಾದ) ಜಲಚರಗಳ ವರ್ಗ : ಹೇಳಲಾರಳವು ಗುರುಕಥನವಿಳೆಯಂ ಬಳಸಿ ವೇಳಾತಟಂಗಳಿಂ . . . ಕರಿ ಮಕರ ನೀರಾನೆ ಯಾದೋಜಾತಿ ಜಾಳವಿದ್ರುಮರತ್ನಬುದ್ಬುದಾಫೇನಂಗಳೊಳ್ ಯಿಂದೆಸೆವ ನೀರಾಕರಂ ಭೂಮಂಡಲಕ್ಕೆ ಪರಿವೇಷದಂತೆ (ಸಿದ್ಧರಾ. ೧-೧೭). [ಸಂ.]

**ಯಾದೋನಾಥ** (ನಾ). = ಯಾದಸಾಂನಾಥ : " ವರುಣಂ ಪಶ್ಚಿಮದಿಕ್ಪತಿ ಶರನಿಧಿಪತಿ ಪಾಶಪಾಣಿ ಯಾದೋನಾಥಂ " (ವಸ್ತುಕೋ. ೬-೪೩). [ಸಂ.]

**ಯಾನ** (ನಾ). ೧. ಹೋಗುವಿಕೆ ; ಚಲನೆ ; ಸಂಚಾರ : ಹಕ್ಕಿಗೊದಗಿತು ಮತ್ತೆ ಬಾನಯಾನ (ಚಾವಗೀ. ೧೦೦). ೨. ಪಯಣ ; ಪ್ರವಾಸ : ಯಾನಶ್ರಮಹರವಾಗೆನಿತಾನುಂ ವಿಜಯಾರ್ಧಶೈಲಸಾನುಸ್ಥಳದೊಳ್ ತಾನಿರ್ದಂ ವಜ್ರಾಯುಧಭೂನಾಥಂ ಸೇನೆವೆರಸು ಕೆಲವಾನು ದಿನಂ (ಶಾಂತೀಶ್ವ. ೧೨-೧೭). ೩. ನಡೆ ; ನಡಗೆ : ಯಾನಸೌಮ್ಯದೊಳವಿಂ ನೆಲನುಗ್ಗಡಿಪಂತೆ ಮುಂದೆ ಸಂಧಿಸಿದುದು ನೂಪುರಸ್ವನಸಮಾಹೃತಗೇಹಮರಾಳಮಂಡಲಂ (ಚಂದ್ರಪ್ರ. ೧೦-೯) ; ಕಳರವಮಂ ಪಿಕಾಂಗನೆಗೆ ಮಂಜು ಮೃದೂಕ್ತಿಗಳಂ ಪೊವಳ್ದ ಪೆಣ್ಗಿಳಿಗೆ ನವೀನಯಾನಮನಸೂನಮರಾಳಿಗೆ ಶಿಕ್ಷೆಗೆಯ್ಯಲೋಪಳೆ ನಡೆ ನಂದನಕ್ಕೆ (ರಾಜಶೇ. ೧೦-೦೦). ೪. ಪಲ್ಲಕ್ಕಿ ; ಮೇನೆ : ಮೀನು ಹಿಡಿಯುವವನು . . . ರಥದ ಮೇಲಾಗಲಿ ಯಾನದ ಮೇಲಾಗಲಿ ಹೋಗುವುದನ್ನು ನೀವು . . . ಕಂಡಿರುವಿರ ? (ಬಾತಕ. ೧೭೨). ೫. ರಥ ಮೊದಲಾದ ಯಾವುದಾದರೂ ವಾಹನ : " ಯಾನಂ, ಯುಗ್ಯಂ, ಪತ್ರಂ, ಧೋರಣಂ — ೪ ಸರ್ವಂ ವಾಹನಂ, ನಾನಾ ಬಗೆಯಾದ ಸಕಲ ವಾಹನಗಳಿಗೂ ಹೆಸರುಗಳು" (ಸಿದ್ಧಾಂತ. ೨೩೪). ' ಯಾನಶಾಲೆ ' ಪರಾ. ೬. ವಾಹಕ ; ಮಾಧ್ಯಮ : ಪರಮಾನುಭವಗಳುಲಿಯನುಭವಿಗಳೊಳಕಿವಿಗೆ ಒರಟು ಯಾನವೊ ಭಾಷೆ (ಮಂಕುತಿ. ೬೩). ೭. ಕಾಲುವೆ ; ನಾಲೆ : " ಯಾನಂ, ಸಾರಿಣೀ — ಈ ೨ ಹರಿಕೆಣಿ" (ಹಲಾಯು. ೧೩೦-೬೩). ೮. ಮಾರ್ಗ ; ದಾರಿ : ' ಯಾನಯುಗಳ ' ಪರಾ. ೯. [ರಾಜನೀ] ರಾಜನ ಷಡ್ಗುಣಗಳಲ್ಲಿ ಒಂದು ; ವೈರಿಗಳ ಮೇಲೆ ಏರಿ ಹೋಗುವುದು ; ಯುದ್ಧಕ್ಕೆ ಹೊರಡುವುದು : ಕಿಕ್ಕಿಱಿಗಿಱಿದ ಧವಳಚ್ಛತ್ರಂಗಳೊಳ್ ತಳ್ಪೊಯ್ದು ಯಾನವಿಮಾನಂಗಳೊಳ್ ಪಾಯ್ದಾಯ್ದು ತಟ್ಟಿಕ್ಕುವ ಧವಳಚಮರರುಹಂಗಳ ಮುಂದೆ ಪೊಳೆವ ದುಗ್ಧಾಬ್ಧಿ ಫೇನಪಿಂಡಪಾಂಡುರಂಗಳಪ್ಪೊಪ್ಪರಂಗಳೊಳಂ . . . ಪರಭಾಗಯುದೆನು (ಶಾಂತಿಪು. ೧೦-೨೦ ವ); ಯಾನಲೀಲೆಯುಮಂ ನೋಟ್ಟ ವಿಯಚ್ಚರರ್ಗೆ ತೆಱಪರಿ ಮಾಡಿತ್ತು ಕಣ್ಣಾರ್ವಿನಂ (ಪುಷ್ಪದ. ೩-೪೩). ' ಷಾಡ್ಗುಣ್ಯ ' ಪರಾ. ೧೦. [ಬೌದ್ಧ] ಜ್ಞಾನದ ಅರಿವನ್ನು ಉಂಟುಮಾಡುವ ಕ್ರಮ ; ನಿರ್ವಾಣಪ್ರಾಪ್ತಿಯ ಮಾರ್ಗ : ' ಮಹಾಯಾನ ', ' ಹೀನಯಾನ ' ಪರಾ. [ಸಂ.]

**ಯಾನನಾಗ** (ನಾ). ಸವಾರಿಯ ಆನೆ ; ಪ್ರಯಾಣಕ್ಕೆ ಬಳಸುವ ಆನೆ : ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೊಱಮಟ್ಟನೇಱೆ ಜಯಮಂ ಜಯಪರ್ವತಯಾನನಾಗಮಂ (ಶಾಂತಿಪು. ೧೦-೦೪೪). [ಸಂ.]

**ಯಾನಪಾತ್ರ** (ನಾ). ದೋಣಿ ; ನಾವೆ : ಪರಿವೃತಸ್ವಪತ್ರಂಗದೇಪಮಾರ್ಗಾಂತರಗತಬೋಧವಿಶೇಷಯಾನಪಾತ್ರಂ ಪರಮಗುಣಪರೀತ ಕಾವ್ಯರತ್ನಾಕರದುರುಪಾರಮನೆಯ್ದುಗುಂ ಮಹಾತ್ಮಂ (ಕವಿರಾ. ೩-೨೩೦) ; ದ್ರೋಣಿ ಯಾನಪಾತ್ರಾದಿಗಳೊಳ್ ಜಲದುರ್ಗೋತ್ತರಣಮುಮನುಪದೇಶಂಗೆಯ್ದು (ಆದಿಪು. ೬-೬೨ ವ). [ಸಂ.]

**ಯಾನಯುಗಳ** (ನಾ). [ವೇದಾಂತ] ಪರಲೋಕಕ್ಕೆ ಹೋಗುವ ಎರಡು ಮಾರ್ಗ ; ಬ್ರಹ್ಮಲೋಕವನ್ನು ಸೇರುವ ಎರಡು ಮಾರ್ಗ : ದೇವಯಾನ ಮತ್ತು ಪಿತೃಯಾನ : ಯಾನಯುಗಳದ ಜನನಮಾರ್ಗ ವಿಧಾನ ನಿರ್ಣಯವರುಹಿದನು (ಗಗತಾ. ೮ ಸೂಚನೆ). [ಸಂ. ಯಾನಯುಗಲ]

**ಯಾನಶಾಲೆ** (ನಾ). ರಥ ಮೊದಲಾದ ವಾಹನಗಳನ್ನು ಇಟ್ಟಿರುವ ಸ್ಥಳ ; ವಾಹನಶಾಲೆ : ಯಾನಶಾಲೆಗೆ ನಡೆದನೇರಿದನು ಧನದನಿಂ ಗೆಲ್ದು ತಂದಾ ಕಾಮಗಮನದ ವಿಮಾನಮಂ (ಶ್ರೀರಾಮಾ. ೨೦೭-೦೩೬). [ಸಂ. ಯಾನಶಾಲಾ]

**ಯಾನಹಸ್ತಿ** (ನಾ). = ಯಾನನಾಗ : ವಿಜಯಾರ್ಧಪರ್ವತಮೆಂಬ ಯಾನ[ಪಾಠಾಂ. ಗ]ಹಸ್ತಿಯುಂ ಪವನಂಜಯಮೆಂಬ ತುರಗರತ್ನಮುಂ (ಆದಿಪು. ೧೫-೩ ವ). [ಸಂ. ಯಾನಹಸ್ತಿನ್]

**ಯಾನೆ** (ಅ). ಎಂದರೆ ; ಅರ್ಥಾತ್ ; ಅಂದರೆ : ' ಮದ್ದು ' ಯಾನ 'ಮಾಧವ' ಶಾಲೆಯ ಹೇಳಿದುನ್ನು . . . ವ್ಯಯಿಸಿದವನಲ್ಲ (ಕಾರುಬಾ. ೫೫); ಹೆಂಡತಿಯ ತಾಯಿಯ ಸಹೋದರ ಯಾನೆ ಹೆಂಡತಿಯ ಸೋದರಮಾವನು ಸಾಧುವಾದ ಪ್ರಾಣಿಯೆಂದು ಲೋಕದ ಜನರ ನಂಬಿಕೆ (ಪಿಸರವಾ. ೩೭). [ ← ಅರ. ಯಅನೀ ; ಹಿಂ. ಮರಾ. ಯಾನೇ. ಯಾನೀ ]

**ಯಾಪನ** (ನಾ). ೧. (ಸಮಯವನ್ನು) ಕಳೆಯುವುದು. — ನವೆಸುವುದು ; ಕಾಲಕ್ಷೇಪ. ೨. ತಡ ; ವಿಳಂಬ ; ನಿಧಾನ ಮಾಡುವಿಕೆ. ೩. ಜೀವನೋಪಾಯ ; ಜೀವನಾಧಾರ. ೪. ನಡೆ ; ನಡಗೆ : "ಯಾನಂ. ಯಾಪನಂ, ಯಾಪನೀಯಂ, ಯಾತ್ರಾ — ಈ ೪ ನಡೆ" (ಕಾಳಿನ್ಯ. ೧೭೫). [ಸಂ.]

**ಯಾಪನೀಯ** (ನಾ). ೧. ನಡೆ ; ನಡಗೆ : " ಯಾನಂ. ಯಾಪನಂ, ಯಾಪನೀಯಂ, ಯಾತ್ರಾ — ಈ ೪ ನಡೆ " (ಕಾಕಳ್ಯ. ೦೭೫). ೨. [ಜೈನ] ಜೈನರಲ್ಲಿ ಒಂದು ಪಂಗಡ : ಜೈನರಲ್ಲಿ ಯಾಪನೀಯ, ನಿರ್ಗ್ರಂಥ, ಕೂರ್ಚಕ, ಶ್ವೇತಪಟ. ಅಹರಿಷ್ಟಿ ಸಂಘಗಳೆಂಬ ಪಂಗಡಗಳಿದ್ದುವು (ಕರ್ನಾಟ. ೪೦); ಉತ್ತರ ಕರ್ಣಾಟಕದಲ್ಲಿ ಯಾಪನೀಯದ ಅನೇಕ ಕೇಂದ್ರಗಳು . . . ನವಲ್‌ಗುಂದ ಮುಂತಾದ ಕಡೆ ಇದ್ದುವು (ಕಣಾಟ. ೭೫). ' ಯಾಪನೀಯ ಸಂಘ ' ಪರಾ. [ಸಂ.]

**ಯಾಪನೀಯಸಂಘ** (ನಾ). [ಜೈನ] ದಿಗಂಬರ ಮತ್ತು ಶ್ವೇತಾಂಬರ ಪಂಗಡಗಳ ಮಿಶ್ರಣವೆನಿಸುವ ಸಂಘ ; ಕಲ್ಯಾಣವೆಂಬ ನಗರದಲ್ಲಿ ವಿಕ್ರಮನ ಮರಣಾನಂತರ ೯೦೫ನೇ ವರ್ಷ ಕಳೆದಾಗ (ಇಲ್ಲಿ ಕಾಲದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಕೆಲವರು ೨೦೫ ವರ್ಷಗಳೆನ್ನುತ್ತಾರೆ) ಶ್ರೀಕಲಶ ಎಂಬ ಹೆಸರಿನ ಶ್ವೇತಾಂಬರಸಂಪ್ರದಾಯದ ಸಾಧು ಈ ಸಂಘವನ್ನು ಸ್ಥಾಪಿಸಿದನು. ಇದು ದಿಗಂಬರ ಮತ್ತು ಶ್ವೇತಾಂಬರ ಸಂಘಗಳೆರಡರ ತತ್ತ್ವವನ್ನೂ ಒಪ್ಪುತ್ತದೆ. ಇದರಲ್ಲಿ ಗುರುಗಳ ಪರಂಪರೆ ದೊರೆತಿಲ್ಲ : ನುತ ಯಾಪನೀಯಸಂಘ[ಪ್ರ]ತೀತ ಕಣ್ಡೂಗರ್ಣಾಬ್ಧಿ ಚಂದ್ರಮರೆಂದೀ ಕ್ಷಿತಿವಳೆಯಂ ಪೊಗಳ್ವ ನಮುನ್ನತಿವೆತ್ತ ಮರ್ಗ್ಗನಿ ದೇವದಿವ್ಯಮುನೀಂದ್ರರ್ (ಶಾಇಇ. XX. ೦೬-೩೦; ೪೮೦) ; ಯಾಪನೀಯ ಸಂಘಕ್ಕೆ ಕಾರಣಕರ್ತನಾದವನು ಉತ್ತರಭಾರತದ ಶ್ವೇತಾಂಬರಸಂಪ್ರದಾಯದ ವ್ಯಕ್ತಿ (ಕಣಾಟ. ೭೬). [ಸಂ.]

**ಯಾಪೆ** (ನಾ). (ಕರಾ) ಬಿದಿರಿನಿಂದ ಹೆಣೆಯುವ ಒಂದು ಬಗೆಯ ಚಾಪೆ : ಬೇಸಾಯಗಾರರ ಗಮನವೆಲ್ಲ . . . ಹಳ್ಳಕ್ಕೆ ಯಾಪೆ ಕಟ್ಟುವುದು, ಹತ್ತು ಮೀನು ಕಡಿಯುವುದು ಮೊದಲಾದ ಮೀನುಬೇಟೆಯ ಮೃಗಯಾವ್ಯಸನದಲ್ಲಿಯೂ ಆಸಕ್ತವಾಗಿತ್ತು (ಮಲೆವು. ೭೨೭). [ ? ]

**ಯಾಪ್ಯ** (ಗು). ೧. (ಕಾಲದಂತೆ) ಕಳೆಯಬೇಕಾದ; ಸವೆಸಬೇಕಾದ :(*). ೨. ನಿವಾರಿಸಬೇಕಾದ ; ಹೊರತಳ್ಳಬೇಕಾದ ; ಬಿಡಬೇಕಾದ. ೩. ಕ್ಷುದ್ರವಾದ ; ಕುತ್ಸಿತವಾದ : "ಕುತ್ಸಿತಂ ಕುಪೂಯಂ ಯಾಪ್ಯಂ" (ವಸ್ತುಕೋ. ೦೦೬-೩೯). (ನಾ). ೪. ತಂದೆಯ ಹಿರಿಯ ಸಹೋದರ. ೫. ಗುಣಪಡಿಸಲು ಸಾಧ್ಯವಾಗದ, ಆದರೆ ಚಿಕಿತ್ಸೆಯ ಮೂಲಕ ನಿಯಂತ್ರಿಸಬಹುದಾದ ರೋಗ : ಆವುದಾದರೊಂದು ವ್ಯಾಧಿಯು ಔಷಧ ಸೇವನೆ ಪರಿಯಂತರ ಹೆಚ್ಚದೆ, ತಗ್ಗದೆ ಇದ್ದು, ಆ ಔಷಧವನ್ನು ಬಿಟ್ಟು ಬಳಿಕ ಎಂದಿನ ಮರ್ಯಾದೆಯಲ್ಲಿ ಯಾವಾಗ ಹೆಚ್ಚುತಲಿದ್ದಿತೋ ಆ ರೋಗವೂ ದೋಷಾಂತರದೊಡನೆ ಕೂಡಿರುವ ರೋಗವೂ ಯಾಪ್ಯಸಾಧ್ಯಗಳೆಂದರಿವುದು (ಸಳವೃ. ೨೨). [ಸಂ.]

**ಯಾಪ್ಯಯಾನ** (ನಾ). ಪಲ್ಲಕ್ಕಿ ; ಮೇಣೆ : ಪರಿಚಾರವ್ಯಾಪಾರನಿರತರ್ . . . ಯಾಪ್ಯಯಾನಮನವಟಯಿಸಿದಾಗಳ್ (ವರ್ಧಮಾ. ೦೩-೯ ವ). [ಸಂ.]

**ಯಾಪ್ಯಯಾನಕ** (ನಾ). = ಯಾಪ್ಯಯಾನ : "ಯಾಪ್ಯಯಾನಕಮುದು ಶಿಬಿಕಾಖ್ಯಾನಂ" (ವಸ್ತುಕೋ. ೬೬-೯೦). [ಸಂ.]

**ಯಾಭ** (ನಾ). ರತಿಕ್ರೀಡೆ ; ಸಂಭೋಗ : "ನಿಧುವನ ರತ ಯಾಭ ಗ್ರಾಮ್ಯಧರ್ಮನಾಮಂ ವ್ಯವಾಯಮುದು ಮೈಥುನಮುಂ" (ವಸ್ತುಕೋ. ೫೪-೦೨). [ಸಂ.]

**ಯಾಮ** (ನಾ). ೧. ಹತೋಟಿ ; ನಿಯಮನ ; ನಿಗ್ರಹ. ೨. ದಿನದ ಎಂಟನೆಯ ಒಂದು ಭಾಗ ; ಮೂರು ಗಂಟೆಯ ಕಾಲ ; ಪ್ರಹರ ; ಜಾವ : "ಯಾಮಃ · ಪ್ರಹರಃ — ೨ ಜಾವದ ಹೆಸರುಗಳು. ಅಂದರೆ ಅಹೋರಾತ್ರದ ೬೦ ಘಳಿಗೆಗಳ ೮ ನೇ ಭಾಗವಾದ ೭ ಘಳಿಗೆಯುಳ್ಳದ್ದಾಮು, ಹೊತ್ತು" (ಸಿದ್ಧಾಂತಿ. ೩೬) ; ಎರಡನೆಯ ಯಾಮ ಆರಂಭವಾಗುತ್ತಿದೆ. ನನಗೆ ವಿಶ್ರಮಿಸಿಕೊಳ್ಳಲು ಸಾಧ್ಯವಿಲ್ಲ (ಅನ್ನಕ. ೨೭) ; ಯಾಮವು ಕಳೆದರೂ ಬರಲಿಲ್ಲವಾತನು ದೂತಿಯೆ ಹೋಗೋಣ, ಏಳು (೩೦ಕಾಶ. ೦೬೭-೨೨). ೩. ಚಲನೆ ; ಮಾರ್ಗಕ್ರಮಣ : ಯಾಮದ್ವಿಪೇಂದ್ರ ಪ್ರತಾನ ಕಟೋನ್ಮುಕ್ತಮದಾಘಕರ್ದಮಿತಕಾಂತಂ ರಾಜಗೇಹಾಜಿರಂ (ಶಂಪ್ರಪು. ೦-೦೩೦).

**ಯಾಮಪೂಜೆ** = ಸಾಯಂಕಾಲದ ಸಮಯದಲ್ಲಿ ಮಾಡುವ ಪೂಜೆ ; ಪ್ರದೋಷ ಪೂಜೆ . [ಸಂ.]

**ಯಾಮತೂರ್ಯ** (ನಾ). (ರಾತ್ರಿಕಾಲದಲ್ಲಿ) ಒಂದೊಂದು ಜಾವ ಕಳೆದಂತೆ ಅದನ್ನು ಸೂಚಿಸಲು ಬಾರಿಸುವ ಗಂಟೆ, ತಮಟೆ ಮೊದಲಾದ ವಾದ್ಯ : ರವಜಿತಯಾಮತೂರ್ಯರವವಿಶನನಬ್ಧಿಯಿ ನಿದ್ರೆಯ ತ್ರುಲುಪ್ಪವಡಿಸುವಂತು ಮಾಬ್ಬಿದು (ಶಾಂತಿಪು. ೫-೦೩೫). [ಸಂ.]

**ಯಾಮತ್ರಯ** (ನಾ). ಮೂರು ಪ್ರಹರಗಳು: ಒರ್ಮೆ ಯಾಮಿನೀಯಾಮತ್ರಯಸಮಯದೊಳ್ . . . ಗುಹೆಯಿಂ ಪೊಱಮಟ್ಟಂ (ಕಾದಂಬರಿ. ೩೩೯); ಒಂದು ದಿವಸಂ ಯಾಮತ್ರಯ ವಿರಾಮಸಮಯದೊಳ್ ತಾಂಬೂಲ ಕರಂಕವಾಹಿಕಾದ್ವಿತೀಯನುತ್ತುಂಗಸೌಧ ಶಿಖರನಿರ್ಯೂಹಪರ್ಯಂಕದೊಳ್ ಕುಳ್ಳಿರ್ದ (ಶಂಪ್ರಪು. ೨-೨೬ ವ). [ಸಂ.]

**ಯಾಮಳ** (ನಾ). ಜೋಡಿ ; ಜೊತೆ : "ಯುಗಳಂ ಯುಗ್ಮಂ . . . ಯಾಮಳಂ ದ್ವಯಂ ದ್ವಿತಯಂ" (ವಸ್ತುಕೋ. ೦೦೪-೩೫) ; ಭೀಮಬಲದೊಡನೆ ರಾಮನ ಅಭಯನಿಯಮವಿರೆ ಯಾಮಳವರುಗಳವು (ಮಂಕಶ. ೪೩೫). [ಸಂ. ಯಾಮಲ]

**ಯಾಮಿ** (ನಾ). ೧. ಒಡಹುಟ್ಟಿದವಳು ; ಸೋದರಿ. ೨. ಇರುಳು ; ರಾತ್ರಿ. ೩. ಮಗನ ಹೆಂಡತಿ ; ಸೊಸೆ. [ಸಂ.]

**ಯಾಮಿಕ** (ನಾ). ರಾತ್ರಿಯ ಕಾವಲುಗಾರ ; ಪಹರೆಯವನು ; ಪ್ರಹರಿ: ಯಾಮಿಕನಂತಾರೋಪಿತಚಾಪನಾಗಿ ಕುಸುಮಚಾಪನಂತಃಪುರಮಂ ಪೊಕ್ಕು ತೊಳಲೆಯುಂ (ಕಾದಂಬರಿ. ೩೦೪) ; ಗುಣಾಕರನುತ ಕಕ್ಕಯಂ ನಿನಗೆ ಯಾಮಿಕನಲ್ತೆ ಮನೋಜಭಂಜನಾ (ವೃಷಭ. ೬-೯೨). [ಸಂ.]

**ಯಾಮಿಕವೃತ್ತಿ** (ನಾ). ಪಹರೆಯ ಕಾಯಕ ; ಪ್ರಹರಿಯ ಕೆಲಸ : ಸದಭಿದ್ಯೋತಕನೊಳ್ ಪ್ರದೀಪಕರಣಂ ತಾನೇವುದುದ್ಬೋಧತಾಸ್ಪದನೊಳ್ ಯಾಮಿಕವೃತ್ತಿಯೇವುದು ವಿಶುದ್ಧಾಕಾರನೊಳ್ ಸಜ್ಜನವೇವುದು (ಶಂಪ್ರಪು. ೦೨-೨೦೩). [ಸಂ.]

**ಯಾಮಿನಿ** (ನಾ). ೧. ಇರುಳು ; ರಾತ್ರಿ : "ಇರುಳ್ ತಾಂ ತ್ರಿಯಾಮ್ಯೆ ಯಾಮಿನಿಯಕ್ಕುಂ" (ವಸ್ತುಕೋ. ೦೩-೫) ; ಯಾಮಿನಿಯ ಬೆನ್ನನೆ ಪೋಪ ದುಕೂಲಚೇಲದಂಚಳಮೆನೆ ಪೋಯ್ತು ಚಂದ್ರಿಕೆ (ಜಗನ್ನಾ. ೦೩-೦೩೫) ; ಸಿವಿಗೆ ಬಂದೆಸೆದಿರ್ಪುದು . . . ಯಾಮಿನಿಯಂತೆ ಚಂದ್ರರುಚಿರಾಜಿತವಕ್ತ್ರೆಯ ಮೂರ್ತಿಯಂತೆ ಮುಕ್ತಾಮಯಭಾಸಿ (ಧರ್ಮಾಮೃ. ೦೩-೬೩). ೨. ಅರಿಸಿನ : "ಯಾಮಿನೀ = ಅರಿಸಿನ" (೬೩ಧಿ. ೦೫೨). [ಸಂ. ಯಾಮಿನೀ]

**ಯಾಮಿನಿವಿಹಾರ** (ನಾ). (ಬೆಳದಿಂಗಳಿರುವ) ರಾತ್ರಿಯಲ್ಲಿ ಮಾಡುವ ವಿಹಾರ ; ಚಂದ್ರಿಕಾವಿಹಾರ : ಅನಿರುದ್ಧನೊಲಿದತಿಶಯದಿ ಸಖರೊಡನೆ ಯಾಮಿನಿವಿಹಾರಗೈವುತಲಿ . . . ಸಂತಸದಿ ಗೃಹಕೆ ಬಂದ (ನವಮೋ. ೦೫ ಸೂತ್ರ). [ಸಂ. ಯಾಮಿನೀವಿಹಾರ]

**ಯಾಮಿನೀಪತಿ** (ನಾ). ರಾತ್ರಿಯ ಒಡೆಯ ; ಚಂದ್ರ. [ಸಂ.]

**ಯಾಮಿನೀವಿಯೋಗ** (ನಾ). ರಾತ್ರಿಯು ಕಳೆದುಹೋಗುವಿಕೆ : ನಿಶಾಂತ:[ಪ್ರವ್ರ]ಜ್ಯಾಶ್ರಮಗರೂರ್ವರಾಸ್ಯತಿಲಕಂ ಯಾಮಿನೀವಿಯೋಗಮಂ ನಿರ್ವರ್ತಿಸಿ ರಾಜಮಂದಿರಕ್ಕೆ ವಂದು ಪಾರಣಾವಿಧಿಯೊಳಪ್ಪಾಹಾರ ಮನಾರೋಗಿಸಿ (ಶಾಂತಿಪು. ೯-೮೯ ವ). [ಸಂ.]

**ಯಾಮಿನೀವಿರಾಮ** (ನಾ). ರಾತ್ರಿಯ ಮುಕ್ತಾಯ : ಬೆಳಗು : ಮಱುದಿವಸಂ ಯಾಮಿನೀವಿರಾಮಮುಮಪ್ಪುದುಂ ಪ್ರಯಾಣಭೇರಿಯಂ ಪೊಯ್ಸಿದಾಗಳ್ (ಸಂಕಶಂ. ೦೨೬-೦೯). [ಸಂ.]

**ಯಾಮಿರ** (ನಾ). ಚಂದ್ರ. [ಸಂ.]

**ಯಾಮುನ** (ಗು). ೧. ಯಮುನಾನದಿಗೆ ಸಂಬಂಧಪಟ್ಟ; ಯಮುನಾ ನದಿಯಿಂದ ಬಂದ. (ನಾ). ೨. ಒಂದು ಬಗೆಯ ನೇತ್ರಾಂಜನ; ಸೌವೀರಾಂಜನ : "ಸ್ರೋತೋಂಜನಂ, ಸೌವೀರಂ, ಕಾಪೋತಾಂಜನಂ, ಯಾಮುನಂ – ೪ ಸೌವೀರಾಂಜನದ ಹೆಸರುಗಳು" (ಸಿದ್ಧಾಂತಿ. ೩೦೫); "ಯಾಮುನಂ – ನೀಲಾಂಜನ" (೬೩ಧಿ. ೦೫೨). [ಸಂ.]

**ಯಾಮುನಕ** (ನಾ). ಒಂದು ಬಗೆಯ ಖನಿಜಲವಣ ; ಮೈಲುತುತ್ತ; ಮಯೂರತುತ್ತ : "ಯಾಮುನಕಂ – ಸ್ರೋತೋಂಜನ, ಮಯೂರ ತುತ್ತ" (೬೩ಧಿ. ೦೫೨). [ಸಂ.]

**ಯಾಮ್ಯ** (ಗು). ೧. ಯಮನಿಗೆ ಸಂಬಂಧಿಸಿದ. ೨. ದಕ್ಷಿಣ ದಿಕ್ಕಿನ; ದಕ್ಷಿಣಕ್ಕೆ ಇರುವ. (ನಾ). ೩. ಯಮನ ಸೇವಕ ; ಯಮದೂತ : ಗಮ್ಯೆಯಲ್ಲದ ಸತಿಯನಾವನು ಗಮ್ಯನಲ್ಲದ ವರನನಾವಳು ರಮ್ಯವಾತದಲಿ ಗಮಿಸುವರು ರಮಿಸುವರು ಮೇಣವರ ಯಾಮ್ಯರುಭಯವ ಕಾದ ಲೋಹದ ಶರ್ಮಿಯನು ತೋಳುಗಳಲಪ್ಪಿಸಿ ಕರ್ಮ ಸವೆವನ್ನವರ ಬಿಡಲೀಸರು ದುರಾತ್ಮಕರ (ಭಾಗ. ೫-೦೦-೨೮). ೪. ಚಂದನ; ಶ್ರೀಗಂಧ. [ಸಂ.]

**ಯಾಮ್ಯದಿಶೆ** (ನಾ). ದಕ್ಷಿಣ ದಿಕ್ಕು : ತಳರ್ದು ಬಂದೀ ದ್ವಿತೀಯದ್ವೀಪದ ಯಾಮ್ಯದಿಶೆಯೊಳೆಸೆವಿಷುಕಾರಾಖ್ಯಧರಣೀಧರದ ಮೂಡಣ ಭರತದೊಳ್ (ಶಂಪ್ರಪು. ೯-೭೮ ವ); ಯಾಮ್ಯದಿಶೆಯಂತೆ ಧರ್ಮಪ್ರಭಾವವಿಭಾವಿತ ಮುಮೆಂಬ ಮಹನೀಯಮಹಿಮೆಯಂ ತಳೆದು (ಧರ್ಮಾಮೃ. ೯-೩೦ ವ). [ಸಂ. ಯಾಮ್ಯದಿಶಾ]

**ಯಾಮ್ಯದ್ರುಮ** (ನಾ). ಎಲವದ ಮರ : "ಯಾಮ್ಯದ್ರುಮಃ – ಎಲವ" (೬೩ಧಿ. ೦೫೨). [ಸಂ.]

**ಯಾಮ್ಯಾಸ್ತ್ರ** (ನಾ). ಯಮನೇ ಅಧಿಷ್ಠಾನದೇವತೆಯಾಗಿರುವ ಬಾಣ ; ಯಮಾಸ್ತ್ರ : ದಿವಿಜರಿಪು ಯಾಮ್ಯಾಸ್ತ್ರದಿಂದಿಸೆ ಭುವನ ತುಂಬಿತು ಜವನ ಜಂಗುಳಿ (ಕಾಶಿಖಾ. ४०-೩೯). [ಸಂ. ]

**ಯಾಮ್ಯೆ** (ನಾ). ೧. = ಯಾಮ್ಯದಿಶೆ : "ಯಾಮ್ಯಾ, ದಕ್ಷಿಣಾ, ಅವಾಚೀ –ಈ ಮೂರು ತೆಂಕಣ ದೆಸೆ" (ಕಠಾಯು. ೧೭-೦೦೦). ೨. ರಾತ್ರಿ. [ಸಂ. ಯಾಮ್ಯಾ]

**ಯಾಯ** (ನಾ). ಮುತ್ತುಗ : ಪಲಾಶ : "ಯಾಯಃ – ಮುತ್ತುಗ" (೬೫೦. ೦೩೨). [ ? ]

**ಯಾಯಜೂಕ** (ಗು). ೧. ಮೇಲಿಂದ ಮೇಲೆ ಯಜ್ಞಮಾಡುವ. (ನಾ). ೨. ಮೇಲಿಂದ ಮೇಲೆ ಯಜ್ಞಮಾಡುವವನು: ಸತತವಾಗಿ ಯಜ್ಞಮಾಡುವವನು : "ಯಾಯಜೂಕಃ, ಇಜ್ಯಾಶೀಲಃ—ಆಗಾಗ್ಗೆ ಯಜ್ಞಗಳನ್ನು ಮಾಡುತ್ತಲೇಯಿರುವ ಸ್ವಭಾವವುಳ್ಳವನ ಹೆಸರು" (ಸಿದ್ಧಾಂತಿ. ೨೦೪); ಅಂತಃಪುರಾಂಗನೆಯರಮಿತ್ರಪುಜಿಪರಿವಾರಸಂತರು ಯಾಯ ಜೂಕಾದಿಗಳ್ ಪರಮಪ್ರಿಯಪಾಂತು ಮುಂದ್ಯೆವಲೆಂದತಿಪರಂಪಗೊಳು ತೈದಲು (ವಂಶಾರಾ. ೨-೨೬-೩೦). ೩. ಪೂಜಕ; ಅರ್ಚಕ: "ಯಟ್, ಯಾಟ್ . . . ಯಾಯಜೂಕಃ–ಈ ೭ ಪೂಜಿಸುವಾತಂ" (ಕಾಶಕ್ಕ. ೦೬೦). [ಸಂ.]

**ಯಾಯವಾರ** (ನಾ). ೧. ತಿರುಪೆ ; ಭಿಕ್ಷೆ : ಬುಧವಾರವಾದರೆ ಯಾಯ ವಾರ ಇಕ್ಕಬಾರದೇ ? (ಗಾದೆ). ೨. ಭಿಕ್ಷಾವೃತ್ತಿ : ಯಾಯವಾರದಿ ಮನ್ನಿಸುತದೊಬ್ಬತಿಥಿಗಿಕ್ಕುತಲೇಕಭುಕ್ತದಲಿ ತನ್ನ ಪರಮೌಪಾಸನಾಗ್ನಿಯ ಭಿನ್ನವಿಲ್ಲದೆ ಬೇಳಿ ರಾತ್ರಿಯ ಕನ್ನೆಯಲಿ ವಿಜಿತೇಂದ್ರಿಯಂಗಿದು ಬದುಕು ಲೋಕದಲಿ (ಕುವ್ಯಾಅ. ಶಂ. ೩೪೦); ಯಾಯವಾರವ ಮಾಡಿ ವಿಪ್ರರಿಗೆ ವ್ಯಾಪ್ಯಾನ್ನ ಪ್ರೀಯದಲಿ ತಾನೊಂದು ಕೊಡದ ಲೋಭಿ . . . ಗಾಯನವ ಮಾಡಲವ ಹರಿದಾಸನೇ (ಜಗನಾ. ೫೬). [ <ಸಂ. ಯಾಯಾವರ ]

**ಯಾಯಾವರ** (ಗು). ೧. ಅಲೆಮಾರಿಯಾದ ; ಎಲ್ಲಿ ಬೇಕೆಂದರಲ್ಲಿ ತಿರುಗಾಡುವ ; ನೆಲೆಯಿಲ್ಲದ. (ನಾ). ೨. ಧಾನ್ಯದ ಭಿಕ್ಷೆ ; ಕೋರಾನ್ನ : "ಯಾಯಾವರಃ—ಕೋರಾನ್ನ್ಯ[ನ್ನಂ]" (ಕಾಶಕ್ಕ. ೦೬೩) ; ಯಾಯಾವರಂ ತಕ್ಕುದ ತಂದು ಜಡೆಯ ಶಂಕರಂಗಿತ್ತು ಪ್ರಸಾದಮಂ ಕೊಂಡು ಸುಖದೊಳಿರ್ಪುದು (ಶಂಪಾರ. ಹ. ೯-೦೭). ೩. ಅಲೆಮಾರಿಯಾದ ಸಂತ. ೪. ಬ್ರಾಹ್ಮಣರಲ್ಲಿ ಒಂದು ಪಂಗಡದ ಹೆಸರು : ಗೌತಮ ಗೋತ್ರದ ಯಜುಃಶಾಖೆಯ ಯಾಯಾವರ ಗೌಂಡೇವಭಟ್ಟರ ಮಕ್ಕಳು ಮಲ್ಲಿಭಟ್ಟರಿಗೆ ವೃತ್ತಿ ೪ (ಶಾಇಇ. IX–ii, ೯೩೯–೩೩ ; 1511). [ಸಂ.]

**ಯಾಯಿ** (ಗು). ೧. ಹೋಗುವ ; ಸಂಚರಿಸುವ. (ನಾ). ೨. ಸಂಚಾರ ಮಾಡುವವನು ; ಪ್ರಯಾಣ ಮಾಡುವವನು : ವಿಪರೀತ ದೆಸೆ ಬುಧ ಶುಕ್ರ ರಾಹುಗಳ ಯಾಯಿಗಳಿಗಪಜಯ ನಿವಾಸಸ್ಥಾಯಿಗೊಳ್ಳಿತು (ಕುವ್ಯಾಅ. ೨೨–೯). [ಸಂ. ಯಾಯಿನ್]

**ಯಾರಿ** (ನಾ). (?) : ವಾರಿಜಗಂಧಿ ನಿನ್ನಯ ಕಾಂತ ತಿರಾಗದ ದಾರಿಯ ಹೋದಾತ ಬಹನೆ ಯಾ[ ಶಾಪಾ. ಭೂ]ರಿಯ ಮಾಡದೆ ಮನೆವಾರತೆಯ ವಿಚಾರಿಪುದೆಂದರಾಳಿಯರು (ಮೋಹಕ. ೯–೦೬) ; "ತಿರುಗುವ ಬುಗುರಿ" (ಮೋಹಕ. ೩೨೪). [ ? ]

**ಯಾರು** 'ಯಾವುದು' ಪರಾ.

**ಯಾಲಕ್ಕಿ** 'ಏಲಕ್ಕಿ' ಪರಾ.

**ಯಾಲಕ್ಕಿಬಾಳೆ** (ನಾ). ಬಾಳೆಯಲ್ಲಿ ಒಂದು ಬಗೆ : ಹೊಂಬಾಳೆ ಯಾಲಕ್ಕಿ ಬಾಳೆ . . . ಮೊದಲಾದ ರಸ್ಯಸುಬಾರ್ಹ ಸಾರ್ವರ್ತುಕವಾದ ಫಲಂಗಳುಳ್ಳ ತರುನಿಕರಂಗಳಂ (ಅವೀಳ. ೨೨೩). [<ಏಲಕ್ಕಿಬಾಳೆ]

**ಯಾಲಪದ** (ನಾ). ಒಂದು ಬಗೆಯ ದೇಶೀಯ ಗೀತೆ.–ಪದ್ಯ : ಯಕ್ಷಗಾನಗ್ರಂಥಗಳಲ್ಲಿ ಯಾಲಪದವೆಂಬುದೊಂದು ಸಿಕ್ಕುತ್ತದೆ (ಕೃಬಿಇ. ೦೩೪) ; ಯಾಲಪದವು ತ್ಯಾಗವಾಸಗಳು ಅಂಶಗಣಾನ್ವಯವಾದ ಉತ್ಸಾಹ ಲಯದಲ್ಲಿವೆ (ಛಂದೋಅ. ೨೩೬ ಅಡಿಟಿ) : 'ರುದ್ರಗಣಗಳಿಂದ' 'ಯಾಲಪದ' ರಚನೆಯಾಗುತ್ತದೆ. ಇದರಲ್ಲಿ ಒಂದು ಉಪಪಾದವೂ ಆ ಉಪಪಾದಕ್ಕೆ ಏಕಾಕ್ಷರಿಯ ಅನುಪಾದವೂ ಇರುತ್ತದೆ (ಸಂಕೋಠ. ೦೩೦). [<ಏಲಾಪದ]

**ಯಾವ**₁ 'ಯಾವುದು' ಪರಾ.

**ಯಾವ**₂ (ಗು). ೧. ಜವೆಗೋದಿಗೆ ಸಂಬಂಧಿಸಿದ ; ಯವದಿಂದ ಮಾಡಿದ,–ತಯಾರಿಸಿದ. (ನಾ). ೨. ಜವೆಗೋದಿಯಿಂದ ತಯಾರಿಸಿದ ಆಹಾರ. ೩. ರಾಳ ; ಅರಗು : "ಅಲತಗೆ ಜತು ಲಾಕ್ಷಾದ್ರವ ಮಲಕ್ತಕಂ ಯಾವಮಿವು ಸಮಾನಾರ್ಥಂ" (ವಸ್ತುಕೋ. ೭೭-೦೩). [ಸಂ.]

**ಯಾವಕ** (ನಾ). ೧. ಜವೆಗೋದಿಯಿಂದ ತಯಾರಿಸಿದ ಆಹಾರ: ಜವೆಗೋದಿಯ ಗಂಜಿ. ೨. ಅರ್ಧಬೇಯಿಸಿದ ಜವೆಗೋದಿ : "ಅರ್ಧ ಬೇಯಿಸಿದ ಕಾಳು, ಗುಗ್ಗರಿ" (ಗಂಗಾಮು. ೨೩೭). ೩. ಒಂದು ಬಗೆಯ ದ್ವಿದಳಧಾನ್ಯ ; ಅಲಸಂದೆ : "ಯಾವಕಃ, ಯಾವಕಃ, ಕುಲ್ಮಾಷಃ, ೩ ಅಲಸಂದಿಗೋ ಕಾಳು, ಕಾಮುಉದ್ದಿಗೂ ಹೆಸರು" (ಸಿದ್ಧಾಂತಿ. ೨೩೯). ೪. ಅರಗು ; ಅಲತಗೆ : "ಜತು, ಯಾವಕಃ, ಲಾಕ್ಷಾ – ಈ ೩ ಅರಗು" (ಕಠಾಯು. ೯೦-೧೦೦). 'ಯಾವಕದ್ರವ' ಪರಾ. [ಸಂ].

**ಯಾವಕಕೃಚ್ಛ್ರ** (ನಾ). ಒಂದು ಬಗೆಯ ಕೃಚ್ಛ್ರವ್ರತ ; ೯ ಶುಕ್ಲ ಪಕ್ಷದಲ್ಲಿ ಆಹಾರವನ್ನು ತುತ್ತುತುತ್ತಾಗಿ ಹೆಚ್ಚಿಸಿಕೊಂಡು, ಕೃಷ್ಣ ಪಕ್ಷದಲ್ಲಿ ಆಹಾರವನ್ನು ತುತ್ತುತುತ್ತಾಗಿ ಕಡಿಮೆಮಾಡಿಕೊಳ್ಳುವ ವ್ರತ : ದೇವಕೃಚ್ಛ್ರ, ಯಾವಕಕೃಚ್ಛ್ರಾದಿ ಕೃಚ್ಛ್ರಂಗಳಂ ಪಕ್ಷಮಾಸಾದಿಕಂಗಳಲ್ಲಿ ಅನ್ನಮಂ ಪೆರ್ಚಿಸಿ ತಗ್ಗಿಸಿಕೊಂಬುದು (ಅವೀಳ. ೦೨೨). 'ಚಾಂದ್ರಾಯಣ' ಪರಾ. [ಸಂ.]

**ಯಾವಕದ್ರವ** (ನಾ). ಅರಗಿನ ರಸ ; ಅಲತಗೆ : ಮೃದುಪಾದತಳಂ ಗಳನೂಡಿ ಯಾವಕದ್ರವದಿಂದಲಿ ಪ್ರತಿಬಿಂಬಿಸಮಾ ದೇವಿ ವಿಳೇಪಿತಕರ್ಮಮ ನೊರ್ವಳಮರವಧು ಕೆಯ್ಕೊಂಡಳ್ (ಶಾಂತಿಪು. ೯-೦೬೪) ; ಯಾವಕದ್ರವದಿಂ ಪದತಳಮಂ ಲೇಪನಿಸಿಯುಂ (ಶಂಪ್ರಕ್ರಿ. ೬-೬೩ ವ). [ಸಂ.]

**ಯಾವಕರಸ** (ನಾ).= ಯಾವಕದ್ರವ : ಜನಜನನಿಯ ಪದಸೇವೆಗೆ ಘನ ಸಂಧ್ಯಾರಾಗಲಕ್ಷ್ಮಿಯಂ ತಂದೀಗಳ್ ದಿನಲಕ್ಷ್ಮಿ ಸಮರ್ಪಿಸಿದಳೆನಿಸಿದಳಡಿ ಯೂಡುವವಂ ಯಾವಕರಸದಿಂ (ಕೃಕೃಪು. ೯-೬೩). [ಸಂ.]

**ಯಾವಜ್ಜೀವ**₁ (ನಾ). ಜೀವನದ ಪೂರ್ಣಕಾಲ ; ಇಡಿಯ ಜೀವಮಾನ : ಹಿಂಸಾಧರ್ಮವೃತ್ತಿಯಲಿ ನಡೆದು ಯಾವಜ್ಜೀವದಲಿ ಗತಿವಡೆದರುಂಟೆಲೆ ಪಾರ್ಥ (ಕುವ್ಯಾಶ. ೦೭-೦೩). [< ಯಾವಜ್ಜೀವ]

**ಯಾವಜ್ಜೀವ**₂ (ಅ). ಜೀವಮಾನಪರ್ಯಂತ ; ಜೀವನಾಂತ್ಯದವರೆಗೂ : ಯಾವಜ್ಜೀವವೂ ಸತ್ಯೋಪಾಸಕರಾಗಿ . . . ಆ ಮಹಾ ಶಾಸ್ತ್ರಜ್ಞರ ಅಕ್ಷಯಪ್ರತಿಭೆಯನ್ನು ಕೊಂಡಾಡೋಣ (ಜ್ಯೋತಿರ್ಬಿ. ೬); ತಂದೆಯ ರಾಜ್ಯವನ್ನಪಹರಿಸಿ ತಾವು ತಮತಮ್ಮ ಪತಿಗಳೊಡನೆ ಯಾವಜ್ಜೀವವೂ ನಿರಾತಂಕವಾಗಿ ಸುಖವನ್ನನುಭವಿಸಬೇಕೆಂಬ ದುರುದ್ದೇಶದಿಂದಲೇ ಈ ಮಾತನ್ನಾಡಿದರು (ಕಂಕ. ೨೩). [ಸಂ.]

**ಯಾವತ್ತು**₁ 'ಏವೊತ್ತು' ನೋ.

**ಯಾವತ್ತು**₂ (ನಾ). ಎಲ್ಲ ; ಸಮಸ್ತವಾದುದು : ಯಾವತ್ತು [ಶಾಪಾ. ಯಾವಂತಿ]ಗಣಿತಭಾಸ್ಕರ ಪಾವನ ಮುನಿಜನವ್ರಸುದಯಮುಮುಳೆನಗುಣಸದ್ಭಾವದಿಗಂಬರಕುಳಮಂ ಭಾವಿಸೆ ಬೆಳಗುವುದು ಯುಕ್ತಮಾವನೀವ್ಯಕ್ತಂ (ಪಾರ್ಶ್ವಪು. ೦–೨೮); ನೋಹರು . . . ಗಜಘಟೆಗಳಂ ರಥ ಹಯ ಪದಾತಿ ಯಾವತ್ತು ಭಂಡಾರಮಂ (ಕುಂಂಗ. ೨೪-೯೩); ಚಂದಾಸಾಹೇಬರ ಫೌಜು ಯಾವತ್ತು ಮುಳುಗಿಸಿದರು (ರಾಕೆಂಂದ್ರ. ೦೫).

**ಯಾವತ್ತರು** = ಎಲ್ಲರು ; ಸಮಸ್ತರು : ಮರುದಿನ ಆ ಊರ

ಜಾತ್ರೆ ಆಗುತ್ತಿತ್ತು; ನೋಡಲಿಕ್ಕೆ ಯಾವತ್ತರೂ ಹೋದರು (ಮುಂಬಯಿ. ೨-೬೦); ನಾನು, ದೇವತೆಗಳು, ಮನುಷ್ಯರು ಮುಂತಾದ ಯಾವತ್ತರಿಗೂ ಕೊಡ್ರತಕ್ಕ ಸ್ಥಳಸಿದ್ಧತೆಗಳನ್ನು ಮಾಡಿದೆನು (ಉಣತ. ೦೭೩); ನಾನೊಬ್ಬಳೇ ಅಲ್ಲ, ಯಾವತ್ತರೂ ನಿನ್ನ ಗುಣವನ್ನು ಹೊಗಳುತ್ತಾರೆ (ಕೋಹಿಾ. ೨). ಯಾವತ್ತುಗಳ್ = ಎಲ್ಲವೂ: ಹಸ್ತಿರಥತುರಗ ಭಂಡಾರಗಳನೆಲ್ಲ ಯಾವತ್ತುಗಳ್ಕೆಕೊಂಡು (ತುರಂಗ. ೩೨-೦೬); ಧರಣಿ ಯಾವತ್ತುಗಳ್ನಪುಗಾದ ರಾಜ್ಯಮಂ ಬಿಟ್ಟು ಇನ್ನೆತ್ತಣದು ಸ್ವರ್ಗಸುಖ (ತುರಂಗ. ೪೨-೯). [ಸಂ. ಯಾವತ್]

ಯಾವತ್ತೂ 'ಎವೊಟ್ಟುಂ' ನೋ.

ಯಾವನ (ನಾ). ೧. ಯವನದೇಶದವನು; ಯವನ; ಮ್ಲೇಚ್ಛ: ಉದಯಿಸಿದಂ ಪ್ರತಾಪನಿಧಿ ಬಿಜ್ಜಲದೇವಧರಾಧಿನಾಥನಿತ್ತುದಯಿಸೆ ಯಾವನೋದ್ಧತವಧೂತತಿಗುತ್ಕಲಿಕಾಪ್ರಪಂಚಂ (ಎಕ. XI, ದಾವಣ. ೯೨-೨೫; ತು. 1162); ನಿತ್ಯನೈಮಿತ್ತಿಕಾಪ್ರಾತಂಗಳಂ ಪಳಿದು ಯಾವನಾನ್ನಗಳುಂಡು ಲೋಕನಿಂದಿತನಾದರೂ . . . ಎಲ್ಲಮಂ ಬೀತು ಹೋಗುವಡೆ ಪ್ರಾಯಶ್ಚಿತ್ತ ಹರಿನಾಮಖ್ಯಾತನೆಂದರುಪುವುದು ಶ್ರುತಿಗಳನವರತ (ಪಂಕಾರಾ. ೯-೦೨-೯). ೨. ಒಂದು ಬಗೆಯ ಧೂಪದ್ರವ್ಯ: "ಯಾವನಃ— ಕುಂದುರುಷ್ಕ, ತರುಕಿನ ಧೂಪ" (೬೩೦. ೦೩೨). [ಸಂ.]

ಯಾವನಾಳ (ನಾ). ಒಂದು ಬಗೆಯ ಧಾನ್ಯ: ಯವನಾಲ: "ಯಾವನಾಳಃ = ಜೋಳಂ" (ಶಾಕಕ್ಯ. ೦೬೩); ಅಂತು ಕೊಂಡ ಪದವಟಿಗಳೊಳ್ ಕಳಮಷಷ್ಟಿಕಾವ್ರೀಹಿಯವಯಾವನಾಳ . . . ವಿವಿಧ ಧಾನ್ಯ ಭೇದಂಗಳುಂ (ಆದಿಪು. ೬-೭೨ ವ); ಷಣಜಾದಿನ ಯಾವನಾಳದ ಪುಡಿಯ ಕದಡನು ಕುಡಿಯಲೊಲ್ಲದೆ ಕಡಹಿ ಕಳೆದನು ಯಾಳಿಯಾಡುತವಳುತ ಹೋರುತಿರೆ (ಸಂಶಕ. ೦೭-೯೩). [ಸಂ. ಯಾವನಾಲ]

ಯಾವನಿ (ಗು). ೧. ಯವನರಿಗೆ ಸಂಬಂಧಿಸಿದ; ಯವನ ದೇಶೀಯವಾದ. (ನಾ). ೨. ಯವನಜನದ ಭಾಷೆ, ಲಿಪಿ ಇತ್ಯಾದಿ: "ಯಾವನೀ = ಪರಂಗಿ ಲಿಪಿ" (ಶಾಕಕ್ಯ. ೦೬೩). [ಸಂ. ಯಾವನೀ]

ಯಾವನು 'ಯಾವುದು' ಪರಾ.

ಯಾವರು 'ಯಾವುದು' ಪರಾ.

ಯಾವಸ (ನಾ). ಹುಲ್ಲಿನ ರಾಶಿ: ಖಡ್ಗಾಯುಧಂ ಯಾವಸು ಪೆರ್ಚಲ್ಕೀಯದೆ ಕಿಟ್ಟಿಡಲ್ (ಪತ್ತಿಂ. ೨೩). [ಸಂ.]

ಯಾವಳು 'ಯಾವುದು' ಪರಾ.

ಯಾವಾಕೆ 'ಯಾವುದು' ಪರಾ.

ಯಾವಾಗ (ಅ). ಯಾವ ಸಮಯದಲ್ಲಿ; ಯಾವ ಹೊತ್ತಿಗೆ; ಎಂದು: ನಿನ್ನ ನಾಟಕ ಯಾವಾಗಪ್ಪ ರಾಜಾ (ಪಟಿಕಾ. ೦೬).

ಯಾವಾಗಾದರೂ = ಯಾವ ಸಮಯದಲ್ಲಾದರೂ; ಯಾವಾಗಲಾದರೂ: (೬). ಯಾವಾಗಿನಂತೆ = ಎಂದಿನಂತೆ: ರೂಢಿಯಂತೆ: (೬). [ಯಾವ$_1$ (< ಯಾವುದು) + ಆಗ$_1$ (< ಆಗತು)]

ಯಾವಾಗಲು, ಯಾವಾಗಲೂ (ಅ). ಸದಾಕಾಲ; ಎಲ್ಲಾ ಕಾಲನಲ್ಲಿಯೂ; ಒಂದೇ ಸಮನೆ; ನಿರಂತರವಾಗಿ: ಯಾವಾಗಲು ಹೇಳಬಾರದೆ ವಾಸುದೇವನೆ ಕೈಬಿಡಬೇಡವೆಂದೆನುತಲಿ (ಪುರಂದ. ೨-೦೫೯ ಪಲ್ಲವಿ). ಯಾವಾಗಲೂ: ಯಾವಾಗಲೂ ಬೆಳುದಿಂಗಳಿನಿಂದ ತುಂಬಿದ ಪಿಸುನಗೆಯ, ಮೆಲುಮಾತಿನ, ಒಲವಿನ ನೋಟಗಳಿಂದ ತುಂಬಿದ್ದ ದಾಂಪತ್ಯಜೀವನ (ದೂರಬೆಟ್ಟ. ೨೦).

ಯಾವಾಗಲಾದರೂ = ಯಾವಾಗ ಬೇಕೋ ಆಗ: ಯಾವಾಗಲಾದರೂ ಚಾರಲಿ ನಾನು ಎದ್ದು ಬಾಗಿಲು ತೆಗೀತೀನಿ (ದೂರಬೆಟ್ಟ. ೦೯). [< ಏಗಳ್]

ಯಾವಾಗಲೂ 'ಯಾವಾಗಲು' ನೋ.

ಯಾವಾತ 'ಯಾವುದು' ಪರಾ.

ಯಾವುದು (ಸ). ರೂಪಗಳು (ಪುಂ. ಏಕ) ಯಾವನು, ಯಾವಾತ; (ಸ್ತ್ರೀ. ಏಕ) ಯಾವಳು, ಯಾವಾಕೆ; (ಬಹುವ) ಯಾರು, ಯಾವರು, (ವಿಶೇ) ಯಾವ$_1$, ಯಾ$_1$: ೧. ಎಂತಹುದು, ಎಲ್ಲಿಯದು, ಏನು ಎಂಬರ್ಥದಲ್ಲಿ ಬಳಕೆಯಾಗುವ ಪ್ರಶ್ನಾರ್ಥಕ ಸರ್ವನಾಮ: ದಾರಿ ಯಾವುದಯ್ಯ ವೈಕುಂಠಕೆ ಹಾದಿ ತೋರಿಸಯ್ಯ (ಪುರಂದ. ೨-೦೭೬ ಪಲ್ಲವಿ); ಯಾವುದೊ ಅಸಲಿನ ಯಾವುದೊ ಬಡ್ಡಿದರದ ರಾಶಿಗಳನ್ನು ಹಿಂಜಿ ತೆಗೆದು . . . ಅನೇಕರಿಗೆ ತಿಳಿಸಿಕೊಟ್ಟು ದಣಿದಿದ್ದೇನೆ (ಗಾಳಿಪ. ೦೬೩). ೨. ಸಂಬಂಧಾರ್ಥಕ ಸರ್ವನಾಮ: ಯಾವುದು ನಿನಗೆ ಒಪ್ಪಿಗೆಯೋ ಅದನ್ನು ತೆಗೆದುಕೊಂಡು ಹೋಗು (ಪುಣ್ಯಕ. ೩೦); ಈ ಜೀವವನ್ನು ಯಾವುದು ನಿರ್ಮಿಸಿತೋ, ಸ್ವಪ್ನಶೀಲತೆಯನ್ನೂ ಅದೇ ಸೃಜಿಸಿತು (ದೀಕಕ್ಕ. ೯). 'ದಾವುದು' ಪರಾ.

ಯಾವನು: ಯಾವನೋ ಒಬ್ಬನು ಆ ದೇಶಕ್ಕೆ ಎಷ್ಟು ಕೋಣಗಳನ್ನು ಒಯ್ದನೆಂದು ಹೇಳುತ್ತಾರೆ (ಮುಂಬಯಿ. ೩-೨೯). ಯಾವಾತ: ಯಾವಾತನಾದರೂ ಸರಿ, ಕೊಡುವಾತನಾದರೆ ಸಾಕು (೮೦೨). ಯಾವಳು: (೬). ಯಾವಾಕೆ: (೬). ಯಾರು: ಯಾರಿಗೆ ಯಾರುಂಟು ಎರವಿನ ಸಂಸಾರ ನೀರ ಮೇಲಣ ಗುಳ್ಳೆ ನಿಜವಲ್ಲ (ಪುರಂದ. ೪-೬೩ ಪಲ್ಲವಿ); ಈ ಸುದ್ದಿಯನ್ನು ಯಾರು ಹೇಳಿದರು (ಪುಣ್ಯಕ. ೦೬೩); ಯಾರದೋ ರೊಕ್ಕ ಯಲ್ಲಮ್ಮನ ಜಾತ್ರೆ (ಗಾದೆ). ಯಾವರು: ವರ್ಣಧರ್ಮಂಗಳಂ ಯಾವರು ತ್ಯಜಿಸುತ್ತಾರೋ ಅವರು ಪಾಷಂಡಿಯೆನಿಸಿಕೊಂಬರು (ಕುಕಸ. ೨೬೦). ಯಾವ$_1$: ಯಾವ ಕರ್ಮವೋ ಇದು ಯಾವ ಪುಣ್ಯವೋ (ಪುರಂದ. ೩-೨೩ ಪಲ್ಲವಿ); ಆತ್ಮ ಯಾವ ಕುಲ ಜೀವ ಯಾವ ಕುಲ (ಕನಕ. ೭೭-೩). ಯಾ$_1$: ಯಾ ಆಸೆ ಜೀವಾಳದಿ ಉಳಿದು . . . ಮೂಡಿ ಬಂದಿತಿಲ್ಲಿ (ಅರಳು. ೦೫೨-೦).

ಯಾವ ಗಿಡದ ತೊಪ್ಪಲು = (ಆಲಂ) ಯಾವ ಬೆಲೆಯೂ ಇಲ್ಲದಂತಹ ಸರಕು, – ಪದಾರ್ಥ: ಕೊತವಾಲ ಸಾಹೇಬರು ಯಾವ ಗಿಡದ ತೊಪ್ಪಲು? ನಾನು ಮನಸ್ಸು ಮಾಡಿದರೆ ಓಡಿಸಿ ಬಿಡುವೆ (ಕೊತಕಾ. ೩೬). ಯಾವಲ್ಲಿ = ಯಾವ ಸ್ಥಳದಲ್ಲಿ; ಎಲ್ಲಿ: ಇಂಥ ವಸ್ತು ಯಾವಲ್ಲಿ ಸಿಕ್ಕುತ್ತದೆ? (ರಜಾ). ಯಾವುದೊಂದು = ಏನೊಂದು; ಯಾವುದಾದರೂ ಒಂದು: ಯಾವುದೊಂದು ಕೆಲಸ ಮಾಡುವುದು ಎಲ್ಲರಿಂದ ಆಗದೆ ಹೋದಾಗ್ಯೂ, ಅದನ್ನು ಕೆಡಿಸುವುದು ಎಲ್ಲರ ಕೈಯಲ್ಲಿಯೂ ಉಂಟು (ಮುಂಬಯಿ. ೯-೩೭). [< ಆವುದು]

ಯಾಷ್ಟೀಕ (ನಾ). ದೊಣ್ಣೆಯನ್ನು ಹಿಡಿದಿರುವ ಸೈನಿಕ, – ಯೋಧ: "ಯಾಷ್ಟೀಕಃ, ಪಾರಶ್ವಧಿಕಃ – ಈ ೨ನ್ನು ಕ್ರಮದಿಂದ, ಯಷ್ಟಿಸ್ವಧಿತಿ ಹೇತಿಕೌ – ದೊಣ್ಣೆಯೂ ಗಂಡಕೊಡಲಿಯೂ ಆಯುಧವಾಗಿ ಉಳ್ಳವರ ಹೆಸರುಗಳು" (ಸಿದ್ಧಾಂತ. ೨೩೭). [ಸಂ.]

ಯಾಸ (ನಾ). ೧. ಪ್ರಯತ್ನ. ೨. ಒಂದು ಬಗೆಯ ಸಸ್ಯ; ಬಳ್ಳಿದುರುಚಿ: "ಯಾಸಃ, ಯವಾಸಃ . . . ದುರಾಲಭಾ – ೧೧ ತೀಟಕಸಂಧಿ ಹೆಸರುಗಳು. ನಸುಗುನ್ನೀ ಹೆಸರುಗಳು. ತುರುಚೀಬಳ್ಳಿ, ಬಳ್ಳಿದುರಿಚಿ" (ಸಿದ್ಧಾಂತ. ೦೨೩). ೩. ಕೊತ್ತುಂಬರಿ: "ಯಾಸಃ—ಬಳ್ಳಿದುರುಚಿ, ಕುಸ್ತುಂಬರಿ" (೬ಶಧಿ. ೦೫೨). [ಸಂ.]

ಯಾಸಿ 'ಯಾಸೆ' ನೋ.

ಯಾಸೆ, ಯಾಸಿ (ನಾ). ಡೊಂಕಾದುದು; ಓರೆಯಾದುದು; ಸೊಟ್ಟಗಾದುದು; ನೇರವಲ್ಲದುದು: (ತೋಳದ) ಕಣ್ಣುಗಳು ಯಾಸೆಯಾಗಿ ಗುಡ್ಡೆಗಳು ಹಚ್ಚಗೆ ಹೊಳೆಯುತ್ತವೆ (ಮುಂಬಯಿ. ೩-೬೩). ಯಾಸಿ: ಗೇಣು ಒಂದೂವರೆಗೇಣಿಗೊಂದು ಗೂಟಗಳನ್ನಾಗಲಿ, ಮೊಳೆಗಳನ್ನಾಗಲಿ ಕವಲಿನ

**ಯೋಚನೆ** (ನಾ). ೧. ಆಲೋಚನೆ ; ವಿಚಾರ ; ಎಣಿಕೆ : ಈ ಯೋಚನೆಗಳ ತುಯ್ಲಾಟದೊಡನೆ . . . ಹೊಸನಗರ ತಲುಪಿದ್ದನು (ಬಾಳ್ವೆ. ೦೯೯). ೨. ಯೋಚಿಸುವಿಕೆ ; ಚಿಂತನೆ : ಏಕಾಂತ ಕೆಲರೊಳು ಯೋಚನೆ ಕೆಲರೊಳು ಮೂಕತೆ ಕೆಲರೊಳೊಂದೆರಡು ವಾಕು ಕೆಲರೊಳಿರೆ . . . ಭೂಕಾಂತ ನುಡಿದನು (ಭರತ. ೯-೩೭) ; ಮೈತಳೆವ ಕರುಣೆ ಮೈವುರೆತು ಕುಳಿತಿದೆ ನೋಡು ಯೋಚನೆಯ ಯೋಜನೆಯ ಕುರಿತು ಬೆರೆತು (ಉದ್ಯಾ.ಲ. ೪೪-೨). ೩. ಚಿಂತೆ ; ಕಳವಳ : ಪ್ರಾಚೀನಕರ್ಮವು ಬಿಡಲರಿಯದು ಯೋಚನೆಯ ಮಾಡಿ ನೀ ಬಳಲಬೇಡ (ಭುರಂದ. ೪-೦೭ ಪಲ್ಲವಿ) ; ಬಡ್ಡಿಗೆ ಯಾತಕೆ ಬದುಕಿನ ಯೋಚನೆ ? (ಗಾದೆ). ' ಆಲೋಚನೆ ' ಪರಾ.

[<ಯೋಚನ./ತಮಿ. ಯೋಚನೈ ; ತುಳು. ಯೋಚನೆ]

**ಯೋಚನೆಗೈ** (ಕ್ರಿ). ಆಲೋಚಿಸು ; ಯೋಚಿಸು : ಎಂತು ನಾವಿಲ್ಲಿಂದ ಪೊರಡುವ ಯತ್ನವೆಂದಂತದ ಯೋಚನೆಗೈದು . . . ವಿಪ್ರರು ಕಪಟದ ಗೋವ ನಿರ್ಮಿಸಿದರು ಕ್ಷಣದೆ (ಕೆಂಪನಾ. ೩-೦೫).

[ಯೋಚನೆ + ಗೈ (<ಕೆಯ್$_1$)]

**ಯೋಚಿಸು** (ಕ್ರಿ). ೧. ವಿಚಾರ ಮಾಡು ; ಆಲೋಚಿಸು ; ಆಲೋಚನೆ ಮಾಡು : ಕಡುಗೂರ್ಮೆ ಕೂರ್ತವೋಲ್ವೀರವುನಾಕೆಗಳ್ಗೆ ಪಡೆದೊರ್ಬರ ನೊರ್ಬರು ಗೆಲ್ವ ಭೇದಮುಂ ಪಾರಿಜವಕ್ತ್ರೆ ಯೋಚಿಸುವವಂ ಚದುರಂ (ಮದಾಕ. ೦೦-೬೨) ; ಈ ಲಿಪಿಗಳಂ ತಿಳಿದು ಯೋಚಿಸಿ ಹೇಳುವೊಡೆ . . . ಮ್ಲಾನವರಿಗರಿದು (ಜಗಪು. ೫-೫೫) ; ಯೋಚಿಸಿ ಮಾತಾಡು ಪರಹಿತಕಾಗಿ ದಧೀಚಿ ತನ್ನೊಡಲ ಮಾಂಸವನು . . . ಸುರಪಂಗೆ ಕುಡನೆ (ಪೋಹಕ. ೩-೩೨). ೨. ಭಾವಿಸು ; ಎಣಿಸು ; ತಿಳಿದುಕೊಳ್ಳು : ಮಹೇಶ್ವರಂ ಮಿಗೆ ಯೋಚಿಸುತ್ತಿರ್ದನೆನ್ನ ಪಣೆಯಿಂದಾದ ರುದ್ರನೇ ತನ್ನಯ ಸ್ವರೂಪ ಮೆಂದು (ಕಬಿಕ್ಕು. ೦೫-೬). [ಯೋಚನ + _ ಇಸು$_1$]

**ಯೋಜಕ** (ನಾ). ೧. ಹೊಂದಿಸುವಂತಹುದು ; ಹೊಂದುವುದಕ್ಕೆ ಕಾರಣವಾದುದು : ಸಕಲಮಹೀಚರಖೇಚರನಿಕಾಯ ಸೇವ್ಯತೆಗೆ ವೃದ್ಧ ಸೇವಿತ್ವಮೆ ಯೋಜಕವಾದುದು (ಶಾಂತಿಪು. ೨-೪೯). ೨. ಹೊಂದಿಸುವವನು ; ಯೋಜನೆ ಮಾಡುವವನು ; ವ್ಯವಸ್ಥಾಪಕ : ಸಮ್ಮ ದೇಶದಲ್ಲಿ ಒಳ್ಳೆಯ ಯೋಜಕರ ಸಂಖ್ಯೆ ವಿರಳ (ರೂಢಿ). ೩. ಅಗ್ನಿ. [ಸಂ.]

**ಯೋಜನ** (ನಾ). ೧. ಹೊಂದಿಸುವುದು ; ಕೂಡಿಸುವುದು ; ಅಳವಡಿಸುವುದು. ೨. ಏರ್ಪಾಡು ; ವ್ಯವಸ್ಥೆ : ಮೂರು ಭಾಗಗಳ ಯೋಜನ ಮಾಡಿರುತ್ತದೆ (ಮುಂಬಿವ್ಯಾ. ೪ ಶ್ರಸ್ತಾವನ). ೩. ದೂರದ ಅಳತೆಯ ಒಂದು ಪ್ರಮಾಣ ; ಎರಡು ಗಾವುದ ; ನಾಲ್ಕು ಹರದಾರಿ : "ದಂಡಮೆರಡು ಸಾವಿರಮಾಗೆ ಕ್ರೋಶಮಕ್ಕುಮವು ನಾಲ್ಕುವರಲು ಯೋಜನಮಕ್ಕು" (ಮಂಗರಾ. ೯೬-೦೦) ; ಅಲ್ಲಿ ಖರಭಾಗಂ ಪದಿನಾಱುಸಾಸಿರಯೋಜನಂ (ಸಂಸಾರಪಾ. ೦೦-೪೦ ವ) ; ಒಂದು ಯೋಜನವರೆಗೆ ತಿರುಗಿತು ಓಂದಕಪಿತನ ತೇರು ತಾನೆಸಲೊಂದು ಬಿಲ್ಲಂತರಕೆ ತೊಲಗಿತು ನಮ್ಮರಥ (ಕುಮಾ.ಭ. ೨೬-೨೦) ; ಕ್ರೋಶವೆರಡಾಗಲೊಂದು ಗವ್ಯೂತಿ . . . ಗವ್ಯೂತಿಯೆರಡಾಗಲೊಂದು ಯೋಜನವೆನಿಸುವುದು (ಏಪೀಳ. ೨೬೦). ೪. ಮನಸ್ಸಿನ ಏಕಾಗ್ರತೆ ; ಧ್ಯಾನ ; ಚಿತ್ತವೃತ್ತಿನಿರೋಧ. [ಸಂ.]

**ಯೋಜನಗಂಧಿ** (ನಾ). ಒಂದು ಯೋಜನದ ವರೆಗೆ ಸುತ್ತಲೂ ಹರಡಬಲ್ಲಂತಹ ಸುವಾಸನೆಯುಳ್ಳವಳು ; ವ್ಯಾಸಮಹರ್ಷಿಯ ತಾಯಿಯಾದ ಸತ್ಯವತಿ : ಬಳಿಕ ಯೋಜನಗಂಧಿಯಲ್ಲಿಂದೀವನಪ್ರಶ್ಯಾಮನುರುಪಿಂಗಳಜಟಾಬದ್ಧ ವೇದವ್ಯಾಸಮುನಿರಾಯ (ಕುಮಾ.ಭ. ೨-೨೩).

[<ಸಂ. ಯೋಜನಗಂಧಾ]

**ಯೋಜನಗಂಧಿತ್ವ** (ನಾ). ಸುತ್ತಲೂ ಒಂದು ಯೋಜನದವರೆಗೆ ಹರಡುವಂತಹ ಶರೀರಸುಗಂಧವನ್ನು ಹೊಂದಿರುವಿಕೆ : ಮುನೀಂದ್ರನಾಕೆಯೊಡಲೀ ದುರ್ಗಂಧಮೋಪಂತೆ ಯೋಜನಗಂಧಿತ್ವಮನಿತ್ತು . . . ಕೂಡುವೆಡೆಯೊಳ್ ಜ್ಞಾನಸ್ವರೂಪಂ ಮಹಾಮುನಿಪಂ ಪುಟ್ಟಿದಂ (ಕಂಪಭಾ. ೦-೬೯). [ಸಂ.]

**ಯೋಜನವಲ್ಲಿ** (ನಾ). ಒಂದು ಬಗೆಯ ಸಸ್ಯ ; ಮಂಜಿಷ್ಠೆ : "ಮಂಜಿಷ್ಠಾ, ವಿಕಸಾ . . . ಭಾಂಡೀ, ಯೋಜನವಲ್ಲೀ – ೯ ಮಂಜಿಷ್ಠೇ ಹೆಸರುಗಳು" (ನಿದ್ಯಾಂಕಿ. ೦೪೨). [ಸಂ. ಯೋಜನವಲ್ಲೀ]

**ಯೋಜನೆ** (ನಾ). ೧. ವ್ಯವಸ್ಥಿತವಾಗಿ ಮಾಡಬೇಕಾದ ಕಾರ್ಯಗಳ ರೂಪರೇಷೆ ವಿಧಾನಗಳನ್ನು ಮುಂಚಿತವಾಗಿ ರೂಪಿಸಿಕೊಳ್ಳುವುದು, ಏರ್ಪಾಟು ; ವ್ಯವಸ್ಥೆ. ೨. ವ್ಯವಸ್ಥಿತವಾಗಿ ನಿರೂಪಿಸಿಕೊಂಡ ಕಾರ್ಯಕ್ರಮ : ಹಾರ್ವರ್ಡ್ . . . ತನ್ನ ಯೋಜನೆಗಳನ್ನು ಕಾರ್ಯಗತ ಮಾಡಲು ಉದ್ಯುಕ್ತನಾದನು (ಸಸ್ಯಕ. ೩೩) ; ಇತ್ತೀಚೆಗೆ ಗ್ರಾಮಗಳ ಉದ್ಧಾರಕ್ಕಾಗಿ ಹಲವಾರು ಯೋಜನೆಗಳು ಪ್ರಚಾರಕ್ಕೆ ಬರುತ್ತಿವೆ (ವ್ಯವಪ. ೭೩); ಯೋಚಿಸಿ ಯೋಜನೆಯೊಂದನು ಹೊಂದಿಸು ಅದರಂತೆ ಬಾಳನು ನಡಸು (ಇಂಚಾಕ. ೦೦೭೭೦). ೩. [ವ್ಯಾಕ] ನಿಯಮದಂತೆ ಪದ, ಅರ್ಥ ಮೊದಲಾದುವುಗಳನ್ನು ಹೊಂದಿಸುವಿಕೆ.

[ಸಂ. ಯೋಜನಾ]

**ಯೋಜಿತ** (ಗು). ೧. ಕೂಡಿಸಿದ ; ಹೊಂದಿಸಿದ. ೨. ಉಪಯೋಗಿಸಿದ ; ಬಳಸಿದ. ೩. ಕೊರತೆಯಾಗಿದ್ದುದನ್ನು ಭರ್ತಿ ಮಾಡಿದ ; ಹೊಸದಾಗಿ ಒದಗಿಸಿದ. [ಸಂ.]

**ಯೋಜಿಸು** (ಕ್ರಿ). ೧. ಹೂಡು: ಸಂಧ್ಯಾರಾಗವುಳ್ಳ ರಶ್ಮಿಗಳು ಅವರ ರಥಕ್ಕೆ ಯೋಜಿಸಲ್ಪಡುತ್ತವೆ (ಮುಕ್ಕಾರ. ೦೮೦). ೨. ಹೊಂದಿಸು; ಅಳವಡಿಸು ; ಕೂಡಿಸು : ಲೋಕಮಂ ಧರ್ಮಪಥಪ್ರಸ್ಥಾನದೊಳ್ ಯೋಜಿಸಿ (ಕಂಠಾಪಚ. ೦-೨೮) ; ಸಮ್ಯಗೆಂಬುದರರ್ಥಂ ಪ್ರಶಂಸೆಯೊಳ್ವರ್ತಿಸುವುದಱಿಂ ಸಮ್ಯಗ್ದರ್ಶನಂ ಸಮ್ಯಗ್ಜ್ಞಾನಂ ಸಮ್ಯಕ್ಚಾರಿತ್ರಮೆಂದು ಅದು ಬೇಱಿಬೇಱಿ ಯೋಜಿಸೆ ಪಡುಗುಂ (ತತ್ತ್ವಸೂ.೩). ೩. ಧರಿಸುವಂತೆ ಮಾಡು ; ಧಾರಣ ಮಾಡಿಸು: ಜನನಾಥಂ . . . ರಾಜ್ಯಮಂ ನಂದನನೊಳ್ ಶ್ರೀಕಾಂತನೊಳ್ ಯೋಜಿಸಿ ತಳರ್ದು ತಪೋಲಕ್ಷ್ಮಿಯಂ ತಾಳ್ದಿದಂ (ಕಂಪ್ರಪು. ೪-೬೦) ; ಮತ್ತೊರ್ವಳ್ . . . ಪಯೋಧರತಟದೊಳ್ ಸೊಗಯಿಪ ನಕ್ಷತ್ರಮಾಲೆಯಂ ಯೋಜಿಸಿದಳ್ (ಭುಕ್ಕುಪು. ೯-೭೬). ೪. ನಿಯಮಿಸು ; ನೇಮಕಮಾಡು ; ನಿಯೋಜಿಸು: ಅಂ ಪರೀಕ್ಷಿಸಿ ನಿನ್ನಂ ... ಈ ರಾಜ್ಯಭಾರಕ್ಕೆ ಯೋಜಿಸಿದೆಂ (ಕಾದಂಬರಿ. ೩೦೫); ಕನಕೆ ಮೊದಲಹ ಪಲವು ದೇವತೆಯರನು . . . ಹಲವು ಸೇವೆಗೆ ಯೋಜಿಸಲು ನೆರೆತಂದುದೋರಂತೆ (ಶಾಲ್ಯಶಾ. ೩೨-೦೫). ೫. ಉಪಯೋಗಿಸು ; ಬಳಸು ; ಕ್ರಮದಿಂ ಷಾಡ್ಗುಣ್ಯಮಂ ಯೋಜಿಸುವುದೆ ಸುನಯಂ ಪ್ರಾಪ್ತಕಾಲಾನುರೂಪಂ (ಕಂಪತಂ. ೨೦೯-೯); ಪಡುಗೇರಿಯ ಮನೆಯುಮಂ ಧರ್ಮ್ಯದೊಳ್ ಯೋಜಿಸುವಂ × × × (ಸೌತಾಡಾ. XI-i. ೭೩-೭೬; 1040). ೬. ತೊಡಗಿಸು ; ಪ್ರವೃತ್ತಗೊಳಿಸು : ಜನನೀಸ್ತನ್ಯಾಮೃತಸೇವನೆ ಮಾಣ್ದಾ ಬಟೀಕ್ಕಮುಖಿಳವಿದ್ಯಾಮೃತಸೇವನೆಯೊಳೆ ಯೋಜಿಪುದುಚಿತಂ ತನಯನಂ (ಕಂಪ್ರಶ್ರಿ. ೪-೩). ೭. ಸಮ್ಮತಿಸು ; ಒಪ್ಪಿಗೆ ಕೊಡು ; ಅನುಮತಿಸು : "ಯೋಜಿಸು_ಅನುಮತೇ" (ಶಪುರಾ).

[ಯೋಜನ + — ಇಸು$_1$]

**ಯೋತ್ರ** (ನಾ). = ಯೋಕ್ತ್ರ : " ಯೋತ್ರಮದಾಬಂಧ ಯೋಕ್ತ್ರರಶ್ಮಿಸಮಾಖ್ಯಂ " (ವಸ್ತುಕೋ. ೬೩-೬೯). [ಸಂ.]

**ಯೋದ್ಧ** (ನಾ). ಯುದ್ಧಮಾಡುವವನು ; ಯೋಧ ; ಸೈನಿಕ : ನಿಂತಿಹರು ಕಾಣಲ್ಲಿ ದೀರ್ಘಾಸಿ ಕಟಬದ್ಧಸನ್ನದ್ಧ ಯೋದ್ಧರುಂ (ಶ್ರೀರಾಮಾ. ೬೦-೦೬೦). [< ಸಂ. ಯೋದ್ಧೃ]

**ಯೋದ್ಧೃ** (ನಾ). = ಯೋದ್ಧ. [ಸಂ.]

**ಯೋಧ** (ನಾ). = ಯೋದ್ಧ : ಆತನ ಮುಂಗಯ್ ಧಾತ್ರಿಪಾಪನನ ಯೋಧನಿಂ ಚಕ್ರಪಾಣಿಯಿಂ ಖಂಡಿಸೆಪಟ್ಟುದಾಗಿ ನೆಲದೊಳ್ ಬಿರ್ದುದಂ ಪದ್ದು ಕಂಡು (ಪಶ್ನಾರಾ. ೧೪೮-೯); ಯುದ್ಧವೊಂದೇ ಯೋಧನಾದ ಕ್ಷತ್ರಿಯನಿಗೆ ವಿಧ್ಯುಕ್ತಧರ್ಮವೂ ಕರ್ಮವೂ ಆಗಲಿ (ಭಾರತ. ೧೦೭). [ಸಂ.]

**ಯೋಧನ** (ನಾ). ಕಾಳಗ ; ಸಮರ ; ಯುದ್ಧ : ವಾಸಿಗೆಟ್ಟು ಯೋಧನದೆ ದೈತ್ಯರೊಡನೆ . . . ಗಾಂಧರ್ವಸಮುದಾಯಮೇ ಸುರುಳಿತೆನೆ ಲೆಕ್ಕಿಸಲ್ವೇಳ್ಕು (ವೆಂಕಾಶಾ. ೬-೦೭-೪೦). [ಸಂ.]

**ಯೋನ** (ನಾ). ಯವನ ; ಗ್ರೀಸ್‌ದೇಶದವನು : ನಾವೆಗಳನು ಮೂಕಿ ನೂಕಿ, ಯೋನರಿಂದ ಮುರಿದರು (ಶಾರಸಿ. ೨೧-೬). [ < ಸಂ. ಯವನ ]

**ಯೋನಿ** (ನಾ). ೧. ಸ್ತ್ರೀಯ ಜನನಾಂಗ ; ಭಗ : "ಭಗಃ, ಯೋನಿಃ, ಉಪಸ್ಥಃ, ವರಾಂಗಂ, ಸ್ಮರಮಂದಿರಂ—ಈ ೫ ಉಪಸ್ಥಂ" (ಹಲಾಯು. ೯೫-೩೬೦) ; ರುದ್ರನಾವ ಯೋನಿಯಲ್ಲಿ ಬಂದನೆಂದು ನೀವು ಹೇಳರೋ (ಬಸವ. ೪೫) ; ಬಂದ ಯೋನಿಯೊಂದಚೊಯದೆ ಉಂಡ ಮೊಲೆಯೊಂದಚೊಯದೆ ಕಾಮವಿಕಾರ ತಲೆಗೇರಿ ವಿಷಯಾತುರನಾಗಿ . . . ಆತ್ಮ ಕೆಟ್ಟು ನಷ್ಟವಾಗಿ ಹೋಯಿತು (ಅಖಂಡೇ. ೧೦-೬). ೨. ಗರ್ಭಕೋಶ ; ಗರ್ಭಾಶಯ : ನೆಲಸದ ಯೋನಿ ಮುಟ್ಟದೆಡೆ ಕಾಣದ ಕಾಲಪಾತತ್ತ್ವದೊಳ್ ಮನಂ ನಿಲಿಸದ ಭಾವಮುಟ್ಟಿಸದ ವೃದ್ಧಳಮಿಲ್ಲೆನೆ ಕರ್ಮಬಂಧದಿಂ . . . ಭವಾಂಬುನಿಧಿಯೊಳ್ ತಿರಿತಪ್ಪವು ಜೀವರಾಶಿಗಳ್ (ಸುಕುಮಾ. ೫-೩೨). ೩. ಜನ್ಮ ; ಹುಟ್ಟು : ಹಿಂದೆ ನಾನಾ ಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ (ಬಸವ. ೧೭) ; ಜೀವದೊಳಗುಂಟೆಂದರೆ ನಾನಾ ಯೋನಿಯವನಲ್ಲ (ಮೋಕ್ಷಪ. ೩-೮) ; ಹುಟ್ಟಿದ ಯೋನಿಗಳಿಲ್ಲ ಮೆಟ್ಟಿದ ಭೂಮಿಗಳಿಲ್ಲ (ಶಪಶ. ೦೬೨-೧). ೪. ಜನ್ಮಸ್ಥಾನ ; ಉತ್ಪತ್ತಿಸ್ಥಾನ. ೫. ವಂಶ ; ಜಾತಿ. ೬. [ವೇದಾಂತ] ಮೂಲಕಾರಣ; ಹೇತು : ಋಗ್ವೇದವೇ ಮುಂತಾದ ಮಹಾ ಶಾಸ್ತ್ರಕ್ಕೆ 'ಯೋನಿ' ಅಂದರೆ ಕಾರಣವಾಗಿರುವದು (ಬ್ರಹ್ಮಶಾ. ೨೬). ೭. [ಜೈನ] ಜನ್ಮ ಅಥವಾ ಉತ್ಪತ್ತಿಗೆ ಆಧಾರವಾದುದು: ಜೀವಸಮಾಸದಲ್ಲಿ . . . (೧) ಸ್ಥಾನ (ಏಕೇಂದ್ರಿಯ ಮೊದಲಾದ ಜಾತಿಭೇದ), (೨) ಯೋನಿ (ಕಂದ, ಮೂಲ, ತತ್ತಿ, ಗರ್ಭ, ರಸ, ಬೆವರು ಇತ್ಯಾದಿ ಉತ್ಪತ್ತಿಯ ಆಧಾರಗಳು), (೩) ದೇಹಾವಗಾಹನ (ಶರೀರದ ಆಕಾರ), (೪) ಕುಲ . . . ಈ ಕಾರಣಗಳಿಂದಲೂ ಉತ್ತರೋತ್ತರಭಾಗಗಳು ಅಸಂಖ್ಯಾತವಾಗಿವೆ (ತ್ರೈಪಶ. ೩೦೦). [ಸಂ.]

**ಯೋನಿಜ** (ನಾ). ಗರ್ಭಕೋಶದಿಂದ ಹುಟ್ಟುವ ಜೀವ : ಇವರೆಲ್ಲರು ಯೋನಿಜರೆಂಬುದ ತ್ರೈಜಗ ಬಲ್ಲುದು (ಬಸರ. ೫೪೭) ; ಜನಿಸದಯೋನಿಜಂಗಂ ಪಿರಿದು ಜನನಂಗಳಲಿ ಜನಿಸುವ ಯೋನಿಜರು ಸರಿಯೇ (ಬಸಪು. ೫೪-೨೭) ; ಶರೀರವು ಯೋನಿಜ ಮತ್ತು ಅಯೋನಿಜ ಎಂದು ಎರಡು ವಿಧ (ಶಾತತ್ತ್ವ. ೨೯೦). [ಸಂ.]

**ಯೋನಿದೋಷ** (ನಾ). ಸ್ತ್ರೀಯ ಜನನಾಂಗಕ್ಕೆ ಸಂಬಂಧಿಸಿದ ವ್ಯಾಧಿ : ನೈದಿಲಗೆಡ್ಡೆ, ಅರಿವಳ, ಒಪ್ಪಲಿ ಇವ ಸಣ್ಣನಾಗಿ ಅರೆದು ಯೋನಿಯೊಳೊತ್ತೆ ಯೋನಿದೋಷ ಮಾಣ್ಗುಂ (ಏಶ್ವವಿ. ೮೨). [ಸಂ.]

**ಯೋನಿನೆತ್ತರು** (ನಾ). ಯೋನಿಯಿಂದ ಅತಿಯಾಗಿ ರಕ್ತಸ್ರಾವವಾಗುವ ಒಂದು ಬಗೆಯ ರೋಗ : ಯೋನಿನೆತ್ತರಿಗೆ :— ಮೊಸರು, ಹಾಲು, ಎಳ್ಳೆಣ್ಣೆ, ಹಾಲು ಈ ಎರಡನ್ನೂ ಸಮವಂ × × × ಹಾಕಿ ಓಗೆ ಮೂಱುದಿನ ಕುಡಿಸಿದರೆ ನೆತ್ತರು ನಿಲ್ಲುವುದು (ಏಶ್ವವಿ. ೦೭೯).

[ಯೋನಿ + ನೆತ್ತರು (<ನೆತ್ತರ್)]

**ಯೋನಿಮುದ್ರೆ** (ನಾ). ಶಕ್ತಿಪೂಜೆಯ ಸಂದರ್ಭದಲ್ಲಿ ಮಾಡುವ ವಿವಿಧ ಕರನ್ಯಾಸಗಳಲ್ಲಿ ಒಂದು.– ಒಂದು ಬಗೆಯ ಹಸ್ತ ಮುದ್ರೆ : ಅಸ್ತ್ರಮುದ್ರೆ, ಚಕ್ರಮುದ್ರೆ . . . ಯೋನಿಮುದ್ರೆ . . . ಸಂಹಾರಮುದ್ರೆಯೆಂಬ ಸಕಲ ಮುದ್ರಾಲಕ್ಷಣವನರಿದಾ ಯಾ ಕ್ರಿಯೆಗಳಲ್ಲಿ ಪ್ರಯೋಗಿಸಿ (ಏವೀಳ. ೯೩). [ಸಂ. ಯೋನಿಮುದ್ರಾ]

**ಯೋನಿರಕ್ತ** (ನಾ). = ಯೋನಿನೆತ್ತರು : ಎಮ್ಮೆಯ ಹಾಲನು ಚೆನ್ನಾಗಿ ಕಾಸಿ ಸಕ್ಕರೆ ಜೇನುತುಪ್ಪವೆರಸಿ ಕುಡಿಯೆ ಯೋನಿರಕ್ತಂ ಪರಿಹರದಹುದು (ಸಕವ್ಯ. ೦೯೫). [ಸಂ.]

**ಯೋನಿಶೂಲೆ** (ನಾ). ಯೋನಿಯಲ್ಲಿ ಉಂಟಾಗುವ ನೋವು : ನೋವು ನಾಥನ ಇಂಗು ೧ ತೂಕ ಅರೆದು ಆಡಿನ ಹಾಲಲ್ಲಿ ಕಲಸಿ ೨೨ ದಿನ ಕೊಳ್ಳಲು ಯೋನಿಶೂಲೆ ಗುಣ (ಏಶ್ವವಿ. ೦೦೪) ; ನೇರಳೆಚಕ್ಕೆಯ ನಾರು, ಬೋರೆಚಕ್ಕೆ ನಾರು . . . ಬೆಣ್ಣೆ ಮೊಸರನ್ನು ಹಾಕಿ ಕಲಸಿ ಕುಡಿಯಲು ಯೋನಿರಕ್ತ, ಯೋನಿಶೂಲೆಗಳು ನಿಲ್ಲುವುವು (ಸಕತ್ಯ. ೪೩೦). [ಸಂ. ಯೋನಿಶೂಲ]

**ಯೋಷಿಜ್ಜನ** (ನಾ). ಹೆಂಗಸರು; ಸ್ತ್ರೀವರ್ಗ : ದ್ವೇಷಂ ವಿರಹಿಗಳೊಳ್ ಪರಿತೋಷಂ ಮಧುಮತದೊಳಾಗೆ ಬಂದರ್ ಕೆಲರುಂ ಯೋಷಿಜ್ಜನಂ (ಶಾಂತಿಪು. ೮-೨೩) ; ಜಗಜ್ಜನೈಕವಿಭುವಂ ಯೋಷಿಜ್ಜನಂ ಮಜ್ಜನಂಬುಗಿಸಿತ್ತು (ಜಗನ. ೧೦-೧೦೦). [ಸಂ.]

**ಯೋಷಿತೆ** (ನಾ). ೧. ಹೆಂಗಸು ; ಸ್ತ್ರೀ : ನೆರೆದ ಯೋಷಿತೆಯರತಿ ಯೋಚಿಸಿದರು (ತಂಶಪ. ೧೦-೧೭). ೨. ಹೆಂಡತಿ ; ಪತ್ನಿ. 'ಗುರುಯೋಷಿತೆ' ಪರಾ. [ ಸಂ. ಯೋಷಿತಾ ]

**ಯೋಷಿತ್ತು** (ನಾ). = ಯೋಷಿತೆ ೧ : "ವನಿತೆ ವಧು ನಾರಿ ಸೀಮಂತಿನಿ ಯೋಷಿದ್ವಾಮೆ ಕೇವಳಂ ಸ್ತ್ರೀನಾಮಂ" (ಪಶು ಕೋ. ೫೨-೧).

[ ಸಂ. ಯೋಷಿತ್ ]

**ಯೋಷೆ** (ನಾ). = ಯೋಷಿತೆ ೧ : ನಯವಿನಯಮೊಯ್ಯಾರ ಸಂಸ್ಕೃತಿಗಳೊಂದಾಗಿ ಮೆಯ್ವೆತ್ತವೋಲ್ ಬಂದಳಾ ವಿಯಚ್ಚರಯೋಷೆ (ಶ್ರೀರಾಮಾ. ೨೦೫-೩೦೨). [ ಸಂ. ಯೋಷಾ ]

**ಯೌಕ್ತಿಕ** (ಗು). ೧. ಯುಕ್ತಿಯಿಂದ ಕೂಡಿದ ; ತರ್ಕಸಮ್ಮತವಾದ. ೨. ಯೋಗ್ಯವಾದ ; ಅರ್ಹವಾದ. (ನಾ). ೩. ಶತ್ರುಗಳನ್ನು ಭೇದಿಸುವ ಐದುಸಾಧನಗಳಲ್ಲಿ ಒಂದು ; ಯುಕ್ತಿ ; ಉಪಾಯ; ತಂತ್ರ : ಮಾಂತ್ರಿಕ ದೈವಿಕ ನೈಸರ್ಗಿಕ ಯೌಕ್ತಿಕ ವಾಸ್ತವಿಕವೆಂಬ ಪಂಚಭೇದಸಾಧನಂಗಳಿಂದಲುಂ ಪರಭಯಂಕರ ವೇಷಭಾಷಾಕಾರಂಗಳುಳ್ಳ ಘನದೇವರ್ಕಳ್ಕರ್ಮಂ (ಏವೀಳ. ೨೬೩). ೪. ತರ್ಕವನ್ನೇ ಅವಲಂಬಿಸುವವನು; ತಾರ್ಕಿಕ : ತಾರ್ಕಿಕರಿಗೆ ಯೌಕ್ತಿಕರೆಂದು ವ್ಯವಹಾರವಿರುವುದು (ಹಿಂದಶಾ. ೦೦೪). ೫. ಅರಸನ ಬಳಿ ಇರುವ ಸರ್ಮಸಚಿವ. [ಸಂ.]

**ಯೌಗಿಕ** (ಗು). ೧. ಉಪಯುಕ್ತವಾದ ; ಪ್ರಯೋಜನವುಳ್ಳ. ೨. ಯೋಗ್ಯವಾದ ; ತಕ್ಕ. ೩. ರೂಢವಾದ ; ಸಾಂಪ್ರದಾಯಿಕವಾದ. ೪. ಯೋಗಕ್ಕೆ ಸಂಬಂಧಿಸಿದ. (ನಾ). ೫. [ವ್ಯಾಕ] ಅವಯವಾರ್ಥವನ್ನುಳ್ಳ ಪದ ; ವ್ಯುತ್ಪತ್ತಿಯನ್ನು ಹೊಂದಿಕೊಳ್ಳುವ ಪದ. ೬. ರಾಸಾಯನಿಕ ಮಿಶ್ರಣ : (೯). [ಸಂ.]

**ಯೌಗಿಕೆ** (ನಾ). [ಕಾವ್ಯಮೀ] ಶಬ್ದಗುಣಗಳಲ್ಲಿ ಒಂದು; ಅವಯವಾರ್ಥವನ್ನುಳ್ಳ ಪದ : ಅಗ್ನಿಪುರಾಣದಲ್ಲಿ . . . ಶ್ಲೇಷ, ಲಾಲಿತ್ಯ, ಗಾಂಭೀರ್ಯ, ಸೌಕುಮಾರ್ಯ, ಉದಾರತಾ, ರೂಢಿ, ಯೌಗಿಕೀ – ಇವು ಏಳೂ 'ಶಬ್ದಗುಣ'ಗಳೆಂದೂ ಮಾಧುರ್ಯ . . . ಸಾಮಯಿಕತಾ ಇವು ಆರೂ 'ಅರ್ಥಗುಣ'ಗಳೆಂದೂ . . . ಹೇಳಿದೆ (ಕ್ರಿಬಿ. ೨೬೩ ೮೦೬).

[ ಸಂ. ಯೌಗಿಕೀ ]

**ಯೌತಕ** (ನಾ). ಮಗಳು ಮತ್ತು ಅಳಿಯನಿಗೆ ಮದುವೆಯ ಕಾಲದಲ್ಲಿ ಕೊಡುವ ಬಳುವಳಿ.– ಉದುಗೊರೆ : "ಯೌತಕಂ . . . ಮದುವೆ ಮುಂತಾದುವುಗಳಲ್ಲಿ ಮಗಳಿಗೂ ಅಳಿಯನಿಗೂ ಕೊಡತಕ್ಕ ಬಹುಮಾನಕ್ಕೆ ಹೆಸರು" (ಸಿದ್ಧಾಂತ. ೨೪೩). [ಸಂ.]

**ಯೌತವ** (ನಾ). ಒಂದು ಅಳತೆ. – ಮಾನ. [ಸಂ.]

**ಯೌವತ** (ನಾ). ೧. ತರುಣಿಯರ ಗುಂಪು ; ಯುವತಿಯರ ಸಮೂಹ : "ಯೌವತಮದು ಯುವತಿಜನರ ಸಂಘಾತಂ" (ವಸ್ತುಕೋ. ೧೦೩-೩೨); ಇದು ಪಿರಿದುಂ ವಸಂತಸಖ ಯೌವತರತ್ನನಿಧಾನವಂತದಲ್ಲಿದು . . . ರತಿನಾಥಕಲ್ಪಲತಿಕಾಪ್ರಕರೈಕಕೃತಾಳವಾಳಂ (ಕಂದ್ರುಕ. ೬-೦೨೭). ೨. ಯುವತಿಯ ಗುಣಧರ್ಮ; ಯುವತಿಯಾಗಿರುವಿಕೆ. [ಸಂ.]

**ಯೌವನ** (ನಾ). ೧. ಹರಯ ; ತಾರುಣ್ಯ : ಆ ಕನ್ನೆಗೆ ಯೌವನಂ ನೆಱೆದಂದು ಮದುವೆಯಾದೊಡೆ (ರಾಮಾ.ರಾ. ೦೩-೨೭); ಯೌವನವನ ವಸಂತಲಕ್ಷ್ಮಿ ಸೌಭಾಗ್ಯನಿಧಾನದೀಪವರ್ತ್ತಿ . . . ಶ್ರೀಮತ್ಪಿರಿಯರಸಿ ಕಂಚಲಮಹಾದೇವಿಯರ್ (ಕ್ಲಾಇ.XX. ೯೬-೦೩; 1072); ಭವವ ಬಳಸುವ ತನುವಿನಲಿ ಕೌಮಾರ ಯೌವನ ವಾರ್ಧಿಕಂಗಳಲಿ ತನು ವಿಕಾರಿಸುವದು (ಕುಮಾ.ರಾ. ೩-೯೯); ಚಿಂತೆಯೇ ಮುಪ್ಪು, ಸಂತೋಷವೇ ಯೌವನ (ಗಾದೆ). ೨. ತಾರುಣ್ಯವನ್ನು ಉಳ್ಳವನು; ಯೌವನವನ್ನು ಹೊಂದಿದವನು: ಸುಕುಮಾರಸ್ವಾಮಿಯುಂ ಯೌವನನಾಗಿ ಅತ್ಯಂತ ರೂಪಲಾವಣ್ಯ ಸೌಭಾಗ್ಯಕಾಂತಿಯಿಂದಂ ಕೂಡಿದೊಂ (ವಡ್ಡಾ.ರಾ. ೨೩-೦೦); ಬಳಿಕ ಯೌವನನಾಗಿ ಪರಮಂಡಲಕೆ ನಡೆದನು (ಕುಮಾ.ರಾ. ೬-೩೦). [ಸಂ.]

**ಯೌವನಗಾರ್ತಿ** (ನಾ). ಜವ್ವನೆ ; ತರುಣಿ ; ಯುವತಿ : ಅತ್ಯಂತ ರೂಪ ಯೌವನಗಾರ್ತಿಯರು . . . ಸತ್ಯಭಾಮೆಯನು ಸಾರಿದರು (ಜೋಹಕ. ೦೯-೬೨). [ಯೌವನ + – ಕಾಱ + – ತಿ$_1$ (< – ಇತ್ತಿ)]

**ಯೌವನಮದ** (ನಾ). ಹರಯದ ಸೊಕ್ಕು : ಯೌವನಮದದಿಂದಲೂ ಅಸಹನೆಯಿಂದಲೂ ಮೌಢ್ಯದಿಂದಲೂ ತುಂಬಿರುವ ಅವರಿಗೆ ವಿವೇಕವನ್ನು ಹೇಳಿದರೆ ಅದು ಅವರ ಮನಸ್ಸಿಗೆ ಇಳಿಯುವುದಿಲ್ಲ. (ವಕಥಾ. ೨೩೦). [ಸಂ.]

**ಯೌವನಸ್ಥ** (ನಾ). ಯುವಕ ; ತರುಣ : ಯೌವನಸ್ಥನಾದ ಮಾಧವನು . . . ತಂದೆಗೆ ಬಲವಾದ ಎರಡು ಪೆಟ್ಟುಗಳನ್ನು ಕೊಟ್ಟನು (ಶಿಲಾಶಾ. X. ೨೩). [ಸಂ.]

**ಯೌವನಾವಸ್ಥೆ** (ನಾ). ತಾರುಣ್ಯ ; ಯುವಾವಸ್ಥೆ : (೯). [ಸಂ. ಯೌವನಾವಸ್ಥಾ]

**ಯೌವನೆ** (ನಾ). ಯುವತಿ : ತರುಣಿ : ವಯಸವಿಭೇದದಿಂ ಬಾಲೆ ಯೌವನೆ ಪ್ರೌಢೆ ಲೋಲೆಯೆಂದಿಂತು ಧರಿತ್ರಿಯೊಳಪ್ಪರ್ ನಾಲ್ವರ್ಕಾಂತೆಯರ್ (ಮದತಿ. ೬-೦). [ಯೌವನ + – ಎ$_2$]

**ಯೌವನೋದಯ** (ನಾ). ಹರಯದ ಆರಂಭ ; ತಾರುಣ್ಯದ ಪ್ರಾರಂಭ : ವಿಜೃಂಭಿಸಿದುದು ಯೌವ[ಪಾಠಾಂ. ಯುವ್ವ]ನೋದಯವಿಲಾಸ ಮನುಕ್ರಮದಿಂ ಮದಂಗದೊಳ್ (ಕಾದಂಪೂ. ೬೧೯) ; ಆ ವಧು ಯೌವನೋದಯ ರಸಾಯನಸಿದ್ಧಿ ಮನೋವಿಮೋಹ ಸಂಭಾವನವಿದ್ಯೆ . . . ಎನಿಪ್ಪಳದೇಂ ಸುರೂಪೆಯೋ (ಕಂಪ್ರಪು. ೩-೨೬). [ಸಂ.]

**ಯೌವರಾಜ್ಯ** (ನಾ). ೧. ಯುವರಾಜನ ಪದವಿ, – ಅಧಿಕಾರ : ಮೊದಲೊಳ್ ತಾಂ ಯೌವರಾಜ್ಯಂ ಬಳಿಕ ನಡುವೆ ಸಂದಾಧಿರಾಜ್ಯಂ ಬಳಿಕ್ಕಂ ತುದಿಯೊಳ್ ಕೈವಲ್ಯಸೌಖ್ಯಪ್ರದಮೆನಿಪ ತಪೋರಾಜ್ಯಮೆಂದಿಂತು ಮಿಾಯುಂದದೆ ಸೇವ್ಯಂಗಳ್ ಮದೀಯಾನ್ವಯನೃಪರ್ಗೆ (ಕಂದ್ರುಕ. ೨-೩೦). ೨. [ಜೈನ] ಐವತ್ತು ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು : ಯೌವರಾಜ್ಯ . . . ನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೩-೦೩ ವ). [ಸಂ.]

**ಯೌವರಾಜ್ಯಪದ** (ನಾ). ಯುವರಾಜನ ಪದವಿ, — ಅಧಿಕಾರ : ಅನಂತವೀರ್ಯನಪಾರಬಲಂ ಯೌವರಾಜ್ಯಪದದೊಳ್ ನಿಂದು (ಶಾಂತಿಪು. ೨-೧). [ಸಂ.]

**ಯೌವರಾಜ್ಯಾಭಿಷೇಕ** (ನಾ). ಯುವರಾಜಪದವಿಯನ್ನು ಕೊಡುವಾಗ ಮಾಡುವ ಅಭಿಷೇಕ : ಶುಭದಿನದೊಳಿಳಾಧೀಶ್ವರಂ ಮಾಡೆ ತೂರ್ಯಸ್ವರದೊಳ್ ತಳ್ತೊಪ್ಪುದೇಂ ಶೋಭಿಸಿದುದೊ ಪಿರಿದುಂ ಯೌವರಾಜ್ಯಾಭಿಷೇಕಂ (ಕಂದ್ರುಕ. ೨-೬೯); ಕುವರವಿಷ್ಣುವಿಗೇ ಯೌವರಾಜ್ಯಾಭಿಷೇಕವನ್ನು ಮಾಡಿದರಾಯಿತು (ಶಾಂಕಲಾ. ೨೯). [ಸಂ.]

*

# ರ



**ರ$_1$** (ನಾ). ಕನ್ನಡವರ್ಣಮಾಲೆಯ ನಲವತ್ತೇಳನೆಯ ಅಕ್ಷರ : ರಕಾರ ; ರೇಫ : ಅವರ್ಗೀಯ : ಯ ರ ಲ ವ ಸ ಹ ಳ ೞ ಱ (ಕೃಶಬ್ದ. ೩).

**ರ$_2$** (ನಾ). ೧. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ :"ಖಿಶಫರ ಮದರಡಕ್ಕ" (ಮಂಗರಾ. ೧೧೪-೧೧). ೨. [ಛಂದ] ಆದಿ ಮತ್ತು ಅಂತ್ಯಗಳಲ್ಲಿ ಎರಡು ಗುರುಗಳೂ ಮಧ್ಯೆ ಒಂದು ಲಘುವೂ ಉಳ್ಳ ಒಂದು ಗಣದ ಹೆಸರು ; ರಗಣ (–⏑–) : ಮಲ್ಲಿಕಾಮಾಲೆಯಪ್ಪುದು ರಂ ಸಜಂಜಭರಂ ಬರಲ್ (ಕೃಶಬ್ದ. ೬೩). [ಸಂ.]

**ರಂಕ** (ಗು). ೧. ಆತ್ಮಾಸೆಯಿಂದ ಕೂಡಿದ ; ಲೋಭಿಯಾದ. (ನಾ). ೨. ನಿರ್ಗತಿಕ ; ಭಿಕ್ಷುಕ ; ತಿರುಕ : ಅಂಕೆಯಿಲ್ಲದ ರಾಜ್ಯವನು ನಿಶ್ಶಂಕೆಯಿಂದಾಳುವ ನೃಪಾಲಗೆ ಮಂಕುಹಿಡಿಯಲು ತನ್ನನೇ ತಾ ರಂಕನೆಂಬಂತೆ (ಅದ್ಭುತ. ೩-೦೩) ; ರಾಜ ರಂಕನಾಗುವುದು ಕಾಲಗತಿಯ ಪರಿಣಾಮ (ಹಂಪಾ. ೭೯೩) ; ರಾಜನಿಂದ ರಂಕನವರೆಗೂ ಅವನಿಗೆಲ್ಲರೂ ಒಂದೇ (ಪಾಂಗೀ. ೩೯). [ಸಂ.]

**ರಂಕರಾಟಣ** (ನಾ). (ಜಾತ್ರೆ, ಪರಿಸೆ ಮೊದಲಾದುವುಗಳಲ್ಲಿ) ಮಕ್ಕಳನ್ನು ಕೂರಿಸಿ ತಿರುಗಿಸುವ ಗಿರಗಿಟ್ಲೆ : "ಮರದ ಕುದುರೆಗಳು. ತೊಟ್ಟಿಲುಗಳು ಮೊ. ಗಳುಳ್ಳ ತಿರುಗುಯಂತ್ರ ; ರಂಕರಾಟಣ" (Merry-Go-round. ೨೦೯೩). [←ತೆಲು. ರಂಕುಲರಾಟ್ನ]

**ರಂಕು** (ನಾ). ಮೈಮೇಲೆ ಕಪ್ಪುಮಚ್ಚೆಗಳಿರುವ ಒಂದು ಬಗೆಯ ಜಿಂಕೆ : "ಆ ರಂಕು ನ್ಯಂಕುವೆನೆ ಮರೆಗೆ ಪೆಸರಕ್ಕು" (ಮಂಗರಾ. ೯೬-೧೧) ; ಮೆಲ್ಲನಿಟ್ಟೊದತ್ತು ವಿಯತ್ತಳಮಧ್ಯಭಾಗದಿಂ ಪರಿಣತ ರಂಕುರೋಮತತಿ ಪಾಂಡುರಮೆಂದು ಶಶಾಂಕಮಂಡಲಂ (ಕಾದಂಪೂ. ೦೩೬). [ಸಂ.]

**ರಂಕೆ** 'ಟಿಸೌಂಕು' ನೋ.

**ರಂಗ** (ನಾ). ೧. ಬಣ್ಣ : ವರ್ಣ. ೨. ಬಣ್ಣದ ಪುಡಿ : ಜೀನಸಗಳು . . . ೬೫, ರಂಗ, ಸರ್ವಜಾತಿಯದು (ಮುಂಡಿವಾ. ೦೩೦). ೩. ಬಣ್ಣದ ಪುಡಿಯಿಂದ ರಚಿಸುವ ಹಸೆ, ಚಿತ್ರ ಮೊದಲಾದುವು : ನಡುಬೀದಿಯೊಳ್ ಪಸುಗೆಗೆಡೆಯೊಳಮೂರ ಪಿರಿಯ ಚೌವಟ್ಟದೊಳಂ ತೊಡೆದು ಬರೆದಲ್ಲಿ ರಂಗಮನುಡಿಗೆಗಳಂ ಸುರಿದು ಸೂಸಿ ಕಡುವಮೂರ್ಧರ್ (ಸವುಕ. ೯-೦೩೦). ೪. ನಾಟಕ, ಮೇಳ ಮೊದಲಾದುವುಗಳನ್ನು ಆಡುವ ಸ್ಥಳ : ವೇದಿಕೆ : "ಆಡುವ ಠಾವು ರಂಗವೆಂಬುದು" (ಹರಿಹಯ. ೦೭-೯೭) ; ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ (ಅಂಪೂ. ೭-೧೨೭) ; ನನಗೆ ನನ್ನೋರಗೆಯವರಿಗೆ . . . ಉಡಿಗೆ ತೊಡಿಗೆಯನಣಿಮಾಡಿ ರಂಗಕೆ ಬಿಟ್ಟರು ಬಣ್ಣದ ಬಳಸಿ (ಬಂಕಾಕ. ೦೦-೯೩). 'ರಂಗಪೂಜೆ' ಪರಾ. ೫. ಸಭೆ ಸೇರುವ ಸ್ಥಳ : ಸಭಾಮಂದಿರ. ೬. ನಾಟಕ ಮೊದಲಾದುವನ್ನು ನೋಡಲು ಸೇರಿರುವ ಜನಸಮೂಹ : ಪ್ರೇಕ್ಷಕವರ್ಗ. ೭. ಯುದ್ಧಭೂಮಿ : ಕಳ : ರೋಷದಿಂ ಛೀಂಕರಿಸಿ ರಂಗಮಂ ಪೊಕ್ಕು ಮದದ್ವಿಪಂ ಬೆರ್ಚಿ ನಿಂದುದು ಫಕ್ಕನೆಯಿ (ಶ್ರೀರಾಮಪ. ೯೩೬ ೩೩೦). 'ರಣರಂಗ' ಪರಾ. ೮. ನೃತ್ಯ : ನರ್ತನ. ೯. ಹಿಗ್ಗು : ಸಂತೋಷ. ೧೦. ತವರ : "ತ್ರಪು. ಪಿಚ್ಚಟಂ, ರಂಗಂ. ಮುಗಂ — ೪ ತವರದ ಹೆಸರುಗಳು" (ಶಬ್ದಮ. ೩೦೭). ೧೧. ಕೃಷ್ಣ : P ಈ ಅರ್ಥವು ಸಂಸ್ಕೃತ ಕೋಶಗಳಲ್ಲಿಲ್ಲ : ರಂಗ ಬಾರೋ ಕೃಷ್ಣ ಬಾರೋ ಮಂಗಳಾತ್ಮಕ ಮನಸಿಜನಯ್ಯನೆ . . . ಬಾರೋ (ಪುರಂದ. ೩-೭೭ ಪಲ್ಲವಿ) ; ರಂಗ ನಿನ್ನಯ ರಂಗುವಡೆದ ಜಂಘೆಯ ಚೆಲ್ವ ಮುಂಗುಡಿವರಿದು ಮುದದೊಳು ಹಿಂಗದೆ . . . ಹೃದಯಾಂಗಣದೊಳಿರುತಿರ್ಕೆ (ಕಕಾಂ. ೦-೩). ೧೨. ಹೊಳಪು ; ಪ್ರಕಾಶ : 'ಪಿಂಡರಂಗ' ಪರಾ.

ರಂಗಕುಣಿ = ನರ್ತನ ಮಾಡು ; ನಾಟ್ಯವಾಡು : ಅವರೂ . . . ತಮಟೆ ಸದ್ದಿಗೆ ಸರಿಯಾಗಿ ಪಾದವಿನ್ಯಾಸ ಮಾಡುತ್ತಾ ರಂಗಕುಣಿಯುವರು (ಹುಟ್ಟುಪ. ೨೧). **ರಂಗದ ಕುಣಿತ** = ಸುಗ್ಗಿಯಲ್ಲಿ ನಡೆಯುವ ಒಂದು ಬಗೆಯ ಕುಣಿತ : 'ರಂಗದ ಕುಣಿತ' ಮಂಡ್ಯ ಜಿಲ್ಲೆಯಲ್ಲಿ ವಿಶೇಷವಾಗಿಯೂ . . . ಕಂಡುಬರುತ್ತದೆ (ಕಜಳ. ೦೩೨). [ಸಂ.]

**ರಂಗಂಬೊಗು** (ಕ್ರಿ). ನೃತ್ಯ, ನಾಟಕ ಮೊದಲಾದುವುಗಳನ್ನು ಪ್ರದರ್ಶಿಸಲು ರಂಗಸ್ಥಳಕ್ಕೆ ಬರು : ಮಂಗಲಾಲಂಕಾರಾಲಂಕೃತನಾಗಿ ನಾಟ್ಯವಿದ್ಯಾಚಾರ್ಯನಂ ಪೋಲ್ತು ರಂಗಂಬೊಕ್ಕು ಲೋಕಾಕಾರಮನಭಿನಯಿಪಾಕಾರಂ ನೆಗಟ್ಟೆ (ಆಂಪೂ. ೭-೦೦೩ ವ) ; ನಿನ್ನೆ ರಂಗಂಬೊಕ್ಕು ಚಿತ್ರವೆನೆ ನರ್ತಿಸಿದ ಕನ್ನೆ ನಿನ್ನಯ ಕುಮರಿಯೇ (ಸಾಂದಪು. ೬-೭೧).

[ರಂಗ + ಪೊಗು]

**ರಂಗಕಾಱ** 'ರಂಗಗಾಱ' ನೋ.

**ರಂಗಗಾಱ, ರಂಗಕಾಱ** (ನಾ). ಬಟ್ಟೆಗಳನ್ನು ಶುಭ್ರಮಾಡುವವನು : ಅಗಸ ; ರಜಕ : ಬಲ್ಲಿದನು ನೀ ರಂಗಗಾಱರಿಗೆಲ್ಲರಿಗೆ ಲೇಸಾಯ್ತು ಕೊಡು ನಿನಗುಳ್ಳ ವಸನದಲುತ್ತಮವನೆಮಗೆಂದನಸುರಾರಿ (ಶಿರಾಗ. ೦೦-೩೭-೨).

**ರಂಗಕಾಱ** : ವನಮಾಳಿ ಮಾಳಾಪ್ರಪಂಚಂ ಬೇಡ ಬಿಡುಬಿಡೆಂದು ರಣರಂಗಾರ್ಥಿಯಾಗಿ ರಂಗಕಾಱನ ಕಯ್ಯ ಸೀರೆಯಂ ಸೆಳೆಯಲ್ (ಅರ್ಜನೇ. ೬-೭೭ ವ) ; ಇರದೆಯ್ದಿ ರಂಗಕಾಱನೊಳುರವಣೆಯಿಂ ಕೊಂಡ ಮೌಲ್ಯಮೆನಿಸಿದ ನೀಲಾಂಬರಮಂ ರಾಮಂಗಿತ್ತಸೆದಿರೆ ಕೃಷ್ಣನನರ್ಘ್ಯಪೀತವಸನಮನುಟ್ಟಂ (ಜಗಪು. ೭-೯).

[ರಂಗ$_1$ + — ಕಾಱ / ಸಂ. ರಂಗಕಾರ = ಬಣ್ಣಗಾರ, ಚಿತ್ರಗಾರ]

**ರಂಗಗೀತೆ** (ನಾ). ನಾಟಕರಂಗದ ಮೇಲೆ ಹಾಡುವ (ವಿಶಿಷ್ಟವಾದ ಮಟ್ಟುಗಳನ್ನೊಳಗೊಂಡ) ಹಾಡು : ಹಳೆಯ ರಂಗಭೂಮಿಯ ನಟರಲ್ಲಿ ಕೆಲವರು ಇಂದೂ ಆ ಕಾಲದ ರಂಗಗೀತೆಗಳನ್ನು ಸುಶ್ರಾವ್ಯವಾಗಿ ಹಾಡುತ್ತಾರೆ (ರೂ೨). [ಸಂ. ರಂಗಗೀತಾ]

**ರಂಗತಂತ್ರ** (ನಾ). ನಾಟಕರಂಗದ ಮೇಲೆ ಬಳಸುವ ವಿಶಿಷ್ಟವಾದ ತಂತ್ರ.—ವಿಧಾನ : ಶುದ್ಧ ಸಾಂಪ್ರದಾಯಿಕ ರಂಗತಂತ್ರಗಳ ಬಳಕೆ ಅನಿವಾರ್ಯವೆಂದು ಒಪ್ಪಬೇಕಾಗಬಹುದು (ನಾಚಿತ್ರ. ೨೦೦). [ಸಂ.]

**ರಂಗತಾಲೀಮು** (ನಾ). ನಾಟಕಪ್ರದರ್ಶನಕ್ಕಾಗಿ ಮಾಡುವ ಪೂರ್ವಸಿದ್ಧತೆ : ನಾಟಕದ ಅಭ್ಯಾಸ : ನಾಟಕೀಯವಾಕ್ಯಗಳ ಹಾಗು ಪದಪುಂಜಗಳ 'ರಂಗತಾಲೀಮು' ಕಿಟ್ಟಿಯ ಮನಸ್ಸಿನಲ್ಲಿ ನಡೆದಿರುತ್ತಿತ್ತು (ಗಂಪತ್ತು. ೦೨೦) ; ಯಾವ ಮಾತನ್ನು ಹೇಗೆ ಆಡಬೇಕೆಂಬ ರಂಗತಾಲೀಮನ್ನು ಅವರು ಆಗಲೇ ಮಾಡಿಕೊಂಡಿದ್ದರು (ಮುಕ್ತಮು. ೩೦೨).

[ರಂಗ + ತಾಲೀಮು]

**ರಂಗಪಂಚಮಿ** (ನಾ). ಫಾಲ್ಗುಣ ಕೃಷ್ಣಪಂಚಮಿಯ ದಿನ ಮತ್ತು ಅಂದಿನ ಓಕುಳಿಯ ಎರಚಾಟ : ಓಕಳಿಯಾಡುವ ಜೇಕಳಿಯಂತೆ. ಹಗಲು ಹನ್ನೆರಡು ತಿಂಗಳೂ ರಂಗಪಂಚಮಿಯನ್ನು ನೆರವೇರಿಸುವವರಂತೆ. ಪಿಚ್ಚಿ

ಪಿಚ್ಚು ಎಲೆಗಳನ್ನು . . . ಉಗಿದು ಪಿಚಿಪಿಚಿ ಉಗುಳುವ . . . ಬಗ್ಗೆ ನಾನಿಲ್ಲಿ ಬರೆಯಲು ಬಯಸುವದಿಲ್ಲ (ಸಿರಾಶ. ೦೫೯).

[←ಮರಾ. ರಂಗಪಂಚಮಿ]

**ರಂಗಪರಿಕರ** (ನಾ). ನಾಟಕಕ್ಕೆ ಬೇಕಾಗುವ ಬಣ್ಣ, ಭೂಷಣ, ಪರದೆ, ದೀಪ ಮೊದಲಾದ ಸಾಧನ : ಸಂಪೂರ್ಣ ರಂಗಪರಿಕರವುಳ್ಳ ಬಯಲಾಟದ ಸಂಪ್ರದಾಯ ಒಂದಾದರೆ ಅದಿಲ್ಲದಂಥ ತಾಳಮದ್ದಲೆಯ ರೂಪ ಎರಡನೆಯದು (ಹುಕ್ಷಶ. ೦೪೫). [ಸಂ.]

**ರಂಗಪೀಠ** (ನಾ). ನೃತ್ಯ, ನಾಟಕ ಮುಂತಾದುವನ್ನು ಅಭಿನಯಿಸುವ ಸ್ಥಳ.— **ವೇದಿಕೆ** : (ಈ ಎರಡು ಬಾಗಿಲುಗಳ ನಡುವೆ ರಂಗಶೀರ್ಷ ನೇಪಥ್ಯಗಳಿಗೆ ಮಧ್ಯೆ 'ಜವನಿಕೆ' ಅಥವಾ ತೆರೆ ಇರುತ್ತಿತ್ತು). ಈ ಭಾಗದ ಮುಂದೆ ಇರುವ . . . ಭಾಗವು "ರಂಗಪೀಠ" ವೆನ್ನಿಸಿಕೊಳ್ಳುತ್ತದೆ (ಸಂಪಾಲಿ. ೨೩). [ಸಂ.]

**ರಂಗಪೂಜೆ** (ನಾ). ೧. ನಾಟಕ, ನೃತ್ಯ ಮೊದಲಾದುವುಗಳನ್ನು ಪ್ರಾರಂಭಿಸುವುದಕ್ಕೆ ಮುಂಚೆ ರಂಗಕ್ಕೆ ಮಾಡುವ ಪೂಜೆ ; ರಂಗ ದೇವತಾಪೂಜೆ : ನಾಟಕ ಆರಂಭವಾಗುವುದಕ್ಕೆ ಮುಂಚೆ ರಂಗಪೂಜೆ ಮಾಡುವುದು ವಾಡಿಕೆ (ಕಿತ). ೨. ದೇವರ ಉತ್ಸವಮೂರ್ತಿಯನ್ನು ಕೂರಿಸಿ ಮಾಡುವ ಪೂಜೆ : ಪಡುವಕೇರಿಯ ಮಹಾದೇವರ ಸಂನಿಧಿಯಲಿ ಮಾಡಿದ ಧರ್ಮದ ವಿವರ ರುದ್ರಪೂಜೆಯಿಬ್ಬರು ದೀವಳಿಗೆಯ ಹಬ್ಬದಲಿ ರಂಗಪೂಜೆ ೧ (ಸೌಇಇ. IX-ii, ೯೯೬-೦೦ ; 1442) ; ಕಾರ್ತಿಕ ಶುಧ ೧೧ ದಿನ ದೇವಿ ಬಿಜಯಂ ಮಾಡಿದಾಗ ರಂಗಪೂಜೆಗೆ ಲ್ ೨. (ವ್ಯಇಂ. ೦೯೩೯. ೦೯-೦೫ ; 1516) ; ಸೋಣೆತಿಂಗಳಿನ ರಂಗಪೂಜೆಯಲ್ಲಿ ಒಂಬು ದಿನದ ಹೂವಿನ ಪೂಜೆ ಹೆಗಡೆಯದು (ದೇವಹೊ. ೦೯೦). [ಸಂ. ರಂಗಪೂಜಾ]

**ರಂಗಭೂಮಿ** (ನಾ). ೧. ನಾಟಕ, ನೃತ್ಯ ಮೊದಲಾದುವುಗಳನ್ನು ಅಭಿನಯಿಸಿ ತೋರಿಸುವ ಸ್ಥಳ ; ರಂಗಸ್ಥಳ : ಪಾಂಡುಕಶಿಲಾ ತಳಮೆ ರಂಗಭೂಮಿಯಾಗೆ . . . ನಿಳಿಂಪಭಾರತಿಕರೆ ನಟ್ಟುವರಾಗೆ (ಶಾಂತಿಪು. ೦೦-೬೦ ವ) ; ರಂಗಭೂಮಿ ಎಂಬ ಕಲ್ಪನೆಯಲ್ಲಿ ನೃತ್ಯ, ಸಂಗೀತ, ನಟನೆ ಇವುಗಳಿಂದ ಮನೋರಂಜನೆ ಎಂಬ ಮಾತು ಅಡಕವಾಗಿದೆಯಷ್ಟೆ ? (ಕಾರದ. ೫೬೯). ೨. (ಯಾವುದಾದರೂ ಕಾರ್ಯವನ್ನು ನೆರವೇರಿಸುವ) ವೇದಿಕೆ ; ಜಗಲಿ : ರತ್ನದಿಂ ಬೆರಸಿದ ಬಣ್ಣದೊಳ್ ಮೆಚ್ಚೆಯೆ ಕಟ್ಟಿಸಿ ಪುಟ್ಟಿಸಿ ರಂಗಭೂಮಿಯಂ (ಶಂಕರಾ. ೩-೯೦). ೩. ಯುದ್ಧಭೂಮಿ ; ಕಳ : ಗಂಗಾಕುಮಾರನ ಕಳಶಜನ ರಾಧಾತನೂಜನ ರಂಗಭೂಮಿಯಿದು (ಳುವ್ಯಾಕ. ೩-೨೬). [ಸಂ.]

**ರಂಗಭೂಮಿಕೆ** (ನಾ). = ರಂಗಭೂಮಿ ೧ : ಕೆದಱಿದ ಪುಷ್ಪಾವಳಿ ರಂಗದೊಳೆ ಸಯ್ಯಂಬಡೆಯೆ ರಂಗಭೂಮಿಕೆ ಪೂತೊಪ್ಪಿದಪುದು (ಶಾಂತಿಪು. ೬೦-೩೨). [ಸಂ. ರಂಗಭೂಮಿಕಾ]

**ರಂಗಭೋಗ** (ನಾ). ದೇವರ ವಿಗ್ರಹದ ಎದುರಿನಲ್ಲಿ ನೃತ್ಯ, ಸಂಗೀತ ಮೊದಲಾದುವುಗಳ ಮೂಲಕ ಸಲ್ಲಿಸುವ ಸೇವೆ, ಉಪಚಾರ : ಸಂಕ್ರಾಂತಿನಿಮಿತ್ತವಾಗೆ ದೇವರಂಗಭೋಗಕ್ಕಂ ರಂಗಭೋಗಕ್ಕಂ . . . ಕೊಟುಮಡುವುದುಮಂ . . . ಕೊಟ್ಟರ್ (ಕಇಇ. ೨೨-೭-೩೨ : 1083) ; ಮಳ್ಳೇಶ್ವರದೇವರ ನಿತ್ಯಪೂಜೆ ಪಳ್ಳಿಪರ್ವ ಅಙ್ಗಭೋಗ ರಙ್ಗಭೋಗ ಖಣ್ಡಸ್ಫುಟಿತಜೀರ್ಣೋದ್ಧಾರಕಂ . . . ಬಿಟ್ಟ ದತ್ತಿ (ಎಕ. XII ತಿಪಟೂ. ೧೨೩-೯೫ ; 1286). 'ಅಂಗಭೋಗ' ಪರಾ. [ಸಂ.]

**ರಂಗಮಂಟಪ** (ನಾ). ೧. = ರಂಗಭೂಮಿ ೧ : ರಂಗಮಂಟಪ, ಸಭಾಗೃಹ. ನೇಪಥ್ಯಸಂಬಂಧವಾದ ಎಲ್ಲ ವಿಷಯಗಳಲ್ಲೂ ಆಗಿನ ದಿವಸಗಳಲ್ಲಿ ಪಕ್ವವಾದ ಅಭಿಪ್ರಾಯಗಳಿದ್ದಂತೆ ಕಾಣುವುದು (ಬಾಲಕೃ. III, ೦೨೯) ; ಶಾಲೆಯ ಬಾಗಿಲಿಗೂ ರಂಗಮಂಟಪಕ್ಕೂ ತಳಿರುತೋರಣಗಳನ್ನು ಕಟ್ಟಿದರು (೯ಕಥ. ೩-೯೦). ೨. = ರಂಗಭೂಮಿ ೨ : ತಿರುವೆಂಗಳನಾಥಗೆ ಕಟಿಸಿದ ರಂಗಮಂಟಪ (ವ್ಯಇಂ. ೦೯೩೯. ೯-೦೦ ; 1465).

[ರಂಗ + ಮಂಟಪ]

**ರಂಗಮಂಡಪ** (ನಾ). = ರಂಗಭೂಮಿ ೧ : ವಿಮಾನ, ಅರ್ಧಮಂಡಪ, ಮಂಡಪ ಮತ್ತು ತೆರೆದಿರುವ ರಂಗಮಂಡಪಗಳು ಮೊದಲು ಕಂಡು ಬರುತ್ತವೆ (ಹೊಯ್ಸವಾ. ೦೦). [ಸಂ.]

**ರಂಗಮಹಲು** (ನಾ). ಭೋಗವಿಲಾಸವನ್ನು ನಡೆಸುವ ಸ್ಥಳ : ವಿಲಾಸ ಮಂದಿರ : ಅವನು ಅಲ್ಲಿಂದ ಜಾಗ್ರತೆಯಾಗಿ ಹಿಂದಿರುಗಿ ರಂಗಮಹಲಿನಲ್ಲಿ ರಾಣಿಯ ಬಳಿಗೆ ಬಂದನು (ಘೂರಾತ. ೬೦).

[ ← ಪಾರ. ಮರಾ. ರಂಗಮಹಾಲ್; ಹಿಂ. ರಂಗಮಹಲ್ ]

**ರಂಗವಲಿ**, ರಂಗವಾಲಿ, ರಂಗವಾಲೆ, ರಂಗಾವಲಿ, ರಂಗೋಲಿ, ರಂಗೋಲೆ (ನಾ). ನೆಲದ ಮೇಲೆ ಬರೆಯುವ ಹಸೆ ಮುಂತಾದ ಅಲಂಕಾರ ಮತ್ತು ಅದಕ್ಕೆ ಬಳಸುವ ಅಕ್ಕಿಹಿಟ್ಟು, ಬಿಳಿಯ ಕಲ್ಲಿನ ಪುಡಿ, ಬಣ್ಣದ ಪುಡಿ ಮೊದಲಾದುವು : "ಪೂವಲಿಯೆನುತಂ ಧರೆಯೊಳ್ ಭಾವಿಸೆ ತಾಂ ರಂಗವಲಿಗೆ ನಾಮಂ" (೯ವಿಕಂ. ೦೭೭) ; ಕತ್ತುರಿಯ ಸಗಣನೀರ್ ಬಿಡುಮುತ್ತಿನ ರಂಗವಲಿ ಮಿಳಿರ್ವ ದುಗುಲದ ಗುಡಿ . . . ಮನೆಗಳೊಳೆಲ್ಲಂ (ಶಂಕಪ್ರಾ. ೩-೨) ; ಮೆಱೆವ ರಂಗವಲಿ ದಿವ್ಯಪರಿಮಳವೆರೆದಿಹ ಪನ್ನೀರ ಚಳೆಯ (೯ಂಪವಿ. ೨೨-೭೫). **ರಂಗವಾಲಿ** : "ಗೃಹಲಕ್ಷಣಮೆನಿಪ್ಪ ಬಂಧು ರಂಗವಾಲಿಯಕ್ಕು" (ಮಂಗರಾ. ೬೦-೦೯) ; ಕುಂಕುಮದ ಕಾರಣೆಯಿಂ ಕರ್ಪೂರದ ರಂಗವಾಲಿಯಿಂ . . . ಅಲಂಕರಿಸಿದ ಮಕರಧ್ವಜ ಮಂಟಪವು (ಸಂಬಿರ. ೦೦-೫೯) ; ಗಂಧಗಜದಾನಜಲಂಗಳಿನಾದ ಪಂಕದೊಳ್ ವೇಗಿಗಳಪ್ಪ ವಾಜಿಗಳ ಫೇನಲವಂಗಳವಲ್ಲಿಗಿಲ್ಲಿಗಿಂಬಾಗಿಯೆ ಬೀಟೆ ಪೋಲ್ತುದದು ಪದಕದೊಳಿಕ್ಕಿದ ರಂಗವಾಲಿಯಂ (ಪಾರಪು. ೮-೦೯೯). **ರಂಗವಾಲೆ** : ರಂಗವಾಲೆ ಎಂದರಂಗವಿಸದಯ್ಯಾ ಎನ್ನ ಮನವು (ಬಸವ. ೦೦೭-೩೫೨) ; ರಂಗವಾಲೆ ಹಿಟ್ಟಿನಾರತಿಗೆ ವೋಲಗ ನಾಲ್ಕಕ್ಕಂ ಗದ್ಯಾಣಂ ಹದಿನಾಱು (ಎಕ. III ತಿರುಮ. ೯೭-೬೩ ; 1276) ; ಮಠಗಳಲಿಕ್ಕುತಿಹ ರಂಗವಾಲೆಯ ನಾಸಿ ದೇವಿಯರ್ಬಂದರಾನಂದದಿಂದ (ಮದೇಪು. ೨೯-೨೩). **ರಂಗಾವಲಿ** : ಲಲಿತ ಮೌಕ್ತಿಕಮಣಿಗಣಶ್ರೀಕಲಿತರಂಗಾವಲಿಯ ತೊಳಗುವ ಜಾಗದೊಳಿಗಳ (ಕವತ. ೯-೦೦೫). **ರಂಗೋಲಿ** : ಚಿನ್ನದ ನೇಸರುಕೋಲ್ಗದಿರಿಂ ಚೆಂಬಿಸಿಲಿನ ರಂಗೋಲಿಯನೆಸೆದಿತ್ತು (ಕಾವ್ಯ. ೨೬-೭) ; ಗೋಬೆಯಾಟ, ಹಾಡುವುದು, ಕಥೆ ಹೇಳುವುದು–ಕೇಳುವುದು ಮತ್ತು ರಂಗೋಲಿ ಹಾಕುವುದು–ಇವೇ ಆ ನಾದಗಳು (ಸ್ವತಃ. ೬೦). **ರಂಗೋಲೆ** : ಅಂಗಳದೊಳಗೆ ರಂಗೋಲೆ ಹಾಕುವಾಗ ಶೃಂಗಾರದಂಗದ . . . ಹೆಂಗಳ ವ್ರತವನು ಭಂಗಮಾಡಿದ ಶ್ರೀರಂಗನೆಂಬವನು (ಪುರಂದ. ೦-೭೫-೨) ; ಅಂಗಳ ತುಂಬಾ ಅವಳು ಬಗೆಬಗೆಯ ರಂಗೋಲೆಗಳನ್ನು ಬಳಿದಿದ್ದಳು (ಹಾಕುತ್ತ. ೯೯).

ರಂಗವಾಲೆಯ ನಿಯೋಗ = ರಂಗೋಲೆಯನ್ನು ಹಾಕಲು ನೇಮಿಸಿದ ಸೇವಕವರ್ಗ : ಪಾಯಸ ಪಕ್ವಾನ್ನದಡಿಗೆಗೂಡಿದ ರಂಗವಾಲೆಯ ನಿಯೋಗಕ್ಕೆ ಜೀವಿತಗದ್ಯಾಣವೆರಡು (ಎಕ. XII, ಕಶ್ಯಪಾ. ೨-೨೦ ; 1261).

[ < ಸಂ. ರಂಗವಲ್ಲೀ. / ತಮಿ. ರಙ್ಗವಲ್ಲಿ ; ತೆಲು. ರಂಗವಲ್ಲಿ. / ಮರಾ. ರಾಂಗವಳೀ, ರಾಂಗೋಳೀ ]

**ರಂಗವಲ್ಲಿ** (ನಾ). = ರಂಗವಲಿ : ಅರಸರಾ ಬರ್ಪ ಬಟ್ಟೆಯೊಳೆಲ್ಲಂ ಪಂಚರತ್ನಂಗಳಿಂ ರಂಗವಲ್ಲಿಯನಿಕ್ಕಿ ನೇತ್ರುವಟ್ಟು ದುಕೂಲ ಚೀನಾದಿ ದಿವ್ಯವಸ್ತ್ರಂಗಳಂ ಪಾಸಿ (ವಡ್ಡಾರಾ. ೨೭-೨) ; ತಟ್ಟು ಕಟ್ಟಿದ ಗುಡಿ ರಂಗವಲ್ಲಿಗಳೆದಾಂಗುಡಿಯಂತಿರೆ . . . ಪೊಕ್ಕನಂದು ನಿಜಮಂದಿರಮಂ ಪರಸೈನ್ಯಭೈರವಂ (ಶಂಕರಾ. ೫-೦೦೫) : ಬೀದಿಗಳಂ ಗಂಧೋದಕದಿಂ ಸಾರಣೆಗೆಯ್ದು ರಂಗವಲ್ಲಿಗಳನಿಟ್ಟು (ಅದ್ಭುತ. ೦೦-೨೩). [ ಸಂ. ರಂಗವಲ್ಲೀ ]

**ರಂಗವಳಿ** (ನಾ). (?) : "ರಂಗವಳಿಗಳಿನೆ ಬಿರಿದುಮುಡಂಗಾಯ್ತುರೆನಲ್ಕ ಡಂಗಕಾಜರೊಳಪ್ಪರ್" (ಕೃಹಾಶ. ೫೭). [ ? ]

**ರಂಗವಾಲಿ** 'ರಂಗವಲಿ' ನೋ.

**ರಂಗವಾಲೆ** 'ರಂಗವಲಿ' ನೋ.

**ರಂಗಶಿಲ್ಪಿ** (ನಾ). ನಾಟಕರಂಗವನ್ನು ಸಜ್ಜುಗೊಳಿಸುವವನು,– ಸಿದ್ಧಗೊಳಿಸುವವನು : ಬಹಿರಂಗಪ್ರದರ್ಶನ ಮತ್ತು ನಟರುಗಳಿಲ್ಲದಿದ್ದರೂ ರುದ್ರಪ್ರಭಾವವು ಸಾಧ್ಯ. ಅದೂ ಅಲ್ಲದೆ, ದೃಶ್ಯದ ರಚನೆಯು ಕವಿಗಿಂತಲೂ ಹೆಚ್ಚಾಗಿ ರಂಗಶಿಲ್ಪಿಯ ಕೆಲಸ (ಅಂಶಾ. ೭೮). [ ಸಂ. ರಂಗಶಿಲ್ಪಿನ್ ]

**ರಂಗಶೀರ್ಷ** (ನಾ). ಪ್ರಾಚೀನ ರಂಗಸ್ಥಳದಲ್ಲಿ ನಟರು ಅಭಿನಯಿಸಲು ಉಪಯೋಗಿಸುತ್ತಿದ್ದ ವೇದಿಕೆ : "ನಾಟ್ಯರಂಗ" : ಇದರಲ್ಲಿ ೮ × ೩೨ ಹಸ್ತಗಳ ಅಳತೆಯುಳ್ಳ ಎರಡು ಭಾಗಗಳಿದ್ದು, ಹಿಂದಿನ ಭಾಗವು ಜಗಲಿಯ ಹಾಗೆ ಸುಮಾರು ಒಂದು ಮೊಳ ಎತ್ತರವಾಗಿರುತ್ತದೆ; ಇದಕ್ಕೆ "ರಂಗಶೀರ್ಷ" ವೆಂದು ಹೆಸರು (ಸಂನಾಟಿ. ೨೩). [ಸಂ.]

**ರಂಗಸಜ್ಜಿಕೆ** (ನಾ). ೧. ನಾಟಕದ ಅಭ್ಯಾಸ ; ರಂಗತಾಲೀಮು : ಗೋಬಲಿಯವರು . . . ಏಕಾಂತಸ್ಥಳದಲ್ಲಿ ತಮ್ಮ ಭಾಷಣಗಳ ಸಾಧನೆಯವಾದ 'ರಂಗಸಜ್ಜಿಕೆ' ಮಾಡುತ್ತಿದ್ದರಂತೆ (ಕಥಕ. ೭೩). ೨. = ರಂಗಪರಿಕರ : ಈಚೆಗೆ ನಾಟಕಗಳ ರಂಗಸಜ್ಜಿಕೆ ತುಂಬಾ ಅಚ್ಚುಕಟ್ಟಾಗಿರುತ್ತದೆ (ಬಳಕೆ). [ ರಂಗ + ಸಜ್ಜಿಕೆ$_1$ ]

**ರಂಗಸಾಮಗ್ರಿ** (ನಾ). = ರಂಗಪರಿಕರ : ಇದರಲ್ಲಿ ಫರದೆಗಳು, ವೇಷಭೂಷಣಗಳೇ ಮೊದಲಾದ ರಂಗಸಾಮಗ್ರಿ, ದೃಶ್ಯೋಪಕರಣಗಳೆಲ್ಲವೂ ಸೇರಿವೆ (ಅಂಶಾ. ೬೯ ಅಡಿ). [ಸಂ.]

**ರಂಗಸಾಲೆ** (ನಾ). ನಾಟಕರಂಗ ; ನಾಟ್ಯವೇದಿಕೆ : ನಾನು ಬಡವಿ ಆತ ಬಡವ . . . ಹತ್ತಿರಿರಲಿ ದೂರವಿರಲಿ ಅವನೆ ರಂಗಸಾಲೆ (ನಾದಲೀ. ೩೯-೬). [ ರಂಗ + ಸಾಲೆ$_4$ ]

**ರಂಗಸಿದ್ಧತೆ** (ನಾ). ನೃತ್ಯ, ನಾಟಕ ಮುಂತಾದುವಕ್ಕೆ ಅಗತ್ಯವಾದ ಪರಿಕರಗಳನ್ನು ಸಿದ್ಧಪಡಿಸುವುದು : ದೇವತೆಗಳು ಏನೋ ಒಂದು ಮಹತ್ಕಾರ್ಯಕ್ಕೆ ರಂಗಸಿದ್ಧತೆ ಮಾಡುತ್ತಿರುವಂತಿದೆ (ಶಕಂಬಾ. ೬). [ಸಂ. ರಂಗಸಿದ್ಧತಾ ]

**ರಂಗಸ್ಥಲ**, ರಂಗಸ್ಥಳ (ನಾ). ೧. = ರಂಗಭೂಮಿ ೧ : ನಟರಿಗಾಗಿ ಒಂದು ಎತ್ತರದ ರಂಗಸ್ಥಲ, ಶ್ರೋತೃಗಳಿಗಾಗಿ ನೆಲ (ಭಾರಕ. ೩೭೩). **ರಂಗಸ್ಥಳ** : ೧. ರಂಗಸ್ಥಳದ ಮೇಲೆ ದೊಡ್ಡದೊಂದು ರತ್ನಗಂಬಳಿ ಹಾಸಿತ್ತು (ಶಾಕಿಮ. ೦೩೦). ೨. ವೇದಿಕೆ, ಜಗಲಿ: ಮೂಡುವವನು ರವಿ . . . ಮೂಡಣ ರಂಗಸ್ಥಳದಲಿ ನೆತ್ತರು ಮಾಡುವನು (ಕಎಳ. ೩-೦). [ಸಂ.]

**ರಂಗಸ್ಥಳ** 'ರಂಗಸ್ಥಲ' ನೋ.

**ರಂಗಳಿಸು** (ಕ್ರಿ). ೧. ನೀರು, ಹಾಲು, ಜೇನುತುಪ್ಪ ಮೊದಲಾದುವುಗಳಲ್ಲಿ ಔಷಧಿಯ ಪುಡಿಯನ್ನು ಕದರು : ಇವುಗಳ ಅರೆದು ಹಾಲಿನಿಂದ ರಂಗಳಿಸಿ . . . ಬೆಳಗ್ಗೆ ತೆಗೆದುಕೊಳ್ಳುವದು (ಕಾಪುಶಾ. ೨೬೭) ; ಆ ಹಾಲಿಗೆ ಈ ಪುಡಿಯನ್ನು ಸೇರಿಸಿ ರಂಗಳಿಸಿ ಕೈಯಲ್ಲೆತ್ತಿಕೊಂಡಳು (ಕಂಸುಸಂ. ೨೯೬). ೨. ಅಂಗೈಯಲ್ಲಿ ಯಾವುದಾದರೂ ಸಣ್ಣ ವಸ್ತುವನ್ನು ಇಟ್ಟು ಹೊಳಪು ಬರುವಂತೆ ಬೆರಳುಗಳಿಂದ ತಿಕ್ಕು : (*). ೩. (ಆಲಂ) ನಾಶಮಾಡು : ಕಂಗಳಲಿ ಕಿಡಿಸೂಸಿ ಕರಿಬಿಳ ಮುಂಗಡೆಯ ಶಿವಭಟರ ಗಬೆಯಿಂದ ರಂಗಳಿಸಿ ಸಂಗರದೊಳೆರಗುತ . . . ಏತರೆ (ಅಂಬಶಾ. ೨೯-೨೦). [ ? + — ಇಸು, /ತೆಲು. ರಂಗಲಿಂಚು, ರಂಗರಿಂಚು ]

**ರಂಗಾಜೀವ** (ನಾ). ೧. ಬಣ್ಣದ ವೃತ್ತಿಯಿಂದ ಜೀವಿಸುವವನು ; ಬಣ್ಣಗಾರ ; ಚಿತ್ರಕಾರ : "ರಂಗಾಜೀವಃ, ಚಿತ್ರಕೃತ್ — ಈ ೨ ವ್ಯಾಟಿಗಾಬಂ [ಬಣ್ಣಗಾಬಂ, ಚಿತ್ರಕಾರಂ]" (ಹಕಾಅಮ. ೯೭-೯೭೭). ೨. ರಂಗಭೂಮಿಯ ಮೇಲೆ ನಟನೆಮಾಡಿ ಜೀವಿಸುವವನು : ನಟ. [ಸಂ.]

**ರಂಗಾಣಿ** (ನಾ). ಚಿಕ್ಕಮಕ್ಕಳ ಒಂದು ಬಗೆಯ ಆಟಿಕೆ ; ಗಿಲಿಕೆ : ಆಳು ಮಗುವಿನ ಜೆಳ್ಳಿಯ ರಂಗಾಣಿಯನ್ನು ಕೈಯಲ್ಲಿ ಹಿಡಿದುಕೊಂಡು ಇಂದಕ್ಕನ ಬಳಿ ಬಂದ (ಸಂಕಕ್ಕ. ೦೨೬). [← ತುಳು. ರಂಗಾನಿ , ರಂಗಣಿ]

**ರಂಗಾರಿ**, ರಂಗಾರೆ (ನಾ). ಬಣ್ಣದ ಕೆಲಸ ಮಾಡುವವನು; ಬಣ್ಣಗಾರ : ನಾನಾಬಗೆಯ ಕೈಗಾರಿ ಶಿಲ್ಪಿಗರು ರಂಗಾರಿ ಚಿತ್ರಿಗರು (ಕಬಾಮಾ. ೨೬-೯೬) ; ರಂಗಾರಿಗಳು ಮುಂಡಾಸು, ಶಲ್ಲೆ, ಧಡಕಿ ಮುಂತಾದ ಬಿಳಿವಸ್ತ್ರಕ್ಕೆ ಬಣ್ಣ ಕೊಡುವರು (ಕರ್ನಾಗೆ. ೦೫೩). **ರಂಗಾರೆ** : ರಂಗುಹಾಕುವವನು ; ಬಣ್ಣಗಾರ ; ರಂಗಾರಿ (Dyer. ೫೦೪೩). [ ← ಹಿಂ. ರಂಗ್‌ರೇಜ್ ; ಮರಾ. ರಂಗಾರೀ./ಸಂ. ರಂಗಕಾರ ]

**ರಂಗಾರೆ** 'ರಂಗಾರಿ' ನೋ.

**ರಂಗಾವಲಿ** 'ರಂಗವಲಿ' ನೋ.

**ರಂಗಿಗ** (ನಾ). ಬಣ್ಣಗಾರ : ಸ್ಫಟಿಕದ ಘಟದೊಳಗಿದ್ದ ಬಹುರಂಗಿಗರಂತೆ ಎನ್ನಂಗವುಯ ನೀನಾಗಿ ಹಿಂಗಲೇಕೆ (ಪ್ರಭುಲಿಂಗ. ೦೯-೫೨). [ರಂಗು + — ಇಗ]

**ರಂಗಿಣಿ** (ನಾ). ೧. ಒಂದು ಬಗೆಯ ಗಿಡ; ನೀಲಿಗಿಡ : "ನೀಲಿ ರಂಗಿಣಿ ಯಕ್ಕ್ಯ" (ಮಂಗರಾ. ೩೯-೨೯). ೨. ಒಂದು ಬಗೆಯ ಮುಳ್ಳುಗಿಡ; "ಮಹಾಶತಾವರೀ" (ಅಂಚಿತ. ೨೩೯). [ಸಂ. ರಂಗಿಣೀ]

**ರಂಗಿಸು** (ಕ್ರಿ). ೧. ಬಣ್ಣಕೊಡು : ರಂಗುಗೊಳಿಸು : ಏಕಾವಳಿಯ ಮುತ್ತಿನೊಳುವೆಳಗು ಬೆಳುದಿಂಗಳ ರಂಗಿಸಲು ಶೃಂಗಾರನಿಧಿ ಸೌಂದರೇಂದ್ರಂ . . . ನಡೆತಂದನು (ಸೌಂದಪು. ೮-೯೩). ೨. ಕೆಂಪುಬಣ್ಣದಿಂದ ಕೂಡಿರು; ಕೆಂಪಾಗಿರು : ತೆಂಗಿನಕಾಯಿ ತೋರದ ಮೊಲೆವೊತ್ತು ಲತಾಂಗಿಯ ಬಂದುಗೆವಾಯ ರಂಗಿಪ ಚುಂಬಟಿಯಾನಿದನೆ ಮೋಹತರಂಗಿಣಿವೇಳ್ಕೆ (ಮೋಹತ. ೦-೩೭). ೩. ಹೊಳೆ ; ಪ್ರಕಾಶಿಸು : ರಂಗಿಸುವನರ್ಘ್ಯರತ್ನದ ಪಾವುಗೆಯ ತೊಟ್ಟು (ರಂಗಿ. ೩೭-೨೩). ೪. ಉತ್ಸಾಹಗೊಳ್ಳು; ಉಬ್ಬು : ರಂಗಿಸಿದಂ, ರಾಗಿಸಿದಂ, ಭೋಗಿಸಿದಂ (ಕಪುತ. ೬೯ ಪ್ರಯೋ) ; ರಂಗಿಸುತ ಮೊನೆಗಾಣಿಸುತ್ತಂ ಸಂಗಡಿಗರಂ ಹಿಂಗಿಸುತ ತನ್ನಂಗವಂ ತಾನೇಜಲಿಳಿಯಲು ನೋಡುತಾಡುತ (ಬಸವು. ೨೬-೦೨). ೫. ಉದ್ವೇಗಗೊಳ್ಳು : (*). ೬. ಕರಗು; ದ್ರವಿಸು : ತಿಂಗಳ ಬೆಳಗು ಸೋಂಕಲು ಕೂಡೆ ಶಶಿಕಾಂತ ರಂಗಿಸುವಂತೆವೊಲ್ ನೃಪನ ಕಂಗಳ ಪ್ರಭೆ ತಾಗಲೊಡನೆ ಕಾಂತೆಯರಂತರಂಗ ಪೊಸರುವುದು (ಛಠಕ. ೬-೯೬). [ರಂಗು + — ಇಸು$_1$]

**ರಂಗು** (ನಾ). ೧. ಬಣ್ಣ; ವರ್ಣ : "ರಂಗು — ರಂಗ = ಬಣ್ಣ" (ಕದ್ಯಕೋ. ೩೭) ; ನಸುಬಿರಿವ ಕುಸುಮಕೆ ಸುಗಂಧ ರನ್ನಕೆ ರಂಗು ದೊರಕೊಂಡ ಮಾಳ್ಕೆಯಿಂ ಪಸರಿಸಿಮುದೆಳೆವಪ್ನನ (ಸೌಂದಪು. ೭-೨) ; ಪೊಂಗೆ ಪೊಸಮಿಸುಗು ರನ್ನಕೆ ರಂಗು ಸುಧಾರುಚಿಗೆ ಜೊನ್ನಮುವಿನಾಭಾವಂ ಸಂಗಳಿಸಿ ಮಿಸುಪ ತೆಜದಿಂ ಕಂಗೊಳಿಪುದು ಭಕ್ತಿ (ವೃಷಪು. ೫-೬೯) ; ಗುಲಾಬಿಯ ರಂಗು ಮೂಡುವೆನ್ನನ ಕೆನ್ನೆಗಳಲರಳಿ ಕೇಪೇರೆ (ಚಿತ್ರಾಂಗ. ೫೬-೦೫೯೦). ೨. ಕೆಂಪುಬಣ್ಣ: 'ರಂಗುದುಟಿ' ಪರಾ. ೩. ಶೋಭೆ ; ಕಾಂತಿ ; ಕಳೆ : "ಬಿಜಿಪಿನೊಳ್ ಕಾಂತಿಯೊಳ್ ರಮ್ಯದೊಳ್ ರಂಗೆನಿಕು" (ಶಬ್ದಮಂ. ೬೯). 'ರಂಗುಮಾಣಿಕ', 'ರಂಗುಮಡೆ' ಪರಾ. ೪. ಆವೇಶ ; ಉದ್ರೇಕ ; ಆವೇಗ : ಒಗ್ಗಾಲಿಯು . . . ರಂಗಿನಲ್ಲಿ ಮಾತಾಡುತ್ತಿದ್ದ (ಕಂಹಮ. ೦೯). ೫. ಸಡಗರ ; ಉತ್ಸಾಹ : ತುಂಗಭುಜಶಿಖರಂಗಳಲಿ ದಿವಿಜಾಂಗನಾಜನ ಹೇಮಕೃತಪೀತಾಂಗಳಲಿ ಕುಳ್ಳಿರ್ದು ನವರಸಮೊಗಲು ವೀಣೆಗಳಾ ರಂಗುರಕ್ತಿಗಳಿಂದ ಬಾಜಿಪ ಸಿಂಗರದ ಶಿಲೆ ಕರಗಿ ವಿವಿಧ ಮುಖಂಗಳಲಿ ಝರಿಯಾಗಿ ಸುರಿವುತಲಿರ್ಪವೆಲ್ಲೆಡೆಯು (ಅಶಂಅ. ೦-೨-೬).

'ರಂಗುಗೊಳಿಸು' ಪರಾ. ೬. (ನಾಟಕ, ಗಾಯನ, ನೃತ್ಯ ಮೊದಲಾದುವುಗಳಂಥ) ಮನರಂಜನೆಯ ಒಂದು ಪ್ರಕಾರ: ರಾಜರು ಸಂಗೀತ, ಸಾಹಿತ್ಯ, ನಾಚು, ರಂಗು ಮುಂತಾದುವುಗಳಲ್ಲಿಯೇ ಆಸಕ್ತರಾಗಿದ್ದರು (ಬಹ. ೩೩); ದಿನಂಪ್ರತಿ ನಾಚು, ರಂಗು . . . ಅನೇಕ ಸಮಾರಂಭಗಳು ನಡೆದೇ ಇದ್ದುವು (ಮಂಜಾಸ. ೧೪೦). ೭. ಲಾವಣಿಯಲ್ಲಿ ಒಂದು ಬಗೆ: 'ರಂಗು' ಎಂದು ಹೆಸರಾದ ಶೃಂಗಾರಪದಗಳು ಇನ್ನೊಂದು ಜಾತಿ :—ಲಾವಣಿಗಳಲ್ಲೆಲ್ಲ ಇದೇ ಬಹಳ ಸ್ವಾರಸ್ಯವಾದುದು . . . ಈ ರಂಗುಲಾವಣಿಗಳು ಬಹುಶಃ ತಮಿಳಿನ ಕಡೆಯಿಂದ ಬಂದವುಗಳ ಸಂತಾನವಿರಬಹುದು (ಕರ್ನಾಸಂ. ೪೯).

ರಂಗಾಗು = ೧. ಬಣ್ಣವೇರು; ಕಾಂತಿಯಿಂದ ಕೂಡು : ಕುಣಿಯುವ ಕಣ್ಣ ನೋಟ, ಯಾವಾಗಲೂ ರಂಗಾಗಿರುತ್ತಿದ್ದ ಆ ತುಟಿ ಎಲ್ಲಾ – ಅವನ . . . ಉತ್ತರವನ್ನು ನಿರೀಕ್ಷಿಸಿಯೇ ಇರುತ್ತವೆ (ಪತಿಮಾ. II. ೯೦೪). ೨. ಉತ್ಸಾಹಪಡು : ಕವಿಯ ವಿಷಯವಾಗಿ ಅವಳು ರಂಗಾಗಿ ಮಾತನಾಡುತ್ತಿದ್ದಳು (ಅಂಜೂ. ೦೩೪). ರಂಗಿನ ನುಡಿ = (ಅಲಂ) ಬಣ್ಣದ ಮಾತು; ಬಿನ್ನಾಣದ ನುಡಿ : ನೀನು ಹನುಮಣ್ಣನ ರಂಗಿನ ನುಡಿಗಳಿಗೆ ಮನಸೋತು ನಿನ್ನ ಆತ್ಮವನ್ನು ಅವನಿಗೆ ಮಾರಿಕೊಂಡೆ (ಹಾಕುಕ. ೨೯).

[← ಪಾರ. ಹಿಂ. ಮರಾ. ರಂಗ್./ಸಂ. ರಂಗ]

**ರಂಗುಗೊಳಿಸು** (ಕ್ರಿ). ಉತ್ತೇಜನ ನೀಡು; ಹುರುಪುಗೊಳಿಸು : ಕೆಲಬರ ನೆವಲಾಪಿಸಿ ಕೆಲವರಂ ಚದುರಂಗದಾಟದೊಳ್ ರಂಗುಗೊಳಿಸಿ (ಶ್ರೀಗಂಂ. ೬-೧). [ರಂಗು + ಕೊಳ್$_1$ + – ಇಸು]

**ರಂಗುದುಟಿ** (ನಾ). ಕೆಂಪುಬಣ್ಣದ ತುಟಿ; ಚೆಂದುಟಿ : ರಂಗುದುಟಿ ಸೆಳ್ಳುಗುರು ಬಳಲ್ಮುಡಿ ನಾಡೆ ನಳಿತೋಳು (ಚಸ್ವಮಂ. ೦೧೪); ಪೊಂಗೊಡ ಮೊಲೆಗಳ ನೋಡುವನಪ್ಪವ ರಂಗುದುಟಿಯು ಕಚ್ಚಿ ಪೀರ್ವ (ಶರಶ. ೪೦-೬೯); ರತ್ನದಂತೆ ಬೆಳಗುವ ರಂಗುದುಟಿಯು . . . ರವಿಕೋಟಿಪ್ರಭೆಯಂತೆ ರಾಜಿಸುವ ರಾಜಾಧಿರಾಜ ನಮ್ಮ ಅಖಂಡೇಶ್ವರನು (ಅಖಂಡೇ. ೨೬೩-೨೫).

[ರಂಗು + ತುಟಿ]

**ರಂಗುಬಾಟಿ** (ನಾ). ಕೆಂಪುಬಣ್ಣದ ಬಾಳೆ; ಚೆಂದ್ರಬಾಳೆ : ಪಣ್ಣ ಪೊಂಬಾಟಿಯ ಚೆಂಬಾಟಿಯ ರಂಗುಬಾಟಿಯ ತೋಟಂ (ಜಾಮಾಕ್ಕ. ೦೦೦-೨೪). [ರಂಗು + ಬಾಟಿ]

**ರಂಗುಮಾಣಿಕ** (ನಾ). ಪ್ರಕಾಶಮಾನವಾದ ಕೆಂಪುಹರಳು, — ಮಾಣಿಕ್ಯ : ಮಂಗಳಂ ಜಯಮಂಗಳಂ . . . ಗಂಗೆಯ ಪಡೆದ ಶ್ರೀರಂಗನಿಗೆ ರಂಗುಮಾಣಿಕದುಂಗುರದವಗೆ (ಪುರಂದ. ೪-೨೦೪-೨); ಗಗನಮಣಿ ಪಶ್ಚಿಮಾಂಗನೆಯ ಚೈತಲೆಯ ರಂಗುಮಾಣಿಕದಂತೆ ಕಣ್ಗೆ ಕಾಣಿಸುತಿರ್ದುದಸ್ತಗಿರಿಮಸ್ತಕದೊಳು (ಕೃಪಿಲಾ. ೬-೯೩).

ರಂಗುಮಾಣಿಕದಂಬುಲ = ಮಾಣಿಕ್ಯದಂತೆ ಕೆಂಪಾದ ತಂಬುಲ : ಚುಂಬನಗೊಟ್ಟು ಚುಂಬಿಸಿ ರಂಗುಮಾಣಿಕದಂಬುಲವಿತ್ತು ಮುದ್ದಿಸಿದ (ನೋಹಕ. ೪೩-೯೯). [ರಂಗು + ಮಾಣಿಕ]

**ರಂಗುವಡೆ** (ಕ್ರಿ). ಕಾಂತಿಯನ್ನು ಹೊಂದು; ಬಣ್ಣವೇರು : ಸಡಗರಿಸಿದರು ಬಾಣಜೆಯ ಹರ್ಮ್ಯದಿ ರಂಗುವಡೆದ ಮಾಣಿಕ್ಯಮೊಯ್ಲಗಳು ಸೊಡರಿನೆಳ್ಗೆಯ ಹೊನ್ನ ಕಳಸಂಗಳಾಕಾಶದೆಡೆಯಲ್ಲಿ ಜಗಜಗಿಪಂತೆ (ನೋಹಕ. ೪೦-೩); ರಂಗುವಡೆದ ಪವಳದ ತೋರಣದ ಕಾಂತಿ ಕಂಗೊಳಿಸುವುವು ಬೀದಿಯಲಿ (ಕಂಪಿಂ. ೨೦-೦೭). [ರಂಗು + ಪಡೆ$_1$]

**ರಂಗುವಾಲ** (ನಾ). ಒಂದು ಬಗೆಯ ಗಿಡ; ಅರುಟಾಳ : ''ಅರಿಷ್ಟ$_1$. ಫೇನಿಲಃ – ೨ ರಂಗುವಾಲದ ಗಿಡ'' (ಸಿದ್ಧಾಂತಿ. ೦೦೯). [ ? ]

**ರಂಗುವಿಡಿ** (ಕ್ರಿ). ಕೆಂಪುಬಣ್ಣವನ್ನು ಹೊಂದು; ಕೆಂಪಾಗು : ಶೃಂಗಾರಶಾಲಿಯ ಕೋಮಲಗರ್ಭದ ರಂಗುವಿಡಿದ ಮೊತ್ತದಂತೆ ಜಂಘೆಗಳಿಂದ ರಾಜಿಸುವನಾರೀತನ ಸಂಗಕೆಳಸಿತೆನ್ನ ಮನವು (ಶೃಪಹಿ. ೪-೦೦೬).

[ರಂಗು + ಹಿಡಿ$_1$]

**ರಂಗುವೆಡು** (ಕ್ರಿ). ಕಾಂತಿಯನ್ನು ಪಡೆ; ಶೋಭಿಸು : ರಂಗ ನಿನ್ನಯ ಪೊಡ ಕಣ್ಗಳ ಮಂಗಳ ಸಿಂಗಾರ ತ್ರಿಜಗತ್ತಿಂಗೆ ರಂಗುವೆತ್ತಾಳ್ವನೆಯೆನಲದು ವಿಸ್ತಂತರಂಗದೊಳಾವಗಮಿರ್ಕೆ (ಕಕಸಾಂ. ೨-೬). [ರಂಗು + ಪೆಱು$_1$]

**ರಂಗೇರು** (ಕ್ರಿ). ೧. ಬಣ್ಣವೇರು; ರಂಗಾಗು : ಇಗೊ ಸಂಜೆ, ಸಖಿ, ಚೆಂಬೊಗರಿಂ ರಂಗೇರಿಹ ಜಲದಾಬ್ಜಮುಖಿ . . . ಶಿಶುಚಂದ್ರನ ನಗೆ ನಗುವಳು (ಗತಿಕ. ೩೦-೨); ಅವನಿಗೆ ಇದ್ದಕ್ಕಿದ್ದಂತೆ ಮುಖ ರಂಗೇರಿತು (ಅಂಜೂ. ೭೯). ೨. ಕಳೆಗಟ್ಟು; ರಂಜಿಸು : ಹೆಚ್ಚು ಜನ ಇದ್ದದ್ದೂ ಆಟ ರಂಗೇರುತ್ತದೆ (ಶಂಕೂ. I, ೭೦೯).

[ರಂಗು + ಏರು$_1$ (< ಏಱು$_1$)]

ರಂಗೋಲಿ 'ರಂಗವಲಿ' ನೋ.

ರಂಗೋಲೆ 'ರಂಗವಲಿ' ನೋ.

ರಂಚೆ 'ಚಂಚೆ' ನೋ.

**ರಂಚೆಗಾಣು** (ಕ್ರಿ). (?) : ಪಂಚವಿಂಶತಿತತ್ವರೂಪದ ಸಂಚವಡಾಯದೆ ನೀತಿಮಾರ್ಗದಲಿ ರಂಚೆ [ಪಾಕಾಂ. ದಿಂ ಅಂಚೆ]ಗಾಣದೆ ಸಗುಣಮಯ ನೀಹಾರದಲಿ ಮುಳುಗಿ ಮಿಂಚುವೆಳಗಿನ ಬಳಕೆಯಲಿ ಮನಮುಂಚಿ ಮೈಗೊಂಡಳಲು ಪಾತುಮಾವಂಚಕರು ನೀವ್ ಪಶುಗಳೆಂದರೆ ಬೇದವಕ್ಕೇಕೆ (ಕುಮಾಕ. ೬-೨೭).

[ರಂಚೆ$_1$ + ಕಾಣು (< ಕಾಣ್)]

**ರಂಜ, ರಂಜಿ, ರೆಂಜೆ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು; ಪಗಡೆ : ಶಶಿಮುಖಿಯೋರ್ವಳು ರಂಜದೆಡೆಗೆ ಎಯ್ದು ಕುಸುಮರಂಜಿನಿಯೆಂದೆಂಬ ಪೊಸರಾಗವ ಪಾಡೆ (ಜ್ಞಾಪಕ. ೨೫-೯೩); ಗರುಡಾಚಾರ್ಯನಲ್ಲಿ ರಂಜ, ದಾಸಾಚಾರ್ಯನಲ್ಲಿ ಮಂದಾರ; ದುರ್ಗಾಭಟ್ಟನಲ್ಲಿ ಶಂಖಪುಷ್ಪ, ಬಿಲ್ವಪತ್ರೆ (ಸಂಸ್ಕಾರ. ೦೭). ರಂಜಿ : ಕುರವಕ ಬೇಲ ರಂಟಾಳ ಸಿರಿಸ ರಂಜಿಯ ಗೋಳಿ ಲೊದ್ದೆಸೆಲುಕವಾದಿ ಮೆರೆವ ಕಮ್ಮರವನು ಕಂಡ (ಜ್ಞಾಪಕ. ೦೦-೦೯). ರೆಂಜೆ : ಬೋಗಸೆ ಬೋಗಸೆ ರೆಂಜೆ ಮತ್ತು ಸುರಗಿಯನ್ನು ಇಲ್ಲಿ ಸಂಗ್ರಹಿಸುವುದು ಸಾಧ್ಯವೇ ? (ನಾಕ್ಸಂ. ೯).

[ದೇ. ತುಳು. ರಂಜ, ರೆಂಜಿ, ರೆಂಜಿ, ರೆಂಜೆಯು]

**ರಂಜಕ$_1$** (ಗು). ೧. ಬಣ್ಣಹಾಕಿದ. ೨. ಸಂತೋಷಗೊಳಿಸುವ. ೩. ಚೆಲುವಾದ; ಮನೋಹರವಾದ. (ನಾ). ೪. ಅಂದ; ಶೋಭೆ : ಮಾಯದ ಬೊಂಬೆಯ ಮಾಡಿ ಕಂಗಳಿಗೆ ಕಾಮನ ಬಾಣವ ಹೂಡಿ ನಡೆ ನುಡಿಯೊಳಗೆ ರಂಜಕದ ತೊಡಿಗೆಯನೆ ತೊಡಿಸಿ . . . ಸಂದೇಹದಲ್ಲಿ ಸತ್ತು ಹುಟ್ಟುವ ಈ ಭವಬಂಧನಿಗಳೆತ್ತ, ಬಲ್ಲರೋ ಈ ಶರಣರ ನೆಲೆಯ (ಬಂಗಪ. ೪. ೩೬-೩೫). ೫. ಆಕರ್ಷಕವಾದುದು; ಮನೋಹರವಾದುದು : ಜೀವನ—ನಿಸರ್ಗಗಳೆರಡರ ಮನೋಧರ್ಮ. . . ಇವುಗಳೊಳಹೊಕ್ಕು ನೋಡುವ ರಂಜಕವೂ ರಮ್ಯವೂ ಆದ ಪ್ರಯತ್ನ ಮೊದಲಾಯಿತು (ಪಶ್ಚಸಾ. ೦೦೭). ೬. ಸಂತೋಷವನ್ನುಂಟುಮಾಡುವಂತಹುದು; ಆನಂದಗೊಳಿಸುವಂತಹುದು; ನಾಲ್ಕುಭಿನಯಮುಮಂ ಸಕಲಪರಿಷದ್ವಧೂನೆ ರಂಜಕಮಾಡುವು (ಅಕಥೆ. ೩-೯); ಏನು ಮಾಡಲಯ್ಯ . . . ರಮ್ಮಣೀರ ರಂಜಕದ ನುಡಿಯನ್ನು ಕೇಳಿ . . . ತೋಷಿಸುವ ಕರ್ಣೇಂದ್ರಿಯಕೆ (ಕಪಶ. ೬೯-೪); ಅಂಜದಿರು ಗಂಧರ್ವ ತಮ್ಮಾದು ರಂಜಕದ ಮಾತಲ್ಲ ನಿನ್ನನು ಭಂಜಿಸಲು ಬಂದವನನಟ್ಟುವೆ ನಿನ್ನ ರಕ್ಷಿಸುವೆ (ಕೋಗಹು. ೦೦-೯೬). ೭. ಮನವೊಲಿಸುವಂತೆ ಮಾತನಾಡುವವನು; ರಂಜಿಸುವವನು : ಮುನ್ನಿನ ಪುರಾತನರ ನೆನೆದು ಧನ್ಯನಾದಹನೆಂಬ ಮಾತಿನ ರಂಜಕರನೇನೆಂಬೆ (ಬಸವ. ೬೬೮) : ರಂಜಕರು ಪಾಂಡವರು ನಿನ್ನನು ಭಂಜಿಸುವರಾವಂಗದಲಿ (ಕುಮಾಕ. ೬-೩೨). ೮. ಒಂದು ಬಗೆಯ ಗಂಧ; ರಕ್ತಚಂದನ. [ಸಂ.]

**ರಂಜಕ₂** (ನಾ). (ಸಿಡಿಮದ್ದು, ಬೆಂಕಿಕಡ್ಡಿ ಮುಂತಾದುವನ್ನು ತಯಾರಿಸಲು ಬಳಸುವ) ಒಂದು ಬಗೆಯ ಅಲೋಹಮೂಲಧಾತು : ಮತ್ತೊಂದು ಕೋವಿ ರಂಜಕ ಮಾತ್ರ ಹತ್ತಿ . . . ಆ ರಂಜಕದ ಕಿಡಿ ಹಾರಿ ಸುಟ್ಟಿತು (ರಾಜೇಂದ್ರ. ೨೬೬) ; ಸಾರಜನಕ, ಗಂಧಕ, ರಂಜಕ . . . ಕಬ್ಬಿಣ ಮೊದಲಾದ ನಿರವಯವವಸ್ತುಗಳು ಸಸ್ಯಗಳ ಆಹಾರದ ಘಟಕವಸ್ತುಗಳು (ಪ್ರಾಣಿಶಾ. ೩) ; ರಂಜಕದ ಅಭಾವದಿಂದ ಮೂಳೆರೋಗವಾದ ಪಕ್ಕಿರೋಗ ಸಂಭವಿಸುವುದು (ಗೃಹವಿ. ೫೦). [← ಪಾರ. ಹಿಂ. ಮರಾ. ರಂಜಕ]

**ರಂಜಕಿ** (ನಾ). [ಸಂಗೀತ] ಮಧ್ಯಮಸ್ವರದಿಂದ ಹುಟ್ಟುವ ನಾಲ್ಕು ಶ್ರುತಿಗಳಲ್ಲಿ ಒಂದು : ರಂಜಕಿ ಪೂರ್ಣೆ ಅಲಂಕಾರಿಣಿ ವಾಂತೆಯೆಂಬ ನಾಲ್ಕು ಶ್ರುತಿಗಳೇ ಮಧ್ಯಮಸ್ವರದಿಂ ಪುಟ್ಟಿದವು (ಶಿವೇಶ. ೨೩೨). [ಸಂ. ರಂಜಕೀ]

**ರಂಜಣಿಗೆ, ರಂಜಳಿಗೆ** (ನಾ). ೧. (ಪನ್ನೀರು, ಗಂಧ ಮುಂತಾದುವುಗಳನ್ನು ತುಂಬಿಡುವ) ದೊಡ್ಡ ಪಾತ್ರೆ ; ಕೊಪ್ಪರಿಗೆ : ಚಂದನವಾರಿ ಪೂರಮಪ್ಪ ರಜತದ ರಂಜಣಿಗೆಗಳಿಂ . . . ಕಣ್ಗೊಳಿಸಿ (ಕುಸುಮಾ. ೩-೦೨೬ ವ) ; ಲಲಿತಮಣಿರಂಜಣಿಗೆಯೊಳಗುಜ್ಜ್ವಲಿಪ ಸಾದುಜವಾದಿ ಕರ್ದಮವು ಬಳಸಿತೆನಲಿನ್ನುಳಿದುವನು ವರ್ಣಿಸುವನಾರು (ಜೈಮಿನಿ. ೬-೨೯) ; ಸರ್ವೋತ್ಕೃತದ ರಂಜಣಿಗೆಗಳ ಸಾಲಿಳಿಸಿಹಿದವು ಪಾನರಸಾಯನಾದಿಗಳ ಝಗಝಗಿಪ ಹೊಂಗೊಪ್ಪರಿಗೆಗಳ ಬಗೆ ವಿರಾಜಿಸಿತು (ಕೆಂಚರಾ. ೬-೩೩-೩೩). ೨. ದವಸಧಾನ್ಯಗಳನ್ನು ತುಂಬುವ ಗುಡಾಣ : ಒಂದು ರಂಜಣಿಗೆ, ಅವರಲ್ಲಿ ಮನೆಯ ನಗನಾಣ್ಯಗಳನ್ನು ಇಡಲಾಗಿತ್ತು (ಸ್ವಪ್ನ. ೨೨೬). ೩. ವನಕರುಗಳ ಹಟ್ಟಿ; ಕೊಟ್ಟಿಗೆ: ಈ ಹುಲ್ಲನ್ನು ರಾತ್ರಿ ಹಾಸಿಕೊಂಡು ವನದ ರಂಜಳಿಗೆಯೊಳಗೆ ಬಿದ್ದುಕೊಳ್ಳುತಿದ್ದೆವು (ಮಾವಮರ. ೦೭೨):ಬಿರೀಟ್ವೆಯಲ್ಲಿ ಹಿಂದಿನ ರಂಜಳಿಗೆಯಲ್ಲಿ ಕೂತುಕೊಂಡೆವು (ಮಾವಮರಾ. ೦೭೪). [<ಪ್ರಾ. ರಂಜಣ./ಮರಾ. ರಾಂಜಣೀ, ರಾಂಝಣೀ]

**ರಂಜನ** (ನಾ). ೧. ಬಣ್ಣ ಹಾಕುವಿಕೆ. ೨. ಬಣ್ಣ; ವರ್ಣ. ೩. ಸಂತೋಷವನ್ನುಂಟು ಮಾಡುವಂತಹುದು. ೪. ಸಂತೋಷ ; ಆನಂದ. ೫. ಕೆಂಪುಚಂದನ : "ತಿಲಪರ್ಣೀ, ಪತ್ರಾಂಗಂ, ರಂಜನಂ, ರಕ್ತಚಂದನಂ, ಕುಚಂದನಂ – ಈ ಕೆಂಪುಬಣ್ಣದ ಚಂದನವೃಕ್ಷದ ಹೆಸರುಗಳು" (ಸಿದ್ಧಾಂತಿ. ೨೦೯). [ಸಂ.]

**ರಂಜನಿ** (ನಾ). ೧. ಒಂದು ಬಗೆಯ ಗಿಡ ; ನೀಲಿಗಿಡ. ೨. ಅರಿಸಿನ. ೩. [ಸಂಗೀತ] ಒಂದು ರಾಗದ ಹೆಸರು: ರಂಜನಿ—ಖರಹರಪ್ರಿಯ ಮೇಳಕರ್ತ ಧರ್ಮಾವತಿಯಲ್ಲಿ ಜನ್ಯ (ಸಂಗೀತಶಂ. ೨೭೭). [ಸಂ. ರಂಜನೀ]

**ರಂಜನೆ** (ನಾ). ೧. ಬಣ್ಣ ; ವರ್ಣ. ೨. ಮೆರುಗು ; ಕಾಂತಿ . 'ರಂಜನೆಗೈ' ಪರಾ. ೩. ಅಲಂಕಾರ ; ಶೋಭೆ : ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದಟ ಗಂಜಳ ಬಿಡದಣ್ಣಾ (ಬಸವ. ೯೩). 'ರಂಜನೆವಡೆ' ಪರಾ. ೪. ಉಲ್ಲಾಸ ; ಸಂತೋಷ: ಆ ಮಾತು ಆ ಕಥೆ ಆ ನಗೆ ಆ ಬಗೆ ಮೆಚ್ಚುವೊಲೊರೆವ ಕೌಶಲವು ರಂಜನೆಯಾಯಿತು ಸುತ್ತಣ ಜನರಿಗೆ (ಸಂತ್ಯಕ. ೦೦-೩೬). [ಸಂ. ರಂಜನ]

**ರಂಜನೆಗೈ** (ಕ್ರಿ). ಬಣ್ಣಹಾಕು : ಮುನ್ನುಳ್ಳ ಮಣಿಪುಂಜಮಂ ರಂಜನೆಗೈದು ತರವಟಿಂದು ಸರಂಗೊಳಿಸಿ ನವೀನಕಂಠಾಭರಣಮೆನಿಸುವಂತೆ (ಶಬರ. ೨). [ರಂಜನೆ + ಗೈ (<ಕೆಯ್₁)]

**ರಂಜನೆವಡೆ** (ಕ್ರಿ). ಶೋಭೆಯನ್ನು ಪಡೆ ; ಚೆಲುವಾಗು : ಭರತಮಿಳಿತ ದಿಂಡಾ ನೀರ ಭಂಡಾರವು ಪಿರಿದು ರಂಜನೆವಡೆದಿತ್ತು (ಶ್ರೀರಾಮ. ೦-೨೯). [ರಂಜನೆ + ಪಡೆ₁]

**ರಂಜಳಿಗೆ** 'ರಂಜಣಿಗೆ' ನೋ.

**ರಂಜಾನ್** 'ರಮಜಾನು' ನೋ.

**ರಂಜಿ** 'ರಂಜ' ನೋ.

**ರಂಜಿಕೆ** 'ಬಂಜಿಕೆ₂' ನೋ.

**ರಂಜಿತ** (ಗು). ೧. ಬಣ್ಣ ಹಾಕಿರುವ. ೨. ಸಂತೋಷಪಡಿಸುವ ; ಆನಂದವನ್ನುಂಟುಮಾಡುವ : ರಂಜಿತಮಧುಮಧುಕರಚಯಮಂ ಜಿತನಾನಾಪ್ರಸೂನಚಯ(ಮಂ). . . ಕೊಯ್ದಾಳ್ (ಕೃಷ್ಣಕೃ. ೬-೯೩).೩. ಸಂತೋಷಗೊಂಡ. (ನಾ). ೪. ಚೆಲುವಾದುದು; ಮನೋಹರವಾದುದು.[ಸಂ.]

**ರಂಜಿಸು** (ಕ್ರಿ). ೧. ಹೊಳೆ ; ಪ್ರಕಾಶಿಸು : ಅರ್ಥಾಭಾಸದಿನಕ್ಷರಸಾರ್ಥಮನುಚ್ಚರಿಸಿ . . . ರಂಜಿಪುದ ಪಳಿಕು ಮಣಿಯುವೊಲಿರದೇ (ಜಗನ್ನಾ. ೦-೦೯) ; ಚಕ್ರವಾಕದ ತಗಹು ಕಟ್ಟುದು ಹೇಳಿಸಲು ರಂಜಿಸಿತು ದೀಪಾಳಿ (ಕುಮಾರರಾಮ. ೦೩-೩೯). ೨. ಶೋಭಿಸು ; ಮನೋಹರವಾಗು : "ರಂಜಿಸು-ಶೋಭಾಯಾಂ, ರಾಗೇ ಚ (ಬಣ್ಣಹಾಕು)" (ಕವಿಜಿಹ್ವಾ) ; ಅವುದು ಚೆಲ್ವುವೆತ್ತು ರಂಜಿಸುಗುಮದರ್ಕದಂ ಸಮಚಿತ್ . . . ಭೋಗಿಸಿದಂ ಗುಣಾರ್ಣವಂ (ಶಂಕರ. ೦೯-೩೬) ; ಆತನ ಕಯ್ಯೊಳ್ ರಂಜಿಪಕ್ಷಾವಳಿ ನಡುಗಿದುದು (ಶಾರಂಗ. ೭೩೬); ನವಾಕಾಶಸ್ಫಟಿಕದ ಪಾವುಗೆಯಂ ಮೆಟ್ಟುತ್ತೆಬಿಯಿನ ಸಜ್ಜೆಭನೆಗೆ ಬರ್ಪ ಸುಂದರೀಮಣಿ ರಂಜಿಸಿದಳ್ (ಜಗನ್ನಾ. ೨-೫೦). ೩. ಉದ್ರೇಕಗೊಳಿಸು; ರಾಗಾವೇಶಗೊಳ್ಳುವಂತೆ ಮಾಡು : ಒಸಗೆಗಮುತ್ಸಾಹಕ್ಕಂ ಸಸಿಯುದಯಂ ರಂಜಿಪಂತೆ ಕಳ್ಳಂಗಂ . . . ಆ ತೆಜದಿಂ ರಂಜಿಸಲಕ್ಕುಮೆ (ಧರ್ಮಾಮೃ. ೪-೨೯) ; ಉತ್ತಮರತಿಸಾಮ್ರಾಜ್ಯವ ಹರುಷದ ಮೊತ್ತದೆ ರಂಜಿಸಿ ಬೇಗ (ಕಂಪವ. ೦೦-೫೦). ೪. ಸಂತೋಷಗೊಳಿಸು ; ಹಿಗ್ಗುವಂತೆ ಮಾಡು : ವಿನಯಂ ಸಹಜಂ ಕೃತ್ರಿಮಮೆನಿಸಿದವು ಇಮೆರಡುಂ ನಿನಗೊಳವಾರಾರ ಮನಮುಮಂ ರಂಜಿಸವೇ (ಆದಿಪು. ೦೯-೩೩); ಸೊಕ್ಕಾನೆ ಕುಂದುರೆಯ ವ್ಯೆಹಾಳಿಯಂಕಣದಿಕ್ಕ ಕಣ್ಣನಕೆ ರಂಜಿಸಿತು (ಜೋಳಕ. ೨-೩೩) ; ಸಜ್ಜಾತಿಸತಿಯರಿನಿಯರ ಸನ್ನಿಧಿಯೊಳು ಲಜ್ಜೆವೆರೆಸಿ ರಂಜಿಪುದು (ಶಬರ. ೩-೩೯). ೫. ಬೆಳಗಿಸು ; ಪ್ರಕಾಶಗೊಳ್ಳುವಂತೆ ಮಾಡು : ಸಕಿವನಾವತ್ತುಗಳನಂತೆ ನೋಡಿಸುವನಾಶಾಪಾಶವಂ ಭೇದಿಸುವೆಸೂರ್ಜಿತಭಕ್ತಿಯಂ ರಂಜಿಸುಪವನಪರತ (ಬಸವ ೩೬-೩೯). [ರಂಜನ + – ಇಸು₁]

**ರಂಜು** (ನಾ). ಧೂಳು ; ರಜ : 'ಕಾಲುರಂಜು' ಪರಾ. [<ರಜ₁]

**ರಂಜೆ** 'ಬಂಜೆ' ನೋ.

**ರಂಟೆ** 'ರೆಂಟೆ₁' ನೋ.

**ರಂಡೆ** (ನಾ). ೧. ಗಂಡನನ್ನು ಕಳೆದುಕೊಂಡಿರುವವಳು : ವಿಧವೆ : ಸುರಲೋಕವೆ ಪಾಟಾದ್ಯೆ ಸರಸ್ವತೀದೇವಿ ರಂಡೆಯಾದಾ (ಶಾರಂಗ. ೯೦೦); ಜೋಯಿಸನ ಮಗಳ್ ಪಸೆಯ ಮೇಲೆ ರಂಡೆಯಾನಳ್ (ಧರ್ಮಾಮೃ. ೦೨-೩೬); ಅನ್ಯಕಾರಿ ಅತ್ತೆ ಗನ್ನಘಾತಕಿ ರಂಡೆ ಅತ್ತಿಗೆಯು ಎನ್ನ ಗೋಳು ಕಾನೆ ವಾಹ ಪೆಂದಿಗಹುದೊ (ಭರಂದ. ೨-೪೪-೩). ೨. ಹಾದರ ಮಾಡುವವಳು ; ಸೂಳೆ ; ಜಾರೆ : ರಂಡೆಯೊಳಂ ಧೃಷ್ಟೆಯೊಳಂ . . . ನೆರೆದೊಡಬ್ಬಗು ಮಾಯುಂ ಶ್ರೀಯುಂ (ಜೀವ. ೯-೪); ರಂಡೆ ರಜಕಾಂಗನೆ . . . ವೇದದ ಗಿತ್ತಿಯರಿಬ ಪೆಂಡಿರ ನೆರೆಗೊಂಡೊಡಂದಟಾಗೆ ಸಜ್ಜನವೆಂತು ಕೆಟ್ಟಳ್ಳಂ ಬುದಂ (ಜೀವಸಂ. ೬-೦೦೭); ರಂಡೆಯಾಸೆಗೆ ರವಣೆಯುಂದವ -ಕೆಡಿಸಿ ದಂತಾಯ್ತು (ಸುಭಾಷಿ. ೩೯-೫೦). ೩. ಒಂದು ಬಯ್ಗುಳು: "ನಾನು ರಂಡೆಯೋ ? ನೀನು ರಂಡೆ" ಎಂದು ಗದರಿಸಿ, ಬಾಗಿಲು ಮುಚ್ಚಿ ಒಳಗೆ ಮಲಗಿಕೊಂಡಳು (ಜನ್ನ. ಹಾ. ೦೦೪). ೪. ಒಂದು ಬಗೆಯ ಔಷಧೀಸಸ್ಯ [ಸಂ. ರಂಡಾ]

**ರಂಡೆತನ** (ನಾ). ವಿಧವೆಯಾಗಿರುವಿಕೆ ; ವೈಧವ್ಯ : ದಾಯಬಾದಟ್ಟ ಮೆಟ್ಟಿಡಿವ ದಂಟಿವ ರಂಡೆತನಕ್ಕೆ ಪೂಜ್ಞಾಭಿಪ್ರಾಯಮೆ ಸಿಂಹನಂದಿಗಮ ನಿಂದಿತಗಂ (ಶಾಂತಿಪು. ೬-೯೯); ಮುಂದಿನ ವರ್ಷದಿಂದ ಅತ್ತೆಯ ರಂಡೆತನವನ್ನೂ ನೋಡತೊಡಗಿದರು (ಮರಳಿ. ೯೦). [ರಂಡೆ + – ತನ]

**ರಂಡೆಹುಣ್ಣಿವೆ** (ನಾ). ಮಾರ್ಗಶೀರ್ಷಮಾಸದ ಹುಣ್ಣಿಮೆ ; P ಕಾರ್ತವೀರ್ಯನು ಜಮದಗ್ನಿಯಿಂದ ಕಾಮಧೇನುವನ್ನು ವಶಪಡಿಸಿಕೊಳ್ಳಲು ಪ್ರಯತ್ನಪಟ್ಟು ಜಮದಗ್ನಿಯು ಮೂರ್ಛೆ ಹೋಗುವಂತೆ ಆಘಾತಗೊಳಿಸಿದನು. ಆಗ ರೇಣುಕೆಯು ವೈಧವ್ಯದ ಹೆದರಿಕೆಯಿಂದ ಗೋಳಾಡಿದಳು. ಇದು ಮಾರ್ಗಶೀರ್ಷಮಾಸದ ಹುಣ್ಣಿಮೆಯಂದು ನಡೆದುದೆಂಬ ನಂಬಿಕೆಯಿದೆ : ಮಾರ್ಗಶೀರ್ಷಪೂರ್ಣಿಮೆಗೆ ರಂಡೆಹುಣ್ಣಿವೆಯೆನ್ನುವರು. ಈ ಜಾತ್ರೆಯಲ್ಲಿ ದೇವತೆಯು ಕೈಯೊಳಗಿನ ಬಳೆಗಳನ್ನು ಒಡೆದು ರಂಡೆತನ ಬಂದಂತೆ ತೋರಿಸುವರು (ಕರಾಗ. ೫೦೭) ; ರೇಣುಕಾಭಕ್ತರು ಆ ದಿನವನ್ನು ರಂಡೆಹುಣ್ಣಿವೆ ಎಂದು ಹೇಳುತ್ತಾರೆ (ಜಾಹಬ್ಬ. ೬೦).
[ ರಂಡೆ + ಹುಣ್ಣಿವೆ (< ಹುಣ್ಣಿವೆ) ]

**ರಂಡೋಲು** ' ರಮಡೋಲು ' ನೋ.

**ರಂಢೋಲು** ' ರಮಡೋಲು ' ನೋ.

**ರಂದಣ**, ಲಂದಣ (ನಾ). ಅಡುಗೆಯ ಕೆಲಸ ; ಅಡುಗೆಮಾಡುವಿಕೆ : ' ರಂದಣಿಗ ' ಪರಾ. **ಲಂದಣ** : ' ಲಂದಣಿಗ ' ಪರಾ.
[ < ಸಂ. ರಂಧನ ]

**ರಂದಣಗಿತ್ತಿ**, ಲಂದಣಗಿತ್ತಿ (ನಾ). ಅಡುಗೆ ಮಾಡುವವಳು : ಅನುಶ್ರುತವ ಮಾಡಿಹನೆಂದು ಉಪ್ಪರಗುಡಿಯನೆತ್ತಿ ಮಾಡುವ ಭಕ್ತನ ಮನೆ ಅಟ್ಟಕ್ಕುವ ರಂದಣ [ಪಾಠಾಂ. ಲಂದಣ, ಅಂದಣ]ಗಿತ್ತಿಯು ಮನೆ (ಶಬ್ದವ. ೪. ೩೩೮-೬೦೮). ' ಅಂದಣಗಿತ್ತಿ ' ಪರಾ. **ಲಂದಣಗಿತ್ತಿ** : ಅನವರತ ಮಾಡಿಹನೆಂದು ಉಪ್ಪರಗುಡಿಯ ಕಟ್ಟಿ ಮಾಡುವ ಭಕ್ತನ ಮನೆಯುದು ಲಂ[ಪಾಠಾಂ. ಅಂ]ದಣಗಿತ್ತಿಯು ಮನೆ (ಬಸವ. ೨೨೬) ; ಲಂದಣ [ಪಾಠಾಂ. ೪] ಗಿತ್ತಿಯಂತೆ ಬಂದ ನಿಂದ ಭಕ್ತರಲ್ಲಿ ಹೊಸತನದಂದವ ಹೇಳಿ (ಸಕವ.೯. II, ೯೨೦-೦೨೦೧). [ರಂದಣಿಗ + — ಇತ್ತಿ]

**ರಂದಣಿಗ**, ಲಂದಣಿಗ (ನಾ). ಅಡುಗೆಯ ಕೆಲಸವನ್ನು ಮಾಡುವವನು ; ಬಾಣಸಿಗ : ' ರಂದಣಗಿತ್ತಿ ' ಪರಾ. **ಲಂದಣಿಗ** : ಭಕ್ತರೆಲ್ಲರೂ ಲಂ[ಪಾಠಾಂ. ಅಂ]ದಣಿಗರಾಗಿ ಹೋಯಿತ್ತು ಜಂಗಮವೆಲ್ಲವು ಉಪಜೀವಿಗಳಾಗಿ ಹೋಯಿತ್ತು (ಅವತಂ. ೦೦೬-೯೬೦) ; ತತ್ಪುರದೊಳಿರ್ದ ವಿಶಾಖನಂದಿ ಪಸಿವಂ ನಂದಿಸಲೆಂದು ಲಂದಣಿಗರ ಮಂದಿರಕ್ಕೆ ಪೋಪವಂ ಮುಂದೆ ಸಂದಣಿಸಿ ನಿಂದ ನೆರವಿಯಂ ಭೋಂಕನೆ ಕಂಡು (ಕರ್ಣಪು. ೩-೦೨ ವ).
[ರಂದಣ + — ಇಗ]

**ರಂದಿ**, ರಂದೆ (ನಾ). ೧. (ಉಕ) ಅಸ್ತವ್ಯಸ್ತವಾಗಿ ಹರಡಿದ ವಸ್ತು ; ಕಸ : ಒಲೆಯ ಮುಂದೆ ರಂದಿ ಹರಡಿತ್ತು (ಕೃ.ಶಿ. ೨೭೬) : ಸಿಗರೇಟಿನ ಬೂದಿ . . . ತುಂಡು, ಟೇಬಲ್ಲಿನ ಆಸುಪಾಸು ರಂದಿ ಹರವಿದ್ದವು (ಶೀಕಹ. II, ೨೯೬). ೨. ಗೊಂದಲ ; ಗಲಾಟೆ : ಮಾತುಮಾತಿಗೆ ಸಿಟ್ಟು ಸಿಡವು, ರಂದಿ, ರಪಕಸಿ (ಹೊಸಕ್ಕ. ೦೯೬) ; ಇಷ್ಟೆಲ್ಲ ರಂದಿಯಾದರೂ ಆಗುವ ಕಾರಣವಿರಲಿಲ್ಲ (ಮಬಗಿಬು. ೦೦೬). **ರಂದೆ** : ೨. ನಮ್ಮ ಖಾನಾವಳಿಗೆ ಪ್ರವಾಸಿಗರ ರಂದೆ ಇಲ್ಲ (ಕಳ್ಳರ್ಕ. ೬೦) [← ಮರಾ. ರೇಂದ, ರೇಂದಾ]

**ರಂದು** (ನಾ). ಒಡಕು ; ನ್ಯೂನತೆ ; ದೋಷ : ಸೋತವರುಗಳು ಬಿರಬೇಕು ಪನ್ನೆರಡುವರುಷ ವನವಾಸಂಗಳ ಪೊಂದೊಂದು ವರುಷ ಮಜ್ಞಾತವಾಸಮಿದರೊಳಗೆ ರಂದು ಕಂಡರೆ ಮರಳಿಬರಬೇಕು ಮತ್ತೆ ನಾ ಹಿಂದೆ ಪೇಳಿರ್ದ ಮರಿಯಾದೆಯೊಳ್ (ತುರಂಗ. ೨೫-೯೯).
[ < ಪ್ರಾ. ರಂಧ. / ಸಂ. ರಂಧ್ರ]

**ರಂದೆ** ' ರಂದಿ ' ನೋ.

**ರಂಧ್ರ** (ನಾ). ೧. ಕಂಡಿ ; ತೂತು : "ನಿಮ್ಮಂ . . . ರಂಧ್ರಕೋಶಃ . . . ಈ ೧ನೆ ಕಂಟಿ" (ಹರಾಹುಂ. ೦೦೩-೨) ; ಗೋಡೆಗೆ ತಗಲುಹಾಕಿರುವ ಪಟಗಳ ಅಂಚಿನಲ್ಲಿ ಅಲ್ಲಿಯ ಸಣ್ಣ ರಂಧ್ರಗಳ ಸುತ್ತಮುತ್ತ . . . ತಗಣೆಗಳ ಬೀಡು (ಶಂಬಶಂ. ೯೬). ೨. ಸೀಳು ; ಬಿರುಕು : (೯). ೩. ಮನುಷ್ಯನ ಶರೀರದಲ್ಲಿರುವ ಬಾಯಿ, ಮೂಗು, ಕಿವಿ ಮೊದಲಾದ ಒಂಬತ್ತು ತೂತು ; ನವದ್ವಾರ: ಪ್ರಚುರಂ ಪತ್ರೊಳಗಣ ರಂಧ್ರವನೆ ಕೈಗೊಂಡೆಂಟನೀಗೇಳ ಬಿಟ್ಟು (ಸೋಮೇಶ. ೦೦೦). ೪. ತಪ್ಪು ; ನ್ಯೂನತೆ ; ದೋಷ : ' ರಂಧ್ರಾನ್ವೇಷಣ ' ಪರಾ. ೫. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : ಭಾವ ರಂಧ್ರನಂದಪದಾರ್ಥಂ . . . ನವಮವೊಂಭತ್ತನಿಕ್ಕುಂ (ಕೃಪಾ. ೯-೯). ೬. [ಜ್ಯೋತಿ] ಎಂಟನೆಯ ರಾಶಿ ; ವೃಶ್ಚಿಕರಾಶಿ : ರಂಧ್ರಗತಿಮಾದಿತ್ಯರೊಂದಾಗಿ ಅರ್ಥಸುತ ಅಂದಿನ ತಿಥಿಯನೊಡಗೂಡೆ ನಕ್ಷತ್ರ ಮುಂದೆ ಬಂದಕ್ಕು (ಸವರ್ಣ. ೧೫೬೬). [ಸಂ.]

**ರಂಧ್ರಪಾತ್ರೆ** (ನಾ). ೧. (ದೇವತಾವಿಗ್ರಹಗಳಿಗೆ ಅಭಿಷೇಕಮಾಡಲು ಬಳಸುವ) ತೂತಿರುವ ಪಾತ್ರೆ ; ಧಾರಾಪಾತ್ರೆ. ೨. ತೂತುಮಾಡಿದ ಪಾತ್ರೆಯನ್ನು ನೀರಿನಲ್ಲಿ ಇಟ್ಟು, ಅದು ತುಂಬಿಕೊಳ್ಳುವಷ್ಟು ಕಾಲವನ್ನು ನೋಡಿ, ಸಮಯವನ್ನು ಅಳೆಯುತ್ತಿದ್ದ ಪಾತ್ರೆ ; ಗಳಿಗೆ ಬಟ್ಟಲು : ಆಗ ಅರ್ಧರಾತ್ರಿ ಕಳೆದು ಒಂದು ಜಾವಕಾಲವಾಗಿತ್ತು. ಕಾತರರಾಗಿದ್ದ ಜನಗಳ ದೃಷ್ಟಿ ಈಗ ರಂಧ್ರಪಾತ್ರೆಯ ಮೇಲೆ ಬಿದ್ದಿತು (ಶಾಂತಲಾ. ೨೫೬). [ಸಂ. ರಂಧ್ರಪಾತ್ರ]

**ರಂಧ್ರಾನ್ವೇಷಣ** (ನಾ). ಮತ್ತೊಬ್ಬರ ತಪ್ಪನ್ನು ಹುಡುಕುವಿಕೆ ; ದೋಷಾನ್ವೇಷಣೆ : ಕೃತಿಗಳನ್ನು . . . ತುಂಡುತುಂಡಾಗಿ ಕತ್ತರಿಸಿ, ರಂಧ್ರಾನ್ವೇಷಣ ಅಥವಾ ರಂಧ್ರೀಕರಣ ಮಾಡಲು ಸ್ವಭಾವತಃ ಪ್ರವೃತ್ತಿ ಉಂಟಾಗಿಲ್ಲ (ಶಿಬಂರ. II, ೦೬). [ಸಂ.]

**ರಂಧ್ರಾನ್ವೇಷಿ** (ಗು). ೧. ತಪ್ಪನ್ನು ಹುಡುಕುವ : ತಪ್ಪು ಹಿಡಿಯುವ ; ಹುಳುಕು ಹುಡುಕುವ ; ದೋಷದೃಷ್ಟಿಯ ; ರಂಧ್ರಾನ್ವೇಷಿ (Censorious. ಇಂಕಿಬಿ). (ನಾ). ೨. ತಪ್ಪು ಹುಡುಕುವವನು : ರಂಧ್ರಾನ್ವೇಷಿಗಳ ಸ್ನೇಹ ಅಪಾಯಕಾರಿಯಾದುದು (ಕೊಕಿ). [ಸಂ. ರಂಧ್ರಾನ್ವೇಷಿನ್]

**ರಂಧ್ರಿ** (ನಾ). (ಹಿಟ್ಟು, ತರಿ ಮುಂತಾದುವನ್ನು ಶೋಧಿಸಲು ಬಳಸುವ) ಸಣ್ಣ ತೂತುಗಳಿರುವ ಒಂದು ಬಗೆಯ ಸಾಧನ ; ಜರಡಿ ; ಒಂದರಿ : "ಚಾಳನಿ ರಂಧ್ರಿ ಸಾರಣಿಗೆ" (ಮುಂಗಲ. ೬೨-೨೦). [ಸಂ. ರಂಧ್ರಿನ್]

**ರಂಧ್ರಿಸು** (ಕ್ರಿ). ತೂತು ಕೊರೆ ; ಛಿದ್ರಿಸು : ಹೂಸಿ ಹತ್ತಿನ ಮಣ್ಣ ರಂಧ್ರಿಸಿ ಕಾಸಿದವು ಫಣಿಕುಲವ. ಮೇಣೊಳ್ವಸದಲಿ ಡಾವರಿಸಿದವು ಕಿಡಿ ಧೂತಧೂಮದಲಿ (ಕುಮ್ಮಾರ. ೨೦-೬೦). [ರಂಧ್ರ + — ಇಸು₃]

**ರಂಧ್ರೀಕರಣ** (ನಾ). = ರಂಧ್ರಾನ್ವೇಷಣ ; ಕೃತಿಗಳನ್ನು . . . ತುಂಡುತುಂಡಾಗಿ ಕತ್ತರಿಸಿ, ರಂಧ್ರಾನ್ವೇಷಣ ಅಥವಾ ರಂಧ್ರೀಕರಣ ಮಾಡಲು ಸ್ವಭಾವತಃ ಪ್ರವೃತ್ತಿ ಉಂಟಾಗಿಲ್ಲ (ಶಿಬಂರ. II, ೦೬). [ಸಂ.]

**ರಂಪ₁** (ನಾ). ೧. ಚರ್ಮ ಮೊದಲಾದುವನ್ನು ಕತ್ತರಿಸುವ ಸಾಧನ : ಘೋರರಂಪಗಳಿಂದ ಮನುಜರನ್ನು ವೀರರು ಕಡಿದು ಹಾಕಿದರು (ಸಾಪಂಗ. ೩೬). ' ರಂಪಿಗೆ ' ಪರಾ. ೨. ಗರಗಸ : ಗರಗಸ, ರಂಪ (Saw. ಇಂಕಿಬಿ). [ದೇ.॥ ತಮಿ. ಇರುಂಬು ; ತೆಲು. ಉಂಪ ; ಪರ್ಜಿ. ರಂಪ]

**ರಂಪ₂**, ರಂಪು (ನಾ). ಗದ್ದಲ ; ರಗಳೆ ; ಹಗರಣ : ಕಾರ್ತವೀರ್ಯಾರ್ಜುನನೆಂಬವಂ ರಂಪದಿಂ ನೀರ್ತರುಬಿ ಬಿಡುತಲ್ಲಿ ನಾರಿಯರ ಲಂಪಟದಿ ಕ್ರೀಡಿಸುತ್ತಿರ್ದಪಂ (ಕರಕು. ೦೩-೩೩) ; ನೀವು ಹಾದಿ – ಬೀದಿ ರಂಪ ಎಬ್ಬಿಸಬೇಡಿ (ಗಂಗಾವ. ೯೮). **ರಂಪು** : ಆ ಅಯೋಗ್ಯನ ಬಳಿ ನಾನು ಹೆಣ್ಣು ಕೇಳಲು ಹೋಗುವುದಿಲ್ಲವೆಂದು ಮೊದಲು ಗುಂಡೂರಾಯರು ರಂಪು ಮಾಡಿದ್ದರು (ಮಖಿಲಾವ. ೩೫); ಅವಳ ಜತೆಗೆ ಲಲಿತೆಯದೂ ರಂಪು. ನನಗೆ ಉಭಯಸಂಕಟ (ಕಾವಂಕಾಂ. ೨೯೫). ' ರಂಪಾಟ ' ಪರಾ.
[ದೇ.॥ ಕೊಡ. ರಂಪ ; ತೆಲು. ರೆಂಪು. ಜಂಪು ; ಕೋಲಾ. ರಾಪಂ]

**ರಂಪಣ$_1$** (ನಾ). = ರಂಪ$_2$ : ಹರಕಂತ್ರರ ಮಾತೃಭಾಷೆ ಕನ್ನಡವಾದರೆ, ಗಾಬೀತರ ಭಾಷೆ ಮರಾಠಿ. ಈ ಎರಡು ಪಾಡೆಗಳಲ್ಲಿ ಎಷ್ಟೋ ರಂಪಣೆಗಳು ನಡೆಯುತ್ತಿದ್ದವು (ಜಾವಕ. ೭). [< ರಂಪ$_2$]

**ರಂಪಣ$_2$** (ನಾ). (ಕರಾ) ದೊಡ್ಡ ಬಲೆ : ಈ ಹೊತ್ತು ರಂಪಣೆ ಹಾಕಿದ್ದರೆ ಬಂಗಡೆ ರಾಶಿಗಟ್ಟಲೆ ಬೀಳಬಹುದಿತ್ತು (ಮೂಕಜ್ಜಿ. ೭೫) ; ಬಂಗ್ಡೆ, ಕಾಣೆ ಇವತ್ತು ಇಲ್ಲ. . . ನಿನ್ನೆಯ ರಂಪಣಗೆ ಬೀಳಲಿಲ್ಲ (ಹೊಸಕ್ಷ. ೪೯).

[ ← ತುಳು. ರಂಪೊಣಿ ]

**ರಂಪಾಟ**, ರಂಬಾಟ, ರಂಭಾಟ (ನಾ). = ರಂಪ$_2$ : ಯಾಕೆ ಗಂಗವ್ವ ಇಷ್ಟು ರಂಪಾಟ (ಮುಳ್ಳಹಾ. ೦೨೪) ; ಈ ವಿಚಾರವು ನಮ್ಮ ಭಂಡವಾಳದ ಮಾಲಕರಿಗೆ ತಿಳಿದುಹೋದರೆ ಬಹಳ ರಂಪಾಟವಾದೀತು (ಕೃಠಾಕ. ೭೫). **ರಂಬಾಟ** : ತಾಯಿಯು ರಂಬಾಟಕ್ಕೆ ಹಾಗೂ ಗೆಳೆಯರ ಸಲಹೆಗೆ ಸೋತು ಹಸೆಯ ಮೇಲೆ ಕುಳಿತಿದ್ದನು (ಸಮಾಜ. ೦೭೦) ; ಬಾಯಿಗೆ ಬಂದ ಹಾಗೆ ಬೈದು ಬಹಳ ರಂಬಾಟ ಮಾಡಿದ್ದರು (ಮುಂಬಯಿ. ೪-೦೮೦). **ರಂಭಾಟ** : ಹಿರಿಯ ಹೆಂಡತಿ ಲಕ್ಷ್ಮಿಬಾಯಿ ಅತ್ತು ರಂಭಾಟ ಮಾಡಿದ್ದರೂ ಮದುವೆ ನಡೆದೇ ಹೋಯಿತು (ಗ್ರಾಮಾಯಣ. ೦೩೪) ; ಸುಮಿತ್ರೆ. . . ಬೆಳಗ್ಗೆ ಎಣ್ಣೆ ನೀರು ಹಾಕಿಕೊಳ್ಳುವಾಗ ರಂಭಾಟ ಹೂಡಿದಳು (ಐದ್ಯಾರಿ. ೪೪).

[ ರಂಪ$_2$ + ಆಟ./ ತುಳು. ರಂಭಾಟ ]

**ರಂಪಿಗೆ** (ನಾ). ಚರ್ಮವನ್ನು ಕತ್ತರಿಸುವ ಸಾಧನ : ಶಿವನು. . . ಉಳಿ ರಂಪಿಗೆ ಚರ್ಮಗಳಂ ಪೊತ್ತುಕೊಂಡು ಮನೆಗೆ ಬರಲು (ಶೃಠಸೂ. I. ೩೮೫); ಪಾದರಕ್ಷೆಯನ್ನು ಹೊಲಿಯುತ್ತಲಿದ್ದ ಶಿವಗಂಗೆಗೆ ಒಮ್ಮಿಂದೊಮ್ಮೆಲೆ ಜ್ವರ ವೇರಿತು. ರಂಪಿಗೆ, ಉಳಿ, ದಾರ ಮೊದಲಾದ ಸಾಮಾನುಗಳನ್ನೆಲ್ಲ ಡಬ್ಬಕ್ಕೆ ತುಂಬಿ. . . ದೇಹವನ್ನೊರಗಿಸಿದಳು (ಸೀನವು. ೪೩).

[ ರಂಪ$_1$ + — ಇಗ್ಗೆ./ ತುಳು. ರಂಪಿ ; ತೆಲು. ರಂಪಿಯ, ರಂಪೆ./ ಹಿಂ. ರಾಂಪಿ ; ಮರಾ. ರಾಂಪಾ, ರಾಂಪೀ ]

**ರಂಪಿಣೆ** (ನಾ). = ರಂಪಿಗೆ : " ರಂಪಿಣೆ= ಚರ್ಮಪ್ರಭೇದಿಕೆ ; ಚರ್ಮವನ್ನು ಕತ್ತರಿಸುವ ಕತ್ತಿ " (ಶ್ರಠಣ). [ < ರಂಪ$_1$ ]

**ರಂಪು** ' ರಂಪ$_2$ ' ನೋ.

**ರಂಬಾಟ** ' ರಂಪಾಟ ' ನೋ.

**ರಂಬಾರೂಟಿ**, ರಂಭಾಲೂಟಿ (ನಾ). = ರಂಪ$_2$ : ಇಜಾವುತ ಜವಾಂಗಳ ರಂಬಾರೂಟಿಯು ಹರಿದಾಡುತ ಕೊಲ್ಲುವರು (ಜ್ಞಾನತ. ೦೩-೪೭). **ರಂಭಾಲೂಟಿ** : ಒಂದೇ ಕೋವಣ ಧರಿಸಿ ಹೆಗಲಿಗೆ ಒಂದೇ ಅರಿವೆ ಹಾಕಿಕೊಂಡು ಎಷ್ಟೆಲ್ಲ ರಂಭಾಲೂಟಿ ಮಾಡಿ ಓಡಿದ್ದಾರೆ (ಕೃಷ್ಣಾಂಕ. ೨೮).

[ದೇ.॥ ತುಳು. ರಂಬ್ಯಾರೂಟಿ, ರಂಭಾರೂಟಿ, ರಂಬ್ಯಾರೊಟ ; ತೆಲು. ರಂಬಾರೂಳ್ಳು ]

**ರಂಬಿಸು** ' ರಮಿಸು ' ನೋ.

**ರಂಬೆ** (ನಾ). ೧. ಒಬ್ಬ ಅಪ್ಸರಸ್ತ್ರೀ ; ರಂಭೆ : "ರಂಬೆ — ರಂಭಾ= ಒಬ್ಬಳು ದೇವಸ್ತ್ರೀ " (ಕರ್ಣಕೋ. ೩೭). ೨. ಸುಂದರಿ ; ಚೆಲುವೆ : ತಿಂಗಳಿಗೆ ನೂರು ಮದುವೆಯು(ಯೂ)ಗಲೆಂದು ರಂಬೆ ತಕ್ಕೊಳ್ಳಿ ಕಳಸವ (ನಾಠಠ. ೦೦೯). [ < ಸಂ. ರಂಭಾ]

**ರಂಭ$_1$** (ನಾ). ಬಾಳೆ ; ಕದಳಿ : ಊರುದಂಡಂ ರಂಭಗಳ ಸೊಬಗನಿಳಿ ಸುತಿರೆ (ಐಕರ. ೦-೦೦೭). [ ಸಂ. ರಂಭಾ]

**ರಂಭ$_2$** (ನಾ). (?) : ಎನ್ನ ಮಾತು ನಿಮಗೆ ಅನ್ಯವೆ ರಂಭದ ಸಂಚಾರ ರಂಭಕ್ಕೆ ಕೇಡು ಚುರುಂಬದ ಸಂಚಾರ ರಂಭದ ಕೇಡು (ಸಠವ. II. ೪೨೦-೩೨). [ ? ]

**ರಂಭಣ** (ನಾ). ೧. ದನದ ಕೂಗು. ೨. ಅಪ್ಪುಗೆ ; ಆಲಿಂಗನ : ಕುಂಭಕರ್ಣನನೆಬ್ಬಿಸುವ ಸೌರಂಭವನು ಸಲೆ ನೋಡಲೆಂದಾ ಜಂಭಭೇದಿ ದಿಶಾಂಗನಾಸುರತೋಪಚಾರಕದ ರಂಭಣದ ರಮಣೀಯತರದೋಸ್ತಂಭ ಗಳನಗಲಿಸುತ ತಿಮಿರ ವಿಜೃಂಭಣನು ಅಡರ್ದನಂಬರವ (ತೊರರಾ. ೭-೨೭-೦೯) ; ನಾನಾಪ್ರಕಾರದಿಂದೀಕ್ಷಿಸುತ್ತಿರುತಿರ್ದರೇನೆಂಬೆ ಕಣ್ಗಿದಿರ ಮಾಲೆಗಳ್ಬಟುಭಟರ ಸೇನೆಯಂ ಪರಿವೇಷ್ಟಿಸೊಪ್ಪಿರ್ದವಗಲದೊಳ್ ಸೌರಂಭರಂಭಣದೊಳು (ವಂಕಾಠಾ. ೦-೭-೦೪). ☞ ಇಲ್ಲಿ ಕವಿಗಳು ಸಂಸ್ಕೃತದ ' ಪರಿರಂಭಣ ' ಎಂಬ ಶಬ್ದದ ಅರ್ಥವನ್ನು ಈ ಶಬ್ದಕ್ಕೂ ಸ್ವೀಕರಿಸಿರುವಂತಿದೆ. [ಸಂ.]

**ರಂಭಾಟ** ' ರಂಪಾಟ ' ನೋ.

**ರಂಭಾಲೂಟಿ** ' ರಂಬಾರೂಟಿ ' ನೋ.

**ರಂಭಾಶೂಲ್ಯಕ** (ನಾ). ಬಾಳೆಕಾಯಿಯನ್ನು ಬೆಂಕಿಯಲ್ಲಿ ಸುಟ್ಟು ತಯಾರಿಸುವ ಒಂದು ಬಗೆಯ ಖಾದ್ಯ : ಮಿಗಿಲಾಗಿ ಬಲಿದ ಬಾಳೆಯ ಕಾಯ ಸಿಪ್ಪೆಯಂ ತೆಗೆದು . . . ಕರ್ಬೊನ್ನ ಸಲಗೆಯೊಳು ಕೆಂಪೊಗೆವಂತೆ ಕೆಂಡದೊಳು ತಿರಿತಿರಿಹಿ ಕಾಸಿ . . . ಪುಡಿಪ್ಪುಣಸನಿಕ್ಕಲಪು ತಾನೆ ರಂಭಾ ಶೂಲ್ಯಕಂ (ಸೂಪಶಾ. ೪-೮೭). [ಸಂ.]

**ರಂಭಾಸ್ತಂಭ** (ನಾ). ಬಾಳೆಯ ಗಿಡದ ಕಾಂಡ,— ಬುಡ : ಕದಳೀಸ್ತಂಭ: ರಂಭಾಸ್ತಂಭೋಪಮಾನೋರುಯುಗಳೆಯರ್ ಶಾತಕುಂಭರಂಭಾವನಂ ಗಳುಮಂ . . . ತೊಟಲ್ವಲ್ಲಿ (ಆದಿಪು. ೧೧-೯೩ ವ); ತೊಡೆಗಳ್ ರಂಭಾಸ್ತಂಭದ ಗೆತೆಗಳ್ (ಕಮದ. ೯೫ ಶ್ರಯೋ). [ಸಂ.]

**ರಂಭೆ** (ನಾ). ೧. ಒಂದು ಬಗೆಯ ಗಿಡ ; ಬಾಳೆಯ ಗಿಡ : ಕದಳಿ : " ರಂಭಾ, ಕದಳೀ, ಮೋಚಾ — ಈ ೩ ಬಾಳೆ[3] " (ಪಠಾಯು. ೩೨-೩೮) ; ಸಪಕಾರ ರಂಭೆ ದಾಡಿಮಫಲಂ (ಶ್ರಶುಶ್ರು. ೩-೨೦). ೨. ದೇವಲೋಕದ ಒಬ್ಬ ಸ್ತ್ರೀ,— ಅಪ್ಸರೆ : " ಘೃತಾಚೀ. ಮೇನಕಾ. ರಂಭಾ. ಊರ್ವಶೀ . . . ಅಚ್ಚರಸಿಯರ್" (ಪಠಾಯು. ೦೩-೮೮) ; ರಂಭೆ ರಂಗಂಬೊಕ್ಕಳ್ (೦೯ಠಾವ. ೪-೦೦೭) ; ಹೇಷಿತಘೋಷಣಶ್ರವಣಮಾತ್ರವಿತ್ರಾಸನ ರಚಿತ ಜಂಭಾರಿ ದೇಹಪರಿರಂಭರಂಭಾತಿಲೋತ್ತಮೋರ್ವಶೀಸುಕೇಶಿಯೆಂಬ ಕೇಶಿಯುಮಂ. . . ಕರೆದು (ಜಗಾ. ೩-೨೨ ವ). ೩. ಸುಂದರಿ ; ಚೆಲುವೆ : ಈಗ ಊರಿಗೆಲ್ಲ ತಾನೇ ರಂಭೆಯೆಂದು ಮೆರೆದಾಡುತ್ತಿದ್ದಾಳಂತಲ್ಲ (ಮೂಕಜ್ಜಿ. ೧೮೦). ೪. ವೇಶ್ಯೆ ; ಸೂಳೆ. [ಸಂ. ರಂಭಾ]

**ರಂಭೋರು** (ನಾ). ೧. ಬಾಳೆಯ ದಿಂಡಿನಂತೆ ನುಣುಪು ಹಾಗೂ ದುಂಡಗಿರುವ ತೊಡೆ; ಸುಂದರವಾದ ತೊಡೆ : ಅಬ್ಜಗಂಧಮಿಭಕುಂಭ ಶ್ರೋಣಿ ರಂಭೋರು ಕಂತುನಿಷಂಗೋಪಮ ಜಂಘೆ (ಮದಠ. ೨-೦) ; ಆ ತರುಣಿ . . . ರಂಭೋರುವಿಭವಾನ್ವಿತೆಯಾಗಿಯುಂ (ರಾಜಶೇ. ೭-೬೦ ವ). ೨. ಬಾಳೆಯ ದಿಂಡಿನಂಥ ತೊಡೆಯುಳ್ಳವಳು : ರಂಭೋರು ಜಗದ್ವಿ ಜಯಾರಂಭಿ ಮನೋಭವಕರೇಣುವಂತೊರ್ವಳ್ ಕಟ್ಟಂಭೋಜದಲರ್ಗಳಂ ಕುಚಕುಂಭಂಗಳೊಳೊಟ್ಟಿಕೊಳ್ವಳೇನೊಪ್ಪಿದಳೋ (೦೯ಠಾವ. ೦೩-೧೨೭). [ಸಂ.]

**ರಂಹ** (ನಾ). ರಭಸ ; ವೇಗ : ಝಂಝಾನಿಲನು ಪ್ರಚಂಡರಂಹದಿಂದ ಮೇಘಪಟಲವನ್ನು ಓಡಿಸಿ (ಶ್ರೀರಾಕ. ೬೮). [ಸಂ. ರಂಹಸ್]

**ರಕಂ**, ರಕಮು, ರಖಂ (ನಾ). ೧. ಧನ ; ಹಣ : ಅವನ ಪತ್ತೆಯನ್ನು ಹಚ್ಚಿದವರಿಗೆ ಕೆಲ ರಕಂನ್ನು ಕೊಡುವದಾಗಿಯೂ ಜಾಹೀರಪಡಿಸಲಾಗಿತ್ತು (ಸಮಾಜ . ೬೫). ೨. ರೀತಿ; ಬಗೆ : ಮೂವತ್ತು ವರುಷ ಆಗಿಹೋಯಿತು . . . ಆದರೂ ಇನ್ನೂ ಇದರ ರಕಂ ಸರಿಯಾಗಿ ಅರ್ಥವಾಗಿಲ್ಲ ನನಗೆ (ಸಾಹೇಬ್. ೦೨೯). **ರಕಮು** : ೧. ರಕಮು ಸಹಿತ ಲೆಕ್ಕದ ಹೊಣೆಯನ್ನು ಅರ್ಧಾಂಗಿನಿಗೆ ಒಪ್ಪಿಸಿದವನು ತನ್ನ ಪರಮವಿಶ್ವಾಸವನ್ನು ವ್ಯಕ್ತಪಡಿಸುತ್ತಾನೆ (ಗಾಳಿಶ. ೦೯೨) ; ಭಾರಿ ರಕಮಿನ ವ್ಯವಹಾರಗಳಿಗೂ ಒಂದು ಮಿತಿಯೆನ್ನುವ ದಿರುವುದಿಲ್ಲ (ಕಣ್ಣಗೋ. ೨೦). **ರಖಂ** : ೧. ಅವರಿಗೆ ರಖಂ ಬರೆಯುದ

ಚೆಕ್ಕನ್ನು ಕೊಡುವ ಯೋಜನೆಯು ಆದಾಗಿತ್ತು (ಜಂತ್ರ್. ೧೯೮). ೨. ರಾಜಕೀಯ ಒರಟು ಕೆಲಸ. ಅದಕ್ಕೆ ಬೇಕಾದದ್ದು ಮೊದಲನೆಯ ರಖಂ ಬುದ್ಧಿಶಕ್ತಿಯಲ್ಲ (ಅಕ್ಕಿಶಾ. ೩೨೧). ೩. ಒಟ್ಟು : ಸಗಟು : ಅವರೆ "ರಖಂ" ವ್ಯಾಪಾರವಾಗುವಾಗಲೂ, ಎರಡು ದೂರದ ಊರಿನ ವ್ಯಾಪಾರಿಗಳೊಡನೆ ವ್ಯಾಪಾರ ನಡೆಯುವಾಗಲೂ ಹೀಗೆ ನಡೆಯಲು ಸಾಧ್ಯವಿಲ್ಲ (ಪಾಂಚ್ಯ. II. ೯೯೫). [←ಅರ. ರಕ್ಮ್ : ಹಿಂ. ರಕಮ್ ; ಮರಾ. ರಕಮ್, ರಕ್ಕಮ್]

**ರಕಂವಾರು** (ಅ). ವಸ್ತುಗಳ ಬೆಲೆ ಮತ್ತು ದರ್ಜೆಯನ್ನು ಅನುಸರಿಸಿ : ಅಂಗಡಿಯಲ್ಲಿ ಬಟ್ಟೆಯನ್ನು ರಕಂವಾರು ಜೋಡಿಸಿದ್ದಾರೆ (ಕೂ೩).
[ ← ಅರ. ಹಿಂ. ಮರಾ. ರಕಮ್‌ವಾರ್]

**ರಕಮು** ' ರಕಂ ' ನೋ.

**ರಕಾಬು** ' ರಿಕಾಬು ' ನೋ.

**ರಕಾರ** (ನಾ). ' ರ ' ಎಂಬ ಅಕ್ಷರ : ಹಳಗನ್ನಡಪದಗಳಲ್ಲಿ ರಕಾರ ಬಂದರೇ ಒಂದರ್ಥ, ಱಕಾರ ಬಂದರೇ ಮತ್ತೊಂದು ಅರ್ಥ (ದ್ರಾವಿ. ೩೫೦). [ಸಂ.]

**ರಕುತ**, ರಗುತ (ನಾ). ನೆತ್ತರು ; ರಕ್ತ : ರಕುತದ ಕಡಲೊಳರೆಜೀವದ ಭಟರು ಬಾಯ್ಬಿಡುತ ತೇಕಾಡಿದರು (ಕುಮಾ.ದ್ರೋ. ೫-೧೧); ಸೊಕ್ಕಿದ ಕುಂಭಾಂಡ ರಣದೊಳು ರಕುತವ ಕಕ್ಕಿದ (ಮೋಹತ. ೯೦-೬೨). **ರಗುತ :** "ಕನ್ನೀರು ರಗುತ ನೆತ್ತರು ಶೋಣಿತಂ" (ಕಬ್ಬಿಮಂ. ೯೫); ರಗುತಗಳ ತೊಳದಂಬನುಗಿದೇಱುಗಳಲಾಷಧಿಯ ಬಗೆಗೊಳಿಸಿ (ಕೊರರಾ. ೬-೯೩-೦೯).
[< ಸಂ. ರಕ್ತ]

**ರಕುತಗುಡುಹಿ** (ನಾ). ರಕ್ತವನ್ನು ಕುಡಿಯುವವನು ; ರಾಕ್ಷಸ : ಕೂಡಿದ ಕಡುಹುಕಾಱರ ರಕುತಗುಡುಹಿಗಳೊಡಲ ತುಂಬಿದು ತುದಿವೆರಳಲುಬ್ಬಿಱುದನಾ ಹನುಮ (ಕೊರರಾ. ೫-೫-೨೩).
[ರಕುತ + ಕುಡುಹಿ (< ಕುಡಿಹಿ)]

**ರಕುತಜಿಱಾಟಳೆ** (ನಾ). ರಕ್ತವನ್ನು ಚಿಮ್ಮುವ ಘಟೀಯಂತ್ರ : ಗುರುಸುತ ತುಳುಕಿದನು ಫಲುಗುಣನ ಮೈಯಲಿ ರಕುತಜಿಱಾಟಳೆವ (ಕುಮಾ.ಕ. ೧೯-೦೯).
[ರಕುತ + ಜಿಱಾಟಳೆ (<ಜಿಱಾಟಗ)]

**ರಕುತಿ** (ನಾ). ಒಲವು ; ಪ್ರೀತಿ ; ರಕ್ತಿ : ತನುದಂಡನಂಗೈದು ರಕುತಿಯುಂಟೇನಬಲೆ (ಪಂಚಾರಾ. ೫-೯-೦೫). [< ಸಂ. ರಕ್ತಿ]

**ರಕ್ಕಸ**, ರಾಕಾಸ (ನಾ). ೧. ಅಸುರ ; ರಾಕ್ಷಸ : "ಚುಕ್ಕಿಗುವರರು ರಕ್ಕಸರು ಮಬ್ಬಿಗರುಮೆನಲ್ಕೆ ಅಸುರಾಭಿಧಾನದೊಳ್" (ಕಬ್ಬಿಮಂ. ೦೦); ಪೊಟಲಿಂ ಬಂಡಿಯನಟ್ಟಿಕೊಂಡು ರಕ್ಕಸನಿರ್ದೆಡೆಗೆಯ್ತಂದು (ಶಂಕರಾ. ೩-೨೭ ವ). ೨. ಕ್ರೂರಿ ; ಹಿಂಸಕ : ' ರಕ್ಕಸಿ ' ಪರಾ. ೩. (ಅಲಂ) ದೊಡ್ಡದು ; ಭಾರಿಯಾದುದು : ' ರಕ್ಕಸವಕ್ಕಿ ', ' ರಕ್ಕಸವಲಗೆ ' ಪರಾ. **ರಾಕಾಸ :** ೧. ಮಾತಳಸಮೇತದಿಂ ರಾಕಾಸರಿಹ ಪಟ್ಟಣವ ಪೊಗಲ್ಕೆ (ರಕ್ಷ್ಕಶಾ. ೩-೬-೦೬).

**ರಕ್ಕಸರೋಜ** = ರಾಕ್ಷಸರ ಗುರು ; ಶುಕ್ರಾಚಾರ್ಯ : "ರಕ್ಕಸರೋಜ ಚುಕ್ಕಿಯೆನಲು ಸಂಗಳಿಕುಮಸುರಗುರುವಿನೊಳು" (ಕಬ್ಬಿಮಂ. ೦೬).
[< ಪ್ರಾ. ರಕ್ಖಸ. / ಸಂ. ರಾಕ್ಷಸ]

**ರಕ್ಕಸುಂಕಲೆ** (ನಾ). ರಕ್ಷಣೆಗಾಗಿ ಕಟ್ಟುವ ಕಾಪು : ಎರಡುಪದಂಗಳಪಭ್ರಂಶಕ್ಕೆ . . . ರಕ್ಷಾಶ್ಯಂಖಲ – ರಕ್ಕಸಂಕಲೆ (ಶಮದ. ೨೬೬ ವೃತ್ತಿ).
[< ಸಂ. ರಕ್ಷಾಶೃಂಖಲ]

**ರಕ್ಕಸಗಂಡಪೆಂಡ್ಯ** (ನಾ). ರಾಕ್ಷಸರನ್ನು ಸೋಲಿಸಿದ ವೀರನೆಂಬ ಬಿರುದನ್ನು ಸೂಚಿಸುವ, ಕಾಲಿಗೆ ತೊಡಿಸುವ ಒಂದು ಬಗೆಯ ಬಳೆ: ಚರಣಯುಗಳದ ಸರಪಣಿಯ ನೂಪುರದ ರಕ್ಕಸಗಂಡಪೆಂಡ್ಯದ ಬೆರಳ ಮುದ್ರಿಕೆ . . . ಮೆರೆವ ಲಕ್ಷ್ಮೀರಮಣನೋಲಗಗೊಡುತಲಿರುತಿರ್ದ (ಅನಂರಾ. ೦-೩-೩೬). [ರಕ್ಕಸ + ಗಂಡ$_1$ + ಪೆಂಡ್ಯ (<ಪೆಂಡೆಯ)]

**ರಕ್ಕಸಜೂಜು** (ನಾ). ರಾಕ್ಷಸರಿಗೆ ಭಯವನ್ನುಂಟುಮಾಡುವವನು : ದೈತ್ಯಮರ್ದನನ ದಾನವಾರಿಯ ರಕ್ಕಸಜೂಜಿನ ಪಚ್ಚೆಯ ಪರಿಗೆಯ ಪಸರದ . . . ಹರಿಗೆಕಾಱರ ಪರಿವೀಥಿಯೊಳಂ (೧೦ಳ. ೩-೫೫ ವ).
[ರಕ್ಕಸ + ಜೂಜು$_2$]

**ರಕ್ಕಸದಲ್ಲಣ** (ನಾ). ರಾಕ್ಷಸರನ್ನು ತಲ್ಲಣಗೊಳಿಸುವವನು : ರಂಗನ ನೋಡಿರೆ . . . ರಕ್ಕಸದಲ್ಲಣ ರಾವಣಾಂತಕನ (ತ್ರಿರಂದ. ೯-೪೬-೨).
[ರಕ್ಕಸ + ತಲ್ಲಣ (< ತಲ್ಲಟ)]

**ರಕ್ಕಸದಿಂಡೆಯ** (ನಾ). ರಾಕ್ಷಸರಲ್ಲಿ ಶೂರನಾದವನು ; ದೈತ್ಯವೀರ : ದಿಂಡುಗೆಡೆದುದು ನೆಲಕೆ ರಕ್ಕಸದಿಂಡೆಯನ ರೌಕುಳದ ರಕುತದ ಮುಂದ (ಕೊರರಾ. ೧-೦೨-೦೬). [ರಕ್ಕಸ + ದಿಂಡೆಯ]

**ರಕ್ಕಸನೂರ್** (ನಾ). ಒಂದು ಊರಿನ ಹೆಸರು : ಪುಬ್ಬು ರಕ್ಕಸನೂರು ಕೊಳ್ವಲ್ಲಿ ಪಾರ್ವರೊಡೊಳ್ ಸತ್ತಾನ್ (ಮೈಅಂ. ೦೯೧೭. ೦೦-೩; ನಡು ೬೩).
[ರಕ್ಕಸ + ಊರ್]

**ರಕ್ಕಸಪಾರ್ವ** (ನಾ). ಬ್ರಾಹ್ಮಣವರ್ಗದ ರಾಕ್ಷಸ ; ಬ್ರಹ್ಮರಾಕ್ಷಸ : ಪಿಶಾಚಿಾನಿವಹಮನಡಗುಣಮೆಂದು ನವಮೇದಮಂ ಪೇಟ್ದರಲ್ಲಿ ರಕ್ಕಸಪಾರ್ವರ್ (ಗದಾಯು. ೯-೩೯); ಪೊಲಸಂ ಪಸುತಿರ್ಪ ನಿಶಾಚರರ್ಕಳಂ ಗ್ರಾಸಮನುಣ್ಬೆದೆಂದೊಡಣಮೋಳಿಯ ರಕ್ಕಸಪಾರ್ವರಿರ್ದದೊಂದಾಸೆಗೆ (ಕುವ್ಯಶಾ. ೫೩೫). [ರಕ್ಕಸ + ಪಾರ್ವ]

**ರಕ್ಕಸಬಣಗು** (ನಾ). ಕ್ಷುದ್ರರಾಕ್ಷಸ : ಕೆಣಕಿದರಲಾ ರಣವ ರಕ್ಕಸಬಣಗುಗಳು (ಕುಮಾ.ದ್ರೋ. ೦೫-೬೦). [ರಕ್ಕಸ + ಬಣಗು$_2$]

**ರಕ್ಕಸಬೇರ** ' ರಕ್ಕಸವೇರ ' ನೋ.

**ರಕ್ಕಸರಾಯ** (ನಾ). ರಾಕ್ಷಸರ ರಾಜ,–ಒಡೆಯ : ರಕ್ಕಸರಾಯ ಕರೆಸಲು ನಾಗಕಂಕಣನೈತಂದ (ಮೋಹತ. ೩೫-೫೬). [ರಕ್ಕಸ + ರಾಯ]

**ರಕ್ಕಸವಕ್ಕಿ** (ನಾ). ದೈತ್ಯಾಕಾರದ ಪಕ್ಷಿ ; ರಣಹದ್ದು : ಕುಡಿದವರು ಕಾಂಬುವನು ಮರದುದಿಗಡರಿ ರಕ್ಕಸವಕ್ಕಿಗಳು (ಕೊರರಾ. ೬-೧೯-೩೯).
[ ರಕ್ಕಸ + ಪಕ್ಕಿ ]

**ರಕ್ಕಸವಗೆ** (ನಾ). ೧. ರಾಕ್ಷಸರ ದ್ವೇಷ,– ಶತ್ರುತ್ವ: 'ರಕ್ಕಸವಗೆಯ' ಪರಾ. ೨. ರಾಕ್ಷಸರ ಶತ್ರು : ಅಸುರಾರಿ ; ವಿಷ್ಣು : ಮೊಕ್ಕಳಂ ಸೃಷ್ಟಿ ಸ್ಥಿತಿ ಪ್ರಭೃತಿಗೆಯ್ವವಂ ರಕ್ಕಸವಗೆಯನಾಳ್ವವಂ ಸರ್ವಜಂತುಸಂಘಕ್ಕೆ ಮೋಕ್ಷವನೀವವಂ ಸರ್ವಪತಿ ಸರ್ವಶಕ್ತನಾಂ (ಕವ್ಯರಾ. ೦೦-೨೪); ರಕ್ಕಸವಗೆ ಖಗರಾಜಂಗೆ ಪೇಳ್ದ . . . ನೀ ತಳರೆಂದು (ಮೋಹತ. ೯೨-೬). [ರಕ್ಕಸ+ಪಗೆ$_2$]

**ರಕ್ಕಸವಗೆಯ** (ನಾ). = ರಕ್ಕಸವಗೆ ೨ : "ರಕ್ಕಸವಗೆಯನೆಯ್ದೆ ನಾಲ್ದೋಳ ನೆನೆ . . . ಉಪೇಂದ್ರ" (ಕಬ್ಬಿಮಂ. ೬). [ರಕ್ಕಸವಗೆ + –ಅ$_7$]

**ರಕ್ಕಸವಡೆ** (ನಾ). ರಾಕ್ಷಸರ ಸೈನ್ಯ ; ಅಸುರದಳ : ಮೂಜುಂಯೋಜನದಳವಿಯ ಸಭಾಮಂಟಪಮನೊಂದುಲಕ್ಕ ರಕ್ಕಸವಡೆಯಿಂ ಪೊತ್ತು ತರಿಸಿ (ಶಂಕರಾ. ೬-೨ ವ); ಬಂದಿದೆ ದನಿಗ ರಕ್ಕಸಪಡೆ ಬಾಗಿಲೊಳ್ ನಿಂದಿದೆ ಘುಡಘುಡಿಸುತ್ತ (ಮೋಹತ. ೩೩-೯೦). [ರಕ್ಕಸ + ಪಡೆ$_2$]

**ರಕ್ಕಸವಲಗೆ** (ನಾ). ದೊಡ್ಡ ಗುರಾಣಿ : ಕಳಿಲಿ ರಣದಲಿ ಕೆಡೆವ ರಕ್ಕಸವಲಗೆಯಿರಲದ ಕೊಂಡು ಮುಂಗೈಗೊಳಿಸಿ ಯುದ್ಧದ ವೀರಭದ್ರನ ರಣಕೆ ಗುರುವಾದ (ಕೊರರಾ. ೩-೬-೯೦). [ರಕ್ಕಸ + ಪಲಗೆ]

**ರಕ್ಕಸವೇರ**. ರಕ್ಕಸಬೇರ (ನಾ). = ರಕ್ಕಸವಗೆ ೨ : "ಅರಿಶೂಡಿಯಂ . . . ರಕ್ಕಸವೇ [ಪಾಠಾಂ. ಬೇ] ರಂ, ತಾವರೆಗಣ್ಣಂ . . . ಕಾವನಯ್ಯಂ– ಈ ೧೨ ವಿಷ್ಣುಗೆ ಪೆಸರ್" (ಕಕನಾ. ೦-೯). **ರಕ್ಕಸಬೇರ :** "ರಕ್ಕಸಬೇರಂ ತಾವರೆಗಣ್ಣಂ ಕಾವನೈಯನಾ . . . ಹರಿಯೆಂದು" (ಕನಕಂ. ೨೪). [ರಕ್ಕಸ + ಬೇರ$_1$]

**ರಕ್ಕಸಿ**, ರಾಕಾಸಿ (ನಾ). ೧. ರಾಕ್ಷಸರ ಹೆಣ್ಣು : ಅಸುರಸ್ತ್ರೀ ; ದೈತ್ಯೆ : ರಕ್ಕಸಿಯರ ಕಂಡ ಕುಂಬಳದ ಮಾಟಕ್ಕೆಪೋಲಾಗಿರೆ ಮಾಡದಿರ್ಪರೇ (ಶಂಶಛಾ. ೯–೪೯); . ರಕ್ಕಸಿಯುಂ ಮಾನಿಸಂ ಸಿಂಹಮನಾನೆ ಲೋಗರಂ ಶಿಶು . . . ಪೊರ್ದದಂತೆ (ಧರ್ಮಪು. ೩-೧೨೩); ಹೆದಜದಿರು ಚಿತ್ರದಲಿ ಬಾಣಾ ಹೆದೆಗೊಳಿಸು ರಕ್ಕಸಿಯು ಹರಣವನೊದೆದು ಹಾಯ್ದು (ಕೊರಾ. ೧-೧೧-೯). ೨. ಕ್ರೂರ ಸ್ತ್ರೀ : ನಿನ್ನನಿಂತು ಮಗುಟ್ದುಂ ಮಗುಟ್ದುಂ ಕೊಲವೇಟ್ಟುದೆಂದು ಮೇಟಿನ್ನನಿವಿಂತು ಪುಟ್ಟಿಸಿದನೇ ವಿಧಿ ರಕ್ಕಸಿಯುಂ ಮನಃಪ್ರಿಯಾ (ಕಾದಂಬ. ೬೨೦); ತಾಯಿ ರಕ್ಕಸಿಯಾದಂತೆ ಕಾಯವಿಕಾರವು (ಮಹಾದೇ. ಬ. ೬೪–೦೩೭). ೩. ಒಂದು ಬಗೆಯ ಸಸ್ಯ : "ಛಿನ್ನರೋಹ – ಕೆಂಪಿನ ಬಳ್ಳಿ, ರಕ್ಕಸಿ " (೬ಶಂ. ೩೯). ೪. (ಅಲಂ) ದೊಡ್ಡದು : ' ರಕ್ಕಸಿದಬ್ಬೆ ' ಪರಾ. ರಾಕಾಸಿ : ೨. ಪಂಚಪಾತಕನಾ ಕೈಯಲ್ಲಿ ಹಿಡಿದೂ ಈ ರಾಕಾಸಿ ಮನೆಗೇ ಸೊಸೆಯಾದೆ (ಹುಟ್ಟಿಹ. ೯೯); ತವರಿಗೆ ಯಾಕ್ಬಂದೆ ತಂಗ್ಯಮ್ಮ ರಾಕಾಸಿ ಅವಳೆ ಮನೆಯಲ್ಲಿ (ಹಳ್ಳಿಶ. ೦೦೩).

[ <ಪ್ರಾ. ರಕ್ಖಸೀ. / ಸಂ. ರಾಕ್ಷಸೀ ]

**ರಕ್ಕಸಿದಬ್ಬೆ** (ನಾ). ಒಂದು ಬಗೆಯ ದೊಡ್ಡ ಜಾತಿಯ ಹುಲ್ಲು : ನಾಲಗರುಗ ರಕ್ಕಸಿದಬ್ಬೆ ಕಾರೆ ಕಜಾಂಕೆ (ಶ್ರೀಪಾಲ. ೭–೦೩).

[ ರಕ್ಕಸಿ + ದಬ್ಬೆ₂ (<ದರ್ಭೆ ) ]

**ರಕ್ಕಿಸು**.. ರಖಿಸು (ಕ್ರಿ). ಕಾಪಾಡು ; ರಕ್ಷಿಸು : ಬಿಸುಗೊರಲ ರಕ್ಕಿಸು ಪೂಗುವರತತ್ತಿಯಂ (ಬಿಕೋಪು. ೩-೩). **ರಖಿಸು** : ಆವನೊರ್ವ ಸ್ವಧರ್ಮವೆನ್ನದೆ ರಖಿಸಿದ ಪುಣ್ಯಮಾತಂಗೆ (ವ್ಯಐ. ೦೯೩೦, ೭೬-೪೯; 1080).

[ ರಕ್ಕ + — ಇಸು₃ ]

**ರಕ್ಕೆ** (ನಾ). ೧. ರಕ್ಷಿಸುವುದು ; ಕಾಪಾಡುವುದು ; ಪಾಲನೆ : ''ರಕ್ಕೆ ರಕ್ಷೆ'' (ಶಬ್ದಾಸಿ. ೭೨): ಒಮ್ಮೆರ್ತ್ತಕ್ಕೆಯು ಊನಿದ[ಟಿ]ರಕ್ಕೆಗೆ (ವ್ಯಐ. ೦೪೪೦, ೨೯-೪ ; ಸು. 797) ; ಹುತವಹಂ ರಿಸಿಗೆಜಿಗಿ ರಕ್ಕೆಯಕ್ಕೆ . . . ಎಂದು ಕಣ್ಣೀರಿಡುವುದುಂ (ರಾಮಾಶ್ವ. ೩೫-೦೦). ೨. ಕಾಪು ; ರಕ್ಷಣೆ : ನುಡಿದನೆ ಕಾವುದನೇ ಎರ್ದೆಗಿಡದಿರು ಜಾನಿಟ್ಟ ರಕ್ಕೆ ನಿನಗೆ (ಕಾವ್ಯಾವ. ೪೯). ೩. ಭೂತ, ಗ್ರಹಪಿಶಾಚಾದಿಗಳ ಶಂಕೆ ತಟ್ಟದಿರಲೆಂದು ಧರಿಸುವ ಯಂತ್ರ, ಭಸ್ಮ, ಅಂಜನ ಮುಂತಾದುವು : ಮಣಿಕಿಂಕಿಣಿ ಗೆಜ್ಜೆ ರಕ್ಕೆ ಕುಂಡಲಯುಗ ಮುತ್ತು ಕಾಲ್ಗಡಗ ಪನೆಸೆದಿರ್ದುದೊ ಬಾಲಮುಂಡನೊ (ಅಜಿಪು. ೫-೬೨) ; ಪಿಡಿಪಸೋಕೆಯ ಬಿಲ್ಲು ಜೆಂದಳರುವಿಗೆ ಕೆಂಗಜಗೋಲು ಹೊದೆಯೆಳೆಮಿಡಿಯ ರಕ್ಕೆಗಳರಳ ಕಂಕಣ ಖಿಡೆಯ (ಶಾಸ್ತ್ರಾ. ೫-೯) ; ರಕ್ಕೆಯುಂ ಪಣೆಗಿಟ್ಟು ತೂಪಿಜಿಸಿದು (ಶಬಕ್ಕ. ೫-೨೬). [< ಸಂ. ರಕ್ಷಾ ]

**ರಕ್ಕೆಗಟ್ಟು** (ಕ್ರಿ). ರಕ್ಷಾಯಂತ್ರವನ್ನು ಕಟ್ಟು : ಪದಪಿಂ ಪ್ರಭುಸೂನುಗೆ ತಾನೆ ರಕ್ಕೆಗಟ್ಟುವ ತೆಜದಿಂದೆ ಕಟ್ಟಿದನಿಳಾಪತಿ ತನ್ನಧಿರಾಜಪಟ್ಟಮಂ (ಶಂದ್ರಶು. ೬-೦೦೨). [ ರಕ್ಕೆ + ಕಟ್ಟು₁ ]

**ರಕ್ಕೆಯಾಳ್** (ನಾ). ರಕ್ಷಣೆ ನೀಡುವವನು : ಕಾವಲುಗಾರ : ಜನವ ಬಾಗಿಲಂ ಬೇಗದಿಂ ಪೊಕ್ಕು ರಕ್ಕೆಯಾಳ್ಗಳಂ ಲೆಕ್ಕಿಸಿ ನೋಡಿ (ವರ್ಧಪು. ೨-೩೮ ಪ). [ ರಕ್ಕೆ + ಆಳ್₃ ]

**ರಕ್ಕೆವಣಿ** (ನಾ). ರಕ್ಷೆಗಾಗಿ ಕಟ್ಟುವ ಮಣಿ ; ರಕ್ಷಾಮಣಿ : ರೋಚನದಿಂ ರಂಜಿಪ ನೂಲ ರಕ್ಕೆವಣಿಗಳ್ಬೆಲ್ಲಾಗೆ (ಕಾದಂಪೂ. ೩೫೫) ; ರಕ್ಕೆವಣಿ ಪುಲಿಯುಂಗುರ್ ಗೆಜ್ಜೆ . . . ಪರಿಪರಿಯ ಬಾಲದೊಡಿಗೆಗಳನಾಂತು (ಶಬಕ್ಕ. ೫–೩೬). [ ರಕ್ಕೆ + ಮಣಿ₃ ]

**ರಕ್ಕೆವೊಟ್ಟು** (ನಾ). ಭೂತ, ಪಿಶಾಚಾದಿಗಳಿಂದ ಉಂಟಾಗುವ ತೊಂದರೆಗಳಿಂದ ರಕ್ಷಿಸುವುದಕ್ಕಾಗಿ ಇಡುವ ಬೊಟ್ಟು ; ದೃಷ್ಟಿ ಬೊಟ್ಟು : ತದಂಘ್ರಿಯ ರೇಣುವಕ್ಕ ಜಂಬೊರೆಯುದ ರಕ್ಕೆವೊಟ್ಟೆಸಿಸಿರಲ್ಕೆ (ಶಶಕ್ಕ. ೩-೯೬) : ಲೋಕಲೋಚನಪರಿಪಾತದೋಷಹರಕಾರಣದಿಂದವಳಿಟ್ಟ ರಕ್ಕೆವೊಟ್ಟಿನೆ ನಸುಗರ್ಪು ಕಣ್ಗೊಳಿಸಿದತ್ತು ಕುಚಂಗಳ ಚೂಚುಕಂಗಳೊಳ್ (ಶಾಂತೀಶ್ವ. ೪-೨೭). [ ರಕ್ಕೆ + ಬೊಟ್ಟು₂ (<ಬಟ್ಟು) ]

**ರಕ್ತ** (ಗು). ೧. ಬಣ್ಣ ಹಾಕಿದ ; ಬಣ್ಣ ಬಳಿದ. ೨. ಕೆಂಪುಬಣ್ಣದಿಂದ ಕೂಡಿದ ; ಕೆಂಪಾದ : ವನಕರಿಕುಂಭಪಾಟನ ಪಟಿಷ್ಠ ಕಠೋರ ನಖಿಪ್ರಹಾರಭೇದನ ಗಳಿತಾ[ಸ್ರ] ರಕ್ತನವಮೌಕ್ತಿಕ ಪಂಕ್ತಿವಿಳಾಸ ಭಾಸುರಾನನನೆನೆ (ಶಂಶಛಾ. ೦೩-೫೧). ೩. ಅಕ್ಕರೆಯ ; ಪ್ರೀತಿಯ. (ನಾ). ೪. ಕೆಂಪು ; ಕೆಂಪುಬಣ್ಣ : "ಅರುಣಃ, ಶೋಣಃ, ರಕ್ತಃ . . . ಲೋಹಿತಃ — ಈ ೭ ಕೆಂಪು" (ಹಲಾಯು. ೦೨೦-೪೯) ; ಸುರಗಿಪ್ರಸೂನಮುಂ ಕೊಂಡು ಧೃತರಕ್ತಕರವೀರನೇಟ್ರೆಂದು (ಕಾವಶಂ. ೪-೦೭). ೫. ಅನುರಾಗ ; ಪ್ರೀತಿ : "ಅನುರಾಗದೊಳು ಕೆಂಪಿನೊಳು ಕುಂಕುಮದೊಳು ರುಧಿರದೊಳು ರಕ್ತಂ" (ಮಂಗರಾ. ೦೫೦-೫೪). ೬. ಅನುರಾಗವುಳ್ಳ ವ್ಯಕ್ತಿ ; ಅನುರಕ್ತ : ಕೆಂಪೇಜ ನೈಜಾಂಶುರಕ್ತಂ ಭಗಣಂ ತತ್ಸೀಕರಂಬೊಲ್ ಮೆಜೆಯೆ (ರಾಜಶೇ. ೬-೨೮). ೭. ಜೀವಿಗಳ ದೇಹದಲ್ಲಿ ಇರುವ ಜೀವದಾಯಕವಾದ ಕೆಂಪುಬಣ್ಣದ ದ್ರವ ; ನೆತ್ತರು ; ರುಧಿರ : "ಕ್ಷತಜಂ . . . ಶೋಣಿತಂ, ರಕ್ತಂ— ಈ ೭ ನೆತ್ತರು" (ಹಲಾಯು. ೦೦೪-೦೦) : ಖಳದುಃಶಾಸನವಕ್ಷಸ್ಥತೋಚ್ಚಲತ್ಕೃಷ್ಣರಕ್ತಜಲದಿಂ ಕೋಪಾನಳನಂ ಮನ್ನಿಸದಿಸ್ಸಂಗಳಗಳಿತ ಸರೋಪನಿರ್ಪ ತೆಜದಿಂದಿರ್ದ್ದೆ (ಗದಾಯು. ೧.೫೭) ; ಆರುಕೋಶಗಳು ಯಾವುವೆಂದರೆ—ಪಿತೃಶರೀರದಿಂದ ಬರುವ ಅಸ್ಥಿ ಸ್ನಾಯು ಮಜ್ಜ, ಮಾತೃಶರೀರದಿಂದ ಬರುವ ರೋಮ ಮಾಂಸ ರಕ್ತ (ಹಿಂದಶಾ. ೫೯). ೮. ಕೆಂಪು ಬಣ್ಣದ ಚಂದನ : '' ತ್ರಿಚಂದನಂ — ರಕ್ತ, ಪೀತ, ಸಿತಚಂದನ'' (೬ಶಂ. ೭೦). ೯. ಕುಂಕುಮಕೇಸರಿ : "ಕಾಶ್ಮೀರಾರುಣಮೋಹರಕ್ತಮಿವು ರಕ್ತಾಖ್ಯಂ " (ಪಾಪಾರ. ೦೨೭). ೧೦. ಕುಸುಂಬೆ ಗಿಡ ಮತ್ತು ಅದರ ಹೂವು. ೧೧. ಅಗ್ನಿಯ ಏಳು ನಾಲಗೆಗಳಲ್ಲಿ ಒಂದು. ೧೨. ತಾಮ್ರ. ೧೩. ಮುಟ್ಟು ; ರಜಸ್ಸು.

**ರಕ್ತದ ಒತ್ತಡ** = (ಶರೀರದ) ರಕ್ತದ ಏರಿಳಿತ : ವಯಸ್ಸಾದವರು ರಕ್ತದ ಒತ್ತಡವನ್ನು ಆಗಿಂದಾಗ್ಗೆ ಪರೀಕ್ಷೆ ಮಾಡಿಸಿಕೊಳ್ಳುವುದು ಒಳ್ಳೆಯದು (ರೂಢಿ). **ರಕ್ತ ಹೀರು** = ೧. ರಕ್ತವನ್ನು ಕುಡಿ; ನೆತ್ತರನ್ನು ಹೀರು: ಕಚ್ಚಿದ ತಗಣೆ ಕಣ್ಣಿಗೆ ಬೀಳುತ್ತದೆಯೆ ? ಅದು ನಿಮ್ಮ ಉಪಾಪಿನ ಹೊರಗಿನಿಂದಲೇ ರಕ್ತಹೀರಬಲ್ಲದು (ವಂಟಿಜು. ೪೭). ೨. (ಅಲಂ) ತೊಂದರೆ ಕೊಡು ; ಕಾಡು : ಬಾಕಿ ಬರಲಿಲ್ಲವೆಂದು ಅವರು ರಕ್ತಹೀರುತ್ತಾ ಇದ್ದಾರೆ (ರೂಢಿ). [ಸಂ.]

**ರಕ್ತಕ** (ಗು). ೧. ಕೆಂಪಾದ. ೨. ಮೋಹಗೊಂಡ. (ನಾ). ೩. ಕೆಂಪು ಬಣ್ಣ. ೪. ಕೆಂಪುಬಟ್ಟೆ. ೫. ಒಂದು ಬಗೆಯ ಮರ. [ಸಂ.]

**ರಕ್ತಕಂಬಲ**, ರಕ್ತಕಂಬಳ (ನಾ). ಕೆಂಪುಬಣ್ಣದ ಕಂಬಳಿ: ಪಾಂಡುಕಪಾಂಡು ಕಂಬಲ ರಕ್ತಕಂಬಲಾ [ಶಾಕಾಂ. ಶಾ] ತಿರಕ್ತಕಂಬಲ . . . ಸಿಂಹಾಸನಾಲಂಕೃತಮುಪವಾಗಿ (ಆದಿಪು. ೧-೪೯ ವ). **ರಕ್ತಕಂಬಳ**: ರಕ್ತಕಂಬಳಮನಿದನೆಲ್ಲಿ ಪಡೆದೆ (ತಾಪುಂಶು. ೭೫). [ಸಂ.]

**ರಕ್ತಕಂಬಳ** ' ರಕ್ತಕಂಬಲ ' ನೋ.

**ರಕ್ತಕಟ್ಟು** (ನಾ). ದನಗಳಿಗೆ ಬರುವ ಒಂದು ಬಗೆಯ ರೋಗ : ಆಮಶಂಕೆ : (ಎಸಪ್ಮ. XV. ೪೦). [ರಕ್ತ + ಕಟ್ಟು₂]

**ರಕ್ತಕಣ** (ನಾ). ರಕ್ತದ ಸೂಕ್ಷ್ಮಾಂಗ: ಕಾಯಿಲೆಯು ಹೆಚ್ಚಾದಾಗ ರಕ್ತಕಣಗಳು ವೇಗವಾಗಿ ಕಳಮಟ್ಟಕ್ಕಿಳಿಯುತ್ತವೆ (ಕಿಲರೋ. ೦೯); ರಕ್ತಕಣಗಳೂ ಜೀವದೆಣುಗಳೂ ಕುಣಿಯೆ ಕೊಡುತ ಹೊಳಲು! (ಕೃಪಾಕು. ೨೭-೦೩). [ಸಂ.]

**ರಕ್ತಕರ್ದಮ** (ನಾ). ಕೆಂಪುಬಣ್ಣದ ಸುಗಂಧದ ಕಲ್ಕ. – ಮಂದವಾದ ದ್ರವ: ಪೀನಕ್ಷು ರಕ್ತಕರ್ದಮನೂನ ಸುಗಂಧಾಧಿಕಾವಮರ್ದನಕುಶಲಂ

ಕಾನಿಂಗಿತಜ್ಞಸಂ ವಿಜ್ಞಾನಿಸಂ ಶುಚಿ ಪೀಠವರ್ಧನನೆನಿಕುಂ (ಮುಪತಿ. ೦೦-೪೦). ' ಯಕ್ಷಕರ್ದಮ ' ಪರಾ. [ಸಂ.]

**ರಕ್ತಕಾಸ** (ನಾ). ಕೆಮ್ಮಿದಾಗ ರಕ್ತ ಬೀಳುವ ಒಂದು ಬಗೆಯ ರೋಗ : ತಡಕಲು ಬೇರನ್ನು ಗೋಮೂತ್ರದಲ್ಲರೆದು ಕುಡಿಯಲು ರಕ್ತಕಾಸ ನಿಲ್ಲುವುದು (ಸಕವೈ. ಕಾ. ೪೩೩). [ಸಂ.]

**ರಕ್ತಕೃಚ್ಛ್ರ** (ನಾ). (ಮೂತ್ರದಲ್ಲಿ ರಕ್ತಬೀಳುವ) ಒಂದು ಬಗೆಯ ರೋಗ : ರಕ್ತಕೃಚ್ಛ್ರಕ್ಕೆ : – ಮಡುವಾಗಲಗೆಡ್ಡೆ ಇದಂ ಅರೆದು ಮೊಸರುನೀರಲ್ಲಿ ಕವಡಿ ಸಕ್ಕರೆ ಸಹ ಕೊಳ್ಳಲು, ರಕ್ತಕೃಚ್ಛ್ರಹರ (ಏಷ್ಕ. ೦೯೯). [ಸಂ.]

**ರಕ್ತಕೊಡಗೆ**, ರಕ್ತಕೊಡಿಗೆ, ರಕ್ತಗೊಡಿಗೆ (ನಾ). ನಾಡಿಗಾಗಿ ಅಥವಾ ಅರಸನಿಗಾಗಿ ಪ್ರಾಣ ತೆತ್ತ ವೀರನ ಕುಟುಂಬದವರಿಗೆ ಕೊಡುವ ದಾನ, – ಉಂಬಳಿ ; ನೆತ್ತರಕೊಡಿಗೆ : ಭಟ್ಟವಾನ್ಯ ಉಂಬಳಿ ರಕ್ತಕೊಡಗೆ ಮುಂತಾದುವೇನೂ ಹೆಚ್ಚು ಕಡಮೆಯಾಗದಂತೆಯೂ . . . ಕರಣಿಕರು ವಿಚ್ಚಿತ್ತಿಸಬೇಕು (ಐಕುಸಂ. ೩೬-೨೨). **ರಕ್ತಕೊಡಿಗೆ** : ಹರತಿ ಬೋತಿ ಚನ್ನನು ಹರತಿ ಮುತ್ತಿಗೆಯಲ್ಲು ಫೂ × × ಹೋರಟು ತಲೆವೇರಿ ಬಿದ್ದು ಜಗಳದಲಿ ಮೃತವಾಗಲಾಗಿ ಕೊಟ ರಕ್ತಕೊಡಿಗೆ ಮಾನ್ಯದ ಹೊಲವನ್ನು . . . ಅನುಭವಿಸಿಕೊಂಬುದು (ಎಕ. XI. ಹಿಂದು.ಸಿ. ೦೯-೦೮; 1706); ಯುದ್ಧದಲ್ಲಿ ತೀರಿಹೋದ ಜನಗಳ ಹೆಂಡಿರು ಮಕ್ಕಳಿಗೆ ರಕ್ತ ಕೊಡಿಗೆ ಎಂಬದಾಗಿ ಭೂಮಿಯನ್ನು ಕೊಟ್ಟು (ಮಕಾಪಂ. I. ೦೯೨). **ರಕ್ತಗೊಡಿಗೆ** : ಆಯ ಗಜುಚಕು ಅವನ ಕೆಸಿಡೋಜನು ಮಗನಿಗೆ ರಕ್ತ ಗೊಡಿಗೆ ಮನ್ನ (ಎಕ. X (೪). ಶಿಡ್ಲ. ೦೨೦-ಖ; 15ನೆಯ ಶ). [ರಕ್ತ + ಕೊಡಗೆ (< ಕೊಡಂಗೆಯ್ $_2$)]

**ರಕ್ತಕೊಡಿಗೆ** 'ರಕ್ತಕೊಡಗೆ' ನೋ.

**ರಕ್ತಕೋಷ್ಠ** (ನಾ). ಒಂದು ಬಗೆಯ ಮರ : ''ರಕ್ತನೇತ್ರಃ – ರಕ್ತಕೋಷ್ಠ, ಪತಂಗ'' (೬ಕಂ. ೦೫೯). [ಸಂ.]

**ರಕ್ತಕ್ಷಯ** (ನಾ). ದೇಹದಲ್ಲಿ ರಕ್ತವು ಕಡಮೆಯಾಗುತ್ತಾ ಹೋಗುವ ಒಂದು ಬಗೆಯ ರೋಗ : ಬಿಳಿಚುರೋಗ : ಕೆಲವು ಜಾತಿಯ ಆನಬೆಗಳಲ್ಲಿ ಫೋಲಿಕ್ ಆಮ್ಲ ಹೆಚ್ಚಾಗಿರುವುದೆಂದು ತಿಳಿದುಬಂದಿದೆ. ಈ ಆಮ್ಲವನ್ನು ರಕ್ತಕ್ಷಯದಿಂದ ನರಳುವ ರೋಗಿಗಳಿಗೆ ಕೊಡುತ್ತಾರೆ (ಕನಕೋ. I. ೨೨೫); ರಾಘಪ್ಪನ ಹೆಂಡತಿ ಬಹುದಿನಗಳಿಂದ ರಕ್ತಕ್ಷಯ ದಿಂದ ಬಳಲುತ್ತಿರುವಳು (ಗಂಡುಮ. ೪೩). [ಸಂ.]

**ರಕ್ತಗತ** (ಗು). ೧. ರಕ್ತದಲ್ಲಿ ಹೊಕ್ಕ – ಸೇರಿದ. ೨. ಬಹುಕಾಲ ದಿಂದ ಇರುವ : ತಾವರೆಪಲೆ, ರಂಜಿಕೆ . . . ಇವು ಸಮಭಾಗ ಕಷಾಯವಿಕ್ಕಿ ಸೇವಿಸೆ, ರಕ್ತಗತಜ್ವರ ಗುಣವಹುದು (ಸಕವೈ. ೦೦೭). (ನಾ). ೩. ರಕ್ತದಲ್ಲಿ ಸೇರಿರುವುದು. ೪. (ಅಲಂ) ಹುಟ್ಟಿನಿಂದ ಬಂದುದು ; ವಂಶಪಾರಂಪರ್ಯವಾದುದು.

**ರಕ್ತಗತವಾಗು** = ೧. ರಕ್ತದಲ್ಲಿ ಸೇರು : ಖರ್ಜೂರದಲ್ಲಿರುವ ಸಕ್ಕರೆಗೆ ಬಹುಬೇಗನೆ ರಕ್ತಗತವಾಗುವ ಗುಣವಿದೆ (ಆರುಪ. ೬೪) ; ದೇಹವಸ್ತು . . . ರಕ್ತಗತವಾದ ವೇಳೆ, ಇವನ್ನು ದೇಹವು ಶಕ್ತಿ ಉತ್ಪತ್ತಿಗೆ ಉಪಯೋಗಿಸಿಕೊಳ್ಳುವುದು (ಗೃಕಾ. ೦೮). ೨. ಬಹಳ ಕಾಲದಿಂದ ಇರು ; ವಂಶಾನುಗತವಾಗಿರು : ಸಪನೆ ಶ್ರದ್ಧೆ ತನ್ನ ಹಿರಿಯರಿಂದ ಪಡೆದ ಪ್ರಸಾದಗುಣ. ಈ ಸಂಸ್ಕಾರ ಅವಳಂತಹ ಹೆಣ್ಣಿಗೆ ರಕ್ತಗತವಾದದ್ದು (ಹೊಸೆ ೨೦). [ಸಂ.]

**ರಕ್ತಗುಂಜೆ** (ನಾ). ಕೆಂಪುಬಣ್ಣದ ಗುಲಗಂಜಿ : "ರಕ್ತಗುಂಜೀ .. ಅರಗು, ವಂಜಿಷ್ಠ, ರಕ್ತಗುಂಜಿ" (೬ಕಂ. ೦೫೩). [< ಸಂ. ರಕ್ತಗುಂಜ]

**ರಕ್ತಗೊಡಿಗೆ** ' ರಕ್ತಕೊಡಗೆ' ನೋ.

**ರಕ್ತಗ್ರಹಣಿ** (ನಾ). ಗ್ರಹಣಿರೋಗದಲ್ಲಿ ಒಂದು ಬಗೆ ; ರಕ್ತಬೇಧಿ : ಅತ್ತಿತಿಗುಡು, ಕೊಡಸಿಗೆತಿಗುಡು . . . ಚೂರ್ಣಂ ಮಾಡಿ . . . ತಕ್ರದಲ್ಲಿ ಕಲಸಿ ಕೊಳ್ಳಲು ರಕ್ತಗ್ರಹಣಿ ಮಾಣ್ಗುಂ (ಸಕವೈ. ೩೯೪). [ಸಂ.]

**ರಕ್ತಚಂಚು** (ನಾ). ೧. ಕೆಂಪುಬಣ್ಣದ ಕೊಕ್ಕು. ೨. ಕೆಂಪುಬಣ್ಣದ ಕೊಕ್ಕಿರುವ ಪಕ್ಷಿ ; ಗಿಳಿ : ಪಿಂಗಳವಾದ ನೆಲ್ಲ ತೆನೆಯಂ ನಸುಗರ್ಚಿದ ರಕ್ತಚಂಚು ಪಕ್ಷಂಗಳ ಹಾಡ್ವಲಚ್ಚವಿ ಮನಂಗೊಳೆ ಪಾಱುವ ಕೀರಮಾಲೆ . . . ರಂಜಿಕುಂ (ಜಗಂ. ೪-೬೬). [ಸಂ.]

**ರಕ್ತಚಂದನ** (ನಾ). ಚಂದನದಲ್ಲಿ ಒಂದು ಬಗೆ ; ಕೆಂಪು ಶ್ರೀಗಂಧ : "ಕರತ್ – ರಕ್ತಚಂದನ" (೬ಕಧ. ೨೦) ; ಶಾರಿಬಾದಿಗಣ : — ಸೊಗದೆ ಬೇರು . . . ಇವೈ ಹೂವು, ಶ್ರೀಗಂಧ, ರಕ್ತಚಂದನ, ಅತಿಮಧುರ (ಸಕವೈ. ೮೦ ಅಂಬ). [ಸಂ.]

**ರಕ್ತಚಲನೆ** (ನಾ). (ದೇಹದಲ್ಲಿ) ರಕ್ತವು ಹರಿಯುವಿಕೆ ; ರಕ್ತಸಂಚಾರ : ವಿಟಮಿನ್‌ಗಳು ದೇಹದ ಬೆಳವಣಿಗೆಗೆ ರಕ್ತಚಲನೆ, ಪಚನಕಾರ್ಯ ಇತ್ಯಾದಿ ಕೆಲಸಗಳು ಸುಗಮವಾಗಿ ವ್ಯವಸ್ಥಿತವಾಗಿ ನಡೆಯುವಂತೆ ಸಹಾಯಕ ವಾಗುವುವು (ಗೃಕಾ. ೬). [ಸಂ. ರಕ್ತಚಲನ]

**ರಕ್ತಚ್ಛದ** (ನಾ). ಕೆಂಪುರೆಕ್ಕೆಗಳುಳ್ಳ ಒಂದು ಬಗೆಯ ಹಕ್ಕಿ : "ರಕ್ತಚ್ಛದಂ ಪಿಕ್ಕುಳಿಕೆ" (ಚಂಗರಾ. ೩೨-೯). [ಸಂ.]

**ರಕ್ತಜಿಹ್ವಕ** (ನಾ). ನಾಲಗೆಯು ಕೆಂಪುಬಣ್ಣಕ್ಕೆ ತಿರುಗುವ ಒಂದು ಬಗೆಯ ರೋಗ : ನಾಲಗೆ ರಕ್ತವರ್ಣವಾಗಿ ಒಣಗಿ ಮುಳ್ಳುಮುಳ್ಳಾಗಿ ರ್ಪುದು . . . ರಕ್ತಜಿಹ್ವಕಸನ್ನಿದೋಷವೆಂದರಿವುದು (ಸಕವೈ. ೦೭೦). [ಸಂ.]

**ರಕ್ತತುಂಡ** (ನಾ). = ರಕ್ತಚಂಚು ೨ : ಪಸರಿಸಿ ಶಾಖಾಭುಜದೊಳ್ ಮಿಸುಗುವ ನಖಪದಮನಧರಪಲ್ಲವಮಂ ಖಂಡಿಸಿ ರಕ್ತತುಂಡನೇಂ ಪುಟ್ಟಿಸಿದುದೊ ಸಹಕಾರಲತಿಕೆಗಂಗಜಶರಮಂ (ಪುಳ್ಗೆ. ೬-೪೪). [ಸಂ.]

**ರಕ್ತತ್ವ** (ನಾ). ೧. ಕೆಂಪುಬಣ್ಣ : ಸುದತಿಯ ಚರಣತಳಕ್ಕತಿವ್ಯುದುತ್ತ ರಕ್ತತ್ವ ಮುಚಿತವೆಂದೆ ಪೊಗಬುಸುಗುಂ (ಶಂಪ್ರಪು. ೦೦-೦೦೪). ೨. ಅನುರಾಗ ; ಪ್ರೀತಿ. ೧, ೨ : ಅನುಂ ಪ್ರತೀಚೀಸದಾಗಮಸಂತುಷ್ಟನೆನಪ್ಪೆನೆಂದು ದಿನಪಂ ರಕ್ತತ್ವದಿಂ ಪೋಗೆ ರಾಗವೆ ತತ್ಕಾಂಕುವುರಾಗವಾದುದಪರಾಲಂ ಕಾರವಿಸ್ತಾರದೊಳ್ (ಶಾಂತಿಪು. ೬-೩೦). [ಸಂ.]

**ರಕ್ತದಾಹ** (ನಾ). (ಕೊಲೆ, ಯುದ್ಧ ಮುಂತಾದ ಸಂದರ್ಭಗಳಲ್ಲಿ ಜನರ) ರಕ್ತವನ್ನು ಚೆಲ್ಲುವ ಬಯಕೆ : ರಕ್ತದಾಹಕ್ಕೆ ಮಾಡಿದ ಕೃತ್ಯ ಅಂತಹನೂ ಹೇಳೋ ಹಾಗಿಲ್ಲ (ಶಿರಿಸ್ಟೆ. ೦೦). [ಸಂ.]

**ರಕ್ತದೇಶಿ** (ನಾ). [ಸಂಗೀತ] ಒಂದು ರಾಗದ ಹೆಸರು : ಗುಂಡಾಕ್ರೀ ರಕ್ತದೇಶಿ ಲಲಿತಾ . . . ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಶಬ್ದೀಕ. ೨-೯೦). [ ? ]

**ರಕ್ತಧಾತು** (ನಾ). ೧. ಕೆಂಪುಬಣ್ಣದ ಕಲ್ಲು ; ಕಾವಿ. ೨. ರಕ್ತದ ಮೂಲಧಾತು : ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು . . . ಶುಕ್ಲಧಾತು ಎಂದು ಏಳು ತೆರನಾಗಿವೆ (ಸಕವೈ. ೯೯). ೩. ತಾಮ್ರ. [ಸಂ.]

**ರಕ್ತಧಾರೆ** (ನಾ). ನೆತ್ತರ ಪ್ರವಾಹ, – ಹೊನಲು : ಪಾಂಚಿ ಮುನ್ನವೆ ಸಚಿವಾಶ್ವಪ್ಪೆದೆ ಕೊಳಗಿಂ ತಲೆ ಬಿಂಪಿಸಿ ಪಾಚಿ ಮೆಟ್ಟತಂದವಿರಳರಕ್ತಧಾರೆ ಪೂಜಿಸೂಸಿರೆ ಬಾಲನ ಕಂಠನಾಳಮಂ (ರಾಜಶೇ. ೦೪. ೯೬). [ಸಂ. ರಕ್ತಧಾರಾ]

**ರಕ್ತನಾಳ** (ನಾ). ದೇಹದಲ್ಲಿ ರಕ್ತ ಚಲಿಸುವ ನಾಳ; ನರ; ಸಿರೆ : ರಕ್ತದ ಒತ್ತಡವನ್ನು ಮತ್ತೆ ಏರಿಸಲು ಇದನ್ನು ನಿಧಾನವಾಗಿ ರಕ್ತನಾಳದ ಮೂಲಕ ಕೊಡಬಹುದು (ಕನಕೋ. I. ೨೨೫). [ಸಂ. ರಕ್ತನಾಲ]

**ರಕ್ತನೀರು** (ನಾ). ಕೆಂಪುಬಣ್ಣದ ನೀರು ; ಓಕುಳಿ : ಆರತಿಯಿಂ ರಕ್ತನೀರಿಂದ ಕುಸುಮೋಪಹಾರದಿಂ . . . ಮಂಗಳನಾರಿ ಸತ್ಕರಿಸಿ ದಳಂದು (ಕುಣಾಸಾಂ. ೦೩-೦೬೩). [ರಕ್ತ + ನೀರು $_1$ (< ನೀರ್ $_1$)]

**ರಕ್ತಪ** (ನಾ). ರಕ್ತವನ್ನು ಕುಡಿಯುವವನು; ರಾಕ್ಷಸ. [ಸಂ.]

**ರಕ್ತಪದಿ** (ನಾ). ಒಂದು ಬಗೆಯ ಸಸ್ಯ; ಶೀಘ್ರಿ: "ಹತ್ತಿದರೆ ಮುರುಟುಪಂ ರಕ್ತಪದಿ ಶೀಘ್ರಿ" (ಶಬ್ದಗಣ. ೯೩-೯೩). [ಸಂ. ರಕ್ತಪದೀ]

**ರಕ್ತಪರಿಚಲನೆ** (ನಾ). = ರಕ್ತಚಲನೆ: ರಕ್ತಪರಿಚಲನೆ (ರಕ್ತಕೋಶದಿಂದ ಅಪಧಮನಿಗಳಲ್ಲಿ ಹೊರಟು ಮರಳಿ ಅಭಿಧಮನಿಗಳ ಮೂಲಕ ರಕ್ತಕೋಶವನ್ನು ಸೇರುವುದು) (circulation. ಜೀಶಾ); ಕೀಟಗಳಲ್ಲಿ ರಕ್ತಪರಿಚಲನೆ ಪ್ರಧಾನಪ್ರಾಣಿಗಳಂತಲ್ಲದೆ, ಮುಖ್ಯವಾಗಿ, ಅಂಗಾಂಗಗಳ ರಾಸಾಯನಿಕ ಬದಲಾವಣೆಗಳ ಮಾಧ್ಯಮ (ಕೀಟಶ. ೩೦). [ಸಂ. ರಕ್ತಪರಿಚಲನ]

**ರಕ್ತಪಾತ** (ನಾ). (ಅಲಂ) ಸಾಮೂಹಿಕವಾದ ಕೊಲೆ: ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ರಕ್ತಪಾತವಾದೀತು (ರಾಷ್ಟ್ರಪಿ. ೬೪). [ಸಂ.]

**ರಕ್ತಪಾನ** (ನಾ). ರಕ್ತವನ್ನು ಕುಡಿಯುವಿಕೆ: ರಣದೊಳಭಿಲಾಷೆಯಿಂ ಪೈಶಾಚರಂತೆ ಹೇಸದೆ ರಕ್ತಪಾನಮಂ ಮಾಡಿಯೊಡಲ ಪೋಷಿಸಿದೆ (ಕೈಪಿಡಾ. ೨-೬೦). [ಸಂ.]

**ರಕ್ತಪಾಯಿ** (ನಾ). ೧. ರಕ್ತವನ್ನು ಕುಡಿಯುವವನು; ರಾಕ್ಷಸ. ೨. ತಿಗಣೆ. [ಸಂ. ರಕ್ತಪಾಯಿನ್]

**ರಕ್ತಪಿಂಡಾಲ** (ನಾ). ಒಂದು ಬಗೆಯ ಔಷಧೀಸಸ್ಯ: "ಆಲುಃ — ರಕ್ತಪಿಂಡಾಲು" (ಓಷಧಿ ೦೦). [< ಸಂ. ರಕ್ತಪಿಂಡಾಲು]

**ರಕ್ತಪಿಂಡಾಲು** (ನಾ). = ರಕ್ತಪಿಂಡಾಲ: "ಪತ್ರಾಲುಃ — ರಕ್ತಪಿಂಡಾಲು" (ಓಷಧಿ. ೯೦). [ಸಂ.]

**ರಕ್ತಪಿತ್ತ** (ನಾ). ಒಂದು ಬಗೆಯ ರೋಗ; ಪಿತ್ತವಿಕಾರದಿಂದ ಉಂಟಾಗುವ ರಕ್ತಪರಿಚಲನೆಯ ಏರುಪೇರು: ನೆಲ್ಲಿಚೆಟ್ಟಿನ ಚೂರ್ಣವ ಮಾಡಿ ಸಕ್ಕರೆಯ ಬೆರಸಿ, ತುಪ್ಪವ ಕಲಸಿ ಮೆಲ್ಲಲು ರಕ್ತಪಿತ್ತ ಹರ (ವೈದ್ಯಾ. ೦೦); ನಾಡಿಯು . . . ಹಲ್ಲಿಯ ಹಾಗೆ ಆಡಿದರೆ ರಕ್ತಪಿತ್ತವೆಂಬುವ ಹಾಗೂ . . . ತಿಳಿವುದು (ಕಳವ್ಯ. ೦೨). [ಸಂ.]

**ರಕ್ತಪಿಪಾಸಿ** (ನಾ). ರಕ್ತವನ್ನು ಕುಡಿಯುವ ದಾಹವುಳ್ಳವನು; ಪೋಲೀಸರ ದೃಷ್ಟಿಯಲ್ಲಿ ಈತ ರಕ್ತಪಿಪಾಸಿ ದೈತ್ಯ (ಅಕ್ಷ್ಯಾರ್ಶ. ೩೩). [ಸಂ. ರಕ್ತಪಿಪಾಸಿನ್]

**ರಕ್ತಪಿಪಾಸೆ** (ನಾ). = ರಕ್ತದಾಹ. [ಸಂ. ರಕ್ತಪಿಪಾಸಾ]

**ರಕ್ತಪುಚ್ಛ** (ನಾ). ಕೆಂಪುಬಣ್ಣದ ಕೊಂಡಿಯಿರುವ ಒಂದು ಬಗೆಯ ಚೇಳು; ಕೆಂಚೇಳು: ಕುಂದುರುಜ, ರಕ್ತಪುಚ್ಛ, ಪಿಪ್ಪೀಚೇಳು, ಶುಕ್ಲಕೀಟ ಎಂದು ಚೇಳುಗಳು ನಾಲ್ಕು ತೆರ (ವೈದ್ಯಶಾ. II. ೯೦). [ಸಂ.]

**ರಕ್ತಪುನರ್ನವ** (ನಾ). ಕೆಂಪು ಸೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ: ಅಡಕುಪುಟ್ಟನ ಗಿಡ, ಬಸವಡಿಕೆ, ಸನಾದಿಕಾ, ಗೊನೆಜಾಲಿ, ರಕ್ತಪುನರ್ನವ (ವೈದ್ಯನಿ. ೦೩-೨೩೦). [ಸಂ. ರಕ್ತಪುನರ್ನವಾ]

**ರಕ್ತಪುರ** (ನಾ). ಒಂದು ಊರಿನ ಹೆಸರು; P ಈಗಿನ ವಿಜಾಪುರ ಜಿಲ್ಲೆಯ ಪಟ್ಟದಕಲ್ಲು. ಇದು 'ಕಿಸುವೊಳಲ್' ಎಂಬುದರ ಸಂಸ್ಕೃತೀಕರಣ: ರಕ್ತಪುರಮಧಿವಸತಿ ವಿಜಯಸ್ಕನ್ಧಾವಾರೇ (ಎಇ. IX. ೨೦೪-೩೩; 750). [ಸಂ.]

**ರಕ್ತಪುಷ್ಪ** (ನಾ). ೧. ಕೆಂಪುಹೂವು: ರಕ್ತಪುಷ್ಪವು ಗಂಧಭೂಷಣರಕ್ತಕರವಾತ್ರೇ (ದೇಶೀಯು. ೩೪೪). ೨. ಕೆಂಪುಹೂವುಗಳನ್ನು ಬಿಡುವ ಮುತ್ತುಗ ಮೊದಲಾದ ಮರಗಳು. [ಸಂ.]

**ರಕ್ತಪೈತ್ಯ** (ನಾ). = ರಕ್ತಪಿತ್ತ: ದಾಹ, ಮೂರ್ಛೆ, ಭ್ರಮೆ, ರಕ್ತಪೈತ್ಯ ಮುಂತಾದ ಸಕಲರೋಗಗಳೂ ತತ್‌ಕ್ಷಣವೇ ನಾಶವಾಗುವುವು (ಕಳವ್ಯ. ೯೩). [ರಕ್ತ + ಪೈತ್ಯ]

**ರಕ್ತಪ್ರಕೋಪ** (ನಾ). = ರಕ್ತಪಿತ್ತ: ರಕ್ತಪ್ರಕೋಪಕ್ಕೆ:— ಪಥ್ಯ ರಾಜಾನ್ನ, ಹೆಸರು, ತೊಗರಿ ಇಷ್ಟು ಪಥ್ಯ (ವೈದ್ಯಾ. ೦೯೦). [ಸಂ.]

**ರಕ್ತಪ್ರಮೇಹ** (ನಾ). ಮೂತ್ರದಲ್ಲಿ ರಕ್ತವು ಹೋಗುವ ಒಂದು ಬಗೆಯ ರೋಗ: ರಕ್ತಪ್ರಮೇಹ . . . ಕಲ್ಲುಂಡೀಳಿವುದು ಇವಕ್ಕೆಲ್ಲಾ ಅಮರದ ಬಳ್ಳಿಯಲ್ಲಿ ೨೧ದಿನ ಕೊಡುವುದು (ವೈದ್ಯಾ. ೯೨). [ಸಂ.]

**ರಕ್ತಪ್ರಸೂನ** (ನಾ). = ರಕ್ತಪುಷ್ಪ ೧: ಮೊದಲೊಳ್ ಮುಳ್ ಮೇಗೆ ವಿಚಿತ್ರದಳತ ರಕ್ತಪ್ರಸೂನಮೆಂಬಿನಿತಜಜೋಳಾಗದು ಶಾಲ್ಮಲಿವನರುಹಮಾವುದುತ್ತರಂ ನಿನಗಮಿದಿರವಾದಿಗಮಧಿಪಾ (ಶಾಂತಿಪು. ೬-೦೫೨). [ಸಂ.]

**ರಕ್ತಬೀಜ** (ನಾ). ೧. ದಾಳಿಂಬೆ ಗಿಡ. ೨. ಒಬ್ಬ ರಾಕ್ಷಸನ ಹೆಸರು: ಕುಸುರಿದರಿವುದು ರಕ್ತಬೀಜನಂ (ಅಂಬಿಕಾ. ೯೦-೯೪). [ಸಂ.]

**ರಕ್ತಬೋಳ** (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಅಂಟು: ಬಾಣಂತಿಬೋಳ, ರಕ್ತಬೋಳ . . . ತೆಗೆದುಕೊಳ್ಳಲು ಕ್ಷಯ, ಪಾಂಡು, ಕಾಮಾಲೆ, ಪೈತ್ಯರೋಗ ಸಹ ಗುಣಮಕ್ಕುಂ (ಕಳವ್ಯ. ೨೫೨); ಒಂದು ಚೂರು ಡಿಕ್ಕಿಮಾಲೆ ಮತ್ತು ರಕ್ತಬೋಳ (ಯಾವುದಾದರೊಂದು ಸಾಕು) ವನ್ನು ನೀರಲ್ಲಿ ತೇದು . . . ಕೆಳಹೊಟ್ಟೆಗೆ ತೆಳುವಾಗಿ ಹಚ್ಚುವುದು (ಮನಶು. ೮). [ರಕ್ತ + ಬೋಳ$_3$ ( < ಬೋಳ$_3$ )]

**ರಕ್ತಭೇದಿ** (ನಾ). ಮಲದಲ್ಲಿ ರಕ್ತ ಹೋಗುವ ಒಂದು ಬಗೆಯ ರೋಗ: ಆಮಶೋಗೆ . . . ಎಲೆಗಳ ರಸವನ್ನು ಆಮಶಂಕೆ ರಕ್ತಭೇದಿಗಳಿಗೆ ಔಷಧವಾಗಿ ಉಪಯೋಗಿಸುವರು (ಸಸ್ಯಶಾಸ್ತ್ರ. I. ೭೫೯). [ಸಂ.]

**ರಕ್ತಮಂಡಲ** (ನಾ). ೧. ರಕ್ತವಿಕಾರದಿಂದ ಚರ್ಮದ ಮೇಲೆ ತೋರುವ ಕೆಂಪು ಕಲೆ, —ಶುಕ್ಕೆ: ಎಕ್ಕ, ಕಳ್ಳಿಯ ಹಾಲನ್ನೆರೆದು ಪಂಚಲವಣಂ ಬೆರಸಿ, ಅದನ್ನು ಆಡು, ಹಸು, ಕತ್ತೆ, ಕುದುರೆ ಇವುಗಳ ಮೂತ್ರದೊಳು ಹಾಕಿ ಎಣ್ಣೆಯನ್ನೆರೆದು ತೈಲವನಟ್ಟು ಪೂಸಿದರೆ ರಕ್ತಮಂಡಲ, ಕುಷ್ಠ . . . ಇವೆಲ್ಲವನ್ನೂ ಕೆಡಿಸುಗುಂ (ವೈದ್ಯಾ. ೦೫೯). ೨. ಮೈಮೇಲೆ ಕೆಂಪುಮಚ್ಚೆಗಳಿರುವ ಒಂದು ಬಗೆಯ ಹಾವು. [ಸಂ.]

**ರಕ್ತಮುಖ** (ನಾ). (ಕೋಪದಿಂದ) ಕೆಂಪಾದ ಮುಖವುಳ್ಳವನು: ಹೊರಳಿದನು ಹುಬ್ಬೇರಿಸಿ ವಧಿಯುಂಬಿ ರಕ್ತಮುಖನಾಗಿ (ಕೌಶಿರಾ. ೩೨-೩೮). [ಸಂ.]

**ರಕ್ತಮೂತ್ರ** (ನಾ). ಮೂತ್ರದಲ್ಲಿ ನೆತ್ತರು ಬೀಳುವ ಒಂದು ಬಗೆಯ ರೋಗ: ಆಲದ ಬಿಳಲು, ಅದರ ಮೊಗ್ಗುಗಳು ಎರಡನ್ನೂ ಮಜ್ಜಿಗೆಯಲ್ಲಿ ಅರೆದು . . . ತುಪ್ಪ ಸಹ ಮೂರು ದಿವಸ ಉಣ್ಣಲು ರಕ್ತಮೂತ್ರರೋಗ ಗುಣ (ವೈದ್ಯಾ. ೦೦೯). [ಸಂ.]

**ರಕ್ತಮೂಲವ್ಯಾಧಿ** (ನಾ). ಮಲದಲ್ಲಿ ರಕ್ತ ಹೋಗುವ ಮೂಲವ್ಯಾಧಿ ರೋಗ: ಜೋಳ, ನಾಗಕೇಸರ, ಖಂಡಸಕ್ಕರೆ ಇವಂ ಏಳುದಿನ ಗಟ್ಟಿ ಬೆಣ್ಣೆಯಲ್ಲಿ ಮೆಲೆ ರಕ್ತಮೂಲವ್ಯಾಧಿ ಪರಿಹಾರ್ಯಂ (ವೈದ್ಯಾ. ೯೨). [ಸಂ.]

**ರಕ್ತಮೇಹ** (ನಾ). = ರಕ್ತಮೂತ್ರ: ಉಪ್ಪುಂ ಕರ್ಪಿನ ರಸಮುಂ ಪಿಪ್ಪಲಿಯುಂ ಘೃತಮುಮೆಳ್ಳುಮಿನಿತುಮನೋರಂತಪ್ಪೆಸಮಾ[ನ]ತುಗೆ ಪ್ರಾಲೊಳ್ ತಪ್ಪಲ್ಲದೆ ಪಯಕ್ಕೆ ರಕ್ತಮೇಹಂ ಕಿಡುಗುಂ (ಕಲ್ಯಾಣ. ೦೦-೨೩); ಶುಕ್ಲವು ರಕ್ತವೂ ಮೂತ್ರವೂ ಮೂರೂಕೂಡಿ ಬೀಳುವುದು. ಈ ಲಕ್ಷಣಗಳುಳ್ಳುವೆ ಕ್ರಮದಿಂದ ರಕ್ತಮೇಹ, ಶುಕ್ಲಮೇಹಮೆಂದರಿವುದು (ಕಳವ್ಯ. ೩೭೦). [ಸಂ.]

**ರಕ್ತಮೇಹನ** (ನಾ). = ರಕ್ತಮೂತ್ರ: ಎ(ಯ)ಲವ[ದ]ಗೊಟ್ಟೆಯಷ್ಟಿಮಧುಕಂ ಮಧು ಮಂಜಿಟೆ ತುಪ್ಪಮಿಂತಿವಂ ಕಲಸಿ ಪಯಕ್ಕೆ ಕೊಟ್ಟು ಬಟಿಕ . . . ರಕ್ತಮೇಹನ ಪರಂ ತುರಗಕ್ಕೆ (ಅಶ್ವಶಾ. ೦೦-೨೪). [ಸಂ.]

**ರಕ್ತಮೋಕ್ಷ** (ನಾ). (ಜಿಗಣೆಯಿಂದ ರಕ್ತವನ್ನು ಹೀರಿಸಿ ಮಾನವರ ಶರೀರದಿಂದ) ರಕ್ತವನ್ನು ತೆಗೆಯುವುದು: (ಶೋಧನವು) ನಿರೂಹಣ-

ವಮನ. ವಿರೇಕ. ನಸ್ಯ. ರಕ್ತಮೋಕ್ಷಂಗಳೆಂದೈದು ತೆರನಾಗಿರುವುದು (ಸಕವೈ. ೧೯). [ಸಂ.]

**ರಕ್ತವಮನ** (ನಾ). ರಕ್ತವನ್ನು ಕಕ್ಕುವಿಕೆ ; ನೆತ್ತರನ್ನು ಕಾರುವುದು : ರಕ್ತವಮನಕ್ಕೆ :-ಮರಗಡ್ಡೆಸೊಪ್ಪು. ಮರಹತ್ತಿಸೊಪ್ಪು. ಈ ಎರಡನ್ನೂ ಸಮಾನವಾಗಿ ತೆಗೆದುಕೊಂಡು ತುಳಸು . . . ಮೂಜುದಿನ ತೆಗೆದುಕೊಳ್ಳಿಸಲ್ಲುವುದು (ಏವೈಟ. ೭೦). [ಸಂ.]

**ರಕ್ತವಾತ** (ನಾ). ಒಂದು ಬಗೆಯ ವಾತರೋಗ : ಏಲಕ್ಕಿ ನಾಗಕೇಸರಿ ಲವಂಗಚಕ್ಕೆ . . . ಸೇವಿಸೆ . . . ರಕ್ತವಾತ. ಕ್ಷಯರೋಗ . . . ಸಪ ಗುಣವಾಗುವುದು (ಸಕವೈ. ೮೪). [ಸಂ.]

**ರಕ್ತಶಾಲಿ. ರಕ್ತಶಾಳಿ** (ನಾ). ಕೆಂಪುಜಾತಿಯ ಬತ್ತ ; ಕೆಂಬೂತಿ ; "ಕೆಂಪ್ರಭತ್ತ, ಕೆಂಬೂತಿಭತ್ತ" (ಅಸಂನಾ). **ರಕ್ತಶಾಳಿ** : "ರಕ್ತಶಾಳಿಃ, ಮಹಾಶಾಳಿಃ, ಕಳಮಃ — ಇವು ಮೊದಲಾಗುಳ್ಳುವು ಕಳಮೆಯ ಭೇದಂ" (ಹಲಾಯು. ೯೩-೯೨೬). [ಸಂ.]

**ರಕ್ತಶಾಳಿ** 'ರಕ್ತಶಾಲಿ' ನೋ.

**ರಕ್ತಶೂಲೆ** (ನಾ). ಹೆಣ್ಣೆರೋಗದಲ್ಲಿ ಒಂದು ಬಗೆ : ಯೋನಿಯಿಂದ ರಕ್ತ ಸುರಿಯುವುದು : ತ್ರಿಕಟುಕ. ಭಾರಂಗಿ, ಬೆಲ್ಲಪತ್ತದ ತಿರುಳು, ಇವಂ ಸಮಾನಂಗೊಂಡು ಅರೆದು ತುಪ್ಪದಿಂದ ಕಲಸಿ ಕುಡಿಯೆ ರಕ್ತಶೂಲೆ ಕೆಟ್ಟು ಗರ್ಭಮಕ್ಕುಂ (ಏವೈಶಿ. ೦೦೭). [ಸಂ. ರಕ್ತಶೂಲಾ]

**ರಕ್ತಶೋಷಣ** (ನಾ). ರಕ್ತವು ಹೋಗುವುದು : ರಕ್ತಶೋಷಣದಿಂದಾದ ಮೂತ್ರಕೃಚ್ಛ್ರದಲ್ಲಿ ರಕ್ತವೇ ಬೀಳುವುದು (ಸಕವೈ. ೩೭೦). [ಸಂ.]

**ರಕ್ತಸಂಬಂಧ** (ನಾ). ಅಣ್ಣತಮ್ಮಂದಿರು, ದಾಯಾದಿಗಳು ಮೊದಲಾದವರಲ್ಲಿರುವ ಬಾಂಧವ್ಯ ; ಜ್ಞಾತಿಸಂಬಂಧ : ಪ್ರತ್ಯಕ್ಷ ರಕ್ತಸಂಬಂಧವುಳ್ಳವರನ್ನು ನಂಟರ ಪಟ್ಟಿಯಿಂದ ತೆಗೆದುಹಾಕಬೇಕು (ನಂಟರು. ೫) ; ರಕ್ತಸಂಬಂಧ. ಎಷ್ಟು ಆದರೂ ಜೀವ ಹೆಂಗ ನಿಲ್ಲಬೇಕು ನೋಡಿರಿ ! (ಗಂಪಾಯು. ೦೦೩). [ಸಂ.]

**ರಕ್ತಸಂಬಂಧಿ** (ನಾ). ರಕ್ತ ಸಂಬಂಧವುಳ್ಳ ವ್ಯಕ್ತಿ ; ಜ್ಞಾತಿ : ನಾನೇನು ರಕ್ತಸಂಬಂಧಿಯೆ ? . . . ಎಲ್ಲಿಂದಲೊ ಬಂದವಳು (ವಾತ್ಸಲ್ಯ. ೧೫೨). [ಸಂ. ರಕ್ತಸಂಬಂಧಿನ್]

**ರಕ್ತಸಿಂಹಾಣ** (ನಾ). ಸಿಂಬುಳದೊಂದಿಗೆ ರಕ್ತ ಬೀಳುವ ಒಂದು ಬಗೆಯ ರೋಗ : ಕುರು ಮೂಡಿದಂತೆ ಗಂಟುಗಳಿರೆ ನಾಸಿಕದೊಳಗೆ ರಕ್ತಸಿಂಹಾಣ[ಮು]ಂ ನೀರ್ಪರಿಯಲ್ಪಡೆಯುದೆ ಕೀತೊಡೆ ತುರಗಕ್ಕದು ಮರಣಚಿಹ್ನಂ (ಅಶ್ವಶಾ. ೦೦-೫೫). [ಸಂ.]

**ರಕ್ತಸಿರೆ** (ನಾ). ಕಣ್ಣಿನಲ್ಲಿ ರಕ್ತನಾಳಗಳು ಕೆಂಪಾಗುವ ಒಂದು ಬಗೆಯ ರೋಗ : ರಕ್ತಸಿರೆ ಹರಡಿದರೆ ಎಸಗದ ಸೊಪ್ಪಿನ ರಸದಿಂ ಜೀರಿಗೆ, ಸಾರಂಗದ ಕೊಂಬು ಅರೆದು ಪಾವಡೆಯೊಳಗಿಕ್ಕಿ ಕಣ್ಣಿಗೆ ಹಿಂಡಲು ಸಿರೆ ಹರ (ಏವೈಶಿ. ೦೯೭). [ ರಕ್ತ + ಸಿರೆ$_1$ (< ಸೆರೆ$_4$) ]

**ರಕ್ತಸೇಕ** (ನಾ). ರಕ್ತವು ಸುರಿಯುವುದು ; ರಕ್ತದ ಸೇಚನ : ತೋರಣಕನನ್ನುಕುರಂ ದೊರೆಯಾಗಿ ತೋಱಿದತ್ಯಾತನೊಳಾಂತು ಪುಣ್ಪಡೆದ ಖೇಚರಸೇನೆಯು ರಕ್ತಸೇಕದಿಂ (ಚಂದ್ರಪು. ೬-೩೭). [ಸಂ.]

**ರಕ್ತಸ್ರಾವ** (ನಾ). ರಕ್ತ ಸುರಿಯುವಿಕೆ ; ನೆತ್ತರು ಸೋರುವುದು : ರಕ್ತಸ್ರಾವವಾಗುವುದನ್ನು ಮತ್ತು ಕರುಳು ತೂತುಬೀಳುವುದನ್ನು ತಪ್ಪಿಸಬೇಕು (ಕಂಠಮಾ. ೬೦) ; ದೇಹವು ಗಾಯಗೊಂಡು ರಕ್ತಸ್ರಾವವಾದಾಗ ಆ ರಕ್ತವು ಹೆಪ್ಪುಗಟ್ಟುವುದಕ್ಕೆ ಕ್ಯಾಲ್ಸಿಯಂ ಅತ್ಯಾವಶ್ಯಕ (ನ್ಯಹಪ. ೨೯). [ಸಂ.]

**ರಕ್ತಾಂಗ** (ನಾ). ೧. ತಿಗುಣೆ. ೨. ಒಂದು ಬಗೆಯ ಸಸ್ಯ ; ಕಾಂಪಿಲ್ಲ. ೩. ಹವಳ. ೪. ಕುಂಕುಮಕೇಸರಿ. ೫. [ಜ್ಯೋತಿ]ಮಂಗಳಗ್ರಹ. [ಸಂ.]

**ರಕ್ತಾಂಗಿ** (ನಾ). ಒಂದು ಬಗೆಯ ಸಸ್ಯ : ಮಂಜಿಷ್ಠೆ : "ಪರ್ತಿ ರಕ್ತಾಂಗಿ ಮಂಜಿಟೆಯು ಮಂಜಿಷ್ಠೆ" (ಮಂಗರಾ. ೪೨-೩೮). [ಸಂ. ರಕ್ತಾಂಗೀ]

**ರಕ್ತಾಂಬರ** (ನಾ). ೧. ಕೆಂಪುಬಣ್ಣದ ಬಟ್ಟೆ : ಅವನಿ ರಕ್ತಾಂಬರವನುಟ್ಟಂತೆಸೆದುದೊಗುನೆತ್ತರಿನ ಪೂರದಲಿ (ತೊರರಾ. ೬-೪೦-೨೬). ೨. ರಕ್ತದಲ್ಲಿ ನೆನಸಿದ ಬಟ್ಟೆ : ಘಾಯವನು ಪಡೆದು ಹಾಯ್ದು ಕರುಳಿನ ಮಿದುಳ ಜೋರಿನ ತೊಯ್ದು ರಕ್ತಾಂಬರದಿ ತಾನಿರಲ್ಕದಿ ಕುರುಪತಿ ಕಂಡನಾದರೆ ಧನ್ಯ ತಾನು (ಕುವ್ಯಾಶ. ೮-೪೦). [ಸಂ.]

**ರಕ್ತಾಂಬು** (ನಾ). ಕಣ್ಣೀರು ; ನೆತ್ತರು : ಪುಷ್ಪಚಾಪಾಸ್ತ್ರಟಂಕಾರರವೋದ್ಭಿನ್ನಪ್ರಪಾಂಥಪ್ರಕರಹೃದಯರಕ್ತಾಂಬುಗಳ್ ಕೂಡೆ ಮಾರ್ಗಾಂತರದೊಳ್ ಸೂಸುತ್ತಿರಲ್ ಬಂದುದು . . . ವಸಂತಂ (ಕಾದಂಪೂ. ೭೨೦) ; ಸುರಿವ ರಕ್ತಾಂಬುಗಳಲಂಬಿನಬುರವಣಿವ ಬಿಜಂಗಾಳಿ ಸೂಸಿತು ಸುರರ ಮೈಗಳಲಿ (ತೊರರಾ. ೬-೪೦-೨೬). [ಸಂ.]

**ರಕ್ತಾಕ್ಷ** (ಗು). ೧. ಕೆಂಪುಕಣ್ಣುಳ್ಳ. ೨. ಭೀಕರವಾದ. (ನಾ). ೩. ಕೋಣ : "ಮಹಿಷಂ. . . ರಕ್ತಾಕ್ಷನ[ಪಾಠಾಂ. ಕ್ಷಿಯು]ಶ್ವಾರಿ ಕೋಣನಕ್ಕು" (ಮಂಗರಾ. ೪೮-೦೦). ೪. ಪಾರಿವಾಳ. ೫. ಸಾರಸಪಕ್ಷಿ. ೬. ಚಕೋರಪಕ್ಷಿ. [ಸಂ.]

**ರಕ್ತಾಕ್ಷಿ** (ನಾ). ೧. ಕೆಂಪುಬಣ್ಣದ ಕಣ್ಣುಳ್ಳುದು : ಕೋಣ : "ಮಹಿಷಂ . . . ರಕ್ತಾಕ್ಷಿಯು [ಪಾಠಾಂ. ಕ್ಷನ]ಶ್ವಾರಿ ಕೋಣನಕ್ಕು" (ಮಂಗರಾ. ೪೮-೦೦); ಶಾರ್ದೂಲ ರಕ್ತಾಕ್ಷಿ ಮಾಂಗರಿ ಮುಂತಾದ ಮೃಗಂಗಳಬ್ಬರವದಂ ಕಂಡಾಗ ಘೋಷರ್ಗೆ ಭೀಕರವಂ ಮಾಡುತ . . . ಕಣ್ಗೊಪ್ಪುಗುಂ (ವನ್ನಶಾ. ೨-೮೪). ೨. ಅರುವತ್ತು ಸಂವತ್ಸರಗಳಲ್ಲಿ ಐವತ್ತೆಂಟನೆಯದು : ಪ್ರಭವ. . . ರಕ್ತಾಕ್ಷಿ. . . ಅಕ್ಷಯನೆಂದಱುವತ್ತು ತೆಱನಾಗಿಹುದು (೭ಪೇಶ. ೩೨೦). [ ಸಂ. ರಕ್ತಾಕ್ಷೀ ]

**ರಕ್ತಾಣು** (ನಾ). ರಕ್ತದಲ್ಲಿರುವ ಸೂಕ್ಷ್ಮಾಂಶ.—ಅಣು ; ರಕ್ತಕಣ : ಒಂದು ಘನ ಇಂಚಿಗೆ ಸಾಧಾರಣ ೧೫೦ ಮಿಲಿಯದಷ್ಟು ರಕ್ತಾಣು (Red Corpuscles) ಗಳಿವೆ (ಜಾಂಕ್ರ. I. ೩೦೯). [ಸಂ.]

**ರಕ್ತಾತಿಸಾರ** (ನಾ). = ರಕ್ತಭೇದಿ : ಮಡುವಾಗಲದ ಗೆಡ್ಡೆಯಂ. . . ಪಾಲುಂಬವಲ್ಲೂ ಅಲ್ಲ ಹಾಲಲ್ಲೂ ಕುಡಿಯೆ ರಕ್ತಾತಿಸಾರ ತೀರ್ಗುಂ (ಏವೈಶಿ. ೯೫). [ಸಂ.]

**ರಕ್ತಾಭಿಸರಣ** (ನಾ). = ರಕ್ತಚಲನೆ : ನಿರ್ಗಂಧವಾಯುವುಳ್ಳ ಆಹಾರವು ಕಡಿಮೆಯಾದರೆ. ರಕ್ತಾಭಿಸರಣ, ಶ್ವಾಸೋಚ್ಛ್ವಾಸ, ಅನ್ನಪಚನ. . . ಉಂಟಾಗುತ್ತದೆ (ಮುಖಬಬು. ೫-೧೭೨). [ಸಂ.]

**ರಕ್ತಾರ್ಜುನ** (ನಾ). ಕೆಂಪು ಮತ್ತಿಯ ಮರ : " ನದೀಸರ್ಜಃ. . . ಅರ್ಜುನಃ—ಇ ತೋರಮತ್ತಿಗಿಡ. ಕೆಂಪುಮತ್ತೀಗಿಡ. ರಕ್ತಾರ್ಜುನವೃಕ್ಷ " (ಸಿದ್ಧಾಂಶಿ. ೦೨೨). [ಸಂ.]

**ರಕ್ತಾರ್ಶ** (ನಾ). ಒಂದು ಬಗೆಯ ಮೂಲವ್ಯಾಧಿ : ನೆಲದಾಳಗೆಡ್ಡೆ, ಒಂದೆಲೆಹೊನ್ನೆ — ಇವಂ ಸಮಾಂಶವಾಗಿ ಅರೆದು . . . ತುಪ್ಪದಲ್ಲಿ ಕಲಸಿ ಕೊಡಲು ರಕ್ತಪಿತ್ತ, ರಕ್ತಾತಿಸಾರ, ಯೋನಿದೋಷ, ಬಿಳಿಸೀರೆ, ರಕ್ತಾರ್ಶ— ಇವೆಲ್ಲ ಪರಿಹಾರಮಕ್ಕುಂ (ಸಕವೈ. ೦೮೯). [ ಸಂ. ರಕ್ತಾರ್ಶಸ್ ]

**ರಕ್ತಾಶೋಕ** (ನಾ). ಕೆಂಪುಬಣ್ಣದ ಅಶೋಕವೃಕ್ಷ : ಭವ್ಯಹೃತ್ಕಮಳಕ್ಕಂ ಮುದಮಂ ಜಪಾಪ್ರಸವರಕ್ತಾಶೋಕಬಂಧೂಕಶೋಣಮಣಿಜ್ಯೋತಿಗಳ ಕ್ಕೆಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ (ಆದಿಪು. ೦೭ ೩). [ಸಂ.]

**ರಕ್ತಿ** (ನಾ). ಒಲವು : ಆಸಕ್ತಿ ; ಪ್ರೀತಿ : ಓರಿದುಂ ರಕ್ತ ವಿರಕ್ತಗಳುಂ ಬಂಧುರಭೋಗಂ ಯೋಗಮುಮಿಹಪರಮುದ್ಭುರಸಂಸಾರಂ ನಿಸ್ಸಂಸಾರಂ ಜೂದುಂ ಪೂಜೆಯುದು (ಉದ್ಭದೇ. ೩-೩೮) ; ಕೇಳಲ್ಕೆಂದೈತರೆ ವಿಟಮೃಗಂ ಬಾಜಿಸುತ್ತಿರ್ದ ಗೋರ್ವಾಳ್ತೀಳಾವಳ್ಯಾದ್ಯಳಿಪಿಲಸದ್ವಾಗಮಂ ರಕ್ತಿಯಿಂದಂ

(ರಾಜಶೇ. ೦೦-೯೭) ; ತಂತ್ರೀವಾದ್ಯದ ರಕ್ತಿ ಪಣ್ಯಾದಿಳಿಯೊಳ್ (ಶಕಿಂ. ೪-೦೦೨). [ಸಂ.]

**ರಕ್ತಿಮೆ** (ನಾ). ಕೆಂಪುಬಣ್ಣ ; ಅರುಣರಾಗ : ಸೌಂದರಿಯುಧರದ ರಕ್ತಿಮೆಯನು ಕಂಡು ಚಂದವಿಲ್ಲೆನ್ನ ಮೈಬಣ್ಣ (ಹ್ಯಾಪತ. ೨-೦೪). [ಸಂ. ರಕ್ತಿಮನ್]

**ರಕ್ತೆ** (ನಾ). ೧. ಅರಗು. ೨. ಗುಲಗಂಜಿ. ೩. ಪ್ರೀತಿಯುಳ್ಳವಳು ; ಅನುರಕ್ತೆ : ರಕ್ತೆಯುಸುರಕ್ತೆಯುತಿರಕ್ತೆಯೆಂದಿಂತು ಮೂಜಾತಿಜದಿಂ ಟೇಟವಂಕಕ್ಕುಂ (ಮದನ. ೦೦-೨೬). [ಸಂ. ರಕ್ತಾ]

**ರಕ್ತೋತ್ಪಲ, ರಕ್ತೋತ್ಪಳ** (ನಾ). ಕೆಂದಾವರೆ : ಕೆಂಪುಬಣ್ಣದ ಕಮಲ : ಎಳೆಯ ರವಿರಶ್ಮಿಗಳು ರಕ್ತೋತ್ಪಲದೊಳಗೆ ಹೊಳೆವಂತೆ ಹೊನ್ನರೆ ಬೀಣಪುಳುಕನೆ ಕಾಣಲಾದುದು ಘಟನ ಕಾಯದೊಳ್ (ಶಂಪ್ಯಾರ್ರ್ರೋ. ೬-೨೦). ರಕ್ತೋತ್ಪಳ : "ಚೆಂಗಲವೆಯುಮುದಸರ್ ಸಲೆ ರಕ್ತೋತ್ಪಳ ಮಾಕ್ಕುಂ" (ಶಬ್ದಮ. ೯೩). [ಸಂ.]

**ರಕ್ತೋತ್ಪಳ** 'ರಕ್ತೋತ್ಪಲ' ನೋ.

**ರಕ್ಷ** (ನಾ). ೧. ಕಾಪಾಡುವಿಕೆ. ೨. ಕಾಪಾಡುವವನು ; ರಕ್ಷಕ : ರಕ್ಷರಾನ್ನೀಕನಿಯೊಳನೆ ಅಧ್ಯಕ್ಷ (ಜಗನ್ನಾಥ. ೯೩-೦೨). [ಸಂ.]

**ರಕ್ಷಕ** (ಗು). ೧. ಪೋಷಿಸುವ ; ಪಾಲಿಸುವ : ಹಣ್ಣು, ತರಕಾರಿ ಮತ್ತು ಹಾಲು ಸಹ ರಕ್ಷಕಆಹಾರಗಳೆಂದು ಕರೆಯಲ್ಪಡುವುವು (ಗೃಹವಿ. ೮). (ನಾ). ೨. ಕಾಪಾಡುವವನು ; ರಕ್ಷಿಸುವವನು : ಇನಜಂ ಮೇಪದೊಳೊಂದಿದಂದು ..... ನಿರ್ಲಜ್ಜಕಂ ರಕ್ಷಕಂ (ಶಾಕಿ. ೧೭-೩೨); ಜನಕಂ ರಕ್ಷಕನಂತೆ ನಿನಾದಿಮಧ್ಯಾಂತ ನಿನಗದಾವನುಂಗಂ ಜನಕಂ ರಕ್ಷಕನಂತಕ ನೆನೆಸಿದೆ ಪೊಗಟ್ಟುರಳವೆ ನಿನ್ನ ಮಹತ್ವಂ (ಹಗಂ. ೩-೯೭). [ಸಂ.]

**ರಕ್ಷಣ** (ನಾ). ೧. ಕಾಪಾಡುವುದು : 'ರಕ್ಷಣು' ಪರಾ. ೨. [ನಾಟ್ಯ] ಒಂದು ಬಗೆಯ ಕರವಿನ್ಯಾಸ : ಧೂನನ . . . ರಕ್ಷಣ . . . ಈ ಇಪ್ಪತ್ತು ಕರಕರ್ಮಭೇದಂಗಳ್ (ಶಾಸ್ತ್ರಕರಂ. ೪-೦೦). [ಸಂ.]

**ರಕ್ಷಣಾಖಾತೆ** (ನಾ). (ದೇಶವನ್ನೂ ಜನರನ್ನೂ) ರಕ್ಷಿಸುವ ಸೈನ್ಯ, ಪೋಲೀಸು ಮೊದಲಾದ ಇಲಾಖೆ : ಬೋಳನು ರಕ್ಷಣಾಖಾತೆಯವರಲ್ಲಿಗೆ (ಪೋಲೀಸ್) ಮೊರೆಯೋಲೆ ಕೊಟ್ಟು . . . ಮೊರೆಯಿಟ್ಟನು (ಶಾಲಾಪ. ೦೦ ಕಾಣಿಸಿಕ). [(ಸಂ. ರಕ್ಷಣಾ) + ಖಾತೆ]

**ರಕ್ಷಣಾದಳ** (ನಾ). ಕಾವಲುಪಡೆ : ಆತನು ರಕ್ಷಣಾದಳವನ್ನು ಸೇರಿ . . . ಹಣ ಪೋಲುಮಾಡಿದ ಪರಿಣಾಮವಾಗಿ ತಾನು ಮೂಲನಿಧಿಗೂ ಕೈಹಾಕಬೇಕಾಗಿ ಬಂದಾಗ ತಾಯಿಗೆ ಸ್ವಲ್ಪವೂ ವ್ಯಥೆಯಾಗಲಿಲ್ಲ (ಶ್ರೀವಾರು. ೬೦). [ಸಂ. ರಕ್ಷಣಾದಲ]

**ರಕ್ಷಣಾವ್ಯವಸ್ಥೆ** (ನಾ). ರಕ್ಷಣೆಗಾಗಿ ಮಾಡುವ ಏರ್ಪಾಡು, ವ್ಯವಸ್ಥೆ : ಆ ಕಾಲದಲ್ಲಿ ಈಗಿನಂತೆ ದೇಶದ ನಾನಾಭಾಗಗಳಲ್ಲಿ ಆಳಿತವರ್ಗದಿಂದ ನೇಮಿತವಾದ ರಕ್ಷಣಾವ್ಯವಸ್ಥೆಯಿರಲಿಲ್ಲ (ಕರಾಕಾ. ೨೯೭). [ಸಂ. ರಕ್ಷಣಾವ್ಯವಸ್ಥಾ]

**ರಕ್ಷಣೀಯ** (ಗು). ೧. ಕಾಪಾಡಬೇಕಾದ ; ರಕ್ಷಿಸಬೇಕಾದ : ಸೀತೆಯ ರಕ್ಷಣೀಯ ರೂಪ, ತ್ಯಾಗ, ಪಾತಿವ್ರತ್ಯಗಳು ಭಾರತೀಯ ಸಾಮಾಜಿಕ ಹಾಗೂ ಕೌಟುಂಬಿಕ ಜೀವನದ ಅನೇಕಸಮಸ್ಯೆಗಳನ್ನು ಬಿಡಿಸಲು ಕಾರಣವಾಗಿವೆ (ಕರ್ಣಾಕ. ೮). (ನಾ). ೨. ಕಾಪಾಡಲು ಅರ್ಹನಾದ ವ್ಯಕ್ತಿ : ಕೊಲಲುಪೊಮೊ ವಧ್ಯನೆ ನಿನ್ನಂ ಸಲುಪುವುದೋ ರಕ್ಷಣೀಯನಾದಾ ದ್ವಿಜನಂ (ಶಾಕುಂತ. ೯೬-೦೩೯). [ಸಂ.]

**ರಕ್ಷಣೆ** (ನಾ). ೧. ಕಾಪಾಡುವಿಕೆ ; ಸಂರಕ್ಷಿಸುವಿಕೆ : ದೇಶದ ವ್ಯವಸಾಯಕ್ಕೆ ಅನೇಕ ಬಗೆಯ ರಕ್ಷಣೆಯನ್ನೂ ಪ್ರೋತ್ಸಾಹವನ್ನೂ ಕೊಡುತ್ತಾರೆ (ಹಣಶ್ರ. ೦೩೨) : ಒಂದೊಂದು ಗ್ರಾಮದಲ್ಲೂ ಅದರ ರಕ್ಷಣೆಗಾಗಿ ಆ ಊರಿನ ಒಂದು ವೀರರ ತಂಡವೇ ಸಿದ್ಧವಾಗಿರುತಿತ್ತು (ಕಲಾಕ. ೨೯೭). ೨. ಕಾವಲು : ಕಾಯುವಿಕೆ. [ಸಂ. ರಕ್ಷಣಾ]

**ರಕ್ಷಣೋಪಾಯ** (ನಾ). ಕಾಪಾಡುವ ಮಾರ್ಗ : "ರಕ್ಷಣೋಪಾಯ. ಸಂರಕ್ಷಣೆ" (Safe-Guard. ಛಕ್ರಿ. ೬೨). [ಸಂ.]

**ರಕ್ಷಸ್ಸು** (ನಾ). ೧. ಕಾಪಾಡುವಂಥವನು ; ರಿಜರ್ವ್‌ಬ್ಯಾಂಕು ಹಣದ ಪೇಟಿಯ ರಕ್ಷಸ್ಸು, ಅಲ್ಲಿಯ ಪರಮಾಧಿಕಾರಿ (ಹಣಶ್ರ. ೩೦೨). ೨. ರಾಕ್ಷಸ : ಮದನವಿಲಾಸದಿಂ ಸಂಚರಿಸುತಿರ್ಪ ವಿದ್ಯಾಧರ . . . ರಕ್ಷಸ್ಸು . . . ದೇವಯೋನಿವಿಶೇಷಂಗಳು (ಶವೇಕ. ೨೦೩). [ಸಂ. ರಕ್ಷಸ್]

**ರಕ್ಷಾಂಕಿತ** (ಗು). ವಿಭೂತಿಯನ್ನು ಲೇಪಿಸಿಕೊಂಡ; ಭಸ್ಮಲೇಪಿತವಾದ : ರಕ್ಷಾಂಕಿತತನು ಮೆಲ್ಲನೆ ವೃಕ್ಷಂಗಳ ಕೆಳಗೆ ಪೋಗಿ ನಿಂದಿರ್ದಾಗಳ್ ಭಿಕ್ಷಾಂ ದೇಹಿಯೆನಲ್ಕೆ (ಗಾಮಂಪು. ೬೪೪). [ಸಂ.]

**ರಕ್ಷಾಂಜನ** (ನಾ). ರಕ್ಷೆಗಾಗಿ ಇಡುವ ಕಾಡಿಗೆ ಬೊಟ್ಟು : ತತ್ಕಾಮಿನೀಪುಣ್ಯದೇವತೆ ಕಣ್ಣೀಜಲ ದೋಷಮಂ ಪುರಿ ಪರಿ ಪಲಿಂದಂದಿಟ್ಟ ರಕ್ಷಾಂಜನಾಕೃತಿಯಿಂ ಪೀನಪಯೋಧರಾನನಮಪೇಂ ಕರ್ಪಂಗಿಡರ್ಪಾದುವೋ (ಮಲ್ಲಿಕ. ೪-೯೬). [ಸಂ.]

**ರಕ್ಷಾಕವಚ** (ನಾ). ೧. (ಯುದ್ಧದಲ್ಲಿ) ದೇಹದ ರಕ್ಷಣೆಗಾಗಿ ತೊಟ್ಟುಕೊಳ್ಳುವ ಉಕ್ಕಿನ ಅಂಗಿ : ರಕ್ಷಾಕವಚವನ್ನು ಅಳವಡಿಸು (Armour, ಇಂಕಿಶ). ೨. ಪುಸ್ತಕಗಳ ಮೇಲೆ ಹಾಕುವ ಕಾಗದದ ಅಥವಾ ಬಟ್ಟೆಯ ಹೊದಿಕೆ ; ರಟ್ಟು : ಕವಿತಾಸ್ರೋತದ ತಿ ಮನೋಹರ ಅಲೆಗಳ ಸಮ್ಮಿಲನವೇ ಆ ಕವನಸಂಕಲನ . . . ಎಂದುಕೊಂಡು ಸಂತಸದಿಂದ ರಕ್ಷಾಕವಚವನ್ನು ತೆಗೆದ (೭೮೦. ೨೬); ಜಿರಲೆಗಳು . . . ಪುಸ್ತಕಗಳ ತೊಗಲಿನ ರಕ್ಷಾಕವಚವನ್ನು ಕೂಡ ತಿನನುತ್ತದೆ (ಅವುಜಾ. ೯೯). [ಸಂ.]

**ರಕ್ಷಾಪತ್ರ** (ನಾ). = ರಕ್ಷಾಕವಚ ೨ : ಪುಸ್ತಕದ ರಕ್ಷಾಪತ್ರದ ಮೇಲೆ ಸುಂದರವಾದ ಚಿತ್ರವಿದೆ (ಕೂ೩). [ಸಂ.]

**ರಕ್ಷಾಬಂಧ** (ನಾ). ಯಜ್ಞಕಾರ್ಯ, ಮದುವೆ, ಉಪನಯನ ಮುಂತಾದ ಸಂದರ್ಭಗಳಲ್ಲಿ ದುಷ್ಟಶಕ್ತಿನಿವಾರಣೆಗಾಗಿ ಕರ್ತನು ರಕ್ಷಣೆಗಾಗಿ ಕೈಗೆ ಕಟ್ಟಿಕೊಳ್ಳುವ ಬಂಧ ; ಕಾಪು. [ಸಂ.]

**ರಕ್ಷಾಬಂಧನ** (ನಾ). ೧. ದುಷ್ಟಶಕ್ತಿಗಳ ಬಾಧೆ ತಟ್ಟದಂತಿರಲು ಧರಿಸುವ (ತಾಯಿತ ಮುಂತಾದ) ಸಂರಕ್ಷಣೆಯ ಸಾಧನ : ಯುದ್ಧೋತ್ಸಾಹದಿಂದ ಹೊರಡುವ ಇಂದ್ರನಿಗೆ ಶಚೀದೇವಿ ರಕ್ಷಾಬಂಧನ ಎಂದು ಮುಂಗೈಕಟ್ಟನ್ನು ಕಟ್ಟುತ್ತಿದ್ದಳಂತೆ (ಶಾತಬ್ಬ. ೦೦೭). ೨. ಶ್ರಾವಣಪೂರ್ಣಿಮೆಯಂದು ಒಡಹುಟ್ಟಿದವಳು ತನ್ನ ಒಡಹುಟ್ಟಿದವನ ಬಲಗೈಗೆ ಕಟ್ಟುವ ರಕ್ಷೆಯ ದಾರ ಮತ್ತು ಅಂದು ಆಚರಿಸುವ ಹಬ್ಬ ; ರಾಖಿ : ಶ್ರಾವಣಹುಣ್ಣಿಮೆಯ ದಿನ ನಡೆಯುವ ರಕ್ಷಾಬಂಧನ ಪದ್ಧತಿ ಸಂರಕ್ಷಣೆಯ ಬದಲು ಆತ್ಮಸಂರಕ್ಷಣೆಯ ಸಾಧನವಾಗಿದೆ (ಶಾತಬ್ಬ. ೦೦೭); ಈ ಹಬ್ಬದಲ್ಲಿ ತಂಗಿಯು ಅಣ್ಣನಿಗೆ ರಕ್ಷಾಬಂಧನಗೈಯುವಳು (ಕೃಷತ. ೩೭೦). [ಸಂ.]

**ರಕ್ಷಾಮಣಿ** (ನಾ). ೧. ದುಷ್ಟಶಕ್ತಿಗಳ ಬಾಧೆ ತಟ್ಟದಂತಿರಲು ಧರಿಸುವ ಸಂರಕ್ಷಣೆಯ ಸಾಧನ, – ಮಣಿ : ರಕ್ಷಾಮಣಿ ಮೊದಲಾದುವನ್ನು ಮಕ್ಕಳಿಗೋ ಬಂಧುಬಾಂಧವರಿಗೋ ಕೊಡುವ ಇಡುವ ಪದ್ಧತಿ ಎಂದಿನಿಂದಲೂ ಇದೆ (ಶಾತಬ್ಬ. ೦೦೭). ೨. ಕಾಪಾಡುವ ವ್ಯಕ್ತಿ ; ರಕ್ಷಿಸುವ ವ್ಯಕ್ತಿ : ಶ್ರೀಜೈನಧರ್ಮೋನ್ನತಿಯ ಮಹಿಮೆಯಿಂ ಭಕ್ತಿಯಿಂ ಕಾವ ರಕ್ಷಾಮಣಿಯುಂ . . . ಶ್ರೀದಾನಚಿಂತಾಮಣಿಯೆ (ಅಜಪು. ೦೨-೦೪). [ಸಂ.]

**ರಕ್ಷಾಮರಿ** (ನಾ). ಕಾಪಾಡುವ ದೇವತೆ ; ಅಂಗರಕ್ಷಕಿಯಾದ ದೇವತೆ : ಎಳೆಮಿಂಚುಂ ಸಿಡಿಲುಂ ಬಂದೆಳಸಿದ ಘನಮಾಳೆ ರಂಜಿಪಂತಿರೆ ತೇಜನಂ

ಲಲಿತೆಯ ರಕ್ಷಾಮರಿಯರೀ ತಳಿದರ್ ಭೂಷಣದ ಬಾಳ ಪೊಳೆಪುಗಳಿಂದಂ (ಪುಷ್ಪ.ಕ. ೯-೬೯). [ಸಂ. ರಕ್ಷಾಮರೀ]

**ರಕ್ಷಾಯಂತ್ರ** (ನಾ). = ರಕ್ಷಾಬಂಧನ ೧ : ರಕ್ಷಾಯಂತ್ರವು ಈತನ ಮುಂಗೈಯಲ್ಲಿ ಕಾಣುವುದಿಲ್ಲ ! (ಕಾಕುಂತ. ೧೦೬-೨೦). [ಸಂ.]

**ರಕ್ಷಾವಿಧಿ** (ನಾ). ರಕ್ಷಣೆಯುಂಟಾಗಲೆಂದು ಮಾಡುವ ಧಾರ್ಮಿಕ ಸಂಸ್ಕಾರ, – ವಿಧಿ : ವಿವಿಧ ರಕ್ಷಾವಿಧಿಯಂ ವತ್ಸಂಗೆ ನೆಗಟ್ದು . . . ನಂದನಿರ್ದಂ ಸುಖದಿಂ (ಜಗ. ೬-೨೬). [ಸಂ.]

**ರಕ್ಷಿತ** (ಗು). ೧. ಕಾಪಾಡಿದ; ಪಾಲಿಸಿದ. (ನಾ). ೨. ಕಾಪಾಡಿದುದು: "ರಕ್ಷಿತಮವಿತಂ" (ಚನ್ನ.ಕೊ. ೦೦೩-೯೩). [ಸಂ.]

**ರಕ್ಷಿವರ್ಗ** (ನಾ). ೧. ಮೈಗಾವಲಿನ ಪಡೆ ; ಅಂಗರಕ್ಷಕರ ಸೈನ್ಯ. ೨. ಸೇನೆಯ ಮುಖಂಡ ; ಸೇನಾಪತಿ : "ರಕ್ಷಿವರ್ಗಃ . . . ವಾಹಿನೀಪತಿಃ— ಈ ೪ ದಂಡನಾಯಕಂ" (ಹಲಾಯು. ೬೦-೨೭೯). [ಸಂ.]

**ರಕ್ಷಿಸು** (ಕ್ರಿ). ಕಾಪಾಡು ; ಕಾಯು ; ಪಾಲಿಸು : "ರಕ್ಷಿಸು — ಪಾಲನೇ" (ಕವಿಮ) ; ಮಹಾಯಕ್ಷನಾದರದಿಂ ರಕ್ಷಿಸುತಿರ್ಕುಪಾಸಕಗಣ ಶ್ರೀಸೇವ್ಯರಂ ಭವ್ಯರಂ (ಅಜಿ.ಪು. ೦-೦೩) ; ಅಭಿಮಾನದ ಪೆರ್ಚಂ ರಕ್ಷಿಸಲುಂ ಕಾರ್ಯಮಂ ಸಾಧಿಸಲುಂ . . . ಸತ್ಪುರುಷರ್ ಅರಸನನಾಶ್ರಯಿಸಿರ್ಪರ್ (ಪಂಚತಂ. ೦೬೩-೦೬) : ಶರೀರವನ್ನು ರೋಗರುಜಿನಗಳಿಂದ ರಕ್ಷಿಸುವುದು— ಇದು ಮುಖ್ಯವಾಗಿ ಜೀವಾತುಗಳ ಕೆಲಸ (ಅರುಣ. ೩೬).

[ ರಕ್ಷಣ + – ಇಸು$_3$ ]

**ರಕ್ಷಿಸುವಣ** (ನಾ). ಕಾಪಾಡುವುದು ; ರಕ್ಷಿಸುವಿಕೆ : ಸ್ವಾಮಿರಕ್ಷಾ— ಅಳ್ದನೆ ರಕ್ಷಿಸುವ [ಪಾಠಾಂ. ಹ]ಣಮುಂ (ಶೀಶಿವಾ. ೦೬-೬).

[ ರಕ್ಷಿಸು + – ಅಣ ]

**ರಕ್ಷೆ** (ನಾ). ೧. ಕಾಪು ; ರಕ್ಷಣೆ : ಜಗತ್ತ್ರಯರಕ್ಷಾಪ್ರಿಯನಪ್ಪ ಕೃಷ್ಣನ ಚರಿತ್ರಂ ಭೀತಿಯಂ ಮಾಡ್ಕುಮೇ (ಜಗ. ೬-೪೩) ; ನೀಂ ಪೂಜೆಗೈದಿರ್ದ ದೇವಾನುದೇವತೆಗಳೆಲ್ಲರೂ ನಿನಗಕ್ಕೆ ರಕ್ಷೆ ! (ಶ್ರೀರಾಮಾಯ. ೬೩-೦೯೯). ೨. (ಗ್ರಹಾದಿಗಳ ಭೀತಿಯನ್ನು ತಡೆಗಟ್ಟಲು ಕಟ್ಟುವ) ತಾಯಿತ, ಯಂತ್ರ ಮೊದಲಾದುವು: ಧರಣಿಪತಿ ತೆಗೆದೀಕಯನು ಕುಳ್ಳಿರಿಸಿ ತನ್ನಯ ತೊಡೆಯ ಮೇಲಾದರಿಸಿ ಮಂತ್ರಿಸಿ ನೀರ ತಳಿದನು ರಕ್ಷೆಗಳ ರಚಿಸಿ (ಕುವ್ಯಾ. ೯-೨೮) ; ಶಾಂತಿಯ ಬದುಕಿಗೆ ಕಟ್ಟಿದ ರಕ್ಷೆ (ಕವಿಕೋ. ೦೩-೦೩). ೩. (ಹವನ ಹೋಮಾದಿಗಳಲ್ಲಿ ಪವಿತ್ರವೆಂದು ಹಣೆಯಲ್ಲಿ ಧರಿಸುವ ಹವಿಸ್ಸಿನ) ಭಸ್ಮ: "ಭೂತಿಃ . . . ರಕ್ಷಾ — ಈ ೫ ಬೂದಿ" (ಹಲಾಯು. ೦೪-೬೯). ೪. ಬಳೆಯ ಚೂರು ಇತ್ಯಾದಿಗಳಿಂದ ಹಾಕುವ ಬರೆ ; ಚಿಟಿಕೆ : ಈ ಸನ್ನಿಪಾತಕ್ಕೆ ಸಂದುಸಂದಿಗೆ ವಾತಹರವಾದ ತೈಲಂಗಳನಿಕ್ಕಿಸಿ ಅಲ್ಲಲ್ಲಿಗೆ ನರಭೇದಗಳನರಿದು ರಕ್ಷೆಯ ಹಾಕಿಸಿ (ಕಲ್ಯಾಣ. ೦೫೦). [ ಸಂ. ರಕ್ಷಾ ]

**ರಕ್ಷೆಗಟ್ಟು** (ಕ್ರಿ). ಯಂತ್ರ, ತಾಯಿತ ಮೊದಲಾದುವನ್ನು ಕಟ್ಟು : ಪದಪಿಂ ಪ್ರಭುಸುತನುಗೆ ತಾನೆ ರಕ್ಷೆ[ಪಾಠಾಂ. ಕೈ]ಗಟ್ಟುವ ತೆಜದಿಂದೆ ಕಟ್ಟಿದ ನಿಳಾಪತಿ ತನ್ನಧಿರಾಜಪಟ್ಟಮಂ (ಚಂದ್ರ.ಪು. ೬-೦೦೨) ; ಮುಂಡಿಯ ಭಾರಗಳ ನಾರಿಯರ ಕಂಬುಗ್ರೀವ ಬಿಡದಾನಲಾಜಿವೆಂದೆನುತ ಕುಡುವಿಲ್ಲ ರಕ್ಷೆಗಟ್ಟಿದ ಮಂತ್ರಿಲೇಖಿನದಡಹೆನೆ ಪುಸ್ಸಿಯೊಪ್ಪಿದುವು (ಶಂಕರ. ೨೪-೩೨).

[ ರಕ್ಷೆ + ಕಟ್ಟು$_1$ ]

**ರಕ್ಷೆಬೊಟ್ಟು** (ನಾ). ಅನಿಷ್ಟನಿವಾರಣೆಗಾಗಿ ಹಣೆಯ ಮೇಲೆ ಇಡುವ ಬೊಟ್ಟು : (*). [ ರಕ್ಷೆ + ಬೊಟ್ಟು$_2$ ( < ಬಟ್ಟು ) ]

**ರಕ್ಷೆಯಿಕ್ಕು** (ಕ್ರಿ). = ರಕ್ಷೆಗಟ್ಟು : ಅಶ್ವಯುಜಶುದ್ಧಬಿದಿಗೆಯೊಳ ಶ್ವಾನೀಕಕ್ಕೆ ರಕ್ಷೆಯಿಕ್ಕುವುದು ಧರಾಧೀಶ್ವರಂ (ಅಶ್ವಶಾ. ೬-೨).

[ ರಕ್ಷೆ + ಇಕ್ಕು ]

**ರಕ್ಷೆಯಿಡು** (ಕ್ರಿ). ರಕ್ಷೆಬೊಟ್ಟನ್ನು ಇಡು : ಪಕ್ಷಿವಾಹನದೇವ ಅಂಜಿದಂಜಿದನೆಂದು ರಕ್ಷೆಯಿಡುವ ಪುಣ್ಯವೆಲ್ಲಿ ಪಡೆದಳೊ (ಪುರಂದ.೪-೦೦೩-೦) ; ಹೆಣ್ಣುಮಕ್ಕಳಿಗೆ ಯಾರೊಬ್ಬರ ಕೆಟ್ಟಕಣ್ಣು ತಾಗದಿರಲೆಂದು ರಕ್ಷೆಯಿಟ್ಟರು (ಕಾಂತಲಾ. ೬೦). [ ರಕ್ಷೆ + ಇಡು$_1$ ]

**ರಕ್ಷೆವೆರು** (ಕ್ರಿ). ರಕ್ಷಣೆಯನ್ನು ಹೊಂದು : ದಾದಿಯೊರ್ವಳ ಅಕ್ಕರೆಯ ಸಾಹಸದಿ ರಕ್ಷೆವೆತ್ತು . . . ಕಡೆಗೆ ಕುಂತಳನಗರವೀಥಿಯಲಿ ಮುಗಿಯುವುದೆ ಅವನ ಬಾಳ್? (ಚಂದ್ರಹ. ೨-೦೩). [ರಕ್ಷೆ + ಪೆರು$_1$ (< ಪೆಱು$_1$)]

**ರಕ್ಷೋಗಣ** (ನಾ). ರಾಕ್ಷಸರ ಸಮೂಹ : ಲೀಲೆ ಮಿಗೆ ರವಿಸುತಿಹ ಯಕ್ಷಕಿನ್ನರಕಿಂಪುರುಷಗರುಡಗಂಧರ್ವರಕ್ಷೋಗಣಂಗಳಿಂದೆ . . . ಅಚಲೇಂದ್ರ ಮೆಸೆದಿರ್ದುದು (ಕೈಲಾಸ. ೦೦-೪). [ಸಂ.]

**ರಕ್ಷೋಗಾಂಧಾರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಗಾಂಧಾರಿ ರಕ್ಷೋ[ಪಾಠಾಂ. ರಕ್ಷ]ಗಾಂಧಾರಿ . . . ಕೌಶಿಕೆಯೆಂಬ ಹತ್ತೇ ಮಧ್ಯಮಗ್ರಾಮದಿಂದಾದ ರಾಗಂಗಳು (ಶಿವೇಶ. ೦೫೭). [ ಸಂ. ? ]

**ರಕ್ಷೋಗುರು** (ನಾ). ೧. ರಾಕ್ಷಸರ ಗುರು ; ಶುಕ್ರಾಚಾರ್ಯ. ೨. [ಜ್ಯೋತಿ] ಶುಕ್ರಗ್ರಹ : ಹರಿಜನ್ಮಮಾಗೆ ಮಂದಂ ಬೆರಸಿನಸಿರೆ ನಿಧನದೊಳ್ ನಿರೀಕ್ಷಿಸೆ ರಕ್ಷೋಗುರು ಲಗ್ನದಿನಪ್ಪಮಮಂದಿರಕ್ಕಜಾಳಿಯನೆ ತತ್ಕ್ಷಮಾಣಕ್ಕೆ ಲಯಂ (ಜಾತಕ. ೬-೬೬). [ಸಂ.]

**ರಕ್ಷೋಘ್ನ** (ಗು). ರಾಕ್ಷಸರನ್ನು ಕೊಲ್ಲುವ ; ಅಸುರರನ್ನು ನಾಶ ಮಾಡುವ : ಉಪಚರಿಸಿ ರಕ್ಷೋಘ್ನಸೂಕ್ತದ ಜಪವ ಮಾಡಿಸಿ ವಚನ ಮಾತ್ರದ ರಪಣದಲಿ ರಚಿಸಿದನು ಗೋಧನಭೂಮಿದಾನವನು (ಕುವ್ಯಾ.೬. ೯-೨೯) ; ಅರ್ಜುನಂ ನಗುತೆ ರಕ್ಷೋಘ್ನಬಾಣವನೆ ಪೂಡಿ ಬೇಗದಿಂದಿಸಲು (ಕೈಲಾಸ. ೦೬-೩೯); ಯಾಗಶಾಲೆಯೊಳೆಣ್ದೆಸೆಯೊಳಂ ಬಾಗಿಲೊಳೋರಿರ್ವರ್ ಮುನಿಗಳ್ ರಕ್ಷೋಘ್ನಸೂಕ್ತಮಂ ಪಠಿಸುತ್ತೆ ಕಾವಲಿರೆಸೆದರ್ (ರಾಮಾಶ್ವ. ೦೬೬-೩). [ಸಂ.]

**ರಖಂ** 'ರಕಂ' ನೋ.

**ರಖಂವ್ಯಾಪಾರ** (ನಾ). ಒಟ್ಟುಗಟ್ಟಳೆ ವ್ಯವಹಾರ; ಸಗಟುವ್ಯಾಪಾರ : ನಾರಾಯಣ ರಖಂವ್ಯಾಪಾರ ಮಾಡುವುದಕ್ಕಾಗಿ ಸಾಟಿ ಮಾಡುತ್ತಿರುವಾಗ ಕೇಶವ ಚಿಲ್ಲರೆವ್ಯಾಪಾರವನ್ನು ದೊಡ್ಡದಾಗಿ ಮಾಡುವ ಹಂಚಿಕೆ ಹೂಡುವನು (ರಾತಂತ್ರ. ೯). [ರಖಂ (< ರಕಂ) + ವ್ಯಾಪಾರ]

**ರಖಾವು** (ನಾ). ೧. ಕಾಪಾಡುವುದು ; ರಕ್ಷಿಸುವುದು. ೨. ಉಪಪತ್ನಿಯನ್ನು ಇಟ್ಟುಕೊಳ್ಳುವುದು : ಚಿಕ್ಕಬಾಬುಗಳಿಗೆ ಇರೋದು ಆಕೆ ಒಬ್ಬಳೇ. ರಖಾವು ಹೆಂಗಸು (ಜಾಹೀರ್. ೩೭೨).

[←ಹಿಂ. ರಖಾವ್]

**ರಖಾವುದಾರ** (ನಾ). ಉಪಪತ್ನಿಯನ್ನು ಇಟ್ಟುಕೊಂಡಿರುವವನು.

**ರಖಾವುದಾರಳು** = ಇಟ್ಟುಕೊಂಡಿರುವವಳು; ಉಪಪತ್ನಿ : ಅವನ ಹೆಂಡತಿಗೆ ಅವನ ರಖಾವುದಾರಳು ಅಗಸಗಿತ್ತಿಯ ದೆಸೆಯಿಂದ ಅವನಲ್ಲಿ ದ್ವೇಷವಿದ್ದರೂ ಪ್ರಾಣಭಯದಿಂದ ಅನಾಥಳಾಗಿದ್ದಾಳೆ (ಕಲಿ. ೦೮೩).

[ರಖಾವು + – ದಾರ$_4$]

**ರಖಿಸು** 'ರಕ್ಕಿಸು' ನೋ.

**ರಖೇಲಿ** (ನಾ). ಉಪಭೋಗಿಸುವ ಹೆಣ್ಣು; ಉಪಪತ್ನಿ : ಬಸವಂತ ಶ್ಯಾಮರಾಯನ ಕೇವಲ ರಖೇಲಿ . . . ಅಲಗರ್ಜಿ ಜಾತಿಯ ಹೆಣ್ಣಲ್ಲವೆಂದು ಖಾತ್ರೀಯಾಯಿತು (ದೀಕಕ. II, ೦೭೭). [← ಹಿಂ. ಮರಾ. ರಖೇಲೀ]

**ರಖೋಲೆ** (ನಾ). ಕಾವಲು; ರಕ್ಷಣೆ: ರಾಮಣ್ಣನನ್ನು ಇಲ್ಲಿಯ ರಖೋಲೆಗೆ ಹೇಳಿದ್ದೇನೆ. ಬರುತ್ತೇನೆ ಎಂದಿದ್ದಾನೆ (ಶಿರಾಉ. ೨೩೨); ಅಗೋ ಅಲ್ಲಿ ತೋಟ. ಇಂದಿನಿಂದ ಅದರ ರಖೋಲೆ ನಿನಗೆ ಸೇರಿದ್ದು (ಕರಂಬ. ೦೨).

[←ಹಿಂ. ರಖವಾಲೀ]

**ರಗಟೆ** (ನಾ). ೧. ಹರಿದ ಬಟ್ಟೆ; ಜೀರ್ಣವಸ್ತ್ರ; ಚಿಂದಿ : ಅಥವ ಬೀಡು ಮುಕುತಿಗೇಡು ಜನಿಸಿ ಕೆಡುವ ತನುವ ರಗಟೆಗಿಂತ ಕಡೆಯ ಕಾಂಬುದೆಂದಿ ಗವ್ಪುದೊ (ಸುಜಾಕ. ೬೩-೨). ೨. ಜೀರ್ಣವಾದ ಬಟ್ಟೆಗಳನ್ನು ಸೇರಿಸಿ ಹೊಲಿದ ಹೊದಿಕೆ ; ಕವುದಿ : ಕ್ಷುತ್ತಿಂಗೆ ಭಿಕ್ಷ. ಶೀತಕ್ಕೆ ರಗಟೆ ಮಾತಿಂಗೆ ಮಂತ್ರ (ಅವಶೂ. ೨೦೫-೬೨೪) : ಪ್ರಾಣಲಿಂಗದಲ್ಲಿ ಪರಿಣಾಮಿಯಾಗಿ ಕ್ಷುತ್ತಿಂಗೆ ಭಿಕ್ಷೆ ಶೀತಕ್ಕೆ ರಗಟೆಯಾಗಿ ಮೋಕ್ಷಗಾಮಿಯಾಗಿಪ್ಪದೇ ಮಧ್ಯ (ಶಿಶಿಪ. ೦೦-೭) ; ಬಾವಿಯಲ್ಲಿ ಸೀರೆ ರಗಟೆ ಕವದಿ ಮೊದಲಾದ ಮಲಿನ ವಸ್ತ್ರಗಳನ್ನು ತೊಳೆಯಲಾಗದು (ಕೈಶಿಕ್ಷ. ೦೭೩).

[← ಮರಾ. ರಕಟೀ, ರಗಟಾ, ರಗಟೀ]

**ರಗಡ** ' ಲಗಡು ' ನೋ.

**ರಗಡು** (ನಾ). (ಉಕ) ಹೆಚ್ಚು; ತುಂಬ : ನೀ ನೋಡಿದ್ರಾಗ್ಯೂ ಈಗ್ಯೂ ರಗಡ ಫರಕ ಆಗೇದ (ಗಂಪರಾಯ. ೦೨) ; ನೀನೂ ರಗಡು ಸಹಾಯಾ ಮಾಡಿದೀ. ಆದರೂ ಪೂರಾ ಸಾಧಿಸಲಿಲ್ಲ (ಹಿತಗು. ೬೩).

**ರಗಡಾಗು** = (ಕ್ರಿಮಾವು) ಬಹಳವಾಗು ; ಹೆಚ್ಚಾಗು : ಅವರ ಚಕ್ರವ್ಯೂಹದಿಂದ ಪಾರಾಗಬೇಕಾದರೆ ಅವನಿಗೆ ರಗಡಾಯಿತು (ಅಸ್ವ. ೦೫); ಮಳೆಯಾಗ ಗುಡ್ಡದಿಂದ ಬರಬೇಕಾದ್ರ ರಗಡಾಗಿ ಹೋತು (ಸಕರಾ. II, ೦೦೩೦). [← ಅರ. ರೆಫದ್; ಹಿಂ. ಮರಾ. ರಗಡ್]

**ರಗಣ** (ನಾ). [ಛಂದ] ಎರಡು ಗುರುಗಳ ಮಧ್ಯೆ ಲಘುವುಳ್ಳ ಅಕ್ಷರ ಗಣ (– ⌣ –) : ಮಗಣಂ ಭೂಮಿಯೆನಿಕ್ಕುಂ ಯಗಣಂ ಜಲ ರಗಣಮಗ್ನಿ ಸಗಣಂ ವಾತಂ (ಛಂದೋಂಬು. ೦-೬೯ ಅಬಿ). [ಸಂ.]

**ರಗಣಲಿಪಿ** (ನಾ). ಒಂದು ಬಗೆಯ ಲಿಪಿ : ಪ್ರಬಂಧಲಿಪಿ ರಗಣಲಿಪಿ ಶೈಲಲಿಪಿ . . . ಯಾ ಅಗಣಿತ ಲಿಪಿಗಳ ನೋಡಲಬಿಸುದೆ (ಭಾಸ್ಕರ. ೬೭-೬).

[ರಗಣ₁ + ಲಿಪಿ]

**ರಗಳು** (ಕ್ರಿ). ಕೋಪದಿಂದ ಹರಟು ; ಗಳಹು : ಬಾಯಲ್ಲಿ ಬೇಕಾದಷ್ಟು ರಗಳಿಕೊ ; ಕೈಯಲ್ಲಿ ಮಾತ್ರ ಮುಟ್ಟಬೇಡ ! (ಬಟ್ಟಕಿ. ೯೦-೨೦).

[← ತೆಲು. ರಗುಲು = ಕೋಪಗೊಳ್ಳು ]

**ರಗಳೆ, ರಘಟೆ** (ನಾ). ೧. ಗದ್ದಲ ; ಗೊಂದಲ : ಯಾವ ವಿಧವಾದ ರಗಳೆ ರಾದ್ಧಾಂತಗಳೂ ನಡೆಯುತ್ತಿರಲಿಲ್ಲ (ಕರಾಶಾ. ೩೨) ; ಮದುವೆ ಯಾದ ಬಳಿಕ ಒಂದು ರಗಳೆಯುಂಟಾಯಿತು (ಚೀಚಿಹ. ೯). ೨. ಕರೆಕರೆ; ಉಪದ್ರವ ; ಪೀಡೆ : ಆ ರಗಳೆಯನ್ನೆಲ್ಲಾ ಯೋಚಿಸಿಕೊಂಡರೆ ಹೋಗುವುದು ಬೇಡವೆನ್ನಿಸುತ್ತದೆ (ವಶಿಖ. ೦೫೯) ; ಒಮ್ಮೆ ಇಲ್ಲಿಂದ ಹೊರಬಿದ್ದರೆ ಮತ್ತೆ ಅವಳ ರಗಳೆ ಇಲ್ಲವಲ್ಲ (ಬೀಶಿರ. ೦೦೮). ೩. ಬೇಸರ ತರುವ ದೀರ್ಘವಾದ ಮಾತುಕತೆ ; ತಲೆಚಿಟ್ಟು ಹಿಡಿಯುವ ದೀರ್ಘ ಚರ್ಚೆ : ಮಂತ್ರವಾದಿಯ ಕುತಂತ್ರದ ರಗಳೆಗೆ ಜೋರಾಗಿ ರೇಗಿದನು (ಪಸ್ಮರ್ಶ. ೮೫) ; ಮುಗಿಯದೇ ನಿನ್ನ ರಗಳೆ (ಕಂಠಮ. ೦೦-೦೫). ೪. ಬಗೆಹರಿಯದುದು ; ಕೊನೆಗಾಣದುದು : ಈ ರಗಳೆಗೆ ಕೊನೆಯೇ ಇಲ್ಲ (ಕೂಂ). ೫. (ಮಗುವಿನ) ಚಂಡಿ ; ರಂಪ : ಮಗುವಿನ ರಗಳೆ ಇನ್ನೂ ನಿಂತಿಲ್ಲ (ಕೂಂ). ೬. [ಛಂದ] ಒಂದು ಬಗೆಯ ಮಾತ್ರಾಗಣದ ಛಂದ ; "ಸಮಾನವಾದ ಮಾತ್ರಾಗಣಗಳುಳ್ಳ ಬಹು ಪಾದಗಳಿಂದ ಕೂಡಿದ ವೃತ್ತವು ರಗಳೆಯೆನಿಸುವುದು" (ಕೈಶಿ. ೯೭) : ರಗಳೆಯ ಲಕ್ಷಣಮಂ ಕಂದಪದ್ಯದಿಂ ಪೇಳ್ದಿಂ (ಛಂದೋಂಬು. ೩-೨೨೨) ; ಹರಿಯರಸನೆಂಬಾತ ಶಿವಕವೀಶ್ವರನು ಗಡ . . . ಪರಿರಚಿಸುತಿಹ ಕಬ್ಬ ರಗಳೆಗಿಗಳೆಗಳು ಗಡ (ರಾಘಶ. ೦೯-೨೭) ; ಗಿರಿಜಾಕಲ್ಯಾಣವನ್ನು ಆತನು ರಚಿಸದೆ ಹೋಗಿದ್ದರೂ ರಗಳೆಗಳೆರುವ ತನಕ ಆತನ ಮಹಿಮೆಯಲ್ಲಿ ಲವ ಲೇಶವೂ ಕಡಿಮೆಯಾಗುತ್ತಿರಲಿಲ್ಲ (ಅಪುಕ. ೨). ರಘಟೆ : ೬. ಮಾಲಾ ವೃತ್ತದಂಡಕ[ಂಗಳುಂ] ರಘಟೆ (ರಗಳೆ) ಮಾತ್ರಾರ್ಯಾ – ತ್ರಿಪದಿ (ಛಂದೋಂಬು. ೯. ೦-೬೭ ಪ); ರಘಟೆಗಳ (ತೆಲುಗು–ರಗಡ) ಪ್ರಭೇದಗಳನ್ನು ತಿಳಿಸುವ. . . ಎರಡು ಪದ್ಯಗಳು (ಕೈಶಿ. ೦೩೩).

[?./ ಹಿಂ. ರಗಡ /ತೆಲು. ರಗಡ]

**ರಗುತ** ' ರಕುತ ' ನೋ.

**ರಗ್ಗು** (ನಾ). ಉಣ್ಣೆಯಿಂದ ನೆಯ್ದು ಮಾಡಿದ ದಪ್ಪ ಹೊದಿಕೆ ; ನಯಗಂಬಳಿ : ನಾನು ರಗ್ಗನ್ನು ಮುಖದ ಮೇಲೆಳೆದು ಬಿದ್ದುಕೊಂಡೆ (ಬೀಗಾರ. ೩೬) ; ನೆಲಕ್ಕೆ ಚಾಪೆ ಅಥವಾ ಸಾಧ್ಯವಾದರೆ ರಗ್ಗುಗಳನ್ನು ಹಾಸ ಬೇಕು (ಗೃಹಿ. ೬೭). [← ಇಂ. Rug]

**ರಘಟಾಪ್ರಬಂಧ** (ನಾ). = ರಗಳೆ ೬ ; ಮಹಾಪುರಾತನರ ಸತ್ಕಥೆಗಳಂ ರಘಟಾಪ್ರಬಂಧದಿಂ ಪೊಗಳುತ್ತಲಿ (ರಾಘಶ. ೦೯-೦೩೨).

[<ರಘಟೆ + ಪ್ರಬಂಧ]

**ರಘಟಾಬಂಧ** (ನಾ). = ರಗಳೆ ೬ : ಗುಣಾಗ್ರಣಿಯ ಮತದಿಂದೆ ತಾಳದ ಗಣನೆಗೊಡಂಬಟ್ಟೊಡದುವೆ ರಘಟಾಬಂಧಂ (ಛಂದೋಂಬು. ೩-೨೨೨).

[<ರಘಟೆ + ಬಂಧ]

**ರಘಟೆ** ' ರಗಳೆ ' ನೋ.

**ರಚನ** (ನಾ). ೧. ನಿರ್ಮಾಣ ; ಸೃಷ್ಟಿ : ' ರಚನಕಾರ ' ಪರಾ. ೨. ಆಕರ್ಷಕವಾದುದು : ಎನ್ನ ಕಣ್ಮನದ ಪುಣ್ಯಾದಿ ಶಕ್ತಿಯೆ ಕೇಳೆನ್ನ ಸವಿವಚನ ನಿನ್ನ ಕಿವಿಗತಿರಚನವಪ್ಪ ಮೇಲ್ನುಡಿಯನುಸುರ್ವೆ (ಪಶಪೂ. ೦೨-೪). ೩. ಅಣಿ; ಸಜ್ಜು. ೪. ಸಿದ್ಧಿ; ಸಾಧನೆ: 'ರಚನಂಗೆಯ್' ಪರಾ. [ಸಂ.]

**ರಚನಂಗೆಯ್** (ಕ್ರಿ). ೧. ನಿರ್ಮಿಸು ; ಸೃಷ್ಟಿಸು. ೨. ಸಾಧಿಸು ; ಸಿದ್ಧಿಯನ್ನು ಹೊಂದು: ರಚನಂಗೆಯ್ಯದೆ ಧರ್ಮಕೀರ್ತಿಯೆರಡಂ ಸದ್ಧರ್ಮವಂ ಪಾಪದಾ ನಿಚಯಕ್ಕೆಕ್ಕದೆ . . . ಪಾದಿಪಾ ವಚನಬ್ರಹ್ಮದೆ ಮುಕ್ತಿಯೇ (ಸೋಮೇಶಶ. ೯೩).

[ರಚನ + ಕೆಯ್₁]

**ರಚನಕಾರ** (ನಾ). ಕಾವ್ಯ ಮುಂತಾದುವನ್ನು ರಚಿಸುವವನು ; ಕೃತಿ ಕರ್ತ : ತ್ಯಾಗರಾಜರ ಅನಂತರದ ಶ್ರೇಷ್ಠ ರಚನಕಾರ – ಸಂಗೀತಗಾರ ರಲ್ಲಿ ಮಹಾವೈದ್ಯನಾಥಅಯ್ಯರವರದು ಬಹಳ ಉಚ್ಚವಾದ, ಗೌರವಾನ್ವಿತ ವಾದ ಸ್ಥಾನ (ಸಂಗೀಕ. ೨). [ಸಂ.]

**ರಚನೆ** (ನಾ). ೧. ನಿರ್ಮಾಣ ; ಸೃಷ್ಟಿ : ಅಪ್ಪತನುವಿನೊಳಗಾದ ಜಗದ ರಚನೆ ಆರಿಂದ ಜನಿಸಿತ್ತು (ಅನಪ. ೩೩೦೦). ೨. ಕಾವ್ಯ, ಚಿತ್ರ ಮೊದಲಾದುವನ್ನು ಬರೆಯುವುದು, — ಸೃಷ್ಟಿಸುವುದು : "ಶಂಥನಂ. ಗ್ರಂಥನಂ. ಗುಂಫಃ, ಸಂದರ್ಭಃ, ರಚನಾ— ಈ ೫ ರಚನೆ" (ಹಲಾಯು. ೦೨೦-೪೫); ಒಂದು ನಾದವೇ ಗಾಯಕನ ಗಾಯನದ ರಚನೆಲೀ ಚಂದಚಂದದ ರಾಗಮೆನಿಪಂತೆ (ಗಣಾ. ೦೯-೭). ೩. ಬರೆದ ಕಾವ್ಯ, ಕೃತಿ, ಗ್ರಂಥ ಮುಂತಾದುವು : ಅವನು ಮಾಡಿದ ರಚನೆಯನ್ನು ಬಾಯಿಂದಾಗಲಿ, ವಾದನಗಳ ಮೇಲಾಗಲಿ ಹಾಡಿ ತೋರಿಸಬಲ್ಲವನು ಗಾಯಕ (ಪಾಂಕ್ರ. II, ೦೦೯೦). ೪. ಕ್ರಮ ; ರೀತಿ. [ಸಂ. ರಚನಾ]

**ರಚನೆವಂತ** (ನಾ). ನಿರ್ಮಾಣ ಮಾಡುವವನು : ಕಟ್ಟುವವನು; ಕರ್ತೃ: ಭಜನೆವಂತರೆಲ್ಲರು ಪುರಾಣದ ಪುಣ್ಯವಂತರು ಶಾಸ್ತ್ರದ ಸನ್ನಿಹಿತರು ವಚನದ ರಚನೆವಂತರು (ಪೋೀಶಿಪಾ. ೦೦೭-೯೨೭). [ರಚನೆ + — ವಂತ ]

**ರಚಯಿತ** (ನಾ). = ರಚನೆವಂತ : ಇಂಥ ಹಾಡುಗಳನ್ನು ಅವುಗಳ ರಚಯಿತರು ಬರೆದಿರಿಸಲಿಲ್ಲ (ಶಾಪಗೀ. ೯); ಸಂಗೀತವು ಎರಡು ಮುಖ್ಯ ವ್ಯಕ್ತಿಗಳನ್ನು ಹೊಂದಿಕೊಂಡಿದೆ. ಮೊದಲನೆಯದು ಸಂಗೀತ ರಚಯಿತ ನನ್ನು (ಪಾಂಕ್ರ. II, ೦೦೯೦). [ಸಂ. ರಚಯಿತೃ]

**ರಚಯಿತಾರ** (ನಾ). = ರಚನೆವಂತ : ಈ ಕವಿತೆಯ ತಿಬೇಟಭಾಷೆಯ ಅನುವಾದದಲ್ಲಿ ರಚಯಿತಾರನ ಹೆಸರು ' ಅಮೋಘೋದಯ ' ಎಂದಿದೆ (ಕಗಾಶ. ೦೬). [ಸಂ. ರಚಯಿತೃ]

**ರಚಯಿಸು** ' ರಚಿಸು ' ನೋ.

**ರಚಿತ** (ಗು). ೧. ಉಂಟಾದ ; ಒದಗಿದ : ರಜತಗಿರಿಶಿಖರದೊಳ್ ಮದನಾರಿಯುಂ ಗೌರಿಯುಮುಚಿತಲೀಲಾರಚಿತಸುಖಸಂಕಥಾಪ್ರಿಯಕೌತುಕದೊಳಿರಲು (ಬಸವ. ೧-೫೨). ೨. ಸಿದ್ಧಪಡಿಸಿದ ; ಅಣಿಗೊಳಿಸಿದ : ರಚಿತರುಚಿನಿಚಿತಶುಚಿಸಾಜ್ಯಭೋಜ್ಯಾಳಿಯಿಂ . . . ಪೂಜಿಸಿದು (ರಾಜಶೇ. ೧೭-೫೧ ರಗಳೆ). ೩. ಮಾಡಿದ. ೪. ಬರೆದ ; ರಚಿಸಿದ. (ನಾ). ೫. ಸೃಷ್ಟಿಯಾದುದು ; ನಿರ್ಮಿತವಾದುದು : ರಚಿತಂ ನಯುಂಗ ಸಪ್ತಸಪ್ತಾರ್ಚಿಯಿಂ ದಂಡಕಂ (ಛಂದೋಂಬು. ೩-೨೨೩). [ಸಂ.]

**ರಚಿಸು**, ರಚಯಿಸು (ಕ್ರಿ). ೧. ನಿರ್ಮಿಸು ; ಕಟ್ಟು : ನವರತ್ನಮಯ ಶಿವಭವನಮಂ ರಚಿಸಿ (ಬಸವ. ೫೩-೨೯); ಬಿಳಿಯ ಚೌರಿಯ ಮೇಲುಗಟ್ಟಿನ ಹೊಳಹು ಮಿಗೆ ರಚಿಸಿದರು ಸತಿಯ ವಿವಾಹಮಂಟಪವ (ಪಳಿಶ. ೩-೭). ೨. ಮಾಡು : ವಿಧ್ಯುಕ್ತಮಾಗಿ ರಚಿಸಿರ್ದ ಜಪಮಾಲೆಯಂ ಮಧ್ಯಮಾನಾಮಿಕಾಂಗುಷ್ಠದಿಂ ಗ್ರಹಿಸಿ . . . ಜಾನಿಸುತೆ (ಶಬ್ದರಾ. ೭-೨೯) : ಭಕ್ತಿಶುಕ್ತಿಯಲಿ ಮುತ್ತುಗಳ ರಚಿಸಿ ಕೊಡಿಹೆ ವರಣಮಾಲೆಯಂ (ಶಶ್ರಾಂಗ. ೩೭-೧೧೧೯). ೩. ಅಣಿಮಾಡು ; ಸಜ್ಜುಗೊಳಿಸು : ನೆರೆದರವನೀನಿರ್ಜರರು ಕೇಸರಿಯ ಪೀಠವ ರಚಿಸಿ ವೈದಿಕಪರಿಣತರ ಮತದಿಂದ ವಿಸ್ತರಿಸಿದರು ಮಂಗಳವ (ಶಂಕ್ರಾಖ್ಯ. ೧-೩೦). ೪. ನೆರವೇರಿಸು ; ಜರುಗಿಸು : ತನ್ನ ನಿಪನುಪನಯನಾದಿ ಕರ್ಮವ ರಚಿಸಿ (ಕೊರಚ. ೧-೩-೧೧); ಪನ್ನೆರಡನೆಯ ದಿವಸ ನಾಮಕರಣವ ಚೆನ್ನಾಗಿ ರಚಿಸಲು ದ್ವಿಜರ . . . ಕರೆಸಿ (ಕಂಠೀರ. ೯-೭೪). ೫. (ಕಾವ್ಯ, ಚಿತ್ರ ಮೊದಲಾದುವುಗಳನ್ನು) ಬರೆ ; ಸೃಷ್ಟಿಮಾಡು : ಅಸದೃಶಮೆನಿಸಿ ಲೋಕಕ್ಕೆಸೆಯೆ ಮನೋವಚನಕಾಯಮಳಮಂ ಕಳೆಯಲ್ಕೆ ಸಮರ್ಥಮೆನಿಪುವಂತೆ ರಚಿಸಿದರ್ಕೇವಳಮೆ ಪೂಜ್ಯಪಾದಮುನೀಂದ್ರರ್ (ಶಮುಶ. ೧-೯) ; ಕಟ್ಟಿದರೋದುಗಬ್ಬವ ಹಾಡುಗಬ್ಬವ ಕಬ್ಬದೊಳೊರೆವರಿವೆರಡು ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇಕಬ್ಬ ಹೇಳೆಲೆ ಸರಸ್ವತಿಯೆ (ಶರಶ. ೧-೭); ಇವರು ರಚಿಸುವ ಕಾವ್ಯವು ಒಬ್ಬ ಮನುಷ್ಯನು ರಚಿಸಿದ್ದೆಂದು ಮನಸ್ಸಿಗೆ ತೋರುವುದಿಲ್ಲ (ಕಾವಗ. ೩). ರಚಯಿಸು : ೫. ಪುರಾಣಮಾರ್ಗಪದಪದ್ಧತಿಬಂಧುರಬಂಧಮೆಂಬಿನಂ ರಚಯಿಸೆ (ಛಂದೋಂಬು. ೧-೭). ೬. ತಿದ್ದು ; ರೇಖಿಸು : ಮಂಗಮಗಿಸುತಿಹ ಪರಿಮಳದ ಪನ್ನೀರಿನಿಂ ಮಜ್ಜನಂಬುಗಿಸಿ ಪರದುಕೂಲಮನುಡಿಸಿ ಪಣೆಯೊಳಗೆ ಮೃಗಮದಲಲಾಮಮಂ ರಚಯಿ [ಪಾಠಾಂ. ವಿರಚಿ] ಸಿದರು (ಶಂಕ್ರ. ೩೭-೯). [ರಚನೆ + –ಇಸು$_3$]

**ರಚ್ಚ** ' ರಚ್ಚೆ$_2$ ' ನೋ.

**ರಚ್ಚಿಸು** (ಕ್ರಿ). ಗುಂಪಾಗು ; ಒಟ್ಟಿಗೆ ಸೇರು; ಒಟ್ಟುಗೂಡು : ಪಾರಿವಾಳವು ಹೆಚ್ಚಿನಾ ಗೌಜೇನ ಹಕ್ಕಿಯು ಕಚ್ಚಿ ಆಡುವ ಸಿಪಲೆ ಹಕ್ಕಿಯು ರಚ್ಚಿಸಿ ಮೆರೆವವರಣ್ಯದಿ (ಗೋಹಾಡು. ೩-೧೩). [ರಚ್ಚೆ$_2$ + –ಇಸು$_3$]

**ರಚ್ಚು** ' ಉಚ್ಚೆ ' ನೋ.

**ರಚ್ಚುಳಿ** (ನಾ). ಅತಿಶಯ ; ಆಧಿಕ್ಯ (?) : ಪಚ್ಚೆಗುಳ ಗಂಟಾಳಿ ರಾಸಿಯ ನಿಚ್ಚಳದ ಕಡಿಯಣದ ಕವಚದ ಪಚ್ಚಡಿಯ ರಚ್ಚುಳಿಯೊಳೊಪ್ಪಿದುದೊಡನೆ ರಣಭೂಮಿ (ಅಂಬಿಗ. ೧೭-೫೯); ಎಲವೋ ಚಚ್ಚರವು ಲೇಸಾಯ್ತು ತಾಂ ಘಡ ವಿರುಪಲೋಚನನ ಅಚ್ಚರಿಯ ಮಗನೆಂದು ಸ್ಮರಿಸಿ ಹೆಚ್ಚಿತಹುದೈಶೌರ್ಯ ನಮ್ಮಯ ರಚ್ಚುಳಿಯ ಬಳಿಕಿನ್ನು ನೋಡೆನುತೆಚ್ಚ ಮತ್ಸರಿಸಿ (ಅಂಬಿಗ. ೨೮-೩೦). [ ? ]

**ರಚ್ಚೆ$_1$** ' ಉಚ್ಚೆ ' ನೋ.

**ರಚ್ಚೆ$_2$**, ರಚ್ಚ (ನಾ). ೧. ಕಟ್ಟೆ; ವೇದಿಕೆ; ಜಗಲಿ : ಮಲ್ಲಿಗೌಡನ ತಾಯ ಹೆಸರಿನಲ್ಲಿ ಮಂಟಪವ ಕಟ್ಟಿಸಿದಳೆತ್ತರದ ರಚ್ಚೆಯಿಕ್ಕಿ (ಗೌಮಲ್ಲಿ. ೨೭). ೨. ಚಾವಡಿ ; ಪಂಚಾಯಿತಿ ಸಭೆ : ದೇವರೊಳು ವಿಗ್ರಹವನು ಮಾಡಿ ರಚ್ಚೆಗೆ ತಪ್ಪಡಾವು ಬಲ್ಲಿದರೆ (ಸೌಂದರ. ೫-೯). ೩. ಪ್ರತಿಪಾದನೆ ; ವಿವರಣೆ ; ನಿರೂಪಣೆ : ಬೀದಿಯಲ್ಲಿ ನಿಂದು ನುಡಿವ ಅನುಭಾವದ ರಚ್ಚೆ ನಗೆಗೆಡೆ ನೋಡಯ್ಯಾ (ಶಶ್ವಕ. ೪. ೫೭೫-೧೨೩೭). ೪. ಮುಚ್ಚುಮರೆಯಿಲ್ಲದ ಸ್ಥಿತಿ ; ಬಹಿರಂಗ : ರಚ್ಚೆಯ ನೆರವಿಗೆ ನಾಣುನುಡಿಯಿಲ್ಲದಿಹುದೆ ಅದಬಂತೆ ಎನಬಹುದೆ ಸಜ್ಜನಸ್ತ್ರೀಯ (ಬಸವ. ೬೨೫); ದನಿಗೆಯ್ಯ ಕೋಗಿಲೆಯುಲಿದು ಲಜ್ಜೆಯಂ ಕಡಿಸಿ ರಚ್ಚೆಗೆ ತಂದವನಾಯ್ಯವಿನ್ನುಳಿದ ನರರೊಳಾವಂ ಹಿತವನು (ಹಕಳ. ೯-೩೦) ; ಮಾತಾಪಿತರ ಹಾದರವನು ರಚ್ಚೆಯೊಳು ಪೇಳ್ವಾತ ಸತ್ಪುತ್ರನಪ್ಪನೇ (ಗುರುಬಾ. ೯-೩೦). ೫. ಗುಂಪು ; ಸಮೂಹ : ' ರಚ್ಚಿಸು ' ಪರಾ. ರಚ್ಚ : ೫. ತೇರ್ಬೀದಿ ನಂಜನಗೂಡು ನಂಜುಂಡಗೆ ರಾಗದಿಂದ ಕೋಲು ಕೊಡಿ ರಚ್ಚದಿಂದ ಕೋಲು ಕೊಡಿ ಬಾಗಿಬಾಗಿ ಕೋಲು ಕೊಡಿ (ಹಳ್ಳಿಹಾ. ೨೦-೨).

ರಚ್ಚೆಕಚ್ಚು = ಚರ್ಚಾಗೋಷ್ಠಿ; ವಾದಭೂಮಿ (?) : ಭೂಲೋಕದಲ್ಲಿ ಹುಟ್ಟಿದ ಮನುಜರು ಶಿವಲಾಂಛನವ ಧರಿಸಿದವರಿಗೆಲ್ಲಕ್ಕು ಶಿವತತ್ತ್ವ ಉಂಟೇ ? ಇವರ ಕೂಡೆ ರಚ್ಚೆಕಚ್ಚಿನಲ್ಲಿ ವಾದವಾಡಲಾರದೆ ಕರಣಂಗಳ ಚಲನತ್ವವಿಲ್ಲದ ಶರಣನು ಮರ್ತ್ಯದ ಉಪಾಧಿ ಜಂಗಮಕ್ಕೆ ವಿಲಕ್ಷಣನು (ಮೋಳಿಗೆ. ೧೮೭-೭೦೩ ಅರ್ಥ). ರಚ್ಚೆಗೆ ತರು = ಬಯಲಿಗೆ ತರು ; ಬಹಿರಂಗಪಡಿಸು : ಕೋದಂಡಮಾ ತೆಗೆದಾರ್ಪಿಂ ಮುಚಿದಿಕ್ಕೆ ಗಾಢಗುಣದಿಂದಂ ತೋಳ್ಗಳಂ ಕಟ್ಟಿ ರಚ್ಚೆಗೆ ತಂದು (ರಘುಗಾ. ೧-೫) ; ನೀನೇಕಾಂತದಲ್ಲಿ ಗಿಳಿಯೊಳಾಡಿದುದನು ಎಲ್ಲರ ಮುಂದೆ ರಚ್ಚೆಗೆ ತಂದು (ಶರಶ. ೭-೧೭). ರಚ್ಚೆಗೆ ಬೀಳ್ = ಬಯಲಾಗು ; ಬಹಿರಂಗವಾಗು : ತನ್ನ ಮರುಳಂ ಮುಚ್ಚಿ ನುಡಿದೊಡಂ ರಚ್ಚೆಗೆ ಬಿರ್ದುದೆಂದರಸನು ಕೂಲವದಿಗಳೊಳ್ ನುಡಿಯುತ್ತುಂ ನಡೆಯೆ (ಅವಂತಿ. ೯-೧೧ ಪ).

[ ದೇ.॥ ತೆಲು. ರಚ್ಚ ]

**ರಚ್ಚೆ$_3$** (ನಾ). [ಸಂಗೀತ] ಒಂದು ಬಗೆಯ ತಾಳ : ಪಡಿಮಂಠೆಯ ರಚ್ಚೆ ಮುಂತಾದ ದೇಶಿಯಲೆ ತಾಳಂಗಳಂ ಬಿತ್ತರಿಸಿ ಬಿನ್ನಣದಲಿ (ಸೌಂದರ. ೯-೫) ; ಏಕ್ಕಸರ ರಚ್ಚೆ ಉತ್ತರಪಾಣಿ ಪಂಚಪಾಣಿ (ವಿವೇಕ. ೧೯೨); ಏಕ್ಕತಾಳ ರೂಪಕ ರಚ್ಚೆಯೆಂಬೀ ಕ್ರಮಗಳು ಏಳುವಿಧವು (ಶರಶಾ. ೭-೫೭). [ ? ]

**ರಚ್ಚೆಕಟ್ಟೆ** (ನಾ). ಪಂಚಾಯತಿ ಕಟ್ಟೆ; ಚಾವಡಿ : ಪಟೇಲನ ಮನೆಯ ಮುಂದಿನ ರಚ್ಚೆಕಟ್ಟೆಯ ಮೇಲೆ . . . ಗಣ್ಯವ್ಯಕ್ತಿಗಳು ಸಭೆ ಸೇರಿದ್ದರು (ಊರುಕ. ೯೭). [ರಚ್ಚೆ$_2$ + ಕಟ್ಟೆ$_1$]

**ರಜ$_1$** (ನಾ). ೧. ಸಣ್ಣಹುಡಿ ; ಧೂಳು : "ಚೂರ್ಣಂ ಧೂಳಿ ಪಾಂಸು ರೇಣು ಕ್ಷೋದಮಾ ರಜಂ ಸಣ್ಣಹುಡಿ" (ಮಂಗರಾ. ೬೯-೨೩); ಸಮರರಸಪ್ರಿಯರೊಳ್ ಸತ್ವಮುಮಿಳೆಯೊಳ್ ರಜಮುಮೊದವೆ ರಣಗಟ್ಟಲೆಯೊಳ್ ತಮಮುಂ ಮಿಗೆ ಸತ್ತ್ವರಜಸ್ತಮಂಗಳುಂ ಕಾಣಲಾದುವೆರಡುಂ ಪಡೆಯೊಳ್ (ಕಂಠೀರ. ೧೧-೭೯); ಅತಿಬಹುಳರಜದೊಳ್ ಪೊರೆದ ಪೊನಲ್ಗಳಂತೆ (ಕಾದಂಬ. ೬೯೯). ೨. ಹೂವಿನಲ್ಲಿರುವ ಪುಡಿ ; ಪರಾಗ : " ಪರಾಗಮೆನೆ ರಜಮಕ್ಕುಂ " (ಮಂಗರಾ. ೩೩-೭); ಕನಕಾಂಭೋಜರಜಂ ನಿಜಾಂಗರುಚಿಯಂ . . . ಕೈಕೊಳ್ವಿನಂ (ಆದಿಪು. ೧-೬೨); ದರವಿಕಸಿತಮಂ ರಜದೊಳ್ ಪೊರೆದಾತ್ಮಜಮುಖಸರೋಜಮಂ ಮೋಹರಸಂ ತೆರೆಮಸಗೆ (ಮಲ್ಲಿಪು. ೩-೧೨೦). ೩. ಕಸ : ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ (ಬಸವ. ೯೭). ೪. ಕಳಂಕ ; ದೋಷ : ಕಲೆಯಿಲ್ಲದ ಮಹಾಕ್ಷೀರದಂತೆ ರಜ[ಪಾಠಾಂ. ಜರ]ವಿಲ್ಲದ ರತ್ನದಂತೆ (ಮೋಳಿಗೆ. ೧೧೧-೪೩೯). ೫. ಕೆಂಪುಬಣ್ಣ ; ಕೆಂಬಣ್ಣ : ಲಲನೆ ಮೂಗಿನೊಳುಸುರನಳ್ಳೆಯೊಳು ಹೊಯ್ಲನುಗುರೊಳು ರಜವನೆದೆಯೊಳಲ್ಲಾಟವಂ . . . ಆರಯ್ದು ಕಾಣದೆ ನೊಂದಳು (ಹಕಳ. ೧೨-೨೭). ೬. ಮುಟ್ಟು ; ರಜಸ್ಸು : " ಆರ್ತವಮುದು

ರಜಮೆಂದುಂ ಪುಷ್ಪಮೆಂದುಮವಿಭೇದ[ದಿಂದೆ ಪೇಟ್ಟಲ್ಪ]ಡುಗುಂ" (ಚಿತ್ತಕೋ. ೩೪-೦೩). 'ರಜೋದರ್ಶನ' ಪರಾ. ೭. ಕತ್ತಲೆ; ತಮಸ್ಸು; ಅಂಧಕಾರ: ಗೂಗೆವೊಂಗುವೊಂಗದೆ ರಜದಿಂ (ಶಾಂತಿಪು. ೨-೩೩). ೮. ಸತ್ತ್ವ, ರಜ ಮತ್ತು ತಮವೆಂಬ ಮೂರು ಮೂಲ ಗುಣಗಳಲ್ಲಿ ಎರಡನೆಯದು; ರಜೋಗುಣ: ಹಿರಣ್ಯಗರ್ಭನೆಂದೆನಿಸಿಯು ದಾರನೆಂಬ ರಜಮೊಂದಿಯೆ ಸತ್ತ್ವನಿಧಾನನೆಂಬ . . . ಚತುರ್ಮುಖನೀಗೆ ರಾಗವಂ (ಜಗು. ೦-೨). ೯. ಕುಂಕುಮಕೇಸರಿ. [ಸಂ. ರಜಸ್]

**ರಜ₂** 'ರಜಾ' ನೋ.

**ರಜಂಬೊರೆ** (ಕ್ರಿ). ೧. ಹುಡಿಯಿಂದ ಕೂಡಿರು: ಪರಿಜನವುನಿತುಂ ತುರಿಪದೆ ಪರಿತಂದಿನ್ನೇವೆಂದು ಕಪ್ಪುರದ ರಜಂಬೊರೆದ ಕರಂಡಂಬುಮ ತಳದು (ಅಂತ್ಯ. ೪-೦೩೭). ೨. ಹೂವಿನ ಪರಾಗದಿಂದ ಕೂಡಿರು: ಪರಮಜಿನಜನನಿಗೊರ್ವಳ್ ಪುರಪಥು ಕೊಡೆವಿಡಿದು ನಳಿನಿಯೊಡವೆಳೆದು ರಜಂಬೊರೆದು ಕೊಡೆಯೆಲೆಯು ಕಟಗಿರ್ದ ರಾಜಹಂಸಿಯ ವಿಳಾಸಮಂ ನೆನೆಯಿಸಿದಳ್ (ಶಾಂತಿಪು. ೯-೦೭೬). ೩. ರಜೋಗುಣವನ್ನು ಉಂಟು ಮಾಡು; ರಾಜಸಗುಣವನ್ನು ಆರೋಪಿಸು. ೧. ೩: ಇರದೊಯ್ವುದು ತನ್ನಿಚ್ಚೆಗೆ ಪರಯಾಪನವಂದು ಪುರುಷನಂ ಪ್ರಕೃತಿ ರಜಂಬೊರೆದು ತಿರುಪುತ್ತೆ ಸುಟ್ಟುರೆ ತೆರಳ್ದ ತಣಿಗೆಳೆಯನುಯ್ವ ತೆಱದಿಂದೆತ್ತಂ (ಕಾದಂಪೂ. ೩೩೩). [ರಜ₁ + ಪೊರೈ]

**ರಜಕ** (ನಾ). ಬಟ್ಟೆಗಳನ್ನು ಮಡಿ ಮಾಡುವವನು; ಅಗಸ; ಮಡಿವಾಳ: "ನಿರ್ಣೇಜಕಃ, ರಜಕಃ – ಈ ೨ ಅಗಸಂ" (ಕಲಾಯು. ೯೭-೯೩೯); ಒಗೆದೊಗೆದು ಮುರಿದು ಜಗುನೆಯೊಳಗಲೊಗೆದುಂ ಪಿಂಡುತಿರ್ಪ ರಜಕನನೀ ಸೀರೆಗಳನುಡಲೀವುದುಮಾಗೆನೆ ಜಗಳಂ ಜಕ್ಕುಲಿಸಿದಂತೆ ನಕ್ಕಂ ರಜಕಂ (ಅರ್ಧನೇ. ೯-೭೭); ಚದುರಕಶ್ಯಪ ಕಾರುಕಂ ನಾರದಂ ರಜಕ ವ್ಯಾಸ ಕಬ್ಬಿಲತಿಯಣುಗಂ (ಏಕೋತ್ತ. ೯-೬೨); ನಮ್ಮ ರಜಕಶಿಖಾಮಣಿ ಖಾದಿ ತೊಟ್ಟುಕೊಳ್ಳದಿದ್ದರೂ ಪಕ್ಕಾ ಸ್ವದೇಶಿ (ದೇಶಪ್ರ. ೩೦). [ಸಂ.]

**ರಜಕಿ** (ನಾ). ೧. ಮಡಿವಾಳನ ಹೆಂಡತಿ. ೨. ಅಗಸಗಿತ್ತಿ. ೩. ಮುಟ್ಟಾದ ಮೂರನೆಯ ದಿನದ ಹೆಂಗಸು. [ಸಂ. ರಜಕೀ]

**ರಜಕೀಶೋಕ** (ನಾ). (?): ಕೇಳು ರಜಕೀಶೋಕದೊಲು ಮನ ಹೇಳ ಹೇಳಲು ದೊಡ್ಡಿತಾಗಿಯೆ ಭಾಳನೇತ್ರಾದಿಗಳನೇಡಿಸಿ ಕಾಡಿತಂದೆನಲು (ಸದ್ಗುರು. ೬-೨೦). [ಸಂ.]

**ರಜತ** (ಗು). ೧. ಬೆಳ್ಳಗಿರುವ; ಬಿಳುಪಾದ. ೨. ಬೆಳ್ಳಿಯಿಂದ ಮಾಡಿದ: ಮಣಿಕನಕರಜತವಸ್ತುಗಳನಿತ್ತು (ಕಂಪಣಾ. ೪-೪೦ ರಗಳೆ). (ನಾ). ೩. ಬಿಳಿಬಣ್ಣದ ಒಂದು ಲೋಹ; ಬೆಳ್ಳಿ: "ರಜತಂ, ಕಳಧೌತಂ, ರೂಪ್ಯಂ, ತಾರಂ – ಈ ೪ ಬೆಳ್ಳಿ" (ಕಲಾಯು. ೨೯-೦೯). ೪. ಮುತ್ತಿನ ಹಾರ: "ಮುತ್ತಿನ ಹಾರದಲ್ಲಿಯುಂ ರಜತಮೆಂಬುದು" (ಕಲಾಯು. ೧೪೦-೩). ೫. ಚಿನ್ನ; ಸುವರ್ಣ. ೬. ಆನೆಯ ದಂತ. ೭. ರಕ್ತ. ೮. [ಗಣಿತ] ಕಳೆಯುವುದು; ವ್ಯವಕಲನ: ರಜತಂ, ರಜ್ಞತಂ, ಉವಿತಂ . . . ಕಳೆ ಇಂತಿನಿತುಂ ಕಳೆವುದಕ್ಕೆ ಪೆಸರು (ವ್ಯವಹಾ. ೦೦). [ಸಂ.]

**ರಜತಗಿರಿ** (ನಾ). ಬೆಳ್ಳಿಯ ಬೆಟ್ಟ; ಕೈಲಾಸಪರ್ವತ: ರಜತಗಿರಿ ನಿಜಖಗೇಶಾತ್ಮಜೆಯ ವಿವಾಹಕ್ಕೆ ಕಟ್ಟಿಪಿದುದು ನಿಬ್ಬಣಮಂ ನಿಜಕಾಂತಿಸಂತತಿಯನೆನೆ ವಿಜೃಂಭಿಸಿತ್ತಮಳಕೌಮುದೀವಿಸ್ತಾರಂ (ಪರ್ಶ್ವ. ೬-೪೪); ಪಯೋಂಬುಧಿ ರಜತಗಿರಿವೊಕ್ಕು ಗಿರಿಜೆಯೊಡಗೂಡಿ ಸುಖದಿಂದಿರ್ದನು (ಕಬಪು. ೪೭-೪). [ಸಂ.]

**ರಜತಪರದೆ** (ನಾ). ಸಿನಿಮಾಮಂದಿರಗಳಲ್ಲಿ ಚಲನಚಿತ್ರಗಳನ್ನು ಪ್ರದರ್ಶಿಸುವ ಬಿಳಿಯ ತೆರೆ: ಕೆಲವರು ತಮ್ಮ ನಚ್ಚಿನ ನಟನನ್ನು ರಜತಪರದೆಯ ಮೇಲೆ ಕಂಡು ಸಂತೋಷದಿಂದ ಚಪ್ಪಾಳೆ ತಟ್ಟಿದರು (ಒಂತಿ). [ರಜತ + ಪರದೆ]

**ರಜತಪರ್ವತ** (ನಾ). = ರಜತಗಿರಿ: ಕನಕದಿವ್ಯವಿಮಾನಪಂಕ್ತಿಗಳನನೆಯದಿ ಬಂದೀಶ್ವರೇಶ್ವರ ಘನರಜತಪರ್ವತಕೆ ಕೊಂಡೊಯ್ವುವು ವಿಳಾಸದಲಿ (ಬಸವ. ೩೪-೦೯). [ಸಂ.]

**ರಜತಪಾತ್ರ** (ನಾ). ಬೆಳ್ಳಿಯ ಪಾತ್ರೆ: ಪರಶುರಾಮನ ಬರವಂ ಗಾಂಗೇಯಂ ಕೇಳ್ದಿದಿರ್ವಂದು ಕನಕರಜತಪಾತ್ರಂಗಳೊಳರ್ಘ್ಯಮಂ ಕೊಟ್ಟು ಪೊಡಮಟ್ಟು (ಕಂಕಣ. ೦-೭೭ ವ). [ಸಂ.]

**ರಜತಪಾತ್ರೆ** (ನಾ). = ರಜತಪಾತ್ರ: ಅನೇಕ ರಜತಪಾತ್ರೆಗಳ ಸಮರ್ಪಣೆಯೂ ಆಯಿತು (ಸತ್ಯಕ. ೪೦). [ಸಂ. ರಜತಪಾತ್ರ]

**ರಜತಪೀಠ** (ನಾ). ಬೆಳ್ಳಿಯ ಆಸನ: ದೇವರನ್ನು ರಜತಪೀಠದಲ್ಲಿ ಇರಿಸಿ ಆರತಿ ಬೆಳಗಿದರು (ಒಂತಿ). [ಸಂ.]

**ರಜತಮಹೋತ್ಸವ** (ನಾ). (ಸಂಘ, ಸಂಸ್ಥೆಗಳಿಗೆ) ಇಪ್ಪತ್ತೈದು ವರ್ಷಗಳು ತುಂಬಿದಾಗ ಆಚರಿಸುವ ಉತ್ಸವ–ಸಮಾರಂಭ; ಬೆಳ್ಳಿಹಬ್ಬ: ೧೯೧೦ರಲ್ಲಿ ಚಿಕಾಗೋ ವಿಶ್ವವಿದ್ಯಾಲಯದ ರಜತಮಹೋತ್ಸವವು ನಡೆದಾಗ . . . ಒಂದು ಉದ್ಗ್ರಂಥವನ್ನು . . . ಸಮರ್ಪಿಸಿದರು (ಸತ್ಯಕ. ೪೦). [ಸಂ.]

**ರಜತಮಾಲಿಕೆ** (ನಾ). ಬೆಳ್ಳಿಯ ಸರ: ರಜತಮಾಲಿಕೆಯ ಗುಣ–ಮನೋಹರವಾದ ಬಿಳುಪಾದ ಬೆಳ್ಳಿಯಿಂದ ಮಾಡಲ್ಪಟ್ಟ ಸರಗಳನ್ನು ಧರಿಸಿದ್ದಲ್ಲಿ . . . ಸಕಲಪಾಪಸಮೂಹಂಗಳಂ ನಾಶಮಾಡುವುದು (ಸಕಲ. ೩೬). [ಸಂ. ರಜತಮಾಲಿಕಾ]

**ರಜತಶಾಸನ** (ನಾ). ಬೆಳ್ಳಿಯ ಫಲಕದ ಮೇಲೆ ಕೆತ್ತಿರುವ ಶಾಸನ: ಓಜೆಗೊಳೆ ರಜತಶಾಸನ ರಾಜಪತ್ರಕದೊಳೆಸೆಯೆ ಬರೆಯಿಸುವಂತಾ ರಾಜತಶೈಲೇಂದ್ರದೊಳೆ ಮಹಾಜಿನಚಂದ್ರಂ ಪ್ರಶಸ್ತಿಯಂ ಬರೆಯಿಸಿದಂ (ಶಾಂತಿಪು. ೪-೩೯). [ಸಂ.]

**ರಜತಾದ್ರಿ** (ನಾ). = ರಜತಗಿರಿ: "ಪಿಂಜರಿವೆಟ್ಟು . . . ರಜತಾದ್ರಿಗೆಸಪ ನಾಮಮಾದಕ್ಕುಂ" (ಕಬಿಕಂ. ೪೩); ರಜತಾದ್ರಿಮುದ್ರಿತಮಹೀತಳಮಂ ಬೆಸಕೆಯ್ದು (ಅಂತ್ಯ. ೦೪-೬೦); ಹಿಮಾಲಯದೊಳೆಸವ ರಜತಾದ್ರಿಯೊಳ್ ತೇಜೋಮಯಮಂ ಸದಾಶಿವನಪ್ಪನು (ಕೈಬಿಪಾ. ೩-೩೩). [ಸಂ.]

**ರಜತೋತ್ಸವ** (ನಾ). = ರಜತಮಹೋತ್ಸವ: ಶಾಲೆಯ ವಾರ್ಷಿಕೋತ್ಸವ, ರಜತೋತ್ಸವ . . . ಮುಂತಾದ ಸ್ಮಾರಕಗಳನ್ನು ಆಚರಿಸುವುದು (ಶಿಕ್ಷಣ. ೩೨೦). [ಸಂ.]

**ರಜನ** (ನಾ). ೧. ಬಣ್ಣ; ರಂಗು. ೨. ಬಣ್ಣ ಬಳಿಯುವುದು; ರಂಗು ಹಾಕುವುದು. ೩. ಕದಿರು; ಕಿರಣ. ೪. ಕುಸುಂಬೆ ಹೂವು. [ಸಂ.]

**ರಜನಿ** (ನಾ). ೧. ಇರುಳು; ರಾತ್ರಿ: "ತಮಿಾ . . . ರಜನೀ, ಯಾಮಿನೀ . . . ರಾತ್ರಿಃ – ಈ ೧೯ ಇರುಳಿನ ಪೆಸರ್" (ಕಲಾಯು. ೦೮-೧೦೭); ರಜನಿಗಳ್ಗೆಂದಪಬಿಂಬವ್ರಜದಿಂ ಜ್ಯೋತ್ಸ್ನಾಪ್ರವಾಹಮಂ ಪಸರಿಪಪೋಲ್ ರಜತಕಲಶಂಗಳಂ ಮಳಯಜಜಳಮಂ ಸುರಿದರಸಿತನಳಿನೇಕ್ಷಣೆಯರ್ (ಕಾದಂಪೂ. ೬೪); ರಜನಿಗಾ ಚಂದ್ರಂ ಮಹಾಭೂಷಣಂ (ಸೋಮೇಶ. ೩). ೨. ದುರ್ಗೆಯ ಹೆಸರುಗಳಲ್ಲಿ ಒಂದು. ೩. ಅರಿಸಿನ: "ಅರಸಿನಂ ಸಿತಂ ಹನಿದ್ರೆ ರಜನಿಯೆನಿಸಕ್ಕು" (ಮಂಗರಾ. ೩೯-೨೩); ಕ್ರಿಮಿಯಿಂ ನೆಲ್ಲಿಯುಮಂ ಪಂತಿಯುಮಂ ರಜನಿಯುಮನರೆದು ಪೂಸಿದೊಡೆ . . . ಭಗಂಧರಂ ಪ್ರಶಮಿಸುಗುಂ (ಲೋಕೋಪ. ೯-೦೩೯); ರಜನಿ ಬರಿಪದಣಿ ಕಟುಕವ್ರಜಮಿನಿತುಮಂ . . . ಕುಡೆ . . . ಸಿಂ(ಘಾ)ಣಾಣ ಹರಂ (ಅಶ್ವಶಾ. ೦೦-೩೦). ೪. ಅರಗು. ೫. (ಆಲಂ) ಅಜ್ಞಾನ; ಮಾಯೆ: ಗಜಬಜಿಸುವ ಪಂಚಭೂತಗಳ ರಜನಿಗೆ ಸಿಲ್ಕದೆ (ಶಶಿಳ. ಭಾ. ೧೨೬-೦). [ಸಂ.]

**ರಜನಿಕರ** (ನಾ). ೧. ಚಂದ್ರ: "ವಿಧು ಚಂದ್ರಂ ರಜನಿಕರಂ . . . ತಾರಾಧೀಶಂ" (ವಸ್ತುಕೋ. ೦೨-೬೭) ; ಅಭಿನವೋದಯರಾಗರಂಜಿತನಪ್ಪ ರಜನಿಕರನಂ ನೋಡಲೊಡಂ (ಕಾದಂಪೂ. ೯೯೦). ೨. ಕರ್ಪೂರ. ೩. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ; ಏಕ: "ರಜನಿಕರಂ . . . ಒಂದವಿ ನಾಮಂ" (ವ್ಯವಹಾ. ೯-೦) [ಸಂ.]

**ರಜನಿಚರ** (ನಾ). ೧. ರಾತ್ರಿಯಲ್ಲಿ ಸಂಚರಿಸುವವನು. ೨. ರಾಕ್ಷಸ. ೩. ಕಳ್ಳ. ೪. ಚಂದ್ರ. ೫. ರಾತ್ರಿಯಲ್ಲಿ ಗಸ್ತು ತಿರುಗುವವನು. [ಸಂ.]

**ರಜನಿಚರಾಂಗನೆ** (ನಾ). ೧. ರಾತ್ರಿಯಲ್ಲಿ ಸಂಚರಿಸುವವಳು. ೨. ರಾಕ್ಷಸಿ: ತುಂಗಬಲ ಸೌಮಿತ್ರಿಯಿಂದುಜ್ಜ ಭಂಗಬಟ್ಟ ಮಹೋಗ್ರರಜನಿಚರಾಂಗನೆಯ ದೂಜಿಂನಲಿ ಬಿರನ್ನೈತಂದನಾಹವಕೆ (ತೊರರಾ. ೬-೫ ಸೂಚನೆ). [ಸಂ. ರಜನಿಚರಾಂಗನಾ]

**ರಜನೀಗಂಧ** (ನಾ). ರಾತ್ರಿಯಲ್ಲಿ ಸುಗಂಧ ಬೀರುವ ಹೂವುಗಳನ್ನು ಬಿಡುವ ಒಂದು ಬಗೆಯ ಬಳ್ಳಿ; ರಾತ್ರಿರಾಣಿ : ಬಂಗಲೆಯ ಆವರಣದೊಳಗಿನ ರಜನೀಗಂಧದ ಅರಳಿದ ಹೂಗಳು ತಮ್ಮ ಮಾದಕಸುಗಂಧವನ್ನು ಸುತ್ತಮುತ್ತಲೆಲ್ಲ ಹರಡಿದ್ದುವು (ಮ್ಯಜಂ. ೦೦೯). [ಸಂ.]

**ರಜನೀಚರ** (ನಾ). ೧. ರಾತ್ರಿಯಲ್ಲಿ ಸಂಚರಿಸುವವನು. ೨. ಚಂದ್ರ. ೩. ರಾಕ್ಷಸ ; ಅಸುರ : ರಜನೀಚರರ ಥಟ್ಟಣೆ ಧಾತುಗೆಡಿಸಿತು ದಿಟ್ಟರುಬ್ಬಟೆಯ (ಕುಮಾರವ್ಯಾ. ೦೫-೨೬). ೪. ಕಳ್ಳ; ತಸ್ಕರ. ೫. ರಾತ್ರಿ ಪಹರೆಯವನು: ಕರಸಿ ರಜನೀಚರನ ಆ ತೆರನರುಹಿ ತಿಳಿಯೆನಲು (ರಾಜಶೇ. ೦೬-೦೭). ೬. ರಾತ್ರಿಯಲ್ಲಿ ಸಂಚರಿಸುವ ಗೂಬೆ ಅಥವಾ ಬಾವಲಿ. [ಸಂ.]

**ರಜನೀಚರಿ** (ನಾ). ೧. ರಾತ್ರಿಯಲ್ಲಿ ಸಂಚರಿಸುವವಳು. ೨. ರಾಕ್ಷಸಿ : ರಜನೀಚರಿಯರ್ಕಳ ವಿಕ್ಕ ಪೆಕ್ಕಣಂ ಬಳ್ಳುವ ಸಾಹಣಂ ತಲೆಯ ಪೂಂಜೆಗೆ ಕುಂದವು ತತ್ಪ್ರದೇಶದೊಳ್ (ಕಾವ್ಯಸಾ. ೩೬೦ ಕೂಪ್ತ ೪). [ಸಂ. ರಜನೀಚರಿ]

**ರಜನೀಚಾರಿ** (ನಾ). ೧. ರಾತ್ರಿಯಲ್ಲಿ ಸಂಚರಿಸುವವನು. ೨. ಚಂದ್ರ. ೧, ೨ : ದೋಷಾಕರಾಹ್ವಾನಮಿಾ ರಜನೀಚಾರಿಗೆ ಸಲ್ಲದೇ ಕುವಲಯಾಪ್ತಂ ರಾಜನೇನಲ್ಲವೇ (ರಾಜಶೇ. ೧೦-೭೪). ೩. ರಾಕ್ಷಸ : ತೀರಿತಂದಿನ ರಜನಿ ರಜನೀಚಾರಿಯಾಯುವಿನಂತೆ (ತೊರರಾ. ೬-೯-೩೨). [ಸಂ. ರಜನೀಚಾರಿನ್]

**ರಜನೀಮುಖ** (ನಾ). ರಾತ್ರಿಯ ಪ್ರಾರಂಭ; ಸಂಜೆ : ಶಶಿಮುಖಿಯ ಮಾಯೆಯ ಬಳಸಿ ರಜನೀಮುಖದೊಳಗೆ ತಂದಭಯಾರ್ಕ್ಯನಿವರೆಲ್ಲರು (ತೊರರಾ. ೬-೦೦-೩೨); ಭೂಮಂಡಿದ ಮನೆಮನೆಯೊಳ್ ಸೊಡರುಮೆಸೆದುವು . . . ರಜನೀಮುಖಮೆಡ್ಡವಾದುದು (ರಾಮಾಶ್ವ. ೨೬-೨). [ಸಂ.]

**ರಜನೀರಜ** (ನಾ). ಅರಿಸಿನದ ಪುಡಿ : ಪೆರ್ದೊರೆಜಿಗಳೊಳ್. . . ನೀರಾಟಮನಾಡಿ ಪೋದ ವಾರನಾರಿಯರ ಪೊಂಜೆಳೆಮೆಯ್ಯೊಳ್ ರಂಜಿಸಿರ್ದ ರಜನೀರಜಂಗಳಿಂ ಕದಡೆಳ್ದು ಪರಿದಪುದು (ರಾಜಶೇ. ೦೨-೩೯ ವ). [ಸಂ.]

**ರಜನೀವಲ್ಲಭ** (ನಾ). ಇರುಳಿನ ಒಡೆಯ ; ಚಂದ್ರ.

**ರಜನೀವಲ್ಲಭ ವಾರ** = ರಾತ್ರಿಯ ಒಡೆಯನಾದ ಚಂದ್ರನ ದಿನ; ಸೋಮವಾರ : ಮಾರ್ಗಶಿರಶುದ್ಧೈಕಾದಶೀವಾಸರಂ ರಜನೀವಲ್ಲಭವಾರ ಮಶ್ವಿನಿನಿಶಾನಾಥಾಂಶಕಂ ಕೂಡೆ . . . ಪುಟ್ಟಿದಳ್. . . ಅತ್ತಿಮಬ್ಬೆ (ಅಜಿತ. ೦೨-೩೨). [ಸಂ.]

**ರಜನೀಶ** (ನಾ). = ರಜನೀವಲ್ಲಭ : ವಿಯೋಗಿ ರಜನೀಶ ಮರೀಚಿಯನೊಲ್ಲದಿರ್ದೊಡೇನಾದುದು (ತ್ರಿಪುರ. ೦-೨೦); ರಜನೀಶಂಗಬ್ಜನೀಕಾಂತನೀಂ ತೆಱಪಂ ಮಾಡು (ಶಬರ. ೦-೯೩). [ಸಂ.]

**ರಜಪಂತ** (ನಾ). ರಾಜಬೀದಿ ; ರಾಜಮಾರ್ಗ : ಉತ್ತರಸ್ಯಾನ್ದಿಶಿ ರಜಪನ್ತ ಅನ್ತೆ ಬಂದು ಮೊಹರೆಯ ಕೊಳ ಅನ್ತೆ ಬಂದು ಕೊಟ್ಟಲೆಪಳ್ಳದ ಅಲಕಿಜಾಕೆಯ (ಎಶಿ. XVI, ತಿಕಟೂ. ೦೪೦-೭೦ ; ಸು. ೧೫ನೆಯ ಶಿತ). [ಈ 'ಇದು' ರಾಜಪಂಥ ' ಎಂಬುದರ ಅಪಲಿಖಿತವಿರಬಹುದು]

**ರಜಪುತ, ರಜಪೂತ** (ನಾ). ಒಂದು ಕ್ಷತ್ರಿಯ ವಂಶ ಮತ್ತು ಅದಕ್ಕೆ ಸೇರಿದ ವ್ಯಕ್ತಿ : ರಜಪುತರಲ್ಲಿಯೂ ಗುಜರಾಥೀಜನರಲ್ಲಿಯೂ ಅವು ತಿನ್ನುವ ಚಟ ಹೆಚ್ಚು (ಮುಂಬಯಿ. ೪-೪೦). **ರಜಪೂತ** : ರಜಪೂತ ಕೃಷ್ಣಕೀರ್ತಿಯನೊಮ್ಮೆ ಕಣ್ದಣಿಯೆ ನೋಡುತ್ತ (ಕೃಷ್ಣಕು. ೪-೪). [ < ಸಂ. ರಾಜಪುತ್ರ ]

**ರಜಪುಷ್ಪಿ** (ನಾ). ಒಂದು ಬಗೆಯ ಸಸ್ಯ : ಆವರಿಕೆ : "ರಜಪುಷ್ಪಿ ಆವರವೆನಲ್ಕಾವರೆಯೆನಿಕ್ಕು" (ಮಂಗರಾ. ೪೦-೩೦). [< ಸಂ. ರಾಜಪುಷ್ಪಿ]

**ರಜಪೂತ** ' ರಜಪುತ ' ನೋ.

**ರಜಪೊರಿಗೆ** (ನಾ). ಧೂಳನ್ನು ಉಡುಗುವ ಸಾಧನ ; ಕಸಪೊರಕೆ : ಆನೆ ಮೊಜದಾಕಾರವೆಂದ ಕಿವಿಯ ಮುಟ್ಟಿದಾತ ಆನೆ ರಜಪೊರಿಗೆ [ಪಾಠಾಂ. ಬರಿಗೆ, ಪುಡಿಗೆ] ಯಾಕಾರವೆಂದ ಬಾಲವ ಮುಟ್ಟಿದಾತ (ಶಿವವ. ೪೫-೪೦). [ರಜ೧ + ಪೊರಿಗೆ(< ಪೊರಕೆ)]

**ರಜಬ** ' ರಜಬು ' ನೋ.

**ರಜಬು, ರಜಬ** (ನಾ). ಮಹಮ್ಮದೀಯ ವರ್ಷದ ಏಳನೆಯ ತಿಂಗಳು : ರಜಬು ತಿಂಗಳು ೯ನೇ ತಾರೀಕು (ರಾತೇಂದ್ರ. ೦೫೭). **ರಜಬ** : ಈ ಯುದ್ಧವು ರಜಬ ತಿಂಗಳಲ್ಲಾಯಿತು (ಹವಾಶ. ೨೨). [ ← ಅರ. ಪಾರ. ಮರಾ. ರಜಬ್ ]

**ರಜಯ್ಯ** (ನಾ). ಒಬ್ಬಾತನ ಹೆಸರು ; ಶ್ರೀಮಂತ್‌ಗಂಗಿಗವುಣ್ಡನ ಮಗ ರಜಯ್ಯ ತುಜುಮನಿಕ್ಕಿಸಿ ಸತ್ತಂ (ಎಶಿ. XIV, ನಾಗಮಂ. ೦೩೯-೫ ; 950). [ ? + ಅಯ್ಯ೧ ]

**ರಜರೂಪಿ** (ನಾ). (ಆಲಾ) ಸೂಕ್ಷ್ಮರೂಪದಲ್ಲಿರುವವನು : ರಜರೂಪಿ ಭಗವಂತನೆಂದಿಗೈತಹನೆಂದೆ ಅವನೆಯ ಗತಿ ನನಗೆಂದೆ (ಇಂಕಾಶ. ೦೦೬-೬೬). [ ಸಂ. ರಜರೂಪಿನ್ ]

**ರಜಸ್ವರ** (ನಾ). ಹೂವಿನ ಹುಡಿ ; ಪರಾಗ : ಸಮೀರನುದಾರಕವುಬಕೇತಕೀಪ್ರಸರರಜಸ್ವರಪ್ರಕಟಪಾಂಸುಳಮಾದುದು ಮೇಘಕಾಲದೊಳ್ (ಶಂಕರಾ. ೭-೨೨). [ < ಸಂ. ರಜಸ್ವಲ ]

**ರಜಸ್ವಲೆ** (ನಾ). ಮುಟ್ಟಾದ ಹೆಂಗಸು; ಬಹಿಷ್ಠೆ: "ಅವೀ:, ಉದಕ್ಯಾ, ರಜಸ್ವಲಾ, ಆತ್ರೇಯಿಕಾ, ಪುಷ್ಪವತೀ–ಈ ೫ ಮುಟ್ಟುವೆಗಂಡವಳ್" (ಹಲಾಯು. ೬೦-೩೩೪) ; ರಜಸ್ವಲೆಯಾಗಿರ್ದಂ ಮುಟ್ಟಲಾಗದೆನೆಯುಂ. . . ಮುಡಿಯುಂ ಪಿಡಿದು (ಶಂಕರಾ. ೭-೪ ವ) ; ಸೈರಿಸಿದರೇ ಪಾಂಡುಸುತ ರಂಭೋರುಹಾಕ್ಷಿ ರಜಸ್ವಲೆಯ ಸುಲಿಸೀರೆಯಲಿ (ಕುಮಾರವ್ಯಾಗ. ೦೦-೪). [ ಸಂ. ರಜಸ್ವಲಾ ]

**ರಜಸ್ಸು** (ನಾ). ೧. ಧೂಳು ; ಹುಡಿ. ೨. ಸತ್ವ, ರಜ ಮತ್ತು ತಮಗಳೆಂಬ ಮೂರು ಗುಣಗಳಲ್ಲಿ ಒಂದು ; ರಜೋಗುಣ. ೧, ೨ : ಕೆಸಱೊಳ್ ಪುಟ್ಟಿದುದುಂತುಮಲ್ಲದೆ ರಜಸ್ಸಂಲೀಢಮುಂತುಂ ಜಡಾವಸಥಂ (ಜಗಾ. ೦-೬). [ಸಂ. ರಜಸ್]

**ರಜಾ, ರಜ೩, ರಜೆ** (ನಾ). ೧.ಶಾಲೆ, ಕಾಲೇಜು, ಕಚೇರಿ ಮೊದಲಾದವುಗಳಿಗೆ ಕೊಡುವ ಬಿಡುವು ; ಸೂಟಿ : ಶಾಲೆಯ ವಿದ್ಯಾರ್ಥಿ ರಜಾದಿನಗಳಲ್ಲಿ ಮಾಡಬೇಕಾದ ಕೆಲಸ ; ರಜಾಕಾಲದ ಕೆಲಸ (Holiday-Task. ಇಂಕಾ). ೨. ನೌಕರನು ಮೇಲಧಿಕಾರಿಯ ಅನುಮತಿಯಿಂದ ಪಡೆಯುವ ಬಿಡುವು : ರಜಾದ ಮೇಲೆ ಹೋಗುವ ಕಾಲ ವಿನಹಾ ಮತ್ಯಾರನ್ನು ಬದಲಿಯಾಗಿ ಇಡಕೂಡದು (ಗ್ರಾಮಶಿ. ೫). **ರಜ೩** : ೧. ಅಕ್ಕ! ನಾಳೆ ದೀಪಾವಳೀ ಹಬ್ಬವಂತಲ್ಲೇ! ನಮಗೆ ರಜ ಬಿಟ್ಟು ಬಿಟ್ಟಿದ್ದಾರೆ (ಮೂಗ್ಧ. ೫೩). ೨. ರಂಗಣ್ಣ ಎರಡು ತಿಂಗಳು ಕಾಲ ರಜ

ತೆಗೆದುಕೊಂಡು ಬೆಂಗಳೂರಿಗೆ ಬಂದು ವಾಸಮಾಡುತ್ತಿದ್ದನು (ರಂಗಕ. ೦); ಸರಕಾರದವರು . . . ಅವರಿಗೆ ಹೆಚ್ಚಿನ ರಜವನ್ನು ಮಂಜೂರುಮಾಡಿ ಬೇಕಾದ ಅನುಕೂಲತೆಗಳನ್ನು ಮುಂದುವರೆಸಿಕೊಟ್ಟರು (ಸಸ್ಕ. ೦೦೨). **ರಜೆ** : ೧. ಅಂದು ಕ್ರಿಶ್ಚಿಯನ್ನರ ಯಾವುದೋ ಹಬ್ಬಕ್ಕಾಗಿ ರಜೆಯಿತ್ತು (ಧಾರೆ. ೪) ; ನಿನ್ನೆಯಿಂದ ದುರ್ಗಾಪೂಜೆಯ ರಜೆ ಆರಂಭವಾಗಿದೆ (ಳುಂಹಿಂ. ೦). ೨. ಅವನು ಒಂದು ವರ್ಷದ ರಜೆಯನ್ನು ಕೇಳಿದನು (ಸ್ಕೂರಬಿ. ೨೮) ; ನಾನು ಕಳೆದ ತಿಂಗಳಿನಲ್ಲಿ ಮೂರು ದಿನ ರಜೆಗೆ ಬರೆದಿದ್ದೆ (ಮಗವೂಂ. ೬೦).

**ರಜದ ಊಳಿಗ**=ರಜ ಪಡೆದುಕೊಂಡ ದಿನಗಳಿಗೆ ಬದಲಾಗಿ ಕೆಲಸ ಮಾಡುವುದು : ಅರಮನೆಯಲ್ಲಿ ಸಮ್ಮುಖದೊಳು ನಿತ್ಯಕಟ್ಟಳೆಯಲ್ಲಿ ನಡೆಯುವ ಊಳಿಗಗಳು – ಸಂಬಳದ ಊಳಿಗ . . . ಅವಸರದ ಊಳಿಗ, ರಜದ ಊಳಿಗ (ಮಹಾವಂ. I. ೪೩). [←ಅರ. ಹಿಂ. ಮರಾ. ರಜಾ]

**ರಜಾಕಾರ** (ನಾ). ಭಾರತಕ್ಕೆ ಸ್ವಾತಂತ್ರ್ಯ ಬಂದ ತರುಣದಲ್ಲಿ ಹೈದರಾಬಾದಿನಲ್ಲಿ ಸ್ಥಾಪಿತವಾಗಿದ್ದ, ಒಂದು ರಾಷ್ಟ್ರವಿರೋಧಿ ಮುಸ್ಲಿಂ ದಳ : ಆಗಲೇ ರಜಾಕಾರರ ಚಟುವಟಿಕೆಗಳು ತೆರೆಯ ಹಿಂದೆ ಏಳಹತ್ತಿದ್ದವು (ತೇರಾವ. ೬೦) : ಈ ರಜಾಕಾರರಂತಹ ಮಕ್ಕಳ ಕಾಟಕ್ಕೆ ಅದಾವ ಗಿಡ ಬದುಕಲು ಸಾಧ್ಯ ? (ಹುತ್ಮಹು. ೭೨). [←ಹಿಂ. ರಜಾಕಾರ್]

**ರಜಾಮಂದಿ**, ರಜಾವಂದಿ (ನಾ). ಸಮ್ಮತಿ; ಒಪ್ಪಿಗೆ : 'ಸುಮಾರಾಗಿ ಊಟ ಅಥವಾ ತಿಂಡಿಯ ಹೊತ್ತಿಗೆ ಜಗಳ ಬರುವದು ವಾಡಿಕೆ. ಊಟ ಅಥವಾ ತಿಂಡಿ ತಯಾರಾಗಿ ಬಾಯಿಗೆ ಸಿದ್ಧವಾಯಿತೋ, ಕೂಡಲೇ ರಜಾಮಂದಿ ' (೪೩ಗಾ. ೦). **ರಜಾವಂದಿ** : ರಾಜರು . . . ತಮ್ಮ ಹೆಸರು ಸಹಿ ಹಾಕಿ, ರಜಾವಂದಿಯಿಂದ ಕೊಡದೆ (ರಾಕೇಂದ್ರ. ೦೯).

[←ಪಾರ. ಹಿಂ ರಜಾಮಂದೀ ; ಮರಾ. ರಜಾಮಂದೀ, ರಜಾವಂದೀ, ರಜಾವಂತೀ]

**ರಜಾಯಿ** (ನಾ). ೧. ತೆಳ್ಳಗಿರುವ ಹಾಸುಗೆ; ಲೇಪು : ಮೆತ್ತನೆಯ ಪದಾರ್ಥವನ್ನಿಟ್ಟು ಅಡ್ಡ ಹೊಲಿಗೆ ಹಾಕಿ ಮಾಡಿದ ಹಾಸಿಗೆ, ಮೆತ್ತೆ ; ರಜಾಯಿ (Quilt. ಇಂಕೋ) ; ಶಿವಮೊಗ್ಗೆಯಲ್ಲಿ ಚಳಿ ಹೆಚ್ಚೆಂದು . . . ರಗ್ಗುಗಳನ್ನೂ, ರಜಾಯಿಗಳನ್ನೂ, ರುಮಾಲುಗಳನ್ನೂ ಕಡ ತಂದವರೆಷ್ಟೊ (೪ಹಜಾತ್ರ. ೩೦). ೨. ಅರಳೆ ತುಂಬಿ ಮಾಡಿದ ತೆಳುವಾದ ಹೊದಿಕೆ : ಹುಡುಗಿಗೆ ರಜಾಯಿಯೊಂದನ್ನು ಹೊದಿಸಿದಳು (ತತತ. ೨೦).

[←ಪಾರ. ಹಿಂ. ರಜಾಈ ; ಮರಾ. ರಜಾಈ, ರಜಈ]

**ರಜಾವಂದಿ** ' ರಜಾಮಂದಿ ' ನೋ.

**ರಜೆ** ' ರಜಾ ' ನೋ.

**ರಜೋಗುಣ** (ನಾ). ರಾಜಸ, ತಾಮಸ ಮತ್ತು ಸಾತ್ತ್ವಿಕಗಳೆಂಬ ಮೂರುಗುಣಗಳಲ್ಲಿ ಒಂದು ; ಕಾಮಕ್ರೋಧಗಳಿಂದ ಕೂಡಿರುವ ಸ್ವಭಾವ ; ರಾಜಸಗುಣ : ಘನರಜೋಗುಣದಲ್ಲಿ ಚತುರಾನನ ತಮೋಗುಣದಲ್ಲಿ ಶಂಕರನೆನಿಸಿ (ಕುವ್ಯಾಸ. ೪-೩) ; ರಜೋಗುಣಭರಿತಂ . . . ಲಂಕಾನಾಥಂ (ತೊರರಾ. ೬-೭-೦). [ಸಂ.]

**ರಜೋಗ್ರಹ** (ನಾ). ಬುಧ, ಶುಕ್ರ ಮುಂತಾದ ರಾಜಸಗುಣವುಳ್ಳ ಗ್ರಹ : ಶಶಾಂಕಜನುಂ ಭಾರ್ಗವನುಂ ರಜೋಗ್ರಹಂ ಭಾನವನುಂ ಮಾಹೇಯನುಂ ತಮೋಗ್ರಹಮೆನಿಪರ್ (ಜಾತಿ. ೪-೦). [ಸಂ.]

**ರಜೋದರ್ಶನ** (ನಾ). (ಮೊದಲನೆಯ ಬಾರಿಗೆ) ಮುಟ್ಟಾಗುವಿಕೆ ; ರಜಸ್ವಲೆಯಾಗುವಿಕೆ. [ಸಂ.]

**ರಜೋವಿಕೃತಿ** (ನಾ). ೧. ಧೂಳು ತುಂಬಿರುವುದು. ೨. ಹೂವಿನ ಧೂಳು ಏಳುವುದು ; ಪರಾಗ ಉಂಟಾಗುವುದು. ೩. ರಜೋಗುಣದಿಂದ ಉಂಟಾಗುವ ಮನೋವಿಕಾರ. ೨. ೩ : ರಜೋವಿಕೃತಿಜಾತಿಸಂಕರಂ . . . ಇಲ್ಲ ಬನದೊಳಲ್ಲದೆ ಜನದೊಳ್ (ಕುಕೃತ. ೨-೨೮). ೪. ಮುಟ್ಟಾಗುವುದು. ೧, ೪ : ಉಪಶಾಂತರಜೋವಿಕೃತಿಯಿನುಪಾತ್ತಕಾಳಿಮಪಯೋಧರಾಸ್ಯತೆಯಿಂ ಮತ್ತುಪಚಿತ ಜಡವೃತ್ತಿಯಿನೆಯ್ದೆ ಪೋಲ್ತುದಭ್ರಾಗಮಂ ಸಗರ್ಭಾಂಗನೆಯಂ (ಕಂಪ್ರಕು. ೪-೪೩). [ಸಂ.]

**ರಜ್ಜು** (ನಾ). ೧. ಹಗ್ಗ ; ಪಾಶ : ''ಶುಲ್ಬಾ, ರಜ್ಜುಃ, ವಟಾರಃ, ವಟಃ, ತಂತ್ರೀಗುಣಃ – ಈ ೫ ನೇಣ್'' (ಕರಾಯು. ೧೮-೪೪೩) ; ಅತಿಚಪಳಮೆನಿಪ್ಪಿಂದ್ರಿಯತತಿಯಂ ತೆಗೆದೊಳಗೆ ಪಿಡಿದು ಕಟ್ಟಿದ ರಜ್ಜುಪ್ರತತಿಯಿದೆಂಬಿನೆಗಂ ಯತಿಪತಿಗೆಸೆದುವು ಕೊರಳೊಳಮರ್ದ ಸರೆಗಳ ತುಱುಗಲ್ (ಕಾರಂಪೂ. ೨೩೯) ; ಅಗ್ನಿ ರಜ್ಜುವಿನಿಂದ ಕಟ್ಟಲ್ಪಡುವುದೆ (ವಶಸಂ. ೪೭೮-೦೮೩); ಪ್ರಭುಗಳು . . . ಕುದುರೆಗಳ ಕಡಿವಾಣದ ರಜ್ಜುಗಳನ್ನು ಕೈಗೆ ತೆಗೆದುಕೊಂಡರು (ಶಾಂಕಲಾ. ೬೨೦). ೨. ಜಡೆ ; ಹೆರಳು. ೩. ಬೆನ್ನುಮೂಳೆಯಿಂದ ಹೊರಡುವ ಸ್ನಾಯು. ೪. [ಜೈನ] ಲೋಕಾಕಾರ ವರ್ಣನೆಯಲ್ಲಿ ಬರುವ ಉದ್ದಳತೆಯ ಒಂದು ಪ್ರಮಾಣ ; ಎಂಟುಹಸ್ತಗಳಷ್ಟು ಪ್ರಮಾಣ : ಏಕರಜ್ಜುಪ್ರಮಾಣಂ ತಿರ್ಯಗ್ಲೋಕಂ (ಅರಿಕು. ೦-೪೮) ; ರಜ್ಜುಗಳೇಳು ಕೆಳಗೆ . . . ನಿರ್ಜರನಿಳಯದಗ್ರದೊಳೊಂದು ಪದಿನಾಲ್ಕು ರಜ್ಜುದ್ದ ಲೋಕವೊಪ್ಪುವುದು (ಅನಂತ. ೦-೩೦) ; ತ್ರಿಲೋಕವು ಆದಿಯಿಂದ ತುದಿಯವರೆಗೆ ದಕ್ಷಿಣೋತ್ತರ ೧೪ ರಜ್ಜು ಉದ್ದವಾಗಿದೆ (ಕೃಪರ. ೩೩). ೫. ರೇಖಾಗಣಿತ: ರಜ್ಜು (= ಹಗ್ಗ) ಎಂಬುದು ರೇಖಾಗಣಿತಕ್ಕೆ ಪ್ರಾಚೀನ ನಾಮಧೇಯ (ಗಣಿತ. ೨೦೨). ೬. [ಜ್ಯೋತಿ] ಆಶ್ರಯಯೋಗಗಳಲ್ಲಿ ಒಂದು ; ಏಳುಗ್ರಹಗಳೂ ಚರರಾಶಿಗಳಲ್ಲಿರುವುದು : ಚರರಾಶಿಯೊಳೇಳುಂಗ್ರಹಮಿರೆ ಯೋಗಂ ರಜ್ಜುವೆನಿಸುಗುಂ (ಜಾತಿ. ೦೩-೧); ''ಚರರಾಶಿ (ಮೇಷ ಕರ್ಕಟಕ ತುಲಾ ಮಕರ)ಗಳಲ್ಲಿ ಏಳುಗ್ರಹಗಳೂ ಇದ್ದರೆ ರಜ್ಜುಯೋಗ'' (ಜಾತಿ. ೦೩-೦ ಟೀಕೆ).

**ರಜ್ಜುಸರ್ಪನ್ಯಾಯ** = ಲೌಕಿಕನ್ಯಾಯಗಳಲ್ಲಿ ಒಂದು ; ಹಗ್ಗವನ್ನು ಹಾವೆಂದು ತಿಳಿಯುವುದು : ಆ ಮನವೆಂಬ ಕರಣದಲಿ ರಜ್ಜುಸರ್ಪನ್ಯಾಯ ಸ್ಥಾಣುಚೋರನ್ಯಾಯದಂತೆ ತಾನು ಪರವಸ್ತುಸ್ವರೂಪನು (೪ರಹ. ೩೯). [ಸಂ.]

**ರಟನ** (ನಾ). ಕೂಗುವಿಕೆ ; ಅಬ್ಬರ : ನಿಬಿಡತರ, ಪಟುರಟನದೊಡನೆ ಘುಡಿಘುಡಿಪ ಸುಭಟಪಟಲಕಳಕಳಂ . . . ಅಳುರ್ಕೆಗೊಳೆ (ರಾಜಶೇ. ೬-೦೦ ವ). [ಸಂ.]

**ರಟಿಸು** (ಕ್ರಿ). ಕೂಗಿ ಹೇಳು : ಉದ್ಘೋಷಿಸು : ಕನ್ನಡ ಹುರುಮುಂಜಿ ಸೊರಟ ಗುಜ್ಜರಾದಿ ನಾಡಿನೊಳು ರಟಿಸುತನಂತವೀರ್ಯಸ್ವಾಮಿಯುರು ಗಂಧಕುಟಿ ಬಂದುದು (ಛಂಕ. ೩೯-೭). [ರಟನ + – ಇಸು₃]

**ರಟ್ಟ**, ಱಟ್ಟ (ನಾ). ೧. ಹಿಂದೆ ಕರ್ನಾಟಕದಲ್ಲಿ ಸಾಮಂತರಾಗಿದ್ದ ಒಂದು ಅರಸುಮನೆತನದ ಹೆಸರು : ಧರಣಿಗೆ ನೆಗೞ್ದರ್ ರಟ್ಟರಾಜ್ಯದೊಳ್ ಮುನ್ನೆ ಪಂಪನುಂ ಪೊನ್ನಿಗನುಂ (ಅಜಪು. ೦೨-೪೦) ; ರಣರಂಗಭೀಷಣಂ ರಟ್ಟವಂಶೋದ್ಭವಂ ಸೆನ್ದೂರ ಲಾ[ಂ]ಛನಂ ಬಿರುದರ ಸಿಂಗಂ . . . ಶ್ರೀಮನ್ಮಹಾಸಾಮನ್ತನೆಱೆಯಮ್ಮಂ (ಸೌಇಇ. XI-i, ೭೪-೯; 1041). ೨. ಒಬ್ಬಾತನ ಹೆಸರು : ಪೊಸವೂರ ಚೇದಮ್ಮನುಂ ಕನ್ನರನುಂ ಕಳ್ಳವ್ವಣಸೆಯ ರಟ್ಟನು (ಎಕ. XI, ಚಿತ್ರದು. ೭೪-೨೮ ; 968). **ಱಟ್ಟ** : ೧. ಱ[ಟ್ಟ]ರ ಪಟ್ಟಜಿನಾಲಯಕಟ್ಟಳೆವಾದಯ್ವತ್ತೊಕ್ಕಲನುಮತದಿಂದಂ ಕೊಟ್ಟರ್ ಜಿನೇಂದ್ರಪೂಜೆಗೆ (ಸೌಇಇ. XX. ೦೮-೨; 980) ; ಅವಿಹಿತವೇಗಂ . . . ಅಂಬರಕ್ಕೆ ನಿಳ್ಕುವ ಜಯಕೇತು ಸಂದೆಯದೆ ದಂದುಗಮಂ ಕಿಡಿಸಿತ್ತು ಮುಂದಣೋಡುವ ರಿಪುದಂತಿಗಂ ಪೆಱಗಣಟ್ಟುವ ಱಟ್ಟರ ಮೇರುದಂತಿಗಂ (ಕಾವ್ಯಾವ. ೬೨೦). ೩. ' ಱಟ್ಟಮತ ' ಎಂಬ ಕಾವ್ಯವನ್ನು ಬರೆದ ಒಬ್ಬ ಕನ್ನಡಕವಿಯ ಹೆಸರು : ಗುರುವೀರೇಟುಂ ಮಾಸಮುಮಿರೆ ಪ್ರಾಜಾಪತ್ಯಂ

ದೈವಮಪಟಿ ಪೆಸರಂತಿರೆ . . . ಜಟ್ಟಿನಾ ಪಂತದಿಂದಂ (ಅಭಿಪು. ೦೨-೦೭೩).

**ರಟ್ಟಕಂದರ್ಪ** = ರಟ್ಟವಂಶದವರಲ್ಲಿ ಮನ್ಮಥನಂತಿರುವವನು : ಒಂದು ಬಿರುದು : ಪೊಜಗೊಳಗೆಡದೊಳಂ ಬಲದೊಳಂ ಕಪುಗಡಂಪಿನ್ನೆ ಬಪ್ಪ್ ವಳಯನ್ನಪ್ಪಡೆ ಚಾರಿಸಾಪ್ಪೋಜೆಯಂ ರಟ್ಟಕನ್ದರ್ಪನನ್ಬಾವಂ ಬಲ್ಲಂ (ಎಕ. II, ೦೩೩-೯೩ ; 982). **ರಟ್ಟಘರಟ್ಟ** = (ಅಲಂ) ರಟ್ಟರನ್ನು ನಾಶಮಾಡಿದವನು ; ಒಂದು ಬಿರುದು : ರಟ್ಟರಾಜ್ಯದರಸುಗಳ್ ಮುಂ ಬಿಟ್ಟು ತಱಿದೊಟ್ಟಿ ರಟ್ಟಘರಟ್ಟಂ ಚಾಳುಕ್ಯರಾಜ್ಯಪಟ್ಟಮನಾತಂ (ಎಕ. V, ೦೩-೦೨ ; 1019). **ರಟ್ಟಮಾರ್ತಂಡ** = ರಟ್ಟರಲ್ಲಿ ಸೂರ್ಯನಂತಿರುವವನು ; ಒಂದು ಬಿರುದು : ರಟ್ಟಮಾರ್ತಣ್ಡಂ . . . ಶ್ರೀಮನ್ಮಹಾಸಾಮನ್ತನೆಱಿಯಪ್ಪಂ (ಸೌಇಇ. XI-i, ೭೯-೯ ; 1041). **ಱಟ್ಟವೆಡಂಗ** = ಚೆಲುವನಾದ ರಟ್ಟ ; ರಟ್ಟಕವಿಯ ಒಂದು ಬಿರುದು : ಮನಸಿಜನನ್ನಿಭನೆನಿಸಿದ ವಿನಯಗುಣೋತ್ತುಂಗನೆಸೆವ ಱಟ್ಟವೆಡಂಗಂ (ಅಭಿಪು. ೦-೨೩). P ಈ ಶಬ್ದದಲ್ಲಿರುವ 'ಱ' ಕಾರದ ಅಸ್ತಿತ್ವ ವಿಚಾರಣೀಯವಾದುದರಿಂದ ಕಾವ್ಯಪ್ರಯೋಗಗಳನ್ನು ದೊರಕಿದ ರೂಪದಲ್ಲಿಯೇ ಕೊಡಲಾಗಿದೆ . [< ಸಂ. ರಾಷ್ಟ್ರಕೂಟ]

**ರಟ್ಟಕುಳ, ಱಟ್ಟಕುಲ, ಱಟ್ಟಕುಳ** (ನಾ). ಒಂದು ವಂಶದ ಹೆಸರು ; ರಾಷ್ಟ್ರಕೂಟವಂಶ : ರಟ್ಟಕುಳಾನ್ವಯನೃಪರುಂ ಪಟ್ಟದ ತವಪ್ಪರ್ಗನೆಗಳೆನಿಪ ಗಾವುಂಡುಗಳುಂ ಬಿಟ್ಟರ್ಜಿನೇಂದ್ರಪೂಜೆಗೆ (ಸೌಇಇ. XX, ೦೯-೦; 980). **ಱಟ್ಟಕುಲ** : ಱಟ್ಟಕುಲಾಗ್ರಣಿ ಧರಣೀಪಟ್ಟಂ ನಿಜನೊಸಲೊಳೆಸೆಯೆ (ಕೊಲ್ಹಾಶಾ. ೨೨-೨೩ : 1209). **ಱಟ್ಟಕುಳ** : ಱಟ್ಟಕುಳಭೂಷಣಂ ಸಿಂಧೂರಲಾಂಛನಂ (ಕೊಲ್ಹಾಶಾ. ೨೩-೦೦; ?). [ರಟ್ಟ + ಕುಳ$_{5}$ (= ಕುಲ)]

**ರಟ್ಟಗಡ** (ನಾ). ಒಂದು ಊರಿನ ಹೆಸರು : ಪಣರವಾಡಿಯ ರಟ್ಟಗಡ ಸಣ್ಣಪಯ್ಯನ ಮಗ ಅಸಗಯ್ಯ (ಎಕ. V, ಚನ್ನರಾ. ೨೭೭-೦೨; 971). [ರಟ್ಟ + ಗಡ$_{3}$]

**ರಟ್ಟಪಳ್ಳಿ** (ನಾ). ಒಂದು ಊರಿನ ಹೆಸರು ; P ಈಗಿನ ಧಾರವಾಡ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ರಟ್ಟಿಹಳ್ಳಿ : ಬನವಾಸಿನಾಡಂ ಛಲದಙ್ಕರಾಮನ್ ಸಾಸ್ಸಿರನಾಳೆ ರಟ್ಟಪಳ್ಳಿಯ ಪೊಲಗನು × × × (ಎಕ. VII, ಹೊನ್ನಾಳಿ. ೨೩-೭; 934). [ರಟ್ಟ + ಪಳ್ಳಿ$_{1}$]

**ರಟ್ಟಪಾಡಿ** ' ರಟ್ಟವಾಡಿ ' ನೋ.

**ರಟ್ಟವಾಡಿ, ರಟ್ಟಪಾಡಿ** (ನಾ). ರಾಷ್ಟ್ರಕೂಟರು ಆಳುತ್ತಿದ್ದ ಪ್ರದೇಶ : ರಾಷ್ಟ್ರಕೂಟರ ನಾಡು : ಪನ್ನಿರುವರುಂ ರಟ್ಟವಾಡಿ ಮೇಗೆ ವಣ್ಣುವೋದಲ್ಲಿ (ಎಕ. XII, ಮಧುಗಿ. ೯೨-೨ ; ಸು. 750). **ರಟ್ಟಪಾಡಿ** : ಪೊಗೞ್ವೊಡುಪಡಿಯ ರಟ್ಟಪಾಡಿಯೇೞ[ಱ] ಲಕ್ಕಮುಂ (ಎಕ. VII (R). ಶಿಂಡ್ಯ. ೩೩-೩೩ : 1024) ; ಅವರು ಆಳಿದ ನಾಡಿಗೆ ರಟ್ಟಪಾಡಿಯೆಂದು ಹೆಸರು (ಶಾಇಶ್ರ. ೨೯೭). [ರಟ್ಟ + ಪಾಡಿ$_{2}$]

**ರಟ್ಟಿಕ್ಕು** (ಕ್ರಿ). ಕೂಗು ; ಕಿರುಚು : ಕೊಡುಕೊಡೀಕ್ಷಣ ಸಲ್ಲದೊಡೆ ನಾ ನುಡಿದ ಶಪಥವನಾಂತೊಪ್ಪದೆ ಬಿಡೆನೆನುತ್ತೋರಂತೆ ಶಿವಘೋಷಮೆನುತ ರಟ್ಟಿಕ್ಕೆ (ಬಸಪು. ೨೭-೬೯). [< ರಟನ + ಇಕ್ಕು]

**ರಟ್ಟು$_{1}$** (ನಾ). ೧. ಎರಡೆಳೆಗಳನ್ನು ಜೊತೆಯಾಗಿ ಹಾಕಿಕೊಂಡು ನೆಯ್ದ ದಪ್ಪಬಟ್ಟೆ ; ಒರಟುಬಟ್ಟೆ : (?). ೨. ಪುಸ್ತಕಕ್ಕೆ ಹಾಕುವ ದಪ್ಪಬಟ್ಟೆ ಅಥವಾ ದಪ್ಪಕಾಗದದ ಮೇಲುಹೊದಿಕೆ ; ಬೈಂಡು : ಕಡತವನ್ನು . . . ಮಡಿಸಿ ಎರಡುಕಡೆಗಳಿಗೂ ರಟ್ಟನ್ನು ಹಾಕಿ ಕಟ್ಟುತ್ತಿದ್ದರು (ಕನ್ನಸಂ. ೯೦). ೩. ಪುಸ್ತಕವು ಕೊಳೆಯಾಗದಂತಿರಲು ಮೇಲೆ ಹಾಕುವ ಕಾಗದದ ಹೊದಿಕೆ : ಪುಸ್ತಕಕ್ಕೆ ದಪ್ಪಕಾಗದದಿಂದ ರಟ್ಟು ಹಾಕಿದರೆ ಚೆನ್ನಾಗಿ ಬಾಳಿಕೆ ಬರುತ್ತದೆ (ರೂಢಿ). [ದೇ.॥ ತೆಲು. ರೆಟ್ಟ, ರೆಟ್ಟು]

**ರಟ್ಟು$_{2}$** (ನಾ). ಯಾವುದಾದರೂ ವಿಷಯವನ್ನು ಬಹಿರಂಗ ಪಡಿಸುವಿಕೆ, — ಹೊರಗೆಡಹುವಿಕೆ, — ಪ್ರಕಟಿಸುವಿಕೆ : ಮರುಳಿ ರಟ್ಟಾದ ಹಾದರಗಿತ್ತಿ . . . ರೋಗಿಯೆಂಬರ ಕೂಡೆ ರತಿಗೆಯ್ಯದವನೆ ಚದುರಂ (ಜನಪ. ೦೨-೦೭); ರಟ್ಟುಮಾಡುವದಾಯತವಲ್ಲ ಹೇಳ್ಬೊಡಂಬಟ್ಟುದೆ ಸ್ಮರಕುಮಾರನಿಗೆ (ಮೋಹತ. ೭೭-೭೩) ; ಸಾಕುಮಾಡಿರವ್ವ . . . ಭ್ರಷ್ಟಮಾತುಗಳನೆಷ್ಟೋ ಕಲ್ಪಿಸಿ ಪಟ್ಟುಪಟ್ಟಿಗೆ ರಟ್ಟುಮಾಡುವುದ (ಪುರಂದ. ದಾ. ೪-೭೭-೦) ; ಸಂಸಾರ ಗುಟ್ಟು, ರೋಗ ರಟ್ಟು (ಗಾದೆ). [ದೇ.॥ ತೆಲು. ರಟ್ಟು]

**ರಟ್ಟುಕಟ್ಟು$_{1}$** (ಕ್ರಿ). ಪುಸ್ತಕ ಮೊದಲಾದುವುಗಳಿಗೆ ಹೊದಿಕೆಯನ್ನು ಹಾಕು ; ರಟ್ಟುಹಾಕು : ನನ್ನಲ್ಲಿ ಗ್ರಂಥದ ರಟ್ಟುಕಟ್ಟಿದ ಪ್ರತಿಗಳಿಲ್ಲ. ನಿಮಗೆ ಬೇಕಾದರೆ ಬಿಡಿಪುಸ್ತಕವನ್ನು ಕೊಡುತ್ತೇನೆ (ಕನ್ನಸಂ. VI, ೪೦೯). [ ರಟ್ಟು$_{1}$ + ಕಟ್ಟು$_{1}$ ]

**ರಟ್ಟುಕಟ್ಟು$_{2}$** (ನಾ). ಪುಸ್ತಕಗಳ ಹೊದಿಕೆ, — ಕವಚ : ಹೊಸ ಗ್ರಂಥಗಳು ಭಂಡಾರವನ್ನು ಸೇರಿದೊಡನೆಯೆ ಅವುಗಳ ರಟ್ಟುಕಟ್ಟು, ಅಚ್ಚು . . . ಸರಿಯಾಗಿವೆಯೋ ಎಂದು ಪರೀಕ್ಷಿಸಬೇಕು (ಗ್ರಂಥಾಂ. ೦೯). [ರಟ್ಟು$_{1}$ + ಕಟ್ಟು$_{2}$]

**ರಟ್ಟೆ** 'ಜಟ್ಟೆ' ನೋ.

**ರಟ್ಟೆಗೆಡಹು** (ಕ್ರಿ). ತೋಳನ್ನು ಕಡಿದು ಬೀಳಿಸು, — ಕತ್ತರಿಸಿ ಹಾಕು : ಅರಿಮನೊಗ್ಗರಿಯ ರಟ್ಟೆಗೆಡಹಿ ರಣರಂಗವೀರನು ಜಗಜಟ್ಟಿ ನಟ್ಟಾಳು ರಾಜರಿಗೆ (ಸೌಂದರಾ. ೯-೯೭). [ರಟ್ಟೆ (<ಜಟ್ಟೆ) + ಕೆಡಹು (<ಕೆಡಪು)]

**ರಟ್ಟೆಪಲ್ಲವಿ** (ನಾ). [ಸಂಗೀತ] ಜೊತೆಪಲ್ಲವಿ ; ಜೋಡಿಪಲ್ಲವಿ : ರಟ್ಟೆಪಲ್ಲವಿ ಎಂಬುದು ನಿಜವಾಗಿ ಎರಡು ಬೇರೆ ಬೇರೆ ಪಲ್ಲವಿಗಳು. ಆದರೆ ಎರಡನ್ನೂ ಮಾಧುರ್ಯದಿಂದ ಒಂದುಗೂಡಿಸಿ ಒಂದೇ ಪಲ್ಲವಿಯೆನ್ನುವಂತೆ ಹೆಣೆದುದು (ಸಂಗೀತ. ೩೯). [ರಟ್ಟೆ$_{0}$ (P←ತಮಿ. ಇರಟ್ಟೈ = ಜೊತೆ; ತೆಲು. ರೆಟ್ಟ = ಜೊತೆ) + ಪಲ್ಲವಿ]

**ರಡ್ಡಿ** ' ರೆಡ್ಡಿ ' ನೋ.

**ರಣ$_{1}$** ' ಬ್ರಣ ' ನೋ.

**ರಣ$_{2}$** (ನಾ). ೧. ಕಾಳಗ ; ಯುದ್ಧ : "ಸಂಗ್ರಾಮಃ . . . ರಣಂ . . . ವಿಗ್ರಹಃ — ಈ ೩೫ ಕಾಳೆಗಂ" (ಪಲಾಯು. ೭೩-೩೦೦); ವಿಶ್ವರೂಪಮನಾಂ ತೋಱಿದೆನಿಂ ಕಡಂಗಿ ರಣದೊಳ್ ನೀಂ ತೋಱು ನಿನ್ನಾರ್ಪುಮಂ (ಜಜಶಾ. ೯-೭೯); ರಣದೊಳ್ ಮಾಱಾಂತ ಚೂಡಾಮಣಿಗೆ ಮಣಿಯದುದ್ವೃತ್ತನಂ ಗೆಲ್ದ ವಿದ್ಯಾಮಣಿ (ಅಜಪು. ೦೨-೦೩). ೨. ಯುದ್ಧರಂಗ ; ಸಮರಭೂಮಿ ; ಕಳ : ರಣಮಂ ಪೂಜಿಸವೇಟ್ಟು (ಅಪಂಪು. ೦೯-೨೩); ಉರೆ ಮಹಾರಥಸಮರಥಾದಿಗಳುರುಳೆ ರಣದೊಳಗೆ (ಗಗತಾ. ೦೯-೯೩); ನಾನಾತುಮುಲಭಾವಘರ್ಷಣೆಗೆ ರಣನಾದ ರಾವಣಂ (ಶ್ರೀರಾಮಾ. ೩೨೩-೦೭೭). ೩. ಸಂತೋಷ ; ಆನಂದ. ೪. ಶಬ್ದ ; ಧ್ವನಿ . ೫. ಉಗ್ರವಾದುದು : 'ರಣಗುಟ್ಟು', 'ರಣಬಿಸಿಲು' ಪರಾ. ೬. ದೊಡ್ಡದು ; ಗಾತ್ರವಾದುದು : ' ರಣಪರ್ದು ' ಪರಾ. ೭. ದೆವ್ವ ; ಭೂತ : ಅಂದಿನ ಮಲೆನಾಡಿನಲ್ಲಿ ಭೂತ, ಪ್ರೇತ, ಪಿಶಾಚಿ, ಪಂಜುರುಳ್ಳಿ, ರಣ, ಮಾರಿ . . . ಕಲ್ಲುಕುಟಿಗ ಮುಂತಾದ ಹಲವು ಹೆಸರಿನ ಹಲವು ಜಾತಿಯ ದೆವ್ವಗಳಿದ್ದವು (ಕಂಕಹಂ. ೨). ' ರಣಹೊಡೆ ' ಪರಾ. [ಸಂ.]

**ರಣ$_{3}$** (ನಾ). ಹಡಗಿನ ಒಂದು ಭಾಗ : ಅಂತು ಸಮುದ್ರಂ ಬಹಿತ್ರಂ ಬೆದಱುವಂದು ತಿಟ್ಟನೆ ತಿಱಿದು ಕಲ್ಲಿಯುಂ ಕವಿಯುಂದಾಗೆ ನಿರ್ಜೀವನು ಮೆದರ್ದು ಪೋಗೆ ಕೂಪಕಂಭಂ ಮುಱಿಯೆ ಬಂಧಂ ಬಿರಿಯೆ ರಣಂ ಮುಱಿಯೆ ಕೀಲ್ ಕಟಿಲೆ (ಬಂಹಂ. ೪-೦೯ ವ). [ ? ]

**ರಣಕಂಬ** (ನಾ). (ಜಾತ್ರೆ ಮೊದಲಾದ ಸಂದರ್ಭಗಳಲ್ಲಿ) ಕುರಿ, ಕೋಣ ಇತ್ಯಾದಿಗಳನ್ನು ಬಲಿಕೊಡುವ ಸ್ಥಳದಲ್ಲಿ ನಿಲ್ಲಿಸುವ ಕಂಬ ;

ವಧಸ್ತಂಭ : ಕೋಣವನ್ನು . . . ಸಂಭ್ರಮದಲ್ಲಿ ಕರೆತಂದು. ಗುಡಿಯ ಮುಂದೆ ಇದ್ದ ರಣಕಂಬಕ್ಕೆ ಅದನ್ನು ಕಟ್ಟಿದ್ದ (ಊರುಳ. ೬). [ ರಣ$_2$ + ಕಂಬ$_1$ (< ಕಂಭ) ]

**ರಣಕಣ** 'ರಣಕಳ' ನೋ.

**ರಣಕಬಳ** (ನಾ). ಯುದ್ಧಸಮಯದಲ್ಲಿ ಅಗತ್ಯವಾಗುವ ಆಹಾರ : ರಣಕಬಳ ರಕ್ಕಿಮರ್ದುಗಳ್ಪುದಿದ ಭರಣಿಗಳ (ರಾಜಶೇ. ೬-೦೦ ವ). [ಸಂ.]

**ರಣಕರ್ಕಶ** (ನಾ). ಯುದ್ಧದಲ್ಲಿ ಗೆಲ್ಲಲು ಕಠಿಣನಾದವನು : ರಣಕರ್ಕಶ ನಸುರಕುಲಾಗ್ರಣಿ ವಿರಥಂ ಮಾಡಿ ವೀರನಂ . . . ಪಿಡಿದಂ (ಶಂರಾಮ. ೦೩-೦೯೬). [ಸಂ.]

**ರಣಕಲಿ** (ನಾ). ಕಾಳಗದಲ್ಲಿ ಶೌರ್ಯದಿಂದ ಹೋರಾಡುವವನು ; ಯುದ್ಧವೀರ : ಮಡಿದುದೌ ನಿನ್ನ ರಣಕಲಿಕುಮಾರನ ಕೈಲಿ ಕದನ ಮುಖದಲಿ ಫಲ್ಗುಣನ ಸೇನೆಯಲಿ ಜನಂ ವಿಪುಲಸಂಖ್ಯೆಯಲಿ (ತತ್ತ್ವಂಗ. ೬೩-೨೨೮೬). [ಸಂ.]

**ರಣಕಹಳೆ** 'ರಣಗಹಳೆ' ನೋ.

**ರಣಕಳ, ರಣಕಣ** (ನಾ). ರಣರಂಗ ; ಯುದ್ಧಭೂಮಿ : ಮಾಯೆಯಿಂದ . . . ಭೀಷ್ಮರು ರಣಕಳದಲ್ಲಿ ಎಲ್ಲಿ ನೋಡಿದರೂ ಕಾಣಲ್ಪಟ್ಟರು (ವ್ಯಾಸಭಿ. ೩೩೫). **ರಣಕಣ** : ಊರೂರೆ ರಣಕಣವು ತಾಂಡವವು ಗೊಂದಣವು (ಸೂರ್ಯಕಾ. ೬೩-೯). [ರಣ$_2$ + ಕಳ$_3$]

**ರಣಕಾಳಿ** (ನಾ). ಯುದ್ಧದೇವತೆ ; ರಣಚಂಡಿ ; ದುರ್ಗೆ : ರಣಕಾಳಿ ರುಂಡಮುಂಡಗಳ ಚೆಂಡಾಟವಾಡಿದಳಲ್ಲಿ (ತತ್ತ್ವಂಗ. ೬೨-೨೨೫೯); ಕರೆಯುತ್ತಿ ಹಳದೊ ರಣಕಾಳಿ (ಕೋಗಿರಿ. ೩೩-೬). [ಸಂ. ರಣಕಾಲೀ]

**ರಣಕೋಲಾಹಲ** (ನಾ). ಯುದ್ಧರಂಗದಲ್ಲಿ ಗದ್ದಲವನ್ನು ಉಂಟು ಮಾಡುವಂಥದು : ರಣಕೋಲಾಹಲನಂ ಕರ್ನಾಟರದನಂ ನೀಲಾಚಲ ಸ್ಪರ್ಧಿಯಂ . . . ದ್ವಿಪೇಂದ್ರಮಂ ತನ್ನಿ (ವೃಷಭ. ೪೦-೯೨). [ಸಂ.]

**ರಣಖೇಡ** (ನಾ). ಯುದ್ಧಕ್ಕೆ ಹೆದರುವವನು ; ರಣಹೇಡಿ : ಓಡಿ ನಾಚಿಸುವವರು ನಿಲ್ಲಿ ರಣಖೇಡರೀಗಳೆ ಮರಳಿ (ಕುಮಾ. ೬-೩೦). [ರಣ$_2$ + ಖೇಡ]

**ರಣಗಬ್ಬಿ** (ನಾ). ಕಾಳಗ ಮಾಡಬೇಕೆಂಬ ಸೊಕ್ಕುಳ್ಳವನು : ಬೊಬ್ಬಿರಿವ ರಣಭೂತಗಳ ಕಂಡುಬ್ಬಿ ಬಹಳಾನಂದದಲಿ ರಣಗಬ್ಬಿ ಮೆರೆದ. ನೃಸಿಂಹ ನಾಹವರಂಗಮಧ್ಯದಲಿ (ಕೃಷ್ಣ ಕ. ೦೫-೫೫). [ರಣ$_2$ + ಗಬ್ಬಿ$_1$]

**ರಣಗಲಿ** (ನಾ). = ರಣಕಲಿ : ರಣಗಲಿಯ ಚಿತ್ತೈಸು (ಕುರಂಗ. ೬-೦೯-೩). [< ರಣಕಲಿ]

**ರಣಗಹಳೆ, ರಣಕಹಳೆ, ರಣಗಾಳೆ** (ನಾ). ೧. (ಅಲಂ) ದೊಡ್ಡಧ್ವನಿ; ಅಬ್ಬರ ; ಆರ್ಭಟ : ಐತಾಳರ ಗಂಟಲ ರಣಗಹಳೆ ಕೇಳಿ ದಬಕ್ಕನೆ ಎಚ್ಚರವಾಯಿತು (ಮರಮ. ೬೯). **ರಣಕಹಳೆ** : ೨. ಯುದ್ಧ ಪ್ರಾರಂಭದಲ್ಲಿ ಊದುವ ಕಹಳೆ : ಸೌಮಿತ್ರಿ ರವಿಯುದಯದೃಶ್ಯಮಂ ನಿಟ್ಟಿಸುತ್ತಿರೆ, ಕೇಳ್ದುದೊಂದದ್ಭುತಂ ರಣಕಹಳೆ (ಶ್ರೀರಾಮಾ. ೩೦೨-೪೦). **ರಣಗಾಳೆ** : ೨. ರಣದಲ್ಲಿ ಮಸದಲ್ಲಿ ಬೀಸುವುದು ಬಿರುಗಾಳಿ ರಣದಲ್ಲಿ ಕಿವಿಯಲ್ಲಿ ಕೂಗುವುದು ರಣಗಾಳೆ (ಕೃಷ್ಣಕು. ೫-೦೦). [ರಣ$_2$ + ಕಹಳೆ]

**ರಣಗಳ್ಳ** (ನಾ). ಕಾಳಗದಿಂದ ಓಡಿಹೋಗುವವನು ; ರಣಹೇಡಿ : ಜಳ್ಳು ರಕ್ಕಸನವನನೀ ಹೆಂಗಳ್ಳನನು ಸಂತಾಪಿಸುವ ರಣಗಳ್ಳನನು ಗತಿಗೇಡುಗನನೀ ದ್ರೋಹಿರಕ್ಕಸನ . . . ಹೊಳ್ಳುವಾಳಿಸಲೂದುವೆನು (ಕುರಂಗ. ೫-೬-೩೬). [ರಣ$_2$ + ಕಳ್ಳ$_1$]

**ರಣಗಟ್ಟಲೆ** (ನಾ). ಯುದ್ಧರಂಗದಲ್ಲಿ ಧೂಳು, ಬಾಣಸಮುದಾಯ, ಧ್ವಜ ಮೊದಲಾದುವುಗಳಿಂದ ಉಂಟಾಗುವ ಕತ್ತಲೆ : ರಣಗಟ್ಟಲೆ ಯೊಳ್ ತಮಮುಂ ಮಿಗೆ (ಶಂಕರಾ. ೧೦-೬೯) ; ರಣಗಟ್ಟಲೆ ಕೈಮಿಗೆ ಬಲ್ಲಿಸ ಕಡುಕೆಯ್ದುಭಯಬಲದೊಳಂಬಿಕ್ಕುವುದುಂ (ಶಂರಾಮ. ೦೩-೩೯). [ ರಣ$_2$ + ಕಟ್ಟಲೆ ]

**ರಣಗಾಳೆ** 'ರಣಗಹಳೆ' ನೋ.

**ರಣಗೀತೆ** (ನಾ). ಯುದ್ಧವನ್ನು ಕುರಿತಂತೆ ರಚಿಸಿದ, ವೀರಾವೇಶ ವನ್ನುಂಟುಮಾಡುವ ಹಾಡು : ರಣಪ್ರಣಯದ ಉತ್ಸಾಹವನ್ನು ಸೂಚಿಸುವ ರಣಗೀತೆಯೊಡನೆ ಕುಣಿತ ಆರಂಭವಾಯಿತು (ಸವತಿ. ೩) ; ಒಂದು ರಾಷ್ಟ್ರವನ್ನು ಯುದ್ಧೋನ್ಮುಖವಾಗಿ ಮಾಡುವಾಗ ಹಾಡುವ ರಣಗೀತೆಗಳು. . .ಉತ್ಸಾಹವನ್ನು ತುಂಬಿರುವುದೂ ಉಂಟು (ಸೌಂದಸ.೬೪). [ಸಂ. ರಣಗೀತಾ]

**ರಣಗುಟ್ಟು** (ಕ್ರಿ). ೧. ತೀಕ್ಷ್ಣವಾಗು ; ಉಗ್ರವಾಗು : ತಲೆಯ ಮೇಲೆ ಬಿಸಿಲಂತು ರಣಗುಟ್ಟುತ್ತಿರುತ್ತದೆ (ಮುಂಬಯಿ. ೫-೦೯೫). ೨. (ಅಲಂ) ಶೂನ್ಯವಾಗು ; ಭಣಗುಡು : ರಾಜಮಾರ್ಗ . . . ಜನರಹಿತವಾಗಿ ಸ್ಮಶಾನದಂತೆ ರಣಗುಟ್ಟುತ್ತಲಿವೆ (ಕುಬ್ಜಾ. ೩) ; ತೆರವಾಗಿ ರಣಗುಟ್ಟುವ ಈ ಎನ್ನ ಹೃದಯಮಂದಿರವನ್ನು ಇನ್ನಾತರಿಂದ ತುಂಬಲಿ (ಅಂತರಾ. ೮). [ರಣ$_2$ + ಕುಟ್ಟು$_1$]

**ರಣಗುಡು** (ಕ್ರಿ). ೧. = ರಣಗುಟ್ಟು ೧ : ಹೊರಗಡೆ ಮಧ್ಯಾಹ್ನದ ಉರಿಬಿಸಿಲು ರಣಗುಡುತ್ತಿತ್ತು (ಕಮನ. ೦೬೦) ; ಬಿಸಿಲೇನೋ ಇನ್ನೂ ರಣಗುಡುತ್ತಲೆ ಇತ್ತು (ಕೃಪಸ. ೫). ೨. ಅಧಿಕವಾಗು; ತೀವ್ರವಾಗು : ರಣಗುಡುವ ಸಾಮೂಹಿಕ ಅಳಲಿನೊಂದಿಗೆ ತಿಮ್ಮಯ್ಯನವರ ಅಂತ್ಯವಿಧಿ ಕೊನೆಗೊಂಡಿತು (ಕಾಗೆ. ೨೦). ೩. = ರಣಗುಟ್ಟು ೨ : ಪಸಿರುಹಣೆಯಂತೆ ಬಿಕೋ ಎನ್ನುವ ಅಂಗಳ ಏನನ್ನೊ ಕಳೆದುಕೊಂಡಂತೆ ರಣಗುಡುತ್ತದೆ (ಗಾಳಿ. ೦೦೦). [ರಣ + ಕುಡು$_1$ (< ಕೊಡು$_1$)]

**ರಣಗೇಡಿ** (ನಾ). = ರಣಖೇಡ : ಪರಿಜನಾಪವಮೆಂಬರಾವೆಡೆ ಹರೆದರೀ ರಣಗೇಡಿಗಳು ನುಡಿಯುರಿಯ ಹೊಜೆವುದು ಛಾಯವತಿಶೀತಳ ಮಹಾ ದೇವ (ಕುಮಾಭೀ. ೮-೪೫). [ ರಣ$_2$ + ಕೇಡಿ$_1$ ]

**ರಣಚಂಡಿ** (ನಾ). = ರಣಕಾಳಿ : ಆಕೆಯು . . . ಹಟಯೋಗಿನಿಯಾಗಿ, ರಣಚಂಡಿಯಾಗಿ, ಕಾಣಿಸುತ್ತಾಳೆ (ಶಾರದ. ೪೯೫) ; ರಣಚಂಡಿ ಕತ್ತಿ ಕಡಿ ಯಮ, ಯುದ್ಧ ಸುಡಲರಿದು ನಿನ್ನ ನೆನಪಿನ ಕವನ ಜೀವಂತದಾಖಲೆಯ (ನಲಮು. ೬೨-೬). [ ಸಂ. ರಣಚಂಡೀ ]

**ರಣಚೌಪಟ** (ನಾ). ಯುದ್ಧರಂಗದಲ್ಲಿ ಏಕಾಂಗಿಯಾಗಿ ಹೋರಾಡು ವವನು ; ಚೌಪಟಮಲ್ಲ ; ಮಹಾವೀರ : ರಣಚೌಪಟ ಚತುರ್ಬಲ ದೊಳಗೆ ಪೊಕ್ಕನು(ಕುಮಾದ್ರೋ. ೫-೬೦). [ರಣ$_2$ + ಚೌಪಟ (< ಚೌವಟ್ಟ)]

**ರಣಜವೊಟಲ್** (ನಾ). ಒಂದು ಊರಿನ ಹೆಸರು : ರಣಜವೊಟಲ ಬಯಲ ××× ರ. . . ದೇವಭೋಗವಮ್ಮಾಡಿಕೊಟ್ಟಂ (ಎಕ. XI, ಹೊಳಲ್ಕೆ. ೨೩-೪೦ ; ೯೬೪). [ ರಣಜ$_1$ + ಪೊಟಲ್ ]

**ರಣಜೆಟ್ಟಿಗ** (ನಾ). ಕಾಳಗದಲ್ಲಿ ಮಲ್ಲನಂತೆ ಇರುವವನು : ಗೋದಾಮೆ ಯಂತೆ ಬಗೆದ ಬಣ್ಣಮಪ್ಪ ರಣಜೆಟ್ಟಿಗರಿಂ. . . ಅತಿಭಯಂಕರಾಕಾರ ಮಪ್ಪುದು (ಕಾವ್ಯಸಾ. ೫೨೯ ಶೂದ್ರಕ). [ರಣ$_2$ + ಜೆಟ್ಟಿಗ (< ಜಟ್ಟಿಗ$_1$)]

**ರಣಜೇಯ** (ನಾ). ಕಾಳಗದಲ್ಲಿ ಸೋಲಿಸಬೇಕಾದವನು : ಜಡಮತಿಯತಿ ಹತೋಪಾಯನ ಸಂಧೇಯನಲ್ತವಂ ರಣಜೇಯಂ (ರಾಜಶೇ. ೬-೧೨೦). [ಸಂ.]

**ರಣಡೊಂಬಿಗ** (ನಾ). ಕಾಳಗದಲ್ಲಿ ಆಡಂಬರವನ್ನು ತೋರಿಸುವವನು ; ಯುದ್ಧದಲ್ಲಿ ವಿಜೃಂಭಿಸುವವನು : ಅಂಬುಜಾಕ್ಷನ ಸರಿಸದಲಿ ರಣ ಡೊಂಬಿಗನ ಕಂಡಮಮ ವಿಲಯಾಡಂಬದಾಟೋಪದಲಿ ಕಿಡಿಗೆದರಿದವನು ಕಲಿನೀಲ (ಕುರಂಗ. ೬-೦೯-೫೦). [ರಣ$_2$ + ಡೊಂಬಿಗ$_2$]

**ರಣತೂರ್ಯ** (ನಾ). = ರಣಗಹಳೆ ೨ : ಒಂದೆಡೆ ವಲ್ಲಭೆಯುಂ ಮತ್ತೊಂದೆಡೆ ರಣತೂರ್ಯಘೋಷಮುಂ ಚೀರುತಿರಲ್ (ರ್ಯಾಸಾಲೋ. ೦೬೯). [ಸಂ.]

**ರಣದವಕ** (ನಾ). ಕಾಳಗ ಮಾಡಬೇಕೆಂಬ ಆತುರ ; ಯುದ್ಧಾಪೇಕ್ಷೆ : ಅನುಸಾಲ್ವಕನ ಸೇನೆಯೊಡ್ಡೊಗದೊಳಿರೆಯುಗಿದ ಫಣಿಕುಲದಂತೆ ರಣದವಕ ವೊಗದೊದಗಿತಂಬುಧಿಯ ತೆರೆಯಂತೆ (ಕೃ.ಖಾ. ೦೨-೦೩).
[ರಣ$_2$ + ತವಕ$_1$]

**ರಣದವಕಿ** (ನಾ). ಕಾಳಗ ಮಾಡಬೇಕೆಂಬ ಆತುರವುಳ್ಳವನು : ರಣ ದವಕಿ ಕರ್ಣದ್ರೋಹಿ ಯಾವೆಡೆ ತೋಱುತೋಱು (ಕುವ್ಯಾ.ಕ. ೦೩-೮).
[ರಣ$_2$ + ತವಕಿ]

**ರಣದವಕಿಗ** (ನಾ). = ರಣದವಕಿ : ತ್ರಿಭುವನ ಕಂಟಕಸುತಿರ್ದನ್ನೆ ರಣದವಕಿಗರ ಪಕ್ಕಡದ ಬೆಬ್ಬಾಳದ ಸುಹಾಸವಕ (ಕೊರವಂ. ೪-೩-೧೨).
[ರಣ$_2$ + ತವಕಿಗ]

**ರಣದಿಟ್ಟ** (ನಾ). ಕಾಳಗದಲ್ಲಿ ದಿಟ್ಟನಾಗಿ ನಿಂತವನು : ಪಾರ್ಥಿವಜಾತಿ ಯಲ್ಲಿ ರಣದಿಟ್ಟರುಂಟೇ ನಿಮ್ಮ ಹೋಲಿಸಲು (ಕುವ್ಯಾ.ದ್ರೋ. ೪-೦೦).
[ರಣ$_2$ + ದಿಟ್ಟ$_{II}$]

**ರಣದೀಕ್ಷಿತ** (ನಾ). ಯುದ್ಧಮಾಡಲು ಸಂಕಲ್ಪಮಾಡಿದವನು : ಭಾಪಿ ಸಂಗ್ರಾಮುಚರ್ಯಾವಚನಂಗಳನನ್ವಯಾಗತರುಂ ರಣದೀಕ್ಷಿತರುಮಪ್ಪ ವೀರ ಸಾಮಂತರೊಳ್ ಏರಿದು ಬೇಗಂ ನುಡಿಯುತ್ತುಮಿರ್ದು (ಚಂದ್ರ.ಕು. ೦೦-೫೯ ಪ).
[ಸಂ.]

**ರಣದೀಕ್ಷೆ** (ನಾ). ಕಾಳಗವನ್ನು ಮಾಡಬೇಕೆಂಬ ಸಂಕಲ್ಪ : ರಣದೀಕ್ಷೆ ಯನು ಕೈಕೊಂಡಮರರಿಪ್ಪ . . . ಏಱಿದನು ಮಣಿರಥವ (ಕೊರವಂ. ೩-೪೭-೩೦).
[ಸಂ. ರಣದೀಕ್ಷಾ]

**ರಣದುರುಳತ್ವ** (ನಾ). ಯುದ್ಧದಲ್ಲಿ ಸೋಸಾಡುವ ಗುಣ : ತರಳ ನೆಂದಾನು ಕೈಗಾದುಬಿಟ್ಟಡೆ ರಣದುರುಳತ್ವ ನಿನಗೆ ಸಿದ್ಧಿಪುದೇ (ಪೋಹಕ. ೪೩-೩೦).
[ರಣ$_2$ + ದುರುಳತ್ವ]

**ರಣದೋಹಳ** (ನಾ). ಯುದ್ಧಮಾಡುವ ಆಸೆಯುಳ್ಳವನು : ರಣ ದೋಹಳನೆನಿಪ ಕೇಶವಾದಿತ್ಯಂಗಂ ಪ್ರಣುತೇಶಂ ಜನಿಯಿಸಿದಂ (ಕರ್ಣಾ. XX. ೦೦೫-೩೦; 1146); ವಪ್ರವಹ್ನಿಯಂ ತಳವೊಳಗಿರ್ದಿದಾಗೆ ಪೊಸದಿಕ್ಕುವ ಸಿಂಗವ ಕೇಸರಂಗಳಂ ಸೆಳೆವಳವಂ ಸಮಂತು ತಳೆದಂ ರಣದೋಹಳನಾ ಕುಮಾರಕಂ (ಚಂದ್ರ.ಕು. ೩-೨೮).
[ ಸಂ. ರಣದೋಹಲ ]

**ರಣಧಾರಿ** (ನಾ). ಒಬ್ಬಾತನ ಹೆಸರು : ರಣಧಾರಿ ಲಿಖಿತ ( ಎಇ. IX. ೨೨-೦೮ ; ೩ಪರು ೩೫).
[ ? ]

**ರಣಧೀರ** (ನಾ). = ರಣದಿಟ್ಟ : "ತೋರಹತ್ತನೆನೆ ತಾಂ ರಣಧೀರಂ" (ಭಾರತ. ೩೯) ; ರಣಧೀರಂ ಸಾರ್ವಭೌಮಂ ನಿಷಧಪತಿ (ನಳಚಂ. ೦೪೯).
[ಸಂ.]

**ರಣಪಟಹ** (ನಾ). ಯುದ್ಧದಲ್ಲಿ ಬಾರಿಸುವ ತಮಟೆ,–ಹಲಗೆ : ರಣ ಪಟಹ ರವಂ ದಿಗ್ವಾರಣ ಕರ್ಣಾಭ್ಯರ್ಣಮಂ ಪಳಂಚಲಿಯೆ (ಶಂಕರಾಪಾ. ೦೦-೫೦).
[ಸಂ.]

**ರಣಪದ್ದು** ' ರಣಪರ್ದು ' ನೋ.

**ರಣಪರ್ದು**, ರಣಪದ್ದು, ರಣಹದ್ದು (ನಾ). (ಹೆಣಗಳನ್ನು ತಿನ್ನುವ) ಒಂದು ಬಗೆಯ ದೊಡ್ಡ ಹದ್ದು : "ಕಂಕಃ — ರಣಪರ್ದು" (ಅಭಿ. ೪೦). **ರಣಪದ್ದು** : ಶರಘಟಿರುಂಡ ರಣಪದ್ದು ಬಾವುಲಿ ಪಂಗ ಗರುತ ಮೊದಲಾದ ಪರಿಪರಿಯಿಂದೊದೆವೊರ್ದ ಭೀಕರವತುಳ ಖಗ ಮೃಗದ ನೆರವಿ (ಪವಪೋ. ೮-೦೦). **ರಣಹದ್ದು** : ರಣಹದ್ದುಗಳು ಹಾರಾಡಿ ಮನದಲ್ಲಿ ಭೀತಿಯನ್ನು ಮೂಡಿಸಿದವು (ಸೂಣ). [ ರಣ$_2$ + ಪರ್ದು ]

**ರಣಪಲಾಯನ** (ನಾ). ಕಾಳಗದಿಂದ ತಪ್ಪಿಸಿಕೊಂಡು ಓಡುವುದು ; ಯುದ್ಧದಿಂದ ಹಿಂದೆಗೆಯುವುದು : ಅಸುವ ತಡೆವರೆ ರಣಪಲಾಯನ ವೆಸವುದೇ ಕ್ಷತ್ರಿಯರಿಗತಿಸಾಹಸಿಕನಾದಡೆ ನಿಲ್ಲು (ಕುವ್ಯಾ.ಕ. ೩-೫೬).
[ಸಂ.]

**ರಣಪಾರಗಾವುಂಡ** (ನಾ). ಒಬ್ಬಾತನ ಹೆಸರು : ರಣಪಾರಗಾವುಣ್ಡರುಂ ಅನ್ನವಾಸಿಲ ಉತ್ತಮಗಾವುಣ್ಡರುಂ (ಎಕ. II. ೩೫-೮ ; ೩ು. 800).
[ ರಣಪಾರ ? + ಗಾವುಂಡ ]

**ರಣಬಲಿ** (ನಾ). ಯುದ್ಧಕ್ಕೆ ನೀಡುವ ಆಹುತಿ : ಪೆತ್ತ ನಿನ್ನನದೇಕೆ ರಣಬಲಿಗಿತ್ತನೇ ದುರ್ಯೋಧನನು (ತಿಪ್ಪ.ಸ್ತ್ರೀ. ೩-೪೦).
[ಸಂ.]

**ರಣಬಾಲಕ** (ನಾ). ಕಾಳಗದ ಅನುಭವವಿಲ್ಲದವನು ; ಯುದ್ಧನಿಪುಣ ನಲ್ಲದವನು : ರಣಬಾಲರೇರಾ ಸಮಸ್ತಭೂಪಾಲಕಬಾಲಕರ್ ಕದನಕೇಳಿಗೆ ಮುಚ್ಚಿ ಗದಿಂದೊಡರ್ಚಿದರ್ (ಶಂಗಾಪಾ. ೩-೯೭) ; ರಣಬಾಲ [ಬಾಲಾ. ೪]ಕ ನಪ್ಪೆ ನೀಂ ರಣಪರಿಣತವಯಸಸಪ್ಪನವನೀಪತಿ ನೀಂ (ಪಾರ್ಶ್ವಪು. ೨-೭೭).
[ಸಂ.]

**ರಣಬಿನ್ನಾಣಿಗ** (ನಾ). ಕಾಳಗದಲ್ಲಿ ನಿಪುಣನಾದವನು : ರಣಬಿನ್ನಾಣಿ ಗರು ಜವಗುಂದಿ ಭಂಗದ ಕಾಳಾಱಿದೆ ಧರ್ಮಸುತ ಭೀಮಂಗೆ ತೋಱಿಸಿದ (ಕುವ್ಯಾ.ವಿ. ೬೦೩. ೫-೭೫).
[ ರಣ$_2$ + ಬಿನ್ನಾಣಿಗ ]

**ರಣಬಿಸಿಲು** (ನಾ). ಉಗ್ರವಾದ ಬಿಸಿಲು ; ಉರಿಯುವ ಬಿಸಿಲು : ಇಂಥ ರಣಬಿಸಿಲಿನಲ್ಲಿ ಸುಂದರಮ್ಮ ತನ್ನ ಮನೆಯ ಬಾಗಿಲು ತೆರೆದಿಟ್ಟೇ ಮಲಗಿದ್ದಳು (ಹಳ್ಳಿ.ಹಾ. ೦) ; ಈ ರಣಬಿಸಿಲಿಗೇ ಹೊರಡಬೇಕೆ ? (ಮರಮ. ೬೦).
[ ರಣ$_2$ + ಬಿಸಿಲು (< ಬಿಸಿಲ್) ]

**ರಣಭೀತಿ** (ನಾ). ಕಾಳಗದ ಭಯ ; ಯುದ್ಧದ ಅಂಜಿಕೆ : ಅಂತಃಪುರ ದೊಳಲ್ಲಿರಿವಲ್ಲಿ ಹರೆದುದು ಕೂಡೆ ರಣಭೀತಿ (ಕುವ್ಯಾ.ಗ. ೪-೦೦).
[ಸಂ.]

**ರಣಭೂತ** (ನಾ). ಯುದ್ಧರಂಗದಲ್ಲಿರುವ ಪಿಶಾಚಿ : ಬಸಿವಾಯ ರಕುತದ ಲೋಡಿದವು ರಣಭೂತ ದೆಸೆದೆಸೆಗೆ (ಕುವ್ಯಾ.ದ್ರೋ. ೦-೨೦).
[ಸಂ.]

**ರಣಭೂಮಿ** (ನಾ). ಯುದ್ಧಭೂಮಿ ; ರಣರಂಗ : ಪಾರ್ಥನ ತಲೆಯ ನಾಕ್ಷಣಕೆ ತಂದುದು ಸುದರ್ಶನಂ ಮಣಿಪುರದ ರಣಭೂಮಿಗೆ (ಕೃ.ಖಾ. ೨೯-೬೮) ; ಈತನು . . . ರಣಭೂಮಿಯಲ್ಲಿ ಚಾಡಿಕಾದೇವಿಯನ್ನು ಆರಾಧಿಸಿದನೆಂದು . . . ತಿಳಿದುಬರುತ್ತದೆ (ಸೊಳಂಲಂ. ೨೪).
[ಸಂ.]

**ರಣಭೇತಾಳ** (ನಾ). = ರಣಭೂತ : ಮ್ಯೆ ನಿಮ್ಮಂತಹ ರಣಭೇತಾಳಗಳಿಗೆ ಮಾರಲು . . . ನಮ್ಮ ಗಂಡಸರು ಇನ್ನೂ ನಪುಂಸಕರಾಗಲಿಲ್ಲ ಗೊತ್ತಾಯ್ತಾ ? (ಹೊಸಕ್ಷ. ೫೦).
[ರಣ$_2$ + ಭೇತಾಳ$_0$ (< ಬೇತಾಳ)]

**ರಣಭೇರಿ** (ನಾ). ೧. ಯುದ್ಧದಲ್ಲಿ ಬಾರಿಸುವ ನಗಾರಿ,– ಭೇರಿ : ಉತ್ಸಾಹ ರಣಭೇರಿಗಳು ಮೊಳಗಿದವಸುರಸೇನೆಯಲಿ (ಕೊರವಂ. ೩-೩೭-೦೭) ; ಕಡಿದ ಮರದಿಂದ ರಣಭೇರಿಗಳನ್ನು ತಯಾರಿಸುತ್ತಿದ್ದರು (ಹಮುಹೂ. ೪೭). ೨. ಒಂದು ಬಗೆಯ ಸಸ್ಯ : ಕಾಡುತಂಬೇಗಿಡ, ರಣಭೇರಿ (ವೃ.ಶಿಗ. ೫೦-೯೯೦).
[ಸಂ.]

**ರಣಭೈರವ** (ನಾ). ಕಾಳಗದಲ್ಲಿ ಭೈರವನಂತೆ ಇರುವವನು ; ಮಹಾ ಪರಾಕ್ರಮಿ : ಬವರ ಬಲಿದುದು ಬಳಿಕ ರಣಭೈರವರಘುಕ್ಷಿತಿಪತಿಗೆ (ಕೊರವಂ. ೩. ೦೫-೩೦).
[ಸಂ.]

**ರಣಮಂಡಲ**, ರಣಮಂಡಳ (ನಾ). ೧. ಕಾಳಗಮಾಡುವ ಸ್ಥಳ ; ಯುದ್ಧರಂಗ: ರಣಮಂಡಲಕೆ ನಡೆತಂದಳಾ ಕಾಂತೆ (ಕೊರವಂ. ೩-೫೦-೮೭) ; ಮಿಱುಪ ಬಿಂಕದಿಂದಿಱಿವ ಕಲಿತನಕೆ ರಣಮಂಡಲಂ ಸಾಕೋಚಮೆನೆ ಬಂದು . . . ನಿಂದಾದುರ್ದಾ ಸೇನೆ (ಕೃ.ಖಾ. ೦೨-೪). **ರಣಮಂಡಳ** : ೨. ರಾಜವಂಶದವರಿಗೆ ವಿದ್ಯೆಯನ್ನು ಕಲಿಸುವ ಸ್ಥಳ : ಅರಮನೆಗಿಂಬು ವೆತ್ತ ರಣಮಂಡಳಮಾ ರಣಮಂಡಳಕ್ಕೆ ಬಿತ್ತರಿಸಿದ ಬೀದಿ (ಅವಂತಿ. ೦೦-೦೩).
[ಸಂ.]

**ರಣಮಂಡಳ** ' ರಣಮಂಡಲ ' ನೋ.

**ರಣಮನ್ನೆಯ** (ನಾ). (?) : ಸುಂಕ ಸಾ[ಕ್ಷ]ವೀ ರಣಮನ್ನೆಯ ಮೊದಲಾದ ಸರ್ವಬಾಧೆ ಪರಿಹಾರ (ಕಿಇ. IV. ೫೪-೯೯; 1245). [ರಣ$_2$ + ಮನ್ನೆಯ$_1$]

**ರಣಮರಣ** (ನಾ). ಯುದ್ಧರಂಗದಲ್ಲಿ ಸಾಯುವುದು ; ವೀರೋಚಿತವಾದ ಸಾವು : ಕೆಲ[ಬರಿರ್ದೇ]ಟಿ ಸಂದಿಱಿವ ತಮ್ಮೆಱಿಂಗೆ ಪೂಣ್ಬು ಜಾಱಿಯುಂ ಕೆಲಬರ್ ತಮ್ಮ ರಣಮರಣಮಂ ನಿಶ್ಚಯಿಸಿ ವೀರಸಂನ್ಯಾಸಕ್ಕೊಡರ್ಚೆ ನಿರೆಯುಂ (ವರ್ಧಮಾ. ೪-೩೪ ಪ). [ಸಂ.]

**ರಣಮುವ್ವರಿ** 'ರಣಮಹೌವರಿ' ನೋ.

**ರಣಮುಖ** (ನಾ). ಮುಂಚೂಣಿ; ಸೇನಾಮುಖ : ರಘುಪತಿಯ ಕೈಯಲಿ ರಣಮುಖದಲುಪಹತಿ ನಿನಗೆ ಬರಲಿ (ತೊರರಾ. ೧-೬-೪೦).

**ರಣಮುಖದುಟ್ಟ** = ಯುದ್ಧರಂಗದಲ್ಲಿ ದುಷ್ಟನಾದವನು; ಒಂದು ಬಿರುದು : ರಣಮುಖದುಟ್ಟನಾ ಮಗನ್ ಕರಪುರನ್ ಬಸ್ಸು ಬಲ್ಲದಾ ತುಱುಗೊಳ್ (ಎಕ. X, ಮುಳಬಾ. ೯೨-ಐ; ಸು. 780?). [ಸಂ.]

**ರಣಮೂಢ** (ನಾ). ಯುದ್ಧಚಾತುರ್ಯವನ್ನು ತಿಳಿಯದವನು : ಏಲವೆಲವೊ ಮೂರುತಿಯುಳ್ಳಿಗಡ್ಡದ ಹರಿಪ್ರಳಿಯು ರಣಮೂಢ ಸಿಲುಕಿದೆಲಾ (ಕುಮಾರವ್ಯಾ. ೭. ೦೩-೭೦). [ಸಂ.]

**ರಣಮೂರ್ಖ** (ನಾ). ಒಂದು ರಾಜವಂಶದ ಹೆಸರು : ರಣಮೂರ್ಖನೃಪಾಮ್ನಾಯದೊಳಾಯವ ಮೆಯ್ಗಲಿ ಬಾಯಿಕನೆಂಬ ನೆಗಟ್ಟಿಯುಂ ಪ್ರಕಟಿಸಿದನ್ (ಎಕ. II, ೦೩೯-೨ ; ಸು. 950) ; ರಿಪುಬಳ್ಳಕ್ರಿತಾಸ್ಥಂ ರಣಮೂ[ರ್ಖ್ರ] ವಂಶೋದ್ಭವಂ ಸಿಂಗನ ಬಂಟಂ ಶ್ರೀಮದಾಯ್ವವರ್ಮ್ಮರಸಂ (ಸೌಇಇ. XI-i, ೬೨-ಐ ; 1024).

**ರಣಮೂರ್ಖಕೇಸರಿ** = ರಣಮೂರ್ಖವಂಶದವರಲ್ಲಿ ಸಿಂಹದಂತಿರುವವನು ; ಒಂದು ಬಿರುದು : ಶ್ರೀಕಾನ್ತಾಕಾನ್ತಂ . . . ರಣಮೂರ್ಖ್ಖಕೇಸರಿ ಕದನಾದಿತ್ಯಂ (ಸೌಇಇ. XI-i, ೨೨-೬ ; 897). **ರಣಮೂರ್ಖಧವಳ** = ರಣಮೂರ್ಖ ವಂಶದವರಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ಶ್ರೀಕಾನ್ತಾಕಾನ್ತಂ ರಣಮೂರ್ಖ್ಖಧ[ವ]ಳಂ (ಸೌಇಇ. XI-i, ೨೨-೬ ; 897). [ಸಂ.]

**ರಣಮಹೌವರಿ,** ರಣಮುವ್ವರಿ (ನಾ). ಒಂದು ಬಗೆಯ ರಣವಾದ್ಯ : ಕೊಂಬು ರಣಮಹೌವರಿ ಮೃದಂಗಮು ಭೇರಿ ಕಹಳಾರವದ ರಭಸದಲಿ ಬಿರಿಯಲುಬುಜಭವಾಂಡ (ತೊರರಾ. ೬-೨೬-೨೬). **ರಣಮುವ್ವರಿ** : ದಿಗ್ಭಿತ್ತಿಯನಿಯ ಕರ್ಣಮಂ ಕಿವುಡುದೋರುತಿವೆ ರಣಮುವ್ವರಿ (ತುರಂಗ. ೬೬-೨).

[ರಣ$_2$ + ಮಹೌವರಿ (< ಮಹೌರಿ$_1$)]

**ರಣರಂಗ** (ನಾ). ಯುದ್ಧಮಾಡುವ ಸ್ಥಳ ; ಯುದ್ಧಭೂಮಿ ; ಕಳ : ಕಡಿದಾಡಲ್ ರಣರಂಗದೊಳ್ . . . ಪಡೆದಪ್ಪಲ್ಲದೆ ಬರ್ಪುದೇ (ತೋಮೇಕ. ೨೯) ; ಶ್ರೀಕೃಷ್ಣನು ಅವನನ್ನು ರಣರಂಗದಲ್ಲಿ ತಂದು ನಿಲ್ಲಿಸಿದನು (ಧರ್ಮಸಾ. ೦೦೯).

**ರಣರಂಗಧೀರ** = ಯುದ್ಧಭೂಮಿಯಲ್ಲಿ ವೀರನಾದವನು : ಹಾ ಮಗನೆ ರಣರಂಗಧೀರನೆ ಹಾ ಮದೀಯ ಕುಮಾರ ವೀರನೆ ಬಾ ಮಗನೆ (ಕುಮಾರವ್ಯಾ. ೯ ಸಂಕಪ). **ರಣರಂಗಸೋಱ, ರಣರಂಗಸೂರ** = ರಣರಂಗಕ್ಕೆ ಶೋಭೆ ತರುವವನು ; ಒಂದು ಬಿರುದು : ರಣರಂಗಸೋಱ ಪುಸಿವರ ಬಾಯುಂ ಸುಡುವ ಪಿಸುಣರ ಸೇಲ್ವ (ಎಕ. VII, ಶಿಕಾ. ೩-೨೩ ; 1061) ; ಸರ್ವ್ವಸ್ವಸೂಱೆಕಾಱ ರಣರಂಗಸೂರ ದಾಯಿಗ ಬೇಣ್ಟೆಕಾಱ (ಎಕ. VI, ಕಡೂರು. ೩೩-೪೯ ; 1336). **ರಣರಂಗಭೀಮ** = ಯುದ್ಧರಂಗದಲ್ಲಿ ಭಯಂಕರನಾಗಿರುವವನು ; ಒಂದು ಬಿರುದು : ಚಲದಂಕರಾಮ ರಣರಂಗಭೀಮ ಕದನಪ್ರಚಂಡ (ಎಕ. II, ೩೭೦-೨೯ ; 1181). **ರಣರಂಗಭೈರವ** = ಕಾಳೆಗದಲ್ಲಿ ಭೈರವನಂತಿರುವವನು ; ಒಂದು ಬಿರುದು : ರಣರಂಗಭೈರವನುಭಯಬಳಸಂಘಟಕೀರ್ತಿಪ್ರತಾಪಂ (ಸೌಇಇ. XX, ೯೬-೩೪ ; 1072). **ರಣರಂಗಸಿಂಗ** = ಯುದ್ಧದಲ್ಲಿ ಸಿಂಹದಂತೆ ಇರುವವನು ; ಮಹಾಶೂರ : ರಣರಂಗಸಿಂಗವಿಜಯಿಸಾ (ಎಕ. II, ೩೯೮-೦೫ ; 1೦ನೆಯ ಶ). **ರಣರಂಗಸಿಂಹ** = ರಣರಂಗಸಿಂಗ : ಅತಿಪ್ರಬಲರಣರಾಮನುಮೆನಿಸಿದ ರಣರಂಗಸಿಂಹನಿಂ (ಗದಾಯು. ೨-೬ ಪ) [ಸಂ.]

**ರಣರಂಪ,** ರಣಾರಂಪ, ರಾಣಾರಂಪು (ನಾ). ದೊಡ್ಡಗಲಾಟೆ ; ಗದ್ದಲ ; ಕೋಲಾಹಲ : ಅವಳಿಗೆ ಸರಿಯಾಗಿ ನಡಕೊಂಡೆನೋ, ತಲೆ ಬೋಳಿಸಿಹೋಗುತ್ತೆ. ಇಲ್ಲವೋ ರಣರಂಪವಾಗುತ್ತೆ (ಶವರ. ೪೪); ಏನಪ್ಪಾ, ಇದೆಲ್ಲಾ ರಣರಂಪ (ಕಂಪಕಂ. ೦೯೨). **ರಣಾರಂಪ** : ಇವೊತ್ತೆ ಆಗಬೇಕಾಗಿತ್ತೆ ಈ ರಣಾರಂಪ ? (ಕುಂಗಳ. ೦೩೪). **ರಾಣಾರಂಪು** : ಹಣ ಕೊಡೋದಿಲ್ಲಾಂತ ನೀನು ರಾಣಾರಂಪು ಮಾಡಿದೆ (ತುಪಕು. ೬೦).

[ರಣ$_2$ + ರಂಪ$_2$]

**ರಣರಣ** (ಅ). ಅತಿಯಾದ ತಾಪ ಅಥವಾ ತೀಕ್ಷ್ಣತೆಯನ್ನು ಸೂಚಿಸುವ ಒಂದು ಅನುಕರಣಾವ್ಯಯ : ಹೊರಗೆ ಬಿಸಿಲು ರಣರಣ ಉರಿಯುತ್ತಿತ್ತು (ಕಪುಸಿ. ೯೩).

**ರಣರಣಕ** (ನಾ). ಅತಿಯಾದ ಕಾತರ ; ಉತ್ಕಂಠೆ : "ಉತ್ಕಳಿಕೆ ರಣರಣಕಮಾಯುಲ್ಲಕಂ ವಿರಹಮುತ್ಕಂಠೆ . . . ಎನಲಾತುರಂ" (ಮಂಗರಾ. ೦೩೨-೨೯) ; ತರಳಾಕ್ಷಿಯನಾ ಕಾದಂಬರಿಯಂ ರಣರಣಕವಿಕಲಹೃದಯದಿ ನೋರುತಿರೆ ಚಿಂತಿಸುತ್ರಮಿರ್ದು (ಕಾದಂಕಾ. ೦೫೩). [ಸಂ.]

**ರಣರಣಿಕೆ** (ನಾ). = ರಣರಣಕ : ನಿನ್ನ ಜಗಜಟ್ಟಿತನವನ್ನು ಎಕ್ಕತುಳದಿಂದ ಸವಿಗೊಳ್ಳಬೇಕೆಂಬ ರಣರಣಿಕೆಯು ನನ್ನನ್ನೀ ವೀರತಾಣ್ಡವದಿಂದಾಡಿಸುತ್ತಿದೆ (ಪುಂಕ್ತ ಕ. ೬೩-೦೩). [< ರಣರಣಕ]

**ರಣರಭಸ** (ನಾ). ೧. ಯುದ್ಧವನ್ನು ಮಾಡಬೇಕೆಂಬ ಆವೇಶ : 'ರಣರಭಸಿಗ' ಪರಾ. ೨. ಯುದ್ಧದ ಬಿರುಸು, – ಜೋರು : ರಣರಭಸೋತ್ಕಟಂ ಧರೆ ಪೆಡಂ ಮಗುಟ್ದಂತೆ (ಕಪಂಪು. ೦೦-೬೪) ; ಕಲಹದುಬ್ಬರದ ರಣರಭಸ ಹುಟ್ಟಿಸಿತಜಾಂಡದ ಹಣೆಗೆ ಬೇಸೆಯನು (ತೊರರಾ. ೬-೦೩-೩೫). [ಸಂ.]

**ರಣರಭಸಿಗ** (ನಾ). ಯುದ್ಧದಲ್ಲಿ ಆವೇಶವುಳ್ಳವನು : ಅಬ್ಬರಿಸಿದವು ರಣದ ಚೂಣಿಯಲುಬ್ಬುವಱೆ ಶತಕೋಟಿಸಂಖ್ಯೆಯಲುಬ್ಬರಿಸ ರಣರಭಸಿಗರ ಮುಖಸನ್ನಿವೇಶದಲಿ (ತೊರರಾ. ೬-೦೯-೦೯). [ರಣರಭಸ + – ಇಗ]

**ರಣರಸ** (ನಾ). ೧. ಯುದ್ಧೋತ್ಸಾಹ : ರಣರಸಮುಣ್ಮಿದತ್ತು ಕದಪಿಂ ರಣರಾಗಮೆ ಸೂಸಿದತ್ತು ವೀಕ್ಷಣದಿನೆನಲ್ ರಣಪ್ರತಿಫದಿಂ ಏದಪಿಂದೊಗೆತರ್ಪ ಘರ್ಮವಾಃಕಣತತಿ (ಜಗಂ. ೦೩-೬೨). ೨. ಯುದ್ಧದ ಸ್ವಾರಸ್ಯ : ಕುರುಡಂಗೆ ರಣರಸವ ಬಿತ್ತರಿಸುವವನು (ಕುಮಾಗ. ೩-೫). [ಸಂ.]

**ರಣರಸಿಕ** (ನಾ). ಯುದ್ಧದಲ್ಲಿ ಉತ್ಸಾಹವುಳ್ಳವನು : ವಿಭೀಷಣಂ ರಣರಸಿಕನಾಗಿ ಪೊಕ್ಕಪುದುಂ (ಕಂರಾಮಾ. ೦೩-೦೯೬ ಪ) ; ರಣರಸಿಕರಚ್ಚಾಡಿದರು ನೆಱೆ ಮೆಚ್ಚಲು ಸುರವ್ರಾತ (ತೊರರಾ. ೬-೨೫-೦೪). [ಸಂ.]

**ರಣರಹಸ್ಯ** (ನಾ). ಯುದ್ಧದ ಒಳಗುಟ್ಟು, – ಮರ್ಮ : ರಣರಹಸ್ಯಜ್ಞಾನಿಗಳು ಮಿಗೆ ಮಣಿವರಿಂದ್ರಿಯವಶಕೆ (ಕುಮಾಭೀ. ೬-೦೦); ನಿಶಾಚರರು . . . ರಣರಹಸ್ಯದ ರಸಿಕತನದುಬ್ಬಣದ ವಿದ್ಯಾಪ್ರೌಢಿಯಲಿ . . . ಹೊಯ್ದಾಡಿದರು (ತೊರರಾ. ೬-೩೦-೨೦). [ಸಂ.]

**ರಣರಾಗ** (ನಾ). ಕಾದಾಡಬೇಕೆಂಬ ಆಸಕ್ತಿ : ರಣರಸಮುಣ್ಮಿದತ್ತು ಕದಪಿಂ ರಣರಾಗಮೆ ಸೂಸಿದತ್ತು ವೀಕ್ಷಣದಿಂ (ಜಗಂ. ೦೩-೬೨). [ಸಂ.]

**ರಣರಾಮ** (ನಾ). ಯುದ್ಧದಲ್ಲಿ ಆಸಕ್ತಿಯುಳ್ಳವನು ; ಯುದ್ಧಾಸಕ್ತ : ಅತಿಪ್ರಬಲರಣರಾಮನುಮೆನಿಸಿದ ರಣರಂಗಸಿಂಹನಿಂ (ಗದಾಯು. ೨-೬ ಪ).

[ಸಂ.]

**ರಣಲಂಪಟ** (ನಾ). ಯುದ್ಧದಲ್ಲಿ ಅತ್ಯಾಸಕ್ತಿಯುಳ್ಳವನು : ಅಧಟನೋ ರಣಲಂಪಟನೋ ಜನಾರ್ದನಂ (ಕಂರಾಮಾ. ೦೦-೬೨) ; ರಣಲಂಪಟನು ನಡೆಸಿದ ತೇರ ಸೂಠಿಯಲಿ (ಕೌಶಿರಾ. ೩೫-೬). [ಸಂ.]

**ರಣವರ** ' ರಣವಟ$^3$ ' ನೋ.

**ರಣವಸುಧೆ** (ನಾ). = ರಣಭೂಮಿ : ಕಾಕಪಕ್ಷಿನಿಸರದ ತಣ್ಪಿಂದಸುರಗಣ ಮಿಕ್ಕುರ್ವಿಮಾ ರಣವಸುಧೆಯೊಳೆಂದವ ರರೆಸೆಗೆವಟ$^3$ ವಾಜಿಪಿನಂ (ಜಗನ್ನಾ. ೩-೬೬). [ಸಂ. ರಣವಸುಧಾ]

**ರಣವಟ$^3$**, ರಣವರೆ (ನಾ). ಯುದ್ಧದಲ್ಲಿ ಬಾರಿಸುವ ಹರೆ.–ತಮ್ಮಟೆ : ನಿಡುಗರುಳುಗಳ ತೋರಣಗಟ್ಟ ರಣವಟ$^3$ಗಳ ನಿನಾದದಲಿ . . . ಬೀಯಗರು ತಮ್ಮೊಳಗಾಗಿ ಕೊಡಗೂಸುಗಳ ಮದುವೆಯ ಮಾಡುತಿರ್ದರದೊಂದು ತಾಣದಲಿ (ಕೊರಂ. ೬-೩೬-೯೧). **ರಣವರೆ :** ಅಲಿಸಿದನು . . . ಅಜಿಳ ವಾದ್ಯದಿ ಘೀಳಿಡುವ ರಥಸಗಳ ರಣವರೆ ಭೇರಿ ಶಂಖಗಳ (ಕೋಗಡು. ೨೦-೩). [ರಣ$_2$ + ಪಟ$^3_1$]

**ರಣವಾಜಿ** (ನಾ). ಯುದ್ಧದ ಕುದುರೆ; ಯುದ್ಧಾಶ್ವ : ವಿಶ್ವ ದುವ್ವಾಳಿ ಸುಪಡಾವಿಗಳತ್ತಲಾನೆಯು ಘಟ್ಟ ಕಾಲಾಳೊತ್ತರದ ರಣವಾಜಿ (ಕುವ್ಯಾ. ವಿ. ೩-೦೦) ; ಅವನ ದೇಶದ ತೀರದಲ್ಲಿ ಕಾಣಿಸಿಕೊಂಡ ನಾವಿಕರನ್ನೆಲ್ಲಾ ಅವನು ಕೊಂದು, ಅವರ ಮಾಂಸವನ್ನು ತನ್ನ ರಣವಾಜಿಗಳಿಗೆ ಕೊಡುತ್ತಿದ್ದನು (ಮಹಿಸ. ೯೬). [ಸಂ. ರಣವಾಜಿನ್]

**ರಣವಾತು** (ನಾ). ಯುದ್ಧದಲ್ಲಿ ಉಭಯಪಕ್ಷದವರೂ ಪರಸ್ಪರ ಮೂದಲಿಸುತ್ತ ಆಡುವ ಮಾತು ; ಕಟಕಿ : ಮನದಲಂಕುರವಾಗಿ ಕಡೆಗಣ್ಣಿನಲಿ ಪಲ್ಲವವಾಗಿ ರಣವಾತಿನಲಿ ಹೂತುದು ಕರ್ಣ ಪಾರ್ಥರ ರೋಷವಮಯ ಚೂತ (ಕುವ್ಯಾ. ಕ. ೨೩-೦೦). [ರಣ$_2$ + ಮಾತು$_1$]

**ರಣವಾದಸಿದ್ಧಿ** (ನಾ). ಯುದ್ಧದಲ್ಲಿ ಗಳಿಸಬೇಕಾದ ಜಯ : ಎಮಗಿನ್ನೇನು ಗತಿ ರಣವಾದಸಿದ್ಧಿಯಮೆತು ಜಯಸಂಪಾದಕರು ನಮಗಾರು (ಕುವ್ಯಾ. ಶ. ೨-೩೩). [ಸಂ.]

**ರಣವಾದ್ಯ** (ನಾ). ಯುದ್ಧದಲ್ಲಿ ಬಾಜಿಸುವ ವಾದ್ಯ ; ಸಮರವಾದ್ಯ : ನಳಿನಜಾಂಡದ ನೆತ್ತಿ ಬಿರಿಯಲು ಮೊಳಗಿದವು ರಣವಾದ್ಯತತಿ (ಕೊರಂ. ೬-೦೩-೦೫). [ಸಂ.]

**ರಣವಿಜಯ** (ನಾ). ಯುದ್ಧದಲ್ಲಿ ಪಡೆದ ಅತಿಶಯವಾದ ಗೆಲುವು : ಹರಸಿ ಕುಜಾಗಳಸಿಕ್ಕಿದಡೆ ಗೋಚರಿಸದೇ ರಣವಿಜಯಸಿಧಿ ಹರಹರ ಎನುತ ಕರಗಿದನು ಕಡುಕರುಣದಲಿ ಬಲರಾಮ (ಕುವ್ಯಾ. ಗ. ೬-೩). [ಸಂ.]

**ರಣವಿಶಾರದ** (ನಾ). ಯುದ್ಧದಲ್ಲಿ ನಿಪುಣನಾದವನು : ರಣವಿಶಾರದ ರಹಿರಲೇ ನೀವಣಕವೇತಕೆ ರಾಜಗುರುಗಳು ಸೆಣಸುವರೆ (ಕುವ್ಯಾ. ಶ. ೩-೯). [ಸಂ.]

**ರಣವೀರ** (ನಾ). ಯುದ್ಧ ಮಾಡುವುದರಲ್ಲಿ ಶೂರನಾದವನು : ರಣವೀರಂ ಶುಂಭನಿಂ ಜಂಭನೆ (ಜಗನ್ನಾ. ೦೫-೯೨). [ಸಂ.]

**ರಣವೀರ್ಯ** (ನಾ). ಹೋರಾಡುವುದರಲ್ಲಿರುವ ಶಕ್ತಿ ; ಯುದ್ಧಸಾಮರ್ಥ್ಯ : ನಿನ್ನ ರಣವೀರ್ಯವನ್ನೂ ದಾನಶೌರ್ಯವನ್ನೂ ನಾನು ಬಲ್ಲೆ (ವಚಚಾ. ೨೬೮). [ಸಂ.]

**ರಣವೀಳಯ** (ನಾ). ಯುದ್ಧಪ್ರಾರಂಭಕ್ಕೆ ಮೊದಲು ಯೋಧರಿಗೆ ಕೊಡುವ ತಾಂಬೂಲ : ಇಯುಜ್ವೀನರಿಗೆ ರಣವೀಳಯವನ್ನು ಕೊಡುತ್ತೇನೆ (ರಾಂಚ. ೦೦೯). [ರಣ$_2$ + ವೀಳಯ (< ವೀಳೆಯ)]

**ರಣವೈದ್ಯ** (ನಾ). ಉಗ್ರವಾಗಿ ಚಿಕಿತ್ಸೆ ಮಾಡುವವನು : ಆ ರಣವೈದ್ಯನ ಹತ್ತಿರ ಚಿಕಿತ್ಸೆ ಮಾಡಿಸಿಕೊಂಡ ಮೇಲೆ ರೋಗ ಹೆಚ್ಚಾಯಿತು (ರೂಢಿ). [ಸಂ.]

**ರಣವ್ಯಸನಿ** (ನಾ). ಯುದ್ಧದಲ್ಲಿ ಅತ್ಯಾಸಕ್ತಿ ಇರುವವನು : ಅಸುರ ವಡೆಯನನಿಲತನೂಜಂ ಸವ್ಯಾಪಸವ್ಯಮೆಚ್ಚು ರಣವ್ಯಸನಿ ಪಿಶಾಚಪಡೆಗೆ ಬಾಣಸುಗೆಯ್ದಂ (ಕಂಠಾಪು. ೦೩-೦೩೦). [ಸಂ. ರಣವ್ಯಸನಿನ್]

**ರಣವ್ರಣಿತ** (ನಾ). ಯುದ್ಧದಲ್ಲಿ ಗಾಯಗಳನ್ನು ಹೊಂದಿರುವುದು : ಅಂತು ಮಾಡಿಸಿ ಬಟಿಯಂ ದುಸ್ಸಹರಣವ್ರಣಿತವಾದ ಸೇನೆಯಂ ಸನ್ಮಾನ ವಾಹನಪುರಸ್ಸರಂ ಬೀಡಿಂಗೆ ಕಟಿಪ್ರತಿಪ್ರರ್ವನ್ನಗಂ (ಕಂಪ್ರಕೆ. ೦೦-೧೦೬ ವ). [ಸಂ.]

**ರಣಶಾಕಿಣಿ** (ನಾ). ಯುದ್ಧರಂಗದಲ್ಲಿ ಓಡಾಡುವ ಕ್ಷುದ್ರದೇವತೆ : ರಣಶಾಕಿಣಿಯರಜಪಟ್ಟಗೆಯ ರಕ್ತದ ತಣಿವು ಹರಸುತಿರೆ (ಕೌಶಿಂ. ೩೨-೨೩). [ < ಸಂ. ರಣಶಾಕಿನೀ ]

**ರಣಶೂರ** (ನಾ). = ರಣವೀರ : ರಣಶೂರರಲ್ಲಿಯು ವಿಭೋಗಿಗಳಲ್ಲಿಯು ಚಾಗಿಪ್ಪಂದವಲ್ಲಿಯು ಎನೆ ಸಾರಮೆಂಬಿನೆಗವಾ ಮಹಿ ಪೋಲ್ವುದು ಭೋಗಭೂಮಿಯಂ (ಪುಕೃ. ೯-೧೬). [ಸಂ.]

**ರಣಸನ್ನಿ** (ನಾ). ತೀವ್ರವಾಗಿರುವ ಸನ್ನಿರೋಗ : ಗೋಪಾಲನಿಗೆ ರಣಸನ್ನಿಯಾಗಿ ನಾಲಿಗೆ ಒಳಕ್ಕೆ ಸೇದಿಕೊಂಡು ಹೋಯಿತು (ಮೂವರು. ೦೦೯). [ರಣ$_2$ + ಸನ್ನಿ]

**ರಣಸಾಗರ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ರಣಸಾಗರನಾಶಂ(ಸಂ)ಕಟದುಳ್ (ಎಕ. IX. ೦೬-೦; ೮ನೆಯ ಶ). [ ? ]

**ರಣಸುಮ್ಮಾನ** (ನಾ). ಯುದ್ಧದ ಉತ್ಸಾಹ.— ಸಂಭ್ರಮ : ಏನ ಹೇಳುವೆನವರ ರಣಸುಮ್ಮಾನವನು (ಕುವ್ಯಾ. ದ್ರೋ. ೦೫-೫೨) ; ಬೋಳಯಿಸಿದನು ಸಕಲಸಮರಭಟಾಳಿಗಳ . . . ರಣಸುಮ್ಮಾನ [ಶಾಂ. ಸನ್ಮಾನ, ಸನ್ನಾಹ' ದುಬ್ಬಿನಲಿ (ಕೊರಂ. ೬-೨೦-೨೬). [ರಣ$_2$ + ಸುಮ್ಮಾನ]

**ರಣಸ್ಥಾನ** (ನಾ). = ರಣರಂಗ : ರಣಸ್ಥಾನದೊಳೆನ್ನರಟ್ಟುಡಿವೆನೇ (ಕಂಕಥಾ. ೦೩-೯೦). [ಸಂ.]

**ರಣಹಂಬಲು** (ನಾ). ಯುದ್ಧಮಾಡಬೇಕೆಂಬ ಆಸಕ್ತಿ : ಮರುಳಂತೆ ದುಶ್ಶಾಸ ಮಷಿಗಂಡು ರಣಹಂಬಲ ಮರೆದು . . . ರಣಾಂಕಣದೊಳು (ತುರಂಗ. ೫೨-೨೨). [ ರಣ$_2$ + ಹಂಬಲು (< ಪಂಬಲ್) ]

**ರಣಹಕ್ಕಲು** (ನಾ). ೧. ರಣಭೂಮಿ ; ಯುದ್ಧರಂಗ : ನಾವೆ ರಣಹಕ್ಕಲೋಳ್ ನಿನ್ನ ಜಯಿಸಿರ್ದುದುಂಟಾದರೆಮಗಕ್ಕು ಗಜಪುರದ ಸಿರಿ (ತುರಂಗ. ೬೫-೨೦). ೨. ಯುದ್ಧಾನಂತರ ಯುದ್ಧರಂಗದಲ್ಲಿ ಅಳಿದುಳಿದುದು : ತನ್ನಕ್ಕಳಂ ಸಾಲುಸಾಲೊಳ್ಗೊಂಡು ಬಿದ್ದಿರ್ದ ರಣಹಕ್ಕಲಂ ನೋಡಿ ಕಂಬನಿಮಾಡಿ (ತುರಂಗ. ೫೦-೫೦). [ ರಣ$_2$ + ಹಕ್ಕಲು (<ಹಕ್ಕಲ್) ]

**ರಣಹದ್ದು** ' ರಣಪದ್ದ ' ನೋ.

**ರಣಹೂಣಿಗ** (ನಾ). ಯುದ್ಧಮಾಡಬೇಕೆಂಬ ಛಲವುಳ್ಳವನು : ರಣಹೂಣಿಗರು ನಿಲಿ ಭೀಮ ಪಾರ್ಥರ ಕಾಣಬಹುದೋ ಕರೆಯೆನುತ ಗರ್ಜಿಸಿದನಾಚಾರ್ಯ (ಕುವ್ಯಾ. ದ್ರೋ. ೧೬-೨೨). [ ರಣ$_2$ + ಹೂಣಿಗ (< ಪೂಣಿಗ) ]

**ರಣಹೇಡಿ** (ನಾ). ಯುದ್ಧಕ್ಕೆ ಹೆದರುವವನು ; ಕಾಳಗಕ್ಕೆ ಅಂಜಿ ಓಡಿ ಹೋಗುವವನು : ದೌರ್ಜನ್ಯದೊಡನೆ ಹೆಚ್ಚಾಗಿ ಪರಾಕ್ರಮವಿರುವುದು. ನಿನ್ನಲ್ಲಿ ಅದೂ ಇಲ್ಲ ; ನೀನು ರಣಹೇಡಿ (ಗುರುಚ. ೯೯) ; ರಣಹೇಡಿ ಮನ ಹೇಡಿಗಳ ಕುಲದಿ ಜನಿಸಿದೆನು ರಿಣಪಾಶ ಹರಿಯಲೆಂದು ! (ಕೃತಾಕು. ೫–೧೦). [ ರಣ$_2$ + ಹೇಡಿ (< ಪೇಡಿ$_1$) ]

**ರಣಹೇಡಿಗ** (ನಾ). = ರಣಹೇಡಿ : ಬೇದ ಬದುಕಿದು ಸುಡಲಿ ರಣಹೇಡಿಗನು ನೀನು (ಕೌಶಿಂ. ೩೬-೦). [ರಣ$_2$ + ಹೇಡಿಗ]

**ರಣಹೊಡೆ** (ಕ್ರಿ). ದೆವ್ವ, ಗ್ರಹ ಮೊದಲಾದುವು ಮೆಟ್ಟಿಕೊಳ್ಳು ; ಗರ ಬಡಿ : ಹಗಲು ಹೊತ್ತೇ ರಣಹೊಡೆದು ಮಣ್ಣುಮುಕ್ಕಬೇಕಾದೀತು (ಬೆಳುವ. ೯೬) ; ಹೊಟ್ಟೆಕಿಚ್ಚಿನ ಪಾಪಕ್ಕ ಆ ಹೆಗ್ಗಡ್ತೀಗೆ ರಣಹೊಡೀತು ! (ಮರವ. ೬೦). [ರಣ$_2$ + ಹೊಡೆ$_1$ (<ಪೊಡೆ$_1$) ]

**ರಣಾಂಗಣ** (ನಾ). ಯುದ್ಧಭೂಮಿ ; ಸಮರಾಂಗಣ : ನಾಳೆಯು ರಣಾಂಗಣದೊಳ್ ನಡೆ ನೋಡುವಿರ್ ಮರುಳ್ಗಡೆಯೊಡಗೂಡೆ ತಾಂಡವಮು

ನಾಡುವ ರಾವಣನಟ್ಟೆಯಾಟವಮಂ (ಶಂರಾಪು. ೧೦-೨೩೩).

**ರಣಾಂಗಣಧುರೀಣ** =ಯುದ್ಧರಂಗದಲ್ಲಿ ಧೀರನಾದವನು ; ಒಂದು ಬಿರುದು : ಶಸ್ತ್ರಶಾಸ್ತ್ರಾದಿ ಸತ್ಕಳಾಪ್ರವೀಣ ರಣಾಂಗಣಧುರೀಣ . . . ಅನೂನದಾನರವಿನಂದನ (ಕ್ಯಾಶಾ. XI-ii, ೧೦೯-೩೬; ಶಾ. ೨೪೮).

[ರಣ$_2$ + ಅಂಗಣ]

**ರಣಾಗಮಹೀನ** (ನಾ). ಯುದ್ಧನೀತಿಯಲ್ಲಿ ತಿಳಿವಳಿಕೆಯಿಲ್ಲದವನು : ಏನೆಲವೊ ರಾವಣ ರಣಾಗಮಹೀನನೇ ನೀನು (ತೊರರಾ. ೬-೪೭-೩). [ಸಂ.]

**ರಣಾಗ್ರ** (ನಾ). ಯುದ್ಧರಂಗದ ಮುಂಚೂಣಿ. — ಮುಂಭಾಗ : ಸೌಮಿತ್ರಿಯುಂ ರಾಮನುಂ ವಿರಥಮಾಡಿ ರಣಾಗ್ರದೊಳ್ ಪಿಡಿದು ತಂದಾಂ ಕೊಟ್ಟಪೆಂ ಸೀತೆಯುಂ (ಶಂರಾಪು. ೧೪-೧೦೯) ; ಸಿಂಧಸೆಳೆಗಳು ಸಟ್ಟಡವಿ ಪವಡಿಸಿದ ತೆಜಿನಾವುದು ರಣಾಗ್ರದಲಿ (ಕುವ್ಯಾದ್ರೋ. ೬-೬೪). [ಸಂ.]

**ರಣಾಜಿರ** (ನಾ). = ರಣರಂಗ : ರಣಶ್ರೀ ರಣಾಜಿರದೊಳ್ ಮಾಣದೆ ಪೊರ್ಮವಂತೆ ಬೆಸಸಿಂ (ಶಂಶಾ. ೧೫-೯).  [ಸಂ.]

**ರಣಾಜಿರಂಗ** (ನಾ).=ರಣಾಂಗಣ : ಆ ಸೈನ್ಯಮುದ್ಯಾನದಂತೆ ಮಹಾಗಜಾತಿಶೋಭಿತಮುಂ ರಣಾಜಿರಂಗದಂತೆ ಮನೋಗಮನವಾಜಿರಂಜಿತಮುಂ . . . ಎನಿಸಿ (ರಾಶಕಃ. ೬-೦೭ ವ). [ಸಂ.]

**ರಣಾನಕ** (ನಾ).=ರಣವಾದ್ಯ : ಅಕಾಲ ಘನಗರ್ಜನೆಯಂತೆ ಸಮಸ್ತದಿಕ್ತಟಂ ಪಿಡುಗುವಿನಂ ರಣಾನಕರವಂಗಳಸುಂಗೊಳೆ ಪರ್ವೆ (ಶಂಶಾ. ೧೩-೩೩) ; ಭೇರಿ ಪಟಹ ಮೃದಂಗ ತಂಬಟವೀ ರಣಾನಕಮುಖ್ಯನಾನಾವೀರವಾದ್ಯಗಳ ರಭಸದಲಿ ರಂಜಿಸಿದುದಾ ದುರ್ಗ (ತೊರರಾ. ೬-೭-೦೫). [ಸಂ.]

**ರಣಾನುರಾಗ** (ನಾ).=ರಣಹಂಬಲು : ವಿದ್ಯಾಧರು ಮುಂದೆ ನಡೆವ ನಳನ ಪಡೆಗೆ ರಣಾನುರಾಗದಿನಡ್ಡಂಬಂದು ನಿಲ್ವುದುಂ (ಶಂರಾಪು. ೧೨-೩೬ ವ) ; ಆ ನಿರಂತರಸರಳ ಸಾರವ ಸೋನೆ ಸದೆದುದು ಧರ್ಮಸುತನ ರಣಾನುರಾಗವ ತೊಳೆದುದು (ಕುವ್ಯಾಕ. ೩-೪೩). [ಸಂ.]

**ರಣಾರಂಪ** ' ರಣರಂಪ ' ನೋ.

**ರಣಾರಣಿ** (ಗು). ಅತಿಭಯಂಕರವಾದ : ರಣಾರಣಿ ಯುದ್ಧವಾಡುತ್ತೇನೆ (ರಾಂಶ. ೩೯೬). ' ಹಣಾಹಣಿ ' ಹೋ.  [< ರಣ$_2$]

**ರಣಾವನಿ** (ನಾ).=ರಣಭೂಮಿ : ರಕ್ತವಾರಿ ಬೆದೆಗೂಡಿಸೆ ಸಾಲಿಡೆ ಪೆರ್ಣಂ ರಣಾವನಿತಲಮಿರ್ದುದಂಕುರಿತಮಾದವೊಲ್ (ಶಂರಾಪು. ೧೩-೯೯); ಪಾತಾಳದುತ್ತಮಸುಮಸ್ತಸಹಿತಂಶರಿಸದ್ಯದಿದಂ ಫಲುಗುಣಂ ಮಡಿದಿಹ ರಣಾವನಿಗೆ ಸಂಭ್ರಮದೊಳು (ಕೃಪಾಭಾ. ೨೪-೪೦). [ಸಂ.]

**ರಣಿಗ** (ನಾ). ಯುದ್ಧಮಾಡುವವನು : ಎತ್ತಿ ಬಂದರಿಯ ಬಲವನೋರ್ವನೆ ಪೊಕ್ಕು ಕತ್ತರಿಸುವೆನು ಶಿರಗಳ ಇತ್ತ ಪಾಲಿಸು ತಾಲಿಯನೆಂದು ರಣಿಗರ ಮುತ್ತ ನಂಜನು ಬಿನ್ನವಿಸೆ (ಶ್ಯಾಪಶ. ೧೩-೯). [ರಣ$_2$ + – ಇಗ]

**ರಣಿತ** (ಗು). ೧. ಶಬ್ದಮಾಡುವ ; ಧ್ವನಿಮಾಡುವ : ಮೃದುಪದಂಗಳೊಳ್ ಕಳರವರಣಿತಮಣಿನೂಪುರಂಗಳಿಂ ತಂಡಿಸಿ (ಆದಿಪು. ೭-೦೦೬ ವ). (ನಾ). ೨. ಧ್ವನಿ ; ಶಬ್ದ : ನೂಪುರರಣಿತಕ್ಕಳಸಿ ಬರ್ಪಂಚೆವಿಂಡಿನಿಂಚರದೊಳಂ (ಕಾದಂಪೂ. ೬೭); ವಾದ್ಯದ ರಣಿತಮದ್ರಿಯಂ ಸೊದೆದುದು (ಕುವ್ಯಾಗ. ೧-೭). [ಸಂ.]

**ರಣೋರ್ವಿ** (ನಾ). ರಣಭೂಮಿ ; ಕಳ : ಅಪಹಾರತೂರ್ಯಮಂ ಪೊಯಿಸಿ ಪಡೆಗಳೆರಡುಂ ರಣೋರ್ವಿಯಿಂದಂ ತಂತಮ್ಮ ಪುರಕ್ಕೆ ಪೋದುವು (ಶಂರಾಪು. ೧೩-೧೦೦). [ಸಂ. ರಣೋರ್ವೀ]

**ರತ** (ಗು). ೧. ಆಸಕ್ತ : ಮಗ್ನ : ದ್ವಿಟ್ಪುರಧ್ವಂಸರತಕ್ರೋಧಂ . . . ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿನೇತ್ರಂ (ಜಗಂ. ೧-೩) ೨. ಸಂತೋಷಗೊಂಡ ; ತೃಪ್ತಿಗೊಂಡ. ೩. ಪ್ರೀತಿಸಿದ ; ಪ್ರೇಮಿಸಿದ. (ನಾ). ೪. ತತ್ಪರತೆ ; ಧ್ಯಾನ : ಸತತ ಈತನೆ ಮುಖ್ಯಗುರುವೆಂದು ತಿಳಿದು ಅವನ ರತದಲ್ಲಿ ಇಪ್ಪಗೆ ವಜ್ರಪಂಜರ ಚರಣ (ಐದಾಳ್. ೨೭-೩). ೫. ಹರ್ಷ ; ಸಂತೋಷ. ೬. ಸುರತ ; ಕೂಟ : "ರತಂ ಮೈಥುನಂ ಯಾಭವೆಂನೆ ಕೂಟವಾದು" (ಮಂಗರಾ. ೪೭-೦೩) ; ನೆನೆದು ಮೊದಲಾದ ರತವನುವನೊಡಲೊಳ್ ಪುಳಕವನೆ ತಾಳ್ದ ತನ್ನಂಕದ್ವಚಲಸುತೆಯ ಮನವನಚಿದಪ್ಪಿ (ಜಪಪ. ೯-೬೩). [ಸಂ.]

**ರತಕೂಜಿತ** (ನಾ). ಸುರತಧ್ವನಿ ; ಸೀತ್ಕಾರ. [ಸಂ.]

**ರತಕೇಳಿ** (ನಾ). ಸಂಭೋಗ ; ರತಿಕ್ರೀಡೆ : ರತಕೇಳಿರಾಗವನಿಶಂ ಸ್ತ್ರೀವುಂ ವೃಷಕ್ಕೆಲ್ಲಂ (ಜಗಂ. ೨-೩). [ಸಂ.]

**ರತಕ್ರೀಡೆ** (ನಾ). = ರತಕೇಳಿ : ತನಪುತ್ರಂತರತೆ . . . ಮಯ್ಯಾದರದೊಳ್ಪಿಂಬಿವಂ ದಿವಿಜಂ ಶ್ರೀಪ್ರಭೆಗಿತ್ತನಾಕೆ ದಿವಿಜಂಗಿತ್ತಳ್ ರತಿಕ್ರೀಡೆಯೊಳ್ (ಚಾಂಪು. ೭-೩೭). [ಸಂ. ರತಕ್ರೀಡಾ]

**ರತಖಿನ್ನ** (ಗು). ಸುರತದಿಂದ ಬಳಲಿದ ; ಸಂಭೋಗದಿಂದ ಆಯಾಸಗೊಂಡ : ರತಖಿನ್ನಕಿನ್ನರೀಸನ್ನತೆಯುಂ ತಣ್ಣೆಲರು ಕಳೆದು ಸುಯ್ಯಂ ಸುರಭೀಕೃತಮಾಗುತ್ತುಂ ಪ್ರತ್ಯುಪಕೃತಿಪಡೆವುದು ತದುಪವನದ ಪಾವನಪವನಂ (ಶಂಪ್ರಭು. ೧೦-೪೨). [ಸಂ.]

**ರತಜಲ** (ನಾ). ಸಂಭೋಗದ್ರವ ; ಕಾಮಜಲ : ರತಿಸಮಯದೊಳೆ . . . ಶಂಖರವದ ಮಿಂತವೆನಿಸಲುಂಬಲ್ಪರತಜಲದ ಕೆಂಪನುಡುವತಿಚದುರಿನವಳೆ ಶಂಖಿಣಿ (ಜನವ. ೨-೦೩). [ಸಂ.]

**ರತದೀಪಿಕೆ** (ನಾ). ರತಿಕಾಲದಲ್ಲಿ ಹತ್ತಿಸಿಟ್ಟ ಸಣ್ಣ ದೀಪ : ನಾಣ್ಚತಲೆಯಂ ತೆಗೆವಂತಿರೆ ಪಾತ್ರಮಧ್ಯದೊಳ್ ತೆಗೆದುಡುಗಿರ್ದುವೊಳ್ಗುಡಿಗಳಂ ರತದೀಪಿಕೆಗಳ್ ನಿಶಾಂತದೊಳ್ (ಲೀಲಾವ. ೩-೧೮). [ಸಂ. ರತದೀಪಿಕಾ]

**ರತನಿ** (ನಾ). ಮೊಳಕೈಯಿಂದ ಮುಚ್ಚಿದ ಅಂಗೈವರೆಗಿನ ಒಂದು ಅಳತೆ : ಏಳೋ ಎಂಟೋ ರತನಿಗಳ ಪ್ರಮಾಣದ ಸಲಗವು ಅಲ್ಲಿಗೆ ಬರುವುದು (ಬಂದ್ವಕ. ೭೯). [ < ಸಂ. ರತ್ನಿ ]

**ರತಲು** ' ರಾತಲು ' ನೋ.

**ರತಾಂತ** (ನಾ). ಸುರತದ ಅಂತ್ಯ ; ಸಂಭೋಗದ ಕೊನೆ : ಮನದಜೀವಂ ಕಟಿಲ್ದುವ ರತಾಂತ ಸುಖೋಪಮದಿಂದೆ ನಿದ್ರೆಯಂ ನೆನೆಯದೆ ಪೋದುವಂತವರ್ಗೆ ಚಿತ್ತಜ ಕೇಳಿಗಳಿಂದೆ ಪೊಳ್ತುಗಳ್ (ಶಂಪ್ರಭು. ೬-೪೩) ; ಸಲಿಲಕೇಳಿಯುಮುಂ ಸಮಲಾಟದೇಳ್ಗೆಯುಂ ತಳೆದಭಿಸಾರಿಕಾನಿಕರಮೊಪ್ಪಿದುದಾತ್ತರತಾಂತಲೀಲೆಯೊಳ್ (ಗಂಕ. ೪-೬೬). [ಸಂ.]

**ರತಾಂಬು** (ನಾ).= ರತಜಲ : ನೆರೆಯಲ್ಕೆ ಷಷ್ಠಿಯೊಳ್ ಕೊಡನೊಡೆದಂತೆ ಗುಳ್ಳಿಸಿಟಿಗಂ ಸತಿಯರ್ಗೆ ರತಾಂಬು ಮರ್ಮದೊಳ್ (ಮನ್ಮವಿ. ೩-೦೭).

[ಸಂ.]

**ರತಾರ್ತ** (ನಾ). ರತಿಕ್ರೀಡೆಯ ಬಯಕೆಯುಳ್ಳ ವ್ಯಕ್ತಿ : ಎಳಲತೆವನೆಯನಿತೆನಿತುಂ . . . ಕೃತಕಾಚಳಮೆನಿತನಿತುಂ ರತಾರ್ತರೆಳಸಿರೆ ರಮ್ಯಂ (ಪುಷ್ಪಪು. ೨-೪೦). [ಸಂ.]

**ರತಾರ್ಥಿನಿ** (ನಾ). ಸಂಭೋಗದ ಬಯಕೆಯುಳ್ಳವಳು : "ವೃಷಸ್ಯಂತೀ, ರತಾರ್ಥಿನೀ — ಈ ೨ ಸುರತದಜಕೆಯವಳ್" (ಹರಾಯು. ೮೦-೩೩೦).

[ಸಂ. ರತಾರ್ಥಿನೀ]

**ರತಿ$_1$** (ನಾ). ೧. ಸಂತೋಷ ; ಆನಂದ ; ಹರ್ಷ. ೨. ಪ್ರೀತಿ ; ಒಲವು ; ಆಸಕ್ತಿ : ಸಲ್ಲಲಿತರತಿಯಲ್ಲಿ ನಿಮ್ಮಯ ಮೆಲ್ಲಡಿಗಳಂ ಪೂಜಿಸುವ ಸಂಫುಲ್ಲಭಕ್ತಿಯನಿತ್ತು ಪರಿಪಾಲಿಸಿದೆ (ಬಸಪು. ೫೦-೭೨). ೩. ಹಂಬಲು ; ವ್ಯಾಮೋಹ : ನಿಮ್ಮ ನೋಡಿ ನೋಡಿ ಮನದಲ್ಲಿ ರತಿ ಹುಟ್ಟಿ ನಿಮಿರ್ದವೆನ್ನ ಕಳೆಗಳು (ಬಸವ. ೪೯೦) : ಕೃತರಾಪಾನ್ವಿತನಾ ಹಿಮಾಂಶು ಗುರುವಿಂ ಗೋತ್ರಾರಿಯಸ್ತಾಂಗನಾರತಿಯಿಂ ಕೀಚಕನಂ ಬಕಾರಿ ಮುಂಜೀದಂ (ಕೋವೊಂಶ. ೩೯). ೪. ಬಯಕೆ ; ಆಸೆ ; ಇಚ್ಛೆ : ಅನುದಿನಂ ಬಪ್ಪ

ತೆಱದಿಂ ಪೊಪ್ಪುವ ರತಿಯುಲಾ ಸಿದ್ಧಕುಲತಿಲಕನೆಯ್ತಂದು (ಸಿದ್ಧರಾ. ೯-೭೮). ೫. ಕೂಟ ; ಸುರತ ; ಸಂಭೋಗ : "ಸಂವೇಶನಂ . . . ರತಿಃ. ಸುರತಂ. ಮೋಹನಂ — ಈ ೭ ಸುರತಂ" (ಶಬ್ದಮ. ೯೩-೧೦೫) ; ಇಲ್ಲಿ ಮನುಜಸ್ತ್ರೀಯು ಮೇಳನವಲ್ಲಿ ಸುರನಾರಿಯರ ರತಿ (ಶಿವಾ.ಗ. ೦-೨೧) ; ಸುಳಿಗಾಳಿ ನಿಲೆ ತೆರೆ ನಿಲುವಂತೆ ರತಿಯಾಟ ನಿಲೆ ನಿಂದುದೊಡನೆ ಮೈಯಾಟ (ಭರತ. ೧೦-೯೨). ೬. ಮನ್ಮಥನ ಹೆಂಡತಿ : "ಇಚ್ಛೆ ಗಾತ್ರಿಯೆಂದು ರತಿ" (ಕಬಿಗಾ. ೧೮-೧೯) ; ಸ್ಮರನ ಪೊಗೆಯಿಂದೆ ಪುದಿದಿರ್ದ ರತಿಯುವೋಲ್ಕಾಂತೆ ಕರಮೆ ಕಣ್ಗೆಸೆದಿರ್ದಳ್ (ಕಾದಂಪೂ. ೯೩). ೭. ಚಂದ್ರನ ಹದಿನಾರು ಕಳೆಗಳಲ್ಲಿ ಆರನೆಯದು : "ಅಮೃತಾ . . . ರತಿ . . . ಕಾಮದಾಯಿನಿಯೆಂಬ ಷೋಡಶಕಲಾಭರಿತನಾಗಿ (ವಿವೇಕ. ೨೧೮). ೮. [ಕಾವ್ಯವಿ] ಸ್ಥಾಯಿಭಾವಗಳಲ್ಲಿ ಒಂದು ; "ರತಿಯೆಂದರೆ ಸ್ತ್ರೀ ಪುರುಷರಿಗೆ ಪರಸ್ಪರವಾಗಿರತಕ್ಕ ಪ್ರೀತಿ" (ಸಾರವಿ. ೩೯೯) : "ರತಿಃ, ಹಾಸಃ . . . ಶಮಃ — ಈ ೯ ಸ್ಥಾಯಿಭಾವಂಗಳ್" (ಶಬ್ದಮ. ೦೩-೯೦); ರತಿ ಹಾಸ . . . ರಮೆಯೆಂಬ ಕ್ರಮದಿಂ ಶೃಂಗಾರಾದಿ ನವರಸಕ್ಕೆ ಬೀಜಭೂತಾತಂಗಳಾದ ಸ್ಥಾಯಿಭಾವಂಗಳೇ ದಕ್ಷಿಣಾದಿನಾಯಕಪ್ರದಯದಲ್ಲಿ ಸ್ಥಾಯಿಯಾಗಿರ್ಪ (ವಿವೇಕ. ೨೨೭) ; ಮುಗಿಲ ಮಾರಿಗೆ ರಾಗರತಿಯ ನಂಜ ಏರಿತ್ತ (ಗಂ. ೬೯-೧). ೯. [ಛಂದ] ಅಂಶಗಣದಲ್ಲಿ ಒಂದು ; ಬ್ರಹ್ಮಗಣ : ಜಯಕೀರ್ತಿಯು 'ಬ್ರಹ್ಮ' 'ವಿಷ್ಣು' 'ರುದ್ರ' ಗಣಗಳ ಬದಲಾಗಿ 'ರತಿ' 'ಮದನ' 'ಶರ' ಗಣಗಳ ಹೆಸರಿನಲ್ಲಿ ಲಕ್ಷಣ ಹೇಳಿದ್ದಾನೆ (ಛಂದೋಚ. ೦೩೨). [ಸಂ.]

**ರತಿ$_2$** (ನಾ). ೧. ರತ್ನಗಳನ್ನು ತೂಗಲು ಬಳಸುವ ಗುಲಗಂಜಿ ಮತ್ತು ಅದರ ತೂಕ : ಹವಳಕ್ಕೆ ಕಣಜ ಮುತ್ತಿಗೆ ಚವ ಪಚ್ಚೆಗೆ ರತಿ ವಜ್ರಕ್ಕೆ ಮಂಜಾಡಿ . . . ಯಿವು ತೂಗಿ ಮಾರುವಂತ ವಿವರಗಳು (ಬಾಸ್ಕರ. ೭೮-೧). ೨. ಹೊಳಪು ; ಕಾಂತಿ ; ಪ್ರಕಾಶ : ರತ್ನದ ಶಿಲೆಯೊಡೆದು ಪುಡಿಯಾದಲ್ಲಿ ರತಿಯಿಲ್ಲಿ ಅಡಗಿತ್ತೆಂಬುದನರಿದಲ್ಲಿ ಪ್ರಾಣಲಿಂಗಿಯೆ ಪ್ರಾಣಲಿಂಗಸ್ಥಲ (ಮೋಳಿಮಾ. ೧೯೩-೫೯೭) ; ರತಿಯಿಂದ ರತ್ನ ಗತಿಯಿಂದ ವಾದ್ಯ (ಸಲವ-ಪ. ೯,೩೯೫-೭೮) ; ರತಿಯೆಂಬುದೆ ಪ್ರಾಣ ಘಟವೆಂಬುದೆ ಕಲ್ಲು (ಸಲವ-ಕ. ೩,೯೦೨-೯೪). ೩. (ಅಲಂ) ಸ್ವಲ್ಪ ; ಕೊಂಚ : ನನಗೆ ರತಿ ಮಾತ್ರವೂ ದುಃಖವಾಗುವುದಿಲ್ಲ (ತುಳಸಿ. ೦೨೫).
[← ಹಿಂ. ರತ್ತೀ./ಮರಾ. ರತಿ, ರತೀ./ಸಂ. ರಕ್ತಿಕಾ]

**ರತಿಕಲೆ, ರತಿಕಳೆ** (ನಾ). ಕಾಮಕಲೆ ; ಶೃಂಗಾರಕಲೆ : ರತಿಕಲಾಸುಪ್ರೌಢೆಯಲ್ಲದ ಸತಿಗೆ ರೂಪಿದ್ದೇನು (ಕೊರಂ. ೭-೯೫-೧೭). **ರತಿಕಳೆ** : ನಲ್ಲರೊಡನೊಂದಿ ಮಱೆದಿರೆ ರತಿಕಳಾಕೇಳಿಯಿಂದಂ . . . ಅಬಲೆಯರು ಕಣ್ಗೆಸೆದರು (ಹಕಾ. ೪-೩೭). [ಸಂ. ರತಿಕಲಾ]

**ರತಿಕಳೆ** 'ರತಿಕಲೆ' ನೋ.

**ರತಿಕಾಂತ** (ನಾ). ರತಿಯ ಗಂಡ ; ಮನ್ಮಥ : ರತಿಕಾಂತನಸಿಯ ನುಣ್ಪುಗರತಿಕಾಂತದ್ಯುತಿಯನಾಂತು ಬೆಳ್ವಿಸೊಳಧಿಕಂ ಲತೆಯ ಮೊದಲ್ಗೆಸೆ ರತಲೋಲತೆಯನಿನಂಗೀವುವವಳ ತೋಳ ಮೊದಲ್ಗಳ್ (ಜಗಪ. ೧೦-೩೦). [ಸಂ.]

**ರತಿಕಾತಿ** (ನಾ). ಪ್ರೀತಿಯನ್ನುಂಟುಮಾಡುವವಳು : ಆ ರತಿಕಾತಿಯುವಳ ಲೋಚನವೆಂಬಾಬಿಡಿವಱಿಗಳೆಯ್ತಂದು ನೀಜಿನ ನಿಜವದನಾಂಬುಜದೊಳು ಕಾಲೂಱಿ ನಿಂದುವು (ಕೃಭಂಜ. ೩-೭೮). [ರತಿ$_1$ + – ಕಾತಿ$_5$]

**ರತಿಕೇಳಿ** (ನಾ). = ರತಕೇಳಿ : ತೋಳ ಮೊದಲು ಪೊಕ್ಕುಳ ಮೊದಲು ಸ್ಥೂಲಜಘನವಿವು ಪೇಳುವುದೇನ್ ರತಿಕೇಳಿಯೊಳಗೆ ಚುಂಬಿಪ ತಾಣಂ (ಜಪಪ. ೭-೨೫). [ಸಂ. ರತಿಕೇಲಿ]

**ರತಿಕ್ರೀಡೆ** (ನಾ). = ರತಕೇಳಿ : ತದ್ವಸನವಾಲೆ ರತಿಕ್ರೀಡೆಗೆ ಮನೋಜ್ಞಮನುಕೂಲಮುಚಿತಂ (ಶುಕ್ರಶ. ೩-೫೯) ; ರತಿಕ್ರೀಡೆ ಎರಡು ಪ್ರಕಾರ. ಬಾಹ್ಯರತಿ ಅಭ್ಯಂತರ ರತಿ ಎಂದು (ಕಾಮಶಾ. ೨೨೧). [ಸಂ. ರತಿಕ್ರೀಡಾ]

**ರತಿಗಲೆ** (ನಾ). ರತಿಕ್ರೀಡೆಯಲ್ಲಿ ಉಂಟಾದ ನಖಕ್ಷತ ಮುಂತಾದ ಗುರುತು : ತನ್ನ ಮೈಯೊಳಪ ರತಿಗಲೆಯ ಬಡವೆಲ್ಲವನು ತೋಱಿ ಸ್ವಪ್ನದಿರವಂ ಪೇಳೆ (ಪ್ರಭುರಾ. ೦೦-೯೯). [ರತಿ$_1$ + ಕಲೆ$_2$]

**ರತಿಗಾರ** (ನಾ). ಪ್ರೀತಿಸುವವನು ; ಪ್ರಿಯ ; ನಲ್ಲ : ನನ್ನ ಗಂಧದ ರತಿಗಾರ ರುಮ್ಮಾಲೆಲ್ಲ ಪರಿಮಳ, ರಾಯ ಯಾವಾಗ ಬರುತ್ತೀರಿ ? (ಹಳ್ಳಿಪಾ. ೫೯). [ರತಿ$_1$ + – ಗಾರ (< – ಕಾಱ)]

**ರತಿಗೃಹ** (ನಾ). ೧. ವಿಲಾಸಗೃಹ. ೨. ಸೂಳೆಯ ಮನೆ. ೩. ಯೋನಿ. [ಸಂ.]

**ರತಿಗೆಡು** (ಕ್ರಿ). ಆಸಕ್ತಿಯನ್ನು ಕಳೆದುಕೊಳ್ಳು ; ನಿಷ್ಠೆಯಿಲ್ಲವಾಗು : ವ್ರತವ ಮಾಡಿಕೊಂಡಲ್ಲಿ ರತಿಗೆಡದೆ ಕ್ಷೇತ್ರವಾಸಂಗಳಲ್ಲಿ ಬೇಡದೆ (ಸರ್ವಜ್ಞ. ೦೮೯-೮೮೩) ; ಧೃತಿಬಿಡದೆ ರತಿಗೆಡದೆ ಭಕ್ತಿಸ್ಥಿತಿಯ ಮಱೆಯದೆ . . . ಸಂಪ್ರತಿಬಲಿದ ಸದ್ವ್ರತಿಯ ಸಮತೆಗೆ ಪುರಜನಂ ವಿಸ್ಮಯವಿದನು ತಿಳಲು (ಬಸಪು. ೩೮-೩೦). [ರತಿ$_1$ + ಕೆಡು$_1$]

**ರತಿಗೆಯ್, ರತಿಗೈ** (ಕ್ರಿ). ಸಂಭೋಗಿಸು ; ರತಿಕ್ರೀಡೆಯಾಡು : ಸೊಗಸಿವಡೆ ರತಿಗೆಯ್ವು ಸೊಕ್ಕಿದೆಡಗಲಮೊಳಪೊಕ್ಕು (ಬಸಪು. ೪೨-೦೫) ; ಶ್ಲಥೆ ಘನಂ ರತಿಗೆಯ್ಯಲತ್ಯುಚ್ಚರತವೆನಿಸುವುದು (ಜಪಪ. ೪-೩೯). **ರತಿಗೈ** : ಓರಂತೆ ವಿಟನೊಳು ಮಗ್ಗುಲ ರತಿಗೈವ ವಾರಾಂಗನೆಯರೊಪ್ಪಿದರು (ಕಂಪನ. ೬-೦೨೧). [ರತಿ$_1$ + ಕೆಯ್$_1$]

**ರತಿಗೇಹ** (ನಾ). ೧. ವಿಲಾಸಗೃಹ. ೨. ಸೂಳೆಯ ಮನೆ ; ವೇಶ್ಯಾಗೃಹ : ರತಿಗೇಹಂ ಹಾಸುಮಂಚಂ . . . ಮಾಬ್ಬುಂ ವಿಟಗರ್ಭಮತವುಂ ಕಾಮಸಾಮ್ರಾಜ್ಯದೊಳ್ಪಂ (ಸೋಮಸು. ೧೪-೨) ; ಮಿಂಚುವ ರನ್ನಗನ್ನಡಿ ವಿಲೇಪನ ಚಂದನವಾರಿ ಗಿಂಡಿ ಲಾಮಂಚದ ವೀಜನಂ ಪಲಸರಂ ಪಡಿಗಂ ರತಿಗೇಹಮೊಪ್ಪುಗುಂ (ಮುಸ್ಕಪ. ೦೦-೩). ೩. ಯೋನಿ. [ಸಂ.]

**ರತಿಗೈ** 'ರತಿಗೆಯ್' ನೋ.

**ರತಿಗೊಡು** (ಕ್ರಿ). = ರತಿಗೆಯ್ : ಒಡೆದೆರಡುಕೈಯೊಳಾ ತೊಡೆಯೆರಡ ನೊತ್ತಿ ರತಿಗೊಡಲದೇ ವೇಷ್ಟಿತಕರಣಂ (ಜಪಪ. ೯-೧೮). [ರತಿ$_1$ + ಕೊಡು$_1$]

**ರತಿತಂತ್ರ** (ನಾ). = ರತಿಕಲೆ : ಚಂಚಲನೇತ್ರೆ ಚತುರೆ ರತಿತಂತ್ರಕುಶಲೆ [ಪಾಠಾಂ. ದೇಳ್ಗೆ]ನಿಪುಣೆ . . . ಮಂಗಿನಾಡ ಹೆಣ್ಣು (ಜಪಪ. ೩-೩೯). [ಸಂ.]

**ರತಿಪ** (ನಾ). ರತಿಯ ಗಂಡ ; ಮನ್ಮಥ : ಓರಂತೆ ರತಿಪನೆಸುವ ನಿಶಾತ ಮಾರ್ಗಣಹತಿಗೆ ಗುಱಿಯಾದೆನು (ಬಸಪು. ೯೦-೭). [ಸಂ.]

**ರತಿಪತಿ** (ನಾ). = ರತಿಪ : ರತಿಪತಿಗೆ ಮೂಲೋಕವಾವರಿಸುವ ರೂಪು . . . ಕೊಟ್ಟ ಗುರುಮೂರ್ತಿ (ಹಕಾ. ೦-೧). [ಸಂ.]

**ರತಿಬಂಧ** (ನಾ). ೧. = ರತಿಕಲೆ : ಕ್ರೀಡಾಬಂಧ ರತಿಬಂಧಾದಿಗಳಿಂ ಸಂಗೀತಸಾಹಿತ್ಯಾದಿ ವಿದ್ಯಾಗೋಷ್ಠಿಗಳಿರೆ ಮಲ್ಲಯುದ್ಧ ಲೀಲಾಯುದ್ಧಾದಿ ವಿಹಾರಗಳಿಂ (ವಿವೇಕ. ೨೦೩). ೨. ಸಂಭೋಗದಲ್ಲಿ ಅನ್ಯೋನ್ಯ ಉಪಲಗ್ನದ ಬೇರೆ ಬೇರೆ ವಿಧ ; ಚಿತ್ರರತಿಗಳಲ್ಲಿ ಒಂದು ಪ್ರಕಾರ. [ಸಂ.]

**ರತಿಯೆಱೆಯ** (ನಾ). = ರತಿಪ : ಆ ರತಿಯೆಱೆಯಂ ಪೂಜಿಪ ಕೆಂಗಲ್ಗರುವಿನ ತೆಱಸನೆ ಯುವತಿ ಕಲಾವತಿ ಸಿರಿಯಿಂದಾ ಲಕ್ಷ್ಮಿಗೆ ಸವತಿ (ಜಯಾಕಾ. ೨-೯೮). [ರತಿ$_1$ + ಎಱೆಯ]

**ರತಿರಮಣ** (ನಾ). = ರತಿಪ : ಅತಿನಿಬಿಡಂಗಳ್ . . . ರತಿರಮಣಕುಂಭಿಕುಂಭಾಕೃತಿಗಳ್ ಕಳಶೋಪಮಂಗಳವಳ ಕುಚಂಗಳ್ (ಗದಾಯು. ೮-೫೭) ; ರತಿರಮಣನತಿಮೋದದಿಂದಮ್ಮನಂಪಗಲದಿರ್ಕೆ (ಜಪಪ. ೨-೧). [ಸಂ.]

**ರತಿರಸ** (ನಾ). ಕಾಮಾಸಕ್ತಿ : ನರಪಮುಖವಿಧುಬಿಂಬಂ ಸತಿಯ ಮನಃಕುಮುದವಮನುರು ರತಿರಸವಮಂ ಬಿಡದಲರ್ಚಿಸಿತ್ತು ನಿತಾಂತಂ (ಶಾಂತಿ. ೬-೮೨) ; ರತಿರಸದಿಂ ಸೊರ್ಕಿ ನಿಮೀಳಿತಲೋಚನಪಕ್ಷ್ಮದಿಂ ತೊದಳ್ ನುಡಿಯಿಂ ಸೂಯಿತಘರ್ಮಾಂಬುಗಳಿಂ ಮೂರ್ಛೆತೆಯಿಂ ತಾಳ್ದೊಪ್ಪುತಿರ್ದರಾ ದಂಪತಿ (ತ್ರಿಷ್ಠಿ. ೧೭-೦೨೮). [ಸಂ.]

**ರತಿರಹಸ್ಯ** (ನಾ). ಕಾಮದ ಗುಟ್ಟು ; ಶೃಂಗಾರ ರಹಸ್ಯ : ಸ್ಮರರಾಗೋದ್ರೇಕಂ ವೀತರಾಗನಿರ್ದೆಡೆಯೊಳೇಕೆ ಪುಟ್ಟುಗುಮೆನೆ ತತ್ಪರತೆಯಿನಂತರ್ವರ್ತಿಯೊಳರಸನವೇಕ್ಷಿಸನೆ ರತಿರಹಸ್ಯೋತ್ಸವಮಂ (ಕುಸ್ಮ. ೯-೦೦೯). [ಸಂ.]

**ರತಿರಾಗ** (ನಾ). = ರತಿರಸ : ಮಾಗಿಯ ದಿವಸಂ ಘನರತಿರಾಗವನುತ್ಸವದಿ ಮಾಡುಗೆ (ಮಡಿ. ೩-೯); ರತಿರಾಗಾಮೃತವಾರ್ಧಿಯೊಳತನುಕ್ರೀಡಾನಿಮಗ್ನೆಯಾದಂತೆ (ಕುಸ್ಮ. ೩-೦೦೯). [ಸಂ.]

**ರತಿರಾಗಂಬೆಱು** (ಕ್ರಿ). ಕಾಮಾಸಕ್ತಿಯನ್ನು ಹೊಂದು ; ಕಾಮಾತುರದಿಂದ ಕೂಡಿರು : ರತಿರಾಗಂಬೆತ್ತು ಕಾಂತಂ ತೆಗೆದು ಬಿಗಿದು ತಳ್ಕೈಸೆ (ಶಾಕುಂ. ೮-೮೯). [ ರತಿರಾಗ + ಪೆಱು₁ ]

**ರತಿರಾಗಿ** (ನಾ). ಸಂಭೋಗದಲ್ಲಿ ಆಸಕ್ತಿಯುಳ್ಳವನು ; ಸುರತಾಸಕ್ತಿಯಿರುವವನು : ಉಜ್ವಲಯಶಂ ರತಿರಾಗಿ ಕಳಾವಿಭೂಷಣಂ. . . ಶುಚಿಯೆಂದೆನಿಪಂದಮಿ ನಾಗರೀಕನಂ (ಮುಕ್ತಾ. ೦೦-೩). [ಸಂ. ರತಿರಾಗಿನ್]

**ರತಿವೆರು** (ಕ್ರಿ). ಸಂತೋಷವನ್ನು ಹೊಂದು : ಆನಂದಪಡು : ನರ್ತನದ ಸತಿಯರೇಳ್ತಂದು. . . ತಾಳಮಾರ್ದಳೆಯುಪಾಂಗಂ ವೀಣೆಯು ಮುಖ್ಯಂಗಳನು ನುಡಿಸುತೇ ಜತೆಗೂಡಿ ಗಾನಸಂಗೀತಚಯದಿಂದೊಲಿದು ರತಿವೆತ್ತು ಭೂಪಾಳಿಯಂ ಪಾಡೆ (ಪಪಪು. ೦೯-೩೦). [ ರತಿ₁ + ಪೆರು₁ (< ಪೆಱು₁) ]

**ರತಿಶಾಸ್ತ್ರ** (ನಾ). ಕಾಮಶಾಸ್ತ್ರ : ಲೀಲೆಯಿಂ ರತಿಶಾಸ್ತ್ರಮೂಲವಜಾದ (ಜಪವ. ೯-೨೨). [ಸಂ.]

**ರತಿಶ್ರಾಂತಿ** (ನಾ). ಸಂಭೋಗದಿಂದ ಉಂಟಾದ ಆಯಾಸ,- ದಣಿವು : ರತಿಶ್ರಾಂತಿನಿರ್ಯಲ್ಲಳನಾಸಿಶ್ವಾಸಪುಷ್ಪಪ್ರಸರದಗುರುಸೌರಭ್ಯಸಂದೋಹಭಾರಾಕಳಿತಂ. . . ಗಂಧವಾಹಂ (ತಂದ್ರಪು. ೬-೯೩). [ಸಂ.]

**ರತಿಸು₁** (ಕ್ರಿ). ೧. ಗಮನಿಸು ; ಲಕ್ಷ್ಯವಿಡು : ನಿರ್ಮಲಮತಿಯನಂಗೀಕರಿಸಿ ಲಕ್ಷ್ಯವ ರತಿಸುತಿಹುದಾವಾಗಲು (ಸವ್ವರು. ೨-೩). ೨. ಕೂಡು ; ಭೋಗಿಸು : ಗೋತ್ರದೊಳ್ಪುಟ್ಟಿರ್ದ ಸತಿಗಳ ನೇತ್ರದಿಂ ನೋಡ್ಯಪರರತಿಸುವ ಮನುಜಮಾತ್ರನು ಮೂತ್ರರೋಗದಿ ಬಳಲಿ ಸಾಯುವನು (ಜಾವಂಗ. ೨೦) ; ಇಂದೀವರಾಂಬಕ ನಿಂದಿಸದೆಮ್ಮಾನು ಮಂದಹಾಸದಿ ನೀನು ಹೊಂದಿ ರತಿಸಿಂದು (ಹಮತ. ೩೯). [ರತ + — ಇಸು₃]

**ರತಿಸು₂** (ಕ್ರಿ). ಮಾಡು ; ರಚಿಸು : ಮತ್ತೆ ಬಿಡದೊಮ್ಮೆ ಪೂಜೆಯ ರಚಿಸಿರ್ಪ ಸಾಕಿಂದಿಗೆ (ಶರಕ. ೬೨-೬೯). [ <ರಚಿಸು₁]

**ರತಿಸುಖ** (ನಾ). ಸಂಭೋಗದ ಆನಂದ ; ಕೂಟದ ಸುಖ : ವಧುವುಂ ತಾನುಂ ರತಿಸುಖ ಮಧುಸೇವಾಮತ್ತರತ್ತ ಮೆಯ್ಮರೆದಿರ್ದರ್ (ಶಂಕರಾಪ. ೧೩-೩೬) ; ತನ್ನಾಶ್ರಯದ ರತಿಸುಖವನು ತಾನುಂಬ ಊಟವನು ಬೇಱೆ ಮಕ್ಕೊಬ್ಬರ ಕೈಯಲ್ಲಿ ಮಾಡಿಸಬಹುದೆ (ಬಸವ. ೦೮೩). [ಸಂ.]

**ರತಿಸುಖವಡೆ** (ಕ್ರಿ). ಸಂಭೋಗಸುಖವನ್ನು ಪಡೆ ; ಸುರತದ ಆನಂದವನ್ನು ಹೊಂದು : ಒಂದಿನ ಪರಮಸುಂದರಿಯೆನ್ನ ಕನಸಿನೊಳ್ ಸಂದಿಸಿ ರತಿಸುಖವಡೆದು ಅಂದಿನಿಂದವಳ ಕಾಣದೆ ವಿಹವನನಾಂತು ಕಂದಿದೆ (ವೋಹತ. ೩೦-೦೩). [ರತಿಸುಖ + ಪಡೆ₁]

**ರತಿಸೌಖ್ಯ** (ನಾ). = ರತಿಸುಖ : ಚುಂಬಿಸಿ ತೋಳ ಮೊದಲೊಳುಗುರ್ಗಳ ನೆಲೆಯ ಮೃದುಮಪ್ಪ ರತಿಸೌಖ್ಯಮಂ ಪಡೆವರು (ಜಪಪ. ೬-೩೯). [ಸಂ.]

**ರತಿಸ್ರುತೆ** (ನಾ). = ರತಜಲ : ಇದನು ಬೆರಳ್ಗಳ ಕಂಡು ಗೋಕುಲಗುಡಿಸೆ ದ್ರವಿಪಳು ಮದನದ್ವಾರದ ಕಳೆಯು ಪದುಮದ ತೆರನು ರತಿಸ್ರುತೆಯೆಂಬ ಪೆಸರದಕೆ (೯೯೩೪೪. ೦೦-೬೩). [ಸಂ. ರತಿಸ್ರುತ]

**ರತಿಹೀನ** (ನಾ). ರತಿಶಕ್ತಿಯಿಲ್ಲದವನು ; ನಪುಂಸಕ : ರತಿಹೀನಂ ಪೆಟವಂ ಕುಬ್ಜಂ ಮತಿವಂತಂ . . . ಸತಿಯಂ ಕಾದುಲ್ಕಿತಿಪ್ಪಂ (ಮದಿ. ೬-೩೪). [ಸಂ.]

**ರತೀಧವ** (ನಾ). = ರತಿಪ : ಆಧಾರಗೆಯ್ದು ಕುಳ್ಳಿರಗೊಟ್ಟು ಕೇಳ್ದ ರತೀಧವ ಬಂದ ಸುದ್ದಿಯನು (ಪೋಹತ. ೩-೪೪). [ಸಂ.]

**ರತೀಶ** (ನಾ). = ರತಿಪ : ಘನವಿಪಾಳವ್ರತೀಂದ್ರರ ತಪೋವಿಪಿನಂ ಬಯಲಪ್ಪಿನಂ ರತೀಶನ ಚತುರಂಗಸೇನೆ ನಡೆದತ್ತು ಧರಿತ್ರಿಗೆ ಚಿತ್ರಮಪ್ಪಿನಂ (೧೦೪. ೬-೭) ; ರತೀಶನ ತಂದೆಯುಂ ಬಿದಿ ರವಿ ಶಿಖಿಗಳಂ ಭಜಿಸಿ ಕರ್ಮಕ್ಕೆ ತಂದೆ ನಿನ್ನೊಡಲಂ (ಬಸತ. ೩-೬೦). [ಸಂ.]

**ರತುನ**, ರನ್ನ (ನಾ). ೧. ವಜ್ರ, ಮಾಣಿಕ್ಯ ಮುಂತಾದ ಬಹುಬೆಲೆಯುಳ್ಳ ಹರಳು,- ಮಣಿ : ಪಂಚರತುನದೊಳೆ ಸೆಱೆದ ಪಸರದಿಂ ತೋರಣಂಗಳೊಳ್ ತೊಡರ್ದ ತಿಸರದಿಂ (ಕಂಕರಾ. ೩-೨೨ ರಗಳೆ) ; ಕನಕಶಿಲೆ ಎನಿಸುವ ಪಾಷಾಣದಲ್ಲಿ ರತುನ ಪುಟ್ಟಲು (ಪ್ರಪೋಪಪ. ೨೬೩-೦೯) ; ಜಲಧಿ ತಲದ ರತುನದಂತೆ . . . ಹೊಳೆಹೊಳೆವುದು ಚಿತ್ರವು (ಏಜಾನೀ. ೦೩-೮). ರನ್ನ : ೧. ಚೆಂಬೊನ್ನ ಪಟ್ಟವಣೆ ರನ್ನದ ಕನ್ನಡಿ (ಅದಪು. ೯-೩೩) ; ಸಾಣೆಯ ಮೇಲೆ ರನ್ನಗಳಿಟ್ಟು ಪಾಸೆದೊಪ್ಪಗಾಣಿಸಿ ಕುಡುವ ತೇಟಿಗರು (ಪೋಹತ. ೩-೨೬). ೨. ಕೆಂಪುಹರಳು ; ಮಾಣಿಕ್ಯ : "ಕೆಂಬರಲು ರನ್ನ ಕಿಸುಗಲ್ಲೆಂಬಿವು ರತ್ನಾಭಿಧಾನಂ" (ಕಂಶಂ. ೩೩). ೩. ಶ್ರೇಷ್ಠವಾದುದು : 'ರನ್ನ' ಪರಾ. ೪. 'ಗದಾಯುದ್ಧ' ಮತ್ತು 'ಅಜಿತನಾಥಪುರಾಣ' ಮುಂತಾದುವುಗಳನ್ನು ರಚಿಸಿದ ಕನ್ನಡದ ಒಬ್ಬ ಪ್ರಸಿದ್ಧಕವಿಯ ಹೆಸರು : ಕವಿಚಕ್ರವರ್ತಿವೆಸರೇಂ ರನ್ನಂಗೆ ಮೆಯ್ವೆತ್ತುದೋ (ಅಜಿಪು.೦-೮೬) ; ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇಱಿ ಪರೀಕ್ಷಿಪಂಗೆಂಟೆರ್ದೆಯೇ (ಗದಾಯು. ೧-೪೪). [<ಸಂ. ರತ್ನ]

**ರತುನದಾಲಿ**, ರನ್ನದಾಳಿ (ನಾ). ರತ್ನವನ್ನು ಕುಂದಣಿಸಿದ ತಾಳಿ: ನೇವಳದ ನಾಯಕಿಗೆ ರತುನದಾಲಿ [ಶಾಣಾಂ. ರತ್ನದಾಲಿ, ರನ್ನದಾಳಿ]ಯ ರಾಜಹಂಸೆಗೆ ಮಾಗಾಯ್ದುಳ ಮುಗ್ಗೆಗೆ . . . ನಿಯಾಮಿಸಿ (೧೦೪. ೩-೯೦ ವ). ರನ್ನದಾಳಿ : ನೇಸಱ ಬಿಂಬಂ . . . ವಿಯತ್ತ್ರೀಜಾ ಸತಿಯ ರನ್ನದಾಳಿಯ ಮೈಸಿರಿಯನೆ ಪೋಲ್ತು ಮಾಗಿಯೊಳ್ ಶೋಭಿಸುಗುಂ (ಉತ್ತಪು. ೯-೨೩) ; ನುಣ್ಗೊರಳ್ಗೆ ರನ್ನದಾಳಿಯನಾಳಿಸಿಯುಂ . . . ಪಸದನಂಗೊಳಿಸಲ್ (ಪ್ರಪಾ. ೩-೦೩ ವ). [ರತುನ + ತಾಲಿ₁]

**ರತೆ** (ನಾ). ಸಂಭೋಗದಲ್ಲಿ ತೊಡಗಿರುವವಳು : " ರತೆಯೆನಲು ಸುರತೆಯಕ್ಕುಂ " (ಪಂಗರಾ. ೬೯-೨). [ಸಂ. ರತಾ]

**ರತೋತ್ಕಂಠೆ** (ನಾ). ಸಂಭೋಗದಲ್ಲಿ ಉತ್ಸುಕತೆಯುಳ್ಳವಳು : ಕಾಮಾತುರೆ : ಕೋಮಲೆಯಂ ಕೋಟಿಚಟೂಕ್ತಿಯಿಂದೊಸೆಯಿಸುತ್ತಿರ್ದಂ ರತೋತ್ಕಂಠೆಯಂ (ಕಂಪ್ರಪು. ೬-೩೩). [ಸಂ. ರತೋತ್ಕಂಠಾ]

**ರತೋತ್ಸವ** (ನಾ). ಸಂಭೋಗದ ಸಂಭ್ರಮ : ಮಿಕ್ಕಮಂಡನಂ ಯುವತಿಜನಕ್ಕದೇವುದೊ ರತೋತ್ಸವಚಿಹ್ನಮೆ ದಿವ್ಯಮಂಡನಂ (ಶಗಂ. ೦೯-೦೦೦); ಅನವರತಂ ರತೋತ್ಸವದೊಳ್ಪುಣ್ಮುವ ಘರ್ಮಜಲಂಗಳಿಂದೆ ಮಜ್ಜನಮನತಿಪ್ರಿಯಾಧರಸುಧಾರಸಸೇವನೆಯಿಂದಮೂಟಮಂ... ನೆನೆಯದೆ ಪೋದುವಂತವರ್ಗೆ ಚಿತ್ರಜಕೇಳಿಗಳಿಂದೆ ಪೊಬ್ಬುಗಳ್ (ಕಂಪ್ರಪು. ೬-೮೩) [ಸಂ.]

**ರತ್ನ** (ನಾ). ಒಬ್ಬಾತನ ಹೆಸರು: ಶ್ರೀರತ್ನ (ಎಕ. II, ೪೧೯, 800). [?]

**ರತ್ನೂಡಿ** (ನಾ). ಹಪ್ಪಳ ಮೊದಲಾದುವುಗಳನ್ನು ಲಟ್ಟಿಸುವ ಸಾಧನ ; ಲಟ್ಟಣಿಗೆ : ಹಪ್ಪಳ ಲಟ್ಟಿಸಬೇಕು. ರತ್ನೂಡಿ ಎಲ್ಲಿ ? (ರೂಢಿ). [ ? ]

**ರತ್ನ** (ನಾ). ೧. ವಜ್ರ, ಮಾಣಿಕ್ಯ, ಮರಕತ ಮುಂತಾದ ಬಹು ಬೆಲೆಯುಳ್ಳ ಮಣಿ ; ಅನರ್ಘ್ಯವಾದ ಹರಳು : ವಾರಿಧಿ ಮೈದೆಗೆದರೆ. ರತ್ನಂಗಳು ಕಾಣಬಹುದು (ರಸಕ. ೬೬೦); ಕೆಲವು ಅಮೂಲ್ಯವಾದ ಹರಳು ಕಲ್ಲುಗಳು ಕಣಿಗಳಲ್ಲಿ ದೊರೆಯುತ್ತವೆ. ಅವುಗಳಿಗೆ ರತ್ನಗಳು ಅನ್ನುತ್ತಾರೆ (ಶುಂಂಬದು. ೪-೦೬೪). ೨. ಕೆಂಪುಹರಳು ; ಮಾಣಿಕ್ಯ : ಕೆಂಬರಲು ರನ್ನ ಸುಗಲ್ಲೆಂಬಿವು ರತ್ನಾಭಿಧಾನಂ " (ಕಬಕಂ. ೩೩). ೩. ಅತ್ಯುತ್ತಮ ವಾದುದು ; ಶ್ರೇಷ್ಠವಾದುದು ; ಅಮೂಲ್ಯವಾದುದು : "ಮಣಿಯುಂ ರತ್ನತ್ರಯಂ ಭಾಸುರತರಮಿವು ರತ್ನಾಷ್ಟಯಂ " (ಶಾವಾರ. ೦೩೩). ೪. ಸಮಾಸಗಳ ಕೊನೆಯಲ್ಲಿ ಶ್ರೇಷ್ಠ, ಪ್ರಮುಖ ಎಂಬರ್ಥವನ್ನು ಕೊಡುವ ಒಂದು ಪದ ; ಉದಾ : ನಾಯಕರತ್ನ, ಸ್ತ್ರೀರತ್ನ. ೫. ಕನ್ನಡದ ಒಬ್ಬ ಪ್ರಸಿದ್ಧಕವಿ; ರನ್ನ : ಶ್ರೀ ಕವಿರತ್ನ (ಎಕ. II. ೪೦; ಶು. ೨೨೦೪); ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ (ಗದಾಯು. ೦-೩೪) ; ನಯದಿಂ ಪಂಪನೊಲಿಲ್ದು ನಿರ್ಮಿಸಿದ ಪೊನ್ನಂ ಪ್ರೀತಿಯಿಂ ಪೇಲ್ದು ಭಕ್ತಿಯಿನಾ ರತ್ನಕವೀಶ್ವರಂ ಸಮೆದ ತತ್ಕಾವ್ಯತ್ರಯಕ್ಕಂ ಜಗತ್ತ್ರಯಮುಂ ಮುಂ ಬೆಲೆಯಾಗಿ ಪೋಯ್ತು (ಕಂದ್ರಕ. ೦.೬೬). ೬. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : ರಸ ನಾಟ್ಯಂಗಂ ಗ್ರಹಣಾ ಪೃಷತಂ ನಿಧಿ ರತ್ನ ನವಮು ಮೊಂಭತ್ತನಿಕುಂ (ಕ್ಕಶಾ. ೪-೪). [ಸಂ.]

**ರತ್ನಕಂಕಣ** (ನಾ). ರತ್ನಖಚಿತವಾದ ಬಳೆ,–ಕಡಗ : ದೇವಿಯ ವಿಗ್ರಹಕ್ಕೆ ಭಕ್ತರೊಬ್ಬರು ರತ್ನಕಂಕಣವನ್ನು ಅರ್ಪಿಸಿದ್ದಾರೆ (ಹೂ). ೨. [ಸಾಮುದ್ರಿ] ಹಸ್ತದಲ್ಲಿರುವ ಒಂದು ರೇಖೆಯ ಹೆಸರು : ಮಣಿಬಂಧದಲ್ಲಿ ರೇಖೆಯಿರಲು ರತ್ನಕಂಕಣವೆಂದು ನಾರದಾದಿ ಋಷಿಗಳು ಹೇಳುವರು (ಸಾಮುಂ. ೬೩-೨). [ಸಂ.]

**ರತ್ನಕಂಬಲ, ರತ್ನಕಂಬಳ** (ನಾ). ಬೆಲೆಬಾಳುವ ಕಂಬಳಿ ; ಅಮೂಲ್ಯವಾದ ಕಂಬಳಿ : ತನ್ನ ಬೆಳಗೆ ಬೆಳಗಾಗಿದ ರತ್ನಕಂಬಲಮನಾ ಧರಿತ್ರೀ ವಲ್ಲಭಂ ಮುಹುರ್ಮುಹುರಾಲೋಕನಕುತೂಹಳಚಿತ್ತನಾಗಿ ವಿಸ್ಮಯಂ ಬಟ್ಟು . . . ನುಡಿದಂ (ಸುಕುಮಾ. ೦೦-೦೦೫ ವ). **ರತ್ನಕಂಬಳ್** : ನಿನ್ನ ರತ್ನಕಂಬಳಮಂ ಪೊದೆದು ಮನೆಗೆ ಪೊಂದೊಡೆ (ವಡ್ಡಾರಾ. ೩೪-೬); ಬಿಳಿದಾದ ರತ್ನಕಂಬಳದಿಂದೆಯುಂ . . . ಪರಿಶೋಭಿತಮಾಗಿ (ಆದಿಪು. ೩೬-೨೬೩). [ಸಂ.]

**ರತ್ನಕಂಬಳ** ' ರತ್ನಕಂಬಲ ' ನೋ.

**ರತ್ನಕಂಬಳಿ** ' ರತ್ನಗಂಬಳಿ ' ನೋ.

**ರತ್ನಕನ್ನಡಿ** (ನಾ). ರತ್ನಖಚಿತವಾದ ಕನ್ನಡಿ : ಒಂದುದಿನಂ ರತ್ನಕನ್ನಡಿಯೊಳ್ ಮೊಗಮಂ ನೋಡುವಾಗಳ್ (ಧರ್ಮಾಮೃ. ೩೫). [ರತ್ನ + ಕನ್ನಡಿ₁]

**ರತ್ನಕರ್ಮ** (ನಾ). ರತ್ನಗಳನ್ನು ಕುಂದಣಿಸುವ ಕೆಲಸ : ಶಿಲಾಕರ್ಮ್ಮ ರತ್ನಕರ್ಮ ಕಾಷ್ಠಕರ್ಮ್ಮ ಚಿತ್ರಕರ್ಮ್ಮ ಪತ್ರಕರ್ಮ ಪ್ರತಿಮಾಲಕ್ಷಣ ಸಮುಸ್ತಹಸ್ತಕುಶಲತೆಯುಳ್ಳ ವಿಶ್ವಕರ್ಮನಿರ್ಮಿತಂ (ಎಕ. IV(B). ಕ್ಕಕ್ಕಾ. ೬೬-೧೦; 1116). [ಸಂ. ರತ್ನಕರ್ಮನ್]

**ರತ್ನಕುಂಡಲ** (ನಾ). ರತ್ನದ ಕರ್ಣಾಭರಣ ; ಮಣಿಕುಂಡಲ : ಇವು ರತ್ನಕುಂಡಲಂ ಜಿತರವಿಮಂಡಳಮಿವು ತುಡಲ್ಕೆ ಯೋಗ್ಯಮೆ ನಿನಗೆ (ಅಜಿಪು. ೦೨-೦೦೬). [ಸಂ.]

**ರತ್ನಗಂಧಿ** (ನಾ). ಕೆಂಪು ಮತ್ತು ಹಳದಿಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ : ಲಕ್ಷ್ಮಿ . . . ರತ್ನಗಂಧಿಗಿಡದ ಬುಡದಲ್ಲಿ ಉಚ್ಚೆ ಹೊಯ್ದು ಬಿಟ್ಟಿದ್ದಾಳೆ ! (ಕಾಮೂರು. ೪೪೯) ; ಛತ್ರಿಯ ಹಾಗೆ ಹರಡಿಕೊಂಡಿರುವ ಛತ್ರಿಮರದ ಕೆಂಪುಬಣ್ಣದ ಹೂ. ಪಟ್ಟಣಗಳಲ್ಲಿ ರತ್ನಗಂಧಿಯೂ ಎನ್ನುವುದು ಇದನ್ನೇ (ಬೋರೇದೇ. ೬೪). [ಸಂ. ರತ್ನಗಂಧೀ]

**ರತ್ನಗಂಬಳಿ, ರತ್ನಕಂಬಳಿ** (ನಾ). = ರತ್ನಕಂಬಲ : ಒರ್ವಂ ರ್ಘುರ್ಘುವೇಗ ನಮೂಲ್ಯಮಪ್ಪ ರತ್ನಗಂಬಳಿಯುಂ ಕೊಂಡು ಬಂದು (ಸುಕುಮಾ. ೦೦-೦೦೪ ವ); ಚಿನ್ನದ ಕಾಲ ಬೆಳ್ಳಿಯ ಕಾಲ ಮಂಚ ಸುವರ್ಣದಡ್ಡಣಿ ಸುಪ್ಪತಿಗೆ ರನ್ನವಿಚ್ಚುರ ರತ್ನಗಂಬಳಿ ತಲೆಗಿಂಬ ಹೊನ್ನಾಂಬರನಿತ್ತ ಮಗಗೆ (ಮೋಹಕ. ೦೩-೦೬); ರತ್ನಗಂಬಳಿಗುಣ – ನಾನಾವರ್ಣದಿಂದ ವಿಚಿತ್ರವಾಗಿಯೂ, ಶೀತಪರವಾಗಿಯೂ ಕಂಬಳ ಶ್ರೇಷ್ಠವಾಗಿಯೂ ಇರುವುದು (ಸಕಪ. ೬೬). **ರತ್ನಕಂಬಳಿ** : ರತ್ನಕಂಬಳಿಯಂ ಮಚ್ಚಾರತಿಯರ ಕಯ್ಯೊಲಿಟ್ಟದಾಗಳ್ (ಸುಕುಮಾ. ೦೦-೦೦೮ ವ); ರತ್ನಕಂಬಳಿಗಳನ್ನು ಹಾಸುವ ಹಾಗೆ ಭೃತ್ಯರಿಗಾಜ್ಞಾಪಿಸಿ (ಕ್ಕವಾಕಾ. ೦೪೩). [ರತ್ನ + ಕಂಬಳಿ]

**ರತ್ನಗರ್ಭ** (ನಾ). ೧. ರತ್ನಗಳನ್ನು ತನ್ನ ಬಸಿರಿನಲ್ಲಿ ಹೊಂದಿರುವುದು : ಧರೆ ರತ್ನಗರ್ಭಮಾದುದು ಸುರರೆಲ್ಲಂ ಹರ್ಷಗರ್ಭರಾದರ್ (ಅಂಕ. ೬-೨೬). ೨. ತನ್ನ ಒಡಲಲ್ಲಿ ರತ್ನಗಳನ್ನುಳ್ಳದು ; ಸಮುದ್ರ : ದಡದಲ್ಲಿ ಕೂತು ಮೀನವೇಷವೆಣಿಸುವವನಿಗೆ ರತ್ನಗರ್ಭದ ಮಹತ್ವ ತಿಳಿಯಲು ಹೇಗೆ ಸಾಧ್ಯ (ಜೀವಾಂ. ೬). ೩. ಕುಬೇರ. [ಸಂ.]

**ರತ್ನಗರ್ಭೆ** (ನಾ). ಹೊಟ್ಟೆಯಲ್ಲಿ ರತ್ನಗಳನ್ನು ಹೊಂದಿರುವವಳು; ಭೂಮಿ ; ವಸುಂಧರೆ : "ಭೂಃ . . . ರತ್ನಗರ್ಭಾ, ವಸುಂಧರಾ, ಧರಾ, ಆಧಾರಾ – ಈ ೩೭ ಭೂಮಿಯ ಪೆಸರ್" (ಹಲಾಯು. ೨೬-೦); ಈ ರತ್ನಗರ್ಭೆಯೊಳ್ ಸೀತಾರತ್ನಂ ಜನಿಸಿದ ಬಗೆಯೆಂತೆಂದುಮುಸಿರ್ವೆಂ (ಅದ್ಭುತ. ೩-೨೦). [ಸಂ. ರತ್ನಗರ್ಭಾ]

**ರತ್ನತ್ರಯ** (ನಾ). ೧. [ಜೈನ] ಮೋಕ್ಷವನ್ನು ಪಡೆಯಲು ಸಾಧನವಾದ ಸಮ್ಯಕ್ ದೃಷ್ಟಿ, ಸಮ್ಯಕ್ ಜ್ಞಾನ ಮತ್ತು ಸಮ್ಯಕ್ಚಾರಿತ್ರ ಎಂಬ ಮೂರು ತತ್ತ್ವಗಳು : ನಾಗಶ್ರೀಯುಂ ಭಕ್ತಪ್ರತ್ಯಾಖ್ಯಾನವಿಧಿಯಿಂ ರತ್ನತ್ರಯಮುಮಂ ಸಾಧಿಸಿ ದೇವನಾಗಿ ಪುಟ್ಟಿದೊಳ್ (ವಡ್ಡಾರಾ. ೨೦-೨೦) ; ಸಮ್ಯಗ್ದರ್ಶನ, ಸಮ್ಯಕ್ ಜ್ಞಾನ, ಸಮ್ಯಕ್ಚಾರಿತ್ರವೆಂಬ ರತ್ನತ್ರಯವು ಮೋಕ್ಷ ಮಾರ್ಗವು (ಹಿಂದಸಾ. ೮೬). ೨. [ಬೌದ್ಧ] ಬುದ್ಧ, ಧರ್ಮ ಮತ್ತು ಸಂಘ ಎಂಬ ಮೂರು ಅಂಗಗಳು : ಅವನು ರತ್ನತ್ರಯಗಳಿಗೆ ಶರಣು ಬಂದದ್ದರಿಂದ, ಮುಂದೆ ಅವನಿಗೆ ಒದಗಬೇಕಾಗಿದ್ದ ಅವೀಚೀನರಕ ನರಕ ತಪ್ಪಿತು (ಹಸ್ತಮ. ೪೦). ೩. ಕನ್ನಡದಲ್ಲಿ ಪ್ರಸಿದ್ಧರಾದ ಪಂಪ, ಪೊನ್ನ, ರನ್ನರೆಂಬ ಮೂರು ಜನ ಜೈನ ಕವಿಶ್ರೇಷ್ಠರು : ಕವಿಜನರೊಳ್ ರತ್ನತ್ರಯ ಪವಿತ್ರಮೆನೆ ನೆಗಟ್ದ ಪಂಪನುಂ ಪೊನ್ನಿಗನುಂ ಕವಿರತ್ನನುಮೀ ಮೂವರ್ ಕವಿಗಳ್ ಜಿನಸಮಯದೀಪಕರ್ (ಅಜಿಪು. ೦೨-೩೬) ; ರತ್ನತ್ರಯರಲ್ಲಿ ಪೊನ್ನನು ಎರಡನೆಯವನು (ಕಸಾಶ. ೦೦೦). [ಸಂ.]

**ರತ್ನದರ್ಪಣ** (ನಾ). = ರತ್ನಕನ್ನಡಿ : ಆ ಕಪೋಲಗಳ ಕಾಂತಿಯು ರತ್ನದರ್ಪಣಕಾಂತಿಯನ್ನು ಮೀರಿಸುತ್ತಿವೆಯಲ್ಲ! (ಶಾಕುಂ. ೨೬) [ಸಂ.]

**ರತ್ನಧೇನುದಾನ** (ನಾ). ಷೋಡಶಮಹಾದಾನಗಳಲ್ಲಿ ಒಂದು ; ರತ್ನಖಚಿತವಾದ ಹಸುವಿನ ವಿಗ್ರಹವನ್ನು ದಾನಮಾಡುವುದು : (೧) ತುಲಾಪುರುಷದಾನ . . . (೧೫) ರತ್ನಧೇನುದಾನ, (೧೬) ಮಹಾಭೂತಘಟದಾನ ; ಈ ಮೇರೆಗೆ ಷೋಡಶಮಹಾದಾನಗಳನ್ನು . . . ಮಾಡಿ (ಮಹಾಪ್ರ. I. ೦೦೨). [ಸಂ.]

**ರತ್ನಪಟ್ಟ** (ನಾ). ೧. ಅಧಿಕಾರಸೂಚಕವಾಗಿ ಹಣೆಗೆ ಕಟ್ಟುವ ರತ್ನಖಚಿತವಾದ ಚಿನ್ನದ ಪಟ್ಟಿ : ವರಧರ್ಮ ಕುಮಾರಕನಂ ಕರೆಯಿಸಿ ರಾಜ್ಯಾಭಿಷೇಚನಂಗೆಯ್ದು ಜಗದ್ಗುರು ಕಟ್ಟಿ ರತ್ನಪಟ್ಟಮನಿರಿಯಿತ್ತಂ ತನ್ನ ಸರಳ ರಾಜ್ಯಶ್ರೀಯುಂ (ಧರ್ಮಾಪು. ೦೬-೩೪). ೨. [ಶಿಲ್ಪಶಾ] ರಾಜರೂ ದೇವತೆ

ಗಳೂ ಧರಿಸುವ ಶಿರೋವೇಷ್ಟನಗಳಲ್ಲಿ ಒಂದು ಬಗೆ ; ಈ ಶಿರೋವೇಷ್ಟನಗಳಲ್ಲಿ ಜಟಾ,ಮೌಳಿ ಮುಂತಾದ ಹನ್ನೆರಡು ವಿಧಾನಗಳನ್ನು ಅನುಸರಿಸುತ್ತಾರೆ. ಇವುಗಳಲ್ಲಿ ' ಪಟ್ಟ ' ಎಂಬುದು ಕೊನೆಯದು : ಇವುಗಳಲ್ಲಿ ಪಟ್ಟವೆಂಬುದು ಪತ್ರಪಟ್ಟ, ರತ್ನಪಟ್ಟ, ಪುಷ್ಪಪಟ್ಟ ಎಂದು ಮೂರು ಬಗೆಯಾಗಿದೆ (ಶಂಕಮೇ. ೦). [ಸಂ.]

**ರತ್ನಪಡಿ** (ನಾ). ೧. ರತ್ನಗಳನ್ನು ಕುಂದಣಿಸಿದುದು : 'ರತ್ನಪಡಿನಗ' ಪರಾ. ೨. ರತ್ನಗಳನ್ನು ತೂಕ ಮಾಡಿ ಬೆಲೆಕಟ್ಟುವುದು. ೩. ರತ್ನಗಳನ್ನು ಮೆಟ್ಟಿರುವ ಒಡವೆ ಮುಂತಾದುವು : ಪಾಂಡವರು ತಮಗೆ ಹಂಚಿಕೆಯಲ್ಲಿ ಬಂದ ಒಡವೆಯಲ್ಲಿ ಚಿನ್ನ, ಬೆಳ್ಳಿ, ರತ್ನಪಡಿ ಮೊದಲಾದ ವಸ್ತುಗಳನ್ನು ಕೈಗೊಂಡು . . . ಹೋಗಿ (ಕೃವಾಅ. ೮೭) ; ರತ್ನಪಡಿಯು ಆಭರಣಗಳೂ . . . ದೊರೆತಿವೆ (ಶಾಶಪ. ೩೭೯). [ರತ್ನ + ಪಡಿ$_1$? ]

**ರತ್ನಪಡಿನಗ** (ನಾ). ರತ್ನಗಳನ್ನು ಕುಂದಣಿಸಿರುವ ಒಡವೆ : ದೊಡ್ಡ ಮುತ್ತಿನ ಮೂಗುತಿ ಮುಂತಾದ ರತ್ನಪಡಿನಗಗಳನ್ನು ಅಲಮೇಲಮ್ಮನವರು ಕೊಟ್ಟು (ಮೈವಾಸ್ತು. ೦೨೯) : ದೇವರ ಉತ್ಸವಕಾಲದಲ್ಲಿ ಅಲಮೇಲಮ್ಮನವರು ತಮ್ಮ ರತ್ನಪಡಿನಗಗಳನ್ನು ಕೊಡುತ್ತಿದ್ದರು (೬ಡಕ. ೨೯).

[ ರತ್ನಪಡಿ + ನಗ$_1$ ]

**ರತ್ನಪಡಿವರ್ತಕ** (ನಾ). ರತ್ನಾಭರಣಗಳ ವ್ಯಾಪಾರಿ : ಈ ಪಟ್ಟಣದಲ್ಲಿ ವಿಷ್ಣುದಾಸನೆಂಬ ರತ್ನಪಡಿವರ್ತಕನಿದ್ದಾನೆ (ರಾಕ್ಷಮು. ೯೪).

[ ರತ್ನಪಡಿ + ವರ್ತಕ ]

**ರತ್ನಪಡಿವ್ಯಾಪಾರ** (ನಾ). ರತ್ನದ ಆಭರಣಗಳನ್ನು ಮಾರುವುದು ; ರತ್ನಖಚಿತವಾದ ಒಡವೆಗಳ ಮಾರಾಟ : ಅವರ ವಂಶದವರು ತಲತಲಾಂತರದಿಂದ ರತ್ನಪಡಿವ್ಯಾಪಾರ ಮಾಡುತ್ತಿದ್ದಾರೆ (ರಾಶಿ).

[ ರತ್ನಪಡಿ + ವ್ಯಾಪಾರ ]

**ರತ್ನಪಡಿವ್ಯಾಪಾರಿ** (ನಾ). = ರತ್ನಪಡಿವರ್ತಕ : ಮುತ್ತಿನ ಗಲ್ಲಿ ರತ್ನಪಡಿವ್ಯಾಪಾರಿ ವರದಪ್ಪನಾಯಕನಿಗೆ ಅಪರೂಪಕ್ಕೊಂದು ಪುತ್ರರತ್ನ ಜನಿಸಿದೆ (ಹೇಮಕೂ. ೬) ; ರಾಜರ ಮೇಲೆ ರಾಜರು ರತ್ನಪಡಿವ್ಯಾಪಾರಿಗಳಾದ ವೈಶ್ಯರಂತೆ ಬಗೆಬಗೆಯ ರತ್ನಗಳನ್ನು ತಂದು ತಂದು ಕಾಣಿಕೆ ಒಪ್ಪಿಸಿದರು (ವಕಭಾ. ೮೭). [ ರತ್ನಪಡಿ + ವ್ಯಾಪಾರಿ ]

**ರತ್ನಪಡಿಸಿಕೆ** (ನಾ). ಒಂದು ಬಗೆಯ ರತ್ನದ ಆಭರಣ (?) : ಚಾಮರಗಳು ಅಂದಿಗೆಗಳು ರತ್ನಪಡಿಸಿಕೆ ಮೊದಲಾದ ಭೂಷಣಗಳಿಂದ ಭೂಷಿತವಾದ ವೃಷಭವಾಗಿ (ಶಿವಶ. ೨೦೩-೦೪). [ < ರತ್ನಪಡಿ ]

**ರತ್ನಪರೀಕ್ಷಕ** (ನಾ). ರತ್ನಗಳ ಗುಣದೋಷಗಳನ್ನು ಕಂಡುಹಿಡಿಯುವವನು : " ಬಗೆಯ ಮಾಣಿಕಚಟ್ಟನೆಂಬ ರತ್ನಪರೀಕ್ಷಕಗೆ . . . " (ಚನ್ನಕೃ. ೩೪) ; ರತ್ನಪರೀಕ್ಷಕ ತಾಂ ಕೃತಿರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇಟಿಟ್ ಪರೀಕ್ಷಿಪಂಗೆಂಟೆರ್ದೆಯೇ (ಗದಾಯು. ೦-೮೪). [ಸಂ.]

**ರತ್ನಪರೀಕ್ಷೆ** (ನಾ). ಚೌಷಷ್ಟಿಕಲೆಗಳಲ್ಲಿ ಒಂದು ; ರತ್ನಗಳ ಗುಣಾವಗುಣಗಳನ್ನು ಕಂಡುಹಿಡಿಯುವ ವಿದ್ಯೆ : ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕಾಯುರ್ವೇದ ಧನುರ್ವೇದ ಹಸ್ತ್ಯಶ್ವತಂತ್ರ ರತ್ನಪರೀಕ್ಷೆಗಳುಮಂ . . . ಉಪದೇಶಂಗೆಯ್ದಂ (ಆದಿಪು. ೮-೩೦ ವ) ; ರತ್ನಪರೀಕ್ಷೆ, ಅಶ್ವಪರೀಕ್ಷೆ . . . ವೈದ್ಯ ಮೊದಲಾದ ಅರವತ್ತುನಾಲ್ಕುಕಲೆಗಳಿಗೂ ಆಗಮಶಾಸ್ತ್ರವು ಆಶ್ರಯವಾಗಿದೆ (ಶಾಶಪ. ೬೦). [ ಸಂ. ರತ್ನಪರೀಕ್ಷಾ ]

**ರತ್ನಪ್ರಭೆ** (ನಾ). ೧. ಮಣಿಯ ಕಾಂತಿ, —ಪ್ರಕಾಶ. ೨. ಭೂಮಿ. ೩. [ಜೈನ]ಒಂದು ನರಕದ ಹೆಸರು : ನೀಂ ನಿಜಾಯುರವಸಾನದೊಳ್ ರತ್ನಪ್ರಭೆಯೆಂಬ ಮೊದಲ ನರಕದ ಪದಿಮೂಱುಮಿಂದ್ರಕಂಗಳೊಳಗೆ . . . ಪುಟ್ಟಿದೈ (ಶಾಂತಿಪು. ೭-೮೩ ವ). : ಅಧೋಲೋಕದಲ್ಲಿ (೧) ರತ್ನಪ್ರಭೆ . . . (೭) ಮಹಾತಮಃಪ್ರಭೆ ಎಂದು ಏಳು ನರಕಗಳು ಇರುತ್ತವೆ (ಕೃಸರ. ೪೪೭).

[ ಸಂ. ರತ್ನಪ್ರಭಾ ]

**ರತ್ನಮತಲ್ಲಿಕೆ** (ನಾ). ರತ್ನಗಳಲ್ಲಿ ಶ್ರೇಷ್ಠವಾದುದು : ನಿಲ್ಲೆನುತ ಸಳನಾಕ್ಷಸೈದಿದನುಲ್ಲಸಿತತಚೂಡರತ್ನಮತಲ್ಲಿಕಾಗ್ರಹಣೈಕತತ್ಪರನಾಗಿ ಬೆಂಬಿಡದೆ (ಶಿಶಾಗ. ೧೦-೨೯-೩೮). [ ಸಂ. ರತ್ನಮತಲ್ಲಿಕಾ ]

**ರತ್ನಮಾಲೆ** (ನಾ). ರತ್ನಗಳಿಂದ ಕೂಡಿದ ಸರ ; ಮಣಿಮಾಲೆ.

[ ಸಂ. ರತ್ನಮಾಲಾ ]

**ರತ್ನಮುದ್ರಿಕೆ** (ನಾ). ರತ್ನಖಚಿತವಾದ ಉಂಗುರ : ತನ್ನ ಬೆರಲೊಳಿರ್ದನರ್ಘ್ಯಮಪ್ಪ ರತ್ನಮುದ್ರಿಕೆಯಂ ಪಿಡಿದಿರಿಮೆಂದು ಕೊಟ್ಟಂ (ಸುಕುಮಾ. ೩-೫ ವ) ; ಸರಳವಾದ ಬೆರಳುಗಳಲ್ಲಿ ರತ್ನಮುದ್ರಿಕೆಯು ಕಂಗೊಳಿಸುತ್ತದೆ (ಮಂಜುಳ. ೨೦). [ ಸಂ. ರತ್ನಮುದ್ರಿಕಾ ]

**ರತ್ನಮಾವುಡ** (ನಾ). ರತ್ನಗಳನ್ನು ಅಳವಡಿಸಿದ ಬಟ್ಟೆ : ಸಿಂಗಾಡಿಗಳ ಸರಳ ಹೊದೆಯ ಮೊಗರಂಬುಗಳ ಪೊಂಗೆಜ್ಜೆಗಳ ರತ್ನಮಾವುಡದ . . . ರಾಜಪುತ್ರರ್ ನಡೆಗೊಂಡರು (ಪಂಪಭಾ. ೪೦-೫೦). [ ರತ್ನ + ಮಾವುಡ$_1$ ]

**ರತ್ನಶಿಲೆ** (ನಾ). ರತ್ನದ (ದೊಡ್ಡ) ಹರಳು : " ರತ್ನಶಿಲೆಯೆನಲ್ ಮಣಿಶಿಲೆಯು " (ಮಂಗರಾ. ೩೦-೭) ; ಚಿಮ್ಮಿದುದು ಜಂಕೆಮರಿಯೊಂದು . . . ತಿರಿಕವಣೆಯಿಂ ಪಳಂಚುವ ರತ್ನಶಿಲೆಯಂತೆ (ರತ್ನಾಂಗ. ೩-೭೯).

[ ಸಂ. ರತ್ನಶಿಲಾ ]

**ರತ್ನಸಂಬಳಿಗೆ** (ನಾ). ರತ್ನಖಚಿತವಾದ ಕರಂಡಕ : ಧವಳಸರೋಜಾಕ್ಷ ತಾಸಲ್ಲದನ್ಯರೊಳ್ ಜಪಳಾಗದಂತೆ ವ್ಯಸಿಕದ ಕವಳವ ಕುಡುವಂತೆ ರತ್ನಸಂಬಳಿಗೆದಾಳ್ದವಳಿರ್ದಳತಿಸಮ್ಮದದಿ (ಮೋಹತ. ೯-೭).

[ ರತ್ನ + ಸಂಬಳಿಗೆ ]

**ರತ್ನಸಾನು** (ನಾ). ಮೇರುಪರ್ವತ : " ಮೇರುಃ . . . ರತ್ನಸಾನುಃ, ಸುರಾಲಯಃ — ಇ ಮೇರುಪರ್ವತದ ಹೆಸರುಗಳು " (ಸಿದ್ಧಾಂತಿ. ೨೨).

[ಸಂ.]

**ರತ್ನಾಂಗುಳೀಯ** (ನಾ). = ರತ್ನಮುದ್ರಿಕೆ : ಸುಬಳಮಹೀನಾಥನ ಕಯ್ಯ ಬೆರಲ ರತ್ನಾಂಗುಳೀಯಮಂ ಮಱಿವೆಯೊಳತ್ತ ಬಿಸುಟ್ಟು (ಸುಕುಮಾ. ೩-೦೨). [ ಸಂ. ರತ್ನಾಂಗುಲೀಯ ]

**ರತ್ನಾಂಜುಳಿ** (ನಾ). ಒಂದು ಬೊಗಸೆ ತುಂಬುವಷ್ಟು ರತ್ನ : ನೆತ್ತರ್ ಮೆರಸಿ ಪರೆದ ಮುತ್ತುಗಳು ತನ್ನ ಬರವಿಂಗೆ ವನದೇವತೆಯಿಟ್ಟ ರತ್ನಾಂಜುಳಿಗಳಂತಿರೆ ಕಂಡು ಕಂಡು ಹಾರೈಸುತ್ತಂ (ಸಂಬರ. ೦೮-೨೩).

[<ಸಂ. ರತ್ನಾಂಜಲಿ]

**ರತ್ನಾಕರ** (ನಾ). ರತ್ನಗಳಿಗೆ ಆಶ್ರಯವಾದುದು ; ಸಮುದ್ರ : " ರತ್ನಾಕರಃ . . . ಸಮುದ್ರಃ — ಈ ೧೨ ಸಮುದ್ರಂ " (ಹಲಾಯು. ೦೦೭-೩೦) ; ಈ ರತ್ನಾಕರದೊಳ್ ಪುತ್ರಿಕೆಯೆನೆ ಬಟ್ಟಳಿಂತು ಬಾಟ್ಟದೆ ಚೋದ್ಯಂ (ಕವಿರಾ. ೨ ೩೭) ; ಜಗತೀಪಲಯದಮಲಸೌಭಾಗ್ಯರತ್ನಾಕರಂ ಪೆರ್ಚಸಿಂ ಮೇರೆವರಿಯೆ (ಕೃವಿಜಾ. ೦-೧). [ಸಂ.]

**ರತ್ನಾತಪ** (ನಾ). ೧. ರತ್ನದ ಕಾಂತಿ ; ರತ್ನಪ್ರಭೆ. ೨. ರತ್ನಕಾಂತಿಯಿಂದ ಶೋಭಿಸುವಂಥದು : ಮಣಿಪ್ರಭಾಪ್ರೇಂಖಿತ ರಥ್ಯಾಮಂಡನಮಂ ಕಂಡಂ ಶ್ರೀಮಂಟಪಮಂ ವಿಚಿತ್ರರತ್ನಾತಪಮಂ (ಶಾದಂಪೂ. ೦೧೦೨).

[ಸಂ.]

**ರತ್ನಾರತಿ** (ನಾ). ತಟ್ಟೆಯಲ್ಲಿ ರತ್ನಗಳನ್ನು ತುಂಬಿ ಮಾಡುವ ಆರತಿ : ತುಳುಕಿದವು ರತ್ನಾರತಿಯ ಬೆಳಕುಗಳು (ಕುಮಾರರಾ. ಓಂ೩. ಶಂ. ೨೮೭) ; ಪಸುಗರ್ಪಳ ಪರಿವಾಣಗಳೊಳು ತುಂಬಿ ರಂಜಿಸುವ ರತ್ನಾರತಿವೆಳಗ ಗಸಂಪಟ್ಟಾವಳಿ ಚಿತ್ರವಸ್ತ್ರವ ನಿವಳಿಸಿದರಚ್ಯುತನಂಘ್ರಿಗಳಲಿ (ಮೋಹತ. ೯೨-೨೭).

[ ರತ್ನ + ಆರತಿ$_1$ ]

**ರತ್ನಾವಳಿ** (ನಾ). ೧. ಮುತ್ತಿನ ಹಾರ. ೨. ಶ್ರೀ ಹರ್ಷಕವಿಯು ರಚಿಸಿದ ಒಂದು ಪ್ರಸಿದ್ಧ ಸಂಸ್ಕೃತನಾಟಕ. ೩. [ಜೈನ] ಮೂವತ್ತು ಉಪವಾಸಗಳು ಮತ್ತು ಹತ್ತು ಪಾರಣೆಗಳನ್ನೊಳಗೊಂಡ ಒಂದು ವ್ರತ: ಪದ್ಮಾವತಿ ಎಂಬ ಕಂತಿಯರ ಬಳಿಯೊಳ್ ರತ್ನಾವಳಿಯೆಂಬ ವ್ರತಮಂ ಮಾಡಿ ಆಯುರಂತ್ಯದೊಳ್ ತನುವಂ ತ್ಯಜಿಸಿ (ಧರಂಕ. ೬-೩೦). [ಸಂ. ರತ್ನಾವಲೀ]

**ರತ್ನಾವಳಿತಪ** (ನಾ). = ರತ್ನಾವಳಿ ೩ : ಪ್ರಭಾವತಿಯುಂ ಪದ್ಮಾವತ್ಯಾರ್ಯಿಕಾ ಪಾದಮೂಲದೊಳ್ ಪಾಲಿಸಿದ ರತ್ನಾವಳಿತಪದೊಳಚ್ಯುತ ಕಲ್ಪದೊಳ್ ಪ್ರತೀಂದ್ರಪದವಿಯಂ ಪಡೆದಳ್ (ಆದಿಪು. ೩-೩೯ ವ); ಪ್ರಭಾವತಿಯುಂ . . . ರತ್ನಾವಳಿತಪದೊಳ್ನೆಗಟ್ಟು ಅಚ್ಯುತಕಲ್ಪದೊಳು ಪ್ರತೀಂದ್ರನಾದೋಂ (ಶಾಪುಪು. ೨೦). [< ಸಂ. ರತ್ನಾವಲೀತಪ]

**ರತ್ನಿ** (ನಾ). ಉದ್ದವನ್ನು ಅಳೆಯುವ ಒಂದು ಪ್ರಮಾಣ; ಮೊಳಕೈಯ ತುದಿಯಿಂದ ಮುಚ್ಚಿದ ಅಂಗೈವರೆಗಿನ ಅಳತೆ : "ಬಿಡಿಕೆಬ್ಬಿನ ಮೊಟಸಂ ರತ್ನಿಯೆಂಬುದು" (ಹಲಾಯು. ೪೬-೩೬೩); ದ್ವಾವಿಂಶತಿಸಾಗರೋಪಮಾಯುಷ್ಯನುಂ ತ್ರಿರತ್ನಿಪ್ರಮಾಣೋತ್ಸೇಧನುಂ . . . ಆಗಿ (ಶಾಪುಪು. ೩೬೩); ಅಲ್ಲಿಯ ದಿವಿಜರೆಲ್ಲಂ ಪಂಚರತ್ನಿಪ್ರಮಾಣರುಂ . . . ಅಪ್ಪರ್ (ಸುಕುಮಾ. ೦೦-೬೩ ವ). 'ಅರತ್ನಿ' ಹೋ. [ಸಂ.]

**ರತ್ಯಂಗ** (ನಾ). ಜನನೇಂದ್ರಿಯ ; ಗುಹ್ಯಾಂಗ. [ಸಂ.]

**ರತ್ಯಕ್ಷಿತಿ** (ನಾ). ಒಂದು ಸಂವತ್ಸರದ ಹೆಸರು; ರಕ್ತಾಕ್ಷಿ : ರತ್ಯಕ್ಷಿತಿಯಮ್ಮ ವರಿಷಾ ಪ್ರವರ್ತಿಸೆ (ಸೌಇಶಾ. XX, ೦೩-೪; 904). [P ಇದು 'ರಕ್ತಾಕ್ಷಿ' ಎಂಬುದರ ಅಪಲಿಖಿತ]

**ರಥ** (ನಾ). ೧. ಬಂಡಿ ; ವಾಹನ : "ಅನಃ, ಶತಾಂಗಃ, ಶಕಟಃ . . . ಕೂಬರೀ – ಈ ೧೯ ರಥಂ" (ಹಲಾಯು. ೬೩-೨೯೦). ೨. ಉತ್ಸವದಲ್ಲಿ ದೇವತಾವಿಗ್ರಹವನ್ನು ಕೂರಿಸಿ ಮೆರವಣಿಗೆ ಮಾಡುವ ಬಂಡಿ; ತೇರು : ರಥ ಎಳೆದು ಪುಣ್ಯ ಪಡೆಯಲಿಕ್ಕೆ ಜನರು ಏಳುವುದು ಬೀಳುವುದನ್ನು ಕೂಡ ಲಕ್ಷಿಸದ . . . ರಥದ ಕಡೆಗೆ ಧಾವಿಸಿದರು (ಹೊಸಕ್ಷ. ೨೦೬); ಈ ತೊಟ್ಟಿಲಿನ ಭಾರ ತಡೆಯಲಿಕ್ಕೆ ಕೋಟೇಶ್ವರದ ರಥದ ಮಿಣಿಯೇ ಬೇಕು (ಮರಮ. ೧೨೦). 'ರಥೋತ್ಸವ' ಪರಾ. ೩. ಒಂದು ಬಗೆಯ ಯುದ್ಧಸಾಧನ ; ಚತುರಂಗಸೈನ್ಯದಲ್ಲಿ ಒಂದು: ಪೊಸಮುಸೆಯಂಬುಗಳ್ ದೆಸೆಗಳಂ ಮುಸುಕಲ್ಕೆನೆಗವೆಯ್ದೆ ಪಾಯಿ ಪಾಯಿಸುವ ರಥಂಗಳ್ (ಶಂಕರಾ. ೦೦-೬೩); ರಥಮಿಲ್ಲದೆಯುಂ ಜಂಘಾರಥದಿಂದೆ . . . ಪೃಥಿವೀಪತಿ ತಾನೆ ಕಾದಲುದ್ಯತನಾದಂ (ಗದಾಯು. ೬-೬೬); ರಥ ಮುಱಿದುದೆನೆ ನೊಱಿ ತತ್ಪಾರಥಿಗಳಳಿದುದು ನೊಱಿ (ಶಬ್ದಾಗ. ೦-೦೩). ೪. ಒಡಲು ; ದೇಹ. ೫. ದೇಹದ ಒಂದು ಅಂಗ, – ಭಾಗ. ೬. ಆನಂದ ; ಸಂತೋಷ. ೭. [ಕಾವ್ಯಮೀ] ಚಿತ್ರಕಾವ್ಯಬಂಧಗಳಲ್ಲಿ ಒಂದು ; ರಥದ ಆಕಾರದಲ್ಲಿ ಬರೆಯುವ ಒಂದು ಪದ್ಯಬಂಧ: ಶರಶೂಲಚಾಪಚಕ್ರಾಸಿರೂಪವಿಭು ರಥ ತುರಂಗಪದಗತಪಾತಂ ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣ ಸರ್ವತೋಭದ್ರಂಗಳ್ (ಕಾವ್ಯಾವ. ೩೬೯). ೮. [ವಾಸ್ತು] ಶಿಲ್ಪದಲ್ಲಿ ಒಂದು ಬಗೆ ; ರಥದ ಆಕಾರದಲ್ಲಿ ಕಟ್ಟಿದ ಒಂದು ಕಟ್ಟಡ : ಒಂದೇ ಬಂಡೆಯಲ್ಲಿ ಕೊರೆದ ದೇವಾಲಯಗಳು. ಇವುಗಳನ್ನು 'ರಥ' ವೆಂದು ಕರೆಯುವುದುಂಟು (ಭಾರದ. ೪೯೬). ೯. [ಗಣಿತ] ಇಪ್ಪತ್ತೊಂಬತ್ತು ಅಂಕಿಗಳಿರುವ ಒಂದು ದೊಡ್ಡ ಸಂಖ್ಯೆ : ಏಕ್ಕಂ, ದಾಹಂ . . . ರಥ. ಮಹಾರಥ . . . ಪರಿಮಿತ, ಮಹಾಪರಿಮಿತ ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೮-೨೩). [ಸಂ.]

**ರಥಂತರ** (ನಾ). ಶಿವನನ್ನು ಸ್ತೋತ್ರ ಮಾಡುವ ಸಾಮವೇದದ ಒಂದು ಭಾಗ : ಚತುರ್ಮುಖದಿಂ ರುದ್ರಸೂಕ್ತ ರಥಂತರಾದಿಮಂತ್ರವನೋದುವಬ್ಜಭವನಿಂ. . . ಪೆಂಪನಾಳ್ದ (ಶಂಶಂ. ೦-೬೯ ವ); ಆತನು ನಸುನಕ್ಕು, ರಥಂತರಸಾಮವನ್ನು ಹಾಡುತ್ತಾನೆ (ವಿರಿವಾ. II, ೦೪೬೦). [ಸಂ.]

**ರಥಕಟ್ಯೆ** (ನಾ). ರಥಗಳ ಸಮೂಹ : "ರಥ[ಸಮುದಾಯಂ] ರಥ್ಯಾ ರಥಕಟ್ಯಾಭಿಖ್ಯಮೆಂದು ತಱಿಸಲ್ಗಱಿವಂ" (ಶಶ್ಮಕೋ. ೬೭-೩೦). [ಸಂ. ರಥಕಟ್ಯಾ]

**ರಥಕಡ್ಯ** (ನಾ). = ರಥಕಟ್ಯೆ: "ರಥ್ಯಾ, ರಥಕಡ್ಯಾ – ೨ ರಥವ್ರಜಿ. ರಥಸಮೂಹಕ್ಕೆ ಹೆಸರುಗಳು" (ಸಿದ್ಧಾಂತಿ. ೨೩೩); ವಾಜಿವರ್ಗಾವ ಪರ್ವಿಂ ರಥಕಡ್ಯದೊಡ್ಡನದಿಸೊಳ್ಪಾಳೋಳಿಯಿಂ . . . ಸೇನಾಚಕ್ರಮೇನೊಪ್ಪಿತೋ (ಕೃಕೃತಿ. ೦೪-೯೩); ಬಂದನು . . . ನೃಪನು ಮುಂದಿ ಕುದುರೆ ಗಜ ರಥಕಡ್ಯಗಳ ಸಂದಣಿಯೊಳು ಸೊಬಗಿಂದ (ಗೋಪುಟೇ. ೦೦-೦೩). [ಸಂ. ರಥಕಡ್ಯಾ]

**ರಥಕಲ್ಪ** (ನಾ). ರಥವನ್ನು ನಡೆಸುವ ಸಾಮರ್ಥ್ಯ : ರಥಕಲ್ಪವೆಂಬುದು ಶಲ್ಯಂಗೊಡವುಟ್ಟಿದುದು (ಶಂಶಂ. ೦೨-೦೦೩ ವ). [ಸಂ.]

**ರಥಕಾರ** (ನಾ). ೧. ರಥವನ್ನು ಮಾಡುವವನು ; ಬಡಗಿ : "ತ್ವಷ್ಟಾ . . . ರಥಕಾರಃ, ವರ್ಧಕೀ – ಈ ೫ ಬಡಗಿ" (ಹಲಾಯು. ೯೬-೯೩೩). ೨. ರಥವನ್ನು ನಡೆಸುವವನು; ಸಾರಥಿ : ನಡೆಸುವ ರಥಕಾರ ಪೋಗಲಾ ರಥವಾಯೆಡೆಯೊಳು ನಿಲುವಂತೆ (ಶಂಕ್ರಸಾಂ. ೨೨-೦೨). [ಸಂ.]

**ರಥಗುಪ್ತಿ** (ನಾ). ಯುದ್ಧಸಮಯದಲ್ಲಿ ಸಂಘಟನೆಯಿಂದ ತಪ್ಪಿಸಿಕೊಳ್ಳಲು ರಥದ ಸುತ್ತಲೂ ರಚಿಸುವ ಲೋಹ ಅಥವಾ ಮರದ ಕಟಕಟೆ : "ರಥಗುಪ್ತಿ, ವರೂಥ ಎಂದು ಧೂಳುಮಾಟಿಕೆ, ಕಂಬುಗೆ ಎಂದೂ ಎಂಬರು" (ನಾಚಿರಾ. ೬). [ಸಂ.]

**ರಥಗೋಪ** (ನಾ). = ರಥಗುಪ್ತಿ : "ಕಟ್ಟುವಂಜರಂ ರಥಗೋಪವಮಕ್ಕು" (ಮಂಗರಾ. ೬೪-೨೩). [ಸಂ.]

**ರಥಗೋಪನ** (ನಾ). = ರಥಗುಪ್ತಿ : "ವರೂಥಃ, ರಥಗೋಪನಂ–ಈ ೨ ರಥದ ಕಟ್ಟುವಂಜರ" (ಹಲಾಯು. ೬೪-೨೬೩). [ಸಂ.]

**ರಥಚಕ್ರ** (ನಾ). ೧. ರಥದ ಚಕ್ರ ; ಬಂಡಿಯ ಗಾಲಿ : ಧನಾದಿ ಸಂಪತ್ತುಗಳು ರಥಚಕ್ರವಂತೆ ಒಂದೆಡೆ ಸ್ಥಿರವಾಗಿ ನಿಲ್ಲದೆ ಒಬ್ಬನಿಂದ ಮತ್ತೊಬ್ಬನಿಗೆ ಹೋಗಿ ಸೇರುತ್ತದೆ (ಮುಕ್ತಾರ. ೩೦೭). ೨. [ನಾಟ್ಯ] ಒಂದು ಬಗೆಯ ಭೌಮಚಾರಿ ; P "ಚತುರಸ್ರಸ್ಥಾನಕದಿಂದ . . . ನಿಂತುಕೊಂಡು ಮುಂದಕ್ಕೂ ಹಿಂದಕ್ಕೂ ಚಲಿಸುವುದು" (ಲಾಸ್ಯರಂ. ೩೨೦ ಗದ್ಯಭಾಗ) : ಎಸೆವ ರಥಚಕ್ರವೊಳ್ಪಿಂ ಮಿಸುಪ ಪರಾವೃತ್ತತಲಮುದುಂ ನೂಪುರಮುಂ ಪಸಿಮುಖಿ ತಿರ್ಯಙ್ಮುಖಮುಂ ಪಸರಿಸುವ ಮರಾಳಮೆಂಬ್ದು ಕರಿಪಸ್ವಾಸ್ತಿಕಂ (ಲಾಸ್ಯರಂ. ೬-೮). [ಸಂ.]

**ರಥಚರಣ** (ನಾ). ೧. ರಥದ ಗಾಲಿ. ೨. ಚಕ್ರಾಯುಧ : 'ರಥಚರಣಪಾಣಿ' ಪರಾ. ೩. ಚಕ್ರವಾಕ ಪಕ್ಷಿ ; ರಥಾಂಗ : ಸುರಪತಿಯ ಬೆಳ್ಗೊಡೆಯ ರಥಚರಣದ . . . ಪೆಸರ ಖಗಕುಳಂ ಕರಮೆಸೆಗುಂ (ರಾಜಶೇ. ೩-೬೦). [ಸಂ.]

**ರಥಚರಣಪಾಣಿ** (ನಾ). ಚಕ್ರಾಯುಧವನ್ನು ಹಿಡಿದಿರುವವನು ; ವಿಷ್ಣು : ರಥಚರಣಪಾಣಿ ಬಲಮುಂ ಮಥಿಯಿಸೆ ಜಂಭಾರಿಗಾಯ್ತು ಗೀರ್ವಾಣಾಹತಿ (ಜಗಖ. ೦೩-೮೦). [ಸಂ.]

**ರಥಚೋದಕ** (ನಾ). ರಥವನ್ನು ನಡೆಸುವವನು ; ಸಾರಥಿ : "ರಥಚೋದಕನಕ್ಕುಂ ಸಾರಥಿ" (ಪಶ್ಮಕೋ. ೯೭-೩೦); ರಥಂಗಳೊಂದೆಸೆಯೊಳುರುಳ್ದು ಕೆಡೆದುವು ನೋಡಾ ರಥಚೋದಕರೊಂದೆಸೆಯೊಳ್ ಪೃಥಾಸುತಪೃಥಿತಪೃಥುಗದಾಪ್ರಹರಣೆಯಿಂ (ಗದಾಯು. ೩-೬). [ಸಂ.]

**ರಥದ್ರು** (ನಾ). ಒಂದು ಬಗೆಯ ಮರ ; ಹುಲಿಗಿಲು ; ಹೊಂಗೆ : "ತಿನಿಶಃ, ಸ್ಯಂದನಃ, ನೇಮಿಃ, ರಥದ್ರುಃ . . . ಚಿತ್ರಕೃತ್ – ೭ ಹುಲಿಗಿಲ ಮರದ ಪೆಸರುಗಳು" (ಸಿದ್ಧಾಂತಿ. ೦೦೭). [ಸಂ.]

**ರಥದ್ರುಮ** (ನಾ). = ರಥದ್ರು : "ತಿನಿಶಂ ನೇಮಿ ತಾಂ ರಥದ್ರುಮ ವಕ್ಚ್ಯಂ" (ಶಬ್ದಮಣಿ. ೩೩-೦೩). [ಸಂ.]

**ರಥನೇಮಿ** (ನಾ). ರಥದ ಚಕ್ರದ ಹೊರಸುತ್ತು : ಉರಿಯುವ ರಥನೇಮಿಗಳಂ (ಜಾತಕತಿ. ೦೦೨-೦೭೩). [ಸಂ.]

**ರಥಬೀದಿ** (ನಾ). ದೇವರ ವಿಗ್ರಹವಿರುವ ರಥವನ್ನು ಮೆರವಣಿಗೆಯಲ್ಲಿ ಕೊಂಡೊಯ್ಯುವ ದೊಡ್ಡ ರಸ್ತೆ ; ತೇರುಬೀದಿ : ಗುಡಿಯ ಮುಂದೆಯೇ ರಥಬೀದಿ (ದೀಪಶಿ. ೪೯). [ಸಂ.]

**ರಥಯುದ್ಧ** (ನಾ). ಉಭಯಪಕ್ಷದವರೂ ರಥದಲ್ಲಿದ್ದುಕೊಂಡು ಮಾಡುವ ಕಾಳಗ : ನಿಮ್ಮಲ್ಲಿ ಯಾರಾದರೂ ನನ್ನೊಡನೆ ನೆಲದ ಮೇಲೆ ನಿಂತು ಗದಾಯುದ್ಧ ಮಾಡಲಿ . . . ರಥಯುದ್ಧಗಳು ಹಿಂದೆ ಎಷ್ಟೋ ಆದುವಲ್ಲ ! (ಶಕುನಿ. ೩೦೬). [ಸಂ.]

**ರಥರೇಣು** (ನಾ). ಕ್ಷೇತ್ರಪ್ರಮಾಣದಲ್ಲಿ ಒಂದು ಅಳತೆ : ಎಂಟು ತ್ರುಟಿರೇಣುಗಳಿಂದ ಒಂದು ತ್ರಸರೇಣು, ಎಂಟು ತ್ರಸರೇಣುಗಳಿಂದ ಒಂದು ರಥರೇಣು (ಕೃಷಿಶ. ೩೦೭). [ಸಂ.]

**ರಥವಂಗಡ** (ನಾ). ರಥಗಳ ಸಮೂಹ : ಬಿಡದೆ ನೂಱೆಂಭತ್ತು ಪರಿಯಂತರದಿ ಸಾರಥಿಸಹಿತ ರಥವಂಗಡವ ವಿಂಗಡಿಸಿದನು ಸಂಗರರಂಗ ಮಧ್ಯದಲಿ (ಕುಮಾರ. ೩-೬-೪೬). [ರಥ + ವಂಗಡ]

**ರಥವಕ್ಕಿ** (ನಾ). ಚಕ್ರವಾಕಪಕ್ಷಿ : ಬಿಸರುಹ ರಥವಕ್ಕಿ ತಸ್ಕರ ಜಾರರ್ಗೆ ಬಿಸವಾದುದು ಶಶಿಕಿರಣ (ಕುಮಾರಶ. ೦೮-೩೨). [ರಥ + ಪಕ್ಕಿ]

**ರಥವಾಜಿ** (ನಾ). ರಥಕ್ಕೆ ಹೂಡುವ ಕುದುರೆ ; ತೇರಿನ ಅಶ್ವ : ರಥವಾಜಿಗಳೊಂದೆಸೆಯೊಳ್ ರಥಂಗಳೊಂದೆಸೆಯೊಳಿರಲ್ದು ಕೆಡೆದುವು (ಗದಾಯು. ೬-೩) ; ಆನೆಗಳಱಿ ಕೆಡೆದವು ಮುಗ್ಗಿದವು ರಥವಾಜಿಗಳು (ಕುಮಾರ. ೧೬-೨). [ಸಂ. ರಥವಾಜಿನ್]

**ರಥವಾಹಕ** (ನಾ). ರಥವನ್ನು ಎಳೆಯುವಂಥದು ; ಕುದುರೆ : " ರಥದೊಳ್ ಪೂಡುವ ಹಯಮದು ರಥವಾಹಕ ರಥ್ಯ ನಾಮಧೇಯಂ" (ಶಬ್ದಮಣಿ. ೪೬-೨೬). [ಸಂ.]

**ರಥಶಾಲೆ** (ನಾ). ರಥವನ್ನು ನಿಲ್ಲಿಸುವ ಶಾಲೆ ; ತೇರುಮನೆ. [ಸಂ. ರಥಶಾಲಾ]

**ರಥಸಪ್ತಮಿ** (ನಾ). ಮಾಘಶುದ್ಧಸಪ್ತಮಿ ಮತ್ತು ಆ ದಿನದಂದು ಮಾಡುವ ಸೂರ್ಯಪೂಜೆ : ರಥಸಪ್ತಮಿಯ ಮಹತ್ತ್ವವನ್ನು ಶ್ರೀಕೃಷ್ಣ ಧರ್ಮರಾಜನಿಗೆ ಹೇಳಿದಂತೆ ಪೌರಾಣಿಕ ಕಥೆಯಿದೆ (ಭಾರತ್ಕ. ೨೬೦). [ಸಂ. ರಥಸಪ್ತಮೀ]

**ರಥಹಯ** (ನಾ). = ರಥವಾಜಿ : "ವಾಹನಂ ಧೋರಣಂ ರಥಹಯಂ" (ಮಂಗರಾ. ೬೩-೨೫) : ರಥಹಯಮಂ ನಾಲ್ಕಂಬಿಂ ರಥಮಂ ಮೂಱಱಿಂದೆರಲ್ಪಣೆಯಿಂ ಸಾರಥಿಯಂ ಕೆಡೆಯಲ್ಚೆಚ್ಚಂ. (ಆದಿಪು. ೭-೯೦). [ಸಂ.]

**ರಥಾಂಗ** (ನಾ). ೧. ರಥದ ಯಾವುದಾದರೂ ಒಂದು ಭಾಗ. ೨. ರಥದ ಚಕ್ರ ; ಬಂಡಿಯ ಗಾಲಿ : "ಚಕ್ರಂ, ರಥಾಂಗಂ – ಈ ೨ ಗಾಲಿ" (ಚತುರಾಸ್ಯ. ೬೩-೨೪೩). ೩. ಚಕ್ರಾಯುಧ : ಸದಾ ಹರಿಕರಭಾಸುರಮಾಗಿ ಚಕ್ರಮೆನಿಸಿದ ಸುರುಚಿರಥಾಂಗಂ ಪ್ರಸನ್ನಮಕ್ಕೆ (ಚಿಕ್ಕದೇ. ೧-೧-೨೦೦) ; ರಥಾಂಗಪ್ರಭಾವದಿಂ ಜಾಯುಂಗಿನಿಸುಂ ತೊಡರ್ ತೋರ್ದುದಿಲ್ಲಂ (ಅದ್ಭುತ. ೦೯-೦೬). 'ರಥಾಂಗಧರ' ವರಾ. ೪. ಚಕ್ರವಾಕ ; ಜಕ್ಕವಕ್ಕಿ : "ಕೋಕಃ, ಚಕ್ರಃ, ಚಕ್ರವಾಕಃ, ರಥಾಂಗಃ – ಈ ೪ ಜಕ್ಕವಕ್ಕಿ" (ಚತುರಾಸ್ಯ. ೪೦-೯೦); ಓಡೆ ತಮೋಬಳಂ . . . ರಥಾಂಗಯುಗಂಗಳ್ ಕೂಡೆ ಬಗೆ ಕೂಡೆ ನೇಸಱ್ ಮೂಡಿದುದು (ಶಂಕರಾ. ೩-೨೭). ೫. ಕುಂಬಾರನ ತಿಗುರಿ. [ಸಂ.]

**ರಥಾಂಗಧರ** (ನಾ). ೧. ಚಕ್ರವನ್ನು ಧರಿಸಿರುವವನು ; ಚಕ್ರಪಾಣಿ ; ವಿಷ್ಣು : ನಿಜರಥಮಂ ರಥಾಂಗಧರನಂ ಮುನ್ನಮೇಱಲ್ವೇೞ್ದು ಮೂಱು ಸೂೞು ಬಲವಂದು ಪೊಡಮಟ್ಟು ರಥಮನೇಱಿ (ಶಂಕರಾ. ೦೦-೦೩೨ ವ). ೨. [ಜೈನ] ವಾಸುದೇವ : ಅಜಿತಸೇನ ರಥಾಂಗಧರಂ ಸಮಸ್ತಭೂಜನದ ಮನಕ್ಕೆ ತನ್ನೊಳನುರಾಗಮನಾವಗೆಮುಂಟುಮಾಡುವಂ (ಚಂದ್ರಪ್ರ. ೭-೩೬). [ಸಂ.]

**ರಥಾಂಗಪಾಣಿ** (ನಾ). ೧. = ರಥಾಂಗಧರ ೧ : "ವಿಷ್ಣುಃ . . . ರಥಾಂಗಪಾಣಿಃ . . . ಗದಾಧರಃ — ಈ ೪೫ ನಾರಾಯಣನ ಪೆಸರ್" (ಚತುರಾಸ್ಯ. ೫-೨೩). ೨. = ರಥಾಂಗಧರ ೨ : ಪಂಚಮರಥಾಂಗಪಾಣಿಗೆ ಪಂಚಪುಕಲ್ಪ ಪ್ರಧಾನರಮೃತಾಯತಮಾದಿಂಚರದಿಂ ಬಿನ್ನವಿಸಿದರ್ (ಶಾಂತಿಪು. ೦೦-೯೩). [ಸಂ.]

**ರಥಾರೂಢ** (ನಾ). ರಥವನ್ನು ಏರಿದವನು: ಚಂಡನುದ್ದಂಡಕೋದಂಡಮಂ ಜೇವೊಡೆಗೆಯ್ದು . . . ಕಯ್ಯಾಸಿ ರಥಾರೂಢನಾಗಿ . . . ಮುಂದಕ್ಕೆ ಸಾಗಿದಾಗಳ್ (ಜಗನ್ನಾಥ. ೩-೯೨ ವ) ; ಬಾದಂ ರಥಾರೂಢನಾಗಿ . . . ರಘುನಂದನಂ (ಕೃಷ್ಣರಾಜ. ೨೦-೨೩). [ಸಂ.]

**ರಥಾರೋಹಣ** (ನಾ). ೧. ರಥವನ್ನು ಹತ್ತುವಿಕೆ : ರಥಾರೋಹಣ ಮಾಡಿದ್ದಲ್ಲಿ ಜನಗಳಿಗೆ ಮಹಾಮಂಗಳಕರವಾಗಿ . . . ಪಿತ್ತಕಾರಣವಾಗಿ ಅಗ್ನಿಯನ್ನುಂಟುಮಾಡಿ ದೇಹಧರ್ಮಗಳಿಗೂ, ಅಸ್ಥಿಗಳಿಗೂ ದುಃಖವನ್ನುಂಟು ಮಾಡುವುದು (ಸಕಲ. ೫೯). ೨. ಚೌಷಷ್ಟಿಕಲೆಗಳಲ್ಲಿ ಒಂದು; ರಥಕಲ್ಪ: ಶಕುನಜ್ಞಾನಂ ರಥಾರೋಹಣಂ ಸ್ಮರಮಂತ್ರಂ . . . ಎಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಗೌಶಲಮಂ (ಧನ್ಯಕು. ೪-೫೯). [ಸಂ.]

**ರಥಾರೋಹಣಂಗೈ** (ಕ್ರಿ). ರಥವನ್ನು ಹತ್ತು–ಏರು : ತಾಮ್ರಧ್ವಜಂ ಕನಲ್ದು ವನಿಯಂ ಸೇರಿ ಬಾಣತ್ರಯದಿಂದೊಳಾತನಂ ಘಾತಿಸಿ ರಥಾರೋಹಣಂಗೈದನು (ಕೃಷ್ಣರಾಜ. ೨೫-೨೯). [ರಥಾರೋಹಣ + ಕೈ$_{1}$ (< ಕಯ್$_{1}$)]

**ರಥಾವರ್ತ** (ನಾ). [ಜೈನ] ವಿದ್ಯಾಧರರು ಮಾಡುವ ಒಂದು ಬಗೆಯ ಜಿನಪೂಜೆ : ವಿದ್ಯಾಧರವರ್ಗಾಟ್ಟ ರಥಾವರ್ತಮೆಂಬ ಪೂಜೆಯುಂ ಮಹಾಮಂಡಲೇಶ್ವರವರ್ಗಾಟ್ಟಿಂದ್ರಕೇತುವೆಂಬ ಪೂಜೆಯುಂ (ಸುಕುಮಾರ. ೬-೨೫ ವ). [ಸಂ.]

**ರಥಿ** (ನಾ). ೧. ರಥವನ್ನು ಹತ್ತುವವನು : "ರಥೀ, ಸ್ಯಂದನಾರೋಹಃ – ಈ ೨ ರಥವನೇಱುವಾತಂ" (ಚತುರಾಸ್ಯ. ೬೫-೨೩೬). ೨. ರಥದಲ್ಲಿ ಕುಳಿತು ಯುದ್ಧಮಾಡುವವನು ; ರಥಿಗಳನಗ್ರಸ್ಥಿತಸಾರಥಿಗಳನಸೆ ಸೀರಪಾಣಿ ಸಲೆ ರಥದ ಮನೋರಥದೊಡನೆ ಮಡದರ್ . . . ಅರ್ಧರಥರ್ಕಳ್ (ನೇಮಿಪು. ೫-೦೨); ಬವರವೆಲ್ಲಿ ? ಏಕೆ ತಡವು ? ರಥಿಯದಾರು ಅರಿಪುದು ! (ಗಂ. ೪೩-೦೦). ೩. ರಥವನ್ನು ಹೊಂದಿರುವವನು. [ಸಂ. ರಥಿನ್]

**ರಥಿಕ** (ನಾ). ೧. = ರಥಿ ೨ : ''ಕಾಳಗದ ಬಂಡಿಯಂ ಹತ್ತಿ ಹೋಹಂ ರಥಿಕಂ'' (ಮಂಗರಾ. ೬೩-೨೬); ಗಜಾರೋಹಕರ ರಥಿಕಾವಳಿಯುಬ್ಬರದ ರಂಗದಲಿ ಸರಮಣಿಯೊಪ್ಪಿದವು (ಕುಮಾರ. ೦೦-೦೩). ೨. = ರಥಿ ೩. [ಸಂ.]

**ರಥಿನಿ** (ನಾ). ರಥಗಳ ಸಮೂಹ : ರಥಯಾನಪಾತ್ರದಿಂ ಪರರಥಿ[ನೀಜಲ]ನಿಧಿಯ ಪಾರಮಂ ಸಲ್ವ . . . ಅತಿರಥಮಥನಂ ಕರ್ಣಧಾರನಲ್ಲನೆ ಕರ್ಣಂ (ಪಂಪಭಾ. ೦೨-೫೦); ಬಂದುದು ರಥ್ಯಮಾತ್ರರಥಿನೀನೈಪಥ್ಯಶೋಭಾವಹಂ (ಚಂದ್ರಪ್ರ. ೦೦-೨೦). [ಸಂ. ರಥಿನೀ]

**ರಥಿನೀನಾಥ** (ನಾ). ರಥಸೈನ್ಯದ ಒಡೆಯ: ಎಣ್ಬರುಂ ದಿಗಧಿಪರ್ ತಂತಮ್ಮೊಳಾಳ್ವೊಳ್ಪನೊಲ್ದೀಯುತ್ತಿರ್ಕೆ ಕುಮಾರಲಕ್ಷ್ಮರಥಿನೀನಾಥಂಗತಿ ಪ್ರೀತಿಯಿಂ (ಶಾಸನ. ೨೪೦ ; 1230 ; ಎಕ. V, ಬೇಲೂರು. ೦೦೨-೫ ; 1220 ನೋ). [ಸಂ.]

**ರಥೋತ್ಸವ** (ನಾ). ರಥದಲ್ಲಿ ದೇವರನ್ನು ಕೂಡಿಸಿ ಮಾಡುವ ಉತ್ಸವ.–ಸಮಾರಂಭ : ನಿತ್ಯೋತ್ಸವ ಮೊದಲಾಗಿ ರಥೋತ್ಸವ

ಪರ್ಯಂತವಾದ ವಿಶೇಷೋತ್ಸವಾಚರಣೆಗಳಿಂದ ಪಂಡಿತರಿಗೂ-ಪಾಮರರಿಗೂ . . . ಬೋಧಕವಾಗಿಯೂ ಇದೆ (ಶಾಕಿತ. ೬೨); ರೈತ . . . ಜಾತ್ರೆ ತೇರು ರಥೋತ್ಸವ ಬಂಡಿಹಬ್ಬ ಇವುಗಳಲ್ಲೆಲ್ಲ ಭಾಗಿಯಾಗಿ ತನ್ನ ಆತ್ಮದ ಹಸಿವನ್ನು ಸ್ವಲ್ಪವಾದರೂ ಅಡಗಿಸಿಕೊಳ್ಳಲು ಪ್ರಯತ್ನಪಡುತ್ತಾನೆ (ಹೇವನಾಕೀ. ೨೬).

[ಸಂ.]

**ರಥೋದ್ಧತ** (ನಾ). [ಛಂದ] ಪ್ರತಿಸಾಲಿನಲ್ಲಿಯೂ ಹನ್ನೊಂದು ಅಕ್ಷರಗಳಿರುವ ತ್ರಿಷ್ಟುಪ್ಪು ಛಂದಸ್ಸಿನ ಒಂದು ವೃತ್ತ : ಮಾರುತೇಷ್ಟ ದಿವಿಜಾಗ್ನಿಯುಂ ಲಗಂ ಸಾರೆಯಾಗೆ ರಸದಲ್ಲಿ ವಿಶ್ರಮಂ ದೂರಮಲ್ಲದಿರೆ ಕೇಳ್ರಥೋದ್ಧತೋದಾರನಾಮಮೆಸೆಗುಂ (ಛಂದೋಂಬು. ೨-೦೦೬); ರಂನರಂಲಗ ವಿರಲ್ ರಥೋದ್ಧತಂ (ಕ.ಬಿ. ೮೦). [ಸಂ. ರಥೋದ್ಧತಾ]

**ರಥ್ಯ** (ನಾ). ರಥಕ್ಕೆ ಹೂಡುವ ಕುದುರೆ : "ರಥದೊಳ್ ಪೂಡುವ ಹಯಮಂ ರಥವಾಹಕ ರಥ್ಯ ನಾಮಧೇಯಂ" (ಅಸ್ತ ಕೋ. ೬೬-೨೬). [ಸಂ.]

**ರಥ್ಯೆ** (ನಾ). ೧. ರಥಗಳು ಓಡಾಡುವ ದೊಡ್ಡ ಬೀದಿ ; ರಾಜಮಾರ್ಗ : "ಪ್ರತೋಳೀ, ವಿಶಿಖಾ, ರಥ್ಯಾ-ಈ ೩ ಬೀದಿ" (ಹಲಾಯು. ೪೮-೦೩೪) ; ಗಿರಿಶಿಖರಂಗಳೊಳ್ಪರೆದು ಸೌಧಗೃಹಂಗಳೊಳೊಂದಿ ರಥ್ಯೆಯೊಳ್ಪರಿದು . . . ಪರ್ವಿದುವಿಂದುಮರೀಚಿಮಾಲೆಗಳ್ (ಶಾಂತಿಪು. ೪೨೧). ೨. ರಥಗಳ ಸಮೂಹ. [ಸಂ. ರಥ್ಯಾ]

**ರದ** (ನಾ). ೧. ಹರಿಯುವಿಕೆ ; ಸೀಳುವಿಕೆ. ೨. ಹಲ್ಲು; ದಂತ: "ದಶನಃ, ದ್ವಿಜಃ, ದಂತಃ, ರದಃ, ರದನಃ- ಈ ೫ ಪಲ್ (ಹಲ್ಲು)" (ಹಲಾಯು. ೬೬-೩೬೩); ಕಳಧೌತಚ್ಛವಿ ಕುಂದಕುಟ್ಮಲರದಂ ಬಾಲಪ್ರವಾಳೋಷ್ಠಂ . . ತಳೆದಂ ಸಾಶ್ಚರ್ಯಸೌಂದರ್ಯಮಂ (ಚಂದ್ರ ಪು. ೪-೬). ೩. ಆನೆಯ ದಂತ,—ಕೋರೆ. [ಸಂ.]

**ರದಕ್ಷತ** (ನಾ). [ಕಾಮಶಾ] ಪ್ರಣಯಪರವಶರಾದ ಸ್ತ್ರೀಪುರುಷರು ರತಿಕ್ರೀಡೆಯ ಸಮಯದಲ್ಲಿ ಪರಸ್ಪರರ ಶರೀರಗಳಲ್ಲಿ ಮಾಡುವ ಹಲ್ಲಿನ ಕಚ್ಚು; ದಂತಕ್ಷತ : ತರದೆ ಬೆಸ್ನೊಳು ಪಯೋಧರದೊಳೆ ರದಕ್ಷತಂ ನೆರೆದಿರೆ ವರಾಹಚರ್ವಿತಂ (ಜನಪ. ೬-೩೩); ಉರೋಜಮಂಡಲದ ನಖ ಕ್ಷತಕ್ಕಧರದೊಳ್ತಲೆದೋರ್ಪ ರದಕ್ಷತಕ್ಕುರಸ್ಥಲದ ರಸಾರ್ದ್ರಕುಂಕುಮಮಂ ನಂಕಿಸಿ ಜಾಣ್ಮೆಗೆ ಪಾಣ್ಬೆಯೆಯ್ದಿದರ್ (ರಾಜಶೇ. ೦೨-೬). [ಸಂ.]

**ರದಗಜ** (ನಾ). ಕೋರೆಹಲ್ಲಿರುವ ಆನೆ : ಬೆಣ್ಣಗಳುವುದನೂರೊಳಗೆ ನೆಟ್ ಮಣ್ಣ ಮೆದ್ದುವ ರದಗಜಂಗಳ ಬಣ್ಣಗೆಯ ಚಿತ್ರವನು . . . ಕಂಡೆನು (ಪಶಾಗ. ೦೦-೩೨-೨೩). [ಸಂ.]

**ರದಚ್ಛದ** (ನಾ). ತುಟಿ ; ಅಧರ : ನಿರ್ಗಳಿತಸರಾಗಭಾವಮೆನಿಸಿತ್ತು ರದಚ್ಛದಮಿಾಗಳಿಂದುಮಂಡಳಲಲಿತಾಸ್ಯ (ಚಂದ್ರ ಪು. ೮-೬೬) ; ದಡದಡಿಸಿತ್ತು ನುಣ್ಗೊಡೆ ರದಚ್ಛದಮಿರ್ಪುಡುಗಿತ್ತು . . . ಮೃಗಾಯತಾಕ್ಷಿಯಾ (ರಾಜಶೇ. ೬-೬೨). [ಸಂ.]

**ರದನ** (ನಾ). ೧. ಹಲ್ಲು : ದಂತ : "ದಶನಃ, ದ್ವಿಜಃ, ದಂತಃ, ರದಃ, ರದನಃ—ಈ ೫ ಪಲ್ (ಹಲ್ಲು)" (ಹಲಾಯು. ೬೬-೩೬೩) ; ಸುರಕರಿಗೆ ಮೊಗಂ ಮೂವತ್ತೆರಡಾದುವೆ ಬೇಟೆವೇಟೆ ಮೊಗದೊಳಗೆಂಟೆಂಟು ರದನ ಮೊಪ್ಪುಗುಂ (ಆದಿಪು. ೪-೨೦) ; ಪರಿವಡೆದ ರತ್ನದರ್ಪಣದಂತೆ ಪರವದನ ವಜ್ರಮಣಿಯಂತೆ ರದನ (ಸೌಂದರ್ಪು. ೪-೫). ೨. ಆನೆಯ ಕೋರೆ : ಗಜದಂತ : "ವಿಷಾಣಃ, (ದಶನಃ) ರದನಃ – ಈ ೨ ಕೊಂಬು" (ಹಲಾಯು. ೩೪-೬೪) ; ಕದಳಿಯ ಮೂಲದೊಳಿದು ಗಜಮದಮಂ . . . ಅವಜ ಫಲಂ ರದನಿರದನದಾಕೃತಿಯಕ್ಕುಂ (ಲೋಕೋಪಕಾ. ೬-೨೪). [ಸಂ.]

**ರದನಚ್ಛದ** (ನಾ). = ರದಚ್ಛದ : "ಓಷ್ಠಮಧರ ರದನಚ್ಛದಂ ಪೇಟ್ ತುಟಿಯಕ್ಕು" (ಪಂಪರಾ. ೯೪-೪) ; ನಾಸಾಗ್ರದ ಮುತ್ತಿನ ಮಣಿ ರದನಚ್ಛದ ದೀಧಿತಿ ಪುದಿಯೆ ಕೆಂಪನಾಳ್ದವೊಲೆಸೆಗುಂ (ರಾಜಶೇ. ೦೨-೬೯). [ಸಂ.]

**ರದನಿ** (ನಾ). ಕೋರೆಗಳನ್ನುಳ್ಳುದು ; ಆನೆ ; ದಂತಿ : "ದ್ವಿರದಂ . . . ಅನೇಕಪಂ ರದನಿ . . . ಸಿಂಧುರಂ" (ಅಸ್ತ ಕೋ. ೬೬-೩೦) ; ಮದನಮದ ರದನಿಯಂತಿರೆ . . . ಬಂದಾಪ (ಸುಕುಮಾ. ೯-೦೦೬) ; ರದನಿಗಳ ರೌದ್ರಾಹವಕೆ ಕೋವಿದನಲೇ ಕೊಳ್ಳೆನುತ ಕರಿಗಳ ಕೆದಜಿದನು (ಕುವ್ಯಾಗ. ೧-೬೦).

[ಸಂ. ರದನಿನ್]

**ರದನರಿಪು** (ನಾ). ಆನೆಯ ಶತ್ರು ; ಸಿಂಹ : ಕರ್ಕಿ ಪೃಷ್ಠಂ ರದನರಿಪುವೆರಂ ಕನ್ಯಕಾರಾಶಿಪಾರ್ಶ್ವಂ (ಜಾತಕ. ೫-೩). [ಸಂ.]

**ರದಬದಲಿ** (ನಾ). ಮಧ್ಯಸ್ಥಿಕೆ : ಮದುವೆಯ ಮಾತಿಗೆ ಫುಟ ಸಿಗುವುದರೊಳಗಾಗಿಯೇ ಸೀನಣ್ಣನ 'ರದಬದಲಿ'ಯಿಂದ ಮೆಡಿಕಲ್‌ಕಾಲೇಜ್ ಸೇರಲು ಅರ್ಜಿಮಾಡಿಬಿಟ್ಟ (ದೀಕನಿ. ೦೦).

[ ←ಮರಾ. ರದಬದಲ್, ರದಬದಲೀ ]

**ರದಿ** (ನಾ). =ರದನಿ : "ಮಾತಂಗಃ . . . ರದೀ, ಸಾಮೋದ್ಭವಃ, ಸಿಂಧುರಃ — ಈ ೧೪ ಆನೆಯ ಪೆಸರ್" (ಹಲಾಯು. ೩೬-೬೦). [ಸಂ. ರದಿನ್]

**ರದ್ದತಿ, ರದ್ದಿಯಾತಿ** (ನಾ). ವಜಾಮಾಡುವುದು ; ರದ್ದುಗೊಳಿಸುವುದು : "ರದ್ದುಮಾಡುವುದು ; ರದ್ದು ; ರದ್ದತಿ" (Abolition. ಪತ್ರಿ. ೦). **ರದ್ದಿಯಾತಿ** : ಇನಾಂ ರದ್ದಿಯಾತಿ ಕಾನೂನಿನ ದೆಶೆಯಿಂದ ಆತನ ಬಹುಭಾಗದ ಭೂಮಿ ರೈತರಿಗೆ ಹೋಗಬೇಕಾಗಿತ್ತು (ಪಂಚಕಂ. ೦೪೦); ಹಿಡುವಳಿ ರದ್ದಿಯಾತಿಯ ೧೯೪೯ನೆಯ ಇನಾಮಿಯ ಅಧಿನಿಯಮ (ಶಾಶಾಪ. ೩೦೬). [ < ರದ್ದು₂ ]

**ರದ್ದಿ** (ಗು). ೧. ಕೆಲಸಕ್ಕೆ ಬಾರದ ; ನಿರುಪಯುಕ್ತವಾದ : ಅಟ್ಟದ ಮೇಲೆ ರದ್ದಿ ಸಾಮಾನುಗಳ ರಾಶಿಯಲ್ಲಿ ಬಿದ್ದಿರುವ ಕೊಡೆಗಳ ನೆನಪು ಏಕಾಏಕಿ ಬರುತ್ತದೆ (ಶೃಹಾರ. ೦೫) ; ರದ್ದಿಕಾಗದ ಕೊಳ್ಳುವವ ನಿಮ್ಮ ಪುಸ್ತಕಗಳನ್ನು ಕೊಂಡ (ಪುಗಳ. ೦೦೮). (ನಾ). ೨. ಕೆಲಸಕ್ಕೆ ಬಾರದ ವಸ್ತು : ಅವನ ಕೊಠಡಿಯಲ್ಲಿ ಬರೀ ರದ್ದಿ ತುಂಬಿದೆ (ರೂಢಿ). ೩. ನಿರುಪಯುಕ್ತವಾದ ಕಾಗದ : ರದ್ದಿ ಆಯುವ ಹುಡುಗರಿಗಾಗಿ ಬದುಕಲು ಉಪಯೋಗವಾಗುವಂಥ ತರಬೇತಿಶಾಲೆಯೊಂದನ್ನು ಈಚೆಗೆ ತೆಗೆದಿದ್ದಾರೆ (ರೂಢಿ).

[ ←ಹಿಂ. ಮರಾ. ರದ್ದೀ ]

**ರದ್ದಿಯಾತಿ** 'ರದ್ದತಿ' ನೋ.

**ರದ್ದು₁** (ನಾ). ಆರ್ಭಟ ; ಗದ್ದಲ ; ಕೋಲಾಹಲ : ರದ್ದಿಲಿ ನಾದದ ಘರ್ಜನೆ ಮೊರೆಯೆ (ತಪಾವ. ೦೫೮-೦೩) ; ಬದ್ಧಪುರುಷರ್ಷವ ಪೊತ್ತು ರೋದಿಸುತ ಬಹುರದ್ದಿನಿಂ ಪೋಗುತಿರೆ (ಕೋಶರಾ. ೫-೪೦).

[ ←ತೆಲು. ರದ್ದು, ರದ್ದಿ ]

**ರದ್ದು₂** (ನಾ). ತೆಗೆದುಹಾಕುವಿಕೆ ; ವಜಾಮಾಡುವಿಕೆ : ಇದೆಲ್ಲಾ ವಿವಾಹ ರದ್ದು ನೋಟೀಸು ಕೊಟ್ಟದ್ದರ ಹೊಟ್ಟೆಉರಿ ! (ಪಶು. ೬೦).

**ರದ್ದಾಗಿಸು** = ತೆಗೆದುಹಾಕುವಂತೆ ಮಾಡು ; ವಜಾಮಾಡು : ಆತನು ಕೂಡಲೆ ಅವನ್ನು ರದ್ದಾಗಿಸಿ . . . ಎಚ್ಚರಿಸಿದನು (ಗೂರೂಶಾ. ೦೬ ಟಿಪ್ಪ). **ರದ್ದಾಗು** = ಇಲ್ಲವಾಗು ; ವಜಾ ಆಗು : ಭಗವದಿಚ್ಛೆಯಿದ್ದರೆ ಶಿಕ್ಷೆ ರದ್ದಾಗುತ್ತದೆ (ಪುಪರು. ೨೫೬). **ರದ್ದು ಮಾಡು** = ತೆಗೆದುಹಾಕು ; ವಜಾಮಾಡು : ಆ ಪಾಠಶಾಲೆಯನ್ನು ರದ್ದುಮಾಡಿ ಆ ಮೇಷ್ಟರನ್ನು ಇಲ್ಲಿಗೆ ಕಳಿಸಿಕೊಟ್ಟರೆ ಸಾಕು (ರಂಗಳ. ೦೦೬) ; ಅವರ ಇಷ್ಟದಂತೆಯೇ ಅಂದಿನ ಕಚೇರಿಯನ್ನು ರದ್ದುಮಾಡಲಾಯಿತು (ಸಂಗೀತ. ೨೩).

[← ಅರ. ಹಿಂ. ರದ್ದ್ ; ಮರಾ. ರದ್, ರದ್ದ್]

**ರದ್ದುಗೊಳಿಸು** (ಕ್ರಿ). ತೆಗೆದುಹಾಕು ; ವಜಾಮಾಡು : ಭೋಜನಕೂಟದ ಕಾರ್ಯಕ್ರಮವನ್ನು ರದ್ದುಗೊಳಿಸಲಾಗುವುದಿಲ್ಲವೇ (ಅಕ್ಷಪು. ೬೫); ದಂಡನೆಯ ಆಜ್ಞೆಯನ್ನು ರದ್ದುಗೊಳಿಸುವಂತೆ ಕೇಳಿಕೊಂಡರು (ರಾಜಪ. ೩೬).

[ರದ್ದು₂ + ಕೊಳ್₁ + — ಇಸು₃]

**ರದ್ದುಪಡಿಸು** (ಕ್ರಿ). = ರದ್ದುಗೊಳಿಸು : ಕೋರ್ಟಿನವರು ಡಿಸ್‌ಮಿಸ್ ಮಾಡಿರುವುದನ್ನು ರದ್ದುಪಡಿಸಿ ಹುಕುಂ ಮಾಡತಕ್ಕದ್ದು (ಗ್ರಾ.ವಾಕ್. ೨೮) ; ಖಾಸಗಿ ಒಡೆತನವನ್ನು ಪೂರ್ತಿಯಾಗಿ ರದ್ದುಪಡಿಸುವುದಕ್ಕೆ ಒಪ್ಪುವದಿಲ್ಲ (ಷಾವಾರ. ೦೯೩). [ರದ್ದು₂ + ಪಡಿಸು]

**ರನ್ನ** 'ರತುನ' ನೋ.

**ರನ್ನಕನ್ನಡಿ** 'ರನ್ನಗನ್ನಡಿ' ನೋ.

**ರನ್ನಕುಂಡಲ** 'ರನ್ನಗುಂಡಲ' ನೋ.

**ರನ್ನಗಂಬಳಿ** (ನಾ). = ರತ್ನಕಂಬಲ : ರತ್ನಕಂಬಳ - ರನ್ನಗಂಬಳಿ (ಕವಿತ. ೨೯೩ ಕ್ರಿಯೋ) ; ಜಡೆಮುಡಿಯನಳವಡಿಸಿ ತೋಳುವ ವೃಷಭನ ಸೆಜ್ಜೆ ಸಿತಾಂಬರದ ಚೆಲುವುಡಿಗೆ ಹೊದೆದಿಪ ರನ್ನ[ಪಾಠಾಂ. ರತ್ನ]ಗಂಬಳಿ ತಾಪ್ರು ಕುಂಡಲವು (ಬಸವು.೩-೨೬); ಸಂಬಳಿಗೆಯು ಸಂಚಿ ಮೊಗವಾವುದ ರನ್ನಗಂಬಳಿ ಹೊನ್ನ ಹಾವುಗೆಯು (ವೀಕಶ. ೨೯-೬). [ರನ್ನ (< ರತುನ) + ಕಂಬಳಿ]

**ರನ್ನಗಟ್ಟೆ** (ನಾ). ರತ್ನದಿಂದ ಮಾಡಿದ ಪಾತಿ,– ಮಡಿ : ವನದೊಳೆಸೆವ ವೃಕ್ಷವೃಕ್ಷಮೂಲಗಳೊಳು ಘನತರ ರನ್ನಗಟ್ಟೆಗಳು (ಅಂಕಕ. ೨-೩೬).
[ರನ್ನ (< ರತುನ) + ಕಟ್ಟೆ₁]

**ರನ್ನಗಡಗ** (ನಾ). ರತ್ನಖಚಿತವಾದ ಬಳೆ : ಇಂತಪ್ಪ ಸಲ್ಲಕ್ಷೆಯುಂ ಬಿತ್ತರಿಸಿ ದೊಡೆ ಅರಮನೆಯೊಳ್ ರನ್ನಗಡಗಮುಂ ಪೊನ್ನ ಕಂಠಿಕೆಯುಂ ಮೆಚ್ಚನೀವರ್ (ರಾಮಾಶ್ವ. ೩-೦೫). [ರನ್ನ (< ರತುನ)+ಕಡಗ₁]

**ರನ್ನಗಣಿ** (ನಾ). ರತ್ನಗಳು ದೊರೆಯುವ ಸ್ಥಳ ; ರತ್ನದ ಗಣಿ : ಬೆಟ್ಟು ರನ್ನಗಣಿಯಿಂ ಕಾಡಾನೆಯಿಂ ಕಾಡು... ಒಪ್ಪೆ (ಪುಲ್ಗಿಪು. ೨-೦೫); ಲೋಕನಾಥನ ಪುತ್ರ ಭರತೇಶ ರತ್ನಶಲಾಕೆಯಾ ರನ್ನಗಣಿಯೊಳು ಈ ಕುವರಾರೆ ರತ್ನಗಳು ಜನಿಸಿವೆ (ಭರತ. ೩೭-೧೫).
[ರನ್ನ (< ರತುನ) + ಗಣಿ₂ (< ಕಣಿ₀)]

**ರನ್ನಗನ್ನಡಿ, ರನ್ನಕನ್ನಡಿ** (ನಾ). ರತ್ನಖಚಿತವಾದ ಕನ್ನಡಿ : ರಂಜಿಪ ರನ್ನಗನ್ನಡಿ ರನ್ನವೆಸದ ಕಾಳಾಂಜಿ ಕರ್ಪೂರಕರಂಡ ಮುಂಜುಳಗಂಧೋದಕ ಪಿಡಿದವರ್ಗಳು ಕಂಜಾಕ್ಷಿಯರೊಡನೆಯ್ದಿದರು (ವೀಕಶ. ೨೯-೦೦) ; ರನ್ನಗನ್ನಡಿಯಲ್ಲಿ ತನ್ನ ಪಡಿನೆಳಲೊಗೆಯೆ (ತತ್ತ್ವಗ. ೦೯-೩೦೭). **ರನ್ನಕನ್ನಡಿ** : ಶಶಿ ರವಿಗಳಂ ರನ್ನಕನ್ನಡಿಗಳೆಂದು ನಿಟ್ಟಿಸುವ... ವಿಷಮುಪ್ರಮುಭಗಣಮೈದುತಿರ್ದುದು (ಚೆನ್ನ. ೪೦-೪೯).
[ರನ್ನ (< ರತುನ) + ಕನ್ನಡಿ₁]

**ರನ್ನಗರು** (ನಾ). ರತ್ನದ ಗೊಂಬೆ : ರನ್ನಗರುವಿನಂತೆಸೆದಳಾ ತರುಣಿ (ಶ್ರೀಪಾಲ. ೪-೬೨) ; ಉನ್ನತವಹ ಸುರದಂಪತಿಗಳ ಬಲುರನ್ನಗರುಗಳಿಂದೆಸೆ ದುದು[ಪಾಠಾಂ. ರನ್ನೆಯರಿಂದತಿ ಮಿಗಲು] (ರಾಮಾ. ೬-೭).
[ರನ್ನ (<ರತುನ) + ಕರು₂]

**ರನ್ನಗುಂಡಲ, ರನ್ನಕುಂಡಲ** (ನಾ). ರತ್ನದ ಕರ್ಣಾಭರಣ : ಜಯಸಿರಿಗೆ ಇಕ್ಕುವ ರನ್ನಗುಂಡಲದಂತೆ ಸಿಂಗಾಡಿಯುಕ್ಕಜಿಳೊಳೆಸೆದುದೇನೆಂಬೆ (ಕಂಪಿ. ೨೨-೦೦). **ರನ್ನಕುಂಡಲ** : ಕಿವುಡುತನ ತಪ್ಪಿತೇ ರನ್ನಕುಂಡಲ ದಿಂದ ? (ಮಂಕುತ. ೩೩೨). [ರನ್ನ (< ರತುನ) + ಕುಂಡಲ]

**ರನ್ನಗೊಂಡೆಯ** (ನಾ). ರತ್ನಖಚಿತವಾದ ಕುಚ್ಚು : ಕಂಡ ಕಡೆಗೆ ರನ್ನ ಗೊಂಡೆಯ ಮಾಣಿಕಪೆಂಡೆಯಗಳ ಕೆದರುವರು (ಭರತ. ೭೭-೦೦೯).
[ರನ್ನ (< ರತುನ) + ಗೊಂಡೆಯ]

**ರನ್ನಜಗಲಿ** (ನಾ). = ರನ್ನಗಟ್ಟೆ : ಪ್ರಕಟತರ ತರುಲತೆಗಳಂ ರನ್ನಜಗಲಿ ರಮ್ಯಕಸರಸಿಕೃತಕಾದ್ರಿಗಳ್ ತರತರದೊಳರಲ್ಕಳಂಕಕೇಳೀವನಂ ಮೆರೆದುದು (ಶಿವು. ೩-೩೦). [ರನ್ನ (<ರತುನ) + ಜಗಲಿ]

**ರನ್ನದಂಬಿಗೆ** (ನಾ). ರತ್ನಖಚಿತವಾದ ಚೆಂಬು : ನೆಟ್ ರನ್ನದಂಬಿಗೆ ಯೊಳು ದಿವ್ಯಜಲವನು ತರುಣಿಯೊರ್ವಳು ಸೂಸಲು (ಕಂಪಿ. ೨೨-೫೫).
[ರನ್ನ (< ರತುನ) + ತಂಬಿಗೆ (< ತಂಬುಗೆ)]

**ರನ್ನದಪ್ಪಲು** (ನಾ). ತಪ್ಪಲಲ್ಲಿ ರತ್ನಗಳನ್ನು ಹೊಂದಿರುವ ಪರ್ವತ ; ಮೇರು : "ಪೊಂಬೆಟ್ಟು ರನ್ನದಪ್ಪಲು ಸುರಗಿರಿ" (ಶಬ್ದಮಂ. ೦೦).
[ರನ್ನ (< ರತುನ) + ತಪ್ಪಲು₁ (< ತಪ್ಪಲ್)]

**ರನ್ನದಲೆಗ** (ನಾ). ರತ್ನವನ್ನು ಹೆಡೆಯಲ್ಲಿ ಉಳ್ಳದು : ಸರ್ಪ.
ರನ್ನದಲೆಗರ ಹಚ್ಚವಿಟ್ಟಯ್ಯ = ಸರ್ಪವನ್ನು ಧರಿಸಿಕೊಂಡಿರುವವನು ; ನಾಗಭೂಷಣ ; ಶಿವ : ದೈನ್ಯವಾನುತ ಸ್ತೋತ್ರವಂ ಮಾಡೆ ರನ್ನದಲೆಗರ ಹಚ್ಚವಿಟ್ಟಯ್ಯ ನಗುತ ಬೋಧಿಸುತಲೆಂತೆಂದನು (ಶ್ರೀಕುಶ. ೪-೩೮). [ರನ್ನ (< ರತುನ) + ತಲೆ₁ + – ಗ₂]

**ರನ್ನದಾಳಿ** 'ರತುನದಾಲಿ' ನೋ.

**ರನ್ನದುಟಿ** (ನಾ). ಮಾಣಿಕ್ಯದ ಬಣ್ಣದ ತುಟಿ ; ಕೆಂದುಟಿ: ಆಲವಣ್ದುಟಿಯು ಚೆಂದುಟಿಯು ಪೊಸಪವಳದುಟಿಯೊಳು ರನ್ನದುಟಿ ರಂಗುದುಟಿಗಳವರು . . . ಬರುತಿರ್ದರು (ಚೆನ್ನ. ೩೭-೪೫).
[ರನ್ನ (< ರತುನ) + ತುಟಿ]

**ರನ್ನದೆನೆ** (ನಾ). ರತ್ನಖಚಿತವಾದ ಕೋಟೆಯ ಮೇಲುಭಾಗ ; ಮಣಿ ಖಚಿತವಾದ ಬುರುಜು : ಗಗನಗತಿಶ್ರಮಮಂ ನೆಟ್ಟಗೆ ಕಳೆವರ್ ಖಚರ ರಜನಿ ರನ್ನ[ದೆ]ನೆಗಳೋಳಿಗಳೊಳ್ (ಶಂಕುವಾ. ೨-೭೬) ; ಹೊಂಗೋಟೆ ಮೇಗಣ ರನ್ನದೆನೆಯು ಕಾಂತಿಯೊಳೆಸಿಲಾಗಿದ್ದುದೈದಿದರವರು (ಭರತ. ೦೬-೦೦೭). [ರನ್ನ (< ರತುನ) + ತೆನೆ₁]

**ರನ್ನದೊಟ್ಟಿಲ್, ರನ್ನದೊಟ್ಟಿಲು** (ನಾ). ರತ್ನಖಚಿತವಾದ ತೊಟ್ಟಿಲು; ಮಣಿಮಯವಾದ ತೊಟ್ಟಿಲು : ಗಿರಿಸುತೆಯನತಿಸ್ಫುಟಮಣಿಗಣಪ್ರಭಾ ಸಂಪುಟಮೆನಿಸುವ ರನ್ನದೊಟ್ಟಿಲೊಳಗಿರಿಸುತ್ತುಂ (ಗಿರಿಜ. ೩-೬೬). **ರನ್ನದೊಟ್ಟಿಲು** : ತರುಣನ ರನ್ನದೊಟ್ಟಿಲೊಳಿಟ್ಟು ಹರುಷದಿ ತರಳೆಯರುಗಳು ಪಾಡಿದರು (ಶ್ರೀಪಾಲ. ೨-೬೦).
[ರನ್ನ (< ರತುನ) + ತೊಟ್ಟಿಲ್₁]

**ರನ್ನದೊಟ್ಟಿಲು** 'ರನ್ನದೊಟ್ಟಿಲ್' ನೋ.

**ರನ್ನದೊಡವು** (ನಾ). ರತ್ನಖಚಿತವಾದ ಒಡವೆ,– ಆಭರಣ : ಪರಿಪರಿಯ ರನ್ನದೊಡವಿನ ಬೆರಕೆಯು ಬೆಳಗದರೆ (ಕನ್ನಿಕಾ. ೦೩೮) ; ರನ್ನದೊಡವನಿಟ್ಟ ರಮಣಿಯ ಕಣ್ಬೆಳಗುನ್ನತವಾಯ್ತು ಬೀದಿಯಲಿ (ಮೋಹತ. ೦೬-೩೩). [ರನ್ನ (< ರತುನ) + ತೊಡವು]

**ರನ್ನದೋರಣ** (ನಾ). ರತ್ನಖಚಿತವಾದ ತೋರಣ ; ಮಣಿಮಯವಾದ ತೋರಣ : ಪರಕೇರಿ ತರತರದಲಿ ಬೆಡಗಿಂದ ಕರುಮಾಡ ರನ್ನದೋರಣವ ಸುಕಲಶದಿ ಪರಮವಿಭವವ ತಾಳ್ದಿಹುದು (ಪರ್ವತ. ೦-೯೧); ಹೊನ್ನ ಬಾಗಿಲುಗಳ ರನ್ನದೋರಣಗಳ ಪನ್ನೀರುಸಾದಿನಿಂದೆಸೆವಾ ಕನ್ನಡಿನೆಲ ದರಮನೆಯೊಳು ಪೊಕ್ಕು (ಭರತ. ೩-೬೬).
[ರನ್ನ (< ರತುನ) + ತೋರಣ]

**ರನ್ನಪುತ್ಥಳಿ** (ನಾ). ರತ್ನಖಚಿತವಾದ ಗೊಂಬೆ,— ವಿಗ್ರಹ : ರನ್ನಪುತ್ಥಳಿಗಳು ಜೀವಪಡೆದು ರತಿಬಿನ್ನಣದೊಳು ಕೂಡುವಂತೆ ಚೆನ್ನೆಚೆನ್ನರು ನೆರೆದರು (ಭರತ. ೪೦-೦೩೦). [ರನ್ನ (< ರತುನ) + ಪುತ್ಥಳಿ]

**ರನ್ನವಚ್ಚ** (ನಾ). ರತ್ನದ ಆಭರಣ ; ರತ್ನಖಚಿತವಾದ ಒಡವೆ : ಮಹೀಪಾಲಕಾಗ್ರಣಿ ರನ್ನವಚ್ಚಮನಾಂತು . . . ವಿವಾಹಮಂದಿರಕುಲ್ಲಸಲ್ಲೀಲೆ ಪೆರ್ಚೆ ತೆರಳ್ದು (ಉದ್ಭಟ. ೮-೩೨) ; ಪಜ್ಜಳಿಸುವ ರನ್ನವಚ್ಚಂ . . . ತನಗೊಪ್ಪಿರೆ ಬಂದಳದೊಂದು ಲೀಲೆಯಿಂ (ರಾಜಶೇ. ೦೨-೬೨) ; ಆ ಕಾಂತೆಯರ್ . . . ನಿಚ್ಚದಲ್ಲವ ರನ್ನವಚ್ಚಮಂ ತೆಗೆದಿಟ್ಟು . . . ಜಲಕೇಳಿಗೆ ಮೇಳವಿಸಿದರ್ (ರಾಮಾಶ್ವ. ೧೨೩-೦೦).
[ರನ್ನ (< ರತುನ) + ವಚ್ಚ₂]

**ರನ್ನವಜ್ಜೆ** (ನಾ). ಮಾಣಿಕ್ಯದಂತೆ ಕೆಂಪಾದ ಪಾದ : ತಾವರೆವಜ್ಜೆಗಳ ತಳತಳಿಸುವ ರನ್ನವಜ್ಜೆಗಳ ನಳಿನನೇತ್ರೆಯುರೊಡನೆೞ್ಗರಲವಳಂದು ನೆಲೆವಾಡ ದೆಡೆಗೈದಿದಳು (ಶಾಂತಿಪು. ೨೦-೯೩). [ರತ್ನ (<ರತುನ) + ವಜ್ಜೆ]

**ರನ್ನವಟ್ಟಗೆ** (ನಾ). ರತ್ನಖಚಿತವಾದ ಡಾಬು, — ಸೊಂಟಪಟ್ಟಿ : ಸುರಹೊನ್ನೆಯ ರನ್ನವಟ್ಟಗೆಯಿಂ ರಕ್ತಾಶೋಕರಚಿತ ರತ್ನಕಟಕದಿಂ . . . ಅಲಂಕರಿಸಿ (ಚಂದ್ರಪ್ರ. ೭೪೯) ; ಕುಮುದಂಗಳಿಂ ನೆಗೆವ ಜಂಘಾಕಾಂಡದಿಂ ರನ್ನವಟ್ಟಗೆಯಿಂ . . . ಬಗೆಯಂ ಬಲ್ಸೆಱೆಗೆಯ್ವ ಪುತ್ಥಳಿಗಳಿಂ (ಎಪಿ. XI, ಚಿತ್ರ. ೨೩-೭೭ ; 1224). [ರನ್ನ (< ರತುನ) + ಪಟ್ಟಗೆ]

**ರನ್ನವಟ್ಟೆ** (ನಾ). = ರನ್ನವಟ್ಟಗೆ : ವೀರಘಂಟೆಯ ಪೊನ್ನ ಗುಬ್ಬಿಯ ರನ್ನವಟ್ಟೆಯ ಬೆನ್ನ ಚಮ್ಮಟಿಗೆಯ ಬಿಳಿಯ ಚವರದ . . . ಬಿರುದಿನ ಹರಿಗೆಕಾಱರ ಪರಿವೀಥಿಯೊಳಂ (ಗಿರಿಜಾ. ೭-೩೩ ವ) : ವೀರಸಿರಿಯುಪ್ಪದ ತೋಳ್ಸುತ್ತಿನಿಪ ರನ್ನವಟ್ಟೆಯು ರುಕ್ಮಿಂಜದ ಮಂಜರಿವೊಲ್ ರಂಜಿಸಿದುದು ಪೊನ್ನಾಯುಗದ ಪೊನ್ನ ಬಜ್ಜರಿ ಕಟಿಯೊಳ್ (ಅನಂತಪು. ೭-೩೦).
[ರನ್ನ (< ರತುನ) + ಪಟ್ಟೆ$_3$]

**ರನ್ನವಡಲಿಗೆ** (ನಾ). ರತ್ನಖಚಿತವಾದ ಹರಿವಾಣ : ಆ ಬಾಣವನು ಅಂದು ಪೂಜಿಸಿ ರನ್ನವಡಲಿಗೆಯೊಳಗಿಟ್ಟು ಬಂದನು ಚಕ್ರಿಯಿದ್ದೆಡೆಗೆ (ತ್ರಿಲೋಕ. ೦೩-೦೨೯).
[ರನ್ನ (< ರತುನ) + ಪಡಲಿಗೆ (<ಪಡಲಗೆ)]

**ರನ್ನವಣಿ** (ನಾ). ರತ್ನದ ಹರಳು : "ರನ್ನವಣಿ — ರತ್ನಮಣಿ= ರತ್ನದ ಹರಳು" (ಶಬ್ದಮಣಿ. ೩೭) ; ರತ್ನಮಣಿ — ರನ್ನವಣಿ (ಕವಿರಾ. ೨೯೨ ಕೃಹೋ). [ರನ್ನ (< ರತುನ) + ಮಣಿ$_3$]

**ರನ್ನವರದ** (ನಾ). ರತ್ನದ ವ್ಯಾಪಾರಿ; ರತ್ನಪಡಿವರ್ತಕ : ಬೆಲೆವಣ ಗಾಗರಮೆನೆ ತೋರ್ಪ ರನ್ನವರದರಂಗಡಿಯಿಂ . . . ಪುರಂ ಕಣ್ಗೆಂಬಾದುದು (ರಾಮಾಶ್ವ. ೦೦೩-೯). [ರನ್ನ (< ರತುನ) + ಪರದ$_1$]

**ರನ್ನವರಲ್** (ನಾ). ಕೆಂಪುಹರಳು ; ಮಾಣಿಕ್ಯ : "ಕೆಂಬರಲೆಂದು ರನ್ನವರ ಲೆಂದೆನಲ್ ಕಿಸುಗಲ್ಲು" (ಶಬ್ದಮಂ. ೭೯). [ರನ್ನ (<ರತುನ) + ಪರಲ್]

**ರನ್ನವಲ್ಲಕ್ಕಿ** (ನಾ). ರತ್ನಖಚಿತವಾದ ಪಲ್ಲಕ್ಕಿ : ಮುತ್ತಿನ ಸತ್ತಿಗೆ ಮುತ್ತಿನ ಹೆಗ್ಗಾಳೆ ಮುತ್ತು ಕೆತ್ತಿಸಿದುತ್ತಮರನ್ನವಲ್ಲಕ್ಕಿಯನಿತ್ತನವಳಿ ಗಸುರೇಂದ್ರ (ಶಾಂತಿಪು. ೯೦-೯೦).
[ರನ್ನ (<ರತುನ) + ಪಲ್ಲಕ್ಕಿ$_1$ (<ಪಲ್ಲಂಗ)]

**ರನ್ನವಲ್ಲಣ** (ನಾ). ರತ್ನಖಚಿತವಾದ ಜೀನು : ಸುರಧನು ರನ್ನವಲ್ಲಣದ ಮಾಲ್ಕೆಯೊಳೊಪ್ಪಿರೆ ಬಳ್ಳಿಮಿಂಚು ವಿಸ್ಫುರಿತ ಖಲೀನದಂತಿರೆ ಘನಧ್ವನಿ ಹೇಷಿತಮಾಗೆ . . . ತೋಱೆ ನೀಲತುರಗಂ (ಕಬಿಕಂ. ೨-೩೯).
[ರನ್ನ (< ರತುನ) + ಪಲ್ಲಣ]

**ರನ್ನವಸರ** (ನಾ). ರತ್ನವ್ಯಾಪಾರಿಗಳ ಅಂಗಡಿಸಾಲು; ರತ್ನವ್ಯಾಪಾರಿಗಳ ಬೀದಿ : ಪೆಂಪಿನಿಂದೆರಡನೆಯಬ್ಧಿ ರನ್ನವಸರಂ ಗೆಲೆವಂದುದು ರೋಹ ಣಾದ್ರಿಯಂ (ಚಂದ್ರಪ್ರ. ೦-೦೨೦); ದಾಳಿಂಬದ ಮರಗಳ್ ರನ್ನವಸರದಂತೆಸೆ ದಿರ್ದುವು (ಕಬ್ಬಿಗ. ೦೦೯) ; ಸ್ಮರಮಣಿಗಾಱ ಮಾಱುವ ರನ್ನವಸರದಂತುಱೆ ಮೆಱೆದಿಹುದಂಗನೆಯುರು (ಕಿಂಪ್ರಶ. ೭-೯೮). [ರನ್ನ (< ರತುನ) + ಪಸರ]

**ರನ್ನವಸಿಱ್** (ನಾ). ೧. ರತ್ನಗಳನ್ನು ಹೊಂದಿರುವ ಗರ್ಭ. ೨. ರತ್ನಗಳನ್ನು ಹೊಂದಿರುವ ಬಸಿರುಳ್ಳದು : ಭೂಮಿ : ರನ್ನ ವಸಿರ್ಪಲಮೊಗಮೇಳ್ವಾಲಗೆಯನ್ನಿಲ್ಲದೆ ನಡೆವ ನೆರಲ್ಸರಿವುಮುನ್ನೀರ್ಗಂದು ಬಿಸುಗದಿರನೊಡಲ್ಪಿಡಿದವನೆಂಬೆಂಬು ನಿನ್ನಯ ಪರಿಚಾಂತು (ಕಾವ್ಯಾವ. ೦-೩೨).
**ರನ್ನವಸಿಱಳ್** = ರತ್ನವನ್ನು ಬಸಿರಿನಲ್ಲಿ ಹೊಂದಿರುವವಳು: ಭೂಮಿ : ರತ್ನಗರ್ಭೆ : "ಎಳೆ . . . ರನ್ನವಸಿಱಳ್ ಭೂಮಿ" (ಶಬ್ದಮ. ೩೩-೨೦೦). [ರನ್ನ (<ರತುನ) + ಬಸಿಱ್]

**ರನ್ನವಾಟ** (ನಾ). ರತ್ನಖಚಿತವಾದ ಗೃಹ, — ಭವನ : ಎಡೆಬಿಡದಿನ್ನು ಘೋಷಿಪ ವಿಬುಧ ಭೂಸುರ ರನ್ನವಾಟಗಳೆಸೆದವು (ಬಸವಪು. ೨೨-೨೯).
[ರನ್ನ (<ರತುನ) + ವಾಟ]

**ರನ್ನವಾವುಗೆ** (ನಾ). ರತ್ನಖಚಿತವಾದ ಪಾದುಕೆ : "ರನ್ನವಾವುಗೆ ಯೆಂದುದಾದುದು ರತ್ನಪಾದುಕೆ" (ಕಬಿಕಂ. ೦೩೨) ; ಪುರಾಂತಕಂ ಮುಂಬಿರಿದು ಕೆಯ್ಗುಡೆ ವೃಷಭೇಂದ್ರನಿಂದವತರಿಸಿ ಕುಬೇರಂ ಸಾರ್ಚಿದ ರನ್ನವಾವುಗೆಯಂ ಮೆಟ್ಟಿ (ಕಬಿಕಂ. ೩-೩೭ ವ) ; ಮುತ್ತಿನ ಸರವೆನ್ನ ರನ್ನವಾವುಗೆಗಳ ಸುತ್ತ ಲಂಬಣವಾದುದಿಂದು (ಹರಿಶ. ೦-೯೨).
[ರನ್ನ (< ರತುನ) + ಪಾವುಗೆ]

**ರನ್ನವಾಸಱ್** (ನಾ). ರತ್ನದ ಹಾಸುಗಲ್ಲು : ಕಂಡರವರು . . . ರನ್ನವಾಸಱ ಗಳಿಂದೆ ಶಶಿಕಾಂತಶಿಲೆಗಳ ಕಂದರಂಗಳಿಂದತಿಮನೋಹರವಾದ ಗಿರಿ ಯೊಂದನು (ತ್ರಿಖಡಾ. ೩-೦೩). [ರನ್ನ (< ರತುನ) + ಪಾಸಱ್]

**ರನ್ನವಿಟ್ಟರ** (ನಾ). ರತ್ನ ಖಚಿತವಾದ ಆಸನ ; ಮಣಿಪೀಠ : ಚಿನ್ನದ ಕಾಲ ಬೆಳ್ಳಿಯ ಕಾಲ ಮಂಚ ಸುವರ್ಣದಡ್ಡಣಿ ಸುಪ್ಪತಿಗೆ ರನ್ನವಿಟ್ಟರ ರತ್ನಗಂಬಳಿ . . . ಇತ್ತ ಮಗಗೆ (ಪೋಹಶ. ೦೩-೦೭).
[ರನ್ನ (< ರತುನ) + ವಿಟ್ಟರ]

**ರನ್ನವೆಸ** (ನಾ). ರತ್ನವನ್ನು ಕುಂದಣಿಸುವಿಕೆ : ತನ್ನೊಲವಿಂ ತತ್ಪುತ್ರ ಕಳತ್ರಕೆ ರನ್ನವೆಸದ ಬಹುವಿಧ ಭೂಷಣಮಂ ಮನ್ನಿಸಿ ಕೊಟ್ಟಾ ದೇವನಮರ ಲೋಕಕ್ಕೆಯ್ದಿದಂ (ಜಯನೃ. ೩-೭೨); ರನ್ನವೆಸದ ಕಾಳಾಂಜಿ ಕರ್ಪೂರಕರಂಡ ಮಂಜುಳಗಂಧೋದಕವಿಡಿದವರ್ಗಳೆ ಕಂಜಾಕ್ಷಿಯರೊಡನೆಯ್ದಿದರು (ಪೋಹಶ. ೨೯-೦೦). [ರನ್ನ (< ರತುನ) + ಬೆಸ$_1$]

**ರನ್ನವೆಳಗು** (ನಾ). ರತ್ನದ ಹೊಳಪು, — ಕಾಂತಿ : ಹೊನ್ನ ಹಾವುಗೆಯ ರನ್ನವೆಳಗಂ ಕೀಳ್ಮಾಡಿ ನಕ್ಷತ್ರಮಾಲೆಯಂತೆ ಸುಣ್ಬೆಳಗನೀಂಬ ಪದನಖಪ್ರಭೆ ಪೂವಲಿಗೆದಱೆ (ಗಿರಿಜಾ. ೩-೭೩ ವ) ; ಒಳಗಣ ರನ್ನವೆಳಗಲ್ಲದಿವು ತೊಡರ್ದಿಪ್ಪ ಕೆಂಬವಳಮಲ್ಲಿವು ಪಯೋನಿಧಿಯ ಕೆನೆಯೊಪ್ಪಮಲ್ಲದೆ ನೀರ್ಮೊಗೆಯಲಿಳಿವ ಮೇಘಂಗಳಲ್ಲೆನಿಸಿದುವು ಕಡಲೊಳು (ಕೃಷ್ಣರಾ. ೭-೭).
[ರನ್ನ (< ರತುನ) + ಬೆಳಗು$_2$]

**ರನ್ನಸರ** (ನಾ). ರತ್ನದ ಹಾರ ; ಮಣಿಮಾಲೆ : ಪೊಸಲತೆಯಕ್ಕುಮಲ್ಲ ಲತೆಗೆತ್ತಣದೀ ಸವಿಪಾತು ನೀಟ್ಟ ರನ್ನಸರಮುದಕ್ಕುಮಲ್ಲ ಸರಕೆತ್ತಣದೀ ನವಘರ್ಮಬಿಂದುಗಳ್ (ಕಾವ್ಯಾವ. ೬-೯೦). [ರನ್ನ (<ರತುನ) + ಸರ$_3$]

**ರನ್ನು** (ನಾ). (ಕ್ರಿಕೆಟ್ ದಾಂಡುಗಾರರು ಗುರಿಗೋಲುಗಳ ಮಧ್ಯೆ ಪರಸ್ಪರ ಓಡಿ ಮಾಡುವ) ಗೆಲ್ಲಂಕದ ಓಟ: ಒಂದು ಗಂಟೆಯಲ್ಲಿ ಒಂದುನೂರುಐವತ್ತಕ್ಕೆ ಮೇಲ್ಪಟ್ಟು ರನ್ನುಗಳನ್ನು ಹೊಡೆದರು (ನಾಡಿಗೇ. ೦೩೦). [← ಇಂ. Run]

**ರನ್ನೆ** (ನಾ). ಶ್ರೇಷ್ಠಳಾದವಳು : ಆ ಹೆಣ್ಗಳ ರನ್ನೆಗೆ ಪಲ್ಲವಕವ್ಯೂಹದೆರ್ದೆ ಯನಿಳ್ಕಳಿಗೊಂಡತಿ ರಾಜಿಸಿವವು ತಿವಳಿಗಳು (ಜಯನೃ. ೩-೩೩); ಕಲಕೀರ ವಾಣಿಯರ್ಕಾಳಾಹಿವೇಣಿಯರ್ . . . ಕಳೆದುಳಿದ ರನ್ನೆಯರ್ (ಕೃಷ್ಣರಾ. ೩೦-೩). [ರನ್ನ (< ರತುನ) + — ಎ$_2$]

**ರಪಣ**, **ರವಣ**$_1$ (ನಾ). ೧. ಆಸ್ತಿ; ಐಶ್ವರ್ಯ : ಮಾಣಿಸಿದೊಡೆ ಮಾಣದೆ ರ[ಪಾಠಾಂ. ವ]ಪಣಮಂ ತೋಱೆಯುಮೊತ್ತೆಯನುಗ್ಗಡಿಸಿಯುಂಮಾಡಿಮೆನೆ (ಚಂಶಪು. ೭-೩ ವ); ಕೆಱೆಯುಂ ಕಂಡು ಕಟವೆಯುಂ ಬಿತ್ತುವಂತೆ ರಪಣಮಂ ಕಂಡು ಕಡನಂ ಕುಡುವಂತೆ (ಧರ್ಮಾಮೃ. ೦೯-೧೭೦). ೨. ಹಣ ; ಧನ : ವಚನಮಾತ್ರದ ರಪಣದಲಿ ರಚಿಸಿದನು ಗೋಧನಭೂಮಿದಾನವನು (ಶಿವಾಕ. ೯-೨೯); ಗುಪಿತದಿಂ ರಪಣವಿತ್ತೆಯೆಂದು ಬೈದಂದು ಪೆರ್ಗಹಳೆ ಭೋರ್ಗರೆದವು (ಶಂಕು. ೦೦-೦೨); ಸಾಲ ತೀರಿಸಲು ಆವನ ಬಳಿ ರಪಣವೂ ಇಲ್ಲದ್ದರಿಂದ, ಅವನ ಹೆಂಡತಿ ಮಕ್ಕಳನ್ನೂ ಆಸ್ತಿಪಾಸ್ತಿಗಳನ್ನೂ ಮಾರಿ ಸಾಲ

ತೀರಿಸತಕ್ಕದ್ದೆಂದು ಸಾಲಿಗ ಅಜ್ಜಿ ಮಾಡಿದನು (ಕೃಷು. ೩೯೦). ೩. ರಕ್ಷಿಸುವ ಸಾಧನ; ಸಹಾಯಸಾಮಗ್ರಿ : ರಪಣವೇಕೆಲೆ ಹೂಹೆ ಭಟರಿಗೆ ವಿಪುಳ ಸಂಗ್ರಾಮದಲಿ ಭುಜವೇ ರಪಣವಲ್ಲೈ (ಶಿಶಾಗ. ೧೦-೯೯-೩೨): ರಪಣಗಳೇ ಕೆಲೊ ಹೂಹೆ ಭುಜರಪಣವು ಭಟಗಾಜಿಗಿಹೆ (ಜೂರಣಾ. ೩೯). ರಪಣ₁ : ೨. ರಪಣಮಾದ ಜೂದುಗಾಣಿನಂತೆ ಮಗುಟ್ಟುಮಗುಟ್ಟುಮಭ್ಯಾಸ ವಶದಿನಿನಿಯಳ ಕೂಟಮನೆ ಬಯಸಿ (ಶರ್ಶಪ. ೬-೯ ಶ). ೪. ಜೂಜಿನಲ್ಲಿ ಒಡ್ಡುವ ಹಣ ; ಪಣ : ನೋಡುವರೆಡಗಣ್ಣ ಥಾಳದೊಳ್ ಹಾಸಗೆಯಾಯ ಮನಂ ವಿಟರ್ಗೆ ಹೋದುವು ರಪಣಂ ಗುಣಕ್ಕವಳ ಜವ್ವನನೆತ್ತದೊಳಾರೊ ಸೋಲದರ್ (ಸೂಕ್ತಿಸು. ೬-೪೯೦) ; ಮಣಿಜೂಜಂ ಕುಡವೆಟ್ಟುದಾಂ ರಪಣಮಂ ಬೇಟ್ಟಂತುಟಂ ತಂದೆನೆಂದಿಪಲ್ಲೆ (ಶಶಿಶು. ೭೩೯) ; ನಿಮಗೆ ಹರಿಬದೊಳೊಂದು ಮುಟ್ಟಿಗೆ ರಪಣವುಂಟೇ ಹಾಯ್ಕಿ ನಿಮ್ಮಾಟವನು ನೋಡುವೆನು (ಕುಮ್ಕ್ಯಾಶ. ೨೯-೯೬). [p ಇದು ಸಂಸ್ಕೃತದ 'ರೈ' ಮತ್ತು 'ಪಣ' ಎಂಬ ಎರಡು ಶಬ್ದಗಳು ಸೇರಿ ಆದ ಕೂಡುನುಡಿ ಇರಬಹುದು]

**ರಪರಪನೆ** 'ಜಪಜಪನೆ' ನೋ.

**ರಪಾಟ, ರಪಾಟಿ, ರಪಾಟೆ** (ನಾ). (ಉಕ) ವೇಗವಾದ ಓಟ ; ದೌಡು : ಎಲ್ಲಿಯೂ ಅವನ ಹೆಸರು ಕಾಣದಾಗಿತ್ತು. ಕೂಡಲೇ ಮೋರೆ ಬಾಗಿಸಿ ಕೊಂಡು ಸೈಕಲ್ಲು ತೆಗೆದುಕೊಂಡವನೇ 'ರಪಾಟ' ಹೊಡೆದನು (ಶೀಳಶ. ೩೬). **ರಪಾಟಿ** : ಮೂವರೂ ರಪಾಟಿ ಓಡಲಾರಂಭಿಸಿದರು (ಜೂಲಿಕಿ. ೨) ; ಒಂದು ಕಲ್ಲು ತೆಗೆದುಕೊಂಡು ಒಗೆ. ತಾನೇ ರಪಾಟಿ ಓಡುವುದು (ಕೊಂಬು. ೯). **ರಪಾಟೆ** : ಇಂದು ಬೇಟೆ. ನಾಳೆ ಕುದುರೆಯ ರಪಾಟೆ (ಕ್ರೀಮಣ. ೬೩). [← ಹಿಂ. ರಪಟ್. ರಪಟ್ಟಾ; ಮರಾ. ರಪಾಟಾ]

**ರಪಾಟಿ** 'ರಪಾಟ' ನೋ.

**ರಪಾಟೆ** 'ರಪಾಟ' ನೋ.

**ರಪ್ಪಿಸು** (ಕ್ರಿ). (?) : ಜ್ಞಪ್ತಿಯಿಂ ರಾಗಾತಿರೇಕವಿಜ್ಞಾನದಿಂ ರಪ್ಪಿಸುವ ಸಿದ್ಧಾಂತವೇದಾಂತಮಂ ಜಱಿದು ಗುಪ್ತಕೋಟಿವಿಶೇಷಮಂತ್ರ ಬೀಜಾಕ್ಷರದಿ ಉಪ್ಪನೆಯಿದಂ ತನ್ನವಂ (ಅಂಗಪು. ೩೩-೩೦). [ ? + — ಇಸು₁]

**ರಪ್ಪನೆ** (ಅ). 'ರಪ್' ಎಂಬ ಶಬ್ದದೊಡನೆ : ಭಾರತರು ಧರೆಗೆ ಮೂಲ ಕಳೆದುರುಳ್ದಂತೆ ರಪ್ಪನೆ ಬೀಳಲು (ಶಶಿಶು. ೧೯-೦೫).

[ರಪ್₂ + — ಅನೆ₁]

**ರಫು₁** (ನಾ). ಹರಿದು ತೂತುಬಿದ್ದಿರುವ ಬಟ್ಟೆಗಳನ್ನು ದಾರದಿಂದ ಹೆಣೆದು ಜೋಡಿಸುವುದು : ಹಳತಾಗಿ ಚಿಂದಿಯಾಗುವೆನೆಂಬ ಬಟ್ಟೆಯನು ರಫ್ಫನಲಿ ತೇಪೆಯಲಿ ಸರಿಮಾಡಲಾಗುವುದೆ? (ಪಪಾ. ೯-೦೫).

**ರಫುಮಾಡು** = "(ಉಣ್ಣೆ, ವೊ. ದ) ಹೆಣಿಗೆಯಲ್ಲಿ ಬಿದ್ದಿರುವ ಕಂಡಿಯನ್ನು ಸೂಜಿಯಿಂದ ಬೇರೆ ಎಳೆಹಾಕಿ ಮುಚ್ಚು ; ರಫುಮಾಡು : ಎಳೆತುಂಬು" (Darn. ೨೦೯೨). **ರಫುಹಾಕು** = ರಫುಮಾಡು ; ಹೋಗುವಾಗ ತೊಟ್ಟುಕೊಂಡಿದ್ದ ಬಟ್ಟೆ ಬದಲಾಯಿಸಿ, ದಿನದ ರಫು ಹಾಕಿದ ಮೂರುಮೊಳದ ಸೀರೆಯ ತುಂಡನ್ನು ಉಟ್ಟು (ಸೀನೋಶ. ೦೬).

[← ಅರ. ಹಿಂ. ಮರಾ. ರಫೂ; ಪಾರ. ರಫ್]

**ರಫೆ** 'ಚಿಪ್ಪೆ' ನೋ.

**ರಫ್ತು** (ನಾ). ೧. ವ್ಯಾಪಾರಕ್ಕಾಗಿ ಸರಕನ್ನು ವಿದೇಶಕ್ಕೆ ಕಳುಹಿಸುವುದು ; ನಿರ್ಯಾತ : ಹತ್ತಿಯಲ್ಲಿ ಬಹುಭಾಗ ಇಂಗ್ಲೆಂಡ್. ಜಪಾನ್ . . . ಮುಂತಾದ ದೇಶಗಳಿಗೆ ರಫ್ತಾಗುವುದು (ಪಂಶ. ೯). ೨. ವ್ಯಾಪಾರಕ್ಕಾಗಿ ದೇಶದಿಂದ ಹೊರಕ್ಕೆ ಕಳಿಸುವ ಸರಕು.

**ರಫ್ತುಮಾಡು** = ಸರಕನ್ನು ದೇಶದಿಂದ ಹೊರಕ್ಕೆ ಕಳಿಸು ; ನಿರ್ಯಾತ ಮಾಡು : ಈ ನೀಲಿಯನ್ನು . . . ನಮ್ಮ ದೇಶಗಳಿಗೆ ರಫ್ತು ಮಾಡುತ್ತಾರೆ (ಕ್ರ ಜಾ. II, ೩೯). [←ಪಾರ. ಹಿಂ. ಮರಾ. ರಫ್ತ್]

**ರಫ್ತುವ್ಯಾಪಾರ** (ನಾ). ವಿದೇಶಗಳಿಗೆ ವಸ್ತುಗಳನ್ನು ಕಳಿಸಿ ಮಾಡುವ ವ್ಯಾಪಾರ ; ನಿರ್ಯಾತವ್ಯಾಪಾರ : ರಫ್ತುವ್ಯಾಪಾರದಿಂದ ದೇಶದೊಳಕ್ಕೆ ಹೆಚ್ಚು ನಿವ್ವಳಹಣ ಬರುವುದು (ಪಂಶ. ೦೯೬).

[ ರಫ್ತು + ವ್ಯಾಪಾರ ]

**ರಫ್ತುಸುಂಕ** (ನಾ). ವಿದೇಶಗಳಿಗೆ ಕಳಿಸುವ ವಸ್ತುಗಳ ಮೇಲೆ ಹಾಕುವ ಸುಂಕ : "ರಫ್ತುಸುಂಕ : (ಸಂ)ನಿರ್ಯಾತಶುಲ್ಕ" (Export duty. ಶಶಿಶು. ೩೭). [ ರಫ್ತು + ಸುಂಕ₁ ]

**ರಬಟಿ** (ನಾ). (ಉಕ) ಅನಾವಶ್ಯಕವಾದ ಆಯಾಸ; ವ್ಯರ್ಥವಾದ ದಣಿವು : ಈಗ ಮಲಗು ಹೋಗು. ಒಂದು ಕಾಸು. ಇದೆಲ್ಲ ರಬಟಿ ತೊಗೊಂಡು ನೀನೇನು ಮಾಡೀ ! (ದಾಕೂಟಿ. ೬೩) ; ಇಷ್ಟು ಮಾತ್ರ ಹೇಳಬಲ್ಲೆ. ಈ ಅಡಿಗಿ ನಿನ್ನದು ಅಲ್ಲಾ ಅಂತ. ನಿನ್ನ ರಬಟಿ ನಾಲ್ಕುಮರುಷ ನನಗ ಗೊತ್ತಿಲ್ಲ ? (ಕಳ್ಕಶ. ೩೩). [ ← ಹಿಂ. ರಬಡ್; ಮರಾ. ರಾಬಡ್]

**ರಬಟೆ** (ನಾ). ಅಂಟಂಟಾಗುವಂತೆ ಅರೆದುಮಾಡಿದ ಲೇಪನದ್ರವ್ಯ; ಕಲ್ಕ : ಶುಂಠೀರಬಟೆಯನ್ನು ಮಾಡಿ ಅದನ್ನು ಬೆಚ್ಚಗೆ ಮಾಡಿಕೊಂಡು ಕೋಣೆಗೆ ನಡೆದಳು (ಪುಟ್ಟಕ್ಕ. ೭೩).

[ ← ಹಿಂ. ಮರಾ. ರಬಡೀ. ರಾಬಡೀ = ಗಟ್ಟಿಗೊಳಿಸಿದ ಹಾಲು]

**ರಬಾಬು, ರವಾಬು** (ನಾ). ಒಂದು ಬಗೆಯ ತಂತೀವಾದ್ಯ : ವೇಣು ರಬಾಬು ಸಾರಂಗಿ ಜಾಣರು ನುಡಿಸುವ ತಂಬುರ ಸ್ವರಗೇಳುತಾನಂದದಿ ಬಂದರೊಸೆದು (ಗೊಮ್ಮಟ. ೩-೦೦೬). **ರವಾಬು** : ರವಾಬು ಕಿನ್ನರಿ . . . ಕಾಳಕೀಯೆಂಬ ಮೂವತ್ತುಮೂರು ತಂತೀವಾದ್ಯಂಗಳ್ (ಐಹಿಸ. ೨೩೩).

[ ← ಅರ. ಹಿಂ. ಮರಾ. ರಬಾಬ್ ]

**ರಬ್ಬರು** (ನಾ). ೧. ಒಂದು ಬಗೆಯ ಮರ : ಮೊದಲು ರಬ್ಬರಿನ ಬೆಳೆಯುವಿಕೆಯು ದಕ್ಷಿಣ ಅಮೆರಿಕದ ಎಮೆಜಾನ್ ಕಾಡುಗಳಲ್ಲಿತ್ತು (ಪಂಶ. I, ೯೮). ೨. ರಬ್ಬರು ಮರದಿಂದ ಸುರಿಯುವ ರಸ ಮತ್ತು ಅದರಿಂದ ತಯಾರಿಸುವ ವಸ್ತು : ಈ ಮರಗಳಿಂದ ರಬ್ಬರನ್ನು ಸಂಗ್ರಹಿಸಿದರಾಯಿತು (ಪಂಶ. I. ೦೪೨); ರಬ್ಬರಿನ ಚೆಂಡುಗಳು . . . ಇನ್ನೂ ಏನೇನೊ ಸಾಮಾನುಗಳಿದ್ದವು (ಸ್ವರ್ಗಶಾ. ೯೦).

[ ← ಇಂ. Rubber ]

**ರಬ್ಬಳಿಕೆ** 'ರಬ್ಬಳಿಗೆ' ನೋ.

**ರಬ್ಬಳಿಗೆ, ರಬ್ಬಳಿಕೆ** (ನಾ). ಜೋಳದಿಂದ ಮಾಡಿದ ಗಂಜಿ.–ಅಂಬಲಿ : ಎಮ್ಮ ಮನೆಯಲ್ಲಿ ಶಿವಪೂಜೆಗೆಯ್ದು ಮಾಡಿದ ರಬ್ಬಳಿಗೆಯನುಣಲೆಳ್ಳಂ (ಶಬಶ. ೦೦-೩೩). **ರಬ್ಬಳಿಕೆ** : "ರಬ್ಬಳಿಕೆ = ದಸಾಳಗಂಜಿ" (ಶಾಕಕೋ. ೩೯). [ ? ]

**ರಬ್ಬಳೆ** (ನಾ). ಕೊಚ್ಚೆ; ರಾಡಿ : ರಬ್ಬಳೆಯ ನೀರುಮಂ ಶುಭ್ರವೆಸಗಲು (ಕ್ರೀಣಾಕ. ೯-೩೩). [ ← ಮರಾ. ರಬಡಾ ]

**ರಬ್ಬು** 'ಜಬ್ಬು' ನೋ.

**ರಬ್ಬುದೋರು** (ಕ್ರಿ). ಆಡಂಬರವನ್ನು ತೋರಿಸು; ವೈಭವದಿಂದ ಮೆರೆ : ಹಬ್ಬಿತು ಗಗನ ಕಂಥೊಳು ಮುಸುಕಿ ಬಹ ಹಬ್ಬಿಸಗಳು ವರಂಗಿಗಳೂ ರಬ್ಬುದೋರುತ ಅರಬ್ಬಿಗಳು ಭೂತಗಳಂತೆ ಗರ್ಭನಿರ್ಭೇದ ನೋಡುವರೇ (ಶ್ರೀಂದಣ. ೩-೦೦).

[ ರಬ್ಬು (< ಜಬ್ಬು) + ತೋರು (< ತೋಱು) ]

**ರಭಸ** (ನಾ). ೧. ವೇಗ; ಜೋರು : ಕಲ್ಪಾಂತಶರಧಿಯ ರಭಸವಲ್ಲಿಯೆ ಕೇಳಲಾದುದು (ಕುಮಾರ್ಯ. ೨-೦೦) ; ಹೊಡೆವ ರಭಸದಲದ್ದಿಹೋಯಿತು ವಾದ್ಯನಿರ್ಘೋಷ (ಕೃಸಂ. ೩೩-೨೨) ; ಗಂಗಾನದಿ . . . ಭೂಮಿಗೆ ರಭಸದಿಂದ ಇಳಿದು (ಪಸಂ. ೬). ೨. ಆರ್ಭಟ ; ಬೊಬ್ಬೆ : ಚೀಱಿದನು ಗಿರಿಗಳ ಬೆಸುಗೆ ಬಿಡೆ ನಡುವಿರುಳು ಕೋಳಾಹಳಿಸಿತು ರಭಸ (ಕುಮಾಶ. ೨-೯೩);

ತರತರದ ಕೇರಿಗಳ ಭೂರಿಗಳ ಭೇರಿಗಳ ರಭಸದಿಂ ಪುರವೆಸೆದುದು (ಶಬಕ. ೩-೩). ೩. ಕೋಪ ; ಆಕ್ರೋಶ : ಅವನು ರಭಸದಿಂದ ಮಾತನಾಡಿದನು (ರೂಢಿ). [ಸಂ.]

**ರಮ** (ನಾ). ೧. ಸಂತೋಷ ; ಆನಂದ. ೨. ಹಿತಕರವಾದುದು ; ಸಂತೋಷದಾಯಕವಾದುದು : "ರಮಂ ರಮಣ್ಯಂ ರಮ್ಯಂ ರುಚಿರಂ ಪ್ರವೇಶಮೆನೆ ಸೌಮ್ಯಕ್ಕೆ ನಾಮಮಕ್ಕುಂ" (ಶಬ್ದಮಣಿ. ೦೨೬-೨). ೩. ಹಿತ ವನ್ನುಂಟುಮಾಡುವವನು ; ಇನಿಯ; ನಲ್ಲ : ಅಜಾಂಡಮಂ ಪುದಿದು ಬರ್ಪ ದಶಾಸ್ಯನ ವಹ್ನಿಬಾಣಮಂ ಜಯರಮಣೀರಮಂ ತವಿಸಿದಂ ಹರಿ ವಾರುಣದಿವ್ಯಬಾಣದಿಂ (ಕಂಠಾಭರ. ೦೯-೦೬೦). ೪. ಗಂಡ; ಪತಿ. ೫. ಕಾಮ ; ಮನ್ಮಥ. [ಸಂ.]

**ರಮಜಾನ್** 'ರಮಜಾನು' ನೋ.

**ರಮಜಾನು**, ರಂಜಾನ್, ರಮಜಾನ್, ರಮ್ಜಾನು (ನಾ). ಅರಬ್ಬೀ ವರ್ಷದ ಒಂಬತ್ತನೆಯ ತಿಂಗಳು ಮತ್ತು ಆ ತಿಂಗಳಿನಲ್ಲಿ ಮುಸಲ್ಮಾನರು ಆಚರಿಸುವ ಉಪವಾಸದ ಹಬ್ಬ : ನಂದನಸಂವತ್ಸರದ ರಮಜಾನು ತಿಙ್ಗಳು (ಎಕ. IX. ಅನೇಕ. ೨-೦ ; 1652 ?). ರಂಜಾನ್ : ರಂಜಾನ್ ತಿಂಗಳನ್ನು ಉಪವಾಸದ ಹಬ್ಬವೆಂದು ಕರೆಯುತ್ತಾರೆ (ರೂಢಿ). ರಮಜಾನ್ : ರಮಜಾನ್ ತಿಂಗಳು ಪೂರಾ ಮುಸಲ್ಮಾನರಿಗೆ ಉಪವಾಸ ವ್ರತದ ಸಮಯ (ಜಾನಪ. ೦೯೯). ರಮ್ಜಾನು : ರಮ್ಜಾನು ತಿಂಗಳು (ರಾಜೇಂದ್ರ. ೬೬). [← ಅರ. ರಮಜ್ಞನ್, ರಮದ್ಝಾನ್ ; ಪಾರ. ಹಿಂ. ಮರಾ. ರಮ್‌ಜಾನ್]

**ರಮಡೋಲು** ರಂಡೋಲು, ರಂಢೋಲು (ನಾ). ೧. ಒಂದು ಬಗೆಯ ದೊಡ್ಡ ಚರ್ಮವಾದ್ಯ (+) ರಂಡೋಲು : ೧. (ಎಕಮ್ಮ. XVII. ೨೬). ೨. (ಆಲಂ) ದೊಡ್ಡದು ; ದಪ್ಪವಾದುದು : ತೆರೆದ ಕದ ತೋರಿಸಿತು ಎನ್ನ ಹರಿಯುವ ಹೀರಬಂದಿರುವ ಕ್ರೂರಿಯನು— ಹೊಟ್ಟೆಯದು ರಂಡೋಲು, ಮೂಗು ತೆಂಗಿನಕಾಯಿ (ಪಪ್ಪರ. ೫): ರಂಢೋಲು ೧. ಬಾಣ ಬಿರುಸು ರಂಢೋಲು ವಾದ್ಯ ! (ಕುಟ್ಟಿಹ. ೦೦). [← ಮರಾ. ರಮಢೋಲ್]

**ರಮಣ** (ನಾ). ೧. ಹಿತವನ್ನು ಉಂಟುಮಾಡುವಂತಹುದು ; ಆನಂದ ದಾಯಕವಾದುದು : "ರಮಣಾರ್ಥಂ ರಮಣೀಯಂ ರಾಮಣೀಯಕಂ" (ಕಕುಶಾ. ೦೦೬) : ಸುಮತಿಗಳು ಪರಮೇಶನೆಂದಡೆ ರಮಣದಿಂ ಪರಮಾತ್ಮ ನೆಂದಡೆ ವಿಮಳತ ಪರಬ್ರಹ್ಮವೆಂದೆಡೆ ಹರನ ನಾಮವಿವು (ಬಸವ. ೩೩-೩೯). ೨. ವಿಲಾಸ ; ಲೀಲೆ ; ಕ್ರೀಡೆ : ಪರಿಥಾವನ್ನಕ್ರಚಕ್ರಕ್ರಮಣ ರಮಣ ಸಂಜಾತಕಲ್ಲೋಲಮಾಲಾಸ್ಫುರದುದ್ಯತ್ಸೀಕರೌಘಸ್ಥಗಿತಗಗನದಿಗ್ಮಂಡಲಂ. . . ಶೋಭಿಕಂ . . . ರೌದ್ರಂ ಸಮುದ್ರಂ (ಎಕ. XI. ದಾವಣ. ೯೭-೯ ; 1164); ರಮಣಾ ನಿಟ್ಟಿಸಿ ಮುಗ್ಗೆ ಬಾರೆನುತ ಕುಸ್ತರಿಸಿ ರಮಣಮಂ ತೀರ್ಚಿ ಚಟ್ಟಂ ಪರಿದು ಸಂತೈಸಿ ರಮಣನಿರ್ವೆತೆಗೆ ಕಳುಹಿದ (ವಂಶಾವಾ. ೩-೨-೯೨). ೩. ನಲ್ಲ ; ಪ್ರಿಯ : ಪ್ರಮದವಮದನಮಾಧ್ಯದ್ಯೌವನೋದ್ಯಾನರಾಮಂ ರಮಣರಣ[ತ] ಗೋಷ್ಠೀಬಂಧಸಂಧಿಪ್ರಬಂಧಾ (ಕಬಿರಾ. ೩-೨೦೨). ೪. ಗಂಡ ; ಪತಿ : "ಕಾಂತಃ . . . ರಮಣಃ, ಪ್ರಾಣನಾಥಃ, ಅನುಕಃ— ಈ ೧೪ ಗಂಡಂ" (ಕರಾಮು. ೯೨-೬೯೩) ; ರಮಣನಿರೆ ಪಾಣ್ಯನೊಳ್ಳತಿ ರಮುಯಿಸಿದವಳುಂ ವ್ಯಥಾಸುವಾದದೆ ಫಳಮೇಂ ಕಮಳಿನಿ ದಿನಪತಿಗಲ್ಲದೆ ಸಮನಿಸಿ ಬೋಧಾಕರಂಗೆ ಮೊಗಮಿತ್ರವಳೇ (ಅಜಿತ. ೦೦-೯೦). ೫. ಕಾಮ; ಮನ್ಮಥ. ೬. ಕತ್ತೆ. [ಸಂ.]

**ರಮಣಿ** (ನಾ). ೧. ಸುಂದರಳಾದ ತರುಣಿ : ರಮಣಿಯ ಮುಖಕ್ಕೆ ಮಣಿಮುಕುರಮನೊಪ್ಪಿರೆ ತೋರ್ಪ ದಿವಿಜವಧು ಸಮ್ಮುಖದೊಳ್ ಹಿಮ ಕಿರಣಂಗೆ ರವಿಗಂ ಸಮನಿಸಿ ಪುಣ್ಣಮೆಯ ಸಂಜೆವೆಣ್ಣಿರ ಪೋಲ್ತಳ್ (ಸುಕುಮಾ. ೧೦-೩೩೯). ೨. ಹೆಂಡತಿ ; ಪತ್ನಿ. ೩. ಹೆಂಗಸು ; ಸ್ತ್ರೀ : "ರಾಮಾ . . . ರಮಣೀ . . . ಯುವತಿಃ_ ಈ ೨೮ ಸ್ತ್ರೀಯರ್" (ಕರಾಮು. ೭೯-೬೨೮); ಅರ ಸಿತೇಂದುಗಳಂತೆಬಳರಾಗಿ ಸಮದೊಳಿರೆ ರಮಣಿ ಪುಟ್ಟುಗುಂ (ಜಾತಕ. ೩-೮೨) ; ೪. ನಲ್ಲೆ ; ಪ್ರಿಯೆ : "ವಲ್ಲಭನಾ ತನ್ನಲ್ಲಿ ರಮಿಸಲಿಚ್ಛೆಯುಳ್ಳವಳು ರಮಣಿಯೆನಿಸುಗು" (ಜಾತಕ. ೦೦೩) ; ರಂಡೆಯಾಸೆಗೆ ರಮಣಿಯಂದವ ಕೆಡಿಸಿದಂತಾಯ್ತು (ಕೌಶಿಕ. ೩೯-೪೦). [ಸಂ. ರಮಣೀ]

**ರಮಣೀಯ** (ಗು). ೧. ಆನಂದವನ್ನುಂಟುಮಾಡುವ ; ಆಹ್ಲಾದಕರ ವಾದ : ವಾಸನೆಸುತಿರ್ಪುದು ಸಾರ್ಥತೆಯುಂ ನಿಜಾಪ್ಸೆಯೊಳ್ ನೆರೆವ ಸುಗಂಧಿಮಂಡಲಮಿಳಾರಮಣೀರಮಣೀಯಕುಂಡಲಂ (ಚಂದ್ರಕೀ. ೩-೮೫) ; ರಮಣೀಯತರದೋಸ್ತಂಭಗಳನಗಲಿಸುತ ತಿಮಿರವಿಜೃಂಭಣನು ಮಣಿಮಯ ರಥದಿಂದಡರ್ದನಂಬರವ (ತೊರವೆ. ೬-೨೬-೦೯) ೨. ಚೆಲುವಾದ ; ಮನೋಹರವಾದ ಚಿತ್ರದಲಿ ಚಿತ್ರಿಸುತ್ತಾ ಘಾಷವರಮಣೀಯ ರಮಣಿಯಂ ಹೋಲಿಸಿದನಲ್ಲಿ (ತತ್ವಾಂಗ. ೬೯-೨೦೭೬). (ನಾ). ೩. ಆನಂದ ದಾಯಕವಾದುದು. ೪. ಮನೋಹರವಾದುದು : ಆ ಜಲಪಾತದ ದೃಶ್ಯ ರಮಣೀಯವಾಗಿದೆ (ರೂಢಿ). [ಸಂ.]

**ರಮಣೀಯತೆ** (ನಾ). ೧. ಅಂದ ; ಮನೋಹರತೆ : ಅಂತತಿರಮಣೀಯತೆಯಮನೊಳಕೊಂಡಖಿಳಜನಮನೋರಂಜನವಾದ ಬೀದಿಗಳೊಳ್ (ಜಗನ್ನಾ. ೨-೨೯ ವ). ೨. ಆನಂದವನ್ನುಂಟುಮಾಡುವಂತಹುದು: ಸುಖ ಕೊಡತಕ್ಕ ಅಂಶವು ಒಂದು ಇದೆ. ಇದನ್ನು ರಮಣೀಯತೆ ಎಂದು ಕರೆಯಬಹುದು (ಕೃಬಿ. ೦೬೯). [ಸಂ. ರಮಣೀಯತಾ]

**ರಮಣ್ಯ** (ಗು). ೧. ಸುಂದರವಾದ ; ರಮಣೀಯವಾದ. (ನಾ). ೨. =ರಮ ೧ : "ರಮಂ ರಮಣ್ಯಂ ರಮ್ಯಂ ರುಚಿರಂ ಪ್ರವೇಶಮನೆ ಸೌಮ್ಯಕ್ಕೆ ನಾಮಮಕ್ಕುಂ" (ಶಬ್ದಮಣಿ. ೦೨೬-೨). [ಸಂ.]

**ರಮಲ** (ನಾ). ಕವಡೆ ಹಾಕಿ ಶುಭಾಶುಭಗಳನ್ನು ಹೇಳುವ ಫಲ ; ಜ್ಯೋತಿಷ : ಕನಸು, ಜ್ಯೋತಿಷ್ಯ, ಶಕುನ, ಮುಹೂರ್ತ, ರಮಲ, ದೈವಭಕ್ತಿ ಇತ್ಯಾದಿಗಳು ಒಂದೇ ಮೂಢಭ್ರಾಂತಿಮಾಲೆಯೊಳಗಿನ ಮಣಿಗಳು (ಕಿಚಾಪು. ೭೦). [←ಅರ. ಹಿಂ. ಮರಾ. ರಮಲ್]

**ರಮಲಜ್ಞ** (ನಾ). ರಮಲಶಾಸ್ತ್ರವನ್ನು ತಿಳಿದವನು : ರಮಲಜ್ಞನ ಕಡೆ ವಿಚಾರಣೆ ಆಯ್ತು (ಕಹಕ. ೩೩). [ರಮಲ + ಜ್ಞ]

**ರಮಾಧವ** (ನಾ). ೧. ಲಕ್ಷ್ಮೀಪತಿ ; ವಿಷ್ಣು : ಶಿವನಂತೆ ಗಂಗಾಹಿಮ ಕರಾವಹಂ ರಮಾಧವನಂತೆ ಗೋತ್ರೈಕಪಾಲಕಂ (ಕೈಬಿಬಾ ೬-೩).. ೨. [ಜೈನ] ವಾಸುದೇವ : ಅಗಲ್ದು ಪೋದನಧರಾಜನಿಳಾತಿಳಕಂ ರಮಾಧವಂ (ಧರ್ಮಾಮೃ. ೦೩-೯೩). [ಸಂ.]

**ರಮಾರಮಣ** (ನಾ). = ರಮಾಧವ ೧ : ಮಾರರಮಣ ಭೂರಮಣ ಪುರಂದರವಿಟ್ಠಲ ಸಾರ್ವಭೌಮ ರಮಾರಮಣ (ಪುರಂದ. ದಾ. ೨-೯೬-೬) ; ರಮಾರಮಣನಾಗಿ ಪ್ರಕಟತದ ಧರ್ಮಸಂತತಿಗಳಂ ಪಾಲಿಸುವ ಸುಕುಮಾರ ಮೂರ್ತಿಯುಂ. . . ಎನಗೆ ತೋಜದುದಿಲ್ಲ (ಕೃಬಿಚಾ. ೩೨-೩೯). [ಸಂ.]

**ರಮಾರಮಿ** (ಗು). ೧. ಎದ್ದುಕಾಣುವ : ಡಿಕಾವಾದ, ರಮಾರಮಿರಂಗಿನ. ಹೊಸದಾಗಿ ಬಣ್ಣಬಳಿದ (Smart. ೨೦೯೩). (ನಾ). ೨. ಜಮೆ ಮತ್ತು ಖರ್ಚು ಸಮಾನವಾಗಿರುವುದು ; ನಷ್ಟವಾಗದಿರುವುದು. ೩. ಎಲ್ಲಾ ವಿಧದಲ್ಲಿಯೂ ಒಂದೇ ಸಮನಾಗಿರುವುದು ; ಸಮತೆ [← ಮರಾ. ರಮಾರಮ, ರಮಾರಮಿ]

**ರಮಾವಲ್ಲಭ** (ನಾ). = ರಮಾಧವ ೧ : ಆ ವಿನುತಚಟ್ಟ ಸೆಟ್ಟ ರಮಾವಲ್ಲಭನಂ ವಧುವರಸನ್ವೆ ವೆರಸು ಸದ್ಭಾವದ ಪೂಜಿಸಿ (ಕಾಂತ್ಯಾಸಾ. ೯-೨೩; 1147). [ಸಂ.]

**ರಮಿತ** (ಗು). ಆನಂದಗೊಳಿಸಲ್ಪಟ್ಟ ; ಹರ್ಷವನ್ನು ತಂದ : ಎಲ್ಲರುಂ ಕಾಂತಾರಮಿತಭೋಗಸಂಪದರ್ಕುಜರೆನಿಸರವನಿಳೆಯೊಳು (ಶೃಂಶಾ. ೨-೧೧). [ಸಂ.]

**ರಮಿಯಿಸು** ' ರಮಿಸು ' ನೋ.

**ರಮಿಸು, ರಂಬಿಸು, ರಮಿಯಿಸು, ರಮ್ಮಿಸು** (ಕ್ರಿ). ೧. ಆನಂದಪಡು ; ಸುಖಿಸು : ಮೆರೆದುದು ವಿಷಯಮಧ್ಯೆ ರಾಜಧಾನಿ ಅಯೋಧ್ಯೆ. ರಮಿಸು ವಿಂದ್ರಿಯಸುಖದ ನಡುವಣಾತ್ಮಾನಂದದಂತೆ (ಶ್ರೀರಾಮ. ೬-೧೩೮) ; ಮೇರಿಯ ಪ್ರೇಮಸರೋವರದಲ್ಲಿ ರಮಿಸುವ ನಾರಾಯಣಮಾಸ್ತರರಿಗೆ ಹೊರಪ್ರಪಂಚದ ಅರಿವಿದೆಯೋ ? (ಕಾವೇರಿ. ೬) ; ಇವನಲ್ಲಿ ಯೋಗಿಗಳು (ಆನಂದಿಸುವರು) ರಮಿಸುವರಾದುದರಿಂದ 'ರಾಮ' ಎಂಬ ಶಬ್ದವು ಬಂದಿದೆ (ಶಾರದ. ೯೯). ೨. ಪ್ರೀತಿಯಿಂದ ಸಮಾಧಾನಮಾಡು ; ಸಂತೈಸು : ಒಡಲುರಿಗೆ ಮೊರೆಯಿಡುವ ಕಡಲನು ಕಡುಪಿನೊಳು ಮುದ್ದಾಡಿ ರಮಿಸುವೆ (ಗಂ. ೫-೧೯) ; ಅವಳೊಪ್ಪದಿರಲು ಗಂಡು ಅನೇಕ ರೀತಿಯಿಂದ ರಮಿಸಿ ಸಮಾಧಾನ ಹೇಳುತ್ತದೆ (ಕನ್ನಜಾ. ೧೦೮) ; ಅವನನ್ನು ರಮಿಸಬೇಕಾದರೆ ನರಹರಿಗೆ ಸಾಕುಬೇಕಾಯಿತು (ಸಮಾಜ. ೧೯೪) ; ಮಗನನ್ನು ಮುದ್ದಿಸಿ, ರಮಿಸಿ ಪೆಪ್ಪರ್‌ಮೆಂಟು ತಂದುಕೊಡುವುದಾಗಿ ಹೇಳಿ . . . ಹೊರಟ (ರೂಪಶಿಲ್ಪ. ೧೭೦). ೩. ಸಂಭೋಗಿಸು ; ಕ್ರೀಡಿಸು " ರಮಿಸು—ಕ್ರೀಡಾಯಾಂ " (ಶಮಧಾ) ; ಮಿಕ್ಕ ಹೊಲತಿಯರು ನೀವೆನೆ ನಿಮ್ಮ ಜವ್ವನದ ಸೊಕ್ಕು ರೂಪಿನ ಗಾಡಿ ಜಾಣತನದೊಪ್ಪವೇತಕ್ಕೆ ಯೋಗ್ಯಂ ರಮಿಸಿದವರುಂಟೆ ಶಿವಶಿವ (ಹಕಾ. ೬-೧೮) ; ಪುರುಷನೊಬ್ಬನಿರಲ್ಕೆ ಕಾಮಾತುರವಡಿಸಿ ನಿನ್ನಂ ರಮಿಸುವುದು ನೀತಿಯಲ್ಲೆನಗೆ (ಬಸವ. ೯೨-೩೨). ೪. ಆಸೆಪಡು ; ಕಾಮಿಸು : ಉದಿರ್ದಂಗದ ಬಾವನ್ನವುಡಿಯ ಸೊಗ ಸೊದವೆ ರಮಿಸಿದಾ ನವಸೌಗಂಧಕೆ ಪದೆದೆಱಗುವ ಪೊಸಪಱಮೆಗಳ ಪಸುಳೆಯಿಂಚರಬೊಪ್ಪಿದುವು (ಜಯಶಾ. ೪-೪). ೫. ಆನಂದವನ್ನುಂಟುಮಾಡು; ಸಂತೋಷಗೊಳಿಸು : ಬಿಲ್ಗೋಲಾಂತು ನಿಂದುದು ಬೇಡವೆಣ್ಗಳು ಕಣ್ಗೆ ರಮಿಸೆ (ಮೋಹತ. ೧೯-೯೦). **ರಂಬಿಸು :** ೨. ನಮ್ಮ ರಂಗ ಆಡಿದ ನೋಕುಳಿಯ ರಂಬಿಸಿ ಕರೆದು ಚುಂಬಿಸಿ ಒಗೆದನು ರಂಭೇರಿ ಗೋಕುಳಿಯ (ಕುರಂದ. ೫-೧೨೯ ಅಮಶಲ್ಲಿ) ; ವನದೇವಿ ಮೆಲ್ಲಡಿಯಿಡುತ ತಾ ಬಂದು ಗಲ್ಲವ ಪಿಡಿದು ತೊಡೆಯೊಳಿಟ್ಟು ರಂಬಿಸಿ ಬಲ್ಲಿದನಾಗೆಂದು ಹರಸಿ (ಸಂಶ್ರಹಾ. ೧-೫೮) ; ನಂಬಿಸಿ ರಂಬಿಸಿ ಚುಂಬಿಸಿ ಎದೆಗೊಂಬಿ ಬಿಂಬೀಸಿ ಎದೆಯೊಳಗ ಅಂಧಾಂಗ (ಸಜೀಗೀ. ೫೧-೫) ; ಬಗೆಬಗೆಯಾಗಿ ರಂಬಿಸಿದೆ. ತಿಂಡಿ ಕೊಡುವೆನೆಂದು ಆಶೆ ಪಚ್ಚಿದೆ (ಶಂಖವಿ. ೧೯). ೪. ಸುಭೋಶಂಕರ ಎಂದು ರಂಬಿಸಿ ಕರೆವೆ (ಕಹಾಕ. ೪೨೨). **ರಮಿಯಿಸು :** ೧. ಸಮುದಿತಸಮಸ್ತ ಲೋಕಂ ರಮಿಯಿಸುವ ವನಾಂತಮಂತದುದ್ಯಾನವನಂ (ವಸು ಕೋ. ೩೨-೧೩). ೩. ಅಲ್ಲಿಯು ತೊಡರ್ದಲ್ಲಿಯು ನಿಂದಲ್ಲಿಯು ರಮಿಯಿಸಿದಳಾಕೆ ಮರು[ದಾ]ತ್ಮಜನೊಳ್ (ಶಂಶಾ. ೩-೧೯) ; ಕನಕಮಾಲಿಮಂ ಕೊಂಡು ಕಟ್ಟಿ ಕಟಿಯೊಳ್ ಪುರುಷಂ ರಮಿಯಿಸಿದಂದಾಕೆಗೆ ಗರ್ಭವಾಗದು (ಲೋಕೋಪ. ೯ ೧೮೦). **ರಮ್ಮಿಸು :** ೧. ರಮ್ಮೆಯರೊಡಗೂಡಿ ರಮ್ಮಿಸುವ ಶ್ರೀಕೃಷ್ಣ (ಲಕ್ಷ್ಮೀಕೋ. ೮೦). ೨. ನಿಮ್ಮ ಹಾಗೆ ವಿದ್ಯಾರ್ಥಿಗಳ ಗದ್ದ ತಟ್ಟಿ ಹಿಡಿದು ರಮ್ಮಿಸುತ್ತಿರಲಿಲ್ಲ (ರಂಗಶೋ. ೧೨೫). [ರಮು + —ಇಸು₃]

**ರಮೆ** (ನಾ). ೧. ಪತ್ನಿ ; ಹೆಂಡತಿ. ೨. ಲಕ್ಷ್ಮಿ : " ಇಂಗಡಲಣುಗಿ ರಮೆಯೆನಿಕ್ಕುಂ " (ಶಶಾಬ. ೧೧೩) ; ಇದನು ಕೇಳುವ ಸಜ್ಜನಂಗಳ ಸದನದಲಿ ರಮೆ ನೆಲಸುವಳು (ಕೌಶಾ. ೨-೭೪). ೩. ಸಿರಿ ; ಸಂಪತ್ತು. ೪. ಶೋಭೆ : ತೇಜಸ್ಸು. ೫. ಸಂಭೋಗ ; ಕೂಟ : " ಕೂಡೆ ಭೋಗಿಪಲ್ಲಿ ರಮಾಭಿಧಾನಮಕ್ಕುಂ " (ಮಂಗರಾ. ೧೫೬-೭೯). ೬. ಹೆಣ್ಣು ; ಸ್ತ್ರೀ : " ಸ್ತ್ರೀಯುಮಂ ಸಂಭೋಗಮುಮಂ ಗೋವಿನಿಯಿನಿತು ರಮಾವಾಚಕಂ " (ನಾನಾರ. ೧೪೦). [ಸಂ. ರಮಾ]

**ರಮ್ಮ** (ಗು). ೧. ಚೆಲುವಾದ ; ಸುಂದರವಾದ. (ನಾ). ೨. ಅಂದವಾದುದು ; ಮನೋಹರವಾದುದು : ' ರಮ್ಮಿಡು ' ಪರಾ. [<ಪ್ರಾ. ರಮ್ಮ./ಸಂ. ರಮ್ಯ]

**ರಮ್ಮಜಾನು** ' ರಮಜಾನು ' ನೋ.

**ರಮ್ಮಿ** (ನಾ). ಇಸ್ಪೇಟು ಆಟದಲ್ಲಿ ಒಂದು ಬಗೆ : ಕೆಲಹೊತ್ತು ರಮ್ಮಿಯಾದರೂ ಆಡೋಣ (ಆಶೋರಿ. ೧೨೮). [← ಇಂ. Rummy]

**ರಮ್ಮಿಡು** (ಕ್ರಿ). ಚೆಲುವಾಗು ; ಶೋಭಿಸು : ಹಮ್ಮಿನಿಂ ರಮ್ಮಿಡುವ ಮಕುಟವ ಚಿಮ್ಮಿದವು ಮುಮ್ಮುಖದಿ ಕವಚವ ನೆಮ್ಮಿದವು ದುಮ್ಮೆಚ್ಚಿ ಮಹಿಷಾಸುರನ ಶರಜಾಲ (ಆಂಬಿಕಾ. ೨೩-೨೩). [ರಮ್ಮ + ಇಡು₁]

**ರಮ್ಮಿಸು** ' ರಮಿಸು ' ನೋ.

**ರಮ್ಮೆ** (ನಾ). ೧. = ರಮೆ ೨ : ಒಮ್ಮಾನದಿಂದ ನೋಡೆನೆಂಬ ಭರದಿಂದ ರಮ್ಮೆ ಮುಖವ ತಗ್ಗಿಸಿ ನಾಚಿದಳು (ಪ್ರಾಚೀ. ೧೫೮-೬). ೨. ಸುಂದರಳಾದ ಸ್ತ್ರೀ.—ತರುಣಿ : ರಮ್ಮೆಯರೊಡಗೂಡಿ ರಮ್ಮಿಸುವ ಶ್ರೀಕೃಷ್ಣ (ಲಕ್ಷ್ಮೀಕೋ. ೮೦).

**ರಮ್ಮೆಯರಸ** = ಲಕ್ಷ್ಮೀಪತಿ ; ವಿಷ್ಣು : ತಿಮ್ಮಯ್ಯಾ ನಿನ್ನ ಪಾದವ ನಮ್ಮೈಸಿದೆನೊ ನಾನು ಸುಮ್ಮನಿರದಿರು ರಮ್ಮೆಯರಸಾ (ತೀರ್ಥಮ. ೧೯೮) ; ಪರಮಪುರುಷ ಪುರುಷೇಶ್ವರ ರಮ್ಮೆಯರಸ ರಾಗಾದಿ ದೂರಾ (ಮೋಕ್ಷರೀ. ೨೭-೨). [ < ರಮೆ ]

**ರಮ್ಯ** (ಗು). ೧. ಚೆಲುವಾದ ; ಸುಂದರವಾದ : ಅಕ್ಷಯಕೀರ್ತಿ . . . ರಮ್ಯಸುರಲೋಕಸುಕಕ್ಕೆ ಭಾಗಿ (ಎಕ. II, ೨೧-೪; ಸು. 700); ವಸಂತನವೊಲ್ ಕರಮೆಸೆದಂ ರಮ್ಯಗಾತ್ರನಾ ಮುನಿಪುತ್ರಂ (ಶಾರಂಪು. ೬೨೬). ೨. ಸಂತೋಷದಾಯಕವಾದ. (ನಾ). ೩. ಚೆಲುವಾದುದು ; ಸುಂದರವಾದುದು : " ರಮಂ ರಮಣ್ಯಂ ರಮ್ಯ ರುಚಿರಂ ಪ್ರವೇಕಮೆನೆ ಸೌಮ್ಯಕ್ಕೆ ನಾಮಮಕ್ಕುಂ " (ಮಂಗರಾ. ೦೨೬-೨). [ಸಂ.]

**ರಮ್ಯಂಬಡೆ, ರಮ್ಯವಡೆ** (ಕ್ರಿ). ಚೆಲುವಾಗು ; ಸುಂದರವಾಗು : ಒಂದುಮಾತ್ರಮಪಟದ ಸುರುಳ್ದಿಗೆಯುತ ಮುಖವಸ್ತ್ರವನು ಕಳೆಯಲ್ ಕುವರನ ಚೆಲ್ವಂ ಚಿತ್ರದ ನಳಿನವಿಲೋಚನೆ ನೋಡುವೆನೆನುತಂ ಗಳಿಲನೆ ಮುಸುಕಂ ತೆಗೆದಂದದಿನತಿರಮ್ಯಂಬಡೆಯಿತ್ತು (ಜಯಶಾ. ೩-೭) ; **ರಮ್ಯವಡೆ :** ಸಪಗರದೊಳು ಬಂದು ಕಂಡನು ಬಹು ರಮ್ಯವಡೆದಿರ್ದ ಭಾಗೀರಥಿಯ (ಮೋಹತ. ೬-೩೦). [ ರಮ್ಯ + ಪಡೆ₁ ]

**ರಮ್ಯತೆ** (ನಾ). ಚೆಲುವು ; ಸೌಂದರ್ಯ : ಹಳ್ಳಿಯ ಜೀವನದ ರಮ್ಯತೆ—ವಿಷಮತೆಗಳು . . . ವ್ಯಕ್ತವಾಗಿವೆ (ಸಮಾಜ. ೮ ಪೀಠಿಕೆ). [ ಸಂ. ರಮ್ಯತಾ ]

**ರಮ್ಯತೆವಡೆ** (ಕ್ರಿ). ಚೆಲುವಾಗು ; ಶೋಭಿಸು : ಎಡಬಲದಲಿ ಸತ್ಯಭಾಮೆ ರುಕ್ಮಿಣಿಯ ಹೊಂದೊಡವಿನ ರತ್ನದೀಪ್ತಿಗಳ ಪಡೆದ ತಾಯೆಂಬಂತೆ ಕೌಸ್ತುಭ ರಮ್ಯತೆವಡೆದುದು ಹರಿಯುರಸ್ಥಳದಿ (ಮೋಹತ. ೦೩-೧೧). [ ರಮ್ಯತೆ + ಪಡೆ₁ ]

**ರಮ್ಯತ್ವ** (ನಾ). = ರಮ್ಯತೆ : " ರಾಮಣೀಯಕಂ ರಮ್ಯತ್ವಂ " (ವಸು ಕೋ. ೦೦೬-೩೦). [ ಸಂ.]

**ರಮ್ಯವಡೆ** ' ರಮ್ಯಂಬಡೆ ' ನೋ.

**ರಯ್**₁ (ನಾ). ವೇಗವನ್ನು ಸೂಚಿಸುವ ಒಂದು ಅನುಕರಣ ಶಬ್ದ : ' ರಯ್ಯನೆ ' ಪರಾ.

**ರಯ್**₂ (ನಾ). ಸಂಪತ್ತು ; ಸಮೃದ್ಧಿ : ರಯ್‌ಗೆ ಕರೆದೊಯ್, ಓ ಅಗ್ನಿ ! (ಶ್ರೀರಾಮ. ೮೨೬-೧). [<ಸಂ ರೈ ]

**ರಯ** (ನಾ). ೧. ವೇಗ ; ರಭಸ : " ರಯಂ ಜವಂ . . . ವಾಜಮೆನಲೋಟಮಕ್ಕು " (ಮಂಗರಾ. ೯೦-೧೨) ; ಜಲಪ್ಲವಾವಿಳ ವಿಲೋಳ

ವೀಚೀರಯಪ್ರದಾರಿತಕುಳಾಚಲೋದಧಿಪರೀತವಾಗಿರ್ದ ಜಂಬೂದ್ವೀಪದೊಳ್ (ಶುಕಸ. ೧-೫೦ ವ). ೨. ನೀರಿನ ಹರಿವು ; ಪ್ರವಾಹ : " ಓಘಃ, ಪ್ರವಾಹಃ . . . ರಯಃ — ಈ ೬ ತೊರೆಯ ಹರಿಹಂ " (ಕರಾಯು. ೧೧೧-೯೬) : ಹರನಂತೆ ಧನದಸಖ ನವರತ್ನದಂತೆ ಗುಣವಿರಚಿತೆ . . . ಸದ್ವರುಷುಣತು ನಿಮ್ನಗಾರಯದಂತೆ ರಚಿತಾನುಕೂಲೆ (ಕಂಕ. ೧೧-೫೭). [ಸಂ.]

**ರಯುಗ** (ನಾ). ವೇಗವಾಗಿ ಚಲಿಸುವುದು ; ಗಾಳಿ ; ವಾಯುತ. **ರಯುಗಸಖನೇತ್ರ** = ವಾಯುವಿನ ಮಿತ್ರನಾದ ಅಗ್ನಿಯನ್ನು ಕಣ್ಣಿನಲ್ಲಿ ಹೊಂದಿರುವವನು ; ಶಿವ : ರಯುಗಸಖನೇತ್ರನಂ ಪಂಚಶರದಿಂದೆಚ್ಚ ಮಯಣರಾಯನ ಸುಪ್ರತೀಕವೇ ದಿಗ್ಗಜ (ಶೃಬುಖ. ೩-೧೧೩). [ಸಂ.]

**ರಯುಗಮನೆ** (ನಾ). ಚುರುಕಾದ ನಡಿಗೆಯುಳ್ಳವಳು : ಸತಿತಳು ಭಯಭಕ್ತಿಗೆ ರಯುಗಮನೆ (ಅಗ್ನಿಹಂ. ೭೦). [ಸಂ. ರಯುಗಮನಾ]

**ರಯುಪತಿ** (ನಾ). ಗಾಳಿಯ ಅಧಿದೇವತೆ ; ಮಾರುತ : ರಯಪತಿಯುಂ ಧನಪತಿಯುಂ ಪಶುಪತಿಯುಮೆನಿಸಿದಾಶಾಪತಿಗಳ್ . . . ಇರ್ದರ್ (ಶಕ್ಕೃ. ೧೧-೬೦). ' ರಯುಗ ' ಪರಾ. [ಸಂ.]

**ರಯಿ** (ನಾ). ಸಂಪತ್ತು ; ಐಶ್ವರ್ಯ : " ರಯಿ (ರಯ್ಯ) — ರೈ = ಸಂಪತ್ತು " (ಕನ್ನಕೋ. ೫೬). [ಸಂ.]

**ರಯಿಸು, ರೈಸು** (ಕ್ರಿ). ಶೋಭಿಸು ; ರಂಜಿಸು : ಮತಂಗನೊಲವಿಂದೆ ಬಾಜಿಸುವ ಘನಮೃದುತರ ಮೃದಂಗಗತಿ ರಯಿಸಲು (ಸೌಂದಕ. ೦-೯೦). **ರೈಸು** : ನಾಗ ಇಲ್ಲದೆ ಮನೆ ರೈಸುವುದೇ ಇಲ್ಲ (ಹಹ. ೧೧); ಮಕ್ಕಳು ಮನೆಯಲ್ಲಿ ಆಚೀಚೆ ಓಡಾಡದೆ ಹೋದರೆ ಏನೂ ರೈಸುವುದಿಲ್ಲ (ಮಾಕಮ. ೧೧೬). [< ರಯ್ಯ + — ಇಸು$_3$]

**ರಯಿ** (ನಾ). = ರಯ ೧ : ಕರಿಯಂ ಪಿರಿಯ ಕುದುರೆಯುಂ ತೇರ್ವೆಸಿರಿಯಂ ಪದಚರರಯಿಯುಂ ಕೊಂಡ . . . ಗಣವರಿಯರನಾಂ ತುತಿಪೆಂ (ಉದ್ಭಕೇ. ೧-೧೯). [ಸಂ. ರಯ]

**ರಯ್ಯ** (ಗು). ೧. ಚೆಲುವಾದ ; ಸುಂದರವಾದ : ಉಲಿವ ಕಾಲುಂಗುರವನಾ ರಯ್ಯವಿಪ್ಪೆ ಮಂಟಿಗೆ ಕಿಱುಬು ಓಲ್ಲಿಗಳನಾ ರವಣೆಗೊಲ್ಬಲಂಕರಿಸಿ (ಶಬ್ದಾ. ೬-೯೫). (ನಾ). ೨. ಅಂದವಾದುದು ; ಮನೋಹರವಾದುದು : ಇವರಿಂದಂ ಬಸವಂದಂ . . . ಇವಱಿಂಮೊಳ್ ನಾಟಕಶಾಲೆ ರಯ್ಯಂ (ಶಂಕಠ. ೬-೬); ಜನವಜಿನಂದು ಶ್ರೀರಂಗಪಟ್ಟಣ ಭಾಗ್ಯದೇಸಕದೊಳತಿರಯ್ಯವಾಗಿ (ಕಂಠೀ. ೩-೨). ' ರಯ್ಯಂಬಡೆ ' ಪರಾ. [< ಸಂ. ರಮ್ಯ]

**ರಯ್ಯಂಬಡೆ, ರಯ್ಯವಡೆ** (ಕ್ರಿ). ಚೆಲುವಾಗು ; ಸೊಗಸಾಗು : ನವರತ್ನರಚಿತವಾಗಿ ರವಿಮಂಡಲಮಂ ಮುಂದಾಡುವ ಸುವರ್ಣಕಳಶ ದರ್ಪಣಂಗಳಿಂ ರಯ್ಯಂಬಡೆದು (ಗಿರಿ. ೧೧-೨೮ ವ). **ರಯ್ಯವಡೆ** : ಕಡೆಯಾಣೆ ಚಿನ್ನದ ಪ್ರತಿಮೆಗೆ ಹೂಳಿಯನು ತೊಡೆದೊಪ್ಪವಿಕ್ಕಿದಂದದಲಿ . . . ರಯ್ಯವಡೆದಿರ್ದಳಿಸ ಬಣ್ಣಿಸುವೆ (ವೀರಕಶ. ೦೬-೨೦). [ರಯ್ಯ + ಪಡೆ$_1$]

**ರಯ್ಯನೆ** (ಅ). ವೇಗವಾಗಿ ; ಜೋರಾಗಿ : ಸಸುಸಗೆ ದಶನಪ್ರಭೆಯಿಂದ ಕೊಡಲು ಪಸೆ ಧವಳಿಸವೊಲಬ್ಬು ರಯ್ಯನಾ ವೀಳಯಕೆ ನೀಡಿದವಂ ಕಿಯ್ಯ (ಶಾಂತೀಪು. ೪೬೩); ಕಾನನಕರಿಯಂತೆ ಬಂದುದೆಲರೊಯ್ಯನೆ ರಯ್ಯನೆ ವಾರಿದೇಶದಿಂ (ಅರ್ಜುನ. ೩-೯೮); ರಯ್ಯನೆ ಬರ್ಪ ಪಗೆಯ ಪೊಸಸಣೆಗಳಂ ಮಿಂಡಿಸಿ (ರಾಜಶೇಖ. ೯೩-೩). [ರಯ್$^i_1$ + — ಅನೆ$_1$]

**ರಯ್ಯಪ** (ನಾ). ಒಬ್ಬಾತನ ಹೆಸರು : ಇವಕ್ಕೆ ಸಕ್ಕಿ ಮುಂದಿರೆ ಬೂವಯ್ಯ ಬೆಳ್ಳನ ಆರಕುಡಿ ಬಾರದರಜ್ಜಿಯಮ್ಮ ಕಿಡಟಿಯ ರಯ್ಯಪ (ಎಕ. IV. ಹುಣಸೂ. ೯೨-೦೨ ; ೫೨೦). [ರಯ್ಯ + ಅಪ (< ಅಪ್ಪ$_1$)]

**ರಯ್ಯರಲ್** (ನಾ). ಸುಂದರವಾದ ಹೂವು ; ಸೊಗಸಾದ ಪುಷ್ಪ : ಕೆಯ್ಯದ ಮುಗಿದಿರೆ ಪೂಜಿಸಿ ರಯ್ಯರಲಂ ಕೊಟ್ಟಸಭವನಂಬಾರಮಣಂ (ಜಮ್ಮಾ. ೨-೦೯). [ ರಯ್ಯ + ಅರಲ್$_2$ ( < ಅಲರ್$_2$ ) ]

**ರಯ್ಯವಡೆ** ' ರಯ್ಯಂಬಡೆ ' ನೋ.

**ರಲ್ಲಕ** (ನಾ). ೧. ಉಣ್ಣೆಯಿಂದ ತಯಾರಾದುದು ; ಕಂಬಳಿ : "ಆವಿಕಃ, ಔರಭ್ರಃ, ರಲ್ಲಕಃ, ಊರ್ಣಾಯುಃ, ಕಂಬಳಃ— ಈ ೫ ಕಂಬಳಿ" (ಕರಾಯು. ೯೦-೬೯೭). ೨. ರೆಪ್ಪೆಯ ಕೂದಲು ; ಎವೆಗೂದಲು. ೩. ಒಂದು ಬಗೆಯ ಜಿಂಕೆ. [ಸಂ.]

**ರವ** (ನಾ). ಧ್ವನಿ ; ಶಬ್ದ : " ಘೋಷವಮಾ ಶಬ್ದವಾ ರವಂ " (ಶುಂಗರಾ. ೯-೩೦) ; ಚಾರುತರಯಜ್ಞವಿದ್ಯಾಪಾರಗರ ರವಂಗಳಿಂ . . . ನೆಗೞ್ದುದಾಹುತಿಧೂಮಂ (ಶಂಕಠ. ೬-೩೯) ; ವಿಮೋಹಮ್ಯಗಮಂ ಮಿಥ್ಯಾಕೇದರದೊಳ್ ಬೆದಱಟ್ಟುವ ದುಂದುಭಿರವದಂತಿರೊಗೆಯೆ ಗಂಭೀರರವಂ (ಯಶೋಧ. ೪-೨೨). [ಸಂ.]

**ರವಂಗುಡು** (ಕ್ರಿ). ಧ್ವನಿಮಾಡು ; ಶಬ್ದಮಾಡು : ಕಲರುತಿಕಿಂಕಿಣೀ ಕಲಿತಕಾಂಚಿ ರವಂಗುಡೆ . . . ನೀಱ್ ಬಿಡದೇಱಿದ್ದಳೊಯ್ಯನೆ ರಮ್ಯ ಹರ್ಮ್ಯಮಂ (ರಾಜಶೇ. ೭-೦೭). [ರವ + ಕುಡು$_1$ (< ಕೊಡು$_1$)]

**ರವಕುಳ, ರೌಕುಳ** (ನಾ). ೧. ಹಾಹಾಕಾರ ; ಆಕ್ರಂದನ ; ಬೊಬ್ಬೆ : ರವಕುಳವ ನಾನೇನ ಹೇಳುವೆನವನಿಪತಿಯಾ ಕರ್ಣ ಮೊದಲಾದವರ ರಾಣೀವಾಸ ಬಹಳಾಕ್ರಂದನಧ್ವನಿಯ (ಉದ್ಯೋ. ೧-೬). **ರೌಕುಳ** : ೨. ಅವ್ಯವಸ್ಥೆ : ಚೆಲ್ಲಾಪಿಲ್ಲಿ: ಬಲುಸರಿಯ ನಾರಾಚಜಾಳದ ಮಳೆಯು ನೆತ್ತರ ಹೊನಲುಗಳ ರೌಕುಳದ ಮಳೆಗಾಲದಲಿ ಹೆಚ್ಚಿತು ಭಟರ ಶೌರ್ಯಾಶಿವಿ (ಕುಮಾದ್ರೋ. ೦೩-೨೯) ; ದಿಂಡುಗೆಡೆದುದು ನೆಲಕೆ ರಕ್ಕಸದಿಂಡೆಯನ ರೌಕುಳದ ರಕುತದ ಮುಂಡ (ತೊರರಾ. ೦-೧೧-೮೪). ೩. ಅತಿಶಯ ; ಆಧಿಕ್ಯ : ಜೋಲ್ವೆ ಖಡಗಳ ಮುಂಡಗಳ ಮುರಿಮೂಳೆವಿಂಡುಗಳ ಪೊಸಬಗೆಯ ಜೊಂಡುಗಳ ರೌಕುಳಂ ಕಂಗೆಸೆದುದು (ಕಂಕ. ೨೬-೦೯). [←ಮರಾ. ರವಖಳ]

**ರವಕೆ** ' ಱವಿಕೆ ' ನೋ.

**ರವಣ$_1$** ' ರಪಣ ' ನೋ.

**ರವಣ$_2$** (ಗು). ೧. ಅಳುವ ; ರೋದಿಸುವ. ೨. ಹಾಸ್ಯಕರವಾದ ; ವಿನೋದಕರವಾದ. ೩. ಚಂಚಲವಾದ; ಅಸ್ಥಿರವಾದ. ೪. ಸುಡುವ; ಚುರುಕಾದ. (ನಾ). ೫. ಕೋಗಿಲೆ. ೬. ಒಂಟೆ : "ದಾಸೇರಕಃ . . . ಮಯಃ, ರವಣಃ, ಕರಭಃ, ಶೃಂಖಳಕಃ—ಈ ೭ ಒಟ್ಟೆ"(ಕರಾಯು.೪೬-೦೨೩). [ಸಂ.]

**ರವಣೆ** ' ರವಳಿ ' ನೋ.

**ರವಣೆ** (ನಾ). ಧ್ವನಿ ; ನಾದ : ವಿವಿಧವೀಣಾವಾದ್ಯಕೋಮಲರವದ ಮಧುರಮೃದಂಗಗತಿಗಳ ರವಣೆಗಳ . . . ಮೇಳವು ಮುತ್ತಿ ಮುಸುಕಿತು (ಕುಮಾ. ೦೨-೦೯) ; ಮೇಲುವಾದ್ಯದ ರವಣೆ ನಿಂದತ್ತು (ರಾಮಾಶಂ. ೨-೪-೪೩). [ಸಂ. ರವಣ]

**ರವದಿ** ' ರವದೆ ' ನೋ.

**ರವದೆ, ರವದಿ** (ನಾ). (ಉಕ) ಜೋಳ ಮುಂತಾದುವುಗಳ ಒಣಗಿದ ಗರಿ ; ಸೊಪ್ಪೆ : ಬರುಗಾಳಿಗೆ ಸಿಕ್ಕಿದ ರವದೆಯು ಮೇಲಕ್ಕೆ ಹಾರುವಂತೆ (ಶ್ರೀರಾಕ. ೩೦) ; ಗಾಳಿಗೆ ಹೊಲದಲ್ಲಿಯ ರವದೆ ಸಪ್ಪಳ ಮಾಡಿತು (ಕಹುಗೋ. ೫೭). **ರವದಿ** : ಅವನಿಯೊಳು ಭಿಕ್ಷುಕಂ ರವದಿಗಿಂ ಬಲು ಹಗುರು (ಚುಲ್ಲಿಕ. ೯-೩) ; ರವದಿಯನ್ನೆತ್ತಿ ತುಟಿಚಚ್ಚಿ ಕೂದಿದೆನು ನಾ (ಹಣೆಗ. ೬೬-೦೬); ದುರ್ಘಟಪರಿಸ್ಥಿತಿಗೆ ಸಿಕ್ಕ ರವದಿಯಂತ ಹಾರಾಡುವುದು ಜಯಂತನ ಸ್ಥಿತಿಯಾಗಿದೆ (ಜಯಂತ. ೫೪೯). [ ? ]

**ರವದೋಱು** (ಕ್ರಿ). ಧ್ವನಿ ಮಾಡು : ಹೇಳು : ದಿಸಾರಾಜಸನ್ನಿಧಿಯಾಪ ರಾಜನೆಯ್ತಂದನವಧಾನ ಸ್ವಾಮಿ ಪರಾಕು . . . ಎಂದು ರವದೋಱಿದರು ವೇತ್ರಧರರು (ಶಬರ. ೩೮-೩೦). [ರವ + ತೋಱು]

**ರವನಿಸು** (ಕ್ರಿ). (ಜರಡಿಯಂತೆ) ತೂತಾಗು ; ರಂಧ್ರಗಳಿಂದ ತುಂಬು : ದಿವಿಜರಿಪುಗಳ ಬಾಣವೃಷ್ಟಿಗೆ ದಿವಿಜನಿಕರವಹಾಸ್ತ್ರತತಿಯಲಿ ರವನಿಸಿತು ರವಿಮಧ್ಯ (ಕಭಾಗ. ೬-೧೦-೦೮).

[ರವನ್ನ (ಜ← ಮರಾ. ರವಳ) + — ಇಸು]

**ರವರವ** (ಗು). ಭಯಂಕರವಾದ ; ಘೋರವಾದ : ಈ ಧರ್ಮ್ಮವ ತೊಡದವ ರವರವನರಕದ ಕಡಲೊಳ್ ಕೆಡದವ (ಎಕ. VII. ಶಿಕಪೂ. ೬೯-೨೯; 1320). [<ಪ್ರಾ. ರಉರವ. / ಸಂ. ರೌರವ]

**ರವಸ** (ನಾ). ಆರ್ಭಟ : ರಭಸ: ಹೊಯಿಂದ ಭೇರಿಯ ನಾದ ಸಾಗಿಸ್ಸಲ್ಲಿಗೆ ಆದನಾರು ಬಲ್ಲರು ಮೇಧಿ ರವಸವ (ಜೈಮಿನಿ. ೨೫೦-೮೦೬). ಧರೆ ಧಸಾವ ರ್ಘೋಂಕರಿಸೆ ರವಸಙ ದ್ರುಹಿಣಮಂಡಲವನು ದಿಕ್ತಟವನಲ್ಲರಿಯ ಪೂಡಿದರು ರಥವೆರಡ ಯುಕ್ತಿಯಿಂ ಗರುಡ ಹನುಮಂತರಂ ಸಿಂಧಕವನೆತ್ತಿದರು ಜೋಡಿಸಿದರೇರಿದರು ರಥವ ಪರಿಸಿದರಿವರು ಪಾಂಡವನಕ (ಸುರಂಗ. ೦೬-೨೭).

[< ಸಂ. ರಭಸ]

**ರವಸಂಗತಿ** (ನಾ). [ಸಂಗೀತ] ಸಪ್ತಸ್ವರಗಳ ಸಪ್ತಅವಸ್ಥೆಗಳಲ್ಲಿ ಒಂದು : ಸರಿಗಮಪಧನಿಯೆಂಬ ಸಪ್ತಸ್ವರಪ್ರಕೃತಿಗಳಿಂ ಅಂಕುರಸ್ಥಾಯಿ . . . ರವಸಂಗತಿ . . . ಮುಕ್ತಾಯಗಳೆಂಬ ಸಪ್ತಾವಸ್ಥೆಗಳಲ್ಲಿಯುಂ (ಅಜಿತ. ೨೬೩). [ಸಂ.]

**ರವಳಿ**, ರವಣೆ (ನಾ). ೧.(ವಾದ್ಯ ಮುಂತಾದುವುಗಳ) ಧ್ವನಿ; ಘೋಷ; ಶಬ್ದ : ಪೊಯ್ಯೆಕ್ಕವದ್ದಳೆಯ ದನಿಯುಂ ಉದ್ದುವ ಜುಂಜಿಯ ರವಮುಂ ಬಾರಿಪ ಜಂಕರಮುಂ ರವಳಿಯುಂ ನೆರವೆ (ಅರ್ಜುನಪು. ೮-೭೫ ವ); ಆ ಪ್ರಹಸ್ತನು . . . ಎಱಗಿದನು ರವಿತನುಜ ಪ್ರಭಂಜನಸೂನುಮುಖ್ಯಮಹಾಪ್ರಚಂಡರ ಬಳಿಗಳಲಿ ಬಲುರವದ ರವಳಿಯಲಿ (ತೊರವೆ. ೬-೦೯-೯೩) ; ಕೋಟಿ ಖುರಪುಟ ರವಳಿಯಾಟ ಕೇಳುತಿದೆ (ಬ್ರಹ್ಮೋತ್ತ. ೬೮-೧೯). ೨. ಒಂದು ಬಗೆಯ ರಣವಾದ್ಯ : ನರಸಾ ಬಹುಬಲಸಹಿತಲಾದೈತರಲು ರಭಸದ ರವಳಿಯಲಿ ಮಿಗೆಯುರವಣಿಸಿ ಹಯ ನೇಱಿತಂದು ತ್ರಿಗರ್ತದೇಶವನು (ಅಶ್ವಮೇ. ೩-೬೬) ; ಯುದ್ಧಶಿಬಿರಗಳಲ್ಲಿ ರವಳಿ ಎಂಬ ವಾದ್ಯವನ್ನು ಘೋಷಿಸುತ್ತಿದ್ದರು (ಕರ್ನಾ. ೨೬೯). ರವಣೆ : ೧. ಭೋರೆಂಬ ನಿಸ್ಸಾಳ ರವಣೆಯುಂ (ಪಂಪ. ೨೬-೨೩). ೩. ಅಬ್ಬರ ; ರೀವಿ : ಪ್ರತಿಶರಂಗಳಂ ಮಿಗೆ ಪೂಡಿ ರವಣೆಯೊಳ್ ರಾಮನೊಡನಿಂತೆಂದಳು (ಪಂಪ. ೪೦-೦).

**ರವಳಿಘೋಷಿಸು** = ರವಳಿ ಎಂಬ ರಣವಾದ್ಯವನ್ನು ಮೊಳಗಿಸಿ ಯುದ್ಧಕ್ಕೆ ಸೂಚನೆಯನ್ನು ಕೊಡು : ಆಗಳಿರ್ಗುಂ ಬೀಡುಗಳೊಳಂ ಭೋರೆಂದಾರ್ದು ರವಳಿಘೋಷಿಸಿ ಕೊಳ್ಳ ವೀಸಿದಾಗಳ್ (ಶಂಕರ. ೦೦-೩೩ ವ); ಸುಭಟಾಲಾಪಮನಾಲಿಸುವ ರವಳಿಘೋಷಿಸುವ ದಂದುಗದಿನಂದಿನಿರುಳಂ ಕಳೆಯೆ (ಶಂಕರ. ೦೩-೦೦ ವ) ; ದಳ್ಳಿಸಿದತ್ತೊ ವೀರರಸವಾರಿಧಿ ವಾತ ಮಹಾಪ್ರಘಾತದಿಂ ನಿಲ್ಲದೆನಿಪ್ಪಿನಿಂ ರವಳಿಘೋಷಿಸೆ ಭೈರವಮಾದುದಾ ರಣಂ (ಶಿವಪು. ೦೦-೦೨೩). [< ಸಂ. ರವ(?)/. ತೆಲು. ರವಳಿ, ರವಲಿ, ರವಾಳಿ]

**ರವಳಿಗೆ** (ನಾ). ಬಿದಿರಿನಿಂದ ಮಾಡಿದ ಬುಟ್ಟಿ : "ವಿದಲ— ರವಳಿಗೆ" (ಗಂಗಾಪು. ೨೮೯). [?./ಮರಾ, ರವಳೀ, ರೋವಳೀ]

**ರವಾನಿಸು** (ಕ್ರಿ) (ಮುಖ್ಯವಾಗಿ ಸರಕನ್ನು) ಸಾಗಿಸು ; ಕಳಿಸು : ಮಿಕ್ಕಿದ ಸರಕುಗಳನ್ನು ನಾವು ಇತರ ಕೇಂದ್ರಗಳಿಗೆ ರವಾನಿಸುತ್ತೇವೆ (ಕಾಂಡು. ೦೦೦) ; ಘಾರನುಗಳು ತಯಾರ್ಮಾಡಿ ರವಾನಿಸಬೇಕು (ಗ್ರಾಮ. ೨) ; ಈತ ತನ್ನ ದಿವ್ಯಪ್ರೇಮಕ್ಕೆ ಕಟ್ಟುಬಿದ್ದು, ತಾನು ಕೈಹಿಡಿದ ವಳನ್ನು ಊರಿಗೆ ರವಾನಿಸಿದ (ಪುಣ್ಯ. ೦೩). [ರವಾನೆ + — ಇಸು]

**ರವಾನೆ** (ನಾ). ೧. (ವಸ್ತು ಮುಂತಾದುವನ್ನು) ಕಳುಹಿಸುವಿಕೆ : ಸಾಗಣೆ : ಮುಂದಕ ರವಾನೆ ಮಾಡಿ ಕಳುಹಿಸಿ ಕೊಡಲುಳವರು (ಪ್ಯಾಲ. ೨೯೩೨. ೦೯-೨೬ ; 1704 ?); ಕಿಲ್ಲೇಕ ಹೋಗಿ ಬದ್ದರೆಂದರೆ ಸ್ವಾಧೀನಕ ಬರೋದಿಲ್ಲವೆಂದು ತಾಕೀದು ಮಾಡಿ ಆ ಕ್ಷಣವೇ ರವಾನೆ ಮಾಡಿದರು (ಮದಕ. ೬೨-೦೦) ; ಪ್ರಾಣಗಳ ರವಾನೆಗಾಗಿಯೇ . . . ಬೇರೊಂದು ಬಂಡಿಯನ್ನು ಲಗತ್ತಿಸಬೇಕು (ಹಸುರು. ೨೨೬). ೨. ಅಪ್ಪಣೆಚೀಟಿ ; ರಹದಾರಿ : (?).

**ರವಾನೆ ಆಗು, ರವಾನೆಯಾಗು** = (ವಸ್ತು ಮುಂತಾದುವು) ಕಳುಹಿಸಲ್ಪಡು: ಸಾಗಣೆಯಾಗು: ದೊಡ್ಡಮನುಷ್ಯರಿಗೆಲ್ಲರಿಗೂ ಅಚ್ಚು ಹಾಕಿದ ಲಗ್ನಪತ್ರಿಕೆಗಳು ಕ್ರಮವಾಗಿ ರವಾನೆ ಆದುವು (ಮುಹಾರಂ. II. ೦೬೩) ; ಪ್ರಪಂಚದ ಎಲ್ಲ ಭಾಗಗಳಿಗೂ ಚಿನ್ನ ಮತ್ತು ಸಂಬಾರದ ವಸ್ತುಗಳು ರವಾನೆಯಾಗುತ್ತವೆ (ಕೃಷಿ. II. ೦೯).

[ ← ಪಾರ. ರವಾನಹ್ ; ಹಿಂ. ಮರಾ. ರವಾನಾ ]

**ರವಾನೆದಾರ** (ನಾ). ಸರಕುಗಳನ್ನು ಕಳುಹಿಸುವವನು ; ಸಾಗಣೆದಾರ: ಸರಕನ್ನು ರವಾನಿಸುವವನು ; ರವಾನೆದಾರ (Consignor. ೩೮೪೦).

[ ರವಾನೆ + — ದಾರ ]

**ರವಾಬು** 'ರಬಾಬು' ನೋ.

**ರವಾಳವಳ** (ನಾ). ಅಕ್ಕಸಾಲಿಗ (?) : ವಂಶಿಗಂಗೆ ಮತ್ತರುಂ ೧೨ ರವಾಳ ವಳ ಸಿಂಗಯ್ಯಂಗೆ ಮತ್ತರುಂ ೧೫ ಬರಿಯ ರವಾಳ[ವಳ](ಎಕ. XV. ೬೨-೨೦; 1064). [ ?./ಮರಾ. ರವಾಳೆ = ಅಕ್ಕಸಾಲಿಗನ ಒಂದು ಉಪಕರಣ ]

**ರವಿ** (ನಾ) ೧. ನೇಸರು ; ಸೂರ್ಯ : "ಆದಿತ್ಯಃ . . . ರವಿಃ, ಮಿಹಿರಃ . . . ತ್ರಯೀತನುಃ—ಈ ೪೭ ಆದಿತ್ಯನ ಪೆಸರ್" (ಕಲಾಯು. ೬-೩೩) : ರವಿಕಿರಣಾಳಿಗಳ್ ಧ್ವಜಪಟಾಳಿಯ ತಿಂತಿಣಿಯಿಂದಮರ್ಚಲಾಱವೆ ರವಿವಾಜಿಗಳ್ ನೆಗೆದ ಪಾಂಸುಗಳಿಂ ದೆಸೆಗೆಟ್ಟು ಪೋಗಲಾಱವೆ ರವಿಬಿಂಬ ಮಂದೆಸೆಯಲಾಱದೆ ಪೆಂಪಿನ ತಿಣ್ಣನಾಂತ ಕೌರವಬಳದಂತು ಮೇರೆ ಪವಣ್ (ಶಂಕರ. ೦೨-೩೦) ; ರವಿಯಾಕಾಶಕೆ ಭೂಷಣಂ ರಜನಿಗಾ ಚಂದ್ರಂ ಮಹಾಭೂಷಣಂ (ಸೋಮೇಶ. ೩) ; ರವಿ ಕಾಣದ್ದನ್ನು ಕವಿ ಕಂಡ (ಗಾದೆ). ೨. ಪರ್ವತ ; ಬೆಟ್ಟ : "ಗಿರಿಯೊಳರ್ಕನೊಳು ಪೋಕ್ತದಿಂ ರವಿ" (ಶಂಗರಾ. ೦೯೯-೨೩). ೩. ಎಕ್ಕದ ಗಿಡ : 'ರವಿದುಗ್ಧ' ಪರಾ. ೪. ಒಂದು ಬಗೆಯ ದಿವ್ಯ—ಉಗ್ರಪರೀಕ್ಷೆ (?) : ಕೊಪ ರವಿ ತಂಡುಲವಗ್ನಿ ತಪ್ತಮಾಷಂ ಜಲವಿಷದೆಳಸಪ್ತದಿವ್ಯಮುಂ ವರ್ತಿಸುಗುಂ (ಸೌತಇ. IX-i. ೦೩೩-೬೯; 1083) ; 'ಕೊಪ' (ಬಹುಶಃ 'ಕೋಶ' ಇರಬೇಕು), ರವಿ, ತಂಡುಲ, ಅಗ್ನಿ, ತಪ್ತಮಾಷ, ಜಲ, ವಿಷ—ಇವೇ ಆ ಸಪ್ತದಿವ್ಯಗಳು (ಕರ್ನಾ. ೩೯೭). 'ದಿಬ್ಯ' ಪರಾ. ೫. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ : "ರವಿಯೆನಲು ಹನ್ನೆರಡು" (ಶಂಗರಾ. ೦೦೯-೮) ; ಪುರನಯನ ರವಿ ರಂಧ್ರಯುಗವ ಗೆಲಿದಾ ಮಹಿಮ (ಶ್ರೀಕರಾ. ೦೩-೦). ೬. [ಛಂದ]ಎರಡು ಲಘುಗಳ ಮಧ್ಯೆ ಒಂದು ಗುರುವು ಇರುವ ಒಂದು ಗಣದ ಹೆಸರು ; ಜಗಣ (ᑌ – ᑌ) : "ಗುರು ಮಧ್ಯದೊಳ್ ತೋಱೆ ರವಿಯಕ್ಕು" (ಶಂಗರಾ. ೦೦೬-೨೦) ; ಧರಣಿ ಜಲಾಗ್ನಿ ಮರು ದ್ವ್ಯೋಮ ರವಿ ಶಶಾಂಕೇಂದ್ರನಿಲಯಮಿವು ಗಣದ ಪೆಸರ್ (ಛಂದೋಂಬು. ೦-೩೭). ೭. ಸಂಪತ್ತು ; ಐಶ್ವರ್ಯ (?) : ಕೊತರ್ಪ ಭೂವನಿತೆಗಿನ ಕುಲದ ನೃಪನೊಸಗೆಗಟ್ಟಿಸಿದ ಜೀವನಿಧಿವಸನದೊಡನೆಸೆವ ರವಿಯುಂಗುರವೊ . . . ವಿಚಾರಿಸೆ ಬೆಡಂಗಮದರ್ಪ ಕಣ್ಗೆಡ್ಡಮಾಯ್ತಾವರಿಸೆ ತೇಜವಗ್ಗದ ಮೇರು (ಕಾದಂಬ. ೦-೨೯). [ಸಂ.]

**ರವಿಕಯ್ಯ** (ನಾ). ಒಬ್ಬಾತನ ಹೆಸರು: ಸೂರ್ಯ್ಯಗ್ರಹಣದನ್ದು ಶ್ರೀಪೂರದು ರವಿಕಯ್ಯ ಮೊದಲಾಗಿ ಯಿಬ್ಬೊಪ್ಪ(ರ್ವ್ವ)ರುಂ ಮಹಾಜನದ ಕಾಲಂ

ಕಟ್ಟಿ (ಇಳ. XII, ೨೦೯-೨೦; 814). [ಈದು ಸಂಸ್ಕೃತದ 'ರವಿಕಾರ್ಯ' ಶಬ್ದದಿಂದ ಬಂದಿರಬಹುದು]

**ರವಿಕರಡಾಣ ?** (ನಾ). (?) : ಪುಷ್ಪ ಮೊದಲಾದ ನಂದನವನ ತೋಟಕೆ ಸಮರ್ಪಿಸಿದ ಹೊಲ ಗದೆ ತೋಟ ರವಿಕರಡಾಣ ಕಲ್ಲಸ್ಥಳ (ಎಕ. IX (S), ನೆಂಮಂ. ೪೦-೬; 1532). [ ? ]

**ರವಿಕಳಂಬ** (ನಾ). ಸೂರ್ಯನು ಅಭಿಮಾನಿದೇವತೆಯಾಗಿರುವ ಒಂದು ಬಗೆಯ ಬಾಣ, – ಮಂತ್ರಾಸ್ತ್ರ : ಫಲುಗುಣಂ ತಿಮಿರಸಾಯಕವನು ಸಳೆದು ಮರಾಳಧ್ವಜನ ಸುತಂ ತೆಗೆದನುಜ್ಜ್ವಲರವಿಕಳಂಬಮಂ (ಕೃಬಾಭಾ. ೧೪-೧೫). [ಸಂ. ರವಿಕಲಂಬ]

**ರವಿಕಾಂತ** (ನಾ). ಬಿಸಿಲಿಗೆ ಕಿಡಿ ಸೂಸುವುದೆಂದು ನಂಬಲಾದ ಒಂದು ಬಗೆಯ ಶಿಲೆ ; ಸೂರ್ಯಕಾಂತ : ''ಬಿಸುಗಲ್ಲೆನೆ ರವಿಕಾಂತಂ'' (ಕಕಾಮ. ೦೦೦): ಇಂತಿಂತು ಮೆಱೆಯುತಿರ್ಪವಸಂತಂ ಘನತೇಜದಿಂದೆ . . . ರವಿಕಾಂತಮುಮಸ್ಕಾಂತಮಿಂದುಕಾಂತಂ ನಗದೊಳ್ (ಗಂಕ. ೦-೫೬); ಪರತೇಜಂ ತಗುಳ್ದೊಡೆ ಸಲೆ ತೋರ್ಪರದಂ ತಾಂ ಸ್ಪರ್ಶಾನುಕೂಲ ರವಿಕಾಂತಂಬೊಲ್ (ಶಾಕುಂತ. ೨೪-೯೨). [ಸಂ.]

**ರವಿಕಾಂತೋಪಲ** (ನಾ). = ರವಿಕಾಂತ : ರವಿರಶ್ಮಿಗಳಿಂ ಪುಟ್ಟಿಸಿ ರವಿಕಾಂತೋಪಲಕೃಶಾನುವಂ ಕೋಟಿಗ್ಗವಂ ದಿವಸದವಸಾನಸಮಯದೊಳವನಂಜಿಸುವೊಂದುಪಾಯಮಂ ಪ್ರಜೆಗಿತ್ತಂ (ಶಂರಾಮ. ೦-೬೪). [ಸಂ.]

**ರವಿಕಾಳಿ** (ನಾ). ಒಬ್ಬಾತನ ಹೆಸರು: ಮಾಡಿಸಿದೊಂ ರವಿಕಾಳಿ ಬೆಸಸೆ ಮಣಿನಾಗಂ (ಎಪ. XIII, ೦೬೯-೬; 888). [ ? ]

**ರವಿಕೆ** ' ಱವಿಕೆ ' ನೋ.

**ರವಿಚಂದ್ರಯ್ಯ** (ನಾ). ಒಬ್ಬಾತನ ಹೆಸರು: ರವಿಚನ್ದ್ರಯ್ಯನೆಲ್ಲಜವಳ್ಳಿಯೊಳ್ಮಸವದಿತ್ಯರ್ಕರ್ಗಳಿಂ ಪ್ರತಿಷ್ಠೆಗೆಯ್ದಂ (ಎಕ. VIII, ತೀರ್ಥಹ. ೨೭-೮; ೯೨೯). [ರವಿ + ಚಂದ್ರ$_2$ + ಅಯ್ಯ$_{61}$]

**ರವಿಜ** (ನಾ). ೧. ಸೂರ್ಯನ ಮಗ. ೨. ಕರ್ಣ: ''ರವಿಜನೆನೆ ಕರ್ಣಂ'' (ಮಂಗರಾ. ೬೮-೨) ; ರವಿಜ ಗುರುಸುತ ಶಲ್ಯ ಕಲಶೋದ್ಭವರು . . . ಅವನಿಪಾಲನ ಕಂಡರು (ಕುವ್ಯಾ.ಭೀ.೦-೨). ೩. ಸುಗ್ರೀವ: ತ್ರಿದಶಾರಿತು ರವಿಜನಘಟನು ಹೊಗಳಿತುಭುಜಬಲ (ತೊರಾ. ೪೭-೨೯). ೪. ಶನಿ : ರವಿಜನನುಕ್ರಮದೆ ಗುಣಿತೇಷ್ಟವಾರದಿಂ . . . ಸವನಿಸುಗುಂ ಸಂದ ಗು(ಕು)ಳಿಕನುದಯಂ ನಿರುತಂ (ಲೋಕೋಪ. ೦-೨೮) ; ರವಿಜಂ [ಪಾಠಾಂ. ಇನಜಂ] ವೃಶ್ಚಿಕಸಂಸ್ಥನಾಗೆ ಚಪಲಾಂಗಂ ನಿರ್ದಯಂ (ಜಾತಕ. ೦೬-೪೪). ೫. ವಾಲಿ. ೬. ಯಮ. [ಸಂ.]

**ರವಿದುಗ್ಧ** (ನಾ). ಎಕ್ಕದ ಗಿಡದ ಹಾಲು : ರವಿದುಗ್ಧಂ ಪಾರಿವದೆಚ್ಚ ಮುಂದುರದ ವಿಷ್ಟಿ ತಗರ ಕೋಡಿನ ಮಷಿಯೆಂಬಿವನೊರಸಿ ಕಾಸಿ ನೀರೂಡುವುದುಱಿಯಂ ತೈಲತಕ್ರದೊಳ್ ಪವಿಯುಕ್ತ್ಯಂ '(ಲೋಕೋಪ. ೫-೯೦). [ಸಂ.]

**ರವಿನಂದನ** (ನಾ). ೧. ಸೂರ್ಯನ ಮಗ. ೨. ಯಮ : ಧನಪತಿಯ ಸಿರಿ . . . ರವಿನಂದನನ ನಡವಳಿ ಧರೆಯ ಸ್ಥಿರಣೆಯಿನಿತು ದಶರಥ ಸಾರ್ವಭೌಮಂಗಲ್ಲದಿಲ್ಲ (ತೊರಾ. ೦-೪-೨೬). ೩. ಸುಗ್ರೀವ. ೪. ಕರ್ಣ: ರವಿನಂದನನು ಗೆಲಿದನು ಧರ್ಮನಂದನನ (ಕುವ್ಯಾ.ಕ. ೦೦ ಸೂಚನೆ). [ಸಂ.]

**ರವಿಪತ್ರ** (ನಾ). ಒಂದು ಬಗೆಯ ಸಸ್ಯ ; ಎಕ್ಕದ ಗಿಡ: '' ರುದ್ರಾ– ರುದ್ರಜಡೆ. ರವಿಪತ್ರ, ಕಾಡ ಹಾಗಲ'' (೬ಕಂ. ೧೪೯). [ಸಂ.]

**ರವಿಪ್ರಭೆ** (ನಾ). [ಛಂದ] ಒಂದು ಅರ್ಧಸಮವೃತ್ತದ ಹೆಸರು: ಅಮರಸರೋರುಹಮಿತ್ರಗಣಂ ಶರಸಂಖ್ಯೆಯ ಮುಂದೆ ಲ ಗಂ ಸೋಮಗಣಂಗಳೆ ನಾಲ್ಕೆಡೆಯೊಳ್ ಬರೆ . . . ನಾಮಮಿದಕ್ಕೆ ರವಿಪ್ರಭೆ (ಛಂದೋಂಬು. ೪. ೩-೨೩೯). [ಸಂ. ರವಿಪ್ರಭಾ]

**ರವಿಬಿಂಬ** (ನಾ). ಸೂರ್ಯನ ಬಿಂಬ ; ಇನಮಂಡಲ : ರವಿಬಿಂಬದ್ಯುತಿ ಮೂರ್ತಿವೆತ್ತ ತೆಱದಿಂ ತೇಜೋಮಯಂ ... ಯುವರಾಜಂ (ವಳಕಂ. ೨೬೦). [ಸಂ.]

**ರವಿಭಕ್ತ** (ನಾ). ಒಂದು ಬಗೆಯ ಔಷಧೀಸಸ್ಯ : ಇಂಗುಪಟಲಂ ರವಿಭಕ್ತಸಪೂರ್ವಚಿತ್ರಕಂ ಜೀರಗೆಯುಪ್ಪು ಬೋಟಿತರವಿಂಗುಳಮಾಗುಳಚ (ಬ)ಂಗಳಂ ಯವಕ್ಷಾರಸಮೇತಮಿಕ್ಕುವುದು ವಾಜಿಗೆ ಸರ್ವರುಜಾಪಹಾರಕಂ (ಅಶ್ವಶಾ. ೭-೪೦). [ ? ]

**ರವಿಮಂಡಲ**, ರವಿಮಂಡಳ (ನಾ). = ರವಿಬಿಂಬ : ರವಿಮಂಡಲಂ ಪ್ರತೀಚೀಯುವತೀಕರ್ಣಾವತಂಸರಕ್ತೋತ್ಪಲದಂತೆಪೊಲ್ದಿರೆ (ಕಾದಂಪೂ. ೫೦೦) ; ಪುಂಡರೀಕಾಕ್ಷನ ಉತ್ತಮಾಂಗದಲಿ ರವಿಮಂಡಲಗಳ ಪ್ರಭೆಯ ಮಸಳಿಸುತಿರೆ ಮುಕುಟ (ತುರಂಗ. ಭಾ. ೪-೨೦-೨). **ರವಿಮಂಡಳ** : ರವಿಮಂಡಳಮುಪನೀತಳಕವತರಿಸಿತ್ತೆಂಬ ತೆಱದಿನಂಬರದಿಂದಂ ನವರತ್ನಖಚಿತಮೆಂದೆನಿಸುವ ದಿವ್ಯವಿಮಾನವಿರದೆ ಬಂದುದು (ತ್ರಿಷ. ೭-೦೦೬). [ಸಂ.]

**ರವಿಮಂಡಳ** ' ರವಿಮಂಡಲ ' ನೋ.

**ರವಿಮಾರ್ಗಣ** (ನಾ). = ರವಿಕಳಂಬ : ಸೆಳೆದು ಮೂಡಿಗೆಯಿಂದ ರವಿಕುಲತಿಲಕ ಹೂಡಿದನುಷ್ಣಕಿರಣಾಕಲಿತರವಿಮಾರ್ಗಣವ (ತೊರಾ. ೬-೫೦-೨೦). [ಸಂ.]

**ರವಿವಾರ** (ನಾ). ಆದಿತ್ಯವಾರ; ಭಾನುವಾರ: ರವಿವಾರಮಾದಿಯಾಗೆಯ್ದೆ ವಿಶಾಖಿಪ್ರಮುಖತಾರೆಗಳ್ ನಾಲ್ಕುಂ ಸಂಘವಿಸಿದೊಡುತ್ಪಾತಂ ಮೃತ್ಯುವಧೆಯುಮುಮೃತಾಖ್ಯಮೆಂಬಿವಕ್ಕುಂ ಯೋಗಂ (ಲೋಕೋಪ.೦-೦೬). [ಸಂ.]

**ರವಿಸಿದ್ಧಾಂತ** (ನಾ). [ಜ್ಯೋತಿ] ಸೌರಗಣನೆಯ ಮೂಲಕ ಗುಣಿಸಿ ಹೇಳುವ ಜ್ಯೋತಿಷ್ಯ ; ಸೂರ್ಯಸಿದ್ಧಾಂತ : ರವಿಸಿದ್ಧಾಂತಪಾಠಕರಷ್ಟಭಾಷಾಕವಿಗಮಕಿಗಳು ತಾರ್ಕಿಕರು ವಿವಿಧವಿದ್ವತ್ಸಭೆ ನೆಱೆವುದು (ಮೋಹತ. ೪-೯೦). [ಸಂ.]

**ರವಿಸು** (ಕ್ರಿ). ಧ್ವನಿಮಾಡು : ದನಿಗೈವ ಪಾರಿವದಂತಿರೆ ರವಿಸುವಕಂಠದೊಳ್ (ಕೃಬಾಭಾ. ೦೫-೯೬). [ರವ + — ಇಸು$_3$]

**ರವಿಸುತ** (ನಾ). ೧. ಸೂರ್ಯನ ಮಗ. ೨. ಕರ್ಣ : ಮುಳಿದಿರ್ಪೆಯೊ ಮೋಹ್ ಮಱುವಾತುಗುಡದೆ ರವಿಸುತ ಮಱುಂದಿರ್ದಪೆಯೊ (ಗದಾಯು. ೫-೦೫) ; ರವಿಸುತನೊಂದು ನನ್ನಿ ಪವಮಾನತನೂಜನದೊಂದು ಬಲ್ಪು (ಎಕ. IV, ನಾಗಮಂ. ೯೭-೪೪ ; 1199) ; ನೀಲಧ್ವಜನನುಱೆ ಘಾತಿಸಿ ರವಿಸುತನ ಸೂನುವಂ ಪರಿಘವಿಸಿ (ಕೃಬಾಭಾ. ೦೯-೫). ೩. ಸುಗ್ರೀವ : ರವಿಸುತಂ ನಮ್ಮೆರೆಯನಟ್ಟಿದನ್ ರವಿಕುಲದ ನಿಮ್ಮ ಕೆಳೆಯಂ ಬಯಸಿಬೇಡಿ! (ಶ್ರೀರಾಮ. ೨೮೯-೦೦೯). ೪. ಶನಿ. ೫. ಯಮ. [ಸಂ.]

**ರವಿಸುತೆ** (ನಾ). ಸೂರ್ಯನ ಮಗಳು ; ಯಮುನೆ : ವರದಾಸಿಂಧು ಸರಸ್ವತೀರವಿಸುತಾಗೋದಾವರೀ . . . ಗಂಗಾಸಲಿಲಂಗಳಂ ಹಿಮಕರಸ್ವಚ್ಛಂಗಳಂ ತಂದರ್ (ಶಂಕಕಂ. ೨೨೪-೦೪). [ಸಂ. ರವಿಸುತಾ]

**ರವೆ** (ನಾ). ೧. ಗೋಧಿ, ಅಕ್ಕಿ ಮೊದಲಾದುವುಗಳ ಸಣ್ಣ ನುಚ್ಚು,– ತರಿ ; ಸೋಜಿ : ತುಪ್ಪದೊಳು ಹುರಿದು ಪಲತೆಱನಾಗಿ ಮಾಡಿಕೊಂಡ ದಱೊಂದಕೆ ಒಡೆಯ ರವೆಸಕ್ಕರೆಯನಿಕ್ಕುವುದು (ಸೂಪಶಾ. ೬-೦೫) ; ಸೇವಗೆಯ ಪಾಯ್ಸಕ್ಕೆ ಬೆಲ್ಲ ಮೂಡೆ ಓಕ್ಕೆ ರವೆ ಸ ೩ ಗೆ (ಮೈ.ಆಂ. ೦೯೪೯, ೦೬-೫; 1516). ೨. ಯಾವುದಾದರೂ ವಸ್ತುವಿನ ಸಣ್ಣ ಭಾಗ ; ಪುಡಿ ; ಚೂರು ; ಕಣ : ಪುಡಿಗತ್ತುರಿಯ ರಜದ ರವೆ (ರೇವಣ. ೪-೨೬). ೩. ಬಂದೂಕಿಗೆ ಹಾಕುವ ಚರೆ : ಒಂದು ರವೆಯೂ ಇಲ್ಲದೆ ಹೋಯಿತೆ ? ರವೆ ಇರುವ ತೋಟೆಯನ್ನು ಕೊಡಲೆ ? (ದೇಪಾಶೌ. ೬೦) ; ರವೆ, ಗುಂಡು ಹಾಕ್ಕೊಂಡು ಬಂದು ಅವರನ್ನು ಮೊನಿ ಮಾಡಾಕ ನಂಗೇನು ಹುಚ್ಚೇ ? (ಪುರಿಮ. ೫೬೭).

ರವೆಯಷ್ಟು = ಕೊಂಚ : ತೀರ ಅಲ್ಪ : ನಿನ್ನ ವಿಷಯದಲ್ಲಿ ನನಗೆ ರವೆಯಷ್ಟಾದರೂ ಅನುಮಾನವಿಲ್ಲ (ರಾಜಾ. ೧೪) ; ತಮ್ಮದೇ ಆಳ್ವಿಕೆ ಇಲ್ಲಿ ನೆಲಸಬೇಕು ಎಂಬ ಆಕಾಂಕ್ಷೆ ಪ್ರಭುಗಳವರಿಗೆ ರವೆಯಷ್ಟಾದರೂ ಇಲ್ಲ (ಸವಿ. ೬೯). [ದೇ.॥ ತಮಿ. ಇರವೈ ; ತುಳು. ರವೆ ; ತೆಲು. ರವ, ರವ್ವ./ ಹಿಂ. ಮರಾ. ರವಾ./ಪ್ರಾ. ರಯ./ಸಂ. ರಜಸ್]

**ರವೆಗಾಲು** (ನಾ). ಕುದುರೆಯ ಒಂದು ಬಗೆಯ ನಡಗೆ : ಮಡದ ಸನ್ನೆಗೆ ಕುಣಿದು ರವೆಗಾಲಿಡುತ [ಪಾಠಂ. ತಿರುಗಿತತಿವೇಗದಲಿ] ಜೋಡಣೆಯಿಂದ ಹಯವಡಿಗಡಿಗೆ ಚಿಮ್ಮಿತು ವಾಯುವೇಗದೊಳು (ಸಳಕ. ೬-೫) ; ಉತ್ತಮ ವಾಜಿಯನು ತೊಲಗು ವೇಢೆಯ ರವೆಗಾಲು ಬಂಬೀರಿಯೊಳ್ಗಲಿದೇಜು ಮೆಜುಯುತರ್ತಿಯಲಿ (ಕಂಪಿ. ೨೨-೯೪).

[← ತೆಲು. ರವಗಾಲು, ರವಾಲು]

**ರವೆಯ** (ನಾ). ನವರತ್ನಗಳಲ್ಲಿ ಒಂದು ; ವಜ್ರ: ಆ ನವರತ್ನದ ರವೆಯುದ ಬಂದಿ ವಿರಾಜಿಸುತಿರ್ಪವಲ್ಲಿ ಗಿರಿಜೆಯ ತೋಳೊಳ್ (ಗಿಂಳ. ೩-೮೩); ರವೆಯುದ ತೋಳ ಬಂದಿಯ ಕೊರಳ ತ್ರಿಸರದ ಬೆರಳ ಮುದ್ರಿಕೆಯ . . . ಸಖೀಜನ ಸಂದಣಿಸಿತಲ್ಲಿ (ಕುಮಾ.ರಾ. ೦೩-೩೨); ರಸುಮಿಪ ರವೆಯದ ಕಂಕಣ ಮಂಗಜವೆಸರಂ . . . ತಳೆದು ವಿರಾಜಿಸಿದ್ರುವು ಸುಕುಮಾರಿ ಸುಲೋಚನೆಗೆ (ಜಯಶಾ. ೫-೨೩). [< ರವೆ]

**ರವೆಯಿಡ್ಲಿ** (ನಾ). ರವೆಯಿಂದ ಮಾಡಿದ ಇಡ್ಲಿ : ಬೆಳಗ್ಗೆ ತಿಂಡಿಗೆ ರವೆಯಿಡ್ಲಿ ಮಾಡಿದ್ದೆ (ರೂಢಿ). [ರವೆ + ಇಡ್ಲಿ ( < ಇಡ್ಡಲಿ ) ]

**ರವೆವುಂಡೆ** (ನಾ). ರವೆ ಮತ್ತು ಸಕ್ಕರೆಗಳಿಂದ ತಯಾರಿಸಿದ ಉಂಡೆ : ಏನು ಕೊಡಲಿ ಸಾರ್ . . . ಬೇಸನ್‌ಲಾಡು, ರವೆವುಂಡೆ (ಮಹಾಂ. ೪೬).

[ರವೆ + ಉಂಡೆ]

**ರಶನ** (ನಾ). ೧. ನಡುವಿಗೆ ಧರಿಸುವ ಪಟ್ಟಿ; ಡಾಬು : ದಿವಿಜಸ್ತ್ರೀ ಜಘನಾಭಿರಾಮರಶನಂ ದೇವಾಂಗನಾಪಾಂಗಕೈರವಚಂದ್ರಂ (ಸುಕುಮಾ. ೯-೩೫) : ಕಟಿವಲಯದಿಂ ಪ್ರಧನು ರಶನದಿಂದೆಸೆವಂತೆ, ರಮಣೀಯ ರತ್ನಮಯ ಕಾಂಚನದ ಕಾಂಚಿಯಂ ತೊಟ್ಟು (ಶಬ್ದಾಂಗ. ೦೯-೫೦೫). ೨. ಲಗಾಮು ; ಕಡಿವಾಣ. [ಸಂ. ರಶನಾ]

**ರಶೀತಿ. ರಶೀದಿ. ರಸೀತಿ, ರಸೀದಿ** (ನಾ). (ಹಣ ಮೊದಲಾದುವು) ತಲುಪಿದುದಕ್ಕಾಗಿ ಕೊಡುವ ಚೀಟಿ ; ಪಾವತಿಪತ್ರ; ಸಲ್ಲಿಕೆಚೀಟಿ : ಹಣ ತಲುಪಿದುದಕ್ಕೆ ಸರಕಾರದ ಒಡತಿಯಿಂದ ರಶೀತಿ ಬಂದಿರಲಿಲ್ಲ (ರಂಗವಿ. ೬೬); ರುಜುಹಾಕುವುದಕ್ಕೂ ಕೊಟ್ಟ ಕಂದಾಯದ ರಶೀತಿ ನೋಡುವುದಕ್ಕೂ ಬಂದರೆ ಸಾಕು (ಹುಟ್ಟಿಹ. ೬). **ರಶೀದಿ** : ಸರಕಾರಕ್ಕೆ ತೆಗೆದುಕೊಂಡು ರಶೀದಿಕೊಡುವ ಹಾಗು (ಮೈರಾ. ೦೯೩೯, ೯೨-೦೦೫ ; 1826) ; ಅದನ್ನು ತೆಗೆದುಕೊಂಡು ರಶೀದಿ ಕೊಟ್ಟು (ರಾಕೇಂದ್ರ. ೬೬). **ರಸೀತಿ** : ಒಂದು ತುಂಡು ಚೀಟಿಯನ್ನು ರಸೀತಿಯಾಗಿ ಕೊಟ್ಟರೂ ಸಾಕು (ಪಾಗರ. ೬೯); ನೀವು ರೈತರಿಂದ ಕಂದಾಯ ತಕೊಂಡ್ರೂನೂ ರಸೀತಿ ಕೊಡದೆ . . . ಡಬ್ಬಲ್ ಕಂದಾಯ ವಸೂಲಿ ಮಾಡಿಲ್ಲವಾ ? (ನಮ್ಮ. ೦೫). **ರಸೀದಿ** : ಪಾವತಿಯಾದ ಕೂಡಲೆ ಗ್ರಾಮ ಕೋರ್ಟಿನವರು ಅದಕ್ಕೆ ರಸೀದಿಯನ್ನು ಕೊಡತಕ್ಕದ್ದು (ಗ್ರಾಮಾಳ. ೩೯); ಮನೆಯ ಕರಣಿಕನು ರಸೀದಿಯನ್ನು ತಯಾರಿಸುತ್ತಿದ್ದನು (ಅಮ್ಮ. ೩೭).

[ ← ಪಾರ. ಹಿಂ. ಮರಾ. ರಸೀದ್. / ಇಂ. Receipt]

**ರಶೀದಿ** 'ರಶೀತಿ' ನೋ.

**ರಶ್ಮಿ** (ನಾ). ೧. ಕದಿರು; ಕಿರಣ : " ರೋಚಿಃ . . . ರಶ್ಮಿಃ . . . ಗಾಃ– ಈ ೩೨ ರಶ್ಮಿಗಳ ಪೆಸರ್" (ಹಲಾಯು. ೬-೩೮). ೨. ಕಾಂತಿ ; ಪ್ರಭೆ : ಫಣೀಂದ್ರಾಳಯದಿಂದಮುರ್ಚಿದ ಫಣಾಮಣಿಮಂಗಳರಶ್ಮಿಯೋ (ಕಂಪಿ. ೦-೯೬). ೩. ಕಡಿವಾಣ; ಲಗಾಮು : "ವಲ್ಗಾ, ರಶ್ಮಿಃ, ಕುಶಾ– ಈ ೩ ವಾಗೆ" (ಹಲಾಯು. ೬೩-೨೮೮). ೪. ಹಗ್ಗ; ಪಾಶ; ಕಣ್ಣಿ : " ಯೋಕ್ತ್ರಂ, ರಶ್ಮಿಃ, ಆಬಂಧಃ – ಈ ೩ ಹಗ್ಗಂ " (ಹಲಾಯು. ೯೪-೪೨೦). ೫. ರೆಪ್ಪೆಯ ಕೂದಲು; ಎವೆಗೂದಲು. ೬. ತಿವಿಗೋಲು; ಅಂಕುಶ. ೭. ಚಬಕ ; ಚಾಟಿ. [ಸಂ.]

**ರಶ್ಮಿಕಲಾಪ** (ನಾ). ಒಂದು ಬಗೆಯ ಹಾರ ; ಐವತ್ತುನಾಲ್ಕು ಎಳೆಗಳುಳ್ಳ ಮುತ್ತಿನ ಹಾರ : ವಿಜಯಚ್ಛಂದಹಾರದೇವಚ್ಛಂದಾರ್ಧಹಾರ ರಶ್ಮಿಕಲಾಪಗುಚ್ಛನಕ್ಷತ್ರಮಾಲಾರ್ಧಗುಚ್ಛ . . . ಎಂಬ ಪನ್ನೊಂದು ನಾನಾರತ್ನಸುವರ್ಣಪದಕವಿರಚನಾದಿಭೇದದಿಂ (ಅರಿಷ್ಟ. ೩-೫೪ ವ). [ಸಂ.]

**ರಶ್ಮಿಶಿಕ್ಷ** (ನಾ). ಸೂರ್ಯನ ಕಿರಣಗಳು ಇರುವಾಗ ಮಾಡುವ (ಖಡ್ಗ ಮುಂತಾದ ಯಾವುದಾದರೂ) ಸಾಧನೆಯ ಮುಕ್ತಾಯಕಾಲದ ಶಿಕ್ಷಣ,– ಅಭ್ಯಾಸ : ಸಾಯಂಕಾಲದಲ್ಲಿ ಆರುಘಳಿಗೆ ಉಳ್ಳಂಥಾ ಕಾಲವು ಸಾಧನೆಗೋಸ್ಕರ ನಿರ್ಮಾಣವ ಮಾಡಲ್ಪಟ್ಟಿತು. ಸಾಧನೆಯ ಬಿಡುವ ಕಾಲವು ಸೂರ್ಯಕಿರಣ ಉಳ್ಳಂಥಾದು ರಶ್ಮಿಶಿಕ್ಷ ಯಂಬುದು (ಖಡ್ಗಚಿ. ೫-೫೨). [ಸಂ. ರಶ್ಮಿಶಿಕ್ಷಾ]

**ರಸ** (ನಾ). ೧. ಗಿಡ, ಮರ, ಕಬ್ಬು ಮುಂತಾದುವುಗಳ ದ್ರವ : ಕಬ್ಬಿನ ರಸವೆಟ್ಟಿ ಜಾಗದ ಪೊಸರ್ (ಕುಸ್ಕಿ. ೨-೪೦); ರಸವಟಿತ ದಂಟುಗಳ ಹಸು ಮೇಯಲೊಲ್ಲದು (ಸರ್ವಜ್ಞ. ೦೬೯೯). ೨. ಹೂವು, ಕಾಯಿ, ಹಣ್ಣು ಮುಂತಾದುವುಗಳಲ್ಲಿರುವ ಸಾರ : ದಳಿತ ಜಂಬೂಪಕ್ವಫಲರಸ ಲುಳಿತನವಮಕರಂದಮಾಧುರಿಕೋರ್ಛರನಿಪಾತದಲಿ . . . ಎಸೆದುದು ಗಜಪುರೋದ್ಯಾನ (ಕುಮಾ.ಉ. ೬-೨೬); ಮಾವಿನ ತನಿವಣ್ಣ ರಸದಂತೆ . . . ಮಂಗರಸನೊಪ್ಪುವ ವಾಕ್ಯಗುಂಫನಂ ಭಾವಿಸಿದೊಡೆ (ಸಮ್ಯ. ೦-೦೦). ೩. ದ್ರವರೂಪವಾದ ಪದಾರ್ಥ : ನಾವು ತಿನ್ನುವ ಅನ್ನದ ರಸದಿಂದ ಮಾಂಸ ಹುಟ್ಟುತ್ತದೆ (ಪುಂಡರಿಯ. ೯-೩೨). ೪. ನೀರು ; ಜಲ : ರಸರಸದ ಬಾವಿ ಮನೆಮನೆಗೆ ಬೇಱ (ಕಂಸಶಾ. ೪-೧೦ ಕಗಳ); ಪೊಸಕಲಶಮಾಯತಿಯ ಕರದಲಿರಲದ ಕೊಂಡು ರಸಭರಣಗೈದು ಒಡಿದೈದಿದಂ (ವಂಕಾರಾ. ೨-೨೩-೩೦). ೫. ಗಾಯದಿಂದ ಸುರಿಯುವ ಕೀವು ; ರಸಿಕೆ : (ಉಗುರು ಸುತ್ತಿಗೆ) ಮೆಟಸಿನ ಪುಡಿಯೊಳಗೆರ್ಮೆಯ ತಿಳಿವಾಲಂ ಕಲಸಿ ಬಿಗಿದು ಕಟ್ಟುಗೆ ಬೆರಳಂ ಚಳಿಸಿದ ರಸದಿಂಬುಣ್ಗಳ ನಿಲಿಸದಿರದು (ರೋಗಶೋಕ. ೯-೦೬೯). ೬. ಹಾಲು, ತುಪ್ಪ, ಎಣ್ಣೆ ಮೊದಲಾದ ದ್ರವಪದಾರ್ಥ: 'ರಸಧಾನ್ಯ' ಪರಾ. ೭. ಅಮೃತ ; ಸುಧೆ : ಕೂಡಲ ಸಂಗನ ಶರಣರು ರಸದ ವಾರುಧಿಗಳು ಎಂತಿರ್ದರೇನಯ್ಯಾ (ಬಸವ. ೬೪೦). ೮. ದೇಹದಲ್ಲಿರುವ ಸಪ್ತಧಾತುಗಳಲ್ಲಿ ಒಂದು ; ವೀರ್ಯ ; ರೇತಸ್ಸು. ೯. ವಿಷ ; ನಂಜು: "ಬ್ರಹ್ಮಪುತ್ರಃ . . . ರಸಃ . . . ವಿಷಂ –ಈ ೯ ವಿಷಂ" (ಹಲಾಯು. ೦೦೩-೨೪). 'ರಸದಾನ' ಪರಾ. ೧೦. ಪಾದರಸ; ಪಾರದ : "ಪಾದರಂ ಚಪಲಮೆನೆ ರಸಮೆನಿಕ್ಕು" (ಕುಂಗರಾ. ೯೬-೦೫) ; ಸಂಸಪ್ತಕನಿಕುರುಂಬದೊಳಗೊರ್ವರುಮಂ ಕಿಱವೀಟಲೀಯದೆ ರಸಮಂ ಕೊಲ್ವಂತೆಂತಾನುಂ ಕೊಂದು (ಗಂಕಥಾ. ೧೨-೦೨೦ ವ) ; ಉರಿಗೆ ರಸ ನಿಂದಾಗವೆ ರಸಸಿದ್ಧಿ ಎಂಬೆ (ಪಾಳಿಪಾ. ೧೯-೬೬); ರಸಮಂ ನೀರೆ ಗೆತ್ತು ಮೊಗೆಯೆಲೆನ್ನ ಕರಯುಗಂಗಳ್ ಕೊಟಿತಟದು ಬೀಟಲಿರ್ದುವು (ಜೀವಂಧ. ೪-೯೦ ವ). ೧೧. ರಾಳ ; ಹಗಿನು. ೧೨. ಚಿನ್ನ ಮೊದಲಾದ ಲೋಹ. ೧೩. ರುಚಿ ; ಸವಿ ; ಸ್ವಾದು : ಕಯ್ಪುಯಮ್ಮಾರಂ ರಸಮೆ ಬಾರಿಕುಂ (ಶಾಂತಿಪು. ೬-೭೭) ; ರಸಮಂ ನಾಲಗೆ ಕವಿತಾರಸಮಂ ಕವಿ . . . ಅಱವನು (ಮಲ್ಲಿಪು. ೦-೨೮). ೧೪. ಆನಂದ ; ಸಂತೋಷ ; ಹರ್ಷ : ರಸದ ತೊಱ ಪರಿದುದಮರ್ದಿನ ಪೊಸಸೋನೆಯ ಸುರಿದುದೆಂಬಿನಂ ಪೇಟೋರ್ವಳ್ ಮಸುಮಸೆಯೆ ಪಾಡಿದಳ್ (ಸುಕುಮಾ. ೦೦-೨೩) ; ರಸದ ಮಱ ಕಱದವುದು ಸಾತಸದಿಂ ಮಾಣದೆ ರಸಾಯನದ ಕೂಪದೊಳೆಂಬೆಸಕದಿನುದಳಮೆಸವುದು ರಸಗೀತಂ (ರಸಾಣವ. ೪-೦೬೭). ೧೫. ಸಿಹಿ, ಹುಳಿ, ತೊಗರು,

ಕಹಿ ಮೊದಲಾದ ರುಚಿ : ರಸ—ತಿಕ್ತಕಟುಕಷಾಯಾಮ್ಲ ಮಧುರಾಭಿಧಾನರಸಪಂಚಕಮುಂ (ಕಲ್ಯಾ.ಕ್ರ. ೨೯೩). 'ಷಡ್ರಸ' ಪರಾ. ೧೭. [ವೈಶೇ] ನಲವತ್ತುವಿಧವಾದ ಗುಣಗಳಲ್ಲಿ ಒಂದು : ರೂಪ, ರಸ, ಗಂಧ, ಸ್ಪರ್ಶ . . . ಸೌಭಾಗ್ಯವೆಂದು, ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಶಾ. ೨೬೩). ೧೭. [ಕಾವ್ಯಮೀ] ಭಾವ, ವಿಭಾವ, ಸಂಚಾರಿಭಾವಗಳ ಸಂಯೋಗದಿಂದ ಆಗುವ ಆನಂದಾತ್ಮಕವಾದ ಚಿತ್ತವೃತ್ತಿ ; ಶೃಂಗಾರ, ಹಾಸ್ಯ, ಕರುಣೆ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಮತ್ತು ಶಾಂತ ಎಂಬ ಒಂಬತ್ತು ರಸಗಳು: ನವವಿಧರಸಂಗಳಂ ಮನಕೆ ವರೆ ನಿರೂಪಿಸುವ ವಚನರಚನೆ ರಸವದ್ವಿಧಾಳಂ ಕಾರು ಕುಜಿಂತು ವಿಕಲ್ಪಿಸಿ ತೋರ್ಪೆಂ (ಕವಿರಾ. ೩-೦೬೬) ; ರಸಮಿಲ್ಲದ ಕಾವ್ಯಂ ನೀರಸಂ (ರಕಚ. ೦-೪) ; ವಿಸ್ಮಯವೇ ಪ್ರಧಾನವಾಗಿ ಮಿಕ್ಕ ಚಿತ್ತವೃತ್ತಿಗಳು ಅಪ್ರಧಾನವಾದಾಗ ಅದೇ ರಸವೆನ್ನಬಹುದು (ಭಾರತೀ. ೪೦೩). ೧೮. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : ರಸ ನಾಟ್ಯಾಂಗಂ ಗ್ರಹಣಂ ಪೊಸತು ನಿಧಿ ರತ್ನ ನವಮುಂ ಪೊಂಭತ್ತೆನಿಕುಂ (ಕೃಶಾ. ೯-೯). ೧೯. ಆರು ಎಂಬ ಸಂಖ್ಯೆಯ ಸಂಕೇತ : "ಋತುರಸವಿರಮದಾಜು" (ಹಂಗರಾ. ೦೦೩-೬) ; ಋತು . . . ರಸ . . . ೬ ಕ್ಕೆ ಪೆಸರು (ಕೃಪಶಾ. ೦೦). [ಸಂ.]

**ರಸಋದ್ಧಿ** (ನಾ). [ಜೈನ] ತಪಸ್ಸಿನ ಸಾಧನೆಯಿಂದ ದೊರಕುವ ಒಂದು ಬಗೆಯ ಸಿದ್ಧಿ : ಆಸ್ಯವಿಷತ್ವಂ ದೃಷ್ಟಿವಿಷತ್ವಂ ಕ್ಷೀರಾಸ್ರವತ್ವಂ ಮಧ್ವಾಸ್ರವತ್ವಂ ಸರ್ಪಿರಾಸ್ರವತ್ವಮಮೃತಾಸ್ರವತ್ವಮೆಂದನೇಕಪ್ರಕಾರಷಟ್ಕಾರಮಾದ ರಸಋದ್ಧಿಯೊಳಂ . . . ನೆಜೆದಿರ್ದು (ಶಂಪ್ರತ. ೦೪-೩೦ ಪ). [ಸಂ.]

**ರಸಋಷಿ** (ನಾ). ರಸಾನಂದವನ್ನು ಉಂಟುಮಾಡುವ ಋಷಿ ; ಕವಿ ; ಪರಮಾನಂದವನ್ನು ನೀಡುವ ದ್ರಷ್ಟಾರ : ಪರೀಕ್ಷರು . . . ತನ್ನ ಪಾಲಿನ ಕರ್ಮಫಲಗಳನ್ನು ಮುಚ್ಚದೆ ಮಾಜದೆ ಆಡಿ ಮಾಡಿ ಬೋಧಿಸುತ್ತಿದ್ದ ಒಬ್ಬ ರಸಋಷಿಯಾಗಿದ್ದರು (ಕಲೇಶ. ೬೨ ಶತಿಕಾವ್ಯಹಂಸದ) ; ರಸಋಷಿಗೆರಗುವೆನವರೆನ್ನನು ಕರುಣಿಸುತಿಹುದೆನ್ನ ಸ್ವಪ್ನ (ಬಂಕಾಕ. ೯-೬). [ಸಂ.]

**ರಸಂಗೊಳ್** (ಕ್ರಿ). ದ್ರವವನ್ನು ಪಡೆ : ಪುಂಡ್ರೇಕ್ಷುದಂಡಂಗಳಂ ಕಡಿಕಡಿದು ಯಂತ್ರಪೀಡನೆಯಿಂ ರಸಂಗೊಳ್ವ ತೆಜನುಮನಜಿಯೆ ಪೇಟ್ದು (ಅರ್ಜು. ೬-೭೭ ಪ). [ರಸ + ಕೊಳ್$_1$]

**ರಸಂದೆಗೆ** (ಕ್ರಿ). ನೀರು ಇಂಗಿ ಹೋಗು ; ಒಣಗು : ಸುಳಿವಾಗುಲಿಕೆಗಳ ರಸಂದೆಗೆದ ಜಿಹ್ವೆಯ ಚೆರ್ಮವನಿಗಳುದಿಸಿದ ವದನದ . . . ಬಿಗಿದ ಬೆಜಗಿನ ಚಿಂತೆಗಾಗರಂ ತಾನಾಗಿ (ಕಬ್ಬಿ. ೭-೫೪). [ರಸ + ತೆಗೆ$_1$]

**ರಸಂಬಡೆ** (ಕ್ರಿ). ನವರಸಗಳನ್ನು ಸೃಷ್ಟಿಸು, – ಚಿತ್ರಿಸು : ಸುಗತಿಗಳಂ ಸೂಸುವ ಮದ್ದಳೆಗರಿಂ ರೂಪುರೇಖೆ ರಸಂಬಡೆವ ನರ್ತನನಾಯಕಿಯರಿಂ (ಗಿರಿ. ೨-೦೦೩ ಪ). [ರಸ + ಪಡೆ$_1$]

**ರಸಂಬೋಗು** (ಕ್ರಿ). ರಸವಿಲ್ಲದಂತಾಗು ; ಒಣಗು ; ರಸಂಬೋದ ಕಬ್ಬಿನಂತೆ ಪೇಡಿಯಪ್ಪರಸಿನ ಮಾತಿನಂತೆ (ಧರ್ಮಾಮೃ. ೯-೨೩). [ರಸ + ಪೋಗು$_1$ (< ಪೋ$_1$)]

**ರಸಕವಳ** (ನಾ). ರುಚಿಕರವಾದ ಭೋಜನ ; ಸವಿಯಾದ ಊಟ : ಗುರುಗಳ ಮನೆಯಲ್ಲಿ ಎರಡು ಹೊತ್ತೂ ರಸಕವಳ ಬಿದ್ದುಹೋಗುತ್ತಿತ್ತು (ಗಾಗಿತ. ೬೩) : ಪೂಟು ಮಾಡಿದರೆ ರಸಕವಳ ತಪ್ಪದು ನಮಗೆ (ಶೀಕಪು. ೩೨-೦). [ಸಂ. ರಸಕವಲ]

**ರಸಕಸಿ, ರಸಕಸೆ, ರಸಋಸಿ, ರಸಗಸಿ** (ನಾ). ೧. ತಿಕ್ಕಾಟ ; ಮನಸ್ತಾಪ : ನಾರಾಯಣ ನಿನ್ನ ನಾಮದ ಸ್ಮರಣೆಯ ಸಾರಾಮೃತವೆನ್ನ ನಾಲಿಗ್ಗೆ ಬರಲಿ . . . ರಸಕಸಿ ಇರಲಿ ಹರುಷಿರಲಿ (ಪುರಂದ. ೦-೭೩-೨) ; ಆಸವಸವು ಬೇಡ, ರಸಕಸಿಯು ಬೇಡ. ಹೊಸ ರಸಿಕವೃತ್ತಿ ಬೇಕು (ಕೃದಾ. ೬೩-೦೩) ; ಮಾತುಮಾತಿಗೆ ಸಿಟ್ಟು, ಸೆಡವು, ರಂದಿ, ರಸಕಸಿ (ಜೋಸ್ಸೆ. ೦೯೩). **ರಸಕಸೆ** : ೨. ಜಗಳ ; ಕಲಹ : ರಸಕಸೆಯನ್ನು ಮಾಡಬೇಡ ಸೋನಾ (ಕವಲು. ೦೩೭). **ರಸಋಸಿ** : ೨. ಯಾಕ ಹುಡಿಗಿ, ಅತ್ತೀ ಜೋಡಿ ರಸಋಸಿ ಮಾಡತೀಯೆಂತಲ್ಲಾ (ಸಂಪತಾಯು. ೦೩೪). **ರಸಗಸಿ** : ೨. ಹೀಂಗ ಮಾತುಮಾತಿಗೆ ರಸಗಸಿ ಮಾಡೋದೊಂದು ಕೆಟ್ಟಚಾಳೀನ ಅದ ಆಕೀಗೆ (ಶಾಂತಾಯು. ೬). [← ಮರಾ. ರಸಕಸ್, ರಸಘಸ್]

**ರಸಕಸೆ** 'ರಸಕಸಿ' ನೋ.

**ರಸಕಾವ್ಯ** (ನಾ). ನವರಸಭರಿತವಾದ ಕಾವ್ಯ : ಭರತಂ ಮಹಾತ್ಮನೆಸೆದನು . . . ರಸಕಾವ್ಯ ಸತ್ಕಲಾಭ್ಯಾಸದಧ್ಯಾತ್ಮದಲಿ (ಶ್ರೀಭಾಷಾ. ೨೩-೬೯೬). [ಸಂ.]

**ರಸಕೂಪ** (ನಾ). ಪಾದರಸದ ಬಾವಿ : ಇದು ಚಿತ್ರಂ ರಸಕೂಪದೊಳ್ ಪದೆಬಿನಿಂದಾಂ ಬಂದು ಪೊಕ್ಕಿರ್ಪುದೆತ್ತ . . . ಬಿರಿದೊಂದುಪತ್ತು ಪೆತ್ತಿರ್ಪುದೆತ್ತ (ಶೀಬಾಹ. ೪-೯೦). [ಸಂ.]

**ರಸಋಸಿ** 'ರಸಕಸಿ' ನೋ.

**ರಸಗಂದಾಯ** (ನಾ). ರುಚಿಕರವಾದ ಪದಾರ್ಥಗಳ ಮೂಲಕ ಕೊಡುವ ಕಂದಾಯ; ತೆರಿಗೆ: ದಾಳಿಂಬಫಲಸಿಮ್ಮಾವರನೇಜಿಲ್ ಮೊದಲಾದ ಫಳಕುಳಂಗಳಂ ಸೊಬಗುವಡೆದ ಸುರಪಂ ಕೈಗೆಯ್ದು ಕಾಮಧೇನು ಕಲ್ಪವೃಕ್ಷಂಗಳತ್ತ ಪಾಲ್ದುಪ್ಪ ಸಕ್ಕರೆಗಳ್ ಮೊದಲಾದ ರಸಗಂದಾಯಂಗಳಂ . . . ಉದ್ವಾಹ ಮಂದಿರಂ ಪೊಜಿದುದು (ಶಾಲಾಸ್ಕ. ೦-೬-೨೭ ಪ). [ರಸ + ಕಂದಾಯ]

**ರಸಗತಜ್ವರ** (ನಾ). ದೇಹದ ದ್ರವರೂಪವಾದ ಧಾತುವಿನಲ್ಲಿ ಸೇರುವ ಜ್ವರ : ಬಹಳ ವಾತ ಶ್ಲೇಷ್ಮ ಉಂಟಾಗಿ, ಮೈಯಲ್ಲಿ ಭಾರ ಕಾಣಿಸಿ ದೇಹದಲ್ಲಿ ಉರಿದೋರಿ, ದೈನ್ಯವಾದ ಮಾತುಗಳುಂಟಾಗಿ, ಆಕಳಿಸುತ್ತ, ಬಾಯಿಯಲ್ಲಿ ಅರೋಚಕ ಪುಟ್ಟಿ, ವಾಂತಿಯಾಗುತ್ತ, ದಾಹವುಂಟಾಗಿರುವುದೇ ರಸಗತಜ್ವರವೆನಿಸಿಕೊಂಬುದು (ಸಕ್ವೈ. ೯೯). [ಸಂ.]

**ರಸಗತ್ತಲೆ** 'ರಸೆಗೆಳ್ತಲೆ' ನೋ.

**ರಸಗಬ್ಬ** (ನಾ). = ರಸಕಾವ್ಯ : ಇಂಚರದಿ ಸಂಗೀತರಸದಲಿ ಮಿಂಚು ಕವಿಗಳ ಪಲವು ರಸಗಬ್ಬವನು ಗಮಕದಲಿ ಉಂಚದಲಿ ಮೆರೆದೋದಿ (ಸಾಳ್ವಶಾ. ೩೨-೨೯); 'ಕಾಲೂರ ಚೆಲುವೆ' . . . ಪೋಲೀಸರು ಲಂಚಗುಳಿತನದಿಂದ ಮಾಡುವ ಅನ್ಯಾಯ ಇತ್ಯಾದಿಗಳನ್ನು ರಮ್ಯವಾಗಿ ಚಿತ್ರಿಸುವ ರಸಗಬ್ಬ (ಕಾಂಜೀರ. ೦೦ ಪರಿಕ). [ರಸ + ಕಬ್ಬ$_1$]

**ರಸಗರ್ಭ** (ನಾ). ೧. ಕಾಡಿಗೆ ; ರಸಾಂಜನ : "ದಾರ್ವಿಕಾ, ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ – ೬ ರಸಾಂಜನದ ಹೆಸರುಗಳು" (ನಿಘಂಟು. ೩೦೩). ೨. ಕೇಸರಿಬಣ್ಣದ ಪುಡಿ; ಸಿಂದೂರ. [ಸಂ.]

**ರಸಗವಳ** (ನಾ). = ರಸಕವಳ : ಶೃಂಗಾರ ಕರುಣ ವೀರರಸಗಳ ಸಂದರ್ಭೋಚಿತವಾಗಿ ಬಸರಿ ರಸಿಕರಿಗೆ ರಸಗವಳವಾಗಿದೆ (ಕಾಂಜೀರ.೦೦ ಪರಿಕ). [< ರಸಕವಳ]

**ರಸಗಸಿ** 'ರಸಕಸಿ' ನೋ.

**ರಸಗೀತೆ** (ನಾ). ರಸಭರಿತವಾದ ಹಾಡು ; ಇಂಪಾದ ಗೀತೆ : ರಸಗೀತಕ್ಕೆಡೆಗೊಟ್ಟು ತಾಳಲಯದೊಳ್ ನೇರ್ಪಟ್ಟು . . . ಬಾಜಿಸುತ್ತುಂ (ಸುಲ್ಲಪು. ೦೨-೬೬). [ಸಂ.]

**ರಸಗುಂಡು** (ನಾ). ಪಾದರಸವನ್ನು ಬಳಿದ, ಹೊಳೆಯುವ ಬಣ್ಣಬಣ್ಣದ ಗೋಳಾಕಾರದ ಗಾಜಿನ ಗುಂಡು ; ಗುಳಾಪು : ಮದುವೆಯ ಚಪ್ಪರಕ್ಕೆ ರಸಗುಂಡುಗಳನ್ನು ಕಟ್ಟಿ ಚೆನ್ನಾಗಿ ಅಲಂಕರಿಸಿದ್ದರು (ಕೂಶ). [ರಸ + ಗುಂಡು]

**ರಸಗುಲ್ಲ** 'ರಸಗುಲ್ಲಾ' ನೋ.

**ರಸಗುಲ್ಲಾ**, ರಸಗುಲ್ಲ (ನಾ). ಹಾಲನ್ನು ಒಡೆಸಿ ಅದರ ಗರಣೆಯಿಂದ ಮಾಡುವ ಒಂದು ಬಗೆಯ ಸಿಹಿತಿಂಡಿ : ಕಲಕತ್ತೆಯಿಂದ ಒಂದು ಪಾತ್ರೆಯಲ್ಲಿ ಉತ್ತಮ ರಸಗುಲ್ಲಾ ತಂದಿದ್ದೆ (ಶ್ರೀಆಂಕ. ೩೩); ಜನಪ್ರಿಯವಾದ ಮಿಠಾಯಿಯೆಂದರೆ 'ರಸಗುಲ್ಲಾ'. ಅದನ್ನು ಮೊದಲು ತಯಾರಿಸಿದವಳು ಒಬ್ಬ ಸೂಳೆಯಂತೆ (ಅನ್ನದಾ. ೧). **ರಸಗುಲ್ಲ** : ರಸಗುಲ್ಲ, ಮಸಾಲೆದೋಸೆ ಮಾಡಿದ್ದೀನಿ (ರೂಢಿ).

[← ಹಿಂ. ರಸಗುಲ್ಲಾ; ಮರಾ. ರಸಗುಲ್ಲಾ, ರಸಗೋಲ್ಲಾ ]

**ರಸಗೆಡು** (ಕ್ರಿ). ಸಾರವಿಲ್ಲದಾಗು ; ನಿಸ್ಸತ್ತ್ವವಾಗು : ರಸಗೆಟ್ಟು ಹೋದ ವನಿತೆಯ ಹೋಹಾತ ಪಶುವಿನಿಂದತ್ತ (ಸರ್ವಜ್ಞ. ೦೭೬೯).

[ ರಸ + ಕೆಡು$_1$ ]

**ರಸಗೆಯ್**, ರಸಗೈ (ಕ್ರಿ). ೧. ದ್ರವವನ್ನಾಗಿ ಮಾಡು; ಕರಗಿಸು : ಕುಂದಣವನು ರಸಗೆಯ್ದೊಡಾಕ್ಷಣ ಕರುವಿಂದ ಬೇರ್ಪಡಿಸಿ ಪುತ್ತಳಿಯ ತಂದಡರ್ಚಿದರು (ಪೋಹಚ. ೨೭-೫೮). **ರಸಗೈ** : ೨. ಸತ್ತ್ವವುಳ್ಳುದನ್ನಾಗಿ ಮಾಡು : ಬಗೆಬಗೆಯಾಟಿಕೆಗಳನು ಮಣ್ಣೊಳು ಮರದೊಳು ತಂದೆ ನಿರ್ಮಿಸುವರು ಕಸವನು ರಸಗೈವವರವರು (ಕಂತಾಚ. ೦೦-೩೭).

[ ರಸ + ಕೆಯ್$_1$ ]

**ರಸಗೇಯ** (ನಾ). = ರಸಗೀತ: ರಸಗೇಯಂ ನಲಿವೆರ್ಚಿದಲ್ಲೇಕೆ ವಿತತಾತೋದ್ಯಸ್ವನಂ ಸೂಸದೇಕೆ (ಮಲ್ಲಿಪು. ೪-೪); ರಸಗೇಯಂ ಭಾವನೃತ್ಯಂ ಪಣೆಯ (ಪಾರ್ಶ್ವಪು. ೫-೧೦೦).     [ಸಂ.]

ರಸಗೈ 'ರಸಗೆಯ್' ನೋ.

**ರಸಗೋಲ್** (ನಾ). ಸಿಹಿಯಾದ ದ್ರವವನ್ನುಳ್ಳುದು; ಕಬ್ಬು : ಕುಸುಮಾಸ್ತ್ರನೊಂದು ಕಬ್ಬಿನ ಬಿಲ್ಲಿನಿಂ ಲೋಕವಿಸರಮಂ ಕೊಂದು ಕೂಗುತಲಿಹನು . . . ರಸಗೋಲ್ಗಳನ್ನು ಪೆರ್ಗ್ಗಳಮಿರಲು ಮಾರ ಗರ್ವಿಸೆಯೆಂತು ಮಾಳ್ಪನೊ (ಪಟಸೋ. ೪-೨೪).     [ರಸ + ಕೋಲ್$_1$]

**ರಸಗ್ರಹಣ** (ನಾ). ಕಾವ್ಯ, ನೃತ್ಯ ಮೊದಲಾದ ಕಲೆಗಳ ಸ್ವಾರಸ್ಯವನ್ನು ಗ್ರಹಿಸುವಿಕೆ : ಅರ್ಥವನ್ನು ವಿವರವಿವರವಾಗಿ ತಿಳಿದುಕೊಂಡು ರಸಗ್ರಹಣ ಮಾಡುವವರಿಗೆ ಇಂಥ ಕವನಗಳನ್ನು ಓದಿದಾಗ ಒಮ್ಮೆಲೆ ಅರ್ಥವಾಗುವುದಿಲ್ಲ (ಕಪ್ಪಾಜಿ. ೯೫).     [ಸಂ.]

**ರಸಘಳಿಗೆ** (ನಾ). ಅತ್ಯಂತ ಆನಂದದ ಕಾಲ ; ಸಂತೋಷದ ಗಳಿಗೆ : ಮಕ್ಕಳ ಹಿಂದೆ ಮುದುಕರೂ ಹೊರಡುವ ರಸಘಳಿಗೆ ಅದು (ಕಾಕಿಕಾ. I, ೭೦೬).     [ರಸ + ಘಳಿಗೆ$_1$ (< ಗಳಿಗೆ)]

**ರಸಘುಟಿಕೆ** (ನಾ). ಪಾದರಸದಿಂದ ಮಾಡಿದ ಗುಳಿಗೆ, — ಮಾತ್ರೆ: ಮಂತ್ರ ತಂತ್ರ ಯಂತ್ರ ಬೇಳುವೆ ತಿಲಕ ತಿಗುರು ರಸಘ[ಘು]ಟಿಕೆ . . . ಮೊನೆಕಟ್ಟೆಂಬ ಕುವಿದ್ಯದಿಂ ಗೆಲುವೆನು (ಕೃಪಿಮಾ. I, ೩೩೬).

[ಸಂ. ರಸಘುಟಿಕಾ]

**ರಸಚಿತ್ರ** (ನಾ). ೧. ದ್ರವರೂಪವಾದ ಬಣ್ಣಗಳಿಂದ ಬರೆದ ಚಿತ್ರ; ಚಿತ್ರಚಿತ್ರಾರ್ಧಚಿತ್ರಾಭಾಸಮೆಂಬ ಮೂರುಂ ಪ್ರಕಾರಮುಮಂ ರಸಚಿತ್ರ ಧೂಳೀಚಿತ್ರಬೋಜೆಯುಮಂ . . . ಪರಿಭಾವಿಸಿ ನೋಡಿ (ಮಲ್ಲಿಪು. ೫-೬೨) ; ನಡೆಮತ್ತೆ ನುಡಿವ ಪುತ್ರಿಕೆ ಮಿಡುಕುವ ರಸಚಿತ್ರದೆಸೆವ ಪೆಣ್ಣಂ ಬೊಳ್ಪಂ ಪಡೆದಲ್ (ಚಂದ್ರಪ್ರಪು. ೫-೭೨); ರಸಚಿತ್ರಂ ರತ್ನಭೂಷಾವಳಿ ವ್ಯದುವಸನಶ್ರೇಣಿ ಮುಕ್ತಾತಪತ್ರಪ್ರಸರಂ (ಶಾಂತೀ. ೯-೯೦). ೨. ಕಾವ್ಯದಲ್ಲಿ ಆನಂದವನ್ನುಂಟುಮಾಡುವ ಸನ್ನಿವೇಶ ; ಸ್ವಾರಸ್ಯಕರವಾದ ಪ್ರಸಂಗ.     [ಸಂ.]

**ರಸಜ** (ನಾ). ೧. ಸಕ್ಕರೆ. ೨. ಕಾಕಂಬಿ. ೩. ರಕ್ತ. [ಸಂ.]

**ರಸಜೀವನ** (ನಾ). ಸಾರವತ್ತಾದ ಬಾಳು ; ಸೊಗಸಾದ ಜೀವನ : ರಸಜೀವನಕೆ ಎಗಿಲ್ ತಪಮಿಹುದೆ? (ಶ್ರೀರಾಮಾ. ೫೨-೧೨೭).     [ಸಂ.]

**ರಸಜ್ಞ** (ನಾ). ೧. ಸ್ವಾರಸ್ಯವನ್ನು ಬಲ್ಲವನು : ಭೋಗಂಗಳ್ . . . ಮನೋರಾಗಮನೊದವಿಸದವು ಹೃದ್ರೋಗಮನೊದವಿಸೆ ರಸಜ್ಞನನುಭವಿಸುಗುಮೇ (ಅಬಿಪು. ೩-೭೦); ಶ್ರೀಮದುಮಾಮಧುರಾಧರಸೋಮ ಕಳಾರಸರಸಜ್ಞ ರಸನಂ (ರಾಜಶೇ. ೯-೦). ೨. ಶೃಂಗಾರ, ಹಾಸ್ಯ ಮೊದಲಾದ ಕಾವ್ಯರಸಗಳನ್ನು ಬಲ್ಲವನು: ಒದವಿರ್ದ ಚಿತ್ರದಿಂ ತೋರ್ಪುದು ಭಾವಂ ಭಾವದಿಂದೆ ರಸಮುದಯಿಸುಗುಂ ವದನಮದು ಪ್ರಕಟಿಪುದಾ ವದನದೆ ರಸಮಂತಿದೆಂದು ತಿಳಿಗೆ ರಸಜ್ಞರ್ (ರಸರ. ೦-೩). ೩. ರಸವಿದ್ಯೆಗಳನ್ನು ಬಲ್ಲವನು ; ರಸವಾದಿ.     [ಸಂ.]

**ರಸಜ್ಞತೆ** (ನಾ). ೧. ರಸಾನುಭವವನ್ನು ತಿಳಿಯುವ ಶಕ್ತಿ; ಆನಂದವನ್ನು ಅರಿಯುವ ಚೈತನ್ಯ. ೨. ಕಾವ್ಯಶಕ್ತಿ. ೩. ರಸವಾದಜ್ಞಾನ. ೪. ರುಚಿಭೇದಜ್ಞಾನ. ೫. ತಾರತಮ್ಯಜ್ಞಾನ. [ಸಂ. ರಸಜ್ಞತಾ]

**ರಸಜ್ಞಾನಿ** (ನಾ). ರಸವಿದ್ಯೆಯನ್ನು ಬಲ್ಲವನು ; ರಸವಾದಿ: ಇನುತ್ತರಾಯಣದೊಳನುದಿನಂ ರಸಜ್ಞಾನಿ ನೀರನೊಸೆವಂತೊಸೆದಂ (ಜಾಂಪು. ೦೦-೨೫).     [ಸಂ. ರಸಜ್ಞಾನಿನ್]

**ರಸಜ್ಞೆ** (ನಾ). ೧. ರಸಗಳನ್ನು ಅರಿಯುವ ಇಂದ್ರಿಯ ; ನಾಲಗೆ: "ರಸಜ್ಞೆ, ರಸನಾ, ಜಿಹ್ವಾ—ಈ ೩ ನಾಲಗೆ" (ಕರ್ಣಾಟು. ೬೩-೩೬೭). ೨. ರಸವನ್ನು ಬಲ್ಲವಳು ; ರಸಿಕಳು.     [ಸಂ. ರಸಜ್ಞಾ]

**ರಸತಂತ್ರ**(ನಾ). ಕೀಳುಲೋಹಗಳನ್ನು ಚಿನ್ನವಾಗಿಸುವ ಕಲೆ; ರಸವಿದ್ಯೆ : ಮಾಟಮಂತ್ರವಿದ್ಯೆಯ ಒಂದು ಭಾಗ ರಸತಂತ್ರ (ಕೃಪಾ. I, ೬೫೪).[ಸಂ.]

**ರಸತಪಸ್ಸು** (ನಾ). ರಸಾನುಭವಕ್ಕಾಗಿ ಮುಡಿಪಿಟ್ಟ ತಪಸ್ಸು : ಪ್ರೌಢಿಯಾಗಿರಲಿ ಬಾಳ್ವೆ, ಜಯಿಸುಗೆ ರಸತಪಸ್ಸೆ ; ದೊರೆಕೊಳುಗೆ ಚಿರಶಾಂತಿ (ಶ್ರೀರಾಮಾ. ೬-೦೫೪).     [ಸಂ. ರಸತಪಸ್]

**ರಸತವರ** (ನಾ). ಪಾದರಸ : (ದರ್ಪಣದ ಗಾಜಿಗೆ) ರಸತವರವನ್ನು ಲೇಪಿಸು (Quicksilver. ೩೦೪೩).     [ರಸ + ತವರ]

**ರಸತ್ತಾರುಗ** ? (ನಾ). (?) : ತೊತ್ತಳದುಳಿವ ಮದೇಭಂಗಳುಮಂ ಮದೇಭಂಗಳನಾರ್ದು ಬಿಟ್ಟಿಕ್ಕುವ ನಿಜಾಧಿಗ[ಳಿಲ್]ಮೆ ಪೊರಳೆವಿಡಿದು ಕೂರಲ ಬಳೆಗಳೊಳ್ ಕಾಲ್ಗೋದು ಪರಿಯಿಸುವ ರಸತ್ತಾರುಗರುಮಂ[ಪಾಠಾಂ. ಪರಿಯಿಸುವವರಸತ್ತಾರು ಗುರುವುಂ, ಪರಿಣಿಸುವಾರಸತ್ತಾರು ಗುರುವುಂ] ಆ ರಸತ್ತಾರುಗರಿತುಮಿಟ್ಟೆಯ ಪಿಡಿಕುತ್ತಿನ ಕಕ್ಕಡೆಯ ಕೋಳ್ಗೆ ಮರಪಟಲಂ ಪಾಯ್ದು ಕೆಡೆದಂ (ಕಂಕಪಾ. ೦೨-೬೦ ವ) ; " ರಸತ್ತಾರುಗರುಮಂ — ಆನೆಯ ಮೇಲೆ ಕುಳಿತು ಯುದ್ಧಮಾಡುವವರನ್ನು (?)" (ಕಂಕಪಾ. ೯೩೬).

[ ? ]

**ರಸತ್ವ** (ನಾ). ರಸಾನುಭವವುಂಟಾಗುವ ಅವಸ್ಥೆ : ಭಾವ ರಸತ್ವಕ್ಕೆ ಏರುವುದು ಎಂದರೆ ಪ್ರಾಣಮಯ ಮನೋಮಯಕ್ಕೇರುವುದು ಎಂದು ಅರ್ಥ (ಕಾಂಪ್ರಸ. ೦೯).     [ಸಂ.]

**ರಸದಂಬುಲ** (ನಾ). ರಸಭರಿತವಾದ ತಾಂಬೂಲ : ಪೊಳೆವ ಕೆಂಬಲ್ಲಿಗೆ ರಸದಂಬುಲದ ಮೆಲ್ಲಿಗೆ ಸಾರ್ಚಿ (ಪೋಹಚ. ೦೬-೫೯); ಬಿಂಬಾಧರದ ಸವಿಯ ತೋಟಾ ನೆಟಿ ರಸದಂಬುಲಗುಟುಕಿತ್ತು ಕೊಟೊ (ಸಂಪ್ರ. ೯-೦೫೯).

[ರಸ + ತಂಬುಲ]

**ರಸದರ್ಶನ** (ನಾ). ರಸವನ್ನು ಕಾಣುವುದು,— ಅರಿಯುವುದು : ನವನವೋನ್ಮೇಷಿತಂ ನಿತ್ಯಚಿರನೂತನಂ ರಸದರ್ಶನಾಸ್ವಾದನಂಗೈವ ಸಹಜಕವಿ (ಶ್ರೀರಾಮಾ. ೫೭-೦೦೦).     [ಸಂ.]

ರಸದಾಡಿಮ (ನಾ). ಸಾರವತ್ತಾದ ದಾಳಿಂಬೆ : ರಸದಾಡಿಮದ ಬಿತ್ತುಮಂ ಪೊಣಮುತ್ತುಮಂ ಮುಕ್ಕಳಿಸಿದಂತಪ್ಪ ವಿಬುಧವನಜವನಕಳಹಂಸನ ದಂತಪಂಕ್ತಿಗಳವ್ಯುತ್ಕರಣನ ಕಾಂತಿಗಳನಿಳಿಸುವಂತಾದುವು (ಕಂಕಪಾ. ೨-೬೯ ವ).     [ಸಂ.]

**ರಸದಾನ** (ನಾ). ೧. ದ್ರವವನ್ನು ಕೊಡುವಿಕೆ : (*). ೨. ವಿಷಹಾಕುವುದು; ವಿಷಪ್ರಯೋಗ : ಪುರುಷವುಂ ಸಮಕಟ್ಟುವವುಪ್ಪೊಡೆ ಪೊಕ್ಕಿಱಿಯಲಣ್ಮುವರಿಲ್ಲ ರಸದಾನಾದಿಗಳೊಳ್ ಛಿದ್ರಿಸುವವುಪ್ಪೊಡವರಾಪ್ತವಂತರುಂ ಬುದ್ಧಿವಂತರುಮಾಗಿ ನೆಗಬ್ದರ್ (ಶಂಶಕಾ. ೬-೬೬ ಪ). ೩. ಆನಂದವನ್ನು ನೀಡುವುದು ; ರಸಾನುಭವವನ್ನು ಕೊಡುವುದು : ಕವಿಸೃಷ್ಟಿಯ ಈ ಸ್ನಾನ. ಈ ಪಾನ 'ಪಕ್ಷಿಕಾಶಿ'ಯ ರಸದಾನವಾಗಿದೆ (ಕಾಸಮ. ೦೦೦). [ಸಂ.]

**ರಸದಾಳಿ**, ರಸದಾಳೆ, ರಸ್ತಾಳೆ (ನಾ). ೧. ಒಂದು ಬಗೆಯ ಶ್ರೇಷ್ಠ ಜಾತಿಯ ಕಬ್ಬು : ರಸಪತ್ತಾದ ಕಬ್ಬು : ರಸದಾಳಿ ದಾಳಿಂಬಂಗಳಂ ತವೆ ಬಾಲದಿಂದಲಿ ಕಿತ್ತೊಗೆದು ಹುಡಿಹುಡಿ ಮಾಡಿದನು ಹನುಮ (ಶೌರಾ. ೦೦-೨೦): ರಸದಾಳಿಯಂತೆ ರಮಣಿಯರ ಚೆಂದುಟಿಯಂತೆ . . . ಅತಿರುಚಿಯ ಪಡೆದುದತಿರಸಿಕನತಿನಿಪುಣ ಮಂಗರಸನೊಪ್ಪುವ ವಾಕ್ಯಗುಂಫನು ಭಾವಿಸಿದೊಡೆ (ಸಮ್ಯ್‌. ೦-೦೦) ; ಕಬ್ಬಿನ ಜಾತಿಗಳಲ್ಲಿ – ರಸದಾಳಿ, ರಾಮಗಬ್ಬು, ಕರಿಗಬ್ಬು . . . ಎಂದು ಅನೇಕವುಂಟು (ಪಂಜಾಬು. ೩-೨೦೦). ೨. ಒಂದು ಬಗೆಯ ಶ್ರೇಷ್ಠ ಜಾತಿಯ ಬಾಳೆ : ನಂಜನಗೂಡಿನಲ್ಲಿ ರಸದಾಳೆಯನ್ನು ಹೆಚ್ಚಾಗಿ ಬೆಳೆಯುತ್ತಾರೆ (ಆಡು). **ರಸದಾಳೆ :** ೧. 'ರಸದಾಳಿಕಬ್ಬು' ಪರಾ. **ರಸ್ತಾಳೆ :** ೧. ಬಾಳೆ ರಸ್ತಾಳೆ ದಾಳಿಂಬಂ ಮೊದಲಾದ ಫಲತರುಗಳಿಂ . . . ಬೆಳೆಗುವ ಧರ್ಮತೋಟಂ (ಶಾಸಗ. ೫೪). [ದೇ. ; ತೆಲು. ರಸದಾಳಿ, ರಸದಾಡಿ]

**ರಸದಾಳಿಂಬ** (ನಾ). = ರಸದಾಡಿಮ : ರಸದಾಳಿಂಬದ ಬೀಜಮುಂ ಕರ್ದಳಲಾ ಸಾರಂ ಕರಂ ಸೃಕ್ವದೊಳ್ ಬಸಿಯಲ್ (ಉದ್ಯ. ೯-೨೬); ಫಲಭರದ ರಸದಾಳಿಂಬ ಖರ್ಜೂರಾದ್ರು . . . ಮಧೂಕತರುನಿಕುರುಂಬಕದ ಸುರನಂದನ (ಕೊರಚ. ೦-೩-೪೦). [ರಸ + ದಾಳಿಂಬ]

**ರಸದಾಳಿಕಬ್ಬು** 'ರಸದಾಳಿಗರ್ವು' ನೋ.

**ರಸದಾಳಿಗಬ್ಬು** 'ರಸದಾಳಿಗರ್ವು' ನೋ.

**ರಸದಾಳಿಗರ್ವು**, ರಸದಾಳಿಕಬ್ಬು, ರಸದಾಳಿಗಬ್ಬು, ರಸದಾಳೆಕಬ್ಬು (ನಾ). = ರಸದಾಳಿ ೧ : ಇಕ್ಕೆಲದೊಳು ಕೊರ್ವಿ ನಳನಳಿಸಿ ನೀಳ್ದು ಜಿಗಿ ಬೆಳೆದ ರಸದಾಳಿಗರ್ವುಗಳ್ (ಕೃಪಾಚ. ೩-೩). **ರಸದಾಳಿಕಬ್ಬು :** ರಸದಾಳಿ ಕಬ್ಬಿನೊಳು ಹಿಂದುಮುಂದನೆ ತೆಗೆದು ಮಿಸುಪ ಮರಗಬ್ಬು ಕರಿಯ ಮತಗಬ್ಬಿನೊಳೊಸರ್ವ ರಸಮುಂ ಒಳಿದು (ಸೂಕಶಾ. ೨-೩೦) : ರಸದಾಳಿ [ಗಾಣ. ೪]ಕಬ್ಬು ಮೇಲಿಂದು ಹೋದರೆ ವಿಷವಾಗಿ ತೋಱುತಿದೆ ಪಾರಬ್ಧಬಲದಿಂದ (ಕುರಂದ. ೨-೭೬-೬). **ರಸದಾಳಿಗಬ್ಬು :** ಚೆಂದಂಗಿನೆಳ ಗಾಯೊಡೆದು ರಸೋರೆಸೆವೊಸರ್ವ ಪೊನಲಿಂ ಕಡುವೆಳೆದ ರಸದಾಳಿಗಬ್ಬುಗಳು (ಶಾಕ್ಯ. ೦-೬೦) ; ರಸದಾಳಿಗಬ್ಬಿನ ರಸದೊಳಾ ನೃಪತಿ ಮಿಾಯಿಸುವಂದ ಮೆಱೆದುದಾ ಜನಪಾ (ಶರಷ. ೦೬-೭೬). **ರಸದಾಳೆಕಬ್ಬು :** ಆಲದ ಬೀಳು ಎಲಚಿ ಚಿಗುರು . . . ರಸದಾಳೆಕಬ್ಬು, ಇಪ್ಪೆಹೂವು ಇವುಗಳ ಕಷಾಯವಿಕ್ಕಿ ಸಕ್ಕರೆಗೂಡಿ ಸೇವಿಸೆ ದಾಹಜ್ವರ ಗುಣಮಕ್ಕುಂ (ಸಕಿತ್ಯ. ೯೬). [ರಸದಾಳಿ + ಕರ್ವ್$_1$]

**ರಸದಾಳಿವಿಲ್ಲ** (ನಾ). ರಸದಾಳಿಯ ಕಬ್ಬಿನ ಬಿಲ್ಲನ್ನು ಹಿಡಿದಿರುವವನು ; ಮನ್ಮಥ : ನಲ್ಲ ಕೊ ನಾಗರೀಕನೆ ಕೊಳ್ಳೊ ರಸದಾಳಿವಿಲ್ಲನ ರೂಪ ಕೊಳ್ಳಲವೋ (ಪೋಸಕ. ೦೯-೯೬). [ರಸದಾಳಿವಿಲ್ಲು + -ಅ$_7$]

**ರಸದಾಳಿವಿಲ್ಲು** (ನಾ). ಮನ್ಮಥನ ಕಬ್ಬಿನ ಬಿಲ್ಲು : ಕಿವಿವರಂ ತೆಗೆದು ಸಮ್ಮೋದದಿಂದೆಸುವ ರಸದಾಳಿವಿಲ್ಲೋ ಎಸಲ್ಕಾಗಳೆರೆಪೆಱೆಯೊಗೆದುದು (ಶದ್ಯ. ೯-೭೬). [ರಸದಾಳಿ + ಬಿಲ್ಲು$_1$ (<ಬಿಲ್$_2$)]

**ರಸದಾಳೆ** 'ರಸದಾಳಿ' ನೋ.

**ರಸದಾಳೆಕಬ್ಬು** 'ರಸದಾಳಿಗರ್ವು' ನೋ.

**ರಸದು**, ರಸ್ತು (ನಾ). ಸೈನ್ಯಕ್ಕೆ ಸರಬರಾಜುಮಾಡುವ ಆಹಾರಧಾನ್ಯ : ಯೆರಡು ಕೋಟೆಗೆ ಇರುವ ರಸದು ತೆಗೆದುಕೊಂಡು ಹೊರಟು ಬಂದು ರಸ್ತು ಸಾಮಾನು ಸಾಗಿಸಿಕೊಂಡು (ರಾಕಂದ್ರ. ೨೫). **ರಸ್ತು :** ರಾಜೇಶ್ರೀ ದೊರೆಗಳ ರಸ್ತಿನ ಹುಂವಸುಯಿತ್ತಿ (ಎಕ. XI, ಮೊಳಕಾ. ೨೫-೫೬ ; 1665) ; ಜಕೀರಿ ರಸ್ತು ಮುಸ್ತೈದೆಗಳೊಳಪೊಗದಂತು ಕಂಡಿಕಣಿವೆ ಪಥಂಗಳಂ ಕಟ್ಟಿ (ಕಕವ. ೩-೪೪). [<–ಪಾರ. ಹಿಂ. ಮರಾ. ರಸದ್]

**ರಸದುಂಬು** (ಕ್ರಿ). ರಸಭರಿತವಾಗಿರು : ಅವಳ ರಸದುಂಬಿದ ಚೆಂದುಟಿಗಳಿಗೆ ನನ್ನ ಒರಟುತುಟಿಗಳನ್ನು ತಗಲಿಸಿದೆ (ಹಾದಹು. ೦೦೩). [ರಸ + ತುಂಬು$_1$]

**ರಸದೃಷ್ಟಿ** (ನಾ). ಕವಿಯ ಸ್ವಾರಸ್ಯವಾದ ರೀತಿ.– ದೃಷ್ಟಿ : ಕೆಲ ಆಧ್ಯಾತ್ಮಿಕ ಸತ್ಯಗಳನ್ನು ರಸದೃಷ್ಟಿಯಿಂದ ಸೂಚಿಸುವ ವ್ಯಂಜಕತೆ (ವವ್ಯಶಾ. ೦೦೬). [ಸಂ.]

**ರಸದೋಷ** (ನಾ). ೧. ಹೊಟ್ಟೆಯಲ್ಲಿ ನೀರು ತುಂಬಿಕೊಳ್ಳುವ ಒಂದು ಬಗೆಯ ರೋಗ : ಪದನಱಿದು ಮುನ್ನ ಹೇಮಂತದ ಪಿಂಡಮನಿಕ್ಕಿ ಗರ್ದುಗನಿಕ್ಕಿಗೆ ಬಟೀಯುಂ ತ್ರಿದಿನಂ ತಾಂ ಲೇಪಂಗೆಯ್ಸಿದೊಡುಟೀಯದೆ ಕಿಡುಗುವುನಿತಱೊಳ್ ರಸದೋಷಂ (ಅಶ್ವಶಾ. ೦೩-೨೯). ೨. [ಕಾವ್ಯಮಿಾ] ಕಾವ್ಯದೋಷಗಳಲ್ಲಿ ಒಂದು ; ರಸದಲ್ಲಿ ಉಂಟಾಗುವ ದೋಷ : 'ದೋಷ' ಗಳನ್ನು (೧) ಪದದೋಷ, (೨) ಅರ್ಥದೋಷ, (೩) ರಸದೋಷ ಎಂದು ಮೂರು ಭಾಗ ಮಾಡಬಹುದು (ಕೃಬಿ. ೨೨೬). [ಸಂ.]

**ರಸದ್ರವ್ಯ** (ನಾ). ರುಚಿಕರವಾದ ಪದಾರ್ಥ : ಸಹಪಂಕ್ತಿಯಲ್ಲಿ . . . ರಸದ್ರವ್ಯವ ಎಸಕದಿಂದ ಇಕ್ಕಿದತೆ (ಸಕವ. I. ೪೩೦-೨೦) ; ವರ ಸುಹಸ್ತದಿ ಪಾಕಗೈದ ರಸದ್ರವ್ಯಮುಂ ನಿರುತನಾಂ ನಿತ್ಯ ಭುಂಜಿಪೆ (ನವಮೋ. ೯-೬೪). [ಸಂ.]

**ರಸಧರ್ಮ** (ನಾ). ರಸಾನುಭವವನ್ನು ಉಂಟುಮಾಡುವ ಗುಣ : ಇದನ್ನು ಮಮ್ಮಟ ಮುಂತಾದ ನವೀನಾಲಂಕಾರಿಕರು ಗ್ರಹಿಸಿ ಗುಣಗಳು 'ರಸಧರ್ಮ' ಗಳೆಂದು ನಿಷ್ಕರ್ಷಿಸಿದ್ದಾರೆ (ಕೃಬಿ. ೦೬೩). [ಸಂ.]

**ರಸಧಾತು** (ನಾ). ೧. ಪಾದರಸ ; ಪಾರಜ. ೨. ದೇಹದಲ್ಲಿರುವ ಸಪ್ತ ಧಾತುಗಳಲ್ಲೊಂದು : ಧಾತುಗಳು ರಸಧಾತು, ರಕ್ತಧಾತು, ಮಾಂಸ ಧಾತು . . . ಎಂದು ಏಳು ತೆರನಾಗಿವೆ (ಸಕವ್ಯ. ೪೮). [ಸಂ.]

**ರಸಧಾನ್ಯ** (ನಾ). ದ್ರವಾಂಶವಿರುವ ಎಳ್ಳು, ಕಡಲೆಕಾಯಿಬೀಜ ಮುಂತಾದುವು : ಬಿಡುಗದ ಮೂಗಳದ ಹೊಲದಲಿ ಪುಟ್ಟಿದಂತ್ತಾ ರಸಧಾನ್ಯ ಜೋಳ ನೆಲು ಮುಂತಾದ ಧಾನ್ಯ (ಸೌಇ. IX-ii, ೬೪೮-೦೪; 1652). [ಸಂ.]

**ರಸಧಾರೆ** (ನಾ). (ಹಣ್ಣಿನಲ್ಲಿರುವ) ದ್ರವದ ಧಾರೆ : ತನಿವಣ್ಣಂ . . . ಚಂಚುಪುಟದಿಂದಂ ಮೆಳ್ಳಿನಿಂ ಸೀಳ್ದು ಸೀಯೆನೆ ಸೋರ್ವ ರಸಧಾರೆಯುಂ ಸವಿದು (ಕಬಕಂ. ೨-೪೯). [ಸಂ. ರಸಧಾರಾ]

**ರಸಧಿ** (ನಾ). ಕಡಲು ; ಜಲಧಿ : ಸುಖದುಃಖಜನ್ಮಮೃತ್ಯುಗಳೆಲ್ಲಮೊಂದಾಗಿ ಮುಳುಗಿರ್ದುವೊಂದನಂತಾನಂದರಸಧಿಯುಲಿ (ಶತ್ರಂಗ. ೪೦-೦೦೨೨). [ಸಂ.]

**ರಸಧ್ವನಿ** (ನಾ). [ಕಾವ್ಯಮಿಾ] ಐದು ವಿಧವಾದ ಧ್ವನಿಗಳಲ್ಲಿ ಒಂದು ; ರಸಾನುಭೂತಿಯನ್ನುಂಟು ಮಾಡುವ ಧ್ವನಿ : ರಸಗಂಗಾಧರಕಾರನು : "ಹೀಗೆ ಐದು ವಿಧವಾದ 'ಧ್ವನಿ' ಯಲ್ಲಿ 'ರಸಧ್ವನಿ' ಗೇ ಪರಮ ರಮಣೀಯತೆ " ಎಂದು ಹೇಳಿದ್ದಾನೆ (ಕೃಬಿ. ೦೬೪); ವಸ್ತುಧ್ವನಿ ಅಲಂಕಾರ ಧ್ವನಿಗಳೆರಡೂ ಪರ್ಯಂತದಲ್ಲಿ ರಸಧ್ವನಿಗೆ ಪೋಷಕವಾಗಬಹುದು (ಕಾರಬಾ. ೩೨೩). [ಸಂ.]

**ರಸನ** (ನಾ). ೧. ರುಚಿ ನೋಡುವಿಕೆ ; ಆಸ್ವಾದನೆ. ೨. ರುಚಿಯನ್ನು ನೋಡುವ ಅಂಗ ; ನಾಲಗೆ : ಸ್ಪರ್ಶನ ರಸನ ಘ್ರಾಣ ಚಕ್ಷು ಶ್ರೋತ್ರೇಂದ್ರಿಯಂಗಳ್ (ಸುಕುಮಾ. ೯-೬ ಪ) ; ರಸನದಿ ಕೇಳ್ವ ಕಾಂಬ ಅಱಿವ ಅಘ್ರಾಣ

ಸುವ ಆಸ್ವಾದಿಸುವ (ಕುಕಂದ. ೧೨. ೩-೧೪೦-೨). ೩. ಕೂಗುವಿಕೆ; ಅಬ್ಬರ. [ಸಂ.]

**ರಸನಗೆ** (ನಾ). ಸ್ವಾರಸ್ಯವಾದ ನಗು : ರಸನಗೆಯೆಳೆನಗೆಯೆಂಬವೆಂತಿಹು ವೆಂಪು ನಸುನಗುತಪಳು ಪಾಡಿದಳು (ಶರಶ. ೧೦-೩೦). [ರಸ + ನಗೆ]

**ರಸನತ್ವ** (ನಾ). ರುಚಿಯನ್ನು ಕಂಡುಹಿಡಿಯುವ ಶಕ್ತಿ : ಅವರ ಹೊಟ್ಟೆಹಸಿವಿನ ತೀವ್ರತೆಯಲ್ಲಿ ನಾಲಗೆಯ ರಸನತ್ವ ಮಂಕುಬಡಿದು ಹೋಗಿದ್ದಿರಬೇಕು (ಹಸುಹೊ. ೩೩೬). [ಸಂ.]

**ರಸನಾಂಚಲ** (ನಾ). ನಾಲಗೆಯ ತುದಿ ; ಜಿಹ್ವಾಗ್ರ : ತೊಳಗುವ ರಸ್ನ ದೊಟ್ಟಿರೊಳ್ ಪಟ್ಟಿರಿಸುತ್ತೆ ಕುಮಾರಸಂ ಮುಂದಂದಳೆದಳವೆಣ್ಣಳೊಲ್ದು ರಸನಾಂಚಲದೊಳ್ದನಿದೋಱ . . . ಜೋಯೆನುತೊಪ್ಪಿ ತೂಗಿದರ್ (ರಾಜಶೇ. ೪-೬೦). [ಸಂ.]

**ರಸನಾಗ್ರ** (ನಾ). = ರಸನಾಂಚಲ : ದ್ವಿಪಾರಿಗುಣ್ಮುವ ರಸನಾಗ್ರದಿಂ ಪುಲಿಗೆ ಕೈಯಿರಡು ನಿಮಿರ್ದೆತ್ತಿ ಪಂಥಿಗೊಪ್ಪುವ ಮೊಳಕೈಯ ತೋರ್ಪರ ರೆಬರ್ ಬಿಯದರ್ ಸಲೆ ಸನ್ನೆವೇಂಟೆಯೊಳ್ (ರಾಜಶೇ. ೫-೯೫). [ಸಂ.]

**ರಸನಾಮಕರ್ಮ** (ನಾ). [ಜೈನ] ತೊಂಬತ್ತುಮೂರು ಬಗೆಯ ನಾಮಕರ್ಮಗಳಲ್ಲಿ ಒಂದು ; ಸಿಹಿ, ಕಹಿ, ಕಾರ, ಒಗರು ಮತ್ತು ಹುಳಿ ಎಂಬ ಪ್ರಕೃತಿಗಳು : ರಸನಾಮಕರ್ಮಂ ಪಂಚವಿಧಮಕ್ಕುಂ ತಿಕ್ತ ಕಟುಕ ಕಷಾಯಾಂಬ್ಲಮಧುರನಾಮಕರ್ಮಂ (ಗೊಮ್ಮಸಾ. ೪-೧೧). [ಸಂ.]

**ರಸನಾಲಂಪಟ** (ನಾ). ಜಿಹ್ವಾಚಾಪಲ್ಯವುಳ್ಳವನು : ರಸನಾಲಂಪಟ ನಾಜ್ಯವಾಂಛಿತನಸಂತುಷ್ಟಂ ಸದಾಸರ್ವಭಕ್ಷ ಸಮಸ್ತಾಟವಿಭುಂಜತೋಗ್ರ ನೆನಿಪೀ ದಾವಾಗ್ನಿಯಂ ಕಾಲ್ಗಳಿಂ ಪೊಸೆದಂ (ಸೂಕ್ತಿಸು. ೧೧-೦೬೫). [ಸಂ.]

**ರಸನಿಮಿಷ** (ನಾ). ಅತ್ಯಂತ ಸಂತೋಷದ ಕಾಲ; ರಸವತ್ತಾದ ಗಳಿಗೆ: ತನ್ನ ಜೀವನದ ಅತ್ಯುತ್ತಮ ರಸನಿಮಿಷಗಳಲ್ಲಿ ತಾನು ಬಾಳುತ್ತಿದ್ದಂತೆ ಅವನಿಗೆ ಅನುಭವವಾಯಿತು (ಕೃಸರು. ೨೯೭). [ಸಂ.]

**ರಸನಿರೂಪಣೆ** (ನಾ). ರಸದ ಅಭಿವ್ಯಕ್ತಿ : ರಸನಿರೂಪಣೆಯಲ್ಲಿ ವಾಲ್ಮೀಕಿಯ ಶಕ್ತಿ ಅದ್ಭುತವಾದುದು (ಚಾರಿಡ. ೯೨). [ಸಂ. ರಸನಿರೂಪಣ]

**ರಸನಿರ್ಮಿತಿ** (ನಾ). = ರಸನಿರೂಪಣೆ : ರಸನಿರ್ಮಿತಿಯಲ್ಲಿ ಕವಯಿತ್ರಿಯ ವ್ಯಕ್ತಿತ್ವಕ್ಕನುಗುಣವಾಗಿ ಅಲ್ಲಲ್ಲಿ ಭೇದಗಳು ಕಂಡು ಬರುತ್ತವೆ (ಕರ್ನಾಕ. ೩೩೬). [ಸಂ.]

**ರಸನಿಷ್ಪತ್ತಿ** (ನಾ). ರಸಾನುಭವವು ಉಂಟಾಗುವಿಕೆ ; ಕಾವ್ಯಾನಂದದ ಉತ್ಪತ್ತಿ : ವಿಭಾವಗಳು, ಅನುಭಾವಗಳು, ಸಂಚಾರಿ(ಭಾವ)ಗಳು ಇವುಗಳ ಸಂಯೋಗದಿಂದ ರಸನಿಷ್ಪತ್ತಿಯಾಗುವುದು (ಭಾರಮಿಮಾ. ೩೫೫). [ಸಂ.]

**ರಸನೆ** (ನಾ). ೧. ನಾಲಗೆ ; ಜಿಹ್ವೆ : "ರಸಜ್ಞಾ, ರಸನಾ, ಜಿಹ್ವಾ – ಈ ೩ ನಾಲಗೆ" (ಶಬ್ದಾಯು. ೯೭-೩೭೭) ; ರಸನಾಶಂಪಾಶತಂ ಸಂಚಳಿಸೆ ಪುದಿಯೆ ಫೂತ್ಕಾರವಾತಾಂತಮಂ ದಳ್ಳಿಸೆ ವಹ್ನಿಜ್ವಾಲೆ (ಶಂರಾಮಿಮಾ. ೫-೭೪). ೨. ಉಡೆನೂಲು ; ಮೇಖಲೆ : "ರಸನೆ ಮೇಖಲೆ ಕಾಂಚಿ ಸಪ್ತಕಿ ಕಳಾಪಿ ಸಾರಸಮೆನಲುಡಿದಾರಮಕ್ಕು" (ಮಂಗರಾ. ೧೦೦-೩೦) ; ದಿನಲಕ್ಷ್ಮೀ ರಸನೈಕಮಧ್ಯಮಣಿಯಾದಂ ಭಾಸ್ಕರಂ (ಳಾರಂಶೂ. ೬೨೯). [ಸಂ. ರಸನಾ]

**ರಸನೇಂದ್ರಿಯ** (ನಾ). ರುಚಿಯನ್ನು ಗ್ರಹಿಸುವ ಅಂಗ ; ನಾಲಗೆ : ರಸನೇಂದ್ರಿಯವಶದಿಂ ಸೈರಿಸಲಾಱದೆ ಗಾಳದರೆಗೆ ಬಾಯ್ದುಟಾವುವು ಮೀನ ಸುಮಾಯಮೆಂದೊಡಕ್ಕಟ ವಸುಮತಿಯೊಳ್ ಜಿಹ್ವೆ ಕಿಡಿಸದಾರಂ ಪದಪಿಂ (ಧರ್ಮಾಮೃ. ೫-೨೫) ; ರಸನೇಂದ್ರಿಯವಿಷಯದಿಂದೆ ಮತ್ಸ್ಯ ಕೆಡುವುದು ಬಾಲಗಾಜಿನ ಬಲೆಯಲ್ಲಿ (ಅಖಂಡೇ. ೭-೪). [ಸಂ.]

**ರಸಪಂಚಕ**(ನಾ)೧. ಹಾಲು, ತುಪ್ಪ, ಜೇನು, ತೈಲ ಮತ್ತು ಮದ್ಯ ಎಂಬ ಐದು ಬಗೆಯ ರಸಗಳು : ನವರಸದೊಳ್ ಘೃತಾದಿ ರಸಪಂಚಕದೊಳ್ . . . ರಸಾಬ್ಧಿ ಸಂತತಂ (ಜಾಚಾರಿ. ೯೪). ೨. [ಜೈನ] ಮಧುರ, ಆಮ್ಲ, ಕಟು, ಕಷಾಯ ಮತ್ತು ತಿಕ್ತ ಎಂಬ ಐದು ರಸನಾಮ ಪ್ರಕೃತಿ : ಪೂರ್ವಶರೀರಬಂಧನಸಂಘಾತವರ್ಣರಸಪಂಚಕಸಂಸ್ಥಾನಸಂಹನನ ಪಂಚಷಟ್ಕಾಂಗೋಪಾಂಗದ್ವಿಕಂ (ಅಾಶ. ೦೭-೪೯ ವ). 'ಪಂಚರಸ' ಪರಾ. [ಸಂ.]

**ರಸಪರವಶತೆ** (ನಾ). ಆನಂದದಲ್ಲಿ ಮುಳುಗುವಿಕೆ,– ತಲ್ಲೀನಗೊಳ್ಳುವಿಕೆ: ಮಾಯಾಮುರಳಿಯಿಂದ ಹೊರಹೊಮ್ಮುತ್ತಿದ್ದ ನಾದಮಾಧುರ್ಯವು . . . ಮನಮೋಹಕವೂ ಆಗಿತ್ತು. ಅದರ ರಸಪರವಶತೆಯು ದೈವೀಕ ವಾಗಿತ್ತು (ಸಂಗೀತ. ೯೭) ; ಮೂಲಸೌಂದರ್ಯವೇನಿದ್ದರೂ . . . ರಸಪರವಶತೆಗೆ ಸಂದ ಚಿತ್ತಕ್ಕೆ ವೇದ್ಯವಾಗುವ ಒಂದು ಅತೀಂದ್ರಿಯವಾದ ಆಧ್ಯಾತ್ಮಿಕಸತ್ಯ (ಸೌಂದಸ. ೩೬). [ಸಂ. ರಸಪರವಶತಾ]

**ರಸಪರಿತ್ಯಾಗ** (ನಾ). [ಜೈನ] ಆರು ಪ್ರಕಾರದ ಬಾಹ್ಯತಪಗಳಲ್ಲಿ ಒಂದು ; ತುಪ್ಪ, ಹಾಲು, ಎಣ್ಣೆ, ಬೆಲ್ಲ, ಸಕ್ಕರೆ, ಉಪ್ಪು ಮೊದಲಾದ ರಸಪದಾರ್ಥಗಳನ್ನು ಸೇವಿಸದೆ ಇರುವ ವ್ರತ : ಕ್ಷೀರ ದಧಿ ಘೃತ ಲವಣ ತೈಲಾದಿ ರಸಂಗಳಂ ಪರಿತ್ಯಾಗಂಗೆಯ್ವ ರಸಪರಿತ್ಯಾಗಂ ಎಂಬ ನಾಲ್ಕನೆಯ ತಪದೊಳಂ . . . ನೆಱೆದು (ಅಾಶ. ೬-೩೦ ವ) ; ಕರಮೆ ಮುನಿ ದುಗ್ಧ ದಧ್ಯಾದಿ ರಸಂಗಳನೆಯ್ದೆ ತೊಱೆದು . . . ನಾಲ್ಕನೆಯ ರಸಪರಿತ್ಯಾಗವೆಂಬ ತಪಮಂ ತಳೆದಂ (ಚಂದ್ರಪ್ರ. ೧೧-೧೧). [ಸಂ.]

**ರಸಪಾಕ** (ನಾ). ರುಚಿಯಾದ ಅಡುಗೆ ; ಸವಿಯಾದ ಪಾಕ : ಕೂಗರಿ ಬದನೆ ಮೊದಲಾದ ಕಾಯ್ಗಳ ರಸಂಗಳ ತೆಗೆದು . . . ಪರಿಮಳಗೊಳಿಸಲು ಪಾರ್ವತೀಮತದ ರಸಪಾಕ (ಸೂಪಶಾ. ೫-೪೧) : ನಗುವೊಂದು ರಸಪಾಕವಳುವೊಂದು ರಸಪಾಕ . . . ಬಗೆದೆರಡನುಂ ಭುಜಿಸು (ಮಂಕುತಿ. ೯೩೪). [ಸಂ.]

**ರಸಪುರಿ** (ನಾ). ಒಂದು ಬಗೆಯ ಮಾವು : ಮಾವಿನ ಹಣ್ಣುಗಳಲ್ಲಿ ರಸಪುರಿ, ಬಾದಾಮಿ ಮುಂತಾದ ಅನೇಕ ಜಾತಿಗಳಿವೆ (ಕೂಹಿ). 'ತೋತಾ ಪುರಿ' ಪರಾ. [ ರಸ + ಪುರಿ ]

**ರಸಪ್ರಕ್ರಿಯೆ** (ನಾ). = ರಸನಿಷ್ಪತ್ತಿ : ಇವರಲ್ಲಿ ಮುಖ್ಯವಾಗಿ ರಸಪ್ರಕ್ರಿಯೆ ಪ್ರತಿಪಾದಿತವಾಗಿದೆ (ಕೃಖಿ೩. ೦೭೭). [ಸಂ. ರಸಪ್ರಕ್ರಿಯಾ]

**ರಸಫಲ** (ನಾ). ೧. ರಸ ತುಂಬಿರುವ ಹಣ್ಣು ; ಸಾರವತ್ತಾದ ಫಲ : ರಸಫಲ ಪಾಕಾದಿಗಳನೂ ಸರ್ವದ್ರವ್ಯಗಳನೂ ಷಡುರುಚಿ ಭಿನ್ನರುಚಿ ಮೊದಲಾದ ಪದಾರ್ಥವತ್ತಾಜನಜೀವು ಜಿಹ್ವೆಯ ಕೈಯಲೂ ಲಿಂಗಜಿಹ್ವೆಗೆ ಅರ್ಪಿಸಲು ರಸಪ್ರಸಾದ (ಉಶಿ. ೪. ೦೦೭-೦೯೭). ೨. ತೆಂಗು. [ಸಂ.]

**ರಸಬಾಳೆ** 'ರಸವಾಟಿ[3]' ನೋ.

**ರಸಬೀಜ** (ನಾ). ಒಂದು ಬಗೆಯ ಸಸ್ಯ : ತಪಸಿ, ಕಾಲಾದ್ರಿ, ರಸಬೀಜ (ವೃಶಿಗಿ. ೩೪-೯೭೯). [ಸಂ.]

**ರಸಬುರುಡೆ** (ನಾ). = ರಸಗುಂಡು : ನೆಲಕ್ಕೆಲ್ಲಾ ಅಮೃತಶಿಲೆಯು ಹಾಸಲ್ಪಟ್ಟಿದೆ. ಮೇಲುಗಡೆ ಕಂದೀಲುಗಳು ರಸಬುರುಡೆಗಳೂ . . . ಅಲಂಕರಿಸಲ್ಪಟ್ಟಿದೆ (ಶ್ರೀರಾಯ. ೦೩೭). [ ರಸ + ಬುರುಡೆ ]

**ರಸಭಂಗ** (ನಾ). ರಸಾನುಭವಕ್ಕೆ ಉಂಟಾಗುವ ಅಡ್ಡಿ : ರಸಭಂಗ ಭಯದಿನಿಂದ್ರಂ ಪೊಸತೊಂದಾ ದೊರೆಯ ಪಾತ್ರಮಂ ತಂದನುಸಂಧಿಸು ವುದುಂ (ಅಾಶ. ೯-೮೨) ; ಆ ವೇಳೆಯಲ್ಲಿ ಪಾಲೀಕಾರನೊಬ್ಬನು ಬಂದು . . . ರಸಭಂಗ ಮಾಡಿದನು (ರಂಗರೋ. ೭೭). [ಸಂ.]

**ರಸಭರಿತ** (ಗು)೧. ರುಚಿಕಟ್ಟಾದ ; ಸಾರವತ್ತಾದ : ರಸಭರಿತ ಖರ್ಜೂರ ಫಲ ಸಂಪ್ರಸರಭತ್ರ ವನೆಸಗಿಯುಪವನವೆಸೆದುದೈ (ಶಬ್ದಾ ಉ. ೭-೨೪) ; ರಸಭರಿತ ಖರ್ಜೂರ ಕುಜಾ ಮೆಲ್ಲಬಲ್ಲುದೆ (ಕುಕಂದ. ೫-೧೪-೦). (ನಾ). ೨. ಸಾರವತ್ತಾದುದು. ೩. ಶೃಂಗಾರಾದಿ ನವರಸಗಳಿಂದ

ತುಂಬಿದುದು. ೨. ೩ : ರಸಭರಿತವಾಗಿ ಸತ್ಕವಿಕಾವ್ಯಬಂಧದಂತೆ ಸಮಸ್ತಫಲಪೂರ್ಣವಾಗಿ ಸುಕೃತಾತ್ಮನಂತೆ ಪರದನಂತೊಪ್ಪುಗುಂ ಶಾಲಿಯ ವನಂ (ಶಬ್ದಗಾ. ೯-೦೩). [ಸಂ.]

**ರಸಭಸ್ಮ** (ನಾ). ಒಂದು ಬಗೆಯ ಔಷಧೀಭಸ್ಮ ; ಪಾದರಸದ ಬೂದಿ : ರಸವಂ ತೊಳೆದು ಶುದ್ಧಿಯಂ ಮಾಡಿ ಗಂಧಕದ ಚೂರ್ಣದಲ್ಲಿ ಜಳಕಮಾಡಿ, ಇಟ್ಟಿಗೆಯ ಸಂಪುಟವ ಮಾಡಿ, ಕುಳಿ ತೋಡಿ, ವಾಲುಕಾಯಂತ್ರದಲ್ಲಿ ಬೆರಣಿಯ ಕುಳಿಯಲ್ಲಿ ೪ ಜಾವ ಪುಟವಿಕ್ಕೆ ರಸಭಸ್ಮವಹುದು (ಖಗೇಂ. ೭೩). [ಸಂ.]

**ರಸಭಾವ** (ನಾ). ೧. ನೀರು ಇರುವಿಕೆ; ದ್ರವದ ಅಸ್ತಿತ್ವ. ೨. ರಸಾನುಭವವನ್ನುಂಟುಮಾಡುವ ಚಿತ್ತವೃತ್ತಿ : ಮೃದುಪದಗತಿಯಿಂ ರಸಭಾವದ ಪೆರ್ಚಿಂ ಪಣ್ಯವನಿತೆಯೊಲ್ ಕೃತಿಸೌಂದರ್ಯದ ಚಾತುರ್ಯದ ಕಣಿಯೆನೆ ವಿದಗ್ಧಬುಧಜನದ ಮನವನಲೆಯಲೆವೇಡಾ (ಆದಿಪು. ೦-೦೭). ೧, ೨ : ಜಗದೇಕಜೀವನಸ್ಥಿತಿಯಿನ್ನತಿಪ್ರಸಾದಗುಣದಿಂ ರಸಭಾವವಿಳಾಸದಿಂ . . . ಸರಸ್ವತಿ ದಯೆಗೆಯ್ಗೆ (ಶಾಂತೀಪು. ១). [ಸಂ.]

**ರಸಭೋಜ್ಯ** (ನಾ). ದ್ರವರೂಪದ ಆಹಾರ (?) : ರಸಭೋಜ್ಯದೊಳಂ ಮರಣಮುಮಂ ಸಂಪಾದಿಸುಗುಂ ವಾಜಿಗಳ್ಗೆ ಷಡ್ವಿಂಶತಿಯೊಳ್ (ಅಶ್ವಶಾ. ೩-೬೨). [ಸಂ.]

**ರಸಮಗ್ನ** (ನಾ). ಆನಂದದಲ್ಲಿ ಲೀನನಾದವನು : ಚತುರಕವಿ ಪೇಟಿ ರಸವತ್ಕೃತಿಯಿಂ ರಸಮಗ್ನನಾಗಿ ದುರ್ಜನನುಮದಂ ಸ್ತುತಿಯಿಸವೇಟ್ಟುದು (ಪಂಪಭಾ. ೦-೨೯). [ಸಂ.]

**ರಸಮಗ್ನತೆ** (ನಾ). ಆನಂದದಲ್ಲಿ ತಲ್ಲೀನವಾಗುವಿಕೆ : ಘನಾಗಮ ಲಕ್ಷ್ಮೀಕೇತಕೀಧವಳಕಟಾಕ್ಷೆ ಕಂಡು ರಸಮಗ್ನತೆಯಿಂ ಪುಳಕಾಂಕುರಂಗಳತ್ಯವಿರಳವಾಗೆ ಕೊಟ್ಟಳಚಿರಪ್ರಭೆಯೆಂಬ ಸುವರ್ಣಮಾಲೆಯಂ (ಪಂಪರಾ. ೯-೯೭).

[ ಸಂ. ರಸಮಗ್ನತಾ ]

**ರಸಮಟ್ಟ** (ನಾ). ವಸ್ತುಗಳ ಮಟ್ಟವನ್ನು ಕಂಡುಹಿಡಿಯಲು ಉಪಯೋಗಿಸುವ, ಪಾದರಸವನ್ನು ತುಂಬಿ ಮಾಡಿದ ಒಂದು ಸಾಧನ : ವಸ್ತುಗಳು ಸಮತಲವಾಗಿವೆಯೆ ಇಲ್ಲವೆ ಎಂಬುದನ್ನು ಪರೀಕ್ಷಿಸಲು ಉಪಯೋಗಿಸುವ ಒಂದು ಸಲಕರಣೆ ; ಮಟ್ಟಕೋಲು ; ಮೂಲೆಮಟ್ಟ ; (ರಸ)ಮಟ್ಟ (Level· ೩೦೪೨). [ ರಸ + ಮಟ್ಟ$_1$ ]

**ರಸಮಾರ್ಗ** (ನಾ). ಶೃಂಗಾರಾದಿ ನವರಸಗಳನ್ನು ನಿರೂಪಿಸುವ ಕ್ರಮ, ರೀತಿ : ವೀರಾದ್ಭುತಕರುಣಾಶೃಂಗಾರಭಯಾನಕ ಸರೌದ್ರಬೀಭತ್ಸಮಹಾಸಾರತರಹಾಸ್ಯಶಾಂತಾಧಾರನವವಿಧವಿಕಲ್ಪಮಾ ರಸಮಾರ್ಗಂ (ಕವಿರಾ. ೩-೦೮೮). [ಸಂ.]

**ರಸಮೂಲಿಕೆ** (ನಾ). ಒಂದು ಬಗೆಯ ಸಸ್ಯ : "ರೋಮಕಂದಃ — ರೋಮಕಂದರ ; ರಸಮೂಲಿಕೆ " (ಓಕಂ. ೦೪೦).

[ ಸಂ. ರಸಮೂಲಿಕಾ ]

**ರಸಮೆಟ್ಟು** (ಕ್ರಿ). ರಸವು ತುಂಬಿರು ; ಸಾರದಿಂದ ಕೂಡಿರು : ಹಸನಾದ ಹಣ್ಣೀ ಮೊಸಳೆತೋಟ ಬಾರೆ ರಸಮೆಟ್ಟಿದೆಲೆಯ ಕೊಯಿಸೇನು (ಹಳ್ಳಿಯ. ೩೭). [ ರಸ + ಮೆಟ್ಟು$_1$ ]

**ರಸಯಿಸು** (ಕ್ರಿ). ( ? ) : ರಸಯಿಸಿರ್ದ ತುರಂಗಮುಮಂ ನೀರೂಡವ ಹರ್ನಿಶಮುಂ ಪ್ರಯೋಗಿಸುಗೆ ತಪ್ಪದೆ ಜಾವದೊಳ್ಪರ್ತ್ತಿಯ್ದು ಹರೀತಕಿಯಾಗೆ ಸಂಧಿಸಿ (ಲೋಕೋಪ. ೯-೨೩೭). " ವಾಯುಕೊಳ್ " (ಲೋಕೋಪ. ಟೀಕು). [ ? ]

**ರಸಯೋನಿ** (ನಾ). ಬಿಳುಗಾರ ; ಟಂಕಣ. [ಸಂ.]

**ರಸರಸಾಯನ** (ನಾ). ಅತಿರುಚಿಯಾದ ರಸಾಯನ : ನಾಗಕನ್ನೆಯರುಂ ತಾನುಂ ಮನಂಬುಗಿಸುವಂತೆ ಮಜ್ಜನಂಬುಗಿಸಿ ರಸರಸಾಯನಂಗಳನೂಡುವಂತೆ ದಿವ್ಯಾಹಾರಂಗಳನೂಡಿ (ಶಂಕಶಾ. ೯-೦೭ ವ); ದಿನದಿನದೊಳಿತ್ತಲು ರಸರಸಾಯನಮಂ ಬಸವನರಮನೆಯೊಳನುಭವಿಸಿ(ಬಸಪು. ೩೦-೩); ತನಿವಣ್ಣಳ ರಸರಸಾಯನ . . . ಪಾಲ್ಗೊಸರ್ಗಳಿವು ಬಗೆಗೊಳಿಸಿ(ಶ್ರೀಪುರಾ. ೬-೯೯). [ಸಂ.]

**ರಸರ್ಧಿ** (ನಾ). = ರಸನುದ್ಧಿ : ಆಸ್ಯವಿಷರುಂ ದೃಷ್ಟಿವಿಷರುಂ ಕ್ಷೀರಸ್ರಾವಿಗಳುಂ ಮಧುಸ್ರಾವಿಗಳುಂ ಸರ್ಪಿಃಸ್ರಾವಿಗಳುಂ ಅಮೃತಸ್ರಾವಿಗಳುಂ ಎಂದು ರಸರ್ಧಿಪ್ರಾಪ್ತಾಚಾರ್ಯರ್ ಅಱುತೆಱು (ತತ್ತ್ವಸೂ. ೦೭೯). [<ಸಂ. ರಸರ್ದ್ಧಿ]

**ರಸವಂತಿ** (ನಾ). ೧. ರಸವನ್ನು ಹೊಂದಿರುವುದು ; ಸಾರವತ್ತಾದುದು : ಯಾರ ಪುಣ್ಯ ಬೆಳೆಯಲೇದು . . . ಸತತ ಶ್ರಮಿಸಿದೆನೊ ಆ ರಸವಂತಿ ಈಗ ಬತ್ತಿ ಹೋಯಿತೆ ! (ಶಾಂತಲಾ. ೩೩೯). ೨. ಒಂದು ಬಗೆಯ ಔಷಧಿಮೂಲಿಕೆ : ೩೯೫. ರಸವಂತಿ ೩೯೬. ರಸಸಿಂಧೂರ (ವುಂಡಿವಾ. ೦೭೩). [← ಹಿಂ. ಮರಾ. ರಸವಂತೀ]

**ರಸವಂತಿಕೆ** (ನಾ). ರಸಿಕತನ : ಮನೋಹರವಾಗಿ ಹೃದಯಂಗಮವಾಗುವಂತಹ ವಿಶೇಷತರದ ರಸವಂತಿಕೆಯೂ ಇಲ್ಲ (ರಾಜಪ. ೮೨) ; ನನ್ನೀ ರೂಪು . . . ಐಶ್ವರ್ಯ ರಸವಂತಿಕೆ ಎಂಥ ಮಹಾಯೋಗಿಯ ದೃಢನಿಷ್ಠೆಯನ್ನೂ ಹುಡಿಗುಟ್ಟಬಲ್ಲುದು (ಕುಂಗಶ. ೮೨). [ರಸ + — ವಂತ + — ಇಕೆ]

**ರಸವಚ್ಚ** (ನಾ). ಚಿನ್ನದ ಆಭರಣ : ರಸವಚ್ಚಂಗಳ ಬಣ್ಣಗೆವೆಳಗಿನಿಂದೆ ಇಂದ್ರಧನುವಂ ಸಿರಿರಾಣಿಯ ಪೊಂಜೆಳೆಮೆಯ್ಯಿಂ ಮಿಂಚುವಳ್ಳಿಯನೊಳಕೊಂಡಸೆವಮರ್ದುಂಡ ಕಮರ್ಗುಲಂತೆಯುಂ ತೋರ್ಕುಂ (ಕಳವಂ. ೦೨೩-೦೩). [ರಸ + ಪಚ್ಚ$_2$]

**ರಸವಣ್** (ನಾ). ರಸಭರಿತವಾದ ಹಣ್ಣು : ಸಾರವತ್ತಾದ ಫಲ : ಸೋರ್ವ ರಸವಣ್ಗಳಿಂ ತಾಳ್ದ ಚೂತಂ ತುದಿಗೆ ಪರ್ವಿದೆಲೆವಳ್ಳಿಯಿಂದೆಸೆವ ಪೂಗಂ . . . ನಾಡೆ ಸಾರ್ವಕಾಲಂ ಕುಂದವು (ಶಂಪು. ೦೦-೨೨).

[ ರಸ + ಪಣ್$_3$]

**ರಸವಣೆ** (ನಾ). ಒಂದು ಬಗೆಯ ಮದ್ಯ : ರಸವಣೆಯನುಂಡ ಗೊರವಿತಿ ಪೊಸತಾಶೀರ್ವಾದವುಳ್ಳದೊಂದೆಂದಾಗಳ್ ಬಸಿಗಳ್ಳಿಂಗೆ ಮಹೇಶರ ಪಸಾದ ಸುರುಕವಡೆ ಕವಡೆ ಹರಿಪೋ ಎಂದೆಳ್ ( ? ) (ಸೂಕ್ತಿಸು. ೦೩-೨೦). [ರಸ + < ಪಾಣಿ$_1$]

**ರಸವಣಿಗ** (ನಾ). ಮದ್ಯವನ್ನು ಕುಡಿಯುವವನು : ಇಬಿದುದಕದಂತೆ ಹಾಲಿನ ನಬುಸೋನೆಯುಣ್ಡ ಬಣ್ಣದರಲ್ಗಳ ಸೋನೆಯಿಂ ತುಬುಕಿನ ಜೋಲುವ ತಿಳಿಗಳನೀಜಿಗಿದರಾ ಜನಮನಲುರೆ ಹೊಸರಸವಣಿಗರ್ ( ? ) (ಸೂಕ್ತಿಸು. ೦೩-೦೯). [ರಸವಣ + — ಗ$_2$]

**ರಸವತಿ** (ನಾ). ಅಡುಗೆಮನೆ ; ಪಾಕಶಾಲೆ : " ಪಾಕಸ್ಥಾನಂ, ರಸವತೀ, ಮಹಾನಸಂ — ಈ ೩ ಬಾಣಸಿನ ಮನೆ '' (ಕರಾಯು. ೯೯-೦೪೦).

[ಸಂ. ರಸವತೀ]

**ರಸವತ್ತು** (ನಾ). ರಸವುಳ್ಳುದು ; ರಸಭರಿತವಾದುದು : ಇದರಿಂದ ಒಳ್ಳೆ ರಸವತ್ತಾದ ಪಲಾವ್ ಆಗುತ್ತದೆ (ಪುರಿವಾ. ೩೭); ಗುರುಗುಣಾರ್ತಿ . . . ರಸವತ್ತಾದ ಸಾಮಗ್ರಿ ತುಂಬಿದ ಶಾಟು ಮುಂದೆ ಸರಿಸಿದ (ಪಾವಪುಪ. ೦೯೩). [ಸಂ. ರಸವತ್]

**ರಸವದ್ಗೇಯ** (ನಾ). ಸಾರವತ್ತಾದ ಹಾಡು : ಲಲಿತಾಲಂಕರಣಪ್ರಸನ್ನರಸವದ್ಗೇಯಂಗಳೊಳ್ ಮಾಡುತುಂ ಮುಬುಗುತ್ತುಂ (ಆದಿಪು. ೦-೫೯).

[ಸಂ.]

**ರಸವರ್ಗ** (ನಾ). ೧. ಆಹಾರಕ್ಕೆ ರುಚಿಕೊಡುವ ಮೆಣಸು, ಉಪ್ಪು ಮೊದಲಾದ ಪದಾರ್ಥ. ೨. ಚೆನ್ನಾಗಿ ಮಿಶ್ರಣ ಮಾಡಿದ ಗಾರೆ : ವಜ್ರಗಾರೆ. [ಸಂ.]

**ರಸವಶ** (ನಾ). ರಸಾನುಭವದಲ್ಲಿ ತನ್ಮಯನಾದವನು : ಕನ್ನಡವನೆ ಆಡಿ ಕನ್ನಡವನೆ ಹಾಡಿ ರಸವಶನಾದೆನೋರಂತೆ (ಇಂಚಾಪ. ೭೯-೩೩); ದೇವರು

ರುಜುಮಾಡಿದನು : ರಸವಶನಾಗುತ ಕವಿ ಅದ ನೋಡಿದನು (ಶಬ್ದಮ. ೨೭–೩೦). [ಸಂ.]

**ರಸವಸ್ತು** (ನಾ). ಸತ್ವವನ್ನು ನೀಡುವ ದ್ರವಪದಾರ್ಥ ; ಎಣ್ಣೆ : ರಸ ವಸ್ತುವನಾಂಡು ಜ್ಯೋತಿ ತಾ ಪೋಪಾಗ ಪಣತಿಗೆ ಪೇಳದೆ ಹೋಯಿತು (ಪುರಂದ. ದಾ. ೩–೦೩೯–೪). [ಸಂ.]

**ರಸವಾದ** (ನಾ). ಒಂದು ಬಗೆಯ ಲೋಹವಿದ್ಯೆ ; ಕಬ್ಬಿಣ ಮುಂತಾದ ಕೀಳುಲೋಹಗಳನ್ನು ಚಿನ್ನವನ್ನಾಗಿ ಮಾರ್ಪಡಿಸುವ ವಿದ್ಯೆ : ಬಲಭದ್ರನೆಂಬ ಸಿದ್ಧನು . . . ಸಕಲಸಾಧನವಂ ಕೂಡಿ ರಸವಾದದಿಂದ ಸುವರ್ಣವಂ ಮಾಡಲು (ಶೃರಸೂ. I. ೩೨೭); ರಸವಾದದ (Alchemy) ಮಾತು ಮೊದಲು ಬಂದಿರುವುದು ಕ್ರಿ. ಪೂ. ೧೩೩ರಲ್ಲಿ ಚೀನದಲ್ಲಿ (ತಿಂಪ್ರಾ. ೯೯). [ಸಂ.]

**ರಸವಾದಕ** (ನಾ). ಲೋಹವಿದ್ಯೆಯನ್ನು ಬಲ್ಲವನು ; ಕಬ್ಬಿಣ ಮುಂತಾದ ಕೀಳುಲೋಹಗಳನ್ನು ಚಿನ್ನವನ್ನಾಗಿ ಮಾಡುವವನು: ಒರ್ವ ರಸವಾದಕ ನೆಂಬ ಬಿಚ್ಚುವನೀ ಬಾವಿಯೊಳಗಿಲಿದು ನೀನೀ-ರಸಮಂ ತೋಗೆದು ಕೊಟ್ಟೊಡದಜಿಸೊಳ್ ಮಾಡಿದ ಪೊನ್ನುಂ ನಿನಗಮೆನಗಂ ಸಮಭಾಗಮಕ್ಕು ಮೆಂದೊಡೆ (ವಡ್ಡಾರಾ. ೦೮೭–೧೧). [ಸಂ.]

**ರಸವಾದಸಿದ್ಧ** (ನಾ). ರಸವಾದದಲ್ಲಿ ಸಿದ್ಧಿಯನ್ನು ಪಡೆದವನು : ಶಿವನು ರಸವಾದಸಿದ್ಧನೆಂಬ ಜಂಗಮನಾಗಿ ಬಂದು . . . ಪರುಷದ ಗಟ್ಟಿಯಿಂದ ಮುಟ್ಟಿಸಿ ಚಿನ್ನವ ಮಾಡಿ ಜಂಗಮಾರ್ಚನೆಯ ಮಾಡು ಎನಲು (ಶೃರಸೂ. I. ೩೪೪). [ಸಂ.]

**ರಸವಾದಸಿದ್ಧಿ** (ನಾ). ರಸವಾದದ ಪ್ರಯೋಗದಲ್ಲಿ ದೊರೆಯುವ ಸಾಧನೆ ; ರಸಸಿದ್ಧಿ : ಎನ್ನ ರಸವಾದಸಿದ್ಧಿಯಿಂ ನೋಡೀಗಳ್ ಸಿನ್ನ ಮನೆಯೊಳಿರ್ದ ಬೆಳ್ಳಿ ತಾಮ್ರ ಸೂಜಿಗಳ್ ಮೊದಲಾದವಂ ತೆದು ಮುಂದೆ ಮಡಂಗೆಂದು ನುಡಿಯಲ್ (ಹಾಲಾಸ್ಕ. ೩–೪–೧ ವ). [ಸಂ.]

**ರಸವಾದಿ** (ನಾ). = ರಸವಾದಕ : ಎಂದು ಬಿನ್ನಪಂಗೆಯ್ಯಲೊಡಂ ಬದ್ಧರಸನುಂ ಸಿದ್ಧರಸವೇದಿಸುವವಾದ ರಸವಾದಿಯಂತೆ ಜ್ವಳಸಜಟಿ ರಾಗಿಸಿ (ಶಾಂತಿಪು. ೩–೩೭ ವ); ಸೊಗಸ ಹುಟ್ಟಿಸಿ ಸುಲಿವ ರಸವಾದಿಗಳವರ ವಿಡಾಯಿಗಳ ನಂಬುಗೆಯ ಕೇವಣ ಪಾದುಕಾಜಿರ ಕರ್ಣ ನೋಡು (ಶುವ್ಯಾಧ್ರೂ. ೦೬–೨೫). [ಸಂ. ರಸವಾದಿನ್]

**ರಸವಾಳೆ** ' ರಸಪಾಟ್ ' ನೋ.

**ರಸವಾಟಿ**[3], ರಸಬಾಳೆ, ರಸವಾಳೆ (ನಾ). ಒಂದು ಬಗೆಯ ಶ್ರೇಷ್ಠವಾದ ಬಾಳೆ : '' ನೇವಾಳೀಕ್ಷು ರಸವಾಟಿ[3] " (ಓಹಂ. ೯೭). **ರಸಬಾಳೆ** : ರಸಬಾಳೆ ಚಿರುಬಾಳೆ ತಸಬಾಳೆ ಕೆಂಬಾಳೆ ಪೊಂಬಾಳೆ ಕರ್ಪೂರ ಬಾಳೆ . . . ಮೊದಲಾದ ರಸ್ಯ ಸುಖಾರ್ಹ ಸಾರ್ವತ್ರಿಕಮಾದ ಫಲಂ (ಶಿವೀಅ. ೨೦೦); ಬಾಳೆಯ ಕುಲದಲ್ಲಿ ಗುಜರಾಥಿ, ರಸಬಾಳೆ . . . ಪಣೆಬಾಳೆ ಎಂದು ಈ ಪ್ರಕಾರ ಹಲವು ವಿಧ (ಕೃಷಿಕ್ರ. ೦೩೩); ನಂಜನಗೂಡಿನ ರಸಬಾಳೆ ಅತಿ ಪ್ರಸಿದ್ಧ (ರೂಢ). **ರಸವಾಳೆ** : ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆಯಸವಾ ದೇವಾಳೆ . . . ಮಜ್ಜಿದುಪರ್ತಿಯಾಲಿ (ಕೆಂಪಸ. ೩–೯೭) ; ರಸವಾಳೆಹಣ್ಣನು ಒಸೆದು ಮೆಲುವಂತಾಯ್ತು (ಶಸಭಾ. ೦೯–೦೦). [ರಸ + ಬಾಟಿ[3]]

**ರಸವಿಕಾರದೋಷ** (ನಾ). ಜೀರ್ಣರಸವಲ್ಲಿ ದೋಷವುಂಟಾಗುವ ಒಂದು ಬಗೆಯ ರೋಗ : ಸೊರೆವೆರಸು ಲದ್ದಿ ಪೊಜಮಡೆ ತುರಗಂ ದಡವಡಿಸಿ ನಡೆಯಲಾಜದೆ ಕಾಲ್ಗಟ್ಟಿರೆ ರಸವಿಕಾರದೋಷಂ ತುರಗ ಮುಖರ್ಕ್ಕಕ್ಕುಂ (ಅಶ್ವಶಾ. ೦೩–೨೭). [ಸಂ.]

**ರಸವಿಜ್ಞಾನಿ** (ನಾ). ರಸಾಯನಶಾಸ್ತ್ರವನ್ನು ಬಲ್ಲವನು ; ರಸಶಾಸ್ತ್ರಜ್ಞ : ರಸವಿಜ್ಞಾನಿ ಶಾಕಾಫೋಡೆಲ್ ತನಗೆ ಸಿಕ್ಕಿದ ಕಲ್ಲಿನ ಚೂರನ್ನು ತೆಗೆದುಕೊಂಡು ಪ್ರಯೋಗಶಾಲೆಗೆ ಹಿಂತಿರುಗಿದನು (ಮೋರಖ. ೬೦). [ಸಂ. ರಸವಿಜ್ಞಾನಿನ್]

**ರಸವೃತ್ತಿ** (ನಾ). ನವರಸಗಳಿಂದ ಕೂಡಿದುದು; ರಸಮಯವಾದುದು : ರಸವೃತ್ತಿ ಸಭೆಗೆ ಪೋಷನರಸವೃತ್ತಿಯನೀಯೆ ವಿಭ್ರಮಂ ವಿಭ್ರಮವಂ ಪಸರಿಸೆ ವಿಲಾಸವತಿ ನರ್ತಿಸಿದಳ್ ಕಂದರ್ಪಸಾಯಕಂ ನರ್ತಿಪವೋಲ್ (ಮಲ್ಲಿಪು. ೯–೯೯) ; ನೆಟಿದೆಂಟುಮಾರ್ಚನೆಗಳಿಂ ರಸವೃತ್ತಿಯ ನೃತ್ತಮಂ ಪ್ರವರ್ತಿಸಿ (ಚಂದ್ರಪ್ರ. ೪–೬೪). [ಸಂ.]

**ರಸವ್ಯಂಗ್ಯ** (ನಾ). [ಕಾವ್ಯಮೀ] ರಸಾನುಭವಕ್ಕೆ ಸಹಕಾರಿಯಾದ ವ್ಯಂಗ್ಯ : ವಸ್ತು ರಸ ಅಲಂಕಾರಗಳು ವ್ಯಂಗ್ಯಗಳಾಗುವುವೆಂಬೂ ಅವುಗಳಲ್ಲಿ ರಸವ್ಯಂಗ್ಯವೇ ಶ್ರೇಷ್ಠವೆಂದೂ ಸಿದ್ಧಾಂತಿಸಿದ ಮೇಲೆ . . . ಅದಕ್ಕೆ ಪ್ರಾಧಾನ್ಯವನ್ನು ಕೊಟ್ಟಂತೆಯೂ ತೋರುತ್ತದೆ (ಕಪಿಲ. ೦೬೩). [ಸಂ.]

**ರಸಶಾಸ್ತ್ರ** (ನಾ). ೧. = ರಸವಾದ. ೨. [ಕಾವ್ಯಮೀ] ನವರಸಗಳನ್ನು ಕುರಿತ ಶಾಸ್ತ್ರ : ವಿಪ್ರಲಂಭ ವಿಟ ಪ್ರಸ್ತುತ ವೈಶಿಕಾದಿ ರಸಶಾಸ್ತ್ರೋದ್ಭೂತಸನ್ಮಾರ್ಗ ವೃತಿ ವಿಕಲ್ಪಂಗಳುಮಂ ಮನಗೋಳಿಸಿದಂ ಶೃಂಗಾರ ರತ್ನಾಕರಂ (ಶೃಂಗಾರ. ೦.೦೭). ೩. [ವಿಜ್ಞಾನ] ರಸಾಯನಶಾಸ್ತ್ರ : ' ರಸಶಾಸ್ತ್ರಜ್ಞ ' ಪರಾ. [ಸಂ.]

**ರಸಶಾಸ್ತ್ರಜ್ಞ** (ನಾ). ರಸಾಯನವಿಜ್ಞಾನವನ್ನು ಬಲ್ಲವನು ; ರಸವಿಜ್ಞಾನಿ : ತಾವು ವಾಯುವಿನಲ್ಲಿ "ಆರ್ಗಾನ್" ಎಂಬ ಇನ್ನೊಂದು ಹೊಸ ಅನಿಲವು ಇದ್ದೇ ಇರಬೇಕೆಂದು ಹೇಳಿದಾಗ ಇಂಗ್ಲೆಂಡಿನ ರಸಶಾಸ್ತ್ರಜ್ಞರು (chemists) ತಮ್ಮನ್ನು ಧಿಕ್ಕರಿಸಿ ಅವಹೇಳನ ಮಾಡಿದರು (ಜಗಹಂ. ೯೭). [ಸಂ.]

**ರಸಶುದ್ಧಿ** (ನಾ). ಪಾದರಸವನ್ನು ಶುದ್ಧಿಗೊಳಿಸುವಿಕೆ. [ಸಂ.]

**ರಸಶೇಷ** (ನಾ). ವಿಷೂಚಿ ಎಂಬ ರೋಗದಲ್ಲಿ ಒಂದು ಬಗೆ ; ಆ ವಿಷೂಚಿ ವಿಷೂಚಿಕೆಯೆಂದು, ಅಳಸಕವೆಂದು, ಅಜೀರ್ಣವೆಂದು, ವಿಳಂಬಿಕೆಯೆಂದು, ರಸಶೇಷವೆಂದು ಐದು ತೆಜನಾಗಿಹದು (ವೈದ್ಯಸಾ. I. ೨೯೩); ಜೀರ್ಣಾಜೀರ್ಣದೊಷದೆ ಕೂಡಿಕೊಂಡಿರ್ದ ವಿಷೂಚಿಯು ರಸಶೇಷವೆನಿಸಿ ಕೊಂಬುದು (ಸಕವೈ. ೩೭೩). [ಸಂ.]

**ರಸಸಿಂಧೂರ** (ನಾ). ಪಾದರಸ ಮತ್ತು ಗಂಧಕಗಳ ಸಂಯೋಗದಿಂದ ಸಿದ್ಧವಾಗುವ ಒಂದು ಬಗೆಯ ರಾಸಾಯನಿಕ ವಸ್ತು : ರಸಸಿಂಧೂರ ವನ್ನೇ ಅವರು ಧರಿಸುವುದು (ಪಾಪಖನ. ೦೩೩) ; ರಸವಂತಿ. . . ರಸಸಿಂಧೂರ (ಮುಂಬಾಪ್ತ್ಯಾ. ೦೭೩). [ಸಂ.]

**ರಸಸಿದ್ಧ** (ನಾ). = ರಸವಾದಸಿದ್ಧ : ರಸಸಿದ್ಧನಿಟ್ಟ ಗುಳಿಗೆಯನನ್ನ ರೊಬ್ಬಲಾ ಸೊಸಲ ಬೆದರಂ ಪರುಷವೇದಿಯಂ ಮಾಡಿ (ಶಿಕ್ಷೃತು. ೬.೩–೬೦); ಶಿವನು ರಸಸಿದ್ಧನೆಂಬಾಚಾರ್ಯನಾಗಿ ಬಂದು ರಸವಾದಸಿದ್ಧಿಯ ಕಲಿಸಿಹೆನೆನಲು (ಶೃರಸೂ. I. ೩೩೩) ; ಮುಟ್ಟಿದುದನೆಲ್ಲ ಚಿನ್ನ ಮಾಡಿದ ರಸಸಿದ್ಧರವರು (ಪಶ. ೬೬೦). [ಸಂ.]

**ರಸಸಿದ್ಧಿ** (ನಾ). ೧. ರಸವಾದದಲ್ಲಿ ದೊರೆತ ಸಾಧನೆ ; ರಸವಾದಸಿದ್ಧಿ : ಉರಿಗೆ ರಸ ನಿಂದಾಗವೆ ರಸಸಿದ್ಧಿ ಎಂಬೆ ಅಸಿಗೆ ಶರೀರ ನಿಂದಲ್ಲಿಯೆ ಕಾಯ ಸಿದ್ಧಿ ಎಂಬೆ (ಪೋಣವಚ. ೦೯–೭೬) ; ಜಂಗಮದ ಪಾದೋದಕಮೆಂಬ ರಸಸಿದ್ಧಿ ನಮಗುಂಟು (ಶೃರಸೂ. I. ೩೩೩) ೨. ಕಾವ್ಯಾನಂದವನ್ನು ದೊರಕಿಸಿಕೊಳ್ಳುವುದು : ರಸಜೀವನಕೆ ಮಿಗಿಲ್ ತಪವಿಹುದೆ ? ರಸಸಿದ್ಧಿಗಿಂ ಮಿಗಿಲೆ ಸಿದ್ಧಿ ? (ಶ್ರೀರಾಮಾ. ೩೩–೦೨೫). [ಸಂ.]

**ರಸಸೂತ್ರ** (ನಾ). [ಕಾವ್ಯಮೀ] ರಸಾನುಭವದ ವಿಚಾರವನ್ನು ತಿಳಿಸುವ ಸೂತ್ರರೂಪದ ನಿರೂಪಣೆ : ಭರತಾಚಾರ್ಯನು . . . ಉಸುರಿದ ರಸಸೂತ್ರವೇ ಇತ್ತೀಚಿನ ಕವಿಗಳಿಗೂ ಲಕ್ಷಣಕಾರರಿಗೂ ಅಮೃತಾನ್ನ

ವಾಗಿದೆ (ಕಾಹಿಂ. ೩) ; ಭರತಮುನಿಯ ರಸಸೂತ್ರದ ವಿಸ್ತಾರವಾದ ವ್ಯಾಖ್ಯಾನಗಳಿಂದ ಆ ವಿಚಾರ ಚರ್ಚಿತವಾಗಿದೆ (ಕಾಂದಶ. ೧೩೯). [ಸಂ.]

**ರಸಸ್ಥಾನ** (ನಾ). ಕಾವ್ಯದಲ್ಲಿ ಸ್ವಾರಸ್ಯವು ಅತಿಶಯವಾಗಿ ಇರುವ ಸ್ಥಳ, — ನೆಲೆ : ಪುರುದೇವನ ಚರಿತ್ರೆಯಲ್ಲಿ ಅಲ್ಲಲ್ಲಿ ಚೆಲುವಾದ ರಸಸ್ಥಾನಗಳಿರುತ್ತವೆ (ಕಸಾತ. ೯೦). [ಸಂ.]

**ರಸಸ್ಥಿತಿ** (ನಾ). ರಸಾನುಭವವಾಗುತ್ತಿರುವ ಆನಂದದ ಇರವು : ಕವಿಯ ರಸಸ್ಥಿತಿಯನ್ನೂ ಮೀರಿದ ಸಮರಸಸ್ಥಿತಿಯು ಅನುಭಾವಿಯದು (ರಮುಗಾ. ೧೦೦). [ಸಂ.]

**ರಸಸ್ಯಂದಿ** (ನಾ). ಸ್ವಾರಸ್ಯವನ್ನುಂಟುಮಾಡುವುದು ; ರಸಾನುಭವಕರವಾದುದು : ಅವಳ ವಚನಗಳಲ್ಲಿ ಸಮುಭಯಗಳ ಕೊರತೆ ಕಂಡು ಬಂದರೂ ಒಟ್ಟಿನಲ್ಲಿ ರಸಸ್ಯಂದಿಯಾದ . . . ನಿರ್ಮಾಣವಿದೆ (ಕಸಾತ. ೧೬೩). [ಸಂ. ರಸಸ್ಯಂದಿನ್]

**ರಸಹಾರಿ** (ನಾ). (ಸಂಬಾರ ಪದಾರ್ಥಗಳನ್ನು) ಅರೆಯುವ ಕಲ್ಲು ; ಅಮ್ಮಿಕಲ್ಲು : "ರಸಹಾರಿಯೆನಲಮ್ಮಿಕಲ್ಲಕ್ಕು" (ಮಂಗರಾ. ೩೦-೦೯). [ಸಂ. ರಸಹಾರಿನ್ = ದ್ರವವನ್ನು ಉತ್ಪತ್ತಿಮಾಡುವಿಕೆ]

**ರಸಹೀನ** (ನಾ). ರಸವಿಲ್ಲದುದು : ಶುಷ್ಕವಾದುದು ; ರಸಹೀನಂ ಕೆಯ್ಗಳೊಳಂ ರಸಮಯಮಪ್ಪುದು ವಿಚಿತ್ರಮೇಂ ಕಾಣಲೊಡಂ . . . ಮುನೀಂದ್ರಚಂದ್ರನ ಮುಖಮುಂ (ಅಪಂಪು. ೯-೦೦೦). [ಸಂ.]

**ರಸಾಂಜನ** (ನಾ). ೧. ಔಷಧವಾಗಿ ಬಳಕೆಯಾಗುವ ಒಂದು ಧಾತು ವಿಶೇಷ; ಮೈಲುತುತ್ತ : ವನದಂತಿಯ ಪಂದಿಯ ಕೋಣನ ಬಸೆಯೊಳ್ ಮೊಲೆಯುನೊರಸಿ ಕಟುವೆರಸು ರಸಾಂಜನಮಂ ನಸ್ಯಂಗೆಯ್ದೊಡೆ ಪಸಜಾಕ್ಷಿಯ ಮೊಲೆಗಳೊದವಿ ನಡುವಂ ಮುಚ್ಚುಗುಂ (ರೂಪಸಂಕ. ೯-೦೭೦) ; ಛಾಪಮಂಚ, ರಸಾಂಜನ, ಮುಡಿಮಾಳ . . . ಸಕ್ಕರೆ ಸಹ ಚೂರ್ಣಿಸಿ ಹಾಕಿ ಸೇವಿಸೆ ವಾಂತಿ ನಿಲ್ವುಗುಂ (ಸಕವ್ಯ. ೨೬೮). ೨. ಕಣ್ಕಪ್ಪು : ಕಾಡಿಗೆ : "ದಾರ್ವಿಕಾ, ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ— ೬ ರಸಾಂಜನದ ಪೆಸರುಗಳು" (ಸಿದ್ಯಾಂತಿ. ೩೦೩). [ಸಂ.]

**ರಸಾಗ್ರ** (ನಾ). ಹಾಲು, ಮೊಸರು ಮುಂತಾದ ದ್ರವಪದಾರ್ಥಗಳ ಮೇಲುಭಾಗದಲ್ಲಿ ಕಟ್ಟುವ ಕೆನೆ; ಮಂಡ : "ರಸಾಗ್ರಮಂತದು ಮಂಡಂ" (ವಸ್ತುಕೋ. ೯೨-೨). [ಸಂ.]

**ರಸಾತಲ, ರಸಾತಳ** (ನಾ). ಭೂಮಿಯ ಕೆಳಗಿರುವುದೆಂದು ಭಾವಿಸಲಾದ ಅತಳ, ವಿತಳ, ಸುತಳ, ರಸಾತಳ, ತಳಾತಳ, ಮಹಾತಳ ಮತ್ತು ಪಾತಾಳವೆಂಬ ಏಳುಲೋಕಗಳಲ್ಲಿ ಒಂದು : "ರಸಾತಲಮೆನಲ್ಕಧೋಭುವನಮೆಂದೆನಲು ಪಾತಾಳಲೋಕಕ್ಕೆ ನಾಮಂ" (ಮಂಗರಾ. ೧೩೩-೦); ಬಲಿಯಂ ಕಟ್ಟಿದನಾವನೀ ಧರಣಿಯಂ ವಿಕ್ರಾಂತದಿಂದಂ ರಸಾತಲದಿಂದೆತ್ತಿದ ನಾವಂ (ಹಂಪಾ. ೬-೪೦). **ರಸಾತಳ** : ಆ ಮಹಾರ್ಣವಂ . . . ರಸಾತಳದಂತೆ ವಿಷಧರನಿಷೇವ್ಯಮುಂ (ಆಪು. ೦-೪೪ ವ) ; ಶರಧಿಯ ಮಥಿಸಲು ಮಂದರಗಿರಿಯ ತಂದಿರಿಸಿ ರಸಾತಳಕಿಳಿಯೆ ಭರದಿಂದ ಕಮಠ ನೀನಾಗಿ ದೆಸ್ನೊಳು ಪೊತ್ತ ಸಿರಿಯಾಣ್ಮ (ಕವಾಗ. ೨೨೬). [ಸಂ.]

**ರಸಾತಳ** ' ರಸಾತಲ ' ನೋ.

**ರಸಾತ್ಮಕ** (ನಾ). ಸಾರವತ್ತಾದುದು : ರಸಾತ್ಮಕವಾದ ವಾಕ್ಯವು ಕಾವ್ಯ (ಕಾರಪಾ. ೧೩೨ ೩೨೬); ರಸಾತ್ಮಕವಾದ ವಾಕ್ಯವೇ ಕಾವ್ಯ (ಕಾರದ. ೪೪೯). [ಸಂ.]

**ರಸಾತ್ಮಿಕೆ** (ನಾ). ರಸಿಕಳಾದ ಹೆಂಗಸು, — ಸ್ತ್ರೀ : ಭಾವಜೀವಿಯೂ ರಸಾತ್ಮಿಕೆಯೂ ಆದ ಮಹಾರಾಣಿ ಶಾಂತಲಾದೇವಿ . . . ನರ್ತಿಸುತ್ತಿದ್ದ ಶಿಲಾಬಾಲಿಕೆಯಿದೆಂದು ನನ್ನ ಹೃದಯ ಹೇಳಿತು (ಶಾಂತಲಾ. iii. ೫೦೪). [ಸಂ. ರಸಾತ್ಮಿಕಾ]

**ರಸಾಧಿಭೂತೆ** (ನಾ). ಆನಂದಕ್ಕೆ ನೆಲೆಯಾದವಳು; ಸಂತೋಷದಾಯಕಿ: ಸುರಕ್ಷಿತಾಮರವ್ರಾತೆ ರಸಾಧಿಭೂತೆ ರಮಣೀಯರಮಾರತಿಮುಖ್ಯಶಕ್ತಿವಿಖ್ಯಾತೆ . . . ಪಾಲಿಪುದೆನ್ನ (ರಾಜಕೇ. ೫-೦೩೪). [ಸಂ. ರಸಾಧಿಭೂತಾ]

**ರಸಾನಂದ** (ನಾ). ರಸಾನುಭವದಿಂದ ಆಗುವ ಆನಂದ : ದೃಶ್ಯದಲಿ . . . ಒಂದಾಗುವುದೆ ಪರಮರಸಿಕತೆ; ಅದಕೆ ಮಿಗಿಲಹ ರಸಾನಂದ ಮತ್ತೆ ಬೇರೊಂದಿಲ್ಲ! (ಪಕ್ಷಿಕಾ. ೬೪-೪೯); ಅದು, ಕೇವಲ ಭೋಗಿಸಬೇಕೆನ್ನುವ ರಸಾನಂದವಲ್ಲ; ಅದು ರಚಿಸಿ ನೋಡಬೇಕೆನ್ನುವ ರುಚಿರಾನಂದ (ಇತ್ಯ. ೪೦೩). [ಸಂ.]

**ರಸಾನುಭವ** (ನಾ). [ಕಾವ್ಯಮೀ] (ನವರಸಗಳಲ್ಲಿ ಯಾವುದಾದರೂ) ರಸವನ್ನು ಅನುಭವಿಸುವಿಕೆ ; ರಸಾಸ್ವಾದ : ಇವನಿಗೆ ರಸಾನುಭವ ಹೇಗೆ ಉಂಟಾಗುವುದು (ಕಾರಪಾ. ೩೩೭); ಅಭಿನಯಿಸುತ್ತಿರುವಾಗಲಾಗಲಿ ಆಮೇಲಾಗಲಿ ನಟನು ರಸಾನುಭವ ಮಾಡಿದರೆ ಅವನು ಆಗ ಸಾಮಾಜಿಕನಾಗುವನು (ಕ್ಯಪಿಪ. ೦೯೪); ರಸಾನುಭವವು ರಸವದಲಂಕಾರ ಎಂಬ ಹೆಸರಿನಿಂದ ಅಲಂಕಾರಗಳಲ್ಲಿ ಮಧ್ಯೆ ಪ್ರವೇಶ ಪಡೆದಿತ್ತು (ಕಾಂದಶ. ೦೬೧). [ಸಂ.]

**ರಸಾನುಭೂತಿ** (ನಾ). = ರಸಾನುಭವ : ರಸಾನುಭೂತಿಯ ರಸಪಥವಲ್ಲದೆ ಸತ್ಯಕೆ ಗತಿಯಿಲ್ಲ ! (ಪಕ್ಷಿಕಾ. ೨೦-೭). [ಸಂ.]

**ರಸಾನ್ನ** (ನಾ). ರುಚಿಯಾದ ಅನ್ನ; ಸವಿಯಾದ ಆಹಾರ : ಕಾಗೆಗೆ ರಸಾನ್ನ ಮುಂದಿರಲಿಕ್ಕೆ ಹರಿವ ಕೀಟಕಂಗೆ ಸರಿವುದಲ್ಲದೆ ಮತ್ತೆ ಅದು ಸವಿ ಸಾರವ ಬಲ್ಲುದೆ (ಬಿರೇಶ್ವ. ೩೨); ಪಂಚಭಕ್ಷ್ಯ ರಸಾನ್ನಯುತನೈವೇದ್ಯಮಂ ಸೌರಾಷ್ಟ್ರಪತಿಗಿತ್ತು (ಬಸಪು. ೪೩-೨೦). [ಸಂ.]

**ರಸಾಭಾಸ** (ನಾ). ೧. [ಕಾವ್ಯಮೀ]ಕಾವ್ಯ ನಾಟಕಾದಿಗಳಲ್ಲಿ ಬರುವ ನವರಸಗಳಲ್ಲಿ, ಯಾವುದನ್ನೇ ಆಗಲಿ ಕವಿಯು ಪ್ರತಿಪಾದಿಸುವಾಗ ಉದ್ದೇಶಪೂರ್ವಕವಾಗಿ ಅಥವಾ ಪ್ರಮಾದದಿಂದ ತಲೆದೋರುವ ಅನೌಚಿತ್ಯಸನ್ನಿವೇಶ: ಇದುವುಮೇಕತ್ರಾನುರಾಗದಿಂ ರಸಾಭಾಸಮಪ್ಪುದು (ರಸರ. ೪-೨೩೯); ಸಾಮಾಜಿಕರಿಗೆ ಇದು ಅನುಚಿತ ಎಂಬ ಬುದ್ಧಿಯು ಉಂಟಾದರೆ ಆಗ ನಿಜವಾದ ರಸವು ಹುಟ್ಟದೆ ರಸದಂತೆ ತೋರುವ 'ರಸಾಭಾಸ'ವು ಉಂಟಾಗುವುದು (ಕ್ಯಪಿಪ. ೨೦೪); ರಸವಲ್ಲದಿದ್ದರೂ ರಸದಂತೆ ತೋರತಕ್ಕದ್ದು, ರಸಸದೃಶವಾದದ್ದು ರಸಾಭಾಸ (ಕಾರಪಾ. ೪೨೪). ೨. (ಅಲಂ) ಅನುಚಿತವಾದುದು; ಔಚಿತ್ಯಮೀರಿದುದು; ರಸಭಂಗ : ನಡಿ ಗುರುಮೂರ್ತಿ ಇವಳು ಇನ್ನು ರಸಾಭಾಸ ಮಾಡಿಬಿಡುತ್ತಾಳೆ (ಮಾಕುವಿ. ೦೩೩). [ಸಂ.]

**ರಸಾಭಿನಯ** (ನಾ). ಆನಂದವನ್ನು ಕೊಡುವ ಅಭಿನಯ : ರಸಿಕರ್ಕಳೊಪ್ಪುವನ್ನಂ ರಸಾಭಿನಯಕೌಶಲಂಗಳೊಳ್ಪಿಡುವೆನುತಾನುಸಿರೆ (ಶಾಕುಂತ. ೦-೨). [ಸಂ.]

**ರಸಾಭಿವ್ಯಂಜಕ** (ಗು). [ಕಾವ್ಯಮೀ] ನವರಸಗಳಲ್ಲಿ ಯಾವುದಾದರೂ ಭಾವವನ್ನು ಅಭಿವ್ಯಕ್ತಿಗೊಳಿಸುವ, — ವ್ಯಕ್ತಪಡಿಸುವ : ರಸಾಭಿವ್ಯಂಜಕ ಶಬ್ದಾರ್ಥಗಳು ಕೂಡ ಹೀಗೆ "ಮಧುರ", "ಮಧುರತರ", "ಮಧುರತಮ" ವಾಗಿರಬಹುದು (ಕೃಪ್ಯಕೋ. ೬೦). [ಸಂ.]

**ರಸಾಭಿವ್ಯಂಜನ** (ನಾ). [ಕಾವ್ಯಮೀ] ನವರಸಗಳ ಅಭಿವ್ಯಕ್ತಿ : ಸಂಗೀತದಲ್ಲಿ ಯಾವ ಯಾವ ರಸಾಭಿವ್ಯಂಜನಶಕ್ತಿ ಇದೆ ಎನ್ನುವುದನ್ನೂ ಹೇಳದೆ (ಕಾಂದಶ. ೦೨೨). [ಸಂ.]

**ರಸಾಭಿವ್ಯಕ್ತಿ** (ನಾ). = ರಸಾಭಿವ್ಯಂಜನ : ಎಲ್ಲ ಕಲೆಗಳೂ ರಸಾಭಿವ್ಯಕ್ತಿಯನ್ನೇ ತಮ್ಮ ಗುರಿ ಎಂದು ಸಾರಿದುವು (ಕಾಂದಶ. ೦೨೨). [ಸಂ.]

**ರಸಾಯ** (ನಾ). ಸಿಹಿ ನೀರಿನಿಂದ ಕೂಡಿದುದು : ಮಣಿಯಲ್ಲದ ಕಲ್ ಜ್ಯೋತಿಸ್ತೃಣಮಲ್ಲದ **ಪುಲ್** ರಸಾಯಮಲ್ಲದ ಮಡು . . . ಇಲ್ಲ ತತ್ಪರಿಸರದೊಳ್ (ಕಂಪ್ರತಿ. ೦೦-೪೬). [ ಸಂ. ರಸಾಯ್ಯ = ರುಚಿಯಾದ]

**ರಸಾಯನ** (ನಾ). ೧. ಹಿತವಾದುದು ; ಇನಿದಾದುದು ; ಅಹ್ಲಾದ್ಯಯುಮಾನವಾದುದು : 'ಕರ್ಣರಸಾಯನ' ಪರಾ. ೨. ಮಧುರವಾದ ಪೇಯ ; ರುಚಿಕರವಾದ ಪಾನೀಯ : ಚೋಳನ ರಸಾಯನವನೊಲ್ಲದೆ ಚಿನ್ನನ ಅಂಬಳಕವನ್ನು ಉಂಡುದನ್ನು ವೇದವಪುಂಷ ಕೇಳಿದರಿಲ್ಲ ! (ಚೋಳಚ. ೨೭ ಕೃಷ್ಣ ಚ). ೩. ಸಿಹಿ, ಖಾರ, ಹುಳಿ ಮೊದಲಾದ ಆರು ರಸಗಳ ಮಿಶ್ರಣ : "ಇವಂತು ಷಡುರಸವುಕ್ಕು ವಿವ್ವ ತಮ್ಮೊಳೊಂದೊಂದು ಬೆರಸಿ ತೋಱಲ್ ಸ್ವಾದು ರುಚಿ ರಸಾಯನ ಮೆನಿಕ್ಕುಂ" (ಸೂಪಶಾ. ೬೩-೩) ; ಊಳಿಗವನೆ ಮಾಳ್ಪ ಪೆಣ್ಗಳೊಡನೆ . . . ಪುಷ್ಪವನು ರಸಾಯನವನು ಪಣ್ಗಳನು ತರಂಗೋಳ್ಗೆ ಸಾರ್ಚುತೆ (ಜಜ. ೬-೦೪). ೪. ಬಾಳೆಹಣ್ಣು, ಬೆಲ್ಲ ಮುಂತಾದುವುಗಳ ಮಿಶ್ರಣದಿಂದ ತಯಾರಿಸುವ ಒಂದು ಬಗೆಯ ಸಿಹಿಖಾದ್ಯ : ಮೊದಲು ಚಿಂತೂರವರು ಸೊಂಟಕ್ಕೆ ಟವಲು ಬಿಗಿದು ಬಾಗಿ ಭಕ್ತಿಯಿಂದ ರಸಾಯನಕ್ಕೆ ಕೈ ಒಡ್ಡಿದರು (ಸಾಕುಚ. ೦೫೬). ೫. ರಸವಾದ ; ರಸವಿದ್ಯೆ. ೬. ಮಜ್ಜಿಗೆ. ೭. ವಿಷ. ೮. ಬಾಲಮೆಣಸು ; ಹಿಪ್ಪಲಿ. ೯. ಗರುಡನ ಹೆಸರುಗಳಲ್ಲಿ ಒಂದು. ೧೦. [ ವೈದ್ಯಶಾ ] ಒಂದು ಬಗೆಯ ಪಾಕ : ರಸಾಯನ . . . ಸಿದ್ಧಲೇಪಾದಿ ವಸ್ತುಗಳನೇಕವಾಗಿ ಅಲ್ಲಿಯ ಶಿವಭಕ್ತರಿಗೆ ಸುಕೃತಾನುರೂಪದಿಂದಾನಂದಕರಗಳಾಗಿರ್ಪಂ (ಶಿಪಕ. ೩೦೦) ; ಅಶ್ವಗಂಧಿರಸಾಯನ . . . ನಿತ್ಯವೂ ಸೇವನೆಯಂ ಮಾಡಲು ಕ್ಷಯರೋಗ ಮುಂತಾದ ಸಮಸ್ತವ್ಯಾಧಿ ಪರಿಹಾರವಹುದು (ಕಶ್ಯ. ೨೫೪) : ಔಷಧಿ, ರಸಾಯನಾದಿಗಳಲ್ಲಿ ಇವರು ಆ ಕಾಲದ ತಜ್ಞರಾಗಿದ್ದರು (ಕರ್ನಾಟ. ೦೭). ೧೧. ಶಕ್ತಿ, ಉತ್ಸಾಹಗಳನ್ನು ಹೆಚ್ಚಿಸುವ ಒಂದು ಬಗೆಯ ಔಷಧದ ಮಿಶ್ರಣ : ಅಂದಿನ ಅನುಭವವು ಕಿಟ್ಟಯ ಮೈಯಲ್ಲಿ ರಸಾಯನವಾಗಿ ತಿಂಗಳುಗಳವರೆಗೆ ಹಚ್ಚಿಕೊಂಡು ಅನೇಕ ಚಿಕ್ಕಪುಟ್ಟ ಬದಲಾವಣೆಗಳನ್ನು ಮಾಡಿತು (ಗೃಹಿಣಿ. ೩೩). ೧೨. ಕ್ರಿಮಿರೇಚಕ ಔಷಧಿಯಾಗಿ ಬಳಸುವ ಒಂದು ಬಗೆಯ ಮೂಲಿಕೆ ; ವಿಡಂಗ. ೧೩. [ ವಿಜ್ಞಾನ ] ವಸ್ತುಗಳ ಗುಣ ಮತ್ತು ಧರ್ಮವನ್ನು ತಿಳಿಸುವ ವಿದ್ಯೆ,—ಶಾಸ್ತ್ರ : 'ರಸಾಯನ ಶಾಸ್ತ್ರ' ಪರಾ. [ಸಂ.]

**ರಸಾಯನಜ್ಞ** (ನಾ). ರಸಾಯನಶಾಸ್ತ್ರವನ್ನು ಬಲ್ಲವನು : ಇತ್ತೀಚೆಗೆ ರಸಾಯನಜ್ಞರು ಹುಟ್ಟಿಕೊಂಡು ಕೃತಕಚಿನ್ನ ತಯಾರಿಸುತ್ತಿರುವರಂತೆ (ಜೀಬುಕು. ೦೭). [ಸಂ.]

**ರಸಾಯನವಿಜ್ಞಾನ** (ನಾ). "ಮೂಲಧಾತುಗಳು, ಅವು ಸಂಯೋಗವಾಗುವ ನಿಯಮಗಳು, ಮತ್ತು ಅವು ಬೇರೆ ಬೇರೆ ಸ್ಥಿತಿಗಳಲ್ಲಿ ತೋರಿಸುವ ಚರ್ಯೆಗಳು, ಮೊ. ವಿಷಯಗಳನ್ನು ವಿಚಾರಮಾಡುವ ಶಾಸ್ತ್ರ" (chemistry. ೩೦೪೩) : ಪುಸ್ತಕಗಳು ಭೌತವಿಜ್ಞಾನ, ರಸಾಯನವಿಜ್ಞಾನ . . . ಮೊದಲಾದುವುಗಳಿಗೆ ಸಂಬಂಧಿಸಿದುವು (ಜಶಕ. IV. ಮುಖ್ಯ). [ಸಂ.]

**ರಸಾಯನವಿಜ್ಞಾನಿ** (ನಾ). = ರಸಾಯನಜ್ಞ : "ರಸಾಯನವಿಜ್ಞಾನಿ. ಔಷಧವಸ್ತು ವ್ಯಾಪಾರಿ" (chemist. ೩೦೪೩). [ಸಂ.]

**ರಸಾಯನಶಾಸ್ತ್ರ** (ನಾ). = ರಸಾಯನವಿಜ್ಞಾನ : ಭೌತಶಾಸ್ತ್ರ (Physics), ರಸಾಯನಶಾಸ್ತ್ರ (Chemistry) . . . ಖಗೋಳಶಾಸ್ತ್ರ (Astronomy) ಮುಂತಾದ ಭಾಗಗಳು ಈ ರೀತಿಯಲ್ಲಿ ಬೇರೆಬೇರೆಯಾದವು (ಭೌತಿಶಾ. ೦೨) ; ಮೊದಮೊದಲು ಜನರು ರಸಾಯನಶಾಸ್ತ್ರ ಓದಿದ್ದರೆ ಸಾಕೆಂದು ಭಾವಿಸಿದ್ದರು (ಜಜಾಕ. ೦೦೩). [ಸಂ.]

**ರಸಾರುಹ** (ನಾ). ಭೂಮಿಯಲ್ಲಿ ಹುಟ್ಟಿದುದು ; ಮರ ಗಿಡ ಮೊದಲಾದ ಸಸ್ಯ : ಮತ್ತೊಂದು ಸುಮನಿಃಕರರಸಾಲರಸಾರುಹದ ಕೆಳಗೆ . . . ತದ್ಭೂಜಪುಷ್ಪಗಳನ್ನಾಯ್ದುದು ತೋಱುಗುಂ (ಜಾಜ. ೦೦-೨೪ ೩). [ಸಂ.]

**ರಸಾಲ**, ರಸಾಳ (ಗು). ೧. ಸವಿಯಾದ ; ಮಧುರವಾದ. (ನಾ). ೨. ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಮಾವು : ಇದು ಪಿಕತುಂಡಖಂಡಿತಗಳಗ್ರಸಕೋಶರಸಾಲಸಾಲಂ (ಆದಿಪು. ೬೩೩) ; ಗಣಪಂ . . . ಶಿವನಂ ಬಳಸಿ ಬಂದು ಪಣ್ಣೀವುದೆನೆ ಹರಿಸದಿಂ ಮೆಚ್ಚಿ ಗಜವದನಂ ಗೆದಾ ರಸಾಲದ ಪಣ್ಣನಿತ್ತನಭವಂ (ಚಸೋಚ. ೦೦-೪೦) ; ಉರಿವ ಕಡು ಬೇಸಗೆಯ ಬಿಸಿಲಿಂದ ಬಳಲಿದ ಕೋಮಲರಸಾಲದಂತೆ (ಶಂಶೀ. ೦೨೦). ೩. ಕಬ್ಬು. ೪. ಒಂದು ಬಗೆಯ ಕಬ್ಬು ; ಪುಂಡ್ರಕ. ೫. ದ್ವೀಪದ ಹಲಸಿನ ಮರ. ೬. ಧೂಪದ ಮರ ; ಲೋಬಾನ. ೭. ಗೋದಿ. ೮. ಒಂದು ಬಗೆಯ ಇಲಿ. ರಸಾಳ : ೧. ಪುಣ್ಯಕಾರಕಕಥೆಗಳನ್ನೂ ಹೇಳುತ್ತಾ ನಿನ್ನ ರಸಾಳವಾಣಿಯಿಂದ ಅವರನ್ನು ಸಮಾಧಾನಪಡಿಸುತ್ತಾ ಹೋಗು (ಕುಳಸೀ. ೦೨೪). ೨. ರಸಾಳಧ್ರುಮಶ್ರೇಣಿ . . . ಸೊಗಯಿಸಲೆಸಗುಂ ತತ್ಪುರೋದ್ಯಾನವೆಂಬುದುಂ (ಜಗಾ. ೨-೦೩) ; ಸಾಳ ರಸಾಳ . . . ಹಿಂತಾಳ ಮುಖ್ಯತರುಸಂತತಿಯಿಂ ವನಬ್ರುಂದಮೊಪ್ಪುಗುಂ (ಮಾಧವಚ. ೦-೩೩). ೯. ರಸಿಕನಾದವನು ; ರಸಗ್ರಾಹಿ ; ರಸಜ್ಞ : ಒರಿದು ರಸಾಳನೆನಿಸುವ ಪುರಾಣಿಕಂ . . . ಪೇಳಲುದ್ಯತನಾದಂ (ಪ್ರಪ್ರಭು. ೦೬-೦೩). [ಸಂ.]

**ರಸಾಲಂಕಾರ** (ನಾ). [ಕಾವ್ಯಮೀಮಾಂ] ರಸಕ್ಕೆ ಅಂಗವಾದ ಅಲಂಕಾರ : "ರಸವತ್, ಪ್ರೇಯ . . . ಭಾವಶಬಳಂ ಎಂದು ರಸಾಲಂಕಾರಗಳೇಟುಂ (ಅಕ್ಷ್ರಿ. ೦೩೦) ; ರಸಾಲಂಕಾರವಿಲ್ಲದ ಕೃತಿಯುದೇಸಿದ್ದೇನು ಫಲ (ಕೂರಂ. ೬-೦೫-೦೬) ; ನವೀನರ ಪಾಶದಲ್ಲಿ ರಸಕ್ಕೆ ಪ್ರಧಾನಸ್ಥಾನವೇ ಬಂದಿರುವುದರಿಂದ 'ರಸಾಲಂಕಾರಗಳು' ಉಪಮಾದಿ ಉಕ್ತಿವೈಚಿತ್ರ್ಯಗಳ ಜೊತೆಗೆ ಸೇರತಕ್ಕವುಗಳಲ್ಲ (ಕೃಶಿ. ೩೫೦). [ಸಂ.]

**ರಸಾಲೆ** (ನಾ). ಹದ ಮಾಡಿ, ಒಗ್ಗರಿಸಿದ ಮಜ್ಜಿಗೆ : "ರಸಾಲಾ. ಮಾರ್ಜಿತಾ — ೨ ಹೊಸರು ಕೈಗಿಱದು ಹುಡಿದ ಮಜ್ಜಿಗೆ . . . ವಗ್ಗರಿಸಿದ ಸಂಬಾರದ ಮಜ್ಜಿಗೆ" (ಸಿಂಗ್ರಾ. ೩೦೪). [ಸಂ. ರಸಾಲಾ]

**ರಸಾವೇಶ** (ನಾ). ನವರಸಗಳಲ್ಲಿ ಯಾವುದಾದರೂ ರಸದ ಆವಿರ್ಭಾವ ; ರಸಾನುಭವ : ಕಾವ್ಯನಂ ನೆಯೂಮಾತಂ ರಸಾವೇಶ ನುಡಿಕಾಲಸ್ಯವೆಡೆಗೊಳಲು ತಪ್ಪುಗಳ್ಗದೆ ಕಾವ್ಯಕರ್ತೃ ತಪ್ಪುವರೆ (ಶಕಸ. ೦-೨೩) ; ಕವಿಯ ರಸಾವೇಶದಿಂದಲ್ಲಿ ತಾನಾಗಿ ಅನ್ಯರ ಉಕ್ತಿಗಳು — ಪ್ರಯೋಗಗಳು ಬರಲು ಸಾಧ್ಯವಿರುವುದರಿಂದು ಇಲ್ಲಿನ ಅಭಿಪ್ರಾಯವಾಗಿವೆ (ಸಂಕೋಶ. ೦೩೬). [ಸಂ.]

**ರಸಾಶ್ರಯ** (ನಾ). ೧. ನೀರಿಗೆ ಆಶ್ರಯವಾದುದು. ೨. ಕಾವ್ಯರಸಕ್ಕೆ ಆಶ್ರಯನಾದವನು ; ರಸಜ್ಞ. ೧, ೨ : ಕ್ಷಿತಿತಳದಂತೆ ರಸಾಶ್ರಯನರ್ಕನಸುಕವೀಂದ್ರಬ್ರುಂದವಂತೆ ವಿಶೇಷಾನ್ವಿತನಂಬರದಂತೆ ಸದಾವೃತ ಸಂಬುಧಿಯಂತೆ ಪರತುಗಂಭೀರಗುಣಾಂ (ಸುಕುಮಾ. ೪-೩೨). [ಸಂ.]

**ರಸಾಸ್ವಾದ** (ನಾ). ರಸಾನುಭವವನ್ನು ಹೊಂದುವುದು ; ರಸವನ್ನು ಅನುಭವಿಸುವುದು : ಕಳಗೆಯಂ ಒಗೆಗೊಂಡ ರೂಪು ಕುಸುಮಾಮೋದಂ ರಸಾಸ್ವಾದಮುಗ್ಗಳಮುಪ್ಪಂಗಿಪಲಾಗಂ ತಳ್ವೊಯ್ಯು ಪಂಚೇಂದ್ರಿಯಂಗಳೊಳ್ . . . ತಣಿದಂ ಸುಖಾಂಬುನಿಧಿಯೊಳ್ (ಶಾಂತಿಪು. ೬-೦೨೬) ; ಮುಖಮಂಡಲಂ ಶಿವಸ್ತೋತ್ರ ಗೀತಾಮೃತರಸಾಸ್ವಾದ[ಶಾಶಾ. ರಸಾಕ್ಷರ]ಕ್ಕೆ ತೀವಿರ್ದ ರತ್ನ ಖಚಿತಮಾಣಿಕ್ಯ ಕರಂಡಗೆಯಂತಿರ್ದಪ್ಪುದು (ಸಂಶರ. ೪-೩೩) : ಅತ್ಯುತ್ತಮ ಕಲಾವಿದ ತನ್ನ ಕೃತಿಯಲ್ಲಿ . . . ರಸಾಸ್ವಾದದಲ್ಲಿ ತಲ್ಲೀನನಾಗುವಂತಹ ಮನಸ್ಥಿತಿಯನ್ನು ಉಂಟು ಮಾಡಿ ಬಿಡುತ್ತಾನೆ (ಶ್ರೀಂದಕ. ೭೩). [ಸಂ.]

**ರಸಾಳ** : 'ರಸಾಲ' ನೋ.

**ರಸಿಕ** (ಗು). ೧. ಸವಿಯಾದ ; ಮಧುರವಾದ : ಕತೆಗಾರ್ತಿಯರು 'ಹೆಣ್ಣಿನ ಬಾಳಿನ' ಕಣ್ಣೀರನ್ನು ರಸಿಕದಾಂಪತ್ಯದ ಮಧುರಹಾಸವನ್ನೂ . . . ಚಿತ್ರಿಸಬಲ್ಲರು (ಶಾಗಿಪ iii, ಮುನ್ನು೩) ; ಶಾರೀರಕ ಗುಣಧರ್ಮಗಳು ಸ್ಫುಟಗೊಂಡು ರಸಿಕಜೀವನವು ಆರಂಭವಾಗುತ್ತದೆ (ಶಿಕ್ಷದ. ೦೦೩). ೨. ಹಾಸ್ಯ ಮನೋಭಾವದ ; ವಿನೋದಸ್ವಭಾವದ : ಗಾದೆಯನ್ನು ರೂಢಿಸಿದವಳು ಒಬ್ಬ ಕೋಮಲೆಯಾದ ರಸಿಕ ಮುತ್ತೈದೆಯೇ ಆಗಿರಬೇಕು (ದೇಆಶ್ವ. ೦೯). (ನಾ). ೩. ರಸಾನುಭವ ಮಾಡಬಲ್ಲವನು ; ರಸಜ್ಞ : ರಸಿಕರ್ ಬಣ್ಣಿಸೆ ಭಾವಕರ್ ಪೊಗಟಿ . . . ನಾಟ್ಯಮಂ (ಶಿಕ್ಷಪು. ೦೨-೩೦) ; ರಸಿಕರೂಟಕ್ಕೆ ಪಿರಿದುಂ ಯೋಗ್ಯಮಾಗಿಯಾ ಬೋನವೆಸರಂ ತಳೆದುದು (ಸೂಶಿಶಾ. ೦-೬೦) ; ವಸುಧೇಶಂ ಮನುರಾಜಂ ರಸಿಕಂ ರಾಜೇಂದ್ರನಮುಳಹಮ್ಮಿರನೆನಿಪ್ಪ ಸದೃಶತರನಾಮಂಗಳ್ ಪಸರಿಸುಗುಂ (ಹಂಪ್ಯಾರ. ೦-೨೯) ; ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ ರಸಿಕನಲ್ಲದನ ಬಱಿಮಾತು ಕಿವಿಗೆ ಕೂರ್ದಸಿಯು ಬಡಿದಂತೆ (ಸರ್ವಜ್ಞ. ೦೪೩೦) ; ಕಾವ್ಯದ ಸವಿಯನ್ನು ಅರಿಯುವವನು ರಸಿಕ (ಶಾರವಿಶಾ. ೨೨೩). ೪. ಶೃಂಗಾರದಲ್ಲಿ ಆಸಕ್ತಿಯುಳ್ಳವನು ; ವಿಲಾಸಿ : ಬಿಂಬಾಧರವು ಡೊಂಕು ಚುಂಬನವದು ಡೊಂಕೆ ರಸಿಕಾ ಪೇಳೊ (ಗಂ. ೩೨-೦೨) ; ರಸಿಕನೆಂದರೆ ಭೋಗಿಯೆಂದು ಎಲ್ಲರೂ ಬಲ್ಲರು (ಶಾಹಿಶಾ. ೯೩). ೫. ಮರ್ಮ; ರಹಸ್ಯ : ಕಪಾಲವ ಪಿಡಿದಾತನ ಕೈಯಲ್ಲಿ ಗಸಣಿಗೊಳಗಾದರು ಆತ್ಮನ ರಸಿಕವನಱಿಯದೆ (ಮೋಗ್ವಪಾ. ೩೯-೨೯೩). [ಸಂ.]

**ರಸಿಕತನ** (ನಾ). ೧. ರಸಿಕನಾಗಿರುವಿಕೆ : ಪಾನಾದಿಗಳನೀಂಟುತ ರಸಿಕತನದಿಂ ಚಪ್ಪಱಿವ ದನಿ ಕೋಣಲು (ಬಸಪು. ೩೩-೦೩). ೨. ವಿಷಯಲಂಪಟತ್ವ : ಮೊದಮೊದಲಿಗೆ ರಸಿಕತನವೂ ಇತ್ತು ಮಾವಯ್ಯನಿಗೆ (ಪಮ್ಮರು. ೨೦೯). [ರಸಿಕ + — ತನ]

**ರಸಿಕತೆ** (ನಾ). = ರಸಿಕತನ ೧ : ಪೊಸಬಗೆ ಬಗೆ ರಂಜಿಪ ರಸಿಕತೆ ರಸಿಕತೆ ಕುಸಿವ ಪಸರಿಸುವ ರೀತಿ ರೀತಿಯೆನೆ ಮೆಚ್ಚದರಾರ್ (ಸುಕುಮಾ. ೦-೯೩) ; ಇನ್ನೆನಗೆ ನವಯೌವನಂ ಬಂದು ರಸಿಕತೆಯು ಬುಗ್ಗೆಯುಕ್ಕುವುದೊಂದು ಅಚ್ಚರಿಯೆ ? (ಶಂದ್ರಸ. ೯೨-೦೦) ; ರಸಿಕತೆ ಬರಿಯ ವಿಲಾಸವಲ್ಲ. ಅದು ಹಿತವೂ ಮಿತವೂ ಆಗಿದ್ದರೆ ಜೀವನಪಥವನ್ನು ಸುಗಮವಾಗಿ ಮಾಡುತ್ತದೆ (ಸಂಶಾಪ. ೩೬೦). [ಸಂ. ರಸಿಕತಾ]

**ರಸಿಕತ್ವ** (ನಾ). = ರಸಿಕತನ ೧ : ನಿನ್ನ ಪಾಂಡಿತ್ಯಕೆಲ್ಲಿಂದಮೈತಂದುದೀ ರಸಿಕತ್ವಂ ? (ಶಂದ್ರಸ. ೯೦-೨೩). [ಸಂ.]

**ರಸಿಕೆ** 'ಲಸಿಕೆ' ನೋ.

**ರಸಿಗೆ** 'ಲಸಿಕೆ' ನೋ.

**ರಸಿತ** (ಗು). ೧. ರುಚಿ ನೋಡಿದ ; ಸವಿದ. ೨. ಗಿಲೀಟು ಮಾಡಿದ. ೩. ಧ್ವನಿ ಮಾಡಿದ; ಕೂಗಿದ. (ನಾ). ೪. ಧ್ವನಿ ; ಕೂಗು : ಅನೇಕಾಕಾರವಿಕೃತಾಮರಕುಮಾರಪರಿಪಠನನಟನಮೃದು ಕೂಜತರಸಿತದರಹಸಿತ . . . ನಾನಾವಿನೋದಂಗಳೊಳಂ (ಆದಿಪು. ೯-೩ ವ) ; ನೂಪುರಂಗಳ ದನಿಯಿಂ ಕುಸುಮೋಪಹಾರದಳಿಗಳ ರಸಿತಂ ದ್ವಿಗುಣಿಸಿತು ನೃಪಗೃಹಪ್ರಾಂಗಣದೊಳ್ (ಪುಶ್ಯಪು. ೯-೩೩). [ಸಂ.]

**ರಸೀತಿ** 'ರಶೀತಿ' ನೋ.

**ರಸೀದಿ** 'ರಶೀತಿ' ನೋ.

**ರಸುಗೆ** 'ಲಸಿಕೆ' ನೋ.

**ರಸುಮಿ, ರಸುಮೆ, ರಸ್ಮೆ** (ನಾ). ಕಾಂತಿ ; ಪ್ರಭೆ : ರಸುಮಿ ತೋರಿತು ಮೂಡಣಾದ್ರಿಯ ಮೇಲೆ (ಸುದಾಮ. ೨೯). 'ರಸುಮಿಸು' ಪರಾ. **ರಸುಮೆ** : "ರಸುಮೆ – ರಶ್ಮಿ – ಕಿರಣಲೇಖೆ" (ಕದ್ಯಕೋ. ೩೯) ; ನಸುನಗೆಯ ಚೂಣಿಯಲಿ ವದನದ ರಸುಮೆ ಝಳಪಿಸೆ (ಕುಮ್ಯಾರ. ೨-೯) ; ಎಲ್ಲಿ ನೋಡಿದೊಡಲ್ಲಿ ಮಿಂಚುಬುಳುವಿನ ರಸುಮೆ (ಸವ್ಯಶಾ. ೦೦-೩೬) ; ಸೂರ್ಯನ ರಸುಮೆಗಳು ಮಾಸಿದವು (ಜಶಾಗ. ೯-೦-೩೬). **ರಸ್ಮೆ** : ಚಂದದಿ ಪಂಜನು ಹಿಡಿದು . . . ಚಂದ್ರನ ಕಿರಣ ಪ್ರಜ್ವಲಿಸುವಂದದಿ ರಸ್ಮೆಯಿಂದ ಪರ್ಬಿದುದಾಸ್ಥಾನ (ಬಸಶ. ೩-೦೩). [< ಸಂ. ರಶ್ಮಿ]

**ರಸುಮಿಸು** (ಕ್ರಿ). ಬೆಳಗು ; ಪ್ರಕಾಶಮಾನವಾಗು : ವಜ್ರಸ್ತಂಭಗಳ ಕಂಡರಣೆಗಳಲೊಪ್ಪಿರ್ದ ರಸುಮಿಪ ವಜ್ರಧಾರೆಗಳ . . . ವೈವಾಹಮಂಟಪ ವೆಸೆದುದು (ಶೀವಂತ. ೬-೨೯) ; ಕಡೆಗಣ್ಣ ನೋಟವೆಳನಗೆಯ ಮಿಸುಗು ರಸುಮಿಸುವ ಬಟ್ಟದೊಡೆ (ಶಾಂದಪು. ೯-೯) ; ರಸುಮಿಪ ರವೆಯದ ಕಂಕಣವಂಗಜವೆಸರಂ ಕಂಠಿಕೆ ರತಿವೆಸರಂ . . . ತಳೆದು (ಶಯುಶಾ. ೩-೨೩). [ರಸುಮಿ + — ಇಸು₃]

**ರಸುಮೆ** 'ರಸುಮಿ' ನೋ.

**ರಸೆ** (ನಾ). ೧. ನೆಲ ; ಭೂಮಿ ; ಧರೆ : "ಭೂಃ . . . ರಸಾ, ಕ್ಷಿತಿಃ . . . ಆಧಾರಾ – ಈ ೩೭ ಭೂಮಿಯ ಪೆಸರ್" (ಹಲಾಯು. ೨೬-೦) ; ರಸೆಯುಂ ತಾಂ ತಾಂಕಿ ಕಲ್ಪಾಂತದ ಬಱಸಿಡಿಲೆಯ್ತಂದು ಪೊಯ್ಕಲ್ (ಕಾದಂಪೂ. ೬೦೦). ೨. ಅಧೋಲೋಕ ; ಪಾತಾಳ : ಎಳೆ ರಸೆಯೊಳಟ್ಟುದಂ ಭುಜಬಳದಿಂ ಮುನ್ನೆತ್ತಿದಂತೆ ವಿಷಯಾಂಬುಧಿಯೊಳ್ ಮುಱುಗಿರ್ದವ್ಮಯ್ವರುಮಂ ಬಳಿಪರ ಪಿಡಿದೆತ್ತಲೆಂದು ಬಂದ್ಯೆ ಬರವಂ (ಶಂಶಶಾ. ೯-೧೩); ರಸೆಯಿಂ ಕಾಲಾಗ್ನಿರುದ್ರಂ ಪೊಱಮಡುವವೊಲ್ (ಗದಾಯು. ೬-೩೦). ೩. ತದುಕಿನ ಗಿಡ ; ಆನೆಬೇಲ : "ಗಜಭಕ್ಷ್ಯಾ, ಸುವಹಾ, ಸುರಭೀ, ರಸಾ . . . ಹ್ರಾದಿನೀ – ೮ ತದುಕಿನ ಗಿಡದ ಹೆಸರು. ಆನೆಬೇಲ" (ಸಿದ್ಯಾಂತಿ. ೦೯೦). ೪. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : ರಸೆ ಧರೆ ಇಳೆ ರೂಪಮೈಕಮೊಂದಱ ನಾಮಂ (ವ್ಯವಹಾ. ೯). **ರಸೆಯರಸ** = ಭೂಮಿಯ ಒಡೆಯ ; ರಾಜ : ರಸೆಯರಸನಾಕ್ಷೆಯಂ ಪಾಲಿಸುವೊಡಾಂ ಚೀರವಸನಂ ಜಟಾಧಾರಿಯೆನಿಸಿ ವನಮಂ ಪೊಗುವೆ (ವೆಂಕಾರಾ. ೨-೮-೦೯). [ಸಂ. ರಸಾ]

**ರಸಗಳ್ತಲೆ, ರಸಗತ್ತಲೆ** (ನಾ). ದಟ್ಟವಾದ ಕತ್ತಲೆ ; ಕಗ್ಗತ್ತಲೆ : ಪೊದಳ್ದ ಪೆರ್ಗಳ್ತಲೆ ನಾಲ್ದೆಸೆಗಳ್ತಲೆ ಪೊಸಗಳ್ತಲೆಯೆನಿಸಿ ಕೂಡೆ ತೀವಿತು ತಿಮಿರಂ (ಗಿಂಶ. ೯-೬೩). **ರಸಗತ್ತಲೆ** : ಸಂಕೇತಸ್ಥಲಕ್ಕೆ ಬರಲೊರ್ವ ಜಾರೆ ರಸಗತ್ತಲೆಯೊಳವಳನೆರ್ದೆಯನೀಳ್ಕುಳಿಗೊಳ್ವ ರಸಿಕಜಾರಂ ಬರುತಿರಲ್ಕೆ (ಬಕೋಪು. ೯-೬೩). 'ಭೂಛಾಯೆ' ಹೋ.
[ರಸೆ + ಕಳ್ತಲೆ (< ಕಟ್ತಲೆ)]

**ರಸೇಕ್ಷು** (ನಾ). ಒಂದು ಬಗೆಯ ಕಬ್ಬು : ರಸದಾಳಿ : ಇಕ್ಷು ಧವಳೇಕ್ಷು ಪುಂಡ್ರೇಕ್ಷು ರಸೇಕ್ಷು (ಶಿವೀಶ. ೨೦೦). [ಸಂ.]

**ರಸೇಶ್ವರ** (ನಾ). ೧. ಪಾದರಸ ; ಪಾರದ. ೨. ಷಡ್ದರ್ಶನಗಳಿಗೆ ಹೊರತಾದ ಒಂದು ದರ್ಶನ: 'ರಸೇಶ್ವರಶೈವ' ಪರಾ. [ಸಂ.]

**ರಸೇಶ್ವರಶೈವ** (ನಾ). [ಶೈವ] ಶೈವಮತದ ಎಂಟು ಭೇದಗಳಲ್ಲಿ ಒಂದು : ಶೈವಮತದಲ್ಲಿ ನಾವು ಎಂಟು ಪ್ರಭೇದಗಳನ್ನು ಕಾಣಬಹುದು. ೧) ದ್ವೈತಪಾಶುಪತ . . . ೬) ನಂದಿಕೇಶ್ವರಶೈವ, ೭) ರಸೇಶ್ವರಶೈವ, ೮) ಕಾಶ್ಮೀರಶೈವ (ಶಾರದ. ೨೦೦). [ಸಂ.]

**ರಸೋಕ್ತಿ** (ನಾ). ೧. ರಸಭರಿತವಾದ ನುಡಿ ; ಸಾರವತ್ತಾದ ಮಾತು. ೨. [ಕಾವ್ಯಮೀ] ರಸಾಲಂಕಾರ : ವಕ್ರೋಕ್ತಿ ಸ್ವಭಾವೋಕ್ತಿ ರಸೋಕ್ತಿ ಪಾಕಲಾಲಿತ್ಯ . . . ನೂತನಮಾಗೆ (ಗಿಂಶ. ೨-೦೦೩ ವ). [ಸಂ.]

**ರಸೋತ್ಪತ್ತಿ** (ನಾ). ನವರಸಗಳಲ್ಲಿ ಯಾವುದಾದರೂ ಭಾವದ ಉತ್ಪತ್ತಿ,– ಆವಿರ್ಭಾವ : ಒದವಿದ ನಾಟಕದೊಳ್ ಕಾವ್ಯದೊಳೀಕ್ಷಿಸೆ ಪೇಱಲಾದ ಭಾವಾದ್ರಿಯನೊಳ್ಪೊದವೀಕ್ಷಿಪ ಕೇಳ್ದ ಸಭಾಸದರ್ಗೆ ರಸೋತ್ಪತ್ತಿಯೆಂದು ಪೇೞ್ವರ್ ಪಿರಿಯರ್ (ರಸರ. ೦-೬). [ಸಂ.]

**ರಸೋದ್ದೀಪನ** (ನಾ). ಆನಂದವಾಗುವಿಕೆ ; ಸಂತೋಷವುಂಟಾಗುವಿಕೆ : 'ರಸೋದ್ದೀಪನಂಗೊಳ್' ಪರಾ. [ಸಂ.]

**ರಸೋದ್ದೀಪನಂಗೊಳ್** (ಕ್ರಿ). ಆನಂದವನ್ನು ಹೊಂದು ; ರಸಾನುಭವವನ್ನು ಪಡೆ : ಈ ಉದ್ಯಾನ ಶೋಭೆಗೆ ರಸೋದ್ದೀಪನಂಗೊಡು ವೈಮರೆಯುದಿರು (ಕಂದ್ರಸ. ೭೦-೯). [ರಸೋದ್ದೀಪನ + ಕೊಳ್$_1$]

**ರಸೋದ್ರೇಕ** (ನಾ). ಆನಂದದ ಹೆಚ್ಚಳ ; ರಸದ ಉದ್ರೇಕ : (Catharsis. ಶಾಂಶ. ೦೨). [ಸಂ.]

**ರಸೋನಕ** (ನಾ). ಬೆಳ್ಳುಳ್ಳಿ : "ಲಶುನಂ ಗೃಂಜನಸಂಜ್ಞಂ ರಸೋನಕಂ" (ಚಟ್ಟುಕೋ. ೩೯-೨೬). [ಸಂ.]

**ರಸೋಪಾಸಕ** (ನಾ). ಕಾವ್ಯರಸಾನುಭವದ ಉಪಾಸನೆ ಮಾಡುವವನು: ರಸಜ್ಞ : ಹುಟ್ಟು ರಸೋಪಾಸಕನಾದ ಆತನು ತನ್ನ ದರ್ಶನವನ್ನು . . . ರಸ್ಯವಸ್ತುವನ್ನಾಗಿ ರೂಪಿಸುತ್ತಾನೆ (ಪಶ್ಯಕಾ. ೦೨೦). [ಸಂ.]

**ರಸ್ತಾಳಿ** 'ರಸದಾಳಿ' ನೋ.

**ರಸ್ತು** 'ರಸದು' ನೋ.

**ರಸ್ತುಬಿಡು** (ಕ್ರಿ). ಸೈನಿಕರಿಗೆ ಆಹಾರವನ್ನು ಸರಬರಾಜು ಮಾಡು ; ಸೇನೆಗೆ ಧಾನ್ಯವನ್ನು ಕೊಡು : ಅವರ ದಂಡಿಗೆ ರಸ್ತು ಬಿಡದಂತೆ ಆಟಕಾವು ಮಾಡಿಸಿ (ಮಹಾಶಂ. I. ೮೪). [ರಸ್ತು (<ರಸದು) + ಬಿಡು$_1$]

**ರಸ್ತುಮುಸ್ತೈದೆ** (ನಾ). ಆಹಾರಸಾಮಗ್ರಿ : ಜಕೀರಿ ರಸ್ತುಮುಸ್ತೈದೆಗಳೊಳಪೊಗದಂತು ಕಂಡಿ ಕಣವೆ ಪಥಂಗಳಂ ಕಟ್ಟಿ ಜೇರುಮುತ್ತಿಗೆಯಂ ರಚಿಸಲು (ಕಳಕ್ಕ. ೩-೯೩ ಹ); ರಸ್ತುಮುಸ್ತೈದೆಯೂ ಇಲ್ಲವಾಗಿ ಬಹಳ ಜನ ಮೃತವಾಗಿ ಹೋದರು (ರಾಜೇಂದ್ರ. ೨೮).

[ರಸ್ತು (<ರಸದು) + ಮುಸ್ತೈದೆ]

**ರಸ್ತೆ** (ನಾ). ದಾರಿ ; ಮಾರ್ಗ ; ಬೀದಿ : ರಾಜಧಾನಿಯಿಂದ ಆಶ್ರಮದ ವರೆಗಿರುವ ರಸ್ತೆಯು ಬಹಳ ದೂರ (ಹುಟ್ಟಿಹ. ೦೮೯) ; ಅಲ್ಲಿಗೆ ರಸ್ತೆ ಇಲ್ಲ (ಬೌರಿಂಗ್. ೩೨೫).

[← ಪಾರ. ರಾಸ್ತಹ್; ಹಿಂ. ರಸ್ತಾ, ರಾಸ್ತಾ ; ಮರಾ. ರಸ್ತಾ]

**ರಸ್ತೆಸಾರಿಗೆ** (ನಾ). (ರಸ್ತೆಯ ಮೇಲೆ) ಸಾಗಣೆಯ ಸೌಕರ್ಯಕ್ಕಾಗಿ ಏರ್ಪಾಡಾಗಿರುವ ವಾಹನವ್ಯವಸ್ಥೆ : ರಸ್ತೆಸಾರಿಗೆ ಸಂಸ್ಥೆಯ ಕೆಲಸಗಾರರು ಸಂಪು ಹೂಡಿದ್ದಾರೆ (ರೂಢಿ). [ರಸ್ತೆ + ಸಾರಿಗೆ$_1$]

**ರಸ್ಮಿ** 'ರಸುಮಿ' ನೋ.

**ರಸ್ಯ** (ಗು). ೧. ರಸಭರಿತವಾದ ; ರಸವುಳ್ಳ : ರಸ್ಯಗುಣವೊಂದನ್ನು ಹೊರತು ಕವಿಯ ದರ್ಶನಕ್ಕೂ ತಾತ್ತ್ವಿಕರ ನೀತಿಶಾಸ್ತ್ರಜ್ಞರ ದರ್ಶನಗಳಿಗೂ ಇರುವ ಅಂತರವು ಬಹಳ ಕಡಿಮೆ (ಅಂಕಾ. ೯೮). (ನಾ). ೨. ನೆತ್ತರು ; ರಕ್ತ. [ಸಂ.]

**ರಹ$_1$** (ನಾ). ೧. ಏಕಾಂತಸ್ಥಳ ; ನಿರ್ಜನಪ್ರದೇಶ. ೨. ಏಕಾಂತತೆ. ೩. ಗುಟ್ಟು ; ರಹಸ್ಯ : "ಗುಹ್ಯ ರಹಮುಪಹ್ವರಮದು ರಹಸ್ಯಂ" (ಮಂಗರಾ. ೦೨೮-೦೦) ; ಬಹುತಪದ ಕೈಕೊಂಬೆವೆಂಬೊಲು ರಹಕೆ ಸೇರದೆ ಮುಳುಗಿದುವು ವಿಮಾನಂಗಳು ಕೊಳನೊಳಗೆ (ಕೋಗಳು. ೯-೬೩). ೪. ಗುಪ್ತಾಲೋಚನೆ : ಮಂತ್ರಿಯ ಗೃಹಕೆ ಕಳುಹಿಸು ತಂದೆ ಮಕ್ಕಳು ರಹವ ಮಾಡಿದರು (ಕೊರರಾ. ೬-೦-೩೦). ೫. ಆಶ್ಚರ್ಯ ; ಸೋಜಿಗ : "ರಹಮೆನಲತ್ಯಾಶ್ಚರ್ಯಂ" (ಶಾರಂ. ೩೩) ; ಏನು ನಿನ್ನಂಥವಗೆ ನೀನಾರಾ ನರೇಂದ್ರರ ಸೆಜಿಯ ಬಿಡುಗಡೆಗೇನನೆಂಬೆನು ರಹವನೆಂದನು (ಕುವ್ಯಾಸ. ೨-೬೨). [ಸಂ. ರಹಸ್]

**ರಹ$_2$, ರಹಿ$_2$** (ನಾ). ೧. ತಂತ್ರ ; ಉಪಾಯ. ೨. ದಾರಿ; ಮಾರ್ಗ; ಹಾದಿ : ನಾಟ್ಯದ ಗೃಹಕೆ ಸೂಚನೆಗೊಟ್ಟು ನಿಮಿಷಕೆ ರಹವ ಮಾಡಿದರವರು (ಕುವ್ಯಾವಿ. ೯-೬) ; ಹೊಗಳಲದೇಕೆ ನಿಂದಿಸಲೇಕೆ ನಿಮಗೆ ನಾ ಜಗಳವನಿಕ್ಕಬಂದವನೆ ಮಗಳನು ಕೆಡಿಸಿದನಿಗೆ ರಹವಜಾಯದೆ ದೃಗುಯುಗದೊಳು ಕಿಡಿಯೇಕೆ (ಪ್ರೋಹಕ. ೩೩-೨೫) ; ಜನಗಳ ನೆಮ್ಮದಿಗೆ ಭಂಗವನ್ನುಂಟು ಮಾಡುವುದಕ್ಕೆ ಅವಕಾಶಕ್ಕೆ ರಹ ಇಲ್ಲದಂತೆ . . . ತಿಳಿಸುವುದು (ನ್ಯಾಕಾಶ. ೩೦). ರಹಿ$_2$ : ೨. 'ರಹಿಗೆಡು' ಪರಾ.

[← ಅರ. ಪಾರ. ಹಿಂ. ರಾಹ್ ; ಮರಾ. ರಹಾ]

**ರಹಟ** 'ಜಾಟ್ಟ' ನೋ.

**ರಹಟಘಟಿಕಾನ್ಯಾಯ** (ನಾ). [ತರ್ಕಶಾ] ಒಂದು ಬಗೆಯ ನ್ಯಾಯ ; ರಾಟೆ ಮತ್ತು ಅದರ ಗಡಿಗೆಗೆ ಸಂಬಂಧಿಸಿದ ನ್ಯಾಯ ; ಕ್ರಮವಾಗಿ ಪುನರಾವರ್ತನೆಯಾಗುವುದನ್ನು ಸೂಚಿಸುವ ನ್ಯಾಯ : ಅನುಸಂಧಾನಂಗಿಡದೈದನೆಯದು ದುಷ್ಷಮಮೆನಿಪ್ಪ ಕಾಲಂ ಬಟಿಕಾಜಿನೆಯದತಿದುಷಮಂ ವರ್ತನಮಿಂತೀ ತೆಱನೆ ರಹಟಘಟಿಕಾನ್ಯಾಯಂ (ಕಂಠಾಪಶಾ. ೦-೫೭).

[ರಹಟ (< ಜಾಟ್ಟ) + (ಸಂ. ಘಟಿಕಾ) + ನ್ಯಾಯ]

**ರಹಟಘಟೀಯಂತ್ರ** (ನಾ). ಬಾವಿಯಿಂದ ನೀರೆತ್ತುವ ಸಾಧನ ; ರಾಟೆ : ರಹಟಘಟೀಯಂತ್ರಂಗಳ್ ಬಹುವಿಧವಿಭ್ರಮದಿನೆಸೆವುವುಪಶಲ್ಯಕದೊಳ್ (ಕೃಶ್ಯಕ. ೨-೫೦). [ರಹಟ (< ಜಾಟ್ಟ) + ಘಟೀಯಂತ್ರ]

**ರಹಣ** (ನಾ). ಓಡಿಹೋಗುವುದು ; ಪಲಾಯನ : ರಕ್ಕಸರಾಯು ಭೈರವನಾದನಹಹಾ ಕೈಯ ಮುಚ್ಚಿದನೇನ ಹೇಳುವೆ ರಹಣವಾಯ್ತೆಂದು (ಕುಶಂರಾ. ೨೨-೫೦).

ರಹಣಾದಾಕಾರ = ಛದ್ಮವೇಷ ; ಮಾರುವೇಷ : ಆ ಮಹಾಸಭೆಯಾ ರಹಣದಾಕಾರಂಗಳಲಿ ವಿಗ್ರಹಪಲಾಯನನಾಟಕವ ನಿರ್ವಹಿಸಿದಿಂದ್ರಾದಿಗಳು (ಉತ್ತರಾ. ೯-೯೫). [ಸಂ.]

**ರಹಣೆ** (ನಾ). ೧. ಸಾಲು ; ಸರಣಿ : "ರಹಣೆಯೆನಲ್ ಸರಣಿ" (ಶಾರಂ. ೨೦) ; ಗಹಗಹಿಸಿ ನಗೆ ನಗುವ ನಗೆಗಳ ರಹಣೆಗಳಿಗೊಳಗಾದೆನಲ್ಲಾ (ಬಸವ. ೨೮-೨೦) ; ಲಹರಿ ಮಸಗಿದುದತ್ತ ಕಾಂತಾಬಹಳಪಾರಾವಾರ . . . ಗಹಗಹಿಕೆ ಮಿಗೆ ಅಟ್ಟಹಾಸದ ರಹಣೆಗಳ (ಕುವ್ಯಾಆ. ೦೫-೦೯) ; ಅಹುದಲೇ ವಾಲ್ಮೀಕಿ ಕವಿತೆಯ ರ[ಶಾಕಾಂ. ವ]ಹಣಿ ಲೇಸ್ಸೆ (ಕೊರರಾ. ೦-೨-೦೭). ೨. ನಟನೆ ; ಅಭಿನಯ : ಹಯಮಂ ತಡೆದ ರಹಣ ರಾಯರ ಮುಂದೆ ಹೋಗೆಂದು ದುಷ್ಯತಿಯ ಕುಹಕದಿಂ ಬೈದು (ಕೃಪಿಶಾ. ೦೭-೩೩). ೩. ಉಪಾಯ ; ತಂತ್ರ : ಕಾಮನ ಮಹಿಮೆಯಿಂದೆ ಪರವಧುವಿನ [ವನು] ರಹಣೆಯಿಂದೆ ತನ್ನ ಬಗೆಗೆ ಒಪ್ಪವೊಲಿಸುವವಳು ಸಮರ್ಥದೂತಿ (ಅವಪ. ೦೪-೩). [← ಮರಾ. ರಹಣೇ, ರಹಾಣೀ]

**ರಹಣೆಕಾಜಿ** (ನಾ). ನಟನೆ ಮಾಡುವವನು ; ನಟ : ಗರ್ದಭಗಳಂತೊದೆದಾಡಿ ರಹಣೆಕಾಜಿರವೊಲು ಕೆಲೆದು ಮಹಿಷನಂದದಿ ನೋಡಿ ಕುದುರೆವೊಲ್ಯಾಡುವ ಮಹಿಯ ರೊಟ್ಟಿಗರ ವರ್ತನವೆ (ಶರಶ. ೩೦-೦೦೨).

[ರಹಣೆ + -ಕಾಜಿ]

**ರಹದಾರಿ** (ನಾ). ೧. ಅನುಜ್ಞಾಪತ್ರ ; ಪರವಾನೆ : ಮಡಕೆಯನು ಬಡಿದು ಹೊಸ ಕೊಡವ ತೋರುವ ಸವಿನೆ ಪಡೆದಿಪೆಯು ರಹದಾರಿಯನು ಹೊನ್ನಗಣಿಗೆ ? (ಮಂಕುಂಕ. ೬೭೯) ; ಪ್ರಾಚೀನ ಕರ್ನಾಟಕದಲ್ಲಿ ಈಗಿನ ರಹದಾರಿ (Pass-Ports)ಗಳನ್ನು 'ಉಂಡಿಗೆ'ಗಳೆಂದು ಕರೆಯುತ್ತಿದ್ದರು (ಕಶಾಶಕ. ೩೩೬). ೨. ರಸ್ತೆ ; ಮಾರ್ಗ : ಮೈಸೂರಿಗೆ ಹೋಗಬೇಕಾದ್ದಕ್ಕೆ ಒಳ್ಳೆ ರಹದಾರಿ ಮಾಡಿ (ರಾಜೇಂದ್ರ. ೦೨೭) ; ಎಡಬದಿಯ ದೊಡ್ಡಬಯಲನ್ನು ದಾಟಿ ರಹದಾರಿಗಳಿಂದ ದೂರಹೋಗಿ ಸಣ್ಣದಿನ್ನೆಯೊಂದರ ಮೇಲೆ ಕುಳಿತುಕೊಂಡೆವು (ಮುಂಕ್ರಿ. ೨೭). [← ಪಾರ. ಹಿಂ. ರಾಹದಾರೀ ; ಮರಾ. ರಹದಾರೀ]

**ರಹದಾರಿಚೀಟಿ** 'ರಹದಾರಿಚೀಟು' ನೋ.

**ರಹದಾರಿಚೀಟು, ರಹದಾರಿಚೀಟಿ** (ನಾ). (ಒಂದು ಸ್ಥಳದಿಂದ ಹೊರಹೋಗಲು ಅಥವಾ ಒಂದು ಸ್ಥಳದ ಒಳಗೆ ಬರಲು ಪಡೆಯ

ಬೇಕಾದ) ಅಪ್ಪಣೆಚೀಟಿ ; ಅನುಮತಿಪತ್ರ : ಮೂಡಣದೇಶಕ್ಕೆ ಹೋಗು ವಂಥಾ ಜನರಿಗೆ ರಹದಾರಿಚೀಟು ಕೊಡಬೇಕು (ಶಾಕೇಂದ್ರ. ೨೬೦). **ರಹದಾರಿಚೀಟಿ** : ನಗರದಿಂದ ಯಾರೂ ಮುಂದ್ರೆ ಒತ್ತಿದ ರಹದಾರಿಚೀಟಿ ಯಿಲ್ಲದೆ ಹೊರಕ್ಕೆ ಹೋಗದಂತೆ ತಡೆಯಲ್ಪಟ್ಟರು (ವ್ಯಾಕಥಿ. ೦೩೮).

[ ರಹದಾರಿ + ಚೀಟು₂ ]

**ರಹವಾಸಿ** ' ರಹಿವಾಸಿ ' ನೋ.

**ರಹಸಿಯ** (ನಾ). ಗುಟ್ಟು ; ರಹಸ್ಯ : ರಹಸಿಯದ ಬುಗ್ಗೆಯದು ಚಿಮ್ಮುತಿಹುದೆಲ್ಲರೊಳು (ಬಂಕುಳ. ೨೦೫). [< ಸಂ. ರಹಸ್ಯ]

**ರಹಸ್ಯ** (ನಾ). ಗುಟ್ಟು ; ಗೋಪ್ಯ ; ಮರ್ಮ : "ಗುಪ್ತರಹಮುಪಹ್ವರಮದು ರಹಸ್ಯಂ" (ಬಂಗರಾ. ೦೨೬-೦೦) ; ನಿರ್ಮಳದ ಧರ್ಮಸ್ಥಿತಿ ರಹಸ್ಯವ ತಿಳುಹಿದವರಾರ್ (ಶುವ್ಯಾಳ. ೦೭-೬೨); ಇವನ ರಹಸ್ಯವನಿನ್ನು ಮರಿಯಲು . . . ಇಂತೆಂದನು ನಾನಸಪನಂ ಕುರಿತು (ಗಹೀಶ. ೯-೨೨೩).

[ಸಂ.]

**ರಹಾಟ** ' ಜುಟ್ಟು ' ನೋ.

**ರಹಿ₁** (ನಾ). ೧. ರೀತಿ ; ಪ್ರಕಾರ ; ಬಗೆ : "ರಹಿಯೆಂದೊಡದೀ ಪ್ರಕಾರ" (ಚಾರಿಪ. ೩೬) ; ತಾರಾಗಣದ ಮಧ್ಯದ ಚಂದ್ರಮನ ಹೊಯ್ಲಿಣ ಲೊಳಡಸಿದ ರಾಹುವಿನ ರಹಿಯಾಯ್ತು ನಿಮಿಷದಲಿ (ಶುವ್ಯಾಳ. ೫೩-೨೯) ; ವಂದಿಗಳ ವೈತಾಳಿಕಾಮರವೃಂದ ಸೂಸುವ ಪುಷ್ಪವೃಷ್ಟಿಗಳಿಂದ ದೆಸೆ ಮಘ ಮಘಿಸೆ ಪರಮೋತ್ಸವದ ರಹಿಗಳಲಿ (ಶಿರಾಗ. ೩-೬-೩೬). ೨. ಸಡಗರ ; ಸಂಭ್ರಮ ; ಉತ್ಸಾಹ : ರಾಣಿಯರ ರಹಿಯಿಂದ ರಂಜಿಸಿ ಜಾಣಿನಲಿ ಬಹೆವರಸ ನಿಮ್ಮಡಿಯಾಣೆಯೆಂದೊಡಬಡಿಸಿದರು (ಶುವ್ಯಾಳ. ೦೭-೨೩) ; ಮೊಳಗಿದವು ಘನಗಂಭೀರಭೇರಿಗಳಭ್ರದಲಿ ನಾರಿಯರ ಪೆಕ್ಕಣದ ಪರಮೋತ್ಸವದ ರಹಿ ಮಿಗಲು (ಶಿರಾಗ. ೯-೦೦-೩೬). [ < ಪ್ರಾ. ರಹ ]

**ರಹಿ₂** ' ರಹ್₂ ' ನೋ.

**ರಹಿಗೆಡು** (ಕ್ರಿ). ದಾರಿ ಕಾಣದಾಗು : ದಿಕ್ಕು ತೋರದಂತಾಗು : ಮಹಿಯೊಳ್ ಭೂಸುರವೇಷದಿಂದ ಕಲಿಯುಲ್ ಕರ್ಣಂ ಧನುರ್ವೇದಮುಂ ರಹಿಗೆಟ್ಟಂ (ಸೋಮೇಶ. ೬೨). [ ರಹಿ₂ ( < ರಹ್₂ ) + ಕೆಡು₁ ]

**ರಹಿತ** (ಗು). ೧. ಇಲ್ಲದ. (ನಾ). ೨. ಬಿಡುವಿಕೆ ; ತ್ಯಜಿಸುವಿಕೆ : ' ನಿಯಮರಹಿತ ' ಪರಾ. [ಸಂ.]

**ರಹಿತಾಘ** (ನಾ). ಪಾಪವಿಲ್ಲದವನು ; ನಿಷ್ಕಳಂಕ : ಸುಹಿತಾಚಾರನು ದುರಲಾಳ ಮಲಧಾರಿಖ್ಯಾತನಾಮಾಂಕಿತೆ[ಂ] ರಹಿತಾಘಂ ವರಪದ್ಮಸೇನ ಮುನಿಪಂ (ಕಶಾಇ. XX. ೨೦೭-೨೩; 1247). [ಸಂ.]

**ರಹಿತಾನುಕೂಲೆ** (ನಾ). ೧. ಅನುಕೂಲೆಯಲ್ಲದವಳು. ೨. ದಂಡೆಯನ್ನು ಬಿಟ್ಟು ಹರಿಯುವ ನದಿ. ೧, ೨ : ಹರನಂತೆ ಧನದಸಖ ನವರತ್ನದಂತೆ ಗುಣವಿರಹಿತೆ ಸುರಾಚಾರ್ಯನಂತೆ ಗತಸೌಮ್ಯೆ ಸನ್ಮರುಷ ಋತು ನಿಮ್ನಗಾರಯದಂತೆ ರಹಿತಾನುಕೂಲೆ (ಕಂಪ. ೦೦-೩೬).

[ ಸಂ. ರಹಿತಾನುಕೂಲಾ ]

**ರಹಿತು** (ನಾ). ರದ್ದು ; ವಜಾ : ಏನು ನರಹರಿ ! ಈ ವರ್ಷ ಕಾಲೇಜಿಗೆ ಹೋಗುವುದನ್ನು ನೀನು ರಹಿತು ಮಾಡಿದಿಯಾ ? (ಸಚುಹ. ೦೮೭).

[< ರಹಿತ ]

**ರಹಿವಾಸಿ**, ರಹವಾಸಿ (ನಾ). ವಾಸಿಸುವವನು ; ನಿವಾಸಿ : ಅಂಗ್ಲರು ರಾಯರಾದರೂ ಅಲ್ಲಿಯ ಮೂಲ ರಹಿವಾಸಿಗಳಲ್ಲ (ಪಾಠಕೋ. ೬) ; ಇಲ್ಲಿಯ ರಹಿವಾಸಿಗಳು ಕನ್ನಡ ಮಾತೃಭಾಷೆಯವರು (ದೇಪಶ. ೩೯). **ರಹವಾಸಿ** : ನಾವೂ ಪುಣೆಯ ರಹವಾಸಿಗಳಾಗುತ್ತೇವೆ ! (ಸಚುಹ. ೩೭೭).

[ ← ಮರಾ. ರಹಿವಾಸೀ ]

**ರಹಿಸು** (ಕ್ರಿ). ಇರು ; ವರ್ತಿಸು ; ಉಂಟಾಗು : ಸೂಳೆಯರೇಕಪುರುಷರಲ್ಲಿ ವಿಹರಿಸುವರೇ ಲೋಕಧರ್ಮದ ರಹಣಿ ರಹಿಸುವುದೈಸಲೇ (ಶುವ್ಯಾಳ. ೨೨-೨೫) ; ನಾರದನ ತುಂಬುರನ ಸಂಗೀತ ರಹಿಸೆ ರಂಭಾ ರಮ್ಯನರ್ತನ ಕಣ್ಗೆಸೆಯೆ ನೀಲಕಂಧರನಲ್ಲಿ ನೈವೇದ್ಯದೋಜಿಪ (ಗೌಂದಪ್ರ. ೦೭-೭೭).

[ ರಹ್₂ + — ಇಸು₃ ]

**ರಹೋಭ್ಯಾಖ್ಯಾನ** (ನಾ). [ಜೈನ] ಸತ್ಯಾಣುವ್ರತದ ಐದು ಅತಿಚಾರಗಳಲ್ಲಿ ಒಂದು ; ಗಂಡ ಹೆಂಡಿರ ಏಕಾಂತದ ವಿಷಯಗಳನ್ನು ಬಹಿರಂಗಪಡಿಸುವುದು : ನಾನಾ ಮಿಥ್ಯೋಪದೇಶಂ ಪುದಿದೊದವಿದ ಸಾಕಾರಮಂತ್ರಂ ರಹೋವ್ಯಾ [ ಭ್ಯಾ ] ಖ್ಯಾನಂ ನ್ಯಾಸಾಪಹಾರಕ್ರಮಮನು ಗತಿಯಿಂ ಕೂಟಲೇಖಕ್ರಿಯಾವಿಜ್ಞಾನಂ ಸತ್ಯವ್ರತಕ್ಕಂತಿವು ಪರಿಪಡಿಯಿಂ ದಮ್ದತೀಚಾರಮಕ್ಕುಂ (ಸುಕುಮಾ. ೬-೦೯). [ಸಂ.]

**ರಳ** ' ಟಿಬ ' ನೋ.

**ರಾಉತ** ' ರಾವುತ ' ನೋ.

**ರಾಉತ್ತ** ' ರಾವುತ ' ನೋ.

**ರಾಂಕವ** (ಗು). ೧. ರಂಕು ಎಂಬ ಜಿಂಕೆಯ ಕೂದಲಿನಿಂದ ಮಾಡಿದ : ಸುಕುಮಾರವಿಚಿತ್ರರಾಂಕವಾಸ್ತರಣಂಗಳಿಂದೆಯುಂ . . . ಶೋಭಿಸುವ (ಪುರಾಕ. ೨-೦೩-೩೯). (ನಾ). ೨. ರಂಕು ಎಂಬ ಜಿಂಕೆಯ ಕೂದಲಿನಿಂದ ಮಾಡಿದ ವಸ್ತ್ರ, ಕಂಬಳಿ, ಶಾಲು ಮುಂತಾದುವು: "ರಾಂಕವಂ, ಮೃಗರೋಮಜಂ-ಮೃಗರೋಮಗಳಿಂದ ಮಾಡಲ್ಪಟ್ಟ ಶಾಲು . . . ಮುಂತಾದುವುಗಳಿಗೆ ಪೆಸರುಗಳು" (ಸಿದ್ಧಾಂತ. ೨೦೨). [ಸಂ.]

**ರಾಂಡಬಾಜ** (ನಾ). ವ್ಯಭಿಚಾರ ; ಸೂಳೆಗಾರಿಕೆ : ಹೆಣ್ಣಿನ ಸಹವಾಸಕ್ಕೆ 'ರಾಂಡಬಾಜ'ವೆಂದೂ ಆಗದವರು ಕರೆಯುವ ವಾಡಿಕೆ (ಹೀಮಂಕ. ೦೫೨).

[ ← ಹಿಂ. ರಂಡೀಬಾಜೀ ; ಮರಾ. ರಾಂಡಬಾಜ್ ]

**ರಾಂಡಬಾಜತನ** (ನಾ). = ರಾಂಡಬಾಜ : ಮನುಷ್ಯ ಕಳವುಮಾಡಿ ಬದುಕುತ್ತಾನೆ ; ರಾಂಡಬಾಜತನ ಮಾಡಿಯೂ ಮೆರೆಯುತ್ತಾನೆ (ಗೀಕಪ. II. ೩೬೦). [ ರಾಂಡಬಾಜ + – ತನ]

**ರಾಕಟ** ' ರಾಕಡಿ ' ನೋ.

**ರಾಕಡಿ**, ರಾಕಟಿ, ರಾಕುಟಿ, ರಾಕುಡಿ, ರಾಗಟಿ, ರಾಗುಟಿ, ರೇಗಟಿ, ರೇಗಟೆ, ರ್ಯಾಕಟಿ, ರ್ಯಾಕಟೆ, ರ್ಯಾಕಡೆ, ರ್ಯಾಗಟೆ (ನಾ). ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ ; ಜಡೆಬಿಲ್ಲೆ : "ರಾಕಡಿ . . . ಹೆಣ್ಣುಮಕ್ಕಳ ತಲೆಯ ಆಭರಣ" (ಶಾಪಕೋ. ೯೦). **ರಾಕಟಿ** : ಶೃಂಗಾರವಾದ ಜಡೆಭಂಗಾರ ಹೊಂಗ್ಯಾದಿಗೆ ಮುಡಿದ ಭಂಗಾರದ ಹರಳಿನ ರಾಕಟ [ಶಾಶಾಂ. ಗುಟಿ] (ಪುರಂದ. ೦-೦೯೦-೫). **ರಾಕುಟಿ** : ಮುತ್ತಿನ ಮೂಗುತಿ ಕೆತ್ತಿದ ವಾಲೆಯು ಇತ್ತರಾ ಬುಗುಡಿ ನೆತ್ತಿಗರಳಿಲೆ ಚಿನ್ನದ ರಾಕುಟಿ (ಪಾಠಕೀ. ೦-೬೫-೦೬). **ರಾಕುಡಿ** : ಸ್ತ್ರೀಪಾತ್ರಧವರು ರಾಕುಡಿ, ಚಂದ್ರವಂಕಿ, ಜಡೆ, ಅಡ್ಡಬಾಸ ಮುಂತಾದ ಹಳೇಆಭರಣಗಳನ್ನು ತೊಟ್ಟುಕೊಳ್ಳುತ್ತಾರೆ (ಅಹಾಕ್ಕ. ೬೦). **ರಾಗಟೆ** : ಬಿಚ್ಚೋಲೆ ರಾಗಟೆಗೆಡದ ಭೋರೆಂದೆಂಬ ನಿಡುನರವಿಗಳನಿಕ್ಕಿಸಿದ (ಪ್ರಭುರಾಶಾ. ೨-೩೭). **ರಾಗುಟಿ** : ಆಯ್ಕೊಯಿನ್ನಯ . . . ಬುಗುಡಿ ರಾಗುಟಿಯ (ಪುಣ್ಯಕ. ೬-೬) ; ಹೆರಳು ರಾಗುಟಿ ಚೌರಿ ಗಿಳಿಗಳೆಡಬಲಕ (ಜಾಪದ. ೪೪). **ರೇಗಟಿ** : ರೇಗಟಿ, ಕೇದಗೆ . . . ಮೊದಲಾದ ಆಭರಣಗಳು (ಬಂದಿಮ. ೩೮). **ರೇಗಟೆ** : ಕುರುಳು ರೇಗಟೆ ಕರ್ಣಪತ್ರವು ಮೆರೆವ ಕಾಂಚನ ಪೂವ್ಯ ಬೆರಳೊಳಗಿಟ್ಟ ಮುದ್ರಿಕೆ (ಕನಕಾ. ೦೯-೬) . **ರ್ಯಾಕಟಿ** : ಕುವರಿಯಳಯಸಿತ ಮುಡಿದಲೆಗೆ ರ್ಯಾಕಟಯನಮರ್ಚಿ (ಸಪಮೋ. ೨೪-೩೪). **ರ್ಯಾಕಟೆ** : ಮೇಲೆ ರ್ಯಾಕಟೆ ಚೌರಿ ಮುಡಿದ ಕುಸುಮವು (ಶಿವಾಕ್ಕ. ೦೦-೩) ; ರ್ಯಾಕಟೆ ಚೌರಿ ಶತಜಡೆ ಭಂಗಾರವು (ಕುಕೇರೋ. ೦೨೭). **ರ್ಯಾಕಡೆ** : ಹೀಂಬಲು ಹಾಕಿದ ಚೌರಿ ರ್ಯಾಕಡೆಯ ಗೊಂಡೆ (ಜಪಾಶ. ೪೮-೦೦). **ರ್ಯಾಗಟೆ** : ಪದ್ಮರಾಗ

ಮಣಿಯು ರ್‍ಯಾಗಟೆಯು ಬಿಲ್ಲೆಯಂ ಬಿಗಿದು (ಶ್ರೀಗಂಧಿ. ೨೦೦–೦೯) ; ಕಾಳವ್ವಾಳ ವೇಣಿ ಮ್ಯಾಲೆ ರ್‍ಯಾಗಟೆಯು ಸಂದು ಕೀಲಿಸಿದ (ಜನಪಬು. ೯೩–೨೪).

[ದೇ.॥ ತಮಿ. ರಾಕ್ಕಟಿ, ರಾಕ್ಕೊಟಿ, ರಾಕ್ಕುಟಿ; ತೆಲು. ರಾಕಿಡಿ, ರಾಗಿಡಿ./ ಮರಾ. ರಾಖಡೀ]

**ರಾಕರಿ** (ನಾ). ಕಲ್ಲುಗುಡ್ಡೆ : ಈ ಒಂದೆ ಹೂವು ಜರ್ಜರಾ. ಮರದ ಬುಡದ ರಾಕರಿಯಲ್ಲಿ ಮೂಡಿ ಕಠಿಣವರ್ತ್ಯದಲ್ಲಿ ನಾಚುತಿರುವ ನಿರ್ಜರಾ ಬಿಂಬಾಧರದಪ್ಸರಾ ! (ಅನಿಕೇ. ೦೯–೦೩) : ತುಂಡುಜಾತಿ ರಾಕರಿಗಳಲ್ಲಿ ಬೆಳೆಸಲು ಉಪಯುಕ್ತವಾಗಿವೆ (ಕಾಕೆಪು. I. ೬೩೯). [← ಇಂ. Rockery]

**ರಾಕಾಚಂದ್ರ** (ನಾ). ಪೂರ್ಣಚಂದ್ರ ; ಹುಣ್ಣಿಮೆಯ ಚಂದ್ರ : ತಾರೆಗಳ ಸಮೂಹದೊಂದಿಗೆ ಬರುವ ರಾಕಾಚಂದ್ರನಂತೆ ತರುಣಿರನ್ನೆಯರ ಮೊತ್ತದಲಿ ನಾಟಕಶಾಲೆಗೆ ಬಂದನು (ಕೆಹಾರಿ. ೦೬೬). [ಸಂ.]

**ರಾಕಾಸ** ' ರಕ್ಕಸ ' ನೋ.

**ರಾಕಾಸಿ** ' ರಕ್ಕಸಿ ' ನೋ.

**ರಾಕುಟ** ' ರಾಕಡಿ ' ನೋ.

**ರಾಕುಡಿ** ' ರಾಕಡಿ ' ನೋ.

**ರಾಕೆ** (ನಾ). ೧. ಪೂರ್ಣಚಂದ್ರನಿರುವ ದಿನ ; ಹುಣ್ಣಿಮೆ : "ಚಂದ್ರಂ ನೆಟ್ಟನೆ ನೆಱೆದು ಬಿಂಬದಿಂ ಪೂರ್ಣನಾಗೆ ರಾಕಾಖ್ಯೆ ಪೌರ್ಣಮಾಸಿಯುದಕ್ಕುಂ" (ವಸ್ತುಕೋ. ೦೩–೯). ೨. ಮೊದಲನೆಯ ಬಾರಿ ಋತುಮತಿಯಾದ ವಳು ; ಮೈನೆರೆದ ಹುಡುಗಿ : "ಕನ್ಯಕೆಯಾಗಿ ಮುಟ್ಟವೆಗೊಂಡವಳ ರಾಕಾಯೆಂಬುದು" (ಹಲಾಯು. ೮೦–೩೩೯). [ಸಂ. ರಾಕಾ]

**ರಾಕೆಟ್** ' ರಾಕೆಟ್ಟು ' ನೋ.

**ರಾಕೆಟ್ಟು**, ರಾಕೆಟ್ (ನಾ). ೧. ಒಳಗಿನ ಮದ್ದನ್ನು ಹೊತ್ತಿಸುವುದ ರಿಂದ ಮೇಲಕ್ಕೆ ಹಾರಬಲ್ಲ ಲೋಹದ ಅಥವಾ ಕಾಗದದ ಉರುಳೆ ಯಾಕಾರದ ಕೋಶ ; ಪಟಾಕಿಯಲ್ಲಿ ಒಂದು ಬಗೆ : ಆಕಾಶಬಾಣ. ರಾಕೆಟ್ಟು (Rocket. ಶಕ್ತಿಶಿ. ೬೦). **ರಾಕೆಟ್** : ೨. ಕ್ಷಿಪಣಿ : ಅಮೆ ರಿಕನ್ನರು ತಮ್ಮ ಮರಿಚಂದ್ರನನ್ನು ಹಾರಿಸಲು ಜೂಪಿಟರ್ ಎಂಬ ರಾಕೆಟ್ ಉಪಕರಣಗಳನ್ನು ಉಪಯೋಗಿಸಿದರು (ಅಣಾಶ. ೯೭). [← ಇಂ. Rocket]

**ರಾಕೇಂದು** (ನಾ). = ರಾಕಾಚಂದ್ರ : ಒಪ್ಪುವ ಸುಕುಮಾರಂಗೆ . . . ರಾಕೇಂದುವದನ ಶ್ರೀಕಾರಕರ್ಣದ . . . ಗೌರೀದೇವಿಯೆಂಬ ತರುಣಿಯಂ ಮದುವೆಯಂ ಮಾಡಿ (ಹಮ್ಮಿರ. ೨–೩೨ ಪ). [ಸಂ.]

**ರಾಕ್ಷಸ** (ಗು.) ೧.ರಕ್ಕಸರಿಗೆ ಸಂಬಂಧಿಸಿದ. ೨. ಬಯಂಕರವಾದ ; ಅಮಾನುಷವಾದ : ' ರಾಕ್ಷಸವಮೌನ ' ಪರಾ. (ನಾ). ೩. ದೇವತೆ ಗಳ ಶತ್ರು ; ದೈತ್ಯ ; ದನುಜ : ಕ್ರಿಯೆ ಇಲ್ಲದ ಭಕ್ತ ಮನುಜ ಕ್ರಿಯೆ ಇಲ್ಲದ ಜಂಗಮ ರಾಕ್ಷಸ (ವಚರ. ೯೩–೩೩೩) ; ತಮೋಯೋಗ್ಯರಲ್ಲಿ ದೈತ್ಯ, ರಾಕ್ಷಸ, ಪಿಶಾಚ, ಮನುಷ್ಯಾಧಮ ಎಂದು ನಾಲ್ಕು ಪ್ರಕಾರಗಳು (ಹಂಡಿನಾ. ೨೯೬). ೪. ನೈಋತ್ಯದಿಕ್ಕಿನ ಅಧಿಪತಿ ; ನೈಋತಿ : "ಯಾತು, ಯಾತುಧಾನಃ, ಕ್ರವ್ಯಾತ್, ರಾಕ್ಷಸಃ . . . ಕೈಕಸೇಯಃ – ಈ ೯ ನೈಋತಿಯ ಪೆಸರ್" (ಹಲಾಯು. ೧೩–೭೩). ೫. ಎಂಟು ಬಗೆಯ ವಿವಾಹಗಳಲ್ಲಿ ಒಂದು ; ಕನ್ಯೆಯ ಬಂಧುಗಳನ್ನು ಸೋಲಿಸಿ, ಬಲಾತ್ಕಾರವಾಗಿ ಅವಳನ್ನು ಕೊಂಡೊಯ್ದು ಮಾಡಿ ಕೊಳ್ಳುವ ವಿವಾಹ. ೬. ಅರುವತ್ತು ಸಂವತ್ಸರಗಳಲ್ಲಿ ಐವತ್ತನೆ ಯದು : ಪ್ರಭವ . . . ರಾಕ್ಷಸ . . . ಅಕ್ಷಯವೆಂದಱುವತ್ತು ತೆಱನಾಗಿ ಹುದು (ವಿವೇಕ. ೨೩೩). ೭. ಒಂದು ಬಗೆಯ ಕತ್ತಾಳೆ : ಹಂದಿಗಳಿಗೆ ರುಚಿಯಾದ ಆಹಾರ ರಾಕ್ಷಸನ (ಕತ್ತಾಳೆ) ಗೆಡ್ಡೆ (ಕೃಶಾ. ೩೯). [ಸಂ.]

**ರಾಕ್ಷಸಗಣ** (ನಾ). [ಜ್ಯೋತಿ] ನಕ್ಷತ್ರಗಳ ಮೂರುಗಣಗಳಲ್ಲಿ ಒಂದು ; ರಾಕ್ಷಸವರ್ಗಕ್ಕೆ ಸೇರಿದುವೆಂದು ಭಾವಿಸಲಾದ ನಕ್ಷತ್ರಗಳ ಗುಂಪು ; ಕೃತ್ತಿಕೆ, ಆಶ್ಲೇಷೆ, ಮಖೆ, ಚಿತ್ತೆ, ವಿಶಾಖೆ, ಜ್ಯೇಷ್ಠೆ, ಮೂಲ, ಧನಿಷ್ಠೆ ಮತ್ತು ಶತಭಿಷೆ ಇವು ಒಂಬತ್ತು ಸೇರಿ ರಾಕ್ಷಸಗಣ : ದೇವ ಗಣ ರಾಕ್ಷಸಗಣಂಗಳ್ ಕೂಡಿದೊಡೆ ಅಧಮಂ (ಲೋಕೋಪ. ೨–೦೩ ೩೪೪). ' ದೇವಗಣ ' ಪರಾ. [ಸಂ.]

**ರಾಕ್ಷಸಬಾಳೆ** (ನಾ). ಒಂದು ಬಗೆಯ ಬಾಳೆ ; ರಕ್ಕಸಬಾಳೆ ; ದೆವ್ವ ಬಾಳೆ : ರಾಕ್ಷಸಬಾಳೆಯ ಹೂವಿನ ದಳದಲ್ಲಿರುವ ಕಾಯಿಗಳನ್ನು ಬೇಯಿಸಿ (ಸೂಪಶಾ. ೯–೩೫ ಅಬ). [ರಾಕ್ಷಸ + ಬಾಳೆ₁ (< ಬಾಟೆ³)]

**ರಾಕ್ಷಸಭೇದಿ** (ನಾ). ರಾಕ್ಷಸರನ್ನು ನಾಶಪಡಿಸಿದವನು ; ವಿಷ್ಣು : ರಾಕ್ಷಸಭೇದಿಯಂಗುಪ್ಪಸಂಭವೆ . . . ಪರಮಪಾವನೆಯ ನಿರೀಕ್ಷಣೆಗೆಯ್ದು ಮನ್ಮಥನು (ಪ್ರೋಹಚ. ೬–೩೨). [ಸಂ. ರಾಕ್ಷಸಭೇದಿನ್]

**ರಾಕ್ಷಸಮೌನ** (ನಾ). ಭಯಂಕರವಾದ ನಿಶ್ಶಬ್ದತೆ ; ರಣಮೌನ : ಹಿಫೀಸ್ಟಸ್ ಮತ್ತು ಶಕ್ತಿಯರೊಂದಿಗೆ ಹೊರಡುವವರಿಗೆ ರಾಕ್ಷಸಮೌನ ವನ್ನು ಅವಲಂಬಿಸಿ . . . ನಿಂತಿರಬೇಕು (ಬದ್ಧಶ್ರ. XLVI. ೩೧೩೪). [ಸಂ.]

**ರಾಕ್ಷಸಸತ್ವ** (ನಾ.) [ಕಾಮ ಶಾ] ಸ್ತ್ರೀಯರ ಹನ್ನೆರಡು ಬಗೆಯ ಸ್ವಭಾವಗಳಲ್ಲಿ ಒಂದು ; ರಾಕ್ಷಸರ ಮನಸ್ಸಿನಂತೆ ಕ್ರೂರವಾಗಿರುವ ಮನಸ್ಸು : ದೇವಸತ್ವ . . . ರಾಕ್ಷಸಸತ್ವ ಕಿನ್ನರಸತ್ವ ಖರಸತ್ವವೆಂಬ ದ್ವಾದಶಸತ್ವದ ಸತಿಯರಿಂ (ವಿವೇಕ. ೦೬೩). [ಸಂ.]

**ರಾಕ್ಷಸಾಂಶಕೆ** (ನಾ). ೧. ರಾಕ್ಷಸೀ ಅಂಶವನ್ನು ಪಡೆದವಳು. ೨. ಕ್ರೂರ ಳಾದ ಹೆಂಗಸು : ಕರಂ ಕೋಪಮುಂ ಪುಸಿಯುಂ ವಿಡಂಬದ ಪಾಱು ಗೆಯ್ಯುನಮುಗ್ರವಿರೂಪಮುಂ × × × ಕೃಪೆ ರಾಕ್ಷಸಾಂಶಕೆಯೆಂದು ನೀನಱು ಧೂರ್ತೆಯಂ (ಪುರಾಚ. ೩–೪). [<ಸಂ. ರಾಕ್ಷಸಾಂಶಿಕಾ]

**ರಾಕ್ಷಸಿ** (ನಾ). ೧. ರಾಕ್ಷಸರ ಹೆಣ್ಣು ; ರಕ್ಕಸಿ : ರಾಕ್ಷಸಿಯ ತಿಂಬೆ ನೀನೇಕೆಮ್ಮನು (ಶಿಭಾಗ. ೦೦–೭೦–೪೯); ನಖಚಯಂ ಮೊರದವೋಲಗು ರ್ವಾದುದಾ ಸ್ವೈರರಾಕ್ಷಸಿಗೆ (ಶ್ರೀಲಾಪು. ೨೦೯–೬೦೨); ಅವಳಿಗೆ ಆಯುಧ ಧಾರಿಣಿಯರಾದ ವಿಕೃತರಾಕ್ಷಸಿಯರು ಹಗಲೂ ಇರುಳೂ ಕಾವಲಾಗಿದ್ದರು (ವಚನಾ. ೪೦೬). ೨. (ಅಲಂ) ಕ್ರೂರಳಾದ ಹೆಂಗಸು ; ದುಷ್ಟೆ : ಆ ಮೊಮ್ಮಗನನ್ನು ಹಡೆದ ಮೇಣಕಿ,–ಅವರು ಕ್ಷಮಿಸಲಾರದ ರಾಕ್ಷಸಿ (ಸಹಜಾ. ೪೬೦). ೩. ಒಂದು ಬಗೆಯ ಸಸ್ಯ ; ಕರಿಯ ಕಚೋರ : "ರಾಕ್ಷಸೀ, ಚಂಡಾ . . . ಗಣಹಾಸಕಃ — ೬ ಕರೀಕಚೋರ, ಬಲರಾಕ್ಷಸೀ ಗಡ್ಡೆ" (ಸಿದ್ಧಾಂತಿ. ೦೪೦). ೪. [ಸಂಗೀತ] ಒಂದು ರಾಗದ ಹೆಸರು : ನೀಲೋತ್ಪಳಿನಿ . . . ರಾಕ್ಷಸಿ [ಪಾಠಾಂ. ರಕ್ಕಸಿ] . . . ಇಪ್ಪತ್ತೆರಡು ಕ್ರಿಯಾಂಗದಿಂದಾದ ರಾಗಂಗಳು (ವಿವೇಕ. ೧೮೬). [ಸಂ. ರಾಕ್ಷಸೀ]

**ರಾಕ್ಷೆ** (ನಾ). ಕೆಂಪುಬಣ್ಣಕ್ಕಾಗಿ ಉಪಯೋಗಿಸುವ ಒಂದು ಬಗೆಯ ಅರಗು ; ಲಾಕ್ಷೆ : "ಲಾಕ್ಷಾ, ರಾಕ್ಷಾ . . . ದ್ರುಮಾಮಯಃ– ೬ ಅರಗಿನ ಪೆಸರುಗಳು. ಕೆಂಪರಗು" (ಸಿದ್ಧಾಂತಿ. ೨೦೭). [ಸಂ. ರಾಕ್ಷಾ]

**ರಾಖಿ** (ನಾ). ಶ್ರಾವಣಶುದ್ಧಪೌರ್ಣಿಮೆಯಂದು, ಸೋದರತ್ವದ ಸಂಕೇತವಾಗಿ ಕೈಗೆ ಕಟ್ಟುವ ರೇಷ್ಮೆಯ ದಾರ; ರಕ್ಷಾಬಂಧ : ಅವರು ಯಾವನೊಬ್ಬ ಬಲಾಢ್ಯರಾಜನ ಕಡೆಗೆ 'ರಾಖಿ' ಯನ್ನು ಕಳಿಸಿ, ಆತನ ಸಹಾಯವನ್ನು ಯಾಚಿಸುತ್ತಿದ್ದರಂತೆ (ಹಂಸಾ. ೦೨೬); ಆಕೆಯು ರಾಜಪುತ್ರರ "ರಾಖಿ" ಎಂಬ ಪದ್ಧತಿಯಂತೆ ಹುಮಾಯೂನನ ಸಹೋದರತ್ವವನ್ನು ಪಡೆದಿದ್ದಳು (ಭಕ್ಕೋಟಿ. ೦೪೦). [← ಹಿಂ. ಮರಾ. ರಾಖೀ./ಸಂ. ರಕ್ಷಾ]

**ರಾಗ** (ನಾ). ೧. ಬಣ್ಣ ; ರಂಗು : ಮೌಕ್ತಿಕ ಉಂಡ ಜಲಕ್ಕೆ ರಾಗ ಉಂಟೇ ಅಯ್ಯಾ (ಪೋಲಮು. ೦೦೩–೪೪). ೨. ಕೆಂಪುಬಣ್ಣ : ತನ್ನ ರಾಗಮಂ ರಾಗಿಗಳ್ಗೆಲ್ಲಂ ಪೆಚ್ಚುಕೊಟ್ಟಂತೆ ಕೆಂಪು ಪತ್ತುವಿಟ್ಟಾಗಳ್ (ಶಂಕಪು. ೪–೩೦ ವ); ಅಧಿಕತರ ರಾಗದೀಧಿತಿನಿಧಾನಮೆನಲೆಸೆವ ಚಕ್ರಿಚರಣಾಂ ಬುಜಮಾ ಮಧುಕೈಟಭಮದಮರ್ದನರುಧಿರಾರುಣಚಕ್ರಿಚರಣಮಂ ನೆನೆಯಿ

ಸುಗುಂ (ಶಾರಂಪು. ೨೬); ಎಸೆವಲತಗೆಯಿಂ ಪೊರೆದ ಮೆಲ್ಲಡಿಯು ನಡೆಯು ಬೆಡಂಗಿನೊಂದು ಭಾವದಿಂ ನೆಲೆವಟೆಯ ಕಲ್ಗಳ್ಗೆ ರಾಗಮನೊಡರ್ಚೆಯುಂ (ರಾಮಾಶ್ವ. ೩೯-೯). ೩. ಒಲುಮೆ ; ಅನುರಾಗ ; ಆಸಕ್ತಿ : ಬಾಳರವಿ ತನ್ನಯ ಸೋಗಿಲ ಮೇಗೆ ರಾಗದಿಂ ಪೊಡರ್ವುದಂ. . . ಸತಿ ಕಂಡೊಸೆದಳ್ ನಿಶಾಂತದೊಳ್ (ಶಂಕಚ. ೦-೦೪೦); ರಾಗವೇ ಮೂಡಲು ಯೋಗವ್ ಒಡಗಲು ರೋಗವದು ಶುದ್ಧ ಪಡುವಲು ತೆಂಕಲು ಭೋಗದ ಬೀಡು (ಸರ್ವಜ್ಞ. ೦೬೦೩). ೪. ಹಿಗ್ಗು; ಸಂತೋಷ : ಅಱದೆಱೆವಟ್ಟು ರಾಗದ ತವಮ್ಮ್ರನೆ (ಎಕ. IV, ಹುಣಸೂ. ೦೩೬-೪೩; 1162) ; ಲೋಕಪಿತನೊಲ್ದು ಚತುರ್ಮುಖನೀಗೆ ರಾಗಮಂ (ಜಗಪ. ೦-೨). ೫. ಚೆಲುವು; ಸೊಬಗು. ೬. ವೀರ್ಯ ; ರೇತಸ್ಸು : ರಾಗವೆಂಬುದು ರೇತಸ್ಸಿಗೆ ಪೆಸರು (ಶಾಮುಶಾ. ೨೪೨). ೭. [ಸಂಗೀತ] ಇಂಪಾಗುವಂತೆ ಹೊಂದಿಸಿದ ಸ್ವರಗಳ ಮೇಳೈಕೆ : ಶ್ರೋತೃವಿನ ಮನಸ್ಸಿಗೆ ರಂಜನೆಯುಂಟಾಗುವ ರೀತಿಯಲ್ಲಿ ಸ್ವರಗಳು ಮೇಳೈಸಿದರೆ ರಾಗವಾಗುತ್ತದೆ. ರಂಜನೆಯನ್ನುಂಟು ಮಾಡುವುದು ರಾಗದ ಗುಣ (ಸಂಗೀಶಂ. ೨೨) ; ಭೈರವಿ ಪೂರ್ವಯಾಮದ ರಾಗ. ಸೂರ್ಯ ಮೂಡುವ ಮೊದಲು . . . ಹಾಡಿದರೆ ಆ ರಾಗ ಸಿದ್ಧಿಸುತ್ತದೆ (ಸಂಗೀಶ. ೦೪೦). ೮. [ಶೈವ] ಶೈವಾಗಮದ ಮೂವತ್ತಾರು ತತ್ತ್ವಗಳಲ್ಲಿ ಒಂದು : ಶಿವ, ಶಕ್ತಿ . . . ವಿದ್ಯಾ, ರಾಗ, ನಿಯತಿ . . . ಭೂಮಿಯ (ಇವು ಶೈವಾಗಮದಲ್ಲಿರುವ ತತ್ತ್ವ ಸಂದೋಹಗಳು) (ಶಾರದ. ೬೩ ಅಡಿ).

**ರಾಗತೆಗೆ** = ೧. (ಆಲಂ) ಅಳು ; ರೋದಿಸು : ಆ ಮಗು ರಾಗತೆಗೆ ಯಿತು ಅಂದರೆ ಅದು ನಿಲ್ಲಿಸುವುದಿಲ್ಲ (ರೂಢಿ). ೨. ಅಪಸ್ವರ ನುಡಿ; ಅಪಶಕುನ ಹೇಳು : ಒಳ್ಳೆಯುವಕ್ಕೆ ನೀನು ರಾಗತೆಗೆಯಬೇಡ, ಸುಮ್ಮ ನಿರು (ರೂಢಿ). ೩. ನೆವ ತೆಗೆ ; ತಕರಾರು ಮಾಡು : ಗಂಡಿನವರು ಒಪ್ಪಿಗೆ ಕೊಡದೆ ರಾಗತೆಗೆದರು (ರೂಢಿ). [ಸಂ.]

**ರಾಗಂಗೆಡು**, ರಾಗಗೆಡು (ಕ್ರಿ). ೧. ಪ್ರೀತಿಯಿಲ್ಲವಾಗು ; ಆಸಕ್ತಿ ಯಿಲ್ಲವಾಗು : ಮನದೊಳ್ ರಾಗಂಗೆಟ್ಟು ಕೆಲಂಬರ್ ಮೂಗಂ ಮುಚ್ಚಿ ದರ್ (ರಮಾನಾಥ. ೪-೦೩೮). **ರಾಗಗೆಡು** : ೨. ಸಂತೋಷವಿಲ್ಲ ವಾಗು : ಬಳಿಕ ಮರಳಿದು ರಾಗಗೆಟ್ಟಾ ಲಲನೆಯರು ಗೋಕುಲಕೆ ಪರಿ ಜನವುಲಿಯಲಾ ನಿತ್ಯಾತ್ಮರಾಮರು ನಡೆವರುರವಣಿಸಿ (ಐಭಾಗ. ೧೦-೩೪-೩೦). [ರಾಗ + ಕೆಡು₁]

**ರಾಗಂಬೆಱು** (ಕ್ರಿ). ಪ್ರೀತಿಯನ್ನು ಹೊಂದು ; ಒಲುಮೆಯನ್ನು ತಾಳು : ಮುನ್ನ ಮರ್ತ್ಯಕ್ಕೆ ಇಂದುಮೌಳಿಯ ಬೆಸನದಿಂದವೆ ಬಂದ ನಂದೀಶನು ಹೃದಯದೊಳಮಂದರಾಗಂಬೆತ್ತು ತಾನೆಯ್ತಪ್ಪ ಬರವಿಂಗೆ (ಬಸವ. ೨-೩೬). [ರಾಗ + ಪೆಱು₁]

**ರಾಗಂಬೊರೆ** (ಕ್ರಿ). ಬಣ್ಣದಿಂದ ಲೇಪಿತವಾಗು ; ವರ್ಣಮಯ ವಾಗು : ರಾಜಕಂ ಬೇಗಮೆಱಗೆ ತನ್ಮಣಿಮುಕುಟಸ್ಫುರಣೆಗಳಿಂ ಧರೆ ರಾಗಂ ಬೊರೆದಂತೆಸೆದತ್ತು ರಾಜಭವನಾಂಗಣದೊಳ್ (ಶಾಂತಿಪು. ೩-೧೦೩). [ರಾಗ + ಪೊರೆ₂]

**ರಾಗಗೆಡು** 'ರಾಗಂಗೆಡು' ನೋ.

**ರಾಗಟೆ** 'ರಾಕಡಿ' ನೋ.

**ರಾಗಧರ** (ನಾ). ಒಂದು ಬಗೆಯ ಪಕ್ಷಿ : ಟಿಟ್ಟಿಭ ಕುಕಿಲ ತುಱುಮೆಗಣ್ಣಂ ಹಂಸೆ ರಾಗಧರನೆಂಬ ಪಕ್ಷಿಗಳ ದನಿಯಿಂ ಕರೆಯಲು (ಹಕಶಾ. ೩-೪೨). [?]

**ರಾಗಮಾಲಿಕೆ** (ನಾ). ೧. ಒಂದು ಬಗೆಯ ವಾದ್ಯ ; 'ಮೌತ್ ಆರ್ಗನ್' ಎಂಬ ವಾದ್ಯ. ೨. [ಸಂಗೀತ] ಒಂದು ಕೀರ್ತನೆಯ ಹಲವು ಚರಣ ಗಳಿಗೆ ಬೇರೆಬೇರೆ ರಾಗಗಳನ್ನು ಅಳವಡಿಸಿ ಹಾಡುವ ಒಂದು ಪ್ರಕಾರ : ಒಂದು ಪಲ್ಲವಿಯನ್ನು ರಾಗಮಾಲಿಕೆಯಲ್ಲಿ ಕಟ್ಟುವುದು ಸಾಧ್ಯ (ಸಂಗೀಶ. ೩೯) ; ಇವುಗಳಲ್ಲಿ ಒಂದೊಂದು ಭಾಗವೂ ಪ್ರತ್ಯೇಕರಾಗಗಳಲ್ಲಿ ಹಾಡಲ್ಪಡಲು ಪ್ರಾರಂಭವಾಗಿ ರಾಗಮಾಲಿಕೆಯೇ ಆಯಿತು (ಸಂಗೀಶಂ. ೬೬). [ಸಂ. ರಾಗಮಾಲಿಕಾ]

**ರಾಗಮಾಲಿನಿ** (ನಾ). ಒಂದು ಬಗೆಯ ತಂತೀವಾದ್ಯ : ವಿಪಂಚಿಕೆ . . . ರಾಗಮಾಲಿನಿ . . . ಮೂವತ್ತುಮೂಱು ತಂತೀವಾದ್ಯಂಗಳು (ವಿವೇಕ. ೨೩೬). [ಸಂ. ರಾಗಮಾಲಿನೀ]

**ರಾಗರಸ** (ನಾ). ಪ್ರೇಮಾನುರಾಗ ; ಪ್ರಣಯಾಭಿಲಾಷೆ : ಶ್ರೀಗೆ ಕುಳಸದನಮೆನೆ ತೊಳಪ ಮಣಿಭವನದೊಳ್ ರಾಗರಸಮೊದವೆ ಸರಸಿರುಹ ಸಮುಪದನದೊಳ್ (ಆದಿಪು. ೬-೨೬ ರಗಳೆ). [ಸಂ.]

**ರಾಗರಸಿಕ** (ನಾ). ಪ್ರೀತಿಯಲ್ಲಿ ಆಸಕ್ತನಾದವನು ; ರಸಜ್ಞ : ಅನ್ನದ ಸಮಸ್ಯೆಯನ್ನು ಬಿಡಿಸಿದವ ರಾಗರಸಿಕನಾಗಬಲ್ಲ (ಸಮಶೀ. ೩೧೬). [ಸಂ.]

**ರಾಗವಿಡಿ** (ಕ್ರಿ). ಬಣ್ಣವೇರು ; ಕಾಂತಿಗೂಡು : ಸೋಗೆಮುಱುಬಿನ ಶೃಂಗಾರದಾಭರಣದ ರಾಗವಿಡಿದ ತನುಲತೆಯ ಪೂಗಣೆಯನ ಮಸೆವಲಗಿ ನಂತೆಸೆವಳು (ಕಂನಾ. ೨೦-೬೯). [ರಾಗ + ಇಡಿ₂]

**ರಾಗಾಂಧತೆ** (ನಾ). ಮೋಹದಿಂದ ಮುಂದನ್ನು ಕಾಣದಿರುವಿಕೆ : ವ್ಯಾಮೋಹದಿಂದ ವಿವೇಕರಹಿತವಾಗಿರುವಿಕೆ : ಸಾಂಸಾರಿಕವಿಳಾಸಂ . . . ಶಾಶ್ವತಮೆಂದೆ ಬಗೆದು ರಾಗಾಂಧತೆಯಿಂ ಗತಿಗಿಡುವರೇಂ ವಿಚಿತ್ರಮೊ ಕರ್ಮಂ (ಚಂದ್ರಪ್ರ. ೪-೩೨). [ಸಂ. ರಾಗಾಂಧತಾ]

**ರಾಗಾಧರೆ** (ನಾ). ಕೆಂಪಾದ ತುಟಿಯುಳ್ಳವಳು ; ಬಿಂಬಾಧರೆ : ಪಾಡುವ ರಾಗಾಧರೆಯರ ರಾಗರಸಪೂರಂ ಮೇರೆದಪ್ಪಿ ಮೇಲ್ವರಿಯೆ (ರಾಜಶೇ. ೦೩-೪೩ ವ). [ಸಂ. ರಾಗಾಧರಾ]

**ರಾಗಾಲಾಪನ** (ನಾ). [ಸಂಗೀತ] ನಿರ್ದಿಷ್ಟರಾಗವನ್ನು ಸಾಹಿತ್ಯ ವಿಲ್ಲದೆ ವಿಸ್ತಾರವಾಗಿ ಹಾಡುವುದು : ರಾಗಾಲಾಪನಲಾಲಸಂ ನವ ನವೋತ್ಫುಲ್ಲಾನನಾಂಭೋರುಹಂ (ಪಶಪ. ೪-೦೩೦) ; ರಾಗಾಲಾಪನಪದ್ಧತಿ ಯಲ್ಲಿ ಎರಡು ಕ್ರಮ—೧. ಅಕ್ಷಿಪ್ತಕ್ರಮ, ೨. ರಾಗವರ್ಧಿನಿ ಕ್ರಮ (ಸಂಗೀತಂ. ೨೯). [ಸಂ.]

**ರಾಗಾಲಾಪನೆ** (ನಾ). = ರಾಗಾಲಾಪನ : ಮಹಾವೈದ್ಯನಾಥಅಯ್ಯರ್ ಅವರು ತಮ್ಮ ಎಳನೆಯ ವಯಸ್ಸಿನಲ್ಲಿಯೇ ರಾಗಾಲಾಪನ ಮತ್ತು ಪಲ್ಲವಿ ಯನು ಹಾಡುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದರು (ಸಂಗೀಶ. ೩). [ಸಂ. ರಾಗಾಲಾಪನ]

**ರಾಗಾವಲಂಬ** (ನಾ). ರಾಗದ್ವೇಷಗಳಿಗೆ ಒಳಗಾದವನು; ವಿಷಯಾಸಕ್ತ : ನೀವು ಸುಹೃದಯರಿಂದು ದುರ್ಜನರಾವು ನೀವ್ವೀರಾಗಿಗಳು ರಾಗಾವಲಂಬರು ನಾವಲೇ (ಕುವ್ಯಾಸ. ೦೩-೩೬). [ಸಂ.]

**ರಾಗಾವಳಿ** (ನಾ). ಒಂದು ಬಗೆಯ ಕೆಂಪುಬಣ್ಣದ ಬಟ್ಟೆ : ಪೊಪ್ಪಳಿಯು ತಿಗುಳಿ ರಾಗಾವಳಿಯ ರತ್ನಾವಳೀಧಾವಳ್ಯ ದಿವ್ಯತಾರಾವಳಿಯು ಗಗನ ಮಾಲಾವಳಿಯು ವಿರುಪ ನೇತ್ರಾವಳಿಯು ಮುಖ್ಯನಾನಾವಿಧದ ಸೀರೆಗಳ . . . ಬೇಹನಿತ ತಗದು (ಪಪಮೋ. ೦೬-೩೦). [ <ರಾಗ + ಪಳಿ₄ (<ಪಟ್ಟಿ₅) ]

**ರಾಗಾವಿಲ**, ರಾಗಾವಿಳ (ಗು). ೧. ಕೆಂಪುಬಣ್ಣದಿಂದ ಕೂಡಿದ. ೨. ಮೋಹದಿಂದ ಮಲಿನವಾದ ; ಅತಿಯಾದ ಮೋಹಕ್ಕೆ ಒಳಗಾದ : ಯೋಗಂ ಮೂಗಾವುದವೆನೆ ರಾಗಾವಿಲಚಿತ್ತರಾಗಿ ಕುತ್ತದ ಬೇರಂ ನೀಗಲ್ಕರಿ ಯದರುಂ ನಿಜರೋಗಕ್ಕೌಷಧಮನೀತ್ರನೆಡೆಯೊಳ್ ಪಡೆವರ್ (ವಸ್ತುಸಂ. ೩೦). (ನಾ). ೩. ಕೆಂಪುಬಣ್ಣದಿಂದ ಕೂಡಿದವನು. ೪. ಮೋಹದಿಂದ ಮಲಿನವಾದುದು ; ಅತಿಮೋಹಕ್ಕೆ ಒಳಗಾದುದು : ರಾಗದ್ವೇಷ ನಿಬಂಧಮಪ್ಪ ಕೃತಿಯುಂ ನಿರ್ಬಂಧದಿಂ ಬಂಧಮಿಂಬಾಗರ್ಥಂ ಪೊಸತಾಗೆ ಪೇಳ್ದಖಿಲಮಂ ರಾಗಾವಿಲಂ[ಶಾಕಾಂ.೪೦] ಮಾಟ್ಟ ವಿದ್ಯಾಗರ್ವಗ್ರಹ

ಪಂಡಿತರ್ (ಕಂಠಾಪು. ೧-೩೪). ೫. ಮೋಹಕ್ಕೆ ಒಳಗಾದ ವ್ಯಕ್ತಿ : ಮೋಹದಲ್ಲಿ ತೊಡಕಿಕೊಂಡವನು : ರಾಗಾವಿಲ[ಶಾಲಾಂ. ೪]ರಾಪದ್ಗತ ರಾಗದರಾರೆಂದು ' ದಶ ಬುಜಂಗಜ ತ್ರಿಪಪ್ಪೋಲ್ ಆಗಸದಿನಪರಸಂಧ್ಯಾ ರಾಗಾವಿಲ[ಶಾಲಾಂ. ೪]ನರ್ಕ ನಪರವಾರಿಧಿಗಿಬಿದಂ (ಕಂಠಾಪು. ೯-೧೮೮).

**ರಾಗಾವಿಳ :** ೩, ೫ : ಸತತಂ ರಾಗಾವಿಳಂ ಪೀಡಿತಕುವಲಯುನುನಾ್ಮರ್ಗ ಸಂಸಕ್ತನುನ್ಮೀಲಿತಸಾರ್ದ್ರತ್ವಂ ಸದುರ್ದರ್ಶನರುಚಿ ವಿರದಂಡಕ್ರಿಯಂ ತಾನೆನಿಪ್ಪಾ ಕ್ಷಿತಿಪಂಗೆ (ತಂಪ್ರಕ. ೨-೪೩). [ಸಂ.]

**ರಾಗಾವಿಳ** ' ರಾಗಾವಿಲ ' ನೋ.

**ರಾಗಿ$_1$,** ರಾಘಿ (ನಾ). ಒಂದು ಬಗೆಯ ಏಕದಳಧಾನ್ಯ : "ಧಾಳಿಕಂ ರಾಗಿಯದು" (ಮಂಗರಾ. ೧೦೦-೪) ; ವರಕೋಷ್ಟ ರಾಪಾತಂಗಳಸರೆದೊಂದಾಗಿರಲು ಪಾಪೊಳೀವುದು ಮತ್ತಂ ಪರಿಹರಿಪ್ರದಾಕ್ಷಣಂ ತಾಂ ಧರೆಯೊಳ್ ರಾಗಿಯ ವಿಷಂಗಳಂ (ಜವಂತ. ೨-೦೩೭) ; ರಾಗಿ ತಂದಿರ್ಯಾ ಭಿಕ್ಷಕೆ ರಾಗಿ ತಂದಿರ್ಯಾ (ಪುರಂದ. ೧-೭೯ ಪಲ್ಲವಿ) ; ರಾಗಿಯನು ಉಂಬುವ ನಿರೋಗಿ ಎಂದೆನಿಸುವನು ರಾಗಿಯು ಭೋಗಿಗಳಿಗಲ್ಲ ಬಡವರಿಗಾಗಿ ಬೆಳೆದಿಹುದು (ಸರ್ವಜ್ಞ. ೨೦೨೨). **ರಾಘಿ :** ವ್ಯವಸಾಯವ ಮಾಡಿ ರಾಘಿಯ ಬಿತ್ತುವ ಹೊಲ (ಶಾಇ. ೦೯೩೪, ಶೃಂಗಪೂರು. ೦೩೭-೦೦ ; 1419).

**ರಾಗಿಬೀಸು** = ೧. ರಾಗಿಯನ್ನು ಬೀಸಿ ಹಿಟ್ಟು ಮಾಡು : ರಾಗಿ ಬೀಸುವಾಗ, ಗದ್ದೆ ನಾಟಿಮಾಡುವಾಗ . . . ಹಾಡುವ ಹಾಡುಗಳೆಲ್ಲಾ ಅವಳು ಕಲಿತವುಗಳೇ (ನಮ್ಮೂರು. ೨೩) ; ರಾಮರಾಜ್ಯವಾದರೂ ರಾಗಿ ಬೀಸುವುದು ತಪ್ಪಲಿಲ್ಲ (ಗಾದೆ). ೨. (ಆಲಂ) ಅನುಭವ ಪಡೆ : ಪಕ್ವಗೊಳ್ಳು : ನೀನಿನ್ನೂ ಬಹಳ ರಾಗಿಬೀಸಬೇಕು (ರೂಢಿ). **ರಾಗಿಮುಸಿ** = ರಾಗಿಯಿಂದ ತಯಾರಿಸುವ ಮುಸಿ, —ಶಾಯಿ : ರಾಗಿಯನ್ನು ಹುರಿದು ಸೀಯಿಸಿ ಪುಡಿಮಾಡಿ ನೀರಿನಲ್ಲಿ ಕಲಸಿ ಅದಕ್ಕೆ ಗೋಂದನ್ನೂ ಸಕ್ಕರೆಯನ್ನೂ ಅಂಟಿಗಾಗಿ ಸ್ವಲ್ಪ ಮಿಶ್ರಮಾಡಿ ಅದನ್ನು ಬರವಣಿಗೆಗೆ ಉಪಯೋಗಿಸುತ್ತಿದ್ದರು. ಇದಕ್ಕೆ ರಾಗಿಮುಸಿ ಎಂದು ಹೆಸರು (ಕಪ್ರಸಂ. ೪೪). **ರಾಗಿ ಮುದ್ದೆ** = ರಾಗಿಯ ಹಿಟ್ಟನ್ನು ಬೇಯಿಸಿ ಮಾಡುವ ಮುದ್ದೆ : ಹಿಟ್ಟು : ರಾಗಿಮುದ್ದೆ ಮೈಗೆ ತುಂಬ ಪುಷ್ಟಿಯನ್ನು ಕೊಡುವ ಆಹಾರ (ರೂಢಿ). **ರಾಗಿಯ ಪದ** = ರಾಗಿ ಮುಂತಾದುವನ್ನು ರಾಗಿ ಕಲ್ಲಿನಲ್ಲಿ ಬೀಸುವಾಗ ಹಾಡುವ ಹಾಡು : ಮುಂಗೋಳಿ ಕೂಗಿತೆಂದರೆ ನನ್ನೂರಿನ ಎಲ್ಲಾ ಮನೆಗಳಲ್ಲಿಯೂ ರಾಗಿಕಲ್ಲಿನ ಶ್ರುತಿಯೊಡನೆ ಸೇರಿ ಕೇಳಿಬರುವ ರಾಗಿಯ ಪದಗಳು (ನಮ್ಮೂರು. ೨೦). **ರಾಗಿರೊಟ್ಟಿ** = ರಾಗಿಯ ಹಿಟ್ಟಿನಿಂದ ತಯಾರಿಸುವ ರೊಟ್ಟಿ : ರಾಗಿಹಿಟ್ಟು, ರಾಗಿ ರೊಟ್ಟಿ, ರಾಗಿದೋಸೆ ಇತ್ಯಾದಿ . . . ಊಟ ಮಾಡುವುದರಿಂದ ದೇಹಕ್ಕೆ ಕ್ಯಾಲ್ಸಿಯಂ ದೊರಕುತ್ತದೆ (ಗೃಹವಿ. ೨೦) ; ಹೆಂಗಸರು ರಾಗಿರೊಟ್ಟಿಗಳನ್ನು ತಟ್ಟಿ ಚಟ್ನಿ ಅರೆದುಹಾಕಿ ಬುತ್ತಿ ಕಟ್ಟಿಕೊಡುವರು (ಹುಬ್ಬಹ. ೦೯). **ರಾಗಿ ಹಿಟ್ಟು** = ೧. ರಾಗಿಯನ್ನು ಬೀಸಿದಾಗ ಬರುವ ಪುಡಿ,— ಹಿಟ್ಟು : ಮನೆಯಲ್ಲಿ ರಾಗಿಹಿಟ್ಟು ಮುಗಿದಿದೆ (ರೂಢಿ). ೨. = ರಾಗಿಮುದ್ದೆ : ರಾಗಿಹಿಟ್ಟು, ರಾಗಿರೊಟ್ಟಿ, ರಾಗಿದೋಸೆ ಇತ್ಯಾದಿ . . . ಊಟಮಾಡುವುದರಿಂದ ದೇಹಕ್ಕೆ ಕ್ಯಾಲ್ಸಿಯಂ ದೊರಕುತ್ತದೆ (ಗೃಹವಿ. ೨೦).

[ದೇ. ॥ ತಮಿ. ಇರಾಕಿ ; ಮಲ. ರಾಗಿ, ಮುತ್ತಾರಿ ; ತುಳು. ತೆಲು. ರಾಗಿ ; ಕೊಡ. ಏರಿ. / ಸಂ. ರಾಗಾ, ರಾಗೀ ]

**ರಾಗಿ$_2$** (ನಾ). ೧. ಬಣ್ಣವುಳ್ಳುದು ; ರಾಗಯುಕ್ತವಾದುದು. ೨. ಕೆಂಪುಬಣ್ಣ. ೩. ಬಣ್ಣಹಾಕುವಿಕೆ ; ಚಿತ್ರಬಿಡಿಸುವಿಕೆ. ೪. ರಾಗೋದ್ರೇಕವನ್ನು ಹೊಂದಿರುವಿಕೆ. ೫. ಸಂತೋಷವನ್ನು ಕೊಡುವಂತಹುದು. ೬. ಅತಿಯಾಗಿ ಮೋಹಗೊಳ್ಳುವಿಕೆ, — ಇಚ್ಛಿಸುವಿಕೆ. ೭. ಬಣ್ಣಹಾಕುವವನು ; ಚಿತ್ರಗಾರ. ೮. ಪ್ರೇಮಿ ; ಅನುರಕ್ತ : ಆಗಳ್ ತನ್ನ ರಾಗಮುಂ ರಾಗಿಗಳ್ಗೆಲ್ಲಂ ಪಚ್ಚುಕೊಟ್ಟಂತೆ ಕೆಂಪು ಪತ್ತು ವಿಟ್ಟುಗಳ್ (ಕಂಕಥಾ. ೪-೩೦ ವ) ; ಬಂದನೆಂತೆಂತಕ್ಕೆ ಅಗಲಲಾಜದ ರಾಗಿ ಸಂಗಮನ ಕರುಣವೇ ತನಗೆ ಬೆಂಬಲವಾಗಿ (ಬಸರ. ೩-೪೪). ೯. ವಿಷಯ ಲಂಪಟ ; ವಿಷಯಾಸಕ್ತ : ನಿನ್ನನು ಭಜಿಸಲಜಿಯದ ರಾ[ಶಾಲಾಂ. ಯೋ]ಗಿಗಳ ಮಾತೇನು (ಹಂಶಾ. ೦೭) [ಸಂ. ರಾಗಿನ್]

**ರಾಗಿಕಲ್ಲು** (ನಾ). (ರಾಗಿ ಮುಂತಾದ ಧಾನ್ಯಗಳನ್ನು) ಬೀಸಿ ಹಿಟ್ಟು ಮಾಡುವ ಕಲ್ಲು : ಬದಿರೆ ಬೆಟ್ಟದ ಮೇಲೆ ಚದುರ ರಾಗಿಕಲ್ಲು ಮದನಾರಿ ನೆಂಬಿೊ ಹಿಡಿಗೂಟ ಹಿಡುಕೊಂಡು ಶಿವನ ಪಾಡ್ಯಾಳೆ ಸಿರಿಗೌರಿ (ನಾಪದ. ೬೨); ಮುಂಗೋಳಿ ಕೂಗಿತೆಂದರೆ ನನ್ನೂರಿನ ಎಲ್ಲಾ ಮನೆಗಳಲ್ಲಿಯೂ ರಾಗಿಕಲ್ಲಿನ ಶ್ರುತಿಯೊಡನೆ ಸೇರಿ ಕೇಳಿಬರುವ ರಾಗಿಯ ಪದಗಳು (ನಮ್ಮೂರು. ೨೦).

**ರಾಗಿಕಲ್ಲು ಪದ** = ರಾಗಿ ಮುಂತಾದುವನ್ನು ರಾಗಿಕಲ್ಲಿನಲ್ಲಿ ಹಾಕಿ ಬೀಸುವಾಗ ಹಾಡುವ ಹಾಡು : ರಾಗಿಕಲ್ಲುಪದ — ಶರಣೆಂಬೆ ಶಿವನಿಗೆ ಶರಣೆಂಬೆ ಗುರುವಿಗೆ ಶರಣೆಂಬೆ ಶಿವನ ಮದದೀ(ಗೆ) (ಜಗೀತ. ೨).

[ ರಾಗಿ$_1$ + ಕಲ್ಲು ( < ಕಲ್$_3$ ) ]

**ರಾಗಿಣಿ** (ನಾ). ೧. ಪ್ರೀತಿಯುಳ್ಳವಳು ; ಅನುರಕ್ತೆ. ೨. [ಸಂಗೀತ] ಹಿಂದೂಸ್ಥಾನೀ ಸಂಗೀತದಲ್ಲಿ ಬರುವ ಸ್ತ್ರೀರಾಗ : ಋತುಗಳ ಹೆಸರು ಹೊಂದಿರುವ ಆರು ರಾಗಗಳು, ಅವಕ್ಕೆ ಆರು ರಾಗಿಣಿಯರು ಕಲಾವಿದನ ಪ್ರತಿಭಾಕಲ್ಪನೆಗೆ ಸಾಕಷ್ಟು ಉದ್ದೀಪನವಸ್ತುಗಳಾಗಿವೆ (ಶಾರದ. ೫೩೦) ; ಅನೇಕ ರಾಗಗಳು ಇವುಗಳಲ್ಲಿ ಹುಟ್ಟಿ 'ರಾಗಿಣಿ'ಗಳೆಂದು ಹೆಸರಾಂತಿವೆ (ಸಂಗೀತಂ. ೧೮೨). [ಸಂ. ರಾಗಿಣೀ]

**ರಾಗಿಸು** (ಕ್ರಿ). ೧. ಕೆಂಬಣ್ಣವೇರು ; ಕೆಂಪಾಗು : ಸೌಕುಮಾರ್ಯವೇಜಿ ಮೆಲ್ಲಡಿಗಳು ಮೆಲ್ಲನೆ ರಾಗಿಸೆ ಕಿಳ್ಪೊಡೆ ತ್ರಿವಳಿಗಳಂ ಬೀಳ್ಕೊಡೆ (ಬಸರ. ೧೧-೯೭). ೨. ಕೆಂಪಾಗುವಂತೆ ಮಾಡು ; ರಂಗೇರಿಸು : ಕಂಡಾಕ್ಷಣವೆ ತಕ್ಕೈಸಿ ಮುಂಡಾಡಲಿರ್ಪರ ಪರಿತೋಷ ಪೂರ್ವದಿಙ್ಮಂಡಲವನು ರಾಗಿಸಿತು (ಮೋಹತ. ೨೯-೩೬). ೩. ವಿಶ್ವಾಸವಿಡು ; ಆಸಕ್ತಿ ಹೊಂದು : ಗುರುಗಳ ಪೊಗಟಿಗೆ ರಾಗಿಸಿ ಸಂತೋಸಂಬಟ್ಟು (ವಡ್ಡಾರಾ. ೬೨-೨೩). ೪. ಪ್ರೀತಿಯನ್ನು ತೋರು ; ಪ್ರೀತಿಸು : ಬಡವಂ ಮಾಣಿಕಮಂ ಕಂಡಡೆ ರಾಗಿಸುವಂತೆ (ಸಮುಕ. ೪-೩೦) ; ಐದೆ ರಾಗಿಸಿ ದೆಸೆಗೀಗಳೀಗಳುಲಿದಪ್ಪುದು ಕೋಗಿಲೆ (ಕಾವ್ಯಾವ. ೩೭೭); ತಾಗದ ಚುಂಬನಂ . . : ವಿಂಗೆ ರಾಗಿಸುವ ಮನಂ ಮನೋಹರಂ ಜಾರೆಯರೊಳ್ (ಗಿರಿ. ೪-೬೩). ೫. ಸಂತೋಷವನ್ನುಂಟುಮಾಡು : ಕಂಪಿಡುತೆ ಕನಕರುಚಿದಾಳುತ್ತುಂ ರಾಗಿಸುತೆ ರಂಜಿಸುತೆ ಸೊಂಪಾಗಿರ್ದುವು ಕಣ್ಗೆ ಗಂಧಶಾಲಿವನಂಗಳ್ (ರಾಜಶೇ. ೨-೧೧). ೬. ಬಯಸು ; ಅಪೇಕ್ಷಿಸು : ರಾಗಿಸಿ ರಾಸಭನಿರದೆತಿವೇಗದಿನಾ ಸರಿಯ ಪಿಂದುಪೊದನೆ ಬಂದಂ (ಕಂಠಕಂ. ೨೮೩-೪೦೩).

[ರಾಗ + — ಇಸು$_3$]

**ರಾಗುಟಿ** ' ರಾಕಡಿ ' ನೋ.

**ರಾಗೋಪಗೂಢಕ** (ನಾ). [ಕಾಮಶಾ] ಒಂದು ಬಗೆಯ ಚುಂಬನ : ಒಳಪಂಟಿಯನೊತ್ತಿ ಪಲ್ಗಳೊಳೌಂಕಲದು ಮನಂಗೊಳಿಪ ರಾಗೋಪಗೂಢಕ[ಶಾಲಾಂ. ನ]ಮೆನಿಪುದು (ಜನವ. ೭-೨೯). [ಸಂ.]

**ರಾಘಿ** ' ರಾಗಿ$_1$ ' ನೋ.

**ರಾಘೆ** (ನಾ). ಕುದುರೆಯನ್ನು ಹತ್ತಲು, ಅದರ ಮಗ್ಗುಲಲ್ಲಿ ನೇತು ಬಿಟ್ಟಿರುವ ಬಳೆ ; ರಿಕಾಪು ; ಅಂಕವಣಿ : ಅಶ್ವಮಂ ಬೇಗದಿಂ ಬೆಂಗವಾಯ್ದು ರಾಘೆಯೊಳೌಂಕಿ ವಾಘೆಯೊಳ್ ನಿಲಿಸಿ (ಗಿರಿ. ೨-೧೧೩ ವ); ಗರುವ ಜಾತ್ಯಶ್ವಗೊಂದೇ ರಾಯರಾವುತನ ರಾಘೆ ವಾಘೆಯ ಸಾಲದೇ (ಪ್ರಭುಲಿಂ. ೦೩-೭೦). [← ತೆಲು. ರಾಗೆ]

**ರಾಘೋಲು** ' ರಾಯಗೋಲು ' ನೋ.

**ರಾಚಮಲ್ಲ** (ನಾ). ಒಬ್ಬಾತನ ಹೆಸರು ; P ತಲಕಾಡಿನ ಗಂಗವಂಶದ ಕೆಲವು ಅರಸರ ಹೆಸರು : ನೊಳಂಬಿವಡಿಗ ರಾಚಮಲ್ಲ[ಂ] ಮಯಿಸ್ವಡಿ ಗುಂಡಿಗೆಗು[ಳ್] ಎನೆಬರು ಸಮಸ್ತಬಲಂಬೆಱಸಿ ಬಿಟ್ಟೊಡೆ (ಎಇ. XXIV. ೦೯೦-೬; 885). [ರಾಚ್ಚ$_0$ (P ← ಸಂ. ರಾಜನ್) + ಮಲ್ಲ]

**ರಾಚಮಲ್ಲಗಾವುಂಡ** (ನಾ). ಒಬ್ಬಾತನ ಹೆಸರು : ರಾಚಮಲ್ಲಗಾವು ಣ್ಡನು ಸಿಜನುಂ ಗಂಗಗಾವುಣ್ಡನುಂ . . . ಸಾಕ್ಷಿ (ಎಕ. XII, ಗುಬ್ಬಿ. ೬೦-೯೭; 812). [ರಾಚಮಲ್ಲ + ಗಾವುಂಡ]

**ರಾಚಮ್ಮ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಪೆರ್ಮ್ಮಾಡಿಯ ಮಸೆವ ಗತಿ ನೀಲಬ್ಬೆಯ ಮಗಂ ರಾಚಮ್ಮನ ಧರ್ಮ್ಮ (ಎಕ.III. ಶಂಜನ. ೦೩೬-೨; 970). [ರಾಚ್ಚ$_0$ (P ← ಸಂ. ರಾಜನ್) + ಅಪ್ಪ$_1$]

**ರಾಚು** (ಕ್ರಿ). ೧. (ರಭಸದಿಂದ) ಚೆಲ್ಲು ; ಎಸೆ ; ಎರಚು : ಅನಲ ಹೊಟ್ಟನು ತಳಿದುಪುರಿಯೊಳು ರಾಚುವುದುಯೆನಗೊಲುಮೆಯುಪಚರ ನಾರಿಯರು ಅಹುದೆಂದಳಿಂದುಮುಖೀ (ಕಪಗಾ. ೨೯-೩). ೨. ವೇಗವಾಗಿ ಹೊಡೆ,—ಬಡಿ ; ಅಪ್ಪಳಿಸು : ಅವರ ಮಾತು ಕೇಳಿ ನನಗೆ ಮುಖಕ್ಕೆ ರಾಚಿದಂತಾಯಿತು (ಹಂಗೀಕ. ೬೦); ನಾಗವೇಣಿ ನಾಗಿಣಿಯಂತೆ ಸಿಡಿದು ರಪ್ಪನೆ ರಾಚಿದಂತೆ. ಚಿಂತಾಮಣಿಯನ್ನೂ ನುಂಗುವಂತೆ ನೋಡಿ ಹೊರಟು ಹೋದಳು (ವಾಮಪವ. ೩). ೩. ಅಡ್ಡವಾಗಿ ಬೀಳು,—ಕೆಡೆ : ಕೂಚಿ ಯಾದುದು ಕೂಡೆ ಸಾಸಿರಲೋಚನನ ಕಟಕದಲಿ ಗುಡಿಗಳು ರಾಚಿ ಕೆಡದವು (ಅಂಬಿಕಾ. ೪೬-೦೦). ೪. ವ್ಯಾಪಿಸು : ಈ ಕವನದಲ್ಲಿ ಅವನ ಕ್ರೋಧಜ್ವಾಲೆ ಹೇಗೆ ರಾಚುತ್ತದೆಂದರೆ, ಅದರ ಹಬೆಯಲ್ಲಿ ಕವಿತಾಕುಸುಮವು ಬಾಡಿ ಹೋಗಿದೆ (ಸವಾಕಿಜ. ೪೩). ೫. (ಆಲಂ) ಅಹಿತವಾಗು; ಅಸುಖಕರ ವಾಗು : ನಡುಹಗಲಿನ ಬಿಸಿಲು ಮುಖಕ್ಕೆ ರಾಚುತ್ತಿದೆ (ರೂಢಿ); ಆ ಸೀರೆಯ ದಟ್ಟಕೆಂಪುಬಣ್ಣ ಕಣ್ಣಿಗೆ ರಾಚುತ್ತದೆ (ರೂಢಿ).

[< ಎರಚು (<ಎಱಚು). / ತೆಲು. ರಾಚು = ತಿಕ್ಕು, ತೀಡು].

**ರಾಚಿಯ** (ನಾ). ಒಬ್ಬಾತನ ಹೆಸರು : ಪುಳ್ಳಿಯಣ್ಣನ ಮಗಂ ರಾಚಿಯಂ (ಎಕ. XI. ಚಿತ್ರದು. ೭೩-೦೨; 941).

[ರಾಚ್ಚ$_0$ (P ← ಸಂ. ರಾಜನ್) + < ಅಯ್ಯ$_1$ (< ಅಯ್ಯ$_{61}$)]

**ರಾಚಿಯಗಂಗ** (ನಾ). ಒಬ್ಬಾತನ ಹೆಸರು : ಶ್ರೀಮತ್ ಪೆರ್ಮ್ಮಾನಡಿಗಳ ಪಟ್ಟಂಗಟ್ಟಿದ ಇಪ್ಪತ್ತೆರಡನೆ ವರಿಷ × × × ರಿಳ್ಳಗರ ಕೋಟೆಯೊಳ್ ನೊಳಮ್ಮನೊಳ್ ಕಾದಿ ರಾಚಿಯಗಜ್ಜ ಸತ್ತೊಡೆ (ಎಕ. III, ಶಂಜನ. ೦೩೯-೩; 915 ?). [ರಾಚಿಯ + ಗಂಗ]

**ರಾಜ** (ನಾ). ೧. ದೊರೆ ; ಅರಸು : "ನೃಪತಿ ರಾಟ್ ರಾಜಂ . . . ಪ್ರಜಾಧಿಪನೆನಲ್ಕರಸಕ್ಕು" (ಮಂಗರಾ. ೭೬-೦); ಕಳಿಂಗರಾಜನ ನೂಂಕಿದೆ ಕರಿಘಟೆಯನುಡಿಯೆ ಬಡಿಬಡಿದೆತ್ತಂ ಕಿಂಕೋಟಿ ಮಾಟ್ಟುದುಮುಱಿದಟ್ಟಂ ಕರ್ಣಂ ನಿಶಿತಶರದಿನೆರಡುಂ ಕರಮಂ (ಕಂಕಠಾ. ೦೦-೦೦೨); ಜೊನ್ನವಕ್ಕಿ ಗಳೆಂಬ ವಿಬುಧರ್ಕಳೆಂ ತಣಿಪಿದನ್ನಾಡೆ ಜಲಮಾರ್ಗಮಂ ಪೊಕ್ಕ ರಾಜ ನೆನಲಿಂದು ಪಡುಗಡಲ ಸಾರ್ದಂ (ಭಾಪಪಂ. ೬-೩೩) : ಸಾಕೇತಪುರಜನರ್ . . . ಕೊಂಡಾಡಿದರ್ ರಾಜನಂ (ಶ್ರೀರಾಪಾ. ೦೬-೪೨೬). ೨. ಕ್ಷತ್ರಿಯ ವಂಶದಲ್ಲಿ ಹುಟ್ಟಿದವನು ; ಕ್ಷತ್ರಿಯ : "ರಾಜಾ — ಚಂದ್ರ. ಕ್ಷತ್ರಿಯ, ನರಪತಿ" (ಸಿದ್ಧಾಂತ. ೪೦೦). ೩. ಒಡೆಯ : ಪ್ರಭು : ರಾಜರಾಜಸುಮಿತ್ರ . . . ಮರುಳ್ಗಳ ರಾಜ ಪರಮಪವಿತ್ರ ಜಯಜಯ ಶರಣವನಚೈತ್ರ (ಕಂಕಠಾ. ೦೩-೪೩). ೪. ಚಂದ್ರ : "ಇಂದು . . . ದ್ವಿಜರಾಜನೆನೆ ಸುಧಾಂಶುವೆನಿಕ್ಕು" (ಮಂಗರಾ. ೦೦-೪) ; ರಾಜರಾಜಸುಮಿತ್ರ ಭಾಸ್ಕರ ರಾಜಪಾವಕನೇತ್ರ . . . ಜಯಜಯ ಶರಣವನಚೈತ್ರ (ಕಂಕಠಾ. ೦೩-೪೩). ೧, ೪ : ಪರರಾಜಾಶೇಷತೇಜಸ್ಥಿತಿ ಕೆಡೆ ಕಮಳಾಮೋದಪಂಬಾಗೆ ಧಾತ್ರೀಪರಿತೋಷಂ ಪೆರ್ಚೆ (ರಾಜಶೇ. ೩-೭೩). ೫. ಇಂದ್ರ. ೬. ಯತಿ ; ಸಂನ್ಯಾಸಿ : ಕೇಳ್ ಮರುಳೆ ಶೂನ್ಯಾಲಯ ದೊಳಣ್ಣದರಿರರು ನಿತ್ಯದು ರಾಜನಿಹನೆನಲು (ಕಂಕಠಾ. ೦೦-೨೪). ೭. ಸಮಾಸದ ಮೊದಲು ಅಥವಾ ಕಡೆಯಲ್ಲಿ ಸೇರಿ 'ದೊಡ್ಡ, ಮುಖ್ಯ, ಶ್ರೇಷ್ಠ, ಉತ್ತಮ' ಇತ್ಯಾದಿ ಅರ್ಥವನ್ನು ಕೊಡುವ ಪದ : 'ಕವಿ ರಾಜ', 'ಗಜರಾಜ', 'ರಾಜಕೀರ' ಪರಾ.

**ರಾಜನ ಸೇಸೆ** = ಒಂದು ಬಗೆಯ ತೆರಿಗೆ (?) : ಸೇಸೆ—'ರಾಜನ ಸೇಸೆ', 'ಚಕ್ರವರ್ತಿಯ ಸೇಸೆ' ಎಂದು ಶಾಸನಗಳಲ್ಲಿ ಉಕ್ತವಾಗಿದೆ. ರಾಜ ಅಥವಾ ಚಕ್ರವರ್ತಿಯ ಮದುವೆಯ ಸಮಯದಲ್ಲಿ ಜನರು ಕೊಡು ತ್ತಿದ್ದ ತೆರಿಗೆಯಿರಬಹುದೆ ? (ಕಶಾಅ. ೪೦೩). **ರಾಜಮಾರ್ತಂಡರೂಪ** = ೧. ರಾಜರಲ್ಲಿ ಸೂರ್ಯನಂತೆ ಇರುವವನು. ೨. ಚಂದ್ರ ಮತ್ತು ಸೂರ್ಯನ ರೂಪವನ್ನು ಪಡೆದವನು. ೧, ೨ : ಶ್ರೀಕಾಂತಾನೇತ್ರ ನೀಲೋತ್ಪಳವದನಸರೋಜಾತಸಸ್ಮೇರಲೀಲಾಲೋಕಂ . . . ಶ್ರೀವಿಷ್ಣು ಭೂಪಂ ಬೆಳಗುಗೆ ಜಗಮಂ ರಾಜಮಾರ್ತ್ತಣ್ಡರೂಪಂ (ಎಕ. IV, ನಾಗಮಂ. ೭೭-೬ ; 1145). **ರಾಜಾಸಾಹೇಬ** = ಸ್ಥಳೀಯರಾಜರ ಒಂದು ಬಿರುದು : (ಕ). [ಸಂ. ರಾಜನ್]

**ರಾಜಋಷಿ** (ನಾ). (ಪುರೂರವ, ಜನಕ, ವಿಶ್ವಾಮಿತ್ರ ಮೊದಲಾದವ ರಂತೆ) ರಾಜನ ವ್ಯಕ್ತಿತ್ವವನ್ನೂ ಋಷಿಯ ವ್ಯಕ್ತಿತ್ವವನ್ನೂ ಮೈ ಗೂಡಿಸಿಕೊಂಡವನು : ಉತ್ತಾನಪಾದನೆನಿಸುವ ರಾಜಋಷಿ ಮೊದಲು ಪೆತ್ತ ಭರತಂಗೆ ಹಿಮವಂತದಿತ್ತಣ ಧರೆಯನಿತ್ತ ಕತದಿಂದೆ ಭಾರತವರುಷ ವೆನಿಸಿತು (ಶಾವಕಂ. ೨-೩); ಮಹಾಪ್ರಭಾವವುಳ್ಳವನಲ್ಲವೆ ರಾಜಋಷಿಯು! (ಶಾಕುಂತ. ೬೦-೪). 'ರಾಜರ್ಷಿ' ಪರಾ. [ಸಂ.]

**ರಾಜಋಷಿತನ** (ನಾ). ರಾಜಋಷಿಯಾಗಿರುವಿಕೆ : ನಿಯಮವೆಮಗಿದು ವನನಿವಾಸಾಶ್ರಯದ ತುದಿಪರಿಯಂತ ಮೃಗಹಿಂಸೆಯಲಿ ಮಾಡೆವು ಮನದ ಮತವಿದು ರಾಜಋಷಿತನದ (ಕೊರಗ. ೩-೩-೭). [ರಾಜಋಷಿ + —ತನ]

**ರಾಜಋಷಿತ್ವ** (ನಾ). = ರಾಜಋಷಿತನ : ಶರ್ವಾಣಿಯ ಪ್ರಸಾದದಿಂದ ಅವರ ರಾಜಋಷಿತ್ವವು ಸಾರ್ಥಕ್ಯವಡೆಯಲಿ ! (ಸುಗುಗಂ. ೦೪೭-೦೩). [ಸಂ.]

**ರಾಜಕ** (ನಾ). ೧. ರಾಜರ ಸಮೂಹ ; ಅರಸರ ಗುಂಪು : ನೆರೆದ ಸಮಸ್ತರಾಜಕಮನಾವರದಿಂದಿದಿರ್ಗೊಂಡು (ಕಂಕಠಾ. ೩—೪೦) ; ಯುಕುತಿ ನಮಗಿನ್ನೇನುಭಯ ರಾಜಕವ ಸಂತೈಸುವುದು (ಕುವ್ಯಾಉ. ೬-೦೩). ೨. ಸಣ್ಣದೊರೆ ; ಚಿಕ್ಕಅರಸು. ೩. ರಾಜನಿಂದ ಆಗುವ ಆಕ್ರಮಣ,— ಮುತ್ತಿಗೆ : ಕೊಳ್ಳೆಯೋ, ದಂಗೆಯೋ, ಸುಲಿಗೆಯೋ. ಧಾಳಿಯೋ, ರಾಜಕವೋ, ಏನೋ ಬರುತ್ತಿದೆ ! (ಬಿರುಗಂ. ೦೨-೦೩); ರಾಜಕ ಬಂದರೂ ರಾಜ್ಯಕ್ಕೆ, ದೈವಿಕ ಬಂದರೂ ರಾಜ್ಯಕ್ಕೆ (ಗಾದೆ). 'ರಾಜಿಕ' ಪರಾ. [ಸಂ.]

**ರಾಜಕದಲಿ, ರಾಜಕದಳಿ** (ನಾ). ಒಂದು ಬಗೆಯ ಶ್ರೇಷ್ಠಜಾತಿಯ ಬಾಳೆ ; ರಾಜಬಾಳೆ : (ಕ). ರಾಜಕದಳಿ : ಬಕ್ಕೆ ಪಲಸು ರಾಜಕದಳಿ ಯಾಳಿಗಳಾದಿ ಚೊಕ್ಕಫಲವನಾಂತು (ಅನಂತ. ೦_೯೩) ; ಪಣ್ತ ಬಿಣ್ಪೊಸೆ ಯಿಂದೆಜಿಗಿ ನಿಂದ ರಾಜಕದಳಿಗಳುಂ (ಧಬಶಂ. ೨-೮೨ ವ). [ಸಂ. ರಾಜಕದಲೀ]

**ರಾಜಕದಳ** (ನಾ). ರಾಜಕದಲಿ : ರಾಜಕದಳಾಮ್ರಜಂಬೀರ ಫಲ ಗುಚ್ಛದಿಂ . . . ಪೂಜಿಸಿ (ತಂತ್ರಪು. ೬—೦೦೦ ರಗಳೆ). [ಸಂ. ರಾಜಕದಲ]

ರಾಜಕದಳಿ 'ರಾಜಕದಲಿ' ನೋ.

**ರಾಜಕದ್ವಾದಶ** (ನಾ). ಹನ್ನೆರಡು ಜನ ಮಹಾರಾಜರ ಗುಂಪು : ಗೆಲ್ಲನೆ ನಯಶೌರ್ಯದ್ವಯದಿಂ ಪೊಱವಗೆಯ ರಾಜಕದ್ವಾದಶಮಂ (ಕುಪ್ಪಪು. ೩-೭). [ಸಂ.]

**ರಾಜಕಪೋತ** (ನಾ). ಶ್ರೇಷ್ಠಜಾತಿಯ ಪಾರಿವಾಳ : ಮೇಘಳಥಧರಾ ಧೀಶ್ವರನ ಮುಂದೆ ಬಂದು ಬಿಟ್ಟರ್ದ ರಾಜಕಪೋತ (ಶಾಂತಿಪು. ೯-೬೬ ವ) [ಸಂ.]

**ರಾಜಕರ** (ನಾ). ೧. ರಾಜನು ಪ್ರಜೆಗಳ ಮೇಲೆ ಹೇರುವ ಕಂದಾಯ. ೨. ಚಂದ್ರನ ಕಿರಣ. ೧, ೨ : ರಾಜಕರಪಾತಭೀತಿ ಸರೋಜದೊಳ್ . . . ಸಮನಿಕುವಾ ಜನಪದಜನದೊಳೆಂತುಮೇಂ ಸಮನಿಕುಮೇ (ಶಂಪ್ರಶ. ೧೧-೪೮). [ಸಂ.]

**ರಾಜಕರ್ಮ** (ನಾ). ರಾಜನು ಮಾಡಬೇಕಾದ ಕಾರ್ಯ,_ಕರ್ತವ್ಯ : ರಾಜದ್ರೋಹಿ! ಇವನ ನೀ ಕೊಲಿಸದಿರೆ ರಾಜಕರ್ಮವ ಸಮಂತೆಸಗಿದೆಯ ? (ಗೊರಿಶ್ವಥಾ. ೪೩-೧೫೮). [ಸಂ. ರಾಜಕರ್ಮನ್]

**ರಾಜಕಲೆ, ರಾಜಕಳೆ** (ನಾ). ೧. ದೊರೆಗಳು ಕಲಿಯಬೇಕಾಗಿದ್ದ ಆಯುಧಗಳ ಪ್ರಯೋಗ ಮುಂತಾದ ವಿದ್ಯೆ : ರಾಜಕಲೆಗಳೊಳೆ ಕವಿರಾಜಗೋಷ್ಠಿಯೊಳೆ ವನಿತಾಜನೋತ್ಸವವೃತ್ತಿಯೊಳೆ ಸಂತತಂ ರಾಜಿಸುವ ಸದ್ಗುಣಸಮಾಜನಂ ಭೂಕಲ್ಪಭೂಜನಂ ಭೋಜನಂ ಮಿಗೆ ಮೆಚ್ಚುವೆಂ (ಖಪ. ೧-೯). ರಾಜಕಳೆ : ೨. ರಾಜತೇಜಸ್ಸು : ರಾಜತ್ವದ ಕಳೆ : ರಾಜಮುಖಿ ನಿನ್ನಲ್ಲಿ ರಾಜಕಳೆಯಿರುವುದು! (ಗು. ೩೫-೫). [ಸಂ. ರಾಜಕಲಾ]

**ರಾಜಕಶೇರು** (ನಾ). ಸುವಾಸನೆಯನ್ನು ಬೀರುವ ಒಂದು ಬಗೆಯ ಗೆಡ್ಡೆ ; ಕೊಡನಾರಿಗೆಡ್ಡೆ. [ಸಂ.]

**ರಾಜಕಳಾಪ** (ನಾ). ಚಂದ್ರನನ್ನು ಅಲಂಕಾರವನ್ನಾಗಿ ಮಾಡಿಕೊಂಡವನು : ಶಿವ : ಜೋಜೋ ರಾಜಕಳಾಪ ಭಕ್ತಜನಚಿಂತಾರತ್ನ (ಹರಿಶ್ಚರ. ೨-೨೬). [ಸಂ. ರಾಜಕಲಾಪ]

**ರಾಜಕಳೆ** ' ರಾಜಕಲೆ ' ನೋ.

**ರಾಜಕಾರಣ** (ನಾ). ರಾಜ್ಯದ ಆಡಳಿತಕ್ಕೆ ಸಂಬಂಧಿಸಿದ ವ್ಯವಹಾರ; ರಾಜಕೀಯ : ಸುತ್ತಲಿನ ಜನ ಬಹುತರವಾಗಿ ಸ್ಥಳೀಯ ರಾಜಕಾರಣದಲ್ಲಿ . . . ನಿರತರಾದರು (ಸ್ವ್ಯಾತಿ. ೪೪) : ಕಾಂಗ್ರೆಸ್ ರಾಜಕಾರಣದಲ್ಲಿ ಮೋಹನನ ಪ್ರಾಬಲ್ಯವನ್ನು ಯಾವ ರೀತಿ ಕಡಮೆ ಮಾಡಬಹುದು? (ಶಂಜಕಂ. ೯೬). [ಸಂ.]

**ರಾಜಕಾರಣಪಟು** (ನಾ). ರಾಜಕೀಯದಲ್ಲಿ ನಿಪುಣನಾದವನು ; ರಾಜ್ಯದ ಆಡಳಿತದಲ್ಲಿ ದಕ್ಷನಾದವನು : ಆ ಚರ್ಚೆಯನ್ನು ಕೇಳಿದರೆ ಎಂಥ ರಾಜಕಾರಣಪಟುವಿಗೂ ಬುದ್ಧಿ ಚುರುಕಾದೀತು (ಯೋಧಪು. ೭೭); ನಮ್ಮಲ್ಲಿನ ವೈಜ್ಞಾನಿಕರೂ ರಾಜಕಾರಣಪಟುಗಳೂ ದೇಶವಿದೇಶ ಕಂಡವರೂ . . . ತಮ್ಮ ಓದಿನ ಪರಿಜ್ಞಾನವನ್ನು . . . ಪ್ರಸಾರಮಾಡಬೇಕು (ರಾಮರಾ. ೪೫). [ಸಂ.]

**ರಾಜಕಾರಣಿ** (ನಾ). ರಾಜಕಾರಣವನ್ನು ತಿಳಿದ ವ್ಯಕ್ತಿ : ಲೋಕಮಾನ್ಯರು ನಿಜಕ್ಕೂ ಶ್ರೇಷ್ಠರಾಜಕಾರಣಿ (ಧರ್ಮಸಾ. ೧೨೮). [ಸಂ. ರಾಜಕಾರಣಿನ್]

**ರಾಜಕಾರಿಯ** (ನಾ). ರಾಜನಿಗೆ ಅಥವಾ ರಾಜ್ಯದ ಆಡಳಿತ ಮುಂತಾದುವಕ್ಕೆ ಸಂಬಂಧಿಸಿದ ಕೆಲಸ : ತೊಡಗಿದಗ್ಗದ ರಾಜಕಾರಿಯ ಕೆಡುವುದೆಂದೇ ನಿನ್ನನುಳುಹಿದೆ (ಕುಮಾಶ. ೯-೩೮); ಖಾನ ಮುಂದೆಸಗಿದ ರಾಜಕಾರಿಯುವ (ಕಂನಪ. ೧೦-೬೬). [< ಸಂ. ರಾಜಕಾರ್ಯ]

**ರಾಜಕಾರ್ಯ** (ನಾ). ೧. = ರಾಜಕಾರಿಯ : ಶ್ರೀಮನ್ಮಹಾ ಪ್ರಧಾನ ಶಂಖರದೇವಒಡೆಯರು ತುಳುಕಟಕಸಹಿತ ಹಾಡುವಳ್ಳಿ ಮೇಲೆ ರಾಜಕಾರ್ಯಕ್ಕೆ ಬಟಕಳದಲಿ ಪಾಳೆಯ ಬಿಡಲಾಗಿ (ಕಶಾ. ೭, ೪೦-೪ ; 1415) ; ದ್ರುಪದನಕ್ಷೋಣಿಸೇನೆಯು ನೆರವು ಬಂದುದು ರಾಜಕಾರ್ಯದ ಬಳಿಕೆ ಲೇಸೆಂದ (ಕುಮಾಉ. ೮-೨೦) ; ಕೆಡಿಸಿ ಕಳೆದೈ ರಾಜಕಾರ್ಯವ ತತ್ತ ಸಮಯದಲಿ (ಕೌರಾ. ೩೬-೭೮). ೨. (ಅಲಂ) ಮುಖ್ಯವಾದ ಕೆಲಸ : ದೊಡ್ಡ ಕಾರ್ಯ : ಊರಿಗೆ ಹೋಗಿ ಏನು ರಾಜಕಾರ್ಯ ಸಾಧಿಸಿ ಬಂದೆ ? (ರೂಢಿ). [ಸಂ.]

**ರಾಜಕೀಯ** (ಗು). ೧. ರಾಜನಿಗೆ ಸಂಬಂಧಿಸಿದ ; ಅರಸನಿಗೆ ಸೇರಿದ. ೨. ಆಡಳಿತಕ್ಕೆ ಸಂಬಂಧಿಸಿದ. (ನಾ). ೩. ರಾಜನಿಗೆ ಸಂಬಂಧಿಸಿದುದು, — ಸೇರಿದುದು : ರತ್ನಮಯವಾಗಿ ಹೆಸರನ್ನು ಕೆತ್ತಿರುವ ರಾಜಕೀಯವಾದ ಈ ಉಂಗುರವನ್ನು ಎಲ್ಲಿ ಕದ್ದೆ ? (ಶಾಕುಂತ. ೭೫-೪). ೪. = ರಾಜಕಾರಣ : ಪೂಜಿಸುತಲಿರುತಿರ್ದಳೀ ವಿವಿಧ ರಾಜಕೀಯಂಗಳೇನೊಂದರಿಯದತುಳಸಂತೋಷದಿಂದ (ವಂಕಾರಾ. ೨-೧೧-೩೬) ; ಮತಕ್ಕೂ ರಾಜಕೀಯಕ್ಕೂ ಏನು ಸಂಬಂಧ ? (ಬಾಪಜಂ. ೧೪೧). ೫. (ಅಲಂ) ಅಂತಃಕಲಹ ; ಒಳಜಗಳ : ಈಗಿನ ಅನೇಕ ಸಂಘ ಸಂಸ್ಥೆಗಳಲ್ಲಿ ರಾಜಕೀಯ ನಡೆಯುತ್ತಿದೆ (ರೂಢಿ). ೬. ಪಿತೂರಿ ; ಒಳಸಂಚು: ಆ ವೈದ್ಯರನ್ನು ವರ್ಗಾಯಿಸಲು ದೊಡ್ಡ ರಾಜಕೀಯ ನಡೆಯುತ್ತಿದೆ (ರೂಢಿ).

**ರಾಜಕೀಯಕ್ಷೇತ್ರ** = ಆಡಳಿತಕ್ಕೆ ಸಂಬಂಧಪಟ್ಟ ವಲಯ,_ಕ್ಷೇತ್ರ : ನಾನಕ ಮತ್ತು ರಾಮದಾಸರು ರಾಜಕೀಯಕ್ಷೇತ್ರದಲ್ಲಿ ಕಾರ್ಯ ಮಾಡಿದರು (ರಮೇಶಾ. ೧೫೦). **ರಾಜಕೀಯ ಖೈದಿ** = ರಾಜದ್ರೋಹ ಅಥವಾ ದೇಶದ್ರೋಹಕ್ಕಾಗಿ, ರಾಜಕಾರಣದಲ್ಲಿ ಮಾಡಿದ ತಪ್ಪಿಗಾಗಿ ಸೆರೆಯಾಳಾದವನು,_ಬಂದಿಯಾದವನು : ಸಾವಿರಾರು ರಾಜಕೀಯಖೈದಿಗಳಿಗೆ ದಯೆ ದಾಕ್ಷಿಣ್ಯ ಕನಿಕರಗಳಿಲ್ಲದೆ ಚಿತ್ರಹಿಂಸೆ ಕೊಡುತ್ತಿದ್ದನಂತೆ (ಕುನರು. ೩೩೫). [ಸಂ.]

**ರಾಜಕೀರ** (ನಾ). ಶ್ರೇಷ್ಠವಾದ ಗಿಳಿ ; ಅರಗಿಳಿ : ವಿರಹಿಗಳ ಸುಯ್ಯ ಬೆಂಕೆಯೊಳ್ . . . ಕರಿಮುರಿಕನಾದುವುನ್ಮದಪರಭೃತಷಟ್ಚರಣರಾಜಕೀರಕುಲಂಗಳ್ (ಶಂಶಭಾ. ೫-೯೦); ಸಲ್ಲಲಿತದ ರಾಜಕೀರನ ನುಡಿಗೇಳಿ ವಲ್ಲಭ ಬಾರೆಂದಳೆಪಳು (ಕಂನಪ. ೯-೨೧೦). [ಸಂ.]

**ರಾಜಕೀರಕ** (ನಾ). = ರಾಜಕೀರ : ರಾಜಕೀರಕವಾಕ್ಪಾಟವಮಲ್ಲದಿಲ್ಲ ಪಟುತ್ವಂ ವಾಕ್ಪಾಟವಂ ಸುತ್ತಲುಂ (ಶಾಂತಿಪು. ೩-೩). [ಸಂ.]

**ರಾಜಕೀರೆ** ' ರಾಜಗೀರೆ ' ನೋ.

**ರಾಜಕುಂಜರ** (ನಾ). ಶ್ರೇಷ್ಠವಾದ ಆನೆ ; ಗಜರಾಜ : ಅನುಕೂಲಾನಿಲಾಂದೋಲಾಯಮಾನರಾಜಕುಂಜರವಿಜಯಕದಲಿಕಾತರಂಗಿತ ಗಗನಾಂಗಣನುಂ . . . ಆಗಿ ನಡೆಯೆ (ಆದಿಪು. ೧೨-೬೦ ವ). [ಸಂ.]

**ರಾಜಕುಮಾರ** (ನಾ). ದೊರೆಯ ಮಗ ; ಅರಸುಪುತ್ರ : ಪಲಂಬರ್ ರಾಜಕುಮಾರರ ನಡುವೆ . . . ಶಸ್ತ್ರಕಳಾಧರನಾಗಿ ತನ್ನುಮಂ ಗೆಲೆವಂದ ಸಾಮಂತಚೂಡಾಮಣಿಯ ಶರಪರಿಣತಿಯುನಾರಯಲು (ಶಂಶಭಾ. ೨-೫೯ ವ); ರಾಜಕುಮಾರರಿರ್ಕೆ ಸುರರಾಜಕುಮಾರಕರೊಳ್ . . . ದೊರೆಯಪ್ಪರಾರೊ ಪೇಟಿೀ ಜಿತಕಂತುಗೆ (ಶಂರಾವು. ೫-೧೩೯). [ಸಂ.]

**ರಾಜಕುಮಾರಕ** (ನಾ). = ರಾಜಕುಮಾರ : ರಾಜಕುಮಾರಕರ್ ನಿಜವಿನೋದಿಗಳ್ . . . ಜೂಜುಗಳಂ ಸಮಗ್ರಮೆನಲಾಡುತಿರಲ್ ಪದೆವಲ್ಲಿಗೆಯ್ದಿದೆಂ (ದಶಕು. ೮-೯೭); ಸಾರಿತೇಯುಕಟಕಟ ರಾಜಕುಮಾರಕರಿಗಾಪತ್ತು (ಕೊರರಾ. ೬-೨೪-೪೪). [ಸಂ.]

**ರಾಜಕುಮಾರಿ** (ನಾ). ದೊರೆಯ ಮಗಳು ; ಅರಸುಪುತ್ರಿ : ರಾಜಕುಮಾರಿಯು ಶ್ವೇತಚಾಮರವನ್ನು ಶ್ರೀರಂಗರಾಯನ ಕೈಗೆ ತಂದು ಕೊಟ್ಟಳು (ಶ್ರೀರಾಯ. ೩೬೦). [ಸಂ. ರಾಜಕುಮಾರೀ]

**ರಾಜಕುಲ** (ನಾ). ೧. ಅರಸುವಂಶ ; ಕ್ಷತ್ರಿಯಕುಲ : ಆಲೋಳಿಯೊಳಿರ್ಕೆ ರಾಜಕುಲಮೆಂದುತ್ಸಾಹತೂರ್ಯಸ್ವನಂ ದೆಸೆಯುಂ ತೀವೆ (ಶಂರಾವು. ೧೫-೧೧); ರಾಜಕುಲಭೀತರನು ಭಜಿಸಿವೆ (ಐಭಾಗ. ೧೧-೯೭-೧೧). ೨. ರಾಜಮನೆತನ : ನಾನು ಶುದ್ಧ ಮುಸಲ್ಮಾನಳೇನೋ ಹೌದು . . . ಯಾವ ರಾಜಕುಲದಲ್ಲಿಯೂ ಹುಟ್ಟಿದವಳಲ್ಲ (ಬೌಂಶ್. ೩೬೦). ೩. ಅರಸರ ಗುಂಪು ; ಅರಸರ ಸಮೂಹ. ೪. ಅರಮನೆ. ೫. ವಿಲಾಸಿನಿಯರ ಸಮೂಹ : " ವಾರಸತಿ ರಾಜಕುಲವೆನೆ ವಿಳಾಸಿನಿಯರಕ್ಕು " (ಶಂಗರಾ. ೯೦-೬). [ಸಂ.]

**ರಾಜಕುವರ** ' ರಾಜಗುವರ ' ನೋ.

**ರಾಜಕುಳಪ್ರತಿಬದ್ಧೆ** (ನಾ). ವಿಲಾಸಿನಿ ; ಎಂಗಾರದವಳು : " ರಾಜಕುಳಪ್ರತಿಬದ್ಧಾ, ವಾರಸ್ತ್ರೀ, ವಾರಮುಖ್ಯಾ — ಈ ೩ ವಿಳಾಸಿನಿಯರ್'' (ಹಲಾಯು. ೯೦-೩೬೬). [ ಸಂ. ರಾಜಕುಲಪ್ರತಿಬದ್ಧಾ ]

**ರಾಜಕೇತನ** (ನಾ). ಅರಸನು ಇರುವ ನಿವಾಸ ; ಅರಮನೆ ; ರಾಜಗೃಹ : ಆತನುಂ . . . ನಿಜನಾಥಪುರವರಮನೆಯ್ದಿ ರಾಜಕೇತನನಿವಿಷ್ಟನೊಡ್ಡೋಲಗಂಗೊಟ್ಟಿರ್ದ ಗಗನಚರೇಂದ್ರನಂ . . . ಕಂಡು (ಶಾಂತಿಪು. ೫-೩೬ ವ). [ಸಂ.]

**ರಾಜಕ್ಷಯ** (ನಾ). ತೀವ್ರತರವಾದ ಒಂದು ಬಗೆಯ ಕ್ಷಯರೋಗ : ಪುಷ್ಕರಮೂಲ, ಬಿಜೋರ . . . ನೆಗ್ಗಿಲು ಸಹ ಸಮಾನಗೊಂಡರೆದು ತುಪ್ಪದಿಂ ಸೇವಿಸೆ ರಾಜಕ್ಷಯಾದಿ ರೋಗಂ ಪರಿಹರಂ (ಕಳವೈ. ೨೪೯). 'ರಾಜಯಕ್ಷ್ಮ' ಪರಾ. [ಸಂ.]

**ರಾಜಖರ್ಜೂರ** (ನಾ). ಒಂದು ಬಗೆಯ ಉತ್ತಮಜಾತಿಯ ಖರ್ಜೂರ : "ಮುನಿಖರ್ಜೂರಿಕಾ — ರಾಜಖರ್ಜೂರ" (೬೫೦. ೦೨೬). [ <ಸಂ. ರಾಜಖರ್ಜೂರೀ ]

**ರಾಜಗಾಂಭೀರ್ಯ** (ನಾ). ರಾಜೋಚಿತವಾದ ಠೀವಿ,– ಗತ್ತು : ಅವರು . . . ರಾಜಗಾಂಭೀರ್ಯದಿಂದ ಬೀದಿಯಲ್ಲಿ ನಡೆದು ಬರುತ್ತಿದ್ದ ವ್ಯಕ್ತಿಯ ಕಡೆಗೆ ಕುತೂಹಲದಿಂದ ದೃಷ್ಟಿಹರಿಸಿದರು (ಶ್ರೀವರು. ೨೬೬). [ಸಂ.]

**ರಾಜಗಾಮಿ** (ನಾ). ಹಕ್ಕುದಾರರಿಲ್ಲದ ಆಸ್ತಿಯನ್ನು ರಾಜ್ಯದ ಬೊಕ್ಕಸಕ್ಕೆ ಸೇರಿಸಿಕೊಳ್ಳುವುದು : ಭಾರತದ ರಾಜ್ಯಕ್ಷೇತ್ರದಲ್ಲಿರತಕ್ಕ ಯಾವ ಸ್ವತ್ತು . . . ರಾಜಗಾಮಿಯಾಗುವುದರಿಂದ . . . ಅಂಥ ರಾಜ್ಯದ ವಶದಲ್ಲಿ ನೆಲಸತಕ್ಕುದು (ಭಾಧಾಸ. ೦೬೦). [ ಸಂ. ರಾಜಗಾಮಿನ್ ]

**ರಾಜಗಾಮಿತ** (ನಾ). = ರಾಜಗಾಮಿ : ' ರಾಜಗಾಮಿತಂಗೆಯ್ ' ಪರಾ. [ಸಂ.]

**ರಾಜಗಾಮಿತಂಗೆಯ್** (ಕ್ರಿ). ಹಕ್ಕುದಾರರಿಲ್ಲದ ಆಸ್ತಿಯನ್ನು ರಾಜ್ಯದ ಬೊಕ್ಕಸಕ್ಕೆ ಸೇರಿಸಿಕೊಳ್ಳು,– ವಶಪಡಿಸಿಕೊಳ್ಳು : ಗುಣ್ಣಮಯ್ಯಂ ದೋಷ ಎಡೆಯಾಳ್ತನದಿಂ ರಾಜಗಾಮಿತಂಗೆಯ್ದು ಮೆಣ್ಣಯತನವ ಲೂರನೆನ್ನದೆನ್ದು . . . ಇಪ್ಪುರ್ದಂ ಕಣ್ಬು (ಶಾಸಕ. IX-i, ೦೨೩ ೦೬; 1059). [ ರಾಜಗಾಮಿತ + ಕೆಯ್$_1$ ]

**ರಾಜಗಿರಿ** (ನಾ). ಒಂದು ಬಗೆಯ ಸೊಪ್ಪು : '' ರಾಜಾಗ್ರಃ–ರಾಜಗಿರಿ'' (೬೫೦. ೦೩೭) ; ದಿನಾಲು ರಾಜಗಿರಿಯ ಕಾಳುಗಳನ್ನು ತಿನಿಸಿ ಜೋಕೆ ಮಾಡಿದ್ದರಿಂದ ಆ ಚಿಗರೆ ಅವನಿಗೆ ಬಹಳ ಈಲಾಗಿತ್ತು (ಮುಂಬಯು. ೫-೩೦೦) ; ಒಂದು ದಿನ 'ರಾಜಗಿರಿ'ಯ ಪಲ್ಲೆಯ ಎಲೆ ಹಸಿರು ಮುರಿಯುತ್ತಿದ್ದವು (ಸವಣೀ. ೪೬೦) ; ಸೋಮವಾರ ಪ್ರತಿಯೊಬ್ಬರೂ ಬರೀ ರಾಜಗಿರಿಪಲ್ಲೆ . . . ತಿನ್ನತಕ್ಕದ್ದು (ಹನ್ನೊಂದ. ೬೮). 'ರಾಜಗೀರೆ' ಪರಾ. [ ಸಂ./ ಮರಾ. ರಾಜಗಿರಾ ]

**ರಾಜಗಿಳಿ** (ನಾ). = ರಾಜಕೀರ : '' ಪ್ರಾಜ್ಞಃ – ರಾಜಗಿಳಿ '' (೬೫೦. ೯೬). [ ರಾಜ + ಗಿಳಿ ]

**ರಾಜಗೀರೆ, ರಾಜಕೀರೆ** (ನಾ). ಒಂದು ಬಗೆಯ ಕೀರೆಸೊಪ್ಪು : '' ಶತಪತ್ರಃ–ರಾಜಗೀರೆ '' (೬೫೦. ೦೬೦). **ರಾಜಕೀರೆ** : '' ರಾಜಶಾಕಿನೀ– ರಾಜಕೀರೆ '' (೬೫೦. ೦೩೮). 'ರಾಜಗಿರಿ' ಪರಾ. [ ರಾಜ + ಕೀರೆ ]

**ರಾಜಗುವರ, ರಾಜಕುವರ** (ನಾ). = ರಾಜಕುಮಾರ : ನೀವೆಂದಾದರೂ ಈ ಮಾಡದತ್ತ ಬಂದು ರಾಜಗುವರರ ಕುಶಲವನ್ನು ವಿಚಾರಿಸಿದುಂಟೆ ? (ಸವತಿ. ೨೩೬). **ರಾಜಕುವರ** : ನರನೊಳಿಸ್ಸಬ್ಬಿಹುವೆನು. . . ರಾಜಕುವರನ ಮರಣವಾರ್ತೆಯ (ಕುವ್ಯಾಪ್ರಿ. ೮-೩) ; ರಂಗನ ನೋಡಿರೆ ರಾಜಕುವರ ನರಸಿಂಗದೇವ ನಮ್ಮ ದೇವಕಿಸುತನ (ಪುರಂದ. ೪-೪೮ ೫೭೬). [ ರಾಜ + ಕುವರ$_2$ ]

**ರಾಜಗೃಹ** (ನಾ). ೧. ಅರಸನ ನಿವಾಸ ; ಅರಮನೆ : ಲತಾಗೃಹಮೆಂಬ ರಾಜಗೃಹಕ್ಕೆ ವಂದು (ಆದಿಪು. ೮-೪೦ ವ) ; ರಾಜಗೃಹಕ್ಕೆ ಮಿಕ್ಕ ಗಜದಂತ ಚಯಂಗಳುಮಂ . . . ಬಿದಿರಕ್ಕಿಯುಮಂ ತಱುಂಬಿ ನಿರ್ವ್ಯಾಜದಿನೆಯ್ದಿ (ಜೀಬಿಪು. ೧-೭೬). ೨. ಪ್ರಾಚೀನ ಮಗಧರಾಜ್ಯದ ರಾಜಧಾನಿಯ ಹೆಸರು. ೧, ೨ : ಅಂತು ಮಗಧವಿಷಯದಂತೆ ರಾಜಗೃಹಸನಾಥಮುಂ . . . ಯಾಮ್ಯದಿಶೆಯಂತೆ ಧರ್ಮಪ್ರಭಾವವಿಭಾವಿತಮುಮೆಂಬ ಮಹಿಮೆಯ ಪುರಿಮೆಯುಂ ತಳೆದು (ಕೃಷ್ಣಪು. ೯-೩೦ ವ). [ಸಂ.]

**ರಾಜಗೇಹ** (ನಾ). = ರಾಜಗೃಹ ೧ : ಪರಿತಾಂಕುರಫಳಪುಷ್ಪೋತ್ಕರಂಗಳಂ. . . ಧರಣೀಶಂ ಕೆದಱಿಸಿದಂ ನಿರಂತರಂ ರಾಜಗೇಹದೊಳಗಂ ಪೊಱಗಂ (ಆದಿಪು. ೦೫-೭) ; ರಾಜಗೇಹದ ಮುತ್ತಿನ ಬಾಗಿಲಿದಿರೊಳು . . . ನವಿಲು ಯ್ಯಾಲೆಯಿತ್ತುವು ಕಣ್ಗೆ ಕೌತುಕವ (ಕಂಪವು. ೭-೮). [ಸಂ.]

**ರಾಜಗೋಳಿ** (ನಾ). ಒಂದು ಬಗೆಯ ಗೋಣಿಸೊಪ್ಪು : ರಾಗೀಯ ಒಣರೊಟ್ಟಿ ರಾಜಗೋಳಿಯ ಪಲ್ಲೆ ರಾಜಕ ತವರು ಬಡವರ ಮನಿಯಾಗ ನಾಕುದಿನವಿದ್ದು ಒರುಫೇನ (ಗರತಿ. ೮). ' ರಾಜಗೀರೆ ' ಪರಾ. [ರಾಜ + ಗೋಳಿ$_1$]

**ರಾಜಚಿಹ್ನ** (ನಾ). ಅರಸುತನದ ಅಧಿಕಾರ, ಘನತೆ ಮುಂತಾದುವುಗಳನ್ನು ಸೂಚಿಸುವ ಗುರುತು ; ರಾಜಲಾಂಛನ : ಪಟಳಶಂಖಸಂಕಾಶಪಾಂಡುಛತ್ರಚಾಮರಂಗಳಂ ಪೆಱವುಂ ರಾಜಚಿಹ್ನಂಗಳುಮೆಸೆಯೆ (ಕಂಶಕಾ. ೦೦-೫೭ ವ) ; ನಿಜನಿಜರಾಜಚಿಹ್ನನಿವಹಂ ಪರಿರಂಜಿಸೆ (ಜಗಪು. ೦-೪೦). [ಸಂ.]

**ರಾಜಚಿಹ್ನೆ** (ನಾ). = ರಾಜಚಿಹ್ನ : ರಾಜನು ಮಂತ್ರಿಗೆ ಬೆಳ್ಗೊಡೆ, ಚಾಮರ . . . ಮುಂತಾದ ರಾಜಚಿಹ್ನೆಗಳನ್ನು ಕೊಡುತ್ತಿದ್ದನು (ಕಸಾಶ. ೩೨೯) ; ಅರಸನು ಉಳಿಸಿಕೊಂಡಿದ್ದ ಆ ಅಲ್ಪಪರಿವಾರವನ್ನೂ ರಾಜಚಿಹ್ನೆಗಳನ್ನೂ ಸೈರಿಸಲಾರದವರಾಗಿ . . . ನಿರಾಕರಿಸಿ ಬಿಟ್ಟರು (ಕವಿಕ. ೩೫). [ಸಂ. ರಾಜಚಿಹ್ನ]

**ರಾಜಜಿಘಾಂಸು** (ನಾ). ಅರಸನನ್ನು ಕೊಲ್ಲಲು ಬಯಸುವವನು : ಜನರ ಮಾರ್ಮಲೆಸುವೀ ಪರಿಯ ರಾಜಜಿಘಾಂಸುಗೆಮ್ಮ ಬಡ ಧರ್ಮ ದಂಡವೆ ಸಾಕೆ ? (ಗೂರ್ಲ್ಯಾಕಾ. ೪೦-೦೦೫). [ಸಂ.]

**ರಾಜಠೀವಿ** (ನಾ). = ರಾಜಗಾಂಭೀರ್ಯ : ಆತನಲ್ಲಿ ಏನೋ ಒಂದು ಬಗೆಯ ರಾಜಠೀವಿ ಕಾಣುತ್ತಿತ್ತು (ಕ್ಯಾಮಿಸ್ಕೀ. ೦೪೮). [ರಾಜ + ಠೀವಿ]

**ರಾಜಣ** ' ರಾಜನ ' ನೋ.

**ರಾಜತ** (ಗು). ಬೆಳ್ಳಿಯಿಂದ ಆದ ; ಬೆಳ್ಳಿಯ : ಆ ರಾಜತಶೈಲೇಂದ್ರದೊಳೆ ಮಹಾಜಿನಚಂದ್ರಂ ಪ್ರಶಸ್ತಿಯಂ ಬರೆಯಿಸಿದಂ (ಶಾಂತಿಪು. ೪-೫೯) ; ಮರಳೆ ಸುತನಂ ಪಡೆದು ರಾಜತಗಿರಿಯನಾಗಳೆ ಸೂಱೆಗೊಂಡನು (ಬಸಪು. ೨೫-೦೫). [ಸಂ.]

**ರಾಜತಂತ್ರ** (ನಾ). ರಾಜಕೀಯಕಾರ್ಯದಲ್ಲಿರುವ ಚಾತುರ್ಯ ; ಆಡಳಿತತಂತ್ರ : ಹಿಂಗಲೊಲ್ಲದೆ ಹೋಯ್ತು ರಾಮನ ವಿಚಿತ್ರರುಚಿ . . . ದಿನದಿನಕೆ ರಾವಣನ ರಾಜತಂತ್ರದ ಜಯಕೆ ಕೈಗೂಡಿದತ್ತೆಂಬಿನಂ ಮುರುಟಿದುದು ಮನದ ಕೆಚ್ಚು (ಶ್ರೀರಾಮಾ. ೨೭೫-೩೧೮). [ಸಂ.]

**ರಾಜತರು** (ನಾ). ಒಂದು ಬಗೆಯ ಮರ ; ಕಕ್ಕೆಮರ : ''ಆರಗ್ವಧಂ ಸ್ವರ್ಣಪುಷ್ಪ ಕೃತಮೂಲಮೆನಲ್ಕಾ ರಾಜತರುವೆನಲ್ ಕಕ್ಕೆ'' (ಮಂಗರಾ. ೩೫-೦೨) ; ಕನಕಚಂಪಕ, ರಾಜತರು (ವ್ಯಾಜಿಗಿ. ೬೫-೦೩೨೦). [ಸಂ.]

**ರಾಜತೆ$_1$** (ನಾ). ದೊರೆತನ ; ಪ್ರಭುತ್ವ : ನನ್ನ ರಾಜತೆಗೊಂದೆ ಸತ್ಯವನಿತರ ಸಾಕ್ಷಿ! (ಗೂರ್ಲ್ಯಾಕಾ. ೦೦೦-೦೩೦); ಸ್ತ್ರೀಮದ್ಯಲೋಲನಾಗಿ . . .

ಪಣ್ಯಮೋಹಿನಿಯರಿಂಗೆ ಮೆಯ್ಯುನಗಳನು ರಾಜ್ಯ ರಾಜತೆಗಳನು ಸೋಲ್ತು (ಚಿಕ್ಕ. ೨೦೩-೩). [ಸಂ. ರಾಜತಾ]

**ರಾಜತೆ$_2$** (ನಾ). ಪ್ರಕಾಶ ; ಹೊಳಪು ; ಕಾಂತಿ : ಐಕ್ಯನಾವಲ್ಲಿ ಸುಗಂಧದ ಸುಳುಹಿನಂತೆ ಪಳುಕಿನ ರಾಜತೆಯಂತೆ ಶುಕ್ತಿಯ ಅಪ್ಪುವಿನಂತೆ (ಸಕಪ. ೪. II. ೩೩೯-೬). [ಸಂ. ರಾಜತ]

**ರಾಜತೇಜ** (ನಾ). ೧. ಅರಸನಲ್ಲಿರುವ ತೇಜಸ್ಸು, –ಕಾಂತಿ : ರ್ಶೋಂಭಿಸುವ ಸಿರಿಮೊಗದ ನೋಟದ ಸೊಂಪಡಗಿದಾಲಿಗಳ ಧೈರ್ಯದ ಗುಂಪಳಿದ ನಿಜರಾಜತೇಜದ ವಿಪುಳವೇದನೆಯ . . . ವಿಘಾತಿಯ ರ್ಶೋಂಭಿನಲಿ ಹುದುಗಿದ ಮಹೀಶನ ಕಂಡನಾ ಪಾರ್ಥ (ಕುವ್ಯಾ. ೪. ೦೩-೩). ೨. ಘನತೆ ; ಹಿರಿಮೆ : ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ ಲೋಕವಿರೋಧಿ ಶರಣನಾರಿಗಂಜುವನಲ್ಲ ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ (ಬಸವ. ೬೩೩). [ಸಂ. ರಾಜತೇಜಸ್]

**ರಾಜತ್ವ** (ನಾ). = ರಾಜತೆ$_1$ : ಮೃಗರಾಜಂ ರಾಜತ್ವದ ಪಗೆಗಿಱಿವಂತಿ ಱಿದು ನಖದಿಂ (ಶಾಂತಿಪು. ೭-೬೨) ; ಮನಸ್ಸು ರಾಜತ್ವ ಮಾಡುತ್ತಿರುವಾಗ ಅದು ತನ್ನ ಸುಖವನ್ನು ತಾನೇ ಸೃಷ್ಟಿಮಾಡಿಕೊಳ್ಳಬಲ್ಲುದು (ಐಶ್ವ. ೪. ೨೦೯). [ಸಂ.]

**ರಾಜದಂಡ** (ನಾ). ೧. ಪ್ರಭುತ್ವದ ಚಿಹ್ನೆಯಾಗಿ ಅರಸನು ಕೈಯಲ್ಲಿ ಹಿಡಿಯುವ ರತ್ನಖಚಿತವಾದ ಚಿನ್ನದ ದಂಡ : ರಾಜದಂಡಕ್ಕಿಂತಲೂ ಕಾಲನ ಕೈಯು ಹೆಚ್ಚು ಬಲಶಾಲಿ ; ಏನನ್ನೂ ಎಸಗಬಲ್ಲುದು (ಬಾಬುತ್ತಿ. ೪). ೨. ರಾಜಾಧಿಕಾರ ; ಪ್ರಭುತ್ವ. ೩. ಅರಸನು ವಿಧಿಸುವ ಶಿಕ್ಷೆ, —ದಂಡನೆ : ಅವನು ಘಾತುಕ, ಅವನಿಗೆ ತಕ್ಕ ರಾಜದಂಡವಾಗುವುದು (ರಾಂಕ್. ೬೨). ೪. ಅರಸನಿಗೆ ತೆರಬೇಕಾದ ದಂಡ, — ಜುಲ್ಮಾನೆ. [ಸಂ.]

**ರಾಜದಂಡನೆ** (ನಾ). = ರಾಜದಂಡ ೩ : ದ್ವೀಪಾಂತರವಾಸ ಮಾಡಬೇಕೆಂಬ ರಾಜದಂಡನೆಗೆ ಗುರಿಯಾದವರು ಇರುವುದಕ್ಕಾಗಿ ಈ ದ್ವೀಪಗಳಲ್ಲಿ ಸ್ಥಳವು ಏರ್ಪಾಟಾಗಿದೆ (ಭೂಗೋಳ. ೩೦). [ಸಂ. ರಾಜದಂಡನ]

**ರಾಜದರಬಾರು** (ನಾ). ಅರಸನ ಆಸ್ಥಾನ : ರಾಜನ ದರ್ಬಾರು : ರಾಜದರಬಾರಿನಲ್ಲಿ ದೊಡ್ಡಕೆಲಸವನ್ನು ಸಂಪಾದಿಸಬೇಕೆಂಬ ಆಶೆಯಿಂದಲೂ ಅವನು . . . ಅಲ್ಲಿ ವಾಸಮಾಡುತ್ತಿದ್ದನು (ಕಣಾಕುಂ. ೩೪). [ ರಾಜ + ದರಬಾರು (< ದರ್ಬಾರು) ]

**ರಾಜದಾರಕ** (ನಾ). = ರಾಜಕುಮಾರ : ಸಮಪಾಂಸುಕ್ರೀಡಾನೇಕವಿಧ್ರುಮ ಕ್ರೀಡಾರಸೋದಾರರಾಜದಾರಕಪರಿವೃತನಾಗಿ (ಅಂಕಪು. ೯-೫೦ ವ). [ಸಂ.]

**ರಾಜದೂತ** (ನಾ). (ಅರಸನಿಂದ ನಿಯಮಿಸಲ್ಪಟ್ಟು) ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಕಳುಹಿಸಲಾಗುವ ಪ್ರತಿನಿಧಿ ; ರಾಯಭಾರಿ : ಲಾಂಗಲಹಸ್ತಂ ವಿದ್ಯಾಧರರಾಜದೂತನ ಮೊಗಮಂ ನೋಡಿ (ಶಾಂತಿಪು. ೨-೦೩ ವ). [ಸಂ.]

**ರಾಜದ್ರವ್ಯ** (ನಾ). ಅರಸನಿಗೆ ಸಲ್ಲಿಸಬೇಕಾದ ಹಣ,—ಧನ : ಬಾಳ್ಗುಳಿಯೂರೊಡೆಯಂ ಪಶುಪತಿಭಟ್ಟಬಿಗ್ಗಿ ಬಾಬನ್ನಿಯ ಸಂಬನ್ಧದ ರಾಜದ್ರವ್ಯ ಮಾದುದೆಲ್ಲಮಂ ಬಿಟ್ಟರ್ (ಶಾಸ. IX-i. ೩೩-೧೨ : ೮೫೦). [ಸಂ.]

**ರಾಜದ್ರೋಹ** (ನಾ). ಅರಸನಿಗೆ ಅಥವಾ ಆಡಳಿತಕ್ಕೆ ಕೇಡು ಬಗೆಯುವಿಕೆ,– ಅನ್ಯಾಯ ಮಾಡುವಿಕೆ : ಆ ಶಿಬಿರದಲ್ಲಿ ನಡೆಯುತ್ತಿರುವುದೆಲ್ಲಾ ಸ್ವಾಮಿದ್ರೋಹ, ರಾಜದ್ರೋಹಗಳೆಂದು ನನಗೆ ಮನವರಿಕೆಯಾಯಿತು (ಶ್ರೀರಾಮ. ೩೩೩). [ಸಂ.]

**ರಾಜದ್ರೋಹಿ** (ನಾ). ಅರಸನಿಗೆ ಅಥವಾ ಆಡಳಿತಕ್ಕೆ ಕೇಡೆಣಿಸುವವನು; ರಾಜದ್ರೋಹವನ್ನು ಬಗೆಯುವವನು: ರಾಜದ್ರೋಹಿಯಾದ ಹೈದರನು ರಾಜ್ಯಭ್ರಷ್ಟನಾದ (೭ಕಶ. ೪೯) ; ರಾಜಾಧಿರಾಜರಾದ ಮೈಸೂರಿನ ಸುಲ್ತಾನರಿಗೂ ರಾಜದ್ರೋಹಿಯವಾದ ಈ ದಂಗೆಕೋರನಿಗೂ ವ್ಯತ್ಯಾಸವೇನು ? (ರಾಂಕ್. ೬೩). [ಸಂ. ರಾಜದ್ರೋಹಿನ್]

**ರಾಜದ್ವಾರ** (ನಾ). (ಅರಮನೆಯ) ಮುಖ್ಯದ್ವಾರ ; ಹೆಬ್ಬಾಗಿಲು : ರಾಜದ್ವಾರದೊಳಗ್ನಿಕುಂಡಮನಲಂಕರಿಸಿ ಮಾಡಿ ತಂದಿಕ್ಕಿ (ರಕಸು. ೧೦-೧೦೩) ; ತೆಂಕಣ ಬಾಗಿಲೇ ಅರಮನೆಯವರು ಪ್ರವೇಶಿಸುವ ರಾಜದ್ವಾರ (ಸವಿ. ೪೩). [ಸಂ.]

**ರಾಜದ್ವೇಷ** (ನಾ). ೧. ಅರಸನ ಮೇಲಿನ ದ್ವೇಷ,—ಸೇಡು. ೨. ಚಂದ್ರನ ಮೇಲಿನ ದ್ವೇಷ,—ವೈರ. ೧, ೨ : ರಾಜದ್ವೇಷಮಮಧುಪಸಮಾಜಾತಿಪ್ರೀತಿ ತನ್ನ ಸಂಗದೆ ಗುಣಿ ನೀರೇಜಕ್ಕೊಳವೆನಿಸಿದ ಲಕ್ಷ್ಮೀಜಾಯೆಗೆ ಕೊರ್ತಮಂಗೆ ಮತಿ ಸಮನಿಪ್ಪುದೇ (ವೃಷಪು. ೦೨-೪೨). [ಸಂ.]

**ರಾಜಧರ** (ನಾ). ಚಂದ್ರನನ್ನು ಧರಿಸಿದವನು ; ಚಂದ್ರಶೇಖರ; ಶಿವ : ರಾಜಧರನಂತಾ ಪ್ರಮಥಗಣರಾಜಿಸಾರೂಪ್ಯದೊಳಮರ್ದು ವಿರಾಜಿಸುತ್ತಿರೆ (ಬಸಪು. ೬-೨೯) ; ನೀರೇಜಾಂಬಕನೊಲ್ದು ರಾಜಧರನಿಂದಂ ಸೂನುವಂ. . . ಪಡೆದು (ಹಮ್ಮಿರ. ೨-೬). [ಸಂ.]

**ರಾಜಧರ್ಮ** (ನಾ). ಅರಸನು ಪಾಲಿಸಬೇಕಾದ ಧರ್ಮ,–ಕರ್ತವ್ಯ : ವಸುಧೆಯನೇಕಾಯತ್ತವಮಾನಸನಱಿವಿಂ ನೆಱೆದು ರಾಜಧರ್ಮದಿನಭಿರಕ್ಷಿಸೆ ಪೋಯ್ತು ಕಾಲಂ (ಶಾಂತಿಪು. ೬-೬೯) ; ಹೇಳು ಹೇಳನ್ನೊಮ್ಮೆ ಧರ್ಮವ ಕೇಳಿದಱಿಯೆವು ನಿಮ್ಮ ಕಯ್ಯಲಿ ಕೇಳಲಾಗದೆ ರಾಜಧರ್ಮಪುರಾಣಸಂಗತಿಯ (ಕುವ್ಯಾ. ೪. ೨೬-೩೩). [ಸಂ.]

**ರಾಜಧಾನಿ** (ನಾ). ದೇಶದ ಅಥವಾ ರಾಜ್ಯದ ಮುಖ್ಯಪಟ್ಟಣ,–ಆಡಳಿತಕೇಂದ್ರ : "ಸ್ಕಂಧಾವಾರಃ, ರಾಜಧಾನೀ–ಈ ೨ ರಾಜಧಾನಿ" (ಶಬ್ದಮ. ೪೬–೧೩೦) ; ದಕ್ಷಿಣೋತ್ತರಶ್ರೇಢಿಗಳ್ಗೆ ರಾಜಧಾನಿಗಳಾಗಿರ್ದ. . . ಪೊಳಲ್ಗಳನೊಳಕೊಂಡು (ಅಂಕಪು. ೦-೬೨ ವ). [ಸಂ. ರಾಜಧಾನೀ]

**ರಾಜನ, ರಾಜಣ, ರಾಜಾಣ, ರಾಜಾನ, ರಾಜುಣ** (ನಾ). ಒಂದು ಬಗೆಯ ಶ್ರೇಷ್ಠಜಾತಿಯ ಬತ್ತ, ಮತ್ತು ಅದರ ಅಕ್ಕಿ ; ರಾಜಾನ್ನ : ಕನ್ನದ ಬೊಮ್ಮಿದೇವಯ್ಯಗಳು ದಮಮರಸುಗಳು ರಾಜನದ ಬೊಮ್ಮಿದೇವಯ್ಯಗಳು (ಬಸಪು. ೩೬-೨) ; ಕಲ್ಲವ್ವ ತಾಯಿ ಮೆಲ್ಲವ್ವ ರಾಜನವ ಜಲ್ಲಜಲ್ಲಾನೆ ಉದುರವ್ವ ನಾ ನಿನಗೆ ಬೆಲ್ಲದಾರತಿಯ ಬೆಳಗೇನು (ಜಾನಪ. ೨). **ರಾಜಣ** : ಉತ್ತ ಹೊಲದಲ್ಲಿ ಉತ್ರಾಣಿ ಕಾಳಲ್ಲಿ ಪುಟ್ಟರಾಜಣದ ಬಯಲಲ್ಲಿ ಬನಶಂಕ್ರಮ್ಮ ಚಿತ್ರುಸಾಲಲ್ಲಿ ಬರುತಾಳೆ (ಜಾನಪ. ೯೦) ; ರಾಜಣವ (ನೇ) ಗಣೆಗೆ ಒರಗಿ ನಿಂದಿರುವೋಳೆ ರಾಜ ಮಾದಣನ ಕಿರುದಂಗಿ ಕಡಾಚಿಲುವೆ ರಾಜಣ ತತ್ತಾರೆ ಹಸೆ ಹುಯ್ಯೆ (ಜಾಕರ. ೦೭೬). **ರಾಜಾಣ** : ರಾಗಿಯು ಮುಗಿದಾವು ರಾಜಾಣ ಹೆಚ್ಚಾವು ನಾನ್ಹಿಡಿದ ಕೆಲಸ ಪದಗ್ಯಾವ ರಾಗೀಕಲ್ಲೆ ನಾ ತೂಗಿ ಬಿಡುವೇನು ಬಲದೋಳ (ಜಾನಪ. ೩). **ರಾಜಾನ** : ರಾಗಿ ಬೀಸೋ ಕಲ್ಲೆ ರಾಜಾನ ಒಡೆಗಲ್ಲೆ ರಾಯ ಅಣ್ಣಯ್ಯ ಅರಮನಿ ರಾಗೀಕಲ್ಲೆ ರಾಜಬೀದಿಗೆ ದನಿದೋರೆ (ಜಾಕರ. ೬೪). **ರಾಜುಣ** : ಗಂಧಾದ ಮರದಡಿ ರನ್ನಾದ ಕಲ್ಲಿನೊರ್ಳು ಆಡೀ ನಾಜುಣವ ತೋಳಸೋಳಿ ಗೋಪಮ್ಮ ನಂದಾಗೋವಿಂದನ ಕರಕೊಳ್ಳೆ (ಜುಟ್ಟಪ. ೩೬). [ < ಸಂ. ರಾಜಾನ್ನ ]

**ರಾಜನೀತಿ** (ನಾ). ೧. ಅರಸನಿಗೆ ಅಥವಾ ರಾಜ್ಯದ ಆಡಳಿತಕ್ಕೆ ಸಂಬಂಧಿಸಿದ ನೀತಿ ; ಆಡಳಿತವ್ಯವಹಾರ ; ರಾಜಕಾರಣ : ಸಾಮವೆಂಬುದು ರಾಜನೀತಿಗೆ ತಾ ಮನೋಹರ ರೂಪು ಬದುಕುವ ಭೂಮಿಪಾಲರನಂತವಿಭವಕೆ ಬೀಜಮಂತ್ರವಿದು (ಕುವ್ಯಾ. ಉ. ೯-೩); ಈ ಗಣಿಯು . . . ರಾಜನೀತಿಯರಿತು ಸಮಯೋಚಿತವಾಗಿ ಮಾತನಾಡಬಲ್ಲುದು (ಪಕಣ. ೦); ರಾಜದ್ರೋಹಿ . . . ಇನ್ನಿವನ ಜೀವದಿಂದಿರಲೀವ ಕರುಣೆ ಏತರ ರಾಜನೀತಿ ? (ಗೂಕ್ಕೊಪಾ. ೬-೦೮೦). ೨. [ಗಣಿತ] ಒಂದು

ಬಗೆಯ ಲೆಕ್ಕ (?) : ಕರ್ಣಾಟಕದ ವಾರ್ತೆಯಲ್ಲಿ ಅಷ್ಟಾದಶಗಣಿತಂಗಳುಂಟು ಆವಾವುವೆಂದೊಡೆ ಮಗ್ಗಿ ಗಣಿತ . . . ಕ್ಷೇತ್ರಗಣಿತ ಮಂಗಳ ಅಳತೆ ರಾಜನೀತಿ ಬಣ್ಣಾಂತರ ಪದ್ಮನಾಭ . . . ಮುತ್ತಿನ ಚೆಲ್ವಿನ ಗಣಿತವುಂ ಅಷ್ಟಾದಶಗಣಿತಂಗಳು (ಕ್ಷೇತ್ರಗ. ೨–೩). [ಸಂ.]

**ರಾಜನೀತಿಜ್ಞ** (ನಾ). ರಾಜನೀತಿಯನ್ನು ಬಲ್ಲವನು; ರಾಜ್ಯದ ಆಡಳಿತ ವ್ಯವಹಾರವನ್ನು ತಿಳಿದವನು : ಆಂಗ್ಲರಾಜನೀತಿಜ್ಞರು ನಿರೂಪಿಸಿದ ವಿದ್ಯಾಭ್ಯಾಸವಿನ್ಯಾಸ ಇವೆರಡಕ್ಕೂ ಪುಷ್ಟಿ ಕೊಟ್ಟಿತು (ಮುಕ್ಕಾರ. ೧೧೪ ೩೬೬೪). [ಸಂ.]

**ರಾಜನೆಲ್ಲು** (ನಾ). ಒಂದು ಬಗೆಯ ಉತ್ತಮಜಾತಿಯ ಬತ್ತ; ರಾಜಾನ್ನ : (*). [ರಾಜ + ನೆಲ್ಲು (< ನೆಲ್)]

**ರಾಜನ್ಯ** (ನಾ). ೧. ದೊರೆ ; ಅರಸು : "ರಾಜಾ, ರಾಜನ್ಯಃ . . . ಲೋಕಪಾಲಃ–ಈ ೧೨ ಅರಸು" (ಹಲಾಯು. ೬೯–೨೬೬). ೨. ಕ್ಷತ್ರಿಯ ವಂಶದಲ್ಲಿ ಹುಟ್ಟಿದವನು ; ಕ್ಷತ್ರಿಯ : "ಮೂರ್ಧಾಭಿಷಿಕ್ತಃ, ರಾಜನ್ಯಃ, ಬಾಹುಜಃ, ಕ್ಷತ್ರಿಯಃ, ವಿರಾಟ್–೫ ರಾಜ್ಯಾಧಿಕಾರದ ಪಟ್ಟ ಕಟ್ಟಿಕೊಂಡಿರುವ ಕ್ಷತ್ರಿಯನಿಗೂ ಅವನ ವಂಶದಲ್ಲಿ ಹುಟ್ಟಿದವರಿಗೂ ಹೆಸರುಗಳು" (ಸಿದ್ಧಾಂತಿ. ೨೩೪); ರಾಜನ್ಯಗೊಂದು ಸಭೆ; ಪುರದ ಪುರಂಧ್ರಿಯರ್ಗೊಂದು ಸಭೆ ಯೋಜನವಳತೆಯೊಳಾಯ್ತು (ರಾಜಶೇಖ. ೧೬೬–೦); ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು . . . ರಾಜನ್ಯರಿಪು ಪರಶುರಾಮನಮ್ಮನ ನಾಡು (ಕನ್ನಡಾ. ೧೦೦). [ಸಂ.]

**ರಾಜನ್ಯಕ** (ನಾ). ಅರಸರ ಸಮೂಹ ; ದೊರೆಗಳ ಗುಂಪು : "ರಾಜಕಂ, ರಾಜನ್ಯಕಂ–ಅರಸುಗಳ ಗುಂಪಿಗೆ ರಾಜನ್ಯಕವೆಂದು ಹೆಸರು" (ಸಿದ್ಧಾಂತಿ. ೨೩೫); ಅನೇಕ ರಾಜನ್ಯಕಮಕುಟಸಂಘಟ್ಟೋಚ್ಚಲನ್ಮಣಿಮರೀಚಿಗಳ್ ವಿಲಯಾನಲ ವಿಸ್ಫುಲಿಂಗಂಗಳಂತೆ ದೆಸೆದೆಸೆಗೆ ಕಿದಱೆ (ಆದಿಪು. ೦೪–೬೨ ವ) ; ರಾಜಶೇಖರ ಸುಕುಮಾರನ ಬಗೆಗೆ ಸಭಾಸದವೃದ್ಧ ಪ್ರಸಿದ್ಧ ರಾಜನ್ಯಕಂ ಬಗೆ ಮೆಚ್ಚಿ ಮಣಿ ಮಕುಟಮನೊಲೆದು ತೂಗಿ (ರಾಜಶೇ. ೦೪–೨೦ ವ). [ಸಂ.]

**ರಾಜನ್ವತಿ** (ನಾ). ಒಳ್ಳೆಯ ರಾಜನನ್ನು ಉಳ್ಳ ದೇಶ ; ಸದ್ಗುಣಿಯಾದ ಅರಸನಿರುವ ನಾಡು : ರಾಜನ್ವತಿ ಮಾಡು ಧರಣಿಯುಂ ಧರಣಿಪತೀ (ಆದಿಪು. ೦೪–೨೦) ; ರಾಜನ್ವತೀನಾಮಮಂ ವಸುಧಾವಲ್ಲಭೆ ತಾಳ್ದಿ (ಅಜಿತಪು. ೯–೪). [ಸಂ. ರಾಜನ್ವತೀ]

**ರಾಜಪಟ್ಟ** (ನಾ). ೧. (ವಿಧಿಪೂರ್ವಕವಾಗಿ) ಅರಸನ ಹಣೆಗೆ ಕಟ್ಟುವ ರಾಜ್ಯಾಧಿಕಾರದ ಪಟ್ಟ, ಲಲಾಟಪಟ್ಟ : (*). ೨. ದೊರೆಯ ಅಧಿಕಾರ ; ಅರಸೊತ್ತಿಗೆ : ರಾಜಪಟ್ಟವು ದೊರಕುವ ಮೊದಲು ಬಡಜನರ ಗೆಳೆಯರ ಸುಖದುಃಖಗಳು ಅವನಿಗೆ ತಿಳಿದಿರುವುವು (ಗುರುಕ. ೫). [ಸಂ.]

**ರಾಜಪಿಂಡ** (ನಾ). ಅರಸುಕುಲದಲ್ಲಿ ಹುಟ್ಟಿದವನು ; ರಾಜವಂಶಕ್ಕೆ ಸೇರಿದವನು : ಚಂದ್ರಹಾಸನ ಮುಖ ನೋಡಿದ ಕೂಡಲೆ ಅವನು ರಾಜ ಪಿಂಡ ಎಂದು ತಿಳಿಯುತ್ತಿತ್ತು (ಕಥಾ). [ಸಂ.]

**ರಾಜಪಿಂಡೆ** (ನಾ). = ರಾಜಪಿಂಡ : ಪಾಜೆಗಳೂ ರಾಜಪಿಂಡೆಯವರೂ ದಿವ್ಯಾಸನಗಳನ್ನು ಅಲಂಕರಿಸಿದ್ದಾರೆ (ರಾಂಶ್. ೨೨). [< ರಾಜಪಿಂಡ]

**ರಾಜಪುತ್ರ** (ನಾ). ೧. ಅರಸುಮಗ ; ರಾಜಕುಮಾರ : ಬಾಹುಬಲ ವಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು (ಶಾಂತಿಪು. ೪–೩೦ ವ) ; ತಗರ. . . ಜಗಳವ ಕಾದಿಸುತಿಹ ರಾಜಪುತ್ರರು ಸೊಗಸಿದರಾ ಬೀದಿಯೊಳಗೆ (ಕಂಸವ. ೬–೧೨). ೨. ಒಂದು ಕ್ಷತ್ರಿಯವಂಶದ ಹೆಸರು : ರಜಪೂತ : ಬಾಟನೀರೆಂಬಲ್ಲಿನ ರಾಜಪುತ್ರ ಅರಸನೊಬ್ಬನು ಅವನನ್ನು ಪ್ರತಿಭಟಿಸಿದನು (ಶಾಶಕ್ರ. III, ೦೨೩೦). [ಸಂ.]

**ರಾಜಪುತ್ರಿ** (ನಾ). ದೊರೆಯ ಮಗಳು ; ಅರಸನ ಪುತ್ರಿ : ರಾಜಪುತ್ರಿಯು ನಾನು, ರಾಜೀವಕುಲದ ಕುಲದೈವತದ ಹಾಗೆ ಬೆಳೆದು . . . ರಾಜಿಸಿದೆವು (ಕೃಷ್ಣಾಕು. ೪–೦೫); ರಾಜಪುತ್ರಿಯು ಎಚ್ಚೆತ್ತರೆ ತನ್ನನ್ನು ಕೇಳದೆ ನಿನ್ನನ್ನು ಹೊರಗೆ ಬಿಟ್ಟದ್ದಕ್ಕಾಗಿ ವಿಪರೀತವನ್ನು ತಿಳಕೊಂಡಾಳು (ಶಕ್ರ. ೬೫). [ಸಂ. ರಾಜಪುತ್ರೀ]

**ರಾಜಪುರುಷ** (ನಾ). ೧. ದೊರೆಯ ಸೇವಕ ; ಅರಸನ ಆಳು. ೨. ಅರಸನ ಕೈಕೆಳಗಿನ ವ್ಯಕ್ತಿ, ಅಧಿಕಾರಿ : ಮಂತ್ರಿ ಪೂರ್ಣಯ್ಯನವರು ಜೊತೆಯಲ್ಲಿ ಅಜಾನುಬಾಹುವಾದ ರಾಜಪುರುಷನೊಬ್ಬನನ್ನು ಕರೆದು ಕೊಂಡು ದರಿಯಾದೌಲತ್ತಿನ ಮೆಹಡಿಯ ಮೇಲೆ ಬಂದರು (ರಾಂಶ್. ೨೩). ೩. ಮಂತ್ರಿ ; ಸಚಿವ. [ಸಂ.]

**ರಾಜಪುರೋಹಿತ** (ನಾ). ಅರಮನೆಯ ಧಾರ್ಮಿಕ ವ್ರತಾದಿಗಳನ್ನು ಮಾಡಿಸುವವನು, ಪುರೋಹಿತ : ಚಕ್ರವರ್ತಿಯು . . . ರಾಜ ಪುರೋಹಿತನನ್ನು ಕರೆಯಿಸಿ, ಶಾಂತಿಸಂಸ್ಕಾರಗಳನ್ನು ಮಾಡಿಸಿದನು (ಮುದ್ರಿಕ. ೫೬); ರಾಜಪುರೋಹಿತರು ಮಹಾಬ್ರಾಹ್ಮಣರು . . . ಶಾಂತಲ ದೇವಿಗೆ ಮಂತ್ರಪೂರ್ವಕವಾಗಿ ಅಭಿಷೇಕಮಾಡಿದರು (ಶಾಂತಲಾ. ೦೦೩). [ಸಂ.]

**ರಾಜಪೂಜಿತ** (ನಾ). ಅರಸರಿಂದ ಪೂಜಿಸಲ್ಪಟ್ಟವನು, ಗೌರವಿಸಲ್ಪಟ್ಟವನು : ಕಾಳಗನತಿಧವಳಯಶಂ ರಾಜಪೂಜಿತಂ ಸ್ಥಿರವಚನಂ (ಕರ್ಣಾಶ. XX, ೩೦–೦೨; 1044). [ಸಂ.]

**ರಾಜಪೂಜ್ಯ** (ನಾ). ಅರಸರಿಂದ ಪೂಜಿಸಲ್ಪಡುವವನು, ಗೌರವಿಸಲ್ಪಡುವವನು : ನಾಗನಾಯಕಜಿತಾರಿಮಣ್ಡಲವ್ ರಾಜಪೂಜ್ಯಮಮಲ ಶ್ರೀಯಮಾಪ್ಪುದವ್ ಕಾಮದವ್ ಹತಮದವ್ ನಮಾಮ್ಯಹಮ್ (ಎಇ. II, ೩೪–೩; ಸು. 700); ನುಡಿದಡೆ ಕರ್ಣ್ನಾಹವದೊಳನ್ನ್ಯಸುತಂ . . . ಚಾರುದತ್ತನೆನ್ನಡೆ ಸಲೆ [ಮೆಚ್ಚೆ] ಬಣ್ಣಿಸುವರಾಗ್ಗಳ್ ರಾಜಿತ ರಾಜಪೂಜ್ಯನಂ (ಕರ್ಣಾಶ. XX, ೩೦–೦೫; 1044); ರೂಪೋತ್ಕರನು ಧನಿಕನು ರಾಜಪೂಜ್ಯನು ಕೀರ್ತಿವಲ್ಲಭನು (ಕಾವ್ಯಾರಾ. ೩–೦೦೫). [ಸಂ.]

**ರಾಜಪೆಂಡಿ** (ನಾ). = ರಾಜಪಿಂಡ : "ರಾಜಬೀಜೀ, ರಾಜವಂಶ್ಯಃ – ೨ ರಾಜವಂಶದಲ್ಲಿ ಹುಟ್ಟಿದವನ ಹೆಸರುಗಳು, ರಾಜಪೆಂಡಿ, ಅರಸುಪೆಂಡಿ" (ಸಿದ್ಧಾಂತಿ. ೨೦೨). 'ಅರಸುಪೆಂಡಿ' ನೋಡಿ. [ರಾಜ + ಪೆಂಡ್ರ]

**ರಾಜಪ್ರಕೃತಿ** (ನಾ). ಅರಸನು ಮಂತ್ರಾಲೋಚನೆಯನ್ನು ಮಾಡಿ ಕಾರ್ಯವನ್ನು ನಿರ್ವಹಿಸುವಿಕೆ : "ಮಂತ್ರಂ ಕ್ಷಾತ್ರಮಟ್ಟಿ ರಾಜ ಪ್ರಕೃತಿಯಕ್ಕು" (ಮಂಗರಾ. ೬೯–೬). [ಸಂ.]

**ರಾಜಪ್ರತಿನಿಧಿ** (ನಾ). ಅರಸನ ಪರವಾಗಿ ಅಧಿಕಾರವನ್ನು ನಿರ್ವಹಿಸುವ ಅಧಿಕಾರಿ : ಇನ್ನು ಕೆಲವು ಸಂದರ್ಭಗಳಲ್ಲಿ ರಾಜಪ್ರತಿನಿಧಿಗಳೂ ಇವರೊಂದಿಗೆ ಕಲೆಯುತ್ತಿದ್ದುದುಂಟು (ಶಾಸಗ. ೩೫). [ಸಂ.]

**ರಾಜಪ್ರಮುಖ** (ನಾ). ರಾಜ್ಯದ ಪ್ರಧಾನವ್ಯಕ್ತಿ ; P ಈಗಿನ 'ರಾಜ್ಯ ಪಾಲ' ಎಂಬ ಪದಕ್ಕೆ ಪರ್ಯಾಯವಾಗಿ ಹಿಂದೆ ಬಳಕೆಯಲ್ಲಿದ್ದ ಪದ : ಎಲ್ಲೆಲ್ಲಿ "ರಾಜ್ಯಪಾಲರು" ಎಂಬ ಪದವು ಬರುತ್ತದೆಯೋ ಅಲ್ಲಲ್ಲಿ ಆ ಪದಕ್ಕೆ ಬದಲಾಗಿ "ರಾಜಪ್ರಮುಖರು" ಎಂಬ ಪದವನ್ನು ಸೇರಿಸಿಕೊಳ್ಳತಕ್ಕದು (ಭಾರಸಂ. ೦೩೦). [ಸಂ.]

**ರಾಜಪ್ರಶಂಸೆ** (ನಾ). ಅರಸನನ್ನು ಹೊಗಳುವುದು, ಶ್ಲಾಘಿಸುವುದು : ರಾಜಪ್ರಶಂಸೆ, ವಂಶಾನ್ವಯ, ಫಲಶ್ರುತಿ ಇವುಗಳನ್ನು ಸಕ್ರಮ ವಾಗಿ ನಿರೂಪಿಸುವ ಶಾಸನ (ನೊಳಂಬ. ೬೬). [ಸಂ. ರಾಜಪ್ರಶಂಸಾ]

**ರಾಜಫಣಿ** (ನಾ). ಹಾವುಗಳಲ್ಲಿ ಶ್ರೇಷ್ಠವಾದುದು ; ನಾಗರಾಜ ; ರಾಜಸರ್ಪ : "ಫಣಿಫಣಾಗ್ರಾಜಫಣಿಯೆನಲ್ಕರವಾವು" (ಮಂಗರಾ. ೦೦೯–೩). [ಸಂ. ರಾಜಫಣಿನ್]

**ರಾಜಬಲೆ** (ನಾ). ಒಂದು ಬಗೆಯ ಸಸ್ಯ ; ಸಾರಣೆ : "ಸಾರಣೀ . . . ರಾಜಬಲಾ, ಭದ್ರಬಲಾ — ೫ ಕಿರಿಯ ಹಸಾರಣೇಗಿಡ, ಸಾರಣೇಗಿಡ" (ಸಿದ್ಧಾಂತಿ. ೦೪೬). [ಸಂ. ರಾಜಬಲಾ]

**ರಾಜಬಾಳೆ** ' ರಾಜವಾಳೆ ' ನೋ.

**ರಾಜಬಿತ್ತರಿ** (ನಾ). ಅರಸನ ವಿಲಾಸಿನಿ : ಮುತ್ತಿಕೊಂಡಾ ರಾಜಬಿತ್ತರಿಯರು . . . ತೋರಲಾ ರಾಜಪೋಟಿಯರ್ ಧೀರರಾಗಿ ವರದರಗಿಳಿಯುಂ ಕುರಿತು ವಹಿಲದಿಂದ ಸರಸಸುಕುಮಾರ ಶುಕರಾಜ ಸಾರ್ವಭೌಮ ಯಾರು ನೀಂ ಬಂದ ಕಾರ್ಯವನ್ನರುಹು ಜೀಯಾ (ಶಾಗಂಧಿ. ೩೨-೩).

[ ರಾಜ + ಬಿತ್ತರಿ$_2$ ]

**ರಾಜಬೀಜಿ** (ನಾ). = ರಾಜಪಿಂಡ : " ರಾಜಬೀಜೀ, ರಾಜವಂಶ್ಯಃ— ೨ ರಾಜವಂಶದಲ್ಲಿ ಹುಟ್ಟಿದವರ ಹೆಸರುಗಳು; ರಾಜಪಿಂಡಿ, ಅರಸುಪಿಂಡಿ " (ಸಿದ್ಧಾಂತಿ. ೨೦೨). [ ಸಂ. ರಾಜಬೀಜಿನ್ ]

**ರಾಜಬೀದಿ** (ನಾ). ಮುಖ್ಯರಸ್ತೆ ; ಹೆದ್ದಾರಿ : ಮುಂದೆ ಕಂಬಿಯ ಕಂಚುಕಿಯರೊಲವಿಂದ ವಿಪ್ರರ ಮಂತ್ರಘೋಷಣೆಯಿಂದ ಬಂದರು ರಾಜಪುತ್ರರು ರಾಜಬೀದಿಯಲಿ (ಕೊರಟಾ. ೦-೦೬-೪೨) ; ದ್ವಾರಕನಾಥಭಟ್ಟನು ತನ್ನ ಮಗನಾದ ಹರಿಯನ್ನು ಕರಕೊಂಡು ರಾಜಬೀದಿಯಲ್ಲಿ ಹೋಗುತ್ತಿದ್ದನು (ಮುಂಬಯು. ೪-೦೪೬). [ ರಾಜ + ಬೀದಿ ]

**ರಾಜಬುರಿಹಣ್ಣು** (ನಾ). ಒಂದು ಬಗೆಯ ಹಣ್ಣು : ಗೋಮುಳ್ಳು, ರಾಜಬುರಿಹಣ್ಣು (ಮೃಶಿಗ. ೬೭-೦೩೬೦).

[ರಾಜಬುರಿ$_0$ (P ←ಇಂ. Raspberry) + ಹಣ್ಣು (< ಪಣ್$_3$)]

**ರಾಜಬೋಯಿ**, ರಾಜಬೋವ (ನಾ). ಅರಸನ ಪಲ್ಲಕ್ಕಿಯನ್ನು ಹೊರುವವನು : ಅಂದಣವನ್ನು ಹೊತ್ತಿರುವವರು . . . ರಾಜಬೋಯಿಗಳು (ಕಾಂಗಿಶ. ೩೯). **ರಾಜಬೋವ** : ರಾಜಬೋವಂ ಚಂಡವಂಶಮಂ ತನಗೆಂಬ ವ್ಯಾಜದಿಂ ಮನೆಮನೆಗೆ ಬೇಡೆ ಕಲ್ಯಾಣದೊಳಗಾ ಜನಂ ಕುಡದಿರಲು (ಬಿಶಾಂ. ೩೨-೨೬). [ರಾಜ + ಬೋಯಿ ( < ಬೋಯ)]

**ರಾಜಬೋವ** ' ರಾಜಬೋಯಿ ' ನೋ.

**ರಾಜಬ್ರುವ** (ನಾ). ಅರಸನೆಂದು ಹೇಳಿಕೊಳ್ಳುವವನು ; ಹೆಸರಿಗೆ ಮಾತ್ರ ದೊರೆಯಾದವನು : ಸವನಿಸಿದ ಗರ್ವದಲಿ ರಾಜಬ್ರುವನು ಕಳುಹಿದನೆಂದು ಕರುಣಾರ್ಣವನೆ ನಿಮ್ಮಡಿಯಂಘ್ರಿಸನ್ನಿಧಿಗೆ (ಶಿಭಾಗ. ೦೦-೩೪-೪೯). [ಸಂ.]

**ರಾಜಭಕ್ತಿ** (ನಾ). ಅರಸನ ಮೇಲಿರುವ ಭಕ್ತಿ; ರಾಜನಿಷ್ಠೆ : ಅವರು ರಾಜಭಕ್ತಿಯನ್ನು ತೋರ್ಪಡಿಸಿದರೆ ಅವರಿಗೆ ನಗರದ ದಿವಾನಗಿರಿಯನ್ನು ಕೊಡಬಹುದು (ಪ್ರೊಶೆ. ೬೪). [ಸಂ.]

**ರಾಜಭತ್ತ** (ನಾ). = ರಾಜನೆಲ್ಲು : ಏಲಕ್ಕಿ, ರಾಜಭತ್ತದರಳು ಇವನ್ನು ಸಕ್ಕರೆಯೊಡನೆ ತಿನ್ನಲು ದಾಹವಡಗುವುದು (ಸಕಲ್ಯ. ಶಂ. ೪೬೩).

[ ರಾಜ + ಭತ್ತ$_1$ (< ಬತ್ತ) ]

**ರಾಜಭವನ** (ನಾ). ಅರಸನ ನಿವಾಸ ; ಅರಮನೆ : ಮಹಾಮಕುಟಬದ್ಧಪರಿವೃತಂ ರಾಜಭವನಮಂ ಪೊಱಮಟ್ಟು (ಆದಿಪು. ೦೦-೦೪ ವ) ; ರಾಜಭವನದ ರಾಜಾಂಗಣಮಂ ಪೊಕ್ಕು (ಪುಸ್ತಕ. ೮-೪೭ ವ). [ಸಂ.]

**ರಾಜಭಾಷೆ** (ನಾ). ಒಂದು ದೇಶದ ಅಧಿಕೃತವಾದ ಆಡಳಿತಭಾಷೆ : ಆಗ ರಾಜಭಾಷೆಯೊಂದು ಹಿಮಾಲಯದಿಂದ ರಾಮೇಶ್ವರದವರೆಗೂ ಸ್ವೇಚ್ಛೆಯಾಗಿ ಓಡಾಡುವುದು (ಳ೬ಶಾ. ೨) ; ಪರ್ಷಿಯನ್ ಭಾಷೆ ಬಹುಕಾಲ ದೆಹಲಿಅರಸರ ರಾಜಭಾಷೆಯಾಗಿ ನಡೆದುಬಂದಿತು (ಭಾರದ. ೪೦೪). ' ರಾಜ್ಯಭಾಷೆ ' ಪರಾ. [ ಸಂ. ರಾಜಭಾಷಾ ]

**ರಾಜಭೋಗ** (ನಾ). ೧. ಅರಸನಿಗೆ ಯೋಗ್ಯವಾದ ಆಹಾರ ; ಶ್ರೇಷ್ಠವಾದ ಆಹಾರ : ಇದರಲ್ಲಿ ಅನ್ನ ಸಾರು ಇದೆ. ಅದೇ ನನಗೆ ರಾಜಭೋಗ (ಕೀಶ್ರಕ. ೪೨). ೨. ಅರಸರಿಗೆ ಯೋಗ್ಯವಾದ ಸುಖ ; ಶ್ರೇಷ್ಠವಾದ ಸುಖ. ೩. ಒಂದು ಬಗೆಯ ಬತ್ತ ಮತ್ತು ಅದರ ಅಕ್ಕಿ : ರಾಜಭೋಗ ಊಟಕ್ಕೆ ಚೆನ್ನಾಗಿರುತ್ತದೆ (ರೂಢಿ). [ಸಂ.]

**ರಾಜಮಂಡಲ**, ರಾಜಮಂಡಳ (ನಾ). ೧. ದೊರೆಗಳ ಸಮೂಹ ; ಅರಸರ ಗುಂಪು : ಭಾರತೀಯರಾಜರಾದ ತಾವೇ ನಿಯೋಜಿಸಿದ ಯಾವದೇ ಸಂಯುಕ್ತರಾಜಮಂಡಲದ ಕೈಯಲ್ಲಿ . . . ಸಮರ್ಪಿಸಿ (ಶ್ರಬಂರ. ೩೭). ೨. ಚಂದ್ರಮಂಡಲ. **ರಾಜಮಂಡಳ** : ೧, ೨ : ರಿಪುರಾಜಮಂಡಳಂ ಕುಂದಿ ಪದ್ಮತೇಜದಿನದೊರ್ಮೆಯುಂ ಪೆರ್ಚಿದು ಭಾವಿಪೊಡೆಯ್ದೆ ಮಿತ್ರಮಂಡಳಮುಪಚಯಮಂ ತಾಳ್ದುದಂತದುಚಿತಂ ಚಿತ್ರಂ (ಪುಸ್ತಕ. ೩-೮). [ಸಂ.]

**ರಾಜಮಂಡಳ** ' ರಾಜಮಂಡಲ ' ನೋ.

**ರಾಜಮಂತ್ರ** (ನಾ). ಅರಸನು ಮಂತ್ರಿಗಳೊಡನೆ ಮಾಡುವ ಆಲೋಚನೆ ; ದೊರೆಯ ಮಂತ್ರಾಲೋಚನೆ : ರಾಯನನುಜರು ದುರುಳರುಚಿತಾನುಚಿತಗೇಡಿಗಳಿರುಳು ದೊರೆಗಳು . . . ಹರಿಯ ಬಲುಹುಂಟಾದಡೆಯು ಧಿಕ್ಕರಿಸಬಾರದು ರಾಜಮಂತ್ರವನು (ಕುಮ್ಯಾಉ. ೬-೦೮).

[ಸಂ.]

**ರಾಜಮಂದಿರ** (ನಾ). = ರಾಜಭವನ : ಭರತೇಶ್ವರಚಕ್ರವರ್ತಿ ನಿಜಸ್ಥಪತಿರತ್ನವಿರಚಿತಮಣಿಮಯರಾಜಮಂದಿರಮಂ ಪುಗುವುದುಂ (ಆದಿಪು. ೦೨-೦ ವ); ಜಯರವದ ರಭಸದುದಾರ ಮೆಜಿಯಲು ಬೀಳುಕೊಂಡನು ರಾಜಮಂದಿರವ (ಕುವ್ಯಾಉ. ೦-೪೪). [ಸಂ.]

**ರಾಜಮುಖ** (ನಾ). ರಾಜಸೂಯ ಯಾಗ : ನಿನ್ನ ಕೃಪೆಯಲಿ ರಾಜಮುಖ ನಿಷ್ಪನ್ನವಾದರೆ ಬೊಪ್ಪನಿಂದ್ರನ ಮನ್ನಣೆಯ ಮೈಸೋಂಕಿನೋಲಗ ಸುಲಭವಹುದು (ಕುವ್ಯಾಸ. ೬-೦೯). ' ರಾಜಸೂಯ ' ಪರಾ. [ಸಂ.]

**ರಾಜಮನೆತನ** (ನಾ). = ರಾಜಕುಲ ೧ : ರಾಜಮನೆತನದಲ್ಲಿ ಜನ್ಮವೆತ್ತಿದರೂ . . . ಗಟ್ಟಿಮುಟ್ಟಾಗಿ ಬೆಳೆದನು (ಮುತಿಸ. ೭೪).

[ರಾಜ + ಮನೆತನ]

**ರಾಜಮನ್ನಣೆ** (ನಾ). ೧. ದೊರೆಯಿಂದ ಬರುವ ಮಾನ್ಯತೆ ; ಅರಸನು ತೋರುವ ಗೌರವ : ಹಿಂದೆ ವೀಣೆ ಶೇಷಣ್ಣನವರು ತಮ್ಮ ಕೊನೆಗಾಲದವರೆಗೂ ಮೈಸೂರಿನ ಆಸ್ಥಾನವಿದ್ವಾಂಸರಾಗಿ ರಾಜಮನ್ನಣೆಗೆ ಪಾತ್ರರಾಗಿದ್ದರು (ರೂಢಿ). ೨. ಅತಿಶಯವಾದ ಮನ್ನಣೆ; ಶ್ರೇಷ್ಠ ಮರ್ಯಾದೆ : ರಾಜಮನ್ನಣೆಯುಂಟು ಭೀಮುವಿಗೆ! (ಕೆಂಬಹು. ೪೩).

[ರಾಜ + ಮನ್ನಣೆ]

**ರಾಜಮಯ್ಯ** (ನಾ). ಒಬ್ಬಾತನ ಹೆಸರು : ರಾಜಮಯ್ಯನ ಮಗ ಭೀಮಯ್ಯ (ಎಕ. X. ಶಂಕಾಮು. ೪೮-೮; 961).

[ರಾಜ + ಅಮ (< ಅಮ್ಮ$_1$) + ಅಯ್ಯ$_1$]

**ರಾಜಮರಾಲ**, ರಾಜಮರಾಳ (ನಾ). ಶ್ರೇಷ್ಠವಾದ ಹಂಸ ; ಅರಸಂಚೆ : " ಕಾರ್ತ್ತಗಂ ಕೆಂಪುದೋಱಿ ರಾಜಮರಾಲಂ [ಶಾಶಾಂ. ೪೦] " (ಮುಂಗರಾ. ೩೦-೭) ; **ರಾಜಮರಾಳ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ರಾಜಮರಾಳ** ' ರಾಜಮರಾಲ ' ನೋ.

**ರಾಜಮರ್ಯಾದೆ** (ನಾ). ೧. = ರಾಜಮನ್ನಣೆ ೧: ಕರವಯ್ಯನಿಗೆ . . . ಅಡ್ಡಣಿಗೆ ಮತ್ತು ಗದ್ದಿಗೆಗಳೆಂಬ ರಾಜಮರ್ಯಾದೆಗಳನ್ನೊಳಗೊಂಡು ಪುಲಿನಾಡ ಕೊಳತೂರನ್ನು ವೈಶ್ಯದತ್ತಿಯಾಗಿ ಕೊಟ್ಟನು (ಕೊಳಂಬ. ೬೪ c). ೨. = ರಾಜಮನ್ನಣೆ ೨ : ಆ ಸಜ್ಜನರನ್ನು ಕಾಣಲು ಹೋದಾಗ ನಮ್ಮನ್ನು ರಾಜಮರ್ಯಾದೆಯಿಂದ ನೋಡಿಕೊಂಡರು (ರೂಢಿ).

[ಸಂ. ರಾಜಮರ್ಯಾದಾ]

**ರಾಜಮಲ್ಲ** (ನಾ). ಒಬ್ಬಾತನ ಹೆಸರು ; P ಗಂಗವಂಶದ ಒಬ್ಬ ಅರಸನ ಹೆಸರು : ರಾಜಮಲ್ಲಪೆರ್ಮ್ಮಾನಡಿಗಳ್ ಪೃಥುವೀರಾಜ್ಯಂಗೆಯೆ (ಎಕ. III, ತಂಶಪ. ೭೩-೪ ; 870). ' ರಾಚಮಲ್ಲ ' ಪರಾ. [ಸಂ.]

**ರಾಜಮಹಿಷಿ** (ನಾ). ಅರಸನ ಪಟ್ಟದ ರಾಣಿ ; ಮಹಾರಾಣಿ : ವಿಜಯ ರಾಜಮಹಿಷೀಮಯೂರಾತಪತ್ರಶಂಖಾವಹಸಂಕುಳಂಗಳಿಂದಂ . . . ತೀವಿದ ಸಿಬಿಗೆಯೊಳ್ (ಅಜಿತ. ೦೪-೯೦ ವ); ಮಂದ್ರತಾರಗೀತಿಯ ಪವಣೊಪ್ಪೆ ರಾಜಮಹಿಷೀಸಭೆಯೊಳ್ ಕಡುಜಾಣೆಯುಂ ಪ್ರವೀಣೆಯುಮೆನೆ ವೀಣೆಯುಂ ಮಿಡಿದಳ್ (ಶಾಂತಿಪು. ೯-೦೯೭). [ಸಂ. ರಾಜಮಹಿಷೀ]

**ರಾಜಮಾತೆ** (ನಾ). ಅರಸನ ತಾಯಿ : ರಾಮನು ಪಟ್ಟಕ್ಕೆ ಬಂದರೆ . . . ಕೌಸಲ್ಯೆ ರಾಜಮಾತೆಯಾಗುತ್ತಾಳೆ (ಭಾರದ. ೯೬೨) ; ರಾಜಮಾತೆಯವರ ಸಂತೋಷವಂತೂ ಹೇಳತೀರದಷ್ಟಾಗಿತ್ತು (ಶಾಂತಲಾ. ೬೯).
[ಸಂ. ರಾಜಮಾತಾ]

**ರಾಜಮಾನ** (ನಾ). ರಾಜನಿಂದ ಅಥವಾ ಸರಕಾರದಿಂದ ಅಧಿಕೃತವಾಗಿ ಗೊತ್ತುಪಡಿಸಲಾದ ಒಂದು ನಿರ್ದಿಷ್ಟ ಅಳತೆ : ಮಹಾಜನ ಪ್ರಜೆಯೂ ಸನ್ಮತದೆ ಕೊಟ್ಟದು ರಾಜಮಾನ ಅಯ್ವತ್ತು ಮತ್ತರ್ (ಶಾಸನ. IX-i, ೯೮-೬; ೯೭೮ು ೫೮) ; ಸರ್ವ ನಮಸ್ಯಮಾಗಿ ಬಿಟ್ಟ ಕರಿಯ ಕೈ ರಾಜಮಾನ ಧೊಳಾಐು ಮತ್ತರ್ (ಶಾಸನ. XVIII, ೯೯-೪೭; 1019). [ಸಂ.]

**ರಾಜಮಾನ್ಯ** (ನಾ). ೧. ದೊರೆಯಿಂದ ಗೌರವಿಸಲ್ಪಟ್ಟವನು. ೨. ಗೌರವಾಸ್ಪದರನ್ನು ಕುರಿತು ಬರೆಯುವಾಗ ಅಥವಾ ಮಾತನಾಡುವಾಗ ಉಪಯೋಗಿಸುವ ಸಾಂಪ್ರದಾಯಿಕವಾದ ಮರ್ಯಾದೆಯ ಮಾತು : ರಾಜಮಾನ್ಯರಾಜಶ್ರೀ . . . ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯವುಂಟು (ಋಂಬಿಯು. ೯-೬೯). 'ರಾಜಶ್ರೀ' ನೋ. [ಸಂ.]

**ರಾಜಮಾರ್ಗ** (ನಾ). ೧. ದೊಡ್ಡ ರಸ್ತೆ ; ಮುಖ್ಯವಾದ ಮಾರ್ಗ ; ಹೆದ್ದಾರಿ : "ಘಂಟಾಪಥಃ, ಸಂಸರಣಂ_ಈ ೨ ರಾಜಮಾರ್ಗದ ಪೆಸರು. ೧೦೦ ಮಾರಳತೆಯ ಮಾರ್ಗವೆಂದೆಂಬರು" (ಅಭಿಧಾ. ೦೯೩) ; ಸಾರ್ವಭೌಮಂ . . . ಚಂಚತ್ಪಂಚರತ್ನತೋರಣಾಲಂಕೃತರಾಜಮಾರ್ಗದಿಂ ಬರ್ಪಾಗಳ್ (ಅಜಿತ. ೦೦-೦೯ ವ) ; ಲಲಿತಕಟಕದ ರಾಜಮಾರ್ಗದೊಳುಲಿವುತಾಡುವ ಭಕ್ತಗಣಸಂಕುಳದ ನಡುವೆ . . . ಶಿವವನೀಕ್ಷಿಸಿ (ಬಸವ. ೬೨-೦೨). ೨. ದೇಶದ ಮುಖ್ಯಪಟ್ಟಣಗಳಿಗೆ ಹೋಗುವ ದೊಡ್ಡರಸ್ತೆ: ಬಾಟಾಮಾರ್ಗ : ರಾಷ್ಟ್ರೀಯ ಹೆದ್ದಾರಿ. ೩. (ಅಲಂ) ಒಳ್ಳೆಯ ದಾರಿ ; ತಕ್ಕ ಉಪಾಯ : ಜನ ತುಂಬಿಸಲಿಕ್ಕೆ ಚರುವೇ ರಾಜಮಾರ್ಗ (ಶೃದ್ಧಿ. ೨೦೦); ಶಿಸ್ತಿನ ಹೆಸರಿನಲ್ಲಿ ಅಮುಮಿ ಹಿಡಿಯುವುದು ಶಿಕ್ಷಣವ್ಯಕ್ತಿಯಿಂದ ಅಹಿತ. ಅಷ್ಟೇ ಅಲ್ಲ, ಅಪಾಯಕಾರಿ. ಅದರ ಬದಲು ಪ್ರಕಾಶಕ್ಕೆ ಅವಕಾಶ ಕಲ್ಪಿಸುವುದೇ ರಾಜಮಾರ್ಗ (ಶಿಕ್ಷಣ. ೬೨೨). [ಸಂ.]

**ರಾಜಮಾವು** (ನಾ). ಒಂದು ಬಗೆಯ ಉತ್ತಮ ಜಾತಿಯ ಮಾವು : "ಮಹಾರಾಜಚೂತಃ, ಮಹಾರಾಜಾಮ್ರಃ—ಈ ಎರಡುಂ ರಾಜಮಾವು" (ಚಿಕಿಧ. ೦೨೨). [ರಾಜ + ಮಾವು]

**ರಾಜಮಾಷ** (ನಾ). ಒಂದು ಬಗೆಯ ದ್ವಿದಳಧಾನ್ಯ ; ಉತ್ತಮಜಾತಿಯ ಅಲಸಂದೆ : "ಅಲಸಂದೆ ರಾಜಮಾಷಂ" (ವಸ್ತುಕೋ. ೯೩-೦೯); ಮಸೂರಿಕಾಕುಲತ್ಥಮುದ್ಗಮಾಷರಾಜಮಾಷಾಢಕೀನಿಷ್ಪಾವಚಣಕಯಸಾಂಘಕಾರ್ಪಾಸಸರ್ಷಪಜೀರಕಧಾನ್ಯಕಾದಿವಿವಿಧಧಾನ್ಯಭೇದಂಗಳುಂ (ಅಜಿತ. ೬-೬೨ ವ). [ಸಂ.]

**ರಾಜಮುಡಿ** (ನಾ). ದೊರೆಯು ಮಾಡಿಸಿದ ಕಿರೀಟ; ಕ್ರಿ ೧೫೭೮–೧೬೧೭ ರಲ್ಲಿ ಮೈಸೂರನ್ನು ಆಳಿದ ರಾಜಒಡೆಯರು ಮೇಲುಕೋಟೆಯ ಚೆಲುವರಾಯಸ್ವಾಮಿ ದೇವರಿಗೆ ಮಾಡಿಸಿಕೊಟ್ಟ ರತ್ನಖಚಿತವಾದ ಚಿನ್ನದ ಕಿರೀಟ : ಮೇಲುಕೋಟೆ ಚೆಲುವರಾಯಸ್ವಾಮಿಯವರಿಗೆ ಅಮೂಲ್ಯ ರತ್ನಗಳಿಂದ ನೂತನವಾಗಿ ಮಾಡಿಸಿದ ವಯಿರಮುಡಿಯಂತಿರುವ ರಾಜಮುಡಿ ಎಂಬ ಕಿರೀಟವನ್ನು ಸಮರ್ಪಿಸಿ...ವಿಶೇಷೋತ್ಸವಗಳಲ್ಲಿ ರಾಜಮುಡಿ ಮಾತ್ರ ಹೋಗಿ ಬರುವಂತೆಯೂ, ನಿಬಂಧನೆ ಮಾಡಿ . . . ಒಪ್ಪಿಸಿದರು (ಮುಖಾಸಂ. I, ೯೦) ; ವೈರಾಮುಡೀ ಚೆಲುವ ಒಳಗೇನ ಮಾಡೀಯೊ ರಾಜಮುಡೀಯಾ ಬೆಳಕಲ್ಲಿ ಚಲುವಯ್ಯ ವಾಲೇಗೆ ವಜ್ರೂರ ಬಿಗಿಸ್ಯಾನೆ (ಜಾನಪ. ೬೯). 'ವೈರಮುಡಿ' ಪರ್ಯಾ. [ರಾಜ + ಮುಡಿ$_{2}$]

**ರಾಜಮುದ್ರೆ** (ನಾ). ಅರಸನ ಲಾಂಛನ, - ಮೊಹರು ; ಅರಸೊತ್ತಿಗೆಯ ಗುರುತು : ಸಮಸ್ತಪ್ರಜೆಯನ್ನು ಪರಿಪಾಲಿಸುತ ಚಂದದಿಂದಿಹುದೆನುತ ರಾಜಮುದ್ರೆಯನಿತ್ತು ಬೀಳ್ಕೊಡುತ (ಹರಿಶೋ. ೬೯-೬೨).
[ಸಂ. ರಾಜಮುದ್ರಾ]

**ರಾಜಮೋಡಿ** (ನಾ). ಅರಸನ ಪ್ರಭಾವ,—ವರ್ಚಸ್ಸು : ಸುಮ್ಮನಿರ್ದುದು ಜನ ಭರತಚಕ್ರೇಶನ ಸೊಮ್ಮಲ್ಲವೇ ರಾಜಮೋಡಿ (ಭರತ. ೦–೭೦) ; ರಾಜಮೋಡಿಯಿಂದೊಡಗೂಡಿ ಆಜ್ಞಾಪಿಸುವ ಸುಗಂಧರಾಯನ ಗಂಭೀರಧ್ವನಿ (ಸೌಗಂಧಿ. ೬೯೬-೦೨) ; ಅಲ್ಲಿಗೆ ಪುರೋಹಿತನುಂ ಬಂದು ಅಲಂಕಾರಯುಕ್ತನಾದ ರಾಜೇಂದ್ರನ ಮುಂಗಡೆಯೊಳ್ ನಿಂತು ಸೌಂದರ್ಯಾದಿ ರಾಜಮೋಡಿಗಳಂ ನೋಡಿದನು (ಕುಮಾರ. ೦೫೮). [ರಾಜ + ಮೋಡಿ$_{1}$]

**ರಾಜಮೋಡಿಗ** (ನಾ). ಅರಸನ ವರ್ಚಸ್ಸುಳ್ಳವನು : ಅರುಹಪೂಜೆಯೊ ಮಧುಮೆಯೊ ಅಲ್ಲವಿದು ಸ್ವಯಂವರಕೆ ಕೂಡಿದ ಕೂಟದಂತೆ ಈರಸೊಬಗಾಗಿದೆ ಹೇಳೆಂದನಚ್ಚಯ್ಯ ಪರಿಯೊಳು ರಾಜಮೋಡಿಗನು (ಭರತ. ೫೫-೯೦).
[ರಾಜಮೋಡಿ + — ಗ$_{2}$]

**ರಾಜಯಕ್ಷ್ಮ** (ನಾ). ತೀವ್ರತರವಾದ ಒಂದು ಬಗೆಯ ಕ್ಷಯರೋಗ : "ರಾಜಯಕ್ಷ್ಮಾ, ಕ್ಷಯಃ, ಶೋಷಃ — ಈ ೩ ಕ್ಷಯವ್ಯಾಧಿ" (ಅಭಿಧಾ. ೯೮-೯೯೫) ; ಅಳಿಯುಂ ಪೂಗಣಿ ನೆಸ್ಸೀ ಮಗಳೆ ಚವಳೆ ಪೌತ್ರಂ ಕರು ರಾಜಯಕ್ಷ್ಮಾಕುಳನೆನ್ನೈಶ್ವರ್ಯಮಂ ನಿರ್ಜರರೆ ಕವರ್ದಾರ್ (ರಾಜಶೇ. ೦-೦೦೨).
[ಸಂ.]

**ರಾಜಯೋಗ** (ನಾ). ೧. [ಯೋಗ] ನಾಲ್ಕು ಬಗೆಯ ಯೋಗಗಳಲ್ಲಿ ಒಂದು ; ಹಠಯೋಗದಿಂದ ಭಿನ್ನವಾದ, ಸುಲಭವಾಗಿ ಅಭ್ಯಾಸ ಮಾಡಬಹುದಾದ ಒಂದು ಬಗೆಯ ಯೋಗ : ಅಂತರ್ಬಾಹ್ಯದ ದೃಷ್ಟಿ ಮನಸ್ಸುಗಳ ಹೊಂದಿಹೊಮ್ಮಲೀಯದೆ . . . ನಾದಬ್ರಹ್ಮಸಾಕ್ಷಾತ್ಕಾರವಂ ಕಂಡುಕೊಳ್ಳುವುದೆ ರಾಜಯೋಗ (ಕದಗೋ. ೩-೦೯) ; ಮಂತ್ರಯೋಗ ಲಯಯೋಗ ಹಠಯೋಗ ರಾಜಯೋಗವೆಂದು ಯೋಗಚತುರ್ವಿಧದೊಳಗೆ ಮೊದಲು ಮಂತ್ರಯೋಗದ ಭೇದವೆಂತೆಂದೊಡೆ (ಅನುಭ. ೨೦೨-೩೨). ೨. [ಜ್ಯೋತಿ] ಜನ್ಮಕುಂಡಲಿಯಲ್ಲಿ ರಾಜತ್ವವನ್ನು ಸೂಚಿಸುವ ಗ್ರಹಗಳ ಕೂಟ : ಉದಯಿಸಿದಾಲಯಕ್ಕುಮಕಯಾಲಯದಲ್ಲಿ ಸಮಸ್ತಸೌಮ್ಯರೊಂದಿದೊಡತಿಧನ್ಯನೆಂಗುಂ . . . ಇದು ಮುಖ್ಯಮೆನಿಪ್ಪುದು ರಾಜಯೋಗದೊಳ್ (ಜಾತಕ. ೦೨-೩೪). ೩. [ವೈದ್ಯಶಾ] ಅತ್ಯುತ್ತಮವಾದ ಔಷಧ.

**ರಾಜಯೋಗ ಪಳದ್ಯ**=(ಅತ್ಯುತ್ತಮ ಔಷಧಿಗಳಂತೆ ಉಪಯೋಗವಾಗುವ ಪದಾರ್ಥಗಳಿಂದ ತಯಾರಿಸಿದ) ಒಂದು ಬಗೆಯ ಮೇಲೋಗರ : ಕೊತ್ತುಮಲ್ಲಿ, ಓಮ, ಸಾಸಿವೆ, ಸೈಂಧವಲವಣ, ದಾಳಿಂಬದ ಕಾಯಿ, ನೆಲ್ಲಿಗುಟ್ಟು, ಶುಂಠಿ, ಬಿಡುಲವಣ ಇಷ್ಟನ್ನೂ ಸಮಭಾಗ ಚೂರ್ಣಮಾಡಿ ಇರಿಸಿಕೊಂಡು ಹಸುವಿನ ಮಜ್ಜಿಗೆಯಲ್ಲಿ ಕದಡಿ ಪಳದ್ಯ ಕಾಸಿ ಊಟಮಾಡುವಾಗ ಮೊದಲು ಪಳದ್ಯವಂ ಬಿಟ್ಟುಕೊಂಡು ಉಣ್ಣಲು ಸಪ್ತಧಾತುವಿನಿಂದ ಹುಟ್ಟಿದಂಥಾ ವಾಯು ಕೆಡುಗು . . . ಇದು ರಾಜಯೋಗಪಳದ್ಯ. ಸಮಸ್ತ ವ್ಯಾಧಿಗಳಿಗೆಲ್ಲಾ ಒಳ್ಳೆಯದು (ಸೂಪಶಾ. ೯೬).
[ಸಂ.]

**ರಾಜಯೋಗಿ** (ನಾ). ರಾಜಯೋಗವನ್ನು ಅಭ್ಯಾಸ ಮಾಡುವವನು : ಆ ತಾರಕಬ್ರಹ್ಮವನಭ್ಯಾಸಂಗೈವಾತನೆ ರಾಜಯೋಗಿ ನೋಡಾ (ಅನುಭ. ೨೨೯-೬೬) ; ಇಲ್ಲಿರುವ ಯೋಗಿಗಳೆಂಬ ಮಾತಿಗೆ ರಾಜಯೋಗಿಗಳೆಂದೋ

ಅಥವಾ ಜ್ಞಾನಯೋಗಿಗಳೆಂದೋ ಅರ್ಥ (ಅವ್ಯಕ್ತ. ೦-೨ ಟೀಕು).
[ಸಂ. ರಾಜಯೋಗಿನ್]

**ರಾಜಯೋಗ್ಯ** (ನಾ). ದೊರೆಗೆ ಉಚಿತವಾದುದು; ಅರಸನಿಗೆ ಯೋಗ್ಯವಾದುದು,–ತಕ್ಕುದು: ಅರೆಯಿಂಗಿ ಕಾದ ಹಾಲಂ ಮಾದಲದ ಹಣ್ಣನೆರಡಾಗಿ ಕೊಯಿದು ಕುಸುರೆಯ ತೆಗೆದವಕೆ ತುಂಬಿ . . . ಮೆಣಸಿನ ಬಿಳಿಯ ಬೇಳೆಯಂ ಹಾಕಿದೋಗರ ರಾಜಯೋಗ್ಯ ಸೌಗಂಧಿಕಾಸಹಿತ ರುಚಿರೋಗರವೆನಿಸಿಕೊಂಬುದು (ಸೂಪಶಾ. ೩-೨೨) ; ಪಾಂಡುವಿಗೂ ಮಾದ್ರಿಗೂ ರಾಜಯೋಗ್ಯವಾದ ರೀತಿಯಲ್ಲಿ ಉತ್ತರಕ್ರಿಯೆಗಳು ನಡೆದುವು (ವಚಭಾ. ೦೩).
[ಸಂ.]

**ರಾಜಯ್ಯ** (ನಾ). ಒಬ್ಬಾತನ ಹೆಸರು : ಶ್ರೀರಾಜಯ್ಯಂ ಬರೆದಂ (ಎಕ. XI, ದಾವಣ. ೦೦೪-೦೯ ; ೨೨೨). [ರಾಜ + ಅಯ್ಯ₁]

**ರಾಜರಸ್ತೆ** (ನಾ). = ರಾಜಮಾರ್ಗ ೧ : ಅವನ ಮನೆಯ ಮುಂದಿನ ರಾಜರಸ್ತೆಯು ಹೊತ್ತಾರೆಯ ತಂಗಾಳಿಯ ತಂಪಿನಿಂದ ಮರವಟ್ಟು ಹೋಗಿತ್ತು (ಮಣಿಸ. ೦) ; ವಾಹನಗಳಿಗೆ ಹೋಗಲು, ಬರಲು, ಹಾಗೇ ಜನರಿಗೆ ಬೇರೆ ಕಾಲ್ದಾರಿಗಳಿರುವ ಭವ್ಯವಾದ ರಾಜರಸ್ತೆ (ವಾತ್ಸಲ್ಯ. ೩೯).
[ರಾಜ + ರಸ್ತೆ]

**ರಾಜರಹಸ್ಯ** (ನಾ). ಅರಸನಿಗೆ ಅಥವಾ ರಾಜ್ಯಾಡಳಿತಕ್ಕೆ ಸಂಬಂಧಿಸಿದ ರಹಸ್ಯ ; ಅರಸೊತ್ತಿಗೆಯ ಗುಟ್ಟು : ತನ್ನ ರಾಜರಹಸ್ಯವನ್ನು ತಿಳಿಯಬೇಕಾದ ಪ್ರಸಂಗವೂ ಆತನಿಗೆ ಬರದೆ ಹೋಗುವುದಿಲ್ಲ (ಐಶ್ವ. XXX. ೬೦೮೪).
[ಸಂ.]

**ರಾಜರಾಜ** (ನಾ). ೧. ಅರಸರಲ್ಲಿ ಶ್ರೇಷ್ಠನಾದವನು ; ಸಾಮ್ರಾಟ ; ಚಕ್ರವರ್ತಿ : ಆ ಮುನ್ನಿನರಾಜಂ ಕರ್ಮಂಗಳಂ ಗಾಳಿಸಿದಂ ಈ ರಾಜರಾಜಂ ಷಟ್ಖಂಡಮಂಡಲಮಂ ಬಾಯ್ಕೇಳಿಸಿದಂ (ಆದಿಪು. ೬-೨೪ ವ) ; ರಾಜರಾಜಂ ನದೀತನೂಜನಂ ಮಾಣಿಸಿ . . . ನಿಜಾಗಮನವೃತ್ತಾಂತಮಂ ಸಮರಪರಿಚ್ಛೇದಮುಮನಱಿಪಿದೊಡೆ (ಗದಾಯು. ೩-೪೪ ವ). ೨. ಕುಬೇರ : "ಐಳಬಿಳಃ . . . ರಾಜರಾಜಃ, ಧನೇಃ ಪುಣ್ಯಜನೇಶ್ವರಃ– ಈ ೧೭ ಕುಬೇರನ ಪೆಸರ್" (ಹಣಾಯು. ೦೪-೭೮); ರಾಜರಾಜಸುಮಿತ್ರ ಭಾಸ್ಕರರಾಜ ಪಾವಕನೇತ್ರ ಸುಮನಸರಾಜಸಂಸ್ತುತಪಾದ (ಶಂಕರಾ. ೦೩-೯೫). ೧, ೨ : ಅರಿರಾಯಗಿರಿವಜ್ರದಂಡನಘವನಕಾಲಸರಣಿ . . . ರಾಜರಾಜಂ ಮದೀಶಂ (ಭಾವತಂ. ೩-೩೫). ೩. ಚಂದ್ರ. ೧, ೨, ೩ : ಅರಿಕಾಮುಧ್ವಂಸಿ ನಾಗವ್ರಜಮಯಕಟಕಂ ರಾಜರಾಜಪ್ರತಿಷ್ಠಾನಿರತಂ . . . ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ (ಚಗಂ. ೦-೩). [ಸಂ.]

**ರಾಜರ್ಷಿ** (ನಾ). = ರಾಜಋಷಿ : ಬ್ರಹ್ಮಋಷಿಯಾದಡೊಳಗು ನಿರ್ಮಳವಪ್ಪುದಯ್ಯ ನೀಂ ರಾಜರ್ಷಿ ಕೋಟಿಸದೆ ಘಟ್ಟಿಸದೆ ಕೆಡೆನುಡಿಯದೆ ನಿಲಲೆಂತು ಬಲ್ಲೆ (ಹಕಕಾ. ೨-೩೨) ; ರಾಜರ್ಷಿಯಾ ದೀರ್ಘದರ್ಶಿಯಾ ಸಮದರ್ಶಿ ತಾಂ . . . ಸಮಬುದ್ಧಿಯಿಂ ದರ್ಪದಿಂ ಪಾಲಿಸಿರ್ದನು ತನ್ನ ರಾಜ್ಯಮಂ (ಶ್ರೀರಾಮಾ. ೭-೦೭೪).
[ಸಂ.]

**ರಾಜಲೀಲೆ** (ನಾ). ೧. ಅರಸನ ವಿಲಾಸ : ಅಂತು ನಿಜರಾಜಲೀಲೆಯಂತೆ ಜಲಕ್ರೀಡಾದ ರಾಜಲೀಲೆಯಂ ಸವಯೋವಯಸ್ಸ ರಾಜಲೋಕಪರಿವೃತಂ . . . ಅವಲೋಕಿಸುತ್ತುಮಿರ್ಪಲ್ಲಿ (ಪುಷ್ಪಪು. ೦೩-೨೪ ವ). ೨. ಚಂದ್ರನ ವಿಲಾಸ ; ಬೆಳದಿಂಗಳು. ೧, ೨ : ಸಮುಚ್ಚ್ರಿತಾನೇಕಮೇಘಡಂಬರ ಚಾರುತಾವಳಂಬಿಯಾಗಿಯುಂ ಪ್ರಕಟೀಕೃತರಾಜಲೀಲೋದಯಮುಮಪ್ಪ (ಚಂದ್ರಪ್ರ. ೪-೭೨ ವ)
[ಸಂ. ರಾಜಲೀಲಾ]

**ರಾಜವಂಶ** (ನಾ). ೧. ಅರಸುಮನೆತನ ; ಅರಸುಕುಲ : ಆಂಧ್ರಭೃತ್ಯವೆಂಬ ರಾಜವಂಶವೊಂದು ಇತ್ತು (ದ್ರಾವಿ. ೦೨೩). ೨. ಶ್ರೇಷ್ಠವಾದ ಬಿದಿರು ; ಒಳ್ಳೆಯ ಬಿದಿರು. ೧, ೨ : ಜಿತಧಾತ್ರೀಚಕ್ರಚಕ್ರಾಧಿಪ ನೃಪವರಬಲ್ಲಾಳ ಕೇಳ್ ನಿನ್ನೊಳಾಂತುದ್ಧತವೀರಾರಾತಿಯೂಥಂ ವಿಗತವಿಭವಮಾಗಿರ್ದಡಂ ರೆಞ್ಚಿಕುಂ ವಿಶ್ರುತನಾನಾವಾಹಿನೀಸಂಕುಲಪರಿಗತ ಶೋಭಾನುಕೂಲ್ಯಂ ಸದಾಸೇವಿತರಾಜದ್ರಾಜವಂಶಂ ಸಕಲಕವಿನಿಕಾಯಸ್ವನಾತೀರ್ಣಕರ್ಣಂ (ಎಕ. VIII, ಸೊರಬ. ೦೪೦-೪ ; 1098); ಅತ್ಯುದ್ಧತರಾಜವಂಶವನಮಂ ನಿರ್ಮೂಲಿಸಲ್ ಪೋಪೆಂ (ಪುಷ್ಪಪು. ೫-೩).
[ಸಂ.]

**ರಾಜವಂಶೀಯ** (ನಾ). ಅರಸುವಂಶಕ್ಕೆ ಸೇರಿದ ವ್ಯಕ್ತಿ ; ಅರಸುಮನೆತನದಲ್ಲಿ ಹುಟ್ಟಿದವನು : ಪಲ್ಲವರು ಎಲ್ಲಾ ದೃಷ್ಟಿಯಿಂದಲೂ ದಕ್ಷಿಣಭಾರತದ ರಾಜವಂಶೀಯರೆಂಬುದರಲ್ಲಿ ಸಂಶಯ ಕಾಣದು (ಪೊಳಂಬ. ೦೩).
[ಸಂ.]

**ರಾಜವಂಶ್ಯ** (ನಾ). = ರಾಜವಂಶೀಯ : "ರಾಜಬೀಜೀ, ರಾಜವಂಶ್ಯಃ — ೨ ರಾಜವಂಶದಲ್ಲಿ ಹುಟ್ಟಿದವನ ಹೆಸರುಗಳು, ರಾಜಪೆಂಡಿ, ಅರಸುಪೆಂಡಿ" (ಸಿದ್ಧಾಂತಿ. ೨೦೨).
[ಸಂ.]

**ರಾಜವಟ** 'ರಾಜವಟ್ಟ' ನೋ.

**ರಾಜವಟ್ಟ**, ರಾಜವಟ (ನಾ). ರಾಜಕಾರ್ಯಗಳಲ್ಲಿ ಒಂದಾದ ಸಂಧಾನಕಾರ್ಯ ; ರಾಯಭಾರ : ಕಟ್ಟಾಣಿಮುತ್ತ ಸೇರಿಪೊಲು ದೇಸಿಯ ರಾಜವಟ್ಟದ ಸವಿನುಡಿಗಳನ್ನು ಸೃಷ್ಟೀಶ್ವರಗೆ ಬಿನ್ನೈಸುತ (ಕಂಠೀ. ೯-೩೭); ಆತನ ಸಮಿಪಕ್ಕೆ ಕುಲೀನನಾಗಿಯೂ . . . ಪರಿಶುದ್ಧನಾಗಿಯೂ ಇರುವ ಒಬ್ಬನನ್ನು ರಾಜವಟ್ಟಕ್ಕೆ ಕಳುಹಿಸಬೇಕೆಂದು ನುಡಿಯಲು (ಕೃವಾಕಾ. ೭). **ರಾಜವಟ** : ಕಣ್ಣೂರ ಬೀಬಿ ಕಡೆ ನಾಲಕ್ಕುಸಾವಿರ ಮಾಪಿಳ್ಳೆರು ಸಹ . . . ರಾಜವಟ ನಡೆಸಿದಲ್ಲಿ (ರಾಜೇಂದ್ರ. ೬೩). [<ಸಂ. ರಾಜವೃತ್ತ]

**ರಾಜವತಿ** (ನಾ). ಹೆಸರಿಗೆ ಮಾತ್ರ ರಾಜನನ್ನು ಪಡೆದಿರುವ ಭೂಮಿ : ರಾಜವತಿಯಕ್ಕುಮಲ್ಲದೆ ರಾಜನ್ವತಿಯಾಗದಲೆ ಧರೆ ಮತ್ತೂರ್ವಂ ತೇಜಸ್ವಿ ಪೊಡರ್ಪೊಡದಱಿಂ ರಾಜನ್ವತಿ ಮಾಡು ಧರೆಯಂ ಧರಣೀಪತೀ (ಆದಿಪು. ೦೪-೨೦): ರಾಜವತಿಯಾಯ್ತು ರಿಪುವಹಿ ರಾಜನ್ವತಿಯಾಯ್ತು ತನ್ನ ಧರೆ (ಶಾಂತಿಪು. ೦೦-೦೦೨). 'ರಾಜನ್ವತಿ' ಪರಾ. [ಸಂ. ರಾಜವತೀ]

**ರಾಜವಶ್ಯ** (ನಾ). ೧. ಒಂದು ಬಗೆಯ ವಶೀಕರಣವಿದ್ಯೆ; (ಮಂತ್ರದಿಂದ) ಅರಸನನ್ನು ವಶಪಡಿಸಿಕೊಳ್ಳುವಿಕೆ ; ಅರಸನನ್ನು ಅಧೀನಮಾಡಿಕೊಳ್ಳುವಿಕೆ: (ಕ). ೩. (ಮಂತ್ರಕ್ಕೆ) ದೊರೆಯು ವಶವಾಗುವಿಕೆ ; ಅರಸನು ಅಧೀನವಾಗುವಿಕೆ : ಈ ಮಂತ್ರದಿಂ ಉತ್ತರಾಣಿಯ ಕಡ್ಡಿಯ ೨೧ ಸಾರಿ ಮಂತ್ರಿಸಿ ದಂತಧಾವನಮಾಡಿಕೊಳ್ಳೆ ರಾಜವಶ್ಯ (ವಿಶ್ವಪ್ರ. ೨೦೦); ಕುಂಕುಮ ಶ್ರೀಗಂಧ. ಕರ್ಪೂರ ಇವಂ ಹಸುವಿನ ಹಾಲಿನಲ್ಲಿ ತೇದು ತಿಲಕವಿಡೆ ರಾಜವಶ್ಯ (ವಿಶ್ವಪ್ರ. ೨೦೩).
[ಸಂ.]

**ರಾಜವಸು** (ನಾ). ಚಂದ್ರನ ಬೆಳಕು,–ಕಾಂತಿ : ನಿಜಕರದಿಂದೆ ರಾಜವಸುವೆಲ್ಲಮನೊಯ್ಯನೆ ಕಳ್ದು ನೀಲನೀರಜನಿಯ ಬಾಯ ಮುದ್ರಿಸಿ ಭಿಸುಣ್ಣಿಡೆದ್ದಪ್ಪಳಿಸುತ್ತೆ (ರಾಜಶೇ. ೨೦-೨೦).
[ಸಂ.]

**ರಾಜವಾಡೆ** (ನಾ). ಅರಸರು ಶ್ರೀಮಂತರು ವಾಸಿಸುವ ಭವ್ಯವಾದ ಗೃಹ; ಅರಮನೆ; ಪ್ರಾಸಾದ: P ವಿಶೇಷವಾಗಿ ಮರಾಠಿಯ ಪೇಶ್ವೆಗಳು ವಾಸಿಸುತ್ತಿದ್ದ ಭವನಗಳಿಗೆ ಈ ಹೆಸರು ಬಳಕೆಯಾಗಿದೆ : ರಾಜವಾಡೆಯವರು ಮಾತ್ರ ಉಡಲು ಯೋಗ್ಯವಾದ ಚೀನಾಂಬರವನ್ನು ನೋಡುತ್ತ ಮೇಲಕ್ಕೆತ್ತಿದಾಗ ಕೆಳಗೆ ಒಂದು ಓಲೆ ಕಂಡಿತು (ಶಾಂತಲಾ. ೨೬); ಒಳಭಾಗವು ರಾಜವಾಡೆಯಂತೆ ಒಳ್ಳೇ ಭವ್ಯವಾಗಿದ್ದಿತು (ಅಂಬಿಕ. ೨೮).
ರಾಜ + ವಾಡೆ₂ (<ವಾಡ)]

**ರಾಜವಾಹನ** (ನಾ). ಅರಸನ ಕುದುರೆ; ಪಟ್ಟದ ಕುದುರೆ : "ಪಂಚಪಲ್ಲವದ ವಾಜಿಯೆ ರಾಜವಾಹನಂ" (ಕಬ್ಬಿಗಂ. ೪೨).
[ಸಂ.]

**ರಾಜವಾಹ್ಯ** (ನಾ). ಅರಸನ ಆನೆ ; ಪಟ್ಟದ ಆನೆ: "ಔಪವಾಹ್ಯಃ, ರಾಜವಾಹ್ಯಃ –ಈ ೨ ಅರಸರೇಱುವ ಆನೆ" (ಹಲಾಯು. ೩೯-೭೦).
[ಸಂ.]

**ರಾಜವಾಳೆ,** ರಾಜಬಾಳೆ (ನಾ). ಒಂದು ಬಗೆಯ ಉತ್ತಮಜಾತಿಯ ಬಾಳೆ : ರಸವಾಳ ಪುಟವಾಳೆ ರಾಜವಾಳೆ ಸಕ್ಕರೆಯೆಸೆವಾ ದೇವಾಳೆ . . . ಮೆಱೆದುವರ್ತಿಯಲಿ (ಕಂಪಾ. ೩-೯೭). **ರಾಜಬಾಳೆ :** ಬಾಳೆಯಲ್ಲಿ ಅನೇಕ ಜಾತಿಗಳಿವೆ. ರಸಬಾಳೆ, ಚಂದ್ರಬಾಳೆ, ರಾಜಬಾಳೆ (ಕೃಷು. ೩೭). [ರಾಜ+ಬಾಳೆ (<ಬಾೞೆ)]

**ರಾಜವಿಡ್ವರ** (ನಾ). ಅರಸನಿಂದ ಪ್ರಜೆಗಳಿಗೆ ಉಂಟಾಗುವ ಉಪದ್ರವ, ಹಿಂಸೆ: (*). [ರಾಜ + ವಿಡ್ವರ]

**ರಾಜವಿದ್ಯೆ** (ನಾ). ಅರಸನಿಗೆ ಉಚಿತವಾದ ವಿದ್ಯೆ : ನೀನಾದಿರಾಜನ್ಯ ನಿನಗಾ ನಾಲ್ಕುಂ ರಾಜವಿದ್ಯೆ ಪುಟ್ಟಿದುವು (ಆದಿಪು. ೧೪-೨೦); ಅಮಲಸ್ವಭಾವನೊಳ್ ನಿತ್ಯಮಹತ್ವನೊಳತಳುಳ್ಳುಜವಿದ್ಯೆ [ಶಬ್ದಾಂ. ವ್ಯ]ಗಳನಿತುಂ ಕ್ರಮದೆ ಸಮನಿಸಿದುವಾತನೊಳಮಳಿನತಾರಾಳಿ ಗಗನದೊಳ್ ನೆಲಸುವವೊಲ್ (ಕಂದ್ರಪ್ರ. ೯-೩). [ಸಂ. ರಾಜವಿದ್ಯಾ]

**ರಾಜವೀಥಿ** (ನಾ). ದೊಡ್ಡ ರಸ್ತೆ; ರಾಜಮಾರ್ಗ: ವಿಶಾಲವೂ ಸುಂದರವೂ ಆದ ರಾಜವೀಥಿಗಳಲ್ಲಿ . . . ಆ ಬಂಡಿ ಮೆರೆಯುಟ್ಟಳ ಗೃಹಾಭಿಮುಖವಾಗಿ ಸಾಗಿತ್ತು (ಶುಕಸು. ೩೩೭). [ಸಂ.]

**ರಾಜವೀಧಿ** (ನಾ). = ರಾಜವೀಥಿ : ಅನೇಕವಿದ್ಯಾಧರರಾಜರಾಜದ್ರಾಜವೀಧೀವಿಸ್ತೀರ್ಣಮುಮಾಗಿ (ಆದಿಪು. ೦-೭೦ ವ). [ರಾಜ + ವೀಧಿ]

**ರಾಜವೃಕ್ಷ** (ನಾ). ಒಂದು ಬಗೆಯ ಸಸ್ಯ ; ಕಕ್ಕೆಯ ಗಿಡ : "ಆರಗ್ವಧಃ . . ರಾಜವೃಕ್ಷಃ . . . ಕೃತಮಾಲಃ, ಸುವರ್ಣಕಃ ಆರ ಕಕ್ಕೇಗಿಡದ ಹೆಸರು" (ನಿಘಂಟು. ೦೦೭); ರಾಜವೃಕ್ಷದ ಸಮೀಪದೊಳಗೆರಲೆಗಾಬಿಂ ತುಳಿದ ನೆಲದ ಠಾವು ಇದೆ (ಜಾತಕಂ. ೩-೦೦). [ಸಂ.]

**ರಾಜವೃತ್ತ** (ನಾ). ೧. ಅರಸನ ನಡವಳಿಕೆ, ವ್ಯವಹಾರ : ನ್ಯಾಯಾರ್ಜಿತವಿತ್ತಂ ಧರ್ಮಾಯತ್ತಮೆನಿಪ್ಪ ರಾಜವೃತ್ತಂ ತನಗೇಕಾಯತ್ತಮಾಗೆ ಧರೆಯಂ ಜೀಯೆನಿಸಿದನಿಂತುದಾತ್ತಚರಿತರುಮೊಳರೇ (ಶಾಂತಿಪು. ೨-೭೦). ೨. ಚಂದ್ರಬಿಂಬದ (ವೃದ್ಧಿ, ಕ್ಷಯಗಳ) ಸ್ವಭಾವ. ೧, ೨ : ವಸುವಂ ಸನ್ಮಾರ್ಗದೊಳಾರ್ಜಿಸುವಂ ಪರ್ಧಿಸುವನೆಯ್ದೆ ರಕ್ಷಿಸದೀವಂ ನಿಸದಂ ವಿಬುಧರ್ಗದು ಭಾವಿಸೆ ಚಿತ್ರಂ ರಾಜವೃತ್ತಮಾಯ್ತುನ್ಮೂನಂ (ಪುಷ್ಪಪು. ೩-೯). [ಸಂ.]

**ರಾಜವೃಷಭ** (ನಾ). ಅರಸರಲ್ಲಿ ಶ್ರೇಷ್ಠನಾದವನು : ಉತ್ತಮನಾದ ದೊರೆ : ಮುನಿವೃಷಭಂಗೆ ಕೇವಲಜ್ಞಾನೋತ್ಪತ್ತಿಯಾದುದೀ ರಾಜವೃಷಭಂಗೆ ಸಕಲಸಾಮ್ರಾಜ್ಯಸಂಪತ್ತಿಯಾದುದು (ಆದಿಪು. ೬-೨೯ ವ). [ಸಂ.]

**ರಾಜವೈದ್ಯ** (ನಾ). ೧. ಅರಸನಿಗೆ ಚಿಕಿತ್ಸೆಮಾಡುವವನು : ಅರಮನೆಯ ವೈದ್ಯ : ರಾಜವೈದ್ಯನು ತಲೆತಗ್ಗಿಸಿ ನಿಂತಿದ್ದನು (ಪುಸಕ. ೦೮). ೨. ಅತ್ಯುತ್ತಮವಾದ ವೈದ್ಯವೃತ್ತಿ : (*). [ಸಂ.]

**ರಾಜವೊಟಲ್** (ನಾ). ಒಂದು ಊರಿನ ಹೆಸರು : ಮಾಗಟಿನಾಡ ರಾಜವೊಟಲ ಬೀಡಿನೊಳ್ ಸುಖಸಂಕಥಾವಿನೋದದೊಳ್ ಪ್ರಿಥುವೀರಾಜ್ಯಂಗೆಯ್ಯುತ್ತುಮಿರೆ (ಎಕ. IV, ನಾಗಮಂ. ೩೦-೭; ೧೧೭೨). [ರಾಜ + ಪೊಟಲ್]

**ರಾಜಶಾಸನ** (ನಾ). ೧. ಅರಸನ ಅಪ್ಪಣೆ, ಆಜ್ಞೆ : ಬಾದಶಹರವರು ನಗರಕ್ಕೆ ದಯಮಾಡಿಸಿದ ಮೊಟ್ಟಮೊದಲನೆಯ ರಾಜಶಾಸನವು ಒಬ್ಬ ಮುಸಲ್ಮಾನ್‌ಸರದಾರನ ಪದವಿಯಿಂಬುದು ದೊಡ್ಡ ಅಪಖ್ಯಾತಿ (ದೌಲತ್. ೭೭). ೨. ರಾಜ್ಯದ ಆಡಳಿತ, ವ್ಯವಹಾರ : 'ರಾಜಶಾಸನಪಟು' ಪದ. [ಸಂ.]

**ರಾಜಶಾಸನಪಟು** (ನಾ). ರಾಜ್ಯದ ಆಡಳಿತ ಅಥವಾ ವ್ಯವಹಾರವನ್ನು ಚೆನ್ನಾಗಿ ತಿಳಿದುಕೊಂಡವನು ; ರಾಜನೀತಿಜ್ಞ : ಆಕೆ ಅನೇಕಾನೇಕ ನಾಮಾಂಕಿತರಾಜನೀತಿಜ್ಞರನ್ನೂ ಮುತ್ಸದ್ದಿಗಳನ್ನೂ ರಾಜಶಾಸನಪಟುಗಳನ್ನೂ ಹೆತ್ತಿದ್ದಾಳೆ (ಪಂಪಾಜೋ. ೦೬೯). [ಸಂ.]

**ರಾಜಶುಕ** (ನಾ). ಅರಗಿಳಿ ; ರಾಜಕೀರ : ವಿಡಿಯಂ ಕರ್ಪೂರಕಿ ನಲಿದಾಡುವ ರಾಜಶುಕಂ . . . ಇಲ್ಲದುದಿಲ್ಲ ನಂದನಂ (ಜಗ. ೨-೧೦); ಪರ ಕಂಠೀರವಮಧ್ಯೆ . . . ಸುಕೇಶಿ ರಾಜಶುಕಸಲ್ಲಾಪಾಂಗಶೃಂಗಾರೆ (ಹರಿ.ಕ. ೨-೭೨). [ಸಂ.]

**ರಾಜಶೂನ್ಯ** (ನಾ). ೧. (ರಾಜ್ಯದಲ್ಲಿ) ಅರಸನಿಲ್ಲದಿರುವುದು; ಅರಾಜಕತೆ. ೨. (ಆಕಾಶದಲ್ಲಿ) ಚಂದ್ರನಿಲ್ಲದಿರುವುದು ; ಕಗ್ಗತ್ತಲು. ೧, ೨ : ಅದು ಸಲೆ ರಾಜಶೂನ್ಯಮುರುರಾಜವಿಭಾಸಿಯೆ ನಾಂ ದ್ವಿಜಿಹ್ವಸಂಪದಮದು ಸಜ್ಜನಕ್ಕೆ ಶರಣಾಂ . . . ಎನೆ ಭೋಗವತೀಪುರಮನ್ನನೆಂತಃ ಪೋಲ್ವುದು ಚಿರಮೆಂದಧಃಕರಿಸುವಂತಿದೆ ಮೇಲೆನಿಸಿರ್ಪುದಾ ಪುರಂ . (ಪುಷ್ಪಪು. ೯-೩೨). [ಸಂ.]

**ರಾಜಶೂಲೆ** (ನಾ). [ಅಶ್ವಶಾ] ಕುದುರೆಗೆ ಬರುವ ಒಂದು ಬಗೆಯ ತೀವ್ರತರವಾದ ರೋಗ : ತೋರಿದುವಾಗಿರೆ ನಡುಗಳ್ ನೇರಿದು ವಪ್ಪೆರಡು ರೇಖೆಗಳ್ ತಾಂ ಮೊದಲಾಕಾರದೊಳೆರೆ ನವವರುಷಪ್ರಾರಂಭದೆ ವಾಜಿ ರಾಜಶೂಲೆಗೆ ಬೀಡುಂ (ಅಶ್ವಶಾ. ೩-೦೨). [ಸಂ. ರಾಜಶೂಲಾ]

**ರಾಜಶೇಖರ** (ನಾ). ೧. ಅರಸರಲ್ಲಿ ಶ್ರೇಷ್ಠನಾದವನು, ಮುಖ್ಯನಾದವನು : ನಿಯೋಗಿಸಮಸ್ತರನು ಬೀಳ್ಕೊಟ್ಟು ವಿನಿಯೋಗಸ್ತರೋಲಗದಲ್ಲಿ ಎಸೆದನು ರಾಜಶೇಖರನು (ಜಕ್ಕನ್ಯ. ೬೦-೨೭). ೨. (ಮುಡಿಯಲ್ಲಿ) ಚಂದ್ರನನ್ನು ಧರಿಸಿದವನು ; ಸೋಮಶೇಖರ ; ಶಿವ : ರಾಜಶೇಖರ ದಿವಿಜವಂದಿತಪಾದ . . . ಭೋಗಿರಾಜಭೂಷಣ . . . ಸಲಹೆಂದು ಹರಿ ಪೊಗಳ್ದನು (ಕಂಪ. ೦೭-೩೦) ; ಆ ಸಮಯದೊಳಾ ರಾಜಶೇಖರಂ ರಾಜಶೇಖರಪೂಜೆಗೆಯ್ದು ಯಥೋಚಿತಪ್ರಾತರಾಚಾರಮಂ ನಿರ್ವರ್ತಿಸಿ (ರಾಜಶೇ. ೬-೬೦ ವ). [ಸಂ.]

**ರಾಜಶ್ರಾವಿತ** (ನಾ). ಅರಸನಿಗೆ ತಿಳಿಸಿದುದು ; ದೊರೆಯ ಗಮನಕ್ಕೆ ತಂದುದು : ಅಮೋಘವರ್ಷದೇವರೊಳ್ ರಾಜಶ್ರಾವಿತಂ ಮಾಡಿ ತದನುಮತದಿಂದಿರ್ಪ್ಪೊರುಂ (ಎಇ. VI, ೦೦೯-೨೯ ; ೮೬೬); ರಾಜಶ್ರಾವಿತ[ಂಗಳ್ ವೈ] ಶಾಖಮಾಸ ಶುಕ್ಲಪಕ್ಷಪುಣ್ಣಮೆ ದಿನ (ಸೌಇಇ. XI-i, ೦೫-೯ ; ೮೯೬). [ಸಂ.]

**ರಾಜಶ್ರೀ** (ನಾ). ೧. ಅರಸನ ಐಶ್ವರ್ಯ. ೨. = ರಾಜಮಾನ್ಯ ೨ : ಕನ್ನಡದಲ್ಲಿ . . . ರಾಜಮಾನ್ಯ, ರಾಜಶ್ರೀ . . . ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯವುಂಟು (ಪುಂಬರು. ೪-೮೪). [ಸಂ.]

**ರಾಜಶ್ರೇಷ್ಠಿ** (ನಾ). ಪ್ರಧಾನನಾದ ಸೆಟ್ಟಿ ; ವರ್ತಕಶ್ರೇಣಿಯ ಮುಖಂಡ : ಆ ಪೊೞಲೊಳ್ ರಾಜಶ್ರೇಷ್ಠಿ ಸಾಗರಸೇನಂಗಮಮೃತಮತಿಗಂ ಪುಟ್ಟಿದ ದತ್ತನುಂ ನಂದಿಷೇಣನುಂ ಎಂಬರ್ . . . ಬರ್ಪೆಡೆಯೊಳ್ (ಶಾಂತಿಪು. ೯-೯೦ ವ) ; ಸೆಟ್ಟಿವಟ್ಟಮಂ ಕಟ್ಟಿಸಿಕೊಂಡಲ್ಲಿಯ ರಾಜಶ್ರೇಷ್ಠಿಯಾಗಿ ಸುಖದೊಳಿರ್ಪನ್ನೆಗಂ (ಜೀವಸಂ. ೫೯-೦೬). [ಸಂ. ರಾಜಶ್ರೇಷ್ಠಿನ್]

**ರಾಜಸ** (ಗು). ೧. ರಜೋಗುಣಕ್ಕೆ ಸಂಬಂಧಿಸಿದ ; ಕಾಮಕ್ರೋಧಗಳಿಂದ ಕೂಡಿದ : ಅರಸ ಕೇಳ್ಳೆ ರಾಜಸಾಂತಃಕರಣಮದು ಕಾಮ್ಯಾರ್ಥಕಸಿದ್ಧಿಸ್ಫುರಣೆಗೋಸುಗ ತಪವಲೇ ರಾಜ್ಯಾಭಿಲಾಷೆಯುಳಿ (ಉಷಾಭಾ. ೩-೯) ; ಇಂದ್ರಿಯಗಳಿಗೆ ಯಾವುದು ಉಪಾದಾನಕಾರಣವೋ ಅದು ಸಾತ್ವಿಕಾಹಂಕಾರವೆಂದೂ . . . ಈ ಯೆರಡಕ್ಕೂ ಯಾವುದು ಅನುಗ್ರಾಹಕವೋ ಅದು ರಾಜಸಾಹಂಕಾರವೆಂದೂ ತಿಳಿಯಬಹುದು (ತತ್ತ್ವಕು. ೬). (ನಾ). ೨. ಕಾಮಕ್ರೋಧಗಳಿಂದ ಕೂಡಿದ ಗುಣ ; ರಜೋಗುಣ : ರಾಜಸ ಸಾತ್ವಿಕಮೆಂಬೀ ರಾಜಗುಣಂ ವಿಷವಿಷಾವಹಾರ್ರಂಗಳವೊಲ್ ರಾಜಿಸೆ ವಿಷಮೋರಗನಂತೀ ಜಗತೀತಳಮನಾಂತನವನೀಕಾಂತಂ (ಕುಶ್ಲಕ್ಷ. ೬-೭) ; ಮನಸ್ಸನ್ನು ರಾಜಸಕ್ಕೆ ಒಪ್ಪಿಸಿ ಅವರು ಈ ಮೂಲಕ ನಿನ್ನನ್ನು ಶಿಕ್ಷಿಸುವುದಕ್ಕೆ

ಹೊರಟಿದ್ದಾರೆ (ದೂರಿಸ. ೨೧೪). ೩. ರಜೋಗುಣವುಳ್ಳ ವ್ಯಕ್ತಿ : ಜೀವರಾಶಿಗಳ ದೇವಮನುಷ್ಯಾದಿ ಭೇದಗಳಿಂದ ಸಾತ್ವಿಕರು, ರಾಜಸರು, ತಾಮಸರೆಂಬ ಮೂರುವಿಧರಾಗಿ ಭಾಗಿಸಲ್ಪಟ್ಟಿರುವರು (ಹಸಾರ. ೧-೪ ವಿಶೇಷಾರ್ಥ). [ಸಂ.]

**ರಾಜಸದನ** (ನಾ). ಅರಸನ ನಿವಾಸ ; ಅರಮನೆ : "ಸೌಧಃ, ರಾಜಸದನಂ — ೨ ರಾಜಗೃಹದ ಹೆಸರು. ಅರಮನೆ, ರಾಜಯೋಗ್ಯವಾದ ಉಪ್ಪರಿಗೆ" (ಸಿದ್ಧಾಂತ. ೦೦೦); ರಾಜಸದನಸಂಸ್ಥೆಯಾಗಿಯುಂ ಶೂನ್ಯಾರಣ್ಯಸಂಸ್ಥೆಯಂತೆಯುಂ . . . ಇರ್ಪನೆಗಂ (ಚಂದ್ರಪ್ರ. ೩-೩೦ ವ) ; ರಾಜಸದನಕ್ಕೆ ಹೋಗುವೆನು (ಶಾಕುಂತ. ೬೬-೦೭). [ಸಂ.]

**ರಾಜಸಬುದ್ಧಿ** (ನಾ). ೧. ರಜೋಗುಣದಿಂದ ಕೂಡಿದ ಬುದ್ಧಿ. ೨. ರಜೋಗುಣದಿಂದ ಕೂಡಿದ ಬುದ್ಧಿಯುಳ್ಳವನು : ಎಮಗೆ ಜಯವೇತಹುದು ರಾಜ್ಯಭ್ರುವೆಯ ರಾಜಸಬುದ್ಧಿಗಳು ವಿಕ್ರಮವಿಹೀನರು ನಾವು (ಕುಮಾ.ಭಾ. ೭-೨೦). [ಸಂ.]

**ರಾಜಸಭೆ** (ನಾ). ದೊರೆಯ ಒಡ್ಡೋಲಗ ; ಅರಸನ ಆಸ್ಥಾನ : "ಆಸ್ಥಾನವೆಂಬುದು ರಾಜಸಭೆ" (ಹಲಾಯು. ೦೨೬-೯೩) ; ಅಂದು ಕೌರವನಾಯಿ ಸಭೆಯಲಿ ತಂದು ತೋಱಿದನುನ್ನತಿಯ ಬಳಿಕಿಂದು ಕೀಚಕ ಕುನ್ನಿ ಯೊದೆದನು ರಾಜಸಭೆಯೊಳಗೆ (ಕುಮಾ.ವಿ. ೩-೯೭). [ಸಂ. ರಾಜಸಭಾ]

**ರಾಜಸರ್ಪ** (ನಾ). = ರಾಜಫಣಿ : "ರಾಜಸರ್ಪಃ, ಸರ್ಪಭುಕ್ — ಈ ಎರಡು ಅರವಾ(ಹಾ)ವು" (ಹಲಾಯು. ೦೦೩-೨೦). [ಸಂ.]

**ರಾಜಸರ್ಷಪ** (ನಾ). ಕರಿಯ ಸಾಸುವೆ : "ಆಸುರೀ, ರಾಜಿಕಾ, ರಾಜಸರ್ಷಪಃ — ಈ ಮೂಱು ರಾಯಸಾಸುವೆ" (ಹಲಾಯು. ೯೩-೯೨೭). [ಸಂ.]

**ರಾಜಸಿಕ** (ಗು). ೧. ರಜೋಗುಣದಿಂದ ಕೂಡಿದ : ನಮಗೆ ಚಿರಪರಿಚಿತವಾದ ಪ್ರಿಯವಾದ ಈ ರಾಜಸಿಕತುಮುಲಗಳ ನಡುವೆ ನಾವು ಮತ್ತೆ ಮೊದಲಿನಂತಾಗುತ್ತೇವೆ (ಶಂಕೀ. ೨). (ನಾ). ೨. ರಜೋಗುಣದಿಂದ ಕೂಡಿದುದು : ಎಲ್ಲ ವ್ಯಾಪಾರಗಳೂ ಈ ತ್ರಿಗುಣಕ್ರಿಯೆಗಳೇ. ಅವರಲ್ಲಿ ಹಲವು ಪ್ರಧಾನವಾಗಿ ಸಾತ್ವಿಕ, ಮತ್ತೆ ಹಲವು ಪ್ರಧಾನವಾಗಿ ರಾಜಸಿಕ ಅಥವಾ ತಾಮಸಿಕ (ಶ್ರೀಂದಸ. ೧೦೦). [ಸಂ.]

**ರಾಜಸುತ** (ನಾ). = ರಾಜಕುಮಾರ : ರಾಜಸುತಂ ಪಸಿದೆಂ ನೀರಡಿಸಿದೆ ನೆನಗಿವಲ್ಲದಲ್ಲೆನ್ನಂ ಪಾರ್ಶ್ವಸಂ ಪಲವಂ (ಆದಿಪು. ೩-೬೮); ಇದಿರ್ಗೊಂಡು ಶ್ಲಾಘಿಸುತಾ ಭೂಪ ತನ್ನ ಪುರಕೆ ತಂದನಾ ಘನೋಜ್ಜ್ವಲರಾಜಸುತರ (ಭರತ. ೩೩-೪೪). [ಸಂ.]

**ರಾಜಸುತೆ** (ನಾ). = ರಾಜಕುಮಾರಿ : ರಾಜಾಂತರದಿಂದೆ ರಾಜಸುತೆಯುಂ ನಯದಿಂದವಳುಯ್ವಳ್ (ಶಂಕರಾ. ೩-೩೭). [ಸಂ. ರಾಜಸುತಾ]

**ರಾಜಸೂಯ** (ನಾ). ಚಕ್ರವರ್ತಿಯು ಮಾಡುವ ಒಂದು ಬಗೆಯ ಯಾಗ : ೪ ವಾಜಪೇಯಯಜ್ಞವನ್ನು ಮಾಡಿಲ್ಲದ ರಾಜನಿಗೆ ಮಾತ್ರ ಈ ಯಜ್ಞ ಮಾಡುವ ಅಧಿಕಾರವುಂಟು. ಈ ಯಜ್ಞ ಮಾಡುವ ರಾಜನು ಸಾಮ್ರಾಟನಾಗುತ್ತಾನೆ : ಗಾಳುಗೊರವಂ ತಗುಳ್ಚಿ ಪಳಾಳಮನೇನೊಂದನಪ್ಪೊಡಂ ಗಟಪಿದೊಡಾ ಬೇಳು ನುಡಿಗೇಳ್ದು ಕಮ್ಮನೆ ಬೇಳಲ್ ನಿಮಗುಂತು ರಾಜಸೂಯಂ ಮೊಗ್ಗೇ (ಶಂಕರಾ. ೬-೨೪) ; ಸ್ವರ್ಗಾಪವರ್ಗೈಕಕಾರಣವಪ್ಪಗ್ಗದ ರಾಜಸೂಯ ಮನೊಡರ್ಚಿಂ (ಜಗದ. ೧೭-೧೦) ; ವಿರಿಂಚಿಪ್ರಭವನನುಮತದಿಂದ ಧರಣೀವಿಭು ಮಹಾಕ್ರತು ರಾಜಸೂಯವನೊಲಿದು ಕೈಕೊಂಡ (ಕುಮಾ.ಸ. ೧ ಸೂಚನೆ). 'ಅಶ್ವಮೇಧ' ಪರಾ. [ಸಂ.]

**ರಾಜಸೇವೆ** (ನಾ). ಅರಸನ ಸೇವೆ,—ಊಳಿಗ :ಸೆಣಸಿನಲಿ ಸಮದರ್ಶಿಗಳು ಧಾರುಣಿಯ ಪತಿಗಳು ರಾಜಸೇವಾಪ್ರಣಯಮಿಮಾಂಸಾದಿ ಮೂಢರು ನಮ್ಮ ಭಟರೆಂದ (ಕುಮಾ.ಭೀ. ೭-೦೦). [ಸಂ. ರಾಜಸೇವಾ]

**ರಾಜಸ್ವ** (ನಾ). ೧. ಅರಸನ ಆಸ್ತಿ. ೨. ರಾಜ್ಯದ ಹುಟ್ಟುವಳಿ. — ಆದಾಯ : ಸಂಘಕ್ಕೂ ರಾಜ್ಯಗಳಿಗೂ ರಾಜಸ್ವಗಳ ಹಂಚಿಕೆ (ಕಾರಾನ. ೦೩೨). [ಸಂ.]

**ರಾಜಸ್ವರ** (ನಾ). [ಸಂಗೀತ] ಒಂದು ರಾಗದ ಮುಖ್ಯವಾದ ಸ್ವರ; ಜೀವಸ್ವರ : ಒಂದು ರಾಗದ ಸ್ವರೂಪ ಪ್ರತ್ಯೇಕತೆ ಎತ್ತಿ ತೋರಲು ಯಾವ ಸ್ವರ ಪದೇಪದೇ ಉಪಯೋಗವಾಗುವುದೋ ಆ ಸ್ವರ, ವಾದಿಸ್ವರ . . . ವಾದಿಸ್ವರಗಳನ್ನು ರಾಜಸ್ವರಗಳೆಂದೂ ಸಂವಾದಿಸ್ವರಗಳನ್ನು ಮಂತ್ರಿಸ್ವರಗಳೆಂದೂ . . . ಕರೆಯುವ ವಾಡಿಕೆ (ಸಂಗೀತಂ. ೨೦). [ಸಂ.]

**ರಾಜಹಂಸ** (ನಾ). ೧. = ರಾಜಮರಾಲ : "ರಾಜಹಂಸಃ . . . ಕೆಂಪಾದ ಕಾಲುಗಳೂ ಮೂಗೂ ಉಳ್ಳ ಬಿಳೀಹಂಸೆ, ಅರಸಂಚೆ" (ಸಿದ್ಧಾಂತ. ೧೬೦) ; ಕುರುಕುಳಸರೋರಾಜಹಂಸನಲ್ಲಿಯ ರಾಜಹಂಸಿಗಳುಮಂ . . ಅತಿಕುತೂಹಲಂಬೆರಸು ನೋಡಿ (ಗದಾಯು. ೬-೦೩ ವ) ; ಮಹೋದ್ಧತರಾಜಹಂಸತೇಜದಿನೆಸೆದತ್ತು ರಾಜ್ಯವಿಭವಂ ಜಳದಾಗಮಚಕ್ರವರ್ತಿಯಾ (ಜಗದ. ೪-೩೭). ೨. ಅರಸರಲ್ಲಿ ಶ್ರೇಷ್ಠನಾದವನು ; ನೃಪೋತ್ತಮ : ಜಱಯನೆ ಜಱೆ ಹಂಸೀಕುಳಮುಱದು ಸರೋವರದುನದಟ ಫುಟಲೊಳ್ ನಲವಿಂ ಸುಱಯಲ್ಕೆ ತಳರ್ದ ಹಂಸನನಿಱಪಿದನಾ ರಾಜಹಂಸನಬಳಾಳಿಯುತಂ (ಚಂದ್ರಪ್ರ. ೭-೦೯೭). ೩. ಸೂರ್ಯ. ೪. ಚಂದ್ರ. ೧. ೩. ೪ : ನಾರದನ ತೆಱದೆ ಸರದಿಂ ತಾರಾಪಥದಂತೆ ರಾಜಹಂಸಾನ್ವಿತದಿಂ ಕ್ಷೀರಾಬ್ಧಿ ಶಯನಸುರದ್ವಪೊಲಾರವಮೆಯಿಂ ತುಱುಗಿ ಪೊಱವೊಲಲ್ ಸಾ(ಸೊ)ಗಯಿಸುಗುಂ (ಎಕ. XIV, ೨೬೦–೧೦ ; 1181). ೧. ೨. ೩. ೪ : ಜನನುತರಾಜಹಂಸನಯನಂ ಕಮಳಾವಸಥಂ ಕಳಾನಿಕೇತನನೆನಿಸಿರ್ದ . . . ಲೋಕಹಿತನೊಲ್ದು ಚತುರ್ಮುಖನೀಗೆ ರಾಗಮಂ (ಜಗದ. ೧-೨). ೨.೩.೪ : ಉರ್ವಿಯಂತೆ ಸಭದಂತವಲಂಬಿತರಾಜಹಂಸವಾಮ್ರಾವಳಿಯಂತೆ ಕಾಮಿಜನದಂತೆ ಸಮುತ್ಕಳಿಕಾಕುಳಂ ಕೊಳಂ (ಪುಷ್ಪ. ೨-೩೩). [ಸಂ.]

**ರಾಜಹಂಸಿ** (ನಾ). ಶ್ರೇಷ್ಠವಾದ ಹೆಣ್ಣುಹಂಸಪಕ್ಷಿ ; ಹೆಣ್ಣಂಚೆ : ಪರಮಜಿನಜನನಿಗೊರ್ವಳ್ ಸುರವಧು ಕೊಡೆವಿಡಿದು ನಳಿನಿಯೊಡವೆಳೆದು ರಜಂಬೊರೆದು ಕೊಡೆಯೆಲೆಯ ಕೆಲಗಿರ್ದ ರಾಜಹಂಸಿಯ ವಿಳಾಸಮಂ ನೆನೆಯಿಸಿದಳ್ (ಶಾಂತಿಪು. ೯-೦೭೮) ; ಕುರುಕುಳಸರೋರಾಜಹಂಸನಲ್ಲಿಯ ರಾಜಹಂಸಿಗಳುಮಂ . . . ಅತಿಕುತೂಹಲಂಬೆರಸು ನೋಡಿ (ಗದಾಯು. ೬-೦೩ ವ). [ಸಂ. ರಾಜಹಂಸೀ]

**ರಾಜಹಂಸೆ** (ನಾ). = ರಾಜಹಂಸಿ : ಲೀಲಾಲಸಗಮನವಮಂ ಗಜಗಮನೆಯರ್ಗುಪದೇಶಂಗೆಯ್ವ ದೀವದ ರಾಜಹಂಸೆಗಳುಮಂ . . . ಕೊಟ್ಟು (ಆದಿಪು. ೯-೩೪ ವ). [ಸಂ. ರಾಜಹಂಸಾ]

**ರಾಜಹರ್ಮ್ಯ** (ನಾ). ದೊರೆಯ ನಿವಾಸ ; ಅರಮನೆ : ಈ ವಾತಾವರಣದಲ್ಲಿ ಒಮ್ಮೆ ಸುಳಿದು ಬಂದರೆ ಸಾಕು . . . ಯಾವುದೋ ಒಂದು ರಾಜಹರ್ಮ್ಯದಲ್ಲಿ – ಮಹಾದೇವಸ್ಥಾನದಲ್ಲಿ – ಸುಳಿದುಬಂದ ಭಾಸವಾಗುತ್ತದೆ (ರೀಶಹ. II, ೯೩). [ಸಂ.]

**ರಾಜಹುಂಡಿ** (ನಾ). ಸರ್ಕಾರದ ಖಜಾನೆಯಿಂದ ಬರುವ ಹಣದ ಆದೇಶಪತ್ರ,— ಹುಂಡಿ : ಭಾರತಸರ್ಕಾರದಿಂದ ಸ್ವೀಕರಿಸಲಾದ ಎಲ್ಲ ರಾಜಸ್ವಗಳೂ ರಾಜಹುಂಡಿಗಳನ್ನು, ಸಾಲಿಗಳನ್ನು . . . ಸಂಚಿತವಾದ ಒಂದು ನಿಧಿಯಾಗಿ ಏರ್ಪಡಿಸತಕ್ಕುದು (ಕಾರಾನ. ೦೩೦). [ರಾಜ + ಹುಂಡಿ$_1$]

**ರಾಜಹುಣ್ಣು** (ನಾ). ಒಂದು ಬಗೆಯ ಭಯಂಕರವಾದ ಹುಣ್ಣು ; ಬೆನ್ನುಫಣಿ : "ಕಟ್ಟಕುರು ; ಬೆನ್ನುಫಣಿ ; ರಾಜಹುಣ್ಣು, ನೆರಡಿರೋಗ" (Carbuncle. ಇಂಕಸ) ; ನವಾಬ್ ಹೈದರಲ್ಲಿಖಾನರು ಬೆನ್ನಿನಲ್ಲಿ ರಾಜಹುಣ್ಣು ಎದ್ದು ಆರಕಾಡಿನಲ್ಲಿ ಮೃತರಾದರು (ರಾಜೇಂದ್ರ. ೨೬).
[ರಾಜ + ಹುಣ್ಣು (<ಪುಣ್)]

**ರಾಜಾಂಗಣ** (ನಾ). ೧. ಅರಮನೆಯ ಅಂಗಳ : ವಿವಿಧಫಲಪ್ರಸೂನಪಲ್ಲವತತಿಯಿಂ ಕೀವಿದ ರಾಜಾಂಗಣಮನಿಳಾವಂದ್ಯರ್ ಮೆಟ್ಟಲೊಲ್ಲದಲ್ಲಿಯೆ ನಿಂದರ್ (ಆದಿಪು. ೦೫-೯). ೨. (ವಿಶಾಲವಾದ) ಅಂಗಳ: ಬಿಂಗಲಿ ಪೋದಗೆ ಪೊಜಸು ಬಕ್ಕಂ ಗಿಡಿಗಂ ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಚರಿಸುವೊತೆ ಸರಂಗೆಯ್ವುಡೆ ತಡೆಯದಾ ಗೃಹಂ ಪಾಟಕ್ಕುಂ (ಲೋಕೋಪ. ೪-೬೩).

ರಾಜಾಂಗಣದ ಊಟ = ಉಡುಪಿಯ ಮಠದ ವಿಶಾಲವಾದ ಅಂಗಳದಲ್ಲಿ ಸೇರಿ ಮಾಡುವ ಭೂರಿಭೋಜನ,– ಭರ್ಜರಿಊಟ : ಬಮ್ಮಗೆ ಉಂಡು ತೇಗಬೇಕಾದರೆ ಮಧ್ವನವಮಿಊಟಕ್ಕೋ, ರಾಜಾಂಗಣದ ಊಟಕ್ಕೋ ಉಡುಪಿಗೇನೆ ಹೋಗಬೇಕು (ಮಠಮು. ೯೯).
[ ರಾಜ + ಅಂಗಣ ]

**ರಾಜಾಂಗನೆ** (ನಾ). ರಾಜವಂಶದ ಸ್ತ್ರೀ ; ಅರಸುಮನೆತನದ ಹೆಣ್ಣು: ಸುದತಿಯರು ಹೊಚಿಮಂಟರೊಗ್ಗಿನ ಮೃದುಮೃದಂಗದ ಕಹಳೆಗಳು ಸಂಪದದ ಸೊಂಪಿನಲೆಸೆಯೆ ರಾಜಾಂಗನೆಯರನುವಾಯ್ತು (ಕುಮಾ.ವಿ. ೪-೦೦).
[ಸಂ. ರಾಜಾಂಗನಾ]

**ರಾಜಾಂಗವಸ್ತ್ರ** (ನಾ). ಒಂದು ಬಗೆಯ ಶ್ರೇಷ್ಠವಾದ ಬಟ್ಟೆ : ಗಾಜು ನೋಟಕ್ಕೆ ಲೇಸು ಮೋಜು ಇರುಳಲಿ ಲೇಸು ರಾಜಾಂಗವಸ್ತ್ರ ಉಡ ಲೇಸು ಊಟಕ್ಕೆ ರಾಜಾನ್ನ ಲೇಸು (ಸರ್ವಜ್ಞ. ೦೦೬೫). [ಸಂ.]

**ರಾಜಾಜ್ಞೆ** (ನಾ). ದೊರೆಯ ಆದೇಶ ; ಅರಸನ ಅಪ್ಪಣೆ : ತಳೆದೇನಿರ್ದರೊ ತಮ್ಮ ತಮ್ಮ ತಲೆಯೊಳ್ ರಾಜಾಜ್ಞೆಯಂ ಮೂರ್ತಿಗೊಂಡಳನಂಬಂತಿರೆ ಭೂಪತಿಪ್ರಕರ ನಾನಾಮೌಳಿಮಾಣಿಕ್ಯಸಂಕುಳದೊಳ್ ಮಾರ್ಪೊಳೆವೃತ್ತವೊಯ್ಯನೆ ಬರುತ್ತಿರ್ದರ್ ಪ್ರತೀಹಾರಿ (ರಾಜಂಪೂ. ೨೪) ; ಲಂಚವನ್ನು ತೆಗೆದುಕೊಳ್ಳುವುದನ್ನು ರಾಜಾಜ್ಞೆಯು ವಿರೋಧಿಸಿದ್ದಿತು (ಕರ್ನಾ. ೩೪೫). [ ಸಂ. ರಾಜಾಜ್ಞಾ ]

**ರಾಜಾಣ** ' ರಾಜನ ' ನೋ.

**ರಾಜಾತಿಥ್ಯ** (ನಾ). ೧. ಅರಸನು ಮಾಡುವ ಅತಿಥಿಸತ್ಕಾರ. ೨. ರಾಜಯೋಗ್ಯವಾದ ಆತಿಥ್ಯ ; ಶ್ರೇಷ್ಠವಾದ ಆತಿಥ್ಯ : ಐದಾರುದಿನಗಳ ತನಕ ಒಗ್ಗಲಿ ಮತ್ತು ಭಟ್ಟರು ಮುದುಕನ ಮನೆಯಲ್ಲಿ ರಾಜಾತಿಥ್ಯವನ್ನು ಅನುಭವಿಸಬೇಕಾಯಿತು (ಕಂಐತು. ೨೦). [ಸಂ.]

**ರಾಜಾದನ** (ನಾ). ೧. ಒಂದು ಬಗೆಯ ಬಾದಾಮಿಮರ : ಮೊರಟೆಮರ ; ಪ್ರಿಯಾಲ : "ರಾಜಾದನಂ, ಪ್ರಿಯಾಲಃ, ಸನ್ನಕದ್ರುಃ, ಧನುಃಪಟಃ – ೪ ಮೊರಟೀಗಿಡ, ಮೊರಟೇಗಿಡ" (ಸಿದ್ಧಾಂತಿ. ೦೦೯). ೨. ಒಂದು ಬಗೆಯ ದಪ್ಪ ಹಣ್ಣು ಬಿಡುವ ಮರ. ೩. ಒಂದು ಬಗೆಯ ಗಿಡ ; ಹಾಲೆ : "ರಾಜಾದನಂ, ಫಲಾಧ್ಯಕ್ಷಂ, ಕ್ಷೀರಿಕಾ – ೩ ಹಾಲೇಗಿಡ, ಹಾಲುಬಳ್ಳಿ ಪೆಸರು" (ಸಿದ್ಧಾಂತಿ. ೦೨೨). [ಸಂ.]

**ರಾಜಾದಾಯ** (ನಾ). ಅರಸನಿಗೆ ಸಲ್ಲಬೇಕಾದ ಆದಾಯ; ಕಂದಾಯ, ತೆರಿಗೆ ಮುಂತಾದುವು : ಮಿತಿಮೀರಿದ ರಾಜಾದಾಯವನ್ನು ಅನ್ಯಾಯವಾಗಿ ಕೇತಮಲ್ಲನ ಮೇಲೆ ವಿಧಿಸಿ ಅವನ ಹಣದ ಬಹುಭಾಗವನ್ನು ಅಪಹರಿಸಿದ್ದನು (ಕಾಂತಕಾ. ೦೦೬) ; ರಾಜರೂ ಮಂತ್ರಿಯೂ ಇಬ್ಬರೂ ಸೇರಿ ರಾಜಾದಾಯವನ್ನು ಹೆಚ್ಚಿಸಲು ಅನೇಕ ಉಪಾಯಗಳನ್ನು ಯೋಚಿಸಿದರು (ಬಡೆ. ೯೩). [ಸಂ.]

**ರಾಜಾದೇಶ** (ನಾ). = ರಾಜಾಜ್ಞೆ : ದೂತನ ನುಡಿಯುಮಂ ರಾಜಾದೇಶಮುಮನವಧರಿಸಿ ಬಂದ ದೂತನಂ . . . ಪೋಗಲ್ವೇಳ್ದು (ಆದಿಪು. ೦೪–೩೦ ವ). [ಸಂ.]

ಮಂಗಳಂ ಜಯ ಮಂಗಳಂ . . . ರಾಜಿತ ಪುರಂದರವಿಟ್ಠ… ರಾಜಾಧಿರಾಜ ಸರ್ವೇಶಗೆ (ಪುರಂದ. ೩-೦೫೬-೩). [ಸಂ.]

**ರಾಜಾಧ್ಯಕ್ಷ** (ನಾ). ಅರಸನ ಆಸ್ಥಾನದ ಹಿರಿಯ ಅಧಿಕಾರಿ… ರಾಜಾಧ್ಯಕ್ಷ ×ಳಪಟ್ಟಪ್ಪಯ್ಯನ × × × ಲಿಖಿತ (ಎಕ. VII ೩೦೦–೩೩ ; 1057) ; ಶ್ರೀಮನ್ ಮಹಾಪ್ರಧಾನಂ ರಾಜಾಧ್ಯ… ವೆರ್ಗ್ಗಡೆ ಕನ್ನಡಸಂಧಿವಿಗ್ರಹಿ ದಂಡನಾಯಕಂ ಕಾಳಿಮರಸರ್ (ಕಿತಿ… 1032). [ ಸಂ. ]

**ರಾಜಾಧ್ವರ** (ನಾ). = ರಾಜಸೂಯ : ಪರಮಜ್ಞೈಮಿನಿಕಣ್ವ… ಗಳಾಗ್ನೀಧ್ರಾದಿ ರಾಜಾಧ್ವರನಿಯೋಗಿಗಳಾಯ್ತು ವೇದವ್ಯಾಸನ… (ಕುಮಾ.ಪ. ೭–೨೬). [ಸಂ.]

**ರಾಜಾನ** ' ರಾಜನ ' ನೋ.

**ರಾಜಾನ್ನ** (ನಾ). ಒಂದು ಬಗೆಯ ಶ್ರೇಷ್ಠಜಾತಿಯ ಬತ್ತ… ಅದರ ಅಕ್ಕಿ : "ಸಿತಶಾಲಿ ಕೆಂಗಟವೆ ಕಂಬತ್ತ ರಾಜಾನ್ನಂ" … ೦೦೦–೪) ; ಮುಂದೆ ಮಂದೈಸಿ ತಲೆಮುದ್ದವಾಗಿ ತುಱುಗಿ ಬ… ರಾಜಿಸುವ ರಾಜಾನ್ನದ ಕುಸುಂಕುಱೆಗೊಳಗೆ . . . ನೆಗೆವ ಸುಟ್ಟು… (ಲೀಲಾವ. ೩-೭೨ ವ) ; ಬೀಗಿ ಬೆಳೆದು ನಭಕಡರ್ದೊಡೆ ದೇವರ್ಕಳ… ಸವಿಗಾಣರ್ ಪೋಗಿ ಮಾಡುವುದೇನೆನುತ ಲಜ್ಜಿಸಿ ತಲೆವಾಗಿದ… ರಾಜಾನ್ನ (ಧರ್ಮಪ. ೨–೪೦).

ರಾಜಾನ್ನದಕ್ಕಿ = ರಾಜಾನ್ನವೆಂಬ ಬತ್ತದ ಅಕ್ಕಿ : ನಿವೇದ್ಯಕ್ಕೆ ರಾಜಾನ್ನದಕ್ಕಿ ಕೊಳಗ ಒಂದು (ಕಿತಿ. ೭೯–೦೩–೪೦… ಉತ್ತಮದ ರಾಜಾನ್ನದಕ್ಕಿಯ ಬೋನವಂ ಮಾಡಿ ಇತ್ತು… ೨೭–೦೫). [ಸಂ.]

**ರಾಜಾನ್ವಯ** (ನಾ). = ರಾಜಕುಲ ೧ : ಕೆಟ್ಟುದಿಂದ್ರಪ್ರಸ್ಥ… ರುಟ್ಟು ಹೋದರು ನಾರ ಸೀರೆಯ ನಟ್ಟಡವಿ ಮನೆಯಾಯ್ತು… ನ್ವಯದ ರಾಜರಿಗೆ (ಕುಮಾ.ವಿ. ೦–೦೯). [ಸಂ.]

**ರಾಜಾಪುರಿ** (ನಾ). ಒಂದು ಬಗೆಯ ಸಕ್ಕರೆ : ಪುಡಿಸಕ್ಕರೆಯ… ರಾಜಾಪುರೀ, ಎಳಗುಡೀ, ಹುರಿಸಕ್ಕರೆ, ಮಗುದುಮ್ಮಿ ಎಂದ… ತರವುಂಟು (ಮುಂಬಯಿ. ೩-೪೫). 'ರಾಯಪುರಿಸಕ್ಕರೆ' ಪರಾ…

**ರಾಜಾಭರಣ** (ನಾ). ಚಂದ್ರನನ್ನೇ ಆಭರಣವನ್ನಾಗಿ ಧರಿಸಿ… ಚಂದ್ರಶೇಖರ ; ಶಿವ : ರಾಜಾಭರಣನೆ ಕೇಳಯ್ಯ… ವಿರೂಪಾಕ್ಷಾ (ಶಿಂದಂ. ಪೇ. ೩೬–೩). [ಸಂ.]

**ರಾಜಾಯತ್ತ** (ನಾ). ಪ್ರಭುಸಿದ್ಧಿಯ ಮೂರು ಬಗೆಗಳಲ್ಲಿ… ಸಂಪೂರ್ಣವಾಗಿ ಅರಸನು ನಡೆಸುವ ಅಧಿಕಾರ; ನಿರಂಕುಶ… ಪ್ರಭುಸಿದ್ಧಿಯನ್ನು ಅರ್ಥಶಾಸ್ತ್ರಕಾರರು ರಾಜಾಯತ್ತ, ಸಚಿ… ಉಭಯಾಯತ್ತ ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ… ೪೭). 'ಸಚಿವಾಯತ್ತ' ಪರಾ. [ಸಂ.]

**ರಾಜಾರೂಪಾಯಿ** (ನಾ). ೧. ಹಿಂದಿನ ಮೈಸೂರುಅರಸ… ಡಲ್ಲಿದ್ದ ಒಂದು ಬಗೆಯ ನಾಣ್ಯ : (+). ೨. ಐದನೆಯ… ಮುಖದ ಮುದ್ರೆಯಿದ್ದ ಒಂದು ಬೆಳ್ಳಿಯ ನಾಣ್ಯ : ವಸ… ಲಯದಲ್ಲಿ ಇಂದೂ ರಾಜಾರೂಪಾಯಿಯು ಇರಬಹುದು (ಕೂ…
[< ರಾಜ + ರೂಪಾಯಿ]

**ರಾಜಾರೋಷ** (ನಾ). ಎಲ್ಲರಿಗೂ ತಿಳಿಯುವಂತಿರುವುದು ; ಮರೆಯಿಲ್ಲದಿರುವುದು ; ಬಹಿರಂಗವಾಗಿರುವುದು.

ರಾಜಾರೋಷವಾಗಿ = ಎಲ್ಲರಿಗೂ ತಿಳಿಯುವಂತೆ ; ಬಹಿರ…

ವಾಗಿಯೇ ಕೋಳಿಮಾಂಸ ಮತ್ತು ಹೋಟಲುತಿಂಡಿ ತಿನ್ನುತ್ತಿದ್ದರು (ರಾಜಾರ. ೭). [←ಮರಾ. ರಾಜಾರೂಸ್, ರಾಜಾರೋಸ್, ರಾಜಾರೋಶ್, ರಾಜಾರೋಷ್¹]

**ರಾಜಾರ್ಹ** (ಗು). ೧. ಅರಸನಿಗೆ ಉಚಿತವಾದ : ರಾಜಯೋಗ್ಯವಾದ. (ನಾ). ೨. ಒಂದು ಬಗೆಯ ಸುಗಂಧದ ಮರ ; ಧೂಪದ ಮರ; ಅಗುರು : "ವಂಶಕಂ, ಅಗರು, ರಾಜಾರ್ಹಂ, ಲೋಹಂ, ಕ್ರಿಮಿಜಂ, ಜೋಂಗಕಂ– ೬ ಅಗರುಗಂಧ, ಶ್ವೇತಾಗರು" (ಸಿದ್ಧಾಂತಿ. ೨೦೭). ೩. ಒಂದು ಬಗೆಯ ಶ್ರೇಷ್ಠಜಾತಿಯ ಬತ್ತ ; ರಾಜಾನ್ನ. ೪. ಕತ್ತಾಳೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ. [ಸಂ.]

**ರಾಜಾಲಯ** (ನಾ). ದೊರೆಯ ನಿವಾಸ ; ಅರಮನೆ : ಜನನಿಯುಮಂ ಜನ್ಮಭೂಮಿಯುಮಂ ಕಂಡಾಗಿನಿವಿರಿದು ರಾಗೋದಯವುದೇವಿರಿದೆನುತುಂ ಬಂದು ರಾಜಾಲಯವುಮಂ ತೋಜಿ (ಶಾಂತಿ. ೩–೦೦ ವ) ; ಹೊಂಗೆಲಸದಲಿ ರಾಜಾಲಯವನನುಕರಿಸಿದರು ಕುಂತೀಕುಮಾರರಿಗೆ (ಕುಮಾವ್ಯಾ. ಉ. ೦೦–೪೪).

[ಸಂ.]

**ರಾಜಾವರ್ತ** (ನಾ). ಚಿನ್ನದ ಹೊಳಪಿನ ಎಳೆಗಳುಳ್ಳ (ವಿಶೇಷವಾಗಿ ಕಂದುಬಣ್ಣದಿಂದ ಕೂಡಿದ) ಒಂದು ಬಗೆಯ ಹರಳು : "ರಾಜಾವರ್ತವೆಳೆಯ ನೀಲಕ್ಕೆ ಮೆಸರ್" (ಕಬ್ಬಿಗ. ೪೪); ದ್ರುಪದಂ ಪಚ್ಚೆಯ ನೆಲಗಟ್ಟನೊಳಂ ರಾಜಾವರ್ತದ ಕಂಬದೊಳಂ . . . ವಿವಾಹಗೇಹಮಂ ಸಮೆಯಿಸಿ (ಕಂಕಣ. ೩–೭೪ ವ) ; ಪುಷ್ಯರಾಗ, ರಾಜಾವರ್ತ, ಅಡುಸೋಗೆ ಹೂವು . . . ಇವುಗಳಲ್ಲಿ ನಾಲಿಗೆಗೆ ಗಂಡೂಷವನ್ನು ಮಾಡಲು ಪಿತ್ತಜ್ವರ . . . ಗುಣವಾಗುವುವು (ಸಕವ್ಯ. ೯೩). [ಸಂ.]

**ರಾಜಾವರ್ತಿ** (ನಾ). =ರಾಜಾವರ್ತ : ನನ್ನ ರಾಜಾವರ್ತಿ ಕಲ್ಲಿನ ಪದಕ ಕಳೆದುಹೋಗಿದೆ (ರಜಾ). [<ಸಂ. ರಾಜಾವರ್ತ]

**ರಾಜಾವಳಿ** (ನಾ). ೧. ಅರಸರ ಸಮೂಹ. ೨. ಅರಸನ ವಂಶಾವಳಿಯ ನಿರೂಪಣೆ : ಚಾಳುಕ್ಯಚಕ್ರವರ್ತಿಗಳ ವಂಶದ ರಾಜ್ಯಂಗೆಯ್ದರಸುಗಳ ರಾಜಾವಳಿ ಮಂಗಳ (ಎಕ. XII, ೨೭೬–೦೦೭ ; 1077).

[ಸಂ. ರಾಜಾವಲಿ]

**ರಾಜಾಶ್ರಯ** (ನಾ). ದೊರೆಯ ಆಸರೆ ; ಅರಸನ ಆಶ್ರಯ : ಪೂಜಿಸಿದವರ್ಗೆ ಬೇಳ್ಪುದನಾ ಜನ್ಮದೊಳೀವ ದೆಯ್ವಮುಳ್ಳಡೆ ಬಳಿಯಂ ರಾಜಾಶ್ರಯಮೇವುದೊ (ಸಮುಕ. ೬–೬೦) ; ರಾಜಾಶ್ರಯವು ತಿಳಿದಷ್ಟು ಅನುಕೂಲವಾದುದಲ್ಲ (ಚಾರಿ. ೩೭೩). [ಸಂ.]

**ರಾಜಾಸ್ಥಾನ** (ನಾ). = ರಾಜಸಭೆ : ಸ್ಮೃತಿಗಳ ಕಾಲದಲ್ಲಿ ರಾಜಾಸ್ಥಾನವೇ ನ್ಯಾಯಾಸ್ಥಾನವಾಗಿತ್ತು (ಧಾರಿ. ೫೩) ; ರಾಜಾಸ್ಥಾನಗಳ ಒಂದು ಸಮಗ್ರ ಚಿತ್ರವು ಎಲ್ಲಿಯೂ ದೊರೆಯದಿರುವುದು ದುರದೃಷ್ಟ (ಕರಾಅ. ೩೨೩). [ಸಂ.]

**ರಾಜಿ**₁ (ನಾ). ೧. ಸಾಲು ; ಓಳಿ ; ಪಂಕ್ತಿ : "ಅಳೀ(೭) . . . ವೀಥೀ, ರಾಜೀ(೭) — ಈ ೬ ಪಂತಿ" (ಹಲಾಯು. ೦೦೯–೩೩). ೨. ಗುಂಪು; ಸಮೂಹ ; ರಾಶಿ : ಜಲರುಹಬೀಜರಾಜಿಗಳನಾಜಾಪ ವರ್ಣ ಕುಟೀರಕಂಗಳಂ ನಿಲಿಸುವ . . . ಅಕ್ಷಮಣಿಯಂ ಸಮೆವೀ ವ್ಯವಸಾಯ ಮೆತ್ತಲುಂ (ಕಾದಂಪೂ. ೨೨೩) ; ಕೊಡಲಿ ಕುಜನವುಹೀರಾಜಿಗೆ ಕೊಡಲಿ . . . ಕೊಡಲಿ ವೀರವನೆನುತಲಾತನ ಕೊಡಲಿಯಂ ಕೊಂಡಾಡಿದರು (ಜಕವ. ೯–೦೯) ; ಸೋನ್ನತದೇಹ . . . ಭುಜದವರೆಗೆ ತುರಿ ಹರಿದು ಬಂದಿರುವ ಕೇಶರಾಜಿ (ಚಾಂಕರಾ. ೧೦೭). ೩. ಕರಿಯ ಸಾಸುವೆ. ೪. ಕಿರುನಾಲಗೆ. ೫. ಬಯಲು ; ಮೈದಾನ. ೬. ಮೈಮೇಲೆ ಪಟ್ಟೆಗಳುಳ್ಳ ಒಂದು ಬಗೆಯ ಹಾವು : ದರ್ವೀಕರ ಮಂಡಲ ರಾಜಿಗಳೆಂಬ ಮೂರು ತೆರನಾದ ಸರ್ಪವಿಷಗಳಲ್ಲಿ ಸಳಿಯ ಸಟ್ಟುಗದ ಬೇರ ನೀರಲ್ಲಿ ಅರದು ಕುಡಿಯಲು ವಿಷಹರ (ವಿಷಹ. ೦೦–೪). ೭. [ಅಶ್ವಶಾ] ಕುದುರೆಯ ಮೈಮೇಲೆ ಇರುವ ಒಂದು ಬಗೆಯ ರೇಖೆ : ಮೂವತ್ತೆರಡುರೇಖೆಗಳ ನಡುವೆ ಕಾಣಿಸುವ ಇಪ್ಪತ್ತೈದು ಅಡ್ಡರೇಖೆಗಳಿಗೆ ರಾಜಿಗಳೆಂಬ ಹೆಸರು (ಅಶ್ವಶಾ. ೩೬–೦೨). [ಸಂ.]

**ರಾಜಿ**₂ 'ರಾಜೀ' ನೋ.

**ರಾಜಿಕ** (ಗು). ೧. ಅರಸನಿಗೆ ಸಂಬಂಧಿಸಿದ : (ಕ). (ನಾ). ೨. ಮುತ್ತಿಗೆ ; ಆಕ್ರಮಣ : ರಾಜ್ಯದ ಸರ್ವಸ್ವವೂ ಅವರ ರಾಜಿಕವವರ ಕಯ್ಗೆ ಬಿದ್ದು ಸೂರೆಯಾಗಲು . . . ಸಿದ್ಧವಾಗಿದೆ (ಪಟ್ಟಿಕ. ೪೪–೨೪) ; ೧೬೮೪ನೇ ಚಿತ್ರಭಾನು ಸಂ ೧೧ ದಲ್ಲಿ ಇನ್ನೊಂದು ರಾಜಿಕ ಸಂಭವಿಸಿತು (ಕಕ್ರಕಾ. ೬೩). ೩. ಕರಿಯ ಸಾಸುವೆ : "ಸರ್ಷಪವದಾ ರಾಜಿಕಂ ಸಾಸಿವೆಯೆನಿಕ್ಕು" (ಮಂಗರಾ. ೪೦–೩೩).

[←ಮರಾ. ರಾಜೀಕ./ಸಂ. ರಾಜಿಕಾ]

**ರಾಜಿಕೆ** (ನಾ). ೧. ಸಾಲು ; ಪಂಕ್ತಿ ; ಶ್ರೇಣಿ. ೨. ಬಯಲು ; ಮೈದಾನ. ೩. ಕರಿಯ ಸಾಸುವೆ : "ಸಾಸಿವೆ ರಾಜಿಕೆ ಸರ್ಷಪ ಸಾಸುರಿ" (ವನೌ.ಕೋ. ೯೩–೦೯). [ಸಂ. ರಾಜಿಕಾ]

**ರಾಜಿಗೈ** (ಕ್ರಿ). ಒಪ್ಪಂದವಮಾಡಿಸು ; ಒಡಂಬಡಿಸು : ಸಮರವ್ಯಾಜವೆಮ್ಮೊಳಗೇಕೆ ರಾಜಿಗೈವುದಕೆ ನಿಜಜನರನಟ್ಟಿ (ಕಠಾಂಡು. ೫).

[ರಾಜಿ₂ (<ರಾಜೀ) + ಗೈ₁ (<ಕೆಯ್₁)]

**ರಾಜಿತ** (ಗು). ಶೋಭಿಸುವ ; ರಂಜಿಸುವ : ಸಭಾಸದನದಂತೆ ವೇತ್ರಾಸನಾಧಿಷ್ಠಿತರಾಜರಾಜಿತಮುಂ (ಚಂದ್ರಪ್ರ. ೫–೩೩ ವ); ಮಾಣಿಕ್ಯಪ್ರಭಾರಾಜಿತಾಂಘ್ರಿಯುಗ . . . ಪಾಲಿಪುದೆನಗೆ ಚಾರುಮತಿಯಂ (ಕಬ್ಬಿಗ. ೧); ಭಾಜಿತ ದಿನಾಧಿಪಂ ರಾಜಿತ ಜನಾಧಿಪಂ . . . ಪೂಜಿಸಿದನೊಲ್ಮೆಯಿಂ (ರಾಜಶೇ. ೦೩–೩೦ ರಗಳೆ). [ಸಂ.]

**ರಾಜಿನಾಮೆ** 'ರಾಜೀನಾಮೆ' ನೋ.

**ರಾಜಿಲ, ರಾಜಿಳ** (ಗು). ೧. ಪಟ್ಟೆಗಳುಳ್ಳ ; ಗೆರೆಗಳಿರುವ. (ನಾ). ೨. (ಮೈಮೇಲೆ ಪಟ್ಟೆಗಳಿರುವ) ಒಂದು ಬಗೆಯ ನಿರ್ವಿಷವಾದ ಹಾವು ; ಒಳ್ಳೆ ; ನೀರುಹಾವು : ರಾಜಿಲಸರ್ಪದಿಂದಾವುಂಟಾದ ಮೊದಲ ವೇಗ ಮೈಮೇಲೆ ನರಗಳಯೇಳಿಸುವದು (ವಿಷಹ. ೦೦–೨). ೩. ಎರಡುತಲೆಗಳುಳ್ಳ ಒಂದು ಬಗೆಯ ಹಾವು: "ರಾಜಿಲಃ, ಡುಂಡುಭಃ — ೨. ಎರಡುತಲೆಗಳುಳ್ಳ ಶಿಖಂಡಿಯೆಂಬ ಸರ್ಪಭೇದದ ಹೆಸರುಗಳು, ಎರಡು ತಲೆ ಉರಿಶಿಂಗಿ" (ಸಿದ್ಧಾಂತಿ. ೭೨). ೪. ಆನೆ ; ಗಜ. ರಾಜಿಳ : ೨. "ರಾಜಿಳಃ, ಡುಂಡುಭಃ — ಈ ೨ ಒಳ್ಳೆ" (ಹಲಾಯು. ೦೦೬–೨೦). [ಸಂ.]

**ರಾಜಿಸು** (ಕ್ರಿ). ಶೋಭಿಸು ; ಕಂಗೊಳಿಸು : "ರಾಜಿಸು—ಶೋಭಾಯಾಮ್" (ಶಮದಾ); ರಾಜಭವನದೊಳೆಸೆವ ಮಣಿತೋರಣಂಗಳಿಂ ರಾಜಿಸುವುವೆತ್ತಿದಾತಪವಾರಣಂಗಳಿಂ . . . ಕಣ್ಗೆಸೆದುದು ನರೇಂದ್ರಭವನಾಂಗಣಂ (ಆಕವು. ೯–೭ ರಗಳೆ) ; ಕಂಡರಿಸಿದರೊ ಕಡೆದರೋ ಎನೆ ಗಿರಿರಾಜತನೂಜೆ ಪೂಜೆಯೊಳ್ ರಾಜಿಸುವಳ್ (ಗಿರಿಕ. ೩–೦೦೨) ; ಒಪ್ಪುವ ಕಾಡುಮಲ್ಲಿಗೆಯ ಬಳ್ಳಿವಾಡಮುಂ ರಾಜಿಸೆ (ರಾಜಶೇ. ೩೦–೦೯).

**ರಾರಾಜಿಸು** (ದ್ವಿರುಕ್ತಿ): ದಾನನಯಾಳಂಕಾರೆ ರಾರಾಜಿಸಿದಳಖಿಳ ವಿದ್ಯಾರ್ಥಿದೀನಾವಳೀನನ್ದಿನಿಯುಕ್ತಾ ದೇವಿ (ಎಕ. XVIII, ೨೬೩–೨೦; 1022); ದಂತದ್ಯುತಿ ರಾರಾಜಿಸಿ ಮುಖದಿನೊಡ್ಡೆ ನುಡಿದಂ ಕೃಷ್ಣಂ (ಶಬ್ದ. ೦೦–೦೪); ರಂಗಧಾಮನ ರಾಣಿಗೆ ರಾರಾಜಿಪ ರಂಗನಾಯಕಿಗೆಬಿಗುವೆನು (ಹರಿದಾ. ೨–೨).

[ರಾಜ್₀ (P←ಸಂ. ರಾಜ್ =ಪ್ರಕಾಶಿಸು) + —ಇಸು₁]

**ರಾಜಿಳ** 'ರಾಜಿಲ' ನೋ.

**ರಾಜೀ, ರಾಜ್ಜಿ** (ನಾ). ೧. ಒಪ್ಪಂದ ; ಒಡಂಬಡಿಕೆ : ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ . . . ಶಬ್ದಗಳೆಂದರೆ . . .

ರಾಜೀ (ರಾಝಿ), ತಾರೀಖು (ಧಾಕಾಶಾ. ೦೬೬); ಇವನು ಹೋಗಿ ತಪ್ಪಾಯಿತೆಂದು ಬೇಡಿಕೊಂಡೊಡನೆಯೇ ಪುನಃ ರಾಜೀ (ರಾಕಹು. ೦೩). ರಾಜಿ₂: ೧. ಕಕ್ಷಿಗಾರರೇ ರಾಜಿಗೆ ಒಪ್ಪಿದರೆ ಅವರನ್ನು ಒಪ್ಪಿಸಬಹುದು ಎಂದಿದ್ದ (ಕಂದಕೋ. ೦೩೪). ೨. ಒಪ್ಪಿಗೆ ; ಸಮ್ಮತಿ ; ಕಬೂಲು : ಅದಕ್ಕೆ ನಿಮ್ಮ ರಾಜಿ ಇದೆಯೆ ? ನಿಮಗೆ ರಾಜಿ ಇರಲಿ, ಇಲ್ಲದಿರಲಿ ನಾನಂತೂ ರಾಜಿಯಾಗಿದ್ದೇನೆ (ಕಮಳ. ೦೩೬). ೩. ಸ್ವಂತ ಇಚ್ಛೆ ; ಸ್ವಯಂಸಮ್ಮತಿ: ನಡಸಿಕೊಂಡು ಬಹಿರಿಯೆಂದು ನಮ್ಮ ರಾಜಿಯಿಂದ ಒಡಂಬಟ್ಟು ಕೊಟ್ಟ ಧರ್ಮಸಾಧನ (ಎಕ. XIV, ಶ್ರೀರಂಗ. ೨೬೦-೬೬ ; 1419); ಜೂಜವಾಡಿಯು ಸಕಲರಾಜ್ಯವನು ಪುಷ್ಕರಗೆ ರಾಜಿಯಿಂದಲಿ ಸೋತು (ಯುನಳ. ೮೪). ೪. ರಾಜೀನಾಮೆ : ಈಗಿನ ಕೆಲಸಕ್ಕೆ ರಾಜಿಯಿತ್ತರೆ ಮುಂದೆ ಕೆಲಸಮಾಡುವುದೆಲ್ಲಿ (ದೀಕಧು. ೦೬).

**ರಾಜಿಕಬೂಲಿ** = ಒಪ್ಪಂದ ; ಒಡಂಬಡಿಕೆ : ಜನರು ಅದನ್ನು ನೋಡಿ—ನಾವು ಕೇಡಿಗತನದೊಡನೆ ರಾಜಿಕಬೂಲಿ ಮಾಡಿಕೊಳ್ಳತಕ್ಕವರೆಂದು ಭಾವಿಸಿ, ನಮ್ಮ ಮಾತೆಲ್ಲ ಪೊಳ್ಳುಹರಟೆಯೆಂದುಕೊಂಡುಬಿಟ್ಟಾರು (ರಾಜ್ಯಶಾ. ೨೬೨). **ರಾಜೀ ಆಗು, ರಾಜಿಯಾಗು** = ೧. ಹಿಂದಿನ ವಿರೋಧವನ್ನು ಬಿಟ್ಟು ಸ್ನೇಹದಿಂದ ಒಪ್ಪಂದ ಮಾಡಿಕೊಳ್ಳು ; ಒಡಂಬಡು : ರೈತರು ರಾಜೀಆಗಿ ಹೇರಳವಾಗಿ ಭೂಮಿ ಸಾಗುವಳಿ ಮಾಡುತ್ತಾರೆ (ಮಹಾಪ್ರ. II. ೬೩). ೨. ಒಪ್ಪಂದವಾಗು ; ಒಡಂಬಡಿಕೆಯಾಗು : ಪಕ್ಷದ ನಾಯಕರು ಸ್ವಾತಂತ್ರ್ಯವಿಲ್ಲದೆ ಕೈಕಟ್ಟಿದವರಾಗಿ ಅಲ್ಲಿ ಬಂದು ಕುಳಿತರೆ ಅವರಲ್ಲಿ ರಾಜಿಯಾಗುವುದೆಲ್ಲಿ ? (ರಾಜ್ಯಶಾ. ೩೦೨). ೩. ಒಪ್ಪು ; ಸಮ್ಮತಿಸು : ಅದಕ್ಕೆ ನಿಮ್ಮ ರಾಜಿ ಇದೆಯೆ . . . ನಾನಂತೂ ರಾಜಿಯಾಗಿದ್ದೇನೆ (ಕಮಳ. ೦೩೬). **ರಾಜೀಮಾಡಿಸು** = ಪರಸ್ಪರ ಒಪ್ಪಿಸು ; ಒಂದುಗೂಡಿಸು ; ಒಡಂಬಡಿಸು : ನ್ಯಾಯಾಧೀಶರು ಗಂಡನಿಗೆ ಉಪದೇಶಮಾಡಿ ರಾಜೀಮಾಡಿಸಿದರಂತೆ (ಶಶ್ರೀಶಾ. ೬).

[←ಅರ. ರಾಜೀ, ರಾಝಿ ; ಹಿಂ. ಮರಾ. ರಾಜೀ]

**ರಾಜೀನಾಮೆ**, ರಾಜಿನಾಮೆ (ನಾ). ೧. ಪರಸ್ಪರ ಒಪ್ಪಿಗೆಯಿಂದ ಬರೆದುಕೊಡುವ ಪತ್ರ ; ಒಪ್ಪಿಗೆಪತ್ರ ; ಒಡಂಬಡಿಕೆಯ ಪತ್ರ : (೪). ೨. ಉದ್ಯೋಗ ಮೊದಲಾದುವುಗಳಿಂದ ಬಿಡುಗಡೆ ಮಾಡಬೇಕೆಂದು ಕೇಳಿ ತಾನೇ ಒಪ್ಪಿ ಬರೆದುಕೊಡುವ ಪತ್ರ : ಮಂಡಳಿಯ ಸಭಾಸದ ಕೆಲಸಕ್ಕೆ ನಾನು ಈಗ ರಾಜೀನಾಮೆಯನ್ನು ಕೊಡುತ್ತೇನೆ (ಮೋಹಿನೀ. ೦೩೬) ; ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಟ್ಟ (ದುಂಬಕ. ೦೩೬). **ರಾಜಿನಾಮೆ** : ೨. ತನ್ನ ಕೆಲಸಕ್ಕೆ ರಾಜಿನಾಮೆಯಿತ್ತು . . . ಧೊಡ್ಡ ಚಳವಳವನ್ನು ಹೂಡಿದನು (ಜಗಹಂ. ೬೦) ; ನಾನು ಸೇನಾಪತಿಯ ಕೆಲಸಕ್ಕೆ ರಾಜಿನಾಮೆ ಕೊಡುತ್ತೇನೆ (ಮಂದಾಕಿ. ೦೨೮).

[← ಪಾರ. ರಾಜೀನಾಮಹ್, ರಾಝಿನಾಮಾ ; ಹಿಂ. ಮರಾ. ರಾಜೀನಾಮಾ]

**ರಾಜೀವ** (ನಾ). ೧. ಕಮಲ ; ತಾವರೆ : "ಸಹಸ್ರಪತ್ರಂ . . . ರಾಜೀವಂ . . . ಪಂಕಜಂ – ಈ ೧೭ ತಾವರೆ" (ಹಲಾಯು. ೦೦೨-೫೮) ; ಬೆಳಗೆಲ್ಲಂ ಪೋಗೆ ವಿಯತ್ತಳದೊಳ್ ಬೆಳರ್ಗೆಂಪು ಪಸರಿಸುತ್ತಿರಲಪರಾಚಲಶಿಖರದತ್ತಲೊಯ್ಯನೆ ತಳರ್ದಂ ರಾಜೀವಜೀವಿತೇಶ್ವರನಾಗಳ್ (ಕಾದಂಕಾ. ೦೩೭) ; ದೂರದಲಿ ರಾಜೀವಗಂಧಸಮೀರಣನ ಸಂಭಾವನೆಗೆ ಸೊಗಸಿವಳು ಸತಿ (ಕುವ್ಯಾಕ. ೦೦-೦೫); ಪಾದರಿ ಸುರಗಿ ಸೇವಂತಿ ರಾಜೀವ ನಿರ್ಜರಸುಮಮಾಲೆ ಕಣ್ಗೆ ವಿರಾಜಿಸಿದುವು (ಮೋಹತ. ೦೬-೦೩). ೨. ನೈದಿಲೆ ; ಕನ್ನೈದಿಲೆ. ೩. ಒಂದು ಬಗೆಯ ಮೀನು : " ಶಾಲಃ . . . ರಾಜೀವಃ, ಲೋಹಿತಃ, ಪಲ್ಲವಕಃ – ಈ ೬ ಮತ್ಸ್ಯದ ಭೇದಂಗಳ್" (ಹಲಾಯು. ೦೦೯-೩೭) ; ಪೆರ್ಚಿರ್ದುದಧಿಕತರಸತ್ತ್ವದಿಂ ಸತ್ತ್ವದಿಂದುರ್ಚಿ ಮೊಯ್ಗರೆವ ರಾಜೀವಮಾಜೀವಮುಂ ಕರ್ಚಿ ಪಾಯ್ದುಡಂಗುವ ತರಂಗದಿಂ ರಂಗದಿಂದೆಟ್ಟಿ ಪೆರ್ಮೀನಿನಿಂದ . . . ಆ ಸಮುದ್ರಂ (ಶ್ರೀರಾಮ. ೩-೨೫). ೪. (ಮೈಮೇಲೆ ಪಟ್ಟೆಗಳಿರುವ) ಒಂದು ಬಗೆಯ ಜಿಂಕೆ. ೫. ಆನೆ ; ಗಜ. ೬. ಸಮೂಹ ; ಗುಂಪು. ೭. ತಲೆಯ ಕೂದಲು ; ಕೇಶರಾಶಿ. ೮. ನೀರು ; ಜಲ : "ಕೂದಲು ತಾವರೆಯುದಕ ಸಮೂಹ ನಾಲ್ಕು ರಾಜೀವಾಖ್ಯಂ" (ನಾವಾಕಂ. ೫೪).

[ಸಂ.]

**ರಾಜೀವಪೀಠ** (ನಾ). ೧. ಕಮಲದ ಪೀಠ; ತಾವರೆಯ ಆಸನ. ೨. ಕಮಲವನ್ನು ಪೀಠವಾಗಿ ಉಳ್ಳವನು ; ಬ್ರಹ್ಮ : ಶ್ರೀವನಿತೆಯರಸನೆ ವಿಮಲರಾಜೀವಪೀಠನ ಪಿತನೆ . . . ಕಾವುದಾನತಜನವ ಗದುಗಿನ ವೀರನಾರಯಣ (ಕುವ್ಯಾಕ. ೦-೦). [ಸಂ.]

**ರಾಜುಣ** ' ರಾಜನ ' ನೋ.

**ರಾಜುಳ್ಳಿ** (ನಾ). ಒಂದು ಬಗೆಯ ದಪ್ಪ ಈರುಳ್ಳಿ : " ರೋಚಕಃ – ಹೊಂಗೆ, ರಾಜುಳ್ಳಿ" (೬ನಧ. ೦೪೦). 'ರಾಯುಳ್ಳಿ' ಪರಾ.

[ರಾಜ + ಉಳ್ಳಿ₁]

**ರಾಜೇಂದ್ರ** (ನಾ). ಚಕ್ರವರ್ತಿ ; ಮಹಾರಾಜ : ರಾಜೇಂದ್ರ ಚಿತ್ತೈಸೆಂದನಸುರೇಂದ್ರ (ಕೊರಟಾ. ೬-೩-೩೨) ; ಸೃಷ್ಟಿಯ ಶಕ್ತಿದೂತನೆಂ, ರಾಜೇಂದ್ರ (ಶ್ರೀರಾಮಾ. ೦೩-೩೫೩). [ಸಂ.]

**ರಾಜೋಚಿತ** (ಗು). ಅರಸನಿಗೆ ಉಚಿತವಾದ ; ರಾಜಯೋಗ್ಯವಾದ : ಮಕ್ಕಳು ರಾಜೋಚಿತ ಅಲಂಕಾರದಲ್ಲಿ ಬಹಳ ಮುದ್ದಾಗಿ ಕಾಣುತ್ತಿದ್ದರು (ರೂಢಿ). [ಸಂ.]

**ರಾಜೋಪಚಾರ** (ನಾ). ೧. ಅರಸನಿಗೆ ಮಾಡುವ ಸೇವೆ—ಉಪಚಾರ : ಸುದತಿ ನೀ ಕೇಳು ಯಿಂತಧಿಕನಗರದ ಮಧ್ಯ . . . ಕುಧರಜಾರ್ಧಾಂಗ ಪರಮೇಶ್ವರನ ಭವನಮಿದೆ ರಾಜೋಪಚಾರದೊಡನೆ (ಬಬಮೋ. ೨-೬೨). ೨. ರಾಜೋಚಿತವಾದ ಉಪಚಾರ ; ಹೆಚ್ಚಿನ ಸೇವೆ : ರಾಜೋಪಚಾರವನ್ನಿವಾರ್ಯಜದೊಳಾನೆಸಗದಾವೆನೋ ಶಂಭುಗೆ (ವೃಶಶ. ೩೦-೨೦) : ಹೆಣ್ಣಿನವರು ವರನ ಕಡೆಯವರಿಗೆ ರಾಜೋಪಚಾರ ಮಾಡಿದರು (ರೂಢಿ). [ಸಂ.]

**ರಾಜ್ಞಿ** (ನಾ). ೧. ಅರಸಿ ; ರಾಣಿ : ರಾಜ್ಞೀಗರ್ಭದೊಳಿರ್ದುಂ ತ್ರಿಜ್ಞಾನಸಮೇತನೆಂದು ಪೇಟ್ವೆಡೆವೆ ದಲಭಿಜ್ಞಾರೇಖೆಗಳೆನಿಸಿ ಮನೋಜ್ಞತೆಯುಂ ತ್ರಿವಳಿರೇಖೆ ತಳೆದೆಸೆದಿರ್ಕುಂ (ಚಂದ್ರಪ್ರ. ೦೨-೨೫) ; ರಾಜ್ಞಿ, ಕುಸುಮ ಸುಖಿಮೊದಗಿತೀ ಮಾಮರಕೆ (ಶ್ರೀರಾಮಾ. ೦೪-೩೬೩). ೨. [ಸಂಗೀತ] ಒಂದು ರಾಗದ ಹೆಸರು : ನೀಲೋತ್ಪಲನಿ . . . ಗೀತಿ ರಾಜ್ಞಿ [ಪಾಠಾಂ. ರಯಿ] ತರಂಗಿಣಿ . . . ವಸಂತಬಂಗಾಳವೆಂಬಿಪ್ಪತ್ತೆರಡು ಕ್ರಿಯಾಂಗದಿಂದಾದ ರಾಗಂಗಳು (ಶಿವೇಶ. ೧೮೮). [ಸಂ. ರಾಜ್ಞೀ]

**ರಾಜ್ಞೀನಿವಾಸ** (ನಾ). ರಾಣಿಯ ನಿವಾಸಸ್ಥಾನ ; ಅಂತಃಪುರ : "ಅಂತಃಪುರಮೆನಿಕುಂ ಶುದ್ಧಾಂತಂ ರಾಜ್ಞೀನಿವಾಸಂ" (ಬಸ್ತ್ರಕೋ. ೪೮-೦೮) ; ರಾಜ್ಞೀನಿವಾಸದಂತೆ ಜರತ್ಕಂಚುಕಿಕಶೋಭಿತಮುಂ . . . ಆಗಿಯುಂ (ಚಂದ್ರಪ್ರ. ೫-೫೨ ವ). [ಸಂ.]

**ರಾಜ್ಯ** (ನಾ). ೧. ಅರಸನ ಸಪ್ತಾಂಗಗಳಲ್ಲಿ ಒಂದು ; ದೊರೆಯ ಅಧಿಕಾರಕ್ಕೆ ಒಳಪಟ್ಟ ಭೂಮಿ ; ದೇಶ : "ನೆಲನೆಂದೆನೆ ರಾಜ್ಯಂ" (ಕವಿಕಂ. ೨೫೮) ; ತಾಮಿಲ್ಲದೆ ರಾಜ್ಯಮಂ ಪರಿಪಾಲಿಸುವೊರಾರುಮಿಲ್ಲ (ಪಂಪಾರಾ. ೦೩೦-೨೫); ರಾಜ್ಯಕ್ಕಂ ತ್ರಿಭುವನಸಾಮ್ರಾಜ್ಯಕ್ಕಂ ಬಗೆಯೆ ಹಸ್ತಿಮಶಕಾಂತರಮೆಂದಿಜ್ಯಾಪುರಸ್ಸರಂ ಪ್ರವ್ರಜ್ಯಮನವಯವದೆ ಹಲಧರಂ ಧರಿಯಿಪುದುಂ (ಶಾಂತಿಪು. ೫-೬೨); ರಾಜ್ಯವೆಂದರೆ ಕೆಲವು ಮೂಲನಿಬಂಧನೆಗಳಿಗೆ ಅನುಸಾರವಾಗಿ ಒಟ್ಟುಗೂಡಿಕೊಂಡು ಬದುಕಲು ಒಡಂಬಟ್ಟಿರುವ ಜನರ ಸಂಘ ಅಥವಾ ಸಮಾಜ (ರಾಜ್ಯಶಾ. ೪೫). ೨. (ಭಾಷಾನುಗುಣವಾಗಿ) ವಿಂಗಡಿಸಲ್ಪಟ್ಟ ದೇಶದ ಭಾಗ ; ಪ್ರಾಂತ :

ಪ್ರತಿಯೊಂದು ರಾಜ್ಯಕ್ಕೂ ಒಬ್ಬೊಬ್ಬ ರಾಜ್ಯಪಾಲರು ಇರುತ್ತಾರೆ (ಓಂ). ೩. ಅರಸೊತ್ತಿಗೆ ; ದೊರೆತನ. ೪. ಆಡಳಿತ ; ಆಳ್ವಿಕೆ : 'ರಾಜ್ಯಂಗೆಯ್' ಪರಾ. [ಸಂ.]

**ರಾಜ್ಯಂಗೆಯ್**, ರಾಜ್ಯಂಗೈ (ಕ್ರಿ). ರಾಜ್ಯವನ್ನು ಆಳು ; ರಾಜ್ಯಭಾರ ಮಾಡು : ಆಡಳಿತ ನಡೆಸು : ಶ್ರೀಪುರುಷ ರಾಜ್ಯಂಗೆಯ್ಯುತ್ತಿರೆ (ಎಕ. XVI, ಸಿರಾ. ೧೩೩-೭; 788) ; ಸಮಸ್ತಂ ಪರಿವಾರಮೆಂಬ ಗುಣ ಸಂಘಾತಂಗಳಂ ಶಾಳ್ದಿ ಪೆಂಪೆಸಕಂಬೆತ್ತಿರೆ ಸಂತಮಿಂತತಿಬಳಂ ರಾಜ್ಯಂಗೆಯುತ್ತಿರ್ಪಿನಂ (ಆದಿಪು. ೦-೭೬); ಶ್ರೀಮತ್ತ್ರಿಭುವನಮಲ್ಲದೇವರು ಜಯಂತೀಪುರದ ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ (ಕಶಿಲಿ. ೯೪-೩-೭; 1124). **ರಾಜ್ಯಂಗೈ** : ರಾಜರಾಜಾಧೀಶ ರಘುಕುಲ ರಾಜಪರಮೇಶ್ವರನು ನಿಮಿಕುಲರಾಜನಂದನೆ ಸಹಿತ ರಾಜ್ಯಂಗೈದನೊಲವಿನಲಿ (ತೊರರಾ. ೭-೩೩ ಸೂಚನೆ). [ರಾಜ್ಯ + ಕೆಯ್$_1$]

**ರಾಜ್ಯಂಗೈ** 'ರಾಜ್ಯಂಗೆಯ್' ನೋ.

**ರಾಜ್ಯಕ** (ನಾ). ರಾಜ್ಯವನ್ನು ಆಳುವವನು ; ಆಡಳಿತಗಾರ : ಪಾರಿಜಾತವ ಕಂಡು ನಿಡುಸುಯ್ದು, ಪದಗಳಿಂ ಶೌರಿಕಥೆಯನು ಹೇಳದು ತೃಪ್ತನಹನು ಕವಿ ಊರಿನುದ್ಯಾನಕದ ತರಿಸಿ ಬೆಳಸುವ ಕಾರ್ಯಧೀರನಲ ರಾಜ್ಯಕನು (ಮುಂಕುಕ. ೯೭೩). [ಸಂ.]

**ರಾಜ್ಯಕಾರಿಯ** (ನಾ). ಆಡಳಿತದ ವ್ಯವಹಾರ,—ಕೆಲಸ : ಅತಿಬೇಗದಲಿ ರಾಜ್ಯಕಾರಿಯದಿರವ ಬಿನ್ನೈಸಿ ಕಳುಹಿದ (ಕಂಪಿ. ೦೦-೦೦೭). [< ಸಂ. ರಾಜ್ಯಕಾರ್ಯ]

**ರಾಜ್ಯಕಾರ್ಯ** (ನಾ). = ರಾಜ್ಯಕಾರಿಯ : ರಾಜ್ಯಕಾರ್ಯಗಳನ್ನು ಕುರಿತ ಜ್ಞಾನಕ್ಕೆ ರಾಜಮಾರ್ಗವಾವುದೂ ಇಲ್ಲ (ರಾಜ್ಯಾಂಗ. ೦೦೨). [ಸಂ.]

**ರಾಜ್ಯಕಾಲ** (ನಾ). ರಾಜ್ಯವಾಳುವ ಕಾಲ ; ಆಳ್ವಿಕೆಯ ಅವಧಿ : ಸಾರ ವಸ್ತುಗಳೊಳ್ ನಿಸರ್ಗದಿಂದೆ ತಾಂ ನಿರಾದರನಾಗಿ ಶುಭಭಾವನೆಯೊಳ್ ರಾಜ್ಯಕಾಲಮಂ ಸಲಿಸುತ್ತುಮಿರೆ (ಶಾಂತಿಪು. ೭-೦೦೬ ವ) ; ದಶಲಕ್ಷಪೂರ್ವ ಕುಮಾರಕಾಲಂ ಪೋಗೆ ರಾಜ್ಯಕಾಲದೊಳ್ ನಿಂದೇಕೋನತ್ರಿಂಶಲ್ಲಕ್ಷಪೂರ್ವ ಮುಂ ಪನ್ನೆರಡು ಪೂರ್ವಾಂಗಮುಂ ರಾಜ್ಯಕಾಲಂ ಪೋಗೆ (ಶಾಪುಂಪು. ೦೦೬). [ಸಂ.]

**ರಾಜ್ಯಕ್ಷೇತ್ರ** (ನಾ). ರಾಜ್ಯದ ಪ್ರದೇಶ ; ಆಡಳಿತದ ಸೀಮೆ : (೧) ಭಾರತವು ರಾಜ್ಯಗಳ ಒಂದು ಸಂಘವಾಗಿ ಇರತಕ್ಕುದು. (೨). ಅದರ ರಾಜ್ಯಗಳೂ ರಾಜ್ಯಕ್ಷೇತ್ರಗಳೂ ಮೊದಲನೆಯ ಅನುಸೂಚಿಯ . . . ರಾಜ್ಯಕ್ಷೇತ್ರಗಳೂ ಆಗಿರತಕ್ಕುದು (ಭಾರಾ. [illegible]). [ಸಂ.]

**ರಾಜ್ಯಚಿಹ್ನ** (ನಾ). ಅರಸೊತ್ತಿಗೆಯ ಗುರುತು ; ರಾಜಚಿಹ್ನೆ : ಬೆಳ್ಗೊಡೆ ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ (ಪಶ್ಯಾರಾ. ೭೩೦-೨೦) ; ಕಂದಂಗೆ ರಾಜ್ಯಚಿಹ್ನಮನೊಂದೆರಡುಮನಾಟಿಸಿ ಮಂದಿಗೆರೆ ದರ್ಪಮಸಾ ಮಂದಾರಂ ಕಯ್ವಂದವೊಲೆಂದಿತ್ತೆಸಗುವನೊ ನೃಪತಿ ಜನನೋತ್ಸವಮಂ (ಪುಶ್ಯಪು. ೩-೯೦). [ಸಂ.]

**ರಾಜ್ಯಚಿಹ್ನೆ** (ನಾ). = ರಾಜ್ಯಚಿಹ್ನ : ಗುಡಿ, ಚಾಮರ, ಮೇಘಾಡಂಬರಾದಿಗಳು ರಾಜ್ಯಚಿಹ್ನೆಗಳೆಂದು ಒಂದು ಶಾಸನವು ತಿಳಿಸುತ್ತದೆ (ಕಶಾಶ. ೩೩೭). [ಸಂ. ರಾಜ್ಯಚಿಹ್ನ]

**ರಾಜ್ಯದಾಹ** (ನಾ). ರಾಜ್ಯವನ್ನು ಪಡೆಯಬೇಕೆಂಬ ಅತ್ಯಾಸೆ ; ರಾಜ್ಯಲಾಲಸೆ : ಈ ಆಕ್ರಮಣದಿಂದ, ಡಿಲ್ಲಿಸುಲ್ತಾನರ ರಾಜ್ಯದಾಹ ಹೆಚ್ಚಿತು (ಭಾರಹ. ೯೨೨). [ಸಂ.]

**ರಾಜ್ಯನೀತಿ** (ನಾ). ರಾಜ್ಯದ ಆಡಳಿತಕ್ಕೆ ಸಂಬಂಧಿಸಿದ ನೀತಿ, —ವ್ಯವಹಾರ : ರಾಜ್ಯಪಟ್ಟಂಗಟ್ಟಿ ಸಂಕ್ಷೇಪದಿಂ ರಾಜ್ಯನೀತಿಯನಿಂತೆಂದು ಕಲ್ಪಿಸಿದಂ (ಪಶ್ಯಾರಾ. ೦೯೯-೨೩). [ಸಂ.]

**ರಾಜ್ಯನೀತಿಜ್ಞ** (ನಾ). ರಾಜನೀತಿಯನ್ನು ಬಲ್ಲವನು ; ರಾಜನೀತಿಜ್ಞ : ರಾಜ್ಯಶಾಸನ ದೊಡ್ಡದೇ ? ಈ ಪ್ರಶ್ನೆಯನ್ನು ರಾಜ್ಯನೀತಿಜ್ಞರು ಬಹುವಾಗಿ ಚರ್ಚಿಸಿದ್ದಾರೆ (ರಾಜ್ಯಶಾ. ೩೨೩). [ಸಂ.]

**ರಾಜ್ಯಪಟ್ಟ** (ನಾ). ರಾಜಪದವಿ ಸೂಚಕವಾಗಿ ಹಣೆಗೆ ಕಟ್ಟುವ ಚಿನ್ನದ ಪಟ್ಟಿ,— ಲಲಾಟಪಟ್ಟ : ಅಭಿಷೇಕಪುರಸ್ಸರಂ ಸ್ಮರಂ ನಸುಬಿರಿದಿರ್ದ ಮಲ್ಲಿಗೆಗೆ ಕಟ್ಟಿದನಂಕದ ರಾಜ್ಯಪಟ್ಟಮಂ (ಶಾಂತಿಪು. ೭-೦೯೨). [ಸಂ.]

**ರಾಜ್ಯಪತ್ರ** (ನಾ). ಸರ್ಕಾರವು ಪ್ರಕಟಿಸುವ ಪತ್ರ ; ಗೆಜೆಟ್ಟು : ಬಹಳ ಶಕ್ತಿಯುಳ್ಳ ಕಾಗದವನ್ನು . . . ಸೆನ್ನದು- ರಾಜ್ಯಪತ್ರಗಳು, ಮೌಲ್ಯಚಲಾವಣೆಪತ್ರಗಳು. . .ಮುದ್ರಿಸುವುದಕ್ಕೆ ಉಪಯೋಗಿಸುವರು (ಮುದ್ರಕ. ೬೦). [ಸಂ.]

**ರಾಜ್ಯಪದ** (ನಾ). ಅರಸನ ಪದವಿ ; ಅರಸೊತ್ತಿಗೆ : ಸೀತೆಯ ತಂದವನ ತೋಟಿದರೆ ನಮಗದು ರಾಜ್ಯಪದವೆಂದ (ತೊರರಾ. ೩-೦೦-೪೪) ; ಆತನ ಕುಮಾರಂಗೆ ಪಟ್ಟಂಗಟ್ಟಿ ರಾಜ್ಯಪದದೊಳಿಟ್ಟು ಕಾಣ್ಕೆಗೊಂಡು . . . ತೆರಳ್ದಂ (ರಾಮಾಶ್ವ. ೩೩-೦೭). [ಸಂ.]

**ರಾಜ್ಯಪರಿಷತ್ತು** (ನಾ). ಸಂಸತ್ತಿನ ಒಂದು ಅಂಗ ; ಕೇಂದ್ರಸರ್ಕಾರದ ಒಂದು ಸಭೆ ; ರಾಜ್ಯಸಭೆ ; P ಸ್ವತಂತ್ರಭಾರತದ ಕೇಂದ್ರಸರ್ಕಾರದಲ್ಲಿ 'ರಾಜ್ಯಪರಿಷತ್ತು' ಮತ್ತು 'ಲೋಕಸಭೆ' ಎಂದು ಎರಡು ಸಭೆಗಳುಂಟು. ಇವು ಇಂಗ್ಲೀಷಿನ 'Upper–House' ಮತ್ತು 'Lower–House' ಎಂಬ ಪದಗಳಿಗೆ ಸಮಾನವಾದುವು : ಭಾರತ ಸಂಘಕ್ಕೆ, ರಾಷ್ಟ್ರಪತಿಯವರೂ ರಾಜ್ಯಪರಿಷತ್ತೆಂಬ ಹೆಸರಿನ ಒಂದು ಸದನವೂ ಲೋಕಸಭೆ ಎಂಬ ಹೆಸರಿನ ಒಂದು ಸದನವೂ ಸೇರಿರುವ ಒಂದು ಸಂಸತ್ತು ಇರತಕ್ಕುದು (ಶಾಧಾವ. ೩೯). [ಸಂ. ರಾಜ್ಯಪರಿಷದ್]

**ರಾಜ್ಯಪಾಲ** (ನಾ). ಸ್ವತಂತ್ರಭಾರತದ ಕೇಂದ್ರಸರ್ಕಾರದಿಂದ ನೇಮಕಗೊಂಡ ಪ್ರತಿರಾಜ್ಯದ ಮುಖ್ಯಾಧಿಕಾರಿ : ಶ್ರೀಜಯಚಾಮರಾಜ ಒಡೆಯರವರು . . . ಅಖಂಡಕರ್ನಾಟಕಕ್ಕೆ ರಾಜ್ಯಪಾಲರಾಗಿ . . ಎಲ್ಲ ಕನ್ನಡಿಗರ ಸೌಖ್ಯವನ್ನು ನೋಡಿಕೊಳ್ಳುತ್ತಿದ್ದಾರೆ (ಪ್ರಪಾಕು. ೨೦). [ಸಂ.]

**ರಾಜ್ಯಭರ**. (ನಾ). ರಾಜ್ಯದ ಆಡಳಿತ, —ಆಳ್ವಿಕೆ : ಮಹಿತನಿಜೈಕರಾಜ್ಯ ಭರದೊಳ್ ನಿಲವೇಟ್ಪುದು ನೀಂ (ಶಾಂತಿಪು. ೧೦-೧೦೨); ಸಿಂಹಭೂಪತಿ [ಗೆ ಪ್ರಾ] ಸಾಮಂತರುಂ ಮಣ್ಡಳೇಶ್ವರರುಂ ತಪ್ಪೆ ಕಳ[ಲ್ದ] [ರಾಜ್ಯ]ಭರವಂ ಕೈಕೊಣ್ಡು (ಕಶಿಲಿ. ೩-೨-೭೯; 1058); ಆ ರಾಯಂ ಪೊಸಜವ್ವನದ ಮುದ್ದುಗುವರನೊಳ್ ರಾಜ್ಯಭರಮನೊಪ್ಪಿಸಿ ತಾಂ ತಪಸ್ಸಾಮ್ರಾಜ್ಯಮಂ ಸೂಚಿಗೊಂಡಾಳುತುಮಿರ್ದಂ (ರಾಮಾಶ್ವ. ೦೦೬-೩). [ಸಂ.]

**ರಾಜ್ಯಭಾರ** (ನಾ). ೧. ರಾಜ್ಯಾಡಳಿತದ ಹೊಣೆ,— ಜವಾಬ್ದಾರಿ. ೨. = ರಾಜ್ಯಭರ : ಅಂತು ಮೇಘನಾದಂ ತನ್ನ ಮಗಂ ಸಿಂಹನಾದಂಗೆ ರಾಜ್ಯಭಾರಮನಿತ್ತು ತಪೋಭಾರದೊಳ್ ತಾಂ ನಿಂದು (ಶಾಂತಿಪು. ೭-೦೭೭ವ); ಆತನ ತಾಯಿ . . . ಇರಿವನೊಳಂಬನ ರಾಜ್ಯಭಾರವನ್ನು ನಿರೀಕ್ಷಿಸುತ್ತಿದ್ದಳು (ಓಳಂಬ. ೩೩). [ಸಂ.]

**ರಾಜ್ಯಭಾಷೆ** (ನಾ). ರಾಜ್ಯದ ಅಧಿಕೃತಭಾಷೆ : ಒಡಂಬಟ್ಟಿರುವ ಜನಕ್ಕೆ ರಾಜ್ಯಭಾಷೆಯಲ್ಲಿ "ಪ್ರಜೆ" ಎಂದು ಹೆಸರು (ರಾಜ್ಯಶಾ. ೯೩). [ಸಂ. ರಾಜ್ಯಭಾಷಾ.]

**ರಾಜ್ಯಭ್ರಂಶ** (ನಾ). ರಾಜ್ಯವನ್ನು ಕಳೆದುಕೊಳ್ಳುವಿಕೆ; ರಾಜ್ಯಚ್ಯುತಿ : ಶ್ರೀದುದೆವಂಗೆ ವನಪ್ರವಾಸದ ಖೇದ . . . ಹೋದ ರಾಜ್ಯಭ್ರಂಶ ಬಹಳವಿಷಾದ ಬೀತುದು ನಿಮ್ಮ ಕಾರುಣ್ಯೋದಯವುಯಮಗಾಯ್ತೆಲಾ (ಕಜೈಭಾ. ೦೦-೨೬). [ಸಂ.]

**ರಾಜ್ಯಭ್ರಷ್ಟ** (ನಾ). ರಾಜ್ಯದಿಂದೆ ಹೊರಹಾಕಲ್ಪಟ್ಟವನು ; ರಾಜ್ಯಚ್ಯುತ : ರಾಜ್ಯಭ್ರಷ್ಟಂಗೆ ತ್ಯಾಗಭೋಗವುಂಟೆ (ಕಶಪು.ಕಟII. ೩೦೦-೯೦);

ಮುಳಿದು ವಾಸಿಷ್ಠಮುನಿ ಕೊಟ್ಟ ಶಾಪದೊಳು ಕುಲವಳಿದು ರಾಜ್ಯಭ್ರಷ್ಟನಾಗಿ ಚಾಂಡಾಲತ್ವವಳವಟ್ಟು (ಹರಿಶ್ಚ. ೬-೩೯); ಹೈದರನು ರಾಜ್ಯಭ್ರಷ್ಟನಾದನೆಂಬ ಸಮಾಚಾರವನ್ನು ತಿಳಿದು . . . ಮರಾಟೆಯವರ ದಳವನ್ನು ಕಳುಹಿಸಿದನು (ಟಿಪ್ಪು. ೬೯). [ಸಂ.]

**ರಾಜ್ಯಲೋಭ** (ನಾ). = ರಾಜ್ಯದಾಹ : ಮಣಿಯದೆ ರಾಜ್ಯಲೋಭವಶದಿಂ ಪುರುಷಾರ್ಥಮನೊಕ್ಕು ಪಾರ್ಥಿವಾಗ್ರಣಿಗಳನೇಕರುಂ ಜವನದಾಡೆಯೊಳಟ್ಟಿದರ್ (ಕೃಷ್ಣ. ೦೩-೭೪). [ಸಂ.]

**ರಾಜ್ಯವಿಚ್ಯುತ** (ನಾ). = ರಾಜ್ಯಭ್ರಷ್ಟ : ರಾಜ್ಯವಿಚ್ಯುತನಾದ ಚಕ್ರವರ್ತಿಯೆಂಬ ಕ್ಷುದ್ರದೇವತೆಯುನ್ನು ಸೇವೆಮಾಡಿದುದರಿಂದ ನನ್ನ ತಂದೆಯು ಬಹುಕಷ್ಟಗಳನ್ನು ಅನುಭವಿಸಿರುವನು (ರಾಜಾಮು. ೪೬). [ಸಂ.]

**ರಾಜ್ಯವಿಭ್ರಂಶ** (ನಾ). = ರಾಜ್ಯಭ್ರಂಶ : ಚಿರಂತನಭವದ ಕಿಲ್ಬಿಷಕರ್ಮಪಾಕಪ್ರಪರ ದುರಿಯೋಧನನ ಸವ್ಯಪದೇಶಮಾತ್ರದಲಿ ಎಮಗೆ ರಚಿಸಿತು ರಾಜ್ಯವಿಭ್ರಂಶವನು (ಕುಮಾ. ಗ. ೦೦-೪೪). [ಸಂ.]

**ರಾಜ್ಯವ್ಯಸನ** (ನಾ). ಸಪ್ತವ್ಯಸನಗಳಲ್ಲಿ ಒಂದು : ರಾಜ್ಯದ ಚಿಂತೆ : ತನುವ್ಯಸನ ಮನೋವ್ಯಸನ ಧನವ್ಯಸನ ರಾಜ್ಯವ್ಯಸನ . . . ಸೇವಕವ್ಯಸನವೆಂಬ ಸಪ್ತವ್ಯಸನದಿಂ ಹಸಂಗೆಟ್ಟು (ಬಸವ. ೦೯೭); ರಾಜ್ಯವ್ಯಸನವೆತ್ತಿದಲ್ಲಿ ವಾಹನ ವಸ್ತ್ರಾಭರಣ ಅನುಲೇಪನ ತಾಂಬೂಲಂಗಳಂ ಬಯಸುತ್ತಿಹನು (ವಚನ. II. ೦೨೪). [ಸಂ.]

**ರಾಜ್ಯಶಾಸನ** (ನಾ). ರಾಜ್ಯದ ಆಡಳಿತಪಕ್ಷವು ಪ್ರಕಟಿಸುವ ಕಟ್ಟಳೆ,– ಆಜ್ಞೆ : ರಾಜ್ಯಶಾಸನಕ್ಕೆ ವಿಧೇಯನಾಗಿ ನಡೆದುಕೊಳ್ಳುವುದು (ರಾಜ್ಯಾಂಗ. ೧೩೦). [ಸಂ.]

**ರಾಜ್ಯಶಾಸ್ತ್ರ** (ನಾ). ರಾಜ್ಯದ ಆಡಳಿತವನ್ನು ವಿವರಿಸುವ ಶಾಸ್ತ್ರ ; ರಾಜನೀತಿಶಾಸ್ತ್ರ : ರಾಜ್ಯಶಾಸ್ತ್ರದ ವಿಷಯ ಮನಸ್ಸಿಗೆ ಬಂದಾಗಲೆಲ್ಲ ಅಲ್ಲಿ ತಂಬೂರಿಯ ತಂತಿಗಳಂತೆ ಸಮಾಂತರವುಳ್ಳ ಎರಡು ವಿಚಾರಸರಣಿಗಳು ನಾದಮಾಡುತ್ತಿರುತ್ತವೆ (ರಾಜ್ಯಶಾ. ೩೦೬). [ಸಂ.]

**ರಾಜ್ಯಶ್ರೀಕ** (ನಾ). ರಾಜ್ಯಸಂಪತ್ತುಳ್ಳವನು : ಅತುಳತಪಶ್ಶ್ರೀಕರನನುನ್ನತರಾಜ್ಯಶ್ರೀಕನವಧಿದರ್ಶನನಂ . . . ನೃಪತಿ ಭಕ್ತಿಯಿಂ ವಂದಿಸಿದಂ (ಚಂದ್ರಪ್ರ. ೩-೭೦). [ಸಂ.]

**ರಾಜ್ಯಸಭೆ** (ನಾ). = ರಾಜ್ಯಪರಿಷತ್ತು : ಕೇಂದ್ರಸರ್ಕಾರದಲ್ಲಿರುವ ವಿವಿಧರಾಜ್ಯಗಳಿಂದ ಆಯ್ಕೆಯಾದ ಸದಸ್ಯರ ಸಭೆ ; ಪಾರ್ಲಿಮೆಂಟಿನ ಮೇಲ್ಮನೆ (Council of State. ಶಬ್ದಾ. ೨೬). [ಸಂ. ರಾಜ್ಯಸಭಾ]

**ರಾಜ್ಯಸಿರಿ** (ನಾ). ರಾಜ್ಯದ ಸಂಪತ್ತು : ಪೂತುರೇ ಢಣಮೆಂಬುದೆಮ್ಮಯ ಧಾತು ಕಲಿ ಮೂದಲಿಸಿ ಕರೆದರೆ ರಾಜ್ಯಸಿರಿಯೇಕೆ (ಕುಮಾ. ದ್ರೋ. ೦೫-೨೫). [< ಸಂ. ರಾಜ್ಯಶ್ರೀ]

**ರಾಜ್ಯಸೂತ್ರ** (ನಾ). ಆಡಳಿತದ ಅಧಿಕಾರ : ಮೃಗೇಶವರ್ಮ ರವಿವರ್ಮರ ಆಳಿಕೆಗಳ ಮಧ್ಯದಲ್ಲಿ ರಾಜ್ಯಸೂತ್ರಗಳನ್ನು ವಹಿಸಿರಬೇಕು (ಕದಂಬ. ೦೪); ರಾಮಚಂದ್ರರಾಯನು ರಾಜ್ಯಸೂತ್ರವನ್ನು ಸ್ವಾಧೀನಪಡಿಸಿಕೊಂಡು ಕೆಲವು ದಿನಗಳಲ್ಲಿಯೇ ಖಜಾನೆಯನ್ನೂ ಬರಿದು ಮಾಡಿದನು (ರಾಜಾರಾಜ. ೨). [ಸಂ.]

**ರಾಜ್ಯಾಂಗ** (ನಾ). ೧. ಆಡಳಿತಕ್ಕೆ ನೆರವಾಗುವ ರಾಜ, ಪ್ರಧಾನಿ, ಸ್ನೇಹಿತ, ಬೊಕ್ಕಸ, ನಾಡು, ಕೋಟೆ ಮತ್ತು ಸೈನ್ಯ ಎಂಬ ಏಳು ಅಂಗಗಳು ; ಇವುಗಳ ಜೊತೆಗೆ ಪೌರ ಮತ್ತು ಪುರೋಹಿತ ಎಂಬೆರಡನ್ನು ಸೇರಿಸಿ ಕಿಟೆಲ್ ಅವರು ರಾಜ್ಯಾಂಗಗಳು ಒಂಬತ್ತು ಎಂದು ಹೇಳಿದ್ದಾರೆ : ಗಬಗಬ ಸುರಿದುವು ಕಣ್ಬನಿ ಪಟಲೆಪ್ಪದ ರೂಪುಗಳ್ಗೆ ರಾಜ್ಯಾಂಗಂಗಳ್ ಕಟಕುಟಮಾಗಿರ್ದುವು ತತ್ತಬಗುದಿದುವು ಭವನದೀರ್ಘಿಕಾಬ್ಜಜಲಂಗಳ್ (ಶಾಂತಿ. ೩-೦೦೬). ೨. ರಾಜ್ಯದ ಆಡಳಿತ ವ್ಯವಸ್ಥೆ : ರಾಜತ್ವ . . . ಅನೇಕ ನಾಯಕಪ್ರಭುತ್ವ –ಹೀಗೆ ರಾಜ್ಯಾಂಗವು ನಾಲ್ಕಾರು ಮಾರ್ಪಾಟುಗಳನ್ನು ಪಡೆದು ಬೆಳೆದಿದೆ (ರಾಜ್ಯಾಂಗ. ೧೦೬). [ಸಂ.]

**ರಾಜ್ಯಾಂಗಸಪ್ತಕ** (ನಾ). = ರಾಜ್ಯಾಂಗ ೧ : ಆಳುವ ನರಪತಿಗಳ ಸ್ವಾಮ್ಯಮಾತ್ಯ ಬಂಧು ಕೋಶ ರಾಷ್ಟ್ರ ದುರ್ಗ ಬಲಂಗಳೆಂಬ ರಾಜ್ಯಾಂಗ ಸಪ್ತಕದಿಂ (ಶಿವತ. ೨೪೪). [ಸಂ.]

**ರಾಜ್ಯಾದಾಯ** (ನಾ). ರಾಜ್ಯದ ಉತ್ಪತ್ತಿ,– ಹುಟ್ಟುವಳಿ : ರಾಜ್ಯಾದಾಯಕ್ಕೆ ಸಂಬಂಧಪಟ್ಟ ಎಲ್ಲ ವಿಧಿಗಳೂ ಶಾಸನವೆಂದೇ ಎನ್ನಿಸಿಕೊಳ್ಳುತ್ತವೆ (ರಾಜ್ಯಾಂಗ. ೭೩). [ಸಂ.]

**ರಾಜ್ಯಾಧೀನ** (ಗು). ರಾಜ್ಯಾಡಳಿತದ ಕೈಕೆಳಗಿರುವ ; ಸರ್ಕಾರದ ಹತೋಟಿಯಲ್ಲಿರುವ : ಕೇವಲ ಧರ್ಮ, ಮೂಲವಂಶ . . . ಅವುಗಳಲ್ಲಿ ಯಾವುದೊಂದರ ಆಧಾರದ ಮೇಲೆ ಮಾತ್ರವೇ, ಯಾವನೊಬ್ಬ ನಾಗರಿಕನಿಗೆ ರಾಜ್ಯಾಧೀನ ನೌಕರಿಯ ಅಥವಾ ಹುದ್ದೆಯ ವಿಚಾರದಲ್ಲಿ ಅಪಾತ್ರತೆಯುಂಟಾಗತಕ್ಕುದಲ್ಲ (ಭಾರಾಸ. ೯). [ಸಂ.]

**ರಾಜ್ಯಾಧ್ವರ** (ನಾ). ರಾಜಸೂಯಯಾಗ : ಸಿರಿಯ ವಲ್ಲಭನೊಲಿದು ರಾಜ್ಯಾಧ್ವರವನಾನಲು ಕಾಲಭಾಗ್ಯದ ಭರವ ಬಣ್ಣಿಪನಾವ (ಕುಮಾ. ಸಭಾ. ೪೪-೫೬). [ಸಂ.]

**ರಾಜ್ಯಾನುಷ್ಠಾನ** (ನಾ). ಆಡಳಿತದ ಕೆಲಸವನ್ನು ವಿಧಿವತ್ತಾಗಿ ನಡೆಸುವುದು ; ರಾಜಕಾರ್ಯನಿರ್ವಹಣೆ : ನೀನೆಮ್ಮಂ ಬಿಡದೆ ರಾಜ್ಯಾನುಷ್ಠಾನಮನೊಡಂಬಡು (ಆದಿಪು. ೪-೬೦); ಅಂತು ವಿಷಾದವಿಮುಖನುಂ ರಾಜ್ಯಾನುಷ್ಠಾನಾಭಿಮುಖನುಮಾಗಿ (ಚಂದ್ರಪ್ರ. ೨-೩೦). [ಸಂ.]

**ರಾಜ್ಯಾಪಹಾರ** (ನಾ). ರಾಜ್ಯವನ್ನು ಕಿತ್ತುಕೊಳ್ಳುವುದು : ಏನ ನೆನೆದೈ ಮಗನೆ ಕುಂತೀಸೂನುಗಳ ರಾಜ್ಯಾಪಹಾರದೊಳೇನು ಬುದ್ಧಿವಿಳಾಸ (ಕುಮಾ. ಸ. ೦೨-೫೮). [ಸಂ.]

**ರಾಜ್ಯಾಭಿಲಾಷೆ** (ನಾ). ರಾಜ್ಯವನ್ನು ಪಡೆಯಬೇಕೆಂಬ ಬಯಕೆ,– ಅಪೇಕ್ಷೆ : ನಿನ್ನ ಸುತರು ದೃಢೈಕಸತ್ಯರು ನುಡಿದ ಕಾಲವ ನೂಕಿದರು ರಾಜ್ಯಾಭಿಲಾಷೆಗೆ ನೆರಹಿದರು ಬಲವ (ಕುಮಾ. ಉ. ೫-೨೩). [ಸಂ. ರಾಜ್ಯಾಭಿಲಾಷಾ]

**ರಾಜ್ಯಾಭಿಷವಣ** (ನಾ). ರಾಜನಾಗುವವನಿಗೆ ಮಾಡುವ ಅಭಿಷೇಕ ; ಪಟ್ಟಾಭಿಷೇಕ : ರಾಜ್ಯಾಭಿಷವಣಭವನದಂತೆ ಪೂರ್ಣಕುಂಭೋಪಶೋಭಿತಮುಂ . . . ಭದ್ರಲಕ್ಷಣಲಕ್ಷಿತಮುಮಪ್ಪ ಪಟ್ಟವರ್ಧನಮನೇಱಿ (ಮಲ್ಲಿ. ೫-೩೫). [ಸಂ.]

**ರಾಜ್ಯಾಭಿಷೇಕ** (ನಾ). = ರಾಜ್ಯಾಭಿಷವಣ : ಅಂತು ಭುವನತ್ರಯಚೂಡಾಮಣಿಯ ರಾಜ್ಯಾಭಿಷೇಕದೊಸಗೆಯಂ ನಾಭಿರಾಜಾದಿರಾಜಸಭೆಗಱಿಪಿ (ಆದಿಪು. ೬-೬೬ ವ). [ಸಂ.]

**ರಾಜ್ಯಾಭ್ಯುದಯ** (ನಾ). ರಾಜ್ಯಾಡಳಿತ : ರಾಜ್ಯಭಾರ : ಶ್ರೀ ಮಚ್ಚಾಳುಕಪೆರ್ಮಾನಡಿದೇವರು ತತ್ಪುತ್ರಿ ಶ್ರೀಪಂಪಾದೇವಿಯರ ರಾಜ್ಯಾಭ್ಯುದಯದಂದು (ಎಕ. IV. ಹುಣಸೂ. ೫೦-೩ ; ೯೯೭). [ಸಂ.]

**ರಾಜ್ಯಾರ್ಹ** (ನಾ). ರಾಜ್ಯದ ಆಡಳಿತಕ್ಕೆ ಯೋಗ್ಯನಾದವನು ; ಅರಸುತನಕ್ಕೆ ಅರ್ಹನಾದವನು : ಅರಸಂಗಮರಸಿಯರ್ಗಂ . . . ಶರೀರಸಂಸ್ಕಾರವಿಧಿಯಂ ವಿಧಿಪೂರ್ವಕಂ ನಿರ್ವರ್ತಿಸಿ ರಾಜ್ಯಾರ್ಹನಪ್ಪಿಂದ್ರನ ಮಗಂ ಚಂದ್ರನಂ ಧರಾಭಾರಧುರಂಧರಂ ಮಾಡಿದರ್ (ಶಾಂತಿ. ೩-೯೬ ವ). [ಸಂ.]

**ರಾಟ** (ನಾ). ಮಲ್ಲಯುದ್ಧದ ಒಂದು ಪಟ್ಟು : ಉರ್ಬಿನೊಳೆಱಗುವ ಸೊರ್ಕಾನೆಯ ಸಿಗ್ಗವಕ್ಕೆ ಎರ್ದೆಯೊಡ್ಡಿ ಸೋಂಕದ ಮುನ್ನಮೆ ಒರ್ಮೆಯ್ಯೊಳೊಲೆದು ತಪ್ಪಿಸಿ ಎಡೆಗೆಡಪುವಂತೆ ಕೆಡಪಿ ಬೆನ್ನೇಱಿಯುಂ [ಯುಂ] ರಾಟದೊಳ್ಬಗಿದು ತನ್ನ ಸಾದಕದ ಚಳಕಮಂ ಮೆಱೆಯಲ್ಕೆ (ಜಗನ್ನಾ. ೦೬೫-೩). [ದೇ. ? ತೆಲು. ರಾಟ, ರಾಟವ]

**ರಾಟಣ** 'ಬಾಟಣ' ನೋ.

**ರಾಟಣಪೂ** (ನಾ). ಒಂದು ಸ್ಥಳದ ಹೆಸರು (?): ರಾಟಣಪೂ ವಿನ್ನಪ್ಪರ್ವತ್ತಯ್ಗಣ್ನಾಗಂ ವತ್ತ ತೆಱುವೊದು (ಎಕ. XIV. ತಿರುಮ. ೨೩೩-೬; ಸು. 800). [?]

**ರಾಟಣೆ** 'ಬಾಟಣ' ನೋ.

**ರಾಟವಣಿ** 'ಬಾಟಣ' ನೋ.

**ರಾಟವಾಳ** 'ಬಾಟಣ' ನೋ.

**ರಾಟವಾಳಿ** 'ಬಾಟಣ' ನೋ.

**ರಾಟಳ** 'ಬಾಟಣ' ನೋ.

**ರಾಟಳಕ** (ನಾ). (ಕರಾ) ಬಟ್ಟೆಯನ್ನು ಸ್ವಚ್ಛಮಾಡಲು ಬಳಸುವ ಒಂದು ಬಗೆಯ ಕಾಯಿ; ಅಂಟುವಾಳದ ಕಾಯಿ: ಬಟ್ಟೆಯನ್ನು ಬೆಳ್ಳಗೆ ಮಾಡಲು "ರಾಟಳಕ"ದ ಕಾಯನ್ನು ಉಪಯೋಗಿಸುತಿದ್ದವು (ಶಾಂಶ್ರ. III. ೦೪೯೦). [?]

**ರಾಟಾಣ** 'ಬಾಟಣ' ನೋ.

**ರಾಟಾಲ** 'ಬಾಟಣ' ನೋ.

**ರಾಟಾಳ** 'ಬಾಟಣ' ನೋ.

**ರಾಟಾಳತೇರು** (ನಾ). ಒಂದು ಬಗೆಯ ರಥ; ತಿರುಗಣೆ ತೇರು: ಎಡವಲಯ್ಯನ ತೇರು ಬಲದಲಮ್ಮನ ತೇರು ರಾಟಾಳತೇರು ಕೈತೇರು ಗೊಂಬೆತೇರು ಹರಿದೂ ನಂಜಯ್ಯ ಎಡಬಲ್ಕೆ (ಹಳ್ಳಿಯು. ೩೭).

[ರಾಟಾಳ (<ಬಾಟಣ) + ತೇರು$_2$ (<ತೇರ್$_1$)]

**ರಾಟೆ** (ನಾ). ತೊಂದರೆ; ಉಪದ್ರವ; ಹಿಂಸೆ: ಬೇಟೆಯೊಳು ರತನಾಗಿಹನಾತನ ರಾಟೆಗೆ ಮೃಗ ನಿಲ್ಲವಲ್ಲಿ (ಕರ್ಣಾ. ೬-೯೮); ಬಹಳದಿವಸ ಪ್ರವಾಳಭಸ್ಮ ತಕ್ಕೊಳ್ಳಲು ಈ ರಾಟೆಯು ತಪ್ಪುವದು (ಶಿಶದೀ. ೭೦). 'ರಾವಡಿ' ಪರಾ. [ದೇ.॥ ತೆಲು. ರಾಟು]

**ರಾಟೆ** 'ಬಾಟ್ಟ' ನೋ.

**ರಾಟೆವಾಳೆ** 'ಬಾಟಣ' ನೋ.

**ರಾಡಿ** (ನಾ). ೧. ಕೆಸರು; ಬಗ್ಗಡ: ನಾಡೊಳು ಪರಿವ ನಿರ್ಮಲಜಲದೊಳು ಬಲುರಾಡಿ ಕೂಡಿ ಸಾಗಿ ಪೋಗುವಂತೆ (ವೀಶ್ಟರ. ೩೩-೩); ರಾಡಿಯ ನೀರೊಳಗೆ ಘಟಕದ ಪುಡಿ ಚೆಲ್ಲಿದರೆ, ರಾಡಿಯು ತಳಕ್ಕೆ ಕೂಡುತ್ತದೆ (ಮುಂಜಯು. ೩-೦೬೦). ೨. ಮಂದವಾದ ದ್ರವ,- ರಸ: ದ್ರಾಕ್ಷೀ ಜೋಡೀ ಖಾರದ ರಾಡಿ ತುಸಾ ಉಳಸದ. ಹಸನ್ ಮಾಡಿ ಮಿಸೀ ಮಾತ್ರ ಒರಸಿಕೊಂಡು ಹೊರಗ ಬರಬೇಕು (ಹೂಸಂತಾ. ೦೩); ಬಳ್ಳಿಯ ತೊಪ್ಪಲನ್ನು ಹರಿದು ಅದನ್ನು ಒಂದು ಕಲ್ಲಿನ ಮೇಲೆ ಗುಂಡಿನಿಂದ ಅರೆದು ರಾಡಿಯನ್ನು ಮಾಡಿ (ವೈಣವ. ೯೩). ೩. ಹೊಲಸು; ಕೊಳಕು: ದೇಹದ ರಾಡಿಯ ತೊಳಕೋಳ ... ಹೇಸಿ ನಿನ ಮಾರಿ ತೊಳಕೋಳ (ಕರ್ನಾಕ. ೨೩೯). ೪. (ಅಲಂ) ರಂಪ; ಗೊಂದಲ; ರಾದ್ಧಾಂತ: ಇದೆಲ್ಲಾ ರಾಡಿ ಆ ಕೃಷ್ಣಾಜೀದೇ. ಮೊದಲಿಂದಲೂ ಅವಗೆ ನನ್ನ ಕಂಡರಾಗುವುದಿಲ್ಲ (೬೮೦೭. ೯೭); ನಮ್ಮ ಮನೆಯಾಗಿನ ರಾಡಿ - ಹೊಲಗೇರಿ ಹೊರಗ ಹೋಗೂದು ಬ್ಯಾಡಾ (ದೀಕಷ. II. ೩೩೨). ೫. ದುರುದ್ದೇಶ; ಕೆಟ್ಟ ಭಾವನೆ: ನನ್ನ ಮಿದುಳಿನಲ್ಲಿಯ ರಾಡಿಯನ್ನು ತೊಳೆದು ಸ್ವಚ್ಛಮಾಡುವುದೇ ನನ್ನ ಮುಖ್ಯಉದ್ದೇಶ (ಮುಕ್ತ. ೯೨).

**ರಾಡಿಯಾಗು** = ಕೆಸರಾಗು; ಬಗ್ಗಡವಾಗು: ಅದೇ ಬಿದ್ದ ಮಳೆಯಿಂದ ರಾಡಿಯಾದ ... ನೀರನ್ನೂ ಕುಡಿಯಬಾರದು (ಅಶ್ವಾಂಗ. ೯೩); ಅವನ ಮುಖ, ತಲೆ, ಮೈಯೆಲ್ಲ ರಾಡಿಯಾಯಿತು (ಶಿಂಗಾಹ. ೭೦).

**ರಾಡಿಯಾಟ** = ಕೆಸರನ್ನು ಎರಚಿ ಆಡುವುದು: ವಿಷಮಸಂಸಾರಸಾಗರದಲ್ಲಿ 'ರಾಡಿಯಾಟ'ವನಾಡುತ್ತ ... ಬಡಿದಾಡಿ (ವೀಶೀವಸಾ. ೦೨೬ ಕೃಸ್ತಾಪನ). [← ಮರಾ. ರಾಡ್, ರಾಡೀ, ರಾಹಡೀ./ತುಳು. ರಾಡಿ]

**ರಾಡು** (ನಾ). ೧. ಮುಖ್ಯದ್ವಾರದ ಮೇಲೆ ಅಡ್ಡಲಾಗಿ ಕಟ್ಟಿರುವ ಕಟ್ಟಡ,—ರಚನೆ: ಮೂಡಲ ಬಾಗಿಲ ರಾಡಿನಲ್ಲಿರುವ ಬಡಗ ಚಾರಿ ವೆಂಕಟಾಚಲನ ಕೊತ್ತಲದಲ್ಲಿ ೧ ... ಮೈಸೂರುಬಾಗಿಲ ರಾಡಿನಲ್ಲಿ ಜಯವಿಜಯ ಕೊತ್ತಲಗಳಲ್ಲಿ ೨ ... ಫಿರಂಗಿಗಳನ್ನಿರಿಸಿ (ಮಹಾಮಂ. I. ೦೦೩). ೨. ಬಾಗಿಲಿಗೆ ಅಡ್ಡಲಾಗಿ ಹಾಕುವ ಪಟ್ಟಿ; ಅಗಳಿ: ಪಾರುಪತ್ತಗಾರನು ಬಾಗಿಲನ್ನು ಹಚ್ಚಿ ರಾಡು ಹಾಕಿದನು (ಕಂಗಾಳ್ಕ. ೫೩೩).

[?./ತೆಲು. ರಾಡು = ಸ್ತಂಭ./ಇಂ. Rod = ಕಂಬಿ, ಪಟ್ಟಿ]

**ರಾಡುಬಾಗಿಲು** (ನಾ). ಅಗಲವಾದ ಬಾಗಿಲು (?): ಕಣವ ರಾಡು ಬಾಗಿಲ ಹತ್ತಿರಕ್ಕೆ ಹೋಗಿದ್ದ ಸಾಹುಕಾರ ಭದ್ರಪ್ಪನವರ ಕಾಲುಗಳ ಮೇಲೆ ಬಿದ್ದು (ದಿವಾಂ. ೬). [ರಾಡು$_1$ + ಬಾಗಿಲು (< ಬಾಗಿಲ್)]

**ರಾಣ** (ನಾ). ರಾಜ; ದೊರೆ: ಕಂಠೆಯಬಾರದ ನನ್ನಪಯ್ಯರಾಣನ ತನೆ(ನ)ಯಂ ವಿವೇಕನಿಧಿ ಕತ್ತವಹೀಭುಜನೆಂಬ ಪೆರ್ಮ್ಮಗಂ (ಎಕ. XVI. ೯-೯೦; 978). [< ಪ್ರಾ. ರಾಣ./ಸಂ. ರಾಜನ್]

**ರಾಣದೆಱೆ** (ನಾ). ರಾಜನಿಗೆ ಕೊಡಬೇಕಾದ ತೆರಿಗೆ: ಪಂಚಕಾರುಕ ರಾಣದೆಱೆಯಂ ಶ್ರೀಮದ್ರಾಜಗುರುಲೋಕಾಭರಣಗುರುದೇವರ್ಗ್ಗೆ ... ಬಿಟ್ಟ ಧರ್ಮ್ಮ (ಕಇಇ. IX-i. ೩೨೩-೩; 1107). [ರಾಣ + ತೆಱೆ$_3$]

**ರಾಣವೆ** 'ರಾಣುವೆ' ನೋ.

**ರಾಣಾರಂಪು** 'ರಣರಂಪ' ನೋ.

**ರಾಣಿ** (ನಾ). ರಾಜನ ಹೆಂಡತಿ; ಅರಸಿ: ಭಾಗಿಯಬ್ಬೆರಾಣಿಗೆ ಸುತ್ ××× (ಎಕ. XVIII. ೧೩೩-೩೦; 1146); ಭೂಮಿಗೆ ಕಡುಚಾಣೆ ರಾಣ ರವಾಣೀಯತೆಯಂ ಪಡೆದಿರ್ದಳಾಕ್ಷಣಂ (ಜಾರಹ. ೬-೧೦೦); ರಾಣಿಯರ ನವರತ್ನದ ತೊಟ್ಟಿಗಳಹುವರ್ತಿಯುಲಿ (ಕುವಲ. ೬-೯೨).

**ರಾಣಿಯ ವಾಸ**=ಅರಸಿಯು ವಾಸಮಾಡುವ ಸ್ಥಳ; ಅಂತಃಪುರ: ಈ ಬರ್ಪುದೇಂ ರಾಣಿಯ ವಾಸಂ ನೋಡಿಮೆಂಬಂತೆಸೆದುದು ಪಲವುಂ ತಂಡದಿಂ ಪೆಂಡವಾಸಂ (ಅಂತ್ಯ. ೧೦-೯೩); ಚಿತ್ರಮಂ ತಳೆದು ವಿಲಾಸಮಂ ಮೆಱೆವ ರಾಣಿಯ ವಾಸದ ಬಳ್ಳಿವಾಡದುಜ್ಜ್ವಳಮಣಿಭಿತ್ತಿ ಚೆಲ್ವನೊಳಕೊಂಡು (ಕಂಠೀರವಾ. ೧-೦೨೬). [< ಪ್ರಾ. ರಾಣೀ./ಸಂ. ರಾಜ್ಞೀ]

**ರಾಣಿಕ** (ನಾ). ಹೊಂದಾಣಿಕೆ; ಸಾಮಂಜಸ್ಯ: ರಾಜಸೂಯದ ಹೊಱಗೆ ನಿನ್ನದು ರಾಣಿಕವ ನಾನಱಿಯೆನೆಮ್ಮ ಭ್ರಾಭಿಮಾನಪ್ರಾಣದೊಡೆಯನಲೆ (ಕುವ್ಯಾಸ. ೨-೩೦); ಭೀಷ್ಮನ ವಾಣಿ ವಿಷವೈ ನಿನಗೆ ವಿದುರನು ರಾಣಿಕವ ನಿನ್ನಲ್ಲಿ ಬಲ್ಲನೆ (ಕುವ್ಯಾಸ. ೨೦-೦೨). [?]

**ರಾಣಿಗವಲ್ಲ** (ನಾ). ಒಬ್ಬಾತನ ಹೆಸರು: ರಾಣಿಗವಲ್ಲಂ ಪಲರಂ ತಳ್ತಿಱಿದು ಸತ್ತು ಸುಗತಿಗೆ ಸನ್ದಂ (ಎಕ. VII. ಹೊಪ್ಪ. ೨೩-೯; 934). [?]

**ರಾಣಿಗೆದ್ದಲು** (ನಾ). ಗೆದ್ದಲುಹುಳುಗಳಲ್ಲಿ ರಾಣಿಯಂತೆ ಇರುವ ಹುಳು; ಮೊಟ್ಟೆಯಿಡುವ ಹುಳು; ತಾಯಿಗೆದ್ದಲು: ರಾಣಿಗೆದ್ದಲು (ತಾಯಿಗೆದ್ದಲು) ಪ್ರತಿನಿಮಿಷ ಅರವತ್ತರಂತೆ ಲಕ್ಷಾಂತರ ಮೊಟ್ಟೆಗಳನ್ನಿಡುತ್ತದೆ (೬೬೮ಟ. ೦೦೭). [ರಾಣಿ + ಗೆದ್ದಲು (< ಗೆದಲ್)]

**ರಾಣಿಜೇನು** (ನಾ). ಜೇನುಹುಳುಗಳಲ್ಲಿ ರಾಣಿಯಂತೆ ಇರುವ ಹುಳು,– ಮೊಟ್ಟೆಯಿಡುವ ಹುಳು: ರಾಣಿಜೇನು ಮತ್ತು ಇರುವೆಗಳು ಬಾಯಿಯ 'ಫೆರೊಮೋನ್'ಗಳನ್ನು ಸ್ರವಿಸುತ್ತವೆ (೬೬೮ವ. ೯೩).

[ರಾಣಿ + ಜೇನು$_1$ (< ಜೇನ್$_1$)]

**ರಾಣಿವಾಸ**, ರಾಣೀವಾಸ (ನಾ). ೧. ಅರಮನೆಯಲ್ಲಿ ರಾಣಿಯರೂ ಹೆಂಗಸರೂ ವಾಸಿಸುವ ಭಾಗ; ಜನಾನಾ; ಅಂತಃಪುರ: "ರಾಣಿವಾಸವೆ ಪೆಂಡವಾಸ" (ಕುಮಾ. ೬.೨); ಬಾಣಸಿನ ಮಜ್ಜನದ ರಾಣಿವಾಸದ ಮನೆಗಳುಮಂ (ಕಂಕಥಾ. ೩-೯೭ ಪ); ರಾಗಿಯೆನಿಪ್ಪವನ ರಾಣಿವಾಸದ ಕಾಪುಂ

. . . ಅತ್ಯಂತ ದುಃಖಮಂ ಪುಟ್ಟಿಸುಗುಂ (ಧರ್ಮಾಮೃ. ೬-೦೦೨) ; ಕೀಚಕನು . . . ರಾಣಿವಾಸಕ್ಕೆ ಹೋದನು (ಶೀಶಿತಿ. IX, ೬). ೨. ಅಂತಃಪುರದಲ್ಲಿ ವಾಸಮಾಡುವ ಅರಸಿಯರು ಮುಂತಾದವರು : ಎಲೆ ದೇವ ನಿಮ್ಮ ತೊತ್ತಿರು ನೂರ್ವರುಂಟಲ್ಲಿ . . . ಎಂದು ತನ್ನಯ ರಾಣಿವಾಸಮುಂ ಕರೆಸುತ್ತೆ (ಇಹರ. ದೇ. ೩೫-೦೦) ; ಓವೊ ತಪೋವನವಧುಗಳ ಲಾವಣ್ಯಂ ರಾಣಿವಾಸಕರಿದೆನೆ ಪಡೆಯಲ್ಕೇವೇಳ್ದಪನು (ಶಾಕುಂತ. ೬-೦೭). ರಾಣೀವಾಸ: ೧. ಮಾಣಿಕ್ಯಸಿಂಹಾಸನದೊಳು ಕೃಷ್ಣ ಕುಳಿತು . . . ರಾಣೀವಾಸಕ್ಕೆ ವನವನೊಪ್ಪಿಸಿದ (ಪೋತಕ. ೯-೫೬) ; ರಾವಣನ ರಾಣೀವಾಸವು ಬಲು ದೊಡ್ಡದು (ಸಾತಿತ. ೯೬).

ರಾಣಿವಾಸವಾಗು = ಅಂತಃಪುರದವಳಾಗು ; ಅರಸಿಯಾಗು ; ರಾಣಿಯಾಗು : ಜನಕಮಹೀಶಸುತೆ ನಿನಗಂದು ಭವಬಾಣಾಸನದ ಭಾರಣೆಯ ಬಿಗುಹಿನ ಜಗುಳುದಲೆಯಿಂದ ದಾಶರಥಿಗಾ ರಮಣಿ ರಾಣೀವಾಸವಾದಳು (ತೊರರಾ. ೩-೭-೦೭). [ ರಾಣಿ + ವಾಸ$_2$ ]

**ರಾಣಿವೆ** ' ರಾಣುವೆ ' ನೋ.

**ರಾಣಿಸಾಲು** (ನಾ). ಇಸ್ಪೀಟುಆಟದಲ್ಲಿ ಒಂದು ಬಗೆ : ಯಾರೋ ಪರಸ್ಥಳದ ಜನ ; 'ರಾಣಿಸಾಲು' ಆಡುವುದಕ್ಕೆ ಬಂದಿದ್ದವರು (ಕಳುವು. ೫೫). [ ರಾಣಿ + ಸಾಲು$_2$ (< ಸಾಲ್$_2$) ]

**ರಾಣೀವಾಸ** ' ರಾಣಿವಾಸ ' ನೋ..

**ರಾಣುವೆ**, ರಾಣವೆ, ರಾಣಿವೆ, ರಾಣ್ಯ (ನಾ). ೧. ಪಡೆ ; ಸೈನ್ಯ ; ದಳ : " ರಾಣುವೆಯೆನೆ ಸೇನೆ " (ಥಾರಪ. ೬೦) ; ಏಕಛತ್ರರಾಜನು ಹಲವು ಛತ್ರುವ ಕೊಟ್ಟು ರಾಣುವೆಗೆ ಹೊಲಬಿಗರ ಮಾಡಿದಂತೆ (ಕುಶೋಗ. ೬೩) ; ರಾಮಚಂದ್ರುದಣಾಯಕ್ಕರು ಸಮಸ್ತರಾಣುವೆ ಪ್ರಾರುಪತ್ಯವನು ಚಿತ್ತಯಿಸಿ (ಕ್‍ಶಾಇ. IX-ii, ೯೬೦-೪ : 1465) ; ಪಿಲಾತನು ಯೇಸುವಿಗೆ ಮರಣಾಜ್ಞೆಯನ್ನು ವಿಧಿಸಿ ಅವನನ್ನು ರಾಣುವೆಯರಿಗೆ ಒಪ್ಪಿಸಿದನು (ಗೊರ್ಕೊ. ಶಾ. viii, ಮುನ್ನುಡಿ). ೨. ಪರಿವಾರ : ತನ್ನಿಂದ್ರಜಾಲದ ಮಹಿಮೆಗಿಹಿಮೆಯುಂ ನೋಡುವೆಂ ನಿನ್ನ ರಾಣುವೆಯೊಳುಳ್ಳೆಲ್ಲ ಬಲ್ಲವರ್ಗಳಂ ನಿಖಿಳಜನನಿಚಯಮಂ ಬರಿಸು (ಕಮ್ಮರಾ. ೯-೧೬). **ರಾಣವೆ**: ೧. ಸಕಲ ರಾವುತರಾಣವೆಯುಂ ಕಳುಹಿಸಿ (ಶಾರಂಗ. ೦೩). **ರಾಣಿವೆ** : ೧. ಸಕಲ ರಾಣಿವೆ ಸಹಾ ಯದುರುಗೊಂಡು (ಮುಪಳ. ೦೩೮). **ರಾಣ್ಯ** : ೧. ಭರದಿ ಮಾಡಲು ರಾಣ್ಯ ಕೈಕೊಂಡು ಪೊಗಳುವಕ್ಕರಿಗರ ಸಂದಣಿಯೊಳಗೆ (ಶ್ರಾವಚ. ೯೦-೨೫) ; ರಾಣ್ಯವೆಂದರೆ ಸೇನೆ ಎಂದು ಒಂದು ಕಡೆ ಪೋಲೀಸ್ ಅಥವಾ ಕಂದಾಚಾರದ ಸಿಬ್ಬಂದಿ ಎಂದು ಒಂದು ಕಡೆ ಅರ್ಥವಾಗಬಹುದು. ಆ ಕಾಲದಲ್ಲಿ ಎರಡು ಚಾಕರಿಯೂ ವಿಂಗಡಿಸಲ್ಪಡದೇ ಒಟ್ಟಿಗೇ ಸೇರಿಕೊಂಡಿರಬಹುದು (ಶಾಳಣಾ. ೯೬)..

ರಾಣೀರು = ಸೈನ್ಯನಪರು ; ಪಡೆವಳರು : ಬಂದರು ರೈತರು ರಾಣೀರು ಗುರಿಕಾರರು (ಕರ್ನಾಳ. ೨೭೮).

[ದ್ರಾ. ತಮಿ. ರಾಣುವ, ರಾಣು ; ಮಲ. ತೆಲು. ರಾಣುವ; ತುಳು. ರಾಣುವೆ, ರಾಣ್ಯ ]

**ರಾಣೆಯ** (ನಾ). ದೊರೆ ; ರಾಜ : ಸಾಳುವೆಯ ಬಲುಗಿದೇವರಾಣೆಯನು ನಾಗರಖಂಡನಾಡುಮಂ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ (ಎಕ. VII (S), ೩೬೦-೨೦ : 1175) ; ಶ್ರೀಮಂಡಳಿಕಮಹಾದೇವರಾಣೆಯರು (ಕೊರ್ಶಾ. ಶಾ. ೨೦-೨೮ ; 1278). [<ಪ್ರಾ. ರಾಣಯ]

**ರಾಣ್ಯ** ' ರಾಣುವೆ ' ನೋ.

**ರಾತಲು**, ರತಲು, ರಾತ್ಲು (ನಾ). ನಲುವತ್ತು ತೊಲಗಳ ಒಂದು ತೂಕ : ಇಂಗ್ರೇಜ ರಾತಲು ಎರಡಕ್ಕೆ ಪಕ್ಕಾಸೇರು ಒಂದು (ರಾಕೇಂದ್ರ. ೦೨೯) ; ಒಬ್ಬ ಪ್ರಾಯಸ್ಥನ ಸಮತೂಕಆಹಾರವೆಂದರೆ . . . ೧೨ ಔನ್ಸಿನಿಂದ ಒಂದು ರಾತಲಿನವರೆಗೆ ಶರ್ಕರಪಿಷ್ಟಗಳು ಇರಬೇಕು (ಆರುಶಾ. ೭೦). **ರತಲು** : ಒಂದು ರತಲು ನಾಲ್ವತ್ತುರೂಪಾಯಿ ತೂಕವುಳ್ಳದ್ದು (ಮುಂಬಪ್ರಾ. ೬೦). **ರಾತ್ಲು** : ಒಂದು ಖಂಡಿತೂಕದ ಗೋಧಿಹಾಳನ್ನು ಬೆಳೆಯಿಸಲು ಸಾಧಾರಣ ೧೨ ರಾತ್ಲು ಸಾರಜನಕವೂ . . . ೧೨ ರಾತ್ಲು ಪೊಟೇಸಿಯಂ ಕ್ಷಾರವೂ ಬೇಕಾಗುವುದು (ಚಾಂಕ್ರ. II, ೬೯೩) ; ಒಂದು ರಾತ್ಲು ಭಾರದ ಸಾಮಾನು ಹೊರಲಿಕ್ಕೆ ಸುಮಾರು ೫೦ ರೂಪಾಯಿ ತಗಲುತ್ತದೆ (ಬಿದಿಪ್ಪ. ೦೯೮). [←ಅರ. ರತ್ಲ್ ; ಹಿಂ. ರಾತುಲ್ ; ಮರಾ. ರತಲ್, ರತ್ತಲ್./ಪೋರ್ಚು. Arratel]

**ರಾತಾರಾತ್ರಿ** ' ರಾತೋರಾತು ' ನೋ.

**ರಾತೀಪು** ' ರಾತೀಬು ' ನೋ.

**ರಾತೀಬು**, ರಾತೀಪು (ನಾ). ೧. ಪುಷ್ಟಿಕರವಾದ ಆಹಾರ; ಸತ್ತ್ವವುಳ್ಳ ಆಹಾರ : (+). ೨. (ಸಾಮಾನ್ಯವಾಗಿ) ದಿನನಿತ್ಯದ ಆಹಾರ : ಮನೆಯಲ್ಲಿ ರಾತೀಬಿಗೆ ಗತಿಯಿಲ್ಲ, ರತ್ನಪಡಿಯ ವ್ಯಾಪಾರ (ಗಾದೆ). **ರಾತೀಪು** : ೧. ಆಡು, ಕುರಿ ಮುಂತಾದ ರಾತೀಪಿನ ಸಾಮಾನು ಹೇರಳವಾಗಿ ತರಿಸಿ (ರಾಕೇಂದ್ರ. ೭೯). ೨. ಹುಟ್ಟಿಸಿದ ದೇವರು . . . ನನಗೂ ರಾತೀಪು ಕೊಟ್ಟ (ಕಂಗೂಂ. ೭೫) ; ಮೂರುದಿನಗಳಿಂದ ರಾತೀಪು ತಿನ್ನದೇ ಹಸಿದಿರುವೆ (ಶ್ರೀರಾಮು. ೦೯).

[←ಅರ. ಹಿಂ. ರಾತಿಬ್ ; ಮರಾ. ರತೀಬ್]

**ರಾತು** (ನಾ). ಹುಲುಸು ; ಸೊಂಪು : ರಾತಾಗಿ ಬೆಳೆದ ಮೆಣಸೀಯ ಮೆಳೆಯಲ್ಲಿ ಮೋಸಮಾಡಿದಳು ಗೆಣೆಕಾತಿ (ಹಳ್ಳಿಯು. ೬೦). [ ? ]

**ರಾತೋರಾತ್** ' ರಾತೋರಾತು ' ನೋ.

**ರಾತೋರಾತು**, ರಾತಾರಾತ್ರಿ, ರಾತೋರಾತ್, ರಾತೋರಾತ್ರಿ, ರಾತ್ರಾರಾತ್ರಿ, ರಾತ್ರೋರಾತ್ರಿ (ಅ). ರಾತ್ರಿಯಲ್ಲಿಯೆ : ರಾತ್ರಿ ಮುಗಿಯುವುದರೊಳಗಾಗಿ : ತಿಮ್ಮಣ್ಣನಾಯಕನು ರಾತೋರಾತು ನಾಗತಿಯವರೊಡನೆ . . . ದುರ್ಗದ ಗುಡ್ಡಕ್ಕೆ ಬಂದನು (ಕಕ್ರಶಾ. ೬). **ರಾತಾರಾತ್ರಿ** : ಮುತ್ತಣ್ಣನು ಸಂಗಡಯಿದ್ದ ಕೊಡಗಜನ ಯಾವತ್ತು ತೆಗೆದುಕೊಂಡು ರಾತಾರಾತ್ರಿಯೇ ಕಣ್ಣೂರಿಗೆ ಹೊರಟುಹೋಗುವಲ್ಲಿ (ರಾಕೇಂದ್ರ. ೦೨). **ರಾತೋರಾತ್** : 'ರಾತೋರಾತ್' ಹೀಗೆ ಪಾತಕ ಹಿಡಿದು ಹೋಗುವ ಅವಸರ (ಮೂರುದಾ. ೨೨೦). **ರಾತೋರಾತ್ರಿ** : ತೆಂಗಿನ ಮಡಲಿನ ಸೂಟೆಯೊಂದನ್ನು ಉರಿಸಿಕೊಂಡು ರಾತೋರಾತ್ರಿ ಹೊರಟೆಬಿಟ್ಟಿದ್ದರು (ಜಗುಬ. ೬೦) ; ದ್ಯಾವಮ್ಮ ಇವತ್ತು ಬರೋದಿಲ್ಲ . . . ಅಂತ ಅವಳಣ್ಣ ತನಿಯ ಬಂದು ರಾತೋರಾತ್ರಿ ಹೇಳಿದ (ಹೊಸಕ್ಷಿ. ೯೮). **ರಾತ್ರಾರಾತ್ರಿ** : ಕಾಡಿನಲ್ಲಿ ಗುಟ್ಟಾಗಿ ರಾತ್ರಾರಾತ್ರಿ ಕುದುರೆಹಿಂಡನ್ನು ಮೇಯಿಸುವ ಸಲುವಾಗಿ ಅಟ್ಟಿಕೊಂಡು ಹೋಗುತ್ತಿದ್ದರು (ಕುಪರು. ೨೯೫) ; ರಾತ್ರಾರಾತ್ರಿಯೇ ಆತ ಕನ್ನಾನೂರಿಗೆ ಹೋಗಿ . . . ಪೋರ್ಚುಗಲ್ಲಿಗೆ ತನ್ನ ಮರುಪ್ರಯಾಣವನ್ನು ಆರಂಭಿಸಿದನು (ಕೃವಾಇ. II, ೨೨೬). **ರಾತ್ರೋರಾತ್ರಿ** : ರಾತ್ರೋರಾತ್ರಿ ಯುದ್ಧಸಿದ್ಧತೆಗಳು ನಡೆದವು (ರೂಢಿ).

[←ಮರಾ. ರಾತೋರಾತ್, ರಾತೋರಾತೀ]

**ರಾತೋರಾತ್ರಿ** ' ರಾತೋರಾತು ' ನೋ.

**ರಾತ್ಕೃತ** (ನಾ). [ಕಾಮಶಾ] ರತಿಕ್ರೀಡೆಯ ಒಂದು ಧ್ವನಿ : ಸೀತ್ಕೃತಂ ಹೂಂಕೃತಂ . . . ರಣಿತ ಮೃದುರತಮಾಹತಂ ದೂತ್ಕೃತಂ ಶ್ವಸಿತ ಮುರುರಾತ್ಕೃತಂ [ಪಾಠಾಂ. ದಾತ್ಕೃತಂ, ಫಾತ್ಕೃತಿ] ಎನಿಪೀ ಚಮತ್ಕೃತಿಯನಪ್ಪಿದು ರಮಿಸುವನೆ ಚವುರಂ (ಜನಪ. ೬-೫೦). [ಸಂ.]

**ರಾತ್ರಾರಾತ್ರಿ** ' ರಾತೋರಾತು ' ನೋ.

**ರಾತ್ರಿ** (ನಾ). ೧. ಇರುಳು ; ನಿಶೆ ; ರಜನಿ : "ತಮಾ . . . ಶ್ಯಾಮಾ. ರಾತ್ರಿಃ –ಈ ೧೯ ಇರುಳಿನ ಪೆಸರ್" (ಹಲಾಯು. ೦೯-೦೦೭) ; ಅಗ್ನಿಕುಂಡ

ದುರಿ ಪ್ರದೀಪ್ಯಮಾನವಾದುದು . . . ರಾತ್ರಿಯಾಕಾಶದಲಿ ಕಾಣ್ಬೊಂದು ತಾರಾಗರ್ಭದಂತೆ (ಶ್ರೀರಾಮ. ೧೦-೨೬೪). ೨. ಇರುಳಿನ ಕತ್ತಲೆ,– ಅಂಧಕಾರ. ೩. ಅರಿಸಿನ. [ಸಂ.]

**ರಾತ್ರಿಂಚರ** (ನಾ). ೧. ರಾಕ್ಷಸ : ನಡೆವಾಡದೊಳಗಿರ್ದ ರಾತ್ರಿಂಚರರ್ . . . ಎರಗಿ ಕಂಗೆಡಿಸಲ್ಕೆ (ಕೀಚಕಾ. ೦೪-೨೪). 'ರಾತ್ರಿಂಚರಪತಿ' ಪರಾ. ೨. ಕಳ್ಳ. ೩. ಪಿಶಾಚಿ ; ದೆವ್ವ. ೪. ಕಾವಲುಗಾರ.

**ರಾತ್ರಿಂಚರಪತಿ** (ನಾ). ರಾಕ್ಷಸರ ಮುಖಂಡ; ನೈಋತಿ : ರಾತ್ರಿಂಚರಪತಿ ಸಿತವಂಷ್ಟ್ರಾಂಪುರಂ ಪಾಶಿಪಾರ್ೋರುಮುಯುಖಿಂ . . . ಬಳೆದು ಬಳಸಿ ದಂತಾಯ್ತು ಬೆಳ್ದಿಂಗಳೆತ್ತಂ (ರಾಜಶೇ. ೦೩-೯೨). [ಸಂ.]

**ರಾತ್ರಿಚರ** (ನಾ). ೧. ಇರುಳಿನಲ್ಲಿ ಓಡಾಡುವವನು; ಕಳ್ಳ. ೨. ಪಿಶಾಚಿ ; ದೆವ್ವ. ೩. ನಿಶಾಚರ; ರಾಕ್ಷಸ : ಖಚರಸುರೋರಗನರ ರಾತ್ರಿಚರಚಮೂವಂದ್ಯ (ಚಿನಾರಿ. ೩-೩). ೪. ಕಾವಲುಗಾರ; ಪಹರಿ. [ಸಂ.]

**ರಾತ್ರಿಜ** (ನಾ). ಇರುಳಿನಲ್ಲಿ ಮೂಡುವುದು; ನಕ್ಷತ್ರ; ತಾರೆ. [ಸಂ.]

**ರಾತ್ರಿಜಲ** (ನಾ). ಮಂಜು ; ಕಾವಳ. [ಸಂ.]

**ರಾತ್ರಿಜಾಗರ** (ನಾ). ೧. ರಾತ್ರಿಯಲ್ಲಿ ಎಚ್ಚರವಾಗಿರುವಿಕೆ. ೨. ಇರುಳಿನಲ್ಲಿ ಎಚ್ಚರದಿಂದಿರುವ ಪ್ರಾಣಿ ; ನಾಯಿ : "ಕೌಳೇಯಕಂ ರಾತ್ರಿಜಾಗರಂ ಗ್ರಾಮಶಾರ್ದೂಲಂ . . . ನಾಯಿ " (ಶಬ್ದಗಣ. ೩೩-೮). [ಸಂ.]

**ರಾತ್ರಿಜ್ವರ** (ನಾ). ರಾತ್ರಿಯಲ್ಲಿ ಮಾತ್ರ ಬರುವ ಒಂದು ಬಗೆಯ ಜ್ವರ: ವಿಷ್ಣುಕ್ರಾಂತಿ, ಶುಂಠಿ . . . ಸಮಭಾಗ ಕಷಾಯವಿಟ್ಟು ಕೊಡಲು ರಾತ್ರಿ ಜ್ವರಂ ಮಾಣ್ಗುಂ (ಕಳವೈ. ೦೦೭). [ಸಂ.]

**ರಾತ್ರಿನಾಡಿ** (ನಾ). ಶರೀರದ ಬಲಭಾಗದಲ್ಲಿರುವ ನಾಡಿ : ಸ್ತ್ರೀ ಪುರುಷ ನಾಡಿಗಳಿಗೆ ದಿವಾನಾಡಿಗಳೆಂತಲೂ ರಾತ್ರಿನಾಡಿಗಳೆಂತಲೂ ವ್ಯವಹಾರ ಉಂಟು (ಹಠಾರ. ೪-೩ ಕಾಶ್ಯರ್ಪ). [ಸಂ.]

**ರಾತ್ರಿಭುಕ್ತವ್ರತಿಕ** (ನಾ). [ಜೈನ] ರಾತ್ರಿಯಲ್ಲಿ ಊಟಮಾಡದಿರುವ ವ್ರತವಾಡುವವನು : ದಿವದೊಳ್ ಸುರತವ್ಯಾಪಾರವಿನೋದಮನನ್ನ ಪಾನಮುಂ ರಾತ್ರಿಯೊಳಾಸೆವಡುವುದುಮನುಜ್ಜಿಸುಗುವ ವಿವೇಕಿಯಾಜಿನೆಯ ರಾತ್ರಿಭುಕ್ತವ್ರತಿಕಂ (ಸುಕುಮಾ. ೩-೩೦). [ಸಂ.]

**ರಾತ್ರಿಮಣಿ** (ನಾ). ೧. ಇರುಳಿನಲ್ಲಿ ರತ್ನದಂತಿರುವವನು : ಚಂದ್ರ. ೨. ಕರ್ಪೂರ. [ಸಂ.]

**ರಾತ್ರಿಯುದ್ಧ** (ನಾ). ಇರುಳಿನಲ್ಲಿ ನಡೆಯುವ ಕಾಳಗ : ಪ್ರಾಚೀನ ಕರ್ಣಾಟಕದಲ್ಲಿ . . . ರಾತ್ರಿಯುದ್ಧವು ಇರಲಿಲ್ಲವೆಂದೇ ಹೇಳಬಹುದು. ಆದರೂ ಒಂದೇ ಒಂದು ಶಾಸನದಲ್ಲಿ ಮಾತ್ರ ರಾತ್ರಿಯುದ್ಧಗಳು ('ಇರುಳ ಬವರ') ಬಹು ವಿರಳವಾಗಿಯಾದರೂ ನಡೆಯುತ್ತಿದ್ದುವೆಂಬುದಕ್ಕೆ ಸೂಚನೆ ಯಿದೆ (ಕರಾಆ. ೨೭೦). [ಸಂ.]

**ರಾತ್ರಿರಾಣಿ** (ನಾ). ಇರುಳಿನಲ್ಲಿ ಮಾತ್ರ ಅರಳಿ, ಸುವಾಸನೆಯನ್ನು ಬೀರುವ ಒಂದು ಬಗೆಯ ಹೂವು ಮತ್ತು ಅದರ ಗಿಡ : ಸೊಕ್ಕು ಜವ್ವನದ ರಾತ್ರಿರಾಣಿ ಮುಸುಗುಡಿಸಿ ಆಯ್ತು ಹಗಲು (ಸೂರ್ಯಕಾ. ೩೪-೦೪) ; ಬೆಳದಿಂಗಳಿರುಳಲ್ಲಿ ರಾತ್ರಿರಾಣಿಯ ಹೂವು ನಾಲ್ದೆಸೆಗು ಅಚ್ಚ ಸೌರಭ ಬೀರಿರೆ (ಕಾವಕೀ. ೦೭-೩೦೩). [ರಾತ್ರಿ + ರಾಣಿ]

**ರಾತ್ರಿವಿರಾಮ** (ನಾ). ಇರುಳು ಮುಗಿಯುವ ಕಾಲ ; ಮುಂಜಾವ : " ರಾತ್ರಿವಿರಾಮಂ ವ್ಯುಷ್ಟಂ " (ಚತುಕೋ. ೦೭-೬). [ಸಂ.]

**ರಾತ್ರೀಚರ** (ನಾ). ನಿರರುತಿ ; ನಿರ್ಋತಿ : ದಿನಮಣಿಯ ಪುತ್ರನೇ ಪಾಪ ಪುಣ್ಯವಿಚಾರಕಂ ನೆಗಳ್ದ ರಾತ್ರೀಚರನೆ ಪಾದುಕಾಧಾರನೆನೆ ಶಿವಂ ವೈಭವ ದೊಳಿರುತಿರ್ದನು (ಶಿಶುಪು. ೨೯-೩೪). [ಸಂ.]

**ರಾತ್ರೀಶ** (ನಾ). ರಾತ್ರಿಯ ಒಡೆಯ ; ಚಂದ್ರ : ದಿವಸೇಶ ರಾತ್ರೀಶಾಧಿಕಗ್ರಹತಾರಕಾವಳಿಯಧೀಶ ಸಕಲಮುನೀಶರುಂ . . . ನೆರೆದು (ಚಕಥ. ೨೪-೧೪) ; ಘೋರಾಂಧಕಾರರಕ್ಕಸನ ಪೆರ್ವಡೆಯ ಮೇಲೋರಂತೆ ದಂಡೆತ್ತಿ ಬಹನೋ ರಾತ್ರೀಶನೆನೆ (ಪವಪೋ. ೨೩-೩೪). [ಸಂ.]

**ರಾತ್ರೆ** (ನಾ). ರಾತ್ರಿ ; ಇರುಳು : ಚಿಕ್ಕದೇವರಾಜರು ರಾತ್ರೆ ಹಗಲು ಫವುಜು ಕಳುಹಿಸಿ (ರಾತೀಂವ್ರ. ೪). 'ನಡುರಾತ್ರೆ' ಪರಾ. [< ಸಂ. ರಾತ್ರಿ]

**ರಾತ್ರೆರಾಣಿ** (ನಾ). = ರಾತ್ರಿರಾಣಿ : ಮನೆಯ ಮುಂದೆಯೇ ಸರ್ಪಗಳಿಗೆ ಪ್ರಿಯವಾದ ದೇವರ ಮುಡಿಗೆ ಅರ್ಹವಾದ ಶಾವುಸಪುಷ್ಪ – ರಾತ್ರೆರಾಣಿ (ಸಂಸ್ಕಾರ. ೦೭). [ರಾತ್ರೆ + ರಾಣಿ]

**ರಾತ್ರೋರಾತ್ರಿ** ' ರಾತೋರಾತು ' ನೋ.

**ರಾತ್ರ್ಯಂಧ** (ನಾ). ೧. ರಾತ್ರಿಯಲ್ಲಿ ಕಣ್ಣು ಕಾಣಿಸದವನು ; ಇರುಳುಗಣ್ಣ : ಕೌಶಿಕಂಗಳ್ಗಂ ನಮಗಂ ದುರ್ಧರಮಪ್ಪ ವೈರಮುಂಟಾಗಿಯುಂ ನಾವೆಲ್ಲರುಂ ರಾತ್ರ್ಯಂಧರುವಂಪರೆಲ್ಲರುಂ ದಿವಾಂಧರುಮಪ್ಪುದೆಙಂ ಸಂಧಾನಮೆಂತುಮಪಾಗಲರಿಯದು (ಪಂತಂ. ೨೨೦-೨೦). ೨. ರಾತ್ರಿಯಲ್ಲಿ ಕಣ್ಣು ಕಾಣಿಸದಿರುವ ಕಾಗೆ ಮುಂತಾದ ಪಕ್ಷಿ. 'ದಿವಸಾಂಧ' ಪರಾ. [ಸಂ.]

**ರಾತ್ಲು** ' ರಾತಲು ' ನೋ.

**ರಾದ್ಧ** (ಗು). ೧. ಒಲಿಸಿಕೊಂಡ. ೨. ಸಾಧಿಸಿಕೊಂಡ ; ಸಿದ್ಧಿಯನ್ನು ಪಡೆದ. ೩. ದೊರಕಿಸಿಕೊಂಡ ; ಪಡೆದ. [ಸಂ.]

**ರಾದ್ಧಾಂತ** (ನಾ). ೧ [ತರ್ಕಶಾ] ವಾದವಿವಾದಗಳ ನಿರ್ಣಯ ; ಸಿದ್ಧಾಂತ : " ಕೃತಾಂತಃ, ರಾದ್ಧಾಂತಃ, ಸಿದ್ಧಾಂತಃ, ಸಮಯಃ — ಈ ೪ ಸಿದ್ಧಾಂತದ ಪೆಸರು " (ಕಲಾಯು. ೩-೦೦) ; ತತ್ತ್ವಭಾವನೆಯುಂ ಧ್ಯಾನಮುಮೆಂದುಮೊದುವವರಾ ರಾದ್ಧಾಂತಮುಂ ತತ್ತ್ವಯೋಜನಮುಂ ತುಪ್ಪದ ಕಾದ ಪಾಲಪೊಲದೇಂ ಸಂಭಿನ್ನಸಂಯೋಗಮೋ (ಶಾಂತಿಪು. ೬-೦೯೬); ಸಕಳಜೀವದಯಾಪರ ಜೈನಮಾರ್ಗರಾದ್ಧಾಂತಪಯೋಧಿಗಳ್ (ಎಕ. II. ೦೦೭-೦೦೭ ; 1123). ೨. (ಆಲಂ) ರಂಪ ; ಗೊಂದಲ ; ಕೋಲಾಹಲ ; ನಾಳೆ ನಿನ್ನಣ್ಣ ಬಂದಾಗ ರಾದ್ಧಾಂತ ಆಗಬಾರದು (ಮುಚರುದಾ. ೩೦೪); ಮನೆಯಲ್ಲಿ ಈ ಮಾತಿನಿಂದ ರಾದ್ಧಾಂತವಾಗುತ್ತದೆ (ಮುಕ್ಕ್ಯ.ರಿ. ೨೭).

**ರಾದ್ಧಾಂತಚಕ್ರಾಧಿಪ** = ವಾದವಿವಾದ ಮಾಡುವುದರಲ್ಲಿ ಪ್ರಮುಖನಾದವನು ; ಒಂದು ಬಿರುದು : ಲೋಕಕ್ಕೆ ಸದ್ಗುರುವಾದಂ ನಯಕೀರ್ತ್ತಿದೇವಮುನಿಪಂ ರಾದ್ಧಾಂತಚಕ್ರಾಧಿಪಂ (ಎಕ. II, ೩೩-೯೦ ; 1176).

**ರಾದ್ಧಾಂತಪಾರಗ** = ಸಿದ್ಧಾಂತದಲ್ಲಿ ಪರಿಶ್ರಮವುಳ್ಳವನು: ರಾದ್ಧಾಂತಪಾರಗಂ ಗುಣವೃದ್ಧಂ ಮಾರ್ಗಪ್ರಭಾವನಾರ್ಥದಿನಿರ್ದಂ (ಕಂಪ್ರಶ್ನೆ. ೯-೨೦).

**ರಾದ್ಧಾಂತವಿದ** = ರಾದ್ಧಾಂತಪಾರಗ : ತತ್ತ್ವನಿರ್ಣ್ಣಕ್ತ ರಾದ್ಧಾಂತವಿದಂ (ಸೌಇಇ. XX. ೩೦-೨೯ ; ೪).

**ರಾದ್ಧಾಂತೇಶ** = ರಾದ್ಧಾಂತಚಕ್ರಾಧಿಪ : ತಪೋನಿಧಿ ಮುನಿಚಂದ್ರಬ್ರತಿಪನಖಿಳರಾದ್ಧಾಂತೇಶಂ (ಎಕ. VII. ಶಿವಮೊ. ೫೭-೩೩ ; 1115). [ಸಂ.]

**ರಾಧ** (ನಾ). ೧. ಅನುಗ್ರಹ ; ದಯೆ. ೨. ವೈಶಾಖಮಾಸ : " ವೈಶಾಖಃ, ಮಾಧವಃ, ರಾಧಃ — ೩ ವೈಶಾಖಮಾಸದ ಹೆಸರುಗಳು" (ಸಿದ್ಧಾಂತಿ. ೪೦). ೩. ಏಳಿಗೆ ; ಅಭ್ಯುದಯ. [ಸಂ.]

**ರಾಧನ** (ನಾ). ೧. ಪ್ರಾಪ್ತಿ ; ಲಾಭ. ೨. ತಣಿವು ; ತೃಪ್ತಿ. ೩. ನೆರವೇರಿಕೆ. ೪. ಅನುಗ್ರಹ ಸಂಪಾದನೆ. ೫. ಸಾಧನೆ. [ಸಂ.]

**ರಾಧಾತನೂಜ** (ನಾ). ರಾಧೆಯ ಮಗ ; ಕರ್ಣ : ಗಂಗಾಕುಮಾರನ ಕಳಶಜನ ರಾಧಾತನೂಜನ ರಂಗಭೂಮಿಯಿದು (ಕುಮಾ.ಕ. ೩-೨೩). [ಸಂ.]

**ರಾಧೆ** (ನಾ). ೧. ಏಳಿಗೆ ; ಅಭ್ಯುದಯ. ೨. ಮಿಂಚು. ೩. ನೆಲ್ಲಿಗಿಡ. ೪. ವೈಶಾಖಮಾಸದ ಹುಣ್ಣಿಮೆ. ೫. ಕರ್ಣನ ಸಾಕುತಾಯಿ.

ಬಾಳನಂ . . . ಎತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡೆ (ಶಂಕಪು. ೦-೯೬ ವ). ೬. ಶ್ರೀಕೃಷ್ಣನ ನೆಚ್ಚಿನ ಪ್ರೇಯಸಿಯಾದ ಒಬ್ಬ ಗೋಪಿಕಾಸ್ತ್ರೀ : ನೋಡುತಿರಲು ಒಳಗಣ್ಣನಿದಿರು ನೀ ಹೇಗೊ ರಾಧೆಯಾದೆ (ಕೃಷ್ಣ ಕು. ೨೬-೨೨). ೭. ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿನಾರನೆಯದು; ವಿಶಾಖಾನಕ್ಷತ್ರ: "ರಾಧೆಯು ವಿಶಾಖೆ" (ಮಂಗರಾ. ೦೨-೭); ಬಾಗಿಯಂತೆ ನೆಟಿ ಕೊಟ್ಟಿಸೆ ದೊಪ್ಪಿತು ರಾಧೆಯಂತೆ ಸಂದಿಸಿ ಮುಡಿ ಮೇಲೆ ಕೊಂಕಿದುದು (ಹುಕೋಕ. ೩-೭೬). [ಸಂ. ರಾಧಾ]

**ರಾಧೇಯ** (ನಾ). = ರಾಧಾತನೂಜ : ಕೋಳ್ಪೆಂದರಿದೀಡಾಡಿದನಿಂದ್ರಂಗೆ ಕವಚಮಂ ರಾಧೇಯಂ (ಶಂಕಪು. ೦-೦೦೦) ; ಮಱಿದಪ್ಪೊಡಂ ತೊಡಳ ನುಡಿದಱಿಯನಪ್ಪುದಱಿಂ ಸತ್ಯರಾಧೇಯನುಮಂ . . . ಎನಿಸಿ (ಪುಕ್ಯಪು. ೦-೬೨ ವ). [ಸಂ.]

**ರಾಪ**[1] (ನಾ). ಕಬ್ಬಿನ ರಸವನ್ನು ಹೆಚ್ಚಾಗಿ ಕುದಿಸಿ ಮಾಡಿದ ಪಾಕ : ಆ ರಸವನ್ನು ತುಸು ಕುದಿಸಿದರೆ ಕಾಕವಿಯಾಗುವುದು, ಅದಕ್ಕೂ ಹೆಚ್ಚು ಕುದಿಸಿದರೆ ರಾಪವಾಗುವುದು (ಮುಂಬಯಿ. ೩-೯೩).

[ ← ಹಿಂ. ಮರಾ. ರಾಬ್ ].

**ರಾಪ್ಪ**(ನಾ). ಒಬ್ಬಾತನ ಹೆಸರು : ಬಂಕೇಯಂಗೆ ಧರ್ಮ್ಮಮೆಕ್ಕಿನ್ನು ಕುನ್ದಟ್ಟಿಯುಂ ರಾಪನುಮ್ಮಿಟ್ಟು (ಎಇ. VII, ೨೦೩-೦೦ ; 874). [ ? ]

**ರಾಪಣ** (ನಾ). (?) : ಆ ಪುರದ ತರದ ವಿಸ್ತರದ ಸೌಧೋತ್ಕರದ ಶ್ರೀಪುರದ ರಾಪಣದ ಸಿಂಗರದ ಮಂಗಳದ ಗೋಪುರದ ಮತ್ತವಾರಣದ ತೋರಣದ ಉಱಿ ಮೆಱಿವ ವೃಷಭಧ್ವಜಗಳು (ಗುಳಕ. ೦-೩೩). [ ? ]

**ರಾಪಮ್ಮ** (ನಾ). ಒಬ್ಬಾತನ ಹೆಸರು : ತದಸೂರಾ ಸಿಜ್ಜಮಡ್ಡಗಿ ರಾಪಮ್ಮನ್ ಸಿರಿವಾಳ್ಳ ಮಾಡಿದಾನ್ (ಸೌಇಇ. XX, ೬-೩; ಹು. ೩ನೆಯ ೬೩).

[ ರಾಪ್ಪ[2] + ಅಮ್ಮ[1] ]

**ರಾಪಾಟ** (ನಾ). ಆರ್ಭಟ ; ಅಬ್ಬರ : ಅವರ ರಾಪಾಟ ಹೇಳತೀರದು (ಲೂಂ). [ ರಾಪು + ಆಟ ]

**ರಾಪಾಡು** (ಕ್ರಿ). ಆರ್ಭಟಿಸು ; ಕೂಗಾಡು : ಅವನನುಂ ಖಂಡಿಸಲಡ ಹಾಯ್ದು ರಾಪಾಡಿ ಶಿರವನು ಕುಟ್ಟಿ ಮೇಣ್ ತೋರಣಕೆ ಕಟ್ಟಿದಂ ದಿಟ್ಟ ತನದಿಂ (ಪಪಪು. ೩೬-೯೭). [ ರಾಪು + ಆಡು[1] ]

**ರಾಪಿಸು** (ಕ್ರಿ). ಕಂಗೊಳಿಸು ; ಶೋಭಿಸು : ಅಂಗನೆಯ ರೂಪು ರಾಪಿಸುತಾ ಕಂಗಳಿಂವರೆದು ಕುಡಿವಳಂತ ವಾಲಗರಂಗದಿ ಬಂದು ನಿಂದಿಹಳು (ಸೌಂದರ್ಯ. ೩-೨೯). [ ರಾಪು + - ಇಸು[3] ]

**ರಾಪು** (ನಾ). ೧. ದಿಗಿಲು ; ಅಂಜಿಕೆ ; ಭಯ : 'ರಾಪುಗೊಳ್' ಪರಾ. ೨. ಆರ್ಭಟ ; ಜೋರು : ಮಳೆಯ ರಾಪಿಗೆ ಮನುಷ್ಯರು ಹತ್ತಿರ ಸುಳಿಯದ ಹಾಗೆ ಮಾಡಿದ (ಮರಳು. ೯೦) ; ನಿನ್ನಪ್ಪನ ಬಾಯ ರಾಪಿಗೆ ಯಾರು ಹೆದರುತ್ತಾರೆ ? (ಮೂರುದಾ. ೯೭) ; ಅದರ ಬಾಯಿ ಕಟ್ಟಿಸಿ, ಕಣ್ಣಿಗೆ ಪೊಳ ಹೊಡೆದು 'ರಾಪು ನಿಲ್ಲಿಸುತ್ತೀನೆ' ಎಂದ ಇವರ ಹಮ್ಮು ಅಡಗಿತು ! (ಸ್ವಕ್ಷೋ. ೨೭). 'ರಾಪಾಡು' ಪರಾ. ೩. ಕಾಂತಿ ; ಶೋಭೆ : 'ರಾಪಿಸು', 'ರಾಪುದೋರು' ಪರಾ. ೪. ಸೊಕ್ಕು ; ಗರ್ವ ; ಜಂಭ: ಈ ಮೊಗೇರ ಮಕ್ಕಳಿಗೆ ರಾಪು ಹೆಚ್ಚಿಯೇ ಈ ವರ್ಷ ಕಡಲಿಗೆ ಬೈಗೆಮಿಾನು ಬಾರದೆ ಇದ್ದುದು (ಮರಳು. ೩೩೬).

**ರಾಪಾಗು** = ಭಯಪಡು ; ಗಾಬರಿಬೀಳು : ಕಾಪುಗಾರರು ಬಿಟ್ಟು ಪೋದರು ಅವರೆಲ್ಲ ರಾಪಾಗಿ ಮನ ಬಂದ ಕಡೆಗೆ (ಕಠೋ. ೩೯೭-೩).

**ರಾಪು ಮಾಡು** = ೧. ಗಾಬರಿಯನ್ನುಂಟುಮಾಡು ; ಹೆದರಿಸು : ರಾಪುಮಾಡದೆ ಬಿಡನು ಯಮನು (ಶಂಪು. ೬೮). ೨. ಜೀರ್ಣೋದ್ಧಾರಮಾಡು ; ಸರಿಪಡಿಸು : ಆ ಗ್ರಾಮಮು ಬಿಲವಾಗಿಯಿರಲಾಗಿ ಆ ಗ್ರಾಮುವನೂ ರಾಪುಮಾಡಿ ಆ ಗ್ರಾಮದ ಕುಂಟೆಯನೂ ಕಟ್ಟಿಸಿ (ಸೌಇಇ. IX-ii, ೪೭೪-೦೦ ; 1497). [ದೇ. ತುಳು. ತೆಲು. ರಾಪು]

**ರಾಪುಗೊಳ್** (ಕ್ರಿ). ಗಾಬರಿಯಾಗು ; ಹೆದರು : ಬಱಿಯ ಬಿಲ್ದನಿಗೆ ರವಣನ ತಾಗಿತಂಬೆಂದು ನೆಱಿ ಮೋಹದಿಂ ಪೊರಳ್ದುವು ಕೆಲವು ರಾಪು ಗೊಂಡೊಂದಿದಿನಿಯನನಗಲ್ದು ಮಱುಗಿ ಮದನಾಸ್ತ್ರದಿಂದಿರದೆ ಬಿದ್ದುವು ಕೆಲವು (ಕೈಪಿಶಾ. ೨೮-೩೦). [ ರಾಪು + ಕೊಳ್[1] ]

**ರಾಪುದೋರು** (ಕ್ರಿ). ಶೋಭಿಸು ; ಕಂಗೊಳಿಸು : ಈ ಪರಿಯಾಲಿ ರಾಪುದೋರುತ ಸಿಂಹಪೀಠದಿ ಕುಳಿತು ಸಂತಸದಿ (ಸೌಂದರ್ಯ. ೨-೩); ರಾಪುದೋರುವ ಕನಕನೂಪುರಂದುಗೆಗಳ . . . ಇತ್ತು (ದೇವೀಕೃ. ೨೪).

[ ರಾಪು + ತೋರು (< ತೋಱು) ]

**ರಾಭಸಿಕ** (ಗು). ದುಡುಕಿನ ; ಆತುರದ : ಕಾಲೋಚಿತಸಂಧಿವಿಗ್ರಹದೊಳೊಂದಂ ಕಾರ್ಯಮಂ ಪ್ರಾಪ್ತಮಪ್ಪುದನಾಪ್ತೋಕ್ತಮನುಂತೆ ರಾಭಸಿಕ ವಾಕ್ಯಾತಕ್ಕೆ ಮೆಯ್ದಾರ್ಪುದೇ (ಶಾಂತಿಪು. ೩-೭೩). [ಸಂ.]

**ರಾಭಸಿಕವೃತ್ತಿ** (ನಾ). ದುಡುಕುತನ ; ಆತುರದ ಸ್ವಭಾವ : ಆ ಭವದೊಳ್ ತಾಯಾಗಿಯುಮಿಾ ಭವದೊಳ್ ತಂದೆಯಾಗಿಯುಂ ನೀನೆವಿಪ್ಪಾ ರಾಭಸಿಕವೃತ್ತಿಯುಂ ವಾಕ್ಟ್ವಭವದಿಂ ಕಳೆದು ಪೊರೆದೆಯ್ದುವ್ವ ನಸುಂದ್ಯಾ (ಶಾಂತಿಪು. ೬-೯೦). [ಸಂ.]

**ರಾಭೆಯ** (ನಾ). ಒಬ್ಬಾತನ ಹೆಸರು : ಮಾಣಿಕ್ಯಾಂತರನೇಕರಂ ತವಿಸಿ ವಸ್ತುಗಳಂ ಮದವಾರಣಂಗಳಂ ಕಾನ್ತೆಯರಂ ತುರಂಗಚಯಮಂ ಪಿಡಿದಿತ್ತೊಡೆ ಮೆಚ್ಚಿ ರಾಭೆಯಂ ದನ್ತಿಯನಿತ್ತನಂತದುವೆ ಪೇಳದೆ ಪಟ್ಟಗ ನಿನ್ನ ಗೆ[ಲ್ಲ]ವಂ (ಸೌಇಇ. XX, ೦೬-೦೪ ; 980). [ ? ]

**ರಾಮ** (ಗು). ೧. ಸಂತೋಷಗೊಳಿಸುವ ; ಆನಂದಕರವಾದ. ೨. ಮನೋಹರವಾದ ; ಸುಂದರವಾದ. ೩. ಕಪ್ಪಾದ ; ಕಪ್ಪನೆಯ : 'ರಾಮಧಾನ್ಯ' ಪರಾ. ೪. ಬಿಳಿಯ; ಬಿಳಿದಾದ : 'ರಾಮಗುಳ್ಳ', 'ರಾಮತುಳಸಿ' ಪರಾ. (ನಾ). ೫. ಮನೋಹರವಾದುದು ; ಸುಂದರವಾದುದು : ದೆಳತಾಬ್ಜಪ್ರಸರಂ ಸರಂ ಕುಸುಮಮಾಲಾರಾಮಮಾರಾಮಂ (ಜಗಿ. ೨-೨). ೬. ಕತ್ತಲೆಯ ಬಣ್ಣ ; ಕಪ್ಪು. ೭. ಬಿಳಿಯ ಬಣ್ಣ ; ಶ್ವೇತ ವರ್ಣ : "ಬೆಳದಜ್ಜಿಯುಂ ಶುಚಿಯೆಂಬುದು, ರಾಮಮುಮೆಂಬುದು" (ಶಬ್ದಮ. ೦೩೪-೨೨). ೮. ಹಸುರು; ಹರಿದ್ವರ್ಣ : "ಶ್ಯಾಮಂ, ಶ್ಯಾಮಳಂ, ರಾಮಂ, ಪಾಲಾಶಂ, ಹರಿತಂ, ಹರಿತ್_ಈ ೬ ಪ(ಹ)ಸುರ್" (ಶಬ್ದಮ. ೧೨೦-೯೯). ೯. ಶುಚಿಯಾದುದು; ನಿರ್ಮಲವಾದುದು. ೧೦. ಸಂತೋಷ ; ಆನಂದ. ೧೧. ವಿಷ್ಣುವಿನ ಆರನೆಯ ಅವತಾರ : ಜಮದಗ್ನಿಯ ಮಗ ; ಪರಶುರಾಮ : ಕೂರಿ[ಸೆ] ಗುರುಶುಶ್ರೂಷೆಯೊಳಾ ರಾಮನನುಗ್ರಹಶುಪಾಟಿತ ರಿಪುವಂಶಾರಾಮನನಿಷುವಿದ್ಯಾಪಾರಗನನಿಸಿದುದು ಬಳ್ಕೆ ವೈಕರ್ತನನಾ (ಶಂಕಪು. ೦-೦೦೪) ; ಸಾಗರವ ಕಾಸರ ಸೆಣಸುವಂತಾಯ್ತುಱಿಯುಬಹುದಿನ್ನೆನುತ ಕೊಡಲಿಯ ರಘುಡಿದನಾ ರಾಮ (ಕೂರಣಾ. ೦-೧೭-೦೦). ೧೨. ವಿಷ್ಣುವಿನ ಏಳನೆಯ ಅವತಾರ ; ದಶರಥನ ಮಗ ; ರಾಘವ : ರಾಮನಕಟ್ಟಾಹಸುಳೆ ಭಾರ್ಗವರಾಮನಗ್ಗದ ಜವನ ಜಾಜು (ಕೂರಣಾ. ೦-೦೭-೦೨) ; ರಾಮನೊಡಗೂಡಿ ಬಳೆದರು ಮೂವರನುಜರುಂ (ಶ್ರೀರಾಮಪ. ೦೯-೪೪೪) ; ರಾಮನಂತಹ ರಾಜನಿಲ್ಲ ಕಾಮನಂತಹ ಪುರುಷನಿಲ್ಲ (ಗಾದೆ). ೧೩. ವಿಷ್ಣುವಿನ ಎಂಟನೆಯ ಅವತಾರವಾದ ಕೃಷ್ಣನ ಅಣ್ಣ ; ಬಲರಾಮ ; ವಸುದೇವನ ಮಗ : "ಬಲದೇವಃ . . . ರಾಮಃ, ಕಾಮಪಾಲಃ . . . ಹಲಾಯುಧಃ_ಈ ೧೮ ಬಲದೇವನ ಪೆಸರ್" (ಶಬ್ದಮ. ೬-೨೦) ; ಒಲ್ದೀಕ್ಷಿಸಿದಂ ನಿಜಾಗ್ರಭವನಂ ದೈತ್ಯಾರಿ . . . ಪಿಜಯಲಕ್ಷ್ಮೀಗಾರಾಮನಂ ರಾಮನಂ (ಜಗಿ. ೪-೩೬). ೧೪. ವರುಣ :

ರಾಮೋತ್ಕಂಠೆ' ಪರಾ. ೧೫. ಕುದುರೆ ; ಅಶ್ವ. ೧೬. ಒಂದು ಬಗೆಯ ಜಿಂಕೆ. ೧೭. ಪ್ರಿಯ ; ಇನಿಯ : ಅಭಿವರ್ಣಿಪೆಂ ರಣಯಶಶ್ರೀರಾಮನಂ ಭೀಮನಂ (ಗದಾಯು. ೦-೩೨). ೧೮. [ವೀಶೈ] ಪಂಚಾಚಾರ್ಯರಲ್ಲಿ ಒಬ್ಬ : ಏಕೋರಾಮ : ರೇಣುಕ ರಾಮ ಪಂಡಿತ ಮಹಾಮರುಳಾರ್ಯರ . . . ಮಾಣದೆ ಬಣ್ಣಿಸುತ್ತಬಿಗಿ ಮೇಣ್ಪಡೆವೆಂ ಪರಮಾರ್ಥಸಿದ್ಧಿಯಂ (ರಾಶಲೀ. ೦-೦೬). [ಸಂ.]

**ರಾಮಕಲಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ವಿರಾಗವು ರಕ್ತದ ಒತ್ತಡವನ್ನೂ, ತಿಲಂಗ್, ಬಿಲಾವಲ್, ಮುಲ್ತಾನಿ, ರಾಮಕಲಿ ರಾಗಗಳು ಕ್ಷಯರೋಗವನ್ನೂ. . . ಗುಣಪಡಿಸುವುವೆಂಬ ಭಾವನೆ ಉತ್ತರ ಭಾರತದಲ್ಲಿದೆ (ಶಾರದ. ೩೯೯). [ಸಂ. ರಾಮಕಲೀ]

**ರಾಮಕ್ರಿಯೆ** (ನಾ). [ಸಂಗೀತ] ಒಂದು ರಾಗದ ಹೆಸರು : ಬಳಿಕ ಸಪುಸ್ತರಾಗಂಗಳೊಳಗೆ ರಾಮಕ್ರಿಯೆ [ಪಾಠಾಂ. ರಾಮಕ್ರಿ] . . . ಮಧ್ಯಮಾವತಿಯೆಂಬ ಮೂವತ್ತಾಱುರಾಗಂಗಳು (ಬಪೇಕ. ೨೩೯).

[ಸಂ. ರಾಮಕ್ರಿಯಾ]

**ರಾಮಕ್ರೀ** (ನಾ). [ಸಂಗೀತ] ಒಂದು ರಾಗದ ಹೆಸರು : ಲಲಿತಾ ಹರಿನಾಟ ರಾಮಕ್ರೀರಾಗ ತೋಡಿ ಮಕರಂದಿ ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹರಿಶ್ಚ. ೨-೯೦). [ಸಂ.]

**ರಾಮಗಬ್ಬು** (ನಾ). ಒಂದು ಬಗೆಯ ಬಿಳಿಯ ಕಬ್ಬು : ಕಬ್ಬಿನ ಜಾತಿಗಳು—ರಸದಾಳಿ, ರಾಮಗಬ್ಬು, ಕರಿಗಬ್ಬು, ಬೆತ್ತಗಬ್ಬು . . . ಎಂದು ಅನೇಕವುಂಟು (ಶುಂಠಿಯು. ೩-೨೦೦). [ರಾಮ + ಕಬ್ಬು$_2$ (<ಕರ್ಬು$_1$)]

**ರಾಮಗುಳ್ಳ** (ನಾ). ಒಂದು ಬಗೆಯ ಬಿಳಿಯ ಬದನೆ : ರಾಮಗುಳ್ಳ, ಕಿರೀಗುಳ್ಳ (ವೃಶಿಗ. ೬೦-೦೯೩೦) ; ಆ ತುಸೋಗೆಯೆಲೆಯ ಕಡ್ಡಿ . . . ರಾಮಗುಳ್ಳ, ಶುಂಠಿ, ಕಟುಕರೋಹಿಣಿ ಇವುಗಳನ್ನು ಸಮಭಾಗ ಕಷಾಯ ಕಾಯಿಸಿಕೊಡಲು ಶ್ಲೇಷ್ಮಜ್ವರವು ಗುಣವಾಗುವುದು (ಸಕಲ. ೯೦).

[ರಾಮ + ಗುಳ್ಳ]

**ರಾಮಗೋಟು** (ನಾ). ಒಂದು ಬಗೆಯ ಸಸ್ಯ : ಪಿಂಡಿಕಾಯಿ. ರಾಮಗೋಟು (ವೃಶಿಗ. ೩೩-೨೦೦೯). [ ? ]

**ರಾಮಚ** (ನಾ). ಒಂದು ಬಗೆಯ ಔಷಧೀಸಸ್ಯ : ಪರ್ಪಾಟಕ, ರಾಮಚದ ಚೂರ್ಣ . . . ಸಕ್ಕರೆ ಸಹ ಕೊಡಲು, ಸಕಲಕ್ಷಯವ್ಯಾಧಿ . . . ಹರ (ಬಿಪ್ರ. ೨೭). [ ? ]

**ರಾಮಚಂಗಿ** (ನಾ). ಒಂದು ಬಗೆಯ ಫಿರಂಗಿ,— ತೋಪು : ಹಿರಿಯ ತೋಪುಗಳು, ಸಣ್ಣ ತೋಪುಗಳು, ರಾಮಚಂಗಿಗಳು, ರಾಮಬಾಣಗಳು, ಮತಾಪುಗಳು. . . ರಣಗಾಡಿಗಳು ಮೊದಲಾದ ಯುದ್ಧೋಪಕರಣಗಳನ್ನೆಲ್ಲ ಎಣಿಸಿದುದಾಯಿತು (ಬಿಕ್ಕರು. ೦೨). [← ಹಿಂ. ರಾಮಚಂಗೀ]

**ರಾಮಚರಿತ** (ನಾ). ರಾಮನ ಕಥೆ : ರಾಮಚರಿತಾರ್ಥವನು ಕೇಳ್ದಪ ರಾಮನಿಗೆ ಸರಿಯಹನು ಜಗದೊಳು ರಾಮನಾಮದ ಮಹಿಮೆಯನು ಬಣ್ಣಿಸುವಡರಿದು (ತೊರರಾ. ೬-೩೩-೬೦ ಅಶ್ವದ್ಯ). [ಸಂ.]

**ರಾಮಟಂಕಿ**, ರಾಮಟೆಂಕಿ (ನಾ). ರಾಮನ ಪಟ್ಟಾಭಿಷೇಕದ ಚಿತ್ರವಿರುವ ಒಂದು ಚಿನ್ನದ ನಾಣ್ಯ : 'ಶ್ರೀರಾಮಟಂಕೀವರಹ' ಪರಾ. **ರಾಮಟೆಂಕಿ :** ರಾಮಟೆಂಕೀ ನಾಣ್ಯವು ಕಟಾಕಟಿ ನಾಲ್ಕು ತೊಲಿ ಇರುತ್ತಿತ್ತು (ಕಣಗ. ೨೯೦). [ರಾಮ + ಟಂಕಿ$_2$]

**ರಾಮಟೆಂಕಿ** 'ರಾಮಟಂಕಿ' ನೋ.

**ರಾಮಠ** (ನಾ). ಇಂಗು ; ಹಿಂಗು : "ಹಿಂಗುಃ, ರಾಮಠಂ—ಈ ೨ ಹಿಂಗು" (ಹರಾಯು. ೦೦೦-೪೬೩) ; ಎರಡುಳ್ಳಿ ಹಿಂಗು ನಿಂಬದ ತಿರುಳಾಡಿನ ಬೆಣ್ಣೆ ಬೇವಿನೆಣ್ಣೆಯಂ ಬಿತ್ತರದಿಂ ನೆಯಿ ನಿಲೆ ಕುದಿಯಿಸುಗೆ ರಾಮಠಕ್ಕೆಲ್ಲ ಮಿಂತಿದುಂ ಸಮನಕ್ಕುಂ (ಲೋಕೋಪ. ೬-೬೮). [ಸಂ.]

**ರಾಮಣೀಯಕ** (ಗು). ೧. ಸುಂದರವಾದ ; ರಮಣೀಯವಾದ ; ಚೆಲುವಾದ : ಸಂಧಿ ಮುಗಿದುದು ರಾಮಣೀಯಕ ರಾಮಕಥೆಯೊಳಗೆ (ತೊರರಾ. ೦೩-೯೯); ರಾಮಣೀಯಕ ರಾಶಿಗೆ ಪಶ್ಚಿಮರಂಗಧಾಮನಿಗಾನೆಱಗುವೆನು (ಹದಿ. ೦-೦). (ನಾ). ೨. ರಮಣೀಯವಾದುದು ; ಚೆಲುವಾದುದು : ವನ ರಾಮಣೀಯಕಂ, ಜಲ ರಾಮಣೀಯಕಂ (ಶ್ರೀರಾಪು. ೦೯೬-೩೨). [ಸಂ.]

**ರಾಮಣೀಯತೆ** (ನಾ). = ರಾಮಣೀಯಕ ೨ : 'ರಾಮಣೀಯತೆವೆಱು' ಪರಾ. [ಸಂ. ರಾಮಣೀಯತಾ]

**ರಾಮಣೀಯತೆವೆಱು** (ಕ್ರಿ). ಸುಂದರವಾಗು ; ಚೆಲುವಾಗು : ರಾಮಣೀಯತೆವೆತ್ತ ಚಿಂದಳಿರ್ ಮಿಡಿಯಿಂದೆ ಮಾಮರ ಮನಗೊಳಿಸಿದುವು (ಪೋಚಪ. ೨೪-೯೯). [ರಾಮಣೀಯತೆ + ಪೆಱು$_1$]

**ರಾಮತುಳಸಿ** (ನಾ). ತುಳಸಿಯಲ್ಲಿ ಒಂದು ಬಗೆ; ಬಿಳಿತುಳಸಿ : (ವೃಶಿಗ. ೩೬-೦೦೪೬). 'ಕರಿತುಳಸಿ' ಪರಾ. [ಸಂ. ರಾಮತುಲಸೀ]

**ರಾಮದೂತ** (ನಾ). ೧. ರಾಮನ ಸೇವಕ : ರಾಮದೂತನೆ ? ಎಲ್ಲಿ ? ಎಲ್ಲಿ ತೋರ್ ! (ಶ್ರೀರಾಪು. ೮೩೬-೦೬೬). ೨. ಹನುಮಂತ. ೩. ಕಪಿ ; ಕೋತಿ : ಈತನಂ ರಾಮದೂತನೆಂದು ಗೋಸಣೆಗಳೆದು ಪರಿಭ್ರಮಿಸಿ ಪೊಱಮಡಿಸಿ ಕಳೆಯಿಂ (ಕಂರಾಪು. ೦೦-೦೯೦ ಪ). [ಸಂ.]

**ರಾಮಧಾನ್ಯ** (ನಾ). ಒಂದು ಬಗೆಯ ಕಪ್ಪನೆಯ ಧಾನ್ಯ ; ರಾಗಿ : ರಾಮಧಾನ್ಯದ ಕೃತಿಯನು . . . ಪೇಳುವೆನು (ರಾಧಾಚ. ೩-೩). [ಸಂ.]

**ರಾಮನಡಿಕೆ** (ನಾ). ಒಂದು ಬಗೆಯ ಔಷಧೀಸಸ್ಯ : ರಾಮನಡಿಕೆ, ರಾಮಪತ್ರೆ (ವೃಶಿಗ. ೩೬-೦೦೦೬). [ ? ]

**ರಾಮನವಮಿ** (ನಾ). ಶ್ರೀರಾಮನು ಹುಟ್ಟಿದ ಚೈತ್ರಶುದ್ಧನವಮಿಯ ದಿನ ಮತ್ತು ಅಂದು ಆಚರಿಸುವ ಹಬ್ಬ : ರಾಮನವಮಿಯಲ್ಲಿ ರಾಮಭಕ್ತರು ಉಪವಾಸ ಮಾಡುವರು (ಭಾಹಬ್ಬ. ೬೨). [ಸಂ. ರಾಮನವಮೀ]

**ರಾಮನಾಥ** (ನಾ). ಶಿವ ; ಈಶ್ವರ : ರಾಮನಾಥನು ಸರ್ವಗತನೀ ರಾಮನಾಥನ ಭಕ್ತರನಘರು ರಾಮನಾಥನನರ್ಚಿಸಿದವರು ಪರಮಪಾವನರು (ಬಸವ. ೩೦-೬೦). [ಸಂ.]

**ರಾಮಪಟ್ಟಿ** (ನಾ). ಒಂದು ಬಗೆಯ ಆಟ ; ತಿಳ್ಳಿಯಾಟ : ಸ್ಕೂಲಿನ ಸುತ್ತ ಓಡುವುದೋ, ಅಲ್ಲಿನ ಹುಣಿಸೇಮರದ ಕೆಳಗೆ ರಾಮಪಟ್ಟಿ ಆಡುವುದೋ ಅವನ ವಾಡಿಕೆ (ಶ್ರಾಬನ್ನೀ. ೩). [ ? ]

**ರಾಮಪ್ರಿಯ** (ನಾ). ೧. ರಾಮನಿಗೆ ಪ್ರಿಯನಾದವನು : ಯದುಗಿರಿಯೊಳ್ ನೆಲಸಿದ ರಾಮಪ್ರಿಯಂಗೆ ಪ್ರಿಯತಮರೆನಿಸಿದ ರಾಮಾನುಜರಂ ಸನ್ನುತಿಸುವರ್ (೧೯ಶಗೋ. ೯೬-೩ ಪ). ೨. [ಸಂಗೀತ] ಒಂದು ರಾಗದ ಹೆಸರು : ರಾಮಪ್ರಿಯ . . . ಕರುಣಾರಸಪ್ರಧಾನರಾಗ, ರಕ್ತಿರಾಗ (ಸಂಗೀತಪು. ೦೬೩). [ಸಂ.]

**ರಾಮಫಲ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : (ವೃಶಿಗ. ೬-೨೨). 'ಸೀತಾಫಲ' ಪರಾ.

[ಸಂ./ತೆಲು. ರಾಮಫಲ, ರಾಮಾಫಲ]

**ರಾಮಬಾಣ** (ನಾ). ೧. ಶ್ರೀರಾಮಚಂದ್ರನು ಬಿಡುವ ಬಾಣ ; P ರಾಮನು ಬಾಣವನ್ನು ಒಮ್ಮೆ ಪ್ರಯೋಗಿಸಿದರೆ ಅದು ತನ್ನ ಗುರಿಯನ್ನು ತಪ್ಪದೆ ಭೇದಿಸಿ ಮತ್ತೆ ಬತ್ತಳಿಕೆಗೆ ಹಿಂದಿರುಗಿ ಬರುವ ವಿಶಿಷ್ಟಶಕ್ತಿಯುಳ್ಳುದೆಂದು ಭಾವಿಸಲಾದ ಬಾಣ : ದಿವ್ಯಾಸ್ತ್ರದಿಂ ವಿರಥಂಮಾಡಿದನೇಱುಸೂಟ್ಬರೆಗವಮಾವಂ ರಾಮಬಾಣಕ್ಕೆ ನಿತ್ತರಿಪಂ (ಕಂರಾಪು. ೦೪-೩೧); ತರಿಹರಿಸಬಾರದಿಹ ರಾಮಬಾಣಂಗಳ್ಳೆದಿದುವು ಕಾಲಾಗ್ನಿಯಂತೆ (ಕೃಬಿರಾ. ೨೦-೩೩); ರಾಮಬಾಣಕ್ಕೆ ಹುಸಿಯಿಲ್ಲ, ವಾಲಿಯ ಮೈಗೆ ಕಲೆಯಿಲ್ಲ (ಗಾದೆ). ೨. ಒಂದು ಬಗೆಯ ಯುದ್ಧೋಪಕರಣ ;

ರಾಮಚಂಗಿಗಳು, ರಾಮಬಾಣಗಳು, ಮತಾಪುಗಳು . . . ರಣಗಾಡಿಗಳು ಮೊದಲಾದ ಯುದ್ಧೋಪಕರಣಗಳನ್ನೆಲ್ಲ ಎಣಿಸಿಮುಗಿದಾಯಿತು (ಐಕ್ಕರು. ೦೩). ೩. (ಆಲಂ) ನಿಶ್ಚಿತಫಲವನ್ನು ಕೊಡುವಂತಹುದು ; ವ್ಯರ್ಥವಲ್ಲದುದು : ಶ್ರೀ ಶಂಕರರ ಕವಾಟದಲ್ಲಿನ ಔಷಧಗಳಲ್ಲಿ ಇದು ರಾಮಬಾಣದಂತಹುದು (ಕೀಚಾಕ್ಕ. ೩೦೦); ನೆಗಡಿಗೆ ರಾಮಬಾಣ ಯಾವುದೂ ಇಲ್ಲ (ಮಲಿರು. ೩೭). [ಸಂ.]

**ರಾಮರಕ್ಷೆ** (ನಾ). ೧. ಶ್ರೀರಾಮನನ್ನು ಕುರಿತ ಪ್ರಸಿದ್ಧವಾದ ಒಂದು ಸ್ತೋತ್ರ. ೨. (ಆಲಂ) ಏನೂ ಇಲ್ಲದಿರುವ ಸ್ಥಿತಿ : ಯಾರ ಮನೆಯಲ್ಲಿ ಹೊಕ್ಕು ನೋಡಿದರೂ 'ರಾಮರಕ್ಷೆ' (ಹುಡುಗಾ. ೦೦೩); ಈಗೆಲ್ಲಾ ರಾಮರಕ್ಷೆಯಾಗಿ ಕೂತದ ಮನ್ಯಾಗ (ಕಿಡುಗು. ೪೦). [ಸಂ. ರಾಮರಕ್ಷಾ]

**ರಾಮರಗಡು** (ನಾ). ಹೆಚ್ಚಾದುದು ; ಪುಷ್ಕಳವಾದುದು : ಈ ಪಶುಪತಿ ಸಾಂಬಶಾಸ್ತ್ರಿಗಳ ಮನೇ ಊಟದ ಹಾಗೆ ರಾಮರಗಡಾದ ಊಟ . . . ಸಿಕ್ಕಿದರೆ (ಪತಿಮಾ. ೬೯) [←ಮರಾ ರಾಮರಗಡಾ, ರಾಮರಗಾಡಾ]

**ರಾಮರಸ** (ನಾ). ಭಂಗಿಸೊಪ್ಪಿನಿಂದ ತಯಾರಿಸುವ ಒಂದು ಬಗೆಯ ಮಾದಕಪಾನೀಯ : ಬಣ್ಣ ಒಳಿದುಕೊಳ್ಳುವುದಕ್ಕೆ ಮುಂಚೆ ನನ್ನ ಕೈಯಿಂದಲೇ ಅರ್ಧಸೇರು ರಾಮರಸ ಅರೆಸಿಕೊಂಡು ಕುಡಿದರು (ಗರುಡಾ. ೪೦); ಮಿರ್ಜಾಫರನು ಭಂಗಿ, ರಾಮರಸಗಳನ್ನು ಕುಡಿದು ನಿದ್ರೆ ಹೋಗುತ್ತಿದ್ದನು (ಐಂಕಪು. ೨೭೩). [ಸಂ.]

**ರಾಮರಸದಾಳಿ** (ನಾ). ಒಂದು ಬಗೆಯ ಬಿಳಿಯ ಕಬ್ಬು : ರಾಮರಸದಾಳಿಯನ್ನು ತೋಟಗಳಲ್ಲಿಯೂ ಬತ್ತದ ಭೂಮಿಯಲ್ಲಿಯೂ ಹಚ್ಚುವರು (ಕಬಾಗ. ೨೭೩). [ರಾಮ + ರಸದಾಳಿ]

**ರಾಮರಾಜ್ಯ** (ನಾ). ೧. ರಾಮನ ಆಳ್ವಿಕೆಯಲ್ಲಿದ್ದ ಸಾಮ್ರಾಜ್ಯ : ಸಿರಿಯ ವಲ್ಲಭನೊಲಿದು ರಾಜ್ಯಾಧ್ವರವನಾವಲು . . ಹರಸುತಿರ್ದುದು ರಾಮರಾಜ್ಯದೊಳಖಿಳಜನನಿವಹ (ಜೈಕಿರಾ. ೪೪-೩೭) ; ರಾಮರಾಜ್ಯದೊಳ ಕಾಲದ ಮರಣಮಿಲ್ಲಖಿಳಜೀವಿಗಳ್ಗೆ (ಕೈಲಾಣಾ. ೦೮-೦೩). ೨. (ಆಲಂ) ಯಾರಿಗೂ ಯಾವ ತೊಂದರೆಯೂ ಇಲ್ಲದೆ ಬಾಳುವ ರಾಜ್ಯ ; ಸುಖೀರಾಜ್ಯ : ಗಾಂಧೀಯುಗದಲ್ಲಿ 'ರಾಮರಾಜ್ಯ'ವೆಂಬುದಕ್ಕೆ 'ಸ್ವರಾಜ್ಯ' ಎಂಬ ಅರ್ಥವನ್ನು ದೇಶದ ದೊಡ್ಡವರು ಸಂಪಾದಿಸಿ ಕೊಟ್ಟಿದ್ದಾರೆ (ರಾಮರಾ. ೪ ಮುನ್ನುಡಿ). [ಸಂ.]

**ರಾಮರಾಯಿ** (ನಾ). (ಚಿತ್ರದುರ್ಗದ ಪಾಳೆಯಗಾರರಲ್ಲೊಬ್ಬನಾದ ರಾಮರಾಯನು ಚಲಾವಣೆಗೆ ತಂದ) ಒಂದು ಬಗೆಯ ಚಿನ್ನದ ನಾಣ್ಯ : ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ೧ ದೇವರಾಯಿ ೧ ಕಲ್ಲುಕುಂಟಿ ೧ ರಾಮರಾಯಿ (ಚಿತ್ರಾ. ೦೦೪). 'ಕಂಠೀರಾಯಿ', 'ದೇವರಾಯಿ' ಫರಾ. [ರಾಮರಾಯ$_0$ + — ಇ$_3$]

**ರಾಮವಚನ** (ನಾ). ೧. ರಾಮನ ಮಾತು,–ನುಡಿ : ಹನುಮನು. . . ರಾಮವಚನಾನುಗ್ರಹವು ವಿಶ್ರಾಮಿಸಲು ಕರ್ಣದಲಿ ನೃಪಪದತಾಮರಸಕಭಿನಮಿಸಿ ಬೀಳ್ಕೊಂಡನು ಸರಭಸದಲಿ (ತೊರರಾ. ೬-೪೭-೪೭). ೨. (ಆಲಂ) ತಪ್ಪದೆ ಪಾಲಿಸುವ ಮಾತು,–ಭಾಷೆ : ಇವತ್ತು ಏನು ಮಾಡಿದರೂ ಸಾವಿರಾರು ಹೊನ್ನು ಕೊಟ್ಟರೂ ಬರಲಾರೆ, ನಾಳೆ ಅವಶ್ಯವಾಗಿ ಬರುವೆನೆಂದು ರಾಮವಚನವಿತ್ತಳು (ಕಂಠೀ. ೦೯). [ಸಂ.]

**ರಾಮಸೇವಕ** (ನಾ). = ರಾಮದೂತ ೧ : ರಾಮಸೇವಕನಾಗಿ ರಾವಣನ ಪುರವ ನಿರ್ಧೂಮವ ಮಾಡಿದೆ (ಕೆರಂದ. ರಾ. ೦-೪೦-೦). [ಸಂ.]

**ರಾಮಾಂಗಿ** (ನಾ). ಸುಂದರವಾದ ದೇಹವನ್ನುಳ್ಳವಳು ; ಚೆಲುವೆ ; ಸುಂದರಿ : ವಿಕಚೇಂದೀವರವಕ್ತ್ರೆ ಸಸ್ಮರಕತಚ್ಛಾಯಾಂಗಿ ರಾಮಾಂಗಿ (ಸುಕುಮಾ. ೦-೬). [ಸಂ. ರಾಮಾಂಗೀ]

**ರಾಮಾನುಜ** (ನಾ). ೧. ಶ್ರೀರಾಮನ ತಮ್ಮ : ಅಜನು ಬಳಿಕ . . . ಆತ್ಮಜನು ಜನಿಸಿದನೀ ದಶಸ್ಯಂದನಮಹೀಪಾಲ . . . ಬಳಿಕೀ ರಾಮರಾಮಾನುಜರು ಮಕ್ಕಳು ನಾಲ್ವರೀತಂಗೆ (ತೊರರಾ. ೦-೦೩-೨೪). ೨. ಲಕ್ಷ್ಮಣ : ಬಳವದ್ವಿಕ್ರಾಂತದೊಳ್ . . . ಭೀಮಸೇನಂ . . . ಬಳವದ್ರಾಮಾನುಜಂ ಬಾಡಬಶಿಖಿಹನುಮಂ ವೈನತೇಯಂ ಸಮಂ ತನ್ನೊಳೆನಿಪ್ಪಂ (ಎಕ. VIII, ಸೊರಬ. ೦೩೬-೨೪; 1145); ಬೆರಗಾಗಿ ನೋಡುತಿರೆ ರಾಮಾನುಜಂ ಶಾಸ್ತ್ರವೇತ್ತನಾ ಯೋಗಸಿದ್ಧಂ ಪೇಳ್ದನಾತಂ ಗಾಂಜನೇಯಂ ಬ್ರಹ್ಮವಿಜ್ಞಾನಿ (ಶ್ರೀರಾಪಟ. ೭೨೯-೩೩೬). ೩. ಭರತ : ಪವಮಾನಜಂ . . . ಭರತಂಗೆ ತೋರಿಸಿಲ್ಕೆ . . . ರಾಮಾನುಜಂ ಕುಶಲಸಮ್ಮುಖಕ್ಕೆದಿ ನುಡಿಸಿದಂ (ಕೈಲಾಣಾ. ೨೦-೦೩). ೪. ಶತ್ರುಘ್ನ. ೫. ತ್ರಿಮತಗಳಲ್ಲಿ ಒಂದಾದ ವಿಶಿಷ್ಟಾದ್ವೈತಧರ್ಮವನ್ನು ಪ್ರತಿಪಾದಿಸಿದ ಹನ್ನೆರಡನೆಯ ಶತಮಾನದ ಯತಿ : ಶ್ರೀಮತೇ ರಾಮಾನುಜಾಯ ನಮಃ (ಎಕ. VIII (R), ಹೊಳೆನ. ೩೪-೦; ಸು. 16ನೆಯ ಶತ) ; ವಿಶಿಷ್ಟಾದ್ವೈತಸಿದ್ಧಾಂತವೆಂಬುದು ಶ್ರೀಮದ್ರಾಮಾನುಜಾಚಾರ್ಯರಿಂದ ಪ್ರಚಾರಕ್ಕೆ ಬಂದಿರುವುದು (ಹಿಂದಣಾ. ೨೩೦). ೬. ರಾಮಾನುಜಾಚಾರ್ಯರ ಅನುಯಾಯಿ.

**ರಾಮಾನುಜಕೂಟ** = ರಾಮಾನುಜರ ಅನುಯಾಯಿಗಳು ಸಾಮೂಹಿಕವಾಗಿ ಭೋಜನಮಾಡುವ ಛತ್ರ : ನಾಉ ಕಟ್ಟಿಸ್ತ ಶ್ರೀರಾಮಾನುಜ ಕೂಟದಲೂ . . . ಶ್ರೀವಯಿಷ್ಣವರಗಳಿಗೆ ಯಕ್ಯುವ ಹಾಗೆ ಕಟ್ಟಳೆಯ ಮಾಡಿದೆವಾಗಿ . . . ರಾಮಾನುಜಕೂಟಕೆ ನಡಸಿಬಹುದು (ಎಕ. IX-ii, ೪೬೨-೪; 1467). [ಸಂ.]

**ರಾಮಾಭಿರಾಮೆ** (ನಾ). ಅತಿಚೆಲುವೆಯಾದವಳು ; ಅತ್ಯಂತ ಸುಂದರಿ : ಎಲೆಗೆ ರಾಮಾಭಿರಾಮೆ ! ಸುಗ್ರೀವೆ ! ನೀಲಕುಂತಳೆ ! ಕುಮುದನಯನೆ ! (ರಾಮಾಶ್ವ. ೦೪೬-೩). [ಸಂ. ರಾಮಾಭಿರಾಮಾ]

**ರಾಮಾಯಣ** (ನಾ). ೧. (ಶ್ರೀರಾಮ ಮತ್ತು ಸೀತೆಯರ ಚರಿತ್ರೆ ರಾಮ-ರಾವಣರ ಯುದ್ಧ ಮುಂತಾದ ವರ್ಣನೆಗಳನ್ನೊಳಗೊಂಡ) ಆದಿಕವಿ ವಾಲ್ಮೀಕಿಮಹರ್ಷಿಯಿಂದ ಸಂಸ್ಕೃತದಲ್ಲಿ ರಚಿತವಾದ ಮಹಾಕಾವ್ಯ : ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ (ಕುಮಾ,ಆ. ೦-೦೭); ವಾಲ್ಮೀಕಿ . . . ರಾಮಾಯಣವನೆಲ್ಲವಂ ಕಂಡಂತೆ ಹಾಡಿದನೊ (ಶ್ರೀರಾಪಟ. ೩-೩೪); ರಾಮಾಯಣ ಶಬ್ದವು ರಾಮ ಮತ್ತು ಅಯನ ಎಂಬ ಎರಡು ಶಬ್ದಗಳ ಸಮಾಸವಾಗಿದೆ (ಭಾರರ. ೬೯) ; ಬೆಳತನಕ ರಾಮಾಯಣ ಕೇಳಿ ರಾಮನಿಗೆ ಸೀತೆಯೇನಾಗಬೇಕೆಂದ (ಗಾದೆ). ೨. (ಆಲಂ) ದೀರ್ಘವಾದ, ಬೇಸರ ತರುವ ಮಾತು; ಕಗ್ಗ : ನಿನ್ನ ರಾಮಾಯಣ ತೆಗೆಯಬೇಡ (ರೂಢಿ). ೩. ಜಗಳ : ಅವರ ಮನೆಯಲ್ಲಿ ಪ್ರತಿನಿತ್ಯವೂ ರಾಮಾಯಣ ತಪ್ಪಿದ್ದಿಲ್ಲ (ರೂಢಿ). [ಸಂ.]

**ರಾಮಾರಕ್ತ** (ನಾ). ತುಂಬ ರಕ್ತದಿಂದ ಕೂಡಿದುದು : ಬಸುವ ಅಣ್ಣನ ರಾಮಾರಕ್ತವಾದ ಕಳೇಬರವನ್ನು ಅವರಿಗೆ ತೋರಿಸಿದ (ಐಪಸಿ. ೪೦). [←ತುಳು. ರಾಮಾರಕ್ತ = ಅತಿಯಾದ ರಕ್ತಸ್ರಾವದಿಂದ ಕೂಡಿದ]

**ರಾಮಾವತಾರ** (ನಾ). ೧. ವಿಷ್ಣುವಿನ ಏಳನೆಯ ಅವತಾರ; ಶ್ರೀರಾಮಚಂದ್ರನ ಅವತಾರ : ವಿನುತ ರಾಮಾವತಾರದ ಪುಣ್ಯಶಕ್ತಿಯಿಂದೆ . . . ಶೀವಿದ ಮಹಾಶರವನು . . . ಫಲುಗುಣನೆಚ್ಚನು (ಕೈಲಾಣಾ. ೦೩-೪೭). ೨. ರಾಮನ ಅವತಾರವನ್ನು ಎತ್ತಿದವನು.—ಅವತಾರಪುರುಷ : ಪೂಜಿಸನೆ ರಾಮಾವತಾರನು ಸೇತುವಿನೊಳಾ ರಾಮನಾಥನನು (ಐಕಥ. ೩೪-೬೨). [ಸಂ.]

**ರಾಮಾಸ್ತ್ರ** (ನಾ). = ರಾಮಬಾಣ ೧ : ಔಕುವುದು ಬಲವೈದುವುದು ಸುರಲೋಕವನು ರಾಮಾಸ್ತ್ರದಲಿ (ತೊರರಾ. ೬-೩೩-೩೭). [ಸಂ.]

**ರಾಮಿ** (ನಾ). ಒಂದು ಬಗೆಯ ಸಸ್ಯ : ರಾಮಿ (ರಾಮಿಟ). – ಸಣ್ಣಗಿಡ. ಕೊಪ್ಪಲವನ್ನು ನೀರೊಳಗೆ ಚೆಲ್ಲಿದರೆ ಮೀನುಗಳು ನಿಶ್ಚೇತನವಾಗುತ್ತವೆ (ಕಣಗಿ. ೯೭). [ಸಂ. ರಾಮಿಾ]

**ರಾಮೆ** (ನಾ). ೧. ಹೆಂಗಸು; ಸ್ತ್ರೀ : "ರಾಮಾ, ವಾಮಾ . . . ವಶಾ, ಯುವತಿಃ – ಈ ೨೮ ಸ್ತ್ರೀಯರ್" (ಹಲಾಯು. ೬೯–೩೨೭). ೨. ಹೆಂಡತಿ : ರಾಮಂ ಕಲಿಸಿದ ತೆಱದಿಂ ರಾಮೆಗೆ ಪುಸಿ ನುಡಿದು ರಥಮನೇಱಿಸಿಕೊಂಡಾ ಭೀಮಾಟವಿಯಂ . . . ಎಯ್ದಂದಂ (ಶಂಶಾಶತ. ೦೫–೭೩). ೩. ನಲ್ಲೆ; ಪ್ರಿಯೆ ; ಕಾದಲೆ : ಅರಸ ಸತಿಯೆಡೆಗೆಯ್ದಿ ರಾಮೆ ಹೇರಡವಿಯೊಳು ಶಿವನ ಭವನಕೆ ಹೋಗಿ ನೀ ಮಾಡಿದಾಚರಣೆಯೇನು . . . ಎನೆ (ಗುರುಶಾ. ೫–೦೯). ೪. ಲಕ್ಷ್ಮಿ : "ಶರಧಿಸುತೆ ರಾಮೆ ಗೋಮಿನಿ ಲಕ್ಷ್ಮಿ . . . ಮನ್ಮಥಮಾತೆಯೆನಲು ಸಿರಿಗಕ್ಕು ನಾಮಂ" (ಶಂಗರಾ. ೬–೦೮). ೫. ಶಾಕಿನಿ, ಡಾಕಿನಿ ಮುಂತಾದ ಪಿಶಾಚಸ್ತ್ರೀ : ಪಱಿದ ಶಿರಂಗಳಿಂ ಕೆದಱಿ ಬಿರ್ದ್ದ ಗಜಂಗಳಿನಾಡುವಚ್ಚೆಯಿಂ ಸುಱಿದರುಣಾಂಬುವಂ ನಲಿವ ರಾಮೆಯರಿಂ ಪೆಣವತ್ತ ಸಾರ್ವ್ವ ಪೆಂಪೆಱೆಯರಿಂ . . . ಸಮರವಮಾಸುರ ಮಾದುದು (ಎಕ. VII, ಶಾಗರ. ೦೦೯–೩೯; 1042). [ಸಂ. ರಾಮಾ]

**ರಾಮೇಶ್ವರ** (ನಾ). ೧. ದಕ್ಷಿಣಭಾರತದ ದಕ್ಷಿಣತುದಿಯಲ್ಲಿರುವ ಒಂದು ತೀರ್ಥಕ್ಷೇತ್ರ : ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡದು (ಗಾದೆ). ೨. ಈ ಕ್ಷೇತ್ರದಲ್ಲಿರುವ ಶಿವಲಿಂಗದ ಹೆಸರು: ದಾಸಿಮಯ್ಯಂ ಗಂದು ರಾಮೇಶ್ವರನು ಕದವಂ ತೆಱೆದನತಿಶಯವು (ಬಸವು. ೪೩–೪೬). [ಸಂ.]

**ರಾಮೋಜ** (ನಾ). ಒಬ್ಬಾತನ ಹೆಸರು : × × × ರಾಮೋಜನ ಮಣ್ಣು ಕದಂಬರಸು ಮಾಡಿಕೊಟ್ಟ (ಎಕ. V, ಶುಂಶಾ. ೩೬–೦೩; ಸು. 1000 ?).
[ರಾಮ + ಓಜ$_1$ (<ಒವಜ್ಝ)]

**ರಾಮೋತ್ಕಂಠೆ** (ನಾ). ೧. ರಾಮನಲ್ಲಿ ಉತ್ಸುಕತೆಯುಳ್ಳವಳು. ೨. ಜಲಾಭಿಮಾನಿದೇವತೆಯಾದ ವರುಣನಲ್ಲಿ ಉತ್ಸುಕತೆಯುಳ್ಳವಳು. ೧, ೨ : ಕುಲಭೂಭೃದ್ವಿವೆ ಲಕ್ಷ್ಮಣಾಭಿನುತೆ ರಾಮೋತ್ಕಂಠೆ ವೈದೇಹಿ ಮಂಜುಲವೇಣೀ ರವಣೀಯೆ . . . ಕಣ್ಣೊಳಕುಂ ವಾಹಿನಿ ಸೀತೆ ಪೋಲ್ತು ಭುವನಪ್ರಖ್ಯಾತೆಯಂ ಸೀತೆಯಂ (ಕುಕ್ಕು. ೨–೬).
[ಸಂ. ರಾಮೋತ್ಕಂಠಾ]

**ರಾಯ**, **ರಾವ್** (ನಾ). ೧. ಅರಸ ; ರಾಜ ; ದೊರೆ : ರಾಯೆಂಬೀ ಪೆಸರಿಲ್ಲ ದೇತು . . . ಭಾರ್ಗವಂ ಕೊಂದಂ (ಶಂಶಶಾ. ೦೨–೩೬); ಉಱಿದ ರಾಯರ ಕೊಡೆಗಳ್ ಆಣಂಬೆಯ ಕೊಡೆಪೋಲ್ ಬೆಳ್ಗೊಡೆಗಳಾದುವು (ಕನ್ನಶಾ. ೫೦); ಆ ಯುಧಿಷ್ಠಿರಸಹಿತ ನೀನೇ ರಾಯನಾಗಿರು (ಕುವ್ಯಾಕ. ೦೨–೪೫). ೨. ಒಬ್ಬಾತನ ಹೆಸರು ; ಚಾವುಂಡರಾಯ : ಗಂಡರ ಮೂಹುತಿಯೆನಿಸಿದ ಮಂಡಳಿಕರ ಮಂತ್ರಿ ಸಂಧಿವಿಗ್ರಹಿ ರಾಯಂ ಕೊಂಡಾಡಿ ಪೊರೆದು (ರಂಬೋಂಬು. ೧–೩೬) ; ಗಂಗರಾಜನಾ ಮುನ್ನಿನ ಗಂಗರ ರಾಯಂಗಂ ಸೂರ್ಮ್ಮಡಿ ಧನ್ಯನಲ್ತೇ (ಎಕ. II, ೬೩–೪೫; 1118). ೩. ಗಂಡಸರ ಹೆಸರಿನ ಕೊನೆಯಲ್ಲಿ 'ರಾಜ' ಎಂಬಂತೆ ಸೇರುವ ಶಬ್ದ: ಅ. ನ. ಕೃಷ್ಣರಾಯರು ಪ್ರಸಿದ್ಧ ಕಾದಂಬರಿಕಾರರು (ರೂಢಿ). ೪. ಯಜಮಾನ ; ಒಡೆಯ : ಬರಬರುತ್ತ ರಾಯರ ಕುದುರೆ ಕತ್ತೆಯಾಯಿತು (ಗಾದೆ) ; ರಾಯರು ಮನೆಯಲ್ಲಿ ಇಲ್ಲ (ರೂಢಿ). ೫. ಸಮಾಸಪದಗಳ ಆದಿಯಲ್ಲಿ 'ಮಿಗಿಲಾದ', 'ಅತಿಶಯವಾದ', 'ದೊಡ್ಡ' ಎಂಬ ಅರ್ಥಗಳಲ್ಲಿ ಬಳಕೆಯಾಗುವ ಪದ : 'ರಾಯಂಚೆ' 'ರಾಯಗಿಡಿಗ' ಪರಾ. **ರಾವ್** : ೩. ದಿವಾನ್ ಮಾಧವರಾವ್ ರಸ್ತೆಯಲ್ಲಿ ಸಮ್ಮ ಮನೆಯಿದೆ (ರೂಢಿ).

**ರಾಯಕಂದರ್ಪ** = ರಾಜರಲ್ಲಿ ಮನ್ಮಥನಂತಿರುವವನು ; ಒಂದು ಬಿರುದು : ರಾಯಕನ್ದರ್ಪ ಹೃದಯಹರಿಷೋತ್ಕರಿಪೆ ರಾಯದಾಮೋದರಾನುರಾಗಪ್ರತ್ಯಕ್ಷ × × ಯೌವನವನವಸನ್ತಲಕ್ಷ್ಮಿ (ಶೌಇಇ. XX, ೯೬–೦೨; 1072). **ರಾಯಕೋಲಾಹಲ**, **ರಾಯಕೋಳಾಹಳ** = ರಾಜರಲ್ಲಿ ಕಲಕಲವನ್ನುಂಟುಮಾಡುವವನು ; ಒಂದು ಬಿರುದು : ರಾಯಕೋಲಾಹಲಂ, ಜವಾದಿಕೋಲಾಹಲಂ (ಕಪ್ಪಾಮ. ೨೯೫ ಪ್ರಯೋ) ; ರಾಯದಲ್ಲಣ ರಾಯಕೋಳಾಹಳ . . . ಸ್ಥಿರಂಜೀವಯೆಂದು ಕೀರ್ತಿಸಿ (ಪಕಶಾ. ೭–೫); ದಟಮಂಬಾದಿತ್ಯಂ ರಾಯಕೋಳಾಹಳಂ (ಕಮುದ. ೦೭೪ ಪ್ರಯೋ). **ರಾಯಗಂಡರದಾವಣಿ** = ಶೂರರಾದ ರಾಜರನ್ನು ಬಂಧಿಸುವವನು ; ಒಂದು ಬಿರುದು : ಹುಸಿವರ ಶೂಲ ನಿಗಳಂಕಮಲ್ಲ ಚಲದಂಕರಾಮ ರಾಯಗಂಡರದಾವಣಿ (ಎಇ. XXVII, ೦೭೦–೦೬; 1256). **ರಾಯಗಜಕೇಸರಿ** = ರಾಜರೆಂಬ ಆನೆಗಳಿಗೆ ಸಿಂಹದಂತಿರುವವನು ; ಒಂದು ಬಿರುದು : ಮಾರ್ಪ್ಪಡಿಭೀಮಂ ರಾಯಗಜಕೇಸರಿ ಗಂಡರೊಳ್ ಗಂಡ(ಡಂ) (ಇಅ. V, ೦೫–೯; 1019); ಮಱವುತೆಚ್ಚಱುತವನಿಪತಿ ಕರೆ ತರುಣ ನಾವೆಡೆ ರಾಯಗಜಕೇಸರಿಯೆದಾವೆತೆ ಕಂದ ಬಾಯೆನುತಬ್ಬಿದನು ಬಯಲ (ಕುವ್ಯಾದ್ರೋ. ೭–೯). **ರಾಯಗಜಸಿಂಹ** = ರಾಯಗಜಕೇಸರಿ : ರಾಯಮುರಾರಿ ರಾಯಗಜಸಿಂಹಂ ಸೋಮಭೂಪಾಳಕಂ (ಕೊಣ್ಣಶಾ. ೦೯–೦೦; 1176). **ರಾಯಘರಟ್ಟ** = (ಪರ)ರಾಜರನ್ನು ನಾಶಮಾಡುವವನು ; ಒಂದು ಬಿರುದು : ಈ ರಣಮದಾಂಧನ ತೊಟ್ಟುಳಿಕೆಯನು ಕೇಳ್ದ ರಾಯಘರಟ್ಟನಿಲ್ಲಾ ಎನುತ ತನಿ ಮುಸಗಿತು ಭಟಸ್ತೋಮ (ಕುವ್ಯಾಕ. ೨೦–೨). **ರಾಯಜಗಝಂಪ** = (ಪರ)ರಾಜರನ್ನು ಗೆದ್ದವನು ; ಒಂದು ಬಿರುದು : ಚೌವಣ ಸಹಸ್ರಬಾಹು ರಾಯಜಗಝಂಪ ಕೀರ್ತಿವಿದ್ಯಾಧರಂ (ಇಅ. V, ೧೫–೬ ; 1019). **ರಾಯಝಳಪ್ಪ**, **ರಾಯಜಳಪ್ಪ** = (ಉದ್ಧಟರಾದ) ರಾಜರ ಮೇಲೆರಗಿ ಸೋಲಿಸುವವನು ; ಒಂದು ಬಿರುದು : ಸಾಮಾನ್ತಮಲ್ಲನೆಳೆಯೊಳ್ ಸೋಮೇಶ್ವರನನುಜನದಟರಾಯಝಳಪ್ಪಂ (ಶೌಇಇ. XX, ೫೫–೬; 1082) ; ಸೌಭಾಗ್ಯಸದನೆ ರಾಯಜಳಪ್ಪ ಕಲ್ಪಾವನೀಜಸಮಾಲಿಂದ(ಗಿತ) ಜಂಗಮಲತೆ (ಎಇ. XXVIII, ೪೫–೪೯; ಸು. 1082). **ರಾಯದಲ್ಲಣ** = ರಾಜರನ್ನು ತಲ್ಲಣಗೊಳಿಸುವವನು ; ಒಂದು ಬಿರುದು : ರಾಯದಲ್ಲಣ ರಾಯಕೋಳಾಹಳ (ಪಕಶಾ. ೭–೫); ರಾಜಗೃಹಕೆ ಎಡಾಯುದಲಿ ಕತಿಪಯಬಲವು ಸಹ ರಾಯದಲ್ಲಣನೆಯ್ದಿ ಚಕ್ರಿಯ ಕಂಡು ವಸುದೇವ (ಸಾಳ್ವಭಾ. ೦೯–೨೨). **ರಾಯದಳದುಳಕಾಱ**, **ರಾಯದಳವುಳಕಾಱ** = (ಶತ್ರು)ರಾಜರ ಸೈನ್ಯವನ್ನು ಸೂರೆಮಾಡುವವನು ; ಒಂದು ಬಿರುದು : ರಾಯದಳದುಳಕಾಱ ಕೌರವರಾಯಸೇನಾಸೂಱೆಕಾಱನಜೇಯನೋ ಕಲಿಭೀಮ ಗೆಲಿದನು ಭಾನುನಂದನನ (ಕುವ್ಯಾಕ. ೦೨ ಸೂಚನೆ) ; ರಾಯಝಳಪ್ಪ ರಾಯದಳವುಳಕಾಱ . . . ಸ್ಥಿರಂಜೀವಯೆಂದು ಕೀರ್ತಿಸಿ (ಪಕಶಾ. ೭–೫). **ರಾಯದಾಮೋದರ** = ರಾಯಮುರಾರಿ : ರಾಯದಾಮೋದರಾನುರಾಗಪ್ರತ್ಯಕ್ಷ (ಶೌಇಇ. XX, ೯೬–೦೩ ; 1072). **ರಾಯಮುನ್ನೀರಬಡಬಾನಳ** = ರಾಜರೆಂಬ ಸಮುದ್ರಕ್ಕೆ ಬಡಬಾನಳದಂತಿರುವವನು; ಒಂದು ಬಿರುದು : ಶೌರ್ಯನಾರಾಯಣಂ ರಾಯಮುಂನೀರ ಬಡಬಾನಳಂ ಚೌವಾಣ ಸಹಸ್ರಬಾಹು (ಇಅ. V, ೧೫–೬ ; 1019). **ರಾಯಮುರಾರಿ** = ರಾಜರಿಗೆ ಮುರಾರಿಯಂತಿರುವವನು; ಒಂದು ಬಿರುದು : ಪ್ರತಾಪ ಲಂಕೇಶ್ವರ ರಿಪುಮದನ ಮಹೇಶ್ವರ ರಾಯಮುರಾರಿ ಭುಜಬಳಮಲ್ಲ (ಕಇಅ. ೬೪–೦೨–೦೪; 1170). **ರಾಯಸಿರಸೆಲ್ಲ** = (ಶತ್ರು)ರಾಜರಿಗೆ ಶೂಲದಂತಿರುವವನು; ಒಂದು ಬಿರುದು : ಗಿರಿದುರ್ಗಮಲ್ಲಂ ರಾಯಸಿರಸೆಲ್ಲಂ ಚಲದಂಕರಾಮಂ (ಎಕ. VI, ಕಂಲ. ೯೫–೫೦; 1196). [ಜ ಸಂಸ್ಕೃತಕೋಶಗಳಲ್ಲಿ ಇದು 'ರಾಜನ್' ಶಬ್ದದ ತಪ್ಪುರೂಪವೆಂದು ಹೇಳಿದೆ./ಪ್ರಾ. ರಾಯ]

**ರಾಯಂಚಿ** (ನಾ). ಹಂಸಗಳಲ್ಲಿ ಶ್ರೇಷ್ಠವಾದುದು ; ರಾಜಹಂಸ; ಅರಸಂಚೆ : "ರಾಯಂಚೆಯೆನಲ್ ರಾಜಹಂಸಂ" (ಶಬ್ದಮಂ. ೬೯); ಚಾರು ದತ್ತನು ವನಜಷಂಡದ ಬಂಡುವಿಂಡಿನ ಕೂಡೆ ರಾಯಂಚೆ ಬಿನದದಿಂದೆಡೆ ಯಾಡುತಿಹ ಚೆಲುವನು. . . ಕಂಡು ಮೆಚ್ಚಿದನು (ಸಾಳ್ವಭಾ. ೦೬-೦೨); ಪಾಂಡಿತ್ಯಮನೀಯೆ ಕಯ್ಯ ಗಿಳಿಗೊಲ್ದೈತಂದ ರಾಯಂಚೆಗೊಳ್ನಡೆಯಂ ಮೆಲ್ಲಡಿ ಬೇಟ ಬಂದು (ರಾಜಶೇ. ೬-೦೨). [ರಾಯ + ಅಂಚೆ]

**ರಾಯಕಟಕ** (ನಾ). ರಾಜನ ಸೈನ್ಯ; ಅರಸನ ಪಡೆ : ತಪ್ಪದೀ ಯುವ ರಾಜನಾಡಿದ ಕಪ್ಪುದೋಜದ ಮಾತು ಹನುಮಂಗುಪ್ಪರದ ಭಟರುಂಟೆ ನವಿಸ್ಸಾ ರಾಯಕಟಕದಲಿ (ಕೊರರಾ. ೯-೦೨-೦೨).

**ರಾಯಕಟಕಪಿತಾಮಹ** = ರಾಜನ ಸೈನ್ಯಕ್ಕೆ ಅಜ್ಜನಂತಿರುವವನು ; ಭೀಷ್ಮ : ರಾಯಕಟಕಪಿತಾಮಹನ ತಲೆವಾಯಲಭಿಷೇಕವನು ಕೌರವರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನ (ಕುಮಾ.ದ್ರೋ. ೧ ಸೂಚನೆ). **ರಾಯಕಟಕಾಚಾರ್ಯ** = ರಾಜಸೈನ್ಯದ ಆಚಾರ್ಯ ; ಸೇನಾಪತಿ; ದ್ರೋಣ : ರಾಯಕಟಕಾಚಾರ್ಯನಾ ಚಾಪಾಯುಧಾಗ್ರಣಿ ಮೋಹಿದನು ಪದ್ಮಾಯತವ್ಯೂಹವನು (ಕುಮಾ.ದ್ರೋ. ೯ ಸೂಚನೆ). [ರಾಯ + ಕಟಕ]

**ರಾಯಕಲ್ಲು** (ನಾ). ಅರೆಯುವ ಕಲ್ಲು : ಅರೆವ ಗುಂಡ ದೇವರ ಜಗಲಿ ಯೊಳಿಟ್ಟು ಹರಿಗಳ ತಂದು ರಾಯಕಲ್ಲ ಮೇಲಿಟ್ಟ ಮಣಿದೊಜಿಗಿದ್ದ ಮಕ್ಕಳ ಬಡಿದೆಬ್ಬಿಸಿ ಆಟೊಯದಂತೆ ಬೊಬ್ಬಿಡುವ. . . ಮಾಧವನ ಮಹಿಮೆ ಅಳವಲ್ಲವಾರಿಗೂ (ಪುರಂದ. ೩-೭೭-೩). [ರಾಯ$_3$ + ಕಲ್ಲು (<ಕಲ್$_3$)]

**ರಾಯಕುಮಾರ** (ನಾ). ರಾಜಕುಮಾರ; ಅರಸುಕುವರ.

**ರಾಯಕುಮಾರಚಮತ್ಕಾರ** = ರಾಜಕುಮಾರರಿಗೆ ತನ್ನ ಶೌರ್ಯದ ಚಮತ್ಕಾರವನ್ನು ತೋರಿಸುವವನು; ಒಂದು ಬಿರುದು: ವಿಜಯಲಕ್ಷ್ಮೀ ಮುಖದರ್ಪಣಂ ರಾಯಕುಮಾರಚಮತ್ಕಾರಂ (ಶಾಶ. XX, ೧೦-೦೨; ೧೦೦೦). [ರಾಯ + ಕುಮಾರ]

**ರಾಯಕುವರ** (ನಾ). = ರಾಯಕುಮಾರ : ಎಲೆ ರಾಯಕುವರ ನೀನಾರ ಲಸಿಕೆಯಂ ನೋಡದೆನ್ನಸುವನೋವಿದೆ (ಉದ್ಭಟ. ೩-೩); ರಾಯಕುವರನ ಮರಣವಾರ್ತೆಯನಾ ಸುಭದ್ರಾದೇವಿ ಕೇಳಿದಳು (ಕುಮಾ.ದ್ರೋ. ೬-೧೦).

**ರಾಯಕುವರಬಾಧ** = ರಾಜಕುಮಾರರನ್ನು ನಾಶಮಾಡುವವನು; ಒಂದು ಬಿರುದು : ರಾಯಕುವರಬಾಧ ಬಂದನು ರಾಯಕಟಕಾಚಾರ್ಯ ಬಂದನು (ಕುಮಾ.ದ್ರೋ. ೬ಂಣ. ೪-೩೨ ಅಡಿ). [ರಾಯ + ಕುವರ$_2$]

**ರಾಯಗಜ್ಜ** (ನಾ). ರಾಜಕಾರ್ಯ : ಈ ರಾಯಗಜ್ಜದೊಳಾಂ ಪಡೆವಳ ನಪ್ಪೆಂ ಎನಗಪ್ಪಣೆ ವೀಳೆಯಮಂ ದಯೆಗೆಯ್ವುದು (ಜಗನ್ನಾ. ೦೫-೨೦). [ರಾಯ + ಕಜ್ಜ$_1$]

**ರಾಯಗರೀಟಸೀರೆ** (ನಾ). ಒಂದು ಬಗೆಯ ಸೀರೆ : ಪಂಕಜಮುಖಿವು ಮಿನಾಕ್ಷ ಮೆರೆವ ನೋಟ ಶಂಖಗೊರಳು ಗಿಳಿಮಾತು ಶಂಕಿಸಿ ರಾಯ ಗರೀಟಸೀರೆಯನುಟ್ಟು ನಿಶ್ಶಂಕನೋಲಗದಿ ನಿಂದಿಹಳು (ಸೌಂದರ್ಯ. ೩-೯೦). [ ? + ಸೀರೆ$_2$ ]

**ರಾಯಗಿಡಿಗ** (ನಾ). ಒಂದು ಬಗೆಯ ದೊಡ್ಡ ವಾದ್ಯ : ಗಜಜಿವಗ್ಗದ ಬೊಗ್ಗುಗಳ ದಿಗ್ಗಜವ ಸುಡಿಸುವ ರಾಯಗಿಡಿಗನ ವಿಜಯಬಲ ತೊಡ ರಿಕ್ಕಿತ್ತು ಕಲ್ಪಾಂತಸಾಗರಕೆ (ಕುಮಾ.ಶ. ೨-೩); ತೂಳುವಟಿಗಳ ರಾಯ ಗಿಡಿಗನ ಘೋಳಘೋರದ ಘೋಷವವೆಸಿಯ ಸೀಳಿ ನಡೆದುದು ಸೇನೆ (ಕುಮಾ.ಶ. ೨-೨). [ರಾಯ + ಗಿಡಿಗ$_2$ (ಪ← ತೆಲು. ಗಿಡಿಯು)]

**ರಾಯಗಿಡಿಬಿಡಿ** (ನಾ). = ರಾಯಗಿಡಿಗ : ಬೊಬ್ಬಿಡುವ ನಿಸ್ಸಾಳದ ಮಹಾರವ ರಾಯಗಿಡಿಬಿಡಿ [ಪಾಠಾಂ. ಗಡಿಬಿಡಿ]ಯಾ ಘುಡುಘುಡುಸ್ವರವೆಸೆಯ ಲಂಬರವೊಡದುದುಮೋಯೆಂಬಂತೆ ನಗರವನೊಡನೆ ಹೊಣವಂಟರು ನೃಪಾಲನ ಮಲ್ಲಸಂದೋಹ (ಕುಮಾ.ಶಿ. ೬ಂಣ. ೯-೦೪); ಡೌಡೆ ರಾಯಗಿಡಿಬಿಡಿ ಕಹಳೆ ಕಂಬು ಭೇರಿ ಮೃದಂಗ ಬೊಂಬುಳಿರವಂಗಳಿಂದಂಬುಜಭವಾಂಡವುದಿರೆ (ಕಂದು. ೩೯-೨೮). [ರಾಯ + ಗಿಡಿಬಿಡಿ]

**ರಾಯಗಿಳಿ** (ನಾ). ಅರಗಿಳಿ ; ರಾಜಶುಕ : ಮಣಿಪಂಜರದೊಳು ರಾಯ ಗಿಳಿಯ ಹಸುಳೆ ಓದಿದುಂ ರಾಜಿಸುವಂದದಿಂ . . . ತೊಟ್ಟಿರೋಳರಸುವುಗಂ ಬಳೆದಂ (ಜಘುಣಾ. ೨-೬೨). [ರಾಯ + ಗಿಳಿ]

**ರಾಯಗುರಿಪು** (ನಾ). ರಾಜಚಿಹ್ನೆ ; ಅರಸನ ಲಾಂಛನ : ಐಹಿಕವಾದ ತಂತ್ರವನ್ನು ಎಲ್ಲಾ ವಾದ್ಯಗಳನ್ನೂ ಬಿರುದಾವಳಿಗಳನ್ನೂ ಮತ್ತಿನ ರಾಯ ಗುರಿಪುಗಳನ್ನೂ ನಿಲಿಸಿ (ಬಿರುಗಂ. ೦೨-೯). [ರಾಯ + ಕುರಿಪ್ಪು (~ ಕುರುಪು)]

**ರಾಯಗುರು** (ನಾ). ರಾಜನ ಗುರು : ನಾಗಲಾಂಬಿಕೆ ಗಡ ವಿರಕ್ತೆ ಗಡ ರಾಯಗುರುವ ಬಲು ದಣಾಯಕ ಬಸವನಕ್ಕ ಗಡ ಗರ್ಭವಂ ತಳೆದಳ್ಗಡೇಂ ಚಿತ್ರಂ (ತೆರಪು. ೪-೦೬). [ರಾಯ + ಗುರು$_2$]

**ರಾಯಗೆಂಪು** (ನಾ). ಗಾಢವಾದ ಕೆಂಪು ; ಅತಿಯಾದ ರಕ್ತವರ್ಣ : (ಅಂದಳದ ರಾಯಗೆಂಪಿನ ಮುಕಮಲ್ಲಿನ ಮೇಲ್ಮುಸುಕನ್ನೆತ್ತಿ ಸರಿಯಿಸುವಳು) (ಬಿರುಗಂ. ೨೮-೦). [ರಾಯ + ಕೆಂಪು$_1$]

**ರಾಯಗೆಲಸ** (ನಾ). ದೊಡ್ಡ ಕೆಲಸ ; ಮಹಾಕಾರ್ಯ : ನವ್ವ ಹೊಚ್ಚ ಹೊಸಗನ್ನಡದ ಗುಡಿಯನ್ನೇರಿಸುವ ರಾಯಗೆಲಸಕ್ಕೆ ಕೈನೀಡುತ್ತೀರೊ ? (ಪಠಾ. I, ೯೭೭). [ರಾಯ + ಕೆಲಸ]

**ರಾಯಗೋಪುರ** (ನಾ). ದೊಡ್ಡಗೋಪುರ : ರಾಯಗೋಪುರವನ್ನು ಹದ್ದು ಕೊಂಡುಹೋಯಿತೋ ? (ಗಾದೆ). [ರಾಯ + ಗೋಪುರ]

**ರಾಯಗೋಲು, ರಾಘೋಲು** (ನಾ). ಒಕ್ಕುವಾಗ ಕಣದಲ್ಲಿ ತೆನೆ, ಹುಲ್ಲು ಮೊದಲಾದುವುಗಳನ್ನು ಎಳೆಯಲು ಉಪಯೋಗಿಸುವ ಒಂದು ಸಾಧನ ; ಮೆರೆಕೋಲು : ರಾಯಗೋಲಿನಿಂದ ಕಣದಲ್ಲಿ ತೆನೆ ಎಳೆದುಕೊ (ಊರು). **ರಾಘೋಲು** : ಸೆಳ್ಳು, ಜಂತಗುಂಟೆ, ರಾಘೋಲು ಮೊದಲಾದ ಉಪಕರಣಗಳನ್ನು ಹೊತ್ತು (ಕನ್ನಡಾ. ೧೩೬). [ರಾಯ + ಕೋಲು$_1$ (< ಕೋಲ್$_1$)]

**ರಾಯಗೋವಳ** (ನಾ). ದನ ಕಾಯುವವರ ಮುಖಂಡ : ರಾಯ ಗೋವಳಂಗೆ ಬಿನ್ನವಿಸುವರ್ (ಗೀತಗೋ. ೪೬-೦ ವ). [ರಾಯ + ಗೋವಳ (< ಗೋವಾಳ)]

**ರಾಯಗೋಳಾಯ್ಲ** (ನಾ). ಶ್ರೇಷ್ಠನಾದ ಕುದುರೆಸವಾರ : ಉಮ್ಮತ್ತೂರ ಶ್ರೀವೀರ ಶ್ರೀಮಲ್ಲರಾಜಒಡೆಯ ರಾಯಗೋಳಾಯ್ಲನ ಕುಡುತೆಯಲ್ಲಿ ಪ್ರವೇಶ (ಬಿರುಗಂ. ೩೪-೦೨). [ರಾಯ + ಗೋಳಾಯ್ಲ (< ಗೋಟಾಯಿಲ)]

**ರಾಯಜಗಜಟ್ಟಿ** (ನಾ). ರಾಜನ ಪ್ರಖ್ಯಾತ ಜಟ್ಟಿ ; ಅರಸನ ಪ್ರಸಿದ್ಧ ನಾದ ಮಲ್ಲ : ರಾಯಜಗಜಟ್ಟಿಗಳು ರಿಪುಕುರುರಾಯ ಥಟ್ಟನೊಳಿನಬಿರಿಗೆ ನಿನ್ನಾಯತದಿ ನಿಲುವಂಥವರಗಾವೇನ ಹೇಳುವೆವು (ಕುಮಾ.ಶ. ೦೫-೦೦). [ರಾಯ + ಜಗಜಟ್ಟಿ]

**ರಾಯಜಗದಳ** (ನಾ). ಒಂದು ಬಗೆಯ ನಾಣ್ಯ : ಶ್ರೀಕೇಶವದೇವರಿಗಂ ಬ್ರಾಹ್ಮಣರಿಗಂ ಕ್ರಯದಾನವಾಗಿ ಕೊಟ್ಟುಕೊಂಡ ರಾಯಜಗದಳಂ ಗದ್ಯಾಣ ಅಯನೂಱಹತ್ತು ಮತ್ತಂ (ಕ಼. II, ೦೬-೨೦; ೧೧೨೨). [ರಾಯ + ಜಗದಳ$_1$]

**ರಾಯದೆಂಕಣಿ** (ನಾ). ಒಂದು ಬಗೆಯ ಯುದ್ಧಸಾಧನ : ದೊಡ್ಡ ದೆಂಕಣೆ : ತೋಱದೆಡೆಗೆ ಸಿಡಿವ ದೆಂಕಣಿ ರಾಯದೆಂಕಣಿಗಳ ಸಾಲು ಬಿಡ ದೊಪ್ಪಿದವು ದುರ್ಗದೊಳು (ಕುಂಠಾಪಾಂ. ೯೨-೬೯) ; ಗಗನದೊಳಿಟ್ಟಣಿಸಿದುವು ರಾಯದೆಂಕಣಿ ಕವಣೆಗಲ್ಲುಗಳು (ಪ್ರಭುಲಿ. ೨-೦೬). [ರಾಯ + ದೆಂಕಣಿ]

**ರಾಯುತನ** (ನಾ). ದೊರೆತನ ; ರಾಜತ್ವ : ರಾಯುತನವೆಮಗಿಂದ್ರ ಲೋಕದ ರಾಯದಲಿ ದಿಟ (ಕುಮಾ.ಭ. ೦೩-೯೩) ; ಶ್ರೀಮಂತರನ್ನು ಅವರ ರಾಯುತನದ ಹಾವುಗೆಯ ಮಂಗಳಕ್ಕೆ ಸೀಳಿಡುವುದಾಗಿಯೂ ಕೂಗಿ ಕಳಕಳ ಮಾಡಿದರು (ಬಗಹ. ೬೯-೨೦). [ ರಾಯ + — ತನ ]

**ರಾಯುತವಸಿ** ' ರಾಯದವಸಿ ' ನೋ.

**ರಾಯುಥಟ್ಟು** (ನಾ). = ರಾಯಕಟಕ : ರಾಯಕಟಕಾಚಾರ್ಯನೊಡ್ಡಿದ ರಾಯುಥಟ್ಟನೊಳರುಳು ಕೊಂದನು ವಾಯುತನಯನ ತನುಜನಗ್ಗದ ದೈತ್ಯಕೋಟಿಗಳ (ಕುಮಾ.ದ್ರೋ. ೦೩ ಸಂಧಿ). [ ರಾಯ + ಥಟ್ಟು$_2$ ]

**ರಾಯದವಸಿ, ರಾಯತವಸಿ** (ನಾ). ರಾಜಋಷಿ : ರಾಜರ್ಷಿ : ಅಗ್ರಜಂಗಾಂ ಬಟಿಯನಿರ್ಪನಂ ರಾಯದವಸಿಯ ಕುವರಿಯಂ . . . ಸೀತೆಯನಣ್ಣನಾಣತಿಯಿಂ ಕಾಡೊಳ್ ಬಿಸುಡಲ್ಕೆ ಬದ್ಧನಾದಂ (ರಾಮಾಶ್ವ. ೨೭-೯). **ರಾಯತವಸಿ** : ಆ ರಾಯತವಸಿ ತನ್ನೊಳಿಟ್ಟಿರ್ದ ದೃಢ ಭಕ್ತಿಯಂ ಕಾಣುತೆ ಸಂತಸಂದಾಳ್ದು . . . ಜನಾರ್ದನಂ ತಾಂ ಪ್ರತ್ಯಕ್ಷನಾದಂ (ಅದ್ಭು.ಕ. ೬-೦೩). [ ರಾಯ + ತವಸಿ ]

**ರಾಯದಳ** (ನಾ). = ರಾಯಕಟಕ : ಗಜದ ಬಳಿಯಲಿ ಸಂದಣಿಸಿದುದು ರಾಯದಳ ಮಣಿರಥಾಕಾಯದಲಿ (ಕುಮಾ.ಕ. ೨-೧೦) ; ರಾಯ ರಘುಕುಲ ಸಾರ್ವಭೌಮಂಗೆ . . . ಅನುಪಮರಾಯದಳವನು ಕೊಟ್ಟು ಮನ್ನಿಸಿ ಕೊಂಡನಾ ರವಿಜ (ತೊರರಾ. ೪-೬ ಸಂಧಿ). [ ರಾಯ + ದಳ$_2$ (=ದಲ) ]

**ರಾಯನಿಂಬೆ** (ನಾ). ಒಂದು ಬಗೆಯ ದೊಡ್ಡಜಾತಿಯ ನಿಂಬೆ : ಭರಮಾಹೆಗ್ಗಡೆ . . . ರಾಯನಿಂಬೆಯ ಹಣ್ಣುಗಳನ್ನಿತ್ತು ತನ್ನ ಪರಿಚಯವನ್ನು ಹೇಳಿಕೊಂಡನು (ಸಶಾ. ೬೩). ' ಗಜನಿಂಬೆ ' ಪರಾ.

[ ರಾಯ + ನಿಂಬೆ ]

**ರಾಯನೆಲ್ಲಿ** (ನಾ). ಒಂದು ಬಗೆಯ ದೊಡ್ಡಜಾತಿಯ ನೆಲ್ಲಿ; ಅರನೆಲ್ಲಿ : ಈಳೆ ಕಿತ್ತಳೆ ಹಲಸು ಬಕ್ಕವಲಸಿನ ಸಾಲುನೆಲ್ಲಿಯ ರಾಯನೆಲ್ಲಿ (ರೇವಾಂಪು. ೬-೨೬೭) ; ಆನೆಯ ಮರಿಗಳು ಮುರಿದ ರಾಯನೆಲ್ಲೀಮರದ ತೊಗಟೆಯ ವಾಸನೆ ಬರುತ್ತದೆ (ಕುಂಐಮ. ೩-೩೮೩). [ ರಾಯ + ನೆಲ್ಲಿ ]

**ರಾಯನೇರಿಲು** (ನಾ). ಒಂದು ಬಗೆಯ ದೊಡ್ಡಜಾತಿಯ ನೇರಿಳೆ; ಅರನೇರಿಲು : ನೇರಿಲುಂ ರಾಯನೇರಿಲು ಜಂಬುನೇರಿಲು ತೋರುತಿಹ ಹಿಪ್ಪಲಿಯ ನೇರಿಲುಂ (ಪಪುಮೋ. ೨೯-೩೦).

[ ರಾಯ + ನೇರಿಲು ( < ನೇಱಲ್ ) ]

**ರಾಯಪುಡಿಶರ್ಕರೆ** (ನಾ). = ರಾಯಪುಡಿಸಕ್ಕರೆ : ಹಸುವಿನ ಹಾಲು ಚೆನ್ನಾಗಿ ಕಾಸಿ ರಾಯಪುಡಿಶರ್ಕರೆ ಜೇನುತುಪ್ಪವೆರಸಿ ಸೇವಿಸೆ ಹೆಣ್ಣೆತ್ತರು ನಿಲುವುದು (ಸಳವ್ಯ. ೧೯೬). [ < ರಾಯಪುಡಿಸಕ್ಕರೆ ]

**ರಾಯಪುಡಿಸಕ್ಕರೆ, ರಾಯಿಪುಡಿಸಕ್ಕರೆ** (ನಾ). ಒಂದು ಬಗೆಯ ಸಕ್ಕರೆ : ಚಿತ್ರಮೂಲ, ಬೆಳ್ಳುಳ್ಳಿ . . . ಜೀರಿಗೆ ಇವುಗಳನ್ನು ಸಮಭಾಗವಾಗಿ ಕಷಾಯುಮಿಕ್ಕಿ ಶೋಧಿಸಿಕೊಂಡು, ರಾಯಪುಡಿಸಕ್ಕರೆ ಮತ್ತು ಹಸುವಿನ ತುಪ್ಪದಲ್ಲಿ ಪ್ರತಿಪಾಕವನಿಕ್ಕಿ ಕೊಡಲು ವಿಷಮಜ್ವರ ಗುಣವಾಗುವುದು (ಸಳವ್ಯ. ೦೦೩). **ರಾಯಿಪುಡಿಸಕ್ಕರೆ**: "ಶರ್ಕರಾ. ಸಿತಾ—೨ ತವರಾಜನೆಂಬ ಸಕ್ಕರೆ, ರಾಯಿಪುಡಿಸಕ್ಕರೆ" (ಸಿದ್ಧಾಂತ. ೨೯೬). [ < ರಾಯಪುರಿಸಕ್ಕರೆ ]

**ರಾಯಪುರಿಸಕ್ಕರೆ** (ನಾ). ರಾಯಪುರಿ ಎಂಬ ಊರಲ್ಲಿ ತಯಾರಾದ ಸಕ್ಕರೆ : ಇಷ್ಟು ಸೊಪ್ಪನ್ನು ಸಮಾನಂಗೊಂಡು ಅಕ್ಕಿಗಚ್ಚಿನಲ್ಲಿ ರಾಯಪುರಿಸಕ್ಕರೆ, ತುಪ್ಪದಲ್ಲಿ ಮೆಲ್ಲಲು ಗರ್ಭಕಟ್ಟುವುದು (ಹಿಪ್ಪಚಿ. ೧೦೩).

**ರಾಯಪುರಿಯ ಸಕ್ಕರೆ**=ರಾಯಪುರಿಸಕ್ಕರೆ : ವಿಷ್ಣುಕ್ರಾಂತಿವರ್ಣವ . . . ಒಂದು ಪಾವು ರಾಯಪುರಿಯ ಸಕ್ಕರೆಯಿಂದ ಕಲ್ಕಮಾಡಿ ಕೊಡ ಮೂಱುದಿನ ಕೊಳ್ಳಲು ದ್ವಂದ್ವಮೇಹ ನಾಶ (ಹಿಪ್ಪಚಿ. ೦೨೨). ' ರಾಯಪುಡಿಸಕ್ಕರೆ ' ಪರಾ. [ ← ಮರಾ. ರಾಯಪುರೀಸಾಖರ್ ]

**ರಾಯಫೌಜು** (ನಾ). = ರಾಯಕಟಕ : ವಿಜಯವಾದ್ಯಗಳಬ್ಬರ ರಾಯಫೌಜಲಿ ತ್ರಿಜಗಕ್ಕೆ ಭಯವ ಬೀಱಿದುವು (ಕಂಶಂ. ೦೩-೨೦).

[ ರಾಯ + ಫೌಜು ( < ಫೌಜು ) ]

**ರಾಯಬಿತ್ತರಿಗೆ** (ನಾ). ರಾಜಪೀಠ ; ಸಿಂಹಾಸನ : ಅವಳು ಮುಂದೆ ರಾಯಬಿತ್ತರಿಗೆಯನ್ನೇರಿದ ವಿಜಯನಾರಸಿಂಹನನ್ನು ಪಡೆದದ್ದರಿಂದ ವಂಶವೃಕ್ಷವನ್ನಡರಿದ ಅವನ ಜತೆಯಲ್ಲಿ ಇವಳೂ ಪ್ರಧಾನಳಾಗಿ ಕಂಡಳು (ಸಶಾ. v. ಕೃಶ್ನಾತ್ರ). [ ರಾಯ + ಬಿತ್ತರಿಗೆ$_1$ ]

**ರಾಯಬೀದಿ** (ನಾ). ಮುಖ್ಯವಾದ ದಾರಿ ; ರಾಜಮಾರ್ಗ : "ರಾಯಬೀದಿಯೆಂದುಂ ರಾಜಬೀದಿ" (ಕಕಶಾ. ೩೯-೩೦೩) ; ಕಣ್ಗಂಬಾದುದು ರಾಯ[ಪಾಠಾಂ.ಜ]ಬೀದಿ (ಕಬ್ಬಿಗ. ೩೩) ; ರಾಯಂಚೆ ಪೊಣರ್ವಕ್ಕಿಗಳೆಡೆಯಾಟದ ರಾಯಬೀದಿಯೊ ತುಂಬಿಗಳ ಲ್ರಾಯವೊ ಪೇಳು (ಕುಂಶಾಸಾಂ. ೨-೬೨). [ ರಾಯ + ಬೀದಿ ]

**ರಾಯಬೊಗರಿ**(ನಾ). ಜೂಜಿನಂತೆ ಆಡುವ ಒಂದುಬಗೆಯ ಬುಗುರಿಯ ಆಟ : ಲೆತ್ತ, ಪಗಡೆ, ರಾಯಬೊಗರಿ . . . ಮೊದಲಾದ ಜೂಜಿನಾಟಗಳನ್ನಾಡಿ (ಕಪಾಶ. ೧೦೯). [ ರಾಯ + ಬೊಗರಿ ( < ಬವರಿ ) ]

**ರಾಯಬೋರೆ** (ನಾ). ಒಂದು ಬಗೆಯ ದೊಡ್ಡ ಜಾತಿಯ ಬೋರೆ.— ಎಲಚಿ : " ರಾಜಕೋಲಃ— ರಾಯಬೋರೆ, ಹೇರೀಚಲು" (೬ಕಧ. ೦೩೯); ಬೋರೆಯುರಬೋರೆ ಪುಳಿಬೋರೆ ಸೀಬೋರೆಯಿಂ ರಾಯಬೋರೆಯು (ಪಪುಮೋ. ೨೯-೩೦). [ ರಾಯ + ಬೋರೆ$_2$ ]

**ರಾಯಭಾರ** (ನಾ). ೧. ರಾಜ್ಯಾಡಳಿತವನ್ನು ನಡೆಸುವುದು ; ರಾಜ್ಯಭಾರ : ರಾಜೇಂದ್ರನು ಸುಪ್ರಸಿದ್ಧರಾಯಭಾರಕಾರ್ಯಧುರಂಧರತ್ವದೊಳ್ ದೀಕ್ಷಾಬದ್ಧನಾಗಿ (ಶಾಗಂಧಿ. ೬-೦೦). ೨. ದೂತಕಾರ್ಯ; ದೌತ್ಯ : ಶರಣದೇಹಿಕದೇವನೆಂಬೀ ಬಿರುದ ಮೆಱೆಯಲು ರಾಯಭಾರವ ಧರಿಸಿ ಕೌರವನರಮನೆಗೆ ನಡೆತಂದನಸುರಾರಿ (ಕುಮಾ.ಉ. ೬ ಸಂಧಿ) ; ಈತನ ರಾಯಭಾರವು ಸಫಲವಾಯಿತು (ಐಂಶಾಬ್ಯ. ೨೬).

[ < ಸಂ. ರಾಜ್ಯಭಾರ./ತೆಲು. ರಾಯಬಾರ, ರಾಯಭಾರ ]

**ರಾಯಭಾರಿ** (ನಾ). ೧. ಪ್ರತಿನಿಧಿ ; ನಿಯೋಗಿ : ಜಯವರ್ಮಂ ಆದರದಿಂದಟ್ಟಿದ ರಾಯಭಾರಿ ದಮನಂ ಬಂದಿರ್ದಪಂ (ಕ್ರಿಶ್ನಕು. ೭-೩೬); ತ್ವರಿತದಿಂ ಬುದ್ಧಿವಂತರ ರಾಯಭಾರಿಮುಖ್ಯರನು ಕಳುಪೆ (ಕೃರಘು. I. ೦೩೬). ೨. ಒಂದು ರಾಷ್ಟ್ರದಿಂದ ಇನ್ನೊಂದು ರಾಷ್ಟ್ರಕ್ಕೆ ಕಳುಹಿಸಲ್ಪಟ್ಟ ನಿಯೋಗಿ,— ರಾಜದೂತ : ನೀವು ನಿಮ್ಮ ಮಂತ್ರಿಪದವಿಗೆ ರಾಜೀನಾಮೆಯನ್ನು. . . ಪರದೇಶದ ರಾಯಭಾರಿಯಾಗಿ ನಿರ್ದೇಶಿಸಲ್ಪಡದೆ ಕೊಡಬೇಡಿರಿ (ರೂಹಸಂ. ೨೪) ; ಐರೋಪ್ಯನಾಡುಗಳ ಗಿಡಮರಗಳೂ ಇಲ್ಲಿಗೆ ರಾಯಭಾರಿಗಳಂತೆ ಬಂದು ನೆಲಸಿದವು (ಶಾಸಗ. ೩, ಕುಮ್ಮ).

[ರಾಯಭಾರ + — ಇ$_3$. / ತುಳು. ರಾಯಭಾರಿ; ತೆಲು. ರಾಯಬಾರಿ, ರಾಯಭಾರಿ]

**ರಾಯಭಾರಿತನ** (ನಾ). = ರಾಯಭಾರ ೨ : ಧನದನಗಂ ತನಗಟ್ಟಿದೊಡೆ ರಾಯಭಾರಿತನಂ ಬಂದಂತಿರ್ಪವಿದೆಱ ಕುಂಡೋಪಾಂತ ಥಳಥಳಿಸಿ ಬೆಳಗೆ ಕುಳಿಶಾಶೃಂಗಳ್ (ಶಾಂತಿಪು. ೨-೦೦೩) ; ಆಕೆಯ ಪರವಾಗಿ ರಾಯಭಾರಿತನ ವಹಿಸಿ ಬಂದಿರುವುದು ನಾನೇ(ಮಾಸ್ತಿ. ೩೨೦). [ ರಾಯಭಾರಿ + — ತನ ]

**ರಾಯಭೇರಿ** (ನಾ). ದೊಡ್ಡದಾದ ಭೇರಿ ; ಭಾರಿಯಾದ ನಗಾರಿ : ಧ್ವನಿಗೈದುವನಿತಱೊಳಗೆ ರಾಯಭೇರಿಗಳನುವಾದ ಚಿನ್ನಗಾಳೆಗಳು (ಕಂಶಂ. ೨೩-೦). [ ರಾಯ + ಭೇರಿ ]

**ರಾಯಭೇರಿಗೆ** (ನಾ). = ರಾಯಭೇರಿ : ಹಾಯಿ ಹರಿಗೋಲಾದ ರಾಯಭೇರಿಗೆಯಾದ ರಾಯರಾ ಕಾಲಿಗೆ ಮುಳ್ಳೊತ್ತುವಾದೆ (ಜಾನಪ. ೩-೩೨).

[ ರಾಯ + ಭೇರಿಗೆ$_0$ (ಪ ← ತಮಿ. ಪೇರಿಕೈ) ]

**ರಾಯಮನೆ** (ನಾ). ರಾಜನ ನಿವಾಸ ; ಅರಮನೆ : ಘನತರಭದ್ರ ಮಂಟಪಗಳಿಂದಾ ರಾಯಮನೆ ರಾರಾಜಿಸುತಿಹುದು (ಶಂಶಾಸಾ೦. ೩-೩). [ ರಾಯ + ಮನೆ ]

**ರಾಯಮನೆತನ** (ನಾ). ರಾಜಮನೆತನ ; ಅರಸುಕುಲ : ಆ 'ಮೊನೆಗಾರ' ಎಂಬ ಬಿರುದೂ ಮಹೀಶೂರ ರಾಯಮನೆತನಕ್ಕೆ ಆಚನ್ದ್ರಾರ್ಕವಾಗಿ ಸಲ್ಲತಕ್ಕದ್ದು (ಚಿರುಗಂ. ೪೦-೧). [ ರಾಯ + ಮನೆತನ ]

**ರಾಯಮನ್ನಣೆ** (ನಾ). ಅರಸನಿಗೆ ದೊರೆಯುವ ಗೌರವ ; ರಾಜಮನ್ನಣೆ : ಅಲ್ಲಿಯ ಪ್ರಜೆಗಳಾದರಂ ಮಿಗೆ ಮಾಡಿದ ರಾಯಮನ್ನಣೆಯಂ ಕಯ್ಕೊಂಡು (ಪುಂಶಾಕ. ೬-೮೮ ರ). [ ರಾಯ + ಮನ್ನಣೆ ]

**ರಾಯಮಟಿಗೆ** (ನಾ). ಶ್ರೇಷ್ಠವಾದ ಸ್ಥಳ,— ಸ್ಥಾನ (?) : ನೆಟ್ಟನೆ ಜಂಬೂದ್ವಿಪಕ್ಕಿಟ್ಟಳ ಹಗರಟಗೆನಾಡು ನೊಸಲಾ ನೊಸಲಿಂಗಿಟ್ಟೆಸೆವ ತಿಲಕದಂತಿರೆ ಪಟ್ಟಣವಿದು ರಾಯಮಟಿಗೆ ಕಲುಕೆಟಿಯೆಸೆಗುಂ (ಶಾಇ. XX. ೨೦೨-೪೦ ; 1244). [ರಾಯ + ಮಟಿಗೆ]

**ರಾಯಮಾನ** (ನಾ). ರಾಜನಿಗೆ ಸಲ್ಲುವ ಆದಾಯ ; ರಾಜಾದಾಯ : ರಾಜ್ಯಾದಾಯವು ಷಡ್ಭಾಗವೆಂದು ಗೊತ್ತಾದ ನೆಲಗಂದಾಯದಿಂದಲೂ ಪೊಗದಿ, ನಿಕ್ಷೇಪ, ಶುಲ್ಕ, ದಂಡ ಮತ್ತು ಗಣಗಳ ರಾಯಮಾನಗಳಿಂದಲೂ ಉತ್ಪತ್ತಿಯಾಗುತ್ತಿತ್ತು (ಕಾಅಶ. ೬೩). [ರಾಯ + ಮಾನ]

**ರಾಯಮೂದಲೆ** (ನಾ). ಅಧಿಕವಾದ ತಿರಸ್ಕಾರ,—ಅವಹೇಳನ : ಆತನ ಪೆಣ್ಣವಾಸಕ್ಕೆ ಕ್ಷಾತ್ರದ ರಾಯಮೂದಲೆಯನೊಡ್ಡಿ ವಿಡಂಬಿಸಿ ಕೆಣಕಿ . . . ಮಹಾಪರಾಧವನ್ನು ನೀನು ನಡೆಯಿಸಿದವನಾದೆ (ಚಿರುಗಂ. ೩೫-೭). [ರಾಯ + ಮೂದಲ್ಕೆ]

**ರಾಯಮೋಹರ** (ನಾ). = ರಾಯಕಟಕ : ಬಲವಲ್ಲಲ್ಲಿ ಭಯಗೊಳೆ ದ್ರೋಣ ಹೊಕ್ಕನು ರಾಯಮೋಹರಕ್ಕ (ಕುವ್ಯಾದ್ರೋ. ೨-೩೪) ; ಹೊಂತಕಾಱಗಳಾಗ ರಾಯಮೋಹರದಲಿ ಪಂತದೊಳೆಸೆದರುಬ್ಬಿಸಲಿ (ಕಂವಿಭಿ. ೦೩-೨೦). [ರಾಯ + ಮೋಹರ$_1$]

**ರಾಯರಾವುತ**, ರಾಯರಾವುತ್ತ, ರಾಯರಾವ್ತ (ನಾ). ಶ್ರೇಷ್ಠನಾದ ಕುದುರೆಸವಾರ : ಹಿರಿಯ ಮಲಧಾರಿಗಳು ಬಪ್ಪಾಗ ಮುಂದೆ ವೀರರ ಮಕುಟವರ್ಧನರ ರಾಯರಾವು[ಕಾಕಾಂ. ಹು]ತರ . . . ನಡುವೆ . . . ಚಂದಪ್ರಭತೀರ್ಥಕರ್ದನು (ಸೋಪುಶ. ೪-೩೩) ; ಮಿರ ಕುಣಿದಾಡೆ ಹೊಕ್ಕರು ರಾಯರಾವುತರು (ಕುವ್ಯಾದ್ರೋ. ೦೬-೨). **ರಾಯರಾವುತ್ತ** : ಗೆಲ್ಲಂಬಡೆದ ರದಟನಿಂ ರಾಯರಾವುತ್ತರಾದಗಳ್ (ಶಬ್ದಶಾ. ೨೭೯). **ರಾಯರಾವ್ತ** : ವಾನಾಯುಜದ ಸಾಲೆಸೆದುದೊಜಗಿದ ರಾಯರಾವ್ತರ ಮಣಿಮಕುಟ ಮರಗೋಡನೋಲ್ಯೆಸ (ಕುವ್ಯಾದ್ರೋ. ೦೭-೯). [ರಾಯ + ರಾವುತ]

**ರಾಯರಾವುತ್ತ** ' ರಾಯರಾವುತ ' ನೋ.

**ರಾಯರಾವ್ತ** ' ರಾಯರಾವುತ ' ನೋ.

**ರಾಯರಿಸಿ** (ನಾ). ರಾಜಋಷಿ ; ರಾಜರ್ಷಿ : ಈತನನಂತರಿಕ್ಷದೊಳ್ ಕರಗಳನೆತ್ತಿ ರಾಯರಿಸಿಯೆಂದುವರೆ ಕೀರ್ತಿಪರಲ್ತೆ ಚಾರಣರ್ (ಚಾಕಂಕ. ೨೭-೯೯). [ರಾಯ + ರಿಸಿ (< ಋಷಿ)]

**ರಾಯರೂವಾರಿ** (ನಾ). ಶಿಲ್ಪಿಗಳಲ್ಲಿ ಶ್ರೇಷ್ಠನಾದವನು : ಕಲ್ಯಾಣದ ರಾಯರೂವಾರಿ ಬಲ್ಲೋಜ ಕಂಡರಿಸಿದ ಸಾಸನ (ಶಾಇ. XX. ೨೦೨-೧೦೦ ; 1244). [ರಾಯ + ರೂವಾರಿ]

**ರಾಯರೇಖೆ** (ನಾ). ರಾಜನು ಮಾಡಿದ ಆಜ್ಞೆ ; ರಾಜಾಜ್ಞೆ : ರಾಯರೇಖೆಯ ಭವ್ಯರಾಲಿಸಿ ರಾಯಬಿಜ್ಜಣ ಬಸವಗುಲಿದವುಪಾಯ ತಂತ್ರಾಲೋಡವಾದುದೆ ಭಾರ್ಯೆಯಗ್ರಜನ (ಬಪು. ೭೭-೦). [ರಾಯ + ರೇಖೆ]

**ರಾಯಲ್**$_1$ (ನಾ). ಮುದ್ರಣಕಾಗದದ ಒಂದು ಅಳತೆ; ಇಪ್ಪತ್ತುನಾಲ್ಕು ಅಂಗುಲ ಉದ್ದವೂ, ಹತ್ತೊಂಬತ್ತು ಅಂಗುಲ ಅಗಲವೂ ಇರುವ ಮುದ್ರಣದ ಕಾಗದ : ಮುದ್ರಣದಲ್ಲಿ ವಿಂಗಡಣೆ ಮಾಡುವಾಗ ಈ ಮುಂದಿನ ಪಟ್ಟಿಯನ್ನು ಅನುಸರಿಸುವುದು ಲೇಸು . . . ರಾಯಲ್, ಡೆಮ್ಮಿ, ಕ್ರೌನ್ (ಮುದ್ರಶ. ೨೭). [← ಇಂ. Royal]

**ರಾಯಲ್**$_2$ (ನಾ). ಚಿತ್ರದುರ್ಗದ ಪಾಳೆಯಗಾರರ ಕಾಲದ ಒಂದು ಚಿನ್ನದ ನಾಣ್ಯ : ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ೧೦೦,೦೦೦ ರಾಯಲ್ (ತಕ್ಕಶಾ. ೦೦೩). [ ? ]

**ರಾಯವಜೀರ** (ನಾ). ರಾಜನ ಮಂತ್ರಿ,—ಸಚಿವ : ರಾಯವಜೀರರೊಳ್ ರಾಣಾ ಜಗದೇವರಾಯರಸನಗ್ಗಳಂ (ತಕವಿ. ೦೨-೦೯). [ರಾಯ + ವಜೀರ]

**ರಾಯವತ್ತಳೆ** (ನಾ). ರಾಜನ ನಿರೂಪ ; ಅರಸನ ಅಪ್ಪಣೆ : ಶ್ರೀ ಚಿಟ್ಟದ ಚಾಮರಾಜಒಡೆಯರ ಬಳಿಗೆ ಈ ನಿರ್ಣಯವನ್ನು ರಾಯವತ್ತಳೆಯಟ್ಟಿ (ಚಿಟ್ಟ. ೨೦೩-೩). [ರಾಯ + ಪತ್ತಳೆ$_1$]

**ರಾಯವಾಡ** (ನಾ). ರಾಜನನ್ನು ಕುರಿತ ಸ್ತುತಿ,—ಹೊಗಳಿಕೆ : ಓದುವ ರಾಯವಾಡದುಗ್ಗಡಿಸುವ ಮಾಗಳಿಕದ ಚಪ್ಪರಿಸುವ ಪಡಿಯಜರ . . . ಕೈವಾರಿಗಳಾಡಂಬರವಮಳುಂಬವಾಗೆ (ಅವಂಕ. ೦೦-೯೩ ವ). [ರಾಯ + ವಾಡ$_0$ (p ← ಪ್ರಾ. ಪಾಢ = ಅಧ್ಯಯನ, ಶಾಸ್ತ್ರ)]

**ರಾಯವಾವುಡ** (ನಾ). ರಾಜನ ವಸ್ತ್ರ ; ಅರಸನು ಉಡುವ ಬಟ್ಟೆ : ಇದು ರಾಯವಾವುಡಂ ನೆಲೆಯಿಂದನೆಂತೋ ತಂದನಿಂದು ಸಬ್ಬವಕಾಱಂ (ಶಕ. ೬-೦೭೩). [ರಾಯ + ಪಾವುಡ$_1$]

**ರಾಯಶಿಲ್ಪಿ** (ನಾ). = ರಾಯರೂವಾರಿ : ರಾಯಶಿಲ್ಪಿ "ಅಪ್ಪಣೆ ಆದರೆ ಹೋಗಿ ಬರುತ್ತೇನೆ ಪ್ರಭು" ಎಂದನು (ಸಶಿ. ೯೩). [ರಾಯ + ಶಿಲ್ಪಿ$_1$]

**ರಾಯಸ** (ನಾ). ೧. (ತಮ್ಮ ಪ್ರಜೆಗಳನ್ನು ಕುರಿತು ಗುರು, ರಾಜ ಮುಂತಾದ) ಹಿರಿಯರು ಬರೆಸುವ ಪತ್ರ ; ನಿರೂಪ : ಬಲ್ಲಾಳಗೆ ದ್ವಿವಿಜಾರಿ ರಾಯಸಂ ಬರೆಯಿಸುವಂ (ಅಸಂಕ. ೦೩-೯) ; ರಾಯನಾಯುಷ್ಯಾವಸಾನದ ರಾಯಸವ ಬರೆಸಿದರು (ಕೂರಿಶಾ. ೨-೬-೧) ; ಆಡಳಿತವನ್ನು ನಡೆಸಲು . . . ಯಾವ ಭಾಷೆಯಲ್ಲಿ ರಾಯಸಗಳನ್ನು ಬರೆಯಬೇಕು ? (ಮುಕ್ಷಶ. ೨೮). ೨. (ರಾಜನ) ಆಜ್ಞೆ ; ಅಪ್ಪಣೆ ; ಕಟ್ಟಳೆ : ಊರೂರ್ಗೆ ಬೇಱಬೇಱೊಲಿದು ರಾಯಸವಿತ್ತು ಹಾರ್ವೆಸುತರಸಾಳ್ಗಳೆಲ್ಲರ್ಗೆ ಬೆಸನಿತ್ತು (ಸಂಚಿರ. ೩-೯) ; ಯಿಾ ರಾಯಸದ ಮರ್ಯ್ಯಾದೆಯ ಆ ಚಂದ್ರಗಿರಿಯ ಮಲ್ಲಿಕಾರ್ಜುನದೇವರಿಗೆ ಪೂರ್ವ್ವದಲು ಸಲುವಂತೆ . . . ಮಾಡಿಸಿಕೊಂಬುದು (ಶಾಇ. IX-ii. ೪೨೯-೪೦ ; 1405) ; ರಾಯಸವೆಂಬುದು ರಾಯಗಲ್ಲದೆ ಮಿಕ್ಕ ನಾಯಕಮಕ್ಕಳಿಗುಂಟೆ (ಕುರಾಸಾಂ. ೦೦-೨೨). ೩. ಆಜ್ಞಾಪತ್ರಗಳನ್ನು ಬರೆಯುವ ಹಾಗೂ ಓದಿ ಹೇಳುವ ವೃತ್ತಿ : ಈ ಲಿಖಿತಪಚ್ಚರಿ . . . ವಾಚಿಸುವೆನೆಂದೆನುತ ರಾಯಸದ ಕಡುನಿಪುಣರು ನಿಲ್ಲದನಬರ್ ನೋಡಿ (ಅಶಾ೦. ೭೦-೪೭) ; ಕರಿಸಿ ರಾಯಸದ ಮಂತ್ರಿಗಳ . . . ದೊರೆಗಳಿಗೋಲೆಯ ಬರಿಸಿದ ಲಿಂಗರಾಜೇಂದ್ರ (ಕಂವಿಭಿ. ೨೦-೩೩) ; ರಾಯಸದ ಶಕಟದಾಸನು ಅಮಾತ್ಯರಾಕ್ಷಸನ ಪ್ರೇರಣೆಗೆ ಒಳಗಾಗಿ . . . ತಂತ್ರಗಳನ್ನು ನಿತ್ಯವೂ ಹೂಡುತ್ತಿದ್ದ ಕಾರಣ (ಚಾಕ್ಷಪು. ೨೩).

**ರಾಯಸದವ** = ರಾಯಸವನ್ನು ಬರೆಯುವ ಹಾಗೂ ಓದಿ ಹೇಳುವ ಕೆಲಸದವನು : ರಾಯಭಾರಿಗಳ ರಾಯಸದವರ ಕರಣಿಕರ ಜೋಯಿಸರ . . . ನಡುವೆವೊಡ್ಡೋಲಗಂಗೊಟ್ಟು ರಂಜಿಸುತ್ತಿರ್ದನು (ಸಮ್ಯಕೌ. ೨-೩) ; ಅಂತಸ್ತು ಗೌರವಗಳಿಗೆ ತಕ್ಕಂತೆ ಒಕ್ಕಣಿಸಿದ ಲಗ್ನದ ಓಲೆಗಳನ್ನು ಯೋಗ್ಯರಾದ ರಾಯಸದವರು, ಭಟರು ಒಯ್ದರು (ಕಾಂಕಶಾ. ೯೩). [ದೇ.೫ ತಮಿ. ಇರಾಯಚಮ್, ರಾಯಚಮ್; ತುಳು. ರಾಯಸ; ತೆಲು. ರಾಯಸ, ವ್ರಾಯಸ]

**ರಾಯಸನ್ನಿ** (ನಾ). ಸನ್ನಿಪಾತಜ್ವರದಲ್ಲಿ ಒಂದು ಬಗೆ ; ತೀವ್ರವಾದ ಸನ್ನಿ : ಕಿವುಡುಸನ್ನಿಯೆಂದರೆ ಸನ್ನಿಗಳೊಳಗೆ ರಾಯಸನ್ನಿಯಂತೆ (ಪಠಲಾ. I. ೪೩೬). [ರಾಯ + ಸನ್ನಿ]

**ರಾಯಸಭಾರಿ** (ನಾ). = ರಾಯಭಾರಿ ೨ : ಪಾಂಡವರ್ಗೆ ಪಾಗುಡಂಗಳಂ ಸಮುಕಟ್ಟಿ ಸ್ವಕೀಯ ರಾಯಸಭಾ[ಪಾಠಾಂ. ಬಾ]ರಿಗಳಂ ಕಟಿುವುದುಂ (ಪಂಪಾಭಾ. ೯-೦೨೧ ವ). [< ರಾಯಭಾರಿ]

**ರಾಯಸವಿದ್ಯೆ** (ನಾ). ರಾಯಸವನ್ನು ಬರೆಯುವ ಕಲೆ : ಚಿತ್ರಾರಿವಿದ್ಯೆ, ಸಿಪ್ಪರಿಗೆವಿದ್ಯೆ, ಪುಸ್ತಕದ ಲೇಖನವಿದ್ಯೆ, ರಾಯಸವಿದ್ಯೆ . . . ನಾನಾಭಾಷೆ ನಾನಾಸಂಜ್ಞೆಗಳನು ಅರಿತು (ಪಠಣ. ೬). [ರಾಯಸ + ವಿದ್ಯೆ]

**ರಾಯಸಾಹಣಿ** (ನಾ). = ರಾಯರಾವುತ : ವಜ್ರದೇವನ ಡಿಂಗರಿಗ ರಾಯಸಾಹಣಿ ಸೋವಪಂ (ಇಂ. ೦೯೩೨, ಸಂಕಗಾಂ. ೩-೩; ೯).

[ ರಾಯ + ಸಾಹಣಿ ]

**ರಾಯಸಿಗ** (ನಾ). ರಾಯಸವನ್ನು ಬರೆಯುವವನು : ರಾಯಸಿಗನಂ ಕರೆಯಿಸಿ ಪಲವುಂ ಗಡಿಗೋಂಟೆಗಳ ಬಲವುಂ ಪಯಣಸನ್ನದಂಗೆಯ್ವು ದೆಂದು ರಾಯಸಂಗಳಂ ಕಳುಪಿ (ಶಕಂ. ೩-೬೩ ವ); ಅರಸನ ಕಣ್ಸನ್ನೆಯಿಂ ರಾಯಸಿಗನವಂ ಕೊಂಡು (ಶಕವ. ೦೬-೦೬). [ರಾಯಸ + — ಇಗ]

**ರಾಯಸೂಯ** (ನಾ). ಚಕ್ರವರ್ತಿಯು ಮಾಡುವ ಯಾಗ : "ರಾಯ ಸೂಯಮಂ ಮಾಡಿದಾತನಂ ಸಾಮ್ರಾಟ್‌ಯೆಂಬುದು" (ಪಶಾಡು. ೬೦-೨೬೯).

[ < ರಾಜಸೂಯ ]

**ರಾಯಸೆಜ್ಜೆ** (ನಾ). ರಾಜನ ಹಾಸುಗೆ; ಅರಸನ ಶಯ್ಯೆ: ಮಹಾರಾಜ:— (ರಾಯಸೆಜ್ಜೆಯಲ್ಲಿ ಸ್ಥಿತನಾಗುವನು) (ಶಲ್ಯ. ೦೯-೦); ಶಾಂತಲಾದೇವಿ ರಾಯಸೆಜ್ಜೆಯ ಇನ್ನೊಂದು ಅಂಚಿನಲ್ಲಿ ಕುಳಿತಳು (ಸಪಶ. ೯೩).

[ ರಾಯ + ಸೆಜ್ಜೆ$_2$ ]

**ರಾಯಸೊಮ್ಮು** (ನಾ). ರಾಜನ ಸಂಪತ್ತು; ಅರಸನ ಐಶ್ವರ್ಯ : [ಸ್ಥಾನ:_ಶ್ರೀರಂಗಪಟ್ಟಣ. ಅರಮನೆಯ ನೆಲಮಾಳಿಗೆ. ರಾಯಸೊಮ್ಮಿನ ಒಳಭಂಡಾರ] (ಷಂಕ್ರಕ. ೦೦-೦). [ ರಾಯ + ಸೊಮ್ಮು$_3$]

**ರಾಯಿತ** (ನಾ). ತರಕಾರಿ ಮತ್ತು ಮೊಸರು ಬೆರಸಿ ಮಾಡುವ ಒಂದು ಬಗೆಯ ವ್ಯಂಜನಪದಾರ್ಥ : ಬೆಂಡೇಕಾಯಿ ರಾಯಿತವೂ ಅರುಚಿ ಯಾಯಿತು (೪೩೪೫. ೦೦೬). [← ಹಿಂ. ರಾಯತಾ; ಮರಾ. ರಾಯತೀ]

**ರಾಯಿಪುಡಿಸಕ್ಕರೆ** ' ರಾಯಪುಡಿಸಕ್ಕರೆ ' ನೋ.

**ರಾಯುಳ್ಳಿ** (ನಾ). ಒಂದು ಬಗೆಯ ದಪ್ಪ ಈರುಳ್ಳಿ : " ರಾಜ ಪ್ರಿಯ: – ರಾಯುಳ್ಳಿ." (೬೩೦. ೦೩೬); ರೊಟ್ಟಿ ಸಕ್ಕರೆ ತುಪ್ಪ ಬೆಲ್ಲ ಗೋಧುವೆ ತಣ್ಪಟ್ಟು ರಾಯುಳ್ಳಿಯ ಪಿನಿಯ ಒಟ್ಟಿಲು ಕವಳ ಕಲ್ಗೊಡದ ಮಾಸದ ರಾಸಿಯುಟ್ಟಣಿಸಿದವಂಗಡಿಯೊಳು (ಕುರಾಕಾಂ. ೪೨-೬೦). ' ರಾಮುಳ್ಳಿ ' ಪರಾ. [ ರಾಯ + ಉಳ್ಳಿ$_1$ ]

**ರಾಯ್ಯಂಗೆಯ್**, ರಾಯ್ಯಂಗೆಯ್ (ಕ್ರಿ). ರಾಜ್ಯಭಾರಮಾಡು ; ಆಡಳಿತ ವನ್ನು ನಡೆಸು ; ಆಳು : ಬನವಾಸಿಪನ್ನಿಶ್ಛಾಸಿರಕೆ ಚಟ್ಟು ರಾಯ್ಯಂ ಗೆಯುತ್ತಿರೆ (ಎಕ. VIII, ಸೊರಬ. ೪೦೩-೭; 986). ರಾಯ್ಯಗೆಯ್ : ಚಂದ್ರಾರ್ಕತಾರಂಬರಂ ರಾಯ್ಯಗೆಯುತ್ತಿರಲು (ಎಕ. V, ಹಾಸನ. ೦೬೦-೯; 1104). [ < ರಾಜ್ಯಂಗೆಯ್ ]

**ರಾಯ್ಯಗೆಯ್** ' ರಾಯ್ಯಂಗೆಯ್ ' ನೋ.

**ರಾರಾಜಿಸು** ' ರಾಜಿಸು ' ಪರಾ.

**ರಾಲ**, ರಾಳ (ನಾ). ೧. ಒಂದು ಬಗೆಯ ಮರ; ಅರಾಲ: ಸಜ್ಜರಸ : "ಸಸ್ಯಂ – ರಾಲ. ಸಸಿ" (೬೩೦. ೦೬೯). **ರಾಳ** : ೧. "ಸೌರಮಸಲಾ ರಾಳಮೆಸಿ ಸಜ್ಜರಸಮುಕ್ಕು" (ಶಂಗರಾ. ೪೩-೪೨); ಕರೀಡಮಾರ, ರಾಳ (ವೈಶಿ. ೬೦-೦೪೨೬). ೨. ರಾಲಮರದಿಂದ ದೊರಕುವ ಅಂಟು : ಇನ್ನು ಕೆಲವೊಂದು ವಿಶಿಷ್ಟವೃಕ್ಷಗಳಿಂದ ಅಂಟು, ರಾಳ, ಸೀಗೇಕಾಯಿ . . . ಕಾಚು ಮೊದಲಾದ ಉಪಯುಕ್ತವಸ್ತುಗಳು ದೊರೆಯುವವು (೯೩ಕೃ. ೭-೦೯); ಲೋಲಲನಾಗರಮೋತಿ ಚಂದನ -ಕರ್ಪುರ ರಾಳ ಗುಗ್ಗುಳದ ದಶಾಂಗ (ಸಿದ್ಧ. ೦೯-೩). [ಸಂ.]

**ರಾವ್** ' ರಾಯ ' ನೋ.

**ರಾವ** (ನಾ). ೧. (ಪ್ರಾಣಿಗಳ) ಕೂಗು ; ಅರಚಾಟ : ನರಲ್ವ ರಾವದಂತೇಂ ಬಗೆಗೊಂಡುದೋ ಗುಡುಗು ಸೂಕಿಮರುತ್ಕೃತತೋವ ದೇಳ್ಗೆಯಿಂ (ರಾಹಕೇ. ೬-೦೦೩); ವಾಲಿ ದೆಸೆಗಳು ಬಿರಿಯ ರಾವದಲನು ಜನನು ತಿವಿದನು ಸರೋಷದಲಿ (ಅರಾಪೂ. ೪-೨-೩೦); ಹೆಬ್ಬುಲಿಯ . . . ಭಯಂಕರರಾವದ ಇದಿರು ನಾಯಿಯ ಬೊಗಳು ಸಗಣ್ಯವಾಗಿ ಬಿಟ್ಟಿತ್ತು (ಮಲಪು. ೨೩೦). ೨. ಶಬ್ದ; ಧ್ವನಿ; ಸದ್ದು : ದಿಗ್ಭಿತ್ತಿವಿಭೇದಿ ಪೆರ್ಚಿ ಕದನಾನಕರಾವಮುಗುರ್ವಿನುರ್ವೆ ಪರ್ವುತ್ತಿರೆ (ಕಂಕಕಾ. ೬-೬೨); ಅಂಬುಧಿಯ ನಿರ್ಘೋಷಮಂ ಪಳಿವಂತೆ ಡಮರುಗದ ರಾವಮೆಸೆಯ (ಅಶಂ. ೯-೪). [ಸಂ.]

**ರಾವಟಿಗೆ** (ನಾ). ಚಿಕ್ಕ ಡೇರೆ ; ಗುಡಾರ : ನವಾಬರು . . . ತಲೆ ದಿಂಬಿಗೆ ಶಾಲನ್ನೂ ಸಕಲಾತಿಯನ್ನೂ ತಾವು ಮಲಗಿದ್ದಂತೆಯೇ ಹೊದಿಸಿ, ಆ ರಾವಟಿಗೆಯನ್ನು ಕೊಯಿದು ಮತ್ತೊಂದು ಗುಡಾರಕ್ಕೆ ಹೋಗಿ (ಮಹಾಪಂ. I. ೨೨೩). [ ← ಮರಾ. ರಾವಟೀ ]

**ರಾವಡಿ** (ನಾ). ಉಪದ್ರವ ; ತೊಂದರೆ : ನೊಣ ರಣವ ಹೊಕ್ಕು ಶೋಣಿತವ ಭುಂಜಿಸುವಾಗ ಕೇಣಸರದ ಭಟರೆಲ್ಲರೂ ನೊಣದ ರಾವ[ಪಾಠಾಂ. ಡಿ]ಯ ಹೇಳದೆ ಹೋದರು (ಮರಾಪ. ೬೦-೩) ; ಬಡತನದ ರಾವಡಿಗೆಯಾಜಿದೆ ಕಡುಗಿ ಭೂಮಿಯ ತೊಳಲಿ ಬರುತವೆ (ಹರಿದಾ. ೦೦-೦೬).

[← ತೆಲು. ರಾವಡ]

**ರಾವಣ** (ನಾ). ೧. ಗಟ್ಟಿಯಾದ ಕೂಗು ; ಗರ್ಜನೆ. ೨. ಗಟ್ಟಿ ಯಾಗಿ ಕೂಗುವವನು ; ಗರ್ಜಿಸುವವನು. ೩. ರಾಮನಿಂದ ಹತನಾದ ಲಂಕಾದ್ವೀಪದ ಒಬ್ಬ ರಾಕ್ಷಸರಾಜ : ಸೀತೆಯ ದೂಸಜಾ ದಟಾದ ರಾವಣನಂತಿರೆ ನೀನುಂ ಅಟಿಯಲಾಟಿಪ್ಪೆ (ಕಂಕಕಾ. ೯-೪೯) ; ರಾವಣನಂ ಜಗತ್ರಿತಯ ರಾವಣನಂ . . . ರಘುಪ್ರಭವರೂಪದೆ ಮರ್ದಿಸಿದ್ದೆ ಜನಾರ್ದನಾ (ಜಗಂ. ೦-೬೦) ; ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ (ಗಾದೆ). ೪. ಒಂದು ಬಗೆಯ ವೀಣೆ : ವಿಪಂಚಿಕೆ . . . ರಾವಣ . . . ಕಾಲಕೀಯೆಂಬ ಮೂವತ್ತುಮೂಜು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೩೬). [ಸಂ.]

**ರಾವಣಕರ** (ನಾ). [ಗಣಿತ] ಇಪ್ಪತ್ತು ಎಂಬ ಸಂಖ್ಯೆಯ ಸಂಕೇತ : ಕರಿ ದಿನಪ ರಾಜ ರಾವಣಕರ ಪರಿಸಂಖ್ಯಾಕ್ಷರಂ ಪೊದಟ್ಟಿಸೆಯ (ಛಂದೋಂಬು. ೩-೨೫). [ಸಂ.]

**ರಾವಣವೀಣೆ** (ನಾ). = ರಾವಣ ೪ : ರಾವಣವೀಣೆಯ ರಂಜಕರಿಂ . . . ಒಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹರಿಶ್ಚಂ. ೬-೪೦ ವ); ತಂತ್ರೀವಾದ್ಯ ಕಳಾಮಹಿತನಾದ ಮಾದರಸ ರಾವಣವೀಣೆ . . . ಪಿನಾಕಿವೀಣೆ ಮೊದಲಾದ ಮೂವತ್ತೆರಡು ವೀಣೆಗಳನ್ನೂ . . . ಶ್ರುತಿಗೊಳಿಸಿ (ಶರಶ. ೨೬೩).

[ಸಂ. ರಾವಣವೀಣಾ]

**ರಾವಣಶಾಖಿ** (ನಾ). ಒಂದು ಬಗೆಯ ಸಸ್ಯ ; ಆಡುಸೋಗೆ : ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹನೆಂದು ಹೊನ್ನ ಕಬಿಲೆಯ ರಾವಣ ಶಾಖಿದುಚ್ಚಿಪ್ಪದ ಹಾಲಿನಿಂದ ಕೋಟಿಸುಟ್ಟುಂಬವರನೇನೆಂಬೆ (ಬಸವ. ೩೬೯).

[ ? ]

**ರಾವಣಹಸ್ತ** (ನಾ). ಒಂದು ಬಗೆಯ ವೀಣೆ : ಸುಲಲಿತವಾಗೆ ವಸು ಗುಣರೂಪಜನಿಸ್ವನಾಂಕಮಾಲೆಯಿಂ ಪಲತೆಱದಿಂ ರಸಂಬಡೆಯೆ ರಾವಣ

ಹಸ್ತದಿನಂದು ರಾವಣಾಂ ಅಂತು ನಿರ್ಭರಭಕ್ತಿಯಿಂ ಬಾಜಿಪಾಗಳ್ (ಶಂಗಾಪು. ೧೦-೧೭೭) ; ಪ್ರಾಚೀನಗ್ರಂಥಗಳು. ಕಿನ್ನರಿ . . . ರಾವಣಹಸ್ತ ಮುಂತಾಗಿ ನಾನಾರೀತಿಯ ವೀಣೆಗಳನ್ನು ನಮೂದಿಸುತ್ತವೆ (ಸಂಗೀಶಾ. ೩೦೦).
[ಸಂ. ರಾವಣಹಸ್ತ]

**ರಾವಣಾರಿ** (ನಾ). ರಾವಣನ ಶತ್ರು ; ರಾಮು : ರಾವಣಾರಿಯ ಕಾಣಿಕೆಗೆ ಬಲುಶೀವಿಯನು ತೋರಿದನು ಸಾರುವ ಭಟ್ಟರೋಳಿಯಲಿ (ಕುಮಾ. ೮-೯೭) ; ರಾವಣಾರಿಯ ನಾಮ ಇದ್ದಲಿಗೆ ಸುಖಿಯುಂಡೆ (ತುರಂದ. ಧಾ. ೩-೨೭-೨). [ಸಂ.]

**ರಾವಣಾಸುರ** (ನಾ). ಒಬ್ಬ ರಾಕ್ಷಸ ; ರಾವಣ : 'ರಾವಣಾಸುರ ವಧನ' ಪರಾ. [ಸಂ.]

**ರಾವಣಾಸುರಮಥನ** (ನಾ). ರಾವಣನನ್ನು ನಾಶಮಾಡಿದವನು ; ರಾಮ : ರಾವಣಾಸುರಮಥನ . . . ಕಾವ್ಯದಾನತಜನವ (ಕುಮಾ. ೮-೧). [ಸಂ.]

**ರಾವಣಿ** (ನಾ). ೧. ರಾವಣನ ಮಗ. ೨. ಇಂದ್ರಜಿತು : ರಾವಣಿಯ ಸಮರಂಗ ಕಂಗೆಡಿಸಿತ್ತು ಕಪಿಬಲವ (ತೊರಾ. ೧೯-೯೭) ; ಎತ್ತಿ ಬಾಹಾ ದಂಡವನು ನಭಕೊತ್ತಿ ಹಲುಗಳನಾಡಿನರಿ ಲಯಮಿತ್ತುಮೊಗನೆಬಿಗಿದನು ಮದದುಬ್ಬಿನಲಿ ರಾವಣಿಯು (ತೊರಾ. ೩-೬-೨೦). [ಸಂ.]

**ರಾವದಿ** (ನಾ). ಕುದುರೆಯ ಹೃದಯದ ಜಾಗ : ವಕ್ಷದ ಹೃದಯದೆಡೆಗೆ ರಾವದಿಯೆಂಬ ಪೆಸರಕ್ಕುಂ (ಅಶ್ವಶಾ. ೮೮-೧೮). [ ? ]

**ರಾವಬಹದ್ದೂರ್** (ನಾ). ಹಿಂದಿನ ಕಾಲದಲ್ಲಿ ಬ್ರಿಟಿಷ್ ಸರ್ಕಾರದವರು ಪ್ರಸಿದ್ಧರಾದ ಸಮಾಜಸೇವಕರಿಗೆ ಕೊಡುತ್ತಿದ್ದ ಒಂದು ಬಿರುದು: ರಾವಬಹದ್ದೂರ್ ತೋಟದಪ್ಪನವರು ಶ್ರೇಷ್ಠದಾನಿಗಳು (ರೂಢಿ).
[←ಹಿಂ. ರಾವ್‌ಬಹಾದುರ್]

**ರಾವಲ್** (ನಾ). ರಜಪೂತರಾಜರಿಗೆ ಸಲ್ಲುತ್ತಿದ್ದ ಒಂದು ಬಿರುದು : ಚಿಹರಿಮಹಾರಾಜರವರಿಂದ ಕೊಡಲ್ಪಟ್ಟ "ರಾವಲ್" ಎಂಬ ಬಿರುದು ಅನೂಚಾನವಾಗಿ ನಡೆದು ಬಂದಿರುವುದು (ಗುರುಚ. ೩೦).
[←ಹಿಂ. ರಾವಲ್./ಪಾಲಿ. ರಾಜುಲ್]

**ರಾವಸಾಬ್** ' ರಾವಸಾಹೇಬ ' ನೋ.

**ರಾವಸಾಹೇಬ, ರಾವಸಾಬ್** (ನಾ). ಹಿರಿಯರನ್ನು ಗೌರವದಿಂದ ಸಂಬೋಧಿಸುವಾಗ ಬಳಸುವ ಒಂದು ಮಾತು: ಕೆಲವು ಹೊತ್ತಿನ ಮೇಲೆ ಷೇದೆ ತಾನಾಗಿ ನುಡಿದ__'ರಾವ ಸಾಹೇಬ' (ಶರಸಂ. ೯೦). **ರಾವಸಾಬ್** : ಯಾವ ಕೆಲಸವಿದ್ದರೂ ಬಿಟ್ಟುಬರಲು ಹೇಳಿದ್ದಾರೆ ರಾವಸಾಬ್ ! (ರಂಗರೂ. ೬೯). [←ಹಿಂ. ರಾವ್‌ಸಾಹಬ್]

**ರಾವಳಿಸು** (ಕ್ರಿ). ಅಬ್ಬರಿಸು ; ಆರ್ಭಟಿಸು : ಎಂಟುದಿಕ್ಕುಂ ಮುತ್ತಿ ರಾವಳಿಸಿ ಮುಳಿದಮ್ಮ ಗುಂಟಲಂ ಕೊಚಿಯಬೇಡ (ವೀಕೃತಿ. ೩-೨೭-೯೯).
[<ರವಳಿ + — ಇಸು$_3$./ ತೆಲು. ರವಳಿಂಚು]

**ರಾವಿ** (ನಾ). ಒಂದು ಬಗೆಯ ಮರ ; ಅರಳಿ: "ಬೋಧಿದ್ರುಮಃ . . . ಅಶ್ವತ್ಥಃ—ಇ ಅರಳೀಮರದ ಹೆಸರುಗಳು. ಅಶ್ವತ್ಥ. ರಾವಿಚೆಟ್ಟು" (ಸಿದ್ಧಾಂತ. ೦೦೩); ರಾವಿ — . . . (ಅಶ್ವತ್ಥ) (ಶಾಶಗ. ೯). [←ತೆಲು. ರಾವಿ]

**ರಾವಿನಾಡು** (ನಾ). ಒಂದು ನಾಡಿನ ಹೆಸರು : ಬಯ್ದಕೂರ ರಾವಿನಾಡ ಮಾರ್ಯನ್ನು ಮಮ್ಮ ಗಣಿಪ ರಾಮು ತುಜುವನಿಕ್ಕಿಸಿ ಅಟ್ಟಿ ಸತ್ತನ್ (ಎಶಿ. X, ಮುಳಬಾ. ೨೦೩-೨; ೯೩೩). [ರಾವಿ$_1$ + ನಾಡು]

**ರಾವು$_1$** (ಕ್ರಿ). ಅಂಟಿಕೊಳ್ಳು ; ಹತ್ತಿಕೊಂಡಂತಿರು : ಆತನು . . . ನೆಲಕ್ಕೆ ರಾವಿ ಗಗನಕ್ಕೆ ನೆಗೆದು ಹಗೆಯ ಹೊಡೆತವನ್ನು ತಪ್ಪಿಸಿ ಖಡ್ಗದಿಂದ ಪ್ಪಳಿಸಿ ತಾಲನ್ನೊಡ್ಡಿ ತಿವಿದು ರಿಪುಶಿರವನ್ನು ಇಳುಹಿದನು (ಕಬ್ಬಿಗ. ೩೦); ಸುಭಗೆ ಅಡಿಗೆಯ ಮನೆಯ ಮೂಲೆಯಲ್ಲಿ ರಾವಿಕೊಂಡು ಕುಳಿತಿದ್ದಳು (ಗಂಗಾಶಾ. ೦೨೭) ; ಅವನು ಮನೆಯೊಳಗೆ ರಾವಿಕೊಂಡು ಕುಳಿತಿದ್ದ (ಕಲಿನಾ. ೩೩). [?]

**ರಾವು$_2$** (ನಾ). ಒಂದು ಕೋಡಾಟದ ಮಾತು : ಹಳುವೆ ಹಳುರೇ ರಾವು ರಾವುರೆಯೆಂದು ಖಳರುಲಿಯೆ (ತೊರಾ. ೩೨-೨೦); ರಾವು ಫಲುಗುಣಯೆನುತ ಪಾರ್ಥನ ಭಾವ ಕುಡಿಚಮ್ಮಟಿಗೆಯಲಿ ತುರಗಾವಳಿಯನದುಹಿದನು ಸುಳಿಸಿದ ಸಾಹವಕೆ ರಥವ (ಕುಮಾದ್ರೋ. ೯-೩೭).

**ರಾವು$_3$** (ನಾ). ೧. ನವಗ್ರಹಗಳಲ್ಲಿ ಎಂಟನೆಯ ಗ್ರಹ ; ರಾಹು : "ರಾವು (ರಾವು)—ರಾಹು=ಗ್ರಹವಿಶೇಷ" (ಶಬ್ದಕೋ. ೩೮) ; ನೆಜ್ ಮೊಗವೆಂಬ ಚಂದಿರ ರಾವಿನೊಳು ಸೇರಿ ಹಜಿವುದೆನುತ ಬಳುಬೆನಚಿ ಮಚಿವೊಕ್ಕ ಕಿಬು ವೆಚಿಯನು ಸೋಲಿಸುತಂದು ಮೆಚಿದುದವಳ ನುಣ್ಗೊಸಲು (ರಾಕುಶ. ೦೨-೩೩). ೨. ದೆವ್ವ; ಭೂತ : ಅವರ ಹಿರಿಯರು ನಂಬಿದ ರಾವು ಮತ್ತು ಕೀಳುದೆವ್ವಗಳು ಅವು (ಶದ್ಯಸ. ೨೭). ೩. ಅಬ್ಬರ; ಆಟೋಪ; ಉಗ್ರತೆ : ಪ್ಲೇಗಿನಮ್ಮನ ರಾವಿನ ಮುಂದ್ಯಾರು ನಿಲುವೋರು (ಶಷ್ಮರು. ೩೦). ೪. ಭಯಾನಕವಾದುದು : ಭೀಕರವಾದುದು : ಹಣವನ್ನು ತೆಗೆದರು: ಮೈ ಉಬ್ಬಿ ರಾವಾಗಿದೆ (ಳವಳ. ೩೪) ; ತಂದೆಯವರ ಸಿಟ್ಟಿನಿಂದ ರಾವಾದ ಮೋರೆ . . . ಮನಸ್ಸನ್ನು ಕಲಕಿದವು (ಅಶ್ವ. ೯೭). ೫. ಕೋಪ; ಸಿಟ್ಟು : ಜಮಾದಾರರ ಮುಖದ ಮೇಲೆ ರಾವಿನ ಕಳೆಯಿರಲಿಲ್ಲ (ಗಂಗಾಶಾ. ೦೩೩) ; ವಾಲೀಕಾರ ಮಲಪ್ಪ ದಾಡಾನ ರಾವು ನೋಡಿ . . . ಎಂದು ಕೇಳಿದ (ಗ್ರಾಮಾಯ. ೭೭). ೬. (ಕರಾ) ಅತಿಯಾಸೆ; ಹಂಬಲ; ಬಯಕೆ.
[< ಸಂ. ರಾಹು]

**ರಾವುಕನಡಿ** ' ರಾವುಗನ್ನಡಿ ' ನೋ.

**ರಾವುಗಣ್ಣು** (ನಾ). ೧. ಭಯವನ್ನು ಹುಟ್ಟಿಸುವ ಕಣ್ಣು ; ರೌದ್ರವಾದ ಕಣ್ಣು : ಗೌಡರ ಮನೆಗೆ ಬೇಗದಿ ಬೀಗ ಹಾಕಿ ರಾವುಗಣ್ಣಿನ ತುರುಕರ ಕಾವಲಿಟ್ಟು (ಪಾಶದ. ೧೨೦). ೨. ಕೆಟ್ಟ ನೋಟ ; ಕ್ರೂರದೃಷ್ಟಿ : ಅವಳ ರಾವುಗಣ್ಣಿಗೆ ಬೀಳಬೇಡ (ರೂಢಿ). [ ರಾವು$_3$ + ಕಣ್ಣು (<ಕಣ್)]

**ರಾವುಗನ್ನಡಿ, ರಾವುಕನಡಿ** (ನಾ). ಸಣ್ಣವಸ್ತುವನ್ನು ದೊಡ್ಡದನ್ನಾಗಿ ಮಾಡಿ ತೋರಿಸುವ ಕನ್ನಡಿ ; ಭೂತಕನ್ನಡಿ : ಕಲಕಲವು ಓಡಿಗೆ ಬರೆದ ಅಕ್ಷರಗಳನ್ನು ರಾವುಗನ್ನಡಿ ಹಿಡಿದೇ ನೋಡಬೇಕು (ಸ್ವಸಿಶ. ೦೩೭); ಉಬ್ಬಿದ ಭೂತಕನ್ನಡಿಗೆ . . . ಬದಲಾಗಿ ಹಳ್ಳವಾಗಿರುವ ರಾವುಗನ್ನಡಿ (Concave mirror)ಯನ್ನು ಉಪಯೋಗಿಸಿದನು (ವಿಜ್ಞಾಶ. ೪೮). **ರಾವುಕನಡಿ:** ಅರಸು ರಾವುಕನಡಿಯ ಕಂಡು ಡಕ್ಕೆಯ ಬಿಸುಡು (ಪಶರಾ. 1. ೯೩೨). [ರಾವು$_3$ + ಕನ್ನಡಿ$_1$]

**ರಾವುಗಾಣು** (ಕ್ರಿ). ಅತಿಭಯಾನಕವಾಗು : ನಾಯಕನ ಅವ್ಯವಸ್ಥಿತ ಚಿತ್ತದಿಂದ ಆಡಳಿತದಲ್ಲಿ ಉಂಟಾದ ಗಲಭೆಯು ಆತನ ವಧೆಯಿಂದ ರಾವು ಗಂಡಿತು (ಕರಿಂಇ. ೩೭). [ರಾವು$_3$ + ಕಾಣು (< ಕಾಣ್) ]

**ರಾವುಗೆಂಪು** (ನಾ). ಉಗ್ರವಾದ ಕೆಂಬಣ್ಣ ; ಅತಿರಕ್ತವರ್ಣ : ದಾಸವಾಳ, ಕಿಂಜಲ್ಕ ಮೊದಲಾದ ರಾವುಗೆಂಪು ಹೂಗಳನ್ನು ಒಯ್ದು ಅವಳ ಮುಂದೆ ಚೆಲ್ಲಿರಿ (ಶೃಹಾರ. ೦೨೩). [ರಾವು$_3$ + ಕೆಂಪು$_1$]

**ರಾವುಗೈ** (ನಾ). ಬಲಿಷ್ಠವಾದ ಕೈ : ಮರಕಾಲ ರಾವುಗೈಯಿಂದ ಆ ಹುಚ್ಚುಹೊಳೆಯನ್ನು, ತೊಳೆಯಿಂದ ಮರ್ದಿಸತೊಡಗಿದನು (ಶಿದಾಉ. ೦೭೩). [ರಾವು$_3$ + ಕೈ$_{12}$ (< ಕಯ್$_2$)]

**ರಾವುಗೋಲು** (ನಾ). ಕಮ್ಮಾರನು ಉಪಯೋಗಿಸುವ ಒಂದು ಬಗೆಯ ಉದ್ದವಾದ ಕಬ್ಬಿಣದ ಸಲಾಕೆ : " ಲೋಹದ ಪಟ್ಟಿಯು ಒಂದಕ್ಕೊಂದಕ್ಕೆ ಅಂಟಿಕೊಳ್ಳುವುದಕ್ಕೆ ಬೇಕಾಗುವ ಕಾಖದ ಹದವನ್ನು ಪರೀಕ್ಷಿಸುವ ಸಲಾಕೆ " (ಅಶಂಗಾ).
[ರಾವು$_1$ + ಕೋಲು$_1$ (< ಕೋಲ್$_1$) ]

**ರಾವುತ**, ರಾಉತ, ರಾಉತ್ತ, ರಾವುತ್ತ, ರಾವ್ತ, ರಾಹುತ, ರಾಹುತ್ತ (ನಾ). ಕುದುರೆ ಸವಾರ; ಅಶ್ವಾರೋಹಿ : ''ಘೋಟಾಯ್ನನೆ ರಾವುತಂ" (ಶಶಬ್ದ. ೩೯); ರಾವುತನ ತಲೆ ಕುದುರೆಯ ಕಾಲು ಬಲ್ಲಹದ ಮೊನೆ ಅಲ್ಲಿಯೆ ಅಡಗಿತ್ತು (ಸಕಪ. ೪. II. ೬೬೩-೬೪); ತೆಪ್ಪವ ತೆಗೆವಂತೆ ತೆಗೆದೇಱ ರಾವುತ ರೊಪ್ಪದಿ ಬಂದರೋಲೈಸಿ (ಭರತ. ೨೩-೩೦); ಉಭಯಪಾರ್ಶ್ವದಲ್ಲಿಯೂ ರಾವುತರ ಪಹರೆ (ಶ್ರೀರಾಜು. ೯೩). **ರಾಉತ** : ಸಿರಿಯಂಗರಾಉತರಿಗೆ ಖ ೩ ವೊಗುಗೊಡಗೆ (ಎಕ. XIV ಎಳಂದೂ. ೨೩-೦೫; ಸು. 1448). **ರಾಉತ್ತ**. **ರಾವುತ್ತ** : ರಾವುತ್ತರಂ ತಳ್ತಿಱಿದು (ಎಕ. VIII, ಸೊರಬ. ೨೨೩-೦೦; 1152 ?); ರಥಿಕರಿಗೆ ಮಾವಂತರಿಗೆ ಕಾಲಾಳಂಗೆ ರಾವುತ್ತರಿಗೆ ಕೊಡಿಸಿದನವರ ವರಿಗವರಂಗದಾಯುಧವ (ಶಬ್ದಾನುಶಾ. ೦೫-೨೦); ಪಡೆವಳ್ಳರ್ ರಾವುತ್ತರ್ ಸ್ವಾದಿಗಳ್ . . . ದಂಡೆತ್ತಿ ಪೋದರ್ (ರಾಮಾಶ್ವ. ೯೩-೨೯). **ರಾವ್ತ** : ಭಯದಿ ತೇಜಿಯನಿಳಿದು ರಾವ್ತರು ಕರವ ಮುಗಿದರು ಕೊರಳ ಸಲಹೆನುತ (ಶಬ್ದಾನುಶಾ. ೫-೦೯); ಮೊಱೆವ ಬೊಬ್ಬೆಗೆ ರಾವ್ತರಂ ಬಿಸುಟು ವಾಜಿಗಳ್ ಪರಿದ್ಲಾಡಿದುವು (ನೇಮಿಪು. ೨೯-೨೯). **ರಾಹುತ** : '' ಘೋಟಾಯ್ನನೆನಲು ರಾಹುತ " (ಕಬಿಸಂ. ೦೫೬); ಶ್ರೀಮನ್ಮಹಾವಡ್ಡವ್ಯವಹಾರಿ ಕುಲ್ಲ ಹಣ ರಾಹುತರುಂ (ಎಕ. V, ಹಾಸನ. ೦೯೯-೦೯; 1113 ?) ; ಮದಕರಿಯು ಮಾಹುತನ ಕುದುರೆ ತಾ ರಾಹುತನ ಹದುಳವನಱಿದು ನಡೆವಂತೆ ಸೂಳೆ ತನಗೊದಗುವರನಱಿಗು (ಸರ್ವಜ್ಞ. ೦೯೦೫). **ರಾಹುತ್ತ** : ಹೊಸ ಬಿರುದರ ಗಂಡೋರಾಯ ರಾಹುತ್ತಮಿಂಡಃ (ಎಕ. VII, ಶಿವಮೊ. ೯೩-೦೦೩; 1587).

**ರಾವುತರಾಯ**, **ರಾಉತರಾಯ**, **ರಾಉತ್ತರಾಯ**, **ರಾವುತ್ತರಾಯ**, **ರಾಹುತರಾಯ** = ಅಶ್ವಾರೋಹಿಗಳಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ಶ್ರೀಮನುಮಹಾಪ್ರಧಾನಿಯಿಮ್ಮಡಿರಾವುತರಾಯ ರಾಯಕುಮಾರ (ಎಕ. VII, ಶಿವಮೊ. ೬೦-೬ ; 1787); ಅರಸುಗಳವರ ಕಾರ್ಯ್ಯಕ್ಕೆ ಕರ್ತರಾದ ರಾಉತರಾಯರು . . . ಕೊಟ ಗ್ರಾಮ (ಎಕ. XI, ದಾವಣ. ೦೯೯-೯; 1684 ?) ; ರಾಉತ್ತರಾಯರುಂ ಜವನಿಕೆ ನಾರಾಯಣರುಂ ಶ್ರಿ ರಾಮಕೃಷ್ಣಪದಪದ್ಮಾರಾಧಕರುಮಪ್ಪ ಶ್ರೀಮನುಮಹಾಪ್ರಧಾನಂ ಪೆರುಮಾಳೆದೇವ (ಎಕ. XI, ಚಿತ್ರದು. ೦೨-೦೩; 1286); ಸ್ವಸ್ತಿಪುರ ವರಾಧೀಶ್ವರ ಇಂಮಡಿರಾಉತ್ತರಾಯ ಶ್ರೀಪೆರುಮಾಳದಣ್ಣಾಯಕರ ಸುಪುತ್ರಂ (ಎಕ. XIV, ಗುಂಡ್ಲು ಪೇ. ೦೩೦-೯ ; 1310) ; ರಾವುತ್ತರಾಯಂ (ಕಬ್ಬಿಗ ಪು. ೨೯೫ ಶ್ರ ಯೋ); ಶ್ರೀಸೋಮ ಶಿಲಾದೇಉ ರಾಹುತರಾಯ ಮಹಾ ಪಾತ್ರ ಅರಸುಗಳ ಕಾರ್ಯಕ್ಕೆ (ಎಕ. XIV, ಗುಂಡು ಪೇ. ೦೩೨-೩; 1540).

[←ಮರಾ. ರಾಉತ್, ರಾಊತ್, ರಾವುತ್./ತಮಿ. ರಾವುತ್ತ, ಇರಾವುತ್ತ; ತುಳು. ರಾವುತೆ, ರಾಹುತೆ ; ತೆಲು. ರವುತು, ರಾವುತು, ರಾವುತ್ತು, ರಾಹುತು, ರಾಹುತ್ತು]

**ರಾವುತಟ್ಟು** (ಕ್ರಿ). ದೆವ್ವ ಭೂತ ಮುಂತಾದುವುಗಳ ಬಾಧೆ ತಟ್ಟು : ಗರ ಬಡಿದಂತಾಗು : ಅವನ ಮುಖ ರಾವುತಟ್ಟಿದಂತಿತ್ತು (ರೂಢಿ). [ರಾವು$_3$ + ತಟ್ಟು$_1$]

**ರಾವುತಪಡೆ** (ನಾ). ಕುದುರೆಗಳ ಪಡೆ ; ಅಶ್ವಬಲ ; ಅಶ್ವಾರೋಹಿಗಳ ತಂಡ : ಕಡೆಮೊದಲಿಲ್ಲದೆ ಖಳರಾಯರಾವುತಪಡೆ ಬಿದ್ದುದಿತ್ತ ಮೇಣತ್ತ (ಮೋಹತ. ೪೦-೬೨). [ರಾವುತ + ಪಡೆ$_2$]

**ರಾವುತಪಾಯಿಕೆ** (ನಾ). ಕುದುರೆಸವಾರಿ ; ಅಶ್ವಾರೋಹ : ಕಾಟಣ್ಣನ ರಾವುತಪಾಯಿಕೆಯ ಸಫಾಟಿಕೆಯನು ಕಂಡು ಮೆಚ್ಚಿ ನೋಟಕರೊಲಿದು ಕೊಂಡಾಡಿದರು (ಶುರಾಶಾಂ. ೦೩-೦೯). [ರಾವುತ + ಪಾಯಿಕೆ$_0$]

**ರಾವುತಿಕೆ** (ನಾ). = ರಾವುತಪಾಯಿಕೆ : ಆದರಿಸಿ ರಾವುತಿಕೆಯಾದುದ ಭೇದವಿಲ್ಲದೆ ಮಾಳ್ಪ ಹಯವನು ಸಾಧನೆಯ ಧನಪತಿಯ ದಿಕ್ಕಿಗೆ ಹೋಗದಿರಿ (ಸಂಶಶ. ೩-೫); ಕುದುರೆಯ ಹಿಡಿಯ ಹೇಳಿದರೆ ರಾವುತಿಕೆಯ ಮಾಡಿದರೆ ಒಪ್ಪವರೇ (ಸಿದ್ಧೇಪ. ೩೬-೬); ನಿಡುಮವಾಳಕೆ ತೇಜಯ ತೆಗೆದು ಲೀಲೆಯೊಳೊಂದೆರಳ್ಬೀದಿಯನೇಱಿ ನೃಪಾಲ ರಾವುತಿಕೆದೋಱಿದನು (ಭರತ. ೨೯-೨೨). [ರಾವುತ + — ಇಕೆ]

**ರಾವುತು** (ನಾ). ಮೆಚ್ಚುಗೆಯ ಒಂದು ಮಾತು ; ಕೊಂಡಾಟದ ಒಂದು ನುಡಿ : ಪೂತು ರಾವುತೆನೆ (ಎಕ. VI, ತರೀಕೆ. ೯೫-೨೯; 1196); ಅರರೆ ರಾವುತು ಜಾಗು ಸ್ವಾಮಿಯ ಹರಿಬಕೋಸುಗ ಹಗೆಯ ಹೊಯ್ದರಿ (ಶಬ್ದಾಶ. ೩-೪).

**ರಾವುತೆಗೆ** (ಕ್ರಿ). ದೆವ್ವ, ಗ್ರಹ ಮೊದಲಾದುವುಗಳ ಪೀಡೆಯನ್ನು ಮೈ ಮೇಲಿನಿಂದ ಬಿಡಿಸು,– ಓಡಿಸು : ಬಲಿಕೊಟ್ಟು ರಾವುತೆಗೆಯಬೇಕು (ರೂಢಿ). [ರಾವು$_3$ + ತೆಗೆ$_1$]

**ರಾವುತ್ತ** ' ರಾವುತ ' ನೋ.

**ರಾವುಬಡಿ** (ಕ್ರಿ). = ರಾವುತಟ್ಟು : ಅವನು ರಾವುಬಡಿದವನಂತೆ ಸುಮ್ಮನೆ ಕುಳಿತುಬಿಟ್ಟಿದ್ದ (ರೂಶಕ. ೦೯); ಅವರ ಮುಖಗಳು ರಾವುಬಡಿದಂತೆ ವಿಕಾರವಾಗಿ ಕಾಣುತ್ತಿದ್ದುವು (ಕೃಪರು. ೩೦೦). [ರಾವು$_3$ + ಬಡಿ$_1$]

**ರಾವುಮುಖ** (ನಾ). ಗರಬಡಿದಂತಿರುವ ಮುಖ ; ಭಯದಿಂದ ವಿಕಾರ ವಾದ ಮುಖ : ಪ್ರೇತಕಳೆಯ ನಿನ್ನ ರಾವುಮುಖ ನೋಡಿ ಸಾವೆ ಸತ್ತಿತೂ ಏನೊ (ನಾಡರೀ. ೪೦-೭). [ರಾವು$_3$ + ಮುಖ]

**ರಾವುಮೊಗ** (ನಾ). ಭಯಂಕರವಾದ ಮುಖ ; ಹೆದರಿಕೆಯನ್ನುಂಟು ಮಾಡುವಂಥ ಮುಖ : ಜಡೆಗಟ್ಟಿದ ಮೊರಟುಗುರುಳು – ಕಿಸಿಬಾಯಿ– ದೊಡ್ಡಹೊಟ್ಟೆ – ರಾವುಮೊಗಗಳಿಂದ ಅವನು ಯಮದೂತನಂತೆ ಭೀಷಣ ನಾಗಿದ್ದನು (ಶ್ರೀರಾಶ. ೩೯). [ರಾವು$_3$ + ಮೊಗ]

**ರಾವುರೆ** (ನಾ). ಕೊಂಡಾಟದ ಒಂದು ನುಡಿ : ರಾವುರೆ ಅಮರನೀತಿ ಪೂತುರೆ ಅಮರನೀತಿ (ಅಮರ. ದೇ. ೦೦೯-೫) ; ಎಲುವ ಗದೆಯಿಂ ಹಿಟ್ಟು ಗಿಟ್ಟೋ ಹಳುರೆ ಹಳುರೇ ರಾವು ರಾವುರೆಯೆಂದು ಖಳರುಲಿಯೆ (ಕೌಶಿರಾ. ೩೨-೨೦).

**ರಾವುಹಿಡಿ** (ಕ್ರಿ). = ರಾವುತಟ್ಟು : ರಾವುಹಿಡಿದುಹೋಗಿದ್ದ ಮುಖದಿಂದ ಸುಂದರಮ್ಮ ಗೋಳಾಡುತ್ತ ಹೊರಕ್ಕೆ ಬಂದಳು (ಸಂತತ್ರ. ೨೨) ; ಅವನು ಅಬ್ಬರಿಸಿದರೆ ಯಾರಾದರೂ ತುಂಬಿದ ಬಸುರಿ ಇದ್ದರೆ ರಾವುಹಿಡಿದು ಹೋಗುತ್ತಿದ್ದಳು (ಪಮೂರು. ೩೦೩). [ ರಾವು$_3$ + ಹಿಡಿ$_1$ (<ಪಿಡಿ$_1$) ]

**ರಾವುಹೊಡೆ** (ಕ್ರಿ). = ರಾವುತಟ್ಟು : ಅವನ ಮೋರೆ ರಾವುಹೊಡೆದಿತ್ತು (ಸಮಸೀ. ೬೩೦) ; ಅವರ ಕೂಗಾಟಕ್ಕೆ ಓಣಿಗೆ ಓಣಿಯೇ ರಾವುಹೊಡೆದಂತಾ ಗಿತ್ತು (ಗಂಪರಾಯ. ೨೩೨). [ರಾವು$_3$ + ಹೊಡೆ$_1$ (<ಪೊಡೆ$_1$) ]

**ರಾವುಳ** (ನಾ). ಒಂದು ಬಗೆಯ ತೆರಿಗೆ : ಐನೂರ್ವ್ವರಾಹು ಮಲ್ಲೇಶ್ವ ರಂಗೆ ಪೂಜೆಗೆ ಲೋಕಾಭರಣಮುನಿಗೊಲ್ದು ಹೆಜ್ಜುಂಕ ರಾವುಳದ ಪಾಗಮಿತ್ತ ರಾಜೇಂದ್ರಾರ್ಕ್ಕ (ಸೌಇಇ. IX–i, ೩೯೦-೯; 1181). [ ? ]

**ರಾವ್ತ** ' ರಾವುತ ' ನೋ.

**ರಾಶಿ** (ನಾ). ೧. (ಧಾನ್ಯ ಮೊದಲಾದ ವಸ್ತುಗಳ) ಗುಪ್ಪೆ; ಒಟ್ಟಿಲು : ''ಪುಂಜಃ, ರಾಶಿಃ, ಉತ್ಕರಃ, ಕೂಟಂ – ೪ ಧಾನ್ಯಾದಿಗಳ ರಾಶಿ" (ಸಿದ್ಧಾಂತ. ೦೬೭); ಕಾಳನು ತೂರುತ ರಾಶಿಯ ಹೇರುತ ಕುಣಿವರು ರೈತರು ಊರಲ್ಲಿ (ಕಕಥ. ೩-೬೭). ೨. ಗುಂಪು; ಸಮೂಹ : "ನಿಕರಃ. . . ರಾಶಿಃ . . . ಸ್ತೋಮಃ.–ಈ ೩೯ ಸಮೂಹಂ" (ಹಲಾಯು. ೦೦೯-೦); ಮುದ್ರಿಸಿತು ಮಂಡೆಯಂ ಕೆನ್ನವಿರ ರಾಶಿ (ಶ್ರೀರಾಪಾ. ೦೩-೩೯೨). ೩. ಹೆಚ್ಚು; ಬಹಳ : ರಾಶಿ ಅನ್ನ ಹಾಕಬೇಡ, ಎಷ್ಟು ಬೇಕೋ ಅಷ್ಟು ಹಾಕು (ರೂಢಿ). ೪. ಮಧ್ಯಮಂತರಗತಿಯಂದು: ' ರಾಶಿಚಿಕ್ಕಣಿ ' ಪರಾ. ೫. [ಶೈವ] ಕಾಳಾಮುಖ ಮತ್ತು ಪಾಶುಪತಪಂಥದವರ ಹೆಸರಿನ ಕೊನೆಯಲ್ಲಿ ಸೇರುವ ಒಂದು ಪದ: ಶ್ರೀವಿದ್ಯಾರಾಶಿಪಂಡಿತ ದೇವರನ್ನು ಶಾಸನವೊಂದು ಸ್ತುತಿಸುತ್ತದೆ (ಕಶಾಅ. ೦೨೯). ೬. [ಜ್ಯೋತಿ] ಜ್ಯೋತಿಶ್ಚಕ್ರದಲ್ಲಿರುವ

ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಮತ್ತು ಮೀನ ಎಂಬ ಹನ್ನೆರಡು ವಿಭಾಗಗಳು : ಧನು ಝಷಂ ಸುಂದರಿ ಮಿಥುನಂ ದ್ವಿಸ್ವಭಾವರಾಶಿಗಳೆನಿಕುಂ (ಜಾತಿ. ೦-೨೩); ಸೂರ್ಯ . . . ವರ್ಷದ ಹನ್ನೆರಡುತಿಂಗಳುಗಳಲ್ಲಿ ಹನ್ನೆರಡು ರಾಶಿಗಳಲ್ಲಿ ಇರುತ್ತಾನೆ (ಆಕಾಶ. ೯೩). ೭. [ಗಣಿತ] ಕೂಡುವುದು, ಗುಣಿಸುವುದು ಮೊದಲಾದ ಗಣಿತಪ್ರಕ್ರಿಯೆಗಳಲ್ಲಿಯ ಸಂಖ್ಯೆಗಳ ಗುಂಪು: ಸಂಖ್ಯಾನವು (ಗಣಿತವು) ಹತ್ತು ವಿಷಯಗಳನ್ನೊಳಗೊಳ್ಳುತ್ತದೆ : ಪರಿಕರ್ಮ, ವ್ಯವಹಾರ, ರಜ್ಜು, ರಾಶಿ, ಕಲಾಸವರ್ಣ, ಯಾವತ್‌ತಾವತ್, . . . ವರ್ಗವರ್ಗ ಮತ್ತು ವಿಕಲ್ಪ (ಗಣಿತ. ೨೦೦). 'ತ್ರೈರಾಶಿ', 'ಭಿನ್ನರಾಶಿ' ಪರಾ. [ಸಂ.]

**ರಾಶಿಕುಂಡಲಿ** (ನಾ). [ಜ್ಯೋತಿ] ನಿಶ್ಚಿತಕಾಲದಲ್ಲಿ ಗ್ರಹಗಳ ಗತಿಯನ್ನು ಗುರುತಿಸುವ ಹನ್ನೆರಡುಮನೆಗಳ ರೇಖಾಕೃತಿ : ಆ ಗ್ರಾಮದಲ್ಲಿ ಯಾರ ಮನೆಯಲ್ಲಿ ಮಗು ಹುಟ್ಟಿದರೂ ಶಾಸ್ತ್ರಿಗಳೇ ಅದರ ರಾಶಿಕುಂಡಲಿಯನ್ನು ಬರೆಯುವ ವಾಡಿಕೆ (ಕೊಡ). [ಸಂ. ರಾಶಿಕುಂಡಲೀ]

**ರಾಶಿಚಕ್ರ** (ನಾ). ೧. ಆಕಾಶದಲ್ಲಿ ಗ್ರಹಗಳು ಸಂಚರಿಸುವ ಮಂಡಲಾಕಾರವಾದ ಮಾರ್ಗ,-ಪಥ : ಆಕಾಶದಲ್ಲಿ ನಾವು, ಸೂರ್ಯ, ಚಂದ್ರ ಮತ್ತು ಇತರ ಗ್ರಹಗಳ ಚಲನವಲನಗಳನ್ನು ಗಮನಿಸುವಾಗ, ನಕ್ಷತ್ರಗಳ ನಡುವೆ ಯಾವುದೋ ಒಂದು ರಾಜಮಾರ್ಗವಿರಬೇಕು ಎಂದು ಭಾಸವಾಗುತ್ತದೆ . . . ಈ ರಾಜಮಾರ್ಗವನ್ನು ರಾಶಿಚಕ್ರ ಎಂದು ಕರೆದರು (ಆಕಾಶ. ೯೩). ೨. = ರಾಶಿಕುಂಡಲಿ. [ಸಂ.]

**ರಾಶಿಚಿಕ್ಕಣಿ** (ನಾ). ಹೆಚ್ಚು ಬಲಿಯದ, ಹಾಗೂ ಅತಿ ಎಳೆಯದೂ ಅಲ್ಲದ ಅಡಕೆ : ಮಧ್ಯಮದರ್ಜೆಯ ಅಡಕೆ : ಅಡಿಕೆಗಳು . . . ಮಧ್ಯ ಎಳತಾದರೆ ರಾಶಿಚಿಕ್ಕಣಿಯಾಗುವವು (ಕೃಷಿಶ. ೦೩೨). [ರಾಶಿ + ಚಿಕ್ಕಣಿ$_1$]

**ರಾಶಿಭವಿಷ್ಯ** (ನಾ). [ಜ್ಯೋತಿ] ವ್ಯಕ್ತಿಯ ಜನ್ಮರಾಶಿಯನ್ನು ನೋಡಿ ಹೇಳುವ ಭವಿಷ್ಯ: ಚಕ್ರಬಂಧದ ಒಗಟು, ರಾಶಿಭವಿಷ್ಯ, ಲೂಟಿ, ಲಾಟರಿ (ಸೂರ್ಯಶಾ. ೩೦-೭). [ಸಂ.]

**ರಾಶಿವಾಳ** (ನಾ). (?) : ಚೌರಾಸಿಲಕ್ಷಜೀವರಾಶಿಗಳಿಗೆ ರಾಶಿವಾಳ [ಪಾಠಾಂ. ರಾಸಿವಾಳ, ರಾಶಿವಾಳುಕ, ರಾಶಿವಾಳಕ]ತಾನಾಗಿ (ಶಿವತಂ. ೩-೮). [ ? ]

**ರಾಶೀಶ** (ನಾ). [ಜ್ಯೋತಿ] ರಾಶಿಯ ಒಡೆಯ,- ಅಧಿಪತಿ : ಕ್ರಮದಿಂ ದ್ವಾದಶಭಾಗವೊಂದು ಗ್ರಹಕಕ್ಕುಂ . . . ಪ್ರಥಮಕ್ಕೆ ತತ್ಪ್ರಥಮ ರಾಶೀಶಂ (ಜಾತಿ. ೦-೨೭). [ಸಂ.]

**ರಾಶ್ನೆ**, ರಾಷ್ನೆ, ರಾಸ್ನೆ (ನಾ). ಒಂದು ಬಗೆಯ ವನಸ್ಪತಿ : " ನಾಕುಲಿ-ಈಶ್ವರಿ, ಸರ್ಪಾಕ್ಷಿ, ರಾಶ್ನೆ, ಕಾಡುವಿಟ್ಟಿ, ಒಪ್ಪಲಿ, ತುಳಸಿ " (ಒಶಂ. ೯೩). ರಾಷ್ನೆ : ಬಿಲ್ವಪತ್ರೆಯ ಬೇರು ಆ ಹಣ್ಣಿನ ತಿರುಳು ಕಳ್ಳಂಗಡಲೆ ಜೊಳ್ಳಂಗಡಲೆ ಅಕಲಕರೆ ರಾಷ್ನೆ ಸುಂಟಿ ಗಂಟುಪರಂಗಿಯಿವ ಕಷಾಯವನಿಟ್ಟು (ಬಾತಾಶ. ೦೯-೭). ರಾಸ್ನೆ : " ಏಲಾಪರ್ಣೀ, ಸುವಹಾ, ರಾಸ್ನಾ, ಯುಕ್ತರಸಾ_ಈ ೪ ರಾಸ್ನೆ " (ಪಾಶರಾ. ೦೦೦) ; ರಾಸ್ನೆ, ಅಮೃತವಳ್ಳಿ . . . ಕಷಾಯದ ಕಾಸಿ . . . ಕೊಡಿಸಲು ಸಂಧಿಕಸನ್ನಿಪಾತ ಪರವಹುದು (ವೈದ್ಯಶಾ. I. ೩೩). [<ಸಂ. ರಾಸ್ನಾ]

**ರಾಷ್ಟ್ರ** (ನಾ). ೧. ಒಂದು ಆಡಳಿತದ ವ್ಯಾಪ್ತಿಗೆ ಒಳಪಟ್ಟ, ಅನೇಕ ರಾಜ್ಯಗಳ ಸಮುದಾಯ : ದೇಶ ; ನಾಡು : "ವಸುಮತೀಶರಿಗೆ ತಮಗೆನಿತು ಮಹಿಯುಂಟದರ ಪೆಸರು ರಾಷ್ಟ್ರಂ" (ಮಂಗರಾ. ೫೩-೨) ; ರಾಜನಿಲ್ಲದ ರಾಷ್ಟ್ರವು ವಿನಾಶಹೊಂದುವುದು (ರಾಷ್ಟ್ರಾಂಗ. ೦೩). ೨. ಸಾಮ್ರಾಜ್ಯ: ಚಕ್ರಾಧಿಪತ್ಯ. ೩. ಒಂದು ದೇಶದ ಜನತೆ,- ಪ್ರಜಾವರ್ಗ. [ಸಂ.]

**ರಾಷ್ಟ್ರಕ** (ನಾ). ದೇಶದಲ್ಲಿರುವವನು ; ಪ್ರಜೆ : ಪ್ರಜೆಯೆಂದರೆ ಇಲ್ಲಿ ರಾಜ್ಯಕಾರ್ಯಸಮರ್ಥನಾದ ಪ್ರಜೆಯೆಂದು ಭಾವ. ಅಂಥ ಪ್ರಜಾವ್ಯಕ್ತಿಯೇ ರಾಷ್ಟ್ರಕ (ಸಿಟಿಸನ್) (ರಾಷ್ಟ್ರಾಂಗ. ೮೩೦). [ಸಂ.]

**ರಾಷ್ಟ್ರಕೂಟ** (ನಾ). ಕನ್ನಡನಾಡಿನ ಒಂದು ರಾಜವಂಶದ ಹೆಸರು: ಕುನ್ತಳ ದೇಶಮುಂ ಸಮರಧಾರಿಣಿಯಲ್ಲಿಯೆ ರಾಷ್ಟ್ರಕೂಟಭೂಕಾನ್ತರನೆಲ್ಲರಂ ನಿಜಭುಜಾಬಳದಿಂದವೆ ಕಾದಿ ಗೆಲ್ದು (ಕೊಲ್ಹಾಶಾ. ೯-೬; 1147) ; ರಾಷ್ಟ್ರಕೂಟದವರ ಭಾಷೆಯು ಕನ್ನಡವೇ ಆಗಿತ್ತು (ದಕಾಇ. ೯೦). [ಸಂ.]

**ರಾಷ್ಟ್ರಗೀತೆ** (ನಾ). ದೇಶದ ಹಿರಿಮೆಯನ್ನು ಸೂಚಿಸುವ ಸಂಕೇತವಾಗಿ ಆರಿಸಿಕೊಂಡಿರುವ ಒಂದು ಹಾಡು : ಠಾಕೂರರು . . . ಜನಗಣಮನ ಗೀತೆಯನ್ನು ರಚಿಸಿದರು. ಅದು ಸಾರ್ವಭೌಮಸ್ವತಂತ್ರಭಾರತದ ಗಣರಾಜ್ಯಗಳ ರಾಷ್ಟ್ರಗೀತೆಯೆಂದು ಸ್ವೀಕೃತವಾಗಿದೆ (ರಠಾಗಸಾ. ೩೩) ; ನಾಲ್ಕು ನಿಟ್ಟಿನಿಂದಲೂ ಕೇಳಿ ಬರುತ್ತಿತ್ತು ಭಾರತದ ರಾಷ್ಟ್ರಗೀತೆ (ಅತ್ಮಾರ್ಥ. ೦೯೨). [ಸಂ. ರಾಷ್ಟ್ರಗೀತಾ]

**ರಾಷ್ಟ್ರಧ್ವಜ** (ನಾ). ದೇಶದ ಸಂಕೇತವಾಗಿ ರಚಿಸಿಕೊಂಡಿರುವ ಬಾವುಟ: ತ್ರಿವರ್ಣರಾಷ್ಟ್ರಧ್ವಜವೇ ಭಾರತಮಾತೆಯ ಪವಿತ್ರಪ್ರತೀಕ (ರಾಷ್ಟ್ರ. ೦೯೨). [ಸಂ.]

**ರಾಷ್ಟ್ರಪಕ್ಷಿ** (ನಾ). ದೇಶದ ವಿಶಿಷ್ಟಸಂಕೇತವೆಂದು ಆಯ್ಕೆಯಾಗುವ ಪಕ್ಷಿ : ನವಿಲು ಈಗ ಭಾರತದ ರಾಷ್ಟ್ರಪಕ್ಷಿ (ಕವಿಕೋ. X. ೦೪೦). [ಸಂ. ರಾಷ್ಟ್ರಪಕ್ಷಿನ್]

**ರಾಷ್ಟ್ರಪತಿ** (ನಾ). ೧. ಚಕ್ರವರ್ತಿ; ಸಾಮ್ರಾಟ. ೨. ದೇಶದ ಒಡೆಯ; ನಾಡಿನ ಅಧಿಪತಿ : ರಾಷ್ಟ್ರಪತಿ ವಿಷಯಪತಿ ಗ್ರಾಮಕೂಟಕಾಯುಕ್ತಕ ನಿಯುಕ್ತಾಧಿಕಾರಿಕ ಮಹತ್ತರಾದಿ ಸಮೇತದಿಂ (ಎಕ.XII. ೨೯೩-೨೦೦; 1077) ; ನಿಮಗೆ ಅದಿನ್ನೂ ಹೊಸದಾಗಿರದಿದ್ದರೂ ರಾಷ್ಟ್ರಪತಿಯಾಗಿ ನಿವೇದಿಸುತ್ತೇನೆ (ವೀರಶಂ. ೯೩). ೩. ಭಾರತದ ಸಂವಿಧಾನದಂತೆ ಚುನಾಯಿತನಾದ ದೇಶದ ಅಧ್ಯಕ್ಷ ; ದೇಶದ ಸರ್ವೋಚ್ಚಅಧಿಕಾರಿ : ಭಾರತಕ್ಕೆ ಒಬ್ಬರು ರಾಷ್ಟ್ರಪತಿಯವರು ಇರತಕ್ಕದ್ದು (ಭಾರಾಪ. ೨೭) ; "ಪ್ರೆಸಿಡೆಂಟ್" ಪದಕ್ಕೆ "ಪತಿ"—ರಾಷ್ಟ್ರಪತಿ ಎಂದು ಕೆಲವರು ಸಮಾನಪದ ಮಾಡಿಕೊಂಡಿದ್ದಾರೆ (ರಾಷ್ಟ್ರಾಂಗ. ೦೦೯ ಅಡಿ). [ಸಂ.]

**ರಾಷ್ಟ್ರಪ್ರಜ್ಞೆ** (ನಾ). 'ಇದು ನನ್ನ ದೇಶ' ಎಂಬ ಭಾವನೆ; ದೇಶಾಭಿಮಾನ : ರಾಷ್ಟ್ರಪ್ರಜ್ಞೆ, ವೈಜ್ಞಾನಿಕದೃಷ್ಟಿ . . . ನಮ್ಮಲ್ಲಿ ಜಾಗೃತವಾಗದಿದ್ದರೆ, ನಮ್ಮ ದೇಶ ಭಾರತವಾಗಿ ಬಹುದಿನ ಉಳಿಯುವುದೂ ಕಷ್ಟ ಎನ್ನಿಸುತ್ತದೆ (ಹೇಮುಕೊ. ೨ ಮುಖಪುಟ). [ಸಂ. ರಾಷ್ಟ್ರಪ್ರಜ್ಞಾ]

**ರಾಷ್ಟ್ರಸ್ವಾಮ್ಯ** (ನಾ). ದೇಶದ ಒಡೆತನ,-ಯಾಜಮಾನ್ಯ: ಪ್ರಜಾಪ್ರಭುತ್ವಕ್ರಮದಲ್ಲಿ ರಾಷ್ಟ್ರವೇ ಭೂಸ್ವಾಮಿಯಾಗುವುದು. ಆಗ ಉಭಯಪಕ್ಷದವರಿಗೂ ರಾಷ್ಟ್ರಸ್ವಾಮ್ಯವೇ ಲಕ್ಷ್ಯವಾಗುವುದು (ಭಾರಪ. ೩೩೧). [ಸಂ.]

**ರಾಷ್ಟ್ರಾಧ್ಯಕ್ಷ** (ನಾ). ದೇಶದ ಒಡೆಯ : ಅವನೇ ದೊರೆ ಅಥವಾ ರಾಜ ಅಥವಾ ರಾಷ್ಟ್ರಾಧ್ಯಕ್ಷ (ರಾಷ್ಟ್ರಶಾ. ೯೭). [ಸಂ.]

**ರಾಷ್ಟ್ರಾಭಿಮಾನ** (ನಾ). ದೇಶದ ಮೇಲಿನ ಮಮತೆ; ದೇಶಭಕ್ತಿ: ಇಟಲಿ, ಜರ್ಮನಿ . . . ಮುಂತಾದ ದೇಶಗಳು ಹೇಗೆ ತಮ್ಮ ರಾಷ್ಟ್ರಾಭಿಮಾನವನ್ನು . . . ಸಾಧಿಸಿಕೊಂಡವು ಎಂದು ಅರಿತು, ಉದ್ವೇಗಗೊಂಡರು (ಭಾರದ. ೪೨೭). [ಸಂ.]

**ರಾಷ್ಟ್ರಿಕ** (ಗು). ೧. ದೇಶಕ್ಕೆ ಸಂಬಂಧಿಸಿದ ; ದೇಶದ : ಕವಿಗಳು ಪಾರಮಾರ್ಥಿಕವಿಷಯಗಳಿಗಿಂತ ರಾಷ್ಟ್ರಿಕ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕಪ್ರಮೇಯಗಳಿಗೆ ಹೆಚ್ಚು ಗಮನಕೊಡುವರು (ಕವಿಪು. ೬೧೬೪). (ನಾ). ೨. ರಾಷ್ಟ್ರದ ಹಕ್ಕುಬಾಧ್ಯತೆಯನ್ನು ಪಡೆದಿರುವವನು ; ಪೌರ ; ಪ್ರಜೆ. ೩. = ರಾಷ್ಟ್ರಕೂಟ : ಈ ರಾಷ್ಟ್ರಿಕರು ಅಥವಾ ರಾಷ್ಟ್ರಕೂಟರು

ಎಂಬವರೇ ಮಹಾರಾಷ್ಟ್ರರೆಂದು ಹೆಸರಿಟ್ಟುಕೊಂಡು ತಮ್ಮ ರಾಷ್ಟ್ರಕ್ಕೆ ಮಹಾರಾಷ್ಟ್ರವೆಂದು ಹೆಸರಿಟ್ಟರು (ಕಕ್ಕ. ೦೯). ೪. ರಾಜ್ಯದ ಆಡಳಿತವನ್ನು ನಡೆಸುವವನು ; ರಾಜ್ಯಪಾಲ : ರಾಷ್ಟ್ರಿಕ ಅಥವಾ ಭೋಜಕ ಇವು ಮೂಲತಃ ಆಡಳಿತದ ಅಧಿಕಾರಕ್ಕೆ ಸಂಬಂಧಿಸಿದ ಪಾರಿಭಾಷಿಕಶಬ್ದಗಳು (ಕರ್ನಾಟಿ. ೦೩೭). [ಸಂ.]

**ರಾಷ್ಟ್ರಿಕೆ** (ನಾ). ಒಂದು ಬಗೆಯ ಮುಳ್ಳುಬದನೆಕಾಯಿ ; ಹೆಗ್ಗುಳ್ಳ : "ನಿದಿಗ್ಧಿಕಾ, ಸ್ಪೃಶೀ, ವ್ಯಾಘ್ರೀ, ಬೃಹತೀ . . . ರಾಷ್ಟ್ರಿಕಾ_೧೦ ಹೆಗ್ಗುಳ್ಳದ ಹೆಸರುಗಳು" (ನಿಘ್ಂಟಿ. ೦೩೩). [ಸಂ. ರಾಷ್ಟ್ರಿಕಾ]

**ರಾಷ್ಟ್ರಿಯ** (ಗು). ೧. ದೇಶಕ್ಕೆ ಸಂಬಂಧಿಸಿದ. (ನಾ). ೨. ರಾಜನ ಭಾವಮೈದುನ,—ಶ್ಯಾಲಕ: "ರಾಷ್ಟ್ರಿಯಃ, ರಾಜ್ಯಃ, ಸ್ಯಾಲಃ_ಅರಸಿನ ಹೆಂಡತಿಯ ಒಡಹುಟ್ಟಿದವನ ಹೆಸರು" (ನಿಘ್ಂಟಿ. ೬೦). [ಸಂ.]

**ರಾಷ್ಟ್ರೀಕರಣ** (ನಾ). (ಕೈಗಾರಿಕೆ ಇತ್ಯಾದಿಗಳನ್ನು) ದೇಶದ ಸ್ವಾಮ್ಯಕ್ಕೆ ಒಳಪಡಿಸುವುದು ; ಸರ್ಕಾರದ ಅಧೀನಕ್ಕೆ ತೆಗೆದುಕೊಳ್ಳುವುದು : ಕೈಗಾರಿಕೆಗಳ ರಾಷ್ಟ್ರೀಕರಣವಾದ ಮೇಲೂ ವಿಜ್ಞಾನದ ಮೇಲೆ ಹೆಚ್ಚಿನ ಪರಿಣಾಮವಾಗಿಲ್ಲ (ಶಿಲ್ಪನಾ. ೦೪೨). [ಸಂ.]

**ರಾಷ್ಟ್ರೀಯ** (ಗು). ೧. = ರಾಷ್ಟ್ರಿಯ ೧ : ರಾಷ್ಟ್ರೀಯ ರಕ್ಷಣಾಬಲದವರು . . . ಹೆಚ್ಚಾಗಿ ಬೆಳೆಯಿರೆಂದು ಸ್ವಾವಲಂಬನೆಯ ಸಂದೇಶವನ್ನು ಸಾರುತ್ತಿರುವರು (ಕರಶಿ. ೬೩). (ನಾ). ೨. = ರಾಷ್ಟ್ರಿಯ ೨ : ಅರ್ಜುನ, ರಾಷ್ಟ್ರೀಯನಾದ ಮಿತ್ರಾವಸುವು ಮಹಾರಾಜನ ಸನ್ನಿಧಿಯಿಂದ ಇಲ್ಲಿಗೆ ನಮ್ಮನ್ನು ಕಳುಹಿಸಿ ಕೆಲವು ದಿವಸಗಳಾದುವು (ನಾಗಾನಂ. ೮೦-೩). ೩. ರಾಜ ; ದೊರೆ. [ಸಂ.]

**ರಾಷ್ಟ್ರೀಯತೆ** (ನಾ). ೧.ಒಂದು ದೇಶದ ಜನರು ತಮ್ಮ ದೇಶದ ಒಟ್ಟು ಸತ್ವವನ್ನು ಕುರಿತು ಹೊಂದಿರುವ ಅಭಿಮಾನ ; ಒಟ್ಟು ದೇಶದ ಐಕ್ಯದ ಪರಿಭಾವನೆ : ಮಾಂಡಲಿಕ ಪ್ರಭುತ್ವಗಳನ್ನು ಅನುಭವಿಸಿ ರಾಷ್ಟ್ರೀಯತೆಯ ಉದಯವನ್ನು ಕಣ್ಣಾರೆ ಕಂಡು (ಸಪ್ತಶಾ. ೦೩). ೨. "ಜನಾಂಗ ಲಕ್ಷಣ ; ರಾಷ್ಟ್ರೀಯತೆ . . . ಜನಾಂಗವಾಗಿರುವುದು ; ಒಂದು ಅಥವಾ ಹೆಚ್ಚಿನ ರಾಜಕೀಯ ರಾಷ್ಟ್ರಗಳ ಭಾಗವಾಗಿರುವ ಕುಲ" (Nationality. ೩೦೪೩). [ಸಂ. ರಾಷ್ಟ್ರೀಯತಾ]

**ರಾಷ್ಮೆ** 'ರಾಶ್ಮೆ' ನೋ. [ಸಂ.]

**ರಾಸ** (ನಾ). ೧. ಶಬ್ದ ; ಸದ್ದು. ೨. ಕೃಷ್ಣನು, ಗೋಪಿಯರು ಮತ್ತು ಗೋಪಾಲಕರ ಸಂಗಡ ಮಾಡಿದ ಒಂದು ಬಗೆಯ ನೃತ್ಯ : ಮೋಹನನೆನ್ನಂ ಮೋಹಿಸಿ ರಾಸಕೆ ಕರೆದಂತೆ (ಪಂಪಾಭಾ. ೪೩-೨೦). 'ರಾಸಕ್ರೀಡೆ' ಪರಾ. ೩. ನಾಟ್ಯ ; ಕುಣಿತ : ಸಂಜೆಯ ಬೀಸುತ್ತಿದ್ದ ಗಾಳಿಯಲ್ಲಿ ಪೈರುಪಚ್ಚೆಗಳ ಸಾಮೂಹಿಕರಾಸವು ಛಂದೋಬದ್ಧವಾಗಿ ನಡೆದಿತ್ತು (ದೂರಕ. ೬೪). [ಸಂ.]

**ರಾಸಕ** (ನಾ). [ಕಾವ್ಯಮಿ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು; ಒಂದು ಅಂಕದಿಂದೊಡಗೂಡಿದ ಇದರಲ್ಲಿ ಐದು ಪಾತ್ರಗಳಿದ್ದು, ನಾಯಿಕೆಯ ಪಾತ್ರವು ಮೇಲುಗೈಯಾಗಿದ್ದು ನಾಯಕನು ಮೂರ್ಖನಾಗಿರುತ್ತಾನೆ, ಸೂತ್ರಧಾರನಿರುವುದಿಲ್ಲ : ೧. ನಾಟಿಕಾ . . . ೯. ಪ್ರೇಂಖಣ, ೧೦. ರಾಸಕ . . . ಎಂದು ಉಪರೂಪಕಗಳು ಹದಿನೆಂಟು ವಿಧ (ಸಂಪಾಟಿ. ೩೨). [ಸಂ.]

**ರಾಸಕೇಳಿ** (ನಾ). ಕೃಷ್ಣನು ಗೋಪಿಕಾಸ್ತ್ರೀಯರ ಜೊತೆ ಆಡಿದ ಮಂಡಲಾಕಾರದ ನೃತ್ಯ : ಮೊಗಮೊಗದಲಿ ದೀಪಾವಳಿ ! ರಾಸಕೇಳಿ ! ರಾಸಕೇಳಿ ! (ಕೃಷ್ಣಕರ್ಣ. ೦೦-೧೯). [ಸಂ. ರಾಸಕೇಲಿ]

**ರಾಸಕ್ರೀಡೆ** (ನಾ). = ರಾಸ.೨ : ರಾಸಕ್ರೀಡೆಯನು ನಿಜವಲ್ಲಭೆಯರೊಡಗೂಡಿ ಲಕ್ಷ್ಮೀವಲ್ಲಭನು ತೊಡಗಿದನು (ಜಭಾಗ. ೧೦-೨೯-೨). [ಸಂ. ರಾಸಕ್ರೀಡಾ]

**ರಾಸಗೋಷ್ಠಿ** (ನಾ). = ರಾಸಕೇಳಿ : ಎಳನಗೆಯ ಸುಪ್ರೇಮವೀಕ್ಷಣದಲಸಗಮನದ ವಿಭ್ರಮದ ಹರಿ ಸಲಿಸಿದನು ಮನವನು ಸರಾಗದ ರಾಸಗೋಷ್ಠಿಯಲಿ (ಜಭಾಗ. ೧೦-೨೯-೩). [ಸಂ.ರಾಸಗೋಷ್ಠೀ]

**ರಾಸನ** (ನಾ). ೧. ಧ್ವನಿಮಾಡುವಿಕೆ. ೨. ಕತ್ತೆಯ ಕೂಗು : "ರಾಸಃ, ರಾಸುಃ, ರಾಸನಂ, ರಾಸನೀಯಂ, ರಾಸ್ಯಂ; ಈ ೫ ಕತ್ತೆಗೂಗು" (ಶಾಕ್ಕ. ೦೨೦). [ಸಂ.]

**ರಾಸಭ** (ನಾ). ಕತ್ತೆ ; ಗಾರ್ದಭ : "ರಾಸಭಾಖ್ಯಾತಿ ಗರ್ದಭಂ" (ಶಬ್ದಕೋ. ೮೯-೫೯); ರಾಗಿಸಿ ರಾಸಭನಿರದತಿವೇಗದಿನಾ ನರಿಯ ಪಿಂದುಭೂದನೆ ಬಂದಂ (ಪಂಚತಂ. ೨೮೩-೯): ಮಹಾತಾಳವನಮಂ ಧೇನುಕನೆಂಬ ರಾಸಭರಾಕ್ಷಸಂ ಕಾದಿರ್ಪಂ (ಜಗಾ. ೪-೩೯ ವ). [ಸಂ.]

**ರಾಸಭಿ** (ನಾ). ಹೆಣ್ಣುಕತ್ತೆ : ಎನ್ನಿರ್ಪ ಕಾಡಿನೊಳಿರಿಸೆ ನಿಶ್ಚಿಂತರಾಗಿರ್ದ ರಾಸಭೀವಿಲಾಸಿನಿಯರ್ ತಮಗೊರ್ವ ಪುರುಷಂ ತರವೇಟ್ಕುಮೆಂದೆನ್ನಂ ತುತಿಸುತ್ತಿರ್ದಪರ್ (ಪಂಚತಂ. ೨೮೩-೩). [ಸಂ. ರಾಸಭೀ]

**ರಾಸಮಯ್ಯ** (ನಾ). ಒಬ್ಬಾತನ ಹೆಸರು : ಪುಲಿನಾಡು ರಾಸಮಯ್ಯ ಹಲಿಯೂರರಸರಂ ದಣ್ಣುವೇಟಿಸ್ಟೊಡೆ (ಎಕ, X, ಶ್ರೀನಿವಾ. ೬೩-೪; ಸಾ. ೫೦೦). [ರಾಸ$_1$ + ಅಮ (< ಅಮ್ಮ$_1$) + ಅಯ್ಯ$_1$]

**ರಾಸಲೀಲೆ** (ನಾ). = ರಾಸಕೇಳಿ : ಕೃಷ್ಣಗೋಪಿಯರ ರಾಸಲೀಲೆಯಲ್ಲಿ ಗೋಪಿಯರು (ಜೀವಾತ್ಮ) ಕೃಷ್ಣ (ಪರಮಾತ್ಮ)ನನ್ನು ಸೇರಲು ಹಂಬಲಿಸುತ್ತಾರೆ (ಛಾರದ. ೩೪೯) ; ಕೋಲು ಕೋಲಿನ ಆಟ, ಕೂಡಿ ಕೊಳಲಿನ ಆಟ, ರಾಸಲೀಲೆಯು ಕೋಲ (ಅರಕಾ. ೪೩೩-೨). [ಸಂ. ರಾಸಲೀಲಾ]

**ರಾಸಾಯನಿಕ** (ಗು). ೧. [ವಿಜ್ಞಾನ]ರಸಾಯನವಿಜ್ಞಾನಕ್ಕೆ ಸಂಬಂಧಿಸಿದ, -ಸೇರಿದ. ೨. ರಸಾಯನವಿಜ್ಞಾನದ ಪ್ರಕ್ರಿಯೆಯಿಂದ ಸಿದ್ಧಪಡಿಸಿದ : ರಾಸಾಯನಿಕ ಗೊಬ್ಬರಗಳನ್ನೂ ನಮ್ಮ ದೇಶದಲ್ಲಿ ತಯಾರು ಮಾಡುವ ಪ್ರಯತ್ನ . . . ನಡೆದಿದೆ (ರಾಷ್ಟ್ರಶಾ. ೦೩೭). [ಸಂ.]

**ರಾಸಾಯನಿಕವಿದ್ಯೆ** (ನಾ). [ವಿಜ್ಞಾನ] ಮೂಲಧಾತುಗಳು, ಅವುಗಳ ಸಂಯೋಗ ಮೊದಲಾದ ವಿಷಯಗಳ ನಿಯಮಗಳಿಗೆ ಸಂಬಂಧಿಸಿದ ಶಾಸ್ತ್ರ; ರಸಾಯನಶಾಸ್ತ್ರ : ದೇವಾ, ನನ್ನನ್ನೇಕೆ ಹುಟ್ಟಿಸಿದೆ ? ಹುಟ್ಟಿಸಿದರೂ ನನ್ನಲ್ಲಿ ರಾಸಾಯನಿಕ ವಿದ್ಯೆಯನ್ನಾದರೂ ಏಕೆ ಹಾಕಿದೆ ? (ಕುಂಶ್ಲಾ. ೨೫೦). [ಸಂ. ರಾಸಾಯನಿಕವಿದ್ಯಾ]

**ರಾಸಿ$_1$** 'ರಾಸು$_1$' ನೋ.

**ರಾಸಿ$_2$** (ನಾ). ೧. = ರಾಶಿ ೧ : ಕುಬೇರನಿಕ್ಕಿ ತಂದೊಟ್ಟಿದ ಪೊನ್ನ ರಾಸಿಗಳನ್ನಿತ್ತು ಧರಾಮರರ್ಗೆ (ಗದಾಯು. ೨-೩೭); ಮಿಸುನಿಯ ಪೊಂಗಳುಂ . . . ಬಸವನ ಮನೆಯ ಮುಂದೆ ಸುರಿದು ರಾಶಿಯಾಗಿರೆ (ಬಸ. ೦೨-೬೬); ಅಂಗಡಿಯೊಳು ಗೋಧಿ ಕಡಲೆ ನಾನಾಧಾನ್ಯಂಗಳ ರಾಸಿ ರಂಜಿಸಿತು (ಪ್ರಭುಲಿ. ೩-೨೦) ; ಜ್ಯೋತಿರ್ಲಿಂಗದಂತೆ ರಾರಾಜಿಸುವುದು ಆ ಜೋಳದ ರಾಸಿ (ಬೆಳುವ. ೨೩೭). ೨. = ರಾಶಿ ೬ : ಜ್ಯೋತಿಷ್ಕರಂ . . . ಬೆಸಗೊಳಲು ಅಪರಾಭಿಧಾನನಕ್ಷತ್ರರಾಸಿಯ ಗ್ರಹಕರಣಕೂಟಾದಿಗಳನು . . . ನಿಶ್ಚೈಸಲು (ನವಪೂ. ೦೩-೨೧). [< ಸಂ. ರಾಶಿ.]

**ರಾಸಿಕ್ಯ** (ನಾ). ರಸಿಕತನ : ಕಾಶ್ಮೀರದ ವಿಮುಕ್ತಪ್ರಕೃತಿಸೌಂದರ್ಯದ ನಿತಾಂತರಮಣೀಯತೆ, ನೂರಳ ಅನುರಕ್ತ ರಾಸಿಕ್ಯ ಎಲ್ಲವೂ ಸಂದಿಗ್ಧವಾಗಿದ್ದವು (ನೂರಜ. ೩೩) ; ಬಲ್ಲಾಳಕವಿ . . . ಭೋಜನ ರಾಸಿಕ್ಯ, ದಾನಶೂರತ್ವಗಳನ್ನು ಬಣ್ಣಿಸಿದ್ದು ಅಸತ್ಯವಲ್ಲ (ಸಾಂಂಸಾ. ೨೬). [ಸಂ.]

**ರಾಸಿಗೂಳು** (ನಾ). ೧.ಗುಡ್ಡೆ ಹಾಕಿರುವ ಅನ್ನ : ಸುತ್ತಳ ಹಳ್ಳಿಯ ಜನರು ವರುಷಕ್ಕೊಂದು ಬಾರಿ ಬಿಜಿಗೂಳ ಸುರಿಯಲು, ತಪಸಿಯಾಗಿ ರಾಸಿಗೂಳ ತಿಂದು . . . ಆ ಗ್ರಾಮಗಳಿಗೆ ಶಾಂತಿಯ ಮಾಡಿಕೊಂಡಿಪ್ಪನು (ಕೈರಸೂ. I, ೨೬೨) ೨. ಸಾಮಾನ್ಯವಾದ ಆಹಾರ : ರಾಸಿಗೂಳಲ್ಲ

ದಿವ್ಯಾಹಾರವದು ಶಕ್ತಿ ಸೂಸುವುದದಱಿಂದು ತುತ್ತ ಪೂಸರ ದಕ್ಕಿಸಬಲ್ಲನೆ (ಶಠಶ. ೩೦-೦೦೦). [ರಾಸಿ$_2$ + ಕೊಳ್$_2$ ( < ಕೊಟು$_1$ ) ]

**ರಾಸಿಗೆಯ್**, ರಾಸಿಗೈ (ಕ್ರಿ). ಗುಡ್ಡೆಮಾಡು ; ರಾಶಿಹಾಕು : ಕಾಂಚೀರ ಮಹೀರುಹದ ಪಣ್ಗಳಂ . . . ತಿಱಿದು ತಂದು ಧನ್ವಂತರಿ ವಿಶ್ವಾನು ಲೋಪರ ಮುಂದೆ ರಾಸಿಗೆಯ್ವುದುಂ (ರಠೂಕ್ಕು. ೨-೦೮೩). **ರಾಸಿಗೈ** : ನಿರ್ಮಳನಕ್ಷತ್ರಸಮಾಜಮಂ ನೆಗಟ್ದಲಂಪಿಂ ರಾಸಿಗೈದಂತೆ ಕಣ್ಗೆಳವಟ್ಟಿಂ ತುರುಕಾಂತಿಯಂ ಪರವುತಂ ಪ್ರೋತ್ತುಂಗತಾರಾಚಳಂ . . . ಕಣ್ಗೆಸೆದುವು (ಕಾದ್ರಬಿ. ೦೨-೦೦೯). [ರಾಸಿ$_2$ + ಕೆಯ್$_1$ ]

**ರಾಸಿಗೈ** 'ರಾಸಿಗೆಯ್' ನೋ.

**ರಾಸಿಗೊಳ್** (ಕ್ರಿ). ರಾಶಿಯಾಗು; ಒಟ್ಟಾಗು; ಕೂಡು : ಮಕರಂದ ಸಂದೋಹಮೊಂದೆಡೆಯೊಳ್ ರಾಸಿಗೊಂಡು ಪಾಸಾದಂತೆ ಮನೋಹರ ಮೂರ್ಗಿರ್ದ ಮೃದುತಳ್ಪಸಂಪುಟದೊಳಾ ಪುಣ್ಯಜೀವಂ ಬಂದು ನೆಲಸಿ (ಶರ್ಗಪು. ೦೨-೩೨೮). [ರಾಸಿ$_2$ + ಕೊಳ್$_1$ ]

**ರಾಸಿಹಬ್ಬ** (ನಾ). ಸುಗ್ಗಿಕಾಲದಲ್ಲಿ ಕಣದಲ್ಲಿಯ ರಾಶಿಯನ್ನು ಪೂಜೆಮಾಡುವ ಹಬ್ಬ : ನೀನಾದರೂ ಬಂದೆಯಲ್ಲ ರಾಸೀಹಬ್ಬಕ್ಕೆ ಸರಿಯಾಗಿ (ಶೆಲುಮ. ೨೩೭). [ರಾಸಿ$_2$ + ಹಬ್ಬ (<ಪರ್ಬ) ]

**ರಾಸು$_1$**. ರಾಸಿ$_1$ (ನಾ). ದನ ; ಜಾನುವಾರು : ರಾಸುಗಳ ಅತಿಕ್ರಮ ಪ್ರವೇಶದ ಆಕ್ಷನ್ನು ತಿದ್ದುಪಡಿ ಮಾಡಿದ ಕಾನೂನು (ಗ್ರಾಮಠ. ೦೦೩); ಐವತ್ತು ರಾಸು ಇರುತ್ತಾ ಇದ್ದವು (ತಂದತೊಜ. ೩೦). **ರಾಸಿ$_1$** : 'ಗಿಡ್ಡರಾಸಿ' ಪರಾ. [ ? ]

**ರಾಸು$_2$** (ನಾ). ಅಸಲು ಮತ್ತು ಬಡ್ಡಿ ಕೂಡಿದ ಮೊತ್ತ : ಯಾವುದೂ ಅಸಲಿನ ಯಾವುದೋ ಬಡ್ಡಿದರದ ರಾಸುಗಳನ್ನು ಹೀಜಿ ತೆಗೆದು . . . ಅನೇಕರಿಗೆ ತಿಳಿಸಿಕೊಟ್ಟು ದಣಿದಿದ್ದೇನೆ (ಗಾಲಶ. ೦೩೭). [←ಮರಾ. ರಾಸ್]

**ರಾಸೆ** (ನಾ). = ರಾಸ ೨ : ರಾಸೆಯನರ್ಥಕೆ ತಡೆದವಳು ಹಾಡನು ಪಾಡಂಗೈದವಳು (ಗೋಕರು. ೪೨-೨೩). [ಸಂ. ರಾಸ]

**ರಾಸ್ತ** (ಗು). ೧. ಸರಿಯಾದ ; ಯೋಗ್ಯವಾದ ; ನ್ಯಾಯವಾದ : ಆಚಾರೆಪ್ಪ ರಾಸ್ತ ಮಾತ ಆಡಿದಿರಿ (ಮನಶ. ೦೩) ; ನೀ ಏನ ಹೇಳಿದೆಲ್ಲ ಈ ಮಾತೂ ಇದಾ ನೋಡಿದು ರಾಸ್ತ ಮಾತು (ಕಿಡುಗು. ೯೯). (ನಾ). ೨. ಸಮರ್ಪಕವಾದುದು ; ಯೋಗ್ಯವಾದುದು : ನಾ ಹೇಳೂದು ರಾಸ್ತ ಏತಿಲ್ಲೋ (ಗ್ರಾಮಹು. ೨೩). [← ಪಾರ. ಹಿಂ. ಮರಾ. ರಾಸ್ತ]

**ರಾಸ್ತಿ** (ಗು). ೧. ಸರಿಯಾದ : 'ರಾಸ್ತಿತೂಕ' ಪರಾ. (ನಾ). ೨.ನಿಜ : ಸತ್ಯ : ಶಾಸ್ತ್ರ ಶ್ರವಣಗಳಾದೆ ಶ್ರೌತಸ್ಮಾರ್ತಗಳಾದೆ ರಾಸ್ತಿ ಚಿದಾನಂದ ಅವಧೂತನಾದೆ (ಶಧಾಪ. ೦೦೦-೭). [←ಹಿಂ. ಮರಾ. ರಾಸ್ತಿ]

**ರಾಸ್ತಿತೂಕ** (ನಾ). ಸರಿಯಾದ ತೂಕ : ಕಾವು ಮಾಮಲತ್ತು ತಿಳಿಯು ವಂಥಾದ್ದು ರಾಸ್ತಿತೂಕ ಮಾಡುವಂಥಾದ್ದು (ರಾಶೇಂದ್ರ. ೨೬೨). [ರಾಸ್ತಿ + ತೂಕ]

**ರಾಸ್ನೆ** (ನಾ). = ರಾಶ್ನೆ: "ಏಲಾಪರ್ಣೀ, ಸುವಹಾ, ರಾಸ್ನಾ, ಯುಕ್ತರಸಾ- ಈ ೪ ರಾಸ್ನೆ" (ವಾಶಠಾ. ೦೦೦) : ಸರಳಂ ಕೋಷ್ಠಂ ಮಂಜಿಷ್ಠೆ ರಾಸ್ನೆ ಬೆಳ್ಳುಳ್ಳಿ ಸೈಂಧವಂ ತಗರಮಿವಂ ಕರಿಯಾಮಿನ ನೊರೆವಾಲೊಳ್ ಬೆರಸಿ ಬಟ್ಟಿಕ್ಕೆಣ್ಣೆವೊಯ್ವುದು (ಅಶ್ವಶಾ. ೦೩-೩೭). [ಸಂ. ರಾಸ್ನಾ]

**ರಾಸ್ನೆ** 'ರಾಶ್ನೆ' ನೋ.

**ರಾಹ** (ನಾ). ವೇಗ ; ರಭಸ ; ಆರ್ಭಟ : ನಿಗುರ್ಗಿಡಿಗಳೆಲೀಕೆಯು ರಾಹದಿಂ ಲಗಡ್ಗಳಂ ತಗಡೇಣ್ಗಳಂಬಂತ ಬೆಂಗೊಡದೆ (ಶರಕು. ೩೦-೯) ; ಬರಸೆಳೆದು ರಾಹದಿಂ ಶಿರಗಳಂ ಕೊರೆದು ಕೊರೆದೀಡಾಡಿ (ಶರಕು. ೩೭-೦೯).

[ಈ ಇದು 'ರಂಹಸ್' ಎಂಬುದರ ಅಪಭ್ರಷ್ಟವಿರಬಹುದು]

**ರಾಹು** (ನಾ). ೧. ಸಿಂಹಿಕೆ ಎಂಬ ರಾಕ್ಷಸಿಯ ಮಗ ; ಈ ಇವನೇ ನವಗ್ರಹಗಳಲ್ಲಿ ಒಬ್ಬ ಮತ್ತು ಸೂರ್ಯ, ಚಂದ್ರರನ್ನು ಗ್ರಹಣ ಕಾಲದಲ್ಲಿ ನುಂಗುತ್ತಾನೆ ಎಂಬ ಪ್ರತೀತಿಯಿದೆ: "ಭಾನುರಿಪು ಸಿಂಹಿಕಾ ಪ್ರಿಯಸೂನು . . . ವಿಧುಂತುದನಂತದು ಕಾನಕ್ಕುಂ" (ಶಮ. ಕೊಶ. ೦೩-೩೩); ಸುರಪತಿ ಶಿಖಿ ಯಮ ನೈರುತಿ . . . ರಾಹು ಮಂದೇಂದು ಚಂದ್ರನಂದನ ಗುರುಗಳ್ (ಕಾಶತ. ೨-೦) ; ಶಶಿವಂಶದ ನಿಲವನು ರಾಹು ಗೆದ್ದುದ ಕಂಡು ಹಿರಿಯರು ಹೊಲಬುಗೆಟ್ಟರು (ಅಠಕಂ. ೯. ೦೮೯-೩೦೯) ; ರವಿ ಚಂದ್ರ ಬುಧ ನೀನೆ ರಾಹುಕೇತುವು ನೀನೆ (ಶರಂತ. ೨-೨೬-೦). ೨. ಗ್ರಹಣ, ಉಲ್ಕಾಪಾತ, ಭೂಕಂಪ ಮೊದಲಾದ ಉತ್ಪಾತ. ೩. ಅಗ್ನಿ ; ಬೆಂಕಿ : "ಅನಲೋತ್ಪಾತಂ ಕರಾಳಂ ಗ್ರಹವಿವರಮಿವುಂ ರಾಹುವಕ್ಕುಂ" (ನಾಶಾರ. ೭೭). [ಸಂ.]

**ರಾಹುಕಾಲ** (ನಾ). ರಾಹುವು ಅಭಿಮಾನಿದೇವತೆಯಾಗಿರುವ ಕಾಲ ; ಶುಭಕಾರ್ಯಗಳಿಗೆ ಪ್ರಶಸ್ತವಲ್ಲವೆಂದು ಪರಿಗಣಿಸಿರುವ, ಪ್ರತಿ ದಿನದ ಮೂರು ಮುಕ್ಕಾಲು ಗಳಿಗೆ ; ಅಶುಭಕಾಲ : ನಾವು ಇಲ್ಲಿಗೆ ರಾಹುಕಾಲದಲ್ಲಿ ಬಂದಂತಹೆಯಿತು (ಕೈಲಾಶ. ೩೦) ; ರಾಹುಕಾಲದಲ್ಲಿ ಶುಭ ಕಾರ್ಯವನ್ನು ಮಾಡಬಾರದು (ರೂ೩). [ಸಂ.]

**ರಾಹುಗ್ರಸ್ತ** (ನಾ). ರಾಹುವಿನಿಂದ ಹಿಡಿಯಲ್ಪಟ್ಟುದು, - ನುಂಗಲ್ಪಟ್ಟುದು : ಕೆಡದನಕಟಕಟ ಮದಮುದಿತ ರಾಹುಗ್ರಸ್ತವಾದ ತರಣೀಂದು ಬಿಂಬಂ ನೆಲಕೆ ಬೀಳ್ವಂದದೆ (ಹತಶಾ. ೦೨-೯) ; ರಾಹುಗ್ರಸ್ತವಾದಂದದಲಿ ಚಂಡಗಭಸ್ತಿಮಂಡಲವಿಳಗೆ ಕಾಣಿಸದಾಯ್ತು (ಶೊರಠಾ. ೬-೨೬-೩೭). [ಸಂ.]

**ರಾಹುಗ್ರಹಣ** (ನಾ). ಚಂದ್ರ, ಸೂರ್ಯರನ್ನು ರಾಹುವು ಹಿಡಿಯುವಿಕೆ ; ಉಪರಾಗ : ರವಿ ರಾಜರ್ . . . ರಾಹುಗ್ರಹಣಗಾಢಪೀಡಿತ ರಾದರ್ (ಶಬ್ದಾರ. ೨-೩೩). [ಸಂ.]

**ರಾಹುಟಿ** (ನಾ). ಸಣ್ಣಗುಡಾರ; ಡೇರೆ; ತಂಬೂ : ದಾರಿಗುಂಟ ಚಿಕ್ಕಚಿಕ್ಕ ರಾಹುಟಿಗಳಿದ್ದು, ಪ್ರತಿಯೊಂದರಲ್ಲಿ ೨-೩ ಜನ ಶಿಪಾಯಿಗಳು ಇರುತ್ತಿದ್ದರು (ಹಂಶಾ. ೦೦೬); ಪ್ರಯಾಣೋಪಯುಕ್ತವಾದ ಡೇರೆ, ರಾಹುಟಿ ಮೊದಲಾದವುಗಳನ್ನು ತಕ್ಕೊಂಡು ಹೊರಟರು (ಸಂಜಾಳ. ೦೭೩). [←ಹಿಂ. ರಾವಟೀ; ಮರಾ. ರಾವಟೀ, ರಾವ್ಹಟೀ, ರಾಹುಟೀ, ರಾಹೋಟೀ]

**ರಾಹುತ** 'ರಾವುತ' ನೋ.

**ರಾಹುತ್ತ** 'ರಾವುತ' ನೋ.

**ರಾಹುಸಂಸ್ಪರ್ಶ** (ನಾ). = ರಾಹುಗ್ರಹಣ : ಉಪರಾಗಃ, ಉಪಪ್ಲವಃ (ರಾಹುಸಂಸ್ಪರ್ಶ ಉಚ್ಯತೇ)-ಈ ೨ ಗ್ರಹಣದ ಪೆಸರ್ (ಹಲಾಯು. ೬-೯೦). [ಸಂ.]

**ರಾಳ** 'ರಾಲ' ನೋ.

**ರಾಳಕರ್ಪುರ** (ನಾ). ಒಂದು ಬಗೆಯ ಕರ್ಪೂರ ; ಸಜ್ಜರಸದ ಕರ್ಪೂರ : ಚರ್ವಿಸಿ ವೀಳ್ಯಯೇಲವ ರಾಳಕರ್ಪುರವಾ (ಶರಾಶಠಾ. ೩೪೩-೩೭). [ರಾಳ (=ರಾಲ) + ಕರ್ಪುರ (< ಕಪ್ಪುರ) ]

**ರಾಳಧೂಪ** (ನಾ). ಒಂದು ಬಗೆಯ ಮರದ ರಸದಿಂದ ತಯಾರಿಸುವ ಸುಗಂಧದ್ರವ್ಯ ; ಲೋಬಾನ : ರಾಳಧೂಪ(ರಾಳ)- ಸುಂದರವಾದ ವೃಕ್ಷವು. ಇದರ ಅಂಟಿಗೆ ರಾಳವೆನ್ನುವರು. ಅದು ಔಷಧಕ್ಕೆ ಬರುತ್ತದೆ (ಶಭಾಗ. ೯೭). [ಸಂ. ರಾಲಧೂಪ]

**ರಾಳು** (ನಾ). (ಬೆಂಕಿಯನ್ನು ಸುಲಭವಾಗಿ ಹಿಡಿಯಬಲ್ಲ) ಸಾಲವೃಕ್ಷದ ಅಂಟು ; ಸಜ್ಜರಸ : ಕ್ಷಣಹೊತ್ತು ಮನಸ್ಸಿಟ್ಟು ನೋಡುವದೊಂದೇ ತಡ, ರಾಳಿನಂತೆ ಮದ್ದಿನ ಸ್ಫೋಟದಂತೆ ಒಮ್ಮೆಲೇ ಆ ವ್ಯಕ್ತಿಯಲ್ಲಿ ಮಹಾ ಜ್ವಾಲೆಯೇ ಏಳುವದು (ಶ್ರಿಕೃಶ. ೯೯). [< ರಾಲ]

**ರಿ** (ನಾ). [ಸಂಗೀತ] ಸಪ್ತಸ್ವರಗಳಲ್ಲಿ ಎರಡನೆಯದು ; ಋಷಭ : "ಸಪ್ತಸ್ವರಂಗಳ್ . . . ಸರಿಗಮಪಧನಿಯೆಂಬವು" (ಶಂಗಠಾ. ೨೪-೪) ;

ಸಪ್ತಸ್ವರಗಳು ಕ್ರಮವಾಗಿ ಸ, ರಿ, ಗ, ಮ, ಪ, ಧ, ನಿ ಎಂಬ ಸಂಕೇತಾಕ್ಷರಗಳಿಂದ ಪ್ರಯೋಗದಲ್ಲಿವೆ (ಸಂಗೀತಂ. ೦೩). [ಸಂ.]

**ರಿಂಕಿಸು** (ಕ್ರಿ). ಒತ್ತಿ ಹಿಡಿ ; ಅದುಮಿ ಹಿಡಿದುಕೊಳ್ಳು : ನಲ್ಲನೇ ಕೂಪದೊಳು ಬಿದ್ದಿರ್ದ ಪಣ್ಣ ನೀಂ . . . ಕಾಲಲ್ಲಿ ರಿಂಕಿಸಿ ಮೊಗನೂಱಿ ನೆಲವಂ ಮುಟ್ಟಿಯಲ್ಲಿಂದ ತರುವುದು (ಶ್ರೀಕರಾ. ೩-೨೬). [ರಿಂಕು + — ಇಸು$_1$]

**ರಿಂಕು** (ಕ್ರಿ). ಬಿಗಿಯಾಗಿ ಕಟ್ಟು ; ಒತ್ತಿ ಕಟ್ಟು : ಕುಂಕುಮಜಲವ ಹೊನ್ನಂಡೆಗಳೊಳು ತುಂಬಿ ಮುಂಕೊಂಡು ಹೊಯ್ದಾಡಲವಳ ರಿಂಕಿದ ಕುಚಯುಗ ಬಾಹುಮೂಲಂಗಳ ಕುಂಕುಮ ಜಗವ ಮೋಹಿಸಿತು (ಪೋಚಕ. ೦೯-೬೦) ; ಕೊಂಕುಗುರುಳುಗಳು ಕುಣಿದಾಡೆಯಲ್ಲಾಡೆ ಮಿಗೆ ರಿಂಕಿರ್ದ ಬಟ್ಟಮೊಲೆ ನಚ್ಚಣಿಸುತಿರ್ಪ ಮುಡಿಯಿಂ ಕುಸುಮ ಸೂಸೆ . . . ಬಳಲಿಕೆಗಳೆದಲೊಂದೆಸೆಯೊಳೊರ್ವ ನೀಱೆ (ರಾಕಶ. ೬-೯೦). [< ಇಱುಂಕು]

**ರಿಂಖ** (ನಾ). ೧. ತೆವಳುವಿಕೆ ; ಸರಿಯುವಿಕೆ. ೨. ಕುಣಿಯುವಿಕೆ. ೩. ಕುದುರೆಯ ಗತಿಗಳಲ್ಲಿ ಒಂದು. ೪. ಕುದುರೆಯ ಗೊರಸು. ೫. ಮೋಸಗೊಳಿಸುವುದು. [ಸಂ.]

**ರಿಂಖಣ** (ನಾ). ೧. (ಮಕ್ಕಳು) ತೆವಳುವಿಕೆ ; ದೇಕುವಿಕೆ. ೨. ಋಜುಮಾರ್ಗವನ್ನು ಬಿಟ್ಟು ನಡೆಯುವುದು ; ದುರ್ವ್ಯವಹಾರ : "ರಿಂಖಣಂ, ಸ್ಖಲನಂ — ೨ ಜಾರುವವಕ್ಕಾದರೂ, ತಪ್ಪುವದಕ್ಕಾದರೂ ನ್ಯಾಯನಿರ್ಬಂಧದಿಂದ ಹಾರಿಹೋಗುವುದಕ್ಕಾದರೂ ಹೆಸರುಗಳು" (ಸಿದ್ಧಾಂತಿ. ೬೯) ; ರಿಂಖಣದ ತೆಂಕಣರಾಯರ ಬಿಂಕವ ಮುಱಿವ ರೇಖಾಂಕದ ಬಿರುದಂಕರ ಶ್ರೀಮದ್ವೈಸವ ರಾಜದೇವರುಂ ಕಲ್ಯಾಣಪುರವರದೊಳ್ಪುತ್ತಿರೆ (ಕಮ್ಮಿ.ರ. ೯-೯ ಶ). ೩. ಸುತ್ತು ; ಬಳಸು : 'ರಿಂಖಣಂಗೊಳಿಸು' ಪರಾ. [ಸಂ.]

**ರಿಂಖಣಂಗೊಳಿಸು** (ಕ್ರಿ). ಸುತ್ತು ; ಬಳಸುವಂತೆ ಮಾಡು : ವಾಲವಂ ಶಿರದಲಿ ರಿಂಖಣಂಗೊಳಿಸಿ ಕರ್ಣಗಳೆತ್ತಿ ನಿಮಿರ್ಚಿ . . . ಲಂಘಿಸಿದಂ (ಹನುಮ. ೨೦). [ರಿಂಖಣ + ಕೊಳ್$_1$ + — ಇಸು$_3$]

**ರಿಂಗಣ** (ನಾ). ೧. (ಸುತ್ತುತ್ತಾ ಮಾಡುವ) ಒಂದು ವಿಶಿಷ್ಟಬಗೆಯ ಕುಣಿತ — ನೃತ್ಯ : "ರಿಂಗಣಮೊಂದು ಕುಣಿಹಂ" (ಳಕಶಾ. ೬-೩೨೦) ; ಮಂಗಳದ ರಿಂಗಣ ಝೂಡಿಸಿತು ವೈವಾಹಮಂಟಪವ (ಕುಮ್ಮಾ.ರ. ೦೨-೦೩) ; ಮನವ ರಿಂಗಣದ ರಂಗಭೂಮಿಯನು ಅಗೆದು ಬಗೆದು (ಅರಳು. ೧೯೦-೦). ೨. ಚಟುವಟಿಕೆ ; ಚಲನೆ : ಅಣುವಿನಲಿ ಲಘುವಿನಲಿ . . . ವಶಿತ್ವದಲಿ ಪೇಟಣಿಸಿ ರೇಚಕ ಪೂರಕದ ರಿಂಗಣವನಱುವುದು ಯೋಗಸಿದ್ಧಿಗೆ ಲಕ್ಷಣವನು (ಕುಮ್ಮಾ.ಶಾ. ೪-೯) ; ಆ ಕಪಿಗಳುಬ್ಬಟೆಯ ಕೂಲೆಯ ಸವಿಪಾಕದಂಗದ ರಿಂಗಣದ ಲೋಕೈಕವೀರರ ಮುಂಡ ಕುಣಿದವು ಕೋಟಿಸಂಖ್ಯೆಯಲಿ (ಕೊರರಾ. ೬-೪೨-೦೯) ; ನಮ್ಮ ರಿಂಗಣ ನಡದೇ ಇತ್ತು. ಅದರಿಂದ ಅವಳ ಬಯ್ಯುವಿಕೆಗೆ ಮತ್ತಷ್ಟು ಹುರುಪು ಬಂದಿತು (ಕಪಕ. ೯೬). ೩. = ರಿಂಖಣ ೧. [ಸಂ.]

**ರಿಂಗಣಂಗುಣಿ**, ರಿಂಗಣಕುಣಿ, ರಿಂಗಣಗುಣಿ (ಕ್ರಿ). ೧. (ಸುತ್ತುತ್ತಾ) ನೃತ್ಯಮಾಡು ; ಲಾಸ್ಯವಾಡು : ಮೇಗಣ್ಗೆ ನೂಂಕಿ ತೆಗೆದೆತ್ತಿ ಪಾಱಿಸಿ ಸೂರ್ಕಿ ಪೂಗೊಳಂಗಳೊಳ್ಪೆದೆ ರಿಂಗಣಂಗುಣಿವರ್ಪಿ (ಕಾವ್ಯಾರ. ೦೦-೦೨೩) ; ಅಂತರಿಕ್ಷದೊಳ್ ನಾರದಂ ಜಡೆಗೆದಱಿ ರಿಂಗಣಂಗುಣಿವುತಿರಲು (ಜೌಂಜೈ. ೦೨-೯೬) ; ಕೆಲರು ಮನಬಂದಂತೆ ರಿಂಗಣಂಗುಣಿವುತಿರೆ (ಶಾಸೋಕ್ಷ. ೦೩-೨೦). **ರಿಂಗಣಕುಣಿ** : ೨. ಸುತ್ತು ; ತಿರುಗು ; ಅಳವಿ ಮಿಗೆ ಕೌರವಚತುರ್ಬಲದೊಳಗೆ ರಿಂಗಣಕುಣಿವ ಖಾತಿಯ ನಿಲ್ಲಿಸಿ . . . ಹೊಯಿದನು (ಕುಮ್ಮಾ.ಶಿ. ಕಂ. ೦೩). **ರಿಂಗಣಗುಣಿ** : ೧. ನಾರದ ರಿಂಗಣಗುಣಿದನು ನಲಿಯೆ ಮರುಳ್ಗಳ್ (ಶಿಲೀಕ. ೨-೦೯) ; ರಿಂಗಣಗುಣಿದಾರ್ದು ಸಾರ್ದು ನಲವೇರ್ಚುವ . . . ಸಂಭ್ರಮವಾದೇಂ ಬಗೆಗೊಂಡುದೊ ಪಾಂಡುಪುತ್ರನಾ (ಕರಕಂ. ೩-೩೬) ; ಅಂಗನೆಯರು ಆರತಿಯುತ್ತಿದರು ; ಯುವಕರು ರಿಂಗಣಗುಣಿದರು (ಕರಕ. ೬೬೬). ೨. ಚಿಕ್ಕಿಯ ಬಾಲ್ಯವೂ . . . ಅವಳ ಮನದಂಗಣದಲ್ಲಿ ರಿಂಗಣಗುಣಿಯುತೊಡಗಿತು (ಪರಿಣಾ. II, ೬೧೨). [ರಿಂಗಣ + ಕುಣಿ$_1$]

**ರಿಂಗಣಕುಣಿ** 'ರಿಂಗಣಂಗುಣಿ' ನೋ.

**ರಿಂಗಣಗುಣಿ** 'ರಿಂಗಣಂಗುಣಿ' ನೋ.

**ರಿಂಗಣಗುಣಿತ** (ನಾ). (ಸುತ್ತುತ್ತಾ) ಕುಣಿಯುವಿಕೆ; ನಾಟ್ಯವಾಡುವಿಕೆ : ಕ್ರಾಂತಿಯ ದಾರಿಯನ್ನು ನೋಡುತ್ತ ನಡೆದಿರುವ ರಿಂಗಣಗುಣಿತವನ್ನು ನಾವೂ ಕೂಡಿಕೊಳ್ಳುವೆವು (ಕ್ರಾಂಕ. ೩೦). **ರಿಂಗಣಗುಣಿತ ಹಾಕು** = ಸುತ್ತು; ತಿರುಗು : ನೂರಳ ಹೃದಯದಲ್ಲಿ ದುಃಖವು ರಿಂಗಣಗುಣಿತ ಹಾಕುತ್ತಲಿತ್ತು (ಪೂಕಕ. ೫೬). [ರಿಂಗಣ + ಕುಣಿತ]

**ರಿಂಗಳ** (ನಾ). ತಿರುಗುವಿಕೆ; ಸುತ್ತುವಿಕೆ: 'ರಿಂಗಳಗುಣಿಸು' ಪರಾ. [< ರಿಂಗಣ]

**ರಿಂಗಳಗುಣಿಸು** (ಕ್ರಿ). ಸುತ್ತಿಸು ; ತಿರುಗಿಸು : ರಣದಿ ಕುಬಿಬಿರಿದುಬ್ಬಿ ರಿಂಗಳಗುಣಿಸುತಕ್ಷಿಯೊಳಗ ಶರಧನು ತನಗೆ ಮಹಾರಾಂತಖಳಖಳನುರು ಚಾತುರಂಗವನು. . . ಸವರಿ (ಅಂಬಿಕಾ. ೨೬-೯೦). [ರಿಂಗಳ + ಕುಣಿಸು]

**ರಿಃಫ** (ನಾ). [ಜ್ಯೋತಿ] ಲಗ್ನದಿಂದ ಹನ್ನೆರಡನೆಯ ಸ್ಥಾನ : ಉದಯಕ್ಕೆಂಟಱೊಳಿಂದು ಕೂಡೆ ಸರುಜಂ . . . ರಿಃಫದೊಳಸತ್ಕ್ಯಂ ವಾಮನೇತ್ರಾಂಧಕಂ (ಜಾತಕ. ೦೬ ೬). [ಸಂ.]

**ರಿಕಾಪು** 'ರಿಕಾಬು' ನೋ.

**ರಿಕಾಬು**, ರಕಾಬು, ರಿಕಾಪು (ನಾ). ಕುದುರೆಯನ್ನು ಹತ್ತುವಾಗ ಕಾಲನ್ನಿಡಲು ಅನುಕೂಲವಾಗುವಂತೆ ಜೀನಿಗೆ ಅಳವಡಿಸಿರುವ ಬಳೆ; ಅಂಕವಣಿ : ಅಶ್ವರತ್ನದ ಆಭರಣದ ಲೆಕ್ಕ. . . ೨ ರಿಕಾಬು (ಎಕ. XIV. ಪಂಪಿವ. ೨೯೩-೦೯೨; ಕಾ. 1847); ಕುದುರೆಯ ಪಂದ್ಯದಲ್ಲಿ ವಿಶ್ವಾಸ ರಿಕಾಬು_ಲಗಾಮು ಇಲ್ಲದೆ, ಬತ್ತಲೆಕುದುರೆ ಏರಿ ಒಂದು ಮೈಲಿನ ಶರ್ಯತ್ತನ್ನು ಗೆದ್ದಿದ್ದ (ರೀಪಹ. I. ೦೩). **ರಕಾಬು** : ನೀಲನು ತನ್ನ ಕುದುರೆಯನ್ನು ಒಮ್ಮೆಲೆ ಮುಂದೆ ನೂಕಿ ರಕಾಬಿನ ಮೇಲೆಯೇ ಎದ್ದುನಿಂತು ಕೈಯಲ್ಲಿಯ ಚೂರಿಯನ್ನು ಬಲವಾಗಿ ಬೀಸಿ ಒಗೆದನು (ಶಂಗಾಹ. ೬೬). **ರಿಕಾಪು** : ಕುದುರೆಯ ರಿಕಾಪು ಚಾಗಟೆಯ ಬಳ್ಳಿಯೊಂದಕ್ಕೆ ತೊಡಕಿಕೊಂಡಿತು (ಹುಂಶಾ. ೬) ; ಎರಡೇ ನಿಮಿಷಗಳಲ್ಲಿ ಜೀನುಹಾಕಿ ಹೊಟ್ಟೆಗೆ ಪಟ್ಟಿ ಬಿಗಿದ, ರಿಕಾಪು ಸರಿಮಾಡಿಕೊಂಡ (ಬಣಾಂ. ೯೦). [ ← ಅರ. ರಕಾಬ್; ಪಾರ. ಹಿಂ. ರಿಕಾಬ್, ರಕಾಬ್; ಮರಾ. ರಿಕಬ್, ರಿಕಬೀ, ರಿಕಾಬೀ]

**ರಿಕಾಮಿ$_1$** (ಗು). ಖಾಲಿಯಾದ ; ಬರಿಯ : ಸತುವಿನಾ ರಿಕಾಮಿ ಡಬ್ಬಿಗಳು (ಮುಂಬಯ್ಯಾ. ೦೩೯). [← ಮರಾ. ರಿಕಾಮ ]

**ರಿಕಾಮಿ$_2$** (ಅ). ನಿರರ್ಥಕವಾಗಿ ; ವ್ಯರ್ಥವಾಗಿ ; ಸುಮ್ಮನೆ : ಈ ಬಂಟನ್ನ ನಾ ಬಲ್ಲೆ. ರಿಕಾಮಿ ತೋಟತೋಟದ ಸುತ್ತ ತಿರಗತಾನು (ಬಾಂಬಂ. ೯೬). [< ರಿಕಾಮಿ$_1$]

**ರಿಕ್ಕಾ$_1$** (ನಾ). ಒತ್ತಾಗಿರುವುದು ; ಇರುಕು : ಜನರೆಲ್ಲ ರಿಕ್ಕಾಗಿ ಕೂತಿದ್ದಾರೆ (ಅನ್ನ. ೦೦೩) ; ರಿಕ್ಕಾಗಿ ಬಿಗಿಯಾದ ಬಂಧನಗಳು ಬಹಳ ಹೊತ್ತು ಬಾಳವು (ಯುಕ್ಷಕ್ರ. ೦೩೮). [< ರಿಂಕು]

**ರಿಕ್ಕಾ$_2$** 'ರಿಚೆ' ನೋ.

**ರಿಕ್ತ$_1$** (ಗು). ೧. ಬರಿದಾದ ; ಖಾಲಿಯಾದ : ರಿಕ್ತಕುಂಭಂ ವಿಲಾಪಿಪ ಭಗ್ನಾಂಗನ ಕುಷ್ಠಿಯಂ. . . ಧೂಮಮುಂ ನಿಪುಣರ್ ಕಂಡರೆ ಪೋಗರ್ಕೆ (ಸೊಬಗಿನ. ೬೬). ೨. ತಿರುಳಿಲ್ಲದ; ಬೆಲೆಯಿಲ್ಲದ. (ನಾ). ೩. ಶೂನ್ಯ ; ಬರಿದು : ತದಂತರ್ಗತರೋಮಂಗಳಂ ಪ್ರತಿಸಮಯಮೊಂದೊಂದಂ ಅಪಕರ್ಷಣಂ ಮಾಡಿದೊಡೆಂದಿಂಗೆ ರಿಕ್ತಮಕ್ಕುಂ (ತತ್ತ್ವಸೂತ್ರ. ೦೬೩). ೪. ಹೀನ

ವಾದುದು ; ತುಚ್ಛವಾದುದು : " ರಿಕ್ತಂ, ತುಚ್ಛಂ, ಅಸಾರಂ, ಫಲ್ಗು, ವ್ಯರ್ಥಫಲಂ – ಈ ೫ ತುಚ್ಛಂ" (ಶಬ್ದಮ. ೦೨೬-೯೨) ; ಮೃಗಗಳ ಭಾಷೆ ಮನುಷ್ಯನ ಭಾಷೆಯ ಎದುರಿಗೆ ಹೇಗೆ ರಿಕ್ತವೆಂದು ಕಾಣುತ್ತದೆಯೋ ಹಾಗೆ ಮಾನವರ ಇಂದಿನ ಭಾಷೆಯನ್ನು ರಿಕ್ತವೆಂದೆನ್ನಿಸುವ ಒಂದು ಭಾಷೆಯನ್ನು ಊಹಿಸುವುದು ಕಷ್ಟವಲ್ಲ (ಪಮ್ಯಪು. ೨). ೫. ಬಡವ ; ದರಿದ್ರ. [ಸಂ.]

**ರಿಕ್ತ₂** (ನಾ). ಒಂದು ಬಗೆಯ ಸಸ್ಯ : ಕಾಡುಪಿಂಡಿ, ರಿಕ್ತಾ, ರಕ್ತಮರ (ವೃಶಿಗಿ. ೯೮-೯೬೭). [ ? ]

**ರಿಕ್ತಕ** (ನಾ). ಏನೂ ಇಲ್ಲದುದು ; ಬರಿದು : "ಶೂನ್ಯಂ . . . ರಿಕ್ತಕಂ— ೪ ಬರಿದಾದ ಮನೆ, ಮಡಿಕೆ, ಮುಂತಾದ್ದು" (ಸಿದ್ಧಾಂತಿ. ೩೩೮). [ಸಂ.]

**ರಿಕ್ತಗೊಳಿಸು** (ಕ್ರಿ). ಖಾಲಿ ಮಾಡು ; ತೆರವುಗೊಳಿಸು : ರಾಷ್ಟ್ರಪತಿಯವರು ಸಂಸತ್ತಿನ ಉಭಯಸದನಗಳಲ್ಲಿ ಯಾವುದೊಂದರಲ್ಲಾಗಲಿ ನಿರ್ವಾಚಿತರಾದರೆ . . . ಸದನದ ತಮ್ಮ ಸದಸ್ಯಸ್ಥಾನವನ್ನು ರಿಕ್ತಗೊಳಿಸಿದಂತೆ ಭಾವಿಸತಕ್ಕುದು (ಭಾರಾವ. ೨೯). [ರಿಕ್ತ₁ + ಕೊಳ್₁ + — ಇಸು₃]

**ರಿಕ್ತತೆ** (ನಾ). ೧. ಬರಿದಾಗಿರುವಿಕೆ ; ಶೂನ್ಯತೆ : ಸುತ್ತಣ ಈ ವಿಪುಲರಿಕ್ತತೆಯಲ್ಲಿ ಈ ಚಿತ್ರ ಎಷ್ಟು ಸಂಪೂರ್ಣವಾಗಿ, ಒಂದಾಗಿ, ನನಗೆ ಗೋಚರಿಸಿತು ! (ಶಿವಂಧ. II, ೨೦೭). ೨. ದಾರಿದ್ರ್ಯ ; ಬಡತನ. [ಸಂ. ರಿಕ್ತತಾ]

**ರಿಕ್ತಪೂರ್ಣ** (ನಾ). [ನಾಟ್ಯ] ನೃತ್ಯದಲ್ಲಿಯ ನಾಲ್ಕು ಬಗೆಯ ಉದರ ಭೇದಗಳಲ್ಲಿ ಒಂದು : P "ಶ್ವಾಸರೋಗದಿಂದ [ಉಬ್ಬಸ] ಪೀಡಿತನಾದವನಿಗಿರುವಂತೆ ಹೊಟ್ಟೆಯನ್ನು ಒಳಕ್ಕೂ ಹೊರಕ್ಕೂ ಚಲಿಸುವುದು" (ಭಾಸ್ಕರಂ. ೨೬೨ ಗದ್ಯಾನುವಾದ) : ಕ್ಷಾಮ, ಖಲ್ವ, ಪೂರ್ಣ, ರಿಕ್ತಪೂರ್ಣ— ಈ ನಾಲ್ಕು ಉದರಭೇದಂಗಳ್ (ಭಾಸ್ಕರಂ. ೨-೦೩೩ ವ). [ಸಂ.]

**ರಿಕ್ತಹಸ್ತ** (ನಾ). ೧. ಬರಿಗೈ. ೨. ಬರಿಯ ಸೊಂಡಿಲು : ಕಾಣಿಮಾ ಕಾಡಾನೆ . . . ಬಾಯ್ಗೆ ಪುಗಿಸುತಿದೆ ರಿಕ್ತಹಸ್ತವನುಸಿರ ಬಿಸುಪಿಂಗೆ ಬಯಸಿ ! (ಶ್ರೀರಾಮಾ. ೨೦೨-೨೦೯). [ಸಂ.]

**ರಿಕ್ತೆ** (ನಾ). ೧. ಬಡವಿ ; ಅತಿದರಿದ್ರಳಾದವಳು. ೨. ಶುಭ ಕಾರ್ಯಗಳಿಗೆ ಪ್ರಶಸ್ತವಲ್ಲದ, ಶುಕ್ಲ ಮತ್ತು ಕೃಷ್ಣಪಕ್ಷಗಳಲ್ಲಿ ಬರುವ ಚತುರ್ಥಿ, ನವಮಿ, ಚತುರ್ದಶೀ ತಿಥಿಗಳು. [ಸಂ. ರಿಕ್ತಾ]

**ರಿಕ್ಥ** (ನಾ). ೧. ಪಿತ್ರಾರ್ಜಿತವಾಗಿ ಬಂದ ಆಸ್ತಿ ; ಸ್ವತ್ತು. ೨. ಧನ : ಹಣ . "ದ್ರವ್ಯಂ . . . ರಿಕ್ಥಂ . . . ವಿಭವಃ—೧೩ ಧನದ ಪೆಸರುಗಳು" (ಸಿದ್ಧಾಂತಿ. ೩೦೨). ೩. ಬಂಗಾರ : ಚಿನ್ನ : " ರಿಕ್ಥ [ಪಾಠಾಂ. ತ್ತ]ಮಾ ಕನಕಂ ಹಿರಣ್ಯಮರ್ಥಂ" (ಮಂಗರಾ. ೦೬-೦೬). [ಸಂ.]

**ರಿಕ್ಷ** ' ರಿಕ್ಷೆ ' ನೋ.

**ರಿಕ್ಷಾ** (ನಾ). ೧. ಮನುಷ್ಯನಿಂದ ನಡೆಸಲ್ಪಡುವ, ಎರಡು ಅಥವಾ ಮೂರು ಚಕ್ರಗಳುಳ್ಳ ವಾಹನ : ಅನಂತ . . . ರಿಕ್ಷಾದಲ್ಲಿ ಕೂತನು . . . ರಿಕ್ಷಾವಾಲನು ಕಾಲುಗಾಡಿ ತುಳಿಯುಹತ್ತಿದನು (ಜೀವಾನ. ೩೩). ೨. ಯಂತ್ರಚಾಲಿತವಾದ, ಮೂರುಚಕ್ರಗಳುಳ್ಳ ವಾಹನ : ಬಸ್ಸೂ ರಿಕ್ಷಾ ಹತ್ತಿ ಓಡತಾರ (ಅರಳು. ೨೮೦-೦೬); ರಿಕ್ಷಾದಲ್ಲಿ ಕುಳಿತು ಮನೆಯ ಕಡೆಗೆ ಹೊರಟೆ (ರಾತ್ರಿ). [ ← ಇಂ. Riksha]

**ರಿಕ್ಷೆ**, ರಿಕ್ಷ (ನಾ). ನಕ್ಷತ್ರ; ತಾರೆ : ಗರ್ಭಂಗಟ್ಟು(ಟ್ಟಂ)ಗಂದಿನ ರಿಕ್ಷೆಯೊಳ್ (ಅಟ್ಟಮ. ೬-೩). **ರಿಕ್ಷ** : " ರಿಕ್ಷ . . . ಬಗೆ ನಕ್ಷತ್ರಂ " (ಪಸ್ತುಕೋ. ೦೯-೭೭). [< ಸಂ. ಋಕ್ಷ]

**ರಿಗ್ಗವಣೆ**. ರಿಗ್ಘವಣೆ (ನಾ). ೧. ಮದ್ದಳೆ ಮೊದಲಾದ ಚರ್ಮವಾದ್ಯಗಳನ್ನು ಬಾರಿಸುವುದರಲ್ಲಿಯ ಒಂದು ಕ್ರಮ ; ಗತಿ : ನಿನದತ್ಸಂಧ್ಯಾನಕಂ ರಿಗ್ಗವಣೆಯ ಪಟು ಪೂರ್ವಾಚಲಂ ತುಂಗರಂಗಂ ತನಗಾದತ್ತೆಂಬಿನಂ ನೀಲಿಯ ಜವನಿಕೆಪೋಲ್ ಪಿಂಗೆ (ಚಂದ್ರಕೃ. ೬-೩೦); ಆಡಂಗುರಗಳೆಂಬ ರಿಗ್ಗವಣೆಯ ಪಟುಗಗ್ಗಲಿಸುವ ನಗರನರ್ತಕಿಯರ ಚಿತ್ರದಂತಿರೆತ್ತುವ ತೋರಣದ (ಅಪಂಕ್ತಿ. ೯-೩೯ ವ); ಮಲವು ರಿಗ್ಗವಣೆ ಒಡ್ಡಾಸರ ಪಡಿಸಣ ಚಮತ್ಕಾರ . . . ಮೊದಲಾದ ವಾದ್ಯಪ್ರಬಂಧಂಗಳಲ್ಲಿ ತನ್ನ ಸೇರುವೆಯನಾರ್ಯವೃತ್ತ . . . ಬಾಜಿಸುತಿರ್ದಂ (ಶಿರಾಷಾ. ೮೦ ವ). ೨. ಒಂದು ಬಗೆಯ ಚರ್ಮವಾದ್ಯ ; ಮೃದಂಗ : " ರಿಗ್ಗವಣೆಯೆನೆ ಮೃದಂಗಂ " (ಕಕುಶಿ. ೦೦೦). **ರಿಗ್ಘವಣೆ** : ೧. ಮದ್ದಳೆಗಂ ಮದ್ದಳೆಯುಂ . . . ಚಮತ್ಕಾರ ತುಡುಕು ರಿಗ್ಘವಣೆ ಪಹರಣೆಗಳೆಂಬ ನಾನಾಶಬ್ದಂಗಳಂ ಬಾಜಿಸಿ (ಧರ್ಮಕ. ೨-೨೩ ವ). [< ಸಂ. ರಿಗೋಣೀ]

**ರಿಗ್ಘವಣೆ** ' ರಿಗ್ಗವಣೆ ' ನೋ.

**ರಿಚೆ**, ರಿಕ್ಕು₂, ರುಕ್ಕು₁ (ನಾ). ೧. ಆಶೀರ್ವಾದ ಮಂತ್ರ: ಮುಂದದೆಸೆದಿರ್ಪ ಬದ್ದವಣಮುದ್ದವಣಂ ರಿಚೆ [ಪಾಠಾಂ. ರಿಚಿ, ರಿಜೆ, ರುಚಿ] ಪಾಟವಾಟವೆತ್ತಿದ ಗುಡಿ ತೋರಣಂ (ಅರ್ಧನೇ. ೨-೩೯). ' ರಿಚೆವೇಟಿಸ್ ' ಪರಾ. **ರಿಕ್ಕು₂** : ೨. ವೇದಮಂತ್ರ ; ಋಕ್ಕು : " ರುಕ್ಕು (ರಿಕ್ಕು) – ಋಚ್(ಕ್) = ಕಿರಣ, ವೇದಮಂತ್ರ " (ಶಬ್ದಕೋ. ೩೮). **ರುಕ್ಕು₁** : ೨. ವೇದರುಕ್ಕಂ ಪೇಟ್ಟಿಕ್ಷತೆಯನೀವುದುಂ (ರಶಾರ್ಣಪು. ೦-೯೬). [< ಸಂ. ಋಚ್]

**ರಿಚೆವೇಟಿಸ್** (ಕ್ರಿ). ಆಶೀರ್ವಾದ ಮಂತ್ರವನ್ನು ಹೇಳು ; ವೇದಘೋಷ ಮಾಡು : ಅಂತು ಪೊಕ್ಕಾ ನೃಪಂಗೆ ರಿ[ಪಾಠಾಂ. ರು]ಚೆವೇಟ್ಟಕ್ಷತಂಗಳಂ ಕೊಟ್ಟು (ಪೇಮಕೃ. ೦೦-೦೨೨ ವ). [ರಿಚೆ + ಪೇಟ್]

**ರಿಜಮಿಾಟದಾರ** (ನಾ). ಸೈನ್ಯದ ವಿಭಾಗಾಧಿಕಾರಿ ; ತುಕಡಿದಾರ : ಬಾಬುರಾವನ್ಯಾಲ ರಿಜಮಿಾಟದಾರ (ಎಕ. XIV, ಮಂಡ್ಯ. ೦೩೮ ೩; 1851). [ರಿಜಮಿಾಟ₀ (P ← ಇಂ. Regiment) + — ದಾರ್₄]

**ರಿಜಿಸ್ಟರು** ' ರೆಜಿಸ್ಟರು ' ನೋ.

**ರಿಜು** ' ಋಜು₁ ' ನೋ.

**ರಿಣ** ' ಋಣ ' ನೋ.

**ರಿಣಗೂಳು** (ನಾ). ಹಂಗಿನ ಅನ್ನ : ಎಷ್ಟು ದಿನ ರಿಣಗೂಳನ್ನುಂಡು ಕೊಂಡು ಇರುವುದು (ಶಳಶ. ೦೦); ಪರೀಕ್ಷಾ ನಾಪಾಸಾದಿ. ಮನ್ಯಾಗ ಕೂತು ರಿಣಗೂಳು ತಿಂತೀದಿ (ಅಸ್ತಿಶಂ. ೧೯೮). [ರಿಣ (< ಋಣ) + ಕೂಳು₂ (< ಕೂಟ್₁)]

**ರಿಣಗೇಡಿ** (ನಾ). ಸಾಲವನ್ನು ತೀರಿಸದೆ ಇರುವವನು ; ಋಣದಲ್ಲಿರುವವನು : ವ್ರಣ ನೋಡಿ ಬಂದದರ ಮೇಲ್ಕೂತ ನೊಣದಂತೆ ರಿಣಗೇಡಿ ಜೀವವಿನ್ನೇಕೆ ಮಮತೆಯ ಚಿಂತೆ ? (ಸೂರ್ಯಕಾ. ೭೮-೦೨). [ರಿಣ (< ಋಣ) + ಕೇಡಿ₁]

**ರಿಣಸ್ತ** (ನಾ). ಋಣವನ್ನು ಹೊಂದಿರುವವನು ; ಹಂಗಿಗ : ನೀನು ಲಿಂಗದ ರಿಣಸ್ತನು, ನಾನು ನಿನ್ನ ರಿಣಸ್ತನಾದೆನು (ಶೃರಸೂ. I, ೦೯೦). [ರಿಣ (< ಋಣ) + — ಸ್ತ]

**ರಿತುಗಾನ** (ನಾ). ಆಯಾ ಋತುಗಳಲ್ಲಿ ಹಾಡುವ ಗಾನ ; ಋತುಗಾನ : ನವನವ ರಿತುಗಾನವನವತರಿಸುವೆ (ಗೀಶಿಂ. ೪೬-೦). [ರಿತು (< ಋತು) + ಗಾನ]

**ರಿದ್ಧಿ**, ರುದ್ಧಿ (ನಾ). ೧. ಅಭಿವೃದ್ಧಿ : " ರಿದ್ಧಿ–ಋದ್ಧಿ = ಅಭಿವೃದ್ಧಿ " (ಶಬ್ದಕೋ. ೩೮); ಋದ್ಧಿ–ರಿದ್ಧಿ (ಕನ್ನಾಪು. ೦೩೯ ಪ್ರಯೋ). ೨. ಜನನದಿಂದಾಗುವ ಸೂತಕ ; ಪುರುಡು ; ವೃದ್ಧಿ : ನಮಗ್ಯಾರಿಗೂ ಹುಟ್ಟಿದ ರಿದ್ಧಿನೂ ಇಲ್ಲ ; ಸತ್ತ ಸೂತಕನೂ ಇಲ್ಲ (ಹೊಸಂಶಾ. ೭೭). **ರುದ್ಧಿ** : ೧. ಶ್ರುತಕೇವಳಿ . . . ಪಲವು ರುದ್ಧಿಗಳಿಂದಂ ಕೂಡಿದೊಂ (ವಡ್ಡಾರಾ. ೭೯ ಅ೩೬). [< ಪ್ರಾ. ರಿದ್ಧಿ./ಸಂ. ವೃದ್ಧಿ]

**ರಿಪಿ** (ನಾ). ೧. ಕಾಟ ; ಹಿಂಸೆ ; ಕಿರಿಕಿರಿ : 'ರಿಪಿಗೇಡಿ' ಪರಾ. ೨. ಕಾಟ ಕೊಡುವವನು ; ಉಪದ್ರವಕಾರಿ : ನಿನ್ನಿನ ದಿನ ನಾನೇ ಹೋಗಿದ್ದರೆ ಆ ರಿಪಿಯು ನನ್ನ ಬೆನ್ನಿಗೇ ಬೀಳುತ್ತಿದ್ದಿತಲ್ಲಾ ಎಂದು ನಡುಗಿದೆನು (ಕಾಳಿರಾ. ೩೩).

ರಿಪಿರಿಪಿ (ದ್ವಿರುಕ್ತಿ) : ಸುಮ್ಮನೆ ಆಶೆ ತೋರಿಸಿ ರಿಪಿರಿಪಿ ಹಚ್ಚಿರುತ್ತಾನೆ! (ಮೋಹಿನೀ. ೬೩). [← ಮರಾ. ರಿಪರಿಪ ]

**ರಿಪಿಗೇಡಿ** (ನಾ). ಕಾಟ ಕೊಡುವವನು ; ಉಪದ್ರವಕಾರಿ : ಮನಿಯಾಗ ರಿಪಿಗೇಡಿ ಆಡ ಹ್ವಾದಲ್ಲಿ ಕಿಡಿಗೇಡಿ ಬಾಳನ ಹ್ಯಾಂಗ ಸಂಬಸಲಿ ಹಡೆದವ್ವಾ (ಗರಿ. ೯೦) ; ರಿಪಿಗೇಡಿ! ಸಾಕುಮಾಡು ನಿನ್ನ ಬುಡುಬುಡುಕೀನ (ಎತ್ಯ. ೯೩). [ ರಿಪಿ + ಕೇಡಿ$_1$ ]

**ರಿಪಿಜಿಡ್ಡು** (ನಾ). ಜಿಪುಣತನ ; ಜಿಗುಟುಸ್ವಭಾವ : ಅಂಥ ಜಿಗಟು ರಿಪಿಜಿಡ್ಡು ಹುಡುಗರಿಗೆ ಕೂಡ . . . ಅವರ ಕೈಯಿಂದ ಒಂದು ಕಪರ್ದಕವನ್ನೂ ಉಚ್ಚಿಕೊಳ್ಳಲು ಸಾಧ್ಯವಾಗಿದ್ದಿಲ್ಲ (ಇಕ್ಷ್ವ. ೨೯೯). [ರಿಪಿ+ಜಿಡ್ಡು]

**ರಿಪೀಸು** (ನಾ). ಮರದ ಪಟ್ಟಿ ; ತುಂಡು : ಮನೆಯ ರಿಪೀಸುಗಳಿಗೆ ಬೆಂಕಿ ತಗುಲಿತು (ಕೂ೦). 'ರೀಪು' ಪರಾ.

[ ←ಇಂ. Reeper /ಮರಾ. ರೀಪ ]

**ರಿಪು** (ನಾ). ೧. ಹಗೆ; ಶತ್ರು : "ಅಭಿಯಾತಿಃ, ಅರಾತಿಃ, ಅಮಿತ್ರಂ, ರಿಪುಃ . . . ದ್ವಿಷತ್ — ಈ ೨೪ ಹಗೆ" (ಕಲಾಯು. ೭೩-೩೦೦); ಆ ಮಹೋಗ್ರರಿಪುಭೂಭುಜಶ್ರವಣ ಭೈರವಾಡಂಬರಂ . . . ಆದುದಾ ರವಿತನೂಭವಜ್ಯಾರವಂ (ಕಂಕಶಾ. ೦೨-೦೩೩); ಮಡದೀ ನೀಂ ಪಡೆವಾ ಸುತಂ ರಿಪುಚಮೂಸಂಹಾರವಂ ಪಾರವಂ ಪೊಡೆರಲ್ ಮಾಳ್ಕುಂ (ಜಗ೦. ೨-೮೫). ೨. [ಜ್ಯೋತಿ] ಲಗ್ನದಿಂದ ಆರನೆಯ ಸ್ಥಾನ ; ಶತ್ರುಸ್ಥಾನ : ತನಯಸ್ಥಾನದೊಳಾತ್ಮಮಂತ್ರಿ ರಿಪುವೊಳ್ ನಿಶ್ಶತ್ರು (ಜಾತಕ. ೦೬-೦೦).

ರಿಪುಕಟಕಭೈರವ = ಶತ್ರುಸೈನ್ಯಕ್ಕೆ ಭೈರವನಂತಿರುವವನು ; ಒಂದು ಬಿರುದು : ಭಟರ ತಗೆತಗೆ ಪಾರ್ಥನೋ ರಿಪುಕಟಕಭೈರವನೋ (ಕುವ್ಯಾ, ೯. ೯-೦೯). ರಿಪುಕವಿದಲ್ಲಣ = ಶತ್ರುಕವಿಗಳನ್ನು ತಲ್ಲಣಗೊಳಿಸುವವನು ; ಒಂದು ಬಿರುದು : ಕಲ್ಲಿನಾಥನ ಭೃತ್ಯ ರಿಪುಕವಿದಲ್ಲಣಾಗ್ರಘರಟ್ಟ ಪಂಡಿತಮಲ್ಲಿಕಾರ್ಜುನ (ಕಂಕಶಾ. ೦-೦೯). ರಿಪುಗೋಧೂಮಘರಟ್ಟ = ಶತ್ರುವೆಂಬ ಗೋಧುಮೆಗೆ ಬೀಸುವ ಕಲ್ಲಿನಂತಿರುವವನು ; ಒಂದು ಬಿರುದು : ಮಟ್ಟುವಿರದಾಂತ ಪಗೆವರ ಪಟ್ಟಂ ಪಾಱಿಸದೆ ಮಾಣ್ಣ ನೇ ವೈರಿದಿಶಾಪಟ್ಟಂ ರಿಪುಗೋಧೂಮಘರಟ್ಟಂ ಮಲಿದೇವಸದಟರುಪ್ಪರಪಟ್ಟಂ (ಕೂಲ್ಹಾ, ಶಾ. ೦೩-೫೫ ; 1186). ರಿಪುಘಟಾಕೇಸರಿ = ಶತ್ರುವೆಂಬ ಆನೆಗೆ ಸಿಂಹದಂತಿರುವವನು ; ಒಂದು ಬಿರುದು : ಪಾಣಸ್ಸನ್ನಯ ಪುಲಾಂಬರಂ ರಿಪುಘಟಾಕೇಸರಿ (೯೩೮. ೭-೩-೨೬೨ ; 1062). ರಿಪುನೃಪತಿನಿಕ್ಷತ್ರ = ನಿಲ್ಲಲು ನೆಲೆಯಿಲ್ಲದಂತೆ ಶತ್ರುರಾಜರನ್ನು ನಾಶಪಡಿಸುವವನು ; ಒಂದು ಬಿರುದು : ಪರಿವಾರಚಿನ್ನಾಮಣಿ ಸುಜನಚೂಡಾಮಣಿ ರಿಪುನೃಪತಿನಿಕ್ಷತ್ರಂ ಗೋತ್ರಪವಿತ್ರಂ (ಎ೯. VII, ಶಿಕಾ. ೨೦-೦೯ ; 1032). ರಿಪುನೃಪಬಂದಿಕಾಱ = ಶತ್ರುರಾಜರನ್ನು ಸೆರೆಹಿಡಿಯುವವನು ; ಒಂದು ಬಿರುದು : ಇನನಂದನನು . . . ರಿಪುನೃಪಬಂದಿಕಾಱವಧಾರುಧಿರುಪಯುವೆಂದು ಕಳಕಳ ಗಜಬು ಮಿಗೆ ಕುರುಭೂಮಿಗೈತಂದ (ಕುವ್ಯಾ, ದ್ರೋ. ೨-೦೯). ರಿಪುಬಲದಿಶಾಪಟ=ಶತ್ರುಸೈನ್ಯವನ್ನು ಚೆಲ್ಲಾಪಿಲ್ಲಿ ಮಾಡುವವನು ; ಒಂದು ಬಿರುದು : ಗೆಲಿವನಹಿತಾನೀಕವನು ರಿಪುಬಲದಿಶಾಪಟ ಭೀಷ್ಮನು (ಕುವ್ಯಾ, ೮೯. ೫-೨೪). ರಿಪುಭೀಕರ = ಶತ್ರುಗಳಿಗೆ ಭೀತಿಯನ್ನುಂಟುಮಾಡುವವನು ; ಒಂದು ಬಿರುದು : ರಾಜ್ಯಲಕ್ಷ್ಮೀನಿವಾಸನೆನೆ ನೆಗಟ್ದ ನೞ್ಱ್ ರಿಪುಭೀಕರಸೌಷ್ಠವಭುಜಬಳಂ . . . ಚಾವುಂಡನೃಪಂ (ಶಾಇ. XI-ii, ೦೦೯-೦೭ ; ಶ. 948). ರಿಪುಮಂಡಳಿಕಭೈರವ = ಶತ್ರುಮಾಂಡಲಿಕರಿಗೆ ಭೀಕರನಾದವನು ; ಒಂದು ಬಿರುದು : ಸುವರ್ಣಗರುಡಧ್ವಜಂ ಮಜಾಮಂಕಸಪ್ಪಸಿಂ ಅಯ್ಯನ ಸಿಂಗ ರಿಪುಮಂಡಳಿಕಭೈರವಂ . . . ಶ್ರೀಮದ್ವಿಜಯಾದಿತ್ಯದೇವರಸರು (ಕೊಲ್ಹಾ, ಶಾ. ೨೯-೩ ; ೪). ರಿಪುಮದನಮಹೇಶ್ವರ = ಶತ್ರುವೆಂಬ ಕಾಮನಿಗೆ ಈಶ್ವರನಂತಿರುವವನು ; ಒಂದು ಬಿರುದು : ಪ್ರತಾಪಲಂಕೇಶ್ವರ ರಿಪುಮದನಮಹೇಶ್ವರ ರಾಯಮುರಾರಿ ಭುಜಬಳಮಲ್ಲ (೯೩೮. ೭೯-೦೨-೦೯ ; 1170). ರಿಪುರಾಯಕಟಕಸೂಱೆಕಾರ = ಶತ್ರುಸೈನ್ಯವನ್ನು ನಾಶಮಾಡುವವನು ; ಒಂದು ಬಿರುದು : ಸಹಜಮನೋಜರಿಪುರಾಯಕಟಕಸೂಱೆಕಾರ (ಶಾಇ. XX, ೫೫-೦೫ ; 1082). ರಿಪುಸಂವರ್ತ = ಶತ್ರುಗಳನ್ನು ಪ್ರಳಯಕಾಲದಂತೆ ನಾಶಪಡಿಸುವವನು ; ಒಂದು ಬಿರುದು : ಎಲೆಲೆ ರಿಪುಸಂವರ್ತನೊಳು ಕೊಳುಗುಳಕೆ ವರ್ತಿಸಲರಿದೆನುತ ತಲ್ಲಳಿಸಿ ತೆತ್ತರು ಮನವನವನೀಪಾಲಸಂದೋಹ (ಕುವ್ಯಾ, ದ್ರೋ. ೦೨-೦೦). ರಿಪುಸರ್ಪಗರುಡ = ಶತ್ರುವೆಂಬ ಹಾವಿಗೆ ಗರುಡನಂತಿರುವವನು ; ಒಂದು ಬಿರುದು : ಮಹಾಪ್ರಚಂಡದಂಡನಾಯಕವಿಭೂತಿಯ ನಪ್ಪ ಕೆಯ್ದು ರಿಪುಸರ್ಪಗರುಡನೆನಿಸಿ ನೆಗಟ್ದ ಗೋವಿಂದನ ಮಗನಖಿಳ ಕಳಾವಿದಂ (ಕೊಲ್ಹಾ, ಶಾ. ೩-೦೭ ; 1079). ರಿಪುಹೃದಯಶಲ್ಯ = ಶತ್ರುಗಳ ಹೃದಯಕ್ಕೆ ಈಟಿಯಂತಿರುವವನು ; ಒಂದು ಬಿರುದು : ನಿರ್ಮಲ ಕೀರ್ತಿ ದೋಷಕಾನನದಾವ ನಮಿತದೇವಾ ಮಾಂಗಲ್ಯ ರಿಪುಹೃದಯಶಲ್ಯ ಲೋಕಖ್ಯಾತ . . . ಶಾಂತನಜ್ಞೇಶ್ವರಾ (ಏಕ್ಕ, ೬. ೦೪-೨). [ಸಂ.]

**ರಿಪುಕುಲ**, ರಿಪುಕುಳ (ನಾ). ಹಗೆಗಳ ಸಮೂಹ : 'ರಿಪುಕುಲಾಂತಕ' ಪರಾ. **ರಿಪುಕುಳ** : ಉಭಯದೇಶೀಮನೋರಂಜನಂ ರಿಪುಕುಳಜಳಧರ ಪ್ರಭಂಜನ ನಾಮಾದಿ ಸಮಸ್ತಪ್ರಶಸ್ತಿಸಹಿತಂ (೯೩೮. ೦೦೩-೬-೦೯ ; 1076).

ರಿಪುಕುಲಮೃತ್ಯು=ಶತ್ರುಸಮೂಹಕ್ಕೆ ಯಮನಂತೆ ಇರುವವನು ; ಒಂದು ಬಿರುದು: ಸಿಂಧದ ಸತ್ತಿಗೆಯ ಸಾಲಿನಲಿ ರಿಪುಕುಲಮೃತ್ಯುವಾತನು ವೀರಗಂಗಾಸುತನು ನೋಡು (ಕುವ್ಯಾ, ಭಿ. ೬-೩೬). [ಸಂ.]

**ರಿಪುಕುಲಾಂತಕ** (ನಾ). ಶತ್ರುವಂಶಕ್ಕೆ ಯಮಸದೃಶನಾದವನು : ಕಂದ ಬಾರೋ . . . ರಿಪುಕುಲಾಂತಕನಿಪುಣ ಮುಖದೋಱೆಲೊ (ಕುವ್ಯಾ, ದ್ರೋ. ೬-೨೦). [ಸಂ.]

ರಿಪುಕುಳ 'ರಿಪುಕುಲ' ನೋ.

**ರಿಪುಬಲ**, ರಿಪುಬಳ (ನಾ). ಹಗೆಗಳ ಪಡೆ : ಶತ್ರುಸೈನ್ಯ : ರಿಪುಬಲ ದುರ್ಯೋಧನವಹಿನಿವಿಪುಲಂ ಕ್ರೀಡೋಪಯೋಗ್ಯಮೆಂಬೆಡೆಯುಮನೀಕ್ಷಿಪುದೊಂದು ಪೊಟಲುಮಂ ನಡೆಯಿಪುದೀಗಳೆ ನಮ್ಮ ಕಟಕಮಂ (ಜಗ೦. ೯-೨೩): ಏನಿದದ್ಭುತವಿಂದಿನಾಹವದಾಸಿಕೆಯು ರಿಪುಬಲದ ಸಂಭ್ರಮ (ಕುರು೦. ೬-೨೦-೫೩). ರಿಪುಬಳ : ರಿಪುಬಳಕಮಳಾಕರದಮಂ ನೃಪದ್ವಿಪಂ ಮಿಕ್ಕು ಪೊಕ್ಕು ಕೀಳ್ಕೆತ್ತಿತ್ತು (ರಾಜಶೇ. ೫-೬). [ಸಂ.]

ರಿಪುಬಳ 'ರಿಪುಬಲ' ನೋ.

**ರಿಪುಬ್ರಜೆ** (ನಾ). ಶತ್ರುಗಳ ಸಮೂಹ : ರಿಪುಬ್ರಜೆ ಮಂಡಳಮೆಯ್ದೆ ಸಾಕ್ಷಿ ಸಾಹಸಕೆ (ಶಾಇ. XX, ೯೭-೩೦ ; 1072). [< ರಿಪುವ್ರಜ]

**ರಿಪುಭಟ** (ನಾ). ಶತ್ರುಪಕ್ಷದ ವೀರ ; ಅರಿಭಟ : ವಿರಿಂಚಿಪಿತನೊದಂಚಿನಲಿ ರಿಪುಭಟನ ಸಾರಥಿಯ ಮಣಿಸಿದನು (ಕುರು೦. ೭-೯೦-೫೦). [ಸಂ.]

**ರಿಪುಮಥನ** (ನಾ). ಹಗೆಯ ನಾಶ ; ಶತ್ರುಸಂಹಾರ : ಕಥೆಯನಿದನಾಕೇಳಿದೆನು ಕಜುಶಿಖಿಬಾವವು ಹಿಂದಕಿವು ರಿಪುಮಥನವುಂಟೇ ಹೇಳು (ಕುರು೦. ೬-೩೯-೨೩). [ಸಂ.]

**ರಿಪುರಾವುಗಾವುಂಡ** (ನಾ). ಒಬ್ಬಾತನ ಹೆಸರು : ಸಂಗಮದ ಪೃಥುವೀಗಾಮುಣ್ಡರುಂ ರಿಪುರಾವುಗಾಮುಣ್ಡನುಂ ಎನಿಬ್ಬರುಂ ನರಸಾಕ್ಷಿಯಾಗೆ

ಪಡೆದಾವ್ (ಎಕ. VI (R)· ಶ್ರೀರಂಗ· ೬೬-೨೨; ಸು. ೬೦೦).
[ರಿಪು + ರಾಮ + ಗಾವುಂಡ]

**ರಿಪುರಾಯ** (ನಾ). ಶತ್ರುರಾಜ : ಯಾದವಕುಳಕಮಳಕಳಿಕಾವಿಕಾಸ ರಿಪುರಾಯ ಗಳಗಾಳಪಾಸ ಮಾಳವಮದಮಲ್ಲಂ (ಕಶಾಬ್ದಾಕಾ. ೦೬-೮; 1235); ಮುಳಿದುದ್ದೆ ರಿಪುರಾಯದಳ ಹಗೆ ಹಱಿದುದ್ದೆ ಕುರುಪತಿಗೆ (ಕುವ್ಯಾ.ಕ. ೪೦-೬). [ರಿಪು + ರಾಯ]

**ರಿಪುವಂಗಡಿಗ** (ನಾ). ಶತ್ರುಪಂಗಡಕ್ಕೆ ಸೇರಿದವನು ; ಹಗೆಯ ಪಕ್ಷದವನು : ಹೋಗದಿರು ತಲೆಗೊಡುವೊಡದಿರಾಗೆನುತ ರಿಪುವಂಗಡಿಗರನು ಮೂದಲಿಸಿ (ಕುವ್ಯಾ.ಶಿ. ೬೦೩. ೩-೩೪). [ರಿಪು + ವಂಗಡ + - ಇಗ]

**ರಿಪುವ್ರಜ** (ನಾ). ಶತ್ರುಗಳ ಸಮೂಹ : ಅನ್ಯೋನ್ಯದಕಂ ಕಿಡಿದಾದಲ್ಲಿ ರಿಪುವ್ರಜಂಗಳೆಡೆಯೊಳ್ . . . ಇರ್ದೊಡೆ ಹಾನಿಯ್ಕು (ಸೋಮೇಶ. ೨೫). [ಸಂ.]

**ರಿಪೇರಿ** (ನಾ). ಶಿಥಿಲವಾದ ಕಟ್ಟಡ, ಕೆಟ್ಟುಹೋದ ಯಂತ್ರ ಮೊದಲಾದುವನ್ನು ಸರಿಪಡಿಸುವಿಕೆ ; ದುರಸ್ತು : ಕೆರೆ ತೂಬು ವಗೈರೆ ರಿಪೇರಿ ಮಾಡತಕ್ಕದ್ದು (ಗ್ರಾಪಂಕ. ೦); ಆ ಕಟ್ಟಡಕ್ಕೆ ರಿಪೇರಿ ಆಗಿ ಎಷ್ಟೋ ವರ್ಷಗಳಾಗಿವೆ (ಕಂಗಕ. ೦೦೦). [←ಇಂ. Repair]

**ರಿಪೋರ್ಟು** (ನಾ). ಯಾವುದಾದರೊಂದು ಸಂಗತಿಯ ಬಗ್ಗೆ ಮಾಡಿದ ವರದಿ,-ವಿವರ : ಪ್ರತಿದಿನವೂ ನಡೆದ ವಿದ್ಯಮಾನಗಳನ್ನು ರಿಪೋರ್ಟು ಮಾಡುವುದು (ಕುಹಾಪಂ. II. ೩೯); ಲಿಖಿತಮೂಲಕವಾದ ರಿಪೋರ್ಟುಗಳನ್ನು . . . ತಯಾರ್ಮಾಡಲು ಬದ್ಧರಾಗಿರಬೇಕು (ಗ್ರಾಪಂಕ. ೩). [←ಇಂ. Report]

**ರಿಬು, ರಿಭು** (ನಾ). ದೇವತೆ ; ಅಮರ್ತ್ಯ : ಆ ರಿಬುಗಳ ಮೊತ್ತದಿನಿಂದ್ರಂ . . . ಸೊಗಯಿಸೆ (ಶಾಂತಾಪ್ರ. ೧-೨-೪೦ ಪಂಕ). **ರಿಭು** : ' ರಿಭುವಿಮಾನ' ಪರಾ. [<ಸಂ. ಋಭು]

**ರಿಬ್ಬನ್‌ಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಕೃಕಿಇ. ೬೦-೦೨೨೦). [ರಿಬ್ಬನ್ + ಹುಲ್ಲು (<ಪುಲ್)]

**ರಿಭು** ' ರಿಬು ' ನೋ.

**ರಿಭುವಿಮಾನ** (ನಾ). ದೇವವಿಮಾನ : ನೆಲ್ಲವತ್ತಿಯ ಜಿನಭವನಂ ರಿಭು ವಿಮಾನವಂ ಪೋಲ್ತಿರ್ಕುಂ (ಎಕ. VII. ಶಿಕಾಪು. ೦೦-೯೬; 1085 ?). [ರಿಭು (<ರಿಬು) + ವಿಮಾನ]

**ರಿಯಾಯತಿ**, ರಿಯಾಯಿತಿ, ರಿಯಾಯ್ತಿ (ನಾ). ೧. ತೆರಿಗೆ, ವ್ಯಾಪಾರದ ವಸ್ತು ಮೊದಲಾದುವುಗಳ ಮೇಲೆ ನೀಡುವ ಸೋಡಿ,- ವಟ್ಟ : ಸರಕಾರವು ಅಷ್ಟೊಂದು ರಿಯಾಯತಿಯನ್ನೂ ತೋರಿಸುವುದಿಲ್ಲ. ತೆರಿಗೆಯ ದರವೂ ಕಡಿಮೆಯಾಗಿರುವುದಿಲ್ಲ (ಐತಿಸಂ. ೫೩). ೨. ದಯೆ ; ಕರುಣೆ : ಶರಣಾಗತನಾದ ಅಪರಾಧಿಗೆ ವಿಶೇಷವಾಗಿ ರಿಯಾಯತಿಯೂ ದೊರೆಯುತ್ತಿತ್ತು (ಹುಟ್ಟಿಕ. ೦೯). **ರಿಯಾಯಿತಿ** : ೧. ಇಂಡಿಯಾದಿಂದ ತಂದ ಅಥವಾ ಮುಂದೆ ತರುವ ಸಾಮಾನುಗಳ ಮೇಲೆ ಕೇವಲ ಐದರಷ್ಟು ಮಾತ್ರ ಸುಂಕ ಕೊಡಬಹುದೆಂಬ ರಿಯಾಯಿತಿಯೂ ದೊರೆಯಿತು (ಕೃಪಾ೩.II, ೨೨೪); ಅನುಭವಶಾಲೆಯ ಶುಲ್ಕ ದುಬಾರಿಯದಲ್ಲಿ ರಿಯಾಯಿತಿಯಿಲ್ಲ (ಇಂಪಾಕ. ೦೦೬-೨೯). ೨. ನಾನು ಬಹಳ ರಿಯಾಯಿತಿ ತೋರಿಸಿದ್ದೇನೆ (ಸಾಂಸಾಂ. ೦೩೯). **ರಿಯಾಯ್ತಿ** : ೨. ಯಾರಿಗೂ ಯಾವ ರಿಯಾಯ್ತಿಯೂ ಇರುವುದಿಲ್ಲ (ಧುಂಡಿಕ. ೦೬೩); ಅದೇನೋ ರಿಯಾಯ್ತಿಯಿಂದ ಮೂರು ವರ್ಷಗಳ ಶಿಕ್ಷೆ ಆರೇ ತಿಂಗಳಲ್ಲಿ ನಿವೃತ್ತಿಯಾಗಿದೆ (ದೀಕಥ. ೩೬). [←ಅರ. ರಿಆಯತ್ ; ಹಿಂ. ರಿಆಯತ್, ರಿಯಾಯತ್]

**ರಿಯಾಯಿತಿ** ' ರಿಯಾಯತಿ ' ನೋ.

**ರಿಯಾಯ್ತಿ** ' ರಿಯಾಯತಿ ' ನೋ.

**ರಿಯಾಸತ** ' ರಿಯಾಸತ್ತು ' ನೋ.

**ರಿಯಾಸತ್ತು**, ರಿಯಾಸತ (ನಾ). ಸಂಸ್ಥಾನ ; ರಾಜ್ಯ : ರಿಯಾಸತ್ತು ಗಳಲ್ಲಿಯೂ ಈ ವಿಧಾನವನ್ನು ಜಾರಿಗೆ ತರಲಾಗುವುದೆ ? (ಧುಂಡಿಕ. ೬೩). **ರಿಯಾಸತ** : ದಾಖಲ ರಿಯಾಸತ ಮೈಸೂರ (ಮೈಕಂ. ೦೯೨೯. ೯೪-೩; 1813). [ ← ಅರ. ಹಿಂ. ರಿಯಾಸತ್ ; ಮರಾ. ರಿಯಾಸತ್, ರಿಯಾಸತ್]

**ರಿರಂಸೆ** (ನಾ). ರಮಿಸುವ ಆಸೆ ; ಕಾಮತೃಷ್ಣೆ : ರಾಜಸುತೆಯೆನ್ನುತ ರಿರಂಸೆಯಿಂ ಭ್ರಮೆಗೊಂಡು ಕೈವಿಡಿದು ಕಡೆಯೊಳತಿಹಿಂಸೆಗೊಳಗಾದೆ (ವಂಕಾರಾ. ೨-೬-೯೭). [ಸಂ. ರಿರಂಸಾ]

**ರಿವಾಜು** (ನಾ). ಪದ್ಧತಿ ; ರೂಢಿ ; ರೀತಿ : ಮನೆಯ ರಿವಾಜಿನಂತೆ ಅವಳು ಘೋಷಾ ಪಾಲಿಸಬೇಕಾಗಿತ್ತು (ಗ್ರಾಮಾಯು. ೭೯); ಯುಗಾದಿಯ ಸಮಯ ಮಳೆ ಬರುವ ರಿವಾಜೇ ಇದೆ (ಪಂಚಮ. ೫೫). [← ಅರ. ಹಿಂ. ಮರಾ. ರಿವಾಜ್]

**ರಿಷಭ**, ರಿಸಬ (ನಾ). ಬಸವ ; ವೃಷಭ : ಖ್ಯಾತರಾ ದ್ವಾದಶಾದಿತ್ಯರವ ರೊಳಗೆ ಪುರುಹೂತಶಚಿಯರ್ಗೆ ವಿಂಷಮು ಜಯಂತಂ ರಿ[ಷಾಕಂ· ಮೈ.ವ್ಯ] ಷಭರೋತು ಸಂಭವಿಸಿದರ್ (ಕಲ್ಯಾ. ೦೯-೯). **ರಿಸಬ** : ಋಷಭ _ ರಿಸಬ (ಕನ್ನಾಸು. ೦೫೯ ಕೃಯೋ). [< ಸಂ. ಋಷಭ]

**ರಿಷಿ** ' ಋಷಿ ' ನೋ.

**ರಿಷಿಗ** (ನಾ). ಒಬ್ಬಾತನ ಹೆಸರು (?) : ಕುಂದಿಗನೃಪಂ ಚಾವುಣ್ಡರಾಯ ಮುನ್ನತಶೌರ್ಯ್ಯಂ ವಿಭು ಮಾದಿಗಂ ರಿಷಿಗನನ್ನಾ ನಸ್ವಿವರ್ಯ್ಯಂ ಗುಣ ಸ್ತುತಿಗೆಯ್ದು (ಇಇಇ. XX. ೩೧-೦೩; 1044). [ ? ]

**ರಿಷಿಹಳ್ಳಿ** ' ಋಷಿವಳ್ಳಿ ' ನೋ.

**ರಿಷ್ಟ** (ನಾ). ೧. ಅಪಾಯ ; ಕೇಡು. ೨. ಅಶುಭ ; ಅಮಂಗಳ : ಶಿಶಿ ರಿಷ್ಟಹರಂ (ಜಾತಕ. ೭-೪). ೩. ಪಾಪ ; ಕಳಂಕ : "ಪಾಪದಲ್ಲಿಯುಂ ರಿಷ್ಟಮೆಂಬುದು" (ಶಬ್ದಾಮ. ೦೩೪-೦೬). ೪. ಅದೃಷ್ಟ ; ಸುದೈವ : "ರಿಷ್ಟಂ-೧. ಕ್ಷೇಮಂ. ಅಶುಭ ಇಲ್ಲದೇ ಇರುವಿಕೆ" (ನಿಘಂಶಿ. ೩೬೩). [ಸಂ.]

**ರಿಷ್ಟಿ** (ನಾ). ೧. ಕತ್ತಿ ; ಖಡ್ಗ : "ಖಡ್ಗಃ, ನಿಸ್ತ್ರಿಂಶಃ, ಚಂದ್ರಹಾಸಃ, ಅಸಿಃ, ರಿಷ್ಟಿಃ . . . ಕೃಪಾಣಿಕಾ — ೯ ಖಡ್ಗದ ಹೆಸರು" (ನಿಘಂಶಿ. ೨೬೫). ೨. ಕೇಡು ; ಹಾನಿ. ೩. ದುರದೃಷ್ಟ. [ಸಂ.]

**ರಿಸಬ** 'ರಿಷಭ' ನೋ.

**ರಿಸಾಲು**, ರಿಸಾಲೆ (ನಾ). ಸಾಮಾನ್ಯವಾಗಿ ನೂರು ಕುದುರೆಗಳ ಪಡೆ : ' ರಿಸಾಲುದಾರ ' ಪರಾ. **ರಿಸಾಲೆ** : ಒಟ್ಟು ೫೧,೦೦೦ ಕುದುರೆಗಳು ಸೇರಿ ಒಂದೊಂದು ಸಾವಿರಕ್ಕೊಂದೊಂದು ರಿಸಾಲೆಯಂತೆ ವಿಭಾಗವಾಗಿ (ಮಹಾಪಂ. II, ೦೬); ಯಾವಾಗ ರಿಸಾಲೆಗಾಗಲಿ (ಅಶ್ವಸೇನೆ) ಅಥವಾ ಪದಾತಿಸೈನ್ಯಕ್ಕಾಗಲೀ ಆದೇಶ ದೊರಕುವುದೋ ಆಗ ಅವು ಸೂಚಿಸಿದ ಕಡೆ ಯುದ್ಧ ಮಾಡಬೇಕೆಂದೂ ನಿರ್ದೇಶಿಸಿದಳು (ಧುಂಡಿಕ. ೪೨೬). [← ಅರ. ರಿಸಾಲ್; ಪಾರ. ರಿಸಾಲಹ್; ಹಿಂ. ಮರಾ. ರಿಸಾಲಾ]

**ರಿಸಾಲುದಾರ** ' ರಿಸಾಲ್ದಾರ್ ' ನೋ.

**ರಿಸಾಲೆ** ' ರಿಸಾಲು ' ನೋ.

**ರಿಸಾಲ್ದಾರ್**, ರಿಸಾಲುದಾರ, ರಿಸಾಲ್ದಾರ (ನಾ). ಅಶ್ವದಳದ ಅಧಿಪತಿ : (ಕೃಶಗ. II. ೫೩೦). **ರಿಸಾಲುದಾರ** : (೬). **ರಿಸಾಲ್ದಾರ** : ಈ ಸೇನೆಯ ಟೋಲಿಗಳು ರಿಸಾಲ್ದಾರರ ಕೈಕೆಳಗಿದ್ದವು (ಮಹಾಪಂ. II. ೯೭). [← ಅರ. ಪಾರ. ಹಿಂ. ರಿಸಾಲ್‌ದಾರ್, ರಿಸಾಲೇದಾರ್; ಮರಾ. ರಿಸಾಲ್ದಾರ್]

**ರಿಸಾಲ್ದಾರ** 'ರಿಸಾಲ್ದಾರ್' ನೋ.

ರಿಸಿ 'ಋಷಿ' ನೋ.

**ರಿಸಿಕುವರಿ** (ನಾ). ಋಷಿಯ ಮಗಳು : ಚಟುಲಕಾಮೋದ್ದೀಪನದಿಂದೆ ಕಡುಧೂರ್ತವಟುಗಳು ರಿಸಿಕುವರಿಯರ ಬಟುವೊಲೆಗಳ ಕೈದುಡುಕಿದುದು ಕೇಳೆಲೆ ನಿಟಿಲಾಕ್ಷ ತಪವಿರ್ಪ ಬನದಿ (ಬೋಷಹ. ೬-೦೩).

[ರಿಸಿ (< ಋಷಿ) + ಕುವರಿ]

**ರಿಸಿವೆಣ್** (ನಾ). ಋಷಿಯ ಹೆಂಡತಿ; ಮುನಿಪತ್ನಿ: ತಾನೆ ಸೀತೆ ದೋಹದದಿನಡವಿಯ ರಿಸಿವೆಣ್ಗಳಂ ಕಾಣಲ್ಕೆಂದು ಬಯಸಿದಳ್ (ರಾಮಾಶ್ವ. ೨೩-೨೨).

[ರಿಸಿ (< ಋಷಿ) + ಪೆಣ್]

**ರೀಠಾ** (ನಾ). ಕರಂಜಮರದ ಒಂದು ಪ್ರಕಾರ : "ಮಂಗಲಃ – ರೀಠಾ. ಕರಂಜ, ಅರಳಿ, ಇಪ್ಪೆ" (೬೩೦. ೦೦೩). [ಸಂ.]

**ರೀಡರ್** (ನಾ). ೧. ಉಪಪ್ರಾಧ್ಯಾಪಕ ; ಪ್ರವಾಚಕ : ಅವರು ಕನ್ನಡ ರೀಡರ್ ಆಗಿದ್ದಾರೆ (ರೂಢಿ). ೨. ಪಾಠದ ಪುಸ್ತಕ; ಪಠ್ಯಪುಸ್ತಕ : ಕನ್ನಡ ಐದನೆಯ ರೀಡರ್‌ನಲ್ಲಿ ನಳನ ಕಥೆಯಿದೆ (ರೂಢಿ). [← ಇಂ. Reader]

**ರೀಢೆ** (ನಾ). ಅವಮಾನ; ಅವಜ್ಞೆ ; ತಿರಸ್ಕಾರ : "ಅವಗಣನಮವಜ್ಞಾನಮದವಹೇಳಂ ರೀಢೆ" (ಶಬ್ದಮಣಿ. ೦೧೨-೭). [ಸಂ. ರೀಢಾ]

**ರೀಣ** (ಗು). ಸ್ರವಿಸುವ ; ಸೋರುವ. [ಸಂ.]

**ರೀತಿ** (ನಾ). ೧. ಗಮನ; ಗತಿ. ೨. ನದಿಯ ಹರಿವು, — ಪ್ರವಾಹ. ೩. ಮಾರ್ಗ; ಪದ್ಧತಿ : ನಾನಾಜಾತಿನೀತಿಯ ರೀತಿಗಳ ವಿಸ್ತರಿಸಿ (ಗಗಣ. ೦೯-೦). ೪. ಬಗೆ; ವಿಧ; ಕ್ರಮ : ಹೊಳಲು ಹೊಸರೀತಿಯಲಿ ಮಿಗೆ ಕಂಗೊಳಿಸುತಿರ್ದುದು (ಕೊರಟಾ. ೦-೯-೦೦) ; ರೀತಿ ತಿಳಿಯದವ್ದರೂ ಮಾತು ಬಲ್ಲ (ಗಾದೆ). ೫. ಆಚಾರ; ರೂಢಿ; ಸಂಪ್ರದಾಯ: "ಚರಿತಂ ರೀ[ಪಾಠಾಂ. ನೀ]ತಿ ಚಾರಿತ್ರಂ . . . ಆಚಾರಕಕ್ಕೆ ನಾಮಂ" (ರಂಗನಾ. ೭೪-೩); ಪರಕೀಯರ ರೀತಿ ಅನುಕರಣೀಯವಲ್ಲ (ರೂಢಿ). ೬. ಒಂದು ಬಗೆಯ ಲೋಹ ; ಹಿತ್ತಾಳೆ : "ಆರಕೂಟಃ, ರೀತಿಃ – ಈ ೨ ಹಿತ್ತಾಳೆ" (ಹಲಾಯು. ೨೯-೦೩). ೭. ಪೋರೆ ; ಗಡಿ ; ಎಲ್ಲೆ. ೮. ಕಬ್ಬಿಣ ಮುಂತಾದ ಲೋಹಗಳ ಜಂಗು,–ಕಿಟ್ಟ. ೯. ಸ್ವಭಾವ; ಗುಣ : ಅವನ ರೀತಿಯೇ ವಿಚಿತ್ರವಾಗಿದೆ (ರೂಢಿ). ೧೦. [ಕಾವ್ಯಮೀ] ಮಾಧುರ್ಯಾದಿ ಕಾವ್ಯಗುಣಗಳಿಂದ ಕೂಡಿದ ಪದಗಳ ಜೋಡಣೆ : ರೀತಿವಿನೂತವಸ್ತು ಕೃತಿಗೊಪ್ಪುವ ಪೆಂಪು . . . ರೀತಿಯೊಳೊಂದೆ ಪೇಟ್ವುದು ರಸಂ ಬಿಡೆ ಬಂಧುರಕಾವ್ಯಬಂಧಮಂ (ಕಾವ್ಯಾವ. ೭೮೦); ಹೊಸ ರೀತಿ ನೋಡಿದು (೬೩೬೦. ೦-೨೩); ರೀತಿ ಅಥವಾ ಮಾರ್ಗವೆಂದರೆ 'ವಚನವಿನ್ಯಾಸಕ್ರಮ' (ಕಬಿಂ. ೨೨೦). [ಸಂ.]

**ರೀತಿಕೆ** (ನಾ). ಹಿತ್ತಾಳೆ : "ರೀತಿಕ[ಪಾಠಾಂ. ರೀತಿ]ಯೆನಲು ಹಿತ್ತಾಳೆ" (ಮಂಗರಾ. ೩೦-೩) ; ಅಯ್ಯ ರೀತಿಕೆಯಲ್ಲಿ ಅಪರಂಜಿಯನಬಿಸುವರೆ (ಅದಪ. ೦೩-೨೯). [ಸಂ. ರೀತಿಕಾ]

**ರೀತಿಕೆಡು** 'ರೀತಿಗೆಡು' ನೋ.

**ರೀತಿಗೆಡಿಸು** (ಕ್ರಿ). ಹಾಳುಮಾಡು ; ದಾರಿತಪ್ಪಿಸು : ನಂಬಬೇಡ . . . ಪ್ರೀತಿಪಡಿಸಿ ಹಣವ ಸೆಳೆದು ರೀತಿಗೆಡಿಸಿ ಕಡೆಯಲವನ ಕೋತಿಯಂತೆ ಮಾಡಿಬಿಡುವ ಜಾತಿಕಾಜಿ ಹೆಂಗಳ (ಪುರಂದ. ೨-೦೬-೨) ; ಬೆಳೆಯುವ ಮಕ್ಕಳನ್ನು ಅತಿಯಾಗಿ ಮುದ್ದಿಸಿ, ರೀತಿಗೆಡಿಸದೆ ಅವುಗಳನ್ನು ಶಿಸ್ತಿನಿಂದ ಬೆಳೆಸುವುದು ತಾಯಿ ತಂದೆಗಳ ಮಹಾಕರ್ತವ್ಯವಾಗಿದೆ(ಗೃಹವಿ. ೧೩೨).

[ ರೀತಿಗೆಡು + — ಇಸು$_3$ ]

**ರೀತಿಗೆಡು**, ರೀತಿಕೆಡು (ಕ್ರಿ). ಹಾಳಾಗು ; ದಾರಿತಪ್ಪು: 'ರೀತಿಗೆಡಿಸು' ಪರಾ. **ರೀತಿಕೆಡು** : ನೀತಿಕೆಟ್ಟ ರೀತಿಕೆಟ್ಟ ನಾಯಿ (ಹೂಕನ್ನ. ೦೦).

[ ರೀತಿ + ಕೆಡು$_1$ ]

**ರೀತಿಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ರೀತಿಗೌಳ :– ೨೨ನೇ ಮೇಳಕರ್ತ ಖರಹರಪ್ರಿಯದಲ್ಲಿ ಜನ್ಯ. ಉಪಾಂಗರಾಗ. ಘನರಾಗಗಳಲ್ಲೊಂದು(ಸಂಗೀತಸಂ. ೦೩೨). [ ಸಂ. ರೀತಿಗೌಲ ]

**ರೀತಿತಪ್ಪು** (ಕ್ರಿ). = ರೀತಿಗೆಡು : ಇವು ರೀತಿತಪ್ಪಿದಾಗಲೆಲ್ಲಾ ಕಾಣದಂತೆ ಅಸಡ್ಡೆ ಅಲಕ್ಷದಿಂದ ಇರಬಾರದು (ಗೃಹಶಾ. ೦೩೩). [ ರೀತಿ + ತಪ್ಪು$_1$ ]

**ರೀತಿಪುಷ್ಪ** (ನಾ). ಹಿತ್ತಾಳೆಭಸ್ಮದಿಂದ ತಯಾರಿಸಿದ ಕಣ್ಣಿನ ಅಂಜನ; ಕುಸುಮಾಂಜನ : "ರೀತಿಪುಷ್ಪಂ, ಪುಷ್ಪಕೇತುಃ, ಕುಸುಮಾಂಜನಂ – ೩ ಕುಸುಮಾಂಜನದ ಹೆಸರು" (ಶಿದ್ಧಾಂತಿ. ೩೦೪). [ಸಂ.]

**ರೀತಿವಿಫಲ** (ನಾ). [ಕಾವ್ಯಮೀ] ಹದಿನೆಂಟು ಬಗೆಯ ಪದದೋಷಗಳಲ್ಲಿ ಒಂದು : ಅಪದಾರ್ಥಂ . . . ವಿಶ್ಲೇಷಣಷ್ಟಸಮಾಸಂ ನಯನಾಶರೀತಿವಿಫಲಂ ದುರ್ಲಕ್ಷಣಂ . . . ಇವಿನಿತುಂ ದೋಷಂಗಳಷ್ಟಾದಶಂ (ಶಬ್ದೋಂಬು. ೦-೪೬ ವೃತ್ತಿ). [ಸಂ.]

**ರೀಪು** (ನಾ). = ರಿಪೀಸು : ನಮ್ಮದು ಚಿಕ್ಕಮನೆ ; ಬಿದಿರಿನ ರೀಪು ಹೊಡೆದರೆ ಸಾಕು (ಮುಂಗಾರು. ೬೦) ; ಚಿಕ್ಕಪ್ಪನು ಹನ್ನೆರಡು ಕೋಲು ಹಲಗೆ, ಇಪ್ಪತ್ತು ಕೋಲು ರೀಪು, ಎರಡು ಸೇರು ಆಣಿ . . . ತರಿಸಿದ (ಬಳಿಪು. ೬). [ ← ಮರಾ. ರೀಪ ]

**ರೀಮು** (ನಾ). ಐನೂರು ಹಾಳೆಗಳಿರುವ ಕಾಗದದ ಕಟ್ಟು; ಇಪ್ಪತ್ತು ದಸ್ತು : ಬರೆಯುವ ಕಾಗದಗಳಾದರೆ . . . ೨೦ ಕ್ವಯರುಗಳಿಗೆ ಒಂದು ರೀಮನ್ನಾಗಿ ಕಟ್ಟುವರು (ಪಾಠಶ್ರೀ. II. ೪೨೫). [← ಇಂ. Ream]

**ರೀಲ್** 'ರೀಲು' ನೋ.

**ರೀಲು**, ರೀಲ್ (ನಾ). ದಾರ, ತಂತಿ, ಚಲನಚಿತ್ರಪಟಲ ಮೊದಲಾದುವುಗಳನ್ನು ಸುತ್ತುವ ಸಲಕರಣೆ ; ಕಂಡಿಕೆ ; ಇಲ್ಲಿದೋ ಬೆಳ್ಳಕ್ಕಿಯ ಸಾಲು: ಹೊಸಯುಗದ ರೀಲು ! (೩೦೩ಪ. ೬೦-೪). **ರೀಲ್** : ಇದು ಮುಗಿಯುವ ಹೊತ್ತಿಗೆ ಎರಡು ರೀಲ್‌ಗಳು ಮುಗಿದಿರಬಹುದು (ಪಾಡಿಗೆ. ೦೩೦).

**ರೀಲ್‌ಬಿಡು** = (ಆಲಂ) ಸುಳ್ಳು ಹೇಳು; ಬುರುಡೆ ಹೊಡೆ : ನನ್ನ ಮುಂದೇನೇ ಇಷ್ಟು ರೀಲ್ ಬಿಡ್ತಾ ಇದ್ದೀಯಲ್ಲಾ (ರೂಢಿ).

[ ← ಇಂ. Reel ]

**ರುಂಡ** (ನಾ). ೧. ತಲೆಯಿಲ್ಲದ ದೇಹ ; ಮುಂಡ. ೨. ತಲೆಬುರುಡೆ ; ಶಿರಸ್ಸು : "ರುಂಡಮೊಂದು ಶಿರಂ" (ಅಭಿಧಾ. ೩೬-೨೭೪) ; ಧರಣಿ ಕಂಪಿಸೆ ಖಳನ ರುಂಡವು ಹೊರಳಿ ಬಂದುಗು ಹರಿಯ ಚರಣಕೆ (ಕೌರವ. ೨೭-೩೬) ; ಕಡಿವಡೆದ ರುಂಡಗಳ ಘೊನೆಗಣೆಯಿಡಿದಿರುವ ಮುಂಡಗಳ . . . ಕಂಡು (ತಿಮ್ಮಕ್ಕಿ. ೩-೦೩); ರಣಕಾಳಿ ರುಂಡ ಮುಂಡಗಳ ಚೆಂಡಾಟವಾಡಿದಳಲ್ಲಿ (ಕೃಷ್ಣಂಗ. ೯೨-೨೨೩೯). ೩. ಹೇಸರಗತ್ತೆ. [ಸಂ.]

**ರುಂಡಮಾಲೆ**, ರುಂಡಮಾಳೆ (ನಾ). ತಲೆಬುರುಡೆಗಳ ಹಾರ ; ಕರೋಟಿಮಾಲೆ : ದೇಹ ರುಂಡಮಾಲೆಯ ಸ್ಥಾನ ಕರ್ಣ ನಾಗೇಂದ್ರನ ಸ್ಥಾನ (ಬಸವ. ೬೪೪); ಕರುಳುದುಡೆಯ ರುಂಡಮಾಲೆಯ ಮರುಳುಗಳು ಕುಣಿದಾಡೆ (ಕೌರವ. ೪೪-೦೫) ; ಚಂಡಸುರಥನ ಶಿರವನು . . . ತರಿಸಿದನದಂ ರುಂಡಮಾಲೆಯ ತೊಡವಿಗೆ (ಕೃಷ್ಣಾ. ೦೪ ಸೂಚನ). **ರುಂಡಮಾಳೆ** : ಅಭಿಭುಟರುಣ್ಣಮಾಳೆ ಪಳನಿಕ್ಕಿ ತದೀಯಕಪೋಲದೊಳ್ಪುದುಳ್ದಿರಸಿದ ನೆತ್ತರಂ ಸುಚಿದು ಕತ್ತಿಗೆಯಂ ಜಡಿಯುತ್ತೆ . . . ನರ್ತಿಸುವ ಭೈರವನೀ ರಣರಂಗಭೈರವ (ಕೌಶ. XX. ೬೭-೩೪ ; ?). [ಸಂ. ರುಂಡಮಾಲಾ]

**ರುಂಡಮಾಳೆ** 'ರುಂಡಮಾಲೆ' ನೋ.

**ರುಂಡಾಭರಣ** (ನಾ). ತಲೆಬುರುಡೆಯ ಮಾಲೆಯನ್ನು ಆಭರಣವಾಗಿ ಧರಿಸಿದವನು : ರುಂಡಾಭರಣರು ಘನವೆಂಬೆನೆ ರುಂಡಾಭರಣರು ಘನವಲ್ಲ (ಅನಂದಿ. ೩೩೯-೫೦). [ಸಂ.]

**ರುಂಡಿಕೆ** (ನಾ). ೧. ಯುದ್ಧರಂಗ. ೨. ದೂತಿ ಅಥವಾ ಕುಂಟಣಗಿತ್ತಿ. ೩. ಹೊಸ್ತಿಲು. ೪. ಅತಿಮಾನುಷ ಶಕ್ತಿ. [ಸಂ. ರುಂಡಿಕಾ]

**ರುಂಡಿಮಾರಮ್ಮ** (ನಾ). ಒಬ್ಬಾತನ ಹೆಸರು : ವಲ್ಲಭಗಾಮುಂಣ್ಡನುಂ ರುನ್ದಿವಚ್ಚರು ರುಣ್ಡಿಮಾರಮ್ಮನುಂ ಕಾದಳೂರ ಶ್ರೀವಿಕ್ರಮಗಾಮುಂಣ್ಡರುಂ (ಎಕ. II, ೩೫-೭ ; ಕ್ರಿ. 800). [ರುಂಡಿಮಾರ? + ಅಮ್ಮ$_{1}$]

**ರುಂದಿ** (ನಾ). ಅಡ್ಡಳತೆ ; ಅಗಲ : ಲಾಂಬಿಯ ಪಕ್ಕದ ಮೂಲೆಗಳ ನಿಶಾನಿಗಳನ್ನು ಹಿಡಿದು ಶಂಕು ಹತ್ತಿಸಿ ಯಾವ ಅಳತೆ ಬರುತ್ತದೆಯೋ ಅದನ್ನು ರುಂದಿಯೆಂದು ಹೇಳುವುದು (ಭೂಮಿ. ೦೨).

[<ಪ್ರಾ. ರುಂದೀ./ಮರಾ. ರುಂದೀ]

**ರುಂದಿವಚ್ಚ** (ನಾ). ಒಬ್ಬಾತನ ಹೆಸರು : ವಲ್ಲಭಗಾಮುಂಣ್ಡರುಂ ರುನ್ದಿವಚ್ಚರು ರುಣ್ಡಿಮಾರಮ್ಮನುಂ (ಎಕ. II, ೩೫-೭ ; ಕ್ರಿ. 800). [ ? ]

**ರುಂದ್ರ** (ಗು). ೧. ವಿಸ್ತಾರವಾದ ; ವಿಶಾಲವಾದ : "ಬೃಹದುರು ರುಂದ್ರಂ ಪೃಥು ಗುರು ಮಹದ್ವಿಶಾಳಂ ವಿಶಂಕಟಂ ವಿಸ್ತೀರ್ಣಂ" (ಪಶ್ಚಿಕೋ. ೦೦೭-೫೫) ; ವ್ಯಾಸಮುನೀಂದ್ರರುಂದ್ರವಚನಾಮೃತವಾರ್ಧಿಯ ನೀಸುವೆಂ (ಕಂಕಭಾ. ೧-೦೩) ; ಇದು . . . ಶ್ರೀಪಾದನಖಚಂದ್ರಸಾಂದ್ರರುಚಿರುಂದ್ರಚಂದ್ರಿಕಾಚಂಚಚ್ಚಕೋರಾಯಮಾನ (ರಾಜಶೇ. ೨-೦೯೫ ವ) ; ಪುಲಕಿಸಿತು ನಿಶ್ಶಬ್ದರುಂದ್ರದಂಡಕವನಂ ಕೂಡೆ ಪುಲಕಿಸುವಂತೆ (ಶ್ರೀರಾಮಾ. ೦೭೯-೯೬). ೨. ವ್ಯಾಪಕವಾದ ; ನಿಬಿಡವಾದ : ವಿಯಚ್ಚರಧರಣೀಶರತ್ನಮಕುಟಪ್ರಭೆಯಿಂ ದಶದಿಙ್ಮುಖಂಗಳುಂ ಭರಿತಮೆನಿಪ್ಪಿನಂ ನೆರೆದುದಾ ಧ್ವನಿಗಿಂಪಿನ ರುಂದ್ರಸೈನಿಕಂ (ಕಂರಾಮಾ. ೧೦-೦೯೯). [ಸಂ.]

**ರುಂಬಾಲ** ' ರುಮಾಲು$_{1}$ ' ನೋ.

**ರುಂಹರಿ** (ನಾ). ಭೂಮಿ ; ಇಳೆ : ಭಟಾವಳಿಯೊ ತ್ರಿಜಗದಳಿವಿನ ಯಮಪ ಸುಭಟವ್ರಜವೊ ಪೊಗಳುವೆನೇನ ರುಂಹರಿ ರುಜೆಗೆ ಸಂದಳು ಧರಿಸಲಾಱದೆ ವೈರಿವಾಹಿನಿಯ (ಕೊರಂ. ೩-೦೭-೦೨) ; ಹರಿಯಕ್ಷವಾಹಿನಿ ಹಂಸಸ್ವರೂಪೆ ರುಂಹರಿಯ ಭಾರವನು ಭೇದಿಸು (ದೇವೀಕೃ. ೩೪). [ ? ]

**ರುಕ್‍ಸತು** (ನಾ). ಪರವಾನಿಗೆ ; ನಿರೂಪ : ಮಾವಿನಿಸಾಹೇಬರು . . . ಕೊಡಗಿನ ಮಹಾರಾಜರವರ ಸಂಗಡ ರುಕ್‍ಸತು ತೆಗೆದುಕೊಂಡು ತಲಚೇರಿಗೆ ಹೋದರು (ರಾಜೇಂದ್ರ. ೦೦೦).

[←ಅರ. ರುಖ್ಸತ್ ; ಹಿಂ. ಮರಾ. ರುಖಸತ್]

**ರುಕುಮತೋರಣ** (ನಾ). ಚಿನ್ನದ ತೋರಣ ; ಸುವರ್ಣತೋರಣ : ಆ ರುಕುಮತೋರಣದ ಕಾಂತಿಗಳಿಂದ ರಂಜಿಸುವ ದ್ವಾರಕಾಪುರವರವ ಪೊಕ್ಕನುದಾರವೇಂಕಟನಾಥ ಕೃಷ್ಣನು (ಕಿಮ್ಮ.ಕ. ೩-೧೩೨).

[ < ಸಂ. ರುಕ್ಮತೋರಣ ]

**ರುಕ್ಕು$_{1}$** ' ರಿಚೆ ' ನೋ.

**ರುಕ್ಕು$_{2}$** (ನಾ). ೧. ಕಾಂತಿ ; ಪ್ರಭೆ : ಆ ನತಭೂಮಿಪಾಳಿಸಂಕುಳ ಮಣಿಮೌಳಿರುಕ್ಕುಪ್ರಸರಪೂಜಿತಪಾದಪಯೋಜಯುಗ್ಮಂ (ಶಾಸಸ. ೦೫; ಕ್ರಿ. 1270). ೨. ಕದಿರು ; ಕಿರಣ : " ರೋಚಿಃ . . . ರುಕ್ . . . ಗೌಃ — ಈ ೩೨ ರಶ್ಮಿಗಳ ಪೆಸರ್ " (ಹಲಾಯು. ೭-೩೮). [< ಸಂ. ರುಚ್]

**ರುಕ್ಕು$_{3}$** (ನಾ). ರೋಗ ; ಜಡ್ಡು : " ರೋಗಃ, ರುಕ್ . . . ರುಜಾ — ಈ ೧೨ ವ್ಯಾಧಿ " (ಹಲಾಯು. ೯೬-೪೪೭). [ < ಸಂ. ರುಜ್ ]

**ರುಕ್ಚಕ್ರ** (ನಾ). ಕಿರಣಗಳ ಸಮೂಹ : ಈತನೆ ಶಕ್ರನೆನಲ್ ಪಿಂಗದಂಗದಂ ವಜ್ರದ ರುಕ್ಚಕ್ರಂ ದೆಸೆಯಂ ದಳ್ಳಿಸೆ ಚಕ್ರಮನಾಕ್ರಮಿಸಲೆಂದು ತಟಿ ಸಂದಿರ್ದಂ (ಕಂರಾಮಾ. ೦೪-೦೬೦). [ಸಂ.]

**ರುಕ್ಮ** (ಗು). ೧. ಹೊಳೆಯುವ ; ಪ್ರಕಾಶಿಸುವ. (ನಾ). ೨. ಚಿನ್ನ ; ಬಂಗಾರ : " ರೈ ರುಕ್ಮಮಷ್ಟಾಪದಂ . . . ಸ್ವರ್ಣಮೆನೆ ಪೊನ್ನಿಂಗೆ ನಾಮಮಮಕ್ಕುರ '' (ಶಂಗರಾ. ೩೦-೪) ; ರುಕ್ಮರಞ್ಜನೆಯಂ ದೇಹದ ಕಾಂತಿಯೊಳ್ ನಿಱಿಸಿದರ್ (ಎಕ. VIII, ಸೊರಬ. ೦೪೭-೦೩ ; 1388). ೩. ಕಬ್ಬಿಣ. ೪. ಒಂದು ಬಗೆಯ ಕಾಡಿಗೆ. [ಸಂ.]

**ರುಕ್ಮಕ** (ನಾ). ಒಂದು ಬಗೆಯ ಪಕ್ಷಿ : ಆ ವನಂಗಳೊಳು ಶುಕ . . . ರುಕ್ಮಕ . . . ವಾಸಕ ಮೊದಲಾದ ಚಿತ್ರರೂಪಶಕ್ತಿಗಳುಳ್ಳ ಪಕ್ಷಿಕುಲಂಗಳುಂ (ಶಿವೇಕ. ೨೦೨). [ ಸಂ. ]

**ರುಕ್ಮದಾನ** (ನಾ). ಚಿನ್ನವನ್ನು ದಾನಮಾಡುವುದು ; ಸುವರ್ಣದಾನ : ರುಕ್ಮಭೂಷಿತಗಾತ್ರನಾಶ್ರಿತರುಕ್ಮದಾನವಿನೋದಿಯಿಂತಾ ರುಕ್ಮವರ್ಣಾಂಬರನ ವಂಶವದಾಯ್ತು ವಿಖ್ಯಾತ (ಪಿರಾಗ. ೦೦-೬೭-೫೭). [ ಸಂ. ]

**ರುಕ್ಮಾಂಗದ** (ನಾ). ೧. ಚಿನ್ನದ ತೋಳುಬಂದಿ : ಈತಂಗೆ . . . ಸೊಬಗುಸಿರಿಯ ನಳಿದೋಳ್ಗೆ ರುಕ್ಮಾಂಗದಮೆನೆ ಸಲ್ವ ರುಕ್ಮಾಂಗದನೆಂಬ ಸೀಮಂತಪುತ್ರನುಂಟು (ರಾಮಾಶ್ವ. ೦೨೨-೨೦). ೨. ಒಬ್ಬ ರಾಜನ ಹೆಸರು. ೧. ೨ : ಈತಂಗೆ ರುಕ್ಮಾಂಗದನೆಂತೆಂತು ಹರಿಭಕ್ತಿಗಿಂಬಾಗಿ . . . ಸಲ್ವ ರುಕ್ಮಾಂಗದನೆಂಬ ಸೀಮಂತಪುತ್ರನುಂಟು (ರಾಮಾಶ್ವ. ೦೨೨-೨೦). [ಸಂ.]

**ರುಕ್ಷ$_{1}$** (ನಾ). ೧. ಕರಡಿ : ರು[ಪಾಠಾಂ. ಋ]ಕ್ಷ ದಂತಿ ತರಕ್ಷು ಫಣಿ ಹರಿಯಕ್ಷ . . . ರಾಕ್ಷಸರೂಕ್ಷಭೀತಿಗಳು ಆ ಕ್ಷಣವಳಿದು (ಐಸಕ್ಕು. ೬೦-೯೩) ; ಪಕ್ಷಿಗಳ ನುಣ್ಣಿಚಿ ಸೀದುದರಣ್ಯದಲ್ಲಿ ಸುಗಿಡಿಸಿದ ರುಕ್ಷರೋಮತತಿ ಬೆಂದುದು ಬೇಸಗೆಯುಗ್ರಮೆಂತುಟೋ (ರಾಜಶೇ. ೫-೪೭). ೨. ನಕ್ಷತ್ರ ; ತಾರೆ : ಪುನರ್ವಸುರುಕ್ಷಂ (ಖರ್ಗವಾ. ೦೬-೪೭) ; ಮರುನ್ಮಾರ್ಗದಂತಿರೆ ಚಂಚತ್ಸುಗರಾಜರುಕ್ಷಯುತಂ . . . ಗಹನಂ (ರಾಜಶೇ. ೫-೫೬).

[ < ಸಂ. ಋಕ್ಷ ]

**ರುಕ್ಷ$_{2}$** (ಗು). ೧. ಒರಟಾದ ; ಕಠಿಣವಾದ. ೨. ತೀಕ್ಷ್ಣರುಚಿಯ. (ನಾ). ೩. ಕಾಠಿಣ್ಯ ; ಒರಟು : ಮುಂದೇನು ಬೇಕು ? ಶ್ರೀಕಾಂತ ರುಕ್ಷವಾಗಿ ನುಡಿದ (ಮುಕ್ತಿ. ೦೪೨). ೪. ನಯವಿಲ್ಲದುದು ; ದೊರಗು : ಶರೀರವೆಲ್ಲ ಪರೆ ಬಂದಂತೆ ರುಕ್ಷವಾಗಿಯೂ ಮತ್ತು ಕಾಂತಿಹೀನವಾಗಿಯೂ ಕಾಣುವುದು (ಶ್ರೀಕೃಷ್ಣ. ೨೭). [ಸಂ.]

**ರುಖೋತ**, **ರುಖ್ವೋತ** (ನಾ). (ಉಕ) ಮದುವೆಯ ಹಿಂದಿನ ದಿನ ಹೆಣ್ಣಿನ ಕಡೆಯವರು ಗಂಡಿನ ಕಡೆಯವರಿಗೆ ಏರ್ಪಡಿಸುವ ಔತಣ ಮತ್ತು ಆ ಸಮಾರಂಭ : ಮೊದಲು ಎದುರುಗೊಳ್ಳುವುದು, ಆಮೇಲೆ ರುಖೋತವನ್ನು ಹಾಕುವುದೆಂದು ಬಹಳ ಚರ್ಚೆಯಾಗಿ ನಿರ್ಣಯವಾಯಿತು (ಅನಂತ. ೯). **ರುಖ್ವೋತ** : ರಾತ್ರಿ ಸುಳ್ಳೌತಣ ಮುಗಿದು ರುಖ್ವೋತ ಆಗೂ ತನಕಾ ಅಂದರ ಎರಡು ಘಂಟೆ ಆತು (ವ್ಯಕಿ. ೪) ; ಹಿಂದಿನ ರಾತ್ರಿ, ಬೀಗರು ಬಂದು ಎದುರುಗೊಂಡು ಸುಳ್ಳೌತಣ ರುಖ್ವೋತ ಮುಗಿಯುವುದಕ್ಕೆ ರಾತ್ರಿ ಮೂರು ಹೊಡೆದುಹೋಗಿತ್ತು (ಸಾಧೀಲಾ. ೪೯).

[←ಮರಾ. ರುಖತ್, ರುಖವತ್]

**ರುಖ್ವೋತ** ' ರುಖೋತ ' ನೋ.

**ರುಗ್ಣ** (ಗು). ೧. ಮುರಿದ ; ಒಡೆದ. ೨. ಬಾಯಿಲೆಯಿಂದ ಕೂಡಿದ ; ರೋಗದ : ಅವನು ನನ್ನ ರುಗ್ಣ ತಾಯಿಯ ಸೇವೆಯಲ್ಲಿ ಬಹಳ ಸಹಾಯ ಮಾಡಿದ (ಭಾರತಿ. ೩೭). (ನಾ). ೩. ಕೆಟ್ಟುದು; ಹಾಳಾದುದು : "ಭಗ್ನಮೆನೆ ರುಗ್ಣಮೆನೆ . . . ಭಿನ್ನಮೆನೆ ಕಟ್ಟದು" (ಶಂಗರಾ. ೦೩೨-೨೭). ೪. ಮುರಿದುಹೋದುದು : "ರುಗ್ಣಂ. ಭಗ್ನಂ—೨ ಮುರಿದು ಹೋದದ್ದು" (ಸಿದ್ಧಾಂತಿ. ೩೪೭). ೫. ರೋಗಿ. [ಸಂ.]

**ರುಗ್ಣಗೃಹ** (ನಾ). ರೋಗಿಗಳಿಗೆ ಚಿಕಿತ್ಸೆ ಮಾಡುವ ಮನೆ ; ಚಿಕಿತ್ಸಾಲಯ ; ಆಸ್ಪತ್ರೆ : ರುಗ್ಣಗೃಹದ ಅವರ ಸಭೆಯಲ್ಲಿ . . . ಆನಂದ ಪ್ರವಾಹಕ್ಕೆ ತುಂಬ ತಡೆಯುಂಟಾಗುತ್ತಿತ್ತು (ಇಕ್ಷು. ೩೪೨). [ಸಂ.]

**ರುಗ್ಣತೆ** (ನಾ). ರೋಗ ; ಜಡ್ಡು ; ಬಾಯಿಲೆ : ಸಾಮಾಜಿಕ ರುಗ್ಣತೆಯನ್ನು ಕಳೆಯುವ ಇವರ ಹಾಸ್ಯ . . . ಬೆಳಗುವಂತಿರಲಿ (ಗರುಡಾ. ೭ ಮುನ್ನುಡಿ). [ಸಂ. ರುಗ್ಣತಾ]

**ರುಗ್ಣಶಯ್ಯೆ** (ನಾ). ರೋಗದಿಂದ ಹಾಸುಗೆ ಹಿಡಿದಿರುವ ಸ್ಥಿತಿ : ಅಂತ್ಯದಲ್ಲಿ, ರುಗ್ಣಶಯ್ಯೆ ಇಲ್ಲದಿರುವುದು ಮಾನವಜನ್ಮಕ್ಕೆ ಒಂದು ಪೂರ್ವ ಪುಣ್ಯ (ಶಾಂಕಲಾ. ೦೬೦). [ಸಂ. ರುಗ್ಣಶಯ್ಯಾ]

**ರುಗ್ಣಾಲಯ** (ನಾ). =ರುಗ್ಣಗೃಹ : ರೋಗಿಗಳ ರುಗ್ಣಾಲಯದಲ್ಲಿ ತೋರಿ ಬರುವ ಶಾಂತತೆ ಅಲ್ಲಿ ಪರಿಸಿದ್ಧಿತು (ಕಾಂಡಾ. ೬೬); ಅವಳು ರುಗ್ಣಾಲಯಕ್ಕೆ ಹಿಂದಿರುಗಿದಾಗ ದಾದಿಯ ಅಜ್ಞೆ ಕಾದಿತ್ತು (ಭುವರು. ೩೨೩). [ಸಂ.]

**ರುಗ್ಣಾವಸ್ಥೆ** (ನಾ). ರೋಗದಿಂದ ನರಳುತ್ತಿರುವ ಸ್ಥಿತಿ : ರಾಜಲೇ ಖುದ್ದಾಗಿ ಹೋಗಿ ರುಗ್ಣಾವಸ್ಥೆಯಲ್ಲಿದ್ದ ಮಲ್ಲಿಗಮ್ಮನನ್ನು ಕರೆಸಿಕೊಂಡು ಬಂದ ಸುದ್ದಿಯು ಅರಮನೆಯಲ್ಲಿ ಹರಡದೇ ಹೋಗಲಿಲ್ಲ (ಶ್ರೀರಾಮ. ೦೦೩); ಮತ್ಸರಾಗ್ನಿ ಆ ರುಗ್ಣಾವಸ್ಥೆಯಲ್ಲಿಯೂ ಹೊಗೆಯಾಡತೊಡಗಿತ್ತು (ಮರಳು. ೬೮೭). [ಸಂ. ರುಗ್ಣಾವಸ್ಥಾ]

**ರುಗ್ದಾಹ** (ನಾ). ಹದಿಮೂರು ಬಗೆಯ ಸನ್ನಿಪಾತಗಳಲ್ಲಿ ಒಂದು ; ಎಡೆಬಿಡದೆ ಬಾಯಾರುವ ಒಂದು ಬಗೆಯ ಸನ್ನಿಪಾತ : ತ್ರಯೋದಶ ಸನ್ನಿಪಾತವಾವುದೆಂದೊಡೆ : _ ಸಂಧಿಗ, ಅಂತಕ, ರುಗ್ದಾ[ಶಾಕಾಂ.ಗ್ರಾ]ಹ, ಚಿತ್ತವಿಭ್ರಮ . . . ಪ್ರಳಾಪಗಳೆಂದು ಪದಿಮೂರು ತೆರನು (ಸಳವ್ಯ. ೦೩೦). [ಸಂ.]

**ರುಗ್ವೇದ** (ನಾ). ಚತುರ್ವೇದಗಳಲ್ಲಿ ಒಂದು ; ಋಗ್ವೇದ : ' ರುಗ್ವೇದದೆರೆ' ಪರಾ. [< ಸಂ. ಋಗ್ವೇದ]

**ರುಗ್ವೇದದೆರೆ** (ನಾ). ಋಗ್ವೇದದ ಬೋಧನೆಗೆಂದು ಎತ್ತುತ್ತಿದ್ದ ತೆರಿಗೆ ; ಭಟ್ಟವೃತ್ತಿ : ವೇದಾಂತದೆರೆ ಮತ್ತ ೧೫ ಹರಳ್ಮತ್ತರು ೧೦ × × ರುಗ್ವೇದದೆರೆ ಮತ್ತ ೧೫ (ಶಾಇ. XX, ೩೦೦-೦೭ ; 12ನೆಯ ಶತ). [ರುಗ್ವೇದ+ತೆರೆ$_2$ (<ತೆಱೆ$_3$)]

**ರುಚ** (ನಾ). ೧. ಹೊಳಪು ; ಪ್ರಕಾಶ. ೨. ಕಿರಣ ; ರಶ್ಮಿ : "ರುಚಿ ದ್ಯುತಿ ಪ್ರಗ್ರಹಂ ದೀಪ್ತಿ ಘೃಷ್ಟಿ ರಶ್ಮಿ ರುಚಂ ಕಿರಣಂ" (ಮಂಗರಾ. ೦೦-೩). [ಸಂ.ರುಚ್, ರುಚಾ]

**ರುಚಕ** (ಗು). ೧. ಹಿತವಾದ ; ಮನಸ್ಸಿಗೆ ಒಗ್ಗುವ • ೨. ಜೀರ್ಣಕಾರಿಯಾದ ; ಜಠರೋತ್ತೇಜಕವಾದ. ೩. ತೀಕ್ಷ್ಣರುಚಿಯುಳ್ಳ ; ಕಟುರುಚಿಯ. ೪. ಮಂಗಳಕರವಾದ. (ನಾ). ೫. ಮಂಗಳದ್ರವ್ಯ. ೬. ಒಂದು ಬಗೆಯ ಉಪ್ಪು ; ಸೌವರ್ಚಲ : "ಸೌವರ್ಚಳಃ, ರುಚಕಕೆ –ಈ ೨ ಸೌವರ್ಚಳಂ" (ಕಲಾಯು. ೦೦೦-೯೭೩). ೭. ಒಂದು ಬಗೆಯ ಚಿನ್ನದ ಕಂಠಾಭರಣ. ೮. ಮಾಲೆ ; ಹಾರ . ೯. ಹಲ್ಲು ; ದಂತ . ೧೦. ಕುದುರೆಯ ಕುತ್ತಿಗೆಯ ಮೇಲಿನ ಕೂದಲು ; ಅಯಾಲು. ೧೧. ಉತ್ತರದ ಕಡೆ ಮಾತ್ರ ಮುಚ್ಚಿ, ಉಳಿದ ಮೂರು ಕಡೆಗಳಲ್ಲಿ ತೆರೆದ ಆವರಣಗಳಿರುವ ಒಂದು ಬಗೆಯ ಕಟ್ಟಡ. ೧೨. ಅಮೃತ ; ಸುಧೆ. ೧೩. ಒಂದು ಬಗೆಯ ಹಣ್ಣಿನ ಮರ ; ಮಾದಲ; ಮಾತುಲುಂಗ. ೧೪. ಔಡಲದ ಪೊದೆ. ೧೫. ನಿರ್ದಿಷ್ಟನಕ್ಷತ್ರರಾಶಿಯಲ್ಲಿ ಹುಟ್ಟಿದ, ಅಸಾಧಾರಣವಾದ ಐದುಗಣ್ಯಪುರುಷವರ್ಗಗಳಲ್ಲಿ ಒಂದು: ವರಾಹಮಿಹಿರನು ಮನುಷ್ಯರನ್ನು ಶರೀರದ ಆಳತೆ ಆಕಾರದ ಮೇಲೆ, ಐದು ಜಾತಿಗಳನ್ನಾಗಿ ವಿಂಗಡಿಸುತ್ತಾನೆ. ಹಂಸ, ಶಶ, ರುಚಕ, ಭದ್ರ, ಮಾಲವ್ಯ ಎಂಬುವೇ ಈ ಐದು ಜಾತಿಗಳು (ಭಾರಿತ. ೩೦೭). ೧೬. ಕೊರಳು; ಕತ್ತು: "ಭೂಧರದಶನಾಮೃತಂ ಲವಣಭದ್ರ ಶಿರೋಧರ ಮಾತುಳಂಗವಾಭರಣಗಳೆಂಬಿವೈದೆ ರುಚ[ಶಾಕಾಂ.ಟಿ]ಕಾಹ್ವಯಂ" (ಪಾಪಾರ. ೯೨). ೧೭. [ಜೈನ] ಸುಮೇರುಪರ್ವತದ ಬಳಿ ಇರುವ ಒಂದು ಪರ್ವತ : ಪ್ರಾಗ್ದಿಗ್ದೇಶದ ಮೋಘಸುಪ್ರಬುದ್ಧ ರುಂದ್ರವಿಮಳರುಚಕ . . . ಸುಪ್ರತಿಷ್ಠ ಮೆಂಬ ಕೂಟಾಷ್ಟಕಂಗಳೊಳ್ (ಆದಿಪು. ೭-೩೭) ; ತ್ರಿಕೂಟ . . . ಪತಂಗ ರುಚಕ ... ನಿಷಧವೆಂಬೈದು ಗಿರಿಗಳ್ (ಒವೆಶ. ೨೦೪). ೧೮. ಅರುವತ್ತುಮೂರು ಇಂದ್ರಕಗಳಲ್ಲಿ ಒಂದು : ೧. ಋತು . . . ೧೫ ರುಚಕಂ . . . ೬೩ ಸರ್ವಾರ್ಥಸಿದ್ಧಿ ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್ (ಶಕ್ತ್ರಿ. ೨೦೩). [ಸಂ.]

**ರುಚಕಾಯೋಗ** (ನಾ). [ಜ್ಯೋತಿ] ಶುಭವನ್ನುಂಟುಮಾಡುವ ಒಂದು ಯೋಗ, –ದೆಸೆ : ಕುಜನ ಚತುಷ್ಕೇಂದ್ರಂಗಳಲ್ಲಿ ಶುಭಗ್ರಹರಿರಲೂ ರುಚಕಾಯೋಗಂ ಯಿದರಿಂದಂ ಅಷ್ಟಾದಶವಿಧ ಧಾನ್ಯಲಾಭಮಕ್ಕು (ಅಮಬೀ. ೨೫-೦೦). [ಸಂ.]

**ರುಚಿ** (ನಾ). ೧. ಕಾಂತಿ ; ಪ್ರಕಾಶ ; ತೇಜಸ್ಸು : ಸಂಧ್ಯಾಸಮಯಾತ್ತ ರಕ್ತರುಚಿ ಪಿಂಗೆ ಬಟಿಕ್ಕುದಯಾದ್ರಿಯೊಳ್ ಪದಂಗಾಸಿದ ಪೊಸ ಪುಂಜಿಯವೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ (ಶಂಕರಾ. ೩-೬೦); ಸುಧಾಂಶುರುಚಿಯಂತೆ . . . ಶಂಕರಂ . . . ಮೆಱೆವುತಿರ್ದನು ದಿವ್ಯತೇಜದಲಿ (ಪ್ರಭುಲಿ. ೨-೦೩). ' ರುಚಿವೀಱು ' ಪರಾ. ೨. ಕಿರಣ ; ರಶ್ಮಿ : "ರೋಚಿಃ . . . ಕಿರಣಃ, ರುಚಿಃ . . . ಗೌಃ — ಈ ೩೨ ರಶ್ಮಿಗಳ ಪೆಸರ್" (ಶಬಾಮು. ೭-೩೬). ೩. ಅಪೇಕ್ಷೆ ; ಬಯಕೆ : "ಇಚ್ಛೆ . . . ರುಚಿ ಕಾಮ ವಾಂಛೆ ಈಪ್ಸಿತವೆನಲು ಬಯಕೆ" (ಮಂಗರಾ. ೦೩೬-೦೦); ಸನ್ಮಾರ್ಗರುಚಿಪ್ರಸ್ಫೂರ್ತಿ ಚೆಲ್ವಾಗಿರೆ ಕರಮುದಯಂಗೊಂಬ ಬಾಲಾರ್ಕನಂ ಮದ್ವರಚೇತಃಪದ್ಮಿನಿಗಳ್ ಬಯಸಿದವುದು (ರಾಜಶೇ. ೩-೭೩); ಕರ್ಮಗಳಲ್ಲಿ ರುಚಿ ಹುಟ್ಟಿಸಬೇಕಾಗಿದೆ (ಕೃವಾಲೀ. ೩೫). ೪. ಸವಿ ; ಸ್ವಾದ : ತೆಂಗಿನ ತಿರುಳಂ ಪಿಪ್ಪಲಿಯ ನೀರೊಳರದವನಿಂಬಾಗಿರೆ ಪಿಟಿದು ಕಳೆಯೆ ದುಗ್ಧಸ್ವರೂಪಮಂ ತಳೆವಾ ವಿಮಳರುಚಿಯಾಗಿರ್ಕುಂ (ಲೋಕೋಪ. ೬-೯೬); ವಾಸಂತಿಯ ಮನಸ್ಸಿಗೆ ಸೊಗಸಿಲ್ಲ ; ಊಟದಲ್ಲಿ ರುಚಿಯಿಲ್ಲ (ಶೇವೋಣ. ೦೦೦) ; ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ (ಗಾದೆ). ೫. (ವಿಶೇಷ ಸಂದರ್ಭಗಳಲ್ಲಿ) ಉಪ್ಪು : ಸಾರಿಗೆ ರುಚಿ ಸಾಲದು (ರೂಢಿ). ೬. ಒಂದು ಬಗೆಯ ಹುಲ್ಲು : "ಕಹಿಹುಲ್ಲು ರುಚಿಯುಕ್ಕು" (ಮಂಗರಾ. ೩೩-೬). ೭. ಒಂದು ಬಗೆಯ ಸಸ್ಯ : "ಸೊಂಡೆ ರುಚಿ ಚಿತ್ರರಟಿ ಸಿಂಹಿಕಾಖ್ಯಂ" (ಮಂಗರಾ. ೩೯-೨೮).

**ರುಚಿಯಾಗು** = ೧. ಕಾಂತಿಯಿಂದ ಕೂಡಿರು ; ರಂಗಾಗು : ಸುರಧನು ಪಾಟಲರುಚಿಯಾಗಿರೆ ಸಮರಂ ಪೀತವರ್ಣಮಾಗಿರೆ ವೈಶ್ವಾನರ ಭಯಂ (ಲೋಕೋಪ. ೯-೨೫). ೨. ಸ್ವಾದುವಾಗು ; ಹಿತವಾಗು : ಕರಿದ ಆಹಾರ ರುಚಿಯಾಗಿರುತ್ತದೆ (ಆರೂಪ. ೬೯). [ಸಂ.]

**ರುಚಿಕಟ್ಟು$_1$** (ಕ್ರಿ). ರುಚಿಯಾಗು ; ಸವಿಯಾಗು : ಸಾರಿಗೆ ಇಂಗಿನ ಒಗ್ಗರಣೆ ಹಾಕಿದರೆ ಅಡಿಗೆ ರುಚಿಕಟ್ಟುತ್ತದೆ (ರೂಢಿ). [ ರುಚಿ+ಕಟ್ಟು$_1$ ]

**ರುಚಿಕಟ್ಟು$_2$** (ನಾ). ರುಚಿಯಾದುದು ; ಸವಿಯಾದುದು : ಬಾಳೆಯ ಹೂ ಹಾಗೂ ದಿಂಡಿನ ಪಲ್ಲೆ ರುಚಿಕಟ್ಟು (ಸುಕಮು. ೬೦) ; ಬಹಾಳ ಬಹಾಳ ರುಚಿಕಟ್ಟು ! ಅಮೃತದ ಕೆನೆ ಇರ್ತದಂತಲ್ಲ, ಅದಾ ಇದರ ಮುಂದೆ ಸಕ್ಕಟ್ಟೆ ಸಪ್ಪೆ ! (ಬೆಳುಮು. ೨೦೯). [< ರುಚಿಕಟ್ಟು$_1$]

**ರುಚಿಕತ್ರಿ** (ನಾ). ಒಂದು ಬಗೆಯ ಸಸ್ಯ : ಅರದ್ರಿ, ದೊಡ್ಡನಾತದ ಗಿಡ, ಇಬಿನ್ನೆ, ರುಚಿಕತ್ರಿ (ವೈ ಶಿಗಿ. ೦೩-೨೬೩). [?]

**ರುಚಿಕರ** (ಗು). ೧. ಸ್ವಾದುವಾಗಿರುವ; ರುಚಿಕಟ್ಟಾದ. (ನಾ). ೨. ರುಚಿಕಟ್ಟಾದುದು ; ಸ್ವಾದುವಾದುದು : ತಿಳಲು ಬಲು ರುಚಿಕರವು (ಮುಂಜಿಮ. ೯-೬೦) ; ಅಟ್ಟ ಆಹಾರ ರುಚಿಕರವಾಗಿರುವುದು ಮಾತ್ರವಲ್ಲದೆ ಜೀರ್ಣಕಾರಿಯೂ ಆಗಿದೆ (ಆರೂಪ. ೬೬). [ಸಂ.]

**ರುಚಿಕಾರ** (ನಾ). ರುಚಿಯನ್ನು ಕೊಡುವ ವಸ್ತು,—ಪದಾರ್ಥ : ಅನ್ನಾದಿ ರುಚಿಕಾರದೊಳು ಸಾಧನಾಖ್ಯಂ (ಮಂಗರಾ. ೦೯೭-೩೭). [ಸಂ.]

**ರುಚಿಕೆಡು** ' ರುಚಿಗೆಡು ' ನೋ.

**ರುಚಿಕೊಡು** ' ರುಚಿಗೊಡು ' ನೋ.

**ರುಚಿಗೆಡು**, ರುಚಿಕೆಡು (ಕ್ರಿ). ೧. ಸವಿಯಿಲ್ಲದಂತಾಗು; ಅರುಚಿಯಾಗು: ರುಚಿಗೆಡುದು . . . ಅಮಳ ಸುಭಾಷಿತರಸವ (ಇಂಶಾಕ. ೨೨೨-೧೦೦). ೨. ಕಾಂತಿಗುಂದು ; ತೇಜೋಹೀನವಾಗು : ಭವದಾನನಕ್ಕೆ ಸೋಲ್ತಾತ್ಮ ವಿಲಾಸಮನುಳಿದ ತೆಱದೆ ರುಚಿಗೆಟ್ಟು ದಿಗಂತವಿಲಂಬಿಬಿಂಬಸಂಬುರುಹ ವೈರದಿಂದುಮುಪನುಡುಪನಾದಂತಾದಂ (ಶಾಂತಿಪು. ೫-೮೮). **ರುಚಿಕೆಡು** : ೧. ಈ ರೋಗದಿಂದಾಗಿ ಜೀರ್ಣಶಕ್ತಿಯ ಮೇಲೆ ಪರಿಣಾಮವಾಗುವುದು ; ರುಚಿಕೆಡುವುದು (ಅಡುಗೆ. ೬೩). [ರುಚಿ + ಕೆಡು$_1$]

**ರುಚಿಗೆಯ್** (ಕ್ರಿ). ಸವಿನೋಡು ; ಆಸ್ವಾದಿಸು : ಉಚಿತವೞಿದು ಮಿಂಡಿವೆಣ್ಗಳು ನವರತ್ನಖಚಿತಭೂಷಣಹಸ್ತದಲಿ ರುಚಿವೆತ್ತು ಬಡಿಸಲ್ಕೆ ಶ್ರೀಕೃಷ್ಣರಾಯನು ರುಚಿಗೆಯ್ದು ಮೊಗವನೀಕ್ಷಿಸಿದ (ಮೋಹತ. ೦೪-೦೪). [ರುಚಿ + ಕೆಯ್$_1$]

**ರುಚಿಗೊಡು**, ರುಚಿಕೊಡು (ಕ್ರಿ). ೧. ಸವಿಯಾಗು; ರುಚಿಯಾಗು : ಎಲ್ಲಿ ಕಡಲಿನ ಉಪ್ಪು ಎಲ್ಲಿ ಕಾಡಿನ ನೆಲ್ಲಿ ಸವಿಕೂಟ ಕೂಡಿಬಂದಲ್ಲಿ ನನ್ನಲ್ಲಿ ರುಚಿಗೊಡುವಿ ಕಂದ ಬಂದಿಲ್ಲಿ (ಗಂ. ೦೦೬-೦೨). **ರುಚಿಕೊಡು** : ೨. ರುಚಿಯೊದಗಿಸು : ಊಟಕ್ಕೆ ಉಪ್ಪಿನಕಾಯಿ ರುಚಿಕೊಡುತ್ತದೆ (ರೂಢಿ). [ರುಚಿ + ಕೊಡು$_1$]

**ರುಚಿಗೊಳಿಸು** (ಕ್ರಿ). ಸವಿಯಾಗಿಸು ; ರುಚಿಯಾಗಿಸು : ಸ್ವಾತಂತ್ರ್ಯದುಪ್ಪು ಸಾಗರದವರೆಗೆ ಮುಟ್ಟಿಸುವ ಪಂಥ ತಳೆದ. ಅಂಥ ಉಪ್ಪಿನಲೆ ಜೀವ ರುಚಿಗೊಳಿಸಿ ಸಪ್ಪೆತನವ ಕಳೆದ (ಸೂರ್ಯಪಾ. ೦೩-೦೨). [ರುಚಿ + ಕೊಳ್$_1$ + —ಇಸು$_3$]

**ರುಚಿತೋರು** ' ರುಚಿದೋಱು ' ನೋ.

**ರುಚಿತ್ವ** (ನಾ). ೧. ರುಚಿಯಾಗಿರುವಿಕೆ ; ಸವಿ. ೨. ಕಾಂತಿಯಿಂದ ಕೂಡಿರುವುದು : ದ್ವಿಜಮುಖ್ಯವೃತ್ತಿ ಕೃಷ್ಣರುಚಿತ್ವಂ ಪೆಱದಿರೆ ಪುರೋಹಿತ ಬ್ರಾಹ್ಮಣನೆನಿಸಿದುದತನುನೃಪತಿಗೀ ಪರಪುಷ್ಟಂ (ಚಂದ್ರಪ್ರ. ೭-೮೮). [ಸಂ.]

**ರುಚಿದೋಱು**, ರುಚಿತೋರು (ಕ್ರಿ). ೧. ಹೊಳಪನ್ನು ತೋರು ; ಕಾಂತಿ ಬೀರು : ಕುವಲಯನೇತ್ರೆ ದಾಳಿಂಬದ ಬಿತ್ತಿನಂತೆಸೆವ ಕೆಂಬಲ್ಲ ರುಚಿದೋಱೆ ಬಿನ್ನವಿಸಿದಳು ಪೀತಾಂಬರಧರಗೆ ( ಮೋಹತ. ೦೩-೨೯ ). **ರುಚಿತೋರು** : ೨. ಸವಿಯಾಗು; ರುಚಿಕಾಣು : ರುಚಿತೋರದ ಊಟ ಉಂಡರೆಷ್ಟು ಬಿಟ್ಟರೆಷ್ಟು ? (ರೂಢಿ). [ರುಚಿ + ತೋಱು]

**ರುಚಿನೋಡು** (ಕ್ರಿ). ಪದಾರ್ಥದ ಸವಿಯು ಸರಿಯಾಗಿದೆಯೋ ಇಲ್ಲವೇ ಎಂದು ಪರೀಕ್ಷಿಸಲು ಸ್ವಲ್ಪ ಭಾಗವನ್ನು ತಿಂದು ನೋಡು : ಉತ್ತಮವಾದ ಫಲಗಳನ್ನು ನಿಮಗೋಸ್ಕರ ರುಚಿನೋಡಿ ಇರಿಸಿದ್ದೇನೆ (ಪೀಠಿಕಾ. XV, ೨೧). [ರುಚಿ + ನೋಡು]

**ರುಚಿರ$_1$** (ನಾ). [ಛಂದ] ಒಂದು ವೃತ್ತದ ಹೆಸರು : ಅತಿಜಗತಿ ಛಂದಸ್ಸಿನಲ್ಲಿ ಹದಿಮೂರಕ್ಷರವಾದವಾಗಿ ಹುಟ್ಟುವ ವೃತ್ತಗಳಲ್ಲಿ ಒಂದು : ದಿನೇಶ ಚಂದ್ರ ಪವನ ಭಾನು ರುದ್ರರೊಂದಿನಿಲ್ವುದುಂ . . . ರುಚಿರಮಿದಾಗಮೋಕ್ತಿಯಿಂ (ಛಂದೋಂಬು. ೨-೦೩೯). [ಸಂ. ರುಚಿರಾ]

**ರುಚಿರ$_2$** (ಗು). ೧. ಹೊಳೆಯುವ ; ಪ್ರಕಾಶಮಾನವಾದ : ಯತಿತತಿ ಚಕ್ರವರ್ತಿರುಚಿರಾಮಳಮೂರ್ತಿ . . . ಮಾಳ್ಕೆಮಗಿಷ್ಟಸಿದ್ಧಿಯಂ (ರಾಜಶೇ. ೦-೬). ೨. ಸುಂದರವಾದ ; ಚೆಲುವಾದ : ಆ ರುಚಿರವನಧಿಪರಿಯಂತ . . . ಒಪ್ಪುವುದು ಚಾರುತರಲಾಳದೇಶಂ (ಹರಿಶ್ಚ. ೦-೩೪). ೩. ರುಚಿಯಾದ ; ಸವಿಯಾದ : ಪ್ರಿಯಕುಶಲಪೂರ್ವಕೋಚಿತ ನಮವಿನಯೋದಾರರುಚಿರವಚನಪ್ರಾಯಂ ಪ್ರಿಯತರಮೆಂಬುದು (ಕಾದಂ. ೩-೨೦೩). ೪. ಜೀರ್ಣಕಾರಿಯಾದ; ಜಠರೋತ್ತೇಜಕವಾದ. (ನಾ). ೫. ಸೌಂದರ್ಯ ; ಚೆಲುವು : "ವಾಗ್ರ್ಯಂ . . . ಮನೋಹರಂ, ರುಚಿರಂ . . . ಪೇಶಲಂ —ಈ ೨೯ ಒಳ್ಪಿತು" (ಶಬ್ದಮ. ೦೦೪-೪). ೬. ಕೇಸರಿಬಣ್ಣ. ೭. ಕೆಂಪುಬಣ್ಣದ ಕುದುರೆ : ಅತ್ತಿಹಣ್ಣಿನ ವರ್ಣ ಉಳ್ಳ ಕುದುರೆಯು ರುಚಿರವೆಂದು ಹೇಳಲ್ಪಡುವುದು (ಶಾಲಿಂ. ೩೦೦-೦೮). [ಸಂ.]

**ರುಚಿರತೆ** (ನಾ). ಸೌಂದರ್ಯ ; ಚೆಲುವು : ಯಾವ ವಸ್ತು ಸುಂದರವಾಗಿದೆಯೋ ಅದರ ಮೊದಲ ಗುಣ ರುಚಿರತೆ (ಸೌಂದರ್ಯ. ೪೬). [ಸಂ. ರುಚಿರತಾ]

**ರುಚಿರಾಮ** (ನಾ). ೧. ಪಾದರಸ ; ಪಾರದ : (✝). ೨. ಕಣ್ಣು ; ನಯನ : (✝). ೩. ಬಿಳಿದು ; ಶ್ವೇತ : " ಬಿಳಿದೆನಿಪ್ಪುದಂ ನುಡಿವಲ್ಲಿ [ಶಾಶ್ವ.ಶು]ಚಿರಾಮಮೆಂದೆಂಬುದು " (ಶಬ್ದಮ. ೦೪೦-೦೦) ; " ಸಿತಂ ದೃಕ್ಶೂಷ್ತಂ ರುಚಿರಾಮಮುಕ್ಯಂ" (ಪಾಶ್ವರ. ೦೩೨). [ಸಂ.]

**ರುಚಿರೆ** (ನಾ). ನಲ್ಲೆ ; ಕಾದಲೆ : ಪ್ರಿಯತಮೆ : " ಪ್ರಿಯತಮೆ ಸುಭಗೆ . . . ರುಚಿರೆ ವಲ್ಲಭೆ ತಾಂ" (ವಸ್ತುಕೋ. ೫೨-೫) . [ಸಂ. ರುಚಿರಾ]

**ರುಚಿವಡಿಸು** (ಕ್ರಿ). ರುಚಿಗೊಳಿಸು ; ಸವಿಗೊಳಿಸು : ನಿನ್ನ ಕರ್ಣಕೆ ಕಡುರುಚಿವಡಿಸುವೆ ಪೇಳಿ ಮೇಲ್ಗತೆಯ (ಮೋಹತ. ೦೪-೨). [ರುಚಿ + ಪಡಿಸು]

**ರುಚಿವಡೆ** (ಕ್ರಿ). ರುಚಿಯಾಗು ; ಸವಿಯಾಗು : ಉಪ್ಪಿಲ್ಲದೆ ಕೇಳೊಕ್ಕಳ ತುಪ್ಪವನೆಱೆದುಣ್ಣೆನೆಂಬೊಡುಂಬುಣಸೇಂ ಸ್ವಾದಪ್ಪುದೆ ಸಹಜಂ ತನಗಿನಿಸಪ್ಪೊಡಮಿಲ್ಲದನ ಕವಿತೆ ರುಚಿವಡೆದಪುದೇ (ಧರ್ಮಾಮೃ. ೦-೫೦). [ರುಚಿ + ಪಡೆ$_1$]

**ರುಚಿವೀಱು** (ಕ್ರಿ). ಕಾಂತಿಯನ್ನು ಬೀರು ; ಪ್ರಕಾಶಿಸು : ಪಸುರುಗಲ್ಲಾ ಬೆಳೆದ ರುಚಿವೀಱುವ ಗವಾಕ್ಷದಿ ತೊಳಪ ಬಹುರತ್ನಂಗಳ್ (ಕಾವ್ಯಸಾ. ೪-೩೦). [ರುಚಿ + ಬೀಱು$_1$]

**ರುಚಿವೆಱು** (ಕ್ರಿ). ಕಾಂತಿಯನ್ನು ಹೊಂದು ; ಹೊಳಪನ್ನು ಪಡೆ : ತರುಣಮೃಣಾಲಗರ್ಭರುಚಿವೆತ್ತ ರಘೂದ್ವಹದೇಹದೀಪ್ತಿಮಂಜರಿಯನುಪಾಶ್ರಯಂಬಡೆದು (ಶಂಕರವಿ. ೦೨-೧೫) ; ಉಚಿತವೞಿದು ಮಿಂಡಿವೆಣ್ಗಳು ನವರತ್ನಖಚಿತಭೂಷಣಹಸ್ತದಲಿ ರುಚಿವೆತ್ತು ಬಡಿಸಲ್ಕೆ ಶ್ರೀಕೃಷ್ಣರಾಯನು ರುಚಿಗೆಯ್ದು ಮೊಗವನೀಕ್ಷಿಸಿದ (ಮೋಹತ. ೦೪-೦೪). [ರುಚಿ + ಪೆಱು$_1$]

**ರುಚಿಸು** (ಕ್ರಿ). ೧. ರುಚಿಯಾಗು ; ಸ್ವಾದುವಾಗು : ಶ್ರೋತ್ರಂಗಳೇಕೆ ಆಲಿಸಬೇಡ ಎಂದಡೆ ಮಾಣವು ಜಿಹ್ವೆಯೇಕೆ ರುಚಿಸಬೇಡ ಎಂದಡೆ ಮಾಣವು (ಅವಕಂ. ೨೪-೯೬). ೨. ಆಸ್ವಾದಿಸು ; ತಿನ್ನು : ಜಿಹ್ವೆಯೊಳಗೆ ಜಿಹ್ವೆಯಿಂದ್ರೂ ರುಚಿಸಲೇಕಱಿಯರಯ್ಯಾ (ಬಸವ. ೪೦೬). ೩. ಹೊಳೆ ; ಪ್ರಕಾಶಿಸು : ರತುನರವಿ ರುಚಿಸಿದನು ಕೋಟೀರಕೋಟಿಕಿರಣಕಿರೀಟ ತಾನಾಗಿ (ಶ್ರೀರಾಮಪ. ೦೭೩-೫೬೬). ೪. ಇಷ್ಟಪಡು ; ಆಶಿಸು ; ಬಯಸು : ಪರಿಪೂರಿತಾಮೃತಕಿರಣರುಚಿಯಂ ರುಚಿಸುವ ಚಕೋರ ಸೇರಿ ಮರ್ಬಿಂಗೆಳಸುವುದೆ (ಬಸವ. ೦೦-೦೦). ೫. ಮೆಚ್ಚಿಗೆಯಾಗು ; ಮನಸ್ಸಿಗೆ ಬರು,_ ಹಿಡಿಸು : ಉಚಿತವನು ನಾನಱಿಯೆ ವಾರ್ಧಕರಚಿತನಿಜವನು ನುಡಿಯೆ ನಿನಗವು ರುಚಿಸವೇ ಮಾಣಲಿ (ಕುಮಾರಿ. ೦-೨೫) ; ಹುಡುಗರಿಗೆ ಈ ಸೂಚನೆ ಒಪ್ಪಿತವಾಯಿತು ; ಹುಡುಗಿಯರಿಗೆ ರುಚಿಸದಾಯಿತು (ಹಸುಹೂ. ೬೨). [ರುಚಿ + – ಇಸು$_3$]

**ರುಚ್ಯ** (ಗು). ೧. ಪ್ರಕಾಶಮಾನವಾದ ; ಹೊಳಪುಳ್ಳ. ೨. ಚೆಲುವಾದ ; ಸುಂದರವಾದ ; ಮನೋಹರವಾದ. ೩. ಸಂತೋಷಗೊಳಿಸುವ ; ಆಹ್ಲಾದಗೊಳಿಸುವ. ೪. ಹಸಿವನ್ನು ಉದ್ದೀಪನಗೊಳಿಸುವ. (ನಾ). ೫. ಹೊಳಪು ; ಕಾಂತಿ : " ರುಕ್ . . . ರುಚ್ಯಂ, ರೌಚ್ಯಂ, ಈ ೬ ಪೊಗರ್" (ಕಾಕ್ಯ. ೦೩೦). ೬. ಸುಂದರವಾದುದು ; ಮನೋಹರವಾದುದು : ಪ್ರಕಟಿಸುವುವಖಿಳಧಾನ್ಯಪ್ರಕರಂಗಳ್ . . . ಬೆಳೆವಕೃಷ್ಣಪಚ್ಯಂಗಳತುಳಫಳರುಚ್ಯಂಗಳ್ (ಕುಕ್ಕು.

೯-೦೩). ೭. ಗಂಡ ; ಪತಿ : "ಕಾಂತಃ , . . . ರುಚ್ಯಃ . . . ಅನುಕಃ — ಈ ೧೪ ಗಂಡಂ" (ಹಲಾಯು. ೬೨-೩೯೩). [ಸಂ.]

**ರುಜ** (ನಾ). ನಿರುತ ; ದಿಟ ; ಸತ್ಯ (?): ಇಜಿವ ಅಸಿ ನೋವ ಬಲ್ಲಡದೆ ಬೇಡುವಾತ ರುಜವ ಬಲ್ಲನೇ (ಮೋಳಿಪತಾ. ೦೬-೬೯) ; ಸ್ಕಂದ ಕೇಳ್ ರುಜದಿಂ ಶಿವಪ್ರಸಾದದೊಳು ನೀಂ ಅಮ್ಮ ನಾಗಲೆಯೊಳುದಿಸು (ಶ್ರಕುಪು. ೩-೬೦). [ < ಋಜು$_1$ ]

**ರುಜಾಂಗ** (ನಾ). ಖಾಯಿಲೆಯವನು ; ವ್ಯಾಧಿಗ್ರಸ್ತ ; ರೋಗಿ: ಘನರುಜಾಂಗನ ಬಿಡುದಲೆಯ ರೋಧಿನಿಯನುಪ್ಪವಡಿಸುವ ಸಮಯ ದೊಳೀನಿಬರನು ಕಾಣ್ಬುದು ಮಹೀಶರಿಗಂಗವಲ್ಲ (ಕುವ್ಯಾಉ. ೩-೦೦೭). [ಸಂ.]

**ರುಜಾವು** (ನಾ). ತೆಳುವಾದ ಅರಳೆಯ ಗಾದಿ : ಗಾದಿ ರುಜಾವುಗಳ ಮೇಲೆ ಶಯನವನ್ನು ಮಾಡದೆ ಹುಲ್ಲುಚಾಪೆಯ ಮೇಲೆ ದೇಹವನ್ನು ಆವಶ್ಯಕವಾದ ವಿಶ್ರಾಂತಿಗಾಗಿ ಚೆಲ್ಲುವ ಪ್ರತಿಜ್ಞೆಯನ್ನು ಪ್ರತಾಪನು ಮಾಡಿದನು (ಚಿಕರ್. ೬೦). 'ರಜಾಯಿ' ಪರಾ.

[ ← ಪಾರ. ಮರಾ. ರುಜಾಮಾ ]

**ರುಜಾರ್ತ** (ನಾ). ರೋಗಪೀಡಿತನಾದವನು: ಖರಭುಜ್ಜಂದನನೊಂದಿದಂ ದುದಯದೊಳ್ ರೋಗಾನ್ವಿತಂ ಬಾಲ್ಯಕಾಲರುಜಾರ್ತಂ . . . ಅಕ್ಕುಂ (ಜಾತಕ. ೦೬-೦೪). [ಸಂ.]

**ರುಜಿನ** (ನಾ). ಖಾಯಿಲೆ ; ವ್ಯಾಧಿ ; ರೋಗ : ಅತಿವೈದ್ಯದಿಂದ ಹೊಸರುಜಿನಕಿಡೆಯಾದೀತೊ (ಮಂಕುಕ. ೬೭೭). 'ರೋಗರುಜಿನ' ಪರಾ.

[ < ಸಂ. ವ್ಯಜಿನ = ಆಪತ್ತು, ಗಂಡಾಂತರ ]

**ರುಜು$_1$**, ರಿಜು (ಗು). ೧. ವಕ್ರವಲ್ಲದ ; ನೇರವಾದ : "ರುಜು (ರಿಜು) — ಋಜು = ನೇರ" (ಶಬ್ದಕೋ. ೩೬). (ನಾ). ೨. ನ್ಯಾಯವಾದುದು; ಸರಿಯಾದುದು : ನಿಜಕಾಂತನಿಲ್ಲದೊಡೆ . . . ಪ್ರಜೆಗಳಂ ಪಡೆದು ಸದ್ಗತಿಗೈದವೇಳ್ಪುದಿದು ರುಜುವಲ್ಲ (ಕೈಖಿಶಾ. ೨೭-೦೪); ಸಹಜವಾಗಿ ಸುಳಿವ ನಿಜಜಂಗಮದಾಚರಣೆ ರುಜುವೆಂದ ಗುರುವೆ ಕೃಪೆಯಾಗು (ಪ್ಮಲಾರ. ೭೦-೨೩೩) ; ನೇರಾದ ರೀತಿ ರುಜು ಅವನ ನೀತಿ (ಕೃಷ್ಣಾ೦. ೪-೨). ೩. ಸರಳಸ್ವಭಾವದವನು; ಕಪಟವನ್ನರಿಯದವನು: ಎಂತೋ ಕಾಂತೆಯ ಪರಿಶೀಮಂತಂ ಕೆಳೆಗೊಂಡುದಿರ್ಕಲದ ಕುಟಿಲಾಂತಃ ಕುಂತಳಮಂ ಸ್ನಿಗ್ಧಮೃದುತ್ವಂ ತೋಜಲ್ ಪೊಚಗೆ ರುಜುಗಳೇನಂ ಬಲ್ಲರ್ (ಕುಶ್ಮಪು. ೩-೩೩). ರಿಜು : ೨. ಋಜು — ರಿಜು (ಕವಿಪದ. ೨೭೮ ಕೃಧೋ). ರುಜುವಾಗು = ಪ್ರಾಮಾಣಿಕವಾಗು ; ಋಜುವಾಗು : ನೀವು ಈ ವಕ್ರವನ್ನು ಬಿಟ್ಟು ರುಜುವಾಗಿ ಇದ್ದರೆ ಸರಿ (ಶಿವಪ. ೦೦೪-೦೪); ತ್ರಿಜಗವತಿಚಿತ್ರಮುಖಲಮದಿಲ್ಲಿ ನೆಲೆಗೊಂಡು ರುಜುವಾದುದೆನೆ ದೇವಶಿಲ್ಪಿಗಳ ಕರ್ಮವಂ ಭಜಿಸಿ ಮೆರೆದತ್ತು . . . ವೈವಾಹದುತ್ಸವಂ (ಮಹಾಶಿ. ೨೩-೩೭). [ < ಸಂ. ಋಜು ]

**ರುಜು$_2$** (ನಾ). ೧. ಸಹಿ ; ದಸ್ಕತ್ತು ; ಒಪ್ಪಿತ : ರುಜು ಶ್ರೀ ಕೃಷ್ಣ (ಮೈಆಂ.೦೯೪೨. ೭೩-೩೭ ; 1818) ; ಭಗವಂತಗಿರಿಗೋಸಾವಿ ರುಜುವೂ (ಎಕ. IX, ಬೆಂಗಳೂ. ೩-೨೩ ; 1855) ; ಕರುಣೀಕರುಗಳು ನಾಡಿಗರುಗಳಿಂದಲೂ ರುಜುವು ಮಾಡಲ್ಪಟ್ಟ ನಂತರ . . . ರವಾನಿಸಬೇಕು (ಗ್ರಾಮಾಕ. ೭). ೨. ಆಧಾರ ; ಸಾಕ್ಷಿ ; ಪುರಾವೆ : (ಕೈಶ್ಗ. ೪I, ೩೬೦). ರುಜುಮಾಡು = ೧. ಸ್ವಹಸ್ತಾಕ್ಷರ ಹಾಕು ; ಸಹಿಮಾಡು : ನಿಮಗೆ ಅವಳ ವಿಚಾರವೆಲ್ಲಾ ಗೊತ್ತಿರುವಂತಿದೆ ; ಅದನ್ನು ಬರೆದು ರುಜು ಮಾಡಿಕೊಡುವಿರಾ ? (ಬಂಕಿಮು. ೦೨೦). ೨. ರುಜುವಾತು ಮಾಡು ; ಖಚಿತಪಡಿಸು : ಸಮುದ್ರದ ಮೇಲೆ ಬರುವ ಹಡಗವು ಭೂಮಿ ಗುಂಡಾಗಿಯಿರುವುದನ್ನು ರುಜುಮಾಡುತ್ತದೆ (ಅವಂಕ. ೪೦). ರುಜುವಾಗು = ೧. ಸಹಿ ಹಾಕಲ್ಪಡು ; ದಸ್ಕತ್ತು ಮಾಡಲ್ಪಡು : ಸಾಹೇಬರ ರುಜುವಾಗಿದೆ (ರಂಗಕ. ೯). ೨. ರುಜುವಾತಾಗು ; ಸಾಬೀತಾಗು : ದೊಣ್ಣೆಯು ಮುನಿಯುನದೇದು ರುಜುವಾಯಿತು (ಮುಣಿಪತಾ. ೨೦೨). ರುಜುಹಾಕು = ಸಹಿಮಾಡು ; ರುಜು ಮಾಡು : ಸಂಧಿಗೆ ರುಜುಹಾಕಬೇಕೆಂದೂ ಗಾವಾನಿಗೆ ಹೇಳಿ ಕಳುಹಿಸಿದನು (ಕೃಪಾತಾ. II, ೨೩೪) ; 'ವಕಾಲತ್ತು ಫಾರಂ'ಗೆ ರುಜುಹಾಕಿ ಬಂದರು, ಕರಿಯಪ್ಪ, ತಿಪ್ಪಾರೆಡ್ಡಿ (ಕಂಚೆಕೋ. ೦೯೯).

[ ← ಅರ. ರುಜೂಅ ; ಮರಾ. ರುಜೂ ]

**ರುಜುಪಡಿಸು** (ಕ್ರಿ). ಯಾವುದಾದರೊಂದು ವಿಷಯವನ್ನು ಸಾಕ್ಷ್ಯಾಧಾರಗಳಿಂದ ಸಿದ್ಧಪಡಿಸು ; ರುಜುವಾತು ಮಾಡು : ಅವರು . . . ಜವ್ವನಿಕೆ ಹರೆಯದಲ್ಲಿಲ್ಲ; ಮನಸ್ಸಿನಲ್ಲಿದೆ ಎಂಬ ಹುರುಳನ್ನು ರುಜುಪಡಿಸಿದರು (ಜಗುಬ. ೪) ; ಅದನ್ನು ರುಜುಪಡಿಸುತ್ತೀರಾ ? (ಕಾವೇಂ. ೦೨೩).

[ರುಜು$_2$ + ಪಡಿಸು]

**ರುಜುಭಾವ** (ನಾ). ನೇರವಾದ ಸ್ವಭಾವ; ಸರಳತೆ : ಉತ್ತರಾಭಿಮುಖಂ ಪ್ರಸನ್ನಮುಖಂ ಪದ್ಮಾಸನಮನವಷ್ಟಂಭಿಸಿ ರುಜುಭಾವದಿಂ ಕುಳ್ಳಿರ್ದು (ರಾಜಶೇ. ೦೩-೯೩ ವ). [ < ಸಂ. ಋಜುಭಾವ]

**ರುಜುರೋಹಿತ** (ನಾ). ಕೆಂಪಗೆ ನೇರವಾಗಿರುವ ಇಂದ್ರನ ಬಿಲ್ಲು : ಹರಿಯು ಹಳಚೆ ಗದಾಯುಧವವನೀಶ್ವರನ ಜಟಿದಜಗರನಿಂದ್ರನ ಪರಿಭವಿಸಿ ರುಜುರೋಹಿತವನಂತಕನ ಸದೆಬಡಿದು ಪರಿಘವನು . . . ಧರಿಸಿದತಿಬಲರಿರ್ದುದು (ಕೊರಂ. ೭-೦೦-೯). [ < ಸಂ. ಋಜುರೋಹಿತ]

**ರುಜುವತ್ತು** 'ರುಜುವಾತು' ನೋ.

**ರುಜುವಾತು**, ರುಜುವತ್ತು (ನಾ). ಸಾಕ್ಷ್ಯ; ಆಧಾರ : ಅವ ನಿಮ್ಮೂರಿಗೆ ಹೋದದ್ದಕ್ಕೆ ರುಜುವಾತು ಇದೆ (ಕಂಕಕಂ. ೦೯೯) ; ಅದನ್ನು ರುಜುವಾತು ಪಡಿಸುವುದು ಕಷ್ಟ (ಅನಾಥ. ೨೪) ; ರುಜುವಾತಿಗಾಗಿ ಮರದ ಪೆಟ್ಟಿಗೆಯನ್ನು ತಲೆಕೆಳಗು ಮಾಡಿ ತೋರಿಸಿದಳು (ಸ್ವಾಮಿಸ್ನೇ. ೬೯). ರುಜುವತ್ತು: ಈಗಿರುವ ರುಜುವತ್ತೇ ಸಾಕು (ಕಂಪ. ೦೦೭).

[← ಅರ. ರುಜಅತ್; ಮರಾ. ರುಜುವಾತ್]

**ರುಜುವೆರು** (ಕ್ರಿ). ಸರಳಸ್ವಭಾವವನ್ನು ಹೊಂದು ; ಋಜುಭಾವದಿಂದಿರು : ಸಕಲದೇಶಮನಾಳ್ವ ನೃಪರೆಲ್ಲ ರುಜುವೆತ್ತು ಕಪ್ಪಮಂ ತೆತ್ತು ಬಾಳುವರು (ಪಪಮೋ. ೩-೨೭). [ರುಜು$_1$ + ಪೆರು$_1$ (< ಪೆಱು$_1$)]

**ರುಜೆ** (ನಾ). ೧. ಒಡೆದುದು ; ಮುರಿದುದು ; ಭಂಗವಾದುದು. ೨. ಖಾಯಿಲೆ ; ರೋಗ : " ರೋಗಃ . . . ರುಜಾ – ಈ ೧೨ ವ್ಯಾಧಿ " (ಹಲಾಯು. ೯೬-೯೯೭); ಇದು ದುಃಖಿಮೊ ರುಜೆಯೊ ಕಳವಳಮೊ ಪೇಟು (ಕಾದಂಪೂ. ೭೬೩) ; ರುಜೆಯಡಸಿ ಕೆಡೆದಿಹ ಹೊತ್ತು ರಂಭೆ ದೊರೆಕೊಂಡಲ್ಲಿ ಫಲವೇನು (ಹಕಕಾ. ೭-೮). ೩. ನೋವು ; ಬಾಧೆ. ೪. ಒಂದು ಬಗೆಯ ಮರ : ಸಿರಿಕಂಡಂ ರುಜೆ ಮಾಂಸಿ . . . ಎಂಬಿನಿತುಮಂ ಶೀತಾಂಬುವಿಂ ಪೂಸೆ (ಲೋಕೋಪ. ೯-೦೬೩). [ಸಂ. ರುಜಾ]

**ರುಡ್ಡುಗೋಲು** (ನಾ). (?) : ಶಿವನು ಹಟಿಕುಗಡ್ಡ, ಕೆದರುಮೀಸೆ, ದೊಡ್ಡ ಕಚ್ಚೆ . . . ಕೈಯಲ್ಲಿ ರುಡ್ಡುಗೋಲು, ಹೆಗಲ ಮೇಲೆ ಕಂಬಳಿ, ನೊರೆವಾಯಿಕಿದ ಗಾವುಡಿಯಾಗಿ, ನಡುಪಟ್ಟಣದೊಳು ಬರುತ (ಭೈರಕಾ. I, ೨೦೩). [ರುಡ್ಡು ? + ಕೋಲು$_1$ (< ಕೋಲ್$_1$)]

**ರುಣ**, ರಿಣ (ನಾ). ೧. ಸಾಲ ; ಕಡ : ಗೋಣುಮವಾಟಿಗಳೊಳಗದ ಹಣರುಣವ ನೀಗಿದರು (ಶುವ್ಯಾಶೀ. ೮-೦೩) ; ಜೂಜಾಟಿಕೆ ಸೂಳೆಬಂಟಿಕೆ ರುಣದ ಸಂಪಾಜ ಪೆರ್ಗುಡಿಗಳ ಚೆರ್ಚೆ . . . ಮಾಜದು ನಿತ್ಯಕೃತ್ಯದಲಿ (ವೋಹಕ. ೨೦-೨೬). ೨. (ಅಲಂ) ಹಂಗು : ಎಲ್ಲರ ಮುಂದೆ ಮೊಗಗೆಡಿಪ ರುಣದೊಳಗೆ ಸುಡುತಿರುವ ಚಿಂತೆ (ಕೃಕಪ. ೦-೦೯-೨). ರಿಣ :

೨. ಅಖಿಳದಳಭಾರ ಬಿದ್ದುದು ಸಾತ್ಯಕಿಯು ಸುರನಾರಿಯರ ತೋಳಿನಲಿ ಕಾಬುದು ನೆಲನ ರಿಣ ಹಱಿದು (ಕುಭಾ.ಕ. ೩-೧೫) ; ಎಣ್ಣೆ ಬೆಣ್ಣೆಯ ರಿಣವು ಅನ್ನವಸ್ತ್ರದ ಋಣವು ಹೊನ್ನು ಹೆಣ್ಣಿನ ರಿಣ ತೀರಿದಾಕ್ಷಣದಿ ಮಣ್ಣು ಪಾಲು (ಸರ್ವಜ್ಞ. ೪೬೩). ೩. ಉಪಕಾರ : ಯಾವ ಜನ್ಮದಲ್ಲಿನ್ನು ರಿಣವ ತೀರಿಸಲಿ (ಸೂರ್ಯಕಾ. ೭೮-೫). [< ಸಂ. ಋಣ]

**ರುಣಪಾತಕ** (ನಾ). ಸಾಲ ತೀರಿಸದಿರುವುದರಿಂದಾದ ಪಾಪ; ಋಣದ ಪಾಪ : ಅಣು ಹೋಗಿ ಪರ್ವತವಾದರೂ ರುಣಪಾತಕ ಬೆನ್ನು ಬಿಡದು (ಗಾದೆ). [< ಸಂ. ಋಣಪಾತಕ]

**ರುಣಿ** (ನಾ). ಸಾಲವನ್ನು ತೀರಿಸದೆ ಇರುವ ವ್ಯಕ್ತಿ: 'ರುಣಿತನ' ಪರಾ. [< ಸಂ. ಋಣಿನ್]

**ರುಣಿತನ** (ನಾ). ಸಾಲಗಾರಿಕೆ : ಸಂಸಾರವಿಚಾರವನ್ನೂ ಧನಿಕನ ರುಣಿತನದ ಗತಿಗಳನ್ನೂ (ಕೀಹರ. ೦-೧). [ರುಣಿ + — ತನ]

**ರುತ** (ಗು). ೧. ಶಬ್ದ ಮಾಡಲ್ಪಟ್ಟ ; ಧ್ವನಿಮಾಡಿದ. ೨. ಪುಡಿ ಮಾಡಿದ ; ಮುರಿದ ; ಚೂರುಚೂರಾದ. (ನಾ). ೩. (ಪಶು, ಪಕ್ಷಿ ಮೊದಲಾದುವುಗಳ) ಧ್ವನಿ; ಕೂಗು : ತಟನೀವ್ಯೂಹದೊಳ್ ಪೂರವಾರಂ ವಿರಹಿವ್ರಾತಂ ಬಿಗುರ್ವಂತೊಡನೊಡನೆ ರುತಂ ಪರ್ವಿಸುತ್ತಿರ್ದುವೆತ್ತಂ (ಕಾದಂಪು. ೫೩೨); ಎನ್ನಿರವನಱಿಪುವೆನೆಂದು ಭಿನ್ನಸ್ವರದಿಂ ಸರಂಗೆಯ್ವುದು ಮುಳೂಕಂಗಳ್ ಕೇಳ್ದು ಕಾಕರುತಮಪ್ಪುದೆಂದರಿಮರ್ದನಂಗಱಿಪುವುದುಂ (ಶಂಕಕಂ. ೨೩೯-೧೮). [ಸಂ.]

**ರುತಿ** (ನಾ). ೧. ಧ್ವನಿ : ಪಾಸಱೆ ಸಿಂಹಪೀಠಮಳನೀರುತಿ ಮಂಗಳಗೀತಿ (ಶಂಕಭಾ. ೭-೨೯); ಮಂಜೀರಕಂಕಣಕಿಂಕಿಣೀರುತಿ ಪೊಣ್ಮೆ (ಜಗಪು.೩-೫೨); ಈ ಶಾಶ್ವತರುತಿಗೊಂದಿದ ಅಂದಂದಿನ ಸ್ಮೃತಿಯೋಲ್ (ಗಕೀಕ. ೨೭-೦). ೨. ಮಾತು : ಸೊಗದಂತಕೆ ಸೆಳೆದೊಯ್ವುದು ಅದೊ! ನೇಹದ ರುತಿಯು ಇನಿವೇಟದ ಸೊಧೆಗಡೆದು ಸವಿದಾಡುವ ಸೈಗರೆದು (ಕವಿಕಾ. ೬೫-೨). [ಸಂ.]

**ರುತು**$_1$, ರಿತು (ನಾ). ೧. ವಸಂತ, ಗ್ರೀಷ್ಮ ಮೊದಲಾದ ಆರು ಋತುಗಳು : "ಎರಡೆರಡು ಮಾಸಂ ಕೂಡಿದೊಡೆ ವಸಂತ, ಗ್ರೀಷ್ಮ, ಪ್ರಾವೃ(ಟ್)ಡ್, ಶರ(ದ್)ತ್, ಹೇಮಂತಃ, ಶಿಶಿರಃ – ಎಂದಾಱು ರುತುಗಳಕ್ಕುಂ" (ಹಲಾಯು. ೦೯-೦೦೩) ; ಈ ಪೊೞ್ತಿಂಗೀ ರುತುವಿಂಗೀ ಪಸದನಂ (ಶಂಕಭಾ. ೩-೪೫); ಪಸದನಮಾವುದಾವ ರುತುವಿಂಗಮದೊಪ್ಪುಗುಮಾವ ಪೊೞ್ತದಾಮೆಸಕದೊಳೊಂದುಗುಂ (ಗದಾಯು. ೦೦-೨೦ ಅವತರ). ೨. ಮುಟ್ಟು ; ರಜಸ್ಸು : 'ರುತುಕಾಲ' ಪರಾ. ೩. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : ದ್ರವ್ಯ, ಋತು . . . ರುತು . . . ಇಂತಿನಿತುಂ ೬ಕ್ಕೆ ಪೆಸರು. (ವ್ಯವಹಾ. ೦೦). 'ರುತುವದನ' ಪರಾ. **ರಿತು** : ೧. ತಮ್ಮತಮ್ಮಂದಿನಂದಮನಾಱುಂ ರಿತು ಪತ್ತುವಿಟ್ಟು (ಶಾಂತಿಪು. ೯-೦೩೫) ; ಉಪೇಂದ್ರನ ವನಕೇಳಿಯ ಪದನಂ ಸಾರ್ದೋಲಗಕ್ಕೆ ರಿತುಗಳ್ ಬಂದಿರ್ಪುದನಱಿಪುಗುಂ . . . ಸುಮನೋಲತೆಗಳ್ (ವರ್ಧಪು. ೮-೭೬); ಸಕಲರಿತುವೊಳು ಪೂವ ಪಣ್ವ ಮರವೇನು ? (ಗಿರಿಪಿಂ. ೨೮-೩೮). [<ಸಂ. ಋತು]

**ರುತು**$_2$ (ನಾ). = ರುತ ೩ : ಅಮರವಿರೋಧಿ ಬಭ್ರು ರುತುಗಾನ ನಭಂಗಳು ಗೀತವಾಚಕಂ" (ಶಾವಾರ. ೩೭). [<ಸಂ. ರುತ]

**ರುತುಕಾಲ** (ನಾ). ಮುಟ್ಟಾಗುವ ಕಾಲ ; ರಜೋದರ್ಶನದ ಸಮಯ: ರು[ಪಾಠಾಂ. ಋ]ತುಕಾಲವೇಬುದಱಿಕೆಯಿಲ್ಲ ಸತಿಯಳ (ಅಪ್ಪರಿಪಿ. ೨-೩೯). [<ಸಂ. ಋತುಕಾಲ]

**ರುತುಕಾಲವಡೆ** (ಕ್ರಿ). ಮುಟ್ಟಾಗು ; ರಜಸ್ವಲೆಯಾಗು : ಮೊಡವಿಯ ಮೊಳೆಯುನೊತ್ತುತ . . . ರುತುಕಾಲವಡೆದ ಪುಷ್ಪಿಣಿಯರೊಪ್ಪಿದರು (ವೋಹತ. ೦೮-೫೨). [ರುತುಕಾಲ + ಪಡೆ$_1$]

**ರುತುವದನ** (ನಾ). ಆರುಮುಖಗಳನ್ನು ಹೊಂದಿರುವವನು; ಷಣ್ಮುಖ : ರುತುವದನನೆಚ್ಚ ಬಾಣಗಳ ಕತ್ತರಿಸಿ ಮನ್ಮಥ ನುಡಿದ (ನವಮೋ. ೩೦-೪೪). [< ಸಂ. ಋತುವದನ]

**ರುದಂತಿ** (ನಾ). ಒಂದು ಬಗೆಯ ಸಸ್ಯ : ಶ್ರೀಗಂಧಂ ರುದಂತಿ ಜಟಾಮಾಂಸಿ . . . ಇವೆಲ್ಲಮನುದಕದಲ್ಲರೆದು ಪೂಸಲ್ ಕಂಚುಕಿ . . . ಗಾಯದ ಪುಣ್ಗಳ್ ಇವೆಲ್ಲಂ ಮಾಣ್ಬುವು (ಲೋಕೋಪ. ೯-೦೭೩ ಟೀಕು); ನಲಿದು ಮಾಕ್ಷಿಕದೆ ಪಿಪ್ಪಲಿ ರುದಂತಿಗಳನೊಡೆಗಲಸಿ ಮಧುವಿಂವರೆದು (ಜವವ. ೦೩-೫೨). [ಸಂ. ರುದಂತೀ]

**ರುದಮಿತ್ರ** (ನಾ). ದುಃಖಕ್ಕೆ ಶತ್ರುವಾದವನು ; ದುಃಖನಿವಾರಕ : ಭಾಸ್ವತ್ರಯಿಾ ಸ್ತೋತ್ರವರಪಾತ್ರ ರುದ[ಪಾಠಾಂ.ತರು]ಮಿತ್ರ ಶರ್ವ ತ್ರಾಹಿ (ಉದ್ಭದೇ. ೩-೩೭). [ಸಂ.]

**ರುದಾಕ** (ನಾ). ಒಂದು ಬಗೆಯ ವೃಕ್ಷ ; ರುದ್ರಾಕ್ಷಿಮರ : ರುದಾಕ (ರುದ್ರಾಕ್ಷ)—ಬಹು ದೊಡ್ಡಮರ. ಇದರ ಬೀಜಗಳೇ ರುದ್ರಾಕ್ಷಮಣಿಗಳು (ಕಸಾಗ. ೪೭). [< ರುದ್ರಾಕ್ಷ]

**ರುದಿತ** (ಗು). ೧. ರೋದಿಸಿದ ; ಗೋಳಾಡಿದ ; ಅತ್ತ. (ನಾ). ೨. ಅಳುವುದು ; ರೋದಿಸುವುದು ; ರೋದನ : "ಕ್ರಂದಿತಂ, ರುದಿತಂ, ವಿಲಾಪಃ, ಪರಿದೇವನಂ – ಈ ೪ ಅೞ್ಕೆ" (ಹಲಾಯು. ೦೦೫-೦೭); ಅರಣ್ಯರುದಿತಂ ವಲಮೆನ್ನೊಲವಿಂದುವಕ್ತ್ರೆಯಾ (ಶಂಕಭಾ. ೪-೭೯) ; ಕದನದೊಳ್ಪಡೆದ ವೃತ್ತಾಂತಮಂ ಪೇಳಲ್ಕೆ ರುದಿತದಿಂ ಕೈಮೆರಲ್ಗಳನೊತ್ತಿಕೊಳುತೆ (ಜೈಮಿಭಾ. ೨೦-೧೯). [ಸಂ.]

**ರುದ್ದು** (ಕ್ರಿ). ಕುಟ್ಟು : ಕಡಗಿ ಜವದಿ ರುಡ್ಡಿ{ದ್ದಿ} ನಸುಮಿಸಿಯಿಂದ ಬಡಿಸಿ ಘೃತವನ್ನೀಡೆ ಲಡ್ಡುಗೆಯನರ್ಪಿಸುವುದು (ಲಿಂಗಪು. ೮-೦೩). [← ತೆಲು. ರುದ್ದು, ರುತ್ತು]

**ರುದ್ಧ** (ಗು). ೧. ತಡೆಯಲ್ಪಟ್ಟ ; ಪ್ರತಿಬಂಧಿತ : ಶುದ್ಧತತ್ವಾಧಿಪತಿ ಶಿವನೆನಗೆ ಕರ್ತು ತದ್ರುದ್ಧಮಾರ್ಗದೊಳಾನು ಬಂಟಂ (ಏಕೋ.ಪು. ೪-೦೦-೪೨). ೨. ಆವರಿಸಿದ ; ಸುತ್ತಲ್ಪಟ್ಟ : "ವೇಷ್ಟಿತಂ, ವಲಯಿತಂ, ಸಂವೀತಂ, ರುದ್ಧಂ, ಆವೃತಂ— ೫ ಈಚಿನವರಿಗೆ ಅಡ್ಡವಾಗಿರುವಂತೆ ಸುತ್ತಿಕೊಳ್ಳಲ್ಪಟ್ಟದ್ದು" (ಸಿದ್ಧಾಂತಿ. ೩೪೭). ೩. ಮುಚ್ಚಿದ; ಹಾಕಿದ : ಸತ್ಯವಾದ ಪ್ರೇಮ ಭಾರತವಾಸಿಗಳ ಬಹುದಿನಗಳ ರುದ್ಧದ್ವಾರದಲ್ಲಿ ಯಾವ ಮುಹೂರ್ತದಲ್ಲಿ ಬಂದು ನಿಂತಿತೊ ಆ ಕ್ಷಣ ಅದು ತೆರೆದುಕೊಂಡಿತು (ಸಂಅಧ. I, ೩೦೭). (ನಾ). ೪. ತಡೆ ; ಅಡ್ಡಿ ; ಪ್ರತಿಬಂಧ : ಆಂ ಮಾಡುವ ರುದ್ಧದೊಳ್ಕಿಱಿದು ಸಾಚುಗುಮೋ ವಧು (ಕಾದಂಬ. ೬೮೩); ಸ್ವಭಾವತಃ ಆತನ ಮನಸ್ಸು ಶುದ್ಧವಿದ್ದುದರಿಂದ ಆತನ ಶ್ವಾಸಗತಿಯು ರುದ್ಧವಾಗಿ ಆತನಿಗೆ ಸಮಾಧಿಯು ಹತ್ತಿತು (ತುಳಸೀ. ೩೮). [ಸಂ.]

**ರುದ್ಧನೇತ್ರ** (ನಾ). ಮುಚ್ಚಿದ ಕಣ್ಣು ; ತೆರೆಯದ ಕಣ್ಣು : ನನ್ನ ರುದ್ಧನೇತ್ರಗಳ ಮುಂದಿದ್ದ ಅಸೀಮಅಂಧಕಾರದ ಮಧ್ಯದಲ್ಲಿ ನಾನು ಏಕಾಕಿಯಾಗಿ ನಿಂತು . . . ಕೂಗಿಕೊಳ್ಳಹತ್ತಿದೆನು (೨ಕ್ಕಕ. ೨೦೩). [ಸಂ.]

**ರುದ್ಧಿ** 'ರಿದ್ದಿ' ನೋ.

**ರುದ್ರ** (ಗು). ೧. ಭಯವನ್ನು ಹುಟ್ಟಿಸುವ ; ಭಯಂಕರವಾದ ; ಭೀಕರವಾದ : ನೋಡು ಬರುತಲಿರುವಳದೋ ರುದ್ರ ಭದ್ರಕಾಳಿಯು (ಶಾಂಕಜ. ೦೦-೦೮). (ನಾ). ೨. ಭಯವನ್ನು ಹುಟ್ಟಿಸುವವನು ; ಭೀಕರನಾದವನು. ೩. ತ್ರಿಮೂರ್ತಿಗಳಲ್ಲಿ ಒಬ್ಬ ; ಶಿವ : "ಈಶಾನಃ . . . ರುದ್ರ . . . ನೀಲಲೋಹಿತಃ — ಈ ೪೫ ಮಹಾದೇವರ ಪೆಸರ್" (ಹಲಾಯು. ೩-೦೨); ಕಾಳಾಗ್ನಿರುದ್ರನ ಮೇಳಾಪವನಱಿಯದವರು ಕಾಳುಬೇಳೆಯೆನುತಿಪ್ಪರಯ್ಯಾ (ಬಸವ. ೨೨೭); ಆ ರುದ್ರನ್, ಉರಿಗಣ್ಣನ್, ಆರ ನಚ್ಚಲ್ಲದನ್ . . . ಎನ್ನನ್, ಮರುಳ್ಗೊಳಿಸಿ

(ಅಕ್ಕತಾ. ೦೬-೩೬೪). ೪. ಈಶಾನ್ಯದಿಕ್ಕಿನ ಪಾಲಕ : " ಇಂದ್ರಃ . . . ಧನದಃ , ರುದ್ರಃ — ಈ ೮ ಮೂಡಲ್ ಮೊದಲಾದೆಂಟುದೆಸೆಗಂ ಕ್ರಮದಿಂದೊಡೆಯರ್ " (ಹರಿಯು.೦೭-೧೦೦). ೫. (ಸೃಷ್ಟಿಯ ಆರಂಭದಲ್ಲಿ ಬ್ರಹ್ಮನ ಭ್ರೂಮಧ್ಯದಿಂದ ಹುಟ್ಟಿದವರೆನ್ನಲಾದ) ಹನ್ನೊಂದು ಜನ ಗಣದೇವತೆಗಳು : ಏಕಾದಶರುದ್ರರು : ಸುರ ಮಹೀಜನರಾಜ ರುದ್ರರ ಚರಿತೆಗಳಿಗಿಮ್ಮಡಿಯೆನಿಸಿ ಸತ್‌ಪುರುಷನಿಲ್ಲಿಗೆ ಸಲಹ ಬಂದನು ಬಸವವಿಭುವೆನುತ (ಬಸಪು. ೩-೬೪); ೪೯ ಮರುತ್ತುಗಳು ೧೧ ರುದ್ರರು (ಹಸಾರ. ೩-೩೦ ತಾತ್ಪರ್ಯ). ೬. 'ಜಗನ್ನಾಥವಿಜಯ' ಎಂಬ ಕನ್ನಡಕಾವ್ಯವನ್ನು ಬರೆದ ಒಬ್ಬ ಕವಿಯ ಹೆಸರು : ವಾಣಿ ಬಂದು ಸಮಂತಿರ್ಕೆ ಸವೀನಸೌರಭದವೋಲ್ ಜಿಹ್ವಾಗ್ರದೊಳ್ ರುದ್ರನಾ. (ಜಗವಿ. ೦-೬). ೭. ಯಜುರ್ವೇದದಲ್ಲಿ ಪ್ರಸಿದ್ಧವಾದ ಶತರುದ್ರೀಯವೆಂಬ ಹೆಸರುಳ್ಳ ಹನ್ನೊಂದು ಅನುವಾಕಗಳುಳ್ಳ ವೇದಭಾಗ : (ಶ). ೮. [ಗಣಿತ] ಹನ್ನೊಂದು ಎಂಬ ಸಂಖ್ಯೆಯ ಸಂಕೇತ : " ದಿಶಿ ಹತ್ತು ನಭ ಸೊನ್ನೆ ರುದ್ರರೆನೆ ಹನ್ನೊಂದು " (ಮಂಗರಾ. ೦೦೪-೬). ೯. [ಛಂದ] ಅಂಶಗಣದ ಒಂದು ಪ್ರಭೇದ ; ನಾಲ್ಕು ಅಂಶಗಳ ಗಣ : ಎರಡುಂ ಮೂಱುಂ ನಾಲ್ಕುಂ ಗುರುವಿಂ ಪ್ರಸ್ತರಿಸಲ್ . . . ಸರಸಿಜಭವ ವಿಷ್ಣು ರುದ್ರ ಸಂಜ್ಞೆಗಳಕ್ಕುಂ.(ಛಂದೋಂಬು. ೩-೨೪೦); ಬ್ರಹ್ಮ, ವಿಷ್ಣು, ರುದ್ರ ಎಂಬ ಅಥವಾ ಎರಡು, ಮೂರು, ನಾಲ್ಕು ಅಂಶಗಳ ಗಣಗಳು ಹೋಗಿ . . . ಮೂರು ಗಣಗಳು ಉಳಿದುವು (ಕೃಬಿಂ. ೦೦೯). ೧೦. ಗುರುವಿನ ಸಂಕೇತ ; ದೀರ್ಘಾಕ್ಷರದ ಸಂಕೇತ. [ ಸಂ. ]

**ರುದ್ರಕಾಂತ** (ನಾ). [ವಾಸ್ತು] ಕಂಬದ ಪ್ರಭೇದಗಳಲ್ಲಿ ಒಂದು : ಶಿಲ್ಪಶಾಸ್ತ್ರಗಳಲ್ಲಿ ಬ್ರಹ್ಮಕಾಂತ, ವಿಷ್ಣುಕಾಂತ, ರುದ್ರಕಾಂತ ಇತ್ಯಾದಿ ಸ್ತಂಭಪ್ರಭೇದಗಳು ಉಕ್ತವಾಗಿವೆ (ಹೊಯ್ಸವಾ. ೨೭). [ಸಂ.]

**ರುದ್ರಕಾವ್ಯ** (ನಾ). ದುಃಖದಲ್ಲಿ ಕೊನೆಗೊಳ್ಳುವ ಕಾವ್ಯ; ದುರಂತ ಕಾವ್ಯ: ಒಂದು ರುದ್ರಕಾವ್ಯವನ್ನು ಓದಿದಾಗ ಸಹ ನಾವು ಆನಂದಪಡುತ್ತೇವೆ (ನವ್ಯಗಾ. ೩೭). [ಸಂ.]

**ರುದ್ರಗಂಟಿ** (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ರುದ್ರಗಂಟಿ ಜಾಜಿ . . .ಅಂಟುಗಳನ್ನು ಮಾಡಿ ಹಚ್ಚಬೇಕು (ಕೃಷಿಶ್ರ. ೨೦೦); ರುದ್ರಗಂಟಿ ಮೂಸಿ ವಿಷ್ಣುಗಂಟಿ ಹಾಸಿ (ಗಂ. ೯೭-೩). ೨. ರುದ್ರಾಕ್ಷಿಯ ಚಿತ್ರದ ಅಂಚಿರುವ ಸೀರೆ ಅಥವಾ ಪಂಚೆ: ಆಕೆಯು ಉಟ್ಟಿರುವುದು ರುದ್ರಗಂಟಿ ಸೀರೆ (ರೂಢಿ). 'ವಿಷ್ಣುಗಂಟಿ' ಪರಾ. [ರುದ್ರ + ಕಂಟ್ಟು]

**ರುದ್ರಗಂಟು** (ನಾ). [ವೀಶೈ] ಶಿವದಾರದ ಎರಡು ತುದಿಗಳನ್ನೂ ಸೇರಿಸಿ ಹಾಕುವ ಗಂಟು : ಶಿವದಾರಕ್ಕೆ ರುದ್ರಗಂಟು ಹಾಕು (ರೂಢಿ). 'ಬ್ರಹ್ಮಗಂಟು' ಪರಾ. [ರುದ್ರ + ಗಂಟು]

**ರುದ್ರಗಣ** (ನಾ). ೧. ಪರಮೇಶ್ವರನ ಪರಿವಾರದಲ್ಲಿರುವ ಒಂದು ದೇವತಾಗಣ : ಆ ಕೈಲಾಸವೇ ಕಲ್ಯಾಣವಾಗಲಾ ಕಲ್ಯಾಣಕ್ಕೆ ಪ್ರಮಥ ಗಣಂಗಳ ರುದ್ರಗಣಂಗಳ ಅಮರಗಣಂಗಳ . . . ತಂದು ನೆರಹಿದಾತ ನಮ್ಮ ಬಸವಯ್ಯನು (ಶೀಲಸ.೪. ೬-೯); ರುದ್ರಲೋಕದ ರುದ್ರಗಣಂಗಳೆಲ್ಲರು ರುದ್ರಪದವೆಂಬ ಸಂಸಾರಕ್ಕೊಳಗಾದರು (ಅವಚಂ. ೨೩೪-೦೦೬೨). ೨.[ಛಂದ] ಅಂಶಗಣದಲ್ಲಿ ಒಂದು ಬಗೆ ; ನಾಲ್ಕು ಅಂಶಗಳಿರುವ ಗಣ: ರುದ್ರಗಣಮೆಂತೆಂದೊಡೆ ಗಂಗಾಧೀಶಂ (ಛಂದೋಂಬು. ೩-೨೪೦ ವ); ಬ್ರಹ್ಮಗಣ, ವಿಷ್ಣುಗಣ, ರುದ್ರಗಣ (ಕೃಬಿಂ. ೦೦೨). [ಸಂ.]

**ರುದ್ರಜಟೆ** (ನಾ). ಒಂದು ಬಗೆಯ ಬಳ್ಳಿ: "ಶಿವಾ—ರುದ್ರಜಟೆ, ಮುಡಿವಾಳ, ನಾಳಲು" (ಓಷಧಿ. ೧೬೪) ; ಪುಷ್ಯನಕ್ಷತ್ರದಲಿ ತಂದು ರುದ್ರಜಟೆಯುರನಣಲಿಂದಗಿದು ಕಿವಿಯಲೂದೆ ಲಲನೆಯೊಲ್ವಳ್(ಶವವ. ೦೩-೪೩) ; ರುದಂತಿ ರುದ್ರಜಟೆ ಸಹದೇವಿ ಮಯೂರಶಿಖಿಯಿವಂ ಸರಿಗೂಡಿ ತಣ್ಣೀರಿಂದರೆದು ಮೈಗೆ ಪೂಸಿಕೊಳ್ಳೆ ಸಕಲಕಾರ್ಯವು ಸಿದ್ಧಿಯಹುದು (ಕಾಮಶಾ. ೨೭೭). [ಸಂ. ರುದ್ರಜಟಾ]

**ರುದ್ರಜಡೆ, ರುದ್ರಜೆಡೆ** (ನಾ). = ರುದ್ರಜಟೆ : "ರುದ್ರಾ—ರುದ್ರಜಡೆ" (ಓಷಧಿ. ೨೩೯). **ರುದ್ರಜೆಡೆ** : ತುಱುಚ,ನೀಲಿ, ರುದ್ರಜೆಡೆ ಇವು ಸಮಾನಂಗೊಂಡು ಸಹದೇವಿರಸದಲ್ಲಿ ಲೇಪವಂ ಮಾಡಿದುದು ಜ್ವರಹರ (ಬಪ್ಯಶಿ. ೦೯೩). [<ಸಂ. ರುದ್ರಜಟಾ]

**ರುದ್ರಜೆಡೆ** ' ರುದ್ರಜಡೆ ' ನೋ.

**ರುದ್ರನಾಟಕ** (ನಾ). ದುಃಖದಲ್ಲಿ ಕೊನೆಗೊಳ್ಳುವ ನಾಟಕ ; ದುರಂತ ನಾಟಕ : ರುದ್ರನಾಟಕವು ಗಂಭೀರವಾದ, ಸ್ವಲ್ಪ ವಿಶಾಲವಾದ, ಸ್ವಸಂಪೂರ್ಣವಾದ ಕಾರ್ಯವೊಂದರ ಅನುಕರಣ (ಅಂಕಾ. ೨೪ ಪಿಠಿಕೆ); ರುದ್ರನಾಟಕದಂತೆ ನಗರದ ಜೀವನ, ನರನೆ ಈ ನಾಟಕಕಾರ (ಇಂಚಾಪ. ೦೦೬-೨೬). [ಸಂ.]

**ರುದ್ರನಾಟ್ಯ** (ನಾ). ಭಯಂಕರವಾದ ನೃತ್ಯ: ಉಗ್ರಮಾರುತನು ವಾತಾವರಣವನ್ನು ಅಲ್ಲೋಲಕಲ್ಲೋಲ ಮಾಡಿ . . . ಅಬ್ಬರದಿಂದ ರುದ್ರನಾಟ್ಯದಲ್ಲಿ ತಾನೆ ತಾನಾಗಿ ಮೈಮರೆತಿದ್ದನು (ಶಿಕೆಉ. ೦೭೯). [ಸಂ.]

**ರುದ್ರನಾಡಿ** (ನಾ). ದೇಹದಲ್ಲಿರುವ ನಾಡಿಗಳಲ್ಲಿ ಒಂದು; ಕಾಲು ಹರಡಿನ ಕೆಳಗಿರುವ ನಾಡಿ : ರೋಗಿಗಳಿಗೆ . . . ಕಾಲ ಹರಡಿನ ಕೆಳಗೆ ರುದ್ರನಾಡಿ ಕಾಣಿಸಿಕೊಳ್ಳದೆ ಇದ್ದರೆ ಆತನಿಗೆ ಆ ದಿನವೇ ಮರಣವೆಂದರಿವುದು (ಸಳವ್ಯ. ೦೩). [ಸಂ. ರುದ್ರನಾಡೀ]

**ರುದ್ರನಾಯಕ** (ನಾ). ರುದ್ರನಾಟಕದ ನಾಯಕ ; ದುರಂತನಾಯಕ : ಸಂಪೂರ್ಣವಾಗಿ ನಿರ್ದೋಷಿಯಾದ ಪರಮಸದ್ಗುಣಿಯಾದ ವ್ಯಕ್ತಿಯು ರುದ್ರನಾಯಕನಾಗಲು ಸಾಧ್ಯವೇ (ಅಂಕಾ. ೦೭೬); ಇದು ನನ್ನ ಜೀವನದ ರುದ್ರನಾಟಕದ ಕೊನೆಯ ದೃಶ್ಯ, ನಾನೇ ಅದರ ರುದ್ರನಾಯಕ (ಬೀಳಕಿ. ೦೭೦). [ಸಂ.]

**ರುದ್ರಪುಷ್ಪ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು ; ದಾಸವಾಳ : "ರುದ್ರಪುಷ್ಪಂ, ಜಪಾ—ಈ ೨ ದಾಸವಣಂ" (ಹರಿಯು. ೩೩-೩೪). [ಸಂ.]

**ರುದ್ರಬಾಣ** (ನಾ). ರುದ್ರಮಂತ್ರವನ್ನು ಅಭಿಮಂತ್ರಿಸಿ ಬಿಡುವ ಬಾಣ: ರವಿಕುಲಾನ್ವಯ ರುದ್ರಬಾಣವ ಬಿಡೆ ಪಿನಾಕಿಗಳು ಕವಿದುದಗಣಿತ ನಂದಿವಾಹನ ರವಿಯ ತೇಜದ ಭಾಳನೇತ್ರರು (ಕೌಶಿರಾ. ೪೦-೩೪). [ಸಂ.]

**ರುದ್ರಭೂಮಿ** (ನಾ). ರುದ್ರನು ವಾಸಮಾಡುವ ಸ್ಥಳ ; ಶ್ಮಶಾನ : ಆ ದೇಶದ ಪ್ರಾಣಿಗಳೆಲ್ಲರೂ ಮೃತರಾದರು ಅವರ ಸುಟ್ಟ ರುದ್ರಭೂಮಿಯಲ್ಲಿ ನಾ ನಿಮ್ಮ ನಜಿಸುವೆ (ಅವಚಂ. ೩೩-೨೨೭); ಆ ದಿಗಂಬರಂ ಪಡುವೊಡೆ ರುದ್ರಭೂಮಿ ನಿಮಗಲ್ಲದೊಡೆ . . . ಎಮಗೇನನೆಂದವರ್ (ಹಂಶಾಕ. ೨೦); ಬೊಪ್ಪಣ ರುದ್ರಭೂಮಿಗೆ ಬಂದಾಗ ಚಿತೆ ಪ್ರಜ್ವಲಿಸುತ್ತಿತ್ತು (ಶಾಂಕಲಾ. ೦೯೦). [ಸಂ.]

**ರುದ್ರರೂಪಕ** (ನಾ). = ರುದ್ರನಾಟಕ : ಒಂದು ರುದ್ರರೂಪಕವನ್ನು ಓದುವಾಗ ಭೀತಿಯೊಡನೆ ಶಾಂತಿಯೂ ಬೆರತುಕೊಂಡಿರುತ್ತದೆ(ಪಶ್ಚಕಾ. ೬೪); ಶ್ರೀಕಂಠಯ್ಯನವರು . . . ರನ್ನನ ಗದಾಯುದ್ಧವನ್ನು ರುದ್ರರೂಪಕವಾಗಿ ಪರಿವರ್ತಿಸಿದರು (ಶಿಶಾಪಂ. ೦೦೭). [ಸಂ.]

**ರುದ್ರವಾಸ** (ನಾ). [ಸಂಗೀತ] ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು ; ಮುಖರಂಧ್ರದಿಂದ ಧ್ವನಿರಂಧ್ರದವರೆಗೆ ಹನ್ನೊಂದು ಅಂಗುಲ ಅಂತರವಿರುವ ಕೊಳಲು : ಜಾತಿವಾಸ . . . ರುದ್ರವಾಸ . . . ಭುವನಾಧಿಪತಿವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವ ನಜಿದಾ ಜಾತಿ ಮುಖದ ಕಳೆಯ ಮಯಣವಂ ಸೈತುಮಾಡಿ (ಶಿಶೀಳ. ೦೯೦). [ರುದ್ರ + ವಾಸ$_1$]

**ರುದ್ರವೀಣೆ** (ನಾ). ಒಂದು ಬಗೆಯ ವೀಣೆ :ವೀಣೆ ರುದ್ರವೀಣೆ ತುಂಬುರ ವೀಣೆ ಕಿನ್ನರವೀಣೆ ಕೈಲಾಸವೀಣೆ ಮೊದಲಾದ ತಂತಿ ಕಟ್ಟಿ ನುಡಿವ ವಾದ್ಯ ವನುಳ್ಳುವುದು (ಆದಿಶ. ೬-೦೩) ; ವಿಪಂಚಿಕೆ . . . ರುದ್ರವೀಣೆಯೆಂಬ ಇಪ್ಪತ್ತೆರಡು ತೆಱದ ತಂತ್ರೀವಾದ್ಯಕ್ರಮವೆಂಬುದು (ವಿವೇಕ. ೨೩೬); ಯಾಕೊ ಕಾಣೆ ರುದ್ರವೀಣೆ ಮಿಡಿಯುತಿರುವುದು (ಗಂ. ೦೦೩-೨).
[ಸಂ. ರುದ್ರವೀಣಾ]

**ರುದ್ರವೀರ್ಯ** (ನಾ). ೧. ಶಿವನ ರೇತಸ್ಸು : (*). ೨. ಪಾದರಸ ; ಪಾರಜ : (*). ೩. ಗಂಧಕ : (*). [ಸಂ.]

**ರುದ್ರಸಾವರ್ಣಿಕ** (ನಾ). ಹದಿನಾಲ್ಕುಮನುಗಳಲ್ಲಿ ಹನ್ನೆರಡನೆಯವನು: ಸ್ವಾಯಂಭುವ . . . ರುದ್ರಸಾವರ್ಣಿಕ . . . ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳೊಳಗೆ (ವಿವೇಕ. ೨೦೪). [ಸಂ.]

**ರುದ್ರಸೂಕ್ತ** (ನಾ). ರುದ್ರನನ್ನು ಕುರಿತು ಪಠಿಸುವ ಋಗ್ವೇದದ ಮಂತ್ರ : ಚತುರ್ಮುಖದಿಂ ರುದ್ರಸೂಕ್ತರಥಂತರಾದಿಮಂತ್ರಮನೋದು ವಬ್ಜಭವನಂ . . . ಪೊಪನಾಳ್ದು (ಶಬಶಂ. ೦-೭೪ ವ). [ಸಂ.]

**ರುದ್ರಹೋಮ** (ನಾ). ರುದ್ರದೇವತೆಯ ಪ್ರೀತ್ಯರ್ಥವಾಗಿ ಮಾಡುವ ಯಜ್ಞ : ಮುರುಗಸೆಟ್ಟಿಯ ಮಗಂ ಬಸವಯ್ಯಂ ರುದ್ರಹೋಮಂಗೆಯ್ದು (ಎಕ. IV. ಹಗ್ಗ. ೦೬-೬; 1021). [ಸಂ.]

**ರುದ್ರಾಕ್ಷ** (ನಾ). ೧. ಒಂದು ಬಗೆಯ ಮರ ಮತ್ತು (ಜಪಮಾಲೆಗೆ ಉಪಯೋಗಿಸುವ) ಅದರ ಕಾಯಿ ; ☞ ಇದು ರುದ್ರನ ಕಣ್ಣೀರಿನಿಂದ ಹುಟ್ಟಿತು ಎಂಬ ನಂಬಿಕೆಯಿದೆ : ನಂದನಾದ್ಯಾರಾಮಂಗಳೊಳು ರುದ್ರಾಕ್ಷ . . . ಶಿರೀಷ (ವಿವೇಕ. ೨೦೦). ೨. [ವೀಶೈ] ಅಷ್ಟಾವರಣಗಳಲ್ಲಿ ಒಂದು ; ರುದ್ರಾಕ್ಷಮರದ ಬೀಜ ; ☞ ಶೈವರು ಹಾಗೂ ವೀರಶೈವರು ಇದನ್ನು ಪವಿತ್ರವೆಂದು ದೇಹದಲ್ಲಿ ಧರಿಸುತ್ತಾರೆ : ಮಣಿಸು: ಕಾಳು ದೊಡ್ಡದಿರಬೇಕು, ಮೇಲಿನ ಹುರುಬುರುಕುತನ ಧಮ್ಮಾಗಿದ್ದು ರುದ್ರಾಕ್ಷದಂತೆ ಸ್ಪಷ್ಟಾಗಿರಬೇಕು (ಷುಂಬವ್ಯಾ. ೩೦). [ಸಂ.]

**ರುದ್ರಾಕ್ಷಹಲಸು** (ನಾ). ಒಂದು ಬಗೆಯ ಹಲಸು : ರುದ್ರಾಕ್ಷಹಲಸು ನೆಲಹಲಸು ಬಕ್ಕೆಹಲಸು (ವಿವೇಕ. ೨೦೦).
[ರುದ್ರಾಕ್ಷ + ಹಲಸು (< ಪಲಸು)]

**ರುದ್ರಾಕ್ಷಿ** (ನಾ). ೧. = ರುದ್ರಾಕ್ಷ ೧ : ಇರಲು ರುದ್ರಾಕ್ಷಿಗಳ ಬೀಜವ ಹರನ ಉರಿಗಣ್ಣದನು ಧರಿಸಲು ದುರಿತನಿರ್ದಹ (ಬಸ. ಪು. ೪೩-೭೪) ; ರುದ್ರಾಕ್ಷಿ ಅಮರದವಳ್ಳಿ . . . ಕಷಾಯವಂ ಕಾಯಿಸಿ ಕುಡಿಯೆ ದಾಹಜ್ವರ ಪರಿಹಾರವಾಗುವುದು (ಸಕವ್ಯ. ೬೩). ೨. =ರುದ್ರಾಕ್ಷ ೨ : ವಿಭೂತಿಯನೆ ಪೂಸಿ ರುದ್ರಾಕ್ಷಿಯನೆ ಕಟ್ಟ ಶಿವ ನಿರ್ಮೊಲವಿಲ್ಲದಂತೆ ಆಗಿರ್ದನಯ್ಯಾ (ಬಸವ. ೩೬೯) ; ಆ ಯಜ್ಞಂಗಳ ಫಲವು ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೇ ದೊರೆಕೊಂಬುದು ನೋಡಾ (ಅಬಂಡೇ. ೯೯-೨). [< ಸಂ. ರುದ್ರಾಕ್ಷ]

**ರುದ್ರಾಕ್ಷೆ** (ನಾ). ೧. = ರುದ್ರಾಕ್ಷ ೧ : "ಶಿವಾಕ್ಷಂ . – ರುದ್ರಾಕ್ಷೆ" (ಓಷಧಿ. ೧೬೪). ೨. = ರುದ್ರಾಕ್ಷ ೨ : ವಿಭೂತಿಯುಮುನುದ್ಧೂಳನಂ ಮಾಡಿ ಹರುಷದಿಂ ಪಾಡುತುಂ ರುದ್ರಾಕ್ಷೆ[ಪಾಠಾಂ. ಕ್ಷಿ]ಯಂ ಸೂಡಿ (ಶಿರುಶ. ೭೮. ೪-೦೦). [ಸಂ. ರುದ್ರಾಕ್ಷ]

**ರುದ್ರಾಟ್ಟಹಾಸ** (ನಾ). ೧. ಶಿವನ ನಗು : ಎಲೆ ತಾರಾಗಂ ಪರಂ ಕಣ್ಣಡೆ ೯ರಗಿದುದಂತಲ್ತು ರುದ್ರಾಟ್ಟಹಾಸಂ ಜಲವಾದತ್ತಲ್ತು . . . ಎಸೆಲ್ ಚೆಲ್ಲದಾಯ್ತುಬ್ಜಪುಂಡಂ (ಕಾದಂಪೂ. ೬.೬೪). ೨. ಭಯಂಕರವಾದ ನಗು ; ಭೀಕರವಾದ ಅಟ್ಟಹಾಸ : ಮೊರೆದುರುಳು, ರತ್ನಧಿಯ, ಉಲ್ಲೋಲ ಕಲ್ಲೋಲ ರುದ್ರಾಟ್ಟಹಾಸದಿಂ (ಪಶ್ಯಾಂಗ. ೬೩-೦೭೭೪).
[ರುದ್ರ + ಅಟ್ಟಹಾಸ]

**ರುದ್ರಾಣಿ** (ನಾ). ಪರಮೇಶ್ವರನ ಹೆಂಡತಿ ; ಪಾರ್ವತಿ : "ರುದ್ರಾಣೀ . . . ಗಿರಿಜಾ, ಮೇನಕಾತ್ಮಜಾ – ಈ ೨೦ ಗೌರೀದೇವಿಯ ಪೆಸರ್" (ಹಲಾಯು. ೯-೦೩) ; ರಾಣಿಯ ವಾಸದ ಪೊಸ ನೇರಾಣಿಯ ಮಾಡಂಗಳೊಳಗೆ ಕಯ್ಗೆಗ್ಗಿದ್ದರೆ ರುದ್ರಾಣಿ ವರುಣಾನಿ ನೆಗಟ್ದಿಂದ್ರಾಣಿಯೆನಲ್ಕಕ್ಕುಮಿಕ್ಕ ಮಹಿಷೀಬೃಂದಂ (ಶಾಂತಿಪು. ೦೦-೭೦). [ಸಂ. ರುದ್ರಾಣೀ]

**ರುದ್ರಾಭಿಷೇಕ** (ನಾ). ರುದ್ರಮಂತ್ರವನ್ನು ಪಠಿಸುತ್ತಾ ಶಿವಲಿಂಗಕ್ಕೆ ಮಾಡುವ ಅಭಿಷೇಕ : ಮಧ್ಯಾಹ್ನ ರುದ್ರಾಭಿಷೇಕ . . . ನೂರೆಂಟು ಆರತಿಯ ರಂಗಪೂಜೆ (ದೇಶಹಂ. ೯). [ಸಂ.]

**ರುದ್ರಾವತಾರ** (ನಾ). ೧. ಶಿವನ ಅವತಾರ : ಭಾವಿಸುವಡೀತಲ್ಲದಿದ್ದಡೆ ಭೂಮಂಡಲದೊಳಗುದಯಿಸಿದ ರುದ್ರಾವತಾರದ ದಿವ್ಯಮಹಿಮೆಯಿಂದಂತ ಮರ್ದಪುದು (ಬಸವು. ೩೩-೬). ೨. ರುದ್ರನ ಅಂಶದಿಂದ ಹುಟ್ಟಿದವನು; ಅಶ್ವತ್ಥಾಮ ಮೊದಲಾದವರು : ಕಮಲಕುಲೋದ್ಭವ ಮಿಗೆ ವಿಷ್ಣುಮೂರ್ತಿ ರುದ್ರಾವತಾರನಿಱಿಪಬೆಡಂಗಂ (ಗದಾಯು. ೦-೦೪) ; ರುದ್ರಾವತಾರನು ವೀರಶೃಂಗಾರ (ಬಸವು. ೬೦-೦) ; ಬಾರ, ಬೀರರ ಬೀರ, ದೈವಮನ್ ಲೆಕ್ಕಿಸದ ರುದ್ರಾವತಾರ ! (ಅಕ್ಕತಾ. ೯-೬೦). ೩. ಭಯಂಕರವಾದ ರೂಪ : ರಣಹಲಗೆ ಸದ್ದಿನಲಿ ಜಿದ್ದುಕಟ್ಟಿದ್ದಿರುವ ಜಡಿಮಳೆಯ ರುದ್ರಾವತಾರ ! (ನಲವು. ೦೯-೮) ; ಅವಳ ಚಿತ್ರಪಟಲದ ಮೇಲೆ ಅವಳ ಹಿಂದಿನ ಜೀವನವೆಲ್ಲ ಜೀವ ತಾಳಿ ರುದ್ರಾವತಾರದಿಂದ ಕುಣಿಯತೊಡಗಿತು (ಹಳ್ಳಿಹಾ. ೭೩).

ರುದ್ರಾವತಾರಜನಕ=ಅಶ್ವತ್ಥಾಮನ ತಂದೆ; ದ್ರೋಣ: ತ್ರೈಲೋಕ್ಯ ಧನುರ್ಧರನುಂ ರುದ್ರಾವತಾರಜನಕನುಂ . . . ಎನಿಸಿದ ಬಿಲ್ಲ ಜಾಣಂ ದ್ರೋಣನಟಬಿನೊಳಂ (ಗದಾಯು. ೨-೦೦ ವ). [ಸಂ.]

**ರುಧಿರ** (ಗು). ೧. ಕೆಂಪಾದ : ರಕ್ತವರ್ಣದ. (ನಾ). ೨. ಕೆಂಪುಬಣ್ಣ : ರಕ್ತವರ್ಣ : ಬಾಳುಡಿ ಪಾಱಿ ಬೀೞೆ ಪಗಲುಳ್ಕದವೊಲ್ ರುಧಿರಂ ದಿಗಂತಮಂ ಮೇಳಿಸಿ ಕೊರ್ವಿ ಕಲ್ಪದವಸಾನದ ಸಂಜೆಮುಗಿಲ್ಗಳಂದಮಂ ಪಾಳಿಸೆ (ಶಂಶಾವಪ. ೦೩-೩೩). ೩. ನೆತ್ತರು; ರಕ್ತ : "ಕ್ಷತಜಂ . . . ರುಧಿರಂ . . . ರಕ್ತಂ — ಈ ೭ ನೆತ್ತರು" (ಹಲಾಯು. ೦೦೯-೦೦); ಅಧಿಕ ರಿಪುನೃಪತಿಬಳನವರುಧಿರಜಳಪ್ಪುರಿತರೌದ್ರಮಿಾ ಗದೆ ಪೆಸರಿಂ ರುಧಿರಮುಖಿ ಯೆಂಬುದು (ಶಂಶಾವ. ೬-೩); ರುಧಿರಂ ಬಸಿಯೆ [ಪಾಠಾಂ. ಕಡುಮುಳಿಸಿಂದ] ಹೊಯ್ದು (ಹತಶಾ. ೭-೨೩); ರಾಮಾದಿಗಳುಮರಸುತ್ತ ಬಂದು ಕಂಡರು . . . ರುಧಿರಸಿಕ್ತಾಂಗನಂ, ಕ್ಲಾಂತ ಸುಗ್ರೀವನಂ (ತ್ರೀರಾಪಟ. ೪೦೭-೦೭೦). ೪. [ಜ್ಯೋತಿ] ಕುಜಗ್ರಹ ; ಅಂಗಾರಕ : ಹತ್ತನೆಯೊಳ್ ರುಧಿರಂ ನಾಲ್ಕನೆಯೊಳ್ ರವಿ ನಿಧನಂ ಮನುಜಂಗೆ ಲಗುಡಪಾತದಿನಕ್ಕುಂ (ಜಾತಕ. ೨೩-೦೦). [ಸಂ.]

**ರುಧಿರೆ** (ನಾ). ಒಂದು ಬಗೆಯ ಸಸ್ಯ; ಮದರಂಗಿ : "ರುಧಿರೆಯೆನೆ ಮಧುರಂಗಿ" (ಮಂಗರಾ. ೩೩-೦೩). [ಸಂ. ರುಧಿರ]

**ರುಧಿರೋದ್ಗಾರಿ** (ಗು). ೧. ರಕ್ತವನ್ನು ಕಾರುವ. (ನಾ). ೨. ಅರುವತ್ತು ಸಂವತ್ಸರಗಳಲ್ಲಿ ಐವತ್ತೇಳನೆಯದು : ೫೭ನೆಯ ರುಧಿರೋದ್ಗಾರಿ ಸಂವತ್ಸರದ ಪುಷ್ಯಸುದ್ಧ ೧೩ (ಕೊಲ್ಲಾಪು. ೮-೯ ; 1083) ; ಮತ್ತಮಾ ವರ್ಷವೇ ಪ್ರಭವ . . . ರುಧಿರೋದ್ಗಾರಿ . . . ಅಕ್ಷಯಮೆಂದರುವತ್ತು ತೆಱನಾಗಿಹುದು (ವಿವೇಕ. ೨೬೩). [ಸಂ. ರುಧಿರೋದ್ಗಾರಿನ್]

**ರುಪಾಯಿ** ' ರೂಪಾಯಿ ' ನೋ.

**ರುಬ್ಬು** (ಕ್ರಿ). ತಿರುವು ; ನುಣ್ಣಿಸು : ಆ ಶರಣ ಬೀದಿಲೀ ಬರುತ್ತಲಿರ್ದು ಜೋಳ ರುಬ್ಬುತಲಿಂದುಮಂದನೆ ಓರ್ವಳಿರಲಾ ರುಬ್ಬುಕಲ್ಲೂ ಕಂಡು (ಕೊಲ್ಲಿಪಾ. ೦೯೦-೯); ಅಲದ ಮೊಗ್ಗು . . . ಅಕ್ಕಿ ಇವನ್ನು ರುಬ್ಬಿ ಅಂಬಲಿ ಕಾಯಿಸಿ ತುಪ್ಪ ಹಾಕಿಕೊಂಡು ಕುಡಿಯಲು ಮೂತ್ರ ಬಿಡುವುದು (ಸಕವ್ಯ. ಶಂ. ೯೯೯). [ದೇ.॥ ತಮಿ. ರುಪ್ಪು; ತೆಲು. ರುಬ್ಬು]

**ರುಬ್ಬುಕಲ್ಲು** 'ರುಬ್ಬುಗಲ್ಲು' ನೋ.

**ರುಬ್ಬುಗಲ್ಲು**, ರುಬ್ಬುಕಲ್ಲು (ನಾ). ಒರಳಿನಲ್ಲಿ ಪದಾರ್ಥವನ್ನು ಹಾಕಿ ತಿರುವಲು ಬಳಸುವ ಗುಂಡಾದ ಕಲ್ಲು; ಗುಂಡುಕಲ್ಲು : ಅವನ ಕೈ ರುಬ್ಬುಗಲ್ಲನ್ನು ಉರುಳಿಸುತ್ತಿತ್ತು (ಮುಗ್ಧಾ. ೬೩). **ರುಬ್ಬುಕಲ್ಲು :** ಆ ಶರಣ ಬೀದಿಲೀ ಬರುತ್ತ್ರಲಿರ್ದು . . . ಆ ರುಬ್ಬುಕಲ್ಲೂ ಕಂಡು (ಕೊಲ್ಲಪೂ. ೦೧೦-೪). [ರುಬ್ಬು + ಕಲ್ಲು (< ಕಲ್$_3$)]

**ರುಬ್ಬುಗುಂಡು** (ನಾ). = ರುಬ್ಬುಗಲ್ಲು : ನಿಮ್ಮ ಶಿರಸ್ಸು ಎಂಬುದು ಹೇಗೆ ಬೇಕೋ ಹಾಗೆ ಹೊರಳಿಸಬಲ್ಲ ರುಬ್ಬುಗುಂಡಾಗಬೇಕು (ದೇಶಕ್ಷ. ೭೨); ಹೃದಯವೋ ರುಬ್ಬುಗುಂಡೋ (ಕಂಡಿಪು. ೨೯-೬). [ರುಬ್ಬು + ಗುಂಡು]

**ರುಮಡಿ** (ನಾ). ಒಂದು ಬಗೆಯ ಮರ; ಔದುಂಬರವೃಕ್ಷ; ಅತ್ತಿಮರ : ಅತ್ತಿ (ಉಂಬರ, ರುಮಡಿ) :_ ಪ್ರಸಿದ್ಧ – ಕಟ್ಟಿಗೆ ಸಾಧಾರಣ ತರದ್ದು (ಕಥಾಗ. ೩೩). [← ಮರಾ. ರುಮಡ, ರುಂಬಡ]

**ರುಮಾಲಿ** (ನಾ). ಕಳ್ಳತನಕ್ಕಾಗಿ, ದೇಹವು ಒಳಗೆ ತೂರುವಂತೆ, ಮನೆಯ ಭಾವಣಿಯಲ್ಲಿ ರಂಧ್ರ ಕೊರೆದು ಇಳಿಯುವಿಕೆ : ಬಾಗಿಲಿನ ಹತ್ತಿರ ಗೋಡೆ ಕೊರೆದು ಒಳಸೇರುವುದಕ್ಕೆ "ಬಗಲಿ" ಪದ್ಧತಿಯೆಂದೂ, ಭಾವಣಿಯಿಂದಿಳಿಯುವುದಕ್ಕೆ "ರುಮಾಲಿ" ಪದ್ಧತಿಯೆಂದೂ ಕರೆಯುವ ರೂಢಿಯಿದೆ (ಬಂಗಾರ. ೦೩೦). [← ಮರಾ. ರುಮಾಲೀ]

**ರುಮಾಲು$_1$**, ರುಂಬಾಲ, ರುಮಾಲೆ, ರುಮ್ಮಾಲು, ರೂಮಾಲು, ರೂಮಾಲೆ (ನಾ). ತಲೆಗೆ ಸುತ್ತಿಕೊಳ್ಳುವ ಉದ್ದವಾದ ಬಟ್ಟೆ ; ಪೇಟ ; ಮುಂಡಾಸು : ಚಿನ್ನದ ಸರಿಗೆರುಮಾಲು ಸುತ್ತಿ ಮಲ್ಲಿಗೆಯಂ ಮುಡಿದು (ಹುಚಳ. ೬೦); ರುಮಾಲುಗಳಂ ಕೈಗಳಿಂ ಸುಮಾನದಿಂದ ಪಿಡಿದು (ಶಾಗಂಂ. ೨೦೩-೨೦) ; ಹೊರಗೆ ಹೊರಟಾಗ ತಲೆಗೊಂದು ರುಮಾಲು (ರತ್ನಗೋ. ೫). **ರುಂಬಾಲ :** ನೀ ರುಂಬಾಲ ಸುತ್ತು (ಅಕೋಳ. ೦೬) ; ನಾಲ್ಕು ಬೆರಳು ಅಂಚಿನ ಜರದ ರುಂಬಾಲ (ಮುಂಗಾರು. ೨೬). **ರುಮಾಲೆ :** ಗಂಡಸರು ತಲೆಗೊಂದು ರುಮಾಲೆಯನ್ನು ಬಿಗಿಯುವರು (ಜಾಲಕ್ರ. I. ೩೬೦). **ರುಮ್ಮಾಲು :** ಮಿಸುನಿಯ ಜರತಾರ ರುಮ್ಮಾಲು ಪೈರಣಿ ಪೊಸತಾದ ದುಪ್ಪಟದಿಂದ . . . ರಂಜಿಸಿದನು (ಕಂಪಪಿ. ೨೩-೬೦) ; ಭಾರಿಜರದ ವಾರಿ ರುಮ್ಮಾಲಾ ಸುತ್ತಿಕೊಂಡಾಂವಾ (ಸಂಚಿಗೀ. ೯೨-೩). **ರೂಮಾಲು :** ಜರೀಪೇಟ ರೂಮಾಲನ್ನು ಸುತ್ತಿಕೊಂಡು ಹಾಡುತ್ತಿರಲು (ಕಥಾಮಂ. IV. ೦೦). **ರೂಮಾಲೆ :** ಪೂಮಾಲೆ ಇಲ್ಲದಿದ್ದರೆ ರೂಮಾಲೆ ಬೇಡವೋ ? (ಗಾದೆ). [← ಪಾರ. ಹಿಂ. ರುಮಾಲ್, ರೂಮಾಲ್ ; ಮರಾ. ರುಮಾಲ್./ತಮಿ. ರುಮಾಲೈ, ಉರುಮಾಲೈ; ತುಳು. ರುಮಾಲ್; ತೆಲು. ರುಮಾಲು]

**ರುಮಾಲು$_2$** (ನಾ). ಒಂದು ಘನಅಡಿ ; ಒಂದು ಘನಪೂಟು : ಬಾವಿಯ ಆಳವನ್ನೆಲ್ಲ ಒಂದು ರುಮಾಲಿನಳತೆಯಷ್ಟು ಅಗಿದು ತೆಗೆದರೆ ಹತ್ತು ಆಣೆ ಯೆಂದವರು ತಿಳಿದಿದ್ದರು. ಆದರೆ ಒಂದು ರುಮಾಲೆಂದರೆ ಒಂದು ಘನಪೂಟು ಎಂದು ಲೆಕ್ಕವಿತ್ತು (ಸ್ವ.ತಿತ. ೩೩೬). [ ? ]

**ರುಮಾಲೆ** ' ರುಮಾಲು$_1$ ' ನೋ.

**ರುಮುಜುಮು** (ನಾ). ಒಂದು ಅನುಕರಣ ಪದ : ಜುಮ್‌ಜುಮು ರುಮುಜುಮು ಗುಂಗುಣು ದುಮುದುಮುನಾದದ ನದಿಯೊಂದು ನಡೆಧಾಂಗ (ಸಂಚಿಗೀ. ೩೦-೦೬).

**ರುಮುರುಮು** (ಅ). ವೇಗವಾಗಿ ಎಂಬರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ರುಮುರುಮು ಹೆಜ್ಜೆ ಇಡುತ್ತ ಶಿನ್ನನ ಮನೆಯತ್ತ ನಡೆಯಹತ್ತಿದ (ಮುರುಟಾ. ೦೦) ; ಗಾಳಿ ರುಮುರುಮು ಬೀಸುತ್ತಿರುತ್ತದೆ (ಕುಕ್ಕುಕು. ೬೦).

**ರುಮೆ** (ನಾ). ಉಪ್ಪಿನ ಗಣಿ ; ಉಪ್ಪಿನ ಮೋಳೆ : "ಉಪ್ಪಿನ ಕಟ್ಟರು ಮನೆ (ರುಮಾ)ಯೆಂಬುದು" (ಶಬ್ದಮ. ೨೯-೦೩) ; ಪುಷ್ಪಾದಿ ರುಮೆಯ ನ್ನೆರದು ಲವಣವೆನಿಪಂತೆ (ಅಮಕಾ. ೯-೪-೭). [ಸಂ. ರುಮಾ]

**ರುಮ್ಮಾಲು** ' ರುಮಾಲು$_1$' ನೋ.

**ರುಮ್ಮು$_1$** (ಕ್ರಿ). ಸುತ್ತಾಡಿಸು ; ಶ್ರಮಪಡಿಸು (?) : ಗಾಣ ಹಾಕಿ ರುಮ್ಮಿದರ ಇದರ ಡುಬ್ಬ ಕಡಿಯಾಕ ಅಗದಿದ್ದರ ನನ್ನ ಹೆಸರಗೊಂಡ ಕರಿ ಬ್ಯಾಡಿರಿ (ಶಾಬಿ. ೦೩). [<ರುಬ್ಬು$_1$]

**ರುಮ್ಮು$_2$** (ನಾ). (ಉಕ) ಕುಂಟೆಯನ್ನು ಹಿಡಿಯಲು ಅನುಕೂಲಿಸು ವಂತೆ ಅಳವಡಿಸಿರುವ ಹಿಡಿ,–ಹಿಡಿಕೆ : ರುಮ್ಮಿನ ಮೇಲೆ ಭಾರ ಹಾಕಿ ರಂಟೆ ಹೊಡೆಯಲಿ (ರೂಢಿ). [?./ಮರಾ. ರುಮಣೀ]

**ರುರು** (ನಾ). ೧. ಮೈಮೇಲೆ ಬಿಳಿಯ ಚುಕ್ಕೆಗಳಿರುವ ಒಂದು ಬಗೆಯ ಜಿಂಕೆ : "ಸಾರಂಗಃ . . . ರುರುಃ – ಈ ೪ ಸಾರಂಗಂ" (ಶಬ್ದಮ. ೩೯-೭೭) ; ರುರುಗಣಮಿತ್ತಲಿತ್ತ ವಿಚರನ್ಮೃಗಸಂಕುಳಮಿತ್ತಲಿತ್ತ (ಕಾರಂಪೂ. ೦೫೭) ; ಕರಿ ರುರು ಹರಿಣ ಶಶಕ ಸಾರಂಗಮ ಮೊದಲಾದ ಮೃಗಂಗಳೊಡನೆ ಬದ್ಧವೈರಮಂ ಪತ್ತುವಿಟ್ಟು (ಶಂಕಶಂ. ೦೦೯-೨೦). ೨. ನಾಯಿ : 'ರುರುಪರಿಚಿತ' ಪರಾ. ೩. ಒಂದು ಬಗೆಯ ಕ್ರೂರ ಮೃಗ. [ಸಂ.]

**ರುರುಪರಿಚಿತ** (ಗು). ೧ ಜಿಂಕೆಗಳಿಂದ ಕೂಡಿರುವ. ೨. ನಾಯಿಗಳಿಂದ ಕೂಡಿರುವ. ೧, ೨ : ಆ ಮಹಾವನಂ . . . ಭೈರವಾವಳಿಯಂತೆ ರುರುಪರಿಚಿತಮುಂ ಪಿತಾಮಹಾನನದಂತೆ ಸಾಮಜಪದಾಭಿರಾಮಮುಂ (ಶಂಪ್ರಪು. ೫-೩೩ಪ). [ಸಂ.]

**ರುರುವಂತಿ** (ನಾ). ಒಂದು ಬಗೆಯ ಸಸ್ಯ ; ತೂಬರೆಗಿಡ : "ತುಂಬಿ ರುರುವಂತಿ ತಿಂದುಕಂ" (ಮುಂಗರಾ. ೩೩-೦೬). [ ? ]

**ರುರುವಕ್ತ್ರ** (ನಾ). ೧. ಜಿಂಕೆಯಂತೆ ಮುಖವುಳ್ಳವನು. ೨. ಶಿವ ಗಣಗಳಲ್ಲಿ ಒಬ್ಬ : ಪಯುಶ್ಚರವಕ್ತ್ರಂ ರುರುವಕ್ತ್ರನೆಂಬರೆಸೆದರ್ವಿಶ್ವೇಶ್ವರಾ ಸ್ಥಾನದೊಳ್ (ರಾಶಕೇ. ೦೧-೦೫೪). [ಸಂ.]

**ರುವತ್ಕೀರ** (ನಾ). ಧ್ವನಿಮಾಡುತ್ತಿರುವ ಗಿಳಿ : ಅಗಲ್ದು ಪೋಗವು ರುವತ್ಕೀರಾಳಿ ಕೇದಾರದಿಂ (ಜಗಂ. ೨-೬). [ಸಂ.]

**ರುವರಿ** ' ರೂವಾರಿ' ನೋ.

**ರುವಾರಿ** ' ರೂವಾರಿ' ನೋ.

**ರುವಿ** 'ರುವ್ವಿ' ನೋ.

**ರುವ್ವಿ**, ರುವಿ (ನಾ). ಒಂದು ಸಣ್ಣ ನಾಣ್ಯ ; ದಮ್ಮಡಿ : ಕೊಂಡಾಡಿ ಬೇಡಿದ್ದರು ಕೊಡರೊಂದು ರುವ್ವಿಯನು [ ಪಾಠಾಂ. ಪೈಸವನು] (ಶುಕಂದ. ೦-೨೯-೩) ; ಟೆಂಕೆ ೧ಕ್ಕೆ ೪ ದುಡ್ಡು ೧೬ ಸಟುಗಾಣಿ ೪ ಪೈಸಾ ೮ ಭಾಡ್ಗೆ ಗಾಣಿ ೧೨ ಭಾರಾಗಾಣಿ ೧ಕ್ಕೆ ದುಗ್ಗಾಣಿ ೨ ದುಡ್ಡಿಗೆ ೩ ರುವ್ವಿ (ಶಾಸ್ತ್ರಕ. ೭೭-೨) ; ರುವ್ವಿ ಕೊಡದವ ರುಮಾಲು ಕೊಟ್ಟಾನೆ ? (ಗಾದೆ). **ರುವಿ :** ಒಂದು ದುಡ್ಡಿಗೆ ಮೂರು ರುವಿ (ಕಥಾಗ. ೨೬೦) ; ರುವಿ ದುಗ್ಗಾಣಿಯನ್ನು ಕೊಡಿಸಿ ಗಿರಾಕಿಯನ್ನು ಕಳುಹಿಸುವುದಕ್ಕೆ ಹತ್ತು ನಿಮಿಷ ಬೇಕಾಯ್ತು ಅಜ್ಜಯ್ಯನಿಗೆ (ದೇಪಹಿಂ. ೭೭).

[ದೇ.॥ ತುಳು. ರುವಿ, ರುಯಿ ; ತೆಲು. ರುವ್ವ]

**ರುಷವತ್ತು** 'ರುಷುವತ್ತು' ನೋ.

**ರುಷಿ**, ರಿಷಿ, ರಿಸಿ, ರುಸಿ (ನಾ). ತಪಸ್ಸುಮಾಡುವವನು ; ಮುನಿ : ಶ್ರಾವಕರಿಂ ರುಷಿಯರಿಂ ಕೃತಾರ್ಥರುಮೊಳರೇ (ಧರ್ಮಾಮೃ. ೦-೨೦೩) ; ಒಡನಂದಿನ ರುಷಿಗಳು ತಮ್ಮ ಪೆಸರಲಿ ಬಿಡದೆ ತೀರ್ಥವ ಕಲ್ಪಿಸಲು (ಕಂಪಿಪ. ೫-೩೭). **ರಿಷಿ :** ಶ್ರೀಮಾಸೇನಪ್ಪರಮಪ್ರಭಾವರಿಷಿಯರ್ (ಎಕ. II, ೨೭-೦ ; ಕ್ರಿ. 700) ; ಅಲ್ಲಿಯ ರಿಷಿಯರಾನ್ ಚಿರಚ್ಛೇದಂಗೆಯ್ದು ಪಾತಕನಕ್ಕು (ಎಕ. X (S). ಶ್ರೀನಿ. ೭೭-೨೯; 850). **ರಿಸಿ :** ನಾಡೊಳಗಿರ್ದ ರಿಸಿಯ

ರ್ಕಳ್ಗೆಲ್ಲಂ ಬಟ್ಟೆಯುಟ್ಟ (ವಡ್ಡಾ. ೯೬-೮); ರಿಸಿಗಳೊಳ್ ಆರೆಬರ್ ಒಂದೆಡೆಯೊಳ್ ಪಟವಾತಂ ನುಡಿಯುತೆ ಜನ್ನದಾರಮಂ ಪೊಸೆಯುತಿರ್ಪರ್ (ಅದ್ಭುತ. ೦-೯). ರುಸಿ : 'ರುಸಿವಳ್ಳಿ' ಪರಾ. [<ಸಂ. ಋಷಿ]

**ರುಷಿತ** (ಗು). ಕೋಪಗೊಂಡ ; ರೋಷಗೊಂಡ : ಸಿಂಜಿನಿಯ ಚಾಪಟಂಕೃತಿ, ಕಲಿಯ ಪೌರುಷದ ರುಷಿತರವಂ . . . ಕೇಲಿಸಿತು ಕಿವಿಗತಿ ಕಠೋರವಂ ! (ಚತ್ರಾಂಗ. ೬೨-೨೨೫). [ಸಂ.]

**ರುಷುವತ್ತು**, ರುಷವತ್ತು (ನಾ). ನ್ಯಾಯವಿರುದ್ಧವಾಗಿ ಪಡೆಯುವ ಅಥವಾ ಕೊಡುವ ಹಣ ; ಲಂಚ : ಕಕ್ಷಿಗಾರರಿಂದ ರುಷುವತ್ತಿಗೆ ಯತ್ನಪಟ್ಟರೆ ನಾನು ಮ್ಯಾಜಿಸ್ಟ್ರೇಟಾಗಿ ಗಮನಿಸಬೇಕಾಗುತ್ತೆ (ಕಂಠಿ. ೩೩೯); ನಮ್ಮ ಅಧಿಕಾರಿಗಳು ಯಾರೂ ಲಂಚ ರುಷುವತ್ತು ತೆಗೆದುಕೊಳ್ಳಕೂಡದು (ಕೃವಾಳಿ. II, ೪೬೦). **ರುಷವತ್ತು** : ಲಂಚ, 'ರುಷವತ್ತು' (Bribe. ೩೦೯೩). [←ಅರ. ಪಾರ. ಹಿಂ. ರಿಶ್ವತ್ ; ಮರಾ. ರುಶವತ್, ರುಶ್ವತ್, ರುಷ್ವತ್, ರಿಷ್ವತ್ ]

**ರುಷೆ** (ನಾ). ಕೋಪ ; ಸಿಟ್ಟು : ನೀಂ . . . ರುಷೆಯನಿಂತಾರೊಳಭಿನಯಿಸುತಿರುವೆ (ಶಾಕ೧. ೯೩). [ಸಂ. ರುಷಾ ]

**ರುಷ್ಟ** (ಗು). ೧. ಕೋಪಗೊಂಡ ; ಸಿಟ್ಟಿನಿಂದ ಕೂಡಿದ. (ನಾ). ೨. ಕೋಪ ; ಸಿಟ್ಟು. ೩. ಕೋಪಗೊಂಡ ವ್ಯಕ್ತಿ ; ಸಿಟ್ಟಾದ ವ್ಯಕ್ತಿ : ಪದಗರ್ಭವನ್ನು ಕೇಳಿದ ಪಂಡಿತರು ಒಡನೇ ರುಷ್ಟರಾದರು (ಕಥು. ೩೨೯) ; ಅವರ ಮಾತಿಗೆ ಸಾಧ್ವಿಯಾದ ಸೋಫಿಯಾಳು ರುಷ್ಟಳಾದಳು (ಸ್ಕೂಲಬು. ೯೬). [ಸಂ. ]

**ರುಷ್ಯ** (ನಾ). ಮೈಮೇಲೆ ಬಿಳಿಚುಕ್ಕೆಗಳುಳ್ಳ ಅಥವಾ ಬಿಳಿಬಣ್ಣದ ಪಾದಗಳುಳ್ಳ ಜಿಂಕೆ : "ಆ ರುಷ್ಯವುದು . . . ಸಾರಂಗಮಕ್ಕು" (ಮಂಗರಾ. ೧೯-೦೦). [<ಸಂ. ಋಶ್ಯ ]

**ರುಸಿ** ' ರುಷಿ ' ನೋ.

**ರುಸಿಪಳ್ಳಿ** ' ರುಸಿವಳ್ಳಿ ' ನೋ.

**ರುಸಿವಳ್ಳಿ**, ರಿಷಿಹಳ್ಳಿ, ರುಸಿಪಳ್ಳಿ (ನಾ). ಋಷಿಗಳು ವಾಸಿಸುವ ಸ್ಥಳ ; ಆಶ್ರಮ : ಈ ರುಸಿವಳ್ಳಿಯೊಳಾನವಿಚಾರದೆ ಋಷಿಸುತನನೊರ್ವನಂ ಕೊಂದೊಡೆ (ಶಂಕಕೃ. ೨೬೯-೦೩). **ರಿಷಿಹಳ್ಳಿ** : ಬಸದಿಯ ವಸದಲಿ ಪಲವ ಮನೆಗಳ ಮಾಡಿಸಿ ರಿಷಿಹಳ್ಳಿಯೆಂದು ಪೆಸರನಿಟ್ಟು (ವ್ಯಕಾಂ. ೦೯೩೨ ; ೦೩-೨೬ ; 1069). **ರುಸಿಪಳ್ಳಿ** : ಸಿಂಧುತೀರದ ರುಸಿ[ಶಾಕಾಂ. ಋಷಿ] ಪಳ್ಳಿಯೊಳ್ ಮೃಗಾಯಣನೆಂಬ ಮುನಿಗಂ ವಿಶಾಖೆಯೆಂಬ ಗೊರತಿಗಂ ಗೌತಮನೆಂಬ ಮಗನಾಗಿ ಪುಟ್ಟಿ (ಅರ್ಧನೇ. ೪-೦೨೭ ವ).

[ ರುಸಿ (<ರುಷಿ) + ಪಳ್ಳಿ$_{1}$ ]

**ರುಸುಂ**, ರುಸುಮು (ನಾ). ನಿಯಮಾನುಸಾರವಾಗಿ ಕೊಡುವ ಶುಲ್ಕ, ತೆರಿಗೆ ಮೊದಲಾದ ಹಣ : ದಿವಾನ್‌ಪೂರ್ಣಯ್ಯನವರಿಗೆ . . . ನಿವ್ವಳಹಣದಲ್ಲಿ ಶೇಕಡ ಅರ್ಧರೂಪಾಯಿಯಂತೆ ರುಸುಂ ಸಹ ಪಾವತಿಯಾಗುತ್ತಿತ್ತು (ಪುಕಾವಂ. II, ೩೩) ; ಅವರಿಗೆ ಕೊಡುವ ರುಸುಂ ಕ್ರಮಪಡಿಸಲ್ಪಡುವುದು (ಗ್ರಾಪಂಕ. ೮). **ರುಸುಮು** : ಫಸಲು ಕಟಾವಾದ ಕೂಡಲೆ ಧಾನ್ಯವು ಕಣದಲ್ಲಿ ಇದ್ದ ಹಾಗೆಯೇ ಬಾರಾಬಲೂತಿಯ ರುಸುಮು ಗಳನ್ನು ತೆಗೆಯುತ್ತಿದ್ದರು (ಕಾಪುಕಂ. ೩೪೦) ; ಒಂದು ಗಂಟೆಯ ಸಮಾರಂಭಕ್ಕೆ ಐವತ್ತುರೂಪಾಯಿಗಳ ರುಸುಮು ತೆಗೆದುಕೊಂಡ ಒಬ್ಬ ಪುರೋಹಿತ (ವಂಕವ. ೨೪೦). [←ಅರ. ರಸೂಮ್ ; ಹಿಂ. ರುಸೂಮ್, ರಸೂಮ್ ; ಮರಾ. ರುಸುಮ್, ರುಸೂಮ್ ]

**ರುಸುಮು** ' ರುಸುಂ ' ನೋ.

**ರುಸ್ತುಂ** (ಗು). ೧. ಸಮರ್ಥನಾದ ; ಗಟ್ಟಿಗನಾದ : ಕ್ಲಬ್ಬಿನ ರುಸ್ತುಂ ಆಟಗಾರರು (ಕಾಯಕ.೩೫).(ನಾ). ೨. ಸಮರ್ಥ; ಗಟ್ಟಿಗ; ಬಹಳ ರುಸ್ತುಂ ಕಾಣೆನೋ, ನೀನು (ನಡಿವಾ. II, ೮೩೯).

[←ಅರ. ಹಿಂ. ರುಸ್ತಮ್ ; ಪಾರ. ಮರಾ. ರುಸ್ತುಮ್,ರುಸ್ತೂಮ್, ರುಸ್ತಮ್ ]

**ರುಹೆ** (ನಾ). ಗರಿಕೆ ; ದೂರ್ವೆ : "ದೂರ್ವಾ . . . ರುಹಾ, ಅನಂತಾ— ೬ ಗರಿಕೆಹುಲ್ಲಿನ ಪೆಸರುಗಳು" (ಸಿದ್ಧಾಂತಿ. ೦೪೯). [ ಸಂ. ರುಹಾ ]

**ರುಳಿ** ' ಲುಳ್ಳಿ$_{2}$ ' ನೋ.

**ರೂ$_{1}$** (ನಾ). (ಪಾತ, ಮಗ್ಗಿ ಮೊದಲಾದುವನ್ನು) ಕಂಠಪಾಠಮಾಡುವುದು ; ಉರು : (೬).

**ರೂಹಾಕು** = ಗಟ್ಟಿಮಾಡು ; ಉರುಹಾಕು : ಸಂಜೇ ಮುಂಚಾನೇ ಎಷ್ಟು ರೂಹಾಕಿದ್ರೂ ನನಗನಕಾ ಒಂದ ಕವಿತಾಯೇನ್ಪಾಠ ಮಾಡಲಿಕ್ಕ ಆಗತಿದ್ದಿಲ್ಲಾ (ಕಂಬತು. ೪೨) ; ಮಾಸ್ತರರು . . . ಮಾತನ್ನು 'ರೂ' ಹಾಕುತ್ತಿದ್ದರು (ಗಂಗಾಕಾ. ೩೭). [← ತೆಲು. ರೂವು, ರುವ್ವು ]

**ರೂ$_{2}$** (ನಾ). 'ರೂಪಾಯಿ' ಎಂಬುದರ ಸಂಕ್ಷಿಪ್ತರೂಪ : ಆ ಪುಸ್ತಕಕ್ಕೆ ಎರಡು ರೂ. ಹತ್ತು ಪೈಸೆ (ರೂಢಿ). [ < ರೂಪಾಯಿ ]

**ರೂಕ್ಷ** (ಗು). ೧. ಬಿರುಸಾದ ; ಒರಟಾದ ; ನುಣುಪಾಗಿರದ : ರೂಕ್ಷಕೇಶದ ಕಲಿಪುರುಷ ಸಾಕ್ಷಾತ್ಕರಿಸಿ (ತಿಮ್ಮಸ್ತಿ. ೦-೯೪); ಸಿಂಹಾಕೃತಿಯ ಮಹಾರೂಕ್ಷಶ್ಮಲೋಪಮಂ ಭೀಮಕಾಯಂ ಕಠಿನಗಂಭೀರನಾ ಯೋಗಿ (ಶ್ರೀರಾಮಾ. ೦೪೩-೩೯). ೨. ಕಠಿಣವಾದ ; ಕ್ರೂರವಾದ. ೩. ತೀಕ್ಷ್ಣವಾದ : 'ರೂಕ್ಷದಾಹ' ಪರಾ. (ನಾ). ೪. ಕಾಠಿಣ್ಯ; ಗಡುಸುತನ : "ರೂಕ್ಷಮಾ ವಸು ತೀಕ್ಷ್ಣಂ" (ಮಂಗರಾ. ೦೦-೨). ೫. ಕಠಿಣವಾದ ಮಾತು; ಒರಟುನುಡಿ : ರೂಕ್ಷವನು ನುಡಿಯುತಿಹೆ ಮಿತಿಮೀರಿ (ಶಾಸನಾ. ೬೭). ೬. ಕ್ರೂರನಾದವನು; ನಿರ್ದಯಿ : ಆ ಹಿರಣ್ಯಾಕ್ಷನಂ ದಿವಿಜಾಧೀಶ್ವರರೂಕ್ಷನಂ . . . ಕೊಂದು (ಜಗಪ. ೦-೩೭) ; ರೂಕ್ಷನಿಗೆ ಕಣ್ಣಳಲ್ಲದೆಯು ಬೇರೆ ಗುರಿ ಸಲ್ಲದಯ್ (ಶ್ರೀರಾಮಾ.೦೬೦-೦೫೭). ೭. ಸಿಡುಕು; ಕೋಪ : ಕತ್ತಲೆಯು ಭೀತಿಯನ್ನುಂಟುಮಾಡಿ ರೂಕ್ಷವನ್ನೂ ಎಚ್ಚರವನ್ನೂ ನಾಶಮಾಡುವುದು (ಸಕವ್ಯ. ೩೬). [ಸಂ.]

**ರೂಕ್ಷಣ** (ಗು). ಕಠಿಣವಾದ : ಪೌರುಷದ ರೂಕ್ಷಣಧನುರ್ವಿದ್ಯೆಯಲ್ಲದೆಯು ಲಲನಾಸಹಜರತಿಲಾಭ್ಯಾಸವಿನಿತಿರದ ಆ ಚೈತ್ರುವಾಹಿನಿ ಕಿರೀಟಿಯೆಡೆಗೈದಿದಳ್ (ಚಿತ್ರಾಂಗ. ೨೨-೬೦೦). [<ರೂಕ್ಷ]

**ರೂಕ್ಷತನ** (ನಾ). ಒರಟುತನ : ರೂಕ್ಷತನದಿಂದ ಕೂಡಿದ್ದೂ ಮೌಲಿಕ ತರತಮಜ್ಞಾನವಿಲ್ಲದ್ದೂ ಆದ ಉಚ್ಛೃಂಖಲತೆಯು ಆದಕ್ಕೆ ಸಲ್ಲುವುದಿಲ್ಲ (ವಂಕವ. ೦೦ ಹಿನ್ನುಡಿ). [ ರೂಕ್ಷ + — ತನ ]

**ರೂಕ್ಷತೆ** (ನಾ). = ರೂಕ್ಷತನ : ರೂಕ್ಷತಾವಿಕೃತಿಯಿಂ ಗುಜ್ಜುಮೆಯ್ಯಿಂ ಕುರೂಪಂಬೆತ್ತ ಶ್ರೀಗಂಧಕಾಷ್ಠವಕ್ರತೆಗಗ್ಗಲಗ್ನದಿಂ, ಕೇಳ್, ರೂಪ ಶೂನ್ಯತೆಯೊದಗಲೇಂ ? (ಶ್ರೀರಾಮಾ. ೦೨೯-೩೩೫); ಒಂದು ಬಾಳಿನ ಬೆಳಸು ಸಂಯಮದ ರೂಕ್ಷತೆಯ ಶಾಂತಿಸೌಜನ್ಯವನು ರೂಢಿಸಿದ ನಿಮ್ಮಂಥ ಬದುಕು ಇನ್ನೆಂದು ಬಂದೀತು ಬುವಿಗೆ ?. (ಅಮುಕಂ. ೨೦-೦೯).

[ ಸಂ. ರೂಕ್ಷತಾ ]

**ರೂಕ್ಷದಾಹ** (ನಾ). ತೀಕ್ಷ್ಣವಾದ ಉರಿ ; ಅತಿಯಾದ ಉರಿ : ರೂಕ್ಷದಾಹಗಳು ಶಮನವಾಗಿ ಸುವರ್ಣದಂತೆ ವರ್ಣ ಉಂಟಾದ ದೇಹವುಂಟಾಗಿ ಹೊಟ್ಟೆಯುಬ್ಬರವನ್ನು . . . ಪರಿಹರಿಸುವುದು (ಸಕವ್ಯ. ೨೭). [ಸಂ.]

**ರೂಕ್ಷಾನಿಲ** (ನಾ). ಬಿರುಸಾದ ಗಾಳಿ; ಬಿರುಗಾಳಿ : ರೂಕ್ಷಾನಿಲಪಾತದಿಂ ತಪನತಾಪದಿನಂಬಿಕೆಗಗ್ಗಳಂ ಪರಿಮ್ಲಾನತೆಯಕ್ಕುಂ (ಶಂಕರಪಾ. ೦೦-೦೨೮).

[ಸಂ.]

**ರೂಕ್ಷಾವರ್ತ** (ನಾ). ಒಂದು ಬಗೆಯ ರೋಗ : ತೊಡೆಯುಂ ಮೊಗಮುಂ ಕಾಲುಂ ಬಿಡದಾಡುವುದರ್ಕಾಬಂಬದಶ್ಚಲೆ ನೋಟ್ಕುಂ

ನಿಡುಸುಯ್ಯುಂ ಧಾತುಗಳುಂ ಕಿಡುಗುಮತಿಪ್ರಬಲಮಾಗೆ ರೂಕ್ಷಾವರ್ತಂ (ಅಕ್ಕ್ರಾ. ೧೧-೧೩). [ಸಂ.]

**ರೂಕ್ಷಾಳಕ** (ನಾ). ಒರಟಾದ ಮುಂಗುರುಳು : ಅತಿರಕ್ತಾಶೋಕದ ಸುತ್ತಿನೊಳಿರ್ದ ರೂಕ್ಷಾಳಕಂಗಳನೋಸರಿಸುತ್ತುಂ ಮೆಲ್ಲನೆ ಮೇಳಿಸಿ ಕನ್ನೆಯುಂ (ಅಂಕ. ೩-೩೦). [ ಸಂ. ರೂಕ್ಷಾಲಕ ]

**ರೂಡಿ** (ನಾ). ೧. ಬಳಕೆ; ಚಾಲ್ತಿ : "ರೂಡಿ–ರೂಢಿ=ವಾಡಿಕೆ, ಪ್ರಸಿದ್ಧಿ" (ಕದ್ಯಕೋ. ೩೯); ಹಾಗೆ ಇದ್ದ ಪಕ್ಷಕ್ಕೆ ನಮ್ಮಲ್ಲಿ ಹೊಸ ನಡತೆಗಳು ಎಂದಿಗೂ ರೂಡಿಯಲ್ಲಿ ಬರುತ್ತಿದ್ದಿಲ್ಲ (ಮುಂಬಯಿ. ೬. ೪–೧೬೯). ೨. ಹೆಸರುವಾಸಿ; ಪ್ರಸಿದ್ಧಿ : ಬಸಂತನೊಲ್ದೊಲಿಸಿ ಕಾಡುವ ರೂಡಿಯು ಬರ್ದುಕೆಂಡಿರಂ ನಿಲೆ ಸೆಱೆಗೆಯ್ವಂ (ಕಬ್ಬಿಗ. ೩೬). [ < ಸಂ. ರೂಢಿ ]

**ರೂಡಿಸು** (ಕ್ರಿ). ೧. ಎಲ್ಲರಿಗೂ ಪರಿಚಿತವಾಗು,– ವಿದಿತವಾಗು : ಕ್ರೀಡಿಸುವನಾ ಪುರದ ರೂಡಿಸಿದ ಬೀದಿಯೊಳ್ಕ್ರೀಡದಲ್ಲೆಡೆಯೊಳಂ ಪಸುಳೆ ಪರಪುಟ್ಟನಾಗಿ (ಕೃಬಾಲ. ೨೯–೨೨). ೨. ಏಳಿಗೆಯಾಗು; ಅಭಿವೃದ್ಧಿಯನ್ನು ಹೊಂದು : ಪಾಡಿವದೆಳವೆಱೆ ಪುಣ್ಣಿಮೆವರೆಗಂ ರೂಡಿಸಿ ದಿನದಿನದಪ್ಪದೆ ಕಲೆಯೊಳ್ ಕೂಡಿ ಬಳೆದು (ಶಬರ್. ೨-೬೩). ೩. ಕಲ್ಪಿಸು ; ಏರ್ಪಡಿಸು : ಮೋಡಿಯಱಿದು ದ್ವಾರದೊರೆಗಳ್ಗೆ ಮನೆಗಳ ರೂಡಿಸಿರ್ದನು ವಿಶ್ವಕರ್ಮ (ಭರತ. ೨೨-೬೩). ೪. (ಆಸ್ತಿಮುಂತಾದುವನ್ನು) ಗಳಿಸು ; ಸಂಪಾದಿಸು : ಆತ ಮನೆಬಾಗಿಲು ಚೆನ್ನಾಗಿ ರೂಡಿಸಿಕೊಂಡಿದ್ದಾನೆ (ರೂಢಿ). [ರೂಡಿ + –ಇಸು$_3$]

**ರೂಢ** (ಗು). ೧. ಹತ್ತಿದ ; ಏರಿದ. ೨. ಹುಟ್ಟಿದ ; ತಲೆದೋರಿದ. ೩. ಬೆಳೆದ ; ವೃದ್ಧಿಯಾದ. ೪. ದೊಡ್ಡ ; ಬೃಹತ್ತಾದ. ೫. ಎಲ್ಲರಿಗೂ ತಿಳಿದ,–ವಿದಿತವಾದ. ೬. ಪ್ರಸಿದ್ಧವಾದ ; ಖ್ಯಾತವಾದ. ೭. ಪದ್ಧತಿಯ ; ಬಳಕೆಯ. (ನಾ). ೮. [ವ್ಯಾಕ] ಪದಗಳಿಗೆ ಇರುವ ವಾಚ್ಯಾರ್ಥವಲ್ಲದ ಅರ್ಥ,– ಪ್ರಸಿದ್ಧವಾದ ಅರ್ಥ ಅವಯವಾರ್ಥವಿಲ್ಲದೆಯುಂ . . . ಪ್ರಸಿದ್ಧವಾದರ್ಥವು ರೂಢವು (ಹೊಸಗ. ೧೬೦); ಪದಗಳ ವಿಭಾಗವನ್ನು ಯೋಗ, ರೂಢ, ಯೋಗರೂಢ ಮೊದಲಾದ ಭೇದಗಳಿಂದ ವಿಭಾಗಮಾಡುವರು (ಹಿಂದಣ. ೧೪೭). [ಸಂ.]

**ರೂಢಗೊಳಿಸು** (ಕ್ರಿ). ಬಳಕೆಗೆ ತರು ; ರೂಢಿಯಲ್ಲಿರುವಂತೆ ಮಾಡು : ಮೊದಲಿನ ಕನ್ನಡಕವಿಗಳೆಲ್ಲ ಜೈನರಾಗಿದ್ದುದರಿಂದ ಚಂಪೂರೂಪವನ್ನು ಕಲ್ಪಿಸಿ ಕನ್ನಡದಲ್ಲಿ ಅವರೇ ರೂಢಗೊಳಿಸಿದರೆಂದು ತೋರುತ್ತದೆ (ಕವಿ. ೪೦). [ರೂಢ + ಕೊಳ್$_1$ + – ಇಸು$_3$]

**ರೂಢನಾಮ** (ನಾ). ೧. ರೂಢಿಯಿಂದ ಬಂದ ಹೆಸರು ; ಖ್ಯಾತನಾಮ: ಈ ನಾಡ ಪ್ರಭುಗಳೆಲ್ಲರಿಗೂ ಚಿಕ್ಕಪ್ಪಗೌಡರೆಂಬುದು ರೂಢನಾಮವಾಗಿತ್ತು (ನೆಳಲಂಬ. ೬೨). ೨. [ವ್ಯಾಕ] ನಾಮಪದದಲ್ಲಿ ಒಂದು ಬಗೆ ; ನಿಷ್ಪತ್ತಿಗೆ ಒಳಪಡದೆ, ರೂಢಿಯಿಂದ ಅರ್ಥವನ್ನು ಹೊಂದುವ ಪದ ; ಬಳಕೆಯಿಂದ ಅರ್ಥಪಡೆಯುವ ಪದ : ರೂಢನಾಮಮೆಂದುಂ, ಅನ್ವರ್ಥನಾಮಮೆಂದುಂ, ಅಂಕಿತನಾಮಮೆಂದುಂ, ನಾಮಂ ಮೂದೆಱನಾಗಿರ್ಪುದು (ಶಬ್ದ. ೭೬ ವೃತ್ತಿ) ; ಗಂಡಸು, ಹೆಂಗಸು, ನೆಲ . . . ಇವು ಆಯಾ ಪದಾರ್ಥಗಳಿಗೆ ಹಿಂದಿನಿಂದಲೂ ರೂಢಿಯಾಗಿ ಬಂದಿರುವ ಹೆಸರನ್ನು ಹೇಳುತ್ತವೆ. ಇಂಥ ನಾಮವಾಚಕಗಳಿಗೆ ರೂಢನಾಮಗಳೆಂದು ಹೆಸರು (ಮುದ್ದು. ೨೩). [ಸಂ. ರೂಢನಾಮನ್]

**ರೂಢಬುದ್ಧಿ** (ನಾ). ವ್ಯಾವಹಾರಿಕ ಬುದ್ಧಿ ; ಸಹಜವಾದ ಅರಿವು : ಯಾವ ಮಾತು –ಸಂದರ್ಭಗಳಲ್ಲಿ ರೂಢಬುದ್ಧಿಗೆ ಅಶ್ಲೀಲತೆಯ ಧ್ವನಿಯು ಹುಟ್ಟಬಹುದೋ ಅಂಥ ಮಾತು . . . ಅವರದು (ವಿಚಾರಮಂ. ೧೧೧). [ಸಂ.]

**ರೂಢಮೂಲ** (ಗು). ಬಹಳಕಾಲದಿಂದ ಬಳಕೆಯಲ್ಲಿರುವ; ಅನೂಚಾನವಾದ : ತರಗತಿಯ ಪಾಠಗಳೇ ಶಿಕ್ಷಣದ ಸರ್ವಸ್ವವೆಂದು ರೂಢಮೂಲವಾಗಿರುವ ಭಾವನೆ ಹೋಗಬೇಕು (ಶಿಕ್ಷಣ. ೧೩೭). [ಸಂ.]

**ರೂಢಿ** (ನಾ). ೧. ಭೂಮಿ ; ಧರೆ : ರೂಢಿಗೆ ರೂಢಿವೆತ್ತಸೆವ ಬೆಳ್ವಲದೇಶಮನಾಳ್ದ ಗಂಗಪೆರ್ಮ್ಮಾನಡಿಗಳಿಂದಂ (ಎಇ. XV. ೩೪೦-೦೭ ; 1071) ; ಅವಿವೆನ್ನದೆ ರೂಢಿಯ ತಾಣಮೆಲ್ಲಮಂ ತೀರ್ಥಕರರ ಕೇವಳಿಗಳ ಮುನ್ನೆ ವಿಹಾರಿಸಿದೆಡೆಗಳಿವೆಲ್ಲವೆಂದು ವಂಬುವುದು (ಸಮುಚ. ೨-೬೩). ೨. ಲೋಕದ ಜನ ; ಜನತೆ : ವರಶಿಶುವ ನಲಿದಾಡಿಸುವ ರೂಢಿಯಿಲ್ಲೆಂದು ನೆಱೆ ನೊಂದು ಮಱುಗುವಳು (ಕೃಬಾಲ. ೨೯-೦೯). ೩. ಪ್ರಸಿದ್ಧಿ ; ಕೀರ್ತಿ : ಅಗ್ಗಳಿಸಿರ್ದ ರೂಢಿ ತನ್ನೊಳಮದ್ದೊರ್ಕ್ಕಿರೆ (ಎಕ. V. ಬೇಲೂರು. ೦೭-೫೯ ; 1136); ರೂಢಿಯೋಲೆಯಕಾಱನರ್ಜುನನಾಡ ಪತಿಕರಿಸುವನು ನೀನದ ನೋಡಿ ಸಂತಸಬಡು (ಕುಮಾವ್ಯ. ೯-೦೩). ೪. ವಾಡಿಕೆ ; ಬಳಕೆ ; ಅಭ್ಯಾಸ : ಸಕಳವ್ಯಾಕರಣಾರ್ಥಶಾಸ್ತ್ರ . . . ಶಕುನಾದಿ ಪ್ರೌಢಿಯೊಳ್ ರೂಢಿಯಾಯ್ತು ಕುಮಾರಂಗೆ (ಕುಕ್ಕು. ೦೨-೬೪) ; ಇದು ರೂಢಿಯ ಮಾತು (ಹೀನಾಕ್ಯ. ೦೬೦) ; ರೂಢಿ ಇಲ್ಲದ ಪದ ಹಾಡಿದರೆ ತಿಳಿದಾನೆ ? (ಗಾದೆ). ೫. [ಕಾವ್ಯಮೀ] ಶಬ್ದಗುಣಗಳಲ್ಲಿ ಒಂದು ; ಹೆಚ್ಚು ಪ್ರಚಾರದಲ್ಲಿರುವುದು : ಶ್ಲೇಷ, ಲಾಲಿತ್ಯ . . . ರೂಢಿ, ಯೌಗಿಕೀ – ಇವು ಏಳೂ 'ಶಬ್ದಗುಣ'ಗಳು (ಶೃಬಿಂ. ೨೩೨ ಅಡಿ). [ಸಂ.]

**ರೂಢಿತ** (ಗು). ಏರಿದ ; ಹತ್ತಿದ : ಉಮಾಕಾಂತೆಯು ಮಹೇಶ್ವರನು ಮಾನಿತೋನ್ನತ ದಿವ್ಯರತ್ನವಿಮಾನರೂಢಿತಯಾನರಾಗಿ ಸುಮಾನದಿಂ ಗಮನಿಸುತ (ಬಸವ. ೫೦-೨). [ಸಂ.]

**ರೂಢಿಪ** (ನಾ). ಭೂಮಿಯ ಒಡೆಯ ; ರಾಜ : ರೂಢಿಪ ದಾನಚಿಂತಾಮಣಿ ಜಯತೆಂದು ಪಾಡಿದರು (ಕಂಸಬ. ೯-೫೦). [ಸಂ.]

**ರೂಢಿಪತಿ** (ನಾ). = ರೂಢಿಪ : ಅರಸನಂ ಕೊಲ್ವೆನೆಂದಾಯುಧವ ಭರದಲುಗಿದು ರೂಢಿಪತಿಯಂ ಪೊಯ್ವೆನೆಂದು ಬರೆ (ಕುರಂಗ. ೬೪-೪೨) ; ನಾಡೆಂಬ ದೇಹಕ್ಕೆ ರೂಢಿಪತಿಯೇ ಪ್ರಾಣ (ವಿಚಾರಮಂ. ೨೦). [ಸಂ.]

**ರೂಢಿಮಾತು** (ನಾ). ಜನಬಳಕೆಯ ಮಾತು,– ನುಡಿ : ಗಾಡಿಕಾಱ ಕೃಷ್ಣ ನಿನ್ನ ಬೇಡಿಕೊಂಬೆ ಬಾರೋ ರೂಢಿಮಾತನಾಡ ಸರ್ವರೂಢಿಗೊಡೆಯ ಬಾರೋ (ಪುರಂದ. ದಾ. ೦-೬೦-೨). [ರೂಢಿ + ಮಾತು$_1$]

**ರೂಢಿಲಕ್ಷಣೆ** (ನಾ). [ಕಾವ್ಯಮೀ] ಲಕ್ಷಣಾವೃತ್ತಿಯಲ್ಲಿ ಒಂದು ವಿಧ ; ರೂಢಿಯಿಂದ ಬಂದ ವಾಚ್ಯಾರ್ಥವನ್ನು ತ್ಯಜಿಸಿ ಬೇರೆ ಅರ್ಥವನ್ನು ಹೇಳುವುದು : ಪ್ರಯೋಜನವಿರಹಿತವಾಗಿ ಪರಿಣಮಿಸಿದ ಇಂಥ ವ್ಯಾಪಾರವನ್ನು "ರೂಢಿಲಕ್ಷಣಾ" ಎಂದು ಕರೆಯುತ್ತಾರೆ. ಭಾಷಾಪಥದ ಉದ್ದಕ್ಕೂ ರೂಢಿಲಕ್ಷಣೆಯ ನಿದರ್ಶನಗಳು ಕಿಕ್ಕಿರಿದಿವೆ (ಶಾರದಾ. ೨೫೯).

[ಸಂ. ರೂಢಿಲಕ್ಷಣಾ]

**ರೂಢಿವಡೆ** (ಕ್ರಿ). ೧. ಪ್ರಸಿದ್ಧಿಯನ್ನು ಪಡೆ ; ಹೆಸರುವಾಸಿಯಾಗು : ವೀರದೊಳುಕ್ಕಿ ಮಚ್ಚರಿಸಿ ಕೋಪದೆ ಜೈನನೆ ಕಾದಿ ಸತ್ತು ವೈಲಾರನೆನಲ್ಕೆ ರೂಢಿವಡೆದಂ (ಸಮುಚ. ೨-೬೦) ; ರೂಢಿವಡೆದ ನೃಪಾಲಕರ ನೆಲೆವಾಡ . . . ಚೆಲುವಿಕೆಯನೀವುವು ನೋಡುವರ ಕಂಗಳಿಗೆ (ಶಾಳ್ವಭಾ. ೨-೯). ೨. ಅತಿಶಯವಾಗು : ರೀತಿ ನೂತನವಾಗೆ ಗದ್ಯಪದ್ಯಕಾವ್ಯಕಳಾಪ್ರೌಢರೂಢಿವಡೆಯೆ ಮೆಱೆದಿರ್ದ ಸರಸಕವಿಗಳ ಸಂದಣಿಯೊಳಂ (ಗಿರಿಜಾ. ೨-೦೦೩ ವ).

[ ರೂಢಿ + ಪಡೆ$_1$ ]

**ರೂಢಿವಿಡಿ** (ಕ್ರಿ). = ರೂಢಿವಡೆ ೨ : ನೋಡಲು ನರಜನ್ಮದೊಳಗಿಂತು ಸೊಬಗಿನ ರೂಢಿವಿಡಿದ ನೀಱರುಂಟೆ (ಕಂಸಬ. ೯-೦೦೩).

[ ರೂಢಿ + ಪಿಡಿ$_1$ ]

**ರೂಢಿವೆಱು** (ಕ್ರಿ). ಪ್ರಸಿದ್ಧಿಯನ್ನು ಹೊಂದು; ಕೀರ್ತಿಯನ್ನು ಪಡೆ : ಭಾಸುರಮೆನಿಸಿರ್ದ ದೇವನಿಳಯಂಗಳನೇಳಿಸಿ ರೂಢಿವೆತ್ತನುಂ ಪರವಧುಗಾಸೆಗೆಯ್ಯ ಕಿಡುಗುಂ (ಸಮುಚ. ೫-೬೯) ; ಕೆಲವು ಸಕ್ಕದದ ಮೂಱುಲಿಂಗಮುಂ

ರೂಢಿವೆತ್ತ ಕರ್ಣಾಟಕದೊಳ್ ನಿಲೆ (ಕವಿರ. ೦೩೩) ; ಆ ರೂಢಿವೆತ್ತ ಮಹಾಭಾರತದೊಳ್ . . . ಕಥೆಯೊಂದುಂಟು (ಹರಿಶ. ೨-೨೯).
[ ರೂಢಿ + ಪೆಱು₁ ]

**ರೂಢಿಸು** (ಕ್ರಿ). ೧. ಹೆಚ್ಚಾಗು ; ಅಧಿಕ್ಯವನ್ನು ಹೊಂದು : ತಿರುಗುವ ಮೃಗಂಗಳ್ ದುಷ್ಟಮೃಗಮಲ್ಲಿ ವೃಕ್ಷಮೇ ಬೆಂದ ಕೊಱಡು ರೂಢಿಸುವ ಝಳಮಲೆವ ಬಿಱುಗಾಳಿ ಬಿಱುಬಿಸಿಂ ಕಾಡುತಿಹ ಯಮದೂತರ್ (ಶಂಕ. ೩೬-೨೩). ೨. ಪ್ರಸಿದ್ಧಿಯಾಗು ; ಖ್ಯಾತಿಹೊಂದು : ರೂಢಿಸಿದ ಸರ್ವ್ವೋಹನಾಸ್ಪದ ಪಾಡಱಿದು ಕಲಿಪಾರ್ಥಗಿತ್ತನು (ಶಂಕಕ. ೨೬-೭). ೩. ನೆಲಸು ; ಇರು : ಸುಡುಗಾಡ ಬೂದಿಯನೊಂದು ಶುನಿ ಮೆಟ್ಟಿಯೋಡುತುಂ ಬೇಡವಣೆಯೊಳ್ ಬೂದಿ ಪೊರೆದ ಕಾಲೂಱಲಾ ಬೂದಿ ಬೇಡನ ಪಣೆಯೊಳು ರೂಢಿಸಿರೆ (ಐಕೋಶ. ೦೪-೦೦೩).

**ರೂಢಿಸಿಕೊಳ್ಳು**=ಒಗ್ಗಿಸಿಕೊಳ್ಳು ; ಅಭ್ಯಾಸಮಾಡಿಕೊಳ್ಳು : ನಾನು ಲೇಖನ ಬರೆಯಲು ರೂಢಿಸಿಕೊಳ್ಳಲೇಬೇಕು (೨ಕೃಶ. ೨೬೩) ; ಕಾಲಕ್ಕೊಪ್ಪುವ ತತ್ತ್ವದೃಷ್ಟಿಯನ್ನು ರೂಢಿಸಿಕೊಳ್ಳುವ ಯತ್ನ . . . ಕಂಡುಬಂದಿದೆ (೩ಶ್ವೆದ. ೪. ಮುನ್ನುಡಿ). [ರೂಢಿ + - ಇಸು₃]

**ರೂಪ** (ನಾ). ೧. ಆಕಾರ ; ಆಕೃತಿ ; ಪರಿಜು : ವಿವರಿಸಲ್ ಸ್ಥೂಲವೆನಿಸುವ ದ್ರವ್ಯವೇ ರೂಪಮುವಿರತಂ ಪ್ರವಿವಿಕ್ತವೆನಿಪುದೇ ರುಚಿ (೦ಶಿತಂ. ೩೪-೪೬) ; ರೂಪವಾಗಬಲ್ಲ ಅರೂಪವಾಗಬಲ್ಲ ರೂಪ ಅರೂಪವೆರಡೂ ಆಗಬಲ್ಲ (ಪುರಂದ. ದಾ. ೪-೦೧೦-೦) ; ಜಗತ್ತೆಂಬುದು ಅಸ್ತಿ (ಇದೆ), ಭಾತಿ (ತೋರುತ್ತದೆ), ಪ್ರಿಯ (ಬೇಕೆನಿಸುವುದು), ನಾಮ (ಹೆಸರು), ರೂಪ (ಆಕಾರ) ಈ ಐದಂಶಗಳನ್ನು ಕೂಡಿದೆ (ಅಮೃತ. ೭-೦೭ ಟೀಕು). ೨. ಚೆಲುವು ; ಸೌಂದರ್ಯ : ವಸ್ತುವಿನಲ್ಲಿ ಸೌಂದರ್ಯದ ಆವಿರ್ಭಾವಕ್ಕೆ ಅನುಕೂಲ ಸ್ಥಿತಿಯೊಂದು ಮಾತ್ರ ಇರಬೇಕಾಗುತ್ತದೆ. ಇದನ್ನು ರೂಪವೆಂದು ಕರೆಯಬಹುದು (ಪಶ್ಚಕಾ. ೬೬). ೩. ಬಣ್ಣ ; ವರ್ಣ. ೪. ಪಶು ; ಜಾನುವಾರು : "ಮೃಗಸಮೂಹಂ ವರ್ಣ ರೂಪಾಂಕಿತಂ" (ಶಾಶಾಶ. ೦೨೦). ೫. ಐಶ್ವರ್ಯ ; ಸಂಪತ್ತು : 'ರೂಪ' ವೆಂದರೆ ಐಶ್ವರ್ಯವೆಂದೂ ಅರ್ಥವಾಗುತ್ತದೆ (ಶಾಂದಶ. ೪೩ ಅಡಿಟಿ). ೬. ಪರಮಾತ್ಮನ ದಿವ್ಯರೂಪವಾದ ದೇಹ : ರೂಪವೆಂದರೆ . . . ಪರಮಾತ್ಮನ ಶುದ್ಧ ಸತ್ತ್ವದ್ರವ್ಯಮಯವಾದ ದೇಹ (ಹಿಂದಶಾ. ೨೯೯). ೭. ಸ್ವಭಾವ ; ಸಹಜಗುಣ. ೮. ರೀತಿ ; ವಿಧ. ೯. ಪ್ರತಿಕೃತಿ ; ಪಡಿಯಚ್ಚು. ೧೦. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: ರಸೆ ಧರೆ ಇಳೆ ರೂಪಮೃಕವೊಂದಱ ನಾಮಂ (ವ್ಯವಹಾ. ೯). ೧೧. [ಕಾವ್ಯಮೀ] ದೃಶ್ಯಕಾವ್ಯ ; ರೂಪಕ. ೧೨. [ವ್ಯಾಕ] ಪ್ರಕೃತಿ ಅಥವಾ ಧಾತುಗಳಿಗೆ ಪ್ರತ್ಯಯವು ಸೇರಿ ಆಗುವ ಸ್ವರೂಪ: ಬೆಳ್, ಪೊಸ ಮೊದಲಾದ ಪ್ರಕೃತಿಗಳಿಗೆ ದು ತುಗಳು ಸೇರಿ ಬಿಳಿದು ಪೊಸತು ಮೊದಲಾದ ರೂಪಗಳು ಬಂದಿವೆ (ಕೃಶಿಶ. ೦೪). ೧೩. [ತರ್ಕಶಾ] ವೈಶೇಷಿಕದ ಇಪ್ಪತ್ತುನಾಲ್ಕು ಗುಣಗಳಲ್ಲಿ ಒಂದು. [ಸಂ.]

**ರೂಪಂದಳೆ** (ಕ್ರಿ). ರೂಪವನ್ನು ತಾಳು ; ಆಕಾರವನ್ನು ಧರಿಸು : ಪಂಚೇಂದ್ರಿಯವೃತ್ತಿಗಳೆ ಬೇಱೆಬೇಱೆ ರೂಪಂದಳೆದುವೆನಿಪಂಗುಳಿಗಳಿಂ ಮನುಗೊಳಿಸುವ ಕರಕಮಲಂಗಳಂ ಚಂದ್ರಾಪೀಡಂ ನೀಡೆ (ಕಾದಂಕಾ. ೩೬). [ರೂಪ + ತಳೆ₁]

**ರೂಪಂಬೆಱು** (ಕ್ರಿ). ಚೆಲುವನ್ನು ಪಡೆ ; ಸುಂದರವಾಗು : ಗಿರಿಜೆಗುತ್ತರೋತ್ತರರೂಪಂಬೆತ್ತ ಘನಯೌವನಂ ಸಾರುತ್ತಿರ್ದಪುದು (ಗಿಂಶ. ೪-೩೪). [ರೂಪ + ಪೆಱು₁]

**ರೂಪಕ** (ನಾ). ೧. ಆಕಾರ ; ಪರಿಜು. ೨. ಚೆಲುವು ; ಸೌಂದರ್ಯ ೩. ಹೋಲಿಕೆ; ಸಾದೃಶ್ಯ : ನರನಾರೀಪರಿಚುಂಬಿರೂಪಕಮದೇನಿಂಬಾಯ್ತೊ ಬಂಧೂಕಬಂಧುರಪುಷ್ಪಾಧರದಿಂದಮುಟ್ಟ ಮಧುಗಳ್ . . . ವಿಡಂಬಿಸೆ (ರೀಲಾಪ. ೦೧-೬೮). ೪. ರೀತಿ ; ವಿಧ : ಆರ್ಯರು ತಮ್ಮ ಧರ್ಮಾಚರಣೆಯ ಪವಿತ್ರಪ್ರತೀಕವಾದ ಯಜ್ಞದ ರೂಪಕದಿಂದಲೇ ಪುರುಷನನ್ನು ಭಾವಿಸಿ ಸೃಷ್ಟಿಯನ್ನು ವರ್ಣಿಸಿರುವುದು ಆಶ್ಚರ್ಯವೇನೂ ಅಲ್ಲ (ಭಾರಿದ. ೨೬). ೫. ಒಂದು ರೂಪಾಯಿಯ ನಾಣ್ಯ. ೬. [ಕಾವ್ಯಮೀ] ಅಭಿನಯದ ಸಹಾಯದಿಂದ ಪ್ರದರ್ಶಿಸುವ ನಾಟಕ ಮುಂತಾದುವು ; ದೃಶ್ಯಕಾವ್ಯ : ಅಭಿನಯದ ಸಹಾಯದಿಂದ ಪ್ರದರ್ಶಿಸಲ್ಪಡಬಹುದಾದ ಕಾವ್ಯಗಳಿಗೆ ದೃಶ್ಯ (ಎಂದರೆ ನೋಡಬಹುದಾದ) ಕಾವ್ಯಗಳೆಂದೂ ರೂಪಕಗಳೆಂದೂ ಹೆಸರು (ಕೃಶಿಶ. ೨೦೩) ; ಪ್ರಾಚೀನ ಹಿಂದೂ ನಾಟಕವು ಅಂಗವಿನ್ಯಾಸ, ಭಂಗಿ, ವೇಷಭೂಷಣ, ನೃತ್ಯಗೀತಗಳ ಮೂಲಕ ನಿರ್ವಹಿಸಲ್ಪಡುತ್ತಿದ್ದ ಕಾರಣ, ಅದಕ್ಕೆ ರೂಪಕ ಎಂಬ ಹೆಸರೇ ಬಂತು (ಭಾರಿದ. ೩೯೯). ೭. ಅರ್ಥಾಲಂಕಾರಗಳಲ್ಲಿ ಒಂದು ; ಉಪಮಾನ, ಉಪಮೇಯ ವಸ್ತುಗಳನ್ನು ಒಂದರಂತೆ ಮತ್ತೊಂದು ಎಂದು ವರ್ಣಿಸದೆ ಒಂದು ಮತ್ತೊಂದು ಎಂದೇ ವರ್ಣಿಸುವುದು : ರೂಪಕಮೆಂಬುದು ಪೆಱವರ ರೂಪಾದಿಗುಣಂಗಳಭೇದೋಕ್ತಿಗಳಿಂ ರೂಪಿಸುವುದಿಂತು ಬಾಹುಲತಾಪಾದಾಂಬುಜಮುಖೇಂದುನಯನನಾಳಿಗಳಿಂ (ಕವಿರಾ. ೩-೦೨) ; ಪ್ರತಿವಸ್ತೂಪಮೆ ಸಾಮ್ಯಪ್ರತೀತಿಯಿಂದಂ ಸಮಾನವಸ್ತುನ್ಯಸನಂ ಪ್ರತಿಪಾದಿಸುವುದಭೇದಾತ್ಮತೆಯಿಂದುಪಮೆಯನದಲ್ತೆ ರೂಪಕಮಕ್ಕುಂ (ಕಾವ್ಯಾವ. ೬೬೩). ೮. ಒಂದು ವಿಷಯವನ್ನು ಮನಸ್ಸಿಗೆ ನಾಟುವಂತೆ ಅದೇ ರೀತಿಯ ಮತ್ತೊಂದು ವಿಷಯದ ಮೂಲಕ ಹೇಳುವ ಕಥನ : ಈ ಹೊಸ ಅರ್ಥದಲ್ಲಿ 'ರೂಪಕ' ಎಂಬುದು ಇಂಗ್ಲಿಷಿನ 'ಎಲಿಗರಿ' (Allegory) ಎಂಬುದಕ್ಕೆ ಪರ್ಯಾಯವಾಗಿದೆ (ಕ್ರೀಕೃಕೃ. ೦೦೬). ೯. [ಸಂಗೀತ] ಒಂದು ಬಗೆಯ ತಾಳ : ಧ್ರುವ ಮಠ್ಯ ರೂಪಕ . . . ಎಂಬ ಸಪ್ತತಾಳಭೇದಂಗಳ್ (ಶಿವಕೆ. ೨೩೪) ; ಏಕತಾಳ ತ್ರಿಪುಟೆ ರೂಪಕ ಹೀಗೆ ಆರೆಂಟು ತಾಳಗಳನ್ನು . . . ಅನುಕರಿಸಬಹುದು (ಶಾಂಕ್ಷ. II. ೯೬೦). "ಅಲಂಕಾರದೊಳು ನಾಟ್ಯದೊಳು ಧೂರ್ತನೊಳು ಕಾವ್ಯದೊಳು ತಾಳಮಾನದೊಳು ರೂಪಕವೆಂಬ ನಾಮಮಕ್ಕುಂ" (ಶಬ್ದಂಗರಾ. ೦೩೪-೬೨). [ಸಂ.]

**ರೂಪಕತಾಲ, ರೂಪಕತಾಳ** (ನಾ). = ರೂಪಕ ೯. **ರೂಪಕತಾಳ** : ಧ್ರುವತಾಳ, ಮಠ್ಯತಾಳ, ರೂಪಕತಾಳ . . . ಏಕತಾಳ ಇವೇ ಸೂಳಾದಿ ಸಪ್ತತಾಳಗಳು (ಸಂಗೀತಂ. ೩೯) ; ಅಲ್ಲಿ ಪದ್ಯದಲ್ಲಿ ಬರುವ ಗಣಗಳು ಮೂರು ಮಾತ್ರೆಯವಾದರೆ ರೂಪಕತಾಳವಾಗುವುದು (ಸಂಕೋಲ. ೧೨೦). [ಸಂ.]

**ರೂಪಕತಾಳ** ' ರೂಪಕತಾಲ ' ನೋ.

**ರೂಪಕರೂಪಕ** (ನಾ). [ಕಾವ್ಯಮೀ] ರೂಪಕದಲ್ಲಿ ಒಂದು ಬಗೆ; ಒಂದು ರೂಪಕವನ್ನು ಮತ್ತೊಂದು ರೂಪಕವನ್ನಾಗಿ ಭಾವಿಸಿ ಅತಿಶಯತೆಯನ್ನುಂಟುಮಾಡುವುದು : ರೂಪಕರೂಪಕಕ್ಕೆ-ತರುಣಿಯ ಮುಖೇಂದು ಕಮಲಾಕರದೊಳ್ ದೃಗ್ಗೋಳಕಾಂತಿ ನೀಳಾಬ್ಜಮಳಂಕರಿಸೆ ವಿಟರಾಹು ಭೃಂಗಂ ಬರೆ ಪೀರ್ದತ್ತಧರಚಂದ್ರಿಕಾಪರಿಮಳಮಂ (ಕಾವ್ಯಾವ. ೬೯೯). [ಸಂ.]

**ರೂಪಕಾತಿಶಯೋಕ್ತಿ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ಬಗೆ : ಉಪಮಾನೋಪಮೇಯಗಳಲ್ಲಿ ಉಪಮೇಯವನ್ನು ಹೇಳದೆ ಇದ್ದರೂ ಅದು ಗಮ್ಯವಾಗಿ ಅದಕ್ಕೂ ಉಪಮಾನಕ್ಕೂ ಅಭೇದವು ಕಂಡುಬರುತ್ತಿದ್ದರೆ ಅದು ' ರೂಪಕಾತಿಶಯೋಕ್ತಿ ' (ಕೃಶಿಶ. ೨೬೬). [ಸಂ.]

**ರೂಪಕಾಪಹ್ನುತಿ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ಬಗೆ : ವದನಮಿದಲ್ತಂಬುರುಹಂ ಮದಲೋಲವಿಲೋಚನಂಗಳಲ್ಲಮಿವಳಿಗಳ್ ಮುದಮಲ್ಲಿದು ವಿಕಸನಮೆಂಬದನಿಂ[ಬೆ]ನೆ ಬಗೆಗೆ ರೂಪಕಾಪಹ್ನುತಿಯಂ (ಕಾವ್ಯಾ. ೩-೨೪). [ಸಂ.]

**ರೂಪಕಾಲಂಕಾರ** (ನಾ). = ರೂಪಕ ೭ : ಉಪಮಾನ ಉಪಮೇಯ ವಸ್ತುಗಳನ್ನು 'ಒಂದರಂತೆ ಮತ್ತೊಂದು ಇದೆ' ಎಂದು ಅವುಗಳ ಹೋಲಿಕೆ ಕಾಣುವಂತೆ ವರ್ಣಿಸದೆ 'ಒಂದು ಮತ್ತೊಂದೆಯೇ' ಎಂದು ವರ್ಣಿಸಿದರೆ ಅದು ರೂಪಕಾಲಂಕಾರವಾಗುತ್ತದೆ (ಕೃಬಿಶಿ. ೨೬೩). [ಸಂ.]

**ರೂಪಗೊಳಿಸು** (ಕ್ರಿ). ರೂಪಿಸು ; ರಚಿಸು : ದೇಶಾಂಗೀಕೃತವನ್ನು ರೂಪಗೊಳಿಸುವುದಕ್ಕಾಗಿ ಮಂತ್ರಿಸಂಪುಟ (ರಾಜ್ಯಶಾ. ೩೬).
[ರೂಪ + ಕೊಳ್$_1$ + —ಇಸು$_3$]

**ರೂಪಗೊಳ್ಳು** (ಕ್ರಿ). ಆಕಾರವನ್ನು ತಾಳು; ರಚನೆಯಾಗು: ಈ ಸ್ವಭಾವ ಗುಣ ನಮ್ಮ ಜನದಲ್ಲಿ ರೂಪಗೊಂಡಿತ್ತು (ರಾಜ್ಯಶಾ. ೦೩); ಗಿಡದ ಅರೈಕೆಯನ್ನು ಅನುಸರಿಸಿ ಕಾಯಿಗಳ ಗಾತ್ರ ರೂಪಗೊಳ್ಳುತ್ತೆ (ತರಕಾ. ೨೩).
[ರೂಪ + ಕೊಳ್ಳು$_1$ ( < ಕೊಳ್$_1$)]

**ರೂಪಚಿತ್ರ** (ನಾ). [ಚಿತ್ರಶಾ] (ಮೂಲವಸ್ತುವಿನ) ಆಕಾರದ ಪ್ರತಿಕೃತಿ : ಈತನಕ ಯುರೋಪಿನ ಚಿತ್ರಕಾರರು ರೂಪಚಿತ್ರದ ಹಾದಿಯನ್ನು ಹಿಡಿದಿದ್ದರು (ಶಾಲಕ್ಷ. II, ೬೨೬). [ಸಂ.]

**ರೂಪಜೀವನೆ** (ನಾ). ಸೌಂದರ್ಯದಿಂದ ಜನರನ್ನು ವಶಪಡಿಸಿಕೊಂಡು ಜೀವಿಸುವವಳು ; ಸೂಳೆ ; ವೇಶ್ಯೆ : "ರೂಪಿಣೀ, ರೂಪಜೀವನಾ, ಈ ೨ ಸೂಳೆ" (ಕಾಲಿಶ್ಯ. ೨೯೦). [ಸಂ. ರೂಪಜೀವನಾ]

**ರೂಪಜೀವೆ**, ರೂಪುಜೀವೆ (ನಾ). = ರೂಪಜೀವನೆ : "ರೂಪಜೀವಾ, ವೇಶ್ಯಾ, ಗಣಿಕಾ, ಪಣ್ಯಾಂಗನಾ, ಕ್ಷುದ್ರಾ – ಈ ೫ ಸೂ(ಳ್)ಳೆ" (ಶಬ್ದಾಭು. ೬೦–೩೩೩); ಸೊಬಗಾಂತಿಕ್ಷುಚಾಪನಾದುಂಬೊಲದಂತೆಸೆದಿಹ ವಲ್ಲಿ ರೂಪ[ಶಾಶಾಂ. ಪು]ಜೀವೆಯರ ಕೇರಿಗಳು (ರಾಘಪಾಂ. ೩–೬೩). **ರೂಪುಜೀವೆ** : ದೂತಿಯರು ನೆಟ್ ಕಾಣುತಾ ರೂಪುಜೀವೆಗದ ತೋಟ್ ಚೋದ್ಯಂಬಟ್ಟು (ಶ್ರೀಶಚ. ೯–೦೯). [ < ಸಂ. ರೂಪಾಜೀವಾ ]

**ರೂಪಣ** (ನಾ). ೧. ಆಕಾರವನ್ನು ಕೊಡುವಿಕೆ ; ರೂಪಿಸುವಿಕೆ. ೨. ಚಿತ್ರಣ ; ಚಿತ್ರಿಸುವಿಕೆ : ಈ ವ್ಯಕ್ತಿತ್ವದ ರೂಪಣದಲ್ಲಿ ಒಂದು ದಿವ್ಯ ಸಂಕಲ್ಪದ ಅಮೃತಸಂಸ್ಪರ್ಶವನ್ನು ಸ್ವಾಮಿದಾಸರು ಅನುಭವಿಸಿದ್ದರು (ಸಮಜೀ. ೦೦೬೭). ೩. ಹೇಳುವುದು; ತಿಳಿಸುವಿಕೆ. [ಸಂ.]

**ರೂಪದ್ವಿತ್ವ** (ನಾ).. ಒಂದು ಪದವನ್ನು ಎರಡು ಸಲ ಹೇಳುವುದು; ದ್ವಿರುಕ್ತಿ: ಚಾಪಲ ವೀಪ್ಸಾಭೀಕ್ಷ್ಣ್ಯ ಸಮೀಪಾನುಕೃತಿ ಕ್ರಿಯಾಸಮಭಿಹಾರಾದಿ ಖ್ಯಾಪನೆಯೊಳ್ ಪದಕಕ್ಕಂ ರೂಪದ್ವಿತ್ವಂ ಯಥಾಪ್ರಯೋಗಾನುಗತಂ (ಶಾಬ್ದ್ಯಕ. ೨೬೭). [ಸಂ.]

**ರೂಪಧಾರಿ** (ನಾ). ರೂಪವನ್ನು ಧರಿಸಿದವನು ; ಆಕಾರವನ್ನು ತಾಳಿರುವವನು : ಲಾವುಕ ಸಿಂಹ ಕೇಕಿ ವಾನರ ಮೃಗರೂಪಧಾರಿ ಸುರಕೋಟಿ ವಿನೋದದ ತೋಟಿಯೊಳ್ ಚರಾಚರಗುರುವಿಂಗೆ ಪೊಟ್ಟು ಗಳೆಯುತ್ತಿರೆ (ಶಾಂತಿಪು. ೦೦–೯೦). [ಸಂ. ರೂಪಧಾರಿನ್]

**ರೂಪನಿದಾನ** (ನಾ). ಚೆಲುವಿನ ಕಣಿಯಂತಿರುವವನು; ಸುಂದರ : ನೀರೊಳಗಳ್ಕಿದ ನೆವದಿಂದಾ ರೂಪನಿದಾನನಂ ಮೃಗಾಕ್ಷಿಯರಪ್ಪರ್ ಸಾರೆ ಬಿಡುತಂದು ಕೂಡಲ್ (ಶಾಂತಿಪು. ೬–೯೭). [ರೂಪ+ ನಿದಾನ$_1$]

**ರೂಪನಿಷ್ಪತ್ತಿ** (ನಾ). ೧. ಆಕಾರವು ಹುಟ್ಟುವಿಕೆ ; ರೂಪವು ಕಾಣಿಸುವಿಕೆ : ಸಾಮಾನ್ಯನಯನಗಳಿಗೆ ಬೇಕಾದುದು ಬರಿ ಬೆಳಕಲ್ಲ – ಕತ್ತಲು ಬೆಳಕಿನ ಸರಿಬೆರಿಕೆ. ಅಲ್ಲಿಯೆ ಸಾಮಾನ್ಯರಿಗೆ ರೂಪನಿಷ್ಪತ್ತಿ (ಶಾಹಿಶಿ. ೩೩). ೨. ಆಕಾರವನ್ನು ಚಿತ್ರಿಸುವಿಕೆ ; ಚಿತ್ರವನ್ನು ಬರೆಯುವಿಕೆ : ಅವನ ಕರ್ಮಕೌಶಲ್ಯವೆಲ್ಲವೂ ರೂಪನಿಷ್ಪತ್ತಿಯಲ್ಲಿ ತಲ್ಲೀನವಾಗಿತ್ತು (ಶಿಲಾಶ. ೩೦). ೩. [ವ್ಯಾಕ] ಶಬ್ದಗಳು ಈಗಿನ ರೂಪವನ್ನು ಹೇಗೆ ಪಡೆದುವು ಎಂದು ಗುರುತಿಸುವುದು,—ನಿರೂಪಿಸುವುದು : ಹಿಂದಿನ ಪ್ರಕರಣಗಳಲ್ಲಿ ಪದಗಳ ರೂಪನಿಷ್ಪತ್ತಿಯನ್ನೂ ಅವುಗಳ ಪ್ರಯೋಗದ ಸಾಮಾನ್ಯಾಂಶಗಳಲ್ಲಿ ಕೆಲವನ್ನು ಹೇಳಿದೆ (ಕೃಬಿಶಿ. ೩೩); ಕೆಮ್ಮಣ್ಣು, ಕೇಸಕ್ಕಿ . . . ಇವುಗಳ ರೂಪನಿಷ್ಪತ್ತಿಯನ್ನು ದೊಡ್ಡ ವ್ಯಾಕರಣಗಳಿಂದ ತಿಳಿದುಕೊಳ್ಳಬೇಕು (ಮಕ್ಕಳ ಶಿ. ೦೯೬). [ಸಂ.]

**ರೂಪಪರಾವರ್ತನ** (ನಾ). ರೂಪವನ್ನು ಬದಲಾಯಿಸಿಕೊಳ್ಳುವುದು ; ರೂಪಾಂತರ : ಅಜ್ಞಾತವಾಸಕ್ಕೆ ಚಿಂತಿಪೊಡಿನ್ನನ್ನವು ಕಾಣಮಿಲ್ಲದೆಟ್ ನುಂತಾರ್ಗಪ್ಪೊಡಂ ಮಿಕ್ಕ ರೂಪಪರಾವರ್ತನದಿಂ ವಿರಾಟಪುರಮಂ ಪೊಕ್ಕು ರ್ದದಂ ನೀಗೆವೇ (ಕಂಶಭಾ. ೬–೩೦). [ಸಂ.]

**ರೂಪಪರಾವರ್ತನವಿದ್ಯೆ** (ನಾ). ಶರೀರಾಕೃತಿಯನ್ನು ಮಾರ್ಪಾಟು ಮಾಡುವ ವಿದ್ಯೆ ; ರೂಪವನ್ನು ಬದಲಾವಣೆ ಮಾಡುವ ವಿದ್ಯೆ : ರೂಪಪರಾವರ್ತನವಿದ್ಯೆಯಿಂ ತುರಗರೂಪದಿಂ ಚರಂ ಖೇಚರಂ (ಕಂಠಾಪಶಾ. ೯–೦೦೩) ; ತನಗೆ ವಶವಾಗಿದ್ದ ರೂಪಪರಾವರ್ತನವಿದ್ಯೆಯಿಂದ ನಾನಾ ರೂಪಗಳನ್ನು ಧರಿಸುವುದಲ್ಲದೆ . . . ಶತ್ರುಗಳನ್ನು ನಡುಗಿಸುತ್ತಾನೆ (ಸಂಕಾಂಶ. ೦೯೨). [ಸಂ. ರೂಪಪರಾವರ್ತನವಿದ್ಯಾ]

**ರೂಪಪರಾವರ್ತನೆ** (ನಾ). ಮಾರ್ಪಾಟು; ಬದಲಾವಣೆ; ರೂಪಾಂತರ: ಉದಾತ್ತಗುಣಸನ್ನಿಕರ್ಷದಿಂದ ಪ್ರಮಿಥ್ಯೂಸನ ಪಾತ್ರದ ರೂಪಪರಾವರ್ತನೆ ಅದ್ಭುತವಾಗಿ ನಡೆದಿದೆ (ಐಶ್ವಕ್ರ. VI. ಮುಖ್ಯಾ). [ಸಂ. ರೂಪಪರಾವರ್ತನ]

**ರೂಪಪಲ್ಲಟ** (ನಾ). [ವ್ಯಾಕ] ಪದದ ಒಂದು ರೂಪಕ್ಕೆ ಬದಲಾಗಿ ಮತ್ತೊಂದು ರೂಪವು ಬರುವುದು : ರೂಪಪಲ್ಲಟ – (i) ಕ್ರಿಯಾಪದದ ಒಂದು ರೂಪಕ್ಕೆ ಪ್ರತಿಯಾಗಿ ಮತ್ತೊಂದು ರೂಪವು ಕೆಲವು ವೇಳೆ ಬರುವುದುಂಟು (ಕೃಬಿಶಿ. ೩೯). [ಸಂ.]

**ರೂಪಪ್ರವೀಚಾರ** (ನಾ). [ಜೈನ] ದೇವವನಿತೆಯರ ಅವಲೋಕನಮಾತ್ರದಿಂದಲೇ ಇಂದ್ರಿಯಜನಿತ ಸುಖವನ್ನು ಹೊಂದುವ ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠಕಲ್ಪಗಳ ದೇವತಾವರ್ಗ : ಅಲ್ಲಿಯ ದಿವಿಜರೆಲ್ಲಂ . . . ರೂಪಪ್ರವೀಚಾರರಪ್ಪರ್ (ಸುಕುಮಾ. ೦೦–೩೩ ಶ). [< ಸಂ. ರೂಪಪ್ರವಿಚಾರ]

**ರೂಪಮದ** (ನಾ). ಎಂಟು ಬಗೆಯ ಮದಗಳಲ್ಲಿ ಒಂದು : ತನ್ನ ರೂಪವೇ ಮಿಗಿಲಾದುದು ಎನ್ನುವ ಅಹಂಕಾರ : ಕುಲಮದವೊಂದು ರೂಪಮದವೊಂದು . . . ಅಲ್ಲದೆ ಬೇಟ್ ರಾಗಮುಗ್ಗಲಿಸಿದ ದೋಷದೃಷ್ಟಿ ವಿಷಯಾತುರರೇಂ ಗಡ ಮುಂದುಗಾಣ್ಬರೇ (ಕಂಠಾಪಶಾ. ೬–೦೪) ; ಅನ್ನಮದ ಅರ್ಥಮದ ಅಖಿಳವೈಭವದ ಮದ ಮುನ್ನ ಪ್ರಾಯದ ಮದವು ರೂಪಮದವು (ಪುರಂಶ. ಧಾ. ೨–೦೬–೦). 'ಅಷ್ಟಮದ' ಪರಾ. [ಸಂ.]

**ರೂಪರೇಖೆ** (ನಾ). (ಕಾರ್ಯ, ಯೋಜನೆ ಇತ್ಯಾದಿಗಳ) ಸ್ಥೂಲ ಆಕಾರ ; ಬಾಹ್ಯರೇಖೆ : ಇದರ ಪ್ರಾಚೀನತೆಯ, ಪೂರ್ವಸ್ಥಿತಿಯ ರೂಪರೇಖೆಗಳ ವಿವರಗಳು ಕತ್ತಲೆಯಲ್ಲಿ ಮುಳುಗಿಹೋಗಿರುವುದು (ದ್ರಾಬಿಶಿ. ೩೦) ; ರಾಜ್ಯವ್ಯವಸ್ಥೆಯ ರೂಪರೇಖೆಯನ್ನು ಹಿಂದಿನ ಪ್ರಕರಣದಲ್ಲಿ ಕೊಂಚಮಟ್ಟಿಗೆ ನೋಡಿದ್ದಾಗಿದೆ (ರಾಜ್ಯಶಾ. ೯೩). [ಸಂ. ರೂಪರೇಖಾ]

**ರೂಪರೇಷೆ** (ನಾ). = ರೂಪರೇಖೆ : ಸಂಸ್ಥೆಯ ಕಾರ್ಯಕಲಾಪಗಳ ರೂಪರೇಷೆಯು ನಿಶ್ಚಯಿಸಲ್ಪಟ್ಟಿತು (ಪೂರುಉ. ೩ ಮುಖ್ಯಾ); ಮುಂದಿನ ಕಾರ್ಯಕ್ರಮದ ರೂಪರೇಷೆಗಳನ್ನು ಹಾಕಿಕೊಂಡನು (ಐಂಗಾಹ. ೩೯).
[ಸಂ. ರೂಪರೇಖಾ]

**ರೂಪವಂತ** (ನಾ). ಚೆಲುವ ; ಸುಂದರ : ಅರಿಂದಮನು ಚಿತ್ರವನ್ನು ನೋಡಿ ರೂಪವಂತನೆಂದೂ . . . ಮನದಲ್ಲಿ ಸಿದ್ಧಾಂತವಮಾಡಿಕೊಂಡ ಬಳಿಕ . . . ಪರೀಕ್ಷಿಸಲಾರಂಭಿಸಿದನು (ಪಪ್ಪಕೇ. ೬೦) ; ಮನ್ಮಥನಂತಹ ರೂಪವಂತನೂ ಅಭಿಮನ್ಯುವಿನಂತಹ ವೀರನೂ ಗುಣವಂತನೂ ಉದಾರಿಯೂ ಆದವನು ತನ್ನ ಕೈಹಿಡಿದನು (ಶಾಂತಲಾ. ೨೦೬).
[< ಸಂ. ರೂಪವತ್]

**ರೂಪವತಿ** (ನಾ). ಚೆಲುವೆ ; ಸುಂದರಿ : "ಸುಂದರಿ ಸುತನು ರೂಪವತಿ" (ಪಟ್ಟುಕೋ. ೫೨-೫) ; ರೂಪವತಿ ತಾನೇ ಶತ್ರು ಗಂಡಂಗೆ ಮೋಹ ಮೊದಿಗಾ ಯವ್ವನೆ ಶತ್ರುವೈ (ಸೋಮೇಶ. ೯೬) ; ವರವಚನೆ ಭಾವೆ ಸಿಂಗರಕಾರ್ತಿ ರೂಪ [ಪಾಠಾಂ. ವು]ವತಿ ಸುರತಪ್ರವೀಣೆ . . . ಕನ್ನಡಿತಿ (ಶಪವ. ೬-೪) ; ರೂಪವತಿಯಾದ ಒಂದು ಹುಡುಗಿ ಕೇರಿಯಲ್ಲಿರುವುದು ಅಪಾಯ (ದೇಪಹಂ. ೯೬). [ಸಂ. ರೂಪವತೀ]

**ರೂಪವಿಕ್ರಯಿ** (ನಾ). = ರೂಪಜೀವನೆ : ಜಯಂತ, ನಿನ್ನ ರೂಪಾ ರೂಪವಿಕ್ರಯಿಯೆಂದು ತಿಳಿಯುವೆಯಾ (ಜಯಂತ. ೨೦೪). [ಸಂ. ರೂಪವಿಕ್ರಯಿಯಾ]

**ರೂಪವಿದ್ಯಾಧರ** (ನಾ). ಚೆಲುವಿನಲ್ಲಿ ದೇವತೆಯಂತೆ ಇರುವವನು ; ಬಹಳ ಸುಂದರನಾದವನು : ಓರ್ವಳ್ ವಿಮುಗ್ಧೆ ರೂಪವಿದ್ಯಾಧರನ ರೂಪಾತಿಶಯವಿಲೋಕನವಾತ್ರದಿಂ . . . ಕಂಡು ವಿಸ್ಮಯಾಪನ್ನಮಾನಸೆ ಯಾಗಿ (ಸುಕುಮಾ. ೧೧-೦೪ ವ). [ಸಂ.]

**ರೂಪವಿದ್ಯಾಧರಿ** (ನಾ). ಚೆಲುವಿನಲ್ಲಿ ವಿದ್ಯಾಧರಸ್ತ್ರೀಯಂತೆ ಇರುವವಳು ; ಬಹಳ ಸುಂದರಿ : ವಿಶಿಷ್ಟಜನಕಾಮಧೇನು ಆಶ್ರಿತಜನ ಕಲ್ಪಲತೆ ರೂಪವಿದ್ಯಾಧರಿ ಕಲಿಕಾಲಸರಸ್ವ[ತಿ] (ಸೌಇಇ. XX, ೨೩-೭; 1029); ಪದನಖಕೇಶಾಗ್ರಂಬರಮೊದವಿದ ಮಾನಪ್ರಮಾಣಲಕ್ಷಣಮಂ [ತು][ವ್ವಿ]ದ ಚತುರಾಸ್ಯಂಗಂ ಬಾರದು ಬರೆಯಲ್ ರೂಪು ರೂಪವಿದ್ಯಾಧರಿಯ (ಸೌಇಇ. XX, ೪೪-೫೨; 1076 ?). [ಸಂ. ರೂಪವಿದ್ಯಾಧರೀ]

**ರೂಪವಿಹೀನ** (ನಾ). ರೂಪವಿಲ್ಲದ ವ್ಯಕ್ತಿ ; ಕುರೂಪಿ: ರೂಪವಿಹೀನರಂ ಕುಟಿಲಬುದ್ಧಿಗಳಂ . . . ನಿರ್ಮಿಸಿದುತ್ಕಟಚಿಂತೆಯಿಂದೆ ತತ್ಪಾಪಮಡಂಗ ಲೆಂದು ಪಡೆದಂ ದಮಯಂತಿಯನಬ್ಜಸಂಭವಂ (ನಳಶಂ. ೯೦). [ಸಂ.]

**ರೂಪವಿಹೀನೆ** (ನಾ). ರೂಪವಿಲ್ಲದವಳು ; ಕುರೂಪಿ : ರೂಪವಿಹೀನೆ ರೂಪಸಿಯೊಳಿರ್ದು ತನಗಿಲ್ಲದಾ ಚೆಲ್ವಿನಲಿ ಲೋಲಾಡಿದಳ್ (ಶ್ರೀರಾಮಪ. ೨೩-೬೦೪). [ಸಂ. ರೂಪವಿಹೀನಾ]

**ರೂಪಸಾಧಾರಣ** (ನಾ). [ಸಂಗೀತ] ಒಂದು ರಾಗದ ಹೆಸರು : ನರ್ತಕಿ ಕಕುಭ ಷಡ್ಜಕೌಶಿಕ ಭ್ರಮಾಳ ಪಂಚಮಭ್ರಮಾಳ ಪಂಚಮಗಾಂಧಾರ ರೂಪಸಾಧಾರಣವೆಂಬೇಳು ರಾಗಂಗಳ್ (ವಿವೇಕ. ೦೬೭). [ಸಂ.]

**ರೂಪಸಿ** (ನಾ). ಚೆಲುವೆ ; ರೂಪವತಿ : ರೂಪವಿಹೀನೆ ರೂಪಸಿ ಯೊಳಿರ್ದು ತನಗಿಲ್ಲದಾ ಚೆಲ್ವಿನಲಿ ಲೋಲಾಡಿದಳ್ (ಶ್ರೀರಾಮಪ. ೨೩-೬೦೪); ಆ ನಡುಗಡ್ಡೆಯ ಅಧಿರಾಣಿಯಿರಬೇಕು ಆ ಅಪೂರ್ವವಿಚಿತ್ರರೂಪಸಿ (ನಿಶಾಂ. ೩೬).

[ < ಸಂ. ರೂಪಸ್ವಿನೀ./ ತೆಲು. ರೂಪಸಿ./ಹಿಂ. ರೂಪಸೀ ]

**ರೂಪಸ್ಕಂಧ** (ನಾ). [ಬೌದ್ಧ] " ರೂಪಸ್ಕಂಧವೆಂದರೆ — ಕಣ್ಣು ಕಿವಿ ಮೂಗು ನಾಲಗೆ ದೇಹ ಎಂಬ ಐದು ಇಂದ್ರಿಯಗಳು " (ಹಿಂದಸಾ. ೨೪): ವಿಷಯದ ಆಕಾರವನ್ನು ಹೊಂದಿದ ಪ್ರವೃತ್ತಿವಿಜ್ಞಾನಕ್ಕೂ ತಮ್ಮ ವಿಷಯಗಳಿಂದ ಸಹಿತಗಳಾದ ಇಂದ್ರಿಯಗಳಿಗೂ ರೂಪಸ್ಕಂಧವೆಂದು ಹೆಸರು (ಛಾತತ್ತ್ವ. ೨೦೬). [ಸಂ.]

**ರೂಪಸ್ತವ** (ನಾ). ಸೌಂದರ್ಯದ ಹೊಗಳಿಕೆ ; ರೂಪವನ್ನು ಕುರಿತ ಸ್ತುತಿ : ಫಣಿಪ್ರಭುಗಮೆತ್ತಮತ್ತಳಗಮಲ್ತೆ ರೂಪಸ್ತವಂ ಗುಣಸ್ತವ ಮುದಾತ್ತವೃತ್ತಭವದೀಯವಸ್ತುಸ್ತವಂ (ಆದಿಪು. ೦೩-೯೦) ; ಶಚೀಪತಿಯುಂ . . . ಬಂದನೇಕವಸ್ತುಸ್ತವರೂಪಸ್ತವಗುಣಸ್ತವಂಗಳಿಂ ಸ್ತುತಿಯಿಸಿ (ಶಾಂತಿಪು. ೦೪-೯೯ ವ). ' ಗುಣಸ್ತವ ', ' ವಸ್ತುಸ್ತವ ' ಪರಾ. [ಸಂ.]

**ರೂಪಳಿ** ' ರೂಪಟು ' ನೋ.

**ರೂಪಟು**, ರೂಪಳಿ, ರೂವಳಿ, ರೂವಟು (ಕ್ರಿ). ೧. ರೂಪವು ನಾಶವಾಗು ; ವಿರೂಪಗೊಳ್ಳು : ಇನರಥಹತಿಯಿಂ ನೆಗೆದ ಗಗನ ಧಾತುಸ್ಥಳಿರಜಂಗಳಿಂ ರೂಪಟಿದತ್ತೆನೆ ಸಂಜೆ ಕೆಂಪನುಟಿದಿರೆ (ಜಗಪು. ೦೬-೯೬); ಮಣ್ಮಟು — ರೂಪಟಿದ ಸಾವು (ಕವಿಮ. ಕಂ. ೦). ೨. ರೂಪವನ್ನು ನಾಶಗೊಳಿಸು ; ವಿರೂಪಗೊಳಿಸು : ಸಗ್ಗಮದು ಕಟುರ್ಪರ್ಪ ರೂಪಟುವ ಪೀಡೆಯನ್ . . . ಬಣ್ಣಿಸಿದ ನೀನಯಂ, ನೀನಾರ್ಗೆ ಪೇಟುಯ್ ? (ಶಿರಿಕೃ. ೩೧-೬೬೨). **ರೂಪಳಿ** : ೧. ತೊಸ್ತುವಿಡಿ ದಾವರಿಸಿ ರೂಪಳಿದಿಂತಿರುತ್ತಿರಲ್ (ಬಸಪು. ೫೭-೫೭) ; ಉಟಿ ರೂಪಳಿದಂ ರತಿರಾಜಂ (ಹರಿಶ್ಚಂ. ೬-೩೦). **ರೂವಳಿ** : ೧. ಇರುಳ ಹಾವಸೆಯಂತೆ ರೂವಳಿದು ತೇಲುತಿವೆ . . . ಹೊಂಗೆ ಹಿಪ್ಪೆ (ಗಜೇಶ. ೨೪-೭). **ರೂವಟು** : ೧. ರೂವಟುಯೆ . . . ಸೂಕ್ಷ್ಮಸಾಂಪರಾಯಕ್ಷಪಕಂ ಭಾವತರವಾರಿಯಿಂದಷ್ಟಾವಿಂಶತಿ ಮೋಹಬಳಮನುನ್ಮೂಳಿಸಿದಂ (ಅಪಂಪು. ೯-೦೦೬). [ ರೂಪು + ಅಟು$_1$ ]

**ರೂಪಾಂತರ** (ನಾ). ಬೇರೆಯ ಆಕಾರ, — ಸ್ವರೂಪ : ರೂಪಾಂತ್ರರ ಕೈಯ್ದು ಭಾಸುರದಿಂ ತತ್ಪುರರಾಜನಂದು ಪಿರಿದೊಂದುತ್ಸಾಹಮಂ ಮಾಡಿದಂ (ಆದಿಪು. ೦೬-೫೨) ; ಕೋಟಕ್ಕೆ (ಕೋಡಿಗೆ), ನಾಟಕ್ಕೆ (ನಾಡಿಗೆ), ಇವುಗಳು ಸಮಾಸವಿಧಿಯಿಂದ ಡಕಾರಕ್ಕೆ ಟಕಾರವಾಗಿ ರೂಪಾಂತರವಾಗಿವೆ (ಶಬ್ದಶಾಂ. ೭೫). [ಸಂ.]

**ರೂಪಾಂತರಿಸು** (ಕ್ರಿ). ರೂಪವನ್ನು ಬದಲು ಮಾಡು ; ಬೇರೆಯ ರೂಪವನ್ನು ಕೊಡು : ಅನ್ಯಕವಿಗಳ ಗದ್ಯಪದ್ಯಗಳನ್ನು ಯಥಾರೀತಿ ತನ್ನ ಪದ್ಯರೂಪಕ್ಕೆ ರೂಪಾಂತರಿಸಿದಾಗ ಅದು ಅನುವಾದವೆನಿಸುವುದು (ಸಂಕೋಲ. ೦೨೭). [ರೂಪಾಂತರ + — ಇಸು$_3$]

**ರೂಪಾಜೀವೆ** (ನಾ). ತನ್ನ ಸೌಂದರ್ಯದಿಂದ ಜೀವಿಸುವವಳು ; ವೇಶ್ಯೆ : ಕುಂದ ಚಿತ್ರಮಾಲತಿಯ ಪುಷ್ಪಂಗಳಂ ಹರುಷದಿಂ ಸೂತ್ರದಿಂ ಕೊಯ್ದು ರೂಪಾಜೀವೆಗಳ ಮುಡಿಗೆ ಮುಡಿಸುವಂ ಮೋಹದಿಂದಂ (ಕೃಕುಪು. ೩-೭೩) ; ನಾನು ರೂಪಾಜೀವ, ಸೂಳೆ, ಬೆಲೆವೆಣ್ಣು, ವಾರ ವಿಲಾಸಿನಿ (ಮಂಕ್ಕಕ. ೩೩-೨೦). [ ಸಂ. ರೂಪಾಜೀವಾ ]

**ರೂಪಾಧಿಕ** (ನಾ). ಅತ್ಯಂತ ಸುಂದರನಾದವನು ; ಮಿಗಿಲಾದ ಚೆಲುವ : ರೂಹಿಸುವಲ್ಲಿ ರೂಪಾಧಿಕ ನೋಡುವಲ್ಲಿ ನೋಟ ಘನ (ಬಸವ. ೯೦೬) ; ಉನ್ನತನ ರೂಪಾಧಿಕನ ಸಂಪೂರ್ಣದಕ್ಷನನನ್ಯರೆನ್ನ ವರನ್ನ ದನ . . . ಪಡಿಹಾಟಕನ ಮಾಡುವುವು (ಕುಮಾರರಾ. ಉ. ೩-೯೯). [ಸಂ.]

**ರೂಪಾನು** (ಕ್ರಿ). ರೂಪವನ್ನು ತಾಳು ; ಆಕಾರವನ್ನು ಪಡೆ : ನೀ ಪಾಲಿಸಬೇಕು ನನಗೊರ್ವ ಕಂದರ್ಪರೂಪಾಂತ ವರಕುಮಾರಕನ (ಮೋಹತ. ೯-೨೦); ಎರಡು ರೂಪಾಂತೈರಾವತವೆಂದೆನೆ ಮೆಟಿದುವು ಬಾಗಿಲಾನೆಗಳು (ಶಂಪರ. ೭-೯೪). [ರೂಪು + ಆನು$_1$ (<ಆನ್$_1$) ]

**ರೂಪಾನುಪಾತ** (ನಾ). [ಜೈನ] ದೇಶವ್ರತಾತಿಚಾರಗಳಲ್ಲಿ ಒಂದು ; ತನ್ನ ರೂಪವನ್ನು ಬೇರೆಯವರಿಗೆ ತೋರಿಸುವುದು : ಕಪಟದೊಳೇಂ ಪ್ರೇಷಣಶಬ್ದಪುದ್ಗಲಕ್ಷೇಪಸಮುದಿತಾನಯನಂ ತಾಪಪಚಾರಂಗಳ್ ರೂಪಾನು ಪಾತಮುಂ ಪ್ರವಿತತದೇಶನಿಯಮವ್ರತದೊಳ್ (ಸುಕುಮಾ. ೬-೦೪). [ಸಂ.]

**ರೂಪಾಯಿ**, ರುಪಾಯಿ (ನಾ). (ಭಾರತದಲ್ಲಿ ಹಿಂದೆ ಚಲಾವಣೆಯಲ್ಲಿದ್ದ ಹದಿನಾರಾಣೆಯ ಹಾಗೂ ಈಗಿನ ನೂರುಪೈಸೆಯ ಬೆಲೆಯುಳ್ಳ ಬೆಳ್ಳಿ ಮೊದಲಾದ ಲೋಹಗಳ) ಒಂದು ನಾಣ್ಯ ಅಥವಾ ನೋಟು : ವಿರ್ಚು ೪೦ ರೂಪಾಯಿ (ಎಕ. IX, ಕಾಪಲಾ. ೯೦-೩೩; 1700) : ಸನ್ ೧೮೪೦ರ ವರೆಗೆ ಹದಿನಾರುಪ್ರಕಾರದ ರೂಪಾಯಿಗಳು ನಡೆಯುತ್ತಿದ್ದವು (ಕಥಾಗ. ೨೮೦): ರೈತರು ಅಜ್ಜ ಮುತ್ತಜ್ಜರು ಹೂತಿಟ್ಟಿದ್ದ ರೂಪಾಯಿ ಗಳನ್ನು ಕೊಟ್ಟಿದ್ದರು (ಹುಟ್ಟಿಹ. ೫). **ರುಪಾಯಿ**: ಸಂಬಾಚಾರಿ ವ್ಯಾದ ರುಪಾಯಿ ಮಡವ ಪಂಚರಸಿಯ ಸಲಾಕೆ (ಮೈಕಂ. ೦೯೩೦, ೬೨-೦; 1726).

[ ←ಹಿಂ. ರುಪಯಾ; ಮರಾ. ರುಪಯಾ, ರುಪಾಯಾ. ಸಂ. ರೂಪ್ಯ ]

**ರೂಪಾರ**, ರೂವಾರ, ರೂಹಾರ (ನಾ). ೧. ಶಿಲ್ಪಿ : ಚಿತ್ರಕಾರ–ಚಿತ್ತಾರ; ರೂಪಾಕಾರ–ರೂಪಾರ (ಕವಿದ. ೨೯೫ ಕ್ರಿಯೋ) : ಸೌನ್ದರ್ಯತತ್ತ್ವಮವತರಿಸಿ ಕೊಳ್ವವನೊಲ್ವಾರ್ಪ ರೂಪಾರಂ ಮೆಯ್ಸಿರಿ ಬಣ್ಣವುರಂ ಬಾಳ್ಕೆಗಳಿನೊಪ್ಪಿಸಿಯುದಂ ಕಾಣ್ಕೆ ಮಾಳ್ಕುಂ (ಸಂಕಶ. ೫೦-೬೯). **ರೂವಾರ** : ೧. "ರೂವಾರ(ರೂಪಾರ) ರೂಪಾಕಾರ, ರೂಪಕಾರ–ಶಿಲ್ಪಿ" (ಕನ್ನಕೋ. ೩೯). ೨. ವಿಗ್ರಹ ; ಮೂರ್ತಿ : ತಳದಿಂ ಕಳಶಂಬರಮೊಂದಳವಿಯು ರೂವಾರಮೆನಿಸಿ ಬಹುರೂಪಿಣಿಯೊಳ್ . . . ಒಪ್ಪುವವು ನಾಡೆಯುಂ ಕರುಮಾಡಂ (ಅಜಪು. ೨-೨೦); ಕಾರ ಮಿಂಚಿನ ಬೊಂಬೆಯೊ ಅಮರ್ದಿನ ರೂವಾರವೊ . . . ಎನಲಾ ನಾರಿ ಪಳಚ್ಚನೊಪ್ಪಿದಳು (ಶ್ರೀರಾಂ. ೨-೫೨). **ರೂಹಾರ** : ೨. ಲತಾವಳಿಯ ವಿಳಸದ ಸರ್ವರೂಹಾರದ ಚಂದ್ರಿಕಾಮಂಟಪ (ಕೇಶಿರ. ೧೦೦-೨೨); ಪಚ್ಚಪವಳಂಗಳ ಸ್ತಂಭಗಳ ಶಶಿಕಾಂತಶಿಲೆಯ ತೊಲೆಯ ಕಡೆದ ರೂಹಾರಗಳಲೀಕ್ಷಿಸಲು (ಸೋಮಶ. ೨-೨೦).

[<ಪ್ರಾ. ರೂಅರ./ಸಂ. ರೂಪಕಾರ]

**ರೂಪಿ** (ಗು). ೧. ರೂಪವುಳ್ಳ ; ಆಕಾರವನ್ನು ಹೊಂದಿರುವ. ೨. ಸುಂದರವಾದ ಆಕಾರವುಳ್ಳ. ೩. ಹೋಲಿಕೆಯುಳ್ಳ ; ಸಾಮ್ಯವಿರುವ. (ನಾ). ೪. ರೂಪವುಳ್ಳವಳು ; ಚೆಲುವೆ : ನೋಡುವುದೆ ಕಣ್ಣು . . . ಮುರುಕಿ ಕುಬ್ಜೆಯ ಡೊಂಕ ತಿದ್ದಿ ರೂಪಿಯ ಮಾಡಿ ಸೆಱಿಗ ಪಿಡಿಸಿಕೊಂಬನ (ಪುರಂದ. ೧೫. ೪-೬೦-೫). [ಸಂ. ರೂಪಿನ್]

**ರೂಪಿಡು**, ರೂವಿಡು, ರೂಹಿಡು (ಕ್ರಿ). ೧. ತನ್ನ ರೂಪದಂತೆಯೇ ಕಾಣು ; ಹೋಲು : ಕಾಮಿನಿ . . . ಖಚರೀಜನಂಗಳೊಳ್ ರೂಪಿಡೆ ತನ್ನ ರೂಪೊಲಿದು ಪಾಡಿದಳಚ್ಯುತನಂಕಮಾಲೆಯಂ (ಜಗಚ. ೦೬-೦೦೪). ೨. ತನ್ನನ್ನು ಒಪ್ಪಿಸಿಕೊಳ್ಳು,–ಅರ್ಪಿಸಿಕೊಳ್ಳು : ಪಾಪಿ ಗಂಡನೆಯೆನ್ನ ಆಪತ್ತಿಗೊಡೆಯನೆಂಬಾಪೇಕ್ಷೆಯಲಿ ಬಂದು ನಿನಗೆ ರೂಪಿಟ್ಟೆ ದುಃಖವನೀ ಪರಿ ಮಾಳ್ಪರೆ (ಪಾಶಾಂ. ೪-೪೬). ೩. ಕೋಪವನ್ನು ಪ್ರಕಟಿಸು ; ರೇಗು ; ಕೆರಳು : "ರೂಪಿಡು–ಕ್ರೋಧನಿರ್ದೇಶೇ" (ಶಮದ) ; ಚಪ್ಪರಿಸು ರೂಪಿಡು ಕೂಪಿಡು ಕೂರ್ಪುದ್ದೋಱು ಪಾಱಿಗಿಯದೆ ಕೂರ್ಮೆ ಮಿಕ್ಕು ತಗೆ ತೊಂಗಲನಿಂಬೆನೆ ನೂಂಕು ಯುದ್ಧಮಂ (ಕಾವ್ಯಾವ. ೪೦೬); ಸೇನಾನಿಯುಮದಂತೆಯೇ ತಮ್ಮ ಹೆಗ್ಗಡೆಗೆ ವೀರವನ್ದನವನ್ನೊಪ್ಪಿಸಲಿಲ್ಲವೆಂದು ರೂಪಿಟ್ಟು ಹುಚ್ಚೆದ್ದು (ಮಂತ್ರಶ. ೬೮-೭). **ರೂವಿಡು** : ೪. ಆಕಾರವನ್ನು ಕೊಡು,– ನೀಡು : ರೂವಾರಿ ರೂವಿಟ್ಟ ಕಲ್ಲಲ್ಲ, ಮೂರ್ತಿಯಿದು ಎಂತೆಂದರಂತಾಗಬಲ್ಲ ಬಯಲಲ್ಲ (ಮಲೆದೇ. ೦೯-೧). **ರೂಹಿಡು** : ೧. ಚೆನ್ನೆ ನೀನಲ್ಲದೆ ಬಳಿಕಾರಿನ್ನು ದಿಟವಿದಿರಿಟ್ಟು ತೋಱಿಸಲನ್ಯರುಂಟೇ ರೂಹಿ[ಪಾಠಾಂ. ಕುಱುಹಿ]ಡಲು ನೆಱೆ ನೋಡು ನೀನೆನುತ ಕನ್ನಡಿಯ ತೋಱಿದಳೊಬ್ಬಳು (ಶೃಖಂ. ೪-೨೨). ೪. ಸರಸಿಜಭವ ಚದುರಿನೊಳು ಅರೆಕಾಣಿ ತಟ್ಟಿಲ್ಲದ ತ್ರಾಸಿನೊಳು ತೂಗಿ ಪರಿಕಿಸಿ ರೂಹಿಟ್ಟನಿವರ (ನಾಗಕು. ೬-೪೦). ೫. ಅಂದವಾಗಿ ಕಾಣು ; ಕಂಗೊಳಿಸು : ರೂಹಿಟ್ಟ ಮನ್ಮಥನಂತೆ ಬೆಳಗಿದನಖಿಳದಿಗುತ್ತಟವ (ಏಕಾಗ. ೦೦-೨೯-೪). [ರೂಪು + ಇಡು$_1$]

**ರೂಪಿಣಿ** (ನಾ). ೧. ಚೆಲುವೆ ; ರೂಪವತಿ : ರೂಪಿಣಿಯರನುದಿನಂ . . . ಮುನಿತಿಲಕನ್ಯತಪ್ಪ ಪಥಮಂ ನಿರೀಕ್ಷಿಸುತಿರೆ (ವಂಕಾರಾ. ೧-೫-೪೩). ೨. ಸೂಳೆ : ವೇಶ್ಯೆ : "ರೂಪಿಣೀ, ರೂಪಜೀವನಾ, ಈ ೨ ಸೂಳೆ" (ನಾಕಿಸ. ೨೪೦). [ಸಂ. ರೂಪಿಣೀ]

**ರೂಪಿತ** (ಗು). ೧. ಕಲ್ಪಿಸಿದ ; ಯೋಜಿಸಿದ. ೨. ಧರಿಸಿದ ; ತೊಡಿಸಿದ: ಶಿವಮಂತ್ರಾಭಿಮಂತ್ರಿತಭೂತಿ ರುದ್ರಾಕ್ಷಾದಿ ರೂಪಿ[ಪಾಠಾಂ. ಭೂಷಿ]ತ ಜಾತನಿರ್ಮಳಪಂಚಮುದ್ರಾಧಾರರಂ ಮಾಡಿ (ಬಸಪು. ೪೯-೪೦). (ನಾ). ೩. ರೂಪುಗೊಂಡುದು: ಕ್ರಿಯಾತ್ಮಕಶಿಕ್ಷಣಯೋಜನೆಯು ಪ್ರಪಂಚದಲ್ಲೇ ಶ್ರೇಷ್ಠಮೇಧಾವಿಯುವರಾದ ಮಹಾತ್ಮಾಗಾಂಧಿಯವರಿಂದ ರೂಪಿತವಾಯಿತು (ಕ್ರಿಯಾಶಿ. ೧೯೨); ಮಹಾಭಾರತವು ಇಂದು ನಮಗೆ ಉಪಲಬ್ಧವಿರುವ ರೀತಿಯಲ್ಲಿ ರೂಪಿತವಾದದ್ದು ಬಹುಶಃ ಕ್ರಿ. ಪೂ. ಐದನೆಯ ಮತ್ತು ಒಂದನೆಯ ಶತಮಾನದ ಅಂತರದಲ್ಲಿರಬಹುದು (ಭಾರರ. ೧೦೪). [ಸಂ.]

**ರೂಪಿಮಾ** (ನಾ). [ಭಾಷಾಶಾ] ಭಾಷೆಯ ಅರ್ಥವತ್ತಾದ ಚಿಕ್ಕಘಟಕ: ಮೂಲರೂಪಗಳನ್ನು ಸಾಧಿಸುವಲ್ಲಿ ಧ್ವನಿಮಾ, ರೂಪಿಮಾಗಳ ಪರಸ್ಪರ ಸಾದೃಶ್ಯವನ್ನು ಅರಿತುಕೊಳ್ಳುವುದರಲ್ಲಿ ಅತ್ಯಂತ ಪ್ರಯೋಜನವಾಗುವುದು (ಸುವರ್ಣ. ೨೯೩). 'ಧ್ವನಿಮಾ', 'ಸ್ವನಿಮಾ' ಪರಾ. [ಸಂ.]

**ರೂಪಿಲಿ**, ರೂವಿಲಿ (ನಾ). ರೂಪವಿಲ್ಲದ ವ್ಯಕ್ತಿ ; ಕುರೂಪಿ : ಸೊಬಗಂ ಪುಟ್ಟಿನೆನೆಯುಂ ಆದಂ ರೂಪಿಲಿ ನಾಡೆ ಅಪ್ಸರಸ್ತ್ರೀಚಿಂತೆಯಿನಂ (ಸೌಂದ. ೦೦-೬). **ರೂವಿಲಿ** : ನಮ್ಮ ತಾಯ್ನುಡಿ . . . ತಾನಮಂಗಳೆಯೆನಿಸಿ ಹಿರಿಮೆಯ ನೀಗಿ ಹೆಸರನಳಿದು ರೂವಿಲಿಯಾಗಿ ಬನ್ನಪಡುತಿರಲು (ಗದೇಶ. ೪೦-೯). [ರೂಪು + – ಇಲಿ$_3$]

**ರೂಪಿಸು**, ರೂವಿಸು, ರೂಹಿಸು (ಕ್ರಿ). ೧. (ಚಿತ್ರ, ಶಿಲ್ಪ ಮೊದಲಾದುವುಗಳಂತೆ) ಆಕಾರವನ್ನು ಕೊಡು ; ರೂಪಕೊಡು : ಆವ ದೇಮರುವಾಗೆ ಬಯಲ ರೂಪಿಸಬಲ್ಲರೇ (ಶವವೋ. ೭-೩೬); ನನ್ನೂರಿನ ಸುತ್ತಣ ಪ್ರದೇಶವನ್ನು, ಆಸಕ್ತಿಯಿಂದ ಅವಲೋಕಿಸಿ . . . ಚಿತ್ರವನ್ನು ರೂಪಿಸುವ ಕೆಲಸಕ್ಕೆ ಕೈಹಾಕಿದೆ (ಪಮ್ಮರು. ೦೩ ಪೀಠಿಕೆ). ೨. ಕಲ್ಪಿಸು ; ಯೋಚಿಸು : ನಾನು ನನ್ನ ಸಂಸಾರವನ್ನು ಹೇಗೆ ರೂಪಿಸುವೆನೆಂಬುದನ್ನು ನೋಡುವಿರಂತೆ (ಸ್ವಕಿ. ೩); ಇವನ್ನೆಲ್ಲಾ ಓದಿಕೊಂಡು, ನಾನು ನನ್ನ ಅಭಿಪ್ರಾಯವನ್ನು ರೂಪಿಸುತ್ತೇನೆಯೋ ? (೬೨ಐದ. ೦೦). ೩. ಹೇಳು ; ನಿರೂಪಿಸು : ರೂಪಕಮೆಂಬುದು ಪೆಱವರ ರೂಪಾದಿಗುಣಂಗಳಾನಭೇದೋಕ್ತಿಗಳಿಂ ರೂಪಿಸುವುದು (ಕವಿರಾ. ೩-೦೨); ರೂಪಿಸುವ ತನ್ನೀಶನಿಂದಾಲಾಪಮಂ ಕೇಳದೆ (ಬಸಪು. ೬೦-೦೮); ಮುನಿ ರೂಪಿಸಿದ ಮಾತುಗಳೆನಗೆ ಸಾಮ್ಯವದಾಯ್ತು (ಜೀವಂಧ. ೫-೩೯). ೪. ತಿಳಿ ; ಭಾವಿಸು : ಸತಿಯೋಪ ಶಿವನಂ ತನಯನೆಂದೇ ರೂಪಿಸುತ್ತುಪಲಾಲಿಸುತ ಕೊಂಡಾಡುತಿರಲು (ಬಸಪು. ೦೫-೦೫); ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾಮಿಸಿದನಾ ಭೂಮಿಪಂ ತದ್ರೂಪಗುಣಹೃದಯರಂ (ಶ್ರೀರಾಮ. ೦೨-೩೦೦). ೫. ಸ್ಥಿರಪಡಿಸು: ನಾನಾಪುರಾಣಾಗಮನಿಗಮಸರ್ವಪ್ರಮಾಣದಲಿ ರೂಪಿಸಲು ಸಂಸಿದ್ಧವೆಂಬಾಲಾಪಮಂ ಕೇಳ್ದು (ಬಸಪು. ೫೦-೪೦). ೬. ಪ್ರದರ್ಶಿಸು ; ಕಾಣುವಂತೆ ಮಾಡು : ಎಲ್ಲ ವಿಕೃತಿಯ ತಳದ ವಾತ್ಸಲ್ಯ ದೃಷ್ಟಿಯನು ರೂಪಿಸುವೊಲು (ಮಲೆದೇ. ೪೦-೯). ೭. ಉಂಟು ಮಾಡು : ಕೌರವ ಪಾಂಡವರ ವೈರಜೀವನ ಹಲವು ಪರಿಯಲ್ಲಿ ಮುಂದುವರಿದು ಅನೇಕ ವಿಷಘಟನೆಗಳನ್ನು ರೂಪಿಸಿತು (ಭಾಮುತ. ೦೦). ೮. ಸಿಟ್ಟಾಗು ; ಕೋಪಗೊಳ್ಳು ; ಕೆರಳು : ರೂಪಿಸುತ ಬಂದೇಱಿರೊಡನೆ ನಿರೂಪನಾಗಳೆ ಮಾಳ್ಪ ತರುಗಳ ರೂಪಿಸುತ ಬಂದೇಱಿರೊಡನೆ ನಿರೂಪನಾದಡೆಯು (ಬಸಪು. ೦೯-೫೦). **ರೂವಿಸು** : ೯. ಆಕಾರವನ್ನು ತಳೆ ; ರೂಪವನ್ನು ಹೊಂದು : ಭೂರವಮಂ ಭಟಂ ನಿಮಿರ್ದು ಕುತ್ತಿದೊಡುರ್ಚಿದ ಚಂಡಶಾಸನಂ ಚಾರಣದಾಸೆಯಿಂ ನುಸುಳ್ದು ಮುಜ್ಜುಟದೊಳ್ಮಗುಱ್ದಿಕ್ಕಿವಟ್ಟಿಸೈಪಾರಿಸೆ ಕಂಡ ಭೂರಣದೆ ರೂವಿಸಿದಂ ಪೊಯ್ಯೆ ಕಾಳವಟ್ಟದಿಂ ಪೋರಗದಿಂದೆ ಪೊಯ್ದನೆರಡುಂ ಸರಿವೋದವು ಲಾಗುಬೇಗದೊಳ್ (ಅಜಿಂಪು. ೦೦-೬೦). **ರೂಹಿಸು**: ೧. ಉರಿ ಕರ್ಪೂರ ಸಂಯೋಗ ನಿಷ್ಪತ್ತಿಯಾದಲ್ಲಿ ಮರಳಿ ರೂಹಿ[ಪಾಠಾಂ. ಓ]ಸಿ ಹಿಡಿಯಲುಂಟೆ ಅಯ್ಯಾ (ಅಲಂದೇ. ೩೪೦-೫೬). ೪. ನಿಜಲಿಂಗೈಕ್ಯನ ಉಪಮಿಸಲಿಲ್ಲ ಉಪಮಿಸಲಿಲ್ಲಾಗಿ ರೂಹಿಸಲಿಲ್ಲ ರೂಹಿಸಲಿಲ್ಲಾಗಿ ಭಾವಿಸಲಿಲ್ಲ (ಅವಕಂ. ೨೬೦-೦೨೬೨) ; ಆತ್ಮನಲ್ಲಿ ಮಲವು ಹುದುಗಿರ್ದ ಭೇದವ ತಿಳಿದು ರೂಹಿಸಿ ಹೇಳಬಲ್ಲಡೆ ಸಿದ್ಧಾಂತಿ ಎಂಬೆ (ಉಂಶ. ೪. ೨೦೬-೨೯೬). ೬. ರವದ ಪೊಕರ್ಗಳ ಗಂಟೆಯ ಮೋಹಿಸುವ ಮೊಗವಡದ ರೂಹಿಸುವ

ನೊಸಲ ಕನ್ನಡಿಯ . . . ತುರಂಗಬಲದೊಳು (ಗಂಳ. ೬-೩೩ ವ). ೧೦. ಕೆತ್ತು ; ಕಂಡರಿಸು : ಮರಮರದ ಮೇಲೆಲ್ಲ ಪ್ರೇಯಸಿಯ ಹೆಸರನ್ನು ರೂಹಿಸಿದ (ಪಶ್ಚಿ. ೨೨). ೧೧. ಕಾಣಿಸಿಕೊಳ್ಳು ; ಹುಟ್ಟು ; ಮೈದೋರು : ಸುರರು ಹೂಮಳೆಗಱೆದರಾಗಳು . . . ಗುರು ಗುಹೇಶ್ವರನಿಳೆಗೆ ರೂ[ಪಾಠಾಂ. ಮೋ]ಹಿಸಿ ಮೆಱೆದ ಕತದಿಂದೆ (ಪ್ರಭುಲಿ. ೬-೨೩) ; ಭೂಮಿಯ ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ (ಕೊರಟಾ. ೬-೨-೨೦) ; ರೂಹಿಸಿತೊಂದು ದಿವ್ಯೋಪಾಯ (ಭರತ. ೩೦-೪೬). ೧೨. ನಿರ್ಮಿಸು ; ರಚಿಸು : ಕೇಡಿಗರು ಕೃತ್ರಿಮರಚನೆಯಲಿ ರೂಹಿ[ಪಾಠಾಂ. ಮಾಡಿ]ಸಿದರರಮನೆಯ (ಸಂಭಸ. ೨೦-೬೦). [ರೂಪು + — ಇಸು₃]

**ರೂಪು**, ರೂವ₁, ರೂವು, ರೂಹ, ರೂಹು (ನಾ). ೧. ಆಕಾರ ; ರೂಪ : ಬಾಲಸುರವಣಿಸಿದನು ಮಸಗಿದ ಕಾಲರುದ್ರನ ರೂಪ ತಾಳ್ದನು ವೈರಿಸೇನೆಯಲಿ (ಕುಮಾವ್ಯಾದ್ರೋ. ೬-೨೬) ; ಅವರನಾಜಿಯಲಿ ಕೊಂದನೊಬ್ಬನ ಸೂಕರನ ರೂಪಿಂದಲೊಬ್ಬನ ನರಹರಿಯ ರೂಪಿಂದ ಲಕ್ಷ್ಮೀಕಾಂತನಹಿತ ಕೃತಾಂತನಾಜಿಯಲಿ (ಕೊರಟಾ. ೦-೮-೨೨). ೨. ಚೆಲುವು ; ಅಂದ ; ಸೊಗಸು : ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಪೋ ಮೆಚ್ಚೆಂ (ಹಂಸಶಾ. ೪-೩೬) ; ಊರಿಂಗೆ ದೊರೆ ರೂಪು ನಾರಿಂಗೆ ಗುಣ ರೂಪು ಚಾರು ಕೋಕಿಲೆಗೆ ಸ್ವರ ರೂಪು ರಾಜಂಗೆ ಧೀರತ್ವ ರೂಪು (ಸರ್ವಜ್ಞ. ೬೦೬). **ರೂವ₁** : ೧. ಧಾರಿಣಿಯೊಳು ಪೂಜೆಗೊಂಬನತಿಭಕ್ತರ ರೂವದೊಳು ನಿರಂತರಂ ಪರಮಸಿವಾಗಮಿಕರಿಗೆ (ಎಕ. VII, ಶಿಆರ. ೯೩-೦೩ ; 1422). **ರೂವು** : ೧. ಕುಳ್ಳಿರ್ದಂ ಸಿರಿಯರಸಂ ಕಾರ ಮುಗಿಲ ರೂವೆಂಬಿನೆಗಂ (ಕಬ್ಬಿಗ. ೦೬೩) ; ರೂಪ – ರೂವು, ರೂವು (ಕಮಾತ. ೨೬೬ ಶ್ರಯೋ) ; ಹರಿಯುತ ದುಷ್ಕರನಿರಿಯಲೋಸುಗ ನರರ ರೂವಿಂ ರಾಮನಾಮವ ಧರಿಸಿ (ರಾಮಾಸಂ. ೦-೨-೩೩). **ರೂಹ** : ೧. ಬೆಟ್ಟಬಿಲ್ಲಯ್ಯನ ರೂಹಕ್ಕೆ ಒಟ್ಟ ಭಕ್ತನಾದನೆಂಬುವನ ಯುಕ್ತಿ ಮಳಲೊಟ್ಟಯಂತೆ ನೋಡಾ (ಸಿದ್ಧವ. ೩೨-೪೮೦) ; ಲಿಂಗಾರ್ಚನಂಗೆಯ್ಯುತ್ತ ತಲ್ಲಿಂಗದಂಗದೊಳನಂಗಾರಿಯೆಚ್ಚ ರೂಹ ಕಂಡು (ಷಟ್ಪಾ. ೭ ಸಂಧಿ). **ರೂಹು** : ೧. "ರೂಹೆಂಬುದು ರೂಪಂ" (ಶಬ್ದಮ. ೨೦೬) ; ರೂಹಿಲ್ಲದೊಡಂ ಕೆಲಬರ ಸಹಾಯದಿಂ ... ರೂಹಂ ಪಡೆದೇಕೆ ಮರುಳೆ ನೀಂ ವ್ಯಥೆಗಳೆವೈ (ಧರ್ಮಾಮೃ. ೩-೧೩೦); ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಂಗಾನೊಲಿದೆ (ಮಹಾದೇ. ಬಿ. ೦೨೨-೨೬೩); ಕಳಿತ ಹಲಾಹಳದ ಕಜ್ಜಾಯವೆನಿಸಿತು ರೂಹು . . . ಸುರಸತಿಯ (ಕುಮಾವ್ಯಾಶ. ೮-೪೨).

**ರೂಪುಮಾಡಿಸು** = ಭೂಮಿಯನ್ನು ವ್ಯವಸಾಯಯೋಗ್ಯವನ್ನಾಗಿ ಮಾಡಿಸು : ದೊಡ್ಡೇರಿಯ ಕೆರೆಯ ಕಟಿಸಿ ರೂಪು ಮಾಡಿಸಿದಕ್ಕೆ ಕೊಟ್ಟ ಗದೆ (ಎಕ. VII, ಶಿಕಪು. ೯೬-೬; 1648 ?). **ರೂಪುಮಾಡು** = ರೂಪು ಮಾಡಿಸು : ತೋಟಗದ್ದೆಯನು ಮಾಡಿಸಿ ವ್ಯವಸಾಯದಿಂದ ರೂಪು ಮಾಡಿಕೊಂಡು (ಎಇ. XVI, ೨೨೬-೬೪; 1414); ಕೆಱೆಯ ಒಡವುಗಳನೂ ಕಟ್ಟಿ ರೂಪುಮಾಡಲಾಗಿ (ಎಕ. IX (8), ಹೊಸಕೋ. ೦೮೪-೧೮; 1433).

[< ಪ್ರಾ. ರೂವ. / ಸಂ. ರೂಪ ]

**ರೂಪುಗರೆ**, ರೂಹುಗರೆ (ಕ್ರಿ). ೧. ಆಕಾರವು ಕಾಣದಂತಾಗು ; ಅದೃಶ್ಯವಾಗು : ಬ್ರಹ್ಮರಾಕ್ಷಸನವಳ ಮಾತಂ ನಂಬಿ . . . ರೂಪುಗರೆದು ಪೆಱಪೆಱಗನೆ ಬರುತಿರ್ದು (ಸುಕುಮಾ. ೭-೦೬ ವ); ಪೊಸ್ಕಳ್ ತ್ರಿದಶೋತ್ತಮೆ ರೂಪುಗರೆದು ಜನನೀಗೃಹಮಂ (ಅಪಂಪು. ೩-೦೬). ೨. ಬೇರೆ ರೂಪವನ್ನು ಧರಿಸು ; ವೇಷ ಮರೆಸಿಕೊಳ್ಳು : ತನ್ನ ರೂಪುಗರೆದಿರುಳ್ ಪೊಟಲಿಲ್ಲವಂ ಕಳ್ದು ದಿವಸಕ್ಕೀ ಪಾಂಗಿನೊಳ್ ತೊನ್ನನಾಗಿರ್ಪೊಂ (ವಡ್ಡಾರಾ. ೦೨೪-೯) ; ಭೀಮಸೇನಂ ಕೇಳ್ದುವಂದಿರೊಡನೆ ರೂಪುಗರೆದು ಪೊಟಲಂ ಪೊಱಮಟ್ಟು . . . ಕೀಚಕನಿಕಾಯಧ್ವಂಸನಂ ಮಾಡಿದಂ (ಪಂಪಭಾ. ೮-೬೯ ವ). **ರೂಹುಗರೆ** : ೨. ದ್ರೋಹಿಯನು ಗೆಲಲರಿದು . . . ರೂಹುಗರೆದಿಳೆಯುಮರರಂದದಲಾಹವವ ಬೇಡುವುದು ಕೊಲುವುದು (ಶಿಭಾಗ. ೦೦-೬೮-೩೯). [ರೂಪು + ಕರೆ₃]

**ರೂಪುಗಾಣ್** (ಕ್ರಿ). ೧. ಆಕಾರವನ್ನು ಕಾಣು; ರೂಪವನ್ನು ನೋಡು : ರೂಪಗಾಣುತಲಂತರಂಗದೊಳ್ ಸಂತಸ ವ್ಯಾಪಿಸೆ (ಪುರೇಪು. ೨೦-೨೦). ೨. ಚೆಲುವನ್ನು ಕಾಣು ; ಸೌಂದರ್ಯವನ್ನು ನೋಡು : ಈ ಲೋಕದೊಳ್ ರೂಪುಗಾಣಲೊಡಂ ತೊಟ್ಟನೆ . . . ಎರ್ದೆಗೆಟ್ಟರಾರ್ (ಗಾದಂಪು. ೬೩೦). [ರೂಪು + ಕಾಣ್]

**ರೂಪುಗಾಣಿಸು**, ರೂಹುಗಾಣಿಸು (ಕ್ರಿ). ೧. ಆಕಾರವು ತೋರು,— ಕಾಣು : ತಾನರ್ಧತನುವಿನೊಳಾ ಗಿರಿಜೆ ಶಿವನೊಳು ಬೆರಸಿದಳೊ ರೂಪುಗಾಣಿಸದು (ಬಸಪು. ೦೬-೩). **ರೂಹುಗಾಣಿಸು** : ೧. ರೂಹುಗಾಣಿಸದಂತೆ ವಿಪ್ರವೇಷಮನಾಂತು . . . ಅವರಿರ್ವರುಂ ಮಯೂರಧ್ವಜನ ಪಟ್ಟಣಕೆ ನಡೆತಂದರು (ಜೈಮಿಭಾ. ೨೬-೩). ೨. ರೂಪವನ್ನು ತೋರಿಸು,— ಪ್ರದರ್ಶಿಸು : ಕ್ಷೋಣಿಯೊಳಾತ್ಮೇಶ್ವರನ ದಿಟ್ಟಿಗೆ ರೂಹುಗಾಣಿಸಿ ಬಾಯಾಱಿಸುತೆ ಬಾಣತಿರೂಹಿಂದೆ ಬಂದಳು ಹರಿನೀಲವೇಣಿ (ಮೋಹತ. ೦೬-೪೬). [ರೂಪು + ಕಾಣಿಸು]

**ರೂಪುಗಿಡು** ' ರೂಪುಗೆಡು ' ನೋ.

**ರೂಪುಗೂಡು** (ಕ್ರಿ). ರೂಪವನ್ನು ತಾಳು,—ಪಡೆ : ಲೋಹಸಂಗದಿಂದಗ್ನಿ ಒಡವಡೆದಂತೆ ರೂಪುಗೂಡಿದ ರುಚಿಯ ಸತ್ಕ್ರಿಯೆಯಿಂದರ್ಪಿಸಬೇಕು (ಅಪಸಂ. ೨೩೭-೦೦೬೯). [ರೂಪು + ಕೂಡು₁]

**ರೂಪುಗೆಡು**, ರೂಪುಗಿಡು, ರೂವುಗಿಡು, ರೂಹುಗೆಡು (ಕ್ರಿ). ೧. ಆಕಾರವು ಕೆಟ್ಟುಹೋಗು ; ವಿಕಾರವಾಗು : ಕದನದೊಳಾದರ್ಸಾರ್ದಿಸೆ ಮಹಾರಥರ್ . . . ಮಡಂ ಕಡಿವೋದುವು ಪಾಪೆ ರೂಪುಗೆಟ್ಟುದು (ಕಂಠಾಮಾ. ೦೩-೬೯) ; ದೀಪಿಸುವ ಮಾಣಿಕ್ಯವಂ ಮಳಿನಾಪರಿಮಿತಪಟಂ ಮುಸುಕಿದಡೆ ರೂಪುಗೆಡುವುದೆ (ಬಸಪು. ೩೬-೭೦). ೨. ರೂಪವು ಕಾಣದಾಗು ; ಮರೆಯಾಗು : ತರದಿಂ ಮೇಲೊಗೆದಿರ್ಪ ಬೀಲಿವಟಿಗಳ್ ತಳ್ತಾಗಸಂ ರೂಪುಗೆಟ್ಟರೆ (ಕಬ್ಬಿಗ. ೨೩೨). **ರೂಪುಗಿಡು** : ೧. ನೀಂ ಮೃಡನೊಳಿರ್ದಿರ್ಪ ರೂಪುಗಿಡುವಂದಿವು ಮಾಡಿದ ಮಾಟವಾವುದು (ಶಗಂ. ೦೮-೩೬). **ರೂವುಗಿಡು** : ೨. ರೂವು[ಪಾಠಾಂ. ಪುಣ್ಯ]ಗಿಡೆ ತೆಂಬೆಲರಂಚೆಗಳೊಡ್ಡು ಪಾಱೆ (ಕಬ್ಬಿಗ. ೩೦೦). **ರೂಹುಗೆಡು** : ೧. ತ್ರಾಹಿ ಮದನಾಂತಕ . . . ಜಗತ್ರಯ ರೂಹುಗೆಡುತಿದೆ ದೇವ (ಕುಮಾವ್ಯಾಕ. ೭-೪೩). [ರೂಪು + ಕೆಡು₁]

**ರೂಪುಗೇಡು**, ರೂಹುಗೇಡು (ನಾ). ಕುರೂಪ ; ವಿಕಾರ ; ವಿಕೃತಿ : ಕಳವಳದಿಂದನ್ನೆಗಮಿಂದುಕಾಮಸೂರ್ಯರ್ ಜಗುಬ್ದರ್ ಕಱೆ ರೂಪುಗೇಡು ನಿಡುಬವಣೆಗಳಿಂ (ಶಕಾ. ೩-೦೦). **ರೂಹುಗೇಡು** : ಎಂತೆನಗೆ ರೂಹುಗೇಡನ್ ತಂದತ್ತು ಎಂಬುದನ್. . . ಬಿತ್ತರಿಸುವೆನ್ (ಐಶ್ವರ್ಯ. ೩೪-೬೨೯). [ ರೂಪು + ಕೇಡು ]

**ರೂಪುಗೊಳ್**, ರೂಪುಗೊಳ್ಳು, ರೂಹುಗೊಳ್ (ಕ್ರಿ). ಆಕಾರವನ್ನು ಪಡೆ; ರೂಪವನ್ನು ತಾಳು : ಭಕ್ತಿಯೆ ಭವಸನ್ನಿಧಿಯಲ್ಲಿ ರೂಪುಗೊಂಡಂತಿರ್ದಳ್ (ಗಾದಂಪು. ೬೬೦) ; ಶಿವನಾ ರೂಪುಗೊಂಡೊಲಿದಿಹುದು ಚೋದ್ಯಮೆ (ಬಸಪು. ೦೫-೦೬). **ರೂಪುಗೊಳ್ಳು** : ನಿರ್ದಿಷ್ಟರೀತಿಯಲ್ಲಿ ಪತ್ರವಿಷಯ ರೂಪುಗೊಳ್ಳಬೇಕು (ಶಿಕ್ಷತ. ೦೬೯); ಸಂಯುಕ್ತಜೀವಕಣದ ವಿಭಜನೆ ವಿಕಾಸದಿಂದ ನವಮಾಸದಲ್ಲಿ ಒಂದು ಮಗುವು ರೂಪುಗೊಳ್ಳುವುದು (ಗೃಹಿ. ೦೦೬). **ರೂಹುಗೊಳ್** : ಭವನ ನೇಹದ ಕಾಹು ರೂಹುಗೊಂಡೊಗೆವಂತೆ ಉದಯಿಪಾದಂ ಶಿವನ ಸೌಂದರಾಧಿಪನಂದು (ಸಂಬಸ. ೦-೦೦೬); ಪರಿಮಳವೇ ರೂಹುಗೊಂಡು ಪುಷ್ಪವಾದಂತೆ (ಮೋಕ್ಷಮಾ. ೬೪ ಕೃಸ್ತಾವಪ).

[ ರೂಪು + ಕೊಳ್₁ ]

**ರೂಪುಗೊಳ್ಳು** ' ರೂಪುಗೊಳ್ ' ನೋ.

**ರೂಪುಜೀವೆ** ' ರೂಪಜೀವೆ ' ನೋ.

**ರೂಪುದಳೆ,** ರೂಹುದಳೆ (ಕ್ರಿ). = ರೂಪುಗೊಳ್ : ಅಂ ಭರದಿಂದೆ ನಿನ್ನಯ ಭುಜಬಲದೆಟ್ಟರವಂ ಪರೀಕ್ಷಿಸಲ್ ಡಂಭದಿನೊಂದು ರೂಪು [ಪಾಠಾಂ. ಹು]ದಳೆದಿನ್ನೆವರಂ ಪೋಣರ್ದಿರ್ಕ್ಕುವಟ್ಟು ಕಂಡೆಂ (ಶಂಕ್ರಕೃ. ೫-೬೩). **ರೂಹುದಳೆ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ ರೂಪು + ತಳೆ$_1$ ]

**ರೂಪುದೋಱಿಸು** (ಕ್ರಿ). ಆಕಾರವನ್ನು ತೋರಿಸು; ಪ್ರತ್ಯಕ್ಷವಾಗು : ಎಡೆವಿಡದ ರೂಪುದೋಱಿಸುವ ಸಂಕಲ್ಪವಾಯಿನಪ್ಪ ಯುವರಾಜನೆ ಮದೀಯ ವಿರಹಮರಣಭಯಹರಣನಪ್ಪುದಕ್ಕೆ ಕಾರಣಂ (ಕಾದಂಬ. ೩೦೭); ಪರಪುರುಷರು ರೂಪುದೋಱಿಸಿ ಸರಿವರಲ್ಲದೆಯೊಂದುತಾವಿನೊಳಿರರು (ಜೀಜಂಕ. ೬-೨). [ ರೂಪುದೋಱು + — ಇಸು$_3$ ]

**ರೂಪುದೋಱು,** ರೂಹುದೋಱು (ಕ್ರಿ). = ರೂಪುದೋಱಿಸು : ರೂಪುದೋಱದೆ ಬಂದು ಸುಭಟನ ಚಾಪವನು ಖಂಡಿಸುವುದು (ಕುವ್ಯಾದ್ರೋ. ೬-೨೯); ಇಭಚರ್ಮಾಂಬರವಣಿಯರವಮರ್ದಿಸಿಯೆ ‿ರೂಪುದೋಱಿದ ನಾಗಳ್ (ವೃತ್ತವಿ. ೦೪-೦೦೬ ಪ). **ರೂಹುದೋಱು** : ಚತುರ್ಮುಖನಬ್ಜನೇತ್ರನೆಂದೊದವಿದತರ್ಕ್ಯರೆಂಬವರ್ಗೆ ಸುಂಟಿಸಬಾರದು ರೂಹುದೋಱಬಾರದು (ಶಂಪಾಶ. ೪೩); ಕಲಿಭೀಮ ಸಾತ್ಯಕಿ ರೂಹುದೋಱಿದರು (ಕುವ್ಯಾದ್ರೋ. ೨-೬೫). [ ರೂಪು + ತೋಱು ]

**ರೂಪುರೇಖೆ** (ನಾ). ಸ್ವರೂಪ; ಆಕಾರ : ನಮ್ಮ ಶಿಕ್ಷಣಕ್ಕೆ ಉಚಿತವೆನಿಸುವ ನೂತನ ತತ್ವದೃಷ್ಟಿಯ ರೂಪುರೇಖೆಗಳು (ಶಿಕ್ಷಣ. ೧೭); ಖಿಲ್ಜಿಯ ರೂಪುರೇಖೆಗಳುಳ್ಳ ಒಬ್ಬ ಯುವನನು ಗೌಡದೇಶವನ್ನು ಜಯಿಸುವವನಾಗಿದ್ದನು (ರಂಜಿಪು. ೦೫೩). [ ರೂಪು + ರೇಖೆ ]

**ರೂಪುವಡೆ,** ರೂಹುವಡೆ (ಕ್ರಿ). = ರೂಪುಗೊಳ್ : ಏಳಿದನಾಸನದ್ರುಥತೆ ರೂಪುವಡೆದತ್ತೆನಲಿಂದ್ರಾಯುಧಮನಂದು ಚಂದ್ರಾಪೀಡಂ (ಕಾದಂಬ. ೪೬೯); ಕೇಳೀನಂದನ ನವಪುಷ್ಪಚಾಪನ ಬಂಡಾರದಂತೆ ರೂಪುವಡೆದು ಮೆಱೆದುದು (ಕಂಪವಿ. ೫-೦೦೦). **ರೂಹುವಡೆ** : ಮಂದರಾಗವೆ ರೂಹುವಡೆದುದೆನೆ ಸಂಪ್ರೀತಿಯಿಂದೊಂದಿ ಚಲಿಸದಿರ್ದು (ಶದ್ಮರಾ. ೩-೬೯). [ ರೂಪು + ಪಡೆ$_1$ ]

**ರೂಪುವಿಡಿ,** ರೂಹುವಿಡಿ (ಕ್ರಿ). ೧. ಚೆಲುವನ್ನು ಹೊಂದು; ಅಂದವಾಗು : ರೂಪುವಿಡಿದ ಹೊನ್ನ ಪುತ್ಥಳಿಗಳ ಕಾಂತಿ ವ್ಯಾಪಿಸಿದುವು ಚೌದೆಸೆಯ (ಕಂಪವಿ. ೨೦-೨೬). **ರೂಹುವಿಡಿ** : ೨. ಆಕಾರವನ್ನು ತಾಳು; ರೂಪುದೋರು : ಮನಸಿನ ಭ್ರಮೆ ರೂಹುವಿಡಿದಲೆವುದು ಬಂದು ಕನಸಿನೊಳು (ಮದೀಕೃ. ೨೦-೦೪). [ ರೂಪು + ಪಿಡಿ$_1$ ]

**ರೂಪುವೆರು** ' ರೂಪುವೆಱು ' ನೋ.

**ರೂಪುವೆಱು,** ರೂಪುವೆರು (ಕ್ರಿ). = ರೂಪುಗೊಳ್ : ಉರಿಗಣ್ಣನೊಗೆದ ಬೀರಂಬೆರಸೊದವಿದ ನಂಜು ರೂಪುವೆತ್ತವೊಲೇನಚ್ಚರಿಯಂ ಪುಟ್ಟಿಸಿದರೊ . . . ಬೀರಗಣೇಸರ್ (ಅನ್ನ. ೦೬೦). **ರೂಪುವೆರು** : ಶಾಂತಿಯೇ ಮನೆಯ ರೂಪುವೆತ್ತಿದೆಯೋ (ಸುಪಶಂ. ೨). [ರೂಪು + ಪೆಱು$_1$]

**ರೂಪೋತ್ಕರ** (ನಾ). ರೂಪದಲ್ಲಿ ಮಿಗಿಲಾದವನು; ಅತ್ಯಂತ ಸುಂದರನಾದವನು: ಕಡುಸುಖಿ ಭೋಗಿ ರೂಪೋತ್ಕರನು ಧನಿಕನು ರಾಜಪೂಜ್ಯನು (ಕುವ್ಯಾಉ. ೩-೦೦೫). [ಸಂ.]

**ರೂಪ್ಯ** (ಗು). ೧. ಚೆಲುವಾದ ; ಸುಂದರವಾದ. ೨. ಮುದ್ರೆಯೊತ್ತಿದ ; ಅಸ್ಸೆ ಹಾಕಿದ. (ನಾ). ೩. ಬೆಳ್ಳಿ ; ರಜತ : ''ರಜತಂ, ಕಳಧೌತಂ, ರೂಪ್ಯಂ, ತಾರಂ— ಈ ೪ ಬೆಳ್ಳಿ'' (ಪಶಾಯು. ೨೮-೦೬); ಜಗಣ್ಣಿಶ್ಚರ್ಯವೈಶ್ಚರ್ಯಮಾಮಸಥಂ ರೂಪ್ಯಮಹೀಧರೇಂದ್ರಂ (ಆದಿಪು. ೦-೬೯); ರೂಪ್ಯದ ಕುಪ್ಪಿಗೆಗಳೊಳಂ . . . ತೀವಿದನಿತಾನುಂ ತೆಱದ ಬಂಧುರ ಸುಗಂಧವಸ್ತುಸಂದೋಹವುಂ ಪಿಡಿದು (ಜಗಪು. ೬-೦೮೪). ೪. ಮುದ್ರಿಸಿದ ಬೆಳ್ಳಿ, ಚಿನ್ನ ಮುಂತಾದ ಲೋಹಗಳ ನಾಣ್ಯ; ರೂಪಾಯಿ: ''ರೂಪ್ಯಂ, ಆಹತಂ, ತದ್ವಯಂ–ಅರಸಿನ ಮುದ್ರೆ ಹೊಡೆಯಲ್ಪಟ್ಟ ಬೆಳ್ಳಿ ಭಂಗಾರದ ನಾಣ್ಯಗಳ ಪೆಸರು'' (ಸಿದ್ಧಾಂತ. ೩೦೩). [ಸಂ.]

**ರೂಬ್‌ರೂಬ್** 'ರೂಬುರೂಬು' ನೋ.

**ರೂಬರು** (ಅ). ಸಮ್ಮುಖದಲ್ಲಿ; ಎದುರಿನಲ್ಲಿ : ದಂಡನ್ನು ಕೂಡುಮಾಡಿ ಅವರ ರೂಬರು ಇಳಿದು ಲಡಾಯಿ ಕೊಡಬೇಕು (ಕತ್ತಶಾ. ೬೩).

[←ಪಾರ. ರೂಬಾರೂ; ಹಿಂ. ರೂಬರೂ; ಮರಾ. ರೂಬರೂ, ರುಬರು]

**ರೂಬುರೂಬು,** ರೂಬ್‌ರೂಬ್ (ಅ). ಎದುರಿಗೆ; ಪ್ರತ್ಯಕ್ಷವಾಗಿ : ಈಗ ರೂಬುರೂಬು ಬಂದು ಇರುವಂಥಾ ಕಷ್ಟ ಪರಿಹರಿಸುವುದಕ್ಕೆ ಇದೇ ವಳ್ಳೇದು (ರಾಕೇಂದ್ರ. ೬೬). **ರೂಬ್‌ರೂಬ್** : ಗ್ರಾಮಾಧಿಕಾರಿಗಳು ತಾವೇ ರೂಬ್‌ರೂಬ್ ತಾಲ್ಲೂಕುಕಚೇರಿಗೆ ಹೋಗಲಾರದ ಪಕ್ಷದಲ್ಲಿ . . . ನಮೂದಿಸಬೇಕು (ಗ್ರಾತಾಳ. ೬). [← ಮರಾ. ರುಬೇರೂಬ್].

**ರೂಮಾಲು** ' ರುಮಾಲು$_1$ ' ನೋ.

**ರೂಮಾಲೆ** ' ರುಮಾಲು$_1$ ' ನೋ.

**ರೂಯಿ** (ನಾ). ಬೀಜ ತೆಗೆದ ಹತ್ತಿ; ಅರಳೆ: ಕಾಳುಕಡಿ ರೂಯಿ ಅಂದರೆ ಅರಳೆ ಮತ್ತು ಕೆಲವು ಕಿರಾಣೀಜೀನಸುಗಳ ವ್ಯಾಪಾರಣೆಯು ಪತ್ರದೊಳಗಿಂದ . . . ಕಳುಹಿಸುತ್ತಿದ್ದೆವು (ಹುಂಪವ್ಯಾ. ೬೦).

[ ← ಹಿಂ. ರುವಾ; ಮರಾ. ರೂಯ್, ರುಈ]

**ರೂಲು** (ನಾ). ೧. ನಿಯಮ ; ಶಾಸನ ; ಕಟ್ಟಳೆ: ಕಂದಾಯವನ್ನು ಕಟ್ಟಲೇಬೇಕೆಂದು ರೂಲಿದೆ (ರೂಕೆ). ೨. ಗೆರೆ; ಸಾಲು ; ರೇಖೆ : ಆ ಕಾಲದಲ್ಲಿ ಪಾವತಿಯಾದ ಐಟಂಗಳ ರೂಲಿನಲ್ಲಿ ಕಾರಣಗಳನ್ನು ಬರೆಯತಕ್ಕದ್ದು (ಗ್ರಾವಳ. ೬). ' ರೂಲುದೊಣ್ಣೆ ' ಪರಾ. [← ಇಂ. Rule]

**ರೂಲುದೊಣ್ಣೆ** (ನಾ). ಗೆರೆ ಹಾಕಲು ಉಪಯೋಗಿಸುವ ದುಂಡನೆಯ ಕೋಲು : ಗೆರೆ (ಹಾಕುವ)‿ಕಡ್ಡಿ, ಉರುಳೆ; ರೂಲುದೊಣ್ಣೆ (Ruler. ಇಂಕಿ). [ರೂಲು + ದೊಣ್ಣೆ$_1$]

**ರೂವ$_1$** ' ರೂಪು ' ನೋ.

**ರೂವ$_2$** (ನಾ). ಕಂಡರಿಸುವವನು ; ಶಿಲ್ಪಿ (?): ಗುತ್ತಂ ರೂವಂಗೆ ಮಾಘಮಾಸದುಳ್ ಕೊಡುವೆದು (ಎಕ. XIV. ೦೪೦–೨೨; 725); ನಾಗಯಬ್ಬೆಯ ಮಗ ಮಾರೆಯ್ಯ ಕೊಟ್ಟೂರ ತುಱುಗೊಳಲ್ಲಸ್ಸೆ ಸತ್ತ ಹೊನ್ನ ರೂವ (ಎಕ. XI, ಹಳ್ಳಕೆ. ೪–೬; 974). [<ರೂವಾರಿ$_1$]

**ರೂವರಿ** ' ರೂವಾರಿ ' ನೋ.

**ರೂವಳಿ** ' ರೂಪಟಿ ' ನೋ.

**ರೂವಟಿ** ' ರೂಪಟಿ ' ನೋ.

**ರೂವಾರ** ' ರೂಪಾರ ' ನೋ.

**ರೂವಾರಿ,** ರುವರಿ, ರುವಾರಿ, ರೂವರಿ, ರೂಹರಿ (ನಾ). ವಿಗ್ರಹ, ಶಾಸನ ಮೊದಲಾದುವುಗಳನ್ನು ಕೆತ್ತುವವನು : ಖಣ್ಣಿಸ್ಸುಟಿತ ಮೊದಲಾಗೆಲ್ಲಾ ಬೆಸನುಮಂ ನಡೆಯಿಸುವ ರೂವಾರಿ ಮಚ್ಚೋಜಂಗೆ ಮತ್ತರ್ಪ್ಪೆನ್ನೆರಡು (ಕೌಇಇ. IX-i, ೦೦೨–೫೫ ; 1045); ಮಱಿಯಾನೆಯ ಸಿಸ್ಯ ಚಿಕ್ಕ ರೂವಾರಿ (ಪ್ರೈಕಂ. ೦೪೩೨, ೨೪–೦೦ ; 1226); ದಾಸೋಜ ಸಾಮಾನ್ಯನಲ್ಲ. ತುಂಬ ಹೆಸರಾದ ರೂವಾರಿ (ಸವತಿ. ೪೭). **ರುವರಿ** : ಯಿ ರೂವ ಮಾಡಿದ ರುವರಿ ಬೋಗೋಜ (ಪ್ರೈಕಂ. ೦೪೩೨, ೨೩–೯; 1313). **ರುವಾರಿ** : ರುವಾರಿಯ ಉಳಿಯು ಬೆಳಗಲ್ಲನ್ನು . . . ಚಮತ್ಕೃತಿ ಲಾಲಿತ್ಯಗಳಿಂದ ನಿರ್ಮಿಸಿದ ಕೆಲಸ (ಕಲಾವಿ. ೦೦). **ರೂವರಿ** : ರೂವರಿ ಮಲ್ಲಿತಮ್ಮ (ಎಕ. XIV, ತಿರುಕು. ೦೭೫–೨೦; ಕು. 1208); ರೂವರಿ ಚಕ್ರವರ್ತಿ ಪಾಲೋಜ

(ಮುಂಬಿರಾ. ೧೯೦೫, ೩೩೫-೬; ?). **ರೂಹರಿ :** ರೂಹರಿ ಬಮ್ಮೋಜನ ಮಗ ಸುರಿಯಾಚಾರಿ ಬರದ. (ಎಕ. XII, ಶಿಕ್ಕನಾ. ೯-೪೯; 1187).
[< ಸಂ. ರೂಪಕಾರಿನ್]

**ರೂವಿಕ** (ನಾ). ಒಂದು ಊರಿನ ಹೆಸರು : ಯಾಪದ್ರೂವಿಕಗ್ರಾಮ (ಇಇ. VII, ೨೦೩, ೪೪-೭೨; ಸು. 10ನೆಯ ಶಶ). [ ? ]

**ರೂವಿಡು** ' ರೂಪಿಡು ' ನೋ.

**ರೂವಿಲಿ** ' ರೂಪಿಲಿ ' ನೋ.

**ರೂವಿಲ್ಲ** (ನಾ). ಆಕಾರವಿಲ್ಲದವನು; ಮನ್ಮಥ : " ಅನಂಗನಲ್ಲಿ ರೂವಿಲ್ಲನ" (ಕಬಾ೯ಶಿ. ೬೯). [ರೂವು (< ರೂಪು)+ಇಲ್$_1$+ — ಅ$_7$]

**ರೂವಿಸು** ' ರೂಪಿಸು ' ನೋ.

**ರೂವು** ' ರೂಪು ' ನೋ.

**ರೂವುಕ** (ನಾ). ಒಂದು ಬಗೆಯ ಸಸ್ಯ; ಹರಳು; ಔಡಲ. [ಸಂ.]

**ರೂವುಗಿಡು** ' ರೂಪುಗೆಡು ' ನೋ.

**ರೂಷಿತ** (ಗು). ೧. ಶೃಂಗರಿಸಿದ; ಅಲಂಕರಿಸಿದ. ೨. ಒರಟು ಮಾಡಿದ; ತರಕಲು ಮಾಡಿದ. ೩. ಪುಡಿಯನ್ನಾಗಿ ಮಾಡಿದ. ೪. ಲೇಪಿಸಿದ; ಬಳಿದ. ೫. ಆವರಿಸಿದ; ವ್ಯಾಪ್ತವಾದ. (ನಾ). ೬. ಮುಸುಕಿದುದು; ಆವೃತವಾದುದು: "ರೂಷಿತಂ, ಕುಂಠಿತಂ— ಈ ೨ ಮುಸುಕಿದುದು" (ಕಲಾಯು. ೦೨೬-೯೩). [ಸಂ.]

**ರೂಹ** ' ರೂಪು ' ನೋ.

**ರೂಹರಿ** ' ರೂವಾರಿ ' ನೋ.

**ರೂಹಾರ** ' ರೂಪಾರ ' ನೋ.

**ರೂಹಿಡು** ' ರೂಪಿಡು ' ನೋ.

**ರೂಹಿಸು** ' ರೂಪಿಸು ' ನೋ.

**ರೂಹು** ' ರೂಪು ' ನೋ.

**ರೂಹುಗರೆ** ' ರೂಪುಗರೆ ' ನೋ.

**ರೂಹುಗಳೆ** (ಕ್ರಿ). ರೂಪವು ಕೆಡು ; ಅಸ್ತವ್ಯಸ್ತಗೊಳ್ಳು : ರೂಹುಗಳೆ ದುಟ್ಟಬುವೆಗಳ ಕಾಳಿಕೆಯು ಮೋಟಿಯ ತಾಟಿದೊಡಲುಗಳ . . . ತರಳ ಹೃದಯದ ದೇವಮಿಂದ್ರನನಬಿಸಿ ಕಂಡರು (ಕುವ್ಯಾಕ. ೬-೦೨).
[ರೂಹು (< ರೂಪು) + ಕಳ್$_1$]

**ರೂಹುಗಾಣಿಸು** ' ರೂಪುಗಾಣಿಸು ' ನೋ.

**ರೂಹುಗೆಡಿಸು** (ಕ್ರಿ). (ಆಕಾರವನ್ನು) ಇಲ್ಲವಾಗಿಸು; ನೀಗು : ಜನನ ಮರಣಂಗಳಂ ರೂಹುಗೆಡಿಸಿದ್ದ ಗುರುವೆ (ಕೆಂಪೇರ. ದೇ. ೨೪೪-೨೦); ಸ್ತ್ರೀ ಜನ್ಮವ ರೂಹುಗೆಡಿಸಿ ಮುಂದೆ ನೀನು ಹೋಹ ಮುಕ್ತಿಗೆ ನಾನು ಬರಬೇಕು (ಭರತ. ೫೯-೩೬). [ರೂಹುಗೆಡು (<ರೂಪುಗೆಡು)+—ಇಸು$_3$]

**ರೂಹುಗೆಡು** ' ರೂಪುಗೆಡು ' ನೋ.

**ರೂಹುಗೇಡು** ' ರೂಪುಗೇಡು ' ನೋ.

**ರೂಹುಗೊಳ್** ' ರೂಪುಗೊಳ್ ' ನೋ.

**ರೂಹುಗೊಳಿಸು** (ಕ್ರಿ). ರೂಪಿಸು; ರಚಿಸು : ಕಿನ್ನರಂ. . . ಬಿಂಕಂ ಬಡೆಯೆ ಮುಹಚಾರೆಯುಮಂ ಮಾಡಿ ರೂಢಿವಡೆದ ಮಧ್ಯಮಾದಿಯೆಂಬಾದಿ ರಾಗಮಂ ರೂಹುಗೊಳಿಪುದುಂ (ಶಾಂತೀಶ. ೦೬-೭೭ ವ).
[ರೂಹು (< ರೂಪು)+ಕೊಳ್$_1$+— ಇಸು$_3$]

**ರೂಹುದಳೆ** ' ರೂಪುದಳೆ ' ನೋ.

**ರೂಹುದೋಱು** ' ರೂಪುದೋಱು ' ನೋ.

**ರೂಹುವಡೆ** ' ರೂಪುವಡೆ ' ನೋ.

**ರೂಹುವಿಡಿ** ' ರೂಪುವಿಡಿ ' ನೋ.

**ರೆಂಕೆ** ' ಎಱಂಕೆ ' ನೋ.

**ರೆಂಚೆ** ' ಱಂಚೆ ' ನೋ.

**ರೆಂಜೆ** ' ರಂಜ ' ನೋ.

**ರೆಂಟೆ$_1$**, ರಂಟೆ (ನಾ). ಹೊಲವನ್ನು ಉಳಲು ಬಳಸುವ ನೇಗಿಲಿನಂಥ ಒಂದು ಬಗೆಯ ಸಾಧನ : ರೆಂ[ಪಾಠಾಂ. ರಂ]ಟೆಹೊಡೆದು ಬೆಳಸುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ (ಕಪಕ. ೦೬೬-೪); ಅಂದು . . . ಬಂಡಿ, ರೆಂಟೆ, ಕುಂಟೆ ಮೊದಲಾದ ಸಾಮಗ್ರಿಗಳನ್ನೂ ತೊಳೆದು ಪೂಜೆಮಾಡುತ್ತಾರೆ (ಕಪ್ಪಕಾ.೦೭೯). **ರಂಟೆ :** ಉಗೆಯ ರಂಟೆ, ಕಬ್ಬಿಣದ ರಂಟೆಗಳು ಉಪಯೋಗದಲ್ಲಿ ಬರಹತ್ತಿವೆ (ಮುಂಬಿಭೂ.೩೭); ಒಡೆಯರೇ ಮಾಡುತ್ತ ಬಂದ ಅನೇಕ ರಂಟೆಗಳ ಬೇಸಾಯ ಅಲ್ಲಿತ್ತು (ಶ್ರೀಮುಕ್ರ. ೪೯). [ ? ]

**ರೆಂಟೆ$_2$** (ನಾ). ಒಂದು ಬಗೆಯ ಹೂವು : ಅವಿರಳಮಪ್ಪ ಮಲ್ಲಿಗೆಯ ಮೊಗ್ಗೆಯ ರಂಜಿಪ ರೆಂಟೆಯಂ ಸುಧಾಂಶುವ ಪೊಳೆಪಂ ಪಗಲ್ ಪಸರಿ ಪಂಶುಕದುಟ್ಟುಡೆ ತೊಟ್ಟ ಕಂಚುಕಂ ವಿವಿಧಲತಾಂತಸಂತತಿಯಲಂಕರಣಂ ಸಿರಿಗಂಪಿನಂಪು ತನ್ನವಯವಶೋಭೆಯಿಂದೆ ಕಡುಶೋಭೆಯನಾಂತಿರಲೆಯ್ದೆ ವರ್ಣನಂ. (ಮಹಾಪೀ. ೦೪-೨೨). [ ? ]

**ರೆಂಬೆ** (ನಾ). ಮರದ ಕೊಂಬೆ ; ಶಾಖೆ ; ಟಿಸಿಲು : ತಳೆದು ತಾಂ ಪಲಬಗೆಯ ಬಲುಗೊಂಬೆ ರೆಂಬೆಗಳನ್ನು (ಕರಕು. ೦೨-೬); ಹಿಗ್ಗಿದನು ಮನದೊಳಗೆ ರೆಂಬೆಯು ನೆಗ್ಗಿತೆನೆ ಕುಣಿದಾಡುತ (ರಾಮಾಸಂ. ೫-೨-೪೬); ಮಾಧವ ಮರದ ರೆಂಬೆಯ ಮೇಲೆ ಕುಳಿತಿದ್ದನು (ಪರಾಕ. ೩೬).
[←ತೆಲು. ರೆಂಬ, ರೆಬ್ಬ, ರೆಮ್ಮ]

**ರೆಕ್ಕೆ** ' ಎಱಂಕೆ ' ನೋ.

**ರೆಕ್ಕೆ‌ಇರುವೆ** (ನಾ). ರೆಕ್ಕೆಗಳಿರುವ ಒಂದು ಜಾತಿಯ ಇರುವೆ : (*).
[ರೆಕ್ಕೆ (< ಎಱಂಕೆ)+ಇರುವೆ$_1$ (<ಇಱುಂಪೆ)]

**ರೆಕ್ಕೆಹುಳು** (ನಾ). ರೆಕ್ಕೆಗಳಿರುವ ಒಂದು ಬಗೆಯ ಹುಳು; ಈಚಲು ಹುಳು : ಮಳೆಗಾಲದಲ್ಲಿ ಸಂಜೆಯಾದ ಕೂಡಲೆ ರೆಕ್ಕೆಹುಳುಗಳು ಬಂದು ಬಿಡುತ್ತವೆ (ರೂಢಿ). [ರೆಕ್ಕೆ (< ಎಱಂಕೆ)+ಹುಳು (<ಪುೞು)]

**ರೆಜಿಸ್ಟರು**, ರಿಜಿಸ್ಟರು (ನಾ). ನಿಗದಿಮಾಡಿದ ವಿವರಗಳನ್ನು ನಮೂದಿಸುವ ಪುಸ್ತಕ; ದಾಖಲೆಪುಸ್ತಕ: ಕೌಂಟರಿನಲ್ಲಿದ್ದ ರೆಜಿಸ್ಟರಿನಲ್ಲಿ ತನಗೆ ಸಂಬಂಧಪಟ್ಟ ವಿವರಗಳನ್ನು ಬರೆಯುತ್ತಿದ್ದಂತೆ . . . ಪ್ರಶ್ನಿಸುತ್ತಿದ್ದ (ಹೊಸಕ್ಷಿ. ೦೬೬). **ರಿಜಿಸ್ಟರು :** ಅವಳು ರಿಜಿಸ್ಟರಿನಲ್ಲಿ ಸಹಿ ಹಾಕಿದಳು (ರೂಢಿ). [← ಇಂ. Register]

**ರೆಟ್ಟೆ** ' ಱಟ್ಟೆ ' ನೋ.

**ರೆಡಿಯೂರ್** (ನಾ). ಒಂದು ಊರಿನ ಹೆಸರು : ಉದಕಪೂರ್ವ್ವನ್ ದತ್ತಃ ಅಸ್ಯ ತಟಾಕಸ್ಯ ರೆಡಿಯೂರ್‌ನ್ನಾಮಗ್ರಾಮಸ್ಯ ಕೇದಾರೇಷು (ವ್ಯಕಂ. ೦೯೦೬. ೦೨-೩೨; 540). [ ? ]

**ರೆಡ್ಡಿ**, ರಡ್ಡಿ (ನಾ). ೧. ಕರ್ನಾಟಕ ಮತ್ತು ಆಂಧ್ರಪ್ರದೇಶದ ಗಡಿಗಳಲ್ಲಿ ನೆಲಸಿರುವ, ವ್ಯವಸಾಯವೇ ಮುಖ್ಯಕಸುಬಾಗಿದ್ದು, ತೆಲುಗು ಭಾಷೆಯನ್ನಾಡುವ ಒಂದು ಜನಾಂಗ : (*). **ರಡ್ಡಿ :** ೧. ಕಾಮ ಹರಭಕ್ತನೋರ್ವಂ ರಡ್ಡಿಕುಲಭವಂ . . . ಹೇಮರಡ್ಡಿಯೆನಿಪ್ಪವಂ . . . ಸಂಸಾರಮಂ ಮಾಡುತಿರಲು (ಮಲ್ಲಿತ. ೨-೯); "ರಡ್ಡಿ "ಯೆಂಬ ಅಡ್ಡಹೆಸರು ಹೇಮನ ವಂಶದವರಿಗೆ ಬಿತ್ತು (ಕಾಣಗ. ೦೨೬). ೨. ಗ್ರಾಮಾಧಿಕಾರಿಗಳಲ್ಲಿ ಒಬ್ಬ ; ಪಟೇಲ : ಪಟೇಲನಿಗೆ . . . ರಡ್ಡಿ, ಹೆಗ್ಗಡೆ ಎಂತಲೂ ಹೆಸರುಂಟು (ಗ್ರಾಮಾಕ. ೦) ; ಗೌಡ, ನಾಯಕ, ರಡ್ಡಿ (ದೇಸಾಯಿ) ಎಂಬುವು ಬೇರೆಬೇರೆ ಪ್ರದೇಶಗಳಲ್ಲಿ ಅವರಿಗೆ ಸಲ್ಲುತ್ತಿದ್ದ ಹೆಸರುಗಳು (ಕರ್ನಾಭೂ. ೦೨೫).
[ದೇ.೫ ತಮಿ. ಇರಟ್ಟಿ, ರೆಟ್ಟ ; ತೆಲು. ರೆಡ್ಡಿ, ರಡ್ಡಿ]

**ರೆಪ್ಪು** ' ಱೆಪ್ಪು ' ನೋ.

**ರೆಪ್ಪೆ**$_1$ 'ಚಿಪ್ಪೆ' ನೋ.

**ರೆಪ್ಪೆ**$_2$ (ನಾ). ಒಂದು ಬಗೆಯ ಸಸ್ಯ : ರೆಪ್ಪೆ, ತೊಟ್ಟಲ್ಲ (ವೃಕ್ಷಿಗಿ. ೦೬-೩೦೫). [?/ ತೆಲು. ರೆಪ್ಪಾಲ]

**ರೆಪ್ಪೆಬಡಿ** (ಕ್ರಿ). ಎವೆಯನ್ನು ಅಲುಗಾಡಿಸು ; ರೆಪ್ಪೆಹೊಡೆ : ನವ ಕುಮಾರನನ್ನು ರೆಪ್ಪೆಬಡಿಯದೆ . . . ನೋಡುತ್ತ ರಾಜಮೋಹಿನಿಯಾಗಿ ನಿಂತಳು (ಕಣಾಟಂ. ೯೦). [ರೆಪ್ಪೆ$_1$ (< ಚಿಪ್ಪೆ) + ಬಡಿ$_1$]

**ರೆಪ್ಪೆಹೊಡೆ** (ಕ್ರಿ). ೧. = ರೆಪ್ಪೆಬಡಿ : ಅವನು, ಅವಳನ್ನು ರೆಪ್ಪೆ ಹೊಡೆಯದ ಹಾಗೆ ನೋಡಿದ (ರೂಢಿ). ೨. ಸೂಚಿಸು; ಸನ್ನೆಮಾಡು: ಅವಳು ಆ ಸಂಗತಿಯನ್ನು ಎಲ್ಲರ ಮುಂದೂ ಹೇಳಬೇಡವೆಂದು ರೆಪ್ಪೆ ಹೊಡೆದು ಸೂಚಿಸಿದಳು (ರೂಢಿ).

[ರೆಪ್ಪೆ$_1$ (< ಚಿಪ್ಪೆ) + ಹೊಡೆ$_1$ (< ಪೊಯ್$_1$)]

**ರೆವಡಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಶಿಲೇಮುದ್ದರ ಮರ್ಮ್ಮಾನ್ ಸರ್ವ್ವಸಿದ್ಧಿ ಆಚಾರ್ಜ್ಯ(ರ್ಯ್ಯ)ರ ಚಟ್ಟರ ರೆವಡಿಒವಜ್ಜರ್ ತೆಂಕಣದಿಶೆ ಮಾಡಿದೊರ್ (ಎಕ. X. ೦೭೦-೪ ; ೬ನೆಯ ಶತ). [?]

**ರೆವಡಿಬದ್ದ** (ನಾ). ಒಬ್ಬಾತನ ಹೆಸರು : ಪೆಸದೊರಾ ಮಗನ್ ರೆವಡಿ ಬದ್ದರಾಟದಾಳೆ ಕೊಮರಸಿಙ್ಗನ ದೇಗುಲದ ಆದಿತ್ಯಬಟಾರಗೆ ಕೊಟ್ಟುದು (ಎಕ. VII, ೨೪೭-೨ : 732). [?]

**ರೆವಿನ್ಯೂ, ರೆವೆನ್ಯು** (ನಾ). ತೆರಿಗೆ, ಸುಂಕ ಮುಂತಾದುವುಗಳಿಂದ ಬರುವ ಹುಟ್ಟುವಳಿ ; ರಾಜ್ಯಾದಾಯ : ಗ್ರಾಮಾಧಿಪತಿಗಳು ಸರ್ಕಾರದ ರೆವಿನ್ಯೂಬಾಬಿನಲ್ಲೆಲ್ಲಾ ಕಂದಾಯದ ಹಣದ ವಸೂಲಿಯು ಅತಿಮುಖ್ಯ ವಾದುದೆಂದು ತಿಳಿದಿರಬೇಕು (ಗ್ರಾಮಾಶ. ೬೮). ರೆವೆನ್ಯು : ರೆವೆನ್ಯು . . . ಹುಟ್ಟುವಳಿ, ಆದಾಯ, ಆಯ, ಉತ್ಪತ್ತಿ (Revenue ಇಂಕೋ).

[← ಇಂ. Revenue]

**ರೆವೆನ್ಯು** 'ರೆವಿನ್ಯೂ' ನೋ.

**ರೆಳ್ಳು** (ನಾ). ಒಂದು ಬಗೆಯ ಜೊಂಡು,— ಗಲಗು : "ರೆಳ್ಳು — ಗಲಗು" (ಶಾಶಕೋ. ೯೦). [← ತೆಲು. ರೆಲ್ಲು ಜಿಲ್ಲು]

**ರೆಳ್ಳುಗುಸುವು** (ನಾ). ಒಂದು ಬಗೆಯ ಜೊಂಡು : "ಹುಲ್ಲುಮೆದೆ. . . ಸಣ್ಣಹುಲ್ಲು — ಈ ೪ ಜಾಬುಹುಲ್ಲು ಹೆಸರೆಂದು ಕೆಲವರನ್ನುವರು. ಅಂಧ್ರ ದಲ್ಲಿ ರೆಳ್ಳುಗುಸುವು" (ಸಿದ್ಧಾಂತಿ. ೦೫೦). [ರೆಳ್ಳು + ಕಸುವು$_1$]

**ರೇಂಜರು** (ನಾ). ಅರಣ್ಯಗಳ ರಕ್ಷಣೆಯನ್ನು ನೋಡಿಕೊಳ್ಳುವವನು : ಇಪ್ಪು ಚಿಕ್ಕವಯಸ್ಸಿನಲ್ಲಿ ರೇಂಜರಾಗಿದ್ದೀರಿ (ಕೃಶತ. ೫೯).

[← ಇಂ. Ranger]

**ರೇಂಜರುಗಿರಿ** (ನಾ). ಅರಣ್ಯಗಳನ್ನು ರಕ್ಷಿಸುವ ಅಧಿಕಾರ,— ಪದವಿ: ಮಂತ್ರಿತ್ವ ಮಾಡಲು ಹುಟ್ಟಿದವನು . . . "ರೇಂಜರುಗಿರಿ" ಯಿಂದಲೇ ತೃಪ್ತನಾಗಬೇಕಾಯಿತು (ಶುರಾಜು. ೩೦). [ರೇಂಜರು + — ಗಿರಿ$_2$]

**ರೇಕ** (ನಾ). ೧. ಸಂದೇಹ ; ಸಂಶಯ. ೨. ಕೀಳುಜಾತಿಯವನು. ೩. ಕಪ್ಪೆ. ೪. ಒಂದು ಬಗೆಯ ಮೀನು. ೫. ಭೇದಿ ; ವಿರೇಚನ.

[ಸಂ.]

**ರೇಕವಿಸರ** (ನಾ). ಒಂದು ಬಗೆಯ ಕಬ್ಬಿಣದ ಆಯುಧ : ಮಕರದಿಬ್ಬಿ ರೇಕವಿಸರ ಗೋವಿ ತುಪಾಕಿ ಮೊದಲಾದ ಆಯಸಯಂತ್ರಜಾಲಗಳು (ಕೃವಾಶ. ೮೭). [?]

**ರೇಕು** (ನಾ). ೧. ಚಿನ್ನ ಮುಂತಾದ ಲೋಹಗಳ ತೆಳುವಾದ ತಗಡು; ವರ್ತಿ : ದಪ್ಪಮಿಾನು, ಸಣ್ಣಮಿಾನು ಬೆಳ್ಳಿಯ ಚೂರುಗಳಂತೆ, ಚಿನ್ನದ ರೇಕುಗಳಂತೆ . . . ಮೇಲಕ್ಕೆ ಬರುತ್ತಿದ್ದವು (ಬೆಸ್ತ೪. ೭) ; ಚಂದ್ರನ ಬೆಳ್ಳಿ ಎಲೆಗಳ ಮೇಲೆ ರೇಕುಗಳನ್ನು ಚಿಮುಕಿಸಿದಂತೆ ಕಾಣುತ್ತಿತ್ತು (ಅಂಶೂ. ೦೦೨). ೨. ಹೂವಿನ ಎಸಳು ; ಪಕಳೆ : ಹುವ್ವಿನ ರೇಕುಗಳಂ ಕರ್ಪೂರದ ಪುಡಿಯಂ ಶರಗಿನಿಂ ಸವರಿ (ಶಾಗಂ. ೦೭೬-೦೦) ; ಆ ಪುಷ್ಪ ಗಳಲ್ಲಿ ಒಂದಾದರೂ ಮುರಿದ ರೇಕಿನ . . . ಬಾಡಿದ ಪುಷ್ಪಗಳಿರಲಿಲ್ಲ (ಶಾಂತಲಾ. ೦೦೦). ೩. ಚಿನ್ನ ; ಬಂಗಾರ : ರಂಗನ್ನ ನೋಡೋಕೆ ರೇಕು ಮಾಣಿಕವೇಕೆ (ಹ್ಯಾಲಾ. ೦೭).

[ದೇ. ॥ ತಮಿ. ಇರೇಕ್ಕು ; ತೆಲು. ರೇಕು, ಚೀಕು]

**ರೇಕೆ**, ರೇಖೆ (ನಾ). ೧. ಗೆರೆ ; ಎಳೆ ; ರೇಖೆ : "ರೇಕೆ— ರೇಖಾ= ಗೆರೆ, ಗುರುತು" (ಕನ್ನಕೋ. ೫೬). ೨. ಒಂದು ಅಳತೆ : ಹೊಲಗದೆ ೧ ರೇಕೆ ಒಂದುವೆ ಎಚಿ ರೇಕೆ (ಎಕ. IX. ಮಾಗಡಿ. ೦೨-೫ ; 1692). ೩. ಹಸನುಮಾಡುವುದು ; ಶುದ್ಧಮಾಡುವುದು. **ರೇಖೆ** : ೪. ಕಂದಾಯ ; ತೆರಿಗೆ (?) : ರೇಖು ಪ್ರಮಾಣು ಗ ೨೪ (ಎಕ. VII. ಶಿಕಾರಿ. ೩-೦೩ ; 1671).

**ರೇಕೆಮಾಡು**, ರೇಖೆಮಾಡು = ಶುದ್ಧಮಾಡು ; ಹಸನು ಗೊಳಿಸು : ರೇಕೆ ಮಾಡಲಿಕ್ಕೆ ತಿಳಿಯದಿದ್ದರೆ ತೋಕೂರಿಗೆ ಹೋಗಲಿಕ್ಕೆ ತಿಳಿಯದೇ ? (ಗಾದೆ) ; ಪೈರನ್ನು ಕುಯಿದು ಒಟ್ಟಿ . . . ರೇಖುಮಾಡಿ ಗುತ್ತಿಗೇದಾರರಿಗೆ ಕೊಡುತ್ತಿದ್ದರು (ಹುಬ್ಬಿಶ. ೬೨). **ರೇಕೆಯಾಗು** = ಒಕ್ಕಣೆಯಾಗು ; ಹಸನಾಗು : ರಾಗಿ ರೇಕೆಯಾಗಿದೆ (ರೂಢಿ).

[< ಸಂ. ರೇಖಾ]

**ರೇಖಾಂಶ** (ನಾ). [ಭೂಗೋಳ] ಭೂಮಂಡಲದ ಉತ್ತರಧ್ರುವ ದಿಂದ ದಕ್ಷಿಣಧ್ರುವಕ್ಕೆ, ಒಂದು ಅಂಶಕ್ಕೆ ಒಂದರಂತೆ ಮುನ್ನೂರು ಅರುವತ್ತುರೇಖೆಗಳನ್ನು ಎಳೆದಂತೆ ಭಾವಿಸಿರುವ ಉದ್ದ ರೇಖೆ; ಮಧ್ಯಾಹ್ನರೇಖೆ : ರೇಖಾಂಶ (Longitude) ಅಂದರೆ ಯಾವದಾ ದರೂ ಒಂದು ಮಧ್ಯಾಹ್ನರೇಖೆಯಿಂದ ಪೂರ್ವಕಡೆಯಲ್ಲಾಗಲಿ . . . ಅಥವಾ ಪಶ್ಚಿಮಕಡೆಯಲ್ಲಾಗಲಿ ಇರುವ ಒಂದು ಸ್ಥಳಕ್ಕೂ ಮತ್ತು ಮಧ್ಯಾಹ್ನರೇಖೆಗೂ ಮಧ್ಯದಲ್ಲಿರುವ ದೂರವು (ಭೂಗೋಳ. ೬); ಅಕ್ಷವೃತ್ತ ಗಳ ಮೇಲೆ ಪ್ರಥಮಯಾಮ್ಯೋತ್ತರದಿಂದ ಎಣಿಸಿದ ಅಂಶಗಳಿಗೆ ರೇಖಾಂಶ ಗಳೆಂತಲೂ ಅನ್ನುವರು (ಭುಂಂಬಿಯ. ೩-೬೫). 'ಅಕ್ಷಾಂಶ' ಪರಾ. [ಸಂ.]

**ರೇಖಾಕೃತಿ** (ನಾ). ಗೆರೆಗಳಿಂದ ಕೂಡಿದುದು ; ರೇಖಾಕಾರವಾದುದು: ಬ್ರಾಹ್ಮೀಲಿಪಿ ಹೆಚ್ಚಿನ ಮಟ್ಟಿಗೂ ರೇಖಾಕೃತಿಯದು (ಸಂಕೋಶ. ೪). [ಸಂ.]

**ರೇಖಾಗಣಿತ** (ನಾ). [ಗಣಿತ] ಗೆರೆಗಳು, ಕ್ಷೇತ್ರಗಳು ಮತ್ತು ಘನಾಕೃತಿಗಳು ಮುಂತಾದುವುಗಳ ಲಕ್ಷಣಗಳು, ಪ್ರಮಾಣಸಂಬಂಧ ಗಳನ್ನು ತಿಳಿಸುವ ಶಾಸ್ತ್ರ; ಜಾಮಿಟ್ರಿ : ಭೂಮಿಯ ಅಳತೆಯಲ್ಲಿ ಮುಖ್ಯವಾಗಿ ತಿಳಿದಿರಬೇಕಾದ ರೇಖಾಗಣಿತ ಸಿದ್ಧಾಂತಗಳಾವವು ? (ಭೂಅಳ. ೯೭); ಈ ಪಿರಮಿಡ್ಡುಗಳನ್ನು ಕಟ್ಟಿದ ಶಿಲ್ಪಿಗಳಿಗೆ ರೇಖಾಗಣಿತದ ಜ್ಞಾನವು ತಕ್ಕಮಟ್ಟಿಗೆ ಚೆನ್ನಾಗಿಯೇ ಇದ್ದಿರಬೇಕು (ಗಣಿತ. ೩). 'ಅಂಕಗಣಿತ', 'ಬೀಜಗಣಿತ' ಪರಾ. [ಸಂ.]

**ರೇಖಾಚಿತ್ರ** (ನಾ). ಗೆರೆಗಳಿಂದ ಬರೆದ ಚಿತ್ರ : ಮಧ್ಯಹಿಂದೂಸ್ಥಾನದ ವಿಂಧ್ಯಾಚಲದ ಕೈಮುರುಬೆಟ್ಟದಲ್ಲಿ ಕೆಲವು ರೇಖಾಚಿತ್ರಗಳಿವೆ (ಭಾಕಶ. ೦೭).

[ಸಂ.]

**ರೇಖಾಮಾತ್ರ** (ಅ). ಒಂದು ಗೆರೆಯಷ್ಟು ; ಸ್ವಲ್ಪಮಾತ್ರ : ಇದುವೆ ರೇಖಾಮಾತ್ರ ಸರ್ವಾಂಗದಲಿ ನಿನ್ನನು ಮುಚಿಯದಿರು (ಶುಭಾಸ. ೦೦-೩೩).

[< ಸಂ. ರೇಖಾಮಾತ್ರಂ]

**ರೇಖಾಯಿಲ** (ನಾ). ರೇಖೆಗಳನ್ನು ಬಳಸಿ ಬರೆಯುವವನು (?) : ಆಕೂಲಪ್ರತ್ಯಯಕ್ಕೆ — ಗಾಥಾಯಿಲಂ, ರೇಖಾಯಿಲಂ (ಶಮದ. ೨೦೫ ವೃ ಯೋ). [< ರೇಖೆ + — ಆಯಿಲ$_2$]

**ರೇಖಾರೂಪ** (ನಾ). ಗೆರೆಗಳನ್ನು ಬಳಸಿ ಬರೆದ ನಕ್ಷೆ : ಮೂಲಭಾಷೆ ಯಿಂದ ಮೊದಲು ಪ್ರತ್ಯೇಕವಾದುದು ತೆಲುಗುಭಾಷೆಯೆಂದೂ, ಆಮೇಲೆ

ತಮಿಳು ಕನ್ನಡಗಳು ಕವಲೊಡೆದುವೆಂದೂ . . . ಹೇಳಬಹುದು. ಇದನ್ನೇ ರೇಖಾರೂಪವಾಗಿ ಹೀಗೆ ತೋರಿಸಬಹುದು (ಕೈಶಿ. ೩೦೬). [ಸಂ.]

**ರೇಖಾಶಾಸ್ತ್ರ** (ನಾ). = ರೇಖಾಗಣಿತ : ಸಂಖ್ಯಾಶಾಸ್ತ್ರವನ್ನು ಕಂಡುಹಿಡಿದ ಯಶಸ್ಸು ಭಾರತಕ್ಕೆ ಸಲ್ಲುತ್ತದೆ. ರೇಖಾಶಾಸ್ತ್ರದಲ್ಲಿ ಯವನರು ಪ್ರವೀಣರು (ಶಿಲ್ಪಾ. ೬೨). [ಸಂ.]

**ರೇಖಿಕೆ** (ನಾ). ಗೆರೆ; ಗೀಟು : ಮಳಯಜರೇಣುಜಾಲಪರಿಪಾಂಡುರ ಮಾಯ್ತು ಕುಚದ್ವಯಂ ವಿಕಜ್ಜಳಕೃತರೇಖಿಕಾರಚನಮಾದುವು ಲೋಚನ ಯುಗ್ಮಂ (ಕಂದ್ರಪ್ರ. ೬-೭೭). [ಸಂ. ರೇಖಿಕಾ]

**ರೇಖಿಸು** (ಕ್ರಿ). ೧. ಗೆರೆಯನ್ನು ಎಳೆ; ಗೀಟುಹಾಕು : ಕತ್ತುರಿಯಿಂದನುಮಾಡಿದ ನೆಲದೊಳ್ ವೃತ್ತಪಯೋಧರೆಯೊರ್ವಳ್ ಸಂತಸವೆತ್ತು ಮಸೆದ ಕೂರುಗುರಿಂ ರೇಖಿಸಿ (ಜಯಕಾ. ೬-೦೪). ೨. ಚಿತ್ರಿಸು : ಶಂಕರನು 'ನೆಲ-ಮುಗಿಲ'ನ ಮುಖಪುಟವನ್ನು ಸುಟಿಯಾಗಿ ರೇಖಿಸಿಕೊಟ್ಟನು (ಶಿಂಮು. XI, ಪವಳದ ಹುಡಿ). ೩. ಕಲ್ಪಿಸು ; ಯೋಜಿಸು : ಇವರು ತಮ್ಮ ನಾಟ್ಯಗಳಲ್ಲಿ ರೇಖಿಸುವ ರಂಗನಮೂನೆಗಳು . . . ಮಾಯಾಜಾಲವನ್ನು ಬೀಸುತ್ತವೆ (ಕಾರಂ. ೩೭೪) ; ಜಗದಾವ ವಸ್ತುವೂ ಇದರಾಸೆ ರೇಖಿಸದು (ಪುಕಿರ. ೩೬-೬). [ರೇಖೆ + — ಇಸು$_3$]

**ರೇಖು** 'ರೇಕೆ' ನೋ.

**ರೇಖೆ** (ನಾ). ೧. ಗೆರೆ ; ಗೀಟು : "ಗೆಜ್ಜೆ ರೇಖೆಯುಕ್ಕು" (ಮುಂಗಾರು. ೬೬೦೬); ಬಿಜುಗಯ್ಯ ಕೂರುಗುರಿಂದ ಮೈಯೊಳು ತಾಗಲಿಱಿದು ರೇಖೆಗಳ ಮಾಡಿದನು (ಜೈಮಿನಿ. ೪-೩೩); ನಕ್ಷೆಯಲ್ಲಿ ಉತ್ತರದಿಂದ ದಕ್ಷಿಣಕ್ಕೆ ಎಳೆದಿರುವ ರೇಖೆಯು (ವೃತ್ತದ ವ್ಯಾಸವು) ಸರಿಯಾಗಿ ೧೮೦ ಡಿಗ್ರಿಗಳು (ನಕ್ಷತ್ರ. ೦೪). ೨. ಗಡಿಯನ್ನು ನಿರ್ಧರಿಸಲು, ಭೂಮಿಯನ್ನು ಅಳತೆಮಾಡಿ ಹಾಕಿರುವ ಗೆರೆ. ೩. ಹಸನುಮಾಡುವಿಕೆ : ಶುದ್ಧಗೊಳಿಸುವಿಕೆ : ಸಾಲಗಾರನು ಅಡಕೆ ಛತ್ರಗಳನ್ನು ರೇಖೆಮಾಡುತ್ತಿರುವುವನ್ನು . . . ನೋಡುತ್ತಾ ಇದ್ದರು. ಸಂಪೂರ್ಣ ರೇಖೆಯಾದೊಡನೆ ಕೋರ್ಟಿನಲ್ಲಿ ಅಮಲ್ದಾರ ದಾಖಲ್ಮಾಡಿಸುತ್ತಿದ್ದರು (ಕಂಹಸಂ. ೪೭). ೪. ನಿರ್ದೇಶನ ; ಸೂಚನೆ : ಘುಳುಘುಳಿಪ ಚೀತ್ಕಾರ ಕೋಳಾಹಳದ ಸೂಚನ ರೇಖೆಯುಲಿ ಭಟಸಂಕುಲಲಾಮನ ತೇರು ಬಂದುದು ತೀವಿದಸ್ತ್ರದಲಿ (ಶುಮ್ಯಾದ್ರೋ. ೪-೩೦). ೫. ಅಂದ ; ಸೊಗಸು : ಬರಿಸುವುತ್ತಮದಿವ್ಯವಾಜಿಯನರಸ ಮೇಣಿವು ವೈಶ್ಯಜಾತಿಯ ತುರಗ ಕಣ್ಣಿಗೆ ರೇಖೆಯುಲ್ಲದ ಸತ್ವಮೆಳ್ಳನಿತುಮಂಗುಳಲಾರವು (ಅಂಂಂ. ೧೬-೨೮). 'ರೇಖೆಗೊಳ್' ಪರಾ. ೬. ಲಾವಣ್ಯ ; ವಿಲಾಸ : ರೇಖೆ ನೃತ್ತದಿರವಂ ನೆನಪೊಂದಿರೆ ದೇಸೆಯಿಂ ಶ್ರಮಂ ಬೆರಸುವನೀ ಕುಮಾರನೊಸೆದಂದಿನ ನಂದನ ಕಂದನಂದದಿಂ (ಚಿತ. ೪-೦೩೩). ೭. [ಅಶ್ವಶಾ] ಕುದುರೆಯ ಆರು ಬಗೆಯ ಲಕ್ಷಣಗಳಲ್ಲಿ ಒಂದು (?) : ಭಂಜಳಿ ಮುರಳಿ ಝಳಂಪಿ ವಾಹಿಣಿ ರೂಪು ರಂಜವ ರೇಖೆಯೆಂದೆಂಬ ಮಂಜುಳವಾದ ಷಡಂಗದೊಳಾ ಹಯ ರಂಜನೆವಡೆದುದು (ತ್ರಿಷಾಂ. ೪-೦೨). ೮. ಕಂದಾಯ ; ತೆರಿಗೆ (?): ತ್ರಿಭುವನಮಹಾದೇವಿ ಪಟ್ಟನ ಮೊಸುಕೊಳತ್ತೂರ ಗ್ರಾಮು ೧೬೦ ರೇಖೆ ಗ ೧೭.೨ (ಸೌಇಇ. IX — ii. ೪೭೭-೪ ; ಶಾ. 1472) ; ನಂದಿಗೇರೀಗ್ರಾಮು ೧೯ಕ್ಕೆ ರೇಖೆ ಗ ೮೦ (ಎಕ. VII, ಶಿವಮೊ. ೨-೯೩ ; 1641).

**ರೇಖೆಮಾಡಿಸು** = ಧಾನ್ಯವನ್ನು ಹಸನುಮಾಡಿಸು : ದೊರೆಗಳವರು ಒಂದು ವರ್ಷ ಆದ ಫಲವನ್ನು ರೇಖೆಮಾಡಿಸಿ . . . ಸಮವಾರು ಕೊಡುವಂತೆಯೂ ನಿಬಂಧನೆಮಾಡಿದರು (ಮಹಾಕಂ. I. ೦೦೬). **ರೇಖೆಮಾಡು** = ೧. ಬರೆ : ಈ ಕೆಳಗಿನ ಪಟ್ಟಿಯಲ್ಲಿ ಸೂಕ್ಷ್ಮವಾಗಿ ರೇಖೆಮಾಡಿದೆ (ರಾಷ್ಟ್ರಶಾ. ೩೩೩). ೨. ಹಸನುಮಾಡು : ರಾಗಿಯ ರೇಖೆಮಾಡು (ಅರ್ಥಕೋ. ೩೦-೩೦) ; ಸಾಲಗಾರನು ಅಡಕೆ ಛತ್ರಗಳನ್ನು ರೇಖೆಮಾಡುತ್ತಿರುವುದನ್ನು ಗೌಡರು . . . ನೋಡುತ್ತಾ ಇದ್ದರು (ಕಂಹಸಂ. ೪೭). **ರೇಖೆಯ ಕಾಲ** = ಒಕ್ಕಣೆ ಮಾಡುವ ಕಾಲ : ರೇಖೆಯ ಕಾಲದಲ್ಲಿ ಧಾನ್ಯವನ್ನು ಅಳೆಸಿ ರಾಜಾದಾಯವನ್ನು ಪ್ರತ್ಯೇಕಿಸಿಡಬೇಕು (ಕರಂ. ೩೬೬). [ಸಂ. ರೇಖಾ]

**ರೇಖೆಗೊಳ್** (ಕ್ರಿ). ಚೆಲುವಾಗು ; ಸುಂದರವಾಗು : ಬಳ್ಳಿಬೆಳೆದಳಗೌಂಗಿನಂತೆ ಲೋಕದ ಚೆಲ್ವೆಲ್ಲಮನೊಳಕೊಂಡು ರೇಖೆಗೊಂಡ ಲಾಟೀಲಲಾಮನ ಪರಿಣದ್ಧಕಂಧರಂ (ಶಂಕಥಾ. ೨-೩೯೭). [ರೇಖೆ + ಕೊಳ್$_1$]

**ರೇಖೆಗೊಳಿಸು** (ಕ್ರಿ). ಗೆರೆಯನ್ನು ಬರೆ ; ಗೀಟು ಎಳೆ : ತುಱುಗಿವೆ ಗಪ್ಪು ಕವಲ್ತು ಕುಡಿಗೊಂಡುದೆನಿಸಿ ನಿಡುಗಣ್ಗಂಜನಮನೆರ್ಚ ಸೋಗೆಯಂ ರೇಖೆಗೊಳಿಸಿಯುಂ (ಪ್ರಕಶ. ೩-೦೫೭). [ರೇಖೆ + ಕೊಳ್$_1$ + — ಇಸು$_3$]

**ರೇಖೆದೆಗೆ** (ಕ್ರಿ). ಗೆರೆಯೆಳೆ ; ಗುರುತುಮಾಡು : ಮೊಲೆಯನುಗುರೊಳೌಂಕಿ ತೊಡೆಯನಲೆದು ರೇಖೆದೆಗೆದು ತುಟಿಯನೊಲಿದು ಸವಿವುತೊತ್ತಿ ತೋಳೊಳಪ್ಪಿ ಚುಂಬಿಸಿ (ಜಪರ. ೩-೦೩). [ರೇಖೆ + ತೆಗೆ$_1$]

**ರೇಖೆದೋಱು** (ಕ್ರಿ). ೧. ಗೆರೆಯು ಕಾಣಿಸಿಕೊಳ್ಳು : ವರನಾರಾಯಣನ ರಾಣಿಯರ ಪಾದದ ಹೊನ್ನ ಸರಪಳಿಯೆಳೆಯುತ್ತ ಬರಲು ವರನೀಲದ ನೆಲಗಟ್ಟಲ್ಲಿ ಪೊಂಬಳ್ಳಿವರೆದಂತೆ ರೇಖೆದೋಱುವುವು (ಪೋಹಶ. ೦೪-೨೬). ೨. ಚೆಲುವಾಗು ; ಸುಂದರವಾಗು : ತವರು ಗುಳಿಯುಲ್ಲದೊಪ್ಪುವ ರೇಖೆದೋರ್ಪ ಪೊಂಬವಳ ಪೊಳ್ಳೆಗಳದಾತಂ ತಾಳ್ದಿಹ ಪವಣೆನಿಪ ಚಿತ್ರಸಂಭವಕೇತನಾಗ್ರಮುಳ್ಳವನಿಳಾತಳವನಾಳ್ವಂ (ಜಪರ. ೦೦-೨೨). [ರೇಖೆ + ತೋಱು]

**ರೇಗಟ** 'ರಾಕಡಿ' ನೋ.

**ರೇಗಟಿ** 'ರಾಕಡಿ' ನೋ.

**ರೇಗಡ** 'ರೇಗಡೆ' ನೋ.

**ರೇಗಡಿ** 'ರೇಗಡೆ' ನೋ.

**ರೇಗಡೆ**, ರೇಗಡ, ರೇಗಡಿ (ನಾ). ವ್ಯವಸಾಯಕ್ಕೆ ಉತ್ತಮವಾದ ಒಂದು ಬಗೆಯ ಭೂಮಿ ; ಎರೆಭೂಮಿ : ರೇಗಡೆ ಪಾಳುಭೂಮಿಗೆ ತಮ್ಮ ಕೈಯಿಂದ . . . ಸಾಗುವಳಿ ಮಾಡುತ್ತೇನೆಂದು ದರಖಾಸ್ತು ಮಾಡಿದವರಿಗೆ ಕ್ರಯಕ್ಕೆ ಕೊಡಬೇಕಾದರೆ (ಮಹಾಕಂ. II. ೬೨) ; ನೆಲದಲ್ಲಿ ಜಾತಿಗಳು : ರೇಗಡೆ, ಎರೆ, ಕರಲು (ಪಶ್ಚಿಮಘ. ೨೯೩). **ರೇಗಡ** : (ಕೃಷಿಗ. II, ೩೬೦). **ರೇಗಡೆ** : "ರೇಗಡನೆಲ– ಕರ್ಲುಭೂಮಿ" (ಪಾಪಕೋ. ೪೦).
[ದೇ. ? ತಮಿ. ರೇಕಟ ; ತೆಲು. ರೇಗಡ, ರೇಗಡಿ, ರೇವಡ, ರೇವಡಿ]

**ರೇಗಾಟ** (ನಾ). ಕೋಪದಿಂದ ಕೂಗಾಡುವಿಕೆ : ನಮ್ಮ ರೇಗಾಟಕ್ಕೆ ಯಾರೂ ಹೆದರುವುದಿಲ್ಲ (ಋಂ). [ರೇಗು$_1$ + ಆಟ]

**ರೇಗಾಡು** (ಕ್ರಿ). ಕೋಪದಿಂದ ಕೂಗಾಡು ; ಕೆರಳು : ನಾನೊಂದು ಹತ್ತು ನಿಮಿಷವಿದ್ದು ಹೋಗುತ್ತೇನೆ. ಇಲ್ಲವಾದರೆ ದೊಡ್ಡಮ್ಮ ರೇಗಾಡುತ್ತಾರೆ (ವಾತ್ಸಲ್ಯ. ೨೬೪); ಅವನು ಯುಕ್ತಾಯುಕ್ತವಿವೇಚನೆಯನ್ನು ಕಳೆದುಕೊಂಡು ಕಂಡಕಂಡವರ ಮೇಲೆಲ್ಲ ರೇಗಾಡತೊಡಗಿದನು (ರಾಜಕಥಾ. ೩೨). [ರೇಗು$_2$ + ಆಡು$_1$]

**ರೇಗಿಸು** (ಕ್ರಿ). ೧. ಸಿಟ್ಟಿಗೇಳಿಸು ; ಕೆರಳಿಸು : ಕೇಸರಿಗಳನು ರೇಗಿಸುತ್ತಿರುವ ನರಪತಿ (ಶ್ರೀರಾಕ. ೩೪ ೬೮೩೪). ೨. ಹೆಚ್ಚುಮಾಡು ; ಉದ್ರೇಕಗೊಳಿಸು : ಆ ಸುದ್ದಿ ಒಮ್ಮೊಮ್ಮೆ ಅವನ ಮಾತ್ಸರ್ಯಾಗ್ನಿಯನ್ನು ರೇಗಿಸಿ, ಅವನ ಹೃದಯವನ್ನು ಹಿಂಡಿದರೂ . . . ಆಶಾಭಾವನೆ ತಾಳಿದನು (ಶ್ರವಣ. ೦೬) ; ಆಹಾರವ್ಯತ್ಯಾಸಗಳಿಂದ ಈ ಇಸುಬು ಬರುವುದೆಂದು ತಿಳಿದು ಬಂದಿದೆ. ಔಷಧಿಯ ಮೇಲೆ ಔಷಧಿ ಹಾಕಿ ರೇಗಿಸದೆ ಮಗುವನ್ನು ಶುಚಿಯಾಗಿ ಇಟ್ಟುಕೊಂಡರೆ ಅದು ಸ್ವಲ್ಪ ಶಮನವಾಗುತ್ತದೆ (ಗೃಶಿಪ. ೦೪೬). [ರೇಗು$_2$ + — ಇಸು$_3$]

**ರೇಗು$_1$** (ಕ್ರಿ)· ಕೋಪಗೊಳ್ಳು; ಕೆರಳು : ಮಕ್ಕಳು ಅತ್ತರೆ ತಾಯಂದಿರು ಆಗಾಗ ರೇಗುವುದುಂಟು (ಶೀಪಾಕ್ಕ. ೧೬೦) ; ನೀನು ರೇಗಿದಾಗ ನಾನು ಒಪ್ಪುವುದು ಅಂದರೇನು ? (ಬಿಕಾಕ· ೪೩).

[ದೇ.॥ ತಮಿ. ರೇಜ್ಜು ; ತುಳು. ರೇಗು ; ತೆಲು. ರೇಗು, ರೇವು./ ಮರಾ. ರೇಂಕಣೇ, ರೇಕಣೇ]

**ರೇಗು$_2$** (ನಾ)· ಕೋಪ : ಸಿಟ್ಟು ; ಆಕ್ರೋಶ : ನನಗೆ ಬೆರಗೂ ಹುಟ್ಟಿತು, ರೇಗೂ ಇಟ್ಟಿತು (ಮುಂಗಾಪು· ೯೩) ; ನನಗರಿವಿಲ್ಲದೆಯೇ ನಾನು ರೇಗಿನಿಂದ ಆಡಿದೆ (ಅಂಹೂ. ೦೩೩). [<ರೇಗು$_1$]

**ರೇಗು$_3$** (ನಾ)· ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಎಲಚಿ : "ಕುವಲಂ . . . ಕೋಲಂ — ಇ ಯೆಳಚೀಹಣ್ಣು, ಬೋರೆ ಹಣ್ಣು, ರೇಗುಪಂಡು" (ಸಿದ್ಧಾಂತಿ. ೦೨೦).

[ದೇ.॥ ತೆಲು. ರೇಗು ; ಕೋಲಾ· ರೇಂಗ ; ಪರ್ಜಿ. ರೇಗ ; ಗೊಂಡಿ. ರೇಂಗಾ, ರೇಂಗ]

**ರೇಗುಪ್ತಿ** (ನಾ)· [ಸಂಗೀತ] ಒಂದು ರಾಗದ ಹೆಸರು : ರಾಗ ರೇಗುಪ್ತಿ, ಛಾಪುತಾಳ (ಹಮು. ೩೪) ; ಹಾಡುಗಳಿಗೆ ಕಾಂಬೋಧಿ, ಕಲ್ಯಾಣಿ· ರೇಗುಪ್ತಿ . . . ಆನಂದಭೈರವಿರಾಗಗಳೂ, ಆದಿ ಅಟತಾಳಗಳೂ ಸೂಚಿತವಾಗಿವೆ (ಯಕ್ಷಗಾ· ೩೮). [ಸಂ.]

**ರೇಚ** (ನಾ)· ೧. ಉಸಿರನ್ನು ಹೊರಬಿಡುವುದು ; ನಿಶ್ವಾಸ· ೨. ಒಂದು ಬಗೆಯ ಗಿಡ : (ಶ)· [ಸಂ.]

**ರೇಚಕ** (ನಾ)· ೧· ಉಸಿರು ಬಿಡುವುದು ; ನಿಶ್ವಾಸ : ' ರೇಚಕವಾತ ' ಪರಾ. ೨. ಭೇದಿಯಾಗಲು ಕೊಡುವ ಔಷಧ ಮುಂತಾದುವು ; ವಿರೇಚಕ : ಬಾಳೆಹಣ್ಣು ರೇಚಕವೆಂಬುದೇನೋ ನಿಜ. ಆದರೆ ಬೇನೆ ಬಿದ್ದಾಗ ಅದನ್ನು ಯಾರೂ ಕೊಡುವುದಿಲ್ಲ (ಬಾಬಂ. ೯೭)· ೩. ಒಳಗಿನ ವಾಯುವನ್ನು ಹೊರಹಾಕುವ ಒಂದು ಬಗೆಯ ಸಲಕರಣೆ ; ನಿಷ್ಕಾಸನಾಳ : ಯಂತ್ರದ ರೇಚಕದಲ್ಲಿ (ಎಗ್ಸಾಸ್ಟ್) ವ್ಯರ್ಥವಾಗ ಬಹುದಾದ ಶಕ್ತಿಯನ್ನು ಬಳಸಿಕೊಂಡು . . . ಅತಿಪೂರಕಗಳನ್ನು ನಡೆಸು ವುದು ಮತ್ತೊಂದು ವಿಧಾನ (ಕವಿಕೋ. I, ೨೪೭)· ೪. ಕಳಂಕ ; ದೋಷ : ಪೇಚರತ್ನದ ನಿಲವ ಭೂಚರರರಿವರೆ ವಾಚಾಳಿಗಳ ಮಾತ್ರು ಹೊಲ್ಲದು ಮನದೊಳು ರೇಚಕವಳಿಸುದೆ ಹೇಳಿಯದು (ಸಿದ್ಧಕೃ· ೩೭-೨೩)· ೫· [ಯೋಗ] ಮೂರು ಬಗೆಯ ಪ್ರಾಣಾಯಾಮದ ಅಂಗಗಳಲ್ಲಿ ಒಂದು ; ಮೂಗಿನ ಒಂದು ಹೊರಳೆಯಿಂದ ಉಸಿರನ್ನು ಹೊರ ಹಾಕುವುದು : "ನಾಸಿಕದಿ ಬಿಡುವಾನಿಲಂ ರೇಚಕಮೆನಿಕ್ಕು" (ಮಂಗರಾ· ೦೭-೦೪) ; ವನರುಹವಿಷ್ಟರಂ ರುಚಿರರೇಚಕಪೂರಕಕುಂಭಕಕ್ರಿಯಾಮನಮಿರೆ (ಗದಾಯು· ೦೭-೦೩); ರೇಚಕಪೂರಕದ ರಿಂಗಣವನರಿವುದು ಯೋಗಸಿದ್ಧಿಗೆ ಲಕ್ಷಣವನು (ಕುಮಾವ್ಯಾ. ೪-೯) ; ನಾಸಿಕಾಪುಟದಿಂದ ಪ್ರಾಣವಾಯುವನ್ನು . . . ಹೊರಗೆ ಬಿಡುವುದಕ್ಕೆ ರೇಚಕ ಎಂದು ಹೆಸರು (ಶಾತತ್ತ್ವ. ೩೩೭). ಪೂರಕ ' ಪರಾ. ೬. [ನಾಟ್ಯ] ನೃತ್ಯದ ಒಂದು ಚಲನೆ : ಕರಣಂ ರೇಚಕಮಂಗಹಾರಮಿನಿತೆಂದೋದುತ್ತುಮಿರ್ಪೋದದತ್ತಿರಲ್ (ಆದಿಪು· ೭-೦೨೦); ಒಂದು ಅಂಗದ ವರ್ತುಲಾಕಾರಚಲನೆಗೆ ' ರೇಚಕ ' ವೆಂದು ಹೆಸರು (ಅಭಾಪ್ರ. ೩೩). [ಸಂ.]

**ರೇಚಕಯಂತ್ರ** (ನಾ). ಒಳಗಿರುವ ಗಾಳಿಯನ್ನು ಹೊರಕ್ಕೆ ಹೊರಡಿಸುವ ಸಾಧನ; ಪಂಪು : "ರೇಚಕಯಂತ್ರ ; ಪೂರಕಯಂತ್ರ" (Pump· ಇಂಕಿನಿ). [ಸಂ.]

**ರೇಚಕವಾತ** (ನಾ). ಉಸಿರಿನ ಗಾಳಿ : ಧಾತ್ರಿ ರೇಚಿಸುವ ರೇಚಕವಾತ ದಿನಭೃದೊಡ್ಡುಗಳ್ ರ್ಝಾಳಿಸೆ (ಮಹಾಶೀ. ೯-೦೦). [ಸಂ.]

**ರೇಚಕಾನಿಳಹತಿ** (ನಾ). ಉಸಿರಿನ ಗಾಳಿಯ ಹೊಡೆತ : ಮಿರ್ಪ ಪತಾಕಿಗಳೆತ್ತಿದ ಶಿಳಮೆನೆ ಜನಶಿಶುವ ರೇಚಕಾನಿಳಹತಿಯಿಂ ತಳರ್ದು ನಭೋಬ್ಧಿಯ ನೌಸಂಕುಳದಂತೋಡಿದುದು ಸುರವಿಮಾನವಿತಾನಂ (ಕಂದ್ರಕೃ. ೦೨-೦೩೭). [ ಸಂ. ರೇಚಕಾನಿಲಹತಿ ]

**ರೇಚನ** (ನಾ)· ದೋಷವನ್ನು ಹೊರಹಾಕುವಿಕೆ : ನಾಚಿಕೆಯನಾಗಿಪುವು ನಮ್ಮ ಸುಖದಾತುರದ ಯೋಚನೆಗಳವನು ಮರುವಗಲು ಪರಿಕಿಸಲು ಚಾಚಿದ್ದ ರಸನೆ ತಾನೊಳಸೇರಿಕೊಳ್ಳುವುದು ರೇಚನವದಾತ್ಮಕ್ಕೆ (ಮಂಕುತ. ೨೯೩). [ಸಂ.]

**ರೇಚನಿ** (ನಾ)· ಒಂದು ಬಗೆಯ ಸಸ್ಯ : ಲಾಲ್‌ತಿಗಡೆ : "ಸರ್ವಾನು ಭೂತಿಃ . . . ರೇಚನೀ — ೭ ಕೆಚ್ಚನೇ ತಿಗಡೆಯ ಹೆಸರುಗಳು " (ಸಿದ್ಧಾಂತಿ· ೦೩೭). [ ಸಂ. ರೇಚನೀ ]

**ರೇಚಯ್ಯ** (ನಾ). ಒಬ್ಬಾತನ ಹೆಸರು : ಪೃಥುವೀಪರಮೇಶ್ವರಮಹಾ ನಾಯ್ಕರ ರೇಚಯ್ಯನ ಮಗನ್ (ಎಕ. XV· ಹೊಳೆಪ· ೬೮-೩; ಸು. 950)· [ ರೇಚ? + ಅಯ್ಯ$_1$ ]

**ರೇಚಿತ** (ಗು)· ೧· ಬರಿದು ಮಾಡಿದ· (ನಾ) ೨ ಕುದುರೆಯ ಐದು ಬಗೆಯ ನಡಗೆಗಳಲ್ಲಿ ಒಂದು : ನೆಟ್ಟಗೆ ನಿಲ್ಲದೆ ಓಡುವುದು ರೇಚಿತವೆನಿಸಿಕೊಂಬುವುದು (ಅಶ್ವಶಾ. ೨೩-೨) ; ದಾರತಿಕ ಸ್ಕಂಧಿತ ಪ್ಲುತ ವಲ್ಗಿತ ಚಾರು ರೇಚಿತಗಳು (ಜ್ಞಾನಸ. ೪-೩೩). ೩. [ನಾಟ್ಯ] ಹಸ್ತ ಚಲನೆಗಳಲ್ಲಿ ಒಂದು ಬಗೆ ; P'' ಪತಾಕಹಸ್ತಗಳೆರಡನ್ನು ಅಂಗೈ ಮೇಲಕ್ಕೆ ಮಾಡಿ ನೀಡುವುದು ಅಥವಾ ಹಂಸಪಕ್ಷಹಸ್ತಗಳೆರಡರ ಮುಂಗೈಗಳನ್ನು ಜಾಗ್ರತೆ ತಿರುಗಿಸುವುದು [ಚಲಿಸುವುದು]" (ಲಾಸ್ಯರಂ. ೨೪೯ ಗದ್ಯಾನುವಾದ) : ಅಂಗೈ ಮೇಗಾಗಿ ಪತಾಕಂಗಳ್ ಮೇಣ್ ಹಂಸಪಕ್ಷಮಾಗಿಯೆ ಬೇಗಂ ಬಿಂಗದೆ ಮುಂಗೈ ತಿರುಗಲ್ ಕಂಗೊಳಿಸುವ ರೇಚಿತಾಖ್ಯಹಸ್ತಮೆನಿಕ್ಕುಂ (ಲಾಸ್ಯರಂ· ೨-೩೩)· ೪. ಕೊರಳನ್ನು ತಿರುಗಿಸುವ ಒಂದು ಪ್ರಕಾರ : ಸಮ. ನಿವೃತ್ತ· ವಲಿತ. ರೇಚಿತ· ಕುಂಚಿತ, ಅಂಚಿತ· ತ್ರ್ಯಸ್ರ· ನತ· ಉನ್ನತ — ಈ ಒಂಬತ್ತುಂ ಕೊರಲ ಭೇದಂಗಳ್ (ಲಾಸ್ಯರಂ. ೨-೦೦೯೩)· ೫· ಮೂವತ್ತೆರಡು ಬಗೆಯ ಅಂಗ ಹಾರಗಳಲ್ಲಿ ಒಂದು: ಸ್ಥಿರಹಸ್ತ . . . ರೇಚಿತ . . . ಸ್ವಸ್ತಿಕರೇಚಿತ — ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಲಾಸ್ಯರಂ. ೩-೭೩). [ಸಂ.]

**ರೇಚಿಸು** (ಕ್ರಿ)· ೧. ಉಸಿರನ್ನು ಹೊರಕ್ಕೆ ಬಿಡು ; ನಿಶ್ವಾಸಿಸು : ಧಾತ್ರಿ ರೇಚಿಸುವ ರೇಚಕವಾತದಿನಭೃದೊಡ್ಡುಗಳ್ ರ್ಝಾಳಿಸೆ (ಮಹಾಶೀ. ೯-೦೧) : ಶರಣ ರೇಚಿಸುವಲ್ಲಿಯೇ ಪಂಚಾಕ್ಷರಂಗಳು ಎಡೆಯಾಡುತ್ತಿವೆ (ಶಿವವ. ೬೩-೩೨)· ೨. [ಯೋಗ] ಪ್ರಾಣಾಯಾಮದಿಂದ ನಿರೋಧಿ ಸಿದ್ದ ವಾಯುವನ್ನು ಮೂಗಿನಿಂದ ಹೊರಕ್ಕೆ ಬಿಡು : ಪದ್ಮಾಸೀನ ನಾಗಿ . . . ಪ್ರಾಣವಾಯುವಂ ಪೂರಿಸುತೆ ಸಲ್ಲೀಲೆಯಿಂದವಂ ರೇಚಿಸುತೆ (ಶಬ್ದಾ· ೨-೪೩). ೩. [ನಾಟ್ಯ] ಹಸ್ತಾಭಿನಯ ಮಾಡು : ಅರುಣ ಸರೋರುಹದಲರಂ ಮುರಿಮುರಿದೀಡಾಡುವಂತೆ ನಿಟ್ಟಿಸಿ ನೋಡಲ್ ಕರಮುರಿದೆನೆ ಕರಮಿವು ಸಾಸಿರಮೆನೆ ರೇಚಿ [ಶಾಕಾಂ· ರಚಿಯಿ]ಸಿದಳಾಕೆಯೆಡಕಂ ಬಲಕಂ (ರೇಲಾವ. ೪-೦೪೦). [ ರೇಚ + — ಇಸು$_3$ ]

**ರೇಜಿಗೆ** (ನಾ)· ೧. ಹೊಲಸು ; ಕೊಳಕು : ರೇಜಿಗೆ ರೇಚನದಿಂದ ಆದದ್ದು. ಆರಂಭದ ಅರ್ಥ ಮಾಂತಿ. ಈಗ ಯಾವುದೇ ಹೊಲಸು (ನಮ್ಮಪು. ೦೩೭). ೨· (ಆಲಂ) ರಂಪ ; ರಾದ್ಧಾಂತ; ರಗಳೆ : ಸುಮ್ಮನೆ ನಾವು ಇದನ್ನು ರೇಜಿಗೆ ಮಾಡಬಾರದು· ಕೆತ್ತಿದರೆ ಇನ್ನೂ ಬಿಗುರೇ ಆಗುತ್ತೆ (ರೀಮುಣಾ. ೦೩೭); ಈಗ ನೋಡಿ ಮನೇಲೆಲ್ಲ ಜಗಳ. ಮೂರುಹೊತ್ತೂ ರೇಜಿಗೆ (ಗುನೂರು· ೦೯೦). ೩. ಅಸಹ್ಯ ; ಜುಗುಪ್ಸೆ : ನನಗೆ ಅವರ ಮೇಲೂ ಅವರ ಮಾತು, ಕತೆ. ಆಚಾರಗಳ ಮೇಲೂ . . . ರೇಜಿಗೆಯಾಯ್ತು (ಹೂಕ್ಕ· ೦೦೮). [ ? ]

**ರೇಜಿಡು** (ಕ್ರಿ). ಸಾಲಾಗಿ ನಿಲ್ಲು ; ಸಾಲುಗಟ್ಟು : ಜನ ರೇಜಿಟ್ಟೈತಿ ನೋಡು ನಾಯಕರ ಮನಿಗೆ (**ಜನಪಾ. ೯೬**) ; ಅವರ ಮನಿ ಮಂದೆಲ್ಲ ರೇಜಿಟ್ಟಾಂಗ ಕಾಣತ್ಯತಿ (**ಆಮೂ. ೦೩**). [ರೇಜು + ಇಡು$_1$]

**ರೇಜು** (ನಾ). (ಉಕ) ಸಾಲು; ಓಳಿ: 'ರೇಜಿಡು', 'ರೇಜುಗಟ್ಟು' ಪರಾ. [← ಮರಾ. ರೇಘ. / ಸಂ. ರೇಖಾ]

**ರೇಜುಗಟ್ಟು** (ಕ್ರಿ). = ರೇಜಿಡು : . ಶೇಷಾಚಲದಿಂದ ಆಕಾಶರಾಜನ ಪಟ್ಟಣದವರೆಗೂ ಜನಸಮೂಹವು ರೇಜುಗಟ್ಟಿತು (**ವೇಂಪುಸಾಹಾ. ೦೦೦**) ; ಜೇನುತುಪ್ಪ ತೀರುವ ತನಕ ಆ ಹಲಿಗೆಯ ಮೇಲೆ ಇರುವೆಯ ಸಾಲು ಒಂದೇ ಸಮನೆ ರೇಜುಗಟ್ಟಿತ್ತು (**ಪುಂಂಬಿಯು. ೩-೮೩**). [ರೇಜು + ಕಟ್ಟು$_1$]

**ರೇಡಿಯೋ** (ನಾ). ೧. ಆಕಾಶದಲ್ಲಿ ಕಳಿಸುವ ನಿಸ್ತಂತುಸಂಜ್ಞೆಗಳನ್ನು ಹಿಡಿಯುವ ಸಲಕರಣೆ : ರೇಡಿಯೋ ವಾಲ್ವಿನ ಒಳಗಡೆ ಏನಿದೆಯೆಂದು ತೋರಿಸುವ ಚಿತ್ರ (**ಬಾಲಪ್ರ. III, ೦೩೯೩**). ೨. ಆಕಾಶವಾಣಿ ; ಬಾನುಲಿ : ಇಂದು ರಾತ್ರಿ ಅವರ ರೇಡಿಯೋ ಭಾಷಣವಿದೆ (**ರೂಢಿ**). [← ಇಂ. Radio]

**ರೇಣು** (ನಾ). ೧. ಹುಡಿ ; ಧೂಳು ; ಕಣ : "ಪಾಂಸುಃ, ಕ್ಷೋದಃ, ರೇಣುಃ . . . ರಜಃ—ಈ ೬ ಧೂಳಿ" (**ಹಲಾಯು. ೭೩-೨೦೯**) ; ಎಲರಲೆಪ ದಿಂದುರುಳ್ದು ಪರೆದೆಸೆವ ಕುಸುಮರೇಣುಗಳೊಳಂ (**ಕಾದಂಪೂ. ೯೭**) ; ಅಣುರೇಣುಮಧ್ಯದಲ್ಲಿ ಗುಣಭರಿತ ನೀನೆಂದು ಮಣಿವುತಿಪ್ಪೆನಯ್ಯ (**ದೇವಾಪ. ೨-೩**) ; ಕೆಂಮೂಳಿ ಸೋಂಕಿದ ಸಿರಿಮುಡಿಯ ಕುಡಿವಿಸಾಸೆಯಲಿ ಕೆಂಪಡರ್ದ ರೇಣುಗಳ . . . ದೇವನ ಬರವ ಕಂಡನು (**ಕುವ್ಯಾ.ಉ. ೬-೭**). ೨. ಹೂವಿನಲ್ಲಿರುವ ಪುಡಿ; ಪರಾಗ. ೩. ಒಂದು ಅಳತೆಯ ಪ್ರಮಾಣ: ಅಣುವೆಂಟು ರೇಣುವು (**ವ್ಯವಹಾ. ಅಪುಂಂ. I. ೬-೩೦**). [ಸಂ.]

**ರೇಣುಕ$_1$** (ನಾ). ೧. ಒಂದು ಬಗೆಯ ಔಷಧದ್ರವ್ಯ ; ಭಸ್ಮಗಂಧಿ : "ದ್ವಿಜಾ, ಹರೇಣು ... ಭಸ್ಮಗಂಧಿನೀ ಈ ೭ ರೇಣುಕವೆಂಬ ಗಂಧದ್ರವ್ಯ" (**ವಾತರಾ. ೦೦೦**) ; ನವಘೃತದೊಳ್ ಕೊತಸಿಗೆ ಸೈಂಧವ ರೇಣುಕ ಚಿತ್ರಮೂಲ ಪಾಣಿಜಪಿಂಗೆಂಬಿವನಿಕ್ಕಿ ಪಿಂಡಮಂ ಮಾಡುವುದು (**ಅಶ್ವಶಾ. ೦೦ ೦೬**) ; ಜಟಾಮಾಂಸಿ, ರೇಣುಕ, ಗಟುಭಾರಂಗಿ, ಅರಸಿನ (**ವೈದ್ಯಸಾ. II. ೩೩**). ೨. ಒಂದು ಬಗೆಯ ದ್ವಿದಳಧಾನ್ಯ ; ಬಟ್ಟಗಡಲೆ: ರೇಣುಕ (ಕಾಕಬೀಜ) (**ಮುಂಂಪಿವ್ಯಾ. ೦೭೯**). 'ರೇಣುಕಬೀಜ' ಪರಾ. [ಸಂ. ರೇಣುಕಾ]

**ರೇಣುಕ$_2$** (ನಾ). ೧. ಒಬ್ಬ ಯಕ್ಷನ ಹೆಸರು. ೨. ಗಣಗಳಲ್ಲಿ ಒಬ್ಬ : ವೀರವೀರಕನಂದಿ ರೇಣುಕದಾರುಕರುವೃಷಭಮನ್ಮುಖ್ಯಂಗಿಯು ವೀರಭದ್ರಾದಿ ಪ್ರಮಥರೋಲೈಪ ಸಮಯದೊಳು (**ಬಸಪು. ೦-೩೨**). ೩. [ವೀಶೈ] ಪಂಚಾಚಾರ್ಯರಲ್ಲಿ ಒಬ್ಬ ; ಪಂಚಪೀಠಗಳಲ್ಲಿ ಒಂದಾದ ರಂಭಾಪುರೀ ವೀರಸಿಂಹಾಸನವನ್ನು ಸ್ಥಾಪಿಸಿದವನು : ರೇಣುಕ ರಾಮಪಂಡಿತ ಮಹಾಮರುಳಾರ್ಯರ . . . ಬಣ್ಣಿಸುತ್ತೆಱಗಿ ಮೇಣ್ಬಿಡದೆ ಪರಮಾರ್ಥಸಿದ್ಧಿಯಂ (**ರಾಜಶೇ. ೦-೦೭**). 'ದಾರುಕ' ಪರಾ. ೪. ಒಂದು ಸರ್ಪದ ಹೆಸರು : ಮಿತ್ರಾರಿ ರೇಣುಕನು ... ದಂಡಿಪಾದಾದ್ಯುರುತರದ ಕಿಲ್ಬಿಷದ ಫಣಿಗಳು ಲಕ್ಷಸಂಖ್ಯೆಯವು (**ಜಸಪು. ೯೭-೨೬**). ೫. ಒಂದು ಆನೆಯ ಹೆಸರು [ಸಂ.]

**ರೇಣುಕಪೀಠ** (ನಾ). [ವೀಶೈ] ಪಂಚಪೀಠಗಳಲ್ಲಿ ಒಂದು : ಬಾಳೆ ಹೊನ್ನೂರಿನಲ್ಲಿ ರೇಣುಕಪೀಠವಿದೆ (**ರೂಢಿ**). [ಸಂ.]

**ರೇಣುಕಬೀಜ** (ನಾ). ಒಂದು ಬಗೆಯ ಔಷಧದ್ರವ್ಯ ; ಭಸ್ಮಗಂಧಿ : " ಕಪಿಲೆ – ರೇಣುಕಬೀಜ" (**ಗಂಗಾಪು. ೬೦**) ; ಸೈಂಧವಲವಣ, ರೇಣುಕ ಬೀಜ, ಇವಂ ಸಣ್ಣನಾಗಿ ಪುಡಿಮಾಡಿ ಆ ಕಷಾಯಕ್ಕೆ ಹಾಕಿ ಕೊಳ್ಳಲು ಬಾಣಂತಿಯರ ಸಕಲರೋಗಂಗಳು ಮಾಣುವುವು (**ಬಿಪ್ಪವಿ. ೦೩೨**). [ರೇಣುಕ$_1$ + ಬೀಜ]

**ರೇಣುಕಾನಂದನ** (ನಾ). ರೇಣುಕೆಯ ಮಗ ; ಪರಶುರಾಮ : ನಿಜಭುಜ ಶಕ್ತಿಯಂ ಪ್ರಕಟಂ ಮಾಡಲೆಂದು ರೇಣುಕಾನಂದನನಲ್ಲಿಗೆ ಪೋಗಿ (**ಕುಂಶರಾ. ೦-೦೦೩ ವ**). [ಸಂ.]

**ರೇಣುಕೆ** (ನಾ). ೧. = ರೇಣುಕಬೀಜ : ಸಬ್ಬಸಿಗೆ, ರೇಣುಕೆ ಇವುಗಳ ಕಷಾಯವನಿಕ್ಕಿ ತೆಗೆದುಕೊಳ್ಳಲು ವಾತಜ್ವರಂ ಮಾಣ್ಗುಂ (**ಸಕವೈ. ೬೩**). ೨. ಜಮದಗ್ನಿಯ ಹೆಂಡತಿ; ಪರಶುರಾಮನ ತಾಯಿ : "ರೇಣುಕಾ= ಜಮದಗ್ನಿಯ ಹೆಂಡತಿ" (**ಕಾಕೋ. ೩೩**); ಒಲುಮೆಯವಳೆಂತಿರ್ದು ಗಂಡನ ತಲೆಯ ರೇಣುಕೆ ತಱಸಳೆ (**ಮದೇಪು. ೨೬-೯೭**). [ಸಂ. ರೇಣುಕಾ]

**ರೇಣುಕೇಶ** (ನಾ). = ರೇಣುಕ$_2$ ೩ : ಶಿವವಕ್ತ್ರೋಭವಸ್ಥರೇಣುಪ್ರಭವನೆನಿಸಿ ಮುಂ ರೇಣುಕೇಶಾಖ್ಯೆಯಂ ತಾಳ್ದು (**ರಾಜಶೇ. ೦-೩೩**). [ಸಂ.]

**ರೇಣುಕೇಶ್ವರ** (ನಾ). = ರೇಣುಕ$_2$ ೩ : ರೇಣುಕೇಶ್ವರಮಹಾಗುರು ಮಾಳ್ಕೆ ಮಗಿಪ್ಪಸಿದ್ಧಿಯುಂ (**ವೃಷಪು. ೦-೦೦**). [ಸಂ.]

**ರೇತ** (ನಾ). ವೀರ್ಯ ; ಶುಕ್ಲ : "ಇಂದ್ರಿಯಮುಂತೆ ಧಾತು ರೇತಂ ಶುಕ್ಲಂ" (**ವಸ್ತುಕೋ. ೭೨-೩೦**) ; ರೇತ ರಜಸ್ಸಿನಲ್ಲಿ ಜನಿತ ಆಧಿವ್ಯಾಧಿಯ ತವರುಮನೆ . . . ತನು (**ವಚಸಂ. ೯೩-೬೨**). [ಸಂ. ರೇತಸ್]

**ರೇತಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ಪೆರ್ಗ್ಗಡೆ ರೇತಯ್ಯನ ವೇದ ಸಂಕಯ್ಯ (**ಎಕ. II, ೯೭೭; ಸು. 1000**). [ರೇತ ? + ಅಯ್ಯ$_1$]

**ರೇತಸ್ಸು** (ನಾ). ೧. = ರೇತ : ಮಲಮೂತ್ರನಿರೋಧದಿಂದಲೂ . . . ರೇತಸ್ಸು ಕ್ಷೀಣವಾಗುವುದು (**ಸಕವೈ. ೨೯೭**); ರಾಗವೆಂಬುದು ರೇತಸ್ಸಿಗೆ ಹೆಸರು (**ಕಾವುಸಾ. ೨೯೨**). ೨. ಪಾದರಸ; ಪಾರಜ. ೩. ನೀರು. [ಸಂ. ರೇತಸ್]

**ರೇಪಡಿಸು** (ಕ್ರಿ). (ಉಕ) ಎಣ್ಣೆ, ತುಪ್ಪ ಮೊದಲಾದ ಜಿಡ್ಡು ಪದಾರ್ಥ ಗಳನ್ನು ಸವರು—ಬಳಿ ; ಅವಳ ಸರ್ವಾಂಗಕ್ಕೆಲ್ಲವೂ ಅಗ್ನಿರಸವನ್ನು ರೇಪಡಿಸಿದಂತಾಗಿ ಕಣ್ಣ ಕೊನರುಗಳು ಉರಿಯ ಹತ್ತಿದ್ದವು (**ರಕ್ತರ್ಪ. ೩೯೦**). [ರೇಪಡ$_0$ (P ← ಮರಾ. ರೇಪಟಣೇ) + — ಇಸು$_1$]

**ರೇಫ** (ನಾ). ೧. 'ರ' ಎಂಬ ಅಕ್ಷರ : ಪಲ್ಲಟಿಸಿ ಱಕಾರದ ನೆಲೆಯಲ್ಲಿ ಱಕಾರಂ ಱಕಾರದೊಳ್ ರೇಫಮ ತಾನೆಲ್ಲಿಯುಮಕ್ಕುಂ ಪದವಿಧಿಯಲ್ಲಿ ಪರಂ ವ್ಯಂಜನಾದಿಯಾಗಿರೆ ಬಹುಳಂ (**ಶಾಬ್ದಾವ. ೨೯೭**); ರೇಫ ಱಕಾರಂಗಳ ವರ್ಣಾವೃತ್ತಿಗೆ (**ಕಪುದ. ೦೯ ಶ್ರಯೋ**); ಹಳಗನ್ನಡದಲ್ಲಿ ರೇಫಯುಕ್ತ ವಾಗಿದ್ದ ಒತ್ತಕ್ಷರಗಳು ಈಗ ಸಜಾತೀಯ ಸಂಯುಕ್ತವ್ಯಂಜನಗಳಾಗಿವೆ (**ಕೈಪಿಡಿ. ೬**). 'ಶಕಟರೇಫ' ಪರಾ. ೨. 'ರ' ಕಾರದ ಧ್ವನಿ,—ಶಬ್ದ. ೩. ಆಸಕ್ತಿ; ಒಲವು. ೪. ನೀಚ; ಅಧಮ : "ರೇಫ . . . ನಿಕೃಷ್ಟನೆನೆ ಕಷ್ಟನೆಂದೆಂಬವಗೆ ನಾಮಂ" (**ಪುಂಗರಾ. ೬೭-೯**). ೫. [ಛಂದ] ಅಕ್ಷರ ಗಣಗಳಲ್ಲಿ ಒಂದು; ರಗಣ (— ∪ —). [ಸಂ.]

**ರೇಫೆ** (ನಾ). = ರೇಫ ೧ : ರೇಫೆ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಱಕಾರಂ ಪುಟ್ಟುಗುಂ (**ಕಪುರ. ೦೨ ವೃತ್ತಿ**). [ಸಂ. ರೇಫ]

**ರೇಭಣ** (ನಾ). ಆಕಳಿನ ಧ್ವನಿ; ಹಸುವಿನ ಕೂಗು. [ಸಂ.]

**ರೇಯ** (ನಾ). ಒಡೆಯ; ಪ್ರಭು : ಆದಿಮೂರುತಿ ಸಿರಿಹಯವದನ ರೇಯಾ (**ವಾದಿಕೀ. ೬೩-೩**); ಬಲವೈರಿನುತ ನಮ್ಮ ವಿಜಯವಿಠ್ಠಲರೇಯ . . . ನಮ್ಮ ಭಾರ ವಹಿಸುವ (**ವಿದಾಕೀ. ೦೯-೩**). [< ರಾಯ]

**ರೇಯೂರ್** (ನಾ). ಒಂದು ಊರಿನ ಹೆಸರು : ರೇಯೂರುನಾಮ ಗ್ರಾಮ [೬] (**ಎಇ. VII, ೦೬೬-೦೩; ೦೦೮**). [? + ಊರ್]

**ರೇರಿಹಾಣ** (ನಾ). ೧. ಶಿವ ; ಈಶ್ವರ. ೨. ಕಳ್ಳ; ತಸ್ಕರ. ೩. ಒಬ್ಬ ರಾಕ್ಷಸನ ಹೆಸರು. [ಸಂ.]

**ರೇಲ** (ನಾ). ಒಂದು ಬಗೆಯ ಮರ : ಶಮ್ಯಾಕ : (**[illegible]**) [← ತೆಲು. ರೇಲ]

**ರೇಲು** ' ರೈಲು ' ನೋ.

**ರೇಲುವೆ** ' ರೈಲ್ವೆ ' ನೋ.

**ರೇವ** (ನಾ). ೧. ರೈವಂತನ ತಂದೆ. ೨. ನರ್ಮದಾ ನದಿ. ೩. ನೀಲಿಗಿಡ. [ಸಂ.]

**ರೇವಂತ** (ನಾ). ೧. ಸದ್ಯದ ಕಲ್ಪದ ಐದನೆಯ ಮನುವಿನ ಹೆಸರು. ೨. ಒಬ್ಬಾತನ ಹೆಸರು : ರೇವಂತನಡೆಗೌಡ ಸುರಿತಂಣ ಪಿರಿಯ ತಮ್ಮ ಗೌಡರು (ಎಕ. VII, ಶಿವಮೊ. ೦೦೪-೦೫ ; 950 ?) ; ವೈರಿಘರಟ್ಟ ವಿಶಮ ಹಯಾರೂಢಪ್ರೌಢ ರೇವಂತ ಪರಬಳಕೃತ್ತಾಂತ (ಕಇಅ. ೦೩-೪-೮೪; 1093). ೩. ಒಬ್ಬ ರಾಜನ ಹೆಸರು : ಕಡುಗಲಿಗಳೇಳೂಟದಲಿ ಮಿಗೆ ರಘುಡಿ ಪವಾಡ ದೃಢಾಯತಿಕೆಗಿದು ಪಡಿಯ ನಳ ರೇವಂತರೆಂದುದು ರಾವುತಿಕೆಗಳಲಿ (ಕುವ್ಯಾಶಿ. ೭-೨). [ಸಂ.]

**ರೇವಡಿ**, ಲೇವಡಿ₂ (ನಾ). (ಉಕ) ಸಕ್ಕರೆ ಅಥವಾ ಬೆಲ್ಲದ ಪಾಕಕ್ಕೆ ಎಳ್ಳು ಹಾಕಿ ಮಾಡುವ ಒಂದು ಬಗೆಯ ಸಿಹಿತಿಂಡಿ : ಅವುಗು ಲಡ್ಡಿಗೆ ಬೆಲ್ಲ ಸವಿ ಮಾಡುಂಡೆಯು ರೇವಡಿಯು ಸವಿವಡೆ ತಜಿಗು ಭಾವಿಸುವಂತೆ ಚಕ್ಕುಲಿ (ಕರಣಾ. ೫-೦೦೨) ; ಅವಲಕ್ಕಿ ರೇವಡಿ ಬೆಂಡು ಬೆತ್ತಸ ಪ್ಯಟಾಣಿ ಮಕ್ಕಳ ಕಸಕೊಂಡು ಮುಕ್ಕಿತು ಮಂಗ (ಜನಗೀ. ೫೦). **ಲೇವಡಿ₂** : ಲೇವಡೀ ರುಚಿ ಹಾವಾಡಿಗ ಬಲ್ಲನೇ ? (ಗಾದೆ).

[← ಹಿಂ. ಮರಾ. ರೇವಡೀ. / ತುಳು. ಲೇವಡ]

**ರೇವಡಿಗಾರ** (ನಾ). ರೇವಡಿಯೆಂಬ ತಿಂಡಿಯನ್ನು ಮಾರುವವನು : ಒಬ್ಬ ಒಕ್ಕಲಿಗ, ಬಳಿಕ ಒಬ್ಬ ರೇವಡಿಗಾರ ಬಂದರು (ಪವತ. ೬೯).

[ರೇವಡಿ + — ಗಾರ (< — ಕಾಱ)]

**ರೇವಡಿಗಿಡ** (ನಾ). ಮುಳ್ಳುಗಳಿಂದ ಕೂಡಿರುವ ಒಂದು ಬಗೆಯ ಗಿಡ : (*). [ರೇವಡಿ₀ (p← ತೆಲು. ರೇವಿಡಿ) + ಗಿಡ (< ಗಿಡು)]

**ರೇವಣನಾತ** (ನಾ). ಒಬ್ಬಾತನ ಹೆಸರು : ಆತನ ಸೂನು ದಾನಿ ತಾಂ [? ರೇ]ವಣನಾತನ್ (ಎಕ. XI, ಚಳ್ಳಕೆರೆ. ೭೪-೬ ; 968). [ ? ]

**ರೇವತಿ** (ನಾ). ೧. ಹಸು. ೨. ಬಲರಾಮನ ಹೆಂಡತಿ : "ರೇವತೀ . . . ಕೃಷ್ಣನಣ್ಣನ ಬಲಮನ ಹೆಂಡತಿಯುಂ" (ಶಾಕಕ್ಕ. ೦೦೩) ; ರೈವತಕಂ ತಂದು ತನ್ನ ಮಗಳಂ ಕುಡಲ್ ಆ ರೇವತಿಯೊಳ್ ಬಲದೇವಂ ವೈವಾಹೋತ್ಸವದೆ ನೆರೆದು ಸುಖದಿಂದಿರ್ದಂ (ಜಗಪು. ೦೦-೨). ೩. [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಕೊನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ರೇವತಿ ಪುಷ್ಯಮಶ್ವಿನಿ ಧನಿಷ್ಠೆ . . . ತಾರಾವಳಿಯುತ್ತಮಂ . . . ಚೌಲಕರ್ಮದೊಳ್ (ಲೋಕೋಪ. ೨-೪೦) ; ಅಶ್ವಿನಿ . . . ರೇವತಿ ಗಳೆಂಬಿಪ್ಪತ್ತೇಳು ತಾರೆಗಳ್ (ಪವೇಶ. ೨೩೬) ; ಸೂರ್ಯನು ರೇವತೀತಾರೆ ಯನ್ನು ಸೇರಿದ ಕ್ಷಣವೇ ಮೇಷಸಂಕ್ರಮಣ (ಪಕ್ಷಶ್ರು. ೪೬). [ಸಂ. ರೇವತೀ]

**ರೇವದಾಸ** (ನಾ). ಒಬ್ಬಾತನ ಹೆಸರು : ರೇವದಾಸ ವೀಸೋತ್ತರ ದೀಕ್ಷಿತರತಿಪ್ರಪಸ್ಥರತಿಮಾರ್ಗ್ಗಸ್ಥರ್ (ಎಕ. XIII, ೩೩೦-೦೫ ; 929). [ಸಂ.]

**ರೇವಮಗಾವಿಗ** (ನಾ). ಒಬ್ಬಾತನ ಹೆಸರು : ಇದಕೆ ಸಕ್ಕಿ ರೇವಮ ಗಾವಿಗನು (ಎಕ. VIII, ಸೊರಬ. ೩೭೦-೩೦ ; 692). [ ? ]

**ರೇವಮ್ಮ** (ನಾ). ಒಬ್ಬಾತನ ಹೆಸರು : ಪಣ್ಡಿತರ ಸಿಂಹ ಶ್ರೀರೇವಮ್ಮನ ಅಣ್ಣನ್ × ಕ್ಕಿಗನ್ (ಎಕ. XVI, ತುಮಕೂ. ೯೨-೦೪ ; ಸು. 780).

[ರೇವ + ಅಮ್ಮ₁]

ರೇವಲ್ಚಿನ್ನಿ ' ರೇವಾಚಿನ್ನಿ ' ನೋ.

**ರೇವಾಚಿನ್ನಿ**, ರೇವಲ್ಚಿನ್ನಿ (ನಾ). ಒಂದು ಬಗೆಯ ಔಷಧೀಸಸ್ಯ : "ಚೀನಾ ಮತ್ತು ಟಿಬೆಟ್ಟುಗಳ ಒಂದು ಸಸ್ಯದ ಬೇರು ; ಇದರಿಂದ ಮಾಡಿದ ಭೇದಿಯೌಷಧ , ವಿರೇಚಕ ; ರೇವಲ್ಚಿನ್ನಿ, ರೇವಾಚಿನ್ನಿ" (Rhubarb. ಇಂಕಕ). ' ದಾಲಚಿನ್ನಿ ' ಪರಾ. **ರೇವಲ್ಚಿನ್ನಿ** : ರೇವಲ್ಚಿನ್ನಿ, ಮಡ್ಡಿ ಕರ್ಪೂರ, ಗಂಧದ ಮರ, ಏಲಕ್ಕಿ . . . ಇವು ಇಲ್ಲಿ ದೊರೆಯುವ ಸಾಮಾನುಗಳು (ಕ್ರಪಾಇ. I, ೩೯೯). [← ಮರಾ. ರೇವಾಚಿನೀ, ರೇವಚಿನೀ]

**ರೇವು** (ನಾ). ಸಮುದ್ರದ ದಡದಲ್ಲಿ ಹಡಗುಗಳು ನಿಲ್ಲುವ ಸ್ಥಳ ; ಬಂದರು : ದೇಶದ ಸಮೀಪದಲ್ಲಿ ಹಡಗುಗಳು ಲಂಗರುಹಾಕುವ ಸ್ಥಳವು "ರೇವು" ಅಥವಾ "ಅಳವೆ" ಎಂದು ಕರೆಯಲ್ಪಡುತ್ತದೆ (ಭೂಗೋಳ. ೦೦): ಅವನು ರೇವಿಗೆ ಹೋಗಿ ನೌಕೆಯೊಂದನ್ನು ಸಿದ್ಧಪಡಿಸಿದ (ಹಾಹುತ್ತ. ೪೫).

[ದೇ.॥ ತಮಿ. ತುಳು. ತೆಲು. ರೇವು]

**ರೇವುಕುಂಟೆ** (ನಾ). ಒಂದು ಸ್ಥಳದ ಹೆಸರು : ತೆಂಙ್ಕಣ ದೆಸೆ ಗುಡ್ಡೆಗಲ್ಲು ತುಮ್ಬುಕುಣ್ಟೆ ಪಾಮ್ಬುಳಕುಣ್ಟೆ (ಎಕ. XVI, ಶಿರಾ. ೩೯-೩೫; 878).

[ರೇವು ? + ಕುಂಟೆ₃]

**ರೇವುಪಟ್ಟಣ** (ನಾ). ಹಡಗುಗಳ ನಿಲ್ದಾಣವಿರುವ ಪಟ್ಟಣ ; ಬಂದರಿರುವ ನಗರ : ಭಾರತದೇಶದ ಹೆಚ್ಚು ವ್ಯಾಪಾರ ಬೊಂಬಾಯಿ, ಕಲ್ಕತ್ತ, ಕರಾಚಿ, ರಂಗೂನ್, ಮದರಾಸ್ — ಈ ಐದು ರೇವುಪಟ್ಟಣಗಳ ಮೂಲಕ ನಡೆಯುತ್ತದೆ (ಭೂಪಪ. ೩೬೩). [ರೇವು + ಪಟ್ಟಣ]

**ರೇವೆ₁** (ನಾ). ೧. ಒಂದು ನದಿಯ ಹೆಸರು; ನರ್ಮದೆ: "ಮೇಖಳಕನ್ಯಾ, ನರ್ಮದಾ, ರೇವಾ — ಈ ೩ ನರ್ಮದೆ" (ಶಬ್ದಮ. ೦೦೦-೫೨). ೨. ನೀಲಿಗಿಡ. ೩. ರತಿ. [ಸಂ. ರೇವಾ]

**ರೇವೆ₂** (ನಾ). ೧. ಸಣ್ಣ ಕಣ ; ಪುಡಿ : ಪೀಪಿನ ತಳಕ್ಕೆ ಉಳಿಯುವ ರೇವೆಯೋ ನೀಲಿಯು . . . ಆ ರೇವೆಯನ್ನು ತೆಗೆದು . . . ಬಿಸಿ ಮಾಡುತ್ತಾರೆ (ಮುಂಬಯಿ. ೪-೫೫). ೨. ಪ್ರವಾಹದಲ್ಲಿ ಕೊಚ್ಚಿ ಕೊಂಡು ಬರುವ ಮರಳು ; ಮೆಕ್ಕಲುಮಣ್ಣು : ಸಿಂಧು ಮತ್ತು ಗಂಗಾನದಿಗಳು ಹಿಮಾಲಯದಿಂದ ತಂದ ರೇವೆಯಿಂದ ಬೈಲುಸೀಮೆಯಾಯಿತೆಂದು ಕಂಡು ಬರುತ್ತದೆ (ಹಿಂದುಇ. ೨).

**ರೇವೆಯ ಭೂಮಿ** = ಮರಳುಮಿಶ್ರವಾದ ಭೂಮಿ ; ಮೆಕ್ಕಲು ಮಣ್ಣಿನ ಜಮೀನು : ರೇವೆಯ ಭೂಮಿ . . . ಸಾಗುಮಾಡಲಿಕ್ಕೆ ಸುಲಭವಾಗಿರುವುದು (ಸಸ್ಯಶಾ. ೦೨೬). [← ಮರಾ. ರೇವ]

**ರೇಶಿಮೆ** ' ರೇಶ್ಮೆ ' ನೋ.

**ರೇಶ್ಮೆ**, ರೇಶಿಮೆ, ರೇಷ್ಮೆ, ರೇಸಿಮೆ, ರೇಸ್ಮೆ (ನಾ). ೧. ಕೋಶದಲ್ಲಿ ವಾಸಿಸುವ ಒಂದು ಬಗೆಯ ಹುಳುವಿನಿಂದ ಉತ್ಪತ್ತಿಯಾಗುವ ಎಳೆ: 'ರೇಶ್ಮೆಬಟ್ಟೆ' ಪರಾ. ೨. ರೇಶ್ಮೆಯ ಎಳೆಯಿಂದ ತಯಾರಿಸಿದ ಬಟ್ಟೆ; ಪಟ್ಟೆವಸ್ತ್ರ : ಶ್ರೀಮನ್ನಾರಾಯಣನು ರೇಶ್ಮೆಯುಟ್ಟುಕೊಂಡು . . . ಮಲಗಿದ್ದಾನೆ (ದೇಕಸ್ವ. ೦೦). **ರೇಶಿಮೆ** : ೨. ರೇಶಿಮೆ, ಮಣ್ಣುಪಾತ್ರೆ ಮುಂತಾದ ಜಿನಸುಗಳು ಚೀನದೇಶದಿಂದ ನಮ್ಮ ದೇಶಕ್ಕೆ ಬರುತ್ತವೆ (ಮುಂಬಯಿ. ೪-೦೫೫); ನೀರೊಡೆದ ಕಣ್ಣುಗಳನ್ನು ಉಟ್ಟ ರೇಶಿಮೆಯ ಮುಗುಟದಿಂದ ಒರಸಿಕೊಳ್ಳತೊಡಗಿದಳು (ಅಕೋಳ. ೨); ತನ್ನ ರೇಶಿಮೆಯ ಸೆರಗಿನ ತುದಿಯಿಂದ ನನ್ನ ಮುಖವನ್ನು ಮುಚ್ಚಿದಳು (ಕೃಜಸ. ೨). **ರೇಷ್ಮೆ** : ೧. ರೇಷ್ಮೆಯ ನಾರು ರೇಷ್ಮೆಯ ಹುಳುವಿನಿಂದ ಉತ್ಪತ್ತಿ ಯಾಗುತ್ತದೆ. ರೇಷ್ಮೆಹುಳು ಕಟ್ಟಿದ ಗೂಡಿನಿಂದ ತೆಗೆದ ದಾರವೇ ರೇಷ್ಮೆ ನಾರು (ಗೃಹವಿ. ೬೩). ೨. ರೇಷ್ಮೆಕಮ್ಚಿ ಲಗಾಮು ಸಹ (ಎಕ. XIV, ಹಂಣಸ. ೨೯೨—೩೮೮. ೦೪೨; 1847); ಮುನ್ನೂರು ವರಹಗಳು ಮಾತ್ರವೇ ಅಲ್ಲ . . . ಅಪೂರ್ವವಾದ ರೇಷ್ಮೆದುಪ್ಪಟ, ಅದನ್ನೂ ಕೊಡುತ್ತೇನೆ (ಆರ್ಯಕ. ೫). **ರೇಸಿಮೆ** : ೧. ಉಪ್ಪುನೇರಿಳೆಸೊಪ್ಪು ಕೂಡ ತೆಳ್ಳನೆ ಬೆಳ್ಳನೆ ರೇಸಿಮೆನೂಲಾಗಿ ಮಾರ್ಪಾಟುಗೊಳ್ಳುವುದು ನೋಡ (ಜಂಚಾಶ. ೦೩೩-೪೬). **ರೇಸ್ಮೆ** : ೨. ದಿವಿಜರೀಕ್ಷಿಸುವಂತೆ ರೇಸ್ಮೆನಿಡುದುಗುಲಮಂ ತೋಯಿಸುತೆ ರುಧಿರದೊಳ್ ನಿಂದಿರ್ದಂ (ಶರಕು. ೩೦-೩೩).

[← ಪಾರ. ಹಿಂ. ರೇಶಮ್; ಮರಾ. ರೇಶೀಮ್. / ಚೀನಿ. ರೇಶಮ್]

**ರೇಶ್ಮೆಬಟ್ಟೆ**, ರೇಷ್ಮೆಬಟ್ಟೆ (ನಾ). ರೇಶ್ಮೆನೂಲಿನಿಂದ ತಯಾರುಮಾಡಿದ ಬಟ್ಟೆ ; ಪಟ್ಟೆವಸ್ತ್ರ : ಹಳೆರೇಶ್ಮೆಬಟ್ಟೆಯ ತುಂಡು . . . ಫರ್ನಿಚರನ್ನು ಉಜ್ಜಿ ಪಾಲಿಷ್ ಮಾಡಲು ಬಹಳ ಅನುಕೂಲವಾಗಿರುತ್ತದೆ (ಗೃಹಶಿ. ೦೭೦). **ರೇಷ್ಮೆಬಟ್ಟೆ** : ರೇಷ್ಮೆಬಟ್ಟೆಗಳು ಮೈಯನ್ನು ಶಾಖವಾಗಿಡುವುವು. ರೇಷ್ಮೆಬಟ್ಟೆಗಳು ಬಹಳ ನುಣುಪಾಗಿರುವುದರಿಂದ ಇವು ಬೇಗ ಕೊಳೆಯಾಗುವುದಿಲ್ಲ (ಗೃಹಶಿ. ೬೭). [ರೇಶ್ಮೆ + ಬಟ್ಟೆ₂]

**ರೇಷಣ** (ನಾ). ೧. ಅರಚುವುದು; ಆರ್ಭಟಿಸುವುದು. ೨. ಗೊಣಗುವುದು: "ರೇಷಃ, ರೇಷಣಂ, ರೇಷಣೀಯಂ, ಈ ೩. ಗೊಣಗು" (ಶಾಶಕ. ೦೨೦). ೩. ತೋಳದ ಕೂಗು; ಊಳು. ೪. ಗಾಯ. [ಸಂ.]

**ರೇಷನ್ನು** (ನಾ). ಒಬ್ಬ ಮನುಷ್ಯನಿಗೆ ನಿಗದಿಯಾಗಿ ಕೊಡುವ ಆಹಾರಪದಾರ್ಥಗಳ ಪ್ರಮಾಣ ; ಪಡಿತರ : ರೇಷನ್ನಿನಕ್ಕಿಯ ಚೀಲ ಬಂದಿತು ಕೈಗೆ (ಸಂಪ್ರಪೀ. ೪೫-೩೭). [←ಇಂ. Ration]

**ರೇಷಮಾನಿ** (ನಾ). = ರೇಶ್ಮೆ ೨: ಒಬ್ಬ ಸಂಗೀತಗಾರನು . . . ಕುತ್ನಿನಿ ಪಾಯಿಜಾಮಾ ಹಾಕಿಕೊಂಡು ರೇಷಮಾನಿ ಕೈವಸ್ತ್ರ ಸಹ ಬಹಳ ಡಬಡ್ಡಾಳಿಕೆಯಿಂದಹಾಡುತ್ತಿರಲು (ಕಥಾವಂ. VI, ೯). [<ರೇಶ್ಮೆ]

**ರೇಷೆ** (ನಾ). ಗೆರೆ; ರೇಖೆ: ಎರಡೂ ಸಂಸ್ಕೃತಿಯ ಪ್ರಗತಿಯು ಎಷ್ಟು ಸಮಾನಾಂತರರೇಷೆಯಲ್ಲಿ ಸಾಗಿತ್ತೆಂಬುದು ಇದರಿಂದ ವ್ಯಕ್ತವಾಗುತ್ತಿದೆ (ಕರ್ನಾಪೂ. ೬೮); ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ ತನ್ನ ದೈವರೇಷೆ ಬರೆಯುವಂತೆ ತಾನೆ ಛಾಲಾ (ವಾರಲೀ. ೮೯-೦೦). [ಸಂ. ರೇಷಾ]

**ರೇಷ್ಮೆ** 'ರೇಶ್ಮೆ' ನೋ.

**ರೇಷ್ಮೆಕಾಯಿಲೆ** (ನಾ). ಒಂದು ಬಗೆಯ ರೋಗ : ಅವರು ರೇಷ್ಮೆಕಾಯಿಲೆಯಿಂದ ಮೃತರಾಗಿದ್ದರು (ಕಾಷಿಮರು. ೩೯). [ರೇಷ್ಮೆ₁ + ಕಾಯಿಲೆ]

**ರೇಷ್ಮೆಜ್ವರ** (ನಾ). = ರೇಷ್ಮೆಕಾಯಿಲೆ: ನಾಳಸಂಕೋಲೆ, ಛಳಿಜ್ವರ, ರೇಷ್ಮೆಜ್ವರ, ಗಂಟಲುಬೇನೆಗಳಿಗೆ ಸಿದ್ದಣ್ಣನ ಮೂಲಿಕೆಗಳು ಸಿದ್ಧೌಷಧವಾಗಿದ್ದುವು (ಕಂಜಕಂ. ೫೯). [ರೇಷ್ಮೆ₁ + ಜ್ವರ]

**ರೇಷ್ಮೆಬಟ್ಟೆ** 'ರೇಶ್ಮೆಬಟ್ಟೆ' ನೋ.

**ರೇಷ್ಮೆಸೀರೆ** (ನಾ). ರೇಶ್ಮೆದಾರದಿಂದ ನೆಯ್ದ ಸೀರೆ ; ಪಟ್ಟೆಸೀರೆ : ತರೋದೆ ಉಂಟಂತೆ. ಒಂದು ರೇಷ್ಮೆಸೀರೆ ತರೋದು ಬೇಡವೆ! (ನಮ್ಮೂರು. ೨೯೨). [ರೇಷ್ಮೆ (< ರೇಶ್ಮೆ) + ಸೀರೆ₁]

**ರೇಷ್ಮೆಹಿಪ್ಪಲಿಗಿಡ** (ನಾ). ರೇಶ್ಮೆಹುಳುಗಳು ತಿನ್ನುವ ಸೊಪ್ಪಿನ ಗಿಡ; ಉಪ್ಪುನೇರಳೆ: ಕಂಬಳಿಗಿಡ, ರೇಷ್ಮೆಹಿಪ್ಪಲಿಗಿಡ (ವೃಕಿಗ. ೫೫-೦೦೦೦). [ರೇಷ್ಮೆ (<ರೇಶ್ಮೆ) + ಹಿಪ್ಪಲಿ + ಗಿಡ (< ಗಿಡು)]

**ರೇಷ್ಮೆಹುಳು** (ನಾ). ರೇಶ್ಮೆಯನ್ನು ಉತ್ಪತ್ತಿ ಮಾಡುವ ಒಂದು ಬಗೆಯ ಹುಳು: "ಕೌಶೇಯಂ . . . ರೇಷ್ಮೆಹುಳು" (ಸಿದ್ಧಾಂತ. ೨೦೨); ರೇಷ್ಮೆಹುಳುಗಳನ್ನು ಮೊಟ್ಟಮೊದಲು ಚೀಣಾದೇಶದಲ್ಲಿ ರೇಷ್ಮೆಗಾಗಿ ಸಾಕಲು ಪ್ರಾರಂಭಿಸಿದರು (ಗೃಹಶಿ. ೬೫). [ರೇಷ್ಮೆ (<ರೇಶ್ಮೆ)+ಹುಳು (<ಪುಟು)]

**ರೇಸಿಮೆ** 'ರೇಶ್ಮೆ' ನೋ.

**ರೇಸು** (ನಾ). ಕುದುರೆಗಳೂ, ಕ್ರೀಡಾಪಟುಗಳೂ ಓಡುವ ಪಂದ್ಯದ ಓಟ : ಬೆಂಗಳೂರಿನಲ್ಲಿ ಕುದುರೆರೇಸು ನಡೆಯುತ್ತದೆ (ರಿಖಿ).

[←ಇಂ. Race]

**ರೇಸ್ಮೆ** 'ರೇಶ್ಮೆ' ನೋ.

**ರೈ** (ನಾ). ೧. ದ್ರವ್ಯ ; ಸಂಪತ್ತು; ಐಶ್ವರ್ಯ : "ಧನಕನಕವಾಚಕಂ ರೈಶಬ್ದಂ" (ವಸ್ತುಕೋ. ೦೨೫-೯೨); ಐಕಾರಕ್ಕೆ--ದ್ರೈಯೆಂದಂ ; ರೈಯೊದವಿತ್ತು (ಶಮದ. ೫೩ ಪ್ರಯೋ); ಸೌಸ್ಥ್ಯರ್ಯದಿಂದಂಕಮಂ ರೈಯಂ ಕೈಮಿಗೆ ಸಾರ್ಚಿಸಂತವಿಸಿದಾ ಗೋವಿಂದನಂ ವಂದಿಪೆಂ (ಐಕ್ಶಗೋ. ೦-೦). ೨. ಚಿನ್ನ ; ಸುವರ್ಣ: "ಗೈರಿಕಂ ... ಕಾಂಚನಂ ರೈ ರುಕ್ಮಮಷ್ಟಾಪದಂ . . . ಸ್ವರ್ಣಮೆನೆ ಹೊನ್ನಿಂಗೆ ನಾಮಮಕ್ಕುಂ" (ಮಂಗರಾ. ೩೦-೪); ಸಕಳಾರ್ಥಿವ್ರಾತಚೇತೋಮುದಮನಮನಮಲರೈಧಾರೆಯಿಂ . . . ಮಾಡಿ (ಶಂಪ್ರಕು. ೪-೬೪). [ಸಂ.]

**ರೈಟರು** (ನಾ). ಕರಣಿಕ ; ಗುಮಾಸ್ತ: ನಮ್ಮ ಕಚೇರಿಯಲ್ಲಿ ಇಬ್ಬರು ರೈಟರುಗಳಿದ್ದಾರೆ (ರಿಖಿ). [← ಇಂ. Writer]

**ರೈತ**, ರೈಹಿತ್ತ₂ (ನಾ). ಆರಂಬಮಾಡುವವನು ; ಒಕ್ಕಲಿಗ ; ವ್ಯವಸಾಯಗಾರ : ಸರಕಾರಕ್ಕೆ ರುಜು ಇಲ್ಲದೆ ರೈತನಾಗಬಾರದು ಆದಂತೆಂದೊಡೆ ಇಷ್ಟುಳ್ಳಾತನೇ ಪಾಚ್ಯಾರೈತ (ವಕಸಂ. ೩೦); ರೈತರುಯೆಲ್ಲಾ ಬಿತ್ತಿ ಬೆಳದಾ ಧಾನ್ಯ (ಜುವಳ. ೦೦); ಎರಡು ವರ್ಷಗಳಿಂದಲೂ ಬರಗಾಲವು ಬಂದು ರೈತರು ದಣಿದಿದ್ದಾರೆ (ತ್ರಿರಾಜು. ೦೬೬). **ರೈಹಿತ್ತ₂** : ಕಿಗ್ಗಟ್ಟುಹತ್ತುನಾಡುರೈಹಿತರು ತಂಮ ಭಕ್ತಿಯಿಂದ . . . ರಾಮೇಶ್ವರದೇವರ ದೇವಸ್ಥಾನವನ್ನು ಜೀರ್ಣೋದ್ಧಾರಮಾಡಿಸಿಯಿದ್ದಾರೆ (ಎಕ. I. ೦೦೬-೨; 1840). [← ಅರ. ರಈಯತ್ ; ಹಿಂ. ರಯ್ಯತ್, ರೈಯತ್; ಮರಾ. ರಯತ್, ರಯ್ಯತ್, ರೈಯತ್ /ಇಂ. Ryot]

**ರೈತಾಪಿ** (ನಾ). ೧. ಆರಂಬ ; ಬೇಸಾಯ : ಆದವಾನಿಸೀಮೆ ರೈತರ ಹಿಡಿತಂದು ಕೊಡಗಿನ ಸೀಮೆಯಲ್ಲಿ ರೈತಾಪಿಗೆ ಇಟ್ಟು (ರಾಕೆಂದ. ೦೭); ೨. ವ್ಯವಸಾಯಗಾರ: ಹೆಚ್ಚು ತರಕಾರಿ ಬೆಳೆಯಬೇಕೆಂಬ ಪ್ರಚಾರವನ್ನು ರೈತಾಪಿ ಜನರು ಸ್ವಾಗತಿಸುವುದರಲ್ಲಿ ಸಂದೇಹವಿಲ್ಲ (ತರಶಿ. ೬೬); ರೈತಾಪಿ ಜನರು . . . ಬಾಧೆಪಡುವುದನ್ನೂ ನಿಲ್ಲಿಸುವುದಕ್ಕೆ ಈ ಸಹಕಾರಸಂಘಗಳು ಸ್ಥಾಪಿತವಾದವು (ಗೃಹಶಿ. ೦೯೯). [ < ರೈತ]

**ರೈದ** (ನಾ). ಐಶ್ವರ್ಯವನ್ನು ಕೊಡುವವನು ; ಕುಬೇರ : ಜಯ ಜಯವಿಚಿತ್ರಚಾರಿತ್ರ ರೈದನ ಮಿತ್ರ ಜಯಜಯ . . . ಗುರುಸಂಗಮೇಶಾ (ಶ್ರಕುಶು. ೬-೦೦೦). [ಸಂ.]

**ರೈಲು**, ರೇಲು (ನಾ). ೧. ಕಂಬಿ : ಹಳಿ : 'ರೈಲುಮಾರ್ಗ' ಪರಾ. ೨. ಆವಿ ಅಥವಾ ವಿದ್ಯುತ್ತಿನ ಸಹಾಯದಿಂದ ಕಂಬಿಗಳ ಮೇಲೆ ಚಲಿಸುವ ಗಾಡಿ ; ಟ್ರೈನು : ರೈಲಿನ ಉಪಯೋಗ ಎಲ್ಲಿಯವರೆವಿಗೆ ? ನಮ್ಮ ಸ್ಟೇಷನ್ ಸಿಕ್ಕುವವರೆವಿಗೆ (ಶಂವಾಕ್ಯ. ೨೭೦). ಕಳುಹಿಸಿ ಕೊಟ್ಟಳು ಪತಿಯನು ರೈಲಿಗೆ (ಸಂಪ್ರಪೀ. ೨೫-೯೭). **ರೇಲು** : ೧. ನೀವು ನಿಲ್ಮನೆ ಮುಟ್ಟುವಲ್ಲಿ ರೇಲು ಹೋಯಿತೆಂಬುದು ಖಚಿತವಾಯಿತು (ಕೆಂಡುಟಿ. ೦೦); ಆದಪ್ಪ ಮಾಸ್ತರರು . . . ಬೆಳಗಿನ ರೇಲಿಗೆ ಇಳಿದು . . . ಊರಿನ ಕಡೆಗೆ ನಡೆದರು (ಅಕೋಳ. ೨೯೬).

ರೈಲು ಬಿಡು = (ಆಲಂ) ಸುಳ್ಳುಹೇಳು ; ಬುರುಡೆ ಹೊಡೆ : ಚಾರ್ಲಿ ಚಾಪ್ಲಿನ್ ರೈಲುಬಿಟ್ಟ ಮೇಲೆ ರೈಲಿನಲ್ಲಿಯೂ ಕುಳಿತುಕೊಳ್ಳಬಾರದೆಂದು ನಿರ್ಧಾರ ಮಾಡಿತು ನಮ್ಮೂರಿನ ಮಹನೀಯರ ಮಂಡಳಿ (ನಮ್ಮೂರು. ೨೯). **ರೈಲು ಹತ್ತಿಸು** = (ಆಲಂ) ಪೂಸಿಮಾಡು; ಪುಸಲಾಯಿಸು : ಈಗ ಅವರಿಗೆ ತಮ್ಮ ಕೆಲಸವಾಗಬೇಕಾಗಿದೆ, ಅದಕ್ಕೇ ಅವನನ್ನು ರೈಲು ಹತ್ತಿಸುತ್ತಾ ಇದ್ದಾರೆ (ರಿಖಿ). [ ← ಇಂ. Rail ]

**ರೈಲುಚೆಂಬು**, ರೈಲುಚೊಂಬು (ನಾ). (ಪ್ರಯಾಣದಲ್ಲಿ ತೆಗೆದುಕೊಂಡು ಹೋಗಲು ಉಪಯೋಗಿಸುವ) ನೀರು ತುಳುಕದಂತೆ ತಿರುಪಿನ ಮುಚ್ಚಳವಿರುವ ಚೆಂಬು : ಅವಳು ಕೈಯಲ್ಲಿ ಒಂದು ಸಣ್ಣ ರೈಲುಚೆಂಬು ಹಿಡಿದಿದ್ದಳು (ಕವಿಸಂ. ೦೨೦). **ರೈಲುಚೊಂಬು** : ಎರಡು ಟ್ರಂಕ್, ಬೆಡ್ಡಿಂಗ್, ರೈಲುಚೊಂಬು ಇಷ್ಟನ್ನೇ ಸಾಗಿಸಿಬಿಟ್ಟು (ರೂಕಸಂ. ೨). [ ರೈಲು + ಚೆಂಬು₁ ]

**ರೈಲುಚೊಂಬು** 'ರೈಲುಚೆಂಬು' ನೋ.

**ರೈಲುಮಾರ್ಗ** (ನಾ). ರೈಲುಗಾಡಿಯು ಚಲಿಸಲು ಉಕ್ಕಿನ ಕಂಬಿಗಳಿಂದ ನಿರ್ಮಿಸಿರುವ ರಸ್ತೆ : ನಿಟ್ಟೂರು : ಬೆಂಗಳೂರು – ಪೂನ ರೈಲು

ಮಾರ್ಗದಲ್ಲಿ ಹದಿಮೂರನೆಯ ನಿಲ್ದಾಣ (ಒಟ್ಟೂಕಾಂ. ೨).
[ ರೈಲು + ಮಾರ್ಗ ]

**ರೈಲ್ವೆ, ರೇಲುವೆ** (ನಾ). ರೈಲುಮಾರ್ಗ ಮತ್ತು ಅದಕ್ಕೆ ಸಂಬಂಧಿಸಿದ ಕಾರ್ಯಭಾರವನ್ನು ನಿರ್ವಹಿಸುವ ಇಲಾಖೆ : ರೈಲ್ವೆ ಕಂಪನಿಯ ಯಾ ಸ್ಥಳೀಯಾಧಿಕಾರಿಯ ನಾಕರನಿಗೆ ಸಲ್ಲಬೇಕಾದ ಸಂಬಳ (ಗ್ರಾಮಾಕ. ೪೩). **ರೇಲುವೆ :** ಎಣ್ಣೆಯು ಸೋರಹತ್ತಲು ರೇಲುವೆ ಕಂಪನಿಯವರು ತಕ್ಕೊಳ್ಳು ವದಿಲ್ಲ (ಮುಂಬವ್ಯಾ. ೪೯ ಕೃಸ್ತಾವನೆ). [ ← ಇಂ. Railway ]

**ರೈವತ** (ನಾ). ೧. ಐಶ್ವರ್ಯವಂತ ; ಧನಿಕ. ೨. ಹದಿನಾಲ್ಕು ಮನುಗಳಲ್ಲಿ ಐದನೆಯವನು : ಸ್ವಾಯಂಭುವ ರೈವತ . . . ಇಂದ್ರ ಸಾವರ್ಣಿಕರೆಂಬ ಹದಿನಾಲ್ಕು ಮನುಗಳು (ಶಿವೇಕ.೩೦೯). ೩. ರೇವತೀ ನದಿಯ ಹತ್ತಿರದಲ್ಲಿರುವ ಒಂದು ಬೆಟ್ಟದ ಹೆಸರು : ಶ್ರೀವೃಕ್ಷಪನಸ ನಿವಹಮುಮಾವಿಷ್ಕೃತಕುಸುಮವಿಸರಮೆನೆ ಶಿಖರಿವನಂ ಶ್ರೀವಿರೆ ಶಿಖಂಡ ಮಣಿಕಿರಣಾವಳಿಯಿಂ ಕಾಣಲಾಯ್ತು ರೈವತಶೈಲಂ (ಜಗಧ. ೧೬-೧). ೪. ಮೋಡ. ೫. ಶಿವ. ೬. ಒಬ್ಬ ರಾಜನ ಹೆಸರು. [ಸಂ.]

**ರೈವೃಷ್ಟಿ** (ನಾ). ಚಿನ್ನದ ಮಳೆ ; ಸುವರ್ಣವೃಷ್ಟಿ : ಧನದಂ ಕಾಂಚನ ಪಂಚರತ್ನಮಯಮಂ ರೈವೃಷ್ಟಿಯಂ ಮಾಡುವಲ್ಲಿ (ಅಂಪು. ೭-೨೪) ; ಹೇಮಗರ್ಭಂ ವಸುಧಾಂತರ್ಭಾಗವಾಗಿರ್ಪಿನೆಗಮನುದಿನಂ ಕೂಡೆ ರೈವೃಷ್ಟಿಯಂ ನಿರ್ಮಿಸಿಪಂ (ವರ್ಧಮಾ. ೦೦-೩೪). [ಸಂ.]

**ರೈಸು** ' ರಯಿಸು ' ನೋ.

**ರೈಸ್ತಂಭ** (ನಾ). ಚಿನ್ನದ ಕಂಬ ; ಸುವರ್ಣಸ್ತಂಭ : ತ್ರಿಭುವನಮಂಗಲ ತೋರಣನಿಭಮಂ ಪ್ರವಚನಮನೆಯ್ದೆ ರೈಸ್ತಂಭಮುಮಪ್ರಭರಂತರ್ನಿಭೃತೋ ನ್ನತವಿಭವರ್ ಭೂತಬಲಿ ಪುಷ್ಪದಂತಾಚಾರ್ಯರ್ (ಚಂದ್ರಪ್ರ. ೧-೦೩). [ಸಂ.]

**ರೈಹಿತ**$_1$ (ನಾ). ಲಕ್ಷ್ಮಿಗೆ ಹಿತನಾದವನು ; ನಾರಾಯಣ : ಭೀಮ ರೈಹಿತ ರೌದ್ರಸ್ತುತ ರಂಗ ಸಿರಿಧಾಮ ರಕ್ಷಿಸು (ಕಕಗಾಂ. ೭೭-೯೩).
[ಸಂ.]

**ರೈಹಿತ**$_2$ ' ರೈತ ' ನೋ.

**ರೊಂಕಣೆ** (ನಾ). ಲೇಪನ ; ಗಿಲೀಟು ; ಒಪ್ಪ (?) : ಮಿಡುಗುವ ಮಿಂಚಿಗಿಂದುಗಳೆಯಿಂ ಮಿಗೆ ರೊಂಕಣೆಯುಕ್ಕುವಂತಿರಲ್ಕಜನಿಪಟ್ಟಿಪ ನಾಡ ಕಡುನೀಳಿಯರಂ ನಡೆನೋಡಿ ಸೋಲದಿಂ ಮಿಡಿವುದು ರಂಭೆಯೂರ್ವಶಿ ತಿಲೋತ್ತಮೆ ಮೇನಕಿ ಮಂಜುಘೋಷೆಯೆಂಬಬಲೆಯ ದೇವಸೌಂದರಿ ಯರಂ ಚರಿಯಿಪ್ಪ ನಿಳಿಂಪಸಂಕುಳಂ (ಸೂಕ್ತಿಸು. ೪-೦೨೭).
[ ?. / ಸಂ. ರೋಕ = ಬೆಳಕು, ಕಾಂತಿ]

**ರೊಂಕೆ** ' ಜೌಂಕು ' ನೋ.

**ರೊಂಡಿ** (ನಾ). ಸೊಂಟದ ಕೆಳಗಿನ ಹಿಂಬದಿಯ ಭಾಗ ; ಕುಂಡೆ ; ಪಿರ್ರೆ : " ಕಟಿ – ರೊಂಡಿಯಲ್ಲಿ " (ಶಾಶಚಿ. ೨-೦-೭೭ ವ) ; ದೇಹದಲ್ಲಿ ನಡುವಿನ ಕೆಳಗೆ ಎರಡುಪಕ್ಕಗಳಲ್ಲಿಯೂ ಚಾಚಿಕೊಂಡಿರುವ ಕಿಬ್ಬೊಟ್ಟೆಯ ಭಾಗ : ಟೊಂಕ ; ರೊಂಡಿ ; ಚಪ್ಪೆ ; ಕಟಿ (Hip. ೩೦೪೩).
[ದೇ.॥ ತೆಲು. ರೊಂಡಿ]

**ರೊಂಡೆ** (ನಾ). ಕೆಸರು ; ರಾಡಿ : " ರೊಂಡೆ = ಕೆಸರು " (ಶಾವಕೋ.೯೦) ; ಜಾಜಲಂಟಿದ ಕಾಲ ರೊಂಡೆ [ಶಾಕಾಂ. ಜೊಂಡೆ, ಜೊಂಪೆ] ಯನೂಜು ಬದ್ದಂಗಯ್ಯ ಕೆಸರಿಂ ತೋಯುತಂ (ಶಿತತ್ತ.. ೧೦-೬). ' ಜೊಂಪೆ ' ಪರಾ. [ ? ]

**ರೊಂದಿಬಗ್ಗ** (ನಾ). ನಾಡಾಡಿ ಜನ ; ಅಲ್ಪಜನ (?) : ಸಂದಿಯ ರೊಂದಿ ಬಗ್ಗರ ಸಮಕ್ಷದೊಳಿದ್ದುರಿದೆದ್ದು ದುರ್ಜನಂ ನಿಂದಿಸುತಿರ್ಪನುತ್ತಮರ ಕಾವ್ಯಮನಂತಟು ದಲ್ ನಿರಂತರಂ ಹಂದಿಗೆ ಮಿಂದ ಕೆಸಟಿಗೊಗ್ಗುವುದಲ್ಲದ ತಣ್ಣನೀಮ ಸಚ್ಛಂದನದಣ್ಪದೊಗ್ಗುವುದೆ (ಶಿಕಶಂ. ೬). [ ? ]

**ರೊಂಯ್** (ನಾ). ಒಂದು ಅನುಕರಣ ಶಬ್ದ : ಗಾಳಿಪಟ ರೊಂಯ್ ಎಂದು ಶಬ್ದ ಮಾಡುತ್ತಿದೆ (ರೂಢಿ).

**ರೊಕ** ' ರೊಕ್ಕ ' ನೋ.

**ರೊಕ್ಕ**. ರೊಕ, ರೊಖ, ರೊಖ್ಖ, ರೋಕ$_2$, ರೋಖ, ರೋಖು (ನಾ). (ಉಕ) ಬಳಸಲು ಸಿದ್ಧವಾಗಿರುವ ಹಣ ; ನಗದು ; ದುಡ್ಡು : ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ (ಸಕವ. II. ೯೬೩-೬೨) ; ಅಕ್ಕಿಯರುಗಳುಯೆಂಬ ಹಣನಿಗೆ ರೊಕ್ಕವನು ತೆಗೆಯೆಂಬ ಹರದನು (ಕಶಿರಾ. ೧೦-೨೪) ; ರೊಕ್ಕ ಎರಡಕ್ಕು ದುಃಖ ಕಾಣಕ್ಕ (ಭರಂವ. ೨-೯೮ ಕಲ್ಗಿಶಿ) ; ರೊಕ್ಕವಿಲ್ಲದ ಬಾಳ್ವೆ ಮಕ್ಕಳಿಲ್ಲದ ಮನೆಮು ಅಕ್ಕಜವಿರದ ತವರೂರು ಇವು ಮೂಜು ದುಕ್ಕ ಕಾಣಯ್ಯ (ಸರ್ವಜ್ಞ. ೦೬೯೨). **ರೊಕ :** ಗದೆಯ ಮೇಲೆ ರೊಕ ಭತವನೂ (ಕಶಿಐ. ೦೯೩೯, ಶೃಂಗಪೂರು. ೦೩೭-೦೯ ; 1419) ; ಬಂದ ಬಡಿಯ ರೊಕವನು ಆಗುಮಾಡಿ (ಎಕ. XIV, ಮಳವ. ೦೦೦-೦೬ ; 1604). **ರೊಖ :** ರೊಖ ಹಣವು ಮುಂಗಡವಾಗಿ ಕಳುಹಿಸಿ (ಮುಂಬವ್ಯಾ. ೨೪೯). **ರೊಖ್ಖ :** ರೊಖ್ಖವಂ ಗಳಿಸುವದೆ ದುಃಖ ಮಗುಳಾ ಧನವ ರಕ್ಷಿಸುವಡತತಳದುಃಖಂ , . . ರೊಖ್ಖಕೆಂ ನೃಪ ಚೋರ ಬಾಧೆಗಳು ದಿನದಿನಂ ಮಿಕ್ಕುದು (ಕುರಂಗ. ೪-೭). **ರೋಕ**$_2$ **:** ರೋಕರಕಮಿನಿಂದ ವ್ಯವಹಾರ ಮಾಡಿದರೆ . . . ತಕ್ಕೊಳ್ಳಲಾದೀತು (ಮುಂಬವ್ಯಾ. ೦೦ ಕೃಸ್ತಾವನೆ). **ರೋಖ :** ಇವತ್ತು ರೋಖ ನಾಳೆ ಉದ್ದರಿ (ಶಿಪೋದ. ೨೨). **ರೋಖು:** ತಂದೆ ಗಳಿಸಿದ ರೋಖು ರೂಪಾಯಿಗಳನ್ನು ಬಡ್ಡಿಗೆ ಹಚ್ಚಿದ್ದರು (ಇಕ್ಕ. ೨೯೯) ; ಎಂಭತ್ತೈದು ರೋಖು ಎಣಿಸಿಕೊಟ್ಟೆವ್ನಿ (ಬಂಗಾ. ೦೨).
**ರೊಕ್ಕ ಮಾಡು**= ಹಣವನ್ನು ಸಂಪಾದಿಸು ; ಐಶ್ವರ್ಯವನ್ನು ಗಳಿಸು : ತಂಬುಲಿಗರ್ ಹುಟ್ಟಿದ ಧಾರಣೆಯಿಂ ರೊಕ್ಕಮಾಡಿ ಕುಡುವರ್ (ಮುಂಬಶಾ. XII. ೦೩-೯೯ ; 1223) ; ಈ ವಿಶ್ವನಾಥ ರೊಕ್ಕಮಾಡಿದ ರೀತಿ ನನಗೆ ಗೊತ್ತಿಲ್ಲವೆ ? (ಮುರಂ. ೬೦). [←ಹಿಂ. ರೋಕ್ ; ಮರಾ. ರೋಖ್./ತಮಿ. ಮಲ. ತುಳು. ತೆಲು. ರೊಕ್ಕ]

**ರೊಕ್ಕಮುಕ್ಕ** (ನಾ). ಹಣವನ್ನು ಕಬಳಿಸುವವನು ; ಗಂಟುಗಳ್ಳ : ಪ್ರತಿಭೆಯ ಫಲವನ್ನು ನಾನು ಅನುಭವಿಸುವ ಮುಂಚೆಯೇ "ರೊಕ್ಕಮುಕ್ಕ" ಗಳು ಯಾರಾದರೂ ಅನುಭವಿಸಿಯಾರೆಂದು ಹೆದರಿಕೆ (ಪಂಚಿಕು. ೦೯).
[ರೊಕ್ಕ + ಮುಕ್ಕ$_1$]

**ರೊಕ್ಕಸ್ತ** (ನಾ). ಹಣವುಳ್ಳವನು ; ಸಾಹುಕಾರ : "ರೊಕ್ಕಸ್ತ = ಸಿರಿ ಮಂತ, ಸಾವುಕಾರ" (ಶಾಸಕೋ. ೯೦). ' ದುಡ್ಡಸ್ತ ' ಪರಾ.
[ರೊಕ್ಕ + – ಸ್ತ]

**ರೊಕ್ಕಿ** (ನಾ). ಒಂದು ಬಗೆಯ ಸಸ್ಯ ; ಲಕ್ಕಿಗಿಡ : "ಸಿಂಧುಕಃ, ಸಿಂಧು ವಾರಃ, ಇಂದ್ರಸುರಸಃ, ನಿರ್ಗುಂಡಿಃ, ಇಂದ್ರಾಣೀ – ಈ ೫ ರೊಕ್ಕಿ " (ಶಾಶಶಾ. ೦೦೬). [< ಲೊಕ್ಕಿ]

**ರೊಖ** ' ರೊಕ್ಕ ' ನೋ.

**ರೊಖ್ಖ** 'ರೊಕ್ಕ' ನೋ.

**ರೊಚ್ಚು** ' ಜಿಚ್ಚೆ ' ನೋ.

**ರೊಚ್ಚುಗುಂಡಿ**, ರೊಚ್ಚೆಗುಂಡಿ (ನಾ). ಕೊಳಕು ನೀರು ನಿಲ್ಲುವ ಸ್ಥಳ : "ಬಚ್ಚಲು, ಚರಂಡಿ, ಪಾಯಖಾನೆ, ಮೊ. ಗಳಿಂದ ಬಂದ ರೊಚ್ಚಿನ ನೀರಿ ನಲ್ಲಿಯ ಘನಪದಾರ್ಥಗಳನ್ನು ತಡೆದಿಟ್ಟುಕೊಳ್ಳುವುದಕ್ಕಾಗಿ ಮಾಡಿದ ತೊಟ್ಟಿ : ರೊಚ್ಚುಗುಂಡಿ" (Cesspool. ೩೦೪೩). **ರೊಚ್ಚೆಗುಂಡಿ :** ರೊಚ್ಚೆಗುಂಡಿಯಲ್ಲಿ ನೀರು ನಿಂತು ಸಂಗ್ರಹಿಸುತ್ತಿದೆ (ರೂಢಿ).
[ರೊಚ್ಚು (<ಜಿಚ್ಚೆ) + ಗುಂಡಿ$_1$]

**ರೊಚ್ಚುಗೊಳ್ಳು** (ಕ್ರಿ). ಕೋಪಗೊಳ್ಳು ; ಸಿಟ್ಟಿಗೇಳು ; ರೇಗು : ಕಾರ್ಯಕ್ರಮಗಳ ಬಗೆಗೆ ಸ್ವಲ್ಪ ಭಿನ್ನಾಭಿಪ್ರಾಯವನ್ನು ಸೂಚಿಸಿದೊಡನೆ

ರೊಚ್ಚುಗೊಳ್ಳುವ . . . ಜನರು ಎಲ್ಲೆಲ್ಲೂ ತುಂಬಿದ್ದು (ಹುಕ್ಷಕ್ರ. ೦೬).
[ರೊಚ್ಚು (<ಱೊಚ್ಚು) + ಕೊಳ್ಳು₁ (<ಕೊಳ್₁)]

**ರೊಚ್ಚಿ** 'ಱೊಚ್ಚು' ನೋ.

**ರೊಚ್ಚಿಗುಂಡಿ** 'ರೊಚ್ಚುಗುಂಡಿ' ನೋ.

**ರೊಚ್ಚಿಬ್ಬಿಸು** (ಕ್ರಿ). ಸಿಟ್ಟಿಗೇಳಿಸು ; ರೇಗಿಸು : ಜಗಳವ ತೆಗೆದು ರೊಚ್ಚಿಬ್ಬಿಸುವಿವಳೇನು ನಾರಿಯೊ ಮಾರಿಯೊ (ಕಂಪ್ರಶೀ. ೦೬-೭೨).
[ರೊಚ್ಚು(<ಱೊಚ್ಚು) + ಎಬ್ಬಿಸು(<ಎೞ್ಬಿಸು)]

**ರೊಚ್ಚೇಳು** (ಕ್ರಿ). ಸಿಟ್ಟಿಗೇಳು ; ರೇಗು : ಹೆಂಡತಿ ಬರುತ್ತಲೇ, ಹೆತ್ತು ಸಾಕಿ ಸಲಹಿದ ತಾಯಿ ಇವನಿಗೆ ದೂರವಾದವಳಲ್ಲ ಎಂದು ಅವಳ ಮನಸ್ಸು ರೊಚ್ಚೆದ್ದಿತ್ತು (ಹೊಸಕ್ಕ. ೩೦) ; ಹಟತೊಟ್ಟು ಕಚ್ಚಿ ಕೆಡಹುವೆನು ಕುಣಿತದೊಳು ಟೌಡನಿಗೆ ರೊಚ್ಚೆದ್ದು ಸಿಂಹ ಜಿಗಿದಂತೆ (ಕನ್ನಶಾ. ೨೯೦).
[ರೊಚ್ಚು (<ಱೊಚ್ಚು) + ಏಳು₁ (< ಏೞ್₁)]

**ರೊಜ್ಜು** 'ಱೊಚ್ಚು' ನೋ.

**ರೊಟ್ಟಿ**, ರೋಟು₁ (ನಾ). ೧. ರಾಗಿ, ಅಕ್ಕಿ, ಜೋಳ ಮೊದಲಾದುವುಗಳ ಹಿಟ್ಟು, ಉಪ್ಪು, ಖಾರ ಮುಂತಾದುವನ್ನು ನೀರಿನಲ್ಲಿ ಕಲಸಿ, ತಟ್ಟಿ, ಹಂಚಿನ ಮೇಲೆ ಬೇಯಿಸಿ ಮಾಡುವ ಒಂದು ಬಗೆಯ ತಿಂಡಿ : ರೊಟ್ಟಿಯುಂ ಮೆಲ್ವವನೊರ್ವನುಂಬುತತಿಯುಂ ಬಿಡದೀಂಟುವನೊರ್ವನುಂಟೆ (ಉದ್ಭಟಿ. ೧೧-೭೦) ; ದೋಸೆ ಕಜ್ಜಾಯ ರೊಟ್ಟಿ ಹೋಯಿಗಡುಬತಿರಸಂಗಳ್ (ತಿಂಶು. ೯೭-೯೨) ; ಶಿವು . . . ರಾಗಿಯ ರೊಟ್ಟಿಯನ್ನು ತಿಂದುಕೊಂಡು ಒಂದುವಾರ ಇರಬಲ್ಲ (ರಾಶಜಾಸ. ೦೦೫) ; ರೊಟ್ಟಿ ತೊಳೆದು ನೀರು ಕುಡಿದ ಹಾಗೆ (ಗಾದೆ). ೨. "ಅಕ್ಕೀಹಿಟ್ಟಿನೊಳಗೆ ಬೆಲ್ಲವನ್ನೂ ತುಪ್ಪವನ್ನೂ ಹಾಕಿ ಮಾಡಿದ ರೊಟ್ಟಿ, ಕಜ್ಜಾಯ" (ಗಂಗಾಪು. ೬.). ೩. ಬ್ರೆಡ್ಡು : ಬೇಕರಿಯಿಂದ ರೊಟ್ಟಿ ತಂದರು (ರೂಢಿ). **ರೋಟು₁** : ೩. ಮೂವ್ವರೂ ಕೂಡಿ ಚಹಾ ಮತ್ತು ರೋಟು ತೆಗೆದುಕೊಂಡೆವು (ಬಿರುಗಾ. ೦೨); ಆ ಜಾಗಿರದಾರ ಏಳೋದರಾಗ ರೋಟು ತರಿಸಿ ಇಡಬೇಕಂತೆ (ಶಾಗ್ಗತ್ರೀ. ೯೦).
[ದೇ.೫ ತಮಿ. ಮಲ. ತುಳು. ಕೊಡ. ರೊಟ್ಟಿ; ತೆಲು. ರೊಟ್ಟೆ, ರೊಟ್ಟೆಯ./ಹಿಂ. ರೋಟೀ, ರೋಟಾ; ಮರಾ. ಗುಜ. ರೋಟ್, ರೋಟಾ./ಪ್ರಾ. ರುಟ್ಟಿಯಾ. ರೋಟ್ಟ. /ಸಂ. ರೋಟಿ. ರೋಟಿಕಾ]

**ರೊಟ್ಟೀಹಲಸು** (ನಾ). ಹಿಟ್ಟಿನಂತೆ ಮೃದುವಾದ ತಿರುಳುಳ್ಳ ಒಂದು ಬಗೆಯ ಹಲಸು : ದ್ವೀಪದ ಹಲಸು : ಸೀಮೆಹಲಸು. ದೀವಿಹಲಸು, ರೊಟ್ಟೀಹಲಸು (ವೃಕ್ಷಶಾ. ೯-೦೬೦). [ರೊಟ್ಟಿ + ಹಲಸು (< ಪಲಸು)]

**ರೊಡ್ಡ**, ಲೊಡ್ಡ (ನಾ). ೧. ಎಡಗಡೆ ; ವಾಮಭಾಗ : 'ರೊಡ್ಡ ಕೆಯ್' ಪರಾ. ೨. ಎಡಗೈಯನ್ನೇ ಉಪಯೋಗಿಸಿ ಕೆಲಸ ಮಾಡುವವನು ; ಎಡಚ : "ರೊಡ್ಡ-ಎಡಚ" (ಶಾವಕೋ. ೯೦). **ಲೊಡ್ಡ** : ೨. ಅವನೊಬ್ಬ ಲೊಡ್ಡ (ರೂಢಿ). [←ತೆಲು. ರೊಡ್ಡ, ಲೊಡ್ಡ]

**ರೊಡ್ಡಕೆಯ್**. ರೊಡ್ಡಗೈ (ನಾ). ಎಡಗೈ ; ವಾಮಹಸ್ತ : (೬). **ರೊಡ್ಡಗೈ** : ಎಡಗೈಯನ್ನೇ ಹೆಚ್ಚಾಗಿ ಉಪಯೋಗಿಸುವ ; ಎಡಚು; ರೊಡ್ಡಗೈಯ (Left handed. ಇಂಕಶ). [ರೊಡ್ಡ + ಕೆಯ್₂]

**ರೊಡ್ಡಗೈ** 'ರೊಡ್ಡಕೆಯ್' ನೋ.

**ರೊಡ್ಡಿ** (ನಾ). ಒಂದು ಬಗೆಯ ಔಷಧೀಸಸ್ಯ ; ಕಾಕೋಲಿ : ರೊಡ್ಡಿ, ಹಾಲುರೊಡ್ಡಿ. ಮಂಜಿಷ್ಠೆ . . . ಚೂರ್ಣಿಸಿ (ವೈದ್ಯಶಾ I. ೯೦೫) ; ಸಿಹಿ ಹಾಲೆ. ರೊಡ್ಡಿ. ಹಾಲರೊಡ್ಡಿ . . . ಕಾಯಿಸಿ ಪಾಕದಲ್ಲಿಳಿಸಿ ಶರೀರಕ್ಕೆ ಲೇಪಿಸೆ ಪಿತ್ತಜ್ವರ, ಉನ್ಮಾದ, ಮೂರ್ಛೆ ಸಹ ಮಾಣುವುವು (ಕಶವೈ. ೬೫)
[←ಮರಾ. ರೋಡಾ]

**ರೊಣಮೊಡೆಯು** (ನಾ). ಒಬ್ಬಾತನ ಹೆಸರು : ಎಜಿಸಿನಾಳ್ವೆಜೀದು ಬಿಟ್ಟುದ್ದಾರ್ ಕ[ನ್ನ]ರಸರುಬ್ಬರ್ ಇದರ್ಕೆ ಚಿವಾಣಿಕಳನಿ ವಾಳ್ಗಟ್ಟು ಕೊಟ್ಟೊದು ರೊಣಮೊಡೆಯೊಗೆ ಕೊಟ್ಟರ್ (ಎಶಿ. XVI. ಕುಮುಕು. ೬೬-೬: 750). [ ? ]

**ರೊಣೆ** (ನಾ). ಒರಟಾದ ಮೈಗೂದಲು ; ರೋಮ : ಕೊಬ್ಬು ಕರಗಿ ಒಣಗ ಹತ್ತಿದ ಕಪ್ಪುರೊಣೆ ತುಂಬಿದ ಕೈರಟ್ಟೆಗಳು (ಮೂರುದಾ. ೦೭೯) ; ಮೋರೆಗೆ ಇಷ್ಟುದ್ದ ಕಪ್ಪು ಪೊತ್ತ-ಮೀಸೆಗಳು; ಕಪ್ಪು ಎದೆಯ ಮೇಲೆ ಕಪ್ಪು ರೊಣೆ (ಹೊಸಕ್ಕ. ೦೭೦). [ ? ]

**ರೊಪ್ಪ** 'ಱೊಪ್ಪ' ನೋ.

**ರೊಯ್** (ನಾ). ೧. ಒಂದು ಅನುಕರಣ ಶಬ್ದ : 'ರೊಯ್ಯನೆ' ಪರಾ. ೨. ಎಮ್ಮೆಯ ಕೂಗು : (೬).

**ರೊಯಿಲಿ** (ನಾ). "ಶತ್ರುಗಳ ಹಡಗನ್ನು ಹಿಡಿದೆಳೆದುಕೊಳ್ಳುವುದಕ್ಕಾಗಿ ಹಗ್ಗ ಕಟ್ಟಿ ಎಸೆಯುವ ಕಬ್ಬಿಣದ ಕೊಂಡಿಗಳುಳ್ಳ ಸಲಕರಣೆ, ಅನೇಕ ಕೊಂಡಿಗಳುಳ್ಳ ಸಣ್ಣ ಲಂಗರು, ಪಾತಾಳಗರಡಿ" (ಅವಂಶಾ).
[←ಮರಾ. ರೋಯಲೀ, ಲೋಯಲೀ]

**ರೊಯ್ಯನೆ** (ಅ). ಒಂದು ಅನುಕರಣಾವ್ಯಯ : ಗಾಳಿ ರೊಯ್ಯನೆ ಬೀಸುತ್ತಿದೆ (ರೂಢಿ). [ರೊಯ್ + -ಅನೆ₁]

**ರೊಷ್ಟು** (ನಾ). ೧. ಕಾಟ ; ಹಿಂಸೆ : ಆದರೂ ಹಸುವ ಕಟ್ಟುವುದೆ ಸರಿ ; ಇನ್ನೆಷ್ಟು ಹೇಳಿದರು ಎಮ್ಮೆಯೇ ರೊಷ್ಟು (ಸುಶೀಕ. ೩೩-೪); ಅರಮನೆಗೆ ಬಿಟ್ಟಿಮಡಕೆಗಳು ಬೇಕೆಂದು ತಗಾದಿ ಹಚ್ಚಿ ಬಹಳವಾಗಿ ರೊಷ್ಟುಮಾಡಿ ತೊಂದರೆಪಡಿಸಿದನು (ಕಶಾಮು. IV. ೩೦). ೨. "ಕೊಳೆ" (ಅವಂಶಾ).
[ದೇ.೫ ತಮಿ. ರೊಷ್ಟು; ತೆಲು. ಲೊಷ್ಟು, ರೊಸ್ಟು]

**ರೊಳ್ಳಿ** (ನಾ). (ಉಕ) ನೆಪ; ಕಾರಣ; ಸೋಗು : ಭಟ್ಟರು ರೊಳ್ಳೀ ತೆಗೆದರು (ದಾಗಹು. ೬೭); ಏ ರಂಗ್ಯಾ, ನೀ ಏನಾರ ರೊಳ್ಳೀ ತಗೀಬ್ಯಾಡ (ಅಮಾ. ೯೯). [?./ತೆಲು. ರೊಲ್ಲು=ಪ್ರಲಾಪಿಸು]

**ರೋಂಕಿಸು** (ಕ್ರಿ). ಗರ್ಜನೆ ಮಾಡು ; ಆರ್ಭಟಿಸು : ಭಾನುಸುತ ಬಿಲ್ಗೊಂಡು ಸಮರಕಿನ್ನಾರೆನುತ ಮರಿದಾಡಿ ರೋಂಕಿಸುತ ಭಂಗವಂ ಬರಿಸಿದನು ರಿಪುಬಲದೊಳು (ಕುರಂಗ. ೩೩-೧).
[ರೋಂಕು (< ಱೌಂಕು) + -ಇಸು₃]

**ರೋಂಕು** 'ಱೌಂಕು' ನೋ.

**ರೋಕ₁** (ನಾ). ೧. ತೂತು ; ರಂಧ್ರ : "ನಿಮ್ನಂ . . . ರಂಧ್ರಃ, ರೋಕಃ, ಕುಹರಃ, ದರಃ – ಈ ೧೫ ಕುಟಃ" (ಹಲಾಯು. ೦೦೩-೨) ; ಕುಹರಕರುವೆಯುನಿದುಕಿ ಛಿದ್ರಮಂ ಮುಚ್ಚಲಿಕ್ಕಳಸಲಾ ರೋಕಮನ್ನುಂ ಪೆರ್ಚಿ (ಶ್ರೀರಾಮಮ. ೬೭-೬೦೭). ೨. ಜಹಜು : ಹಡಗು. ೩. ಕಾಂತಿ ; ಪ್ರಕಾಶ. [ಸಂ.]

**ರೋಕ₂** 'ರೊಕ್ಕ' ನೋ.

**ರೋಕಡ**, ರೋಕಡಿ, ರೋಖಡಿ (ನಾ). ನಗದು ಹಣ : ರೊಕ್ಕ : ರೈಲುಹಾದಿ ಕಟ್ಟುವ ಮಜೂರರಿಗೆ ರೋಕಡ ಸಂಬಳ ದೊರೆಯಲು ಬಹಳ ಕಾಲ ಹಿಡಿಯಿತು (ಐಶಿಸಂ. ೩೦). **ರೋಕಡಿ** : ರೋಕಡಿಯ ಕೆಲಸ ಅಂದರೆ ಹಣ ಕೊಡುವುದು, ತಕ್ಕೊಂಬುವುದು (ಮುಂಬಯಿ. ೨೭೯). **ರೋಖಡಿ** : ರೋಖಡಿ ಮತ್ತು ಕರೆನ್ಸಿನೋಟುಗಳೂ ಇಲ್ಲದಂತಾಗಿದ್ದು ಉಳಿದ ಜಿನಸುಗಳೆಲ್ಲ ಇಟ್ಟಂತೆಯೇ ಇದ್ದವು (ಪೋರ್ತು. ೦೩೦).
[ ← ಹಿಂ. ಮರಾ. ರೋಕಡ್]

**ರೋಕಡಿ** 'ರೋಕಡ' ನೋ.

**ರೋಕು** (ನಾ). ರೋಷ ; ಕ್ರೋಧ : ಭೂವರನ ಬೀಳ್ಕೊಂಡು ರೋಕಿನಿಂ ಪಿತಿ ಮಸಗಿ ಜೀವಾಳಮುಟ್ಟೈಪ್ಪರೊಡಗೊಂಡು (ಕರಕು. ೨೩-೨೦) ; ಆಕಾಶಕೇಶನುಂ . . . ರೋಕಿನಿಂದಾ ನಿಶಾಟನ ಕೊಲ್ಲಲುರಿಗಣ್ಣ ಭೀಕರದ ತೆರೆದನಹುದು (ಪಂಚಾರಾ. ೫-೦೩-೦೭).
[← ಹಿಂ. ಮರಾ. ರೋಖ್./ಸಂ. ರೋಷ]

**ರೋಖ** ' ರೊಕ್ಕ ' ನೋ.

**ರೋಖಡಿ** ' ರೋಕಡ ' ನೋ.

**ರೋಖು** ' ರೊಕ್ಕ ' ನೋ.

**ರೋಗ** (ನಾ). ಅರೋಗ್ಯವಿಲ್ಲದಿರುವಿಕೆ ; ಖಾಯಿಲೆ ; ವ್ಯಾಧಿ : ''ರೋಗಃ . . . ರುಜಾ – ಈ ೧೨ ವ್ಯಾಧಿ" (ಹಲಾಯು. ೯೮-೯೯೬) ; ದೇಹವನಲೆದುದಲ್ಲಿ ರೋಗದ ಕೀಳಿ ರೋಗದಿಂ ಪತ್ತೆಂಟು ದಿವಸಕಸುವೊಜಿ ಯಾಗಿ (ಬಸರ. ೩-೦೯೭) ; ರಾಗವೇ ಮೂಡಲು ಯೋಗವೇ ಬಡಗಲು ರೋಗವದು ಶುದ್ಧ ಪಡುವಲು ತೆಂಕಲು ಭೋಗದ ಬೀಡು (ಸರ್ವಜ್ಞ. ೦೬೦೩) ; ಉಗುಳಿ ಉಗುಳಿ ರೋಗ, ಬೊಗಳಿ ಬೊಗಳಿ ರಾಗ (ಗಾದೆ). [ಸಂ.]

**ರೋಗಂದ, ರೋಗಂಧ** (ನಾ). ಒಂದು ಬಗೆಯ ಅಂಟುದ್ರವ್ಯ : ಧೂಪದ ಮರ – ಬಹು ಸುಂದರವಾದ ಉನ್ನತವೃಕ್ಷವು . . . ಅಂಟಿನಿಂದ ರೋಗಂದವಾಗುತ್ತದೆ (ಕಭಾಗ. ೬೨) ; ಕಪ್ಪುರವು ಬಹಳ ದೊಡ್ಡ ಔಷಧಿಯಿದೆ. ಅದರಿಂದ ಒಂದು ತರದ ಮೇಲಾದ ರೋಗಂದವೂ ಆಗುತ್ತದೆ (ಮುಂಬಯಿ. ೪-೬೨). **ರೋಗಂಧ :** ಕಟ್ಟಿಗೆಗಳು ಹುಳ ಹತ್ತಿ ಕೆಡದ ಹಾಗೆ ಅವುಗಳಿಗೆ ಎಣ್ಣೆರ್ನಾಳ ಹುರಮಂಜನ್ನು ಕುದಿಸಿ ಹಚ್ಚಬೇಕು ಅಥವಾ ಡಾಂಬರವನ್ನಾಗಲಿ ರೋಗಂಧವನ್ನಾಗಲಿ ಹಚ್ಚಿದರೂ ಬರುತ್ತದೆ (ಕೃಷಿಶ್ರ. ೦೦೨). [← ಪಾರ: ರೌಗನ್, ರೌಘನ್; ಹಿಂ. ರೋಗನ್, ರೌಗನ್; ಮರಾ. ರೋಗಣ್]

**ರೋಗಂಧ** ' ರೋಗಂದ ' ನೋ.

**ರೋಗಗ್ರಾಹಿ** (ನಾ). ರೋಗಗ್ರಸ್ತನಾದವನು ; ವ್ಯಾಧಿಪೀಡಿತ : ರೋಗಗ್ರಾಹಿಗಳಿಗೆ ಮಾತ್ರ ಈ ಇಂಜಕ್ಷನ್‌ಗಳನ್ನು ಕೊಡಬೇಕು (ಕಂಠೀರ. ೨೬). [ಸಂ. ರೋಗಗ್ರಾಹಿನ್]

**ರೋಗಜೀವ** (ನಾ). ವ್ಯಾಧಿಗ್ರಸ್ತ ; ರೋಗಿ : ವೈದ್ಯ ಬಂದ ನೋಡಿ . . . ಧರ್ಮವೈದ್ಯನಿವ ಜಗಕೆಲ್ಲ ಒಬ್ಬನೆ ಮರ್ಮ ಬಲ್ಲ ರೋಗಜೀವಂಗಳ (ಶರಂರ. ಭಾ. ೩-೦೯೨-೪). [ಸಂ.]

**ರೋಗಜ್ವರ** (ನಾ). ಒಂದು ಬಗೆಯ ಜ್ವರ : ಕಲ್ಯಾಣಘೃತ . . . ಸಂಬೆಕಾಯಿತೋರ ಒಂದು ಮಂಡಲ ಕೊಳ್ಳಲು ರೋಗಜ್ವರ, ಕಾಸರೋಗ . . . ಪರಿಹರವಹುದು (ಸಕವೈ. ೦೬೯). [ಸಂ.]

**ರೋಗತಂಡುಲ** (ನಾ). ಒಂದು ಬಗೆಯ ಸಸ್ಯ; '' ವಾಯುವಿಳಂಗ'' (ಅಷ್ಟಾಂಗ). [ಸಂ.]

**ರೋಗನಿದಾನ** (ನಾ). ವ್ಯಾಧಿಯ ಲಕ್ಷಣಗಳಿಂದ ರೋಗವು ಇಂತಹುದೇ ಎಂದು ಕಂಡು ಹಿಡಿಯುವುದು : ವೀರರಾಜನು . . . ರೋಗನಿದಾನ ದಲ್ಲಿಯಾಗಲಿ ಚಿಕಿತ್ಸಾಕ್ರಮದಲ್ಲಿಯಾಗಲಿ ಇರುವ ಭಿನ್ನಾಭಿಪ್ರಾಯಗಳನ್ನು ಸೂಚಿಸಿದ್ದಾನೆ (ಸಕವೈ. IX, ಪ್ರಸ್ತಾವನ) ; ರೋಗಕ್ಕೆ ಸರಿಯಾದ ರೋಗ ನಿದಾನ ಹುಡುಕಬೇಕು (ಹೊಸಕ್ಷ. ೨೯೩). [ಸಂ.]

**ರೋಗರಾಜ** (ನಾ). ರೋಗಗಳಲ್ಲಿ ಬಹು ದೊಡ್ಡ ರೋಗ ; ಕ್ಷಯ; ರಾಜಯಕ್ಷ್ಮ. [ಸಂ.]

**ರೋಗರುಜಿನ** (ನಾ). ರೋಗ ಮತ್ತು ಖಾಯಿಲೆ ; ಖಾಯಿಲೆಕಸಾಲೆ : ಎಲ್ಲ ಜಗವ ನುಂಗಿ ದಕ್ಕಿಸಿಕೊಂಡವಗೆ ಸಲ್ಲದು ರೋಗರುಜಿನವು (ಲಕ್ಷ್ಮೀಶೋ. ೩೬); ಪ್ರಾಣಿಗಳ ರೋಗರುಜಿನಗಳನ್ನು ಗುಣಮಾಡಲು ಆಸ್ಪತ್ರೆಯನ್ನು ತೆರೆಯಲಾಗಿದ್ದಿತು (ಕತ್ನಾಬ್ರಾ. ೩೦೯). [ರೋಗ + ರುಜಿನ]

**ರೋಗಹಾರಿ** (ಗು). ೧. ರೋಗವನ್ನು ನಿವಾರಿಸುವ; ಕಾಯಿಲೆಯನ್ನು ವಾಸಿಮಾಡುವ. (ನಾ). ೨. ರೋಗವನ್ನು ನಿವಾರಿಸುವವನು; ವೈದ್ಯ; ಡಾಕ್ಟರು : ''ರೋಗಹಾರೀ . . . ವೈದ್ಯಃ, ಚಿಕಿತ್ಸಕಃ – ೫ ವೈದ್ಯನ ಹೆಸರುಗಳು'' (ಸಿದ್ಧಾಂಶ. ೦೯೪). [ಸಂ. ರೋಗಹಾರಿನ್]

**ರೋಗಾಣು** (ನಾ). ರೋಗಕ್ಕೆ ಕಾರಣವಾದ ಸೂಕ್ಷ್ಮಜೀವಿ : ಮಾನವನಿಗೆ ಬರಬಹುದಾದ ಕಾಯಿಲೆಗಳಲ್ಲಿ ಹೆಚ್ಚು ಕಾಯಿಲೆಗಳು ರೋಗಾಣುಗಳಿಂದ ಬರುತ್ತವೆ (ಕಂಠೀರ. VI, ಬಿನ್ನಹ); ಆಮಶಂಕೆ, ಕ್ಷಯ ಮೊದಲಾದ ರೋಗಗಳು ರೋಗಾಣುಗಳಿಂದ ಕೂಡಿದ ಆಹಾರ ಮತ್ತು ನೀರಿನ ಮೂಲಕ ಹರಡುವ ಸಂಭವವಿದೆ (ಆರೋಗ್ಯ. ೯೪). [ಸಂ.]

**ರೋಗಿ** (ನಾ). ಕಾಯಿಲೆಯಿಂದ ನರಳುತ್ತಿರುವವನು; ವ್ಯಾಧಿಗ್ರಸ್ತ : ಸಲೆ ನವೆವ ರೋಗಿ ಬೇಗಂ ತಲೆಯೆತ್ತಲ್ಕಾಡಿ ನವೆವನನ್ಯರ ಮತದೊಳ್ (ಸಮಕ. ೩-೬೪); ಮುಕ್ಕುಳಿಸಿಸಿದಂ ರೋಗಿಯಿಂ ಬೆಜ್ಜಂ (ಕರ್ನಾಟಕ. ಷು. ೩೯೦ ವ್ಯಾಖ್ಯಾ); ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ (ಗಾದೆ). [ಸಂ. ರೋಗಿನ್]

**ರೋಗಿತ** (ಗು). ೧. ರೋಗದಿಂದ ನರಳುತ್ತಿರುವ ; ಕಾಯಿಲೆಯ. ೨. (ನಾಯಿಯಂತೆ) ಹುಚ್ಚಾದ. [ಸಂ.]

**ರೋಗಿಷ್ಠ** (ನಾ). = ರೋಗಜೀವ : ರೋಗಿಷ್ಠನೂ ದಯಾಮಯಿಯೂ ಆದ ಅವರ ವಯಸ್ಸಿನ ಇನ್‌ಸ್ಪೆಕ್ಟರ್‌ನ ಸ್ಥಿತಿ ಅವೆಲ್ಲಕ್ಕಿಂತ ಭಯಾನಕ ವಾಗಿತ್ತು (ಕುಸರು. ೨೯೪).

**ರೋಗಿಷ್ಠವಾಗು** = ರೋಗಗ್ರಸ್ತವಾಗು : ಈ ತಾಪವು ಸಾಹಿತ್ಯಕ್ಕೆ ತಪಸ್ಸಿನಂತೆ ಫಲದಾಯಕವಾಗಿ ಪರಿಣಮಿಸಲು ಬಾರದಿದ್ದರೆ ಸಾಹಿತ್ಯವು ರೋಗಿಷ್ಠವಾಗುವುದು (ಕ್ರ ಬಿಂಧ. ೪೯). [ಸಂ.]

**ರೋಗುಟ್ಟು** (ಕ್ರಿ). 'ರೋ' ಎಂದು ಧ್ವನಿಮಾಡು: ನಿನ್ನನ್ನು ಎಷ್ಟೆಷ್ಟು ಸೇವಿಸಬೇಕೆಂದು ಆಶೆ ಇಟ್ಟುಕೊಂಡಿದ್ದೆ . . . ಎಂದು ರೋಗುಟ್ಟಿ ಅಳಹತ್ತಿದನು (ಇದುಂತ. ೨೬೦) [ರೋ ? + ಉಟ್ಟು$_{1}$]

**ರೋಚಕ** (ಗು). ೧. ತೇಜಸ್ಸುಳ್ಳ ; ಪ್ರಕಾಶಮಾನವಾದ. ೨. ಹಸಿವನ್ನುಂಟುಮಾಡುವ. ೩. ಹಿತಕರವಾದ ; ಸುಖಕರವಾದ: ರೋಚಕ ಅರೋಚಕವೆಂಬನ್ನಕ್ಕ ಪ್ರಸಾದಿಸ್ಥಲವಿಲ್ಲ (ಪೋಲೀಳವ. ೦೩೬-೩೨೩). ೪. ಜೀರ್ಣಕಾರಿಯಾದ ; ಪಚನಕಾರಿಯಾದ. ೫. ಪ್ರಿಯಕರವಾದ : ಖೇಚರರ ವರ್ತನಾಚಾರದೊಳ್ವರ್ತಿಸುವ ಶೌಚವಿಧ[ದ]ರೆನಿಪ ರೋಚಕ ಸಾಧುಜನರುಂಟು (ಬಕೋಳಕ್ಕು. ೩-೩೦). (ನಾ). ೬. ಹಸಿವು ; ಉಳ್ಳಿರ್ದನು . . . ನಿಖಿಳೇಂದ್ರಿಯದ ರೋಚಕ ಬಿಗಿಯಿ ಬೇಸಜಿನ ಬಿಸುಗುದಿಯ ಸುಯ್ಲಿನಲಿ (ಕುವ್ಯಾಖ. ೨೨-೦೩). [ಸಂ.]

**ರೋಚಕದ್ರವ್ಯ** (ನಾ). ರುಚಿಕರವಾದ ಪದಾರ್ಥ ; ಸವಿಯಾದ ವಸ್ತು : ಅಜ್ಜಿಯ ಸ್ವಹಸ್ತರಚಿತವಾದ ಉಪ್ಪಿನಕಾಯಿ, ಅಮ್ರ ಸತ್ವ ಮೊದಲಾದ ರೋಚಕದ್ರವ್ಯಗಳನ್ನೆಲ್ಲ ಶೈಲೇಂದ್ರನು . . . ಕದ್ದು ತಿಂದು ತೀರಿಸಿಯೇ ಬಿಟ್ಟಿದ್ದಾನೆ (ಇಶ್ವಕ. ೨೯೩). [ಸಂ.]

**ರೋಚಕಿ** (ನಾ). ಆಸಕ್ತಿಯುಳ್ಳವನು ; ಇಷ್ಟವಿರುವವನು : ಅರೋಚಕಿಯ ಬಾಳಿನಲ್ಲಿ ? ರೋಚಕಿಯಿರಲಾವ ಪುಣ್ಯ ? (ತಂತರ. ೩೯-೦೭). [ಸಂ. ರೋಚಕಿನ್]

**ರೋಚನ** (ಗು). ೧. ಹೊಳೆಯುವ ; ಪ್ರಕಾಶಿಸುವ. ೨. ಸುಂದರವಾದ; ಚೆಲುವಾದ. ೩. ಹಸಿವನ್ನುಂಟುಮಾಡುವ ; ಜೀರ್ಣಕಾರಿಯಾದ. (ನಾ). ೪. ಜೀರ್ಣಕಾರಿಯಾದ ವಸ್ತು,- ಪದಾರ್ಥ. ೫. ಒಂದು ಬಗೆಯ ಮರ ; ಕೆಂಪು ಬೂರುಗ ; ಶಾಲ್ಮಲಿ : " ರೋಚನಃ, ಕೂಟ ಶಾಲ್ಮಲೀ – ೨ ಕೆಚ್ಚನೆ ಎಲವದ ಪೆಸರು, ಬೆಟ್ಟಬೂರುಗ, ಕೆಂಪುಬೂರುಗ " (ಸಿದ್ಧಾಂಶ. ೧೨೩). ೬. ಹಳದಿ ಬಣ್ಣದ ಒಂದು ಬಗೆಯ ಸುಗಂಧ ದ್ರವ್ಯ ; ಗೋರೋಚನ : ಅತಿಂಪಿಳಿರೋಚನಾಂಚಿತತಿಳಕಮದು ನೊಸಲ ಕಣ್ಣೊಳೆಸದಿರೆ (ಕಾದಂಷು. ೪೦); ಸರೋರುಹತಂತು ರೋಚನಂ . . . ಪೂರ್ಣಕುಂಭವೆಸೆದತ್ತು ವಿವಾಹಗೃಹಾಂತರಾಳದೊಳ್ (ರಾಜಶೇ. ೬-೦೦). [ಸಂ.]

**ರೋಚನಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರಿಂದ ತಯಾರಿಸಿದ ಔಷಧ : "ಕಾಂಪಿಲ್ಯಃ . . . ರೋಚನೀ – ಈ ಕಂಪಿಲ್ಲದ ಹೆಸರು, ರೋಚನೀಯೆಂಬುವ ಓಷಧಿ" (ನಿಘಂ. ೦೯೬). [ಸಂ. ರೋಚನೀ]

**ರೋಚಮಾನ** (ನಾ). ಕುದುರೆಯ ಕತ್ತಿನಲ್ಲಿರುವ ಸುಳಿ : "ಉರದಿಂದ ಮೇಲಿಪ್ಪ ಸುಟಿ ರೋ[ಪಾಠಾಂ. ಲೋ]ಚಮಾನ ನಡುಗೊರಲ ಸುಟಿ ದೇವಮಣಿ" (ಪಂಗರಾ. ೯೩-೨೦); ಕೊರಲೊಳ್ ಕಣ್ಗೆಸೆದೊಪ್ಪೆ ದೇವಮಣಿ ಮೇಣ್ ರೋಚಮಾನಂ ಪೊದಟ್ಟಿರೆ ಪೂರ್ವಾಂಗದ ದೋಷಮಂ . . . ಪಿಂಗುಗುಂ (ಅಶ್ವಶಾ. ೦೦-೯೯). [ಸಂ.]

**ರೋಚಿ** (ನಾ). ೧. ಬೆಳಕು ; ಕಾಂತಿ. ೨. ಕಿರಣ ; ರಶ್ಮಿ : "ರೋಚಿಃ . . . ವಿರೋಕಃ, ಗೌಃ – ಈ ೩೨ ರಶ್ಮಿಗಳ ಪೆಸರ್" (ಶಬ್ದಸು. ೬-೩೬); ಚಂಚಲ್ಲಸಚ್ಚಂದ್ರರೋಚಿರ್ಘವಳು ಮಾಡಿತ್ತು ತನ್ಮಂದರವುಹಿಧರವು ಕ್ಷೀರಧಾರಾಪ್ರವಾಹಂ (ಅಜಪು. ೯-೩೪); ಕಾಲಾನಲಾಕ್ಷಿ ಸ್ಫುರದ್ರೋಚಿರ್ಜಾಲಂ ಪೊಣ್ಮೆ (ರಾಜಶೇ. ೩-೯೯). [ಸಂ. ರೋಚಿಸ್]

**ರೋಚಿಮಂಡಲ** (ನಾ). ಕಾಂತಿಯ ಆವರಣ ; ತೇಜೋವಲಯ : ಮೂಡಣದ್ರಿಯ ಕೋಡುಗಲ್ಲಿನೆಡೆ ರುಚಿರರವಿರೋಚಿಮಂಡಲವಿಣಿಕಿ ಬರೆ (ತತ್ತ್ವಾಂಗ. ೩೦-೦೩೩೭). [ಸಂ.]

**ರೋಚಿಷ್ಣು** (ಗು). ೧. ಕಾಂತಿಯುತವಾದ ; ಪ್ರಕಾಶಮಾನವಾದ. ೨. ಅಲಂಕಾರಗೊಂಡ ; ಶೋಭಾಯಮಾನವಾದ : ಜಿಷ್ಣುವಂ ಸಾರೆ ಭಗದೇಹನಾದನುರೆ ರೋಚಿಷ್ಣು ಭೂಪಾಲರಂ ಸಾರಲವರಳಿದಿರ್ದರೆಂದಾ ಮಹಾಲಕ್ಷ್ಮಿಯುಂ (ಜರುತ್ಕಾ. ೦೭-೭). (ನಾ). ೩. ಕಾಂತಿ : ಪ್ರಕಾಶ. ಕಾಂಚನರೋಚಿಷ್ಣುಗಳೆ ವಿಂಕ್ಕ ಕುಲಧರರೆಲ್ಲಂ (ಶಂರಾಪೂ. ೦-೬೭). ೪. ಅಲಂಕರಿಸಿಕೊಂಡಿರುವವನು : "ವಿಭ್ರಾಟ್, ಭ್ರಾಜಿಷ್ಣುಃ, ರೋಚಿಷ್ಣು ೩ ಭೂಷಣಾದಿಗಳಿಂದ ಪ್ರಕಾಶಿಸುತ್ತಿರುವವನ ಹೆಸರುಗಳು" (ನಿಘಂಟು. ೧೯೮). [ಸಂ.]

**ರೋಚಿಸು** (ಕ್ರಿ). ೧. ಬೆಳಗು ; ಶೋಭಿಸು ; ರೋಚಿಸೆ ನಾನಾರಸ ಭಾವೋಚಿತ ಕರಣಾಂಗಹಾರಪಥದಲ್ಲಿ ಕೆಲರ್ ಸೂಚಿಸೆ ನಾಟ್ಯಮನಾಡಿದರ್ (ಪುಷ್ಪದ. ೦೨-೪೩). ೨. ಇಷ್ಟಪಡು ; ಆಶಿಸು : ಯೋಚಿಸಿ ನೀನದುಕಾರಣ ವನುದಿನ ರೋಚಿಸದಿರು ಮರಣಕ್ಕೆ (ಜೋಗಾಂಬ. ೩-೨೭); ನಿಮ್ಮಡಿಯ ಮೇಲೆ ರೋಚಿಸಿತು ಮನ (ಶಿಲಾಗ. ೯-೨೩-೮). [ರೋಚನ + – ಇಸು₃]

**ರೋಜ₁** 'ರೋಜಾ₁' ನೋ.

**ರೋಜ₂**, ರೋಜಾ₂ (ನಾ). ೧. (ಸಾಮಾನ್ಯವಾಗಿ ತಿಳಿಗೆಂಪುಬಣ್ಣದ) ಸುವಾಸನೆಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು: ಗುಲಾಬಿ : ಮೇಜಿನ ಮೇಲೊಂದು ರೋಜದ ಹೂವು. ಹಿಂದೆಂದು ಕಾಣದ ಸೊಗಸಿನ ಹೂವು (ಷಡಂಕಲ್. ೦೨-೦). **ರೋಜಾ₂** : ೨. ಗುಲಾಬಿ ಹೂವಿನಂತಹ ತಿಳಿಗೆಂಪುಬಣ್ಣ : ಚಿರಂಜೀವಿ . . . ರೋಜಾ ಬಣ್ಣದ ರೇಷ್ಮೆಯ ವಲ್ಲಿಯನ್ನು ಹೊದದಿರುವನು (ವಠರಾ. I, ೩೩೬).

[← ಇಂ. Rose]

**ರೋಜನಾಮಾ** 'ರೋಜುನಾಮ' ನೋ.

**ರೋಜಮಾರಿ** (ನಾ). ಸುವಾಸನೆಯ ಎಲೆಗಳುಳ್ಳ ಒಂದು ಬಗೆಯ ಸಸ್ಯ : (ವೃ.ಶಿ. ೨-೨೮).

[← ಇಂ. Rosemary / ಮರಾ. ರೋಜ್‌ಮಾರೀ]

**ರೋಜಮೇಳ** (ನಾ). ಆಯಾದಿನದ ಆಯವ್ಯಯ ; ದಿನದ ಲೆಕ್ಕ : ಪಕ್ಕಾ ರೋಜಮೇಳ ಬರಿಯುವದು (ಮುಂಬಯಿ. ೨೭೯).

[← ಮರಾ. ರೋಜ್‌ಮೇಳ]

**ರೋಜಾ₁**, ರೋಜ₁ (ನಾ). ೧. ಮುಸಲ್ಮಾನರು ರಂಜಾನ್ ತಿಂಗಳಲ್ಲಿ ಕೈಗೊಳ್ಳುವ ಉಪವಾಸವ್ರತ. ೨. (?) : ಮಶೀದಿಯು ರೋಜಾ ಎಂಬುದರ ಪಶ್ಚಿಮಕ್ಕಿರುತ್ತದೆ (ಮುಂಬಯಿ. ೬-೦೦೯). **ರೋಜ₁** : (೩).

[← ಪಾರ. ರೋಜಾ, ರೋಜದ್ ; ಹಿಂ. ಮರಾ. ರೋಜಾ]

**ರೋಜಾ₂** 'ರೋಜ₂' ನೋ.

**ರೋಜಾಂಬರಿ** (ನಾ). ರೋಜಾಹೂವಿನ ಬಣ್ಣದ ಸ್ಫಟಿಕದ ಹೂವು : ಜಾಜಿಮಲ್ಲಿಗೆ ಪುಷ್ಪ ಸೂಜಿಮಲ್ಲಿಗೆ ದವನ ರೋಜಾಂಬರಿ ನಿತ್ಯಮಲ್ಲಿಗೆ (ಸಿದ್ಧಪು. ೦೬-೯೯). 'ನೀಲಾಂಬರ' ಪರಾ. [< ರೋಜ₂]

**ರೋಜಾಹೂವು** (ನಾ). ಸಾಮಾನ್ಯವಾಗಿ ತಿಳಿಗೆಂಪುಬಣ್ಣವನ್ನು ಹೊಂದಿರುವ, ಸುವಾಸನಾಯುಕ್ತವಾದ ಒಂದು ಬಗೆಯ ಹೂವು ; ಗುಲಾಬಿಯ ಹೂವು : ಫೋಟೋ ಮೇಲೆ ಇಟ್ಟಿದ್ದ ರೋಜಾಹೂವು ಎರಡು ದಿನವಾದರೂ ಬಾಡಿಲ್ಲ (ರೂಢಿ).

[ರೋಜಾ₂ ( < ರೋಜ₂) + ಹೂವು ( < ಪೂ₂) ]

**ರೋಜಿ** (ನಾ). ೧. ದಿನಭತ್ಯ : ಪಡಿ : (೩). ೨. ಕೆಲಸ; ಕಸುಬು ; ವೃತ್ತಿ : (೩). [← ಪಾರ. ಹಿಂ. ಮರಾ. ರೋಜೀ]

**ರೋಜಿನ** (ಅ). ಪ್ರತಿದಿನ ; ದಿನವೂ : ಯಜಮಾನರು ರೋಜಿನ ಇಷ್ಟೊತ್ತಿಗೇ ಬತ್ತಿದ್ರು (ಅವಕಂ. ೯೩).

[← ಪಾರ. ರೋಜಾನಹ್ ; ಹಿಂ. ರೋಜಾನಾ]

**ರೋಜು** (ನಾ). ೧. ದಿನ ; ನಿತ್ಯ : (೩). ೨. ಕೆಲಸ ; ಉದ್ಯೋಗ : (೩). ೩. ಕೂಲಿ ; ಸಂಬಳ : (ಕಾನಕೋ. ೪೦).

[← ಪಾರ. ಹಿಂ. ಮರಾ. ರೋಜ್]

**ರೋಜುಗಾರ** (ನಾ). ವೃತ್ತಿಯಲ್ಲಿರುವವನು ; ಕೆಲಸಗಾರ : (೩).

[← ಪಾರ. ಹಿಂ. ಮರಾ. ರೋಜ್‌ಗಾರೀ]

**ರೋಜುಗಾರಿ** (ನಾ). ೧. ಕೂಲಿ ; ಮಜೂರಿ : (೩). ೨. ದಂಧೆ ; ಕೆಲಸ ; ಉದ್ಯೋಗ : (೩). [← ಪಾರ. ಹಿಂ. ಮರಾ. ರೋಜ್‌ಗಾರ್]

**ರೋಜುಗಾರಿಕೆ** (ನಾ). ಕೆಲಸ ; ದಂಧೆ : (೩). [ರೋಜುಗಾರ + – ಇಕೆ]

**ರೋಜುನಾಮ**, ರೋಜನಾಮಾ, ರೋಜುನಾಮೆ (ನಾ). ೧. ಪ್ರತಿದಿನದ ಕಾರ್ಯಕಲಾಪವನ್ನು ಬರೆದಿಡುವ ಪುಸ್ತಕ; ದಿನಚರಿ : (೩). ೨. ಆಯಾದಿನದ ಖರ್ಚನ್ನು ಬರೆದಿಡುವ ಪುಸ್ತಕ ; ಕಿರ್ದಿ : (೩). **ರೋಜನಾಮಾ** : ೧. ಬ್ರಹ್ಮಲಿಪಿ ರಾಯರ ಅದು. ಅದೇನು ರೋಜನಾಮಾ ಲಿಖೀನ ? (ವಡುಮು. ೩೩). **ರೋಜುನಾಮೆ** : (ಅಪಂಪಾ). [← ಪಾರ. ರೋಜ್‌ನಾಮಹ್ ; ಹಿಂ. ರೋಜ್‌ನಾಮಚಾ]

**ರೋಜುನಾಮೆ** 'ರೋಜುನಾಮ' ನೋ.

**ರೋಟರಿ** (ನಾ). ೧. ಸುರುಳಿಕಾಗದದಿಂದ ಮುದ್ರಿಸಬಹುದಾದ ಒಂದು ಬಗೆಯ ಮುದ್ರಣಯಂತ್ರ : 'ರೋಟರಿಯಂತ್ರ' ಪರಾ. ೨. "ಮಾನವ ಸೇವೆಯ ಉದ್ದೇಶದಿಂದ ಅಂತರರಾಷ್ಟ್ರೀಯ ಆಧಾರದ ಮೇಲೆ ಸ್ಥಾಪಿಸಿದ, ಹಲವು ಶಾಖೆಗಳುಳ್ಳ, ಒಂದು ವಿಶ್ವವ್ಯಾಪಕ ಸಂಘ" (Rotary. ಇಂಕಾ). 'ರೋಟರಿಕ್ಲಬ್ಬು' ಪರಾ.

[← ಇಂ. Rotary ]

**ರೋಟರಿಕ್ಲಬ್ಬು** (ನಾ). = ರೋಟರಿ ೨ : ರೋಟರಿಕ್ಲಬ್ಬಿನಲ್ಲಿ ಇಂದು ಅವರ ಭಾಷಣವಿತ್ತು (ರೂಢಿ). [ರೋಟರಿ + ಕ್ಲಬ್ಬು]

**ರೋಟರಿಮುದ್ರಣ** (ನಾ). ರೋಟರಿಯಂತ್ರದಲ್ಲಿ ಮಾಡುವ ಮುದ್ರಣ : ಬಾಗಿದ ಸ್ಟೀರಿಯೋ ತಯಾರಿಕೆಯೂ ಸ್ವಲ್ಪಕಾಲದಲ್ಲೇ ಬಳಕೆಗೆ ಬಂದುದರಿಂದ ರೋಟರಿಮುದ್ರಣವು ಸಾಧ್ಯವಾಯಿತು (ಮುದ್ರಕ. ೯೯).

[ರೋಟರಿ + ಮುದ್ರಣ]

**ರೋಟರಿಯಂತ್ರ** (ನಾ). = ರೋಟರಿ ೧ : ಬಿಡಿಹಾಳೆಗಳನ್ನು ಉಡಿಸಿ ಮುದ್ರಿಸುವ ರೋಟರಿಯಂತ್ರಗಳೂ ಇವೆ (ಮುದ್ರಕ. ೯೯).

[ ರೋಟರಿ + ಯಂತ್ರ ]

**ರೋಟಿ** (ನಾ). ೧. ಸೆಳೆಯುವುದು; ಎಳೆಯುವುದು : "ರೋಟಿಃ-ಸೆಳೆ" (ಕಾಶಕ್ಕ. ೦೩೦). ೨. ಗಿಡ, ಮರಗಳಿಂದ ಎಲೆ, ಕಾಯಿ, ಸೊಪ್ಪು ಮುಂತಾದುವುಗಳನ್ನು ಕೀಳಲು ಬಳಸುವ, ತುದಿಯಲ್ಲಿ ಕೊಕ್ಕೆ ಇರುವ ಕೋಲು ; ದೋಟಿ : ಆಡಿಗೆ ಸೊಪ್ಪು ಸೆಳೆಯಲು ರೋಟಿ ಬೇಕು (ರೂಢಿ). 'ರೋಟಿಗಳೆ' ಪರಾ. [ ? ]

**ರೋಟಿಗಳೆ** (ನಾ). = ರೋಟಿ ೨ : ಫಳಹರದ ಸೂತ್ರಿಕೆಗಳೊತ್ತುಗೆ ತಲೆಜವಳ ರೋಟಿಗಳೆ ವೇಟಿನ ಸೆಳೆವಲಗೆಯುಗ್ಗರಣೆ ತಿರುಜೆಯ ಮುರುಜಿ ಹೊರಜಗಳ (ಅಂಜನಾ. ೨೯-೬). [ ರೋಟಿ + ಗಳೆ (< ಗಟಿ³) ]

**ರೋಟ್ಟು₁** 'ರೊಟ್ಟಿ' ನೋ.

**ರೋಟ್ಟು₂** 'ರೋಡು' ನೋ.

**ರೋಡಾಡಿಸು** 'ಜಿ³ೋಡಾಡಿಸು' ನೋ.

**ರೋಡಾಡು** 'ಜಿ³ೋಡಾಡು' ನೋ.

**ರೋಡಿಗ** 'ಜಿ³ೋಡಗ' ನೋ.

**ರೋಡಿಸು** 'ಜಿ³ೋಡಿಸು' ನೋ.

**ರೋಡು**, ರೋಟ್ಟು₂ (ನಾ). ರಸ್ತೆ : ದಾರಿ: ಮಾರ್ಗ : ಅವರು ಮಾಗಡಿರೋಡಿನಲ್ಲಿ ಮನೆ ಮಾಡಿದ್ದಾರೆ (ರೂಢಿ). **ರೋಟ್ಟು₂** : ನಡುವೆ ಅಗಲವಾದ ಗಾಡಿರೋಟು ಹೋಗುತ್ತಿದ್ದುದರಿಂದ (ಪಟ್ಟಿಕಾ. ೧೩೬).
[ ← ಇಂ. Road ]

**ರೋಡೆಗ** 'ಜಿ³ೋಡಗ' ನೋ.

**ರೋಣ** (ನಾ). ಒಂದು ಊರಿನ ಹೆಸರು ; ಈಗಿನ ಧಾರವಾಡ ಜಿಲ್ಲೆಯ ರೋಣ : ರೋಣದ ಮಹಾಜನಕೆ . . . ಕೊಟ್ಟು (ಎಇ. XIII, ೦೬೩-೭; 874) ; ರೋಣ[ದ] ಹನ್ನಿರ್ವ್ವರು ಗದ್ಯಾಣಂ (ಇಆ. XII, ೨೫೭-೦೩ ; 971). [ ? ]

**ರೋಣುಗಲ್ಲು** (ನಾ). ತೆನೆಯಿಂದ ಕಾಳುಗಳನ್ನು ಬೇರ್ಪಡಿಸಲೂ ಗಾರೆ ಮೊದಲಾದುವನ್ನು ಪುಡಿಮಾಡಲೂ ಬಳಸುವ ದುಂಡನೆಯ ಕಲ್ಲನ್ನು ಅಳವಡಿಸಿದ ತಿರುಗುಯಂತ್ರ : ಒಂದು ಪಾಲು ಸುಣ್ಣಕ್ಕೆ ಮೂರು ಪಾಲು ಮರಳನ್ನು ಬೆರಸಿ ಸುಣ್ಣದ ಕಾಲುವೆಗಳಲ್ಲಿ ರೋಣುಗಲ್ಲಿಗೆ ಎತ್ತುಗಳನ್ನು ಕಟ್ಟಿ ಹಿಂದೆ ಅರೆಯುತ್ತಿದ್ದರು (ಶಿಲ್ಪಶಾ. ೨೯೦): ರೋಣುಗಲ್ಲು ಹತ್ತುತ್ತಾನೆ. ಕಣಮಾಡುವಾಗ, ಎತ್ತುಗಳನ್ನು ತಾನೆ ಹೆಣೆಗೆ ಕಟ್ಟಿ . . . ಹಿಗ್ಗುತ್ತಾನೆ (ಜಕುಮ. ೦೩೭). [ ರೋಣು₀ + ಕಲ್ಲು (< ಕಲ್³₃) ]

**ರೋಣುಹೊಡೆ** (ಕ್ರಿ). ರೋಣುಗಲ್ಲನ್ನು ತಿರುಗಿಸು : ಅವನು . . . ಕದರಿದ ಹುಲ್ಲಿನ ಮೇಲೆ ರೋಣುಹೊಡೆಯುವನು (ಜಕುಮ. ೦೯೦).
[ ರೋಣು₀ + ಹೊಡೆ₁ ( < ಪೊಡೆ₁ ) ]

**ರೋಣೂರ್** (ನಾ). ಒಂದು ಊರಿನ ಹೆಸರು : ವೆಜ್ಜಪೆ × × ಅರಸರ್ ರೋಣೂರಾಳೆ × × ಸಗರ ವಿಕ್ಕಾಣೆ (ಎಕ. X, ಶ್ರೀನಿವಾ. ೬೩-೩; ಕು. 765). [ ರೋಣು₀ + ಊರ್ ]

**ರೋತಿ** 'ರೋತೆ' ನೋ.

**ರೋತೆ**, ರೋತಿ (ನಾ). ೧. ಕೊಳಕು ; ಹೊಲಸು ; ಹೇಸಿಗೆ : ಪಕ್ಕದಲ್ಲಿ ಮಲಗಿದ್ದ ಗಂಡನ ರೋತೆಯನ್ನು ನೆನೆದು ಚಿಂತಿಸುತ್ತಾ ಮಲಗಿದ್ದಳು (ಮಾಲವು. ೨೬೩). ೨. ಅಸಹ್ಯ; ಜುಗುಪ್ಸೆ : ಇದೊ! ಶರಣಾದೆನು ! ನಾ ಸೋತೆ! ನುಂಗೆನ್ನನು ! ತಪ್ಪಲ್ಲಿ ರೋತೆ ! (ಪಾಂಚಜ. ೫೬-೨೦). ೩. ಅಸಹ್ಯಕರನಾದವನು : ಗೌತಮನ ಸತಿಯರಿಗೆ ಗಜವಾಹನನು ಮೆಚ್ಚಿ ರೋತೆಯಾಗನೆ ಮುನ್ನ ಋಷಿಯ ಶಾಪದಲಿ (ಸಾರಂಗ. ೨೬). **ರೋತಿ** : ೧. ಉಸುರು ಕೊರಳಲ್ಲಿ ಸಿಕ್ಕಿ ತಿರುಗದೆ ಉಬ್ಬಸ ಬರುವರುವಾಗಿ ಕರ್ನ ಕಂಗಳ ರೋತಿಯು ಸೋರೆ (ವಿಶಾಸು. ೫೦-೩).
[ ದೇ. ॥ ತಮಿ. ರೋಸ್ತ್ಯ: ತೆಲು. ರೋತ ]

**ರೋದನ** (ನಾ). ೧. ಅಳುವಿಕೆ; ಪ್ರಲಾಪ : "ಅಟ್ಟಿಯೆನೆ ರೋದನಂ" (ಸಂಜೀವ. ೭); ರೋದನದಿಂ ಸುತನ ಶಿರಶ್ಛೇದನದಬಲಾಜಿದಾಬುಗುಂ ರಿಪುರುಧಿರಾಸ್ವಾದನದಿಂ (ಕಂಠಾಪಹಾ. ೯-೩೩); ಆ ರೋದನಕ್ಕುರೆ ಬೆರ್ಚಿ . . . ಶಾನಾಯೆಡೆಗೆ ಬರೆ (ಶ್ರೀರಾಮಪಾ. ೧೯-೫೦೦). ೨. ಕಣ್ಣೀರು ; ಕಂಬನಿ : "ಅಶ್ರು, ಬಾ(ಷ್ಪಂ)ಜ್ಪಂ, ರೋದನಂ, ನಯನಜಳಂ, ಅಸ್ರಂ–ಈ ೫ ಕಣ್ಣನೀರ್" (ಹಲಾಯು. ೦೭-೩೭೩). [ಸಂ.]

**ರೋದನಿ** (ನಾ). ಒಂದು ಬಗೆಯ ವನಸ್ಪತಿ ; ಬಳ್ಳಿದುರುಚಿ : "ಯಾಸಃ . . . ರೋದನೀ, ಕಚ್ಛುರಾ . . . ದುರಾಲಭಾ–೧೦ ಶೀಟಕಸಂಧಿ ಹೆಸರುಗಳು" (ನಿಘಂಟು. ೦೩೩). [ಸಂ. ರೋದನೀ]

**ರೋದನಿಸು** (ಕ್ರಿ). ಅಳು ; ಪ್ರಲಾಪಿಸು : ರಮಣನಗಲಿದನೆಂದು ರೋದನಿಸಿ ಮುಖಿ ಬಳಲಿ ಕಮಲ ನೆಟಿ³ ನೊಂದು ಜೀವಿಸಲಾಜದಂತಿಹುವು (ಕಅಪ. II, ೩೦೦ ಶಿವಾಂಕ್ಕ ಪುರಾಣ). [ರೋದನ + –ಇಸು₃]

**ರೋದನೆ** (ನಾ). ರೋದನ ೧ : 'ರೋದನೆಗೆಯ್' ಪರಾ.
[ಸಂ. ರೋದನ]

**ರೋದನೆಗೆಯ್** (ಕ್ರಿ). ರೋದನಿಸು : ರೋದನೆಗೆಯ್ಯಲೇತಕೆ ಕೇಳು ಕೇಳು ತಳೋದರಿ (ವೀಕಃಪ. ೦೦-೫೩). [ರೋದನೆ + ಕೆಯ್₁]

**ರೋದಸಿ** (ನಾ). ಆಕಾಶ ಮತ್ತು ಭೂಮಿ : "ದ್ಯಾವಾಭೂಮೀ, ರೋದಸ್ಯೌ, ರೋದಸೀ, ರೋಷಸೀ – ಈ ೪ ನೆಲನುಂ ಆಕಾಶದ ಪೆಸರ್" (ಹಲಾಯು. ೨೦-೦೨೦): ಪೂರಿಪ ಶಂಖಂಗಳ ಘನಘೋಷದ ಪೆರ್ಚುಗೆ ಬಳೆದುಟಿ³ ತೀವಿತ್ತು ರೋಧ[ದ]ಸೀಮಂಡಲಮಂ (ಶ್ರೀಕೃಷ್ಣ. ೦೯-೬೦).
[ಸಂ. ರೋದಸೀ]

**ರೋದಸ್ಸ್ಥಳ** (ನಾ). ಸ್ವರ್ಗ : ಚರಾಚರಧಾತ್ರಿಯುನೆಯ್ದಿ ಸುತ್ತಿ ರೋದಸ್ಥಳಮಂ ಪೆಳಂಜಲೆವ ಭಂಗುರತುಂಗತರಂಗಸಂಗತ (ಶಾಸಸ. ೫೨-೮; 1138). [<ಸಂ. ರೋದಸ್ಥಲ]

**ರೋದಿಸು** (ಕ್ರಿ). = ರೋದನಿಸು : ಸಿತಕಂಜದಳನೇತ್ರೆಯು ಪೊಡೆಯೊಳಗಿರ್ದ ಸುತ ಪೊಜಿಮಟ್ಟ ರೋದಿಸುತ (ವೀಶಚ. ೦೭-೦೭) ; ಮಗನ ಮರಣವಾರ್ತೆಯನ್ನು ಅರಿತ ರಾಣಿ ರೋದಿಸಿದಳು (ಹಾಹುಕ. ೫೦).
[ರೋದನ + –ಇಸು₃]

**ರೋದೋಂಗಣ** (ನಾ). ಆಕಾಶಪ್ರದೇಶ ; ಗಗನಸ್ಥಳ : ಪಾಡುವ ಕೀರಮಾಲೆ ರೋದೋಂಗಣಮೆಂಬ ಪಟ್ಟಣದೊಳೊಪ್ಪುವ ಬೆಳ್ಳುಗಿಲೆಂಬ ಬಳ್ಳಿಮಾಡಂಗಳ ಪೊನ್ನ ಮಾಣಿಕದ ಪಚ್ಚೆಯ ತೋರಣದಂತೆ ರಂಜಿಕುಂ (ಜಗಮ. ೯-೬೭). [<ಸಂ. ರೋದೋಂಗನ]

**ರೋದೋವಾತ** (ನಾ). ಆಕಾಶದಲ್ಲಿ ಬೀಸುತ್ತಿರುವ ಗಾಳಿ : ರೋದೋವಾತಮಂ ಕೇತುತತಿ ಘೆಗೆಯೆ (ಚಂದ್ರಪು. ೦೦-೫೦). [ಸಂ.]

**ರೋದೋವಿವರ**(ನಾ). ಭೂಮಿ ಮತ್ತು ಆಕಾಶಗಳ ಮಧ್ಯದ ಪ್ರದೇಶ; ಗಗನಾಂತರ ; ಕ್ಷಿತಿಜ : ಪ್ರಚಂಡಪ್ರಳಯಘನಘಟಾರಾವದಿಂದಾರ್ದು ಬಾಣಾವಲಿಯಿಂದಂ ಪೂಟಿ³ ರೋದೋವಿವರಮನೊದವಿತ್ತೊಂದು ಘೋರಾಂಧಕಾರಂ (ಶಂಕರಾ. ೦೦–೦೪೬). [ಸಂ.]

**ರೋಧ** (ನಾ). ೧. ತಡೆಯುವುದು ; ನಿಲ್ಲಿಸುವುದು : ಒಂದು ತಂತಿಯ ಮೂಲಕ ವಿದ್ಯುತ್ಪ್ರವಾಹವು ಹರಿಯುವುದನ್ನು ತಡೆಗಟ್ಟುವ ಗುಣವು ಆ ತಂತಿಗೆ ಇರುತ್ತದೆ. ಈ ಗುಣಕ್ಕೆ ರೋಧವೆಂದು (Resistance) ಹೆಸರು (ಭೌತಶಾ. ೨೯೬). ೨. ಹಿಡಿದುಕೊಳ್ಳುವುದು ; ಬಂಧಿಸುವುದು. ೩. ತಡೆ ; ಅಡ್ಡಿ. ೪. ನದಿಯ ತೀರ, –ದಡ : "ತೀರಂ ರೋಧಂ ತಟಂ ಪ್ರಪಾತಂ ಕೂಲಂ" (ವಸ್ತುಕೋ. ೨೯-೦೩); ರೋಧಮನ್ಯೆದೆ ನೀಳ್ದಿರದುಮಂ ಪುದಿದೊಪ್ಪುವ ನಂದನಾಳಿಯಗ್ರಾಧರಪಕ್ಷ್ಮಪಾಳಿ (ಚಂದ್ರಪು. ೦-೬೨).
[ಸಂ.]

**ರೋಧಕ** (ಗು). ೧. ತಡೆಯುವ ; ಅಡ್ಡಿಪಡಿಸುವ. (ನಾ). ೨. ತಡೆಯುವಂಥದು ; ಅಡ್ಡಿಪಡಿಸುವಂಥದು : ಕಾಜು — ರೇಶಿಮೆಗಳು ವಿದ್ಯುಲ್ಲತೆಯ ರೋಧಕಗಳುಂಟು (ಮುಂಬಯಿ. ೫-೨೦೩). [ಸಂ.]

**ರೋಧನ** (ನಾ). ೧. ತಡೆಯುವುದು ; ಅಡ್ಡಿಪಡಿಸುವುದು. ೨. [ಜ್ಯೋತಿ] ಬುಧಗ್ರಹ. [ಸಂ.]

**ರೋಧಸಿ** (ನಾ). ದಡಗಳನ್ನು ಹೊಂದಿರುವುದು ; ಹೊಳೆ ; ನದಿ : "ನದಿ ತರಂಗಿಣಿ . . . ರೋಧಸಿ ಸರಿತ್ತು . . . ತೊಱೆಗೆ ನಾಮಂ" (ಮಂಗರಾ. ೦೨೨-೦೦). [ಸಂ. ರೋಧಸೀ]

**ರೋಧಸ್ವಿನಿ** (ನಾ). ನದಿ ; ಹೊಳೆ : ದುರಿತವ್ರಾತಲತಾಕೃಪಾಣಿ ವಿಸರದ್ದುರ್ಬೋಧರೋಧಸ್ವಿನೀತರಣದ್ರೋಣಿ . . . ವಾಣಿ (ಕಂಪ್ರ.ಕ. ೦-೦೨). [ಸಂ. ರೋಧಸ್ವಿನೀ]

**ರೋಧಿ** (ನಾ). ತಡೆಯುವವನು ; ಪ್ರತಿಬಂಧಿಸುವವನು. [ಸಂ. ರೋಧಿನ್]

**ರೋಧಿನಿ** (ನಾ). ತಡೆಯುವವಳು ; ಪ್ರತಿಬಂಧಿಸುವವಳು : ಅಂಗಹೀನನ ಪಂಗುಳಾಂಧಕನ ಘನರುಜಾಂಗನ ಬಡುದಲೆಯ ರೋಧಿನಿಯನುಪ್ಪವಡಿಸುವ ಸಮಯದೊಳಿನಿಬರನು ಕಾಣ್ಬುದು ಮಹೀಶರಿಗಂಗವಲ್ಲ (ಶಂಪ್ಯಾ.ಉ. ೩-೦೦೭). [ಸಂ. ರೋಧಿನೀ]

**ರೋಧೋವಕ್ರೆ** (ನಾ). = ರೋಧಸಿ : "ಸಿಂಧುಃ . . . ರೋಧೋವಕ್ರಾ — ಈ ೨೧ ತೊಱೆ" (ಹಲಾಯು. ೦೧೦-೪೪). [ಸಂ. ರೋಧೋವಕ್ರಾ]

**ರೋಧ್ರು** (ನಾ). ೧. ಒಂದು ಬಗೆಯ ಮರ ; ಲೋಧ್ರ : "ರೋಧ್ರುಂ ತಿಲ್ಲಂ" (ವಸ್ತು.ಕೋ. ೩೪-೬). ೨. ಪಾಪ. [ಸಂ.]

**ರೋಪ** (ನಾ). ೧. ಮೇಲಕ್ಕೆ ಏರಿಸುವುದು. ೨. ನಾಟಿಹಾಕುವುದು ; ನೆಡುವುದು. ೩. ಬಾಣ ; ಸರಳು : "ಕಂಕಪತ್ರಃ, ಶರಃ . . . ರೋಪಃ — ಈ ೧೬ ಅಂಬು" (ಹಲಾಯು. ೭೭-೩೦೨) ; ನಿಜಧನು ದನುಜಾರಾತಿಜಾತಾಧಿವಾಸಂ ನಿಜರೋಪಂ ವಿಶ್ವರೂಪಂ (ರಾಜಶೇ. ೦-೨). ೪. ತೂತು ; ರಂಧ್ರ. [ಸಂ.]

**ರೋಪಣ** (ನಾ). ಬಾಣ ; ಸರಳು : ಕೊಳದಿಂ ಕೂಪ ಪರಿಕಾಲಿಂದೆ ಪಲ್ಲವರೋಪಣನ ಲೀಲಾಸ್ಪದಂ ದಿಟವೆನಿಸಿ ರಾಜಿಪುದು (ಮರೇಕ. ೨-೨೭). [ಸಂ.]

**ರೋಪಣಾಸನ** (ನಾ). ಬಿಲ್ಲು ; ಶರಾಸನ : ಅರ್ಜುನಶಿಲೋಚ್ಚಯ ಸುರೋಪಣಾಸನಕೃತಂ ದುರ್ಜನಕ್ಷಣದಾಚರಾದ್ರಿ ಕುಲಕುಲಿಶ . . . ಸಂಗಮೇಶ್ವರ ರಕ್ಷಿಸೆನ್ನ ಸತತಂ (ಶ್ರೀಕರಾ. ೭-೦). [ಸಂ.]

**ರೋಪಿತ** (ಗು). ೧. ಬೆಳೆಸಲ್ಪಟ್ಟ. ೨. ನೆಟ್ಟ. [ಸಂ.]

**ರೋಪು, ರೋಫ್, ರೋಫು** (ನಾ). ಜೋರು ; ಜಬರ್ದಸ್ತು : ನಿನ್ನ ರೋಪು ನನ್ನ ಹತ್ತಿರ ತೋರಿಸಬೇಡ (ರೂಢಿ). **ರೋಫ್** : 'ನಿನ್ನ ತೀರಿಸಿಬಿಡ್ತಿನಿ' ಅಂತ ಗುಮಾನಿ 'ಖಾಲಿ ರೋಫ್' ಹಾಕಿದ್ದ (ವಷ್ಮರು. ೨೦೦). **ರೋಫು** : ನಿಮ್ಮ ಬೆಂಗಳೂರಿನ 'ರೋಫು' ಇಲ್ಲಿ ನಡೆಯೋದಿಲ್ಲ (ಹೊಸಮ. ೨೨೦).

[← ಅರ. ರುಅಬ್ ; ಹಿಂ. ರೋಬ್ ; ಮರಾ. ರೋಬ್, ರೂಆಬ್]

**ರೋಫ್** 'ರೋಪು' ನೋ.

**ರೋಫು** 'ರೋಪು' ನೋ.

**ರೋಮ** (ನಾ). ೧. ಮೈಮೇಲೆ ಬೆಳೆಯುವ ಕೂದಲು; ತನೂರುಹ : "ರೋಮನ್, ತನೂರುಹಂ — ಈ ೨ ಮೆಯ್ಯ ಕೂದಲ್" (ಹಲಾಯು. ೮೭-೩೭೦) ; ಮೆಯ್ಯೊಳ್ ಸಮುದ್ಗತರೋಮಂ . . . ಎಸೆಯುತಿರ್ಪನ್ನಮಿಂತೆಂದರ್ (ಜಗ. ೩-೫). ೨. ಹಕ್ಕಿಯ ಗರಿ. [ಸಂ. ರೋಮನ್]

**ರೋಮಂಥ** (ನಾ). ೧. (ಹಸು ಮೊದಲಾದ ಪ್ರಾಣಿಗಳು) ತಿಂದ ಆಹಾರವನ್ನು ಮೆಲುಕು ಹಾಕುವಿಕೆ : ಮೃಗಸಂದೋಹರೋಮಂಥಫೇನೋದ್ಗತಬಿಂದುಸ್ಯಂದಿ ಶೀಡಿತ್ತೆಸಗಿ ಸುರಭಿ ವೈಭಾತಿಕಂ ಮಾತರಿಶ್ವಂ (ಕಾದಂಪೂ. ೦೪೭) ; ಸರಳಲತಾಲಾಸ್ಯನಟಂ ಹರಿಣೀರೋಮಂಥಮಂಥರಂ ಲವಲೀಮರ್ಮರಮುಖರಂ ಕರಿಕರಶೀಕರಶೀತಳಮೆಸಗಿದತ್ತರಣ್ಯಸಮೀರಂ (ಮಲ್ಲಿಕ. ೦೦-೫೨). ೨. ಪುನರುಕ್ತಿ; ಪುನರಾವೃತ್ತಿ. [ಸಂ.]

**ರೋಮಂಥಿಸು** (ಕ್ರಿ). ಮೆಲುಕು ಹಾಕು : ರೋಮಂಥಿಸಿತು ರತಿರೋಮಹರ್ಷಣದಿ ಭಾವಜಪ್ರಾಣಪಶು (ಕೃಲಾಪೂ. ೨೦೬-೦೪೫).

[ರೋಮಂಥ + —ಇಸು₃]

**ರೋಮಂಬೊರೆ** (ಕ್ರಿ). ಕೂದಲನ್ನು ಹೊಂದು : ಆ ಚಂಡಾಲಕನ್ನಿಕೆ ರೋಮಂಬೊರೆದ ಪಂದೊವಲ ಪಂಜರದೊಳಿಕ್ಕಿ (ಕಾದಂಉ. ೬೩೦).

[ರೋಮ + ಪೊರೆ₂]

**ರೋಮಕಂದ** (ನಾ). ಗೆಡ್ಡೆಗಳನ್ನು ಬಿಡುವ ಒಂದು ಬಗೆಯ ಸಸ್ಯ ; ವಾರಾಹಿ : "ರೋಮಕಂದಃ — ರೋಮಕಂದರ, ರಸಮೂಲಿಕೆ" (೬೫೦. ೦೪೦). [ಸಂ.]

**ರೋಮಕಂದರ** (ನಾ). = ರೋಮಕಂದ : "ಪರ್ವಮೂಲಾ — ರೋಮಕಂದರ, ಬೇನ" (ಓಷಧಿ. ೯೩). [< ಸಂ. ರೋಮಕಂದ]

**ರೋಮಕರ್ಣಕ** (ನಾ). ೧. ಕೂದಲು ತುಂಬಿದ ಕಿವಿಯುಳ್ಳದು. ೨. ಮೊಲ. [ಸಂ.]

**ರೋಮಕಲವಣ** (ನಾ). ಒಂದು ಬಗೆಯ ಉಪ್ಪು : "ಉತ್ಕಂ—ರೋಮಕಲವಣಂ" (೬ಷಧಿ. ೦೫). [ಸಂ.]

**ರೋಮಕೂಪ** (ನಾ). ಕೂದಲು ಬೆಳೆಯುವ ರಂಧ್ರ : ಅನಂತಕೋಟಿ ಬ್ರಹ್ಮಾಂಡಗಳು ನಿಮ್ಮ ರೋಮಕೂಪದೊಳಗಡಗಿಪ್ಪವೆಂದರೆ ಬ್ರಹ್ಮ ವಿಷ್ಣು ರುದ್ರರಿವರೆಲ್ಲ ಒಂದು ಬ್ರಹ್ಮಾಂಡದೊಳಗಣ ಬಾಲಕರು (ಅರವ. ೨-೪) ; ಬಿಗಿದ ರಕುತದ ರೋಮಕೂಪದ ತೊಗಲ ಕೋಟೆಯ ನಂಬಿ (ಹಂಸಾ. ೯೯). [ಸಂ.]

**ರೋಮನಾಳ** (ನಾ). ಕೂದಲು ಬೆಳೆಯುವ ನಾಳ : ಸುಮಾನಾಮಸಿಲಂ . . . ಅನ್ನರಸಮಂ ಲೇಸಾಗಿ ಬಹು ರೋಮನಾಳಕ್ಕೆ ಹಂಚಿಕ್ಕಿ ಸಾಸದಿಂ ದಿಹುದು (ಶೀಕೃಕ. ೬-೨೦-೨೩). [ಸಂ. ರೋಮನಾಲ]

**ರೋಮಪುಳಕ** (ನಾ). ಸಂತೋಷ, ಭಯ ಮುಂತಾದುವುಗಳಿಂದ ಮೈಗೂದಲು ನಿಮಿರುವಿಕೆ : ಕದಡಿತೀ ಬಲ ರೋಮಪುಳಕವ ಹೊದೆದುದಾ ಬಲ . . . ನರನ ರಥ ಸುಳಿಯೆ (ಕುಮಾ.ದ್ರೋ. ೩-೪೭).

[ಸಂ. ರೋಮಪುಲಕ]

**ರೋಮರಂಧ್ರ** (ನಾ). = ರೋಮಕೂಪ : ಶರೀರದಲ್ಲಿ ೭೦ ಲಕ್ಷ ರೋಮರಂಧ್ರಗಳುಂಟೆಂದು ತಿಳಿಯುತ್ತದೆ (ಮುಂಬಯಿ. ೫-೦೭೯) ; ರೋಮರಂಧ್ರಗಳರಳೆ ಶತಕೋಟಿ ಕಣ್ಣುಗಳು ಆ ಮಹಾರೂಪ ಕಂಡಾಕಣಿಯನುಸಿರುವೆನು (ಗಂ. ೦೦-೦೭). [ಸಂ.]

**ರೋಮಲತೆ** (ನಾ). (ಹೊಕ್ಕುಳಿನಿಂದ ಮೇಲುಭಾಗದಲ್ಲಿ ಬೆಳೆಯುವ) ಕೂದಲಿನ ಸಾಲು : ಬಾಸೆ ಮೊಲೆ ಪೊಣರ್ವೆಟ್ಟು ರೋಮಲತೆ ಬಟ್ಟೆ ನಿತಂಬಮಿಱುಂಬು ನಾಭಿ ಕುತ್ತುಱುಗುಂಟೆ ಮಿಂಚುವೊಳ್ದೊಡೆ . . . ಆಗೆ ಮದನಾಟವಿಯಂತೆವೊಲೊಪ್ಪ ತೋಱಿದಳ್ (ಕಾವ್ಯಸಾ. ೩೦೨ ಕೂಪ್ರಕ).

[ಸಂ. ರೋಮಲತಾ]

**ರೋಮಶ** (ನಾ). ೧. ಮೈತುಂಬ ಕೂದಲುಳ್ಳದು. ೨. ಕುರಿ. ೩. ಕಾಡುಹಂದಿ. ೪. ಒಬ್ಬ ಋಷಿಯ ಹೆಸರು : ಮಾರ್ಕಂಡೇಯ ರೋಮಶರ್ಪ್ರತ್ಯೇಕರಳಿವರ್ (ಕೈಬಿಭಾ. ೩೨-೩೦). ೫. ಗುಹ್ಯಾಂಗ. [ಸಂ.]

**ರೋಮಸ್ಪನ** (ನಾ). ಕುದುರೆಯ ಬಾಲದ ಬುಡ ; ಪೇಚಕ (?) : ಬಾಲದ ಕೆಟಗು ತಗರಿಯೆಂಬ ಮೆಸರಕ್ಕಂ ಅದಱ ಕೆಲಂಗಳ್ಗೆ ವೃತ್ತಿಯೆಂಬ

ಪೆಸರಕ್ಕುಂ ವ್ಯತ್ಪತ್ತಿಯಿಂ ಕಿಬಗೆ ರೋಮಪ್ಪ(ಸ್ವ)ನಮೆಂಬ ಪೆಸರಕ್ಕುಂ (ಅಕ್ಕಿಶಾ. ೯೯-೧೦). [ ? ]

**ರೋಮಹರುಷಿತೆ** (ನಾ). ಸಂತೋಷದಿಂದ ಪುಳಕಗೊಂಡವಳು : ಹಾ ಮಹಾದೇವೆಂದು ಪುಳಕಿತ ರೋಮಹರುಷಿತೆಯಾಗಿ. . . ಬಿನ್ನೈಸಿದಳು ಗಿರಿಜಾತೆ (ಕೂರರಾ. ೦-೨-೦೦). [<ಸಂ. ರೋಮಹರ್ಷಿತಾ]

**ರೋಮಹರ್ಷ** (ನಾ). = ರೋಮಪುಳಕ : "ರೋಮಾಂ(ಕ)ಚಃ, ಪುಳಕಃ . . . ರೋಮಹರ್ಷಃ _ ಈ ೧೦ ರೋಮಾಂಚಂ" (ಹಲಾಯು. ೦೦೭-೨೯); ವಿಸ್ಮಯಂಬಡನೆ ಮಯಂ ಬೆರಲ್ಮಿಡಿಯನೇ ಸುರವರ್ಧಕಿ ರೋಮಹರ್ಷ ದೊಳ್ ತೊಡರನೆ ಚೀರಘಟ್ಟಿ (ಶಂಪ್ರಕೃ. ೦-೦೯೯); ನಯನಸಲಿಲದ ರೋಮಹರ್ಷದ ಸತ್ವಭಾವದ ಭೂಮಿಪತಿ ಮೈಯಿಕ್ಕಿದನು ಮುನಿವರನ ಚರಣದಲಿ (ಕುವ್ಯಾಅ. ೪-೬). [ಸಂ.]

**ರೋಮಹರ್ಷಣ** (ಗು). ೧. ರೋಮಾಂಚನಗೊಳಿಸುವ. (ನಾ). ೨. = ರೋಮಪುಳಕ : ವಸುಧೆಯದಿರಿತು ಪೇರುಶೈಲಮೆಲ್ಲಾಡಿದುದು ಬಸವಳಿದನಹಿ . . . ಆಹವಂ ಘೋರವಾದುದು ರೋಮಹರ್ಷಣದೊಳು (ಕೃಐಭಾ. ೨೫-೨೫). [ಸಂ.]

**ರೋಮಹರ್ಷಿತ** (ನಾ). ಪುಳಕಿತನಾದವನು ; ರೋಮಾಂಚನಗೊಂಡವನು. [ಸಂ.]

**ರೋಮಾಂಗಿ** (ನಾ). ಮೈಮೇಲೆ ತುಂಬ ಕೂದಲುಳ್ಳವಳು : ವಾಮನೆ ವಿಕಳೆ ರೋಮಾಂಗಿ ಮಾರ್ಜಾಲಾಕ್ಷಿ ಕಪಿಲಕಚೆ ಶುನಕಯಾನೆ. . . ಎನಿಪಂಗನೆಯರಿಂದ ಗತಾಯು ಪುರುಷಂಗೆ (ಶೀವಂಶ. ೦೭-೯೦).
[ಸಂ. ರೋಮಾಂಗೀ (ರೋಮ + ಅಂಗ + — )]

**ರೋಮಾಂಚ** (ನಾ). ೧. ಮೈಗೂದಲು ನೆಟ್ಟಗೆ ನಿಲ್ಲುವಿಕೆ ; ಪುಳಕ ; ನವಿರು : "ರೋಮಾ(ಕ)ಚಃ . . . ರೋಮಹರ್ಷಃ — ಈ ೧೦ ರೋಮಾಂಚಂ" (ಹಲಾಯು. ೦೦೭-೨೯) ; ಶರೀರದೊಳೆತ್ತಂ ರೋಮಾಂಚ ಕಂಚುಕಂ[ಪಾಠಾಂ. ವಂ] ಮದಿರಾಮದವಾಗಿಸೆ ತೆಗಟ್ಟನಾಕೆಯ ನುಡಿಯೊಳ್ (ಕವಿರಾ. ೩-೯) ; ರೋಮಾಂಚಮನಾನಂದಾಶ್ರುವಂ ತಾಳ್ದಿದನಮಲಯಶಂ ಭಾರತೀಕರ್ಣಪೂರಂ (ಶಂರಾಷು. ೨-೭೭). ೨. [ಕಾವ್ಯಮಿ] ಸಾತ್ವಿಕಭಾವಗಳಲ್ಲಿ ಒಂದು : ಸ್ತಂಭ ಸ್ವೇದ ರೋಮಾಂಚ . . . ಸಾತ್ವಿಕಭಾವಂಗಳ್ (ಅವೀಕ. ೨೨೭) ; ಮರವಟ್ಟರುವುದು, ರೋಮಾಂಚ ಮುಂತಾದ ಸಾತ್ವಿಕ ಭಾವಗಳು . . . ಚೇತನವನ್ನು ಧ್ವನಿಸುತ್ತವೆ (ಭೃಪ್ರಾಲೋ. ೭೯ ಅಡಿಟಿ).
[ಸಂ.]

**ರೋಮಾಂಚಕಾರಕ** (ಗು). ಮೈನವಿರೇಳಿಸುವ ; ಪುಳಕವನ್ನುಂಟುಮಾಡುವ : ಅದೊಂದು ರೋಮಾಂಚಕಾರಕ ದೃಶ್ಯ (ಅತ್ಕಾರ್ಶ. ೦೩೨).
[ಸಂ.]

**ರೋಮಾಂಚಕಾರಿ** (ನಾ). ರೋಮಾಂಚವನ್ನುಂಟುಮಾಡುವುದು ; ಪುಳಕ : ಕೊನೆಯ ವಾಕ್ಯದ ವಿಸ್ಮಯಪಂತೂ ರೋಮಾಂಚಕಾರಿಯಾಗಿದೆ (ಕೂಶ್ವಕು. ೦೩೯). [ ಸಂ. ರೋಮಾಂಚಕಾರಿನ್ ]

**ರೋಮಾಂಚಗೊಳ್ಳು** (ಕ್ರಿ). ಮೈಗೂದಲು ನಿಮಿರಿ ನಿಲ್ಲು ; ರೋಮಾಂಚವಾಗು ; ಪುಳಕಹೊಂದು : ಈ ಮಾತನ್ನು ಕೇಳಿ ಮಹಾರಾಜನು ಹರ್ಷದಿಂದ ರೋಮಾಂಚಗೊಂಡು 'ಕೊಟ್ಟೆ' ಎಂದನು (ವತಕಾ. ೯). [ ರೋಮಾಂಚ + ಕೊಳ್ಳು$_1$ (< ಕೊಳ್$_1$). ]

**ರೋಮಾಂಚತೆ** (ನಾ). = ರೋಮಾಂಚ ೧ : ಅಲರ್ದು ಕಡವಿನ ಮರಗಳ್ ಪರಿಗತರೋಮಾಂಚತೆಯಿಂ ದೊರೆಮಾಡಿದುದೆನ್ನ ತನುವುಮಂ ನೆಟ್ಟಿ ತನ್ನೊಳ್ (ಶಂಪ್ರಕೃ. ೨-೯೯). [ಸಂ. ರೋಮಾಂಚತಾ]

**ರೋಮಾಂಚನ** (ನಾ). = ರೋಮಾಂಚ ೧ : ಹೂಗೊಂಚಲ ರೋಮಾಂಚನ ಪಡೆದೆ (ಕರಿ.೧೯೮. ೨೭-೩). [ಸಂ.]

**ರೋಮಾಂಚನಗೊಳ್ಳು** (ಕ್ರಿ). = ರೋಮಾಂಚಗೊಳ್ಳು : ಮೈ ಕೂಡಾ ರೋಮಾಂಚನಗೊಂಡಿತು. ಶರೀರವೇ ಒಮ್ಮೆ ನಡುಗಿತು (ಕಂಬಕು. ೦೩೩).
[ರೋಮಾಂಚನ + ಕೊಳ್ಳು$_1$ (<ಕೊಳ್$_1$)]

**ರೋಮಾಂಚನವೆಸಗು** (ಕ್ರಿ). = ರೋಮಾಂಚಗೊಳ್ಳು : ನಿಟ್ಟಿಸುವಳು ಚುಂಬಿಸುವಳು ಮೈ ಜುಮ್ಮುದಟ್ಟಿ ರೋಮಾಂಚನವೆಸಗಿ ಉಟ್ಟುದು ಸರಿದು ಮದನಜಲ ನೆಟ್ಟಿ ಪೊಜಿಮಟ್ಟುದು ನಾಣಡೆಯಿಂದ (ಕಂವಿವಿ. ೯-೦೯೭).
[ರೋಮಾಂಚನ + ಎಸಗು$_1$]

**ರೋಮಾಂಚನಿಸು** (ಕ್ರಿ). = ರೋಮಾಂಚಗೊಳ್ಳು : ಮಿಂಚಿ ರೋಮಾಂಚನಿಸಿತೆಂಬವೋಲ್ ಮೊಗಕೆ ತುಳ್ಕಿದುದು ತೈಜಸಂ (ಶ್ರೀರಾಷು. ೩೯೯-೯೯೫).
[ರೋಮಾಂಚನ + -ಇಸು$_3$]

**ರೋಮಾಂಚವೇಳು** (ಕ್ರಿ). = ರೋಮಾಂಚಗೊಳ್ಳು : ಶಂಖಧ್ವನಿಯು ಮೇಲಿಂದ ಮೇಲೆ ಕಿವಿಗೆ ಬೀಳುತ್ತಲೇ ಇತ್ತು. ಅದನ್ನು ಕೇಳಿದಾಗ ನನ್ನ ಮೈ ರೋಮಾಂಚವೇಳುತ್ತಿತ್ತು (ಪಕಭಾ. ೬೯).
[ರೋಮಾಂಚ + ಏಳ್ಳು$_1$ (< ಏಟ್$_1$)]

**ರೋಮಾಂಚಿತ** (ಗು). ೧. ಕೂದಲು ನೆಟ್ಟಗಾದ,- ನಿಮಿರಿದ. (ನಾ). ೨. = ರೋಮಾಂಚ ೧ : ಬರ್ಕನ ವಕ್ತೃತೆಯನ್ನು (speeches) ಓದಿದರೆ ಶರೀರವೆಲ್ಲಾ ರೋಮಾಂಚಿತವಾಗಿ ಮನಸ್ಸು ಉನ್ನತ್ತವಾಗಿ ಹೋಗುತ್ತದೆ (ದೇಐಕೌ. ೩೦). [ಸಂ.]

**ರೋಮಾಳಿ** (ನಾ). ೧. = ರೋಮಲತೆ ; ಕರ್ಪೊದವಿದ ರೋಮಾಳಿ ರಂಜಿಕುಂದೇವಕಿಯಾ (ಜಗವಿ. ೨-೯೦). ೨. = ರೋಮಾಂಚ೧ : ಹೊಳೆಯುವ ಹರುಷದಲಿ ರೋಮಾಳಿಗಳ ಗುಡಿಯಲಿ ತನ್ನ ನಿಳಯಕೆ ಮುಗುದೆ ಬಂದಳು (ಕುವ್ಯಾವಿ. ೩-೦೦೩). ೩. ಹೆಣೆದ ಕೂದಲು ; ಜಡೆ : ಕವಿಕುಲಪಾರಿಜಾತ ಸನ್ಮಂದಗಾಮಿನಿ ಸಿಂಹಿಕೇಯರೋಮಾಳಿಸದೃಶ (ಕಬಕ್ಕು. ೦೦-೯೩). ೪. ಮೈನೆರೆದಿರುವ ಸ್ಥಿತಿ ; ಯೌವನದ ಆರಂಭಕಾಲ. [ಸಂ. ರೋಮಾಲೀ]

**ರೋಮಿ** (ಗು). ೧. ಕೂದಲುಗಳಿಂದ ತುಂಬಿದ ; ರೋಮದಿಂದ ಕೂಡಿದ. (ನಾ). ೨. ಒಂದು ಬಗೆಯ ಜಿಂಕೆ ; ಚಮರೀಮೃಗ : "ರೋಮಿ ಗೋಕರ್ಣಮೆನಲು ಚಮರಿಯ ಮೃಗಂ" (ಮಂಗರಾ. ೯೯-೦೦).
[ಸಂ. ರೋಮಿನ್]

**ರೋಮೋದ್ಗಮ** (ನಾ). = ರೋಮಾಂಚ ೧ : ಆನಂದಾಶ್ರುಬಿಂದು ಪ್ರತತಿ ಸುರಿಯೆ ರೋಮೋದ್ಗಮಂ ಕೂಡೆ ಪೊಣ್ಮುತ್ತಿರೆ (ಕಾದಂಪೂ. ೯೯೦); ಹೇಳಿದಳು ಚಿತ್ರೆ ಪಾರ್ಥಂಗೆ ರೋಮೋದ್ಗಮಂ ಸುಭವಿಸುವಂತೆ (ತತ್ವಾಂಗ. ೯೭-೦೩೦೩). [ಸಂ.]

**ರೋರುವ** (ನಾ). ರುರು ಎಂಬ ಜಾತಿಗೆ ಸೇರಿದ ಒಂದು ಬಗೆಯ ಜಿಂಕೆ : ಈ ಕಾಂಡಕ್ಕೆ ಸುತ್ತಿರುವ ಸ್ನಾಯುವು ಗೋವಿನದೆ, ಮಹಿಷದ್ದೆ, ರೋರುವದ್ದೆ, ಅಥವಾ ಕೋತಿಯದೆ ? (ಬಿಬ್ರಕ. ೬೦). [<ಸಂ. ರುರು]

**ರೋಲಂಬ** (ನಾ). ದುಂಬಿ ; ಭ್ರಮರ : "ಮಧುವ್ರತಃ . . . ರೋಲಂಬಃ, ಬಂಭರಃ- ೧೫ ತುಂಬಿಯ ಹೆಸರುಗಳು" (ನಿಘಂಟು. ೦೬೨); ಫಾಲಾಕ್ಷಪದಪದ್ಮಮಕರಂದರಸಪಾನರೋಲಂಬಸಮರೂಪ (ದುರಕೃ.೩೩-೩೨).
[ಸಂ.]

**ರೋಲ್ಲೊಜುಕಿ** (ನಾ). ಒಂದು ಸ್ಥಳದ ಹೆಸರು : ರೋಲ್ಲೊಜುಕ್ಕುತ್ತರತಃ . . . ಉದಕಪೂರ್ವ್ವಕಂ ದತ್ತಃ (ಇಇ. VI. ೭೩-೦೫; 535).
[ ? ]

**ರೋವ** (ನಾ). = ರೋಮ ೧ : "ರೋವ _ ರೋಮ(ನ್) = ಕೂದಲು, ತುಪ್ಪುಳ" (ಶಬ್ದಕೋ. ೩೬); ಮಕಾರಕ್ಕೆ ವಕಾರಂ — ಅಮರೀ — ಅವರಿ . . . ರೋಮ — ರೋವ (ಶಮರ. ೨೬೩ ಕೃಬೋ).
[<ಸಂ. ರೋಮನ್]

**ರೋಷ** (ನಾ). ಸಿಟ್ಟು ; ಕೋಪ : "ಕೋಪಃ, ಕ್ರೋಧಃ, ಅಮರ್ಷಃ, ರೋಷಃ, ಪ್ರತಿಘಃ – ಈ ೫ ಮುನಿಸು" (ಹಲಾಯು. ೫೯–೨೦೭); ಆಶೆ ಇಲ್ಲದಿಪ್ಪುದೇ ತಪ. ರೋಷವಿಲ್ಲದಿಪ್ಪುದೇ ಜಪ (ಬಂಶಿ. ४. ೦೯೯–೨೬೩); ದುರುಳರಿಬ್ಬರಿಗಿತ್ತರತಿನಿಷ್ಠುರದ ಶಾಪವನಸುರವಂಶೋತ್ಕರದೊಳಗೆ ಸಂಭವಿಸಿ ನೀವೆಂದಧಿಕರೋಷದಲಿ (ಕೊರಠಾ. ೧–೬–೦೪); ದೋಷ ಮಾಡು ವವನಿಗೆ ರೋಷ ಬಹಳ (ಗಾದೆ). [ಸಂ.]

**ರೋಷಂದಟ್ಟು** (ಕ್ರಿ). ಕೋಪವುಂಟಾಗು ; ಸಿಟ್ಟುಬರು ; ಕ್ರೋಧ ಗೊಳ್ಳು : ಮಂಡದಿಯರ ಮನದಿ ರೋಷಂದಟ್ಟದೊಡೆ ಪ್ರಾಣ ಬಿಡುವರ್ಕೆ (ಪವಪೋ. ೯–೩೭). [ರೋಷ + ತಟ್ಟು$_1$]

**ರೋಷಂಬಡೆ** (ಕ್ರಿ). ಕೋಪಗೊಳ್ಳು ; ರೇಗು : ಉಗ್ರರೋಷಂಬಡೆದು ಹೊಯ್ದನು ತೋರಣದ ಕಂಬದಲಿ ರಕ್ಕಸನ (ಕೊರಠಾ. ೫–೫–೨೬). [ರೋಷ + ಪಡೆ$_1$]

**ರೋಷಚ್ಯುತ** (ನಾ). ಕೋಪವನ್ನು ಬಿಟ್ಟವನು ; ಶಾಂತಚಿತ್ತ : ಯತಿಗಳಾದರಿ ನೀವು ರೋಷಚ್ಯುತರಲ್ಲೇ ಬಳಿಕೇನು ಧರ್ಮಜ್ಞತೆಯ ನೆಲೆ ಗಳನರಿದ ಮನವೆಣಿಗುವುದೆ ಕಾಳಗಕೆ (ಕುವ್ಯಾ.ಉ. ೬–೨೦). [ಸಂ.]

**ರೋಷಣ** (ಗು). ೧. ಸಿಟ್ಟಿಗೆದ್ದ; ಕೋಪಗೊಂಡ. (ನಾ). ೨. ಸಿಟ್ಟು; ಕೋಪ : "ರೋಷಣಂ, ರೋಷಣೀಯಂ, ಈ ೨ ರೋಸಂ" (ಶಾಶಕ್ಯ. ೨೬೯). ೩. ಕೋಪಗೊಳ್ಳುವವನು ; ಕೋಪಿಷ್ಠ : "ಕೋಪನಃ, ಕ್ರೋಧನಃ, ಕ್ರೋಧೀ, ರೋಷಣಃ, ಅಮರ್ಷಣಃ – ಈ ೫ ಮುನಿವವಂ" (ಹಲಾಯು. ೫೯–೨೦೩). [ಸಂ.]

**ರೋಷಣೆ** (ನಾ). ಕೋಪ ; ಸಿಟ್ಟು : ಚಿಂತೆ ರೋಷಣೆ ಮಾತ್ರ ಸಮಗುಣ ವಾಂತುವಲ್ಲಾ ಧಾತು ಬಲಗಳ ವಂತನಾಗೆಲೆಯಾತ್ಮ ರಕ್ಷಿಪ ದೇವನಸವರತಾ (ಶರಾಮಾ. ೩೩೨–೯೩). [ಸಂ. ರೋಷಣ]

**ರೋಷಭೀಷಣ** (ನಾ). ಕೋಪದಿಂದ ಭಯಂಕರನಾದವನು : ರೋಷ ಭೀಷಣನಾಗಿ ಕಾರ್ದನ್ ಕಠೋರಮಂ (ಶ್ರೀರಾಮಾ. ೭೨–೯೬೯). [ಸಂ.]

**ರೋಷಸಿ** (ನಾ). ಭೂಮಿ ಮತ್ತು ಆಕಾಶ : "ದ್ಯಾವಾಭೂಮಿ, ರೋದಸ್ಯೌ, ರೋದಸೀ, ರೋಷಸೀ – ಈ ೪ ನೆಲನುಂ ಆಕಾಶದ ಪೆಸರ್" (ಹಲಾಯು. ೨೦–೦೨೦). [ಸಂ. ರೋಷಸೀ]

**ರೋಷಿ** (ಗು). ಕೆರಳಿದ ; ಕುಪಿತಗೊಂಡ : ಸೋದರನ ಧನುರ್ಗುಣಮಂ ಛೇದಿಸಿದಂ ರೋಷಿರಾವಣಂ (ಶಂರಾಮಾ. ೦೪–೦೫). [ಸಂ. ರೋಷಿನ್]

**ರೋಸ** (ನಾ). = ರೋಷ : ಚಕ್ಕಟೆದ ಪೊಲೆಗಳುಂ ಕೈಮಿಕ್ಕಂಕುರ ದುಗಿಯುವುಲೆಯ ಸೆಳೆಗೊಂಬು ನೊಸಲ್ಗೊಕ್ಕಳಕಮುಮಿನಿಯನ ರೋಸಕ್ಕೆಡೆಯಾಯ್ತುಪ್ಪೆ ತರುಣಿ ಕುರವಕತರುವಂ (ಲೀರಾಪ. ೧೩–೯೩) ; ಷಕಾರಕ್ಕೆ . . . ರೋಷ – ರೋಸ (ಶಮದ. ೨೫೩ ವೃಯೋ). [< ಸಂ. ರೋಷ]

**ರೋಸಿಕೆ, ರೋಸಿಗೆ** (ನಾ). ಜುಗುಪ್ಸೆ ; ಅಸಹ್ಯ : ಅಧ್ಯಾತ್ಮವನ್ನು ಚಿಂತಿಸಿ ಚಿಂತಿಸಿ ನಮ್ಮವರು ಬೇಸತ್ತಿದ್ದಾರೆ, ಇವರಿಗೆ ಅದರಲ್ಲಿ ರೋಸಿಕೆ ಯುಂಟಾಗಿದೆ (ಕವಶಾಂ. ೯೦). **ರೋಸಿಗೆ** : ಷಡುರಥಲೊಂದಾಗಿ ಕೊಂದೊಬ್ಬ ಹಸುಳೆಯ ಹೊಡದರು ರೋಸಿಗೆಗೊಳದೆ (ಅಭಿಶಾ. ೦೬). [ರೋಸು$_1$ + – ಇಕೆ]

**ರೋಸಿಗೆ** 'ರೋಸಿಕೆ' ನೋ.

**ರೋಸು$_1$** (ಕ್ರಿ). ೧. ಬೇಸರಗೊಳ್ಳು ; ಜುಗುಪ್ಸೆಹೊಂದು : ಮನಸ್ಸು ರೋಸಿ ನುಡಿಯಿತು (ಐಕಾಂಗಿ. ೩). ೨. ಕೋಪಗೊಳ್ಳು ; ಸಿಟ್ಟಾಗು : ಸೋಸಿ ದೈತ್ಯರನೆಲ್ಲ ರೋಸಿ ಪ್ರಾಣವ ಕೊಂಡ ದೋಷತನವ ನಾನು ಹೇಳಲೆ (ಪುರಂದ. ದಾ. ೨–೦೦೫–೬) ; ಸಾಸಿರಗಾವುದಕ್ಕೆಯ್ದಿ ತನ್ನಿಷ್ಟಾರ್ಥ ಕೈಸಾರುವ ಸಮಯದೊಳು ರೋಸಿ ಬಿಸುಟು ಮರಳುವ ತೆಜದೊಳು (ಕರಾವ್ಯ. ೦೦–೦೫) ; ರೋಸದವರ ಮೇಲೆ ರೋಸುವೆ (ಬಂದ್ಯ.ಶ. ೬೪). **ರೋಸಿಕೊಳ್ಳು** = ಹೇಸು ; ಬೇಸರಪಡು : ನಾನು ನನ್ನ ಮೇಲೆಯೇ ರೋಸಿಕೊಂಡು ಆಕೆಯನ್ನು ಹಿಂಬಾಲಿಸಿದೆ (ಬಾಣಕ. ೨೦೬). **ರೋಸಿಬಿಡು** = ಕೋಪಗೊಳ್ಳು ; ಸಿಟ್ಟಾಗು : ಈ ಪ್ರಪಂಚವನ್ನು ಕಂಡು ಅಷ್ಟು ರೋಷ ಬಂತು. ರೋಸಿ ಬಿಟ್ಟು ಆ ಮಾತು ಆಡಿದೆ (ಸಂಪಕಂ. ೨೪). **ರೋಸಿಹೋಗು** = ರೋಸಿಕೊಳ್ಳು : ನನಗೂ ಜೀವ ರೋಸಿಹೋಗಿದೆ (ಪಾಪೋರೀ. ೨೨೪) ; ಶಾಂತಾಳ ಮನಸ್ಸು ರೋಸಿ ಹೋಯಿತು (ಮೂರುಬಾ. ೦೭೦). [ದೇ. ॥ ತೆಲು. ರೋಯು]

**ರೋಸು$_2$** (ನಾ). ಕೊಳಕು ; ಹೇಸಿಗೆ : "ರೋಸು – ಹೊಲಸು" (ಪಾನಕೋ. ೪೦). [< ರೋಸು$_1$]

**ರೋಹಣ** (ನಾ). ೧. ಹತ್ತುವುದು; ಏರುವುದು. ೨. ಬೆಳೆಯುವುದು; ಏಳಿಗೆ: "ರುಟ್, ರುಹಂ, ರೋಹಣಂ, ರೋಹಣೀಯಂ—ಈ ೪ ಮೊಳಕೆ" (ಶಾಶಕ್ಯ. ೦೩೦). ೩. ಬಾಣ; ಅಂಬು. ೪. (ಸಿಂಹಳದಲ್ಲಿರುವ) ಒಂದು ಪರ್ವತ: ತಾರಾಚಳಮೊಡನೆ ರೋಹಣಂ ಪೋರ್ದುದೆನಲ್ ವಾರಣ ದೊಡನೆ ಖಗಪ್ರಭುವಾ ರಣದೊಳ್ ಪೋರ್ದು (ಜಗಿಪ. ೦೩–೦೦೦); ಉರ್ವೀಧ್ರಂ ರೋಹಣಾಪು ಗಡಾರ್ವರ್ಣಿಸಲಜಿವರಣ್ಣ ತಜ್ಜನಪದಮಂ (ಶಂಪ್ರಪು. ೩–೧೧). [ಸಂ.]

**ರೋಹಣದ್ರುಮ** (ನಾ). ಗಂಧದ ಮರ; ಚಂದನವೃಕ್ಷ. [ಸಂ.]

**ರೋಹಿ** (ನಾ). ೧. ಸವಾರಿಮಾಡುವವನು; ಸವಾರ: ರೋಹಿ ಜಾಗ್ರತ ದಪ್ಪೆ ಯಾತ್ರೆ ಸುಖ ಸಾಗೀತೆ (ಮಂಕುತಿ. ೩೯೭). ೨. ಬೆಳೆಯುವುದು; ವೃದ್ಧಿ. ೩. ಒಂದು ಬಗೆಯ ಜಿಂಕೆ. ೪. ಒಂದು ಬಗೆಯ ಮರ: "ರೋಹೀ . . . ದಾಡಿಮಪುಷ್ಪಕಃ—ನಾಲ್ಕು ಮುಳ್ಳುಮುತ್ತುಗದ ಹೆಸರುಗಳು" (ಸಿದ್ಧಾಂತಿ. ೦೩೩). [ಸಂ.]

**ರೋಹಿಣ** (ಗು). ೧. ರೋಹಿಣೀನಕ್ಷತ್ರದಲ್ಲಿ ಹುಟ್ಟಿದ. (ನಾ). ೨. ವಿಷ್ಣು. ೩. ಒಂದು ಬಗೆಯ ಸಸ್ಯ; ಮುಳ್ಳುಮುತ್ತುಗ. [ಸಂ.]

**ರೋಹಿಣಿ** (ನಾ). ೧. ಹತ್ತುವುದು ; ಸವಾರಿ ಮಾಡುವುದು. ೨. ಶ್ರೀಗಂಧ; ಚಂದನ: "ರೋಹಿಣಿ ಮಲಯಜಂ ಚಂದನಂ ಗಂಧಮೆಂದೆ ನಿಕ್ಕುಂ" (ಮಂಗರಾ.೯೯–೨೦). ೩. ಕೆಂಬಣ್ಣದ ಹಸು: "ರೋಹಿಣಿಯನಡ್ವಿ ಯರ್ಜುನಿ ವೃಷ ಗೋ ವೃಷಭ ವಾಹಿನಿಯೆನೆ ಹಸು" (ಮಂಗರಾ. ೫೩–೩). ೪. ದಕ್ಷಬ್ರಹ್ಮನ ಮಗಳು; ಚಂದ್ರನ ಹೆಂಡತಿ : "ರೋಹಿಣೀ= ಚಂದ್ರನ ಹೆಂಡತಿ" (ಶಾಶಕ್ಯ. ೦೩೦); ಕ್ಷಿತಿಗೆ ಲಕ್ಷ್ಮಿಗೆ ರೋಹಿಣಿಗೆ ಭಾರತಿಗೆ . . . ಸೂಜುಮುಡಿ . . . ಗಂಗಾಯಿ (ದಸಪು. ೪–೭೦). ೫. ವಸುದೇವನ ಹೆಂಡತಿ; ಬಲರಾಮನ ತಾಯಿ: ಮಾಯಾದೇವಿ . . . ದೇವಿಯ ಗರ್ಭದರ್ಭಕನನತ್ತಲ್ ಗೋಕುಲಕ್ಕುಯ್ದು . . . ಯೋಜಿಸಿದಳಂತಾ ರೋಹಿಣೀಗರ್ಭದೊಳ್ (ಜಗಿಪ. ೨–೬೦). ೬. ಮೈನೆರೆದ ಹುಡುಗಿ. ೭. ಒಂದು ಬಗೆಯ ಸಸ್ಯ ; ಕಟುಕರೋಹಿಣಿ : "ಕಟುಃ, ಕಟುಂಭರಾ, ಅಶೋಕಾ, ರೋಹಿಣೀ . . . ಶಕುಲಾದನೀ—೯ ಕಟುಕರೋಹಿಣೀ ಹೆಸರು ಗಳು" (ಸಿದ್ಧಾಂತಿ. ೦೩೦). ೮. ಒಂದು ಬಗೆಯ ಕಂಠರೋಗ: ಪಿತ್ತಾಧಿಕ್ಯ ದಿಂದ ಉಂಟಾಗಿ ಕೊರಳ ನರಗಳು ಬಿಗಿದು ಬಾಯಾಜಿಕೆ ತಾಪ, ಬಳಲಿಕೆಗಳ ಉಂಟುಮಾಡುವದು ರೋಹಿಣಿ ಎನಿಸಿಕೊಂಬ ಕಂಠರೋಗವೆಂದಜಿವುದು (ವೈದ್ಯಶಾ. II. ೦೦೭). ೯. [ಜ್ಯೋತಿ] ಇಪ್ಪತ್ತೇಳುನಕ್ಷತ್ರಗಳಲ್ಲಿ ನಾಲ್ಕನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ಅಶ್ವಿನಿ ರೋಹಿಣಿಯುದಿತಿಯುಸಿಷ್ಯನಿತಂ ನಕ್ಷತ್ರಮುತ್ತಮಂ ಪೊಸತನುಡಲ್ (ಲೋಕೋಶ. ೦–೦೨) ; ತಾವರೆಮರದ ಬದಣಿಕೆಯಂ ರೋಹಿಣಿನಕ್ಷತ್ರದಲ್ಲಿ ತಂದು ಮುಂಗೈಗೆ ಕಟ್ಟುವುದು (ಕಶಪ್ಪ. ೦೨೦) ; ರೋಹಿಣಿ ಮೃಗಶಿರ . . . ಆಶ್ಲೇಷ ಈ ಆರು ಮಳೆಗಳಲ್ಲಿ ಮುಂಗಾರಿಯನ್ನು ಬಿತ್ತುವದು (ಕೃಷಿಶ್ರ. ೬೫);

ರೋಹಿಣಿ ಬಿತ್ತನೆ ರೋಗವಿಲ್ಲದ ತನೆ (ಗಾದೆ).

**ರೋಹಿಣ್ಯಾದಿಕಲ್ಕ** = ಕಟುಕರೋಹಿಣಿ ಮುಂತಾದುವುಗಳಿಂದ ಮಾಡಿದ ಒಂದು ಬಗೆಯ ಔಷಧದ್ರವ್ಯ: ರೋಹಿಣ್ಯಾದಿಕಲ್ಕ-ಕಟುಕ ರೋಹಿಣಿ, ಕೊತ್ತುಂಬರಿ . . . ಗೋರೋಜನ ಇವುಗಳನ್ನು ಸಮವಾಗಿ ಸೇರಿಸಿ, ಕಲ್ಕ ಮಾಡಿ ಸಹದೇವಿರಸವನ್ನು ಸೇರಿಸಿ ಕೊಟ್ಟಲ್ಲಿ ಸರ್ವಜ್ವರವು ಬಿಡುವುದು (ಸಕವೈ. ೦೦೪). **ರೋಹಿಣ್ಯಾದಿಘೃತ** = ಕಟುಕರೋಹಿಣಿ ಮುಂತಾದುವನ್ನು ಹಾಕಿ ಮಾಡಿದ ಒಂದು ಬಗೆಯ ಔಷಧದ್ರವ್ಯ: ರೋಹಿಣ್ಯಾದಿಘೃತ . . . ಕಟುಕರೋಹಿಣಿ ೫ ತೂಕಮಂ ಚೂರ್ಣವ ಮಾಡಿ ಹಾಕಿ ತೊಳಸಿ ಇಳಿಸಿಕೊಂಡು ನಿತ್ಯವೂ ಸೇವಿಸಲು ಹಳೆಯ ಜ್ವರ ಗುಣಮಕ್ಕುಂ (ಸಕವೈ. ೧೨೪). [ಸಂ. ರೋಹಿಣೀ]

**ರೋಹಿಣಿಸಂಧಿ** (ನಾ). ಕುದುರೆಯ ಒಂದು ಅಂಗ : ಶ್ರಿಕದೆರಡುಂ ಕೆಲಕ್ಕಂ ರೋಹಿಣಿಸಂಧಿಯೆಂಬ ಪೆಸರಕ್ಕುಂ (ಅಶ್ವಶಾ. ೬೪-೬). [ರೋಹಿಣಿ + ಸಂಧಿ]

**ರೋಹಿಣೀಪರಿಗತ** (ನಾ). ೧. ಕೆಂಪುಬಣ್ಣದ ಆಕಳಿನಿಂದ ಕೂಡಿದುದು. ೨. ರೋಹಿಣೀನಕ್ಷತ್ರದಿಂದ ಕೂಡಿದುದು. ೧, ೨ : ನೀಹಾರರುಕ್ಶಿತ್ತ ವೃತ್ತದವೋಲ್ ರಾಜಿತರೋಹಿಣೀಪರಿಗತಂ . . . ಏಂ ಚೆಲ್ವಾಯ್ತೊ ಗವಾಶ್ರಯಂ (ಲೀಲಾವ. ೫-೦೨೦). [ಸಂ.]

**ರೋಹಿಣೀವಲ್ಲಭ** (ನಾ). ಚಂದ್ರ : "ಇಂದುಃ . . . ರೋಹಿಣೀವಲ್ಲಭಃ . . . ದಾಕ್ಷಾಯಣೀರಮಣಃ-ಈ ೧೨ ಚಂದ್ರನ ಪೆಸರ್" (ಶಠಾಯು. ೬-೪೨). [ಸಂ.]

**ರೋಹಿತ** (ಗು). ೧. ಕೆಂಪಾದ; ಕೆಂಪುಬಣ್ಣದಿಂದ ಕೂಡಿದ. (ನಾ). ೨. ಕೆಂಪುಬಣ್ಣ ; ರಕ್ತವರ್ಣ : "ಲೋಹಿತಃ, ರೋಹಿತಃ, ರಕ್ತಃ- ೩ ಕೆಂಪುಬಣ್ಣದ ಹೆಸರುಗಳು" (ಸಿದ್ಧಾಂತಿ. ೪೬). ೩. ನೆತ್ತರು; ರಕ್ತ: ಕಾಳಿಮ್ಮೆಯ ಕಟಿಯಲಾಗಿ ಹಾಲು ರೋಹಿತವಾಗಿ ಬದ್ದಿತ್ತು (ಮೋಳಿಶಿವಾ. ೨೨೬-೬೬೬); ವಿಳ್ದರುತಿರ್ದಪುದಿತ್ತ ನಿನ್ನ ಪೆರ್ಬಲಮುಡಿದಸ್ಥಿಯಿಂ ಸುರಿವ ರೋಹಿತದಿಂ (ರಾಜಶೇ. ೫-೦೦೪). ೪. ಒಂದು ಬಗೆಯ ಜಿಂಕೆ ; ಚಮರೀ ಮೃಗ : "ರೋಹಿತಃ, ಚಮರಃ -ಚೌರೀಬಾಲದ ಮೃಗ" (ಸಿದ್ಧಾಂತಿ. ೦೩೬). ೫. ಕುಂಕುಮಕೇಸರಿ. ೬. ಮನುಷ್ಯನ ಕಣ್ಣಿಗೆ ಕಾಣುವುದಿಲ್ಲ ವೆಂದೂ ನೆಟ್ಟಗಿರುವುದೆಂದೂ ನಂಬಲಾದ ಕಾಮನ ಬಿಲ್ಲು: "ಇಂದ್ರನ ಬಿಲ್ಲು ಋಜು(ವಾದುದು) ರೋಹಿತಮೆಂಬುದು" (ಶಠಾಯು. ೦೦-೫೭). ೭. ಒಂದು ಬಗೆಯ ಕೆಂಬಣ್ಣದ ಮೀನು : "ರೋಹಿತಃ, ಮದ್ಗುರಃ -ಯಾವಾಗಲೂ ಮುಳುಗಿಕ್ಕೊಂಡಿರುವ ಮೀನು, ಕೆಂಪುಮೀನು" (ಸಿದ್ಧಾಂತಿ. ೬೨); ಆಳದ ಮಡುವಿನೊಳಾಡುತಲಿದ್ದರು ತಾನು ನಿಗರ್ವಿ ರೋಹಿತನು ಉಂಗುಟಮಾತ್ರದ ನೀರಿನೊಳಿದ್ದರು ಶಫರಿ ತಾ ಪುರ್ಪುರಾಯತನು (ಬಂಕಾಪ. ೬೨-೪೬). [ಸಂ.]

**ರೋಹಿತಕ** (ನಾ). ಒಂದು ಬಗೆಯ ಮರ ; ಮುಳ್ಳುಮುತ್ತುಗ : "ರೋಹೀ, ರೋಹಿತಕಃ, ಪ್ಲೀಹಶತ್ರುಃ, ದಾಡಿಮಪುಷ್ಪಕಃ - ೪ ಮುಳ್ಳು ಮುತ್ತುಗದ ಹೆಸರುಗಳು" (ಸಿದ್ಧಾಂತಿ. ೦೨೩). [ಸಂ.]

**ರೋಹಿತಾಶ್ವ** (ನಾ). ೧. ಕೆಂಪುಕುದುರೆಗಳನ್ನುಳ್ಳವನು ; ಅಗ್ನಿ : "ಅಗ್ನಿಃ . . . ಅನಲಃ, ರೋಹಿತಾಶ್ವಃ . . . ಅಪ್ಪಿತ್ತಂ - ೩೪ ಅಗ್ನಿ ಹೋತ್ರನ ಹೆಸರುಗಳು" (ಸಿದ್ಧಾಂತಿ. ೨೩). ೨. ಹರಿಶ್ಚಂದ್ರನ ಮಗ; ಲೋಹಿತಾಶ್ವ : ರೋಹಿತಾಶ್ವನು ಮರಣಹೊಂದಿದಾಗ ಅವನ ತಾಯಿ ತಂದೆಗಳು ಹೇಡಿತನದಿಂದ ಅಗ್ನಿಪ್ರವೇಶಮಾಡಲು ಸಿದ್ಧರಾದರು (ಹಕಕಾ. ೨೯ ಪೀಠಿಕೆ). [ಸಂ.]

**ರೋಹಿಷ** (ನಾ). ೧. ಒಂದು ಬಗೆಯ ಸುವಾಸನೆಯ ಹುಲ್ಲು; ಲಾಮಂಚ. ೨. ಒಂದು ಬಗೆಯ ಮೀನು. ೩. ಒಂದು ಬಗೆಯ ಜಿಂಕೆ. [ಸಂ.]

**ರೋಹಿಸು** (ಕ್ರಿ). ಮೇಲೆಬೀಳು ; ಆಕ್ರಮಿಸು : ಆ ಕಾಕರಾಸರುಮೆಬ್ಬಾ ಪೆರ್ಗಾಣ್ಣಿಯ ಕೋಟೆಯಾನ್ ರೋಹಿಸಿ (ಎಕ. VIII, ಸೊರಬ. ೦೦-೪; ಕ್ರಿ. ೮೦೦). [ರೋಹಣ + - ಇಸು]

**ರೋಹೀತಲ್ಲ** (ನಾ). ಒಂದು ಊರಿನ ಹೆಸರು : ತಸ್ಯ ಪೂರ್ವತಃ ರೋಹೀ ತಲ್ಲಗ್ರಾಮಃ (ಇಇ. XII. ೨೬೬-೫೪; ೯೭೩). [ ? ]

**ರೌಕುಳ** ' ರವಕುಳ ' ನೋ.

**ರೌಕುಳಿ** (ನಾ). ಚೆಲ್ಲಾಪಿಲ್ಲಿ ; ಅಸ್ತವ್ಯಸ್ತತೆ: ಆ ರೌಕುಳಿಯ ರಣದೊಳೆತ್ತ ತ್ತಲುಂ ಪರಿದಪಾರಶೋಣಿತನದಿಗಳ್ (ಕೀಶರಾ. ೦೭-೩೭). [<ರವಕುಳ]

**ರೌಚನಿಕ** (ಗು). ೧. ಹಳದಿಬಣ್ಣದ. (ನಾ). ೨. ಹಲ್ಲಿನ ಮೇಲಿನ ಕೊಳೆ. [ಸಂ.]

**ರೌಚ್ಯ** (ನಾ). ೧. ಕಾಂತಿ; ಹೊಳಪು: "ರುಕ್ . . . ರುಚ್ಯಂ, ರೌಚ್ಯಂ, ಈ ೬ ಪೊಗರ್" (ಕಾಕಶ. ೧೫೦). ೨. ಹದಿನಾಲ್ಕು ಮನುಗಳಲ್ಲಿ ಒಬ್ಬ: ರುದ್ರಸಾವರ್ಣಿಕ ರೌಚ್ಯ ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳ್ (ವಿವೇಕ. ೨೦೪). [ಸಂ.]

**ರೌಡಿ** (ನಾ). ತುಂಟಃ ಪುಂಡ : ಆ ಹಳ್ಳಿಯಲ್ಲಿ ಅವನು ರೌಡಿರಂಗಣ್ಣ ನೆಂದೇ ಹೆಸರುವಾಸಿಯಾಗಿದ್ದಾನೆ (ರೂಢಿ). [←ಇಂ. Rowdy]

**ರೌಡು** (ನಾ). ಆರ್ಭಟ ; ಜೋರು (?) : ಈ ಸಾರಿ ಜಾತ್ರೀ ರೌಡು ಸ್ವಲ್ಪ ಹೆಚ್ಚು ಮಾಡಬೇಕಾಗೇದ (ತಿರುಗು. ೪೩) ; ಲಗೂ ಹೋಗು ಎಂದು ರೌಡು ಮಾಡಿದನು (ಗಂಡುಗಾ. ೧೪೬).

**ರೌಡಿಗೇಳು** = ಉದ್ರೇಕಗೊಳ್ಳು ; ಅಬ್ಬರಮಾಡು : ಅವರು ತುಸು ರೌಡಿಗೆದ್ದೇ ಮಾತಾಡಿದರು (ಗಂಡುಗಾ. ೪೩). [ ? ]

**ರೌದ್ರ** (ಗು). ೧. ರುದ್ರನಿಗೆ ಸಂಬಂಧಿಸಿದ. ೨. ಭಯಂಕರವಾದ ; ಭೀಕರವಾದ : ಮಹಾಬೀಭತ್ಸುಕುತ್ಸಿತೋತ್ಪತ್ತಿಸ್ಥಾನಂಗಳೊಳುತ್ಪನ್ನ ಕೃಷ್ಣನೀಲಕಪೋತಲೇಶ್ಯಾನುಬಂಧರೌದ್ರಪರಿಣಾಮಪರಿಣತರುಂ (ಸುಕುಮಾ. ೦೦-೪೦ ವ); ಹರುಷದಿಂ ಶಾಂತಿ ಸತ್ಯಂ ಭೂತದಯೆಗಳಂ ದೊರಕಿಸಿಯೆ ಕ್ರೋಧಾರ್ಥರೌದ್ರಮಿಥ್ಯಂಗಳಂ ಪರಿಹರಿಸಿ (ಹಕಾ. ೮-೦೬). (ನಾ). ೩. ಭಯಂಕರತೆ ; ಬೀಭತ್ಸ. ೪. ಕೋಪ ; ಕ್ರೋಧ. ೫. ಬಿಸಿಲು: " ಆತಪಃ , ರೌದ್ರಃ (ಕಥ್ಯತೇ) — ಈ ೨ ಬಿಸಿಲ್ " (ಶಠಾಯು. ೬-೪೦). ೬. ಒಂದು ಕ್ರೂರದೇವತೆ. ೭. ಅರುವತ್ತುನಾಲ್ಕು ಸಂವತ್ಸರಗಳಲ್ಲಿ ಐವತ್ತುನಾಲ್ಕನೆಯದು ; ರೌದ್ರಿ. ೮. [ಕಾವ್ಯಮೀ] ನವರಸಗಳಲ್ಲಿ ಒಂದು; ಕ್ರೋಧವೆಂಬ ಸ್ಥಾಯೀ ಭಾವದಿಂದ ಹುಟ್ಟುವ ರಸ: '' ಶೃಂಗಾರಃ, ಹಾಸ್ಯಃ, ಕರುಣಃ, ರೌದ್ರಃ . . . ಶಾಂತಃ — ಈ ೯ ರಸಂಗಳ್ '' (ಶಠಾಯು. ೦೬-೬೨); ಶೃಂಗಾರ ಹಾಸ್ಯ ಕರುಣ ರೌದ್ರ . . . ನವರಸಾವಸ್ಥೆ (ವಿವೇಕ. ೨೨೭) ; ರೌದ್ರ- ಗದಾಯುದ್ಧದಲ್ಲಿ ಮತ್ತು ವೇಣೀಸಂಹಾರದಲ್ಲಿ ದುರ್ಯೋಧನ ಭೀಮರ ಆಟೋಪ ಬರುವ ಕಡೆಗಳು (ಕೃಶಿಶಿ. ೦೪೦). ೯. [ಜೈನ] ನಾಲ್ಕು ಬಗೆಯ ಧ್ಯಾನಗಳಲ್ಲಿ ಒಂದು : ಆರ್ತರೌದ್ರಧರ್ಮಶುಕ್ಲಾಭಿ ಧಾನಧ್ಯಾನಚತುಷ್ಟಯಮುಮಂ (ಸುಕುಮಾ. ೩-೩೪ ವ). [ಸಂ.]

**ರೌದ್ರಕ** (ನಾ). ಉಗ್ರತೆ ; ತೀಕ್ಷ್ಣತೆ : ಕುಶನೆ ಕೇಳಚ್ಚರಿಯ ಕಟಿದವು ರಸವಸಿರಡಕ್ಷಿಗಳು ಲಕ್ಷ್ಮಣ ದಶಮುಖರ ಮೇಲಿಂದುಸೂರ್ಯರ ಶಾಂತ ರೌದ್ರಕದ (ತೊರರಾ. ೬-೨೫-೦). [ಸಂ.]

**ರೌದ್ರಕಾಲ** (ನಾ). ರಾತ್ರಿ ; ಇರುಳು : ಈ ರೌದ್ರಕಾಲದಲ್ಲಿ ರಾಕ್ಷಸರಿಗೆ ಬಲ ಹೆಚ್ಚಾಗುತ್ತದೆ (ವಕಥಾ. ೩೯). [ಸಂ.]

**ರೌದ್ರತೆ** (ನಾ). ಭಯಂಕರತೆ ; ಭೀಷಣತ್ವ : ನಂದೀಶ್ವರನ ಸರ್ವಜ್ಞತೆಯ ಭೃಂಗೀಶ್ವರನ ಶಿವ ಲಿಂಗೈಕಭಾವನೆ ವೀರಗಣವರನ ಪರಮ ರೌದ್ರತೆ (ಬಸವ. ೩೩-೫). [ಸಂ. ರೌದ್ರತಾ]

**ರೌದ್ರತೆವೆಱು** (ಕ್ರಿ). ಭಯಂಕರವಾಗು ; ಭೀಷಣತ್ವವನ್ನು ಹೊಂದು : ಪುಟ್ಟಿ ಸಮಸ್ತಧಾತ್ರಿಗೆ ಭಯಂ ನಿಟಲಾಕ್ಷ ಚತುರ್ಭುಜಾನ್ವಿತಂ ಪುಟ್ಟಿದ ಗುರ್ವು ರಾವಣನ ರೌದ್ರತೆವೆತ್ತವತಾರವೀತನೊಂದೊಟ್ಟಜೆ (ಜಗರಿ. ೬-೯೩). [ರೌದ್ರತೆ + ಪೆಱು]

**ರೌದ್ರದೃಷ್ಟಿ** (ನಾ). [ನಾಟ್ಯ] ಉಗ್ರತೆಯನ್ನು ಸೂಚಿಸುವ ನೋಟ ; "ಹುಬ್ಬನ್ನು ಗಂಟಿಕ್ಕಿ, ಕಣ್ಣನ್ನು ಕೆಂಪಗೆ ಮಾಡಿ ರೆಪ್ಪೆಬಡಿಯದೆ ನಟ್ಟ ದೃಷ್ಟಿಯಲ್ಲಿ ಆತುರದಿಂದ ನೋಡುವುದು" (ಅಭಿನಯದರ್ಪಣ ಅನುವಾದ) : ಎವೆಯೊಯ್ಯದೆ ಕಡುಗೆಂಪಂ ಸವನಿಸಿ ನಟ್ಟಾಲಿಗೊಂಡು ಪುರ್ವಂ ಗಂಟಿಕ್ಕುವ ಭಾವದಿಂದೆ ನೋಡುವ ತವಕಂ ವಿಸಗೆ ರೌದ್ರದೃಷ್ಟಿಯೆನಿಕುಂ (ಅಭಿನಯ. ೩-೦೩). [ಸಂ.]

**ರೌದ್ರಧ್ಯಾನ** (ನಾ). = ರೌದ್ರ ೯ : ಬಹ್ವಾರಂಭಸುರಂಭರೌದ್ರಧ್ಯಾನ ಪರಿಣತಂ (ಆದಿಪು. ೨-೦೦ ವ) ; ಬಹ್ವಾರಂಭರೌದ್ರಧ್ಯಾನದಿನುಪಾರ್ಜಿತ ನರಕಾಯುಷ್ಯನಾಸನ್ನಮೃತ್ಯುವಾಗಿ (ಚಾವುಂಪು. ೦೯). [ಸಂ.]

**ರೌದ್ರರತಿ** (ನಾ). ಉಗ್ರವಾದ ಸುರತ : ಅವಳು ಕೋಪದಿಂ ಕೆಂಗಣ್ಣಾಗಿ ಎವೆ ಇಕ್ಕದೆ ನೋಡುವಳು. ಅವನತ್ಯಂತ ಭಾವಿಸುವಳು . . . ನಖಕ್ಷತಂಗೈದು ಪೀಡಿಸಿ ಅವನ ಕೆಳಗಿಕ್ಕಿ ಮೇಲೇರಿ ಉಪರಿಸುರತಂಗೈವಳು. ಇದು ರೌದ್ರರತಿ (ಕಾಮಸೂ. ೨೪೬). [ಸಂ.]

**ರೌದ್ರರವ** (ನಾ). ಭಯಂಕರವಾದ ಶಬ್ದ, —ಅಬ್ಬರ : ರೌದ್ರರವಭಟಭಟಿತನಿಸ್ವನದ ಇಡಿದ ಧೂಳಿಯ ಧೂಮರಾಶಿಯು ಪಡೆ . . . ದಾವಾಗ್ನಿಯಂತಿರೆ ತೋಱಿತು (ಕುಮಾವ್ಯಾ. ೬-೩). [ಸಂ.]

**ರೌದ್ರರಸ** (ನಾ). = ರೌದ್ರ ೮ : ನೃಪತುಂಗದೇವ ಮಾರ್ಗೋತ್ಸವ ಮೂರ್ಜಿತೋಕ್ತಿಗಳಿನಕ್ಕತಿರೌದ್ರರಸಂ ರಸಾವಹಂ (ಕವಿರಾ. ೨-೦೦೦) ; ಕ್ರೋಧಾತ್ಮಕವಾದ ರೌದ್ರರಸದಲ್ಲಿ ಹೃದಯಸಂವಾದವನ್ನು ಪಡೆಯುವುದು ತಮಃಪ್ರಕೃತಿಯವರಿಗೇ ಸಹಜವು (ಕಾರಭಾ. ೪೦೯). [ಸಂ.]

**ರೌದ್ರಾವತಾರ** (ನಾ). ಭಯಂಕರವಾದ ಅವತಾರ ; ಉಗ್ರವಾದ ರೂಪ : ನಿನ್ನನ್ನೂ ಸೀಳಿ ನಾಲ್ಕುಭಾಗ ಮಾಡಿ ನಾಲ್ಕುಬಾಗಿಲುಗಳಿಗೆ ಜೋತುಹಾಕುತ್ತೇನೆ ನೋಡು ಈಗ ಎಂದು ರೌದ್ರಾವತಾರ ತಾಳಿ . . . ಒಳಗೆ ಹೋದಳು (ಹಳ್ಳಿಹಾ. ೦೧೬) ; ಜನರು ಅವನ ರೌದ್ರಾವತಾರವನ್ನು ನೋಡಿ ಬೆಕ್ಕಂಬೆರಗಾಗುತ್ತಿದ್ದರು (ವವಣ್ಣರು. ೩). [ಸಂ.]

**ರೌದ್ರಾವಹ** (ನಾ). ಭಯವನ್ನುಂಟುಮಾಡುವುದು; ಭೀಕರತೆಯನ್ನುಂಟು ಮಾಡುವುದು : ದೇವ ಮದೇಭದಾಕೃತಿಯನಾಂತು ಕೃತಾಂತನೆ ಬಂದನೆಂಬ ರೌದ್ರಾವಹಮಪ್ಪುದೊಂದು ಗಜಮೆತ್ತಣಿನಕ್ಕೆ ಪುರಕ್ಕೆ ಬಂದು (ಕಂಪ್ರಪು. ೯ ೯೩). [ಸಂ.]

**ರೌದ್ರಾಹವ** (ನಾ). ಭಯಂಕರವಾದ ಕಾಳಗ; ಭೀಕರವಾದ ಯುದ್ಧ : ಗದಾಯುದ್ಧಂ ಪರಿಚ್ಛನ್ನಮಿಂತು ದಿನಂಗಳ್ ಪದಿನೆಂಟಱಿಂ ಸಮೆದುದಾ ರೌದ್ರಾಹವಂ ಭಾರತಂ (ಗದಾಯು. ೯-೩೩) [ಸಂ.]

**ರೌದ್ರಿ** (ನಾ). ೧. ಭಯಂಕರಸ್ವರೂಪವನ್ನು ಹೊಂದಿರುವವಳು ; ದುರ್ಗೆ; ಪಾರ್ವತಿ : ಕ್ರೂರಮಾತೆಯರ, ರೌದ್ರಿಯರ, ಕಟ್ಟುಗ್ರಮೆಱಗಿಂ, ತೀರಿಸಿಂ ನಿಮ್ಮ ಕೋಪಂಗಳನ್ (ಅಕ್ಕತಾ. ೩೪-೬೫೭) ; ಶಕ್ತಿಯು . . . ವಾಮಾ, ಜ್ಯೇಷ್ಠಾ, ರೌದ್ರೀ ಎಂಬ ಸಂಜ್ಞೆಗಳಿಂದಲೂ ಇರುತ್ತಾಳೆ (ಶಾರದ. ೨೨೨). ೨. ಅರುವತ್ತುಸಂವತ್ಸರಗಳಲ್ಲಿ ಐವತ್ತುನಾಲ್ಕನೆಯದು: ಪ್ರಭವ . . . ರೌದ್ರಿ . . . ಅಕ್ಷಯವೆಂಬಱುವತ್ತು ತೆಱನಾಗಿಹುದು (ವಿವೇಕ. ೩೨೦). ೩. ಒಂದು ಬಗೆಯ ಬಳ್ಳಿ : "ರೌದ್ರಿಯೆನೆ ಕಣಬೆ" (ಮಂಗರಾ. ೯೪-೯೩). [ಸಂ. ರೌದ್ರೀ]

**ರೌದ್ರಿಕ** (ನಾ). ಭಯವನ್ನುಂಟುಮಾಡುವವನು : ಮೃತ್ಯುಧ್ಯಾನಪನೆ ಮಾಡುತಿರುವ ರೌದ್ರಿಕರ ನಡುವೆ ನಡೆದೆ (ಸರ್ದೂಲಾ. ೦೬-೩). [ಸಂ.]

**ರೌದ್ರೆ** (ನಾ). ೧. ಭಯಂಕರವಾಗಿರುವವಳು : ಕಡುವೇದನೆಯ ಕಳಕಳದ ಹಾಹಾರವದ ರೌದ್ರೆ ಸುಭದ್ರೆ ನಡೆತಂದು (ಕುಮಾವ್ಯಾದ್ರೋ. ೬-೦೩). ೨. ದುರ್ಗೆ : ಜಯ ರೌದ್ರೆ ಭೈರವಿ ವಿರೂಪಟ್ಟಹಾಸಿನಿ (ದೇವೀಮು. ೫೦). [ಸಂ. ರೌದ್ರಾ]

**ರೌನಾಡು** (ನಾ). ಒಂದು ಪ್ರದೇಶದ ಹೆಸರು : ಅಯ್ಯಪ್ಪ ರೌನಾಡ ಪಕ್ಕದ ಭಾಗದ ತೋಂಟಮಾವಾ ಮೂಡಣ ಬಸದಿಗೆ ಕೊಟ್ಟರ್ (ಮೈಶಾಶಾ. ೦೯೦೯, III, ೬-೩ ; ೩೦೦). [ ? + ನಾಡು]

**ರೌಪ್ಯ** (ಗು). ೧. ಬೆಳ್ಳಿಯಿಂದ ಮಾಡಿದ ; ರಜತದ. (ನಾ). ೨. ಒಂದು ಬಗೆಯ ಲೋಹ ; ಬೆಳ್ಳಿ ; ರಜತ : "ರೌಪ್ಯಮೆನೆ ಕಾರಮೆನೆ . . . ಬೆಳ್ಳಿಗಭಿಧಾನಮಕ್ಕುಂ" (ಮಂಗರಾ. ೩೦-೩) ; ಖೇಚರ ಕಾಂತೆಯ ಹಸ್ತದಿಂ ಕಟಲ್ದಿದ ನವರೌಪ್ಯಕುಂಭಮೆ . . . ಕಾಣಲಾದವು ದೆನಲ್ . . . ಪೊಳೆಯುತಿರ್ದುದು ಚಂಡಮರೀಚಿಮಂಡಲಂ (ಜಗರಿ. ೪-೬೦) ; ಬೆಳಮಂಜು ತಾಂ ರೌಪ್ಯಧೂಳಿಯ ಸಾಂದ್ರಧೌತಧವಳವನೆರಚಿ ಮುಚ್ಚಿ ಮುಸುಕಿದುದು ಗಿರಿವನಭುವನಮಂ (ಶ್ರೀರಾಮಾ. ೦೯೯-೦೩೩). [ಸಂ.]

**ರೌಪ್ಯಾದ್ರಿ** (ನಾ). ಬೆಳ್ಳಿಯ ಬೆಟ್ಟ ; ರಜತಗಿರಿ : ಅರ್ಥಶಾಸ್ತ್ರೋದಾತ್ತಂ ದಂಡೋಪ[ನತ]ನೆನೆ ರೌಪ್ಯಾದ್ರಿ ಚೆಲ್ವಾದುದಾಗಳ್ (ಶಾಂತಿಪು. ೦೦-೩೦) ; ನಗಂ ತೊಟ್ಟನೆ ಚಂಚಚ್ಚಂದ್ರರೋಚಿರ್ಧವಳಮೆನಿಸಿ ರೌಪ್ಯಾದ್ರಿಯಂ ಶಿರ್ದುದು (ಅಜಪು. ೪-೬೮). [ಸಂ.]

**ರೌಮಕ** (ಗು). ೧. ರೋಮದೇಶಕ್ಕೆ ಸಂಬಂಧಪಟ್ಟ,— ಸೇರಿದ. (ನಾ). ೨. ಅಜ್ಮೀರದ ಬಳಿಯಲ್ಲಿ ದೊರೆಯುವ ಒಂದು ಬಗೆಯ ಉಪ್ಪು : "ರೌಮಕಂ, ಬಸ್ತಕಂ'— ೨ ಸಾಭಿದೇಶದಲ್ಲಿ (ರುಮ) ಎಂಬ ಗಣಿಯೊಳಗೆ ಹುಟ್ಟುವ ಉಪ್ಪು, ಚೌಳುಪ್ಪಿಗೆ ಹೆಸರುಗಳು" (ನಿಘಂಟು. ೨೩೩). [ ಸಂ. ]

**ರೌರವ** (ಗು). ೧. ರುರು ಎಂಬ ಜಿಂಕೆಯ ಚರ್ಮದಿಂದ ಮಾಡಿದ. ೨. ಭಯಂಕರವಾದ ; ಭೀಕರವಾದ. ೩. ಅಪ್ರಾಮಾಣಿಕತೆಯಿಂದ ಕೂಡಿದ ; ಮೋಸದ. (ನಾ). ೪. (ಚಿತ್ರವಿಚಿತ್ರ ಹಿಂಸೆಗಳನ್ನು ಕೊಡುವುದೆಂದು ಭಾವಿಸಲಾದ) ಭಯಂಕರವಾದ ನರಕಗಳಲ್ಲಿ ಒಂದು : "ತಪನಃ . . . ರೌರವಃ . . . ಕಾಲಸೂತ್ರಂ . . . ಆ ನರಕಭೇದಂಗಳ ಹೆಸರುಗಳು" (ನಿಘಂಟು. ೬೪) ; ಭಾರತದ ಕಥನಪ್ರಸಂಗವು . . . ಘೋರರೌರವವನ್ನು ಕೆಡಿಸುಗು ಕೇಳ್ದ ಸಜ್ಜನರ (ಕುಮಾವ್ಯಾ. ೦-೨೨) ; ರೌರವ . . . ಕಾಲಸೂತ್ರಗಳೆಂಬವೇ ಯೆಂಟು ನರಕಂಗಳು (ವಿವೇಕ. ೦೬೧). ೫. ಇಪ್ಪತ್ತೆಂಟು ಶಿವಾಗಮಗಳಲ್ಲಿ ಒಂದು : ಕಾಮಿಕ . . . ವೀರ, ರೌರವ, ಮಕುಟ . . . ವಾತುಲ ಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಶಾರದ. ೬೨). ೮. [ಜೈನ] ಹದಿಮೂರು ಇಂದ್ರಕಗಳಲ್ಲಿ ಒಂದು : ರೌರವ ಭ್ರಾಂತ . . . ವಿಕ್ರಾಂತಾಖ್ಯ ತ್ರಯೋದಶೇಂದ್ರಕ . . . ಬಿಲಂಗಳ್ (ಕತ್ತ್ರಿಕ್ರ. ೦೨೦). [ ಸಂ. ]

**ರೌಸು** (ನಾ). ಆರ್ಭಟ ; ಅಬ್ಬರ : ರೌಸಿನಲ್ಲಿ ಯೋಗ್ಯಾಯೋಗ್ಯದ ವಿವೇಕವು ಅಳಿದು ಆವೇಶದ ಕೂಗು ಕೇಳಿಬರುತ್ತದೆ (ಹುಕ್ಕೇರಿ. ೦೩೭) ; ರೌಸಿನಿಂದ ಎದ್ದು ಕುಳಿತಳು (ಕಂಕಂ. ೯೯). [← ಮರಾ. ರವಸ]

**ರೌಹಿಣ** (ಗು). ೧. ರೋಹಿಣೀನಕ್ಷತ್ರದಲ್ಲಿ ಹುಟ್ಟಿದ. (ನಾ). ೨. ಶ್ರೀಗಂಧದ ಮರ ; ಚಂದನವೃಕ್ಷ. ೩. ಅಗ್ನಿಯ ಹೆಸರುಗಳಲ್ಲಿ ಒಂದು. [ ಸಂ. ]

**ರೌಹಿಣೇಯ** (ನಾ). ೧. ರೋಹಿಣಿಯ ಮಗ ; ಬುಧ : " ರೌಹಿಣೇಯಃ, ಬುಧಃ, ಸೌಮ್ಯಃ, ಚಾಂದ್ರಮಸಾಯನಃ— ಈ ೪

ಬುಧನ ಪೆಸರ್ " (ಹರಿವಂ. ೯-೯೬) ; ನಮ್ಮ ದೇಶದಲ್ಲಿ ಈ ಗ್ರಹಕ್ಕೆ ಬುಧ, ರೌಹಿಣೇಯ (Rauhineya) ಎಂದು ನಾಮಕರಣ ಮಾಡಿದ್ದರು (ಅಣಾಕ. ೦೩). ೨. ವಸುದೇವನ ಹೆಂಡತಿಯಾದ ರೋಹಿಣಿಯ ಮಗ ; ಬಲರಾಮ : "ಬಲದೇವಃ . . . ರೌಹಿಣೇಯಃ . . . ಹಲಾಯುಧಃ— ಈ ೧೮ ಬಲದೇವನ ಪೆಸರ್ " (ಹರಿವಂ. ೬-೩೦) ; ರೌಹಿಣೇಯಂ ಮಾಯಾವೇಷನಾಗಿ ಗೋಪನಪ್ಪ ಪ್ರಳಂಬನೊಡನೆ ಮಿಕ್ಕ ಗೋಪಾಲರೆಲ್ಲಂ ಗೋಪಾಲರೊಡನೆ ಗೆಡೆಯಾಗಿ (ಜಗಂ. ೯-೩೨ ವ). ೩. ಒಂದು ಬಗೆಯ ರತ್ನ ; ಪಚ್ಚೆ; ಮರಕತ. ೪. ಕರು.

[ಸಂ.]

**ರೌಹಿಷ** (ನಾ). ೧. ಒಂದು ಬಗೆಯ ಜಿಂಕೆ : "ಸಾರಗ, ರೌಹಿಷಃ, ಬೆಟ್ಟಕುರಿ . . . ಪೃಷತಃ, ಚುಕ್ಕೆದುಪ್ಪಿ " (ಸಿದ್ಧಾಂತಿ. ೦೩೩). ೨. ಒಂದು ಬಗೆಯ ಹುಲ್ಲು ; ಕಾಚಿಹುಲ್ಲು : "ಕತ್ತೃಣಂ . . . ರೌಹಿಷಂ— ೬ ಕಾಚೀಹುಲ್ಲು " (ಸಿದ್ಧಾಂತಿ. ೦೩೦). ೩. ಒಂದು ಬಗೆಯ ಮೀನು: (?). [ಸಂ.]

**ರ್‍ಯಾಕಟಿ** ' ರಾಕಡಿ ' ನೋ.

**ರ್‍ಯಾಕಟೆ** ' ರಾಕಡಿ ' ನೋ.

**ರ್‍ಯಾಕಡೆ** ' ರಾಕಡಿ ' ನೋ.

**ರ್‍ಯಾಗಟೆ** ' ರಾಕಡಿ ' ನೋ.

*

# ಲ

**ಲ** (ನಾ). ೧. ಕನ್ನಡ ವರ್ಣಮಾಲೆಯ ನಲವತ್ತೆಂಟನೆಯ ಅಕ್ಷರ; ಅವರ್ಗೀಯದ ಮೂರನೆಯ ವರ್ಣ ; ಲಕಾರ. ೨. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : "ಗ ಡ ಬ ಲಂ ಮೂಱಕ್ಕು" (ಮಂಗರಾ. ೦೦೯-೦೦). ೩. [ಛಂದ] ಲಘು ಎಂಬುದರ ಸಂಕೇತ : "ಮಯರಸತಜಭನಂಲಗವೆನಿಪ್ಪಕ್ಷರಂ ಗಣಾಕ್ಷರಗಳಕ್ಕುಂ" (ಮಂಗರಾ. ೦೦೭-೦೯); ಮಯರಸತಜಭನಲಗವಿನಿಚಯವೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ (ಛಂದೋಂಬು. ೦-೩೬).

**ಲಂಕ** (ನಾ). ಬಡಗಿ : ಲಂಕರೊಕ್ಕಲಲ್ಲಿ ಆಱುತಿಂಗಳ್ಗೆ ಮಾಣಿತಿವಿಗೆ ಮರವಿಯೆಂಬಿವೊನ್ದಕ್ಕುಂ ವರ್ಷಕ್ಕೆ ಮಂಚವೊನ್ದಕ್ಕುಂ (ಎಕ. XIX, ೬೬-೨೮; 1135) ; " ಬಡಿಗ, ಮರದ ಕೆಲಸ ಮಾಡುವವನು" (ಎಕ. XIX, ಪು. ೩೩ ಛಾಯಾಂತರ).

**ಲಂಕಿಗ** (ನಾ). ಲಂಕೆಯಲ್ಲಿ ವಾಸಿಸುವವನು ; ಲಂಕೆಯ ಪ್ರಜೆ : ಲಂಕೆಗಿನ್ ಸುಖಮೆಲ್ಲಿ? ಲಂಕೆಗಿನ್ ಶುಭಮೆಲ್ಲಿ? ಲಂಕಿಗರ್ ನಮಗೆ ನೆಮ್ಮದಿಯೆಲ್ಲಿ ? (ಶ್ರೀರಾಮಾ. ೯೬೭-೯೮೦). [ಲಂಕೆ + — ಇಗ]

**ಲಂಕಿಣಿ** (ನಾ). ೧. ಲಂಕೆಯ ಕಾವಲಿನ ರಾಕ್ಷಸಿ : ಹರಿತಂದಳಾ . . . ಮಹಾದ್ಭುತಘೋರರಕ್ಕಸಯುವತಿ ಲಂಕಿಣಿಯೆಂಬವಳು ರಕ್ಕಸಿಯರೊಡಗೂಡಿ (ತೊರರಾ. ೩-೨-೬) ; ಲಂಕಿಣಿಯನು ಕೊಂದು ಶಂಕೆಯಿಲ್ಲದೆ ನಾನು ಬಿಂಕದಿಂದಲಿ ಬಂದೆ (ಪುರಂದ. ೯-೬೮-೨). ೨. (ಆಲಂ) ದುಷ್ಟ ಹೆಂಗಸು; ಗಯ್ಯಾಳಿ : ಆ ಲಂಕಿಣಿಯ ಕಾಲು ಕಟ್ಟಿಕೊಳ್ಳುವ ಸ್ಥಿತಿ ನನಗೆ ಬಂತು (ಮಹಾಗ. ೯೦). ' ತಾಟಕಿ ' ಪರಾ. [< ಸಂ. ಲಂಕಾ]

**ಲಂಕಿಣಿವಿದ್ಯೆ** (ನಾ). (ಆಲಂ) ಘಾಟಿತನ ; ಕುಯುಕ್ತಿ : ಅವಳಿಗೇನು ಬಂದಿದೆ ರೋಗ ! ಲಂಕಿಣಿವಿದ್ಯೆ ಮಾಡಿದ್ದಾಳೆ (ಮಹಾಗ. ೦೭೮).

[ಲಂಕಿಣಿ + ವಿದ್ಯೆ]

**ಲಂಕೆ** (ನಾ). ೧. ಭಾರತದ ದಕ್ಷಿಣಕ್ಕಿರುವ ಒಂದು ದ್ವೀಪ ; ಸಿಂಹಳ; ಈಗಿನ ಸಿಲೋನು. ಇದರ ರಾಜಧಾನಿಗೆ ಲಂಕಾನಗರಿ ಎಂಬ ಹೆಸರಿತ್ತು : ಲಂಕೆಯ ಚೆಲ್ವಂ ನೋಡುತ್ತುಂ . . . ಅರಮನೆಯಂ ಪೊಕ್ಕಂ (ತುಂರಾಮಾ. ೦೯-೯೬); ರಾವಣಾಸುರ ಲಂಕೆಯಲಿ ಮತ್ಸ್ಯಾವತಾರಂ ಮತ್ಸ್ಯಕೇಶ್ವರದೇವರಂ ತಾ ನಿಲಿಸಿ ಭಜಿಸನೆ (ಚಿಕ್ಕು. ೩೯-೬೨) ; ಅಂಕೆಯಿಲ್ಲದ ಕೋತಿ ಲಂಕೆ ಸುಟ್ಟಿತು (ಗಾದೆ). ೨. ಒಂದು ದ್ವೀಪಸಮುದಾಯದ ಹೆಸರು : ಗೋದಾವರೀನದಿಯು ಸಮುದ್ರಕ್ಕೆ ಸೇರುವ ಕಡೆ . . ಲಂಕೆಗಳು ಎಂದು ಕರೆಯಲ್ಪಡುವ ಅನೇಕ ದ್ವೀಪಗಳೂ . . . ಇವೆ (ಭೂಗೋಳ. ೫೦). [ಸಂ. ಲಂಕಾ]

**ಲಂಕೋಯಿಕೆ** (ನಾ). ಒಂದು ಬಗೆಯ ಸಸ್ಯ; ಸ್ಪೃಕ್ಕೆಯೆಂಬ ಗಂಧದ್ರವ್ಯ ; ಸಂಕೇಬೇರು : "ಮರುನ್ಮಾಲಾ . . . ಲಘುಃ, ಸಮುದ್ರಾಂತಾ, ವಧೂಃ, ಕೋಟಿವರ್ಷಾ, ಲಂಕೋಯಿಕಾ—೧೦ ಸ್ಪೃಕ್ಕೆಯೆಂಬ ಗ್ರಂಧ್ಯದ್ರವ್ಯ, ಸಂಕೇಬೇರು" (ಸಿದ್ಧಾಂತಿ. ೦೯೩).

[ಸಂ. ಲಂಕೋಯಿಕಾ]

**ಲಂಗ** (ನಾ). ಹೆಣ್ಣುಮಕ್ಕಳ ಒಂದು ಉಡುಗೆ ; ಪಾವಡೆ : ಚಿಕ್ಕ ಮಕ್ಕಳು ಇಂಗ್ಲೀಷಿನವರಂತೆ ಷರಾಯಿ ಲಂಗಗಳನ್ನು ಹಾಕಿಕೊಳ್ಳುತ್ತಿದ್ದವು (ಹುಚ್ಚಿಹ. ೬) ; ನಿನ್ನ ಲಂಗ ಯಾರು ಹೊಲಿದದ್ದು ? (ದೀಕ್ಷಿತ. ೦೦೦).

[← ಹಿಂ. ಮರಾ. ಲಹಂಗಾ]

**ಲಂಗಟ** ' ಲಂಗೋಟಿ ' ನೋ.

**ಲಂಗಡ**, ಲಂಗಡೆ (ನಾ). ಕಾಲಿನಲ್ಲಿ ಊನವುಳ್ಳವನು ; ಕುಂಟ : ಟೀಪುಸುಲ್ತಾನರ ಕಡೆಯಿಂದ ಲಂಗಡಾ ದಾಡಿಸೇಖ್‌ಯಿಮಾಮುಯೆಂಬ ಶಿಪಾದಾರನು (ರಾಜೇಂದ್ರ. ೮೭). **ಲಂಗಡೆ** : ವೆಂಕಟಕೃಷ್ಣ ಪಾಪ ಕೊಂಚ ಕುಂಟು. ತೀರ ಲಂಗಡೆ ಅಲ್ಲ (ಮಾಮಾಪಿ. ೦೩); ಕಾಲುಗೀಲು ಮುರಿದುಕೊಂಡು ಲಂಗಡೇ ಆಗೀರಿ (ಸಂಯುಕ್ತ. ೯೨). [← ಹಿಂ. ಮರಾ. ಲಂಗಡಾ]

**ಲಂಗಡೆ** ' ಲಂಗಡ ' ನೋ.

**ಲಂಗರಖಾನೆ** (ನಾ). ಬಡಬಗ್ಗರಿಗಾಗಿ ಇರುವ ತಂಗುಮನೆ.— ಅನ್ನಛತ್ರ : ಆರು ತಿಂಗಳಲ್ಲಿ ಮಶೀದಿಯು ತಯಾರಾಯಿತು. ಲಂಗರಖಾನೆಯ ಕಟ್ಟಡವೂ ಸಿದ್ಧವಾಯಿತು (ದಾಂಡೇ. ೨೯೦).

[ ← ಪಾರ. ಹಿಂ. ಮರಾ. ಲಂಗರ್‌ಖಾನಾ]

**ಲಂಗರು**, ನಂಗರು, ನಂಗಲ್ಲು (ನಾ). ಹಡಗನ್ನು ನಿಲ್ಲಿಸುವಾಗ ನೀರಿನಲ್ಲಿ ಇಳಿಬಿಡುವ ಭಾರವಾದ ಕಬ್ಬಿಣದ ಸಲಕರಣೆ; ಗುಂಡು ಮತ್ತು ಸರಪಳಿ : ' ಲಂಗರು ' ಎಂಬುದು ಬಹಳ ಭಾರವಾದ ಕಬ್ಬಿಣದ ತೊಲೆ . . . ಹಡಗು ಗಾಳಿಗೆ ಕದಲದೆ ನಿಲ್ಲಬೇಕಾದ ಸಂದರ್ಭದಲ್ಲಿ ಅದನ್ನು ಸರಪಳಿಯಿಂದ ನೀರಿನಲ್ಲಿ ಬಿಟ್ಟು, ಅದು ನೆಲದ ಮೇಲೆ ಕುಳಿತುಕೊಳ್ಳುವಂತೆ ಮಾಡುವರು (ಗುಣಶಾ. ೬೫); ಅದು ಲಂಗರಿಲ್ಲದ ನೌಕೆ (ಹುಕಕ. ೩೯). **ನಂಗರು** : (ಕಿಸಂಗಾ. ೦೩೫). **ನಂಗಲ್ಲು** : " ನಂಗಲ್ಲು ಸ್ಥಾಪ್ಯಮಕ್ಕುಂ " (ಮಂಗರಾ. ೦೨೦-೯); ನಂಗಲ್ಲನಿಳುಹಿದ ಹಡಗು ನಿಲ್ವಂತೆ ರಥಾಂಗ ನಿಂದುದು ತೋಟ್ಪನಲ್ಲಿ (ಶರಶ. ೨೯-೩೦); ನಂಗಲ್ಲನಿಕ್ಕಿದ ಹಡಗಿನಂತಾ ರಥ ಕಂಗೊಳಿಸುತ ನಿಂದಿರಲು (ಗೋಮುಟೀ. ೦೦-೬೬).

**ನಂಗರುಎತ್ತು** = ಲಂಗರನ್ನು ಎತ್ತು,—ತೂಗು: (ಕಿಸಂಗಾ. ೦೩೫). **ನಂಗರುಬಿಡು** = ಲಂಗರುಹಾಕು : (ಕಿಸಂಗಾ. ೦೩೫). **ನಂಗರುವಾಡೆ** = ಹಡಗನ್ನು ಲಂಗರು ಹಾಕಿ ನಿಲ್ಲಿಸುವ ಸ್ಥಳ : (ಕಿಸಂಗಾ. ೦೩೫). **ಲಂಗರುಹಾಕು**, **ನಂಗರುಹಾಕು** = ಹಡಗನ್ನು ನಿಲ್ಲಿಸಲು ಲಂಗರನ್ನು ನೀರಿನಲ್ಲಿ ಇಳಿಬಿಡು ; ಹಡಗನ್ನು ನಿಲ್ಲಿಸು : ಹರಿಕುಲಿಶನು . . . ಕಪ್ಪುಸಮುದ್ರವನ್ನು ದಾಟಿ ಆ ಪುರದ ಬಂದರಿನಲ್ಲಿ ಲಂಗರುಹಾಕಿದನು (ಕುಹಿಸ. ೯೬); ಹಡಗುಗಳು ಲಂಗರುಹಾಕುವ ಸ್ಥಳವು 'ರೇವು' ಅಥವಾ 'ಅಳವೆ' ಎಂದು ಕರೆಯಲ್ಪಡುತ್ತದೆ (ಭೂಗೋಳ. ೦೦). [ ← ಪಾರ. ಹಿಂ. ಲಂಗರ್ : ಮರಾ. ಲಂಗರ್, ನಾಂಗರ್ ; ಇಂ. Anchor]

**ಲಂಗರುಸುಂಕ** (ನಾ). ಲಂಗರು ಹಾಕಿದ ಹಡಗುಗಳ ಮೇಲೆ ಹಾಕುವ ತೆರಿಗೆ : (Anchorage. ೩೦೪೩). [ಲಂಗರು + ಸುಂಕ$_1$]

**ಲಂಗಿಗ** (ನಾ). ಬಿದಿರಿನ ಗಳೆಯ ಮೇಲೆ ಕಸರತ್ತು ಮಾಡುವವನು; ದೊಂಬ : ವಿಳಯ ಬಿದಿರ ಮೇಗೇಱಯಾಕಾಶದೊಳಾಡುವ ವಿದ್ಯಾಧರ ಲಂಗಿಗರ ಮನೆಯೊಳ್ ಪೆಣ್ಗತ್ತಿಯಾಗಿ ಪುಟ್ಟಿ (ವಡ್ಡಾರಾ. ೯-೨೬).

[< ಪ್ರಾ. ಲಂಖಿಗ. / ಸಂ. ಲಂಘಕ]

**ಲಂಗಿಸು** (ಕ್ರಿ). ನೆಗೆ; ಹಾರು; ಕುಪ್ಪಳಿಸು; ಜಿಗಿ : ತುಂಗಗಿರಿಶಿಖರದಿಂದಂ ಲಂಗಿಸಿ ಶೂದ್ರಕನ ಪೊಳೆವ ಸುರಿಗೆಯ ಮೊನೆಯೊಳ್ . . , ಪಾಯ್ದು ಬರ್ದುಂದು ಸಿಂಗಂ (ಕಾವ್ಯಸಾ. ೦೦೦೯ ಶೂದ್ರ೪) ; ಪೊಗೆ ಪುಗೆ ಕಣ್ಣಿಂ ಸಿಂಗಂಗಳಳುರೆ ಗರ್ಜಿಸಿ ಲಂಗಿಸಿ ಪುಡಪುಡನೆ ಪುಟ್ಟಿಗಿ ಸತ್ತುವು ಪಲವುಂ (ಶಂಶಚ. ೩-೯೨); ಸಿಂಗಾಡಿಗಳ ತುಂಡಿಸಿ ನೇಜೆಯುಗಳ ಲಂಗಿಸಿ ಸೆಳೆಸೆಳೆದಿಡುತ (ಕಂಪರಿ. ೦೫-೯೬). [< ಲಂಘಿಸು]

**ಲಂಗು** (ನಾ). ಕಡಿವಾಣದ ಒಂದು ಭಾಗ ; ಕಡಿವಾಣ.

**ಲಂಗುಲಗಾಮು** = ೧. ಕುದುರೆ ಮತ್ತು ಒಂಟೆಗಳನ್ನು ಹತೋಟಿಯಲ್ಲಿಡಲು ಬಳಸುವ ಸಾಧನಗಳು; ಕಡಿವಾಣ ಮತ್ತು ಕಡಿವಾಣ: ಸೊಗಸಾದ ಜೀನುಗಳನ್ನು ಮತ್ತು ಲಂಗುಲಗಾಮುಗಳನ್ನು ಹಾಕಿದ್ದ ಎರಡು ಒಂಟೆಗಳನ್ನೂ . . . ಅರ್ಪಿಸಿದೆ (ಕ್ರವಾಣ. II. ೯೪); ಇಂದ್ರಿಯಗಳ ಹಿಂದೆ ಮನಸ್ಸನ್ನು ಲಂಗುಲಗಾಮಿಲ್ಲದ ಕುದುರೆಯಂತೆ ಬಿಟ್ಟುಕೊಟ್ಟು (ವಾರಾಳ. ೦೦೬). ೨. (ಆಲಂ) ಕಟ್ಟು; ತಡೆ; ನಿರ್ಬಂಧ ; ಹಿಡಿತ : ನಿನ್ನ ಬಾಯಿಗೆ ಲಂಗುಲಗಾಮು ಏನೂ ಇಲ್ಲ (ರಂಗರೋ. ೦೪೦); ಅವರ ಕೋಪಕ್ಕೇನು ಲಂಗುಲಗಾಮೇ ಬೇಡವೆ ? (ಸ್ವಾಮಿಸ್ಸೇ. ೫೬). [< ಸಂ. ಲಂಖನೀ]

**ಲಂಗೂಟ** ' ಲಂಗೋಟಿ ' ನೋ.

**ಲಂಗೋಟಿ**, ಲಂಗಟಿ, ಲಂಗೂಟ (ನಾ). (ಗಂಡಸು) ಗುಹ್ಯಾಂಗವನ್ನು ಮಾತ್ರ ಮುಚ್ಚುವಂತೆ ಧರಿಸುವ ಬಟ್ಟೆ ; ಕೌಪೀನ ; ಪುಟಗೋಸಿ : ಲಂಗೋಟಿ ಬಲುಪೊಳ್ಳೆದಣ್ಣ ಬಚ್ಚಿರ್ಹಂಗಿಲ್ಲದೆ ಮಡಿಗೆ ಒದಗುವುದಣ್ಣ ಬಡವರಿಗಾಧಾರವಣ್ಣ ಈ ಲಂಗೋಟಿ ಬೈರಾಗಿಗಳ ಭಾಗ್ಯವಣ್ಣ (ಪುರಂದ. ೪-೮೮ ಪಲ್ಲವಿ) ; ಲಂಗೋಟ ಹಾಕಿದಿ ಕಂಗೆಟ್ಟು ಶೋಕದಿ (ಕಂಠ. ೬೫ ಕವಿಕಾವ್ಯಕಂಠಹು) ; ಲಂಗೋಟಿಯ ಮೇಲೆಯೇ ಒಂದು ಸಣ್ಣ ರೇಶಿಮೆಯ ಮಡಿ ಉಟ್ಟುಕೊಂಡಿದ್ದ (ವ್ಯಪಿ. ೦೯೩). **ಲಂಗಟಿ** : ಲಾಂಗೀ ಆರ ಸುತ್ತರೀ ಲಂಗಟಾ ಆರ ಲಪಾಡಿಸಿರಿ (ಸಮಶೀ. ೨೯೫) ; ಒಂದೂವರಿ ಗೇಣು ಲಂಗಟಾ ಸಿಗಿಸಿಕೊಂಡು . . . ಹೊರಟರು (ತಿಮಗು. ೦೯). **ಲಂಗೂಟ** : ಲಂಗೂಟ ಹಾಕಿ ಬತ್ತಲೆಯಾಗಿ ಗುರ್ಜಿಯನ್ನು ಹೊರುವ ಹುಡುಗರು ಕೋಪಣ ಧರಿಸುವ ವಿರಕ್ತಮೂರ್ತಿಯನ್ನು ಚಿತ್ರಿಸದಿರವು. (ಕನ್ನಶಾ. ೦೫೯).

**ಲಂಗೋಟಿಗೆಳೆಯ** = ಚಿಕ್ಕಂದಿನ ಸ್ನೇಹಿತ : ಬಾಲ್ಯಮಿತ್ರ : ಲಂಗೋಟಿ ಗೆಳೆಯರೊಂದಿಗೆ ವಿಶ್ವಾಸದಿಂದ ಕಲಿಯುತ್ತಿದ್ದನು (ಕೃಪರು. ೫೨೬). **ಲಂಗೋಟಿಮಿತ್ರ** = ಲಂಗೋಟಿಗೆಳೆಯ : ಅಪರಿಚಿತರನ್ನು ಸಹ ಲಂಗೋಟಿಮಿತ್ರರಂತೆ ಮಾತನಾಡಿಸುತ್ತಾನೆ (ನಾಡಗೀ. ೯೦). **ಲಂಗೋಟಿಸ್ನೇಹಿತ** = ಲಂಗೋಟಿಗೆಳೆಯ : ಅವರಿಬ್ಬರೂ, ಲಂಗೋಟಿಸ್ನೇಹಿತರು (ರೂಢಿ). [← ಪಾರ. ಲಂಗೋಟೀ ; ಹಿಂ. ಲಂಗೋಟ್, ಲಂಗೋಟಾ, ಲಂಗೋಟೀ; ಮರಾ. ಲಂಗುಟಾ, ಲಂಗುಟೀ, ಲಂಗೋಟ್, ಲಂಗೋಟಾ, ಲಂಗೋಟೀ]

**ಲಂಘಕ** (ನಾ). = ಲಂಗಿಗ : ತನ್ನ ವಿದ್ಯೆಯನ್ನು ತೋರಿಸಲು ಬಯಸುವ ಲಂಘಕನು ನೆಲವನ್ನು ಅಗೆಯಿಸಿ, ಕಲ್ಲುಬಕ್ಕರೆಗಳನ್ನು ತೆಗೆಯಿಸಿ, ನೆಲವನ್ನು ಸಮಗೊಳಿಸಿ. ಮೃದುವಾದ ನೆಲದಲ್ಲಿ ತನ್ನ ವಿದ್ಯೆಯನ್ನು ತೋರಿಸುವನು (ಬುದ್ಧಕ. ಮಿಲಿಂದ. ೯೫). [ಸಂ. / ಪಾಲಿ. ಲಂಘಕ]

**ಲಂಘನ** (ನಾ). ೧. ಹಾರುವಿಕೆ ; ನೆಗೆತ; ಜಿಗಿತ: ' ಲಂಘಿಸು ' ಪರಾ. ೨. ಕುದುರೆಯ ಒಂದು ಬಗೆಯ ಓಟ;ನೆಗೆದು ನೆಗೆದು ಓಡುವುದು;ಪ್ಲುತ: ನೆಗೆನೆಗೆಯಿಸಿ ಓಡಿಸುವುದು ಲಂಘನವೆನಿಸಿಕೊಂಬುವುದು (ಅಶ್ವಶೀ. ೨೫-೦೦). ೩. ಮಿತಿಯನ್ನು ಮೀರುವುದು; ಹದ್ದು ಮೀರಿದ ವರ್ತನೆ. ೪. ಹತ್ತುವುದು; ಏರುವುದು. ೫ ಉಪವಾಸ ; ನಿರಾಹಾರ : ಲಂಘನವು ದೀಪನ ಪಾಚನಂಗಳನ್ನುಂಟುಮಾಡುವುದು (ಸಕವೈ. ೦೦೦) ; ಲಂಘನವು ಶೋಧನ, ಶಮನ ಎಂದು ಎರಡು ಪ್ರಕಾರವಾಗಿದೆ (ಆಂಗಾ. ೦೯೫). ೩, ೫ : ಭಕ್ತದ್ವೇಷಂ ಜಡಸಂಸಕ್ತಿ ಸದಾಚರಿತಲಂಘನಂ . . . ಕುಂದದ ಮುಕ್ತಜ್ವರನಂದದಿಂದಮರಸರೊಳೆಂದುಂ (ಶಂಭ್ರಪು. ೦೦-೦೦೬).

**ಲಂಘನಮಾಡು** = ಲಂಘನಹಾಕು : ಅಜೀರ್ಣವಾದಾಗ ಲಂಘನ ಮಾಡಿದರೆ ಒಳ್ಳೆಯದು (ರೂಢಿ). **ಲಂಘನಹಾಕು** = ಉಪವಾಸವಿರು ; ನಿರಾಹಾರಿಯಾಗಿರು : ಎರಡು ದಿವಸ ಲಂಘನಹಾಕಿದರೆ ಸರಿಹೋಗುತ್ತೆ ಎಂದು ಅದನ್ನು ಮಾಡಿದೆ (ಮಹೋಪಂ. ೭೬). [ಸಂ.]

**ಲಂಘನಂಗೆಯ್** (ಕ್ರಿ). ಉಪವಾಸವಿರು ; ನಿರಾಹಾರಿಯಾಗಿರು : ಗಜಮಸ್ತಕಮಸ್ತಿಷ್ಕದಿನಜೀರ್ಣಮಾಯ್ತೆಂದು ಲಂಘನಂಗೆಯ್ವಪೊಲೇಂ ಗಜರಿಪು ಲಂಘಿಸಿದುದೊ (ಅಕಪು. ೯-೨೬). [ಲಂಘನ + ಕೆಯ್$_1$]

**ಲಂಘನೀಯ** (ನಾ). ಮೀರಬೇಕಾದುದು ; ತಿರಸ್ಕರಿಸಲು ಯೋಗ್ಯವಾದುದು : ಮುದುಗಣ್ಣುಚಿತಮಂ ನುಡಿವುದು . . . ಉಚಿತಮಂ ಬಗೆಯದೆ ನುಡಿದೊಡಮಮಗೆ ಲಂಘನೀಯಮಪೇಯಂ (ಶಾಂತಿಪು. ೦೦-೦೨೦). [ ಸಂ. ]

**ಲಂಘನೆ** (ನಾ). = ಲಂಘನ ೧ : ಅಡಿದೊಡರ್ವ ನಿಡುಜಡೆಯ ನಡುಬಳಸಿಯಸುಗೊಳಿಸಿ ಜಡಿವಪೋಲೆಯನೊಡಂಬಡಿಸಿಪೊಡನೆ ಲಂಘನೆಲಾಗು ಬಿಡುತೆಗಳ ಬಿರುಬನಿಂ (ಬಳಸ. ೯೬). [ ಸಂ. ಲಂಘನ ]

**ಲಂಘಿತ** (ಗು). ೧. ದಾಟಿದ; ಜಿಗಿದ. ೨. ಮೀರಿದ; ಅತಿಕ್ರಮಿಸಿದ. ೩. ತಿರಸ್ಕರಿಸಲ್ಪಟ್ಟ; ಅಲಕ್ಷಿಸಲ್ಪಟ್ಟ; ಅಪಮಾನಿತ. (ನಾ). ೪.

[ನಾಟ್ಯ] ಮೂವತ್ತೈದು ದೇಶೀಯಭೌಮಚಾರಿಗಳಲ್ಲೊಂದು; ಃ "ಒಂದು ಕಾಲನ್ನು ಖಂಡಸೂಚಿಸ್ಥಾನಕದಲ್ಲಿ [ಸ್ಥಾನಕ ೨೯] ನಿಲ್ಲಿಸಿ ಜಾಗ್ರತೆ ಇನ್ನೊಂದು ಕಾಲಿಂದ ದಾಟುವುದು" (ಅಭಿನಯದರ್ಪಣ. ೩೨೨ ಗದ್ಯಾನುವಾದ) : ಉರು ಖಂಡಸೂಚಿಕಾದಿ ನಿರುತದಿಂದಂ ಪಾದಮದನೆ ಬೇಗಂ ಬೇಗಂ ಪಿಡಿದುಂ ತೆಗೆವುತೆ ತದಿತರ ಚರಣದೆ ದಾಂಟಲ್ಕೆ ಲಂಘಿತಾಖ್ಯ ಮೆನಿಕ್ಕುಂ (ಅಭಿರಂ. ೬-೬೯). ೫. [ಸಂಗೀತ] ಹಾಡುವಾಗ ಅನುಕ್ರಮ ವಾಗಿ ಉಚ್ಚರಿಸದೆ ಮಧ್ಯದ ಸ್ವರಗಳನ್ನು ಹಾರಿಸಿ ಹೇಳುವುದು : ಮಂದ್ರ ಮಧ್ಯಮ ತಾರವೆಂಬ ತ್ರಿವಿಧವೊಂದಲು ಚಾರವೆಂಬ ಲಯ ಲಂಕಿ [ಘಿ] ತಂಗಳು ನಿಮಿರ್ದಮರ್ದಿರಲು . . . ದೇಶೀಮಾರ್ಗವೆಸೆಯಲು (ಬಸವ. ೦೯-೦೦); ಲಳಿತ ಗಾಢ ಮಿತಾಯಿ ಲಂಘಿತ ಕಾಕುಜಾಯನುಜಾಯಿ . . . ಬೆಡಂಗಮರೆ ಬಾಜಿಸುತೆ ಚಾರುವೀಣೆಯಂ (ಪ್ರಭು. ೦೦-೯).

[ಸಂ.]

**ಲಂಘಿಸು** (ಕ್ರಿ). ೧. ಹಾರು ; ಜಿಗಿ ; ನೆಗೆ : ಸಿಂಧುರಾರಾತಿಯನು ಜ್ವಳತನುವನಭ್ರಪಥದತ್ತ ಲಂ[ಪಾಠಾಂ. ೪ಂ]ಘಿಸಲ್ಕಿರ್ದುದಂ ಚಮೂಪತಿ ಕಂಡಂ (ಆದಿಪು. ೦೬-೯೩); ಕೊಂಬಿನ ಮೇಲಣ ಮರ್ಕಟನಂತೆ ಲಂಘಿಸು ವುದೆನ್ನ ಮನವು (ಬಸವ. ೩೨); ಹೊಯ್ದನು ಭೀಮ ಲಂಘಿಸಿ ಗಜದ ಮಸ್ತಕವ (ಕುಮಾರವ್ಯಾ. ೩-೩೩). ೨. ದಾಟು; ಕ್ರಮಿಸು : ನಿನ್ನಾಜ್ಞೆ ಯಂತೆ ಗಗನಮನುನ್ನತಿಯಿಂ ದಾಂಟಿ ಪೆಜಿರ್ಗೆ ಲಂಘಿಸಲರಿದೆಂಬನ್ನೆಗ ಮೊಪ್ಪಿರ್ದುದು (ಆದಿಪು. ೦೦-೩೬); ಜಲಧಿಯ ಲಂಘಿಸಿದವಗೆ ಜಯ ಮಂಗಲ (ಪುರಂದ. ೧-೨೨೯ ಪಲ್ಲವಿ). ೩. ಮೇಲೇರು ; ಹತ್ತು; ಏರಿಹೋಗು : ತೊಲೆಗಳೊಳಗೆ ದಸಿಗಳ ಪೆಟ್ಟಿ ಲಂಘಿಪ ಬಲುಮೆಕಾಜಿರ ಮೇಲೆ ನೂಕೆ . . . ತೊಜಿದರು ಜೀವಗಳನು (ಕಂಪಿಲ. ೦೯-೬೦). ೪. ಮೀರು ; ಮೀರಿ ನಡೆ; ಅತಿಕ್ರಮಿಸು : ಲಂಘಿಸಿದಂ ನಿಮ್ಮಯ ಮಾತನೊರ್ಮೆಗಮಿದಾಜ್ಞಾಲಂಘನಂ ದೋಷಂ (ಗದಾಯು. ೬-೩).

[ ಲಂಘನ + — ಇಸು$_3$ ]

**ಲಂಘ್ಯ** (ಗು). ೧. ಹಾರಬೇಕಾದ; ಜಿಗಿಯಬೇಕಾದ. ೨. ಮೀರಲು ಸಾಧ್ಯವಾದ; ಅತಿಕ್ರಮಿಸಬಹುದಾದ. ೩. ತಿರಸ್ಕಾರಕ್ಕೆ ಯೋಗ್ಯ ವಾದ; ಅಲಕ್ಷ್ಯ ಮಾಡಬಹುದಾದ. [ಸಂ.]

**ಲಂಚ** (ನಾ). ಕಾರ್ಯಸಾಧನೆಗಾಗಿ ಅಕ್ರಮವಾಗಿ ಪಡೆಯುವ ಅಥವಾ ಕೊಡುವ ಹಣ, ವಸ್ತು ಮೊದಲಾದುವು; ರುಷುವತ್ತು : "ಲಂಚಃ, ಉತ್ಕೋಚಃ, ಉಪಾದಾನಂ, ಉಪಚಾರಃ, ಆಮಿಷಂ — ಈ ೫ ಲಂಚಂ" (ಹಲಾಯು. ೬೧-೨೯೦); ಲಂಚಂ ಬೇಪ್ಪರ್ ಘಳಿಲೆನೆ ತಾಯ್ಗಂ ತಂಗೆಗವಳಿಪಿದವಂ ಲೆಕ್ಕವಿಡುವವಂ ಮಾದಿಗಂ (ಶಾಸನ. IX-i, ೦೦೬-೨೬; 1050); ತನಿವಣ್ಣಂ ಲಂಚಮೀವೆಂ ಪುರುಳಿ ನಿನಗೆ (ಶಬ್ದಶಾ. ೩೦೬); ಹವಣನಾರಯ್ದು ಲಂಚವಂ ಮೊದಲೆ ಕೊಂಡು ಕಸವರ ಮನರಮನೆಯ ಭಂಡಾರಕೊದಗಿಸುವ . . . ರಾಜಮಂತ್ರಿಗಳ್ (ಕಂಪು.೬-೬).

**ಲಂಚತಿನ್ನು** = ಲಂಚವನ್ನು ಸ್ವೀಕರಿಸು : ಸಾವಿರ ಸಾವಿರ ಸಂಬಳ ಬರುತ್ತಿದ್ದರೂ ಅವರು ಲಂಚತಿನ್ನುವುದನ್ನು ಬಿಟ್ಟಿಲ್ಲ (ವಾಘೋರಿ. ೦೦೧). **ಲಂಚಲಾವಣಿ** = ಲಂಚ ಮತ್ತು ಆ ಬಗೆಯ ಇತರ ಹಣ : ಸಾಲವನ್ನು ಕೊಟ್ಟವರಿಗೂ ತೆಗೆದುಕೊಂಡವರಿಗೂ ಶಿಕ್ಷೆಮಾಡಿ, ಜನಗಳಿಗೆ ಲಂಚಲಾವಣಿಗೆ ಆಸ್ಪದವಿಲ್ಲದಂತೆಯೂ . . . ಬಂದೋಬಸ್ತು ಮಾಡಿ ಬುದ್ಧಿ ಕಲಿಸಿದರು (ಮಹಾವಂ. 1, ೦೩೮) ; ನಿಮ್ಮ ನಿಮ್ಮ ಮರೆಮೋಸ ಲಂಚಲಾವಣಿಗಳ ಪ್ರಪಂಚವನ್ನೂ . . . ಸಂಗ್ರಹಿಸಿಕೊಂಡಿರುವೆವು (ಬೆಟ್ಟಿ. ೩೨-೨೬). **ಲಂಚಹಾಕು** = ಅಕ್ರಮವಾಗಿ ಹಣವನ್ನು ಕೊಡು : ಮಹಮ್ಮದಲ್ಲಿಖಾನನು ಮುರಾರಿರಾಯರಿಗೆ ಲಂಚಹಾಕಿ ಆತನ ಮುಖಾಂತ್ರ ಅರಸಿನವರ ಬಳಿಯಲ್ಲಿ ಕವುಲು ಮಾಡಿಕೊಂಡ ವಿವರ (ಹೈದರ. ೩೯). **ಲಂಚಹೊಡೆ** = ಅಕ್ರಮವಾಗಿ ಹಣ ತೆಗೆದುಕೊಳ್ಳು : ಲಂಚಹೊಡೆ ಯುವುದರಲ್ಲಿ ಪಟಾಯಿತನಾಗಿಬಿಟ್ಟ (ವಾಘೋರಿ. ೦೦೩).

[ಸಂ. ಲಂಚಾ./ಪ್ರಾ. ಲಂಚಾ]

**ಲಂಚಂಗುಳಿ**, ಲಂಚಗುಳಿ (ನಾ). ಲಂಚವನ್ನು ತೆಗೆದುಕೊಳ್ಳುವ ಸ್ವಭಾವವುಳ್ಳ ವ್ಯಕ್ತಿ ; ಕೈಯಾಸೆ ಮಾಡುವ ವ್ಯಕ್ತಿ : ಗುಳಿ ಪ್ರತ್ಯಯಕ್ಕೆ—ಆಟಂಗುಳಿ, ಸಾಲಂಗುಳಿ, ಲಂಚಂಗುಳಿ (ಕವಿರ. ೨೦೨ ಪ್ರಯೋ) ; ಲಂಚಮಂ ಕೊಳ್ವಂ, ಲಂಚಂಗುಳಿ (ಶಬ್ದಮ. ೪೦೪ ಪ್ರಯೋ). ಲಂಚಗುಳಿ : ಲಜ್ಜೆಯ ಲಂಚಗುಳಿಯ ಸೋಟದ ತವಕಕಾರ್ತಿಯ . . . ಮನಮಂ ತನ್ನತ್ತ ಸೆಳೆದು (ಪಂಪರ. ೦೪-೪೬); ಇಂಚೆವೋಯಿತ್ತು ನಮ್ಮಯ ತೇಜವಿನ್ನೇನು ಲಂಚಗುಳಿಯಾದ ಶಿವ (ಸಿದ್ಧರಾ. ೬-೬೦); ಘಾತಿಸುವರೀ ಲಂಚಗುಳಿಯಂ (ಶೀಹರಿ. ೧೩-೨೦).  [ಲಂಚ + — ಗುಳಿ$_3$ (< —ಕುಳಿ$_3$) ]

**ಲಂಚಂಗೊಡು**, ಲಂಚಕೊಡು (ಕ್ರಿ). ತನ್ನ ಕೆಲಸವನ್ನು ಸಾಧಿಸಿ ಕೊಳ್ಳಲು ಅಕ್ರಮವಾಗಿ ಹಣ, ವಸ್ತು ಮೊದಲಾದುವನ್ನು ಕೊಡು; ಕೈಯಾಸೆ ತೋರು : ಒಂದು ಕಂಕಣಮನಾಕೆಗೆ ಲಂಚಂಗೊಟ್ಟು ಬೆಸಗೊಂಡು (ಬಂಹಂ. ೨-೬ ವ). **ಲಂಚಕೊಡು** : ಆತ ಲಂಚ ಕೊಡುವಾಗ ಪೋಲಿಸರ ಕೈಗೆ ಸಿಕ್ಕಿಬಿದ್ದ (ರೂಢಿ). [ಲಂಚ + ಕೊಡು$_1$]

**ಲಂಚಂಗೊಳ್** (ಕ್ರಿ). ಅಕ್ರಮವಾಗಿ ಹಣ, ವಸ್ತು ಮೊದಲಾದುವನ್ನು ಸ್ವೀಕರಿಸು ; ಕೈಯಾಸೆ ಮಾಡು : ಅವನ ಕೆಯ್ಯೊಳು ಲಂಚಂಗೊಂಡ ನಕ್ಕುಮೆಂದು ಕಳ್ಳಂಗಂ ತಳಾಜಿಂಗಂ ಕೆಳೆಸಂಕಲೆಯನಿಕ್ಕಿದಾಗಳ್ (ಜಾಪುಂಪು. ೬೯) ; ರತಿರೂಪಂ ಲಂಚಂಗೊಂಡ ವಿಲಾಸದಿನೆಸೆದತ್ತಾ ರಾಣೀವಾಸ (ಜಘುಕಾ. ೨-೨). [ಲಂಚ + ಕೊಳ್$_1$]

**ಲಂಚಕೊಡು** ' ಲಂಚಂಗೊಡು ' ನೋ.

**ಲಂಚಕೋರ**, ಲಂಚಖೋರ (ನಾ). ಲಂಚವನ್ನು ತೆಗೆದುಕೊಳ್ಳು ವವನು : ಭೀಕನ್ನನು ಲಂಚಕೋರನೆಂದೂ . . . ಯುಧಿಷ್ಠಿರನು ಸುಳ್ಳುಹೇಳಿದನೆಂದೂ, ಅರ್ಜುನ ಮಗನಿಗೆ ಸೋತನೆಂದೂ ಹೇಳಿದೆ (ಬಂಕಿಮ. ೦೬೯) ; ನೀನೆ ನನ್ನ ಲಂಚಕೋರನಾಗೂತ ಹೇಳಬಹುದೇ ? (ಪಪಾ. ೪೦). ಲಂಚಖೋರ : ನಮ್ಮಲ್ಲಿಯ ಅಧಿಕಾರಿಗಳಂತೆ ನನ್ನನ್ನೂ ಲಂಚಖೋರನೆಂದು ಎಣಿಸಿದ್ದಾರೆ (ಹಮ್ಮೀರ. ೦೩೩).

[ಲಂಚ + — ಕೋರ$_3$./ಮರಾ. ಲಾಂಚಖೋರ್]

**ಲಂಚಕೋರಿ** (ನಾ). ಲಂಚವನ್ನು ತೆಗೆದುಕೊಳ್ಳುವವಳು ; ಕೈಯಾಸೆ ಮಾಡುವವಳು : ಬಡವಿ ಅವಳು. ಆದರೇನು ? ಸತ್ಯವಂತ. ಲಂಚ ಕೋರಿಯಲ್ಲ (ಬಾಗಿ. ೦೯). [ಲಂಚಕೋರ + — ಇ$_2$]

**ಲಂಚಖೋರ** ' ಲಂಚಕೋರ ' ನೋ.

**ಲಂಚಗ** (ನಾ). ಕೈಯಾಸೆಯಿಂದ ಜೀವಿಸುವವನು : ಲಂಚದಿಂ ಜೀವಿಸುವಂ ಲಂಚಗಂ, ಲಂಚವಣಿಗಂ (ಶಬ್ದಮ. ೪೦೩ ಪ್ರಯೋ) ; ಲಂಚ ದಿಂದ ಬದುಕುವವನು ಲಂಚವಣಿಗನು, ಲಂಚಗನು (ಹೊಮಗ. ೬೬).

[ಲಂಚ + — ಗ$_2$]

**ಲಂಚಗಾರ** ' ಲಂಚಗಾಜಿ ' ನೋ.

**ಲಂಚಗಾರಿಕೆ** (ನಾ). ಅಕ್ರಮವಾಗಿ ಹಣ, ವಸ್ತು ಮೊದಲಾದುವನ್ನು ತೆಗೆದುಕೊಳ್ಳುವುದು; ಕೈಯಾಸೆಗೊಳಗಾಗುವುದು : ಲಂಚಗುಳಿತನ: ಅವನು ತನ್ನ ಲಂಚಗಾರಿಕೆಯಿಂದ ಇದ್ದ ಕೆಲಸವನ್ನು ಕಳೆದುಕೊಂಡ (ರೂಢಿ). [ಲಂಚಗಾರ (< ಲಂಚಗಾಜಿ) + — ಇಕೆ]

**ಲಂಚಗಾಜಿ**, ಲಂಚಗಾರ (ನಾ). ಲಂಚವನ್ನು ತೆಗೆದುಕೊಳ್ಳುವವನು ; ಲಂಚಕೋರ : ಲಂಚಗಾಜನಂತೆ ನುಡಿಗೆಡಿಸದೆ [ಏಕಚಿತ್ತದಿಂ] ಕೇಳ್ದಿರಪ್ಪೊಡೆ ಪೇಟ್ದಪೆಂ (ಧರ್ಮಾಮೃ. ೦-೧೬೩). **ಲಂಚಗಾರ** : ' ಲಂಚಗಾರಿಕೆ ' ಪರಾ.

[ಲಂಚ + —ಕಾಜಿ]

**ಲಂಚಗಿ** (ನಾ). ಲಂಚದಿಂದ ಜೀವಿಸುವವಳು : ಬೂತುಗಿ, ಬೂತುಗಿತಿ; ಲಂಚಗಿ, ಲಂಚಗಿತಿ (ಶಬ್ದಾ.ಮ. ೦೯೩ ಕ್ರಿಯೋ). [ಲಂಚಗ + –ಇ₂]

**ಲಂಚಗಿತಿ** (ನಾ). = ಲಂಚಗಿ : ಲಂಚಗಿ, ಲಂಚಗಿತಿ (ಶಬ್ದಾ.ಮ. ೦೯೩ ಕ್ರಿಯೋ). [ಲಂಚಗ + – ಇತಿ₁ (< – ಇತ್ತಿ)]

**ಲಂಚಗುಂಡಿ** (ನಾ). = ಲಂಚಂಗುಳಿ : ಬೆವಕೂಫ್ ಲಂಚಗುಂಡಿ ಚಾಕರರು ಬಹಳ ಜನಯಧಾರೆ (ಹ್ವರ. ೩೦). [?< ಲಂಚಂಗುಳಿ]

**ಲಂಚಗುಳಿ** 'ಲಂಚಂಗುಳಿ' ನೋ.

**ಲಂಚಗುಳಿತನ** (ನಾ). ಅಕ್ರಮವಾಗಿ ಹಣ, ವಸ್ತು ಮುಂತಾದುವನ್ನು ತೆಗೆದುಕೊಳ್ಳುವ ಸ್ವಭಾವ : ಪೋಲೀಸರು ಲಂಚಗುಳಿತನದಿಂದ ಮಾಡುವ ಅನ್ಯಾಯ (ಕಾಲೂರ. ೧೦ ಮುಮ್ಮುಡಿ); ಸರಕಾರಿನೌಕರರಲ್ಲಿ ಲಂಚಗುಳಿತನ ಮಿತಿ ಮೀರಿ ನೆಲೆಯೂರಿದುದರಿಂದ ನಮ್ಮ ದಾರಿ ಸುಗಮವಾಯಿತು (ಕಥುಂಕಾ. ೧೩೦). [ಲಂಚಗುಳಿ (< ಲಂಚಂಗುಳಿ) + – ತನ]

**ಲಂಚನಿರೋಧ** (ನಾ). ಅಕ್ರಮವಾಗಿ ಹಣ ಮೊದಲಾದುವನ್ನು ಸ್ವೀಕರಿಸುವುದನ್ನು ತಡೆಗಟ್ಟುವಿಕೆ : "ಭ್ರಷ್ಟಾಚಾರನಿರೋಧ, ಲಂಚನಿರೋಧ" (Anticorruption. ಶಕ್ತಿಶ. ೫). [ಲಂಚ + ನಿರೋಧ]

**ಲಂಚನಿರ್ಮೂಲನ** (ನಾ). ಅಕ್ರಮವಾಗಿ ಹಣವನ್ನು ಕೊಡುವ, ತೆಗೆದುಕೊಳ್ಳುವ ವ್ಯವಹಾರವನ್ನು ಕಿತ್ತುಹಾಕುವುದು ; ಭ್ರಷ್ಟಾಚಾರನಿವಾರಣೆ : ಪ್ರತಿಯೊಬ್ಬನೂ ಲಂಚಕ್ಕಾಗಿ ಬಾಯಿ ತೆರೆದು ಕೊಂಡಿರುವಾಗ ನನ್ನೊಬ್ಬನಿಂದ ಲಂಚನಿರ್ಮೂಲನ ಹೇಗೆ ತಾನೆ ಸಾಧ್ಯ ? (ಕೃಷರು. ೫೬೭). [ಲಂಚ + ನಿರ್ಮೂಲನ]

ಲಂಚಬಡಕ (ನಾ). = ಲಂಚಕೋರ : ಸುತ್ತಮುತ್ತಲಿನ ಸೀಮೆಯಲ್ಲೆಲ್ಲ ಆತ ಲಂಚಬಡಕ ಗೌಡನೆಂದು ಹೆಸರು ಪಡೆದಿದ್ದ (ಮಣ್ಣುಹ. ೩೦). [ಲಂಚ + – ಬಡಕ₂ (< – ಬಡಕ₁)]

ಲಂಚಬಡಕತನ (ನಾ). = ಲಂಚಗುಳಿತನ : ಲಂಚಬಡಕತನವು ದೇಶದಿಂದ ನಿರ್ನಾಮವಾಗಬೇಕೆಂದು ನ್ಯಾಯದೇವತೆಯು ಅಪೇಕ್ಷಿಸುತ್ತಲಿದ್ದಾಳೆ (ನ್ಯಾಯಲಂ. ೦೬). [ಲಂಚಬಡಕ + – ತನ]

**ಲಂಚವಣಿಗ** (ನಾ). = ಲಂಚಕೋರ : ವಣಿಗ ಪ್ರತ್ಯಯಕ್ಕೆ . . . ಲಂಚವಣಿಗಂ, ಸಾಲವಣಿಗಂ (ಶಮದ. ೨೦೬ ಕ್ರಿಯೋ) ; ಲಂಚದಿಂ ಜೀವಿಸುವಂ ಲಂಚಗಂ, ಲಂಚವಣಿಗಂ (ಶಬ್ದಾ.ಮ. ೪೦೫ ಕ್ರಿಯೋ) ; ಒಲ್ಲೆ ನೊಲ್ಲೆನೀ ಲಂಚವಣಿಗರಂ (ರಾಮಾಶ್ವ. ೫೮–೩೦). [ಲಂಚ + – ವಣಿಗ₂]

**ಲಂಚವೊಗು** (ಕ್ರಿ). ಲಂಚಕ್ಕೆ ಒಳಗಾಗು ; ಲಂಚವನ್ನು ಸ್ವೀಕರಿಸು : ಬಲ್ಲಿದಂ ಕೈಕೊಂಡ ಸತಿಯಂತೆ ಲಂಚವೊಕ್ಕಿರ್ದ ಪ್ರಧಾನನಂತೆ . . . ಚಿತ್ತದೊಳಾನಂದಂ ಬೆರಸಿರ್ಪುದು (ರಸರ್ವಾಮೃ. ೯೬೩). [ಲಂಚ + ಪೊಗು]

**ಲಂಜಿಕೆ** (ನಾ). ಸೂಳೆ ; ಬೆಲೆವೆಣ್ಣು ; ವೇಶ್ಯೆ : ಅದೇಂ ಲಂಜಿಕೆಯರ ಗುಂಜನ್ಮಣಿಮಂಜೀರಕಮಂಜುಸಿಂಜಿತಂ ರಂಜಿಸಿತೊ (ಅಜಿಪು. ೫–೪೨); ರಂಜಿಸಿದುದು ಕಡುಸೊಬಗಿಂ ಲಂಜಿಕೆಯರ ಬೀದಿ ಬೀಱುತುಂ ಪರಿಮಳಮಂ (ಕಾದ್ಯಸಿ. ೦–೬೬).

**ಲಂಜಿಕಾಮದನಾಸ್ತ್ರ** = ಬೆಲೆವೆಣ್ಣುಗಳಿಗೆ ಕಾಮನ ಬಾಣದಂತಿರುವವನು ; ಸುಂದರಾಂಗ ; ಒಂದು ಬಿರುದು : ರಿಪುಪುಞ್ಜಕಞ್ಜವನಕೇಳೀಕುಞ್ಜರಂ ಲಞ್ಜಿಕಾಮದನಾಸ್ತ್ರಂ ಚಲದಂಕರಾಮ ನೃಪಲಕ್ಷ್ಮೀಲಕ್ಷ್ಮನಂ ಲಕ್ಷ್ಮಣಂ (ಎಕ. VII, ಶಿಕಾರಿ. ೦೩೬–೨೪ ; 1068). [ಸಂ. ಲಂಜಿಕಾ]

**ಲಂಜಿಗೇಸರ** (ನಾ). ಲಕ್ಷ್ಮೀಪತಿ ; ವಿಷ್ಣು (?) : ಲಂಜಿಗೇಸರಂ ದೇವರ್ಗೆ ಪೂಜಿಸುವ ಮಾಲ(ಲಾ)ಕಾರರ್ಗ್ಗೆ (ಇಇ. X, ೬೦–೨ ; 578). [ಲಂಜಿಗ₀ (ಪ್ರ← ಸಂ. ಲಂಜಾ = ಲಕ್ಷ್ಮೀ) + ಈಸರ]

**ಲಂಜೆ** (ನಾ). = ಲಂಜಿಕೆ : ಕಾಂಚಿಯ ಪಟ್ಟಣದಲಿ ಕಣಿಯ ಕೇಳಿರೊ ಅಲ್ಲಿ ಲಂಚೆ [ಜೆ] ಯರು ಕಡಿಸ್ಯಾರು ಕಣಿಯ ಕೇಳಿರೊ (ಎಪಿಕಾ. ೦೯೨–೪೦). [ಸಂ. ಲಂಜಾ]

**ಲಂಟವಾಣೆ** 'ಲಂಟಾನಾ' ನೋ.

**ಲಂಟಾನ** 'ಲಂಟಾನಾ' ನೋ.

**ಲಂಟಾನಾ**, ಲಂಟವಾಣೆ, ಲಂಟಾನ, ಲಂತಾನ, ಲಾಂಟನಾ (ನಾ). ನೀರಿನ ಸೌಕರ್ಯವಿಲ್ಲದಿದ್ದರೂ ಪೊದೆಪೊದೆಯಾಗಿ ಬೆಳೆಯುವ, ಸಣ್ಣ ಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ : ಲಂಟಾನಾ ಹೂಗೊಂಚಲು ನುಡಿಯಿತು (ಸುಶೀಕ. ೨೭–೦೩). **ಲಂಟವಾಣೆ** : ಲಂಟವಾಣೆಗಿಡ, ಹೇಸಿಗೆಹೂ ಕಾಡುಜೋಳ (ವೃಶಿಗಾ. ೪೯೦–೬೮). **ಲಂಟಾನ** : ಪಾಳುದೇಗುಲದಲ್ಲಿ ಲಂಟಾನಪೊದೆಯಲ್ಲಿ ಸಾಗುತಿರಲು (ಕೋಗಿಲೆ. ೪೫–೦೨) ; ನಮ್ಮ ನಿತ್ಯಜೀವನದಲ್ಲಿ ಅದರ ಪ್ರಭಾವ ಲಂಟಾನ ಬೆಳೆ ಹಾಗೆ ಹಬ್ಬಿದೆ (ಪಾರಿಗೇ. ೫೩). **ಲಂತಾನ** : ಲಂತಾನದಂತಹ ಸಣ್ಣ ಸಣ್ಣ ಪೊದೆ ಪೊದರುಗಳೂ ಮುಳ್ಳುಗಿಡಗಳೂ ಬೆಳೆದಿವೆ (ಚಾಳಗಿ. ೪೬); ಸುತ್ತಲೂ ಲಂತಾನ ಪೊದೆ ಬೆಳೆದಿತ್ತು (ಹುಲಿಪಾ. ೦೮). **ಲಾಂಟನಾ**: ಮಲೆನಾಡಿನಲ್ಲಿ ಲಾಂಟನಾ ಇದ್ದಹಾಗೆ (ಕಂಗೂಲಿ. ೯೬). [← ಇಂ. Lantana]

**ಲಂಡ₁**, ಲಂಡಿ₁, ಲಂಡು, ಲೆಂಡ, ಲೆಂಡು (ಗು). ೧. ದುಷ್ಟತನದಿಂದ ಕೂಡಿದ ; ಕೆಟ್ಟತನದ : 'ಲಂಡವೇಣ್' ಪರಾ. ೨. ಮೋಟಾದ ; ಮೊಂಡಾದ ; ಗಿಡ್ಡವಾದ : ಲಂಡತೋಳಿನ ಬುಷ್‌ಕೋಟು ಅವನ ಮೊದಲಿನ ನೆಹರುಶರ್ಟನ್ನು ಓಡಿಸಿತ್ತು (ಬಾರಿಶ. ೦೦೪). (ನಾ). ೩. ನೀತಿ ನಿಯಮವಿಲ್ಲದವನು ; ದುಷ್ಟ ; ನೀಚ : "ಲಂಡ – ಲಡ್ಡ(ಟ್ಟ) = ಧೂರ್ತ, ಅಸಭ್ಯ" (ಕದ್ಯಕೋ. ೩೮) ; ಜಾರ ಚೋರ ಸಂದಣಿಗ ಲಂಡ ಭಂಡ ಚಾರ್ವಾಕ . . . ಇಂತಿವರಲ್ಲಿ . . . ನುಡಿದಡೆ ಆ ಭಕ್ತಂಗೆ ಭಕ್ತಿಯಿಲ್ಲ (ಶೂನ್ಯಸಂ. ೨೭–೦೦೦) ; ಕಂಡ ನಾರಿಗಿಚ್ಛೈಸುವ ಲಂಡಗೆ ಪುರಾಣವೇಕೆ (ಪುರಂದ. ೦–೩೦–೩) ; ಪಂಡಿತನು ಭಂಡರೊಡನಾಡಿ ಅವ ಶುದ್ಧ ಲಂಡ ತಾನಕ್ಕು (ಸರ್ವಜ್ಞ. ೬೨೪). ೪. ಧರ್ಮಶ್ರದ್ಧೆಯಿಲ್ಲದವನು; ಪಾಷಂಡಿ : ಧರ್ಮದ ಸೋಗಿನಿಂದ ಸ್ವಾರ್ಥಸಾಧನಕ್ಕಾಗಿ ಮನಬಂದಂತೆ ನಡೆಯುವ ಲಂಡರ ಆಚರಣೆಯೆತ್ತ ? (ವಸಾಧಕ. ೯) ; ಪಿಂಡ ಹಾಕಿದರೂ ಲಂಡ ಎನಿಸಿಕೊಳ್ಳೋದು ತಪ್ಪಲಿಲ್ಲ (ಗಾದೆ). 'ಧರ್ಮಲಂಡ' ಪರಾ. ೫. ಒರಟ ; ಉದ್ಧತ : ಲಂಡರಹ ದಾನವರ ಕೊಲುವವಖಂಡ ವಿಕ್ರಮವೀರ ನರಹರಿ (ಕೋಗಹು. ೨೭–೪೨). ೬. ತುಂಡಾದುದು ; ಮೋಟಾದುದು ; ಮೊಟಕಾದುದು : ಕೂದಲನ್ನು ಲಂಡವಾಗಿ ಕತ್ತರಿಸಿದ್ದರಿಂದ . . . ಅವು ಹೆಗಲ ಮೇಲೆ ಲೋಲಾಡುತ್ತಿದ್ದವು (ಹೇಮಂಕ. ೧೯೪). **ಲಂಡಿ₁** : ೩. ಕದನಮುಖದ ಕೈಕೊಂಡುಳಿವರಿಲ್ಲ ನಿನಗಾತನೊಳು ವೈರವೇ ಲಂಡಿ ಹೋಗೆಂದು ನೆರೆ ಜರೆಯೆ ಕೋಪಾಟೋಪದಿಂ ಖಡ್ಗಮಂ ಜಡಿದನು (ಲಕ್ಷ್ಮೀಭಾ. ೩–೩೦–೬೬) ; ತರಳರೆಂದುದ ಕೇಳಿ ಶ್ರೀಹರಿ ಮರಳಿ ಪೇಳಿದ ಲಂಡಿಗಳು ನೀವ್ ಬರಿದೆ ಪೊಗಳುವಿರಾಕೆಯನು (ಕಂದ್ರಾವ. ೯). **ಲಂಡು** : ೧. ಅನಾರ್ಜಿತವ ಮಾಡಿ ಕೆಡಿಸುವಂಥಾ ಲಂಡು ಪುಂಡರುಯಿದ್ದರೆ ವೀರಮಾಹೇಶ್ವರರು ಪೊಡೆಯರು ಭಕ್ತರು ವಿಚಾರಿಸಿ ಕೊಂಡು ಅಂಥಾ ಲಂಡು ಪುಂಡರ ತೆಗೆದು ಸತ್ಪುರುಷರ ಇರಿಸುವುದು (ಎಕ. XVI, ಶಕ್ತಿಶಾ. ೦–೨೩ ; 1623). ೭. ನೀಚತನ ; ದುಷ್ಟತನ : ತೊಂಡುತೊಳಸಿಕ್ಕಸಿಕ್ಕ ವಂಚನೆ ಕುಹಕ ಜೂದು ಕುತ್ಸಿತ ಲಂಡು ಬಂಡು ದುರ್ಜನಮೆಂಬಿವೆಲ್ಲ ದುಷ್ಟಸ್ವಭಾವಂ ನೀವಿದಕ್ಕೇನ ಮಾಳ್ಪಿರಿ (ಸಪ್ತಶಾ. ೬–೩೩). **ಲೆಂಡ** : ೧. ದಂಡಾಧೀಶ್ವರ ಬಂದ ಲೆಂಡಗಣವನಳಿದ (ಕೋಡಕ. ೩–೯). ೪. ದೀಗುವಿಡಿದಾ ಭಂಡರಾದ ಲೆಂಡರಿಗೇಕೋ ಲಿಂಗದ ಸುದ್ದಿ (ಶೂನ್ಯಸಂ. ೦೬೪–೬೯೩); ಕೆಂಡುದ ಹೇಳಹೆನೆ ಸಮುಯುಕ್ಕೆ

ದೂರ ಎನ್ನ ಇರವನಱಿಯರು ಲೆಂಡನೆಂಬರು ಸುಮ್ಮನಿದ್ದೇನೆ ಇವರೆನ್ನ ಅರ್ಯದು ಕಂಡುದ ನುಡಿವರು (ಚಕಸಂ. ೯–೨೮). ೫. ಲೆಂ[ಪಾಠಾಂ. ಲಂ]ಡ ಪುಂಡರ ಕೂಡಿಕೊಂಡು ರಾಜ್ಯವ ನೀವಂಡಲೆವುದನೆಮ್ಮ ರಾಯ ಕಂಡು ಸೈರಿಸುವನೆ (ಕಂಠಾಗಾಂ. ೦೦-೦೬) ; ದಂಡವಗೊಳದಿರು ಧರ್ಮವ ಬಿಡದಿರು ಲೆಂಡ ಪುಂಡರ ಸೇರಿಸದಿರು (ಬಿಕ್ಕ.ರಾ. ೦೨-೯೦). ಲೆಂಡು : ೭. ಪೃಥುಲನಿಂದೆಯುಗಳಿಂದೊಪ್ಪುವ ಲೆಂಡು ದುರ್ಮಾರ್ಗದುರ್ಗವ ಬಸವ ರಾಜೇಂದ್ರು ಕೊಂಡು (ಸಿಂಗಿರಾ. ೨೩-೨೦).

ಲಂಡಾಗು = ಗಿಡ್ಡವಾಗು : ನಾವೇ ಅವರಣ್ಣನಿಗೆ ಕೊಟ್ಟ ಧೋತರ ಅವರಿಗೆ ಲಂಡಾಗುತ್ತದೆ (ವ್ಯಾಪ. ೪೬). ಲಂಡೋಬಂಡೋ ಆಟ = ಲಂಡತನದಿಂದ ಆಡುವ ಆಟ ; ಭಂಡಾಟ : ಲಂಡೋಬಂಡೋ ಆಟ ಆಡಿ ಮೂರಾಬಟ್ಟೆ ಮನಿ ಆತಂತ (ಜೀವಂ. ೨೯–೦೩). [<ಸಂ. ಲಡ್ಡ]

**ಲಂಡ$_2$** (ನಾ). ಆನೆ, ಕುದುರೆ ಮುಂತಾದುವುಗಳ ಮಲ ; ಲದ್ದಿ ; ಸಗಣಿ : "ಲದ್ದಿಯೆನೆ. ಲಂಡಮಕ್ಕುಂ" (ಪುಂಗರಾ. ೪೭-೩) ; ಲಂಡ ದೊದವಿಂದಂ ತನ್ನದೀಕೂಲಮಂ ಕದಡುತ್ತಿರ್ದುದು . . . ಕರೀಂದ್ರೋತ್ಕರಂ (ಪುಣ್ಯಾ. ೦೦–೬೬) ; ಇಕ್ಕಿದ ಲಂಡದ ಬೆಂಕೆಯಿಂ ಕವಿವ ಕಟ್ಟದದೊಳ್ಗೊನ ಲೊಳ್ . . . ಸುಯ್ಯಾಱದ ಪೆರ್ನೊರೆಯಿಂ . . . ಅಱಿದಂ ಕಾಡಾನೆ ಗಳಾಗಡೆ ಪೋದುದಂ (ಕಾವ್ಯಾಪ. ೩೨೬) ; ಪೊಡೆಯೊತ್ತೆ ಬಾಲಂ ನಿಮಿರೆ ಲಂಡಮನುರ್ಚುವಾಕಳಿಂ (ರಾಜಾಶ್ಯ. ೪೩-೨೨). [ಸಂ.]

**ಲಂಡಂಗಿ** (ನಾ). ಅರ್ಧತೋಳಿನ ಅಂಗಿ ; ಗಿಡ್ಡತೋಳಿನ ಷರಟು : ಬರಿಯೊಂದು ಲಂಡಂಗಿಯು ಮೇಲೆ ಬೆಳದಿಂಗಳಲ್ಲಿ ಹೋಗಿಬಿಟ್ಟ (ಕವಕ. ೩೨).

[ಲಂಡ$_1$ + ಅಂಗಿ$_2$]

**ಲಂಡಗಚ್ಚೆ** (ನಾ). ಮೇಲಕ್ಕೆ ಎತ್ತಿ ಕಟ್ಟಿದ ಕಚ್ಚೆ : ರಾಯರು ಲಂಡಗಚ್ಚೆ ಹಾಕಿಕೊಂಡು ತೋಟದ ಕೆಲಸವನ್ನು ಪ್ರಾರಂಭಿಸಿದರು. (ಲೂಪ).

[ಲಂಡ$_1$ + ಕಚ್ಚೆ$_1$]

**ಲಂಡಚಣ್ಣ** (ನಾ). ಗಿಡ್ಡವಾದ ಚಲ್ಲಣ ; ಚಡ್ಡಿ ; ನಿಕ್ಕರು : ಅವನು ಲಂಡಚಣ್ಣ ಹಾಕಿರಬೇಕು (ವ್ಯಾಪ. ೮) ; ಕಚೇರಿಗೆ ಖಾಕೀ ಲಂಡಚಣ್ಣದ ಮೇಲೆ ಕಳಿಸಿದ ಆಕೆ ಈಗ ಬದಲಾಗುತ್ತಾಳೆಯೋ ? (ಗಂಪಾರು. ೦೨೩).

[ಲಂಡ$_1$ + ಚಣ್ಣ (<ಚಲ್ಲಣ)]

**ಲಂಡತನ**, ಲೆಂಡತನ (ನಾ). ಔದ್ಧತ್ಯ; ಉದ್ಧಟತನ: ಲಂಡತನದಲಿ ನಡೆವ ಭಂಡ ಹೊಲೆಯ (ಕುಕಂಪ. ೧–೦೬೮-೨); ಲಂಡತನದಿ ಕಾಳಗಕೊಡ್ಡಿದೊಡ್ಡನು ದ್ದಂಡಿಸಿ ಪುರಕೆ ಪೋಪವನ ಕಂಡು ಭಟರು ಪೋಗಬೇಡ ಬೇಡೆನೆ (ಸಂಕ್ರಸಾಂ. ೮-೬೪) ; ಕಂಡು ಸತಿಯುಳ ಭ್ರಾಂತುಗೊಂಡು ಕಳವಳಿಸುತ್ತ ಚಂಡಭುಜಬಲನೆಂಥ ಲಂಡತನದಿಂದ (ಜಯಪ. ೯). ಲೆಂಡತನ: ಅಷ್ಟ ಮದಂಗಳ ವರ್ತನೆಯ ಲೆಂಡತನವ ನಷ್ಟವ ಮಾಡಿ (ಪರೀಕ್ಷಮ. ೦೯೩-೬೨೬ ಆರ್ಪ). [ಲಂಡ$_1$ + – ತನ]

**ಲಂಡಪಂಚೆ**, ಲಂಡಪಂಜೆ (ನಾ). ಮೋಟಾದ (ನೀರು)ಪಂಚೆ; ಗಿಡ್ಡವಾದ ಧೋತ್ರ : ಲಂಡಪಂಚೆ ಹಚ್ಚಿಕೊಂಡು . . . ಕ್ಷೌರ ಮಾಡಿಸಿಕೊಂಡು ಆಮೇಲೆ ಗೋಮ.ಹಚ್ಚಿ ಇತ್ಯಾದಿ ಎಲ್ಲ ವಿಧಾನಗಳು ಆಗತಕ್ಕವು (ಪುಂಗಾಪ. ೮೮). ಲಂಡಪಂಜೆ : ಅನಂತರ ನಮ್ಮ ಮಡಿಯ ಲಂಡಪಂಜೆ ಯನ್ನು ಇಳಿಸಿ . . . ಹಳೆಯ ತ್ಯಾಪೀ ಹಚ್ಚಿದ ಅಂಗಿ_ಚಣ್ಣದ ಚೆಲಖತ್ತು ಏರಿಸುತ್ತಿದ್ದೆವು (ದೀಶಹ. II, 1). [ಲಂಡ$_1$ + ಪಂಚೆ]

**ಲಂಡಪಂಜೆ** 'ಲಂಡಪಂಚೆ' ನೋ.

**ಲಂಡಪಾತಿ** (ನಾ). [ಅಶ್ವಶಾ] ಲದ್ದಿಹಾಕುವುದಕ್ಕೆ ಸಂಬಂಧಿಸಿದ ರೋಗ : ಮಾರ್ಜಾಲದ ಕಣ್ಣಂ ಪೋಲ್ವ ಕಣ್ಗಳುನ್ಮೀ(ಣ್ಮಿ)ಲಿತನೇತ್ರದ ಲಂಡಪಾ[ಪಾಠಾಂ. ನಾ]ತಿಯುಪ್ಪಾ ಕುದಿರೆಯದು ಗತಾಯುವಕ್ಕುಮೋಬಬ್ಬ ದೊಳಂ (ಅಶ್ವಶಾ. ೬–೪). [ಸಂ. ಲಂಡಪಾತಿನ್]

**ಲಂಡಪೆಣ್** 'ಲಂಡವೆಣ್' ನೋ.

**ಲಂಡವೆಣ್**, ಲಂಡಪೆಣ್, ಲಂಡಹೆಣ್ಣು (ನಾ). ದುಷ್ಟಹೆಂಗಸು; ನೀಚ ಸ್ತ್ರೀ: ತೊಂಡುವೆಣ್ಗಳ ನೇಹದೊಡಕಿಗೆ ಸಿಲುಕದೆ ಲಂಡವೆಣ್ಗಳ ಲಾಲಿಸದೆ . . . ನಲ್ವೆಂಡಿರೊಡನೆ ಬೆರಸುವುದು (ಹರಿಬಿ. –೪೬). ಲಂಡಪೆಣ್ : ಇಂತೆಂದು ಲಂಡಪೆಣ್ಗಳು ನುಡಿಯಲು , (ಕಂಕ. ೯೩-೯). ಲಂಡಹೆಣ್ಣು: ಸಾಜ್ಞೆಯಿಂದಾಳಬೇಕಣ್ಣ ಗಂಡನಾಜ್ಞೆಯ ಮಾಱಿ ನಡೆವ ಲಂಡಹೆಣ್ಣ (ತುರಂಪ. ೩-೦೪ ಅನುಕ್ರಂ). [ಲಂಡ$_1$ + ಪೆಣ್]

**ಲಂಡಹೆಣ್ಣು** 'ಲಂಡವೆಣ್' ನೋ.

**ಲಂಡಿ$_1$** 'ಲಂಡ$_1$' ನೋ.

**ಲಂಡಿ$_2$** (ನಾ). ದುಷ್ಟೆ ; ನೀಚಸ್ತ್ರೀ : ಲಂಡಿಯರು ನಿರ್ಲಜ್ಜರು ಜಗಭಂಡೆಯರು . . . ಪಾತಕದ ರೂಪಿನ ಕೋಪಿಗಳು (ದೇವಪ. ೬-೦೩).

[ಲಂಡ$_1$ + — ಇ$_2$]

**ಲಂಡು** 'ಲಂಡ$_1$' ನೋ.

**ಲಂಡೆ**. ಲೆಂಡೆ (ನಾ). = ಲಂಡಿ$_2$ : ಉಂಡಳೊಬ್ಬಳೆ ಮಗನ ಪಡೆದಳು ಲಂಡೆ ನಾವೇನಾಳಿದರೆಲ್ಲರು ಪೆಂಡಿರಲ್ಲಾ (ಶಿಭಾಗ. ೬-೧೩-೨೮); ದುರಿತಗಣಕಂಜದಿಹ ಲಂಡೆಯರ್ದಿಂಡೆಯರ್ನರರ ಹೃದಯವ ಕೊಯ್ವ ಕತ್ತಿಗಳ್ ತಿತ್ತಿಗಳ್ (ಕಪಂ. ೨-೩೬) ; ಆ ಲಂಡೆಯರು ತಮ್ಮ ದುರ್ನಡತೆಯನ್ನು ಬಿಟ್ಟಿಲ್ಲ (ಕೃಪಾಪ. II, ೩೦೦). ಲೆಂಡೆ : ಗಂಡು ತನ್ನದು ಎಂದು ಲೆಂ[ಪಾಠಾಂ. ಲಂ]ಡೆ ಸುತನೆಂಬುವಳು ಖಂಡಪರಶುವಿನ ವರಪುತ್ರ ಆನು ನೆಱೆ ಕಂಡುದನೆ ನುಡಿದೆ (ಸರ್ವಜ್ಞ. ೦೩). [ಲಂಡ$_1$ + – ಎ$_2$]

**ಲಂತಾನ** 'ಲಂಟಾನಾ' ನೋ.

**ಲಂದಣ** 'ರಂದಣ' ನೋ.

**ಲಂದಣಗಿತ್ತಿ** 'ರಂದಣಗಿತ್ತಿ' ನೋ.

**ಲಂದಣಿಗ** 'ರಂದಣಿಗ' ನೋ.

**ಲಂಪಂಬೆಱು** (ಕ್ರಿ). ಮೇಲ್ಮೆಯನ್ನು ಪಡೆ ಹಿರಿಮೆಯನ್ನು ಹೊಂದು : ಸಂಪದ್ಧರ್ಮಾರ್ಥಕಾಮಾಂಬುರುಹ ವನಜಮಿತ್ರಂ ಧರಿತ್ರೀಸುವಕ್ತ್ರಂ ಲಂಪಂಬೆತ್ತೈದೆ ಕಣ್ಗೊಪ್ಪಿದುದು . . . ಪಂಪಾಕ್ಷೇತ್ರಂ (ಅಗ್ರ್ಯಟಿ. ೩-೩೪).

[< ಲಂಪು + ಪೆಱು$_1$]

**ಲಂಪಟ** (ನಾ). ೧. ಯಾವುದಾದರೊಂದು ಚಟವುಳ್ಳವನು,–ಗೀಳುಹಿಡಿದವನು : "ಲೋಲುಪಂ ಲಾಲಸಂ ಲೋಲುಭಂ ಲಂಪಟಂ ಲೋಲನೆನಲಳಿಪುವವನಕ್ಕು" (ಮಂಗರಾ. ೬೯-೦೦) ; ಕರ್ಣನುಮಾದೀರ್ಣವೀರರಸಾಸ್ವಾದನಲಂಪಟನಾಗಿ . . . ಬಂದು ತಾಗಿದಾಗಳ್ (ಕಂಕಭಾ. ೦೨-೦೦೬ ವ) ; ಅಧರಪೀಯೂಷಲಂಪಟಜಿಹ್ವನೇತ್ರುತ್ರಯನೆ (ಹ್ರಿಶರಾ. ೨-೪೨). ೨. ಕಾಮಾಸಕ್ತ ; ಕಾಮುಕ : ಅಟಮಟಗಂ ಗಾಳುವಿಮಂ ಕುಟಿಲಂ ಲಂಪಟನೆನಿಪ್ಪವಂ ಮಾನಸನೇ (ಕಾವ್ಯಾವ. ೩೬); ಕಾಮಾಂಧವಶನಾಗಿ ಲಂಪಟನೊರ್ವ ಮತಿಗೆಟ್ಟು ಮುಪ್ಪುದೊರೆ ಹೆಂಗುಸೊರ್ವಳ ಪದಕೆ ದಾಸನಾಗುರುಳಿದರೆ, ಪೂಜ್ಯನೀ ರಾಮಚಂದ್ರಂ ರಾಜ್ಯಮಂ ತ್ಯಜಿಸಿ ವಿಪಿನಾಂತರದ ವಾಸಮಂ ಕೈಕೊಳ್ವುದೇಕೆ? (ಶ್ರೀರಾಪಾ. ೮೦-೬೩). ೩. ಗೀಳು ; ಚಟ ; ಅತ್ಯಾಸಕ್ತಿ : ಪಂಚೇಂದ್ರಿಯಲಂಪಟದಿಂದು ಸುರನರರನೊಯ್ವುದೊಂದಾಶ್ಚರಿಯೋ (ಅದಿಶ. ೩೨-೨) ; ಹೀನಮಾನವರು ತಾವು ಬ್ರಹ್ಮವೆಂದು ಜಿಹ್ವೆ ಗುಹ್ಯ ಲಂಪಟದಲ್ಲಿ ಹೊಂದಿದುದ ನೋಡಿ ನಗುತಿದ್ದನು ನಮ್ಮ ಗುಹೇಶ್ವರಲಿಂಗನು (ಪ್ರೋಪಿಸಾಂ. ೨೮). [ಸಂ.]

**ಲಂಪಟತನ** (ನಾ). ಅತಿಯಾದ ಆಸಕ್ತಿ, – ವ್ಯಾಮೋಹ ; ಲೋಲುಪ್ತಿ : ಜಂಗಮವೇ ಲಿಂಗವೆಂಬುದಕ್ಕೆ ಏನು ಗುಣ ಮನದ ಲಂಪಟತನ ಹಿಂಗದಾಗಿ ಒಡೆಯರ ಬರವಿಂಗೆ ಕುನ್ನಿ ಬಾಲ ಬಡಿವರೆ ವೆಚ್ಚವೇನು ಹತ್ತುವದು (ಶಿಕವ. ೨೦೬). [ಲಂಪಟ + – ತನ]

**ಲಂಪಟತೆ** (ನಾ). ವಿಷಯಲೋಲುಪತೆ ; ಕಾಮುಕತೆ : ದಿಟದಿಂದೊಲ್ದವರಂ ಲಂಪಟತೆಯಿನಮರ್ದಪ್ಪಿ ನೆರೆವ ನೆರೆವನಿತು ಸುಖಂ ಘಟಿಯಿಸದು ತಮ್ಮೊಳ್ (ಶಂಪ್ರಪು. ೪-೬೩). [ಸಂ. ಲಂಪಟತಾ]

**ಲಂಪಟತ್ವ** (ನಾ). ಅತ್ಯಾಸಕ್ತಿ ; ಅತಿಯಾಸೆ : ಇವರಚ್ಯುತಾಂಘ್ರಿ ದರ್ಶನಲಂಪಟತ್ವದಿಂದ . . . ಬಂದರ್ (ಕೈಬಿಭಾ. ೪-೩೦). [ಸಂ.]

**ಲಂಪಟೆ** (ನಾ). ಕಾಮಾಸಕ್ತಳಾದವಳು ; ವಿಷಯಲೋಲುಪಳಾದ ಸ್ತ್ರೀ : ವಿಟಗೋಷ್ಠಿಯೊಳ್ಭೋಗವುಂ ಬಯಸಿ ಕಾಮಲಂಪಟೆಯಾಗಿ ಮೇಣರ್ಥಮುಂ ಗಳಿಸಿ (ಕೈಬಿಭಾ. ೩-೩೬). [ಸಂ. ಲಂಪಟಾ]

**ಲಂಪಣ** 'ಲಂಪಳ' ನೋ.

**ಲಂಪಳ**, ಲಂಪಣ, ಲಂಬಳ$_1$ (ನಾ). ೧. ವಿಷಯಾಸಕ್ತ ; ಸುಖಲೋಲುಪ; ಕಾಮುಕ : ಒಂದೊಂದೆ ರಸದ ಸೋಲಮುದೊಂದೊಂದನೆ ಕೊಲ್ಗು ಮೋಪೋ ಲಂಪಳ [ಪಾಠಾಂ. ಟ]ರಪ್ಪೆಮ್ಮಂದಿಗರಂ ಬಗೆವಂದದೆ ಕೊಂದಿಕ್ಕುವೆ ಸಕಳವಿಷಯವಿಷಮವಿಷಂಗಳ್ (ಅಂಪು. ೪-೬೩). **ಲಂಪಣ**: ೧. ಲಂಪಣನವೊಲೇನಾನುಮಲಂಪಿನ ಸಗೆನುಡಿಯ ನೆವದಿ ನೆಯ್ದಿಲ ಪೂವಿಂದಂ ಪೊಯ್ಯೆ ಮೂರ್ಛೆವೋದಳ್ (ಜಕೋತ. ೨-೬೭). **ಲಂಬಳ**$_1$. ೧. "ಲಂಬಳ (ಲಂಬಾಳ) — ಲಂಪಟ = ಲೋಲುಪ" (ಶಬ್ದಕೋ. ೩೯). ೨. ವಿಷಯಾಸಕ್ತಿ ; ವಿಷಯಲೋಲುಪತೆ ; ಕಾಮುಕತೆ : ಲಂಪಟಶಬ್ದಕ್ಕಾದ ಲಂಬಳಮೆಂಬುದುಂ ಜಟಿಕ್ಕ ಸಂದೇಹಂ (ಶಮದ. ೨೨ ಪ್ರಯೋ) ; ಪಳದಂ ಚೆಲ್ವಿಕೆಗೆತ್ತಿ ಪೊಚ್ಚಪೊಸತೊಂದಂ ಮಾಡಿ ಸಾಲ್ಪುರ್ವಿ ಲಂಪಳದಿಂ ತನ್ನಯಮುಪ್ಪವೋಲ್ ಕೊಳಿಸು (ಸಂಕಶ. ೩೦-೦೦೦). [<ಸಂ. ಲಂಪಟ]

ಲಂಪಳಿಕೆ (ನಾ). ವಿಷಯಾಸಕ್ತಿ ; ಮೋಹ ; ಲಂಪಟತನ : "ಲಂಪಳಿಗೆ(ಕೆ) — ಲಾಂಪಟ್ಯ = ಅತ್ಯಾಸಕ್ತಿ" (ಶಬ್ದಕೋ. ೩೦) ; ಬಿಸುಡಂ ಮುನ್ನಿನ ತನ್ನ ಲಂಪಳಿಕೆಯಂ (ಅಂಪು. ೨-೯೩) ; ಅಶ್ವಗ್ರೀವನುಂ ರಾವಣನುಂ ಕೀಚಕನುಂ ದುಶ್ಶಾಸನನುಂ ಕಮಠನುಮೆಂದಿವರೆಲ್ಲರುಂ ಪರವನಿತಾಲಂಪಳಿಕೆಯಿಂ ಕೆಟ್ಟರ್ (ಪಾರ. ೩೦೨). [ಲಂಪಳ + — ಇಕೆ]

ಲಂಪು (ನಾ). ವೈಭವ ; ಆಡಂಬರ : "ಲಂಪೆನಲು ವಿಭವಂ" (ಕಶಶ. ೯೮) ; ನಿಗುರ್ವ ಪೂಮಾಲೆಗಳ ಲಂಪಿಂದಲಂಪಿಂದೆ ಮಂಟಪಂ ಚೆಲ್ವಾದುದು (ಶಂಪು. ೩೭-೩೨). 'ಲಂಪಂಬೆಟು' ಪರಾ. [<ಅಲಂಪು]

**ಲಂಬ** (ಗು). ೧. ಜೋಲುವ ; ನೇತಾಡುವ ; ತೂಗುತ್ತಿರುವ : ಉತ್ತುಂಗಪೀನನಿಜಾಂಸಾರ್ಪಿತ ಲಂಬಹಾರನವನಾ ಪಾಂಡ್ಯಂ (ಶಂಶಭಾ. ೩-೩೪) ; ಲಂಬೋಪರಂ ಲಂಬಕೂರ್ಚಕಲಾಪಂ ಸಿತಕಂಚುಕಂ ತ್ವರಿತದಿಂ ಬಂದಂ ಪ್ರತೀಹಾರಕಂ (ಶಂಶಾಪಖಾ. ೨-೨). ೨. ದೊಡ್ಡದಾದ; ದಪ್ಪವಾದ: ತುಂಬಿತುಳುಕಾಡಿದಪುದಯ್ಯನ ಲಂಬಜಠರವಿದೆನುತ (ಬಸಪು. ೫೯-೦೭). ೩. ಉದ್ದವಾದ ; ಎತ್ತರವಾದ : ದನಗಾಹಿಯು ಕರಿಯ ಕಂಬಳಿಯನ್ನು ತಲೆಯಿಂದ ಮೊಳಕಾಲ ತನಕ ಹೊತ್ತಿದ್ದನು . . . ಒಂದು ಲಂಬಕಟ್ಟೆಗೆಯ ಮೇಲೆ ಕಂಬಳಿಯನ್ನು ಹೊದಿಸಿದಂತೆ ತೋರುತ್ತಿತ್ತು (ರಶ್ಮಿ. ೦೨). (ನಾ) ೪. ಉದ್ದಳತೆ : 'ಹೈಪೊಫ್ಯಾರಿಂಕ್ಸ್' ಇದು ಬಾಯಿಯ ತಳ ಅಥವಾ ಮುಂಬಾಯಿಯ ನಾಲಗೆಯಂತಹ ಲಂಬ (prolongation) (ಕೀಟಶ. ೭೨). ೫. ಬಾಗಿಲಿನ ಚೌಕಟ್ಟು ಮೊದಲಾದುವುಗಳ ಉದ್ದವಾದ ಪಟ್ಟಿ : "(ಬಾಗಿಲ ಚೌಕಟ್ಟು, ಗೋಡೆಯ ಹಲಗೆಸೇರುವೆ. ಮೊ.ಗಳಲ್ಲಿ) ನಿಲು, ಲಂಬ,—ಪಟ್ಟಿ, ಮರ" (stile. ೩೮೪೨). ೬. [ರೇಖಾಗ] ಸಮತಲ ರೇಖೆಯ ಮೇಲೆ ಸಮಕೋನವಾಗುವಂತೆ ಎಳೆದ ಗೆರೆ : ಒಂದು ರೇಖೆಯು ಮತ್ತೊಂದು ರೇಖೆಯ ಬಳಿ ಬಂದು ಸೇರುವುದರಿಂದ ಎರಡು ಕೋನವಾಗುತ್ತೆ . . . ಹಾಗೆ ಸೇರುವಂತಾ ರೇಖೆಗೆ ಲಂಬಮೆಂಬ ಹೆಸರಾಗುವುದು (ಕೂಬಿಂಕ. ೦೦). ೭. ಒಂದು ಸ್ಥಳದ ಹೆಸರು : ವೀರನಾಯಕ ಬಲವುಗ್ಬೆರಸು ಲಂಬದ ಕೋಟೆಯುವಗ್ ಕಡಿಸಿ (ಪ್ರಿಯಾ. ೮೯೨೩. ೬೨-೭; ೪). [ಸಂ.]

**ಲಂಬಕ** (ನಾ). ೧. ಒಂದು ಬಗೆಯ ಆಭರಣ : ಪ್ರತಿಮೆಗಳಿಗೆ . . . ಮುಖ್ಯವಾದ ಆಭರಣಗಳು_ಕೌಸ್ತುಭ, ಕುಂಡಲ, ಕಿರೀಟ, ಜಟಾಮುಕುಟ, ಲಂಬಕ, ಮೇಖಲಾ, ಕಟಕ ಮುಂತಾದುವು (ಭಾರದ. ೩೦೭). 'ಲಂಬಣ' ಪರಾ. ೨. ಗ್ರಂಥದ ಅಧ್ಯಾಯ,—ಪ್ರಕರಣ. [ಸಂ.]

**ಲಂಬಣ**, ಲಂಬಳ$_2$ (ನಾ). ೧. ಉದ್ದವಾದ ಒಂದು ಬಗೆಯ ಸರ : ನೆತ್ತಮನಾಡಿ ಭಾನುಮತಿ ಸೋಲ್ದೊಡೆ ಸೋಲಮನೀವುದೆಂದು ಕಾಡುತ್ತಿರೆ ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬಳ್ಕುತ್ತಿರೆ (ಶಂಶಭಾ. ೯-೬೪) ; ಲುಂಗದ ಲಂಬಣಂಗಳಂ ಚಂದನದ ವಂದನಮಾಲೆಗಳಂ . . . ತಣ್ಪಿನ ತಾಣಮುಮೆನಿಸಿರ್ಪ ಲತಾಮಂಟಪಮಂ ಪೊಕ್ಕು (ಶಂಸುಪಖಾ. ೧೨-೦೩೭ ಪ) ; ಮುತ್ತಿನ ಸರವೆನ್ನ ರನ್ನವಾವುಗೆಗಳ ಸುತ್ತ ಲಂಬಣಮಾದುದಿಂದು (ಹರಿ. ೦-೯೨). ೨. ಕುಚ್ಚು ; ಗೊಂಡೆ : ಒಪ್ಪಿದುವು ಶಾದ್ವಲರತ್ನವಿತಾನದೊಳ್ಳಂಗೋಳಸುವ ಪದ್ಮರಾಗಮಣಿ ಕೀಲಿತ ಲಂಬಣಜಾಲಮೆಂಬಿನಂ (ಪುಲ್ಲಪು. ೨-೦೮) ; ಪಚ್ಚೆಯ ಚೆಂಬವಳದ ಲಂಬಣದಿಂ ಸಿಂಗರಿಸಿ . . . ನಟ್ಟ ಕಾವನ ಗೆಲ್ಲಗಂಬಮೆನೆ . . . ಕಣ್ಗೆಡ್ಡಮಾಗಿರ್ದುಂ ಕೌಂಗುದೋಂಟಂ (ಧಪುರಾ. ೮-೨೨) **ಲಂಬಳ**$_2$ : ೧. ಬರಗೆಲೆಯುಂ ಕೊಪ್ಪುಂ ನೂಪುರಮುಂ ಲಂಬಳ [ಪಾಠಾಂ. ಣ]ಮುಮಲ್ಲಿ ಮಲ್ಲಿಗೆಯ ಮುಗುಳ್ ಜರಿಮುಗುಳೆಂಬಿವು ತನಗಾಗಿರೆ ದೇಸೆಯ ಮಾಸರಿಕ್ಕೆಯುಂ ಪೊಸಯಿಸಿದಳ್ (ಶಾಂತಿಪು. ೬-೨೨) ; ಮುತ್ತಿನ ಲಂಬಳದ ಲೋವೆಗಳಕಾಂತಿಯ ಲಳಿಯ ಲಹರಿಯೊಳೆದ್ದನಮರಾರಿ (ಕುವ್ಯಾಸ. ೩-೩೯) ; ಕನಕದ ಸಡಕು ಮಣಿಲಂಬಳದ ಹಯವಿಗೆ ಗುಡಿಯುಚ್ಚಿದು ಮೊಗವೆತ್ತಿ ನರ್ತಿಸಿತಸುರನಿದಿರಿನಲಿ (ಕೂರಶಾ. ೬-೨೯-೦೨). ೨. ಕೋಮಳಹರಿನ್ಮಣಿಭಿತ್ತಿಗಳನೊಪ್ಪುವ ಮುತ್ತಿನ ಲಂಬಳಂಗಳಂ (ಪಾರಪು. ೬-೨). [< ಸಂ. ಲಂಬನ]

**ಲಂಬಣಮಾಲೆ** (ನಾ). ಉದ್ದವಾದ ಸರ ; ಜೋಮಾಲೆ : ರಂಭಾಸ್ತಂಭಂ ಕೇತಕಿ . . . ವಿಚಿಕಿಲ ಲಂಬಣಮಾಲೆಗಳು (ಭೈರಪು. ೫-೦೭) ; ಪಚ್ಚೆಯ ಕುಟ್ಟಿಮಸ್ಥಳಂ ಸುತ್ತಿಡಿದಿರ್ದ ಮಾಣಿಕದ ಲಂಬಣಮಾಲೆ (ರಾಜಶೇ. ೫-೨). [< ಸಂ. ಲಂಬನ ಮಾಲಾ]

**ಲಂಬಣಿಗೆ**, ಲಂಬಳಿಗೆ (ನಾ). = ಲಂಬಣಮಾಲೆ : "ಲಂಬನಂ. ಲಲಂತಿಕಾ — ಈ ೨ ಮುತ್ತಿನ ಲಂಬಣಿಗೆ" (ಶಾಶರಾ. ೦೨೩) ; ಮಣಿಮಕುಟಂ ಶಿಖರಂ ಲಂಬಣಿಗೆಯು ಪೊಸಮುತ್ತು ನಿರ್ಝರಂ . . . ಆಗೆ ತದ್ಗಿರಿಗೆಣೆಯಾದಂ ತನ್ನ ಪೆಸರೊಳಂ ವಿಜಯಾರ್ಧಂ (ಅಂಪು. ೦೭-೦೩). **ಲಂಬಳಿಗೆ** : ಮುತ್ತಿನ ಲಂಬಳಿಗೆಯಿಂ ಬೆಸಂಗುವಡೆಯೆ ಕಟ್ಟದ ಕಾಂಚಿಯಿಂ ಕಾಂಚೀಪದದೊಳಂಗಜಂಗೆ ಸಾಮ್ರಾಜ್ಯಪಟ್ಟಮಂ ಕಟ್ಟಿಯುಂ (ಪರ್ವಪು. ೭-೯ ಪ). [< ಸಂ. ಲಂಬನಿಕಾ]

**ಲಂಬನ** (ನಾ). ೧. ಜೋಲಾಡುವುದು; ನೇತಾಡುವುದು : "ಲಂಬಃ. ಲಂಬನಂ, ಲಂಬನೀಯಂ-ಈ ೩ ನೇಲ್ಕೆ" (ಶಾಶಕ್ಕ. ೦೦೯). ೨. ಉದ್ದವಾದ ಒಂದು ಬಗೆಯ ಸರ,— ಹಾರ : "ಲಂಬನಂ, ಲಲಂತಿಕಾ— ಈ ೨ ಮುತ್ತಿನ ಲಂಬಣಿಗೆ" (ಶಾಶರಾ. ೦೨೩). ೩. [ಖಗೋಳ] ವೀಕ್ಷಣೆಯ ಸ್ಥಾನವನ್ನು ವ್ಯತ್ಯಾಸಮಾಡುವುದರಿಂದ ವೀಕ್ಷಿತ ವಸ್ತುವಿನ ಸ್ಥಾನವು ಬದಲಾವಣೆಯಾದಂತೆ ಕಂಡುಬರುವುದು : ವಸ್ತುಸ್ಥಾನಾಭಾಸ : 'ಲಂಬನ' ಎಂದರೆ ಭಿನ್ನದೃಷ್ಟಿ (ಕ್ಯೋಶಬಿರ. ೨೬೨) ; ದಶಜ್ಯಾ ವಿಧಾನ ಎಂಬುದಾಗಿ ಕರೆಯಲಾದ ಲಂಬನ (parallax) ವನ್ನು ಕಂಡುಹಿಡಿಯುವ ಮೊದಲನೆಯ ಆರ್ಯಭಟನ ಮಾರ್ಗವು ಮುಖ್ಯವಾಗಿ ಭಾರತೀಯವಿಧಾನ (ತತ್ವಶಾ. ೯೬೩). [ಸಂ.]

**ಲಂಬಹಸ್ತ** (ನಾ). ಕೆಳಗೆ ಇಳಿಬಿಟ್ಟ ಕೈ : ಪೂರ್ವದಲ್ಲಿ ಷಡ್ಭುಜನೃತ್ಯ ಮಾಡುವ ಕೃಷ್ಣ (ಅಭಯ, ಶಂಖ, ಸ್ವರ್ಗಹಸ್ತ, ಚಕ್ರ, ಲಂಬಹಸ್ತ, ದಾನ) (ಹೊಯ್ಸಳ. ೦೩೨). [ಸಂ.]

**ಲಂಬಳ**$_1$ ' ಲಂಪಳ ' ನೋ.

**ಲಂಬಳ**$_2$ ' ಲಂಬಣ ' ನೋ.

**ಲಂಬಳಿಗೆ** ' ಲಂಬಣಿಗೆ ' ನೋ.

**ಲಂಬಾಡಿ**, ಲಂಬಾಣಿ, ಲಮಾಣಿ, ಲವಾಣ (ನಾ). ಒಂದು ಅಲೆಮಾರಿ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ : "ಲಂಬಾಡಿ (ಲಮ್ಮಾನಿ) — ಒಂದು ಕಾಡುಜನಾಂಗ" (ಜಾವಕೋ. ೯೨). **ಲಂಬಾಣಿ :** ' ತಾಂಡೆ '. ಯಿಂದಲಿ ಬರುವ ಲಂಬಾಣಿ ಹೆಂಗಸರ ಉಡುಪು ತೊಡಪೇನು (ಜಾವಜ. ೫-೦). **ಲವಾಣಿ :** ಹಾದಿ ಯೊಳಗ ಲವಾಣಿ ತಾಂಡೆ ಇತ್ತು (ಇತಿಶ್ರೀ. ೫೯) ; ನಮ್ಮ ಊರ ಲವಾಣ್ಯಾರು ಇದ್ದಾರ (ಗಂವಖರು. ೦೦೯). **ಲವಾಣ :** ಲವಾಣರು, ಇಲ್ಲವೆ ಲಂಬಾಡಿಗರು :– ಇವರು ವಾಡಿಕೆಯಾಗಿ ಅಡವಿಯ ಹತ್ತಿರ ಇಲ್ಲವೆ ಗುಡ್ಡದ ಮೇಲೆ ಇರುತ್ತಾರೆ (ಕಶಾಗೆ. ೦೦೩).
[ದೇ. ತಮಿ. ಲಮ್ಬಾಟಿ; ತುಳು. ಲಂಬಾಡಿ, ಲಂಬಾಣಿ; ತೆಲು. ಲಂಬಾಡಿ. / ಮರಾ. ಲಂಬಾಣ, ಲಮಾಣ]

**ಲಂಬಾಡಿಗ**, ಲಂಬಾಣಿಗ (ನಾ). = ಲಂಬಾಡಿ : ಲವಾಣರು, ಇವೆಲ್ಲ ಲಂಬಾಡಿಗರು.– ಇವರು ವಾಡಿಕೆಯಾಗಿ ಅಡವಿಯ ಹತ್ತಿರ ಇಲ್ಲವೆ ಗುಡ್ಡದ ಮೇಲೆ ಇರುತ್ತಾರೆ (ಕಶಾಗೆ. ೦೦೩). **ಲಂಬಾಣಿಗ :** ಎತ್ತುಗಳನ್ನು ಅದರ ಸಂಗಡ ಇದ್ದ ಲಂಬಾಣಿಗರನ್ನು ಸಹ ಹಿಡಿದುಕೊಂಡು ಬರುವಾಗ್ಗೆ (ರಾಕೇಂದ್ರ. ೯೩). [ಲಂಬಾಡಿ + – ಇಗ]

**ಲಂಬಾಣಿ** ' ಲಂಬಾಡಿ ' ನೋ.

**ಲಂಬಾಣಿಗ** ' ಲಂಬಾಡಿಗ ' ನೋ.

**ಲಂಬಾಳಕ** (ನಾ). ಜೋಲುವ **ಮುಂಗುರುಳುಳ್ಳವನು** : ಪ್ರಸಾರಿತ ಕಜ್ಜಲಂ ತಿಳಕವಿಳಸದ್ಭಾಳಂ . . . ತಳೆದಂ ಚೆಲ್ವಂ ಲಂಬಾಳಕಂ ನೃಪ ಬಾಲಕಂ (ಮಲ್ಲಿಶ. ೯-೦೩೦). [ಸಂ. ಲಂಬಾಲಕ]

**ಲಂಬಿಕಾಯೋಗ** (ನಾ). [ಯೋಗ] ಯೋಗದ ಸಾಧನೆಗಳಲ್ಲಿ ಒಂದು ; ನಾಲಗೆಯನ್ನು ಬ್ರಹ್ಮರಂಧ್ರದ ಕುಹರಕ್ಕೆ ಒಯ್ಯುವುದು : ಬಹುಪ್ರಯಾಸಮಾದ ಲಂಬಿಕಾಯೋಗವೆನಿಸುವ ಬಾಹ್ಯಖೇಚರಿಯನವಲಂಬಿಸಿ ನಾಲಗೆಯನು ಛೇದಿಸುವ ವ್ಯಾಪಾರದಲಿ ತತ್ಪರರಾಗಿ ಕಪಾಲಕುಹರಾಂತ ರ್ಗತಮಾದ ಶ್ಲೇಷ್ಮರಸಾಸ್ವಾದನಮಂಮಾಳ್ಪ ಹಠಯೋಗಿಗಳಿಂ (ಶರವಾ. ೫-೬೬) ; ಶಿವನು ಪ್ರಸನ್ನವಾಗದಿರಲು, ಲಂಬಿಕಾಯೋಗದಲ್ಲಿ ನಾಲಗೆಯ ಬ್ರಹ್ಮರಂಧ್ರಕೆ ನೀಡಿ . . . ಒಂದು ಕಾಲಲ್ಲಿ ನಿಂದು ಹತ್ತುಸಾವಿರವರುಷ ತಪವ ಮಾಡುವಾಗ (ಭೈರಕಾ. I, ೯೦) ; ಲಂಬಿಕಾಯೋಗದ ದಂಭದಿ ನುಡಿಬೇಡ ತುಂಬಿ ತುಳುಕಬೇಕು ಸರ್ವಾಂಗ (ಸಿದ್ಧಶಿ. ೩೭-೫). [ಸಂ.]

**ಲಂಬಿಕಾಯೋಗಿ** (ನಾ). ಲಂಬಿಕಾಯೋಗವನ್ನು ಸಾಧಿಸಿರುವವನು : ಮಥಿಸಿ ಮಸ್ತಕಮಧ್ಯಭಾಗಸ್ಥಿತದ ಚಂದ್ರಾಮೃತವ ಸೇವಿಸಿ ಸತತ ಸೊಕ್ಕಿದ ಲಂಬಿಕಾಯೋಗಿಗಳ ಪರಿಯಂತೆ (ಗಗತಾ. ೦೭-೩೬).
[ಸಂ. ಲಂಬಿಕಾಯೋಗಿನ್]

**ಲಂಬಿಕೆ** (ನಾ). ೧. ನೇತಾಡುವುದು; ತೂಗಾಡುವುದು. ೨. ಕಿರುನಾಲಗೆ : ಖಂಡಿಸಿದ ಕರಗಳಿಂ ಬಿಲ್ಲ ಹಿಡಿಯಬೇಕು ವದನದಿಂ ದೃಷ್ಟಿಯಿಲ್ಲದೆ ನಭವ ನೋಡಬೇಕು ಲಂಬಿಕೆಯರಿದು ಬೆಲ್ಲಮಂ ಮೆಲಲು ಬೇಕು (ಶಂಗಿಶಿ. ೨೨-೦೩). ೩. ಕಿವಿಯ ಹಾಲೆ : "ಹಾಲೆ ಪತ್ರಾಶ್ರಯಂ ಲಂಬಿಕಾಖ್ಯಂ" (ಶಂಗರಾ. ೯೪-೫). ೪. = ಲಂಬಿಕಾಯೋಗ: ಹಠಯೋಗ ಲಂಬಿಕೆಯೆಂದು . . . ಇದು ಪೂರ್ವನವನಾಥಸಿದ್ಧರ ಮತೋಕ್ತವೆಂದು. ಕಾಪಾಲಿಕಾಚರಣೆ ಯನಾಚರಿಸುವರಲ್ಲ ಶರಣರು (ಅವಕಂ. ೦೫೯-೬೨೪); ಲಂಬಿಕೆಯಿಂ ಸುಷುಮ್ನೆಯೊಳು ಜ್ಯೋತಿಯಂ ನಡಸಿ (ಸಿದ್ಧರಾ. ೯-೨೭). [ಸಂ. ಲಂಬಿಕಾ]

**ಲಂಬಿತ** (ಗು). ಜೋಲಾಡುವ ; ತೂಗಾಡುವ ; ಇಳಿಬಿದ್ದಿರುವ : ಧೃತದಂಡಂ ಚಾರುಚಂಪಕಚ್ಛಾಯಂ ಲಂಬಿತಕೂರ್ಚಂ (ಜಾತಿ. ೦೯-೩೭); ಲಲನೆ ಶಯನಿಸುವಮಳಪುಷ್ಪಕನಿಳಯಲಂಬಿತರತ್ನಮಾಲಾಕಲಿತಮಣಿಗಣ ದೀಪವಿಭ್ರಮಕಾಂತಿಯಗ್ಗಳಿಸೆ (ಬಸಪು. ೦೨-೦೯). [ಸಂ.]

**ಲಂಬಿಸು** (ಕ್ರಿ). ೧. ತೂಗಾಡು ; ಜೋಲಾಡು : ಸೋಮಾರ್ಗಡಿ ಲಂಬಿಸೆ ಕರ್ಣಪೂರಿತೋತ್ಪಲವೊಲೆದಾಡೆ ಗಟ್ಟಗಳನಂದು ಮುಗುಳ್ಚಿದರಿಂದುವಕ್ತ್ರೆಯರ್ (ಗಂಶ. ೨-೯೦) ; ಲಂಬಿಸುವ ಫಲಭರದ ರಸದಾಳಿಂಬ ಖರ್ಜೂರಾಮ್ರಕದಳಿಕದಂಬ (ಕೊರಣಾ. ೦-೫-೪೦) ; ಲಂಬಿಸುವಲಮರ್ಗಡಿಗಳ ಶಿರಂಗಳಿಂ ಬಾಗಿ ಲಕ್ಷ್ಮೀಪತಿಗೆ ವಂದಿಸಿದರು (ಕೃಬಿಭಾ. ೭-೦೩). ೨. ಹೆಚ್ಚು ; ವೃದ್ಧಿಯಾಗು : ಲಂಬಿಸಿತು ಭಯತಿಮಿರ ಶೋಕಾಡಂಬರದ ಡಾವರ ವಿವೇಕವ ಚುಂಬಿಸಿತು (ಕುವ್ಯಾಗ. ೯-೦೯) ; ಚಿಗುರಿದುದು ದುರ್ವಾರ್ತೆಲತೆ ನಿಜನಗರದಲಿ ಲಂಬಿಸಿತು ಕರ್ಣದೊಳಾ ಕಕುತ್ಸ್ಥಜನ (ತೊರಣಾ. ೧-೩-೩); ರಂಭೆ ಮುಖವು ಬಿಳಿದಾಗಿ ಸುಜಠರವು ಲಂಬಿಸೆ (ಅಶ್ವಿಚ. ೨-೯೦). ೩. ದೊಡ್ಡದನ್ನಾಗಿ ಮಾಡು ; ಬೆಳೆಸು ; ಹೆಚ್ಚಿಸು : ಕ್ಷಯದ ವೇಗವನ್ನು ನಿರೋಧಿಸಿ ಜೀವಮಾನವನ್ನು ಲಂಬಿಸುವುದು ಸಾಧ್ಯವು (ಆರ್ಯುಶ. ೦೬೦); ಯಾವುದೊಂದು ವಿಷಯವಾಗಲಿ ಅತಿಯಾಗಿ ಲಂಬಿಸಿರ ಬಾರದು (ಶಿಕ್ಷದ. ೨೬೮). ೪. ಮೈಚಾಚು ; ಒರಗು ; ಮಲಗು : ತುದಿಖುರವನೂಚಿ ನವಾಯಿ ಮಿಗಲರೆನೋಟದಾಲಿಯ ಮಿಡುಕದವಿಲಣದ ಲಾಯದಲಿ ಲಂಬಿಸಿದವೊಲು ವಾನಾಯುಜದ ಸಾಲೆಸೆದುದು (ಕುವ್ಯಾದ್ರೋ. ೦೭-೯). [ಲಂಬನ + – ಇಸು$_3$]

**ಲಂಬು** (ಗು). ೧. ಉದ್ದನೆಯ ; ಉದ್ದವಾದ. (ನಾ). ೨. ಉದ್ದಳತೆ: "ಲಂಬು (ಲಾಂಬು) ⊥ ಲಂಬ" (ಕದ್ಯಕೋ. ೩೯). ೩. ಉದ್ದವಾಗಿರುವವನು ; ಎತ್ತರವಾಗಿರುವ ವ್ಯಕ್ತಿ : ಅವನೇನು ಆರೂವರೆ ಅಡಿ ಉದ್ದದ ಲಂಬುವಂತೆ (ಕೃಸರು. ೧೦೧). [←ಹಿಂ. ಲಂಬೂ. / ಸಂ. ಲಂಬ]

**ಲಂಬೂಷ** (ನಾ). ಏಳು ಎಳೆಗಳ ಸರ,–ಕಂಠಹಾರ : ತಾರಾತರಲಮುಕ್ತಾಫಲಲಂಬಲಂಬೂಷಭೂಷಿತಮುಮಮವಲಂಬಿತ ಸುರಭಿಕುಸುಮದಾಮಾಕೀರ್ಣ ಮುಂ . . . ಅಪ್ಪ ಶ್ರೀಮಂಟಪಮಂ ವಿರಚಿಸಿ (ಆದಿಪು. ೭-೬೩ ತ); ಪಾಂಡುಕಶಿಲಾತಲೋಪರಿಮಂಡಪಲಂಬೂಷ ಲಂಬಮಂದನಮಾಲಾಮಂಡನ ಲತಾಂತಪರಿಮಳಮಂಡಳಿತ ಮದಾಳಿಗೀತ ಮಂದಸಮೀರಂ (ಅನಂಪು. ೫-೯೯).
[<ಸಂ. ಲಂಬೂಷಾ]

**ಲಂಬೋದರ** (ನಾ). ೧. ದೊಡ್ಡಹೊಟ್ಟೆಯವನು ; **ಡೊಳ್ಳು** ಹೊಟ್ಟೆಯವನು : ಧವಲೋತ್ತರೀಯವಸನಂ ಲಂಬೋದರಂ ಲಂಬ**ಕೂರ್ಚ** ಕಲಾಪಂ . . . ಬಂದಂ ಪ್ರತೀಹಾರಕಂ (ಶಂರಾಮಾ. ೨-೨) ; **ಆಜಾನು** ಬಾಹುಗಳುಳ್ಳ ಲಂಬೋದರಸ್ವರೂಪಿಯಾದ ಭವ್ಯತರುಣನೊಬ್ಬನು **ನಿಂತು** ಕೊಂಡಿದ್ದನು (ಕಳ್ಳಕಾ. ೩೨). ೨. ಹೊಟ್ಟೆಬಾಕ ; **ತಿಂಡಿಪೋತ** : (ಶ). ೩. ಗಣೇಶ ; ಬೆನಕ ; ವಿನಾಯಕ : "**ಹೇರಂಬಃ**, ಲಂಬೋದರಃ . . . ವಿಘ್ನರಾಜಃ — ಈ ೯ ಬೆನಕನ ಪೆಸರ್" (ಶಬ್ದಾಯು. ೯-೦೯) ; ಕರಿಗೊರಳ ತನ್ನ ಕಂಠದಲಿ ಲಂಬೋದರನ ತ್ವರಿತ **ಪುಟ್ಟಿಸಿ** (ಶ್ರೀತರಾ. ೮-೦೦) ; ಲಂಬೋದರಗೇತಕೆ ತರಳೋದರೆ ಕುಂಭಶಿರ**ಂಗೇತಕೆ** ಬಿಂಬಾಧರೆ (ಗಣೇಶ. ೫-೦೨೦). [ಸಂ.]

**ಲಂಬೋದರಿ** (ನಾ). ೧. ದೊಡ್ಡ ಹೊಟ್ಟೆಯುಳ್ಳವಳು. ೨. ಒಬ್ಬ ರಾಕ್ಷಸಿಯ ಹೆಸರು : ರೋಷದಿಂದೊದಱಿದಳ್ ಮತ್ತೊರ್ವಳಸುರಿ ಲಂಬೋದರಿ ನಿಶಾಚರಿ ಮಹಾಭಯಂಕರಿ (ಕೃಬಿಭಾ. ೦೩-೩೫).
[ಸಂ. ಲಂಬೋದರೀ]

**ಲಂಭ** (ನಾ). ೧. ಪಡೆಯುವುದು ; ದೊರಕಿಸಿಕೊಳ್ಳುವುದು. ೨. ಪ್ರಾಪ್ತಿ ; ಸಿದ್ಧಿ : ವಿವಿಧವಿಭವಶೋಭಾರಂಭಲಂಭಪ್ರಲಂಭೋದ್ಭವ ವಿಹಿತವಿವಾಹೋತ್ಸಾಹಸಾಕಲ್ಯಕಲ್ಪಂ . . . ಸಮುದಿತಸೇವಾರಾತಿವೃತ್ತಾಂತ ವೃತ್ತಂ (ಕಬರಾ. ೩-೨೦೨). ೩. [ಸಂಗೀತ] ಒಂದು ಬಗೆಯ ಗೀತ ಪ್ರಬಂಧ : ಏಲಾ, ಢೇಂಕೀ, ಝೊಂಬಡ, ಲಂಭ, ರಾಸಕ . . . ಲೋಲೀ, ಢೊಲ್ಲರೀ, ದಂತೀ — ಈ ಇಪ್ಪತ್ತೆರಡು ಪ್ರಬಂಧಗಳೂ ತಾರಾವಳೀ ಜಾತಿಯುವೆಂದು ಪ್ರಸಿದ್ಧವಾಗಿವೆ (ಕಕುಶ್ರ: ೬೩). [ಸಂ.]

**ಲಂಭನ** (ನಾ). = ಲಂಭ ೧ : ಭಾವೇಂದ್ರಿಯಂ ದ್ವಿವಿಧಂ ಜ್ಞಾನಾವರಣ ಕ್ಷಯೋಪಶಮವಿಶೇಷಮಪ್ಪ ಲಂಭನಂ ಲಬ್ಧಿ (ತತ್ತ್ವಸೂ. ೯೬). [ಸಂ.]

**ಲಕಚ** 'ಲಕ್ಕುಚಣ' ನೋ.

**ಲಕಪರಾಲಿ** (ನಾ). ಒಂದು ಊರಿನ ಹೆಸರು : ಅಸ್ತೆ ಬನ್ದು ಬೆಳೆ ಕೆಱೆಯ ಪಡುವಣಕಡೆಯಿಂ ಅಸ್ತ ಬನ್ದು ಲಕಪರಾಲಿಯ ಮೂಡಣ ಬೇಲಿಯಿಂ (ಎಕ. III, ನಂಜನ. ೦೪೯-೦೯ ; 915 ?). [ ? ]

**ಲಕಮುಕ** 'ಲಕುಮುಕಿ' ನೋ.

**ಲಕಲಕ** (ನಾ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣ ಪದ : ಪಾತ್ರೆ ಪರಡಿಗಳನ್ನೆಲ್ಲ ಹುಣಿಸೇಹಣ್ಣಿನಿಂದ ತಿಕ್ಕಿ ಲಕಲಕ ಮಾಡಿದಳು (ಮುಕ್ತ್ಯ ದೆ. ೨೩) ; ಎಲೆಯ ಮೇಲ್ಮೈಯು ಲಕಲಕ ಹೊಳೆಯುವ ಕೆಂಪುಬಣ್ಣದ್ದಿರುತ್ತದೆ (ಮುಂಬಯಿ. ೯-೭೦).

**ಲಕಲಕನೆ** (ಅ). ಕಾಂತಿಯಿಂದ ಹೊಳೆಯುವಂತೆ ಎಂಬರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಹಲವರು ಬಂದಿಗೆ ಕೊಡಗಳನ್ನು ಲಕಲಕನೆ ತಿಕ್ಕುತ್ತಿದ್ದಾರೆ (ಶಲಸಂ. ೯).
[ಲಕಲಕ + - ಅನೆ₁]

**ಲಕಲಿಸು** (ಕ್ರಿ). ಕಾಂತಿಯಿಂದ ಬೆಳಗು ; ಥಳಥಳಿಸು ; ಮಿಂಚು : ಕಪ್ಪುದ್ರಾಕ್ಷಿಯಲ್ಲಿ ನಕ್ಷತ್ರಗಳನ್ನು ಸೆರೆಹಿಡಿದಿಟ್ಟಂತೆ ಲಕಲಕಿಸುವ ಕಣ್ಣುಗಳು (ಚಿಕಂಪಾ. ೬೩) ; ಬೆಳ್ಳಿಯ ಭಾಂಡಿಗಳು ಎಲ್ಲ ಕಡೆಗೆ ಲಕಲಕಿಸುತ್ತವೆ (ಅಷ್ಟ. ೯೩). [ಲಕಲಕ + - ಇಸು₃]

**ಲಕಲಿ** 'ಲೊಕ್ಕಿ₁' ನೋ.

**ಲಕಾರ** (ನಾ). 'ಲ' ಎಂಬ ಅಕ್ಷರ : ವಿಕಲ್ಪಂ ಕ್ಷಳನಿಲ್ಲದಿಲ್ಲ ಸಂಸ್ಕೃತ ದೊಳಾ ಲಕಾರಕ್ಕೆ ಪೇೞ್ದಿನೆದಱಿಂ ಕ್ಷಳನಂ (ಶಬ್ದದ. ೩). [ಸಂ.]

**ಲಕುಚ** (ನಾ). ೧. ಗಜನಿಂಬೆ : "ಲಕುಚಃ, ಲಿಕುಚಃ, ಡಹುಃ — ೩ ಗಜನಿಂಬೇ ಹೆಸರುಗಳು" (ಸಿದ್ಧಾಂಶಿ. ೦೨೩). ೨. ಬೇಲ ; ಕಪಿತ್ಥ : "ಲಿಕುಚಂ [ಲಕುಚಂ] ಕಪಿತ್ಥಮೞಿಗೆ ದಧಿತ್ಥಂ" (ವಸ್ತುಕೋ. ೩೩-೩). ೩. ಒಂದು ಬಗೆಯ ಕಾಡುಹಲಸು. [ಸಂ.]

**ಲಕುಟ** (ನಾ). ಬಡಿಗೆ ; ದೊಣ್ಣೆ ; ಕೋಲು : "ವೈಣವಃ, ಲಕುಟಃ . . . ಯಷ್ಟಿಃ — ಈ ೫ ಕೋಲ್" (ಕಣಾಭು. ೦೨೦-೯೦) ; ಲಕುಟ ಯಷ್ಟ್ಯಾದಿವಿಧಿಯನುಪದೇಶಿಗೆಯ್ದಾತಂ ಕ್ಷೇಮಂಧರನೆಂಬ ಪೆಸರಂ ಪಡೆದಂ (ಅಜಿತ. ೬-೩೬ ವ) ; ಅರಸಂ ಮುಳಿದು ಲಕುಟ ಶಾಟ(ಡ)ನಪೂರ್ವಕಮಾ ಶುನಕನಂ ಕಳೆದಂ (ಜಾಪುಂಪು. ೯೩೩) ; ಗಳತಾಶ್ರು ವಿಷಣ್ಣನೆಣ್ಣೆವೂಸಿದನತಿ ರಕ್ತವಸ್ತ್ರಕುಸುಮಂ ಲಕುಟಾಜಿನಪಾಶಹಸ್ತಂ (ಲೋಕೋಪ. ೦೦-೩). [ಸಂ.]

**ಲಕುಮಿ**, ಲಕ್ಕಿ₂, ಲಕ್ಷುಮಿ, ಲಚ್ಚಿ, ಲಚ್ಚಿ (ನಾ). ೧. ಐಶ್ವರ್ಯ ; ಸಂಪತ್ತು. ೨. ವಿಷ್ಣುವಿನ ಹೆಂಡತಿ ; ಲಕ್ಷ್ಮಿ : "ಲಕುಮಿ ಲಕ್ಷ್ಮಿಯೆನಿಕ್ಕುಂ" (ಶಬಿಕಂ. ೨೬) ; ನಂದಿವರ್ಮನಂಗನೆ ಭೂನಾರಿಗೆ ರತಿಗರುನ್ಧತಿದೇವಿಗೆ ಲಕುಮಿನಾರಿಗೆ ಪಡಿಯೆನೆ ಭೂನುತೆ ತಾ ಚಾಕಣಬ್ಬೆ ಕಾಂತಾರತ್ನ (ಎಕ. XX, ೦೦೫-೨೭ ; 1146) ; ಲಕ್ಷ್ಮೀ— ಲಕುಮಿ, ಶಬ್ದ — ಸಬುದ (ಶಬ್ದದ. ೨೩೯ ಪ್ರಯೋ). ೧, ೨ : ದೇಹಕಾಂತಿಗೆ ಮುಳಿದ ತರಣಿಸತಿಯಾ ಪಿಡಿದು ಕಾಹನಟ್ಟನುಡಿ ಲಕುಮಿಯನೊಳಗೆ ತುಂಬಿ ರಾಜಂಗೆ ಕೈಸೆಕೆಯ ತೋಱುವೆನೆನುತ್ತೆ . . . ಇನನುದಯಗಿರಿಯನಡರ್ದಂ (ಶಾಪಶಂ. ೩-೩೪). ೩. ಶೋಭೆ ; ಕಾಂತಿ : ನಿನಗೆ ತಾನೆಲೆ ದೇವ ವಲ್ಲಭೆಯೆನಿಸುವಡೆ ಕೀಳ್ ದ್ರುಮುವ ನಡೆ ಮನಕೆ ಬಾರದಡ್ಡೆದಳಪಗತವದನ ಲಕುಮಿಯಲಿ (ಸಿಭಾಗ. ೦೦-೭೦-೩೪). **ಲಕ್ಕಿ₂** : ೨. "ಲಕುಮಿ (ಲಚ್ಚಿ, ಲಕ್ಕಿ)ಲಕ್ಷ್ಮೀ=ಶ್ರೀದೇವಿ" . (ಕದ್ಯಕೋ. ೩೬). **ಲಕ್ಷುಮಿ** : ಒಳ್ಳಿತೇ ಶಕುನಫಲವೆಲ್ಲ ನಮಗೆ ಲಕ್ಷುಮಿವಲ್ಲಭನ ಸೇವೆ ದೊರಕೊಂಬುದೇ ರಮಣಿ (ಫುರಂದ. ೩-೮೦ ಪಲ್ಲವಿ). **ಲಚ್ಚಿ** : ೨. "ಲಕ್ಷ್ಮೀ-ಲಚ್ಚಿ" (ಶಬ್ದಾ ಸು. ೦೬೦ ಪ್ರಯೋ). ೪. ಒಬ್ಬಾಕೆಯ ಹೆಸರು : ಬಂಮರಸಂಗಂ ಲಚ್ಚಿಯಬರಸಿಗಂ ಪುಟ್ಟಿದ (ಎಕ. VIII, ಸಾಗರ. ೦೩-೦೩ ; 1218). **ಲಚ್ಚಿ** : ೫. [ಜೈನ] ಊರ್ಧ್ವಲೋಕದ ಒಂಬತ್ತು ಅನುದ್ದಿಶ ವಿಮಾನಗಳಲ್ಲಿ ಒಂದು : ನವಗ್ರೈವೇಯಕಂಗಳೊಳಮಲ್ಲಿಂ ಮೇಗಣ ಲಚ್ಚಿ ಮಹಾಲಚ್ಚಿ ಮಾಳಿನಿ ವೈರೆ ವೈರೋಚನೆ ಸೋಮೆ ಸೋಮರೂಪೆ ಅಂಕೆ ಪಳಿಕೆ ಅಯಿಚ್ಚಿಯೆಂಬ ನವಾನುದ್ದಿಸೆಗಳೊಳಂ (ವಡ್ಡಾರಾ. ೯೬-೩೦).
[< ಸಂ. ಲಕ್ಷ್ಮೀ./ಪ್ರಾ. ಲಚ್ಚಿ]

**ಲಕುಮುಕಿ**, ಲಕಮುಕ (ನಾ). ೧. ಜಾಲಗಾರನ ಹಕ್ಕಿ ; ಮೀಂಚುಳ್ಳಿ : (ಕ). ೨. ಟಿಟ್ಟಿಭ ಪಕ್ಷಿ : "ಟಿಟ್ಟಿಭಕಃ, ಲಕುಮುಕೀ ಹಕ್ಕಿ" (ಸಿದ್ಧಾಂಶಿ. ೦೬೩). **ಲಕಮುಕ** : (ಕ). [ ←ತೆಲು. ಲಕುಮುಕಿ ]

**ಲಕುಲೀಶ** (ನಾ). ೧. ಒಂದು ಶೈವಪಂಥದ ಪ್ರವರ್ತಕನಾದ ಒಬ್ಬ ಮಹಾಪುರುಷ : ಆಯೆಂಬ ವರ್ಣವೈಶ್ವರ್ಯಮಂ ವರ್ಧಿಪುದು ಲಾಯೆಂಬ ವರ್ಣ ಲಕುಲೀಶಗಣಪದಮಕ್ಕು . . . ನಂಬಿಯಲ್ಲಮಪ್ರಭುವೆಂಬ ಮಂತ್ರಾಮೃತವ ಸೇವಿಸಿ (ಪ್ರಭುಪು. ೯-೩೨). 'ಲಕುಲೀಶಪಾಶುಪತ' ಪರಾ. ೨. ಶೈವ ಧರ್ಮದ ಒಂದು ಪ್ರಭೇದ ; ಲಕುಲೀಶನಿಂದ ಸ್ಥಾಪಿಸಲ್ಪಟ್ಟ ಪಂಥ : ಕಾಳಾಮುಖ, ಲಕುಲೀಶ, ಮಾಹೇಶ್ವರ . . . ಇವೇ ಮೊದಲಾದವು ಶಿವಭಕ್ತಿಪಂಥದ ಮುಖ್ಯಪ್ರಭೇದಗಳು (ಭಾರದ. ೩೦೬).
[ಸಂ.]

**ಲಕುಲೀಶಪಾಶುಪತ**, ಲಕುಳೀಶಪಾಶುಪತ (ನಾ). ಶೈವಧರ್ಮದಲ್ಲಿ ಒಂದು ಪಂಥ ; ಲಾಕುಳಶೈವಪಂಥ : ಕ್ರಿ.ಶ. ಏಳನೇ ಶತಮಾನ ದಿಂದಲಾದರೂ ಲಕುಲೀಶಪಾಶುಪತವೆಂಬ ಶೈವಧರ್ಮ ಪ್ರಚಾರದಲ್ಲಿತ್ತು (ಹೊಸ್ತಕು. ರ ಪತ್ರಿಕೆ). **ಲಕುಳೀಶಪಾಶುಪತ** : ಈ ಲಕುಳೀಶಪಾಶುಪತ ಶೈವಪಂಥವು ಪ್ರವರ್ತಿತವಾದುದು ಕ್ರಿ. ಪೂ. ೨ನೇ ಶತಕದಲ್ಲಿಯೆಂದು . . . ಅಭಿಪ್ರಾಯಪಡುವರು (ಹಿರಗೀ. ೨ ಪೀಠಿಕೆ). [ಸಂ.]

**ಲಕುಳ** (ನಾ). ಮುಂಗುಸಿ ; ನಕುಲ : ನರಿ ನವಿಲು ಲ[ಶಾಣಂ.ನ]ಕುಳ ವಾಯಸಂಗಳು ತಿರ್ದೆ ಶುಭಶಕುನಂಗಳು (ಶಿವೇಶ. ೦೨೩). [<ಸಂ. ನಕುಲ]

**ಲಕುಳೀಶಪಾಶುಪತ** 'ಲಕುಲೀಶಪಾಶುಪತ' ನೋ.

**ಲಕೋಟ** 'ಲಗಾಟ' ನೋ.

**ಲಕೋಟೆ₁**, ಲಕ್ಕೋಟೆ₁ (ನಾ). ೧. ಪತ್ರವನ್ನು ಇಟ್ಟು (ಅಂಟಿಸಿ) ಕಳುಹಿಸುವ ಕಾಗದದ ಸಣ್ಣ ಚೀಲ; ಪಾಕೀಟು ; ಸಣ್ಣ ಕವರು : ಅವಳು ಲಕೋಟೆಯೊಳಗಿನ ಕಾಗದವನ್ನು ಹೊರಗೆ ತೆಗೆಯುತ್ತ ನುಡಿದಳು (ಸೀಪಂಂಕ. ೩೩೦); ಫೋಟೋವನ್ನು ಲಕೋಟೆಯಿಂದ ತುಸು ಹೊರಗೆಳೆದು ತೀವ್ರಾಸಕ್ತಿಯಿಂದ ನೋಡುತ್ತಿದ್ದಳು (ಕೃಪರು. ೩೨೩). ೨. ಅಂಟಿಸಿದ ಅಥವಾ ಅಂಟಿಸದೆ ಮುಚ್ಚಿರುವ ಅಂಚೆಯ. ಪತ್ರ : ಅಂಚೆಯವನು ಒಂದು ಲಕೋಟೆಯನ್ನಿತ್ತು ತೆರಳಿದನು (ಸುಂದಂ. ೬೩); ಲಕೋಟೆ ಯೊಂದವ್ನು ಹೆಕ್ಕಿ ಎಲ್ಲಿಂದ ಬಂದುದೆಂದು ಮುದ್ರೆ ನೋಡಿದೆ (ಮುಂಗಾಮು. ೦೬). **ಲಕ್ಕೋಟೆ₁**: ೧. ಲಕ್ಕೋಟೆಯನ್ನು ಒಡೆದು ನೋಡಿದೆ (ಪಪಪೀ. ೯೮); ಪತ್ರಗಳನ್ನು ಒಂದು ಲಕ್ಕೋಟೆಯಲ್ಲಿಟ್ಟು ತಲೆಚೀಟಿ ಹಚ್ಚಿದಳು (ಶ್ಯಾಮಸ್ನೇ. ೦೪೦). [←ಹಿಂ. ಲಫೋಟಾ; ಮರಾ. ಲಫೋಟಾ, ಲಾಫೋಟಾ]

**ಲಕೋಟೆ₂** · ಲಕ್ಕೋಟೆ₂ (ನಾ). ಒಂದು ಬಗೆಯ ಹಣ್ಣು (೬).
**ಲಕ್ಕೋಟೆ₂** : (ವೃಶಿಗಿ. ೩೪-೭೬೭). [ ? ]

**ಲಕೋಟೆಹೋಳಿಗೆ** (ನಾ). ಲಕೋಟೆಯ ಆಕಾರದಲ್ಲಿ ಮಡಿಸಿ ಮಾಡಿದ ಒಂದು ಬಗೆಯ ಹೋಳಿಗೆ : (೬).
[ಲಕೋಟೆ₁ + ಹೋಳಿಗೆ₁ ( < ಪೋಳಿಗೆ₁)]

**ಲಕ್ಕ₁**, ಲಕ್ಕ₁₃, ಲಕ್ಖ, ಲಖ್ಖ₁, ಲಖ್ಖೆ, ಲಚ್ಚ₁, ಲಾಖ (ನಾ). ಒಂದು ಸಂಖ್ಯೆ ; ನೂರುಸಾವಿರ ; ಲಕ್ಷ: "ಲಕ್ಷದೊಳೆ ಲಕ್ಕಂ" (ಕರ್ಣಾ. ೩೯) : ಚತುರತ್ತಂ ಮೂಱುಂಯೋಜನದಳವಿಯ ಸಭಾಮಂಟಪಮನೊಂದುಲಕ್ಕ ರಕ್ಕಸವಡೆಯಿಂ ಪೊತ್ತು ತರಿಸಿ (ಶಂಶಿಖ. ೬-೨ ವ) ; ನೂಱು ಕರಿಘಟೆ ಲಕ್ಕ ಪ್ರಾಯದಳ (ಕುಮ್ಮ. ೪. ೨-೬); ಲಕ್ಕಧನಮಿರಲು ಕೆಡುಗುಂ ಚಿಕ್ಕಂದಿನ ವಿದ್ಯೆ ಪೊರೆಗು (ಕಶಕೆ. ೩-೧೯೭). **ಲಕ್ಕ₂** : ಮೂಱುಲಕ್ಕ ದೇವಿಯರಪ್ಪರಸಿಯರ್ಕಳುಂ (ವಡ್ಡಾ. ೮೯-೦೧); ಒಂದೊತ್ತಂ ನಡೆಯಿಸುವುದ ದೊಂದೊಂದಱ ಲಯಕೆ ಲಕ್ಕಿತೆಱನಾಡುವುದೇನೆಂದೇಂ ಬಣ್ಣಿಸುವುದೊ ಸುರಸುಂದರಿಯ ವಿಲಾಸವಿಭ್ರಮಭ್ರೂಲತೆಯಂ (ಅಂಕೃ. ೯-೩೬); ಮಾರ್ಪಡೆ ಸರಲೊಂದಱಿಂ ಕಡೆಯೆ ಲಕ್ಕಯ ಲೆಕ್ಕದಿನೆಚ್ಚ ನರ್ಪಿನಂ (ನೇಮಿಪು. ೦೦-೦೯೯). **ಲಕ್ಖ** : ಕಲ್ಯಾಣದ ನೆಲೆವೀಡಿನೊಳು ಸಪ್ತಾರ್ಧಲಕ್ಖಭೂಮಿಯಂ ದುಷ್ಟನಿಗ್ರಹಂ ಶಿಷ್ಟಪ್ರತಿಪಾಲನಂಗೆಯ್ಯುತ್ತ . . . ರಾಜ್ಯಂಗೆಯ್ಯುತ್ತಿರೆ (ಎಕ. VI, ಕಡೂರು. ೩೭-೮ ; 1187 ?). **ಲಖ್ಖ₁** : ವಡ್ಡರಾವುಳದ ಸುಂಕ ಲಖ್ಖಕ್ಕೆ ಅಱುವಣ ಮುಪ್ಪಾಗದೊಳಗೆ ಶ್ರೀಸ್ವಯಂಭುಕಲಿದೇವಸ್ವಾಮಿದೇವರ ಗ್ರಾಸನದ ಸತ್ರಕ್ಕೆ ಬಿಟ್ಟ ಪಾಗವೊಂದು (ಶಾಇ. IX-i, ೨೦೦-೨೦; 1122). **ಲಖ್ಖೆ** : ತ್ರೈಲೋಕ್ಯಮಲ್ಲ ವಿಕ್ರಮಾದಿತ್ಯದೇವರು ಸಪ್ತಾರ್ಧಲಖ್ಖೆ ಪ್ರಿಥ್ವಿಯನಾಚಂದ್ರಾರ್ಕತಾರಂಬರಂ . . . ರಾಜ್ಯಂಗೆಯ್ಯುತ್ತಿರೆ (ಎಕ. VI, ಕಡೂರು. ೮೭-೪ ; 1173). **ಲಚ್ಚ₁** : ಪೊನ್ನೊಡೆಯಂ ಲಚ್ಚದ ಪೊನ್ನೊಡೆಯಂ ಗಡ ಶತಲಕ್ಷದ ಪೊನ್ನೊಟ್ಟಲ ನಾನೀವೆಂ (ಉದ್ಭಟ. ೨-೨೬). **ಲಾಖ** : ಸಂಭಾವಿತರು ಲಾಖ ಮಂದ್ಯಾಗ ಒಬ್ಬಾವ ಇದ್ದರ ಇರಬೇಕು (ಗ್ರಾಪಾಡು. ೦೨೩).

**ಲಕ್ಕಲಕ್ಕ**, ಲಚ್ಚಾಳಚ್ಚ (ದ್ವಿರುಕ್ತಿ) : ಲಕ್ಕಲಕ್ಕಕ್ಕೆ ನೆರೆದಭವಭಕ್ತರ ನಡುವೆ (ಬಸರ. ೦೦-೦೦೭) ; ಲಕ್ಕಲಕ್ಕದಲಿ ಕಿಕ್ಕಿರಿದಿರೆ ಜೇಂಬುಳು ಮೋಹಿಸಿ ದುಂಬಿ (ಕೋಗಿಲೆ. ೬೭-೨೦) ; ಲಚ್ಚಾಳಚ್ಚ ಕುದುರೆಯಂ ಗಜರಥವ ಪೊಸ್ತಾಗಿ ಜೋಡಿಸಲ್ವೇಮಿಸುತ ಕೈದುಗಳ ಮಸ್ತಾಗಿ ಪೊಸದಾದುದಂ ತರಿಸಿ (ಕುರಂಗ. ೩೬-೪೨). **ಲಕ್ಕಮುಕ್ಕ**=ಲಕ್ಷಾಂತರ ಹಣವನ್ನುಳ್ಳ ಮೂರ್ಖ ; ಸಿರಿವಂತನಾಗಿರುವ ದಡ್ಡ : ಅಕ್ಕೊ ಬರುವ ಸೊಕ್ಕಿ ಮೆರೆವ ಲಕ್ಕಮುಕ್ಕ, ಏನೆ ಇರಲಿ ; ಅರಿತು ಕಣ್ಣ, ಹರಿವರಣ್ಣ — ಬೆಪ್ಪ, ಬಜಲಾ, ಏನೆ ಇರಲಿ (ಇಂಗೀತ. ೩೭-೦೬). [<ಪ್ರಾ. ಲಕ್ಖ / ಸಂ. ಲಕ್ಷ]

**ಲಕ್ಕ₂**, ಲಕ್ಕು, ಲಚ್ಚ₂, ಲೆಕ್ಕ₁ (ನಾ). ೧. ಗಮನ ; ಲಕ್ಷ್ಯ : 'ಲಕ್ಕಿಸು' ಪರಾ. ೨. ವ್ಯಾಖ್ಯೆ ಅಥವಾ ವಿವರಣೆಗಳಿಂದ ಹೇಳಲ್ಪಟ್ಟುದು ; ಲಕ್ಷಣಕ್ಕೆ ಉದಾಹರಣೆಯಾದುದು ; ದೃಷ್ಟಾಂತ : ಸಕ್ಕದದಿಂ ಲಕ್ಕಣಮುಂ ಲಕ್ಕಮುನೊಳ್ಗನ್ನಡಂಗಳಿಂ ವಿವರಿಸಿದು (ಅಕ್ಷ್ರ. ೦-೦೪).
**ಲಕ್ಕು** : ೧. ಗ್ಯಾಲಿರಿಯೊನಿಗೆ ವಿದ್ಯಾಭ್ಯಾಸದ ಲಕ್ಕು ಬಹಳ (ಮುಂಬಿಯು. ೫-೨೨೨) ; ಆದರೆ ಈಗ ನಿನ್ನ ಲಕ್ಕಿಲ್ಲ ಹೊರಗೆಯೇ ಇದೆ (ಕಪಟ. ೨) ; ಕುಮುದೆಯ ಮೇಲೆ ಅವನ ಲಕ್ಕಂತೆ (ಕಪಕ. ೩೭). **ಲಚ್ಚ₂** : ೩. ಗುರುತು ; ಚಿಹ್ನೆ : ಇದು ನಿಚ್ಚಂ ತನ್ನ ಲಚ್ಚಂ ಮಿಱತರುವೆನಿಪೀ ವಾಂಛೆಯಿಂ ಚಂದ್ರಮಂ ಸೂಸಿದಪಂ ಪೀಯೂಷಮಂ (ಕಪತ. III, ೩೦೯, ಹಿರಣ್ಯಗರ್ಭನ ಸರಸ್ವತೀಸ್ತುತಿ). **ಲೆಕ್ಕ₁** : ೧. ಅವನಿಗೆ ಹಿರಿಯರನ್ನು ಕಂಡರೆ ಲೆಕ್ಕವೇ ಇಲ್ಲ (ರೂಢಿ). 'ಲಕ್ಷ₁', 'ಲೆಕ್ಕಿಸು₁' ಪರಾ.
[< ಪ್ರಾ. ಲಕ್ಖ / ಸಂ. ಲಕ್ಷ್ಯ]

**ಲಕ್ಕ₃** (ನಾ). ಅರಗು ; ಲಾಕ್ಷ : ಲಕ್ಕವ ತಂದಗ್ನಿಮುಖದಲ್ಲಿ ಇಟ್ಟಂತೆ ಉಕ್ಕುವ ಹೊಳೆಯೊಳು ಪೊಕ್ಕು ಮುಣಗಿದಂತೆ (ವಿಶ್ವಾಸು. ೯೦-೪).
[ <ಪ್ರಾ. ಲಕ್ಖ, ಲಕ್ಖಾ / ಸಂ. ಲಾಕ್ಷಾ]

**ಲಕ್ಕ₄**, ಲಖ್ಖ₂ (ಗು). ೧. (ಉಕ) ಸುಂದರವಾದ ; ಚೆನ್ನಾದ ; ಶೋಭೆಯಿಂದ ಕೂಡಿದ : ಏನು ರಾಯರೇ, ಲಕ್ಕ ಬೆಳದಿಂಗಳು ನೋಡಿ ಗೊಂಬೆಯ ಹಾಗೆ ಮಲಗಿಬಿಟ್ಟಿದ್ದಿರೇನು (ಕಾರುಕ. ೭). (ನಾ). ೨. ಸುಂದರವಾದುದು ; ಒಳ್ಳೆಯದು : ನಾ ಮಾಡಿದ್ದೆಲ್ಲ . . . ಪಾಡ, ನಾ ಮಾಡಿದ್ದೆಲ್ಲಾ ಲಕ್ಕ . . . ಎಂದು ತುಳಜಾ ಅವನನ್ನಣಕಿಸುತ್ತಾಳೆ (ಬಿನಸಿ. ೬೭). **ಲಖ್ಖ₂** : ೨. ಲಖ್ಖದ ಈ ನಿವಾಂತ ಜಾಗಾ ನನ್ನ ಕೆಲಸಕ್ಕ (ಪಾರಾಂ. ೪೮).

**ಲಕ್ಕಾಗು** = ಚೆನ್ನಾಗು ; ಒಳ್ಳೆಯದಾಗು : ನಿಮ್ಮ ಪ್ರಕೃತಿ ಬಹಳ ಲಕ್ಕಾಗಿದ್ಯ ಗುರುತು ಸಹ ಹತ್ತುವಂತಿಲ್ಲ (ಸಂಕವು. ೪೨).
[← ಮರಾ. ಲಕ್ಕ, ಲಕ್ಖ, ಲಖ್ಖ]

**ಲಕ್ಕಂಬಡೆ** (ಕ್ರಿ). ಲಕ್ಷ ಬೆಲೆಯನ್ನು ಹೊಂದು ; ಲಕ್ಷ ಹೊನ್ನಿನ ಬೆಲೆಬಾಳು : ತೊಡವೆನಗಪ್ಪೊಡೆ ಲಕ್ಕಂಬಡವವು ಪಲವೊಳವು ನಂಬೆಯಪ್ಪೊಡೆ ನೋಡೀಗಡೆ (ಧರ್ಮಾಮೃ. ೨-೦೨೦). [ಲಕ್ಕ₁ + ಪಡೆ₁]

**ಲಕ್ಕಗೆಯ್** (ಕ್ರಿ). ಲಕ್ಷವನ್ನಾಗಿ ಮಾಡು ; ಲಕ್ಷಸಂಖ್ಯೆಗೆ ಏರಿಸು : ಸಾಸಿರವೊಂಗೆಯ್ದು ಚಃ ಕಾಸಟವೆಂದೊಂದುಲಕ್ಕಗೆಯ್ವುದಿದರ್ಕಂ ಮೂಸರ ಮುಂಡಲೇದಧಿಕವಿಳಾಸದಿನುಡಲಕ್ಕಿ ನೆಱೆಯೆ ಬಿಯಮಂ ಮೆಱೆದಂ (ಶಂಶಿಖ. ೩-೪೪). [ಲಕ್ಕ₁ + ಕೆಯ್₁]

**ಲಕ್ಕಚಣ**, ಲಕಚ (ನಾ). ಒಂದು ಬಗೆಯ ಸಾಧನ, — ಸಣ್ಣ ಆಯುಧ; ಚಾಣ : "ಲಕಚಂ ಲಕ್ಕಚಣಮೆಂದೆನಿಕ್ಕುಂ" (ಮಂಗರಾ. ೦೦೩-೯) ; ಸುಲಿಪಲ್ಲಂ ಮೆಱೆವೈ ಪರಲಲನೆಯರ್ಗೆಂದಿಕ್ಕುಱಿಂದೆ ಕೀಲ್ತರ್ ಪಲ್ಲಂ ಸಲೆ ಕಣ್ಣಂ ಕಿತ್ತುವೆಯೆಂದು ಲಕ್ಕಚಣದಿಂದೆ ವಿಮಾಂಟ ಕಳೆವರ್ ಕಣ್ಣಂ (ಹಾರ್ಕ್ಲಿ. ೬-೯೦). **ಲಕಚ** : ಮೇಲಿನ 'ಮಂಗರಾ' ಪ್ರಯೋಗವನ್ನು ನೋಡಿ. [ಲಕ್ಕ? + < ಚಣ]

**ಲಕ್ಕಡಿ** (ನಾ). ಮರದ ದಿಮ್ಮಿ : 'ಲಕ್ಕಡಿಕೋಟೆ' ಪರಾ.
[ ← ಹಿಂ. ಲಕಡೀ. / ಸಂ. ಲಕುಟ. / ಪ್ರಾ. ಲಕ್ಕುಡ ]

**ಲಕ್ಕಡಿಕೋಟೆ** (ನಾ). ಭಾರವಾದ ಮರದ ದಿಮ್ಮಿಗಳನ್ನು ನಿಲ್ಲಿಸಿ ಕಟ್ಟಿದ ಕೋಟೆ, — ಮರದ ದಿಮ್ಮಿಗಳಿಂದಾದ ದುರ್ಗ : ಅಲ್ಲಲ್ಲಿ ಲಕ್ಕಡಿಕೋಟೆಗಳ ಹಾಕಿ ಠಾಣ್ಯ ಇಟ್ಟುಕೊಂಡು . . . ಬರುತ್ತಾರೆ (ರಾಕೇಂದ್ರ. ೪೦). [ ಲಕ್ಕಡಿ + ಕೋಟೆ₁ ( < ಕೋಂಟೆ ) ]

**ಲಕ್ಕಣ**, ಲಚ್ಚಣ₁, ಲಚ್ಛಣ (ನಾ). ೧. ಗುರುತು, — ಚಿಹ್ನೆ : "ಲಕ್ಕಣಮೆನೆ ಲಕ್ಷಣ" (ಕಬಿಕಂ. ೧೦೬); ಬೂದಿ ಜೆಡೆ ಲಕ್ಕಣಂ ತಪಕಾದುವೆರಟಿಸ್ಸೊಣೆ ಶರಾಸನಂ ಕವಚಮೆಂತಾದುವೊ (ಶಂಶಿಖ. ೬-೯೨). ೨. ಒಂದು ವಸ್ತು ಇಲ್ಲವೆ ಸಂಗತಿಯ ವಿಶಿಷ್ಟವಾದ ಗುಣದ ನಿರೂಪಣೆ ; ವ್ಯಾಖ್ಯೆ; ಸೂತ್ರ : ಏಳಯ ಲಕ್ಕಣ [ಪಾಠಾಂ. ಲಕ್ಷಣ]ಮಂ ಪೇೞ್ವೆಂ (ಛಂದೋಂಬು. ೫-೨೫೦); ಸಕ್ಕದದ ತದ್ಭವಂಗಳ ಲಕ್ಕಣಮಂ ಕನ್ನಡಕ್ಕೆ ಲಕ್ಷಿಸಿ ಪೇೞ್ವೆಂ (ಕಮಚ. ೨೩೩); ಸಕ್ಕದದಿಂ ಲಕ್ಕಣಮುಂ ಲಕ್ಕಮುನೊಳ್ಗನ್ನಡಂಗಳಿಂ ವಿವರಿಸಿದಂ (ಅಕ್ಷ್ರ. ೦-೦೪). ೩. ದುರ್ಯೋಧನನ ಮಗ; ಲಕ್ಷಣಕುಮಾರ : ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಂ ಸುತ್ತಿಱಿದು ಬಳಸಿ ಬರೆ (ಶಂಶಿಖ. ೦೦-೨೭ ವ). ೪. [ಕಾವ್ಯಮೀ] ಕಾವ್ಯದ ಸೌಂದರ್ಯವನ್ನು ಹೆಚ್ಚಿಸುವ ಗುಣ, — ಲಕ್ಷಣ : ಪುರುಳುಂ ಲಕ್ಕಣಮುಂ ಮೆಯ್ಸಿರಿಯುಂ ತಳ್ಳಿಸೆಯೆ ಪೇೞ್ದ ಕಬ್ಬಂ (ಕಬ್ಬಿಗ. ೬); ರಸಮೊಸರೆ, ಲಕ್ಕಣಂ ಮಿಕ್ಕಿರೆ, ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ, ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ (ಅವಶ್ಯ. ೬-೦೬). **ಲಚ್ಚಣ₁** : ೧. "ಲಚ್ಚಣಮೆಂದು ಲಕ್ಷಣದೊಳಂ"

(ಕರ್ಣಾಟ. ೮೩-೩೩); ''ಲಕ್ಷಣಕ್ಕೆ ಲಚ್ಚಣಮೆನಿಪ್ಪುದು'' (ಶಬ್ದ. ೦೨೯). ೫. [ನಾಟ್ಯ]ಹತ್ತು ಬಗೆಯ ನೃತ್ಯಭೇದಗಳಲ್ಲಿ ಒಂದು : ತಾಂಡವ ನಾಟ್ಯ ನೃತ್ಯ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಣ. . . ದಶವಿಧಪಾತ್ರಂಗಳಂ ತೋಱಿ ರಂಜಿಸುವ ನರ್ತನ ನರ್ತಕಿಯರಿಂ (ಧ್ಯರಪು. ೩-೩೪)· **ಲಚ್ಚಣ:** ೫. **ತಾಂಡವ** ನಾಟ್ಯ ನೃತ್ತ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಣ ಅಪರಿಪಾತ್ರ **ಸುಪಾತ್ರ** ಸರ್ವತೋಭದ್ರವೆಂಬ ದಶವಿಧಪಾತ್ರಂಗಳಂ (ಏವೇಶ. ೨೩೯)·

[ < ಸಂ. ಲಕ್ಷಣ ]

ಲಕ್ಕಣಿಕೆ ' **ಲೆಕ್ಕಣಿಕೆ** ' ನೋ.

ಲಕ್ಕರಿ ' **ಲಪ್ಕರು** ' ನೋ.

ಲಕ್ಕಲಿ ' **ಲೊಕ್ಕಿ$_1$** ' ನೋ.

ಲಕ್ಕಾ (ನಾ). ಪಾರಿವಾಳಗಳಲ್ಲಿ ಒಂದು **ಜಾತಿ** : ಲಕ್ಕಾ ಎಂಬ ಪಾರಿ **ವಾಳಗಳು** (ಮುಂಬಯಿ. ೩-೦೦೦)· [ ← ಅರ. ಪಾರ. ಹಿಂ. ಲಕ್ಕಾ ]

ಲಕ್ಕಿ$_1$ ' **ಲೊಕ್ಕಿ$_1$** ' ನೋ.

ಲಕ್ಕಿ$_2$ ' ಲಕುಮಿ ' ನೋ.

ಲಕ್ಕಿಗಿಡ, ಲಕ್ಕಿಲಿಗಿಡ (ನಾ). ಒಂದು ಬಗೆಯ ಔಷಧೀಸಸ್ಯ; ಲೊಕ್ಕಿ : " **ಸಿಂಧುಕಃ** . . . ಇಂದ್ರಾಣಿಃ_ವಾವಿಲೀಗಿಡದ ಹೆಸರುಗಳು; ಲಕ್ಕಿ: **ಗಿಡ** " (ನಿಘಂಟು. ೦೨೭); ಎಕ್ಕ ಎಲಚಿಯು ಲಕ್ಕಿಗಿಡಗಳು ಸೊಕ್ಕಿ ಮೆರೆವಾ **ಸೀಗೆಮರಗಳು** (ಗೋಹಾರು. ೨-೬); **ಲಕ್ಕಿಲಿಗಿಡ** : " ಲಕ್ಕಿಲಿಗಿಡ, ನೆಕ್ಕಿ. . . **ವಾಮಿ**· ಭೂತವೇಷಿ " (ಸಸ್ಯ. ೦೩೩); ಲಕ್ಕಿಲಿಗಿಡ, ನೆಕ್ಕಿ (ವ್ಯಕಿಗ. ೬೬-೦೩೯೯). [ ಲಕ್ಕಿ$_1$ (< ಲೊಕ್ಕಿ$_1$) + ಗಿಡ (< ಗಿಡು) ]

ಲಕ್ಕಿಮುಷ್ಟಿ (ನಾ)· (ಉಕ) ಒಂದು ಬಗೆಯ ಜೂಜಾಟ; " ರೊಕ್ಕ **ದಾಟ** " (ಶಾಸಕೋ. ೯೦) : ಲಕ್ಕಿಮುಷ್ಟಿ ಆಡಿ ಆಸ್ತಿ ಕಳಕೊಂಡ (ರೂಢಿ).

[ ಲಕ್ಕಿ$_2$ (< ಲಕುಮಿ) + ಮುಷ್ಟಿ$_2$ ]

ಲಕ್ಕಿಲಿ ' **ಲೊಕ್ಕಿ$_1$** ' ನೋ.

ಲಕ್ಕಿಲಿಗಿಡ ' ಲಕ್ಕಿಗಿಡ ' ನೋ.

ಲಕ್ಕಿಸು, **ಲೆಕ್ಕಿಸು$_1$** (ಕ್ರಿ)· ಗಮನ ಕೊಡು; ಲಕ್ಷಿಸು : ಹೂಳಿದನು ಮುರ **ವೈರಿ ಸಾಸಿರಕೋಲುಗಳ** ಬಾಯೊಳಗೆ ಲಕ್ಕಿಸದಾಳವಾಡುತ ದನುಜನೆಂದನು **ಮಂದಹಾಸದಲಿ** (ಕೋಗಮು. ೨೩-೬೦). **ಲೆಕ್ಕಿಸು$_1$** : ಅನೇಕ ಶೀಲಗುಣ **ದೊಟ್ಟದೊರಿಂತು** ಲೆಕ್ಕಿಸದುವು ನೆನೆಗೆನ್ದೊರು ಮುನಿಯಿಂದಳ್ತಿಪಚ್ಚಲೆ **ಸೋನ್ತು** ತಾವುಂ ತಮಗೆ ಮೃತ್ಯುವರವಾನಱಿದಂ (ಎಶ· II· ೧೦೩-೧; ೩· ೭೦೦) ; ಮನೆನೆಳಲಂ ನೆನೆಯದೆ ಅರ್ಥಮಂ ಲೆಕ್ಕಿಸದೆ ವೃತ್ತಿಯಂ **ವಿಚಾರಿಸದೆ** . . . ಬಾಗೆವಾಡಿಯಿಂ ಪೊಱಮಟ್ಟು (ಬಸರ. ೨-೯೩); ರಾವುತ **ಪಾಯಕರ** ಲೆಕ್ಕಿಸದೆಕ್ಕಲ ಖಿನ್ನೋಜಿಗಳು ರಕ್ಕಸನಿದಿರೊಳೊಪ್ಪಿದರು (**ಕುಮಾರಾ**. ೦೬-೯೯). [ಲಕ್ಕ$_2$ + _ ಇಸು$_3$]

ಲಕ್ಕು ' ಲಕ್ಕ$_2$ ' ನೋ.

ಲಕ್ಕೆ$_1$ ' ಲೊಕ್ಕಿ$_1$ ' ನೋ.

ಲಕ್ಕೆ$_2$ ' **ಲಕ್ಕ$_1$** ' ನೋ.

ಲಕ್ಕೆ$_3$ **(ನಾ)**· ಗುರಿ; ಉದ್ದೇಶ (?): ವನಧಿಯ ನೀಳ್ದ ಪೆರ್ದೆರೆಗಳೀ ನೆಲನಂ ಕವಿದಪ್ಪುವೀಗಳೆಂಬಿನಮತಿವೇಗದಿಂ ಪರಿವ ಪಾಱುವ ಲಕ್ಕೆಯನೊಡ್ಡು **ವೊಳ್ಪು** ತನ್ನನೆ ನಡೆ ನೋಡಿಸುತ್ತುಮಿರೆ **ಜಾಯಿಲ**ವೊಂದೆರಡೆಂದು **ತೋಱಿ** ನೆಟ್ಟನೆ ಪದಿನೆಂಟುಕೋಟಿವರೆಗಂ ತಳರ್ದತ್ತು ತುರಂಗಸಾಧನಂ (ಆದಿಪು. ೦೦-೩೦)· [<ಲಕ್ಷ್ಯ ?]

ಲಕ್ಕೋಟೆ$_1$ ' ಲಕೋಟೆ$_1$ ' ನೋ.

ಲಕ್ಕೋಟೆ$_2$ ' ಲಕೋಟೆ$_2$ ' ನೋ.

ಲಕ್ಖ ' **ಲಕ್ಕ$_1$** ' ನೋ.

ಲಕ್ಖಗಡುಗೆ, **ಲಖಗಡುಗೆ** (ನಾ)· **ದೇವರಿಗೆ ಲಕ್ಷ ಗಡಿಗೆಗಳ ನೀರಿನಿಂದ** ಮಾಡುವ ಅಭಿಷೇಕ ; ಲಕ್ಷಕುಂಭಾಭಿಷೇಕ : ಶ್ರೀಮತು ಕಲಿದೇವರ್ಗ್ಗೆ ಪ್ರತಿವರ್ಷಂ ಲಕ್ಖಖಗಡುಗೆನಿಮಿತ್ತವಾಗಿಯಲ್ಲಿಯಗ್ರ್ರವಾಣಿಯಂ ತಹರು ನಾಲ್ವರು (ಶಾಇಇ. IX-i, ೨೩೩-೦೩ ; 1148)· **ಲಖಗಡುಗೆ** : ಸಮಸ್ತ ಸಿವಸ್ಥಾನಂಗಳಿಗೆ ಲಖಗಡುಗೆ ನಂದಾದೀವಿಗೆಗಂ ಸುಂಕಪನ್ನಾಯ ಸರ್ವ್ವ ಬಾಧೆಪರಿಹಾರವಾಗಿ . ... ಧಾರಾಪೂರ್ವ್ವಕಂ ಮಾಡಿ ಬಿಟ್ಟ ದತ್ತಿ (ಎಕ. VI. ಕಡೂರು· ೦೩೯-೩; 1206).

[ಲಕ್ಖ (<ಲಕ್ಕ$_1$) + ಗಡುಗೆ (< ಗಡಿಗೆ) ]

**ಲಕ್ವ** (ನಾ). ಶರೀರದ ಒಂದು ಭಾಗವು ನಿಷ್ಕ್ರಿಯವಾಗುವ ಒಂದು ಬಗೆಯ ರೋಗ ; ಅರ್ಧಾಂಗವಾಯು ; **ಪಾರ್ಶ್ವವಾಯು** : ಮೃದುತಾಳಿಗೆಗೆ ಲಕ್ವ (Paralysis) ಹೊಡೆದಾಗ ನುಂಗಿದ ಆಹಾರ ಮೂಗಿನ ಮೂಲಕ ಹೊರಬರುತ್ತದೆ (ಕಿವಿಮೂ. ೦೯); ವಿಧಿ ಅವನಿಗೆ ಲಕ್ವ ಹೊಡಿಸಿ, ಪ್ರಾಣಾನ ಕಿತ್ತುಕೊಂಡುಹೋಯಿತು (ಸಂಗೂ೦. ೦೩)·

ಲಕ್ವಬಡಿ = ಅರ್ಧಾಂಗವಾಯುವುಂಟಾಗು ; ಪಾರ್ಶ್ವವಾಯು ಬರು: ಅವನ ಕ್ರಿಯಾಪಟುತ್ವಕ್ಕೇ ಲಕ್ವಬಡಿದ ಹಾಗಾಯಿತು (ಮರಿಮ. ೩೬೯)· **ಲಕ್ವಹೊಡೆ** = ಲಕ್ವಬಡಿ : ಅವರಿಗೆ ಲಕ್ವ ಹೊಡೆದು ಆಸ್ಪತ್ರೆ ಸೇರಿದ್ದಾರೆ (ರೂಢಿ). [← ಅರ. ಹಿಂ. ಲಕವಾ ; ಮರಾ. ಲಕವಾ, ಲಖವಾ]

**ಲಕ್ಷ$_1$**, ಲಕ್ಷೆ (ನಾ)· ಗಮನ : ಧ್ಯಾಸ ; **ಲಕ್ಷ್ಯ** : ಸಮುದ್ರತಳದಲ್ಲಿ ನಡೆಯುವ ಕೆಲವು ಮಹತ್ಕಾರ್ಯಗಳು ನಿಮ್ಮ ಲಕ್ಷಕ್ಕೆ ಬರದೆ ಇರಲಾರವು (ಮುಂಬಯಿ· ೬-೨೦೯); ಈ ಎಲ್ಲಾ ಪ್ರಕಾರಗಳು ಲಕ್ಷದಲ್ಲಿಡುವುದು ಅವಶ್ಯಕವದೆ (ಮುಂಬಯಿ. ೯. ಪ್ರಸ್ತಾವ); ನಿರ್ಜನವಾದ ಬೀದಿಯಲ್ಲಿ ಅದು ಬಹುಶಃ ಯಾರ ಲಕ್ಷಕ್ಕೂ ಬರಲಿಕ್ಕಿಲ್ಲ (ಹೊಸಕ. ೨೦೦). ' ಲಕ್ಷಗೊಡು ' **ಪರಾ**. **ಲಕ್ಷೆ** : ತನ್ನ ಮಗಳನುಪೇಕ್ಷಿಸದಿರೆಂದು ಕಟ್ಟಮ್ಮಾಡಿ ತರುಣಿ ಯರನಾಕ್ಷಣವೆ ಕಳುಹಿಸಿ ಯಯಾತಿ ಸಂಗಡ ಶುಕ್ರ ಮರಳಿದನು ನಿಜ ನಿಲಯಕೆ ಲಕ್ಷೆ[ಶಾಠಾಂ. ಕ್ಷಿ]ಯನ್ನಿವರ ಮೇಲಿಟ್ಟು (ತುರಂಗ. ೬-೩೦). 'ಲಕ್ಕ$_2$' ಪರಾ. [< ಸಂ. ಲಕ್ಷ್ಯ]

**ಲಕ್ಷ$_2$** (ನಾ)· ೧· ಒಂದು ಸಂಖ್ಯೆ ; ನೂರುಸಾವಿರ : ಚತುರಶೀತಿಲಕ್ಷ ಪೂರ್ವಾನಪವರ್ತ್ಯಾಯುಷ್ಯನುಮಪ್ರತಿಹತಶಾಸನಮುಮಾಗಿ(ಆದಿಪು: ೦೩_೩೪); ಕೆಟಗಶೀತ ಸಹಸ್ರೋತ್ತರಲಕ್ಷಯೋಜನಬಾಹುಲ್ಯಮನಾಂತು ರತ್ನಪ್ರಭೆ ಯೆಂಬ ಪೃಥ್ವಿಯಿರ್ಕುಂ (ತುಕಮಕ. ೦೦-೯೦ ವ); ಲಕ್ಷ ಸಂಖ್ಯೆಯ ಹಿರಣ್ಯವ ತಂದು (ಬಸವ· ೬೦೩) ; ಏಳು ಲಕ್ಷವೆ ಲಕ್ಷ . . . ವಚನಗಳ ಹೇಳಿದನು ಕೇಳೊ (ಸವಾಶ್ಟ. ೨೯); ತುಂಬಿತ್ತೊಡನೆ ವನದೇಶವಂ ಲಕ್ಷ ಪಕ್ಷಿಯುಲಿ (ಶ್ರೀರಾಮಾ. ೩೦-೦೦೩); ಲಕ್ಷವಾದರೂ ಭಿಕ್ಷೆ ಬೇಡಬಾರದು (ಗಾದೆ)· ೨· ಗುರುತು ; ಚಿಹ್ನೆ : ಉಕ್ತಪರಲಕ್ಷ ವಿಜಿತಾಕ್ಷ ಮದದಕ್ಷ ಮಖ ಶಿಕ್ಷ . . . ಜಯಸಿದ್ಧನಂಜ (ಗುರುಚಾ· ೬-೦). ೩· ತೋರಿಕೆ ; ನಟನೆ. ೪. ಕಪಟ ; ಮೋಸ. ೫. ಗುರಿ ; ಧ್ಯೇಯ : "ಲಕ್ಷ್ಯಂ, ಲಕ್ಷಂ, ಶರವ್ಯಂ__ ೩ ಗುರಿಯ ಹೆಸರು ; ಗುರಿಯ ಗುರ್ತು" (ನಿಘಂಟು. ೨೬೯). ೬· ಮುತ್ತು ; ಮೌಕ್ತಿಕ.

ಲಕ್ಷಗಟ್ಟಲೆ, ಲಕ್ಷಗಟ್ಲೆ = ಲಕ್ಷಾಂತರ ; ಬಹಳ : ರಾಮಾಯಣ ದಲ್ಲಿ ಲಕ್ಷಗಟ್ಟಲೆಯ ರಾಕ್ಷಸರ ಆಕಾರಗಳು ಬಹುಘೋರವಾಗಿಯೂ, ವಿಚಿತ್ರವಾಗಿಯೂ ಇದ್ದುವೆಂದು ವರ್ಣಿಸಲಾಗಿದೆ (ಕಾರದ. ೬೯) ; ಅಲ್ಲಿ ನಡೆಯುವ ಜಾತ್ರೆಗೆ ಲಕ್ಷಗಟ್ಲೆಯಲ್ಲಿ ಜನ ಸೇರುತ್ತಾರೆ (ರೂಢಿ). ಲಕ್ಷ ದೀಪಾರಾಧನೆ = ದೀಪಾವಳಿಯಲ್ಲಿ ಲಕ್ಷದೀಪಗಳನ್ನು ಹಚ್ಚಿಟ್ಟು ಮಾಡುವ ಪೂಜೆ, — ಉತ್ಸವ : ಲಕ್ಷದೀಪಾರಾಧನೆಯ ಹಬ್ಬವೆಂದು ಲಕ್ಷಾಧಿಪತಿ ಮಹಾತ್ಮರ ಮುಂದೆ ಬಂದು ಲಕ್ಷಲಕ್ಷಾಂತರದಿ ಹರಸುವೆವು ಬೇಡಿ (ಕವಿಕ. ೦೩-೦೬). ಲಕ್ಷಾನುಲಕ್ಷ = ಅನೇಕ ಲಕ್ಷ ; ಲಕ್ಷಗಟ್ಟಲೆ: ಒಂದು ಭಾರೀ ದೂರದರ್ಶಕದ ಮೂಲಕ ಲಕ್ಷಾನುಲಕ್ಷ ನಕ್ಷತ್ರಗಳನ್ನು

ನೋಡಬಹುದು (ಆಕಾಶ. ೩೨). ಲಕ್ಷಾವಧಿ=ಲಕ್ಷಗಟ್ಟಲೆ : ಅನ್ಯಪತ್ರಿಕೆಗಳು ಲಕ್ಷಾವಧಿ ಓದುಗರ ಕೈಗಳಿಗೆ ಹೋಗುತ್ತವೆ (೬೦ಬರ. ೮). ಲಕ್ಷೋಪಲಕ್ಷ =ಲಕ್ಷಾನುಲಕ್ಷ : ಕತ್ತಿಯ ಏಟಿಗೆ ಸಿಕ್ಕಿ ಸತ್ತವರನು ಲಕ್ಷೋಪಲಕ್ಷ ವೆನ್ನುವರು (ಏಂಕಾಶ. ೨೪೮-೫೦). [ಸಂ.]

**ಲಕ್ಷಕ** (ಗು). ೧. ಗುರುತಿಸುವ ; ಸೂಚಿಸುವ. (ನಾ). ೨. [ಕಾವ್ಯವಿಶಾ] ಲಕ್ಷ್ಯಾರ್ಥವನ್ನು ಕೊಡುವ ಶಬ್ದ : ಅರ್ಥವು ಮುಖ್ಯ ವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರು ವಿಧ : ಈ ಅರ್ಥಗಳನ್ನು ಕೊಡುವ ಶಬ್ದಗಳಿಗೆ (ಕ್ರಮವಾಗಿ) ವಾಚಕ, ಲಕ್ಷಕ, ವ್ಯಂಜಕಗಳೆಂದೂ . . . ಹೆಸರು (ಕೃಶಿಪ. ೧೭೬) ; ವಾಚ್ಯಾರ್ಥಕ್ಕೆ ಬಾಧೆ ತಟ್ಟಿದಾಗ ಮಾತ್ರ ಲಕ್ಷಣಾವೃತ್ತಿಗೆ ಪ್ರವೃತ್ತಿಯುಂಟಾಗಿ ಲಕ್ಷ್ಯಾರ್ಥವು ಗೋಚರವಾಗುತ್ತದೆ. ಇದನ್ನು ತಿಳಿಸುವ ಶಬ್ದಕ್ಕೆ 'ಲಾಕ್ಷಣಿಕ' ಅಥವಾ 'ಲಕ್ಷಕ' ಎಂದು ಹೆಸರು (ಭಾರಶಿ. ೨೬೩). [ಸಂ.]

**ಲಕ್ಷಕೊಡು** 'ಲಕ್ಷಗೊಡು' ನೋ.

**ಲಕ್ಷಗೊಡು**, ಲಕ್ಷಕೊಡು (ಕ್ರಿ). ಗಮನ ಕೊಡು : ಲಕ್ಷಿಸು : ಆಕಾಶ ವನ್ನು ನೋಡಿ ಹವೆಯಲ್ಲಿ ಮೂಸಿ, ಪ್ರಕೃತಿಯ ಪ್ರಕೋಪಗಳೇನಾದರೂ ತೋರುವವೋ ಎಂದು ಲಕ್ಷಗೊಡುತ್ತಿದ್ದನು (ಬಂಗಾಹ. ೩೩). **ಲಕ್ಷಕೊಡು** : ಹಿರಿಯರ ಮಾತಿಗೆ ಲಕ್ಷಕೊಡದ್‌ ಹುಡುಗ ಹಾಳಾದ (ರೂಢಿ). [ಲಕ್ಷ$_1$ + ಕೊಡು$_1$]

**ಲಕ್ಷಣ$_1$** (ನಾ). ೧. ಗುರುತು ; ಚಿಹ್ನೆ ; ಕುರುಹು : "ಚಿಹ್ನಂ ಲಾಂಛನಂ ಕಳಂಕಂ ಲಕ್ಷಣಂ ಲಕ್ಷ್ಮಮುಖಮದು" (ಪುಂಗರಾ. ೧೧-೩) ; ಜಂಗಮ ಸ್ಥಳಕ್ಕೆ ಲಕ್ಷಣವಾವುದೆಂದರೆ ಹೇಳಿಹೆ ಕೇಳಿರಣ್ಣ (ಬಸಪು. ೧೦೪-೪೭೦) ; ಲಕ್ಷಣವೆಂದರೆ ಆಯಾ ವಸ್ತುಗಳಲ್ಲಿರುವ ಮುಖ್ಯವಾದ ಸಾಧಾರಣವಲ್ಲದ ಧರ್ಮಗಳು, ಗುರುತುಗಳು (ಹಿಂದಶಾ. ೨೨೦) ; ನೀನಂತೂ ಇಲ್ಲಿಂದ ಬೇಗ ಅಲ್ಲಾಡುವ ಲಕ್ಷಣ ಕಾಣಲಿಲ್ಲ (ಇಶ್ಯ. ೨೦೩). ೨. ವಿಶಿಷ್ಟವಾದ ಗುಣ. ೩. ಚಂದ್ರನಲ್ಲಿರುವ ಕಪ್ಪು,— ಕಳಂಕ : "ಮೃಗಃ . . . ಲಕ್ಷ್ಮ, ಲಕ್ಷಣಂ, ಕಳಂಕಃ . . . ಈ ೮ ಚಂದ್ರಮಂಡಲದ ನಡುವಣ ಕರ್ಪು" (ಹಲಾಯು. ೬-೪೩). ೪. (ಮೈಮೇಲಿನ) ಒಳ್ಳೆಯ ಗುರುತು,— ಶುಭಚಿಹ್ನೆ : ಪಟ್ಟವ ಕಟ್ಟಿದ ಬಳಿಕ ಲಕ್ಷಣವನೆಣಿಸುವರೆ (ಬಸವ. ೦೩೬) ; ನಿಮ್ಮ ಮಗನಿಗೆ ಯೋಗಪುರುಷನ ಲಕ್ಷಣಗಳಿವೆ (ಸಂಗಾಳ. ೪). ೫. (ರೋಗದ) ಸೂಚನೆ ; (ಕಾಯಿಲೆಯ) ಚಿಹ್ನೆ : ಲಕ್ಷಣವೆಂಬುದು ಹುಟ್ಟಿದ ರೋಗದ ವ್ಯಕ್ತಲಕ್ಷಣ (ಸಕವೈ. ೨೦) ; ಅಬಾಧಿತತ್ವ ಕಡಿಮೆಯಾದಾಗ ರೋಗ ತಗುಲಿದರೆ ರೋಗದ ಲಕ್ಷಣಗಳು ಕಾಣಬರುತ್ತವೆ (ಸಂರಕೋ. ೩). ೬. ಚೆಲುವು ; ಅಂದ ; ಸೌಂದರ್ಯ: ಲಕ್ಷಣಕ್ಕಮನುರೂಪಮಾದ ವ್ಯಂಜನಕ್ಕಂ ಹಾವಕ್ಕನುರೂಪಮಾದ ಪೆಣ್ಬಾವಕ್ಕಂ . . . ಬೆಕ್ಕಸಂಬಟ್ಟು (ಶಾಂತಿಪು. ೩-೩೩ ವ) ; ಕಣ್ಣು ಮೂಗಿನಿಂದ ಲಕ್ಷಣವಾಗಿದ್ದಳಾದರೂ ಮೈಬಣ್ಣ ಸ್ವಲ್ಪ ಕಪ್ಪು (ಪಾಪೋಲಿ. ೦೬೪). ೭. ಒಂದು ವಸ್ತು ಇಲ್ಲವೆ ಸಂಗತಿಯ ವಿಶಿಷ್ಟಗುಣಗಳ ಸೂತ್ರ ಬದ್ಧವಾದ ನಿರೂಪಣೆ ; ವ್ಯಾಖ್ಯೆ : ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಮೆಂದೆ ಪಟಿಗನ್ನಡಮಂ ಪೊಲಗೆಡಿಸಿ ನುಡಿವರಾಗಮ ಬಲ್ಲೋನರ್ (ಕವಿರಾ. ೦-೪೮) ; ಕಂದಕ್ಕೆ ಲಕ್ಷಣಮಂ ಪೇಟ್ವೆಂ (ಛಂದೋಂಬು. ೪-೨೩೦); ತಮ್ಮಾಯತವ ತಮ್ಮಾರುಭಟೆಯನು ಲಕ್ಷ್ಯಲಕ್ಷಣಭೇದಭಂಗಿ ಗಳ ಸಾರತರಕೋದಂಡಪಂಡಿತರಾರಯಿಕೆಯಲಿ ತಲುಬಿ ನಿಂದರು (ಕುಮ್ಯಾ. ೪. ೨೦-೨೬) ; ಸಂಗೀತದಲ್ಲಿ ಲಕ್ಷ್ಯಕ್ಕೂ ಲಕ್ಷಣಕ್ಕೂ ಭಿನ್ನಾಭಿಪ್ರಾಯವಿದ್ದೇ ಯಿದೆ (ಭಾರರ. ೩೩೬). ೮. ನೋಟ; ದರ್ಶನ : "ನಿಭಾಳನಂ . . . ಲಕ್ಷಣಂ, ದರ್ಶನಂ, ದೃಷ್ಟಿಃ, ದ್ಯೋತನಂ —ಈ ೮ ನೋಟಂ" (ಹಲಾಯು. ೪೩-೪೦೨) ; "ಲಕ್ಷಣಂ ದರ್ಶನಂ ಧ್ಯಾನಮುವಲೋಕನಂ ನೋಟಮಕ್ಕು" (ಮಂಗರಾ. ೯೩-೨). ೯. ಗುರಿ; ಉದ್ದೇಶ; ಆಶಯ; ಧ್ಯೇಯ. ೧೦. ದುರ್ಯೋಧನನ ಮಗ ಕೌರವೇಶ್ವರಂ . . . ತನ್ನ ಮಗನಪ್ಪ ಲಕ್ಷಣಕುಮಾರನಂ ನೆನೆದು ಮನ್ಯೂದ್ಗತಕಂಠನಾಗಿ ತದಾಸನ್ನಪ್ರದೇಶ ದೊಳ್‌ ತನ್ನ ಕುಮಾರನಂ ಕಂಡು (ಗದಾಯು. ೪-೩೪ ವ) ; ನಿನ್ನಯ ಬಸಿಱ ಸಿರಿಯೆ ತಿಗಿವೆಮ್ಮಯ ಷಖನನೆನುತಾ ಲಕ್ಷಣಾದಿಗಳು ತೆಗೆದೆಸುತ ನುಡಿ ಕೈದರು (ಕುವ್ಯಾದ್ರೋ. ೩-೭೩). ೧೧. = ಲಕ್ಷಣಾವೃತ್ತಿ : ಅಭಿಧಾ, ಲಕ್ಷಣಾ, ವ್ಯಂಜನವೇ ಮುಂತಾದ ಶಬ್ದಶಕ್ತಿಯನ್ನು ಈ ಕಾಲದ ಯಾವ ಕವಿಯೂ ಕಣ್ಣೆತ್ತಿ ನೋಡಲಿಲ್ಲ (ಭಾರರ. ೪೬೩). ೧೨. [ಜೈನ] ಪಾರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು : ಲಕ್ಷಣಮೆಂಬುದು ಪರಮಲಕ್ಷಣಧರನಪ್ಪ ಜನಪತಿಯನಾಶ್ರಯಿಸಿ ತನ್ನ ದೇಹಲಕ್ಷಣಮನಪಮಾನಂಗೆಯ್ದು ತಪದೊಳ್‌ ನೆಗಟ್ದೊಡೆ ದಿವ್ಯ ಲಕ್ಷಣ ವಿಜಯಲಕ್ಷಣ ಪರಮಲಕ್ಷಣಂಗಳಂ ಪಡೆಯಲಕ್ಕುಂ (ಚಾವುಂಪು. ೨೨೯). ೧೩. ಅಷ್ಟಾಂಗನಿಮಿತ್ತಗಳಲ್ಲಿ ಒಂದು : ನೆಬಿಯಬಿದೆನಂತರಿಕ್ಷಸ್ವರ ಭೌಮವ್ಯಂಜನಾಂಗಛಿನ್ನಸ್ವಪ್ನೋದ್ಧರಲಕ್ಷಣಮೆಂದೇ ಬಿತ್ತರಿಪಷ್ಟಾಂಗದ ನಿಮಿತ್ತಶಾಸ್ತ್ರಾವಳಿಯಂ (ಶಾಂತೀಶ್ವ. ೩-೩೪). 'ನಿಮಿತ್ತ', 'ಲಕ್ಷಣನಿಮಿತ್ತ' ಪರಾ. ೧೪. [ಯೋಗ] ಸಮಾಧಿಸ್ಥಿತಿಗೆ ಕಾರಣವಾಗುವ ಚಿತ್ತ ಪರಿಣಾಮ : ನಿರೋಧ, ಸಮಾಧಿ, ಏಕಾಗ್ರತಾ ಎಂಬ ಮೂರು ವಿಧವಾದ ಚಿತ್ತಸ್ಥಿತಿಗಳು ಧರ್ಮ, ಲಕ್ಷಣ, ಅವಸ್ಥಾ ಎಂಬ ಸೂಕ್ಷ್ಮಸ್ಥೂಲರೂಪವಾದ ಚಿತ್ತಪರಿಣಾಮಗಳೆನ್ನಲ್ಪಡುವುವು . . . ಭೂತ ವರ್ತಮಾನ ಭವಿಷ್ಯತ್ ಎಂಬ ಕಾಲಭೇದದಿಂದ ತಿಳಿಯಲ್ಪಡುವ ಪರಿಣಾಮವು ಲಕ್ಷಣಪರಿಣಾಮ (ಹಿಂದಶಾ. ೦೬೩). [ಸಂ.]

**ಲಕ್ಷಣ$_2$** (ನಾ). (ಉಕ) ಉಗುರು ತೆಗೆಯುವ ಸಾಧನ : ಲಕ್ಷಣವನ್ನು ಉಪಯೋಗಿಸುವವನಿಗೆ ಬಹಳ ಜಾಣ್ಮೆ ಇರಬೇಕಾಗುತ್ತದೆ (ರೂಢಿ). [ ? ]

**ಲಕ್ಷಣಂಬಿಡಿ** (ಕ್ರಿ). ಉದ್ದೇಶವನ್ನು ಅನುಸರಿಸು ; ಸೂತ್ರಬದ್ಧವಾಗು : ದಕ್ಷಿಣದೊಳಕ್ಷೀಣರವದಿಂ ಲಕ್ಷಣಂಬಿಡಿದು ಚತುರ್ಮುಖದಿಂ . . . ಮಂತ್ರ ಮನೋದುವಬ್ಜಭವನಿಂ (ಕಬಿಕಂ. ೦-೭೪ ವ). [ಲಕ್ಷಣ$_1$ + ಬಿಡಿ$_1$]

**ಲಕ್ಷಣಗೇಡಿ** (ನಾ). ಶುಭಚಿಹ್ನೆಗಳಿಲ್ಲದ ವ್ಯಕ್ತಿ : ಲಕ್ಷಣಗೇಡಿ ಹೆತ್ತಳೇ ಲೆಕ್ಕವಿಲ್ಲದ ಮಕ್ಕಳ (ಗಾದೆ). [ಲಕ್ಷಣ$_1$ + ಕೇಡಿ$_1$]

**ಲಕ್ಷಣಗ್ರಂಥ** (ನಾ). (ಭಾಷೆ, ಕಾವ್ಯ ಮುಂತಾದುವುಗಳ) ಲಕ್ಷಣಗಳನ್ನು ಪ್ರತಿಪಾದಿಸುವ ಗ್ರಂಥ ; ಅಲಂಕಾರಶಾಸ್ತ್ರ, ವ್ಯಾಕರಣ ಇತ್ಯಾದಿ : ಕವಿರಾಜಮಾರ್ಗವು . . . ಅಲಂಕಾರಶಾಸ್ತ್ರಕ್ಕೆ ಸಂಬಂಧಪಟ್ಟ ಲಕ್ಷಣ ಗ್ರಂಥ (ಕವಿರಾ. ೦ ಪೀ೪೪); ಈ ಕಾಲದಲ್ಲಿ ಸಾಹಿತ್ಯಾಚಾರ್ಯರು ಲಕ್ಷಣಗ್ರಂಥ ಗಳನ್ನು ಅನೇಕವಾಗಿ ರಚಿಸಿದರು (ಭಾರರ. ೪೬೩). [ಸಂ.]

**ಲಕ್ಷಣದೋಷ** (ನಾ). [ತರ್ಕಶಾ] ಒಂದು ವಸ್ತು ಇಲ್ಲವೆ ಸಂಗತಿಯ ವಿಶಿಷ್ಟಗುಣಗಳ ನಿರೂಪಣೆಯಲ್ಲಿ ಉಂಟಾಗುವ ಕೊರತೆ, ನ್ಯೂನತೆ: ಇದರಲ್ಲಿ ಅವ್ಯಾಪ್ತಿ, ಅತಿವ್ಯಾಪ್ತಿ, ಅಸಂಭವ, ಆತ್ಮಾಶ್ರಯ ಮತ್ತು ಅನ್ಯೋನ್ಯಾಶ್ರಯಗಳೆಂಬ ಐದು ವಿಧಗಳಿವೆ . 'ದೋಷ' ಪರಾ. [ಸಂ.]

**ಲಕ್ಷಣನಿಮಿತ್ತ** (ನಾ). = ಲಕ್ಷಣ$_1$ ೧೩ : ಅಂತರಿಕ್ಷನಿಮಿತ್ತ ಭೌಮ ನಿಮಿತ್ತ . . . ಲಕ್ಷಣನಿಮಿತ್ತ ಭಿನ್ನನಿಮಿತ್ತ ಸ್ವಪ್ನನಿಮಿತ್ತ ಎಂದಿವಷ್ಟಾಂಗ ನಿಮಿತ್ತಮೆಂಬುದು . . . ಶರೀರದ ಹಲ ಕುಲಿಶ . . . ಶ್ರೀವತ್ಸ ಚಕ್ರ ಅನಲ ಕುಂಭ ಎಂಬ ದ್ವಾತ್ರಿಂಶತ್ ಶುಭಲಕ್ಷಣಂಗಳಂ ನೋಡಿ ಶುಭಾ ಶುಭಂಗಳಂ ಪೇಟ್ವುದು ಲಕ್ಷಣನಿಮಿತ್ತಮೆಂಬುದು (ಕಸಾರ. ೩೬೬). [ಸಂ.]

**ಲಕ್ಷಣವಂತ** (ನಾ). ೧. ಶುಭಚಿಹ್ನೆಗಳಿಂದ ಕೂಡಿದವನು ; ಅದೃಷ್ಟ ವಂತ. ೨. ಚೆಲುವ ; ಸುಂದರ : ಹುಡುಗನು ಲಕ್ಷಣವಂತನೆಂದು ಆವನ ಮನಸ್ಸಿಗೆ ಹೋಯಿತು (ಪಾಗ್ಯ. ೦೦೨). [<ಸಂ. ಲಕ್ಷಣವತ್]

**ಲಕ್ಷಣವಂತೆ** (ನಾ). ಚೆಲುವೆ ; ಸುಂದರಿ : ಆ ಹುಡುಗಿ ತುಂಬ ಲಕ್ಷಣವಂತೆ (ರೂಢಿ). [ಲಕ್ಷಣವಂತ + – ಎ₂]

**ಲಕ್ಷಣವಿಧಿ** (ನಾ). ವ್ಯಾಖ್ಯೆಯ ನಿಯಮ ; ಲಕ್ಷಣದಲ್ಲಿ ಹೇಳಿರುವ ಕ್ರಮ : ಕೂಷ್ಮಾಂಡದ ಷತ್ವಕ್ಕಂ ಬಿಂದುಗಮುದಯಿಸುಗುಂ ಲೋಪವೃತ್ತಿ ಲಕ್ಷಣವಿಧಿಯಿಂ (ಶಮದ. ೨೬೪). [ಸಂ.]

**ಲಕ್ಷಣಶಾಸ್ತ್ರ** (ನಾ). ದೈಹಿಕಚಿಹ್ನೆಗಳಿಂದ ಮನುಷ್ಯರ ಮತ್ತು ಪ್ರಾಣಿಗಳ ಸ್ವಭಾವ, ಯೋಗ್ಯತೆಗಳನ್ನು ತಿಳಿದು ಹೇಳುವ ಶಾಸ್ತ್ರ : ಅಕ್ಷರ ಲೆಕ್ಕ ಗಂಧರ್ವ ಜ್ಯೋತಿಷ್ಯ . . . ಸಾಮುದ್ರಿಕಶಾಸ್ತ್ರ ಲಕ್ಷಣಶಾಸ್ತ್ರ ಅಶ್ವಪರೀಕ್ಷೆ ಗಜಶಿಕ್ಷೆ . . . ಇವೆಲ್ಲವ ಕಲಿತರೇನೋ (ಮಣಿಷಾ. ೯೩-೬೦). [ಸಂ.]

**ಲಕ್ಷಣಾವೃತ್ತಿ** (ನಾ). [ಕಾವ್ಯಮೀ] "ಶಬ್ದದ ವಾಚ್ಯಾರ್ಥವು ಸನ್ನಿವೇಶಕ್ಕೆ ಹೊಂದದಿದ್ದಲ್ಲಿ, ಹೊಂದಿಕೆಯಾಗುವಂತೆ ಅದನ್ನು ಸರಿಪಡಿಸಿ ಅರ್ಥ ಕೊಡುವ ಮತ್ತೊಂದು ವೃತ್ತಿ ಕೆಲಸ ಮಾಡುತ್ತದೆ ; ಇದಕ್ಕೆ ಲಕ್ಷಣಾವೃತ್ತಿಯೆಂದೂ, ಇದರಿಂದ ಬರುವ ಅರ್ಥಕ್ಕೆ ಲಕ್ಷ್ಯಾರ್ಥವೆಂದೂ ಹೆಸರು" (ಕಾಲಿಮೀ. ೯೮) : ಅರ್ಥವು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರುವಿಧ ; ಈ ಅರ್ಥಗಳನ್ನು ಕೊಡುವ ಶಬ್ದಗಳಿಗೆ (ಕ್ರಮವಾಗಿ) ವಾಚಕ, ಲಕ್ಷಕ, ವ್ಯಂಜಕಗಳೆಂದೂ ಅವುಗಳಲ್ಲಿರುವ ಸಾಮರ್ಥ್ಯಕ್ಕೆ (ಅಥವಾ ವೃತ್ತಿಗೆ – ಕ್ರಮವಾಗಿ) ಅಭಿಧಾವೃತ್ತಿ, ಲಕ್ಷಣಾವೃತ್ತಿ, ವ್ಯಂಜನಾವೃತ್ತಿ ಎಂದೂ ಹೆಸರು (ಕೃಶಿಶಿ. ೦೬೬). [ಸಂ.]

**ಲಕ್ಷಣಾವ್ಯಾಪಾರ** (ನಾ). = ಲಕ್ಷಣಾವೃತ್ತಿ : ಶಬ್ದವು ಮುಖ್ಯವಾದ ವೃತ್ತಿಯನ್ನು ( = ಅಭಿಧಾವ್ಯಾಪಾರವನ್ನು) ಬಿಟ್ಟು ಗುಣವೃತ್ತಿಯಿಂದ ( = ಲಕ್ಷಣಾವ್ಯಾಪಾರದಿಂದ ) ಅರ್ಥವನ್ನು ಬೋಧಿಸುವುದಕ್ಕೆ ಒಂದು ಪ್ರಯೋಜನವೇ ಕಾರಣವಾಗಿರುವುದಷ್ಟೆ (ಕೃಷ್ಣಾಲೋ. ೯೬). [ಸಂ.]

**ಲಕ್ಷಣೆ** (ನಾ). = ಲಕ್ಷಣಾವೃತ್ತಿ : ವಾಚ್ಯ ಲಕ್ಷ್ಯದ ತೆಳಿನದಾವುದು ಲಕ್ಷಣೆಯಲವಕ್ಕೆಕ್ಕವೆಂತಹುದು (ಅಪ್ಯ.ಶ. ೩-೦೯) ; ಅರ್ಥಪ್ರಕರಣ ಮೊದಲಾದವುಗಳಿಂದ ಶಕ್ಯಾರ್ಥವ ಹೇಳಕೂಡದೆ ಶಕ್ಯಾರ್ಥ ಸಂಬಂಧವುಳ್ಳದನ್ನು ಹೇಳಿದರೆ, ಅದು ಲಕ್ಷಣೆ (ಹೊಸಗ. ೦೬೦) ; ಈ ಉಕ್ತಿಯಲ್ಲಿ ಲಕ್ಷಣೆಯ ಚಮತ್ಕಾರವಿದೆ (ಕ್ರೀಕೃಕೃ. ೩). [ಸಂ. ಲಕ್ಷಣಾ]

**ಲಕ್ಷವರಾಳಿ** (ನಾ). [ಸಂಗೀತ] ಏಳು ಬಗೆಯ ಮಿಶ್ರರಾಗಗಳಲ್ಲಿ ಒಂದು : ಶೋಕವರಾಳಿ ವಸಂತವರಾಳಿ ಜೋಗಿವರಾಳಿ. . . ಲಕ್ಷವರಾಳಿ ನಾಗವರಾಳಿಯೆಂಬ ವರಾಳೀಸಪ್ತಕವೇ ಶುದ್ಧವರಾಳಿಗೆ ಮಿಶ್ರಂಗಳ್ (ಶಿವೀಕ. ೨೩೩). [ಲಕ್ಷ₂ + ವರಾಳಿ]

**ಲಕ್ಷಾಂತರ** (ನಾ). ಲಕ್ಷಗಟ್ಟಲೆ ; ಬಹಳ : ಯುದ್ಧಕ್ಕೆ ಹೋದ ಲಕ್ಷಾಂತರ ಸೈನಿಕರ ಪೈಕಿ ಸಾವಿರಾರುಜನ ಗೈರುವಿಲೆ ಆಗಿಬಿಟ್ಟಿದ್ದಾರೆ (ಶೀಕಮೋ. ೯೬). [ಸಂ.]

**ಲಕ್ಷಾಧಿಕಾರಿ** (ನಾ). ಲಕ್ಷಸಂಖ್ಯೆಯ ಸಂಪತ್ತಿನ ಒಡೆಯ; ಲಕ್ಷಾಧೀಶ್ವರ: ದುರದೃಷ್ಟದಿಂದ ಲಕ್ಷಾಧಿಕಾರಿಯಾಗಿದ್ದವನು ದರಿದ್ರನಾದನು (ರೂಢಿ). [ಸಂ. ಲಕ್ಷಾಧಿಕಾರಿನ್]

**ಲಕ್ಷಾಧಿಪತಿ** (ನಾ). = ಲಕ್ಷಾಧಿಕಾರಿ : ಲಕ್ಷಾಧಿಪತಿ ಮಹಾತ್ಮರ ಮುಂದೆ ಬಂದು ಲಕ್ಷಲಕ್ಷಾಂತರದಿ ಹರಸುವವು ಬೇಡಿ (ಕಂಕೃ. ೦೩-೦೮). [ಸಂ.]

**ಲಕ್ಷಾಧೀಶ್ವರ** (ನಾ). = ಲಕ್ಷಾಧಿಕಾರಿ : ಅವನೊಬ್ಬ ಲಕ್ಷಾಧೀಶ್ವರ (ಕೃಪರು. ೩೦೦). [ಸಂ.]

**ಲಕ್ಷಿತ** (ಗು). ೧. ಲಕ್ಷಣಗಳಿಂದ ಕೂಡಿದ ; ಕುರುಹುಗಳನ್ನುಳ್ಳ. ೨. ಗಮನಕ್ಕೆ ಬಂದ ; ಗಮನಿಸಿದ; ಗ್ರಹಿಸಲಾದ. ೩. ಗುರಿಯಾಗಿಟ್ಟುಕೊಂಡ. (ನಾ). ೪. ಲಕ್ಷಣಗಳಿಂದ ಕೂಡಿದುದು; ಚಿಹ್ನೆಗಳಿಂದ ಕೂಡಿದುದು : ಪೂರ್ವಾಪರವಿಷಯವಿವಿಕ್ತಾರ್ಥವ್ಯಂಜನಯೋಗಸಂಕ್ರಮಣಲಕ್ಷಣಲಕ್ಷಿತಮಪ್ಪ [ಪಾಠಾಂ. ಲಕ್ಷಣಮಪ್ಪ] . . . ಶುಕ್ಲಧ್ಯಾನದೊಳ್ (ಆದಿಪು. ೬-೩೯ ವ) ; ಅಕ್ಷೂಣಲಕ್ಷಣಲಕ್ಷಿತಂಗಳಪ್ಪ ಪುತ್ರನಂಗಪ್ರತ್ಯಂಗಂಗಳಂ ನೀಡುಂ ಭಾವಿಸಿ ನೋಡಿ (ಚಂದ್ರಪು. ೩-೦೦೨ ವ) ; ತಾಪತ್ರಯದ ಲಕ್ಷಣಲಕ್ಷಿತವನರಿದು . . . ನಡವಂಗರಿದೆನಿಸುವುದದಾವುದೈ (ಕುಮ್ಯಾಭಾ. ೯-೬೦). [ಸಂ.]

**ಲಕ್ಷಿಸು** (ಕ್ರಿ). ೧. ಗುರಿಯಿಡು : ನನೆಗಣೆಯುಂ ತೊಟ್ಟು . . . ಕೇಣಮನಿಂಬಿಟ್ಟು ಕಲಹಮನೊಡಂಬಟ್ಟು ಭಾಳಾಕ್ಷನಂ ಲಕ್ಷಿಸಿ ನೋಡಿ (ಗಿರಿಕ. ೬-೨೬ ವ). ೨. ಹೊಂದಿಸು ; ಅಳವಡಿಸು : ಸಕ್ಕದದ ತದ್ಭವಂಗಳ ಲಕ್ಕಣಮಂ ಕನ್ನಡಕ್ಕೆ ಲಕ್ಷಿಸಿ ಪೇಟ್ವೆಂ (ಶಮದ. ೨೩೩). ೩. ಗಮನಿಸು ; ಲಕ್ಷ್ಯಕ್ಕೆ ತೆಗೆದುಕೊಳ್ಳು ; ಪರಿಗಣಿಸು : ತದಾಸ್ವದಗಂಧದಂತೆ ತದ್ಗಂಧಮೆಂದು ಲಕ್ಷಿಸುಗವಳ್ (ಶೂರಶೀಕಶ. ೦೦-೩೪) ; ರಚಿತಮಾಯು ಏಮಾಯ ಮಾಯಾನಿಚಿತ ಮಾಯಾಧಾರ . . . ಲಕ್ಷಿಸಿ ಕರುಣಿಸುವುದು (ಕುಮ್ಯಾಭ. ೬೦೫. ೭-೯೦) ; ಸೇನರೂ ಸಹ ಅವಶ್ಯವಿದ್ದಾಗ ಅಷ್ಟೇ ಅವಳೊಂದಿಗೆ ಕೂಡಿರುತ್ತಾರೆಂಬುದನ್ನಾದರೂ ನೀವು ಲಕ್ಷಿಸುವಿರೋ ? (ಹಮಂಕ. ೩೬೯). [<ಲಕ್ಷ್ಯ + – ಇಸು₁]

**ಲಕ್ಷುಮಿ** 'ಲಕುಮಿ' ನೋ.

**ಲಕ್ಷೆ** 'ಲಕ್ಷ₁' ನೋ.

**ಲಕ್ಷ್ಮ** (ನಾ). ೧. ಗುರುತು ; ಚಿಹ್ನೆ ; ಕುರುಹು : "ಅಭಿಜ್ಞಾನಚಿಹ್ನಲಾಂಛನ ಲಕ್ಷ್ಮಾಖ್ಯಂ" (ಚಸು.ಕೋ. ೦೨-೬೯). ೨. ಚಂದ್ರನಲ್ಲಿರುವ ಕಳಂಕ ; ಕರೆ : "ಮೃಗಃ . . . ಲಕ್ಷ್ಮ, ಲಕ್ಷಣಂ, ಕಳಂಕಃ . . . ಈ ೫ ಚಂದ್ರಮಂಡಲದ ನಡುವಣ ಕರ್ಪು" (ಹಲಾಯು. ೯-೯೩) ; ನಗೆಯೆಂಬೀ ನೆವದೆ ಬೆಳಗೀ ಮೊಗಮೆಂಬೀ ನೆವದೆ ಶಿಂಗಳೊಳಗೆಸೆದಾದಂ ಸೊಗಯಿಸಿ ತೋರ್ಕುಂ ಲೋಚನಯುಗವೆಂಬೀ ನೆವದೆ ಲಕ್ಷ್ಮವೆನೆ ತದ್ವ್ಯಾಜಂ (ಶಬಶಾ. ೩-೨೬) ; ತೆಳ್ಪಂ ತಾಳ್ದ ಚಂದ್ರೋಪಳಮಮಳಶರತ್ಪೂರ್ಣಶುಭ್ರಾಂಶುವಂ ಸಂತಸದಿಂದಂತಲ್ಲಿ ಪಟ್ಟಿರ್ದೆರಲೆವಱ ಉಸಲ್ಲಕ್ಷ್ಮಮಂ ಪೋಲ್ತು (ಕೃಕೃಪು. ೩-೭೭) ; ಚಂದ್ರಮಧ್ಯವಟಪತ್ರದಲ್ಲಿ ಲಕ್ಷ್ಮೀಂದ್ರನಿರ್ಪನೆನೆ ಲಕ್ಷ್ಮ [ಪಾಠಾಂ. ಕ್ಷ್ಮೇ] ವೊಪ್ಪುಗುಂ (ಅಣಕೀ. ೦೦-೬೨). ೩. ಮುಖ್ಯವಾದುದು ; ಪ್ರಮುಖವಾದುದು. [ಸಂ. ಲಕ್ಷ್ಮನ್]

**ಲಕ್ಷ್ಮಣ** (ನಾ). ೧. ಗುರುತುಳ್ಳುದು ; ಚಿಹ್ನೆಯುಳ್ಳುದು. ೨. ಶುಭಲಕ್ಷಣದಿಂದ ಕೂಡಿದವನು ; ಭಾಗ್ಯಶಾಲಿ ; ಸುದೈವಿ. ೩. ಒಂದು ಬಗೆಯ ಪಕ್ಷಿ ; ಸಾರಸ. ೪. ದಶರಥನ ಮಗ ; ರಾಮನ ತಮ್ಮ ; ಸೌಮಿತ್ರಿ : ವಿದ್ಮಾದಂಗಂ . . . ರಾಮಂಗಂ ಲಕ್ಷ್ಮಣಂಗೆಮಾನತನಾದಂ (ಶಂರಾಪಾ. ೭-೭೩) ; ಧರಣಿಜೆಯ ಬಿಜುನುಡಿಗೆ ಲಕ್ಷ್ಮಣ ತೆರಳಿದನಭಿಸಂಧಿಯಲಿ ಸೀತಾತರುಣಿಯನು ಕದ್ದೊಯ್ದುನಡಮಿಯಲಾ ದಶಗ್ರೀವ (ಕೂರಶಾ. ೩-೯ ಸೂಕಪ) ; ಹಿಂದೆ ಶೂರ್ಪಣಖಿ ಲಕ್ಷ್ಮಣನನಂಡಲೆದು ಪಡೆದಂದಮಂ ನೆನೆದು (ಕೃಬಿಶಾ. ೦೬-೦೯). [ಸಂ.]

**ಲಕ್ಷ್ಮಣಕಂದ** (ನಾ). ಒಂದು ಬಗೆಯ ಗಡ್ಡೆ : ''ಮಂಜಿಷ್ಠಾ–ಮಂಜಿಷ್ಠೆ, ಲಕ್ಷ್ಮಣಕಂದ" (ಔಷಧಿ. ೦೦೬). [<ಸಂ.ಲಕ್ಷ್ಮಣಾಕ್ಷಂದ]

**ಲಕ್ಷ್ಮಣೆ** (ನಾ). ಹೆಣ್ಣು ಸಾರಸಪಕ್ಷಿ : "ಸಾರಸಾ, ಲಕ್ಷ್ಮಣಾ–ಈ ೨ ಸಾರಸಿ" (ಹಲಾಯು. ೯೦-೯೦) ; "ಲಕ್ಷ್ಮಣಾ. ಸಾರಸಸ್ಯ ಯೋಷಿತ್–ಹೆಣ್ಣುಜಲಪಕ್ಷಿ" (ಸಿದ್ಧಾಂತಿ. ೦೬೦). [ಸಂ. ಲಕ್ಷ್ಮಣಾ]

**ಲಕ್ಷ್ಮಿ** (ನಾ). ೧. ಸಂಪತ್ತು ; ಐಶ್ವರ್ಯ ; ಭಾಗ್ಯ. ೨. ಸುದೈವ ; ಅದೃಷ್ಟ. ೩. ಏಳಿಗೆ ; ಅಭಿವೃದ್ಧಿ ; ಯಶಸ್ಸು. ೪. ಚೆಲುವು ; ಶೋಭೆ ; ಸೌಂದರ್ಯ : "ಲಕ್ಷ್ಮೀ, ಶ್ರೀ, ಕಾಂತಿ, ವಿಭ್ರಮವೆಂಬಿವು ಶೋಭೆಯಲ್ಲಿಯುಂ ವರ್ತಿಸುಗುಂ" (ಹಲಾಯು. ೦೩೩-೨೬) ; ಲಕ್ಷ್ಮಿ ಮತ್ತು ಶ್ರೀ ಎಂಬ ಎರಡು ಪದಗಳೂ ಸೌಂದರ್ಯವೆಂಬ ಅರ್ಥದಲ್ಲಿ

ಪ್ರಯೋಗದಲ್ಲಿವೆ (ಶಾಂದಸ. ೪೪). ೫. ಐಶ್ವರ್ಯ ಮತ್ತು ಸೌಂದರ್ಯಗಳ ಅಧಿದೇವತೆ : ವಿಷ್ಣುವಿನ ಹೆಂಡತಿ : "ಶರಧಿಸುತೆ ರಾಮೆ ಗೋವಿಂದ ಲಕ್ಷ್ಮಿ ಪದ್ಮಮಂದಿರೆ . . . ಮನ್ಮಥಮಾತೆಯೆನಲು ಸಿರಿಗಕ್ಕು ನಾಮಂ" (ಮಂಗರಾ. ೬-೧೯) ; ತಕ್ಕೆತಿಯೊಳ್ ಕಡೆಗಣಿಸುವ ನೃಪವಿಡಂಬಿಯು ಲಕ್ಷ್ಮಿ ನಿನ್ನ ದೂಸಱಿನಲ್ತೇ (ಗದಾಯು. ೯-೮) ; ಆದಿಶಕ್ತಿಯು ಮಗ ವಿಷ್ಣು ಅವನ ಅರ್ಧಾಂಗಿ ಲಕ್ಷ್ಮಿ (ಜಸ. ೯೩೦) ; ಭಾಗ್ಯದ ಲಕ್ಷ್ಮೀ ಬಾರಮ್ಮಾ ನಮ್ಮಮ್ಮಾ ನೀ ಸೌಭಾಗ್ಯದ ಲಕ್ಷ್ಮೀ ಬಾರಮ್ಮಾ (ಪುರಂದ. ೦-೩೦೦ ಕಲ್ಲಿ). ೬. ಒಂದು ಬಗೆಯ ಸಸ್ಯ : ಕರಿಯ ಉಗುನಿ : ಕ್ರಿಯೆಯುಱೆದು ಲಕ್ಷ್ಮಿಯುಂ ಮೇಣ್ ಮಯೂರಶಿಖೆಯುಂ ಪಯೋನ್ವಿತಂ ಕುಡಿಗಾಜ್ಯಪ್ರಯುತಂ ಮೇಣಿಂಬಿನೆ ಲಕ್ಷ್ಮಿಯು ಬೇರಂ ನಸ್ಯಮೆಱಿಗೆ ಗರ್ಭಿಣಿಯಕ್ಕುಂ (ಕೋಕಶಾಸ್ತ್ರ. ೯-೦೭೭) ; ತಿಗಡೆ ಮರಾಪಸೋಕ ಕಱಿದುಂ(ದೇ)ಗು . . . ಲಕ್ಷ್ಮಿಯೆಂಬ ಗಿಡು ಪುಟ್ಟಿದ ತಾಣಮನೊಳ್ಳಿತಾಗಿ ನಿಂ ಬಗೆಯುಮಱಿಂದೆ ತಂಕೆರಡು ಕಯ್ಯೊರಲತ್ತಗುಟ್ಟಿದು ಧಾರೆ ಬೇಗೊಗೆಗು (ಅಸ್ಥಿಸು. ೧೦-೩೩). ೭. ಒಂದು ಬಗೆಯ ಗಂಧದ್ರವ್ಯ : "ಯೋಗ್ಯ, ವೃದ್ಧಿ, ಸಿದ್ಧಿ, ಲಕ್ಷ್ಮಿ – ವೃದ್ಧಿಯೆಂಬ ಗಂಧದ್ರವ್ಯಂ" (ನಾತರಾ. ೮). ೮. ಅರಿಶಿನ. ೯. ಒಬ್ಬಾಕೆಯ ಹೆಸರು : ವಿಷ್ಣುಮಹೀಶಂ ಸಲೆ ಶಾನೆ ವಿಷ್ಣುವೆನಿಪಂ ಲಕ್ಷ್ಮೀವಧೂವಲ್ಲಭಂ (ಎಕ. v, ಅರಸೀ. ೬೨-೧೭ ; 1117). ೧೦. [ಸಂಗೀತ] ಇಪ್ಪತ್ತಾರು ಆರ್ಯಾಭೇದಗಳಲ್ಲಿ ಒಂದು : ಲಕ್ಷ್ಮೀ ಮೊದಲಾದ ಇಪ್ಪತ್ತಾರು ಆರ್ಯಾಭೇದಗಳನ್ನು (ಸಂಗೀತ)ರತ್ನಾಕರದಲ್ಲಿ ಹೇಳಿದೆ (ಶರತ್ರ. ೦೦೩).

ಲಕ್ಷ್ಮೀಕಾಸು = ಲಕ್ಷ್ಮಿಯ ಚಿತ್ರವಿರುವ ಕಾಸು : ಲಕ್ಷ್ಮೀಕಾಸುಗಳನ್ನು ಪೋಣಿಸಿದ ಸರವನ್ನು ಆಭರಣವಾಗಿ ಧರಿಸುತ್ತಾರೆ (ಜಾ).
**ಲಕ್ಷ್ಮೀಚೀಳು** = ಜರಿ ; ಸಾವಿರಕಾಲು ಚೇಳು : ಲಕ್ಷ್ಮೀಚೇಳು ಕಂಡರೆ ತುಂಬ ಅದೃಷ್ಟವೆಂದು ಅನೇಕರ ನಂಬಿಕೆ ಇದೆ (ಜಾ). [ಸಂ. ಲಕ್ಷ್ಮೀ]

**ಲಕ್ಷ್ಮೀಕಟಾಕ್ಷ** (ನಾ). ಲಕ್ಷ್ಮಿಯ ಕೃಪೆ : ಸೌಭಾಗ್ಯ : ಶ್ವೇತಚಾಮರವನ್ನುಪಯೋಗಿಸುವುದರಿಂದ . . . ಲಕ್ಷ್ಮೀಕಟಾಕ್ಷಕ್ಕೆ ಆವಾಸಸ್ಥಾನವಾಗಿ . . . ಚಂದ್ರನಿಗೆ ಸಮಾನವಾದ ಬಳುಪು ಉಂಟಾಗುವುದು (ಸಕಪ. ೩೭). [ಸಂ.]

**ಲಕ್ಷ್ಮೀಕಾಂತ** (ನಾ). ಲಕ್ಷ್ಮಿಯ ಪತಿ ; ವಿಷ್ಣು : ಇಂತು ರಮೆಯ ಮನೋರಥಂಗಳ ಸಂತಸಮನೀವುತ್ತ ಲಕ್ಷ್ಮೀಕಾಂತನೆಸೆದಿರೆ (ಶಾಂತಿ. ೪೪-೩೩); ಮುಂದೆ ಸುರಪುರದ ಲಕ್ಷ್ಮೀಕಾಂತನಾವ ತೆಱದಿಂದ ಪರಿಹರಿಸುವನೊ ತನ್ನ ಶರಣಾಗತರನೊಂದುಪಾಯದೊಳೆಂದು ಧೈರ್ಯಮಂ ತಾಳ್ದಿರಿಂದ್ರಾದಿ ಸುರರು (ಕೃಬಿಚಾ. ೯-೩೪). [ಸಂ.]

**ಲಕ್ಷ್ಮೀಧವ** (ನಾ). = ಲಕ್ಷ್ಮೀಕಾಂತ : ಲಕ್ಷ್ಮೀಧವನ ಕಳುಹಿದನಿತ್ತ ಬೀಳ್ಕೊಟ್ಟನು ಸುಯೋಧನನ (ಕುಮ್ಯಾಭಾ. ೦೦-೪೦). [ಸಂ.]

**ಲಕ್ಷ್ಮೀನೀಡ** (ನಾ). ಲಕ್ಷ್ಮಿಯ ವಾಸಸ್ಥಳ ; ಸುಖಸಂಪತ್ತುಗಳ ಆಶ್ರಯಸ್ಥಾನ : ಆ ನಾಡೆಂಬ ಸರೋವರಕ್ಕೆ ವಿಕಸತ್ಪಂಕೇಜಮೆಂಬಂತೆ ಲಕ್ಷ್ಮೀನೀಡಂ ಭುವನೋನ್ನತಂ . . . ಕಾಕಂದಿನಾಮಂ ಪುರಂ (ಪುಷ್ಪ. ೯-೦೯). [ಸಂ.]

**ಲಕ್ಷ್ಮೀಪತಿ** (ನಾ). ೧. = ಲಕ್ಷ್ಮೀಕಾಂತ : ನಿಜಸೈನಿಕವನಲ್ಲಿ ಬಿಡಿಸಿರ್ದು ದೇವಪುರ ಲಕ್ಷ್ಮೀಪತಿಯ ಪೈದುನಂ ಮುದದೊಳು (ಕೃಬಿಚಾ. ೯-೪೪). ೨. ಸಿರಿವಂತ; ಧನಿಕ : ಲಕ್ಷ್ಮೀಪುತ್ರರೂ ಲಕ್ಷ್ಮೀಪತಿಗಳೂ ಸಾಹಿತ್ಯದ ಕಡೆಗೆ ತಮ್ಮ ದೃಷ್ಟಿಯನ್ನು ತಿರುವಬೇಕು (ರಾಮರಾ. ೪೭). [ಸಂ.]

**ಲಕ್ಷ್ಮೀಪುತ್ರ** (ನಾ). ೧. ಲಕ್ಷ್ಮಿಯ ಮಗ ; ಕಾಮ ; ಮನ್ಮಥ. ೨. ಐಶ್ವರ್ಯವಂತ ; ಧನಿಕ : ಲಕ್ಷ್ಮೀಪುತ್ರರೂ. ಲಕ್ಷ್ಮೀಪತಿಗಳೂ ಸಾಹಿತ್ಯದ ಕಡೆಗೆ ತಮ್ಮ ದೃಷ್ಟಿಯನ್ನು ತಿರುವಬೇಕು (ರಾಮರಾ. ೪೭) ; ಊರ ಹೊರಗೆ, ಊರಿಗೆ ತಾಗಿಕೊಂಡು, ಲಕ್ಷ್ಮೀಪುತ್ರರಾದ ಜಿಲ್ಲಾ ಮನೆತನದವರು ಕಟ್ಟಿಸಿದೊಂದು ದೇವಾಲಯವಿದೆ (ಅಂಬಾ. ೯೩). [ಸಂ.]

**ಲಕ್ಷ್ಮೀರಮಣ** (ನಾ). = ಲಕ್ಷ್ಮೀಕಾಂತ : ಚಪಲನೆಸಿತಂ ಮಾಡಿದಂದಿನ ಕದಾಚನಗ್ಗದ ಹಾಳೆಹಳನಿಂತಡಸಿ ಬಂದಾದೆನುತ್ತ ಲಕ್ಷ್ಮೀರಮಣನಸಳುಕಿದನು (ದಸಕ. ೩೯-೬೨) : ಎಳನಗೆಯ ಬೆಳ್ದಿಂಗಳಂ ಪಸರಿಸುವ ದೇವಪುರ ಲಕ್ಷ್ಮೀರಮಣನಾಸ್ಯಚಂದ್ರನಾನಂದವಾಂ ಜಮಗೀಯಲಿ (ಕೃಬಿಚಾ. ೦-೦). [ಸಂ.]

**ಲಕ್ಷ್ಮೀಲೋಲ** (ನಾ). = ಲಕ್ಷ್ಮೀಕಾಂತ : ಲಕ್ಷ್ಮೀಲೋಲನಾಜ್ಞೆಯಲಿವರು ಬಲಿದರು ತಮ್ಮ ಮೋಹರವ (ಕುಮ್ಯಾಭಾ. ೬-೦) ; ಜೀಯ ಚಕ್ರಿಯೆ ಪೀತವಾಸ ಲಕ್ಷ್ಮೀಲೋಲ . . . ಬಿಡಿಸು ಸಂಸಾರಪಾಶದಿಂದೆನ್ನನು (ಕೃಬಿಚಾ. ೦೩-೩೮). [ಸಂ.]

**ಲಕ್ಷ್ಮೀವಲ್ಲಭ** (ನಾ). = ಲಕ್ಷ್ಮೀಕಾಂತ : ಅಪ್ಪಾಜನು . . . ಲಕ್ಷ್ಮೀವಲ್ಲಭಂ ಗೆತ್ತಿರ್ದಾ ಗಗನಸ್ಥಿತರುವ ಸೋಮಂಡಮೊನಿಸರ್ ಸಾಲ್ದಕ್ಕು ಹೇಮಾಚಲಂ (ಜಗಾ. ೦-೨೩). [ಸಂ.]

**ಲಕ್ಷ್ಮೀಶ** (ನಾ). ೧. ಲಕ್ಷ್ಮಿಯ ಒಡೆಯ ; ವಿಷ್ಣು : ಮಂಗಳಂ ಜಯ ಮಂಗಳಂ . . . ಕ್ಷೀರಸಾಗರವಾಸಿ ಲಕ್ಷ್ಮೀಶಗೆ (ಪುರಂದ. ೩-೦೩೬-೨); ವಿರಚಿಸಿದಂ . . . ಹೃದ್ವನಜದೊಳ್ದೇವಪುರದ ಲಕ್ಷ್ಮೀಶನ ಪದದ್ವಯ ವನಾವಗಂ ಧ್ಯಾನಿಸುವವರಡಿಗಳಂ ಸದ್ವಿನಯದಿಂ ಭಜಿಪ ಬಲ್ಪಿಂದ (ಕೃಬಿಚಾ. ೦-೧೧). ೨. ಕನ್ನಡದಲ್ಲಿ ಜೈಮಿನಿಭಾರತವನ್ನು ರಚಿಸಿದ ಕವಿ : ವಿರಚಿಸಿದಂ . . . ಅಣ್ಣಮಾಂಕನ ಸುತಂ ಸದ್ವಿನುತಕರ್ಣಾಟಕವಿಚೂತವನಚೈತ್ರ ಲಕ್ಷ್ಮೀಶನೆಂಬೊರ್ವನು (ಕೃಬಿಚಾ. ೦-೧೧). ೩. [ಸಂಗೀತ] ಒಂದು ತಾಳದ ಹೆಸರು : ವರಾಳಿರಾಗದ ಇವರ ವರ್ಣವೂ, ೧೦೮ ತಾಳಗಳಲ್ಲಿ ಒಂದಾದ ಲಕ್ಷ್ಮೀಶತಾಳದ ಶಿಲ್ಪಾನವೂ ಉತ್ಕೃಷ್ಟಕೃತಿಗಳು (ಸಂಗೀತ. ೩೩). [ಸಂ.]

**ಲಕ್ಷ್ಯ** (ಗು). ೧. ಗುರುತಿಸಲ್ಪಡುವ. ೨. ಲಕ್ಷಣಕ್ಕೆ ವಿಷಯವಾದ : ವ್ಯಾಖ್ಯೆಯಿಂದ ಹೇಳಲ್ಪಡುವ. ೩. ಗುರಿಯಿಡಬೇಕಾದ; ಉದ್ದೇಶಿಸತಕ್ಕ. ೪. ಗಮನಿಸಬೇಕಾದ ; ಗಣನೀಯ. ೫. ವಿಶಿಷ್ಟವಾದ ಗುಣದಿಂದ ಕೂಡಿದ. ೬. ವಿವರಿಸಬೇಕಾದ. ೭. ಪರ್ಯಾಯವಾಗಿ ಸೂಚಿಸುವ. (ನಾ). ೮. ಗುರುತು ; ಚಿಹ್ನೆ. ೯. ಗುರಿ ; ಧ್ಯೇಯ; ಉದ್ದೇಶ : "ಶರವ್ಯ [ನಿಮಿತ್ತ] ವೇಧ್ಯಮಂತದು ಲಕ್ಷ್ಯಂ" (ಚನ್ನುಕೋ. ೩೩-೦೮) ; ನೆರೆದಿನಿಬರುಮಿಹಾ ಲಕ್ಷ್ಯಮನಿರದಕ್ಕಟ ಸರದ ತಗೆಯಲಾರ್ತಿರು ಮಿಲ್ಲಾ (ರಾಜಶೇ. ೨-೩೨) ; ಸ್ಮರಶರಸಂಧಾನಕ್ಕಂಬುರುಹೇಕ್ಷಣೆ ಲಕ್ಷ್ಯಮಾಗೆ (ಶಾಂತಿಪು. ೯-೮೨) ; ತಮ್ಮಾರುಭಟೆಯನು ಲಕ್ಷ್ಯಲಕ್ಷಣ ಭೇದಭಂಗಿಗಳ ಸಾರತರ ಕೋದಂಡಪಂಡಿತರಾರಯಿಕೆಯಲಿ ತಱುಬಿ ನಿಂದರು (ಕುಮ್ಯಾಭಾ. ೨೦-೨೩). ೧೦. ಲಕ್ಷಣಕ್ಕೆ ಉದಾಹರಣೆಯಾದುದು ; ದೃಷ್ಟಾಂತ ; ನಿದರ್ಶನ : ಪ್ರಸ್ತುತಮೆಂಬುವಳಂಕೃತಿ ವಿಸ್ತರಮಿಂತಕ್ಕುಮದಱ ಲಕ್ಷ್ಯ ವಿಭಾಗಂ (ಕವಿರಾ. ೩-೦೩೯); ತಾಂಡವಕ್ಕೆ ಲಕ್ಷ್ಯಮಿದೆಂಬಂತಿರೆ ದೇವಮನುಜಸಭೆಗಚ್ಚರಿ ಬೆಚ್ಚರೆ ದಿವಿಜನಾಯಕಂ ನರ್ತಿಸಿದಂ (ಪುಷ್ಪ. ೦೩-೪೨) : ಗುಣವರ್ಮ ಶ್ರೀವಿಜಯರ ಪೊನ್ನನ ಪಂಪನ ಸುಜನೋತ್ತಂಸನ ಸುಮಾರ್ಗಮಿದಱೊಳೆ ಲಕ್ಷ್ಯಂ (ಶಬ್ದಮ. ೩ ಶೀಲ). ೧೧. ಗಮನ ; ಧ್ಯಾಸ ; ಅವಧಾನ : ಈ ನಿಯಮಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ನಡೆಯುವವನಿಗೆ ಬಹುತರ ರೋಗಗಳು ಬರಲಿಕ್ಕಿಲ್ಲ (ಪಂಚಯಿ. ೯-೨೩); ಒಂದು ಕೊಂಬೆಯುಳ್ಳ ದೊಡ್ಡ ಕರಿಯ ಮರದ ಕೊರಡು ಅವನ ಲಕ್ಷ್ಯವನ್ನು ಎಳೆಯಿತು (ಮಲೆನಾ. ೪೪). ೧೨. ತೋರಿಕೆ ; ಕಪಟ ; ಮೋಸ : ಲಕ್ಷ್ಯದೀಪಾರಾಧನೆಯ ಹಬ್ಬವೆಂದು ಲಕ್ಷಾಧಿಪತಿಮಹಾತ್ಮರ ಮುಂದೆ ಬಂದು ಲಕ್ಷಲಕ್ಷಾಂತರದಿ ಹರಸುವೆವು ಜೀಡಿ. ಲಕ್ಷ್ಯವೇನುಂ ಬೇಡ ; ಮಾನವೊಲಿದು

ನೀಡಿ (ಕರ್ಣಾ. ೧೩-೩). ೧೩. ಪಾತ, ಲಕ್ಷ್ಯ, ಶೀಘ್ರ, ಘಾತ ಮತ್ತು ಬಹುವೇಗವೆಂಬ ಐದು ಬಗೆಯ ಬಾಣಪ್ರಯೋಗಗಳಲ್ಲಿ ಒಂದು : ಪಾತಂ ಲಕ್ಷ್ಯಂ ಶೀಘ್ರಂ ಘಾತಂ ಬಹುವೇಗಮೆಂಬಿವಯ್ದೀಸಿನೊಳಂತೀತನ ದೊರೆಯಿಲ್ಲೆನಿಸಿರುದಾತನ ಬಿಲ್ಬಲ್ಮೆ ಸುರರಿನಂಬರತಲದೊಳ್ (ಶಂಕರಾ. ೧೩-೦೫೩). ೧೪. ಒಂದು ಸಂಖ್ಯೆ; ನೂರುಸಾವಿರ ; ಲಕ್ಷ. ೧೫. [ಕಾವ್ಯಮೀ] ಲಕ್ಷಣಾವೃತ್ತಿಯಿಂದ ಸೂಚಿತವಾಗುವ ಅರ್ಥ : ಅರ್ಥವು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರು ವಿಧ (ಕೃಪಿಶಿ. ೦೬೭) ; ಲಕ್ಷಣೆಯೆಂಬ ವೃತ್ತಿಯಿಂದ ತೋರುವರ್ಥವು ಲಕ್ಷ್ಯವು (ಹೊಸಗ. ೧೬೦).

ಲಕ್ಷ್ಯಕ್ಕೆ ತರು = ಗಮನಕ್ಕೆ ತರು : ಆ ವಿಚಾರವನ್ನು ಅವನ ಲಕ್ಷ್ಯಕ್ಕೆ ತಂದರು (ರೂಢಿ). ಲಕ್ಷ್ಯಕ್ಕೆ ಬರು = ಗಮನಕ್ಕೆ ಬರು ; ಮನಸ್ಸಿಗೆ ಬರು : ಹಿರಿಯರ ಬುದ್ಧಿಮಾತು ಅವನ ಲಕ್ಷ್ಯಕ್ಕೆ ಬರಲಿಲ್ಲ (ರೂಢಿ). [ಸಂ.]

**ಲಕ್ಷ್ಯಕೊಡು** ' ಲಕ್ಷ್ಯಗೊಡು ' ನೋ.

**ಲಕ್ಷ್ಯಗೊಡು, ಲಕ್ಷ್ಯಕೊಡು** (ಕ್ರಿ). ಗಮನ ಕೊಡು ; ಮನಸ್ಸಿಗೆ ತಂದುಕೊಳ್ಳು : ಕರಗಿದಂತಃಕರಣದಲ್ಲಿಯೆ ಎರಕಹೊಯ್ದಿರಿ ನನ್ನನೆ ಹೋದ ಹೋದೆಡೆ ಲಕ್ಷಲಕ್ಷದಿ ಲಕ್ಷ್ಯಗೊಟ್ಟಿರಿ ಸುಮ್ಮನೆ (ಪಂಚಮು. ೩೨-೦೦) ; ಅತ್ತ ಕಡೆಗೆ ಹೆಚ್ಚಾಗಿ ಲಕ್ಷ್ಯಗೊಡದವನಂತೆ . . . ನೋಡುವುದರಲ್ಲಿ ತಲ್ಲೀನನಾಗಿದ್ದನು (ಅಂಚೆಕ. ೨೩). **ಲಕ್ಷ್ಯಕೊಡು** : ಅವನ ಎಲೆಗಳ ಕಡೆಗೇ ಲಕ್ಷ್ಯ ಕೊಟ್ಟರೂ ತನ್ನ ಆಟವನ್ನು ಸಹ ಬಹಳ ಎಚ್ಚರಿಕೆಯಿಂದ ಆಡುತ್ತಿದ್ದನು (ಅಂಗಾಶೆ. ೩೨). [ಲಕ್ಷ್ಯ + ಕೊಡು$_1$]

**ಲಕ್ಷ್ಯಚ್ಯುತ** (ನಾ). ಗುರಿ ತಪ್ಪಿದವನು : "ಲಕ್ಷ್ಯಚ್ಯುತಂ ತಪ್ಪಲೆಚ್ಚನಕ್ಕು" (ಮಂಗರಾ. ೩೬-೪೩). [ಸಂ.]

**ಲಕ್ಷ್ಯಭಾವ** (ನಾ). ಉದ್ದೇಶಿಸಿದ ಗುರಿ ; ಮುಟ್ಟಬಯಸಿದ ಸ್ಥಳ : ಬಸವಣ್ಣ ಸಂಗಮಕ್ಕೆ ಚೆನ್ನಬಸವಣ್ಣ ಉಳುವಿಗೆ ಪ್ರಭು ಕದಳಿಗೆ ಮಿಕ್ಕಾದ ಪ್ರಮಥರೆಲ್ಲರೂ ತಮ್ಮತಮ್ಮ ಲಕ್ಷ್ಯಭಾವಕ್ಕೆ ಮುಕ್ತಿಯನೆಯ್ದಿಹರು (ವಚನಸಂ. ೧೦೪-೪೪೪). [ಸಂ.]

**ಲಕ್ಷ್ಯಲಕ್ಷಿತ** (ನಾ). ಗುರಿಗೆ ಸರಿಯಾಗಿ ಹೊಡೆಯುವವನು; ಗುರಿಯನ್ನು ಭೇದಿಸುವವನು : "ಲಕ್ಷ್ಯಲಕ್ಷಿತನೆನಲು ತಾಗಲೆಸುವವನಕ್ಕು" (ಮಂಗರಾ. ೩೬-೪೩). [ಸಂ.]

**ಲಕ್ಷ್ಯವಿಡು** (ಕ್ರಿ). ಗಮನ ಕೊಡು ; ಎಚ್ಚರವಹಿಸು : ಗುಡಿಸುವಾಗಲೂ ಮೂಲೆಗಳ ಕಡೆಗೆ ಲಕ್ಷ್ಯವಿಟ್ಟುಕೊಳ್ಳುವುದಕ್ಕೆ ಮರೆಯಬಾರದು (ಅಡುಗೆ. ೪೯). [ಲಕ್ಷ್ಯ$_4$ + ಇಡು$_1$]

**ಲಕ್ಷ್ಯಸಿದ್ಧಿ** (ನಾ). ೧. ಗುರಿಯನ್ನು ಮುಟ್ಟುವುದು ; ಉದ್ದೇಶಸಾಫಲ್ಯ : ಗುರು ಲಕ್ಷ್ಯಸಿದ್ಧಿಯಿಲ್ಲೆನೆ ಮರವಂಬಂ ಪರಿದು ಪಿಡಿದು ಬೇಗಂ ತರ್ಪಂತಿರೆ . . . ಮರುತ್ಸುತಂ ಪರಿದಂ (ಗದಾಯು. ೬-೨೯) ; ನಿಯಮಿಸುವರ್ ತ್ರಿವಿಧಧನುಃಪ್ರಯೋಗದೊಳ್ ದೃಷ್ಟಿಮುಷ್ಟಿ ಶರಸಂಧಾನಕ್ರಿಯೆ ಲಕ್ಷ್ಯಸಿದ್ಧಿ ನಿಜಶಿಕ್ಷೆಯನನುಪಮಮಾಗೆ ಚತುರಚಾಪಾಚಾರ್ಯರ್ (ಪುಷ್ಪ. ೨-೩೪). ೨. ಉದಾಹರಣೆಗಳಿಂದ ಸಿದ್ಧವಾಗುವಿಕೆ ; ನಿದರ್ಶನಗಳಿಂದ ಸಿದ್ಧಮಾಡಿ ತೋರಿಸುವಿಕೆ : ಧಾತುಗಳವು ನಾನಾರ್ಥೋಪೇತಂಗಳ್ ಲಕ್ಷ್ಯಸಿದ್ಧಿವಿಡಿದುವನಜಿಜು . . . ಪೂರಿಸುಗೆ (ಶಬ್ದಮ. ೨೬೦). [ಸಂ.]

**ಲಕ್ಷ್ಯಾರ್ಥ** (ನಾ). [ಕಾವ್ಯಮೀ] "ಒಂದೊಂದು ಕಡೆ ಶಬ್ದದ ವಾಚ್ಯಾರ್ಥವು ಸನ್ನಿವೇಶಕ್ಕೆ ಹೊಂದದಿದ್ದಲ್ಲಿ, ಹೊಂದಿಕೆಯಾಗುವಂತೆ ಅದನ್ನು ಸರಿಪಡಿಸಿ ಅರ್ಥಕೊಡುವ ಮತ್ತೊಂದು ವೃತ್ತಿ ಕೆಲಸ ಮಾಡುತ್ತದೆ ; ಇದಕ್ಕೆ ಲಕ್ಷಣಾವೃತ್ತಿಯೆಂದೂ ಇದರಿಂದ ಬರುವ ಅರ್ಥಕ್ಕೆ ಲಕ್ಷ್ಯಾರ್ಥವೆಂದೂ ಹೆಸರು" (ಕಾ. ೨. ೪೪) ; ಬೇರೆ ಅರ್ಥಗಳು ವಾಚ್ಯಾರ್ಥಗಳಿಂದ 'ಸೂಚ್ಯ'ವಾಗಿ ಲಕ್ಷ್ಯಾರ್ಥವೆನಿಸುವುವು (ಕೃಪಿಶಿ. ೦೬೭). [ಸಂ.]

**ಲಕ್ಷ್ಯೆ** (ನಾ). ಗುರಿಯಾಗಿ ಬಳಸುವ ಸಾಧನ; ಗುರಿಹಲಗೆ : ಅದು ಹೋಗಿ ಒಂದು ಗಟ್ಟಿಯಾಗಿರುವ ಗುರಿಯನ್ನು (Target) ಹೊಡೆದು, ಅಲ್ಲಿಯೇ ಕೆಳಗೆ ಬೀಳುವುದೆಂದು ಊಹಿಸುವ . . . ಗುಂಡು ಹೊಡೆದಲ್ಲಿ ಲಕ್ಷ್ಯೆಯು ಬಿಸಿಯಾಗುತ್ತದೆ (ವಿಜ್ಞಾನ. ೧೯). [ಸಂ. ಲಕ್ಷ್ಯ]

**ಲಖಿಗಡುಗೆ** ' ಲಕ್ಕಗಡುಗೆ ' ನೋ.

**ಲಖ್ಖ$_1$** ' ಲಕ್ಕ$_1$ ' ನೋ.

**ಲಖ್ಖ$_2$** ' ಲಕ್ಕ$_4$ ' ನೋ.

**ಲಖ್ಖಣ** (ನಾ). ಒಂದು ಬಗೆಯ ಸೈನ್ಯ (?) : ತುರಗದಳ ಪದಾತಿಬಲ ಬಿಲ್ಲಿನ ಲಖ್ಖಣ ವಗ್ಗಸೇನೆ ಬಹುವಡೆಯಂ ಬೆಳಗದತ್ತಿಯ ಕೋಟೆಯ ಮುತ್ತಿ ಪತ್ತಿ ಥುರದೊಳು ಬಲಿಗೌಡನ ಸುತ್ತಿ . . . ತಳ್ತಿರ್ದು (ಮೈಶಾಸಂ. ೦೬೯೨. ೩೬-೬ ; 1166). [ಲಖ್ಖ$_1$ + ಅಣ್ಣ]

**ಲಖ್ಖೆ** 'ಲಕ್ಕ$_1$' ನೋ.

**ಲಗಕ್ರಿಯೆ** (ನಾ). [ಛಂದ] ಷಟ್ಪ್ರತ್ಯಯಗಳಲ್ಲಿ ಒಂದು ; ಒಂದು ಛಂದಸ್ಸಿನಲ್ಲಿ ಯಾವುದೇ ಒಂದು ನಿರ್ದಿಷ್ಟವಾದ ವೃತ್ತವು ಎಷ್ಟನೆಯದು ಎಂಬುದನ್ನು ಕಂಡುಹಿಡಿಯುವ ವಿಧಾನ : ಏಕದ್ವ್ಯಾದಿ ಲಗಕ್ರಿಯೆಯಿಂತಕ್ಕುಂ . . . ಈ ಪ್ರತ್ಯಯವು ಯಾವುದಾದರೊಂದು ಛಂದಸ್ಸಿನಲ್ಲಿ ಒಂದು ಲಘುವಿರುವ ವೃತ್ತವೆಷ್ಟು ? ಎರಡು ಲಘುವಿರುವ ವೃತ್ತವೆಷ್ಟು? ಎಂಬ ಒಂದು ಎರಡು ಮೊದಲಾದ ಲಘುಗಳಿರುವ ವೃತ್ತಗಳ ಲೆಕ್ಕವನ್ನು ತಿಳಿಸುತ್ತದೆ (ಛಂದೋಂಬು. ೬-೪).

' ಷಟ್ಪ್ರತ್ಯಯ ' ಪಠಾ. [ಸಂ. ಲಗಕ್ರಿಯಾ]

**ಲಗಡ$_1$** ' ಲಗಡು ' ನೋ.

**ಲಗಡ$_2$, ಲಗಡಿ, ಲಗುಡಿ** (ನಾ). ೧. ಹೊಡೆತ ; ಪೆಟ್ಟು : 'ಲಗಡಿಸು' ಪಠಾ. ೨. ಮಲ್ಲಯುದ್ಧದ ಒಂದು ಪಟ್ಟು : ಮುಷ್ಟಿ ಕಮ್ಮಿ ಮುಹುಡಂ ಜವತ್ಸವಡಿ ಪಾಸಗ ಕಕ್ಷವಡುಮ್ಮುಹುಗ್ಗಮುಂತರಲಗಡಂ . . . ಪಟ್ಟಿ ಕತ್ತರಿಗಳೆನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ಶ್ರೀಕೃ. ೨೬-೦೬). **ಲಗಡಿ** : ೨. ತಳಹತ್ತದಲಿ ತವಕಿಸುವ ಲಗಡಿಯಲಿ ಲಟಕಟಿಸುವಂತರಲಗಡಿಯಲಿ ಲಾಲಿಸುವ . . . ಬಿನ್ನಾಣದಲಿ ಹೆಣಗಿದರು (ಕುಮಾವ್ಯಾ. ೦೯-೪೪) ; ಸೆಳೆದು ಶಿರ್ರನೆ ತಿರುಗಿ ಲಗಡಿಯ ಲುಳಿಯ ಪಯಪಾಡಿನಲಿ ನೆಲಕಪ್ಪಳಿಸಿದೊಡೆ (ಕರ್ಣಾಕ. ೬-೬೯). **ಲಗುಡಿ** : ೩. ಕೋಲು ; ದೊಣ್ಣೆ : 'ಲಗುಡಿಗ' ಪಠಾ. ೪. ಕೋಲುಕಾರ ; ವೇತ್ರಧರ : ಪೂಜೆ ಲಗುಡಿ ಛಾಯಿಪಯ್ಯ ಲಗುಡಿಗರ ಥಮ್ಮಮ್ಮವಾಗಿ ತಮ್ಮ ಕಜೆಯಂ ಬಿಟ್ಟು ನರಸಿಂಘಯ್ಯನ ಮಗ ಸೋಮನಾಥಯ್ಯನು (ಸೌಇಇ. IX-i. ೦೦೭-೦೯ ; 1050). [< ಸಂ. ಲಗುಡ]

**ಲಗಡಿ** 'ಲಗಡ$_2$' ನೋ.

**ಲಗಡಿಸು** (ಕ್ರಿ). ೧. ಹೊಡೆ ; ಬಾರಿಸು ; ಲಗಾಯಿಸು : (೪). ೨. ಮಲ್ಲಯುದ್ಧದಲ್ಲಿ ಲಗಡವೆಂಬ ಪಟ್ಟನ್ನು ಹಾಕು : ಬಿಗಿವ ಬಿಡಿಸುವ ಬಿಡಿಸಿದಾಕ್ಷಣ ಸೆಳೆವ . . . ಬಗಿವ ಬಳಸುವ ಬಂಧಗತಿಯಲಿ ಲಗಡಿಸುವ ಲೋಕೈಕವೀರರು ಹೊಕ್ಕು ಹೆಣಗಿದರು (ಕುಮಾವ್ಯಾ. ೬-೨೬) ; ಹೊಗುವ ಹೊಳಕುವ ಬಗಿವ ಬಾಗುವ ಲಗಡಿಸುವ ಲಾಗುಗಳ (ಅಂಚೆಕಾ. ೦೬-೨೨). [ಲಗಡ$_2$ + — ಇಸು$_3$]

**ಲಗಡು, ರಗಡ, ಲಗಡ$_1$, ಲಗಡೆ, ಲಗುಡ$_1$** (ನಾ). ಒಂದು ಮಾಂಸಭಕ್ಷಕ ಪಕ್ಷಿ ; ಗಿಡುಗ ; ಡೇಗೆ : ಒಬ್ಬರ ಕಂಡೊಬ್ಬರ ಮನದೊಳು ಕ್ರೋಧ ಹಬ್ಬಿತು ದೂರೆ ದೊರೆಗಳಿಗೆ ಕಬ್ಬಕ್ಕಿ ಗಿಳಿವಿಂಡು ಲಗಡು ಸಾಳುವ ನಾನು ತಪ್ಪಿಕೊಂಬರೆ ಬರುವಂತೆ (ಅಜುಹಾಂ. ೨-೦೦) ; ಲಗಡಿನಂತೆಜಾ

ಲಂಗಿಸುವ ಹೋರಾಟದ ವಿಗತವಲ್ಲರುಗಳೊಪ್ಪಿದರು (ಶಂಪು. ೨೦-೯೩); ಪಕ್ಷಿಗಳ ಗೂಡು ಗುಂಪುಗಳ ಗುಯರ್ಗಾಡುವ ಗಿಡುಗ ಲಗಡು ಬ್ಯಾಜ್ಞಗಳಂ (ಸಗಂ. ೩೦-೭). **ರಗಡ** : ರಗಡನೆತ್ತಲು ರಾಯುಗುಲಗೀಜಗಖಿಗಾವಳ ಯೆತ್ತ ಸಿಂಹದ ನೆಗೆತಮೆತ್ತಲು ಹರಿಣಪ್ಲೋತಮದೆತ್ತ ಪಟಿಸಲು (ಕಂಠೀಶ. ೪೦-೨೦). **ಲಗಡ**$_1$ : ಕುಕ್ಕುಭ ಲಗಡ ಸಲೆ ಕೂಕುಟಗ . . . ಕಬ್ಬಕ್ಕಿ ಪುಟ್ಬಕ್ಕಿಗಳ ನೋಡಿದವು (ಪುರೀಕೃ. ೩-೪); ಎರಗುವ ಲಗಡ ನಂದದೊಳಮರಸುಭಟರ ತಗುಲಿ ಪೊಗದೋರಿದವು ಬೆನ್ನಿಂ ಬೋಳೆ ಯಂಬುಗಳು (ಕಂಠೀಶ. ೦೭-೪). **ಲಗಡೆ** : ಲಗಡೆ ರಣಹದ್ದು ಸಾಳಿವ ಕಾಳಿಂಗ ಹಂಸ ಚಕೋರನ ಬಳಗವೊಪ್ಪಿತು ವನದೊಳು (ಗೋಹಾರು. ೩-೦೨). **ಲಗುಡ**$_1$ : ಗಿಡುಗ ಲಗುಡ [ಶಾಶಾಂ. ಗಡು]ಗಳೆಸೆಯಲಲ್ಲಿ ವನಚರರಿಂದೆ ವನವೆಸೆದುದು (ಶಬಕ್ಷ. ೩೩-೨೨).

[ದೇ.॥ ತೆಲು. ಲಗುಡು./ಹಿಂ. ಮರಾ. ಲಗಡ್]

**ಲಗಡೆ** 'ಲಗಡು' ನೋ.

**ಲಗತ** (ನಾ). ಲಯಬದ್ಧವಾದ ಕುಣಿತ, —ನೃತ್ಯ : ಪುಗಿಸೆಳಸಂಜೆಯೊಳ್ ಸುಟುವ ಪಾರಿವಮಂ ಸಖಿ ಗೂಡಿನೊಳ್ ಮಯೂರಿಗೆ ಲಗತಂಗಳಂ ಕಲಿಸು (ಲೀಲಾವ. ೦೪-೦೦೬). [< ಸಂ. ಲಯಗತ ?]

**ಲಗತಿಡು** (ಕ್ರಿ). ಜೋಡಿಸು ; ಸೇರಿಸು ; ಹೊಂದಿಸು : ಈ ಎಲ್ಲ ಖಲಮುಗಳಿಗೆ ಬೇಕಾದ ಪುರಾವೆಯನ್ನು ಇಲ್ಲಿ ಲಗತಿಟ್ಟು ಕಳಿಸಿದೆ (ಜಜಾ. ೬೩). [ಲಗತು (< ಲಗತ್ತು)+ ಇಡು$_1$]

**ಲಗತು** 'ಲಗತ್ತು' ನೋ.

**ಲಗತ್ತಿಸು** (ಕ್ರಿ). = ಲಗತಿಡು : ಒಂದು ಛಾಯಾಗ್ರಾಹಕಯಂತ್ರವನ್ನು ದೂರದರ್ಶಕಕ್ಕೆ ಲಗತ್ತಿಸಿ ಛಾಯಾಚಿತ್ರ ಹಿಡಿದರೆ ಲೆಕ್ಕವಿಲ್ಲದಷ್ಟು ನಕ್ಷತ್ರಗಳನ್ನು ನೋಡಬಹುದು (ಅಶಾಶ. ೩೨); ನಿರೂಪದ ನಕಲೊಂದನ್ನು ಈ ಕಾಗದದೊಡನೆ ಲಗತ್ತಿಸಿದ್ದೇನೆ (ಶ್ರೀಪರು. ೩೬೯).

[ಲಗತ್ತು + - ಇಸು$_3$]

**ಲಗತ್ತು**, ಲಗತು (ನಾ). ೧. ಜೋಡಣೆ ; ಹೊಂದಿಕೆ ; ಸೇರಿಕೆ : ಅವಾ ನಮ್ಮ ಅಳಿಯನಿಗೂ ನಿಮಗೂ ಲಗತ್ತು. ಇನ್ನು ಕಾಸೀಮಂದ್ಯ ಕರೀಮಂದು ಯಾವುದೂ ಸಂಬಂಧ ಇಲ್ಲ (ಸಾರುದಾ. ೦೦೬). **ಲಗತು** : ೨. ಹತ್ತಿರ ; ಸಮೀಪ : ಇಲ್ಲೆ ಲಗತಿನಾಗ ಇರತಾರು (ಜನಾ. ೪೪).

**ಲಗತ್ತಾಗು**=ಹೊಂದಿಕೆಯಾಗು ; ಜೋಡಣೆಯಾಗು ; ಸೇರಿಕೆಯಾಗು : ಆ ನೌಕರಿಗೆ ಪುರಾವಿನಲ್ಲಿ ಲಗತ್ತಾಗಿದ್ದ ಕೆಲಸಗಳು ಈಗ ಮಾಡಲ್ಪಡುತ್ತಿರಲಿ (ಗ್ರಾಮಶ. ೪೪). [←ಮರಾ. ಲಗತ್]

**ಲಗರಗೋಲು** (ನಾ). ನಂದಿಕೋಲು (?) : ವೃಷಭನಾಟಕ್ಕೆ ಲಗರಗೋಲನಿತ್ತು ನೀವು ಪಶುಪತಿಯ ಮುಂದಣ ಎಸೆವ ಅನಾದಿಗಳೇವೆಂದು ಶೀಲವ ಬಸವಣ್ಣನಿಟ್ಟು ಬೆರಸಿದ (ಬಸ್ತಾ. ೯-೪೦).

[?+ ಕೋಲು$_1$(< ಕೋಲ್$_1$)]

**ಲಗಳ** 'ಲಗಳೆ' ನೋ.

**ಲಗಳಚಣ್ಣ** (ನಾ). ಸಡಿಲವಾದ ಚಲ್ಲಣ, - ಪಾಯಿಜಾಮಾ : (+).

[ಲಗಳ$_1$ + ಚಣ್ಣ (< ಚಲ್ಲಣ)]

**ಲಗಳೆ**, ಲಗಳ (ನಾ). ನೀರು ಮೊದಲಾದ ದ್ರವಪದಾರ್ಥಗಳನ್ನು ತುಂಬುವ ದೊಡ್ಡ ಚರ್ಮದ ಚೀಲ ; ಪಕಾಲಿ : ಹೂಗೆಯ ಕುಡಿದಲೆಯನಗಿವ ಬಾಯತ್ ಸಿಂದಿಯ ಲಗಳೆಯಂತಿತುದು (ಸರ್ವಜ್ಞ. ೦೩೦೭); ಶಿಶುನಾಳಧೀಶನ ದಿವ್ಯಜ್ಞಾನದ ಲಗಳೆ ಹೊತ್ತು ತಿರುಗುವ ಕಾಯಕವು ತನ್ನದು (ಶಂಶಿ. ೭೪ ಶಶಿನಾಳಶಂಕರು). 'ಸಗ್ಗಳೆ' ಪರಾ. **ಲಗಳ** : ಎರಡೆರಡು ಮೂರುಮೂರು ಮೈಲಿನ ಮೇಲಿಂದ ಲಗಳಗಳಲ್ಲಿ ಇಲ್ಲವೆ ಛಕ್ಕಡಿಗಳಲ್ಲಿ ನೀರು ತರುತ್ತಿರುತ್ತಾರೆ (ಶಶಾಗ. ೨೩೩). [?]

**ಲಗಾಟ**, ಲಕೋಟಿ, ಲಗಾಟ$_1$, ಲಘಾಟಿ (ನಾ). ೧. ತಲೆ ಕೆಳಗು ಮಾಡಿ, ಕಾಲು ಮೇಲು ಮಾಡಿ ನೆಗೆದು ಮತ್ತೆ ನಿಲ್ಲುವುದು; ಲಾಗ; ಪಲ್ಟಿ : ಲಖಿತಲಲಾಟದೋಲರದಿರಲೇಗ್ಯೆವೆ ಎಷ್ಟು ಲಗಾಟವ ಹೊಡೆವೆ (ಅಂತಾಶ. ೦೭೦-೪೦). ೨. (ಅಲಂ) ಅನುತ್ತೀರ್ಣ; ನಪಾಸು; ಫೇಲು: ಮ್ಯಾಟ್ರಿಕ್‌ಪರೀಕ್ಷೆಯಲ್ಲಿ ಪ್ರಥಮ ಲಗಾಟವಾದ ಮೇಲೆ . . . ಶಾನಾದರೂ ಶಾಲೆಯ ಲಾಯಿಫ್‌ಮೆಂಬರ ಎಂಬಂತೆ ವಸಂತ ವರ್ತಿಸತೊಡಗಿದನು (ಗಂಜೂಯು. ೬೦). **ಲಕೋಟಿ** : ೧. ರಣಸೂರಬಾಬೂಸಾಹೇಬ ಹೊಡೆದ ಲಕೋಟಿ ಆದ ಸುಮಾರ (ಶ್ರಂಆ. ೬೩). **ಲಗಾಟ**$_1$. **ಲಘಾಟಿ**: ೧. ಲಗುಬೀರಣ್ಣಾ ಲಗುಬೀರಾ ಚಲ್ ಲಘಾಟಿ ಕೊರವರು ಬರುತಾರೆ (ಹುಬ್ಬಿಹ. ೯೬).

**ಲಗಾಟಹಾಕು**, ಲಗಾಟಹಾಕು=೧. ಲಾಗಹಾಕು ; ಪಲ್ಟಿಹೊಡೆ. ೨. (ಅಲಂ) ಸಾಯು ; ಮರಣಹೊಂದು : ಅವಳಾದರೋ ತುಂಬ ಮುದುಕಿ, ಯಾವಾಗ ಲಗಾಟಹಾಕುತ್ತಾಳೆ ಎಂಬುದನ್ನು ತಿಳಿಯಲು ಅಸಾಧ್ಯ (ಶಿರೋಗಾ. ೨). ೩. ಅಯಶಸ್ವಿಯಾಗು; ಅನುತ್ತೀರ್ಣವಾಗು; ನಪಾಸಾಗು: ಕನ್ನಡ ನಾಲ್ಕನೆ ಇಯತ್ತೆಯಲ್ಲೇ ಮೂರುಸರತಿ ಲಗಾಟ ಹಾಕಿ ಸಾಲೆ ಬಿಟ್ಟು ಈಗ ಅಂಗಡಿಯಲ್ಲಿ ಕೊಡ್ತಾ ಇದ್ದಾನೆ (ಮೂರುದಾ. ೨೩೪).

**ಲಗಾಟಹೊಡೆ**, **ಲಗಾಟಿಹೊಡೆ**=ಲಗಾಟಹಾಕು ೧ : ಗಿಮಿ ಗಿಮಿ ಹಸಿರು ಹುಲ್ಲ ಮೇಲೆ ಲಗಾಟಹೊಡೆಯಬೇಕೆಂದೆನಿಸಿತು (ವಸಮನ. ೯೩) ; ಮಂದೀ ಕುಂಬೀ ಮ್ಯಾಲ ಏಟ ದಿನಾ ಲಗಾಟಹೊಡೆಯೋದು ? (ಬಾಂಂ. ೪೪).

[ಲಾಗು$_1$ + ಆಟ]

**ಲಗಾಟ**$_1$ 'ಲಗಾಟ' ನೋ.

**ಲಗಾಟ**$_2$ (ನಾ). ಜಗಳಗಂಟಿ ಹಾಗೂ ದುಷ್ಟಳಾದ ಹೆಂಗಸು : (+) [?]

**ಲಗಾಡಿ** (ನಾ). ಕೇಡು ; ನಾಶ ; ನಷ್ಟ : 'ಲಗಾಡಿತೆಗೆ' ಪರಾ.

[←ತುಳು. ಲಗಾಡ್, ಲಗಾಡಿ]

**ಲಗಾಡಿತೆಗೆ** (ಕ್ರಿ). ಹಾಳುಮಾಡು : ನಾಶಮಾಡು : ಕಳೆ : ಆಸ್ತಿ ಹಣಗಳನ್ನು ಲಗಾಡಿತೆಗೆಯಲು ಏನೇನು ಬೇಕೋ ಅದಕ್ಕೆ ತಕ್ಕ ಬರವಣಿಗೆ ಹೇಳಿಕೊಡುತ್ತಿದ್ದರು (ಹುಮುಂ. ೦೭); ನಮ್ಮ ಮಾಧವನು ಇದ್ದುದನ್ನು ಲಗಾಡಿತೆಗೆದ ಮೇಲೆ . . . ಎಲ್ಲವನ್ನು ಹಂಚಿಕೊಟ್ಟೆ (ಸಾರುದಾ. ೦೬೩); ಬೂದಿಕಟ್ಟೆದೇವರು ಸುಟ್ಟು ಲಗಾಡಿತೆಗೆದ (ಪುಜಳಶ್ರ. ೪೪). [ಲಗಾಡಿ + ತೆಗೆ$_1$]

**ಲಗಾಮು** (ನಾ). ೧. ಕುದುರೆಯನ್ನು ಹಿಡಿತದಲ್ಲಿಟ್ಟುಕೊಳ್ಳಲು, ಅದರ ಬಾಯಲ್ಲಿ ಸಿಕ್ಕಿಸುವ ಕಬ್ಬಿಣದ ತುಂಡು ಮತ್ತು ಅದಕ್ಕೆ ಕಟ್ಟುವ ಚರ್ಮದ ಪಟ್ಟಿ; ವಾಘೆ : ತಡಿ ಸುಖಾಸನ ಸಂಗತಿ ವೊಯಾವುತೆ ಜನಾಖಿ ಲಗಾಮು . . . ಮಣಲಂಬಳದ ಹಯ ಮಿಗೆ ಗುಡಿಯುಜೀದು ವೊಗವೆತ್ತಿ ನರ್ತಿಸಿತಸುರನಿದಿಂನಲಿ (ಕೊರಡಾ. ೬-೨೪-೦೨); ರಥದ ಅಲಂಕಾರಕ್ಕೆ . . . ೪ ಬೆಳ್ಳಿಮುಲಾಮಿನ ಲಗಾಮು ಸಾರಥಿ ಕುದುರೆಗೆ (ಎಶಿ. XIV, ಶಂಜನ. ೨೯೨-ಶೃಲಿ.೦೪೨ ; 1847); ಅದರ ಲಗಾಮಿಗೆ ಕೈಹಾಕಲು ಅದು ಗರ್ರನೆ ತಿರುಗಿ ಹಿಂಗಾಲು ಜಾಡಿಸಿ ಕೊಸರಿಕೊಂಡು ಓಡಿ ಹೋಯಿತು (ಹುಂಜಾ. ೪-೭೯); ತುಂಟುಕುದುರೆಗೆ ಗಂಟುಲಗಾಮು (ಗಾದೆ). ೨. (ಅಲಂ) ಅಂಕೆ; ಹತೋಟಿ; ಹಿಡಿತ; ನಿರ್ಬಂಧ : ಈಗವನ ಬುದ್ಧಿಗೆ ಲಗಾಮು ಇಲ್ಲದಾಗಿದೆ (ಶ್ಯಾಗು. ೭೦); "ನಿನ್ನ ನಾಲಗೇಗೆ ಲಗಾಮು ಐತಾ ?" "ನೀವು ಅಕ್ಕೀರಾ, ಲಗಾಮು ?" (ಕೆಂಗಾ. ೦೪೪).

[←ಪಾರ. ಹಿಂ. ಮರಾ. ಲಗಾಮ್]

**ಲಗಾಯಿಸು** (ಕ್ರಿ). ೧. ಕೂಡಿಸು; ಜೋಡಿಸು; ಸೇರಿಸು : (+). ೨. (ಅಲಂ) ಹೊಡೆ; ಬಾರಿಸು; ಪೆಟ್ಟುಕೊಡು : ಹೆಚ್ಚು ಮಾತನಾಡಿದರೆ ಒಂದು ಲಗಾಯಿಸುತ್ತೇನೆ ನೋಡು (ಶಾಪ). ೩. ತಿನ್ನು; ನುಂಗು : ಸೀಬೆಯ ಹಣ್ಣು ಕೊಡುತ್ತಾನೆ, ಲಗಾಯಿಸು (ಶಶದಾ. ೧೬೩೩೩). ೪. ಒತ್ತಿ ಹೇಳು ; ಗಟ್ಟಿಯಾಗಿ ಉಚ್ಚರಿಸು : ಹಲೊ ಎನ್ನುವಲ್ಲಿ 'ಲ'ವತ್ತು

ಲಗಾಯಿಸಿ ಕೂಗಿದ್ದು ಚೇಳಿಡಿದವರಿಗೆ ಅನುಕೂಲವಾಯ್ತು (ಶತಮಾನ. ೯೯).
[ಲಗಾ₀ (P ← ಹಿಂ. ಲಗಾನಾ) + –ಇಸು₁./ತುಳು. ಲಗಾಸ್]

**ಲಗಾವು** (ನಾ). ಸೇರುವಿಕೆ ; ಹೊಂದಿಕೆ ; ಲಗತ್ತು : ಗ್ರಾಮನೌಕರಿಗೆ ಅಥವಾ ನೌಕರಿಗಳಿಗೆ ಲಗಾವಾಗಬೇಕಾದುದಿಲ್ಲವೆಂದು ಸರ್ಕಾರಿ ಗೆಜೆಟ್ಟಿನಲ್ಲಿ . . . ಸರ್ಕಾರದವರು ವಿನಾಯಿಸಬಹುದು (ಗ್ರಾಮಾಳ. ೬೩).

**ಲಗಾವಾಗು** = ಸರಿಹೊಂದು ; ಹೊಂದಿಕೆಯಾಗು : ಸಿಂತೆಗೂ ಕೂಡ ಅದೇ ಪ್ರತ್ಯುತ್ತರ ಲಗಾವಾಗದಿದ್ದೀತೇ ? (ಮುಂಕೆಶ್ಚ. ೨೩೦).
[← ಹಿಂ. ಮರಾ. ಲಗಾವ್]

**ಲಗಿಮ** (ನಾ). ೧. ಅಲ್ಪತೆ; ಲಘುತ್ವ. ೨. ಅಲ್ಪನಾದವನು ; ಹೀನ : ಸುಗುಣಿ ಗುಣಗಳನೆಣಿಸಿ ಸಂತೋಷಗೊಳುವಂತೆ ಲಗಿಮನರಿವನೆ (ವಂಶಾವಾ. ೪-೦೪-೬). [< ಸಂ. ಲಘಿಮನ್]

**ಲಗಿಸು** (ಕ್ರಿ). ಯೋಜಿಸು ; ಸಿದ್ಧಪಡಿಸು (?) : ಕಾಳಗಾವುಣ್ಣನ ತಮ್ಮ ಲೆಂಕರಾಯನಂ ಕರೆದು ವಿಷ್ಣುವರ್ಧನ ಹೊಯ್ಸಳದೇವಂ ಮುಂಗೊಳುವಾಯದ ಕಾಳಗಕೆ ಲಗಿಸಿ ಬೆಸಂಬೇಳೆ ಲೆಂಕರಾಯಂ ಮಾಡಿದ ಪರಾಕ್ರಮೋನ್ನತಿಯಂದೆಂತೆಂದಡೆ (ಎಕ. V. ಹೇಲೂರು. ೨೦೨-೬; 1138).
[P ಇದು 'ಲಾಗಿಸು' ಎಂಬುದರ ಅಪಲಿಖಿತವಿರಬಹುದು]

**ಲಗು₁**, ಲಗೂ₁ (ನಾ). ೧. ಹಗುರ; ಭಾರವಿಲ್ಲದುದು : "ಲಗು–ಲಘು = ಶೀಘ್ರ, ಹಗುರ" (ಕರ್ನ್ಯಕೋ. ೩೬). 'ಲಗುಗೆಯ್' ಪರಾ. ೨. ಸರಳವಾದುದು; ಸುಲಭವಾದುದು : ಲಗುವಿಂ ಪಾಡಲುವಾಯ್ತು ನಾಲ್ಕುಡಿಗಳಂ ಲಾಲಿತ್ಯದಿಂ . . . ಆಗಿಸುವನೊರ್ವಂ ಕಬ್ಬಿಗಂ (ಕಂಕಕ. ೩೪-೯). ೩. ಅವಸರ; ತ್ವರೆ. ೪. ಚೇತರಿಸಿಕೊಳ್ಳುವಿಕೆ ; ಆರೋಗ್ಯ ಸುಧಾರಿಸುವಿಕೆ : (೬). ಲಗೂ₁ : ೩. 'ಲಗೂನೆ' ಪರಾ.

**ಲಗುಬಿಗಿ** = ಸರಳತೆ ಮತ್ತು ಬಿಗುಮಾನ,—ಕಾಠಿಣ್ಯ : ಮೊದಲನೆಯ ಪತ್ರವು ನಮ್ಮ ಲಗುಬಿಗಿಯನ್ನು ನೋಡುವ ಪತ್ರ(ಕ್ರಿಂ೦ಡು.೦೯೬).
**ಲಗುಬಿಗು** = ಲಗುಬಿಗಿ : ಮೊದಲು ಲಗುಬಿಗು ನೋಡಿಕೊಂಡು ಆಮೇಲೆ ಕೆಲಸ ಮಾಡಬೇಕು (ಲೂಕ). **ಲಗುಮಾಡು** = ಅವಸರ ಪಡು ; ತ್ವರೆಮ್ಮಾಡು : ಒಲ್ಲೆ ನಾ ಭಾವಣ್ಣ, ಸಣ್ಣಾವನಿದ್ದ ನೀ ಲಗುಮಾಡದೆ (ಜಾತುಹಾ. ೩೨-೨೨). [< ಸಂ. ಲಘು]

**ಲಗು₂**, ಲಗೂ₂ (ಅ). ಬೇಗನೆ ; ಶೀಘ್ರವಾಗಿ : ಅದಪ್ಪು ಲಗು ಬಸ್ಸ ಏದ್ವರೆ ಹಳಸಿ, ಹದಗೆಟ್ಟು, ಹಾಳಾಗಿ ಹೋಗಬಹುದು (ಜಾನಾರ. ೦೦೬); ಒಂದಿನಿತು ಲಗು ನಡಿ (ತಂಡುಬಿ. ೩೨). **ಲಗೂ₂** : ಏನು ಗೌಡ್ರು, ಎಷ್ಟು ಲಗೂ ಬಂದ್ರಿ (ಬಿಂಕಕು. ೦೩) ; ಅದಪ್ಪು ಲಗೂ ತಿಳಿಸೋದು ನಿನಗೂ ಹಿತ (ಕಂಂ. ೫೦).

ಲಗುಲಗು, ಲಗೂಲಗೂ (ದ್ವಿರುಕ್ತಿ) : ನೂರಾಎಂಟು ಸಾರೆ . . . ಎಂದೆನ್ನಬೇಕು. ಬಹಳ ಲಗುಲಗು (ಕಂಹಿಂ. ೨೭) ; ಹೋಗರಿ . . . ಲಗೂಲಗೂ ಮಾಡಿಕೊಂಡು ಬರ್ರಿ (ದಕಂಕ. ೩೬). [< ಲಗು₁]

**ಲಗುಗೆಯ್** (ಕ್ರಿ). (ಅಲಂ) ಹಗುರವಾಗಿ ಭಾವಿಸು; ಕಡೆಗಣಿಸು ; ಉಪೇಕ್ಷಿಸು : ಲಗುಗೆಯ್ಯದೆನ್ನ ಬಿನ್ನಪವ ಲಾಲಿಪುದೆಂದು ಸುಗುಣಾಂಗಿ ಬಿನ್ನಯಿಸಿದಳು (ವಂಶಕ. ೬-೨೩). [ಲಗು₁ + ಕೆಯ್₁]

**ಲಗುಡ₁** ' ಲಗಡು ' ನೋ.

**ಲಗುಡ₂** (ನಾ). ದೊಣ್ಣೆ ; ಬಡಿಗೆ : "ಲಗುಡ – ಲಕುಟ = ದೊಣ್ಣೆ" (ಕರ್ನ್ಯಕೋ. ೩೬); ನೇವಾಂಡಿ ವ್ಯಾಯಾಮ ಲಗುಡವ ಪಿಡಿಯಿರಿ ಮಾನವರೆಚ್ಚರಿಕೆ (ಬ್ರಹ್ಮಕ. ೨೨೦) ; ಬೆಂದವೊಡಲು ವೊನಚಾದ ಲಗುಡ (ಕೋಲು)ದಿಂದ ಭೂಮಿಯಲ್ಲಿ ಹಳ್ಳ ಕುತ್ತಿ ಕಾಳನ್ನು ಬಿತ್ತಲಾಯಿತು (ಜಾನಂ. ೧ ಮುನ್ನುಡಿ).
[ಸಂ.]

**ಲಗುಡತಾಡನೆ** (ನಾ). ದೊಣ್ಣೆಯ ಪೆಟ್ಟು ; ಕೋಲಿನ ಹೊಡೆತ, — ಪೆಟ್ಟು : ಜೋಳದ ಕಟ್ಟಂ ನೀರಂಬಲಿಯಂ ಪ್ರತಿದಿನಂ ಕುಡುವುದದು ಹೆಚ್ಚು ಕಡಮೆಯಾದೊಡೆ ಲಗುಡತಾಡನೆಯಂ ಪಡೆವೆಂದು ನಿಯಮಿಸೆ (ರಾಜಾವ. ೬೨). [ಸಂ. ಲಗುಡತಾಡನ]

**ಲಗುಡಪಾತ** (ನಾ). = ಲಗುಡತಾಡನೆ : ನಾಲ್ಕನೆಯೋಳ್ ರವಿ ನಿಧನಂ ಮನುಜಂಗೆ ಲಗುಡಪಾತದಿನಕ್ಕುಂ (ಜಾತಕ. ೨೩-೦೦). [ಸಂ.]

**ಲಗುಡಿ** ' ಲಗಡು₂ ' ನೋ.

**ಲಗುಡಿಗ** (ನಾ). ಕೋಲುಕಾರ ; ವೇತ್ರಧರ : ಒಸ್ದು ಪೊಟ್ ಲಗುಡ ಭಾಯಿಪಯ್ಯ ಲಗುಡಿಗರ ಧರ್ಮ್ಮವಾಗಿ ತಮ್ಮ ತೆಜ್‌ಯಂ ಬಿಟ್ಟ ನರಸಿಂಘಯ್ಯನ ಮಗ ಸೋಮನಾಥಯ್ಯನು (ಕ್ಕೆಇ. IX–i, ೦೦೬–೦೯ ; 1050).
[ಲಗುಡಿ (<. ಲಗಡು₂) + — ಗ₂]

**ಲಗುಣೆ** (ನಾ). ಮಲ್ಲಯುದ್ಧದ ಒಂದು ಪಟ್ಟು : ಪಾಯಕರ ದಂಡೆಯಲಿ ಲಗುಣೆಯ ಲಾಯಿಯೊಳಗೆ ನವಾಯಿ ಬಿನ್ನಾಣದಲಿ . . . ಆಯುತವನ ಜಾಡಿಸುವ ಮಲ್ಲನ (ಕುವ್ಯಾಕ. ಶ್ವಿತ. ೦-೬೩). ' ಲಗಡು₂ ' ಪರಾ.
[ಸಂ. ಲಗುಡ]

**ಲಗುನ**, ಲಗ್ಗ₁ (ನಾ). ೧. ಮದುವೆ : "ಲಗುನವೆನೆ ಲಗ್ನಮಕ್ಕುಂ" (ಕಕಃ. ೯೬) ; ಮಾಯದ ಕೈಯಲ್ಲಿ ಓಲೆ ಕಂಠವ ಕೊಟ್ಟರೆ ಲಗುನವಿಗುನವ ಬರೆಯಿತ್ತು ನೋಡಾ (ಅವಕ. ೯-೩೬) : ಲಗ್ನ – ಲಗುನ, ಲಕ್ಷ್ಮಣ – ಲಕುಮಣ (ಕಮರ. ೨೩೯ ಕ್ರಮೋ). ೨. ಶುಭಮುಹೂರ್ತ : ದಶರಥ ಜನಪನಲ್ಲಿ ಪಯಣ ಲಗುನದೊಳನುವಿನಿಂ ಪೊರಮಟ್ಟನುರೆ ಸಾಕೇತಪುರಿಗಾಗಿ (ರಾಮಾಶ್ವಂ. ೦-೩-೦). **ಲಗ್ಗ₁** : ೧. ಕೊಂಡುದಿಲ್ಲ ಕೊಟ್ಟುದಿಲ್ಲ ಲಗ್ಗವಿಲ್ಲ ವಿಲಗ್ಗವಿಲ್ಲ (ಬಸವ. ೪. ೦೨೦೯). ೩. ಸಂಬಂಧ ; ಸಂಪರ್ಕ : ಯಿ ಹೊಂನು ಭತ್ತವಲ್ಲದೆ ಮತ್ತಾವ ಸೀಮೆ ಸಿದ್ಧಾಯದ ಹೊಂನು ಭತ್ತದ ಲಗ್ಗವಿಲ್ಲ (ಕೆಇ. IX–ii, ೪೬೦–೨೨ ; 1466) ; ಮಾಯೆಯ ಲಗ್ಗವನು ಪರಿಹರಿಸಿದೆನು ಸುಮಿಯಾಡೆ ನಾನು (ಅರಾಗ. ೦೦-೫-೩೬) ; ಶರಣರ ದ್ವಿತಯಾಕ್ಷರವ ಲಗ್ಗವನಾಂತ ಚರಣಾನ್ವಿತ ಕೃಷ್ಣ ಜಯತು (ಮೋಹಕ. ೪೦–೦೬). [< ಸಂ. ಲಗ್ನ]

**ಲಗುನಿ** (ನಾ). ಅನುರಕ್ತೆ : ಜಗವಂದ್ಯಗೆ ಬೇಟವ ಮಾಡಿದೆ . . . ಗಗನಗಿರಿಯ ಮೇಲಿರ್ದಹನೆಂದಡೆ ಲಗುನಿಯಾಗಿ ನಾಸಜಸುತ ಬಂದೆನು ಅಘಹರ ಕರುಣಿಸು ನಿಮಗಾನೊಲಿದೆನು (ಮಹಾದೇ. ೩. ೯೬–೨೩೩).
[ಲಗುನ + — ಇ₂]

**ಲಗುಬಗೆ** (ನಾ). ಅವಸರ ; ಆತುರ ; ತ್ವರೆ : ಎಂಥ ಲಗುಬಗೆಯಿಂದ ಕಣ್ಮರೆ ಸಂದೆಯೋ (ಜಾತುಹಾ. ೯೬–೨) ; ಲಗುಬಗೆಯಿಂದ ಊಟ ತೀರಿಸಿಕೊಂಡು ಕೋಟು ಟೊಪ್ಪಿಗೆ ಹಾಕಿಕೊಂಡು ಹೊರಟೆ (ಮುಂಗಾರು. ೯೩).
[ಲಗು₁ + ಬಗೆ₃./ತುಳು. ಲಗಬಗ./ಮರಾ. ಲಗ್‌ಬಗ್]

**ಲಗುಬದರಿ** (ನಾ). ಒಂದು ಬಗೆಯ ಸಸ್ಯ : "ಮಧುರಃ – ಬೀಯವರೆ, ಲಗುಬದರಿ, ಕೆಂಗಬ್ಬು" (ಚಿಕಂ. ೦೦೯). [< ಸಂ. ಲಘುಬದರೀ]

**ಲಗೂ₁** ' ಲಗು₁ ' ನೋ.

**ಲಗೂ₂** ' ಲಗು₂ ' ನೋ.

**ಲಗೂನೆ** (ಅ). ಬೇಗನೆ ; ಶೀಘ್ರವಾಗಿ ; ತಟ್ಟನೆ ; ಬಸ್ಸು ಬೇಗ ಸಿಕ್ಕಿತು. ಹಾಗಾಗಿ ಲಗೂನೆ ಬರುವುದಕ್ಕಾಯ್ತು (ಕರ್ನ್ಯಕ. ೨೩೯); ಬಡವರ ಮದುವೆ ಲಗೂನೆ ಹ್ಯಾಂಗ ಆದೀತು ಹೇಳು ? (ಚಕಂ. ೨೦).
[ಲಗೂ₁ (< ಲಗು₁) + – ಅನ್ನೆ₁]

**ಲಗೋರಿ** (ನಾ). ಒಂದು ಬಗೆಯ ಲಗ್ಗೆಚೆಂಡಾಟ : ಓಣಿಯ ಹುಡುಗರು ಆಟದ ಬಯಲಿನಲ್ಲಿ ಕೂಡಿದರು. ಲಗೋರಿಆಟ ಆಡಲು ಸಿದ್ಧಮಿಸಿದರು (ಕಕಿ. ೪-೯೩). ' ಲಗ್ಗ ' ಪರಾ.
[← ಮರಾ. ಲಗೋರೀ]

**ಲಗ್ಗ1** ' ಲಗುನ ' ನೋ.

**ಲಗ್ಗ2** ' ಲಗ್ಗ ' ನೋ.

**ಲಗ್ಗಿಕ, ಲಗ್ಗಿಗ** (ನಾ). ಲಗ್ನವನ್ನು ಹೇಳುವವನು ; ಜ್ಯೋತಿಷಿ ; ನೈಮಿತ್ತಿಕ : "ಲಗ್ಗಿಕರ್ ಲಾಗ್ನಿಕರ್ಗಳ್" (ಶಬ್ದಮ. ೪೭). ; ನತ್ವಕ್ಕೆ ಗತ್ವಂ-ಅಗ್ನಿ-ಅಗ್ಗಿ ; ಲಾಗ್ನಿಕ-ಲಗ್ಗಿಕ, ಲಗ್ಗಿಗ (ಶಮದ. ೨೭೭ ವೃತ್ತಿ). **ಲಗ್ಗಿಗ** : ಅರಯುತ್ತ ಲಗ್ಗಿಗರುಸಿರಲು ಕೇಳುತ್ತೈವಗಲಾಗೆ (ಜಗನ್ನಾ. ೨-೩೦) ; ಲಾಗ್ನಿಕ-ಲಗ್ಗಿಗ (ಶಬ್ದಾನು. ೧೬೦ ವೃತ್ತಿ). [<ಸಂ. ಲಾಗ್ನಿಕ]

**ಲಗ್ಗಿಗ** ' ಲಗ್ಗಿಕ ' ನೋ.

**ಲಗ್ಗಿಸು** (ಕ್ರಿ). ಮುತ್ತಿಗೆ ಹಾಕು ; ಆಕ್ರಮಣ ಮಾಡು : ಸುರಕುಲಂ . . . ನಡೆತಂದು ಪರಿದು ನೆರೆದು ಮುಂಗುಡಿಗೆಡಲ್ ಸಂಗರಭೂಮಿಯೊಳೊಡ್ಡಿ ನಿಂದಿದ್ದಮಾಗಿ ಲಗ್ಗಿಸಿ ಮೊಗ್ಗರಿಸುತ್ತೊಗ್ಗುಗೆಡದೆ ನಡೆಗೋಂಟೆಯಂತೆ ನೆಲೆವೆರ್ಚಿ ನಿಂದು (ಗಿರಿಜಾ. ೩-೩೩ ವ).

[ಲಗ್ಗ + - ಇಸು3]

**ಲಗ್ಗ, ಲಗ್ಗ2, ಲೆಗ್ಗ** (ನಾ). ೧. ಮುತ್ತಿಗೆ ; ದಾಳಿ ; ಆಕ್ರಮಣ : "ಲಗ್ಗೆಯ ದಾಳಿಯೆನಿಕ್ಕುಂ" (ಶಾರದಾ. ೧೭) ; ಮೆಯ್ವೆತ್ತಿ ಲಗ್ಗೆಯಂ ಮುಟ್ಟುಬಳ್ಕಳಂ ದುರ್ಗದವರ್ಗಳ್ ನುಗ್ಗುಮಾಡೆ ನಾಡೆಯುಂ ಸಿಗ್ಗಾಗಿ ಲಗ್ಗೆಯಂ ತೆಗೆಸಿ (ಪಾರ್ಶ್ವಪು. ೬-೦೪೦ ವ) ; ಮೊದಲ ಲಗ್ಗೆಗೆ ಮಹಾಬಲ ಸಾವಿರತೇರು ನೆಗ್ಗಿದವೊಂದುನಿಮಿಷದಲಿ (ಕುಮಾ.ರಾ. ೮-೪೯) ; ತುಡುಕಿ ಲಗ್ಗೆಯನೇಱಿದು ವಜ್ರಾರ್ಗಳ ಕಡುಗಲಿ ಖಾನ ಬೆಸಸಿದ (ಕಂಠೀ. ೦೩-೪೫). ೨. ಕೋಲಾಹಲ ; ಗದ್ದಲ ; ಗಲಭೆ : ಲಗ್ಗೆಯ ರವದ ನಿಱಿದನುಬಳ ಘನಗಂಭೀರನಾದದಲಿ (ಕುಮಾ.ರಾ. ೧೭-೩) ; ಲಗ್ಗೆ ಮಸಗಿತು ಕೂಡೆ ರಕ್ಕಸ ಮೊಗ್ಗರದ ಮುಂಬಿನಲಿ (ಕೊರಟಿ. ೩-೨೦-೩೦). ೩. ಆರ್ಭಟ : ನೊರೆ ಬುಱುಬುದವನೊಡೆಗಲಸಿ ಕದಡಿ ಕಂಗಳಮುಟ್ಟಿ ಲಹರಿಗಳ ಲಗ್ಗೆಯಿಂದೆಸೆವ ನದಿಯೊಪ್ಪವನದೇವೊಗಳ್ವೆನು (ಹರಿ. ೦೦-೨೯). ೪. (ಆಕ್ರಮಣದ ಸಮಯದಲ್ಲಿ ಬಾರಿಸುವ) ಹಲವು ವಾದ್ಯಗಳ ಮೇಳ : "ಮೊಟಗೆ ಬಹುವಾದ್ಯಮದು ಲಗ್ಗೆಯಕ್ಕುಂ" (ಮಂಗರಾ. ೮೩-೨೭) ; ತಂಬಟ್ಟವ ಸೂಳಿನ ಲಗ್ಗೆಯೊಡಮಿಡದೆ ಚೀಱಿದವು (ಹರಿ. ೩-೦೯) ; ಉಲಿವ ಕೈವಾರಿಗಳ ಲಗ್ಗೆಯ ಬಲಿವ ತಂಬಟಕೋಟಿಗಳ . . . ಅಬ್ಬರಣೆ ಮಿಗೆ ಕೈಕೊಂಡ ರಥಿಬಳರು (ಕುಮಾ.ರಾ. ೯-೩೫) ; ಕಿತ್ತಿರಿಯ ತಂಬಟದ ಲಗ್ಗೆಯ . . . ಭಾರಿಯ ಘೋರಘೋಷದಲಿ (ಕೊರಟಿ. ೩-೭-೩) ; ಹೆಗ್ಗಡಲ ತೆರೆಯಂತೆ ಮೊಳಗುವ ಲಗ್ಗೆಗಳಲೋರಂತೆ ಸುಭಟರ . . . ಸಿಂಹನಾದದಲಿ (ಜೈಮಿ. ೧೦-೩೨-೪೩). ೫. ಮಲ್ಲಯುದ್ಧದ ಒಂದು ಪಟ್ಟು,—ವರಸೆ : ಉಬ್ಬಸಮಾದ ತೋರಹತ್ತಕ್ಕೆ ತಗುಳ್ದು ಪತ್ತಿಸುವ ಮಾನಿಸಗೋಳಮೆನಿಪ್ಪ ಡೊಕ್ಕರಕ್ಕೆಕ್ಕಿದ ವಪ್ರಲೇಪಮೆನೆ ಪತ್ತುವ ಲಗ್ಗೆಗೆ ಮಾರಿಯೊಳ್ ಮೊಗಂಬೊಕ್ಕವೊಲಾಗೆ ಬೆರ್ಚದನವಂ ಕುಪರಂಗೆನಸುಂ ನಿಯುದ್ಧದೊಳ್ (ಕಂದ್ರಪ್ರ. ೭-೬೦). ೬. ಚೆಂಡಾಟದಲ್ಲಿ ಚೆಂಡನ್ನು ಎಸೆಯಲು ಇಟ್ಟಿರುವ ಗುರಿಹಲಗೆ : ವಿರಹಿಜನದೆರ್ದೆಯ ಲಗ್ಗೆಯನಿಡುವ ಮನಸಿಜನ ಕರದ ಪಾರಿಕ್ತಿಕದ ಸೆಂಡೋ (ಶಬ್ದ.ಶ. ೦-೩೯) ; ಪರಪೂಜೆಯನಾಂತು ಮೆಱೆವ ಮುತ್ತಿನ ಚೆಂಡು ಬರಬೇಕದು ಲಗ್ಗೆಯೆಡೆಗೆ (ಕುಮಾರಸಂ. ೩೦-೩) ; ಗುಂಡಾದ ಮುತ್ತಿನ ಚೆಂಡು ಉದಯಗಿರಿಯೆಂಬ ಲಗ್ಗೆಯಂ ತಾಗಿ ಪುಟ ಹಾರಿಯದುಱೇರಿ ಬರುವುದೊಯೆಂಬಂತೆ (ಶೌಗಂಧಿ. ೦೫೭-೦೩). ೭. ಪೇರಿಸಿ ಇಟ್ಟುದು ; ರಾಶಿ : ಸಣ್ಣಸೇವಗೆಯ ಮುದ . . . ದೋಸೆಯ ಲಗ್ಗೆ ಬೆಲ್ಲಗಾರಿಗೆಯ ಬಣಬೆ (ಶಬ್ದ.ಶ. ೭-೨೫). ೮. ಒಂದು ಬಗೆಯ ಚೆಂಡಾಟ ; ಲಗೋರಿ : ಬೊಗರಿ ಗದುಗು ಸಡುಗುಡು ಲಗ್ಗೆ ಹಿಡಿಗವಡೆ ಮೊದಲಾದ ಆಟಪಾಟಗಳು ಪ್ರಸಿದ್ಧವಾಗಿದ್ದುವು (ಕಂಕುಂದ. ೧೩೨). ೯. ಗುಂಪು ; ಸಮೂಹ : ಮಱುದಿನ ತನ್ನ ಮಂತ್ರಿಯ ಮುಂದುಮಾಡೆಲ್ಲರ ಕೂಡೆ ಬಂದ ಪೆಂಗಳಗೆ ಪೇಚರಮಂತ್ರಿಗುಟಿಸಿ ವಿತ್ತೋದೆ ಲಗ್ಗೆಯೊಳು ಕೆಸಱಿದ (ಜೈಮಿ. ೩೭-೦೨೫). ' ಲಾಗ1 ' ಪರ್ಯಾ. **ಲಗ್ಗ2** : ೫. ಕಳಂಬೊಕ್ಕು . . . ನಾಲ್ಕುಂ ಸ್ಥಾನದೊಳಂ ಮೂಱು ಲಗ್ಗದೊಳಂ ಐದುಂ ಡೊಕ್ಕರದೊಳಂ ಎಣ್ಬತ್ತುನಾಲ್ಕು ಬನ್ನಣದೊಳಂ ಪಲತೆಱದ ಪಾತಂಗಳೊಳಂ ನೆರೆದು (ಕಂದ್ರಪ್ರ. ೩-೭೭ ವ). **ಲೆಗ್ಗ** : ೧. ತೊಡಗಿದರೊಂದು ಲೆಗ್ಗಗ ವಿಶೇಷವಿರೋಧ ನಿರೋಧಗಾಢದಿಂ (ಶಬ್ದಾ.ಶ. ೩-೪೭) ; ಗಿರಿದುರ್ಗದಿಂದ ಲೆಗ್ಗಯೊಳರಿವರ್ಗಮನಿಱಿವಲೆಳಸಿ ದಿವ್ಯಮೆನಿಪ್ಪಾ ಗಿರಿದುರ್ಗಮನೇಱಿಸಿದಂ ನರಪತಿಯುಪ್ರತಿಮವೀರಚಿಕದೇವೇಂದ್ರಂ (ಚಿಕ್ಕ.ಕಿ. ೮೩-೩). ೧೦. ಜಗಳ : ಕದನ.

**ಲಗ್ಗನುಗ್ಗು**=ಮುತ್ತಿಗೆ ಹಾಕು ; ಆಕ್ರಮಣ ಮಾಡು : ಪಾಗಿಯ ಮುಂಜು ಲಂಕೆಯಂ ಸುತ್ತಿದುದು ಮುತ್ತಿದುದು, ಲಗ್ಗನುಗ್ಗೊಳಹೊಕ್ಕು ನುಂಗಿನುದವಿಲದ್ಯಗ್ನಿಪಯುವಂ (ತೊರವೆರಾ. ೪೭೪-೦೨). **ಲಗ್ಗಬೀಳು** = ಲಗ್ಗನುಗ್ಗು : ಲಗ್ಗೆಬಿದ್ದ ಕೋಟೆಯ ಒಳಗಿನ ಜನರಿಗೂ – ಹೊರಗಿನವರನ್ನು ತೊಂದರೆಗೀಡುಮಾಡುವುದಕ್ಕೆ ಅನೇಕ ತರದ ಸಾಧನ_ಸಲಕರಣೆಗಳಿರುವವು (ಕೋಟೆ. ೫). **ಲಗ್ಗಮಾಡು**=ಲಗ್ಗನುಗ್ಗು : ಲಗ್ಗೆಮಾಡಿದ ಪರಾನನ ಸುತಶತಗಳೊಳೊಗ್ಗೊಡೆಯದೆ ತಮತಮಗೆ ಉಗ್ರದೊಳಸು ತೊಡವರಲು ವಿಭೀಷಣ ಭಾರ್ಗವನಂಕಿದಿರಾಗಿ (ರಂಕ್ಷ. ೭-೧೭೩). **ಲಗ್ಗಯಾಟ**=ಲಗ್ಗೆ ಚೆಂಡಿನ ಆಟ: ಕುಮಾರರಾಮನೂ ಆತನ ಸಂಗಡಿಗರೂ ಲಗ್ಗೆಯಾಟವನ್ನು ಆಡುತ್ತಿರುವರೆಂದು ತಿಳಿಸಿದ್ದಳು (ಕುಮಾರರಾ. ೦೦೧). **ಲಗ್ಗಯಿಕ್ಕು**=ಲಗ್ಗನುಗ್ಗು : ಕೋಟೆಗೆ ಲಗ್ಗೆಯಿಕ್ಕಿದರು (ಕೋಟೆ. ೦೪೨). **ಲಗ್ಗಯೇರು**=ಲಗ್ಗನುಗ್ಗು : ಎರಡು ಕಡೆಯಲ್ಲಿಯೂ ಲಗ್ಗೆಯೇರಿ ಬರುತಲಿರುವ ಆ ಶತ್ರುಜನಗಳು ಅರಿಯಿಡದಂತೆ . . . ಮಾಡಿದರು (ಮುದ್ರಾ. I. ೭೪) : ಆತನ ಪಡೆ ಲಗ್ಗೆಯೇರಲು ತೊಡಗಿತ್ತು (ಕುಮಾರರಾ. ೭೩). **ಲಗ್ಗಹತ್ತು, ಲೆಗ್ಗಹತ್ತು** = ೧. ಲಗ್ಗನುಗ್ಗು : ರಂಗಪಟ್ಟಣಕ್ಕೆ ಲಗ್ಗೆಹತ್ತುತಿದಾರೆಂಬ ವರ್ತಮಾನ ತಿಳಿಯಿತು (ಶತ್ರುಶಾ. ೩) ; ಶೌರ್ಯದಿಂದ ಕಾದಿದರೂ ಶತ್ರುಗಳು ಲಗ್ಗೆ ಹತ್ತುವುದನ್ನು ನಿಲ್ಲಿಸಲಾಗದೆ ಹೋಯಿತು (೭ದೇ. ೪೨). ೨. ಜಗಳವುಂಟಾಗು ; ವಿರೋಧವುಂಟಾಗು : ರೂಪಚಂದನಿಗೂ ದಯಾವತಿಗೂ ಲೆಗ್ಗೆಹತ್ತಿರುವುದು ಗಜೇಂದ್ರಸಿಂಹನಿಗೆ ಗೊತ್ತಾಗಿತ್ತು (ಜಟಾಶಾ. ೦೩೨). **ಲಗ್ಗಹಾಕು**=ಲಗ್ಗನುಗ್ಗು : ತರೀಕೆರೆ ದಂಡು ಬಂದು ರಂಗ ಪಟ್ಟಣಕ್ಕೆ ಲಗ್ಗೆಹಾಕಿದ್ದು (ಶತ್ರುಶಾ. III. ಅಮುಬಂಧ ೦). **ಲಗ್ಗಹೂಡು**=ಲಗ್ಗನುಗ್ಗು : ಇವನು ಪಡಸಾಲೆಯಲ್ಲಿ ಕುಳಿತಾಗ ಸ್ನೇಹಿತರು ಬಾಗಿಲ ಬಳಿ ಲಗ್ಗೆಹೂಡಿ . . . ಸನ್ನೆ ಮಾಡುತ್ತಿದ್ದರು (ಗಂಡಭೇರು. ೫೫).

[< ಸಂ. ಲಂಘನ]

**ಲಗ್ಗಗೆಯ್** (ಕ್ರಿ). ಮುತ್ತು ; ದಾಳಿಮಾಡು ; ಲಗ್ಗೆಯಿಕ್ಕು : ತುರಗಾಧಿರೂಢರ್ . . . ಉತ್ಖಾತಾಸಿಚ್ಛುರಿತಭುಜಪರಿಘರೋಂದೊರ್ವರ ಸೆಣಸಿಂ ಲಗ್ಗೆಗೆಯ್ದು ಪಾಯಿಸೆ ಜವದಿಂ (ಶಾಂತಿಪು. ೪-೦೫) : ಅಱಿಯೊಡಲೆಂಬ ಮಣ್ಣ ಮಱೆಗೋಟೆಯೊಳಿಂದ್ರಿಯದುಃಪರಿಗ್ರಹಂಗಳನೊಳಕೊಂಡು ಜೀವನಿಲಲಾರ್ತಪ ನಾಳೆಯ ಲಗ್ಗೆಗೆಯ್ದು ತೊತ್ತಳದುಳಿದಿಪ್ಪನುದ್ದಪರಿಯಿಂ ಜವಂ (ಸಮಯ. ೧೫-೯೫). [ಲಗ್ಗ+ಕೆಯ್1]

**ಲಗ್ಗಚೆಂಡು** ' ಲಗ್ಗಸೆಂಡು ' ನೋ.

**ಲಗ್ಗಚೆಂಡು** ' ಲಗ್ಗಸೆಂಡು ' ನೋ.

**ಲಗ್ಗದಂಬಟ** (ನಾ). ಆಕ್ರಮಣದ ಸಮಯದಲ್ಲಿ ಬಾರಿಸುವ ತಮಟೆಗಳ ಸಮೂಹ : ಇಕ್ಕೆಲದ ರಾವುತರ ತೇರಿನ ತೆಕ್ಕೆಗಳ ಗಜಘಟೆಯ ಕಾಲಾಳಕ್ಕಜದ ನಿಸ್ಸಾಳಸೂಳಿನ ಲಗ್ಗದಂಬಟದ (ಕುಮಾ.ಕ. ೬-೨೩) ; ಸಂತಪಿಸಿತಾ ಸೇನೆ ಕುರುಬಲ ಕಂತುಹರನುದ್ಯೋಗವಾಗೆ ನಿರಂತರದ ನಿಸ್ಸಾಳಸೂಳಿನ

ಲಗ್ಗದಂಬಟದ (ಶಬ್ದಾ.ಶ. ೨೧-೦೫). 'ಲಗ್ಗವಟಿ' ಪರಾ.

[ ಲಗ್ಗ + ತಂಬಟ ]

**ಲಗ್ಗದೋಟು** (ಕ್ರಿ). ಗದ್ದಲ ಹೆಚ್ಚು; ಗಲಭೆಯಾಗು : ಅಚ್ಚಂ ಕೊಂಡು ಕವಡೆಯಂ ತೂಗಿಯುನಿತ್ತೆಂದುಟಿ ಕೈಚಳಕಂ ಮಿಗೆ ಚೆಂದಮೆನಲ್ ಲಗ್ಗದೋಟಲಾಡುತ್ತಿರ್ದರ್ (ದಕಮ. ೬-೩೩). [ ಲಗ್ಗ + ತೋಟು ]

**ಲಗ್ಗಮಣೆ** (ನಾ). ೧. ಚೆಂಡನ್ನು ಎಸೆಯುವ ಗುರಿಹಲಗೆ : ಲಗ್ಗಮಣೆ ಚೆಂಡು ತರಲು ಹೊರಟಿದ್ದವನು . . . ಮನೆಯೊಳಗೆ ಓಡಿದನು (ಪುಲಮ. ೨೪೦). ೨. ಗುರಿಹಲಗೆಗೆ ಚೆಂಡನ್ನು ಎಸೆಯುವ ಆಟ : ಬನ್ರೋ ಲಗ್ಗಮಣೆ ಆಡಾನ (ಪುಲಮ. ೨೪೦). [ ಲಗ್ಗ + ಮಣೆ ]

**ಲಗ್ಗವರಿಗೆ** (ನಾ). (ದಾಳಿಗೆ ನುಗ್ಗುವಾಗ) ಆತ್ಮರಕ್ಷಣೆಗಾಗಿ ಬಳಸುವ ಗುರಾಣಿ,-ಢಾಲು : ತಕ್ಕಿವರಿಗೆ ಲಗ್ಗವರಿಗೆಯುಂದೆಯ್ಯುಂದೆಕ್ಕೆಯುಂ ಪಟುಭಟರು ಹೊಕ್ಕು ಹೊಯ್ದಾಡಿ (ಶಂರಾಶಾಂ. ೦೨-೬೭).

[ ಲಗ್ಗ + ವರಿಗೆ ]

**ಲಗ್ಗವಲ್ಲೆ** (ನಾ). = ಲಗ್ಗಮಣೆ ೧ : ಬಳೆಯಾಡುವ ಚೆಂಡು ಲಗ್ಗವಲ್ಲೆಗಳ ತಂದಿಳುಪಲುಳಿಗದ ಬೋಳಕರು (ಶಂರಾಶಾಂ. ೩೦-೬೭).

[ ಲಗ್ಗ + ವಲ್ಲೆ$_2$ ]

**ಲಗ್ಗವಟಿ** (ನಾ). = ಲಗ್ಗದಂಬಟ : ಅನೇಕದುರ್ಗಸಾಧನಪರಿಕರಂ ಗಳ್ವೆರಸು ನಡೆದು ಘೋರ್ಗರವ ಲಗ್ಗವಟಿಗಳ್ ಮೊಟಗೆ ಸುತ್ತಿ ಮುತ್ತಿ (ಶಗಂ. ೭-೯೬ ವ); ಲಗ್ಗವಟಿಗಳಿಗಮವು ಮ್ರೌನದ ಸುಗ್ಗಿಯಾಯಿತು (ಶಬ್ದಾಂಶ. ೬-೩೩); ಲಗ್ಗವಟಿ ಮೊಳಗಿದವು ನಿಜಬಲದೊಳು (ಕೃಶಾಶಾ. ೦೩-೯೩). [ ಲಗ್ಗ + ವಟಿ$_1$ ]

**ಲಗ್ಗವಿಡಿ** (ಕ್ರಿ). ಮುತ್ತಿಗೆ ಹಾಕು ; ಆಕ್ರಮಣ ಮಾಡು : ಗೊಂಡ ದುರ್ಗಕ್ಕೆ ಬೆಚ್ಚರದಿಂ ಮುತ್ತಿ ಪೊದಲ್ದು ಲಗ್ಗವಿಡಿದಾತ್ಮಾಧೀನಮಂ ಮಾಡಿ (ಶ್ರೀಮಚಾ. ೨-೩೯). [ ಲಗ್ಗ + ಪಿಡಿ$_1$ ]

**ಲಗ್ಗಸೂಳು** (ನಾ). ಅನೇಕ ವಾದ್ಯಗಳ ಜೋರಾದ ಧ್ವನಿ : ನಡುಗಿತ ವನಿಯುಪಾಂಡವಿರ್ವರವೊಡೆಯಲವನಿಯು ಲಗ್ಗಸೂಳಿನ ಹೊಡೆಗುಂಳಿನೊಲ್ಪು ರಿಪುವು ನಿಸ್ಸಾಳಕೋಟಿಗಳು (ಶಬ್ದಾಶಾ. ೦೦-೩೯).

[ ಲಗ್ಗ + ಸೂಳ್$_3$ ( < ಸೂಳ್$_2$ ) ]

**ಲಗ್ಗಸೆಂಡು**, ಲಗ್ಗಚಂಡು, ಲಗ್ಗಚೆಂಡು (ನಾ). ೧. ಗುರಿಹಲಗೆಗೆ ಚೆಂಡನ್ನು ಎಸೆದು ಆಡುವ ಆಟ : ಬಡದ ಶಿವದ್ರೋಹಿಗಳಂ ಪಡಲಿಡುವೊಡ ತಾಳ್ದ ಲಗ್ಗಸೆಂಡಂಬಸೆಗಂ ನಿಡುಗಣ್ಣ ಗಾಡಿಕಾರ್ತಿಯ ಮಡಮಾಪು ವೃತ್ತತೆಯನೊಪ್ಪ ಕನ್ನೊಗೆಸಿರ್ಕಂ (ಶೀಕಂ. ೯-೯). **ಲಗ್ಗಚಂಡು** : ೧. ಲಗ್ಗಚಂಡನು ಬುಗುರಿ ಗುಡುಗಾಲಂಕಿ ಘನ ಜೂಜಂಗಳಾಡೆ (ಶಾರಂಗ. ೩) ; ಜತಿಜನರ ಕಲ್ಲೆರ್ದೆಯ ಲಗ್ಗಗಳನೂ . . . ಚರ್ಗ್ಯಯದಲ್ಲದೆ ಬಿಜಮಬು ಮಾಳ್ಕೆಯಿಂ ಲಗ್ಗಚಂಡಾಡುತಿರ್ದರು ಪಂಥದಿ (ಶವಮೋ. ೦೭-೩೭). **ಲಗ್ಗಚೆಂಡು** : ೨. ಗುರಿಹಲಗೆಗೆ ಎಸೆದು ಆಡುವ ಚೆಂಡು : ನೀವೆಲ್ಲಾ ಕಣಕ್ಕೆ ಹೋಗ್ರೋ, ನಾ ಲಗ್ಗಚೆಂಡು, ಮಣೆ ಹುಡುಕಿ ತರ್ತೀನಿ (ಪುಲಮ. ೨೪೦). [ ಲಗ್ಗ + ಸೆಂಡು ]

**ಲಗ್ನ** (ಗು). ೧. ಸೇರಿದ; ಕೂಡಿದ : ತತ್ಕಮಳಾನನಕಂಟಕಲಗ್ನವಾದ ನಾದವೊಲುಡುಗುತ್ತುಮಾತ್ಮಕರಮಂ ರವಿ ಪೂರ್ದಿದನಸ್ತಶೈಲಮಂ (ಶಂಕರಾ. ೯-೯೭). ೨. ಅಂಟಿದ ; ನಾಟಿದ. ೩. ಸಂಬಂಧಿಸಿದ ; ಹೊಂದಿಕೊಂಡ. ೪. ನಾಚಿಕೆಗೊಂಡ. ೫. ಬಳಸಿದ; ಉಪಯೋಗಿಸಿದ. ೬. ಮಂಗಳಕರವಾದ; ಪ್ರಶಸ್ತವಾದ. ೭. ಆಸಕ್ತಿಯುಳ್ಳ; ತತ್ಪರವಾದ. (ನಾ). ೮. ಮುಹೂರ್ತ; ನಿಶ್ಚಿತವಾದ ಕಾಲ : ಸಾವ ಲಗ್ನವು ಸನಿಯ ಬಂದುದು (ಶಿಶಿರಾ. ೨೩-೯೩). ೯. ಶುಭಕೆಲಸವನ್ನು ಮಾಡಲು ಮಂಗಳಕರವೆಂದು ಗೊತ್ತುಪಡಿಸುವ ಗಳಿಗೆ; ಶುಭವುಹೂರ್ತ : ಸೈಪುತ್ತಿಕನಂ ಬರಿಸಿ ತದಾತನಮುಮುತ್ತಂತ ನೂತನಮುಮುವೃದೋದು ಲಗ್ನಮಂ ಪೇಟುಮೆಂಬುದಂ (ಶಾಂತಿಕು. ೩-೩೩೪); ಲಗ್ನವೆಲ್ಲಿಯದೊ ವಿಘ್ನವೆಲ್ಲಿಯದೊ ಸಂಗಯ್ಯಾ (ಬಸವ. ೬೭೦). ೧೦. ಮದುವೆ; ವಿವಾಹ : ಸುರರ ಸೇನಾಧಿಪ ಕಾಣಾದರು ಗುಹನಿಗೆ ಲಗ್ನವಾಗಿಲ್ಲವಾಹ ! (ಶಂಕಾಕ. ೦೩೦-೩೯); ನಿಮ್ಮ ಲಗ್ನ ಆಗೇದೇನು (ಅಜಾ. ೨೪). ೧೧. ಮದಿಸಿದ ಆನೆ ; ಮದಗಜ: "ಲಗ್ನಃ. ಪ್ರಭಿನ್ನಃ. ಮತ್ತಃ – ಈ ೩ ಮದದಾನೆ" (ಶಲಾಯು. ೩೭-೭೭); "ಲಗ್ನಂ ಪ್ರಭಿನ್ನಂ ಮತ್ತಮೆನೆ ಮದಗಜಂ" (ಶಂಗಣ. ೯೩-೩). ೧೨. ರಾಜನನ್ನು ನಿದ್ದೆಯಿಂದೆಬ್ಬಿಸುವ ಸ್ತೋತ್ರಪಾಠಕ,– ಸ್ವಸ್ತಿವಾಚಕ. ೧೩. [ಜ್ಯೋತಿ] ಒಂದು ದಿನದ ಹನ್ನೆರಡನೆಯ ಒಂದು ಭಾಗ. ೧೪. ಸೂರ್ಯ ಅಥವಾ ಗ್ರಹಗಳ ಉದಯ. ೧೫. ಸೂರ್ಯನು ಯಾವುದೇ ರಾಶಿಯನ್ನು ಪ್ರವೇಶಿಸುವ ಕಾಲ,– ಸಮಯ: ಮೇಷವೇ ಮೊದಲಾದ ರಾಶಿಯ ಉದಯ: "ಪರಿವಿಡಿದು ಮೇಷಾದಿಗಳು ಲಗ್ನಮೆನಿಕುಂ" (ಶಂಗಣ. ೨೦-೩) ; "ಯಾವ ಕಾಲದಲ್ಲಿ ಯಾವ ರಾಶಿ ಉದಿಸುತ್ತೋ ಆಗ ಅದು ಲಗ್ನವಹುದು" (ಸಿದ್ಧಾಂತಿ. ೩೨). ಕನಕನಿಕರ ಲಗ್ನದೊಳ್ ಕ್ಷತತನು (ಶಾಶತಿ. ೦೮-೯). ೧೬. ಹನ್ನೆರಡು ರಾಶಿಗಳ ಆಕೃತಿ,–ಆಕಾರ.

**ಲಗ್ನವಾಗು** = ಮದುವೆಯಾಗು ; ವಿವಾಹವಾಗು : ಭಾರತೀಯ ವಿದ್ಯಾರ್ಥಿಗಳು ಆಂಗ್ಲಕನ್ನೆಯರನ್ನು ಏಕೆ ಲಗ್ನವಾಗುತ್ತಾರೆ ? (ಸವಃಶೀ. ೯೦೦). [ಸಂ].

**ಲಗ್ನಂಬಡೆ** (ಕ್ರಿ). ಮಗ್ನವಾಗು; ಆಸಕ್ತವಾಗು: ರಾರಾಜಿಪ ಲೋಚನಕ್ಕಿರವ ದೊಳು ಕೂರುಗುರ್ಗೆದಗೆಯೆಸಳೊಳು ನೃಪತಿಯ ಚಾರುನಯನಮತಿಲಗ್ನಂ ಬಡೆದುವು ಬಂಡುಣಿವಳಿಯಂತೆ (ಶಮಳ. ೩-೦೩). [ಲಗ್ನ + ಪಡೆ$_1$]

**ಲಗ್ನಕ** (ನಾ). ಹೊಣೆಗಾರ; ಜಾಮೀನಾದವನು : "ಪ್ರತಿಭೂಃ, ಲಗ್ನಕಃ – ಈ ೨ ಹೊಣೆ(ಗಾರು)" (ಶಲಾಯು. ೬೨-೨೨೩); "ಲಗ್ನಕಃ, ಪ್ರತಿಭೂಃ – ೨ ಹೊಣೆಗಾರ, ಜಾಮೀನ್‌ದಾರ" (ಸಿದ್ಧಾಂತಿ. ೩೦೪). [ಸಂ.]

**ಲಗ್ನಕಾಲ** (ನಾ). ಶುಭಕಾರ್ಯಗಳನ್ನು ನೆರವೇರಿಸಲು ಒಳ್ಳೆಯದೆಂದು ನಿಶ್ಚಯ ಮಾಡಿದ ಸಮಯ ; ಶುಭಮುಹೂರ್ತ: ಲಗ್ನಕಾಲಕ್ಕೆ ವಿಘ್ನ ಮಾಡಬಾರದು (ಗಾದೆ). [ಸಂ].

**ಲಗ್ನಪತ್ರಿಕೆ** (ನಾ). ೧. ಮದುವೆ, ಮುಂಜಿ ಮುಂತಾದ ಶುಭಕಾರ್ಯಗಳಿಗೆ ಆಮಂತ್ರಿಸುವ ಪತ್ರ,–ಆಹ್ವಾನಪತ್ರಿಕೆ,– ಕರೆಯೋಲೆ : ನೆಂಟರಿಗೆಲ್ಲ ಲಗ್ನಪತ್ರಿಕೆಗಳನ್ನು ಕಳುಹಿಸಿಬಿಡಿ (ಶಶಿ. ೯೯); ಕವರು ಬಿಚ್ಚಿ ನೋಡಿದೆ ; ಲಗ್ನಪತ್ರಿಕೆ (ರಾಪೂಶ. ೬೯). ೨. ಮದುವೆಯ ದಿನ, ಮುಹೂರ್ತಗಳನ್ನು ನಿಶ್ಚಯಿಸಿ ಕರೆಯೋಲೆಯನ್ನು ಸಿದ್ಧಪಡಿಸುವ ಸಮಾರಂಭ; ನಿಶ್ಚಿತಾರ್ಥ: ಅವರ ಮನೆಯಲ್ಲಿ ಈವೊತ್ತು ಲಗ್ನಪತ್ರಿಕೆ (ರೂಢಿ). [ಸಂ. ಲಗ್ನಪತ್ರಿಕಾ]

**ಲಗ್ನಾಧಿಪತಿ** (ನಾ). ೧. [ಜ್ಯೋತಿ] ಆಯಾ ರಾಶಿಗೆ ಮುಖ್ಯಸ್ಥಾನದಲ್ಲಿರುವ ಗ್ರಹ; ಉದಾಹರಣೆಗೆ—ಕನ್ಯಾರಾಶಿಗೆ ಬುಧ, ಧನೂರಾಶಿಗೆ ಗುರು ಲಗ್ನಾಧಿಪತಿಗಳು. ೨. ಎಲ್ಲರ ಮದುವೆಯನ್ನು ನಿಷ್ಕರ್ಷೆ ಮಾಡುವ ಅಧಿಕಾರಿ; ಬ್ರಹ್ಮ : ಈ ಮೊದಲು ಲಗ್ನಾಧಿಪತಿಯಾದ ಬ್ರಹ್ಮನು ಎಂದೂ ನನ್ನ ಲಲಾಟಪಟ್ಟದಲ್ಲಿ ಬಂದು ಕುಳಿತಿರದಿದ್ದರೂ ಒಮ್ಮೆ ನನ್ನ ಮಾನಸಪದ್ಮದಲ್ಲಿ ಕುಳಿತಿದ್ದನು (ಚಿತ್ತಶ. ೯೩೯). [ಸಂ].

**ಲಗ್ನಾಹ** (ನಾ). ಮದುವೆ, ಮುಂಜಿ ಮುಂತಾದ ಶುಭಕಾರ್ಯಗಳನ್ನು ಮಾಡಲು ಗೊತ್ತುಪಡಿಸಿದ ದಿನ,–ದಿವಸ: ಉದ್ವಾಹಲಗ್ನಾಹಮುಂ ಭೋಂಕೆನೆ ಸಾರ್ತಂದಿರ್ದುದೇನುಂ ತಡೆದಿರಲೆಡೆಯುಲ್ಲ (ಶಂರ್ರಶಿ. ೬-೯೩).

[ಸಂ.]

**ಲಗ್ನಿಗ** (ನಾ). ಮದುವೆ, ಮುಂಜಿ ಮೊದಲಾದ ಶುಭಕಾರ್ಯಗಳಿಗೆ ಮುಹೂರ್ತವನ್ನು ನಿಶ್ಚಯಿಸಿ ಹೇಳುವವನು ; ಜ್ಯೋತಿಷಿ : ಸಮಯದ ವಿವರವಱಿದು ಲಗ್ನಿಗರು ನವಕಾಂಚನಘಟದೊಳು ಘಟಿಕಾಪಾತ್ರ ವನಿರಿಸಿದರೊಲವಿಂದ (ತ್ರಿಪುರಾ. ೧೧-೩೨). [ಲಗ್ನ + – ಇಗ]

**ಲಗ್ನಿಸು** (ಕ್ರಿ). ಸಂಬಂಧಿಸು; ಸೇರು; ಬೆರೆ; ಲೀನವಾಗು: ಭಗ್ನದುರಾತ್ಮಗೆ ಸುಪ್ರಭೆ ಸುಜ್ಞಾನ ಲಗ್ನಿಸಲೆರಡೊಂದೆ ರೂಪು (ಭರತ. ೬೬-೮೬).
[ಲಗ್ನ + – ಇಸು₃]

**ಲಘಾಟ** ' ಲಗಾಟ ' ನೋ.

**ಲಘಿಮ** (ನಾ). ೧. ಹಗುರವಾಗಿರುವಿಕೆ; ಲಘುವಾಗಿರುವಿಕೆ; ಭಾರವಿಲ್ಲದಿರುವಿಕೆ. ೨. ಸಣ್ಣತನ ; ಅಲ್ಪತೆ. ೩. ಕೀಳುತನ ; ಕ್ಷುದ್ರತೆ. ೪. ವಿಚಾರಹೀನತೆ ; ಗಾಂಭೀರ್ಯವಿಲ್ಲದಿರುವಿಕೆ ೫. ವಿಚಾರಶೂನ್ಯನಾದವನು ; ಅವಿವೇಕಿ : ಕಾಮಿನೀವಶನಾದ ನಾವನಾಗಲಿ ಮನೋಭ್ರಾಮಕತ್ವದಿ ತೊಳಲಿ ಲಘಿಮನಪ್ಪಂತೆ (ವಿಂಶಾರಾ. ೨-೬-೩೪). ೬. [ಯೋಗ] ಅಷ್ಟಸಿದ್ಧಿಗಳಲ್ಲಿ ಒಂದು ; ಇಚ್ಛಿಸಿದಾಗ ದೇಹವನ್ನು ಅತ್ಯಂತ ಹಗುರವಾಗಿಸಿಕೊಳ್ಳಬಲ್ಲ ಶಕ್ತಿ : ಅಣಿಮವೆಂಬುದದು ತಾನೊಂದು . . . ಮತ್ತೆ ಅರಿ ಲಘಿಮಾವ್ರುದುವೆ ನಾಲುಕು (ಜ್ಞಾನಸಿಂ. ೨೦-೪೨) ; ಇಂಥಾ ದೃಢಭಕ್ತಿಯಿಂದ ಅಣಿಮ, ಮಹಿಮ, ಲಘಿಮ, ಗರಿಮ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವಗಳೆಂಬ ಅಷ್ಟೈಶ್ವರ್ಯಂಗಳನ್ನು ಹೊಂದಿದರು (ಪುರಾಶ. ೧೩೨).
[ಸಂ. ಲಘಿಮನ್]

**ಲಘಿಮೆ** (ನಾ). ೧. = ಲಘಿಮ ೧. ೨. ಸಣ್ಣದಾಗಿರುವಿಕೆ; ಚಿಕ್ಕದಾಗಿರುವಿಕೆ. ೩. ಕೀಳುತನ; ಅಲ್ಪತೆ. ೪. ವಿಚಾರಹೀನತೆ. ೫. = ಲಘಿಮ ೬ : " ಅಣಿಮೆ ಲಘಿಮೆಗಳೆನಲ್ಕಷ್ಟಸಿದ್ಧಿಗಳಕ್ಕು " (ಮಂಗರಾ. ೧೩೪-೩೩) ; ಅಣಿಮಾ ಗರಿಮಾ ಮಹಿಮಾ ಲಘಿಮಾ ಪ್ರಾಪ್ತಿ ಪ್ರಾಕಾಮ್ಯ ಈಶತ್ವ ವಶಿತ್ವಮೆಂಬಷ್ಟಗುಣ ಮಣಿಭೂಷಿತನುಮಾಗಿ (ಕ್ರಾವಣ. ೧೧೯) ; ಮಹಾಮೇರುಪರ್ವತಕ್ಕೆ ಸಮಾನವಾದ ಶರೀರಮುಳ್ಳಾತನಂ ಮೇಲಕ್ಕೆ ನೆಗಹುವ ಕೃತ್ಯದಲ್ಲಿ ಪರಮಾಣುವಿಗೆ ಸದೃಶವಹುದೇ ಲಘಿಮೆ (ಶಿವೇಶ. ೨೯೦).
[ಸಂ. ಲಘಿಮನ್]

**ಲಘಿಷ್ಠ** (ಗು). ೧. ಬಹಳ ಹಗುರವಾದ. ೨. ಎಲ್ಲಕ್ಕಿಂತ ಸಣ್ಣದಾದ; ಕನಿಷ್ಠಗಾತ್ರದ. ೩. ಅತ್ಯಂತ ವೇಗವುಳ್ಳ ; ಚುರುಕಾದ. [ಸಂ.]

**ಲಘು** (ಗು). ೧. ಹಗುರವಾದ ; ಭಾರವಿಲ್ಲದ : ತೂಕವಿಲ್ಲದ. ೨. ಸುಲಭವಾದ ; ಸರಳವಾದ. ೩. ಸಣ್ಣದಾಗಿರುವ : ಚಿಕ್ಕದಾದ. ೪. ದೀರ್ಘವಲ್ಲದ ; ಹ್ರಸ್ವವಾದ ೫. ಅಲ್ಪವಾದ ; ತುಚ್ಛವಾದ : ಅತೀವಜಘನ್ಯಶರೀರಮಂ ಕೈಕೊಂಡು ಪುಟ್ಟಿ ಮತ್ತಮಾ ಯೆಡೆಯೊಳ್ ಪಲವುಂ ಸೂಟಿರ್ ಲಘುಜನ್ಮಾವಗಾಹದಿಂ ಪುಟ್ಟಿ ಸತ್ತು (ಸುಕುಮಾ. ೬-೬ ವ). ೬. ದುರ್ಬಲವಾದ ; ಬಲಹೀನವಾದ. ೭. ಸತ್ತ್ವರಹಿತವಾದ ; ನಿಸ್ಸಾರವಾದ. ೮. ಮನೋಹರವಾದ ; ಸುಂದರವಾದ. ೯. ಮೃದುವಾದ ; ನಯವಾದ. ೧೦. ವೇಗವಾದ ; ಶೀಘ್ರವಾದ : ಲಘುಲಕ್ಷಸುಟಿಯೊಳೊದಗಿ ಪೊಕ್ಕು ಪೊಡದಿಱಿದೊಗೆದು ಸಂಗ್ರಾಮಮುಖದೊಳು ಬಗೆಗುಂದಿಸುವನು ಶತ್ರುಗಳ ಭೈರವರಾಜ ನಿಗದಾವನಾಂಪ (ಭೈರವೇ. ೩-೧೦). (ನಾ). ೧೧. ಮುಖ್ಯವಲ್ಲದುದು ; ಕ್ಷುಲ್ಲಕವಾದುದು ; ತುಚ್ಛವಾದುದು : ಅಧಿಕಸತ್ವಗುಣೈಕಾಗ್ರಣಿಗಾ ನೃಪಂಗೆ ಮನದೊಳ್ ತೃಣವಲ್ಲಘುವಾದುದಾವಗಂ ಸ್ತ್ರೈಣಸುಖಂ (ಕಾದಂಪೂ. ೧೯) ; ಗುರುವ ಲಘುವನು ಉತ್ತಮಾಧಮವೆರಡ ಸರಿಗಾಂಬವರ ಮಧ್ಯದಿ ಪಿರಿಯನೇಗುವ ಹೇಮ ಗುಂಜೆಗೆ ಸರಿಯೆನಿಪ್ಪಂತೆ (ಕೌಶರಾ. ೨೩-೧೧) ; ಲಘುವೆಣಿಸಿ ಗುರುವಾಯ್ತಲಾ ! (ತ್ರಿಪುರಾಮಾ. ೨೯೪-೩೭೦). ೧೨. ದೀರ್ಘವಲ್ಲದುದು ; ಸಂಕ್ಷಿಪ್ತವಾದುದು ; ಹ್ರಸ್ವವಾದುದು : ಮಾತುಗಳು ಯಾವತ್ತೂ ತೀರ ಲಘುವಾಗಿ ಇರಲಿ (ರೂಪಸಂ. ೨೨). ೧೩. ವೇಗ ; ಶೀಘ್ರತೆ : " ಲಘು ಶೀಘ್ರಂ " (ವಸ್ತುಕೋ. ೦೦೩-೦೩). ೧೪. ಗಾಳಿಯ ನಡೆ ; ವಾಯುವಿನ ವೇಗ. ೧೫. ನಿಸ್ಸಾರವಾದುದು. ೧೬. ದೀನತೆ ; ದೈನ್ಯ. ೧೭. ಸುಂದರವಾದುದು. ೧೮. ಒಂದು ಬಗೆಯ ಸುಗಂಧದ್ರವ್ಯ ; ಅಗುರು : "ಕರ ಶೀಘ್ರದಲಿ ಮನೋಜ್ಞ ನಿಸ್ಸಾರದಲಿ ಮರುತಗತಿಯಲಿ ಅಗರಿನಲಿ ಲಘುವೆನಿಕ್ಕು" (ಮಂಗರಾ. ೦೩೯-೬೯) : "ವಾಯುಚಾರಂ ದೈನ್ಯಂ ನಿಸ್ಸಾರಮುಂ ಶೀಘ್ರಮುಮಗುರು ಮನೋಜ್ಞಂ ಲಘೂವಾಕ್ಯಮಕ್ಕುಂ" (ನಾನಾರ. ೦೪೬). ೧೯. ಕೈಚಳಕ ; ಲಾಘವ : ' ಲಘುದೋರು ' ಪರಾ. ೨೦. ಗದಾಯುದ್ಧದ ಒಂದು ವರಸೆ. – ಪಟ್ಟು : ಬವರಿ ಮತ್ಸ್ಯೋದ್ಗತಿ ವಿಲಂಘನ . . . ವವಿದ್ರಾವಣ ಲಘುವಿನ್ಯಸ್ತವೆಂಬೀ ವಿವರದಲಿ ಕಾದಿದರು ಕೌತುಕವೆನಲು ಸುರನಿಕರ (ಕುಮಾ ಗ. ೬-೨೩). ೨೧. ಆರೋಗ್ಯ ; ಸ್ವಾಸ್ಥ್ಯ : ಬರಿದೆ ದೇಹಕ್ಕೆ ಲಘುವಿಲ್ಲವೆಂದು ಮೂರು ನಾಲ್ಕುದಿನ ಹೋಗದೆ ಇದ್ದು (ಶಿಶ್ರೀಶ. ೦೨೨). ೨೨. ಲಾಮಂಚ ; " ಕರೇಬಾಳದ ಬೇರು " (ಸೂಗಾಮ. ೨೬೬). ೨೩. [ಛಂದ] ಒಂದು ಮಾತ್ರೆಯ ಅವಧಿಯಲ್ಲಿ ಉಚ್ಚರಿಸುವ ಅಕ್ಷರ ; ಹ್ರಸ್ವಾಕ್ಷರ : ಬರೆದಯ್ದಱ ಲೆಕ್ಕಮನಾಪರದಿಂ ಗುರುಲಘುವಿಭೇದಮಂ ಭಾವಿಸು ನೀಂ ಗುರು ಮುಂತೆ ಕೊಂಕೆ ತೋಱುವ ಬರೆ ಹಿಂತಣ ಸೈತನಪ್ಪ ಬರೆ ಲಘು ಕೆಳದ (ಛಂದೋಂಬು. ೧-೩೩) ; ಮೊದಲು ಕೊನೆಗಳಲ್ಲಿ ಲಘುವೂ ಮಧ್ಯದಲ್ಲಿ ಗುರುವೂ ಇದ್ದರೆ ಜಗಣವೆಂದು ಸಮ್ಮತಿಸಿದೆ (ಶಕುಸ್ತ್ರ. ೭೩). ೨೪. [ಸಂಗೀತ] ತಾಳದ ಆರು ಅಂಗಗಳಲ್ಲಿ ಒಂದು : ಪಂಚಸ್ಥಳದಲಿ ಲಘುವಿಡಿದೊಮ್ಮೆ . . . ಪಂಪನಾಟಕಭೇದವ ವಾಚಿಸುತ್ತ (ಭೀಕಾಂಡ. ೩-೦೯೪-೫) ; ಝೊಂಪಟತಾಲದಲ್ಲಿ ಎರಡೆರಡು ಅಕ್ಷರ(ಕಾಲ)ಗಳ ಎರಡು ದ್ರುತಗಳೂ ನಂತರ ನಾಲ್ಕಕ್ಷರಪ್ರಮಾಣದ ಒಂದು ಲಘುವೂ ಇವೆಯೆಂದು ತಿಳಿಯಬೇಕು (ಶಕುಸ್ತ್ರ. ೨೮). 'ಷಡಂಗ' ಪರಾ. ೨೫. [ನಾಟ್ಯ] ನೃತ್ಯದ ಒಳಭೇದಗಳಲ್ಲಿ ಒಂದು ; ವಿಷಮ, ವಿಕಟ, ಲಘುವೆಂಬ ಮೂರು ನೃತ್ತಗಳಲ್ಲಿ ಒಂದು : " ಅಂಚಿತ ಮೊದಲಾದ ಅಲ್ಪ ಕರಣಗಳನ್ನು ಮಾಡುವುದು ಲಘುನೃತ್ತವು" (ಶಾಸ್ತ್ರಕಂ. ೨೦೯ ಗದ್ಯಭಾವ) : ಒಡವಿದ ನೃತ್ತಂ ತ್ರಿವಿಧಾಖ್ಯದೆ ರಂಜಿಪುದೆಯ್ದೆ ವಿಷಮ ವಿಕಟಂ ಲಘುವೆಂದುದಯಿಪುದು . . . ಅಂಚಿತ ಮೊದಲಾಗಿರುವಲ್ಪಕರಣಮಂ ಕೀಳ್ ವಿರಚಿಸುವುದು ಲಘುವೆನಿಪ್ಪ ಪೆಸರಂ ಪಡೆಗುಂ (ಶಾಸ್ತ್ರರಂ. ೦-೬೬). ೨೬. [ಜೈನ] ಎಂಟು ಬಗೆಯ ಸ್ಪರ್ಶನಾಮಕರ್ಮಗಳಲ್ಲಿ ಒಂದು : ಸ್ಪರ್ಶನಾಮಕರ್ಮಮಷ್ಟವಿಧಮಕ್ಕುಂ ಕರ್ಕಶಮೃದುಗುರುಲಘುರೂಕ್ಷ ಸ್ನಿಗ್ಧಶೀತೋಷ್ಣ ಸ್ಪರ್ಶನಾಮಕರ್ಮಮೆಂದಿಂತು (ಗೊಮ್ಮಟಸಾ. ೪-೧೧). ' ನಾಮಕರ್ಮಪ್ರಕೃತಿ ' ಪರಾ.

ಲಘುವಾಗು = ಗೌರವವನ್ನು ಕಳೆದುಕೊಳ್ಳು ; ಅಲ್ಪವಾಗು : ಎನ್ನವರಂ ಲಘುವಾಗದಿರ್ಪೆನೋ ಅನ್ನೆಗಮಿಾಗಳೀಯೆಡೆಯನಾಂ ತೊಲಗಿ ಪೋದು ಕಜ್ಜಂ (ಶಾಂತಿಪು. ೭೫೨). [ಸಂ.]

**ಲಘುಕರಿ** (ನಾ). [ಜೈನ] ಒಂದು ವಿದ್ಯೆಯ ಹೆಸರು : ಪ್ರಜ್ಞಪ್ತಿ . . . ಪರ್ಣಲಘು ಲಘುಕರಿ . . . ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದ (ಶಾಪುಂಕ. ೦೯೬).
[ಸಂ.]

**ಲಘುಕಾವ್ಯ** (ನಾ). ಸಣ್ಣಕಾವ್ಯ ; ಖಂಡಕಾವ್ಯ : ಕಬ್ಬಿಗರ ಕಾವವೇನೂ ಒಂದು ಮಹಾಕಾವ್ಯವಲ್ಲ. ಅದೊಂದು ಲಘುಕಾವ್ಯ (ಕಾಚಿಸ. ೦೦೩).
[ಸಂ.]

F-73

**ಲಘುಕೃತಿ** (ನಾ). ಸಣ್ಣಗ್ರಂಥ : ಕವಿಗಳು . . . ದೀರ್ಘಪುರಾಣಗಳ ಬದಲಾಗಿ ಲಘುಕೃತಿಗಳನ್ನು ರಚಿಸುವರೆಂದೂ . . . ಸೂಚಿಸಿದ್ದ ಲಕ್ಷಣಗಳಿಗೆ ಈ ಪದ್ಯಪುಸ್ತಕವು ಲಕ್ಷ್ಯವಾಗಿದೆ (ಕಪು. ೩೬೦೯). [ಸಂ.]

**ಲಘುಗೀತ** (ನಾ). ಶಾಸ್ತ್ರೀಯಂವಾದ ರಾಗ, ತಾಳಗಳಿಂದ ಭಿನ್ನವಾದ ಹಾಡು : ನವೀನಸಮಾಸಗಳು ಲಘುಗೀತಗಳಂತೆ ಸುಂದರವಾಗಿವೆ (ಪದ್ಯಶಾ. ೨೮). [ಸಂ.]

**ಲಘುಟಿಪ್ಪಣಿ** (ನಾ). ಚಿಕ್ಕವಿವರಣೆ ; ಸಣ್ಣಟೀಕೆ : ಮನಸ್ಸಿನ ವಿಷಯವಾಗಿ ಶಾಕ್ತದೃಷ್ಟಿಯನ್ನು ಕುರಿತ ಒಂದು ಲಘುಟಿಪ್ಪಣಿ ಇಲ್ಲಿ ಅಪ್ರಸಕ್ತವಾಗುವುದಿಲ್ಲ (ಶಕ್ತಿಶಾ. ೯೯೩). [ಸಂ. ಲಘುಟಿಪ್ಪಣೀ]

**ಲಘುತೆ** (ನಾ). ೧. ಭಾರವಿಲ್ಲದಿರುವಿಕೆ ; ಹಗುರವಾಗಿರುವಿಕೆ : "ಲಾಘವಮದು ಲಘುತೆ" (ಪಸ್ತುಕೋ. ೦೦೫-೨೯). ೨. ಚಟುವಟಿಕೆ ; ಪಟುತ್ವ : ಕೃಷ್ಣ ಸಾಹಿತ್ಯಪ್ರೇಮಿಯಲ್ಲ ; ವಿಹಾರಪ್ರೇಮಿ. ಜೀವನದ ಲಘುತೆ ಅವನಲ್ಲಿ ತುಂಬಿ ಚೆಲ್ಲುವಷ್ಟಿದೆ (ವೊಕವು. ೨೭). ೩. ದೀರ್ಘವಲ್ಲದುದು : ಸಂಕ್ಷಿಪ್ತವಾದುದು. [ಸಂ. ಲಘುತಾ]

**ಲಘುತ್ವ** (ನಾ). ೧. ಹಗುರವಾಗಿರುವಿಕೆ : ಭಾರವಿಲ್ಲದಿರುವಿಕೆ : ರೂಪ . . . ದ್ರವತ್ವ, ಲಘುತ್ವ, ಮೃದುತ್ವ, ಕಠಿನತ್ವ . . . ಸೌಭಾಗ್ಯಮೆಂದು, ಸಾಮಾನ್ಯವಾಗಿ ನಱವತ್ತುವಿಧ ಗುಣಗಳು (ಹಿಂದಶಾ. ೨೭೫). ೨. ಸಣ್ಣದಾಗಿರುವಿಕೆ. ೩. ಕೀಳುತನ ; ಕ್ಷುದ್ರತನ. ೪. ಹುಡುಗಾಟ ; ಗಂಭೀರರಾಹಿತ್ಯ. ೫. ವೇಗ ; ಶೀಘ್ರತೆ. ೬. ಅಗೌರವ ; ಅವಮರ್ಯಾದೆ. ೭. ಅನುಕೂಲ ; ಸೌಲಭ್ಯ. [ಸಂ.]

**ಲಘುದೋರು** (ಕ್ರಿ). ಕೈಚಳಕವನ್ನು ತೋರು ; ಲಾಘವವನ್ನು ತೋರು : ಸೆಣಸಿ ಮುಂಬರಿದು ಲಘುದೋರಿ ತಪ್ಪಿಸುತ (ಪಪಮೋ. ೨೯-೩೮). [ಲಘು + ತೋರು ( < ತೋಱು ) ]

**ಲಘುದೋಷ** (ನಾ). [ಛಂದ] ಗುರುವಿರಬೇಕಾದ ಕಡೆಯಲ್ಲಿ ಲಘುವನ್ನಿಡುವುದರಿಂದಾಗುವ ದೋಷ : ಕವೀಶರಾರ್ಪಂತು ಪಿಂಗಿಸುಗೆ ಕಾವ್ಯದಿನಾ ಲಘುದೋಷಮಂ (ಕಎಶಾ. ೦-೦೨೯). [ಸಂ.]

**ಲಘುನೃತ್ತ** (ನಾ). = ಲಘು ೨೫ : ಅಂಚಿತ ಮೊದಲಾದ ಅಲ್ಪಕರಣಗಳನ್ನು ಮಾಡುವುದು ಲಘುನೃತ್ತವು (ಅಸ್ಕರಂ. ೨೦೯ ಗದ್ಯಾನುವಾದ). [ಸಂ.]

**ಲಘುಪಾಳಿ** (ನಾ). ವೇಗದ ಕ್ರಮ ; ಶೀಘ್ರವಿಧಾನ : ಕಲಿತರು ನಿಮ್ಮ ಪೂರ್ವನೃಪಾಲಕರು ಸರಹಸ್ಯಸಾಂಗೋಪಾಂಗವಿದ್ಯೆಗಳ ಸ್ಥೂಲದಲಿ ಸೂಕ್ಷ್ಮದಲಿ ಬಹಳವಿಶಾಲದಲಿ ಸಂಕೋಚದಲಿ ಲಘುಪಾಳಿಯಲಿ ಹಾರದಲಿ ವಿವಿಧಾನುಪ್ರಯೋಗದಲಿ (ಕುವ್ಯಾಶ. ೭-೦). [ಲಘು + ಪಾಳಿ$_3$ (< ಪಾಱು$_3$)]

**ಲಘುಪುಟ** (ನಾ). ಸ್ವಲ್ಪಮಾತ್ರ ಬೇಯಿಸುವುದು : ಹೆಮ್ಮರದ ತೊಕ್ಕನ್ನು . . . ಇಡಿದು ಮುದ್ದೆಯ ಮಾಡಿ . . . ಲಘುಪುಟವಿಟ್ಟು ಬೆವರಿಸಿ ತೆಗೆದು (ಶಿವತ. ೩೦೦). [ಸಂ.]

**ಲಘುಪ್ರಹಸನ** (ನಾ). ದೀರ್ಘವಲ್ಲದ ನಗೆನಾಟಕ; ಸಣ್ಣ ಪ್ರಹಸನ : ಫ್ರೆಂಚ್‌ನಾಟಕಮಂದಿರದಲ್ಲಿ ಲಘುಪ್ರಹಸನಗಳನ್ನು ನೋಡಿ ಬಂದು . . . ಪ್ರೋತ್ಸಾಹ ನೀಡುತ್ತಿದ್ದರು (ಕೃಪರು. ೬೦). [ಸಂ.]

**ಲಘುಬದರಿ** (ನಾ). ಒಂದು ಬಗೆಯ ಸಸ್ಯ; ಸಣ್ಣಬೋರೆ : ಎಲಚಿ : "ಬಹುಕಂಟಃ — ಲಘುಬದರಿ" (ಓಷಧಿ. ೦೦೩). [ಸಂ. ಲಘುಬದರೀ]

**ಲಘುಲಯ** (ನಾ). ಒಂದು ಬಗೆಯ ಸುವಾಸನೆಯ ಬೇರು ; ಲಾಮಂಚ : ಮುಡಿವಾಳ : "ಉಶೀರಂ . . . ಲಘುಲಯಂ . . . ಲಾಮಂಚದ ಹೆಸರುಗಳು" (ಓಷಧಿ. ೦೩೦). [ಸಂ.]

**ಲಘುಶಂಕೆ** (ನಾ). ಮೂತ್ರವಿಸರ್ಜನೆ. [ಸಂ. ಲಘುಶಂಕಾ]

**ಲಘುಶರೀರಿ** (ನಾ). ಚಟುವಟಿಕೆಯಿಂದ ಕೂಡಿದವನು : ಪ್ರಾಯದ ಜಿಂಕೆಗಳಂತೆ ಲಘುಶರೀರಿಗಳಾಗಿ ಇಬ್ಬರೂ ಎದ್ದು . . . ಪರ್ವತದ ಸಾನುಪ್ರದೇಶದ ಕಡೆ ತಿರುಗಿದರು (ಯೋಗಕ್ಷೇ. ೬೩). [ಸಂ. ಲಘುಶರೀರಿನ್]

**ಲಘುಸಂಗೀತ** (ನಾ). ಶಾಸ್ತ್ರೀಯಸಂಗೀತಕ್ಕಿಂತ ಭಿನ್ನವಾದ, ಆಧುನಿಕ ಕವನ ಮುಂತಾದುವುಗಳ ಮನೋರಂಜಕವಾದ ಹಾಡುಗಾರಿಕೆ : ಈಚಿನ ದಿನಗಳಲ್ಲಿ ಶಾಸ್ತ್ರೀಯಸಂಗೀತಕ್ಕಿಂತ ಲಘುಸಂಗೀತದ ಕಡೆಗೆ ಹೆಚ್ಚು ಜನರ ಒಲವು ಕಾಣುತ್ತಿದೆ (ಕೂ). [ಸಂ.]

**ಲಘುಹಸ್ತ** (ನಾ). ೧. ಕೈಚಳಕವುಳ್ಳವನು ; ಕರಕೌಶಲವುಳ್ಳವನು. ೨. ವೇಗವಾಗಿ ಬಾಣಪ್ರಯೋಗ ಮಾಡಬಲ್ಲವನು ; ನುರಿತ ಬಿಲ್ಲುಗಾರ : "ಲಘುಹಸ್ತಃ, ಶೀಘ್ರವೇಧೀ — ಈ ೨ ಶೀಘ್ರ ವಿಸುವಾತಂ" (ಕಲಾಪು. ೬೭-೩೧೭). [ಸಂ.]

**ಲಘೂಕರಣ** (ನಾ). ಹಗುರ ಮಾಡುವುದು; ಕಡಮೆಯಾಗಿಸುವುದು : ಯಾವ ವ್ಯಕ್ತಿಯ ಮೇಲಿನ ದಂಡವನ್ನಾದರೂ ಕ್ಷಮಾಮಾಡುವ . . . ಪರಿಹಾರಮಾಡುವ ಅಥವಾ ಲಘೂಕರಣ ಮಾಡುವ ಶಕ್ತಿಯು ರಾಷ್ಟ್ರಪತಿಯವರಿಗಿರತಕ್ಕದು (ಶಾರಾಶ. ೩೩). [ಸಂ.]

**ಲಘೂಪಧೆ** (ನಾ). [ವ್ಯಾಕ] ಯಾವುದಾದರೂ ಶಬ್ದದ ಕೊನೆಯ ಅಕ್ಷರದ ಹಿಂದಿನ ಅಕ್ಷರವು ಲಘುವಾಗಿರುವ ಶಬ್ದ, ಪದ : ಗದವಜಕಾರುವಿದಿರಿರೆ ಪದಮಧ್ಯಂ ವಿಷಯಮಾಗಸೇಕಾಕ್ಷರದೊಳ್ ಪುದಿಯೆ ಲಘೂಪಧೆ ಕಿಲಕಿಲವೊದವಿರ್ಕುಂ ರಾಂತಳಾಂತಮವು ಶಿಥಿಲತೆಯಂ (ಕಮಾತ. ೪೩). [ಸಂ. ಲಘೂಪಧಾ]

**ಲಘೂಪಾಗಮ** (ನಾ). = ಲಘುದೋಷ : ಬೇಗಮಾ ಲಘುಗಳಲ್ಲದ ತಾಣದೊಳಂ ಲಘೂಪಾಗಮಕ್ರಮದೆ ನಂಬುಗೆ ಲಾಘವದೋಷಮಂ (ಕಎಶಾ. ೦-೦೨೭). [ಸಂ.]

**ಲಚಂಡ, ಲಚಾಂಡ** (ನಾ). ೧. (ಉಕ) ಗೋಜು ; ಸಿಕ್ಕು : ತೊಡಕು : ಏನೂ 'ಲಚಂಡ'ವಿಲ್ಲದ ವಿರಕ್ತಿ ಸುಂದರಕ್ಕ. ಆಕೆಯ ಕಣ್ಣಲ್ಲಿ ಈ ಪರಿ ಮಹಾಪೂರವೇ! (ವೃಶಿ. ೩೨೯) ; ನಿನಗೆ ಯಾರು ಹೇಳಿದ್ದು ಎರಡನೆಯವರ ಲಚಂಡ ಸಂಭಾಳಿಸುವದು ! (ಸ್ವಶಿವ. ೯೦೯). **ಲಚಾಂಡ** : ೨. ಗೋಳು ; ಸಂಕಟ : ಇಲ್ಲಿಯ ಲಚಾಂಡ ಯಾರು ನೋಡಬೇಕು ? (ರೀಶಕ. I. ೨೦೨). [←ಮರಾ. ಲಚಂಡ್, ಲಚಾಂಡ್]

**ಲಚಾಂಡ** 'ಲಚಂಡ' ನೋ.

**ಲಚ್ಚ$_1$** 'ಲಕ್ಕ$_1$' ನೋ.

**ಲಚ್ಚ$_2$** 'ಲಕ್ಕ$_2$' ನೋ.

**ಲಚ್ಚಣ$_1$** 'ಲಕ್ಕಣ' ನೋ.

**ಲಚ್ಚಣ$_2$, ಲಚ್ಚಣೆ$_2$** (ನಾ). ೧. ಗುರುತು; ಚಿಹ್ನೆ ; ಲಕ್ಷಣ : "ಲಚ್ಚಣಮೆನೆ ಲಾಂಛನಮದು" (ತಕುಓ. ೨೯) ; ಅಲ್ಲಿ ಪಲ್ಲಘೆಯೊಳೆರಡಿಲ್ಲದೆ ನೆರಮುವನೀ ಲಚ್ಚಣಮು ಪೇಟ್ಟಿನಿಲ್ಲಿ ಸಂದೆಗದೋವುದು (ರೀಶಾವ. ೦೦-೯೬ ವ) ; ಬಿಂದುಲೋಪಕ್ಕೆ . . . ಲಾಂಛನ–ಲಚ್ಚಣ (ಕಮರ. ೨೮೫ ಶ್ರುಯೋ) ; ಓರಿಯ ಲಚ್ಚಣದ ಮೊಯ್ಕಟ್ಟು (ಶದ್ಯರಾ. ೯-೩೨). ೨. ಕಾಳನ್ನು ರಾಶಿಮಾಡಿದ ಮೇಲೆ ರಾಶಿಯ ಸುತ್ತಲೂ ಹಾಕುವ ಗೆರೆ, — ರೇಖೆ : ನಿಮ್ಮ ಶರಣನು ಲಚ್ಚಣವಳಿಯದೆ ರಾಸಿಯನಳೆವನು (ಅಪಸಂ. ೧೮೬-೬೩೫) : ರಾಶಿಗಿಕ್ಕಿದ ಲಚ್ಚಣ ರಾಶಿಯ ಕೊಳಬಲ್ಲುದೇನೋ ಮೂಢ ರಾಶಿಯ ಒಡೆಯನಲ್ಲದೆ ಆ ಪರಿಯಲ್ಲಿ ಈ ಲಿಂಗವು ಜಂಗಮದ ಮುದ್ರೆ ಎಂದು ತಿಳಿ (ಶಸ್ವವ. ೦೦-೮). **ಲಚ್ಚಣೆ$_2$** : ೨. ಸುರರುಣಿಸಿ ಗಜನೆಂಬ ಪಾಮರಂ ಬೆಳಸಿದುರುತರದ ರಾಜಾನ್ನರಾಶಿಯ ಲಚ್ಚಣೆಯೊ . . . ಎನಲು ಮೆಱೆದುದಾ ಪರಿವೇಷಮಪ್ಪುತದೊಬ್ಬುಳಿಯ ಕೋ (ಶೀರಪು. ೭-೩೭). 'ಲಕ್ಕಣ' ಪರಾ. [<ಸಂ. ಲಾಂಛನ]

**ಲಚ್ಚಣಗಂಬ** (ನಾ). ಸಂಕೇತವಾಗಿ ನೆಟ್ಟ ಕಂಬ ; ಗುರುತಿನ ಕಂಬ : ಎಂಟುವಾನೆಗಳ್ಮಂ ತಱಿತಱಿಸಲ್ಕನಂ ಜಯದ ಲಚ್ಚಣಗಂಬದೊಳುರ್ದ್ದಿ ಕೊಳುತ್ತವಾವಱಿವೆವೆ ವಿಷ್ಣುವಿಕ್ರಮದುದಪಕ್ರಮಮಂ (ಎಳ. v, ಶೇಬೂರು. ೫೬೦-೬೩ ; 1160). [ಲಚ್ಚಣ$_{2}$+ಕಂಬ$_{1}$ (<ಕಂಭ)]

**ಲಚ್ಚಣಿಸು** (ಕ್ರಿ). ೧. ಗುರುತಿಸು ; ಗುರುತುಮಾಡು : ಕೇಳುತವೆ ಕಂಬನಿಗಳೊಸರಿದವಾಲಿಗಳೆಲೋರಂತೆ . . . ಬೀಳುತಿರಲಾ ಮುಂದೆ ಬಹಳ ವಿಶಾಲಭೋಗಸ್ಥಾನವೆಂಬುದನಾಲಿಸುತ ಲಚ್ಚಣಿಸಿ ತೋಱಿಸುವಂತೆ ಬಿಂದುಗಳು (ಶಬಾಗ. ೧೦-೩೫-೭೩). ೨. (ಕಾವ್ಯದ) ಲಕ್ಷಣಕ್ಕೆ ಹೊಂದಿಸು : ಹಲಗೆ ಬಳಪದಿಂದ ಚಲಿಸದಂದದಿ ಪ್ರಾಸ ನೆಲೆಮಾಡಿ ತಿದ್ದಿ ಲಚ್ಚಣಿಸಿ ಬಲಿದು ಪದನ ಮಾಡಿ ಪೇಳ್ದನಾವಡೆ (ಬಸಮಾ. ೦-೦೫). [ಲಚ್ಚಣ$_{1}$ (<ಲಕ್ಕಣ)+—ಇಸು$_{3}$]

**ಲಚ್ಚಣೆ$_{1}$** (ನಾ). ಸಾರಸ ಪಕ್ಷಿ : ಪಾಡುವ ಸಾಳಗಂ ಲಳಿಯೊಳಾಡುವ ಲಚ್ಚಣೆ[ಣೆ] (ಳಸಾಪ. ೧೮). [<ಸಂ. ಲಕ್ಷ್ಮಣಾ]

**ಲಚ್ಚಣೆ$_{2}$** 'ಲಚ್ಚಣ$_{2}$' ನೋ.

**ಲಚ್ಚಿ** 'ಲಕುಮಿ' ನೋ.

**ಲಚ್ಚಿಸು** (ಕ್ರಿ). ಗುರುತುಮಾಡು ; ಗುರುತಿಸು : ಸಿರಿಗಳ್ ಪರ್ವಿರೆ ತುಱುಯುಮಂ ಕೆರಕುಂ ದುಷ್ಟಪ್ರಣಂಗಳುಂ ಬಂದದಪಂದಿರ ತನುಗಳ್ ಪಾಪದ ಫಲದ ರಾಶಿಗಳ್ ಲಚ್ಚಿಸಿರ್ಪ ತೆಱದಿಂದಿರ್ಕುಂ (ಶರ್ಕಪು. ೦೦-೩೬). [ಲಚ್ಚ$_{2}$ (<ಲಕ್ಕ$_{2}$)+—ಇಸು$_{3}$]

**ಲಚ್ಛಣ** 'ಲಕ್ಕಣ' ನೋ.

**ಲಚ್ಛಿ** 'ಲಕುಮಿ' ನೋ.

**ಲಜ್ಜರಿಕೆ** (ನಾ). ಮುಟ್ಟಿದರೆ ಮುದುರಿಕೊಳ್ಳುವ ಎಲೆಗಳುಳ್ಳ ಒಂದು ಬಗೆಯ ಗಿಡ ; ಮುಟ್ಟಿದರೆ ಮುನಿ : ಮೊ (ಪೊ)ರಕೆಯ ಬೂದಿಯುಂ ಗರುಗದಾ ರಸಮುಂಪ್ಪವನೊ(ನ)ಟ್ಟುಗಲ್ಲ ಲಜ್ಜರಿಕ ಸಲೋಚನಂ . . . ತಿಲತೈಲದೊಳಿಟ್ಟು ಪೂಸುಗೆ (ಕೋಶೇಸ. ೯-೨೦೩) ; ವಿವಿಧಶಸ್ತ್ರದ ಘಾಯದೊಳ್ . . . ಹೊನ್ನಗನ್ನೆಯತಕ್ಕೆ ಸಂಭವಿಸೆ ಲಜ್ಜರಿ[ಶಾಶಂ. ಲಿ] ಕಾಖ್ಯಮುಂ . . . ಇವಱೊಳಾವುದನಾದೊಡಂ ತೊಡೆಗೆ (ಖಪರ. ೩-೨೦೩). 'ಲಜ್ಜಾವತಿ' ಪರಾ. [ಸಂ. ಲಜ್ಜರಿಕಾ]

**ಲಜ್ಜಾಲು, ಲಜ್ಜಾಳು** (ಗು). ೧. ನಾಚಿಕೆಯ ಸ್ವಭಾವದ ; ಸಂಕೋಚ ಪ್ರವೃತ್ತಿಯ. (ನಾ). ೨. ನಾಚಿಕೆಯ ಸ್ವಭಾವದ ವ್ಯಕ್ತಿ; ಸಂಕೋಚ ಸ್ವಭಾವದವನು : "ಲಜ್ಜಾಶೀಲಂ ಲಜ್ಜಾಲು" (ಶಬ್ದಕೋ. ೬೯-೭೭). ೩. = ಲಜ್ಜರಿಕೆ. **ಲಜ್ಜಾಳು** : ೨. ನಾನು ಅತ್ಯಂತ ಲಜ್ಜಾಳುವಾದ ಮನುಷ್ಯ (ಇಶ್ವ. ೯೩೦). [ಸಂ.]

**ಲಜ್ಜಾವತಿ** (ನಾ). ೧. ನಾಚಿಕೆಯ ಸ್ವಭಾವದವಳು. ೨. = ಲಜ್ಜರಿಕೆ: ಮುಟ್ಟಿದರೆ ಮುನಿ, ಮುದುಗುದಾವರೆ, ನಾಚಿಕಗಿಡ, ಲಜ್ಜಾವತಿ (ಕೃಷಿಗ. ೩೯-೨೦೬೯) ; ನನ್ನ ತೋಟದಲ್ಲಿ ಲಜ್ಜಾವತಿ ಬಳ್ಳಿ (ಪೊಕಕ್ಷ. ೭೭). [ಸಂ. ಲಜ್ಜಾವತೀ]

**ಲಜ್ಜಾವಿಹೀನ** (ನಾ). ನಾಚಿಕೆಯಿಲ್ಲದವನು; ನಾಚಿಕೆಗೇಡಿ ; ನಿರ್ಲಜ್ಜ : "ನಾಣಿಲಿಯನಲ್ಕೆ ಲಜ್ಜಾವಿಹೀನು" (ಕಕೃ. ೪೯). [ಸಂ.]

**ಲಜ್ಜಾವಿಹೀನತ್ವ** (ನಾ). ನಾಚಿಕೆಯಿಲ್ಲದಿರುವಿಕೆ ; ಭಂಡತನ : "ಲಜ್ಜಾವಿಹೀನತ್ವದೊಳ್ ಬಂಡು" (ಕಧಮು. ೯೯). [ಸಂ.]

**ಲಜ್ಜಾಶೀಲ** (ನಾ). ೧. ನಾಚಿಕೆಯ ಸ್ವಭಾವ ; ಸಂಕೋಚಪ್ರವೃತ್ತಿ. ೨. ನಾಚಿಕೆಯ ಸ್ವಭಾವದ ವ್ಯಕ್ತಿ ; ಸಂಕೋಚಸ್ವಭಾವದವನು : "ಲಜ್ಜಾಶೀಲಂ ಲಜ್ಜಾಲು" (ಶಬ್ದಕೋ. ೬೯-೬) ; [ಸಂ.]

**ಲಜ್ಜಾಹೀನ** (ನಾ). ನಾಚಿಕೆಯಿಲ್ಲದ ವ್ಯಕ್ತಿ ; ಭಂಡ : ನಾನು . . . ಲಜ್ಜಾಹೀನರಾದ ನವೀನಸುಂದರಿಯರನ್ನು ಕುರಿತು ಬರೆಯುವುದಿಲ್ಲ [ಸಂ.]

**ಲಜ್ಜಾಳು** 'ಲಜ್ಜಾಲು' ನೋ.

**ಲಜ್ಜಿಕೆ** (ನಾ). ನಾಚಿಕೆಯನ್ನುಂಟುಮಾಡುವಂಥದು ; ಲಜ್ಜಾಸ್ಪದ ವಾದುದು : ನನ್ನ ಪ್ರಣಯವನ್ನು ಜನ್ಮವನ್ನು ಸರ್ವಸ್ವವನ್ನೂ ಸಾರ್ಥಕ ಮಾಡಿಕೊಳ್ಳುವುದು ಲಜ್ಜಿಕೆಯ ಅನ್ಯಾಯದ ಅಕ್ರಮದ ದ್ರೋಹದ ಅಕಾರ್ಯವೆ ? (ಶಕ್ತಿಗ. ೨೫-೨). [ಲಜ್ಜೆ + — ಇಕೆ]

**ಲಜ್ಜಿತ** (ಗು). ೧. ನಾಚಿಕೆಪಟ್ಟುಕೊಂಡ ; ಲಜ್ಜೆಗೊಳಗಾದ. ೨. ಅವಮಾನಗೊಂಡ ; ಅಪಮಾನವನ್ನು ಹೊಂದಿದ. (ನಾ). ೩. ನಾಚಿಕೆಗೊಂಡವನು : ಸಂಕೋಚ ಹೊಂದಿದವನು : ಪ್ರಜೇಶ್ವರನು ವಿಸ್ಮಿತನಾಗಿ, ಲಜ್ಜಿತನಾಗಿ . . . ಸ್ವಲ್ಪ ಭಯಪಟ್ಟವನೂ ಆದನು (ದೇವೀಶಾ. ೦೩೯). ೪. ಅವಮಾನಗೊಂಡ ವ್ಯಕ್ತಿ; ಅಪಮಾನ ಹೊಂದಿದವನು : ಲಜ್ಜಿತನಾಗಿ ತಿರುಗಿದನನುವರದಲೀ ಕರ್ಣನು (ಕುಮ್ಯಾಭಾ. ೬-೭೫). ೫. [ನಾಟ್ಯ] ಇಪ್ಪತ್ತು ಸಂಚಾರಿದೃಷ್ಟಿಗಳಲ್ಲಿ ಒಂದು ; ಲಜ್ಜೆಯನ್ನು ವ್ಯಕ್ತಪಡಿಸುವ ನೋಟ; ಣ" ರೆಪ್ಪೆಗಳನ್ನು ಮೇಲಕ್ಕೂ ಕೆಳಕ್ಕೂ ಚಲಿಸುತ್ತಾ ಕೆಳಗೆ ನೋಡುವುದು" (ಶಾಸ್ತ್ರಕಂ. ೨೬೯ ಗದ್ಯಾನುವಾದ) : " ಲಜ್ಜಿತ — ನೆಲನಂ ನೋಡುತೆ ಕಣ್ಣಿವೆಯಲಸದೆ ಮೇಲ್ನೋಡಿ ಬಾಗೆ ಲಜ್ಜೆಯನಿಕ್ಕುಂ (ಶಾಸ್ತ್ರಕಂ. ೩-೨೯). [ಸಂ.]

**ಲಜ್ಜಿತೆ** (ನಾ). ನಾಚಿಕೊಂಡವಳು ; ಸಂಕೋಚಗೊಂಡವಳು : ಅಗುಸುತ ಬೆಡಗಾಗುತ್ತೆ ಸಂವರಿಸಿಕೊಳುತೆ ವಲ್ಕಲವಸನಾಭೋಗಮುನತಿಲಜ್ಜಿತೆ ತಲೆವಾಗಿದಳನುರಾಗವೇಱೆ ಪುಳಕಿಸುತಿರ್ದಳ್ (ಗಂಗ. ೦೦-೨). [ಸಂ. ಲಜ್ಜಿತಾ]

**ಲಜ್ಜಿಸು** (ಕ್ರಿ). ೧. ನಾಚಿಕೊಳ್ಳು ; ಸಂಕೋಚಪಟ್ಟುಕೊಳ್ಳು : ನಿಜರೂಪಸ್ತುತಿಗೆ ಲಜ್ಜಿಸಿ ಕೇಳದಂತೆ ಪೋಗೆ (ಕಾದಂಪೂ. ೭೬೩) ; ತಾನೇ ಧರಣಿಪತಿ ನಳನೆನಲು ಲಜ್ಜಿಸಿ ಕಿರವ ನಸುಬಾಗಿದಳು (ನಳಚ. ೩-೯೩) ; ವಲ್ಲಭೆಯ ನುಡಿಗೆ ಲಜ್ಜಿಸಿ ಮನಂ ಕಂದೆ ಕಣ್ಣಾಲಿಗಳ್ ಕೆಂಪಡರೆ (ಕೈಶಿಚಾ. ೭-೩೮). ೨. ನಾಚಿಕೆಪಡಿಸು ; ನಾಚಿಕೊಳ್ಳುವಂತೆ ಮಾಡು : ಸಜ್ಜನ ಸ್ತುತಿಗೆಯ್ಯಲಾತ್ಮಸ್ತುತಿಯುಕ್ಕು ಮಜ್ಜೀವವಪರಾಗಿ ಕುಜನರ ಲಜ್ಜಿಸಿ ನಿಂದಿಪೊಡಿಪು ಪುಣ್ಯಕಥೆ (ತ್ರಿರುತ. ೦-೦೬). [ಲಜ್ಜೆ + —ಇಸು$_{3}$]

**ಲಜ್ಜೆ** (ನಾ). ೧. ನಾಚಿಕೆ ; ಸಂಕೋಚ: "ವ್ರೀಡೆ ಲಜ್ಜೆಯೆನೆ ಮಂದಾಕ್ಷಂ" (ವಸ್ತುಕೋ. ೦೦೯-೦೯) ; ಕಾಮಿಗುಂಟೆ ಲಜ್ಜೆ ನಾಚಿಕೆ (ಬಸವ. ೩೦೬); ಒಂದಣ ಸೋಲಮಂ ಮಱೆದು ಲಜ್ಜೆಯನೊಲ್ಲದೆ ಮತ್ತೆ ಬಂದನೇ ಪಂದೆ ಗಳೋಜಂ (ಚಂಕಾ. ೨-೨೫). ೨. ಅವಮಾನ ; ಅಪಮಾನ : ಲಜ್ಜೆಯುಂ ತಲೆವಾಗಿ ತೋರ್ಪ ತದೀಯ ದೇಶಿಕನಂದದಮಂ . . . ನಿಟ್ಟಿಸಿ (ಅದ್ಭುತ. ೫-೦೦೯) ; ನಾರೀವೃಂದ . . . ಗೊಳ್ಳೆಂದು ನಕ್ಕುದು ನೊಂದು ತಲೆವಾಗಿದನು ಲಜ್ಜೆಯಲಿ (ಕುಮ್ಯಾಭಾ. ೦೨-೭೭). ೩. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು : ಮತಿನಿರ್ವೇದಾವಹಿತ್ಥ ಶ್ರಮ . . . ಅಪಸ್ಮಾರ ಲಜ್ಜಾ ವಿಷಾದಸ್ಥಿತಿ ಚಿತ್ತಭ್ರಂಶ ಮೋಹಾಮಯಂಕೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾಸ. ೭೯೩) ; ಮತಿ ಲಜ್ಜೆ ಆವೇಗ ಶಂಕೆ . . .ಅಪಸ್ಮಾರವೆಂಬ ಮೂವತ್ತುಮೂಱು ಸಂಚಾರೀಭಾವಂಗಳಂ ಪರಿವರ್ತಿಸಿ (ಏಪಳ. ೦೮೦). [ಸಂ. ಲಜ್ಜಾ]

**ಲಜ್ಜೆಕಾತಿ** (ನಾ). ನಾಚಿಕೆಯ ಸ್ವಭಾವದವಳು ; ಲಜ್ಜಾಶೀಲೆ : ಮಾನ ಭೂಷಣೆ ಲಜ್ಜೆಕಾತಿ ಸೌಜನ್ಯನಿಧಾನೆ ಗಂಭೀರೆ ಸುಶೀಲೆ (ರಾಕ. ೯೩-೬೯). [ಲಜ್ಜೆ +— ಕಾತಿ]

**ಲಜ್ಜೆಗಾ** (ಕ್ರಿ). ನಾಚಿಕೆಯಿಂದಿರು ; ಸಂಕೋಚವನ್ನು ಉಳಿಸಿಕೊಳ್ಳು: ಸುತ್ತಲುಂ ಸಖೀಜನಮಿರೆಯುಂ ವಿಚಾರಿಸನೆ ಮಾಃಖದೊಳಕ್ಕನಿರಲ್ಕೆ ಲಜ್ಜೆಗಾಯೆನೆ ಗುರುಂಗಳ್ಗೆ ಬೆಳ್ಕಱಿನೆ ಚೇಟಕಿಯರ್ಸೇರದಿರ್ದರೆಂಬಿದಂ ನೆನೆಯೆನೆ ಕೆಟ್ಟೆನೇನನಿರದಿಂತಱು ವಿಭ್ರಮದಿಂದೊಡರ್ಚಿದೆಂ (ಕಾದಂಪೂ. ೭೭). [ಲಜ್ಜೆ + ಕಾ$_{1}$]

**ಲಜ್ಜೆಗೆಡು** (ಕ್ರಿ). ನಾಚಿಕೆ ಇಲ್ಲವಾಗು ; ನಿರ್ಲಜ್ಜೆಯಿಂದ ವರ್ತಿಸು : ತೊಟ್ಟನೆ ಲಜ್ಜೆಗೆಟ್ಟುಜಾವುಗೆಟ್ಟೆನ್ನಂತೆ ಕಣ್ಗೆಟ್ಟು ಪೇಟಿಕೂಲವಿಂದಿಂತೆರ್ದೆಗೆಟ್ಟರಾರ್ (ಶಾರಂಥೂ. ೬೩೦); ಲಜ್ಜೆಗೆಟ್ಟ ಹೆಣ್ಗಳಂತೆ ಮೇಲ್ವಾಯ್ವ ಹೆರ್ಬುಗಿಲಿಂದಿಂ (ರಪುರಾಶು. ೩-೩೩) ; ಲಜ್ಜೆಗೆಟ್ಟಾದರೂ ಲಿಂಗವನೊಲಿಸುವೆ (ಬಸವ. ೪೯೬). [ಲಜ್ಜೆ + ಕೆಡು$_1$]

**ಲಜ್ಜೆಗೇಡಿ** (ನಾ). ನಾಚಿಕೆಗೇಡಿ ; ನಿರ್ಲಜ್ಜ : 'ಲಜ್ಜೆಗೇಡಿತನ' ಪರಾ. [ಲಜ್ಜೆ + ಕೇಡಿ$_1$]

**ಲಜ್ಜೆಗೇಡಿತನ** (ನಾ). ನಾಚಿಕೆಯಿಲ್ಲದಿರುವಿಕೆ ; ನಿರ್ಲಜ್ಜತೆ : ನನ್ನ ಲಜ್ಜೆಗೇಡಿತನವನ್ನು ಮನ್ನಿಸಬೇಕು (ಶರೀವ. ೬೯). [ಲಜ್ಜೆಗೇಡಿ + —ತನ]

**ಲಜ್ಜೆಗೇಡು** (ನಾ). ೧. ನಾಚಿಕೆಗೇಡು ; ನಾಚಿಕೆಯಿಲ್ಲದಿರುವುದು. ೨. ಅವಮಾನಾಸ್ಪದವಾದುದು ; ಅಪಮರ್ಯಾದೆಯಿಂದ ಕೂಡಿದುದು : ಅಜ್ಜಿಯಿಲ್ಲದ ಮನೆಯು ಮಜ್ಜಿಗಿಲ್ಲದ ಊಟ ಕೊಜ್ಜೆಯಿಲ್ಲದರ ಮನೆಯು ಇವು ಮೂಱು ಲಜ್ಜೆಗೇಡು (ಸರ್ವಜ್ಞ. ೬೩೦). [ ಲಜ್ಜೆ + ಕೇಡು ]

**ಲಜ್ಜೆಗೊಳ್ಳು** (ಕ್ರಿ). ನಾಚಿಕೊಳ್ಳು ; ಸಂಕೋಚಪಡು ; ಕೃತ್ತಿಕಾಪುಂಜವು ಲಜ್ಜೆಗೊಂಡಂತೆ ಅಡಗಿಕೊಂಡಿರುವುದು (ಸೂರ್ಯಶಿರ್. ೩೪). [ಲಜ್ಜೆ + ಕೊಳ್ಳು$_1$ ( < ಕೊಳ್$_1$) ]

**ಲಜ್ಜೆಪಡು** (ಕ್ರಿ). = ಲಜ್ಜೆಗೊಳ್ಳು: ಎಲೆ ಮಗಳೆ, ಒಂದು ಮುಹೂರ್ತ ಲಜ್ಜೆಪಡದಿರು (ಶಾಕುಂತ. ೬೭-೭) ; ತನ್ನ ವೃತ್ತಿ ಕೀಳಾದುದೆಂದು ಭಾವಿಸಿಕೊಂಡು ಲಜ್ಜೆಪಡಬಹುದೆಂಬ ಕಲ್ಪನೆ ಸರ್ವಸಾಧಾರಣವಾದುದು (ಕೃಷರು. ೦೯೭). [ಲಜ್ಜೆ + ಪಡು$_1$]

**ಲಜ್ಜೆಯೇಱು** (ಕ್ರಿ). ನಾಚಿಕೆಯನ್ನು ಹೊಂದು ; ಸಂಕೋಚವನ್ನು ತಾಳು : ಗಣಕರು ಲೆಕ್ಕಿಸಲಾಱದೆ ಬೆಱಗಾಗೆ ಪರಸಮಯಿಗಳ ಮೊಗಂ ಬೆಳ್ಪೇಱಿ ಬಿಜ್ಜಳನ ಮೊಗಂ ಲಜ್ಜೆಯೇಱಿ ಶರಣರ ಮೊಗಂಗಳು ಹರುಷವೇಱಿ (ಬಸವ. ೬-೦೨೬). [ಲಜ್ಜೆ + ಏಱು$_1$ ( < ಏಱ್$_1$) ]

**ಲಜ್ಜೆವೆರಸು** (ಕ್ರಿ). ನಾಚಿಕೆಯಿಂದ ಕೂಡಿರು ; ಸಂಕೋಚಗೊಳ್ಳು : ಕುವರನಂ ಧಟ್ಟಿಸಿ ಮರಾಳಧ್ವಜಂ ಕೇಳ್ವೊಡಡಿಗಿಟ್ಟ ದಿಟ್ಟಿಯಿಂದಂಜುತೊಯ್ಯನೆ ಲಜ್ಜೆವೆರಸಿ ಬಿನ್ನೈಸಿದನವಂ ಪಿತಂಗೆ (ಜೈಮಿನಿ. ೦೦-೨೬) ; ಸಜ್ಜಾತಿಸತಿಯರಿನಿಯರ ಸನ್ನಿಧಿಯೊಳು ಲಜ್ಜೆವೆರಸಿ ರಂಜಿಪುದು (ಶಂಬ. ೩-೩೯). [ಲಜ್ಜೆ + ಬೆರಸು$_1$ ( < ಬೆರೆಯಿಸು ) ]

**ಲಟಕ್** (ನಾ). ಒಂದು ಅನುಕರಣ ಶಬ್ದ : ಕೈಯಲ್ಲಿಯ ಪೆನ್ನನ್ನು ಕೆಳಗಿಟ್ಟು ಕೈಯ ಬೊಟ್ಟು ಲಟಕ್ಕನಿಸಿಕೊಂಡರು (ಅಮೃ. ೬ ಹಿಸ್ಟರಿ).

**ಲಟಕಟ** (ನಾ). ಬಳಲಿಕೆ; ಆಯಾಸ : "ಲ[ಶಾಕಾಂ.ಲ]ಟಕಟಮೊಂದೊಡೆ ಬಳಲಿಕೆ" (ಶಾರಶ. ೩೦). 'ಲಟಕಟಿಸು' ಪರಾ.

**ಲಟಕಟಿಸು** (ಕ್ರಿ). ೧. ಬಳಲು ; ಆಯಾಸಗೊಳ್ಳು : ಗಾಸಿಯಾದನು ಪವನಸುತನೆಳ್ಳಸು ಬಿಡುಕದು ಬಾಲ ಊರ್ಧ್ವಶ್ವಾಸಲಹರಿಯಲಡಗಡಿಗೆ ಲಟಕಟಿಸಿದನು ಭೀಮ (ಕುಮ್ಯಾ. ೦೦-೦೮) ; ಬಿಂಡೆಯವನುರೆ ರಭುಡಿದು ಕಿಟ ಲಟಕಟಿಸೆ ಘಾತಿಸಲು (ಅಜಾರಾ. ೦-೪-೨೯). ೨. ಆತುರಪಡು ; ತವಕಿಸು ; ಹಾತೊರೆ : ತದ್ವಾದಿಗುತ್ತರಂಗುಡಲೆಂದು ಲಟಕಟಿಪ ಸಮಯದಲ್ಲಿ (ಶಬ್ದರಾ. ೦೦-೩) ; ಘಟ ಬೀಳಲವಳಿದ್ದ ಬಳಿಗೆ ಬಂದಪೆನೆಂದು ಲಟಕಟಿಸಿದನು ಕುವರ (ಪ್ರೋಡಕ. ೩೦-೨೩) ; ದನುಜರಾರ್ಭಟಿಸಿದರ್ ಜಯಕೆ ಲಟಕಟಿಸಿದರ್ (ಶಂತ. ೦೬-೦೦) ; ಲಟಕಟಿಪ ಸಮರಲಂಪಟರ ಭುಜಗಳ ಹೊಯ್ಲು (ಜೈಮಿನಿ. ೪-೦೬). ೩. ಉದ್ರೇಕಗೊಳ್ಳು ; ಉದ್ದೀಪನಗೊಳ್ಳು : ಉಕ್ಕಿದಾ ಕಿವಿವೇಟ ಕಣ್ಬೇಟಕ್ಕೆ ತಂದುದು ಕಂಗಳೆಯ ಪುಳ್ಕುಳಿಸಿ ಮೈಸೋಂಕಿನಲಿ ಲಟಕಟಿಸಿದುದು ಹೃದಯ (ಕುಮ್ಯಾ. ೧೩-೩೬); ನಿಟಿಲನೇತ್ರನ ಕೋಪಶಿಖಿ ಲಟಕಟಿಸುವಂತಿರೆ ಸಿಕ್ಕಿತಳಗಿಗೆ ಹೆಚ್ಚಿದತಿ ಬಲದಟವಿಯನು ಸವಱಿದುದು ಪಾರ್ಥಗಾಮೋಶರಜಾಲ (ಕುಮ್ಯಾದ್ರೋ. ೩-೬೦). ೪. ಅಬ್ಬರಿಸು ; ಅರ್ಭಟವಮಾಡು : ಸಂತೈಸಿಕೊಂಡಟಮಟಿಸಿ ಗದೆಯಲಿ ಹೊಯ್ದು ... ಹೆಚ್ಚಿದನೌಕಿ ಬೊಬ್ಬಿಡುತ ಪುಟದ ಕಂತುಕದಂತೆ ಘಣಿ ಲಟಕಟಿಸಲೌಕಿತು ಗಿಡಗನೆಱಿಯ ಪುಟದ ಗಿಳಿಯಂದದಲಿ ಗಿಱಿ ಗಿಱಿಗುಟ್ಟಿದನು ಭೀಮ (ಕುಮ್ಯಾ. ೦೩-೩೪) ; ಪಟಪಡಿಂಡಿಮವಾದ್ಯ ಮುರಿತಾಪ ಭೇರಿತಂಬಟದಮಾವಿಗಳಾದಿಯಲಿ ಲಟಕಟಿಸುವ ನಾನಾವಾದ್ಯ ಸಕಲದಿಕ್ತಟ ಬಿರಿವಂತೆ ಗರ್ಜಿಸಿತು (ಪ್ರೋಡಕ. ೩೭-೯). ೫. ಹೀಗಳೆ ; ಕೀಳುಮಾಡು : ಮಟಘಜವನತಿಗಳೆದು ಬಿಂಬವ ಲಟಕಟಿಸಿ . . . ಕುಟಿಲ ಕುಂತಳೆಯಧರವತಿಶಯದಿಂದಲೊಪ್ಪಿದುದು (ಶೋಗಯ. ೦೩-೩೭). ೬. ತಗ್ಗು ; ಕಡಮೆಯಾಗು : ಝುಳದ ಲಳಿ ಲಟಕಟಿಸೆ ಮಾರ್ಗಸ್ಖಲಿತ ಖೇದಸ್ವೇದಬಿಂದುಗಳೊಳಸರಿಯೆ ರೋಮಾಳಿ ಜಾಳಿಸೆ . . . ಭಾವಿಸುತ ಘುಲ್ಲವಿಸಿದನು ಭೀಮ (ಕುಮ್ಯಾ. ೦೦-೪೪). [ಲಟಕಟ + — ಇಸು$_3$]

**ಲಟಕರಿಸು** (ಕ್ರಿ). ಲಟಲಟವೆಂದು ಸದ್ದುಮಾಡು : ಲಟಲಟಾ ಲಟಲಟಾ ಲಟಕರಿಸಿ ವನಜಜಾಂಡ . . . ಬಿಚ್ಚುತಿರಲು (ಎರಾಳ. ೭೩-೪). [ ಲಟಕರಣ$_0$ + — ಇಸು$_3$ ]

**ಲಟಕಾಯಿಸು** (ಕ್ರಿ). ತೂಗುಹಾಕು; ನೇತುಹಾಕು : ಮಾಧವನ . . . ಚಿತ್ರ ಅವನ ಬಲಪಾರ್ಶ್ವದಲ್ಲಿ ಕಟ್ಟಿಗೆಯ ಫಳಿಗೆ ಲಟಕಾಯಿಸಿತ್ತು (ಬೀಶಕ. I. ೧೩೭). [ ಲಟಕಾ$_0$ (P ← ಹಿಂ. ಲಟಕನಾ, ಲಟಕಾನಾ; ಮರಾ. ಲಟಕಣೇ ) + — ಇಸು$_3$ ]

**ಲಟಕಿ** 'ನೆಟ್ಟಿಕೆ' ನೋ.

**ಲಟಕಿಮುರಿ** 'ನೆಟ್ಟಿಗೆಮುರಿ' ನೋ.

**ಲಟಕು** 'ನೆಟ್ಟಿಕೆ' ನೋ.

**ಲಟಕುಮುರಿ** 'ನೆಟ್ಟಿಗೆಮುರಿ' ನೋ.

**ಲಟಕ್ಕು** 'ನೆಟ್ಟಿಕೆ' ನೋ.

**ಲಟಪಟ** (ನಾ). ಒಂದು ಅನುಕರಣ ಶಬ್ದ : ಕೈಕಾಲು ಸತ್ತುಹೋಗಿ ಲಟಪಟ ನಡುಗುತ್ತವೆ (ಬುಂಬಯ. ೪-೪೦); ಜಾತಿಕುದುರೆಗಳು ಮೆಲ್ಲನೆ ಘೂಂಕರಿಸುತ್ತ ಓಟ ಕಿತ್ತುವು ; ಅವುಗಳ ಗೊರಸು ಕಲ್ಲಿಗೆ ತಗುಲಿ ಲಟಪಟ ಧ್ವನಿ ಹೊರಹೊಮ್ಮುತ್ತಿತ್ತು (ಕೃಷರು. ೩೩೬).

**ಲಟಪಟ** (ಅ). ಒಮ್ಮೊಂದೊಮ್ಮೆಲೆ; ಇದ್ದಕ್ಕಿದ್ದಂತೆ : ಏತಱ ಕಟಪಟ ಒಂದಿನ ಹೋಗುತಿದ್ದೆ ಲಟಪಟ (ಕನ್ನಡ. ೨-೩೨ ಕನ್ನಡ).

**ಲಟಪಟಿ** (ನಾ). ಒಂದು ಅನುಕರಣ ಶಬ್ದ : ಓತು ಲಟಪಟಿ ಶಬ್ದಗಳ ಬಲ್ಲೆನೆಂದೆನುತೆ ಚಾತುರ್ಯದಿಂದೆ ಕೆಲ ಶಬ್ದಗಳ ಗಂಟಿಕ್ಕ (ಶತಂ. ೦-೨೦).

**ಲಟಲಟ** (ನಾ). ಒಂದು ಅನುಕರಣ ಶಬ್ದ : ಲಟಲಟಾ ಲಟಲಟಾ ಲಟಕರಿಸಿ ವನಜಜಾಂಡ . . . ಬಿಚ್ಚುತಿರಲು (ಎರಾಳ. ೭೩-೪); ನೆಲದ ಲಟಲಟ ಮುರಿದು ಮೆಟ್ಟುವ ಪಡಂಭೂತಗಳೆಲ್ಲಿವೆ ? (ಕೃಶ್ಯಂ. ೨೯-೧). 'ಲಟಲಟನೆ', 'ಲಟಲಟಿಸು' ಪರಾ.

**ಲಟಲಟನೆ** (ಅ). ಲಟಲಟ ಎಂದು ಸದ್ದಾಗುವಂತೆ : ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ ಹೊಟ್ಟೆಡಿಯಾಗಿ ಬೀಳುವ ಲೊಟ್ಟೆಮೂಳನ ಕಂಡಡೆ ಮೆಟ್ಟಿನ್ನ ಎಡವಾದರಕ್ಷೆಯ ಕಗೊಂಡು ಲಟಲಟನೆ ಹೊಡಿ (ವಚನ. I. ೩೨೬-೦೨); ಲಟಲಟನೆ ಲಟಿಗೆಹೊಡೆಯುತಲಿಹುವು ಮೊಗ್ಗೆಗಳು (ಇರುಕ್ಕು. ೪೩-೦೩). [ ಲಟಲಟ + — ಅನೆ$_1$ ]

**ಲಟಲಟಿಸು** (ಕ್ರಿ). ೧. ತವಕಿಸು ; ಆತುರಪಡು : ನೆಱನೆತ್ತಿ ಬೈವ ಪುರುಡಿಪ ಜಱಿಚುವ ಒರಿದಲಸೆ ಕೂಡ ಲಟಲಟಿಸುವ ಮೇಲ್ವರಿಯದೆ ಸೋಂಕುವ ಕೂರದೊಡೆಱಗುವ ವಿಟನೆಗ್ಗನಲ್ತೆ (ಮುರಶ. ೦೦-೪೬); ಮಟ್ಟು ನೋಱುವ ದೃಷ್ಟಿಯೆವೆಯಿಕ್ಕ ಲಟಲಟಿಸುತಿರೆ ಚಿತ್ತ (ಸೋಮಶು. ೨-೫೫); ಕಟಕದೊಳದ್ದಾನೆಕುದುರೆ ಬೆದಱಿ ಲಟಲಟಿಸುತ್ತಿತ್ತಲೋಡಿದುವು

(ಶಶಿ. ೨೯-೬೬). ೨. ಹಿಂಸೆಪಡು : ತೊಂದರೆಗೊಳಗಾಗು : ಹುಟ್ಟು ನೀರಡಿಕೆಯಿಂ ಲಟಲಟಿಸುತಿಹ ಬಾಧೆ (ಶಿಕ್ಷೆ. ೪-೨೩-೩). ೩. ಉತ್ಸಾಹದಿಂದ ಮುನ್ನುಗ್ಗು : ಪುಟಚಂಡಿನಂತೆ ಲಂಘಿಸುತಾಗೊಳ ಹೊಕ್ಕು ಪಟುವಾದ ಶೌರ್ಯದೇಳ್ಗೆಯುಲಿ ಲಟಲಟಿಸುತ ಕಾಲಾಳ ಖಂಡಿಸು ತುತ್ಕಟದಲಿ ಕಲಿಯೇಱೆ ಮೆಱೆದ (ಕಂಹೊ. ೦೮-೦೬೨). ೪. ಚೂರು ಚೂರಾಗು; ಛಿನ್ನಭಿನ್ನವಾಗು : ನಟಿಸಿ ಮೇಗೆತ್ತಿ ಕುಕ್ಕುಱೆಸೆ ನೆಲನಂ ಟೊಣೆದು ಹಲಗೆಪೊತ್ತಿಸೊಳಸ್ಯುನು ಲಟಲ[ಪಾಠಾಂ. ಕ]ಟಿಸಲಿಕ್ಕಿ ವಾಮಾಂಗ ಕುಸಿಯಲು (ಸೋಮಕು. ೩-೦೬). [ ಲಟಲಟ + — ಇಸು$_3$ ]

**ಲಟಹ** (ನಾ). ಸೊಗಸು ; ಸೌಂದರ್ಯ : ಪಱಿಯಂ ಪೊಯ್ಯಿಸೊಸೆದು ರಾಗಿಸಿ ತ್ರಿದಂಡಮನೆತ್ತಿ ಸೊರ್ಕಿದ ಪ್ರಜೆವೆರಸು ಲಟಹದಿಂದಾಡಿದೊಂ (ವಡ್ಡಾರಾ. ೦೯೦-೦೩); ಲಟಹ[ಪಾಠಾಂ. ನ]ಯುತಂಗಳ್ ದುಗ್ಧಚ್ಛಟೋಜ್ಜ್ವಲಂಗಳ್ ತದಮುರಚಮರರುಹಂಗಳ್ (ಅಜಿ. ೬-೩೦) ; ಆ ತರಳಾಪಾಂಗ ವಿಲಾಸಮಾ ಲಟಹಮಾ ಲಾವಣ್ಯಮಾ ಪುಣ್ಯಮಾ ದರಹಾಸಾಮೃತಮೇಂ ಮನಂಗೊಳಿಸಿತೋ (ಗದಾಯು. ೭-೩೦). [ಸಂ.]

**ಲಟಾಪಟ** (ನಾ). ಹೊಡೆದಾಟ ; ಗುದ್ದಾಟ : ನನಗೂ ಅವನಿಗೂ ಒಮ್ಮೆ ಆಗಿತ್ತು ಲಟಾಪಟ (ಪೀಠಿಪು. ೪) ; ಗಂಡ_ಹೆಂಡತಿ, ಮಾವ-ಅಳಿಯ ಇವರಿಗೆ ಲಟಾಪಟ ಜಗಳಗಳಾದದ್ದುಂಟು (ಸಂಹಾಸ. ೨೪) ; ದೊಣ್ಣೆಗಳ ಲಟಾಪಟ ಶಬ್ದ ಮುಂತಾಗಿ ಬಹಳ ಗದ್ದಲವು ಹತ್ತಿತು (ಬೀಬೀ. ೦೭೬). [ ← ಹಿಂ. ಮರಾ. ಲಟಾಪಟೀ]

**ಲಟ** (ನಾ). ಒಂದು ಬಗೆಯ ಭಕ್ಷ್ಯ : ಭಾಗ್ಯಪುರದ ಚೆನ್ನಿಗರಾಯಗೆ ಮಾಡಿದ ಸೇವೆ . . . ತುಪ್ಪದ ಲಟ ಬೆಲ್ಲದ ಕರ್ಜಾಯ ೧೦ ತಾಂಬೂಲಕೆ ಅಡಕೆಯ ಹೋಳು ೧೦ (ಎಕ. XI, ಹೊಳಲ್ಕೆ. ೦೦೩-೦೮ ; 1566). [?]

**ಲಟಿಕಿ** ' ನೆಟ್ಟಿಕೆ ' ನೋ.

**ಲಟಿಕಿಹೊಡೆ**. ಲಟಿಗೆಹೊಡೆ (ಕ್ರಿ). ಚಿಟಿಕೆಹಾಕು : ನಾನು . . . ಹೇಳಿದರೆ ನಿನ್ನ ಬಾಯಿ ತಾನೇ ಮುಚ್ಚುವುದು (ಲಟಿಕಿಹೊಡೆಯುವವಳು) (ಕಾದಪ್ಪ. ೬೩) : (ಅಳಲಿಸಿ ಲಟಿಕಿಹೊಡೆದು) ಕಾಲಾಯಿತಪ್ಪೈನಮ: ! (ಹೊಸಂಗಾ. ೪೦). **ಲಟಿಗೆಹೊಡೆ** : ಲಟಿಗೆಹೊಡೆದು ಮೋಜು ಗುದ್ದಿ . . . ಒಮ್ಮೆಲೆ ನನ್ನನ್ನು ಮಾತನಾಡಿಸಿದ (ಗಾಳಿ. ೨೦) ; ಲಟಲಟನೆ ಲಟಿಗೆ ಹೊಡೆಯುತಲಿಹವು ಮೊಗ್ಗೆಗಳು (ಕರುಣಾ. ೪೩-೦೩).
[ಲಟಿಕಿ ( < ನೆಟ್ಟಿಕೆ) + ಹೊಡೆ$_1$ ( < ಪೊಡೆ$_1$)]

**ಲಟಿಕೆ** 'ನೆಟ್ಟಿಕೆ' ನೋ.

**ಲಟಿಕೆಮುರಿ** 'ನೆಟ್ಟಿಗೆಮುರಿ' ನೋ.

**ಲಟಿಗೆ** 'ನೆಟ್ಟಿಕೆ' ನೋ.

**ಲಟಿಗೆಮುರಿ** 'ನೆಟ್ಟಿಗೆಮುರಿ' ನೋ.

**ಲಟಿಗೆಹೊಡೆ** 'ಲಟಿಕಿಹೊಡೆ' ನೋ.

**ಲಟುಕಿಕೆ** (ನಾ). ಒಂದು ಬಗೆಯ ಪಕ್ಷಿ : ಚಿಕ್ಕಹಕ್ಕಿಯಾದ ಲಟುಕಿಕೆ ಕೂಡ ತನ್ನ ಗೂಡಿನಲ್ಲಿ ಬೇಕಾದುದನ್ನು ಹೇಳಬಲ್ಲುದು (ಜಾತ್ರಸ. ೪೦).
[ < ಸಂ. ಲಟ್ವಾಕಾ ?]

**ಲಟುಕು** (ನಾ). ಸೊಗಸು ; ಸೌಂದರ್ಯ : ಸಾಮಾನ್ಯವಾಗಿ ಅಂಥ ಲಟುಕು ಅವರ ಸ್ವಂತದ್ದಾಗಿರುವುದು (ಸುಜ್ಞಾ. ೬೨). [ < ಸಂ. ಲಟಹ]

**ಲಟ್ಟ$_1$** (ನಾ). ದುಷ್ಟ ; ನೀಚ ; ಧೂರ್ತ : "ಲಂಡ — ಲಡ್ವ(ಟ್ಟ) = ಧೂರ್ತ, ಅಸಭ್ಯ" (ಕನ್ನಕೋ. ೩೬). [ಸಂ.]

**ಲಟ್ಟ$_2$** 'ಲತ್ತ' ನೋ.

**ಲಟ್ಟಣಿಗೆ** (ನಾ). ೧. ಚಪಾತಿ, ಹಪ್ಪಳ ಮೊದಲಾದುವನ್ನು ಲಟ್ಟಿಸುವ (ಮರದ) ಉರುಳೆಯಂಥ ಸಾಧನ; ರತ್ತೋಡಿ ; ಲತ್ತೋಡಿ ; ಲತ್ತೆಗುಣಿ : ಹಿಟ್ಟನು ಕೊಟ್ಟರೆ ಭಟ್ಟರು ರೊಟ್ಟಿಯ ಥಟ್ಟನೆ ಸುಟ್ಟು ಕೊಟ್ಟಾರು ಹಿಟ್ಟಿಲ್ಲದಿದ್ದರೆ ಕುಟ್ಟಿ ಲಟ್ಟಣಿಗೆಯ ಥಟ್ಟನೆ ಸಿಟ್ಟಿಗೆದ್ದಾರು (ಸಂಸ್ಕೃತಿ. ೦೩-೩೨) ; ಲಟ್ಟಣಿಗೆ : ೧೦" ಉದ್ದವಿರಬೇಕು (ಅಡುಗೆ. ೬೪). ೨. ಮುದ್ರಣಯಂತ್ರದಲ್ಲಿ ಜೋಡಿಸಿದ ಅಚ್ಚಿನ ಮೊಳೆಗಳಿಗೆ ಮಸಿಯನ್ನು ಹಚ್ಚುವ ಉರುಳುಕಂಬಿ ; ಉರುಳೆ : ಅಕ್ಷರಗಳೆಲ್ಲ ಆ ಕಲ್ಲ ಮೇಲೆ ಮೂಡುತ್ತವೆ . . . ಅದರ ಮೇಲೆ ಮಸೀ ಹಚ್ಚುವ ಲಟ್ಟಣಿಗೆಯನ್ನು ಆಡಿಸಿ, ಮೇಲೆ ಬಿಳೇ ಕಾಗದವನ್ನು ಹಾಕಿ ಒತ್ತಿದ ಕೂಡಲೆ ಅದರ ಮೇಲಿನ ಆ ಕಾಗದದ ಮೇಲೆ ಮೂಡುತ್ತವೆ (ಮುಂಬಯಿ. ೪-೨೦೩). [?-/ಮರಾ. ಲಾಟಣೇ, ಲಾಟಣೀ]

**ಲಟ್ಟನೆ** (ಅ). ಕೂಡಲೆ ಎಂಬರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಉದಾರ ಹುದ್ದರಿಗಳ ಲೆಕ್ಕಪತ್ರವನ್ನು ಲಟ್ಟನೆ ಗೋಡೆಗೆ ನೇತುಹಾಕಿದ ಪಾಟಿಯ ಮೇಲೆ ಹಚ್ಚಿಡುವ (ಮುಂಗಾರು. ೩೬); ಅದರ ವಾಸನೆ ನಿನಗೆ ಲಟ್ಟನೇ ಬಡೀತದ (ದೀಪಕ. II. ೬೩). [ಲಟ್$_0$ + — ಅನೆ$_1$]

**ಲಟ್ಟಲೂರ್**, ಲತ್ತಲೂರ್ (ನಾ). ಒಂದು ಊರಿನ ಹೆಸರು ; P ಈಗಿನ ಮಹಾರಾಷ್ಟ್ರದಲ್ಲಿರುವ ಲಾತೂರ್ : ಲಟ್ಟಲೂರ ಪುರಪರಮೇಶ್ವರಂ ಶ್ರೀನೃಪತುಙ್ಗನಾಮಾಙ್ಕಿತ ಲಕ್ಷ್ಮೀವಲ್ಲಭೇನ್ದ್ರಂ (ಇಇ. XII. ೨೦೮-೦೩; 814). **ಲತ್ತಲೂರ್** : ಲತ್ತಲೂರ್ ಪುರವರೇಶ್ವರರು (ಇಇ. XIX. ೦೬೬-೬: ೯೬೨).
[ ? + ಊರ್]

**ಲಟ್ಟವಾಡ** (ನಾ). ಒಂದು ಊರಿನ ಹೆಸರು : ಬಳ್ವಯಾಳೆದ್ದಾವದಸ್ವಾಸ್ತಃ ಲಟ್ಟವಾಡೊ(ಡೋ)ನಾಮಗ್ರಾಮಃ ತ್ರಿ(ತ್ಸ)ತೀಯಃ (ಇಇ. VII. ೨೦೪-೪೮ ; ಕು. 10೭ಪು ೬೩). [ಲಟ್ಟ$_0$ + ವಾಡ ( < ವಾಡ) ]

**ಲಟ್ಟಿಸು** (ಕ್ರಿ). (ಚಪಾತಿ, ಹಪ್ಪಳ ಮೊದಲಾದುವನ್ನು ಮಾಡಲು) ಹಿಟ್ಟಿನ ಉಂಡೆಯನ್ನು ಲಟ್ಟಣಿಗೆಯಿಂದ ಒತ್ತಿ ತೆಳ್ಳಗೆ ಮಾಡು : ಮೊನ್ನೆ ಬೇಸಗೆಯಲ್ಲಿ ಲಟ್ಟಿಸಿದ ಹಪ್ಪಳ, ಇಟ್ಟ ಸಂಡಿಗೆ, ತುಂಬಿಟ್ಟ ಉಪ್ಪಿನಕಾಯಿಭರಣಿ ಎಲ್ಲ ತೆರೆದಿತು (ಪಂಜು. ೦೬-೭); ಭವಾನಿಯು ಹಪ್ಪಳವನ್ನು ಲಟ್ಟಿಸುತ್ತಾ ಮಾರಿನಿಯೊಡನೆ ಹರಟೆ ಹೊಡೆಯುತ್ತಲಿದ್ದಳು (ಮೊಗ್ಗು. ೨೪). [ಲಟ್ಟ$_0$ (P ← ಮರಾ. ಲಾಟಣೇ) + — ಇಸು$_3$]

**ಲಟ್ಟೆ$_1$** (ನಾ). ೧. ನಾಲಗೆಯಿಂದ ಮಾಡುವ ಒಂದು ಶಬ್ದ,- ಧ್ವನಿ ; ಚಪ್ಪರಣೆ; ಲೊಟ್ಟೆ : ಆನೆ ಮುಂದಕ್ಕೆ ಹೊರಟಿತು . . . ಹಯಾತನು ಲಟ್ಟೇ ಹಾಕುತ್ತಲೇ ಇದ್ದ (ಕಂಗಾಳ್ಕ. ೨೧೨). ೨. ವ್ಯರ್ಥವಾದುದು ; ನಿಷ್ಪ್ರಯೋಜಕವಾದುದು : ' ಲಟ್ಟೆಕಾರ ' ಪರಾ.

**ಲಟ್ಟೆಹಾಕು**=ನಾಲಗೆಯಿಂದ ಶಬ್ದ ಮಾಡು : ಚಪ್ಪರಿಸು : ಹಯಾತನು ಕಪ್ಪಗಳಾಚೆ ನಿಂತು ಲಟ್ಟೆಹಾಕಿದನು (ಕಂಗಾಳ್ಕ. ೨೧೩).

**ಲಟ್ಟೆ$_2$** (ನಾ). ಎಳೆಯ ಬಿದಿರು; ಕಳಲೆ : ಎಳಮಾವಿನ ಮಿಡಿ ಮಾಗುಳ ಮೊಟಟಿನ ಕರ ಬೆತ್ತ ಲಟ್ಟೆಯಾಳೆಯ ಗೊಲೆಯಿಂದಳವಟ್ಟರೆ ಲಾವಣಕಂಗಳ ನಿಕ್ಕಿದರಾಗಳಟ್ಟಾಯಿಂದಂಗನೆಯರ್ (ಸುಕುಮಾ. ೦೦-೩೦). 'ಚಿತ್ರಲಟ್ಟೆ' ನೋ.

**ಲಟ್ಟೆ$_3$** (ನಾ). ಕೆಟ್ಟ ಹೆಂಗಸು ; ದುಷ್ಟೆ : ದಿಟ್ಟೆಯರು ಕುಟಿಲೆಯರು ಕುಹಕದ ಘಟ್ಟೆಯರು ಲಟ್ಟೆ[ಪಾಠಾಂ. ಮಟ್ಟೆ]ಯರು (ಬಸವ. ೪೦-೩೬).
[ ಸಂ. 'ಲಟ್ವಾ']

**ಲಟ್ಟೆಕಾರ** (ನಾ). ನಿಷ್ಪ್ರಯೋಜಕ ವ್ಯಕ್ತಿ : ಉಬ್ಬುಗುಣದಿಂದ ತೊಟ್ಟು ಋಣವನ್ನುಂಗುವರು . . . ಲಟ್ಟೆಕಾರರನೇರಿ ಘನ ಘಳಿಸಿ ಧರ್ಮಕ್ಕೆ ಥಟ್ಟನೆ ಪದಗುವವರು (ಅರಿತ್ಮೋಕ್ಷ. ೭-೪೦-೦೨). [ಲಟ್ಟೆ$_1$ + — ಕಾರ$_1$ ( < — ಕಾಱ)]

**ಲಟ್ಟೆಕಾರಿಕೆ** (ನಾ). ವ್ಯರ್ಥವಾದುದು ; ತಿರುಳಿಲ್ಲದುದು ; ಸತ್ತ್ವವಿಲ್ಲದುದು : ಹೊಟ್ಟೆಯ ಹೊರುವರು ಲಟ್ಟೆಕಾರಿಕೆಯ ಮಾತಾಡಿ ಜಗದೊಳು ಸಿಟ್ಟಲಿ ಮೆರವರು ಪ್ರಜ್ಞಾನಿ (ಅರಿತ್ಮೋಕ್ಷ. ೭-೪೬-೦೦).
[ಲಟ್ಟೆಕಾರ + — ಇಕೆ]

**ಲಥ್ಥ**, ಲಥ್ಥು (ಗು). ೧. ದಪ್ಪವಾದ ; ಸ್ಥೂಲವಾದ : ಈಗ ಯಜಮಾನನಾಗಿದ್ದಾನೆ. ಈ ಲಥ್ಥ ಹೊಟ್ಟೆಯವ (ಶಾರಶಿ. ೬೪). (ನಾ). ೨. ದಪ್ಪ; ಸ್ಥೂಲ : ಅಬ್ಬಾ ಎಷ್ಟು ಲಥ್ಥ ಆನೆಯಂತಿದ್ದಾಳಲ್ಲ (ಜ್ಞಿಶ. ೩); ಎರಡು ದಿನದಾಗ ಎಷ್ಟ ಲಥ್ಥ ಆಗೀನಿ ನೋಡ್ರಿ (ಕೃಶಿ. ೦೯೪). ೩. ಲಾಠಿ; ದೊಣ್ಣೆ : ಲಥ್ಥ ಹಿಡಿದ ಪೋಲೀಸಿನವನು ಗಸ್ತು ತಿರುಗುತ್ತಿದ್ದನು (ಲೂ೩). **ಲಟ್ಟ** : ೩. ಅವರುಗಳ ಕೈಯಲ್ಲಿ ಹಣವುಟ್ಟದ ಲಟ್ಟಗಳಿದ್ದುವು (ಕೆಂಗಾಕ್ಕೆ. ೯೪೭). [← ಹಿಂ. ಲಟ್ಠಾ ; ಮರಾ. ಲಥ್ಥ]

**ಲಡತ್ತು** (ನಾ). ಕುಸ್ತಿ; ಜಟ್ಟಿಕಾಳಗ; ಮಲ್ಲಯುದ್ಧ : ನನ್ನ ಎದುರಿಗೆ ಅವರನ್ನು ಲಡತ್ತು ಮಾಡಿಸುತ್ತಿದ್ದರು (ಕೆಂಪಿ. ೦೯೦). [← ಹಿಂ. ಲಡಂತ್]

**ಲಡಾಯ** ' ಲಡಾಯಿ ' ನೋ.

**ಲಡಾಯಿ**, ಲಡಾಯ, ಲಢಾಯಿ (ನಾ). ಯುದ್ಧ; ಕಾಳಗ : ಆಯುತದ ರಣರಾಜಕವ ನೋಡ್ದು ಭೀಷ್ಮನ ಲಡಾಯಿಯುಂವರಿದು ಗುರು ಪಹಿಲದಿಂ ಬರುತಲು (ಕುರಂಗ. ೩೩-೩೭); ಚಿತ್ರಗಲ್ಲ ಪಾಳೆಗಾರನು ಶೀರ್ಯದವರ ಮೇಲೆ ಲಡಾಯಿಗೆ ಬಂದಲ್ಲಿ (ಕೃಶಠ. ೨೯); ಬಡಾಯಿ ಬಲ್ಲವನು ಲಡಾಯಿ ಬಲ್ಲನೇ ? (ಗಾದೆ). **ಲಡಾಯ** : ಪೇರಳ ಲಡಾಯುವಾಗಿ ಅವರ ಕಡೇ ಸುಮಾರು ೧೫೦೦ ಜನ ಪರಿಯಂತ್ರ ಮೃತವಾಗಿ (ರಾಜೇಂದ್ರ. ೭); ಇಬ್ಬರಿಗೂ ಪದ್ಧತಿಯಂತ ಬೈಗುಳದ ಒಂದು ಲಡಾಯವೇ ನಡೆದುಹೋಯ್ತು (ಹುಲಿಹು. ೪೫೦). **ಲಢಾಯಿ** : ಊವವನೊಡನೆ ಏಕೆ ಲಢಾಯಿ ? (ಅರಳು. ೦೪೬-೦೦). [← ಹಿಂ. ಲಡಾಈ ; ಮರಾ. ಲಡಾಈ, ಲಢಾಈ]

**ಲಡಿ** (ನಾ). ದಾರ ಮುಂತಾದುವುಗಳ ನೀಳವಾದ ಮತ್ತು ಸಡಿಲವಾದ ಸುರುಳಿ, –ಸರ : ನಿದ್ದೆಗೆಟ್ಟು ದಾರದ ಲಡಿಗಳನ್ನು ಅಳೆದರು . . . ದಾರ ಕಡಿಮೆಯಿರುವುದರಿಂದ ಲಡಿಗಳನ್ನೆಲ್ಲ ನಿರಾಕರಿಸಬೇಕೆಂದು ದಾದಾಭಾಯಿ ಅಭಿಪ್ರಾಯಪಟ್ಟರು (ಹ್ಯಾಂಡ. ೬); ಗೂಡುಗಳನ್ನು ಸಂಗ್ರಹಿಸಿ, ಹಬೆಯಲ್ಲಿ ಇವನ್ನು ಬೇಯಿಸಿ ತುಂಡಾಗದ ಸಿಲ್ಕ್ನಾರನ್ನು ಲಡಿಗಳನ್ನಾಗಿ ಸುತ್ತುತ್ತಾರೆ (ಗೃಶಾ. ೬೬). [← ಹಿಂ. ಮರಾ. ಲಡ್, ಲಡೀ]

**ಲಡ್ಡ** (ನಾ). ದುಷ್ಟ ; ನೀಚ ; ಧೂರ್ತ : "ಲಂಡ–ಲಡ್ಡ(ಟ್ಟ) = ಧೂರ್ತ, ಅಸಭ್ಯ " (ಕರ್ನಾಟ. ೩೯). [ಸಂ.]

**ಲಡ್ಡಿ** ' ಲೊಡ್ಡು ' ನೋ.

**ಲಡ್ಡಿಕೆ** ' ಲಡ್ಡುಗೆ ' ನೋ.

**ಲಡ್ಡಿಗೆ** ' ಲಡ್ಡುಗೆ ' ನೋ.

**ಲಡ್ಡು**$_1$ ' ಲೊಡ್ಡು ' ನೋ.

**ಲಡ್ಡು**$_2$ (ನಾ). ಒಂದು ಬಗೆಯ ಸಿಹಿತಿನಿಸು ; ಲಾಡು : ಮನಕಕ್ಕರ ತೋರುವ ಬುಂದೆಗಳು ಕರದಿಕ್ಕಿದ ಜಿಲ್ಬಿಲಿ ಲಡ್ಡುಗಳು (ಜನಗ. ೪೭) ; ಲಡ್ಡು ತಿನ್ನುತ್ತೀಯಾ ? (ಕುಣಾಟಿ. ೦೮). ' ಲಾಡು ' ಪರಾ. [ಸಂ./ಹಿಂ. ಲಡ್ಡೂ ; ಮರಾ. ಲಡ್ಡು]

**ಲಡ್ಡುಕ** (ನಾ). = ಲಡ್ಡು$_2$ : ಲಡ್ಡುಕ ಪೂಪ ಗಾರಿಗೆ ಮುಂತಾದ ಪಲವು ಭಕ್ಷ್ಯಗಳ . . . ನೈವೇದ್ಯವೆತ್ತಿದನು (ಶಾಂತೀಶ. ೯-೯೪). [ಸಂ.]

**ಲಡ್ಡುಗ** ' ಲಡ್ಡುಗೆ ' ನೋ.

**ಲಡ್ಡುಗೆ**, ಲಡ್ಡಿಕೆ, ಲಡ್ಡಿಗೆ, ಲಡ್ಡುಗ (ನಾ). = ಲಡ್ಡು$_2$ : ಪಲವುಂ ತೆರದ ಲಡ್ಡುಗೆಗಳ್ ಮಂಡಗಗಳುಂ ಮೊದಲಾಗೊಡೆಯ ಪಲವುಂ ಭಕ್ಷ್ಯರೂಪಂಗಳುಮಂ ಕೊಂಡು (ಪಪ್ಯಾರಾ. ೦೪-೦೩) ; ಪಿಸದ ಲಡ್ಡುಗೆಯ ನಿಕ್ಕಿಯುಂ . . . ಗೆಲಲಾಜಿದ (ಶಂಕರಾ. ೨-೩೨ ಪ) ; ಹೂರಿಗೆಯ ಲಡ್ಡುಗೆಯ ಬೆಟ್ಟಂಗಳಲ್ಲಲ್ಲಿ (ಏಕರ. ೬-೦೦) ; ಮುಂಗಿಲ ಬೆನಕಗೆ ಲಡ್ಡುಗೆಗಳಾದವು ಸಮಸ್ತಗ್ರಹಸುಕಾರೆಗಳು (ಕುಪ್ಯಾತ. ೦೪-೦೬). **ಲಡ್ಡಿಕೆ** : ಸದ್ಧಕನಿಗಿಂತ ನೆಂಟನಿಲ್ಲ, ಲಡ್ಡಿಕೆಗಿಂತ ಕಜ್ಜಾಯವಿಲ್ಲ (ಗಾದೆ). **ಲಡ್ಡಿಗೆ** : ವಿಷದ ಲಡ್ಡಿಗೆ ಮೆದ್ದಿತು ಕೂಸು (ಭರಂಡ. ೦-೦೪-೨) ; ಲಡ್ಡಿ[ಶಾಕಾಂ. ಡ್ಡು]ಗೆಯ ಬಿಜ್ಜೂರಿಗೆಗಳಂ ಬಡ್ಡಿಸಿದರಂಗನೆಯರು (ಸುದೇಪು. ೦೬-೨೪); ತರಗು ಲಡ್ಡಿಗೆಗೆ ಪೊಳ್ಳು ಗಣಪತಿಯೇ ಶ್ರೇಷ್ಠ (ಗಾದೆ). **ಲಡ್ಡುಗ** : ವರದ ಪಾಶಾಂಕುಶಕ ಲಡ್ಡುಗದಿಂದೆ ಕರವೆಸೆವ . . . ಗಣನಾಥ ಕರುಣಿಸು ಮತಿಗೆ ಮಂಗಳವ (ಅಕ್ರೂಶ. ೦-೩). [< ಸಂ. ಲಡ್ಡುಕ]

**ಲಡ್ಡುಮರ** ' ಲೊಡ್ಡುಮರ ' ನೋ.

**ಲಢಾಯಿ** ' ಲಡಾಯಿ ' ನೋ.

**ಲತಾಂಗ** (ನಾ). ೧. ಬಳ್ಳಿಯಂತೆ ಬಳುಕುವ ಕೋಮಲವಾದ ಶರೀರ : ಕುಡಿಹುಬ್ಬು ಸಿಂಗಾಡಿಯೋಲ್ ಪೊಳೆವ ಪೊಂಬಣ್ಣದ ಲತಾಂಗ (ಕ್ರಿಶಂ. ೩-೨೬) ; ಮಾಲೆಗಾರ್ತಿಯರ . . . ಲತಾಂಗವಂ ತಾಗಿ, ಬೀಗಿ, ದಕ್ಷಿಣಾನಿಲನೆನಿತಿರೆ ಪಶ್ಚಿಮಾನಿಲಂ ಮೈದೋಜಲೊಡಂ (ರಾಜಾಶ. ೨-೨೭). ೨. [ಜೈನ] ದೀರ್ಘವಾದ ಕಾಲದ ಒಂದು ಅವಧಿ,—ಮಾನ : ಎಂಬತ್ತುನಾಲ್ಕುಲಕ್ಷ ಗುಣಿತಕ್ರಮದಿಂದ . . . ಲತಾಂಗ ಮತ್ತು ಲತಾ, ಮಹಾಲತಾಂಗ ಮತ್ತು ಮಹಾಲತಾ ಎಂಬವು ಕ್ರಮದಿಂದ ಆಗುತ್ತವೆ (ಜೈಪಶ. ೩೦೩). [ಸಂ.]

**ಲತಾಂಗಿ**, ಳತಾಂಗಿ (ನಾ). ೧. ಬಳ್ಳಿಯಂತೆ ಕೋಮಲವಾದ ಶರೀರವುಳ್ಳವಳು ; ಸುಂದರ ಸ್ತ್ರೀ : ನೀಳನೀರಜವನಂಗಳ ಚಿಲ್ಲುಗಳೆಂಬುವಾಲತಾಂಗಿಯ ಕಡೆಗಣ್ಣ ಬೆಳ್ಪುಗಳ ಸಿಲ್ಕಿದ ಸಿಲ್ಕಿನ ಸಿಲ್ಕಿವಲ್ಲವೇ (ಶಂಕಶಾ. ೯-೭೦) ; ತಲ್ಲಕಾಂಗಿಯು ನಾಮವಣ್ಣಲದೇವಿ (ಏಕಪ್ಪ. ೪೬-೪) ; ಬಂದೆತ್ತಿದರು ರಾಘವಪ್ರಾಣೆಯಂ . . . ಲಂಕಾಲತಾಂಗಿಯರ್ (ಶ್ರೀರಾಮಾ. ೬೨೩-೯೭). ೨. [ಸಂಗೀತ] ಒಂದು ರಾಗದ ಹೆಸರು : ಅವರು ಹಾಡಿದ ಲತಾಂಗಿರಾಗದ ಕೀರ್ತನೆ ತುಂಬ ಸೊಗಸಾಗಿತ್ತು (ಕೂ೩). **ಳತಾಂಗಿ** : ೧. ಪಕ್ಕ ಸೋವ ಳತಾಂಗೀಜನದೊಂದು ಮೆಲ್ಲುಲಿವಿವುದುಂ ಕೇಳ್ದು (ಜಗಪ. ೨-೩). [ ಸಂ. ಲತಾಂಗೀ (ಲತಾ + ಅಂಗ + —) ]

**ಲತಾಂತ** (ನಾ). ಹೂವು ; ಪುಷ್ಪ : ವಿಕಸಲ್ಲತಾಂತಮಂಜರಿ ಫಲದೇಟಿಗೆಯುಂ ನೆಟೆಯಿ ಪೇಟ್ಟವೋಲ್ (ಕಾರಲು. ೩೯೭) ; ವಿಕ್ರಯಿಪರ್ ಸತಿಯರ್ ಲತಾಂತಮಂ (ಜಗಪ. ೨-೨೪) ; ಅಂತೊಳಗೆ ಪುದುಗಿರ್ದ ಮಿವುಳದೊಳೊಪ್ಪುವ ಲತಾಂತಕುಟ್ಮಲದಂತೆ (ಕೈಪಿಡಾ. ೦೬-೦೯). [ಸಂ.]

**ಲತಾಕರ** (ನಾ). [ನಾಟ್ಯ] ಮೂವತ್ತು ವಿಧವಾದ ನೃತ್ತಹಸ್ತಗಳಲ್ಲಿ ಒಂದು ; P "ಪತಾಕ ಅಥವಾ ತ್ರಿಪತಾಕಹಸ್ತಗಳೆರಡನ್ನು ಜೋತು ಬಿಟ್ಟು ಅಡ್ಡಲಾಗಿ ನೀಡುವುದು " (ಲಾಸ್ಯರಂ. ೨೫೦ ಗದ್ಯಾನುವಾದ) : ಚತುರಸ್ರ, ಉದ್ವೃತ್ತ . . . ಕೇಶಬಂಧ, ಲತಾಕರ, ಕರಿಹಸ್ತ . . . ವಲಿತ, ಲಲಿತ—ಈ ಮೂವತ್ತು ನೃತ್ತಹಸ್ತಂಗಳ್ (ಲಾಸ್ಯರಂ. ೨-೪೪ ಪ). [ಸಂ.]

**ಲತಾಕ್ಷೇಪ** (ನಾ). [ನಾಟ್ಯ] ಮೂವತ್ತೈದು ಬಗೆಯ ದೇಶೀಯ ಭಾವಚಾರಿಗಳಲ್ಲಿ ಒಂದು ; P "ಕಾಲನ್ನು ಹಿಂದಕ್ಕಿರಿಸಿ ಪುನಃ ಮುಂದಕ್ಕೆ ನೀಡಿ ನೆಲವನ್ನು ಕುಟ್ಟುವುದು" (ಲಾಸ್ಯರಂ. ೬೩೩ ಗದ್ಯಾನುವಾದ): ಭುರಿಕಂ ವಿಸ್ಫುರಿಪ ನಿಕುಟ್ಟನಂ ಲತಾಕ್ಷೇಪಾಖ್ಯಂ (ಲಾಸ್ಯರಂ. ೬-೦೨). [ಸಂ.]

**ಲತಾಗೃಹ** (ನಾ). ಬಳ್ಳಿಮಾಡ ; ಲತಾಮಂಟಪ : ಲತಾಗೃಹದೊಳ್ಪುಮಲ್ಲಿಕಾಕುಸುಮದ ಬೆಳ್ಪು . . . ತಮಾಲದ ಸುರ್ವು ಸುತ್ತಲುಂ (ಸುಕುಮಾ. ೯-೪೯) ; ವನಲತಾಗೃಹಂಗಳೊಳ್ ವಿಶ್ರಮಿಸುತ್ತೆ (ಪುಷ್ಪಕ. ೯-೯೪ ಪ). [ಸಂ.]

**ಲತಾಡ** (ನಾ). ಹಿಂಸೆ ; ಕಾಟ ; ತೊಂದರೆ ; ಇಬ್ಬರೂ ನನ್ನದು ತನ್ನದು ವಂದು ಮಗುವನ್ನು ಎಳೆದಾಡಿದರು. ಆ ಹಸುಳೆಯು ಈ ಲತಾಡವನ್ನು

ಸಹಿಸಲಾರದೆ ಗಟ್ಟಿಯಾಗಿ ಅತ್ತಿತು (ಸೀತಾರಾ. X, ೦೯).
[← ಹಿಂ. ಲತಾಡ್]

**ಲತಾಬಂಧ** (ನಾ). ಜಟ್ಟಿಕಾಳಗದ ಒಂದು ವರಸೆ : ಮಲ್ಲಯುದ್ಧದ ಒಂದು ಪಟ್ಟು : ಉರೋಬಂಧಂ ಲತಾಬಂಧಮುಜ್ಜ್ವಳಶಾಖಾಚರಬಂಧಂ ಚಮತ್ಕರಿಸೆ ನಾನಾಕೌಶಲಂದೋಱಿದರ್ (ಕಬಕಂ. ೪-೭೫). [ಸಂ.]

**ಲತಾಲೀಢ** (ನಾ). ಬಳ್ಳಿಗಳಿಂದ ಆವರಿಸಿದುದು : ಲತಾಮಂಟಪ : ಪುರವೆಲ್ಲಂ ಮಾಡದಿಂದಲ್ಲಿಪೊ ಪುರವನಮೆಲ್ಲಂ ಲತಾಲೀಢದಿಂ ಗೋಪುರ ಮೆಲ್ಲಂ ಚೈತ್ಯಗೇಹಂಗಳಿಂ . . . ರಂಜಿಸೆ (ಮಲ್ಲಿಪು. ೨-೩). [ಸಂ.]

**ಲತಾವೃಶ್ಚಿಕ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು; "ಒಂದು ಕಾಲನ್ನು ಚೇಳಿನ ಬಾಲದಂತೆ ಹಿಂದಕ್ಕೆತ್ತಿ ಎಡಗೈಯನ್ನು ಲತಾ ಹಸ್ತದಲ್ಲಿ ಹಿಡಿಯುವುದು. ವಿ–ಆಕಾಶದಿಂದ ಬೀಳುವುದನ್ನು ಅಭಿನಯಿಸುವಾಗ" (ಲಾಸ್ಯರಂ. ೨೯೭ ಗದ್ಯಾನುವಾದ) : ವೃಶ್ಚಿಕರೇಚಿತ ಲತಾವೃಶ್ಚಿಕ . . . ಗಂಗಾವತರಣ — ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ಸಂ.]

**ಲತಾವೇಷ್ಟನ** (ನಾ). [ಕಾಮಶಾ] ಹನ್ನೆರಡು ಬಗೆಯ ಆಲಿಂಗನಗಳಲ್ಲಿ ಒಂದು : ಪುಷ್ಕರ ವಿವಿಧಕ . . . ಲತಾವೇಷ್ಟನ . . . ಎಂಬ ದ್ವಾದಶ ವಿಧಾಲಿಂಗನಂಗಳಿಂ (ವಿವೇಕ. ೨೨೯) ; ನಿಂದಿರ್ದ ಪುರುಷನಂ ಸ್ತ್ರೀಯರು ಮರನನು ಬಳ್ಳಿ ಹ್ಯಾಗೆ ಹತ್ತುವುದೋ ಹಾಗೆ . . . ಪುರುಷನಂ ಬಾಗಿಸು ವಳು. ಇದು ಲತಾವೇಷ್ಟನವೆಂಬ ಆಲಿಂಗನ (ಕಾಮಶಾ. ೨೨೨). [ಸಂ.]

**ಲತಿಕಾಗೃಹ** (ನಾ). = ಲತಾಗೃಹ : ಓರೊರ್ವರ್ ಸುರಭಿಪರಿಮಳೋದ್ಗಾರಿಸ್ಮೇರಕುಸುಮಮಂಜರೀನಿಕರಭರವಿನತಲತಿಕಾಗೃಹಂಗಳೊಳ್ ಭ್ರಮರ ಮಿಥುನದಂತೆ ಪುಷ್ಪಾಪಚಯದಿಂ ಭ್ರಮಿಸಿಯುಂ (ಚಂದ್ರಪ್ರ. ೩-೨೯ ವ). [ಸಂ.]

**ಲತಿಕೆ** (ನಾ). ಸಣ್ಣ ಬಳ್ಳಿ ; ಹಂಬು : ಲತಿಕಾಲಾಸ್ಯೋಪದೇಶವ್ಯಸನ . . . ಚಂಚಚ್ಚಂಚರೀಕಂ (ಕಾದಂಪೂ. ೦೪೭) ; ಚಲುವ ಕಣ್ಣಾಪನಂಬಕಂಗಳ ತಳಿರ್ವ ಲತಿಕೆಗಳೋ (ವಿಸಪ. ೦೬-೮೪). [ಸಂ. ಲತಿಕಾ]

**ಲತೆ**, ಳತೆ (ನಾ). ೧. ಹಬ್ಬುವ ಸಸ್ಯ ; ಬಳ್ಳಿ ; ಹಂಬು : "ಲತಾ, ಪ್ರತಾನಿನೀ, ವಲ್ಲೀ, ವ್ರತತೀ, ಪ್ರತತಿಃ — ಈ ೫ ಬಳ್ಳಿ" (ಹಲಾಯು. ೩೦-೨೭) : ಮಡಲ್ತು ಪೂತ ಲತೆಗಳ್ ಕೆಯ್ಗೆಯ್ದು[ಪೂ]ನೀಡಲ್ಕರ್ಘ್ಯಮನೀವಂತೆವೊಲಾದುದು (ಶಂಕರಾ. ೭-೭೭) ; ಲತೆಗಳ ಜನ್ಮಭೂಮಿ ಪುಳಿನಂಗಳ ಪೆರ್ಗಣಿ . . . ಸಾಲ ತಣ್ಣೆಲ ತಾಯ್ಮನೆ ತಾನೆನಿಸಿರ್ದುದಾ ವನಂ (ಕುಸುಮಾ. ೦೦-೧೭೯) ; ಕುಸುಮಕಿಸಲಯಲತಾಶೋಭಿತದ ರಮಣೀಯಗಂಧಬಂಧುರದೇವಕಾನನ (ತ್ರಿಲಾಪು. ೦೦-೨೭೯). P ಸುಕುಮಾರವಾದುದು ಎಂಬ ಅರ್ಥದಲ್ಲಿ ಕೆಲವು ಮರಗಳ ಹೆಸರುಗಳ ಕೊನೆಗೂ ಈ ಶಬ್ದ ಸೇರಿ ಬರುವುದುಂಟು. ಉದಾಹರಣೆಗೆ—'ಕಲ್ಪಲತೆ', 'ಚೂತಲತೆ'. ೨. ಕೊಂಬೆ; ರೆಂಬೆ : "ಶಾಖಾ. ಲತಾ . . . ೨ ಕೊಂಬೆಗಳ ಹೆಸರುಗಳು, ರೆಂಬೆಗಳು" (ಸಿದ್ಧಾಂತಿ. ೧೦೨). ೩. ಒಂದು ಬಗೆಯ ಸಸ್ಯ ; ಪ್ರಿಯಂಗು : "ಶ್ಯಾಮಾ, ಮಹಿಲಾಹ್ವಯಾ, ಲತಾ . . . ಪ್ರಿಯಕಃ — ೧೨ ಪ್ರೇಂಕಣ ಗಿಡದ ಹೆಸರು ; ಪ್ರಿಯಂಗು ಪ್ರಸಿದ್ಧವಾದದ್ದು" (ಸಿದ್ಧಾಂತಿ. ೦೨೪). ೪. ಒಂದು ಬಗೆಯ ಗಂಧದ್ರವ್ಯ ; ಸ್ಪೃಕ್ಕೆ : "ಮರುನ್ಮಾಲಾ, ಪಿಶುನಾ, ಸ್ಪೃಕ್ಕಾ, ದೇವೀ, ಲತಾ . . . ಲಂಕೋಯಿಕಾ—೧೦ ಸ್ಪೃಕ್ಕೆಯೆಂಬ ಗ್ರಂಥದ್ರವ್ಯ ; ಸಂಕೇಬೇರು" (ಸಿದ್ಧರಾ. ೦೪೩). ೫. ಕಂಗೊಂಗೆ ಗಿಡ ; ಮಿಂಚುಬಳ್ಳಿಗಿಡ : "ಪಾರಾವತಾಂಘ್ರೀಃ, ಕಟಭಿಃ, ಪಣ್ಯಾ, ಜ್ಯೋತಿಷ್ಮತೀ, ಲತಾ — ೫ ಕಂಗೊಂಗೇಗಿಡ, ಕಂಗೊಂದೀಗಿಡ, ಮಿಂಚುಬಳ್ಳೀಗಿಡ" (ಸಿದ್ಧಾಂತಿ. ೦೪೭). ೬. ಒಂದು ಬಗೆಯ ಬಳ್ಳಿ ; ತೊಟ್ಟಿ : "ಗೃಹಭೇದ ಲತೆಯೊಳು ತೊಟ್ಟಿ" (ಕಬ್ಬಮಂ. ೯೦). ೭. [ಜ್ಯೈಸ] ಒಂದು ಕಾಲಗಣನೆ : ಎಂಬತ್ತುನಾಲ್ಕುಲಕ್ಷ ಗುಣಿತಕ್ರಮದಿಂದ . . . ಲತಾಂಗ ಮತ್ತು ಲತಾ . . . ಎಂಬಿವು ಕ್ರಮದಿಂದ ಆಗುತ್ತವೆ (ಕೃಪಕ. ೩೦೭). ೮. [ನಾಟ್ಯ] ನೃತ್ತಹಸ್ತಗಳಲ್ಲಿ ಒಂದು : ಈ ಕೆಳಗೆ ಹೇಳಿರುವ ಹಸ್ತಗಳು ನೃತ್ತಹಸ್ತಗಳು — ಚತುರಸ್ರ, ಉದ್ವೃತ್ತ . . . ಕೇಶಬಂಧ, ಲತಾ, ಕರಿಹಸ್ತ (ಅಭಾಸ್ಯ. ೯೯). ಳತೆ : ೧. ಕಂದಳಿಗೊಂ ಚಲ ಚೆಲ್ಲಣಂ ಪ್ರವಾಳಳತೆಯ ಬಾಲಗಜ್ಜೆ (ಲೀಲಾವ. ೦೦-೭೫). 'ಳತಾಂಗಿ' ಪರಾ. [ಸಂ. ಲತಾ]

**ಲತೆಯಿಱು** (ಕ್ರಿ). (ವಿಲೆಯಂತೆ) ತೆಳ್ಳಗೆ ಒತ್ತು.— ಲಟ್ಟಿಸು : ಪಿಟ್ಟಿಯ ಹಿಟ್ಟನೊತ್ತಿ ಲತೆಯಿಱಿದೆರಡು ಬಟ್ಟಲ ನಡುವೆಯಿರಿಸಿ ಯೆರಡ ಱಂಚುಗಳ ಮುಚ್ಚಿರಿದು (ಸೂಪಶಾ. ೦-೧೦) ; ಗೋದುವೆಯ ಹದನಾಗಿ ಹಿಟ್ಟು ಮಾಡಿ ಎಣ್ಣೆಯೊಳು ಕಲಸಿ ಹಪ್ಪಳದಂತೆ ಲತೆಯಿಱಿದು (ಸೂಪಶಾ. ೦-೪೫).
[ಲತೆ + ಇಱು]

**ಲತೆವನೆ** (ನಾ). = ಲತಾಗೃಹ : ಲತೆವನೆಯೊಳಗಣ ತಣ್ಪುಱಲ ತಾಣ ದೊಳ್ ಕುಸುಮದೆಸಟಿ ಪಸೆಯಂ ಸೀತಾಪತಿಗೆ ಸಮೆದಂ ಸುಮಿತ್ರಾಸುತಂ (ತೊರರಾಮಾ. ೬-೩) ; ಕಾಂತೆಯನೆಯ್ದೆ ಪಸದನಂಗೊಳಿಸಿ ಲತೆವನೆಯೊಳಿರಿಸಿ (ಸಾಳ್ವಭಾ. ೨೭-೪). [ಲತೆ + ಮನೆ]

**ಲತ್ತ** 'ನೆತ್ತ₁' ನೋ.

**ಲತ್ತಲೂರ್** 'ಲಟ್ಟಲೂರ್' ನೋ.

**ಲತ್ತಾಪ್ರಹಾರ** (ನಾ). ಕಾಲಿನಿಂದ ಒದೆಯುವಿಕೆ; ಒದೆತ: ಅವನ ರಥವನ್ನು ಮುರಿದು ಸಾರಥಿಯನ್ನು ಕೊಂದು ಅವನ ಎದೆಗೆ ಲತ್ತಾಪ್ರಹಾರ ಮಾಡಿದನು (ಕುಳಸೀ. ೩೧೦) ; ಈ ಅತ್ತಿಮರದ ಕಟ್ಟಿಗೆಯ ಕದವು ನಿನ್ನ ಲತ್ತಾಪ್ರಹಾರಕ್ಕೆ ಮುರಿಯುವುದೆ? (ಅಂಬಿಕೆ. ೦೩೪). [< ಲತ್ತೆ + ಪ್ರಹಾರ]

**ಲತ್ತೆ**, ಲಾತ, ಲಾತು (ನಾ). ೧. = ಲತ್ತಾಪ್ರಹಾರ : ನಿನಗೂ ಲತ್ತೆ ಬೀಳಲಿಕ್ಕಿಲ್ಲ (ಮುಂಬಯಿ. ೩-೭೩) ; ಅಂದು ಅವನಿಗೆ ಮನೆಯಲೆರಡು ಲತ್ತೆಗಳು ಬಿದ್ದವು (ದಾಸಹು. ೦೦) ; ಕುದುರೆಗೆ ಇಷಾರೆ, ಕತ್ತೆಗೆ ಲತ್ತೆ (ಗಾದೆ). **ಲಾತ** : ೨. ಏಟು ; ಹೊಡೆತ ; ಪೆಟ್ಟು : ಒಂದು ದಿನ ತಪ್ಪಿಸಿ ಕೊಂಡರೆ ಮಾರನೆಯ ದಿನ ಆರಾರು ಲಾತಗಳು (ಸ್ವಾಮಿಸ್ಮೃ. ೦೪೭) ; ಯಾವಾಗಲೂ ಮುಟ್ಟಿ ನೋಡಿಕೊಳ್ಳುವಂಥ ಲಾತ ಕೊಡುತ್ತೇನೆ (ಶ್ರೀವರು. ೪೩೭); ನಾಲ್ಕು ಲಾತ ಬಿಗಿದು ಇವನಿಗೆ ಬುದ್ಧಿ ಕಲಿಸೋದು (ಹೊಸಕ್ಷಿ. ೦೦೫). **ಲಾತು** : ೨. ಮಗು ಆದರೆ ಎರಡು ಲಾತು ಬಿಗಿದು ಬುದ್ಧಿ ಕಲಿಸಬಹುದು (ಬೀಮಶಾ. ೦೫೭). ೩. (ಆಲಂ) ಮೋಸ ; ದಗಾ : ನಿನ್ನನ್ನು ನೋಡಿದರೆ ಮನೆಗೆ ಲಾತು ಕೊಟ್ಟು ಬಂದವಳೆಂದು ತೋರುತ್ತದೆ (ಕದಂಬ. ೭೪).

**ಲತ್ತೆತಿನ್ನು**=ಒದೆಯಿಸಿಕೊಳ್ಳು : ಲತ್ತೆ ತಿಂದ ತಿಂಮನ ನೆತ್ತಿಯಿಂದ ರಕ್ತ ಸುರಿಯುತ್ತಿದ್ದರೂ . . . ಸುಮ್ಮನೆ ಕುಳಿತಿದ್ದನು (ತಿಂಮನ. ೬೦). **ಲತ್ತೆಹೊಡೆ**=೧. ತ್ಯಜಿಸು ; ಬಿಡು : ತನ್ನ ನೌಕರಿಗೆ ಲತ್ತೆಹೊಡೆದು ಅವರೊಂದಿಗೆ ಹೋಗಿಬಿಡೋಣ ಎಂದೆನಿಸುತ್ತಿತ್ತು (ವೋಪವು. ೦೦೭). ೨. (ಆಲಂ) ಕೆಡುಕಾಗು; ದುರದೃಷ್ಟ ಒದಗು; ಗ್ರಹಚಾರ ಬಡಿ : ಅವನಿಗೆ ಲತ್ತೆ ಹೊಡೆಯಿತು (ರೂಢಿ).

[<ಪ್ರಾ. ಲತ್ತಾ, ಲತ್ತಿಆ./ಹಿಂ. ಲತ್ತೀ, ಲಾತ್; ಮರಾ. ಲತ್ತಾ, ಲಾತ್, ಲಾಥ್]

**ಲತ್ತೆಗುಣಿ** (ನಾ). ಲಟ್ಟಿಸಲು ಬಳಸುವ ಸಾಧನ ; ಲಟ್ಟಣಿಗೆ: "ಲಟ್ಟಿಸುವ ಉಳಕ" (ಚಾವಕೋ. ೪೨). [?]

**ಲತ್ವ** (ನಾ). = ಲಕಾರ : ದ ದವಂಗಳ ಪರವಾಗೆ . . . ಕೊಲ್ ಸಲ್‌ಗಳ ಲತ್ವಕ್ಕಂ ನಕಾರಾದೇಶಂ (ಶಮದ. ೨೭ ವೃತ್ತಿ); ಶ್ಲೋಕದ ಲತ್ವಕ್ಕೆ ದುರ್ಜನ ರೆಮರೊಳು ಲೋಪವೆ ಸಂಭವಿಸುವುದು (ಇಂಶಾಕ. ೨೦೫-೭೭). [ಸಂ]

**ಲದ್ದಿ** (ನಾ). ಆನೆ, ಕುದುರೆ, ಕತ್ತೆ, ಒಂಟೆ ಮೊದಲಾದುವುಗಳ ಮಲ :

"ಲದ್ದಿಯೆನೆ ಲಂಡಮಕ್ಕುಂ" (ಮಂಗರಾ. ೯೭-೬); ಕರಮಾಮದೊಳೊಂದಿ ಲದ್ದಿ ಪೋಪೊಡಮದು ಶೂಲೆಯೆಂದಱಿದು ವಾಜಿಗೆ ಪಿಪ್ಪಲಿ ಶುಂಠಿ ಸೈಂಧವಂ ಗಿಡಿವುದು ಮೂಗಿನೊಳ್ (ಲೋಕೋಪ. ೯-೨೨೬); ಇದ್ದು ಉಣದಿಪ್ಪ ಬಾಯೊಳಗೆ ಕತ್ತೆಯ ಲದ್ದೆ [ದ್ದಿ]ಯೇ ಬೀಳ್ಗು (ಸರ್ವಜ್ಞ. ೬೫೫); ವೃದ್ಧಿ ದುಡಿಮೆಯ ಹಾಗೆ ಶುದ್ಧಿ ವಿವಾಹದ ಹಾಗೆ ಲದ್ದಿ ಆಹಾರದ ಹಾಗೆ (೨೦ಶಾಶ. ೮೨-೯೯). [<ಪ್ರಾ. ಲದ್ದೀ]

**ಲದ್ದಿಗುತ್ತ** (ನಾ). ದನಕರುಗಳಿಗೆ ಬರುವ ಒಂದು ಬಗೆಯ ರೋಗ ; ಲದ್ದಿಗೆ ಸಂಬಂಧಿಸಿದ ರೋಗ : ಅನುಲೋಮವಾಗಿ ವಾಜಿಗೆ ಜನಿಯಿಸೆ ಬಲವೆರ್ದೆಯು ಲದ್ದಿಗುತ್ತಂ ಪಿರಿದಪ್ಪಿನಮಲ್ಲಿ ಕಜ್ಜಿ ಗಟ್ಟುವುವನುನಯದಿಂ ಕುಡುಗೆಣ್ಣೆಯಂ ನವರಸಮಂ (ಅಶ್ವಶಾ. ೭-೨೬). [ಲದ್ದಿ+ಕುತ್ತ]

**ಲದ್ದಿಬೇನೆ** (ನಾ). = ಲದ್ದಿಗುತ್ತ : ಕುದುರೆಗಳಿಗೂ ದನಗಳಿಗೂ ಬರುವ ಸಾಂಕ್ರಾಮಿಕರೋಗವಾದ 'ಅಂತ್ರಾಕ್ಸ್' (ಲದ್ದಿಬೇನೆ, ಗಂಟ್ಲುಕಟ್ಟು) ಎಂಬುದು ಲಂಡನ್ನಿನಲ್ಲಿ . . . ಅಂಟಿಕೊಂಡ ವಿಷಯವು ಬಹಳ ವಿಚಿತ್ರವಾಗಿರುವುದು (ವಿಜ್ಞಾ. ಶ. ೨೨೩). [ಲದ್ದಿ+ಬೇನೆ]

**ಲದ್ದು, ಲದ್ದೆ** (ನಾ). ಹೊರೆ ; ಹೇರು ; ಭಾರ : ಕಟ್ಟಿಗೆಯ ರಾಶಿಗೆ ೧ ರೂಪಾಯಿ ; ಒಂದು ಎತ್ತಿನ ಲದ್ದಿಗೆ ಒಂದಾಣೆ, ಗಂಡಸಿನ ತಲೆಹೊರೆಗೆ ೧ ದುಡ್ಡು (ಕಪಾಗ. ೩೪). **ಲದ್ದೆ** : ಈತನೇ ಒಕ್ಕಲಿಗ ಮುದ್ದಯ್ಯ ನೆಂಬಾತನೀತನೇ ಲದ್ದೆಯಾ ಸೋಮಯ್ಯನೆಂಬಾತನು (ಚೆಂಬ. ೫೭-೫೬) ; ಚನ್ನಯ್ಯಗಳು ಲದ್ದೆಯ ಹುಲ್ಲು ಸೋಮಯ್ಯಗಳು ಬಡತನದಲ್ಲಿ ಶಿವನೊಳು ಬೆರಸಲಿಲ್ಲವೆ (ಸುಶಾರ. ೯೭-೭).

[←ಹಿಂ. ಲಾದಿ, ಲದಾವ್ ; ಮರಾ. ಲಾದಾ]

**ಲದ್ದೆ** 'ಲದ್ದು' ನೋ.

**ಲಪಟಾಯಿಸು** (ಕ್ರಿ). ಪರರ ವಸ್ತುವನ್ನು ಸ್ವಾಧೀನಪಡಿಸಿಕೊಳ್ಳು.— **ಎತ್ತಿ ಹಾಕು** : ವಿಷ್ಣು, ಲಕ್ಷ್ಮಿ, ಕೌಸ್ತುಭ ಮುಂತಾದ ಅನರ್ಘ್ಯರತ್ನಗಳನ್ನೆಲ್ಲಾ ತಾನೇ ಲಪಟಾಯಿಸಿ, ಏನೂ ತಿಳಿಯದ ಈಶ್ವರನಿಗೆ ವಿಷವನ್ನು ಕುಡಿಸಿಬಿಟ್ಟನು (ಶಿವಂಶಾ. ೭೦); ಸಾಮಾನ್ಯಜನರ ಆಸ್ತಿಪಾಸ್ತಿಗಳನ್ನು ಲಪಟಾಯಿಸಿಕೊಂಡಿದ್ದ (ಭುವರು. ೩೯೭).

[?+—ಇಸು₃. / ತೆಲು. ಲಪಟಾಯಿಂಚು, ಲಪ್ಪಾಯಿಂಚು]

**ಲಪನ** (ನಾ). ೧. ಮಾತನಾಡುವುದು; ನುಡಿಯುವುದು. ೨. ಮುಖ; ವದನ : "ವದನಮಾನನಮಾಸ್ಯಂ . . . ಲಪನಂ ವಕ್ತ್ರಂ ಮೊಗಕ್ಕೆ ನಾಮಂ" (ಪಸ್ತುಕೋ. ೬೯-೦೫); ಲಪನಂ ಕಾರುಣ್ಯಮಂ ಕನ್ನಡಿಪೆ (ಅರ್ಥಸೇ. ೦-೨೦); ಮತ್ತೊಂದು ದೆಸೆಗೆ ಲಪನವನ್ನೆದೆ ತಿರುಪಲಾ ಠಾವಿಗೆಯ್ದೆ (ಪಿಕ್ಕೃಪು. ೩-೨-೭೦). [ಸಂ.]

**ಲಪಾಡಿಸು** (ಕ್ರಿ). ಸುತ್ತು; ಕಟ್ಟು : ಝಗಾ ಆರ ಹಾಕರೀ ! ಲುಂಗೀ ಆರ ಸುತ್ತರೀ; ಲಂಗಟಾ ಆರ ಲಪಾಡಸರಿ! (ಸವಜಾ. ೨೯೩).

[ಲಪಾಡು₀ (← ಹಿಂ. ಲಪೇಟನಾ)+—ಇಸು₃]

**ಲಪಿತ** (ನಾ). ೧. ಮಾತಾಡಿದುದು; ಹೇಳಿದುದು : "ಉಕ್ತಂ, ಭಾಷಿತಂ, ಉದಿತಂ, ಜಲ್ಪಿತಂ, ಆಖ್ಯಾತಂ, ಅಭಿಹಿತಂ, ಲಪಿತಂ—೭ ಹೇಳಲ್ಪಟ್ಟದ್ದು ನುಡಿಯಲ್ಪಟ್ಟದ್ದು" (ಸಿದ್ಧಾಂಶಿ. ೩೩೨). ೨. ಮಾತು; ನುಡಿ. [ಸಂ.]

**ಲಪಿಸು** (ಕ್ರಿ). ಹೇಳು; ನುಡಿ : ಜಿಹ್ವೆಯನ್ನಲುಗಿ ಮಾಳ್ಪ ಜಪವೆ ರಸನಾಧಿಕಂ ಮೌನದಿಂ ಚಿತ್ತದೊಳ್ ಲಪಿಸುವುದೆ ಮಾನಸಿಕಂ (ವಂಶಾರಾ. ೨-೦೩-೩೪). [ಲಪನ+—ಇಸು₃]

**ಲಪೇಟ**, ಲಪ್ಪಟ್ಟೆ, ಲಪ್ಪಾಟಿ (ನಾ). (ತಲೆಗೆ ಅಥವಾ ಸೊಂಟಕ್ಕೆ) ಸುತ್ತಿಕೊಳ್ಳುವ ಬಟ್ಟೆ : ಸಣ್ಣ ಪಂಚೆಯೊಂದನ್ನು ಲಪೇಟಿಯಂತೆ ಅಡ್ಡ ಸುತ್ತಿಕೊಂಡಿದ್ದ (ಹುಚ್ಚುಮು. ೬೦). **ಲಪ್ಪಟ್ಟೆ** : ತಲೆಗೆ ಒಂದು ಲಪ್ಪಟ್ಟೆ ಕಟ್ಟಿ ಹೊರಟೇ ಬಿಟ್ಟರು (ರೂಪ). **ಲಪ್ಪಾಟಿ** : ಕೇಶವರಾಯನು ತಲೆಗೆ ಲಪ್ಪಾಟಿಯನ್ನು ಸುತ್ತಿ . . . ಎದುರಿಗೆ ಬರುತ್ತಿದ್ದ ದಾಸಪ್ಪನನ್ನು ಕಂಡನು (ಕಥಾ. ೩). [← ಹಿಂ. ಮರಾ. ಲಪೇಟಾ]

**ಲಪ್ಪಟ್ಟೆ** 'ಲಪೇಟ' ನೋ.

**ಲಪ್ಪಾಟಿ** 'ಲಪೇಟ' ನೋ.

**ಲಫಂಗ** (ನಾ). ಪುಂಡ ; ದುರಾಚಾರಿ : ಹೋದಲ್ಲೆಲ್ಲ ತನ್ನ ಚರಿತ್ರಹೀನತೆಯನ್ನು ಪ್ರದರ್ಶನಕ್ಕಿಡುವ ಲಫಂಗ (ವಾತ್ಸಲ್ಯ. ೩೨೩); ಊರಾಗಿನ ಲಫಂಗರದು ಬೆಂಬಲ ಆದ (ಬೀಶಕ. II, ೦೦೩).

[← ಪಾರ. ಲಫಂಗ್; ಹಿಂ. ಮರಾ. ಲಫಂಗಾ]

**ಲಫಂಗಗಿರಿ** (ನಾ). ಪುಂಡತನ; ದುರಾಚಾರ : ಅವರ ಲಫಂಗಗಿರಿಯ ವಿಷಯ ಮಾತ್ರ ಸುಳ್ಳೇನೂ ಆಗಲಾರದು ! (ತಿರುಕ್ಕೆ. ೦೦೦).

[ಲಫಂಗ+—ಗಿರಿ₂]

**ಲಬಕ್** (ನಾ). ಒಂದು ಅನುಕರಣ ಶಬ್ದ : ಅವನು ಕಲ್ಲುಸಕ್ಕರೆಚೂರನ್ನು ಲಬಕ್ ಎಂದು ಬಾಯಿಗೆ ಹಾಕಿಕೊಂಡು ಬಿಟ್ಟನು (ರೂಪ).

**ಲಬಲಬ** (ನಾ). ಬಾಯಿ ಬಡಿದುಕೊಳ್ಳುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : ಲಬಲಬ ಬಾಯಿ ಬಡಿದುಕೊಂಡರು (ರೂಪ). 'ಲಬಲಬಿಸು' ಪರಾ.

**ಲಬಲಬನೆ** (ಅ). ಬಾಯಿ ಬಡಿದುಕೊಳ್ಳುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಲಬಲಬನೆ ಬಾಯಿ ಬಡಿದುಕೊಂಡೂ ಎದೆ ಗುದ್ದಿಕೊಂಡೂ ಕೇರಿಯೆಲ್ಲಾ ನೆರೆಯುವಂತೆ ಗೋಳು ಹೊಯ್ದುಕೊಂಡಿದ್ದಳು (ಮಲೆಮ. ೯೦೩). [ಲಬಲಬ+—ಅನೆ₁]

**ಲಬಲಬಿಸು** (ಕ್ರಿ). ಲಬಲಬ ಎಂದು ಬಾಯಿಬಡಿದುಕೊಳ್ಳು : ಅವನ ಅಪ್ಪ . . . ಯಾರಾದರೂ ಸತ್ತರೆ ಬಾಯಿ ಬಡಿದುಕೊಳ್ಳುವಂತೆ ಲಬಲಬಿಸಿದ್ದರು (ಮಲೆಮ. ೩೩೭). [ಲಬಲಬ+—ಇಸು₃]

**ಲಬಾಡ** (ನಾ). ಸುಳ್ಳುಗಾರ ; ಅಸತ್ಯವನ್ನಾಡುವವನು : ಏನೋ ಲಬಾಡಾ, ನಾನು ತಿಂದದ್ದು ಯಾವಾಗ ? (ಸ್ವ. ಚಿತ. ೨೩೯).

[←ಹಿಂ. ಲಬಡಾ. ಲಬರಾ; ಮರಾ. ಲಬಾಡ್]

**ಲಬಾಡಿ** 'ಲಬಾಡು' ನೋ.

**ಲಬಾಡು, ಲಬಾಡಿ** (ನಾ). ೧. ಮೋಸ ; ಕಪಟ ; ವಂಚನೆ : ಇನ್ನು ಮುಂದೂ ಲೂಟಿ ಲಬಾಡು ಮಾಡದೆ, ಅಪ್ಪಣೆ ಪ್ರಕಾರ ನಡಕೊಳ್ಳುತ್ತೇನೆ (ರಾಜೇಂದ್ರ. ೦೫೩). **ಲಬಾಡಿ** : ೧. ಜೀನಸುಗಳು ಲಬಾಡಿಯಿಂದ ಅಂದರೆ ಖೊಟ್ಟಿತನದಿಂದ ತುಂಬಿದ್ದಾದರೆ ಆವಾಗಲೆ ತಿಳಿದು ಬರುವುದು (ಮುಂಬಿವ್ಯಾ. ೯೨). ೨. ಸುಳ್ಳು ; ಸಟೆ ; ಅಸತ್ಯ : ಲಬಾಡಿ ಬಿಲ್‌ಕುಲ್ ಕೇಳಬೇಡ (ವೋಹಿಶಿ. ೯೦).

[←ಹಿಂ. ಮರಾ. ಲಬಾಡ್, ಲಬಾಡೀ]

**ಲಬುಧ** (ಗು). ದೊರಕಿದ : ಈಡಗೂರ ದೇವೀಲಬುಧವರಪ್ರಸಾದಪ್ರಗಮದೊವೋದಯರ್ (ಎಕ. XII, ತಿಪಟೂ. ೦೦೯-೨೦ ; 1130) ; ಜಯನ್ತೀ ಮದು(ಧು)ಕೇಶ್ವರದೇವರ (ವ)ಲಬುಧವರಪ್ರಸಾದಂ ಸಹಜಮೃಗಮದಾವೋದಂ (ಎಇ. XXVII, ೦೬೦-೦೫ ; 1256). [<ಸಂ. ಲಬ್ಧ]

**ಲಬೋಲಬೋ** (ನಾ). =ಲಬಲಬ : ಬೀದೀಲಿ ನಿಂತುಕೊಂಡು ಲಬೋ ಲಬೋ ಅಂತ . . . ಕೂಗೋದು (ತುಂಗಭ. ೩೦).

**ಲಬ್ಧ** (ಗು). ೧. ದೊರಕಿದ ; ಪ್ರಾಪ್ತವಾದ : ಸ್ವಪಕ್ಷ ಸ್ಥಾಪನೆಗೆಯ್ದು ಸನ್ಮಾರ್ಗ ಪ್ರಕಾಶನದಿಂ ಮಾರ್ಗಪ್ರಭಾವನೆಯುಂ ಮಾಡಿ ಸಭಾಸದರಿಂ ಲಬ್ಧಪ್ರಶಂಸನಾಗಿ (ಆದಪು. ೨-೨೨೩). (ನಾ). ೨. ಪಡೆದುದು ; ಪ್ರಾಪ್ತಿ; ಫಲ : ಅಲಬ್ಧಲಾಭಂ ಲಬ್ಧಪರಿರಕ್ಷಣಂ ರಕ್ಷಿತವಿವರ್ಧನಂ (ಪಂಪಭಾ. ೨. ೨೦-೦೩) ; ವ್ರೀಹಿಯಂ ನೆರಪುತ್ತೊಯ್ಯನೆ ಮಾಱುಗೆಂಟನೆಯ ತಿಂಗಳ್ಗಿಂದಿದಂ ಮಾಱಿಸಲ್ ನಿರುತಂ ಲಬ್ಧಮನೆಟ್ಟನೆಂದುದೆ ನಯಂ. ಶ್ರೀ ಚಟ್ಟ

ಕಂದರ್ಪನಾ (ಅಭಿಷು. ೬-೩೨). ೩. ಸಂಭಾವಿತ ; ಯೋಗ್ಯ : "ಅಭಿಜಾತಂ ತಾಂ ಲಬ್ಧನುಮಭಿವಿನುತಕುಳಪ್ರಸೂತನಂ" (ಪಂಪಭಾ. ೦೨೪-೩೭). ೪. [ಗಣಿತ] ಲೆಕ್ಕಾಚಾರದ ಪ್ರಕ್ರಿಯೆಗಳ ಮೂಲಕ ಬರುವ ಉತ್ತರ,—ಮೊತ್ತ : ಅರ್ಧನವಾಂಶಂಗಳಿನಾಱುವನ್ನಱಿದು ಭಾಗಂಗೊಂಡು ನೂಱಿಂಟಱಿಂದೆ . . . ಪೆತ್ತಾ ಲಬ್ಧಮಂ ನೋಡೆ (ಪಾಕಶಾ. ೬-೬) ; ಗುಣಿಸಿ ಬಂದ ಲಬ್ಧ (ಭಾಸ್ಕರ. ೦-೬). [ಸಂ.]

**ಲಬ್ಧವರ್ಣ** (ನಾ). ಅಕ್ಷರಗಳನ್ನು ಕಲಿತವನು; ಪಂಡಿತ; ವಿದ್ವಾಂಸ : "ಧೀರಃ, ಧೀಮಾನ್, ಲಬ್ಧವರ್ಣಃ . . . ಮತಿಮಾನ್—ಈ ೨೮ ವಿದ್ವಾಂಸರ್" (ಶಬ್ದಮ. ೫೫-೦೭೭). [ಸಂ.]

**ಲಬ್ಧ** (ನಾ). ೧. ದೊರಕಿದುದು ; ಪ್ರಾಪ್ತಿ. ೨. ಗಳಿಕೆ ; ಸಂಪಾದನೆ. ೩. ಲಾಭ ; ಫಾಯಿದೆ ; ನಫೆ : ಮೊದಲುಗೆಟ್ಟಿಹ ಹರದ ಕಾಬನೆ ಲಬ್ಧಯನು ಮತಿಬಱಿಪ ಹೋಗೆಂದ (ತೊರವೆ. ೬-೩-೪೬). ೪. = ಲಬ್ಧಿ ೪. ೫. [ಜೈನ] "ಮೋಕ್ಷ ಪೂರ್ವಜ್ಞಾನ" (ಶಂಬಾಪು. ೯-೦೫ವ ಅಮುಬಾರ): ಎಮ್ಮಂ ಕಂಡ ದೊಸಱಿಂ ಕರ್ಮಬಂಧಂ ಶಿಥಿಲವಾದುದೆಂದದಱ ಮನೋವಿಷಾದಮಂ ಕಳೆವದರ್ಕೆ ಲಬ್ಧ ದೊರೆಕೊಂಡುದು (ಶಂಬಾಪು. ೯-೦೫ ವ) ; ಲಬ್ಧಿವಶದಿಂದೆ ಸಂಸಾರಾಬ್ಧಿಯ ನಾಪೇಕ್ಷಸಲೆಂದು ಬಗೆದು (ಪಾರ್ಶ್ವಪು. ೪-೭೫). ಯಾವುದೊಂದು ವಸ್ತುವನ್ನು ಅದರೊಡನೆ ಸಂಬಂಧವಿರುವ ಯಾವುದೊಂದು ವಿಷಯದ ಸಹಾಯದಿಂದ ನಿರ್ದೇಶಿಸುವುದು ಲಬ್ಧಿಯೆನಿಸುವುದು (ಕೈಪಿಡಿ. VIII. ಉಪೋದ್ಘಾತ). 'ಪಂಚಲಬ್ಧಿ' ಪರಾ. [ಸಂ.]

**ಲಬ್ಧಿಗ್ರಹಣ** (ನಾ). [ಜೈನ] ಲಬ್ಧಿಯನ್ನು ಪಡೆಯುವಿಕೆ : ಸಮ್ಯಕ್ತ್ವಜ್ಞಾನಸಂಪಾದನೆ : ಜಿನದೀಕ್ಷಾಗ್ರಹಮಂ ಪಡೆದಲ್ ಲಬ್ಧಿಗ್ರಹಣದಿ ನೊಳ್ಪುವಡೆವುದೊಂದಚ್ಚರಿಯೇ (ಶಂಬಾಪು. ೨-೨೫). [ಸಂ.]

**ಲಬ್ಧಿಚತುಷ್ಟಯ** (ನಾ). [ಜೈನ] ಕ್ಷಯೋಪಶಮ, ವಿಶುದ್ಧಿ, ದೇಶನಾ ಮತ್ತು ಪ್ರಾಯೋಗ್ಯಗಳೆಂಬ ನಾಲ್ಕು ಬಗೆಯ ಲಬ್ಧಿಗಳು : ಅವು ಲಬ್ಧಿಚತುಷ್ಟಯಮೆಂಬಿನನೆಯ್ದದೆ ದುರಿತವಶದೆ ಬಹುವಿಧದುಃಖಾರ್ಣವದೊಳಗಟ್ಟಿರೆ (ಜೀವಸಂ. ೪೭೮). [ಸಂ.]

**ಲಬ್ಧಿತ್ರಯ** (ನಾ). [ಜೈನ] ಕಾಲ, ಕರಣ ಮತ್ತು ಉಪಶಮ ಎಂಬ ಮೂರು ಬಗೆಯ ಲಬ್ಧಿಗಳು : ಅಂತು ತನಗೆ ಕಾಲಲಬ್ಧಿಯುಂ ಕರಣಲಬ್ಧಿಯುಂ ಮುಪಶಮಲಬ್ಧಿಯುಮೆಂಬ ಲಬ್ಧಿತ್ರಯಂ ದೊರಕೊಳೆ (ಆದಿಪು. ೩-೦ ವ). [ಸಂ.]

**ಲಬ್ಧಿಬಧಿರಸಮ** (ನಾ). [ಜೈನ] ಹುಟ್ಟುಕಿವುಡನಂತೆ ಮತ್ತೇನನ್ನೂ ಕೇಳದೆ ಜಿನೋಪದಿಷ್ಟತತ್ತ್ವವನ್ನು ಮಾತ್ರ ಏಕಚಿತ್ತದಿಂದ ಗ್ರಹಣ ಮಾಡುವವನು : ಲಬ್ಧಿಬಧಿರಸಮನೆಂಬೊಂ ಸುಜಂಗಿ ಕಿವುಡನಂತೆ ಕೋಟಿಗೆಯ್ಯದೆ ತನ್ನ ಮನೋಭಿಲಷಿತಮಪ್ಪರ್ಥಮಂ ಕೇಳ್ದು ಕೈಕೊಳ್ಗುಂ (ಪಾಪುಂಪು. ೬). [ಸಂ.]

**ಲಬ್ಧಿಬುದ್ಧ** (ನಾ). [ಜೈನ] ಜ್ಞಾನಪ್ರಾಪ್ತನಾದವನು; ಸಮ್ಯಕ್‌ಜ್ಞಾನಿ : ಅನುಕೂಲಕನುಮನಾಲಸ್ಯನುಮನವಕ್ರಾರ್ಯನುಂ ಲಬ್ಧಿಬುದ್ಧಸದೃಶನುಂ (ಆದಿಪು. ೦೦-೩ ವ). [ಸಂ.]

**ಲಬ್ಧೋಪದೇಶ** (ನಾ). ಉಪದೇಶ ಹೊಂದಿದವನು : ನೀರ ಪೋಗಲ್ ಕಾಲ್ಗಜಗಲೊಡಂ ಕೇವಲಜ್ಞಾನಮಕ್ಕುಮೆಂದು ಬೆಸಸಿದೊಡೆ ಲಬ್ಧೋಪದೇಶ ನಾಗಿ . . . ಬಂದೆಱಗಿ (ಆದಿಪು. ೦೪-೦೪೭ ವ). [ಸಂ.]

**ಲಬ್ಬ** 'ಲಬ್ಬೆ₁' ನೋ.

**ಲಬ್ಬೆ₁**, ಲಬ್ಬ (ನಾ). ಮೂಲತಃ ಅರಬ್ಬನಾಗಿದ್ದು ತಮಿಳು ಮಾತನಾಡುವ ಮಹಮದೀಯ ವ್ಯಕ್ತಿ : "ಮುಸಲ್ಮಾನರ ಒಂದು ಪಂಗಡ ; ತೊಗಲು ಹದಮಾಡುವವರು" (ಜಾಸಕೋ. ೪೨) : ಹಬ್ಬರೂ ಮಾಪಿಳ್ಳೆ ಲಬ್ಬೆ ಬ್ಯಾರಿ ಮೊದಲಾದ ಮಲೆಯಾಳಿಗಳು ಉಡುವಂತೆ . . . ಅಡ್ಡಪಂಚೆ ಸುತ್ತಿ, ಉದ್ದುದ್ದ ಬನೀನು ಹಾಕಿದ್ದರು (ಮಲೆಮ. ೪೪೨). ಲಬ್ಬೆ : ಕ್ರಿ.ಶ. ಏಳನೆಯ ಶತಮಾನದ ಹೊತ್ತಿಗೆ ಮುಸ್ಲಿಮರು ಹೆಚ್ಚು ಸಂಖ್ಯೆಯಲ್ಲಿ ಮಲಬಾರಿನಲ್ಲಿ ನೆಲಸಿದ್ದರೆಂದು ಮಾಪ್ಪಿಳ್ಳೆಗಳಲ್ಲೂ ಲಬ್ಬೆಗಳಲ್ಲೂ ಐತಿಹ್ಯವಿದೆ (ಶಾರದ. ೩೨೫). [ ?./ ತಮಿ. ಲಪ್ಪೈ ; ತುಳು. ಲಬ್ಬೆ ; ತೆಲು. ಲಬ್ಬಿ]

**ಲಬ್ಬೆ₂** (ನಾ). ಕೂಗು ; ಬೊಬ್ಬೆ : ಈ ಭಯಂಕರದೃಶ್ಯವನ್ನು ನೋಡಿ ಹೌಹಾರಿ ಒಂದೇ ಸಮನೇ ಲಬ್ಬೆ ಇಡತೊಡಗಿದನು (ವಿಷಂ. ೭೭). 'ಲಬಲಬ' ಪರಾ. [ ? ]

**ಲಭಿಸು** (ಕ್ರಿ). ಪ್ರಾಪ್ತವಾಗು; ಉಂಟಾಗು : ಕಾಲಕಾಲದಲ್ಲಿ ನೆನದಕಾರ್ಯ ಲಭಿಸುವದಕ್ಕೆ ಪ್ರತ್ಯಕ್ಷ ಪರೋಕ್ಷಗಳಲ್ಲಿ ನಿದರ್ಶನ ಉಂಟಾಗುತ್ತಿರಲು (ಕೌಗಂಧಿ. ೨೩೦-೭) ; ಸಾಹಸಂ ಲಭಿಸಿತೆಂದುರ್ಕೆಹದಿನಱಿದೆದ್ದು, ಕಾಳೆಗಂಗೊಡೆ ಮಸಂಮಾಡಿ (ಜತ್ತಂಗ. ೭೪-೨೦೪೩). [ಲಭನ್ + — ಇಸು]

**ಲಭ್ಯ** (ಗು). ೧. ಹೊಂದಬಹುದಾದ ; ಪಡೆಯಬಹುದಾದ. ೨. ಉಚಿತವಾದ ; ತಕ್ಕುದಾದ. ೩. ತಿಳಿಯಲಾಗುವ ;ಗ್ರಹಿಸಲಾಗುವ. (ನಾ). ೪. ದೊರೆತುದು ; ಪ್ರಾಪ್ತಿ : ಯಾವ ಸಂಖ್ಯೆಯನೇನು ಸೊನ್ನೆಯಿಂ ಗುಣಿಸಿದರೆ ಲಭ್ಯ ಸೊನ್ನೆ (ಬೀಜಗಣಿ. ೪೬-೯). ೫. ದೊರಕುವಂಥವನು : ನಿಶ್ಚಲವಾದ ಅಪೇಕ್ಷೆಯಿಂದ ಯತ್ನ ಮಾಡಿದರೆ ಎಂತಹ ಕನಿಷ್ಠಜೀವಕ್ಕೂ ದೇವನು ಲಭ್ಯನೆಂಬುದನ್ನು ನಾವು ಮನಗಾಣಬೇಕು (ಧರ್ಮಸಾ. ೯೫). ೬. ಅದೃಷ್ಟ : ಸಂತೋಷಪಡುವುದಕ್ಕೆ ಅವನಿಗೆ ಲಭ್ಯವಿಲ್ಲ (ಕೂಡ). [ಸಂ.]

**ಲವಾಣಿ** 'ಲಂಬಾಡಿ' ನೋ.

**ಲಯ** (ನಾ). ೧. ಅಂಟಿಕೊಂಡಿರುವುದು ; ಅನುಸರಿಸುವುದು. ೨. ಅಡಗುವಿಕೆ ; ಗುಪ್ತವಾಗಿರುವಿಕೆ. ೩. ಹಾಳು ; ಕೇಡು ; ನಾಶ : ಯುಧಿಷ್ಠಿರಂ ಕೊಟ್ಟ ನನ್ನಿಯ ಬಲದೊಳ್ ತನಗೆ ಲಯಮಿಲ್ಲಮದನಱಿದು ಮೇಗಿಲ್ಲದ ಗೊಡ್ಡಾಟಮಾಡಲ್ ಬಗೆದು (ಶಂಕಬಿ. ೬-೪ ವ); ಈ ಹೊತ್ತಿನಲಿ ಧರ್ಮಸ್ಥಿತಿಗೆ ಲಯವಿಲ್ಲ (ಕುವ್ಯಾಕ. ೦೭-೨). ೪. ಪ್ರಳಯ : ರಾಗರಂಜನೆಯ ಉತ್ಪತ್ತಿ ಸ್ಥಿತಿ ಲಯ ನಿನ್ನಿಂದಾದುವು (ಬಸವ. ೪೬೬); ಹರಿ ಹರ ನಳಿನಭವರಾರಾಜ್ಞೆಯಿಂ ಲಯ ಸೃಷ್ಟಿಗೈಯುವರು (ಗಗಶಾ. ೦೨-೨೯); ಲಯವಾದ ಮೇಲೆ ಭಯವೇನು ? (ಗಾದೆ). ೫. ತನ್ಮಯತೆ; ಲೀನವಾಗುವಿಕೆ; ತಾದಾತ್ಮ್ಯ : ತಂಗೆವ್ವ ಲಯ ಬೇಕು ಶಿವನ ನೆನವಲ್ಲಿ (ಸಿದ್ಧಪು. ೦-೭೭); ನಾವು ಮಾಡುವ ಕೆಲಸ ಕಲೆಯಾಗಬೇಕಾದರೆ ಅದರಲ್ಲಿ ಮುಖ್ಯವಾದ ಒಂದು ವಿಶಿಷ್ಟಧರ್ಮವಿರಬೇಕು, ಅದನ್ನು ನಾವು ಲಯವೆಂದು ಕರೆಯಬಹುದು (ಜಾಹಿತ. ೯). ೬. ವಿಶ್ರಮಿಸುವ ಸ್ಥಳ ; ತಂಗುದಾಣ. ೭. ಒರಗುವಿಕೆ ; ನಿದ್ರಿಸುವಿಕೆ : ಲಯವೆಂದರೆ ನಿದ್ರೆಬಾಹಣ (ಕಾವ್ಯಸ್ಯ. ೨೨-೦). ೮. ಗತಿ ; ಗಮನ : ಲಯದಿಂ ಮೆಲ್ಪಿಂ ಜೆಡಂಗಂ ಪಡೆವ ತುರಗದಿಂ (ಆದಿಪು. ೦೦-೪೫). ೯. [ಸಂಗೀತ] ತಾಳ. ತಾಳಗಳ ನಡುವೆ ಬರುವ ಸಮಾನವಾದ ಕಾಲಪ್ರಮಾಣ: ದ್ರುತ, ಮಧ್ಯಮ ಮತ್ತು ವಿಲಂಬಿತ ಎಂದು ಇವು ಮೂರು ಬಗೆ : "ಹೊತ್ತು ಕ್ರಿಯಾಪ್ರಮಾಣಂ ತಾಳಮೆನಿಕುಂ ಸಮವೆತ್ತಲ್ಲಿ ಲಯಮೆನಿಕ್ಕುಂ" (ಪಂಗಶಾ. ೫೫-೭); ಒಂದೊತ್ತಂ ನಡೆಯಿಸುವುದದೊಂದೊಂದಱ ಲಯಕೆ ಲೆಕ್ಕ ತೆಱನಾಡುವುದೇನೆಂದೇಂ ಬಣ್ಣಿಸುವುದೊ ಸುರಸೌಂದರಿಯ ವಿಲಾಸ ವಿಭ್ರಮಭ್ರೂಲತೆಯುಂ (ಆದಿಪು. ೯-೩೭); ಸಂಗೀತದ ಆಧಾರಸ್ತಂಭಗಳು ನಾದ ಮತ್ತು ಲಯ (ಶಾರದ. ೩೩೫). ೧೦. [ಛಂದ] ಛಂದೋಬದ್ಧವಾದ ಗಣಗಳ ನಡುವೆ ಬರುವ ಸಮಾನವಾದ ಕಾಲಪ್ರಮಾಣದ ನಡೆ : ಛಂದಸ್ಸಿನ ಜೀವಾಳ ಲಯ ; ಲಯವನ್ನು ರೂಪಿಸತಕ್ಕವು

ಗಣಗಳು (ಶಿವತತ್ತ್ವ. ೦೪೭). ೧೧. = ಲಯಯೋಗ : ಮಂತ್ರ ಲಯ ಹಠ ರಾಜವೆಂಬ ನಾಲ್ಕು ಯೋಗಭೇದಂಗಳು (ಏಕೋ. ೦೨೯); 'ಯೋಗ ಮಾರ್ಗದ ಪ್ರಭೇದಗಳು ಹಠ, ಮಂತ್ರ, ಲಯ, ರಾಜ ಎಂದು ನಾಲ್ಕು ಬಗೆಯಾಗಿವೆ (ಭಾರತ. ೦೪೩). [ಸಂ.]

**ಲಯಂಗಿಡು** (ಕ್ರಿ). [ಸಂಗೀತ] ಕಾಲಪ್ರಮಾಣವು ಕೆಡು : ಲಯಂಗಿಡ ದೊಡನುಲಿವುವು ಬೆರಲ ಕೊರಲ ನಾಣೆಮುಲಿಗಳ್ (ಕಾವ್ಯಸಾ. ೬೩೬ ಪೂರ್ವ೪). [ಲಯ + ಕಿಡು (< ಕೆಡು₁)]

**ಲಯಕರ್ತೃ** (ನಾ). ನಾಶವನ್ನುಂಟುಮಾಡುವವನು ; ಪ್ರಳಯಕಾರಿ: ಲಯಕರ್ತೃ ಹರನೆಂದು ನುಡಿವ ವಾದಿಗಳನನುನಯದೆ ಬಾಧಿಸುತೆ (ಅನಂತ. ೦-೦-೬೨); ಈಶ್ವರನು ಲಯಕರ್ತೃವಾದುದರಿಂದ ಈ ರುದ್ರದೇವ ರಿಂದೊಗೆದ ಈ ಜ್ವರವು ಕಾಲಮೃತ್ಯುರೂಪವಾಗಿ ಒಪ್ಪುತ್ತದೆ (ಸಕಲ. ೬೦). [ಸಂ.]

**ಲಯಕರ್ಮಿ** (ನಾ). ಹಾಳುಮಾಡುವವನು ; ನಾಶಗೊಳಿಸುವವನು : ಕಾಣ್, ಗಿರಿಜೆ . . . ಕುಂಭಕರ್ಣಾದಿಮಹೋಗ್ರಸಂಗ್ರಾಮದಂ. ಪ್ರಿಯಂ ಲಯಮೂರ್ತಿಗೆನಗಿವಂ ಲಯಕರ್ಮಿ (ಶ್ರೀರಾಮಾ. ೬೭೯-೨೨). [ಸಂ. ಲಯಕರ್ಮಿನ್]

**ಲಯಕಾಲ** (ನಾ). ಪ್ರಳಯಕಾಲ : ನಿನ್ನಂ ಹಿಡಿಂಬಾಂತಕಂ ಲಯ ಕಾಲಾಂತಕನಂತೆ ಕೊಲ್ಲದಿರಂ (ಗದಾಯು. ೪-೬೬); ಮಾಧವನ ಸೂತ್ರದ ಯಂತ್ರವಿದು ಲಯಕಾಲ ನಮಗೆಂದ (ಕುಮಾರವ್ಯಾ. ೦೬-೨೨). [ಸಂ.]

**ಲಯಕೃತಾಂತ** (ನಾ). ಪ್ರಳಯಕಾಲದ ಯಮ : ಕುಂಭಕರ್ಣ ನ್ಯೋಮವೆನಲದೆ ಲಯಕೃತಾಂತನ ಕ್ರೂರಪರಿವಾರ (ಕುಮಾ. ೭. ೨-೦೩). [ಸಂ.]

**ಲಯಗತಿ** (ನಾ). ೧. ಒಳ್ಳೆಯ ನಡಗೆ,–ಗಮನ : ತರದೊಳುಡುಗಿರ್ದ ಬಾಲಂ ಕೊರಲುನ್ನತವಕ್ಷಮೆಸೆವ ಲಯಗತಿ ಶುಭದಂ (ಅಶ್ವಶಾ. ೩-೫೪). ೨. ಹಾಡುಗಾರಿಕೆಯ ಲಯ : ಕ್ರೀಡಾಸರಸಿಯೊಳಳಿಗಳ್ ಪಾಡುವ ಲಯಗತಿಗೆ ಕೃತಕಗಿರಿಯೊಳ್ ನವಿಲೆಳ್ದಾಡುವುವಂ ಪಥಿಕರ್ ನಡೆ ನೋಡುವರ್ (ವರ್ಧಮಾ. ೨-೨೨). [ಸಂ.]

**ಲಯಗ್ರಾಹಿ** (ನಾ). [ಛಂದ] ಒಂದು ಅಕ್ಷರವೃತ್ತದ ಹೆಸರು; 'ಭಜಸನಭಜಸನಭಯ' ಎಂಬ ಗಣವಿನ್ಯಾಸವಿದ್ದು ೧೧, ೧೮ ಮತ್ತು ೨೫ನೆಯ ಅಕ್ಷರಗಳ ಸ್ಥಾನದಲ್ಲಿ ದ್ವಿತೀಯಾಕ್ಷರಪ್ರಾಸ ಪುನರಾವರ್ತಿಸುತ್ತದೆ : ವ್ಯೋಮಂ ನಭೋಕಾಶವಿಹಾಶದ್ವಯಂಗಳ್ ಶಾಮೊಂದಿರಲ್ಕಾಗಿ ಅಂಭೋಜನೇತ್ರೆ ನಾಮಂ ಲಯಗ್ರಾಹಿಯೆಂದಾಯ್ತು (ಛಂದೋಂಬು. ೨-೦೨೪). [ಸಂ. ಲಯಗ್ರಾಹಿನ್]

**ಲಯತ್ರಯ** (ನಾ). [ಸಂಗೀತ] ಸಂಗೀತ, ನಾಟ್ಯಗಳಲ್ಲಿ ಮತ್ತು ವಾದ್ಯಗಳನ್ನು ನುಡಿಸುವಲ್ಲಿ ಬರುವ ದ್ರುತ, ವಿಲಂಬಿತ ಮತ್ತು ಮಧ್ಯಮವೆಂಬ ಮೂರು ಲಯಗಳು : ಹೃದ್ಯವಾದ್ಯವಿಶೇಷಂಗಳೊಳ್ . . . ದ್ರುತವಿಲಂಬಿತಮಧ್ಯಮವೆಂಬ ಲಯತ್ರಯದೊಳಂ . . . ನೆಗಳ್ದು (ಆದಿಪು. ೫-೬೨ ವ). [ಸಂ.]

**ಲಯದೂರ** (ನಾ). ನಾಶವಿಲ್ಲದವನು ; ಪ್ರಳಯಕ್ಕೆ ದೂರವಾದವನು : ಲಯದೂರಂಗೆ ಲಯಾನ್ವಿತರ್ ಸತತ . . . ತೊಣೆಯೆ ಪೇಳ್ (ವೃಷಭ. ೪೭-೬೯). [ಸಂ.]

**ಲಯನ** (ನಾ). ೧. ಅಂಟಿಕೊಂಡಿರುವುದು ; ಹೊಂದಿಕೊಂಡಿರುವುದು. ೨. ಒರಗಿಕೊಳ್ಳುವಿಕೆ ; ವಿಶ್ರಾಂತಿ. ೩. ವಿಶ್ರಮಿಸುವ ಸ್ಥಳ : ತಂಗುದಾಣ. [ಸಂ.]

**ಲಯಬದ್ಧ** (ಗು). ೧. ಲಯಕ್ಕೆ ಹೊಂದಿಕೊಂಡಿರುವ : ಅದು ಲಯಬದ್ಧ ಆವಿಷ್ಕಾರ ಅಥವಾ ಅಭಿವ್ಯಕ್ತಿ (ಕಥಾಶಾ. ೦೦೩). (ನಾ). ೨. ಲಯಕ್ಕೆ ಹೊಂದಿಕೊಂಡಿರುವುದು : ಸಂಗೀತರಚನೆಗಳು ಒಂದು ರಾಗದ ಕೆಲವು ಅಂಶಗಳನ್ನು ಲಯಬದ್ಧವಾಗಿ ತೋರುತ್ತವೆ (ಸಂಗೀತ. ೨). [ಸಂ.]

**ಲಯಮಿತ್ತು** (ನಾ). ಪ್ರಳಯಕಾಲದ ಮೃತ್ಯು : ಲಯಮಿತ್ತು ಮೊಗ ನೆಗಹಿದನೊ ಮದದುಬ್ಬಿನಲಿ (ತೊರವೆ. ೩-೬-೨೦). [ಲಯ + ಮಿತ್ತು (< ಮಿಟ್ಟು₃)]

**ಲಯಮೂರ್ತಿ** (ನಾ). ಪ್ರಳಯವನ್ನುಂಟುಮಾಡುವವನು : ಶಿವ : ಕಾಣ್, ಗಿರಿಜೆ . . . ಕುಂಭಕರ್ಣಾದಿಮಹೋಗ್ರಸಂಗ್ರಾಮದಂ. ಪ್ರಿಯಂ ಲಯಮೂರ್ತಿಗೆನಗಿವಂ ಲಯಕರ್ಮಿ (ಶ್ರೀರಾಮಾ. ೬೭೯-೨೨). [ಸಂ.]

**ಲಯಯೋಗ** (ನಾ). [ಯೋಗ] ಮಂತ್ರಯೋಗ, ಹಠಯೋಗ, ರಾಜಯೋಗ ಮತ್ತು ಲಯಯೋಗಗಳೆಂಬ ನಾಲ್ಕು ವಿಧವಾದ ಯೋಗಗಳಲ್ಲಿ ಒಂದು ; ಸಾಂಪ್ರದಾಯಿಕವಾದ ಯೋಗಸಾಧನೆ ಗಳಲ್ಲಿ ಮನಸ್ಸನ್ನು ಲಯಗೊಳಿಸುವಿಕೆ ; ಮನಸ್ಸು ಮತ್ತು ಪ್ರಾಣ ವಾಯುಗಳು ಪರಸ್ಪರ ಲೀನವಾಗುವುದು : ಮಂತ್ರಯೋಗ ಹಠಯೋಗ ಲಯಯೋಗ ಜ್ಞಾನಯೋಗ ಇವು ಮೊದಲಾದ ಎಲ್ಲ ಯೋಗ ವನರಿದು (ಚನ್ನಬ. ೦೦೯-೨) ; ಈಡಾ ಪಿಂಗಳೆಯಲ್ಲಿ ತುಂಬಿ ಸೂಸುವ ಹಂಸರೂಪವಾದ ಪ್ರಕೃತಿಪ್ರಾಣವಾಯುವನು ಸೋಹಂಭಾವದಿಂದೆ . . . ಮನೋಮಾರುತಂಗಳೊಳಗೂಡಿ ಲಯಿಸುವುದೆ ಲಯಯೋಗ (ಶೂನ್ಯಸಂ. ೨೦೩-೫೩). [ಸಂ.]

**ಲಯಯೋಗಿ** (ನಾ). ಲಯಯೋಗವನ್ನು ಆಚರಿಸುವವನು : ಲಯ ಯೋಗಿಗಳ ರೀತಿ ಬೇರೆ, ಇವರು ಅಲ್ಪತೃಪ್ತರಲ್ಲ (ಶಾಹಿತ್ಯ. ೦೦). [ಸಂ. ಲಯಯೋಗಿನ್]

**ಲಯವಡಿಸು** (ಕ್ರಿ). ಪ್ರಳಯವನ್ನುಂಟುಮಾಡು : ನಯನಯುಗದಿಂ ಜಗವ ಪೊರೆದು, ನಿಟಿಲಾಕ್ಷಿಯಿಂ ಲಯವಡಿಸುವುದದೇನು ಶಿವಯೋಗಲೀಲೆ? (ಮಂಕುತಿ. ೨೦೩). [ಲಯವಡು + – ಇಸು₃]

**ಲಯವಡು** (ಕ್ರಿ). ನಾಶವಾಗು ; ಪ್ರಳಯವಾಗು : ‹ ಲಯವಡಿಸು ಪರಾ. [ಲಯ + ಪಡು₁]

**ಲಯವಾದ್ಯ** (ನಾ). [ಸಂಗೀತ] ಲಯಕ್ಕಾಗಿ ಬಳಸುವ ವಾದ್ಯ : "ಭೂಮಿದುಂದುಭಿ" ಎಂಬ ಲಯವಾದ್ಯವನ್ನು ಅವರು ಸೃಷ್ಟಿಸಿಕೊಂಡ ರೆಂದು ತಿಳಿದು ಬಂದಿದೆ (ಸಂಗೀತ. ೨೨). [ಸಂ.]

**ಲಯವಿನ್ಯಾಸ** (ನಾ). [ಸಂಗೀತ] ಲಯದ ಕ್ರಮ, –ಗತಿ : ಈ ತೊಡಕಾದ ತಾಳದಲ್ಲಿ ಪಲ್ಲವಿಯನ್ನು ಹಾಡುವ ಯಾವ ಗಾಯಕನಿಗೇ ಆಗಲಿ ಲಯವಿನ್ಯಾಸದಲ್ಲಿ ಮಹತ್ತರ ಪ್ರತಿಭೆಯಿರಲೇ ಬೇಕು (ಸಂಗೀತ. ೭). [ಸಂ.]

**ಲಯವಿಹೀನ** (ನಾ). ನಾಶವಿಲ್ಲದವನು ; ಚ್ಯುತಿಯಿಲ್ಲದವನು : ಜಯ ಜಗತ್ರಯನಾಥ . . . ಲಯವಿಹೀನ ಮಹೇಶ (ಕುಮಾ. ೬-೮೩). [ಸಂ.]

**ಲಯಸಮಯ** (ನಾ). ಪ್ರಳಯಕಾಲ : "ಲಯಸಮಯಂ . . . ಮಹಾ ಪ್ರಳಯಮೆಂಬುದದು ಸಂವರ್ತಂ" (ಚನ್ನಕೋ. ೦೭-೦೭) ; ಲಯಸಮಯಂ ಜಗಕ್ಕೆ ಪಜೆಶಾವುದೊ ರಾವಣನುಗ್ರಕೋಪವನ್ನುಯಿ ವಿಲಯಾನಿಲಂ ಮುಳಿಸೆ ಕಲ್ಪವಿರಾಮಂ (ಕಂರಾಮಾ. ೦೪-೦೭೦) : ಲಯಸಮಯತಾಂಡವಪ್ರಳಯ ನಾಟ್ಯಾಕುಂಕಿಗಳ್ ಕುದಿದು ಘೀಂಕರಿಸಿ ಗದಗದಿಸಿದುವು ಚಕಿತ ದಿಗ್ದಂತಿ ! (ಶ್ರೀರಾಮಾ. ೬೬೬-೪೫೪). [ಸಂ.]

**ಲಯಾಂತಕ** (ಗು). ೧. ಪ್ರಳಯಕಾಲದ : ಲಯಾಂತಕಘೋಷಭೀಷಣಂ ಪುರದೊಳಗುಣ್ಮಿದತ್ತು ಭಯವಿಹ್ವಲಪೌರಕೃತಂ ಮಹಾರುತಂ (ಕಂದ್ರಪ್ರ. ೪-೬೫). (ನಾ). ೨. ಪ್ರಳಯಕಾಲದ ಯಮ : ಪೊವಟ್ಟ ಲಯಾಂತಕ ತ್ರಿಶೂಲೋಪಮ ಭೀಷಣಭ್ರುಕುಟಿ ಮುನ್ನಮೆ ರೌದ್ರಗದಾ ಯುಧಂಬರಂ ಪೊವ ಭುಜಾರ್ಗಳಂ ರಿಪುಗಳ ಗ್ರಹ ಮಾಡುದು

ಭೀಮಸೇನನಾ (ಕಂಕಥಾ. ೭-೬). [ಸಂ.]

**ಲಯಾಗ್ನಿ** (ನಾ). ಪ್ರಳಯಾಗ್ನಿ : ಕಾನನದುರ್ಗಕ್ಕೆ ಮಹಾದವಾಗ್ನಿ ಜಲದುರ್ಗಕ್ಕುರ್ವಿದೌರ್ವಾಗ್ನಿ ಧಾನ್ವನದುರ್ಗಕ್ಕೆ ಬೃಹಲ್ಲಯಾಗ್ನಿಯೆನೆ. ... ನೃಪಸುತಂ ವಿಕ್ರಾಂತಮಂ ತೋಱಿದಂ (ಧ್ರಸ್ಪ. ೩-೫೦); ಮಗ್ನನಾದನೆ ಕಪೀಂದ್ರಂ ಮಹಾಸುರಲಯಾಗ್ನಿಯೊಳ್ ? (ತ್ರಿರಾಮಪ. ೬೯೦-೬೬). [ಸಂ.]

**ಲಯಿಸು** (ಕ್ರಿ). ೧. ನಾಶಮಾಡು : ಪಾಂಡುಬಲ ಮುನ್ನೂಱುಪದ್ಮವ . . . . ಲಯಿಸಿದನೆಂದು ರಘುರಾಮ (ಕೌಶಿರಾ. ೩೭ ಸೂಪದ) ; ಇನಿತಿಲ್ಲದಂತೆ ಲಯಿಸುವ ತೆಜನನು . . . ಒರವೆನಾಲಿಸು (ಶರಿಪೋ. ೩-೦೮-೦). ೨. ಲೀನವಾಗು ; ಮಗ್ನವಾಗು ; ತಲ್ಲೀನವಾಗು : ಅಜ್ಞಾನವೆಂಬ ಬೀಜದಲ್ಲಿ ಮನಸ್ಸು ಲಯಿಸುತ್ತದೆ (ಶಾರದ. ೨೩೭) : ಈ ಚಿತ್ತವೃತ್ತಿಗಳು ಅಥವಾ ಭಾವಗಳು ಆತನ ಆತ್ಮ ಅಥವಾ ಹೃದಯಸಮುದ್ರದಲ್ಲಿದ್ದು ಅಲ್ಲೀ ಲಯಿಸಿ ಹೋಗುವ ತರಂಗಗಳು (ಕಾವ್ಯಕು. ೮೦). [ಲಯ + – ಇಸು₃]

**ಲಯೋತ್ತರ** (ನಾ). [ಛಂದ] ಮಾತ್ರಾ — ವರ್ಣ ಮಿಶ್ರವೃತ್ತಗಳಲ್ಲಿ ಒಂದು ; ಇದರಲ್ಲಿ ಕೆಲವು ಪ್ರಭೇದಗಳು ಇವೆ. ಉತ್ಸವವೃತ್ತ ಮತ್ತು ರಮಾವೃತ್ತದ ಪಾದಗಳನ್ನು ಬೆರಸಿ ಇದರ ಪ್ರಭೇದಗಳನ್ನು ಕಲ್ಪಿಸಲಾಗುತ್ತದೆ. ಜಯಕೀರ್ತಿಯು ಲಯೋತ್ತರವೃತ್ತದ ಮೊದಲನೆಯ ಪ್ರಭೇದದಲ್ಲಿ ಉತ್ಸವದ ಒಂದು ಪಾದ+ರಮಾದ ಒಂದು ಪಾದ ಬರುತ್ತದೆ. ಉದಾಹರಣೆಗೆ — ೨ ಗಲ/ನಗಣ, ಗ+ಜಗಣ, ೨ ಗಲ/ನಗಣ, ಗ. [ಸಂ.]

**ಲರಿಲರಿ** (ನಾ). ಒಂದು ಅನುಕರಣ ಶಬ್ದ : ತಿಂದರು ಶವಗಳ ಲರಿಲರಿ ಕಡಿದು (ಶಾಂತಕ. ೭೦-೬).

**ಲಲಂತಿಕೆ** (ನಾ). ಒಂದು ಬಗೆಯ ಸರ : ಉದ್ದವಾಗಿರುವ ಕಂಠಹಾರ: "ಏಕಾವಳಿ ಸರಿಗೆ ಸುವರ್ಣಕಳಿತಂ ಲಂಬಣಂ ಲಲಂತಿಕೆ ಮುಕ್ತಾನೀಕಂ. . . ನಕ್ಷತ್ರಮಾಲೆಯೆನಿಕುಂ ಪೆಸರಿಂ" (ಪಕ್ತುಕೋ. ೬೩-೪). [ಸಂ. ಲಲಂತಿಕಾ]

**ಲಲನ** (ನಾ). ೧. ಆಟವಾಡುವುದು; ವಿನೋದವಾಡುವುದು ; ಕ್ರೀಡೆ. ೨. ನಾಲಗೆಯನ್ನು ಚಾಚುವುದು.— ಜೋಲುಬಿಡುವುದು. ೩. ಗಂಡ ; ಪತಿ : ಎನ್ನ ಲಲನನಂ ಪಶ್ಚಿಮಸಮುದ್ರಕ್ಕೆಳಿಪಿದಿರಿ ನೀವೆನುತ ದಿನಸತಿ ಸಲೆ ಕರಂ ಮುಗಿದಿಹವೊಲು ಕರಂ ಮುಗಿದವಬ್ಜಾಳಿ (ಬಸಪು. ೦೦-೪೩) ; ಲಲನನಂ ತೊಱಿದು ಬಹುಬುದ್ಧಿಯಿಂದಿರ್ಪಳುಜ್ವಲ ಕುಂಭದೊಳು ಸೂಳೆ (ಶಿಕ್ಷಕು. ೪-೨೦-೨೨). [ಸಂ.]

**ಲಲನೆ, ಲಳನೆ** (ನಾ). ೧. ಹೆಂಗಸು ; ಹೆಣ್ಣು : ಸ್ತ್ರೀ : "ಪ್ರಮದೆ ನಿತಂಬಿನಿ . . . ಮನೋರಮೆ ಲಲನೆ ಕಾಂತೆ ಎಂದಿಂತು ಮತ್ತಮಬಲಾ ವಿಶೇಷ [ಮುಂ೧ ಕಾಮು]ಕ್ಕುಂ" (ಪಕ್ತುಕೋ. ೩೨-೨) ; ಲಲನಾಮುಖೇಂದು ಲಾವಣ್ಯಲೀಲೆಯುಂ ಪಡೆವ ಬಣ್ಣದಿಂ ಕಂಪಿಂದೇನಲೆದುದೊ ಪ್ರೈತಿಕದಂತಿರೆ ಕುಸುಮಾಕ್ಷಿಯುಮಂ ಕಾಶ್ಮೀರಂ (ಅದಿಪು. ೦೦-೦೨೪) ; ಲಲನೆಯ ಬಾಸೆಯ ಕರ್ಪೀಂ ಗೆಲೆವಂದುದೊ ವಿಷ್ಣು ಗರ್ಭದೊಳ್ಳಲಸಲೊಡು (ಅಹಂಪು. ೦೨-೬೪); ಈ ಲಲನೆಯ ಸೌಂದರ್ಯಂ ಸೋಲಿಸಿದುದು ಗಡ ಮದೀಯ ಮನಮಂ (ರಾಜಶೇ. ೭-೬೦). ೨. ಹೆಂಡತಿ : ಪತ್ನಿ : ಪುರುಷನ ಒಲವಿಲ್ಲದ ಲಲನೆಯಂತೆ ಆಗಿದ್ದೆನಯ್ಯಾ (ಬಸವ. ೨೬೯); ಮಲುಹಣಂ ಕಾಮಬಾಣದಿನೊಂದು . . . ಲಲನೆಯಂ ಕಾಣದಲ್ಲದೆ ಉಳಿಯೆನೆಂದವಳ ಗೃಹಕೆ ಬರುತಿರಲು (ಶ್ರೀಶರಾ. ೪-೨೯). ೩. ನಾಲಗೆ. **ಲಳನೆ** : ೧. ಲಳನಾ ಭೂಷಣಾಮೀಕೆ ಭೂಷಣಾಕೆ ಭೂಪಾಲಕ್ಷ್ಮಿಯಂ ಮಾಟ್ಪುದು (ಜಗು. ೦೦-೦೦೩); ಲಳ[ಶಾಕಾಂ. ಲ]ನೆ ಮನೋಭವಾಂಬುದದ ಮಾಟ್ಕೆಯುಮೊಲ್ಪದವಿತ್ತುದಪಾಣ . . . ರತಾಂತಮಂತಲಘುತರೋಪಶಾಂತ ಘನಕಾಲದ ಲೀಲೆಯು ನಾಂತುದಾವಗಂ (ಕಾಕ್ಯಗ್ರ. ೦೦-೭೪) ; ಲಳನಾಧಮ್ಮಿಲ್ಲಮಾಲಾಕುಸುಮ ಪರಿಮಳಾಮೋದಿ . . . ಸಮೀರಂ (ಧ್ರಸ್ಪ. ೯-೦೦೮). [ಸಂ. ಲಲನಾ]

**ಲಲಾಟ** (ನಾ). ೧. ಹಣೆ ; ನೊಸಲು : "ನಿಟಿಳಂ ಭಾಳಮಳಿಕಮಱಿಗೆ ಲಲಾಟಂ" (ಪಕ್ತುಕೋ. ೭೦-೦೮) ; ಸಹಜಮನೋಜನ ಲಲಾಟ[ಂ] ಪಟ್ಟಂಗಟ್ಟಿದ ನೊಸಲ್ಗೆ ಲಕ್ಷಣಮನಱಿಸಲ್ವೇಡೆಂಬಂತಾದುದು (ಕಂಕಥಾ. ೨-೩೯ದ); ಲಲಾಟದಲ್ಲಿ ವಿಭೂತಿಯ ಬರೆಯಲಿಕೆ ಪಾಪ ಪಲ್ಲಟವಾಗದೆ (ಬಸವ. ೭೩) ; ಲಿಖಿತ ಲಲಾಟದೊಳಿರದಿರಲೇಗೈವೆ ಎಷ್ಟು ಲಗ್ಗಾಟವ ಹೊಡವೆ (ತಂಜಾಕ. ೦೭೦-೪೦). ೨. [ಕಾಮಶಾ] ಆಲಿಂಗನಗಳಲ್ಲಿ ಒಂದು ಬಗೆ : ಸ್ತ್ರೀಯ ಮುಖದಿಂ ತನ್ನ ಮುಖಮಂ ಕಂಗಳಿಗೆ ಕಂಗಳಂ ಹಣೆಗೆ ಹಣೆಯಿಂದೊತ್ತರಿಸುತ್ತ ಆಲಿಂಗನಂಗೆಯ್ವುದು ಇದು ಲಲಾಟವೆಂಬಾಲಿಂಗನ (ಕಾಮಶಾ. ೨೨೪). [ಸಂ.]

**ಲಲಾಟಕ** (ನಾ). ೧. ಹಣೆ ; ನೊಸಲು. ೨. [ಕಾಮಶಾ]ಆಲಿಂಗನಗಳಲ್ಲಿ ಒಂದು ಬಗೆ : ಮುಸುಡು ಮುಸುಡೊಳು ನೊಸಲು ನೊಸಲೊಳೆದೆಯೆದೆಯೊಳಗೆ ಉಸಿರುಸಿರೊಳೊಂದಿ ಬೇಱಿಲ್ಲದಂತೆ ಸಸಿನೆ ತಳ್ತಮರ್ದಪ್ಪಿದಸಿಯುಳಸಿಯನ ದೆಸೆಯೊಳೆಸೆವುದು ಲಲಾಟಕಮೆಂದಪ್ಪುದಬಲೆ (ಶವದ.೭-೦೪) ; ಪುಷ್ಕರ . . . ಲಲಾಟಕವೆಂಬ ದ್ವಾದಶವಿಧಾಲಿಂಗನಂಗಳಿಂ (ಶಿಶುಕ. ೨೨೯). [ಸಂ.]

**ಲಲಾಟನೇತ್ರ** (ನಾ). ೧. ಹಣೆಯಲ್ಲಿರುವ ಕಣ್ಣು; ಹಣೆಗಣ್ಣು: ಮುಳಿಸು ಲಲಾಟನೇತ್ರ ಶಿಖಿ ಮೆಚ್ಚೆ ವಿನೂತರಸಪ್ರಸಾದಂ (ಕಂಕಥಾ.೦-೨) ; ಸ್ಮರರಿಪುಲಲಾಟನೇತ್ರಸ್ಫುರದುರುಹುತವಹನಿಸೆಯ್ದ ಬೇವುಶ್ರೀದರ್ಪ ಸ್ಮರನ ಪೊಗೆಯಿಂದ ಪದಿದಿರ್ದ ರತಿಯವೊಲ್ ಕಾಂತೆ ಕರಮೆ ಕಣ್ಗೆಸೆದಿರ್ದಳ್ (ಗಾರಂಪು. ೪೩). ೨. ಹಣೆಯಲ್ಲಿ ಕಣ್ಣುಳ್ಳವನು; ಹಣೆಗಣ್ಣ; ಶಿವ: ಲಲಾಟನೇತ್ರ ನಾಗಸೂತ್ರ ವಿಶ್ವಜೈತ್ರ . . . ಪಾಹಿಮಾಂ ಮಹೇಶ್ವರಾ (ಹರಿಚ. ೨-೩-೨೮). [ಸಂ.]

**ಲಲಾಟಪಟ್ಟ** (ನಾ). ೧. ಹಣೆ : ನಿಜಾನುಜಸಹಿತಮಿದಿರ್ವಂದು ಧರಾತಳನಿಷ್ಠ ಲಲಾಟಪಟ್ಟಂ ಸಾಷ್ಟಾಂಗವೆಱಗಿ ಪೊಡಮಟ್ಟು ತದೀಯಾಶೀರ್ವಾದಮನಾಂತು (ಕಂಕಥಾ. ೭-೩೯ ಬ) ; ಮಹೀತಳಾಶ್ಲಿಷ್ಟಲಲಾಟಪಟ್ಟನೆಱಗಿ ಪೊಡಮಟ್ಟು (ಶಾಂತಿಪು. ೩-೩೦ ಬ). ೨. ಹಣೆಪಟ್ಟಿ : ಈಗಲಾದರೆ 'tourist' ಎಂಬ ಲಲಾಟಪಟ್ಟವನ್ನು ಧರಿಸಿ ಪ್ರೇಕ್ಷಕಸಮುದಾಯವನ್ನು ತುಂಬಿಕೊಂಡು ಅನೇಕ ಬಸ್ಸುಗಳು ಸಂಚರಿಸುತ್ತವೆ (ಪಂಟರು. ೦೦೩). ೩. ಒಂದು ಬಗೆಯ ಆಭರಣ; ಹಣೆಗೆ ಕಟ್ಟುವ ಅಲಂಕಾರದ ಪಟ್ಟಿ : ಸುಜನೈಕಮಿತ್ರ ಅಭಿಮಾನಮನ್ದರ ವಿಭವಪುರಂದರ ಸರಸ್ವತೀಗಣಲಲಾಟಪಟ್ಟ ಕನ್ನಕೈರ ದಿಶಾಪಟ್ಟ ವಾಜಿಕುಳಾಂಬರದ್ಯುಮಣಿ (ಶಾಇಕ. XX, ೬೯-೦೪ ; 1107). [ಸಂ.]

**ಲಲಾಟರೇಖೆ** (ನಾ). ೧. ಆಯುಷ್ಯವನ್ನು ಸೂಚಿಸುವ ಹಣೆಯ ಮೇಲಿನ ರೇಖೆ. ೨. ಹಣೆಯ ಬರಹ ; ಅದೃಷ್ಟ : ದೊರೆಗಳು ಎನ್ನಿಸಿಕೊಂಡವರೆಲ್ಲರಿಗೂ ಈ ಭಾಗದಲ್ಲಿ ಲಲಾಟರೇಖೆಯು ಏಕರೀತಿಯಾಗಿದೆಯೋ (ಪೂಮಗಾ. ೭೨). [ಸಂ. ಲಲಾಟರೇಖಾ]

**ಲಲಾಟಲಿಖಿತ** (ನಾ). = ಲಲಾಟರೇಖೆ ೨: ಲಲಾಟಲಿಖಿತ ಬರೆದ ಬಳಿಕ ಪಲ್ಲಟವ ಮಾಡಬಾರದು (ಬಸವ. ೩೬); ಲಲಾಟಲಿಖಿತವಾದ ವಿಧಿಯಿಚ್ಛೆಯಂತೆ ನಡೆಯುವುದು ನನ್ನ ಕರ್ತವ್ಯ (ಧ್ರುವರು. ೨೯೯). [ಸಂ.]

**ಲಲಾಟಲೋಚನ** (ನಾ). ಹಣೆಯಲ್ಲಿ ಕಣ್ಣುಳ್ಳವನು: ಹಣೆಗಣ್ಣ ; ಶಿವ: ಜಯಂತೀಮಧುಕೇಶ್ವರದೇವಲಬ್ಧವರಪ್ರಸಾದಂ ಮೃಗಮದಾಮೋದಾತ್ರಿಯಕ್ಷಕ್ಷುಮಾಕ್ಷಸಂಭವ ಚತುರಾಸೀತಿನಗರಾಧಿಷ್ಠಿತ ಲಲಾಟಲೋಚನ (ಶಾಇಕ.XX, ೬೬-೬; 1118); ಲಲಾಟಲೋಚನನ ಮಹಿಮೆಯ ಪೇಳುತಿರಲಿಂದು (ಶಿಕ್ಷಕು. ೪-೩-೪೦). [ಸಂ.]

**ಲಲಾಟಶೂನ್ಯ** (ನಾ). ಹಣೆಯ ಮೇಲೆ ತನ್ನ ಧರ್ಮದ ಚಿಹ್ನೆಯನ್ನು ಧರಿಸದೆ ಇರುವವನು; ಹಾಳುಹಣೆಯುಳ್ಳವನು : (+). [ಸಂ.]

**ಲಲಾಟಾಕ್ಷ** (ನಾ). = ಲಲಾಟಲೋಚನ : ಪಾಲಿತಾಖಿಲಸುಮನಸೇ ವಿಧುಮೌಲಿ . . . ಲಲಾಟಾಕ್ಷ ಪ್ರತಿಮ ಬಸವಾಯತೇ ಜಯತು (ಬಸವು. ೭೦-೯೯). [ಸಂ.]

**ಲಲಾಟಿಕೆ** (ನಾ). ೧. ಮುಂದಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ ; ಬೈತಲೆಮಣಿ. ೨. ಮುಂದಲೆಯಲ್ಲಿ ಧರಿಸುವ ಹೂವಿನ ಕುಚ್ಚು : "ಮಾಲೆಯಂ ಚಂಡಿಕೆಯೊಳಿಕ್ಕಿ ಪುಷ್ಪಕಂ ಮುಂದಲೆಯ ಲಲಿಪ್ಪವು ಲಲಾಟಿಕಾಖ್ಯಂ" (ಮಂಗರಾ. ೯೬-೨೦). ೩. ಹಣೆಯ ಮೇಲೆ ಚಂದನ ಮೊದಲಾದ ಸುಗಂಧದ್ರವ್ಯಗಳಿಂದ ಇಡುವ ಗುರುತು ; ತಿಲಕ; ಬೊಟ್ಟು : "ತಿಲಕಂ ತಮಾಲಪತ್ರಂ . . . ಲಲಾಟಿಕಾ — ಈ ೬ ಬೊಟ್ಟು" (ಕರಾಯು. ೬೯-೪೮೬) ; ಅನಂಗರಚಿತಚಂದನಲಲಾಟಿಕಾ ತ್ರಿಪುಂಡ್ರನುಂ (ಕಾದಂಬ. ೯೦೦). [ ಸಂ. ಲಲಾಟಿಕಾ ]

**ಲಲಾಟೇಕ್ಷಣ** (ನಾ). = ಲಲಾಟಲೋಚನ : ಶಿವಲಿಂಗಾಂತಃಸ್ಥನಾದಂ ವಿಯತ್ಪಿತೃಪುರಾರಣ್ಯದವಾಗ್ನಿ ಹಂಪೆಯ ವಿರೂಪಾಕ್ಷ ಲಲಾಟೇಕ್ಷಣಂ (ಶಂದರಿ. ೬ ಸಂತಕವ). [ಸಂ.]

**ಲಲಾಮ** (ನಾ). ೧. ಮುಂದಲೆಯ ಆಭರಣ ; ಬೈತಲೆಮಣಿ : ಆ ವತ್ಸವಿಷಯಂ . . . ಭೂಲಲನಾವದನಲಲಾಮಮೆಂಬಿನಂ ಸೊಗಯಿಸುಗುಂ (ಸುಕುಮಾ. ೦-೭೦); ಈ ಭೂಕಾಂತೆಗೆ ಲಲಾಮಮೆಂಬಂತೆ . . . ಒಪ್ಪುವುದಹಿಚ್ಛತ್ರಪುರಂ (ರಾಮಾಶ್ವ. ೩೩-೦೦). ೨. =ಲಲಾಟಿಕೆ ೩ : ಕಟಕಳ ಕಾಂಚಿಯಿಂದೆ . . . ನಿಟಲಂ ಲಲಾಮದಿಂ ನಿಟಲದಿನಾ ಲಲಾಮಮುಮಾ ಲಂಕರಿಸಿರ್ದುವೆನುತ್ತೆ ನೋಡಿದರ್ (ಶಂಶ್ರ‍ಪು. ೬-೭೭). ೩. ಗುರುತು; ಚಿಹ್ನೆ. ೪. ಬಾವುಟ ; ಪತಾಕೆ. ೫. ಬಾಲ. ೬. ಹೆಚ್ಚುಗಾರಿಕೆ; ಹಿರಿಮೆ. ೭. ಕೊಂಬು ; ಕೋಡು ; ಶೃಂಗ. ೮. ಕುದುರೆ. ೯. ಮಂಗಳಕರವಾದ ಗುರುತು; ಶುಭಲಕ್ಷಣ. ೧೦. ತಿಲಕಪ್ರಾಯವಾದುದು; ಶ್ರೇಷ್ಠವಾದುದು ; ᴾ ಸಮಾಸದ ಕೊನೆಯಲ್ಲಿ ಈ ಅರ್ಥ ಬಳಕೆಯಾಗುತ್ತದೆ : ಸಕಲಕ್ಷತ್ರಕುಲಪೂಜ್ಯನಮಳಚರಿತ್ರಂ ಪ್ರೋದ್ದಾಮಸೋಮವಂಶಲಲಾಮಂ (ಕಂಜಾಪಾ. ೦-೬೦); ಗುರುಕುಲಲಲಾಮನಂ ಕಂಡನು (ಕಾವಕಂ. ೨-೨೩). ೧೧. ಒಡೆಯ; ಸ್ವಾಮಿ : ಅಪವರ್ಗಸಂಪದ್ವಿಳಾಸಿನೀಲಲಾಮನುಂ (ಧನ್ಯಕು. ೦೦-೬೨ ವ). ೧೨. ಚೆಲುವು; ಸೌಂದರ್ಯ. ೧೩. ಸರಸ್ವತಿ. ೧೪. ಲಕ್ಷ್ಮಿ. ೧೫. ಬಸವ; ವೃಷಭ. ೧೬. ಸೂರ್ಯ. ೧೭. ಚಂದ್ರ. ೧೮. ತುದಿ; ಅಗ್ರ. ೧೯. ಕಿರಣ; ರಶ್ಮಿ. ೨೦. ಕೆಂಪುಬಣ್ಣ. ೨೧. ಅರಗು; ಅಲತಗೆ. ೨೨. ಬಿಳಿದು; ಶ್ವೇತವರ್ಣ. ೨೩. ಆಟ; ಕ್ರೀಡೆ. ೨೪. ನಾದ; ಸ್ವರ. ೨೫. ಮುಖ್ಯನಾದವನು; ಪ್ರಧಾನವ್ಯಕ್ತಿ : "ತಿಲಕದಲಿ ಹಮ್ಮಿಯಲಿ ಕೋಡಿನಲಿ ಮುಖ್ಯನಲಿ ಅಲತಗೆಯೊಳಾಭರಣದಲಿ ಪತಾಕೆಯಲಿ ನೀಳ್ದಲೆವ ಬಾಲದಲಿ ವಾಜಿಗಳಲಿ ಲಲಾಮವೆಂದೆಂಬ ನಿಜನಾಮಮುಮಕ್ಕುಂ" (ಮಂಗರಾ. ೦೯೬-೩೯); "ಭಾರತಿ ಗೋಮಿನಿ ವೃಷಭ ತುಂಗ ತುರಂಗ ಪತಂಗ ಶೃಂಗ ಶೃಂಗಾರ ವಿಭೂಷಣಾಂಶು ಧವಳಾಗ್ರ ಸಲಕ್ಷಣ ವಾಳ ಕೇಳಿ ಚಂದ್ರಾರುಣ ಶ್ರೇಷ್ಠನಾದ ತಿಲಕ ಧ್ವಜಮಿಂತು ಲಲಾಮಶಬ್ದಂ" (ಪಾವಾರ. ೨೬). [ಸಂ.]

**ಲಲಾಮಕ** (ನಾ). ಮುಂದಲೆಯಲ್ಲಿ ಧರಿಸುವ ಹೂವಿನ ಕುಚ್ಚು : "ಮುಂದಲೆಯ ಹೂ ಲಲಾಮಕವೆಂಬುದು" (ಕರಾಯು. ೯೦-೪೯೯). [ಸಂ.]

**ಲಲಾಮೆ** (ನಾ). ೧. ತಿಲಕಪ್ರಾಯಳಾದವಳು; ಶ್ರೇಷ್ಠಳಾದವಳು : ಅಗಳಾತನಂತಃಪುರಸೀಮಂತಿನೀ ಲಲಾಮೆಯಪ್ಪನಂಗವುಷ್ಪೆ. . . ಸುಗ್ರೀವನ ಸಂತೋಷದೊಳಾದ ಮನೋರಾಗಮುಮನಪ್ಪುಕೆಯ್ಯೆ (ಕಂರಾಮಾ. ೦೦-೩೨ವ). ೨. (?) : ಮಹಿಷಾಸುರನಂತೆ ಸೂಲದೊಳ್ ನೊಂದು ನರಳ್ದ ಕಳ್ಳರಿಂ ಬೋಂತಿಯಂತೆ ದಕ್ಕಿನೊಳ್ದ ಪಂದಲೆಗಳಿಂ ಬಂದಿಕಾಜನಂತೆ ತೆಜಿಪುವಾರ್ದು ಓಡಿವ ಶಾಕಿನಿಯರಿಂ ಮೃಗಯಾಪತಿಯಂತೆ ಕೀಲಾಲಜಲ್ದ ದೊಳೋಲಾಡುವ ಲಲಾಮೆಯರಿಂ (?) ಸೋಂಬನಂ ಮೆಚ್ಚಿ ಬೇಟಿರ್ಗೆ ಪೋದ ಸೂಳೆಯಂತುಯ್ಯಲಾಡುವ ರಣದೇವತೆಯರಿಂದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೭೯ ಶಿಶ್ರ‍ಕ). [<ಸಂ. ಲಲಾಮಾ]

**ಲಲಿತ**, ಲಳಿತ (ಗು). ೧. ವಿನೋದದ ; ಲೀಲೆಯ. ೨. ಚೆಲುವಾದ ; ಸುಂದರವಾದ ; ಮನೋಹರವಾದ : ಲಲಿತಮುಖಸರಸಿಜಂ . . . ನಿಶ್ಚಳತನು ನಡೆ ನೋಡೆ ಭರತರಾಜಂ ಸೊಲ್ಲಂ (ಆದಿಪು. ೦೯-೦೦೫) ; ಲಲಿತಾನನಾಂಬುಜಮಲರ್ದೆಸೆದುದು ಮಂದಹಾಸದಿಂ ಮುರಹರನಾ (ಜಗರಾ. ೩-೬೨); ಜಲರಸಾನಲಮರುದ್ಗಗನರವಿಸೋಮಾತ್ಮ ಲಲಿತಕಾಯಂ (ಶ್ರೀಕರಾ. ೨-೦). ೩. ಕೋಮಲವಾದ; ಮೃದುವಾದ : ಲಲಿತಕಿಸಲಯಮೆ ಬಾಸಂ ಮಲರಕ್ಷತಮಳಿರುತಿ ಶ್ರುತಿ ಸ್ವರಮಾಗಲ್ ಸಲೆ ಕಂತುವಿನ ಪುರೋಹಿತಕುಲ ಮೆನಿಸಿತು ಬನದ ಬಾಲಚೂತವ್ರಾತಂ (ಕುಸುಮಾ. ೨-೬೩) ; ಲಲಿತಮೃಣಾಳದಿಂ ತಣಿದು ತಣ್ಪುಳಿನಸ್ಥಳದೊಳ್ನಿಜೇಚ್ಛೆಯಿಂ ನಲಿವ ಮರಾಳದೊಳ್ನಡೆಯನು . . . ಕಲಲೆಂದು ಬರ್ಪುದು ತದೀಯ ಬನಕ್ಕೆಬಲಾಕದಂಬಕಂ (ಶಾಂತೀಶ್ವ. ೦೩-೮೯). (ನಾ). ೪. ಚೇಷ್ಟೆ ; ಆಟ ; ಕ್ರೀಡೆ. ೫. ಸ್ತ್ರೀಯ ಶೃಂಗಾರಭಾವಗಳಲ್ಲಿ ಒಂದು : "ಹೇಲಾ ವಿಳಾಸ ವಿಭ್ರಮ ಲೀಲಾ ಬಿಬ್ಬೋಕ ಲಲಿತ ಹಾವಾಖ್ಯಂಗಳ್ . . . ಶೃಂಗಾರಭಾವಸಂಭೂತಂಗಳ್" (ಚನ್ನಕೋ. ೭೬-೨೨) : "ಹೇಲಾ, ವಿಳಾಸಃ … ಲಲಿತಂ, ವಿಭ್ರಮಃ- ಇವು ಮೊದಲಾದುವು ಸ್ತ್ರೀಯರ ಭಾವಂಗಳ್" (ಕರಾಯು. ೦೩-೮೯). ೬. ಮನೋಹರವಾದುದು ; ಆಕರ್ಷಕವಾದುದು : ಬೀಸುವ ಧವಳ ಚಾಮರಂಗಳ್ . . . ಎಸೆದುವತಿಲಲಿತಂಗಳ್ (ಕಸ್ತೂರಿ. ೩-೦೭). ೭. ಚೆಲುವು ; ಸೌಂದರ್ಯ. ೮. ಮೃದುತನ ; ನಯ ; ಮಾರ್ದವತೆ. ೯. ಸರಳತೆ ; ಮುಗ್ಧತೆ. ೧೦. ಲಲಿತಾಗಮದ ನಾಲ್ಕು ಭೇದಗಳಲ್ಲಿ ಒಂದು : ಲಲಿತ ಲಲಿತೋತ್ತರ ಕೌಮಾರತಂತ್ರ ವಿಶ್ವೇಶ್ವರಾಗಮವೆಂದು ಲಲಿತಾಗಮದ ನಾಲ್ಕು ಭೇದಂಗಳು (ಏವಕ. ೭೦). ೧೧. ಒಂದು ಬಗೆಯ ಸಸ್ಯ : "ಹಸ್ಯಗಣೆ ಲಲಿತವಕ್ಕು" (ಮಂಗರಾ. ೩೭-೦೯). ೧೨. [ನಾಟ್ಯ] ಮೂವತ್ತು ಬಗೆಯ ನೃತ್ತ ಹಸ್ತಗಳಲ್ಲಿ ಒಂದು ; "ಅಲಪಲ್ಲವ ಹಸ್ತಗಳೆರಡನ್ನು ತಲೆಯ ಹತ್ತಿರ ಮೇಲೆ ಹಿಡಿಯುವುದು" (ಶಾಸ್ತ್ರರಂ. ಗದ್ಯಾನುವಾದ. ೨೩೩) : ಲಲಿತಮೆನಿಪ್ಪೀ ಹಸ್ತಂ ನೆಲೆಗೊಳ್ಳುಂ ಭರತದಲ್ಲಿ ಮೂವತ್ತೆಂದುಂ (ಶಾಸ್ತ್ರರಂ. ೨-೪೪). ೧೩. ನೃತ್ಯದ ಮೂವತ್ತಾರು ಬಗೆಯ ಸಂಚಾರೀಭಾವದೃಷ್ಟಿಗಳಲ್ಲಿ ಒಂದು ; "ಮುಗುಳ್ನಗೆಯಿಂದ ಕೂಡಿ ಅನುರಾಗ ಹೆಚ್ಚುವಂತೆ ಹುಬ್ಬು ಹಾರಿಸುತ್ತಾ ಕಡೆಗಣ್ಣಿನಿಂದ ನೆಲವನ್ನು ನೋಡುವುದು ; ವಿ — ಹೆಂಗಸರ ವಿಲಾಸವನ್ನು ಅಭಿನಯಿಸುವಾಗ" (ಶಾಸ್ತ್ರರಂ. ೨೬೦ ಗದ್ಯಾನುವಾದ) : ನೆಲನಂ ನೋಡುವಪಾಂಗಂ ಚಲಿಸುವ ಭ್ರೂ ಮಂ[ದ]ಹಾಸಮಂಗಜನುರ್ಬಂ ಗೆಲೆ ಮಾಳ್ಪ ನೋಟಮೊಪ್ಪಲ್ ಜಲಜಾಕ್ಷೀ ಲಲಿತಮೆಂಬ ಪೆಸರಂ ಪಡೆಗುಂ (ಶಾಸ್ತ್ರರಂ. ೪-೪೯). ೧೪. [ಛಂದ] ಒಂದು ಅಕ್ಷರವೃತ್ತದ ಹೆಸರು ; ᴾ ಇದರಲ್ಲಿ ಎರಡು ಬಗೆಗಳಿವೆ. 'ಸನಭನಜನನಯ' ಎಂಬ ವಿನ್ಯಾಸದ್ದು ಒಂದು. 'ಭಜಸನ ಭಜಸನಭಯ' ಎಂಬ ವಿನ್ಯಾಸವಿದ್ದು, ೧೦, ೧೮ನೆಯ ಅಕ್ಷರಗಳು ಪ್ರಾಸಾಕ್ಷರದ ಆವೃತ್ತಿಯಾಗಿರುವುದು ಮತ್ತೊಂದು : ಲಲಿತಾಕ್ಷರ ಪದರಚನೆಗಳಿಂದಂ ಪರೆದುದು ಲಲಿತಂ (ಛಂದೋಂಬು. ೨-೦೯೦). ೩. ೧೪ : ಹರಿಣೀ ಮತ್ತೇಭ ವಿಕ್ರೀಡಿತ ಲಲಿತ ಮಯೂರಾನ್ವಿತಂ . . . ನಭಮಂ ಪೋಲ್ತು ಚೆಲ್ವಾಯ್ತುರಣ್ಯಂ (ಶಾಂತೀ. ೩-೭೩). ೧೫. ರಗಳೆ ಛಂದಸ್ಸಿನಲ್ಲಿ ಒಂದು ಬಗೆ : ಪಾದವೊಂದಕ್ಕೆ ಐದು ಮಾತ್ರೆಯ ಗಣವು ನಾಲ್ಕಿರಲು ಲಲಿತರಗಳೆ ಯಾಗುವುದು (ಛಂದೋ. ೩೩).

೧೬. [ಸಂಗೀತ] ಒಂದು ರಾಗದ ಹೆಸರು: ನಾದರಾಮಕ್ರಿಯಾ . . . ಗೌಳ. ಲಲಿತ, ಗುರ್ಜರೀ ಗುಂಡಕ್ರಿಯಾ. ಮಲಹರಿಯೆಂಬುದು. ಆರ್ದ್ರದೇಶಿಕಾರಾಗ (ಕಕುಕ್ರ. ೦೨೯). **ಲಳಿತ :** ೧. ಲಳಿತ ಲತಾಂಗಭಂಗಿಯ ಬೆಡಂಗಿಯರಿಕ್ಕುವ ಚಾಮರಗಳಿ ಸಂಚಳನದ ಚಿತ್ರಕಾಂತಿ ನಿಮಿರುತ್ತಿರಲ್ (ಶಾಂತೀಶ್ವ. ೦೩-೦೨). ೨. ಲಳಿತನಿಜರೂಪವಿಭ್ರಮವಿಳಾಸಮಂದರ್ಶಿಸೆಯೆ ಬಂದರ್ . . . ಜವ್ವನೆಯರ್ (ಜಗಂ. ೯-೦೨೦); ಲಳಿತತರಂಗಂ ಒಳ್ನುಜು ಲಸತ್ಪುಳಿನಸ್ಥಳ ಸತ್ಕಟೀತಟಂ . . . ಎನಿಪ್ಪ ವಿಯತ್ತರಂಗಿಣೀಲಳನೆ (ರಕಾ. ೬-೦೦೬). ೫. ಲಳಿತತವಮಾಳಲತಾಕೋಮಳೆ (ಶಬರಶ. ೦-೬೪); ಲಳಿತ ವಿಳಾಸ ವಿಭ್ರಮ ಕಳಾವತಿಯರ್ (ಪುಕ್ಕಶು. ೬-೩೬). ೧೭. [ನಾಟ್ಯ] ಒಂದು ಬಗೆಯ ನೃತ್ಯ : ಅಳಿನಿನದದ ಮದಕೋಕಿಳಕಳನಿನದದ ಜತಿಯೊಳ್ ಘನಯಂ ನೆಗಟ್ಟುನೆಗಂ ಲಳಿತಮನೇನಾಡಿಸಿದನೊ ಮಳಯಜಾನಿಳನರ್ತಕಂ ಲತಾನರ್ತಕಿಯಂ (ಆದಿಪು. ೦೦-೯೦). [ಸಂ.]

**ಲಲಿತಕಲೆ** (ನಾ). ಮನಸ್ಸಿಗೆ ಆನಂದವನ್ನುಂಟುಮಾಡುವ ಕಾವ್ಯ, ಸಂಗೀತ, ಚಿತ್ರ, ಶಿಲ್ಪ ಮುಂತಾದ ಕಲೆಗಳು : ಲಲಿತಕಲೆಗಳಲ್ಲಿ ಈ ತತ್ವದ ಅನುಷ್ಠಾನವನ್ನು ಕಾಣುತ್ತೇವೆ (ರಾಠಕ. ೪೦೯) ; ವೈವಿಧ್ಯದ ಅಧ್ಯಯನ ಯೋಜನೆಗಳನ್ನು ಅವರು ಸಲಹೆ ಮಾಡಿರುವರು. ಅವುಗಳಲ್ಲಿ . . . ಲಲಿತಕಲೆ . . . ಇವು ಮುಖ್ಯವಾದುವು (ಕಸ್ತು. ೦೯೩). [ಸಂ. ಲಲಿತಕಲಾ]

**ಲಲಿತತೆ, ಲಳಿತತೆ** (ನಾ). ಲಾವಣ್ಯ ; ಸೊಬಗು: 'ಲಲಿತತೆವೆಱು' ಪರಾ. **ಲಳಿತತೆ :** ಶ್ರೀಯಂ ಶ್ರೀಕಲ್ಲಿನಾಥಂ ಕುಡುಗೆ . . . ಗೌರೀಜಾಯಾಕಾಯಾನುಷಂಗಾಕಳಿತಲಳಿತತಾಪ್ರೋಲ್ಲಸದ್ವಾಮಭಾಗಂ (ಎಇ. XXI. ೦೨-೩; 1260). [ಸಂ. ಲಲಿತತಾ]

**ಲಲಿತತೆವೆಱು** (ಕ್ರಿ). ಸೊಬಗನ್ನು ಪಡೆ ; ಲಾವಣ್ಯವನ್ನು ಹೊಂದು: ಲಲಿತತೆವೆತ್ತು ಕೊಂಕಿ ಪರಿದೊಪ್ಪದೊಳೊಂಬರೆ ಪುರ್ಬು ಚಾಪಮಂ . . . ಪೋಲ್ತಿರೆ (ರಘುಚಮ್ಮ. ೬-೦೯೬). [ಲಲಿತತೆ+ವೆಱು]

**ಲಲಿತಪದ** (ನಾ). ೧. ಮೃದುವಾದ ಶಬ್ದ : ಕೋಮಲವಾದ ಪದ: ಲಲಿತಪದಂ ಪ್ರಸನ್ನಕವಿತಾಗುಣವಿಲ್ಲದೆ ಮಾಣ್ದು ಪೇಟ್ದ ಬೆಳ್ಗಳ ಕೃತಿಬಂಧಮುಂ ಬರೆ[ಪ]ಕಾಜರ ಕೈಗಳ ಕೇಡು ನುಣ್ಣನಪ್ಪಳಕದ ಕೇಡು (ಶಬಶಾ. ೦-೦೨). ೨. [ಛಂದ] ಒಂದು ಅಕ್ಷರವೃತ್ತದ ಹೆಸರು ; ಪಾದವೊಂದಕ್ಕೆ ಹನ್ನೆರಡು ಅಕ್ಷರಗಳಿರುವ, ಜಗತೀಛಂದಸ್ಸಿನ ಒಂದು ವೃತ್ತ : ಕುಲಿಶಧರಾರ್ಕಯುಗಂಗಳ ಮುಂದಾ ಜಲಗಣಮೊಪ್ಪಿರೆ ಬಂದು ವಿರಾಮಂ ಕುಲಗಿರಿಯೊಳ್ಳಿರೆ ನಾಕಿಗನಿಂದು ಲಲಿತಪದಂ ಪೆಸರಿಂ ಲಲಿತಾಂಗೀ (ಛಂದೋಂಬು. ೨-೦೩೩). [ಸಂ.]

**ಲಲಿತಭ್ರೂಕ** (ನಾ). ಮನೋಹರವಾದ ಹುಬ್ಬುಗಳುಳ್ಳವನು; ಸುಂದರವಾದ ಭ್ರೂವಿನ್ಯಾಸವುಳ್ಳವನು : ಶ್ರೀ ಕಮಳಲೋಚನಂ . . . ಲಲಿತಭ್ರೂಕಂ . . . ಊರುತಿರ್ದಂ ಕೊಳಲಂ (ಜಗಂ. ೩-೦). [ಸಂ.]

**ಲಲಿತಸ್ತರಣ** (ನಾ). ಮೃದುವಾದ ತಲ್ಪ,—ಹಾಸಿಗೆ : ಚಿತ್ರಾವಳಿಯ ಮೇಲ್ಕಟ್ಟಿನಲಿ ಲಲಿತಸ್ತರಣಮಧ್ಯದಲಿ ಹೊಳೆಹೊಳೆವ ನವರತ್ನಭೂಷಣ ಕಳಿತಕಾಯನ ಕಂಡು ರೋಷಪ್ರಳಯಭೈರವರೂಪನೊದೆದನು ವಾಮಪಾದದಲಿ (ಕುಭಾಗ. ೯-೨೩). [ಸಂ.]

**ಲಲಿತಾಂಗ, ಲಳಿತಾಂಗ** (ನಾ). ೧. ಸುಂದರವಾದ ದೇಹ ; ಚೆಲುವಾದ ಶರೀರ : ಲಲಿತಾಂಗ ಕನಕಾವದಾತಮಲರ್ಗಣ್ ನೀಲೋತ್ಪಲಚ್ಛಾಯೆ (ಆಪು. ೨-೯೩) ; ಲಲಿತಾಂಗಂ ಲತೆ ಕೆಂದಳಂ ತಳರಲರ್ ಕಣ್ಗಳ್ ಕುರುಳ್ ಭೃಂಗಸಂಕುಲಂ . . . ಎನಲ್ಕೆ ನಿಂದು . . . ಕಣ್ಗೊಪ್ಪಿದರ್ ಕಾಂತೆಯರ್ (ಶಾಂತೀಶ್ವ. ೯-೦೨) ; ರಾಜಲಕ್ಷಣದ ಚೆಲ್ವಿಡಿದ ಲಲಿತಾಂಗದಿಂ ಕುಶಲವರ್ಕುಶಲವರ್ಧನರಾಗಿ ರಂಜಿಸಿದರು (ಕೃಜಿಜಾ. ೦೯-೩೦). ೨. ಕೋಮಲವಾದ ಶರೀರ : ಲಲಿತಾಂಗದ ಬಿಮರ್ವರ್ಣನೆಗಳನಲೆದಾಚೆವ ಕೀರಕುಳದೊಲಂಕೆಯ ಕಡುದಕ್ಷೆಲರ್ಗೆಳಸಿ ಪಕ್ಕಿ ಸೋಯದೆ ಕೆಲಬರ್ ಪಾವುರಿಯರವರ ಬರವನೆ ಪಾರ್ವರ್ (ಕುಕ್ಕ. ೨-೦೪). ೩. ರೂಪವಂತ ; ಚೆಲುವ : ಲಲಿತಾಂಗ [ನಂಗ]ವಿಷಯಾಧಿಶಂ ಸುರಸ್ತ್ರೀಜನೋದಾತ್ತಪ್ರಾರ್ಥಿತಯೌವನಂ (ಶಾಂತೀ. ೩-೦೩೩). **ಲಳಿತಾಂಗ :** ೧. ಲಳಿತಾಂಗದ್ಯೋತಿಯಿಂ ಭೂವಳಯಮನೊಳಕೊಂಡಿರ್ದ್ದಳ್ (ಶೌಇ. XX, ೯೬-೨೯ ; 1076). [ಸಂ.]

**ಲಲಿತಾಂಗಿ** (ನಾ). ಸುಂದರವಾದ ದೇಹವುಳ್ಳವಳು ; ಚೆಲುವೆ : ಲಲಿತಾಂಗಿ ಮೆಲ್ಲಮೆಲ್ಲನೆ ನಳಿತೋಳಂ ಬೀಸೆ ಮಿಸುಗುವಸಿಯುಂಗುರಗಳ ನುಣ್ಬೆಳಗು ನಿಮಿರ್ದಸೆದುವು (ಕಾರಂಪು. ೩೦೬) ; ಲಲಿತಾಂಗಿಯರ ಕರತಳದ ವಿಪುಳಕಲಶೋದಕವನೊಲಿದೀಂಟುತಿರ್ದೊಡಂ ಮನ ತಣಿಯದು (ಕೃಜಿಜಾ. ೩-೦೦). [ಸಂ. ಲಲಿತಾಂಗೀ]

**ಲಲಿತಾಕಾರ, ಲಳಿತಾಕಾರ** (ನಾ). ಸುಂದರವಾದ ಆಕಾರ; ಮನೋಹರವಾದ ರೂಪ : ಲಲಿತಾಕಾರನುಂದೀಯ ನಾಡೆ ನಯನಕ್ಕಾನಂದವಂ (ಸಂಗಾವಿ. ೬-೦೩೨) ; ಲಲಿತಾಕಾರದ ರಾಜಪುತ್ರತತಿಯಿಂದ . . . ಒಪ್ಪಿರ್ದುದೊಡ್ಡೋಲಗಂ (ಕುಸುಮಾ. ೩-೮೬). **ಲಳಿತಾಕಾರ :** ಲಳಿತಾಕಾರಂ ವಿಭವಂ ಬೆಳಗುವ ಲಾವಣ್ಯಮೆಸೆಯೆ ಬಂದರ್ . . . ಕೋಮಳೆಯರ್ (ಜಗಂ. ೪-೦೨೪). [ಸಂ.]

**ಲಲಿತೆ, ಲಳಿತೆ** (ನಾ). ೧. ಹೆಂಗಸು ; ಸ್ತ್ರೀ. ೨. ಸ್ವೇಚ್ಛಾಚಾರಿಯಾದ ಹೆಂಗಸು ; ಸ್ವೈರಿಣಿ. ೩. ವಿಲಾಸಿನಿ ; ಸುಂದರಿ : ಲಲಿತೆಯ ಮುಖೇಂದುಬಿಂಬದ ಬೆಳಗಿನೊಳರದಗಿದು ಪೆಚಿಗೆದು ತವೋಬಳವಿರ್ದುದೆಂಬಿನಂ ಕಣ್ಗೊಳಿಸುಗುಮುಕೆಯ ವಿನೀಳಕಬರೀಭಾರಂ (ಸುಕುಮಾ. ೯-೩೩). ೪. ದುರ್ಗೆಯ ಒಂದು ಹೆಸರು. ೫. [ಕಾವ್ಯಮೀ] ಒಂದು ಅನುಪ್ರಾಸದ ಹೆಸರು : ಸೌಷ್ಠವಗುಣಸಮನ್ವಿತಂ ಲಲಿತವೃತ್ತಿಯಿಂ ಲಲಿತೆಯೆಂಬ ವೃತ್ತಿಯುದಕ್ಕುಂ (ಕಾವ್ಯಾವ. ೩೬೪). ೬. ಒಂದು ಅಲಂಕಾರದ ಹೆಸರು : ಪ್ರಸ್ತುತ ವರ್ಣಿಸದೆ ಪ್ರತಿಬಿಂಬ ರೂಪದ ಪ್ರಸ್ತುತವ ವರ್ಣಿಸೆ ಲಲಿತೆಯು (ಕುವಲ. ೦೨೪). ೭. = ಲಲಿತ ೧೫ : ಇಪ್ಪತ್ತು ಮಾತ್ರೆ ಲಲಿತೆಗೆ ಬಪ್ಪುದು ಪದಿನಾಱು ವಕಾತ್ರೆ ಮುಂದಾ ನಿಲಕಂ ತಪ್ಪದುವುತ್ಸಾಹಕ್ಕಂ ಚೆಯೊಪ್ಪುವುದಿಪ್ಪತ್ತುನಾಲ್ಕು ಮಾತ್ರೆಗಳಬಲೇ (ಛಂದೋಂಬು. ೩-೨೨೨ ಅಂಶವೃ). ೮. [ಸಂಗೀತ] ಒಂದು ರಾಗದ ಹೆಸರು : ಕೌಶಿಕಿ ವೇಳಾವಳಿ . . . ಲಲಿತೆ . . . ಶಯನಸೋದರಿಯೆಂಬ ಮೂವತ್ತುನಾಲ್ಕುರಾಗಂಗಳೇ ಭಾಷಾಂಗದಿಂದ ಪುಟ್ಟಿದವು (ಶಿವತ. ೨೩೩). **ಲಳಿತೆ :** ೮. ಚಾರುವೀಣೆಯ ಬಾಜಿಸುತ್ತ ಲಳಿತೆಯ ಪಾಡೆ (ಗುರುಚ. ೬-೩೦). [ಸಂ. ಲಲಿತಾ]

**ಲಲಿತೋಚ್ಛ್ರಿತ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ . . . ಲಲಿತೋಚ್ಛ್ರಿತ [ಶಾಂ. ಚೃದ] . . . ಕೋಮಲವೆಂಬ ಯಿಪ್ಪತ್ತೆರಡು ಶ್ರುತಿಗಮಕಂಗಳು (ಶಿವತ. ೦೬೬). [ಸಂ.]

**ಲಲಿತೋತ್ತರ** (ನಾ). ಲಲಿತಾಗಮದ ನಾಲ್ಕುಭೇದಗಳಲ್ಲಿ ಒಂದು : ಲಲಿತ ಲಲಿತೋತ್ತರ ಕೌಮಾರತಂತ್ರ ವಿಘ್ನೇಶ್ವರಾಗಮವೆಂದು ಲಲಿತಾಗಮದ ನಾಲ್ಕು ಭೇದಂಗಳು (ಶಿವತ. ೩೩). [ಸಂ.]

**ಲಲ್ಲಯಿಸು, ಲಲ್ಲೈಸು** (ಕ್ರಿ). ಮುದ್ದಿಸು ; ರಮಿಸು ; ಪ್ರೀತಿಸು : ಎರೆವ ಮರಲ್ದ ಲಲ್ಲಯಿಪ ಕಾಲ್ವಿಡಿವೆಂಬುದನಾಯಿಕೆಯ್ಯಳಂಕರಣವಿಳಾಸಮಂ ಮೆಚ್ಚಿವ ಮೇಳಿಸುವಂದಿನ ರೂಪು ಶಾಸನಂಬರೆದುದು (ಆದಿಪು. ೩-೯೩) ; ನುಡಿದು ಕಾತರಿಸದೆ ಕೂಡೆ ಲಲ್ಲಯಿಸದೆ . . . ಬಬ್ಬೆಯನೊಲಿಪನಾವಂ (ಸುಕುಮಾ. ೬-೦೩) ; ಮೆಲ್ಲನೆ ಮೇಳಿಸಿ ಪುರ್ಬುವ ಲಲ್ಲಯಿಸುವ ಪೆಚಿರನಟ್ಟಿ ದೂಱುವ . . . ಮುನಿಯಲ್ಲಿ ಜನೋಕ್ತಿಯನೆ

ಕೇಳಲಾಗದು ಚತುರಂ (ಧರ್ಮಾಮೃ. ೬-೨೦೨). **ಲಲ್ಲೈಸು** : ಕುಡದಿರ್ ಫುರಿಗಣೆಯುನೆನಿತು ಲಲ್ಲೈಸಿದೊಡಂ (ಕಂಕಾ. ೯-೭೮) ; ಕಡುಮುಳಿದ ನಲ್ಲನಂ ಕಾಲ್ವಿಡಿದುಂ ಲಲ್ಲೈಸಿ . . . ತಿಳಿಪಲ್ (ಶೃಂಗಾರ. ೨-೪) ; ಮೆಲ್ಲದೆ ರಾಗದ ಹರಿಯುತ ನಿಂದು ಲಲ್ಲೈಸುವನೀ ಧರಣಿಯುನಿಂದು (ಜನ್ನ. ೬೭-೨).

[ ಲಲ್ಲೆ + – ಇಸು$_3$ ]

**ಲಲ್ಲೆ** (ನಾ). ೧. ಮುದ್ದು : ಪ್ರೀತಿ : "ಲಲ್ಲೆಯೆಂದಕ್ಕು ಮುದ್ದಿಂಗೆ ಪೆಸರು" (ಕಬ್ಬಿ. ೬೬) ; ಲಾಲಿಸಿ ಕೇಳ್ವರ ಕಿವಿಗೋಪವಳಾಡಿದ ಲಲ್ಲೆಯನೆ ಅನುರಾಗದಿ ಲಿಖಿಸುವೆನು (ಜಯಕಾ. ೦-೨೫) ; ಮಾತಿನಲ್ಲಿ ಲಲ್ಲೆ[ಪಾಠಾಂ. ಲೀಲೆ] ಮನದಲ್ಲಿ ಘಾತಕತನವುಳ್ಳವನ ಕನಿಷ್ಠನೆಂಬರು (ಅಜಿಂತೇ. ೯೯-೨೫). ೨. ವಿನೋದ ; ಸರಸ : ಲಲಿತಾಂಗನಂ ಮನಂಗೊಳಿಸುವರಿಚ್ಚೆ ಕಾರ್ತನದ ಲಲ್ಲೆಯ ಸಗ್ಗದ ದೇಸೆಕಾರ್ತಿಯರ್ (ಅಜಿತ. ೨-೭೦) : ತಮ್ಮ ಲಲ್ಲೆ ಕುಣಿತಗಳಲ್ಲಿ, ಪುಷ್ಪಾಪಚಯದಲ್ಲಿ, ಜಲಕ್ರೀಡೆಯಲ್ಲಿ, ಯಾರನ್ನು ಲೆಕ್ಕಿಸದೆ . . . ನುಗ್ಗುತ್ತಾರೆ (ಕಾವ್ಯಸ. ೬೨).

ಲಲ್ಲೆಯಾಡು = ಮುದ್ದಾಡು : ಬಾಲಸೂರ್ಯನ ಬಂಗಾರ ಕಿರಣಗಳು ಆಗಲೇ ಜಾಜಿ–ಗುಲಾಬಿ ಬಳ್ಳಿಗಳ ಮೇಲೆಲ್ಲ ಲಲ್ಲೆಯಾಡುತ್ತಲಿದ್ದವು (ಹಾದುಹು. ೦೦೨). ಲಲ್ಲೆ ಹಾಕು = ವಿನೋದಪಡು ; ಸಂತೋಷಪಡು : ಕಂಡವರ ಮಕ್ಕಳನ್ನು ಭಾವಿಗೆ ತಳ್ಳಿ ಅವು ತೇಲಿ ಮುಳುಗುವುದನ್ನು ನೋಡಿ ಲಲ್ಲೆ ಹಾಕುವ ಗುಣವಿಲ್ಲ (ಕಾಂಪೂಕ. ೦೦). **ಲಲ್ಲೆಹೊಡೆ** = ಸರಸವಾಗಿ ಮಾತನಾಡು ; ಚಕ್ಕಂದವಾಡು : ಅವಳೂ ಅವನೊಡನೆ ಲಲ್ಲೆ ಹೊಡೆಯುತ್ತಿದ್ದಳು (ಮಹಾತ್ಮಾ. ೦೪); ಓಣಿಯಲ್ಲಿಯೋ ಪಡಸಾಲೆಯಲ್ಲಿಯೋ . . . ನಿಂತು ಅವರು ಲಲ್ಲೆ ಹೊಡೆಯುತ್ತಿದ್ದರು (ಕುವರು. ೫೭).

[ದೇ.೩ ತುಳು. ಲಲ್ಲೆ. ಲಲ್ಲ; ತೆಲು. ಲಲಿ]

**ಲಲ್ಲೆಗಣ್ಣು** (ನಾ). ಪ್ರೀತಿಯನ್ನು ಸೂಸುವ ಕಣ್ಣು : ನಿಡಿಗಣ್ಣ ಹುಲ್ಲೆಗಣ್ಣವರೆಸಳ್ಗಣ್ಣ ಲಲ್ಲೆಗಣ್ಣವರ್ ನಗೆನೋಟದ ತೋರ ಧಮ್ಮಿಲ್ಲೆ ಯುರೆಯ್ದುತೊಗ್ಗಿನಲಿ (ಪೋಹಕ. ೨೪-೧೨).

[ ಲಲ್ಲೆ + ಕಣ್ಣು (< ಕಣ್) ]

**ಲಲ್ಲೆಗರೆ** ' ಲಲ್ಲೆಗಱೆ ' ನೋ.

**ಲಲ್ಲೆಗಱೆ**, ಲಲ್ಲೆಗರೆ (ಕ್ರಿ). ೧. ಪ್ರೀತಿಯ ಮಾತನ್ನು ಆಡು ; ರಮಿಸು : ಮುದ್ದಿಸು : ವಲ್ಲಭನಿದ್ದಾನೆಂದು ಲಲ್ಲೆಗಱೆಯ ಬೇಡ (ಸಿದ್ಧವ. ೪. ೦೦೨-೭) ; ರುಗುಮಿಣಿ ಮುಸಿಯೆ ಪುಂಡರೀಕಾಕ್ಷನಾಕೆಯ ಚರಣದಲ್ಲಿ ನೊಸಲಂ ಚಾಚಿ ಲಲ್ಲೆಗಱೆಯೆ (ಹರಿವಂ. ೨೬-೦೦) ; ರನ್ನಗಲ್ಲೆಡೆಯ ಪಲ್ಲ ನಲ್ವಾಸಿನೊಳ್ ಚೆಲ್ಲದಿಂ ನಲ್ಲಳ್ವೆರಸು ನಿಲ್ಲದೆ ಕುಳ್ಳಿರ್ದು ಮೆಲ್ಲಮೆಲ್ಲನೆ ಲಲ್ಲೆಗಱೆವ (ರಾಮಾಶ್ವ. ೭೬-೨). **ಲಲ್ಲೆಗರೆ** : ೧. "ನಾನೇ ಚಿನ್ನಮರಿ" ಎಂದು ಪೈದಿ ಬುಸೋವ್‌ಕಿನ್ ಲಲ್ಲೆಗರೆದನು (ಕುವರು. ೫೭೮). ೨. ಸರಸವಾಡು ; ಚಕ್ಕಂದವಾಡು : ಕೊಂಚ ಸಲುಗೆ ಕೊಟ್ಟೆಯೋ ಲಲ್ಲೆಗರೆಯೋಕೆ ಬರುತ್ತವೆ (ಕೂಪುವ. ೦೨೦). [ಲಲ್ಲೆ + ಕಱೆ$_1$]

**ಲಲ್ಲೆಗಾರಿಕೆ** (ನಾ). ಪ್ರೀತಿಯನ್ನು ತೋರಿಸುವುದು ; ಪ್ರಣಯ : ಪೆಟಕೀತಿ – ಲಲ್ಲೆಗಾರಿಕೆಯನಾಡಿದಪನೆಂಬುದು (ಕಾಶ್ಯ. ೦೮).

[ಲಲ್ಲೆ + – ಕಾರ$_1$ (< – ಕಾಱ) + – ಇಕೆ]

**ಲಲ್ಲೆಗಾರ್ತಿ** (ನಾ). ಸರಸವಾಡುವವಳು ; ಚೆಲ್ಲಾಟದ ಹೆಣ್ಣು : ಬೆಳತಿಗೆ ಗಣ್ಣ ದಿಡಂಗಿ ಲೋಲಾಪಾಂಗದ ಲಲ್ಲೆಗಾರ್ತಿ ಕುಡುವುರ್ವುಗಳ ಕುಶಲೆ (ಉದ್ಭಟ. ೫-೩೩ ೮). [ಲಲ್ಲೆ + – ಕಾಱ + – ತಿ$_1$ ( <– ಇತ್ತಿ) ]

**ಲಲ್ಲೆಗೆಯ್**, ಲಲ್ಲೆಗೈ (ಕ್ರಿ). = ಲಲ್ಲೆಗಱೆ ೧ : ಲಲ್ಲೆಗೆಯ್ದು ಲಲ್ಲೆಗೆ ಮಾಱಿದರ್ದೊಡೆ (ಕಂಕಾ. ೪-೦೦೭) ; ಪಕ್ಕಮಂ ಬಿರ್ಚಿ ಲಲ್ಲೆಗೆಯ್ದು [ಪಾಠಾಂ. ಗಱೆದು]ತ್ತು ಪಾರಿವಂ ಪಾರಿವದೊಳ್ (ಗಿರಿಕ. ೨-೫೨) ಲಲ್ಲೆಗೆಯ್ಯುತ್ತೆ ದೈನ್ಯಂದೋಱೆ (ಕಬ್ಬಿಗ. ೭-೩೦). **ಲಲ್ಲೆಗೈ** : ಗಲ್ಲ ಮನೊರಲ್ದೊಲಿದೆತ್ತಿ ಮುದ್ದಿಪಳ್ ಮಾಣದೆ ಲಲ್ಲೆಗೈವಳ್ (ಉದ್ಭಟ. ೬-೦೨೫); ಲಲ್ಲೆಗೈದೊಲವನಾಣ್ಮಂಗೆ ಕಾಣಿಸಿದಳು (ಕೈಬಿಕಾ. ೦೦-೨೨); ಬೀಸು ವಿಱಿಸಲು ಸೂಸುವ ಸೋನೆಯುಂ ಸ್ಪರ್ಶಿಸದೆ ಪಕ್ಕಿಯೊಳೆ ಪಟ್ಟು, ಕಣಸಂ ಲಲ್ಲೆಗೈದು (ಗುಪಾಶ್ವ. ೩-೨೭). [ಲಲ್ಲೆ + ಕೆಯ್$_1$]

**ಲಲ್ಲೆಗೈ** ' ಲಲ್ಲೆಗೆಯ್ ' ನೋ.

**ಲಲ್ಲೆನುಡಿ** (ನಾ). ಪ್ರೀತಿಯ ಮಾತು ; ಮುದ್ದುಮಾತು ; ಸರಸ ಸಲ್ಲಾಪ : ಗದ್ಗದತ್ವಂ ಪಡೆದಿರ್ಪ ಲಲ್ಲೆನುಡಿ ಲೀಲೆಯನೀಯೆ (ಉದ್ಭಟ. ೩-೦೦೭) ; ಎಸೆವಂಗಪರಿಮಳಂಗಳ ನಾಸಿಕದಿನೀಂಟಿ . . . ಕರ್ಣಂಗಳೊಳು ಲಲ್ಲೆನುಡಿಯನಿದುಗೇಳಿ . . . ಸುರತಪನೆಸಗಲು (ಕಾವಣ. ೩-೩೦) ; ಸವಿ ಲಲ್ಲೆನುಡಿಗೆ ಲವಲವಿಪ ನಾಲಗೆ ಕೂಟಕೆ ಕಾತರಿಸಿ ಮಿಡುಮಿಡುಕಲೊಸರ್ವ ನಾಣೆಡೆ (ಚಂಡು. ೦೯-೩೨). [ಲಲ್ಲೆ + ನುಡಿ$_2$]

**ಲಲ್ಲೆಮಾತು** ' ಲಲ್ಲೆವಾತು ' ನೋ.

**ಲಲ್ಲೆವಾತು**, ಲಲ್ಲೆಮಾತು (ನಾ). = ಲಲ್ಲೆನುಡಿ : ಲಲ್ಲೆವಾತಿಂ ಗಲ್ಲವ ಪಿಡಿದು ಪುಷ್ಪಪರಿಮಳದಂತೆ ನಾ ನೀನುಭಯವಿಲ್ಲದಂತೆ ಕೂಡೆನ್ನ ಪ್ರಾಣೇಶನೇ (ಶಿನವ. ೨-೦); ಹಲವು ಪರಿಯಲಿ ಲಲ್ಲೆವಾತಿನಲಲದು ರಾಮನ ಕೋಮಲಾಂಘ್ರಿಯೊಳೆಳುಹಿದಳು ಮೂರ್ಧ್ನಿಯನು (ತೊರರಾ. ೩-೮-೩೩); ಜತೆಗೊಂಡು ಸಾರ್ದು ಇನಿವೊಬ್ಬಂ ಲಲ್ಲೆವಾತಿನ ಸೊಲ್ಲ ಸೊಗದೊಳ್ದು (ರಾಜಾಶ್ವ. ೬೦-೨೭). **ಲಲ್ಲೆಮಾತು** : ಲೇಸು ಹಾಸು ನೋಟವಾಭರಣ ಆಲಿಂಗನ ವಸ್ತ್ರ ಚುಂಬನವಾರೋಗಣೆ ಲಲ್ಲೆಮಾತು ತಾಂಬೂಲ ಲವಲವಿಕೆಯೆ ಅನುಲೇಪನವೆನಗೆ (ಮಹಾದೇ. ೪. ೦೦೩-೨೬೬). [ಲಲ್ಲೆ + ಮಾತು$_1$]

**ಲಲ್ಲೈಸು** ' ಲಲ್ಲಯಿಸು ' ನೋ.

**ಲವ** (ನಾ). ೧. ಕೀಳುವುದು. ೨. ಕಟಾವು. ೩. ಸಂಗ್ರಹಿಸುವುದು; ಒಟ್ಟುಗೂಡಿಸುವುದು. ೪. ಅಲ್ಪ; ಸ್ವಲ್ಪ; ಲೇಶ : " ಅಣು ಸೂಕ್ಷ್ಮಂ ಲೇಶಂ ತುಟಿ ಕಣಂ ಲವಂ . . . ಅಣಮೆ ಕಿಱಿದಪ್ಪುದೆಮು ತಾಂ" (ವಸ್ತುಕೋ. ೦೦೭-೫೬); ಬೆದಬೆದ ಬೆಂದ ಜೀವಕ್ಕಂತಾನುಂ ಕ್ಷಯೋಪಶಮ ನಿಮಿತ್ತದಿಂ ಸದ್ಧರ್ಮಾಮೃತ ಲವಂ ದೊರೆಕೊಂಡುದಪ್ಪೊಡೆ (ಸುಕುಮಾ. ೩-೩೫ ವ); ತನ್ನಲ್ಲಿ ರಾಜಸಂ ತಾಮಸಂ ಸಾತ್ತ್ವಿಕಗುಣಂ ಲವಮಿಲ್ಲದಂತೆ ಲಯವಪ್ಪುವು (ಲಕಿಂ. ೫೪-೮). ೫. ನೀರಿನ ತುಂತುರು,–ಹನಿ : ನಗೇಂದ್ರೋಪಕಂಠಂಗಳೊಳ್ ನಿರ್ಝರಮಂ ಮಾಡುತ್ತುಮುದ್ಯಲ್ಲವ ನಿವಹದೆ ದೇವೇಂದ್ರಲೋಕಕ್ಕಮುತ್ಕಾದರಮಂ ಮಾಡುತ್ತುಮೇನಾಱಿಸಿದುದೊ ದಿವಿಜವ್ರಾತಮಂ ಗಂಧತೋಯಂ (ಅಜಿತ. ೬-೦೦೩). ' ಲವೋದ್ಗಮ ' ಪರಾ. ೬. ಸಣ್ಣ ತುಣುಕು,–ಭಾಗ,– ತುಂಡು. ೭. ಉಣ್ಣೆ; ತುಪ್ಪಳು. ೮. ಆಟ; ಕೇಳಿ. ೯. ಸ್ವಲ್ಪಕಾಲದ ಅವಧಿ ; ಅತ್ಯಲ್ಪಕಾಲ : ಕಾಲಮದು . . . ತ್ರುಟಿ ಲವಮುಖ್ಯಕಾಲಂಗಳಿಂದೆ ತಾನ ಖಿಲಮಾಗೆಸೆದಿರ್ಪುದು (ಅರಾಕ. ೩-೪-೭); ಒಮ್ಮೆ ಕಣ್ಣೆವೆಯನಿಕ್ಕುವನಿತರ ನಾಲ್ಕು ಭಾಗೆಯೊಳಗೊಂದು ಭಾಗವೇ ತ್ರುಟಿಯೆನಿಸುಗುಮದೇ ಎರಡಾಗಲೊಂದು ಲವವೆನಿಸುಗು (ವಿವೇಕ. ೨೬೦). ೧೦. ಶ್ರೀರಾಮನ ಅವಳಿ ಮಕ್ಕಳಲ್ಲಿ ಒಬ್ಬ : ಲವನ ಬಲಕ್ಕೆ ರಾಘವಬಲಂ ಪೆಱಪಿಂಗೆ ಕಡಂಗಿ ರಾಘವಂ ಲವನೊಳಿದಿರ್ಚೆ . . . . ಅವನಾಹವದೊಳಿದಿರ್ಚಿ ಜೀವಿಸುವವಂ ಲವನಂ ಜವನಂ ಮಹೀಭುಜಂ (ತೊರಾಮಾ. ೦೬-೦೦): ಕಂಡನರ್ಚಿತ ಸುವಾಜಿಯುಂ ವೀರಲವನು (ಕೈಬಿಕಾ. ೨೦-೫). ೧೧. ಒಂದು ಬಗೆಯ ಪಕ್ಷಿ; ಲಾವಕ್ಕಿ; ಪುರಲೆಹಕ್ಕಿ. ೧೨. ಲವಂಗ. ೧೩. ಒಂದು ಬಗೆಯ ಸುವಾಸನೆಯ ಬೀಜ: ಜಾಯೀಕಾಯಿ. ೧೪. ಒಂದು ಬಗೆಯ ಮೂಲಿಕೆ; ಲಾವಂಚದ ಬೇರು. ೧೫. [ಕಾವ್ಯಮೀ] ಒಂದು ಕಾವ್ಯಾಲಂಕಾರ ; ಲವ ರೂಪ ವಿಕೃತಮಂ ಮುಚ್ಚುವುದು ಲವಂ ರಾಜಸುತೆಯನೀಕ್ಷಿಸಿ ಮೊಯ್ದೋ

ಬವ ಪುಳಕವುನಬುವರ್ಗಿಂತು ವಿಟಂ ವನದತುಳ ಶೀತಪವನನಿನೆಂದಂ (ಕಾದಜೂ. ೪೪).

ಲವಲವ₁ (ದ್ವಿರುಕ್ತಿ) : ಮೃತ್ಯು ತಾಂ ಬಂದು . . . ನಿತ್ಯ ನಿನ್ನನುವ ಲವಲವ ಪೀರುತಲಿ ದೀರ್ಘಹತ್ಯೆಯಲಿ ಹರುಷಿಪಳೊ (ಜಂಕುಕ. ೦೬೦).

**ಲವಲೇಶ** = ಸ್ವಲ್ಪ ; ಶೀರ ಅಲ್ಪ ; ಕೊಂಚ : ಲವಕುಶಶಾತ ಲಂಕಾಧೀಶಸುಹಾರ ಲವಲೇಶದೋಷವಿದೂರ (ಕಕಸಾಂ. ೭೦-೭೦) ; ಲವಲೇಶವಾದರೂ ಹೊಟ್ಟೆಯ ಕಿಚ್ಚಿನ ಕಿಡಿ ಕಾರದಂಥ ಶೀತಲರು (ಜಂಚಾಕ. ೨೨-೯೬). [ಸಂ.]

**ಲವಂ** (ಅ). ಸ್ವಲ್ಪವೂ : ಅದರ್ಕಾ ಲವಂ ಲವಂ ಬೆರ್ಚದೆ . . . ಲಕ್ಷ್ಮಣನ ಧನುವಂ ಮುಟಿದಂ (ರಾವಾಶ್. ೦೫೯-೦೩). [ಸಂ.]

**ಲವಂಗ** (ನಾ). ೧. ಒಂದು ಬಗೆಯ ಮರ ಮತ್ತು ಅದರಲ್ಲಿ ಬಿಡುವ ಸುವಾಸನೆಯುಳ್ಳ ಒಂದು ಸಂಬಾರಪದಾರ್ಥ ; ದೇವಕುಸುಮ : ಲವಂಗಂ ನಾಗೋರ್ವೀರುಪಕುಸುಮುಮಲ್ಲಂ ಮೆಟಸು ಸೈಂಧವ ಬೆಲ್ಲಂ . . . ಕೂಡಿ (ಲೋಕೋಕ. ೬-೩೪) ; ಬುಂಗ ಲವಂಗ[ಕಾಶಾಂ. ವಿಳಂಗ]ಗಳ ಸೊಂಪೊಗೆವ ಸಕಲ ಸುರದ್ರುಮಾಳಿಯುನು (ಕೊರಶಾ. ೫-೪-೭) ; ಶುಂಠಿ, ಹಿಪ್ಪಲಿ, ಮೆಣಸು . . . ಬೆಳ್ಳುಳ್ಳಿ, ಲವಂಗ, ಅರಿಸಿನ . . . ಇವಿಷ್ಟನ್ನೂ ಸಮಭಾಗವಾಗಿ ಬಿಸಿನೀರಿಂದರೆದು ಕೊಡಲು ಶೀತಜ್ವರ ಪರಿಹಾರವಕ್ಕುಂ (ಸಕವೈ. ೬೬). ೨. ದಾಲಚಿನ್ನಿ: 'ಲವಂಗಚೆಕ್ಕೆ', 'ಲವಂಗಪಟ್ಟೆ' ಪರಾ. [ಸಂ.]

**ಲವಂಗಚೂರು** (ನಾ). ಲವಂಗನ ಆಕಾರಕ್ಕೆ ಕತ್ತರಿಸಿ, ಬೇಯಿಸಿ ಒಣಗಿಸಿದ ಒಂದು ಬಗೆಯ ಅಡಕೆ : ಚತುರ್ಭಾಗ, ಕೊರಪ್ಪ, ಲವಂಗಚೂರು, ಮೋಡಿ, ಅಣ್ಣಾವಾರ, ದೇಶಾವಾರ ಎಂದು ಬೇರೆ ಬೇರೆ ರಾಶಿಗಳನ್ನು ಮಾಡುತ್ತಾರೆ (ಕೃಶಿಕ್ರ. ೦೩೨). [ಲವಂಗ + ಚೂರು₃]

**ಲವಂಗಚೆಕ್ಕೆ** (ನಾ). ಸಂಬಾರವಸ್ತುವಾಗಿ ಬಳಸುವ, ಸುವಾಸನೆಯಿಂದ ಕೂಡಿದ ಒಂದು ಬಗೆಯ ಮರದ ತೊಗಟೆ ; ದಾಲ್ಚಿನ್ನಿ : ಲವಂಗ ಚೆಕ್ಕೆ, ದಾಲ್ಚಿನ್ನಿ, ಕರ್ಸಕಟ್ಟು (ವೈಶಿಗಿ. ೨೦-೩೯೨).
[ಲವಂಗ + ಚೆಕ್ಕೆ (<ಸಕ್ಕೆ₁)]

**ಲವಂಗತಿಗುಡು** (ನಾ). = ಲವಂಗಚೆಕ್ಕೆ : "ವಸಂ . . . ಲವಂಗ ತಿಗುಡು" (ಒಕಂ. ೦೪೪). [ಲವಂಗ + ತಿಗುಡು₁]

**ಲವಂಗತೊಕ್ಕು** (ನಾ). = ಲವಂಗಚೆಕ್ಕೆ : "ತ್ವಚಂ–ಲವಂಗತೊಕ್ಕು" (ಬಾಹಟಿ. ೨-೨-೬೦೨) ; ಮಗ್ಗಾರೆಸೊಪ್ಪು ಜಾಯಿಕಾಯಿ ಯಾಲಕ್ಕಿ ಲವಂಗತೊಕ್ಕು ಲವಂಗಪತ್ರ (ಕಾವುಶಾ. ೨೬೪). [ಲವಂಗ + ತೊಕ್ಕು₂]

**ಲವಂಗಪಟ್ಟೆ** (ನಾ). = ಲವಂಗಚೆಕ್ಕೆ : ಕಾಫಿ, ಅಕ್ಕಿ . . . ಲವಂಗಪಟ್ಟೆ ಸಿಂಕೋನಾ ಮುಖ್ಯವಾಗಿ ಬೆಳೆಯಾಗುತ್ತವೆ (ಕೂಗೋಳ. ೯೭) ; ಕ್ರಿ. ಪೂ. ೧೫ನೆಯ ಶತಮಾನದ ಈಜಿಪ್ಟ್ ಶಿಲಾಶಾಸನಗಳಲ್ಲಿ ಕಂಡುಬರುವ ಲವಂಗ ಪಟ್ಟೆ ಅಥವಾ ದಾಲ್ಚಿನ್ನಿ ಮಲಬಾರಿನಲ್ಲಿ ಉತ್ಪನ್ನವಾಗುವ ವಸ್ತುವನ್ನೇ ಪ್ರಾಯಶಃ ಸೂಚಿಸುತ್ತದೆ (ಬಠಾ. ೩೨). [ಲವಂಗ + ಪಟ್ಟೆ₁]

**ಲವಂಗಪತ್ರೆ** (ನಾ). ಸುವಾಸನೆಯಿಂದ ಕೂಡಿದ, ದಾಲ್ಚಿನ್ನಿ ಜಾತಿಗೆ ಸೇರಿದ ಒಂದು ಗಿಡದ ಎಲೆ ; "ತೇಜಪತ್ರ" (ಶಂಂಕ. ೨೬೦): ಏಲಕ್ಕಿ, ಲವಂಗಚಕ್ಕೆ, ಲವಂಗಪತ್ರೆ . . . ತೆಗೆದುಕೊಳ್ಳೆ . . . ಪೈತ್ಯಜ್ವರಂ ಪರ್ಮಾಶ್ವಿಂ (ಸಕವೈ. ೭೭). [ಸಂ. ಲವಂಗಪತ್ರ]

**ಲವಕುಟ** (ನಾ). ಬಹಳ ಚಿಕ್ಕದಾದ ಮಣ್ಣಿನ ಪಾತ್ರೆ ; ಮಣ್ಣಿನ ಕುರುಳಿ : "ಕರಗಳಂತಿಗೆಯೆನಲು ಕೈಗಡಿಗೆ ಲವಕುಟಂ ಕುರುಳಿಯುಕ್ಕು" (ಶುಂಗರಾ. ೬೨-೨೪). 'ಕುರುಳಿ₁' ಪರಾ. [ಸಂ.]

**ಲವಡ** 'ಲವುಡ' ನೋ.

**ಲವಡಿ** 'ಲೌಡಿ₂' ನೋ.

**ಲವಣ** (ನಾ). ೧. ಉಪ್ಪು ; ಕ್ಷಾರ : "ಲವಣಂ ಸಮುದ್ರಜಂ ಕಲ್ಲುಪ್ಪೆನಿಕ್ಕು" (ಶುಂಗರಾ. ೯೩-೯೦) ; ನರಡಿಯಿಂದಟಿದದನೊಡೆದೊರಸು ವುಳು ಪುಳಿಯೊಳಂ ಲವಣದೊಳಂ (ಲೋಕೋಕ. ೬-೨೦೬). ೨. ಷಡ್ರಸ ಗಳಲ್ಲಿ ಒಂದು ; ಉಪ್ಪಿನ ರುಚಿ ; "ತುವರಂ ತಿಕ್ತಂ ಮಧುರಂ ಲವಣಂ ಕಟುಕಾರಮೆಂದು ರಸಮಾಱು ತೆಱಂ" (ವಸ್ತುಕೋ. ೯೪-೦೫). ೩. ರಾಸಾಯನಿಕ ಲವಣ ; ಸೈಂಧವ : "ಲವಣಂ ಸೈಂಧವಮುಂ" (ವಸ್ತುಕೋ. ೦೬೪-೯೯). ೪. ಮನೋಹರವಾದುದು ; ಸುಂದರ ವಾದುದು ;- ಚೆಲುವಾದಂದು: 'ಲವಣಿಕೆ' ಪರಾ. ೫. ಶತ್ರುಘ್ನ ನಿಂದ ಹತನಾದ ಒಬ್ಬ ರಾಕ್ಷಸನ ಹೆಸರು : 'ಲವಣಾಸುರ' ಪರಾ. ೬. ಒಂದು ಬಗೆಯ ತೆರಿಗೆ ; ಉಪ್ಪಿನ ತೆರಿಗೆ : ಮಗ್ಗತೆಱ ಹೊಗೆದೆಱ ಲವಣ ಪಣ್ಣಾಕಾರುಕ (ಎಕ. IX. ಕನ್ನಕ. ೬೬-೦೪ ; 1288).
[ಸಂ.]

**ಲವಣಜಲಧಿ** (ನಾ). ಉಪ್ಪುನೀರಿನ ಸಮುದ್ರ, ಕಡಲು : ನಿಜವಿಜಯವರೂಥಮೊಂದಱಿಕೊಳೆ ನುಗುಟ್ಟು ಲವಣಜಲಧಿಯುಂ ಪೊಕ್ಕು (ಆದಿಪು. ೦೪-೩೩ ವ). [ಸಂ.]

**ಲವಣತೆ** (ನಾ). ಉಪ್ಪಿನ ಅಂಶ ; ಕ್ಷಾರತ್ವ : ನದೀಮುಖಗಳ ಸಮೀಪದಲ್ಲಿ ಅಥವ ಅನೇಕ ನದಿಗಳು ಬಂದು ಬೀಳುವ, ಭೂಪ್ರದೇಶಗಳು ಬಳಸಿದ ಸಮುದ್ರಗಳಲ್ಲಿ . . . ಲವಣತೆ ಬಹಳ ಕಡಿಮೆ (ಭೂಂಶ. ೬೩).
[ಸಂ. ಲವಣತಾ]

**ಲವಣಾಸುರ** (ನಾ). = ಲವಣ ೫ : ಲವಣಾಸುರಂ ಕಾಳಗದೊಳೀತನಿಂದಳಿದನಾ ಬಾಲಕರ ತೋಳ ಬಲ್ಪೆಂತೋ (ಕೈಶಿಭಾ. ೨೦-೩೭). [ಸಂ.]

**ಲವಣೆ₁**, ನವಣೆ₁, ಲಹಣಿ₁ (ನಾ). ೧. ಕಾಂತಿ ; ಶೋಭೆ ; ಮೆರುಗು : ಕವಿವವರುಣಾಂಶುಗಳ ಲಹರಿಯ ಲವಣಿ ಲಾವಣಿಗೆಯಲಿ ನೀಲಚ್ಛವಿಯ ದೀಧಿತಿ ಝಳಪಿಸಿತು ದೆಸೆದೆಸೆಯ ಭಿತ್ತಿಗಳ (ಕುವ್ಯಾಸ. ೦೩-೨೬) ; ಪೊಳೆವ ಮಿಂಚಿನ ಲವಣಿ[ಪಾಠಾಂ. ಅಲವ]ಯನು ಮೈಗಳಲಿ . . . ತೋಱದರು ಭರದಿ (ಸಾಶ್ಭಾ. ೨೨-೬೯). ನವಣೆ₁ : ೨. ಮನೋಹರತೆ ; ಅಂದ ; ಸೊಗಸು : ಕೋಮಳಿಕೆ ಕೊಂಕುವಡೆಯೆ ಕೊಂಕು ಬಿಂಕಂಬಡೆಯೆ ಬಿಂಕಂ ಲುಳಿವಡೆಯೆ ಲುಳಿ ನವಣ ವಡೆಯೆ ನವಣೆ ಬಹುವಿಕವಡೆಯೆ ಬಹುವಿಧದ ವಹಣಿಯ ಮಾರಚಿತ್ರದ ಗತಿಗಳೊಳ್ ಮೆಱೆದು (ಅವಂಪು. ೨-೨೬ ವ). ಲಹಣಿ₁ : ೧. ನಡುವೆ ಪರಿಮಳದ ನಾವೆಯೆಂತಡ್ಡಮಿರ್ದ ನಾಸಿಕಮಂ ದಾಂಟಲಾಱದುಭಯಪಕ್ಷದಿಂ ಸುತ್ತಿ ಬಪ್ಪಾಸೆಯೊಳು ಬಟ್ಟೆಗೊಡುವುದೆಂದು ಕರ್ಣಾವತಂಸದಳಂಗೆ ಲಹಣಿಶ್ರೀಗೆ ಮೌಕ್ತಿಕಾವತಂಸಕಿರಣಚ್ಛಲದಿಂ ಚಾಮರವನಿಕ್ಕುವಂತೆ ಗಂಡ ಮಂಡಲದೊಳು ಮಾರ್ಪೊಳೆವ ಕರ್ಣಪಾಲಿಕೆಗಳ (ಬಸರ. ೦೨-೪೪).
[ < ಸಂ. ಲವಣಾ ]

**ಲವಣೆ₂**, ನವಣೆ₂, ಲವಣೆ, ಲಹಣಿ₂, ಲಾವಣೆ₂ (ನಾ). ೧. ಯುದ್ಧದ ಒಂದು ವರಸೆ,– ಚಳಕ: ಸಂಯೋಧನ ಕವಿದು ನಾಭಿಗೆ ತೋಱ ಜಂಘೆಗೆ ಹೂಡಿ ಝಳಪದಲಿ ಲವಣಿಯಲಿ ಲಳಿಯೆದ್ದು ಹೊಯ್ದನು ಪವನಜನ ಭುಜಶಿರವ (ಕುವ್ಯಾಗ. ೭-೨೫) ; ಕೇಳ್ಳೆ ಲವನೆ ಲವಣಿಯ ಲಾಗು ಬೇಱವರ (ಕೊರಶಾ. ೭-೨೫-೦೬); ವಜ್ರದ ಬಂಧುರದ ಗದೆಗಳಲಿ ಲವಣಿಯ ಬಂಧದಲಿ ಬಿಡದೊಡನೆ ಬಡಿದಾಡಿದರು ಜಡಿತೆಯಲಿ (ಅಂಬಶಾ. ೦೫-೦೨). ೨. [ಸಂಗೀತ] ಹಾಡುವಿಕೆಯ ಒಂದು ಸೊಗಸು; ಜಟಿಲವಲ್ಲದ ಗೇಯಸೌಂದರ್ಯವು ಪ್ರಸನ್ನವಾಗಿ ಸರಳರೂಪದಲ್ಲಿ ಪ್ರಕಟ ಗೊಳ್ಳುವಂಥ ಒಂದು ಠಾಯೆ,– ರಾಗದ ಅವಯವ. ಕೆಲವರು ಸಂಸ್ಕೃತದ 'ನಮನ'ಶಬ್ದಕ್ಕೆ ಇದು ಸಂಬಂಧಿಸಿದೆಯೆಂದು ಹೇಳು ತ್ತಾರೆ : ಸ್ಥಾಯಿಯಯನಾರೋಹಿಯನವರೋಹಿಣಿಯನೋಯರವಂ

ಸಂಚಾರಿ ಬಚಾವಣೆ ಠಾಯೆ ಲವಣಿ ವಹಳಿಕೆ ಡಾಳಂಗಳಕಾರಪರಂಪರೆಯ . . . ಚತುರ್ವಿಧ ದಂಡಿಯು ಗಾಯಕಿ ರಸಿಕಮನೋದಾಯಕಿ ಪಾಡಿದಳತಿ ಚದುರಿಂದ (ಶಯುಕಾ. ೦೪-೯೩). ೩. [ನಾಟ್ಯ] ದೇಶೀನೃತ್ಯದ ಒಂದು ರೀತಿ : ನಟನ ತಾಂಡವ ನಾಟ್ಯ ಪಟುನೃತ್ಯ ಲಾಸ್ಯದುತ್ಕಟ ನೇರ್ಪ ತಿರುಪುರುಲವಣಿ (ಶೃರವೇ. ೦-೩೯೪) ; ಪದತಳದೊಳ್ ತಾಳಮಂ ಬೀಸರಂ ಬೋಗಲೀಯದೆ ಸೆಱೆವಿಡಿದು ರೂಪು ನೇರು ಲಾಗು ಲವಣಿಯುಡವು ತಿರುಪು ಕೈಮುಱೆ ಕಳಾಸ ಕೂಟಮಾನಂಗಳಂ ಸಂಗಳಿಸಿ . . . ತೋರ್ಪ ನರ್ತಕಿಯರಿಂ (ರಾಜಶೇ. ೩-೦೯ ವ). ನವಣೆ$_2$ : ೧. ವಹಿಲತನಂ ಪದಗತಿಯಿಂ ಬಹುವಿಕೆ ಕೈ ಮಾಟ್ಟ ನವಣಿಯಿಂ . . . ಅಹವಂಹುವಿಕೆ ಮಿಕ್ಕು ಮೆಱೆದು ವಿರ್ವರ ಮೆಯ್ಯೊಳ್ (ಅನಂಪು. ೧೦-೩೯). ಲವಣೆ : ೧. ಚಲದಿಂದಲೋ ರೋರ್ವರಬ್ಬಾಡಿದರ್ವೆಯ್ಯ ಲವಣೆ ಮಿಗೆ ಚಮತ್ಕೃತಿಯೊಳು (ಶೋರಾಸು. ೬-೭). ಲಹಣಿ$_2$ : ೨. ಇಂಪಂ ಕಱೆವ ಸುಧಾರಸಗಾನಂ ನಾನಾರಸದ ಲಹಣಿಯ ರೂಪುವಡೆಯೆ ಪಾಡುವ ಗಾಯಕರೊಳಂ (ಗಂಕ. ೨-೦೦೩ ವ). ಲಾವಣ್ಯ : ೨. ಗಳೆಯೋಸರಿಸಲು ಮುಂದಳದೊಳು ಘಮ್ಮನೆ ಉಳಿಯಲೊದಗಿ ಮೊಸೆದೋಱೆ ಕಳೆದು ಲಾವಣಿಯೊಳಾಗಳೆ ಹೊಕ್ಕನೆದೆ ಪೋೞು ಗಳೆವಂತೆ (ಶೃರವೇ. ೩-೧೩).

[ ?. / ಸಂ. ಲವಣೇ. / ಮರಾ. ಲವಣೀ = ಬಾಗಿರುವಿಕೆ ]

ಲವಣಿಕೆ (ನಾ). ರಮ್ಯತೆ ; ಮನೋಹರತೆ : ಕಾಲೇಳುಗೆಯ ಲವಣಿಕೆ ಕೋಟಿಕೆಯ ಶುದ್ಧ ಬಾಲದದರು ಮನದೆಸಕ ಮೇಲು ಹಗುರದಿಂದವೆ ಹಮುವಾ ಭೂಪಾಲನ ಮನವ ಮೆಚ್ಚಿಸಿತು (ಶ್ರೀಶಾರ. ೯-೦೦).

[ಲವಣ + — ಇಕೆ]

ಲವಣಿಸಾರ (ನಾ). ೧. ಯುದ್ಧದ ಒಂದು ಚಾಕಚಕ್ಯತೆ : ಲವಣಿಸಾರದೊಳ್ ಸುಣ್ಣುವ ಮಲ್ಲನನಾಕೆ ಒಡಿದು ಸುತ್ತಿ (ಗಂಕ. ೨-೧೦೩ ವ). ೨. ಯುದ್ಧದ ವರಸೆಗಳ ಚಾಕಚಕ್ಯತೆಗಳನ್ನು ಬಲ್ಲವನು ; ಯುದ್ಧ ನಿಪುಣ : ಬಲಿದ ದಂಡೆಯ ಮಸೆಯ ಬಯಸಿಕೆ ಲಳಿಯ ಮೈಗಳ ಲವಣಿಸಾರರು ಕೊಳುಗಿಡಿಯ ಖಂಡೆಯದ ಖಣಿಕಟಲೆಸೆಯೆ ಕಾದಿದರು (ಕುಮಾರ‍ರಾ. ೦೪-೬).

[ಲವಣಿ$_2$ + ಸಾರ$_2$]

ಲವಣಿಸು$_1$ (ಕ್ರಿ). ಉಪ್ಪುಹಾಕು ; ಉಪ್ಪನ್ನು ಸೇರಿಸು : ನೀಳವಾಗು ತ್ರಿರಿಸಿ ಲವಣಿಸುತ ಪಚನಿಸುತ (ಶಂಗಪು. ೮-೩೭).

[ಲವಣ + — ಇಸು$_3$]

ಲವಣಿಸು$_2$ (ಕ್ರಿ). ಬೆಳಕು ಸೂಸು ; ಕಾಂತಿಯು ಹೊರಹೊಮ್ಮು : ಆಗ್ನೇಯವನು ಹೂಡಿದನು . . . ವಾಯು ಪಡಿಬಲವಾಗೆ ಕಿಡಿಗಳ ಬಾಯಿಧಾರೆಯ ಹೊದಱ ಕಬ್ಬೊಗೆ ಲಾಯದಲಿ ಲವಣಿಸುವ ದಳ್ಳುರಿದಿರುಳ [ಪಾಠಾಂ. ರಾಯದಳದಲಿ ಮೋಹಿಸಿತು ದಳ್ಳುರಿಯು] ಚೂಣಿಯಲಿ (ಕುಮಾ.ಶ. ೨೩-೩೦).

[ಲವಣಿ$_1$ + — ಇಸು$_3$]

ಲವಣಿಸು$_3$ (ಕ್ರಿ). ಕಾಳಗದಲ್ಲಿ ಸುತ್ತ ತಿರುಗಿ ಚಮತ್ಕಾರದಿಂದ ಹೋರಾಡು : ಬಿರುದಿನಂಕದ ಭಟರು ಭೋರೆಂದು ಬೊಬ್ಬೆಗೈದು ಲಾಗಿಸಿ ಲವಣಿಸಿ ಮಂಚಿಸಿ . . . ಹಿಮ್ಮೆಟ್ಟಿ ಬೊಗರಿದಿರಾಗಿ ಮುತ್ತಿ ಕಾದುವಲ್ಲಿ (ದಶಾವ. ೩-೦೪೭ ವ).

[ಲವಣಿ$_2$ + — ಇಸು$_3$]

ಲವಣೆ 'ಲವಣಿ$_2$' ನೋ.

ಲವಣೋತ್ತಮ (ನಾ). ೧. ನದಿ ಅಥವಾ ಗಣಿಯ ಉಪ್ಪು; ಸೈಂಧವ: "ಸಿಂಧೂತ್ಥಂ . . . ಲವಣೋತ್ತಮಂ—ಈ ೪ ಸೈಂಧವಂ" (ಹಲಾಯು. ೧೦೦-೯೩೦) ; " ಲವಣೋತ್ತಮಂ ಮಾಣಿಮಂತಂ ಸೈಂಧವಂ" (ಮಂಗರಾ. ೩೦-೭). ೨. ಪೆಟ್ಲುಪ್ಪು : (?).

[ಸಂ.]

ಲವಣೋದ (ನಾ). ಉಪ್ಪುನೀರಿನ ಕಡಲು : "ಲವಣೋದಃ . . . ಉಪ್ಪುನೀರಿನ ಕಡಲು" (ಸಿದ್ಧಾಂತಿ. ೭೩).

[ಸಂ.]

ಲವಣೋದಕ (ನಾ). ೧. ಉಪ್ಪುನೀರು. ೨. ಸಮುದ್ರ.

[ಸಂ.]

ಲವಣೋದಧಿ (ನಾ). = ಲವಣೋದ : ದ್ವಾದಶರಾಜಕವೆಂಬುದ ನೋದುಗಳೊಳ್ ಕೇಳಲಾದುದಲ್ಲದೆ ಕಾಣಲ್ಕಾದುದೆ ಲವಣೋದಧಿವೃತ ಮೇದಿನಿಯೊಳ್ ದೇವ ನಿನ್ನ ಪೆಸರೆಸವೆಡೆಯೊಳ್ (ಆದಿಪು. ೦೪-೦೯).

[ಸಂ.]

ಲವನ (ನಾ). ೧. ಕೊಯ್ಯುವಿಕೆ : " ಲವಃ, ಅಭಿಲಾವಃ, ಲವನಂ—೩ ಹೊಲಗದ್ದೆ ಮುಂತಾದ ಬೆಳೆಗಳನ್ನು ಕುಯ್ಯುವಿಕೆ, ಭೇದಿಸುವಿಕೆ" (ಸಿದ್ಧಾಂತಿ. ೩೬೩). ೨. ಕೊಯ್ಯುವ ಸಾಧನ; ಕುಡುಗೋಲು.

[ಸಂ.]

ಲವಲವ$_1$ ' ಲವ ' ಪರಾ.

ಲವಲವ$_2$ (ನಾ). ೧. ಉತ್ಸುಕತೆ; ಆತುರ; ತವಕ: 'ಲವಲವಿಕೆ' ಪರಾ. ೨. ಆಸೆ ; ಹಂಬಲ : ' ಲವಲವಿಕೆ ', ' ಲವಲವಿಸು ' ಪರಾ.

[←ಮರಾ. ಲವಲವ]

ಲವಲವಿ (ನಾ). ಉತ್ಸಾಹ: ಲವಕುಶತಾತ . . . ಲವಣಾಸುರಾಂತಕಪ್ರಿಯ ಲಕ್ಷ್ಮೀಪತಿ ನಿನ್ನೊಲವೆ ಲವಲವಿಯೆನಿಸುವುದು (ಕಕಶಾಂ. ೭೩-೭೦).

[<ಲವಲವ$_2$]

ಲವಲವಿಕೆ (ನಾ). ೧. ಉತ್ಸಾಹ ; ಹುರುಪು : ಒಲವಿಲ್ಲದ ಭಕ್ತಿ, ಲವಲವಿಕೆಯಿಲ್ಲದ ಪೂಜೆ . . . ಹುಲುಸರವಿಯಿಂದ ಕರಕಷ್ಟ (ದೇದಾವ. ೨೦-೩೭) ; ಲವಲವಿಕೆಯಲಿ ಕಾದಬೇಕಮ್ಮವನಿಯನು ಕೈಕೊಳಲುಬೇಕು (ಕುಮಾ.ರಿ. ೩-೩೯) ; ಬೇಸಗೆಯ ದಿನಗಳ ಲವಲವಿಕೆ ನನ್ನಲ್ಲಿ ಮೂಡಿತು (ಕಾರಿಮು. ೬೬). ೨. ಹಂಬಲ ; ಆಸಕ್ತಿ : ಈ ವಿಷಯವನ್ನು ಪೂರ್ಣ ಅರಿಯಬೇಕೆಂಬ ಲವಲವಿಕೆಯಿಂದ ಒಲ್ದಾ ಕೇಳಿದಳು (ಕೀಮೋಡ. ೨೦).

[ಲವಲವ$_2$ + — ಇಕೆ]

ಲವಲವಿಸು (ಕ್ರಿ). ೧. ಉತ್ಸುಕವಾಗು ; ತವಕಪಡು ; ಆತುರಗೊಳ್ಳು : ಕೈ ಶಿವಪೂಜೆಗೆ ಲವಲವಿಸುತ್ತಿರೆ ತನ್ನಂ ಮುಱಿವುತೆ ಪರವಶನಾಗಲ್ (ಶೃಂಗೇರಿ. ಶ. ೪೯೬-೨೩) ; ತವರೂರ ವಿಭವಕೆ ಕಿವಿಗೊಟ್ಟು ಹೆಂಗಳು ಲವಲವಿಸುವರಲ್ತೆ (ಭರತ. ೩೯-೦೪) ; ಹರೆಯದಲಿ ಲವಲವಿಸಿ ನಾ ಕಲಿಯಲೆಂದೆ ಬಲ್ಲವರ ಸಂತರೆಲ್ಲರ ಬಳಿಗೆ ಸಂದೆ (ಗೀಬಿಂ. ೦೦೯-೦೮). ೨. ಹಂಬಲಿಸು ; ಬಯಸು : ಲವಲವಿಸುವ ನೋಟಂ ಕೆತ್ತುವ ತೋಳ್ ಕಂಪಿಸುವ ಹಸ್ತಂ (ಗಂಕ. ೩-೨೭) ; ತರುಣಿಯರಧರಪಾನರುಚಿಗೆ ಲವಲವಿಸಿದುದು ಜಿಹ್ವೆ (ಸೌಂದಪು. ೯-೩) ; ಅಂತು ಕುಳ್ಳಿರ್ದು ಲವಲವಿಸಿ ನೋಡಿ (ದಶಾವ. ೭-೨೩ ವ). ೩. (ಆಲಂ) ಒದ್ದಾಡು ; ಹೊರಳಾಡು: ನಾ ತಿವಿದ ಖಡ್ಗಕೆ ನರನ ಮೈ ಲವಲವಿಸಲಡಿ ಮೇಲಾಗಿ ಹೊರಳ್ದರೆ ಧನ್ಯ ತಾನೆಂದ (ಕುಮಾ.ಶ. ೬-೯೦).

[ಲವಲವ$_2$ + — ಇಸು$_3$]

ಲವಲಿ, ಲವಳಿ (ನಾ). ೧. ಒಂದು ಬಗೆಯ ಬಳ್ಳಿ : ಕಕುಭಾಶೋಕ ಕದಂಬ ಲುಂಗ ಲವಲೀಭೂಜಾರ್ಜುನಾನೋಕಹಪ್ರಕರಂ (ಶಂಕಭಾ. ೩-೮೦); ಚಂಪಕ ಲವಲೀ ನಾಗಂ ವಕುಳ ಪಾಟಳಾಶ್ವತ್ಥಬ್ರಾತಂ (ಸುಕುಮಾ. ೦೦-೩೩ ರಗಳೆ) ; ಮುಚುಕುಂದ ಕುಂದೆ ಲವಲೀ ಹರಿಚಂದನ (ಶಾಸನ. XX. ೨೩೭-೦೩ ; 1155) ; ಮತ್ತಕೋಕಿಲೆಗಳು ಲವಲಿಯ ವಿಕಸಿತಪಲ್ಲವದೊಳಗೆ ಮುಳುಗಿ ಮಕರಂದವನ್ನು ಹೀರುತ್ತಿದ್ದವು (ಶಾಕಂ. ೬೯). ೨. "ಕಾಚು ಮರ" (ಆದಿಪು. ಕೋಶ) : ತೀರಸ್ಥ ಲವಂಗ ಚೂತ ಲವಲೀಪುಷ್ಪಾಸವಾಸ್ವಾದಿತಾಲಿಯುತೋನ್ಮಾದೆಯ (ಆದಿಪು. ೦-೩೪). ೩. "ಅರನೆಲ್ಲಿ" (ಆದಿಪು. ಕೋಶ) : ಏಲಾಲವಂಗಲವಲೀವೇಲಾವನಭೂಮಿಯೊಳ್ (ಆದಿಪು. ೦೩-೨) ; ಸರಳ ಲತಾಲಾಸ್ಯನಟಂ ಹರಿಣೀರೋಮಂಥಬಂಧುರಂ ಲವಲೀ ಮರ್ಮರಮುಖರಂ ಕರಿಕರಶೀಕರಶೀತಳಮೆಸಗಿದತ್ಯರಣ್ಯಂ ಸಮೀರಂ (ಶಂರಾಪು. ೭-೦೦೩). ೪. ಒಂದು ಬಗೆಯ ಸಸ್ಯ ; ಅದಿರ್ಗಂತಿ : "ಲವಲಿಃ, ಲವಲೀ— ಈ ೨ ಅದಾರ್ಗಂತಿ" (ಶಾಕಶ. ೨೯೩). ಲವಳಿ : ೨. ಸಾಳ ತಾಬಿ ಲವಳೀ ಹಿಂತಾಳ ನಾಳಿ: . . . ಕೋಳ ನಿಚುಳಾಕ್ಷೋಣಾಂಗಳಿಂದೊಪ್ಪುಗುಂ (ಶರಶಮಾ. ೩-೯೬).

[ಸಂ. ಲವಲೀ]

**ಲವಲಿಕೆ** (ನಾ). = ಲವಲವಿಕೆ : ಪುಲಿ ನೀರುಣಾತಿರೆ ಪಾಯ್ದುಕ್ಕಲವಂದಿ ತದೀಯ ವಿಪುಳಗಳ ವಿಗಳದಸೃಗ್ಜಲದಿಂ ಬಗರಗೆ ಕೀವಿದೊಡೆ ಲವಲಿಕೆಯು ನೂಡಿ ಪೋದುದು (ಅಂಜನಾ. ೬-೯೬).

[? ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು]

**ಲವಳಿ** 'ಲವಲಿ' ನೋ.

**ಲವಳಗೆ** (ನಾ). ಬಿಲ್ಲಿನ ಹಗ್ಗ; ನಾರಿ: ಬಳಿಕಾ ರವಿಸುತನು ಬಲವಂದು ಬಿಲ್ಲಿನ ಲವಳಗೆಯ ನೇವರಿಸಿ ರವಿಮಂಡಲಕೆ ಕೈಮುಗಿದ (ಕಂಭಕ. ೦೯-೩೧). [?]

**ಲವಾಜಮೆ**, ಲವಾಜಮ್ಮು (ನಾ). ೧. ಪರಿಕರ ; ಸಾಧನಸಾಮಗ್ರಿ: ಆವಶ್ಯಕವಸ್ತು : ಶಯನಮಂಟಪಕ್ಕೆ ಲವಾಜಮೆಸಹಿತವಾಗಿ ಚಪ್ಪರಗಾಲು ಮಂಚವನ್ನು ಸೇವಾರ್ಥವಾಗಿ ಒಪ್ಪಿಸಿರುತ್ತಾರೆ (ಶಾಶಸಂ. ೨೬೯); ಇವನ್ನು ಕಡಿದು ತಿನ್ನುವವರಿಗೆ ತಕ್ಕ ಲವಾಜಮೆ ಬೇಡವೆ? (ಶಕುಪ. ೦೦೦). ೨. ಪರಿವಾರ; ಪರಿಜನ : ಅರಮನೆಯಿಂದ ಪುರೋಹಿತರ ಮನೆಗೆ ಸಕಲಸಾಮಗ್ರಿಗಳೂ ಲವಾಜಮೆ ಕಳುಹಿಸಲ್ಪಟ್ಟಿತು (ಶ್ರೀರಾಘು. ೬೦). **ಲವಾಜಮ್ಮು**: ೨. ಅವರ ಸಂಗಾಟ ಅವರ ಲವಾಜಮ್ಮೂ ಬಂದಿತ್ತು (ಅಮರ. ೫).

[←ಅರ. ಲವಾಜಿಮ್ ; ಹಿಂ. ಲವಾಜಮಾ, ಲವಾಜಿಮಾ ; ಮರಾ. ಲವಾಜಮೊ]

**ಲವಾಜಮ್ಮು** 'ಲವಾಜಮೆ' ನೋ.

**ಲವಿತ್ರ** (ನಾ). ಕೊಯ್ಯುವ ಸಾಧನ ; ಕುಡುಗೋಲು : "ಲವಿತ್ರಂ. ದಾತ್ರಂ-ಈ ೨ ಕುಡುಗೋಲ್" (ಹಲಾಯು. ೯೯-೭೨೩) ; ಅವರ ಮಿತ್ರತ್ವ ವೆಂಬುದು ಜನ್ಮತರುಲವಿತ್ರವೆ ಆಗಬಾರದು (ಸಿದ್ಧಪ. ೬೪-೩೫೨) ; ಉತ್ತಮ ಕೃಪಾಪಾತ್ರನಧಿಕಜ್ಞಾನನೇತ್ರನಘವಲ್ಲೀಲವಿತ್ರನೆನಿಪ . . . ಮಾಯಿದೇವ (ಶದ್ಧರಾ. ೨-೩೨); ಕೆಡಹಿ ಲವಿತ್ರದೊಳ್ಕೊಯಿದು ಸೀಳಿದರೀಗ ಬಡವ್ವ ಸದ್ಗುಣವನು (ಕಂಪಠ. ೫-೬೩). [ಸಂ.]

**ಲವುಡ, ಲವಡ** (ನಾ). ಪುರುಷನ ಜನನೇಂದ್ರಿಯ ; ಶಿಶ್ನ : (೬) **ಲವಡ** : (೬). [←ಮರಾ. ಲವಡಾ; ಹಿಂ. ಲೌಡಾ]

**ಲವುಡಿ₁**, ಲೌಡಿ₁, ಲೌಡೆ (ನಾ). ಒಂದು ಬಗೆಯ ಕಬ್ಬಿಣದ ಆಯುಧ-ದೊಣ್ಣೆಯಂಥ ಸಾಧನ : ತಡಯುವ ಲವುಡಿಯ ಚಾವುಡಿಯ ಬಾವುಲಿಯ ಬಲ್ಲಾಳ್ಗಳ ಮುಂದೆತ್ತಿದ ಪರಿಪರಿಯ ಪರಾಕಾವಳಿಯ (೧೦೪. ೬-೫೫೨); ಭಾರಾಂಕ ಲವುಡಿಯ ಗವಿಯ ಗರುವರು ನೂಕಿದರು ತೇಜಿಗಳನೋಜೆಯಲಿ (ಕುಮಾರ. ೪-೫೦) ; ಸುರಗಿಯಲಿ ಲವುಡಿಯಲಿ ಮುಸಲದಲಾ ಕೃಪಾಣದಲಿ ಪೂತು ಮಝುರೆನುತರಮರಿಸಲೆಚ್ಚಾಡಿದರು (ಕೋಗಯು. ೨೦-೨೫). **ಲೌಡಿ₁** : ಹೊಡೆವ ಲೌಡಿಗಳೊತ್ತಿ ನೆತ್ತಿಯ ಬಿದುಮಿದುಳ ಕೆದರುದವ (ಕುಮಾ. ೪-೫೯) ; ಪೊಡೆದನು ಲೌಡಿಯಿಂ ತಲೆಯ ಮಿದುಳ ಖಂಡ ಕಡಗೆ ಚೆಲ್ಲಲು ರಾವುತರನು (ಕಂಠಶಾ. ೪೦-೨೯). **ಲೌಡೆ** : ಬೇಡರಸು ಬೆನ್ನೀಯೆ ನೆತ್ತಿಯ ಬೀಡೆ ಬಿರಿಯಲು ಬಿದ್ದ ಲೌಡಿಗಳೀಡಿಬೊದಪರಿಚಾತುರಂಗದ ಚಪಳ ಚೂಣಿಯಲಿ (ಕುಮಾ. ೦೦-೦೦). [< ಪ್ರಾ. ಲಉಡ. / ಸಂ. ಲಗುಡ]

**ಲವುಡಿ₂** 'ಲೌಡಿ₂' ನೋ.

**ಲವುಡಿ**ಮಗ 'ಲೌಡಿಮಗ' ನೋ.

**ಲವೋದ್ಗಮ** (ನಾ). ಸಿಡಿದ ಸಣ್ಣ ಹನಿ,-ತುಂತುರು : ತಣಿಯಿಂ ದೇವಲೋಕ ಸುಖಸಾಗರಮಂ ತವೆ ಹೀರ್ದುಪಿಾಗಳೀಂ ತಣಿವೊ ಮನುಷ್ಯ ಕೀಟಕಸುಖಾಂಬುಲವೋದ್ಗಮದೊಳ್ ವಿಚಾರಿಸಲ್ ಗಣದಮಿದೊಂದು ಮಿಲ್ಲ (ಅಂಪು. ೩-೬೦). [ಸಂ.]

**ಲಶುನ** (ನಾ). ಬೆಳ್ಳುಳ್ಳಿ : "ಲಶುನಂ ಗೃಂಜನ" (ವಸ್ತುಕೋ. ೩೭-೨೬); ಲಶುನಂ ನಿಂಬಫಳಂ ಹಿಂಗು ಶುಂಠಿ (ಲೋಕೋಪ. ೭-೬೦); ಕಸ್ತೂರಿಯೊಡ ನಿಟ್ಟು ಕುಟ್ಟಿ ತೆಗೆದಿಟ್ಟರು ಲಶುನಕೆ ಸೌರಭ ಬರದು (ಇಂಪಾಕ. ೨೨೦-೪೯). [ಸಂ.]

**ಲಷ್ಕರ್** 'ಲಷ್ಕರು' ನೋ.

**ಲಷ್ಕರಿ** 'ಲಷ್ಕರು' ನೋ.

**ಲಷ್ಕರು**, ಲಕ್ಕರಿ, ಲಷ್ಕರ್, ಲಷ್ಕರಿ, ಲಸಿಕರಿ, ಲಸುಕರಿ (ನಾ). ೧. ಸೈನ್ಯ ; ದಳ: ನಾಳೆ ಬರುವ ಬಳ್ಳಾರಿ ಲಷ್ಕರ ಸರಬರಾಯಿಯಂ ತುಸ ಪುಕಸಿರಿಲ್ಲವಂತೆಸಗಿ ಪೇಳು (ಅಶ್ವಗಂ. ೩೦-೩೯). ೨. ಸೈನ್ಯವನ್ನಿಟ್ಟಿರುವ ಸ್ಥಳ ; ದಂಡುಪ್ರದೇಶ; ಕಂಟೋನ್ಮೆಂಟು : ಪೂರ್ವಕ್ಕೆ ಇದ್ದ ಬೆಟ್ಟ ಗುಡ್ಡಗಳ ಶ್ರೇಣಿಯು ಲಷ್ಕರಿನಿಂದ ಸುಮಾರು ಎರಡು ಮೈಲಿ ದೂರವಿದ್ದಿತು (ಚಿತಾಕ. ೪೩೬); ಈ ಮ್ಯಾರಿಗೆಲ್ಲಾ ಬಂದೋಬಸ್ತು ಮಾಡಿದರು ಶಿವಾಯಿ ಲಷ್ಕರು ಕೂಚು ಮಾಡೀ ರತ್ನಗೇರಿಯಿಂದಾ ಯೆರಡು ಮಜಲ್ಲು ಮಾಡಿ (ಮರಾಠ. ೩೪-೦೯). **ಲಕ್ಕರಿ** : ೧ ಅಂಬರಖಾನನ ಬಳಿಯ ಲಕ್ಕರಿಗಳ ತುಂಬುಲೆಕ್ಕಕ್ಕೆ ಸಂದಾಗ ಒಂಭತ್ತುಸಾವಿರ ಮಡಿದುದು ರಣದಲ್ಲಿ (ಕಂಪಠ. ೦೫-೬೯). **ಲಷ್ಕರ್** : ೧. ಬೆಂಗಳೂರಿನಲ್ಲಿ ಬ್ರಿಟಿಷ್ ಸರ್ಕಾರದವರು ಸ್ಥಾಪಿಸಿದ ಲಷ್ಕರ್ ಸ್ಥಾನಕ್ಕೆ . . . ಒದಗಿಸಿಕೊಟ್ಟರು (ಮಹಾಪು. II, ೪೪). ೨. "ಸೇನೆಯ ದಳಗಳಿಗೆ ಗೊತ್ತುಮಾಡಿರುವ ವಾಸಸ್ಥಾನ; ಸೈನ್ಯಾವಾಸ. (ಇಂಡಿಯಾದಲ್ಲಿ) ಸೈನ್ಯವನ್ನಿಟ್ಟಿರುವ ಪಟ್ಟಣ ಅಥವಾ ಪಟ್ಟಣದ ಭಾಗ: 'ಲಷ್ಕರ್'; ದಂಡು" (Cantonment. ೨೦೪೩). **ಲಷ್ಕರಿ** : ೧. ಜೀವನದಲ್ಲಿ ಸಾಹಸವೊಂದೇ ಸುಖ ಕೊಡುವುದರಿಂದ ಕೊನೆಗೆ ಲಷ್ಕರೀ ಸೇರಬೇಕೆಂದು ಬಯಸುತ್ತೇನೆ (ಮೇಧಾಪು. ೦೬೬); ಸುಶೀಲ ರಾಯನು ಲಷ್ಕರೀ ಸುಭೇದಾರನಿರುತ್ತಾನೆ (ಮೋಹಿನೀ. ೬೦). **ಲಸಿಕರಿ**: ೧. ಹಸುರು ನಿಸಾನಿ ಶಮನಕಾಲಿ ನಗಾರಿ ಲಸಿಕರಿಗಳು ಸುತ್ತ ಬಳಸಿ (ಕೌಂಡಲ. ೬-೬೪). **ಲಸುಕರಿ** : ೧. 'ಲಸುಕರಿತನ' ಪದ್ಧಾ.

[←ಪಾರ. ಮರಾ. ಲಶ್ಕರ್; ಹಿಂ. ಲಷ್ಕಡ್, ಲಶ್ಕರೀ]

**ಲಸಿಕರಿ** 'ಲಷ್ಕರು' ನೋ.

**ಲಸಿಕೆ**, ರಸಿಕೆ, ರಸಿಗೆ, ರಸುಗೆ (ನಾ). ೧. ಸಾಂಕ್ರಾಮಿಕರೋಗಗಳ ತಡೆಗಾಗಿ ಬಳಸುವ ಔಷಧಿದ್ರವ ; ಸಿಡುಬು ಮೊದಲಾದುವುಗಳ ತಡೆಯಲು; ಲಸಿಕೆಗಳ ಪ್ರಯೋಗ. ಕಾಯಿಲೆ ಬಂದಾಗ ಅತಿ ಬೇಗ ಅದನ್ನು ಗುರುತಿಸಿ ತಕ್ಕ ಚಿಕಿತ್ಸೆ ಕೊಡುವುದೇ ಮುಂತಾದ ಕ್ರಮಗಳು ಸಾಂಕ್ರಾಮಿಕ ರೋಗಗಳ ಗತಿಯನ್ನೇ ಬದಲಿಸಿವೆ (ಕಂಲೋ. VI, ಐಪ್ಪಹ). **ರಸಿಕೆ**: ೧. ರಸಿಕೆ (serum) ಮನುಷ್ಯನನ್ನು ೧೨೫ ವರ್ಷಗಳ ವರೆಗೆ ಬದುಕಿಸು ವುದಂತೆ (ವೈಜ್ಞಾಕ್ರ. ೬೫). ೨. ಗಾಯ ಮೊದಲಾದುವುಗಳಿಂದ ಸೋರುವ ನೀರು; ಕೀವು : ಕಂಪ್ಪ ಬಲಿತರೆ . . . ರಸಿಕೆ ಸುರಿಯುತ್ತಿ ಹುದು (ವೈದ್ಯಶಾ. I, ೩೯೭); ಆಕಳ ಕಚ್ಚಲಿನ ಮೇಲಿನ ಹುಣ್ಣಿನ ರಸಿಕೆಯು ಕೈಗೆ ಹತ್ತಿ ಮೈಲಿ ಎದ್ದು ಹೋಗಿರುತ್ತವೆ (ಮುಂಬಯು. ೪-೨೦೭). **ರಸಿಗೆ** : ೨. ಕೀವಿಂ ಕೊಬಿಯಿಂ ಮಹಾರಸಿಗೆಯಿಂ ಪೊಂಗಿರ್ದ ಪುಣ್ (ರಪರಾಮ. ೪-೬೪); ಬಸಿದಪ್ಪುದು ಮೆಯ್ಯ ಕೀವುಂ ರಸಿಗೆಯುಂ (ಯಶೋಧ. ೩-೭೨). ೩. ಕಬ್ಬಿನ ಹಾಲಿನ ಪಾಕ; ಕಾಕಂಬಿ : "ರಸಿಗೆ-ರಸಿಕಾ=ಕಬ್ಬಿನ ರಸ. ಕೀವು" (ಶಬ್ದಕೋ. ೩೮). **ರಸುಗೆ** : ೨. ಪುಣ್ಗಳ ಬಾಯಿಂ ಪಡುಕನಾರ್ವ ರಸುಗೆಗಳೊಸರ್ಗಂ (ಚಿತ್ರಮಾ. ೨೦-೪). [< ಸಂ. ಲಸೀಕಾ = ದ್ರವ, ರಸ]

**ಲಸಿತ** (ಗು). ೧. ಕಾಣಿಸಿಕೊಂಡ ; ಬೆಳಕಿಗೆ ಬಂದ. ೨. ಹೊಳೆಯುವ; ಪ್ರಕಾಶಿಸುವ : ಲಸಿತಭಸಿತೋಜ್ವಲಗಾತ್ರಂಸ್ಥಾಣು ನೊಸಲಕಣ್ದೋಱದ ಪೋಲ್ (ಕಂಠೀರವ. ೫-೦೦೬); ಬೆಳ್ಳಗಿಲಾಗಸದಂತಿರೆ ಭಸಿತೋದ್ಧೂಳಿತ ಲಸಿತ ಲಲಾಟಂ ಕಣ್ಗೊಳಿಸೆ (ರಾಜಶೇ. ೪೦-೦೬). [ಸಂ.]

**ಲಸುಕರಿ** 'ಲಷ್ಕರು' ನೋ.

**ಲಸುಕರಿತನ** (ನಾ). ಸೈನ್ಯಾಧಿಪತ್ಯ: ಒರಿದು ಸಂತೋಷದೆ ಪಾತಶ್ಯಾವು ಖಾನಗೆ ಸರಿ ಲಸುಕರಿತನವಿತ್ತು . . . ಹೋಗೆಂದ (ಕಂಪಠ. ೧೧-೬).

[ಲಸುಕರಿ (<ಲಷ್ಕರು) + -ತನ]

**ಲಸುನ,** ಲಸೋನ (ನಾ). ಬೆಳ್ಳುಳ್ಳಿ : ಲಸುನಂ ತುಂಬಿರ್ವ ಪಾತ್ರಂ (ಶಬ್ದಾ.ಶ. ೬೧). **ಲಸೋನ** : "ಉಳ್ಳಿ ಗೃಂಜನಂ ಲಶುನಂ ಲಸೋನಂ ಪಲಾಂಡುವಕ್ಕುಂ" (ಮಂಗರಾ. ೪-೦೬). [<ಪ್ರಾ. ಲಸುಣ./ಸಂ. ಲಶುನ]

**ಲಸೋನ** ' ಲಸುನ ' ನೋ.

**ಲಸ್ತಕ** (ನಾ). ಬಿಲ್ಲಿನ ಮಧ್ಯಭಾಗ ; ಬಿಲ್ಲನ್ನು ಕೈಯಲ್ಲಿ ಹಿಡಿಯುವ ಸ್ಥಳ : "ಲಸ್ತಕಃ, ಧನುರ್ಮಧ್ಯಂ—ಬಿಲ್ಲಿನ ನಡುವಿಗೆ ಹೆಸರು. ಕೋದಂಡದ ಮಧ್ಯಪ್ರದೇಶ ; ಬಿಲ್ಲಿನ ಕೈಪಿಡಿಯ ಸ್ಥಳ" (ಸಿದ್ಧಾಂತ. ೬೩). [ಸಂ.]

**ಲಸ್ತಕಿ** (ನಾ). ಬಿಲ್ಲು. [ಸಂ. ಲಸ್ತಕಿನ್]

**ಲಹಣ್ಣ$_1$** ' ಲವಣ್ಣ$_1$ ' ನೋ.

**ಲಹಣ್ಣ$_2$** ' ಲವಣ್ಣ$_2$ ' ನೋ.

**ಲಹಣಗೊಡು** (ಕ್ರಿ). [ಸಂಗೀತ] ಸೊಗಸನ್ನುಂಟುಮಾಡು : ಗತಿಗೊಡುವ ಮದ್ದಳೆಯ ಲಹಣಗೊಡುವ ಆವುಜದ ದೆಕ್ಕಳಂಗೊಡುವ ಕರಡೆಯ (ಸುಬಚ. ೦೦೭_೦). [ಲಹಣ್ಣ (< ಲವಣ್ಣ) + ಕೊಡು$_1$]

**ಲಹರಿ** (ನಾ). ೧. ಅಲೆ ; ತೆರೆ ; ತರಂಗ : ಮಂದಮಂದಂ ಕ್ರೀಡಿತಾಲೋಲಗಂಗಾಲಲಿತಲಹರಿ ಕಾಸಾರಸಾರಂ ಸಮೀರಂ (ಅಪು. ೭-೨೫); ಅನುರಾಗರಸದ ಲಹರಿಯೊಳು ಏಗೈವನೆಂಬುದನರಿಯದವನಿಗಿದಿರಾಗಿ ನಿಟ್ಟಿಸಿ ನಿಂದಿಹಳು (ಹರಿ. ೭-೪೦); ಕಾವ್ಯಕರುಣಾರಸದ ಲಹರಿಯ . . . ಲಸದ್ರೂಪಂ ಮೆರೆಯದಿಹುದೆ? (ಶ್ರೀರಾಮಾ.೦೦೫-೩೩). ೨. ದೊಡ್ಡ ಅಲೆ,—ತೆರೆ : "ಊರ್ಮಿಃ . . . ಕಲ್ಲೋಲಃ, ಲಹರೀ — ಈ ೫ ಪೆರ್ದೆರೆ" (ಹಲಾಯು. ೦೦೬-೭೦). ೩. ಮನಸ್ಸಿಗೆ ಒಮ್ಮೆಲೇ ಉಂಟಾಗುವ ಇಚ್ಛೆ,-ಒಲವು : ಯಾರಿಗೆ ಯಾವಾಗ ಲಹರಿಯೋ ಆಗ ಬರುತ್ತಾರೆ ಹೋಗುತ್ತಾರೆ (ಇತ್ಯ.ಶ. ೩೦೬); ಆತನ ಲಹರಿಯು ಯಾವ ಕಾಲಕ್ಕೆ ಎತ್ತ ಕಡೆ ಹೊರಳೀತೆಂಬುದರ ಭರವಸೆಯೇ ಇರಲಿಲ್ಲ (ಕಾದುಹು. ೩); ಯಾರಿಗೂ ಪಾಠಪ್ರವಚನದ ಲಹರಿ ಬಂದಿರಲಿಲ್ಲ (ದೂರಸ. ೩೦). ೪. ಉಲ್ಲಾಸ ; ಸಂತೋಷ : ಕೇವಲ ಲಹರಿಗಾಗಿ ರೇ. . . ಪುಸ್ತಕವೊಂದನ್ನು ಪ್ರಕಟಿಸಿದನು (ಸಸ್ಯ.ಶ. ೪). ೫. ಒಂದು ಬಗೆಯ ಮಾದಕಪದಾರ್ಥ : ಹುರಿದ ಹೊಸ ಭಂಗಿ ಹದಗೆಯ್ದು ಏನಿಕೂಟದೊಳೇ ಬೆರೆದಮಲ್ ಜಾಯಿಕಾಯ್ ಪತ್ರೆ ಕಸಕಸೆಯೆಂಬ ತರತರದೊಳೆಸೆವ ಲಹರಿಗಳುಮೆಲ್ಲಾ ಪಕ್ಷಿಮೃಗಕುಲದ ಮಾಂಸಂಗಳು (ಶಂಪು. ೪೭-೪೫). ೬. ಅಮಲು ; ಗುಂಗು : ಒಳ್ಳೆಯಲ್ಲಿ ದೋಷ ಬಂಗಿನುಗ್ಗೆಯಲ್ಲಿ ಲಹರಿ ಉಳ್ಳೆಯಲ್ಲಿ ದುರ್ಗಂಧ (ಬಲೀಸ್ಥ. ೭೪); ಮಣ್ಣೆಂಬ ಘಟದ ಮಧ್ಯದಲ್ಲಿ ಹೊನ್ನೆಂಬ ಸುರೆ ಹುಟ್ಟಿತ್ತು ಹೆಣ್ಣೆಂಬ ಬಟ್ಟಲಲ್ಲಿ ಅಂತು ಈಂಟಲಾಗಿ ಲಹರಿ ತಲೆಗೇರಿತ್ತು (ಸರ್ವವ. ೦೧೨-೬೬೭). [ಸಂ. ಲಹರೀ./ಹಿಂ. ಮರಾ. ಲಹರ್]

**ಲಹರಿಕೆ** (ನಾ). ಅಲೆ : ತೆರೆ ; ತರಂಗ : "ಭಂಗಂ ಲಹರಿಕೆ ವೀಚಿ ತರಂಗಂ ಲಳಿಯೆಂಬಿವೂರ್ಮಿಪರ್ಯಾಯಂಗಳ್" (ಪಸ್ತುಕೋ. ೨೨-೩) ; ನಾನಾಜಲಚರನಿಕರಾಸ್ಫಾಳನಪ್ರೋಜ್ಜ್ವಲತ್ಪ್ರಚ್ಛದನಚ್ಛನ್ನಚ್ಛಟಾಪ್ರಕ್ಷುಭಿತಲಹರಿಕಾ ಸ್ಫಾರ ರೌದ್ರಂ ಸಮುದ್ರಂ (ಕಾವ್ಯಸಾ. ೬೪ ಕೂಡ್ರ ೪) ; ಸೊಗಯಿಸುವ. . . ಲಲಿತಗಂಗಾನದೀಲಹರಿಕಾತಲ್ಪದೊಳ್ (ಅಂಪು.೬-೦೬೪). [ಸಂ. ಲಹರಿಕಾ]

**ಲಳಗಿ** ' ನಳಗೆ ' ನೋ.

**ಲಳನೆ** ' ಲಲನೆ ' ನೋ.

**ಲಳಿ** (ನಾ). ೧. ರಭಸ; ತೀವ್ರತೆ; ಆವೇಗ : ಭಾರಿಯ ಭೂರಿ ಕೋಪಾನಳನ ಲಳಿಯ ತಗ್ಗಿಸುವೆನೆನುತ (ಕುವ್ಯಾ.ಶ. ೦೨-೦೨); ಬುದ್ಬುದದ ಜಲ ಜಂತುಜಾಲ್ಗದ ಲಳಿಯ ಉಳಿಯ ಲಹರಿಗಳ ವಿಸ್ತರದ ಮರಗಂಗೆಯಂ ಕಂಡಳು (ಕೈಪಿಡಾ. ೯-೨೩). ೨. ಚಾಕಚಕ್ಯತೆ; ಚುರುಕು : ಶರಸಂಧಾನ ಸತ್ತ್ವ ಸಾಹಸ ಲಕ್ಷ್ಯ ಲಳಿ ಲಾಘವಗಳಿಂದೆ (ಕೈಪಿಡಾ. ೨೬-೦೫). ೩. ಕೌಶಲ್ಯ ; ನೈಪುಣ್ಯ ; ಚಮತ್ಕಾರ : ಸುಸ್ವರಂ ಲಳಿ ಉಳಿ. . . ಸಂಗಳಿಸೆ ಸುಕಂಠೆ ಪಾಡಿ ಪುದಿದಳ್ ಮುದಮಂ ನರನಾಥಚಿತ್ತದೊಳ್ (ಕುಸುಮಾ. ೦-೩೭) ; ಕರಿಗಳಟ್ಟೆಯನೆಳೆವ ರಕ್ತದ ಹೊನಲ ಮುಂಡದ ಲಳಿಯ ನಾಟ್ಯದಲೆಸೆದುದೈ ಬೀಭತ್ಸ ರೌದ್ರದಲಿ (ಕುವ್ಯಾ.ಶ. ೦೫-೨೭). ೪. ಕಾಂತಿ ; ಪ್ರಭೆ : "ತೊಳಗು ಬೆಳಗೆನೆ ಕಾಂತಿ ಲಳಿ" (ಸಂಕೀಪ. ೨೫) ; ಪಚಕಿನ ಸೂಸಕದ ಲಂಬಲದ ಲಳಿಗಳ ಲಹರಿಯಲಿ ರಂಜಿಸಿದುದು (ಕೂರಾ. ೦-೭-೦೪). ೫. ಅಲೆ; ತೆರೆ: "ಭಂಗಂ ಲಹರಿಕೆ ವೀಚಿ ತರಂಗಂ ಲಳಿಯೆಂಬ ವೂರ್ಮಿಪರ್ಯಾಯಂಗಳ್" (ಪಸ್ತುಕೋ. ೨೨-೩). [ ? ]

**ಲಳಿಗೆ** ' ನಳಿಗೆ ' ನೋ.

**ಲಳಿತ** ' ಲಲಿತ ' ನೋ.

**ಲಳಿತತೆ** ' ಲಲಿತತೆ ' ನೋ.

**ಲಳಿತಾಂಗ** ' ಲಲಿತಾಂಗ ' ನೋ.

**ಲಳಿತಾಕಾರ** ' ಲಲಿತಾಕಾರ ' ನೋ.

**ಲಳಿತೆ** ' ಲಲಿತೆ ' ನೋ.

**ಲಳಿಮಸಗು** (ಕ್ರಿ). ೧. (ಅಲೆಗಳು) ಉಕ್ಕು,-ಉಕ್ಕೇರು : ಒಸರಿದುದು ಶಶಿಕಾಂತಶಿಲೆ ಧವಳಿಸಿದುದಂಬರವಂಬುನಿಧಿ ಲಳಿ ಮಸಗಿದುದು (ಕೂರಾ. ೩-೩-೪). ೨. ರಭಸಗೊಳ್ಳು ; ಉದ್ವೇಗಗೊಳ್ಳು : ಎಸೆದುದಾ ಮಣಿಖಚಿತಕರಣಪ್ರಸರಮುದ್ರಿಕೆ ಪೂತ್ಕರಿಸಿ ಲಳಿಮಸಗಿದಹಿಪನ ಪೆಡೆಮಣಿಯ ವೊಲು (ಕೂರಾ. ೪-೬-೦೭). [ಲಳಿ+ಮಸಗು$_1$]

**ಲಳಿಯೇಳು** (ಕ್ರಿ). ರಭಸಗೊಳ್ಳು ; ಉದ್ವೇಗ ಹೊಂದು : ಲಾಗಿಸುತ ಲಳಿಯೆದ್ದು ಭೀಮನ ತಾಗಿಸಿದನವನೀಶನು (ಕುವ್ಯಾಗ. ೭-೨೦) ; ವಿಗಡ ಬಸವಂ ಮಸಗಿ ಲಳಿಯೆದ್ದು ತತ್‌ಕ್ಷಣಂ ಚಿಗಿಯಲ್ ತೊಡರ್ದ ದಾವಂಗಳೆಲ್ಲಂ ಪರಿದವು (ಪಂಪು. ೪೪-೦೬) ; ಕಡುಪಾಂತ ಕಾಲಾಳ್ಗಳೊಡಲಳಿಯೆ ಲಳಿಯೆದ್ದು ಪಡೆಯನುಚಿ ಕೊಂದವು (ಕೈಪಿಡಾ. ೨೨-೨೦). [ಲಳಿ+ಏಳು$_1$ (<ಏಱು$_1$)]

**ಲಾಂಗಲ** (ನಾ). ೧. ನೇಗಿಲು ; ಹಲ : "ಹಲಂ, ಲಾಂಗಲಂ, ಸೀರಃ— ಈ ೩ ನೇಗಿಲ್" (ಹಲಾಯು. ೯೯-೪೨೦) ; ಪಿಂಗಾಕ್ಷನ ವಕ್ಷಸ್ಥಳಮಂ ತನ್ನ ಗದಾಲಾಂಗಲದಿಂದಿರ್ಬಗಿಯಾಗಿ ಪೋಳ್ದು (ಗದಾಯು. ೬-೦೬೫) ; ಶರಧಿ ತೆರೆಯಿಂದೆ ನೂಂಕಲ್ : . . . ಒಂದು ಪೆಟ್ಟಿಗೆ ಪೊಳಲ್ಕಿರದೆ ಲಾಂಗಲಕೆ ಸಿಲ್ಕಿತು (ದಶಾವ. ೯-೦೦೯). ೨. ಒಂದು ಬಗೆಯ ಆಯುಧ : ಬರಲೀಯದೆಂದು ಲಾಂಗಲ ಶರಂಗಳಂ ಪಿಡಿದು ಪವನನಂದನನಿರ್ದಂ (ಸಂಶಾಹಾ. ೦೪-೦೮೦) ; ತಣಿವುವೆಂ ಮುಸಲಮನೀ ಲಾಂಗಲಮಂ (ಇಗಂ. ೦೫-೫೨). ೩. ಒಂದು ಬಗೆಯ ಮರ ; ತಾಳೆ. ೪. [ಜೈನ] ಅರುವತ್ತುಮೂರು ಇಂದ್ರಕಗಳಲ್ಲಿ ಒಂದು : ೧. ಋತು . . . ೩೬. ಲಾಂಗಲಂ . . . ೬೩ ಸರ್ವಾರ್ಥಸಿದ್ಧಿ —ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್ (ತತ್ತ್ವಸೂ. ೨೦೩). 'ಲಾಂತವ' ಪರಾ. [ಸಂ.]

**ಲಾಂಗಲಗತಿ** (ನಾ). [ಜೈನ] ಸಂಸಾರಿಜೀವದ ಇಷುಗತಿ, ಪಾಣಿಮುಕ್ತಗತಿ, ಲಾಂಗಲಗತಿ, ಗೋಮೂತ್ರಗತಿಗಳೆಂಬ ನಾಲ್ಕು ಗತಿಗಳಲ್ಲಿ ಒಂದು ; ನೇಗಿಲಿನಿಂದ ಉತ್ತಾಗ ನೆಲದ ಮೇಲೆ ಮೂಡುವ ಎರಡು ರೇಖೆಯಂಥ ಗತಿ,—ಗಮನ : ಸಂಸಾರಿಜೀವಕ್ಕೆ . . . ಹಲದ ಪೋಲ್ ಎರಡು ವಕ್ರಮನುಳ್ಳ ಲಾಂಗಲಗತಿಯುಂ . . . ಗೋಮೂತ್ರಗತಿಯುಂ, ಎಂದು ಗತಿ ನಾಲ್ಕುತೆಱಂ (ತತ್ತ್ವಸೂ. ೦೦೦). [ಸಂ.]

**ಲಾಂಗಲದಂಡ** (ನಾ). ನೇಗಿಲಿಗೆ ಜೋಡಿಸುವ ಉದ್ದವಾದ ಮರ; ಈಸು :"ಈಷಾ, ಲಾಂಗಲದಂಡಃ — ೨ ಈಸಿನ ಹೆಸರು; ಈಚುಕೋಲು" (ಸಿದ್ಧಾಂತ. ೨೭೬). [ಸಂ.]

**ಲಾಂಗಲಹಸ್ತ** (ನಾ). ೧. ನೇಗಿಲನ್ನು ಕೈಯಲ್ಲಿ ಹಿಡಿದಿರುವವನು, ಹಲಾಯುಧಧಾರಿ. ೨. [ಜೈನ] ಲಾಂಗಲವೆಂಬ ಆಯುಧವನ್ನು ಉಳ್ಳವನು; ಬಲದೇವ : ಭದ್ರಾಸನದೊಳ್ ಕುಳ್ಳಿರೆ ಲಾಂಗಲಹಸ್ತಂ ವಿದ್ಯಾಧರ ರಾಜದೂತನ ಮೊಗಮಂ ನೋಡಿ (ಶಾಂತಿಪು. ೨-೦೬೪). [ಸಂ.]

**ಲಾಂಗಲಿ$_1$, ಲಾಂಗಳಿ** (ನಾ). ೧. ನೇಗಿಲನ್ನು ಆಯುಧವನ್ನಾಗಿ ಹೊಂದಿದವನು; ಬಲರಾಮ : ಅರುಣಾಧರಪಾಂಡುರದಶನರುಚಿಗಳಾ ನನದಿನೊಗೆಯೆ ಲಾಂಗಲಿ ನುಡಿದಂ (ಜಗ. ೦೩-೩೦). ೨. ಒಂದು ಬಗೆಯ ಔಷಧೀಸಸ್ಯ; ಕೋಳಿಕುಟುಮನ ಗಿಡ : "ಲಾಂಗಲೀ, ಲಾಂಗಲಿಕೀ, ಅಗ್ನಿಶಿಖಾ – ಕೊಲುಕುಟುಗನ ಗಿಡದ ಹೆಸರುಗಳು" (ಸಿದ್ಧಾಂತಿ. ೦೩೯) ; ಒಳಗಂಬುಡಿದಿರ್ದೊಡೆ ಲಾಂಗಲಿಯಂ ತಂದು . . . ಪುಣ್ಣ ಬಾಯೊಳೆ ವಿಳೇಪನಂಗೆಯ್ದೊಡಾ ಸರಲ್ ಪೊಱಮಡುಗುಂ (ಗೋವೈದ್ಯ. ೯-೦೩೯). ೩. ತೆಂಗಿನ ಮರ : "ನಾಳಿಕೇರಃ, ಲಾಂಗಲೀ– ತೆಂಗಿನ ಮರದ ಹೆಸರುಗಳು" (ಸಿದ್ಧಾಂತಿ. ೧೩೨). ೪. ಹಾವು ; ಸರ್ಪ. **ಲಾಂಗಳಿ** : ೨. ತಿಳತ್ರೈಳದೊಳ್ . . . ಲಾಂಗಳಿಯೆಂಬಿವನಟ್ಟೊಂದಿರೆ . . . ಪುಣ್ಗಳ್ ಕಿಡುಗುಂ (ಗೋವೈದ್ಯ. ೯-೩೯). [ಸಂ. ಲಾಂಗಲಿನ್]

**ಲಾಂಗಲಿ$_2$** (ನಾ). ನೀರುಹಿಪ್ಪಲಿ : "ಲಾಂಗಲೀ, ಶಾರದೀ, ತೋಯ ಪಿಪ್ಪಲೀ, ಶಕುಲಾದನೀ – ನೀರುಹಿಪ್ಪಲೀ ಹೆಸರುಗಳು" (ಸಿದ್ಧಾಂತಿ. ೦೩೬). [ ಸಂ. ಲಾಂಗಲೀ ]

**ಲಾಂಗಲಿಕ** (ಗು). ೧. ನೇಗಿಲಿಗೆ ಸಂಬಂಧಿಸಿದ. (ನಾ). ೨. ಒಂದು ಬಗೆಯ ವಿಷ; ಸ್ಥಾವರವಿಷ. [ಸಂ.]

**ಲಾಂಗಲಿಕಿ** (ನಾ). = ಲಾಂಗಲಿ$_1$ ೨ : "ಲಾಂಗಲೀ, ಲಾಂಗಲಿಕೀ, ಅಗ್ನಿಶಿಖಾ – ಕೊಲುಕುಟುಗನ ಗಿಡದ ಹೆಸರುಗಳು" (ಸಿದ್ಧಾಂತಿ. ೦೩೯). [ ಸಂ. ಲಾಂಗಲಿಕೀ ]

**ಲಾಂಗಳಿ** ' ಲಾಂಗಲಿ$_1$ ' ನೋ.

**ಲಾಂಗುಲಿಕ** (ನಾ). ಲಾಂಗೂಲವನ್ನುಳ್ಳವನು; ಬಾಲವನ್ನು ಹೊಂದಿದವನು : ಅಲ್ಲಿ . . . ಏಕಪಾದರುಂ ಲಾಂಗುಲಿಕರುಂ ವಿಷಾಣಿಗಳುಂ ಅಭಾಷಕರುಂ ಅಪ್ಪರ್ (ಕರ್ಣ್ಯಪ. ೦೯೩). [ < ಸಂ. ಲಾಂಗೂಲಿಕ ]

**ಲಾಂಗೂಲ** (ನಾ). ಬಾಲ ; ಪುಚ್ಛ : "ಲೋಮಪುಚ್ಛಂ, ಲಾಂಗೂಲಂ, ವಾಲಹಸ್ತಃ, ವಾಳಧಿಃ – ಈ ೪ ಬಾಲಂ" (ಕಣಾದು. ೬೨-೨೪೭); ಚಮರೀ ಲೋಲಲಾಂಗೂಲವಾಲಾವಳಿವಿಕ್ಷೇಪಂಗಳಿಂ (ಕಂಕಕಾ. ೪-೦೯); ತುಂಗಶೃಂಗಗಳಿಂದ ಭೂಮಿಯ ಮುಟ್ಟುವ ಲಾಂಗೂಲದಿಂ ಕೊರ್ಬಿ ಬೆಳೆದು ಸಿಂಗರವಾದ ಒಟೆಲಿನಿಂದೆಸೆವ ವೃಷಪುಂಗವನೆಯ್ದುಂದುದು (ಶಂಕ್ರಕಾಂ. ೨-೩೩).

**ಲಾಂಗೂಲಚಾಲನ** = ೧. ಬಾಲವನ್ನು ಅಲ್ಲಾಡಿಸುವುದು ; ಬಾಲ ಬಡಿಯುವಿಕೆ. ೨. (ಆಲಂ) ಇನ್ನೊಬ್ಬರು ಹೇಳಿದ್ದಕ್ಕೆಲ್ಲಾ ಹೂಗುಟ್ಟುವಿಕೆ ; ಬಾಲಬಡಿಕತನ : ಲಾಂಗೂಲಚಾಲನದ ಅಧಃಪತನಕ್ಕೆಳೆಯುವ . . . ಆಟವನ್ನು ಎಲ್ಲಿ ಕಲಿತೆ ? (ರಕ್ತಾಕ್ಷಿ. ೦೨೩); ಭಾಸ್ಕರನ ಲಾಂಗೂಲಚಾಲನ ವೃತ್ತಿ ಒಮ್ಮೊಮ್ಮೆ ಮೋಹಿನಿಯಲ್ಲಿ ಆತ್ಮಾಭಿಮಾನವನ್ನು ಕೆರಳಿಸುತ್ತಿತ್ತು (ಕಮಪಿ. ೦೩೯). [ಸಂ.]

**ಲಾಂಗೂಲಕರ್ತನ** (ನಾ). ಒಂದು ನರಕದ ಹೆಸರು : ಲಾಂಗೂಲಕರ್ತನ ಶಾಳಪತ್ರಪಾಟನ . . . ಮೋಹಸಭ್ರಂಶವೆಂಬೈದು ಮಂತ್ರಿನರಕಂಗಳಿಂ (ಬಿಲ್ಲ. ೦೩೦). [ಸಂ.]

**ಲಾಂಛನ** (ನಾ). ೧. ಗುರುತು ; ಚಿಹ್ನೆ ; ಮುದ್ರೆ : ''ಚಿಹ್ನಂ ಲಾಂಛನಂ ಕಳಂಕಂ'' (ಮಂಗರಾ. ೦೨-೩); ಕಮಲವಾಲಾಚಕ್ರವಸ್ತ್ರಗಜಲಾಂಛನಮಪ್ಪ ದಶವಿಧದಿನೆಸೆದು (ಆಆಪು. ೬-೨೦೫) ; ಲಾಂಛನವ ಕಂಡು ನಂಬುವೆ ಅವರಂತರಂಗವ ನೀವೇ ಬಲ್ಲಿರಿ (ಬಸವ. ೪೦೦) ; ಹಣೆಯ ಮೇಲಿನ ಲಾಂಛನದಿಂದ ಅವರಿಗೆ ಉಂಟಾಗಿರುವುದೆಂಬುದನ್ನು ತಿಳಿದು (ಕೆಳಹಂ. ೯೬). ೨. ಜಾತಿ, ಮತ, ಪಂಥ, ಸಂಪ್ರದಾಯಗಳ ಗುರುತನ್ನು ಸೂಚಿಸುವ, ಹಣೆಯ ಮೇಲೆ ಇಡುವ ಗುರುತು ಮುಂತಾದುದು. ೩. (ಚಂದ್ರಬಿಂಬದ ಮೇಲಿರುವ) ಕಲೆ ; ಮಚ್ಚೆ ; ಕಪ್ಪು : "ಮೃಗಃ . . . ಲಾಂಛನಂ, ಲಕ್ಷ್ಮ, ಲಕ್ಷಣಂ, ಕಳಂಕಃ — ಈ ೮ ಚಂದ್ರಮಂಡಲದ ನಡುವಣ ಕರ್ಪು" (ಕಣಾದು. ೬-೪೩). ೪. ಕಳಂಕ ; ಅಪಮಾನಕರವಾದುದು : ಪ್ರತ್ಯಕ್ಷ ರಾಜಧಾನಿಯಲ್ಲಿ ಈ ಪ್ರಕಾರ ಕಳವಾಗುವುದು ಬಹಳ ಲಾಂಛನದ ಮಾತು (ಮುಂಡಾಜು. ೪-೨೦); ಅದೆಂತಹ ದುಷ್ಟಲಾಂಛನವು ನನ್ನನ್ನು ಅಂಟಿಕೊಂಡು ಬಿಟ್ಟಿತು ! (ಕಡಿ. ೯೮). [ಸಂ.]

**ಲಾಂಛನಾಸ್ಪದ** (ನಾ). ಅಪಮಾನಕರವಾದುದು; ಲಜ್ಜಾಸ್ಪದವಾದುದು: ಸಂಪ್ರದಾಯದಂತೆ ಹೆಣ್ಣನ್ನು ನೋಡಲಿಕ್ಕೆ ಹೋಗದೆ ಲಗ್ನವಾಗುವುದು ಅವನಿಗೆ ಲಾಂಛನಾಸ್ಪದವೆನಿಸಿತು (ಸಜುಪ. ೪೨); ಇದು ನನಗೂ, ತಮಗೂ ಕೂಡಿಯೇ ಲಾಂಛನಾಸ್ಪದವು (ಅಂಬಿಕೆ. ೦೨೩). [ಸಂ.]

**ಲಾಂಛಿತ** (ಗು). ಗುರುತುಳ್ಳ ; ಚಿಹ್ನೆಯುಳ್ಳ ; ಲಕ್ಷಣವುಳ್ಳ : ಕನಕಪತ್ರಲತಾಲಾಂಛಿತಗದಾದಂಡಮಂ ಕೊಂಡು . . . ನಡೆಗೊಂಡು (ಕಂಠೀರ. ೦೩-೬೦೫). [ಸಂ.]

**ಲಾಂಟಾನಾ** ' ಲಂಟಾನಾ ' ನೋ.

**ಲಾಂತ** (ನಾ). ' ಲ ' ಎಂಬ ವರ್ಣದಿಂದ ಕೊನೆಗೊಳ್ಳುವ ಪದ: "ಲಾಂತಕ್ಕೆ—ಅಂಡಲೆ. ಆಸನ್ನಪೀಡನೇ (ತೊಂದರೆ ಪಡಿಸು)" (ಕಪುರಾ). [ಸಂ.]

**ಲಾಂತವ** (ನಾ). ೧. [ಜೈನ] ಹದಿನಾರು ಕಲ್ಪಗಳಲ್ಲಿ ಒಂದು : ಲಾಂತವ ಕಾಪಿಷ್ಠದೊಳೋರಂತಿರೆ ಪದಿನಾಲ್ಕು ಮಂತ್ತಮುಳಿದಿರ್ದವರೊಳ್ ಭ್ರಾಂತೇನೆರಡಧಿಕಂ (ಪಾರ್ಶ್ವಪು. ೫-೬೩) ; ಲಾಂತವ ಕಾಪಿಷ್ಠಂಗಳೊಳಿಂತೊಳ ವಯ್ವತ್ತುಸಾಸಿರಂ ಜಿನಗೇಹಂ (ಪಾರ್ಶ್ವಪು. ೦೩-೦೫). ೨. ಅರುವತ್ತು ಮೂರು ಇಂದ್ರಕಗಳಲ್ಲಿ ಒಂದು : ೧. ಋತು . . . ೪೪. ಲಾಂತವಂ . . . ೬೩. ಸರ್ವಾರ್ಥಸಿದ್ಧಿ—ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್ (ಕತ್ಯಕ್ತ್ರ. ೨೦೩). [ಸಂ.]

**ಲಾಂದರ, ಲಾಂದ್ರ, ಲಾಟನ, ಲಾಟಾನು, ಲಾಟೀನು** (ನಾ). ಗಾಳಿ ತಾಗದಂತೆ ಗಾಜಿನ ಆವರಣವುಳ್ಳ, ಎಲ್ಲಿಗಾದರೂ ಒಯ್ಯಲು ಅನುಕೂಲವಾಗುವಂತೆ ಹಿಡಿಕೆಯುಳ್ಳ ದೀಪ : ಕಂದೀಲು : ನುಸುಳಿ ಬರುವ ಬೆಳುದಿಂಗಳ ಮಂಜಲ್ಲಿ ಮಂಕಾದ ಬೆಳಕಿನ ಲಾಂದರದಲ್ಲಿ (ಅಂಗೀಶ. ೦೯-೬) ; ಒಂದು ಲಾಂದರವನ್ನು ನನ್ನ ಕೈಗೆ ಕೊಟ್ಟು . . . ಹೋಟೆಲಿನ ಮಾಲೀಕ ಜಾರಿದನು (ಪಂಬಿಲು. ೪೪). **ಲಾಂದ್ರ** : ಲಾಂದ್ರ ಹತ್ತಿಕೊಂಡಿತು (ಮುಖಪಾ. ೮) ; ಲಾಂದ್ರದಲ್ಲಿ ದೀಪವು ನಿರ್ಮಲವಾಗಿ ಕಂಡಂತೆ ಬೋಕೆಯಲ್ಲಿ ನಿರ್ಮಲವಾಗಿ ಕಾಣುವುದೇ ? (ಕೃಷಿಕ್ರ. ೨೪೦). **ಲಾಟನ** : ಕಾಮಾಕ್ಷಿ ಒಳಗಿನಿಂದ ಲಾಟನವೊಂದನ್ನು ಹಚ್ಚಿ ತಂದಳು (ಮುಖಲದಾ. ೩೪) ; ಕೈಯೊಳಗ ಲಾಟನ ಒಯ್ಯುತ್ತಿರಿ (ಅಟೋಳ. ೦೩೩). **ಲಾಟಾನು** : ಕೊಪಡಿಯಲ್ಲಿದ್ದ ಲಾಟಾನಿನಲ್ಲಿ ಎಣ್ಣೆಯಿರಲಿಲ್ಲ (ಬೀಗಾಳಿ. ೪೨); ಲಾಟಾನಿನ ಮಂದಪ್ರಕಾಶದಲ್ಲಿ . . . ಮುಖಗಳು ಸ್ಪಷ್ಟವಾಗಿ ಕಾಣುತ್ತಿದ್ದುವು (ಪುರಿಳ. ೩). **ಲಾಟೀನು** : ಲಾಟೀನು ಬೆಳಕಿನಲ್ಲಿ ಓದೋಣಾದರೆ ಓದು (ಅಂದಪ. ೦೫) ; ಕೈಯಲ್ಲಿದ್ದ ಲಾಟೀನನ್ನು ಬಿಸಾಡಿ ಕಾಲಿಗೆ ಬುದ್ಧಿ ಹೇಳಿದೆ (ಕಪ್ಪಸ. ೦೯೭). [←ಪೋರ್ಚ್. Lanterna / ಇಂ. Lantern. / ತಮಿ. ಲಾನ್ತರ್; ತುಳು. ಲಾಂಟನ್, ಲಾಂದರ್]

**ಲಾಂದ್ರ** ' ಲಾಂದರ ' ನೋ.

**ಲಾಂಪಟ್ಯ** (ನಾ). ಅತ್ಯಾಸಕ್ತಿ ; ಗೀಳು ; ಲಂಪಟತನ : ಸಂಪಗೆಯ ಪೆಂಪಮರ್ದ ಜೊಂಪದಲಂಪಿನೊಪ್ಪಿನ ಲಾಂಪಟ್ಯದಿಂ ತಾಂ ಒರಿದು ತಣಿಯುಂಡು ರ್ಘೋಂಕಿಸಿ ಜಿಟ್ಟಿಲರ್ವಕ್ಕಿಮಱಿಗಳನೆತ್ತಿ ತೆಗೆದು (ಉದ್ಭಟ. ೦-೬೪೮). [ಸಂ.]

**ಲಾಂಬಿ** (ನಾ). ೧. ಉದ್ದ : ಉದ್ದಳತೆ ; ನೀಳ : ಈ ಒಂದೊಂದು ಕೊಂಡಿಯೂ ೨ ಅಡಿ ಲಾಂಬಿ ಇರುವುದು (ಕೂಬಿಶಿ. ೯). ೨. (ಪ್ರಮಾಣ ಅಥವಾ ಸಮರ್ಥನೆಗಾಗಿ ಇಟ್ಟುಕೊಳ್ಳುವ) ಆಧಾರರೇಖೆ : ಭೂಮಿಯನ್ನು ಅಳೆಯ ಮೊದಲಿಟ್ಟವನು ಆ ಭೂಮಿಯಲ್ಲಿ ಅಳತೆಯ ಸೌಕರ್ಯಕ್ಕಾಗಿ ಒಂದು ಸರಳರೇಖೆಯನ್ನಾಗಿ ಯಾವುದನ್ನು ಕಲ್ಪಿಸಿಕೊಳ್ಳುತ್ತಾನೋ ಅಂತಹ ಸರಳರೇಖೆಯನ್ನು ಆಧಾರರೇಖೆ ಅಥವಾ ಲಾಂಬಿಯೆಂದು ಹೇಳುವುದು (ಕೂಬಿಶಿ. ೦೨). ೩. ಉದ್ದವಾಗಿರುವ ಮರದ ತುಂಡು ; ದಿಮ್ಮಿ. [←ಮರಾ. ಲಂಬೀ, ಲಾಂಬೀ ; ಹಿಂ. ಲಂಬಾಈ]

**ಲಾಕ, ಲಾಕು** (ನಾ). ದೋಣ್ಣೆ ; ಬಡಿಗೆ : "ಲಾಕಮೆಂದು ಲಾಕುಳಂ" (ಕಶಬಾ. ೭೦-೬೦೯). **ಲಾಕು** : "ಲಾಕೆಂದೆನೆ ಲಾಕುಳಕ್ಕೆ ಪೆಸರು" (ಕಶಕಿ. ೨೯೭). [<ಲಾಕುಲ]

**ಲಾಕಪ್ಪು** (ನಾ). ಸೆರೆಮನೆ ; ಜೈಲು : ಇಬ್ಬರನ್ನೂ ಕೋಳ ಹಾಕಿ ತೀರ್ಥಹಳ್ಳಿ ಲಾಕಪ್ಪಿಗೆ ಕರೆದುಕೊಂಡು ಹೋದರು (ಮಲೆಮ. ೬೦೩). [← ಇಂ. Lock-up]

**ಲಾಕು** 'ಲಾಕ' ನೋ.

**ಲಾಕುಲ, ಲಾಕುಳ, ಲಾಗುಳ** (ನಾ). ೧. ಲಕುಲೀಶನೆಂಬುವನಿಂದ ಸ್ಥಾಪಿತವಾದ ಶೈವಮತದ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದ ವ್ಯಕ್ತಿ : ಶೈವಾಗಮಗಳು ಒಂದೊಂದು ಬಾರಿ ಶೈವಮತವನ್ನು . . . ಸೋಮಸಿದ್ಧಾಂತ ಮತ್ತು ಲಾಕುಲ ಎಂದೂ . . . ವಿಂಗಡಿಸುತ್ತವೆ (ಕಶ.ಶಿ. ೦೨೩). **ಲಾಕುಳ** : ೧. ಗಾನಿಗರ ಲಾಕುಳರ ಚಿನಿವಾಲರ (ಸಿದ್ಧರಾ. ೦೩-೩೭). ೨. ದೊಣ್ಣೆ ; ಬಡಿಗೆ : ವಲ್ಲಭ ಧ್ವಜಮೆಂಬ ಲಾಕುಳದ ಕೋಲ ತುದಿಯಲ್ಲಿ (ಶಬ್ದ. ೦೦-೩೨). ೩. ಸಂನ್ಯಾಸಿಗಳು ಉಪಯೋಗಿಸುವ ದಂಡ ; ಯೋಗದಂಡ : ಅಚಳಿತವೇ ಖರ್ಪರ ಅಪ್ರಮಾಣವೇ ಲಾಕುಳ (ಅವಕಿ. ೬೩-೩೭೯); ಯೋಗಪಟ್ಟಂ ಮೃಗದ ಸದಜಿನಂ ವಲ್ಕಲಂ ಲಾಕುಳಂ ಮಂಜುಳಮಂದಸ್ಮೇರವಕ್ತ್ರಂ ಮಿಸುಗೆ ಚರಿಯಿಪರ್ ತಪ್ಪಲೊಳ್ ತಾಪಸೇಂದ್ರರ್ (ರಾಚಕೀ. ೦-೦೩೨). **ಲಾಗುಳ** : ೨. "ಲಾಗುಳ (ಲಾಕುಳ) — ಲಕುಟ (ಲಗುಡ) = ಬಡಿಗೆ. ಯೋಗದಂಡ" (ಕದ್ಯಕೋ. ೩೯). ೩. ನಿನ್ನೀ ಜಡೆಯುಂ ತೊವಲುಂ ಪಾವಿನ ತೊಡವುಂ ಲಾಗುಳಮುಮದ್ದಮೇಂ ಬಂದಪುದೇ (ಕದ್ದಕಾ. ೨೯೭). [< ಸಂ. ಲಕುಟ]

**ಲಾಕುಲಾಗಮ, ಲಾಕುಳಾಗಮ** (ನಾ). ಲಕುಲೀಶನೆಂಬುವನಿಂದ ಸ್ಥಾಪಿತವಾದ ಆಗಮ : ಲಕುಲೀಶನಲ್ಲಿ . . . ಮತ್ತು ಅವನ ಬೋಧನೆಗಳನ್ನೊಳಗೊಂಡಿರಬಹುದಾದ ಲಾಕುಲಾಗಮದಲ್ಲಿ ಪರಮಭಕ್ತಿ ಎದ್ದು ಕಾಣುತ್ತದೆ (ಕೂಪ್ಕ. ೦). **ಲಾಕುಳಾಗಮ** : ಅನೇಕ ದಾನವಿನೋದರುಂ ಲಾಕುಳಾಗಮಾಭರಣರುಂ ಸಮಸ್ತಶಾಸ್ತ್ರಾಗಮವಿಚಾರಚಾರುಚತುರರುಂ (ಎಕ. VII. ಶಿಕಾ. ೦೨೩-೭೨; 1159). [ಲಾಕುಲ + ಆಗಮ]

**ಲಾಕುಳ** 'ಲಾಕುಲ' ನೋ.

**ಲಾಕುಳಾಗಮ** 'ಲಾಕುಲಾಗಮ' ನೋ.

**ಲಾಕ್ಷ** (ನಾ). ಒಂದು ಬಗೆಯ ಕೆಂಪುದ್ರವ್ಯ ; ಅರಗು ; ಅಲತಗೆ : "ಲಾಕ್ಷಮದರಗು" (ಮಂಗರಾ. ೯೩-೯೨) ; "ಲಾಕ್ಷಕೃಶಾನುಧಾತ್ರಿಧರಕಾಷ್ಠಗಳೆಂಬಿವು ಕೀಲಕಾಹ್ವಯಂ" (ವಾಕಾರ. ೦೭೨). [ಸಂ. ಲಾಕ್ಷಾ]

**ಲಾಕ್ಷಣಿಕ** (ಗು). ೧. ಲಕ್ಷಣಗಳನ್ನು ಬಲ್ಲ ; ಶಾಸ್ತ್ರಜ್ಞಾನವಿರುವ : ಲಾಕ್ಷಣಿಕ ಕವಿಮಾರ್ಗದೊಳೆ ಸಂದು (ಕಶ್ರಮೂ. ೭೬). ೨. ಸಾಂಕೇತಿಕ ಅರ್ಥವನ್ನು ಸೂಚಿಸುವ; ಆಲಂಕಾರಿಕವಾದ : ಭಕ್ತಿಯೆಂದರೆ ಕೇವಲ 'ಉಪಚಾರ' (ಅಥವಾ ಗೌಣ ಮತ್ತು ಲಾಕ್ಷಣಿಕಪದಪ್ರಯೋಗ) (ಧ್ವನ್ಯಾಲೋ. ೯೨) ; ಅಲ್ಲಲ್ಲಿ ಅನೇಕ ಲೇಖನಗಳನ್ನು . . . ಪತ್ರಿಕೆಗಳಿಗೆ ಬರೆಯುತ್ತಿದ್ದರೂ ಲಾಕ್ಷಣಿಕ (Feature) ಬರಹಗಳು ಮಾಸಶೀರ್ಷದುದು ಜಯಂತಿಯಲ್ಲಿಯೆ (ಶ್ರೀರಂಗ. ೦೬೦). (ನಾ). ೩. ಕಾವ್ಯಲಕ್ಷಣಗಳನ್ನು ಬಲ್ಲವನು ; ಕಾವ್ಯ ಶಾಸ್ತ್ರಜ್ಞ : ಧ್ವನಿ ಎಂಬುವನ್ನು ಲಾಕ್ಷಣಿಕರು ಮೊದಲಿಂದ ಅರಿತಿದ್ದರೂ ಅದನ್ನು ಪ್ರಧಾನವಾಗಿ ಪ್ರತಿಪಾದಿಸಿದವನು ಆನಂದವರ್ಧನ (ಧ್ವನ್ಯಾಲೋ. VI. ಮುನ್ನು೩) ; ಇದರಲ್ಲಿಯ ಅಭಿಪ್ರಾಯಗಳು ಹೆಚ್ಚಾಗಿ ದಂಡಿ ಮುಂತಾದ ಪ್ರಾಚೀನಲಾಕ್ಷಣಿಕರ ಅಭಿಪ್ರಾಯಗಳೆಂದು ತಿಳಿಯುತ್ತದೆ (ಕಪಾಕ. ೩೩). ೪. [ಕಾವ್ಯಮಿ] ಲಕ್ಷ್ಯಾರ್ಥವನ್ನು ಹೊಂದಿರುವ ಶಬ್ದ : ವೈಖರೀರೂಪ ಶಬ್ದಸಮೂಹವೇ ವಾಚಕಮೆಂದು ಲಾಕ್ಷಣಿಕಮೆಂದು ವ್ಯಂಜಕಮೆಂದು ತ್ರಿವಿಧಮಾಗಿಹುದು . . . ಅನ್ಯಾರ್ಥಮಂ ಲಕ್ಷಿಪ ಶಬ್ದಾದಿಕವೇ ಲಾಕ್ಷಣಿಕಶಬ್ದವೆನಿಸುವುದು (ವಿವೇಕ. ೦೯೩) ; ವಾಚ್ಯಾರ್ಥಕ್ಕೆ ಬಾಧೆ ತಟ್ಟಿದಾಗ ಮಾತ್ರ ಲಕ್ಷಣಾವೃತ್ತಿಗೆ ಪ್ರವೃತ್ತಿಯುಂಟಾಗಿ ಲಕ್ಷ್ಯಾರ್ಥವು ಗೋಚರವಾಗುತ್ತದೆ ; ಇದನ್ನು ತಿಳಿಸುವ ಶಬ್ದಕ್ಕೆ "ಲಾಕ್ಷಣಿಕ" ಅಥವಾ "ಲಕ್ಷಕ" ಎಂದು ಹೆಸರು (ಭಾರತೀಮಿ. ೨೬೩). [ಸಂ.]

**ಲಾಕ್ಷಣ್ಯ** (ನಾ). ಲಕ್ಷಣಗಳಿಂದ ಕೂಡಿದುದು; ಚಿಹ್ನೆ ಅಥವಾ ಗುರುತಿಗೆ ಸಂಬಂಧಿಸಿದುದು. [ಸಂ.]

**ಲಾಕ್ಷಾಗೃಹ** (ನಾ). ಅರಗಿನ ಮನೆ : ಲಾಕ್ಷಾಗೃಹೋಗ್ರಾಗ್ನಿ[ಯಾ]ನನದೊಳ್ ಮುಟ್ಟಿಗದರ್ (ಕಂಪಭಾ. ೩-೩೨). [ಸಂ.]

**ಲಾಕ್ಷಾದ್ರವ** (ನಾ). ಅರಗಿನ ರಸ : "ಅಲತಗೆ ಜತು ಲಾಕ್ಷಾದ್ರವಮಲಕ್ತಕಂ ಯಾವಮಿವು ಸಮಾನಾರ್ಥಂ" (ಚತುಕೋ. ೭೭-೦೩) ; ಲಾಕ್ಷಾದ್ರವಾದಿಕಾರಿತ ಮಾಯಾರುಣಜಲಪರಿಪೂರ್ಣವಾಪಿಯುಂ ಸಮೆಯಿಸಿದೊಡೆ (ಆದಿಪು. ೨-೦೯೭); ರಕ್ತಮಂ ಪೋಲ್ವ ಲಾಕ್ಷಾದ್ರವದೊಳು ಬೊಡ್ಡಣಬಾವಿಯಂ ತೀವಿದೊಡೆ (ಶಾಪುಂಪು. ೦೯). [ಸಂ.]

**ಲಾಕ್ಷಾಪ್ರದೀಪ** (ನಾ). ಒಂದು ನರಕದ ಹೆಸರು : ಲಾಕ್ಷಾಪ್ರದೀಪ . . . ಕ್ರಿಮಿಕುಲಗಳೆಂಬವೇ ಯೆಂಟು ರಾಜನರಕಂಗಳು (ವಿವೇಕ. ೦೭೯). [ಸಂ.]

**ಲಾಕ್ಷಾಪ್ರಸಾದನ** (ನಾ). ಒಂದು ಬಗೆಯ ಮರ ; ಕೆಂಪು ಅರಗಿನ ಮರ : "ಕ್ರಮುಕಃ, ಪಟ್ಟಿಕಾಖ್ಯಂ, ಪಟ್ಟಿ, ಲಾಕ್ಷಾಪ್ರಸಾದನಃ— ಳ ಕೆಂಪುಅರಗಿನ ಗಿಡ, ಕೆಂಪುಚಾಲಾರೀಗಿಡ, ಪವಕದ ಮರವೆಂದು ಕೆಲವರಿನ್ನುವರು" (ಸಿದ್ಧಾಂಶಿ. ೦೨೦). [ಸಂ.]

**ಲಾಕ್ಷಾಮುದ್ರೆ** (ನಾ). ಅರಗಿನ ಮುದ್ರೆ : ನವಲಾಕ್ಷಾಮುದ್ರೆಯನೊಡೆದ ಪಧರಿಪುದುಂ (ಸುಕುಮಾ. ೦೦-೦೦೩). [ಸಂ. ಲಾಕ್ಷಾಮುದ್ರಾ]

**ಲಾಕ್ಷಾರಸ** (ನಾ). = ಲಾಕ್ಷಾದ್ರವ : ಪೆಜಿರಜಿಯದಂತು ಕರುವಿಡಿಸಿ ಲಾಕ್ಷಾರಸಾದಿಗಳಿಂ ಸಪ್ತಧಾತುಗಳಂ ಪಡೆದು ವರ್ಣಕ್ರಮಂಗೈಯೆ (ಶಂರಾಪಾ. ೩-೨೫೪). [ಸಂ.]

**ಲಾಕ್ಷೆ** (ನಾ). = ಲಾಕ್ಷ : "ಜತು, ಯಾವಕಃ, ಲಾಕ್ಷಾ—ಈ ೩ ಅರಗು" (ಹಲಾಯು. ೯೦-೯೦೦) ; ಕೃಷ್ಣಾಗರು ಶ್ರೀಗಂಧ ಲಾಕ್ಷಾ . . . ಕರ್ಪೂರಮೆಂಬ ದಶಾಂಗಗಳಂ (ವಿವೇಕ. ೦೦೩) ; ಮತ್ತಮದೊಂದು ವೃಕ್ಷಮಿರದಿತ್ತುದು ಕಾನಡಿಯೂಡೆ ಲಾಕ್ಷೆಯಂ (ಕಾಕಂಶಂ. ೫೦-೬೩). [ಸಂ. ಲಾಕ್ಷಾ]

**ಲಾಖ** 'ಲಕ್ಕ$_1$' ನೋ.

**ಲಾಖಿ** (ನಾ). ಕಡುಗೆಂಪುಬಣ್ಣ ; ಅರಗಿನ ಬಣ್ಣ : (೯). [←ಹಿಂ. ಲಾಖೀ]

**ಲಾಗ$_1$** 'ಲಾಗು$_1$' ನೋ.

**ಲಾಗ$_2$** 'ಲಾಗು$_2$' ನೋ.

**ಲಾಗರು** (ನಾ). ನಿಶ್ಶಕ್ತವಾದುದು ; ದುರ್ಬಲವಾದುದು : ದಂಡಿನಲ್ಲಿ ಇರುವಂಥಾ ಸಾಮಾನು ಹೇರುವ ಎತ್ತು, ಗಾಡಿಯೆತ್ತು ಸಹ, ಬಹಳ ಲಾಗರಾಗಿ ಇದೆ. ಇದರಿಂದ ಕೆಲಸ ಸಾಗುವದಿಲ್ಲಾ (ಐತೀಂದ್ರ. ೦೯೩). [←ಪಾರ. ಹಿಂ. ಲಾಗರ್]

**ಲಾಗವಡು**, ಲಾಗವಾಡು, ಲಾಗುವಡು, ಲಾಗುವಾಡು, ಲಾಗೋಡು (ನಾ). ೧. (ವ್ಯವಸಾಯದ) ಖರ್ಚು ; ವೆಚ್ಚ : •ನಿರೂಪ ಸೌದರಾದ ಪ್ರಕಾರ ಲಾಗವಡು ಮುಟ್ಟಿಸಿ (ಕುಹಾಪ. II. ೭೩) ; ದನಕರುಗಳಿಗೆ ನೀರು, ಮೇವು ಕೊಡುವ ವಿರ್ಪಾಟನ್ನು ಮಾಡುವರಲ್ಲದೆ ಅದಕ್ಕಾಗಿ ತಗಲುವ ಲಾಗವಡನ್ನು ಆಯಾಯ ಕಾಲಕ್ಕನುಗುಣವಾಗಿ . . . ನಿರ್ಧರಿಸುವರು (ಗ್ರಾಪಾಳ. ೦೬೪). **ಲಾಗವಾಡು** : ೧."ಲಾಗವಾಡು = ವರ್ಷದ ಖರ್ಚು" (ಶಾಪಕೋ. ೪೨). **ಲಾಗುವಡು** : ೧. ಯಿನ್ನೂರುಐವತ್ತು ವರಹದ ವರಿಗು ಲಾಗುವಡು (ಎಕ. XI, ಹಿಂದುಜ. ೩೬-೦೦ ; 1633ಕೆ). **ಲಾಗುವಾಡು** : ೧. ಪ್ರಯಾಣದ ವೆಚ್ಚ, ಊಟ, ತಿಂಡಿಗಳ ವೆಚ್ಚ-ಬೇರೆ ಲಾಗುವಾಡು ಖರ್ಚುಗಳು, ಎಲ್ಲ ನನ್ನ ಲೆಕ್ಕಕ್ಕೆ ! (ಭೂಪುಕೇ. ೨೨). **ಲಾಗೋಡು** : ೧. (ನೂರು) ೧೦೦ ರೂಪಾಯಿ ಲಾಗೋಡಾಗುತ್ತೆ (ಕಂಪ. ೩೬೦) ; ಇಂತಹ ಗೊಬ್ಬರದಲ್ಲಿ ಲಾಗೋಡು ಕಡಮೆ, ಸ್ವಲ್ಪ ಹೆಚ್ಚು ಕಾಲ ಬೇಕಾಗುತ್ತದೆ (ಕಠ. ೯). ೨. ಗೊಬ್ಬರ : ಈ ಸಲದ ಮಳೆ ಬೀಳುವ ಮೊದಲೇ ಹೊಲಕ್ಕೆ ಲಾಗೋಡು ಹೊಡೆಯಬೇಕು (ಕೂಶ). [← ಮರಾ. ಲಾಗವಡ./ತೆಲು. ಲಾಗುಬಡಿ]

**ಲಾಗವಾಡು** 'ಲಾಗವಡು' ನೋ.

**ಲಾಗಾಯತು$_1$**, ಲಾಗಾಯತ್ತು, ಲಾಗಾಯಿತು$_1$, ಲಾಗಾಯ್ತು$_1$ (ನಾ). ಮೊದಲು : ಪ್ರಾರಂಭ : ಇಂಗ್ಲೆಂಡಿನಲ್ಲಿ ಲಾಗಾಯತಿನಿಂದ ಶ್ರೀಮಂತ ಸಭೆಯೊಂದು . . . ಪಾರ್ಲಿಮೆಂಟಿನ ಅಂಗವಾಗಿ ಬೆಳೆದುಕೊಂಡು ಬಂದಿರುವುದು (ರಾಜ್ಯಶಾ. ೩೯೯). **ಲಾಗಾಯತ್ತು** : ಲಾಗಾಯತ್ತಿನಿಂದ ಹಂಗೇನೇ ನಡೆದುಕೊಂಡು ಬಂದದೆ (ಶಾಹೀರ್. ೯೩೩). **ಲಾಗಾಯಿತು$_1$** : ಲಾಗಾಯಿತಿನಿಂದಲೂ ಸಾಗುವಳಿ ಮಾಡುತ್ತಿದ್ದ ಒಕ್ಕಲಿಗರಿಗೆ ಗುತ್ತಿಗೆಗೆ ಕೊಟ್ಟು ಮಾಡಿಸುತ್ತಾರೆ (ಕಂಪ. ೦೫೩). **ಲಾಗಾಯ್ತು$_1$** : ಲಾಗಾಯ್ತಿನಿಂದ ನಿಮ್ಮನೇ ಬೀದೀಲೆ ಇದ್ದೇನೆ, ಸಾರ್ (ಮುಕೋಶಂ. ೭೭) ; ಪುಲ್ಲಯ್ಯನಿಗೂ ನಮಗೂ ಲಾಗಾಯ್ತಿನಿಂದ ವ್ಯಾಜ್ಯ (ಮುಂದು. ೩೦). [< ಲಾಗಾಯತ್ತು$_2$]

**ಲಾಗಾಯತು$_2$**, ಲಾಗಾಯಿತು$_2$, ಲಾಗಾಯ್ತು$_2$ (ಅ). ೧. ಮೊದಲಿನಿಂದ; ಪ್ರಾರಂಭದಿಂದ: ಈ ಲಾಗಾಯತು ೧೮೩೩ನೇ ಇಸವಿಯವರಿಗೂ ಮಹಾರಾಜರವರೇ ಸ್ವಂತವಾಗಿ ರಾಜ್ಯಭಾರ ಮಾಡಿದರು (ಕಾಮುಪಂ. ೩೩೧) ; ಹೋದ ಜುಲಾಯಿತಿಂಗಳು ಲಾಗಾಯತು ಯುದ್ಧಕ್ಕೆ ತಯಾರು ಮಾಡುವುದಕ್ಕಾಗಿ (ರಾಕೀಂದ್ರ. ೦೩೭). **ಲಾಗಾಯಿತು$_2$** : ೧. ಮೊಕದ್ದಮೆಯು ಕಾರ್ತೀಕದ ಲಾಗಾಯಿತು ಹುಣ್ಣಿವೆ ವಾನಿಯಾಗುವ ಕಾರ್ತೀಕದ ವರೆಗೆ (ಗ್ರಾಪಾಳ. ೭೩). ೨. ಹೊತ್ತಿನಿಂದ ; ಸಮಯದಿಂದ : ೧೮೮೫ರ ಲಾಗಾಯತು ಬೊಂಬಾಯಿಯಲ್ಲಿ ಅನೇಕ ಕಾರ್ಖಾನೆಗಳು ಏರ್ಪಟ್ಟುದರಿಂದ (ಕಾಗ್ಯತಿ. ೯೦) ; ಮುಂಜಾನೆ ಸುದ್ದಿ ತಿಳಿದ ಲಾಗಾಯಿತು ಬಹಳ ಕಾತರಳಾಗಿ ಬಿಟ್ಟಿದ್ದಾಳೆ (ಶಾಹೀರ್. ೨೨೭). **ಲಾಗಾಯ್ತು$_2$** : ೨. ಇಲ್ಲಿಂದ ಹೋದ ಲಾಗಾಯ್ತು ಅವಳ (ನಿರ್ಮಲೆಯ) ಮೇಲೆ ಕಣ್ಣಿಟ್ಟಿದ್ದೆ (ಕೂರುದಾ. ೨೬೮) ; ವರುಷವರುಷಗಳ ಲಾಗಾಯ್ತು ನಾನು ಜೀವ ಹಿಡಿದು ಕೊಂಡಿರುವುದು ಅಪ್ಪರ ಸಲುವಾಗಿಯೇ ಮಗೂ (ಹಳ್ಳಿಪಾ. ೦೦೨).

[← ಅರ. ಹಿಂ. ಲಗಾಯತ್]

**ಲಾಗಾಯತ್ತು** 'ಲಾಗಾಯತು$_1$' ನೋ.

**ಲಾಗಾಯಿತು$_1$** 'ಲಾಗಾಯತು$_1$' ನೋ.

**ಲಾಗಾಯಿತು$_2$** 'ಲಾಗಾಯತು$_2$' ನೋ.

**ಲಾಗಾಯ್ತು$_1$** 'ಲಾಗಾಯತು$_1$' ನೋ.

**ಲಾಗಾಯ್ತು$_2$** 'ಲಾಗಾಯತು$_2$' ನೋ.

**ಲಾಗಿಸು$_1$**, ಲಾಘಿಸು$_1$ (ಕ್ರಿ). ೧. ಹಾರು ; ನೆಗೆ ; ಜಿಗಿ : ಭಯವಡಗಿ ರಾಯನಲ್ಲಿಗೆ ಮೆಲ್ಲಮೆಲ್ಲನುಪಾಯುಗತಿ ಪಲ್ಲವಿಸಲುಪ್ಪರಭಾಯದಲಿ ಲಾಗಿಸುವ ಪಾರ್ಥನ ಕಂಡುದಖಿಳಜನ (ಕುವ್ಯಾಳ. ೦೭-೨) ; ಲಾಗಿಸಿ ನಭಕುಪ್ಪರಿಸುವ ಬಂದಿದಿರಾಗಿ ನಿಲ್ಲುವ ಭೂತದಂತೆ (ಪೋಹಕ. ೦೦-೬೮) ; ಕುವಳಯ ಕುಟ್ಮಳಾವಳಿಯ ವರ್ಗಳೆಯುಂ ನೆಗೆದೇಱಿ ಲಾಗಿಸುತ್ತೆ (ಕಾಹಕ. ೨-೭೨). ೨. ನೆಗೆಯಿಸು ;ಹಾರಿಸು ; ಚಿಮ್ಮಿಸು : ಸೀಗುರಿಸುವುರಿವಿಷದ ಲೋಳೆಯ ಲಾಗಿಸುವ ನಾಲಗೆಯ . . . ಹಾವ್ ತುಡುಕಿದವು ಥಟ್ಟನೆಲಿ (ಕುವ್ಯಾಳ. ೨೩-೩೯) ; ಮನೆಮನೆ ತೋಟದ ಅಡಿಮೇಲಾಗಿಸಿ ತೆಂಗನು ಲಾಗಿಸಿ ಅಡಕೆಯ ಬಾಗಿಸಿ (ಕಂಪ. ೨೮-೦೦). ೩. ಎಳೆ ; ಜಗ್ಗು : ಕೀಚಕನು ಬೆನ್ನಟ್ಟಿ ತುರುಬನ್ನು ಹಿಡಿದು ಲಾಗಿಸಲು ಆ ರಾಜಪುತ್ರಿಯು ಭೂಮಿಯಲ್ಲಿ ಬಿದ್ದಳು (ಕೃಪಾಪ. ೨೯). **ಲಾಘಿಸು$_1$** : ೧. ಕಟಿಕಟಕ ಕವಿಕವಿದು ನಾಲ್ದೆಸೆಯ ಗಿರಿತರುನಿವಹಗಳ ಲಾಘಿಸುತ ಕಂಠೀರವರವದೊಳ್ಳೆತಂದರು (ಅಹಂಠ. ೩-೬-೩). [ಲಾಗು$_1$ + -ಇಸು$_3$]

**ಲಾಗಿಸು$_2$** (ಕ್ರಿ). ೧. ಯೋಜಿಸು ; ಎಸೆಕೆ ಹಾಕು : ವೇಗದಲಿ ಸನ್ನದ್ಧ ಚಾಪದಲಾಗ ಪಾರ್ಥನು ಬರುತ ಮನದಲಿ ಲಾಗಿಸುತ ತಾನೊಂದ ನೆನೆದನು (ಕಂಠಕ. ೦೪-೨೩). ೨. ಒದಗು ; ಉಂಟಾಗು : ಸಮಬುದ್ಧಿ ಮೆಲ್ಲನೆ ಲಾಗಿಸುವುದಿರುತಿರುತಲೀ ಪರಿ ಚಿತ್ತಶುದ್ಧಿಯಲಿ (ಶ್ರೀಬುಂ. ೦೩-೯೩). ೩. ಒದಗಿಸು : ಲಾಗಿಸುತಿರ್ಪುವು ಸುಜ್ಞಾನಸುಖಗಳು ಯೋಗದ ಸಿರಿಯನು (ಶಠಕ. ೯-೩). ೪. ಹೊಡೆ ; ಬಡಿ ; ತಾಟಿಸು : ದೂರಕೆ ಸಿಡಿದ ಗದೆಯನು ತುಡುಕಿ ನೃಪತಿಯು ತೊಡೆಗೆ ಲಾಗಿಸಿದ (ಕುವ್ಯಾಗ. ೭-೪೪) ; ಲಗಿಡನಂತೆಬಗೆ ಲಾಗಿಸುವ ಹೋರಾಟದ ವಿಗಡಮಲ್ಲರು ಗಳೊಪ್ಪಿದರು (ಕಂಪಪ. ೨೦-೯೩). 'ಲಗಾಯಿಸು' ಪರಾ.

[ಲಾಗು$_3$ + -ಇಸು$_3$]

**ಲಾಗು$_1$**, ಲಾಗ$_1$ (ನಾ). ೧. ನೆಗೆಯುವಿಕೆ ; ಲಂಘನ : "ವೆಗ್ಗಳ ಲಂಘನಂಗಳೊಳು ಲಾಗು" (ಕಬ್ಬಿರುಂ. ೯೩); ತೋಹಿನ ಶಬರನಂತೆ ಲಾಗಿನ ವ್ಯಾಘ್ರದಂತೆ ಆಡುವ ವಿಧಾನದಂತೆ ಇಂತೀ ವೇಷ ಸಹಜ (ಪೋಳಿಕಪ. ೩೯-೦೧೦); ಗಜಗಮನ ಅಹಿಯ ಸರಸಂಧಾನ ಮಯೂರನ ಶಯನ ಮಾರ್ಜಾಲನ ಧ್ಯಾನ ಕಂಠೀರವನ ಲಾಗು . . . ಇಂತೀ ನಾನಾ ಗುಣಂಗಳ ಲಕ್ಷ್ಯಾಲಕ್ಷತವಂ ತಿಳಿದು (ಸವಕ. ೦೫೯-೬೬೩). ೨. ಪಲ್ಟಿ : ಕುರುಡಡೊಂಬನ ಲಾಗುಗಳಂತೆ ಕಡೆಯೊಳು ನರಕಗತಿಗೆ ಕೆಡಹಿದುದು (ವರ್ಠಕ. ೩-೯೯). ೩. ಮಲ್ಲಯುದ್ಧದ ಒಂದು ಪಟ್ಟು-ವರಸೆ : ಒಂದೆರಡು ಲಾಗಿನಲಿ ನಿಮ್ಮನು ಹಿಂದುಮುಂದನು ಮಾಡದುಳಿವನೆ ಎಂದು ದಾನವ ಗದೆಯ ತಿರುಹುತ ಮುಂದೆ ಹರಿತಂದ (ಕೌಠಿರಾ. ೨೫-೯೦); ಭುಜಗಳನು ಹೊಯ್ದು ಘಲ್ಲಿಸುತ್ತಿದಿರಾಗಿ . . . ಅವದಿರು ಲವಣ ಲಾಗು ಮುರಿ ವೊದಲ ಬಗೆಯಿಂದ ಹಣಗುತ್ತಿರ್ದರು (ಲೀಕೃಕ. ೨-೦೨-೯೦). ೪. [ನಾಟ್ಯ] ನೃತ್ಯದ ಒಂದು ಭಂಗಿ : ನಲವಿನ ರೇಖೆ ರೇಖೆಗಳಮ್ಮು ಶರೀರದ ಲಾಗು ಲಾಗಿನೊಳ್ ನೆಲಸಿದ ರೂಪು . . . ಭಾವವಳಮ್ಮರೆ ನರ್ತಕಿ ನಾಡೆ ನರ್ತಿಪಳ್ (ಧರ್ಮಕ. ೨-೨೯); ಪದತಳದೊಳ್ ತಾಳಮಂ ಬೀಸರಂಬೋಗಲೀಯದೆ ಸೆಱೆವಿಡಿದು ರೂಪು ನೇರು ಲಾಗು ಲವಣಿಯುಡವು . . . ಕೂಟಮಾನಂಗಳಂ ಸಂಗಳಿಸಿ ರಸಭಾವಂದಪ್ಪದೆ . . . ಚತುರ್ವಿಧ ನರ್ತನಮಂ ಚತುರಜನ ಮಚ್ಚುವಂತೆ ತೋರ್ಪ ನರ್ತಕಿಯರಿಂ (ರಾಜಶೇ. ೩-೦೯ ಪ). ೫. [ಸಂಗೀತ] ಹಾಡುವಿಕೆಯ ಒಂದು ಸೊಗಸು : ವಳಿ ಲಾಗು ನೋಗು ಪಸರಂ ಪರಿ ಪಾಂಗು ಬೆಡಂಗು ಭಂಗಿ ಸಂಗಳಿಸೆ ಸುಕಂಠೆ ಪಾಡಿ ಪುದಿದಳ್ ಮುದಮಂ ನರನಾಥಚಿತ್ತದೊಳ್ (ಕುಮುಹ. ೦-೬೭). 'ಲವಣ್ಯ' ಪರಾ. **ಲಾಗ$_1$** : ೧. ಧರೆಗೆ ಕಾಲಿಡದೊಂದು ಲಾಗ ಲಾಗಿಸಿತಲ್ಲಿಗೆರಡಾಱುಯೋಜನವಾಯ್ತು (ಕಠಕ. ೨೯-೯೩). ೨. ಹುಲಿ ಕರಡಿಗಳಿಂದ ಸಾವೂ ಮಾಡಿಸಬೇಕು ಹೊಡಿ ಮೂರು ಲಾಗವೆನಬೇಕು (೨೦ಶಾಕ. ೦೦೯-೪೪) ; ಚಿತ್ರವಿಚಿತ್ರವಾದ ಲಾಗಗಳು

ಹಾಕುವುದನ್ನು ನಾನು ಅನೇಕ ಸಾರಿ ಕಂಡಿದ್ದೇನೆ (ಗಂಕ್ತ. ೩೨). ೪. ಅಂಬಾವರನ ಮುಂದೆ ಇಂಬಾದ ಭಾವಪ್ರೇರಣೆ ತಿರುವು ಲಾಗಗಳು ಸಂಭ್ರಮಂಬಡೆ ಸ್ತ್ರೀಯು ನರ್ತನದ ಕೇಳಿಕೆಯು ನಿತ್ಯ ಕೇಳಿಸುವಾತನು (ಗುರುಕಾ. ೭-೬೦). ' ಲಗ್ಗೆ ' ಪರಾ.

**ಲಾಗಹಾಕು** = ೧. ತಲೆಕೆಳಗು ಮಾಡಿ ನೆಗೆ ; ಪಲ್ಟಿಹೊಡೆ : ಬೇಗ ತಿರುನೆ ತಿರುಗಿ, ಸರ್ರನೆ ಲಾಗ ಹಾಕಿದ ಡೊಂಬನು (ಕಂಫ. ೩೮-೭); ಪಾರಿವಾಳ ಹಾರುವಾಗ ಲಾಗ ಹಾಕುವುದು (ಕಂಕೋ. I. ೭೦೦) ; ಲಾಗ ಹಾಕೋಣ ಎಂದು ಆಸೆಯಾಯಿತು (ಶಾರಿಮ. ೦೨೦). ೨. (ಅಲಂ) ಪ್ರಯತ್ನಮಾಡು : ಕಷ್ಟಪಡು : ವರ್ಷವೆಲ್ಲಾ ಲಾಗಹಾಕಿ ತಲೆ ಕೆಡಿಸಿಕೊಂಡು ಹಗಲೂ ರಾತ್ರಿ ಓದಿ ಓದಿ (ಶಾಗಸ. ೦೦೨). ೩. ಅನುತ್ತೀರ್ಣನಾಗು : ಸೋಲು ; ನಪಾಸಾಗು : ಪರೀಕ್ಷೆಯಲ್ಲಿ ಲಾಗಹಾಕಿದ್ದ ವಿದ್ಯಾರ್ಥಿ (ಶಾಗೀ. ೦೯೦) ; ಬಿ.ಎ. ಯಲ್ಲಿ ಎರಡನೆಯ ವರ್ಷ ಲಾಗ ಹಾಕಿ ಮೂರನೆಯ ದಂಡಯಾತ್ರೆಗೆ ಸಿದ್ಧನಾಗುತ್ತಿದ್ದ (ಅಂಕಾ. ೯೬); ಅವರಲ್ಲಿ ಬಹುಮಂದಿ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಲಾಗ ಹಾಕಿ ಬಂದವರೇ (ರವೀಕ್ರಿ. ೯೬). **ಲಾಗಹೊಡೆ** = ೧. ನೆಗೆ ; ಜಿಗಿ ; ಹಾರು : ಡೊಂಕ ಮಾರಿಯ ಹನುಮ . . . ಲಂಕಾಕ ಲಾಗ ಹೊಡೆದಾನೊ (ಕನ್ನಜ. ೦೦) . ೨. ಬಹಳ ಪ್ರಯತ್ನ ಮಾಡು: ಕಾಮಣ್ಣ ಎಂಥ ಲಾಗಹೊಡೆದರೂ ಸಹ ಜನರು ಗೌಡನ ಕಡೆ ಹೋಗುವುದನ್ನು ನಿಲ್ಲಿಸಿರಲಿಲ್ಲ (ಮುದ್ದುಕ. ೩೦). ೩. ಸಾಯು : ಮರಣ ಹೊಂದು : ಅವಳಗಾದರೂ ವಯಸ್ಸು ಬಹಳಾಗಿದೆ. ಯಾವಾಗ ಲಾಗಹೊಡೆಯುವಳೋ ಎಂಬುದು ತಿಳಿಯುವುದಿಲ್ಲ (ಸಿರ್ಗೋಶಿ. ೦೪).

[ದೇ.॥ ತೆಲು. ಲಾಗು./ಸಂ. ಲಂಘನ]

**ಲಾಗು₂**. ಲಾಗ್ಗ₂. ಲಾಘ (ನಾ). ೧. ರಭಸ; ತೀವ್ರತೆ : ಕುಸುಮಂಗಳಂ ಲಾಗಿನಿಂ ತಿರಿವ ಪಸುಗೂಸುಗಳ್ . . . ದಾರಿಯಂ ತೋಱಲ್ಕೆ (ಹಾಸೋಫ. ೫-೩೦) ; ತನಿಗಿಡಿಯು ದಳ್ಳುರಿಯ ನಾಲಿಗೆ . . . ಕಡುಲಾಗಿನಲಿ ಲಂಬಿಸಿ ಚುಂಬಿಸಿದುದುರಿ ಲಲಿತನಂದನವ (ಕುಪ್ಪಾಕ. ೨೦-೨೬) ; ಸರಳ ಹಿಡಿವುದ ಬಿಡುವ ಲಾಗುವ ಸುರರಿಗುಪಮಿಸಲರಿದು (ಕಾಕಿರಾ. ೩೫-೨೬). ೨. ಚಳಕ; ಕೌಶಲ; ಚಾತುರ್ಯ : ಲಾಗಿಂದ ಕಲ್ಲುಕೋಳಿಯು ತಾ ಕೂಗೀತು (ಕಾಲಸಂ. ೬೦) ; ನಮ್ಮ ಲಾಗಿನ ಧುರವು ತಾನಿದು ದಿಟ್ಟನೆಯೋ ಪಾರ್ಥ (ಕುಪ್ಪಾದ್ರೋ. ೭-೯೬) ; ಮಗನೆ ಕೇಳ್ಕೆ ಲವನ ಲವಣೆಯು ಲಾಗು ಬೇಱವರ (ತೊರವಾ. ೬-೨೫-೦೬). ೩. ಆಧಿಕ್ಯ : ಅತಿಶಯತೆ : ಹೆಚ್ಚಳ : ಬೇಗದಲಿ ಪರಸಿದ್ಧಿಯು ಲಾಗಿನಲಿ ಶಂಭುವನು ಮೆಚ್ಚಿಸುತ (ಸಂಭಕ. ೯-೨) ; ಇವನ . . . ಕಪಟಪಾರಿಗಭೇದ್ಯ ಬೆಮ್ಮನ ವರದ ಲಾಗಿನಲಿ (ಕಾಕಿರಾ. ೨೬-೦೪). ೪. ಹಗುರ; ಸರಳ; ಸುಲಭ : ಈ ಪ್ರಶ್ನೆಯು ನಿನಗೆ ಲಾಗಲ್ಲಾಯೆಂದು (ಐಲೀಕ್ಷ. ೬೬) ; ಬಲೆಯು ಹೇಳೆನಗೆ ಲಾಗಾಗೆ ಹೊಂಗೊಡುವೆನೇಳೆಂಬುದಿನಕೆಂದನು (ಹನಕಾ. ೦೦-೭) ; ಲಾಗಿನಿಂದಲಿ ಗುರುಗುಹೇಶ್ವರನಾಗಳೆನ್ನನು ಸುಡಿತೋಡೆ ನುಡಿದಾಗಬಾರದಿಯೆ ಪೇಳ್ವೆನು (ಶ್ರಕುಂ. ೦-೯). ೫. ಗುರಿ ; ಲಕ್ಷ್ಯ; ಧ್ಯೇಯ: ಉದ್ದೇಶ : ಆಡುವ ಆಟ ತಪ್ಪಿ . . . ಮತ್ತೆ ಆ ಲಾಗು ಬಂದಿತ್ತೆಂದು ದಿಮ್ಮ ಮನುಜರುಗಳಿಗೆ ಹೇಳುವುದುಂಟೇ (ಮೋಕಪಾ. ೯೬-೩೩೦) ; ಭವಭವಂಗಳಲಿ ತೋಳಲಿ ಬಳಲುವ ಜೀವಭಾವದೊಳುಳಿವುದಾವುದು ಲಾಗು ಮೂಢರ ಬಳಕೆಗಾವಂಜುವೆವು (ಕುಪ್ಪಾಶ. ೩-೪೦). **ಲಾಗ್ಗ₂** : ೬. ತ್ವರೆ; ಶೀಘ್ರತೆ ; ಮಾಯಾವಾದನು ಲಾಗದಲಿ ಕಳವಾಟಿಗೆ . . . ಸನ್ನೆ ಮಾಡುತ ಕೈಗಳಿಂದಾ ಹುಡುಗಿಗೆ (ಕಂಕ. ೩೦-೨೫). ೭. ಮೋಸ ; ಕಪಟ ; ವಂಚನೆ (?) : ಎನ್ನ ಒಡಲ ಹೊರೆದನೆಂದು ಹೋದ ಠಾವಿನಲ್ಲಿ ಓಗರವನಿಕ್ಕುವ ಲಾಗಿನ ಶೀಲವಂತರ ಮನದ ಭೇದವ ನೀವೆ ಬಲ್ಲಿರಿ (ಕವಾಕಕ. ೦೩೬). **ಲಾಘ** : ೨. ಡೊಂಬಗಣೆಯನೇರುತಾನೆ ಆವನು ಕಂಬ ಮುರಿದು ಲಾಘ ತಪ್ಪಿ (ಕಾಲಸಂ. ೯).

**ಲಾಗುವೇಗ**, **ಲಾಗುಬೇಗೆ** = ಅತಿಶಯವಾದ ಕೈಚಳಕ,— ಕೌಶಲ : ಕರ್ಣನ ಲಾಗುವೇಗವನೇನನೆಂಬೆನು ಚಾಪತಂತ್ರದಲಿ (ಕುಪ್ಪಾಕ. ೨೩-೩೯); ಅನಲಾಂಬಕ ಪರಿಸವಲಿ ಘನ ಲಾಗುವೇಗದ ಜೋಡಿಸಿ ನೆರೆದಿವಾಹನವೇಱುವನಾಹವಕೆ (ಕೋಹಕ. ೩೭-೯೩); ಪೊಯ್ಮೆ ಕಾಳವಟ್ಟದಿ ಪೋರಗದಿಂದೆ ಪೊಯ್ವ ನೆರತುಂ ಸರಿಪೋದವು ಲಾಗುಬೇಗದೊಳ್ (ಶಿವಂಫ. ೦೦-೬೦). [ < ಸಂ. ಲಾಘವ ]

**ಲಾಗು₃** (ನಾ). ೧. ಹೊಂದಿಕೆ; ಸೇರುವಿಕೆ; ಲಗತ್ತು : ಈ ಭಾಗದಲ್ಲಿರುವ ನೇಮಗಳು ಕೆಲ ಜನರಿಗೆ ಲಾಗು ಇರುತ್ತವೆ ಮತ್ತು ಕೆಲವರಿಗೆ ಲಾಗು ಇರುವುದಿಲ್ಲ (ಕ ೨೦೦ವ್ಯಾ. ೩೯ ಕೃಷ್ಣಾಪತಿ); ಇದಕ್ಕೆ ಯಾವ ಕಾಯದೆ ಲಾಗೂ ಆಗಾಣಲ್ಲಾ (ರಕ್ತಧ್ವ. ೦೨೦). ೨. (ಅಲಂ) ಹೊಡೆತ; ತಾಡನ: ಹಗಲಿರುಳೆನ್ನದೆ ಹೊಡೆಯುವ ಜಡಿಮಳೆ ಬಡಿಕೋಲ್ಮಿಂಚಿನ ಲಾಗುಗಳು (ಪಕ್ಷಿ. ೨೦-೩). [ < ಲಗಾವು./ಮರಾ. ಲಾಗೂ ]

**ಲಾಗುಕಾಜಿ** (ನಾ). ಚತುರ : ಭೇದದ ಗುರು ಚೋದ್ಯದ ಶಿಷ್ಯ ಇಂತೀ ಲಾಗುಕಾಜಿತನೊಲ್ಲ ಆತುರವೈರಿ ಮಾರೇಶ್ವರಾ (ಶಗಪಾ. ೪. ೧೨೨-೦೨೦೯); ತೆಗೆದೆಚ್ಚು ಗರುಡಿಯ ಲಾಗುಕಾಜಿನ ರಥವ ಮುಱಿದನು (ಕುಪ್ಪಾದ್ರೋ. ಶಂ. ೨೬೦). [ ಲಾಗು₂ + – ಕಾಜಿ ]

**ಲಾಗುವಡು** ' ಲಾಗವಡು ' ನೋ.

**ಲಾಗುವಾಡು** ' ಲಾಗವಡು ' ನೋ.

**ಲಾಗುಳ** ' ಲಾಕುಲ ' ನೋ.

**ಲಾಗೊತ್ತು** (ಕ್ರಿ). ಕಾರ್ಯೋನ್ಮುಖಗೊಳಿಸು : ತೊಡಗಿಸು ; ನಿಯೋಜಿಸು : ಅಡಿಯನಾರ್ಯ್ಯೆದೆಯ್ದೆ ಹಕ್ಕಿಯಿಕ್ಕೆಯನಱುವ ಗಿಡುಗನಂ ಲಾಗೊತ್ತಿ ಸಲಿಗೆಯಂಬಂ ಸಿಲುಕೆ . . . ತೋಱಿದರು ಬೇಂಟೆಯಂ (ಅಶಿಸಂ. ೨೩-೦೬). [ ಲಾಗು₂ + ಒತ್ತು₁ ]

**ಲಾಗೋಡು** 'ಲಾಗವಡು' ನೋ.

**ಲಾಘ** 'ಲಾಗು₂' ನೋ.

**ಲಾಘವ** (ನಾ). ೧. ಚಿಕ್ಕದಾಗಿರುವುದು : ಪುಟ್ಟದಾಗಿರುವುದು. ೨. ಹಗುರವಾಗಿರುವಿಕೆ ; ಲಘುತ್ವ : "ಲಾಘವವುದು ಲಘುತೆ" (ಪಕ್ವಕೋ. ೦೦೩-೨೯); ಹಿಂದಿನ ಕಾವ್ಯಗೌರವಗಳಿಗೆ ಲೋಪಗಳುಂಟಾಗಿ, ಎಲ್ಲದರಲ್ಲಿಯೂ ಲಾಘವ ಹೆಡೆಯೆತ್ತಿದೆ (ಅರವಿಮೋ. VII, ಮುನ್ನುಡಿ). ೩. ಕೀಳುತನ; ಕ್ಷುದ್ರತೆ ; ಸಣ್ಣತನ : ಲಾಘವದಿಂದಿರುವುದು ರಣಧೀರನಿಗೆ ಸಪನೆಯಾಗದೆ. ಅವನು ಅವರಿಗೆ ಬುದ್ಧಿ ಕಲಿಸಿದ (ಸಂಕಳ. ೦೦೩). ೪. ಕೀಳಾದುದು; ಕ್ಷುಲ್ಲಕವಾದುದು; ಹೀನವಾದುದು : ಕೈಕೆ ಬೇಡ ಧರೆಯಂ ತೃಣದಿಂ ಲಾಘವಮೆನೆ ಬಗೆದೀಗುಂ ರಾಘವನೌದಾರ್ಯತುಂಗ ನೀಯದುದುದುಂಟೇ (ಕಂದಪಾ. ೬-೦೦೯); ಕಾಮಧೇನುವನ್ನೆ ಮನದಲ್ಲಿ ಕಟ್ಟಿಕೊಂಡು ಉಚ್ಚೈಶ್ರವಾಶ್ವವನ್ನೆ ಲಾಘವದೊಳಿರಿಸಿ ದೇವಗಜವನ್ನೆ ಕೀರ್ತಿಯೊಳು ಬೆರಸಿಕೊಂಡು (ಸಗಂದ. ೦-೨). ೫. ಸೌಲಭ್ಯ; ಅನುಕೂಲ. ೬. ವೇಗ; ತ್ವರಿತತೆ; ಶೀಘ್ರತೆ. ೭. ಕೌಶಲ; ಚಳಕ; ಪಟುತ್ವ : ಚದುಪಾಣಿ ಲಾಘವ ಪಂಥಪಾಡುಗಳನಱಿದು ಬಿನ್ನಾಣದಿಂ ಗಾಯು ಗಾಣಿಸಿದರು (ಕೈಬಿಕಾ. ೨೨-೬); ಲಾಘವದಲ್ಲಿ ಪಾಂಡಿತ್ಯದಲ್ಲಿ ಪಟುತರದಲ್ಲಿ ಪರಾಕ್ರಮದಲ್ಲಿ ಭೀಮನ ಸರಿ ದಾರು ಇಲ್ಲ (ಕಾತ್ರಿ. ೦೩-೩); ಕತ್ತಿ ಗುರಾಣಿಗಳನ್ನು ತೆಗೆದುಕೊಂಡು ಲಾಘವ, ಸೌಷ್ಠವ, ಸೊಗಸು, ಸ್ಥೈರ್ಯ, ಹಿಡಿತ ಮುಂತಾದವುಗಳನ್ನು ಪ್ರದರ್ಶಿಸಿದರು (ಪಕ್ಷಿ. ೨೩). [ಸಂ.]

**ಲಾಘವದೋಷ** (ನಾ). [ಛಂದ] ಲಘುವಲ್ಲದ ಕಡೆಗಳಲ್ಲಿ ಲಘುವನ್ನು ಬಳಸುವ ಒಂದು ದೋಷ : ಆಗಳುಂ ಗುರುಗಳಲ್ಲದ ತಾಣದೊಳಂ ಗುರುರೂಮ್ಮೋಗದಿಂ ಬಗೆಗೆ ಗೌರವದೋಷಮಿದೆಂಬುದುಂ ಬೇಗವಾ

ಲಘುಗಳಿಲ್ಲದ ಠಾಣದೊಳಂ ಲಘೂಪಾಗಮಕ್ರಮದ ನಂಬುಗೆ ಲಾಘವ ದೋಷಮುಮಂ (ಕಂರಾ. ೦-೦೫). [ಸಂ.]

**ಲಾಘಿಸು$_1$** ' ಲಾಗಿಸು$_1$ ' ನೋ.

**ಲಾಘಿಸು$_2$** (ಕ್ರಿ). ಕೀಳುಮಾಡು ; ಕಡೆಗಣಿಸು : ನೀಲೋತ್ಪಲದ ದಳವ ಲಾಘಿಸುವ ಸುಂದರಾಂಬಕದ . . . ಸೊಬಗಿ (ಗುರುಚ. ೦೬-೪೦). [< ಲಾಘವ + -ಇಸು$_1$]

**ಲಾಚಾರ್** ' ಲಾಚಾರು ' ನೋ.

**ಲಾಚಾರಿ** ' ಲಾಚಾರು ' ನೋ.

**ಲಾಚಾರು**, ನಾಚಾರ್ಲು, ಲಾಚಾರ್, ಲಾಚಾರಿ (ಗು). ೧. ಸತ್ತ್ವಹೀನವಾದ; ದುರ್ಬಲವಾದ : ಈ ಲಾಚಾರು ವೈರಿನಿಂದ ಏನು ಬೆಳೆ ಸಿಕ್ಕೀತು? (ಕೂಕ). (ನಾ). ೨. ಅಸಹಾಯಕವಾದುದು : ಬಲಹೀನವಾದುದು : ತನ್ನ ಜೋರು ಇಲಾಜು ಯೇನೂ ನಡೆಯದೆ ಲಾಚಾರಾಗಿ . . . ತಿರುಗುತ್ತ ಇದ್ದಲ್ಲಿ (ಡಾಕೀಂದ್ರ. ೨೯); ಕುರ್ಕನುಗುರು ಬಗೆದಿದ್ದ ಕಣ್ಣಿನ ಗಾಯದ ಬೇಸಿಯಿಂದ . . ಹುಲಿಯು, ಲಾಚಾರಾಗಿದ್ದರೂ . . . ಬೇಟೆಯಾಡಿ (ಕುಉಪ. ೫೭). **ನಾಚಾರ್ಲು** : ೩. ನಿಶ್ಶಕ್ತ ; ಬಲಹೀನನಾದವನು ; ಈಗ ತಿನ್ನುವುದು ಕುಡಿಯುವುದು ಎಲ್ಲಾ ಬಿಟ್ಟು ನಾಚಾರ್ಲಾಗಿದ್ದಾರೆ (ಪಷ್ಮರು. ೩೨). **ಲಾಚಾರ್**: ೩. ಹುಡುಗ ಯಾಕೋ ಲಾಚಾರ್ ಆಗಿದ್ದಂಗೆ ಕಾಣ್ತಾನೆ (ಶಃಬಾ. ೦೭೩). **ಲಾಚಾರಿ** : ೧. ತುಂಬಾ ಲಾಚಾರಿ ಮನುಷ್ಯ. (ಹಿಂಬಾ. ೦೦೭). ೪. ಅಸಹಾಯಕತೆ ; ದುರ್ಬಲತೆ : ಈ ಕೊಲೆಗಾರರದೆ ಲಾಚಾರಿಯಿಂದ . . . ಇಕ್ಕಟ್ಟಾದ ಗ್ರಾಮಗಳಿಗೆ ಬಾರದೆ . . . ರೈತರ ಮನೆಮಾರು ಲೂಟಿ ಮಾಡಿ ಬೆಂಕಿ ಹಾಕುತ್ತ ಇದ್ದನು (ಡಾಕೀಂದ್ರ. ೩೯).

[←ಹಿಂ. ಮರಾ. ಲಾಚಾರ್, ಲಾಚಾರೀ]

**ಲಾಜ$_1$** (ನಾ). ೧. ಸೆನೆಸಿದ ಅಕ್ಕಿ. ೨. ಅಕ್ಷತೆ : 'ಲಾಜಾರೋಪ' ಪರಾ. ೩. ಹುರಿದು ಅರಳಿಸಿದ ಕಾಳು ; ಬತ್ತದ ಅರಳು ; ಅವಲು : "ಅರಳು ಲಾಜಾಖ್ಯೆಯಕ್ಕು" (ಶಬ್ದಮ. ೦೦೦-೬); ತಪ್ಪಾಯಃಕಟಾಹಪತಿತ ಲಾಜಃಪುಂಜದಂತೆ . . . ಸಿಡಿಲ್ದು (ಆತ್ಮ. ೦೦-೩೩೮) ; ಪುಷ್ಪಗಳಿಂ ಕೂಡಿದ ಲಾಜಗಳಿಂ ಪೂಜಿತನಾಗಿ (ಶಾಗಂಪು. ೨೬೩-೦೫). ೪. ಒಂದು ಬಗೆಯ ಸಸ್ಯ: "ಲಾಕ್ಷಾವೃಕ್ಷಃ—ಲಾಜ, ಕೋಶ ಮಾವು" (ಓಕಂ. ೦೪೩).

**ಲಾಜಾವರುಷ**=ಅರಳನ್ನು ಸೂಸುವಿಕೆ ; ಅರಳಿನ ಮಳೆ : ವೀರಭುಜಕ್ಕೆ ಸುರಿವ ಲಾಜಾವರುಷದಂತಿರೆ ಮುತ್ತುಗಳೆಸೆದವು (ಕುವ್ಯಾ. ೫೬.೪-೮೯).

**ಲಾಜಾವರ್ಷ**=ಲಾಜಾವರುಷ : ಪೌರಜನದ ಸೂಸುವ ಲಾಜಾವರ್ಷಮುಮಂ ಕುಸುಮವರ್ಷಮುಮನಾಂತುಕೊಳುತ್ತುಂ (ಆಪು. ೪-೨೫ ವ).

[ಸಂ.]

**ಲಾಜ$_2$** (ನಾ). ತಕ್ಷಣ; ಬೇಗ; ಒಂದು ಕ್ಷಣ : ಒಂದೇ ಒಂದು ಲಾಜ ದಾರಿ ತಪ್ಪಿ ಹೋಗಿದ್ದೀವಿ ಎಂಬುದಾಗಿ ಮತ್ತೊಬ್ಬಳು ಹೆಂಗುಸು ನುಡಿದಳು (ಶೃಮು. ೨೬೭); ಎಲ್ಲ ಲಾಜದಲ್ಲಿ ನಡೆಸಿಬುಡ್ತೇನಿ (ಸರ್ಕಾಪು. ೦೭೩). [ ? ]

**ಲಾಜಕ** (ನಾ).=ಲಾಜ$_1$ ೨: ತಳಿವ ಲಾಜಕಮೆತ್ತುವ ಪುಷ್ಪಮಾಲೆ ನೀಡುವ ನವಮಾತುಳುಂಗಫಲಮೆಂಬಿವನಚ್ಯುತನೊಲ್ದು ಕಾಣ್ಬದಂ (ಜಗು. ೬-೨). [ಸಂ.]

**ಲಾಜಾಂಜಲಿ**, ಲಾಜಾಂಜಳಿ (ನಾ). ೧. ಬತ್ತದ ಅರಳಿನಿಂದ ತುಂಬಿದ ಬೊಗಸೆ. ೨. = ಲಾಜ$_1$ ೨ : ಲತಾಂಗಿಯುರ್ಸೂಸುವ ಕುಸುಮಮಿಶ್ರಲಾಜಾಂಜಲಿಗಳ್ (ಅರಂಪು. ೪೬೫); ಬಟುಯುಂ ಪುರೋಹಿತಾದೇಶದಿಂ ಹೋಮಾಗ್ನಿಯುಂ ಪ್ರದಕ್ಷಿಣಂಗೈದು ಲಾಜಾಂಜಲಿಯನಿಕ್ಕಿ ಬಂದೊಂದೆ ಪಸೆಯೊಳ್ ಕುಳ್ಳಿರ್ದಂ (ಹಂದ್ರಪು. ೬-೭೬ ವ). **ಲಾಜಾಂಜಳಿ** : ೧. ದಿಕ್ಕನ್ನಕೆಯರ ಸೂಸುವ ಲಾಜಾಂಜಳಿ[ಪಾಠಾಂ. ಲಿ] ನಿಚಯಮೆಣಿಸುವ ಮದಕರಿಕರಶೀಕರಮುಮಂ (ಆಪು. ೦೩-೪೪ವ) ; ಸೂಸುವ ಲಾಜಾಂಜಳಿಗಳ ಸೇಸೆಯು ಸಿದ್ಧಾರ್ಥದೊದವಿನಿಂ (ವರ್ಧಪು. ೬-೪೨). [ಸಂ.]

**ಲಾಜಾಂಜಳಿ** ' ಲಾಜಾಂಜಲಿ ' ನೋ.

**ಲಾಜಾಕ್ಷತೆ** (ನಾ).=ಲಾಜ$_1$ ೨ : ಬಟ್ಟಲು ವೀಳ್ಯ ವಿಶಿಷ್ಟ ಲಾಜಾಕ್ಷತೆ ಪುಷ್ಪ ಕದಳಿ ಬೆಲ್ಲ ಕಸ್ತೂರಿಗಳಿಂದ ಕೃಷ್ಣರಾಯನ ಮುಂದಿಟ್ಟು ಸಮರ್ಪಿಸಿ (ಪುರಂದ. ೪-೪೨-೪). [ಸಂ. ಲಾಜಾಕ್ಷತಾ]

**ಲಾಜಾರೋಪ** (ನಾ). ಅಕ್ಷತೆಯನ್ನು ಎರಚುವುದು, —ಸೂಸುವುದು : ಸಭೆಯಲ್ಲಿದ್ದವರೆಲ್ಲರೂ ದೊರೆಗಳ ಮೇಲೆ ಲಾಜಾರೋಪ ಮಾಡಿ ತಮ್ಮ ಸಂತೋಷವನ್ನೂ ಶುಭಾಶಯವನ್ನೂ ವ್ಯಕ್ತಪಡಿಸಿದರು (ಕೃಕೃಚ. ೮೪೯). [ಸಂ.]

**ಲಾಜಾಹುತಿ** (ನಾ). ಅರಳಿನಿಂದ ಮಾಡುವ ಹೋಮ ; ಅಗ್ನಿಗೆ ಅರಳನ್ನು ಅರ್ಪಿಸುವುದು : ಪುರೋಹಿತರು ವಧುಗೀಗೆ ಈ ಅರ್ಥ ಬರುವ ಮಂತ್ರಗಳನ್ನು ಹೇಳಿಸಿ ಅಗ್ನಿಗೆ ಲಾಜಾಹುತಿಯನ್ನು ಮೂರಾವರ್ತಿ ಮಾಡಿಸಿದರು (ಶಾಂತಲಾ. ೦೦೦). ' ಲಾಜಾಹೋಮ ' ಪರಾ. [ಸಂ.]

**ಲಾಜಾಹೋಮ** (ನಾ). ಮದುವೆಯಲ್ಲಿ ಮಾಡುವ ಒಂದು ವಿಧಿ ; ವಧೂವರರು ಇಬ್ಬರೂ ಬೊಗಸೆಗಳನ್ನು ಕೂಡಿಸಿ ಅರಳುಗಳನ್ನು ಅಗ್ನಿಗೆ ಹೋಮ ಮಾಡುವುದು : ಲಾಜಾಹೋಮಂ ರಾಜಿಸಲಾ ಜಲರುಹಪತ್ರನೇತ್ರೆ . . . ಉದ್ಭಟರಾಜನ ಬಲದಿಂದೆಡಕ್ಕೆ ಬಂದಳ್ಕದದಿಂ (ಉದ್ಭಟ. ೬-೩೯) ; ಹಾರುವರುಚ್ಚರಿಸುವ ಅಗ್ನಿಹೋತ್ರಪ್ರಕಾರದಿಂದ ಅವನು ವಧುವನ್ನು ಕೈಹಿಡಿದ. ಲಾಜಾಹೋಮವಾಯಿತು (ಅದುಕ. ೫೭೩). [ಸಂ.]

**ಲಾಜು** (ನಾ).=ಲಾಜ$_1$ ೨ : ಲಾಜಿಸಿಂದಭಿಷೇಕವ ಜನರಾಜನಿಗಾಜನೇಂದುವಸೂನು ಮಾಡೆ (ಜ್ಞಾಪಹ. ೬-೭೭). [<ಸಂ. ಲಾಜ]

**ಲಾಜೆ** (ನಾ).=ಲಾಜ$_1$ ೩ : "ಅರಳಾಗಿ ಪುರಿದ ಧಾನ್ಯೋತ್ಕರಮಂತವೆ ಲಾಜೆ" (ಶಬ್ದಕೋ. ೯೩-೦೦) ; ಓಜೆಯೊಳ್ ಲಾಜೆಯನಗ್ನಿಕುಂಡದೊಳ್ ಸುರಿದು (ಹಂಶಾ. ೩-೭೫ ವ) ; ಅರಲ ಸರಂಗಳಂ ಸವೆವ ಲಾಜೆಯನೆಣಿಕೆಯೊಳಾಯ್ದು . . . ನೀಚೆಯರದೇನೆಸೆದಿರ್ದರೊ ಮಂಟಪಾಗ್ರದೊಳ್ (ರಾಜಶೇ. ೬-೭). [ಸಂ. ಲಾಜಾ]

**ಲಾಟ** (ನಾ). ೧. ಒಂದು ನಾಡು ಮತ್ತು ಅಲ್ಲಿಯ ಜನರ ಹೆಸರು; ಈಗಿನ ಗುಜರಾತು ರಾಜ್ಯ : ಇದು ಲಾಟಬಲಂ (ಆಪು. ೦೩-೪೩೪) ; ಲಾಟ ಭೋಟಕ ಗೌಳ ಪಾರ್ಶ್ವ . . . ಸಕಲದೇಶಾಧೀಶಸಮುದಯಸ್ವೀಕೃತಸೇತುಮಹಾಸಿಂಧುಪ್ರವಾಹ ಪರಾಕು (ಮಾದಕು. ೩-೦೮) ; ನಖಕ್ಷತದಂತಕ್ಷತಂಗಳಿಂ ಬಹು ದ್ರಾವಿಸುವಳು . . . ಇವಳು ಲಾಟದೇಶದ ಸ್ತ್ರೀ (ಕಾಮಶಾ. ೨೦೯). ೨. ಲಾಟದೇಶದ ಭಾಷೆ : "ಲಾಟಕ ಲಾಟಮದಟ ನುಡಿ ಲಾಟೀಯಮ್ಮು"(ಹಂಪಕ. ೨೦). ೩. (ಬಟ್ಟೆ, ಆಭರಣ ಇತ್ಯಾದಿಗಳು) ಹಳೆಯದಾದುದು ; ಹರಿದು ಹೋದುದು ; ಹಾಳಾದುದು. ೪. ಮಲ್ಲಯುದ್ಧದ ಒಂದು ಪಟ್ಟು : ಕೊಂತಮಾರವು ಲಾಟ ಡೊಕ್ಕರ. . . ತುಳಿಲ ವಿಂದಾಣದಲಿ ಹರಿ ಕಾದಿ ಬಳಲಿಸಿದ (ಕಾಭಾ. ೨೨-೭೩). [ಸಂ.]

**ಲಾಟಕ** (ನಾ). ೧. ಲಾಟದೇಶಕ್ಕೆ ಸಂಬಂಧಿಸಿದುದು. ೨. = **ಲಾಟ ೪**: ಕೊಂತಮಾರಿಯು ಲಾಟಕಾ ಕೋದಂತೆ ಉತ್ತರ ಡೊಕ್ಕರವು ನೆಟ ಕೊಂತ ವಹರವು ಲಾಟ ಡೊಕ್ಕರ . . . ತುಳಿಲ ವಿಂದಾಣದಲಿ ಹರಿ ಕಾದಿ ಬಳಲಿಸಿದ (ಕಾಭಾ. ೨೨-೭೩). [ಸಂ.]

**ಲಾಟನ** 'ಲಾಂದರ' ನೋ.

**ಲಾಟರಿ** (ನಾ). "ಹಣ ಕೊಟ್ಟು ಪಡೆದ 'ಟಿಕೆಟ್ಟು' ಚೀಟಿಗಳ ಮೂಲಕ, ಕೆಲವರಿಗೆ ಕೇವಲ ಅದೃಷ್ಟದಿಂದ ಬಹುಮಾನ ದೊರೆಯುವಂತೆ

ಏರ್ಪಡಿಸಿದ ಅದೃಷ್ಟದ ಆಯ್ಕೆ" (Lottery. ಇಂಗ್ಲಿ ): ಯಾವನೋ ದಾರಿಯಲ್ಲಿ ಲಾಟರಿಯಿಟ್ಟುಕೊಂಡಿದ್ದ . . . ನಾನೂ ಒಂದಾಣೆ ಹಾಕಿದೆ ಎರಡು ಪೆಪ್ಪರ್‌ಮೆಂಟ್ ಬಂತು (ಶಿಶು. ೯) ; ಮದುವೆಯೆಂಬುದು ಒಂದು ಲಾಟರಿ ಎಂದು ಉತ್ತರ ಕೊಡುತ್ತಾನೆ (ಬಂಕಿಮ. ೯೯).

[ ← ಇಂ. Lottery ]

**ಲಾಟರಿಹೊಡೆ$_1$** (ಕ್ರಿ). ಅದೃಷ್ಟಪರೀಕ್ಷೆಯಲ್ಲಿ ಜಯ ದೊರಕು; ಲಾಟರಿಯಲ್ಲಿ ಬಹುಮಾನವು ಬರು : ಅವನಿಗೆ ಲಾಟರಿಹೊಡೆದು ಇದ್ದಕ್ಕಿದ್ದಂತೆ ಲಕ್ಷಾಧಿಪತಿಯಾದನು (ಆಡು). [ ಲಾಟರಿ + ಹೊಡೆ$_1$ (< ಪೊಡೆ$_1$) ]

**ಲಾಟರಿಹೊಡೆ$_2$** (ಕ್ರಿ). ೧. (ಕೆಲಸವಿಲ್ಲದೆ) ವ್ಯರ್ಥವಾಗಿ ಅಲೆ.–ತಿರುಗು : ಎರಡುವರ್ಷಕಾಲ ಉದ್ಯೋಗವಿಲ್ಲದೆ ಲಾಟರಿಹೊಡೆದು ಪತ್ರಿಕೋದ್ಯಮಕ್ಕೆ ಆತ ಧುಮುಕಿದಂದಿನಿಂದ . . . ಅವನನ್ನು ಬಲ್ಲೆ (ಜನು. ೧೯). ೨. ತೊಳಲಾಡು ; ಬವಣೆಪಡು : ಅವನಿಗೆ ಕೊಟ್ಟು ನನ್ನ ಕಣ್ಣ ಮುಂದೆ ಅವಳು ಊಟಕ್ಕಿಲ್ಲದೆ ಲಾಟರಿಹೊಡೆಯುವುದನ್ನು ನೋಡುವುದಿಲ್ಲ (ಜಾಲ. ೭೬). [ಲಾಟರಿ$_0$ (?← ಇಂ. Loiter) + ಹೊಡೆ$_1$(< ಪೊಡೆ$_1$) ]

**ಲಾಟಾನು** ' ಲಾಂದರ ' ನೋ.

**ಲಾಟ** (ನಾ). [ಕಾವ್ಯಮೀ] ವೈದರ್ಭಿ, ಗೌಡಿ, ಪಾಂಚಾಲಿ ಹಾಗೂ ಲಾಟಿ ಎಂಬ ಕಾವ್ಯದ ನಾಲ್ಕು ಬಗೆಯ ರೀತಿಗಳಲ್ಲಿ ಒಂದು: ಇವುಗಳ ಜೊತೆಗೆ 'ಲಾಟ'ಯನ್ನು ಸೇರಿಸಿ ರೀತಿಗಳು ನಾಲ್ಕೆಂದೂ . . ಹೇಳುತ್ತಾರೆ (ಕಲಾ. ೨೨೦). [ ಸಂ. ಲಾಟೀ ]

**ಲಾಟೀನು** ' ಲಾಂದರ ' ನೋ.

**ಲಾಟು** (ನಾ). ಜನ ಅಥವಾ ವಸ್ತುಗಳ ತಂಡ,–ಮೊತ್ತ : ಏನು ಹ್ಯಾಗೆ ಕೊಡುತ್ತಿ ? ಲಾಟ(Lot)ಗೆ ಹೇಗೆ? (ಹೊಸಕ್ತ. ೩೦).

**ಲಾಟುಲಾಟು** (ದ್ವಿರುಕ್ತಿ): ಮಾರ್ಕೆಟ್ಟಿನಲ್ಲಿ ತರಕಾರಿ ಲಾಟುಲಾಟಾಗಿ ಬಂದು ಬಿದ್ದಿವೆ (ಆಡು). [ ← ಇಂ. Lot ]

**ಲಾಠಿ, ಲಾತಿ** (ನಾ). ಬಡಿಗೆ; ದೊಣ್ಣೆ; ದಂಡ : ನಿನಗೆ ಲಾಠಿ ತಿರುವಲು ಬರುತ್ತದೆಯೊ? (ಕೊಡಗಾ. ೬೬); ಕೋವಿ ಲಾಠಿಗಳನ್ನು ಧರಿಸಿದ ಪೋಲೀಸ್ ಪಡೆ ಹಳ್ಳಿಗೆ ಬಂತು (ಕರುಣಾ. ೦೨೦) ; ಪ್ರತಿಯೊಬ್ಬರ ಕೈಯಲ್ಲೂ ಒಂದೊಂದು ಲಾಠಿ (ಸ್ವಾತಂತ್ರ್ಯ. ೯). **ಲಾತಿ** : ಬ್ರಿಟಿಶರ ಲಾತಿಪ್ರಹಾರಗಳು ಅವರನ್ನು ವಂಚಿಸದಾಯಿತು (ಚಾಂತ್ರ. III. ೧೭೦೬).

**ಲಾಠೀಚಾರ್ಜ್** = ಲಾಠಿಪಲ್ಲೆ : ಮುಖಂಡರ ಬಂಧನ . . . ಲಾಠೀಚಾರ್ಜ್ ಗೋಳೀಬಾರ್ . . . ಫಾಸೀ . . . ಘೋರ ಘೋರ ಶಿಕ್ಷೆಗಳು (ಅಗ್ನಿ. ೯). [< ಪ್ರಾ. ಲಟ್ಠಿ./ಹಿಂ. ಮರಾ. ಲಾಠೀ]

**ಲಾಠಿಹಲ್ಲೆ** (ನಾ). ದೊಣ್ಣೆ ಬೀಸಿ ಗುಂಪನ್ನು ಚದುರಿಸುವುದು : ಸ್ತ್ರೀಯರ ಮೇಲೆಯೂ ಲಾಠಿಹಲ್ಲೆಗಳಾಗಹತ್ತಿದವು (ಕಾಂಗ್ರೆಸ್. ೨೩).

[ಲಾಠಿ + ಹಲ್ಲೆ$_4$ (< ಹಲ್ಲಾ) ]

**ಲಾಡ$_1$** ' ಲಾಳ$_2$ ' ನೋ.

**ಲಾಡ$_2$** ' ನಾಲ$_2$ ' ನೋ.

**ಲಾಡಿ$_1$** ' ಲಾಳಿ$_1$ ' ನೋ.

**ಲಾಡಿ$_2$** (ನಾ). ಲಾಟದೇಶದವನು : ಅಖಂಡೈಶ್ವರ್ಯದಿಂದೊಪ್ಪಿದ ಗುಜರಾತಿಯರು ಕಾಯತರು ಗೋಸಾವಿಯರು ಲಾಡಿಯರು (ಶಾಸಂ. ೧೭೩–೧).  [ < ಲಾಡ$_1$ ]

**ಲಾಡಿ$_3$** (ನಾ). ೧. ನೀಳಪಟ್ಟಿ ; ಕಸೆ ; ದಾರ : " ಲಾಡೀ— ಚಲ್ಲಣದ ಕಶೆ " (ಕಾಕ. ೨೩೯) : ಈ ಪರಾಯಿಗಳಿಗೆ ಕಾಣಿಸುವ ತೆರಪುಗಳಿರುವುದಿಲ್ಲ . . . ಇವನ್ನು ಬೆನ್ನಿನ ಹಿಂಭಾಗದಲ್ಲಿ ಲಾಡಿಯಿಂದ ಕಟ್ಟುತ್ತಾರೆ (ಕ್ರಿವಾಜ. I. ೩೩೬). ೨. ಹಗ್ಗ ; ಹುರಿ : ಲಾಡಿಯ ಲಗಾಮನ್ನು ಹಿಡಿದಿದ್ದ ಅವರ ಕೈಗಳಲ್ಲಿ ಪವಿತ್ರದ ಉಂಗುರಗಳು ಹೊಳೆಯುತ್ತಿದ್ದವು (ಕಳತು. ೧) : ಅವನ್ನು ಕೂಡಲೆ ಲಾಡಿಗಳ ಮೂಲಕ ಮೋಟರನ್ನು ಜೋಡಿಸುವಲ್ಲಿಗೆ ಕಳುಹುವರು (ಚಾಂತ್ರ. I. ೯೦೩). ೩. ತೆಳುವಾಗಿ ಉದ್ದಕ್ಕೆ ಲಾಡಿಯಾಕಾರದ ಒಂದು ಬಗೆಯ ಹುಳು; ಕರುಳಿನ ಹುಳು : "ಲಾಡಿಯಂತಿರುವ (ಕರುಳಿನಲ್ಲಿಯ ಜಂತು) : ಲಾಡಿಜಂತು" (Cestoid. ಇಂಗ್ಲಿ) ; ಲಾಡಿಹುಳುಗಳ ವರ್ಗದಲ್ಲಿ ದೇಹವು ಚಪ್ಪಟೆಯಾಗಿ ಲಾಡಿಯಂತೆ ಉದ್ದನಾಗಿರುತ್ತದೆ (ಪ್ರಾಣಿಶಾ. ೧೩೩).

[← ಹಿಂ. ನಾಡಾ; ಮರಾ. ನಾಡಾ, ನಾಡೀ. / ಪ್ರಾ. ಣಾಡಿ./ಸಂ. ನಾಡೀ]

**ಲಾಡು** (ನಾ). ಒಂದು ಬಗೆಯ ಸಿಹಿಭಕ್ಷ್ಯ; ಲಡ್ಡು : ವಡೆ ಅತಿರಸ ಲಾಡು ಸೇವಿಗೆ ಪರಮಾನ್ನ (ಕಂದ್ರಾಕ. ೬) : ಶಿವು . . . ಲಾಡು ಸಮಾರಾಧನೆಗೆ ಒಂದು ದಿನವಾದರೂ ತಪ್ಪಿಸಿಕೊಳ್ಳುವ ಮನುಷ್ಯನಲ್ಲ (ರಾವಬಹ. ೦೦೩); ಚಿರೋಟಿ, ಲಾಡು, ಮತ್ತೊಂದು ಸಿಹಿ ದಪ್ರೋಟು (ಸಂಗಾ. ೩೯). [ ← ಹಿಂ. ಲಾಡೂ; ಲಡ್ಡೂ ; ಮರಾ. ಲಾಡು./ತಮಿ. ಲಾಡು. /ಸಂ. ಲಡ್ಡು]

**ಲಾತ** ' ಲತ್ತೆ ' ನೋ.

**ಲಾತಕೋಲು** (ನಾ). ಏಟು ಕೊಡುವ ಕೋಲು : ಬಡಿಗೋಲು : ಮೇಲೆ ಮಿಳ್ಳುವಿನ ದಾಡೆಯಂ ಕೀಳುತಂ ಲಾತಕೋಲಂತೆ ತಿರುವುವ ಮಹಾಮೇರುಮಂದರ ಸುಕೀಲಕಂಗಳ ಕಂತುಕಕ್ರೀಡೆಯಾಡುವ . . . ಓರ್ವಂ (ಶೀಕೃಷ್ಣ. ೯–೬–೨೯); ಪಿರಿಯ ಮಿಳ್ಳುವಿನ ದಾಡೆಗಳನಲುಗಿ ಕಿಳ್ತು ಭರದಿಂದೆ ಲಾತಕೋಲಂತೆ ತಿರುಗಿಪನೊರ್ವನುರು ಮೇರು ಮಂದರಾದ್ರಿಗಳ ಪೊಡೆಚೆಂಡಾಡುವಂ ಸಂತತಂ ಮುದದೊಳು (ಅರಾಶ. ೩–೦೬–೯).

[ ಲಾತ (< ಲತ್ತೆ) + ಕೋಲು$_1$ ( < ಕೋಲ್$_1$) ]

**ಲಾತಿ** 'ಲಾಠಿ' ನೋ.

**ಲಾತು** 'ಲತ್ತೆ' ನೋ.

**ಲಾಪ** (ನಾ). ಸಂಭಾಷಣೆ; ಆಲಾಪ : ಓಲದೊಳ್ ಕುಳ್ಳಿರಿಸಿ ಲಾಪಮಂ ಪರಮಯೋಗೀಂದ್ರನೊಡನಾರಂಭಿಸುತ್ತಿಂದ ಶಕ್ರ ನಗುತ (ಕುಮಾರ. ೬).

[ಸಂ.]

**ಲಾಪಿಸು** (ಕ್ರಿ). ಹೇಳು; ತಿಳಿಸು : ಒಲ್ಲದಕುಬಾಯವನು ಲಾಪಿಸುವನು (ದೇವಾಂಕ. ೨–೩೮). [ ಲಾಪ + — ಇಸು$_3$ ]

**ಲಾಭ** (ನಾ). ೧. ದೊರಕಿದುದು ; ಪ್ರಾಪ್ತಿ: "ಲಭ್, ಲಬ್ಧ . . . ಲಭಃ. ಲಾಭಃ, ಈ ೯ ಪಡೆತಂ" (ಕಾಕ. ೦೩೦); ಲೋಭವೇಕೋ ಭಕ್ತಿಯ ಲಾಭವ ಬಯಸುವಂಗೆ (ಬಸವ. ೦೦೯). ೨. (ವ್ಯಾಪಾರದಲ್ಲಿ) ಖರ್ಚು ಕಳೆದು ಬರುವ ಫಾಯಿದೆ,– ನಫೆ : "ಉಟ್ಟದುದು — ಬಿಟ್ಟುದು . . . ಲಾಭವಾದುದು" (ಕಮುದ. ಕಂ. ೦) : ವ್ಯಾಪಾರ ಮಾಡುವಾಗ ಖರ್ಚೆಲ್ಲಾ ಕಳೆದು ಬಳಿ ಉಳಿಯುವ ಹಣವೇ ಲಾಭ (ಗೃಹಶಾ. ೦೯೪); ಲಾಭವಿಲ್ಲದೆ ಸೆಟ್ಟಿ ಹಳ್ಳಿಗೆ ಹೋಗ (ಗಾದೆ). ೩. ಪ್ರಯೋಜನ : ಈ ಸಂಸಾರದಲ್ಲಿ ವಿನಯದಿಂದ ಬಹಳ ದೊಡ್ಡ ಲಾಭವಾಗುವುದು (ಮುಂಬಯಿ. ೪–೭೩). [ಸಂ.]

**ಲಾಭಂಬೆಱು** (ಕ್ರಿ). (ವ್ಯಾಪಾರದಲ್ಲಿ) ಖರ್ಚುಮಾಡಿದುದಕ್ಕಿಂತ ಹೆಚ್ಚು ಹಣವನ್ನು ಪಡೆ; ಆದಾಯವನ್ನು ಪಡೆ : ಮಂವರದಂತೆ ಧೈರ್ಯಂ ಬೆರಸು ಲಾಭಂಬೆತ್ತ ಪರದನಂತುತ್ಸಾಹಂಬೆರಸು . . . ದೃಢಚಿತ್ತದಿಂದಿರ್ದ (ರವಿತನ್ಯ. ೦–೧೩೩). [ ಲಾಭ + ಪೆಱು$_1$ ]

**ಲಾಭಕ** (ನಾ). ೧. ನಫೆ; ಫಾಯಿದೆ. ೨. ಲಾಭವನ್ನು ಪಡೆದವನು: "ಲಭಕಃ, ಲಾಭಕಃ, ಲಭಮಾನಃ, ಈ ೩ ಪಡೆವು" (ಕಾಕ. ೦೩೦). [ಸಂ.]

**ಲಾಭಕರ** (ಗು). ೧. ಲಾಭವನ್ನುಂಟುಮಾಡುವ; ಲಾಭದಾಯಕವಾದ. (ನಾ). ೨. ಪ್ರಯೋಜನಕಾರಿಯಾದುದು : ವೈಯುಕ್ತಿಕವಾಗಿಯೂ ತನಗೂ ಮತ್ತು ತನ್ನ ಮಗಳಿಗೂ **ಲಾಭಕರವಾಗಿರುವಾಗ**, ಎರೆ ನುಂಗಿ

ಗಾಳಕ್ಕೆ ಸಿಕ್ಕಿದ ಮೀನನ್ನು ದಡಕ್ಕೆಳೆಯದೆ ಬಿಡುವಷ್ಟು ಎಗ್ಗನಾಗಿರಲಿಲ್ಲ ಅವನು (ಮರಳು. ೭೭೦). [ಸಂ.]

**ಲಾಭಗವಳಿಗೆ** (ನಾ). (ವೀಳೆಯದೆಲೆಯ ಕಟ್ಟುಗಳ ಮೇಲೆ ಹಾಕುವ) ಒಂದು ಬಗೆಯ ತೆರಿಗೆ : ಪೇಜುಂಗೆ ಲಾಭಗವಳಿಗೆ ಯೆಣ್ಣುನೂಱುಲೆಯುಮಂ ತಲೆವೊಱೆಗೆ ಲಾಭಗವಳಿಗೆಯು ನಾಲ್ನೂಱೆಲೆಯುಮಂ . . . ಸಾಸಿವರ್ಬಿಟ್ಟಾರ್ (ಎಪಿ. XVIII, ೦೯೨-೩೪ : 1184).

[ ಲಾಭ + ಕವಳಿಗೆ$_{3}$ ]

**ಲಾಭದಾಯಕ** (ಗು). ೧. ಲಾಭವನ್ನುಂಟುಮಾಡುವ. (ನಾ). ೨. ಲಾಭಕರವಾದುದು : ತರಕಾರಿ ಬೆಳೆಯುವುದು ಮೋಹದ ಅಡ್ಡಕಸುಬು ಮಾತ್ರವಲ್ಲದೆ ಲಾಭದಾಯಕವೂ ಆಗಿದೆ (ಅಮಾಸ. ೦೨೬) ; ಬಂದ ಹಣ ಲಾಭದಾಯಕವಾಗುತ್ತಿರಲಿಲ್ಲ. (ಐಮಾಜ. ೦೪೯). [ಸಂ.]

**ಲಾಭಬಡಕ**, ಲಾಭಬಡುಕ (ನಾ). ಹೆಚ್ಚು ಲಾಭವನ್ನು ಪಡೆಯಲು ಪ್ರಯತ್ನಿಸುವವನು : ಲಾಭಬಡಕರಿಗೆ ನಾಯ ಒಳ್ಳೆಯ ಸುವರ್ಣಸಂಧಿ ಬಂದೊದಗಿತು (ಕಾರಾಣ. ೦೫೨). **ಲಾಭಬಡುಕ** : ಕೆಲವರು ಲಾಭಬಡುಕ ಕಂಟ್ರಾಕ್ಟರುಗಳಿಂದಲೂ, ದಲ್ಲಾಳಿಗಳಿಂದಲೂ . . . ಹೇರಳವಾಗಿ ಹಣವನ್ನು ಸಂಗ್ರಹಿಸಿ (ಕಂಜಕಂ. ೦೪೬).

[ ಲಾಭ + -ಬಡಕ$_{2}$ (< -ಬಡಿಕ$_{2}$) ]

**ಲಾಭಬಡುಕ** 'ಲಾಭಬಡಕ' ನೋ.

**ಲಾಭಸೆರೆ** (ನಾ). (?) : ಗೇಣಿದಾರರು ಗೇಣಿಯನ್ನು ಕೊಡುವುದರ ಜೊತೆಗೆ ತರಕಾರಿ, ತರಪಡಿ, ತಳರಾಸಿ, ಮೇಲ್ಗೊಳಗ, ಲಾಭಸೆರೆ ಮುಂತಾದ ಮರ್ಯಾದೆಗಳನ್ನೂ ಭೂಮಾಲೀಕರಿಗೆ ಕೊಡಬೇಕಾಗಿತ್ತು (ಕಂಜಕಂ. ೦೧).

[ ಲಾಭ + ಸೆರೆ$_{7}$ ]

**ಲಾಭಾಂತರಾಯ** (ನಾ). [ಜೈನ] ಅಂತರಾಯಪಂಚಕಗಳಲ್ಲಿ ಒಂದು; ಲಾಭವನ್ನು ಸಂಪಾದಿಸಬೇಕೆಂದಿದ್ದರೂ ಅದು ಸಿಗದಂತೆ ಮಾಡುವ ಕರ್ಮಪ್ರಕೃತಿ : ಲಾಭಾಂತರಾಯ : ಲಾಭವನ್ನು ಸಂಪಾದಿಸುವ ಬಯಕೆ ಇದ್ದರೂ ಸಿಗದಿರುವುದು (ಕೃಪಠ. ೩೭೭). 'ಅಂತರಾಯಪಂಚಕ' ಪರಾ. [ಸಂ.]

**ಲಾಮ** 'ಲಾಮಾ' ನೋ.

**ಲಾಮಂಚ**, ಲಾಮಚ, ಲಾಮಚ್ಚ, ಲಾಮಚ್ಛ, ಲಾಮಜ್ಜ, ಲಾಮಜ್ಜೆ, ಲಾವಂಚ, ಲಾವಂಚಿ (ನಾ). ಒಂದು ಬಗೆಯ ಸುವಾಸನೆಯ ಬೇರುಳ್ಳ ಹುಲ್ಲು ; ಬಾಳದ ಬೇರು : "ಬಾಳಮಾ ಹ್ರೀಬೇರವೆನಲು ಲಾಮಂಚಮಕ್ಕು" (ಮಂಗರಾ. ೩೯-೨೯) ; ಪೊಸ ಲಾಮಂಚದ ತೆ[ಕೇ]ರ್ಗಳಲಂಪಿಂ ಸಸಿಮಣಿವೇದಿಕೆಗಳ ಕಪುಸೊಂಪಿಂ (ಕಾವ್ಯಟಿ. ೫-೦೬); ಕುಂಚ ಸತ್ತಿಗೆ ಕನಕ ದಂಡಿಗೆ ಚಮರಗಳು ಲಾಮಂಚ ಬಿಜ್ಜಣ ದಾಲವಟ್ಟ ಕಾಂಚನ ಸೌಖ್ಯ ಸಗ್ಗಳೆ ಗಿಂಡಿವಣ್ಣಗಳು ಚಂಚಲಾಕ್ಷಿಯೊಳ್ಳಿದಿದರು (ಕೋಹಕ. ೨೪-೯). **ಲಾಮಚ** : "ಜತ್ತಕ್ಕೆ ಚತ್ತಂ – ಲಾಮಜ್ಜ – ಲಾಮಚ್ಚ, ಲಾಮಚ" (ಕಮಜ. ೨೬೨ ಕ್ರಯೋ) ; ಲಾಮಚದ ನೆರಕೆ ಗಱಿಪೂವುಗಳ ಹೊದಕೆ ಪಚ್ಚೆಗಪ್ಪುರವಾಳಿಗಳ ಕಂಬವಮಾರ್ಗ ಮುಡಿವಾಳ ಗಟ್ಟು (ಕದ್ಯರಾ. ೬-೬) ; ಲಾಮಚವು ಮುಡಿವಾಳ ಪಚ್ಚೆಯ ಚಾಮರಂಗಳು (ಉತ್ತರ. ೦೪-೫೫). **ಲಾಮಚ್ಚ** : "ಲಾಮಚ್ಚ [ಶಾಕಾಂ. ಮಂಚ] ದಿರವೆ ಕೊಳವೇರೆಸಿಕ್ಕುಂ" (ಕಬ್ಬಿ. ೨೦). **ಲಾಮಚ್ಛ** : "ಕಾಕ್ಷಿಕಾ – ಲಾಮಚ್ಛ, ಒ(ಪೊ)ಗರು (ಜು)ಮಣ್ಣು" (೬೭ಧಿ. ೨೯). **ಲಾಮಜ್ಜ** : "ಶ್ವೇತವಾಲುಕಂ – ಲಾಮಜ್ಜ" (೬೫ಧಿ. ೦೭೦). **ಲಾಮಜ್ಜೆ** : "ಇಷ್ಟಕಾ ಪಥಂ – ಲಾಮಜ್ಜೆ" (೬೫ಧಿ. ೦೪). **ಲಾವಂಚ** : ಕಂಪಿನ ಮೊಲ್ಲೆ ಮಲ್ಲಿಗೆ ಪದ್ಮ ಲಾವಂಚ ತಂಪೆನುತಿರ್ದರಲ್ಲಲ್ಲಿ (ಶರಶ. ೯೭-೨೫) ; ಯಾವ ಲಾವಂಚದ ಬೀಸಣಿಗೆ . . . ತಂಪಿಡಿದೀತು ? (ಬಾಂತ್ರ. II. ೦೦೬೦).

**ಲಾವಂಚಿ** : ಕಬ್ಬು, ನಸೇ, ಲಾವಂಚಿ, ಕಾಶಿ (ಕಮ್ಮಚು. ೨೩೯).

[ < ಪ್ರಾ. ಲಾಮಂಜಯ, ಲಾವಂಜ. / ಸಂ. ಲಾಮಜ್ಜಕ ]

**ಲಾಮಚ** 'ಲಾಮಂಚ' ನೋ.

**ಲಾಮಚ್ಚ** 'ಲಾಮಂಚ' ನೋ.

**ಲಾಮಚ್ಛ** 'ಲಾಮಂಚ' ನೋ.

**ಲಾಮಜ್ಜ** 'ಲಾಮಂಚ' ನೋ.

**ಲಾಮಜ್ಜಕ** (ನಾ). = ಲಾಮಂಚ : "ಉಶೀರಂ, ಅಭಯಂ . . . ಲಾಮಜ್ಜಕಂ, ಲಘು, ಲಯಂ, ಅಪದಾಹಂ, ಇಷ್ಟಕಾಪಥಂ–೧೦ . . . ಲಾಮಂಚದ ಹೆಸರು" (ಸಿದ್ಧಾಂಕಿ. ೦೫೦). [ಸಂ.]

**ಲಾಮಜ್ಜೆ** 'ಲಾಮಂಚ' ನೋ.

**ಲಾಮಾ**, ಲಾಮ (ನಾ). [ಬೌದ್ಧ] ಧರ್ಮಗುರು : ಬೌದ್ಧಧರ್ಮದ ಮುಖ್ಯಆಚಾರ್ಯನಾದ ಲಾಮಾ ಎಂಬುವನು ಇರುತ್ತಾನೆ (ಕುಂಬಿಯ. ೪-೨೦೯). **ಲಾಮ** : ಮತಪ್ರವರ್ತಕರಾದ ಗುರುಗಳು 'ಲಾಮ' ಎಂದು ಕರೆಯಲ್ಪಡುತ್ತಾರೆ. ಮಹಾಲಾಮನು ಬುದ್ಧನ ಅವತಾರವೆಂದು . . . ಭಾವಿಸೋಣವಾಗಿದೆ (ಭೂಗೋಳ. ೦೨೦).

[← ನೇಪಾಳಿ. ಲಾಮಾ ; ಟಿಬೆಟಿಯನ್. ಬ್ಲಾಮ]

**ಲಾಮಾಪಂಥ** (ನಾ). ಬೌದ್ಧರ ಒಂದು ಪಂಥ,–ಪಂಗಡ : ಪದ್ಮಸಂಭವ ತಾಂತ್ರಿಕಬೌದ್ಧಮತದ ಆಚಾರ್ಯನಾಗಿದ್ದು . . . ಲಾಮಾ ಪಂಥವನ್ನು ಆರಂಭಿಸಿದ (ಭಾರಜ. ೩೪೭). [ಲಾಮಾ + ಪಂಥ]

**ಲಾಯ** (ನಾ). ಕುದುರೆಗಳನ್ನು ಕಟ್ಟುವ ಕೊಟ್ಟಿಗೆ ; ಅಶ್ವಶಾಲೆ ; ತಬೇಲಿ : "ಲಾಯ:_ಕುದುರೆಯ ಮನೆ" (ಕಾಕೌ. ೦೭೭) ; ಲಾಯದ ಅಶ್ವ ನೀರನೊಡಗೂಡಿತ್ತು (ಮರಾಜ. ೫೭) ; ಲಾಯದೊಳಗುತ್ತಮದ ತೇಜಿಯನಾಯ್ದು ಹೂಡಿದ ರಥಕೆ (ಪಳಕ. ೬-೨೯) ; ಒಬ್ಬನು ಕುದುರೆಗಳನ್ನು ಲಾಯದಲ್ಲಿ ತಂದು ಕಟ್ಟಿದನು (ಮಂಜಾಳ. ೦೦); ಅರಸನ ಕುದುರೆ ಲಾಯದಲ್ಲೇ ಮುಪ್ಪಾಯಿತು (ಗಾದೆ).

[? / ತಮಿ. ಮಲ. ತುಳು. ತೆಲು. ಲಾಯ]

**ಲಾಯಃಖ್** 'ಲಾಯಕ್ಕು' ನೋ.

**ಲಾಯಕು** 'ಲಾಯಕ್ಕು' ನೋ.

**ಲಾಯಕ್ಕು**, ಲಾಯಃಖ್, ಲಾಯಕು, ಲಾಯಖು, ಲಾಯಖ್ಖು (ನಾ). ೧. ಯೋಗ್ಯವಾದುದು ; ಅರ್ಹವಾದುದು : ಒಂದು ರೀತಿಯಿಂದ ಸುದ್ದಿಗಳು ಹುಟ್ಟುವುದು ಲಾಯಕ್ಕು (ಐಮಾಜ. ೨). ೨. ಯೋಗ್ಯವ್ಯಕ್ತಿ ; ಅರ್ಹನಾದವನು: ಶ್ರೀಧರನು . . . ಆ ಹುಡುಗಿಗೆ ಸುತರಾಂ ಲಾಯಕ್ಕಲ್ಲ (ಕಿಪರಾ. ೦೦೯) ; ಹೋಗಾ ಹೊರೋಕೆ ನೀನು ಲಾಯಕ್ಕು (ಅವ್ವಕ್ರೂ. ೭೩) ; ಸೇವೆಗೆ ಲಾಯಕ್ಕು ಆಗಿದ್ದೀ (ಬೆಂಕ್. ೨೯೨). **ಲಾಯಃಖ್** : ೧. ಮರಿಕತ್ತೆ ಲಾಯಃಖಾಗಿಲ್ಲ, ಕುಂಟುತ್ತದೆ (ಹಸಹೂ. ೩೨೦). **ಲಾಯಕು** : ೧. ಎತ್ತುಗಳು ಗಿಡ್ಡರಾಸಿ ಆಗಿ ಗಾಡಿ ಎಳೆಯುವ ಲಾಯಕು ಅಲ್ಲ (ರಾಜೇಂದ್ರ. ೫೪). **ಲಾಯಖು** : ೧. ಸಾಗುವಳಿ ಲಾಯಖು ಭೂಮಿ (ಭೂಕಾಂ. ೩೪) ; ತಮಿಳು, ತೆಲುಗು ಸಿನೇಮಾನೇ ಅವರಿಗೆ ಲಾಯಖು (ಹವ್ಯಂಡ. ೫೭). ೨. ಚಿಕ್ಕಪುಟ್ಟ ಕಳವು ಮೊಕದ್ದಮೆಗಳನ್ನು ಹಿಡಿದು ವಿಚಾರಿಸಲು ಲಾಯಖಾಗಿರುತ್ತಾನೆ (ಗ್ರಾಕಾಳ. ೬೧). **ಲಾಯಖ್ಖು** : ೧. ಕೇವಲ ಗುಮಾಸ್ತರ ವರ್ಗವನ್ನು ಉತ್ಪತ್ತಿ ಮಾಡುವುದಕ್ಕೆ ಲಾಯಖ್ಖಾದ ಶಿಕ್ಷೆ (ಭುಜಾಂಗ. ೦೬೩) ; ಇದು ಅದಕ್ಕಿಂತ ಪಸಂದಾಗಿದೆ. ಲಾಯಖ್ಖಾಗಿ ಬಳುಕ್ತದೆ. ಎಂದು ಐಗಳಿಗೆ ಕೊಟ್ಟರು (ಮರಳು. ೩೫೬).

[← ಅರ. ಲಾಇಕ್ ; ಹಿಂ. ಲಾಯಕ್ ; ಮರಾ. ಲಾಯಕ್, ಲಾಯಖ್]

**ಲಾಯಖು** 'ಲಾಯಕ್ಕು' ನೋ.

**ಲಾಯಖ್ಖು** 'ಲಾಯಕ್ಕು' ನೋ.

**ಲಾಯಗುದುರೆ** (ನಾ). ಲಾಯದಲ್ಲಿರುವ ಕುದುರೆ : ಮತ್ತಗಜ ಮದ ವೇಜು ಕಂಭವ ಕಿತ್ತುದುಪ್ಪರಿಗೆಯ ಮುಜಿದುದಾ ಲಾಯಗುದುರೆಗಳಾ ತುತ್ತಿದುದು (ಕಾಳ್ಗ. ೨೨-೩೨). [ಲಾಯ + ಕುದುರೆ]

**ಲಾಯರ್** 'ಲಾಯರು' ನೋ.

**ಲಾಯರಿ** (ನಾ). ವಕೀಲವೃತ್ತಿ ; ವಕಾಲತ್ತು : ಈ ಸಲದ ಲಾಯರಿ ಪರೀಕ್ಷೆಗೆ ಅವನು ಕುಳಿತಿದ್ದ (ರಜ). [< ಲಾಯರು]

**ಲಾಯರಿಕೆ** (ನಾ). ವಕೀಲನಾಗಿರುವಿಕೆ ; ವಕೀಲಿವೃತ್ತಿ : ಸೀತಾರಾಮು ನೋಡಲು ಗಡುಸಾಗಿದ್ದರೂ ಸ್ವಭಾವ ಮಾತ್ರ ಬಹಳ ಮೃದು . . . ಆದರಿಂದಲೇ ಇರಬೇಕು ಲಾಯರಿಕೆಯಲ್ಲಿ ಅಷ್ಟಾಗಿ ಹೆಸರು ಬರಲಿಲ್ಲ (ಅಂಕು. ೬೬). [ಲಾಯರು + – ಇಕೆ]

**ಲಾಯರು, ಲಾಯರ್** (ನಾ). ನ್ಯಾಯವಾದಿ ; ವಕೀಲ : ಮೃದುಸ್ವಭಾವದ ಜನರು ಲಾಯರುಗಳಾದರೆ ಕಕ್ಷಿಗಾರರಿಗೆ ಕೈಲಾಸವೇ ಗತಿ ! (ಅಂಕು. ೬೬). **ಲಾಯರ್** : ಈಗ ಮೈಸೂರಿಗೆ ಬಂದು ಲಾಯರ್ ಆಗಿರಲು ಪ್ರಯತ್ನಿಸುತ್ತಿದ್ದ (ಅಂಕು. ೬೬). [← ಇಂ. Lawyer]

**ಲಾಯವಳ್ಳ** (ನಾ). ಲಾಯದ ಸೇವಕ : ಈ ಲಾಯದಿಂ ವಿಜಾ ಬಂದತ್ತರರೇ ಕರ್ಗೋಡಗಂ ಭೋಯೆನುತೆ ವೇಜಗೆ ಸಾರ್ತರ್ಪಿನಂ ಲಾಯವಳ್ಳರ್ (ಪುತ್ರಗೋ. ೨೦-೩೯). [ಲಾಯ + – ವಳ್ಳ (< – ವಳ)]

**ಲಾಯಿ** (ನಾ). ವರಸೆ (?) : ಛಾಯದಲಿ ಸಲೆ ಚೊಕ್ಕಯದಲು ಪಾಯಕರ ದಂಡೆಯಲಿ ಲಗುಡಿಯ ಲಾಯಿಯೊಳಗೆ ನವಾಯಿ ಬಿನ್ನಾಣದಲಿ ಬೇಸಜದೆ ಸ್ಥಾಯಿಯಲಿ ಸಂಚರಿಯಲೀಯದಳ್ಳಾಯಿಯಲಿ ಬಂಧದ ವಿನೋದದಲಾಯತನವನಚಿದಿಹನೆ ಮಲ್ಲನು ರಾಯ ಕೇಳೆಂದ (ಕುವ್ಯಾ. ಸ. ೬೮೪. ೮-೮೩). [ ? ]

**ಲಾರಣಾ** (ನಾ). (?) : ಮಾರ್ಗದಲ್ಲಿ ಅವರನ್ನೆಲ್ಲಾ ಲೂಟೀಮಾಡಿ ಭರತಪುರ್ ಕುದುರೆ ವೈಕಿ ಕೆಲವೂ ತಮ್ಮ ಕಡೆ ಲಾರಣಾ ಬರಸಿಕೊಂಡು . . . ಕೋಟೆಯಲ್ಲಿಯಿದ್ದ ಫವುಜನೆಲ್ಲಾ ತೆಗೆದು ಕಡತನಾಳು ಕೆಂಗಾಳು ಬೋರೆ ಮೇಲೆ ಯಿಳಿಸಿದರು (ಕೃಡಚ. ೩೮). [ ? ]

**ಲಾರಿ** (ನಾ). ಸಾಮಾನು, ಸರಂಜಾಮುಗಳನ್ನು ಸಾಗಿಸುವ ಒಂದು ಬಗೆಯ ಮೋಟಾರು ವಾಹನ : ಲಾರಿಯಲಿ ಇದನು ಸಾಗಿಸಿ ಇಳಿಸಿ ಬಾಗಿಲಲಿ ಹಣ ಸಂದಿತೆಂದು ತೆರಳಿದನು ಸಂತುಷ್ಟಿಯಲಿ (ಬೀಸಮ. ೬೦-೦೩); ದೊಡ್ಡದೊಂದು ಲಾರಿ ಬಂದು ನಿಂತಿತು (ಕಲ್ಕರೂ. ೫೮) ; ಘಾಟಿಯ ದಾರಿಯ ಲಾರಿಯ ನಡುಸುವುದು (ಕಂಪ್ರಕೀ. ೦೦೮-೨೮). [← ಇಂ. Lorry]

**ಲಾಲ್** (ನಾ). ೧. ಕೆಂಪುಬಣ್ಣ ; ಕೆಂಬಣ್ಣ. ೨. ಕಂದುಬಣ್ಣದ ಮೈ ಹಾಗೂ ಕೆಂಬಣ್ಣದ ಎದೆ ಇರುವ ಒಂದು ಬಗೆಯ ಹಕ್ಕಿ : ಚಿಕ್ಕ ಹಕ್ಕಿಗಳಲ್ಲಿ ಹೂಗುಬ್ಬಿಗಳ ಸಾಲಿಗೆ ಸೇರುವ "ಲಾಲ್" ನಮ್ಮಲ್ಲಿ ಅತಿ ಪ್ರಿಯವಾದ ಹಕ್ಕಿ (ಜೀಂಕ್ರ. III. ೦೪೬೩).

**ಲಾಲ್‌ತರಕಾರಿ** = ಮಾಂಸ : ಮುಖ್ಯವಾಗಿ ಅವನಿಗೆ ಬೇಕಾದುದು ಲಾಲ್‌ತರಕಾರಿ (ಪಕ್ಕಾಕು. ೨೨೦). [← ಪಾರ. ಹಿಂ. ಮರಾ. ಲಾಲ್]

**ಲಾಲ್‌ತಿಗಡೆ** (ನಾ). ಒಂದು ಬಗೆಯ ತಿಗಡ ; ಕೆಂಪು ತಿಗಡೆ : "ಸರಲಾ, ತ್ರಿಪುಟಾ . . . ಭೇದಿಯಾಗುವ ಲಾಲ್‌ತಿಗಡ" (ಸಿದ್ಧಾಂತಿ. ೦೪೩).

[ಲಾಲ್ + ತಿಗಡ್ಡೆ]

**ಲಾಲ್‌ಬಾಗ್, ಲಾಲಬಾಗು** (ನಾ). ಉದ್ಯಾನವನ ; ತೋಟ : "ಆಕ್ರೀಡಃ, ಉದ್ಯಾನಂ . . . ಅರಸುಗಳಿಂದ ಹಾಕಿಸಲ್ಪಟ್ಟಿರುವ ಊರು ಹೊರಗಣ ತೋಟ, ಲಾಲ್‌ಬಾಗ್" (ಸಿದ್ಧಾಂತಿ. ೦೦೦) ; ಲಾಲ್‌ಬಾಗಿನಿಂದ ದವಲತ್ತುಬಾಗು . . . ಪ್ರಾರಂಭಮಾಡಿದರು (ದಾಕೀಂಪ್ರ. ೩೨). **ಲಾಲಬಾಗು** : ಸರ್ವಮಾನ್ಯಮಂ ಪಡೆದು ಓರಿಯ ಕೆಜಿಯ ಕೆಳಗೆ ಲಾಲಬಾಗಿನ ಹರಿನೀರಲ್ಲಿ ಬಿಟ್ಟಡಕೆ ತೋಂಟ (ಸ್ಕೇಪ. IX–i. ೨೬೭-೩೯ ; 1160) ; 'ಚಿಕ್ಕಲಾಲ್‌ಬಾಗ್' ಎಂದು ಯಾರು ಹೆಸರಿಟ್ಟರೋ, ಏಕೆ ಇಟ್ಟರೋ ತಿಳಿಯದು, ಬೆಂಗಳೂರಿಗೆಲ್ಲ ಹೆಮ್ಮೆಯ ಉದ್ಯಾನವಾದ ಲಾಲಬಾಗಿಗೂ ಇದಕ್ಕೂ ಒಂದು ವಿಷಯದಲ್ಲೂ ಹೋಲಿಕೆಯಿಲ್ಲ (ಶ್ರೀಕಾಲೋ. ೪೦). [ಲಾಲ್ + ಬಾಗ್]

**ಲಾಲ** (ನಾ). ಒಂದು ಬಗೆಯ ಆಲಲೆ : "ಸಜ್ಜರಸ – ಲಾಲ" (ಲಕಂ. ೦೬೪). [ಸಂ. ಲಾಲಾ]

**ಲಾಲಂಕಿ** (ನಾ). ಒಂದು ಬಗೆಯ ಆಟ (?) : ಒಂದೊಂದಿವಸಂ ಬ್ರಾಹ್ಮಣರ ಪುತ್ರರೊಳಗೆ ಬಸವಂ ಸಂತೋಷದಿಂದೆ ಲಾಲಂಕಿಯಾಡಲು ಪೂರ್ವ ಭ್ರಾಂತನುಂ ಮಹೋರ್ವನಂ ಬಾವಿಯೊಳು ನೂಂಕಿಯುಂತು ಕೆಡಹುವರೆ ಬಸವರಸರೇ ಎಂದಷ್ಟುಮುಂದಿವನ ಮೇಲಿಕ್ಕಲು (ಶ್ರಕುಂ. ೬-೭೭). [?]

**ಲಾಲಂಗಿ** (ನಾ). [ಸಂಗೀತ] ಠಾಯಗಳಲ್ಲಿ ಒಂದು ಪ್ರಭೇದ ; ರಾಗಾಲಾಪನೆಯ ಒಂದು ಪ್ರಕಾರ : ಗಮಕಂ ಗಾರವಂಬಡೆಯೆ ಗಹಗಹಿಕೆಗೊಂಡಂಗೊಂಡಿ ಚಡಂ ಬಾಹಟಂ ಲಾಲಂಗಿ ತನ್ನೆವಣಿ ನಿಸ್ಸರಣೆ ರಂಗರಕ್ತಿ ಬೇಗವಣೆತು . . . ಕಮ್ಮಣೆ ಪೆಸರಂ ಬೆಡಂಗುವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೦೬-೬೬ ವ). [ ? ]

**ಲಾಲಣೆ** (ನಾ). (?) : ನೂಕದರೊಳ್ಪಾಗೆ ಪಾಲ ಮಣಿಯೊಳ್ ಪರಿಸಾಮೈಲುಂ ವಿಷಮಗಳಿದ್ದಪೆ ಮೂಲದೊಳುಂ ದ್ವಿಗುಣಗಾಣ್ ಅದನಂ ಮತ್ತಾ ಪಾಲೆಂ ಮುಜಿಸು ಕೂಡಿಸು ಲಾಲಣೆಯೊಳ್ಗುಣಿಸೆ ಚೌಪಮಣಿಯೊಳ್ಪರಿಸಾ (ಜಾಕ್ಕರ. ೬೮-೨). [ ? ]

**ಲಾಲನೆ** (ನಾ). ೧. ಅಕ್ಕರೆಯನ್ನು ತೋರಿಸುವುದು; ಮುದ್ದಾಡುವುದು; ಮುದ್ದಾಟ : ಬಾಲಕನ ಲೀಲೆಯಂ ಕಂಡು ಹಿಗ್ಗುವಳೊಮ್ಮೆ ಲಾಲನೆಗಳೆಲ್ಲೆಂದಳಲ್ದು ಮಜುಗುವಳೊಮ್ಮೆ (ಕೃಬಿಥಾ. ೨೮-೦೮) ; ಪಾಲನೆ ಇಲ್ಲದಿದ್ದರೆ ಲಾಲನೆಗೆ ಕಡಿಮೆಯೇ ? (ಗಾರ). ೨. (ರಕ್ಷಣೆಯಲ್ಲಿರುವ ಕಾಡೆಮ್ಮೆಗಳ) ಗುಂಪು (?): ಕಂಡ ಮೃಗ ಮೈದೆಗೆಯದಿಕ್ಕೆಯ ಹಿಂಡು ಹೊಳಹಿನ ಹುಲಿಯ ಮೋಕೆಯ ಮಿಂಡವಂದಿಯ ಲಾವ್ಗಗೆಯ ಲುಲಾಯ ಲಾಲನೆಯ ತೊಂಡುವೊಲನ ತೊಡಂಕು ನವಿಲಿನ ಖಂಡೆಯದ ಪೊಳನೆಡದ ಏಡ್ಡಗದ ಹಿಂಡುಗಳ ತೋಜಿಸುವೆನು (ಕುವ್ಯಾಅ. ೦೫-೦೮). [ಸಂ. ಲಾಲನ]

**ಲಾಲಬಂದಿ** 'ನಾಲಬಂದಿ' ನೋ.

**ಲಾಲಬಾಗು** 'ಲಾಲ್‌ಬಾಗ್' ನೋ.

**ಲಾಲಸ** (ನಾ). ೧. ಅತಿಯಾದ ಆಸೆ,—ಬಯಕೆ : "ಲಾಲಸಾ, ಮಹಾನ್ನರ—ಹೆಚ್ಚಾದ ಅಪೇಕ್ಷೆಗೆ ಹೆಸರು" (ಸಿದ್ಧಾಂತಿ. ೬೬) ; ಮಾತಂಗಳ್ ಮದಸರಾಗೋನ್ಮಾದಮಂ ಬೀಜ ಬಾಹುಗಳಾಲಿಂಗನಲಾಲಸಂಗಳೆನೆ ಧೈರ್ಯಂಗೆಟ್ಟು ಮೇಲ್ವಾಯ್ದು ಚೇಷ್ಟೆಗೆ ಪೌಲಸ್ತ್ಯನುಮೊತ್ತುಗೊಟ್ಟನೆನರಾಜಿಂದರ್ಪಕಂ ದಂಡಿಸಂ (ಹಂಪಾಪು. ೯-೦೪೮). ೨. ಅತಿಯಾದ ಅಪೇಕ್ಷೆಯುಳ್ಳವನು : "ಲೋಲುಭಂ, ಲೋಲುಪಂ, ಲೋಲಂ, ಲಾಲಸಂ, ಲಂಪಟಂ_ಈ ೫ ಆಳಿಪುವವಂ" (ಹಲಾಯು. ೫೬-೦೪೮); ಶ್ರೀರಾಮಚಂದ್ರದರ್ಶನಲಾಲಸರ್. . . ಕಾಣಿಸಿಕೊಂಡರ್ (ರಾಪಟಾಕ್ಷ. ೦೬-೬); ಅತ್ಯಲ್ಪ ಸಂಖ್ಯೆಯ ಜನ ಅತಿಧನಿಕರಾಗಿ ಭೋಗಭಾಗ್ಯಗಳಲ್ಲಿ ಲಾಲಸರಾಗಿರುವುದು ಅನ್ಯಾಯ (ಹಪತ್ರ. ೨೦೬). [ಸಂ.]

**ಲಾಲಸಕ** (ನಾ) = ಲಾಲಸ ೨ : "ಲೋಲುಪಸ್ಪಭಿಲಾಷುಕಸ್ತಿಲಾಲಸಕಂ ಗೃಧ್ನು ಲಂಪಟಂ ಲುಬ್ಧನವಂ" (ಪಕ್ಕಶೀಅ. ೯೯-೬). [ಸಂ.]

**ಲಾಲಸೆ** (ನಾ). ೧. ಅತಿಯಾಸೆ; ಉತ್ಕಟವಾದ ಇಚ್ಛೆ; ಔತ್ಸುಕ್ಯ : ಎಲ್ಲಿ ಸೌಂದರ್ಯವಿರುವುದೋ ಅಲ್ಲಿ ಲಾಲಸೆಯು ಸುತ್ತುವರೆದಿರುತ್ತದೆ (ಹುಕುಂಕ. ೪೯೩); ನಮ್ಮ ಪ್ರೇಮವು ಶುದ್ಧ. . . ಆದರಲ್ಲಿ ಲಾಲಸೆ ಇಲ್ಲ (ಶ್ರೀಕಾಕ. ೦೯೦). ೨. ಗರ್ಭಿಣಿಯ ಆಸೆ,—ಬಯಕೆ : "ದೋಹಳಂ,

ದೌಹೃದಂ· ಶ್ರದ್ಧಾ· ಲಾಲಸಾ_ಈ ೪ ಬಯಕೆ" (ಹಲಾಯು. ೬೨-೩೪೪). [ಸಂ.]

**ಲಾಲಾಂಬು** (ನಾ)· ಜೊಲ್ಲು : ಕರಿಕರಶೀಕರಮದಜಳ ತುರಂಗಲಾಲಾಂಬು ಸೇಕದಿಂದಬ್ಬಿದುಬ್ಬಿದಿರ್ದ ರಜಂ ನರೇಂದ್ರಚಾಮರಮರುದ್ಧಥಪತಿಯಿಂ ತೆರಳ್ದು ತೂಳ್ದತ್ತು (ಆದಿಪು. ೧೧-೩೯). [ಸಂ.]

**ಲಾಲಾಗ್ರಂಥಿ** (ನಾ)· ಜೊಲ್ಲು ಉತ್ಪತ್ತಿಯಾಗುವ ಗ್ರಂಥಿ;-ಕೋಶ : ಪಚನಕ್ಕೆ ಸಂಬಂಧಿಸಿದ ಕಿಣ್ವಗಳನ್ನು· ಲಾಲಾಗ್ರಂಥಿಗಳು . . . ಸ್ರವಿಸುತ್ತವೆ (ಶೀಲಿಶ. ೨೯). [ಸಂ.]

**ಲಾಲಾಜಲ**, ಲಾಲಾಜಳ· ಲಾಳಾಜಳ (ನಾ)·=ಲಾಲಾಂಬು : ಖಲೀನ ಸ್ಖಲನಭವಬಹುಳಲಾಲಾಜಲಪುಂಗಾತಿರೆ ತುರಗರತ್ನಮೆಸೆದತ್ತಾಗಳ್ (ಗಾದಂಪು·೪೩೪); ಮೋಹವಲ್ಲರಿ ಪಸರಿಸಿ ಪರ್ಬಿದುದು ಸಾತರ ಲಾಲಾಜಲದಿಂ (ಶಂರಾಪು. ೩-೧೩೯); ಗಜಗಳ ಮದಧಾರಾಜಲದ ಮತ್ತು ಕುದುರೆಗಳ ಲಾಲಾಜಲದ ಪ್ರವಾಹವು . . . ಅನವರತವಾಗಿ ಹರಿಯುತ್ತಿತ್ತು (ಕವೀರ· ೯೬). **ಲಾಲಾಜಳ** : ಗಜಮದಧಾರಾಜಳದ ಹಯಂಗಳ ಲಾಲಾಜಳದ ಪೊನಲ್ (ಎಕ· VII. ಶಿಕಾ೦· ೧೧೦-೦೩; 1129)· **ಲಾಳಾಜಳ**: ಘಟ್ಟಿಸಿದ ಕೀಟ ಘಟ್ಟಣೆಯೊಳ್ ಪೊಟ್ಟಗೊಡೆದ ತಾಳುಗೆಗಳ ರುಧಿರಜಲದೊಳ್ ಬೆರಸಿ ಪದಗೆಂಪನಾಳ್ದ ಜಾತ್ಯಶ್ವದ ಲಾಳಾಜಳದೊಳಂ (ಶಂಶಪು. ೧೧-೭೦ ವ); ಹಯಲಾಳಾಜಳಮುಂ ಮದೇಭಮದಮೂತ್ರಾ ಸಾರಮುಂ. . . ಮೊಟ್ಟೈಸಿ (ಪುಶ್ಯಾ. ೩-೪೩). [ಸಂ.]

**ಲಾಲಾಜಳ** 'ಲಾಲಾಜಲ' ನೋ·

**ಲಾಲಾಟ** (ಗು)· ೧· ಹಣೆಯಲ್ಲಿರುವ : ಭವಲಾಲಾಟವಿಲೋಚನಾಗ್ನಿ ಶಿಖೆಯಿಂ ಬೆಂದು (ಶಂಶಪು· ೭-೨೪)· (ನಾ)· ೨· ಹಣೆ; ನೊಸಲು· [ಸಂ.]

**ಲಾಲಾಟಿಕ** (ನಾ)· ೧· ಒಡೆಯನ ಮುಖವನ್ನು ನೋಡಿಯೇ ಅವನ ಅಭಿಪ್ರಾಯವನ್ನು ತಿಳಿದುಕೊಳ್ಳುವವನು· ೨· ಕೊಟ್ಟ ಕೆಲಸವನ್ನು ಮಾಡಲು ಅಸಮರ್ಥನಾದವನು : "ಲಾಲಾಟಿಕಃ. ಪ್ರಭೋರ್ಭಾವದರ್ಶೀ—ಅರಸಿನ ತಾತ್ಪರ್ಯವನ್ನು ತಿಳಿದವನು. ಕಾರ್ಯಾಕ್ಷಮಃ. ಕೆಲಸವನ್ನು ನಿರ್ವಹಿಸಲಾರದ ಅಸಮರ್ಥನು — ೨ಕ್ಕೂ ಹೆಸರು" (ಸಿದ್ಧಾಂತ. ೩೭೩). [ಸಂ. ಲಾಲಾಟಿಕ]

**ಲಾಲಾರಸ** (ನಾ)·=ಲಾಲಾಂಬು : "ಜೊಲ್ಲು. ಲಾಲಾ(ರಸ); ಉಗುಳು. ಬಾಯಿನೀರು" (Saliva· ೨೦೪೩). [ಸಂ.]

**ಲಾಲಿ**$_1$ (ನಾ)· ಮಕ್ಕಳನ್ನು ಮಲಗಿಸುವಾಗ ಹಾಡುವ ಹಾಡು; ಜೋಗುಳ : ಲಾಲಿ ಲಾಲಿ ರಂಗಯ್ಯಗೆ ಲಾಲಿ ಲಾಲಿ (ಪುರಂದ· ೩-೨೦೯ ಕಲ್ಪ೩): ಲಾಲಿ ಮಿಸುನಿಯ ಬೊಂಬೆರನ್ನವೆ ಲಾಲಿ ಲಾಲೀಯೆಂದು ತೂಗಿದರಾಳಿಕನ್ನೆಯರು (ತಸಭಾ. ೩೨-೧೧) ; ಜಗದಂಬೆ ತೊಡೆಯಲ್ಲಿ ಲಾಲಿ ಕೇಳುತ್ತ ಸೊಗನಿದ್ದೆಗೊಂಡವನು ಬರುವನೇ ಇತ್ತ ? (ಕವಿಪು· ೪೭-೦೩). 'ಲಾಲಿಪದ' ಪರಾ. [ದೇ.॥ ತಮಿ. ತೆಲು. ಲಾಲಿ]

**ಲಾಲಿ**$_2$ 'ಲಾಳಿ$_1$' ನೋ.

**ಲಾಲಿತ**· ಲಾಳಿತ (ಗು). ೧· ಮಮತೆಯಿಂದ ಕೂಡಿದ ; ಪ್ರೀತಿಯ : ಲಾಲಿತಾಸ್ಯವೆ ಮಮತೆ ತೊಳಗುವ ಲೋಲಲೋಚನಮಬುಹುಕುಬುಹು ಪಮೇಳವಾಗಿಹ ಗರಿಜೆ ಮೆಚ್ಚಿದಳು ಶಂಕರಾಂಕವಲಿ (ತ್ರಶುಕೀ. ೨-೧೧). ೨. ಪ್ರೀತಿಯಿಂದ ಪೋಷಿಸಿದ,-ರಕ್ಷಿಸಿದ,-ಸಾಕಿದ : ಲಾಲಿತೋತ್ತಮ ವಾಜಿಗಳು ತೊಂಬತ್ತುಸಾಸಿರವು (ರಶಪು. ೫-೦೯). (ನಾ)· ೩· ಒಲವು; ಪ್ರೀತಿ: ಅನುರಾಗ. ೪. ಆನಂದ; ಸಂತೋಷ: 'ಲಾಲಿಸು' ಹೋ. **ಲಾಳಿತ** : ೫· ಪ್ರೀತಿಯಿಂದ 'ಸಾಕಿದುದು,-ಪೋಷಿಸಲ್ಪಟ್ಟುದು : ಲಾಳಿತವಾಗಿ ತನ್ನ ನಡೆಯಿಂ ನಡೆಗಲ್ತೊಡವರ್ಪ ಕೇಳಿಹಂಸಾಳಿಯ ಬೆನ್ನೊಳ್ಪೆದೆ ನಡೆಯಲ್ ಬಸಮಲ್ಲದೆ ನಿಂದು (ಜಗಾ . ೨-೯೬). [ಸಂ.]

**ಲಾಲಿತ್ಯ** (ನಾ). ೧· ಚೆಲುವು ; ಸೌಂದರ್ಯ. ೨· ಮಾಧುರ್ಯ ; ಇಂಪು : ಸರಸಪದಶಯ್ಯಾದೃಢವ್ಯಾಕರಣಯುತ ಲಾಲಿತ್ಯನಿಯಮಾಕ್ಷರ ಸಲಕ್ಷಣಭಾವಮಾಗಿರೆ ರಚಿಸುವೆಂ ಕೃತಿಯ (ಬಸಪು· ೦-೦೯); ಸಂಗೀತವು . . . ಕೇವಲ ಲಾಲಿತ್ಯದೆಡೆಗೆ ವಾಲಿದಂತಿವೆ (ಹಾರಡ· ೫೪೬)· ೩. [ಕಾವ್ಯಮೀ] ಶಬ್ದಗುಣಗಳಲ್ಲಿ ಒಂದು : ಶ್ಲೇಷ, ಲಾಲಿತ್ಯ . . . ಯೌಗಿಕೀ ಇವು ಏಳೂ 'ಶಬ್ದಗುಣಗಳು' (ಶ್ರಬಿ. ೨೩೨ ಅಡಿ). [ಸಂ.]

**ಲಾಲಿಪದ** (ನಾ)·=ಲಾಲಿ$_1$ : ತಾಯಿಯ ಇಂಪಾದ ಲಾಲಿಪದವನ್ನು ಕೇಳುತ್ತಾ, ಮಗು ಮಲಗಿತು (ಹೊಸ)· [ಲಾಲಿ$_1$+ಪದ$_2$]

**ಲಾಲಿಸು** (ಕ್ರಿ). ೧. ಅಕ್ಕರೆಯನ್ನು ತೋರಿಸು ; ಮುದ್ದಾಡು : ಪಶುಗಳ್ ಕಪ್ರುರಮೃಗಂಗಳ್ . . . ಪ್ರಜೆಗಳುಂ ತಾವೆಲ್ಲರುಂ ತಮ್ಮಯಾ ಶಿಶುಪಂ ಲಾಲಿಸದಿರ್ಪರೇ (ಸೋಮೇಶ. ೯೪) : ಪುಳಕಿಸುತೆ ಕಂಪಿಸುತೆ ಬೀಳ್ಕೊಂಡನಕ್ಕಜಿಂ ಲಾಲಿಸುತ್ತಾಲಿಸುತೆ (ಭಾರ. ೩-೮); ಯಾವಾಗಲೂ ಅದನ್ನು ಎತ್ತಿಕೊಂಡೇ ಇರುತಾ ಲಾಲಿಸುತಿದ್ದಳು (ಮಹಾಮಾ. ೦೨೨). ೨· ಪೋಷಿಸಲ್ಪಡು ; **ಆರೈಕೆ ಹೊಂದು** : ಅಂದಳವನೇರಿಕೊಂಡು ತಿರುಗಾಡುವುದರಿಂದ ಆಯುಸ್ಸು ಹೆಚ್ಚಿ . . . ಕೀರ್ತಿಯಿಂದ ಲಾಲಿಸಲ್ಪಟ್ಟು ಬಹುಸಿದ್ಧಿಕರವಾಗಿರುವುದು (ಸಕವೃ. ೫೫). ೩. (ಕಿವಿಗೊಟ್ಟು) ಕೇಳು ; ಆಲಿಸು : ಆಲಿಸೆನ್ನ ಬಿನ್ನಪವ ಲಾಲಿಸೆನ್ನ ಬಿನ್ನಪವ (ಮುಹಾದೇ· ೬· ೩೭-೪೦); ಒರೆಯೆ ಲಾಲಿಸಲೋದುತಿರ್ದುದು ಕರಣಿಸಂದೋಹ (ಕೌಶಲಾ. ೪೪-೫೦); ದಯವಿಟ್ಟು ನನ್ನ ಮಾತುಗಳನ್ನು ಲಾಲಿಸು (ಆರ್ಯಶ. ೫೯). ೪. ಸಂತೋಷಿಸು : ಮದ್ದಳೆಯ ಗತಿಗೆ ಜಘನಗಳೆದ್ದಾಡಲು ನಗುತ ಕಂಡು ಲಾಲಿಪರಲ್ಲದೆ ಪದ್ಯ ಪದ ಕಾವ್ಯದರ್ಥವ ದೊದ್ದೆಗರೇಂ ಬಲ್ಲರ್ (ಶೀಕಾ. ೭೩). [ಲಾಲನೆ+—ಇಸು$_3$]

**ಲಾಲಿಹಾಡು** (ನಾ)· = ಲಾಲಿ$_1$ : ತೆಲುಗರ ಜನಪದಸಾಹಿತ್ಯ ತುಂಬಿದ ಸಾಹಿತ್ಯವಾಗಿದೆ· ಲಾಲಿಹಾಡುಗಳು . . . ಸುಗ್ಗಿಯ ಹಾಡುಗಳು ಅಪಾರವಾಗಿವೆ (ಹಾರಡ. ೪೦೩)· [ಲಾಲಿ$_1$+ಹಾಡು$_2$ (<ಪಾಡು$_3$)]

**ಲಾಲೆ**, ಲಾಳೆ (ನಾ)·=ಲಾಲಾಂಬು : "ಸ್ಯನಿಕಾ· ಸ್ಯಂದನೀ· ಲಾಲಾ_೩ ಬಾಯಿಜೊಲ್ಲು" (ಸಿದ್ಧಾಂತ. ೦೬೯) ; "ಲಾಲಾ=ಜೊಲ್ಲು" (ಗಾಶಕ್. ೨೭೦). **ಲಾಳೆ** : ಕೂರೆಪೊಡೆ ಬೆಟ್ಟುಗಳ್ ಬಿರಿವುವುಣ್ಬುವ ಲಾಳೆಯ ಲೋಳೆಗಳ್ ಪೊನಲ್ಪರಿವುವು (ಶಂಶಪು· ೪-೦೦೦) ; ಸಿಂಬುಳ್· ಸಿಳ್ಳುಗಟ್ಟ್ ಲೋಳೆ ಲಾಳೆ ಸರಸೂತ್ರಜಳಂ (ಶುಶ್ಯಾ· ೦೩-೪೪). [ ಸಂ. ಲಾಲಾ ]

**ಲಾಲ್ಯ** (ನಾ)· ಅಕ್ಕರೆ ; ಪ್ರೀತಿ : ಕುಲ್ಯವಾದ್ಯರ ಲಾಲ್ಯವನಘರ ತಾಲ್ಯ ಪಕ್ಷಯುಮೂಲ್ಯಪಥವಸ್ಥಾಲ್ಯಮಹ ಕೈವಲ್ಯವೀ ನಿರ್ಮಾಲ್ಯವೆನಲೆಸೆದು (ಜಶಿ· ೪೩-೭೭)· [ಸಂ.]

**ಲಾವ** (ಗು)· ೧· ಕತ್ತರಿಸುವ : ತುಂಡುಮಾಡುವ· (ನಾ). ೨· ಒಂದು ಬಗೆಯ ಪಕ್ಷಿ : ಲಾವುಗೆ ; ಪುರಲೆ : "ಲಾವಃ. ಲಾವಿಗೆ ಹಕ್ಕಿ . . . ಸಿಡಿಮಿಡಿಪಕ್ಕಿ—ಈ ೧೩ ಶಬ್ದಗಳೂ ಪಕ್ಷಿಭೇದಗಳಿಗೆ ಬೇರೆಬೇರೆ ಹೆಸರುಗಳು'' (ಸಿದ್ಧಾಂತ. ೦೭೩); ಮರಾಳ ಲಾವ ಚಾತಕ ಬಕ ಖಂಜನ ದ್ರುಪರಿ ಘೂಟ ನಿಶಾಟನ ಪತ್ರಿಕಂಕ ವರ್ತಕ ಕುರರೀಪ್ಲವಪ್ರಕರದಿಂದೆ ವಿರಾಜಿಕುಮುನ್ನತಂ ವನಂ (ಹರಿಶ್ಚ. ೪-೭೨) ; ಪಿಳಿಪಿಳಿರ್' ಪಿಳಿಲೆಂದು ಲಾವಂಗಳುಬ್ಬಿದುವು (ಶರಕು. ೪-೪೩). [ಸಂ.]

**ಲಾವಂಚ** 'ಲಾಮಂಚ' ನೋ.

**ಲಾವಂಚಿ** 'ಲಾಮಂಚ' ನೋ·

**ಲಾವಕ** (ನಾ)· ೧· ಕತ್ತರಿಸುವವನು; ಕಡಿಯುವವನು. ೨. ಚಾಡಿ ಹೇಳುವವನು; ಪಿಸುಣ: ಲಾವಕರ ನುಡಿಗೇಳಿ ನಡೆದರೆ ಭೂವಳಯ ದೇಶಾಧಿಪತ್ಯದ ಠಾವು ಕೆಡುವುದು (ಕುವ್ಯಾಸ. ೬೦೩· ೦-೪೩); ಹರನ ಭಕ್ತರ ಮಹಾತ್ಮೆಯನರಿಯದೀ **ಲಾವಕರ ಮಾತಗೇಳಿ** ತಗಸಿದ **ಭೂರಿದುರ್ಭಾವ**

ದುರವಣೆಯ ನೋಡಲು (ಸಿಂಗರಾ· ೨೨-೩೯) ; ಲಾವಕರು ಬಿಜ್ಜಳನೊಳಿಂತೆಂದು ಪೇಳ್ದರು (ಶ್ರಶುಕ್ರ· ೯-೨೭). ೩. ಕೆಡುಕ ; ದುಷ್ಟ : ಅರಸಿಗುಪಹತಿಯನೊದವಿಸಿದ ಲಾವಕನು ಕುಲಕೋಟಿಸಹಿತ ಮಹೀವಲಯದಲಿ ಲಯುವನೆಯ್ದಿಯೆ ಜೀವಿಸುತ್ತಿಹನು (ಜೀವಂಧ· ೯-೬೩); ಕೃಷ್ಣ . . . ಲಾವಕರ ಕೊಲಗಿಸೋ (ಪೋಳ್ಗಂ· ೨೨-೦); ಗಾವಿಲಿಗೆ ಭಾಗ್ಯವಾದೊಡೆ ಲಾವಕರಿಗೆ ರುಷ್ಟದುಷ್ಟದುರ್ಜನರ್ಗಲ್ಲದೆ ಭಾವಕರಿಂಗೊಲಿದೀವನೆ (ಶೀತಿಸಾ· ೨೩೩). ೪. ಒಂದು ಬಗೆಯ ಹಕ್ಕಿ; ಲಾವುಗೆ: "ಕಾರಂಡವ ಲಾವಕ ಜೀವಂಜೀವಕ ಶಾರಿಕಾದಿಗಳ್ ವಿಹಗಜಾತಿಯುಕ್ಕುಂ" (ವಸ್ತುಕೋ· ೯೩-೨೦) ; ಹಾರಚೆ ಗವುಜು ಲಾವಕ ಗುಬ್ಬಿ ಸಾಕುವ (ವಸ್ತ್ರಾ·೯-೮೭). ೫. ಹಾವನ್ನು ಹಿಡಿದು ಆಡಿಸುವವನು; ಹಾವಾಡಿಗ; "ಪಾವಡಿಗ" (ಶಕುಂ· ೬. 1, ೫೮). [ಸಂ.]

**ಲಾವಕು ?** (ನಾ)· (?): ಸುಕವಿಪಿಕನಿಕರಶೀತ ಸಹಕಾರನಂದನಂ ನಿಜ ವಿಜಯುಭುಜಾಸಿ ಲತಾನರ್ತ್ತಕೀನರ್ತ್ತನವಿನೋದಲಾವಕುಂ ಕುನಾಗಿಲ [ಕೋ]ಟಾಟ[ವೀ]ದಾವಪಾವಕಂ . . . ರಾಜಾದಿತ್ಯರಸರ್ (ಶಕ್ರಿಶ· ೨೦-೭-೦೭; 1083). [ ? ]

**ಲಾವಕ್ಕಿ** (ನಾ). = ಲಾವಕ ೪ : ಗಿಡಗವನ್ನು ನೋಡಿ ಲಾವಕ್ಕಿಗಳ ಹಿಂಡು ಅಡಗಿಕೊಳ್ಳುವಂತೆ (ಕಳಸೀ· ೯೦) ; ಕವುಜಗಪಕ್ಷಿಯ ಜಾತಿಯ, ಒಳ್ಳೆಯ ಆಹಾರವೆಂದೆನಿಸುವ, ಒಂದು ಬಗೆಯ ಪ್ರವಾಸಪಕ್ಷಿ; ಲಾವಕ್ಕಿ; ಪುರಲಿಹಕ್ಕಿ (Quail. ೩೦೪೩). [ಲಾವ + ಹಕ್ಕಿ (< ಪಕ್ಕಿ). / ತುಳು. ಲಾವಕ್ಕಿ]

**ಲಾವಗ** 'ಲಾವಗೆ' ನೋ.

**ಲಾವಗೆ, ಲಾವಗ, ಲಾವಿಗ, ಲಾವಿಗೆ, ಲಾವುಕ, ಲಾವುಗೆ** (ನಾ)· ೧. ಒಂದು ಬಗೆಯ ಪಕ್ಷಿ ; ಪುರಲೆ : ಮಂದಪಾಲನೆಂಬ ಮುನಿಗವೊಂದು ಲಾವಗೆಗಂ ಪುಟ್ಟಿದ ನಾಲ್ಕುಂ ಲಾವಗೆಗಳಗ್ನಿಸೂಕ್ತಂಗಳನೋದುತ್ತುಮದಿರದಿದಿರಂ ಬರೆ (ಪಂಪಭಾ· ೩-೦೦೦ ವ); ತಗರು ಕೋಟಿಗಳಂ ಲಾವಗೆಗಳನೆಸೆವೆಮ್ಮೆವೋರಿಯಂ ಪಾಪಿಪ್ಪರ್ ಮಿಗೆ ಬಸನದಿಂದೆ ಪೋರಿಪರ್ (ಸಮಯ· ೩-೦೩); ಅರಗಿಳಿ ಪಾರಿವಂ ಕುರರಿ ಲಾವಗೆಯನ್ನಭೃತಂ (ಗಿರಿಜ· ೦-೭೯)· ಲಾವಗ: ೧. 'ಕರಿಲಾವಗ', 'ಕೆಂಪುಲಾವಗ' ಪರಾ. ೨. ಹಾವಾಡಿಗ : "ಲಾವಗ – ಲಾವಕ = ಹಾವಾಡಿಗ" (ತತ್ವಕೋ· ೩೨). ಲಾವಿಗ : ೧· ಲಾವಿಗನ ಹಕ್ಕಿಗಳೂ . . . ಅವನು ಹೇಳಿದಂತೆ ಶಿಕಾರಿ ಮಾಡಿಕೊಂಡು ಅವನ ಪ್ರೀತಿಗೆ ಪಾತ್ರವಾಗಿದ್ದವು (ಮುಗಿಪಿಂ· ೨೩). ಲಾವಿಗೆ : ೧· ಗಿಳಿಗಳಾ ಕುಳುವ ಲಾವಿಗೆ ಪುರುಳಿಯೆಜಲಾವಿಗೆ . . . ಹೊಡೆಗಳೆಂಬ ಪಕ್ಕಿಗಳು (ಶಾಕ್ಯಾ· ೩-೨೦) ; ಅರಿರಾಯಲಾವಿಗೆಗೊಡ್ಡಿದ ಬಲೆಯೆನೆ (ಕಕೇಳ್· ೦-೩೩) ; ಹದ್ದು ಬಿಗಿವಿಡಿದ ಲಾವಿಗೆಯಂತೆ (ಗೊರೊಕ್ಟಾ· ೦೦-೨೯೯)· ಲಾವುಕ : ೧. ಇದೆ ಚಳತಲಾವುಕಸ್ವನಂ . . . ಇದೆ ಕಪಿಂಜಲನಿನದಂ (ಕಾದಂಪೂ· ೦೫೩) ; ಶುಕ . . . ಲಾವುಕ . . . ಪಕ್ಷಿಕುಲಂಗಳುಂ (ಜಿಣಳ್· ೨೦೨). ೩. ಚಾಡಿ ಹೇಳುವವನು ; ಪಿಸುಣ : ದಣಿಯುಂದಿಜಾಯಿಜ್ ಮಿಗೆ ಲಾವುಕನಂ (ಜೀವಂ· ೦೫೦-೩೩); ಲಾವುಕರ ನುಡಿಗೇಳಿ ಕೊಲಿಸದೆ ಕಾವುದೊಳ್ಳಿತು (ಅಕ್ರೊಶ· ೭-೭೬). ಲಾವುಗೆ : ೧. "ಲಾವುಗೆ ಕಪಿಂಜಲಮೊನಿಕ್ಕು" (ಪಂಗರಾ· ೩೨-೦೦); ಕೋಗಿಲೆ ಚಾವಗೆ ಪೋದಗೆ . . . ಬಲಾಕೆ ಲಾವುಗೆ ಸೇನು (ಶಾಬ್ದಸಾ· ೦೦೪೯ ಸೂತ್ರ೪); ಲಾವುಗೆಯುಂಕೆ ಕೊರಸುಂ ಮೊದಲಾಗೊಡೆಯ ಪಕ್ಷಿಜಾತಿಗಳಂ ಬಲೆಯ ನೊಡ್ಡಿ ಪಿಡಿದು (ವಡ್ಡಾರಾ· ೦೫೦-೩) ; ಲಾವುಗೆಯ ಕಂಠವಪ್ಪುರದಲ್ಲೆವಡಿ ಮಾಡಿ (ಹಸಸಾ· ೩-೩೩). [< ಸಂ. ಲಾವಕ. / ಪ್ರಾ. ಲಾವಗ]

**ಲಾವಣ₁** (ನಾ)· ಸೈನಿಕರ ಪಟ್ಟಿ ; ಸಿಪಾಯಿಗಳ ಯಾದಿ : ಜಡನೆಂಬ ನುಡಿ ಶರಧಿಯೊಳುಂಟು ಭಂಗವೆಂದೊಡೆ ತೆರೆಯೊಳಗಾದಂತಹುದೂ ವಡಸೆ ಕಠಿಣವೆನಲಿಡಿದ ಲಾವಣದೊಳನುಡಿಯಲ್ಲದನೃತವಿಲ್ಲ (ಅಮುಗಾಂ· ೦-೩೯); ಕೃಷ್ಣರಾಯನು ರಾಜ್ಯವಾಳುತ್ತಿರುವಾಗ ನೂರಾಳು ನೂರುಕುದುರೆ ಲಾವಣಕ್ಕೆ ಸೇರದೆ ಇರುವ ದಿವಸ ಒಂದಾದರೂ ಇಲ್ಲ (ಕಥಾಮಂ· IV, ೭೯). [ದೇ.॥ ತಮಿ. ಇಲಾವಣ ; ಮಲ. ತೆಲು. ಲಾವಣ]

**ಲಾವಣ₂** (ಗು). ೧. ಉಪ್ಪಿನಿಂದ ಕೂಡಿದ. (ನಾ)·೨. ಉಪ್ಪು. [ಸಂ.]

**ಲಾವಣಿ₁, ಲಾವಳಿ** (ನಾ)· ಜನಪದಹಾಡುಗಳ ಒಂದು ಪ್ರಕಾರ : 'ಲಾವಣಿಯೆಂಬುದು ಗರಡಿಯವರು ಹಾಡುವ ಹಾಡು' ಎಂದು ಜನ ಸಾಮಾನ್ಯದ ಅಭಿಪ್ರಾಯ (ಕರ್ನಾಜಸಂ· ೨೦); ಹೆಂಗಸರ ಹಾಡುಗಳಲ್ಲಿಯೂ ಲಾವಣಿಗಳಲ್ಲಿಯೂ ಈ ಛಂದಸ್ಸಿನ ತಳಹದಿಯನ್ನೂ ರೂಪಾಂತರಗಳನ್ನೂ ಗುರುತಿಸಬಹುದು (ಕೃಶಿ· ೦೦೭) ; ಲಾವಣಿಗಳನ್ನು ಹಾಡಿದರು (ಹಂಪ. ೭೩)· ಲಾವಳಿ : ಲಘುಗಳ ಮಿಳಿತವ ಮಾಡಿ ಕೊನೆಯಲಿ ಗುರುಗಳ ಹೂಡಿ ಅರ್ಥದ ಸಾರವ ನೋಡಿ . . . ಲಾವಳಿ ಕೃತಿಗಳ ಪಾಡಿ (ಛಂದಸ್ಸಾ· ೩-೦೭). [←ಹಿಂ. ಲಾವನಿ, ಲಾವನೀ ; ಮರಾ. ಲಾವಣೀ. / ತಮಿ. ಲಾವಣಿ ; ತುಳು. ಲಾವಣಿ, ಲಾವಳಿ]

**ಲಾವಣಿ₂** 'ಲವಣಿ₂' ನೋ.

**ಲಾವಣಿ₃** (ನಾ)· ಭೂಮಿಯ ಒಡೆಯನಿಗೆ ರೈತರು ಸಾಗುವಳಿಗಾಗಿ ಕೊಡುವ ಹಣ ; ಗುತ್ತಿಗೆಹಣ ; ಗೇಣಿ : ಹೊಲಗಳನ್ನೂ ಲಾವಣಿಗೆ ರೈತರಿಗೆ ಬಿಟ್ಟುಕೊಟ್ಟು (ಗಂಪಾರು· ೯) ; ಒಮ್ಮೆ ಲಾವಣಿಯ ವಸೂಲಿಗೆ ನರಹರಿಯು ಗಂಗೇಲೂರಿಗೆ ಹೋಗುವ ಪ್ರಸಂಗ ಬಂದಿತು (ಸವಿಜ· ೦೯೦) ; ವಸೂಲಾದ ಹಣದ ಮೇಲೆ ಪ್ರತಿಗ್ರಾಮಕ್ಕೂ ಒಂದೆರಡು ರೂಪಾಯಿಯೂ ಸಲ್ಲುತ್ತಿತ್ತು. ಇದಕ್ಕೆ ಲಾಣಿ (ಲಾವಣಿ) ಎಂದು ಹೆಸರು (ಶಾಗಾ. ೦೨). 'ಲಾವಣಿಪದ್ಧತಿ' ಪರಾ. [←ಮರಾ. ಲಾವಣೀ=ಜಮೀನನ್ನು ಬೆಳೆಯಲು ಯೋಗ್ಯವನ್ನಾಗಿ ಮಾಡುವುದು. / ತೆಲು. ಲಾವಣಿ=ಹುಲ್ಲುಗಾವಲಿನಲ್ಲಿ ಪಶುಗಳನ್ನು ಮೇಯಿಸುವುದಕ್ಕಾಗಿ ಕೊಡುವ ಮುಂಗಡ ಹಣ]

**ಲಾವಣಿ₄** (ನಾ). ೧. ಗುಂಪು ; ಸಮೂಹ ; ಸಂದಣಿ : "ಬಂಬಲ್ . . . ಲಾವಣಿ . . . ಗೊಂದಣಿ (ಉಂದಲ್) – ಈ ೪೦ ಸಮೂಹಂ" (ಕಕಶಾ· ೩೭-೨೨೨) ; ತರ್ಗಳ ಲಾವಣಿಯೊಯೆಳವಳ್ಳಿಬಳಗವೊ[ಶಾಕಾ· ಲಾವಣಿಗೆಯೊ ಎಳೆವಳ್ಳಿಯ ಬಳಗವೊ] (ಸೂಕಿಸೋ· ೩-೫೦). ೨. ಹೊಂದಿಸುವಿಕೆ ; ಅಳವಡಿಸುವಿಕೆ: 'ಲಾವಣಿಸು' ಪರಾ. [ ? ]

**ಲಾವಣಿ₅** (ನಾ). ಒಂದು ಬಗೆಯ ಔಷಧೀಸಸ್ಯ : "ಲಾಜಾ (ಜಲಾ)_ ಹಿಪ್ಪಲಿ. ಲಾವಣಿ, ಎಸಗ" (೬ಶಂ. ೦೯೩). [ ? ]

**ಲಾವಣಿಕ** (ಗು)· ೧. ಸುಂದರವಾದ (ನಾ)· ೨. ಉಪ್ಪಿನಿಂದ ಕೂಡಿದುದು : "ಲವಣದಿಂ ಲಾವಣಿಕಂ" (ವಸ್ತುಕೋ· ೯೯-೦೨). ೩. ಉಪ್ಪಿನ ಕಾಯಿ : ಎಳಮಾವಿನ ಮಿಡಿ ಮಾಗುಳಿ ಮೆಣಸಿನ ಕರ ಬೆತ್ತಲಟ್ಟೆಯಿಳೆಯ ಗೊಲೆಯಿಂದಳವಟ್ಟಿರೆ ಲಾವಣ[ಣಿ]ಕಂಗಳನಿಕ್ಕಿದರಾಗಳಟ್ಟಿಯಿಂದಂಗನೆಯರ್ (ಸುಕುಮಾ· ೦೦-೫೦). [ಸಂ.]

**ಲಾವಣಿಕಾರ** 'ಲಾವಣಿಗಾರ' ನೋ.

**ಲಾವಣಿಗಾರ, ಲಾವಣಿಕಾರ** (ನಾ)· ಲಾವಣಿಯನ್ನು ರಚಿಸುವವನು : 'ಮರ್ಘುಮಾ' (ಲಾವಣಿಗಾರರ ಎರಡು ಗುಂಪುಗಳೂ ಸೇರಿ ಹಾಡುವುದಕ್ಕೆ ಕುಳಿತುಕೊಳ್ಳುವ ಸಭೆ) (ಕರ್ನಾಜಸಂ· ೨೯). ಲಾವಣಿಕಾರ : ಹಾಡಬಲ್ಲ ಲಾವಣಿಕಾರನು ಹುಟ್ಟಿಕೊಂಡಂತೆಲ್ಲ ಅವೂ ಹೊಸಹೊಸ ರೂಪಗಳನ್ನು ತಾಳುತ್ತವೆ (ಕರ್ನಾಜಸಂ· ೨೩). P ಈ ಜನಪದಹಾಡುಗಾರಿಕೆಯ ಪದ್ಧತಿಯಲ್ಲಿ ಎಷ್ಟೋ ಜನರು ಆಶುಲಾವಣಿಗಳನ್ನು ರಚಿಸುವವರೂ ಹಿಂದೆ ಇದ್ದರು. [ ಲಾವಣಿ₁ + – ಕಾರ₁ (< – ಕಾಱ) ]

**ಲಾವಣಿಗೆ₁** (ನಾ)· ಉಪ್ಪಿನ ಕಾಯಿ : ಸೋದಿಗೆ ಲಾವಣಿಗೆ ಘೃತಪೂರಂ . . . ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ . . . ಬಡ್ಡಿಸಿ (ವಡ್ಡಾರಾ· ೩೯-೦೭). [ < ಸಂ. ಲಾವಣಿಕ]

**ಲಾವಣಿಗೆ₂**, ಲಾವಳಿಗೆ (ನಾ). ೧. ಗುಂಪು ; ಸಮೂಹ ; ಸಂದಣಿ : "ಲಾವಣಿಗೆವೋಳಿಯು ಸಮೂಹ" (ಕಬ್ಬಿಗ. ೬೦); ಭೂಪಾಳಿಗಳ ರತ್ನಪ್ರಭೆಯ ಲಹರಿಯ ಲಾವಣಿಗೆ ಮಿಗಿಲು (ಕುವ್ಯಾ.ಅ. ೭-೩೬); ಬೆಳ್ದಿಂಗಳ ಹಕ್ಕಿಯ ಹಸುಳೆಗಳ ಲಾವಣಿಗೆಯ ಮುಸುಕಿದವೋಲ್ . . . ಕುವರನ ಲಾವಣ್ಯಾಂಗ ಮನದರ್ಪವು ಪುರಸತಿಯರ ಕಣ್ಗಳ ಬೆಳಗು (ಜಯುಕಾ. ೧೦-೩೩). ೨. ಆಕ್ರಮಣ; ಮುತ್ತಿಗೆ ; ದಾಳಿ : ಪುರವರದಷ್ಟದಿಕ್ಕಿನೊಳೆಡೆವಿಡದೆ ಇಟ್ಟರು ಲಾವಣಿಗೆಯನಾದೀಶ್ವರ ಬಿಟ್ಟಹ ರಣಭೂಮಿಯೊಳು (ತ್ರಿಕುಶಾಂ. ೦೬-೨೦೦); ಲಾವಣಿಗೆಯನೊಡೆಹಾಯಿಸಿದನಿದಿರಾದ ರಾವುತರನು ಕೆಡಹಿದನು (ಕುರಾಣಾಶಾಂ. ೯೩-೩೦) ; ಅವರ ವಿಘಾತಿಯು ಲಾವಣಿಗೆಗೆ ಅದ್ರಿಗಳು ಬಿರಿದುವು (ರಾಜಶೇ. ೨೪). ೩. ಸಂಬಂಧ : ಗೋಜು : ನಾವು ವೃದ್ಧರು ಬಿರುದುಗಿರುದಿನ ಲಾವಣಿಗೆ ಸಮಗೇಕೆ (ಕುವ್ಯಾ.ಶಿ. ೯-೩೦). ೪. ಹಿಡಿತ ; ವಶ ; ಅಧೀನ : ಆಕೆಯಾಕ್ಷಣ ಶಿರವಳಿದ ಹಯಕಿದಿರು ಕುಳ್ಳಿರೆ ನಗ್ನೆ ತಾನಾಗಿ ನಿರುತ ಲಾವಣಿಗೆಯಲಿ ಹೊಕ್ಕಿರೆ ಸುರಪತಿಯು ಹಯದಲ್ಲಿ ವಸಿಸಿದ ನೆರೆದನ್ನೆ ತನ್ನಾತ್ಮಸತಿಯಳ ಯಜ್ಞಕಾಲದಲಿ (ಸಂಶಕ. ೩-೨೩) ; ಆವನಜೀವನು ಶರಣಸಂಜೀವನನೆ ತಮಗೆಂತು ಕಂಗಳ ಲಾವಣಿಗೆಗೊಳಗಾದೆಯೆಂದನು (ಏಕಾಗ. ೯-೩-೯); ಅವಂ ಲಾವಣಿಗೆಯೊಳ್ ತಪ್ಪದೀವ ಕೃಜೀತದೊಳಂ (ತಕಪು. ೦೯-೦೬). ೫. ಒಂದು ಬಗೆಯ ತೆರಿಗೆ : ತಲೆವೊಜಿಗೆ ೩೦೦ ಲಾವಣಿಗೆ ಪೊಕ್ಕಲ್ದೆಟಿ (ಎ. XVI, ೩೪-೯೦; 1102); ಅರಸುವೇಟಿಂಗೆ ಮುನ್ನನ್ನಡವ ಪಾಗಮಲ್ಲದೆ ಮತ್ತೊಂದು ಪಾಗಮುಂ ಲಾವಣಿಗೆಯು ಪಣಮುಂ . . . ಬಿಟ್ಟನ್ (ಶಾಇ. IX-i, ೦೪೨-೨೯ ; 1105). ೬. (?): ರಸಭಂಡವ್ಯೆದು . . . ದೆಶದಿಕ್ಕಿನ ಕಾಲ್ನಡೆ ಯಬುವತ್ತಾಱುಕೋಟಿ ಹೊಸಲಾವಣಿಗೆ ತಿದ್ದುವ ಸುಂಕ ಸುಸರ (ಶಿವಗೀ. ೦೬೯-೯೯೭). **ಲಾವಳಿಗೆ :** ೧. ರಾವಣನ ಪುರದೊಳಗೆ ಹೊಕ್ಕು ಕಪೀಂದ್ರರುರವಣಿಸಿ ಸಾವ ಸಲಿಸಿದರೊಕ್ಕಲಿಕ್ಕಿ ಸುರಾವಳಿಗೆ ಸಂತೋಷ ದೊಟ್ಟಲು ಲಾವಳಿ[ಪಾಠಾಂ. ಣಿ]ಗೆದೋಱಿದರು ದಾಱಿದರಸುಚಿತದ ಫಲವ (ಏಕಾಗ. ೯-೦೦-೩೦). [ಲಾವಣಿ₄ + – ಗೆ]

**ಲಾವಣಿಗೆಗೊಳು** ' ಲಾವಣಿಗೆಗೊಳ್ಳು ' ನೋ.

**ಲಾವಣಿಗೆಗೊಳ್ಳು**, ಲಾವಣಿಗೆಗೊಳು (ಕ್ರಿ). ೧. ಒಟ್ಟಾಗು ; ಒಂದು ಗೂಡು; ಸೇರು : ಭೂಪ ನಿನ್ನಯ ಶಕುನಿಭಾವನೋರ್ವಂ ಕರಿತುರಗ ಪಂಕ್ತಿಗಳಿಂದ ಲಾವಣಿಗೆಗೊಂಡು ವಿಗಡಿಸಿದಂ ಐನೂರುಗಜವೊಂದು ಸಾವಿರ ಹಯ (ಕುರಂಗ. ೩೩-೯). ೨. ಆಕ್ರಮಣ ಮಾಡು; ಮುತ್ತು : ಕಮಲವನವನು ಲೋಚಿನಲಿ ಲಾವಣಿಗೆಗೊಂಡನು ಭೀಮ ನಿಮಿಷದಲಿ (ಕುವ್ಯಾ.ಅ. ೦೦-೩೭). ೩. ಹಿಡಿತಕ್ಕೆ ಸಿಕ್ಕಿಸಿಕೊಳ್ಳು ; ವಶ ಪಡಿಸಿಕೊಳ್ಳು : ಅತಿರಥರ ಲಾವಣಿಗೆಗೊಂಡನು ಕರ್ಣ (ಕುವ್ಯಾ.ಶ. ೬-೩೯); ಹರಿಲೀಲೆ ಮಿಗೆ ಲಾವಣಿಗೆಗೊಂಡುದು ಲೋಕಜನಮನವ (ಏಕಾಗ. ೦೦-೨೩-೭). **ಲಾವಣಿಗೆಗೊಳು :** ೪. ಹಿಡಿತಕ್ಕೆ ಸಿಕ್ಕು ; ವಶವಾಗು : ಲಾವಣಿಗೆಗೊಳಲಲಸಿ ಯಮಮನಸು ಜೀವಿಗಳು ಜಡರಾಯ್ತು (ಕುವ್ಯಾ.ಶ. ೦೯-೨೯). [ಲಾವಣಿಗೆ₂+ಕೊಳ್ಳು₁ (<ಕೊಳ್₁)]

**ಲಾವಣಿಪದ್ಧತಿ** (ನಾ). ಭೂಮಿಯನ್ನು ಗೇಣಿಗೆ ಕೊಡುವ ಪದ್ಧತಿ; ಗುತ್ತಿಗೆ ಪದ್ಧತಿ : ಪಾಲಾವ ಒಂದು ಮಾರದೊಳಗಾಗಿಯೇ ಜ್ಞಾನ ಶಂಕರರು . . . ಲಾವಣಿಪದ್ಧತಿ ಕಿತ್ತಿಹಾಕುವ ಸಿದ್ಧತೆಯಲ್ಲಿ ತೊಡಗಿದರು (ಪ್ರೇಮಚಿತ್ರ. ೯೯). [ ಲಾವಣಿ₃ + ಪದ್ಧತಿ ]

**ಲಾವಣಿಸು** (ಕ್ರಿ). ಸೇರಿಸು; ಹೊಂದಿಸು; ಅಳವಡಿಸು : ಮಂದರನಗ ನಿಭಾಂಗನ ವಜ್ರಮಯಪಕ್ಕಗಳ ಪಡಿಮುಖದೊಳಗೆ ಲಾವಣಿಸಿದನು ಖಂಡೆಯವ (ಕೂರರಾ. ೩-೦೦-೦೯); ಆಯುಧಮುಖದ ಶಿಖಿ ತವಹೃದಯ ದಾಮಿಷಹವಿಗೆ ಹದಿರಿಕ್ಕುವದ ನೋಡೆನುತ ಹೊದಬುಗೈಗಳಲೆತ್ತಿ ಲಾವಣಿಸಿದನು (ಕಜರಾ. ೩-೯೯-೩೭). [ ಲಾವಣಿ₄ + – ಇಸು₃ ]

**ಲಾವಣ್ಯ₁** (ನಾ). ೧. ಉಪ್ಪಾಗಿರುವುದು; ಉಪ್ಪಿನ ರುಚಿಯುಳ್ಳುದು : ಲಾವಣ್ಯ = 'ಉಪ್ಪಿನ ರುಚಿಯಿಂದ ಕೂಡಿರುವಿಕೆ' ಮುಖ್ಯಾರ್ಥ; 'ಪ್ರನ್ನತ್ವ' ರೂಢಮೂಲವಾದ ಲಕ್ಷ್ಯಾರ್ಥ (ಶೃಖ್ಯಾಲೋ. ೪೩). ೨. ಚೆಲುವು; ಸೌಂದರ್ಯ : ಲಾವಣ್ಯಂ ಲಯಮಾಯ್ತು (ಗಂಶ. ೬-೩೨). ೧, ೨ : ಶ್ರೀವನಿತಾಪ್ರಸವದಿನಾ ಲಾವಣ್ಯದಿನಶಿಗಭೀರಭಾವದೆ ನೀನಿಂತಾ ಪಾರಿಧಿಯುಂ ಪೋಲ್ವೆ (ಕುರಾ. ೩-೪೦); ಕಮಲಸಂಭವನಂತೆವೋಲ್ ಸರಸ್ವತಿಯರಸನೆಂಬ ಪೆಸರಂ ಪಡೆದು ಲೋಕಮಱಿಯೆ . . . ಲಾವಣ್ಯ ಲೀಲೆಯಿಂದೆಸೆದಬ್ಜಭವನಲ್ಲ ಸಕಲಭುವನಾಶ್ರಯಂ ತಾನೆನಿಸುತರ್ಣವಂ ಕಣ್ಗೊಳಿಪುದು (ಶ್ರೀಗಾಶ. ೩-೨೭). ೩. ಸೊಬಗು; ಒನಪು; ಒಯ್ಯಾರ: ಲಜ್ಜೆ ಬಿಂಬಿಸೆ ಲಾವಣ್ಯದೊಳೊಯ್ಯನೆ ಪಜ್ಜೆಯಿಡುವುದು ಭಾವೆಯರು (ಹರಿ. ೬-೩೭). [ ಸಂ. ]

**ಲಾವಣ್ಯಂದಳೆ** (ಕ್ರಿ). ಚೆಲುವನ್ನು ಪಡೆ; ಅಂದವಾಗು : ನೃಪವರಸೂನು ಹಿಂಗದೆ ಲಾವಣ್ಯಂದಳೆದೆಸೆದುತ್ತುಂಗಪಯೋಧರಯುಗಳೆಯ ಬಸಿಱೊಳು . . . ಬೆಳೆದು (ಜಯುಕಾ. ೨-೩೯). [ ಲಾವಣ್ಯ + ತಳೆ₁ ]

**ಲಾವಣ್ಯವತಿ** (ನಾ). ಚೆಲುವೆ ; ಸುಂದರಿ ; ಅಂದಗಾತಿ : ಲಾವಣ್ಯ ವತಿಯರುಂ ನಾನಾವಾಹನದಿಂದಮಿಳಿದು ಮೋಹನವಿದ್ಯಾದೇವತೆಯರಂತೆ (ಪುಲ್ಗೆಪು. ೩-೬೨); ಪ್ರವಹಿಸೆ ಕಪೋಲದಲಿ ಲವಣಾಶ್ರುಬಿಂದುತತಿ ನದಿ ಹರಿಯುವಂತೆ ಕಡಲಿಂಗೆ ಲಾವಣ್ಯವತಿ ನಡೆದಳ್ ಲವಣಸಿಂಧುತಟಕೆ (ತಿಕ್ಕಾಂಗ. ೩೭-೦೪೦೦). [ ಸಂ. ಲಾವಣ್ಯವತೀ ]

**ಲಾವನ** (ನಾ). ಒಂದು ಬಗೆಯ ಕತ್ತರಿಸುವ ಆಯುಧ ; ಕುಡು ಗೋಲು; ಮಚ್ಚುಗತ್ತಿ : ಬಿಲ್ಲು ತೀರು . . . ಲಾವನ . . . ಪೇಟಕ ಮುಂತಾದ . . . ಸಾಧನವಿಶೇಷಂಗಳಿಂ (ಏವೀಶ. ೨೬೩).
[ < ಸಂ. ಲವನ ]

**ಲಾವಳಿ** ' ಲಾವಣಿ₁ ' ನೋ.

**ಲಾವಳಿಗೆ** ' ಲಾವಣಿಗೆ₂ ' ನೋ.

**ಲಾವಾ** (ನಾ). ಜ್ವಾಲಾಮುಖಿಯಿಂದ ಪ್ರವಹಿಸುವ ರಸ ; ಶಿಲಾ ರಸ : ದಕ್ಷಿಣಭಾಗದ ನೆಲದಲ್ಲಿ ಲಾವಾ ಹೆಪ್ಪುಗಟ್ಟಿ ಉಂಟಾದ ಬಂಡೆಗಳೇ ಅಧಿಕ (ಅಭೂಕ. ೨೭೭) ; ಅತ್ಯಪ್ರಸ್ತುಬಿಯಕೆಯ ಲಾವಾರಸ ಬುಗ್ಗೆಯಾಗಿ ಕಾರುತ್ತಿದೆ (ಕಂಖುಂತ. ೦೦೩); ಅವನ ಲೇಖನ ಲಾವಾರಸದಲ್ಲಿ ಅದ್ದಿದಂತೆ ಇರುತ್ತಿತ್ತು (ತತ್ವವಾದ. ೦೬). [ ← ಇಂ. Lava ]

**ಲಾವಿಗ** ' ಲಾವಗೆ ' ನೋ.

**ಲಾವಿಗೆ** ' ಲಾವಗೆ ' ನೋ.

**ಲಾವುಕ** ' ಲಾವಗೆ ' ನೋ.

**ಲಾವುಕೋಪು** (ನಾ). ಕಪಟ ; ವಂಚನೆ : ಆ ವೈಶ್ಯನಲ್ಲಭ ಪ್ರಮುಪ್ರ ದತ್ತನೊಳು ತನಗಾವಗಂ ಸ್ನೇಹಮಾದುದಱಿಂದ ದಾಕ್ಷಿಣ್ಯಭಾವಯುತನವ ಗೊಂದು ಲಾವುಕೋಪು ಮಾಡಲೀಸದಿಂತೆನುತುಸಿರ್ದನು (ಸಪ್ತುಳಾ. ೦೦-೬).
[ ? ]

**ಲಾವುಗೆ** ' ಲಾವಗೆ ' ನೋ.

**ಲಾಸ** (ನಾ). ಕುಣಿತ ; ನೃತ್ಯ : ಹಂಸನಿಲ್ಲದ ಸರಸಿ ಬಲುವಿದ್ವಾಂಸರಿಲ್ಲದ ಸಭೆ . . . ಪರಭೃತವಿಲ್ಲದುದ್ಯಾನ ಲಾಸವಿಲ್ಲದ ಗಾನ . . . ನೆರೆಯದು (ಕಾಶಿರಾ. ೦-೨೮). [ಸಂ.]

**ಲಾಸಕ** (ನಾ). ೧. ನೆಗೆಯುವವನು ; ಜಿಗಿಯುವವನು. ೨. ಕುಣಿ ಯುವವನು ; ನರ್ತಕ. [ಸಂ.]

**ಲಾಸಕಿ** (ನಾ). ಕುಣಿಯುವವಳು ; ನೃತ್ಯಗಾತಿ : "ವರ್ತಕೀ ಲಾಸಕೀ— ೨ ಕುಣಿಯುವ ನಾಟ್ಯಗಾತಿಯ ಹೆಸರುಗಳು" (ಸಿದ್ಧಾಂತಿ. ೩೪) ; ಸತಿ . . .

ಅಂಗಜಲಾಸ್ಯಲೀಲೆಯಂ ಕ್ಷಿತಿಪನ ಚಿತ್ತವೃತ್ತಿಗುಪದೇಶಿಪ ಲಾಸಕಿಯಂತೆ ತೋಱಿದರ್ (ಶಂಪ್ರಶ. ೩-೯೩). [ಸಂ. ಲಾಸಕೀ]

**ಲಾಸಿ** (ನಾ). ೧. ಅಲ್ಲಿಂದ ಇಲ್ಲಿಗೆ ಚಲಿಸುವುದು. ೨. ಕುಣಿತ ; ನೃತ್ಯ. [ಸಂ. ಲಾಸಿನ್]

**ಲಾಸಿಕೆ** (ನಾ). = ಲಾಸಕಿ : "ನರ್ತಿಕೆ ಲಾಸಿಕೆಯೆಂಬಳಕ್ಕ್" (ಶಬ್ದಮ. ೬೪-೬೩) : ಕಣ್ಗೊಳಿಸಿದಳಿಂದುಕಾಂತವಮಣಿಮಂಗಳರಂಗದೊಳಪ್ಪುನಾಳಮಂ ಸೆಳೆವಿಡಿದಂಗಜನ್ಮಜಯಲಕ್ಷ್ಮಿಯ ಲಾಸಿಕೆಯಾಕೆಯೆಂಬಿನಂ (ಪುಲ್ಲಶ. ೪-೫೨) ; ನರ್ತಿಸುತ್ತಿರ್ಪ ಮರುತ್ಸುದತಿಯರ್ಗಿಂದ್ರನ ಹೃತ್ಪದ್ಮದೊಳಾಡುವ ಭಕ್ತಿಲಕ್ಷ್ಮಿ ಲಾಸಿಕೆಯಕ್ಕುಂ (ಶಂಪ್ರಶ. ೦೨-೭೦). [ಸಂ. ಲಾಸಿಕಾ]

**ಲಾಸ್ಯ** (ನಾ). ೧. ಕುಣಿಯುವುದು ; ನರ್ತಿಸುವುದು. ೨. ಕುಣಿತ ; ನೃತ್ಯ : ರಾಮನೇರ್ದನು ಬಂಡಿಯಂ, ಲಾಸ್ಯಮಂ ತೊಡಗಿ (ತ್ರಿಣಾವಾ. ೩೬-೨೭೯). ೩. [ನಾಟ್ಯ] ಗಾಯನ ಮತ್ತು ವಾದ್ಯದಿಂದೊಡಗೂಡಿದ ನೃತ್ಯ. ೪. ಶೃಂಗಾರ ಮೊದಲಾದ ಭಾವಗಳನ್ನು ತೋರಿಸುವ ನಾಟ್ಯ.— ನರ್ತನ : "ನೃತ್ಯಂ, ತಾಂಡವಂ, ಲಾಸ್ಯಂ – ಈ ೩ ನಾಟ್ಯಮೆಂಬುದು" (ಹಲಾಯು. ೦೬-೯೩) ; ಸುತ್ರಾಮನಂದಿಂತು ತಾಂಡವಲಾಸ್ಯಂಗಳ ಚೆಲ್ವನೊರ್ನಿಯೆ ತದೀಯಾಸ್ಥಾನದೊಳ್ ತೋಱಿದಂ (ಆಂಪು. ೭-೦೨೬); ಆ ಶಿವಪ್ರಸುಖಮತಮಂ ಪಡೆದಾ ಶಿವೆ ಭರತಂಗೆ ಮಧುರನಾಟ್ಯಕ್ರಮದಾ ಪ್ರೈಸಿರಿಯನೊರೆಯಲಾದುದು ಭಾಸುರತರಮಪ್ಪ ಲಾಸ್ಯನಾಮಂ ಜಗದೊಳ್ (ಲಾಸ್ಯಂ. ೦-೦೩) ; ನೀಱ್ ಮೆಱೆದಳ್ ಲೀಲಾಲಸಲ್ಲಾಸ್ಯಮಂ (ರಾಜಶೇ. ೦೨-೭೨). P ಪಾರ್ವತಿಯಿಂದ ಕಲ್ಪಿತವಾದುದೆನ್ನಲಾದ ಲಾಸ್ಯವು ಸೌಕುಮಾರ್ಯವಾದ ಅಂಗವಿನ್ಯಾಸಗಳಿಂದ ಕೂಡಿದ್ದು, ಶಿವನ ಮತ್ತು ಅವನ ಗಣಗಳ ಉಗ್ರವಾದ ನಾಟ್ಯಕ್ಕೆ ವಿರುದ್ಧವಾದುದಾಗಿದೆ. ೫. ಕುಣಿಯುವವನು ; ನರ್ತಕ. 'ತಾಂಡವ' ಪರಾ.

**ಲಾಸ್ಯವಾಡು** = ಕುಣಿ; ನಾಟ್ಯವಾಡು: ಅವನ ಮುಖದಲ್ಲಿ ನಗೆಯು ಲಾಸ್ಯವಾಡುತ್ತಿತ್ತು (ಮಚಿ೪. ೯೩) ; ಗೆಜ್ಜೆನಾದದಿ ಲಾಸ್ಯವಾಡುತ ತಣಿಸಿ ಕುಣಿಸುವೆ ರಸಿಕನ (ಶಂಪ್ರಪಾ. ೩೬-೭). [ಸಂ.]

**ಲಾಸ್ಯಾಂಗ** (ನಾ). [ನಾಟ್ಯ] ಗೇಯಪದ, ಸ್ಥಿತಪಾಠ್ಯ, ಆಸೀನ (ಪಾಠ್ಯ), ಪುಷ್ಪಗಂಡಿಕಾ, ಪ್ರಚ್ಛೇದಕ, ತ್ರಿಗೂಢಕ, ಸೈಂಧವ, ದ್ವಿಗೂಢಕ, ಉತ್ತಮೋತ್ತಮಕ ಮತ್ತು ಉಕ್ತಪ್ರತ್ಯುಕ್ತ ಎಂಬ ನಾಟ್ಯದ ಹತ್ತು ಭೇದಗಳು : ಭಾಣ . . . ಮುಖನಿರ್ವಹಣಸಂಧಿಗಳೂ, ಹತ್ತು ಲಾಸ್ಯಾಂಗಗಳೂ ಪ್ರಿಯಕವಾಗಿ ಭಾರತೀವೃತ್ತಿಯೂ ಇರುತ್ತವೆ (ಸಂಶಾಟ. ೩೦). [ಸಂ.]

**ಲಾಹರಿ** (ನಾ). ಚಳಕ ; ಕೌಶಲ : ಅಚ್ಚಿನಲ್ಲಿ ಬೇಟದಱಿವು ದೃಷ್ಟವಾಯಿತ್ತು ಮನವಂಚ್ಚಿ ಕೊಟ್ಟ ಲಿಂಗ ಹೃತ್ಕಮಲದಲ್ಲಿ ನಟ್ಟುದಿಲ್ಲಾ ದೃಷ್ಟ ತಾನಾದಲ್ಲದೆ ಇದಿಂಗೆ ದೃಷ್ಟವ ಕಟ್ಟಬಾರದು ಕಟ್ಟಿಕೊಂಡ ಮತ್ತ ಗುಱಿಯನೆಚ್ಚ ಕೈಯ ಲಾಹರಿಯಂತಿರಬೇಕು (ಮೋಳಿವಾ. ೦೫೩-೫೭೪).

[ < ಲಹರಿ ]

**ಲಾಹಿರಿ** (ನಾ). ಮದ ; ಮತ್ತು ; ಮತ್ತತೆ : ಕುಲವು ಕುಕುವರನಿಂದ ಶೀಲವಾ ದೇಶಾಂತರಗಳಿಂದ ಲಜ್ಜೆ ಲಾಹಿರಿಗಳಿಂದ . . . ಕೆಡುವುದು (ಶಶಿಂ. ೦೩-೦೭). [ ← ತೆಲು. ಲಾಹಿರಿ, ಲಾಹಿರೀ ]

**ಲಾಹಿರಿಗೊಳ್** (ಕ್ರಿ). ಮದಿಸು : ಉರವ ಸಿಗಿದಾ ರಕುತವನು ಸುರಿಸುರಿದು ಲಾಹಿರಿಗೊಂಡು ಮದವದ್ವಿರದಗಳ ಚಂದದಲಿ ತರುಬಿದರಾ ಕಪಿಪ್ರಜದ (ಅಶಂರಾ. ೬-೬-೦೯). [ಲಾಹಿರಿ + ಕೊಳ್$_1$]

**ಲಾಳ$_1$** (ನಾ). ೧. ಕೊಳವೆ ; ನಳಿಗೆ : (*). ೨. ಲೇಖನಿಗಳನ್ನು ಮಾಡಲು ಬಳಸುವ, ಟೊಳ್ಳಾಗಿರುವ ಒಂದು ಬಗೆಯ ಗಲಗು.— ಬೆತ್ತ : "ಲಾಳ – ನಾಳ" (ಶದ್ವಶೋ. ೩೯) ; ಸೆಗ್ಗಳ್ಳಿಂಗಡಲೇ ಬೇರು . . . ಲಾಳದ ಬೇರು, ನಾಗಕೇಸರ ಇವಿಷ್ಟನೂ ಪ್ರತ್ಯೇಕ ಎರಡು ವರಹ ತೂಕ ಆಡಿನ ಹಾಲಿನಿಂದ ಅರೆದು ಕುಡಿಯ ಕೊಡಿಸಲು ಶ್ಲೇಷ್ಮಯುಕ್ತವಾದ ಯೋನಿ ಶುದ್ಧವಹುದು (ವೈದ್ಯಾ. II, ೪೦) ; ಒಂದು ತರದ ಲಾಳದ ಕಡ್ಡಿ ಬೆಳೆಯುತ್ತದೆ. ಈ ಕಡ್ಡಿಗಳಿಂದ ಮೀನು ಹಿಡಿಯುವ ದೋಣಿಗಳನ್ನು ಮಾಡುತ್ತಾರೆ (ಕ್ರಪಾ. II, ೦೨೮) ; ನದಿಯ ಇಬ್ಬದಿಯ ಮೇಲೂ ಲಾಳದ ಕಡ್ಡಿಗಳು ಹುಚ್ಚು ಹುಚ್ಚಾಗಿ ಬೆಳೆದು . . . ತಲೆದೂಗುತ್ತಿದ್ದವು (ಕುಗಸಾಂ. ೭೪).

**ಲಾಳದ ಕಡ್ಡಿ** = ಲಾಳದಿಂದ ಮಾಡಿದ ಲೇಖನಿ : ಕಂಟ, ಸೀಸಗಡ್ಡಿ ಕುಂಚಗಳು, ಲಾಳದ ಕಡ್ಡಿ ಮತ್ತು ಮರಗಡ್ಡಿ (Wooden pens)ಗಳನ್ನು ಒಳಗೊಳ್ಳುತ್ತದೆ (ಶಾಶಕ. ೦೮). [< ಸಂ. ನಾಲ]

**ಲಾಳ$_2$, ಲಾಡ$_1$, ಲಾಟ** (ನಾ). ೧. ಒಂದು ದೇಶದ ಹೆಸರು : P ಈಗಿನ ಗುಜರಾತು : "ಲಾಟಃ—ಲಾಳಂ, ನಾಡು" (ನಾಕಿ. ೦೬) ; ಆ ವಿಭುವಾಹವಮಲ್ಲ ಮಹೀವಲ್ಲಭನಲ್ಲಿ ಪಡೆದನುರುತರನಿಜವಿದ್ಯಾವಿಭವದಿಂದ ಮೆಚ್ಚಿಸಿ ಭೂಮಿನುತಂ ಲಾಳಸಂಧಿವಿಗ್ರಹಪದಮಂ (ಎಇ. XII, ೨೮೦-೦೬೭; 1077) ; ಲಾಳ ಚೋಳ ಮರಾಳ ಯವ ಬಂಗಾಳ . . . ಧರಣೀಪಾಲತತಿ ಸಂದಣಿಸಿದುದು (ಕೊರರಾ. ೦-೭-೦೮). ೨. ಲಾಳದೇಶಕ್ಕೆ ಸೇರಿದವನು : ಓಡಿದ ಲಾಳಂ ಕಿವಿವಿಡಿದಾಡಿದ ಚೋಳಂ (ಎಕ. VII, ಶಿಕಾ. ೦೬೭-೨೦ ; 1114). **ಲಾಡ$_1$** : ೧. "ಲಾಡಃ = ನಾಡು" (ನಾಕಿ. ೨೩೪). ೨. ಕರಸಣ್ಣಗಳ ನೆಯ್ಗೆ ಚೇಡರಂ ಲಾಡರಂ ಪರಿಮಳದ ಪೂವಿನಾ ಮಾಲೆಗಾಱರ ನೀಲಿಗಾಱರಾ ಪಸರಮೆಸೆಗುಂ (ಗುರುಶಾ. ೦-೩೪) ; ಬಿಳಿದಂ ನೇಯ್ಗೆ ಚಾಡರುಂ ಲಾಡರುಂ (ಪಂಪಭಾ. ೨-೪೭). **ಲಾಟ** : ೧. "ಲಾಟಕೆ ಲಾಟಂ" (ಶಂಚಿಶ. ೨೦). ೨. ತಱಿಸಂದು ಲಾಟರೊಳ್ ತ[ಳ್ತ]ಱಿದೇಱಂ ಪೇೞ್ ಕೇಳ್ದು (ಶಂತಶಾ. ೦-೩೩). 'ಲಾಟಬಾಸೆಗ' ಪರಾ.

**ಲಾಳ ಕಂಡುಕಾಟ** = ಲಾಳರನ್ನು ಸದೆಬಡಿಯುವವನು : ಶ್ರೀಮನ್ಮಹಾಪ್ರಧಾನಂ ಸೇನಾಧಿಪತಿ ಲಾಳಖಂಡೆಯಕಾಱರಧಿಷ್ಟಾಯಕ ನಾಗ ಸಾಹಣಾಧಿಪತಿ . . . ಪ್ರತಿಪಾಳಿಸುತ್ತಮಿದ್ದು (ಎಇ. IX-i, ೨೬೬-೨೬ ; 1184). [< ಸಂ. ಲಾಟ]

**ಲಾಳ$_3$** 'ನಾಲ$_3$' ನೋ.

**ಲಾಳಕ$_1$** (ನಾ). ಕುದುರೆ, ದನ ಮುಂತಾದುವುಗಳ ಗೊರಸಿಗೆ ಲಾಳ ಹೊಡೆಯುವವನು : ಗಾಣಿಗರ್ ಚಿಪ್ಪಿಗರ್ ಮುಚ್ಚಿಗರ್ ಲಾಳಕರ್, ಸಾಣೆಗರ್ . . . ಬರುತಿರ್ದರು (ಕಪು. ೪೭-೪೦).

[ಲಾಳ$_3$ (<ನಾಲ$_3$) + – ಕ$_5$]

**ಲಾಳಕ$_2$** (ನಾ). (?) : ಅದರ ಸೊಪ್ಪಿನಲ್ಲಿ ಕಟ್ಟಿ, ಕಟ್ಟಿ ಅಭ್ರಕದ ಮೇರೆ ವಡಗಿ ಲಾಳಕದ ಗುಳಿಗ ಹುಡಿಮಾಡಿ ಅದರಲ್ಲಿ ಇಟ್ಟು (ಗಂರತ್ನ. ೩-೪).

[ ? ]

**ಲಾಳಕಟ್ಟು** 'ನಾಲಕಟ್ಟು' ನೋ.

**ಲಾಳಗಾರ** 'ನಾಲಗಾರ' ನೋ.

**ಲಾಳಗುಂಡಿಗೆ** 'ಲಾಳವಿಂಡಿಗೆ' ನೋ.

**ಲಾಳಗುಡಿಗೆ** 'ಲಾಳವಿಂಡಿಗೆ' ನೋ.

**ಲಾಳಬಂದಿ** 'ನಾಲಬಂದಿ' ನೋ.

**ಲಾಳಬುಂಡಿಗೆ** 'ಲಾಳವಿಂಡಿಗೆ' ನೋ.

**ಲಾಳಲಿಪಿ** (ನಾ). ಲಾಟದೇಶದ ಭಾಷೆಯ ಲಿಪಿ : ತೆಲುಗಲಿಪಿ . . . ಲಾ [ಪಾಠಾಂ. ೪ು] ಳಲಿಪಿ ಮೊದಲಾದ ಹಲವು ಲಿಪಿಗಳನೋದಬಲ್ಲಗ್ಗಳದ ಕರಣಿಕರಂ ಕರೆಸಿ (ಬಸಪು. ೩-೩೩). [ಲಾಳ$_2$+ಲಿಪಿ]

**ಲಾಳವಂಡಿಗೆ** 'ಲಾಳವಿಂಡಿಗೆ' ನೋ.

**ಲಾಳವಟ್ಟೆ** (ನಾ). ಲಾಳದ ಕಡ್ಡಿಯ ಸೀಳು,-ಪಟ್ಟೆ : ಪುರವರದೊಳೆಡೆ ವಿಡಲಿಲ್ಲದಾಯಿತ್ತುಕೋದಂಡನರ್ಗೆಸುನಿಟ್ಟ ಮತ್ತಾಯಗ್ಗಾಳು ಪುರಜನಂಗಳೆರ್ದೆಯಂ ಲಾಳವಟ್ಟೆಯಪ್ಪಂತಿರೆಸುವಾ ಕಾಯಜನ ಕೋಳಾಹಳವನು ಕಂಡು (ಶಬ್ದ್ಮ. ೪-೪೦); ಲಾಳವಟ್ಟೆಯ ಮಾಡಿದುವಾನೆಯೊಡಲನು . . . ಆ ಕಣೆಗಳು (ಶೀಂಸ. ೨೯-೦೩೯) ; ಬಿಲ್ಲವರೆಚ್ಚ ಶರಗಳಿಂದಿಟ್ಟಣಿಸುತಲೆಯ್ತಂದು ತಟ್ಟುರ್ಚೆ ರಿಪುಗಳ ಪೇರುರಗಳ ಲಾಳವಟ್ಟೆಯ ಮಾಡಿದವಾಗ (ಕಂಶ್ರಸಾಂ. ೬-೩೫). [ಲಾಳ$_1$+ಪಟ್ಟೆ$_1$]

**ಲಾಳವಾಟೆ** (ನಾ) =ಲಾಳವಟ್ಟೆ : ಲಾಳವಾಟೆಗಳಾದವಾನೆಯ ಹಾಳುವಡಲುಗಳು (ಜೈಭಾ. ೭೯-೯). [< ಲಾಳವಟ್ಟೆ]

**ಲಾಳವಿಂಡಿಗೆ, ಲಾಳಗುಂಡಿಗೆ, ಲಾಳಗುಡಿಗೆ, ಲಾಳಮುಂಡಿಗೆ, ಲಾಳವಂಡಿಗೆ, ಲಾಳವುಂಡಿಗೆ** (ನಾ). ೧. ಬಾಗಿಲನ್ನು ಮುಚ್ಚಿ ಭದ್ರಪಡಿಸಲು, ಅಡ್ಡಲಾಗಿ ಹಾಕುವ (ಮರದ) ಪಟ್ಟಿ : ಅಗುಳಿ : ತಾಳು : "ಪರಿಘಃ, ಪರಿಘಾತನಃ- ೨ ಲಾಳವಿಂಡಿಗೆ" (ಅಭಿಧಾ. ೭೬-೬೨೦); ದಿಶಾಧಿಪರ್ ದಿಗಿಭಸಂಹತಿಯಂ ಮನವೊಲ್ದು ಪಾರಿಸಲಿಕ್ಕಿದ ಲಾಳವಿಂಡಿಗೆಯ [ಪಾ]ಟ್ಟಿಯೊಳಿರ್ದುದು ವಿಂಧ್ಯಪರ್ವತಂ (ಧರ್ಮಪು. ೦೬-೩); ತಂದನ್ ಮನದ ವೇಗದಿ ಬಾಗಿಲುಕ್ಕಿನ ಲಾಳವಿಂಡಿಗೆಯ (ಭೀಪಾ. ೩೩-೩೬); ಜವನರಮನೆಯ ಮುಂಬಾಗಿಲ್ಗೆ ಲಾಳವಿಂಡಿಗೆಯುಂ ಸಮನೆನು (ರಾಜಶೇ. ೯೨-೨). ೨. (ಜಾಗಟೆಯನ್ನು ಬಡಿಯುವ) ದಂಡ,—ಕೋಲು : ಒಂದೆಡೆ ಜಾಗಟೆಯನ್ನು ನೇತುಹಾಕಿದ್ದಾರೆ. ಅದನ್ನು ಬಾರಿಸುವ ಕಿರಿಯ ಲಾಳವಿಂಡಿಗೆಯೂ ಪಕ್ಕದಲ್ಲಿದೆ (ಕಂಪ್ರಪ. ೦೦೯-೪). **ಲಾಳಗುಂಡಿಗೆ** : ೧. ಮಗದಿಗೆ ಲಾಳಗುಂಡಿಗೆ ಸ್ವಾಮಿಪಂಚಕರ ಗಂಡ (ಎಕ. VII, ಶಿಕಾಪು. ೭೬-೦೩; 1291). **ಲಾಳಗುಡಿಗೆ** : ೧. ಶರಣಾಗತ ವಜ್ರಪಂಜರರುಂ ಗಡಿಗೆ ಲಾಳಗುಡಿಗೆ ಬಂಧುಜನಬಾಂಧವರುಂ (ಎಕ. XI, ಹೊಳೆಲ್ಕೆ. ೦೦೩-೩; 1681 ?). **ಲಾಳಮುಂಡಿಗೆ** : ೧. ಹರಿನೀಲದಿಂದಲೆಸವ ಲಾಳಮುಂಡಿಗೆ ಪರಕುಲಿಶದ ಬಲುವೊಳೆಯಿಂ ಬಿರಿದು ರಂಜಿಪ ದ್ವಾರವಟ್ಟದ ಮಹಿಮೆಯನೊರೆವಡಿನ್ನಾರಳವಹುದು (ಅಂಜಕ. ೩-೦೨) ; ಹುಲಿಮುಖಪಂಕ ವಜ್ರದ ಕಂಬದಾಳೇರಿ ಬಲು ಲಾಳಮುಂಡಿಗೆ (ಶೌಂದಪು. ೩-೩೨). **ಲಾಳವಂಡಿಗೆ** : ೧. ಮಾರುತಿ ಕಡುಹಿನಲಿ ಭುಗುಭುಗಿಪ ಭಾರಿಯ ಕಿಡಿಗೆದರಿ ನೋಡಿದನು ಬಾಗಿಲ ಲಾಳವಂ[ಪಾಠಾಂ. ವಿಂ]ಡಿಗೆಯ (ಕುಮಾವ್ಯ. ೦೩-೩೬); ಲಾಳವಂ [ಪಾಠಾಂ. ವಿಂ]ಡಿಗೆಗಳಲಿ ಬಂಡಿಯ ಗಾಲಿಗಳ ಗಾಡಣೆಗಳಲಿ . . . ರಕ್ಕಸಭಟರಿಗಕ್ಕಜವಾದುದಾ ದುರ್ಗ (ತೊರೆರಾ. ೬-೭-೦೩) **ಲಾಳವುಂಡಿಗೆ** : ೧. ರಿಪುಬಲವನಸಿಯುಟ್ಟರೆಸವಿಭ ಬರಿಕೈಯ ಬಾರಿಯ ಲಾಳವುಂಡಿಗೆಯ ಸರಿಸಗುಂಡಿಸೊಳೊಂದನೊಂದಿಟ್ಟೊರಸಿದವು (ಕುಮಾವ್ಯ. ೪-೬೦); ಪೊಸ ಬೀಗ ಬಾಗಿಲು ಲಾಳವುಂ [ಪಾಠಾಂ. ಮುಂ]ಡಿಗೆ ಕಣ್ಗೆಸೆದವು ಕುಮ್ಮಟದೊಳಗೆ (ಕುಮಾರಾಂ. ೩೭-೩೨). [ಲಾಳ$_1$ + ಬಿಂಡಿಗೆ]

**ಲಾಳವುಂಡಿಗೆ** ' ಲಾಳವಿಂಡಿಗೆ ' ನೋ.

**ಲಾಳವ್ಯವಹಾರಿ** (ನಾ). ಲಾಳದೇಶದ ವ್ಯಾಪಾರಿ : ಪರಶುರಾಮನಾಯಕ ಪೊಮ್ಮಣನಾಯಕ ಅಮ್ಮುಗಿ ನಾಯಕ ಪ್ರಮುಖರಪ್ಪ ಸಮಸ್ತಲಾಳವ್ಯವಹಾರಿಗಳುಂ (ಎಕ. XII, ೨೦-೯೯ ; 1204).

[ಲಾಳ$_2$ + ವ್ಯವಹಾರಿ]

**ಲಾಳಾಜಳ** 'ಲಾಲಾಜಲ' ನೋ.

**ಲಾಳಿ$_1$, ಲಾಡಿ$_1$, ಲಾಲಿ$_2$** (ನಾ). ೧. ಒಂದು ಬಗೆಯ ಗಲಗು,-ಬೆತ್ತ : "ವೀರಣಂ, ವೀರತರಂ- ೨ ಮರಕಬ್ಬಿನ ಪೆಸರುಗಳು. ಕೆಲವರು ಲಾಳೀಕಡ್ಡಿಯನ್ನುವರು" (ನಿಘಂ.ಅ. ೦೩೦). ೨. ಬಟ್ಟೆಯನ್ನು ನೇಯಲು ನೇಯ್ಗೆಯವನು ಉಪಯೋಗಿಸುವ ಒಂದು ಸಾಧನ; ನಾಳಿ: ಸೀರೆಯ ನೆಯ್ಯುವಾತನ ಕೈಯ ಲಾಳಿ ನುಂಗಿತ್ತ ಕಂಡೆ (ಪೊಳಲಪು. ೦೦೭-೪೨೭) ; ಹರುಗಣಿ ಗೂಟ ರವಣಿಗೋಲು ಲಾಳಿಯು . . . ನಾಲಿಗೆಗೂಟವನಿ ದೊಂದುಳಿಯದ ಕಟ್ಟಿದನು (ಅಮರಾಂ. ೩-೬); ತರದ ಕೊಂಬಿನ ಲಾಳಿಯ ಮುಟ್ಟಿಸದೆ ರುಚಿರತರವಾದ ಪೊದಕೆಯಂ ನೆಯ್ಸಿಕೊಳ್ಳ (ಪಾಕೋಶ. ೨-೬೦). ೩. ಇಕ್ಕುಳ; ತಂಡಸ : "ಇಕ್ಕುಟಂ ಲಾಳಿ ತಂಡಸ ಗಾರಿಕಾಖ್ಯಂ" (ಮಂಗರಾ. ೧೦೩-೫). ೪. ಒಂದು ಬಗೆಯ ಆಯುಧ ಭೋಂಕಿನೆ ಮಿಡಿವ ಲಾಳಿಯ ಬಿಲ್ಲು ಪೆಟಲ್ಗಳ ಸಂಕುಲವಿರ್ದುದ (ಹೋಚಕ. ೨೦-೪) ; ಜೇಡರ 'ಲಾಳಿ'ಯನ್ನು ಅನೇಕರು ನೋಡಿರಬಹುದು. ಹಾಗೆಯೆ ಸಿಡಿದಾಡುವ ಒಂದು ಇಬ್ಬದಿವೊನೆಯ ಜಡವಾದ ಚಕ್ಕ ಆಯುಧವಿದು (ಕಪಾಗಾ. ೩೭). **ಲಾಡಿ$_1$** : ೨ ಎಂಥೆಂಥ ಎಂಜಿನ್ ಮಾಡಿ ಇರಿಸಿದಾನೆ . . . ಬೇಲು ಬಿಚ್ಚುವುದಕ್ಕೊಂದ ಹಬೇನ ಹತೋಟಿಯಲ್ಲಿಡುವುದಕ್ಕೊಂದು, ಲಾಡಿ ತಯಾರಿಸುವುದಕ್ಕೊಂದು ನೂಲುವುದಕ್ಕನಲವತ್ತೆಂಟು (ಕಂಗೂರ. ೩೭). **ಲಾಲಿ$_2$** : ೨. ಈ ಬತ್ತಿಗಳ ಮರದ ಲಾಲಿ (Bobbins)ಗಳಿಗೆ ಸುತ್ತಲ್ಪಡುವುವು (ಪಾಂಶ್ರ. I. ೪೦೭)

ಲಾಳಿ ಆಡಿಸು=೧. ನೇಯು : ಅವನು ಪಾತ್ರಗಳನ್ನೂ ಘಟನೆಗಳನ್ನೂ ಎರಡುಕಥೆಗಳಿಗೆ ಮಧ್ಯೆ ಲಾಳಿಆಡಿಸಿದಂತೆ ಆಡಿಸಿ ಅವುಗಳನ್ನು ಹಾಸು ಹೊಕ್ಕಾಗಿ ನೆಯ್ದಿದ್ದಾನೆ (ಸಂಪಾಟ. ೦೦೭). ೨. (ಆಲಂ) ಅಲ್ಲಿಂದಿಲ್ಲಿಗೆ ಓಡಾಡಿಸು : ಅಲೆಸು : ನನ್ನನ್ನು ಲಾಳಿಆಡಿಸಬೇಡ (ಶೂದ್ರ).

[< ಸಂ. ನಾಲೀ]

**ಲಾಳಿ$_2$** (ನಾ). ಲಾಟದೇಶದವಳು : "ಲಾಟ-ಲಾಳಿ[ಪಾಠಾಂ. ಟಿ]" (ಶಬ್ದಾ. ೯೩). [ಲಾಳ$_2$ + — ಇ$_2$]

**ಲಾಳಿಕೆ** (ನಾ). ಬಾಯಿ ಕಿರಿದಾದ ಪಾತ್ರೆಗೆ ದ್ರವವಸ್ತುಗಳನ್ನು ಹಾಕಲು ಬಳಸುವ, ಅಗಲ ಕಿರಿದಾಗುತ್ತಾ ಹೋಗುವ ಕೊಳವೆ; ಬುದ್ಧಿವಂತ ಪನ್ನಾಲೆ : ಗಾಜಿನ ಪಾತ್ರೆಯಲ್ಲಿರುವ ನೀರಿಗೂ ಲಾಳಿಕೆಯಲ್ಲಿರುವ ದ್ರಾ ಣಕ್ಕೂ ಒಂದು ತೆಳುವಾದ ಪೊರೆಯಿದೆ (ಜೀವಶಾ. ೯೭) ; ಲಾಳಿಕೆಯಂ (ಫನ್ನಲ್) ಅಗಲ ಕಿರಿದಾಗುತ್ತ ಹೋಗುವ ಕೊಳ್ವೆ (ಕಂಕೋ. I. ೩೨೩); ತ ಕೆಳಗೆ ಮಾಡಿ ಮಲಗಿಸಿ ಮೂಗಿನಲ್ಲೊಂದು ಲಾಳಿಕೆ ಇಟ್ಟರ (ಶುಶ್ರೂಷು. ೨೯). [< ಸಂ. ನಾಲಿಕಾ]

**ಲಾಳಿಕೋಲು** (ನಾ). ಒಂದು ಬಗೆಯ ಆಯುಧ : ತುರುಕಸಿಂಗಾ ಮೇಡೆಯ ಲಾಳಿಕೋಲ ನಿಷ್ಠುರವಾಕ್ಯದಾಳ್ಗಳೊಗ್ಗಿನೊಳು ಚುರುಚುರನೆಯ ಕೈಮುಗಿದು (ಅರಕ. ೨೨-೩೭). [ಲಾಳಿ$_1$ + ಕೋಲು$_1$ (< ಕೋಲ್$_1$)]

**ಲಾಳಿತ** ' ಲಾಲಿತ ' ನೋ.

**ಲಾಳಿತೆ** (ನಾ). ಸಂತೋಷ; ಲಾಳಿತೆಯ ರಮಣೀಯರಸಗಳ ಸೂಳು ನುಡಿಗಳ . . . ಕಥೆಗಳನೊಲಿದು ಬಣ್ಣಿಸುವೆ (ಕೀರ್ತಿ. ೦-೩). [< ಸಂ. ಲಾಲಿತ]

**ಲಾಳೆ** ' ಲಾಲೆ ' ನೋ.

**ಲಾಟಿ** ' ಲಾಳ$_2$ ' ನೋ.

**ಲಾಟಿಬಾಸೆಗ** (ನಾ). ಲಾಳದೇಶ ಭಾಷೆಯನ್ನು ಆಡುವವನು : ಲಾಟಂ = ಲಾಟಂ; ಲಾಟಭಾಷಿಕಂ = ಲಾಟಬಾಸೆಗಂ (ಶಮದ. ೨೦ ಪ್ರಯೋ).

[ಲಾಟ (< ಲಾಳ$_2$) + ಬಾಸೆ$_3$ + – ಗ$_2$]

**ಲಿಂಗ** (ನಾ). ೧. ಚಿಹ್ನೆ ; ಗುರುತು: ಶಿರಸ್ಸೆಂಬ ಸ್ಥಾನಾಷ್ಟಕದಲ್ಲಿ ಪ್ರಾ ವಾಯುಸಂಬಂಧಮಾಗಲಲ್ಲಿ ಪುಟ್ಟುವ ಅರ್ಣ ವರ್ಣ ಬೀಜ ಲಿಂ ಮಾತೃಕೆ ಶುದ್ಧಗೆಯೆಂಬ ಪರ್ಯಾಯ ಸಂಜ್ಞೆ (ಶಿವೇಕ. ೦೭೦); ಶ್ರುತಿ ಎಂದ ಬಾಯಿಬಿಟ್ಟು ಹೇಳುವ ಶಬ್ದವು ; ಲಿಂಗವೆಂದರೆ ಅದೆಂದು ತಿಳಿಸುವ ವಿಶೇಷ ರೂಪವಾದ ಗುರುತು (ಬ್ರಹ್ಮಶಾ. ೨೦೨ ಅ೩೮) ; ಭಾರತೀಯಮೂರ್ತಿಶಿಲ್ಪ ಹೆಗ್ಗುರುತು, ಅದರಲ್ಲಿನ ಚಿಹ್ನೆ, ಲಿಂಗ ಅಥವಾ ಸಂಜ್ಞೆ (Symbolism (ಭಾರದ.೩೦೬). ೨. ಗಂಡಸಿನ ಜನನೇಂದ್ರಿಯ: "ಶಿಶ್ನಃ, ಶೇಫಃ, ಮೇಢ್ರ ಲಿಂಗಂ, ಮೇಹನಂ, ಶೇಫಸ್—ಈ ೬ ಶೇಫಂ" (ಅಭಿಧಾ. ೮೩-೩೬೦)

ಲಿಂಗಂ ಬೆನ್ ಜಂಘಾಯುಗಳಂಗಳುಮೆಂಬೀ ಪ್ರದೇಶಮಿವು ನಾಲ್ಕುಂ ಹ್ರಸ್ವಂಗಳೆನೆ . . . ನಿಧಿವುರುಪಂ (ಲೋಕೋಪ. ೧೦-೪೭). ೩. ಸ್ತ್ರೀ ಅಥವಾ ಪುರುಷಚಿಹ್ನೆ : ಈ ನಿಯಮವನ್ನು ಲಿಂಗಭೇದವಿಲ್ಲದೆ ಅನುಸರಿಸಬೇಕು (ಲೂ). ೪. ದೇವಸ್ಥಾನಗಳಲ್ಲಿ ಪ್ರತಿಷ್ಠಾಪಿಸುವ ಶಿವನ ಪ್ರತೀಕವಾದ ಮೂರ್ತಿ ; ಸ್ಥಾವರಲಿಂಗ ; ವರಸಂಗ ಲಿಂಗ ಶರಣಾಗು (ಬಸವ. ೩-೬೩) ; ನಮ್ಮೂರ ದೇವಸ್ಥಾನದಲ್ಲಿ ಈ ದಿನ ಲಿಂಗದ ಪ್ರತಿಷ್ಠಾಪನೆ ಇದೆ (ಲೂ). ೫. [ವೀಶೈ] ಮೈಮೇಲೆ ಧರಿಸುವ ಶಿವನ ಒಂದು ಪ್ರತೀಕ; ಇಷ್ಟಲಿಂಗ: ಹೊತ್ತಾಱೆ ಎದ್ದು ಅಗ್ಘವಣಿ ಪತ್ರೆಯ ತಂದು ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ (ಬಸವ. ೦೭೨) ; ಲಿಂಗನಿಜಸದ್ಭಾವದೊಳು ಮನಂ ಮುಳುಗಿ (ಚ೩ಪು. ೦-೩) ; ಲಿಂಗಕ್ಕೆ ಕಡೆಯಿಲ್ಲ ಲಿಂಗಿಲ್ಲದೆಡೆಯಿಲ್ಲ ಲಿಂಗದೊಳು ಜಗವು ಅಡಗಿಹುದು ಲಿಂಗವನು ಹಿಂಗಿದವರುಂಟೆ (ಸರ್ವಜ್ಞ. ೦೦೭). ೬. [ತರ್ಕಶಾ] ಪ್ರಮಾಣ ; ಪುರಾವೆ : 'ಅನುಮಾನ'ದಲ್ಲಿ ಸಾಧಕವಾದ ' ಲಿಂಗ 'ಕ್ಕಿರುವ ವರ್ತನೆಯನ್ನೇ ವ್ಯಂಜಕತ್ವದಲ್ಲಿಯೂ ನೋಡಬಹುದು (ಧ್ವನ್ಯಾಲೋ. ೨೦೨). ೭. [ವ್ಯಾಕ] ಪುಂ. ಸ್ತ್ರೀ. ನಪುಂಸಕಗಳ ಸೂಚನೆ : ನೀನಱಿ ಕರ್ಣಾಟಕದೊಳ್ ಪೆಣಂ ಸ್ತ್ರೀ ಪುಂ ನಪುಂಸಕೋಭಯ ಪುಂ ಸ್ತ್ರೀ ಸ್ತ್ರೀನಪ್ಸಮಸ್ತವಾಚ್ಯಾನ್ಯೂನಾವ್ಯಯಮೆಂದು ಲಿಂಗಮೊಂಬತ್ತು ತೆಱಂ (ಶಬ್ದ. ೬೬); ಲಿಂಗವೆಷ್ಟು ವಿಧವು ? ಪುಲ್ಲಿಂಗವೆಂತಲೂ ಸ್ತ್ರೀಲಿಂಗವೆಂತಲೂ ನಪುಂಸಕಲಿಂಗವೆಂತಲೂ ಮೂರು ವಿಧವಾಗಿರುವದು (ಹೊಸಗ. ೩೩). ೮. ಯಾವುದೇ ಪ್ರತ್ಯಯ ಮೊದಲಾದುವುಗಳು ಸೇರದೆ ಇರುವ ಶಬ್ದದ ಮೂಲರೂಪ ; ಪ್ರಾತಿಪದಿಕ : ಕ್ರಿಯೆಯಂ ನುಡಿಯದುದು ವಿಭಕ್ತಿಯನಿಲ್ಲದುದರ್ಥಮುಳ್ಳುದಂತದು ಲಿಂಗಂ (ಶಮ. ೬೨) ; ಧಾತು ಪ್ರತ್ಯಯಾಂತಗಳಲ್ಲದ ಅರ್ಥವುಳ್ಳ ಶಬ್ದಗಳು ಲಿಂಗವೆಂದು ಹೇಳಲ್ಪಡುತ್ತವೆ (ಹೊಸಗ. ೩೪). " ಅನುಮಾನದೊಳು ಮುಷ್ಕದೊಳು ಪ್ರಕೃತಿಯೊಳು ಶೈವಮೂರ್ತಿಯೊಳು ಲಿಂಗಮಕ್ಕುಂ " (ಮಂಗರಾ. ೦೩೦-೩೦).

**ಲಿಂಗದ ಕಲ್ಲು** = ಲಿಂಗಮುದ್ರೆಯಿರುವ ಕಲ್ಲು : ನಾಲ್ಕುಂ ದೆಸೆಯೊಳು [ಳ್] ನಟ್ಟ ಲಿಂಗದ ಕಲ್ಲುಗಳು[ಳ್] (ಕೊಲ್ಲಾಪು. ೦೫-೭೭; 1186). **ಲಿಂಗದ ಕಾಯಿ** = ಶಿವಲಿಂಗವನ್ನಿಡುವ ಕರಡಿಗೆ ; ಚೌಕ : ಅವರು ಲಿಂಗದ ಕಾಯನ್ನು ಕೊರಳಲ್ಲಿ ಹಾಕಿದ್ದಾರೆ (ಲೂ). **ಲಿಂಗದ ಬೀರ, ಲಿಂಗದ ವೀರ** = ವೀರಭದ್ರನ ಖಡ್ಗ ಹೇಳುವ ಕಾಯಕದವನು; ಪುರವಂತ : ಲಿಂಗದ ಬೀರರು ಖಡ್ಗ ಹೇಳುತ್ತಾರೆ (ಲೂ) ; ಲಿಂಗದ ವೀರರ ಕುಣಿತ. ಗಡ್ಡುಗರಕುಣಿತ . . . ಗಮನಾರ್ಹ ನೃತ್ಯಗಳು (ಕರಕೋ. I, ೭೦೪). [ಸಂ.]

**ಲಿಂಗಕಲ್ಲು** (ನಾ). ಲಿಂಗದ ಮುದ್ರೆಯುಳ್ಳ ಗಡಿಕಲ್ಲು : ಬಡಗಲು ಬಟ್ಟೆಯ ನಟ್ಟ ಲಿಂಗಕಲ್ಲು (ಎಪಿ. XIII, ೦೬೨-೪೦; 1055).
[ಲಿಂಗ + ಕಲ್ಲು (< ಕಲ್$_3$)]

**ಲಿಂಗಕಾಣಿಕೆ** (ನಾ). ಒಂದು ಬಗೆಯ ತೆರಿಗೆ : ಯಿವಿರ್ಗೆ ಚಪರಕಾಣಿಕೆಯಿಲ್ಲ ಮರ್‍ಇಕಾಣಿಕೆಯಿಲ್ಲ ದೊಂಬಕಾಣಿಕೆಯಿಲ ಲಿಂಗಕಾಣಿಕೆಯಿಲ (ಎಕ. XVI. ಗುಬ್ಬಿ, ೩೪-೩೩ ; ?). [ಲಿಂಗ + ಕಾಣಿಕೆ (< ಕಾಣ್ಕೆ)]

**ಲಿಂಗಗ್ರಾಹಕ** (ನಾ). ಶಿವತತ್ತ್ವವನ್ನು ಅರ್ಥಮಾಡಿಕೊಂಡವನು,— ತಿಳಿದವನು : ಶಿವಲಿಂಗಾರ್ಚನಾತಿಸ್ನೇಹದೊಳು ಕುಳ್ಳಿರ್ದು ಲಿಂಗಗ್ರಾಹಕಂ ಬಸವಣ್ಣನಿಹ ಸದ್ಭಾವಮಂ ನೋಡಿ (ಬಸವಪು. ೩೩-೯೩). [ಸಂ.]

**ಲಿಂಗಜ** (ನಾ). ೧. ಇಂದ್ರಿಯ ಮೂಲಕವಾಗಿ ಬಂದ ಜ್ಞಾನ : ಶ್ರುತಭೇದಂ ತದ್ವೆದದ್ವಿತಯಂ ಲಿಂಗಜಮುಮಾವಗಂ ಶಬ್ದಜಮುಂ ಅಲ್ಲಿ ಲಿಂಗಜಮನೇಕಭೇದಮನಂಗೀಕರಿಸಿರ್ಕುಮಾವಗಂ (ತಂಪ್ರಪು. ೦೪-೯೩). ೨. ಲಿಂಗಾಯತ : ತೋರದಂತಿನ್ನನ್ಯರೆಲ್ಲಂಗೋಸರಿಸಿದ ಲಿಂಗಜರನೇವಿಸ್ತಾರಗೈವ ಪ್ರಧಾನಿಬಸವನು ಕೇಳಿ ಸದ್ಭುಧರು (ಅಕ್ಕ ಪು. ೮-೨೨). [ಸಂ.]

**ಲಿಂಗತತ್ತ್ವ** (ನಾ). ಶಿವಲಿಂಗದ ವಿಚಾರವನ್ನು ತಿಳಿಸುವ ತತ್ತ್ವ; ಶಿವತತ್ತ್ವ: ಹೀಗೆ ೨೫ ತತ್ವಗಳು ಲಿಂಗೈಕ್ಯವಾದಲ್ಲಿ ಆ ಲಿಂಗತತ್ತ್ವಗಳು ಹನ್ನೊಂದು ತಾವು ಪರಸ್ಪರ ಕೂಡಿಕೊಂಡು ಹೋಗುವುವು (ಶಿವಾಕೋ. ೨೩). [ಸಂ.]

**ಲಿಂಗತನು** (ನಾ). ೧. [ವೀಶೈ] ಸೂಕ್ಷ್ಮಶರೀರ : ಲಿಂಗತನುಚಿಚ್ಛಾಯೆಯೊಳು ತಾ ಸಂಗಿಸಿ (ಅನ್ಮು.ಶ. ೩-೦೭). ೨. ದೇಹದಲ್ಲಿ ಇಷ್ಟಲಿಂಗವನ್ನು ಧರಿಸಿರುವವನು ; ಲಿಂಗಧಾರಿ : ಅಹಂಕಾರಕ್ಕೆ ಎಡೆಗುಡದೆ ಲಿಂಗತನುವಾಗಿರಬೇಕು (ಬಸವ. ೬೦೦). [ಸಂ.]

**ಲಿಂಗತೊಂಡೆ** (ನಾ). ಒಂದು ಬಗೆಯ ತೊಂಡೆಯ ಗಿಡ : ಲಿಂಗತೊಂಡೆ, ಶಿವಲಿಂಗಿ (ಪ್ಲಾಂಟ್ ನೇ. ೦೪-೨೩೯). [ಲಿಂಗ + ತೊಂಡೆ$_1$./ತೆಲು. ಲಿಂಗದೊಂಡ]

**ಲಿಂಗತ್ರಯ** (ನಾ). ೧. [ವೀಶೈ] ಇಷ್ಟ, ಪ್ರಾಣ ಮತ್ತು ಭಾವ ಎಂಬ ಮೂರು ಲಿಂಗಗಳು : ಇಷ್ಟಪ್ರಾಣ ಭಾವಗಳೆಂಬ ಲಿಂಗತ್ರಯಗಳನು ನೆಲೆಗೊಳಿಸಿ (ಅಣ್ಣಾಶಿ. ೧); ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯಂಗಳಂ ಕಳೆದು (ಅಕ್ಕಪ್ರ. ೬೦-೫೬೪). ೨. [ವ್ಯಾಕ] ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕಲಿಂಗ ಎಂಬ ಮೂರು ಬಗೆಯ ಲಿಂಗಗಳು : ಅವ್ಯಯಲಿಂಗಂ ಸಪ್ತವಿಭಕ್ತಿಗಂ ಲಿಂಗತ್ರಯಕ್ಕಂ ವಚನತ್ರಯಕ್ಕಂ ಸರಿಯಾಗಿರ್ದ ತೆಱದಿನರ್ಥಮಂ ಕುಡುಗುಂ (ಶಬ್ದ. ೪೦ ವೃ.). [ಸಂ.]

**ಲಿಂಗದಾಹ** (ನಾ). ಉರಿಮೂತ್ರರೋಗ : ಅಯಿಲೇಯಾದಿ ಚೂರ್ಣ . . . ಆ ಚೂರ್ಣಮಂ ಸಕ್ಕರೆಗೂಡಿ ಹಸುವಿನ ಹಾಲಿನಲ್ಲಿ ಸೇವಿಸಲು . . . ಕಾಮಾಲೆ, ಶಿರೋದಾಹ, ಲಿಂಗದಾಹ ಪರಿಹರಮಕ್ಕುಂ (ಸಿಪವೈ. ೦೪೭) [ಸಂ.]

**ಲಿಂಗದೀಕ್ಷೆ** (ನಾ). ಇಷ್ಟಲಿಂಗವನ್ನು ಧರಿಸುವ ದೀಕ್ಷೆ : ಕಾಳಾಮುಖರು ಈ ಹೊಸ ವೀರಶೈವಪಂಥದಲ್ಲಿ ಲಿಂಗದೀಕ್ಷೆ, ಶಿಕ್ಷೆಗಳಿಗೆ ಗುರುಗಳಾಗಿ ಜಂಗಮರೆಂದು ಕರೆಸಿಕೊಂಡರು (ಹೊಳಂಪ. ೦೩೪). [ಸಂ. ಲಿಂಗದೀಕ್ಷಾ]

**ಲಿಂಗದೂರ** (ನಾ). ಲಿಂಗತನುವಲ್ಲದವನು : ತನ್ನ ಅನುವ ತಾನಱಿಯದೆ ಬಂದುಂಬ ಜಂಗಮದಲ್ಲಿ ಅಂಗವನಱಿಸುವ ಲಿಂಗದೂರರಿಗೇಕೆ ಜಂಗಮಭಕ್ತಿ (ಶೂನ್ಯಸಂ. ೨೭-೦೦೪). [ಸಂ.]

**ಲಿಂಗದೆರಿಗೆ** (ನಾ). ಒಂದು ಬಗೆಯ ತೆರಿಗೆ : ಕನಗೊಂಡನಹಳ ಗ್ರಾಮದಲಿ ಲಿಂಗ [ಧಾ] ರಿಗಳು ಕೊಡುವಂಥ ಲಿಂಗದೆರಿಗೆಯನು ಸಮರ್ಪಣೆವಾಡಿ (ಶಾಇಇ. IX-ii, ೬೩೯-೦೩; 1550). [ಲಿಂಗ + ತೆರಿಗೆ$_3$ (< ತೆಱಗೆ)]

**ಲಿಂಗದೆಱೆ** (ನಾ). = ಲಿಂಗದೆರಿಗೆ : ಕೊಱೂರಸೀಮೆಯೊಳಗಣ ಬಾಗೂಲೆಯ ನಾಯ್ಕಂದರಿಗೆ ಕಾಣಿಕೆ ಕಡಾಯ ಬಿಟಿ ಕೊಟಣ ಬತೆಱ್ ಲಿಂಗದೆಱ್ ವಿನೂಯಿಱಾ (ಶಾಇಇ. IX-ii, ೬೨೨-೦೪; 1547). [ಲಿಂಗ + ತೆಱೆ$_3$]

**ಲಿಂಗದೇಹ** (ನಾ). ಸೂಕ್ಷ್ಮಶರೀರ : ಲಿಂಗದೇಹವ ಹೊದ್ದಿದಂತಿಹ ಸಂಗವದಱೊಳಗಿಲ್ಲ (ಅನ್ಮು.ಶ. ೩-೦೪); ಒಬ್ಬೊಬ್ಬ ಜೀವನಿಗೂ ದೇಹಾವರಣಗಳುಂಟು, ಅವಾವುವೆಂದರೆ, ಮೊದಲು ಜೀವನ ಸ್ವರೂಪದೇಹ, ಎರಡನೆಯದು ಲಿಂಗದೇಹ (ಹಸಾರ. ೩-೭ ವಿಶೇಷಾರ್ಥ). ' ಲಿಂಗಶರೀರ ' ಪರಾ.
[ಸಂ.]

**ಲಿಂಗದೇಹಿ** (ನಾ). ಲಿಂಗದೇಹವನ್ನುಳ್ಳವನು ; ಸೂಕ್ಷ್ಮಶರೀರಿ : ದೇಹಗುಣಗಳಳಿದು ಲಿಂಗದೇಹಿಯಾದ ಶರಣನು ಬಾಹಿರಂಗದ ಬಳಕೆ ಮಾಯಾಮೋಹವನ್ನು ಜಱಿದನು (ಅಶಸಂ. ೨೪೦-೦೩೦೭).
[ಸಂ. ಲಿಂಗದೇಹಿನ್]

**ಲಿಂಗಧರ** (ನಾ). ಇಷ್ಟಲಿಂಗವನ್ನು ಧರಿಸಿದವನು ; ಲಿಂಗವಂತ ; ವೀರಶೈವ : ಆನೆಗೊಂದಿಯ ಕಾಡವೀರನೆಂಬ ಲಿಂಗಧರ[ನೂ] . . . ಕೊಡುವಂಥ ಲಿಂಗದೆರಿಗೆ (ಶಾಇಇ. IX-ii, ೬೩೯-೦೦; 1550); ಲಿಂಗಧರಾಧರಪ್ರತತಿ ಲಿಂಗಮಹೀರುಹಪಂಕ್ತಿ ಲಿಂಗತೀರ್ಥಂಗಳ ರಾಜಿ . . . ಕಣ್ಗೆಸೆದಿರ್ದುದು (ಪ್ರಶಪ. ೦೦-೨೩). [ಸಂ.]

**ಲಿಂಗಧಾರಕ** (ನಾ). = ಲಿಂಗಧರ : ನಿರತಿಶಯಮುಕ್ತಾಫಲಕಂಥಾವರಣ ಶರಣರು ಕಕ್ಷಕರತಳಸುರುಚಿರೋರಸ್ಥಳಕಲಿತಶಿವಲಿಂಗಧಾರಕರು (ಬಸಪು. ೫೯-೫೦); ಗುರುಕಾರುಣ್ಯ ಹೊಂದಿದವನು ಯಾವಾಗಲು ಲಿಂಗಧಾರಕ ನಾಗಿರತಕ್ಕದ್ದು (ದೀಬಾವ. ೦೬-೨೦ ವಿವರಣೆ). [ಸಂ.]

**ಲಿಂಗಧಾರಣ** (ನಾ). [ವೀಶೈ] ದೀಕ್ಷಾಪೂರ್ವಕವಾಗಿ ಇಷ್ಟಲಿಂಗವನ್ನು ಕಟ್ಟುವುದು,— ಧರಿಸುವುದು : ಭಕ್ತನು ಲಿಂಗಧಾರಣವಮಾಡಿದ ಬಳಿಕ ತನ್ನನ್ನು ನಾನಾದಿಕ್ಕಿಗೆ ಒಯ್ಯುವ ತತ್ವಗಳ ಸಮುದಾಯವನ್ನು ನಿವಾರಣೆ ಮಾಡಬೇಕು (ದೀಬಾವ. ೦೫-೨೦ ವಿವರಣೆ) : ದೀಕ್ಷೆಯನ್ನು ಹೊಂದದವನು ಲಿಂಗಧಾರಣಕ್ಕೆ ಅರ್ಹನಲ್ಲ (ಶಾಕರ. ೨೪೯). [ಸಂ.]

**ಲಿಂಗಧಾರಣೆ** (ನಾ). = ಲಿಂಗಧಾರಣ : ಲಿಂಗಧಾರಣೆಯಾದ ಬಳಿಕ ಆ ಲಿಂಗವೇ ಭಕ್ತನಿಗೆ ಗುರುಸ್ವರೂಪವು (ದೀಬಾವ. ೦೫-೨೦. ವಿವರಣೆ). [ಸಂ. ಲಿಂಗಧಾರಣ]

**ಲಿಂಗಧಾರಿ** (ನಾ). ೧. =ಲಿಂಗಧರ : ಅವರಿವರುಯಸದಿನ್ನೆಲ್ಲರೊಂದೇ ಲಿಂಗ ಧಾರಿಗಳೇಸಕೂಟದಲಿ (ಬಸ್ತ್ವಪು. ೯೬-೨೭) ; ಲಿಂಗವನ್ನು ತನ್ನ ಹಸ್ತ ದಲ್ಲಿರಿಸಿ . . . ಧ್ಯಾನಯುಕ್ತನಾಗಿರುವದು ಲಿಂಗಧಾರಿಯ ಕರ್ತವ್ಯ (ದೀಬಾವ. ೦೪-೨೦ ವಿವರಣೆ) ; ಪಾಶುಪತಯೋಗಚಿಹ್ನೆಗಳುಳ್ಳವನೇ ಲಿಂಗ ಧಾರಿಯೂ, ಇವರೇ ಲಿಂಗಿಗಳು ಎಂದು . . . ಕಾಳಾಮುಖರ ಬಗ್ಗೆ ಹೇಳಿದೆ (ಶೂಕೀಲಂ. ೦೩೯). ೨. ಒಂದು ಬಗೆಯ ಮರ :(ಕೋಣನ ಕೊಂಬುಮರ, ಲಿಂಗಧಾರಿ, ಅಂಬಾರಿಹೊಡೆ (ವೃಕ್ಷಶಿ. ೬೫-೦೬೯). [ಸಂ. ಲಿಂಗಧಾರಿನ್]

**ಲಿಂಗಪತ್ರಿಕೆ** (ನಾ). (?) : ಮೊದಲ ಪದನಪಭ್ರಂಶಕ್ಕೆ ಬಾರದೆ ಉತ್ತರ ಪದಂ ತದ್ಭವಮಾದ ಸಮಾಸಕ್ಕೆ . . . ಪಾದಶೃಂಖಲೆ —ಪಾದಸಂಕಲೆ, ಲಿಂಗಪತ್ರಿಕೆ—ಲಿಂಗವತ್ತಿಗೆ (ಶಮದ. ನ. ೩೦೪ ವೃತ್ತಿ). [ ? ]

**ಲಿಂಗಪಥ** (ನಾ). [ವೀಶೈ] ಲಿಂಗೈಕ್ಯಸಾಧನೆಯ ದಾರಿ; ಮೋಕ್ಷಮಾರ್ಗ: ಎನಗೆ ಗುರುಪಥವ ತೋರಿದವರಾರು ಲಿಂಗಪಥವ ತೋರಿದವರಾರು (ಬಸವ. ೬೬೨): ಲಿಂಗಪಥದಲ್ಲಿ ನಡೆಸಿ ಮಹಾಲಿಂಗಪದದಲ್ಲಿ ನಿಲಿಸುವಾತ ಜಂಗಮ (ಶೋಳವಚ. ೦೦೦ ಪ್ರಸ್ತಾವನೆ). [ಸಂ.]

**ಲಿಂಗಪ್ರತಿಷ್ಠೆ** (ನಾ). (ಪೂಜೆಗಾಗಿ ದೇವಸ್ಥಾನ ಮೊದಲಾದೆಡೆಗಳಲ್ಲಿ) ಶಿವಲಿಂಗವನ್ನು ಸ್ಥಾಪಿಸುವಿಕೆ : ಕಲ್ಲ ಮನೆಯ ಮಾಡಿ ಕಲ್ಲ ದೇವರ ಮಾಡಿ ಆ ಕಲ್ಲು ಕಲ್ಲ ಮೇಲೆ ಕೆಡೆದರೆ ದೇವರೆತ್ತ ಹೋದರೋ ಲಿಂಗ ಪ್ರತಿಷ್ಠೆಯ ಮಾಡಿದವಂಗೆ ನಾಯಕನರಕ (ಅವಚಂ. ೫೦-೨೦೨). [ಸಂ. ಲಿಂಗಪ್ರತಿಷ್ಠಾ]

**ಲಿಂಗಪ್ರಸಾದ** (ನಾ). ಈಶ್ವರಲಿಂಗಕ್ಕೆ ಅರ್ಪಿಸಿದ ನೈವೇದ್ಯ : ಲಿಂಗ ಪ್ರಸಾದವನುಂಡು ಅನ್ಯದೈವಂಗಳ ಕೊಂಡಾಡುವವರ ನಮ್ಮ ಕೂಡಲ ಸಂಗಮದೇವನು ಆ ಭಂಡರಿಗೆ ಮಾಡಿದ ಹುಸುಗೊಂಡವನು (ಬಸವ. ೬೦೭): ಅಸಮಭಕ್ತಪ್ರಾಣನಿಧಿ ಕರವೊಸೆದು ಕೈಕೈಯಿಂದವಾರೋಗಿಸುತಿರಲ್ ತ್ರಿಸಂಧಿಯುಲಿ ಲಿಂಗಪ್ರಸಾದವನು (ಬಸಪು. ೩೩-೦೨). [ಸಂ.]

**ಲಿಂಗಪ್ರಸಾದಿ** (ನಾ). [ವೀಶೈ] ಲಿಂಗಪ್ರಸಾದವನ್ನು ಪಡೆದವನು : ಆಧಿಯಿಲ್ಲದಿದ್ದಡೆ ಲಿಂಗಪ್ರಸಾದಿಯೆಂಬೆ ವ್ಯಾಧಿಯಿಲ್ಲದಿದ್ದಡೆ ಜಂಗಮ ಪ್ರಸಾದಿಯೆಂಬೆ (ಅವಚಂ. ೩೫-೦೬೭) ; ಲಿಂಗಪ್ರಸಾದಿಗಳಲ್ಲದವರ ಸಂಗ ಭಂಗವೆಂದುದು ಗುರುವಚನ (ಬಸವ. ೭೯೦). [ಸಂ. ಲಿಂಗಪ್ರಸಾದಿನ್]

**ಲಿಂಗಪ್ರಾಣಿ** (ನಾ). [ವೀಶೈ] ಲಿಂಗವೇ ಪ್ರಾಣವಾದವನು : ಪೂರ್ವ ಬೀಜವಾಯುಪ್ರಾಣಿಯಲ್ಲ ಲಿಂಗಪ್ರಾಣಿಯೂ ಶರಣನು (ಬಸವ. ೭೬೩) ; ಎನ್ನ ದೇಹೇಂದ್ರಿಯ ಮನಃಪ್ರಾಣಾದಿಗಳು ಲಿಂಗವ ಪತಿಯರಾಗಿ ಲಿಂಗ ಕ್ಕೆಂದೆ ಬಯಸಿ ಲಿಂಗಪ್ರಾಣಿಗಳಾದ ಕಾರಣ ಲಿಂಗಕ್ಕೆಂದೆ ಕೈಕೊಂಡೆನು (ಬಸವ. ೨೦-೫೬). [ಸಂ. ಲಿಂಗಪ್ರಾಣಿನ್]

**ಲಿಂಗಮುಖ** (ನಾ). [ವೀಶೈ] "ಲಿಂಗಸ್ಥಾನಗಳೂ ಲಿಂಗಸ್ವರೂಪಗಳೂ ಆದ ನಾಸಿಕ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರವೆಂಬ ಜ್ಞಾನೇಂದ್ರಿಯಂಗಳು ಮತ್ತು ಗುದ, ಗುಹ್ಯ, ಪಾದ, ಪಾಣಿ, ವಾಕ್ಕುಗಳೆಂಬ ಕರ್ಮೇಂದ್ರಿಯಂಗಳು ಲಿಂಗಮುಖಗಳೂ ಆಗಿರುವುವು" (ಶಿವಾಸೂ. ೯೯): ನರಜನ್ಮದಲ್ಲಿ ಹುಟ್ಟಿ ಲಿಂಗಮುಖವನರಿಯದೆ ಉದಮದ ಸೊಕ್ಕಿ ತಲೆಗೇರಿತ್ತ ಅಯ್ಯಾ (ಬಸವ. ೫೬೬). [ಸಂ.]

**ಲಿಂಗಮುದ್ರೆ** (ನಾ). ('ಇದು ದೇವರಿಗೆ ಸೇರಿದುದು' ಎಂದು ತೋರಿಸಲು ಎತ್ತು, ಕಲ್ಲು ಮೊದಲಾದುವುಗಳ ಮೇಲೆ ಒತ್ತುವ ಅಥವಾ ಮುದ್ರಿಸುವ) ಲಿಂಗದ ಗುರುತು,— ಚಿಹ್ನೆ : ಬೀದಿಯ ಬಸವಂಗೆ ದೇಗುಲದ ಪಶುವಿಂಗೆ ಹುಟ್ಟಿದ ಕಱುಹೋರಿಗಳು. ಬಸವಗಳವ್ವುವೆ ಲಿಂಗಮುದ್ರೆಯನೊತ್ತದನ್ನಕ್ಕರ (ತತ್ತ್ವವ.ಕ. ೦೯೨-೪೨೪) ; ಲಿಂಗಮುದ್ರೆಯ ಸೀಮೆಯ ಮೃತ್ತಿಕೆ ಮರ ಕಲ್ಲು ಮುಂತಾದ ಮತ್ತಾವ ಗುಣಂಗಳೆಲ್ಲವೂ ಲಿಂಗಧಾರಣದ ಸೀಮೆಯಾಗಿ (ಏಕೋತ್ತ. ೬೪) : ಸ್ವತಃ ಇಳಕಲ್ಲ ಮಹಾಂತ ಸ್ವಾಮಿಗಳವರೇ . . . ಲಿಂಗಮುದ್ರೆಗಳನ್ನು ಸ್ಥಾಪಿಸಿದರು (ಕರಕ. ೬೨೯)

**ಲಿಂಗಮುದ್ರೆಕಲ್ಲು, ಲಿಂಗಮುದ್ರೆಯ ಕಲ್ಲು** = ಲಿಂಗದ ಚಿಹ್ನೆಯುಳ್ಳ (ಗಡಿ)ಕಲ್ಲು : ಹೊಲ ಮಾಡಿಬಿಟ್ಟು ನಾಲ್ಕುಮೂಲೆಗೂ ನಾಲ್ಕು ಲಿಂಗ ಮುದ್ರೆಕಲ್ಲು ನಡಿಸಿ ಕಾವುಕಟ್ಟು ಮಾಡಿಸಿಬಿಡು (ಶಿಳುಶು. ೯೯) ; ಆ ಶಾಸನಿಗರು ಆ ದೇವರ್ಗ್ಗೆಯಂಗಡಿಗೆ ಲಿಂಗಮುದ್ರೆಯ ಕಲ್ಲ ನಡಿಸಿಕೊಟ್ಟರ್ (ಎಂ. XIX. ೨೫-೩೪; 1245) : ಬಾಣೇಶ್ವರದೇವರ ಲಿಂಗಭೋಗರಂಗ ಭೋಗಕ್ಕೆ ಬಯಸಾಡೊಳಗಣ ಬಾಣಾರನು ಹುಲಿಕಲ್ಲನು ಲಿಂಗಮುದ್ರೆಯ ಕಲ್ಲ ಹಾಕಿ ಕೊಟ್ಟೆಯು (ಎಕ. III (R), ಹಗ್ಗದ, ೦೯೩-೦೬ ; 1497).

**ಲಿಂಗಮುದ್ರೆಬಸವ** = ಲಿಂಗಮುದ್ರೆಯನ್ನು ಒತ್ತಿರುವ ಬಸವ : (ಸ್ಯಾಂಡರ್. ೬೪೭). **ಲಿಂಗಮುದ್ರೆವಳಯ** = ಲಿಂಗಮುದ್ರೆಯ ಕಲ್ಲುಗಳನ್ನು ನೆಟ್ಟಿರುವ ಗಡಿಯ ಪ್ರದೇಶ : ಆ ಪುರದ ಚತುರ್ಸೀಮೆಗೆ ಲಿಂಗಮುದ್ರೆವಳಯ ಶಾಶನವ ಹಾಕಿಸಿ (ಎಕ. XVI. ಕಶ್ಯಪಾ. ೬೩-೦೬; 1529). [ಸಂ. ಲಿಂಗಮುದ್ರಾ]

**ಲಿಂಗಮೆಣಸು** (ನಾ). ಮೆಣಸಿನಲ್ಲಿ ಒಂದು ಬಗೆ : ಲಿಂಗಮೆಣಸು ಗುರುಗು (ವೃಕ್ಷಶಿ. ೨೦-೩೬೩). [ಲಿಂಗ + ಮೆಣಸು (< ಮೆಟಸು)]

**ಲಿಂಗರೋಗ** (ನಾ). ಮೇಹರೋಗ ; ಪರಂಗಿರೋಗ : ಕ್ರಮುಕ ಮನಕ್ಕೆ ಫಲತ್ರಯದ ಮಸಿಯನಕ್ಕಣಿಲೆಯುಂ ರಸಾಂಜನಮುಮನಕ್ಕೆ ಮನುಷ್ಯಕಪಾಲಮನಕ್ಕೆ ಮೊಕ್ಕಳಂ ಪೂಸೆ ಲಿಂಗರೋಗಂ ಕಿಡುಗುಂ (ಗೋಕಮಲ. ೯-೦೬೯). [ಸಂ.]

**ಲಿಂಗವಂತ** (ನಾ). [ವೀಶೈ] ಇಷ್ಟಲಿಂಗವನ್ನು ಧರಿಸಿರುವವನು : ಲಿಂಗ ವಂತನ ಸನ್ನಿಧಿಯಿಂದ ಹಿಂದಣ ದುಸ್ಸಂಗ ಕೆಡುವುದು (ಬಸವ. ೦೫೦); ಅರಳಲೆಯುರಸಂ ಮಾಗಾಯ್ಗಳ ಮಲ್ಲಳಿಗಾಱಂ ಹೊಂಗತಗದ ಲಿಂಗವಂತಂ (ಬಸರ. ೦೦-೦೦೫); ಲಿಂಗಭಾವರು ಲಿಂಗಜೀವರು ಲಿಂಗವಂತರು ಲಿಂಗ ಶಾಂತರು (ಬಸಪು. ೬-೪೯). [ಸಂ. ಲಿಂಗವತ್]

**ಲಿಂಗವತ್ತಿಗೆ** (ನಾ). (?): "ವಾಳೆ(ಲಾಳೆ) = ಲಿಂಗವತ್ತಿಗೆ" (ಕಮದ. ೫೦. ೨); "ಲಾಳೆಯೆನೆ ಲಿಂಗವತ್ತಿಗೆ" (ಕರ್ಣಾಟ. ೩೪) ; "ಲಿಂಗವತ್ತಿಗೆಗೆ ಲಾಳೆಯೆಂಬುದು" (ಕಬ್ಬಿಗ. ೮೦). [< ಲಿಂಗಪತ್ರಿಕೆ]

**ಲಿಂಗವರ್ಜಿತ** (ನಾ). [ವೀಶೈ] ಇಷ್ಟಲಿಂಗವನ್ನು ತ್ಯಜಿಸಿದವನು : ಸರ್ವ ಸಂಸಾರ ಕಾರಣಭಕ್ತಿಗಮ್ಯನಂ ನಿರ್ವಿಕಾರನ ಲಿಂಗವರ್ಜಿತನುದಾರನಂ ಸರ್ವಾಂಗ ವೊಂದಿ ವಂದಿಸುವೆಂ ಲಿಂಗದೊಳಗಿರ್ವನಂ ಕುಱಿತೆಂದನು (ಪಿಕ್ಕಪು. ೬-೦-೩೫). [ಸಂ.]

**ಲಿಂಗವಿಕಾರಿ** (ನಾ). [ವೀಶೈ] ಲಿಂಗಾಭಿಮಾನಕ್ಕೆ ಒಳಗಾದವನು ; ಇಷ್ಟಲಿಂಗಾಭಿಮಾನಿ : ಲಿಂಗವಿಕಾರಿಗೆ ಅಂಗವಿಕಾರವೆಂಬುದಿಲ್ಲ ಜಂಗಮ ವಿಕಾರಿಗೆ ಧನವಿಕಾರವೆಂಬುದಿಲ್ಲ (ಬಸವ. ೬೯೩). [ಸಂ. ಲಿಂಗವಿಕಾರಿನ್]

**ಲಿಂಗವಿವಕ್ಷೆ** (ನಾ). [ವ್ಯಾಕ] ಲಿಂಗದ ವಿಷಯವನ್ನು ನಿರ್ಧರಿಸುವುದು : ಪುಲ್ಲಿಂಗ, ಸ್ತ್ರೀಲಿಂಗ ಅಥವಾ ನಪುಂಸಕಲಿಂಗವೇ ಎಂದು ನಿರ್ಧರಿಸುವುದು : ಅರ್ಥಾನುಸಾರಿಯಾಗಿ ಲಿಂಗವಿವಕ್ಷೆ ಮಾಡುವುದು ಎಲ್ಲ ದ್ರಾವಿಡ ಭಾಷೆಗಳ ವೈಶಿಷ್ಟ್ಯವಾಗಿದೆ (ಭಾಶಾಶಾ. ೨೬೪) : ಸರ್ವನಾಮಗಳಲ್ಲಿ ಲಿಂಗ ನಿರ್ದೇಶನ ಕಾಣಿಸಿದರೂ ಅದು ಲಿಂಗವಿವಕ್ಷೆಗೆ ಸಂಬಂಧಪಡದ ವಿಚಾರ (ದ್ರಾಶಬ್ದ. ೨೩೬). [ಸಂ. ಲಿಂಗವಿವಕ್ಷಾ]

**ಲಿಂಗವೀರ** (ನಾ). ವೀರಭದ್ರನ ಸ್ತೋತ್ರವನ್ನು ಹೇಳುವ ಕಾಯಕದವನು : ಲಿಂಗದ ಬೀರ : ಮೆರಸಿ ನಂದೀಧ್ವಜವ ಕರದಿಯು ಮೊರವಿನೊಳಗೀ ಲಿಂಗವೀರರ ನೆರವಿಯೊಳಗಪಗೈದ ಖಡ್ಗವ ಹೊಗಳಸುತ ಪುರದಿ (ಬಸ್ವಪು. ೯೨-೩).  [ಸಂ.]

**ಲಿಂಗವೃತ್ತಿ** (ನಾ). ಧರ್ಮದ ಹೆಸರಿನಲ್ಲಿ ಸ್ವಾರ್ಥವನ್ನು ಸಾಧಿಸಿಕೊಳ್ಳುವವನು ; ತಪಸ್ವಿಯ ವೇಷ ಧರಿಸಿಕೊಂಡು ಹೊಟ್ಟೆಹೊರೆಯುವವನು ; ಆಷಾಢಭೂತಿ : "ಧರ್ಮಧ್ವಜಂ. ಲಿಂಗವೃತ್ತಿ ಈ ೨ ತಪೋವೇಷಗೊಂಡವಂ" (ಹಲಾಯು. ೭೭-೨೩೦). [ಸಂ.]

**ಲಿಂಗವ್ಯಭಿಚಾರ** (ನಾ). ಪುಲ್ಲಿಂಗ, ಸ್ತ್ರೀಲಿಂಗ ಅಥವಾ ನಪುಂಸಕಲಿಂಗಗಳನ್ನು ವ್ಯತ್ಯಾಸಮಾಡಿ ಹೇಳುವುದು : ಲಿಂಗಸಂಖ್ಯಾಸಾಧನಾದಿ ವ್ಯಭಿಚಾರನಿವೃತ್ತಿಯಿಂ ಶಬ್ದಾನುಗತಾರ್ಥಮಂ ಕೆಯ್ಕೊಳ್ವುದು ಶಬ್ದನಯಂ ಪುಷ್ಯಸ್ತಾರಕಾನಕ್ಷತ್ರಮೆಂಬುದು ಲಿಂಗವ್ಯಭಿಚಾರಂ (ತತ್ತ್ವಸೂ. ೭೩). [ಸಂ.]

**ಲಿಂಗವ್ಯವಸ್ಥೆ** (ನಾ). [ವ್ಯಾಕ] ಪುಂ. ಸ್ತ್ರೀ. ನಪುಂಸಕಲಿಂಗಗಳನ್ನು ಉಪಯೋಗಿಸುವ ನಿಯಮ. –ಕಟ್ಟುಪಾಡು : ಭಾಷೆಗೆ ಲಿಂಗವ್ಯವಸ್ಥೆ ಒಂದು ಬಗೆಯ ಅನುರೂಪತೆಯನ್ನು ತಂದುಕೊಡುತ್ತದೆ (ದ್ರಾಶಬ್ದ. ೨೪೭). [ಸಂ. ಲಿಂಗವ್ಯವಸ್ಥಾ]

**ಲಿಂಗವ್ಯಸನಿ** (ನಾ). [ವೀಶೈ] ಲಿಂಗವನ್ನು ಕುರಿತು ಚಿಂತಿಸುವವನು; ಶಿವಧ್ಯಾನಿ : ದುರ್ವ್ಯಸನಿ ದುರಾಚಾರಿಯೆಂದೆನಿಸದಿರಯ್ಯಾ ಎನ್ನ ಲಿಂಗವ್ಯಸನಿ ಜಂಗಮಪ್ರೇಮಿಯೆಂದೆನಿಸಯ್ಯಾ (ಬಸವ. ೨೬೨) ; ಎಲ್ಲವನು ಹಿಂಗಿಸಿ ತಾ ಲಿಂಗವ್ಯಸನಿಯಾಗಬಲ್ಲಡೆ ಮುಂದೆ ಮಹಾಮಂಗಳದ ಬೆಳಗು ಕಾಣಿಪುದು (ಲಿಂಗಪ. ೨-೬). [ಸಂ. ಲಿಂಗವ್ಯಸನಿನ್]

**ಲಿಂಗವ್ಯಾಧಿ** (ನಾ). = ಲಿಂಗರೋಗ : ರೋಹಿಣೀಧವನುಗ್ರಗ್ರಹಯುಕ್ತನಾಗಿ ನಿಲೆ ಲಿಂಗವ್ಯಾಧಿಯಿಂ ಬರ್ದುಗುಂ (ಶಾತಕ. ೨೧-೦೦). [ಸಂ.]

**ಲಿಂಗಶರಣ** (ನಾ). [ವೀಶೈ] ಲಿಂಗಕ್ಕೆ ಶರಣಾದವನು : ಶಿವಭಕ್ತ : ಲಿಂಗಶರಣನ ಪಂಚೇಂದ್ರಿಯಂಗಳಂ ಲಿಂಗಮುಖವಾಗಿ ನಿಂದು ಮನ ಸಹಿತ ಪಂಚವಿಷಯಂಗಳಖಿಲಸುಖಂಗಳ ಲಿಂಗಾರ್ಪಿತದಿಂದ ಚರಿಸುತ್ತ (ಅದವ. ೨೩-೬೦). [ಸಂ.]

**ಲಿಂಗಶರೀರ** (ನಾ). =ಲಿಂಗದೇಹ: ಭೂತಂಗಳೈದುಂ ಬುದ್ಧಿ ಚಿತ್ತಂಗಳೆರಡು ಇಂತೇಳಂ ಬಿಟ್ಟು ಉಳಿದ ಪದಿನೇಳ್ತತ್ತ್ವಂಗಳ್ ಕೂಡಿ ಸೂಕ್ಷ್ಮಶರೀರಮಾದುದು ಅದಕ್ಕೆ ಲಿಂಗಶರೀರಮೆಂದು ಪೆಸರುಂಟು (ಮನೋಶಿ. ೩-೩೦) : ಬುದ್ಧಿ ಮೊದಲಾಗಿ ತನ್ಮಾತ್ರೆಗಳ ಪರ್ಯಂತ ಹದಿನೆಂಟು ತತ್ತ್ವಗಳು ಪ್ರತಿ ಪ್ರಾಣಿಗೂ ಲಿಂಗಶರೀರವಾಗಬೇಕಾಗಿರುವುದು (ಹಿಂದಶಾ. ೩೭). [ಸಂ.]

**ಲಿಂಗಶರೀರಿ** (ನಾ). = ಲಿಂಗಧರ : ನಳಿನಪತ್ರೇಕ್ಷಣನ ಓಲಗಶಾಲೆಗೆ ಸಲುವರೆ ಲಿಂಗಶರೀರಿಗಳು (ಕುರಂದ. ದಾ. ೩-೦೩೩-೦). [ಸಂ. ಲಿಂಗಶರೀರಿನ್]

**ಲಿಂಗಶುದ್ಧಿ** (ನಾ). ಐದು ಬಗೆಯ ಶುದ್ಧಿಗಳಲ್ಲಿ ಒಂದು ; ಲಿಂಗಪೀಠವನ್ನು ನೀರಿನಿಂದ ತೊಳೆಯುವುದು : ಆತ್ಮಶುದ್ಧಿ ಸ್ಥಾನಶುದ್ಧಿ ದ್ರವ್ಯಶುದ್ಧಿ ಲಿಂಗಶುದ್ಧಿ ಮಂತ್ರಶುದ್ಧಿಯೆಂಬ ಪಂಚಶುದ್ಧಿಗಳಂ ವಿಸ್ತರಿಸುವದಱಲ್ಲಿ . . . ಲಿಂಗಪೀಠಮಂ ವಾರಿಯಿಂ ಪ್ರಕ್ಷಾಲನಂಗೈವುದೇ ಲಿಂಗಶುದ್ಧಿಯೆನಿಸುವುದು (ವಿವೇಕ. ೯೨). [ಸಂ.]

**ಲಿಂಗಸಲಾಖೆ** (ನಾ). ಲಿಂಗದ ಗುರುತುಳ್ಳ ಸಲಾಕೆ.-ಸರಳು (?): × × × ಗಮಹಾದೇವಿಯರುಂ ಸ್ವರ್ಗ್ಗಗಾಮಿಗಳಾದಡಂ . . . ಶ್ರೀಪರ್ವ್ವತಕ್ಕಟ್ಟಿ ಪಾತಾಳಗಂಗೆಯ × × × ಇಟ್ಟಳಲ್ಲಿ ಸಲಕ್ಷಣಮಪ್ಪ ಲಿಂಗಸಲಾಖೆಗಳಂ ತರಿಸಿ (ಎಕ. VI. ಕಡೂರು. ೦೫೭-೩೫; 1191). [ಲಿಂಗ+ಸಲಾಖೆ (<ಸಲಗೆ$_2$)]

**ಲಿಂಗಸಾರಾಯ** (ನಾ). [ವೀಶೈ] ಲಿಂಗತತ್ತ್ವವನ್ನು ಅರಿತವನು; ಶರಣ: ಅಸಂಬಂಧ ಸಂಬಂಧವಾಯಿತ್ತು ಲಿಂಗಸಾರಾಯರ ಸನ್ನುಮತದಿಂದ (ಬಸವ. ೯೪೩). [ಲಿಂಗ + ಸಾರಾಯ$_2$]

**ಲಿಂಗಸ್ಥಲ**, ಲಿಂಗಸ್ಥಳ (ನಾ). [ವೀಶೈ] ನೂರೊಂದು ಸ್ಥಲಗಳಲ್ಲಿಯ ಒಂದು ವಿಭಾಗ: ಶಿವತತ್ತ್ವವು ಸ್ವಶಕ್ತಿಯ ಸ್ಫುರಣೆಯಿಂದ ತಾಳಿದ ಎರಡು ಪ್ರಕಾರಗಳಲ್ಲಿ ಒಂದು : ಸಹಸ್ರಮೂಲಮಂತ್ರಮಂ ಜಪಿಸುತ್ತಾ ಲಿಂಗಸ್ಥಲಕ್ಕೆ . . . ಪ್ರಾಣಪ್ರತಿಷ್ಠೆಯಂ ಮಾಡಿ (ವಿವೇಕ. ೦೦೦) ; ಸ್ಥಲತತ್ತ್ವವು ತನ್ನ ವಿಮರ್ಶಶಕ್ತಿಯ ಕ್ಷೋಭೆಯಿಂದ (ಚಲನದಿಂದ) ಲಿಂಗಸ್ಥಲವೆಂದೂ ಅಂಗಸ್ಥಲವೆಂದೂ ಎರಡುವಿಧ (ಶಿವಾಶಾ. ೧೧-೨೨); ಲಿಂಗಸ್ಥಲವು ಭಾವಲಿಂಗ. ಪ್ರಾಣಲಿಂಗ, ಇಷ್ಟಲಿಂಗ ಎಂದು ಮೂರು ವಿಧವಾಯಿತು (ಚಾರಿತ. ೨೫೩). **ಲಿಂಗಸ್ಥಳ** : ಆದಿಯಲ್ಲಿ ಶಿವಬೀಜವಲ್ಲದವರಿಗೆ ವೇದ್ಯವಾಗದು ಶಿವಜ್ಞಾನ ಶಿವಭಕ್ತಿ ಲಿಂಗಸ್ಥಳವಳವಡದು (ಬಸವ. ೯೩೬). 'ಅಂಗಸ್ಥಲ' ಪರಾ. [ಸಂ.]

**ಲಿಂಗಸ್ಥಳ** 'ಲಿಂಗಸ್ಥಲ' ನೋ.

**ಲಿಂಗಸ್ವಾಯತ** (ನಾ). [ವೀಶೈ] ಲಿಂಗವನ್ನು ಬ್ರಹ್ಮರಂಧ್ರಪ್ರದೇಶದಲ್ಲಿ ಇರಿಸಿಕೊಳ್ಳುವುದು : ಲಿಂಗಭಾವದ ಸಾಕ್ಷಾತ್ಕಾರ : ಬ್ರಹ್ಮರಂಧ್ರದಲ್ಲಿ ಲಿಂಗಸ್ವಾಯತೆ ಭ್ರೂಮಧ್ಯದಲ್ಲಿ ಜಂಗಮಸ್ವಾಯತ (ಅವಶಂ. ೯೭-೨೦೦); ಆ ಗುರುವಿತ್ತ ಲಿಂಗವನೇ ಶಿಷ್ಯನು ಸಾವಧಾನದಿಂದುತ್ತಮಾಂಗಾದಿ ಸ್ಥಾನಂಗಳಲ್ಲಿ ಧರಿಸುವುದೇ ಲಿಂಗಸ್ವಾಯತವೆನಿಸುವುದು (ವಿವೇಕ. ೦೦೨). 'ಜಂಗಮಸ್ವಾಯತ' ಪರಾ. [ಲಿಂಗ + ಸ್ವಾಯತ]

**ಲಿಂಗಾಚಾರ** (ನಾ). [ವೀಶೈ] ಪಂಚಾಚಾರಗಳಲ್ಲಿ ಒಂದು : ಗುರುವು ಅನುಗ್ರಹಿಸಿದ ಲಿಂಗಕ್ಕಲ್ಲದೆ ಬೇರೆ ಲಿಂಗ ಸೇವೆಯನ್ನು ಸಲ್ಲಿಸದಿರುವುದು : ಲಿಂಗಾಚಾರ ಸದಾಚಾರ ಭೃತ್ಯಾಚಾರ ಶಿವಾಚಾರ ಗಣಾಚಾರವೆಂಬ ಪಂಚಾಚಾರನಿಷ್ಠನಾಗಿ . . . ಇವ್ವಾತನೇ ವೀರಶೈವನಪ್ಪಂ (ವಿವೇಕ. ೯೭); ಸದಾಚಾರ ಲಿಂಗಾಚಾರ . . . ಭೃತ್ಯಾಚಾರವೆಂಬ ಪಂಚಾಚಾರಂಗಳಳವಟ್ಟು (ಅನಂದೇ. ೯೭-೯೦). 'ಪಂಚಾಚಾರ' ಪರಾ. [ಸಂ.]

**ಲಿಂಗಾಣು** (ನಾ). ಲಿಂಗದಿಂದ ಉತ್ಪತ್ತಿಯಾಗುವ ಅಣು : ವೀರ್ಯ : ಮಳೆಗಾಲದಲ್ಲಿ ಒಂದೆರಡು ತಿಂಗಳ ಮಟ್ಟಿಗೆ ಜೀವದಿಂದಿದ್ದು ಒಂದು ಸಲ ಲಿಂಗಾಣುಗಳನ್ನು ಉತ್ಪತ್ತಿಮಾಡಿ . . . ಅಳಿಯುವಂಥದ್ದು (ಹಸುಸೂ. ೦೯೦). [ಸಂ.]

**ಲಿಂಗಾತ್ಮಕ** (ನಾ). ಲಿಂಗದಲ್ಲಿ ಸೇರಿಕೊಂಡಿರುವವನು.– ಲೀನವಾಗಿರುವವನು : ಲಿಂಗಮಯ ನಿರ್ಲಿಂಗ ತೇಜೋಲಿಂಗ ಲಿಂಗಾತ್ಮಕ ಸದಾಶಿವಲಿಂಗ ನಿರ್ಮಳಲಿಂಗ ಲಿಂಗಸ್ಥಿತ ಮಹಾಲಿಂಗ. . .ಕರುಣಿಸುವುದು (ಕುವ್ಯಾಶ. ೭-೮೬). [ಸಂ.]

**ಲಿಂಗಾಯುತ**, ಲಿಂಗಾಯಿತ, ಲಿಂಗಾಯ್ತ (ನಾ). ೧. [ವೀಶೈ] ಗುರುವು ಶಿಷ್ಯನಿಗೆ ಕೊಡುವ ಇಷ್ಟಲಿಂಗವನ್ನು, ಶಿಷ್ಯನಿಗೆ ಪೂಜಿಸಿ ತೋರಿಸುವುದು : ಮೂರಂಗಕ್ರೀಯು ಸಂಪಾದಿಸಿ ಲಿಂಗಾಯುತ ಸ್ವಾಯತವಾಗಿ ಒಳಹೊಜಗೆನ್ನದೆ ವೇಧಿಸಿಕೊಳಲು ಮಾಜದ ಕ್ರೀಯೆಂದೆನಿಸಿತ್ತು (ಶಿವಗೀ. ೦೦೨-೩೩೦): ಆಚಾರ್ಯಂ ತಾನು ಶಿಷ್ಯಂಗೆ ಕೊಡಲ್ತಕ್ಕ ಲಿಂಗವನರ್ಚಿಸಿ ಶಿಷ್ಯನಂ ನೋಡಿಸುವುದೇ ಲಿಂಗಾಯುತವೆನಿಸುವುದು (ವಿವೇಕ. ೦೦೨) : ಆಚಾರ್ಯನು ತಾನು ಶಿಷ್ಯನಿಗೆ ಕೊಡತಕ್ಕ ಲಿಂಗವನ್ನು ಪೂಜಿಸಿ ಶಿಷ್ಯನಿಂದ ನೋಡಿಸುವುದೇ ಲಿಂಗಾಯುತವೆನಿಸುವುದು (ಅಷ್ಟಾವ. ೧). ೨. ಇಷ್ಟಲಿಂಗವನ್ನು ಧರಿಸಿದವನು ; ಲಿಂಗವಂತ : ವೀರಶೈವ : ಲಿಂಗಾಯುತರಿಗೆ

ಶ್ವವರಂತಲೂ. ಹೆಸರುಂಟು (ಶಬ್ದಾಗ. ೯೦). **ಲಿಂಗಾಯಿತ** : ೨.
ಗ. ೩೩೩). **ಲಿಂಗಾಯ್ತು** : (ತ). [ಲಿಂಗ + ಆಯುತ$_1$]
**ಯಿತ** 'ಲಿಂಗಾಯುತ' ನೋ.
**ಯ್ತು** 'ಲಿಂಗಾಯುತ' ನೋ.
**ರಾಧನೆ** (ನಾ). [ವೀಶೈ] ಇಷ್ಟಲಿಂಗವನ್ನು ಪೂಜಿಸುವುದು :
ಗಾರಾಧನೆಯ ಮಾಡುವೆ ಜಂಗಮಾರಾಧನೆಯ ಮಾಡುವೆ (ಬಸವ. ೭೦೬).
[ಸಂ. ಲಿಂಗಾರಾಧನ]
**ರ್ಚನೆ** (ನಾ). = ಲಿಂಗಾರಾಧನೆ: ನಾನು ಬೆವಹಾರವ ಮಾಡುವೆ
ಮ್ಮ ಲಿಂಗಾರ್ಚನೆಗೆಂದು (ಬಸವ. ೭೦೬); ನಿತ್ಯಲಿಂಗಾರ್ಚನೆಗೆ ನಡೆತಂದು
ತಸಂಬಡುತೆ ಹರನಾಲಯಕ್ಕೆಯ್ತಂದು (ಹರಿಹರ. ರಘ. ೪-೭); ಲಿಂಗಾ
ನೆಯಿಂದ ಜಂಗಮಾರ್ಚನೆಯಧಿಕ (ಅಖಂಡೇ. ೭೦-೪೨).
[ಸಂ. ಲಿಂಗಾರ್ಚನ]
**ರ್ಪಿತ** (ಗು). ೧. ಲಿಂಗಕ್ಕೆ ಅರ್ಪಿಸಿದ, – ನೀಡಿದ : ಲಿಂಗಾರ್ಪಿತ
ಪದೊಳಭವಂಗರ್ಪಿತವಾಗದಂದದನೆ ಬೆರಸಿದೆಯೊ ಮಹಾಲಿಂಗ
ವಿಧೋದಕಮಂ ಪಿಂಗದೆ ನೀನೊಂದುಗೆಯ್ದಿಯೋ ಮಜಪಿಂಡಂ (ವೃಷಭ.
-೦೬). (ನಾ) ೨. ಆಹಾರಪದಾರ್ಥ ಮುಂತಾದುವನ್ನು
ಂಗಕ್ಕೆ ಅರ್ಪಿಸುವುದು, – ನೀಡುವುದು : ಆವ ಪದಾರ್ಥವಾದರೇನು
ನಿದ್ದಡೆಗೆ ಬಂದುದ ಲಿಂಗಾರ್ಪಿತವ ಮಾಡಿ ಭೋಗಿಸುವುದೆ ಆಚಾರ
ಸವ. ೭೭೪). [ಸಂ.]
**ವತಾರ** (ನಾ). ೧. [ವೀಶೈ] ಶಿವನು ಲಿಂಗದ ಅವತಾರವನ್ನು
ರಿಸುವುದು; ಶಿವನು ಲಿಂಗರೂಪವನ್ನು ತಾಳುವುದು. ೨. ಶರಣ;
ವಭಕ್ತ : ಮಂಗಳದ ಲಿಂಗಾವತಾರರ ಸಂಗದಿಂ ಮಡಿವಳಸು ಭಕ್ತಿ
ರಂಗಮಾಪಿಮೆಯುನಚಿಯುಲಾಜದೆ ಪಲವುರೂಪುಗಳ ಧರಿಸಿ (ಬಸವ.
-೩೮). [ಸಂ.]
(ನಾ). ೧. ಸಂನ್ಯಾಸಿನಿ ; ಯೋಗಿನಿ : ವಿರಕ್ತೆ : ವ್ಯಾಧಿಯುತ
ಳೊಳಂ ಲಲನೆ ಮರುಳ್ಗೊಂಡಳೊಳಂ ಲಿಂಗಿಯೊಳಂ . . . ನೆರೆದೊಡ
ೀಗುವರಾಯುಂ ಶ್ರೀಯುಂ (ಮರತ. ೯-೪) ; ಸೂಳೆ ರಂಡೆ ಕೊಡಗೂಸು
ಂತ್ತು ಲಿಂಗಿ ದೇವತೆ ತಿರ್ಯಗ್ಜಾತಿ ಕೀಳ್ಜಾತಿಯೆಂಬಿವರ್ವೊದಲಾಗೊಡೆಯ
ಯರೊಳು (ರತ್ನಕ. ೩-೬ ಪ). ೨. ಒಂದು ಬಗೆಯ ಗಿಡ;
ಲಿಂಗಿಯೆನಲ್ಕೆರಡೆ" (ಮಂಗರಾ. ೪೪-೯೩).
[< ಸಂ. ಲಿಂಗಿನೀ]
(ನಾ). ೧. ಯತಿ ; ಮುನಿ ; ಋಷಿ : ಬ್ರಾಹ್ಮಣರಂ ಲಿಂಗಿಗಳಂ
ಪುಣ್ಯದಿನಂಗಳೊಳಳಿದವರ್ಗಳಪ್ಪರಿಂತಿದನಳಿದರ್ (ಎಪಿ. XVI. ೩೯-೪೦:
೦೭); ಜೈನ ಭೈರವ ಬುದ್ಧ ಲಿಂಗಿಗಳು ವಿವಿಧವರ್ಣಾಶ್ರಮಸುಧರ್ಮ
ವಹರಣಸಪ್ಪರು . . . ಒದಗಿದರಸಂಖ್ಯಾತ (ಕುಮಾ.ಭಾ. ೦೩-೨೨);
ಂಗಿಯಪ್ಪುದಂ ಹಲ್ಲುಹೋಪುದಂ . . . ಇಂತಪ್ಪ ದುಸ್ವಪ್ನಂಗಳಂ
ಂಡೊಡೆ ಸಾವರು (ಖಗೇಶ. ೦೩೯). ೨. [ವೀಶೈ] ಇಷ್ಟಲಿಂಗವನ್ನು
ರಿಸಿರುವವನು ; ಲಿಂಗಧಾರಿ : ಶಿವಜ್ಞಾನ ಸಂಪನ್ನನಾದ ಜ್ಯೋತಿ
ರ್ಮಯಲಿಂಗಿಗೆ ಅಂಗವುಂಟೆ (ವಚನ.೭೦). [ಸಂ. ಲಿಂಗಿನ್]
**ಗ** (ನಾ). [ವೀಶೈ] ಇಷ್ಟಲಿಂಗವನ್ನು ಹೊಂದಿರುವವನು ;
ಂಗಧಾರಿ ; ಲಿಂಗವಂತ : ಸರ್ವಾಂಗಲಿಂಗಿಗನೆಂದು ಮಂಗಳಾತ್ಮಕ
ರು ನುಡಿದ (ಶಬ್ದಾರ.೨-೯೬). [ಲಿಂಗ + — ಇಗ]
**ನಿ** (ನಾ). [ವೀಶೈ] ಸಂನ್ಯಾಸಿನಿ ; ಯೋಗಿನಿ : ಬಹುವ್ಯಸನ ಲಿಂಗಿನಿ
. . . ಚೆಲೆವೆಣ್ ಮುದುಗುಂಟಣಿ ದೈವಕಾರ್ತಿ ನಾಪಿತೆ ಕಥೆವೇಲ್ವ

**ಲಿಂಗೈಕನಿಷ್ಠ** (ನಾ). [ವೀಶೈ] ಇಷ್ಟಲಿಂಗದಲ್ಲಿ ಏಕನಿಷ್ಠೆಯುಳ್ಳವನು : ಲಿಂಗೈಕನಿಷ್ಠನೆನಿಸುವ ಭೃಂಗೀಶಂ ಶಕ್ತಿಯುಕ್ತಮೆನಿಪೀಶನ ವಾಮಾಂಗ ಮನೆ ಪಿಂಗುತೆಂ ಬಲದಂಗಕೆ ಬಲಗೆಯ್ಯೋಲಾಗಿ ಭಜಸಿದನಲ್ತೇ (ವೃಷಭ. ೩೭-೨೨). [ಸಂ.]

**ಲಿಂಗೈಕ್ಯ** (ನಾ). ೧. ಲಿಂಗದಲ್ಲಿ ಐಕ್ಯನಾಗುವುದು. ೨. [ವೀಶೈ] ಮರಣ ಹೊಂದಿದ ವ್ಯಕ್ತಿ ; ಶಿವೈಕ್ಯ : ಲಿಂಗದಲ್ಲಿ ಐಕ್ಯನಾದವನು : ಕೂಡಲಸಂಗನ ಶರಣರಲ್ಲಿ ಅಚ್ಚಲಿಂಗೈಕ್ಯಂಗೆ ತೊತ್ತಾಗಿಹುದಯ್ಯಾ (ಬಸವ. ೦೩೩) ; ನಿರುಪಮನಿರಾಳನು ನೋಡಾ ಲಿಂಗೈಕ್ಯನು (ಅಖಂಡೇ. ೩೦೬-೫). [ಸಂ.]

**ಲಿಂಗೋದಕ** (ನಾ). [ವೀಶೈ] ಇಷ್ಟಲಿಂಗಕ್ಕೆ ಅಭಿಷೇಕಮಾಡಿದ ನೀರು: ಲಿಂಗದೇವನ ಮುಟ್ಟಿ ಮಜ್ಜನಕ್ಕೆರೆವ ಕೈಯಲು ವಿಪ್ರನ ಕಾಲ ತೊಳೆವರೆ ಲಿಂಗೋದಕ ಪ್ರವಾಹದಲ್ಲಿ ವಿಪ್ರನ ಕಾಲ ತೊಳೆದ ನೀರು ಮಂಡೆಯ ಮೇಲೆ (ಬಸವ. ೩೮೪) : ಪಾದದಲ್ಲಿ ಪಾದೋದಕ ಆ ಪಾದತೀರ್ಥವನ್ನು ಲಿಂಗಕ್ಕೆ ಮಜ್ಜನಕ್ಕೆರೆಯಬೇಕೆಂಬ ಇಚ್ಛೆ ಹುಟ್ಟಿದಲ್ಲಿ ಲಿಂಗೋದಕ ಮಜ್ಜನಕ್ಕೆರೆದಲ್ಲಿ ಮಜ್ಜನೋದಕ (ಶರಣ. ೦೩೭). [ಸಂ.]

**ಲಿಂಗೋದ್ಭವ** (ನಾ). ೧. ಲಿಂಗದ ಉದ್ಭವ, – ಹುಟ್ಟುವಿಕೆ : ಪರಮ ಸುಜ್ಞಾನನಿಧಿನಂದೀಶ್ವರಂಗಮಳಕರಕಮಲಮಂ ಮುಗಿದು ಕೊಂಡಾಡಿ ಚಿತ್ತಸುಸ್ಥಿರನಾಗಿ ಲಿಂಗೋದ್ಭವದ ನಿರೂಪಣವನು ಸನತ್ಕುಮಾರಂ ಕೇಳಲು (ಲಿಂಗಪು. ೪-೧). ೨. "ಅಯೋನಿಜ, ಶಿವಕೃಪೆಯಿಂದ ಜನಿಸಿದವನು" (ಕಲಾ. ೨೪-೭). [ಸಂ.]

**ಲಿಂಗೋಪಾಸನೆ** (ನಾ). [ವೀಶೈ] ಇಷ್ಟಲಿಂಗವನ್ನು ಉಪಾಸನೆ ಮಾಡುವುದು ; ಲಿಂಗಪೂಜೆ : ಷಟ್‌ಸ್ಥಲಮಾರ್ಗವು ವೀರಶೈವರ ಲಿಂಗೋಪಾಸನೆಗಾಗಿ ಯುಕ್ತಿಯುಕ್ತವಾಗಿ ಕಲ್ಪಿಸಿದ ಸಾಧನಮಾರ್ಗವು (ಶಿವಾಕೂ. iv. ಪ್ರಸ್ತಾವನೆ). [ಸಂ. ಲಿಂಗೋಪಾಸನ]

**ಲಿಂಬಿ** 'ನಿಂಬೆ' ನೋ.

**ಲಿಂಬೆ** 'ನಿಂಬೆ' ನೋ.

**ಲಿಕಿತ** (ನಾ). ಬರಹ ; ಬರವಣಿಗೆ: ಪಲ್ಲವಾಚಾರಿ ಲಿಕಿತಂ (ಎಕ. II. ೨೦-೫; ಸು. 700) ; ದಿನಕರಯ್ಯಶೆಟ್ಟಿಯ ಲಿಕಿತಂ (ಎಕ. IV. ಎಳಂದೂ. ೨೫-೦೫ ; ಸು. ೯೭೫ ?). [< ಸಂ. ಲಿಖಿತ]

**ಲಿಕಿಲಿಕಿ** (ನಾ). ೧. (ಉಪಕರಣಗಳ ಕೀಲು ಮುಂತಾದುವು ಹಳೆಯದಾಗುವುದರಿಂದಾಗುವ) ಸಡಿಲ ; ಅಳ್ಳಕ : ಸಾಮ್ರಾಜ್ಯಕೋಟೆಯ ಭದ್ರಕೀಲುಗಳು ಲಿಕಿಲಿಕಿಯಾಗುತ್ತಿದ್ದವು (ರತ್ನತ್ರ. ೦೨೨): ಮೊಗಲ ರಾಜ್ಯದ ಕೀಲುಗಳು ಸಡಿಲಿಹೋಗಿ, ರಾಜ್ಯವು ಲಿಕಿಲಿಕಿಯಾಯಿತು (ರಾಜಾರಾ. ೦೬); ಮೋಟಾರು ೪ ಮೈಲಿ ದೂರದಲ್ಲಿ ಬರುತ್ತಿದ್ದರೂ ಶಬ್ದವಾಗುವಷ್ಟು ಅವು ಲಿಕಿಲಿಕಿಯಾಗಿದ್ದರೆ ಅಂತಹ ಮೋಟಾರಿಗೆ ಹಾರನ್ ಇದ್ದರೆ ಅದನ್ನು ತೆಗೆಯಿಸಿ ಹಾಕುತ್ತೇನೆ (ನಾಡಗೀ. ೭೭). ೨. ಶಿಥಿಲ ; ಜರ್ಜರಿತ: ಕಲ್ಪವೃಕ್ಷವನ್ನು ಸಮೂಲ ಕಿತ್ತು ಒಗೆದಂತೆ ಅರಸನ ಸರ್ವಾಂಗಗಳು ಲಿಕಿಲಿಕಿಯಾದವು (ತುಳಸೀ. ೦೦೬) : ಅವನ ಮೈಯೆಲ್ಲ ಲಿಕಿಲಿಕಿಯಾಗಿತ್ತು (ಎರಕ. ೯೭) : ಅದರ ಮೇಲಿಂದ ಬಿದ್ದದ್ದರಿಂದ ನನ್ನ ಮೈಯೆಲ್ಲವು ಲಿಕಿಲಿಕಿಯಾಗಿವೆ (ಕನ್ನಡ. ೦೪). [← ಮರಾ. ಲಿಕಲಿಕೀ]

**ಲಿಕುಚ** (ನಾ). ೧. ಈಳೆಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು; ಗಜನಿಂಬೆ : "ಲಕುಚಃ, ಲಿಕುಚಃ, ಡಹುಃ_೩ ಗಜನಿಂಬೇ ಹೆಸರುಗಳು" (ಸಿದ್ಧಾಂತ. ೦೨೩); ವಕುಳ ಪಾಟಳಾಶ್ವತ್ಥಬ್ರಾತಂ ಲಿಕುಚ ನಾಳಿಕೇರದ್ರುಮಜಾತಂ (ಸುಕುಮಾ. ೦೦-೩೬ ರಗಳೆ): ಬಿಲ್ವಾವಿನ

ಭಾಳಾಕ್ಷನೆಂದರ್ಚಿಸುತ್ತೆ (ರಾಶತ. ೬-೫೦). ೨. ಒಂದು ಬಗೆಯ ಮರ ಮತ್ತು ಅದರ ಹಣ್ಣು; ಬೇಲ; ಬೆಲ್ಲವತ್ತ: "ಲಿಕುಚಂ (ಲಕುಚಂ) ಕಪಿತ್ಥ ಮಾಱುಗೆ ದಧಿತ್ಥಂ" (ಶಬ್ದಕೋ. ೩೩-೫); ಒರ್ವಳ್ ಲಿಕುಚಕುಚದ ನಸೆಗಾರ್ತಿ ಕಣ್ಣಮಿರೆ . . . ಕುಪ್ಪಸಮಂ ಸಡಿಲ್ಚಿದಳ್ (ರಾಮಾಶ್ವ. ೦೨೩-೦೨). [ಸಂ.]

**ಲಿಕ್ಷೆ** (ನಾ). ೧. ಹೇನಿನ ಮೊಟ್ಟೆ ; ಸೀರು : ಮಾತ್ಕುಣದಂಶಮಶಕಲಿಕ್ಷಾಯೂಕಪಿಪೀಲಿಕಾದೇಹಿಕಂ (ಶಬ್ದಸ್ಮೃ ೯೬). ೨. ದೂರವನ್ನು ಅಳೆಯುವ ಒಂದು ಮಾನ: ಆ ತ್ರಸರೇಣುಗಳೆಂಟಾಗಲೊಂದು ವಾಲಾಗ್ರವೆನಿಸುಗುಂ ಆ ವಾಲಾಗ್ರವೆಂಟಾಗಲೊಂದು ಲಿಕ್ಷೆಯೆನಿಸುಗುಂ (ಶಿವೇಶ. ೨೩೯). [ಸಂ. ಲಿಕ್ಷಾ]

**ಲಿಖನ** (ನಾ). ೧. ಬರೆಯುವಿಕೆ: 'ಲಿಖಿಸು' ಪರಾ. ೨. ಬರೆದುದು: ಬರವಣಿಗೆ ; ಬರಹ. ೩. ಬರೆದ ಆಧಾರ ಪತ್ರ ; ದಾಖಲೆ. [ಸಂ.]

**ಲಿಖಾವಟ್ಟು** (ನಾ). ೧. ಬರವಣಿಗೆ. ೨. ಲಿಖಿತ ದಾಖಲೆ.—ಪತ್ರ : ಈ ಕಾಯಿದೆಯಲ್ಲಿ ಹೊಸದೇನೂ ಇಲ್ಲ. ಇದುವರೆಗೆ ಲಿಖಾವಟ್ಟಿನಲ್ಲಿ ಇಲ್ಲದ್ದಕ್ಕೆ ಈಗ ಲೇಖನರೂಪವನ್ನು ಕೊಟ್ಟಿದೆ (ಬಂಕಿಮ. ೩೫೯); ಪ್ರಾಚೀನ ಕಾಲದ ಶಾಸನಗಳು ಮತ್ತಿತರ ಲಿಖಾವಟ್ಟುಗಳನ್ನೆಲ್ಲಾ . . . ಸಂಪಾದಿಸಿದ್ದು ಚೊಕ್ಕವಾಗಿ ಇಂಗ್ಲಿಷ್‌ಲಿಪಿಯಲ್ಲಿ ಮುದ್ರಣವಾಗಿವೆ (ಶಾಕ್ಯಾ.ವಿ. ೯೮೫). [←ಹಿಂ. ಮರಾ. ಲಿಖಾವಟ್]

**ಲಿಖಾವಟ್ಟುದಾರ** (ನಾ). ಬರವಣಿಗೆಗಾರ; ಲಿಪಿಗಾರ : ಅನೇಕ ಗ್ರಾಮಗಳಲ್ಲಿ ಕೆಲಸಕ್ಕೆ ಬಾರದ ಲಿಖಾವಟ್ಟುದಾರರಲ್ಲದ ಪಟೇಲರುಗಳಿದ್ದರು (ಕಂಠಿ. ೦೬೬). [ಲಿಖಾವಟ್ಟು + — ದಾರ$_4$]

**ಲಿಖಿಚ್ಚು** 'ಲಿಖಿಸು' ನೋ.

**ಲಿಖಿತ** (ಗು).೧. ಬರೆದ: ಪರಲಿಖಿತಪಪ್ಪೋಲೆಯೊಂದಂಬರದೊಳ್ದರ್ಕಸ್ಮಿಕಂ ಭೂವರನ ಸಮ್ಮುಖದಲ್ಲಿ ಬೀಳಲು (ಬಸವ. ೫-೫೨): ನಮಗೆ ದೊರೆತಿರುವ ಪ್ರಾಚೀನ ಲಿಖಿತದಾಖಲೆಗಳು ಕ್ರಿ. ಪೂ. ೪ನೆಯ ಶತಮಾನಕ್ಕಿಂತ ಹಿಂದಿನವಾಗುವುದಿಲ್ಲ (ಭಾರತ. ೯). ೨. ಕೊರೆದ ; ಕಂಡರಿಸಿದ. (ನಾ). ೩. ಬರೆದುದು ; ಬರಹ: ಶಿರದ ಲಿಖಿತವ ಕಂಡು ಮರುಳುತಂಡಗಳು ಓದಿ ನೋಡಲು (ಬಸವ. ೫೩೯) ; ನಿಮ್ಮ ಲಿಖಿತವನಿಂದು ಕಾಣಿಸಿದಿರೇ (ಸಂಬರ. ೬-೬೦). ೪. ಬರೆದ ದಾಖಲೆ: ಕಡತ : ನಾಲ್ಕನೆಯ ಲಿಖಿತದಲ್ಲಿ ಮಂಗರಸರ ಪೂರ್ವಜರ ವಿವರಗಳನ್ನು ಹೇಳಲಾಗಿದೆ (ಕುಮಾರಾಂ. ೦೮). ೫. ಸ್ಮೃತಿಯನ್ನು ಬರೆದ ಒಬ್ಬ ಋಷಿಯ ಹೆಸರು : ಅಜ್ಞಾನ ದ್ವಿಜಾಧಮಂ ತಾನಾದೆನೀ ದ್ರೋಹಕೆಂದು ಲಿಖಿತಂ ನುಡಿದನು (ಕೃಬಾಶ. ೦೨-೨). [ಸಂ.]

**ಲಿಖಿಸು.** ಲಿಖಿಚ್ಚು (ಕ್ರಿ). ಬರೆ ; ಲೇಖಿಸು: ಬರೆದಂ = (ವೃತ್ತಿಯಂ) ಲಿಖಿಸಿದಂ (ಶಮಾದ. ಬೀಶಿ. ೬ ೬೯೯); ಪಂಚಾಕ್ಷರಿಯನಕ್ಷರವಾಗಿ ಲಿಖಿಸುತ್ತ (ಬಸವ. ೫೩-೬೩) : ಮುಖಿಮುದ್ಯೆವತ್ತುನಾಲ್ಕಕ್ಷಿ ಸೂಜೆಂಟರಲ್ ಲಿಖಿಸಿರ್ದ ಪ್ರತಿಮೆಯುಂದದಿ ಬೆಱಗುವಟ್ಟು ಷಣ್ಮುಖನ ಮುಗ್ಧಸುಭಾವಮಂ ಕಂಡು (ಶಂಕ. ೯-೦). **ಲಿಖಿಚ್ಚು** : ಶ್ರೀಮಂತನ್ಧರ್ಮಮಾ ಚನ್ದ್ರಧರಾರ್ಣವವುಂ ಲಿಖಿಚ್ಚಿದೋನ್ ದಿವ್ಯಭಾಷಾಕಲಿನ್ (ಎಕ. XVI, ಶಾಸನ, ೦೨-೯; ಸು. 754). [ಲಿಖನ + — ಇಸು$_3$]

**ಲಿಗಾಡ.** ಲಿಗಾಡಿ. ಲಿಗಾಡು (ನಾ). (ಉಕ) ೧. ಒತ್ತಾಯ; ನಿರ್ಬಂಧ: ಈ ಶೆಟ್ಟಿಯು ನಿನ್ನ ಮೇಲೆ ಲಿಗಾಡ ಹಾಕಿ ತೆಗೆದುಕೊಂಡನೋ (ಕಥಾಮಂ. IV. ೮೩). **ಲಿಗಾಡಿ** : ೨. ಗೋಜು; ಉಸಾಬರಿ; ಗೊಡವೆ : ನಡೆದಾದರೂ ಹೋಗಬಹುದು. ನಿಮ್ಮ 'ಲಿಗಾಡಿ' ಬೇಡ (ಸರಸ. ೨೬). **ಲಿಗಾಡು:** ೨. ಈ ಪ್ರಾಣಿಗೆ ಸಮಾಧಾನವೆಂಬುದೇ ಇರಲಿಲ್ಲ. ಬಂದಿಲ್ಲ ಒಂದು ಲಿಗಾಡು ಬೇಕಾಗುತ್ತಿತ್ತು (ಬೀಸಹ. II. ೦೦೬). ೩. ನಷ್ಟಕ್ಕಾಗಿ ಕೊಡುವ ಪರಿಹಾರ : (೬). [← ಮರಾ. ಲಿಗಾಡ್]

**ಲಿಗಾಡಿ** 'ಲಿಗಾಡ' ನೋ.

**ಲಿಗಾಡು** 'ಲಿಗಾಡ' ನೋ.

**ಲಿಪಿ** (ನಾ). ೧. ಮೆತ್ತುವಿಕೆ : ಬಳಿಯುವಿಕೆ. ೨. ಬರೆಯುವಿಕೆ ; ಲೇಖಿಸುವಿಕೆ. ೩. ಅಕ್ಷರ : "ಲಿಪಿಯೆಂಬುದು ಚಿತ್ರದ ಬರಹಮುಂ, ಅಕ್ಷರದ ಬರಹಮುಂ" (ಹರಿಯು. ೧೨೦-೯೩); ತೆಲುಗಲಿಪಿ ನಾಗರದ ಲಿಪಿ ಗ್ರಂಥಲಿಪಿ ಹಳೆಗನ್ನಡದ ಲಿಪಿ ದ್ರಾವಿಳಲಿಪಿಯು ಪಾರಿಸಲಿಪಿಯು ಲಾಳಲಿಪಿ ಮೊದಲಾದ ಹಲವು ಲಿಪಿಗಳನೋದಬಲ್ಲಗ್ಗಳದ ಕರಣಿಕರಂ ಕರೆಸಿ (ಬಸವ. ೫-೫೩): ಅಕ್ಷರಗಳನ್ನು ಕಣ್ಣಿಗೆ ಗೋಚರಿಸುವಂತೆ ಮಾಡಲು ನಿಶ್ಚಿತವಾಗಿರುವ ಸಂಕೇತಗಳು ಅಥವಾ ಚಿಹ್ನೆಗಳು ಲಿಪಿಗಳೆನಿಸುತ್ತವೆ (ಸಂಕೋಥ. ೦). ೪. ಬರವಣಿಗೆ : ಕೈಬರಹ ; ಹಸ್ತಾಕ್ಷರ : ಪಂಕ್ತಿಭೇದಂ ಲಿಪಿಗಳೊಳ್ . . . ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ (ಸಗಮ. ೨-೦ ಪ). ೫. ಹಣೆಬರಹ ; ವಿಧಿಲಿಖಿತ : 'ಲಿಪಿಕರ್ತೃ' ಪರಾ. ೬. [ತರ್ಕಶಾ] ಹನ್ನೆರಡು ಬಗೆಯ ಪ್ರಮಾಣಗಳಲ್ಲಿ ಒಂದು : ಯಥಾರ್ಥಜ್ಞಾನದ ಲಿಖಿತಪ್ರಮಾಣ. – ಸಾಧನ : ಪ್ರಮಾಣವು ಪ್ರತ್ಯಕ್ಷ. ಅನುಮಾನ. ಉಪಮಾನ. ಶಬ್ದ. ಅರ್ಥಾಪತ್ತಿ. ಅನುಪಲಬ್ಧಿ, ಸಂಭವ, ಐತಿಹ್ಯ, ಲಿಪಿ. ಲೋಕಪ್ರಸಿದ್ಧಿ, ಚೇಷ್ಟೆ. ಪ್ರಾತಿಭ ಎಂದು ಹನ್ನೆರಡು ವಿಧ (ಹಂದಸಾ. ೦೩೩). [ಸಂ.]

**ಲಿಪಿಕ** (ನಾ). ಬರೆಯುವವನು ; ಲೇಖಕ : "ಲಿಪಿಕನೆನೆ ಗ್ರಂಥ ಲೇಖಕಂ" (ಮಂಗರಾ. ೦೦೬-೦೬). [ಸಂ.]

**ಲಿಪಿಕರ** (ನಾ). ೧. ಸುಣ್ಣ, ಬಣ್ಣ ಬಳಿಯುವವನು. ೨. ಬರೆಯುವವನು : ಲೇಖಕ : "ಲೇಖಕಃ, ಲಿಪಿಕರಃ ... ಈ ೨ ಲೇಖಕಂ" (ಹರಿಯು. ೯೬-೪೩೨). ೩. ಕೆತ್ತನೆ ಕೆಲಸ ಮಾಡುವವನು : ಶಿಲ್ಪಿ. [ಸಂ.]

**ಲಿಪಿಕರ್ತೃ** (ನಾ). ಹಣೆಬರಹವನ್ನು ಬರೆಯುವವನು; ಬ್ರಹ್ಮ : ಲಿಪಿಕರ್ತೃವಿನ ಮಾನಸಪುತ್ರ ಮತ್ಕರ್ಮವಿಪಿನಕುಠಾರ ನೀ ಬಂದ ಗುಪಿತ ಪೇಳು (ಮೋಹಕ. ೦೨-೩). [ ಲಿಪಿ+ಕರ್ತೃ (< ಕರ್ತಾರ) ]

**ಲಿಪಿಕಾರ** (ನಾ). =ಲಿಪಿಕರ ೨ :"ಲಿಪಿಕಾರಂ ಲೇಖಕಂ" (ಶಬ್ದಕೋ. ೬೦-೫೯); ವೀರನಾರಾಯಣನೆ ಕವಿ ಲಿಪಿಕಾರ ಕುಮರವ್ಯಾಸ (ಕುವ್ಯಾಭ. ೦-೬); ಲಿಪಿಕಾರ ಎಂಬುದು 'ಲೇಖಕ'ಕ್ಕಿಂತ ಈಚಿನ ಕಾಲದ ಶಬ್ದವೆಂದು ಹೇಳುತ್ತಾರೆ (ಕನ್ನಸಂ. ೯೬). [ಸಂ.]

**ಲಿಪಿಗಲ್ಲು** (ನಾ). ಲಿಪಿಯನ್ನು ಕೊರೆದ ಕಲ್ಲು ; ಶಿಲಾಶಾಸನ : ಶ್ರೀ ಲೋಕಪಾಲೇಶ್ವರ ಕಪ್ಪಾರೆ ಬಳಿ (ಪಟ್ಟದ ಕಲ್ಲಿನ ವಿರೂಪಾಕ್ಷನ ಗುಡಿಯ ಪ್ರಾಕಾರದಲ್ಲಿಟ್ಟ ಲಿಪಿಗಲ್ಲು ಕ್ರಿ. ಶ. ಎಂಟನೆಯ ಶತಮಾನ) (ಕುಳುವಾ. ೨೬೫). [ ಲಿಪಿ+ಕಲ್ಲು (< ಕಲ್$_3$) ]

**ಲಿಪಿಗಾರ** (ನಾ). = ಲಿಪಿಕರ ೨ : ಈಕ್ಷಿಸದೆ ಭಕ್ತಿಪ್ರಭೆಯ ವಿರಜಾಕ್ಷಿಯಿಂ ಕೃತುಪುರದೊಡೆಯನಧೋಕ್ಷಜನ ನೀ ವಿಶ್ವಕವಿಗವಗೆಂತು ಲಿಪಿಗಾರ ? (ಗೀವಿಂ. ೯೬-೪); ಅತ್ತಿಮಬ್ಬೆ ನೂರಾರು ಜನ ಲಿಪಿಗಾರರನ್ನು ಕರೆಸಿದಳು (ದಾನಚಿ. ೦೬೩). [< ಸಂ. ಲಿಪಿಕಾರ]

**ಲಿಪಿಜ್ಞ** (ನಾ). ಬರವಣಿಗೆಯನ್ನು ಬಲ್ಲವನು : ತಿಳಿದವನ ಮತಿವಿದನ ಭಾಷಾವಳಿಲಿಪಿಜ್ಞನ ಸಾಕ್ಷರನ . . . ಸಂಧಿವಿಗ್ರಹರೆನಿಸಬೇಕು (ಕುವ್ಯಾಉ. ೩-೮೯). [ಸಂ.]

**ಲಿಪಿವಿಜ್ಞಾನ** (ನಾ). ಪ್ರಾಚೀನ ಕಾಲದ ಲಿಪಿ ಮತ್ತು ಅದರ ಬೆಳವಣಿಗೆಗೆ ಸಂಬಂಧಿಸಿದ ವಿಜ್ಞಾನ–ಶಾಸ್ತ್ರ ; ಅಕ್ಷರಶಾಸ್ತ್ರ : ಇತ್ತೀಚೆ ಮುಂದೆ ಶಾಸನ ವಿಜ್ಞಾನ (Epigraphy) ಮತ್ತು ಲಿಪಿವಿಜ್ಞಾನ (Palaeography)ಗಳು ಪ್ರತ್ಯೇಕ ಶಾಖೆಗಳಾಗಿ ಬೆಳೆಯತೊಡಗಿದುವು (ಪ್ರಾಚಿವಿ. ೫೯). [ಸಂ.]

**ಲಿಪಿವಿಧಾನ** (ನಾ). ಅಕ್ಷರಗಳನ್ನು ಬರೆಯುವ ಕ್ರಮ : ಸೇವಾಧರ್ಮೋಚಿತಮೆನಿಸುವಸಿಕರ್ಮಮುಮುಮನೇಕ ಲಿಪಿವಿಧಾನಾಧೀನಮಪ್ಪ ವಂಷಿಯುಮಂ . . . ಪಡೆದು (ಅದಿಪು. ೪-೬೪ ವ). [ಸಂ.]

**ಲಿಪಿಶಾಲೆ** (ನಾ). ಬರಹವನ್ನು ಹೇಳಿಕೊಡುವ ಶಾಲೆ; ಲಿಪಿಯನ್ನು ಕಲಿಸುವ ಶಾಲೆ : ಮಹಾವಗ್ಗದಲ್ಲಿ ಸಿದ್ಧಾರ್ಥನು ವಿದ್ಯಾರ್ಥಿಯಾಗಿ ಚಂದನಫಲಕವನ್ನೂ ಸುವರ್ಣಶಲಾಕೆಯನ್ನೂ ಹಿಡಿದು ಲಿಪಿಶಾಲೆಗೆ ಹೋಗುತ್ತಿದ್ದ ವರ್ಣನೆಯಿದೆ (ಭಾಶಾಶಾ. ೦೦೦). [ಸಂ. ಲಿಪಿಶಾಲಾ]

**ಲಿಪಿಶಾಸ್ತ್ರ** (ನಾ). = ಲಿಪಿವಿಜ್ಞಾನ : ಭಿನ್ನಲಿಪಿರೂಪಗಳ . . . ಪ್ರತಿಗಳು ದೊರೆತಾಗ ಲಿಪಿಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸಮಾಡಬೇಕಾಗುತ್ತದೆ (ಕನ್ನಸಂ. ೯೫). [ಸಂ.]

**ಲಿಪಿಶಾಸ್ತ್ರಜ್ಞ** (ನಾ). ಲಿಪಿವಿಜ್ಞಾನವನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದವನು : ಕನ್ನಡಲಿಪಿಯು ಬೆಳವಣಿಗೆಯು ರಾಷ್ಟ್ರಕೂಟರ ಕಾಲದಲ್ಲಿ ಒಂದು ವಿಶಿಷ್ಟಹಂತವನ್ನು ಮುಟ್ಟಿದೆಯೆಂದು ಲಿಪಿಶಾಸ್ತ್ರಜ್ಞರು ಹೇಳಿದ್ದಾರೆ (ನೃಪಕಾಲ. ೬೦). [ಸಂ.]

**ಲಿಪಿಸಂಖ್ಯಾನಸಂಗ್ರಹ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು : ಅನ್ನಪ್ರಾಶನವ್ಯುಷ್ಟಿಕೇಶವಾಪಲಿಪಿಸಂಖ್ಯಾನ ಸಂಗ್ರಹೋಪನಯನವ್ರತಚರ್ಯಾವ್ರತ . . . ಎಂಬಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಅದಿಪು. ೦೩-೦೩ ವ) ; ಲಿಪಿಸಂಖ್ಯಾನಸಂಗ್ರಹಮುಂ ಉಪನೀತಿಯುಂ . . . ಅಪ್ಪ ಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳ್ (ಶಾಪುಕ. ೨೦೩). [ಸಂ.]

**ಲಿಪಿಸಾದೃಶ್ಯ** (ನಾ). ಅಕ್ಷರಗಳು ಒಂದೇ ರೀತಿಯಾಗಿ ಇರುವಿಕೆ ; ಅಕ್ಷರ ಸಾದೃಶ್ಯ : 'ಚಿಕುರ' ಎಂಬುದಕ್ಕೆ 'ಅರ್ಥವಾಗದೆ ಯಾವನೋ ಪ್ರತಿಕಾರ ಅದನ್ನು 'ಚತುರ' ಎಂದು ಭ್ರಮಿಸಿರಬೇಕು, ಲಿಪಿಸಾದೃಶ್ಯ ಕಾರಣವಾಗಿ (ಕನ್ನಸಂ. ೦೯೯). [ಸಂ.]

**ಲಿಪಿಸು** (ಕ್ರಿ). ಬರೆ ; ಲೇಖಿಸು : ಇದಕ್ಕೆ ತಪ್ಪದಂತೆ ಪಣೆಯೊಳಾ ಬ್ರಹ್ಮನೇ ಲಿಪಿಸಿರುವ ಹಾಗೂ . . . ತೋರುತ್ತಾ ಇದ್ದೀತು (ಸಕನ್ಯ. ೬). [ಲಿಪಿ + — ಇಸು]

**ಲಿಪಿಸುಧಾರಣೆ** (ನಾ). ಲಿಪಿಯ ಸಂಸ್ಕರಣ; ಅಕ್ಷರಗಳಿಗೆ ಸಂಬಂಧಿಸಿದ ಬೆಳವಣಿಗೆ,—ಮಾರ್ಪಾಟು : ಕನ್ನಡದ ಈಗಿನ ಲಿಪಿಯನ್ನು ಲಿಪಿ ಯಂತ್ರಕ್ಕೂ . . . ಹೊಂದಿಸುವ ದೃಷ್ಟಿಯಿಂದ ಲಿಪಿಸುಧಾರಣೆಯ ಬಗೆಗೆ ಕೆಲವು ಪ್ರಯತ್ನಗಳೂ ನಡೆದಿವೆ (ಸಂಕೋಧ. ೫). [ಸಂ. ಲಿಪಿಸುಧಾರಣಾ]

**ಲಿಪ್ತ** (ಗು). ೧. ಬಳಿದ : ಸವರಿದ ; ಹಚ್ಚಿದ : ಸದಸದ್ವೇದನೀಯ ಪ್ರಕೃತಿಗೆ ಮಧುಲಿಪ್ತಖಡ್ಗಧಾರೆಯುಮೋಲ್ ಸುಖಾಸುಖದಾಯಕತ್ವಂ ಸ್ವಭಾವಂ (ಕತ್ಸೃತ್ರ. ೨೯೦). ೨. ಮಲಿನವಾದ ; ಮಾಸಿದ. ೩. ವಿಷವನ್ನು ಬೆರಸಿದ. ೪. ತಿಂದ ; ಕಬಳಿಸಿದ. (ನಾ). ೫. ಬಳಿದುದು : "ದಿಗ್ಧಂ, ಲಿಪ್ತಂ – ೨ ಬಳಿಯಲ್ಪಟ್ಟದ್ದು" (ಸಿದ್ಧಾಂತಿ. ೪೯೭). ೬. ವಿಷವನ್ನು ಲೇಪಿಸಿದ ಬಾಣ : "ದಿಗ್ಧಃ, ಲಿಪ್ತಃ – ೨ ವಿಷಾಕ್ತ – ನಂಜು ಪೂಸಿದ ಕೋಲು, ವಿಷ ಬಳಿಯಲ್ಪಟ್ಟ ಸರಳು, ವಿಷಬಾಣ" (ಸಿದ್ಧಾಂತಿ. ೨೬೫). ೭. ತಿಂದುದು : "ಭಕ್ಷಿತಂ, ಚರ್ವಿತಂ, ಲಿಪ್ತಂ . . . ಭುಕ್ತಂ – ೧೪ ಭುಜಿಸಲ್ಪಟ್ಟದ್ದು" (ಸಿದ್ಧಾಂತಿ. ೪೫೨). [ಸಂ.]

**ಲಿಪ್ಯಂತರ** (ನಾ). ಬೇರೆ ಭಾಷೆಯ ಅಕ್ಷರ; ಬೇರೆಯ ಲಿಪಿ : 'ಲಿಪ್ಯಂತರ ಗೊಳ್ಳು' ಪರಾ. [ಸಂ.]

**ಲಿಪ್ಯಂತರಗೊಳಿಸು** (ಕ್ರಿ). ಬೇರೆ ಭಾಷೆಯ ಲಿಪಿಯಲ್ಲಿ ಬರೆ : ಅವುಗಳನ್ನು ಅನುವಾದಿಸುವ ಅಥವಾ ಲಿಪ್ಯಂತರಗೊಳಿಸಬೇಕಾದ ಅಗತ್ಯವೂ ಇಲ್ಲ (ಕ್ರೀಕನ್ನಕ್ರ. ೬೮). [ಲಿಪ್ಯಂತರ + ಕೊಳು (<ಕೊಳ್$_1$) + — ಇಸು$_3$]

**ಲಿಪ್ಯಂತರಗೊಳ್ಳು** (ಕ್ರಿ). ಬೇರೆ ಭಾಷೆಯ ಲಿಪಿಯಲ್ಲಿ ಬರೆಯಲ್ಪಡು : ಇವು ಟಿಬೆಟನ್‌ಭಾಷೆಗೋ ಅಥವಾ ಚೈನೀಭಾಷೆಗೋ ಅನುವಾದಿತವಾಗಿವೆ ಇಲ್ಲವೆ ಲಿಪ್ಯಂತರಗೊಂಡಿವೆ (ಭಾರಶ. ೩೬).

[ಲಿಪ್ಯಂತರ + ಕೊಳ್ಳು$_1$ (<ಕೊಳ್$_1$)]

**ಲಿಪ್ಸು** (ಗು). ೧. ಪಡೆಯಬೇಕೆಂಬ ಆಸೆಯುಳ್ಳ. (ನಾ). ೨. ಆಸೆ ಪಡುವವನು: "ತೃಷಕಃ, ಗರ್ಧನಃ, ಗೃಧ್ನುಃ, ಲಿಪ್ಸುಃ, ಲುಬ್ಧಃ, ಅಭಿಲಾಷುಕಃ – ಈ ೬ ಕಾಂಕ್ಷಿತಂ" (ಹಲಾಯು. ೬೦-೨೦೬). [ಸಂ.]

**ಲಿಪ್ಸೆ** (ನಾ). ಆಸೆ ; ಕಾಂಕ್ಷೆ : "ತೃಷ್ಣಾಃ, ಅಭಿಲಾಷಾ, ಲಿಪ್ಸಾ, ಆಶಾ, ಧನಾಯಾ, ಗರ್ಧನಾ – ಈ ೬ ಕಾಂಕ್ಷೆ" (ಹಲಾಯು. ೬೦-೨೦೯). [ಸಂ. ಲಿಪ್ಸಾ]

**ಲಿಫಾಪೆ** 'ಲಿಫಾಫೆ' ನೋ.

**ಲಿಫಾಫೆ**, ಲಿಫಾಪೆ (ನಾ). ಲಕೋಟೆ : ಹುಜೂರುಖಜಾನೆಯಿಂದ ಬಂದ ಸರಾಫ . . . ಈ ದರ್ಶನಹುಂಡಿಯ ಲಿಫಾಫೆಯನ್ನು ತೋರಿಸಿದರು (ಅಜಾಟಿ. ೬). **ಲಿಫಾಪೆ** : (ಕಸಂಗ್ರ. ೦೦೦).

[← ಅರ. ಹಿಂ. ಲಿಫಾಫಾ; ಮರಾ. ಲಿಫಾಫಾ, ಲಿಫಾಪಾ]

**ಲಿಬಿ** (ನಾ). ಅಕ್ಷರ; ಬರಹ : ಅಶೋಕನ ಶಾಸನಗಳಲ್ಲಿ ಲಿಪಿ, ಲಿಬಿ, ದಿಪಿ ಎಂಬ ಸಮಾನಾರ್ಥಕಶಬ್ದಗಳಿವೆಯೆಂದೂ, ದಿಪಿ ಎಂಬುದು ಪುರಾತನ ಪಾರಸೀ ಭಾಷೆಗೆ ಸೇರಿದ್ದೆಂದೂ . . . ತಿಳಿದುಬರುತ್ತದೆ (ಕನ್ನಸಂ. ೯೬). [ಸಂ.]

**ಲಿಬಿಕಾರ** (ನಾ). ಬರೆಯುವವನು ; ಲಿಪಿಕಾರ : ಕ್ರಿ.ಪೂ. ನಾಲ್ಕನೆಯ ಶತಮಾನಕ್ಕಾಗಲೇ ಲೇಖಕವೃತ್ತಿಯವನನ್ನು ಲಿಪಿಕಾರ ಅಥವಾ ಲಿಬಿಕಾರ ಎಂದು ಕರೆದಿದೆ (ಭಾರಶ. ೦೪). [ಸಂ.]

**ಲಿಬಿಲಿಬಿ** (ನಾ). ಸಂಕಟ, ತಳಮಳ ಮುಂತಾದುವನ್ನು ಸೂಚಿಸುವ ಒಂದು ಅನುಕರಣ ಶಬ್ದ : ರಂಗನಾಥ ಸಾಯುವಾಗ ಹಣವನ್ನೂ ದುಶ್ಚಟಗಳನ್ನೂ ಬಿಟ್ಟು ಹೋಗಲಾರದೆ ಲಿಬಿಲಿಬಿ ಒದ್ದಾಡಿ, ಸಾಯಲಾರದೆ ಸಾಯುತ್ತಾನೆ (ಕಂಕಸಂ. ೨೦೩). 'ವಿಲಿವಿಲಿ' ನೋ.

**ಲಿಲಾವು** (ನಾ). (ಉಕ) ಹರಾಜು ; ಏಲಂ : ಬೆಳಗಾದರೆ ಹಣ ಕಟ್ಟಬೇಕು, ಇಲ್ಲವೆ ಹೊಲಮನೆಗಳ ಲಿಲಾವಿಗೆ ಸಿದ್ಧರಾಗಬೇಕು (ಕಕ. ೭೩೬); ಸರಕಾರದವರು ಜೀನ ತುಪ್ಪ ಜಮೆಮಾಡುವ ಹಕ್ಕು ಪ್ರತಿವರ್ಷ ಲಿಲಾವಿನಿಂದ ಮಾರುವರು (ಕಕಾಗ. ೬೬). [← ಮರಾ. ಲಿಲಾವ್, ನಿಲಾವ್]

**ಲಿಲಾವುದಾರ** (ನಾ). ಹರಾಜು ಹಾಕುವವನು : ಪಕ್ಕಾರ ಹಾಗೂ ಲಿಲಾವುದಾರ ಇವರಲ್ಲಿ ಅಂತರವಿರುವುದೇ ಕ್ವಚಿತ (ಕೃವಾಕೋ. ೯೫).

[ಲಿಲಾವು + – ದಾರ್$_4$]

**ಲಿವಿ**$_1$ (ನಾ). = ಲಿಬಿ : "ಲಿಪಿಯುಂ ಲಿಭಿ[ವಿ] ಲಿಖಿತಾಕ್ಷರಾಳಿನ್ಯಾಸಂ" (ಪಸ್ಟಕೋ. ೬೦-೫೯). [ಸಂ.]

**ಲಿವಿ**$_2$ (ನಾ). ಹಗುರ ; ಲಘು : ಈ ದಿವಸ ನನ್ನ ದೇಹವು ಬಹು ಲಿವಿಯಾಗಿದೆ . . . ಹೊರಗೆ ಸ್ವಲ್ಪ ತಿರುಗಾಡಿ ಅಂಗಗಳು ಲಿವಿಯಾಗಿ ಆಡುವಂತೆ ಕೆಲಸವನ್ನು ಮಾಡಿದ ಹೊರತು ನಾವು ತಿಂದ ಅನ್ನ ಜೀರ್ಣಕ್ಕೆ ಬರುವುದಿಲ್ಲ (ಜೀಶಿಸಂ. I. ೨೯).

[← ತೆಲು. ಲಿವ. / ಮರಾ. ಲಿವಣೆ=ಬಗ್ಗುವ, ಮಣಿಯುವ]

**ಲಿವಿಸಾಧನೆ** (ನಾ). ದೇಹವನ್ನು ಹಗುರ ಮಾಡಿಕೊಂಡು ಗಳಿಯ ಮೇಲೆ ಲಾಗ ಮುಂತಾದುವನ್ನು ಹಾಕುವುದು ; ದೊಂಬರಾಟ : ಎರಡನೆಯದಾದ "ಅಸ್ತ್ರವಿದ್ಯೆ"ಯಲ್ಲಿ ಪುರಾತನಕಾಲದ ಲಿವಿಸಾಧನೆ (Acrobatics)ಯನ್ನು ಕಾಣಬಹುದು (ಅಭಾಸ. ೯೯) ; ದೊಂಬರಾಟ ; ಲಿವಿಸಾಧನೆ (Acrobatics. ೩೦೪೩). [ಲಿವಿ + ಸಾಧನೆ]

**ಲಿಸ್** (ನಾ). ಆಯಾಸ ಅಥವಾ ದುಃಖದಿಂದ ಹೊರಹೊಮ್ಮುವ ಉದ್ಗಾರ : ಎಲುಬುಗಳ ಸಂತತವರ್ಷದಲ್ಲಿಯೂ ಲಿಸ್ಸನ್ನದೆ, ಬೆಂಕಿಗೆ ಕೈಹಾಕಿ (ಗ್ರಾವಾಹದು. ೨೨೬) : ಗೊಡ್ಡದೊಡ್ಡ ಗಾಯಗಳಾದರೆಯೇ

ಕಣ್ದೆರೆದು ನೋಡಲಾರದವರು, 'ಲಿಸ್' ಎನ್ನಲಾರದವರು ಈ ಸಣ್ಣಪುಟ್ಟ ಗಾಯಗಳಿಗೆ ಹೆದರಿಯಾರೆ? (ಒಪಸಿ. ೨೯).

**ಲಿಸುಗುಟ್ಟು** (ಕ್ರಿ). (ಉಕ) 'ಲಿಸ್' ಎಂದು ಶಬ್ದ ಮಾಡು : ಇಳಿಯ ಲಿಕ್ಕೆಂದು ಎದ್ದಾಗ . . . ಅವ್ವ ಲಿಸುಗುಟ್ಟಿದಳು (ಕೃ.ಸಿ. ೮೪); ಗೌಡರು ಧೋತರದ ಶೆರಗಿನಿಂದ ತುಟಿ ಬಾಯಿ ಒರೆಸಿಕೊಳ್ಳುತ್ತ ಲಿಸುಗುಡುತ್ತ ಬರುತ್ತಾರೆ (ಶಕಟಾ. I. ೨೬೪). [< ಲಿಸ್ + ಕುಟ್ಟು₁]

**ಲಿಸ್ಟು** (ನಾ). ಹೆಸರು ಮೊದಲಾದುವನ್ನು ಬರೆದಿರುವ ಪಟ್ಟಿ; ಯಾದಿ: ಪ್ರತಿತಿಂಗಳೂ ಅಂಗಡಿಯಿಂದ ಸಾಮಾನುಗಳನ್ನು ತರುವ ಮೊದಲು ಲಿಸ್ಟು ತಯಾರಿಸುವುದು ಒಳ್ಳೆಯ ಅಭ್ಯಾಸ (ರೂಢಿ).

[← ಇಂ. List]

**ಲೀಟರು**(ನಾ). ದ್ರವಪದಾರ್ಥಗಳನ್ನು ಅಳೆಯುವ ಒಂದು ಅಳತೆ: ಒಂದು ಲೀಟರು ಎಳ್ಳೆಣ್ಣೆಗೆ ನಲವತ್ತೈದುರೂಪಾಯಿಗಳಾಗಿವೆ (ರೂಢಿ).

[← ಇಂ. Litre]

**ಲೀಢ** (ಗು). ತಿಂದ; ರುಚಿನೋಡಿದ. [ಸಂ.]

**ಲೀಢೆ** (ನಾ). ಕಡೆಗಣಿಸುವುದು : ತಿರಸ್ಕಾರ; ಅವಹೇಳನ : "ಹೇಳಾ, ಅವಹೇಳಾ, ಲೀಢಾ, ಅವಜ್ಞಾ, ಅವಲೀಢಾ –ಈ ೫ ಅವಜ್ಞೆ" (ಕರಾಡು. ೦೦೬–೪೦). [ಸಂ. ಲೀಢಾ]

**ಲೀನ** (ಗು). ೧. ಅಂಟಿಕೊಂಡ; ಹತ್ತಿಕೊಂಡ. ೨. ಕರಗಿದ. ೩. ಆಸಕ್ತನಾದ; ಮಗ್ನವಾದ. ೪. ಅಡಗಿದ. ೫. ಕಣ್ಮರೆಯಾದ; ಅಗಲಿದ. (ನಾ). ೬. ಯಾವುದಾದರೊಂದು ವಿಷಯದಲ್ಲಿ ಮಗ್ನನಾದವನು,–ಮುಳುಗಿದವನು: ಸುಖದುಃಖಗಳಲ್ಲಿ ಪದೇಪದೇ ಲೀನನಾಗಿ ತನ್ನನ್ನು ತಾನು ಮರೆತುಬಿಡುತ್ತಿದ್ದನು (ಜನಕಾ. ೬); ವಾಲ್ಮೀಕಿ ವ್ಯಾಸರು ತಮ್ಮ ಕೃತಿಗಳಲ್ಲಿ . . . ಲೀನರಾಗಿ ಹೋಗಿದ್ದಾರೆ (ಕಾಪನೀ. ೨). ೭. ಒಂದೇ ವಿಷಯದಲ್ಲಿ ಮುಳುಗುವಿಕೆ; ತಲ್ಲೀನವಾಗುವಿಕೆ: ವಿಜ್ಞಾನಿಗಳು ತಂಡೋಪತಂಡವಾಗಿ ಭೌತಘಟನೆಗಳ ವಿಮರ್ಶೆಯಲ್ಲಿ ಲೀನವಾಗಿದ್ದಾರೆ (ಜೀವಾಶ್ರ. ೦೦೩). ೮. [ಸಂಗೀತ] ಗಮಕದಲ್ಲಿ ಒಂದು ಬಗೆ : ಕಂಪಿತ . . . ಲೀನ . . . ಆಹತಮೆಂಬೆಳು ದೇಶೀಗಮಕಂಗಳು (ಶಿವೇಕ. ೨೩೨); ಶಾರ್ಙ್ಗದೇವನ ಪಂಚದಶವಿಧ ಗಮಕಗಳು ಹೀಗಿವೆ . . . ಲೀನ – ಹಿಂದಿನ ಸ್ವರವೊಂದು ಮುಂದಿನ ಸ್ವರದಲ್ಲಿ ಮೃದುವಾಗಿಯೂ ನಿಧಾನವಾಗಿಯೂ ಐಕ್ಯವಾಗುವುದು (ಸಂಗೀಕೋ. ೨೩). ೯. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : ಎರಡುಂ ಕೈಗಳನೂರ್ಧ್ವಮಂಡಲದಿನೊಳ್ಪಂ ಬೆತ್ತು ತದ್ವಕ್ಷದೊಳ್ ಕರಯುಗ್ಮಂಗಳನಂಜಲೀಕೃತಿಯನೊಲ್ದುಂ [ಮಾಡಿ] ನೀಹಂಚಿತನೋತ್ಕರಮೊಂಬೊಂದು ಶಿರಸ್ಸಿನೊಳ್ ಮುಡುಪಿನೊಳ್ ಸ್ಥಿತಿಟ್ಟು ಕೊಂಕಲ್ ಕೊರಲ್ ಕರಣಂ ಲೀನಮೆನಿಪ್ಪ ಚೆಲ್ವ ಪೆಸರಂ ತಾಳ್ದತ್ತು (ನಾಟ್ಯರಂ. ೪–೪೪). [ಸಂ.]

**ಲೀನತೆ** (ನಾ). ೧. ಆಸಕ್ತವಾಗಿರುವಿಕೆ; ಮಗ್ನತೆ. ೨. ಕರಗುವಿಕೆ; ಐಕ್ಯತೆ. [ಸಂ. ಲೀನತಾ]

**ಲೀಯ** (ಗು). ೧. ಕೂಡಿಹೋದ; ಬೆರೆತ; ಒಂದಾದ. (ನಾ). ೨. ಬೆರೆಯುವಿಕೆ; ಐಕ್ಯ : ಮನ ದಾಸೋಹಕ್ಕೆ ಲೀಯವಹಂತೆ ಮಾಡು (ಬಸವ. ೪೩೬); ಸಾಗರವನ್ನು ಸೇರಿ ಅದರಲ್ಲಿ ಲೀಯವಾಗಿ ಅದರಲ್ಲಿ ಹರಿದಾಡುವ ನದಿಗೆ ... ಬೇರೆ ಗತಿಯುಂಟೇ? (ವೋಳವಾ. ೩೭ ಕ್ರಿಸ್ತಾಪನ).

[< ಸಂ. ಲೀನ]

**ಲೀಲಾಂದೋಳ** (ನಾ). ವಿನೋದವಿಹಾರದಲ್ಲಿ ಬಳಸುವ ಉಯ್ಯಾಲೆ: ಲೀಲಾವನದೊಳ್ ವಿಹರಿಪ ಲೀಲಾಸರದೊಳಗೆ ಮಾಡಿ ಮುಟ್ಟುವ ಲೀಲಾಂದೋಳ್ದುಮನೇಜುವ ಲೀಲಾಕೇಳಿಗಳೆ ವಿಲಾಸಕೇಳಿಗಳ್ ನೃಪಪತಿಯಾ (ಅಜಿತ. ೩–೯). [ಸಂ. ಲೀಲಾಂದೋಲ]

**ಲೀಲಾಜಲಾಶಯ** (ನಾ). ಜಲಕ್ರೀಡೆಗಾಗಿ ನಿರ್ಮಿಸಿದ ಕೊಳ,–ತಟಾಕ : ನಾನಾಭವನವಿನ್ಯಾಸೋದ್ಯಾನಲೀಲಾಜಲಾಶಯಂಗಳುಮಂ . . . ಮಾಡಿ (ಅಂಜಿ. ೬–೬೩ ವ). [ಸಂ.]

**ಲೀಲಾದೀರ್ಘ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು ಬಗೆ : ಸ್ಫುರಿತ . . . ಲೀಲಾದೀರ್ಘ [ಪಾಠಾಂ. ಲೀಲೋದ್ದೀರ್ಘ] . . . ಕೋಮಲಮೆಂಬ ವಿಪ್ಪತ್ತೆರಡೇ ಶ್ರುತಿಗಮಕಂಗಳು (ಶಿವೇಕ. ೦೮೬).

[ಸಂ.]

**ಲೀಲಾಭಾವಿ** (ನಾ). ಆಟವಾಡುವ ಮನಸ್ಸುಳ್ಳವನು; ಕ್ರೀಡಾಮನಸ್ಕ : ಲೀಲಾಭಾವಿಯಾಗಿ ಏಕೆ ಬಂದೆನೇಂಬುದನರಿದು ಸಾಕಾರದ ನೀತಿಯ ನಿರ್ಣಯವ ಕಂಡು ಪ್ರತಜೀವ ತಿಳಿವು ಇನ್ನೇತರಿಂದ ಉಳಿವು ಈ ಉಭಯದ ನೀತಿಯಲ್ಲಿ ನಿಮ್ಮ ಮೇಲಪ್ಪ ತಾಣವನರಿಯಬೇಕು (ವಚನಸಾ. ೩೦–೨೦೩). [ಸಂ. ಲೀಲಾಭಾವಿನ್]

**ಲೀಲಾಯಿತ** (ನಾ). ಆಟ; ವಿನೋದ; ಕ್ರೀಡೆ : ಆದಿಪುರುಷಂ . . . ತುಂಬುಗಾದಂ ಲೀಲಾಯಿತಂ ಸ್ವಯಂಪ್ರಭುಗುಚಿತಂ (ಆದಿಪು. ೩–೬೮). [ಸಂ.]

**ಲೀಲಾಯುದ್ಧ** (ನಾ). ವಿನೋದದ ಯುದ್ಧ; ಹುಸಿಕಾಳಗ : ಮಲ್ಲಯುದ್ಧ ಲೀಲಾಯುದ್ಧಾದಿ ವಿಹಾರಗಳಿಂ (ಶಿವೇಕ. ೨೦೩). [ಸಂ.]

**ಲೀಲಾರಥ** (ನಾ). ವಿಲಾಸಕ್ಕೆ ಉಪಯೋಗಿಸುವ ತೇರು : ತನ್ನ ಲೀಲಾರಥದೊಳ್ ಲವಣಾಂಭೋಧಿಯುಂ ದಾಂಟಿ (ಅಜಿ. ೦೨–೦೨೬).

[ಸಂ.]

**ಲೀಲಾವತಿ**, ಲೀಳಾವತಿ (ನಾ). ೧. ವಿನೋದಾಸಕ್ತಳಾದ ಹೆಂಗಸು; ಹಾಸ್ಯದಲ್ಲಿ ನಿರತಳಾದವಳು. ೨. ಚೆಲುವೆ; ಸುಂದರಿ. ೩. ನೇಮಿಚಂದ್ರನೆಂಬ ಕವಿಯು ಬರೆದ ಒಂದು ಕನ್ನಡ ಚಂಪೂಕಾವ್ಯ ಮತ್ತು ಅದರ ಕಥಾನಾಯಕಿಯ ಹೆಸರು : ಅತಿಚತುರಸ್ತ್ರೀಯರು ಮತಿಚತುರಕವಿಗಳುಂ ಕೇಳ್ದೊಲವಿಂ ಬಾಯುಂ ಬಿಡುತಿರೆ ಕರ್ಣರಸಾಯನ ಮೆನೆ ಪೇಳ್ವೆನೆಸೆಯೆ ಲೀಲಾವತಿಯಂ (ಲೀಲಾವ. ೦–೬೪); ಲೀಲಾವತಿ ಪತಿಯಾಪ್ಪಾಲೋಲತೆಯಿಂದೊಸೆದು ದೇವಿಯುಂ ಪೂಜಿಸಿದಳ್ (ಲೀಲಾವ. ೦೦–೬). ೪. ಭಾಸ್ಕರಾಚಾರ್ಯನೆಂಬುವನಿಂದ ರಚಿತವಾದ ಗಣಿತಶಾಸ್ತ್ರ ಗ್ರಂಥ. **ಲೀಳಾವತಿ** : ೩. ಲೀಳಾವತಿ ಲೀಳಾವತಿ ಬಾಳೆಯ ಬಂಧುಪ್ರಿಯೇ ನಿಜಪ್ರಿಯುಸಖಿಯರ್ ಕೇಳ ಕಳವಳದೊಳಟ್ಟಿದಪರ್ (ಲೀಲಾವ. ೦೦–೭೭). [ಸಂ. ಲೀಲಾವತೀ]

**ಲೀಲಾಳಕ** (ನಾ). ಅಲುಗಾಡುವ ಮುಂಗುರುಳು : ಮುನಿಚರಣಕಮಲದೊಳ್ ನಿಜವಿನತಶಿರಃಪದ್ಮವಿನುತ ಲೀಲಾಳಕಭೃಂಗನಿಕಾಯಮೆಸಗಿ ತುಂಬುಗಿರೆ (ಸುಕುಮಾ. ೮–೩೭). [ಸಂ. ಲೀಲಾಲಕ]

**ಲೀಲೆ**, ಲೀಳೆ (ನಾ). ೧. ಆನಂದ : ಲೀಲೆಯಿಂದುಡಿಸಿ ದಿವ್ಯವಸ್ತ್ರಮಂ . . . ಪೂಮಾಲೆಯುಂ ಮುಡಿಯಿಸುತ್ತುಮರ್ತಿಯಿಂ (ರವಿಕೀರ್ತಿ. ೩–೯); ಲೀಲೆಯೆಂದರೆ ಸ್ವಾರ್ಥವಾಗಲಿ ಪರಾರ್ಥವಾಗಲಿ ಬೇರೊಂದು ಪ್ರಯೋಜನವನ್ನು ಉದ್ದೇಶಿಸದೆ ತಾನೇ ಪ್ರಯೋಜನರೂಪವಾದ ಸಂತೋಷವ್ಯಾಪಾರ (ಹಿಂದಸಾ. ೩೩). ೨. ಆಟ; ಕ್ರೀಡೆ; ವಿನೋದ : ಲೀಲೆಯೊಳ್ ಮಳಲ ಜಗಲಿಯ ಮೇಲೆ ಸರೋಜಾತಸಖಿಗೆ ಮಿಗಿಲೆನಿಸುವ ಸಲ್ಲೀಲೆಯ ತೇಜೋಧಿಕನಂ ಬಾಲಕನಂ ನಲಿಯುತಿರ್ದನಂ ಕಂಡು (ರವಿಕೀರ್ತಿ. ೦೦–೦೯೬); ಪಾಲುಗಡಲಲಿ ಫಣಿಯ ಮಂಚದ ಮೇಲೆ ಪವಡಿಸಿ ಪರಮನೆನಿಸಿದ ಲೀಲೆಯೆಂತುಟಲು ಮನುಜಭಾವದ ನಟನೆ ತಾನೆಂತ (ಕೌಶಿಲಾ. ೪೩–೪೩); ಚಿಮ್ಮಿ ನೆಗೆಯುವ ತೊರೆಯು ಲೀಲೆಯು ಮನೋಹರತೆ (ಕನ್ನಾಂಗ. ೨೮–೬೦೪). ೩. ಸ್ತ್ರೀಯ ಒಂದು ಬಗೆಯ ಶೃಂಗಾರಭಾವ; ವಿಲಾಸ; ಬೆಡಗು : "ಹೇಳಾ, ವಿಳಾಸಃ, ಬಿಬ್ಬೋಕಃ, ಲೀಲಾ, ಲಲಿತಂ, ವಿಭ್ರಮಃ — ಇವು ಮೊದಲಾದುವು ಸ್ತ್ರೀಯರ ಭಾವಂಗಳ್"

(ಹರಿಚ. ೧೩-೮೯) ೪. ಚೆಲುವು : ಸೌಂದರ್ಯ : ಕಿಸಲಯುಲೀಲೆಯ ಪೋಲ್ವುದು ಅಧರವು ಬಹುಸುಖ ನಿನ್ನ ಸಮ್ಮುಖವು (ಇಂಕಾಶ. ೯೩-೩೨), ೫. ಸರಾಗ ; ಸುಲಭ ; ಹಗುರ : ವಿರಾಟರಾಜನಗರಂ ವಲ್ಲೂರಿವೆಲ್ಲಂ ಭುಜಾಬಲದಿಂ ಲೀಲೆಯ ಸಾಧ್ಯವಾದುದೆಣೆಯಾವ್ವಿರ್ಷ್ಣುಕ್ಷಮಾಪಾಳನೊಳ್ (ಎಕ. V, ಅರಸೀ. ೧–೧೧ ; 1169). ಲೀಳೆ : ೧. ಲೀಳೆಯುನಪ್ಪುಕೆಯ್ದು ನಯನೋತ್ಸವಮಂ ದಯ್ಗೆಯ್ವ ಗಾಡಿಯಿಂದೇಳಿಸಿ ಕಾಮುಕಲ್ಪ ಲತೆಯಂ ಪರಿಪೂರ್ಣಕಳಾವಿಳಾಸದಿಂದೇಳಿಸಿ ಚಾರುಚಂದ್ರಕಲೆಯಂ ನೆಲೆ ವೆರ್ಚಿಸಿದಳ್ (ಶಂರಾಚ. ೪-೩೨). ೨. ಲೀಳೆಯೊಳೆ ತಾವೆ ನಡೆಪಿದ ಕೇಳೀವನಲತೆಗಳಂ ನಿರೀಕ್ಷಿಸಿ ಸುಯ್ವಾವಾಳವಳಯಂಗಳಂ ಭ್ರಮರಾಳಕಿಯರ್ ಬಾಷ್ಪವಾರಿಯಿಂ ಪೂರಿಸಿದರ್ (ಕುಸ್ವತು. ೦೩-೯೯).

ಲೀಲಾಜಾಲವಾಗಿ = ಅತಿಸುಲಭವಾಗಿ; ನಿರಾಯಾಸವಾಗಿ : ಚಿತ್ರಗಳನ್ನು ಲೀಲಾಜಾಲವಾಗಿ ಚಿತ್ರಿಸುತ್ತಿದ್ದ, ಕಳ್ಳಕಲಾವಿದನೊಬ್ಬ ! (ಬುಗಚೂಂ. ೮೪); ಯಾರೊಡನೆಯೂ ಬಾಯಿಬಿಡದ ನಾನು ನಿನ್ನ ಬಳಿ ಲೀಲಾಜಾಲವಾಗಿ ಮಾತನಾಡಿದ್ದೇನೆ (ಗೋಕೃರ. ೬೨). [ಸಂ. ಲೀಲಾ]

**ಲೀಲೆಗಾತಿ** (ನಾ). ವಿಲಾಸವತಿ ; ಬೆಡಗಿ : ಲೀಲೆಗಾತಿಯರ ಮಸ್ತಕದಲಿ ಮೆಚ್ಚಿವ ಪೂಮಾಲೆ (ಬೋಹಕ. ೨೦-೨); ಶೈಲಪದ್ಮದ ಬಟ್ಟವಾವುಗೆಗಳನು ಪೊಂಬಾಳೆಯ ನಿಡುಚವರಗಳಾ ಲೀಲೆಗಾತಿಯರೊಯ್ಯುತಿರೆ ದಕ್ಷಿಣಾಂಕ ನಿಂದಾಲೋಕಿಸುತಿರ್ದನಿನಿಸು (ಭರತ. ೯೬-೪೩). [ಲೀಲೆ + —ಕಾತಿ₃]

**ಲೀಲೆಗಾರ್ತಿ** (ನಾ).= ಲೀಲೆಗಾತಿ : ಲೀಲೆಗಾರ್ತಿಯರಚ್ಯುತನಾಜ್ಞೆಯಿಂದ ಪೆರ್ಗಾಲ ಹೊಂದೂಂಬನು ನೆಗಹೆ ಕೀಲಣೆಗೆಯ್ದ ಸುವರ್ಣವೇತಂಡ ಶುಂಡಾಲದೆ ಸುರಿದುದು ಸಲಿಲ (ಬೋಹಕ. ೦೪-೩೫).

[ಲೀಲೆಗಾಜಿ + —ತಿ₁ (<—ಇತ್ತಿ)]

**ಲೀಲೆಗಾಜಿ** (ನಾ). ವಿಲಾಸಿ; ರಸಿಕ : ಬಾಲೆಯರುಗಳು ಬೊಬ್ಬಿಡಲು ಗೋಪುರದಗ್ರಶಾಲೆಯ ರೋದನಗೇಳಿ ಲೀಲೆಗಾಜಿನ ಕೊಲ್ವುದಿಲ್ಲೆಂದು ದುಃಖದ ಶೀಲೆಗೆ ಮಾತನಟ್ಟಿದನು (ಬೋಹಕ. ೩೫-೩೨).

[ಲೀಲೆ + — ಕಾಜಿ]

**ಲೀಲೆಗೆಡು** (ಕ್ರಿ). ಸಂತೋಷವನ್ನು ಕಳೆದುಕೊಳ್ಳು; ಆನಂದವಿಲ್ಲದಾಗು : ಪಾರ್ಥನು ಲೀಲೆಗೆಟ್ಟು ದ್ವಾರವತಿಯನು ಪೊಕ್ಕು . . . ಅಱುಹಿದನು ಸರ್ವರಿಗೆ (ಕುಮ್ಮಕು. ೩-೦). [ಲೀಲೆ + ಕೆಡು₁]

**ಲೀಲೆದೋಱು** (ಕ್ರಿ). ವಿನೋದವನ್ನು ಸೂಸು,— ತೋರಿಸು : ಆ ಸಕಲನಿಃಕಲತತ್ತ್ವವೆ ತನ್ನ ಶಕ್ತಿಸಮರಸಸಂಭಾಷಣೆಯಿಂದ ಲೀಲೆದೋಱಲಾಗಿ ತಾನೇ ಗುರುವಾದ (ಶತಸಂ. ೩೪೦-೨೪). [ಲೀಲೆ + ತೋಱು]

**ಲೀಲೆವಡೆ** (ಕ್ರಿ). ಸೊಗಸಾಗು; ಚೆಲುವನ್ನು ಹೊಂದು ; ಸುಂದರವಾಗಿ ಕಾಣು : ಸಿವಿಗೆ ತಟಿಮುಱುಗಲೊಡನಿಕ್ಕುವ ಕುಂಚಂ ಲೀಲೆವಡೆಯೆ (ಅದಿಪು. ೦೦-೩೯) ; ವಿಚಕಿಲಮುಕುಲಮಾಲೆಯಂತೆ ಕುಚತಟದೊಳ್ ಕಂಠಮಾಲೆ ಲೀಲೆವಡೆಯೆ (ರಾಜಶೇ. ೩-೦೯ ಪ). [ಲೀಲೆ + ಪಡೆ₁]

**ಲೀಳಾವತಿ** 'ಲೀಲಾವತಿ' ನೋ.

**ಲೀಳೆ** 'ಲೀಲೆ' ನೋ.

**ಲುಂಗ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು; ಮಾದಲ ; ಮಾತುಲುಂಗ : ಕಕುಭಾಶೋಕಕದಂಬಲುಂಗಲವಲೀಭೂರ್ಜಾರ್ಜುನಾನೋಕಹಪ್ರಕರಂ (ಶಂಶಹ. ೩-೬೦) ; ತುಲಸಿಯ ಲುಂಗ ಕಷಾಯದ ಜಲದೊಳ್ ಗೋವನಧಿಕಬೂದಿಯ ಜಲದೊಳ್ ಕಟವೆಯ ಸಮನಿಸು ತಾಂ ಮೊಸರೊಳೆ ಮೇಣ್ ಕಲಸಿದೊಡೆ ಪಲವು ದೆವಸಂ ನಿಲ್ಕುಂ (ಲೋಕೋಪ. ೬-೩); ವಟಕುಟಜ ಲವಂಗ ಲುಂಗ ಮಾತುಲುಂಗ . . . ಬಿಲ್ವಾಶ್ವತ್ಥಾದಿ ವೃಕ್ಷಂಗಳು ಸುಮನಸಭರಿತವಾಗಿ ಶೋಭಿಸುತಲಿತ್ತು (ಕುರಾಪ. ೯೩). [ಸಂ.]

**ಲುಂಗಿ** (ನಾ). ಗಂಡಸರು ಸೊಂಟಕ್ಕೆ ಸುತ್ತಿಕೊಳ್ಳುವ ನಾಲ್ಕು ಮೊಳದ ವಸ್ತ್ರ; ಲಪಾಟಿ : ಅಲ್ಲಿ ಎಲ್ಲರೂ ಲುಂಗಿ ಸುತ್ತುತ್ತಾರೆ (ಕುಂಹಿಂ. ೨೦) ; ಪಚ್ಚಿಗೆ ಮುಖಕ್ಕೆ ಚಿತ್ರವಿಚಿತ್ರ ಬಣ್ಣ ಬರೆದು ಒಂದು ಲುಂಗಿಯನ್ನು ಉಡಿಸಿ (ಬೋರಿಪು. ೦೦೦). [ ←ಪಾರ. ಹಿಂ. ಮರಾ. ಲುಂಗೀ]

**ಲುಂಚನ** (ನಾ). ಕೀಳುವುದು ; ಕಿತ್ತು ತೆಗೆಯುವುದು : ಕೇಶಲುಂಚನಾನಶನಾತಪಸ್ಥಾನಾದಿ ಶರೀರಪೀಡಾಕರಮಪ್ಪ ತಪೋನುಷ್ಠಾನದೊಳಂ (ಕಕ್ಕ್ರ. ೨೬೦). [ಸಂ.]

**ಲುಂಚೆ** (ನಾ). ಒಂದು ಬಗೆಯ ಮರ ; "ಹೆಂಡ ಇಳಿಸುವ ಮರ" (ಕ್ರಕಿವ್ರ) : ಕರಿಯ ಸೀಗೆಯ ತಾಳ ಲುಂಚೆಯಿಗಂಚಲ ಸಕಲತರು ಧಾನ್ಯದಿಂದಾದ ಮದ್ಯಮಂ ಕುಡಿಕುಡಿದು ಮರುತಹತಿಯಿಂದ ಚಾಂಡಾಳಿಸುವ ಚಿತ್ರೆಯನರಸ ನೋಡುತ ಬಂದನು (ಹಕಾಣ. ತಂ. ೨೦೦). [ ? ]

**ಲುಂಟಾಕ₁** (ನಾ). ೧. ಕದಿಯುವುದು ; ಅಪಹರಣ: "ಲುಂಟಾಕಮೆನಲಲ್ಲಿ ನೆಗಪುವುದಕ್ಕುಂ" (ಕಾವ್ಯಕ. ೭೩). ೨. ಕದಿಯುವವನು ; ಕಳ್ಳ; ತಸ್ಕರ : ಗೆಂಟಲಾಱುತ ಸೋರಿ ಬರಿದಂಗದಲಿ ರಕ್ತ ಟೆಂಟಣಿಸುತ ಪೋಗಿ ಪೊಗಲು ಎಂಟಂಗವೆಲ್ಲ ಕತ್ತರಿಸಿ ಬೀಳಲು ಬೀಳ್ವ ಲುಂಟಾಕ ವೈತರಣಿಯೊಳು (ಚರಕ. ೬-೯೬). ೩. ಕಾಗೆ. [ಸಂ.]

**ಲುಂಟಾಕ₂** (ನಾ). ಎರಡು ಬೆಟ್ಟಗಳ ಮಧ್ಯದ ಪ್ರದೇಶ: "ಲುಂಟಾಕ= ಗುಡ್ಡದ ಭೂಮಿ" (ಗುರುಷೋ. ೦೦೭) ; "ಲುಂಟಾಕಮೆನಲೆರಡು ಬೆಟ್ಟಗಳ ಮಧ್ಯಕೆ ಪೆಸರ್" (ಕಕರ. ೯೬). [?]

**ಲುಂಟಾಕಿನಿ** (ನಾ). ನಿವಾರಿಸುವವಳು ; ಹೋಗಲಾಡಿಸುವವಳು : ಪರಿಪೂತನಾಕಿನೀ ಪಾಪಲುಂಟಾಕಿನೀ ಸುರಭಿದವಲೋಕಿನೀ ಪೂರ್ವಮಂದಾಕಿನಿಯೆನುತಿರ್ದರು (ವೀಕ್ವತು. ೩-೨೩-೭೪). [ಸಂ. ಲುಂಟಾಕಿನೀ]

**ಲುಂಠನ** (ನಾ). ದರೋಡೆ ; ಲೂಟಿ : ಮಹಮ್ಮದನ ಸೈನ್ಯದಲ್ಲಿ ಹೆಚ್ಚು ಹೆಚ್ಚಾಗಿ ಲುಂಠನಪ್ರಿಯರು ಬಂದು ಸೇರಿಕೊಂಡರು (ಭಾಇಶ್ರ. ೩೦೭).

[ಸಂ.]

**ಲುಂಠನಕಾರಿ** (ನಾ). ಸುಲಿಗೆಮಾಡುವವನು ; ದರೋಡೆಗಾರ; ಕಳ್ಳ : ಅವನು ಅಷ್ಟಿಷ್ಟು ದಂಡನ್ನು ಕಟ್ಟಿಕೊಂಡು ಲುಂಠನಕಾರಿಯಾಗಿ . . . ಪ್ರಸಿದ್ಧಿಗೆ ಬಂದನು (ಕಗದ್ಯ. II, ೨೭); ಕೃಷಿಜೀವಿಗಳೂ, ಶಿಲ್ಪೋಪಜೀವಿಗಳೂ, ವರ್ತಕರೂ ದುರ್ವೃತ್ತರಾದ ಲುಂಠನಕಾರಿಗಳ ಕೃಪಾಧೀನರಾದರು (ಆಯುರ್ಕೀ. ೦೪೦). [ಸಂ. ಲುಂಠನಕಾರಿನ್]

**ಲುಂಠಾಕ** (ನಾ). ೧. = ಲುಂಠನಕಾರಿ. ೨. ನಾಶಮಾಡುವವನು: ನಿನ್ನಂಶಾಂಶದವತಾರಮೂರ್ತಿಯಿಂ ಲೋಕಲುಂಠಾಕರನಾವ ಪದದೊಳ್ ಮಡಿಯಿಸಲ್ವೇಡಿರ್ದಪುದವರವರಸಂತಂತೆ ಮಡಿಯಿಪುದು (ಜಗಪು. ೬-೭೩ ವ).

[ಸಂ.]

**ಲುಂಠಿಸು** (ಕ್ರಿ). ೧. ಸೂರೆಮಾಡು ; ಕೊಳ್ಳೆಹೊಡೆ : ವೀರಭದ್ರದುರ್ಗದ ನೆರವಿಂ ಗೆಂಟಿಪ ಡೆಂಕಣಿಕೋಂಟೆಯನಂಟಿಸಿಯಾ ರಾಯಗೋಂಟೆಯಂ ಲುಂಠಿಸಿದಂ (ಚಳಪ. ೨-೦೨೯). ೨. ನಾಶಮಾಡು: ರವಣಗೆಯ್ದವನ ಕಂಠವ ಲುಂಠಿಸಿದ ಕಂಠೀರವಮೂರ್ತಿಗಾನೆರಗುವೆನು (ಶತಕಾಂ. ೭೦-೩೪).

[ಲುಂಠನ + — ಇಸು₃]

**ಲುಂದು₁** (ಕ್ರಿ). ೧. ಮಲಗು : ಇರುಳ್ ಕಳ್ಳರ್ ವಂದಾಕೆಯ ಲುಂದಿದ[ಪಾಠಾಂ. ನಿದ್ರೆಗೆಯ್ದ] ಮನೆಯೊಳ್ ಕನ್ನಮಿಕ್ಕಿದೊಡೆ (ವಡ್ಡಾರಾ. ೦೯-೨) : ಕಾರ್ತಿಕಮಾಸದ ಪುಣ್ಣಮಿಯಂದು ಸುಖದಿಂದೆ ಲುಂದಿರ್ದಂ [ಪಾಠಾಂ. ಉಂದಿರ್ದ್ದಂ, ಪಟ್ಟಿರ್ದಂ, ಪಟ್ಟಿರ್ದೊಂ] (ವಡ್ಡಾರಾ. ೨೬-೭). ೨. ಸಂಭೋಗಿಸು : ಮೇಲ್ವಾಯ್ದುಮೇವೈಸಿಯುಂ ಬಿರಿದುಂ ಲುಂದುವ ಬೇಟದೊಂದು ಸುಸಿಲುಂ ನೋಯಿಕ್ಕುಮಾಱಿಕ್ಕುಮುಗ್ಗಲಿಕ್ಕುಂ (ಅದಿಪು. ೦೩-೨೪). 'ಮಱಿಲುಂದು' ಪರಾ.

ಲುಂದುವೋವರಿಗೆ=ಮಲಗುವ ಕೋಣೆ; ಶಯ್ಯಾಗೃಹ: ಸರ್ವರುಚಾಪಹಾರಮೆಂಬ ಹಾರಂ ಸಂತತಿಯಿಂ ವಾಮರಥಂಗೆ ಬಂದುದಂ ವಾಮರಥಂ ಕರುವಾಡದೇಟನೆಯ ನೆಲೆಯೊಳ್ ತನ್ನ ಲುಂದುವೋವರಿಗೆಯ [ಶಾಕಾಂ. ಪವಡಿವೋವರಿಯಲ್] ಪುಡಿಕೆಯೊಳಿಟ್ಟು (ವಡ್ಡಾರಾ. ೦೨೩-೬).

ಲುಂದು₁ (ನಾ). ೧. ಮಲಗುವಿಕೆ. ೨. ಸಂಭೋಗ: ಬಳಸುವ ಬೇಟದೊಳ್ ಮೊಳೆವ ಗೊಟ್ಟಿಯೊಳೇರೆಲೆವೋದ ಲುಂದಿನೊಳ್ ಬಳೆದ ವಿಯೋಗದೊಳ್ . . . ಗೊಲೆಗೊಂಡ ಬೇಟಂ (ಆದಿಪು. ೦೨-೨೦); ಅಮರ್ದಿನ ಧಾರೆಯಂತೆ ನುಡಿಯಿಂಪವಮರ್ದಂ ತಳೆದಂತೆ ಸೋಂಕಿನಿಂಪವಮರ್ದಿನ ಪೂರದಂತೆ ಪದದಿಂಪವಮರ್ದಂ ಕುಡಿವಂತೆ ಲುಂದಿನಿಂಪವಮರ್ದೊಡಮೇಸಗಲ್ಕೆ ಮುಳಿಸಂಬೆರೆದುಂ ಗಡ ಕಾಳಕೂಟವಾಗಮರ್ದಿನ ಕಾಳಕೂಟದೊಡವುಟ್ಟಿದಳೆಂದಪೆನೆನ್ನ ನಲ್ಲಳಂ (ಆದಿಪು. ೦೨-೨೭). [< ಲುಂದು₁]

ಲುಂಬಾಳಕಾರಿ (ನಾ). ಒಂದು ಬಿರುದು (?) : ಸಕಳಸಾಮನ್ತ ಲಕ್ಷ್ಮೀಕಾಂತಲಂಬಲುಂಬಾಳಕಾರಿನಿಲುಂ ಬೀರಚಂದ್ರಕಾಚಂದನತಿಳಕ (ಎಕ. VI. ಕಡೂರು. ೩೫-೪೬ ; 1136). [ ? ]

ಲುಕಸಾನ 'ಲುಕ್ಸಾನು' ನೋ.

ಲುಕಸಾನು 'ಲುಕ್ಸಾನು' ನೋ.

ಲುಕಸಾನೆ 'ಲುಕ್ಸಾನು' ನೋ.

ಲುಕುಸಾನು 'ಲುಕ್ಸಾನು' ನೋ.

ಲುಕ್ಸಾನ 'ಲುಕ್ಸಾನು' ನೋ.

ಲುಕ್ಸಾನು, ನುಕಸಾನಿ, ನುಕಸಾನು, ನುಕ್ಸಾನು, ಲುಕಸಾನ, ಲುಕಸಾನು, ಲುಕಸಾನೆ, ಲುಕುಸಾನು, ಲುಕ್ಸಾನ (ನಾ). ನಷ್ಟ; ಹಾನಿ : ತಮಗೆ ಬಹಳ ಲುಕ್ಸಾನು ಆಯಿತು (ರಾಜೇಂದ್ರ. ೩೩). ನುಕಸಾನಿ : ಹೀಗೆ ಮಾಡೋಣದರಿಂದ ಸುಮ್ಮನೆ ನುಕಸಾನಿ ಆಗುವ ಸಂಭವವಿರುತ್ತದೆ (ವಚನಬಿಬ್ಬಾ. ೩೩). ನುಕಸಾನು : ಸರಕಾರೀಕಂದಾಯದಲ್ಲಿ ಶೇಕಡಾ ಮೂವತ್ತರಂತೆ ಸರಕಾರಕ್ಕೆ ನುಕಸಾನು ಬಂತು (ಕಥಾಗ. ೩೭೭). ನುಕ್ಸಾನು: ವ್ಯಾಪಾರದಲ್ಲಿ ಬಹಳ ನುಕ್ಸಾನು ಆಯಿತು (ರೂಢಿ). ಲುಕಸಾನ : ಇದರ ದೆಸೆಯಿಂದ ವರ್ತಕರಿಗೆ ಲುಕಸಾನವಾಗಿ ಬಹಳೇ ಖೇದವಾಗುತ್ತದೆ (ಹುಬ್ಬಳ್ಳಿವ್ಯಾ. ೬ ಪ್ರಸ್ತಾವನೆ). ಲುಕಸಾನು : ಐಂದಾ ಸಾಗುವಳಿ ಆಗತಕ ಲುಕಸಾನು (ಮೈಕಂ. ೦೯೩೬, ೨೦-೯; 1817); ಇದರ ಲುಕಸಾನು ಸರ್ವನಾಶ (ಕಾಂಗ. I. ೪೯೯). ಲುಕಸಾನೆ : ಶಿರಿಘಾದ ಯಾವನಾದರೊಬ್ಬನಿಗೆ ಲುಕಸಾನೆಯಾಗಿದ್ದರೆ, ಆ ಲುಕಸಾನೆ ಹೊಂದಿದವನು . . . ಫಿರ್ಯಾದಿ ಮಾಡಬಹುದಾಗಿತ್ತು (ಇಂಗ್ಲಂಡ. ೩೫). ಲುಕುಸಾನು : "ಲುಕುಸಾನು _ ನುಕುಸಾನು, ಹಾನಿ" (ಶಾಪಕೋ. ೯೩). ಲುಕ್ಸಾನ : ವಿಸ್ಮಯದ ಲಾಭ ಲುಕ್ಸಾನವನೆ ಬಲ್ಲನು (ಕದಾವ. ೦೫೫-೭).

[ ←ಅರ. ನುಕ್ಸಾನ್; ಹಿಂ. ಮರಾ. ಲುಕ್‌ಸಾನ್. ನುಕ್‌ಸಾನ್]

ಲುಚ್ಚ 'ಲುಚ್ಚಾ' ನೋ.

ಲುಚ್ಚತನ 'ಲುಚ್ಚಾತನ' ನೋ.

ಲುಚ್ಚಾ, ಲುಚ್ಚ, ಲುಚ್ಛಾ (ಗು). ೧. ಕೀಳಾದ ; ಯೋಗ್ಯವಲ್ಲದ ; ಅಲ್ಪ ; ಹೀನ : ಈ ಲುಚ್ಚಾ ಸೂಳೆಮಗನ ಮಾತು ನಂಬಿಕೊಂಡಲ್ಲೇ ಈಗೆಲ್ಲಾ ರಾಮರಕ್ಷಿಯಾಗಿ ಕೂತೇದ (ಕಿತ್ತೂರು. ೯೦); ಲುಚ್ಚಾಜನರ ಸಹವಾಸ ಮಾಡಿ ಆತ ಹಾಳಾದ (ರೂಢಿ). (ನಾ). ೨. ದುರಾಚಾರಿ ; ದುಷ್ಟ ; ದುರ್ವ್ಯಸನಿ : ಘಜನೀಮಹಮ್ಮದನೂ ಔರಂಗಜೇಬನೂ ಲುಚ್ಚಾಗಳು ದುಷ್ಕರು ಅಂತ ಬೈತಾನೆ (ಸ್ವಾತಂತ್ರ್ಯ. ೦೩೦). ಲುಚ್ಚ : ೧. ಅವಳು ರಂಗಭೂಮಿಯ ಮೇಲೆ ಬಂದಾಗ ತನ್ನ ಪಕ್ಷದವರು ಲುಚ್ಚಮಾತುಗಳನ್ನಾಡಿ ಚಪ್ಪರಿಸಿದಾಗ ತಾನು ಗದರಿಸಲಿಲ್ಲವೆ? (ರಂಗಜಾ. ೫). ೨. ಇಚ್ಛಾನಿಗಾತಿ ತಾಯಮ್ಮ ಇದ್ದಾಗ ಲುಚ್ಚವರ ಸಂಗ ನಮಗೇನು (ಕಶ್ಯಪ. ೭೩); ವೈಗಳ್, ಕಳ್ಳ, ಲುಚ್ಚನೆಂಬ ಪದವಿಗಳೇ ಅವನಿಗೆ ದೊರೆತವು (ಕವಲಂ. ೫೭). ಲುಚ್ಛಾ : ೧. ಗಂಧರ್ವಭಾಷೆಯಲ್ಲಿ ಆಡದ 'ಲುಚ್ಛಾ' ಮಾತುಗಳಿಲ್ಲ (ಪಾಂಡುಪು. ೨೭); ಲುಚ್ಛಾ ಜನ ನೀವು (ಶಾಹೀಜ್. ೪೪೪).

[← ಪಾರ. ಹಿಂ. ಮರಾ. ಲುಚ್ಚಾ]

ಲುಚ್ಚಾಗಿರಿ (ನಾ). ಅಲ್ಪತನ ; ಕೀಳುತನ : ಈ ಸಣ್ಣ ವಿಚಾರಕ್ಕೆ ಲುಚ್ಚಾಗಿರಿ ತೋರಿಸಬೇಡ (ರೂಢಿ). [ಲುಚ್ಚಾ + —ಗಿರಿ₂]

ಲುಚ್ಚಾತನ, ಲುಚ್ಚತನ (ನಾ). ೧. ಕೀಳುತನ ; ಹೀನಬುದ್ಧಿ : ಅವನ ಲುಚ್ಚಾತನದಿಂದಾಗಿ ಅವನ ನೆಂಟರಿಷ್ಟರೆಲ್ಲ ದೂರವಾದರು (ರೂಢಿ). ೨. ಪೋಕರಿತನ ; ಸ್ವೇಚ್ಛಾಚಾರ : (ಕ). ಲುಚ್ಚತನ : ೧. ವಿನೋದ ಮಾಡಿದರೆ . . . ವಿನೋದ ! ವಿಕೃತಕಾಮ ! ಲುಚ್ಚತನ ! (ರಂಗಜಾ. ೦೭೩). [ಲುಚ್ಚಾ + —ತನ]

ಲುಚ್ಛಾ 'ಲುಚ್ಚಾ' ನೋ.

ಲುಟಾಯಿಸು (ಕ್ರಿ). ಲೂಟಿ ಮಾಡು ; ಕೊಳ್ಳೆಹೊಡೆ ; ದೋಚು : ನಿಮ್ಮ ಸೀಮೆ ಯಾವತ್ತೂ ಲುಟಾಯಿಸಿ, ಆಕ್ರಮಿಸಿಕೊಳ್ಳುತ್ತೇವೆ (ರಾಜೇಂದ್ರ. ೯೩) ; ವರ್ತಕರಿಂದ ತೆರಿಗೆಗಳನ್ನು ಎತ್ತುತ್ತಲೂ . . . ಅವರ ಭಂಡಸಾಲೆಗಳನ್ನು ಲುಟಾಯಿಸುತ್ತಲೂ ಇದ್ದರು (ರಕಶ. ೦೯).

[ಲುಟಾ₀ (P ← ಹಿಂ. ಲುಟನಾ = ಲೂಟಿಯಾಗು) + — ಇಸು₁]

ಲುಟುಲುಟು (ನಾ). ಒಂದು ಅನುಕರಣ ಶಬ್ದ : ಅಡವಿಯಿಂದ ಮನೆಗೆ ಹೋಗುವಾಗ ಲುಟುಲುಟು ಹೆಜ್ಜೆಹಾಕುವ ಆಕಳ ಕರುವಿನಂತೆ ನೀನು ಹೀಗೇಕೆ ಓಡತೊಡಗಿದ್ದೀಯೆ (ರುಗನಂಜ. ೦೯೬) ; ಲುಟುಲುಟು ಹೆಜ್ಜೆಹಾಕುತ್ತ ಸಮೀಪದ ಪುಸ್ತಕದ ಅಂಗಡಿಯಲ್ಲಿ ಕುಳಿತು . . . ಪತ್ರ ಬರೆದು ಬೀದಿಯ ಮಗ್ಗುಲಲ್ಲಿರುವ ಟಪಾಲುಡಬ್ಬಿಯಲ್ಲಿ ಒಗೆದುಬಿಟ್ಟ (ಮುತ್ತೈದೆ-೬೬).

ಲುಠನ (ನಾ). ೧. ಹೊರಳುವಿಕೆ ; ತಿರುಗುವಿಕೆ. ೨. ತಿರುಗು ಮುರುಗು ; ತಲೆಕೆಳಗು. [ಸಂ.]

ಲುಠಿತ (ಗು). ೧. ಹೊರಳಿದ ; ತಿರುಗಿದ. (ನಾ). ೨. ಹೊರಳಾಡುವ ಕುದುರೆ : "ಉಪಾವೃತ್ತಃ, ಲುಠಿತಃ — ೨ . . . ನೆಲದಲ್ಲಿ ಬಾರಿಬಾರಿಗೂ ಬಿದ್ದು ಹೊರಳಾಡಿದ ಕುದುರೆಯ ಹೆಸರು" (ಸಿದ್ಧಾಂತಿ. ೨೫೦). [ಸಂ.]

ಲುಪ್ತ (ಗು). ೧. ಬಿಟ್ಟ ; ತಿರಸ್ಕರಿಸಿದ. ೨. ಕರಗಿದ. ೩. ಕಾಣದೆ ಹೋದ ; ಮರೆಯಾದ : ಗುಣಲುಪ್ತಪ್ರಮುದಚಿತ್ತಂ ಪ್ರಳಯದೂರಂ . . . ವಿಕಲ್ಪಿತನು (ಧಸಪು. ೬-೩). ೪. ಕಳವು ಮಾಡಿದ ; ದೋಚಿದ. ೫. ಇಲ್ಲವಾದ ; ಲೋಪವಾದ : 'ಲುಪ್ತೋಪಮೆ' ಪರಾ. (ನಾ). ೬. ಕೊರತೆ ; ಕುಂದು ; ಊನ : ಕ್ಲಪ್ತಮೆನಿಸುವ ರಾಜಭೋಜ್ಯದೊಳಗಾವುದಂ ಲುಪ್ತಮಾಗದವೊಲಾರೋಗಿಸೆಯಸ್ಸೆದೆ ಲೋಲುಪ್ತಿಯಿಂ ಮಾಡುತಿರ್ದಂ (ಕೈಪಿಡಿ. ೬-೪೫). ೭. ಮರೆಯಾಗುವಿಕೆ ; ಕಾಣದಾಗುವಿಕೆ ; ಅದೃಶ್ಯ : ನಾನಾಸಂಪ್ರದಾಯಗಳು ಲುಪ್ತವಾಗಿವೆ (ಮುಕ್ತಾರ. ೦೨೦ ೩೬೪) ; ಲುಪ್ತವಾದ ಭಾರತೀಯಕ್ಷಾತ್ರತೇಜವನ್ನು ಮರಳಿ ಪ್ರಖರಗೊಳಿಸುವ ಉದ್ದೇಶವಿರಲಿಕ್ಕೆ ಬೇಕು (ಕರ್ನಾಟ. ೪೨೪). ೮. ಕಳವುಮಾಲು; ಕದ್ದ ವಸ್ತು : "ಅಪಹೃತಂ ಲುಪ್ತಂ— ಈ ೨ ಕಳ್ಳೊಡವೆ" (ಕರಾಜು. ೫೬-೦೮೪). [ಸಂ.]

ಲುಪ್ತಪಿಂಡ (ನಾ). ಪಿಂಡಪ್ರದಾನಕ್ಕೆ ಯಾರೂ ಇಲ್ಲದಿರುವವನು,— ವಾರಸುದಾರನಿಲ್ಲದವನು : ನೀನು ಲುಪ್ತಪಿಂಡ ಆಗಿ ಸಾಯಿ (ಗಂಪತಾಯು. ೦೦೭). [ಸಂ.]

ಲುಪ್ತಿ (ನಾ). ಇಲ್ಲದಾಗುವಿಕೆ ; ಕಾಣದಾಗುವಿಕೆ : ವ್ಯಕ್ತಿ ಲುಪ್ತಿಗಳು ಮಾನವಪ್ರಕೃತಿಯ ಯಾವ ನಿಗೂಢವಾದ ವಿಶೇಷತೆಯೊಡನೆ ಸಂಬಂಧವಾದವು ಎಂಬುದನ್ನು . . . ನಿರ್ಣಯಿಸಲಾಗಿಲ್ಲ (ಕಾಂಗ. II. ೨೦).

[<ಲುಪ್ತ]

**ಲುಪ್ತೋಪಮೆ** (ನಾ). [ಕಾವ್ಯಮಿಾ] ಉಪಮೆಯಲ್ಲಿ ಒಂದು ಬಗೆ ; ೯ " ಉಪಮಾನ ಉಪಮೇಯ ಸಾಧಾರಣಧರ್ಮ ವಾಚಕ ಶಬ್ದ ಇವುಗಳಲ್ಲಿ ಒಂದಾದರೂ ಕೆಲವಾದರೂ ಸ್ಪಷ್ಟವಾಗಿ ಉಕ್ತವಾಗದಿರುವ ಸಾದೃಶ್ಯಕ್ಕೆ ಲುಪ್ತೋಪಮೆಯೆಂದು ಹೆಸರು " (ಕೃಬಿಪ. ೨೫೭) : ಉಪಮೇಯಂ ಉಪಮಾನಂ ಸಮಾನಧರ್ಮಂ ಉಪಮಾವಾಚಕಪದಂ ಎಂಬೀ ನಾಲ್ಕಱೊಳ್ ಒಂದನಾದೊಡಮೆರಡನಾದೊಡಂ ಮೂಱನಾದೊಡಂ ಪೇೞದಿರೆ ಲುಪ್ತೋಪಮೆಯೆನಿಪುದು (ಅಶ್ರತಿ. ೩೪). [ಸಂ. ಲುಪ್ತೋಪಮಾ]

**ಲುಬ್ಧ** (ಗು). ೧. ಆಸೆಯುಳ್ಳ ; ಬಯಕೆಯುಳ್ಳ. ೨. ಅತಿಯಾಸೆಯ ; ಲೋಭತನದ : ದಾನಂ ದುರ್ಬಲಲುಬ್ಧಪ್ರಸ್ತುತಂ (ಶಾಂತಿಪು. ೩-೯೩ ವ). (ನಾ). ೩. ಅತಿಯಾಸೆಯುಳ್ಳವನು ; ಲೋಭಿ : ಜಿಪುಣ : "ತೃಷಕಃ, ಗರ್ಧನಃ, ಗೃಧ್ನುಃ, ಲಿಪ್ಸುಃ, ಲುಬ್ಧಃ, ಅಭಿಲಾಷುಕಃ — ಈ ೬ ಕಾಂಕ್ಷಿತಂ" (ಹಲಾಯು. ೩೦-೨೦೬) ; ಚನ್ನವಾದೊಡಂ ಗುಣವಿಲ್ಲದಾತಂಗೆ ಲುಬ್ಧನ ಧನದಂತೆ ವಿಫಲಮಕ್ಕು (ಮುದತಿ. ೧೧-೨೪) : ಡಿಂಗಿರಾತ ಬಲಗುಪ್ತರು ಅತಿಲುಬ್ಧರು (ರಾಜಶೇ. ೫೨). ೪. ಬೇಟೆಗಾರ; ಬೇಡ. [ಸಂ.]

**ಲುಬ್ಧಕ** (ನಾ). ೧. ಅತಿಯಾಸೆಯುಳ್ಳವನು ; ಲೋಭಿ ; ಜಿಪುಣ. ೨. ಬೇಟೆಗಾರ ; ಬೇಡ : " ಮೃಗಯುಃ, ಲುಬ್ಧಕಃ, ವ್ಯಾಧಃ, ವಾಗುರಿಕಃ – ಈ ೪ ಮಾವುಲಿಗ " (ಹಲಾಯು. ೯೬-೪೪೨) ; ಲುಬ್ಧಕಾರಣ್ಯಚರಪುಲಿಂದಶಬರಾದಿಪರಿರಕ್ಷಿತಾಂತರಾಲದೇಶಂಗಳುಂ (ಆದಿಪು. ೯-೭೩ ವ) ; ಪಿನಮರ್ದಿದರ್ನೊ . . . ಕಟ್ಟಿಲೆಯ ಮೊತ್ತಮಿದೆಂಬಿನಮೊರ್ವ ಲುಬ್ಧಕಂ (ಶಿಶುಪು. ೫-೯೪). ೩. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಆರನೆಯದು ; ಆರ್ದ್ರ : " ಆರ್ದ್ರಾ, ಲುಬ್ಧಕಃ — ಈ ೨ ಆರ್ದ್ರಾ (ನಕ್ಷತ್ರದ ಪೆಸರ್)" (ಹಲಾಯು. ೯-೪೯) ; " ಕೃಪಣಂ ಶಾಬರರಾರ್ದ್ರಾ ಲುಬ್ಧಕಮೆನಿಕ್ಕುಂ" (ನಾನಾರ. ೧೨೬). [ಸಂ.]

**ಲುಬ್ಧತ್ವ** (ನಾ). ಅತಿಯಾಸೆ ; ಜಿಪುಣತನ. [ಸಂ.]

**ಲುಲಾಯ** (ನಾ). ಕೋಣ : "ಮಹಿಷಃ, ಸೈರಿಭಃ, ರಕ್ತಾಕ್ಷಃ, ಕಾಸರಃ, ಲುಲಾಯಃ – ಈ ೫ ಕೋಣಂ" (ಹಲಾಯು. ೩೬-೭೪); ಭೀಕರತರಮಾಯಿತ್ತಭಂ ವಿಲಯಕಾಲಕರಾಳಲುಲಾಯಸನ್ನಿಭಂ (ಕಂದ್ರಪ್ರ. ೧೦-೯೭) ; ಪೃಥುಳಕಂಧರ ಮೃಗಲುಲಾಯ ರಿತುಮಹಿಷೆಗಳ ನಡುವಿರ್ದುದು (ಶಕಗ. ೫-೩೬). [ಸಂ.]

**ಲುಲಾಯಚ್ಛವಿಕ** (ನಾ). ಕೋಣದ ಬಣ್ಣವುಳ್ಳುದು ; ಅತಿಕಪ್ಪು : ದಹನಬಹಳಧೂಮಂ ಯಮೋಚ್ಚೈರ್ಲುಲಾಯಚ್ಛವಿಕಂ ಕೃಷ್ಣಾದ ಕಾಯದ್ಯುತಿ . . . ಪರ್ಬಿತ್ತಿನೆ ದೆಸೆದೆಸೆಯಂ ಮುಬ್ಬೆ ಪರ್ಬಿತ್ತುಗುರ್ಬಿಂ (ಲೀಲಾವ. ೧೧-೨೭). [ಸಂ.]

**ಲುಲಿತ**, ಲುಳಿತ (ಗು). ೧. ಅಲುಗಾಡಿದ ; ಅಲ್ಲಾಡಿದ ; ಕಂಪಿಸಿದ. ೨. ಕೆದರಿದ ; ಅಸ್ತವ್ಯಸ್ತಗೊಂಡ. ೩. ಚಿಮುಕಿಸಿದ ; ಸಿಂಪಡಿಸಿದ. ೪. ತೊಟ್ಟಿಕ್ಕಿದ ; ಹನಿಸಿದ : ಮನ್ಯುಗದ್ಗದಕಂಠೆಯುಮಶ್ರುಜಲಲುಲಿತಲೋಚನೆಯುಮಾದ ಜಾನಕಿಗೆ ಹನುಮನಿಂತೆಂದಂ (ರಾಮಚಂ. ೧೧-೧೧೧ ವ) ; ಲುಲಿತಜಲಲವಲಲಿತನವಜಲರುಹದಳವಿಸರಲಸಿತವಿಮಳಮರಾಲಾವಲಿಕಲಿತ . . . ಮಂದಮಾರುತಮಹಿತಂ (ರಾಜಶೇ. ೧೧-೭೩). ೫. ಚೆಲುವಾದ ; ಅಂದವಾದ : ಲಲಿತಮಾಗೆಸೆವ ಭಾವಳಿಯ ಪಾತ್ರಂ ಮಾಡಿ ಲುಲಿತಪಿಷ್ಟಪದಾರ್ಥನಿಕರಮಂ ಚೈತ್ಯದಜಗಳೊಲವಿನಿಂ ಪ್ರಾಣಲಿಂಗಕ್ಕೆ ಕೊಟ್ಟು ಪ್ರಸಾದಮನುಂಡು (ಅರಾತ. ೧-೮-೧೧೧). **ಲುಳಿತ** : ಎ. ನಂದನಾವಳಿಗಳಂ ಬಳಸಿರ್ದ ಮದಾಳಿಸಂಕುಲಂಗಳ್ ವಿಷಯಾಂಗನಾಲುಳಿತಕುಂತಳದಂತಿವೊಲೊಪ್ಪಿ ತೋಱುಗುಂ (ಶಂಕರಾ. ೧-೫೩) ; ಸುವರ್ಣಕುಂಭಯುಮಳಮಂ ತರಳತರತರಂಗಲುಳಿತಲಲಿತಫೇನಪಿಂಡಮಂ (ಧರ್ಮಪು. ೧೧-೫೪ ರಗಳೆ). ೨. ಚಿತ್ರರಥನಂದನೆ ತುರಗಖುರಲುಳಿತ . ಧೂಳೀಧೂಸರಮಪ್ಪ ಭವದ್ಗಮನಮಾರ್ಗಮಂ ನೋಡುತ್ತಮಿರ್ದ್ದ (ಕಾದಂಬ. ೨೦೧). ೩. ಮಲಯಪವನಲುಳಿತನಳಿನೀದಳಾವಕುಂಠಿತಮಾದ ಮೆಲ್ಲೆರ್ದೆಯೊಳಮೋರೊರ್ವ ಕಳವಳಿಸಿ (ಕಾದಂಪೂ. ೯೨೭). ೪. ಆನಂದಬಾಷ್ಪಜಲಲುಳಿತನೇತ್ರನಾಗಿ (ಜಗದು. ೩-೨೩ವ) ; ಪ್ರಮೋದಬಾಷ್ಪಜಲಲುಳಿತನಯನಪಾಲೀನನುಮಾಗಿ (ಕಂದ್ರಪ್ರ. ೨-೧೧೭). (ನಾ). ೬. ಅಲ್ಲಾಡುವುದು ; ಅಲುಗಾಟ ; ಕಂಪನ : "ಪ್ರೇಂಖೋಳಿತಂ, ತರಳಿತಂ, ಪ್ರೇಂಖಿತಂ, ಲುಳಿತಂ – ಈ ೪ ಅಲ್ಲಾಡುವುದು" (ಹಲಾಯು. ೦೨೩-೩೦). [ಸಂ.]

**ಲುಲಿತಕುಂತಲೆ** (ನಾ). ಅಲುಗಾಡುವ ಮುಂಗುರುಳುಳ್ಳವಳು : ಸ್ಖಲಿತಗತಿ ಲುಲಿತಕುಂತಲೆ ಪಲಿತನಿಜಗ್ರೀವೆ ಪುಗುತ್ತು ನೋಡಿದಳೊರ್ವಳ್ (ಅಜಿಪು. ೯-೩೬). [ಸಂ. ಲುಲಿತಕುಂತಲಾ]

**ಲುಲಿತಾಳಕಿ**, ಲುಳಿತಾಳಕಿ (ನಾ). = ಲುಲಿತಕುಂತಲೆ : ಅವಳೊಲ್ಪಡೆಗೆನೆರಿಯದಿನಿತಿನಿತಂ ಪಳಿಯಲೀಯದಂತೀವುದು ಮನಮಂ ಕಾಣ್ಬುದು ವಿಟಂ ಸ್ಥಿರನಾಗಿ ಲುಲಿತಾಳಕಿ (ಮುದತಿ. ೧೧-೯೭). **ಲುಳಿತಾಳಕಿ** : ಅಳವಿಗಳಿದೆನ್ನ ಮನದುಮ್ಮಳದಿಂ ಪರಿಣತನೆನಿಪ್ಪ ನೈಮಿತ್ತಿಕನಂ ಲುಳಿತಾಳಕಿ ಬೆಸಗೊಳೆ (ಮಲ್ಲಿಪು. ೪-೨೭) ; ಪೂತವನಮಂ ಲುಳಿತಾಳಕಿ ಎಂದು ನೋಡಿದಳ್ (ಮಾನವಾ. ೨-೩೨೬). [< ಸಂ. ಲುಲಿತಾಲಕಾ]

**ಲುಲ್ಲಿ** (ನಾ). ಒಂದು ಬಗೆಯ ಸಣ್ಣಹುಳು : ಸಮುದ್ರದೊಳಗೆ ಲುಲ್ಲಿಯಂತೆ ಮೃದುಶರೀರವುಳ್ಳದ್ದೊಂದು ಜಂತುವಿರುತ್ತದೆ (ಮುಂಬಯು. ೫-೨೯). [ ? ]

**ಲುಳಿ**, (ನಾ). ೧. ರಭಸ ; ವೇಗ : ಮುಂತೆಯ್ದುವ ಕುಳಿಯ ಘೀಳಿನ [ದ] ಲುಗುವ ಡಮರವನಗ್ಗಿಸಿ ಕೊಡಸುವ . . . ಕರಿಘಟೆ ನೆರದುವು ಬಲದೊಳಗೆ (ಶೀರೀಶ. ೨-೨೬) ; ಲುಳಿಯ ಬಿಲುವಿದ್ಯಾಚಮತ್ಕೃತಿಯುಳವು ಗರುಡಿಯೊಳಲ್ಲದೀ ರಿಪುಬಲಕೆ ತೋಱಿಸಬಹುದೆ (ಕುಮಾ.ರಿ. ೩-೫) ; ಉರುಕೇಶಬಂಧನಂ ವಿಟಜನಕೆ ಬಂಧನಂ ಕರದ ಲುಳಿ ಕಾಮನಾಟಕಕೆ ಲಳಿಲುಳಿ (ಸಮ್ಯ.ಕೌ. ೭-೧೩). ೨. ಕಾಂತಿ ; ಹೊಳಪು : ಬಲಿದಿಂಗಲೀಕ ಸುವರ್ಣರೇಖೆಗಳ ಲುಳಿಯ ಹಂಗನ ಗಱಿಯ ಬಿಗುಹಿನ ಹಿಳುಕುಗಳ ಹೊಗರಂಬು ಕವಿದವು (ಕುಮಾ.ದ್ರೋ. ೫-೦೩) : ಸುಳಿವ ಹಸ್ತದ ಜಾತಿ ಭಾವದ ಬಳಿಯಲಾಡುವ ನೋಟ ನೋಟದ ಲುಳಿಯವೊಲು ತಗೆದತ್ತ ತಿರುಗುವ ಕೊರಳು (ಕೃಭುರಾ. ೪-೫೬). ೩. ಚುರುಕುತನ ; ಲವಲವಿಕೆ : ಈ ಬಲ್ಮೆಯಾ ಲುಳಿಯಾ ಬಿನ್ನಣಾ . . . ಶ್ರೀಚಕದೇವನೊಳ್ ಮೆಱೆಗುಂ (ಶಕರಿ. ೪-೦೪೬).

**ಲುಳಿ**, ರುಳಿ (ನಾ). ಕಾಲಿಗೆ ಧರಿಸುವ ಒಂದು ಬಗೆಯ ಆಭರಣ : ಕಡಗ ಪೆಂಡೆಯ ಕಾಲುಲುಳಿಯ ಮೃಡಶರಣರಿಗುಳಿವದೆ ಇತ್ತು ರುದ್ರಾಣಿ (ಅಮುಗಾಂ. ೭-೩೯) ; ಪದಕದ ಲುಳಿಯ ರವೆಯದ ಕಂಕಣದ . . . ಪೆಣ್ಗಳ ತಂಡವೆಳಸಿದುದಾರತಿವಿಡಿದು (ಕುರಾಶಾ. ೪೦-೭೭) ; ಘೂರಿಕುಮಾರರುಂಟೆಮಗೆ ಪದಕದಂತೆ ಹಾರದಂದದಿ ಲುಳಿಯಂತೆ (ಭರತ. ೯೭-೩೦). **ರುಳಿ** : ಕನ್ಯಾಶಿರೋಮಣಿಯ ಚರಣಗಳಿಗೆಯಂದುಗೆ ಗೆಜ್ಜೆ ರುಳಿದೊಡರನಿಟ್ಟರೊಲಿದು (ಪಪಮೋ. ೨೩-೪೨) ; ಕಾಲ ಸರ್ಪಳಿ ರುಳಿ . . . ಜೋಮಾಲಿಗಳು ಇಂಥ ಮೇಲಾಭರಣನಿಟ್ಟು ಲೋಲ್ಯಾಡುತಲಿ ಚೆಲ್ವಬಾಲೆಯರು ಬರುವ ವಿಶಾಲವೇನೆಂಬೆನೊ (ಜಪಗೀ. ೪೪).

[← ಮರಾ. ರುಳೀ]

**ಲುಳಿತ** ' ಲುಲಿತ ' ನೋ.

**ಲುಳಿತಾಲಕ**, ಲುಳಿತಾಳಕ (ನಾ). ಅಲುಗಾಡುವ ಮುಂಗುರುಳು : ಪದದಿಂದಾ ಲುಳಿತಾಲಕಂಬರೆಗ[ಮಂ]ಗೋಪಾಂಗಮಂ ಪಂಚರತ್ನದಿನಂ

ಗೋಚಿತಮಾಗೆ ನಿರ್ಮ್ಮಿಸಿ (ಕಲ್ಪಾ. ೬೦-೦೩-೩೬; 1117). **ಉಳಿತಾಳಕ** : ಉಳಿತಾಳಕಜಾಳಮಂ ಕೊಡಂಕಗೆ ತೆಗೆದೇೞ್ ನೂಂಕಿ . . . ಒಪ್ಪಿದರೆಂದು ಕಾಂತೆಯರ್ (ಕಾದಂಪು. ೬೦) ; ಸುರಸುಂದರಿಯನಿನ್ನಾಡೆತಂದರೆಂದು ಸುಯ್ಯೊಗೆದಳಿವಲೆ ತಮ್ಮ ಉಳಿತಾಳಕದೊಳ್ತೊಡವಾದುದೆಂಬಿನಂ (ಪುಷ್ಪ. ೦೪-೨೬೬). [ಸಂ. ಉಲಿತಾಲಕ]

**ಉಳಿತಾಳಕ** ' ಉಳಿತಾಲಕ ' ನೋ.

**ಉಳಿತಾಳಕಿ** ' ಉಲಿತಾಳಕಿ ' ನೋ.

**ಉಳಿದಾರ** (ನಾ). ಒಂದು ಬಗೆಯ ಆಭರಣ : ಉಳಿದಾರ ಮುಂಗೈಯ ಮುರಿ ಪೆಂಡೆಯ ತೋಳ ಬಳೆ. . . ಮೆಱೆಯೆ ಬಂಟರ ನೋಡಿ ಕಳುಹಿದ ನಂದು ಕಗ್ಗೊಲೆಗೆ (ಕುಮಾರಾಂ. ೬೩-೪೩) ; ಉಳಿದಾರ ಕಂಠಿಕೆ ಖಡೆಯ ಪೊಂಗಲು ಹೊನ್ನ ಬಳೆಯುತ್ತರಿಗೆ ಚೆನ್ನಸರವ ಕಳುಪು (ಕುಮಾರಾಂ. ೪೨-೨೪).
[ಉಳಿ$_2$ + ದಾರ$_1$]

**ಉಳಿಮನ** (ನಾ). ೧. ಚುರುಕಾದ ಮನಸ್ಸು. ೨. ಆಸಕ್ತವಾದ ಮನಸ್ಸು : ಹಲವು ವಿಧದರ್ಚನೆಗಳಿಂದಿಷ್ಟಲಿಂಗವಂ ಉಳಿಮನದಿ ಪೂಜಿಸಲು ಮೆಚ್ಚಿದಂ ಗೌರೀಶ (ಚಿಹಂ. ೦೬-೦೮) ; ನಳಿನರಿಪುಶಾಲಿಯಿದಿರೊಳ್ ತೋಱೆ ಕಾಣುತಂ ಉಳಿಮನದಿ ಮೆಯ್ಯಿಕ್ಕಿ ಭಕ್ತಿಯಿಂ ತುತಿಸುತಂ (ಚಿಹಂ. ೨೪-೨೬). [ಉಳಿ$_1$ + ಮನ]

**ಉಳಿಯಂಬು** (ನಾ). ವೇಗವಾಗಿ ಚಲಿಸುವ ಬಾಣ : ಅರಸ ಚಿತ್ರವಿಸು . . . ಉಳಿಯಂಬು ಕಣಗಲ ಸರಳುಗೂಡಿಪ್ಪತ್ತು ಸಾವಿರವೆರಡುಸಾವಿರ ವುಳಿದವೀ ನಾರಾಚನಿಕರದಲಿ (ಕುಮಾ.ಕ. ೦೩-೨೦) [ಉಳಿ$_1$ + ಅಂಬು$_2$]

**ಉಳಿಯಾಣ** (ನಾ). ರತ್ನದ ಒಂದು ಬಗೆಯ ದೋಷ (?) : ಆ ಮೂಱರೊಳ್ ಬೇಱೆ ಬೇಱೆ ಅರ್ಕ್ಕರಿಂ ಧರಿಸಿದವರಿಗೆ ಫಲವ ಪೇಳುವೆಂ ಕರ್ಕರಕೆ ಭಿನ್ನವೆಂದೊಡದು ಹುಟ್ಟಿದುದೆಂದು ಅಕ್ಕಜದ ಮೊರಬು ಉಳಿಯಾಣ ಸುನಗಳೆಂದು ಪುಟದೋಷಮೆಂದಿರ್ಪುದು (ರತ್ನಶಾ. ೪-೩). [ ? ]

**ಉಳಿವಡಿಸು** (ಕ್ರಿ). ವೇಗಗೊಳಿಸು : ಕಮಲಜನೇಱಿದನು ರಥವ . . . ತುರಗಪ್ರಸರವನು ಬೋಳೈಸಿ ರಥವನು ದೆಸೆದೆಸೆಗೆ ಹೊಳೆಸಿದನು ಉಳಿವಡಿಸಿದ ಮಹಾರಥವ (ಕುಮಾ.ಕ. ೬-೦೪). [ಉಳಿ$_1$ + ಪಡಿಸು]

**ಉಳಿವಡೆ** (ಕ್ರಿ). ೧. ವೇಗಗೊಳಿಸು : ರಭಸಗೊಳಿಸು : ತುರಗವನು ಬೋಳಯಿಸಿ ವಾಘೆಯ ತಿರುಹಿ . . . ಕೃಷ್ಣ ಪಾರ್ಥನ ರಥವ ಉಳಿವಡೆದ (ಕುಮಾ.ಶಲ್ಯ. ೩-೨) ; ಬಳಿಕ ಶಾರ್ಙ್ಗ ಮಹಾಧನುವನುಜ್ವಲಿತ ಮೌರ್ವಿಯ ನೀವಿ ಬೆರಳಲಿ ಉಳಿವಡೆದು ಬರಸೆಳೆದು ಹೂಡಿದನಾ ಮಹಾಶರವ (ಕೃಷ್ಣರಾ. ೬-೩೦-೪೩). ೨. ಚುರುಕುತನವನ್ನು ಹೊಂದು : ಕೊಂಕು ಬಿಂಕಂಬಡೆಯೆ ಬಿಂಕಂ ಉಳಿವಡೆಯೆ ಉಳಿ ನವಣೆವಡೆಯೆ ಮೆಱೆದು (ಅಶಂಪು. ೨-೨೪ಪ). [ಉಳಿ$_1$ + ಪಡೆ$_1$]

**ಉಳಿವಡೆಸು** (ಕ್ರಿ). ವೇಗಗೊಳಿಸು : ವಾಘೆಯ ಕೊಂಡು ತುರಗವ ತಿರುಹಿ ಉಳಿವಡೆಸುತ್ತ ಪಾರ್ಥಗೆ ಮೋಹೆಯನು ಬೀಸಿ . . . ಎಂದನು ನಗುತ ಮುರವೈರಿ (ಕುಮಾ.ಶಲ್ಯ. ೩-೪೨). [ಉಳಿವಡೆ + —ಇಸು$_3$]

**ಉಳಿವೆರು** 'ಉಳಿವೆಱು' ನೋ.

**ಉಳಿವೆಱು**, ಉಳಿವೆರು (ಕ್ರಿ). ೧. ಕಾಂತಿಯನ್ನು ಪಡೆ ; ಹೊಳಪಾಗು : ನಳಿನಪತ್ರಾಯತೇಕ್ಷಣೆಯಂಗದೇಶದೊಳ್ ಪುಳಿ[ಪಾಠಾಂ. ಬೆಳ]ಸಿದ ಲಾವಣ್ಯ ವನದ ಉಳಿವೆತ್ತು ರತಿಕಾಮ ದೇವರಾಡುವ ಕಾಸುಗಾಳಿಯನೆ ಹೊಕ್ಕುಳೊಪ್ಪಿದುದು (ಕೋಹಕ. ೨೩-೦೪). **ಉಳಿವೆರು** : ೨. ವೇಗವನ್ನು ಹೊಂದು : ಸಡಗರಿಸಿ ಮೆಯ್ಮಳಗೊಂಡು ಉಳಿವೆತ್ತು ನೆಗೆದರ್ದು (ಸಂಸತ. ೨೩-೬). [ಉಳಿ$_1$ + ಪೆಱು$_1$]

**ಲೂಟಿ** (ನಾ). ಕೊಳ್ಳೆ ಹೊಡೆಯುವುದು ; ಸುಲಿಗೆ ; ದರೋಡೆ : ಕದನದೆ ಮುಱಿದಿಕ್ಕಿ ಖಳರಾಯನ ಶಸ್ತ್ರಸದನವ ಹೊಕ್ಕು ಲೂಟಿಯಲಿ ಹದ ವಿಲ್ಲು ಕೋಲ್ಗಳ ಕೈಕೊಂಡು ಬತ್ತೀಸಾಯುಧನಾಗಿ ಪೊಱಮಟ್ಟು ಬಂದ (ಕೋಹಕ. ೦೨-೪೦) ; ಈ ಪುರದೊಳು ಪ್ರಜೆ ಉಳುವಿಲ್ಲ ಲೂಟಿಯು ಬಲುಹ ನೇನೆಂಬೆ (ಚಕೋ. ೨೬೨-೦) ; ಇವರ ಲೂಟಿ, ದರೋಡೆಗಳೆ ಜನತೆಯ ಭೀತಿಗೆ ಮುಖ್ಯ ಕಾರಣವಾಗಿತ್ತು (ದ್ರಾಪಿ. ೧೬೩).

**ಲೂಟಿ ಮಾಡಿಸು** = ಕೊಳ್ಳೆ ಹೊಡೆಯಿಸು ; ಸೂರೆ ಮಾಡಿಸು : ನಿಮ್ಮ ತಂಗಿಯರು ತಮ್ಮಂದಿರು . . . ಬೇಕಾದಾಗ ಕರೆಸಿಕೊಳ್ಳುತ್ತೀರಿ, ಮನೆಯೆಲ್ಲ ಲೂಟಿ ಮಾಡಿಸುತ್ತೀರಿ (ಶುಹಾಗ. ೪೮). **ಲೂಟಿ ಮಾಡು** — ಕೊಳ್ಳೆ ಹೊಡೆ ; ಸೂರೆ ಮಾಡು ; ಸುಲಿ : ತೋಟಿಯಿಂದೊಳಪೊಕ್ಕು ಪುರಗಳೊಳಗೆ ಬಲು ಬೇಟೆಯ ನಾಯ ಪಿಡಿವರು ಲೂಟಿ ಮಾಡುವರು (ಕುಮಾರಾಂ. ೦೦-೩) ; ಶತ್ರುಗಳು ದೇಶದ ಮೇಲೆ ನುಗ್ಗಿ ದೇಶವನ್ನೆಲ್ಲಾ ಸುಟ್ಟು ಲೂಟಿ ಮಾಡುತ್ತಿದ್ದರು (ಶಾಂತ್ಯ. ೨). **ಲೂಟಿಯಾಗು** = ಕೊಳ್ಳೆ ಹೋಗು ; ಸೂರೆಯಾಗು ; ಸುಲಿಗೆಯಾಗು : ಪಕ್ಕದ ಹಳ್ಳಿ ಲೂಟಿಯಾಯಿತು (ಶಿರಾತ. ೪೬). **ಲೂಟಿಯಾಡು** = ಲೂಟಿ ಮಾಡು : ಕೇರಿಕೇರಿಯೊಳು ಪರಿದು ಲೂಟಿಯಾಡಿದರೂರು [ಪಾಠಾಂ. ಮಾಡುತಲೂರು] ಕಿಚ್ಚಿನ ಬೀಡಾಯ್ತು (ಕುಮಾರಾಂ. ೦೦-೪೬) ; ನೀನಾರ ಗಂಡನಂ ಲೂಟಿಯಾಡಲ್ಬಂದೆ ಎಂದು ಚೇಲಾಗ್ರವಂ ಪಿಡಿದೆಳೆಯಲು (ಶೀರಪು.೪-೨೬). [← ಹಿಂ. ಲೂಟ್, ಲೂಟಿ; ಮರಾ. ಲೂಟ್]

**ಲೂಟಿಸು** (ಕ್ರಿ). ಕೊಳ್ಳೆಹೊಡೆ ; ದೋಚು ; ಲೂಟಿಮಾಡು : ಮೇಣಾ ವಧೂಟಿಯರು ಲೂಟಿಸಿದರಖಿಲವಿಟಚಿತ್ತಧನಮಂ (ಕರ್ಣ. II. ೪೪೪ ಪಪುಕ್ತ) ; ಬಾರೆಲೆ ವಿಶಾಲಾಕ್ಷಿ ನಿನಗಹಿತಪತ್ನಿಯಾಗಾರವಂ ಲೂಟಿಸು (ಜನವು. ೬-೨೩); ಹೈದರೆಲ್ಲಿ ಖಾನರು ನಾಜರುಜಂಗರ ಖಜಾನೆ ದ್ರವ್ಯವೆಲ್ಲ ದಿಕ್ಕಾಪಾಲಿಗೆ ಲೂಟಿಸಿ ಕೊಂಡ ಹೋಗುವರಲ್ಲಿ ಕೆಲವರನ್ನು ಹೊಡೆದು (ಹೈದರ. ೨೬). [ಲೂಟಿ + —ಇಸು$_3$]

**ಲೂತಿ, ನೂತಿ$_1$** (ನಾ). ೧. ಒಂದು ಬಗೆಯ ಗುಹ್ಯರೋಗ ; ಗುಹ್ಯವ್ರಣ ; ಭಗಂದರ : "ಲೂತಿ [ಪಾಠಾಂ. ಲೂಕಿ, ಪೂರಿ]ಯೆನಲಾಸನದ ಪುಣ್ಣಕ್ಕು" (ಮಂಗರಾ. ೦೦೪-೩) ; ಸರ್ವ ಮಿಗಿಲೆಂಬಹಂಕಾರೀಕನ್ಯೆಯು ಲೂತಿಯು ಹುಣ್ಣನುಳ್ಳಾತನು (ಪಂಕ್ತಿಪ. ೪-೨೨-೩೦) ; ಪ್ರೀತಿಯಿಂದ ನೀತಿ ಹುಟ್ಟುವುದು ಲೂತಿಯಿಂದ ಗಜ್ಜಿ ಹುಟ್ಟುವುದು (ಗಾದೆ). **ನೂತಿ$_2$**: ೧.ಬಾಳೆ ಹೂವು, ಹುರುಳಿ, ಗೇರ ಹರಳು ಇವೆಲ್ಲಟ್ಟು ಇಳುಹಿ, ಗೇರ ಹರಳು ಮೆಲಲು ನೂತಿ ಮಾಣ್ಗುಂ (ಶಿಪ್ರಪಿ. ೬೩) ; ನಾಡೀವ್ರಣವೇ ನೂತಿ ಎನಿಸಿಕೊಂಬುದು (ವೈದ್ಯಶಾ. II, ೧೨೩); ಎಳೇ ನೀಲಿ. . .ನೂತಿ, ಬಾಯಿಹುಣ್ಣು ಗಂಟಲುಹುಣ್ಣು, ಕಾವುಗಣ್ಣುಗಳಿಗೆ ಇದು ಸಂಜೀವನ (ಪಶು. ೪). ೨. ಒಂದು ಬಗೆಯ ರೋಗ : ' ಕಣ್ಣುನೂತಿ ' ಪರಾ.
[<ಸಂ. ಲೂತಾ = ಚರ್ಮರೋಗ /ತುಳು. ಲೂತಿ = ಚರ್ಮರೋಗ]

**ಲೂತೆ** (ನಾ). ೧. ಜೇಡರ ಹುಳು : "ಲೂತಾಹ್ವಯುವರ್ಣನಾಭಂ" (ಶಬ್ದಮಣಿ. ೪೦-೬) ; ಭದ್ರಾಂಗನೆಂದೆಂಬವನ ಮೇಲೊಂದು ಲೂತೆಯು ಡರಲ್ಕಾ ಮುನಿಯ ಶಿಷ್ಯನಾಲೋಕಿಸುತ್ತೆ ಕೌಶಲ್ಯನೇದಂಬಾಕನದಸೆಳೆದು ಕಡೆಗೆ ಹಾಯ್ಕೆ (ಸಿದ್ಧೇಶ. ೦೨-೦೬). ೨. ಇರುವೆ. ೩. (ಜೇಡರ ಹುಳುವಿನ ಎಂಜಲಿನ ಸಂಪರ್ಕದಿಂದ ಉಂಟಾಗುವ) ಒಂದು ಬಗೆಯ ಚರ್ಮರೋಗ: (ಕ). [ಸಂ. ಲೂತಾ]

**ಲೂನ** (ಗು). ೧. ಕತ್ತರಿಸಿದ ; ಕಡಿದ : ಐರಾವತಕರಲೂನಸಲ್ಲಕೀಶಬಳ ಮುಮಪ್ಪುದಯಗಿರಿಯಿಂ ಸೊಗಯಿಸುವ ಮೂಡಣದೆಸೆಗೆ ವಂದು (ಶುಕಶಾ. ೪-೦೬ ವ); ಏನ ಹೇಳುವೆನುಭಯಬಲದಲಿ ಲೂನನಿವಹದ ಹಯುವ ನಡೆಗೆಡೆವಾನೆಗಳ ಹೊದಱಿದ್ದು ಮುಗ್ಗಿದ ರಥವ ವಾಜಿಗಳ (ಕುಮಾ.ಶಲ್ಯ. ೬-೩). (ನಾ). ೨. ಕತ್ತರಿಸಿದುದು ; ತುಂಡುಮಾಡಿದುದು : "ದಾತಂ ಲೂನಂ ದಿತಮಱಿಗೆ". (ಶಬ್ದಮಣಿ. ೦೦೬-೪೪). ೩. ಕೊಯ್ದುದು;

ಕಟಾವಾದುದು : "ಲೂನಂ ಕೊಯ್ಲು [ಶಾಶಾ. ಕೋಯಲು]" (ಮುಂಗಣಾ. ೦೦೯-೨). ೪. ಬಾಲ. [ಸಂ.]

**ಲೂನವಕ್ಷ** (ನಾ). ಕತ್ತರಿಸಿಕೊಂಡುದರಿಂದುಂಟಾದ ಗುರುತನ್ನು ಎದೆಯಲ್ಲಿ ಹೊಂದಿರುವವನು ; ಪ ಹಿಂದಿನ ಕಾಲದಲ್ಲಿ ವೇಳೆವಾಳಿಗಳು, ಗರುಡರು ಮುಂತಾದವರು ತಮ್ಮ ಒಡೆಯರ ಸೇವೆಗೆ ತಮ್ಮನ್ನು ಒಪ್ಪಿಸಿಕೊಂಡುದರ ಸೂಚನೆಯಾಗಿ ಹರಿತವಾದ ಆಯುಧದಿಂದ ತಮ್ಮ ಎದೆಯ ಮೇಲೆ ಒಂದು ಗುರುತನ್ನು ಮಾಡಿಕೊಳ್ಳುತ್ತಿದ್ದರು : ನೃಪಾಲರ ಮಗನೊ ಮೊಮ್ಮನೊ ನೀನವರ ಬಾಂಧವನೊ ಭೃತ್ಯನೊ ನೂ[ಲೂ]ನವಕ್ಷ [ಶಾಶಾ. ವಕ್ಷ]ನೊ ಬೆರಳ ಬದಗನೊ (ಕುವ್ಯಾ.ಕ. ೨-೬೨). [ಸಂ. ಲೂನವಕ್ಷ]

**ಲೆಂಕ** (ನಾ). ೧. ತನ್ನ ಒಡೆಯನ ಸಲುವಾಗಿ ಪ್ರಾಣಾರ್ಪಣೆಯನ್ನು ಮಾಡುವ ನಿಷ್ಠಾವಂತನಾದ ಆಳು ; ಆಪ್ತ ಸೇವಕ : ಕರ್ಣನ ಲೆಂಕಂ ಪ್ರಾತಿಕಾಮಿಯೆಂಬನುಮಂ . . . ಪೇಟ್ಸಿದ (ಪಂಪಭಾ. ೬-೯ ವ) ; ತತ್ಪಾದಪದ್ಮೋಪಜೀವಿ ಲೆಂಕ ಬೇಣಾಯ್ಯಂ (ಶಾಶಾ. XI-i, ೫೦-೦೪; 1005) ; ಓಡುವಾತ ಲೆಂಕನಲ್ಲ ಬೇಡುವಾತ ಭಕ್ತನಲ್ಲ (ಬಸವ. ೪೪೦). ಸ್ವಾಮಿ ನಿಮ್ಮಡಿಯ ಲೆಂಕರ ಪ್ರಥಮ ಲೆಂಕನೆನಗೀ ಮಾತದೇಕೆ (ತರಿಪು. ೩-೨೨). ೨. ಕಿಂಕರ ; ಭಕ್ತ . ಲೆಂಕನಾಗಲಿ ಕಿಂಕರನಾಗಲಿ ಶರಣನಾಗಲಿ ಸಕಳೇಶ್ವರದೇವರಾರ ಮನದಲ್ಲಿ ಹೊಗಿದ್ದಾನೆಂದೆಱುಂಬಾರದು (ಸಕಳೇ ೦೦-೪೩) ; ಲೆಂಕರ ಬಗೆದಾವರೆಯೊಳ್ ಬೆಂಕದೆ ನೆಲಸಿರ್ಪ ದೇವಂ (ಶೀಶಾಸಂ II, ೩) ; ಇಂಥ ಲೆಂಕನ್ನ ದೇವರು ಕೈ ಬಿಡೋದಿಲ್ಲ (ಶಕಣಾ. ೦೪೯).

[ದೇ.॥ ತುಳು. ಲೆಂಕೆ ; ತೆಲು. ಲೆಂಕ, ಲೇಕ ]

**ಲೆಂಕತನ** (ನಾ). ಊಸತ್ತ್ವ ; ಸೇವಕತನ : ನಿಮ್ಮ ಅಂಕೆಗೆ ರುಂಕೆಗೆ ಶಂಕಿಸಿದೆನಾದರೆ ಎನ್ನ ಲೆಂಕತನಕ್ಕೆ ಹಾನಿ (ಬಸವ. ೭೨೪). [ಲೆಂಕ + – ತನ]

**ಲೆಂಕದಂಡ** (ನಾ). ಲೆಂಕರ ವರ್ಗದ ಜನರಿಗೆ ಅಧಿಕಾರಿಯಾದವನು : ಸೇವಕರ ಮುಖ್ಯಸ್ಥ (?): ಪ್ರಧಾನರುಂ ಪರಿಚಾರಕರುಂ ಪೆರ್ಗಡೆಗಳುಂ ಲೆಂಕದಂಡರುಂ ಸಾಮಂತರುಂ . . . ಪೆರ್ಚಿ ಪೋಗುಮೆಯ್ಯಬಿಯದಂತೆ ರಾಗಿಸಿ ತಮ್ಮೊಳಿಂತೆಂದರ್ (ರಘುಶಾಸ್ತ್ರ. ೬-೨೦೩). [ಲೆಂಕ + ದಂಡ]

**ಲೆಂಕವಳಿ, ಲೆಂಕವಾಳಿ** (ನಾ). =ಲೆಂಕತನ : ಲೆಂಕವಳಿಯೊಳು ವೀರತನಂ ತನಗೆನಿಸಿ ಬೀ[ರ] ಡೊಂಗಿನ ಬಪುವಂ ಕೊಟ್ಟು ಪಡೆದ[ಂ] ಸಗ್ಗದ ಸುಖವನು (ಮೈಆರ. ೦೪೪೩, ೩೩-೩ ; 1217). **ಲೆಂಕವಾಳಿ** : ಕನ್ನೆಯನಾಯಕಂ ಭಯಂಕರ ಗರುಡಂಗೆ ಮಾರ್ಮಲೆದು ಹೊಯ್ದುಮಾರ್ದಪ್ಪಿ ನಿಮಿರ್ಚಿ ತ್ರೋಱಿದು ಬಿರುದರ ಗೋವನುರ್ವರಿಗ ಸೋಮನೃಪಾಳನ : ಲೆಂಕವಾಳಿಯಂ (ಎಕ. I೪, ಕೃಷ್ಣರಾ. ೬-೪೨ ; 1257). [ಲೆಂಕ + – ವಳಿ]

**ಲೆಂಕವಾಳ** (ನಾ). = ಲೆಂಕ ೧ : ಲಿಂಗೋಪಜೀವಿಗಳುಂ ಮಾಸವಾಳರುಂ ಲೆಂಕವಾಳರುಂ . . . ಈಯುವಸರ್ಪಿಣಿಯೊಳಾಚಾರ್ಯರ್ಕಲ್ಪಿಸಿದ ನಿರವದ್ಯಚರಿತರಪ್ಪ ಪಂಚಮಜಾತಿಯುಂ ಕಥಂ ಚಿದ್ದಾನಂಗೊಡಲು ಯೋಗ್ಯರಕ್ಕುಂ (ಶಾಶ.೩೨೦). [ಲೆಂಕ + – ವಾಳ೩ (<–ವಳ)]

**ಲೆಂಕವಾಳಿ** 'ಲೆಂಕವಳಿ' ನೋ.

**ಲೆಂಕಿ**$_1$, ಲೆಂಗಿ (ನಾ). ೧. ಸೇವಕಿ ; ದಾಸಿ : ಲೆಂಕದಂಡರುಂ ಸಾಮಂತರುಂ ಪೌರರುಂ ಲೆಂಕಿಯರುಂ . . . ರಾಗಿಸಿ ತಮ್ಮೊಳಿಂತೆಂದರ್ (ರಘುಶಾಸ್ತ್ರ. ೬-೨೦೩). ೨. (ಸ್ವಾಮಿನಿಷ್ಠನಾದ) ಸೇವಕನ ಹೆಂಡತಿ : ಲೆಂಕರೊಡನೆ ಸಹಗಮನ ಮಾಡಲು ಲೆಂಕಿಯರು ಸಿದ್ಧರಾಗುತ್ತಿದ್ದರು (ಕಶಾಶ. ೩೦೦). **ಲೆಂಗಿ** : ೧. ಒಕ್ಕುದ ಮಿಕ್ಕುದನುಂಡು ಕಿವಿಮಿಡಿದಾಡುವೆ ಶರಣರ ಮನೆಯ ಲೆಂಗಿಯ ಡಂಗರಿಗ ನಾನು (ಬಸವ. ೪೬೦). [ಲೆಂಕ + – ಇ೨]

**ಲೆಂಕಿ**$_2$, ಲೇಕಿ (ನಾ). ೧. ಒಂದು ಬಗೆಯ ಧಾನ್ಯ : ಚೆಣಗಿ ಲೆಂಕಿ ಬಟ್ಟಗಡಲಿ ಕರಿ ಹೆಸರು ಮೊದಲಾದವುಗಳನ್ನು ಕೂಡಿಸಿ ಬಿತ್ತುಚಿಕು (ಕೃಷಿಶ. ೮೦). ಲೇಕಿ: ೨. ನೆಲದ ಮೇಲೆ ಬಿದ್ದಿರುವ ಕಾಳು. – ಧಾನ್ಯ: 'ಲೇಕಿಗ' ಪರಾ. [← ತೆಲು. ಲೇಕಿ]

**ಲೆಂಕಿತಿ** (ನಾ). ೧. ಸೇವಕಿ; ದಾಸಿ: "ಅಸಿಕ್ಕಿ ಎಂಬುದು ಲೆಂಕಿತಿ" (ಶಬಾಮು. ೫೦-೩೩೭). ೨. = ಲೆಂಕಿ$_1$ ೨ : ಲಖಿಯ ನಾಯಕಂ ತಂನ ಹೆಂಡತಿ ಗಂಗಾದೇವಿಯುಂ ಅಯ್ವರು ಲೆಂಕರು ಮೂವರು ಲೆಂಕಿತಿಯರುವೆರಸಿ ಬಾಸೆಯಂ ಪೂರೈಯ್ಸಿದನು (ಎಕ. VI (R), ಕೃಷ್ಣರಾ. ೪೪-೩೭ ; 1291).

[ಲೆಂಕ + – ಇತಿ$_1$ (<–ಇತ್ತಿ)]

**ಲೆಂಕೆ** (ನಾ). ಸೇವಕಿ ; ದಾಸಿ : ಲೆಂಕೆಯನೊಕ್ಕಲಿಕ್ಕುವವೊಲಬ್ಧಿಯಿಱ್ ಲಂಕೆಯನೊಕ್ಕಲಿಕ್ಕಿ ಕೀೞ್ಪಿಂ ಕಡುಪಿಂ ತ್ರಿಕೂಟಗಿರಿಯಂ (ಶಂಗಾಪು. ೦೦-೩೩). [ಲೆಂಕ + – ಎ$_2$]

**ಲೆಂಗಣೆ** (ನಾ). ಜಿಗಿತ ; ಹಾರುವಿಕೆ : ಮೃಗದ ಲೆಂಗಣೆ ಸೋಗೆಯಾಟದ ಸೊಗಸುಗಳನ್ನು ನೋಡುತ (ಕಂಕ. ೨೦-೦೦). [< ಲಂಘನೆ]

**ಲೆಂಗಿ** ' ಲೆಂಕಿ$_1$' ನೋ.

**ಲೆಂಡ** ' ಲುಂಡ$_1$' ನೋ.

**ಲೆಂಡತನ** ' ಲುಂಡತನ' ನೋ.

**ಲೆಂಡು** ' ಲುಂಡ$_1$' ನೋ.

**ಲೆಂಡೆ** ' ಲುಂಡೆ ' ನೋ.

**ಲೆಕ್ಕ**$_1$ ' ಲಕ್ಕ$_2$' ನೋ.

**ಲೆಕ್ಕ**$_2$, ಲೆಖ್ಖ (ನಾ). ೧. ಎಣಿಸುವುದು; ಗಣನೆ : ನುಡಿಯಲಕ್ಕುಮ ಪೂಗಳ ಲೆಕ್ಕಮಂ (ಆದಿಪು. ೦೦-೦೦೩); ಕ್ಷಿತಿಯಂ ಶೋಧಿಸಲಕ್ಕು ವೀಚಿಗಳ ಲೆಕ್ಕಂ ಮಾಡಲಕ್ಕುಂ . . . ಸತಿಯಾ ಚಿತ್ತವಭೇದ್ಯವೈ (ಸೋಮೇಶ. ೮೦); ಕರ್ಣ ದ್ರೌಣಿಗಳ ತಱುವಾಯ ಲೆಕ್ಕಕ್ಕೆ ಸಂದನೈ (ಕುವ್ಯಾ.ಕ. ೨೦-೩೩); ಸರೆ ಚಿತ್ರಗುಪ್ತರ ಲೆಕ್ಕವ ಟಕ್ಕರಿಗೆಳೆದು ಲೆಕ್ಕದೆ ಶೂರರೆನಿಪ ಲುಳಿಯಲಿ ವಾಚಿಸುತಿಹ ಕರಣಿಕಕುಲತಿಲಕರ ಗೃಹವಿರುತಿಹುವು (ಕೆಂಪು. ೬-೪೪). ೨. ಸಂಖ್ಯೆ; ಅಂಕಿ : "ಅಂಕೆ ಸಂಖ್ಯೆಯೆನೆ ಲೆಕ್ಕಮಕ್ಕು" (ಮುಂಗಣಾ. ೦೦೯-೦೦); ಗುಣಾರ್ಣವನೆಂಬು ಲಕ್ಕ ಲೆಕ್ಕದೆ ಕೊಳೆ (ಪಂಪಭಾ. ೬-೨೦); ಬರೆದೆಯ್ದುಱ ಲೆಕ್ಕಮನಾದರದಿಂ ಗುರುಲಘುವಿಭೇದಮಂ ಭಾವಿಸು ನೀಂ (ಛಂದೋಂಬು. ೦-೩೩); ಪಟ್ಟಣದ ಧರ್ಮ್ಮೋತಕ್ಕೆ ಬಿಟ್ಟ ಮತ್ತರು ಪನ್ನೆರಡು ಲೆಕ್ಕದೊಳಂ ೧೨ (ಶಾಶಾ. IX-i, ೦೪೦-೦೯; 1070); ಕುದುರೆಯ ಗಜ ರಥವ ಭೂಪಾಲರಳಿದುಳಿದವರ ಲೆಕ್ಕವನೈದೆ ವಿಸ್ತರಿಸಿ (ಕುವ್ಯಾ.ಕ. ೦-೦೭). ೩. ಅಂಕಗಳಿಂದ ಮಾಡುವ ಗಣಿತ; ಅಂಕಗಣಿತ : ತರ್ಕವ್ಯಾಕರಣಾಗಮ ಕಾವ್ಯ ಛಂದಸ್ಸು ಲೆಕ್ಕವಾದಿಯ ವಿದ್ಯೆ (ರಾಜಶು. ೦-೩೩); ಒಬ್ಬ ಹುಡುಗ ಪುಸ್ತಕದಲ್ಲಿನ ಲೆಕ್ಕಗಳನ್ನು ಮಾಡುವುದನ್ನು ಬಾಯಿಪಾಠ ಮಾಡಿದ್ದನು (ಶ್ಯಾಮೀರ. ೨). ೪. ಆಯವ್ಯಯ; ಜಮಾಖರ್ಚು : ಲೆಕ್ಕಗಳನ್ನು ಬರೆಯುವ ಪ್ರವೃತ್ತಿಯಿರುವ ತರುಣನನ್ನು ವ್ಯವಸಾಯ ಮಾಡುವಂತೆ ನಿಯೋಜಿಸುವುದು ಯುಕ್ತವಲ್ಲ (ಶ್ರೀಹಕಿ. ೬೫). ೫. ವ್ಯವಹಾರದಲ್ಲಿ ಬರೆದಿಡುವ ಕೊಳುಕೊಡೆಯ ಗಣನೆ, _ಆಯವ್ಯಯದ ಗಣನೆ : ಎಲ್ಲಾ ಕರಣಂಗಳಂ ಕರೆಯಿಸಿ ಭಂಡಾರದ ಲೆಕ್ಕಮಂ ನೋಡಿ (ಚಶರ. ೬-೯೯) ೬. ಪರಿಗಣನೆ : ಪೊಟ್ಟಳಿಸಿ ನೆಗಟ್ಚಿಗಾಟಿಸುವ ದುಷ್ಟವಿಯಂ ಕವಿಯೆಂಬ ಲೆಕ್ಕಮೇ (ಪಂಪಭಾ. ೦-೦೨) ; ಕಾಮೆ ತಮ್ಮ ಮನದೊಳ್ ಸರ್ವಜ್ಞರೆಂದಿರ್ಪ ಕಬ್ಬಿಗರುಂ ಕಬ್ಬಿಗರೆಂಬ ಲೆಕ್ಕದೊಳಗೇಂ ಭೂಭೃತ್ಸಭಾಭೂಷಣಂ (ಅರ್ಧನೇ. ೦-೩೭) ; ಲೆಕ್ಕದಲ್ಲಿ ನೀ ಮೊದಲು ಮಾಡಿದ್ದಲ್ಲದೆ ಒಮ್ಮೊನಕ್ಕಿ ವೆಗ್ಗಳವಾಗಿ ಕೊಡುವರುಂಟೆ (ಪ್ರಭುಲಿಂ. ೦-೦೪೯-೩). ೭. ಲೆಕ್ಕಾಚಾರ; ವ್ಯವಹಾರ : ಲೆಕ್ಕದಲ್ಲಿ ಲೋಪಿತವಾದ ವರ್ಗೀಕ ಅಜಾತನ ಸುದ್ದಿ (ಮೋಕ್ಷಶಾ. ೦೨-೪೪). ೮. (ಅಲಂ) ಅಭಿಪ್ರಾಯ; ಅನಿಸಿಕೆ : ಬೆಸಗೊಳ್ಳ ಗುಣಾರ್ಣವನ ಲೆಕ್ಕ [ಶಾಶಾ. ಪಿಂಕ]ಮಂ

ಪೊಕ್ಕಮುಮಂ (ಶಂಕಕಾ. ೨-೩೩) : ಯುಧಿಷ್ಠಿರನಟಮಟಿಸಿ ತಾ ಚುಕ್ಕಿಗಿಕ್ಕುವ ಲೆಕ್ಕ ಲೇಸಾಯ್ತು (ಕುಮಾರವ್ಯಾ. ೨-೩೬). ಲೆಖ್ಖ : ೧. ಕ್ಷೋಣಿಯೊಳ್ಪಗೊಳ್ಪ ಲೆಖ್ಖಗಳೆಲ್ಲಮುಮ್ಮಳಿಪೊಂದಜಿೊಳ್ ಪೇಣಾತಂಗಿದವೊಲ್ (ಅಕ್ಕಾಟ. ೩-೦೦೯). ೪. ಲೆಖ್ಖದ ಪಟ್ಟಿಗಳು ತೀವ್ರ ಕಳೆಸಿಸಲಿಕ್ಕೆ ಕಲವು ಅಡಚಣೆಗಳಿರುತ್ತವೆ (ಮುಂಬಯಿ. ೨೯ ಕ್ರಿಸ್ತ ಶಕ). ೮. ಆ ಲೆಖ್ಖದಿಂದ ಎರಡ್ಲಾ ಕೆಟ್ಟು ಹಾಳಾಯಿತು (ಕಾರಿಮ. ೧೬).

**ಲೆಕ್ಕಕೊಡು, ಲೆಕ್ಕಾಕೊಡು** = ಮಾಡಿದ ಖರ್ಚಿಗೆ ವಿವರವನ್ನು ನೀಡು. —ಕೊಡು : ದೇವರಿಗೆ ಅದರ ಲೆಕ್ಕ ಕೊಡಬೇಕಾದೀತು (ಮುಂಬಯಿ. ೩-೦೮೯); ಯಾರು ಅಡಿ ಆಟಕಾವು ಮಾಡಿ ನಡಸದೆ ಸುಂಕವ ಲೆಕ್ಕಾಕೊಟ್ಟು (ಎಕ. XVI. ಶಿಕ್ಕಪಾ. ೯೦-೨೭; 1802). **ಲೆಕ್ಕದಾಳು** = ಎಣಿಕೆಗೆ ಮಾತ್ರ ಇರುವ ಆಳು ; ಕೆಲಸಕ್ಕೆ ಬಾರದವನು : ತುಳಿಲಾಳ್ಗಳಲ್ಲದೆ ರಾಮನ ಮೆಯ್ಗಾವಲೊಳಗಿಲ್ಲ ಲೆಕ್ಕದಾಳುಗಳು (ಕುಂದಾಣಾಂ. ೯-೦೮). **ಲೆಕ್ಕಪಕ್ಕ, ಲೆಕ್ಕಪೊಕ್ಕ** = ಗಣಿತ, ವ್ಯವಹಾರ ಮುಂತಾದುವು : ಲೆಕ್ಕಪಕ್ಕವನರಿತು ಲೋಕದ ಮಕ್ಕಳಿಗೆ ಮಿಗಿಲಾಗಬೇಕು (ಕೃಷ್ಣಾ.ಕ. ೭-೦೯); ಲೆಕ್ಕಪಕ್ಕಂಗಿಡಲ್ ಕಿಕ್ಕಿರಿದು ಪೊಯ್ದಾಡಿದರ್ (ಶ್ರೀರಾಮಪಟ್ಟಾ. ೩೭೦-೯೭); ಸರಕಾರದಿಂದ ಬಿಟ್ಟುಕೊಡುವಂಥಾ ಶೀಮೆ ಲೆಕ್ಕಪೊಕ್ಕವನ್ನು ಬರೆಸಿ (ರಾಜೇಂದ್ರ. ೦೨೨). **ಲೆಕ್ಕಬಿಡಿಸು** = ಸಮಸ್ಯೆಯನ್ನು ಬಿಡಿಸು : ಸನ್ಯಾಸಿಯು . . . ಏಕಾಗ್ರಮನಸ್ಕನಾಗಿ ಲೆಕ್ಕಬಿಡಿಸುತ್ತಿದ್ದನು (ಇಕ್ಕಿಳ. ೩೯೦). **ಲೆಕ್ಕ ಮಾಡು** = ಗಣನೆ ಮಾಡು ; ಎಣಿಸು : ರಾಜಣ್ಣ ಲೆಕ್ಕ ಮಾಡುವ ವಿಧಾನವನ್ನೆಲ್ಲಾ ತಿಳಿಸಿ ಮೇಲೆ ಬಂದ (ಮರೀ. ೩೮) : ಸ್ವತಂತ್ರವಾಗಿ ಲೆಕ್ಕಮಾಡುತ್ತಿರುವಾಗ ಎಲ್ಲಿ ತಪ್ಪಿರುವಿವೆಂಬುದನ್ನು . . . ಗಮನ ಕೊಟ್ಟಿಲ್ಲ (ಶಿಕ್ಷದ. ೨೬೬). **ಲೆಕ್ಕಹಾಕು** = ೧. ಲೆಕ್ಕವನ್ನು ಮಾಡು ; ಎಣಿಕೆಹಾಕು : ಒಂದುದಿನಕ್ಕೆ ಎಷ್ಟಾಗುವುದೆಂದು ಲೆಕ್ಕಹಾಕಿ ಅದಕ್ಕೆ ಸರಿಯಾಗಿ ನೀವು ಕೊಂಡುಕೊಳ್ಳುವ ಆಹಾರಗಳನ್ನು ನಿಶ್ಚಯಿಸಬೇಕು (ಅಡುಗೆ. ೦೨೩) ; ಅಲ್ಲಿ ಕೂತು ಶಾಂತವಾಗಿ ತಮ್ಮ ಲಾಭ ನಷ್ಟಗಳನ್ನು ಲೆಕ್ಕಹಾಕುತ್ತಿದ್ದರು (ಕಗಹೊ. ೦೦೬). ೨. ಯೋಚಿಸು ; ಊಹಿಸು : ಶಂಕರಪ್ಪ ಲೆಕ್ಕಹಾಕಿದವನಂತೆ ಹೇಳಿದ (ಮಿಚಿಕಿ. ೩); ದೇವರಾಜಒಡೆಯರನ್ನು ಸಿಂಹಾಸನದಿಂದ ಕದಲಿಸುವ ಸಮಯ ಸಮಿಪಿಸಿತೆಂದು ಪಂಡಿತನು ಲೆಕ್ಕಹಾಕಿದ್ದ (ಕರೀದ. ೨೨೩).

[< ಸಂ. ಲೇಖ್ಯ. / ಪ್ರಾ. ಲೇಕ್ಖ. / ತುಳು. ಲೆಖ್ಖ ; ತೆಲು. ಲೆಕ್ಕ]

**ಲೆಕ್ಕಂಗೊಳ್, ಲೆಕ್ಕಗೊಳು** (ಕ್ರಿ). ೧. ಲೆಕ್ಕ ಮಾಡು ; ಎಣಿಕೆ ಮಾಡು : ಶಾರ್ದೂಲಾಭಿಲಮಂಗಳೋಳ್ ತಿರಿಪಿದೀಯುರ್ಕೊಂದ ಲೆಕ್ಕಂಗೊಳಲ್ ಕಾಲಂ ಸಾಲವೆ (ಶಂಕಕಾ. ೯-೨೨) ; ಲೆಕ್ಕಂಗೊಳೆ ಕೊಂಗಬಲಂ ಲಕ್ಕಂಬರ ಮಿರ್ಕುಮೆಂಬರ್ (ಶಕಿದ. ೩-೬೩) ; ಸುದಾ ಮುನ್ನರ ದೇಗುಲಂಗಳೆನಿತೋ ಲೆಕ್ಕಂಗೊಳಲ್ಬರ್ಕುಮೇ (ವ್ಯಕೂಮ. ೨-೦೦೦). **ಲೆಕ್ಕಗೊಳು** : ೨. (ಅಲಂ) ಭಾವಿಸು ; ವಿಚಾರಿಸು : ಸಿಕ್ಕಿದರು ತಮಗೆಂದು ಮನದೊಳು ಲೆಕ್ಕಗೊಳಲಿಲ್ಲ (ಐಕಕೃ. ೪೦-೬೬). [ಲೆಕ್ಕ₂ + ಕೊಳ್₁]

**ಲೆಕ್ಕಗೊಳು** 'ಲೆಕ್ಕಂಗೊಳ್' ನೋ.

**ಲೆಕ್ಕಣಿ, ಲೇಖಣಿ** (ನಾ). ಮಸಿಯಲ್ಲಿ ಅದ್ದಿಕೊಂಡು ಬರೆಯುವ ಚೂಪಾದ ತುದಿಯುಳ್ಳ ಒಂದು ಸಾಧನ; ಲೇಖನಿ; ಟಾಕು (ಉಕ): "ಲೆಕ್ಕಣಿ(ಲೇಖಣಿ)_ಲೇಖನೀ" (ಕದ್ದಕೋ. ೩೯) : ಕೆಂಗಲಿಗನುದಿರ್ಗಾರಿಯ ನೆಲರ ಸೀಗುರಿಯಿಂದು ಮಾರೆತದಂ ಬರೆಯೆ ಲೆಕ್ಕಣಿ ಎಸಗುವನ್ನ (ಗಿರಿಜಾ. ೨೯-೬೨) : ಅವರು ಯಾವ ಶಿಕ್ಷಕನ ಬಗ್ಗೆಯೂ ಲೆಕ್ಕಣಿ ಎತ್ತಿದವರಲ್ಲ (ರಂಗಕೋ. ೬೦). **ಲೇಖಣಿ** : ಹೆಚ್ಚು ಕಡಿಮೆ ಇಂದಿನ ದಬ್ಬಳದಂತೆ ಇದ್ದುದನ್ನು ಲೇಖಣಿಯಾಗಿ ಬಳಸುತ್ತಿದ್ದರು (ಪ್ರಾಚಿಪಿ. ೩೯) ; ಬರೆಯುವ ಕಾಲದಲ್ಲಿ ನನ್ನ ಲೇಖಣಿ ನಿಲ್ಲಲಾರದು (ಪ್ರಾಸಕಿ. ೨). [ಸಂ. ಲೇಖನೀ]

**ಲೆಕ್ಕಣಿಕೆ, ಲಕ್ಕಣಿಕೆ** (ನಾ). ೧. = ಲೆಕ್ಕಣಿ : ತರಲಾಪಾಂಗವಿಲಾಸಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲರ್ ಮುನ್ನಂ ಬರೆದತನುಚರಿತವಿಪಾಗಳ್ ಬರೆದಂತಿರ್ದಪುದು ಮನ್ಮನಃಪುಸ್ತಕದೊಳ್ (ಅಂಕೃ. ೯-೦೯) ; ಧರೆ ಹಲಗೆ ವೃದ್ಧಿಯಾಪುದು ಧರಣಿಯ ಮೇಲಿರ್ದ ಮರನೆ ಲೆಕ್ಕಣಿಕೆ (ಧಂದೋಂಬು. ೦-೩೦ ೩೨೬) ; ಶರಮೊಂದಂ ತೆಗೆದು ನಿಜೋದರದಿಂ ಲೆಕ್ಕಣಿಕೆ ಮಾಡಿ ಗಜಮದ ಮಸಿಯುಂ ತರಿಸಿ ಪತಾಕಾಪಟದೊಳ್ ಬರೆದಟ್ಟಿದನಂಧನೃಪತಿಗಾ ಸಿಂಧುಸುತಂ (ಗದಾಯು. ೬-೨) ; ಮಸಿಯಲ್ಲಿ ಬರೆಯುವುದಕ್ಕಾಗಿ ಲೆಕ್ಕಣಿಕೆಯನ್ನು ಬಳಸುತ್ತಿದ್ದರು (ಕನ್ನಸಂ. ೪೪). ೨. ಚಿತ್ರ ಬರೆಯುವ ಸಾಧನ ; ಕುಂಚ : "ಈಷಿಕಾ, ತೂಲಿಕಾ—೨ ಚಿತ್ರ ಬರೆಯುವ ಲೆಕ್ಕಣಿಕೆ" (ಸಿದ್ದಾಂತಿ. ೬೦೬). **ಲಕ್ಕಣಿಕೆ** : ೨. ಲಕ್ಕಣಿಕೆಯ ಪಿಡಿದೊಸೆದು ಚಿತ್ರಿಗ ಕಣ್ಣಿಕ್ಕಿ ಬರೆವ ಗಂಡುರೂಪ (ಕುರಾಣಾಂ. ೨೭-೬); ಬಟ್ಟತರ ಮಸಿಯು ಗುಳ್ಳೆಯು ಲಕ್ಕಣಿಕೆ ಬಿಳಿಯ ಪತ್ರಂಗಳನು ಪಿಡಿದು (ಪಪಪೋ. ೨೭-೦೯).

[< ಸಂ. ಲೇಖನಿಕಾ]

**ಲೆಕ್ಕತಪಾಸಿಗ** (ನಾ). ಲೆಕ್ಕವನ್ನು ಪರಿಶೀಲಿಸುವವನು : ಲೆಕ್ಕಪರೀಕ್ಷಕ : ಪ್ರತಿವರುಷವೂ ಲೆಕ್ಕತಪಾಸಿಗರಿಂದ ಎಲ್ಲ ಲೆಕ್ಕಪತ್ರಗಳ ಶೋಧನೆ ನಡೆಯುತ್ತಿತ್ತು (ಕವಲು. ೩೪); ಲೆಕ್ಕತಪಾಸಿಗರದೊಂದು ವರ್ಗವೆ ನಿರ್ಮಾಣವಾಗಹತ್ತಿದೆ (ಶಕ್ಕಿಂ. ೬೨). [ಲೆಕ್ಕ₂ + ತಪಾಸು + —ಇಗ]

**ಲೆಕ್ಕಪತ್ರ** (ನಾ). = ಲೆಕ್ಕ ೫ : ಒಡೆಯರು ಆ ಲೆಕ್ಕಪತ್ರದ ಆಯವ್ಯಯಪತ್ರಕದ ಇಲ್ಲವೆ ಲೆಕ್ಕಗಳನ್ನಿಟ್ಟ ಪುಸ್ತಕಗಳ ಬೇಕಾದ ಭಾಗವನ್ನು ನೋಡ ಬಯಸಿದರೂ . . . ಒದಗಿಸಿಕೊಡುವಂತಿರಬೇಕು (ಶಕ್ಕಿಂ. ೬೨); ಲೆಕ್ಕಪತ್ರಗಳ ಗೊಂದಲದಿಂದ ಪಾರಾದ ಮೇಲೆ ಮನಸ್ಸು ಶಾಂತಿಯನ್ನು ಬಯಸುತ್ತಿತ್ತು (ಮರೀ. ೨೯). [ಲೆಕ್ಕ₂ + ಪತ್ರ]

**ಲೆಕ್ಕಪರೀಕ್ಷಕ** (ನಾ). = ಲೆಕ್ಕತಪಾಸಿಗ : "ಕರಣಿಕ, ಲೆಕ್ಕಿಗ . . . ಲೆಕ್ಕಪರೀಕ್ಷಕ" (Accountant. ಇಂಕಿ). [ಲೆಕ್ಕ₂ + ಪರೀಕ್ಷಕ]

**ಲೆಕ್ಕಮಿಡು, ಲೆಕ್ಕವಿಡು** (ಕ್ರಿ). ೧. ಗಣನೆ ಮಾಡು ; ಎಣಿಕೆಹಾಕು : ಅನಿತಿನಿತೆಂದು ಲೆಕ್ಕಮಿ[ಶಾಅಂ.ವಿ]ಡಲಾಸಜಿಯೆಂ ಬನಮಂ ಲತಾನಿಕೇತನ ಕೃತಕಾದ್ರಿಯಂ ಪುಳಿನಮಂ ಕೊಳಸಂ (ಮಲ್ಲಿಕೃ. ೨-೯೩) ; ಅಲ್ಲಿಯ ಸಾರಮಪ್ಪ ಬೆಳಸಂ . . . ಲೆಕ್ಕಮಿಡಲ್ಕಣಮಾಜಿರಂತು ಮತ್ತಲ್ಲಮನೆಯ್ದೆ ಲೆಕ್ಕಿಸಿದೊಡಂ ಮನೆಗೆಯ್ದೆ ಸಲಾಜಿರಂತವಂ (ಜಾರಕೃ. ೯-೦೬). **ಲೆಕ್ಕವಿಡು** : ೨. ಲೆಕ್ಕವನ್ನು ಬರೆ ; ಲೆಕ್ಕಾಚಾರವನ್ನು ಲಿಖಿತದ ಮೂಲಕ ಇರಿಸಿಕೊಳ್ಳು : ಅಂಗಡಿಗಳಲ್ಲಿ ಲೆಕ್ಕವಿಟ್ಟುಕೊಂಡು ಸಾಮಾನುಗಳನ್ನು ಕೊಳ್ಳುತ್ತಾ ಹೋಗುವುದೇನೋ ಸುಲಭ (ಅಡುಗೆ. ೦೨೩).

[ಲೆಕ್ಕ₂ + ಇಡು₁]

**ಲೆಕ್ಕವಣಿಗೆ** (ನಾ). ಲೆಕ್ಕದ ವಿವರ ; ಲೆಕ್ಕಾಚಾರ : ತಂದೊಡಮೆಯ್ಯಂ ದಿದಿರೊಳ್ ಪಿಡಿದಂಗಜಂಗೆ ಲೆಕ್ಕವಣಿಗೆದೋಱುವಂತೆಸೆದು ತೋಱಿದುವಂದಿನ ಬಂದ ಮಾವುಗಳ್ (ಅಕೃ. ೬-೨೯). [ಲೆಕ್ಕ + — ವಣಿಗೆ]

**ಲೆಕ್ಕವಲಗೆ** (ನಾ). ಲೆಕ್ಕ ಬರೆಯುವ ಹಲಗೆ,— ಫಲಕ : ಅದಱಿಂದೊಳಗೆ ಪೂರ್ವಾಪರದಿಗ್ಭಾಗದ ಸಮಭೂತಳಪ್ರದೇಶದೊಳ್ಪೂರ್ವಶಿಲ್ಪಿಕೃತಮಪ್ಪ ಲೆಕ್ಕವಲಗೆಯುಂ ಕಾಡಿಗೆಯೊಳ್ ಪುಟ್ಟಿಸಿ ಪೊಟ್ಟಿಗವಡಿಕೆಯೊಳೊರಸಿದಂತೆ ಮಿಂಚೆ . . . ವಾಹಳಿಗಳ್ ಮನೋಹರಂ (ಶಾಂತಿಪು. ೯-೦೧೩ ವ). [ಲೆಕ್ಕ₂ + ಪಲಗೆ]

**ಲೆಕ್ಕವಿಡು** 'ಲೆಕ್ಕಮಿಡು' ನೋ.

**ಲೆಕ್ಕಾಚಾರ, ಲೆಕ್ಕಾಚಾರ, ಲೆಖ್ಖಾಚಾರ** (ನಾ). ೧. ಎಣಿಸುವುದು ; ಲೆಕ್ಕಮಾಡುವುದು : ನಮ್ಮ ನಮ್ಮ ಜಮ - ಖರ್ಚಿನ ಪುಸ್ತಕದಲ್ಲಿ ಲೆಕ್ಕಾಚಾರ ಸರಿಹೋಗಿರುತ್ತದೆ ! (ಶೀರಪೋ. ೩೬) ; "ಕೊಳ್ಳುವುದಕ್ಕೆ ೧೦.೦೦೦. ರಿಪೇರಿಕೆಲಸಕ್ಕೆ.೧೦.೦೦೦" ಎಂದು ಏಜೆಂಟ್ ಹೇಳಿದಾಗ

ಆ ಲೆಕ್ಕಾಚಾರ ಸರಿಯಾಗಿಯೇ ಕಂಡಿತು (ಯೋರವು. ೨೩). ೨. ನಿಶ್ಚಿತವಾದುದು; ನಿಖರವಾದುದು : ಕಾಲೋಚಿತಸನ್ಮಾರ್ಗದಲ್ಲಿ ನಡೆದವರಿಗೆ ಒಳ್ಳೆಯ ಫಲವು ದೊರೆಯುವುದು ಲೆಕ್ಕಾಚಾರ (ಯುಕ್ಷಶ್ರ. ೦೫೨) ; ಅವನು ಆಡುವ ಮಾತೆಲ್ಲ ಲೆಕ್ಕಾಚಾರದ ಮಾತು (ರೂಅ). **ಲೆಕ್ಕಾಚಾರ** : ೨. ನಮ್ಮ ಗ್ರಾಮದ ಹಣ ಲೆಕ್ಕಾಚಾರ ಪ್ರಕಾರ ಕೊಡಿಯಂತ ಕೇಳಿದಲ್ಲಿ (ಎಕ. VIII, ತಾಸಾ. ೯೬-೦೫; 1646 ?). **ಲೆಖ್ಖಾಚಾರ** : ೧. ಅವನು ತನ್ನ ಲೆಖ್ಖಾಚಾರದಿಂದ ಕ್ರಿ. ಪೂ. ೫೮೫ರಲ್ಲಿ ನಡೆದ ಗ್ರಹಣ ಒಂದನ್ನು ಕುರಿತು ಭವಿಷ್ಯ ನುಡಿದಿದ್ದನಂತೆ (ಕಶ್ಮಶ್ವಾ. ೪).

**ಲೆಕ್ಕಾಚಾರಮಾಡು, ಲೆಖ್ಖಾಚಾರಮಾಡು** = ೧. ಎಣಿಸು ; ಲೆಕ್ಕಮಾಡು : ಅಯನವಲನ(Angle of Position)ವನ್ನು ಲೆಕ್ಕಾಚಾರ ಮಾಡಲು ಅವನು ಅದನ್ನು ಉಪಯೋಗಿಸಿದ್ದಾನೆ (ಕಶ್ಮಶ್ವಾ. ೯೭೭). ೨. ಪೂರ್ವಾಪರವನ್ನು ಪರಿಶೀಲಿಸು ; ಆಲೋಚಿಸು : ಮಗನಿಗೆ ಮದುವೆ ಮಾಡಬೇಕೆಂದು ಯೋಚಿಸಿದರೆ ತಮಗೆ ಪತ್ತಿರದ ನೆಂಟೂ ಗಂಟೂ ಉಳಿಯುವುದನ್ನೆಲ್ಲಾ ಲೆಖ್ಖಾಚಾರವಷಡಿ ಆಮ್ಮೇಲೆ ಜೋಯಿಸರಲ್ಲಿ ಹೆಸರು ಬಲ ಕೇಳುವರು (ಹುಟ್ಟಿಹ. ೦೦). **ಲೆಕ್ಕಾಚಾರಹಾಕು** = ಆಲೋಚಿಸು; ಯೋಚಿಸು : " ಎಂದುಕೊಂಡಳು ತನ್ನಲ್ಲೇ, ಮನಸ್ಸಿನಲ್ಲಿ ಏನೇನೋ ಲೆಕ್ಕಾಚಾರ ಹಾಕಿಕೊಳ್ಳುತ್ತ (ಹೂಕಕ್ಕಿ. ೦೭). [ಲೆಕ್ಕ₂ + ಆಚಾರ]

**ಲೆಕ್ಕಿ** 'ಲೊಕ್ಕಿ₁' ನೋ.

**ಲೆಕ್ಕಿಗ** (ನಾ). ೧. ಲೆಕ್ಕ ಬರೆಯುವವನು ; ಕರಣಿಕ : ಲೆಕ್ಕಿಗಂ ನಡೆನಡೆದು ಕರಣಸಾಲೆಗೆ ಬಂದು ಕುಳ್ಳಿರ್ದು (ಬಸರ. ೩-೬೦); ಜೋಯಿಸಿಗಂ, ಲೆಕ್ಕಿಗಂ (ಕಶಬ್ದ. ೦೯೭ ಶ್ರ ಯೋ) ; ಆ ಕಿರಾತನು ತನ್ನ ಕೆಳದಿಗೂಡಲೆಯ ಲಾಗವರ ಎಳದೊಯಿದಿರಿಸಲಾಗೆಮಧರ್ಮಗುಪುರ್ದರು ತಳು ಮಾಡದಾಗ ಲೆಕ್ಕಿಗರು (ಐಶ್ವ. ೦೨-೩೦) ; ಆ ಸಂಸ್ಥೆಯ ಲೆಕ್ಕಿಗರು ಈ ಎರಡೇ ವರುಷಗಳ ಅಂಕಿಗಳನ್ನಿಟ್ಟಿದ್ದಾರೆ (ಕಶ್ವಿ. ೬೦). ೨. ಜೋಯಿಸ ; ಜ್ಯೋತಿಷಿ : " ಕಲತೆ=ಜೀವಿಗಳ ಆಯುಷ್ಯಮಂ ಎಣಿಸಿದಪಂ . . . ಲೆಕ್ಕಿಗಂ " (ಶಾಕಶ್ಯ. ೦೦೯).

**ಲೆಕ್ಕಿಗರ ಪಿರಿಯ** = ಕರಣಿಕರಲ್ಲಿ ಶ್ರೇಷ್ಠನಾದವನು : ಲೆಕ್ಕಿಗರ ಪಿರಿಯನೆನಿಪಾಂಡಯ್ಯಂ (ಕಬ್ಬಿಅ. ೪). **ಲೆಕ್ಕಿಗರರಸ**=ಲೆಕ್ಕಿಗರ ಪಿರಿಯ : ಒಪ್ಪುವ ಲೆಕ್ಕಿಗರರಸನೊಗೆದನೆಸೆವಾಂತಯ್ಯಂ (ಕಬ್ಬಿಅ. ೦೦) ; ಲೆಕ್ಕಿಗರರಸನಂತೆ ಇವನು ! ಕರಣಿಕಾಗ್ರಣಿಯಂತೆ ! (ಕುಂಗಹ. ೦೯).

[ಲೆಕ್ಕ₂ + – ಇಗ]

**ಲೆಕ್ಕಿಸು₁** 'ಲಕ್ಕಿಸು' ನೋ.

**ಲೆಕ್ಕಿಸು₂** (ಕ್ರಿ). ಎಣಿಕೆ ಮಾಡು ; ಲೆಕ್ಕ ಹಾಕು : "ಎಣ್ಣನೆ ಲೆಕ್ಕಿಪುದುಂ " (ರಶ್ವಕಂ. ೬) ; ಮೇಣಲಸದೆ ಲೆಕ್ಕಿಸುತುಂ ಸಿಳ್ಳೆಲೆಯುಂ ಮಸಗೊಂಡು ಪಜುದೊಡಾದುವು ಕಿಡುಗುಂ (ಲೋಕೋಪ. ೯-೨೭) ; ಗಣಕರು ಲೆಕ್ಕಿಸಲಾಜದ ಬೆಜಗಾಗೆ (ಐಸರ. ೮-೦೨೭) ; ಲೆಕ್ಕಿಪರಾರು ಕಲ್ಲರಗಳ (ಪೋಹಕ. ೦೯-೬೪). [ಲೆಕ್ಕ₂ + – ಇಸು₁]

**ಲೆಕ್ಕಾಚಾರ** 'ಲೆಕ್ಕಾಚಾರ' ನೋ.

**ಲೆಖ್ಖ** 'ಲೆಕ್ಕ₂' ನೋ.

**ಲೆಖ್ಖತನಿಖೆ** (ನಾ). ಲೆಕ್ಕದ ಪರಿಶೀಲನೆ,—ತಪಾಸಣೆ : ಭಾರತದ ಹಣಕಾಸಿನ ಆಡಳಿತಾಧಿಕಾರ – (Controller) ಮತ್ತು ಲೆಖ್ಖತನಿಖೆ ಅಧಿಕಾರಿ . . . ಇವರ ಅಧಿಕಾರ . . . ಈ ಎಲ್ಲ ವಿಷಯಗಳ ಮೇಲೆ ರಾಜ್ಯಾಂಗ ರಚನೆಯಾಗಿದೆ (ಬಿಳಿಶ. ೦೨೭). [ಲೆಖ್ಖ (< ಲೆಕ್ಕ₂) + ತನಿಖೆ]

**ಲೆಖ್ಖಾಚಾರ** 'ಲೆಕ್ಕಾಚಾರ' ನೋ.

**ಲೆಗ್ಗೆ** 'ಲಗ್ಗೆ' ನೋ.

**ಲೆಟಗೆ** 'ನೆಟ್ಟಿಕೆ' ನೋ.

**ಲೆಡ್ಜರ್** (ನಾ). ೧. ವ್ಯಾಪಾರ, ವ್ಯವಹಾರಗಳ ಲೇವಾದೇವಿಯ ಲೆಕ್ಕಗಳನ್ನು ಬರೆದಿಡುವ ಪುಸ್ತಕ ; ಮುಖ್ಯಲೆಕ್ಕದ ಪುಸ್ತಕ ; ವರ್ಗ ; ಹಣಕಾಸಿನ ದಾಖಲೆ : ಲೆಡ್ಜರ್ ಬರೆಯುವ ಅವಾಂತರದಲ್ಲಿ ಕಾಗದವನ್ನು ಒಡೆದು ಓದಿಕೊಂಡ (ಕಾಯಿಕ. ೦೭). ೨. ಒಂದು ಬಗೆಯ ಅಳತೆಯ ಕಾಗದ : ಯಂತ್ರದಲ್ಲಿ ಕಾಗದವನ್ನು ತಯಾರಿಸುವಾಗ 'ಸೈಜ್' ಅನ್ನು ಸೇರಿಸಿ ಬಾಂಡ್, ಲೆಡ್ಜರ್, ಇಂಡೆಕ್ಸ್ ಮೊದಲಾದ ಕಾಗದಗಳನ್ನು ತಯಾರಿಸುವರು (ಮುದ್ರಕ. ೬೦). [← ಇಂ. Ledger]

**ಲೆತ್ತ** 'ನೆತ್ತ₁' ನೋ.

**ಲೆಪ್ಪ** (ನಾ). ೧. ಬಳಿಯುವಿಕೆ ; ಲೇಪನ : " ಲೆಪ್ಪ ಮೊದಲಾಗುಳ್ಳ ಕೆಲಸಮುಂ (ಹ)ಪುಸ್ತಕರ್ಮ ಎಂಬುದು" (ಶಬ್ದಾಯು. ೯೭-೪೩೭) ; ಲೆಪ್ಪದ ಬೊಂಬೆಯನೆರಕಂಬೊಯ್ದೊಪ್ಪಂಬೂಸಿದ ಪುತ್ತಳಿಯುಂ ಬೇಜಾಗಿ ತೋಜುಗುಮಲ್ತೆ (ರಾಚಚಾಕ್ಯ. ೦೦-೦೯). ೨. ಬಳಿಯುವ ದ್ರವ; ಲೇಪನ ಸಾಮಗ್ರಿ : "ಲೆಪ್ಪಮೆನೆ ಲೇಪ್ಯಂ" (ಕಚಿ. ೯೩); ಇಲ್ಲಿಯ ಚಿತ್ರದ ಲೆಪ್ಪದ ಕಾಷ್ಠಕರ್ಮದ ರೂಪುಗಳೊಳೆಲ್ಲಂ (ವಡ್ಡಾರಾ. ೩೩-೭); ಇರುಳ ಲೆಪ್ಪವ ತೊಡೆದ ಕಾಳೋರಗನ ಮನೆಯೊ (ಹಕಶಾ. ೩-೦೭); ಒಪ್ಪಗೆಟ್ಟಾಬುದರುಶನದ ಗತಿ ಮಿತಿವಿಡಿಯ ಲೆಪ್ಪದಲಿ ಸವೆದ ಬಹುಭೂಮಿಯುಲ್ಲ (ಶಿವಗೀ. ೩೩-೨೭೩).

೩. ವಿಗ್ರಹಾದಿಗಳನ್ನು ಮಾಡಲು ಉಪಯೋಗಿಸುವ ಎರಕ : ರುಕ್ಮಿಣೀ ರಮಣಿ ಲೆಪ್ಪದ ಕಲ್ಲ ಪೆಣ್ಣಿ ರೂಪೆನೆ ಮರವಟ್ಟಳ್ (ಜಗಪ. ೦೦-೭೬); ಒಪ್ಪಿದಳ್ ಲೆಪ್ಪದ ಕರುವಿನವೋಲ್ (ದಶಚಿ. ೬-೯೨). ೪. ಮಣ್ಣು, ಮೇಣ, ಎರಕ ಮೊದಲಾದುವುಗಳಿಂದ ಮಾಡಿದ ಗೊಂಬೆ,—ಪ್ರತಿಮೆ : ಸಹಜಮಪ್ಪ ಕಾಂತಿಯೊಳೊಪ್ಪಙಬಿಡಿದು ಲೆಪ್ಪದಂತಿರ್ದ ಮಗನಂ ಗೆಂಟಿನೊಳೆ ಕಂಡು (ಆದಿಂಕಾ. ೬೭೨); ಇದು ಭೂಪನ ರೂಪಿದು ಲೆಪ್ಪದ ರೂಪೆನಲೆಂತುಮಾಟಿಯಲರಿದು (ಶಂಗಪಚ. ೩-೨೬); ಲೆಪ್ಪದುರಗನ ಒಡಿವಡೆಸೆತಕೆ ಗರುಡಮಂತ್ರವೆ (ಕುಮಾರರಾ. ೪-೩೬); ಸುರಗಿಯಿಂದಾ ಲೆಪ್ಪದರಸನ ಉರವನಿರ್ದಿಂಟಿದಳು ಮಿಗೆ ನೆತ್ತರನು (ಶಾಕ್ಯಚಾ. ೦೯-೪೪).

೫. (ಅಲಂ) ಸಂಬಂಧ : ಇಂತೀ ಜೀವದ ದೃಷ್ಟದ ಕಡು ಎನಗಿದೆತ್ತಳ ಸರ್ವಜೀವದಯ ಈ ರಕ್ತದ ಲೆಪ್ಪದ ಬಿಡಿಸಾ ಕಲ್ಲು ಮಣ್ಣು ಮರನಂತೆ (ಸರ್ವವ. ೩೩-೨೯೩). [< ಪ್ರಾ. ಲೇಪ್ಪ. / ಸಂ. ಲೇಪ್ಯ]

**ಲೆಪ್ಪಗಾಜ** (ನಾ). ಲೇಪಿಸುವವನು ; ಬಳಿಯುವವನು : "ಲೇಪಕಃ ಪಳಗಂಚಃ—ಈ ೨ ಲೆಪ್ಪಗಾಜಂ" (ಶಬ್ದಾಯು. ೯೭-೪೩೭).

[ಲೆಪ್ಪ + – ಕಾಜ]

**ಲೆಪ್ಪಾಹಾರ** (ನಾ). [ಜೈನ] ಜೈನಾಗಮದಲ್ಲಿ ಹೇಳಿರುವ ಕರ್ಮಾಹಾರ, ನೋಕರ್ಮಾಹಾರ, ಕಬಳಾಹಾರ, ಲೇಪ್ಯಾಹಾರ, ಓಜಾಹಾರ ಮತ್ತು ಮಾನಸಾಹಾರ ಎಂಬ ಆರುಬಗೆಯ ಆಹಾರದ ಪ್ರಕಾರಗಳಲ್ಲಿ ಒಂದು: ವೃಕ್ಷಂಗಳ್ಗೆ ಲೆಪ್ಪಾಹಾರಮಕ್ಕುಂ (ಶ್ರಾವಕಾ. ೭೨-೬) ; ಈ ಗಾಥಾಸೂತ್ರನಿರೂಪಿತಕ್ರಮದಿಂ ನೋಕರ್ಮಾಹಾರಮುಂ ಕರ್ಮಾಹಾರಮುಂ ಕಬಳಾಹಾರಮುಂ ಲೆಪ್ಪಾಹಾರಮುಂ ಓಜಾಹಾರಮುಂ ಮಾನಸಾಹಾರಮುಂ ಮೆಂದಕ್ಕುಂ . . . ಏಕೇಂದ್ರಿಯನಿಕಾಯಕ್ಕೆ ಲೆಪ್ಪಾಹಾರಮಕ್ಕುಂ (ಕಸಾರ. ೩೦೦). [< ಸಂ. ಲೇಪ್ಯಾಹಾರ ]

**ಲೇ** (ಅ). ಸಂಬೋಧನಾರ್ಥಕ ಅವ್ಯಯ : ಇನ್ನೇನು ಮಾಡಲಿ, ಲೇ (ಏಶ್ವಕ. ೦೦೨). [ < ಎಲೆ₂ ]

**ಲೇಕಿ** 'ಲೆಂಕಿ₂' ನೋ.

**ಲೇಕಿಗ** (ನಾ). (ನೆಲದ ಮೇಲೆ ಬಿದ್ದಿರುವ) ಕಾಳನ್ನು ಆರಿಸಿಕೊಂಡು ತಿನ್ನುವವನು ; (ನೆಲದ ಮೇಲೆ ಬಿದ್ದಿರುವ) ಧಾನ್ಯವನ್ನು ಆರಿಸಿಕೊಂಡು ಜೀವಿಸುವವನು : ನಿನ್ನ ಪಾಕಶಾಲೆಯಲ್ಲಿ ಬಿದ್ದ ಕಾಳ ರಾಶಿ ತಿಂಬ ಲೇಕಿಗನು (ಶಿಶ್ರೋಯು. ೩೦-೦). [ಲೇಕಿ (< ಲೆಂಕಿ₂) + – ಗ₁]

**ಲೇಖ** (ನಾ). ೧. ಬರಹದ ದಾಖಲೆ : ಬರಹ ; ಅವರ ಕೈಯೊಳು ಕೊಟ್ಟು ಲೇಖಾರ್ಥವನರಿದು ನೀವನಿಬರುಂ ಹೇಳುವುದೆನಲು (ಶಶಿ. ೩-೩೪); ಮರ ಸುಲಭವಾಗಿ ಒಡೆದು ಹೋಗುವುದರಿಂದಲೂ ಗೆದ್ದಲು ಮುಂತಾದ ಕೀಟಗಳಿಗೆ ತುತ್ತಾಗುವುದರಿಂದಲೂ ದೀರ್ಘಕಾಲ ಇರಬೇಕಾದ ಯಾವ ಲೇಖಕ್ಕೂ ಅದನ್ನು ಭಾರತೀಯರು ಉಪಯೋಗಿಸಲಿಲ್ಲ ವೆಂದು ತೋರುತ್ತದೆ (ಕನ್ನಸಂ. ೩೬). ೨. ಕ್ರಮವರಿತು ವಿಷಯವನ್ನು ಪ್ರತಿಪಾದಿಸುವ ಬರವಣಿಗೆ : ಲೇಖನ : ಹೀಗೆ ಈ ಎಲ್ಲ ಸಂಗತಿಗಳನ್ನು ಒಟ್ಟುಗೂಡಿಸಿ ಅವಳೊಂದು ಲೇಖ ಬರೆದಳು (ಇತ್ಯ. ೨೩೦); ವೈಜ್ಞಾನಿಕ ವಿಷಯದ ಲೇಖಗಳಿಗೆ ಮೂಲಸ್ಥಾನವೆಂದರೆ ' ಪ್ರಬುದ್ಧಕರ್ಣಾಟಕ ' (ಸುವರ್ಣ. ೨೦೬) ೩. ಬರವಣಿಗೆ ಅಥವಾ ಚಿತ್ರಲೇಖನಕ್ಕೆ ಉಪಯೋಗಿಸುವ ಹಲಗೆ,–ಲೇಖನ ವಸ್ತು : "ಲೇಖಮನ್ನಳಿಕಮದಕ್ಕುಂ" (ಶಂಶ. ೦೦೨). ೪. ದೇವತೆ : "ಆದಿತ್ಯಃ . . . ಲೇಖಃ, ಸುಪರ್ವಾ . . . ದೈವತಂ – ಈ ೨೦ ದೇವರ್ಕಳ ಪೆಸರ್" (ಹಲಾಯು. ೨-೪). ಲೇಖವಲ್ಲಭ ' ಪರಾ. [ ಸಂ. ]

**ಲೇಖಕ** (ನಾ). ೧. ಬರೆಯುವವನು; ಲಿಪಿಕಾರ ; "ಲೇಖಕಃ, ಲಿಪಿಕರಃ – ಈ ೨ ಲೇಖಕಂ" (ಹಲಾಯು. ೯೬-೯೩೨); ಚರಣಂಗಳ್ನಾಲ್ಕುಟೊಳಂ ಪರಿಕಿಸೆ ಕರ್ತಂತೆ ಕವಿಗೆ ಲೇಖಕನಪ್ಪಂಗಿರದಕ್ಕುಮುಪಾಯಂಗಳ್ ಚರಣಾಂತ್ಯ ದೊಳೊಂದುವಂಗೆ ದುಷ್ಕರಮಕ್ಕುಂ (ಛಂದೋಂಬು. ೦-೯೪ ಅಂತರ್ನ ೦೬); ಪ್ರತಿಯೊಂದು ಪಂಚಾಯಿತಿಯಲ್ಲಿಯೂ ಗಣಕ, ಲೇಖಕ ಮತ್ತು ಸಾಧ್ಯಪಾಲ ಎಂಬ ಮೂವರನ್ನು ನೇಮಿಸಿರುತ್ತಿದ್ದರು (ಭಾರತ. ೩೬). ೨. ಸಾಹಿತ್ಯದ ಯಾವುದಾದರೂ ಪ್ರಕಾರವನ್ನು ಬರೆಯುವವನು; ಬರಹಗಾರ; ಗ್ರಂಥಕರ್ತ : ಇಷ್ಟು ಅನುಕೂಲವಾದ ರಾಜಮಾರ್ಗ ದೊರೆತ ಮೇಲೆ ಲೇಖಕರು ಉಳಿದ ಪ್ರಯೋಗಗಳ ಹವ್ಯಾಸವನ್ನು ಬಿಟ್ಟು ಬಿಟ್ಟರು (ಪತಂಶ. II. ೦೨೩೯). ಓದುಗನಿಗೆ ಲೇಖಕನ ಅನುಭವದ ಆನಂದವೂ ಉಂಟಾಗುತ್ತದೆ (ಸ್ವ.ಕಾ. ೪).

**ಲೇಖಕಗಿರಿವಜ್ರ** = ಲಿಪಿಕಾರರೆಂಬ ಬೆಟ್ಟಕ್ಕೆ ವಜ್ರಾಯುಧದಂತಿರುವವನು : ಒಂದು ಬಿರುದು : ಬಿರುದ ಲೇಖಕಗಿರಿವಜ್ರಂ ನಾಗದೇವನ ಲಿಖಿತಂ (ಕಶಾಶ. ೬೦-೨-೦೦೩; 1036). [ ಸಂ. ]

**ಲೇಖಕಿ** (ನಾ). ಸಾಹಿತ್ಯದ ಯಾವುದಾದರೂ ಪ್ರಕಾರವನ್ನು ಬರೆಯುವವಳು,–ರಚಿಸುವವಳು : ರಚನೆಯ ಪ್ರಥಮ ಪ್ರಯತ್ನದ ದೃಷ್ಟಿಯಿಂದ ಲೇಖಕಿಯ ಉದ್ಯಮ ಹೊಗಳತಕ್ಕಂತಹದೇ ಸರಿ (ಇತ್ಯ. ೨೩೨). [ ಲೇಖಕ + – ಇ ]

**ಲೇಖಣಿ** ' ಲೆಕ್ಕಣಿ ' ನೋ.

**ಲೇಖನ** (ನಾ). ೧. ಬರಹ; ಬರವಣಿಗೆ : "ಅಕ್ಷರಂ ಲಿಪಿ ಲೇಖನಂ ಬರಹಂ" (ಚುಂಗರಾ. ೦೦೬-೦೬). ೨. = ಲೇಖ ೨ : ಅನೇಕ ಪ್ರಬಂಧಗಳನ್ನೂ ಲೇಖನಗಳನ್ನೂ ಪ್ರಕಟಿಸಿವರು (ಸಸ್ಯ. ೯೦); ಶಕುಂತಲೆಯ ವಿಷಯದಲ್ಲಿ ಗಮನಾರ್ಹವೆನಿಸಿದ ಕೆಲವಂಶಗಳನ್ನು ವಿವೇಚಿಸುವುದೇ ಈ ಲೇಖನದ ಉದ್ದೇಶ (ಶರ್ಮಾ. ೬೭). ೩. ತಾಳೆಗರಿ. [ಸಂ.]

**ಲೇಖನಕಲೆ** (ನಾ). ಅಕ್ಷರವನ್ನು ಸುಂದರವಾಗಿ ಬರೆಯುವಿಕೆ: ಲಿಪಿಶಾಸ್ತ್ರ : ಲೇಖನಕಲೆಯನ್ನು (Calligrapny) ಕಲಿಸುವ ಶಾಲೆಗಳೂ ಇದ್ದುವು (ಕನ್ನಸಂ. ೨೦). [ ಸಂ. ಲೇಖನಕಲಾ ]

**ಲೇಖನಪದ್ಧತಿ** (ನಾ). (ಯೋಚಿಸಿದ ವಿಚಾರಗಳನ್ನು) ಬರಹದಲ್ಲಿ ಮೂಡಿಸುವ ಪದ್ಧತಿ : ಪಠನಪದ್ಧತಿ (Oral transmission)ಯಿಂದ ಲೇಖನಪದ್ಧತಿಗೆ (Written transmission) ಆದ ಈ ಪರಿವರ್ತನೆ ಕ್ರಮಕ್ರಮೇಣ ನಡೆದಿರಬೇಕು (ಭಾರತ. ೨೪). [ಸಂ.]

**ಲೇಖನಶಾಲೆ** (ನಾ). ಬರವಣಿಗೆಯ ಕೋಣೆ : ಸನ್ಯಾಸಿ ಲಿಪಿಕಾರರು ತಮ್ಮ ಕೊಠಡಿಯಲ್ಲಿ ಅಥವಾ ಕೋಣೆಯಲ್ಲಿ ಕುಳಿತು ಹಸ್ತಪ್ರತಿಗಳನ್ನು ಬರೆಯುತ್ತಿರಲಿಲ್ಲ . . . ಇವರಿಗೆ ಮಠದಲ್ಲಿ ಪ್ರತ್ಯೇಕವಾದ ಕೊಠಡಿಯೊಂದಿತ್ತು; ಅದನ್ನು ಲೇಖನಶಾಲೆ (scriptorium) ಎಂದು ಕರೆಯುತ್ತಿದ್ದರು (ಕನ್ನಸಂ. ೩೦). [ ಸಂ. ಲೇಖನಶಾಲಾ ]

**ಲೇಖನಸಾಮಗ್ರಿ** (ನಾ). ಬರೆಯಲು ಬೇಕಾಗುವ ಲೇಖನಿ, ಮಸಿ, ಕಾಗದ ಮೊದಲಾದ ವಸ್ತುಗಳು : ಎಲೌ ಸಖಿಯರೆ, ಒಂದು ಗೀತಿಯನ್ನು ಆಲೋಚಿಸಿರುವೆನು ; ಲೇಖನಸಾಮಗ್ರಿ ಸಮೀಪದಲ್ಲಿಲ್ಲವಲ್ಲ ? (ಶಾಕುಂತ. ೪೯-೩). [ಸಂ. ಲೇಖನಸಾಮಗ್ರೀ]

**ಲೇಖನಿ** (ನಾ). = ಲೆಕ್ಕಣಿ : ಬಿಳಿಯ ಕಾಗದ ಹೃದಯ ಬಾಯಿ ಕಲಮ ದಾನಿ ನಾಲಿಗೆ ಎಂಬೋದು ಲೇಖನಿಯು (ತ್ರಿಪದಿ. ೨-೦೩-೨) ; ಹರಸೊರೆದ ತೆಱದ ಭಕ್ತರ ಚರಿತಗಳನುಸುರುತಿರಲೊರ್ವ ಮಾಹೇಶನಲ್ಲವೆನೆ ಕೋಪದಿಂ ಮರವಿರೂಪಾಕ್ಷನಂ ಲೇಖನಿಯೊಳಿಟ್ಟು ಶಿವ ಮತ್ತೆ ಪೇಳ್ದಂತುಸುರಲು (ಗುರುಚಾ. ೦೩-೨೩) ; ರಾಯನ ಕತ್ತಿಯಲ್ಲಿಲ್ಲದ ಬಿಸಿಯು ಪೆದ್ದನ್ನನ ಲೇಖನಿಯಲ್ಲಿ ಆವೇಶಗೊಂಡಿದೆ (ಸಾಹಿತ್ಯ. ೯೦). [ಸಂ. ಲೇಖನೀ]

**ಲೇಖರಿ** (ನಾ). = ಲೇಖಕ ೧ : ತಪ್ಪಿರೆ ತಿದ್ದಲ್ಬಲ್ಲಂ ಒಪ್ಪುವ ಪಳೆಗಬ್ಬಗಳುಸಿರ್ದ ಕನ್ನ(ಡ)ಗಬ್ಬದಿ ತಿಪ್ಪಣಾಖ್ಯಂ ಲೇಖರಿಯಪ್ಪಂ ಸೇನಾನಿ ದೇವರಾಯನಿಕಟದೊಳ್ (ಮಂಶಾಸ್ತ್ರ. III. ೩೬೫ ಕ್ರಿ.ಶ.೧೩೩೪). [←ತೆಲು. ಲೇಕರಿ]

**ಲೇಖಲಿಪಿ** (ನಾ). ಒಂದು ಬಗೆಯ ಲಿಪಿ : ಚಕ್ರಲಿಪಿ ಲೇಖಲಿಪಿ ದರ್ಪಣ ಲಿಪಿ . . . ಯಿಾ ಅಗಣಿತಲಿಪಿಗಳನೋದಲಱಿಯದೆ . . . ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲ (ಭಾಸ್ಕರ. ೬೬-೬). [ಸಂ.]

**ಲೇಖವಲ್ಲಭ** (ನಾ). ದೇವತೆಗಳ ಒಡೆಯ ; ಇಂದ್ರ : ಕೂಲಿ ಸೂಡಿದ ಪುಷ್ಪಮಾಲೆಯಂ ದುರ್ವಾಸಲೋಲಮುನಿ ಕುಡೆ ಸಿತವ್ಯಾಲಕುಂಭ ಕೈಟ್ಟೊಡಾ ಲೇಖವಲ್ಲಭನಸ್ಥೂಲಭಾಗ್ಯಂ ಪೋದ ಕಾಲದೊಳು (ಶಾವಿಶಂ. ೩-೦೪). [ಸಂ.]

**ಲೇಖವಾರ್ತೆ** (ನಾ). ಬರಹದಲ್ಲಿರುವ ಸುದ್ದಿ ; ಪತ್ರದ ಅಭಿಪ್ರಾಯ : ಬಾಹುಬಲಿಕುಮಾರನಲ್ಲಿಗಮಾ ಸ್ಥಿತಿಯೊಳೋಲೆಯುಮಂ ದೂತರುಮನಟ್ಟಿದೊಡೆ ಲೇಖವಾರ್ತಾಕರ್ಣನದೊಳತಿಕುಪಿತನುಂ ಸಮರಸನ್ನದ್ಧನುಪವಾಗಿ (ಶಾಪುಂಪು. ೪೬) ; ಸೀತೆಯಲ್ಲಿಗೆ ದೂತರನಟ್ಟುವುದೆಂಬ ಲೇಖವಾರ್ತೆಯಂ ಕೇಳ್ದು (ಶಾಪುಂಪು. ೩೦೩). [ಸಂ. ಲೇಖವಾರ್ತಾ]

**ಲೇಖವಾಹ** (ನಾ). ಪತ್ರಗಳನ್ನು ಒಯ್ಯುವವನು ; ಪತ್ರವಾಹಕ ; ಓಲೆಕಾರ : "ಲೇಖವಾಹಂ ದೂತಂ" (ಪದ್ಯಸಾರ. ೬೦-೩೪) ; ಅಂದಿದಿರೊಳೆ ಲೇಖವಾಹನಿವಹಂ ಬರೆ ಕಂದನಿಳಾಧಿನಾಯಕಂ (ಜಾದಂಲು. ೬೬೬) ; ಉಡೆದೋಲುಂ ಪಣೆಕಟ್ಟುಂ ಮಡಮೋಱಿಸಿ ಮೆಟ್ಟಿದೆಕ್ಕಮದಮುಂ ಕೆಯ್ಯೊಳ್ ಪಿಡಿದಿರ್ದ ಕುಂಚಮುಂ ತನಗೊಡಂಬಡಂಬಡೆಯೆ ಲೇಖವಾಹಾಕೃತಿಯೊಳ್ (ವರ್ಧಮಾ. ೨-೯೩). [ಸಂ.]

**ಲೇಖವಾಹಕ** (ನಾ). = ಲೇಖವಾಹ : ಲೇಖವಾಹಕರ್ ತ್ವರಿತಗತಿ ಸಮೇತಂ ರಾಜಾಧಿರಾಜಂಗೆ ಕೃತಪ್ರಣಾಮರಾಗಿ (ಜಾದಂಲು. ೬೬೪); ಜನಕಂ ದಶರಥನಲ್ಲಿಗೆ ಲೇಖವಾಹಕರನಟ್ಟೆ (ಕಂಠಾಸು. ೪-೯೨ ಪ) ; ಲೇಖವಾಹಕರಂ ಶತಮುಖನಲ್ಲಿಗೆ ಕಟ್ಟುಪುವುದುಂ (ಜಂದ್ರಪ್ರ. ೦೩-೩೩ ಪ). [ಸಂ.]

**ಲೇಖವಾಹನ** (ನಾ). = ಲೇಖವಾಹ : ಲೇಖವಾಹನಂ ಚಂದ್ರವಾಹನಂ ಗುತ್ಸಾಹದಿಂ ವಾರ್ತೆಯಂ ಪೇಟ್ಟುದುಂ (ಸುಕುಮಾ. ೭-೩ ಪ). [ಸಂ.]

**ಲೇಖಾಧುನಿ** (ನಾ). ಸುರನದಿ ; ದೇವಗಂಗೆ (?) : ನರನಾಥ ನೋಡಿ ಲೇಖಾಧುನಿಯ ಸಂತಸಂಬೆರೆದು ಸೌಮಿತ್ರಿಯಂ ಕರವೆಂದನಿರುಳಿರುವವರರೆ ಈ ತಾಣಮತಿರಮ್ಯಕರವಾಗಿದೆಕೊ ನೋಡು ತೀರದ ಬನವನು (ತೊರಾರಾ. ೨-೦೬-೦). [<ಲೇಖ+ಧುನಿ]

**ಲೇಖಿಕೆ** (ನಾ). = ಲೇಖಕಿ : ಅವಳು ಲೇಖಿಕೆ, ಕವಯಿತ್ರಿ, ಭಾಷಣಕಾರ್ತಿ –ಹೀಗೆಲ್ಲ ಆಗಬೇಕೆಂದು ಅವರು ಆ ದಿಸೆಯಲ್ಲಿ ಯಾವಾಗಲೂ ಯತ್ನಿಸುತ್ತಿದ್ದರು (ಸ್ತ್ರೀಶ. ೨೬೯). [ಸಂ. ಲೇಖಿಕಾ]

**ಲೇಖಿತ** (ಗು). ಬರೆಯಲ್ಪಟ್ಟ ; ಬರೆದ. [ಸಂ.]

**ಲೇಖಿಸು** (ಕ್ರಿ). ೧. ಬರೆ ; ಲೇಖನ ಮಾಡು. ೨. ಬರೆಯಿಸು : ಹರನಿಂದಧಿಕ ಹರಿಯೆ ಸರ್ವೋತ್ಕೃಷ್ಟನೆಂದಾಗ ಮಂದಮತಿ ವ್ಯಾಸಪತ್ರಿಕೆಯ ಲೇಖಿಸಿ ಪೊಳಲ ಬಾಗಿಲೊಳ್ಕಟ್ಟಿಸಿದನು (ಕಕುಕ್ಕೂ. ೩-೪-೨೪). ೩. ಚಿತ್ರಿಸು : ತೋಳಿನೊಳೊಜಿಗಿದಿನಿಯಳ ಕರ್ಣಪೂರದೊಳೆಱಿಯು ಕತ್ತುರಿರಸವ ನನೆಮೊನೆಯಿಂದ ಲೇಖಿಸಿದ (ಕಾವ್ಯಶಾ. ೦೬-೦). [ಲೇಖನ + —ಇಸು₃]

**ಲೇಖೀ** (ಗು). ಬರವಣಿಗೆಯಲ್ಲಿರುವ : ಮಹಾಲಕರಿಯ ಲೇಖೀ ಪರವಾನೆಯನ್ನು ಪಡೆಯದೆ ಯಾರೂ ಕಡಿಯಲಾಗದು (ಕಬಾಗ. ಕಂ. ೦೪).

[←ಮರಾ. ಲೇಖೀ]

**ಲೇಖೀದಾಖಲೆ** (ನಾ) ಲಿಖಿತ ದಾಖಲೆ : ನಮ್ಮ ಪ್ರತಿಯೊಂದು ಕೆಲಸಕ್ಕೂ ಲೇಖೀದಾಖಲೆ ಬೇಕು (ಇಂಧ್ರಕಾ. ೦೨೦). [ಲೇಖೀ + ದಾಖಲೆ]

**ಲೇಖೀಹೊಣೆ** (ನಾ). ಲಿಖಿತದ ಮೂಲಕ ಕೊಡುವ ಜಾಮೀನು: ಚೆಕ್ಕಿನ ರಕಮು ವಸೂಲಿಮಾಡುವ ಬ್ಯಾಂಕಿನವರು ಅದರ ಲೇಖೀಹೊಣೆಯನ್ನು ತೆಗೆದುಕೊಂಡರೆ ಚೆಕ್ಕಿನ ಹಣವನ್ನು ಕೊಡಬಲ್ಲೆವು (ಬ್ಯಾಂಕ್ಕ. ೭೦).
[ಲೇಖೀ + ಹೊಣೆ (<ಪೊಣ್ಕೆ₂)]

**ಲೇಖೆ** (ನಾ). ೧. ಬರೆಯುವುದು ; ಬರವಣಿಗೆ. ೨. ಪತ್ರ ; ಕಾಗದ: ಜಟಿಲನಾಯನಾರರು . . . ನಂಬಿಯಾರೂರರ ವಿವಾಹಕ್ಕೆ ಬರುವಂತೆ ಶುಭಲೇಖೆಗಳನ್ನು ಕಳುಹಿಸಿದರು (ಶೂಲಾ. ೨೬). ೩. ಗೆರೆ ; ಸಾಲು ; ಪಂಕ್ತಿ : ಕಡುಗರಿದಪ್ಪ ಲೇಖೆಯದು ಕಾಳಿಕೆ (ರೋಕೋಶ. ೦೦-೮೦) ; ಬಹುಧೂಮಲೇಖೆ ನಿಮಿರ್ದುವು ಮಿಹಿರಾಧ್ವದೊಳಾಂಜನೇಯನೊಡರಿಸೆ ಲಂಕಾದಹನಂ (ಕಂರಾಷಾ. ೦೦-೦೯೩) ; ಡೊಂಕು ಲೇಖೆಗಳೆಲ್ಲ ಚೆಲುವಿನಂಕಿಗೆ ಸಂದು (ಹಕರ. ೦೦). 'ಧೂಮಲೇಖೆ' ಪರಾ. ೪. ಚಂದ್ರಬಿಂಬದ ರೇಖೆ.
[ಸಂ. ಲೇಖಾ]

**ಲೇಖ್ಯ** (ನಾ). ಬರೆದುದು ; ಪತ್ರ ; ಕಾಗದ : "ಓಲೆ ಪತ್ರಮದು ಲೇಖ್ಯಮಕ್ಕು" (ಮಂಗರಾ. ೦೦೩-೦೩) ; ವ್ಯವಹಾರಕಾಂಡದಲ್ಲಿ . . . ಸಾಕ್ಷ್ಯ, ಲೇಖ್ಯ, ದಿವ್ಯ . . . ಪ್ರಕೀರ್ಣ ಎಂಬ ೨೫ ಪ್ರಕರಣಗಳಿವೆ (ಬಾಕರ. ೬೨). [ಸಂ.]

**ಲೇಖ್ಯದೋಷ** (ನಾ). ಬರವಣಿಗೆಯ ತಪ್ಪು – ದೋಷ : ಅಕಾಂತಿ, ವ್ಯಾಘಾತ (=ಅರ್ಥವಿರೋಧ), ಪುನರುಕ್ತ, ಅಪಶಬ್ದ, ಸಂಪ್ಲವ (= ಕೆಟ್ಟಜೋಡಣೆ) – ಇವು ಲೇಖ್ಯದೋಷಗಳು (ಕಶಾಶ. ೪೩). [ಸಂ.]

**ಲೇಜಯ** 'ನೇಜಯ' ನೋ.

**ಲೇಟು** (ನಾ). ತಡ ; ನಿಧಾನ ; ವಿಳಂಬ : ಗಾಡಿ ಎಷ್ಟು ದಿನ ಲೇಟು ? (ಜಾಂಗೇ. ೯೦). [ ←ಇಂ. Late ]

**ಲೇಣದೇಣ** 'ಲೇನದೇನ' ನೋ.

**ಲೇಣೆ** (ನಾ). ಸಾಲ ; ಕಡ : ಸರ್ಕಾರದ ಉದ್ದೇಶಗಳಿಗಾಗಿ ಸಮ್ರಾಟರ ಸ್ವಾಧೀನದಲ್ಲಿಟ್ಟಿದ್ದ ಎಲ್ಲ ಸ್ವತ್ತೂ, ಆಸ್ತಿಯ ರೂಪದ ಲೇಣೆಗಳೂ . . . ರಾಜ್ಯದ ವಶದಲ್ಲಿ ನೆಲಸತಕ್ಕುದು (ಕಾರಾವ.೦೬೪). 'ದೇಣೆ', 'ಲೇಣೆದೇಣೆ' ಪರಾ. [← ಹಿಂ. ಲೇನಾ]

**ಲೇಣೆದೇಣೆ** 'ಲೇನದೇನ' ನೋ.

**ಲೇನು** (ನಾ). ಓಣಿ ; ಗಲ್ಲಿ; ಸಂದಿ : ಆ ರೋಡಿನ ಒಂದು ಲೇನಿನೊಳಗೆ ತಿರುಗಿದನು (ಕಾಜಿರೂ. ೪೬). [← ಇಂ. Lane]

**ಲೇನದೇನ, ಲೇಣದೇಣ, ಲೇಣೆದೇಣೆ** (ನಾ). (ಸಾಮಾನ್ಯವಾಗಿ ಹಣವನ್ನು) ಸಾಲ ತೆಗೆದುಕೊಳ್ಳುವ ಮತ್ತು ಕೊಡುವ ವ್ಯವಹಾರ ; ಲೇವಾದೇವಿ : "ಲೇನದೇನ" ವ್ಯವಹಾರದ ನಿರ್ಭಾಗ್ಯರನ್ನೆಲ್ಲಾ ಜೀವಣ್ಣ ಅಲ್ಲಿಗೆ ಹಿಡಿದು ತರುತ್ತಿದ್ದ (ವಾಕುವ. ೦೦೬). **ಲೇಣದೇಣ :** ಆಯಾ ದಿನ ಲೇಣದೇಣ ಎಲ್ಲಾ ಫೈಸಲ್ ಮಾಡಿಬಿಡುತ್ತೇನೆ (ರಾಂಕ್. ೦೯೨). **ಲೇಣೆದೇಣೆ:** ಬ್ಯಾಂಕುಗಳಂತೆ ತಮ್ಮ ಲೇಣೆದೇಣೆ ಪರಿಸ್ಥಿತಿಯನ್ನು ಪ್ರಕಟಿಸುವುದಿಲ್ಲ (ಹಣಶ್ರ. ೩೨೮) ; ತಮ್ಮ ಸ್ಥಿರ ಚರಾಸ್ತಿಭೂಮಿಕಾಣೆ ಲೇಣೆದೇಣೆಗಳ ವಿವರವಿತ್ತು (ವಾಕುವ. ೨). 'ದೇಣಾಲೇಣ' ಪರಾ.

[←ಹಿಂ. ಲೇನಾದೇನಾ ; ಮರಾ. ಲೇಣದೇಣ]

**ಲೇಪ** (ನಾ). ೧. ಹಚ್ಚುವಿಕೆ ; ಸವರುವಿಕೆ : ನೇಪಾಳದ ಬೀಜವಂ ಗಿರಿಕರ್ಣಿಕೆಯ ರಸದಿಂ ಮರ್ದಿಸಿ ನಾಭಿಗೆ ಲೇಪವ ಮಾಡೆ ಶೀಘ್ರವಿರೇಕಮಕ್ಕು (ಕಳವೈ. ೩೦೪). ೨. ಮುಲಾಮು, ಗಿಲೀಟು, ಸುಣ್ಣ ಮುಂತಾದ ಲೇಪನ ವಸ್ತು : ಕಂದುಬಣ್ಣಕ್ಕೆ ಚಿನ್ನದ ಲೇಪಕೊಟ್ಟಂತೆ ರಂಜಿಸುತ್ತಿತ್ತು (ಕಕುಕ್ಕೂ. ೬-೨೭) ; ಹುಣ್ಣ ಬೇನೆಗೆ ಲೇಪ ಹಚ್ಚಿಸಲೊ ? ಉಪ್ಪಿಡಲೊ ? (ಹಪ್ಪಕ. ೨೨-೩). ೩. ಅಂಟಿಕೊಂಡಿರುವ ವಸ್ತು : ಮಾಪರೇ ಪೋಪರೇ ಪಾಪವೇನದು ಕೆಸಱ ವಿಪಾಪರ ಮೈಯ ಮಲ ಪೋಪುದಾ ಪಾಪ ಲೇಪವಾಗಿಕ್ಕು (ಸರ್ವಜ್ಞ. ೬೨೪). ೪. ಕೊಳೆ ; ಕೊಳಕು : ಜ್ಞಾನಕ್ಕೆ ಲೇಪವಾದವನಿರವು ತುಪ್ಪದ ನಂಜಿದ ಬತ್ತಿಯಂತೆ (ಷೋಕಶೂ. ೪-೦೦). ೫. ಊಟ ; ಆಹಾರ : "ಲೇಪಃ . . . ಸ್ಯಾದಃ —೭ ಭೋಜನದ ಹೆಸರುಗಳು" (ಸಿದ್ಧಾಂತ. ೨೯೦). ೬. (ಆಲಂ) ಸಂಬಂಧ ; ಗೊಡವೆ : ಈಶ್ವರನೊಬ್ಬನಿದ್ದರೆ . . . ಜಗದ್ವ್ಯವಹಾರದಲ್ಲಿ ಅವನಿಗೆ ಆಸಕ್ತಿಯಾಗಲಿ, ಲೇಪವಾಗಲಿ ಇದೆಯೆಂದು ನಿರೀಕ್ಷಿಸಲಾಗುವುದಿಲ್ಲ (ಹುಕ್ಸಾರ. ೯ ಶೀಲಳ).

**ಲೇಪಮಾಡು** = ಬಳಿ ; ಹಚ್ಚು ; ಲೇಪಿಸು : ಶ್ರೀತೊಳಸಿಯನ್ನೂ ನುಗ್ಗೆಬೇರನ್ನೂ ಮಜ್ಜಿಗೆಯಿಂದರೆದು ಲೇಪವಮಾಡೆ ಶೀತಜ್ವರಂ ಮಾಣ್ಗುಂ (ಕಳವೈ. ೭೦). **ಲೇಪಹಾಕು** = ೧. ಮುಲಾಮು ಇತ್ಯಾದಿಯನ್ನು ಬಳಿ. – ಸವರು : ತಲೆ ಒಡೆದವನೂ ಸಮ ಲೇಪಹಾಕಿದವನೂ ಸಮ (ಗಾದೆ). ೨. (ಆಲಂ) ಸಂತೈಸು ; ಸಮಾಧಾನಮಾಡು : ಹೆಂಡತಿ ಅವನ ನೊಂದ ಮನಸ್ಸಿಗೆ ಲೇಪಹಾಕಿದಳು (ಯೋಧಕ್ಕ. ೨೬). [ಸಂ.]

**ಲೇಪಕ** (ನಾ). ೧. ಬಳಿಯುವವನು ; ಲೇಪಿಸುವವನು : "ಲೇಪಕಃ, ವಳಗಂಡಃ – ಈ ೨ ಲಿಪ್ಪಗಾಜಂ" (ಹಲಾಯು. ೯೭-೪೭೭). ೨. ಅಚ್ಚು ತಯಾರಿಸುವವನು ; ಮಾದರಿಯನ್ನು ಮಾಡುವವನು. [ಸಂ.]

**ಲೇಪನ** (ನಾ). ೧. = ಲೇಪ ೧ : "ಲೇಪನಮೆನಲ್ ಪೂಸುವುದೆನಿಕ್ಕು" (ಶಂಗರಾ. ೦೦೦-೨೩) ; ಉಪಚರಿತಲೇಪನಾಳಂಕಾರನುಂ . . . ಆಗಿ (ಕಾದಂಪೂ. ೭೯) ; ದ್ರಾವಕವನ್ನು ಗಂಟಲೊಳಕ್ಕೆ ಲೇಪನ ಮಾಡಿಸಿಕೊಂಡೆ (ಹಂಟಿರು. ೯). ೨. =ಲೇಪ ೨. [ಸಂ.]

**ಲೇಪಾಳ₁** 'ನೇಪಾಲ₁' ನೋ.

**ಲೇಪಾಳ₂** (ನಾ). ಒಂದು ದೇಶದ ಹೆಸರು ; ನೇಪಾಳ : 'ಲೇಪಾಳಿಗ' ಪರಾ. [< ಸಂ. ನೇಪಾಲ]

**ಲೇಪಾಳಿಗ** (ನಾ). ನೇಪಾಳದೇಶದವನು : 'ಲೇಪಾಳಿಗಿತಿ' ಪರಾ.
[ಲೇಪಾಳ₂ + — ಇಗ]

**ಲೇಪಾಳಿಗಿತಿ** (ನಾ). ನೇಪಾಳ ದೇಶದವಳು : ಇತಿಗೆ . . . ಕನ್ನಡಿಗಿತಿ, ಲೇಪಾಳಿಗಿತಿ [ಶಬ್ದಾ. ೪೩] (ಕಮದ. ೨೦೬ ಕೃ ಯೋ).
[ಲೇಪಾಳಿಗ + — ಇತಿ₁ (< — ಇತ್ತಿ)]

**ಲೇಪಿ** (ನಾ). ಲೇಪಿಸಿಕೊಂಡುದು ; ಬಳಿದುಕೊಂಡುದು : ಅವನೀಶ ಕೇಳ್ ಘೃತಂ ಪೊರೆದು ಕೈ ಜಡ್ಡಹುದು ಸವಿಯುಣಬಾರದು ರಸಜ್ಞಂ ಲೇಪಿಯಲ್ಲದಿನಿದಱಯವಂತುಟಪ್ಪೆಯಕ್ಕು (ಕೀಶಪು. ೬-೦೩).
[ಸಂ. ಲೇಪಿನ್]

**ಲೇಪಿತ** (ಗು). ೧. ಬಳಿದ; ಸವರಿದ : ಆಗ ಇವನು ಸೋತು ಧೂಳು ರಕ್ತ ಯಶಸ್ಸಿನಿಂದ ಲೇಪಿತನಾಗಿ ಬರುತ್ತಾನೆ (ಪುರಿಪಾ. ೦೯) (ನಾ). ೨.(ಆಲಂ) ಅಪಯಶಸ್ಸನ್ನು ಹೊಂದಿರುವುದು ; ಅಪಕೀರ್ತಿಯನ್ನು ಹೊಂದಿರುವುದು(?): ಲೆಕ್ಕದಲ್ಲಿ ಲೇಪಿತವಾದವರಿಗೇಕೆ ಅಜಾತನ ಸುದ್ದಿ (ಪೋಲೀಸ. ೦೨–೪೪). [ಸಂ.]

**ಲೇಪಿಸು** (ಕ್ರಿ). ೧. ಬಳಿಯಲ್ಪಡು ; ಲೇಪನ ಹೊಂದು : ಆಗಸವೆಲ್ಲಂ ಸುಧೆಯಿಂದೆ ಲೇಪಿಸಿದುದು . . . ದೆಸೆಯೆಲ್ಲಂ ಚಂದನಾಸಾರದಿಂ ಮುಸುಕಿತ್ತೆಂಬಿನಮೊಂದು ಬೆಳ್ಪಿಳಗು ಪರ್ವಿತ್ತೆಯ್ದೆ ರೋದೋಂತವಂ (ಶಾಂತೀಶ. ೦೦೩). ೨. ಬಳಿ ; ಸವರು : ನಾನು ಪರಿಮಳವ ಲೇಪಿಸುವುದಕ್ಕೆ ಮುನ್ನವೇ ಜಂಗಮಕ್ಕೆ ಸುಗಂಧದ್ರವ್ಯಗಳ ಲೇಪಿಸುವೆ (ಮಹಾದೇ. ೪. ೭೩–೦೮೩) ; ಉಬ್ಬಿದ ಸ್ಥಳಕ್ಕೆ ಅರಿಷಣಬೇರನ್ನು ತೇದು ಲೇಪಿಸಿದಳು (ಶಂಗ.ಓ. ೦೯). ೩. ಅಂಟು ; ಹತ್ತಿಕೊಳ್ಳು : ಲೋಪವಾದರು ಸರಿಯೆ ಕರ್ಮಜ ಪಾಪಪುಣ್ಯಗಳೆರಡು ನಿನ್ನನು ಲೇಪಿಸವು (ಹಕಾರ. ೨೯–೦೦). [ಲೇಪನ + – ಇಸು$_3$]

**ಲೇಪು** (ನಾ). ಅರಳೆ ತುಂಬಿ ಮಾಡಿದ ತೆಳ್ಳನೆಯ ಗಾದಿ : ಬಲದೇವ ಮಂತ್ರಿ ತನ್ನ ಬಾಲೆಯಳಿಗಿತ್ತ ಬಹುತಳಿತ ಹೇಮದ ಮಂಚ ಲೇಪು ಮುಸ್ತೈದ (ಶರಶೀ. ೦೯೭–೩) ; ಮಲಗಿಬಿಡೋಣ ಮೆತ್ತನೆ ಲೇಪಿನ ಮೇಲೆ (ತಿಪಾಂ. ೨೭) ; ಹಂಸತೂಲಿಕಾತಲ್ಪ ಎಂದರೆ . . . ಹತ್ತಿಗೆ ಬದಲಾಗಿ ಅದನ್ನು ಉಪಯೋಗಿಸಿ ತುಂಬಿ ಹೊಲಿದ ಲೇಪು (ಸಾಹಿತ್ಯ. ೩೩). [←ಮರಾ. ಲೇಪ್. / ತೆಲು. ಲೇಪು]

**ಲೇಪ್ಯ** (ಗು). ೧. ಬಳಿದ ; ಲೇಪಿಸಿದ. (ನಾ). ೨. ಬಳಿಯುವ ವಸ್ತು ; ಲೆಪ್ಪ : "ಲೆಪ್ಪಕ್ಕೆ ಲೇಪ್ಯ" (ಶಬ್ದಮ. ೨೬೯). [ಸಂ.]

**ಲೇಲಿಹಾನ** (ನಾ). ೧. ಹಾವು ; ಸರ್ಪ : ಈ ಕರ್ಮುಡುವಿನೊಳ್ ಕಾಳಿಯಮಹಾಸರ್ಪನಿರ್ಪಂ . . . ಈ ಸಮುದ್ಧಾಮಧೂಮಸ್ತೋಮಮಾ ಲೇಲಿಹಾನನಾಭೀಲಹಾಲಾಹಲೋದ್ದಾಮಧೂಮಸ್ತೋಮಂ (ಜಗಪು. ೩–೪೦೫). ೨. ಶಿವ. [ಸಂ.]

**ಲೇಲೆ** (ನಾ). (ಕರಾ) ಒಂದು ಅನುಕರಣ ಶಬ್ದ : ಬೆಳ್ಳಿ "ಲೇ ಲೇಲೆ" ಎಂದು ಹಾಡತೊಡಗಿದಳು (ತೋಟದು. ೬).

**ಲೇಲೆಹಾಕು** = (ಕುಣಿತದ ತಾಳಕ್ಕೆ ಸರಿಯಾಗಿ) 'ಲೇ ಲೇ' ಎಂದು ಹೇಳು : ನಾವು ಹೊಲೆಯರು ನಾಲ್ಕು ಲೇಲೆಹಾಕಿ ಇವತ್ತಾದರೂ ಸ್ವಲ್ಪ ಕುಣಿಯುತ್ತೇವೆ (ದಂಡಿನಾ. ೦೩).

[← ತುಳು. ಲೇಲೆ = ಹೊಲೆಯರ ಒಂದು ಬಗೆಯ ಕುಣಿತ]

**ಲೇವಡಿ$_1$** (ನಾ). ಗೇಲಿ ; ಅಣಕ ; ಕುಚೋದ್ಯ : ಈ ರಂಪ ಲೇವಡಿ ನೋಡ್ದೊ (ಹುಬ್ಬಕ. ೦೬೦) ; ಲೇವಡ ಬೇರೆ ಮಾಡ್ತಾಳೆ ? (ಬಿಷಕಂ. ೬೦)

**ಲೇವಡಿಮಾಡು** = ಗೇಲಿಮಾಡು ; ಅಣಕಿಸು : ಹೊಸಮೇಷ್ಟರು ಅವನನ್ನು ಲೇವಡಿಮಾಡಿದುದರಿಂದ ಅವರ ಪ್ರಾಣ ಆಗಿಹೋಗುವುದರಲ್ಲೇ ಇತ್ತಂತೆ (ಸ್ಮಾರಿಸ್ಕೇ. ೮). **ಲೇವಡಿಯೆಬ್ಬಿಸು, ಲೇವಡಿಎಬ್ಬಿಸು** = ಲೇವಡಿಮಾಡು : ಧರಣಯ್ಯನ ಗೆಳೆಯರು ಅವನನ್ನು . . . ಲೇವಡಿಯೆಬ್ಬಿಸುತ್ತಿದ್ದರು (ಮರಿಶ . ೨೭) ; ನಿನ್ನ ಉಲಿತವನ್ನು ಕೇಳಿದ ಕಾರಿ ಲೇವಡಿಎಬ್ಬಿಸಿದ (ಪಶಿಂತಾ. II. ೦೦೯೦).

[←ತೆಲು. ಲೇವಡ =ದಾರಿದ್ರ್ಯ, ಕಷ್ಟ. / ಮರಾ. ರೇವಡೀ = ಫಜೀತಿ]

**ಲೇವಡಿ$_2$** 'ರೇವಡಿ' ನೋ.

**ಲೇವಣ** 'ನೇವಳ' ನೋ.

**ಲೇವಳ** 'ನೇವಳ' ನೋ.

**ಲೇವಾದೇವಿ** (ನಾ). ಹಣವನ್ನು ಕೊಡುಕೊಳ್ಳುವ ವ್ಯವಹಾರ ; ಹಣದ ಕೊಡುಕೊಳೆಯ ವ್ಯವಹಾರ : ಕಕ್ಷಿಗಾರರಲ್ಲಿ ಪರಸ್ಪರ ಲೇವಾದೇವಿ ನಡೆಯುತ್ತಿದ್ದಲ್ಲಿ . . . ಮೂರು ವರ್ಷಗಳು (ಗ್ರಾಹಕಾಶ. ೦೩೭); ಸಾಲಿಗರು ಲೇವಾದೇವಿಯ ಫೈಸಲಾತಿ ಕ್ರಮಗಳಿಗೆ ಅವನನ್ನೇ ನೇಮಿಸಿದರು (ಶಾರಾಶ. ೪೦).

**ಲೇವಾದೇವಿ ಪತ್ರ**=ಹಣವನ್ನು ತೆಗೆದುಕೊಳ್ಳುವ ಮತ್ತು ಕೊಡುವ ವ್ಯವಹಾರದ ಪತ್ರ : ಲೋಹವನ್ನೂ ನಾಣ್ಯವನ್ನೂ ಬೆಲೆಯನ್ನೂ ಕೊಂಡು ತರುವ ಸಾಲಪತ್ರ, ಲೇವಾದೇವಿಪತ್ರಗಳೂ ಇರುವುವು (ಹಶಕೃ. ೨೬).

[←ಹಿಂ. ಲೇವಾದೇಈ]

**ಲೇವೆ** (ನಾ). (ಕುದುರೆಯ ತಲೆಗೆ ಅಲಂಕರಿಸುವ) ಒಂದು ಬಗೆಯ ಅಲಂಕಾರ ಸಾಧನ ; ತುರಾಯಿ : ಪಸುವಟ್ಟೆಯಪಿವ ಪೊಸಲೇವೆಯಾ ಸುಯ್ಯಣ್ಣ ಕಿಸುಗಲ್ಲ ಕೀಲಣೆಯು ಮೊಗಮುಟ್ಟೆ . . . ತದ್ವಾಜಿಯಾಕಾಶ ದೊಳ್ಳುಸುಮಬಾಣನ ರಥದ ಗಿಳಿಯಂತೆ ವಿಜಯಾರ್ಧಗಿರಿಯ ಬಸದಿಗೆ ಪಾಱಿತು (ಶಬ್ದಶಿ. ೦೦–೬೨) ; ಕುದುರೆಗಳ ಜೀನ ಹಲ್ಲಣ ಲೇ[ಪಾಠಾಂ. ತೀ]ವೆ ಕಬ್ಬಿ ಕಂದದ ಹಕ್ಕರಿಕೆ ಚಬುಕು ಮೊಗರಂಬ ವಾಘೆಗಳ್ (ಕವಿಶಿ. ೯೭–೪೪) ; "ಹೊಲಿದು ಸಿದ್ಧಮಾಡಿದ ಆಸನ" (ಕವಿಶಿ. ೪೦೬).

[ದೇ.॥ ತುಳು. ಲೇವೆ ; ತೆಲು. ಲೇವು]

**ಲೇಶ** (ನಾ). ೧. ತುಂಡು ; ಚೂರು. ೨. ತೀರ ಸ್ವಲ್ಪ ; ಅಲ್ಪ ; ಕೊಂಚ : "ಅಣು ಸೂಕ್ಷ್ಮಂ ಲೇಶಂ ತ್ರುಟಿ ಕಣಂ ಲವಂ" (ಪಕ್ಕ್ತಿಕೋ. ೦೦೭–೩೭); ಉದರವೈರಾಗ್ಯವಿದು ನಮ್ಮ ಪದುಮನಾಭನಲ್ಲಿ ಲೇಶಭಕುತಿಯಿಲ್ಲ (ಪುರಂದ. ೨–೨೫ ಪಲ್ಲವಿ) ; ಸುಖಲೇಶಮುಂ ಸುಳಿಯದತಿಕಠಿನಕ್ಕೆ, ರಾಜಪುತ್ರಿ, ಲತಾಂಗಿ, ನಿನ್ನನೆಂತೊಯ್ದಪೆನ್ ಪೇಳ್ ? (ತ್ರೀರಾಮಪಟ್ಟ. ೬೯–೩೦೫). ೩. ಕಿರಿದು ; ಚಿಕ್ಕದು : "ಸೂಕ್ಷ್ಮಃ, ಲೇಶಃ, ಲವಃ . . . ತ್ರುಟಿಃ – ಈ ೧೫ ಕಿಱಿದು" (ಹಲಾಯು. ೦೦೯–೩). ೪. [ಕಾವ್ಯವಿಮ] ಒಂದು ಬಗೆಯ ಅಲಂಕಾರ ; ಗುಣದಲ್ಲಿ ಸ್ವಲ್ಪ ಅವಗುಣವನ್ನೂ ದೋಷದಲ್ಲಿ ಸ್ವಲ್ಪ ಗುಣಾಂಶವನ್ನೂ ಸೇರಿಸಿ ವರ್ಣಿಸುವುದು : ಗುಣದೊಳಮಱು ಪುವುದಿನಿಸವಗುಣಮಂ ದೋಷದೊಳಮಿನಿಸು ಗುಣಮಂ ತಂದಿರ್ದೆಣಿಸು ವುದು ಲೇಶಮೆಂಬುದು (ಕವಿರಾ. ೩–೦೭೦) ; ಗುಣಮನೆ ತರ್ಪುದು ದೋಷದ ಗಣನೆಗೆ ದೋಷಮುಮದಿನಿಸು ಗುಣಗಣನೆಗೆ ತಂದೊಡಾರ್ಪುದು ಲೇಶಂ (ಕಾವ್ಯಾವ. ೭೩೯). [ಸಂ.]

**ಲೇಶಾಲಂಕಾರ** (ನಾ). = ಲೇಶ ೪ : ಮರಳಿ ಗುಣದಲಿ ದೋಷ ದೋಷದಲಿ ಗುಣ ತೋಱೆ ಹರುಷದಿ ಲೇಶಾಲಂಕಾರ (ಕುವಲಂ. ೦೩೯). [ಸಂ.]

**ಲೇಶ್ಯ** (ನಾ). ೧. = ಲೇಶ್ಯೆ ೨ : ಪರಮಾಯುವಿಂದವಧಿಯಿಂ ಸಾಮರ್ಥ್ಯದಿಂ ಲೇಶ್ಯದಿಂ[ಪಾಠಾಂ. ಶ್ಯೆಯಿಂ] . . . ಅಮರತ್ವಂ ಹೇಯ ಮಾದೇಯಮೇ (ಪುಣ್ಯಶ್ರ. ೦೩–೦೨೨) ; ಅಂತರಾತ್ಮನ ಸಹಜಜ್ಞಾನ ಸ್ಫೂರ್ತಿಯು ಕೆಲವು ವೇಳೆ ವಿಚಿತ್ರವಾದ ಸೌಂದರ್ಯವನ್ನು ಹೊಳಪನ್ನು ಉಳ್ಳುದಾಗಿಯೂ ಕೆಲವುವೇಳೆ ವಿಕಾರವಾದ ಲೇಶ್ಯಗಳಿಂದ ಎಳೆಯಲ್ಪಟ್ಟಂತಾಗಿಯೂ ಆಂದೋಲನಗೊಳ್ಳುವುದು (ಶ್ರವಿಂದ. ೦೩೪). ೨. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : ಅರಿಷಡ್ವರ್ಗಾದ್ರು ಲೇಶ್ಯ ಜೀವಂ ದ್ರವ್ಯಂ . . . ಆಱಱ ನಾಮಂ (ವ್ಯವಹಾ. ೯–೬). [ಸಂ.]

**ಲೇಶ್ಯಾವಿಶುದ್ಧಿ** (ನಾ). [ಜೈನ] "ಲೇಶ್ಯೆಯು ಹೆಚ್ಚು ಹೆಚ್ಚು ಮಂದವಾಗುತ್ತ ಹೋಗಿ ಅದು ಇಲ್ಲವಾಯಿತೆಂದರೆ ಅದು ಲೇಶ್ಯಾ ವಿಶುದ್ಧಿ. ಹದಿನಾಲ್ಕನೆಯ ಗುಣಸ್ಥಾನದಲ್ಲಿ ಲೇಶ್ಯೆಯು ಸಂಪೂರ್ಣ ನಷ್ಟವಾಗಿರುತ್ತದೆ. ಆ ಸ್ಥಿತಿಯೇ ಲೇಶ್ಯಾವಿಶುದ್ಧಿ" (ಅಂತಿ. ಕ್ಲಿಷ್ಟ ಶಬ್ದಾರ್ಥಾವಳಿ ಶಬ್ದಕೋಶ) : ಜ್ಞಾನಾದಿ ಪರಿಣಾಮಂಗಳೊಳ್ ನಿರತಿಶಯ ಲೇಶ್ಯಾವಿಶುದ್ಧಿಯಂ ತಾಳ್ದಿ (ಅಂತಿ. ೦೦–೦೯ ವ). [ಸಂ.]

**ಲೇಶ್ಯಾಶುದ್ಧಿ** (ನಾ). = ಲೇಶ್ಯಾವಿಶುದ್ಧಿ : ಅಂದು ಪೊಱಗಣೊಳಗಣ ರಡುಂ ಲೇಶ್ಯಾಶುದ್ಧಿಯಂ ತಾಳ್ದಿ (ಶಾಂತಿತಿ. ೯–೩೩ ವ). [ಸಂ.]

**ಲೇಶ್ಯೆ** (ನಾ). ೧. ಬೆಳಕು; ಕಾಂತಿ. ೨. [ಜೈನ] "ಆತ್ಮವು ಯಾವುದರ ಮುಖಾಂತರ ಪುಣ್ಯ, ಪಾಪಗಳಿಗೆ ಅಧೀನವಾಗುವುದೋ ಅದಕ್ಕೆ ಲೇಶ್ಯಾ ಎಂದು ಹೇಳುವರು" (ಜೈನಶ. ೨೯೬): ಗತಿ ಮೆಯ್ವೆತ್ತ ಕಷಾಯಲಿಂಗತತಿ ಮಿಥ್ಯಾದರ್ಶನಜ್ಞಾನಮಪ್ರತಿಮಾಸಂಯುತೆ ತಾನಸಿದ್ಧತೆ ನಿಕಾಂತಂ ಲೇಶ್ಯೆಯೆಂದಿರ್ಪತೊಂದುತೆಱ (ಸುಕುಮಾ. ೯೦-೭); ಲೇಶ್ಯಾನುವಾದದಿಂ ಆಱುಲೇಶ್ಯಾವರ್ಗಂ ಮೂಱುಸಮ್ಯಕ್ತ್ವಮುಮಕ್ಕುಂ (ತತ್ತ್ವಾ. ೦೨). [ಸಂ. ಲೇಶ್ಯಾ]

**ಲೇಸಯ್ಯ** (ನಾ). ಒಬ್ಬಾತನ ಹೆಸರು: ನೆಗೞ್ದ ಗುಣಾಂಕ ಮಾರ್ಬಲ ಧೀರಂ ಶ್ರೀಮತ್‌ಲೇಸಯ್ಯ (ಎಕ. V, ಕನ್ನರ. ೨೬೭-೦೨; 971). [ಲೇಸು$_1$ + ಅಯ್ಯ$_1$]

**ಲೇಸಿಗ** (ನಾ). ಹಿತವಾದುದನ್ನು ಬಯಸುವವನು; ಒಳ್ಳೆಯದನ್ನು ಹಾರೈಸುವವನು: ಪಶು ಸಾವುತ್ತ ತನ್ನ ಶಿಶುವಿಂಗೆ ಏನ ಗಳಿಸಿ ಕೊಟ್ಟಿತ್ತು . . . ಆರು ಸತ್ತರೂ ಲೇಸಿಗರಿಲ್ಲ ತಮ್ಮತಮ್ಮಷ್ಟಕ್ಕೆ ಲೇಸಿಗರೆಲ್ಲರೂ (ಸರ್ವಜ್ಞ. ೦೬-೬೭). [ಲೇಸು$_1$ + — ಇಗ]

**ಲೇಸು$_1$** (ನಾ). ೧. ಒಳ್ಳೆಯದು; ಹಿತವಾದುದು: ನಿಮ್ಮಡಿ ಕೊಲೆ ಸಾವುದು ಲೇಸಲ್ತೆ (ಶಂಕಥಾ. ೦೦-೩೦); ಲೇಸ ಕಂಡು ಮನ ಬಯಸಿ ಬಯಸಿ ಆಸೆ ಮಾಡಿದೊಡಿಲ್ಲ (ಬಸವ. ೨೩); ಕರ್ಣಂಗೆ ಸಾವಿನ ಸುಖಗಳೇ ಲೇಸೆನುತ ಕೈಕೊಂಡೆಚ್ಚನಾ ಭೀಮು (ಕುಮಾ.ಭಾ. ೦೩-೩೩). ೨. ಮಂಗಳಕರವಾದುದು; ಶುಭಕರವಾದುದು; ಶ್ರೇಯಸ್ಸು: ಕಿಡದ ವಿಧಾನಮನುಳ್ಳ ಇವು ಲೇಸುಗಳ್ಗೆ ಬಟ್ಟೆಯೆನಿಸುವುದು (ಶಂಕಶಂ. ೬೩-೦); ದೇವರ್ಕಳಂ ತುಂಬಿಯುಂ ತಿಳಿಯಲ್ ಸ್ವಪ್ನದಿ ಲೇಸಲ್ತೆ (ಸೋಮೇಶ. ೬೯). ೩. ದೃಢವಾದುದು: ಇರೆ ಶುಭಗ್ರಹಮಾ ಮರಂ ಲೇಸಕ್ಕುಂ (ಜಾತಕ. ೯-೦೭). ೪. ಶುಭಕಾರ್ಯ; ಮಂಗಳಕಾರ್ಯ: ಮದುವೆ ಮುಂಜಿ ಮೊದಲಾದ ಲೇಸುಗಳಲ್ಲಿ ಶೇಷನ ವಾಲಗಕ್ಕೆ ಒಂದು ವೈಭವದ ಸ್ಥಾನವೇ ಇತ್ತು (ಕಂಬಳು. ೦೦೨). ೫. ಉತ್ತಮವಾದುದು; ಶ್ರೇಷ್ಠವಾದುದು: "ನಿಗರ,ನೆಟ್ಟೆ . . . ಲೇಸು, ಒಳ್ಪು, ಕಣ್ಗೆವಂದುದು, ಪರಿವಡೆದುದು — ಈ ೧೪ ಮನೋಹರಂ" (ಶಶಾ. ೩೩-೨೦೦); ಎಸ್ನಾಳ್ವ ಮಂಡಳಂಗಳೊಳ್ ಪುಟ್ಟಿದ ಲೇಸ[ಪಾಠಾಂ. ದೊಳ್ಕಿತ]ಪ್ಪ ವಸ್ತುವಾರ್ಗಕ್ಕುಂ (ವಡ್ಡಾರಾ. ೦೦೩-೨೯). ೬. (ಸಂಭೋಗದ)ಸುಖ — ಸಂತೋಷ: ಭಾಷೆಗೆ ತಪ್ಪದ ಬಂಟ ಲೇಸಿಗೆ ಪೊದಗದ ಸ್ತ್ರೀ ವ್ರತದ ದೆಸೆಯುಸಜಿಯದ ಆಚಾರ . . . ಭಾಸಿಯುಪುಂತಾಯಿತ್ತು (ಐರಾವ. ೦೩); ಬೇಟದೊಳ್ ಬರಿದು ಕೂಟದೊಳರಲ್ದು ಲೇಸಿನೊಳ್ ವಾಸನೆವಡೆದು (ಅನಂತಪು. ೨-೨೦ ವ); ಲೇಸುದಟ್ಟಿದ ಮನ ಹೊಸಮೋಹ ಮತ್ತವರಾ ಸೆಜ್ಜೆವನೆಯೊಳು ಮಾಳ್ಪ ಲೇಸನವರೆ ಬಲ್ಲರ್ (ಭರತ. ೪೨-೦೫೨). ೭. ಒಳ್ಳೆಯ ಕೆಲಸ; ಪುಣ್ಯಕಾರ್ಯ: ಹಿಂದಿನ ಜನುಮದಲಿ ಏನದೋ ಲೇಸನು ಮಾಡಿ ಇಂದು ನಿಮ್ಮಡಿಗೆ ಎಱಗಿದೆನು (ಸರ್ವಜ್ಞ. ೦೦೬).

**ಲೇಸುಲೇಸು** (ದ್ವಿರುಕ್ತಿ): ಲೇಸುಲೇಸಿದು ತಮ್ಮನಾಡಿದ ಭಾಷೆ ಬಾಹಿರವಾಗಬೇಡ (ಕುಮಾ.ಭಾ. ೦೭-೦೦); ಲೇಸು, ಲೇಸು! ನೀರಿಳಿಯುವ ಗಂಟಲೊಳ್ ಕಡುಬುಂ ತುಱುಕಿದಂತಾಯ್ತು (ರಾಜಶೇ. ೬-೯). **ಲೇಸನಾಡು** = ಒಳ್ಳೆಯದನ್ನು ಹೇಳು: ಲೇಸನಾಡಿದೆ ಕರ್ಣ ನಿನಗಿನ್ನೈಸಲೇ ಸಾರಥಿಯ ಕೊಱತೆ (ಕುಮಾ.ಭಾ. ೩-೯). **ಲೇಸಲ್ಲರ್** = ಅಹಿತರು; ಶತ್ರುಗಳು: ಲೇಸಲ್ಲರ್ಗದೇ ಮಂತಣಂ (ಕನ್ನಾ. ೦೬೯). **ಲೇಸಾಗು** = ೧. ಒಳ್ಳೆಯದಾಗು; ಸರಿಯಾಗು; ಹಿತವಾಗು: ನುಡಿದೆನ ಪ್ಪೊಡೆ ಲೇಸಾಗಿ ನುಡಿಯಲ್ಕೆ ಬಲ್ಲುದಿ ೧೪ (ಶಬ್ದಮಣಿ. ೬೩೦); ಸಭೆ ಮೆಚ್ಚಿ ಲೇಸಾಯ್ತೆನುತ್ತಮಿರೆ (ತಿರುಕ. ದೀ. ೨೦-೩); ಕೊರ್ತೆ ನೀನವ ಗೆಂದುದು ಲೇಸಾಯ್ತು (ಶ್ರೀಶಿರಾ. ೨೩-೦೯). ೨. ಚೆನ್ನಾಗು: ಸೊಗಸಾಗು: ಲೇಸಾಗಿ ತುಲಸಿಯ ಮಾಲೆಯ ಧರಿಸಿದ ವಾಸುದೇವನು ಬಂದ ಕಾಣರೇನೆ (ಪುರಂದ. ೧-೦೧೦-೩); ಈಶ ನಿಮಗತ್ಯಧಿಕಸುಖವ ಕೊಡಲೆಂದು ಲೇಸಾಗಿ ಹರಸಿದೆವು ಬಾಲಕರು ಬಂದು (ಕುಶ. ೦೫-೦). [ದೇ.॥ ತುಳು. ಲೇಸು. ಲೇಸ್; ತೆಲು. ಲೆಸ್ಸ]

**ಲೇಸು$_2$** (ನಾ). "ಬೂಟ್ಸು, ಮೊ. ಗಳ ಎದುರುಬದುರಿನ ಅಂಚುಗಳನ್ನು, ಗುಂಡುರಂಧ್ರಗಳ ಅಥವಾ ಕೊಕ್ಕೆಗಳ ಮೂಲಕ, ಒಟ್ಟಿಗೆ ಬಿಗಿಯುವ ಹುರಿ ಅಥವಾ ತೊಗಲಿನ ದಾರ. ಬಟ್ಟೆ, ಅಂಗಿ, ಮೊ. ಗಳ ಅಲಂಕಾರಕ್ಕಾಗಿ ಉಪಯೋಗಿಸುವ ಹೆಣಿಗೆಯ ಪಟ್ಟಿ (ಸಾ. ಜರತಾರಿಯದು); ಕಲಾಬತು; ನಾರು, ಹತ್ತಿ, ಉಣ್ಣೆ, ರೇಷ್ಮೆ, ಲೋಹ—ಇವುಗಳಿಂದ ಮಾಡಿದ ದಾರದಿಂದ ಚಿತ್ರರಚನೆಯಾಗಿ ಹೆಣೆದು ಮಾಡಿದ ಸೂಕ್ಷ್ಮರಚನೆಯ ಅಲಂಕಾರದ ಪಟ್ಟಿ" (Lace. ೩೦೬೩): ಮನೆಯಿಂದ ಹೊರಡುವ ಮುನ್ನ ನನ್ನ ಮಗಳೊಬ್ಬಳು ಲೇಸಿಗೂ . . . ಮಗನೊಬ್ಬನು ಪೆನ್ಸಿಲಿಗೂ ಪುಸ್ತಕಕ್ಕೂ ಹೇಳಿರುತ್ತಾನೆ (ಪಾಡಿಗೆ. ೦೬೯); ನಾನು ರೈತಹೆಂಗಸರಿಂದ ಲೇಸು ಕೊಂಡ್ಕೋತೀನಿ (ಕಾಡು. ೩೯೩). [←ಇಂ. Lace]

**ಲೇಸುಗಾತಿ** (ನಾ). ಸುಖವನ್ನು ಬಯಸುವವಳು: ನಾಲಗೆಯೊಳಗಿಲ್ಲ ನಿನ್ನೆದೆಯೊಳಗೆ ವಿಶಾಲಾಕ್ಷಿಯಿದ್ದು ನೀನೆನ್ನ ಬಾಳಿಸುತಿದ್ದೆಯ ಠಕ್ಕರ ದೇವಯೆಂದಾ ಲೇಸುಗಾತಿಯೊತ್ತಿದಳು (ಭರತ. ೩೭-೯೦). [ಲೇಸು$_1$ + —ಕಾತಿ]

**ಲೇಸುಗಾಱ** (ನಾ). ಸುಖವನ್ನು ಬಯಸುವವನು: ಲಲನೆಯರಯ್ಯಂದಿರೆಲ್ಲರನೇಳಿಸಿ ಕಳುಹಿದನಾ ಲೇಸುಗಾಱ (ಭರತ. ೩೨-೬೪); ಕಾಳಗವುಂಟು ಮತ್ತದ ಯುದ್ಧ ಬೇಡ ಕೇಳ್ಮೆಲಾದ ಮೃದುಲಯುದ್ಧವನು ತೋಳ ಬಲ್ಮೆಯೊಳಿ ನೀವಿಬ್ಬರು ಮಾಳ್ಪುದೆಂದಾ ಲೇಸುಗಾಱರಾಡಿದರು (ಭರತ. ೩೦-೦೬). [ಲೇಸು$_1$ + — ಕಾಱ]

**ಲೇಸುಗೆಯ್** (ಕ್ರಿ). ಒಳ್ಳೆಯದನ್ನು ಮಾಡು; ಹಿತವಾದುದನ್ನು ಆಚರಿಸು: ಕಂಡು ಗೆಂಟಱೊಳೆ ಪೊಡವಟ್ಟು ಮೆಲ್ಲನೆ ನೀಡೆ ಲೇಸುಗೆಯ್ದೆಯೆಂದೆನ್ನಂ ಕರತಲದೊಳ್ ತಳೆದು (ಶಬ್ದಮಣಿ. ೭೯೬); ಆ ಸುರೋತ್ತಮಂ ಸಂತಸದಿಂದೆ ಭಕ್ತಿವೆರಸಾಗಳೆ ಪೂಜಿಸಿ ಲೇಸುಗೆಯ್ದನಿನ್ನಂತುಟೆ ತನ್ನನೀಂದ್ರ ಕೃತಮಂ ಮಱೆದಂದು ಕೃತಘ್ನನಾಗನೇ (ಸುಕುಮಾ. ೯-೩೦). [ಲೇಸು$_1$ + ಕೆಯ್$_1$]

**ಲೇಸುದಟ್ಟು** (ಕ್ರಿ). ಸುಖದ ಬಯಕೆಯಾಗು: ಲೇಸುದಟ್ಟಿದ ಮನ ಹೊಸಮೋಹ ಮತ್ತವರಾ ಸೆಜ್ಜೆವನೆಯೊಳು ಮಾಳ್ಪ ಲೇಸನವರೆ ಬಲ್ಲರ್ (ಭರತ. ೪೨-೦೫೨). [ಲೇಸು$_1$ + ತಟ್ಟು$_1$]

**ಲೇಹ** (ನಾ). ೧. ನೆಕ್ಕುವುದು: 'ಲೇಹಂಗೈ' ಪರಾ. ೨. [ವೈದ್ಯಶಾ] ಕೆಲವು ಔಷಧೀಯಗುಣವುಳ್ಳ ವಸ್ತುಗಳನ್ನು ಹೆಚ್ಚು ಗಟ್ಟಿಯೂ ಅಥವಾ ಹೆಚ್ಚು ನೀರಾಗಿ ಆಗದಂತೆ ಪಾಕಮಾಡಿದ, ನೆಕ್ಕಿ ತಿನ್ನಬಹುದಾದ ಔಷಧವಸ್ತು: ಚೂರ್ಣ, ಘೃತ, ತೈಲ, ಆಸವ, ಲೇಹ ಇವುಗಳನ್ನು ಮಾಡುವಾಗ ಚಂದನವನ್ನು ಹೇಳಿದ್ದರೆ . . . ಉಪಯೋಗಿಸಬೇಕು (ಸಕಪ್ರ. XII, ಶ್ರಾವಣ); ಎಲೆ, ಬೇರು ಮತ್ತು ಹೂಗಳನ್ನು ಸೇರಿಸಿ ಮಾಡಿದ ಕಹಿಯಾದ ಲೇಹ ಹೊಟ್ಟೆಯಲ್ಲಿರುವ ಜಂತುಹುಳುಗಳನ್ನು ನಾಶಮಾಡುವುದು (ಕಂಕೋಶ. I, ೭೦೯). [ಸಂ.]

**ಲೇಹಂಗೈ** (ಕ್ರಿ). ನಾಲಗೆಯಿಂದ ನೆಕ್ಕು: ಪುಲ್ಲೆಗಳ್ಕಂಡು . . . ಬಾಲಕನಂಭ್ರುಪಲ್ಲವದ ರುಧಿರಮಂ ಕುಡಿನಾಲಗೆಗಳಿಂದೆ ಸೊಗಸೆ ಲೇಹಂ [ಪಾಠಾಂ. ಪಂ]ಗೈದುವು (ಕೃಷ್ಣರಾ. ೨೬-೩೭). [ಲೇಹ + ಗೈ (<ಕೆಯ್$_1$)]

**ಲೇಹಕ** (ನಾ). ಬರಹಗಾರ: ಲೇಖಕ: ಲೇಖಕ ಎಂಬುದು ಸಂಸ್ಕೃತದಲ್ಲಿ ತುಂಬ ಹಳೆಯ ಶಬ್ದ, ಲೇಹಕ ಎಂಬುದು ಅದರ ತದ್ಭವ (ಕನ್ನಸಂ. ೯೩). [< ಸಂ. ಲೇಖಕ]

**ಲೇಹಿನಿ** (ನಾ). [ನಾಟ್ಯ] ನಾಲಗೆಯ ಆರು ಬಗೆಯ ಚಲನೆಗಳಲ್ಲಿ ಒಂದು : ☞ "ನಾಲಗೆಯಿಂದ ತುಟಿ ಮತ್ತು ಹಲ್ಲುಗಳನ್ನು ಸೋಂಕಿಸಿ ರುಚಿ ನೋಡುವುದು" (ಭಾಸ್ಕರಂ. ೨೮೦ ಗದ್ಯಾನುವಾದ) : ಮಿಗೆ ಋಜ್ವಂ . . . ಲೇಹಿನಿಯೆಂದುಂ ನಗೆಮೊಗದಳೆ ಜಿಹ್ವೆಯಾಱುಭೇದದಿನೆಸೆಗುಂ (ಭಾಸ್ಕರಂ. ೩-೯೯). [ಸಂ. ಲೇಹಿನೀ]

**ಲೇಹಿಸು** (ಕ್ರಿ). ನೆಕ್ಕು : ನಿಜನಾಸಾಗ್ರದ ಮಧುಬಿಂದುವಿನಿರದುತ್ಸವಿಸಿ ಲೇಹಿಸುವವನಂತೇಕೆ ವೃಥಾ ಯಮಗಾಹುತಿಯಹೆ (ಹೋಗಾಂಡಿ. ೪-೩೭). [ಲೇಹ + – ಇಸು₃]

**ಲೇಹ್ಯ** (ಗು). ೧. ನೆಕ್ಕಬೇಕಾದ. (ನಾ). ೨. ನೆಕ್ಕಿ ತಿನ್ನಬೇಕಾದುದು : ಭೋಜ್ಯ ಭಕ್ಷಂ ಪೇಯ ಲಲಿತ ಲೇಹ್ಯಂ ಚೋಷ್ಯ ಪಿಚ್ಛಿಲ ಷಡ್ರಸಗಳಂ ವಿಳಸವನುಗುಣದ ರುಚಿಯುಂ ಮೇಲೆಯುಱುವವರ ಚರಣಾಂಬುಜಕೆ ಶರಣು (ಂಶಿಂ. ೩೯-೨೮) ; ಲೇಹ್ಯವೆಂದರೆ ನಾಲಿಗೆಯಿಂದ ಚಪ್ಪರಿಸಿ ನುಂಗುವುದು (ಹಸಾರ. ೪-೨ ಕರ್ನಾಟ). ೩. = ಲೇಹ ೨: ಬಿಲ್ವಾದಿಲೇಹ್ಯ . . . ತೆಗೆದುಕೊಳ್ಳಲು ಸಮಸ್ತ ಪೈತ್ಯವ್ಯಾಧಿ, ಅಂತರ್ಗತ ಜ್ವರ, ಕ್ಷಯರೋಗ, ಪಾಂಡುಕಾಮಾಲೆ ಮುಂತಾದುವೆಲ್ಲವು ಪರಿಹರಮಕ್ಕುಂ (ಸಕವ್ಯ. ೦೩೩). [ಸಂ.]

**ಲೇಹ್ಯದ್ರವ್ಯ** (ನಾ). ಲೇಹ್ಯ ಮಾಡಲು ಬಳಸುವ ಸಾಮಗ್ರಿ : ಲೇಹ್ಯದ್ರವ್ಯಪ್ರಮಾಣವನ್ನು ಹೇಳದಿದ್ದರೆ ಚೂರ್ಣಕ್ಕೆ ನಾಲ್ಕರಷ್ಟು ತೂಕ ಸಕ್ಕರೆಯನ್ನು . . . ಮಿಶ್ರ ಮಾಡಿ ಇಳಿಸಬೇಕು (ಸಕವ್ಯ. XIII, ಪ್ರಸ್ತಾವನೆ). [ಸಂ.]

**ಲೇಹ್ಯಪಾಕ** (ನಾ). ಲೇಹ್ಯದ ಹದ, – ಪಕ್ವತೆ : ಲಾಮಂಚ . . . ಕರಿಜೀರಿಗೆ – ಇವು ಪ್ರತ್ಯೇಕ ಗದ್ಯಾಣ ೪ ತೂಕವಂ ಚೂರ್ಣವ ಮಾಡಿ ಪಾಕದಲ್ಲಿ ಹಾಕಿ ಲೇಹ್ಯಪಾಕವಾಗಿ ಅಟ್ಟು . . . ಭಕ್ಷಿಸಿದರೆ . . . ಪೈತ್ಯರೋಗ ಸಹ ಗುಣಮಕ್ಕುಂ (ಸಕವ್ಯ. ೦೩೬). [ಸಂ.]

**ಲೈಂಗ** (ಗು). ಲಿಂಗಕ್ಕೆ ಸೇರಿದ, – ಸಂಬಂಧಿಸಿದ : 'ಲೈಂಗಪುರಾಣ' ಪರಾ. [ಸಂ.]

**ಲೈಂಗಪುರಾಣ** (ನಾ). ಹದಿನೆಂಟು ಮಹಾಪುರಾಣಗಳಲ್ಲಿ ಒಂದು : ಬ್ರಹ್ಮಪುರಾಣ . . . ಲೈಂಗ[ಪಾಠಾಂ. ಗ್ಯ]ಪುರಾಣ . . . ಬ್ರಹ್ಮಾಂಡ ಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂಗಳ್ (ಬಿವೇಕ. ೬). [ಸಂ.]

**ಲೈಂಗಿ** (ನಾ). ಲಿಂಗದ ಸಂಬಂಧವುಳ್ಳವನು ; ಲಿಂಗವಂತ : ಲಿಂಗವೆಂದು ಅರ್ಚಿಸಿ ಸಂಗವನಱಿಯದ ಲೈಂಗಿಗಳಿಗೆಲ್ಲಿಯದೋ ಶಿವಲಿಂಗಪೂಜೆ (ಬೋಳಬಸ. ೩೨-೨೦೩) ; ಈತನುಚ್ಛಿಷ್ಟವನೆ ಕೊಂಡೀ ಭೂತನಾಥಂ ವಿಧಿ ನಿಷೇಧಾತೀತನಾದಂ ಲಿಂಗವೀತನ ಲೈಂಗಿ[ಪಾಠಾಂ. ಲಿಂಗಿ] ತಾನಾಗಿ (ಬಸಪು. ೦೬-೯೮). [ಲೈಂಗ + – ಇ₃]

**ಲೈಂಗಿಕ** (ನಾ). ಸ್ತ್ರೀ, ಪುರುಷ ಲಿಂಗಕ್ಕೆ ಸಂಬಂಧಿಸಿದುದು : ಕೀಟಗಳಲ್ಲಿ ಸಂತಾನೋತ್ಪತ್ತಿ ಲೈಂಗಿಕ (ಕೀಟಶಿ. ೯೭). [ಸಂ.]

**ಲೈಸನ್ಸು** (ನಾ). ಅನುಮತಿ ; ರಹದಾರಿ : ಮೂರು ತಿಂಗಳ ಲೈಸನ್ಸು ಪಡೆದುಕೊಂಡು (ಕಾಬುಕಾಂ. ೬). [← ಇಂ. Licence]

**ಲೊಂಚು** (ನಾ). ಕೀಳುವಿಕೆ (?) : ಮುಳ್ಗಿಡು ಲೊಂಚುಗೊಳಲ್ಕೆ ಚುಂಚು ತಾವರಿಸಿದ ಶಂಕೆ ಭೋಂಕನೆ ನೆಳಲ್ಗಗಿದ್ದುಟ್ಟುಪದನಿಕ್ಕೆ (ಎಇ. XVI, ೩೩೬-೪೦ ; 1076). [< ಲೋಚು ?]

**ಲೊಕಶಿದಿ**, **ಲೊಕಶಿರಿ** (ನಾ). ಆನೆಗೆ ತೊಡಿಸುವ ಅಲಂಕಾರಗಳಲ್ಲಿ ಒಂದು (?) : ಆನೆಗೆ ಹಳದೀಬನಾತಿನ ಬಬ್ರೀ ಜೂಲು ರೇಶ್ಮೆ ಜಾಲರು ಸಹ ೧ ಬದಸ್ತೂರು ಲೊಕಶಿದಿ ೧ ಕತ್ತಿಗೆ ಕಟ್ಟುವ ಪಟ್ಟಿಬದಸ್ತೂರು ೧ ಸಹಾ (ಎಕ. XIV. ಶಂಕಶ. ೨೯೨-ಪುಟ ೦೯೨; 1847). **ಲೊಕಶಿರಿ** : ಆನೆಗೆ ಸಾದಾಬನಾತಿನ ಜೂಲು ೧ ಲೊಕಶಿರಿ ೧ (ಎಕ. XIV, ಶಂಕಶ. ೨೯೨–ಪುಟ ೦೯೨; 1847). [ ? ]

**ಲೊಕಶಿರಿ** 'ಲೊಕಶಿದಿ' ನೋ.

**ಲೊಕ್ಕಿ₁**, ನೆಕ್ಕಿ, ಲಕಲಿ, ಲಕ್ಕಲಿ, ಲಕ್ಕಿ₁, ಲಕ್ಕಿಲಿ, ಲಕ್ಕೆ₁ (ನಾ). (ಕಟುವಾದ ವಾಸನೆಯುಳ್ಳ, ಪೊದೆಯಾಗಿ ಬೆಳೆಯುವ) ಒಂದು ಬಗೆಯ ಔಷಧೀಸಸ್ಯ ; ಸಿಂಧುವಾರ: "ನಿರ್ಗುಂಡೀ, ಸಿಂಧುವಾರ — ಈ ☞ ಲೊಕ್ಕಿ" (ಹಲಾಯು. ೩೩-೯೭) ; ಉರಗನಿವಾಸಂ ಲೊಕ್ಕಿಯ ಪೊರೆಯೊಳ್ ಸಮನಿಸಿ ದೊಡದಱ ತೆಂಕಣ ದೆಸೆಯೊಳ್ ಪುರುಷದ್ವಿತಯದೊಳಕ್ಕುಂ ಕರತ್ರಯಾಂತರದಿನುಗುಬ ಸುಸ್ವಾದುಜಳಂ (ಲೋಕೋಪ. ೩-೦೭) ; ಪೊಂಬುರ್ಚ್ಚದ ಲೊಕ್ಕಿಯ ಮರದಲ್ಲೆಲಸಿ ಲೊಕ್ಕಿಯುಬ್ಬೆಯೆಂಬೆರಡನೆಯ ಪೆಸರಂ ತಾಳ್ದಿ (ಎಕ. VIII, ಸಗರ. ೪೩-೦೨; 1077); ಮಿಗೆ ಸೊಕ್ಕುಗಂಪನೇಳಿಪ ಉಸುರನು ನಗೆಮೊಗದೊಳು ತೀವಿ ಸೊಗಸಲೂಡಿ ಮಗುಳೇಱಿಸಿದರು ಲೊಕ್ಕಿಯ ನಿಮ್ಮ ಜಾತಿಯ ಬಗೆಗೆ ತಹುದು ಪ್ರಿಯೆ ಕೊರ್ತರ (ಸೌಂದರ್ಯ. ೩-೩೦). 'ಕರಿಲೊಕ್ಕಿ' ಪರಾ. **ನೆಕ್ಕಿ**: "ಲಕ್ಕಲಿಗಿಡ, ನೆಕ್ಕಿ . . . ವಾಮಿ, ಭೂತವೇಷಿ" (ಸಸ್ಯಶಿ. ೦೦೩) ; ಮರ ನೆಕ್ಕಿ ನಿಡಲು ಹಾಡಿ ಹಕ್ಕಲು (ಶಾಇಂ. ೦೯೬೨, ೩೦೯-೯೫ 1336); ತಾ ಕೊಂಡು ಬಾಳು ನೀರು ತೋಟ ಮನೆ ಮಕ್ಕಿ ಮ[ರ] ನೆಕ್ಕಿ ನಿಡಲು . . . ನೀರನೆಱದು ಬಿಟ್ಟನು (ಶಾಇಇ. IX-ii, ೪೦೭-೩೦ ; 1364). **ಲಕಲಿ** : ಕಾಶಿತುಂಬೆ ಲಕಲಿ . . . ಸೂರ್ಯಕಾಂತಿಪುಷ್ಪಗಳು (ಸಿದ್ಧಶಿ. ೦೬-೯೨). **ಲಕ್ಕಲಿ** : (ಎಕವ್ಯ. II, ೬). **ಲಕ್ಕಿ₁** : "ನಿರ್ಗುಂಡಿಯೆನೆ ಸಿಂಧುವಾರ ಮೆನಲಿಂದ್ರಾಣಿಯೆನೆ ಲಕ್ಕಿ [ಪಾಠಾಂ. ಲೊಕ್ಕಿ]ಯಕ್ಕು" (ಕಂಗರಾ. ೩೪-೦೨) ; ಹುಲಿಗಿಲ ಬೇರ್ತವಸದ ತಿಗುಡು ಲಕ್ಕಿ ಕಡಸಿಗೆಯ ಬೇರ್ ಮರುಂಗುಳಿಯೊಳಗ್ಗಳಿಸಿರೆ (ಕಲ್ಯಾಣ. ೪-೨೨) ; ಲಕ್ಕಿ:— ಈ ಸೊಪ್ಪಿನ ರಸ ಹರಳ ಎಣ್ಣೆಯಲ್ಲಿ ತೆಗೆದುಕೊಳ್ಳೆ ಮಹೋದರ ಮಾಣ್ಗುಂ (ಬವೈಶಿ. ೬); ಅಲ್ಲಲ್ಲಿ ಸೀಗೆ, ಲಕ್ಕಿ, ಕೆಂಜಿಗೆ . . . ಕರ್ಜಿ ಇತ್ಯಾದಿ ಪೊದೆಗಳು ಬೆಳೆದುಕೊಂಡಿದ್ದುವು (ಮಲೆಮ. ೩೩೨). 'ಕರ್ಲಕ್ಕಿ' ಪರಾ. **ಲಕ್ಕಿಲಿ** : "ಶೇಫಾಲಿಕಾ . . . ಕರೀಹೂವ್ವುಗಳುಳ್ಳ ಲಕ್ಕಿಲಿ, ಕರೀಲಕ್ಕಿಲಿ" (ಸಿದ್ಧೌಷಿ. ೦೨೮). **ಲಕ್ಕೆ₁** : (ಕಂಡಿಕ. ೦೪೭).

[ದ್ರಾ. ತಮಿ. ಮಲ. ನೊಚ್ಚಿ ; ತುಳು. ನೆಕ್ಕಿ, ಲಕ್ಕಿ ; ತೆಲು. ಲೊಕ್ಕಿ, ನೊಚ್ಚಿಲಿ]

**ಲೊಕ್ಕಿ₂** (ನಾ). ಒಂದು ಊರಿನ ಹೆಸರು ; ☞ ಈಗಿನ ಧಾರವಾಡ ಜಿಲ್ಲೆಯ ಲಕ್ಕುಂಡಿ : ಲೊಕ್ಕಿ ಪೊಂಗದ್ಯಾಣವೆಪ್ಪತ್ತು ಅಂಕದೊಳು (ಸೌಇಇ. XV, ೦-೨೦ ; 1059). 'ಲೊಕ್ಕಿಗುಂಡಿ' ಪರಾ.

**ಲೊಕ್ಕಿಯ ಗದ್ಯಾಣ** = ಲೊಕ್ಕಿಗುಂಡಿಯಲ್ಲಿ ಟಂಕಿಸಿದ ಗದ್ಯಾಣ : ಬಡ್ಡಿಯಿಂದಕ್ಷಯವಾಗಿ ಕೊಟ್ಟ ಲೊಕ್ಕಿಯ ಗದ್ಯಾಣಂ (ಎಕ. VII, ಶಿಕಾಪು. ೯೨-೩೬ ; 1113). **ಲೊಕ್ಕಿಯಚ್ಚು** = ಲೊಕ್ಕಿಗುಂಡಿಯ ಗದ್ಯಾಣವನ್ನು ತಯಾರಿಸುತ್ತಿದ್ದ ಅಚ್ಚು : ದೇವರ್ಗ್ಗೆ ಬಿಟ್ಟ ಹೊಸ ಲೊಕ್ಕಿಯಚ್ಚಿನ ಗದ್ಯಾಣ ಹತ್ತು (ಸೌಇಇ. XV, ೨೨-೩೪ ; 1142). **ಲೊಕ್ಕಿಯ ಪೊನ್**, **ಲೊಕ್ಕಿಯ ಹೊನ್** = ಲೊಕ್ಕಿಯ ಗದ್ಯಾಣ : ಶ್ರೀಸ್ವಾಮಿದೇವರ್ ನವಿಲಚ್ಚಿನ ಪೊನ್ನಂ ಲೊಕ್ಕಿಯ ಪೊನ್ನಾಣಿಯು(ಂ)ಮಾ ಪೊನ್ನ ತೂಕಮುವಾಗಿ ಪೊಯ್ದು ಸಲಿಸುವರು (ಸೌಇಇ. IX-i, ೦೬೪-೨೩; 1098) ; ಸೋಮೇಸ್ವರ ಭಟ್ಟರ್ಗ್ಗೆ ಪಾದಪೂಜೆಯಯ್ವತ್ತುಗದ್ಯಾಣ ಲೊಕ್ಕಿಯ ಪೊನ್ನ ಕೊಟ್ಟು . . . ಸರ್ಬ್ಬಬಾಧಾಪರಿಹಾರವಾಗಿ ಬಿಟ್ಟ ಗಟ್ಟಿ (ಸೌಇಇ. XX, ೦೦೦-೪೩ ; 1129) ; ಲಕ್ಕಕ್ಕಿಪ್ಪತ್ತೆರಡುಂ ಲೊಕ್ಕಿಯ ಹೊನ್ನಿಂಗೆ ಸಾವಿರಕ್ಕಂ ಬೆಲೆ (ಪ್ರಪಹಾ. ಉತ್ತರಾರ್ಧ).

[☞ ಇದು 'ಲೊಕ್ಕಿಗುಂಡಿ' ಎನ್ನುವುದರ ಸಂಕ್ಷಿಪ್ತರೂಪ]

**ಲೊಕ್ಕಿಗ** (ನಾ). ಒಂದು ಬಗೆಯ ಹಕ್ಕಿ : **ಲೊ[ಪಾಠಾಂ.ಲೊ]ಕ್ಕಿಗನು** ಹುಡಿಕೇಲು ಹಾಲ್ವಕ್ಕಿ ಕೋಗಿಲೆ ಕೊಟುವೇವನ ಕುಕ್ಕುಮಾಯಿಯ ಕೆಂಡವಕ್ಕಿಗಳವಜಿಗೊಪ್ಪಿದುದು (**ನಾಗ್ಪಾ. ೩-೨೨**). [ ? ]

**ಲೊಕ್ಕಿಗದ್ಯಾಣ** (ನಾ). ಲೊಕ್ಕಿಗುಂಡಿಯಲ್ಲಿ ಟಂಕಿಸಿದ ಗದ್ಯಾಣ : ವರ್ಷಕ್ಕೆ ಪಣವೃದ್ಧಿಯ ಲೆಕ್ಕದೆ ಕೊಟ್ಟ ಲೊಕ್ಕಿಗದ್ಯಾಣಂ ನೂಱುಪ್ಪತ್ತು (**ಎ. XII. ೯೯-೮೩; 1112**). [ಲೊಕ್ಕಿ$_2$+ಗದ್ಯಾಣ]

**ಲೊಕ್ಕಿಗುಂಡಿ** (ನಾ). = ಲೊಕ್ಕಿ$_2$ : ಎಸೆದುವಸದಳಂ ಲೊಕ್ಕಿಗುಣ್ಡೀ ಪುರೋಬ್ಬೀಪತಿ ಚಂಚದ್ರತ್ನಕೋಟಿಸ್ಫುರಿತಮುಕುಟಸಂಭಾಸಜ್ಜಿನಾಧಿವಾಸಂ (**ಸೌಇಇ. XI-i. ೫೨-೯೯ ; 1008**). [ಲೊಕ್ಕಿ$_2$+ಗುಂಡ್ಕಿ]

**ಲೊಕ್ಕಿಯಬೆ** ' ಲೊಕ್ಕಿಯಬ್ಬೆ ' ನೋ.

**ಲೊಕ್ಕಿಯಬ್ಬೆ**, ಲೊಕ್ಕಿಯಬೆ (ನಾ). [ಜೈನ] **ಪದ್ಮಾವತಿ** ಎಂಬ ಯಕ್ಷಿಯ ಹೆಸರು : ಪದ್ಮಾವತೀದೇವಿ . . . ಲೊಕ್ಕಿಯ ಮರದಲ್ಲಿಲಸಿ ಲೊಕ್ಕಿಯಬ್ಬೆಯೆಂಬೆರಡನೆಯ ಪೆಸರಂ ತಾಳ್ದಿ (**ಎಕ. VIII. ನಗರ. ೩೫-೦೨; 1077**) ; ಪದ್ಮಾವತಿಯು **ಲೊಕ್ಕಿ** ಎಂಬ ಮರದಲ್ಲಿದ್ದುದರಿಂದ ಅವಳಿಗೆ ಲೊಕ್ಕಿಯಬ್ಬೆ ಎಂಬ ಪರ್ಯಾಯನಾಮವೂ ಇತ್ತು (**ಕೆಜಿಶ. ೦೦೦**). **ಲೊಕ್ಕಿಯಬೆ :** ಲೊಕ್ಕಿಯಬೆಯಂ ಜಿನಗೇಹಮಂ ಮಾಡಿದಂ ಧರೆಯೆಲ್ಲಂ ಪೊಗಳ್ವನ್ನೆಗಂ. . . **ಅವನಿಪಾಳಕಂ** (**ಎಕ. VII. ಶಿವಮೊ. ೦೦೯-೧೦; 950 ?**).

[ಲೊಕ್ಕಿ$_1$ + ಅಬ್ಬೆ$_1$]

**ಲೊಚ** (ನಾ). ಒಂದು ಅನುಕರಣ ಶಬ್ದ: **'ಲೊಚಗರೆ', 'ಲೊಚಗುಟ್ಟು'** ಪರಾ.

**ಲೊಚಲೊಚ** (ದ್ವಿರುಕ್ತಿ) : ನಾಯಿಗಳು ಬೆಕ್ಕುಗಳ ಹಾಗೆ ತುದಿನಾಲಗೆಯಿಂದ ಲೊಚಲೊಚ ನೀರು ಕುಡಿಯುತ್ತವೆ (**ಮುಂಬಇ. ೩-೯೦**).

**ಲೊಚಕ್** (ನಾ). ಒಂದು ಅನುಕರಣ ಶಬ್ದ. 'ಲೊಚಕು' ಪರಾ.

**ಲೊಚಕು** (ಕ್ರಿ). = ಲೊಚಗುಟ್ಟು : ಗದರುತಿವೆ ಹುಲಿಯಂತೆ. **ಲೊಚಕುತಿದೆ** ಹಲ್ಲಿ (**ಗೀಪಂ. ೦೦೬-೦೨**). [ < ಲೊಚಕ್]

**ಲೊಚಗರೆ** (ಕ್ರಿ). 'ಲೊಚ್' ಎಂದು ಶಬ್ದಮಾಡು : ನಮ್ಮ ವೃತ್ತಾಂತವನ್ನೆಲ್ಲಾ ಹೇಳಿದೆ. ಅವರೆಲ್ಲರೂ **ಲೊಚಗರೆದರು** (**ತಂಗಾಳ್. ೦೦೩**).

[ಲೊಚ + ಕರೆ$_1$]

**ಲೊಚಗುಟ್ಟು** (ಕ್ರಿ). ಬಾಯಿಂದ 'ಲೊಚ' ಎಂದು ಶಬ್ದಮಾಡು : ಕೊಕ್ಕರೆಯಂತೆ ತಲೆಯಾಡಿಸಿ ಅವಳದೇ ಆದ ವಿಶೇಷರೀತಿಯಲ್ಲಿ **ಲೊಚ ಗುಟ್ಟಿದಳು** (**ಹೂಸಕ್ಕಿ. ೭೯**) ; ಹಲ್ಲಿ **ಲೊಚಗುಟ್ಟಿತು** (**ವಚಬಂ. ೦೦೦-೦೬**).

[ಲೊಚ + ಕುಟ್ಟು$_1$]

**ಲೊಚ್ಚು** (ನಾ). ಒಂದು ಅನುಕರಣ ಶಬ್ದ : 'ಲೊಚ್ಚುಗರೆ' ಪರಾ.

**ಲೊಚ್ಚುಗರೆ** (ಕ್ರಿ). = ಲೊಚಗುಟ್ಟು : ಬಾಯಿಂದ **ಲೊಚ್ಚುಗರೆಯುತ** (**ಸೌಗಂಧಿ. ೨೬೯-೦**). [ಲೊಚ್ಚು + ಕರೆ$_1$]

**ಲೊಟ** (ನಾ). ಒಂದು ಅನುಕರಣ ಶಬ್ದ : 'ಲೊಟಗುಟ್ಟು' ಪರಾ.

**ಲೊಟಲೊಟ** (ದ್ವಿರುಕ್ತಿ) : ಲೊಟಲೊಟ ಶಬ್ದ ಮಾಡಬೇಡ (**ರೂಢಿ**).

**ಲೊಟಕ್** (ನಾ). ಒಂದು ಅನುಕರಣ ಶಬ್ದ : ಲೊಟಕ್ ಎಂದು ಆ ಮರದ ಕೊಂಬೆ ಮುರಿಯಿತು (**ರೂಢಿ**).

**ಲೊಟಕಲು** (ನಾ). 'ಲೊಟಲೊಟ' ಎಂದು ಮಾತನಾಡುವಿಕೆ ; ವಟಗುಟ್ಟುವಿಕೆ : ಆ ಮುದುಕಿಯ **ಲೊಟಕಲು** ಕೇಳಲಾಗುವುದಿಲ್ಲ (**ರೂಢಿ**).

[ಲೊಟಕು + — ಅಲು ( < — ಅಲ್$_1$)]

**ಲೊಟಕು**, ಲೊಟಗು (ಕ್ರಿ). ವಟಗುಟ್ಟು ; ಗೊಣಗು : ಸೋರುವ ಮನೆಯೂ **ಲೊಟಕುವ** ಗಂಡನೂ ಸರಿ (**ಗಾದೆ**). **ಲೊಟಗು :** ನಮ್ಮ ತಂದೆಯ ಮೇಲೆ ನಮ್ಮಮ್ಮ **ಲೊಟಗುತ್ತಿದ್ದರು** (**ದೂರದ. ೨೬೯**).

[ < ಲೊಟ ]

**ಲೊಟಕೆ** (ನಾ). ನಾಲಗೆಯಿಂದ ಮಾಡುವ ಒಂದು ಬಗೆಯ ಶಬ್ದ : ಉಪ್ಪಿನಕಾಯನ್ನು **ಲೊಟಕೆ** ಹಾಕುತ್ತ ತಿಂದಳು (**ರೂಢಿ**).

**ಲೊಟಗು** 'ಲೊಟಕು' ನೋ.

**ಲೊಟಗುಟ್ಟು** (ಕ್ರಿ). = ಲೊಟಕು : ಹಳಬರೇ ಹೀಗೆ ಏನಾದರೂ **ಲೊಟ ಗುಟುತ್ತಲೇ** ಇರೋದು (**ಹುಬ್ಬಿ.ಹ. ೦೬೬**). [ಲೊಟ + ಕುಟ್ಟು$_1$]

**ಲೊಟಗೆ** (ನಾ). ನಾಲಗೆಯಿಂದ ಮಾಡುವ ಒಂದು ಬಗೆಯ ಶಬ್ದ : "ಸವಿದರೆ ಈ ಮಾವಡುವನ್ನು ಸವಿಯಬೇಕು" ಎಂದು ದೊಡ್ಡದಾಗಿ **ಲೊಟಗೆ** ಹಾಕಿದ (**ಹಸುಹೊ. ೧೯**).

**ಲೊಟನ್ಪಾರಿವಾಳ** , ನೊಟನಪಾರಿವಾಳ (ನಾ). (ನೆಲದ ಮೇಲೆ ಹೊರಳಾಡುವ) ಒಂದು ಬಗೆಯ ಪಾರಿವಾಳ : "ಪಾರಾವತೇಷು ವಿಲುಠನ್ = **ಲೊಟನ್ಪಾರಿವಾಳ**" (**ಶಾಕುಂಆ. ೩೭ ಟೀಕೆ**). **ನೊಟನ ಪಾರಿವಾಳ :** ನೊಟನ ನೊಟನಪಾರಿವಾಳ, ಜುಟ್ಟನು ಧರಿಸಿಹವು (**ಶಿಶುಂ. II. ೩೭೦**). 'ಲೋಟ್ಸಾ' ಪರಾ.

[ಲೊಟನ್$_0$ (p ← ಸಂ. ಲುಠನ) + ಪಾರಿವಾಳ$_1$]

**ಲೊಟಪಟ** (ನಾ). ಖಾಲಿಯಾದುದು, ನಿರರ್ಥಕವಾದುದು ಎಂಬರ್ಥವನ್ನು ಸೂಚಿಸುವ ಒಂದು ಅನುಕರಣ ಶಬ್ದ : (**?**).

**ಲೊಟಪಾಟ** (ನಾ). = ಲೊಟಪಟ : **ಲೊಟಪಾಟ** ಸಂಸಾರದೊಳಗೆ ಸಿಲುಕಿ ನಾ ವಿಠಲ ನಿನ್ನ ಧ್ಯಾನವ ಮಱತೆನಯ್ಯ (**ಪುರಂಪ. ೨-೦೨ ಪಲ್ಲವಿ**).

**ಲೊಟಲೊಟನೆ** (ಅ). 'ಲೊಟಲೊಟ' ಎಂಬ ಶಬ್ದವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಆ ಮರದ ಕೊಂಬೆ **ಲೊಟ ಲೊಟನೆ** ಮುರಿದು ಬಿತ್ತು (**ರೂಢಿ**). [ < ಲೊಟ + — ಅನೆ$_1$ ]

**ಲೊಟವಿಟ** (ನಾ). = ಲೊಟಪಟ : **ಲೊಟವಿಟ** ಸಂಸಾರ ಹೇಯವೆನ್ನ (**ಪುರಂಪ್ರಂ. ೯೯-೩**).

**ಲೊಟ್ಟಾಲೊಟ್ಟಿ** (ನಾ). ಒಂದು ಅನುಕರಣ ಶಬ್ದ : ಬಿಟ್ಟ ಸೂಟಿಯಲರಿನೃಪಾಲರ ಮುಟ್ಟಿ ಪರೂದಲಿಸುತ್ತ ಮೋಹಿದ ಥಟ್ಟನೊಡೆಹಾಯ್ದುಹಿತ ಜಲದೊಳಗಾನೆವರಿದು ಪಿಟ್ಟುಗುಟ್ಟುತ ಪೆಣನ **ಲೊಟ್ಟಾಲೊಟ್ಟಿ** [**ಪಾಠಾಂ.** ನೊಟ್ಟಲೊಳೊಟ್ಟಿ, ವಟ್ಟಾವಟ್ಟಿ] ಮಸಗಲು ಕಳನ ಚೌಕದಲಟ್ಟಿಯಾಡಿಸ ಜಲ್ಲಪವ ರಾವುತನು (**ಕುಮಾ.ಭಾ. ೩-೦೧೯**) ; ಮೆಟ್ಟಿ ಸೀಳಿದು ಹಾಯ್ಯ್ದಾಡೆಯ ಕೊಟ್ಟು ಮೋಹಿಸುಸೂಲಿವ ಹರಿವರಿಯುಟ್ಟಿ ಹಿಡಿದಪ್ಪಳಿಸಿ ಜೋಡೆರನಂಘ್ರಿಯಿಂದರೆದು ಇಟ್ಟು ಕೆಡಹಲು ಪೆಣನ **ಲೊಟ್ಟಾಲೊಟ್ಟಿ** [**ಪಾಠಾಂ.** ಅಟ್ಟಿಗಳೊಟ್ಟಿ, ಪೊಟ್ಟಲೊಳೊಟ್ಟಿ] ಮಸಗಿತು ತುರಗನರರಥ ವಿಟ್ಟಣಿಸೆ ಸವೆಬಿವವು ದಂತಿವ್ರಾತವುಭಯದೊಳು (**ಕುಮಾ.ಉ. ೯-೭೬**).

[ ? ]

**ಲೊಟ್ಟಿ** (ನಾ). ೧. ಹೆಂಡ ; ಮದ್ಯ : ' ಲೊಟ್ಟಿಗ ', ' ಲೊಟ್ಟಿಗುಡಿಹಿ' ಪರಾ. ೨. ಮರದಿಂದ ಹೆಂಡವನ್ನು ಇಳಿಸಲು ಬಳಸುವ ಮಣ್ಣಿನ ಸಣ್ಣ ಮಡಕೆ. [ದೇ.॥ ತಮಿ. ತೆಲು. ಲೊಟ್ಟಿ]

**ಲೊಟ್ಟಿಗ** (ನಾ). ಮಣ್ಣಿನ ಮಡಕೆಯಲ್ಲಿ ಮದ್ಯಪಾನಮಾಡುವವನು ; (**ಎಸವ. XVII. ೯**). [ಲೊಟ್ಟಿ + — ಗ$_2$]

**ಲೊಟ್ಟಿಗುಡಿಹಿ** (ನಾ). = ಲೊಟ್ಟಿಗ (?) : ಬಿಟ್ಟಿದ್ದ ಮಣ್ಣಿಗೂ ನೆಟ್ಟಿದ್ದ ಕಲ್ಲಿಗೂ ಕಟ್ಟಿದ್ದ ಲಿಂಗವಡಿಯಾಗಿ ಬೀಳುವ **ಲೊಟ್ಟಿಗುಡಿಹಿ** ಗಳನೇನೆಂಬೆನಯ್ಯಾ ಕಲಿದೇವರ ದೇವಾ (**ಬಸವಮ. ೨೨-೨೯**).

[ಲೊಟ್ಟಿ + ಕುಡಿಹಿ]

**ಲೊಟ್ಟಿಮೂಳ** (ನಾ). = ಲೊಟ್ಟಿಗ (?) : ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ ಹೊಟ್ಟೆಡಿಯಾಗಿ ಬೀಳುವ **ಲೊಟ್ಟಿಮೂಳನ** ಕಂಡಡೆ ಮೆಟ್ಟಿದ್ದ ಎಡಪಾದರಕ್ಷೆಯ ತಗೊಂಡು ಲಟಲಟನೆ ಹೊಡಿ (**ವಚಾ. I. ೩೨೮**). [ಲೊಟ್ಟಿ + ಮೂಳ$_1$ ( < ಮೂಳು)]

**ಲೊಟ್ಟೆ₁** (ನಾ). ನಾಲಗೆಯಿಂದ ಮಾಡುವ ಒಂದು ಬಗೆಯ ಶಬ್ದ : ಲೊಟ್ಟೆಯಲ್ಲಿ ಗಟ್ಟಿಗನಾದರೂ ಕೊಟ್ಟ ವಿನಹಾ ಬಿಡುವುದಿಲ್ಲ (ಗಾದೆ)

**ಲೊಟ್ಟೆಹಾಕು** = ನಾಲಗೆಯಿಂದ ಶಬ್ದ ಮಾಡು : ಅವರು ಲೊಟ್ಟೆ ಹಾಕಿಕೊಂಡು ಎತ್ತುಗಳನ್ನು ಓಡಿಸಿದರು (ರೂಢಿ). **ಲೊಟ್ಟೆಹೊಡೆ** = ಲೊಟ್ಟೆಹಾಕು : ಗಾಡಿ ಹೊಡೆಯುವವ ಲೊಟ್ಟೆಹೊಡೆಯುವಂತೆ ಆಯ್ತು (ಮಹೋಶಂ. ೯೦) ; ದುಬಾರಿ ಬಡ್ಡಿಗಾರನ ಕಡೆ ಕಣ್ಣು ಮಿಟುಕಿಸಿ ಲೊಟ್ಟೆ ಹೊಡೆದನು (ವಗಹೂ. ೦೨೨).

**ಲೊಟ್ಟೆ₂** (ನಾ). ೧. ಹುರುಳಿಲ್ಲದುದು ; ವ್ಯರ್ಥವಾದುದು : ಹೀಗೆ ಹುಡುಗಿಯನ್ನು ಬಿಟ್ಟುಕೊಂಡಿರುವುದು ಅಶ್ರೇಯಸ್ಕರ, ಪೂರ್ವಾಚಾರಕ್ಕೆ ವಿರುದ್ಧ, ಬ್ರಾಹ್ಮಣಮತಕ್ಕೆ ಸರಿಯಾದ್ದಲ್ಲ – ಹೀಗೆಯೆ ಏನೇನೋ ಲೊಟ್ಟೆ, ಲಸ್ಕು ಇದೆಯಲ್ಲ (ಇಂದು. ೯೬). ೨. ಸುಳ್ಳು ; ಸಟೆ : ಹಾಗೆ ಹೀಗೆ ಎಂದು ಕಂಡಾಪಟ್ಟೆ ಲೊಟ್ಟೆಹೊಡೆದರು (ಗಂಗಾವ. ೦೬೭).

**ಲೊಟ್ಟೆಲೊಸಕು, ಲೊಟ್ಟುಲೊಸಕು** = ಕೆಲಸಕ್ಕೆ ಬಾರದುದು ಎಂಬುದನ್ನು ಸೂಚಿಸಲು ಬಳಸುವ ಮಾತು : ಲೊಟ್ಟೆಲೊಸಕು ಅಂತ ನೂರೆಂಟು ಹೇಳಿದರು (ಕಂಗೂಹಿ. ೦೦೯); ಬಾಬು ನಿಮ್ಮ ಚಿಕ್ಕಮ್ಮಣ್ಣಿಯವರಿಗೆ ಏನಾಗಬೇಕು ? ಲೊಟ್ಟುಲೊಸಕೂ (ಶಾಹೇಬ್. ೨೫೦).

[ದೇ.೫ ತಮಿ. ಲೊಟ್ಟೈ ; ಮಲ. ಲೊಟ್ಟು ; ತುಳು. ಲೊಟ್ಟೆ]

**ಲೊಟ್ಟೆ₃** (ನಾ). (?): ದೇಗುಲ, ಲೊಟ್ಟೆ, ಕಟ್ಟೋಗರ (ಅಕ್ರಕು. ೦೨೮) ; ಕಟ್ಟಿನ ಕೆಳಗೆ ಲೊಟ್ಟೆಯ ಶ್ರೀಧರಕ್ರವಿನ್ನರು (ಇಂ. ೦೯೯೬, ಶಾಪಂಗ. ೨೯೮–೨೮; ?). [ ? ]

**ಲೊಡಕ** (ನಾ). ೧. ವ್ಯರ್ಥವಾದುದು : ಲೊಡಕ ಲೊಡಕ ಜಿಹ್ವರ ಕೆಟ್ಟಸಂಸಾರವು ನೋಡಮ್ಮವ್ವ (ಪುರಂದ. ೫–೦೦೦ ಕೃಪ). (ಗು). ೨. ವ್ಯರ್ಥವಾದ : ಲೊಡಕಸಂಸಾರವು ನಮ್ಮೆಲ್ಲರ ಗತಿರಹಿತ ಮಾಡುವ ಲೊಡಲೊಟ್ಟೆವ್ವ (ಪುರಂದ. ೫–೦೦೦ ಅನುಕೃಪ). [ ? ]

**ಲೊಡಕಜಿಹ್ವ** (ನಾ). ಹರಟೆ ಹೊಡೆಯುವ ನಾಲಗೆಯವನು : ಲೊಡಕ ಲೊಡಕಜಿಹ್ವರ ಕೆಟ್ಟಸಂಸಾರವು ನೋಡಮ್ಮವ್ವ (ಪುರಂದ. ೫–೦೦೦ ಕೃಪ). [ಲೊಡಕ + ಜಿಹ್ವ]

**ಲೊಡಲೊಟ್ಟೆ** 'ಲೊಳಲೊಟ್ಟೆ' ನೋ.

**ಲೊಡಲೊಡ** (ನಾ). ಒಂದು ಅನುಕರಣ ಶಬ್ದ : ಲೊಡಲೊಡ ಎಂದು ಮಾತನಾಡಬೇಡ (ರೂಢಿ).

**ಲೊಡ್ಡ** 'ರೊಡ್ಡ' ನೋ.

**ಲೊಡ್ಡು, ಲಡ್ಡಿ, ಲಡ್ಡು₁** (ನಾ). ೧. ನಿಸ್ಸಾರವಾದುದು ; ಪೊಳ್ಳು ; ಜಳ್ಳು : 'ಲೊಡ್ಡುಮರ' ಪರಾ. **ಲಡ್ಡಿ** : ೧. ಹಸಿಯ ಕಟ್ಟಿಗೆಗಳು ನೀರೊಳಗೆ ಇರುವುದರಿಂದ ಲಡ್ಡಿ ಹಾಯದೆ ಕಚ್ಚಿನಂತೆ ಆಗಿ ಇರುವುವು (ಕೃಷಿಶ್ರ. ೧೦೨). **ಲಡ್ಡು₁** : ೨. ನಿಸ್ಸಾರವಾದ ಜೊಂಡು ಹುಲ್ಲು : ಗದ್ದೆಗಳಲ್ಲೆಲ್ಲಾ ಲಡ್ಡು ಮತ್ತು ವಡಕೆ ಬೆಳೆದುಕೊಂಡಿತ್ತು (ಜಪ್ಪುಕು. ೨೭೦). ೩. (ಅಲಂ) ಪೊಳ್ಳುತನ ; ದೌರ್ಬಲ್ಯ : ಈ ದುಡ್ಡಿದ್ದವರ ಲಡ್ಡು ಹಿರಿಯೋ ದಿನಾ ಇನ್ನೇನೂ ದೂರಿಲ್ಲಾ (ಶಿಂಶಹು. ೦೬೬). (ಗು). ೪. ಪೊಳ್ಳಾದ ; ಜಳ್ಳಾದ : ಅದೊಂದು ಹಳೆಯ ಲಡ್ಡುಪೆಟ್ಟಿಗೆ (ಮೂಕಜ್ಜ. ೯೨) ; ಹೀಗೆ ನಡೆಯುವ ಲಡ್ಡು ಯಂತ್ರ ಯಾವಾಗ ಮುರಿದು ಬಿದ್ದರೂ ಆಶ್ಚರ್ಯವಿಲ್ಲ (ಮಹಾಸರ. ೨೮೬). ೫. ನಿಸ್ಸತ್ತ್ವನಾದ ; ದುರ್ಬಲನಾದ : ನಿಮ್ಮ ತಂದೀನೂ ಲಡ್ಡ ಮನುಷ್ಯ ಅಲ್ಲ (ಗಂಡುಹು. ೨೫೦).

**ಲೊಡ್ಡಾಗು, ಲಡ್ಡಾಗು** = ಪೊಳ್ಳಾಗು ; ನಿಸ್ಸಾರವಾಗು : ಮರದಲ್ಲಿರುವ ನೀರು ವಿನಾಶಕರವಾದ ಏಕಾಣುಜೀವಿಗಳಿಗೂ ಅಣಬೆಗಳಿಗೂ ಆಹಾರವಾಗಿ ಮರವು ಲೊಡ್ಡಾಗುತ್ತದೆ (ಶಿರ್ರವಾ. ೨೯೦) ; ತೋಟದ ಸಾರ ದಾಟುವಾಗ ಅಡಿಕೆಮರಗಳು ತುಂಬ ಲಡ್ಡಾಗಿದ್ದುದರಿಂದ ಬಳುಕಿದವು (ಜಾಗೃ. ೧೨೫). **ಲೊಡ್ಡು ಮಾಡು** = ಪೊಳ್ಳು ಮಾಡು ; ಟೊಳ್ಳುಮಾಡು : ಅಂಥ ಪದಾರ್ಥವನ್ನು . . . ಒಳಗಿನಿಂದ ಕುಟ್ಟಿ ತಿಂದು ಲೊಡ್ಡು ಮಾಡುತ್ತಲೇ ಇರುತ್ತದೆ (ಜಂಕಿಪು. ೬೨೫). **ಲೊಡ್ಡು ಹಿಡಿ** = ಪೊಳ್ಳಾಗು ; ಟೊಳ್ಳಾಗು : ಸಾಮಾನುಗಳು ಮೂಲೆ ಮೂಲೆಯಲ್ಲಿಯೂ ಧೂಳು ತುಂಬಿ ಲೊಡ್ಡುಹಿಡಿದು ಬಿದ್ದಿದ್ದರೆ, ಅದಕ್ಕೆ ಏನೂ ಅರ್ಥವಿರಲಿಲ್ಲ (ಶಿಬಂಧ. II. ೦).

**ಲೊಡ್ಡುಗಿನಮರ** (ನಾ). ಒಂದು ಬಗೆಯ ಮರ : ಬಲಲೊಡ್ಡಿ, ಬುಡಿಗಾನೆ, ಲೊಡ್ಡುಗಿನಮರ (ವೃಕ್ಷಶಿ. ೭೩–೦೯೯೦). [ ? + ಮರ₁]

**ಲೊಡ್ಡುಮರ, ಲಡ್ಡುಮರ** (ನಾ). ಪೊಳ್ಳಾದ ಮರ; ಜಳ್ಳು ಮರ : ಹಳೇಕಾಲದ ಲೊಡ್ಡುಮರ ಅದು (ಶಳುಹು. ೦೭೩). **ಲಡ್ಡುಮರ** : ಈ ಸಲ ಬಂದ ಬಿರುಗಾಳಿಗೆ ಲಡ್ಡುಮರಗಳೆಲ್ಲ ಮುರಿದು ಬಿದ್ದವು (ರೂಢಿ). [ಲೊಡ್ಡು + ಮರ₁]

**ಲೊದಡಿ** 'ಲೊದಳೆ' ನೋ.

**ಲೊದಳೆ, ಲೊದಡಿ** (ನಾ). ೧. ಜೊಲ್ಲು ; ಲಾಲಾರಸ : ಸುರಿವ ಬೆಮರಿನ ಬಾಯಲೊದಳೆ[ಪಾಠಾಂ. ಬಾಯ ಲೋಳೆ]ಯ . . . ಕುದುರೆ ಬೀಱುತು ಭಯವನಹಿತರಿಗೆ (ಕೊರಂಶ. ೩–೩೦–೩೩). ೨. ಜಿಗುಟಾದ ಮುದ್ದೆ : ತಲದೊಳ್ ತೆಕ್ಕೆಗೊಂಡ ನುಣ್ಪದುಳ ಲೊದಳೆಯಂ ಮೆಟ್ಟಿ (ಶಾಂತೀಶ್ವ. ೯–೦೦೯ ವ). **ಲೊದಡಿ** : ೨. ರಾಯಸಾಹೇಬರು ವೇದನೆಯಿಂದ ನರಳಿದರು, ಕೆಮ್ಮು ಬಂತು. ಬಾಯಿಂದ ನೆತ್ತರ ಲೊದಡಿ ಬಿದ್ದಿತು (ಶ್ರೀಪಾಶ್ರ. ೨೦೦). ೩. ಕಫ ; ಶ್ಲೇಷ್ಮ : ಮುದುಕನು ಕೆಮ್ಮಿ ಕಾರಿಕೊಂಡು ಬಹು ಪ್ರಯಾಸದಿಂದ ಲೊದಡಿಯನ್ನುಗುಳಿ ಕುಳಿತುಕೊಂಡು ಕೇಳಿದನು (ಕುಂಬಳ. ೦೦). 'ಲೋಳೆ' ಪರಾ.

**ಲೊಲ್ಲೊಟ್ಟೆ** 'ಲೊಳಲೊಟ್ಟೆ' ನೋ.

**ಲೊಳ್** (ನಾ). ಒಂದು ಅನುಕರಣ ಶಬ್ದ : ಲೊಳ್ ಎಂದು ನಾಯಿ ಬಗುಳಿತು (ರೂಢಿ).

**ಲೊಳ** (ನಾ). ಬರಿದಾಗಿರುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : 'ಲೊಳಲೊಟ್ಟೆ' ಪರಾ.

**ಲೊಳಲೊಟ್ಟೆ, ಲೊಡಲೊಟ್ಟೆ, ಲೊಲ್ಲೊಟ್ಟೆ** (ನಾ). ಪ್ರಯೋಜನವಿಲ್ಲದುದು ; ನಿಷ್ಪ್ರಯೋಜಕವಾದುದು ; ವ್ಯರ್ಥ : ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ (ಪುರಂದ. ೦–೦೦೦ ಕೃಪ). **ಲೊಡಲೊಟ್ಟೆ** : ಲೊಡಕ ಸಂಸಾರವು ನಮ್ಮೆಲ್ಲರ ಗತಿರಹಿತ ಮಾಡುವ ಲೊಡಲೊಟ್ಟೆವ್ವ (ಪುರಂದ. ೫–೦೦೦ ಅನುಕೃಪ). **ಲೊಲ್ಲೊಟ್ಟೆ** : ಇವಳಿಗೆ ಸಹಾಯ ಲೊಲ್ಲೊಟ್ಟೆಯೆಂದು ಬೇರೆ ಕೆಲವರು (ವಾಗ್ದೇಶ. ೨೯೦) ; ಊರಿಗೆ ಹಬ್ಬವಾದರೆ ನಾಯಿಗೆ ಲೊಲ್ಲೊಟ್ಟೆ (ಗಾದೆ). [ಲೊಳ + ಲೊಟ್ಟೆ₂ / ತಮಿ. ಲೊಟಲೊಟ್ಟೈ]

**ಲೋಕ** (ನಾ). ೧. ಸೃಷ್ಟಿಯಲ್ಲಿ ಕಾಣುವ ಭೂಮಿ, ಆಕಾಶ, ಸಮುದ್ರಗಳ ಎಲ್ಲ ಭಾಗಗಳು ಸೇರಿದ ಭಾಗ ; ವಿಶ್ವ ; ಪ್ರಪಂಚ ; ಜಗತ್ತು : "ಭುವನಂ, ವಿಷ್ಟಪಂ, ಲೋಕಃ, ಜಗತ್ – ಈ ೪ ಜಗದ ಪೆಸರ್" (ಹಲಾಯು. ೨೨–೦೩೩) ; ಹುಟ್ಟೊಂದು ಲೋಕದಲ್ಲಿ ಹುಟ್ಟಿಸಿ ಇಳಿಯ ಬಿಟ್ಟೊಡೆ ನಿಮ್ಮ ನಗುವರಯ್ಯಾ (ಬಸವ. ೬೩) ; ಲೋಕವಿವನ ಮನೆ, ಲೋಕದುದ್ಧಾರಣವೆ ಮನೆವಾರ್ತೆ (ಗೊರೊಕ್ಕಾ. ೨–೯೨). ೨. ಭೂಮಿ ; ಮರ್ತ್ಯಲೋಕ : ಲೋಕದೊಳಾಂ ಕಾಣದರಿಲ್ಲೀ ಕುತ್ತಂ ಪೊರ್ದಿನಮೆವ ಮಾನಿಸರಂ ಕೇಳಿ . . . ಕಂಡಱಿಯೆಂ (ಧರ್ಮಾಮೃ. ೪–೯೦) ; ನಂಬಲಱಿಯರೀ ಲೋಕದ ಮನುಜರು (ಬಸವ. ೦೦೬) ; ಲೋಕದೊಳಗೆಲ್ಲ ಕಂಡುದನು ನುಡಿದು ತಾನೇಕವಾಗಿಹನು (ಸರ್ವಜ್ಞ. ೦೬). ೩. (ಸಾಮಾನ್ಯ) ಜನ; ಪ್ರಜೆ ; ಜನತೆ : " ಜನಃ, ಲೋಕಃ, ಪ್ರಜಾ — ಈ ೩ ಪ್ರಜೆ "

(ಕರಾಜು. ೪೭-೦೨೯). ೪. ಮನುಷ್ಯಸಮುದಾಯ ; ಮಾನವಕುಲ : ಲೋಕಕ್ಕೈದರ್ಥಶಾಸ್ತ್ರದ ಟೀಕೆನಿಸಿದ ತನ್ನ ನುಡಿ ಮನಂಗೊಳಿಸೆ (ಕಂಕಥಾ. ೯-೦೪) ; ಲೋಕದ ಡೊಂಕ ನೀವೇಕೆ ತಿದ್ದುವಿರಿ (ಬಸವ. ೦೩೯) ; ತಂದೆಯನು ಜಜಿಸುವ ಮಗ ಹೊಲ್ಲ ಲೋಕಕ್ಕೆ ಬಂಧನವೆ ಹೊಲ್ಲ (ಸರ್ವಜ್ಞ. ೬೯೮). ೫. ಲೋಕದ ವ್ಯವಹಾರ,— ನಡವಳಿಕೆ : ಲೋಕ ಬಲ್ಲವರಿಗೆ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೆ (ಪಂಟಿರು. ೪೭). ೬. ನೋಡುವುದು ; ನೋಟ. ೭. ಭೂಮಿಯೂ ಸೇರಿದಂತೆ ಮೇಲೆ ಏಳು ಮತ್ತು ಕೆಳಗೆ ಏಳು ಎಂದು ಕಲ್ಪಿಸಿರುವ ಜಗತ್ತು : ಆತನವಯವವೆಲ್ಲವೀ ಸತ್ಯಾದಿ ಲೋಕಗಳು (ಅಪ್ಪುಕ. ೩-೨೩); ಲೋಕಗಳು ೧೪ ಇವೆ. ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಳ ಈ ಏಳು ಕೆಳಗಿನ ಲೋಕಗಳು. ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ—ಈ ಏಳು ಮೇಲಿನ ಲೋಕಗಳು (ಅಪ್ಪುಕ. ೩-೨೩ ಟಿಕು). 'ಚತುರ್ದಶಲೋಕ' ಪರಾ. ೮. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : ಹರನಯನ ವಹ್ನಿ . . . ಲೋಕಮಲತ್ರಿತಯಮಂ . . . ಮೂಜಿಬಿ ನಾಮಂ (ಛವಕಾ. ೯). ೯. ಏಳು ಎಂಬ ಸಂಖ್ಯೆಯ ಸಂಕೇತ. ೧೦. ಹದಿನಾಲ್ಕು ಎಂಬ ಸಂಖ್ಯೆಯ ಸಂಕೇತ.

ಲೋಕರ್ = (ಸಾಮಾನ್ಯ)ಜನ : ಲೋಕರಂತೆ ನೀ ಮೃತ್ತಿಕೆ ಮೆದ್ದು ತಾ ಕೋಟಿಸೆ ಜನನಿಯು (ಕುರಂದ. ೦-೯೬-೩) ; ಲೋಕರ್ಗೆ ಸಂದೇಹಸಲ್ಲ (ಛಕುಂಪ. ೯-೩೩). ಲೋಕಶಿಖಾಮಣಿ = ಜಗತ್ತಿನಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ಶ್ರೀಕೊಪಣಪುರವರೇಶ್ವರ ಲೋಕಶಿಖಾಮಣಿ ವಿಯಚ್ಚರಾನ್ವಯತಿಲಕಂ (ಎಇ. XX ; ೭೦-೨೭ ; ೧೧೦೯). [ಸಂ.]

**ಲೋಕಕಂಟಕ** (ನಾ). ಜಗತ್ತಿಗೆ ಕೇಡು ಮಾಡುವವನು : ತಾಮಸರ್ ಲೋಕಕಂಟಕರಾಗೆ ರಕ್ಕಸರೆನಿಸಿ ಮಾಜುಮೆಯ್ಯೊಳೊಗೆದು . . . ತಿರಿಗೆ ಪೈಜೆಯಾದರ್ (ಭಾಪಪು. ೦೦೯-೨೪). [ಸಂ.]

**ಲೋಕಕರ್ತ** (ನಾ). ಜಗತ್ತನ್ನು ಸೃಷ್ಟಿಸಿದವನು : ಲೋಕಕರ್ತಂ ನಾನೆ ಈತಂ ಲೋಕಪಾವನಮೂರ್ತಿ ಕಾರಣ ಲೋಕಶಿಕ್ಷಕ ನಾನೆ ಈತನು ಲೋಕರಕ್ಷಕನು (ಜಿಪು. ೩೦-೪೦). [ಸಂ. ಲೋಕಕರ್ತೃ]

**ಲೋಕಕಲ್ಯಾಣ** (ನಾ). ಜಗದ ಕ್ಷೇಮ ; ಜಗತ್ತಿನ ಕಲ್ಯಾಣ : ಆತ್ಮಕಲ್ಯಾಣದಂತೆಯೆ ಲೋಕಕಲ್ಯಾಣವೂ ಈತನ ವ್ಯವಹಾರಗಳ ಧ್ಯೇಯವಾಗಿರಬೇಕು (ಬುಕ್ಕಾಕ. ೯೦ ಪೀಠಿ). [ಸಂ.]

**ಲೋಕಗತಿ** (ನಾ). ಜಗತ್ತಿನ ನಡೆ ; ವಿಶ್ವದ ವ್ಯವಹಾರ : ಲೋಕಗತಿ ಮಾಯಾವಿಲಾಸ ವಿವೇಕಗಳಿಗಿದು ಬಯಲು ಛಲುಂಗುಣ ಸಾಕು ಗರ್ವವ ಬೀಳುಕೊಡು (ಕುವ್ಯಾಭೀ. ೩-೩೯). [ಸಂ.]

**ಲೋಕಗಾಳ್ಯ** (ನಾ). ಒಬ್ಬಾತನ ಹೆಸರು ; ಲೋಕಗಾಳ್ಯರ್ಪೂಸವೃತಂ ಬ್ರಹ್ಮದೇಂ ಕೊಟ್ಟು (ಎಸಿಇ. ೦೯೯೩. ೦೦-೩ ; ಸು. ೬೭೮ರು ೬೬). [ ? ]

**ಲೋಕಗುರು** (ನಾ). ೧. ಜಗತ್ತಿಗೆ ಗುರುವೆನಿಸಿರುವವನು ; ಪರಮಾತ್ಮ : ಲೋಕಗುರು ಶಂಖಚಕ್ರಗದಾಕರನತಿಶಯಚತುರ್ಭುಜಂ (ಕಂಕಥಾ. ೯-೪೦). ೨. ವಿಶ್ವದ ಗುರು ; ಮಹಾತ್ಮ : ಮನ್ಮನೋಮಂದಿರಕೆ ಓ ಲೋಕಗುರುಗಳೆಲ್ಲ ಬನ್ನಿ (ಅಗ್ನಿಹಂ. ೯-೨). [ಸಂ.]

**ಲೋಕಚಕ್ಷು** (ನಾ). ಜಗತ್ತಿಗೆ ಕಣ್ಣಾದವನು ; ನೇಸರು ; ಸೂರ್ಯ. [ಸಂ. ಲೋಕಚಕ್ಷುಸ್]

**ಲೋಕಚೂಡಾಮಣಿ** (ನಾ). ಜಗತ್ತಿನಲ್ಲಿ ಶ್ರೇಷ್ಠನಾದವನು : ಸುಖಸಾದ್ಯೈತನುಂ ಲೋಕಚೂಡಾಮಣಿಯುಂ . . . ಪರಮಬ್ರಹ್ಮಸ್ವಕ್ಕೆ ಸಂದಂ (ಅಪು. ೦೩-೩೦). [ಸಂ.]

**ಲೋಕಜನನಿ** (ನಾ). ಜಗತ್ತಿನ ತಾಯಿ ; ಲೋಕಮಾತೆ ; ಲಕ್ಷ್ಮಿ : "ಇಂದಿರಾ . . . ಲೋಕಜನನೀ, ಕ್ಷೀರಸಾಗರಕನ್ಯಕಾ—ಈ ಲಕ್ಷ್ಮಿಯ ಹೆಸರುಗಳು" (ಸಿದ್ಧಾಂತಿ. ೮೪). [ಸಂ. ಲೋಕಜನನೀ]

**ಲೋಕಜಿತ್ತು** (ನಾ). ೧. ಜಗತ್ತನ್ನು ಗೆದ್ದವನು ; ವಿಶ್ವವನ್ನು ಜಯಿಸಿದವನು. ೨. ಋಷಿ ; ಸಂನ್ಯಾಸಿ. ೩. ಬುದ್ಧ : "ಬುದ್ಧಂ . . . ಲೋಕಜಿದ್ಧ ನಿ ಸಮಂತಭದ್ರನೆನಲ್ಕೆ ಬೌದ್ಧಂ" (ಮಂಗರಾ. ೭-೨೩). [ಸಂ. ಲೋಕಜಿತ್]

**ಲೋಕಜ್ಞ** (ನಾ). ಭೂಲೋಕದ ರೀತಿನೀತಿಗಳನ್ನು ಅರಿತವನು : ತಮ್ಮ ಮೂಜಿನೆಯ ಭವದ ಜನ್ಮಜನಕಮೋಹಂ ಕಾರಣವಾಗಿ ನಿಮ್ಮಡಿಯಂ ಕಾಣಲ್ ಬಂದು ಲೋಕಜ್ಞರುಂ ಸೇವಾವಿಚಕ್ಷಣರುಮಪ್ಪುದಱಿಂದಂ . . . ಅದೃಶ್ಯರಾಗಿ ನೋಡುತ್ತುಮಿರ್ದರ್ (ಶಾಂತಿಪು. ೯-೩೩ ವ). [ಸಂ.]

**ಲೋಕಟಿಗ** (ನಾ). ಒಬ್ಬಾತನ ಹೆಸರು : ಆತನ ವೇಳೆ ಬಡಗೊಣ್ಡದ ಲೋಕಟಿಗನರಸಂಗೆ ಪುತ್ರನಿಮಿತ್ತಂ ಕಾರಣಮಾಗಿ ಹುಯ್ವಿಗಣ್ಣದಬ್ಬೆಗೆ ತಲೆಯಂ ಪರಿಸಿ (ಎಕ. VIII, ಸೊರಬ. ೪೭೯-೩ ; ೨೨೧). [ ? ]

**ಲೋಕಟೆ** (ನಾ). ಒಬ್ಬಾತನ ಹೆಸರು : ರತ್ನಕ್ಷಿತಿಯುವ್ವು ವರಿಹಾ ಪ್ರವರ್ತಿಸೆ ಲೋಕಟೆ ಬನವಸೆ[ಪ]ನ್ನಿರ್ಚ್ಛಾಸಿರಮುಮನಾಳೆ (ಎಇ. XX, ೮೫-೩ ; ೪೦೪). [ ? ]

**ಲೋಕತಂತ್ರ** (ನಾ). ೧. ಜಗತ್ತಿನ ವ್ಯವಹಾರ : ವಿಶ್ವದ ನಡವಳಿಕೆ : ನಾವು ವನವಾಸಿಗಳಾದರೂ ಲೋಕತಂತ್ರವನ್ನೆಲ್ಲಾ ಬಲ್ಲೆವು (ಶಾಕುಂತ. ೩೩-೯). ೨. ಪ್ರಜೆಗಳು ಸಾಕ್ಷಾತ್ತಾಗಿ ಅಥವಾ ಪ್ರತಿನಿಧಿಗಳ ಮೂಲಕ ನಡೆಸುವ ರಾಜ್ಯಭಾರ ; ಪ್ರಜಾಪ್ರಭುತ್ವ : "ಪ್ರಜಾಪ್ರಭುತ್ವ, ಜನತಂತ್ರ, ಲೋಕತಂತ್ರ" (Democracy. ಕಪ್ರಿಶ. ೩೦). [ಸಂ.]

**ಲೋಕದೂರ** (ನಾ). ಜಗತ್ತಿನ ವ್ಯವಹಾರದಿಂದ ದೂರವಾದುದು ; ಜಗತ್ತಿನ ಸಂಬಂಧವನ್ನು ಕಳೆದುಕೊಂಡುದು : ರಸಾನುಭವ ಲೋಕಾತಿಶಯ, ಲೋಕೋತ್ತರ ಎಂದರೆ ಲೋಕದೂರವಾಗಲೀ ಲೋಕಭಿನ್ನವಾಗಲೀ ಅಲ್ಲ (ಕಾವ್ಯಾರ್ಥ. ೩೦). [ಸಂ.]

**ಲೋಕಧರ್ಮ** (ನಾ). ಜನತೆಯ ನಡೆ ; ಲೋಕಾಚಾರ ; ಜನರೂಢಿ : ಲೋಕಧರ್ಮದ ರಚನೆ ರಚಿಸುವುದೆಂತಲೇ ನಮಗಿಹುದು ಮತವಲ್ಲದೊಡೆ ಮಾಣಲೆನುತ್ತ ಮುರಿದಿದ್ದ (ಕುವ್ಯಾಕ. ೩೩-೦೯) ; ಲೋಕದ ನಡವಳಿಕೆಯನ್ನು ಅನುಸರಿಸಿ, ಗದ್ಯದಲ್ಲಿ ಮಾತನಾಡುವುದು, ಸ್ವಾಭಾವಿಕವಾಗಿ ನಡೆದಾಡುವುದು ಇವೆಲ್ಲಾ 'ಲೋಕಧರ್ಮ' (ಕೃಶಿಬಿ. ೨೦೩ ಟಿಪ್ಪಣಿ). [ಸಂ.]

**ಲೋಕಧರ್ಮಿ** (ನಾ). [ನಾಟ್ಯ] ಎರಡು ಬಗೆಯ ನಾಟ್ಯಸಂಪ್ರದಾಯಗಳಲ್ಲಿ ಒಂದು : ಲೋಕಧರ್ಮಿ ನಾಟ್ಯಧರ್ಮಿಯೆಂಬೆರಡುಂ ಧರ್ಮಿಯುಮಂ . . . ನೆಟಿಯೆ ತೋಱ (ಅಪು. ೩-೪೦ ವ). 'ಧರ್ಮಿ' ಪರಾ. [ಸಂ. ಲೋಕಧರ್ಮಿನ್]

**ಲೋಕನಯನ** (ನಾ). ಲೋಕಕ್ಕೆ ಕಣ್ಣೆನಿಸಿರುವವನು ; ಸೂರ್ಯ : ಶ್ರೀಕರದ ತತ್ಸರೋವರಮಹೀ [ನೀ] ಕ್ಷಿಸಿ ರತಿ ಲೋಕನಯನದ ತಾಪವಡಸಿ . . . ಸುಯ್ದಾನದೊಡನೆ (ಪಪವಿಹೀ. ೯-೩೩). [ಸಂ.]

**ಲೋಕನಾಥ** (ನಾ). ೧. ಜಗತ್ತಿನ ಒಡೆಯ ; ವಿಶ್ವದ ಪ್ರಭು : ಸಭೆಯೊಳ್ ದೇವನಿಕಾಯಮೊಪ್ಪುತ್ತಿರೆ ಬಂದಂ ಲೋಕನಾಥಂ ಸ್ವಯಂಪ್ರಭತೀರ್ಥೇಶ್ವರಂ (ಶಾಂತಿಪು. ೦-೪೦). ೨. ಬ್ರಹ್ಮ. ೩. ವಿಷ್ಣು : ಲೋಕನಾಥನ ನೆನೆಯೋ ಮನುಜಾ (ಪುರಂದ. ದಾ. ೩-೦೦೬ ಅನುಕ್ರಮ). ೪. ಶಿವ : ಆ ಕುಲಂಗಳ ಮಾತವೇತಕೆ ಲೋಕನಾಥಪ್ರೋಕ್ತವಾದ ಪ್ರಾಕಟದ ಜಾತಿಗಳಿಗಾ ಅಷ್ಟಾವದಂಗಳು (ಬಸಪು. ೩೩-೨೦). ೫. ಬುದ್ಧ. ೬. ರಾಜ ; ದೊರೆ. [ಸಂ.]

**ಲೋಕನಾಥರಸ** (ನಾ). [ವೈದ್ಯಶಾ] ಒಂದು ಬಗೆಯ ಔಷಧೀತೈಲ : ಪಾವಟಬೀಜ, ಬಿಳಿಕರ್ಣಕಬೀಜ . . . ಮರ್ದಿಸಿ ಕಹಿಸೋರೆಕಾಯಲ್ಲಿ

ತುಂಬಿ ಬಿಸಿಲಲ್ಲಿ ಇಟ್ಟಿದ್ದರೆ ತೈಲ ಬರುವುದು . . . ಈ ತೈಲದ ಹೆಸರು ಲೋಕನಾಥರಸ (ಶಶಸ್ತ್ರ. ೩೮.೯೬೦ ।). [ಸಂ.]

**ಲೋಕನಾಯಕ** (ನಾ). ೧. = ಲೋಕನಾಥ ೧ : ಲೋಕನಾಯಕ ಸಿರಿಪುರಂದರವಿಠಲನ ಸಾಕಾರವಾದಂಥ ಪರಮಭಾಗವತರು (ಪುರಂದರ. ದಾ. ೩-೦೫-೩). ೨.= ಲೋಕನಾಥ ೪ : ನಾಕು ಬಾಗಿಲ ನಡುವೆ ಏಕಾಕಿ ನಿಂತಿಹನು ತೂಕುಳ್ಳ ಕೈಲಾಸಮಂದಿರದಿ ಶಿವಸಿದ್ಧ ಲೋಕನಾಯಕನ ಲೀಲೆಯಲಿ (ಸಿದ್ಧ ಪು. ೬-೩೭). [ಸಂ.]

**ಲೋಕನಿಷ್ಠ** (ನಾ). ಜಗತ್ತಿಗೆ ಸಂಬಂಧಪಟ್ಟುದು; ಲೌಕಿಕವಾದುದು : ಕಲೆ ಸತ್ಯವನ್ನು ಪ್ರಕಟಿಸುತ್ತದೆ ಎಂದರೆ ಅದು . . . ಲೋಕನಿಷ್ಠವೇ ಅಥವಾ ಲೋಕಾತೀತವೇ—ಈ ಬಗೆಯ ಹಲವು ಸಮಸ್ಯೆಗಳು ಏಳುತ್ತವೆ (ಸೌಂದರ. ೯೦). [ಸಂ.]

**ಲೋಕನೇತ್ರ** (ನಾ). ೧.= ಲೋಕನಯನ: ಲೋಕನೇತ್ರನ ಕುಲೋದ್ಭವ ಕುಮಾರರ್ಕಳಂ . . . ಆಲೋಕಿಪರು (ಶಾಶಂ. ೬-೦೫); ನಿಜನೇತ್ರಂ ಲೋಕನೇತ್ರಂ . . . ನಿಜರಮಣಿ ಜಗನ್ಮಂಡಲೀಮಹಿತೆ ನಿಚ್ಚಂ . . . ನಿಜಮಾದಂ ಸುಪ್ರಮೋದಂ ಕುಡುಗೆಮಗತುಳಶ್ರೀಯಮಂ ಶೈಲಜೇಶಂ (ರಾಜಶೇ. ೦-೨). ೨. ಚಂದ್ರ : (೪). [ಸಂ.]

**ಲೋಕಪತಿ** (ನಾ). ಜಿನ ; ತೀರ್ಥಂಕರ : ಲೋಕಪತಿಗಿಟ್ಟನನುಸ್ಮೃತ ಮಾತ್ರಪಾಪವಿಚ್ಛೇದನಮಂ ಜಗತ್ಪ್ರಥಮಮಂಗಳಮಂ ಹರಿ ಶಾಂತಿನಾಮ್ನಮಂ (ಶಾಂತಿಪು. ೦೦-೭೯). [ಸಂ.]

**ಲೋಕಪಾಲ** (ನಾ). ೧. ಜಗತ್ತನ್ನು ಪಾಲಿಸುವವನು; ವಿಶ್ವವನ್ನು ಕಾಪಾಡುವವನು: 'ಲೋಕಪಾಲತ್ವ' ಪರಾ. ೨. ದಿಕ್ಕನ್ನು ಕಾಯುವವನು; ದಿಕ್ಪಾಲ : ನಾಲ್ವರ್ ಲೋಕಪಾಲರುಂ . . . ಅಱುವತ್ತು ಮೂವರ್ ವಲ್ಲಭೆಯರುಂ ತನಗೆ ಪ್ರಸಿದ್ಧಮಾಗೆ (ಶಾಂತಿಪು. ೯-೦೦೦ ವ); ಹರಿಯಿಲ್ಲದ ಪವನಾಧ್ವಂ ಹರಿಯಿಲ್ಲದ ಲೋಕಪಾಲಪರಿಷನ್ನಿಲಯಂ ಹರಿಯಿಲ್ಲದ ಕಾಂತಾರಂ ಹರಿ ನೀನಿಲ್ಲದ ಮದೀಯಗೋಕುಲಮಪ್ಪುದಂ (ಜಗಂ. ೩-೮೫). ೩. ಅರಸ ; ರಾಜ: " ರಾಜಾ . . . ಲೋಕಪಾಲಃ—ಈ ೧೨ ಅರಸು" (ಶಬ್ದಮ. ೬೯-೨೬೭); ಹರುಷಸಂಕಲಿತಮಹುದೀ ಲೋಕಪಾಲರಂ ಪಡೆದಖಿಳಭೋಗಂಗಳಂ ಚುಂಬಿಸಿ . . . ಸತಪೋರಾಜ್ಯಪಾಲನೆಗೆ ಗಮಿಸುವುದೆ ಸದ್ಧರ್ಮವು (ಪಂಚಾಶ. ೨-೧೦-೦೦). [ಸಂ.]

**ಲೋಕಪಾಲಕ** (ನಾ).= ಲೋಕಪಾಲ ೨ : ಇಂದ್ರ ಅಗ್ನಿ . . . ಚಂದ್ರ ಈ ಪದಿಂಬರು ಲೋಕಪಾಲಕರಿಂದಂ (ಕೃತಿಶಾ. ೬-೯). [ಸಂ.]

**ಲೋಕಪಾಲತ್ವ** (ನಾ). ಜಗತ್ತನ್ನು ಪಾಲಿಸುವಿಕೆ ; ವಿಶ್ವದ ಅಧಿಕಾರ : ಅವನಿಗೆ ಅಮರತ್ವ, ಧನಪತಿತ್ವ, ಲೋಕಪಾಲತ್ವ . . . ಇವುಗಳನ್ನು ಕೊಟ್ಟನು (ದಶಭಾ. ೯೦೩). [ಸಂ.]

**ಲೋಕಪಾವನ** (ನಾ). ಜಗತ್ತನ್ನು ಪವಿತ್ರಗೊಳಿಸುವಂಥದು: ಲೋಕಪಾವನವೆನಿಸಿ ಹರಿವ ಕಾವೇರಿಯಿಂ (ತಿರುಕ. ದೇ. ೨-೩). [ಸಂ.]

**ಲೋಕಪಿತ** (ನಾ). ಜಗತ್ತಿನ ತಂದೆ; ಪ್ರಜಾಪತಿ; ಬ್ರಹ್ಮ: ಲೋಕಪಿತನೊಲ್ದು ಚತುರ್ಮುಖನೀಗೆ ರಾಗಮಂ (ಜಗಂ. ೦-೨). [< ಸಂ. ಲೋಕಪಿತೃ]

**ಲೋಕಪೂರಣ** (ನಾ). [ಜೈನ] "ಕೇವಲಿಗಳ ಆತ್ಮವು ಭೂಮಂಡಲದ ಹಾಯುತ್ರಯದೊಡನೆ ಲೋಕವನ್ನೆಲ್ಲ ವ್ಯಾಪಿಸುವುದು" (ಕೈಪಶಕೋ. ೨೨೦). ' ಲೋಕಪೂರಣಕ್ರಿಯೆ ' ಪರಾ. [ಸಂ.]

**ಲೋಕಪೂರಣಕ್ರಿಯೆ** (ನಾ). = ಲೋಕಪೂರಣ : ತದನಂತರಕ್ಷಣದೊಳ್ ವ್ಯಾಪ್ತಸಪ್ತಘನರಜ್ಜುಪ್ರಮಾಣಾಶೇಷಜಗತ್ಪ್ರದೇಶಲೋಕಪೂರಣಕ್ರಿಯಾಪರಿಸಮಾಪ್ತಿಯಂ ಮಾಡಿ (ಆದಿಪು. ೦೬-೯೯ವ) ; ದಂಡಕವಾಟಪ್ರತರ ಲೋಕಪೂರಣಕ್ರಿಯೆಗಳಂ ಪ್ರತಿಸಮಯಂ ಪ್ರಯೋಗಿಸಿ (ಶಂಶಾಪು. ೦೬-೭೯ ವ). [ಸಂ. ಲೋಕಪೂರಣಕ್ರಿಯಾ]

**ಲೋಕಪ್ರತೀತ** (ಗು). ಜಗತ್ಪ್ರಸಿದ್ಧವಾದ ; ವಿಶ್ವವಿಖ್ಯಾತವಾದ : ಲೋಕಪ್ರತೀತ ಸುಭಗವಿವೇಕಾಳಾಪಂ ಪ್ರಸನ್ನಮದುಳ್ವಿಚಿಂತಕಶ್ಮಂ (ಶಬ್ದಾ. ೨-೭೫). [ಸಂ.]

**ಲೋಕಪ್ರತೀತಿ** (ನಾ). ಜಗತ್ಪ್ರಸಿದ್ಧವಾದುದು : ನಯವಿದುದಿತ ಯುಕ್ತಿವ್ಯಕ್ತಿಲೋಕಪ್ರತೀತ್ಯಾಶ್ರಯಸಕಳಕಳಾಲೀಲಾಕರಾಲ್ಪೋಪಜಲ್ಪಂ (ಶಬ್ದಾ. ೩-೨೦೩). [ಸಂ.]

**ಲೋಕಪ್ರಸಿದ್ಧ** (ನಾ). = ಲೋಕಪ್ರತೀತಿ : ಶ್ರವಣಬೆಳಗೊಳ ಲೋಕಪ್ರಸಿದ್ಧವಾದುದು (ರೂಪ). [ಸಂ.]

**ಲೋಕಪ್ರಸಿದ್ಧಿ** (ನಾ). ೧. ಜಗತ್ತಿನಲ್ಲಿ ವ್ಯಾಪಿಸಿದ ಕೀರ್ತಿ ; ವಿಶ್ವದಲ್ಲಿ ಹರಡಿದ ಯಶಸ್ಸು : ಲೋಕರೂಢಿ= ಲೋಕಪ್ರಸಿದ್ಧಿ (ಕಮಕ. ೬. ೨೫೨ ಟೀಕು); ಅದರಂತಹುದೆಷ್ಟೊ ಆಗಲೇಬೇಕಲ್ಲ ಲೋಕಪ್ರಸಿದ್ಧಿಯ ಜಯದಲಿ ಎಂದ (ಜಂಗೀಕ. ೩೩-೨೯). ೨. ಜನಬಳಕೆಯಲ್ಲಿರುವುದು ; ಲೋಕಾಚಾರ : ಲೋಕಪ್ರಸಿದ್ಧಿಗೆ ವಿರುದ್ಧವಾದುದು (ಕೃಶಬ್ದ. ೨೨೬). ೩. [ತರ್ಕಶಾ] ಹನ್ನೆರಡು ವಿಧವಾದ ಪ್ರಮಾಣಗಳಲ್ಲಿ ಒಂದು : ಪ್ರಮಾಣವು ಪ್ರತ್ಯಕ್ಷ . . . ಲಿಪಿ, ಲೋಕಪ್ರಸಿದ್ಧಿ, ಚೇಷ್ಟೆ, ಪ್ರಾತಿಭ ಎಂದು ಹನ್ನೆರಡು ವಿಧವೆಂದು ಕೆಲವರು ಹೇಳುತ್ತಾರೆ (ಹಿಂದಶಾ. ೦೩೩). [ಸಂ.]

**ಲೋಕಬಾಂಧವ** (ನಾ). ಜಗತ್ತಿಗೆ ಬಂಧುವಾದವನು ; ಸೂರ್ಯ : ಮಹಾಲಯದ ವಿಷವನಿಕ್ಕಿದರಂ ಸಲಹಿದ ಮತ್ತಾ ಲೋಕಬಾಂಧವನ ಪಲ್ಗಳೆದ (ಶಕ್ಕರಾ. ೦೩-೦೨); ಲೋಕಬಾಂಧವನುದಯವಾಗಲುಪ್ಪವಡಿಸುತಲಾ ಕುಮಾರರು ನಿತ್ಯಕೃತ್ಯಂಗಳಂ ರಚಿಸಿ (ಶಾಶಂ. ೭-೦೫). [ಸಂ.]

**ಲೋಕಬಿಂದುಪೂರ್ವ** (ನಾ). [ಜೈನ] ಆಗಮಗಳ ಹದಿನಾಲ್ಕು ಪೂರ್ವಗಳಲ್ಲಿ ಒಂದು ಬಗೆ; ಮೋಕ್ಷಸಾಧನೆಗೆ ಯೋಗ್ಯವಾದ ಕ್ರಿಯೆಗಳ ವರ್ಣನಾಶಾಸ್ತ್ರ ; ಜಗತ್ತಿನ ತಿಳಿವಳಿಕೆ : ಪೂರ್ವಗಳು ಜೈನ ಶಾಸ್ತ್ರವಿಭಾಗಗಳಾಗಿವೆ. (೧) ಉತ್ಪಾದನಾಪೂರ್ವ . . . (೧೪) ಲೋಕಬಿಂದುಪೂರ್ವ (ಲೋಕದ ತಿಳವಳಿಕೆ) (ಜೈಪಶ. ೯೯೯). ' ಚತುರ್ದಶ ಪೂರ್ವ ' ಪರಾ. [ಸಂ.]

**ಲೋಕಬೆಟ್ಟು** (ನಾ). (?) : ಪಾಂಡೆನಾಡ ಬಂಗಮಂಜು[ವ] ಮೊದಲಾದ ಹಿರಿಯರು ಲೋಕಬೆಟ್ಟೆಂಬ ಬಾಳಿಕೆಯನು ಬಾಳಿ ಬಂದಲ್ಲಿ (ಶಾಶಾ. IX- ii, ೪೬೦-೦೨;`1465). [ ? ]

**ಲೋಕಬ್ಬೆ** (ನಾ). ಒಬ್ಬಾತನ ಹೆಸರು : ತಮ್ಮ ಲೋಕಬ್ಬೆ ಬಿಟ್ಟ × ದಗಟ್ಟ ಕನ್ನಿ ಬಾಚಣಯ್ (ಪ್ರಶಂ. ೦೯೨೫. ೩೨-೬: ೨). [ ? ]

**ಲೋಕಭಿನ್ನ** (ನಾ). ಜಗತ್ತಿನಿಂದ ಬೇರೆಯಾದುದು ; ವಿಶ್ವಕ್ಕೆ ಸೇರದುದು : ರಸಾನುಭವ ಲೋಕಾತಿಶಯ, ಲೋಕೋತ್ತರ ಎಂದರೆ ಲೋಕದೂರವಾಗಲೀ ಲೋಕಭಿನ್ನವಾಗಲೀ ಅಲ್ಲ (ಸೌಂದರ. ೨೦). [ಸಂ.]

**ಲೋಕಮತ** (ನಾ). ಜನರ ಅಭಿಪ್ರಾಯ,—ಮತ : " ಜನಸಾಮಾನ್ಯರಲ್ಲಿ ರೂಢಿಯಾಗಿರುವ ಮಂ. ನೈತಿಕವಿಷಯಗಳ ಮೇಲಿನ ಅಭಿಪ್ರಾಯ : ಜನಾಭಿಪ್ರಾಯ; ಲೋಕಮತ " (Opinion. ಇಂಕಿ). [ಸಂ.]

**ಲೋಕಮರ್ಯಾದೆ** (ನಾ). ಜಗತ್ತಿನ ನಡತೆಯ ಇತಿ ಮಿತಿ ; ಲೋಕಾಚಾರ ; ಲೋಕರೂಢಿ,—ಸಂಪ್ರದಾಯ ; ಯಾರೂ ಲೋಕಮರ್ಯಾದೆಯನ್ನು ಮೀರಬಾರದು (ರೂಪ). [ಸಂ. ಲೋಕಮರ್ಯಾದಾ]

**ಲೋಕಮಾತೆ** (ನಾ). ಜಗತ್ತಿನ ತಾಯಿ ; ಜಗಜ್ಜನನಿ ; ಲಕ್ಷ್ಮಿ : '' ಲೋಕಮಾತೆ ಮನ್ಮಥಮಾತೆಯೆನಲು ಸಿರಿಗಕ್ಕು ನಾಮಂ " (ಮಂಗರಾ. ೬_೦೬); ಒಱಲೆಗಳು ದಳ್ಳುರಿಯ ಕಿಚ್ಚಿಂಗೆಱಗಬಲ್ಲುವೆ ದನುಜ ಕಂಗಳ ತೆಱೆದು ನೋಡಲು ಬಹುದೆ ಸೀತೆಯ ಲೋಕಮಾತೆಯನು (ತೊರಾ. ೯೩-೫೦). [ಸಂ. ಲೋಕಮಾತಾ]

**ಲೋಕಮಾನ್ಯ** (ನಾ). ಜನರಿಂದ ಮಾನ್ಯತೆ ಪಡೆದವನು ; ಜನರಿಗೆ ಪೂಜ್ಯನಾದವನು : ಲೋಕಮಾನ್ಯನು ಕರ್ಣ (ಕುಮಾ.ಭ. ೦೨-೩೦). [ಸಂ.]

**ಲೋಕಮಿತ್ರ** (ನಾ). = ಲೋಕಬಾಂಧವ : ನಿಜಪತ್ನಿಯುಗಲಿ ಕೋಟಲೆಗೊಂಬವಂ ಮುನ್ನದಾರೆಂದೊಡೇ ಲೋಕಮಿತ್ರಾಸ್ತಮಯದಲ್ಲಿ . ಬಂದು ಶ್ರಿತಾನೀಕಕ್ಕೆಯಾಲಯವನೀಯದಾತಂ (ಚೀಕ್ಕ.ಶೃ. ೪-೨೨-೩೦). [ಸಂ.]

**ಲೋಕಮೂಢ** (ನಾ). [ಜೈನ] ಲೋಕಮೂಢ, ದೇವತಾಮೂಢ, ಪಾಷಂಡಿಮೂಢವೆಂಬ ಮೂಢತ್ರಯಗಳಲ್ಲಿ ಒಂದು ; ☞ "ಎಲ್ಲಾ ಸ್ಥಳಗಳೂ ಸಮಾನವೆಂಬುದನ್ನು ಮರೆತು ಗಂಗಾಸ್ನಾನಾದಿಗಳಿಂದ ಪಾಪಪರಿಹಾರವಾಗುವುದೆಂಬ, ಮರಳು ಕಲ್ಲುಗಳನ್ನು ರಾಶಿ ಮಾಡುವುದು, ಬೆಂಕಿಯಲ್ಲಿ ಬೀಳುವುದು ಮುಂತಾದ ಮಿಥ್ಯಾ ನಂಬಿಕೆ" (ಕೃಶಕೋ. ೨೨೦) : ಲೋಕಮೂಢಮುಂ ದೇವತಾಮೂಢಮುಂ ಪಾಷಂಡಿಮೂಢಮುಂ ಎಂದು ಮೂಢಂ ತ್ರಿವಿಧಮಕ್ಕು (ಚಾರಿ. ೪೩೯). [ಸಂ.]

**ಲೋಕಮೂಢತ್ವ** (ನಾ). = ಲೋಕಮೂಢ : ಮತ್ತಂ ಲೌಕಿಕ ಪಾರಮಾರ್ಥಿಕ ಹೇಯೋಪಾದೇಯ ತತ್ತ್ವಪರಿಜ್ಞಾನರಹಿತರನೇಕಮೂರ್ಖ ಲೋಕಪ್ರವಾಹದಿಂ ಬಂದ ಧರ್ಮಕರ್ಮಾನುಷ್ಠಾನಮಂ ಮಾಳ್ಪುದದುವುಂ ಲೋಕಮೂಢತ್ವಮೆಂಬುದು (ಚಾರಿ. ೪೬೦). [ಸಂ.]

**ಲೋಕಯಾತ್ರೆ** (ನಾ). ೧. ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಪ್ರವಾಸಮಾಡುವುದು ; ಜಗತ್ತನ್ನು ಸುತ್ತುವುದು : ಗಾಲಿಯೊಂದೇ ರಥಕೆ ಜೋಡಾಗಿ ಪೂಡುವೊಡೆ ಸಾಲದೇಳೇ ಹಯಂ ನಡೆಸುವೊಡೆ ಸಾರಥಿಗೆ ಕಾಲಿಲ್ಲ ಲೋಕಯಾತ್ರೆಯನೊಲ್ಲೆನೆಂದೊಡಾಗದೆ ತನಗೆ ತಿರುಗಲೇಕೆ (ಕೃಬಿಪಾ. ೨೬-೨೬). ೨. ಲೋಕಾಚಾರ : ಲೋಕರೂಢಿ : ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದೊಡಾಳ್ದನಾಳ್ ಸರೋಗನರೋಗಂ ಶ್ರಮರಹಿತಂ ಕ್ಲೇಶಕೃತಶ್ರಮನೆಂಬೀ ಲೋಕಯಾತ್ರೆ ಕಿಡದೆ ಮಹಾತ್ಮಾ (ಶಾಂತಿಪು. ೬-೦೪೦). ೩. ಪ್ರಪಂಚದಲ್ಲಿರುವ ಬಾಳು ; ಇಹದ ಬದುಕು: ಈ ಜೀವನಕ್ರಮವು . . . ಲೋಕಯಾತ್ರೆಯನ್ನು ನಡೆಸುತ್ತಿದ್ದ ಪ್ರಾಚೀನ ಭಾರತೀಯರೆಲ್ಲರ ಧರ್ಮವಾಗಿದ್ದಿತು (ಭಾರಪ. ೪೪೬). [ಸಂ. ಲೋಕಯಾತ್ರಾ]

**ಲೋಕಯ್ಯ** (ನಾ). ಒಬ್ಬಾತನ ಹೆಸರು : [ನಾ]ಗವ[ರ್ಮ್ಮ ಸಿ]ಡಿಯ ನೂರನಾಳುತ್ತಿರೆ(ಯು) ಲೋಕಯ್ಯಂ ತು × × × ಣ್ಕೆ ಗಾಮುಣ್ಡಗೆ ಅವುತಮು(ಂ)ಮ್ಪಿಟ್ಟು (ಕೌಇ. XX, ೦೩-೬ ; ೭೦೪) ; ಕೊಮರಸೆಯ ಚಿಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಮಾರಪ್ಪಲಿಯುಂ (ಎಕ. XII, ಸಿರಾ. ೨೯-೩೦ ; ೬೩೩). [ಲೋಕ+ಅಯ್ಯ$_{1}$]

**ಲೋಕರಕ್ಷಕ** (ನಾ). ೧. ಜಗತ್ತನ್ನು ಕಾಪಾಡುವವನು : ಲೋಕಕರ್ತಂ ನಾನೆ ಈತಂ ಲೋಕಪಾವನಮೂರ್ತಿ ಕಾರಣ ಲೋಕಶಿಕ್ಷಕ ನಾನೆ ಈತನು ಲೋಕರಕ್ಷಕನು (ಚಪ್ರಿ. ೦೦-೪೦). ೨. ಜಗತ್ತನ್ನು ಕಾಪಾಡುವಂತಹುದು : "ಅಧ್ಯಾತ್ಮತೇಜೋಬಲಂ ಬಲಂ" ಎಂದು ಘೋಷಿಸಿ . . . ಲೋಕನಾಶಕವಲ್ಲದೆ ಪೂರ್ಣವಾಗಿ ಲೋಕರಕ್ಷಕ ಎಂದು ಇಂದಿನ ಯುಗದಲ್ಲಿ ಅದರ ಸತ್ಯಸ್ಥಾಪನೆ ಮಾಡಿದ ಗಾಂಧಿ ಭರತಖಂಡದ ಪ್ರಾಚೀನ ಸಂಸ್ಕೃತಿಯ ಪ್ರತೀಕ (ಪುಣ್ಯರ. ೦೨೦ ಬೀಪ). [ಸಂ.]

**ಲೋಕರೂಢಿ** (ನಾ). ಜನಸಾಮಾನ್ಯರ ಪದ್ಧತಿ.– ಸಂಪ್ರದಾಯ : ಈಕ್ಷಿಸಿ ಶಿಕ್ಷಾಸೂತ್ರದ ಲಕ್ಷಣಮಂ ಲೋಕರೂಢಿ ಕಿಡದವೊಲಬುಧರ್ ಲಕ್ಷಿಪುದು ನಾಡಿಗಳೊಳ್ ಬಹುಳಾಕ್ಷೇಪಣಮಿಲ್ಲದಿರೆಯುಮಬೀಯದ ಕೆಲವಂ (ಶಬ್ದ. ೨೩೨) ; ಬಿಷ್ಟಳ ಎಂದು ಅವನ ಮಾತಾಮಹನ ಹೆಸರಿಕ್ಕಿದುದು ಲೋಕರೂಢಿಗೆ ವಿಹಿತವಾಗಿದೆ (ಪುರುಷಾ. ೭೪). [ಸಂ.]

**ಲೋಕಲುಂಟಾಕ** (ನಾ). ಜಗತ್ತಿಗೆ ತೊಂದರೆ ಕೊಡುವವನು : ಲೋಕಲುಂಟಾ[ಕಾಕಾಂ.ರಾ]ಕರಸಂಖ್ಯಾತರ್ ಕಿರಾತರ್ ನೆರೆದು ನಿಖಿಲ ಭೂಚಕ್ರಮಂ ಸೂರೆಗೊಂಡರ್ (ಕಂರಾಪು. ೪-೩೩) ; ರಣಮೇರು ಲೋಕಲುಂಟಾಕನಿಧಾಘತಾಪಹರವರ್ಷಣಮೇಘನುದಾತ್ತರಾಘವಾ (ಕಂರಾಪು. ೩-೭೨). [ಸಂ.]

**ಲೋಕವಟ್ಟ** (ನಾ). ವಿಶ್ವದ ಸ್ವಾಮಿತ್ವ.– ಅಧಿಕಾರ (?) : ಎಱಗಿದ ಜನಕ್ಕೆ ಪೊಂಮುಗಿಲೆಱಗಿದವೊಲು ಲೋಕವಟ್ಟಮನೆ ಪೊಂಮಳೆಯಂ ಕಱೆವನುಱದೆಱಗದಹಿತಂಗೆಱಗದ ಬಱಸಿಡಿಲೆನಿಪ್ಪನೆಱೆಯಂಗನೃಪಂ (ಎಕ. VI. ಕಡೂರು. ೦೩೯-೨೩; 1173). [ಲೋಕ+ಪಟ್ಟ$_{3}$]

**ಲೋಕವಶ್ಯ** (ಗು). ೧. ಜಗತ್ತನ್ನು ವಶಪಡಿಸಿಕೊಳ್ಳುವ. (ನಾ). ೨. ಪ್ರಪಂಚದ ಜನರನ್ನು ವಶಪಡಿಸಿಕೊಳ್ಳುವುದು.– ಜನರ ವಶೀಕರಣ : ಲೋಕವಶ್ಯದ ತಿಲಕವೊ ಜಗದೇಕರತ್ನವೊ . . . ಚಿತ್ರ ಮಾಯಾಸ್ತ್ರವರ್ಣಶಿಯ ಬರವು (ಕುಮಾ.ರಾ. ೬-೩) ; ಆ ಬೇರಂ . . . ಮಂತ್ರಿಸಿ ಮುಖಮಂ ಪೂಸೆ ಲೋಕವಶ್ಯ (ಬಸ್ವ.ಪ. ೨); ಲೋಕವಶ್ಯಕೆ ಮದ್ದು ಪಕಾಕಿ ಹೋಬೇರು . . . ಮಿಕ್ಕೆಲ್ಲ ಶಾಕುಮದ್ದೆಂದ (ಸರ್ವಜ್ಞ. ೦೭೮೩). ೩. ಇತರರನ್ನು ತಮ್ಮ ಇಷ್ಟಾನುಸಾರವಾಗಿ ನಡೆಸಿಕೊಳ್ಳುವ ಶಕ್ತಿ.—ವಿದ್ಯೆ. [ಸಂ.]

**ಲೋಕವಾದ** (ನಾ). ಜನರಾಡುವ ಮಾತು ; ಜನಶ್ರುತಿ: "ಕಿಂವದಂತೀ, ಜನಶ್ರುತಿಃ, ಕೌಲೀನಂ, ಲೋಕವಾದಃ — ಈ ೪ ಜನವಾರ್ತೆ" (ಶಬ್ದಮ. ೨೪-೦೪೭); ಓದುಗಲಿಸುವರೊಲಿದು ಪೊಗಳಿದೊಡಾವೋದುಗಲಿ ವೆರೋದುಗಳು ಮೇದಿನಿಯೊಳು ಮೇಲೆನಿಪವೆಂಬುದು ಲೋಕವಾದವ್ಯಸಲೆ (ಚಂದ್ರ. ೦-೨೪). [ಸಂ.]

**ಲೋಕವಾರ್ತೆ** (ನಾ). = ಲೋಕವಾದ : ಪರಮದಯಾಗುಣಂ ನಯನದೊಳ್ . . . ಧೃತಮೌನತೆ ಲೋಕವಾರ್ತೆಯೊಳ್ ದೊರವಡೆದೊಪ್ಪೆ ಸಂಚರಿಮಗೀಗಱಿವಂ ಸಲೆ ಸರ್ವಸಾಧುಗಳ್ (ಅವಂತಿ. ೦-೩); ಜಾತಿದಿಂದರಿದವರು ವೃಷಭಖ್ಯಾತಿಯಲಿ ಕರೆದವರು ಸರ್ವಜನಾತನನು ಬಸವಣ್ಣನೆಂಬರು ಲೋಕವಾರ್ತೆಯಲಿ (ಬಸ.ಪು. ೩೩-೨೯). [ಸಂ. ಲೋಕವಾರ್ತಾ]

**ಲೋಕವಿಖ್ಯಾತ** (ನಾ). ಜಗತ್ಪ್ರಸಿದ್ಧವಾದುದು : ದುಷ್ಟರ ದೌಷ್ಟ್ಯವು ಲೋಕವಿಖ್ಯಾತವು ತಿಳಿವುದು ಸುಲಭ ದುಷ್ಟರನು (ಅಂಕಾಕ. ೦೭೩-೩೪). [ಸಂ.]

**ಲೋಕವಿಮೂಢ** (ನಾ). = ಲೋಕಮೂಢ : ನದಿ ವಾರ್ಧಿಗಳಂ ಮಿಂಪುದುಮದಿರದೆ ಶಸ್ತ್ರಾಗ್ನಿ ಗಿರಿಗಳಂ ಪಾಯ್ವುದುಮಿಂತಿದು ಲೋಕವಿಮೂಢಂ ಮುದದಿಂದಂ ರಾಶಿಮಾಳ್ಪುದುಂ ಕಲು ಮಣಲಂ (ಚಾರಿ. ೪೬೦). [ಸಂ.]

**ಲೋಕವಿರುದ್ಧ** (ನಾ). ೧. ಜನಸಾಮಾನ್ಯರ ಪದ್ಧತಿಗೆ ವಿರೋಧವಾದುದು; ಲೋಕರೂಢಿಗೆ ವಿರುದ್ಧವಾದುದು : ಯಾರೇ ಆಗಲಿ ಲೋಕವಿರುದ್ಧವಾಗಿ ನಡೆಯಬಾರದು (ರೂಢಿ). ೨. [ಕಾವ್ಯಮಿ] ಒಂದು ಬಗೆಯ ವಾಕ್ಯದೋಷ ; ☞ ಲೋಕಪ್ರಸಿದ್ಧಿಗೆ ವಿರುದ್ಧವಾದುದು : ಲೋಕಮದರ್ಥಾರ್ಥೋಪಧ್ಯಾಕಾಂಕ್ಷಿತಭೇದರೂಪದಿಂ ಮೂಱಕ್ಕುಂ ಲೋಕವಿರುದ್ಧಂ (ಕವಿರಾ. ೦-೦೦೪); ಕಾಲ ಸ್ವಭಾವ ದೇಶ ಸಮಾಲಕ್ಷಿತವಸ್ತುರೂಪವಿಪರೀತಮವೆಂತಾ ಲೋ[ಕಾಕಾಂ. ಕೋ]ಕವಿರುದ್ಧಂ (ಕಾವ್ಯಾ.ಪ. ೪೭೦). [ಸಂ.]

**ಲೋಕವಿರೋಧಿ** (ನಾ). ಜನರ ವಿರೋಧಕ್ಕೆ ಒಳಗಾದವನು : ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ ಲೋಕವಿರೋಧಿ ಶರಣನಾರಿಗಂಜುವನಲ್ಲ (ಬಸವ. ೭೮೩); ಖಂಡಿತವಾದಿ ಲೋಕವಿರೋಧಿ (ಗಾದೆ).
[ ಸಂ. ಲೋಕವಿರೋಧಿನ್ ]

**ಲೋಕವ್ಯವಹಾರ** (ನಾ). ಪ್ರಪಂಚದ ನಡತೆ,– ಆಚಾರ,– ನಡವಳಿಕೆ; ಅಲಂಕೃತನಾಗಿಯುಂ ನಿಸರ್ಗಸುಂದರನಪ್ಪುದಱಿಂದಮಲಂಕಾರಕ್ಕೆ ತಾನಲಂಕಾರಮಾದೊಡಂ ಲೋಕವ್ಯವಹಾರಾಪೇಕ್ಷೆಯಿಂ ಪ್ರಸಾಧಿತಂ ಮಾಡಿ (ಶಾಂತಿಪು. ೧೧-೩೮ ವ); ಕವಿಮಾರ್ಗಗತಸಮಾಸಮನವನಿನ್ನಱಿವನಿತನೆಯ್ದೆ ಪೇೞ್ದಂ ಲೋಕವ್ಯವಹಾರದಿಂದಂ (ಶಮದ. ೦೯೬); ಲೋಕವ್ಯವಹಾರವನ್ನು ಚೆನ್ನಾಗಿ ತಿಳಿದಿರುವ ನೀವೇ . . . ಹೇಳಿದ ಮೇಲೆ ಇನ್ನು ನಾವು ಆಡತಕ್ಕುದೇನು ? (ಶಾಕುಂತ. ೬೬-೨೦). [ಸಂ.]

**ಲೋಕಸಂಗ್ರಹ** (ನಾ). ಜನರನ್ನು ಪರಸ್ಪರ ಹತ್ತಿರ ತರುವುದರ ಮೂಲಕ, ಜನತೆಗೆ ಮಾಡುವ ಸಹಾಯ ; ವಿಶ್ವಕಲ್ಯಾಣ : ಭಾರತೀಯ ರಾಜ್ಯಶಾಸ್ತ್ರದ ಅಂತಿಮಗುರಿ . . . ಲೋಕಸಂಗ್ರಹ (ಭಾರರ. ೩೬೩) ; ಭಕ್ತರು ಲೋಕಸಂಗ್ರಹಕಾರ್ಯದಲ್ಲಿ ತುಂಬ ನೆರವು ನೀಡಿದ್ದಾರೆ (ಧರ್ಮಗಾ. ೦೩೦). [ಸಂ.]

**ಲೋಕಸಂರಕ್ಷಕ** (ನಾ). ಜಗತ್ತನ್ನು ಕಾಪಾಡುವವನು ; ಪರಮಾತ್ಮ : ಲೋಕಸಂರಕ್ಷಕ ಅಸುರಸಂಹಾರಕ ಲೋಕೇಶ ಪುರಂದರವಿಠ್ಠಲ (ಪುರಂದ. ಭಾ. ೩-೮೭-೬). [ಸಂ.]

**ಲೋಕಸಂರಕ್ಷಣ** (ನಾ). ಜಗತ್ತನ್ನು ಕಾಪಾಡುವುದು ; ವಿಶ್ವದ ಸಂರಕ್ಷಣೆ : ಲೋಕಸಂರಕ್ಷಣಾಧಿಕಾರವು ವಿಶ್ರಾಂತಿಯಿಲ್ಲದುದು (ಶಾಕುಂತ. ೬೦-೧೯). [ಸಂ.]

**ಲೋಕಸಭೆ** (ನಾ). ಕೇಂದ್ರಸಂಸತ್ತಿನ ಉಭಯಸಭೆಗಳಲ್ಲಿ ಒಂದು ; ಜನರಿಂದ ನೇರವಾಗಿ ಚುನಾಯಿತರಾದ ಸದಸ್ಯರ ಸಭೆ : ಭಾರತ ಸಂಘಕ್ಕೆ ರಾಷ್ಟ್ರಪತಿಯವರೂ ರಾಜ್ಯಪರಿಷತ್ತೆಂಬ ಹೆಸರಿನ ಒಂದು ಸದನವೂ ಲೋಕಸಭೆ ಎಂಬ ಹೆಸರಿನ ಒಂದು ಸದನವೂ ಸೇರಿರುವ ಒಂದು ಸಂಸತ್ತು ಇರತಕ್ಕುದು (ಭಾಸಂ. ೩೯). [ಸಂ. ಲೋಕಸಭಾ]

**ಲೋಕಸಾಕ್ಷಿ** (ನಾ). ೧. ಜಗತ್ಸಾಕ್ಷಿ; ವಿಶ್ವಸಾಕ್ಷಿ. ೨. ಬ್ರಹ್ಮ. ೩. ಅಗ್ನಿ. [ಸಂ. ಲೋಕಸಾಕ್ಷಿನ್]

**ಲೋಕಸೇವಾಆಯೋಗ** (ನಾ). ಸಾರ್ವಜನಿಕಸೇವೆ ಸಲ್ಲಿಸಲು ಸರ್ಕಾರವು ನೇಮಿಸಿರುವ, ಕೆಲವು ಸದಸ್ಯರನ್ನೊಳಗೊಂಡ ಒಂದು ಸಮಿತಿ, — ಮಂಡಳಿ : ರಾಜ್ಯದ ಲೋಕಸೇವಾಆಯೋಗದೊಡನೆ . . . ವಿಧಾಯಕ ಮಾಡಬಹುದು (ಭಾಸಂ. ೦೨೩). [ಸಂ.]

**ಲೋಕಸೇವೆ** (ನಾ). ಸಾರ್ವಜನಿಕರಿಗೆ ಸೇವೆ ಸಲ್ಲಿಸುವುದು; ಜನಸೇವೆ: "ಸಾರ್ವಜನಿಕರ ಸೇವೆ; ಸರ್ಕಾರಿ ನೌಕರಿ ; (ಪಾಂ) ಲೋಕಸೇವೆ" (Public service. ಆಕ್ಸ್‌ಫ. ೬೬) ; ರಾಜ್ಯದ ಲೋಕಸೇವಾವ್ಯವಸ್ಥೆಯಲ್ಲಿ ನ್ಯಾಯಪಾಲಿಕೆಯನ್ನು . . . ಜರುಗಿಸತಕ್ಕುದು (ಭಾಸಂ. ೨೩). [ಸಂ. ಲೋಕಸೇವಾ]

**ಲೋಕಸ್ತುತೆ** (ನಾ). ಜಗತ್ತಿನಿಂದ ಹೊಗಳಿಸಿಕೊಂಡವಳು ; ವಿಶ್ವಮಾನ್ಯೆಯಾದವಳು: ಲೋಕಸ್ತುತೆ ಮಣಿಕನಕಪತಾಕೆಯನರ್ಚಿಸುವೆನೆನೆಯೆನ್ನೀ ನಿಲಯಪ್ರಾಕಾರಮಂ (ಅಂದಾವ. ೭-೯೨). [ಸಂ. ಲೋಕಸ್ತುತಾ]

**ಲೋಕಹಿತ** (ನಾ). ೧. ಜನಹಿತ ; ವಿಶ್ವಕಲ್ಯಾಣ : ಲೋಕಹಿತಾಚರಣ ಕಳಾನೀಕಪ್ರಯುತಂಗೆ ಯತಿಗೆ ದಾನವನಿರದುಪ್ರೇಕ್ಷಿಸೆ ಮಾಡುವ ಪೀಡೆ ಸುಧಾಕರನಂ ರಾಹು ಪೀಡಿಪ್ಪುದನನುಕರಿಕುಂ (ಪಾರ್ಶ್ವಪು. ೦೩-೦೨೦) ; ಸಾಹಸಿಗಳ ಲಕ್ಷಣವೇ ಅದು ತಾಯಿ. ಅದರಲ್ಲಿಯೂ ಲೋಕಹಿತದ ದೃಷ್ಟಿ ಇದ್ದರಾಯಿತು (ಸವಿ. ೧೩). ೨. ಜಗತ್ತಿಗೆ ಒಳ್ಳೆಯದನ್ನು ಮಾಡುವವನು : ಮಹಿಶಂ ರಕ್ಷಿಪ ಧರ್ಮಸಂತತಿನಿಮಿತ್ತಂ ರಾಜ್ಯಮಂ ತಾಳ್ದಿ ನಿಸ್ಪೃಹನಾಗಿರ್ಪವೊಲಿರ್ದನಿನ್ನೆವರಮೀಗಳ್ ದ್ರೋಹ ದುರ್ಮೋಹ ನಿಗ್ರಹ ನಿಷ್ಠಾಗ್ರಹನಾದ ಲೋಕಹಿತರಾರೆಲ್ಲಂವರಿಂ ನೀಂ ಬರಂ (ಧನ್ಯಕು. ೦೩-೬೩). [ಸಂ.]

**ಲೋಕಾಂತ** (ನಾ). ೧. ಜಗತ್ತಿನ ಕೊನೆ ; ವಿಶ್ವದ ತುದಿ. ೨. ಯಾರು ಬೇಕಾದರೂ ಇರಬಹುದಾದ ಸ್ಥಳ ; ಸಾರ್ವಜನಿಕ ಜಾಗ : ಏಕಾಂತದ ಸುಖವು ಲೋಕಾಂತವದೇಕೋ (ಪಕಸಂ. ೦೦೯-೯೬) ; 'ಲೋಕಾಂತ'ಕ್ಕಿಂತ ಏಕಾಂತ ಅವರಿಗೆ ಹೆಚ್ಚು ಸೇರುತ್ತಿತ್ತು (ಮೋಹಿನಿ. ೯೩ ಕ್ರಿಸ್ತಾಪನ). ೩. ಎಲ್ಲರಿಗೂ ತಿಳಿದ ವಿಷಯ ; ಜಗಜ್ಜಾಹೀರಾದುದು ; ಸಾರ್ವಜನಿಕವಾದುದು : ಏಕಾಂತರಾಮನನಂತತೇಜೋಮಹಿಮೆಯುದು ಲೋಕಾಂತವಾಯಿತ್ತೀ ಚತುರ್ದಶಭುವನಮಧ್ಯದಲಿ (ಏಕಪು. ೩೨-೯೩) ; ಒಬ್ಬನಱಿದರೆ ಸ್ವಾಂತ ಇಬ್ಬರಲಿ ಏಕಾಂತ ಇಬ್ಬರಿಂದೊಬ್ಬನಱಿದು ಬೇಱೊಬ್ಬನಿಂ ಹಬ್ಬ ಲೋಕಾಂತ (ಸರ್ವಜ್ಞ. ೦೩೬೯) ; ಇಬ್ಬರಿದ್ದರೆ ಏಕಾಂತ, ಮೂವರಿದ್ದರೆ ಲೋಕಾಂತ (ಗಾದೆ). [ಸಂ.]

**ಲೋಕಾಂತರ** (ನಾ). ಬೇರೊಂದು ಲೋಕ ; ಪರಲೋಕ ; ಇನ್ನೊಂದು ಜಗತ್ತು : '' ಪರಲೋಕಮುಱಿಗೆ ಲೋಕಾಂತರಮಕ್ಕು" (ಪಸ್ತುಕೋ. ೩೯-೯೬) ; ಇಳೆಯ ಭೋಗದ ದೃಷ್ಟಿ ತೀರಿದ ಬಳಿಕ ಲೋಕಾಂತರವನೆಯ್ದುವರು (ಕುಮಾ.ಉ. ೯-೦೮) ; ದೇಹಾತ್ಮಗಳೆರಡೂ . . . ಅವರವರ ಕರ್ಮಾನುಗುಣವಾಗಿ ಲೋಕಾಂತರಗಳಲ್ಲಿ ಸಂಚರಿಸುವವರಾಗಿಯೂ ಇದ್ದಾರೆ (ಮಾಕ್ಯಾರ. ೨೮೦). [ಸಂ.]

**ಲೋಕಾಂತರಿತ** (ನಾ). ಬೇರೆ ಲೋಕಕ್ಕೆ ಹೋದವನು ; ನಿಧನ ಹೊಂದಿದವನು ; ಮರಣ ಹೊಂದಿದವನು : ಪ್ರೇಮಪುತಿ . . . ಇನಿತನ್ಯಾಯಮನಾನೆ ಮಾಡಿದೆನ್ನೆ ಮಗನ ಮೇಲೆ ದೋಷಮಾವುದು ಮಿಲ್ಲೆಂದು ಲೋಕಾಂತರಿತನಾದಂ (ಸುಕಸಂ. ೦೬೮-೩) ; ಸೋಮಶರ್ಮಂ ಲೋಕಾಂತರಿತ[ನಾದ]ನೆಂಬುದನತಿಬಲಮಹಾರಾಜಂ ಕೇಳ್ದು . . . ಪಿರಿದುಂ ಕುಟ್ಟುಕಡೆದು (ಸುಕುಮಾ. ೨-೦೦೪). [ಸಂ.]

**ಲೋಕಾಂತಿಕ** (ನಾ). [ಜೈನ] ಬ್ರಹ್ಮಲೋಕದಲ್ಲಿ ವಾಸಿಸುವ ದೇವತೆಗಳ ಒಂದು ಪಂಗಡ : ಬ್ರಹ್ಮಲೋಕನಿಳಯರಪ್ಪ ಲೋಕಾಂತಿಕರುಂ ದಕ್ಷಿಣೇಂದ್ರರುಂ . . . ಮುಕ್ತಿವಧೂವಿವಾಹಮಲ್ಲದೆ ವಧೂವಿವಾಹಮನೊಲ್ಲರ್ (ಶಾಂತಿಪು. ೦೨-೯೩ವ). [ಸಂ.]

**ಲೋಕಾಂತಿಕದೇವ** (ನಾ). = ಲೋಕಾಂತಿಕ : ಎಣ್ಬರುಂ ಲೋಕಾಂತಿಕದೇವರ್ ಬಂದು (ಆದಿಪು. ೯-೧೦ವ) ; ಲೋಕಾಂತಿಕದೇವರ್ ಪರಲೋಕಪ್ರಿಯರಲ್ಲದಂದು ಮುಂ ಬಾರದರೊಲ್ದೀಕೆ ಜಿನಂ ಪರಹಿತಮಂ ಸ್ವೀಕರಿಪುದುಮದನೆ ನುಡಿದು ದೃಢಮೆನಿಸಿದವರ್ (ಪಾರ್ಶ್ವಪು. ೦೩-೬೩). [ಸಂ.]

**ಲೋಕಾಕಾರ** (ನಾ). [ಜೈನ] ಲೋಕದ ಆಕಾರ,–ರೂಪು : ಲೋಕಾಕಾರಮನಭಿನಯಿಪಾಕಾರಂ ನೆಗೞ್ದು ನಿಂದು ವೈಶಾಖಸ್ಥಾನಾಕಾರದೊಳ್ . . . ಚೆಲ್ವಂ ಪಡೆದಂ (ಆದಿಪು. ೭-೦೦೬). [ಸಂ.]

**ಲೋಕಾಕಾರಕಥನ** (ನಾ). [ಜೈನ] ಅಧೋಲೋಕ, ಮಧ್ಯಲೋಕ ಮತ್ತು ಊರ್ಧ್ವಲೋಕಗಳ ವರ್ಣನೆ : ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ . . . ಅವಯವಂಗಳೆಂಟಕ್ಕುಂ (ಆದಿಪು. ೦-೯೨ ವ). [ಸಂ.]

**ಲೋಕಾಕಾಶ** (ನಾ). ೧. ಆಕಾಶ. ೨. [ಜೈನ] ಲೋಕಾಕಾಶ ಮತ್ತು ಅಲೋಕಾಕಾಶ ಎಂಬ ಎರಡು ಬಗೆಯ ಆಕಾಶಗಳಲ್ಲಿ ಒಂದು ; ಜೀವ, ಪುದ್ಗಲಕಾಯ, ಧರ್ಮ, ಅಧರ್ಮ ಇತ್ಯಾದಿ ದ್ರವ್ಯಗಳನ್ನು ಹೊಂದಿರುವ, ಲೋಕಗಳನ್ನು ಒಳಗೊಂಡ ಆಕಾಶಪ್ರದೇಶ : ಲೋಕಾಕಾಶಪ್ರದೇಶಪ್ರಮಾಣಪರಿಮಾಣಮುಮಸ್ಮದಾದ್ಯನುಮೇಯಮುಂ ಸರ್ವಜ್ಞಪ್ರತ್ಯಕ್ಷಗೋಚರಮಪ್ಪುದು ಮುಖ್ಯಕಾಲಂ (ಆದಿಪು. ೬-೯೮); ಈ ದ್ರವ್ಯಗಳಿರುವ ಸ್ಥಾನಕ್ಕೆ ಲೋಕಾಕಾಶವೆಂದೂ, ಬರಿಯ ಆಕಾಶದ್ರವ್ಯವಿರುವ ಸ್ಥಳಕ್ಕೆ ಅಲೋಕಾಕಾಶವೆಂದೂ ಹೆಸರು (ಭಾರದ. ೦೯೬). ' ಅಲೋಕಾಕಾಶ ' ಪರಾ. [ಸಂ.]

**ಲೋಕಾಖ್ಯಾನ** (ನಾ). [ಜೈನ] ಲೋಕದ ಆಕಾರ ವರ್ಣನೆ : ಪುರಾಣ ಕಥೆಗಳೊಳು ಲೋಕಾಖ್ಯಾನಮುಂ ದೇಶಾಖ್ಯಾನಮುಂ . . . ಫಲಾಖ್ಯಾನ ಮುಮೆಂದಷ್ಟವಿಧವರ್ಣನಮಕ್ಕುಂ ಅಲ್ಲಿ ಲೋಕಾಖ್ಯಾನಮೆಂಬುದನಂತಾನಂತಮಪ್ಪಾಕಾಶಬಹುಮಧ್ಯಪ್ರದೇಶದೊಳಸಂಖ್ಯಾತಾತ್ಮಪ್ರದೇಶಾತ್ಮಕಮಾಗಿ . . . ಕುಳಾಚಳ ಸಿದ್ಧಾಲಯ ವಿಮಾನಾದಿಗಳಾಧಾರಭೂತಮಪ್ಪುದಂ ಪೇಟ್ಪುದು (ಕಾಪುಂಕ. ೦೨). 'ದೇಶಾಖ್ಯಾನ' ಪರಾ. [ಸಂ.]

**ಲೋಕಾಚಾರ** (ನಾ). ಜಗತ್ತಿನ ರೂಢಿ, –ಸಂಪ್ರದಾಯ : ವೀರಶೈವನ ಬಗೆಯುದಂತೆನಲು ಲಾಲಿಪಾ ಗೌರಿ ಲೋಕಾಚಾರವರ್ಜಿತಂ ಭಾವಿಸಲುದಾರ ಲೋಕಾಲೋಕಪರಿಹರಂ ತಿಥಿಲಗ್ನ ನಕ್ಷತ್ರಯೋಗಕರಣಂ (ಬಃಶ್ವಕ. ೭-೭-೭). [ಸಂ.]

**ಲೋಕಾನುಗ್ರಹ** (ನಾ). ಜಗತ್ತಿಗೆ ಕರುಣೆ ತೋರಿಸುವುದು : ಲೋಕಾನುಗ್ರಹಶಾಸ್ತ್ರಾನೀಕಮನುರುಪುಣ್ಯನದಿಗಳಂ ಶ್ರುತಿತತಿಯಂ ನೀಕರಿಸಿ ಶೈವಜನಮನನೇಕಾಂಗದಿ ನಿಂದಿಸುತ್ತಮಿರ್ಪರ್ ಸವಣರ್ (ಶ್ರೀಕಂ. ೩೨-೦೦); ಪೂಜ್ಯರಾದ ಕಣ್ವರು ಲೋಕಾನುಗ್ರಹಾರ್ಥವಾಗಿ ಕ್ಷೇಮದಿಂದಿರುವರೆ ? (ಶಾಕುಂತ. ೭೫-೨೭). [ಸಂ.]

**ಲೋಕಾನುಪ್ರೇಕ್ಷೆ** (ನಾ). [ಜೈನ] ಹನ್ನೆರಡು ಬಗೆಯ ಅನುಪ್ರೇಕ್ಷೆಗಳಲ್ಲಿ ಒಂದು : ಲೋಕತ್ರಯದ ತುತ್ತತುದಿಯೊಳು, ಸಿದ್ಧಕ್ಷೇತ್ರಮಕ್ಕುಂ ಅಲ್ಲಿಗೆ ಪೋಪಡೆ ಸಕಲಕರ್ಮಕ್ಷಯಂಗೆಯ್ದೊಡಲ್ಲದೆ ಪೋಗಲ್ಬಾರದೆಂದು ಕರ್ಮನಿರ್ಮೂಳನಕ್ಕರ್ಥಂ ನಿರ್ಮಲಶರ್ಮಾತ್ಮಕಾತ್ಮತತ್ತ್ವಮಂ ಭಾವಿಸುವುದು ಲೋಕಾನುಪ್ರೇಕ್ಷೆ (ಧ್ರಾವಕಾ. ೦೯೭-೩) ; ಲೋಕಾನುಪ್ರೇಕ್ಷೆ–ಲೋಕವೆಂಬುದು ಎಷ್ಟು ದೊಡ್ಡದು, ಅದರಲ್ಲಿರುವ ಜೀವಗಳು ಯಾವ ಯಾವುವು ? ಇದು ಸಾದಿಯೋ ಅನಾದಿಯೋ ಮೊದಲಾದುವನ್ನು ಭಾವಿಸುವುದು (ಕೃಪರ. ೯೩). 'ದ್ವಾದಶಾನುಪ್ರೇಕ್ಷೆ' ಪರಾ. [ಸಂ. ಲೋಕಾನುಪ್ರೇಕ್ಷಾ]

**ಲೋಕಾನುಭವ** (ನಾ). ಪ್ರಪಂಚದ ಬಗ್ಗೆ ಇರುವ ಜ್ಞಾನ ; ಲೋಕದ ಆಗುಹೋಗುಗಳಿಂದ ಬರುವ ತಿಳಿವಳಿಕೆ : ಲೋಕಾನುಭವ ಏನೇನೂ ಸಾಲದು (ಮೂಕಜ್ಜ. ೯). [ಸಂ.]

**ಲೋಕಾಪವಾದ** (ನಾ). ಜನರಿಂದ ಬರುವ ದೂರು, — ಅಪವಾದ ; ಜನರು ಮಾಡುವ ನಿಂದೆ, — ಹೀಯಾಳಿಕೆ : ಲೋಕಾಪವಾದಕ ಪರಾಧಿಯಲ್ಲದ ತನ್ನನು ತರಣಿಕುಲಸಂಭವಂ ಬಿಟ್ಟನೆಂದೀ ವನದೊಳಿರಿಸಿ ಪೋದಂ ಸುಮಿತ್ರಾತ್ಮಜಂ (ಕೃಮಿಭಾ. ೦೯-೪೦) ; ಲೋಕಾಪವಾದಕ್ಕೆ ಹೆದರಬೇಕು (ಪೀಠಿಕಾಂ. XI, ೨೦). [ಸಂ.]

**ಲೋಕಾಭಿರಾಮ** (ಗು). ೧. ಜನರಲ್ಲಿ ಪರಸ್ಪರ ಪ್ರೀತಿಯನ್ನು ಬೆಳೆಸುವ ; ಜನರ ಮನವೊಲಿಸುವಂಥ ; ಜನರಂಜಕವಾದ. (ನಾ). ೨. ಯಾವ ಉದ್ದೇಶವೂ ಇಲ್ಲದುದು ; ಸ್ವಾಭಾವಿಕವಾದುದು : ಸಹಜವಾದುದು : ಈ ಬಗೆಯ ಮಾತುಗಳು ಎಷ್ಟೊ ಸಲ ಕೇವಲ ಲೋಕಾಭಿರಾಮದ, ಅನಿಸಿಕೆಯ ಮಾತುಗಳಾಗಿರುತ್ತವೆ (ವಿಮರ್ಶೆ. ೩೧) ; ಮದುವೆ ಯಾತಕ್ಕೆ ಮಾಡಿಕೊಳ್ಳಲಿಲ್ಲ ಎಂದು ಲೋಕಾಭಿರಾಮವಾಗಿ ಕೇಳಲು (ಕಥಾಮಂ. IV, ೦೫). [ಸಂ.]

**ಲೋಕಾಯತ** (ಗು). ೧. ನಾಸ್ತಿಕತೆಯಿಂದ ಕೂಡಿದ. (ನಾ). ೨. ನಾಸ್ತಿಕತೆ; ನಿರೀಶ್ವರ ವಾದ; ಚಾರ್ವಾಕ ಮತ : ಲೋಕಾಯತಮೆನಿಸಿದ ಚಾರ್ವಾಕೋಕ್ತಿಯಸಹಿತಶಕ್ತಿಯಂ ಭೇದಿಸುವಂ . . . ಜಿನಚಂದ್ರಭೂಭುಜಂ (ಶಾಂತಿಪು. ೯-೧೩೫) ; ವೈದಿಕಸಿದ್ಧಾಂತಕ್ಕೂ ಲೋಕಾಯತವೆಂಬ ಚಾರ್ವಾಕ ಸಿದ್ಧಾಂತಕ್ಕೂ ವ್ಯತ್ಯಾಸವಿಲ್ಲ (ಹಿಂದೂ. ೦೫೩). ೩. ನಾಸ್ತಿಕ ; ನಿರೀಶ್ವರ ವಾದಿ ; ಚಾರ್ವಾಕ : ತಗೆಯಲ್ ಜೈಮಿನಿ . . . ಬಿಡಲ್ಬುಗೆ ಲೋಕಾಯತನೆಯ್ದೆ ಸಾಂಖ್ಯನಡಸಲ್ಕಮ್ಮಮ್ಮ ಷಟ್ತರ್ಕವೀಧಿಗಳೊಳ್ ತೂಳ್ದಿತು ಗೋಪನಂದಿದಿಗಿಭಪ್ರೋದ್ಭಾಸಿಗಂಧದ್ವಿಪಂ (ಎಕ. V. ಅರ್ಸಿ. ೦೯೯-೪೦ ; 1094) ; ಇಂತಪ್ಪನರ್ಘ್ಯಮಂ ಭಕ್ತರ್ಗೆ ಕೆಯ್ಯಾರೆ ಕೊಡಲಿಲ್ಲ . . . ಲೋಕಾಯತರ್ಗೆ ಸಾರುತಲಿರ್ದಪುದಕಟ (ಬಸವ. ೫-೦೪೪) ; ನಿರೀಶ್ವರವಾದಿಗಳಾದ ಲೋಕಾಯತರು ಇಂದ್ರಿಯಗಳನ್ನೇ ಆತ್ಮವೆನ್ನುತ್ತಾರೆ (ಅಪ್ಪಕ. ೩-೪೭ ಟೀಕು). [ಸಂ.]

**ಲೋಕಾಯತದರ್ಶನ** (ನಾ). = ಲೋಕಾಯತ ೨ : ಸ್ಫೂರ್ತ ಚೇತಸ್ಸಿನ . . . ಗುರಿ ಲೋಕಾಯತದರ್ಶನವೂ ಅಲ್ಲ, ಸ್ಫೂರ್ತಪ್ರಾಣಸಿದ್ಧ ದರ್ಶನವೂ ಅಲ್ಲ ಅಥವಾ ದೂರಸ್ಥವೂ ಪ್ರತ್ಯೇಕವೂ ಆದ ಆಧ್ಯಾತ್ಮಿಕತೆಯೂ ಅಲ್ಲ (ನವ್ಯಕಾ. ೦೦೪). [ಸಂ.]

**ಲೋಕಾಯತಮತ** (ನಾ). ನಾಸ್ತಿಕತೆ ; ಚಾರ್ವಾಕಮತ : ಚಾರ್ವಾಕ ದರ್ಶನವು . . . ಲೋಕದಲ್ಲಿ ಹರಡಿರುವುದರಿಂದ ಇವನ್ನು ಲೋಕಾಯತ ಮತ ಎಂದು ಕರೆಯುತ್ತಾರೆ (ಹಿಂದೂ. ೧೦). [ಸಂ.]

**ಲೋಕಾಯತವಾದಿ** (ನಾ). = ಲೋಕಾಯತ ೩ : ಲೋಕಾಯತ ವಾದಿಯಂತೆ ಅಸಾಧಿತಗುರುಮತನಂ (ಚಂದ್ರಕ. ೯-೪೨ ವ). [ಸಂ. ಲೋಕಾಯತವಾದಿನ್]

**ಲೋಕಾಯತಿಕ** (ನಾ). ೧. ನಾಸ್ತಿಕತೆ; ನಿರೀಶ್ವರವಾದ; ಚಾರ್ವಾಕ ಮತ ; ☞ "ಇದು ಚಾರ್ವಾಕಮತದ ಮತ್ತೊಂದು ಹೆಸರು. ಇದರಲ್ಲಿ ದೇಹವೇ ಆತ್ಮವೆಂದೂ, ಪರಲೋಕವಿಲ್ಲವೆಂದೂ ಪಾಪ ಪುಣ್ಯಗಳಿಲ್ಲವೆಂದೂ ಇಂದ್ರಿಯಇಚ್ಛೆಯನ್ನೇ ತೃಪ್ತಪಡಿಸುವುದು ಸುಖವೆಂದೂ ಬಗೆಯುವ ವಿಚಾರಗಳಿರುತ್ತವೆ. ಇದಕ್ಕೆ ಬೃಹಸ್ಪತಿ ಮತವೆಂದು ಮತ್ತೊಂದು ಹೆಸರು ಇದೆ" (ಆದಿಪು. ಶೈವಪಾರಿಭಾಷಿಕ ಶಬ್ದಕೋಶ) : ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕ ಮತವಿತಥಾಭಿಧಾಯಿಗಳ್ ಜೀವಾಭಾವಮನೆ ಪಿಡಿಯುಚ್ಚುವಿಡಿದು (ಆದಿಪು. ೨-೭ ವ). ೨. ಚಾರ್ವಾಕಮತಕ್ಕೆ ಸೇರಿದ ವ್ಯಕ್ತಿ ; ನಾಸ್ತಿಕ ; ನಿರೀಶ್ವರ ವಾದಿ : ಚೈತನ್ಯದಿಂದ ಕೂಡಿರುವ ದೇಹವೇ ಆತ್ಮನು ಎಂದು ಸಾಮಾನ್ಯಜನರೂ ! ಲೋಕಾಯತಿಕರೂ ತಿಳಿದು ಕೊಂಡಿರುವರು (ಬ್ರಹ್ಮಸೂ. ೨೫). [ಸಂ.]

**ಲೋಕಾಯ್ತವೊಟಿಲ್** (ನಾ). ಒಂದು ಊರಿನ ಹೆಸರು : ಕೂರಮಾಡಿ ಮೂನೂಱರ ಬಳಿಯ ಲೋಕಾಯ್ತವೊಟಿಲುಂ ಗುಣ್ಣೇಱೆಕೊಳ್ ಇಪ್ಪತ್ತನಾಲ್ಕು ಮತ್ತರ್ಕ್ಕರಿಯ ಕೆಯ್ಯುಂ . . . ಕೊಟ್ಟರ್ (ಎಕ. XI, ಹೊಳಲ್ಕೆ. ೨೩-೧೬ ; 968). [ಲೋಕಾಯ್ತ? + ಪೊಟಿಲ್]

**ಲೋಕಾರೂಢಿ** (ನಾ). = ಲೋಕರೂಢಿ : ಲೋಕಾರೂಢಿಯಾಗಿ ಈಗಿನ ಕಾಲದ ಮದುವೆ ಮುಂಜಿ ವಿಚಾರಗಳಲ್ಲಿ ಚರ್ಚೆ ಮಾಡುತ್ತಾ ಇದ್ದರು (ಶಾಂತಿಪ. ೨) ; ಅದು . . . ಲೋಕಾರೂಢಿಯ ಮಾತಾಗಿ ಹೋಗಿತ್ತು (ಪುನರು. ೪೭೩). ☞ ಇದು ಅಶುದ್ಧರೂಪವಾದರೂ ಪ್ರಯೋಗದಲ್ಲಿ ಅಂಗೀಕೃತವಾಗಿದೆ. [< ಲೋಕರೂಢಿ]

**ಲೋಕಾಲೋಕ** (ನಾ). ಭೂಮಿಯನ್ನು ಗೋಡೆಯಂತೆ ಸುತ್ತುಗಟ್ಟಿ ಅವ್ಯಕ್ತಲೋಕದ ಕತ್ತಲೆಯಿಂದ ಬೇರ್ಪಡಿಸುವುದೆಂದು ಭಾವಿಸಲಾದ, ಪೌರಾಣಿಕಪರ್ವತ ಶ್ರೇಣಿ ; ಚಕ್ರವಾಳ : ಪರಮಾಗಮ ಮೂರ್ತಿ ಚರಾಚರಲೋಕಾಲೋಕಸಂಪ್ರದಾಯಿನಿ ವಿಬುಧೋತ್ಕರ ಮಾನಸಾಬ್ಜವಾಸಿನಿ ಸರಸ್ವತೀದೇವಿ ವರದೆಯಕ್ಕೆಮಗೆಂದುಂ (ಕಾವ್ಯಾವ. ೨ ಟೀಕೆ) ; ತರಣಿ ಲೋಕಾಲೋಕಪರ್ವತಾಗ್ರಮನಂತು ತಿರುಗುವಂ (ಕಾವತಂ. ೬-೦೦). 'ಚಕ್ರವಾಡಿಕೆ' ಪರಾ. [ಸಂ.]

**ಲೋಕಿಗ** (ನಾ). ಜಗತ್ತಿನಲ್ಲಿರುವವನು ; ಮಾನವ ; ಸಾಮಾನ್ಯ ಮನುಷ್ಯ : ಮದ್ವಚನಮನತಿಕ್ರಮಿಸಿ ನಡೆಯದಿರಲೀ ಲೋಕಿಗರ್ ನಾಕಿಗರ್ ಭಯದೊಳು (ಪಂಪಪು. ೪೦-೦೫) ; ಲೋಕಿಗರ ಮನದ ಕತ್ತಲೆಯ

ನೋಡಿಸಲೆಂದು ಒಳ್ಳನದಿ ನೀ ಓಡಿದ ಪಂಜು (ಕಗದ್ಯ. ೬೩).

[ಲೋಕ + - ಈಗ]

**ಲೋಕೇಶ** (ನಾ). ೧. ಜಗತ್ತಿನ ಒಡೆಯ. ೨. ಬ್ರಹ್ಮ. ೩. ವಿಷ್ಣು : ಲೋಕಸಂರಕ್ಷಕ ಅಸುರಸಂಹಾರಕ ಲೋಕೇಶ ಪುರಂದರ ವಿಠ್ಠಲ (ಪುರಂದ. ದಾ. ೩-೮೬-೬). ೪. ಶಿವ. ೫. ಜಿನ ; ತೀರ್ಥಂಕರ : ಸುರ ವಿಜ್ಞಾನೋಪಯೋಗಂ ಸುರಪತಿಗುಪವಿಷ್ಟಾಸನಾಕಂಪದಿಂದಂ ಬರೆ ಕಂಡ್ಯೆರಾ ಮಹಾದೇವಿಯುರುದರದೊಳಂ ಬರ್ಪ ಲೋಕೇಶನಂ (ಶಾಂತಿಪು. ೯-೦೬೨).

[ಸಂ.]

**ಲೋಕೈಕಚಕ್ಷು** (ನಾ). ಜಗತ್ತಿಗೆಲ್ಲ ಒಂದೇ ಕಣ್ಣಿನಂತಿರುವವನು ; ಸೂರ್ಯ : ಲೋಕೈಕಚಕ್ಷು ನವಕಮಲಾಕರಬಾಂಧವನನೇಕದಿತಿಸುತ ಸಮರಾ[ನೀ]ಕಭಯಂಕರನೆರಡು ವನೀಕಂಗಳನಡರೆ ನೋಡುವಂತುದಯಿಸಿದಂ (ಶಂಕರಾ. ೧೧-೩೦). [ಸಂ. ಲೋಕೈಕಚಕ್ಷುಸ್]

**ಲೋಕೈಕವೀರ** (ನಾ). ಜಗತ್ತಿಗೆಲ್ಲ ಒಬ್ಬನೇ ವೀರ ; ಮಹಾಶೂರ : ನೂಕಿ ಕವಿದುದು ಮುಂದೆ ಮಧ್ಯದೊಳೇಕ ಮೆಲ್ಲನೆ ಬರುತಲಾ ಲೋಕೈಕ ವೀರನ ಕಂಡಳಾ ಬಾಣಸಿನ ಬಾಗಿಲಲ್ಲಿ (ಕುಮಾ.ಭಿ. ೩-೧೧೪) ; ಕುರುವಂಶ ಶರಧಿಯ ಸುಧಾಸೂತಿ ಲೋಕೈಕವೀರನಾಮವನು ಕೇಳ್ದರಿಯೆಯಾ ? (ಕರ್ಣಾ.ಗ. ೩೭-೦೦೦೪). [ಸಂ.]

**ಲೋಕೋಕ್ತಿ** (ನಾ). ೧. ಪ್ರಸಿದ್ಧವಾದ ಮಾತು ; ಗಾದೆ ; ನಾಣ್ಣುಡಿ : ಮುಕ್ತಿಯೊಳಾದ ನಂಬುಗೆ ಮನಂಬುಗದಲ್ಪಸುಖಾಶೆಗೆಂಬ ಲೋಕೋಕ್ತಿಯಿಂ (ಶಾಂತಿಪು. ೧-೮೬); "ಮಾನವನು ತನ್ನ ನಡತೆಯಿಂದ ತಾನೆ ಹಾಳಾದ" ಎಂಬುದು ಒಂದು ಲೋಕೋಕ್ತಿ (ಜೀವಾಶ್ಮ. ೨೨೬) ; 'ಮಿಷ್ಟಾನ್ನಮಿತರೇ ಜನಾಃ' ಎಂಬುದು ಲೋಕೋಕ್ತಿ (ಶಿಶುರ. II. ೨೩೯). ೨. ಜನಸಾಮಾನ್ಯರ ಮಾತು,—ನುಡಿ. [ಸಂ.]

**ಲೋಕೋತ್ತರ** (ಗು). ೧. ಜಗತ್ತಿನಲ್ಲಿಯೆ ಮಿಗಿಲಾದ : ವಿಶ್ವದಲ್ಲಿ ಅತಿಶಯವಾದ : ಪಿರಿದುಂ ಸಮಾಸಮಾಗಿರೆ ವಿರಚಿಸುವುದು ತಾನದೋಜ ಮಕ್ಕುಂ ಲೋಕೋತ್ತರವರ್ಣನಂ ವಿಶೇಷಣ ಪರಪ್ರಕರ್ಷೋಕ್ತಿಯುಕ್ತ ಮಪ್ಪುದುದಾರಂ (ಕಾವ್ಯಾವ. ೩೦೫). (ನಾ). ೨. ಅಸಾಧಾರಣವಾದುದು; ಅಸಾಮಾನ್ಯವಾದುದು : ಮೊಗಕ್ಕೆ ಮೆಯ್ವೆತ್ತ ಬೆಮರ್ ಮನಂಗೊಳಿಸೆ ಭೂಪತಿಯಂ ಬೆಸವೇಟ್ಟಗುರ್ವು ಲೋಕೋತ್ತರವಾಗೆ ವೀರಭಟನೇಂ ಪೂಣ್ದನೋ (ಶಾಂತಿಪು. ೩-೬೮) ; ಮಾಟ್ಪುದಾತ್ಮಹಿತಂ ತಾನಿದು ದುರ್ಗ ಸಿಂಹನ ಮತಂ ಲೋಕೋತ್ತರಂ ಧಾತ್ರಿಯೊಳ್ (ಪಂಚತಂ. ೦೯೯-೦೯); ರಮಣೀಯವೆಂದರೆ ಲೋಕೋತ್ತರವಾದ ಆನಂದವನ್ನುಂಟುಮಾಡ ತಕ್ಕುದ್ದು (ಕಾರಿಕಾ. ೩೯೦). ೩. ಜಗತ್ತಿನಲ್ಲಿ ಶ್ರೇಷ್ಠನಾದವನು,— ಮಿಗಿಲಾದವನು : ಅತುಳತಪಃಶೀಲಮಂ ಮಾಡೆ ಲೋಕೋತ್ತರ ರಾಚಾರ್ಯರೆಮ್ಮಂ ನಿಯಮಿಸುಗೆ ನಿಜಾನುಗ್ರಹಪ್ರೌಢಿಯಿಂದಂ (ಪುಷ್ಪ.ಪು. ೦-೩); ನನಗೆ ಲೋಕೋತ್ತರನಾದ ಒಬ್ಬ ಮಗನಾಗಬೇಕು (ವಚನಾ. ೦೩).

[ಸಂ.]

**ಲೋಕೋದ್ಧಾರ** (ನಾ). ಜಗತ್ತನ್ನು ಮೇಲಕ್ಕೆತ್ತುವುದು ; ವಿಶ್ವ ವನ್ನು ರಕ್ಷಿಸುವುದು : ಲೋಕೋದ್ಧಾರದ ದೃಷ್ಟಿಯಿಲ್ಲದೆ, ತಾವು ಅಮರರಾಗಬೇಕು ಎಂಬ ಉದ್ದೇಶದಿಂದ ಅಮೃತಮಂಥನ ಮಾಡಿದರು (ಶಿಶುಂಬಾ. ೦೬೦). [ಸಂ.]

**ಲೋಕೋಪಕಾರ** (ನಾ). ೧. ಜನಕ್ಕೆ ಉಪಕಾರ ಮಾಡುವುದು ; ಲೋಕಕ್ಕೆ ಹಿತವನ್ನುಂಟುಮಾಡುವುದು : ಅತಿ ಕುಶಲಜ ಲೀಲಾಚಾರ ಲೋಕೋಪಕಾರೋದಿತ ಪರಮಗುಣೈಕೋದಾರ ಧೀರಾಧಿಕಾರಂ (ಕಲಾ. ೩-೨೦೯); ಯೌವನ ಕೂಡೆ ಲೋಕೋಪಕಾರವೆ ಕೈವಲ್ಯವಹುದು (ಮೋಹತ. ೩-೩೬); ಸುತನೆ ತಿಳಿ ಲೋಕೋಪಕಾರಕೆ ಹಿತದಿ ಜನಿಸಿದೆವು (ಗದಾ. ೪-೪೪). ೨. ಚಾವುಂಡರಾಯನೆಂಬ ಕವಿಯು ಬರೆದ ಒಂದು ಪ್ರಾಚೀನ ಕನ್ನಡಗ್ರಂಥದ ಹೆಸರು. ೧, ೨ : ಮೇದಿನಿಯುಪಕಾರಂ ಕಲಿಪೋದುಗಳೆನಿತೊಳವಲ್ಲಿ ನೆಲಸಿರ್ದ ಬುಧೋಪಾದೇಯವಾದ ದೂಷಣ ನಾದುದೆನಿ ಲೋಕೋಪಕಾರಮೆನಿನ್ನರ್ಥಂ (ಲೋಕೋಪ. ೧-೨೩ ಟೀಕೆ).

[ಸಂ.]

**ಲೋಕೋಪಕಾರಕ** (ಗು). ಜಗತ್ತಿಗೆ ಉಪಕಾರ ಮಾಡುವ ; ವಿಶ್ವಕ್ಕೆ ಹಿತವನ್ನುಂಟುಮಾಡುವ. [ಸಂ.]

**ಲೋಕೋಪಚಾರ** (ನಾ). ಲೌಕಿಕನು ಮಾಡುವ ಉಪಚಾರ,- ಸೇವೆ : ಲೋಕೋಪಚಾರಕ್ಕೆ ಮಜ್ಜನಕ್ಕೆಚಿಪೆನಯ್ಯಾ ಮನದ ತಾಮಸ ಬಿಡದು ಮನದ ಕಪಟ ಬಿಡದಯ್ಯಾ (ಬಸವ. ೨೪೦). [ಸಂ.]

**ಲೋಕೋಪಯೋಗಿ** (ಗು). ಸಾರ್ವಜನಿಕರಿಗೆ ಉಪಯೋಗಕರವಾದ,- ಬಳಕೆಗೆ ಬರುವ : 'ಲೋಕೋಪಯೋಗಿಇಲಾಖೆ' ಪರಾ.

[ಸಂ. ಲೋಕೋಪಯೋಗಿನ್]

**ಲೋಕೋಪಯೋಗಿಇಲಾಖೆ** (ನಾ). ಸಾರ್ವಜನಿಕರಿಗೆ ಉಪಯುಕ್ತವಾದ ಕಾರ್ಯವನ್ನು ಮಾಡುವ ಇಲಾಖೆ ; ಮರಾಮಂತ್ತು ಇಲಾಖೆ : ಇಂದು ವಿಧಾನಸಭೆಯಲ್ಲಿ ಲೋಕೋಪಯೋಗಿಇಲಾಖೆಯ ಬೇಡಿಕೆಗಳ ಮೇಲಿನ ಚರ್ಚೆ ನಡೆದಿದೆ (ರೂಢಿ). [ಲೋಕೋಪಯೋಗಿ + ಇಲಾಖೆ]

**ಲೋಗ** (ನಾ). ೧. ಜಗತ್ತಿನಲ್ಲಿರುವ ಜನ. ೨. ಬೇರೆಯವನು ; ಅನ್ಯ ; ಪರಕೀಯ : ನರಪಂಗೆಂತೆಂದೊಡಂ ಲೋಗನೆ ಗಡ ಜನನೀಭ್ರಾತೃ (ಪುಷ್ಪ.ಪು. ೬-೪) ; ನೀ ಬೇಟಿನಗೆ ಲೋಗನೆ ಕಂದ (ಕುಮಾ.ದ್ರೋ. ೦-೨೩) ; ಇವಂ ತನ್ನವನಿವಂ ಲೋಗನೆನ್ನದೆ ನಯಂಬಿಡದು . . . ಅರಸುಗೆಯ್ಯು ತುಮಿರ್ಕುಂ (ಪಂಚತ. ೦೦-೬೨). ೩. ಸಾಮಾನ್ಯಮನುಷ್ಯ ; ನಾಡಾಡಿ; ಎಗ್ಗ : ಲೋಗ-ಲೋಕ=ಜನ. ಸಾಮಾನ್ಯ ವ್ಯಕ್ತಿ" (ಶಬ್ದಕೋ. ೩೯) ; ಲೋಗನಾದೆನು ನಿನ್ನ ಚರಣಕೆ ಬೇಗೆಯುನು ಬರಿಸಿದೆನು (ಶಿಭಾಗ. ೦-೦೩-೨೦).

**ಲೋಗರ್, ಲೋಗರು** (ಬಹುವ) : ರಸಿಗೆ ಸುರಿಯೆ ನೊಳವುಗಳ್ ಮುಸುಕಿಕೊಂಡು ತಿನೆ ಪೇಸಿದನಾಗಿ ಲೋಗರ ಮನೆಗಳೊಳ್ ಭೈಕ್ಷವಂ ಬೇಡಿ (ವಡ್ಡಾರಾ. ೦೨೨-೨೪); ಲೋಗರ ವಸ್ತುವಂ ಕೊಳಲಾಗದು (ಪಂಚತಂ. ೬೪-೦೯); ಲೋಗರ ಮನೆಯ ಬಾಗಿಲ ಕಾಯ್ದುಕೊಂಡಿಪ್ಪವು ಕೆಲವು ದೈವಂಗಳು (ಬಸವ, ೫೫೩); ಮೋಡಿಗೊಳದೆ ಲೋಗರುಚಿತಮನರಿಯ್ಯನೊಯ್ಯನೆಯನು ವಾಗಿ ನುಡಿವುದು (ಹರಿಶ. ೪-೦೦). [< ಸಂ. ಲೋಕ]

**ಲೋಗು** (ಕ್ರಿ). ಹಿಂಜರಿ ; ಹಿಮ್ಮೆಟ್ಟು : ರಾವಣನ ಬರಹೇಳು ರಣಸಭಾ ವನೆಗೆ ಲೋಗಿಡದೆ ಸೀತಾದೇವಿಯಂ ತಂದಿತ್ತು ಬದುಕೆಂದೆನುತಲರುಹೆಂದ (ಅಸಂಬಾ. ೩-೬-೦೩); ಮೈದೆಗೆಯೆ ಮರಣ ಸನ್ನಿಹಿತ ರಣಕೊದಗಿದರೆ ಕೈದು ಗಳಗಶನಮತಿದೂರಪಂಥಾನಗರಿಗೈದಲೊಂದೆಡೆಯ ಮುಂಗಡೆಯ ಶತ್ರು ಗಳಂಗೆ ಲೋಗಿದಪಕೀರ್ತಿಯಹುದು (ಪಂಚಶಾ. ೬-೨೬-೩೩).

[←ತೆಲು. ಲೋಗು]

**ಲೋಗೇಶ್ವರ** (ನಾ). "ಲೋಯಿಸರ (?)" (ಶಿಂಶಂ. ಕೋಶ) : ಶರಸಂಧಾನ ಕ್ರಿಯೆಯಿಂದೆರಡುಂದೆಸೆಗೆಸುತಮಂತೆ ಪರಿಯಿಸಿ ಲೋಗೇಸ್ವರದೊಳಗೆ ಬಂಡಿವರಿಪಂತಿರೆ ಚಕ್ರವ್ಯೂಹದೊಳಗೆ ಪರಿದತ್ತು ರಥಂ (ಶಿಂಶಂ. ೦೨-೦೨).

[< ಲೋಯಿಸರ?]

**ಲೋಚಕ** (ನಾ). ೧. ದಡ್ಡಮನುಷ್ಯ ; ಮೂರ್ಖ. ೨. ಕಣ್ಣಿನ ಪಾಪೆ,— ಹಾಹೆ. ೩. ದೀಪದ ಮಸಿ ; ಕಾಡಿಗೆ. ೪. ಮಾಂಸದ ಗರಣೆ. ೫. ಹಾವಿನ ಪೊರೆ. ೬. ಹೆಂಗಸರು ಹಣೆಯಲ್ಲಿ ಧರಿಸುವ ಆಭರಣ; ಹಣೆಬೊಟ್ಟು. ೭. ಒಂದು ಬಗೆಯ ಕಿವಿಯ ಆಭರಣ. ೮. ಬಾಳೆಗಿಡ. ೯. ಕಪ್ಪು ಅಥವಾ ನೀಲವರ್ಣದ ಉಡುಪು. ೧೦. ಬಿಲ್ಲಿನ ಹಗ್ಗ; ಹೆದೆ. ೧೧. ಸುಕ್ಕುಗಟ್ಟಿದ ಚರ್ಮ. [ಸಂ.]

**ಲೋಚನ** (ಗು). ೧. ಹೊಳೆಯುವ; ಪ್ರಕಾಶಿಸುವ. ೨. ಕಾಣಿಸುವ; ಗೋಚರಿಸುವ. (ನಾ). ೩. ಕಾಣುವಂತೆ ಮಾಡುವ ಅಂಗ ; ಕಣ್ಣು; ನಯನ : "ದೃಕ್, ದೃಷ್ಟಿಃ, ನೇತ್ರಂ, ಲೋಚನಂ . . . ಅಕ್ಷಿ—ಈ ೯ ಕಣ್" (ಹಲಾಯು. ೯೭-೩೭೩) ; ಕಳಕಂಠಲೋಚನಚ್ಛವಿವಿಳಾಸಮಂ ತಳೆದ ನೀಲ ಪಾಟಳ ಜಂಬೂಫಲಾಳಿಯಂ (ಕಾದಂಪೂ. ೯೭) ; ಬಗೆ ಮಾಱೆ ಲೋಚನದೆಳೆಳೊಗೆವ ಸುಖಜಲ (ಹಕಾ. ೩-೭೦) ; ಕಾಡು ಮೀಳಯುಕಿಂಬು ಲೋಚನಾಂಜನಕಿಂಬು (ಸರ್ವಜ್ಞ. ೨೭೩). ೪. ದೃಶ್ಯ ; ನೋಟ. ೫. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಯಮಳ, ಲೋಚನ, ದಂಪತಿ ಇಂತಿನಿತುಂ ೨ಕ್ಕೆ ಪೆಸರು (ವ್ಯವಗ. ೧೧). [ಸಂ.]

**ಲೋಚನಜಲ, ಲೋಚನಜಳ** (ನಾ). ಕಣ್ಣೀರು ; ಕಂಬನಿ ; ಅಶ್ರು. **ಲೋಚನಜಳ** : ಲೋಚನಜಳನಿಪತನಭಯಸಾಚೀಕೃತವದನೆ ವಿಮುಖ ವಿಧಿಯಂ ತೋರ್ಪಂತೆ (ಲೀಲಾವ. ೭-೯೪). [ಸಂ.]

**ಲೋಚನಜಳ** 'ಲೋಚನಜಲ' ನೋ.

**ಲೋಚನವಾರಿ** (ನಾ). = ಲೋಚನಜಲ : ಬಸವಯ್ಯಂ ಪ್ರಳಾಪಿಸು ತೊಂದನೊಂದಂ ಕಿನ್ನರನ ಗುಣವೃಂದವಂ ನೆನೆನೆನೆದು ಲೋಚನವಾರಿಯಲ್ಲಿ ನನೆದು (ಬಸವ. ೪೭-೯) ; ಹೃದಯಶಿಖಿಯುಱೆ ತಳಿತು ಲೋಚನವಾರಿ ತುಳುಕಿತು (ಕುಮಾರವ್ಯಾ. ೭-೯). [ಸಂ.]

**ಲೋಚನಶ್ರುತಿಪ** (ನಾ). ಸರ್ಪಗಳ ಅಧಿಪತಿ : ಆದಿಶೇಷ : ಕ್ರತುಭುಜರ ಸುಡಲು ಗರಳವನುಗುಳ್ವ ಲೋಚನಶ್ರುತಿಪ [ಪಾಠಾಂ. ಲೋಚನದ ಶ್ರುತಿಪ] ನಂತಚಲಾವೃತತ್ವದಿಂ . . . ಒಪ್ಪಿತು ಸಮುದ್ರಂ (ಭಾಪಕಾಂ. ೦-೨೩). [ಸಂ.]

**ಲೋಚನಾಂಬು** (ನಾ). = ಲೋಚನಜಲ : ಲೋಚನಾಂಬುಗಳುಕ್ಕಿದವು ಕಳವಳಿಸಿದವು ಕರಣೇಂದ್ರಿಯಾದಿಗಳು (ಕುಮಾರವ್ಯಾ. ೨೦-೩೩). [ಸಂ.]

**ಲೋಚನಾಂಶು** (ನಾ). ಕಣ್ಣಿನ ಕಾಂತಿ : ನಡು ನಡಪಿತ್ತು ತನ್ನನೆನೆ ಮೆಯ್ ಬಡವಾದುದು ಲೋಚನಾಂಶುಗಳ್ ಬಿಡೆ ತೊಡರ್ದಂತೆ ಗಂಡ ಯುಗಳಂ ಬಿಳಿದಾದುದು (ಶಂಪ್ರಕೃ. ೩-೦೨೪) ; ಲೋಚನಾಂಶು ಸೆಳೆಮಿಂಚು (ಧರ್ಮಾ. ೦೪-೯೭). [ಸಂ.]

**ಲೋಚಮಸ್ತಕ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಕಾಳು; ಓಮ: "ಖರಾಶ್ವಾ, ಕಾರವೀ . . . ಲೋಚಮಸ್ತಕಃ—೫ ಓಮದ ಹೆಸರುಗಳು" (ಸಿದ್ಧಾಂ. ೦೬೨) ; "ಕಲ್ಲಿಕೆಹೂ . . . ಮಯೂರಶಿಖಿ, ಲೋಚಮಸ್ತಕ, ಹೊರೆಯೆಸುಸವ" (ಸಸ್ಯ. ೩೦). [ಸಂ.]

**ಲೋಚು** (ನಾ). ೧. [ಜೈನ] ಮುನಿಧರ್ಮಗಳಲ್ಲಿ ಒಂದು ; ತನ್ನ ತಲೆಯ ಮತ್ತು ಮುಖದ ಕೂದಲನ್ನು ತಾನೇ ಕಿತ್ತು ತೆಗೆಯುವುದು ಅಥವಾ ಬೇರೆಯವರಿಂದ ಕೀಳಿಸಿಕೊಳ್ಳುವುದು ; ಲುಂಚನಕ್ರಿಯೆ : ಲೋಚಿಂಗಾಱದೆ ತಪಮಂ ಕೊಳಲಂಜಿ ಮೆಲ್ಲನಲ್ಲಿಂ ಜಗುಟ್ದುಪೋಗಿ ತಲೆಯಂ ಬೋಳಿಸಿಕೊಂಡು ಬ್ರಹ್ಮಚಾರಿವೇಷಮಂ ಕೈಕೊಂಡು (ವಡ್ಡಾರಾ. ೭-೩೩); ಮುನಿಕುವರರು ಬಿಟ್ಟ ವಸ್ತ್ರಾಭರಣ ಲೋಚನ ಕೇಶಗಳನೊಯ್ದು ಸುರರು ವನಧಿಯೊಳಿಂಬಿಟ್ಟರು (ಧರ್ಮ. ೭೦-೦೦೯). ೨. ಲುಂಚನಕ್ರಿಯೆಯ ಸಂದರ್ಭದಲ್ಲಿ ನಡೆಸುವ ಸಮಾರಂಭ—ಉತ್ಸವ : ಜಿನುಗುಮತಿಗಳ ಸಿದ್ಧ ಸಾಧಕ ಮುನಿಗಳೆಂಬವದಿರುಗಳನು ನಾ ಮುನಿದು ಕಚ್ಚುಟ ಕಂತೆ ಬತ್ತಲೆ ಬೋಳು ಜಡೆ ಲೋಚು ಅನಶನವ್ರತ ನಾರುಬೇರೆಂಬನಿತಱಲಿ ದಂಡಿಸುವೆ ನಾ (ಪ್ರಭುಲಿಂ. ೭-೩೭) ; ತನುವೆರವೆಂಬುದ ದೃಢಮಾಳ್ಪುದಕೆ ಲೋಚು (ಧರ್ಮ. ೭೦-೯೪) ; ಲೋಚು ಮುಗಿದ ಮೇಲೆ ಜಿನಗಂಧೋದಕ ವನ್ನು ಮುನಿಯ ತಲೆಗೆಲ್ಲ ಸವರಿದರು (ದಾಕಕಾಂ. ೦). ೩. ತಲೆಯ ಕೂದಲು,—ಕೇಶ(?): ಅಱಿವೇ ಗುರು ಆಚಾರವೆ ಶಿಷ್ಯ ಜ್ಞಾನವೇ ಲಿಂಗ ಪರಿಣಾಮವೇ ತಪ ಸಮತೆ ಎಂಬುದೇ ಯೋಗ ನೋಡಾ ಈಸುವನಱಿಯದೆ ಲೋಚು ಬೋಳಾದರೇನು ಮಹಾಲಿಂಗ ಕಲ್ಲೇಶ್ವರದೇವರು ನಗುವರು (ವಚನ. ೦೯೭-೩೨) ; ಲೋಚು ಬೋಳಾಗಿ ಜಡೆಗಟ್ಟಿ ದೆಸೆದೆಸೆಗಳಂ ತಿರುಗಿ ಭಿಕ್ಷಾಂದೇಹಿಯಾದ ಸಂದೇಹಿಗಳ ಶಿವನೊಲ್ಲನು (ಶಿವಗೀ. ೩೩-೨೭೦).

[ಸಂ. ಲುಂಚ್]

**ಲೋಚುಗೆಯ್** (ಕ್ರಿ). ಜಿನದೀಕ್ಷೆ ಕೈಕೊಂಡವರ ಕೂದಲನ್ನು ಕೀಳು : ಲೋಚುಮಾಡು : ದೇವತೆಗಳ್ ಮಾಡಿದಾಹಾರಮಂ ರಿಸಿಯರ್ಗೆ ಚರಿಗೆಮಾಡಲಾಗದೆಂದು ಬಾರಿಸಿಯವರ್ಗೆ ಲೋಚುಗೆಯ್ದು ಬ್ರತಂಗಳ ನೇಱಿಸಿ (ಪಡ್ಡಾರಾ. ೯೦-೨೪) ; ಲೋಚುಗೆಯ್ದಂಕಕಾಱಂಗೆ . . . ಪಂಚ ಮಹಾವ್ರತಂಗಳನೇಱಿಸಿ (ಬಂಹಂ. ೦೦-೩೦ ಪ) ; ಬೆಳುವಲ್ಲ ಮಲಿನ ದೇಹದ ಲೋಚುಗೆಯ್ದ ಬೋಳ್ದಲೆಯ . . . ಜಿನಗುರುಗಳು (ಸೌಂದರ. ೦೨-೭೯). [ಲೋಚು+ಕೆಯ್$_1$]

**ಲೋಟ** 'ಲೋಟಾ$_1$' ನೋ.

**ಲೋಟಕ** (ನಾ). ತುಳಿಯುವವನು ; ಮೆಟ್ಟುವವನು : "ಲೋಟಕಃ. ಲೋಟಮಾನಃ. ಈ ೨ ತುಳಿವಂ" (ಕಾಶಕ್ಕ. ೦೩೦). [ಸಂ.]

**ಲೋಟನ** (ನಾ). ೧. ಉರುಳುವಿಕೆ ; ಬೀಳುವಿಕೆ : 'ಲೋಟಿಸು' ಪರಾ. ೨. ತುಳಿಯುವಿಕೆ ; ತುಳಿತ : "ಲುಟ್ . . . ಲೋಟುಃ, ಲೋಟನಂ. ಲೋಟನೀಯಂ, ಈ ೬ ತುಳಿ" (ಕಾಶಕ್ಕ. ೦೩೦). [ಸಂ.]

**ಲೋಟಾ$_1$, ಲೋಟ, ಲೋಟೆ** (ನಾ). ಮಣ್ಣು ಅಥವಾ ಲೋಹದ ಸಣ್ಣ ಕುಡಿಯುವ ಪಾತ್ರೆ : ಅವನ ಫಲಾರವೆಂದರೆ ಲೋಟಾ ನೀರು (ಕಾಮ್ಯ. ೦೯) ; ನಮ್ಮ ಲೋಟಾಗಳಲ್ಲಿ ಮತ್ತೊಂದು ಸಲ ಕಾಫಿಯನ್ನು ಬಗ್ಗಿಸಿದಳು (ಪಡಿದಾ. II. ೯೩೯). **ಲೋಟ** : ಪಕ್ಕದ ಸ್ಟೂಲಿನ ಮೇಲೆ ಹೊಳಪಿನ ಕಂಚಿನ ಕೂಜ, ಲೋಟ (ರಂಗಳ. ೭೦) ; ಅವನ ಹಾಸಿಗೆಯ ಪಕ್ಕದಲ್ಲಿ ಒಂದು ಚಂಬು, ಅದರ ಪಕ್ಕದಲ್ಲಿ ಒಂದು ಲೋಟವಿತ್ತು (ಹೂಹಣ್ಣು. ೩). **ಲೋಟೆ** : ಒಂದು ಲೋಟೆ ಬಾಯಾರಿಕೆಯನ್ನು ತಾನೇ ತಂದು ಕೊಟ್ಟನು (ಮುಂಗಾರು. ೭೪). [←ಅರ. ಹಿಂ. ಮರಾ. ಲೋಟಾ]

**ಲೋಟಾ$_2$** (ನಾ). ಒಂದು ಬಗೆಯ ಪಾರಿವಾಳ : ಲೋಟಾ ಎಂಬ ಪಾರಿವಾಳಗಳು ನೆಲದ ಮೇಲೆ ಉರುಳುತ್ತ ಹೋಗುತ್ತವೆ (ಮುಂಬಯಿ. ೩-೧೦೦). [ ? ]

**ಲೋಟಿಸು** (ಕ್ರಿ). ಉರುಳಿಸು ; ಕೆಡವು ; ಬೀಳಿಸು : ಅಗಡಿಯಲಿ ಲೋಟಿಸಿ ನಿರಂತರ ಲಗಡಿಯಲಿ ಲಾಗಿಸಿ . . . ಹೆಣಗಿದರು (ಕುಮಾರವ್ಯಾ. ಸ. ೨-೯೯); ವಿಗಡರದ ಲೆಕ್ಕಿಸದೆ ಲೋಟಿಸಿ ಮಗುಚಿದರು (ಕುಮಾರವ್ಯಾ. ೦೨-೩೯).

[ಲೋಟನ+ — ಇಸು$_3$]

**ಲೋಟು** (ನಾ). (?) : ಜಯಗೋಪಕನ್ಯಕಾಕಾಮಕಲೆ ಶಾಸ್ತ್ರಪ್ರಭೆಲೋಟ ನೊಳು ತ್ರಿವಳಿಕುಕ್ಷ ಜಯುವನಧಿದಕ್ಷಾ (ಶ್ರೀಕೃಷ್ಣ. ೦). [ ? ]

**ಲೋಟೆ** 'ಲೋಟಾ$_1$' ನೋ.

**ಲೋಡನ** (ನಾ). ೧. ಕದಡುವಿಕೆ ; ಕಲಕುವಿಕೆ ; ಮಥನ. ೨. ಪ್ರಚೋದನೆ. [ಸಂ.]

**ಲೋಡಿಗೆ** (ನಾ). ಒರಗಿಕೊಂಡು ಕೂತುಕೊಳ್ಳಲು, ಅರಳೆ ಮೊದಲಾದುವನ್ನು ತುಂಬಿ ಮಾಡಿದ ಮೃದುವಾದ ದಿಂಬು : ಬಳಿಯ ಚೌರಿಯ ಹೊಱೆಯ ಚಿತ್ರಾವಳಿವಿಧಾನದ ಹಾಸುಗಳ ಹೊಂಬಳಿಯ ತೆರೆಸೀರೆಗಳ ಛತ್ರ ವ್ಯಜನ ಸೀಗುರಿಯ ಹೊಳೆವ ಪಟ್ಟೆಯ ಲೋಡಿಗೆಯ . . . ಸುವರ್ಣಾವಳಿಯ ದಿಂಡುಗಳೊಟ್ಟಿದವು (ಕುಮಾರವ್ಯಾ. ಗ. ೪-೦೪).

[ < ಲೋಡು$_1$ ]

**ಲೋಡು$_1$** (ನಾ). = ಲೋಡಿಗೆ : . ಒಱಗಿಕೊಂಬುದಕೆ ಲೋಡಾಗಲು ಮತ್ತೊಂದು ಮಿಱುಗುವ ಗದ್ದುಗೆಯಾಗೆ (ಜ್ಞಾ ಪಕ. ೩೩-೪೯) ; ಪಾಸಿನೊಳ್ ನೀಳಮಾದೊಂದು ಲೋಡಂ ಮಲಂಗಿಸಿ. . .ಪೊದೆಯಿಸಿ (ಕಳವ್ಯ. ೯-೩೪); ಕನ್ನಡೀಮಹಲಿನಲ್ಲಿ ರತ್ನದ ಗಾದಿಯ ಮೇಲೆ ಲೋಡಿಗೆ ಆತುಕೊಂಡು

ಕುಳಿತರು (ಶಾಂಕುಳ. ೦೦).

[ ದೇ.॥ ತುಳು. ತೆಲು. ಲೋಡು. / ಮರಾ. ಲೋಡ, ಲೋಢ ]

**ಲೋಡು₂** (ನಾ). ವ್ಯಾಯಾಮ ಮಾಡುವುದಕ್ಕಾಗಿ ಕೈಯಲ್ಲಿ ಹಿಡಿದು ತಿರುಗಿಸುವ ಮರದ ಭಾರವಾದ ಸಾಧನ : ಗರುಡಿವನೆಯಂ ಪೊಕ್ಕು . . . ತಿರುಹುತ್ತ ಲೋಡು ನಿಡುಸಾಣಾಗಳ (ಶಶಪು. ೯-೦೦) ; ಕೈಗಳಿಂದ ತಿರಿಗಿಸಲ್ಪಟ್ಟಂಥಾ ಶಿರಸ್ಸಿನ ಸುತ್ತಲು ತಿರಿಗಿಸುವದರಿಂದ ವಷ್ಟ ವಂಥಾ. ತೋರನಾಗಿಯಿದ್ದಂಥಾ ಅದಕೆ ಲೋಡುಯೆಂಬ ಹೆಸರು (ಅಶ್ವಶಿ. ೨-೩೦) ; ಗರಡಿಮನೆಗೆ ಗಂಭೀರ ಹೋಗವ್ನೆ ಗಂಧದ ಲೋಡ ತಿರುಗುವ ದೊರೆಮಗನಿಗೆ ಮಗಳ ಕೊಡಬೇಕು (ಜಕ್ಕಣಾ. ೫೩).

[ ದೇ.॥ ತೆಲು. ಲೋಡಿ, ಲೋಡೀ]

**ಲೋಡು₃** (ನಾ). ಹೊರೆ; ಹೇರು : 'ಫೈಲ್' 'ವ್ಯಾಗನ್' 'ಲೋಡು' ಬರೆದುಕೊಂಡರು (ಅರಕೋ. ೨೦); ಗಾಡಿಗೆ ಲೋಡು ಜಾಸ್ತಿಯಾಗಿದೆ (ಆಡು).

[ ← ಇಂ. Load ]

**ಲೋಣ** (ನಾ). ಒಂದು ಬಗೆಯ ಉಪ್ಪು: "ಲವಣೋತ್ಥಂ, ಲವಣಾರಂ– ಈಯೆರಡು ಲೋಣ, ಲವಣ" (ಚಿತಧ. ೦೯೨).

[ < ಪ್ರಾ. ಲೋಣ. / ಸಂ. ಲವಣ ]

**ಲೋಣಾರ** (ನಾ). ಉಪ್ಪು ಮಾಡುವವನು; ಉಪ್ಪಾರ : ಲೋಣಾರರು:– ಇವರ ಜನ್ಮಭಾಷೆ ಕನ್ನಡ . . . ಸೋರುಪ್ಪು ಮಾಡಿ ಮಾರುವರು (ಕಭಾಗ. ೦೬೮).

[← ಮರಾ. ಲೋಣಾರ. / ಸಂ. ಲವಣಕಾರ ]

**ಲೋಣಿಕೆ** (ನಾ). ಒಂದು ಬಗೆಯ ಸಸ್ಯ; ಪುಳ್ಳಂಪುರಿಚೆ : "ಆ ಲೋಣಿಕೆ ಕ್ಷುಲ್ಲಕಾಮ್ಲ ಪುಳ್ಳಂಪುಣುಸೆ" (ಮಂಗರಾ. ೯೨-೩೯). [ಸಂ.]

**ಲೋಧ್ರ** (ನಾ). ಒಂದು ಬಗೆಯ ಮರ : "ಗಾಲವಃ, ಶಾಂಬರಃ, ಲೋಧ್ರಃ . . . ಮಾರ್ಜನಃ — ಈ ೬ ಲೋಧ್ರಗಿಡದ ಹೆಸರು. ಇದು ಜಾಲಾರಿಮರದಲ್ಲಿ ಭೇದ, ಅರಗಿನ ಮರ" (ನಿಘಂಶಿ. ೦೦೯); ಚೂತಾವನೀ ಜಾತ ಲೋಧ್ರಲವಂಗಪ್ರಕರಪ್ರವಾಳರುಚಿತಂ . . . ಕಣ್ಗೊಳಿಸುಗುಂ (ಕಾದಂಪೂ. ೨೦೩) : ಜಾಜಿ ಬಕುಳಂ ತುಂಬೆ ಲೋಧ್ರವೃಕ್ಷಗಳಗುಳ್ಳ ಕಣಗಿಲುಮಶೋಕೆಯುನ್ಮತ್ತ (ಚೀಕ್ಷ್ಯ. ೭-೦೦-೦೬) ; ಹಿಪ್ಪಲಿ, ಲೋಧ್ರ, ಭದ್ರಮುಷ್ಠಿ. . .ಕೊಡಲು ಪ್ರಳಯಾಗ್ನಿಗೆ ಸಮಾನವಾದ ಉಷ್ಣಜ್ವರವೂ ತಾಪಜ್ವರ ಕಡುಜ್ವರಗಳೂ ಸಹ ಮಾಣುವುವು (ಸಳವೈ. ೭೮).

[ಸಂ.]

**ಲೋಧ್ರಪುಷ್ಪ** (ನಾ). ಒಂದು ಬಗೆಯ ಮರ : ಇಪ್ಪೆ; ಮಧೂಕ : "ಇಪ್ಪೆ ಮಧುಕಂ ಲೋಧ್ರಪುಷ್ಪ ಗುಡಪುಷ್ಪಮಕ್ಕುಂ" (ಮಂಗರಾ. ೯೨-೩೯).

[ಸಂ.]

**ಲೋಪ** (ನಾ). ೧. ಚೂರುಮಾಡುವುದು : ಒಡೆಯುವುದು. ೨. ಹಾಳುಮಾಡುವಿಕೆ ; ನಾಶ. ೩. ಸುಲಿಗೆಮಾಡುವುದು : ಕೊಳ್ಳೆ. ೪. ಇಲ್ಲದಾಗುವುದು : 'ಸ್ವರಮಿರೆ ಪರದೊಳ್ ಪೂರ್ವಸ್ವರಲೋಪಂ (ಶಾಮ್ಯಾದ. ೩೨) ; ದಕಾರದೆಡೆಗೆ ಒರಿಸುಂ ಲೋಪಂ (ಶಬ್ದಮ.೯೬); ಇಲ್ಲಿಯೂ ರೇಫ ಲೋಪವಾಗಿದೆಯೆಂದು ತಿಳಿಸುವರು (ಅಭಿನಿ. ೯೬). ೫. ಕೊರತೆ ; ಊನ : ಚಾಪದಂಶವ ಹೊಂದಿ ಶನಿ ಇರೆ ಪಾಪ ಚಂದ್ರನ ರಕ್ಷಣೆಯು ತಾ ಲೋಪವಿಲ್ಲದೆ ತಾಳಿರಲು ಹನ್ನೊಂದು ವರುಷ (ಕಾಲಚಕ್ರ. ೨-೦೩); ಲೋಪವೇನೂ ಇಲ್ಲ, ದೀಪಕೆ ಮಾತ್ರ ಬಗೆಯಿಲ್ಲ (ಗಾದೆ). ೬. [ವ್ಯಾಕ] ಕನ್ನಡದ ಲೋಪ, ಆಗಮ ಮತ್ತು ಆದೇಶಗಳೆಂಬ ಸಂಧಿಗಳಲ್ಲಿ ಮೊದಲನೆಯದು ; ಸ್ವರದ ಮುಂದೆ ಸ್ವರ ಬಂದರೆ ಹಿಂದಿನ ಸ್ವರ ಬಿಟ್ಟುಹೋಗುವುದು : ಸ್ವರಮಿದಿರೊಳಿರೆ ವಿಭಕ್ತಿ ಸ್ವರಕಂ ಪ್ರಕೃತಿಸ್ವರಕಮಕ್ಕುಂ ಲೋಪಂ (ಶಮದ. ೫೨) 'ಲೋಪಸಂಧಿ' ಪರಾ.

ಲೋಪದೋಷ — ಕುಂದು ಮತ್ತು ಕೊರತೆ ; ಅಂಕುಡೊಂಕು : ಪ್ರಜಾಪ್ರಭುತ್ವದಲ್ಲಿ ಎಷ್ಟೇ ಲೋಪದೋಷಗಳಿದ್ದರೂ ಅದು ಸರ್ವಾಧಿಕಾರ ಪ್ರಭುತ್ವಕ್ಕಿಂತ ಸಾವಿರಪಾಲು ಮೇಲು (ಕಂಕಸಂ. ೦೬೩). [ಸಂ.]

**ಲೋಪಂಬೊರ್ದು** (ಕ್ರಿ). ಲೋಪವನ್ನು ಹೊಂದು ; ಇಲ್ಲದಂತಾಗು : ಇದರ್ಗದನರಿಯದೆ ನಯದಿಂ ಪೊರ್ದುವುವಾಗಮಮುಮಯ್ದು ಪೋಪುವು ಲೋಪಂಬೊರ್ದಿ ವಿಭಕ್ತಿಯ ಬಟಿವಿಡಿದು (ಶಬ್ದದ. ೦೬೩).

[ಲೋಪ + ಪೊರ್ದು₁]

**ಲೋಪಗೈಸು** (ಕ್ರಿ). ಇಲ್ಲದಂತೆ ಮಾಡು ; ಅಳಿಸು : ದೀಪ ದಿವದಲಿ ಕಂಡರಾದಡೆ ಲೋಪಗೈಸುವರಾಕ್ಷಣ (ಹಡಾಶ. ೦೬-೨೭).

[ಲೋಪ + ಕೈಸು (<ಕೆಯ್ಯು₁)]

**ಲೋಪವೃತ್ತಿ** (ನಾ). ಬಿಟ್ಟುಹೋಗುವಿಕೆ ; ಇಲ್ಲವಾಗುವಿಕೆ : ವಿದಿತಂ ದಾಡಿಮ ಕೂಷ್ಮಾಂಡದ ಮತ್ತ್ವ ಸ್ಥಾನದಲ್ಲಿ ಬತ್ವಂ ಕೂಷ್ಮಾಂಡದ ಷತ್ವಕ್ಕಂ ಬಿಂದುಗಮುದಯಿಸುಗುಂ ಲೋಪವೃತ್ತಿ ಲಕ್ಷಣವಿಧಿಯಿಂ (ಶಮದ. ೨೮೪).

[ಸಂ.]

**ಲೋಪಸಂಧಿ** (ನಾ). = ಲೋಪ ೬ : ಸ್ವರದ ಮುಂದೆ ಸ್ವರವು ಬಂದರೆ ಸಾಮಾನ್ಯವಾಗಿ ಹಿಂದಿನ ಸ್ವರವು ಬಿಟ್ಟುಹೋಗುತ್ತದೆ. ಹೀಗೆ ವರ್ಣವು ಬಿಟ್ಟು ಹೋಗುವುದಕ್ಕೆ ಲೋಪವೆಂದೂ ಈ ಸಂಧಿಗೆ ಲೋಪಸಂಧಿಯೆಂದೂ ಹೆಸರು (ಶುರ್ಶ್ಯಕು. ೦೬). [ಸಂ.]

**ಲೋಪಿಸು** (ಕ್ರಿ). ಬಿಡು ; ಕಳೆ ; ತೆಗೆದುಹಾಕು : ತಪನಪ್ರತಾಪಮಂ ಲೋಪಿಪ ನಾಲ್ವತ್ತೆಂಟುಕೋಟಿ ಪಟುಯಾಗೆಯಸೆಗುಂ (ಶಾಕ್ಯರತ್ನ. ೬-೪೦); ಎಲ್ಲಿಯುಮಾಮಂತ್ರಣದೊಳ್ ಬಲ್ಲರ್ ಪ್ರಥಮೈಕವಚನಮಂ ಲೋಪಿಸುವರ್ (ಶಮದ. ೦೨೩); ಪಾಪವಾಸನೆಯನು ಪುಣ್ಯವಾಸನೆಯಿಂದ ಲೋಪಿಸಿ ತನ್ನೊಳು ನಿಂದು (ಶರಶ. ೦೬-೬೬). [ಲೋಪ + —ಇಸು₁]

**ಲೋಪ್ತ್ರ** (ನಾ). ಕದ್ದ ವಸ್ತು ; ಕಳವಿನ ಮಾಲು : "ಲೋಪ್ತ್ರಮೆನೆ ಕಳವಿನೊಡವೆ" (ಮಂಗರಾ. ೬೭-೫). [ಸಂ.]

**ಲೋಬ** (ನಾ). ೧. ಅತಿಯಾಸೆ ; ಕೃಪಣತೆ : ಲೋಭ – ಲೋಬ (ಶಶದ. ೨೫೫ ಪ್ರಯೋ). ೨. ಅತಿಯಾಸೆಯುಳ್ಳವನು ; ಕೃಪಣ : ಲೋಭಿ : ಹುಸಿವನ ಮಾತುಗುಟ್ಟದಿರು ಲೋಬನ ಮಾತನಡಂಗಿಸಾಡಿ ಯೊಳ್ಳುಸಿವನ ಮಾತುಗೇಳದಿರು (ಕಇ. I. ೨೫-೯೬ ; 1186).

[ < ಸಂ. ಲೋಭ]

**ಲೋಬಾನ, ಲೋಭಾನ** (ನಾ). ಸುಗಂಧ ದ್ರವ್ಯದಂತೆ ಬಳಸುವ ಒಂದು ಬಗೆಯ ಮರದ ಅಂಟು ; ತುರುಷ್ಕ : ಲೋಬಾನ ಚಂದನ ಗಾಡಿನೊಳ್ಪಿಂದಿ ಮತ್ತೇಭಂಗಳಿರೆ ಕಂಡರವರು (ಮೋಹಕ. ೦೯-೨೦) : ಕನ್ನಡದಲ್ಲಿ ಲೋಬಾನ ಎಂತಲೂ ಹಾಲುಮಡ್ಡಿ ಎಂತಲೂ ಕರೆಯುತ್ತಾರೆ (ಪ್ರಬಾ೩. I. ೯೯ ೫೩ಬ) ; ಕಾಯಿ ಒಡೆದು ಲೋಬಾನ ಹಾಕಿದ್ದ (ಮೋಡಿಮ. ೩೭). **ಲೋಭಾನ** : ಲೋಭಾನ [ಧೂಪದಿಂ] [ದೊತ್ತರಿಸಿ] (ಸೂಕಲಾ. ೫-೦೫) ; ಕೋಣೆಯಲ್ಲಿ ಲೋಭಾನವು ವಿಶೇಷವಾಗಿ ಸುಡಲ್ಪಟ್ಟದ್ದರಿಂದ ಅದರ ವಾಸನೆಯು ಕೋಣೆಯು ತುಂಬ ಇಡಿಗಿತ್ತು (ಕಶ್ಯದಿ. ೦೦೨) ; ಲೋಭಾನದ ಹೊಗೆಯನ್ನು ಹಾಕಿದ್ದಾರೆ (ದೇಂಕ್. ೦೬೦).

[←ಅರ. ಹಿಂ. ಲೋಬಾನ ; ಮರಾ. ಲೋಬಾನ, ಲೋಭಾನ]

**ಲೋಭ** (ನಾ). ೧. ಅತಿಯಾಸೆ ; ದುರಾಸೆ : ಅನೃತಂ ಲೋಭಂ ಭಯಮೆಂಬಿನಿತುಂ ನೀನಿರ್ದ ನಾಡೊಳಿರ್ಕುಮೆ ರವಿನಂದನ (ಗದಾಯು. ೫-೦೬) ; ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಆರು ಶತ್ರುಗಳನ್ನು (ಅಮ್ಮಕ. ೦-೨೨ ೬೫ಪು) ; ಲೋಭ ನಡಸಿ ನಡಸಿ ಭೋಗ ಕೆಡಿಸಿಕೊಂಡ (ಗಾದೆ). ೨. ಜಿಪುಣತನ; ಕೃಪಣತನ: ಕೊಡೆಯನೀಯನೆ ಲೋಭವೇ ಕರಸ (ಹಡಾಶ.೬-೦೩). ೩. ಜಿಪುಣ; ಕೃಪಣ:

'ಕಡುಲೋಭ' ಪರಾ. ೪. (ಉಕ) ಪ್ರೀತಿ ; ವಾತ್ಸಲ್ಯ ; ಅಕ್ಕರೆ : ಅಣ್ಣಾ ಹೋಗಿಬರುತ್ತೇನೆ; ಲೋಭವಿರಲಿ (ಋಜಾಯು. ೪-೦೪) ; ತಂಗೀ ಇನ್ನು ನಾನು ಹೋಗಿ ಬರುತ್ತೇನವಾ. ಲೋಭವಿರಲಿ (ಉಡಾಕ. ೪೭). ೫. [ಜೈನ] ಐದು ಬಗೆಯ ಅಂತರಾಯಕರ್ಮಗಳಲ್ಲಿ ಒಂದು : ಅಂತರಾಯಕರ್ಮಂ ಪಂಚವಿಧಮಕ್ಕುಂ ದಾನ ಲೋಭ ಭೋಗೋಪಭೋಗವೀರ್ಯಾಂತರಾಯಕರ್ಮಮೆಂದು (ಗೊಮ್ಮಜಾ.೪-೪). 'ಅಂತರಾಯಪಂಚಕ' ಪರಾ. [ಸಂ.]

**ಲೋಭಿಕ** (ಗು). ಲೋಭದಿಂದ ಕೂಡಿದ ; ಕೃಪಣತನದಿಂದ ಕೂಡಿದ : ಮಮ್ಮಲಮಱುಗುತ್ತುಮಿಪ್ಪ ಕಡುಲೋಭಿಕದಾನಗುಣಂಗಳಂ ಪಳಂಚಿ (ಅಜಿ. ೬೨-೦೭). [ಸಂ.]

**ಲೋಭಾನ** 'ಲೋಬಾನ' ನೋ.

**ಲೋಭಿ** (ನಾ). ಕೃಪಣ ; ಜಿಪುಣ : "ಕದರ್ಯಃ . . . ಮಿತಂಪಚಃ–ಈ ೫ ಲೋಭಿ" (ಕರಾಯು. ೩೬-೦೯೨); ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ . . . ಮಕರದೊಳಿರೆ ಮೂರ್ಖಂ ಖಳಂ ಲೋಭಿ (ಜಾತಕ. ೦೬-೦೭); ಭೋಗಿಗೆ ಲೋಭಿಗೆ ಯೋಗಂ ತ್ಯಾಗಂ ಹಿತವಾಗದು (ಶಬ್ದಾ.ಕ. ೨-೩); ಪಾಪಿಗೆ ಪರವಾಯು, ಲೋಭಿಗೆ ಚರಾಯು (ಗಾದೆ). [ಸಂ.]

**ಲೋಭಿಗಲಿ** (ನಾ). ಜಿಪುಣನಾದ ಬಂಟ : ಮಾರ್ಗವಿಮಾಯದ ಬದಿರಿದ ಲೋಭಿಗಲಿಗಳುಮಂ ನೊಂದು ಪಲ್ಗಿರಿದೋಡುವ ಪುಣ್ಣಲಿಗಳುಮಂ . . . ನೋಡಿ (ಗದಾಯು. ೯-೩೪ ಕ). [ಲೋಭಿ + ಕಲಿ]

**ಲೋಭಿತನ** (ನಾ). ಜಿಪುಣತನ ; ಕೃಪಣತ್ವ : (೬). [ಲೋಭಿ + – ತನ]

**ಲೋಭಿಸು** (ಕ್ರಿ). ಅತಿಯಾಸೆಪಡು : ನಿತ್ಯತ್ವಂಬೆತ್ತ ಪಾಂಗಿಂ ಪಳಿವ ಮುಳಿವ ಕಾಮಿಪ್ಪ ಕೋಪಿಪ್ಪ ಲೋಭಿಪ್ಪತ್ಯಂತಂ ಗರ್ವಿಪನ್ನೀ ಮನಕೆ ಪರಮವೈರಾಗ್ಯಮಂ ಕೊಟ್ಟು . . . ರಕ್ಷಿಪ್ಪುದೆನ್ನಂ (ಕೈವಲ್ಯ. ೦೩). [ಲೋಭ + —ಇಸು]

**ಲೋಮ** (ನಾ). ೧. ಮನುಷ್ಯ ಅಥವಾ ಯಾವುದೇ ಪ್ರಾಣಿಯ ಮೈಗೂದಲು ; ರೋಮ : "ಲೋಮಮೆನೆ ಮೆಯ್ಯ ಕೂದಲಕ್ಕುಂ" (ಮಂಗರಾ. ೪೪-೩); "ತನೂರುಹಂ, ರೋಮ, ಲೋಮ_ ೩ ಮೈಯೊಳಗೆ, ಹುಟ್ಟಿದ ಕೂದಲು ಹೆಸರುಗಳು, ಮೈಗೂದಲು" (ಕಿಟ್ಟೆಲ್. ೦೯೭). ೨. ಕೂದಲಿನಂತಿರುವ ಸಣ್ಣ ಬೇರು : ನಿಜವಾದ ಬೇರುಗಳಿಲ್ಲದಿದ್ದರೂ ಅವಕ್ಕೆ ಬದಲಾಗಿ ಹುಟ್ಟಿರುವ ಲೋಮಗಳ ಸಹಾಯದಿಂದ . . . ತನ್ನ ಆಹಾರದ ಏರ್ಪಾಟನ್ನು ತಾನೇ ನಿರ್ವಹಿಸಿಕೊಳ್ಳುತ್ತದೆ (ಜನುಹೊ. ೦೪೦). ೩. ಬಾಲ ; ಪುಚ್ಛ. ೪. ಒಂದು ಬಗೆಯ ಸಸ್ಯ : "ಲೋಮ ಕರ್ಕಟಕಂ" (ಮಂಗರಾ. ೪೦-೩೪). [ಸಂ.]

**ಲೋಮಕ** (ನಾ). ಒಂದು ಬಗೆಯ ಸಸ್ಯ ; ತೊರೆಗಣಗಿಲು : "ತೊರೆಗಣಗಿಲಾ ಲೋಮಕಂ" (ಮಂಗರಾ. ೩೪-೦೦). [ಸಂ.]

**ಲೋಮನಾಳ** (ನಾ). ಕೂದಲಿನಷ್ಟು ಸೂಕ್ಷ್ಮವಾದ (ರಕ್ತ)ನಾಳ: ರೋಗಾಣುಗಳು ಲೋಮನಾಳಗಳಲ್ಲಿ ಸೇರಿಕೊಂಡು ರಕ್ತಚಲನೆಗೆ ಅಡ್ಡಿ ಮಾಡುವುದರಿಂದ ಈ ಚುಕ್ಕೆಗಳು ಕಾಣಿಸಿಕೊಳ್ಳುತ್ತವೆ (ಕಂಠರೋ. ೬೦); ಸೆಲ್ಯುಲೋಸನ್ನು ರಸಾಯನಿಕವಸ್ತುಗಳಲ್ಲಿ ಕರಗಿಸಿ ತಯಾರಿಸಿದ ದ್ರವವನ್ನು ಲೋಮನಾಳ (capillaries)ಗಳ ಮೂಲಕ ಹಾಯಿಸಿ ಹೊರಹೊರಟ ಎಳೆಗಳನ್ನು ಆರಿಸಿ ಹದಗೊಳಿಸಿದ ಪದಾರ್ಥವೇ ರೆಯಾನ್ ಎಳೆಗಳು (ಗೃಕಶಿ. ೬೦). [ಸಂ. ಲೋಮನಾಲ]

**ಲೋಮಶ** (ಗು). ೧. ಕೂದಲಿನಿಂದ ತುಂಬಿರುವ; ರೋಮದಿಂದ ಕೂಡಿರುವ. (ನಾ). ೨. ಕೂದಲಿನಿಂದ ತುಂಬಿರುವ ಪ್ರಾಣಿ : ಲೋಮಶ ಎಂದರೆ ತುಂಬ ಕೂದಲು ಬೆಳೆದ ಪ್ರಾಣಿ ಎಂದು ಅರ್ಥ (ಪಾಲಕಾ. ೪೨). ೩. ಒಬ್ಬ ಋಷಿಯ ಹೆಸರು; ರೋಮಶ : ಕಳುಹಿದನು ಲೋಮಶನನವನೀತಳಕೆ ಸುರಪತಿ (ಕುಭಾ.ಅ. ೯-೨). [ಸಂ.]

**ಲೋಮಶೆ** (ನಾ). ೧. ಒಂದು ಬಗೆಯ ಔಷಧೀಮೂಲಿಕೆ ; ಸುಗಂಧವಟುಸ್ತೆ ; ಜಟಾಮಾಂಸಿ ; "ಜಟಿಲೆ, ಜಟಮಾಂಸಿ, ಸುಗಂಧಮುಸ್ತೆ" (ಸಸ್ಯ.ಶಿ. ೪೩). ೨. ನರಿ. ೩. ಕೋತಿ. [ಸಂ. ಲೋಮಶಾ]

**ಲೋಮಹರ್ಷ** (ನಾ). ಅತಿಯಾದ ಸಂತೋಷ, ಭಯ ಮುಂತಾದುವುಗಳಿಂದ ಮೈಗೂದಲು ನೆಟ್ಟಗಾಗುವುದು. —ಮೈನವಿರೇಳುವುದು. 'ರೋಮಹರ್ಷ' ಪರಾ. [ಸಂ.]

**ಲೋಮಹರ್ಷಣ** (ನಾ). ೧. = ಲೋಮಹರ್ಷ. ೨. ಅತಿಯಾದ ಸಂತೋಷ, ಭಯ ಮುಂತಾದುವು ಮೈಗೂದಲನ್ನು ನೆಟ್ಟಗಾಗುವಂತೆ ಮಾಡುವುದು; ರೋಮಾಂಚಗೊಳಿಸುವುದು. 'ರೋಮಹರ್ಷಣ' ಪರಾ. [ಸಂ.]

**ಲೋಮಿ** (ನಾ). ಕುದುರೆಯ ಗೊರಸಿಗೆ ಹಾಕುವ (ಚಿನ್ನ ಅಥವಾ ಬೆಳ್ಳಿಯ) ಬಳೆ : "ವಳಯಂ ಲೋಮಿವೆಸರಕ್ಕು" (ಮಂಗರಾ. ೬೦-೦೩). [ ? ]

**ಲೋಮಿಕೆ** (ನಾ). ಒಂದು ಬಗೆಯ ಸಸ್ಯ ; ಬೆಂಡೆ : "ಲೋಮಿಕೆಯೆಸಲ್ ಬೆಂಡೆ" (ಮಂಗರಾ. ೪೩-೪೭). [ ? ]

**ಲೋಯಿಸರ** ' ಲೋಳೆಸರ ' ನೋ.

**ಲೋಲ, ಲೋಳ** (ಗು). ೧. ಅತ್ತಿತ್ತ ಅಲುಗಾಡುವ, – ಚಲಿಸುವ ; ಚಂಚಲವಾದ : ಚಮರೀಲೋಲಲಾಂಗೂಲಮಾಲಾವಲಿವಿಕ್ಷೇಪಂಗಳಿಂ ತಚ್ಚಮುರರುಹ ಮಹಾಶೋಭೆ ಕೈಗಣ್ಮೆ (ಶಂಕಕಾ. ೪-೦೪) ; ಮಹೀಭುಜನ ಮೆಯ್ಸಿರಿಯಂ ಸಚಿಗೆಯ್ಯ ತತ್ಸರೋಜಾನನೆ ತನ್ನ ಲೋಲನಯನೋತ್ಪಲಮಾಲೆ ನೃಪಂಗೆ ಮಾಲೆಯಂ ತಾನೊಸೆದಿಕ್ಕಿದಳ್ (ಶಂಕಾಪು. ೩-೪೪). ೨. ಅಸ್ಥಿರಪ್ರಕಾಶದ ; ಮಿಣುಕುವ : ಲೋಲತಾರೆಗಳೆಸೆವಿರುಳಿನ ಮೊಗವನು ರಾಗದಿಂದೆಳೆಯೆ ಚಂದ್ರಮನು (ಇಂಕಾಕ. ೦೦೦-೯೦). (ನಾ). ೩. ಅಲ್ಲಾಡುವುದು; ಚಲಿಸುವುದು ; ಅಲುಗಾಟ : "ಲೋಲಂ, ಚಪಳಂ . . . ಸಂಚಳಂ–ಈ ೧೦ ಸಂಚಳಂ" (ಕರಾಯು. ೦೦೩ ೦೦). ೪. ಪ್ರೀತಿ ; ಅಕ್ಕರೆ : ಬಾಲನ ಹಿಗ್ಗವ ಕಂಡು ಲೋಲದಿ ಎತ್ತಿಕೊಂಡು ತಲೆ ಮೇಲೆ ಕೈಯ ತಿಳವುತ' ಮಲ್ಲಯ್ಯ ಬಾಲಸಿದ್ಧನಿಗೆ ಮುದ್ದಿಟ್ಟನು (ಸಿದ್ಧ.ಕ. ೩-೬೦). ೫. ಆಟವಾಡುವವನು ; ಕ್ರೀಡಾಸಕ್ತ : ಬಾಲನಾ ಲೀಲೆಯುನು ಹೇಳಲಿನ್ನೇನು ನಾ ? ಲೋಲ ಹಿಡಿಹಿಡಿದೆಳೆವ ಮುಂಗುರುಳ (ಕುಪ್ರ. ೪-೩). ೬. ವಿಷಯಲಂಪಟ; ಕಾಮುಕ : ಲೋಲಂಗೀ ವಿಹಂಗಂಗೆ ಬಾಲೆಯನೀ ಮುಗ್ಧೆಯಂ ವಿಚಾರಿಸದೆಯುಂ . . . ಈವುದೆ (ಕಾದಂಬ. ೬೪). ೭. ಪ್ರೀತಿಯುಳ್ಳವನು : ಲೋಲ ಪುರಂದರವಿಠಲ (ಪುರಂದ. ಭಾ. ೩-೦೦೯-೩ ). ' ಸಿರಿಲೋಲ ' ಪರಾ. **ಲೋಳ** : ೧. ಲೋಳ ಕಟಾಕ್ಷತೀಕ್ಷ್ಣಶರದಿಂ ತೆಗೆದಿಚ್ಚೆಗೆ ಸಲ್ವ ಮೇಳದಿಂ ಮೇಳಿಸಿ ಕೇಳಿಯಂ ( ಪಾರ್ಶ್ವಪು. ೦೦ ೬೩ ) ; ಲೋಳತರಂಗರಾಜಿತಮಯತ್ತಟನೀತಟಚಾರು ಕಲ್ಪಭೂಜಾಳಿಯ ಬೀಟಲೆಂದೆನೆ (ಕುಸುಜಾ. ೨-೪೯). ೩. "ಲೋಳಂ ಚಲಮುಂ" (ಶಬ್ದಮಣಿ. ೦೨೪-೬೬). [ಸಂ.]

**ಲೋಲಂಗಿತ** (ನಾ). [ಸಂಗೀತ] ಒಂದು ಬಗೆಯ ಗತಿ (?): ಕಮ್ಮವಣೆ ಲೋಲಂಗಿತ ನುತಶುದ್ಧಸಾಳಂಗ ಸಂಕೀರ್ಣಮಂ ಯಥೋಚಿತತಾರ ಮಧುರ ಮಂದ್ರಂಗಳಿಂ ಹಾಡಿ (ಜಕಾ. ೭-೬). [ಸಂ.]

**ಲೋಲಂಬ, ಲೋಳಂಬ** (ನಾ). ತುಂಬಿಯಲ್ಲಿ ಒಂದು ಬಗೆ ; ದೊಡ್ಡ ದುಂಬಿ: ಲೋಲಂಬ ಕಟಕ (ರೀಜಾ. ೩೬–೦೦). **ಲೋಳಂಬ** : ಅಂಬುರುಹೆ ಲೋಳಂಬ [ಪಾಠಾಂ. ರೋಲಂಬ] ಮತ್ಸ್ಯಕಚ್ಛಪ ವಾರಿಕಂಬುಶೀಕರ ಚಕ್ರವಾಕಶೈವಾಲಕಾದಂಬಗಂಭೀರ ಸೈಕತ ಮೃಣಾಳಂಗಳಿವು ತಮಗವಯವಂಗಳಾಗೆ (ಕೃಶಿಲಾ. ೯-೨೮). [ಸಂ.]

**ಲೋಲಂಬಕದಂಬ** (ನಾ). ೧. ದುಂಬಿಗಳ ಗುಂಪು : ಭ್ರಮರಗಳ ಸಮೂಹ. ೨. ದುಂಬಿಗಳಿಂದ ಆವರಿಸಲ್ಪಟ್ಟವನು : ವಿಲಿಪ್ತಯಕ್ಷಕರ್ದಮಾಮೋದಾಕೃಷ್ಟವನಕುಸುಮಾಲೋಲಲೋಲಂಬಕದಂಬನುಂ . . . ಬರ್ಪಾಗಳ್ (ಕಂಧ್ರ.ಪು. ೬-೮೯ ಪ). [ಸಂ.]

**ಲೋಲಕ್** 'ಲೋಲಾಕು' ನೋ.

**ಲೋಲಕ** (ನಾ). ಅತ್ತಿತ್ತ ತೂಗಾಡುವ ವಸ್ತು : ಆ ಬಳ್ಳಿಗಳ ಕೆಳಭಾಗದಲ್ಲಿ ತ್ರಿಕೋನಾಕೃತಿಯಾದ ಲೋಲಕಗಳು ಜೋತಾಡುತ್ತಿರುತ್ತವೆ (ಕುಂಬಾಬು. ೬-೯೩); ಆಗಿನ ಕಾಲದಲ್ಲಿ ಗಡಿಯಾರಗಳಿಗೆ ಪೆಂಡುಲವ್ (Pendulum) ಅಥವಾ ಲೋಲಕಗಳನ್ನು ಉಪಯೋಗಿಸುತ್ತಿರಲಿಲ್ಲ (ಭೌತವಿ. ೨೬). [ಸಂ.]

**ಲೋಲಕ್ಕು** 'ಲೋಲಾಕು' ನೋ.

**ಲೋಲಚಿಬುಕ** (ನಾ). [ನಾಟ್ಯ] ಎಂಟು ಬಗೆಯ ಚಿಬುಕಭೇದಗಳಲ್ಲಿ ಒಂದು ; ₱ "ಅಗಿಯುವಾಗ ಮಾಡುವಂತೆ ಗಡ್ಡವನ್ನು ಅಡ್ಡಲಾಗಿ ಚಲಿಸುವುದು" (ಅಾಸ್ಯರಂ. ೨೪೦ ಗದ್ಯಾನುವಾದ) : ನೆಗಳ್ದಗಿವ ಸಮಯದೊಳ್ ಪೆಚ್ಚುಗೆಯಂ ಚಲಿಸಲ್ಕೆ ಲೋಲಚಿಬುಕಮೆನಿಕ್ಕುಂ (ಅಾಸ್ಯರಂ. ೩-೦೦೨). [ಸಂ.]

**ಲೋಲಜ್ಞಾನ** (ನಾ). ಹತ್ತು ಸಾತ್ವಿಕಲಕ್ಷಣಗಳಲ್ಲಿ ಒಂದು ; ಅಸ್ಥಿರಜ್ಞಾನ ; ಚಂಚಲತೆ : ಹೇಳ್ವ ಕೇಳ್ವಾಸ್ತ್ರೀಕದಪವನು ಬಾಲಬುದ್ಧಿಯು ಒಾದು ಸಹಜ ಸಂಧೇಳಿಸುತಲಿಹುದೆರಡು ಸತ್ಯವೆಯೆಂಬದದು ಮೂರು ಲೋಲಜ್ಞಾನವು ನಾಲ್ಕು (ಜ್ಞಾನಸಿಂ. ೨೬-೪). [ಸಂ.]

**ಲೋಲತೆ, ಲೋಳತೆ** (ನಾ). ೧. ಅಲುಗಾಟ ; ಚಂಚಲತೆ. ೨. ಆಸೆ ; ಬಯಕೆ : ಲೋಲತೆಯಿಂದೀಕ್ಷಿಪ ಗಣಿಕಾಲಿಯಾವಾಂಗ ತ್ರಿವರ್ಣರುಚಿಗಳ್ ನೀಳ್ದೀಂ ಲೀಲೆಯಪಾಂತುವೋ ಮುತ್ತಿನ ನೀಲದ ಮಾಣಿಕದ ತೋರಣಂಗಳ ತೆಜದಿಂ (ಕಂಧ್ರ.ಪು. ೧೦-೪): ಲೋಲತೆಯಂ ಸುರಾಗದ ಸುರಾಗದ ಪೂವನುದಿರ್ಚುತಂ ಲತಾಜಾಲಕಜಾಲಕಂಗಳನೆಟಬ್ಬುತವಳ್ಳಿಬ್ದಪ್ರುದಭ್ರಮಂ ಚಾಳಿಸುತುಂ (ಶೃಕ್ಕಷ. ೧೦-೬೭). **ಲೋಳತೆ**: ೨. ಲೋಳತೆಯಿಂದೆ ಪುಷ್ಪವತಿಯಂ ಮಧುಭಾಜನೆಯಂ . . . ಸಲೆ ಸೋಂಕುತಿರ್ಪಂ (ಕುಸುಮ. ೧೦-೦೩೬). [ಸಂ. ಲೋಲತಾ]

**ಲೋಲಲೋಚನೆ** (ನಾ). ಚಂಚಲವಾದ ಕಣ್ಣುಗಳನ್ನುಳ್ಳವಳು ; ಚೆಲುವೆ : ಪಾಲು ಸಕ್ಕರೆ ಅಮೃತಾನ್ನವ ನೀನುಂಡು ಲೋಲಲೋಚನೆಯರೊಳಗದ ಮೇಲಾದ ಸಿರಿ (ಹಂಸಾಂ. ೪-೩೬) ; ನಿನ್ನ ಚೆಂದುಟಿಗಳಿಂ ಕೇಳಲಾಟಪೆನದುಂ, ಲೋಲಲೋಚನೆ (ಶಕ್ಯಾಂಗ. ೩೭-೦೦೦೬).
[ ಸಂ. ಲೋಲಲೋಚನಾ (ಲೋಲ + ಲೋಚನ + —) ]

**ಲೋಲಾಕು, ಲೋಲಕ್, ಲೋಲಕ್ಕು** (ನಾ). (ಲೋಲಕದಂತೆ ಅಲುಗಾಡುತ್ತಿರುವ) ಒಂದು ಬಗೆಯ ಕಿವಿಯ ಆಭರಣ: ತೂಗುಬಿಟ್ಟ ಎರಡು ಬಿಲ್ಲೆನಾಕಾರದ ಲೋಲಾಕುಗಳು ! (ಅಂಹು. ೪) ; ಕಿವಿಯಿಂದ ಚಿನ್ನದ ಲೋಲಾಕು ನೇತಾಡುತ್ತಿರುತ್ತವೆ (ಕೃಪಾ. II. ೩೩೦). **ಲೋಲಕ್**: ಸೊಟ್ಟಬೈತಲೆಯು ಲೋಲಕ್ ಥಳುಕಿನ ಬಳುಕುನಡುವಿನ ಜಾರ್ಜೆಟ್‌ಸೀರೆಯ ಬೆಡಗಿನ ಚೆಲುವೆ (ಜುಜಾಗ. ೨೩). **ಲೋಲಕ್ಕು** : ಬಳೆಗಳು, ಲೋಲಕ್ಕುಗಳು, ಜುಮುಕಿ . . . ಇತ್ಯಾದಿ (ಕಕೋ. I. ೩೨೦). [<ಸಂ. ಲೋಲಕ]

**ಲೋಲಾಕ್ಷಿ** (ನಾ). = ಲೋಲಲೋಚನೆ : ಲೋಲಾಕ್ಷಿಯರ್ಕೈದುತ್ತಿರೆ ಸಾಲ್ಗಿಟ್ಟವರಳಕಗಂಧಕೊಡನೈತರುತಂ ರೋಲಂಬಮಾಲೆ ಮೇಲದು ನೀಲದ ನವತೋರಣಂಬೊಲೆನೊಪ್ಪಿದುದೋ (ಅಾಪೀ. ೨-೦೦೯). [ಸಂ. ಲೋಲಾಕ್ಷೀ]

**ಲೋಲಾಡಿಸು** (ಕ್ರಿ). (ನೀರಿನಲ್ಲಿ) ಮುಳುಗಾಡಿಸು : ಓಲಾಡಿಸು : ಪರಿಪರಿಯಲುಂಡುಣಿಸಿ ಸುಖಸಾಗರದಿ ಲೋಲಾಡಿಸುವ ಮಂಗಳಚರಿತ ಚಿನ್ಮಯಗಾತ್ರ (ಜಾಪ. ೨-೦೩) ; ತನ್ನ ಪ್ರಜೆಗಳನ್ನು ಸರ್ವಕಾಲಕ್ಕೂ ಸಂತೋಷದ ಸಾಗರದಲ್ಲಿ ಲೋಲಾಡಿಸುತ್ತಾನೆ (ಮುಂಗಾಶ್ರ. ೬೦).
[ಲೋಲಾಡು + —ಇಸು]

**ಲೋಲಾಡು** (ಕ್ರಿ). ೧. ಅಲುಗಾಡು ; ಅಲ್ಲಾಡು ; ಚಲಿಸು : ಕೂದಲನ್ನು ಲಂಡವಾಗಿ ಕತ್ತರಿಸಿದ್ದರಿಂದ ಗೊಂಡುಗೊಂಡಾಗಿ ಅವು ಹೆಗಲ ಮೇಲೆ ಲೋಲಾಡುತ್ತಿದ್ದವು (ಹೀಮೂಕ. ೦೪೪). ೨. ಮುಳುಗಾಡು ; ಓಲಾಡು : ಎಲೆ ಶಿರವೆ ನೀನಧೋಕ್ಷಜನ ಶ್ರೀಚರಣದ ಜಲರುಹದೊಳಗಳೆಯಂತೆ ಲೋಲಾಡು (ಕುರಂದ. ಧಾ. ೩-೬೦-೩) ; ಪರವಾನಂದಪಯೋನಿಧಿಯಲ್ಲಿ ಓಲಾಡಿ ತೇಲಾಡಿ ಲೋಲಾಡಬೇಕೆಂಬ ಅವರು . . . ಶಂಭುಲಿಂಗನ ಬೆಟ್ಟವನ್ನು ಆಶ್ರಯಿಸುತ್ತಾರೆ (ಶರಕ. ೩೪೦) ; ಅವಳು ಆನಂದಸಾಗರದಲ್ಲಿ ಲೋಲಾಡಹತ್ತಿದಳು (ಸ್ತ್ರೀಬಾ. ೦೨೦). ೩. ಸುಖಿಸು ; ಚಕ್ಕಂದವಾಡು : ಮಿಂಡನ್ನ ಕೂಡಿ ಲೋಲಾಡುತಿಹಳು (ಪುರಂದ. ೦-೦೯೯-೩) ; ಶಾಲಿವನಗಳಲ್ಲಿ ಕುಳಿತು ಲೋಲಾಡುವ ಈ ಹಕ್ಕಿಗಳನ್ನು 'ಸೋಗಯ್ಯಲ್' ನಾರಿಯರ ಬಳಗ ಬೇರೆ ಬೇಕು (ಗಾಳಿಗು. ೭೭).
[ಲೋಲ + ಆಡು]

**ಲೋಲಾಪಾಂಗ** (ನಾ). ಚಂಚಲವಾದ ಕಡೆಗಣ್ಣು : ಲೋಲಾಪಾಂಗದಲ್ಲಿ ಕ್ರೂರವಾದದರ ಕಟಾಕ್ಷವು ಮೇಘಗಳ ಮಧ್ಯದಲ್ಲಿ ಕಣ್ಗೊಳಿಸುವ ವಿದ್ಯುದ್ದಾಮವೋ ಎಂಬಂತಿರುವುದು (ಕಾಶಾಂ. ೪೩). [ಸಂ.]

**ಲೋಲಾಪಾಂಗೆ** (ನಾ). ಚಂಚಲವಾದ ಕಡೆಗಣ್ಣುಗಳನ್ನುಳ್ಳವಳು ; ಸುಂದರಿ: ಯಜ್ಞನೆಯ್ದಿದನುತ್ತುಂಗತರಂಗೆಯಂ ಶಫರಲೋಲಾಪಾಂಗೆಯಂ ಗಂಗೆಯಂ (ಹಂಕಕಂ. ೨೩೩-೦೭). [ಸಂ. ಲೋಲಾಪಾಂಗಾ]

**ಲೋಲಾಪ್ತಿ** 'ಲೋಲುಪ್ತಿ' ನೋ.

**ಲೋಲಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ : ಮುಖ್ಯವಾದ ಕಲವು ಆಸನಗಳು . . . ೧೦ ಲೋಲಾಸನ (ಶಾರದ.೦೭೬). [ಸಂ.]

**ಲೋಲಿತ, ಲೋಳಿತ** (ಗು). ೧. ಅತ್ತಿತ್ತ ಅಲುಗಾಡುವ,– ಚಲಿಸುವ,– ಅಲ್ಲಾಡುವ. (ನಾ). ೨. ಚಂಚಲಮನಸ್ಸಿನವನು : ಜೀವ ಸರ್ವೇಂದ್ರಿಯಂಗಳಲ್ಲಿ ಲೋಲಿತನಾಗದೆ (ಪೋಲಿಧ. ೦೨೯-೪೪೬). ೩. [ನಾಟ್ಯ] ಶಿರೋಭೇದಗಳಲ್ಲಿ ಒಂದು ; ₱ "ಹೆದರಿದಂತೆ ಮಬ್ಬು ದೃಷ್ಟಿಯಿಂದ ಕೂಡಿ ತಲೆಯನ್ನು ಎಲ್ಲ ದಿಕ್ಕಿಗೂ ಆಡಿಸುವುದು" (ಅಾಸ್ಯರಂ. ೨೨೨ ಗದ್ಯಾನುವಾದ) : ಬೆದಚಿದವೊಲೆಂಟುದಿಕ್ಕಿಂಗೊದಗದೆ ಚಲಿಸಲ್ಕೆ ಶಿರವುದೇ ಲೋಲಿತಂ (ಅಾಸ್ಯರಂ. ೦-೬೩). **ಲೋಳಿತ** : ೩. ಕರಮೊಂದು ರೇಚಿತದೆ ಬಿತ್ತರಿಸಲ್ಕಿಂತನ್ಯಹಸ್ತಮುಲಪಲ್ಲವದಿಂಗೆಳೆ ವಕ್ಷದಲ್ಲಿ ಮತ್ತಂ ಶಿರಮದು ಲೋಳಿತದ ತೆಜದೊಳೆರಡುಂ ಕೆಲದೊಳ್ (ಅಾಸ್ಯರಂ. ೪-೦೬೨). [ಸಂ.]

**ಲೋಲು** (ನಾ). ೧. ಕಾಮುಕತನ ; ಲಂಪಟತ್ವ. ೨. ಮೋಜು ; ಮಜ : ಅವನ ಲೋಲು ಹೇಳತೀರದು (ಜನ). ೩. ತೂಗಾಟ ; ಎಳೆತ ; ಸೆಳೆತ ; ಅಮಲಿನ ಲೋಲಿನಲ್ಲಿ ಗಾಢನಿದ್ರೆ ಹೋದರು (ಶಾಂತಲಾ. ೨೨೬). ೪. ಹಣೆಯಲ್ಲಿ ತೂಗಾಡುವಂತೆ ಕಟ್ಟುವ ಒಂದು ಬಗೆಯ ಆಭರಣ ; ಬೈತಲೆಮಣಿ : ಲತೆಗಳೆನುವ ನಾರಿಯರ ಪಣೆಯೊಳಿರುವ ಮುತ್ತಿನ ಬಟ್ಟಿನ ಕೆಂಪುರತ್ನದ ಲೋಲುಗಳೊ ಯೆಂಬಂತೆ (ತ್ರಿಗುಂ. ೪೬-೨೦). [< ಸಂ. ಲೋಲ]

**ಲೋಲುಪ** (ಗು). ೧. ಅತಿಯಾಸೆಯಿಂದ ಕೂಡಿದ ; ಅತಿಯಾಸೆಯ : ಜೀವನೋಪಾಯಮುಮಂ ಪಾಲಿಪುದೆ ಬೆಸನಮದಱಿಂ ಲೋಲುಪ ಮನದಲಿ × × × (ತ್ರಿಷಷ್ಟಿ. XX. ೭೦-೪೦; ಸು. 1108). (ನಾ). ೨. ಅತಿಯಾಸೆಯುಳ್ಳವನು ; ಲಂಪಟ : "ಲೋಲುಭಂ, ಲೋಲುಪಂ . . . ಲಂಪಟಂ — ಈ ೫ ಅಳಿಪುವವಂ" (ಕಜಾದು. ೩೬-೦೪೪). ೩. ಹೆಚ್ಚಿನ ಆಸಕ್ತಿಯುಳ್ಳವನು ; ಆಸಕ್ತ : ನೃಪನೀತಂ ತುರಗ

ಪ್ರಿಯಂ ವಿಷಮುವಾಹಾರೋಹಣಾತ್ಯಂತಲೋಲುಪನೊಳ್ವೇಡಿದೆ ವರಾಣ ನೇಡಿದೊಡೆ ಸಾಲ್ಗುಂ (ಶಂಣರಶ. ೯-೦೦೩). [ಸಂ.]

**ಲೋಲುಪತೆ** (ನಾ). ಅತಿಯಾಸೆ ; ಮೋಹ : ಲೋಲುಪತೆಯವನಿಯ ಲಿಹರೆ ಬರಹೇಳು ಯಮುನಂದನನನು (ಕುಮಾ.ವ್ಯಾ. ೯-೨೦) ; ಅವಳು ಅಧಿಕಾರಲೋಲುಪತೆಯನ್ನು ತ್ಯಜಿಸಲು ಸಿದ್ಧಳಾಗಿರಲಿಲ್ಲ (ಶುಂಠಾಣ. ೨). [ಸಂ. ಲೋಲುಪತಾ]

**ಲೋಲುಪತ್ವ** (ನಾ). = ಲೋಲುಪತೆ. [ಸಂ.]

**ಲೋಲುಪ್ತ** (ನಾ). ೧. ವಿಷಯಾಸಕ್ತ ; ಲಂಪಟ : ಬಾಲ್ಯ ಯೌವನ ದೊಳಗೆ ಲೋಲುಪ್ತನಾಗಿ ನೀನೇಳುತಲೆ ಮಡಿಸುತಿರಬೇಡ ಅನುದಿನದಿ ಶೂಲಿಯನು ನೆನೆಯೊ (ಸರ್ವಜ್ಞ. ೨೯೯). ೨. ಆಸಕ್ತಿಯುಳ್ಳವನು : ಇಷ್ಟಲಿಂಗಪೂಜೆಯಲ್ಲಿ ಲೋಲುಪ್ತನಾಗಿರಬೇಕು (ವಚನ. ೦೬೪). [ಸಂ.]

**ಲೋಲುಪ್ತಿ**, ಲೋಲಾಪ್ತಿ (ನಾ). ೧. =ಲೋಲುಪತೆ : ಪರಸ್ಪರಸ್ಪರ್ಶನ ಲೋಲುಪ್ತಿಯಿಂ ಮನಮೆ ತನುವಾದುದನಬಿಪ್ರವಂತೆ (ಲೀಲಾವ. ೦೦-೯೩ ಪ); ಸಪ್ತರಸನಂ ತಪ್ಪದೆಂದಾ ನೃಪಂ ತಿಳಿದು ಗುಪ್ತದಿಂ ತನ್ನ ಸತಿಯನುಜೆಯಂ ಕರೆಸಿ ಲೋಲುಪ್ತಿಯಿಂ ಬಂದಿವಂಗೀಯಬೇಕೆನಗೆಯುಂ ಶಿವಿಯಮುದೆ ನೋಡೆನಲ್ಕೆ (ಕೈವಲ್ಯ. ೯-೯). ೨. ಸುಖ; ಸಂತೋಷ; ಕೈವಲ್ಯ ಸುಂದರೀ ವದನಾರವಿಂದಮಕರಂದಪಾನಲೋಲುಪ್ತಿಗಿದು ಪೊಚ್ಚುಲ್ತೆ (ರಾಜಶೇ. ೨-೦೯). **ಲೋಲಾಪ್ತಿ** : ೨. ಗೋಳಾಡಲುಂ ಬೇಡ ಲೋಲಾಪ್ತಿಯುಂ ಬೇಡ (ಮುಂಕುಶ. ೨೬೪). ೩. ಸರಸ ; ಚಕ್ಕಂದ : ಅವರ ಲೋಲಾಪ್ತಿ ನಡೆಯುತ್ತಿತ್ತು (ಕಿಕುಣ. ೨೦೩). [<ಲೋಲುಪತೆ]

**ಲೋಲುಭ** (ನಾ). = ಲೋಲುಪ ೨: "ಲೋಲುಭಂ, ಲೋಲುಪಂ, ಲೋಲಂ, ಲಾಲಸಂ, ಲಂಪಟಂ- ಈ ೫ ಅಳಿಪುವವಂ" (ಹಲಾಯು. ೩೮-೦೯೬). [ಸಂ.]

**ಲೋಲುವೆ** (ನಾ). = ಲೋಲುಪತೆ : ಲೀಲೆಯ ಕುಣಿತು ಆಡುವರೆಲ್ಲರು ಕಾಲಸಂಹರನ ಬಂಧುಗಳು ಲೀಲಾಂಗನಾಸುಖದ ಕುಣಿತು ಆಡುವವರೆಲ್ಲರು ಲೋಲುವೆಯ ಬಂಧುಗಳು (ಮೋಳಿಗೆ. ೦೨-೯೬). [<ಲೋಲುಪತೆ ?]

**ಲೋಲೆ** (ನಾ). ೧. ಲಕ್ಷ್ಮಿ. ೨. ಮಿಂಚು. ೩. ನಾಲಗೆ. ೪. ಹೆಬ್ಬೆಟ್ಟಿ ನಲ್ಲಿರುವ ಒಂದು ನಾಡಿಯ ಹೆಸರು : ಧಮನಿ, ಗಮನಿ, ಲೋಲೆ, ಧೃತಿ, ಸರ್ವಗಾ ಎಂಬೈದು ನಾಮವನುಳ್ಳ ನಾಡಿಯು . . . ಹೆಬ್ಬೆಟ್ಟಿನ ಮೂಲದಲ್ಲಿರುವ ನರದ ಮೇಲೆ ಸಣ್ಣನಾಗಿ ಕಾಣಬರುವುದು (ಸಿದ್ಧ. ೦೦). [ಸಂ. ಲೋಲಾ]

**ಲೋಲೇಕ್ಷಣ** (ನಾ). ಚಂಚಲವಾದ ಕಣ್ಣು : ಚಳಮೀನಂ ಪದ್ಮಷಂಡಂ ತರಳಮಧುಕರಾಲಂಕೃತಂ ಪದ್ಮನಾಳಂ ವಿಳಸೃಗೋದ್ಭಾಸಿ ಚಂದ್ರಂ ಸೊಗಯಿಸಿತೆನೆ ಲೋಲೇಕ್ಷಣಂ ಸಂಚಲತ್ಕುಂತಳಮುದ್ರ್ಯೂ ವಿಭ್ರಮಂ ಶೋಭಿಸೆ (ಅಜಿಪು. ೨-೯೦). [ಸಂ.]

**ಲೋವಿಸರ** 'ಲೋಳೆಸರ' ನೋ.

**ಲೋವೆ** (ನಾ). ೧. ಗೋಡೆಯಿಂದ ಮುಂದಕ್ಕೆ ಚಾಚಿದ ಸೂರಿನ ಭಾಗ ; ಮುಂಜೂರು : "ಮನೆಗೇಣಿಸಿದ ಹೊದಿಕೆ ವಳಭ್ಯದಿಯನಿಕ್ಕು ಲೋವೆ ಗೋಪಾನಸೀಸಮಾಖ್ಯಂ" (ಮಂಗರಾ. ೩೯-೦೩); ಮಣಿಮಾಡದ ಮುಂದಣ ಪಟ್ಟಿಯ ಮೊಗಸಾಲೆಯ ಲೋವೆಯೊಳ್ ಪಂಚರತ್ನದಿಂ ದಿಕ್ಕಿದ ರಂಗವಲ್ಲಿಯ (ಸುಕುಮಾ.೦೦-೧೨೨ ಪ); ಪಟ್ಟೆಗಳ ಕಂಬಂಗಳಿಂ ಪವಳ ವಲಗೆಗಳ ಮುಚ್ಚಳ್ಗಳಿಂ ನೀಲಮಣಿಯ ಲೋವೆಗಳಿಂ . . . ಪೆಟ್ಟಿದಾಪು ಗೃಹಗೃಹದ್ವಾರಂಗಳೊಳ್ ಮಹಾಮೇರುವೆಗಳು (ಚಂದ್ರ. ೩-೩); ಲೋವೆ ಯಿಲ್ಲದ ಊಟ ಲೋವೆಯಿಲ್ಲದ ಮನೆಯು ನೋವನರಿಯದವಳ ಮನೆವಾರ್ತೆ ಸಿಹಿಯಬಿಸಿ ಬೇವು ತಿಂದಂತೆ (ಸರ್ವಜ್ಞ.೦೭೦೯). ೨. ಚಾವಣಿಯ ಚೌಕಟ್ಟು: (?).

**ಲೋವೆಪಟ್ಟಿ** (ನಾ). ಹೊರಕ್ಕೆ ಲೋವೆಯಂತೆ ಬಾಗಿಕೊಂಡಿರುವ ಪಟ್ಟಿ ; ಬಾಗುಪಟ್ಟಿ: ಮೇಲೆಪೀಠಕ್ಕೆ ಲೋವೆಪಟ್ಟಿ (ಎಕ. XIV. ಕೃಷ್ಣ. ೨೭೯-ಕೃತಿ ೦೬೯; 1847). [ಲೋವೆ + ಪಟ್ಟಿ$_2$]

**ಲೋಷ್ಟ** (ನಾ). ಮಣ್ಣಿನ ಮುದ್ದೆ ; ಹೆಂಟೆ: "ಲೋಷ್ಟಕಃ, ಲೋಷ್ಟಂ_ಈ ೨ ಹೆಟ್ಟೆ" (ಹಲಾಯು. ೯೯-೨೨೨). [ಸಂ.]

**ಲೋಷ್ಟಕ** (ನಾ). = ಲೋಷ್ಟ: "ಲೋಷ್ಟಕಃ, ಲೋಷ್ಟಂ--ಈ ೨ ಹೆಟ್ಟೆ" (ಹಲಾಯು. ೯೯-೨೨೨). [ಸಂ.]

**ಲೋಷ್ಟಭೇದ** (ನಾ). ಮಣ್ಣು ಹೆಂಟೆಯನ್ನು ಒಡೆಯುವ ಒಂದು ಬಗೆಯ ಸಾಧನ ; ಹಲುಬೆ: "ಲೋಷ್ಟಭೇದಂ ಕೊಱಡು" (ಮಂಗರಾ. ೦೦೯-೦). [ಸಂ.]

**ಲೋಷ್ಟಭೇದನ** (ನಾ). = ಲೋಷ್ಟಭೇದ : "ಕೋಟಿ(೯)ಶಂ, ಲೋಷ್ಟಭೇದನಂ_ಈ ೨ ಹಲಿಕೆ" (ಹಲಾಯು. ೯೯-೨೨೨). [ಸಂ.]

**ಲೋಷ್ಠ** (ನಾ). = ಲೋಷ್ಟ: ಪರಸತಿಯ ನಿಜಜನನಿ ಪರಧನವಿರದೆ ಲೋಷ್ಠವು . . . ಎನುತ ಭಾವಿಸುವೆ (ಕುಮಾ.ರಾ. ೩-೨೩); ಪರವಿತ್ತಮಂ ಲೋಷ್ಠದಂತರಿದು (ದಾರಶ. ೩೩-೦೯). [< ಸಂ. ಲೋಷ್ಟ]

**ಲೋಸು** (ನಾ). ಒಂದು ಬಗೆಯ ಔಷಧೀಸಸ್ಯ : "ಅರಿಷ್ಟಃ -ಬೆಳ್ಳುಳ್ಳಿ . . . ಲೋಸು (ಬೇವು?), ಕರಿಯರಿದಳ" (ಓಷಂ. ೩). [ ? ]

**ಲೋಹ** (ಗು). ೧. ಕೆಂಪಾದ ; ಕೆಂಪುಬಣ್ಣದ ; ತಾಮ್ರವರ್ಣದ. (ನಾ). ೨. ಯಾವುದಾದರೂ ಖನಿಜ- ಧಾತು : ಅಗ್ನಿಯಿಂದ ತಪ್ಪದಾದ ಲೋಹದ ಪುತ್ಥಳಿಯಂತೆ (ಪಪಂ. ೦೦೩-೭೦); ಶಾಂತಿಣ್ಣ ದಲ್ಲಿ ಕಬ್ಬಿಣಕ್ಕೆ ಸರಿಯಾದ ಲೋಹವಿಲ್ಲ (ಮುಂಡರಾಯು. ೯-೦೯೩). ೩. ಕರಿಯ ಬಣ್ಣದ ಲೋಹ ; ಕಬ್ಬಿಣ : "ಗಿರಿಸಾರಂ, ಅಶ್ಮಸಾರಂ, ಲೋಹಂ, ಕಾಳಾಯಸಂ_ ಈ ೪ ಕರ್ಬುನಂ" (ಹಲಾಯು. ೨೮-೦೩) ; ಮಾಧುಯುತಂ ಘೃತಕರ್ಪರ ತುಲ್ಬನಾಗಲೋಹರಜಮನಟ್ಟು ಕಟ್ಟಿ ಕಳೆದಿಕ್ಕುಗುವಮಾವಗವುಸ್ಥಿವೃದ್ಧಿಯು (ಲೋಕೋಪ. ೯-೦೨೯); ಗಗನಾಗ್ರ ದೊಳ್ ಮುಪ್ಪುರಂಗಳಂ ಮಾಡುವೆವು ಸೊಗಸಾಗಿ ಕನಕ ಕಲಧೌತ ಲೋಹಂಗಳಿಂ (ಚಂದ್ರ. ೯೦-೦೪). ೪. ಶುದ್ಧಪಡಿಸಿದ ಕಬ್ಬಿಣ : ಉಕ್ಕು. ೫. ಚಿನ್ನ ; ಸುವರ್ಣ . ೬. ತಾಮ್ರ. ೭. ಕಂಚು : "ಕಂಚುಃ — ಲೋಹಂ" (ಕಾಶ್ಯ. ೯೩). ೮. ಕಡಿವಾಣ ; ಖಲೀನ: ಲೋಹಕ್ಕೆ ನಿರಾಳಮಾಗಿ ಮೊಗಮಿತ್ತುದ್ಭಾವಮಂ ಜಾಱುಕಲ್ಪರಿವಂತಾಸೆಯ ಪೈಸರಂ ಮೆಱೆವ ಚೆಲ್ವಂ ದೇವ ನೀವೇಱಿ ನೋಡಿರೆ ಚಿತ್ತಂಬಡೆದಪ್ಪ ವೆಂದು ಮೆಱೆದಿರ್ ವಾಹಂಗಳಂ ವಾಹಕರ್ (ಅನಂತ. ೨-೩೦). ೯. ರಕ್ತ ; ನೆತ್ತರು. ೧೦. ಒಂದು ಬಗೆಯ ಆಯುಧ: ೧೧. ಒಂದು ಬಗೆಯ ಸುಗಂಧದ ಮರ ; ಕೃಷ್ಣಾಗರು : "ವಂಶಕಂ, ಅಗರು, ರಾಜಾರ್ಹಂ, ಲೋಹಂ, ಕ್ರಿಮಿಜಂ,ಜೋಂಗಕಂ_೬ ಅಗರು ಗಂಧ, ಶ್ವೇತಾಗರು" (ಸಿದ್ಧಾ.ಅ. ೨೦೭). ೧೨. ಮೀನಿನ ಗಾಳ. [ಸಂ.]

**ಲೋಹಕರ್ಮ** (ನಾ). ಕಬ್ಬಿಣದ ಕೆಲಸ ; ಕಮ್ಮಾರವೃತ್ತಿ : ಹೇಮ ಕರ್ಮ ಲೋಹಕರ್ಮ ಶಿಲಾಕರ್ಮ . . . ಹಸ್ತಕುಶಳತೆಯುಳ್ಳ ವಿಶ್ವ ಕರ್ಮನಿರ್ಮಿತಮಪ್ಪ ಗವಟಾಚಾರ್ಯ (ಎಕ. IV, ಕೃಷ್ಣರಾ. ೬೬-೦೦ ; 1116). [ಸಂ. ಲೋಹಕರ್ಮನ್]

**ಲೋಹಕವಚ** (ನಾ). ಲೋಹದಿಂದ ಮಾಡಿದ ರಕ್ಷಾಕವಚ ; ಲೋಹದ ರಕ್ಷಾಸಾಧನ : ಆನೆಗಳು ಲೋಹಕವಚಗಳನ್ನು ಧರಿಸಿ ಬೆಟ್ಟಗಳಂತೆ ಕಾವಲಾಗಿದ್ದವು (ವಕಾ. ೨೬೩). [ಸಂ.]

**ಲೋಹಕಾರ** (ನಾ). ೧. ಲೋಹದ ಕೆಲಸಮಾಡುವವನು. ೨. ಕಬ್ಬಿಣದ ಕೆಲಸಮಾಡುವವನು : ಕಮ್ಮಾರ. ೩. ತಾಮ್ರದ ಕೆಲಸಮಾಡುವ ವನು ; ಬೋಗಾರ : "ವ್ಯೋಕಾರಃ, ಲೋಹಕಾರಃ—ಈ ೨ ಬೋಗಾಱಂ"

(ಹಲಾಯು. ೯೬-೪೩೯) ; ಹಿಫಿಸ್ಟಸ್: ದೇವತೆಗಳ ಲೋಹತಂತ್ರಜ್ಞ; ಸ್ವತಃ ಲೋಹಕಾರದೇವತೆ (ಐಬ್ರಿಕೈ. XLVI, ಪಾಟಿಕರ ಸಮುಸ್ಯೆ). ೪. ಕಂಚಿನ ಕೆಲಸಮಾಡುವವನು ; ಕಂಚುಗಾರ : "ಲೋಹಕಾರನೆನಲ್ ಕಂಚುಗಾಜು" (ಮಂಗರಾ. ೦೦೦ ೦). [ಸಂ.]

**ಲೋಹಕಿಟ್ಟ** (ನಾ). ಕಬ್ಬಿಣದ ಮೇಲೆ ಹತ್ತುವ ಜಂಗು; ತುಕ್ಕು. [ಸಂ.]

**ಲೋಹಖುರವಾಹ** (ನಾ). ಲಾಳ ಕಟ್ಟಿಸಿದ ಕುದುರೆ : ಎರಡುಂ ಪಕ್ಕದೆ ಪಣ್ಣದೋಜೆವಿಡಿಯಂ ಕೈಗೆಯ್ದು ಬಂದೇಜಿ ಚಾಮರಮಂ ಚನ್ನೆಯರಿಕ್ಕೆ ಲೋಹಖುರವಾಹಂ ಸುತ್ತಿ ಕಾಲ್ಗಾಪಿನೊಳ್ ಬಲೆ ಬಂದಂ . . . ವಜ್ರಬಾಹುವುಹಿಪಂ ವಜ್ರಾಯುಧಂ ಬರ್ಪವೊಲ್ (ಕಂಠಾಪಿಚ. ೨-೦೧). [ಸಂ.]

**ಲೋಹಚುಂಬಕ** (ನಾ). ಕಬ್ಬಿಣವನ್ನು ಆಕರ್ಷಿಸುವ ಗುಣವುಳ್ಳದ್ದು ; ಸೂಜಿಗಲ್ಲು ; ಅಯಸ್ಕಾಂತ : ಲೋಹಚುಂಬಕಧರ್ಮವು ಒಂದು ಜಾತಿಯ ಕಬ್ಬಿಣದಲ್ಲಿರುತ್ತದೆ ; ಆ ಕಬ್ಬಿಣಕ್ಕೆ ಲೋಹಚುಂಬಕವೆನ್ನುವರು (ಮುಂಬಿಯು. ೫-೨೨೯) ; ಲೋಹಚುಂಬಕವನು ಕಂಡ ಲೋಹದಂತೆ ನುಗ್ಗಿದೆ (ಗಂಗಾಕ. ೦೫-೭). [ಸಂ.]

**ಲೋಹಚುಂಬಕತ್ವ** (ನಾ). ಕಾಂತಶಕ್ತಿ ; ಅಯಸ್ಕಾಂತ ಗುಣ : ಉಷ್ಣತೆ, ಪ್ರಕಾಶ, ವಿದ್ಯುತ್ತು, ಲೋಹಚುಂಬಕತ್ವ ಈ ನಾಲ್ಕು ನಮ್ಮ ಇಂದ್ರಿಯಗಳಿಗೆ ತಿಳಿಯುವಂಥದು (ಮುಂಬಿಯು. ೫-೩೩). [ಸಂ.]

**ಲೋಹಜ** (ಗು). ಕಬ್ಬಿಣದಿಂದ ಆದ : 'ಲೋಹಜಬಂಧ' ಪರಾ. [ಸಂ.]

**ಲೋಹಜಬಂಧ** (ನಾ). ಕಬ್ಬಿಣದಿಂದ ಮಾಡಿದ ಸರಪಣಿ : ತ್ರಿಜಗದ್ಭೂಷಣವಾರಣಂ ಮುಜಾಯೆ ಪಿಪಯ್ದಾಲಾನಮಂ ತ್ವಗಜಲೋಹಜಬಂಧಂಗಳ ನೆಲ್ಲಮಂ ಪಜಿವಿನಂ . . . ಬಂದು (ಕಂಠಾಪಿಚ. ೦೫-೩೦). [ಸಂ.]

**ಲೋಹಜಿತ್ತು** (ನಾ). ಒಂದು ಬಗೆಯ ರತ್ನ; ವಜ್ರ. [ಸಂ. ಲೋಹಜಿತ್]

**ಲೋಹಟಂಕ** (ನಾ). ಕಬ್ಬಿಣದ ಸುತ್ತಿಗೆ : "ಸುತ್ತಿಗೆ ಲೋಹಟಂಕಂ" (ಮಂಗರಾ. ೦೦೩-೩). [ಸಂ.]

**ಲೋಹತೈಲ** (ನಾ). ಗಣಿಗಳಲ್ಲಿ ದೊರೆಯುವ ಎಣ್ಣೆ ; ಖನಿಜತೈಲ : ಸಮುದ್ರದಲ್ಲಿ ಅಥವಾ ಸರೋವರದಲ್ಲಿ ನದಿ ತನ್ನ ಭಾರವನ್ನು ಇಳಿಸಿದಾಗ ತಳದಲ್ಲಿ ಮುಚ್ಚಿಹೋದ ಪ್ರಾಣಿಗಳ, ಸಸ್ಯಗಳ ಭಾಗಗಳಿಂದ ಲೋಹತೈಲ (Mineral oils)ಗಳಾಗುತ್ತವೆ (ಭೂಪಿಪ. ೦೪೬). [ಸಂ.]

**ಲೋಹದ್ರವ** (ನಾ). ಕಬ್ಬಿಣದ ದ್ರವ ; ಕರಗಿದ ಕಬ್ಬಿಣ : ಸಮಾಕುಲಿತರ್ ಮೋಹಿಸಿ ಮುಚ್ಚೆವೋಗೆ ಪರಿತಂದುತ್ತಪ್ತಲೋಹದ್ರವಂ ಜಲಮೆಂದಲ್ಲಿಯ ನಾರಕರ್ ತಳಿವುದುಂ (ಶಾಂತಿಪು. ೭-೬೯). [ಸಂ.]

**ಲೋಹನಿಧಿ** (ನಾ). ಚಿನ್ನದ ರೂಪದಲ್ಲಿರುವ ನಿಧಿ ; ತೆಗೆದಿಟ್ಟಿರುವ ಚಿನ್ನ ಮೊದಲಾದ ಲೋಹ : ಹಣದ ಬೆಂಗಾವಲಾದ ತನ್ನ ಲೋಹನಿಧಿಯ ಗಾತ್ರವನ್ನೂ ರಚನೆಯನ್ನೂ ಹೇಗೆ ಕಾಪಾಡಿಕೊಳ್ಳುತ್ತಿರಬೇಕು ? (ಹಣಶ್ರ. ೦೬೦). [ಸಂ.]

**ಲೋಹಪರೀಕ್ಷೆ** (ನಾ). "ಒಂದು ಖನಿಜದಲ್ಲಾಗಲಿ, ಲೋಹಮಿಶ್ರಣದಲ್ಲಾಗಲಿ ಇರುವ ಒಂದು ಲೋಹದ ಮೊತ್ತವನ್ನು ನಿಷ್ಕರ್ಷಿಸುವುದು ; ಲೋಹಪರೀಕ್ಷೆ" (Assay, ೩೦೪೬.). [ಸಂ. ಲೋಹಪರೀಕ್ಷಾ]

**ಲೋಹಪೃಷ್ಠ** (ಗು). ೧. ಲೋಹದಂತೆ ಗಟ್ಟಿಯಾದ ಹಿಂಭಾಗವನ್ನು ಹೊಂದಿರುವ. / (ನಾ). ೨. ಒಂದು ಬಗೆಯ ಪಕ್ಷಿ ; ಕ್ರೌಂಚಪಕ್ಷಿ ; ಹರಡೆಹಕ್ಕಿ : "ಲೋಹಪೃಷ್ಠ ಕಂಕ ಶಬ್ದಗಳು ಹರಡೇಹಕ್ಕಿಯ ಹೆಸರುಗಳು. ಇದು ಹದ್ದುಗಳಲ್ಲಿ ಭೇದ. ಕಬ್ಬಾರೆಹದ್ದೆಂಬರು . . . ಘಟ್ಟಿಯಾಗಿರುವ ಪಿರ್ರೆಗಳುಳ್ಳದ್ದು" (ಗುರುಬಾ. ೦೪೯). [ಸಂ.]

**ಲೋಹಪ್ರತಿಮೆ** (ನಾ). ೧. ಲೋಹದಿಂದ ಮಾಡಿದ ವಿಗ್ರಹ,— ಬೊಂಬೆ. ೨. ಕಮ್ಮಾರನ ಅಡಿಗಲ್ಲು. [ಸಂ. ಲೋಹಪ್ರತಿಮಾ]

**ಲೋಹಫಲಕ** (ನಾ). ಲೋಹದ ಹಲಗೆ : ಖರೋಷ್ಠಿಲಿಪಿ ಭೂರ್ಜಪತ್ರಗಳ ಮೇಲೆ ಬರೆದಿರುವುದಲ್ಲದೆ ಲೋಹಫಲಕದ ಮೇಲೂ . . . ದೊರೆತಿದೆ (ಪ್ರಾಲಿಪಿ. ೩೦). [ಸಂ.]

**ಲೋಹಭಸ್ಮ** (ನಾ). ೧. ಕಬ್ಬಿಣದ ಕಿಟ್ಟ,— ಜಂಗು. ೨. (ಔಷಧಿಗಾಗಿ) ಕಬ್ಬಿಣದ ಕಿಟ್ಟದಿಂದ ತಯಾರಿಸುವ ಒಂದು ಬಗೆಯ ಭಸ್ಮ : ಲೋಹಭಸ್ಮ : ಇವನ್ನು ಮಾಡುವ ಕ್ರಮ — ಅರಪುಡಿಯನ್ನು ಅಂಬಲದಲ್ಲಿ ತೊಳೆದು ಅತ್ತಿಯ ತಿಗಡಿನ ರಸದಲ್ಲಿ ಆ ಹುಡಿ ಮುಳುಗುವ ಹಾಗೆ ಹಾಕಿ ಸೂರ್ಯಪುಟದಲ್ಲಿರಿಸಿದರೆ ಆ ಅರಹುಡಿ ಭಸ್ಮವಹುದು (ಐವೈಪಿ. ೪೬); ಕಬ್ಬಿಣದ ಕಿಟ್ಟ ತಂದು, ಪುಟಕ್ಕೆ ಹಾಕಿ ಲೋಹಭಸ್ಮ ಮಾಡುವರು (ಮುಂಬಿಯು. ೪-೦೪೩). [ಸಂ. ಲೋಹಭಸ್ಮನ್]

**ಲೋಹಮಂಡೂರ** (ನಾ). = ಲೋಹಭಸ್ಮ ೧ : ಜೇನುತುಪ್ಪದ ಹನಿಸಿ ಲೋಹಮಂಡೂರ ಹಲವಂ ಹಾಕಿ . . . ಸೇವಿಸೆ ಕ್ಷಯರೋಗ ಪಾಂಡುರೋಗ . . . ಸಹ ಗುಣಮಕ್ಕು (ಸಸವೈ. ೨೩೪). [ಸಂ.]

**ಲೋಹಮಾರ್ಗ** (ನಾ). ಕಬ್ಬಿಣದ ಕಂಬಿಯ ಮಾರ್ಗ ; ರೈಲುರಸ್ತೆ : ರೈಲ್ವೆ ಎಂಬ ಲೋಹಮಾರ್ಗವು ಈ ಊರ ಮೇಲೆ ಹಾಯ್ದು . . . ಕೊಡುತ್ತದೆ (ಮುಂಬಿಯು. ೪-೦೭೩). [ಸಂ.]

**ಲೋಹಯುಗ** (ನಾ). ಮಾನವರು ಲೋಹವನ್ನು ಹೆಚ್ಚಾಗಿ ಬಳಕೆಗೆ ತಂದ ಕಾಲ : ಶೈವಸಂಸ್ಕೃತಿಯು . . . ಲೋಹಯುಗಕ್ಕೆ ಹಿಂದಿನದೆಂತಲೂ ಅಭಿಪ್ರಾಯಪಟ್ಟಿದ್ದಾರೆ (ಭಾರದ. ೩೦೭). [ಸಂ.]

**ಲೋಹಲ** (ಗು). ೧. ಕಬ್ಬಿಣದಿಂದ ಮಾಡಿದ. ೨. ಅಸ್ಪಷ್ಟವಾಗಿ ಮಾತನಾಡುವ. (ನಾ). ೩. ಅಸ್ಪಷ್ಟವಾಗಿ ಮಾತನಾಡುವವನು : "ಲೋಹಲನಸಭಿವ್ಯಕ್ತವ್ಯಾಹಾರಂ" (ವಸ್ತುಕೋ. ೦೦೦-೦೭). [ಸಂ.]

**ಲೋಹವಕ್ಕರಿಕೆ** (ನಾ). (ಆನೆ , ಕುದುರೆ ಮೊದಲಾದುವುಗಳ ಪಕ್ಕಕ್ಕೆ ಕಟ್ಟುವ) ಉಕ್ಕಿನ ಕವಚ : ಕುರುಕ್ಷೇತ್ರದೊಳ್ ವಜ್ರಪ್ರಹರಣದಿನೆ ಜಂಕೆವೆರಸು ಕೆಡೆದ ಪರ್ವತಂಗಳಂತೆ ಲೋಹವಕ್ಕರಿಕೆಗಳ್ವೆರಸು . . . ಕೆಡೆದ ಮದಾಂಧಗಂಧಸಿಂಧುರಂಗಳ್ (ಗದಾಯು. ೬-೩೬ ವ) ; ರಾಜಿಪ ಲೋಹವಕ್ಕರಿಕೆಯ ತೇಜಿಗಳ ಲೆಕ್ಕವಿಲ್ಲದೆ ತಂದೊಪ್ಪಿಸಿ (ಪಾಗಳು. ೦೬-೬೩). [ಲೋಹ + ಪಕ್ಕರಿಕೆ]

**ಲೋಹವಕ್ಕರೆ** (ನಾ). = ಲೋಹವಕ್ಕರಿಕೆ : ಏಜಿಸಿದ ಬಿಸುಗೆಗಳು ಮಿಕ್ಕಿದ ಲೋಹವಕ್ಕರೆಗಳುಮುರ್ಚಿದ ಮೊಗವಡಂಗಳುಂ (ಕಂಠಾಪಿ. ೦೦-೩೦ ವ) ; ಪದಿನೆಣ್ಛಾಸಿರ ಲೋಹವಕ್ಕರೆಯ ಜಾತ್ಯಶ್ವಂಗಳ್ (ಪುದ. ೬೬ ಕ್ರಿಯೋ) ; ಕುದುರೆಗಳಿಗೆ ಲೋಹವಕ್ಕರೆ ಉಕ್ಕಿನ ಮೊಗಂಬಗಳನ್ನೂ ಧರಿಯಿಸಿ (ಮುಂತ್ರಕ. ೬೮-೦೫). [ಲೋಹ + ಪಕ್ಕರೆ]

**ಲೋಹವರ** (ನಾ). ಲೋಹಗಳಲ್ಲಿ ಶ್ರೇಷ್ಠವಾದುದು ; ಚಿನ್ನ ; ಬಂಗಾರ. [ಸಂ.]

**ಲೋಹಶಾಸ್ತ್ರ** (ನಾ). ಲೋಹಕ್ಕೆ ಸಂಬಂಧಪಟ್ಟ ವಿದ್ಯೆ : ಇವುಗಳಲ್ಲಿ ಕಾಣುವ ಲೋಹಶಾಸ್ತ್ರದ ಸಾಧನೆಯು ಎಲ್ಲರ ಗೌರವಕ್ಕೂ ಪಾತ್ರವಾಗಿದೆ (೩ಲ್ಪವಾ. ೯೬). [ಸಂ.]

**ಲೋಹಶ್ರವಣೆ** (ನಾ). ಲೋಹದ ಕರ್ಣಾಭರಣವನ್ನು ಹೊಂದಿರುವವಳು : ವಿವಿಧಾಭರಣಾಢ್ಯೆ ವಿಚಿತ್ರವಸ್ತುಗಳನಜಿಸುವಳ್ ಕಲಾವಿದೆ ಲೋಹಶ್ರವಣೆ ಕಮಲಾಕ್ಷಿ . ಧೂಮ್ರಾಭವರ್ಣೆ ಮೃಗನಿಲಯಮುಮಧ್ಯಮದ್ರೇಕ್ಕಾಣಂ (ಜಾತಕ. ೦೪-೨೯). [ಸಂ. ಲೋಹಶ್ರವಣಾ (ಲೋಹ + ಶ್ರವಣ + —)]

**ಲೋಹಸಿಂಧೂರ** (ನಾ). ಔಷಧಿಗಾಗಿ, ಕಬ್ಬಿಣದ ಹುಡಿಯಿಂದ ತಯಾರಿಸಿದ ಪುಡಿ : ಲೋಹಸಿಂಧೂರ— ಲೋಹದ ಅರಹುಡಿಯನ್ನು ಗೋಮೂತ್ರದಿಂದ ಐದುದಿನ ನೆನೆಯಿಕ್ಕಿ . . . ಖಲ್ವದೊಳಿಕ್ಕಿ ಸೂಕ್ಷ್ಮ ಚೂರ್ಣ ಮಾಡಲು, ಶುದ್ಧಸಿಂಧೂರವಾಗುವುದು (ಸಸವೈ. ೯೩). [ಲೋಹ + ಸಿಂಧೂರ]

